ಆದಿಪರ್ವ

ಸಭಾಪರ್ವ

ವನಪರ್ವ

ವಿರಟಪರ್ವ

ಉದ್ಯೋಗಪರ್ವ

ಭೀಷ್ಮಪರ್ವ

ದ್ರೋಣಪರ್ವ

ಕರ್ಣಪರ್ವ

ಶಲ್ಯಪರ್ವ

ಸೌಪ್ತಿಕಪರ್ವ

ಸ್ತ್ರೀಪರ್ವ

ಶಾಂತಿಪರ್ವ

ಅನುಶಾಸನಪರ್ವ

ಅಶ್ವಮೇಧಿಕಪರ್ವ

ಆಶ್ರಮವಾಸಿಕಪರ್ವ

ಮೌಸಲಪರ್ವ

ಮಹಾಪ್ರಸ್ಥಾನಿಕಪರ್ವ

ಸ್ವರ್ಗಾರೋಹಣಪರ್ವ

# ಮಹಾಭಾರತ
## ಆದಿಪರ್ವ
### 1. ಅನುಕ್ರಮಣಿಕಾಪರ್ವ
### ಒಂದನೆಯ ಅಧ್ಯಾಯ
### ಅನುಕ್ರಮಣಿಕಾ ಪರ್ವ ಪ್ರಾರಂಭ

ನಾರಾಯಣಂ ಸುರುಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ |
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ ಭವಘ್ನಮಮರಾಸುರಸಿದ್ಧವಂದ್ಯಮ್ ॥1॥
ದೇವತೆಗಳಿಗೆ ಗುರುವಾದ ಜಗತ್ತಿಗೆ ಮುಖ್ಯನಾದ ನಾಥನಾದ ಭಕ್ತಪ್ರಿಯನಾದ, ಎಲ್ಲ ಲೋಕ ಗಳಿಂದಲೂ ನಮಸ್ಕರಿಸಲ್ಪಡುವ, ಸತ್ವರಜಸ್ತಮೋಗುಣರಹಿತನಾದ, ಜನನ ರಹಿತನಾದ, ವ್ಯಾಪ್ತನಾದ, ಅನಾದಿಯಾದ, ಸಮರ್ಥನಾದ. ಸಂಸಾರವನ್ನು ಪರಿಹಾರ ಮಾಡುವಂತಹ ಉತ್ತಮನಾದ, ದೇವತೆಗಳಿಂದಲೂ, ಆಸುರರಿಂದಲೂ, ಸಿದ್ಧರಿಂದಲೂ ವಂದ್ಯನಾದ ನಾರಾಯಣನಿಗೆ ನಮಸ್ಕಾರವನ್ನು ಮಾಡುತ್ತೇನೆ.
ಈ ಶ್ಲೋಕವು ಪ್ರಾಚೀನ ಹಸ್ತಪ್ರತಿಗಳಲ್ಲಿ ಮಂಗಳ ಪದ್ಯವಾಗಿದೆ. `ನ ಪೃಥಕ್ ಮಂಗಳಾಚರಣಂ ಚ' ಎಂಬ ಲಕ್ಷಾಲಂಕಾರ ವಾಕ್ಯವು ತಾತ್ಪರ್ಯ ನಿರ್ಣಯದ ಭಾವಪ್ರಕಾಶಿಕಾ ವ್ಯಾಖ್ಯಾನಕ್ಕೆ ವಿರುದ್ಧವಾಗಿರುವುದರಿಂದ ಪ್ರಕ್ಷಿಪ್ತವೆನ್ನಬಹುದು.
ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ |
ಕೃಷ್ಣೋ ವನ್ಯೈರಿಜ್ಯತೇ ಸಮ್ಯೃಶಾನ್ಯೆಃಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ॥2॥
ಸೋಮರಸದಿಂದ ಪವಿತ್ರವಾದ ಯಜ್ಞಗಳಲ್ಲಿ ಕೃಷ್ಣನೇ ಪೂಜಿಸಲ್ಪಡುತ್ತಾನೆ. ಪರಾಕ್ರಮಶಾಲಿಗಳಾದ ವೀರರಿಂದ ಕೃಷ್ಣನೇ (ಧರ್ಮ ಯುದ್ಧಾದಿಗಳಲ್ಲಿ) ಪೂಜಿಸಲ್ಪಡುತ್ತಾನೆ. ಕೃಷ್ಣನೇ ವಿಮರ್ಶೆಮಾಡುವ ವಾನಪ್ರಸ್ಥರಿಂದ ಪೂಜಿಸಲ್ಪಡುತ್ತಾನೆ. ಕೃಷ್ಣನೇ ಮೋಹಾದಿದೋಷ ದೂರರಾದ ಮುಕ್ತರಿಂದಲೂ ಪೂಜಿಸಲ್ಪಡುತ್ತಾನೆ.
ಸೃಷ್ಟಾ ಬ್ರಹ್ಮಾದಯೋ ದೇವಾ ನಿಹತಾ ಯೇನ ದಾನವಾಃ |
ತಸ್ಮೈ ದೇವಾದಿದೇವಾಯ ನಮಸ್ತೇ ಶಾರ್ಙ್ಗಧಾರಿಣೇ ॥3॥
ಯಾವನಿಂದ ಬ್ರಹ್ಮಾದಿದೇವತೆಗಳು ಸೃಷ್ಟರಾದರೋ ಮತ್ತು ದಾನವರು ನಿಹತರಾದರೋ ಅಂತಹ ದೇವಾದಿದೇವನಾದ ಶಾರ್ಙ್ಗಧಾರಿಯಾದ ವಿಷ್ಣುವಿಗೆ ನಮಸ್ಕಾರ.
ಬ್ರಹ್ಮಾದಿದೇವತೆಗಳ ಸೃಷ್ಟಿ ಎಂದರೆ ಆವರಿಗೆ ಮೋಕ್ಷವನ್ನು ಕೊಟ್ಟು ಶಾಶ್ವತವಾದ ಸುಖದಲ್ಲಿಡುವುದು. ದಾನವರ ಸಂಹಾರವೆಂದರೆ ಅವರನ್ನು ತಮಸ್ಸೆಂಬ ನಿತ್ಯನರಕದಲ್ಲಿಟ್ಟು ಶಾಶ್ವತವಾದ ದುಃಖವನ್ನು ಕೊಡುವುದು.
ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ |
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥4॥
ನಾರಾಯಣನನ್ನು ನರನನ್ನು ನರೋತ್ತಮನಾದ ವಾಯುವನ್ನು ಲಕ್ಷ್ಮೀಯನ್ನು ಸರಸ್ವತಿಯನ್ನು ನಮಸ್ಕರಿಸಿ ಜಯ ಎಂಬ ಹೆಸರಿನ ಶ್ರೀಮಹಾಭಾರತವನ್ನು ಹೇಳುತ್ತೇನೆ.
ನಾರಾಯಣನು ಈ ಗ್ರಂಥ ಪ್ರತಿಪಾದ್ಯನಾದವನು. ನರ ಎಂದರೆ ಶೇಷ, ಎಲ್ಲ ಪೌರುಷೇಯಗ್ರಂಥಗಳಿಗೆ ಆವನು ಅಭಿಮಾನಿಯಾದ್ದರಿಂದ ಮತ್ತು ಉಪಸಾಧಕನಾದುದರಿಂದ ಆವನಿಗೆ ನಮಸ್ಕಾರ. ನರೋತ್ತಮ ಎಂದರೆ ವಾಯುದೇವರು. ಸಾಧಕೋತ್ತಮರಾದ್ದರಿಂದ ಅವರಿಗೆ ನಮಸ್ಕಾರ. ದೇವಿ ಎಂದರೆ ಭಾಗ್ಯದೇವತೆಯಾದ ಲಕ್ಷ್ಮಿ, ಆವಳಿಗೆ ನಮಸ್ಕಾರ. ಸರಸ್ವತಿಯು ವಾಗಭಿಮಾನಿ, ಅವಳಿಗೆ ನಮಸ್ಕಾರ. ವ್ಯಾಸರು ಗ್ರಂಥಕರ್ತೃಗಳು ಅವರಿಗೂ ನಮಸ್ಕಾರ.
ರೋಮಹರ್ಷಣಪುತ್ರ ಉಗ್ರಶ್ರವಾಃ ಸೂತಃ ಪೌರಾಣಿಕೋ ನೈಮಿಶಾರಣ್ಯೇ |
ಶೌನಕಸ್ಯ ಕುಲಪತೇರ್ದ್ವಾದಶವಾರ್ಷಿಕೇ ಸತ್ರೇ |
ಸಮಾಸೀನಾನಭ್ಯಗಚ್ಛದ್ ಬ್ರಹ್ಮರ್ಷೀನ್ ಸಂಶಿತವ್ರತಾನ್ ॥5॥
ರೋಮಹರ್ಷಣರ ಪುತ್ರರಾದ ಪುರಾಣವಕ್ತೃಗಳಾದ ಉಗ್ರಶ್ರವ ಎಂಬ ಹೆಸರಿನ ಸೂತರು ನೈಮಿಶಾರಣ್ಯದಲ್ಲಿ ಕುಲಪತಿಗಳಾದ ಶೌನಕರ ಹನ್ನೆರಡುವರ್ಷ ಪರ್ಯಂತದ ಸತ್ರಯಾಗದಲ್ಲಿ ಆಸೀನರಾದಂತಹ ಮಹಾವ್ರತಶೀಲರಾದಂತಹ ಬ್ರಹ್ಮರ್ಷಿಗಳ ಸಮೀಪಕ್ಕೆ ಬಂದರು.
ವಿನಯಾವನತೋ ಭೂತ್ವಾ ಕದಾಚಿತ್ ಸೂತನಂದನಃ |
ತಮಾಶ್ರಮಮನುಪ್ರಾಪ್ಯ ನೈಮಿಶಾರಣ್ಯವಾಸಿನಃ |
ಉವಾಚ ತಾನೃಷೀನ್ ಸರ್ವಾನ್ ಧನ್ಯೋ ವೋಽಸ್ಮ್ಯದ್ಯ ದರ್ಶನಾತ್ ॥6॥
ಸೂತ ಪುತ್ರರಾದ ಅವರು ವಿನಯದಿಂದ ಬಾಗಿದವರಾಗಿ ಆವರನ್ನು ನೋಡಿದರು. ಹೀಗೊಮ್ಮೆ ಅವರು ನೈಮಿಶಾರಣ್ಯಕ್ಕೆ ಬಂದು ನೈಮಿಶಾರಣ್ಯವಾಸಿಗಳಾದ ಆ ಎಲ್ಲ ಋಷಿಗಳನ್ನು ಕುರಿತು ನಿಮ್ಮ ದರ್ಶನದಿಂದ ನಾನು ಧನ್ಯನಾಗಿದ್ದೇನೆ ಎಂದು ಹೇಳಿದರು.
ವೇದ ವೈಯಾಸಿಕೀಃ ಸರ್ವಾಃ ಕಥಾ ಧರ್ಮಾರ್ಥಸಂಹಿತಾಃ |
ವಕ್ಷ್ಯಾಮಿ ವೋ ದ್ವಿಜಶ್ರೇಷ್ಠಾಃ ಶೃಣ್ವಂತ್ವದ್ಯ ತಪೋಧನಾಃ ॥7॥
ನಾನು ವೇದವ್ಯಾಸದೇವರು ಹೇಳಿದಂತಹ ಧರ್ಮಾರ್ಥಯುಕ್ತವಾದ ಎಲ್ಲಾ ಕಥೆಗಳನ್ನು ತಿಳಿದಿದ್ದೇನೆ. ಮುನಿಶ್ರೇಷ್ಠರೇ ಮತ್ತು ತಪೋಧನರೇ ಆದನ್ನು ಕೇಳಿ. ನಾನು ಈದಿನ ನಿಮಗೆ ಆದನ್ನು ಹೇಳುತ್ತೇನೆ.
ತಸ್ಯ ತದ್ವಚನಂ ಶ್ರುತ್ವಾ ನೈಮಿಶಾರಣ್ಯವಾಸಿನಃ |
ಚಿತ್ರಾಃ ಶ್ರೋತುಂ ಕಥಾಸ್ತತ್ರ ಪರಿವವ್ರುಃ ಸಮಂತತಃ ॥8॥
ಅವರ ಆ ಮಾತನ್ನು ಕೇಳಿ ನೈಮಿಷಾರಣ್ಯವಾಸಿಗಳಾದ ಎಲ್ಲರೂ ವಿಚಿತ್ರವಾದ ಕಥೆಗಳನ್ನು ಕೇಳಲು ಆವರ ಸುತ್ತಲೂ ನೆರೆದರು.

ಅಭಿವಾದ್ಯ ಮುನೀಂಸ್ತಾಂಸ್ತು ಸರ್ವಾನೇವ ಕೃತಾಂಜಲಿಃ |
ಅಪೃಚ್ಛತ್ ಸ ತಪೋವೃದ್ಧಿಂ ಸದ್ಭಿಶ್ಚೈವಾಭಿನಂದಿತಃ ॥9॥
ಉಗ್ರಶ್ರವಸ್ಸರಾದರೋ ಆವರೆಲ್ಲರಿಗೂ ಕೈಗಳನ್ನು ಮುಗಿದು ಎಲ್ಲರಿಗೂ ನಮಸ್ಕಾರವನ್ನು ಮಾಡಿ ಆ ಸಜ್ಜನರೆಲ್ಲರಿಂದಲೂ ಅಭಿನಂದಿತರಾಗಿ ಅವರ ತಪಸ್ಸಿನ ವೃದ್ಧಿಯನ್ನು ವಿಚಾರಿಸಿದರು.
ಅಥ ತೇಷೂಪವಿಷ್ಟೇಷು ಸರ್ವೇಷ್ವೇವ ತಪಸ್ವಿಷು |
ನಿರ್ದಿಷ್ಟಮಾಸನಂ ಭೇಜೇ ವಿನಯಾದ್ರೌಮಹರ್ಷಣಿಃ ॥10॥
ಆ ಎಲ್ಲ ತಪಸ್ವಿಗಳು ಕುಳಿತುಕೊಂಡ ಮೇಲೆ ರೋಮಹರ್ಷಣರ ಪುತ್ರರಾದ ಉಗ್ರಶ್ರವರು ವಿನಯದಿಂದ ತಮಗೆ ನಿರ್ದಿಷ್ಟವಾದ ಆಸನವನ್ನು ಸ್ವೀಕರಿಸಿದರು.
ಸುಖಾಸೀನಂ ತತಸ್ತಂ ತು ವಿಶ್ರಾಂತಮುಪಲಕ್ಷ್ಯ ಚ |
ಅಥಾಪಚ್ಛದೃಷಿಸ್ತತ್ರ ಕಶ್ಚಿತ್ ಪ್ರಸ್ತಾವಯನ್ ಕಥಾಃ ॥11॥
ವಿಶ್ರಾಂತಿಯನ್ನು ಪಡೆದು ತಮ್ಮ ಆಸನದಲ್ಲಿ ಸುಖವಾಗಿ ಕುಳಿತಿದ್ದ ಸೂತರನ್ನು ಗಮನಿಸಿ ಆ ಋಷಿಗಳ ಮಧ್ಯೆ ಒಬ್ಬರು ಕಥೆಗಳನ್ನು ಪ್ರಸ್ತಾವ ಮಾಡುವುದಕ್ಕಾಗಿ ಸೂತರನ್ನು ಪ್ರಶ್ನಿಸಿದರು.
ಕುತ ಆಗಮ್ಯತೇ ಸೌತೇ ಕ್ವ ಚಾಽಯಂ ವಿಹೃತಸ್ತ್ವಯಾ |
ಕಾಲಃ ಕಮಲಪತ್ರಾಕ್ಷ ಶಂಸೈತತ್ ಪೃಚ್ಛತೋ ಮಮ ॥12॥
ಸೂತಪುತ್ರರೇ ನೀವು ಎಲ್ಲಿಂದ ಬರುತ್ತಿದ್ದೀರಿ? ಕಮಲನಯನರೇ! ಇಲ್ಲಿಯವರೆಗೆ ಎಲ್ಲಿ ವಿಹರಿಸಿದಿರಿ? ಈ ಪ್ರಶ್ನೆಯನ್ನು ಕೇಳುವ ನನಗೆ ಉತ್ತರಿಸಿರಿ.
ಸೂತಃ
ಜನಮೇಜಯಸ್ಯ ರಾಜರ್ಷೇಃ ಸರ್ಪಸತ್ರೇ ಮಹಾತ್ಮನಃ |
ಸಮೀಪೇ ಪಾರ್ಥಿವೇಂದ್ರಸ್ಯ ಸಮ್ಯಕ್ ಪಾರಿಕ್ಷಿತಸ್ಯ ಚ ॥13॥
ಕೃಷ್ಣದ್ವೈಪಾಯನಪ್ರೋಕ್ತಾಃ ಸುಪುಣ್ಯಾ ವಿವಿಧಾಃ ಕಥಾಃ |
ಕಥಿತಾಶ್ಚಾಪಿ ವಿಧಿವದ್ ಯಾ ವೈಶಂಪಾಯನೇನ ವೈ ॥14॥
ನಾನು ಪರೀಕ್ಷಿತನ ಮಗನಾದ ರಾಜರ್ಷಿಯಾದ ಮಹಾತ್ಮನಾದ ರಾಜಶ್ರೇಷ್ಠನಾದ ಜನಮೇಜಯನ ಸರ್ಪಯಾಗದಲ್ಲಿ ಕೃಷ್ಣದ್ವೈಪಾಯನರಾದ ವ್ಯಾಸರು ಹೇಳಿದ ವಿವಿಧವಾದ ಪುಣ್ಯಕಥೆಗಳನ್ನೂ ಹಾಗೆಯೇ ವೈಶಂಪಾಯನರು ಹೇಳಿದ ಪುಣ್ಯ ಕಥೆಗಳನ್ನೂ ಚೆನ್ನಾಗಿ ವಿಧಿವತ್ತಾಗಿ ಕೇಳಿದೆ.
ಶ್ರುತ್ವಾಽಹಂ ತಾ ವಿಚಿತ್ರಾರ್ಥಾ ಮಹಾಭಾರತಸಂಶ್ರಿತಾಃ |
ಬಹೂನಿ ಸಂಪರಿಕ್ರಮ್ಯ ತೀರ್ಥಾನ್ಯಾಯತನಾನಿ ಚ ॥15॥
ನಾನು ಮಹಾಭಾರತವನ್ನು ಆಧರಿಸಿದ ಆ ವಿಚಿತ್ರವಾದ ಕಥೆಗಳನ್ನು ಕೇಳಿ ಆನೇಕ ತೀರ್ಥಗಳನ್ನು ಕ್ಷೇತ್ರಗಳನ್ನು ಸಂಚರಿಸಿದೆ.
ಸಮಂತಪಂಚಕಂ ನಾಮ ಪುಣ್ಯಂ ದ್ವಿಜನಿಷೇವಿತಮ್ |
ಗತವಾನಸ್ಮಿ ತಂ ದೇಶಂ ಯುದ್ಧಂ ಯತ್ರಾಭವತ್ ಪುರಾ ॥16॥
ಕುರೂಣಾಂ ಪಾಂಡವಾನಾಂ ಚ ಸರ್ವೇಷಾಂ ಚ ಮಹೀಕ್ಷಿತಾಮ್ |
ದಿದೃಕ್ಷುರಾಗತಸ್ತಸ್ಮಾತ್ ಸಮೀಪಂ ಭವತಾಮಿಹ ॥17॥
ನಾನು ಬ್ರಾಹ್ಮಣರಿಂದ ಸೇವಿತವಾದ ಸಮಂತಪಂಚಕ ಎಂಬ ಪುಣ್ಯಕ್ಷೇತ್ರಕ್ಕೆ ಹೋದೆನು. ಆ ಸ್ಥಳದಲ್ಲಿ ಹಿಂದೆ ಮಹಾಭಾರತಯುದ್ಧವು ನಡೆದಿತ್ತಷ್ಟೆ? ಕೌರವರಿಗೂ ಪಾಂಡವರಿಗೂ ಮತ್ತು ಉಳಿದ ರಾಜರಿಗೂ ಯುದ್ಧನಡೆದ ಆ ಸ್ಥಳವನ್ನು ನೋಡಿ ನಿಮ್ಮನ್ನು ನೋಡುವ ಆಸೆಯಿಂದ ಅಲ್ಲಿಂದ ನಿಮ್ಮ ಸಮೀಪಕ್ಕೆ ಬಂದಿದ್ದೇನೆ.
ಆಯುಷ್ಮಂತಃ ಸರ್ವ ಏವ ಬ್ರಹ್ಮಭೂತಾ ಹಿ ಮೇ ಮತಾಃ |
ಅಸ್ಮಿನ್ ಯಜ್ಞೇಮಹಾಭಾಗಾಃ ಸೂರ್ಯಪಾವಕವರ್ಚಸಃ ॥18॥
ಪೂಜ್ಯರಾದ ನೀವೆಲ್ಲರೂ ಯಾವಾಗಲೂ ಮನಸ್ಸನ್ನು ದೇವರಲ್ಲಿಯೇ ಇಟ್ಟಿರುವವರು ಎಂದು ನಂಬಿದ್ದೇನೆ. ಸೂರ್ಯ ಮತ್ತು ಆಗ್ನಿಗೆ ಸಮಾನವಾದ ಕಾಂತಿಯುಳ್ಳ ಮಹಾನುಭಾವರಾದ ನೀವೆಲ್ಲರೂ ಈ ಯಜ್ಞದಲ್ಲಿ ಭಾಗವಹಿಸುತ್ತಿದ್ದೀರಿ.
ಕೃತಾಭಿಷೇಕಾಃ ಶುಚಯಃ ಕೃತಜಪ್ಯಾ ಹುತಾಗ್ನಯಃ |
ಭವಂತ ಆಸತೇ ಸ್ವಸ್ಥಾ ಬ್ರುವೀಮಿ ಕಿಮಹಂ ದ್ವಿಜಾಃ ॥19॥
ನೀವೆಲ್ಲರೂ ಸ್ನಾನವನ್ನು ಮಾಡಿ, ಜಪವನ್ನು ಮಾಡಿ ಅಗ್ನಿಹೋತ್ರವನ್ನು ಮುಗಿಸಿ ಶುದ್ಧರಾಗಿ ಸ್ವಸ್ಥವಾದ ಮನಸ್ಸಿನಿಂದ ಕುಳಿತಿದ್ದೀರಿ. ಬ್ರಾಹ್ಮಣರೇ! ನಾನು ನಿಮಗೆ ಏನನ್ನು ಹೇಳಲಿ?
ಪುರಾಣಸಂಶ್ರಿತಾಃ ಪುಣ್ಯಾ ಕಥಾ ವಾ ಧರ್ಮಸಂಶ್ರಿತಾಃ |
ಇತಿವೃತ್ತಂ ನರೇಂದ್ರಾಣಾಮೃಷೀಣಾಂ ಚ ಮಹಾತ್ಮನಾಮ್ ॥20॥
ಪುರಾಣವನ್ನು ಆಧರಿಸಿದ ಪುಣ್ಯಕಥೆಗಳನ್ನು ಹೇಳಲೋ ಅಥವಾ ಧರ್ಮವನ್ನು ಆಧರಿಸಿದ ಕಥೆಗಳನ್ನು ಹೇಳಲೋ ಅಥವಾ ಮಹಾತ್ಮರಾದ ನರೇಂದ್ರರ ಮತ್ತು ಋಷಿಗಳ ಕಥೆಗಳನ್ನು ಹೇಳಲೋ?
ಋಷಯಃ
ದ್ವೈಪಾಯನೇನ ಯತ್ ಪ್ರೋಕ್ತಂ ಪುರಾಣಂ ಪರಮರ್ಷಿಣಾ |
ಸುರೈರ್ಬ್ರಹ್ಮರ್ಷಿಭಿಶ್ಚೈವ ಶ್ರುತ್ವಾ ಯದಭಿಪೂಜಿತಮ್ ॥21॥
ತಸ್ಯಾಖ್ಯಾನವರಿಷ್ಠಸ್ಯ ವಿಚಿತ್ರಪದಪರ್ವಣಃ |

ಸೂಕ್ಷ್ಮಾರ್ಥನ್ಯಾಯಯುಕ್ತಸ್ಯ ವೇದಾರ್ಥೈರ್ಭೂಷಿತಸ್ಯ ಚ ॥22॥
ಭಾರತಸ್ಯೇತಿಹಾಸಸ್ಯ ಪುಣ್ಯಾಂ ಗೂಢಾರ್ಥಸಂಯುತಾಮ್ ।
ಸಂಸ್ಕಾರೋಪಗತಾಂ ಬ್ರಾಹ್ಮೀಂ ನಾನಾಶಾಸೋಪಬೃಂಹಿತಾಮ್ ॥23॥
ಜನಮೇಜಯಸ್ಯ ಯಾಂ ರಾಜ್ಞೋ ವೈಶಂಪಾಯನ ಉಕ್ತವಾನ್ ।
ಯಥಾವತ್ ತಾಂ ಮುನಿಸ್ತುಷ್ಟ್ಯಾ ಸತ್ರೇ ದ್ವೈಪಾಯನಾಜ್ಞಯಾ ॥24॥
ವೇದೈಶ್ಚತುರ್ಭಿಃ ಸಮಿತಾಂ ವ್ಯಾಸಸ್ಯಾದ್ಭುತಕರ್ಮಣಃ ।
ಸಂಹಿತಾಂ ಶ್ರೋತುಮಿಚ್ಛಾಮೋ ಧರ್ಮ್ಯಾಂ ಪಾಪಭಯಾಪಹಾಮ್ ॥
ಪರಮ ಋಷಿಗಳಾದ ವೇದವ್ಯಾಸರು ಹೇಳಿದ ಪುರಾಣವನ್ನು ದೇವತೆಗಳೂ ಬ್ರಹ್ಮಋಷಿಗಳೂ ಕೇಳಿ ಸನ್ಮಾನಿಸಿದ್ದಾರಷ್ಟೆ. ಆ ಆಖ್ಯಾನವು ಬಹಳ ಶ್ರೇಷ್ಠವಾದುದು. ವಿಚಿತ್ರವಾದ ಪದಪರ್ವಗಳಿಂದ ಕೂಡಿದುದು. ಸೂಕ್ಷ್ಮವಾದ ಅರ್ಥಗಳನ್ನು ಮತ್ತು ನ್ಯಾಯಗಳನ್ನು ಒಳಗೊಂಡುದುದು ಮತ್ತು ವೇದಾರ್ಥಗಳಿಂದ ಭೂಷಿತವಾದುದು. ಅಂತಹ ಮಹಾಭಾರತ ಇತಿಹಾಸವು ಪವಿತ್ರವಾದುದು ರಹಸ್ಯವಾದ ಅರ್ಥಗಳಿಂದ ಕೂಡಿದುದು. ಅನೇಕ ಶಾಸ್ತ್ರಗಳ ಪ್ರಮೇಯಗಳಿಂದ ಬೃಂಹಿತವಾದುದು. ವೇದಕ್ಕೆ ಸಮಾನವಾದುದು ಮತ್ತು ಅನೇಕ ಸಂಸ್ಕಾರಗಳಿಂದ ಕೂಡಿದುದು. ಆ ಕಥೆಯನ್ನು ವೈಶಂಪಾಯನರು ರಾಜನಾದ ಜನಮೇಜಯನಿಗೆ ಸತ್ರಯಾಗದಲ್ಲಿ ವೇದವ್ಯಾಸರ ಅಪ್ಪಣೆಯಂತೆ ಸಂತೋಷದಿಂದ ಯಥಾವತ್ತಾಗಿ ತಿಳಿಸಿದರಷ್ಟೆ? ನಾಲ್ಕುವೇದಗಳಿಗೂ ಸಮಾನವಾದ ಎಲ್ಲ ಪಾಪಗಳನ್ನೂ ಭಯವನ್ನೂ ಪರಿಹರಿಸುವ ಧರ್ಮವನ್ನು ಅಭಿವೃದ್ಧಿಪಡಿಸುವ ಅದ್ಭುತ ಕರ್ಮವುಳ್ಳ ವ್ಯಾಸರು ರಚಿಸಿದ ಆ ಸಂಹಿತೆಯನ್ನು ನಾವು ಕೇಳಲು ಇಷ್ಟಪಡುತ್ತೇವೆ.
ಸೂತಃ
ಆದ್ಯಂ ಪುರುಷಮೀಶಾನಂ ಪುರುಹೂತಂ ಪುರುಷ್ಟುತಮ್ ।
ಋತಮೇಕಾಕ್ಷರಂ ಬ್ರಹ್ಮ ವ್ಯಕ್ತಾವ್ಯಕ್ತಂ ಸನಾತನಮ್ ॥26॥
ಅಸಚ್ಚ ಸಚ್ಚೈವ ಚ ಯದ್ ವಿಶ್ವಂ ಸದಸತಃ ಪರಮ್ ।
ಪರಾವರಾಣಾಂ ಸ್ರಷ್ಟಾರಂ ಪುರಾಣಂ ಪರಮವ್ಯಯಮ್ ॥27॥
ಮಂಗಲ್ಯಂ ಮಂಗಲಂ ವಿಷ್ಣುಂ ವರೇಣ್ಯಮನಘಂ ಶುಚಿಮ್ ।
ನಮಸ್ಕೃತ್ಯ ಹೃಷೀಕೇಶಂ ಚರಾಚರಗುರುಂ ಹರಿಮ್ ॥28॥
ಮಹರ್ಷೇಃ ಸರ್ವಲೋಕೇಶಪೂಜಿತಸ್ಯ ಮಹಾತ್ಮನಃ ।
ಪ್ರವಕ್ಷ್ಯಾಮಿ ಮತಂ ಕೃತ್ಸ್ನಂ ವ್ಯಾಸಸ್ಯಾಮಿತತೇಜಸಃ ॥29॥
ಜಗದಾದಿಯಲ್ಲಿ ಇರುವವನು, ಪುರುಷ ಶಬ್ದವಾಚ್ಯನು, ಸರ್ವಸಮರ್ಥನು, ಬಹಳವಾಗಿ ಸ್ತುತಿಸಲ್ಪಡುವವನು, ಅನೇಕ ಯಜ್ಞಗಳಲ್ಲಿ ಅರ್ಚಿಸಲ್ಪಡುವವನು. ಯಾವಾಗಲೂ ಏಕಪ್ರಕಾರನು. ಪ್ರಣವಪ್ರತಿಪಾದ್ಯನು, ಮೂಲರೂಪದಲ್ಲಿ ಆವ್ಯಕ್ತನಾದವನು ಅವತಾರರೂಪಗಳಲ್ಲಿ ವ್ಯಕ್ತನಾದವನು, ಅಥವಾ ಕೆಲವರಿಗೆ ವ್ಯಕ್ತ, ಕೆಲವರಿಗೆ ಅವ್ಯಕ್ತ, ವೇದಪ್ರತಿಪಾದ್ಯನು, ಕಾರ್ಯಕಾರಣಾತ್ಮಕವಾದ ಪ್ರಪಂಚಕ್ಕಿಂತ ಭಿನ್ನನಾದವನು, ದುರ್ಜನ ಮತ್ತು ಸಜ್ಜನರಿಗಿಂತಲೂ ಅತ್ಯಂತ ಭಿನ್ನನಾದವನು, ಪೂರ್ಣನಾದವನು, ಶ್ರೇಷ್ಠರಾದ ಬ್ರಹ್ಮಾದಿದೇವತೆಗಳನ್ನೂ ಕನಿಷ್ಠರಾದ ಮನುಷ್ಯಾದಿಗಳನ್ನೂ ಸೃಷ್ಟಿಮಾಡುವವನು, ಸರ್ವಾಂತರ್ಯಾಮಿಯು, ಸರ್ವೋತ್ತಮನು, ನಾಶರಹಿತನು, ಭಜಿಸುವವರಿಗೆ ಮಂಗಳವನ್ನು ಕೊಡುವವನು, ಸ್ವತಃ ಮಂಗಳರೂಪಿಯು, ಬಯಸಲ್ಪಡುವವರಲ್ಲಿ ಶ್ರೇಷ್ಠನಾದವನು, ದೋಷದೂರನು, ಶುಚಿಯು, ಸರ್ವೇಂದ್ರಿಯಗಳ ನಿಯಾಮಕನು, ಚರಾಚರವಾದ ಸಮಸ್ತಪ್ರಪಂಚಕ್ಕೆ ಗುರುವಾದವನು, ಮತ್ತು ಪಾಪ ಪರಿಹಾರಕನಾದ ವಿಷ್ಣುವನ್ನು ನಮಸ್ಕರಿಸಿ ಮಹಾ ತೇಜಸ್ಸುಳ್ಳ ಮಹಾತ್ಮರಾದ ಸರ್ವಲೋಕೇಶರಿಂದ ಪೂಜಿತರಾದ ಮಹರ್ಷಿಗಳಾದ ವೇದವ್ಯಾಸದೇವರ ಸಮಗ್ರವಾದ ಅಭಿಪ್ರಾಯವನ್ನು ತಿಳಿದು ನಾನು ಕಥೆಯನ್ನು ಹೇಳುತ್ತೇನೆ.
ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ।
ಯಸ್ಯ ಪ್ರಸಾದಾದ್ ವಕ್ಷ್ಯಾಮಿ ನಾರಾಯಣಕಥಾಮಿಮಾಮ್ ॥30॥
ಅಮಿತ ತೇಜಸ್ಸುಳ್ಳ, ಪೂರ್ಣಷಡ್ಗುಣೈಶ್ವರ್ಯಸಂಪನ್ನರಾದ, ವೇದವ್ಯಾಸದೇವರಿಗೆ ನಮಸ್ಕಾರ, ಅವರ ಅನುಗ್ರಹದಿಂದಲೇ ನಾನು ಈ ನಾರಾಯಣನ ಕಥೆಯನ್ನು ಹೇಳುವೆನು.
ಸರ್ವಾಶ್ರಮಾಭಿಗಮನಂ ಸರ್ವತೀರ್ಥಾವಗಾಹನಮ್ ।
ನ ತಥಾ ಫಲದಂ ಸೂತೇ1 ನಾರಾಯಣಕಥಾ ಯಥಾ ॥31॥
ಎಲ್ಲಾ ಆಶ್ರಮಗಳಿಗೆ ಯಾತ್ರೆಯನ್ನು ಮಾಡಿದರೂ, ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದರೂ ಸಹ ನಾರಾಯಣನ ಕಥೆಯನ್ನು ಕೇಳುವುದರಿಂದ ಉಂಟಾಗುವ ಫಲವು ಆವುಗಳಿಂದ ಎಂದೂ ದೊರೆಯುವುದಿಲ್ಲ.
1 ಸೂತೇ = ಫಲಂ ಪ್ರಸೂತೇ
ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥32॥
ನಾರಾಯಣನಿಗೆ ಸಮನಾದ ವಸ್ತುವು ವರ್ತಮಾನ ಕಾಲದಲ್ಲಿ ಇಲ್ಲ. ಭೂತಕಾಲದಲ್ಲಿ ಇರಲಿಲ್ಲ ಮತ್ತು ಭವಿಷ್ಯತ್‌ಕಾಲದಲ್ಲಿ ಇರುವುದಿಲ್ಲ. ಈ ಒಂದು ಸತ್ಯವಾಕ್ಯವನ್ನು ಆಧರಿಸಿ ನಾನು ಎಲ್ಲಾ ಪ್ರಮೇಯಗಳನ್ನೂ ಸಾಧಿಸುತ್ತೇನೆ.
ಆಚಖ್ಯುಃ ಕವಯಃ ಕೇಚಿತ್ ಸಂಪ್ರತ್ಯಾಚಕ್ಷತೇ ಪರೇ ।
ಆಖ್ಯಾಸ್ಯಂತಿ ತಥೈವಾನ್ಯೇ ಇತಿಹಾಸಮಿಮಂ ಭುವಿ ॥33॥

ಈ ಮಹಾಭಾರತ ಇತಿಹಾಸವನ್ನು ಹಿಂದಿನ ಜ್ಞಾನಿಗಳು ವ್ಯಾಖ್ಯಾನ ಮಾಡಿದರು. ಈಗಲೂ ಕೂಡ ವ್ಯಾಖ್ಯಾನ ಮಾಡುತ್ತಾರೆ, ಮುಂದೆಯೂ ಕೂಡ ಇನ್ನೂ ಅನೇಕರು ಭೂಮಿಯಲ್ಲಿ ವ್ಯಾಖ್ಯಾನ ಮಾಡುವರು.
ಇದಂ ತು ತ್ರಿಷು ಲೋಕೇಷು ಮಹಾಜ್ಞಾನಂ ಪ್ರತಿಷ್ಠಿತಮ್ |
ವಿಸ್ತರೈಶ್ಚ ಸಮಾಸೈಶ್ಚ ಸಾಧ್ಯತೇಯದ್ ದ್ವಿಜಾತಿಭಿಃ ||34||
ಇದು ಎಂದರೆ ಈ ಮಹಾಭಾರತವು ಮೂರುಲೋಕಗಳಲ್ಲಿಯೂ ಇರತಕ್ಕ ದೊಡ್ಡ ಜ್ಞಾನಸಾಧನವಾಗಿದೆ. ದ್ವಿಜರು ಇದನ್ನು ಸಂಕ್ಷೇಪವಾಗಿಯೂ ಮತ್ತು ವಿಸ್ತಾರವಾಗಿಯೂ ನಿರೂಪಿಸುತ್ತಾರೆ.
ಅಲಂಕೃತಂ ಶುಭೈ ಶಬ್ದೈಃ ಸಮಯೈ ರ್ದಿವ್ಯಮಾನುಷೈಃ |
ಛಂದೋವೃತ್ತೈಶ್ಚ ವಿವಿಧೈರನ್ವಿತಂ ವಿದುಷಾಂ ಪ್ರಿಯಮ್ ||35||
ಇದು ಪವಿತ್ರವಾದ ಶಬ್ದಗಳಿಂದಲೂ ದೇವತೆಗಳ ಹಾಗೂ ಮನುಷ್ಯರ ಅನೇಕ ಶಬ್ದನಿಯಮಗಳಿಂದಲೂ, ಅನೇಕವಿಧವಾದ ಛಂದೋಬದ್ಧ ವೃತ್ತಗಳಿಂದಲೂ ಅಲಂಕೃತವಾಗಿ ಜ್ಞಾನಿಗಳಿಗೆ ಅತಿಪ್ರಿಯವಾಗಿದೆ.
ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ |
ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ ||36||
ಸತ್ಯವತಿಯ ಸುತರಾದ ವೇದವ್ಯಾಸರು ತಮ್ಮ ತಪಸ್ಸಿನ ಶಕ್ತಿಯಿಂದಲೂ ಮತ್ತು ಬ್ರಹ್ಮಚರ್ಯದಿಂದಲೂ ಸನಾತನವೇದವನ್ನು ವಿಭಾಗ ಮಾಡಿ ಅನಂತ ಪುಣ್ಯದಾಯಕವಾದ ಈ ಇತಿಹಾಸವನ್ನು ರಚಿಸಿದರು.
ಪುಣ್ಯೇಹಿಮವತಃ ಪಾದೇ ಮಧ್ಯೇ ಗಿರಿಗುಹಾಲಯೇ |
ವಿಶೋಧ್ಯ ದೇಹಂ ಧರ್ಮಾತ್ಮಾ ದರ್ಭಸಂಸ್ತರಮಾಶ್ರಿತಃ ||37||
ಶುಚಿಃ ಸನಿಯಮೋ ವ್ಯಾಸಃ ಶಾಂತಾತ್ಮಾ ತಪಸಿ ಸ್ಥಿತಃ |
ಭಾರತಸ್ಯೇತಿಹಾಸಸ್ಯ ಧರ್ಮೇಣಾನ್ವೀಕ್ಷ್ಯ ತಾಂ ಗತಿಮ್ |
ಪ್ರವಿಶ್ಯ ಯೋಗಂ ಜ್ಞಾನೇನ ಸೋಽಪಶ್ಯತ್ ಸರ್ವಮಂತತಃ ||38||
ವೇದವ್ಯಾಸರು ಪವಿತ್ರವಾದ ಹಿಮಾಲಯದ ತಪ್ಪಲಲ್ಲಿ ತಮ್ಮ ಗುಹೆಯ ಮಧ್ಯದಲ್ಲಿ ದೇಹವನ್ನು ಶೋಧಿಸಿ ದರ್ಭಾಸನದ ಮೇಲೆ ಕುಳಿತು ಶುಚಿಯಾಗಿ, ನಿಯಮಬದ್ಧರಾಗಿ, ಸ್ವಸ್ಥಚಿತ್ತರಾಗಿ ಜ್ಞಾನದೃಷ್ಟಿಯಿಂದ ಈ ಭಾರತ ಇತಿಹಾಸದ ಸಮಗ್ರಗತಿಯನ್ನು ಧರ್ಮಶಕ್ತಿಯಿಂದ ಮತ್ತು ತಮ್ಮ ಯೋಗಶಕ್ತಿಯಿಂದ ಪೂರ್ಣವಾಗಿ ನೋಡಿದರು.
ನಿಷ್ಪ್ರಭೇಽಸ್ಮಿನ್ನಿರಾಲೋಕೇ ಸರ್ವತಸ್ತಮಸಾವೃತೇ |
ಬೃಹದಂಡಮಭೂದೇಕಂ ಪ್ರಜಾನಾಂ ಬೀಜಮಕ್ಷಯಮ್ ||39||
ಸೃಷ್ಟಿಗಿಂತ ಮುಂಚೆ ತಮಸ್ಸಿನಿಂದ ಆವೃತವಾಗಿದ್ದ ಪ್ರಕಾಶ ಶೂನ್ಯವಾಗಿದ್ದ ಈ ಆಕಾಶದಲ್ಲಿ ಎಲ್ಲ ಪ್ರಜೆಗಳ ಸೃಷ್ಟಿಗೆ ಕಾರಣವಾದ ಪ್ರವಾಹತಃ ನಿತ್ಯವಾದ ಬ್ರಹ್ಮಾಂಡವು ಉದಯಿಸಿತು.
ಯುಗಸ್ಯಾದಿನಿಮಿತ್ತಂ ತನ್ಮಹಾದಿವ್ಯಂ ಪ್ರಚಕ್ಷತೇ |
ಯಸ್ಮಿಂಸ್ತು ಶ್ರೂಯತೇ ನಿತ್ಯಂ ಸೌತಿ ಬ್ರಹ್ಮ ಸನಾತನಮ್ ||40||
ಇದನ್ನು ಕೃತ ಮೊದಲಾದ ಯುಗಗಳ ನಿಮಿತ್ತವೆಂದು ಹೇಳುತ್ತಾರೆ. ಇದು ತುಂಬಾ ದೊಡ್ಡದಾದುದು ಮತ್ತು ದಿವ್ಯವಾದುದು ಇದರೊಳಗೆ ಜಗತ್ ಸೃಷ್ಟಿಕರ್ತನಾದ ವೇದಪ್ರತಿಪಾದ್ಯನಾದ ನಾರಾಯಣನು (ವಿರಾಟ್‌ರೂಪದಿಂದ) ಇರುವನೆಂದು ಹೇಳಲ್ಪಡುತ್ತದೆ.
ಅಸಚ್ಚಾಪ್ಯನುಜಾತಂ ಚ ಸರ್ವತ್ರ ಸಮತಾಂ ಗತಮ್ |
ಅವ್ಯಕ್ತಂ ಕಾರಣಂ ಸೂಕ್ಷ್ಮಂ ಯತ್ತತ್ ಸದಸದಾತ್ಮಕಮ್ |
ಯಸ್ಮಿನ್ ಪಿತಾಮಹೋ ಜಜ್ಞೇ ಪ್ರಭುರೇಕಃ ಪ್ರಜಾಪತಿಃ ||41||
ಆ ಪರಮಾತ್ಮನು ಪ್ರಳಯಕಾಲದಲ್ಲಿ ಇಲ್ಲದಿದ್ದ ಜಗತ್ತನ್ನು ಅನಂತರ ಸೃಷ್ಠಿಮಾಡಿದವನು. ಸರ್ವತ್ರಸಮನಾದವನು ಅವನು ಅವ್ಯಕ್ತನಾಗಿ ಜಗತ್ತಿಗೆ ಕಾರಣನಾಗಿದ್ದಾನೆ. ಅವನು ಸರ್ವ ಜೀವರ ಅಂತರ್ಯಾಮಿಯಾಗಿದ್ದಾನೆ. ಎಲ್ಲ ಪ್ರಜೆಗಳಿಗೂ ಒಡೆಯನಾದ ಚತುರ್ಮುಖಬ್ರಹ್ಮನು ಅವನಿಂದ ಜನಿಸಿದನು.
ಬ್ರಹ್ಮಾ ಸುರಗುರುಃ ಸ್ಥಾಣುರ್ಮನುಶ್ಚ ಪರಮೇಷ್ಠಿಜಃ |
ಪ್ರಚೇತಸಸ್ತಥಾ ದಕ್ಷೋ ದಕ್ಷಪುತ್ರಾಶ್ಚ ಸಪ್ತ ಯೇ ||42||
ತತಃ ಪ್ರಜಾನಾಂ ಪತಯಃ ಪ್ರಾಭವನ್ನೇಕವಿಂಶತಿಃ |
ಪುರುಷಶ್ಚಾಪ್ರಮೇಯಾತ್ಮಾ ಯಂ ಸರ್ವಂ ಋಷಯೋ ವಿದುಃ ||43||
ದೇವತೆಗಳ ಗುರುವಾದ ಬ್ರಹ್ಮದೇವರು, ರುದ್ರ, ಬ್ರಹ್ಮದೇವರ ಮಗನಾದ ಸ್ವಾಯಂಭುವ ಮನು, ಪ್ರಚೇತಸರ ಮಗನಾದ ದಕ್ಷ ಮತ್ತು ದಕ್ಷಪುತ್ರರು ಏಳುಮಂದಿ ಇವರಲ್ಲದೆ ಪ್ರಜೆಗಳಲ್ಲಿ ಶ್ರೇಷ್ಠರಾದ ಇಪ್ಪತ್ತೊಂದು ಮಂದಿ ಪ್ರಜಾಪತಿಗಳು ಅವನಿಂದಲೇ ಜನಿಸಿದರು. ಉಳಿದ ಮನುಗಳು ಹನ್ನೆರಡುಮಂದಿ. ಲೋಕಪಾಲಕರಾದ ಇಂದ್ರಾದಿ ವಾಯು ಪರ್ಯಂತ ಆರುಮಂದಿ, ಉತ್ತರಾದಿಗಭಿಮಾನಿಯಾದ ಸೋಮ ಮತ್ತು ಕುಬೇರ ಎರಡುಮಂದಿ. ಅಧೋಲೋಕಾಭಿಮಾನಿಯಾದ ಶೇಷ ಒಬ್ಬ. ಹೀಗೆ ಒಟ್ಟು ಇಪ್ಪತ್ತೊಂದು ಮಂದಿ ಪ್ರಜಾಪತಿಗಳು.
ಅಪ್ರಮೇಯನಾದ ಸರ್ವವ್ಯಾಪ್ತನಾದ ಪುರುಷನಾಮಕಹರಿಯೂ ಸಹ ಅವನಿಂದಲೇ ಜನಿಸಿದನೆಂದು ಋಷಿಗಳು ಹೇಳುತ್ತಾರೆ.
ವಿಶ್ವೇದೇವಾಸ್ತಥಾದಿತ್ಯಾ ವಸವೋಽಥಾಶ್ವಿನಾವಪಿ |
ಯಕ್ಷಾಃ ಸಾಧ್ಯಾಃ ಪಿಶಾಚಾಶ್ಚ ಗುಹ್ಯಕಾಃ ಪಿತರಸ್ತಥಾ ||44||
ಸಪ್ತರ್ಷಯಶ್ಚ ವಿದ್ವಾಂಸಃ ಶಿಷ್ಟಾ ಬ್ರಹ್ಮರ್ಷಯಸ್ತಥಾ |
ರಾಜರ್ಷಯಶ್ಚ ಬಹವಃ ಸಂಭೂತಾ ಭೂರಿತೇಜಸಃ ||45||

ಹಾಗೆಯೇ ವಿಶ್ವೇದೇವತೆಗಳು, ಆದಿತ್ಯರು, ವಸುಗಳು, ಅಶ್ವಿನಿಗಳು, ಯಕ್ಷರು, ಸಾಧ್ಯರು, ಪಿಶಾಚಗಳು, ಗುಹ್ಯಕರು, ಪಿತೃಗಳು, ವಿದ್ವಾಂಸರಾದ ಸಪ್ತರ್ಷಿಗಳು, ಉಳಿದ ಬ್ರಹ್ಮರ್ಷಿಗಳು, ಮಹಾಪರಾಕ್ರಮಶಾಲಿಗಳಾದ ರಾಜರ್ಷಿಗಳು ಈ ಎಲ್ಲರೂ ಅವನಿಂದಲೇ ಜನಿಸಿದರು.
ಸಂವತ್ಸರರ್ತವೋ ಮಾಸಾಃ ಪಕ್ಷಾಹೋರಾತ್ರಯಃ ಕ್ರಮಾತ್ |
ಯಚ್ಚಾನ್ಯದಪಿ ತತ್ಸರ್ವಂ ಸಂಭೂತಂ ಲೋಕಸಂಜ್ಞಿತಮ್ ॥46॥
ಸಂವತ್ಸರ, ಋತುಗಳು, ಮಾಸಗಳು, ಪಕ್ಷಗಳು, ಅಹೋರಾತ್ರಿಗಳು ಮತ್ತು ಉಳಿದ ಜಗತ್ತೆಂದು ಕರೆಸಿಕೊಳ್ಳಲ್ಪಡುವ ಎಲ್ಲವೂ ಅವನಿಂದಲೇ ಜನಿಸಿದವು.
ಯದಿದಂ ದೃಶ್ಯತೇ ಕಿಂಚಿದ್ ಭೂತಂ ಸ್ಥಾವರಜಂಗಮಮ್ |
ಪುನಃ ಸಂಕ್ಷಿಪ್ಯತೇ ಸರ್ವಂ ಜಗತ್ ಪ್ರಾಪ್ತೇ ಯುಗಕ್ಷಯೇ ॥47॥
ನಮ್ಮ ಕಣ್ಣಿಗೆ ಕಾಣುತ್ತಿರುವ ಉತ್ಪನ್ನವಾದ ಈ ಚರಾಚರಾತ್ಮಕವಾದ ಜಗತ್ತು ಯುಗಾಂತಕಾಲವು ಸಮೀಪಿಸಿದಾಗ ಅವನಿಂದಲೇ ಪುನಃ ಸಂಹರಿಸಲ್ಪಡುತ್ತದೆ.
ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ |
ದೃಶ್ಯಂತೇ ತಾನಿತಾನ್ಯೇವ ತಥಾ ಭಾವಾ ಯುಗಾದಿಷು ॥48॥
ಹೇಗೆ ಬೇರೆ ಬೇರೆ ಋತುಗಳಲ್ಲಿ ಆಯಾ ಋತುಗಳ ಚಿಹ್ನೆಗಳು ಪರ್ಯಾಯಕ್ರಮದಿಂದ ಸತತವಾಗಿ ಕಂಡುಬರುತ್ತವೆಯೋ ಹಾಗೆಯೇ ಕೃತಾದಿಯುಗಗಳಲ್ಲಿ ಎಲ್ಲ ಧರ್ಮಗಳೂ ಪರ್ಯಾಯವಾಗಿ ಹಾಗೆಯೇ ಬರುತ್ತವೆ.
ಏವಮೇತದನಾದ್ಯಂತಂ ಭೂತಸಂಘಾತಕಾರಕಮ್ |
ಅನಾದಿನಿಧನಂ ಲೋಕೇ ಚಕ್ರಂ ಸಂಪರಿವರ್ತತೇ ॥49॥
ಈ ಪ್ರಜೆಗಳ ಸಮೂಹಕ್ಕೆ ಕಾರಣವಾದ ಈ ಜಗಚ್ಚಕ್ರವು ಪ್ರವಾಹದ ರೀತಿಯಲ್ಲಿ ಆದಿ ಮತ್ತು ಅಂತ್ಯ ಶೂನ್ಯವಾಗಿದೆ. ಈ ಚಕ್ರವು ಯಾವಾಗಲೂ ತಿರುಗುತ್ತಿರುತ್ತದೆ.
ತ್ರಯಸಿತ್ರಂಶತ್ ಸಹಸ್ರಾಣಿ ತ್ರಯಸಿತ್ರಂಶಚ್ಚತಾನಿ ಚ |
ತ್ರಯಸಿತ್ರಂಶಚ್ಚ ದೇವಾನಾಂ ಸೃಷ್ಟಿಃ ಸಂಕ್ಷೇಪಲಕ್ಷಣಾ ॥50॥
ದೇವತೆಗಳ ಸೃಷ್ಟಿಯನ್ನು ಸಂಕ್ಷೇಪವಾಗಿ ಹೇಳುವುದಾದರೆ ಮೂವತ್ತುಮೂರು ದೇವತೆಗಳು, ಮೂರುಸಾವಿರದ ಮುನ್ನೂರು ದೇವತೆಗಳು, ಮೂವತ್ತು ಮೂರು ಸಾವಿರ ದೇವತೆಗಳು ಮತ್ತು ಮೂವತ್ತುಮೂರು ಕೋಟಿ ದೇವತೆಗಳು ಎಂದು ಹೇಳಬೇಕು. ಮೂವತ್ತಮೂರು ದೇವತೆಗಳು ಎಂದು ಹೇಳಿವಾಗ ಬ್ರಹ್ಮ, ವಿಷ್ಣು, ಮಹೇಶ್ವರರು, ದಶ ರುದ್ರುರು, ಗರುಡ, ಏಕಾದಶ ಆದಿತ್ಯರು, ಅಷ್ಟ ವಸುಗಳು, ಹೀಗೆ ಒಟ್ಟು ಮೂವತ್ತಮೂರು. ಇದು ಅತಿ ಸಂಕ್ಷಿಪ್ತವಾದ ದೇವತೆಗಳ ಗಣನೆ ಅಥವಾ ದೇವರನ್ನು ಬಿಟ್ಟು ಬ್ರಹ್ಮ, ಗರುಡ ಮತ್ತು ಇಂದ್ರ ಈ ಮೂವರು, ಏಕಾದಶ ರುದ್ರುರು, ದ್ವಾದಶ ಆದಿತ್ಯರು ಮತ್ತು ಅಷ್ಟ ವಸುಗಳು ಒಟ್ಟು ಮೂವತ್ತಮೂರು ಎಂದು ತಿಳಿಯಬೇಕು. ದೇವತೆಗಳ ಸೃಷ್ಟಿಯನ್ನು ಅತಿ ಸಂಕ್ಷೇಪವಾಗಿ ಹೇಳುವುದಾದರೆ ಮೂವತ್ತಮೂರು ಎಂದು. ಅತಿ ವಿಸ್ತಾರವಾಗಿ ಹೇಳುವುದಾದರೆ ಮೂವತ್ತಮೂರು ಕೋಟಿ ಎಂದು ತಿಳಿಯಬೇಕು.
ದಿವಸ್ಪುತ್ರೋಬೃಹದ್ಭಾನುಶ್ಚಕ್ಷುರಾತ್ಮಾ ವಿಭಾವಸುಃ |
ಸವಿತಾ ಚ ಋಚೀಕೋಽರ್ಕೋ ಭಾನುರಾವಾಹಕೋ ರವಿಃ |
ಪುತ್ರಾ ವಿವಸ್ವತಃ ಸರ್ವೇ ಮನುಸ್ತೇಷಾಮಥಾಽವರಃ ॥51॥
ದಿವಸ್ಪುತ್ರ, ಬೃಹದ್ಭಾನು, ಚಕ್ಷು, ಆತ್ಮ, ವಿಭಾವಸು, ಸವಿತೃ , ಋಚೀಕ, ಅರ್ಕ, ಭಾನು, ಆವಾಹಕ, ರವಿ ಈ ಹನ್ನೊಂದು ವಿವಸ್ವಂತನಾದ ಸೂರ್ಯನ ಮೂರ್ತಿಗಳು ಒಂದು ವಿವಕ್ಷೆಯಿಂದ ಸೂರ್ಯನ ಪುತ್ರರೂ ಸಹ. ವೈವಸ್ವತಮನುವು ಅವರೆಲ್ಲರಿಗಿಂತಲೂ ಚಿಕ್ಕವನು.
ದೇವಭ್ರಾಟ್ ತನಯಸ್ತಸ್ಯ ತಸ್ಮಾತ್ ಸುಭ್ರಾಡಿತಿ ಸ್ಮೃತಃ |
ಸುಭ್ರಾಜಸ್ತು ತ್ರಯಃ ಪುತ್ರಾಃ ಪ್ರಜಾವಂತೋ ಬಹುಶ್ರುತಾಃ |
ದಶಜ್ಯೋತಿಃ ಶತಜ್ಯೋತಿಃ ಸಹಸ್ರಜ್ಯೋತಿರಾತ್ಮವಾನ್ ॥52॥
ದೇವಭ್ರಾಟ್ ಎಂಬುವನು ವೈವಸ್ವತಮನುವಿನ ಮಗ, ಆವನ ಮಗ ಸುಭ್ರಾಟ್, ಸುಭ್ರಾಜನಿಗೆ ಬಹುಶ್ರುತರಾದ ಅನೇಕಪ್ರಜೆಗಳನ್ನು ಹೊಂದಿದಂತಹ ಮೂರು ಜನ ಮಕ್ಕಳು. ಅವರ ಹೆಸರು ದಶಜ್ಯೋತಿ, ಶತಜ್ಯೋತಿ, ಮತ್ತು ಸಹಸ್ರಜ್ಯೋತಿ ಎಂದು. ಅವರೆಲ್ಲರೂ ಭಗವನ್ನಿಷ್ಠರಾದವರು.
ದಶಪುತ್ರಸಹಸ್ರಾಣಿ ದಶಜ್ಯೋತೇರ್ಮಹಾತ್ಮನಃ |
ತತೋ ದಶಗುಣಾಶ್ಚಾನ್ಯೇ ಶತಜ್ಯೋತೇರಿಹಾತ್ಮಜಾಃ ॥53॥
ಮಹಾತ್ಮ ನಾದ ದಶಜ್ಯೋತಿಗೆ ಹತ್ತುಸಾವಿರ ಮಕ್ಕಳು. ಶತಜ್ಯೋತಿಗೆ ಅದರ ಹತ್ತರಷ್ಟು ಮಕ್ಕಳು.
ಭೂಯಸ್ತತೋ ದಶಗುಣಾಃ ಸಹಸ್ರಜ್ಯೋತಿಷಃ ಸುತಾಃ |
ತೇಭ್ಯೋಽಯಂ ಕುರುವಂಶಶ್ಚ ಯದೂನಾಂ ಭರತಸ್ಯ ಚ ॥54॥
ಯಯಾತೀಕ್ಷ್ವಾಕುವಂಶಶ್ಚ ರಾಜರ್ಷೀಣಾಂ ಚ ಸರ್ವಶಃ |
ಸಂಭೂತಾ ಬಹವೋ ವಂಶಾ ಭೂತಸಂಘಾಃ ಸುವಿಸ್ತರಾಃ ॥55॥
ಸಹಸ್ರಜ್ಯೋತಿಯ ಗಂಡು ಮಕ್ಕಳು ಅದಕ್ಕಿಂತ ಹತ್ತುಪಟ್ಟು ಹೆಚ್ಚಾದವರು. ಅವರಿಂದಲೇ ಕುರುವಂಶ, ಯದುವಂಶ, ಭರತವಂಶ, ಯಯಾತಿವಂಶ, ಇಕ್ಷ್ವಾಕುವಂಶ ಅಲ್ಲದೆ ಇನ್ನೂ ಅನೇಕ ರಾಜರ್ಷಿವಂಶಗಳು, ಅಷ್ಟೇಅಲ್ಲದೆ ಇನ್ನೂ ಅನೇಕ ವಿಸ್ತಾರವಾದ ಜೀವಸಮುದಾಯವೂ ಉಂಟಾದವು.

ಭೂತಸ್ಥಾನಾನಿ ಸರ್ವಾಣಿ ರಹಸ್ಯಂ ತ್ರಿವಿಧಂ ಚಂವಿಕ್ |
ವೇದಾ ಯೋಗಃ ಸವಿಜ್ಞಾನೋ ಧರ್ಮೋಽರ್ಥಃ ಕಾಮ ಏವ ಚ ಯತ್ |
ಧರ್ಮಾರ್ಥಕಾಮಶಾಸ್ತ್ರಾಣಿ ಶಾಸ್ತ್ರಾಣಿ ವಿವಿಧಾನಿ ಚ |
ಲೋಕಯಾತ್ರಾವಿಧಾನಂ ಚ ಸಂಭೂತಂ ದೃಷ್ಟವಾನ್ನೃಷಿಃ ॥56॥
ಎಲ್ಲ ಜೀವರ ಆಶ್ರಯಸ್ಥಾನಗಳು, ಮೂರುವಿಧವಾದ ರಹಸ್ಯಗಳು, ಎಲ್ಲಾವೇದಗಳು, ವಿದ್ಯಾಹೇತುವಾದ ಯೋಗ, ಧರ್ಮ, ಅರ್ಥ ಕಾಮಗಳು, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಮತ್ತು ಉಳಿದೆಲ್ಲಾ ಶಾಸ್ತ್ರಗಳು, ಲೋಕಯಾತ್ರೆಯ ರೀತಿಗಳು. ಎಲ್ಲವನ್ನೂ ವ್ಯಾಸರು ತಮ್ಮ ದಿವ್ಯ ದೃಷ್ಠಿಯಲ್ಲಿ ನೋಡಿದರು.
ವಾಯುದೇವರೇ ಬ್ರಹ್ಮಪದವಿಗೆ ಬರುವವರು. ರುದ್ರನೇ ಶೇಷಪದವಿಗೆ ಬರುವವನು, ದೇವಪದಕ್ಕೆ ಯೋಗ್ಯರಾದವರಿಗೆ ದೇವತ್ವಪ್ರಾಪ್ತಿ ಮೊದಲಾದವುಗಳು ದೇವರಹಸ್ಯ. ಬ್ರಹ್ಮ, ರುದ್ರ ಎಲ್ಲಾ ನಾಮಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಹೇಳುತ್ತವೆ ಎಂಬುದು ವೇದ ರಹಸ್ಯ. ಸಜ್ಜನರಿಗೆ ಹಿತವಾಗುವಂತೆ ನುಡಿಯುವುದು ಮತ್ತು ನಡೆಯುವುದೇ ಸತ್ಯ ಎಂಬುದು ಧರ್ಮರಹಸ್ಯ. ಇವು ಮೂರು ನಿಜವಾದ ರಹಸ್ಯಗಳು. ದ್ರೌಪದಿಯ ದೇಹದಲ್ಲಿ ಪಂಚದೇವಿಯರು ಇದ್ದಾರೆಂಬುದು ದೇವ ರಹಸ್ಯ. ಕುಂತಿಗೆ ದೂರ್ವಾಸರು ಕೊಟ್ಟ ಅಥರ್ವಣಮಂತ್ರೋಪದೇಶವು ವೇದರಹಸ್ಯ. ಸಂತಾನಾರ್ಥವಾಗಿ ಪಾಂಡುವು ಮಾಡಿದಂತೆ ತನ್ನ ಪತ್ನಿಗೆ ತನಗಿಂತ ಉತ್ತಮಪುರುಷನ ಸಂಯೋಜನೆಯು ಧರ್ಮರಹಸ್ಯ. ಈ ಮೂರುವಿಧವಾದ ರಹಸ್ಯಗಳು ಮತ್ತು ಉಳಿದೆಲ್ಲಾ ವೇದ ಶಾಸ್ತ್ರಾದಿವಿಷಯಗಳು ಭಾರತದ ಕಥೆಯಲ್ಲಿ ಸೇರಿಕೊಂಡಿರುವುದನ್ನು ವೇದವ್ಯಾಸರು ತಮ್ಮ ದಿವ್ಯದೃಷ್ಠಿಯಿಂದ ನೋಡಿದರು ಎಂದು ತಾತ್ಪರ್ಯ.
ನೀತಿರ್ಭರತವಂಶಸ್ಯ ವಿಸ್ತಾರಶ್ಚೈವ ಸರ್ವಶಃ |
ಇತಿಹಾಸಾಃ ಸಹವ್ಯಾಖ್ಯಾ ವಿವಿಧಾಃ ಶ್ರುತಯೋಽಪಿ ಚ ॥57॥
ಇಹ ಸರ್ವಮನುಕ್ರಾಂತಮುಕ್ತಂ ಗ್ರಂಥಸ್ಯ ಕಾರಣಮ್ |
ಸಂಕ್ಷೇಪೇಣೇತಿಹಾಸಸ್ಯ ತತೋ ವಕ್ಷ್ಯತಿ ವಿಸ್ತರಮ್ ॥58॥
ರಾಜನೀತಿ, ಭರತವಂಶದ ವಿಸ್ತಾರ, ಪುರಾಣಗಳಲ್ಲಿ ಹೇಳಿದ ನೀತಿ, ವ್ಯಾಖ್ಯಾನಸಹಿವಾದ ಇತಿಹಾಸಗಳು, ಅನೇಕ ಶ್ರುತಿಗಳು ಹೀಗೆ ಒಂದು ಗ್ರಂಥದ ರಚನೆಗೆ ಕಾರಣವಾದ ಎಲ್ಲ ವಿಷಯಗಳನ್ನೂ ವಿಮರ್ಶೆಮಾಡಿ ವ್ಯಾಸರು ಅದನ್ನು ಸಂಕ್ಷೇಪವಾಗಿ ಮಹಾಭಾರತದಲ್ಲಿ ಅಳವಡಿಸಿದ್ದಾರೆ. (ಆದ್ದರಿಂದ ಮಹಾಭಾರತಕ್ಕೆ ಸಂಕ್ಷೇಪಶಾಸ್ತ್ರ ಎಂತಲೂ ಹೆಸರು) ಪುನಃ ಅದನ್ನು ವಿಸ್ತಾರ ಮಾಡಿಯೂ ಹೇಳುತ್ತಾರೆ.
ವಿಸ್ತೀರ್ಯೈತಂ ಮಹಾತ್ಮಾಽಯಂ ಋಷಿಃ ಸಂಕ್ಷೇಪಮಬ್ರುವೀತ್ |
ಇಷ್ಟಂ ಹಿ ವಿದುಷಾಂ ಲೋಕೇ ಸಮಾಸವ್ಯಾಸಧಾರಣಮ್ ॥59॥
ಋಷಿಗಳು ಮತ್ತು ಮಹಾತ್ಮರಾದ ಈ ವೇದವ್ಯಾಸರು ಎಲ್ಲಾ ಶಾಸ್ತ್ರವನ್ನು ಹೀಗೆ ವಿಸ್ತಾರ ಮಾಡಿ ಅನಂತರ ಸಂಕ್ಷಿಪ್ತವಾಗಿ ಹೇಳಿದರು. ಜ್ಞಾನಿಗಳಿಗೆ ಒಂದೇ ವಿಷಯವನ್ನು ಸಂಕ್ಷೇಪ ಮತ್ತು ವಿಸ್ತಾರವಾಗಿ ಹೇಳುವುದು ಬಹಳ ಪ್ರಿಯವಾದುದು.
ಮನ್ವಾದಿ ಭಾರತಂ ಕೇಚಿದಾಸ್ತೀಕಾದಿ ತಥಾಪರೇ |
ತಥೋಪರಿಚರಾದ್ಯನ್ಯೇ ವಿಪ್ರಾಃ ಸಮ್ಯಗಧೀಯಿರೇ ॥60॥
ಈ ಭಾರತವು ಮನ್ವಾದಿಗಳನ್ನು ಹೇಳುತ್ತದೆ ಎಂದು ಕೆಲವು ವಿಪ್ರರು ಅಧ್ಯಯನ ಮಾಡುತ್ತಾರೆ. ಆಸ್ತೀಕಾದಿಗಳನ್ನು ಹೇಳುತ್ತದೆ ಎಂದು ಇನ್ನು ಕೆಲವರು, ಉಪರಿಚರ ಮೊದಲಾದುವುಗಳನ್ನು ಹೇಳುತ್ತದೆ ಎಂದು ಮತ್ತು ಕೆಲವರು ಅಧ್ಯಯನ ಮಾಡುತ್ತಾರೆ.
ಮನು ಎಂದರೆ ಮಂತ್ರಗಳು, ಗಾಯತ್ರಿ, ಸಹಸ್ರನಾಮ ಮೊದಲಾದ ಮಂತ್ರಗಳು ಅವುಗಳಿಗೆ ಅಭಿಮಾನಿ ಭೀಮಸೇನ. ಆದ್ದರಿಂದ ಭೀಮಸೇನನ ಮಹಿಮೆಯನ್ನು ಹೇಳುತ್ತದೆ ಎಂದು ಕೆಲವರು ಹೇಳುತ್ತಾರೆ. ದೇವರು, ಧರ್ಮ, ಮೋಕ್ಷ ಎಲ್ಲವೂ ಇದೆ ಎಂದು ತಿಳಿಯುವವರು ಆಸ್ತಿಕರು. ಪಂಚ ಪಾಂಡವರು ಮತ್ತು ದ್ರೌಪದಿಯು ಅಂತಹ ಆಸ್ತಿಕರಲ್ಲಿ ಅಗ್ರಗಣ್ಯರು. ಮಹಾಭಾರತವು ಅವರ ಕಥೆಯನ್ನು ಹೇಳುತ್ತದೆ ಎಂದು ಇನ್ನು ಕೆಲವರು ಅಧ್ಯಯನ ಮಾಡುತ್ತಾರೆ. ಉಪರಿಚರ ಎಂದರೆ ಎಲ್ಲರ ಮೇಲೆ ಇರುವವನು. ಸರ್ವೋತ್ತಮ ಎಂದರ್ಥ. ಆಂತಹ ಸರ್ವೋತ್ತಮನು ನಾರಾಯಣ. ಮಹಾಭಾರತವು ಸರ್ವೋತ್ತಮನಾದ ನಾರಾಯಣನ ಮಹಿಮೆಯನ್ನು ನಿರೂಪಿಸುತ್ತದೆ ಎಂದು ಇನ್ನೂ ಕೆಲವರು ಅಧ್ಯಯನ ಮಾಡುತ್ತಾರೆ. ಯಥಾಶ್ರುತ ಅರ್ಥಗ್ರಾಹಿಗಳಾದ ವಿಪ್ರರು ಮಹಾಭಾರತವು ಅರ್ಜುನ ದ್ರೌಪದಿ ಮೊದಲಾದವರ ಕಥೆ ಎಂದು ತಿಳಿಯುತ್ತಾರೆ. ಇನ್ನೂ ವಿಶೇಷವಾಗಿ ತಿಳಿದ ಜ್ಞಾನಿಗಳು ಅವರೆಲ್ಲರಲ್ಲಿಯೂ ವಾಯುದೇವರು ಸನ್ನಿಹಿತರಾಗಿರುವುದರಿಂದ ಮಹಾಭಾರತಕಥೆಯು ವಾಯುದೇವರ ಮಹಿಮೆಯನ್ನು ಪ್ರತಿಪಾದಿಸುತ್ತದೆ ಎಂದು ತಿಳಿಯುತ್ತಾರೆ. ಇನ್ನೂ ಕೆಲವು ಜ್ಞಾನಿಗಳು ಪಂಚಪಾಂಡವರಲ್ಲಿಯೂ ವಾಯುವಿನ ಅವತಾರನಾದ ಭೀಮನಲ್ಲಿಯೂ ಅಂತರ್ಯಾಮಿಯಾಗಿರುವ ಹರಿಯೇ ಸರ್ವೋತ್ತಮನಾದವನು, ಸಮಗ್ರವಾದ ಮಹಾಭಾರತವು ಅವನ ಮಹಿಮೆಯನ್ನೇ ತಿಳಿಸುತ್ತದೆ ಎಂದು ತಿಳಿಯುತ್ತಾರೆ. ಆದ್ದರಿಂದ ಈ ಮೂರು ಪಕ್ಷಗಳೂ ಸೂಕ್ತವಾಗಿಯೇ ಇವೆ.
ವಿವಿಧಂ ಸಂಹಿತಾಜ್ಞಾನಂ ದೀಪಯಂತಿ ಮನೀಷಿಣಃ |
ವ್ಯಾಖ್ಯಾನೇ ಯತತೇ ಕೇಚಿತ್ ಕೇಚಿತ್ ಗ್ರಂಥಸ್ಯ ಧಾರಣೇ ॥61॥
ಕೆಲವರು ಇಂತಹ ಮಹಾಭಾರತಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿ ಹಿಂದೆ ಹೇಳಿದ ಭಾಷಾತ್ರೈವಿಧ್ಯದಿಂದ ಕೂಡಿದ ಭಾರತಸಂಹಿತೆಯ ಅರ್ಥವನ್ನು ಪ್ರಕಾಶಗೊಳಿಸುತ್ತಾರೆ. ಇನ್ನು ಕೆಲವರು ಮಹಾಭಾರತಗ್ರಂಥದ ಧಾರಣೆಯಲ್ಲಿ ತೊಡಗುತ್ತಾರೆ.
ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ |
ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ ॥62॥
ಸತ್ಯವತೀಸುತರಾದ ವ್ಯಾಸರು ತಮ್ಮ ತಪಸ್ಸು ಮತ್ತು ಬ್ರಹ್ಮಚರ್ಯಶಕ್ತಿಯಿಂದ ಸನಾತನವಾದ ವೇದವನ್ನು ವಿಭಾಗಿಸಿ ಅನಂತರ ಪವಿತ್ರವಾದ ಈ ಮಹಾಭಾರತಗ್ರಂಥವನ್ನು ರಚಿಸಿದರು.
ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ |

ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ ಭವೇತ್ ॥63॥
ಕೃಷ್ಣದ್ವೈಪಾಯನರಾದ ವೇದವ್ಯಾಸರನ್ನು ಸಾಕ್ಷಾತ್ ನಾರಾಯಣನೆಂದೇ ತಿಳಿ. ಪುಂಡರೀಕಾಕ್ಷನಾದ ನಾರಾಯಣನಲ್ಲದೆ ಬೇರೆ ಯಾರು ಮಹಾಭಾರತವನ್ನು ರಚಿಸಲು ಸಾಧ್ಯ?
ಪರಾಶರಾತ್ಮಜಃ ಶ್ರೀಮಾನ್ ಬ್ರಹ್ಮರ್ಷಿಃ ಸಂಶಿತವ್ರತಃ |
ಮಾತುರ್ನಿಯೋಗಾದ್ ಧರ್ಮಾತ್ಮಾ ಗಾಂಗೇಯಸ್ಯ ಚ ಧೀಮತಃ ॥64॥
ಕ್ಷೇತ್ರೇ ವಿಚಿತ್ರವೀರ್ಯಸ್ಯ ಕೃಷ್ಣದ್ವೈಪಾಯನಃ ಪುರಾ |
ತ್ರೀನಗ್ನೀನಿವ ಕೌರವ್ಯಾನ್ ಜನಯಾಮಾಸ ವೀರ್ಯವಾನ್ ॥65॥
ಶ್ರೇಷ್ಠ ವ್ರತಧಾರಿಗಳೂ, ಬ್ರಹ್ಮರ್ಷಿಗಳೂ, ಧರ್ಮಾತ್ಮರೂ, ಕಾಂತಿಯುಕ್ತರೂ ಆದ ಪರಾಶರರ ಮಕ್ಕಳಾದ ವೇದವ್ಯಾಸರು ತಾಯಿಯ ಮತ್ತು ಮೇಧಾವಿಯಾದ ಭೀಷ್ಮರ ಆದೇಶದಂತೆ ವಿಚಿತ್ರವೀರ್ಯನ ಪತ್ನಿಯರಲ್ಲಿ ಮೂರು ಅಗ್ನಿಗಳಂತಿರುವ ಮೂರು ಕೌರವಶ್ರೇಷ್ಠರನ್ನು ಪಡೆದರು.
ಉತ್ಪಾದ್ಯ ಧೃತರಾಷ್ಟ್ರಂ ಚ ಪಾಂಡುಂ ವಿದುರಮೇವ ಚ |
ಜಗಾಮ ತಪಸೇ ಧೀಮಾನ್ ಪುನರೇವಾಶ್ರಮಂ ಪ್ರತಿ ॥66॥
ಧೀಮಂತರಾದ ವ್ಯಾಸರು, ಧೃತರಾಷ್ಟ್ರ, ಪಾಂಡು, ವಿದುರರನ್ನು ಉತ್ಪಾದಿಸಿ ಪುನಃ ತಪಸ್ಸು ಮಾಡಲು ಉದ್ದೇಶಿಸಿ ತಮ್ಮ ಆಶ್ರಮಕ್ಕೆ ನಡೆದರು.
ತೇಷು ಜಾತೇಷು ವೃದ್ಧೇಷು ಗತೇಷು ಚ ಪರಾಂ ಗತಿಮ್ |
ಅಬ್ರುವೀದ್ ಭಾರತಂ ಲೋಕೇ ಮಾನುಷೇಽಸ್ಮಿನ್ ಮಹಾನೃಷಿಃ ॥67॥
ಶಂತನುವಿನಿಂದ ಆರಂಭಿಸಿ ಪರೀಕ್ಷಿತ್ ರಾಜನವರೆಗೆ ಕುರುವಂಶದ ರಾಜರುಗಳು ಜನಿಸಿ ಪರಗತಿಯನ್ನು ಹೊಂದಿದ ಮೇಲೆ ಮಹರ್ಷಿಗಳಾದ ವ್ಯಾಸರು ಮನುಷ್ಯಲೋಕದಲ್ಲಿ ಮಹಾಭಾರತವನ್ನು ಪ್ರವರ್ತನಗೊಳಿಸಿದರು.
ಜನಮೇಜಯೇನ ಪೃಷ್ಟಃ ಸನ್ ಬ್ರಾಹ್ಮಣೈಶ್ಚ ಸಹಸ್ರಶಃ |
ಶಶಾಸ ಶಿಷ್ಯಮಾಸೀನಂ ವೈಶಂಪಾಯನಮಂತಿಕೇ ॥68॥
ಸಹಸ್ರಾರು ಬ್ರಾಹ್ಮಣರಿಂದಲೂ ಜನಮೇಜಯನಿಂದಲೂ ಪ್ರಾರ್ಥಿಸಲ್ಪಟ್ಟ ವ್ಯಾಸರು ಸಮೀಪದಲ್ಲಿ ಕುಳಿತಿದ್ದ ಶಿಷ್ಯರಾದ ವೈಶಂಪಾಯನರಿಗೆ ಭಾರತವನ್ನು ಹೇಳುವಂತೆ ಆದೇಶ ನೀಡಿದರು. ಭಾರತ ರಚನೆಯು ವ್ಯಾಸಾವತಾರವಾಗಿ 3ನೇ ವರ್ಷದಲ್ಲಿ ಆಗಿದೆ. ಭೂಮಿಯಲ್ಲಿ ಇದರ ಪ್ರಚಾರ ಜನಮೇಜಯನ ಕಾಲದಲ್ಲಿ ನಡೆದಿದೆ.
ಸ ಸದಸ್ಯೈಃ ಸಮಾಸೀನಂ ಶ್ರಾವಯಾಮಾಸ ಭಾರತಮ್ |
ಕರ್ಮಾಂತರೇಷು ಯಜ್ಞಸ್ಯ ಚೋದ್ಯಮಾನಃ ಪುನಃಪುನಃ ॥69॥
ಮತ್ತೆಮತ್ತೆ ಜನಮೇಜಯನಿಂದ ಪ್ರಾರ್ಥಿಸಲ್ಪಟ್ಟ ವೈಶಂಪಾಯನರು ಅವನ ಯಜ್ಞದ ಮಧ್ಯದಲ್ಲಿ ಸಮಯ ದೊರೆತಂತೆ ಸದಸ್ಯರ ಸಮ್ಮುಖದಲ್ಲಿ ಅವನಿಗೆ ಮಹಾಭಾರತವನ್ನು ನಿರೂಪಿಸಿದರು.
ವಿಸ್ತಾರಂ ಕುರುವಂಶಸ್ಯ ಗಾಂಧಾರ್ಯಾಃ ಧರ್ಮಶೀಲತಾಮ್ |
ಕ್ಷತ್ತುಃ ಪ್ರಜ್ಞಾಂ ಧೃತಿಂ ಕುಂತ್ಯಾಃ ಸಾಹ್ಯಂ ದ್ವೈಪಾಯನೋಽಬ್ರವೀತ್ ॥70॥
ಈ ಮಹಾಭಾರತದಲ್ಲಿ ದ್ವೈಪಾಯನರು ಕುರುವಂಶದ ವಿಸ್ತಾರವನ್ನೂ, ಗಾಂಧಾರಿಯ ಧರ್ಮಶೀಲತೆಯನ್ನೂ, ವಿದುರನ ಮೇಧಾವಿತನವನ್ನೂ, ಕುಂತಿಯ ಧೈರ್ಯವನ್ನೂ, ಸಹನೆಯನ್ನೂ ವರ್ಣಿಸಿದ್ದಾರೆ.
ವಾಸುದೇವಸ್ಯ ಮಾಹಾತ್ಮ್ಯಂ ಪಾಂಡವಾನಾಂ ಚ ಸತ್ಯತಾಮ್ |
ದುರ್ವೃತ್ತಂ ಧಾರ್ತರಾಷ್ಟ್ರಾಣಾಂ ಉಕ್ತವಾನ್ ಭಗವಾನೃಷಿಃ ॥71॥
ಪೂಜ್ಯರಾದ ವ್ಯಾಸರು ಈ ಗ್ರಂಥದಲ್ಲಿ ವಸುದೇವಸುತನಾದ ಕೃಷ್ಣನ ಮಹಿಮೆಯನ್ನೂ ಪಾಂಡವರ ಸತ್ಯಶೀಲತೆಯನ್ನೂ, ಧೃತರಾಷ್ಟ್ರಪುತ್ರರ ದುರ್ನಡತೆಯನ್ನೂ ನಿರೂಪಿಸಿದ್ದಾರೆ.
ಇದಂ ಶತಸಹಸ್ರಾಣಾಂ ಶ್ಲೋಕಾನಾಂ ಪುಣ್ಯಕರ್ಮಣಾಮ್ |
ಉಪಾಖ್ಯಾನೈಃ ಸಹಜ್ಞೇಯಂ ಶ್ರಾವ್ಯಂ ಭಾರತಮುತ್ತಮಮ್ ॥72॥
ಈ ಮಹಾಭಾರತಗ್ರಂಥದಲ್ಲಿ ಪುಣ್ಯಕೀರ್ತಿಗಳಾದ ಪುರುಷರಿಗೆ ಸಂಬಂಧಿಸಿದ ಒಂದು ಲಕ್ಷಶ್ಲೋಕಗಳು ಇವೆ. ಇದರಲ್ಲಿ ಅನೇಕ ಉಪಾಖ್ಯಾನಗಳು ಸೇರಿವೆ ಇಂತಹ ಶ್ರೇಷ್ಠವಾದ ಭಾರತವನ್ನು ಕೇಳಬೇಕು ಮತ್ತು ತಿಳಿದುಕೊಳ್ಳಬೇಕು. (ಭಾರತದಲ್ಲಿ ಒಟ್ಟು 1,03,034. ಒಂದು ಲಕ್ಷದ ಮೂರುಸಾವಿರದ ಮೂವತ್ತನಾಲ್ಕು ಶ್ಲೋಕಗಳು ಇವೆಯೆಂದು ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ ತಿಳಿಸಿದ್ದಾರೆ.)
ಚತುರ್ವಿಂಶತಿಸಾಹಸ್ರೀಂ ಚಕ್ರೇ ಭಾರತಸಂಹಿತಾಮ್ |
ಉಪಾಖ್ಯಾನೈರ್ವಿನೈತಾವತ್ ಭಾರತಂ ಪ್ರೋಚ್ಯತೇ ಬುಧೈಃ ॥73॥
ಅನಂತರ ವ್ಯಾಸರು ಇಪ್ಪತ್ತನಾಲ್ಕುಸಾವಿರ ಶ್ಲೋಕಗಳಿರುವ ಮಹಾಭಾರತದ ಖಿಲವೆಂದು ಕರೆಸಿಕೊಳ್ಳುವ ಹರಿವಂಶವನ್ನು ರಚನೆ ಮಾಡಿದರು. ಅದರಲ್ಲಿ ಇನ್ನು ಒಂದು ಸಾವಿರ ಶ್ಲೋಕಗಳಲ್ಲಿ ಬೇರೆ ಬೇರೆ ಉಪಖ್ಯಾನಗಳಿವೆ. (ಹರಿವಂಶದ ಒಟ್ಟು ವಿಸ್ತಾರ ಇಪ್ಪತ್ತೈದುಸಾವಿರ ಶ್ಲೋಕಗಳು)
ತತೋಽಧ್ಯರ್ಧಶತಂ ಭೂಯಃ ಸಂಕ್ಷೇಪಂ ಕೃತವಾನ್ ಋಷಿಃ |
ಅನುಕ್ರಮಣಮಧ್ಯಾಯಂ ವೃತ್ತಾಂತಾನಾಂ ಸಪರ್ವಣಾಮ್ ॥74॥
ಪೂಜ್ಯರಾದ ವ್ಯಾಸರು ಮಹಾಭಾರತದ ಮೊದಲನೆಯ ಅಧ್ಯಾಯದಲ್ಲಿಯೇ ನೂರೈವತ್ತು ಶ್ಲೋಕಗಳನ್ನು ರಚಿಸಿ ಎಲ್ಲ ಪರ್ವಗಳ ವೃತ್ತಾಂತವನ್ನು ಸಂಗ್ರಹಿಸಿ ಅನುಕ್ರಮಣಿಕಾ ಅಧ್ಯಾಯವನ್ನು ಅಳವಡಿಸಿದ್ದಾರೆ.
``ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ'' ಎಂದು ಆರಂಭಿಸಿ ``ತತ್ರೋಪನಿಷದಂ ಪುಣ್ಯಾಂ

ಕೃಷ್ಣದ್ವೈಪಾಯನೋಽಬ್ರವೀತ್'' ಎಂಬ ಶ್ಲೋಕದವರೆಗೆ ಮೊದಲನೆಯ ಅಧ್ಯಾಯದಲ್ಲಿ ಅಳವಡಿಸಿರುವ ಭಾಗವನ್ನು ಅನುಕ್ರಮಣಿಕಾಧ್ಯಾಯವೆಂದು ಹೇಳುತ್ತಾರೆ. ಇಲ್ಲಿ ಯದ್ಯಪಿ ನೂರಿಪ್ಪತ್ತೇಳು ಶ್ಲೋಕಗಳಿವೆ. ಆದರೆ ಅಕ್ಷರಗಳ ಪರಿಗಣನೆಯ ಕ್ರಮದಲ್ಲಿ ಇದನ್ನು ನೂರೈವತ್ತು ಶ್ಲೋಕಗಳಾಗಿ ಎಣಿಸುವ ರೀತಿಯನ್ನು ವಾದಿರಾಜರು ಲಕ್ಷಾಲಂಕಾರದಲ್ಲಿ ತಿಳಿಸಿದ್ದಾರೆ.

ತದಾಖ್ಯಾನವರಿಷ್ಠಂ ಸ ಕೃತ್ವಾ ದ್ವೈಪಾಯನಃ ಪ್ರಭುಃ |
ಕಥಮಧ್ಯಾಪಯಾಮೀದಂ ಶಿಷ್ಯಂ ನಿತ್ಯಮಚಿಂತಯತ್ ॥75॥

ಪ್ರಭುಗಳಾದ ದ್ವೈಪಾಯನರು ಇಂತಹ ಶ್ರೇಷ್ಠವಾದ ಭಾರತವನ್ನು ರಚಿಸಿ ಈ ಗ್ರಂಥವನ್ನು ಶಿಷ್ಯರನ್ನು ಕುರಿತು ಹೇಗೆ ನಿತ್ಯವೂ ಬೋಧಿಸಲು ಸಾಧ್ಯವಾಗುತ್ತದೆ ಎಂದು ಚಿಂತಿಸಿದರು.

ತಸ್ಯ ಚಿಂತಯತಶ್ಚಾಪಿ ಋಷೇರ್ದ್ವೈಪಾಯನಸ್ಯ ಚ |
ಸ್ಮೃತ್ಯಾಽಽಜಗಾಮ ಭಗವಾನ್ ಬ್ರಹ್ಮಾ ಲೋಕಗುರುಃ ಸ್ವಯಮ್ ॥76॥

ಋಷಿಗಳಾದ ದ್ವೈಪಾಯನರು ಹೀಗೆ ಚಿಂತಿಸುತ್ತಿರಲು ಲೋಕಗುರುಗಳಾದ ಪೂಜ್ಯರಾದ ಬ್ರಹ್ಮದೇವರು ತಾವಾಗಿಯೇ ವೇದವ್ಯಾಸರನ್ನು ಸ್ಮರಿಸಿಕೊಂಡು ಅವರ ಆಶ್ರಮಕ್ಕೆ ಬಂದರು.

ಮಹರ್ಷೇಶ್ಚಾಪಿ ಲೋಕಾನಾಂ ಪ್ರೀತ್ಯರ್ಥಂ ಹಿತಕಾಮ್ಯಯಾ |
ತಂ ದೃಷ್ಟ್ವಾ ವಿಸ್ಮಿತೋಽಭೂತ್ವಾ ಪ್ರಾಂಜಲಿಃ ಪ್ರಣತಃ ಸ್ಥಿತಃ ॥77॥

ಲೋಕಪ್ರೀತ್ಯರ್ಥವಾಗಿ ಮತ್ತು ಲೋಕಹಿತಕ್ಕಾಗಿ ಮಹರ್ಷಿಗಳಾದ ವ್ಯಾಸರನ್ನು ನೋಡಿ ಆಶ್ಚರ್ಯಚಕಿತರಾಗಿ ಬ್ರಹ್ಮದೇವರು ಅವರಿಗೆ ಕೈಗಳನ್ನು ಜೋಡಿಸಿ ನಮಸ್ಕಾರಮಾಡಿ ವಿನಯದಿಂದ ನಿಂತರು.

ಆಸನಂ ಕಲ್ಪಯಾಮಾಸ ಸರ್ವದೇವಗಣೈರ್ಯುತಮ್ |
ಹಿರಣ್ಯಗರ್ಭಮಾಸೀನಂ ತಸ್ಮಿಂಸ್ತು ಪರಮಾಸನೇ ॥78॥

ವ್ಯಾಸರು ಎಲ್ಲ ದೇವತೆಗಳ ಜೊತೆಯಲ್ಲಿ ಬಂದ ಬ್ರಹ್ಮದೇವರಿಗೆ ಒಂದು ಆಸನವನ್ನು ಕಲ್ಪಿಸಿ ಬ್ರಹ್ಮದೇವರು ಆ ಶ್ರೇಷ್ಠವಾದ ಆಸನದಲ್ಲಿ ಕುಳಿತುಕೊಳ್ಳುವಂತೆ ಮಾಡಿದರು.

ಪರಿವೃತ್ಯಾಸನಾಭ್ಯಾಶೇ ವ್ಯಾಸಃ ಸ್ವಯಮುಪಾವಿಶತ್ |
ಅನುಜ್ಞಾತೋಽಥ ಕೃತಿನಾ ಬ್ರಹ್ಮಣಾ ಪರಮೇಷ್ಠಿನಾ ॥79॥

ಅನಂತರ ಪುಣ್ಯಶಾಲಿಗಳಾದ ಬ್ರಹ್ಮದೇವರಿಂದ ಪ್ರಾರ್ಥಿಸಲ್ಪಟ್ಟವರಾಗಿ ತಮ್ಮ ಆಸನದ ಬಳಿಗೆ ಬಂದು ತಾವೇ ಕುಳಿತುಕೊಂಡರು.

ನಿಷಸಾದಾಸನಾಭ್ಯಾಶೇ ಪ್ರೀಯಮಾಣಃ ಸುವಿಸ್ಮಿತಃ |
ಉವಾಚ ಚ ಮಹಾತೇಜಾ ಬ್ರಹ್ಮಾಣಂ ಪರಮೇಷ್ಠಿನಮ್ ॥80॥

ಬ್ರಹ್ಮದೇವರ ಸಮೀಪದ ಆಸನದಲ್ಲಿ ಕುಳಿತ ಮಹಾತೇಜಸ್ವಿಗಳಾದ ವಿಸ್ಮಯ ಮತ್ತು ಸಂತೋಷದಿಂದ ಕೂಡಿದ ವ್ಯಾಸರು ಬ್ರಹ್ಮದೇವರನ್ನು ಕುರಿತು ಹೇಳಿದರು.

ಕೃತಂ ಮಯ್ಯೈತದ್ ಭಗವನ್ ಕಾವ್ಯಂ ಪರಮಪೂಜನಮ್ |
ಬ್ರಹ್ಮನ್‌ವೇದರಹಸ್ಯಂ ಚ ಯಚ್ಚಾನ್ಯತ್ ಖ್ಯಾಪಿತಂ ತ್ವಯಾ ॥81॥

ಪೂಜ್ಯರೇ ಎಲ್ಲ ಜನರಿಂದಲೂ ಪೂಜ್ಯವಾದಂತಹ ವೇದದ ರಹಸ್ಯವನ್ನೂ ವೇದವಿಷಯಗಳನ್ನೂ ಒಳಗೊಂಡಂತಹ ಈ ಮಹಾಭಾರತ ಇತಿಹಾಸವನ್ನು ನಾನು ರಚಿಸಿದ್ದೇನೆ.

ಸಾಂಗೋಪನಿಷದಾನಾಂ ಚ ವೇದಾನಾಂ ವಿಸ್ತರಕ್ರಿಯಾ |
ಇತಿಹಾಸಪುರಾಣಾನಾಮುನ್ಮೇಷನ್ನಿಮಿಷಚ್ಚ ಯತ್ ॥82॥

ಈ ಭಾರತದಲ್ಲಿ ನಾನು ವಿಸ್ತಾರಮಾಡಿದ ವೇದ ಉಪನಿಷತ್ತುಗಳು ಮತ್ತು ಅವುಗಳ ಅಂಗಗಳ ಎಲ್ಲಾ ಅರ್ಥಗಳೂ ಸೇರಿಕೊಂಡಿವೆ. ಇತಿಹಾಸ ಪುರಾಣಗಳ ಅರ್ಥಗಳೂ ದಿವಾಚರ ಮತ್ತು ನಕ್ತಂಚರರ ಎಲ್ಲ ವಿಷಯಗಳೂ ನಿರೂಪಿಸಲ್ಪಟ್ಟಿವೆ.

ಭೂತಂ ಭವ್ಯಂ ಭವಿಷ್ಯಚ್ಚ ತ್ರಿವಿಧಂ ಕಾಲಸಂಜ್ಞಿತಮ್ |
ಜರಾಮೃತ್ಯುಭಯವ್ಯಾದಿಭಾವಾಭಾವವಿನಿಶ್ಚಯಮ್ ॥83॥

ತ್ರಿವಿಧವಾದ ಭೂತಕಾಲ,ವರ್ತಮಾನಕಾಲ ಮತ್ತು ಭವಿಷ್ಯತ್ಕಾಲಕ್ಕೆ ಸಂಬಂಧಿಸಿದ ವಿಷಯಗಳು, ಜರಾ, ಮೃತ್ಯು, ಭಯ, ರೋಗ ಇವುಗಳಿಗೆ ಕಾರಣಗಳು, ಇವುಗಳನ್ನು ಪರಿಹಾರ ಮಾಡಿಕೊಳ್ಳುವ ಉಪಾಯಗಳು ಎಲ್ಲವೂ ಇಲ್ಲಿ ಹೇಳಲ್ಪಟ್ಟಿವೆ.

ವಿವಿಧಸ್ಯ ಚ ಧರ್ಮಸ್ಯ ಹ್ಯಾಶ್ರಮಾಣಾಂ ಚ ಲಕ್ಷಣಮ್ |
ಚಾತುರ್ವರ್ಣ್ಯವಿಧಾನಂ ಚ ಪುರುಷಾಣಾಂ ಚ ಕೃತ್ಸ್ನಶಃ ॥84॥

ಇಲ್ಲಿ ಅನೇಕ ಆಶ್ರಮಗಳ ಮತ್ತು ಅನೇಕವಿಧವಾದ ಧರ್ಮಗಳ ಲಕ್ಷಣಗಳು ಹೇಳಲ್ಪಟ್ಟಿವೆ. ಪುರುಷರು ಅನುಸರಿಸಬೇಕಾದ ಚಾತುರ್ವರ್ಣ್ಯದ ಪ್ರಕಾರವು ಸಮಗ್ರವಾಗಿ ಹೇಳಲ್ಪಟ್ಟಿದೆ.

ತಪಸೋ ಬ್ರಹ್ಮಚರ್ಯಸ್ಯ ಪೃಥಿವ್ಯಾಶ್ಚಂದ್ರಸೂರ್ಯಯೋಃ |
ಗ್ರಹನಕ್ಷತ್ರತಾರಾಣಾಂ ಪ್ರಮಾಣಂ ಚ ಯುಗೈಃ ಸಹ ॥85॥

ತಪಸ್ಸು ಮತು ಬ್ರಹ್ಮಚರ್ಯಗಳು ಹಾಗೂ ಪೃಥಿವಿ, ಚಂದ್ರ, ಸೂರ್ಯ, ಗ್ರಹ, ನಕ್ಷತ್ರ, ತಾರೆಗಳು, ಯುಗಗಳು ಇವುಗಳ ಪ್ರಮಾಣಗಳು ಸಹ ಹೇಳಲ್ಪಟ್ಟಿವೆ.

ಋಚೋ ಯಜೂಂಷಿ ಸಾಮಾನಿ ವೇದಾಧ್ಯಾತ್ಮಂ ತಥೈವ ಚ |
ನ್ಯಾಯಃ ಶಿಕ್ಷಾ ಚಿಕಿತ್ಸಾ ಚ ಜ್ಞಾನಂ ಪಾಶುಪತಂ ತಥಾ ॥86॥

ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ನಿರೂಪಿಸಲ್ಪಟ್ಟ ಆಧ್ಯಾತ್ಮ, ನ್ಯಾಯಶಾಸ್ತ್ರ, ಶಿಕ್ಷಾಶಾಸ್ತ್ರ, ವೈದ್ಯಶಾಸ್ತ್ರ, ಪಾಶುಪತಶಾಸ್ತ್ರ, ಎಲ್ಲವೂ ಇದರಲ್ಲಿ ಸೇರಿಕೊಂಡಿವೆ.

ಇತಿ ನೈಕಾಶ್ರಯಂ ಜನ್ಮ ದಿವ್ಯಮಾನುಷಸಂಜ್ಞಿತಮ್ |
ತೀರ್ಥಾನಾಂ ಚೈವ ಪುಣ್ಯಾನಾಂ ದೇಶಾನಾಂ ಚೈವ ಕೀರ್ತನಮ್ ॥87॥
ಇಲ್ಲಿ ದೇವ ಮತ್ತು ಮನುಷ್ಯರಿಗೆ ಸಂಬಂಧಿಸಿದ ಅನೇಕ ವಿಧವಾದ ಜನ್ಮಗಳು ಹೇಳಲ್ಪಟ್ಟಿವೆ. ಪುಣ್ಯ ಕ್ಷೇತ್ರಗಳ ವರ್ಣನೆಯು ಇದರಲ್ಲಿ ಸೇರಿದೆ.
ನದೀನಾಂ ಪರ್ವತಾನಾಂ ಚ ವನಾನಾಂ ಸಾಗರಸ್ಯ ಚ |
ಪುರಾಣಾಂ ಚೈವ ದಿವ್ಯಾನಾಂ ಕಲ್ಪಾನಾಂ ಯುದ್ಧಕೌಶಲಮ್ ॥88॥
ಇದರಲ್ಲಿ ನದಿಗಳ, ಪರ್ವತಗಳ, ಸಾಗರಗಳ, ಅರಣ್ಯಗಳ ಮತ್ತು ದಿವ್ಯವಾದ ಅನೇಕ ನಗರಗಳ ವರ್ಣನೆಯೂ ಮತ್ತು ಸಮರ್ಥರಾದವರ ಯುದ್ಧ ಕೌಶಲವೂ ನಿರೂಪಿಸಲ್ಪಟ್ಟಿವೆ.
ವಾಕ್ಯ ಜಾತಿವಿಶೇಷಾಶ್ಚ ಲೋಕಯಾತ್ರಾಕ್ರಮಶ್ಚ ಯಃ |
ಯಚ್ಚ ಸರ್ವಗತಂ ವಸ್ತು ತತ್ ಸರ್ವಂ ಕ್ಷಂತುಮರ್ಹಸಿ ॥89॥
ಇದರಲ್ಲಿ ಅನೇಕ ವಾಕ್ಯಜಾತಿಗಳು ಸೇರಿವೆ. ಲೋಕಯಾತ್ರೆಯ ಪ್ರಕಾರವು ನಿರೂಪಿಸಲ್ಪಟ್ಟಿದೆ. ಎಲ್ಲದಕ್ಕಿಂತಲೂ ಹೆಚ್ಚಾಗಿ ಸರ್ವಾಂತರ್ಯಾಮಿಯಾದ ಭಗವಂತನು ನಿರೂಪಿಸಲ್ಪಟ್ಟಿದ್ದಾನೆ. ನೀವು ಇದೆಲ್ಲವನ್ನೂ ಅನುಮೋದಿಸಬೇಕು.
ಬ್ರಹ್ಮಾ
ತಪೋವಿಶಿಷ್ಟಾದಪಿ ಚ ವಸಿಷ್ಠಾನ್ಮುನಿಪುಂಗವಾತ್ |
ಮನ್ಯೇ ಶ್ರೇಷ್ಠತಮಂ ತ್ವಾಂ ವೈ ರಹಸ್ಯಜ್ಞಾನವೇದನಾತ್ ॥90॥
ತಪಸ್ವಿಗಳಾದ ವಸಿಷ್ಠರಿಗಿಂತಲೂ ಕ್ಲಿಷ್ಟವಾದ ತಪಸ್ಸನ್ನು ತಾವು ಆಚರಿಸಿದ್ದೀರಿ. ರಹಸ್ಯ ವಿಷಯಗಳ ಜ್ಞಾನದಲ್ಲಿ ನೀವು ವಸಿಷ್ಠರಿಗಿಂತಲೂ ಶ್ರೇಷ್ಠರೆಂದು ನಾನು ತಿಳಿದಿದ್ದೇನೆ.
ಜನ್ಮಪ್ರಭೃತಿ ಸತ್ಯಾಂ ತೇ ವಿದ್ಮ ಗಾಂ ಬ್ರಹ್ಮಗಾಮಿನೀಮ್ |
ತ್ವಯಾ ಚ ಕಾವ್ಯಮಿತ್ಯುಕ್ತಂ ತಸ್ಮಾತ್ ಕಾವ್ಯಂ ಭವಿಷ್ಯತಿ ॥91॥
ತಾವು ಅವತಾರ ಮಾಡಿದಾಗಿನಿಂದಲೂ ತಮ್ಮ ಎಲ್ಲಾ ವಚನಗಳೂ ಸತ್ಯವಾದುವು ಮತ್ತು ಭಗವಂತನನ್ನು ಸ್ಪರ್ಶಿಸುವಂತಹುದು ಎಂದು ತಿಳಿದಿದ್ದೇನೆ. ತಾವು ಇದನ್ನು ಕಾವ್ಯ ಎಂದು ಕರೆದಿದ್ದೀರಿ ಆದ್ದರಿಂದ ಇದು ಕಾವ್ಯವೇ ಆಗಲಿ.
ಅಸ್ಯ ಕಾವ್ಯಸ್ಯ ಕವಯೋ ನ ಸಮರ್ಥಾ ವಿಶೇಷಣೇ |
ವಿಶೇಷಣೇ ಗೃಹಸ್ಥಸ್ಯ ಶೇಷಾಸ್ತ್ರಯ ಇವಾಶ್ರಮಾಃ ॥
ಜಡಾಂಧಬಧಿರೋನ್ಮತ್ತಂ ತಮೋಭೂತಂ ಜಗದ್ ಭವೇತ್ |
ಯದಿ ಜ್ಞಾನಹುತಾಶೇನ ತ್ವಯಾ ನೋಜ್ಜ್ವಲಿತಂ ಭವೇತ್ ॥92॥
ಈ ಕಾವ್ಯವನ್ನು ಮೀರಿದ ಕಾವ್ಯವನ್ನು ರಚಿಸಲು ಯಾವ ಕವಿಗಳೂ ಸಮರ್ಥರಾಗುವುದಿಲ್ಲ. ತಾವು ಜ್ಞಾನಾಗ್ನಿಯಿಂದ ಈ ಜ್ಞಾನದೀಪವನ್ನು ಬೆಳಗಿಸದೆ ಇದ್ದರೆ ಗೃಹಸ್ಥಾಶ್ರಮಕ್ಕೂ ಮಿಗಿಲಾದ ಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಈ ಮೂರೂ ಆಶ್ರಮಗಳನ್ನು ಹೊಂದಿದ ಪುರುಷರು ವಿಶೇಷವಾಗಿ ಜಡರೂ, ಅಂಧರೂ, ಮೂಕರೂ, ಉನ್ಮತ್ತರೂ ಅಗಿ ಈ ಜಗತ್ತು ಅಜ್ಞಾನದಿಂದ ತುಂಬುತ್ತಿತ್ತು.
ಗೃಹಸ್ಥರಿಗಿಂತ ಬ್ರಹ್ಮಚಾರಿ ಮೊದಲಾದವರು ಜ್ಞಾನದಲ್ಲಿ ಹೆಚ್ಚು ಆಸಕ್ತರಾದವರು. ಮಹಾಭಾರತವಿಲ್ಲದಿದ್ದರೆ ಅವರಿಗೆ ಜ್ಞಾನವೇ ಇಲ್ಲದಂತಾಗಿ ಜಗತ್ತು ಅಜ್ಞಾನದಿಂದ ತುಂಬಿರುತ್ತಿತ್ತು ಎಂದು ತಾತ್ಪರ್ಯ.
ತಮಸಾಽಧಸ್ಯ ಲೋಕಸ್ಯ ವೇಷ್ಟಿತಸ್ಯ ಸ್ವಕರ್ಮಭಿಃ |
ಜ್ಞಾನಾಂಜನಶಲಾಕಾಭಿರ್ಬುದ್ಧಿನೇತ್ರೋತ್ಸವಃ ಕೃತಃ ॥93॥
ತಾವು ತಮ್ಮ ತಮ್ಮ ಕರ್ಮಗಳಿಂದ ಬದ್ಧರಾಗಿ ಅಜ್ಞಾನದಿಂದ ಕುರುಡರಾದ ಜೀವರಿಗೆ ಜ್ಞಾನವೆಂಬ ಅಂಜನಶಲಾಕೆಯಿಂದ ಬುದ್ಧಿಗೂ ಮತ್ತು ನೇತ್ರಗಳಿಗೂ ಉತ್ಸವವನ್ನುಂಟು ಮಾಡಿದ್ದೀರಿ.
ಧರ್ಮಾರ್ಥಕಾಮಮೋಕ್ಷಾರ್ಥೈಃ ಸಮಾಸವ್ಯಾಸಕೀರ್ತನೈಃ |
ತ್ವಯಾ ಭಾರತಸೂರ್ಯೇಣ ನೃಣಾಂ ವಿನಿಹತಂ ತಮಃ ॥94॥
ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ಪುರುಷಾರ್ಥಗಳನ್ನು ಸಂಕ್ಷಿಪ್ತವಾಗಿ ಹಾಗೂ ವಿಸ್ತಾರವಾಗಿ ನಿರೂಪಿಸುವ ಈ ಭಾರತವೆಂಬ ಸೂರ್ಯನನ್ನು ರಚಿಸಿ ತಾವು ಜೀವರ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡಿದ್ದೀರಿ.
ಪುರಾಣಪೂರ್ಣಚಂದ್ರೇಣ ಶ್ರುತಿಜ್ಯೋತ್ಸ್ನಾ ಪ್ರಕಾಶಿನಾ |
ನೃಣಾಂ ಕುಮುದಸಾಮ್ಯಾನಾಂ ಕೃತಂ ಬುದ್ಧಿಪ್ರಬೋಧನಮ್ ॥95॥
ಶ್ರುತಿಗಳ ಅರ್ಥವೆಂಬ ಬೆಳದಿಂಗಳ ಪ್ರಕಾಶವುಳ್ಳ ಮಹಾಭಾರತವೆಂಬ ಪೂರ್ಣಚಂದ್ರನಿಂದ ಮತ್ತು ಪುರಾಣಗಳಿಂದ ಕುಮುದದಂತಿರುವ ಸಜ್ಜನರ ಮನಸ್ಸನ್ನು ಉದ್ಬೋಧನಗೊಳಿಸಿದ್ದೀರಿ.
ಇತಿಹಾಸಪ್ರದೀಪೇನ ಮೋಹಾವರಣಘಾತಿನಾ |
ಲೋಕಗರ್ಭಗೃಹಂ ಕೃತ್ಸ್ನಂ ಯಥಾವತ್ ಸಂಪ್ರಕಾಶಿತಮ್ ॥96॥
ಈ ಮಹಾಭಾರತವೆಂಬ ಪ್ರದೀಪವು ಮೋಹವೆಂಬ ಆವರಣವನ್ನು ನಾಶಮಾಡುವಂತಹದು. ಇದರಿಂದ ತಾವು ಎಲ್ಲಾ ಸುಜೀವರ ಅಂತರ ಹೃದಯದ ಅಂಧಕಾರವನ್ನು ಹೋಗಲಾಡಿಸಿ ಅಲ್ಲಿ ಪ್ರಕಾಶವನ್ನು ತುಂಬಿದ್ದೀರಿ.
ಸಂಗ್ರಹಾಧ್ಯಾಯಬೀಜೋ ವೈ ಪೌಲೋಮಾಸ್ತಿಕಮೂಲವಾನ್ |
ಸಂಭವಸ್ಕಂಧವಿಸ್ತಾರಃ ಸಭಾರಣ್ಯವಿಟಂಕವಾನ್ ॥97॥
ಈ ಮಹಾಭಾರತವು ಮಹಾವೃಕ್ಷಕ್ಕೆ ಸದೃಶವಾದದ್ದು. ಈ ವೃಕ್ಷಕ್ಕೆ ಮೊದಲನೆಯ ಅಧ್ಯಾಯವಾದ ಈ ಸಂಗ್ರಹಾಧ್ಯಾಯವೇ ಬೀಜ.

ಪೌಲೋಮ ಮತ್ತು ಆಸ್ತೀಕಪರ್ವಗಳೇ ಬುಡ. ಸಂಭವಪರ್ವವು ಬುಡದಿಂದ ಮೇಲೆ ಬರುವ ವಿಸ್ತಾರ. ಸಭಾ ಮತ್ತು ಅರಣ್ಯಪರ್ವಗಳು ಅದರ ಕವಲುಗಳು.
ಆರಣ್ಯಪರ್ವರೂಪಾಢ್ಯೋ ವಿರಾಟೋದ್ಯೋಗಸಾರವಾನ್ |
ಭೀಷ್ಮಪರ್ವಮಹಾಶಾಖೋ ದ್ರೋಣಪರ್ವಪಲಾಶವಾನ್ ॥98॥
ಅರಣ್ಯಪರ್ವವು ಅದರ ರೂಪ. ವಿರಾಟ ಮತ್ತು ಉದ್ಯೋಗಪರ್ವಗಳು ಆ ವೃಕ್ಷದ ಸಾರ. ಭೀಷ್ಮಪರ್ವವು ಒಂದು ಮಹಾಶಾಖೆ. ದ್ರೋಣಪರ್ವವು ಸಣ್ಣರೆಂಬೆಗಳಂತೆ.
ಕರ್ಣಪರ್ವಚಿತ್ರೈಃ ಪುಷ್ಪೈಃ ಶಲ್ಯ ಪರ್ವಸುಗಂಧಿಭಿಃ |
ಸ್ತ್ರೀಪರ್ವೈಷೀಕವಿಶ್ರಾಮಃ ಶಾಂತಿಪರ್ವಮಹಾಫಲಃ ॥99॥
ಕರ್ಣಪರ್ವ ಎಂಬುದು ಆರಿಸಿದ ಪುಷ್ಪ ಇದ್ದಂತೆ. ಅದು ಶಲ್ಯಪರ್ವ ಎಂಬ ಸುಗಂಧದಿಂದ ಯುಕ್ತವಾಗಿದೆ. ಸ್ತ್ರೀಪರ್ವ ಮತ್ತು ಇಷೀಕಪರ್ವಗಳು ಆ ಮರದಲ್ಲಿರುವ ವಿಶ್ರಾಮಸ್ಥಾನ. ಶಾಂತಿಪರ್ವವು ವೃಕ್ಷದ ಶ್ರೇಷ್ಠಫಲ.
ಆಶ್ವಮೇಧಾಮೃತರಸಃ ಸ್ವಾಶ್ರಮಸ್ಥಾನಸಂಶ್ರಯಃ |
ವೌಸಲಶ್ರುತಿಸಂಕ್ಷೇಪಃ ಶಿಷ್ಟದ್ವಿಜನಿಷೇವಿತಃ ॥100॥
ಅಶ್ವಮೇಧಪರ್ವವು ಆ ಫಲದ ಶ್ರೇಷ್ಠವಾದರಸ. ಸ್ವರ್ಗಾರೋಹಣಪರ್ವವು ಆ ವೃಕ್ಷದ ಮೇಲ್ಭಾಗದ ವಿಸ್ತಾರವಾದ ಸ್ಥಳ. ವೌಸಲಪರ್ವವು ವೃಕ್ಷದ ಅವಸಾನ. ಇದರಲ್ಲಿ ಸಜ್ಜನರು ಎಂಬ ಪಕ್ಷಿಗಳು ವಾಸಿಸುತ್ತಾರೆ.
ಸರ್ವೇಷಾಂ ಕವಿಮುಖ್ಯಾನಾಂ ಉಪಜೀವ್ಯೋ ಭವಿಷ್ಯತಿ |
ಪರ್ಜನ್ಯ ಇವ ಭೂತಾನಾಮಾಶ್ರಯೋ ಭಾರತದ್ರುಮಃ ॥101॥
ಮಳೆಯನ್ನು ಎಲ್ಲಾ ಪ್ರಾಣಿಗಳೂ ಸಸ್ಯಗಳೂ ಆಶ್ರಯಿಸಿದಂತೆ ಎಲ್ಲಾ ಶ್ರೇಷ್ಠರಾದ ಕವಿಗಳು ಈ ಮಹಾಭಾರತವನ್ನು ಆಶ್ರಯಿಸುತ್ತಾರೆ. ಇದು ಅಂತಹ ಶ್ರೇಷ್ಠವಾದ ವೃಕ್ಷ.
ಸೂತಃ
ಏವಮಾಭಾಷ್ಯ ತಂ ಬ್ರಹ್ಮಾ ಜಗಾಮ ಸ್ವಂ ನಿವೇಶನಮ್ |
ಭಗವಾನ್ ಸ ಜಗತ್ಸ್ರಷ್ಟಾ ಋಷಿರ್ದೇವಗಣೈಃ ಸಹ ॥102॥
ಪೂಜ್ಯರಾದ ಸೃಷ್ಟಿಕರ್ತರಾದ ಜ್ಞಾನಿಗಳಾದ ಚತುರ್ಮುಖಬ್ರಹ್ಮರು ವ್ಯಾಸರನ್ನು ಕುರಿತು ಹೀಗೆ ಮಾತನಾಡಿ ಮತ್ತು ದೇವತೆಗಳಿಂದ ಸಹಿತರಾಗಿ ತಮ್ಮ ಲೋಕಕ್ಕೆ ಹಿಂದಿರುಗಿದರು.
ತಸ್ಯ ವೃಕ್ಷಸ್ಯ ವಕ್ಷ್ಯಾಮಿ ಶಾಖಾಪುಷ್ಪಫಲೋದಯಮ್ |
ಸ್ವಾದುಮೇಧ್ಯರಸೋಪೇತಮಚ್ಛೇದ್ಯಮಮರೈರಪಿ ॥103॥
ನಾನು ನಿಮಗೆ ಆ ವೃಕ್ಷದ ಶಾಖೆಗಳ, ಪುಷ್ಪಗಳ ಮತ್ತು ಫಲಗಳ ಉತ್ಪತ್ತಿಯನ್ನು ನಿರೂಪಿಸುತ್ತೇನೆ. ಅದರಲ್ಲಿರುವ ರಸವು ಸಿಹಿಯಾಗಿದೆ ಮತ್ತು ಸ್ವೀಕಾರಾರ್ಹವಾದುದು. ಅಂತಹ ವೃಕ್ಷವನ್ನು ದೇವತೆಗಳೂ ನಾಶಮಾಡಲಾರರು.
ಅನುಕ್ರಾಮಣಮಧ್ಯಾಯಂ ವೃತ್ತಾಂತಂ ಸರ್ವಪರ್ವಣಾಮ್ |
ಇದಂ ದ್ವೈಪಾಯನಃ ಪೂರ್ವಂ ಪುತ್ರಮಧ್ಯಾಪಯಚ್ಛುಕಮ್ ॥104॥
ಎಲ್ಲ ಪರ್ವಗಳ ವೃತ್ತಾಂತವನ್ನು ಸಂಕ್ಷೇಪವಾಗಿ ಸೂಚಿಸುವ ಆನುಕ್ರಮಣಿಕಾ ಅಧ್ಯಾಯವನ್ನು ವೇದವ್ಯಾಸರು ಮೊದಲು ರಚಿಸಿ ತಮ್ಮ ಮಕ್ಕಳಾದ ಶುಕಾಚಾರ್ಯರಿಗೆ ಪಾಠವನ್ನು ಹೇಳಿದರು.
ತತೋಽನ್ಯೇಭ್ಯೋಽಭಿರೂಪೇಭ್ಯಃ ಶಿಷ್ಯೇಭ್ಯಃ ಪ್ರದದೌ ಪ್ರಭುಃ |
ನಾರದೋಽಧ್ಯಾಪಯದ್ ದೇವಾನಸಿತೋ ದೇವಲಃ ಪಿತೄನ್ ॥105॥
ಅನಂತರ ಪ್ರಭುಗಳಾದ ವೇದವ್ಯಾಸರು ತಮಗೆ ಅನುರೂಪರಾದ ಬೇರೆ ಬೇರೆ ಶಿಷ್ಯರಿಗೆ ಅದನ್ನು ಬೋಧಿಸಿದರು. ನಾರದರು ದೇವತೆಗಳಿಗೂ, ಅಸಿತರು ಮತ್ತು ದೇವಲರು ಪಿತೃಗಳಿಗೂ ಈ ಮಹಾಭಾರತವನ್ನು ಉಪದೇಶಿಸಿದರು.
ಗಂಧರ್ವಯಕ್ಷರಕ್ಷಾ ಂಸಿ ಶ್ರಾವಯಾಮಾಸ ವೈ ಶುಕಃ |
ವೈಶಂಪಾಯನವಿಪ್ರರ್ಷಿಃ ಶ್ರಾವಯಾಮಾಸ ಪಾರ್ಥಿವಮ್ |
ಪಾರೀಕ್ಷಿತಂ ಮಹಾತ್ಮಾನಂ ನಾಮ್ನಾ ತು ಜನಮೇಜಯಮ್ ॥106॥
ಶುಕಾಚಾರ್ಯರು ಗಂಧರ್ವರಿಗೆ, ಯಕ್ಷರಿಗೆ ಮತ್ತು ರಾಕ್ಷಸರಿಗೆ ಈ ಮಹಾಭಾರತವನ್ನು ಉಪದೇಶಿಸಿದರು. ವೈಶಂಪಾಯನರು ಪರೀಕ್ಷಿತನ ಮಗನಾದ ಮಹಾತ್ಮನಾದ ಜನಮೇಜಯರಾಜನಿಗೆ ಇದನ್ನು ಶ್ರವಣ ಮಾಡಿಸಿದರು.
ದುರ್ಯೋಧನೋ ಮನ್ಯು ಮಯೋ ಮಹಾದ್ರುಮಃ
ಸ್ಕಂಧಃ ಕರ್ಣಃ ಶಕುನಿಸ್ತಸ್ಯ ಶಾಖಾ |
ದುಃಶಾಸನಃ ಪುಷ್ಪಫಲೇ ಸಮೃದ್ಧೇ
ಮೂಲಂ ರಾಜಾ ಧೃತರಾಷ್ಟ್ರೋಽಂಬಿಕೇಯಃ ॥107॥
ಕ್ರೋಧಶೀಲನಾದ ದುಯೋಧನನೇ ಒಂದು ವೃಕ್ಷ , ಕರ್ಣನು ಅದರ ಹೆಗಲು ಶಕುನಿಯು ಅದರ ಶಾಖೆ (ಕೊಂಬೆ), ದುಃಶಾಸನನು ಸಮೃದ್ಧವಾದ ಪುಷ್ಪ ಮತ್ತು ಫಲ. ಆ ವೃಕ್ಷದ ಬುಡವೆಂದರೆ ಅಂಬಿಕಾಸುತನಾದ ಧೃತರಾಷ್ಟ್ರರಾಜ.
ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ
ಸ್ಕಂಧೋಽರ್ಜುನೋ ಭೀಮಸೇನೋಽಸ್ಯ ಶಾಖಾ |
ಮಾದ್ರೀಸುತೌ ಪುಷ್ಯಫಲೇ ಸಮೃದ್ಧೇ
ಮೂಲಂ ಕೃಷ್ಣೋ ಬ್ರಹ್ಮ ಚ ಬ್ರಾಹ್ಮಣಾಶ್ಚ ॥108॥

ಧರ್ಮಾತ್ಮನಾದ ಯುಧಿಷ್ಠಿರನು ಇನ್ನೊಂದು ಮಹಾವೃಕ್ಷ. ಅರ್ಜುನನು ಅದರ ಸ್ಕಂಧ. ಭೀಮಸೇನನು ಅದರ ಶಾಖೆ, ಮಾದ್ರಿಯಮಕ್ಕಳಾದ ನಕುಲಸಹದೇವರು ಅದರ ಸಮೃದ್ಧವಾದ ಪುಷ್ಪ ಫಲಗಳು. ಆ ಮರದ ಮೂಲವೆಂದರೆ ಶ್ರೀಕೃಷ್ಣ, ಬ್ರಾಹ್ಮಣರು ಮತ್ತು ವೇದಗಳು.
ಪಾಂಡುರ್ಜಿತ್ವಾ ಬಹೂನ್ ದೇಶಾನ್ ಯುಧಾ ವಿಕ್ರಮಣೇನ ಚ |
ಅರಣ್ಯೇ ಮೃಗಯಾಶೀಲೋ ನ್ಯವಸತ್ ಸಜನಸ್ತದಾ |
ಮೃಗವ್ಯಾಜರ್ಷಿನಿಧನೇ ಕೃಚ್ಛ್ರಾಂ ಪ್ರಾಪ ಸ ಆಪದಮ್ ॥109॥
ಪಾಂಡುವು ತನ್ನ ಪರಾಕ್ರಮದಿಂದ ಯುದ್ಧದಲ್ಲಿ ಅನೇಕದೇಶಗಳನ್ನು ಗೆದ್ದು, ಅರಣ್ಯದಲ್ಲಿ ತನ್ನ ಪತ್ನಿಯರೊಡನೆ ಬೇಟೆಯನ್ನು ಆಡುತ್ತಾ ವಾಸಿಸಿದನು. ಜಿಂಕೆಯ ರೂಪವನ್ನು ಧರಿಸಿದ್ದ ಋಷಿಯಶಾಪದ ನಿಮಿತ್ತವಾಗಿ ಅವನು ಕಷ್ಟಕ್ಕೆ ಸಿಲುಕಿದನು.
ಜನ್ಮಪ್ರಭೃತಿ ಪಾರ್ಥಾನಾಂ ತತ್ರಾಚಾರವಿಧಿಕ್ರಮಃ |
ಮಾತುರಭ್ಯುಪಪತ್ತಿಶ್ಚ ಧರ್ಮೋಪನಿಷದಂ ಪ್ರತಿ |
ಧರ್ಮಸ್ಯ ವಾಯೋಃ ಶಕ್ರಸ್ಯ ದೇವಯೋಶ್ಚ ತಥಾಽಶ್ವಿನೋಃ ॥110॥
ಪಾಂಡವರು ಹುಟ್ಟಿದಾಗಿನಿಂದಲೂ ಅವರು ಸದಾಚಾರಗಳನ್ನು ಮತ್ತು ಧರ್ಮಶಿಕ್ಷಣವನ್ನು ಅವರ ತಾಯಿಯಾದ ಕುಂತಿಯಿಂದಲೂ ಮತ್ತು ಜನಕರಾದ ಧರ್ಮ, ವಾಯು, ಇಂದ್ರ ಮತ್ತು ಅಶ್ವಿನಿದೇವತೆಗಳಿಂದಲೂ ಪಡೆದರು.
ತತೋ ಧರ್ಮೋಪನಿಷದಃ ಶ್ರುತ್ವಾ ಭರ್ತುಃ ಪ್ರಿಯಾ ಪೃಥಾ |
ಧರ್ಮಾನಿಲೇಂದ್ರಾಂಸ್ತಾಭಿಃ ಸಾಽಽಜುಹಾವ ಸುತವಾಂಛಯಾ ॥111॥
ಕುಂತಿಯು ದೂರ್ವಾಸರಿಂದ ಮಂತ್ರೋಪದೇಶವನ್ನು ಪಡೆದು, ತನ್ನ ಪತಿಯ ಪ್ರೇರಣೆಯಂತೆ ಯಮ, ವಾಯು ಮತ್ತು ಇಂದ್ರರನ್ನು ಕರೆದು, ಅವರಿಂದ ಮಕ್ಕಳನ್ನು ಪಡೆದಳು.
ತದ್ದತ್ತೋಪನಿಷನ್ಮಾದ್ರೀ ಚಾಶ್ವಿನಾವಾಜುಹಾವ ಚ |
ಜಾತಾಃ ಪಾರ್ಥಾಸ್ತತಃ ಕಾಮೀ ಪಾಂಡುರ್ಮಾದ್ರ್ಯಾದಿವಂ ಗತಃ ॥112॥
ಮಾದ್ರಿಯು ಕುಂತಿಯಿಂದ ಮಂತ್ರೋಪದೇಶವನ್ನು ಪಡೆದು ಅಶ್ವಿನಿದೇವತೆಗಳನ್ನು ಆಹ್ವಾನಿಸಿ ಅವರಿಂದ ಮಕ್ಕಳನ್ನು ಪಡೆದಳು. ಹೀಗೆ ಮಕ್ಕಳನ್ನು ಪಡೆದಮೇಲೆ ಪಾಂಡುವು ಮಾದ್ರಿಯನಿಮಿತ್ತವಾಗಿ ಕಾಮವನ್ನು ಹೊಂದಿ ಸ್ವರ್ಗಸ್ಥನಾದನು.
ತಾಪಸೈಃ ಸಹ ಸಂವೃದ್ಧಾ ಮಾತ್ರಾ ಚ ಪರಿರಕ್ಷಿತಾಃ |
ಮಧ್ಯೇಽರಣ್ಯೇಷು ಪುಣ್ಯೇಷು ಮಹತಾಮಾಶ್ರಮೇಷು ಚ ॥113॥
ಪಾಂಡವರು ಋಷಿಗಳಿಂದ ರಕ್ಷಿಸಲ್ಪಟ್ಟು, ಋಷಿಕುಮಾರರ ಜೊತೆಯಲ್ಲಿ ಕಾಡಿನ ಮಧ್ಯದಲ್ಲಿ ಪವಿತ್ರವಾದ ಆಶ್ರಮಗಳಲ್ಲಿ ಬೆಳೆದರು.
ಋಷಿಭಿಶ್ಚ ಸಹಾಸೀನಾನ್ ಧಾರ್ತರಾಷ್ಟ್ರಾನ್ ಪ್ರತಿ ಸ್ವಯಮ್ |
ಶಿಶವಶ್ಚಾಭಿರೂಪಾಶ್ಚ ಜಟಿಲಾ ಬ್ರಹ್ಮಚಾರಿಣಃ ॥114॥
ಪುತ್ರಾಶ್ಚ ಭ್ರಾತರಶ್ಚೇಮೇ ಶಿಷ್ಯಾಶ್ಚ ಸುಹೃದಶ್ಚ ವಃ |
ಪಾಂಡವಾ ಏತ ಇತ್ಯುಕ್ತ್ವಾ ಮುನಯೋಽಂತರ್ಹಿತಾಸ್ತತಃ ॥115॥
ಆ ಆಶ್ರಮದ ಋಷಿಗಳು ತಮ್ಮೊಟ್ಟಿಗೆ ಇರುವ ಪಾಂಡವರನ್ನು ಧೃತರಾಷ್ಟ್ರನ ಆಸ್ಥಾನಕ್ಕೆ ಕರೆದುಕೊಂಡು ಬಂದರು. ಆಸೀನನಾದ ಧೃತರಾಷ್ಟ್ರನನ್ನು ಮತ್ತು ಅವನ ಸಂಬಂಧಿಕರನ್ನು ಕುರಿತು, ಇವರು ನಿಮ್ಮ ಮಕ್ಕಳು, ನಿಮ್ಮವಂಶಕ್ಕೆ ಅನುರೂಪರಾಗಿದ್ದಾರೆ, ಎಲ್ಲರೂ ವ್ರತಸ್ಥರಾದ ಬ್ರಹ್ಮಚಾರಿಗಳು. ಇವರು ನಿನಗೆ ಮಕ್ಕಳು ಮತ್ತು ನಿನ್ನ ಮಕ್ಕಳಿಗೆ ಸಹೋದರರು. ಇವರು ನಿನ್ನ ಶಿಷ್ಯರು, ಬಂಧುಗಳೂ ಆಗಿದ್ದಾರೆ ಎಂದು ಹೇಳಿ ಪಾಂಡವರನ್ನು ಒಪ್ಪಿಸಿ ಎಲ್ಲರೂ ಅಂತರ್ಧಾನವನ್ನು ಹೊಂದಿದರು.
ತೈಸ್ತಾನ್ ನಿವೇದಿತಾನ್ ಶ್ರುತ್ವಾ ಪಾಂಡವಾನ್ ಕೌರವಾಸ್ತದಾ |
ಶಿಷ್ಟಾಶ್ಚ ವರ್ಣಾಃ ಪೌರಾ ಯೇ ತೇ ಹರ್ಷಾಚ್ಚುಕ್ರುಶುರ್ಭೃಶಮ್ ॥116॥
ಋಷಿಗಳಿಂದ ನಿವೇದಿಸಲ್ಪಟ್ಟ ಪಾಂಡವರನ್ನು ನೋಡಿದ ಕುರುವಂಶ ಮುಖ್ಯಸ್ಥರು ಮತ್ತು ಅಲ್ಲಿದ್ದ ಎಲ್ಲಾ ವರ್ಣಗಳಿಗೆ ಸೇರಿದ ಶಿಷ್ಟರಾದ ಪೌರರೆಲ್ಲರೂ ಸಂತೋಷದಿಂದ ಅಟ್ಟಹಾಸವನ್ನು ಮಾಡಿ ಕೇಕೆಹಾಕಿದರು.
ಆಹುಃ ಕೇಚಿನ್ನ ತಸ್ಯೈತೇ ತಸ್ಯೈತ ಇತಿ ಚಾಪರೇ |
ಯದಾ ಚಿರಂ ಮೃತಃ ಪಾಂಡುಃ ಕಥಂ ತಸ್ಯೇತಿ ಚಾಪರೇ ॥117॥
ಅಲ್ಲಿ ಕೆಲವರು ಸಜ್ಜನರು ಇಂತಹ ಮಕ್ಕಳು ಯಾರಿಗೆ ತಾನೇ ಬೇಡ ಎಂದು ಹೇಳಿದರು. ಇನ್ನು ಕೆಲವರು ಮಿಶ್ರಜೀವರು `ಇವರು ಯಾವ ಪುಣ್ಯಾತ್ಮನ ಮಕ್ಕಳು?' ಎಂದು ಸಂಶಯ ತಾಳಿದರು. ಇನ್ನು ಕೆಲವರು ಅಧಮ ಜೀವರು ಪಾಂಡುವು ಮೃತನಾಗಿ ಬಹಳ ಕಾಲ ಕಳೆದಿರುವಾಗ ಇವರು ಹೇಗೆ ಪಾಂಡುವಿನ ಮಕ್ಕಳು ಎಂದು ಆಕ್ಷೇಪಿಸಿದರು.
ಸ್ವಾಗತಂ ಸರ್ವಥಾ ದಿಷ್ಟ್ಯಾ ಪಾಂಡೋಃ ಪಶ್ಯಾಮ ಸಂತತಿಮ್ |
ಉಚ್ಯತಾಂ ಸ್ವಾಗತಮಿತಿ ವಾಚೋಽಶ್ರೂಯಂತ ಸರ್ವಶಃ ॥118॥
ಶಿಷ್ಟರೆಲ್ಲರೂ ಸಂತೋಷಪಟ್ಟರು, ಅವರಿಗೆ ಸ್ವಾಗತವನ್ನು ಕೋರಿದರು, ದೇವರ ದಯೆಯಿಂದ ನಾವು ಪಾಂಡುವಿನ ಸಂತತಿಯನ್ನು ನೋಡುತ್ತಿದ್ದೇವೆ. ಅವರಿಗೆ ಎಲ್ಲರೂ ಸ್ವಾಗತವನ್ನು ಹೇಳಿ ಎಂಬ ಮಾತು ಎಲ್ಲಾ ಕಡೆಗಳಿಂದಲೂ ಕೇಳಿಬಂದವು.
ತಸ್ಮಿನ್ನುಪರತೇ ಶಬ್ದೇ ದಿಶಃ ಸರ್ವಾ ವಿನಾದಯನ್ |
ಅಂತರ್ಹಿತಾನಾಂ ಭೂತಾನಾಂ ನಿಸ್ವನಸ್ತುಮುಲೋಽಭವತ್ ॥119॥
ಆ ಮಾತುಗಳು ಮುಗಿಯುತ್ತಿದಂತೆಯೇ ಎಲ್ಲ ದಿಕ್ಕುಗಳಲ್ಲಿಯೂ ಅದೃಶ್ಯವಾದ ದೇವಾದಿಗಳಿಂದ ದೊಡ್ಡ ಧ್ವನಿಯು ಉಂಟಾಯಿತು.
ಪುಷ್ಪವೃಷ್ಟಿಃ ಶುಭಾ ಗಂಧಾಃ ಶಂಖದುಂದುಭಿನಿಸ್ವನಾಃ |
ಆಸನ್ ಪ್ರವೇಶೇ ಪಾರ್ಥಾನಾಂ ತದದ್ಭುತಮಿವಾಭವತ್ ॥120॥

ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಎಲ್ಲ ಕಡೆಯೂ ಸುಗಂಧಯುಕ್ತವಾದ ಗಾಳಿಯು ಬೀಸಿತು. ಶಂಖದುಂದುಭಿನಾದವು ಕೇಳಿಬಂದವು. ಪಾಂಡವರು ಧೃತರಾಷ್ಟ್ರನ ಸಭೆಗೆ ಪ್ರವೇಶಿಸಿದಾಗ ಇಂತಹ ಅದ್ಭುತವು ಜರುಗಿತು.
ತತ್ಪ್ರೀತ್ಯಾ ಚೈವ ಸರ್ವೇಷಾಂ ಪೌರಾಣಾಂ ಹರ್ಷಸಂಭವಃ |
ಶಬ್ದಶ್ಚ ಸೀನ್ಮಹಾಂಸ್ತತ್ರ ದಿವಿಸ್ಪೃಕ್ ಕೀರ್ತಿವರ್ಧನಃ ॥121॥
ಆ ಪಾಂಡವರಮೇಲಿನ ಪ್ರೀತಿಯಿಂದ ಪೌರರು ಸಂತೋಷದಿಂದ ಕೇಕೆಹಾಕಿದ ಮಹಾಶಬ್ದವು ಆಕಾಶವನ್ನು ವ್ಯಾಪಿಸಿ ಅವರಿಗೆ ಕೀರ್ತಿಯನ್ನು ಉಂಟುಮಾಡುವುದಾಯಿತು.
ತೇಽಧೀತ್ಯ ಸಕಲಾನ್ ವೇದಾನ್ ಶಾಸ್ತ್ರಾಣಿ ವಿವಿಧಾನಿ ಚ |
ನ್ಯವಸನ್ ಪಾಂಡವಾಸ್ತತ್ರ ಪೂಜಿತಾ ಅಕುತೋಭಯಾಃ ॥122॥
ಆ ಪಾಂಡವರು ಎಲ್ಲಾ ವೇದಗಳನ್ನೂ ವಿವಿಧಶಾಸ್ತ್ರಗಳನ್ನೂ ಅಧ್ಯಯನ ಮಾಡಿ ಎಲ್ಲರಿಂದ ಸತ್ಕರಿಸಲ್ಪಟ್ಟು ಯಾವ ಭಯವೂ ಇಲ್ಲದೆ, ಕೆಲವು ಕಾಲ ವಾಸಮಾಡಿದರು.
ಯುಧಿಷ್ಠಿರಸ್ಯ ಶೌಚೇನ ಪ್ರೀತಾಃ ಪ್ರಕೃತಯೋಽಭವನ್ |
ಧೃತ್ಯಾ ಚ ಭೀಮಸೇನಸ್ಯ ವಿಕ್ರಮೇಣಾರ್ಜುನಸ್ಯ ಚ ॥123॥
ಪ್ರಜೆಗಳಿಗೆ ಯುಧಿಷ್ಠಿರನ ಸತ್ಯಸಂಧತೆಯಿಂದಲೂ, ಭೀಮಸೇನನ ಬಲದಿಂದಲೂ, ಅರ್ಜುನನ ವಿಕ್ರಮದಿಂದಲೂ, ಬಹಳ ಸಂತೋಷವಾಯಿತು.
ಗುರುಶುಶ್ರೂಷಯಾ ಕುಂತ್ಯಾ ಯಮಯೋರ್ವಿನಯೇನ ಚ |
ತುತೋಷ ಲೋಕಃ ಸಕಲಸ್ತೇಷಾಂ ಶೌರ್ಯಗುಣೇನ ಚ ॥124॥
ಕುಂತಿಯ ಗುರುಶುಶ್ರೂಷೆಯಿಂದಲೂ, ನಕುಲಸಹದೇವರ ವಿನಯದಿಂದಲೂ ಮತ್ತು ಐದೂ ಜನರಲ್ಲಿರುವ ಶೌರ್ಯಗುಣದಿಂದಲೂ ಎಲ್ಲಾ ಜನರೂ ಸಂತೋಷಪಟ್ಟರು.
ಸಮವಾಯೇ ತದಾ ರಾಜ್ಞಾಂ ಕನ್ಯಾಂ ಭರ್ತೃಸ್ವಯಂವರಾಮ್ |
ಪ್ರಾಪ್ತವಾನರ್ಜುನಃ ಕೃಷ್ಣಾಂ ಕೃತ್ವಾ ಕರ್ಮ ಸುದುಷ್ಕರಮ್ ॥125॥
ರಾಜರ ಸಮುದಾಯದಲ್ಲಿ ಆರ್ಜುನನು ಸ್ವಯಂವರಸ್ಥಳಾದ ದ್ರೌಪದಿಯನ್ನು ಅತ್ಯಂತ ದುಷ್ಕರವಾದ ಮತ್ಸ್ಯಯಂತ್ರವನ್ನು ಭೇದಿಸಿ ಪಡೆದನು.
ತದಾಪ್ರಭೃತಿ ಲೋಕೇಽಸ್ಮಿನ್ಪೂಜ್ಯಃ ಸರ್ವಧನುಷ್ಮತಾಮ್ |
ಆದಿತ್ಯ ಇವ ದುಷ್ಪ್ರೇಕ್ಷ್ಯಃ ಸಮರೇಷ್ವಪಿ ಚಾಭವತ್ ॥126॥
ಅಂದಿನಿಂದ ಆರಂಭಿಸಿ ಅರ್ಜುನನು ಎಲ್ಲಾ ಧನುರ್ಧಾರಿಗಳಿಗೂ ಪರಮಪೂಜ್ಯನಾದನು. ಯುದ್ಧಗಳಲ್ಲಿ ನೋಡಲು ಅಸಾಧ್ಯವಾದ ತೇಜಸ್ಸುಳ್ಳ ಸೂರ್ಯನಂತೆ ಬೆಳಗಿದನು.
ಸ ಸರ್ವಾನ್ ಪಾರ್ಥಿವಾನ್ ಜಿತ್ವಾ ಸರ್ವಾಂಶ್ಚ ಮಹತೋ ಗಣಾನ್ |
ಆಜಹಾರಾರ್ಜುನೋ ರಾಜ್ಞೋ ರಾಜಸೂಯಂ ಮಹಾಕ್ರತುಮ್ ॥127॥
ಆ ಅರ್ಜುನನು ಎಲ್ಲಾ ರಾಜರನ್ನೂ ಎಲ್ಲಾ ದೊಡ್ಡಸೈನ್ಯಗಳನ್ನೂ ಗೆದ್ದು ಅಣ್ಣನಾದ ಧರ್ಮರಾಜನಿಂದ ರಾಜಸೂಯಮಹಾಯಾಗವನ್ನು ಮಾಡಿಸಿದನು.
ಅನ್ನವಾನ್ ದಕ್ಷಿಣಾವಾಂಶ್ಚ ಸರ್ವೈಃ ಸಮುದಿತೋ ಗುಣೈಃ |
ಯುಧಿಷ್ಠಿರೇಣ ಸಂಪ್ರಾಪ್ತೋ ರಾಜಸೂಯೋ ಮಹಾಕ್ರತುಃ ॥128॥
ಯುಧಿಷ್ಠರನು ಬಹಳ ಅನ್ನದಾನದಿಂದಲೂ, ಬಹಳ ದಕ್ಷಿಣಾದಾನದಿಂದಲೂ ಮತ್ತು ಎಲ್ಲಾ ಶ್ರೇಷ್ಠವಾದ ಗುಣಗಳಿಂದಲೂ ಕೂಡಿದ ರಾಜಸೂಯ ಮಹಾಯಾಗವನ್ನು ನೆರವೇರಿಸಿದನು.
ಸುನಯಾದ್ ವಾಸುದೇವಸ್ಯ ಭೀಮಾರ್ಜುನಬಲೇನ ಚ |
ಘಾತಯಿತ್ವಾ ಜರಾಸಂಧಂ ಚೈದ್ಯಂಚ ಬಲದರ್ಪಿತಮ್ ॥129॥
ಕೃಷ್ಣನ ನೀತಿಯಿಂದಲೂ ಮತ್ತು ಭೀಮಾರ್ಜುನರ ಬಲದಿಂದಲೂ ಜರಾಸಂಧನನ್ನು ಕೊಲ್ಲಿಸಿ ಮತ್ತು ಗರ್ವಿಷ್ಠನಾದ ಶಿಶುಪಾಲನನ್ನು ಸಂಹರಿಸಿ ರಾಜಸೂಯಯಾಗವನ್ನು ನೆರವೇರಿಸಿದನು.
ದುರ್ಯೋಧನಮುಪಾಗಚ್ಛನ್ನರ್ಹಣಾನಿ ತತಸ್ತತಃ |
ಮಣಿಕಾಂಚನರತ್ನಾನಿ ಗೋಹಸ್ತ್ಯಶ್ವರಥಾದಿಕಮ್ ॥130॥
ಆ ರಾಜಸೂಯಯಾಗಕ್ಕೆ ಬಂದ ರತ್ನ, ಸುವರ್ಣ ಮೊದಲಾದ ಎಲ್ಲ ವಸ್ತುಗಳೂ ಅಶ್ವ, ಗಜ, ರಥ ಮೊದಲಾದ ಎಲ್ಲ ವಸ್ತುಗಳೂ ರಾಜಸೂಯಯಾಗದಲ್ಲಿ ಧನಾಧ್ಯಕ್ಷನಾಗಿದ್ದ ದುರ್ಯೋಧನನ ಹಸ್ತವನ್ನು ಸೇರಿದವು.
ಸಮೃದ್ಧಾಂ ತಾಂ ತತೋ ದೃಷ್ಟ್ವಾ ಪಾಂಡವಾನಾಂ ತದಾಶ್ರಿಯಮ್ |
ಈರ್ಷ್ಯಾಸಮುತ್ಥಃ ಸುಮಹಾಂಸ್ತಸ್ಯ ಮನ್ಯುರಜಾಯುತ ॥131॥
ಪಾಂಡವರ ಆ ಅದ್ಭುತವಾದ ಸಮೃದ್ಧವಾದ ಐಶ್ವರ್ಯವನ್ನು ನೋಡಿದ ದುರ್ಯೋಧನನಿಗೆ ಹೊಟ್ಟೆಕಿಚ್ಚಿನಿಂದಾಗಿ ಪಾಂಡವರ ಮೇಲೆ ಮಹಾಕೋಪ ಉಂಟಾಯಿತು.
ವಿಮಾನಪ್ರತಿಮಾಂ ಚಾಪಿ ಮಯೇನ ಸುಕೃತಾಂ ಸಭಾಮ್ |
ಪಾಂಡವಾನಾಮುಪಹೃತಾಂ ಸ ದೃಷ್ಟ್ವಾ ಪರ್ಯತಪ್ಯತ ॥132॥
ಮಯನು ನಿರ್ಮಿಸಿದ ದೇವತೆಗಳ ವಿಮಾನದಂತಿರುವ ಪಾಂಡವರ ಅದ್ಭುತವಾದ ಸಭೆಯನ್ನು ನೋಡಿ ದುರ್ಯೋಧನನು ಬಹಳ ಸಂತಾಪವನ್ನು ಪಟ್ಟನು

ಯತ್ರಾಪಹಸಿತಶ್ಚಾಸೀತ್ ಪ್ರಸ್ಕಂದನ್ನಿವ ಸಂಭ್ರಮಾತ್ |
ಪ್ರತ್ಯಕ್ಷಂ ವಾಸುದೇವಸ್ಯ ಭೀಮೇನಾನಭಿಜಾತವತ್ ॥133॥
ಆ ಸಭೆಯಲ್ಲಿ ಅವಿವೇಕಿಯಾದ ಸಾಮಾನ್ಯಜನದಂತೆ ಭ್ರಾಂತಿಯಿಂದ ಜಾರಿಬಿದ್ದ ತನ್ನನ್ನು ಕುರಿತು ಭೀಮಸೇನ ಮತ್ತು ಕೃಷ್ಣನು ಮಾಡಿದ ಅಟ್ಟಹಾಸದ ನಗುವಿನ ಅಪಹಾಸಕ್ಕೆ ಅವನು ಪಾತ್ರನಾದನು.
ಸ ಭೋಗಾನ್ ವಿವಿಧಾನ್ ಭುಂಜನ್ ರತ್ನಾನಿ ವಿವಿಧಾನಿ ಚ |
ಕಥಿತೇ ಧೃತರಾಷ್ಟ್ರಸ್ಯ ವಿವರ್ಣೋ ಮಲಿನಃ ಕೃಶಃ ॥134॥
ಅವನು ಎಲ್ಲ ರತ್ನಗಳನ್ನೂ ಭೋಗವನ್ನೂ ಅನುಭವಿಸುತ್ತಿದ್ದರೂ ಧೃತರಾಷ್ಟ್ರನ ಸಮೀಪದಲ್ಲಿ ಅವನು ಚಿಂತೆಯಿಂದ ಕಾಂತಿಹೀನನಾಗಿ ಮಲಿನನೂ ಕೃಶನೂ ಆಗಿದ್ದಾನೆ ಎಂದು ಹೇಳಲ್ಪಟ್ಟಾಗ...
ಅನ್ವಜಾನಾತ್ ತತೋ ದ್ಯೂತಂ ಧೃತರಾಷ್ಟ್ರಃ ಸುತಪ್ರಿಯಃ |
ತಚ್ಛ್ರುತ್ವಾ ವಾಸುದೇವಸ್ಯ ಕೋಪಃ ಸಮಭವನ್ಮಹಾನ್ ॥135॥
ಆ ಕಾರಣದಿಂದಾಗಿ ಸುತಪ್ರಿಯನಾದ ಧೃತರಾಷ್ಟ್ರನು ದ್ಯೂತಕ್ಕೆ ಅನುಮತಿಯನ್ನು ನೀಡಿದನು. ಈ ವಿಷಯವನ್ನು ಕೇಳಿದ ಕೃಷ್ಣನಿಗೆ ಬಹಳ ಕೋಪ ಉಂಟಾಯಿತು.
ನಾತಿಪ್ರೀತಮನಾಶ್ಚಾಸೀದ್ ವಿವಾದಂ ಚಾಪ್ಯುಪೈಕ್ಷತ |
ದ್ಯೂತಾದೀನನಯಾನ್ ಘೋರಾನ್ ಪ್ರವೃದ್ಧಾಂಶ್ಚಾಪ್ಯುಪೈಕ್ಷತ ॥136॥
ಧೃತರಾಷ್ಟ್ರನು ದ್ಯೂತ ಮೊದಲಾದವುಗಳು ಘೋರವಾದ ಅನರ್ಥಕ್ಕೆ ಕಾರಣವೆಂದು ತಿಳಿದಿದ್ದರೂ ಕೂಡ ಬಹಳ ಸಂತೋಷದಿಂದ ಕೂಡಿದ ಮನಸ್ಸು ಇಲ್ಲದಿದ್ದರೂ ಸಹ ಮಗನ ಮೇಲಿನ ಪ್ರೀತಿಯಿಂದ ದ್ಯೂತಕ್ಕೆ ಅನುಮತಿಯನ್ನು ನೀಡಿದನು.
ನಿರಸ್ಯ ವಿದುರಂ ದ್ರೋಣಂ ಭೀಷ್ಮಂ ಶಾರದ್ವತಂ ಕೃಪಮ್ |
ವಿಗ್ರಹೇ ತುಮುಲೇ ತಸ್ಮಿನ್ನಹನ್ ಕ್ಷತ್ರಂ ಪರಸ್ಪರಮ್ ॥137॥
ವಿದುರನನ್ನು ದೂರಕಳುಹಿಸಿದ ಮೇಲೆ ದ್ರೋಣ, ಕೃಪ, ಭೀಷ್ಮರ ಮಾತನ್ನು ಕೇಳದೆ ಘೋರವಾದ ಯುದ್ಧವು ಉಂಟಾದಾಗ ಕ್ಷತ್ರಿಯಜಾತಿಯು ಪರಸ್ಪರವಾಗಿ ಹೊಡೆದಾಡಿಕೊಂಡು ಮರಣವನ್ನು ಅಪ್ಪಿತು.
ಜಯತ್ಸು ಪಾಂಡುಪುತ್ರೇಷು ಶ್ರುತ್ವಾ ಸುಮಹದಪ್ರಿಯಮ್ |
ದುರ್ಯೋಧನವಧಂ ಶ್ರುತ್ವಾ ಕರ್ಣಸ್ಯ ಶಕುನೇಸ್ತಥಾ |
ಧೃತರಾಷ್ಟ್ರಶ್ಚಿರಂ ಧ್ಯಾತ್ವಾ ಸಂಜಯಂ ವಾಕ್ಯಮಬ್ರವೀತ್ ॥138॥
ಪಾಂಡುಪುತ್ರರು ಜಯಶೀಲರಾಗುತ್ತಿರಲು ಅತ್ಯಂತ ಅಪ್ರಿಯವಾದ ದುರ್ಯೋಧನನವಧೆಯನ್ನೂ, ಶಕುನಿ ಕರ್ಣರ ವಧೆಯನ್ನೂ ಕೇಳಿದ ಧೃತರಾಷ್ಟ್ರನು ಬಹಳಹೊತ್ತು ಚಿಂತಿಸಿ ಸಂಜಯನನ್ನು ಕುರಿತು ಮಾತನಾಡಿದನು.
ಶೃಣು ಸಂಜಯ ಮೇ ಸರ್ವಂ ನ ಮೇಽಸೂಯಿತುಮರ್ಹಸಿ |
ಶ್ರುತವಾನಸಿ ಮೇಧಾವೀ ಬುದ್ಧಿಮಾನ್ ಪ್ರಾಜ್ಞಸತ್ತಮಃ ॥139॥
ಸಂಜಯನೇ ನೀನು ಮೇಧಾವಿಯು, ಪ್ರಾಜ್ಞನು, ಬುದ್ಧಿವಂತನು ಮತ್ತು ಅಧ್ಯಯನಮಾಡಿದವನು ಆಗಿರುವಿ. ನನ್ನ ಮಾತನ್ನು ಕೇಳು ಅಸೂಯೆಪಡಬೇಡ.
ವಿಗ್ರಹೇ ಮಮ ಪುತ್ರಾಣಾಂ ಪಾಂಡೂನಾಂ ಚ ತಥಾ ಸತಿ |
ನ ಮೇ ವಿಶೇಷಃ ಪುತ್ರೇಷು ಸ್ವೇಷು ಪಾಂಡುಸುತೇಷು ವಾ ॥140॥
ನನ್ನ ಮಕ್ಕಳಿಗೂ ಮತ್ತು ಪಾಂಡುವಿನ ಮಕ್ಕಳಿಗೂ ವಿರೋಧ ಉಂಟಾದಾಗ ಅವರಿಬ್ಬರ ಮಧ್ಯ ನನ್ನ ದೃಷ್ಟಿಯಲ್ಲಿ ಯಾವ ವ್ಯತ್ಯಾಸವೂ ಕಾಣುವುದಿಲ್ಲ.
ವೃದ್ಧಂ ಮಾಮಭ್ಯಸೂಯಂತೇ ಪುತ್ರಾ ಮನ್ಯುಪರಾಯಣಾಃ |
ಅಹಂ ತ್ವಚಕ್ಷುಃ ಕಾರ್ಪಣ್ಯಾತ್ ಪುತ್ರಪ್ರೀತ್ಯಾ ಸಹಾಮಿ ತತ್ |
ಮುಹ್ಯಂತಂ ಚಾನುಮುಹ್ಯಾಮಿ ದುರ್ಯೋಧನಮಚೇತಸಮ್ ॥141॥
ಕ್ರೋಧಶೀಲರಾದ ನನ್ನ ಮಕ್ಕಳು ವೃದ್ಧನಾದ ನನ್ನನ್ನು ನೋಡಿ ಅಸೂಯೆ ಪಡುತ್ತಾರೆ. ಕಣ್ಣುಗಳನ್ನು ಕಳೆದುಕೊಂಡು ಕಾರ್ಪಣ್ಯದಿಂದ ಜೀವಿಸುವ ನಾನು ನನ್ನ ಪುತ್ರರ ಮೇಲಿನ ವ್ಯಾಮೋಹದಿಂದ ಎಲ್ಲವನ್ನೂ ಸಹಿಸುತ್ತಿದ್ದೇನೆ. ನಾನು ದುರ್ಯೋಧನನ ಮೋಹಕ್ಕೆ ಒಳಗಾಗಿ ಅವನು ದುಃಖಿತನಾದರೆ ನಾನೂ ದುಃಖಿತನಾಗುತ್ತಿದ್ದೇನೆ.
ರಾಜಸೂಯೇ ಶ್ರಿಯಂ ದೃಷ್ಟ್ವಾ ಪಾಂಡವಸ್ಯ ಮಹೌಜಸಃ |
ತಚ್ಚಾಪಹಸನಂ ಪ್ರಾಪ್ಯ ಸಭಾರೋಹಣದರ್ಶನೇ ॥142॥
ಅಮರ್ಷಿತಃ ಸ್ವಯಂ ಜೇತುಮಶಕ್ತಃ ಪಾಂಡವಾನ್ ರಣೇ |
ನಿರುತ್ಸಾಹಶ್ಚ ಸಂಪ್ರಾಪ್ತುಂ ಶ್ರಿಯಂ ನಕ್ಷತ್ರಿಯೋ ಯಥಾ |
ಗಾಂಧಾರರಾಜಸಹಿತಶ್ಚದ್ಮದ್ಯೂತಮಮಂತ್ರಯತ್ ॥143॥
ರಾಜಸೂಯಯಾಗದಲ್ಲಿ ಮಹಾಪರಾಕ್ರಮಶಾಲಿಯಾದ ಧರ್ಮರಾಜನ ಸಂಪತ್ತನ್ನು ನೋಡಿ, ಮಯನ ಸಭೆಯಲ್ಲಿ ನಡೆದಾಡುವಾಗ ಉಂಟಾದ ಅಪಹಾಸ್ಯವನ್ನು ಹೊಂದಿ, ಸಿಟ್ಟನ್ನು ಹೊಂದಿದ ನನ್ನ ಮಗನು ಪಾಂಡವರನ್ನು ಯುದ್ಧದಲ್ಲಿ ಗೆಲ್ಲಲು ಸಮರ್ಥನಾಗದೆ ಯುದ್ಧದ ಉತ್ಸಾಹವನ್ನು ಬಿಟ್ಟು ಗಾಂಧಾರರಾಜನಾದ ಶಕುನಿಯ ಮೋಸದ ದ್ಯೂತವನ್ನು ಮಂತ್ರಾಲೋಚನೆ ಮಾಡಿ, ಆ ದ್ಯೂತದ ಸಹಾಯದಿಂದ ಕ್ಷತ್ರಿಯನಿಗೆ ಯೋಗ್ಯವಲ್ಲದ ರೀತಿಯಲ್ಲಿ ಪಾಂಡವರ ಸಂಪತ್ತನ್ನು ಸಂಪಾದಿಸಲು ಪ್ರಯತ್ನಪಟ್ಟನು.
ತತ್ರ ಯದ್ಯದ್ಯಥಾ ಜ್ಞಾತಂ ಮಯಾ ಸಂಜಯ ತಚ್ಛೃಣು |
ಶ್ರುತ್ವಾ ತು ಮಮ ವಾಕ್ಯಾನಿ ಬುದ್ಧ್ಯಾ ಯುಕ್ತಾನಿ ತತ್ತ್ವತಃ |

ತತೋ ಜ್ಞಾಸ್ಯಸಿ ಮಾಂ ಸೌತೇ ಪ್ರಜ್ಞಾಚಕ್ಷುಷಮಿತ್ಯುತ ॥144॥
ಈ ಸಂದರ್ಭದಲ್ಲಿ ಯಾವ ಯಾವ ಘಟನೆಗಳು ಹೇಗೆ ಸಂಭವಿಸಿದವು ಎಂಬ ವಿಷಯದಲ್ಲಿ ನಾನು ತಿಳಿದಂತೆ ಹೇಳುತ್ತೇನೆ. ನನ್ನ ಮಾತನ್ನು ಕೇಳು. ನನ್ನ ಮಾತುಗಳು ಬುದ್ಧಿಯುಕ್ತವಾದವು ಮತ್ತು ತಾತ್ವಿಕವಾದುವು. ಸಂಜಯನೇ ! ಸೂತಪುತ್ರನೇ ! ನನ್ನ ಮಾತುಗಳನ್ನು ಕೇಳಿ ಅನಂತರ ನನಗೆ ಪ್ರಜ್ಞಾಚಕ್ಷಸ್ಸು ಇದೆಯೇ ಇಲ್ಲವೇ ? ಎಂದು ನಿರ್ಧರಿಸು.

ಯದಾಽಶ್ರೌಷಂ ಧನುರಾಯಮ್ಯ ಚಿತ್ರಂ
ವಿದ್ಧಂ ಲಕ್ಷ್ಯಂ ಪಾತಿತಂ ವೈ ಪೃಥಿವ್ಯಾಮ್ |
ಕೃಷ್ಣಾಂ ಹೃತಾಂ ಪಶ್ಯತಾಂ ಸರ್ವರಾಜ್ಞಾಂ
ತದಾ ನಾಶಂಸೇ ವಿಜಯಾಯ ಸಂಜಯ ॥145॥
ಸಂಜಯನೇ ! ಅರ್ಜುನನು ಧನುಸ್ಸನ್ನು ಎತ್ತಿ ವಿಚಿತ್ರವಾದ ಲಕ್ಷ್ಯವನ್ನು ಭೇದಿಸಿ, ನೆಲಕ್ಕೆ ಉರುಳಿಸಿ ಭೂಮಿಯ ಎಲ್ಲಾ ರಾಜರ ಸಮ್ಮುಖದಲ್ಲಿ ದ್ರೌಪದಿಯನ್ನು ಪಡೆದನೆಂದು ಕೇಳಿದ ಮೇಲೆ ನಾನು ವಿಜಯವನ್ನು ಆಶಿಸಲಿಲ್ಲ.

ಯದಾಽಶ್ರೌಷಂ ದ್ವಾರಕಾಯಾಂ ಸುಭದ್ರಾಂ
ಪ್ರಸಹ್ಯೋಢಾಂ ಮಾಧವೀಮರ್ಜುನೇನ |
ಇಂದ್ರಪ್ರಸ್ಥಂ ವೃಷ್ಣಿವೀರೌ ಚ ಯಾತೌ
ತದಾ ನಾಶಂಸೇ ವಿಜಯಾಯ ಸಂಜಯ ॥146॥
ಸಂಜಯನೇ ! ಅರ್ಜುನನು ದ್ವಾರಕಾಪಟ್ಟಣದಲ್ಲಿ ಮಧುಕುಲದಲ್ಲಿ ಜನಿಸಿದ ಸುಭದ್ರೆಯನ್ನು ತನ್ನ ಶಕ್ತಿಯಿಂದ ಕರೆದುಕೊಂಡು ಹೋದನೆಂದು ಅನಂತರ ವೃಷ್ಣಿ ವೀರರಾದ ಕೃಷ್ಣ ಬಲರಾಮರು ಇಂದ್ರಪ್ರಸ್ಥಕ್ಕೆ ಹೋದರೆಂದು ಕೇಳಿದಮೇಲೆ ನಾನು ವಿಜಯವನ್ನು ಆಶಿಸಲಿಲ್ಲ.

ಯದಾಽಶ್ರೌಷಂ ದೇವರಾಜಪ್ರವೃಷ್ಟಂ
ಶರೈರ್ದಿವ್ಯೈರ್ವಾರಿತಮರ್ಜುನೇನ |
ಅಗ್ನಿಂ ತದಾ ತರ್ಪಿತಂ ಖಾಂಡವೇ ತು
ತದಾ ನಾಶಂಸೇ ವಿಜಯಾಯ ಸಂಜಯ ॥147॥
ಸಂಜಯನೇ ! ಅರ್ಜುನನು ದೇವೇಂದ್ರನು ಸುರಿಸಿದ ಪ್ರಭೂತವಾದ ಮಳೆಯನ್ನು ತನ್ನ ದಿವ್ಯವಾದ ಬಾಣಗಳಿಂದ ತಡೆದು ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಪಡಿಸಿದನೆಂದು ಕೇಳಿದ ಮೇಲೆ, ನಾನು ವಿಜಯವನ್ನು ಆಶಿಸಲಿಲ್ಲ.

ಯದಾಽಶ್ರೌಷಂ ಹೃತರಾಜ್ಯಂ ಯುಧಿಷ್ಠಿರಂ
ಪರಾಜಿತಂ ಸೌಬಲೇನಾಕ್ಷವತ್ಯಾಮ್ |
ಅನ್ವಾಗತಂ ಭ್ರಾತೃಭಿರಪ್ರಮೇಯೈ-
ಸ್ತದಾ ನಾಶಂಸೇ ವಿಜಯಾಯ ಸಂಜಯ ॥148॥
ಸಂಜಯನೇ ! ಯುಧಿಷ್ಠಿರನು ಅಕ್ಷದ್ಯೂತದಲ್ಲಿ ಶಕುನಿಯಿಂದ ಪರಾಜಿತನಾಗಿ ತನ್ನ ರಾಜ್ಯವನ್ನು ಕಳೆದುಕೊಂಡು ಅಪ್ರಮೇಯರಾದ ತನ್ನ ತಮ್ಮಂದಿರಿಂದ ಹಿಂಬಾಲಿಸಲ್ಪಟ್ಟು ಹೋದನೆಂಬ ವಾರ್ತೆಯನ್ನು ಕೇಳಿದಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ದ್ರೌಪದೀಮಶ್ರುಕಂಠೀಂ
ಸಭಾಂ ನೀತಾಂ ದುಃಖಿತಾಮೇಕವಸತ್ರಮ್ |
ರಜಸ್ವಲಾಂ ನಾಥವತೀಮನಾಥವತ್
ತದಾ ನಾಶಂಸೇ ವಿಜಯಾಯ ಸಂಜಯ ॥149॥
ಸಂಜಯನೇ ! ರಜಸ್ವಲೆಯೂ, ಏಕವಸ್ತ್ರಳೂ ಆದ, ರೋದಿಸುತ್ತಿರುವ ದ್ರೌಪದಿಯನ್ನು ಗಂಡಂದಿರಿದ್ದರೂ ಅನಾಥಳಂತೆ ಸಭೆಗೆ ಎಳೆದುಕೊಂಡು ಬಂದ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ಸ್ನಾತಕಾನಾಂ ಸಹಸ್ರೈ-
ರನ್ವಾಗತಂ ಧರ್ಮರಾಜಂ ವನಸ್ಥಮ್ |
ಭಿಕ್ಷಾಭುಜಾಂ ಬ್ರಹ್ಮಣಾನಾಂ ಮಹಾತ್ಮನಾಂ
ತದಾ ನಾಶಂಸೇ ವಿಜಯಾಯ ಸಂಜಯ ॥150॥
ಸಂಜಯನೇ ! ವನಗತನಾದ ಧರ್ಮರಾಜನನ್ನು ಸಹಸ್ರ ಸಂಖ್ಯೆಯಲ್ಲಿ ಸ್ನಾತಕರು ಮತ್ತು ಭಿಕ್ಷುಗಳಾದ ಮಹಾತ್ಮರಾದ ಬ್ರಾಹ್ಮಣರು ಹಿಂಬಾಲಿಸಿದರು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ವನವಾಸೇಷು ಪಾರ್ಥಾನ್
ಸಮಾಗತಾನ್ ಋಷಿಮುಖ್ಯೈಃ ಪುರಾಣೈಃ |
ಉಪಾಸ್ಯಮಾನಾನ್ ಸಕಲೈರ್ಜಾತಸಖ್ಯಾನ್
ತದಾ ನಾಶಂಸೇ ವಿಜಯಾಯ ಸಂಜಯ ॥151॥
ಸಂಜಯನೇ ! ವನವಾಸದಲ್ಲಿದ್ದ ಪಾಂಡವರು ಪ್ರಾಚೀನರಾದ ಶ್ರೇಷ್ಠ ಋಷಿಗಳಿಂದ ಸಮಾಗಮವನ್ನು ಹೊಂದಿ ಅವರ ಜೊತೆಯಲ್ಲಿ ಸಖ್ಯವನ್ನು ಹೊಂದಿ ಅವರಿಂದ ಪೂಜಿತರಾದರು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸುತ್ತಿಲ್ಲ.

ಯದಾಽಶ್ರೌಷಂ ಚಾರ್ಜುನಂ ದೇವದೇವಂ
ಕಿರಾತವೇಷಂ ತ್ರ್ಯಂಬಕಂ ತೋಷ್ಯ ಯುದ್ಧೇ |
ಅವಾಪ್ತವಂತಂ ಪಾಶುಪತಂ ಮಹಾಸ್ತ್ರಂ

ತದಾ ನಾಶಂಸೇ ವಿಜಯಾಯ ಸಂಜಯ ॥152॥

ಸಂಜಯನೇ ! ಅರ್ಜುನನು ಕಿರಾತವೇಷಧಾರಿಯಾದ ದೇವದೇವನಾದ ರುದ್ರನನ್ನು ಯುದ್ಧದಲ್ಲಿ ಸಂತೋಷಪಡಿಸಿ ಅವನಿಂದ ಪಾಶುಪತ ಮಹಾಸ್ತ್ರವನ್ನು ಪಡೆದನೆಂದು ತಿಳಿದ ಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.

ಯದಾऽಶ್ರೌಷಂ ತ್ರಿದಿವಸ್ಥಂ ಧನಂಜಯಂ
ಶಕ್ರಾತ್ ಸಾಕ್ಷಾತ್ ದಿವ್ಯಮಸ್ತ್ರಂ ಯಥಾವತ್ |
ಅಧೀಯಾನಂ ಸಂಶಿತಂ ಸತ್ಯಸಂಧಂ
ತದಾ ನಾಶಂಸೇ ವಿಜಯಾಯ ಸಂಜಯ ॥153॥

ಸತ್ಯಸಂಧನೂ ವ್ರತನಿಷ್ಠನೂ ಆದ ಅರ್ಜುನನು ಸ್ವರ್ಗಲೋಕದಲ್ಲಿ ಇಂದ್ರನಿಂದ ಎಲ್ಲಾ ದಿವ್ಯಾಸ್ತ್ರಗಳ ಉಪದೇಶವನ್ನು ವಿಧಿವತ್ತಾಗಿ ಪಡೆಯುತ್ತಿದ್ದಾನೆ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ತೀರ್ಥಯಾತ್ರಾಪ್ರವೃತ್ತಂ
ಪಾಂಡೋಃ ಸುತಂ ಸಹಿತಂ ಲೋಮಶೇನ |
ತಸ್ಮಾದಶ್ರೌಷೀದರ್ಜುನಸ್ಯಾರ್ಥಲಾಭಂ
ತದಾ ನಾಶಂಸೇ ವಿಜಯಾಯ ಸಂಜಯ ॥154॥

ತೀರ್ಥಯಾತ್ರೆಗೆ ಹೊರಟ ಅರ್ಜುನನು ಮಾರ್ಗದಲ್ಲಿ ಲೋಮಶರ ಸಮಾಗಮವನ್ನು ಹೊಂದಿ ತನ್ನ ಅರ್ಥಲಾಭವನ್ನು ಕೇಳಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ವೈಶ್ರವಣೇನ ಸಾರ್ಧಂ
ಸಮಾಗತಂ ಭೀಮಮನ್ಯಾಂಶ್ಚ ಪಾರ್ಥಾನ್ |
ತಸ್ಮಿನ್ ದೇಶೇ ಮಾನುಷಾಣಾಮಗಮ್ಯೇ
ತದಾ ನಾಶಂಸೇ ವಿಜಯಾಯ ಸಂಜಯ ॥155॥

ಸಂಜಯನೇ ! ಭೀಮನು ಉಳಿದ ಸಹೋದರರ ಜೊತೆಯಲ್ಲಿ ಮನುಷ್ಯರಿಗೆ ಅಗಮ್ಯವಾದ ಕುಬೇರನ ಸ್ಥಾನವಾದ ಸೌಗಂಧಿಕಾ ಪುಷ್ಪ ಪ್ರದೇಶದಲ್ಲಿ ಅವನಿಂದ ಸಮಾಗಮವನ್ನು ಹೊಂದಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಘೋಷಯಾತ್ರಾಗತಾನಾಂ
ಬಂಧಂ ಗಂಧರ್ವೈರ್ಮೋಕ್ಷಣಂ ಚಾರ್ಜುನೇನ |
ಸ್ವೇಷಾಂ ಸುತಾನಾಂ ಕರ್ಣಬುದ್ಧೌ ರತಾನಾಂ
ತದಾ ನಾಶಂಸೇ ವಿಜಯಾಯ ಸಂಜಯ ॥156॥

ಸಂಜಯನೇ ! ಕರ್ಣನ ಪ್ರಚೋದನೆಗೆ ಒಳಗಾಗಿ ಘೋಷಯಾತ್ರೆಗೆ ಹೊರಟ ನನ್ನ ಮಕ್ಕಳು ಗಂಧರ್ವರಿಂದ ಬಂಧಿಸಲ್ಪಟ್ಟು ಅರ್ಜುನ ಮೂಲಕ ಗಂಧರ್ವರಿಂದ ಬಿಡುಗಡೆಯನ್ನು ಹೊಂದಿದರೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಯಕ್ಷರೂಪೇಣ ಧರ್ಮಂ
ಸಮಾಗತಂ ಧರ್ಮರಾಜೇನ ಸೂತ |
ಪ್ರಶ್ನಾನುಕಾಂಶ್ಚ ವಿಬ್ರುವಂತಂ ಚ ಸಮ್ಯಕ್
ತದಾ ನಾಶಂಸೇ ವಿಜಯಾಯ ಸಂಜಯ ॥157॥

ಸಂಜಯನೇ ! ಯಕ್ಷರೂಪದಿಂದ ಬಂದ ಯಮನನ್ನು ಕುರಿತು ಅವನು ಕೇಳಿದ ಪ್ರಶ್ನೆಗಳಿಗೆ ಧರ್ಮರಾಜನು ಸಮರ್ಪಕವಾಗಿ ಉತ್ತರವನ್ನು ಕೊಟ್ಟನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ನ ವಿದುರ್ಮಾಮಕಾಸ್ತಾನ್
ವಿರಾಟನಗರೇ ವಸತಃ ಪಾಂಡುಪುತ್ರಾನ್ |
ಪ್ರಚ್ಛನ್ನರೂಪಾನ್ ಸಹ ಕೃಷ್ಣಯಾ ಸದಾ
ತದಾ ನಾಶಂಸೇ ವಿಜಯಾಯ ಸಂಜಯ ॥158॥

ಸಂಜಯನೇ ! ವಿರಾಟನಗರದಲ್ಲಿ ಪ್ರಚ್ಛನ್ನವೇಷದಿಂದ ವಿರಾಟನಿಗೇ ಗೊತ್ತಾಗದಂತೆ ದ್ರೌಪದಿಯ ಜೊತೆಯಲ್ಲಿ ವಾಸಮಾಡುತ್ತಿದ್ದ ಪಾಂಡವರನ್ನು ನನ್ನ ಮಕ್ಕಳು ಗುರುತಿಸಲು ಸಾಧ್ಯವಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಕೀಚಕಾನಾಂ ವರಿಷ್ಠಂ
ನಿಷೂದಿತಂ ಭ್ರಾತೃಶತೇನ ಸಾರ್ಧನ್ |
ದ್ರೌಪದ್ಯರ್ಥಂ ಭೀಮಸೇನೇನ ಸಂಖೇ
ತದಾ ನಾಶಂಸೇ ವಿಜಯಾಯ ಸಂಜಯ ॥159॥

ಸಂಜಯನೇ ! ಕೀಚಕನು ತನ್ನ ನೂರುಜನ ತಮ್ಮಂದಿರ ಜೊತೆಯಲ್ಲಿ ದ್ರೌಪದಿಯ ಸಲುವಾಗಿ ಭೀಮಸೇನನಿಂದ ಹತನಾದ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಮಾಮಕಾನಾಂ ವರಿಷ್ಠಾನ್
ಧನಂಜಯೇನೈಕರಥೇನ ಭಗ್ನಾನ್ |
ವಿರಾಟರಾಜ್ಯೇ ವಸತಾಂ ಮಹಾತ್ಮನಾಂ
ತದಾ ನಾಶಂಸೇ ವಿಜಯಾಯ ಸಂಜಯ ॥160॥

ಸಂಜಯನೇ ! ವಿರಾಟನಗರದಲ್ಲಿ ಮಹಾತ್ಮರಾದ ಪಾಂಡವರು ವಾಸಮಾಡುತ್ತಿದ್ದಾಗ ಅರ್ಜುನನು ಒಂದೇ ರಥದಲ್ಲಿ ಕುಳಿತು ಶ್ರೇಷ್ಠರಾದ ನನ್ನವರನ್ನೆಲ್ಲಾ ಸೋಲಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ಸತ್ಕೃತಾಂ ಮತ್ಸ್ಯರಾಜ್ಞಾ
ಸುತಾಂ ದತ್ತಾಮುತ್ತರಾಮರ್ಜುನಾಯ |
ತಾಂ ತ್ವರ್ಜುನಃ ಪ್ರತ್ಯಗೃಹ್ಣಾತ್ ಸುತಾರ್ಥೇ
ತದಾ ನಾಶಂಸೇ ವಿಜಯಾಯ ಸಂಜಯ ॥161॥

ಸಂಜಯನೇ ! ಮತ್ಸ್ಯರಾಜನಾದ ವಿರಾಟನು ಅರ್ಜುನನನ್ನು ಸತ್ಕರಿಸಿ ತನ್ನ ಮಗಳಾದ ಉತ್ತರೆಯನ್ನು ಅರ್ಜುನನಿಗೆ ಕೊಟ್ಟಾಗ ಅರ್ಜುನನು ತನ್ನ ಮಗನಾದ ಅಭಿಮನ್ಯುವಿನ ಸಲುವಾಗಿ ಅವಳನ್ನು ಸ್ವೀಕರಿಸಿದನು. ಎಂಬ ವಾರ್ತೆಯನ್ನು ಕೇಳಿದಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ನಿರ್ಜಿತಸ್ಯಾಧನಸ್ಯ
ಪ್ರವ್ರಾಜಿತಸ್ಯ ಸ್ವಜನಾತ್ ಪ್ರಚ್ಯುತಸ್ಯ |
ಅಕ್ಷೋಹಿಣೀಃ ಸಪ್ತ ಯುಧಿಷ್ಠಿರಸ್ಯ
ತದಾ ನಾಶಂಸೇ ವಿಜಯಾಯ ಸಂಜಯ ॥162॥

ಸಂಜಯನೇ ! ದ್ಯೂತದಲ್ಲಿ ನಿರ್ಜಿತನಾಗಿ ಧನರಹಿನಾಗಿ, ವನವಾಸವನ್ನು ಮಾಡಿ ತನ್ನ ಸ್ವಜನರಿಂದ ರಹಿತನಾದ ಧರ್ಮರಾಜನು ಏಳು ಅಕ್ಷೋಹಿಣಿ ಸೈನ್ಯವನ್ನು ಕೂಡಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ನರನಾರಾಯಣೌ ತೌ
ಕೃಷ್ಣಾರ್ಜುನೌ ವದತೋ ನಾರದಸ್ಯ |
ಅಹಂ ದೃಷ್ಟಾ್ವ ಬ್ರಹ್ಮಲೋಕೇ ಸದೇತಿ
ತದಾ ನಾಶಂಸೇ ವಿಜಯಾಯ ಸಂಜಯ ॥163॥

ಸಂಜಯನೇ ! ನಾರದರು ನಾನು ಬ್ರಹ್ಮಲೋಕದಲ್ಲಿ ಯಾವಾಗಲೂ ನೋಡುವ ನರನಾರಾಯಣರೇ ಅರ್ಜುನ ಮತ್ತು ಕೃಷ್ಣರು ಎಂದು ಹೇಳಿದ ಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.

ಯದಾಽಶ್ರೌಷಂ ಮಾಧವಂ ವಾಸುದೇವಂ
ಸರ್ವಾತ್ಮನಾ ಪಾಂಡವಾರ್ಥೇ ನಿವಿಷ್ಟಮ್ |
ಯಸ್ಯೇಮಾಂ ಗಾಂ ವಿಕ್ರಮಮೇಕಮಾಹು-
ಸ್ತದಾ ನಾಶಂಸೇ ವಿಜಯಾಯ ಸಂಜಯ ॥164|

ಸಂಜಯನೇ ! ಯಾವ ಕೃಷ್ಣನಿಗೆ ಸಮಗ್ರವಾದ ಈ ಭೂಮಿಯು ತ್ರಿವಿಕ್ರಮ ಅವತಾರದಲ್ಲಿ ಒಂದು ಪಾದವೆಂದು ಪರಿಗಣಿಸಲ್ಪಡುತ್ತದೆಯೋ, ಅಂತಹ ಕೃಷ್ಣನು ಪಾಂಡವರ ಹಿತಕ್ಕಾಗಿ ಬದ್ಧಕಂಕಣನಾಗಿದ್ದಾನೆ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ಕರ್ಣದುಃಶ್ಯಾಸನಾಭ್ಯಾಂ
ಬುದ್ಧಿಂ ಕೃತ್ವಾ ನಿಶ್ಚಲೇ ಕೇಶವಸ್ಯ |
ತಂ ಚಾತ್ಮಾನಂ ಬಹುಧಾ ದರ್ಶಯಾನಂ
ತದಾ ನಾಶಂಸೇ ವಿಜಯಾಯ ಸಂಜಯ ॥165॥

ಸಂಜಯನೇ ! ಕರ್ಣದುಃಶ್ಯಾಸನರು ದುರ್ಮಂತ್ರಾ- ಲೋಚನೆಯನ್ನು ನಡೆಸಿ ಸಂಧಾನಕ್ಕೆ ಬಂದ ಕೃಷ್ಣನನ್ನು ಬಂಧಿಸಲು ಪ್ರಯತ್ನಿಸಿದಾಗ ಕೃಷ್ಣನು ವಿಶ್ವರೂಪವನ್ನು ತೋರಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ವಾಸುದೇವೇ ಪ್ರಯಾತೇ
ರಥಸ್ಯೈಕಾಮಗ್ರತಸ್ತಿಷ್ಠಮಾನಾಮ್ |
ತಪ್ತಾಂ ಪೃಥಾಂ ಸಾಂತ್ವಿತಾಂ ಕೇಶವೇನ
ತದಾ ನಾಶಂಸೇ ವಿಜಯಾಯ ಸಂಜಯ ॥166॥

ಸಂಜಯನೇ ! ಕೃಷ್ಣನು ಹಸ್ತಿನಪುರದಿಂದ ಹಿಂದಿರುಗುವಾಗ ಕುಂತಿಯು ದುಃಖತಪ್ತಳಾಗಿ ಒಬ್ಬಳೇ ಅವನ ರಥದ ಮುಂದೆ ನಿಂತಳು ಮತ್ತು ಕೃಷ್ಣನು ಅವಳನ್ನು ಸಮಾಧಾನಪಡಿಸಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ

ಯದಾಽಶ್ರೌಷಂ ವಾಸುದೇವೇಽಪ್ರಯತ್ನಾ
ರಥಾಂಗಹಸ್ತೇ ಫಲ್ಗುನೇನಾನ್ವಿತೇಽಪಿ |
ಗೃಹೀತುಕಾಮಾ ಮಮ ಪುತ್ರಾವಜಾನನ್
ತದಾ ನಾಶಂಸೇ ವಿಜಯಾಯ ಸಂಜಯ ॥167॥

ಸಂಜಯನೇ ! ಶುಭಪ್ರಯತ್ನರಹಿತರಾದ ನನ್ನ ಮಕ್ಕಳು ರಥಾಂಗಪಾಣಿಯಾದ ಕೃಷ್ಣನು ಅರ್ಜುನನ ಸಹಿತವಾಗಿ ಸಂಧಾನಕ್ಕಾಗಿ ಸಭೆಗೆ ಬಂದಿದ್ದಾಗ ನನ್ನ ಮಕ್ಕಳು ಅವನನ್ನು ಸೆರೆಹಿಡಿಯುವ ಆಸೆಯಿಂದ ಅವನಿಗೆ ಅವಮಾನ ಮಾಡಿದರು ಎಂಬ ವಾರ್ತೆಯನ್ನು ಕೇಳಿದಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ಮಂತ್ರಿಣಂ ವಾಸುದೇವಂ
ತಥಾ ಭೀಷ್ಮಂ ಶಾಂತನವಂ ಚ ತೇಷಾಮ್ |
ಭಾರದ್ವಾಜಂ ಚಾರ್ಷತೋಽನುಬ್ರುವಾಣಂ

तदा नाशंसे विजयाय संजय ॥168॥
ಸಂಜಯನೇ ! ವಾಸುದೇವನು ಪಾಂಡವರಿಗೆ ಮಂತ್ರಿಯೆಂದು ಮತ್ತು ಶಂತನುವಿನ ಮಗನಾದ ಭೀಷ್ಮನು ಹಾಗೆಯೇ ಭರದ್ವಾಜರ ಪುತ್ರರಾದ ದ್ರೋಣರು ಪಾಂಡವರಿಗೆ ವೇದೋಕ್ತವಾದ ಆಶೀರ್ವಾದಗಳನ್ನು ಮಾಡಿದರೆಂದು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ವಾಸುದೇವಾರ್ಜುನೌ ತೌ
ತಥಾ ಧನುರ್ಗಾಂಡಿವಮಪ್ರಮೇಯಮ್ |
ತ್ರೀಣ್ಯು ಗ್ರವೀರ್ಯಾಣಿ ಸಮಾಗತಾನಿ
ತದಾ ನಾಶಂಸೇ ವಿಜಯಾಯ ಸಂಜಯ ॥169॥
ಸಂಜಯನೇ ! ಕೃಷ್ಣ ಅರ್ಜುನ ಮತ್ತು ಗಾಂಡೀವಧನುಸ್ಸು, ಉಗ್ರಪರಾಕ್ರಮವುಳ್ಳ ಈ ಮೂರುವಸ್ತು ಗಳು ಯುದ್ಧಕ್ಕಾಗಿ ಸೇರಿದವು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.

ಯದಾऽಶ್ರೌಷಂ ಕಶ್ಮಲೇನಾಭಿಪನ್ನೇ
ರಥೋಪಸ್ಥೇ ಸೀದಮಾನೇऽರ್ಜುನೇ ಚ |
ಕೃತ್ಸ್ನಾನ್ ಲೋಕಾನ್ ದರ್ಶಯಾನಂ ಶರೀರೇ
ತದಾ ನಾಶಂಸೇ ವಿಜಯಾಯ ಸಂಜಯ ॥170॥
ಸಂಜಯನೇ ! ಸೇನಾಮುಖದಲ್ಲಿ ಅರ್ಜುನನು ತತ್ತ್ವ ನಿಶ್ಚಯವಿಲ್ಲದೆ ರಥದಲ್ಲಿ ಕುಳಿತು ವಿಷಾದಪಡುತ್ತಿರಲು, ಕೃಷ್ಣನು ಅವನಿಗೆ ತನ್ನ ವಿಶ್ವರೂಪವನ್ನು ತೋರಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಭೀಷ್ಮಮಮಿತ್ರಕರ್ಶನಂ
ನಿಘ್ನಂತಮಾಜಾವಯುತಂ ರಥಾನಾಮ್ |
ನ ಚೈಷಾಂ ಕಶ್ಚಿದ್ ದೃಶ್ಯತೇ ವಧ್ಯರೂಪ-
ಸ್ತದಾ ನಾಶಂಸೇ ವಿಜಯಾಯ ಸಂಜಯ ॥171॥
ಸಂಜಯನೇ ! ಶತ್ರುಕರ್ಶನನಾದ, ಯುದ್ಧದಲ್ಲಿ ಪ್ರತಿನಿತ್ಯವೂ ಹತ್ತುಸಾವಿರ ರಥಗಳನ್ನು ನಾಶಮಾಡುವ ಭೀಷ್ಮನು ಯುದ್ಧಮಾಡುತ್ತಿರುವಾಗ ಪಾಂಡವರಲ್ಲಿ ಪಬ್ಬನೂ ಸಹ ಅವನ ಬಾಣಕ್ಕೆ ಗುರಿಯಾಗಲಿಲ್ಲವೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಭೀಷ್ಮಮತ್ಯಂತಶೂರಂ
ಹತಂ ಪಾರ್ಥೇನಾಹವೇಷ್ವಪ್ರಮತ್ತಮ್ |
ಶಿಖಂಡಿನಂ ಪುರತಃ ಸ್ಥಾಪಯಿತ್ವಾ
ತದಾ ನಾಶಂಸೇ ವಿಜಯಾಯ ಸಂಜಯ ॥172॥
ಸಂಜಯನೇ ! ಯುದ್ಧದಲ್ಲಿ ಯಾವಾಗಲೂ ಜಾಗ್ರತನಾದ ಅತ್ಯಂತ ಶೂರನಾದ ಭೀಷ್ಮರನ್ನು ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ರಥದಿಂದ ಕೆಳಗೆ ಉರುಳಿಸಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಶರತಲ್ಪೇ ಶಯಾನಂ
ವೃದ್ಧಂ ಶೂರಂ ಸೂದಿತಂ ಚಿತ್ರಪುಂಖೈಃ |
ಭೀಷ್ಮಂ ಕೃತ್ವಾ ಸೋಮಕಾನಲ್ಪ ಶೇಷಾಂ-
ಸ್ತದಾ ನಾಶಂಸೇ ವಿಜಯಾಯ ಸಂಜಯ ॥173॥
ಸಂಜಯನೇ ! ಯುದ್ಧದಲ್ಲಿ ಶೂರರಾದ ವೃದ್ಧರಾದ ಭೀಷ್ಮರು ಸೋಮಕಸೈನ್ಯವನ್ನು ಹತಶೇಷವನ್ನಾಗಿ ಮಾಡಿ ವಿಚಿತ್ರವಾದ ಬಾಣಗಳಿಂದ ಹೊಡೆಯಲ್ಪಟ್ಟು ಶರಪಂಜರದಲ್ಲಿ ಮಲಗಿದರು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾऽಶ್ರೌಷಂ ಶಾಂತನವೇ ಶಯಾನೇ
ಪಾನೀಯಾರ್ಥಂ ಚೋದಿತೇನಾರ್ಜುನೇನ |
ಭೂಮಿಂ ಭಿತ್ತ್ವಾ ತರ್ಪಿತಂ ತತ್ರ ಭೀಷ್ಮಂ
ತದಾ ನಾಶಂಸೇ ವಿಜಯಾಯ ಸಂಜಯ ॥174॥
ಸಂಜಯನೇ ! ಶರತಲ್ಪದಲ್ಲಿ ಮಲಗಿದ ಭೀಷ್ಮರು ನೀರನ್ನು ಕೇಳಿದಾಗ ಅರ್ಜುನನು ಭೂಮಿಗೆ ಬಾಣವನ್ನು ಬಿಟ್ಟು ನೀರನ್ನು ಚಿಮ್ಮಿಸಿ ಅವರನ್ನು ತೃಪ್ತಪಡಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ

ಯದಾऽಶ್ರೌಷಂ ಶುಕ್ರಸೂರ್ಯೌ ಚ ಯುಕ್ತೌ
ಕೌಂತೇಯಾನಾಮನುಲೋಮೌ ಜಯಾಯ |
ನಿತ್ಯಂ ಚಾಸ್ಮಾನ್ ಶ್ವಾಪದಾನ್ ವ್ಯಾಭಷಂತೌ
ತದಾ ನಾಶಂಸೇ ವಿಜಯಾಯ ಸಂಜಯ ॥175॥
ಸಂಜಯನೇ ! ಶುಕ್ರ ಸೂರ್ಯರು ಪಾಂಡವರ ಜಯಕ್ಕೆ ಅನುಕೂವಾಗಿ ಅನುಕೂಲವಾದ ರಾಶಿಯಲ್ಲಿ ಇರುವರೆಂದು ತಿಳಿದು ನಮ್ಮನ್ನು ಕುರಿತು ನಾಯಿಗಳು ಮತ್ತು ಕ್ರೂರಪ್ರಾಣಿಗಳು ಬೊಗಳುತ್ತಿವೆ ಎಂಬುದನ್ನು ತಿಳಿದು ನಾನು ವಿಜಯದ ಆಸೆಯನ್ನು ಮಾಡುವುದಿಲ್ಲ.

ಯದಾ ದ್ರೋಣೋ ವಿವಿಧಾನಸ್ತ್ರ ಮಾರ್ಗಾನ್

ವ್ಯದರ್ಶಯತ್ ಸಮರೇ ಚಿತ್ರಯೋಧೀ |
ತಾನ್ ಪಾಂಡವಾನ್ ಶ್ರೇಷ್ಠತಮಾನ್ ವದಂತಿ
ತದಾ ನಾಶಂಸೇ ವಿಜಯಾಯ ಸಂಜಯ ॥176॥
ಸಂಜಯನೇ ! ದ್ರೋಣರು ಯುದ್ಧದಲ್ಲಿ ವಿಚಿತ್ರವಾಗಿ ಯುದ್ಧವನ್ನು ಮಾಡಿ ಅನೇಕ ಅಸ್ತ್ರಮಾರ್ಗಗಳನ್ನು ಪ್ರದರ್ಶಿಸಿದರೂ ಸಹ ಅಲ್ಲಿದ್ದವರು ಅವರಿಗಿಂತಲೂ ಪಾಂಡವರೇ ಶ್ರೇಷ್ಠರು ಎಂದು ಹೇಳುತ್ತಾರೆ ಎಂಬ ವಾರ್ತೆಯನ್ನು ಕೇಳಿದಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.
ಯದಾಽಶ್ರೌಷಮಸ್ಮದೀಯಾನ್ ಮಹಾರಥಾನ್
ವ್ಯವಸ್ಥಿತಾನರ್ಜುನಸ್ಯಾಂತಕಾಯ |
ಸಂಶಪ್ತಕಾನ್ ನಿಹತಾನರ್ಜುನೇನ
ತದಾ ನಾಶಂಸೇ ವಿಜಯಾಯ ಸಂಜಯ ॥177॥
ಸಂಜಯನೇ ! ಅರ್ಜುನನ ವಧೆಗಾಗಿಯೇ ಮೀಸಲಾದ ಮಹಾರಥರಾದ ಸಂಶಪ್ತಕರೆಲ್ಲರೂ ಅರ್ಜುನನಿಂದ ಕೊಲ್ಲಲ್ಪಟ್ಟರು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.
ಯದಾಽಶ್ರೌಷಂ ವ್ಯೂಹಮಭೇದ್ಯಮನ್ಯೈ-
ರ್ಭಾರದ್ವಾಜೇನಾತ್ತಶಸ್ತ್ರೇಣ ಗುಪ್ತಮ್ |
ಭಿತ್ತ್ವಾ ಸೌಭದ್ರಂ ವೀರಮೇಕಂ ಪ್ರವಿಷ್ಟಂ
ತದಾ ನಾಶಂಸೇ ವಿಜಯಾಯ ಸಂಜಯ ॥178॥
ಸಂಜಯನೇ ! ದ್ರೋಣರು ಅಭೇದ್ಯವಾದ ವ್ಯೂಹವನ್ನು ರಚಿಸಿ ಅದರ ಮುಂಭಾಗದಲ್ಲಿ ಶಸ್ತ್ರವನ್ನು ಹಿಡಿದು ರಕ್ಷಣೆ ಮಾಡುತ್ತಾ ನಿಂತಿದ್ದರೂ ಅಭಿಮನ್ಯುವು ಏಕಾಂಗಿಯಾಗಿ ಆ ವ್ಯೂಹವನ್ನು ಭೇದಿಸಿ ಒಳಗೆ ಪ್ರವೇಶಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.
ಯದಾಽಭಿಮನ್ಯುಂ ಪರಿವಾರ್ಯ ಬಾಲಂ
ಸರ್ವೇ ಹತ್ವಾ ಹೃಷ್ಟರೂಪಾ ಬಭೂವುಃ |
ಮಹಾರಥಾಃ ಪಾರ್ಥಮಶಕ್ನುವಂತ-
ಸ್ತದಾ ನಾಶಂಸೇ ವಿಜಯಾಯ ಸಂಜಯ ॥179॥
ಸಂಜಯನೇ ! ಅರ್ಜುನನನ್ನು ಎದುರಿಸಲಾಗದ ನನ್ನ ಕಡೆಯ ಮಹಾರಥರೆಲ್ಲಾ ಸೇರಿ ಸುತ್ತುವರೆದು ಬಾಲಕನಾದ ಅಭಿಮನ್ಯುವನ್ನು ಸಂಹಾರಮಾಡಿ ಸಂತೋಷಪಟ್ಟರೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸುವುದಿಲ್ಲ.
ಯದಾಽಶ್ರೌಷಮಭಿಮನ್ಯುಂ ನಿಹತ್ಯ
ಹರ್ಷಾನ್ಮೂಢಾನ್ ಕ್ರೋಶತೋ ಧಾರ್ತರಾಷ್ಟ್ರಾನ್ |
ಕ್ರೋಧಂ ಯುಕ್ತಂ ಸೈಂಧವೇ ಚಾರ್ಜುನೇನ
ತದಾ ನಾಶಂಸೇ ವಿಜಯಾಯ ಸಂಜಯ ॥180॥
ಸಂಜಯನೇ ! ಅಭಿಮನ್ಯುವನ್ನು ಸಂಹಾರ ಮಾಡಿ ಮೂಢರಾದ ನನ್ನ ಮಕ್ಕಳು ಸಂತೋಷದಿಂದ ಕೇಕೆ ಹಾಕುತ್ತಿದ್ದಾರೆ ಎಂದೂ ಮತ್ತು ಅರ್ಜುನನು ತನ್ನ ಕ್ರೋಧವೆಲ್ಲವನ್ನೂ ಸೈಂಧವನ ಮೇಲೆ ತಿರುಗಿಸಿದ್ದಾನೆಂದೂ ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ಸೈಂಧವಾರ್ಥೇ ಪ್ರತಿಜ್ಞಾಂ
ಕೃತಾಂ ತದಾ ತದ್ವಧಾಯಾರ್ಜುನೇನ |
ಸತ್ಯಾಂ ನಿಸ್ತೀರ್ಣಾಂ ಶತ್ರುಮಧ್ಯೇ ಚ ತೇನ
ತದಾ ನಾಶಂಸೇ ವಿಜಯಾಯ ಸಂಜಯ ॥181॥
ಸಂಜಯನೇ ! ಅರ್ಜುನನು ಶತ್ರುಗಳ ಮಧ್ಯದಲ್ಲಿ ನಿಂತು ಸೈಂಧವನ ವಧೆಯನ್ನು ಪ್ರತಿಜ್ಞೆಮಾಡಿ ಆ ಪ್ರತಿಜ್ಞೆಯನ್ನು ನೆರವೇರಿಸಿ ತನ್ನ ಮಾತನ್ನು ಸತ್ಯವನ್ನಾಗಿ ಮಾಡಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ಶ್ರಾಂತಹಯೇ ಧನಂಜಯೇ
ಮುಕ್ತ್ವಾ ಹಯಾನ್ ಪಾಯಯಿತ್ವೋಪವೃತ್ತಾನ್ |
ಪುನರ್ಯುಕ್ತ್ವಾ ವಾಸುದೇವಂ ಪ್ರಯಾತಂ
ತದಾ ನಾಶಂಸೇ ವಿಜಯಾಯ ಸಂಜಯ ॥182॥
ಸಂಜಯನೇ ! ಯುದ್ಧದಲ್ಲಿ ದಣಿದ ಧನಂಜಯನ ಕುದುರೆಗಳನ್ನು ರಥದಿಂದ ಬಿಚ್ಚಿ ನೀರನ್ನು ಕುಡಿಸಿ ಅವುಗಳನ್ನು ಸಮಾಧಾನ ಪಡಿಸಿ ಪುನಃ ರಥದಲ್ಲಿ ಹೂಡಿ ಕೃಷ್ಣನು ಮುಂದಕ್ಕೆ ನಡೆದನು ಎಂಬುದನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ವಾಹನೇಷ್ವಾಶ್ವಸತ್ಸು
ರಥೋಪಸ್ಥೇ ತಿಷ್ಠತಾ ಚಾರ್ಜುನೇನ |
ಸರ್ವಾನ್ ಯೋಧಾನ್ ವಾರಿತಾನ್ ಪಾಂಡವೇನ
ತದಾ ನಾಶಂಸೇ ವಿಜಯಾಯ ಸಂಜಯ ॥183॥
ಸಂಜಯನೇ ! ಕುದುರೆಗಳು ವಿಶ್ರಾಂತಿ ಪಡೆಯುವಾಗ ರಥದಲ್ಲಿ ಕುಳಿತ ಅರ್ಜುನನೊಬ್ಬನೇ ಶತ್ರುಪಕ್ಷದ ಎಲ್ಲ ಯೋಧರನ್ನೂ ಎದುರಿಸಿ ಅವರನ್ನು ನಿವಾರಿಸಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.

ಯದಾಽಶ್ರೌಷಂ ನಾಗಬಲಂ ಸುದುಸ್ಸಹಂ
ದ್ರೋಣಂ ಚಾಸ್ತ್ರೈರ್ಯುಯುಧಾನಂ ಪ್ರಯುಧ್ಯ |
ಯಾಂತೌ ಪಾರ್ಥೌ ಯತ್ರ ತೌ ಕೃಷ್ಣೋಪಾರ್ಥೌ
ತದಾ ನಾಶಂಸೇ ವಿಜಯಾಯ ಸಂಜಯ ॥184॥
ಸಂಜಯನೇ ! ಆನೆಯ ಬಲವುಳ್ಳ ದುಸ್ಸಹರಾದ ಅಸ್ತ್ರಯುದ್ಧವನ್ನು ಮಾಡುವ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಿ ಯುಧಿಷ್ಠಿರ ಮತ್ತು ಭೀಮಸೇನರು ಯುದ್ಧಭೂಮಿಯಲ್ಲಿ ಲೀಲಾಜಾಲವಾಗಿ ಕೃಷ್ಣ ಅರ್ಜುನರಿದ್ದ ಸ್ಥಳಕ್ಕೆ ಹೋದರು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ಯುದ್ಧದಲ್ಲಿ ವಿಜಯವನ್ನು ಬಯಸಲಿಲ್ಲ.
ನಮ್ಮ ಯುದ್ಧಭೂಮಿಯು ಅವರಿಗೆ ವಿಹಾರ ಭೂಮಿಯಾಯಿತು ಎಂಬ ಕಾರಣದಿಂದ ನಾನು ವಿಜಯವನ್ನು ಬಯಸುವುದಿಲ್ಲ.
ಯದಾಽಶ್ರೌಷಂ ಕರ್ಣಮಾಸಾದ್ಯ ಮುಕ್ತಂ
ವಧಾದ್ ಭೀಮಂ ಗರ್ಹಯಿತ್ವಾ ವಚೋಭಿಃ |
ಧನುಷ್ಕೋಟ್ಯಾಽಽತುದ್ಯ ಕರ್ಣೇನ ವೀರಂ
ತದಾ ನಾಶಂಸೇ ವಿಜಯಾಯ ಸಂಜಯ ॥185॥
ಸಂಜಯನೇ ! ಕರ್ಣನು ಭೀಮಸೇನನನ್ನು ಸಮೀಪಿಸಿ ತನ್ನ ಧನುಷ್ಕೋಟಿಯಿಂದ ಅವನನ್ನು ಚುಚ್ಚಿ ಉಗ್ರವಾದ ಮಾತುಗಳನ್ನು ಆಡಿದರೂ ಭೀಮಸೇನನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಭೀಮನು ಸಮೀಪದಲ್ಲಿ ಕೈಗೆ ಸಿಕ್ಕಿದರೂ ಸಹ ಕರ್ಣನು ಅವನಿಗೆ ಏನೂ ಮಾಡಲಾಗಲಿಲ್ಲ ಎಂಬ ಕಾರಣ ಧೃತರಾಷ್ಟ್ರನಿಗೆ ಆಶಾನಿವೃತ್ತಿಯಿದೆ.
ಯದಾಽಶ್ರೌಷಂ ಕೃತವರ್ಮಾ ಕೃಪಶ್ಚ
ಕರ್ಣೋ ದ್ರೌಣಿರ್ಮದ್ರರಾಜಶ್ಚ ಸಂಖೇ |
ನಾರಕ್ಷನ್ ಯತ್ ಸೈಂಧವಂ ವಧ್ಯಮಾನಂ
ತದಾ ನಾಶಂಸೇ ವಿಜಯಾಯ ಸಂಜಯ ॥186॥
ಸಂಜಯನೇ ! ಕೃತವರ್ಮ, ಕೃಪ, ಕರ್ಣ, ಅಶ್ವತ್ಥಾಮ, ಶಲ್ಯ ಎಲ್ಲರೂ ಸೇರಿ ಯುದ್ಧದಲ್ಲಿ ಅರ್ಜುನನಿಂದ ಕೊಲ್ಲಲ್ಪಡುವ ಸೈಂಧವನನ್ನು ರಕ್ಷಿಸಲು ಸಾಧ್ಯವಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ದೇವರಾಜೇನ ದತ್ತಾಂ
ಶಕ್ತಿಂ ಮುಕ್ತಾಂ ವ್ಯಂಸಿತಾಂ ಮಾಧವೇನ |
ಘಟೋತ್ಕಚೇ ರಾಕ್ಷಸೇ ಘೋರರೂಪೇ
ತದಾ ನಾಶಂಸೇ ವಿಜಯಾಯ ಸಂಜಯ ॥187॥
ಸಂಜಯನೇ ! ದೇವೇಂದ್ರನು ಕರ್ಣನಿಗೆ ಕೊಟ್ಟ ಶಕ್ತ್ಯಾಯುಧವನ್ನು ಕೃಷ್ಣನು ವ್ಯರ್ಥಗೊಳಿಸಿ ಘೋರನಾದ ಘಟೋತ್ಕಚರಾಕ್ಷಸನಲ್ಲಿ ಪ್ರಯೋಗಿಸುವಂತೆ ಮಾಡಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ಕರ್ಣಘಟೋತ್ಕಚಾಭ್ಯಾಂ
ಯುದ್ಧೇ ಮುಕ್ತಾಂ ಸೂತಪುತ್ರೇಣ ಶಕ್ತಿಮ್ |
ಯಯಾ ವಧ್ಯಃ ಸಮರೇ ಸವ್ಯಸಾಚೀ
ತದಾ ನಾಶಂಸೇ ವಿಜಯಾಯ ಸಂಜಯ ॥188॥
ಸಂಜಯನೇ ! ಕರ್ಣಘಟೋತ್ಕಚರ ಯುದ್ಧದಲ್ಲಿ ಅರ್ಜುನನಿಗಾಗಿ ಕಾದಿರಿಸಿಕೊಂಡಿದ್ದ ಶಕ್ತ್ಯಾಯುಧವನ್ನು ಸೂತಪುತ್ರನಾದ ಕರ್ಣನು ಘಟೋತ್ಕಚನ ಮೇಲೆ ಪ್ರಯೋಗಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ಯುದ್ಧದಲ್ಲಿ ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ದ್ರೋಣಮಾಚಾರ್ಯಮೇಕಂ
ಧೃಷ್ಟದ್ಯುಮ್ನೇನಾಽಭ್ಯತಿಕ್ರಮ್ಯ ಧರ್ಮಮ್ |
ರಥೋಪಸ್ಥೇ ಪ್ರಾಯಗತಂ ವಿಶಸ್ತಂ
ತದಾ ನಾಶಂಸೇ ವಿಜಯಾಯ ಸಂಜಯ ॥189॥
ಸಂಜಯನೇ ! ರಥದಲ್ಲಿ ಪ್ರಾಯೋಪವೇಶಕ್ಕೆ ಕುಳಿತಿದ್ದ ದ್ರೋಣಾಚಾರ್ಯರನ್ನು ಧೃಷ್ಟದ್ಯುಮ್ನನು ಧರ್ಮವನ್ನು ಅತಿಕ್ರಮಿಸಿ ಕತ್ತರಿಸಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ. ಅತ್ಯಂತ ಬಲಿಷ್ಠನಾದ ದ್ರೋಣನನ್ನು ದುರ್ಬಲನಾದ ಧೃಷ್ಟದ್ಯುಮ್ನನು ಸಂಹರಿಸಿದನು ಎಂಬ ವಾರ್ತೆಯನ್ನು ಕೇಳಿದಾಗ ನನಗೆ ವಿಜಯದ ಆಸೆಯು ಹೋಯಿತು.
ಯದಾಽಶ್ರೌಷಂ ದ್ರೌಣಿನಾ ದ್ವೈರಥಸ್ಥಂ
ಮಾದ್ರೀಪುತ್ರಂ ನಕುಲಂ ಯೋಧಮಧ್ಯೇ |
ಸಮಂ ಯುದ್ಧೇ ಪಾಂಡವಂ ಯುಧ್ಯಮಾನಂ
ತದಾ ನಾಶಂಸೇ ವಿಜಯಾಯ ಸಂಜಯ ॥190॥
ಸಂಜಯನೇ ! ಯುದ್ಧಭೂಮಿಯಲ್ಲಿ ಯೋಧರ ಮಧ್ಯದಲ್ಲಿ ಅಶ್ವತ್ಥಾಮರ ಜೊತೆಯಲ್ಲಿ ದ್ವಂದ್ವಯುದ್ಧದಲ್ಲಿ ನಿರತನಾದ ನಕುಲನು ಅಶ್ವತ್ಥಾಮರಿಗೆ ಸಮನಾಗಿ ಯುದ್ಧವನ್ನು ಮಾಡಿದನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ಭೀಮಸೇನೇನ ಪೀತಂ

ರಕ್ತಂ ಭ್ರಾತುರ್ಯುಧಿ ದುಃಶಾಸನಸ್ಯ |
ನಿವಾರಿತಂ ನಾನ್ಯತಮೇನ ಭೀಮಂ
ತದಾ ನಾಶಂಸೇ ವಿಜಯಾಯ ಸಂಜಯ ॥191॥
ಸಂಜಯನೇ ! ಯುದ್ಧದಲ್ಲಿ ಭೀಮನು ದುಶ್ಯಾಸನನ ರಕ್ತವನ್ನು ಕುಡಿದಾಗ ಯಾರೂ ಭೀಮನನ್ನು ನಿವಾರಿಸಲು ಸಾಧ್ಯವಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾ ದ್ರೋಣೇ ನಿಹತೇ ದ್ರೋಣಪುತ್ರೋ
ನಾರಾಯಣಂ ದಿವ್ಯಮಸ್ತ್ರಂ ವಿಕುರ್ವನ್ |
ನೈಷಾಮಂತಂ ಗತವಾನ್ ಪಾಂಡವಾನಾಂ
ತದಾ ನಾಶಂಸೇ ವಿಜಯಾಯ ಸಂಜಯ ॥192॥
ಸಂಜಯನೇ ! ದ್ರೋಣರು ಹತರಾದ ಮೇಲೆ ಅಶ್ವತ್ಥಾಮಾಚಾರ್ಯರು ಪಾಂಡವರಿಗೆ ವಿರೋಧವನ್ನು ಮಾಡಲು ನಾರಾಯಣಾಸ್ತ್ರವನ್ನು ಪ್ರಯೋಗ ಮಾಡಿದರೂ ಪಾಂಡವರ ವಿನಾಶ ಉಂಟಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ಕರ್ಣಮತ್ಯಂತಶೂರಂ |
ಹತಂ ಪಾರ್ಥೇನಾಹವೇಷ್ವಪ್ರಧೃಷ್ಯಮ್
ತಸ್ಮಿನ್ ಭ್ರಾತೃಣಾಂ ವಿಗ್ರಹೇ ದೇವಮಧ್ಯೇ
ತದಾ ನಾಶಂಸೇ ವಿಜಯಾಯ ಸಂಜಯ ॥193॥
ಸಂಜಯನೇ ! ಅಣ್ಣತಮ್ಮಂದಿರ ನಡುವೆ ನಡೆದ ಆ ಯುದ್ಧದಲ್ಲಿ ಎಂದೂ ಸೋಲದಿರುವ ಅತ್ಯಂತ ಶೂರನಾದ ಕರ್ಣನು ಅರ್ಜುನನಿಂದ ಹತನಾದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ಯುದ್ಧದಲ್ಲಿ ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ದ್ರೋಣಪುತ್ರಂ ಕೃಪಂ ಚ
ದುಃಶಾಸನಂ ಕೃತವರ್ಮಾಣಮುಗ್ರಮ್ |
ಯುಧಿಷ್ಠಿರಂ ಶೂನ್ಯಮಧರ್ಷಯಂತಂ |
ತದಾ ನಾಶಂಸೇ ವಿಜಯಾಯ ಸಂಜಯ ॥194॥
ಸಂಜಯನೇ ! ಅಶ್ವತ್ಥಾಮಾಚಾರ್ಯರು ಕೃಪ, ದುಶ್ಯಾಸನ, ಪರಾಕ್ರಮಿಯಾದ ಕೃತವರ್ಮ ಇವರೆಲ್ಲರೂ ಸೇರಿ ಭೀಮಾರ್ಜುನರಿಂದ ದೂರನಾಗಿದ್ದಂತಹ ಧರ್ಮರಾಜನನ್ನು ಸೋಲಿಸಲು ಸಾಧ್ಯವಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಭೀಮಾರ್ಜುನರಿಗಿಂತ ದುರ್ಬಲನಾದ ಏಕಾಂಗಿಯಾದ ಧರ್ಮರಾಜನನ್ನೂ ನನ್ನವರು ಸೋಲಿಸಲು ಸಾಧ್ಯವಾಗಲಿಲ್ಲ ಅದ್ದರಿಂದ ಜಯದ ಆಸೆ ಇಲ್ಲ.
ಯದಾಽಶ್ರೌಷಂ ನಿಹತಂ ಮದ್ರರಾಜಂ
ರಣೇ ಶೂರಂ ಧರ್ಮರಾಜೇನ ಸೂತ |
ಸದಾ ಸಂಗ್ರಾಮೇ ಸ್ಪರ್ಧತೇ ಯಸ್ತು ಕೃಷ್ಣಂ
ತದಾ ನಾಶಂಸೇ ವಿಜಯಾಯ ಸಂಜಯ ॥195॥
ಸಂಜಯನೇ ! ಕೃಷ್ಣನ ಜೊತೆಯಲ್ಲಿ ಯಾವಾಗಲೂ ಯುದ್ಧದಲ್ಲಿ ಸ್ಪರ್ಧಿಸುವ ಮದ್ರರಾಜನಾದ ಶೂರನಾದ ಶಲ್ಯನು ಧರ್ಮರಾಜನಿಂದ ನಿಹತನಾದನೆಂದು ಕೇಳಿದ ಮೇಲೆ ನಾನು ಜಯವನ್ನು ಬಯಸಲಿಲ್ಲ
ಯದಾಽಶ್ರೌಷಂ ಕಲಹದ್ಯೂತಮೂಲಂ
ಮಾಯಾಬಲಂ ಸೌಬಲಂ ಪಾಂಡವೇನ |
ನಿಹತಂ ಸಂಗ್ರಾಮೇ ಸಹದೇವೇನ ಪಾಪಂ
ತದಾ ನಾಶಂಸೇ ವಿಜಯಾಯ ಸಂಜಯ ॥196॥
ಸಂಜಯನೇ ! ಯುದ್ಧಕ್ಕೆ ಕಾರಣವಾದ ದ್ಯೂತಕ್ಕೆ ಕಾರಣವಾದ ಮಾಯಾವಿಯಾದ ಪಾಪಿಯಾದ ಶಕುನಿಯು ಯುದ್ಧದಲ್ಲಿ ಸಹದೇವನಿಂದ ಹತನಾದನೆಂದು ಕೇಳಿದ ಮೇಲೆ ನಾನು ಜಯವನ್ನು ಬಯಸಲಿಲ್ಲ
ಯದಾಽಶ್ರೌಷಂ ಶ್ರಾಂತಮೇಕಂ ಶಯಾನಂ
ಹ್ರದಂ ಗತ್ವಾ ಸ್ತಂಭಯಿತ್ವಾ ತದಂಭಃ |
ದುರ್ಯೋಧನಂ ವಿರಥಂ ಭಗ್ನಯಜ್ಞಂ
ತದಾ ನಾಶಂಸೇ ವಿಜಯಾಯ ಸಂಜಯ ॥197॥
ಸಂಜಯನೇ ! ಯುದ್ಧದಿಂದ ನಿವೃತ್ತನಾದ ವಿರಥನಾದ ದುರ್ಯೋಧನನು ವೈಶಂಪಾಯನಸರೋವರದಲ್ಲಿ ಜಲಸ್ತಂಭನವನ್ನು ಮಾಡಿ ಮಂತ್ರವನ್ನು ಜಪಿಸುತ್ತಿರಲು, ಆ ಜಪಕ್ಕೆ ಭಂಗಬಂದಿತೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ.
ಯದಾಽಶ್ರೌಷಂ ಪಾಂಡವಾಂಸ್ತಿಷ್ಠಮಾನಾನ್
ಗತ್ವಾ ಹ್ರದೇ ವಾಸುದೇವೇನ ಸಾರ್ಧಮ್ |
ಅಧರ್ಷಿತಂ ಧರ್ಷಯಂತಂ ಸುತಂ ಮೇ
ತದಾ ನಾಶಂಸೇ ವಿಜಯಾಯ ಸಂಜಯ ॥198॥

ಸಂಜಯನೇ ! ಕೃಷ್ಣ ಮತ್ತು ಪಾಂಡವರು ವೈಶಂಪಾಯನ ಸರೋವರದ ಬಳಿಗೆಹೋಗಿ ನನ್ನ ಮಗನನ್ನು ನಿಂದಿಸದಿದ್ದರೂ, ನನ್ನ ಮಗನು ಪಾಂಡವರನ್ನೂ ಮತ್ತು ಕೃಷ್ಣನನ್ನೂ ನಿಂದಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ. ಮರಣಕಾಲದಲ್ಲಿಯೂ ವಿಷ್ಣುವೈಷ್ಣವನಿಂದೆಯನ್ನು ಮಾಡಿ ಕಾರಣಕ್ಕಾಗಿ ವಿಜಯದ ಆಸೆಯನ್ನು ತೊರೆದಿದ್ದೇನೆ.

ಯದಾಽಶ್ರೌಷಂ ವಿವಿಧಾಂಸ್ತಾತ ಮಾರ್ಗಾನ್
ಗದಾಯುದ್ಧೇ ಮಂಡಲಶಶ್ಚರಂತಮ್ |
ಮಿಥ್ಯಾಹತಂ ವಾಸುದೇವಸ್ಯ ಬುದ್ಧ್ಯಾ
ತದಾ ನಾಶಂಸೇ ವಿಜಯಾಯ ಸಂಜಯ ॥199॥

ಸಂಜಯನೇ ! ಅಲ್ಲಿ ಗಧಾಯುದ್ಧದಲ್ಲಿ ಭೀಮ ಮತ್ತು ದುರ್ಯೋಧನನು ಅನೇಕ ಮಾರ್ಗಗಳಲ್ಲಿ ತಿರುಗಿ ಅನೇಕ ಮಂಡಲಗಳಲ್ಲಿ ಯುದ್ಧವನ್ನು ಮಾಡುತ್ತಿರುವಾಗ ಕೃಷ್ಣನ ಪ್ರಚೋದನೆಯಂತೆ ದುರ್ಯೋಧನನು ಮೋಸದಿಂದ ಹೊಡೆಯಲ್ಪಟ್ಟನು ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ವಿಜಯವನ್ನು ಬಯಸಲಿಲ್ಲ. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು ಎಂಬಂತೆ ಅಧಾರ್ಮಿಕನಾದ ದುರ್ಯೋಧನನನ್ನು ಅಧರ್ಮದಿಂದ ಕೊಂದರೂ ಅದು ಧರ್ಮವೇ ಆಗಿದೆ.

ಯದಾಽಶ್ರೌಷಂ ದ್ರೋಣಪುತ್ರಾದಿಭಿಸ್ತೈ-
ರ್ಹತಾನ್ ಪಾಂಚಾಲಾನ್ ದ್ರೌಪದೇಯಾಂಶ್ಚ ಸುಪ್ತಾನ್ |
ಕೃತಂ ಬೀಭತ್ಸಮಯಶಸ್ಯಂ ಚ ಕರ್ಮ
ತದಾ ನಾಶಂಸೇ ವಿಜಯಾಯ ಸಂಜಯ ॥200॥

ಸಂಜಯನೇ ! ಅಶ್ವತ್ಥಾಮ ಮೊದಲಾದವರು ರಾತ್ರಿಯ ವೇಳೆಯಲ್ಲಿ ಮಲಗಿ ನಿದ್ರಿಸುತ್ತಿದ್ದ ದ್ರೌಪದಿಯ ಮಕ್ಕಳನ್ನು ಕೊಂದು ಅಕೀರ್ತಿಕರವಾದ ಬೀಭತ್ಸವಾದ ಕರ್ಮವನ್ನು  ಮಾಡಿದರೆಂದು ಕೇಳಿದ ಮೇಲೆ ನಾನು ನನ್ನ ಮಕ್ಕಳಿಗೆ ಪರಲೋಕದ ಗತಿಯ ಆಸೆಯನ್ನು ಬಿಟ್ಟಿದ್ದೇನೆ.

ನಿದ್ರಿಸಿದ್ದವರನ್ನು ಕೊಂದದ್ದರಿಂದ ಪರಲೋಕದಲ್ಲಿ ಗತಿಯಿಲ್ಲ.

ಯದಾಽಶ್ರೌಷಂ ಭೀಮಸೇನಾನುಯಾತೇ-
ನಾಶ್ವತ್ಥಾಮ್ನಾ ಪರಮಾಸ್ತ್ರಂ ಪ್ರಯುಕ್ತಮ್ |
ಕ್ರುದ್ಧೇನೈಷೀಕಂ ಚಾವಧೀದ್ಯೇನ ಗರ್ಭಂ
ತದಾ ನಾಶಂಸೇ ವಿಜಯಾಯ ಸಂಜಯ ॥201॥

ಸಂಜಯನೇ ! ಭೀಮಸೇನನನ್ನು ಹಿಂಬಾಲಿಸಿದ ಅಶ್ವತ್ಥಾಮನು ಕ್ರುದ್ಧನಾಗಿ ಒಂದು ಹುಲ್ಲುಕಡ್ಡಿಯನ್ನು ತೆಗೆದುಕೊಂಡು ಅದನ್ನು ಬ್ರಹ್ಮಾಸ್ತ್ರವಾಗಿ ಅಭಿಮಂತ್ರಿಸಿ ಉತ್ತರೆಯ ಗರ್ಭದ ಮೇಲೆ ಪ್ರಯೋಗಿಸಿದರೂ ಗರ್ಭವು ನಾಶವಾಗಲಿಲ್ಲ ಎಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ನನ್ನ ಮಕ್ಕಳಿಗೆ ಪರಲೋಕದ ಗತಿಯನ್ನು ಬಯಸಲಿಲ್ಲ.

ಭ್ರೂಣಹತ್ಯಾಪ್ರಯತ್ನದ ಕಾರಣದಿಂದ ಪರಲೋಕದಲ್ಲಿ ಗತಿಯಿಲ್ಲ.

ಯದಾಽಶ್ರೌಷಂ ಬ್ರಹ್ಮಶಿರೋಽರ್ಜುನೇನ
ಮುಕ್ತಂ ಸ್ವಸ್ತೀತ್ಯಸ್ತ್ರಮಸ್ತ್ರೇಣ ಶಾಂತಮ್ |
ಅಶ್ವತ್ಥಾಮ್ನಾ ಮಣಿರತ್ನಂ ಚ ಮುಕ್ತಂ
ತದಾ ನಾಶಂಸೇ ವಿಜಯಾಯ ಸಂಜಯ ॥202॥

ಸಂಜಯನೇ ! ಅಶ್ವತ್ಥಾಮರು ಪ್ರಯೋಗಿಸಿದ ಬ್ರಹ್ಮಶಿರೋಸ್ತ್ರವನ್ನು ಕುರಿತು ಅರ್ಜುನನು ತಾನೂ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿ ಶಾಂತಗೊಳಿಸಿ ಅಶ್ವತ್ಥಾಮರ ಶಿರೋರತ್ನವನ್ನು ತೆಗೆದುಕೊಂಡು ಹೋದನೆಂಬ ವಾರ್ತೆಯನ್ನು ಕೇಳಿದ ಮೇಲೆ ನನ್ನ ಮಕ್ಕಳಿಗೆ ಪರಲೋಕಗತಿಯನ್ನು ಬಯಸಲಿಲ್ಲ.

ಅಶ್ವತ್ಥಾಮರ ಶ್ರೇಷ್ಠವಾದ ಬ್ರಹ್ಮಚರ್ಯವ್ರತವನ್ನು ನಾಶಮಾಡಿದುದರಿಂದ ಪರಲೋಕಗತಿಯಿಲ್ಲ.

ಯದಾಽಶ್ರೌಷಂ ದ್ರೋಣಪುತ್ರೇಣ ಗರ್ಭೇ
ವೈರಾಟ್ಯಾ ವೈ ಪಾತ್ಯಮಾನೇ ಮಹಾಸ್ತ್ರೇ |
ಸಂಜೀವಯಾಮೀತಿ ಹರೇಃ ಪ್ರತಿಜ್ಞಾಂ
ತದಾ ನಾಶಂಸೇ ವಿಜಯಾಯ ಸಂಜಯ ॥203॥

ಸಂಜಯನೇ ! ಅಶ್ವತ್ಥಾಮರು ಉತ್ತರೆಯ ಗರ್ಭದ ಮೇಲೆ ಮಹಾಸ್ತ್ರವನ್ನು ಪ್ರಯೋಗಿಸಿದಾಗ ಕೃಷ್ಣನು ನಾನು ಗರ್ಭವನ್ನು ಬದುಕಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ನಾನು ನನ್ನ ಮಕ್ಕಳಿಗೆ ಪರಲೋಕಗತಿಯನ್ನು ಬಯಸಲಿಲ್ಲ.

ದುರ್ಯೋಧನನ ಸಲುವಾಗಿ ಅಶ್ವತ್ಥಾಮರು, ಕೃಷ್ಣ ಮತ್ತು ವ್ಯಾಸರಿಗೆ ಅಪ್ರಿಯವಾದ ಕಾರ್ಯವನ್ನು ಮಾಡಿದುದರಿಂದ ಪರಲೋಕದ ಗತಿಯ ಆಸೆಯಿಲ್ಲ.

ಶೋಚ್ಯಾ ಗಾಂಧಾರೀ ಪುತ್ರಪೌತ್ರೈರ್ವಿಹೀನಾ
ತಥಾ ವಧ್ವಾ ಪಿತೃಭಿರ್ಭ್ರಾತೃಭಿಶ್ಚ |
ಕೃತಂ ಕಾರ್ಯಂ ದುಷ್ಕರಂ ಪಾಂಡವೇಯೈಃ
ಪ್ರಾಪ್ತಂ ರಾಜ್ಯಂ ನಿಸ್ಸಪತ್ನಂ ಪುನಸ್ತೈಃ ॥204॥

ಮಕ್ಕಳನ್ನೂ ಮೊಮ್ಮಕ್ಕಳನ್ನೂ ಸೊಸೆಯರನ್ನೂ ತಂದೆಯನ್ನೂ ಮತ್ತು ಅಣ್ಣತಮ್ಮಂದಿರನ್ನೂ ಕಳೆದುಕೊಂಡ ಗಾಂಧಾರಿಯು ಶೋಚನೀಯಳು. ಪಾಂಡವರು ದುಷ್ಕರವಾದ ಕಾರ್ಯವನ್ನು ಎಸಗಿದರು. ಅವರು ಪುನಃ ಶತ್ರುರಹಿತವಾದ ರಾಜ್ಯವನ್ನು

ಹೊಂದಿದರು.
ಕಷ್ಟಂ ಯುದ್ಧೇ ದಶ ಶೇಷಾಃ ಶ್ರುತಾ ಮೇ
ತ್ರಯೋಽಸ್ಮಾಕಂ ಪಾಂಡವಾನಾಂ ಚ ಸಪ್ತ |
ದ್ವ್ಯೂನಾ ವಿಂಶತ್ಯಾದಿತಾಽಕ್ಷೋಹಿಣೀನಾಂ
ತಸ್ಮಿನ್ ಸಂಗ್ರಾಮೇ ತುಮುಲೇ ಕ್ಷತ್ರಿಯಾಣಾಮ್ ॥205॥
ಎಂತಹ ಕಷ್ಟ ಒದಗಿತು ! ಯುದ್ಧದಲ್ಲಿ ನಮ್ಮವರು ಮೂರುಜನ ಪಾಂಡವರಕಡೆ ಏಳುಜನ ಉಳಿದರೆಂದು ಕೇಳಿದೆನು. ಹದಿನೆಂಟು ಅಕ್ಷೋಹಿಣಿ ಸೈನ್ಯದಲ್ಲಿ ಉಳಿದೆಲ್ಲ ಕ್ಷತ್ರಿಯರು ಘೋರವಾದ ಯುದ್ಧದಲ್ಲಿ ನಾಶವನ್ನು ಹೊಂದಿದರು. (ಕೌರವರ ಕಡೆ ಕೃಪ, ಅಶ್ವತ್ಥಾಮ, ಯುಯುತ್ಸು ಮತ್ತು ಪಾಂಡವರ ಕಡೆ ಕೃಷ್ಣ, ಸಾತ್ಯಕಿ ಮತ್ತು ಪಂಚಪಾಂಡವರು)
ತಮಸಾ ತ್ವಸ್ಯ ವಿಸ್ತೀರ್ಣಂ ಮೋಹ ಆವಿಶತೇ ಚ ಮಾಮ್ |
ಸಂಜ್ಞಾಂ ನೈವ ಲಭೇ ಸೂತ ಮನೋ ವಿಹ್ವಲತೀವ ಮೇ ॥206॥
ನನ್ನ ಮನಸ್ಸು ಅಜ್ಞಾನದಿಂದ ಆವರಿಸಲ್ಪಡುತ್ತಿದೆ. ಯಾವ ಜ್ಞಾನವೂ ಉಂಟಾಗುತ್ತಿಲ್ಲ. ಸಂಜಯನೇ ! ನನ್ನ ಮನಸ್ಸು ತುಂಬಾ ವಿಹ್ವಲವಾಗುತ್ತಿದೆ. ಅಥವಾ ನನ್ನ ಹೆಂಡತಿ, ನನ್ನ ಮಕ್ಕಳು ಎಂಬ ಅಜ್ಞಾನದಿಂದ ಮೋಹವು ಉಂಟಾಗುತ್ತಿದೆ.
ಇತ್ಯುಕ್ತ್ವಾ ಧೃತರಾಷ್ಟ್ರೋಽಥ ವಿಲಪ್ಯ ಚ ಸುದುಃಖಿತಃ |
ಮೂರ್ಚ್ಛಿತಃ ಪುನರಾಶ್ವಸ್ತಃ ಸಂಜಯಂ ವಾಕ್ಯ ಮಬ್ರವೀತ್ ॥207॥
ಧೃತರಾಷ್ಟ್ರನು ಹೀಗೆ ಹೇಳಿ ದುಃಖದಿಂದ ಬಹಳ ವಿಲಾಪಮಾಡಿ ಮೂರ್ಛೆಯನ್ನು ಹೊಂದಿ ಪುನಃ ಎಚ್ಚರವನ್ನು ಪಡೆದು ಸಂಜಯನನ್ನು ಕುರಿತು ಮಾತನಾಡಿದನು.
ಸಂಜಯೈವಂಗತೇ ಪ್ರಾಣಾಂಸ್ತ್ಯಕ್ತುಮಿಚ್ಛಾಮಿ ಮಾಚಿರಮ್ |
ಸ್ತೋಕಂ ಹ್ಯಪಿ ನ ಪಶ್ಯಾಮಿ ಫಲಂ ಜೀವಿತಧಾರಣೇ ॥208॥
ಸಂಜಯನೇ ! ಪರಿಸ್ಥಿತಿಯು ಹೀಗೆ ಇರುವಾಗ ನಾನು ಪ್ರಾಣವನ್ನು ಬಿಡಲು ಬಯಸುತ್ತೇನೆ. ಬದುಕಿರುವುದರಲ್ಲಿ ಅಲ್ಪವಾದ ಪ್ರಯೋಜನವೂ ಕಾಣುತ್ತಿಲ್ಲ.
ಸೂತಃ
ತಮೇವಂವಾದಿನಂ ದೀನಂ ವಿಲಪಂತಂ ಮಹೀಪತಿಮ್ |
ಗಾವಲ್ಗಣಿರಿದಂ ಧೀಮಾನ್ ಮಹಾರ್ಥಂ ವಾಕ್ಯ ಮಬ್ರವೀತ್ ॥209॥
ಹೀಗೆ ವಿಲಾಪವನ್ನು ಮಾಡುತ್ತಾ ದೈನ್ಯದಿಂದ ಮಾತುಗಳನ್ನು ಆಡುತ್ತಿದ್ದ ಧೃತರಾಷ್ಟ್ರನನ್ನು ಕುರಿತು ಮೇಧಾವಿಯಾದ ಸಂಜಯನು ಅರ್ಥಪೂರ್ಣವಾದ ಮಾತುಗಳನ್ನು ಆಡಿದನು.
ಸಂಜಯಃ
ಶ್ರುತವಾನಸಿ ವೈ ರಾಜನ್ ಮಹೋತ್ಸಾಹಾನ್ ಮಹಾಬಲಾನ್ |
ದ್ವೈಪಾಯನಸ್ಯ ವಚನಾನ್ನಾರದಸ್ಯ ಚ ಧೀಮತಃ ॥210॥
ರಾಜನೇ ! ನೀನು ದ್ವೈಪಾಯನರ ಮುಖದಿಂದಲೂ ನಾರದರ ಮುಖದಿಂದಲೂ ಮಹೋತ್ಸಾಹ ಉಳ್ಳವರೂ, ಮಹಾಬಲ ಉಳ್ಳವರೂ ಮೇಧಾವಿಗಳೂ ಆದ ರಾಜರ ಕಥೆಗಳನ್ನು ಕೇಳಿದ್ದೀಯೆ.
ಮಹತ್ಸು ರಾಜವಂಶೇಷು ಗುಣೈಃ ಸಮುದಿತೇಷು ಚ |
ಜಾತಾನ್ ದಿವ್ಯಾಸ್ತ್ರವಿದುಷಃ ಶಕ್ರಪ್ರತಿಮತೇಜಸಃ ॥211॥
ಆವರೆಲ್ಲರೂ ದೊಡ್ಡ ದೊಡ್ಡ ರಾಜವಂಶದಲ್ಲಿ ಜನಿಸಿದವರು. ಬಹಳ ಸದ್ಗುಣಗಳಿಂದ ತುಂಬಿದವರು ಇಂದ್ರನಿಗೆ ಸಮಾನವಾದ ಪರಾಕ್ರಮ ಉಳ್ಳವರು ದಿವ್ಯಾಸ್ತ್ರಗಳನ್ನು ತಿಳಿದವರು.
ಧರ್ಮೇಣ ಪೃಥಿವೀಂ ಜಿತ್ವಾ ಯಜ್ಞೈರಿಷ್ಟ್ವಾಽಽಪ್ತದಕ್ಷಿಣೈಃ |
ಅಸ್ಮಿಂಲ್ಲೋಕೇ ಯಶಃ ಪ್ರಾಪ್ಯ ತತಃ ಕಾಲವಶಂ ಗತಾನ್ ॥212॥
ಅವರು ಧರ್ಮದಿಂದ ಪೃಥಿವಿಯನ್ನು ಜಯಿಸಿ ಬಹಳ ದಕ್ಷಿಣೆಗಳುಳ್ಳ ಯಾಗಗಳನ್ನು ಆಚರಿಸಿ ಈ ಲೋಕದಲ್ಲಿ ಕೀರ್ತಿಯನ್ನು ಪಡೆದು ಪರಲೋಕಕ್ಕೆ ಹೋಗಿದ್ದಾರೆ.
ವೈನ್ಯಂ ಮಹಾರಥಂ ವೀರಂ ಸೃಂಜಯಂ ಜಯತಾಂ ವರಮ್ |
ಸುಹೋತ್ರಂ ರಂತಿದೇವಂ ಚ ಕಕ್ಷೀವಂತಮಥೌಶಿಜಮ್ ॥213॥
ಅವರುಗಳು ಮಹಾರಥನಾದ ಪೃಥು, ವೀರನಾದ ಸೃಂಜಯ, ಜಯಶಾಲಿಯಾದ ಸುಹೋತ್ರ, ರಂತಿದೇವ, ಉಶಿಜಕುಲದಲ್ಲಿ ಹುಟ್ಟಿದ ಕಕ್ಷೀವಾನ್.
ಬಾಹ್ಲೀಕಂ ದಮನಂ ಶೈಬ್ಯಂ ಶರ್ಯಾತಿಂ ಚ ಶಿಬಿಂ ನಳಮ್ |
ವಿಶ್ವಾಮಿತ್ರಮಮಿತ್ರಘ್ನ ಮಂಬರೀಷಂ ಮಹಾಬಲಮ್ ॥214॥
ಬಾಹ್ಲೀಕ, ದಮನ, ಶೈಬ್ಯ, ಶರ್ಯಾತಿ, ಶಿಬಿ, ನಳ, ವಿಶ್ವಾಮಿತ್ರ, ಅಮಿತ್ರಘ್ನ, ಮಹಾಬಲನಾದ ಅಂಬರೀಷ.
ಮರುತ್ತಂ ಮನುಮಿಕ್ಷ್ವಾಕುಂ ಗಯಂ ಭರತಮೇವ ಚ |
ರಾಮಂ ದಾಶರಥಿಂ ಚೈವ ಶಶಬಿಂದುಂ ಭಗೀರಥಮ್ ॥215॥
ಮರುತ್ತ, ಮನು, ಇಕ್ಷ್ವಾಕು, ಗಯ, ಭರತ, ದಾಶರಥಿಯಾದ ರಾಮ, ಶಶಬಿಂದು, ಭಗೀರಥ
ಯಯಾತಿಂ ಶುಭಕರ್ಮಾಣಂ ದೇವೈರ್ಯೋ ಯಾಜಿತಃ ಸ್ವಯಮ್ |
ಚೈತ್ಯಯೂಪಾಂಕಿತಾ ಭೂಮಿರ್ಯಸ್ಯೇಯಂ ಸವನಾರ್ಣವಾ ॥216॥

ಶುಭಕರ್ಮಗಳನ್ನು ಮಾಡಿದ ಯಯಾತಿ. ದೇವತೆಗಳೇ ನಿಂತು ಅವನಿಂದ ಯಜ್ಞವನ್ನು ಮಾಡಿಸಿದರು. ಅವನ ಯಜ್ಞಗಳಿಂದ ಸಮಗ್ರವಾದ ಈ ಭೂಮಿಯು ಚೈತ್ಯಯೂಪಗಳಿಂದ ತುಂಬಿಹೋಯಿತು.
ಇತಿ ರಾಜ್ಞಾಂ ಚತುರ್ವಿಂಶನ್ನಾರದೇನ ಮಹಾತ್ಮನಾ |
ಪುತ್ರಶೋಕಾಭಿತಪ್ತಾಯ ಪುರಾ ಶೈವ್ಯಾಯ ಕೀರ್ತಿತಾಃ ॥217॥
ಮಹಾತ್ಮರಾದ ನಾರದರು ಪುತ್ರಶೋಕಾಭಿತಪ್ತನಾದ ಶಿಬಿಗೆ ಹಿಂದೆ ಈ ಇಪ್ಪತ್ತನಾಲ್ಕುಜನ ಮಹಾರಾಜರ ಕಥೆಗಳನ್ನು ಹೇಳಿದರು.
ತೇಭ್ಯಶ್ಚಾನ್ಯೇ ಗತಾಃ ಪೂರ್ವಂ ರಾಜಾನೋ ಬಲವತ್ತರಾಃ |
ಮಹಾರಥಾ ಮಹಾತ್ಮಾನಃ ಸರ್ವೈಃ ಸಮುದಿತಾ ಗುಣೈಃ ॥218॥
ಅವರಿಗಿಂತಲೂ ಮೊದಲು ಬೇರೆಯಾದ ಇನ್ನೂ ಬಲಿಷ್ಠರಾದ ಮಹಾರಥರೂ ಮಹಾನುಭಾವರಾದ, ಗುಣಪೂರ್ಣರೂ ಆದ ಅನೇಕ ರಾಜರುಗಳು ಕಾಲವಾಗಿ ಹೋಗಿದ್ದಾರೆ.
ಪೂರುಃ ಕುರುರ್ಯದುಃ ಶೂರೋ ವಿಷ್ವಗಶ್ವೋ ಮಹಾದ್ಯುತಿಃ |
ಅಣುಹೋ ಯುವನಾಶ್ವಶ್ಚ ಕಕುತ್ಸ್ಥೋ ವಿಕ್ರಮೋ ರಘುಃ ॥219॥
ಪೂರು, ಕುರು, ಯದು, ಶೂರ, ವಿಶ್ವಗಶ್ವ, ಮಹಾದ್ಯುತಿ, ಅಣುಹ, ಯುವನಾಶ್ವ, ಕಖೂಸ್ಥ, ವಿಕ್ರಮ, ರಘು
ವಿಜಿತಿರ್ವೀತಿಹೋತ್ರೋಂಗೋ ಹಯಶ್ಶ್ವೇತೋ ಬೃಹದ್ಗುರುಃ |
ಮಹೋತ್ಸಾಹೋ ವಿನೀತಾತ್ಮಾ ಸುಕ್ರತುರ್ನೈಷಧೋನಲಃ ॥220॥
ವಿಜಿತಿ, ವೀತಿಹೋತ್ರ, ಅಂಗ, ಹಯ, ಶ್ವೇತ, ಬೃಹದ್ಗುರು, ಮಹೋತ್ಸಾಹ, ವಿನೀತಾತ್ಮಾ, ಸುಕ್ರತು, ನಿಷಧಾಧಿಪತಿಯಾದ ನಳ.
ಸತ್ಯವ್ರತಃ ಶಾಂತಭಯಃ ಸುಮಿತ್ರಃ ಸುಬಲಃ ಪ್ರಭುಃ |
ಜಾನುಜಂಘೋಽನರಣ್ಯಶ್ಚ ಪ್ರಿಯಭೃತ್ಯಃ ಶುಚಿವ್ರತಃ ॥221॥
ಸತ್ಯವ್ರತ, ಶಾಂತಭಯ, ಸುಮಿತ್ರ, ಸುಬಲ, ಜಾನುಜಂಘ, ಅನರಣ್ಯ, ಪ್ರಿಯಭೃತ್ಯ, ಶುಚಿವ್ರತ.
ಬಲಬಂಧುರ್ನಿರಾಮರ್ದಃ ಕೇತುಶೃಂಗೋ ಬೃಹದ್ಬಲಃ |
ಧೃಷ್ಟಕೇತುರ್ಬೃಹತ್ಕೇತುರ್ದೀಪ್ತಕೇತುರ್ನಿರಾಮಯಃ ॥222॥
ಬಲಬಂಧು, ನಿರಾಮರ್ದ, ಕೇತುಶೃಂಗ, ಬೃಹದ್ಬಲ, ಧೃಷ್ಟಕೇತು, ಬೃಹತ್ಕೇತು, ದೀಪ್ತಕೇತು, ನಿರಾಮಯ.
ಅಧಿಕ್ಷ್ವರ್ವಲಲೋ ಧೂರ್ತೋ ದೃಢಬಂಧುರ್ದೃಢಾಯುಧಃ |
ಮಹಾಪುರಾಣಸಂಭಾವ್ಯಃ ಪ್ರತ್ಯಂಗಃ ಪುರಹಾ ಶ್ರುತಿಃ ॥223॥
ಅಧಿಕ್ಷು, ವಲಲ, ಧೂರ್ತ, ದೃಡಬಂಧು, ದೃಢಾಯುಧ, ಮಹಾಪುರಾಣಗಳಲ್ಲಿ ಪೂಜಿತನಾದ ಪ್ರತ್ಯಂಗ, ಪುರಹಾ ಮತ್ತು ಶ್ರುತಿ
ಏತೇಚಾನ್ಯೇ ಚ ಬಹವಃ ಶತಶೋಽಥ ಸಹಸ್ರಶಃ |
ಶ್ರೂಯಂತೇ ಶತಶಶ್ಚಾನ್ಯೇ ಸಂಖ್ಯಾತಾಶ್ಚಾಪಿ ಸರ್ವಶಃ ॥224॥
ಇವರು ಮತ್ತು ಅನೇಕ ನೂರಾರು ಮತ್ತು ಸಹಸ್ರಾರು ಸಂಖ್ಯೆಯುಳ್ಳ ರಾಜರುಗಳ ಹೆಸರುಗಳು ಕೇಳಿಬರುತ್ತವೆ.
ಹಿತ್ವಾ ತು ವಿಪುಲಾನ್ ಭೋಗಾನ್ ಬುದ್ಧಿಮಂತೋ ಮಹಾಬಲಾಃ |
ರಾಜಾನೋ ನಿಧನಂ ಪ್ರಾಪ್ತಾಸ್ತವ ಪುತ್ರೈರ್ಮಹತ್ತಮಾಃ ॥225॥
ಮಹಾಬಲಿಷ್ಠರಾದ ಅವರೆಲ್ಲರೂ ನಿನ್ನ ಮಕ್ಕಳಿಗಿಂತಲೂ ಶ್ರೇಷ್ಠರಾದವರು. ಅವರೆಲ್ಲರೂ ವಿಪುಲವಾದ ಭೋಗವನ್ನೂ ಐಶ್ವರ್ಯವನ್ನೂ ಬಿಟ್ಟು ಕಾಲವಾಗಿದ್ದಾರೆ.
ಯೇಷಾಂ ದಿವ್ಯಾನಿ ಕರ್ಮಾಣಿ ವಿಕ್ರಮಸ್ತ್ಯಾಗ ಏವ ಚ |
ಮಾಹಾತ್ಮ್ಯಮಪಿ ಚಾಸ್ತಿಕ್ಯಂ ಸತ್ಯಂ ಶೌಚಂ ದಮಾರ್ಜವಮ್ ॥225॥
ವಿದ್ವದ್ಭಿಃ ಕಥ್ಯತೇ ಲೋಕೇ ಪುರಾಣೈ ಕವಿಸತ್ತಮೈಃ |
ಸುಬುದ್ಧಿಗುಣಸಂಪನ್ನಾಸ್ತೇ ಚಾಪಿ ನಿಧನಂ ಗತಾಃ ॥226॥
ಅವರ ದಿವ್ಯವಾದ ಕರ್ಮಗಳು, ಪರಾಕ್ರಮ, ತ್ಯಾಗ, ಮಹಾತ್ಮ್ಯ, ಶ್ರದ್ಧೆ, ಸತ್ಯ, ಶೌಚ, ದಮ, ಆರ್ಜವ, ಈ ಗುಣಗಳನ್ನು ಲೋಕದಲ್ಲಿ ವಿದ್ವಾಂಸರು ಇಂದೂ ಹೊಗಳುತ್ತಾರೆ. ಶ್ರೇಷ್ಠವಾದ ಕವಿಗಳು ಪುರಾಣಗಳಲ್ಲಿಯೂ ಅವರನ್ನು ಹೊಗಳಿದ್ದಾರೆ. ಸದ್ಬುದ್ಧಿಯಿಂದಲೂ ಸದ್ಗುಣಗಳಿಂದಲೂ ಕೂಡಿದವರೆಲ್ಲರೂ ನಿಧನರಾದರು.
ತವ ಪುತ್ರಾ ದುರಾತ್ಮಾನಃ ಪ್ರತಪ್ತಾಶ್ಚೈವ ಮನ್ಯುನಾ |
ಲುಬ್ಧಾ ದುರ್ವೃತ್ತಭೂಯಿಷ್ಠಾ ನ ತಾನ್‌ಶೋಚಿತುಮರ್ಹಸಿ ॥227॥
ನಿನ್ನ ಮಕ್ಕಳಾದರೋ ದುಷ್ಟರಾದವರು ಯಾವಾಗಲೂ ಕ್ರೋಧದಿಂದ ಉರಿಯುತ್ತಿದ್ದರು. ದುರಾಶೆವುಳ್ಳವರು, ದುರ್ನಡತೆವುಳ್ಳವರು, ಅವರನ್ನು ಕುರಿತು ಶೋಕಿಸುವ ಅಗತ್ಯವಿಲ್ಲ.
ದೈವಂ ಪುರುಷಕಾರೇಣ ಕೋ ನಿವರ್ತಿತುಮರ್ಹತಿ |
ವಿಧಾತೃವಿಹಿತಂ ಮಾರ್ಗಂ ನ ಕಶ್ಚಿದತಿವರ್ತತೇ ॥228॥
ದೈವಸಂಕಲ್ಪವನ್ನು ಪುರುಷ ಪ್ರಯತ್ನವು ಎಂದೂ ಮೀರಲು ಸಾಧ್ಯವಿಲ್ಲ. ಎಲ್ಲರೂ ವಿಧಿಯು ಬರೆದ ಮಾರ್ಗದಲ್ಲಿಯೇ ನಡೆಯಬೇಕು.
ಕಾಲಃ ಸೃಜತಿ ತತ್ಸರ್ವಂ ಭಾವಾಭಾವೌ ಸುಖಾಸುಖೇ |
ಕಾಲಃ ಪಚತಿ ಭೂತಾನಿ ಕಾಲಃ ಸಂಹರತಿ ಪ್ರಜಾಃ ॥229॥
ಕಾಲನಾಮಕನಾದ ವಿಷ್ಣುವೇ ಎಲ್ಲವನ್ನೂ ಸೃಷ್ಟಿಸುತ್ತಾನೆ, ಉತ್ಪತ್ತಿನಾಶಗಳಿಗೂ, ಸುಖಃ, ದುಃಖಗಳಿಗೂ ಅವನೇ ಕಾರಣ. ಅವನು ಜೀವರನ್ನು ದುಃಖಗಳಿಗೆ ಒಳಪಡಿಸುತ್ತಾನೆ ಮತ್ತು ಸಂಹರಿಸುತ್ತಾನೆ.

ನಿರ್ದಹನ್ ವೈ ಪ್ರಜಾಃ ಕಾಲಃ ಕಾಲಃ ಶಮಯತೇ ಪುನಃ |
ಕಾಲೋऽಪಿ ಕುರುತೇ ಭಾವಾನ್ ಸರ್ವಲೋಕಶುಭಾಶುಭಾನ್ ॥230॥
ಜೀವರಿಗೆ ತಾಪವನ್ನು ಕೊಡುತ್ತಾನೆ, ಪುನಃ ಉಪಶಮನ ಮಾಡುತ್ತಾನೆ. ಎಲ್ಲವನ್ನೂ ವಿಪರಿಣಾಮ ಮಾಡುತ್ತಾನೆ. ಎಲ್ಲ ಲೋಕಗಳಿಗೆ ಶುಭಾಶುಭಗಳನ್ನು ಉಂಟುಮಾಡುತ್ತಾನೆ.
ಕಾಲಃ ಸಂಕ್ಷಿಪ್ಯ ಸರ್ವಾಸ್ತು ಪ್ರಜಾ ವಿಸೃಜತೇ ಪುನಃ |
ಕಾಲಃ ಸರ್ವೇಷು ಭೂತೇಷು ಚರತ್ಯವಿರತಃ ಸಮಃ ॥231॥
ಅವನು ಎಲ್ಲವಸ್ತುಗಳನ್ನು ವಿಲೀನಗೊಳಿಸಿ ಪ್ರಜೆಗಳನ್ನೂ ಮತ್ತು ಜಗತ್ತನ್ನು ಪುನಃ ಸೃಷ್ಟಿಸುತ್ತಾನೆ. ಅವನು ಅವಿಶ್ರಾಂತನಾಗಿ ಲೀಲೆಯಿಂದ ಎಲ್ಲ ಜೀವರಲ್ಲಿಯೂ ಪಕ್ಷಪಾತವಿಲ್ಲದೆ ಸಂಚರಿಸುತ್ತಾನೆ.
ಅತೀತಾನಾಗತಾ ಭಾವಾ ಯೇ ವರ್ತಂತೇ ಚ ಸಾಂಪ್ರತಮ್ |
ತಾನ್ ಕಾಲನಿರ್ಮಿತಾನ್ ಬುದ್ಧ್ವಾ ನ ಸಂಜ್ಞಾಂ ಹಾತುಮರ್ಹಸಿ ॥232॥
ಈಗಿರುವ ಎಲ್ಲ ವಸ್ತುಗಳು ಹಿಂದಿದ್ದ ಮತ್ತು ಮುಂದೆ ಬರುವ ಎಲ್ಲ ಜಡಚೇತನಗಳು ಜ್ಞಾನರೂಪನಾದ ಕಾಲನಾಮಕನಾದ ವಿಷ್ಣುವಿನ
ಅಧೀನವೆಂದು ತಿಳಿದು ನೀನು ಸಮಾಧಾನವನ್ನು ತಂದುಕೊಳ್ಳಬೇಕು.
ಸೂತಃ
ಏವಮುಕತ್ವಾ ತು ರಾಜಾನಂ ಸಂಜಯೋ ವಿರರಾಮ ಚ |
ಧೃತರಾಷ್ಟ್ರೋऽಥ ರಾಜಾ ಚ ಧೃತಿಮೇವ ಸಮಾಶ್ರಯತ್ ॥233॥
ಸಂಜಯನು ರಾಜನನ್ನು ಕುರಿತು ಹೀಗೆ ಮಾತನಾಡಿ ತನ್ನ ಮಾತನ್ನು ನಿಲ್ಲಿಸಿದನು. ಧೃತರಾಷ್ಟ್ರರಾಜನೂ ಸಹ ಧೈರ್ಯವನ್ನು ಹೊಂದಿದನು.
ಅತ್ರೋಪನಿಷದಂ ಪುಣ್ಯಾಂ ಕೃಷ್ಣದ್ವೈಪಾಯನೋऽಬ್ರವೀತ್ |
ಭಾರತಾಧ್ಯಯನಾತ್ ಪುಣ್ಯಾದಪಿ ಪಾದಮಧೀಯತಃ |
ಶ್ರದ್ದಧಾನಸ್ಯ ಪೂಯಂತೇ ಸರ್ವಪಾಪಾನ್ಯ ಶೇಷತಃ ॥234॥
ವೇದವ್ಯಾಸರು ಈ ಆದಿಪರ್ವದಲ್ಲಿ ಉಪನಿಷತ್ ರೂಪವಾದ ಈ ಅನುಕ್ರಮಣಿಕಾ ಅಧ್ಯಾಯವನ್ನು ಹೇಳಿದ್ದಾರೆ. ಭಾರತದ ಅಧ್ಯಯನದಿಂದ ಉಂಟಾದ ಪುಣ್ಯದಿಂದಲೂ, ಭಾರತದ ಒಂದು ಪಾದವನ್ನು ಅಧ್ಯಯನಮಾಡುವ ಪುಣ್ಯದಿಂದಲೂ, ಶ್ರದ್ಧೆಯುಳ್ಳ ಪುರುಷರಿಗೆ ಎಲ್ಲ ಪಾಪಗಳೂ ನಿಶ್ಶೇಷವಾಗಿ ಪರಿಹಾರವಾಗುತ್ತವೆ
ದೇವರ್ಷಯೋ ಹ್ಯತ್ರ ಪುಣ್ಯಾ ಬ್ರಹ್ಮರಾಜರ್ಷಯಸ್ತಥಾ |
ಕೀರ್ತ್ಯಂತೇ ಶುಭಕರ್ಮಾಣಸ್ತಥಾ ಯಕ್ಷಮಹೋರಗಾಃ ॥235॥
ಇಲ್ಲಿ ಪವಿತ್ರರಾದ ದೇವರ್ಷಿಗಳೂ, ರಾಜರ್ಷಿಗಳೂ, ಅವರು ಮಾಡಿದ ಶುಭಕರ್ಮಗಳೂ, ಯಕ್ಷರೂ ಮತ್ತು ಮಹೋರಗಗಳೂ ಕೀರ್ತಿಸಲ್ಪಡುತ್ತಾರೆ.
ಭಗವಾನ್ ವಾಸುದೇವಶ್ಚ ಕೀರ್ತ್ಯತೇऽತ್ರ ಸನಾತನಃ |
ಸಹಿ ಸತ್ಯಮೃತಂ ಚೈವ ಪವಿತ್ರಂ ಪುಣ್ಯಮೇವ ಚ |
ಶಾಶ್ವತಂ ಪರಮಂ ಬ್ರಹ್ಮ ಪರಂ ಜ್ಯೋತಿಃ ಸನಾತನಮ್ ॥236॥
ಪೂಜ್ಯನಾದ ಸನಾತನನಾದ ವಸುದೇವನ ಸುತನಾದ ಶ್ರೀಕೃಷ್ಣನು ಇಲ್ಲಿ ಎಲ್ಲಾ ಕಡೆಯೂ ಕೀರ್ತಿಸಲ್ಪಡುತ್ತಾನೆ. ಅವನೇ ಸತ್ಯ, ಋತ, ಪವಿತ್ರ, ಪುಣ್ಯಪ್ರದ, ಶಾಶ್ವತ, ಪರಬ್ರಹ್ಮ, ಪರಜ್ಯೋತಿ ಮತ್ತು ಸನಾತನನಾದವನು.
ಯಸ್ಯ ದಿವ್ಯಾನಿ ಕರ್ಮಾಣಿ ಕಥಯಂತಿ ಮನೀಷಿಣಃ |
ಅಸತ್ ಸತ್ ಸದಸಚ್ಚೈವ ಯಸ್ಮಾದೇವ ಪ್ರವರ್ತತೇ ॥237॥
ಜ್ಞಾನಿಗಳಾದವರು ಅವನ ದಿವ್ಯವಾದ ಕರ್ಮಗಳನ್ನು ಪ್ರಶಂಶಿಸುತ್ತಾರೆ. ಸೃಷ್ಟಿ, ಸ್ಥಿತಿ, ಸಂಹಾರಗಳು ಅವನಿಂದಲೇ ಉಂಟಾಗುತ್ತವೆ. ಅಸತ್ ಎಂದರೆ ದುರ್ಜನರು. ಸತ್ ಎಂದರೆ ಸಜ್ಜನರು. ಸದಸತ್ ಎಂದರೆ ಉಭಯವಿಧದ ಜನರು, ಅಥವಾ ಅಸತ್ ಎಂದರೆ ಅನಿತ್ಯವಾದ, ಸತ್ ಎಂದರೆ ನಿತ್ಯವಾದ, ಸದಸತ್ ಎಂದರೆ ನಿತ್ಯಾನಿತ್ಯವಾದ ಪ್ರಪಂಚವೂ ಅವನಿಂದಲೇ ಹುಟ್ಟಿತು.
ಸಂತತಿಶ್ಚ ಪ್ರವೃತ್ತಿಶ್ಚ ಜನ್ಮಮೃತ್ಯೂ ಪುನರ್ಭವಃ |
ಅಧ್ಯಾತ್ಮಂ ಶ್ರೂಯತೇ ಯತ್ರ ಪಂಚಭೂತಗುಣಾತ್ಮಕಮ್ ॥238॥
ರಾಜರ ಸಂತತಿಗಳು ಪ್ರವೃತ್ತಿಗಳು ಜನನ ಮರಣಗಳು ಪುನರ್ಜನ್ಮ ಪಂಚಭೂತಗುಣಗಳಿಂದ ಕೂಡಿದ ಶರೀರದಲ್ಲಿ ನಡೆಯುವ ಎಲ್ಲ ವ್ಯಾಪಾರಗಳು ಎಲ್ಲವೂ ಅವನಿಂದಲೇ ಉಂಟಾಗುತ್ತವೆ ಎಂದು ಇಲ್ಲಿ ಹೇಳಲ್ಪಡುತ್ತದೆ.
ಅವ್ಯಕ್ತಾದಿ ಪರಂ ತಚ್ಚ ಸ ದೇವಃ ಪರಿಗೀಯತೇ |
ಯತ್ ಸ್ವಂ ಯತಿವರಾ ಮುಕ್ತಾ ಧ್ಯಾನಯೋಗಬಲಾನ್ವಿತಾಃ |
ಪ್ರತಿಬಿಂಬಮಿವಾದರ್ಶೇ ಪಶ್ಯಂತ್ಯಾತ್ಮನ್ಯವಸ್ಥಿತಮ್ ॥239॥
ಧ್ಯಾನಯೋಗಬಲದಿಂದ ಕೂಡಿದ ಮುಕ್ತರಾದ ಯತಿಶ್ರೇಷ್ಠರು ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡಿದಂತೆ ತಮ್ಮ ಹೃದಯದಲ್ಲಿ ಯಾರ ಸ್ವರೂಪವನ್ನು ನೋಡುತ್ತಾರೆಯೋ ಅಂತಹ ಅವ್ಯಕ್ತಾದಿತತ್ತ್ವಗಳಿಗಿಂತಲೂ ಶ್ರೇಷ್ಠನಾದ ದೇವನು ಈ ಭಾರತದಲ್ಲಿ ಕೊಂಡಾಡಲ್ಪಡುತ್ತಾನೆ.
ಶ್ರದ್ದಧಾನಃ ಸತ್ಯಯುಕ್ತಃ ಸತ್ಯಧರ್ಮಪರಾಯಣಃ |
ಕಥಯನ್ನಿಮಮಧ್ಯಾಯಂ ನರಃ ಪಾಪಾತ್ ಪ್ರಮುಚ್ಯತೇ ॥240॥

ಯಾವ ಮನುಷ್ಯನು ಶ್ರದ್ಧೆಯಿಂದಲೂ, ಸತ್ಯದಿಂದಲೂ ಕೂಡಿದವನಾಗಿ ಧರ್ಮಪರಾಯಣನಾಗಿ ಈ ಅನುಕ್ರಮಣಿಕಾಧ್ಯಾಯವನ್ನು ವ್ಯಾಖ್ಯಾನ ಮಾಡುತ್ತಾನೆಯೋ ಅವನು ಪಾಪಗಳಿಂದ ಮುಕ್ತನಾಗುತ್ತಾನೆ.
ಅನುಕ್ರಾಮಣಿಮಧ್ಯಾಯಂ ಭಾರತಸ್ಯೈವಮಾದಿತಃ |
ಆಸ್ತಿಕಃ ಸತತಂ ಶೃಣ್ವನ್ನ ಕೃಚ್ಛ್ರೇಷ್ವವಸೀದತಿ |
ಸಭಾಮಧ್ಯೇಜಪನ್ ಕಶ್ಚಿತ್ ಸದ್ಯೋ ಮುಚ್ಯೇತ ಕಿಲ್ಬಿಷಾತ್ ॥241॥
ಮಹಾಭಾರತದ ಆದಿಯಲ್ಲಿರುವ ಈ ಅನುಕ್ರಮಣಿಕಾಧ್ಯಾಯವನ್ನು ಶ್ರವಣ ಮಾಡುವ ಆಸ್ತಿಕನು ಕಷ್ಟಗಳಿಗೆ ಸಿಲುಕುವುದಿಲ್ಲ, ಸಭೆಯ ಮಧ್ಯದಲ್ಲಿ ಇದನ್ನು ಜಪಿಸುವ ಮನುಷ್ಯನು ತಕ್ಷಣದಲ್ಲಿಯೇ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಅನುಕ್ರಾಮಣಮಧ್ಯಾಯಮಹೋರಾತ್ರ್ಯಾ ಚ ಸಂಚಿತಮ್ |
ಭಾರತಶ್ರಾವಪುಣ್ಯೇನ ಸತ್ಯಂ ಚಾನೃತಮೇವ ಚ ॥242॥
ದೇವತೆಗಳಿಗೆ ಸಂಬಂಧಿಸಿದ ಹಗಲು ಮತ್ತು ಪಿಶಾಚಿಗಳಿಗೆ ಸಂಬಂಧಿಸಿದ ರಾತ್ರಿಗಳು ಹೇಗೆ ಸತ್ಯ ಮತ್ತು ಸುಳ್ಳಿನಿಂದ ಸಂಬದ್ಧವಾಗಿವೆಯೋ ಹಾಗೆ ಅನುಕ್ರಮಣಿಕಾಧ್ಯಾಯವು ಸಮಗ್ರ ಭಾರತವನ್ನು ಶ್ರವಣ ಮಾಡಿದುದರಿಂದ ಉಂಟಾದ ಪುಣ್ಯದಿಂದ ಸಂಬದ್ಧವಾಗಿದೆ.
ಅನುಕ್ರಮಣಿಕಾ ಅಧ್ಯಾಯದ ಶ್ರವಣದಿಂದ ಉಂಟಾಗುವ ಪುಣ್ಯವು ಸಮಗ್ರ ಭಾರತದ ಶ್ರವಣದಿಂದ ಉಂಟಾಗುವ ಪುಣ್ಯಕ್ಕೆ ಸಮವಾಗಿದೆ.
ನವನೀತಂ ಯಥಾ ದಧ್ನೋ ದ್ವಿಪದಾಂ ಬ್ರಹ್ಮಣೋ ಯಥಾ |
ಆರಣಂ ಚಾಪಿ ವೇದೇಭ್ಯ ಓಷಧೀಭ್ಯೋ ಯಥಾಽಮೃತಮ್ ॥243॥
ಹೇಗೆ ನವನೀತವು ದಧಿಯ ಸಾರಭೂತವೋ, ಹೇಗೆ ಬ್ರಾಹ್ಮಣನು ದ್ವಿಪದಪ್ರಾಣಿಗಳಲ್ಲಿ ಶ್ರೇಷ್ಠನೋ, ಹೇಗೆ ಅರಣ್ಯಕ ಮತ್ತು ಉಪನಿಷತ್ತುಗಳು ವೇದಗಳಲ್ಲಿ ಶ್ರೇಷ್ಠವಾದುವೋ, ಹೇಗೆ ಅಮೃತವು ಓಷಧಿಗಳ ಸಾರವಾಗಿದೆಯೋ ಹಾಗೆ ಅನುಕ್ರಮಣಿಕಾಧ್ಯಾಯವು ಭಾರತದ ಸಾರವಾಗಿದೆ.
ಹ್ರದಾನಾಮುದಧಿಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ |
ಯಥೈತಾನಿ ವಿಶಿಷ್ಟಾನಿ ತಥಾ ಭಾರತಮುಚ್ಯತೇ ॥244॥
ಎಲ್ಲ ಸರೋವರಗಳಿಗಿಂತಲೂ ಸಮುದ್ರವು ಶ್ರೇಷ್ಠವಾದುದು. ಎಲ್ಲ ಚತುಷ್ಪಾದ ಪ್ರಾಣಿಗಳಿಗಿಂತಲೂ ಗೋವು ಶೇಷ್ಠವಾದುದು ಹೇಗೆಯೋ ಹಾಗೆ ಪ್ರಮೇಯವನ್ನು ನಿರೂಪಿಸುವ ಎಲ್ಲ ಗ್ರಂಥಗಳಲ್ಲಿ ಭಾರತವು ಶ್ರೇಷ್ಠವಾದುದು.
ಯಶ್ಚೇದಂ ಶ್ರಾವಯೇಚ್ಛ್ರಾದ್ಧೇ ಬ್ರಾಹ್ಮಣಾನ್ ಪಾದಮಂತತಃ |
ಅಕ್ಷಯ್ಯಮನ್ನದಾನಂ ತತ್ ಪಿತೄಂಸ್ತಸ್ಯೋಪತಿಷ್ಠತಿ ॥245॥
ಶ್ರಾದ್ಧಕಾಲದಲ್ಲಿ ಬ್ರಾಹ್ಮಣರಿಗೆ ಯಾವನು ಕೊನೆಯಪಕ್ಷ ಈ ಭಾರತದ ಒಂದು ಪಾದವನ್ನಾದರೂ ಶ್ರವಣ ಮಾಡಿಸುತ್ತಾನೆಯೋ ಅವನು ಪಿತೃಗಳಿಗೆ ಮಾಡಿದ ಅನ್ನದಾನವು ಅಕ್ಷಯವಾಗಿ ಅದು ಪಿತೃಗಳನ್ನು ತಲಪುತ್ತದೆ.
ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ |
ಬಿಭೇತ್ಯಲ್ಪ ಶ್ರುತಾದ್ ವೇದೋ ಮಾಮಯಂ ಪ್ರಚಲಿಷ್ಯತಿ ॥246॥
ಇತಿಹಾಸ ಪುರಾಣಗಳಿಂದ ವೇದದ ಅರ್ಥವನ್ನು ವಿಸ್ತಾರಮಾಡಿ ತಿಳಿಯಬೇಕು. ಅಲ್ಪವಿದ್ಯೆಯುಳ್ಳ ಮನುಷ್ಯನು ವೇದದ ವ್ಯಾಖ್ಯಾನವನ್ನು ಮಾಡಲು ಹೊರಟರೆ ನನಗೆ ಇವನು ಅಪಾರ್ಥವನ್ನು ಮಾಡುತ್ತಾನೆ ಎಂದು ವೇದವು ಹೆದರುತ್ತದೆ.
ಕಾರ್ಷ್ಣಂ ವೇದಮಿಮಂ ವಿದ್ವಾನ್ ಶ್ರಾವಯಿತ್ವಾರ್ಥಮಶ್ನುತೇ |
ಭ್ರೂಣಹತ್ಯಾಕೃತಂ ಚಾಪಿ ಪಾಪಂ ದಹ್ಯಾನ್ನ ಸಂಶಯಃ ॥247॥
ಈ ಮಹಾಭಾರತವು ವೇದವ್ಯಾಸರು ರಚಿಸಿದ ಪಂಚಮವೇದ. ಇದರ ವ್ಯಾಖ್ಯಾನವನ್ನು ಮಾಡಿದರೆ ಎಲ್ಲಾ ಪುರುಷಾರ್ಥಗಳ ಪ್ರಾಪ್ತಿಯಾಗುತ್ತದೆ. ಭ್ರೂಣಹತ್ಯೆಯನ್ನು ಮಾಡಿದ ಪಾಪವೂ ಕೂಡ ಇದರಿಂದ ಪರಿಹಾರವಾಗುತ್ತದೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಯ ಇಮಂ ಸಂಗ್ರಹಾಧ್ಯಾಯಂ ಪಠನ್ ಪರ್ವಣಿ ಪರ್ವಣಿ |
ಅಧೀತಂ ಭಾರತಂ ತೇನ ಕೃತ್ಸ್ನಂ ಸ್ಯಾದಿತಿ ಮೇ ಮತಿಃ ॥248॥
ಯಾರು ಪ್ರತಿ ಪರ್ವಕಾಲಗಳಲ್ಲಿ ಈ ಸಂಗ್ರಹಾಧ್ಯಾಯವನ್ನು ಪಠಿಸುತ್ತಾರೋ ಅವರು ಸಮಗ್ರವಾದ ಭಾರತವನ್ನು ಪಠಿಸಿದ ಪುಣ್ಯವನ್ನು ಹೊಂದುತ್ತಾರೆ ಎಂದು ನನ್ನ ಅಭಿಪ್ರಾಯ.
ಯಶ್ಚೇದಂ ಶೃಣುಯಾನ್ನಿತ್ಯಮಾರ್ಷಂ ಶ್ರದ್ಧಾಸಮನ್ವಿತಃ |
ಸ ದೀರ್ಘಮಾಯುಧೀರ್ಘಾಂಚ ಸ್ವರ್ಗತಿಂ ಚಾಪ್ನುಯಾನ್ನರಃ ॥249॥
ಋಷಿಗಳಿಗೆ ಯೋಗ್ಯವಾದ ಈ ಭಾರತವನ್ನು ಯಾವನು ಶ್ರದ್ಧೆಯಿಂದ ಕೇಳುತ್ತಾನೆಯೋ ಅವನು ದೀರ್ಘವಾದ ಆಯುಷ್ಯವನ್ನೂ ಮತ್ತು ದೀರ್ಘಕಾಲದ ಸ್ವರ್ಗವಾಸವನ್ನೂ ಹೊಂದುತ್ತಾನೆ.
ಚತ್ವಾರ ಏಕತೋ ವೇದಾ ಭಾರತಂ ಚೈಕಮೇಕತಃ |
ಸಮಾಗತೈಃ ಸುರರ್ಷಿಭಿಸ್ತುಲಾಮಾರೋಪಿತಂ ಪುರಾ ॥250॥
ದೇವತೆಗಳು ಮತ್ತು ಋಷಿಗಳೆಲ್ಲರೂ ಒಂದು ಕಡೆ ಸೇರಿ ಒಂದು ತಕ್ಕಡಿಯಲ್ಲಿ ಒಂದು ಕಡೆ ನಾಲ್ಕುವೇದಗಳನ್ನೂ ಇನ್ನೊಂದು ಕಡೆ ಭಾರತವನ್ನೂ ಇಟ್ಟು ತೂಗಿದರು.
ಮಹತ್ತ್ವೇಚ ಗುರುತ್ವೇಚ ಧ್ರಿಯಮಾಣಂ ತತೋಽಧಿಕಮ್ |
ಮಹತತ್ವದ್ ಭಾರವತತ್ವಚ್ಚ ಮಹಾಭಾರತಮುಚ್ಯತೇ |

ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃಪ್ರಮುಚ್ಯತೇ ॥251॥
ಮಹಾಭಾರತವಿದ್ದ ತಕ್ಕಡಿಯ ತಟ್ಟೆಯು ಗಾತ್ರದಿಂದ ಮತ್ತು ಭಾರದಿಂದ ಕೆಳಗೆ ಹೋಯಿತು. ಗಾತ್ರದಲ್ಲಿ ಮಹತ್ತಾಗಿರುವುದರಿಂದ ಮತ್ತು ಅರ್ಥದಿಂದ ಭಾರವಾಗಿರುವುದರಿಂದ ಇದನ್ನು ಮಹಾಭಾರತ ಎಂದು ಕರೆಯುತ್ತಾರೆ. ಮಹಾಭಾರತ ಶಬ್ದದ ಅರ್ಥವನ್ನು ಯಾವನು ತಿಳಿಯುತ್ತಾನೋ ಅವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ತಪೋನ ಕಲ್ಕೋಽಧ್ಯಯನಂ ನ ಕಲ್ಕಃ
ಸ್ವಾಭಾವಿಕೋ ವೇದವಿಧಿರ್ನ ಕಲ್ಕಃ |
ಪ್ರಸಹ್ಯ ವಿತ್ತಾಹರಣಂ ನ ಕಲ್ಕ-
ಸ್ತಾನ್ಯೇವ ಭಾವೋಪಹತಾನಿ ಕಲ್ಕಃ ॥252॥
ತಪಸ್ಸು ಕೆಟ್ಟದ್ದಲ್ಲ, ಅಧ್ಯಯನವು ಕೆಟ್ಟದ್ದಲ್ಲ, ಸ್ವಭಾವವನ್ನು ಅನುಸರಿಸಿದ ವೇದವಿಧಿಗಳು ಕೆಟ್ಟದ್ದಲ್ಲ, ರಾಜರು ಪ್ರಜೆಗಳಿಂದ ಬಲಾತ್ಕಾರಮಾಡಿ ಯೋಗ್ಯವಾದ ಧನವನ್ನು ಸ್ವೀಕರಿಸುವುದು ಕೆಟ್ಟದ್ದಲ್ಲ, ಆದರೆ ಉದ್ದೇಶವು ದುಷ್ಟವಾದರೆ ಮಾತ್ರ ಇದೆಲ್ಲವೂ ಕೆಟ್ಟದ್ದಾಗುತ್ತದೆ. ಸಂಸಾರಬಂಧನಕ್ಕೆ ಕಾರಣವಾಗುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ
ಸಂಹಿತಾಯಾಮಾದಿಪರ್ವಣಿ ಪ್ರಥಮೋಽಧ್ಯಾಯಃ ॥
॥ ಅನುಕ್ರಮಣಿಕಾಪರ್ವ ಸಮಾಪ್ತಮ್ ॥
ಇಲ್ಲಿಗೆ ಅನುಕ್ರಮಣಿಕಾಪರ್ವವು ಮುಗಿಯಿತು.
2. ಪರ್ವಸಂಗ್ರಹಪರ್ವ
ಎರಡನೆಯ ಅಧ್ಯಾಯ
(ಭಾರತಯುದ್ಧ ಸ್ಥಳದ ಕಥನ ಸಂದರ್ಭದಲ್ಲಿ ಪರಶುರಾಮನ ಚರಿತ್ರೆ. ಸಮಂತಪಂಚಕ ನಿರ್ಮಾಣ. ಸೇನಾಪರಿಮಾಣ, ಪರ್ವಾನುಕ್ರಮಣಿಕೆ ಮತ್ತು ಉಪಪರ್ವಗಳ ವಿಷಯಾನುಕ್ರಮಣಿಕೆ)
ಋಷಯಃ
ಸಮಂತಪಂಚಕಮಿತಿ ಯದುಕ್ತಂ ಸೂತನಂದನ |
ಏತತ್ಸರ್ವಂ ಯಥಾನ್ಯಾಯಂ ಶ್ರೋತುಮಿಚ್ಛಾಮಹೇ ವಯಮ್ ॥1॥
ಎಲೈ ಸೂತಪುತ್ರರೇ ನೀವು ಸಮಂತಪಂಚಕವೆಂದು ಹೇಳಿದಿರಷ್ಟೆ. ಆ ವಿಷಯವನ್ನು ನಾವು ವಿಸ್ತಾರವಾಗಿ ಯಥಾರ್ಥವಾಗಿ ಕೇಳಲು ಬಯಸುತ್ತೇವೆ.
ಸೂತಃ
ಶುಶ್ರೂಷಾ ಯದಿ ವೋ ವಿಪ್ರಾ ಬ್ರುವತಶ್ಚ ಕಥಾಃ ಶುಭಾಃ |
ಸಮಂತಪಂಚಕಾಖ್ಯಾನಂ ಶ್ರೋತುಮರ್ಹಥ ಸತ್ತಮಾಃ ॥2॥
ಎಲೈ ಬ್ರಾಹ್ಮಣರೇ, ಎಲೈ ಶ್ರೇಷ್ಠರೇ, ನಾನು ಹೇಳುವ ಪುಣ್ಯಕಥೆಗಳನ್ನು ನೀವು ಕೇಳುವ ಇಚ್ಛೆಯುಳ್ಳವರಾದರೆ ಸಮಂತಪಂಚಕದ ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳಿ.
ತ್ರೇತಾದ್ವಾಪರಯೋಃ ಸಂಧೌ ರಾಮಃ ಶಸ್ತ್ರಭೃತಾಂ ವರಃ |
ಅಸಕೃತ್ಪಾರ್ಥಿವಂ ಕ್ಷತ್ರಂ ಜಘಾನಾಮರ್ಷಚೋದಿತಃ ॥3॥
ತ್ರೇತಾ ಮತ್ತು ದ್ವಾಪರಯುಗದ ಸಂಧಿಯಲ್ಲಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಪರಶುರಾಮನು ಕ್ರೋಧಕ್ಕೆ ಒಳಗಾದವನಾಗಿ ಅನೇಕ ಬಾರಿ ಸಂಚರಿಸಿ ಭೂಮಿಯಲ್ಲಿದ್ದ ಕ್ಷತ್ರಿಯರನ್ನೆಲ್ಲಾ ಸಂಹರಿಸಿದನು.
ಸ ಸರ್ವಂ ಕ್ಷತ್ರಮುತ್ಸಾದ್ಯ ಸ್ವವೀರ್ಯೇಣಾನಲದ್ಯುತಿಃ |
ಸಮಂತಪಂಚಕೇ ಪಂಚ ಚಕಾರ ರುಧಿರಹ್ರದಾನ್ ॥4॥
ಅಗ್ನಿಯ ತೇಜಸ್ಸುಳ್ಳ ಪರಶುರಾಮನು ತನ್ನ ಪರಾಕ್ರಮದಿಂದ ಎಲ್ಲ ಕ್ಷತ್ರಿಯರನ್ನು ಸಂಹಾರ ಮಾಡಿ, ಸಮಂತಪಂಚಕದಲ್ಲಿ ಐದು ರಕ್ತಸರೋವರಗಳನ್ನು ಮಾಡಿದನು.
ಸ ತೇಷು ರುಧಿರಾಂಭಸ್ಸು ಹ್ರದೇಷು ಕ್ರೋಧಮೂರ್ಚ್ಛಿತಃ |
ಪಿತೄನ್ ಸಂತರ್ಪಯಾಮಾಸ ರುಧಿರೇಣೇತಿ ನಃ ಶ್ರುತಮ್ ॥5॥
ಮಹಾಕ್ರೋಧಕ್ಕೆ ಒಳಗಾದ ಪರಶುರಾಮನು ಆ ಸರೋವರಗಳ ರಕ್ತಜಲದಿಂದ ತನ್ನ ಪಿತೃಗಳಿಗೆ ತರ್ಪಣವನ್ನು ಕೊಟ್ಟನು ಎಂದು ನಾವು ಕೇಳಿದ್ದೇವೆ.
ಅಥರ್ಚೀಕಾದಯೋಽಭ್ಯೇತ್ಯ ಪಿತರೋ ಬ್ರಾಹ್ಮಣರ್ಷಭಮ್ |
ತಂ ಕ್ಷಮಸ್ವೇತಿ ಜಗದುಃ ತತಃ ಸ ವಿರರಾಮ ಹ ॥6॥
ಆಗ ಋಚೀಕ ಮೊದಲಾದ ಅವನ ಪಿತೃಗಳು ಬಂದು ಬ್ರಾಹ್ಮಣಶ್ರೇಷ್ಠನಾದ ಅವನನ್ನು ಕುರಿತು ಶಾಂತನಾಗು ಎಂದು ಹೇಳಿದನು. ಆಗ ಅವನು ಶಾಂತನಾದನು.
ತೇಷಾಂ ಸಮೀಪೇ ಯೋ ದೇಶೋ ಹ್ರದಾನಾಂ ರುಧಿರಾಂಭಸಾಮ್ |
ಸಮಂತಪಂಚಕಮಿತಿ ತತ್ ಪುಣ್ಯಂ ಪರಿಕೀರ್ತ್ಯತೇ ॥7॥
ಆ ರಕ್ತಸರೋವರಗಳ ಸಮೀಪದಲ್ಲಿರುವ ದೇಶಕ್ಕೆ ಸಮಂತಪಂಚಕವೆಂದು ಹೆಸರು. ಅದು ಪವಿತ್ರವಾದ ಕ್ಷೇತ್ರವೆಂದು ಹೇಳಲ್ಪಡುತ್ತದೆ.

ಯೇನ ಲಿಂಗೇನ ಯೋ ದೇಶೋ ಯುಕ್ತಃ ಸಮುಪಲಕ್ಷ್ಯತೇ |

ತೇನೈವ ನಾಮ್ನಾ ತಂ ದೇಶಂ ಯುಕ್ತಮಾಹುರ್ಮನೀಷಿಣಃ ॥8॥
ಯಾವ ದೇಶದಲ್ಲಿ ಯಾವೊಂದು ವಸ್ತುವು ವಿಶೇಷವಾಗಿ ಕಾಣುತ್ತದೆಯೋ, ಆ ವಸ್ತುವಿನ ಹೆಸರೇ ಆ ದೇಶಕ್ಕೆ ಇರುವುದೆಂದು ವಿವೇಕಿಗಳು ಹೇಳುತ್ತಾರೆ.
ಅಂತರೇ ಚೈವ ಸಂಪ್ರಾಪ್ತೇ ಕಲಿದ್ವಾಪರಯೋರಭೂತ್ |
ಸಮಂತಪಂಚಕೇ ಯುದ್ಧಂ ಕುರುಪಾಂಡವಸೇನಯೋಃ ॥9॥
ಕಲಿಯುಗ ಮತ್ತು ದ್ವಾಪರಯುಗದ ಸಂಧಿಯಲ್ಲಿ ಸಮಂತಪಂಚಕದಲ್ಲಿ ಕುರುಪಾಂಡವ ಸೈನ್ಯಗಳಿಗೆ ಯುದ್ಧವು ನಡೆಯಿತು.
ತಸ್ಮಿನ್ ಪರಮಧರ್ಮಿಷ್ಠೇ ದೇಶೇ ಭೂದೋಷವರ್ಜಿತೇ |
ಅಷ್ಟಾದಶ ಸಮಾಜಗ್ಮುರಕ್ಷೋಹಿಣ್ಯೋ ಯುಯುತ್ಸಯಾ ॥10॥
ಭೂದೋಷವರ್ಜಿತವಾದ ಪರಮಧರ್ಮಿಷ್ಠವಾದ ಆ ಕ್ಷೇತ್ರದಲ್ಲಿ ಯುದ್ಧಮಾಡುವ ಇಚ್ಛೆಯಿಂದ ಹದಿನೆಂಟು ಅಕ್ಷೋಹಿಣಿ ಸೈನ್ಯವು ಬಂದು ಸೇರಿತು.
ಏವಂ ನಾಮಾಭಿನಿರ್ವೃತ್ತಂ ತಸ್ಯ ದೇಶಸ್ಯ ವೈ ದ್ವಿಜಾಃ |
ಪುಣ್ಯಶ್ಚ ರಮಣೀಯಶ್ಚ ಸ ದೇಶಃ ಸಂಪ್ರಕೀರ್ತಿತಃ ॥11॥
ಎಲೈ ಬ್ರಾಹ್ಮಣರೇ, ಹೀಗೆ ಆ ದೇಶಕ್ಕೆ ಸಮಂತಪಂಚಕವೆಂಬ ಹೆಸರು ಬಂದಿತು. ಆ ಪ್ರದೇಶವು ಪುಣ್ಯವು ಮತ್ತು ಮನೋಹರವು ಎಂದು ಹೇಳಲ್ಪಡುತ್ತದೆ.
ತದೇತತ್ ಕಥಿತಂ ಸರ್ವಂ ಮಯಾ ವೋ ಮುನಿಸತ್ತಮಾಃ |
ಯಥಾ ದೇಶಃ ಸ ವಿಖ್ಯಾತಸ್ತ್ರಿಷು ಲೋಕೇಷು ವಿಶ್ರುತಃ ॥12॥
ಎಲೈ ಋಷಿಶ್ರೇಷ್ಠರೇ ಮೂರುಲೋಕಗಳಲ್ಲಿಯೂ ಆ ಪ್ರದೇಶಕ್ಕೆ ಸಮಂತಪಂಚಕವೆಂಬ ಹೆಸರು ಹೇಗೆ ವಿಖ್ಯಾತವಾಗಿದೆ ಎಂಬುದೆಲ್ಲವನ್ನೂ ನಾನು ನಿಮಗೆ ಹೇಳಿದ್ದೇನೆ.
ಋಷಯಃ
ಅಕ್ಷೋಹಿಣ್ಯ ಇತಿ ಪ್ರೋಕ್ತಂ ಯತ್ ತ್ವಯಾ ಸೂತನಂದನ |
ಏತದಿಚ್ಛಾಮಹೇ ಶ್ರೋತುಂ ಸರ್ವ ಏವ ಯಥಾತಥಮ್ ॥13॥
ಎಲೈ ಸೂತನಂದನನೇ ನೀನು ಅಕ್ಷೋಹಿಣಿ ಎಂದು ಹೇಳಿದೆಯಷ್ಟೇ. ಈ ಅಕ್ಷೋಹಿಣಿಯ ವಿವರವೆಲ್ಲವನ್ನೂ ನಾವು ಕೇಳಲು ಬಯಸುತ್ತೇವೆ.
ಅಕ್ಷೋಹಿಣ್ಯಾಃ ಪರೀಮಾಣಂ ರಥಾಶ್ವನರದಂತಿನಾಮ್ |
ಯಥಾವಚ್ಚೈವ ನೋ ಬ್ರೂಹಿ ಸರ್ವಂ ಹಿ ವಿದಿತಂ ತವ ॥14॥
ಅಕ್ಷೋಹಿಣಿಯ ಪರಿಮಾಣವನ್ನು ಮತ್ತು ರಥ, ಅಶ್ವ, ಪದಾತಿ, ಮತ್ತು ಗಜಗಳ ಪರಿಮಾಣವನ್ನು ನಮಗೆ ಯಥಾರ್ಥವಾಗಿ ತಿಳಿಸು. ನೀನು ಎಲ್ಲವನ್ನೂ ತಿಳಿದಿರುವಿಯಷ್ಟೆ.
ಸೂತಃ
ಏಕೋ ರಥೋ ಗಜಶ್ಚೈಕೋ ನರಾಃ ಪಂಚ ಪದಾತಯಃ |
ತ್ರಯಶ್ಚ ತುರಗಾಸ್ತಜ್ಜ್ಞೈಃ ಪತ್ತಿರಿತ್ಯಭಿಧೀಯತೇ ॥15॥
ಒಂದು ರಥ, ಒಂದು ಗಜ, ಮೂರು ಅಶ್ವಗಳು, ಐದು ಪದಾತಿಗಳು ಸೇರಿ ಒಂದು ಪತ್ತಿ ಎನಿಸುತ್ತದೆ.
ಪತ್ತಿಂ ತು ತ್ರಿಗುಣಾಮೇತಾಮಾಹುಃ ಸೇನಾಮುಖಂ ಬುಧಾಃ |
ತ್ರೀಣಿ ಸೇನಾಮುಖಾನ್ಯೇಕೋ ಗುಲ್ಮ ಇತ್ಯಭಿಧೀಯತೇ ॥16॥
ಜ್ಞಾನಿಗಳಾದವರು ಮೂರು ಪತ್ತಿಗಳಿಗೆ ಒಂದು ಸೇನಾಮುಖವೆಂದು ಹೇಳುತ್ತಾರೆ. ಮೂರುಸೇನಾಮುಖಗಳು ಒಂದು ಗುಲ್ಮವೆಂದು ಕರೆಯಲ್ಪಡುತ್ತವೆ.
ತ್ರಯೋ ಗುಲ್ಮಾ ಗಣೋ ನಾಮ ವಾಹಿನೀ ತು ಗಣಾಸ್ತ್ರಯಃ |
ಸ್ಮೃತಾಸ್ತಿಸ್ರಸ್ತು ವಾಹಿನ್ಯಃ ಪೃತನೇತಿ ವಿಚಕ್ಷಣೈಃ ॥17॥
ಮೂರು ಗುಲ್ಮಗಳಿಗೆ ಗಣ ಎಂದು ಹೆಸರು. ಮೂರು ಗಣಗಳು ಒಂದು ವಾಹಿನಿಯಾಗುತ್ತವೆ. ಮೂರು ವಾಹಿನಿಗಳನ್ನು ಪೃತನಾ ಎಂದು ತಿಳಿದವರು ಹೇಳುತ್ತಾರೆ.
ಚಮೂಸ್ತು ಪೃತನಾಸ್ತಿಸ್ರಸ್ತಾಶ್ಚ ತಿಸ್ರಸ್ತ್ವನೀಕಿನೀ |
ಅನೀಕಿನೀಂ ದಶಗುಣಾಮಾಹುರಕ್ಷೋಹಿಣೀಂ ಬುಧಾಃ ॥18॥
ಮೂರು ಪೃತನಗಳಿಗೆ ಒಂದು ಚಮೂ ಆಗುತ್ತದೆ. ಮೂರು ಚಮೂಗಳಿಗೆ ಒಂದು ಅನೀಕಿನೀಯಾಗುತ್ತದೆ. ಹತ್ತು ಅನೀಕಿನೀಗಳನ್ನು ಬುಧರು ಒಂದು ಅಕ್ಷೋಹಿಣಿ ಎಂದು ಹೇಳುತ್ತಾರೆ.
ಅಕ್ಷೋಹಿಣ್ಯಾಃ ಪ್ರಸಂಖ್ಯಾನಂ ರಥಾನಾಂ ದ್ವಿಜಸತ್ತಮಾಃ |
ಸಂಖ್ಯಾಗಣಿತತತ್ವಜ್ಞೈಃ ಸಹಸ್ರಾಣ್ಯೇಕವಿಂಶತಿಃ ॥19॥
ಶತಾನ್ಯುಪರಿ ಚೈವಾಷ್ಟೌ ತಥಾ ಭೂಯಶ್ಚ ಸಪ್ತತಿಃ |
ಗಜಾನಾಂ ತು ಪರಿಮಾಣಮೇವಮೇವ ವಿನಿರ್ದಿಶೇತ್ ॥20॥
ಎಲೈ ಬ್ರಾಹ್ಮಣಶ್ರೇಷ್ಠರೇ ಸಂಖ್ಯಾಗಣಿತತತ್ವಜ್ಞರು ಒಂದು ಅಕ್ಷೋಹಿಣಿಯಲ್ಲಿ ಇಪ್ಪತ್ತೊಂದು ಸಾವಿರದ ಎಂಟುನೂರ ಎಪ್ಪತ್ತು ರಥಗಳು ಇರುತ್ತವೆಂದು ಹೇಳುತ್ತಾರೆ. ಗಜಗಳ ಸಂಖ್ಯೆಯೂ ಅಷ್ಟೇ ಇರುತ್ತದೆ.
ಜ್ಞೇಯಂ ಶತಸಹಸ್ರಂ ತು ಸಹಸ್ರಾಣಿ ತಥಾ ನವ |

ನರಾಣಾಮಪಿ ಪಂಚಾಶಚ್ಛತಾನಿ ತ್ರೀಣಿ ಚಾನಘಾಃ ॥21॥
ದೋಷದೂರರಾದ ಎಲೈ ಸಜ್ಜನರೇ, ಒಂದು ಅಕ್ಷೋಹಿಣಿಯಲ್ಲಿರುವ ಪದಾತಿಗಳ ಸಂಖ್ಯೆ ಒಂದುಲಕ್ಷದ ಒಂಭತ್ತುಸಾವಿರದ ಮುನ್ನೂರೈವತ್ತು ಎಂದು ತಿಳಿಯಬೇಕು.
ಪಂಚಷಷ್ಟಿಸಹಸ್ರಾಣಿ ತಥಾಶ್ವಾನಾಂ ಶತಾನಿ ಚ |
ದಶೋತ್ತರಾಣಿ ಷಟ್ ಪ್ರಾಹುರ್ಯಥಾವದಭಿಸಂಖ್ಯಯಾ ॥22॥
ಒಂದು ಅಕ್ಷೋಹಿಣಿಯಲ್ಲಿರುವ ಅಶ್ವಗಳ ಸಂಖ್ಯೆಯನ್ನು ತಿಳಿದವರು ಅರವತ್ತೈದುಸಾವಿರದ ಆರುನೂರ ಹತ್ತು ಎಂದು ಹೇಳುತ್ತಾರೆ.
ಏತಾಮಕ್ಷೋಹಿಣೀಂ ಪ್ರಾಹುಃ ಸಂಖ್ಯಾತತ್ವವಿದೋ ಜನಾಃ |
ಯಾಂ ವಃ ಕಥಿತವಾನಸ್ಮಿ ವಿಸ್ತರೇಣ ದ್ವಿಜೋತ್ತಮಾಃ ॥23॥
ಎಲೈ ದ್ವಿಜಶ್ರೇಷ್ಠರೇ ಸಂಖ್ಯಾತತ್ವವೇತ್ತರಾದ ಜನರು ಹೀಗೆ ಅಕ್ಷೋಹಿಣಿಯನ್ನು ನಿರೂಪಿಸುತ್ತಾರೆ. ನಾನು ನಿಮಗೆ ಅದನ್ನು ವಿಸ್ತಾರವಾಗಿ ಹೇಳಿದ್ದೇನೆ.
ಏತಯಾ ಸಂಖ್ಯಯಾ ಹ್ಯಾಸನ್ ಕುರುಪಾಂಡವಸೇನಯೋಃ |
ಅಕ್ಷೋಹಿಣ್ಯೋ ದ್ವಿಜಶ್ರೇಷ್ಠಾಃ ಪಿಂಡೇನಾಷ್ಟಾದಶೈವ ತಾಃ ॥24॥
ಎಲೈ ದ್ವಿಜಶ್ರೇಷ್ಠರೇ ಹೀಗೆ ಅಕ್ಷೋಹಿಣಿಯನ್ನು ಗಣನೆ ಮಾಡಿದರೆ ಕೌರವ ಮತ್ತು ಪಾಂಡವಸೇನೆಗಳು ಒಟ್ಟುಸೇರಿ ಹದಿನೆಂಟು ಅಕ್ಷೋಹಿಣಿಗಳಾದವು.
ಸಮೇತಾಸ್ತತ್ರ ವೈ ದೇಶೇ ತತ್ರೈವ ನಿಧನಂ ಗತಾಃ |
ಕೌರವಾನ್ ಕಾರಣಂ ಕೃತ್ವಾ ಕಾಲೇನಾದ್ಭುತಕರ್ಮಣಾ ॥25॥
ಆ ದೇಶದಲ್ಲಿ ಆ ಸೈನ್ಯವು ಸೇರಿ ಅಲ್ಲಿಯೇ ನಿಧನವನ್ನು ಹೊಂದಿತು. ಅದ್ಭುತಕರ್ಮನಾದ ಕಾಲನಾಮಕನಾದ ಪರಮಾತ್ಮನು ಕೌರವರನ್ನು ನಿಮಿತ್ತಮಾಡಿಕೊಂಡು ಎಲ್ಲರನ್ನೂ ಸಂಹರಿಸಿದನು.
ಅಹಾನಿ ಯುಯುಧೇ ಭೀಷ್ಮೋ ದಶೈವ ಪರಮಾಸ್ತ್ರವಿತ್ |
ಅಹಾನಿ ಪಂಚ ದ್ರೋಣಸ್ತು ರರಕ್ಷ ಕುರುವಾಹಿನೀಮ್ ॥26॥
ಪರಮಾಸ್ತ್ರವೇತ್ತರಾದ ಭೀಷ್ಮರು ಹದಿನೈದುದಿನಗಳ ಕಾಲ ಯುದ್ಧವನ್ನು ಮಾಡಿದರು. ಅನಂತರ ದ್ರೋಣರು ಐದು ದಿವಸಗಳಕಾಲ ಕುರುಸೇನೆಗೆ ಸೇನಾಪತಿಯಾಗಿ ಸೇನೆಯನ್ನು ರಕ್ಷಿಸಿದರು.
ಅಹನೀ ಯುಯುಧೇ ದ್ವೇ ತು ಕರ್ಣಃ ಪರಬಲಾರ್ದನಃ |
ಶಲ್ಯೋಽರ್ಧದಿವಸಂ ಚಾಸೀದ್ ಗದಾಯುದ್ಧಂ ತತಃ ಪರಮ್ ॥27॥
ಶತ್ರುಸೈನ್ಯನಿಷೂದನನಾದ ಕರ್ಣನು ಎರಡುದಿನಗಳ ಕಾಲ ಯುದ್ಧವನ್ನು ಮಾಡಿದನು. ಅನಂತರ ಶಲ್ಯನು ಅರ್ಧದಿವಸ ಯುದ್ಧವನ್ನು ಮಾಡಿದನು. ಅನಂತರ ಗದಾಯುದ್ಧವು ನಡೆಯಿತು.
ತಸ್ಯೈವ ತು ದಿನಸ್ಯಾಂತೇ ಹಾರ್ದಿಕ್ಯದ್ರೌಣಿಗೌತಮಾಃ |
ಪ್ರಸುಪ್ತಂ ನಿಶಿ ವಿಶ್ವಸ್ತಂ ಜಘ್ನುರ್ಯೌಧಿಷ್ಠರಂ ಬಲಮ್ ॥28॥
ಅದೇ ದಿನ (18ನೇ ದಿನ) ರಾತ್ರಿಯಲ್ಲಿ ಕೃತವರ್ಮ, ಅಶ್ವತ್ಥಾಮರು ಮತ್ತು ಕೃಪಾಚಾರ್ಯರು ಸೇರಿ ರಾತ್ರಿಯ ವೇಳೆಯಲ್ಲಿ ಸುಖವಾಗಿ ನಿದ್ರೆಯನ್ನು ಮಾಡುತ್ತಿದ್ದ ಧರ್ಮರಾಜನ ಸೈನ್ಯವನ್ನು ಸಂಹರಿಸಿದರು.
ಏತತ್ ಶೌನಕ ಸತ್ರೇ ತೇ ಭಾರತಾಖ್ಯಾನವಿಸ್ತರಮ್ |
ಆಖ್ಯಾಸ್ಯೇ ಪೌಷ್ಯಪೌಲೋಮಮಾಸ್ತೀಕಂ ಚ ತತಃ ಪರಮ್ ॥29॥
ಎಲೈ ಶೌನಕರೇ ನಿಮ್ಮ ಸತ್ರದಲ್ಲಿ ನಾನು ಈ ಭಾರತಕಥೆಯನ್ನು ವಿಸ್ತಾರವಾಗಿ ಹೇಳುವೆನು. ಅದು ಪೌಷ್ಯ, ಪೌಲೋಮ, ಅಸ್ತೀಕ ಮೊದಲಾದ ಪರ್ವಗಳಿಂದ ಪ್ರಾರಂಭವಾಗುತ್ತದೆ.
ವಿಚಿತ್ರಾರ್ಥಪದಾಖ್ಯಾನಮನೇಕಸಮಯಾನ್ವಿತಮ್ |
ಅಭಿಪನ್ನಂ ನರೈಃ ಪ್ರಾಜ್ಞೈರ್ವೈರಾಗ್ಯಮಿವ ಮೋಕ್ಷಿಭಿಃ ॥30॥
ಈ ಭಾರತವು ವಿಚಿತ್ರಾರ್ಥಗಳನ್ನು ಹೊಂದಿದ ಪದಗಳಿಂದಲೂ ಮತ್ತು ಆಖ್ಯಾನಗಳಿಂದಲೂ ಕೂಡಿವೆ. ಮತ್ತು ಅನೇಕ ಸಿದ್ಧಾಂತಗಳ ತತ್ವಗಳು ಇಲ್ಲಿವೆ. ಮುಮುಕ್ಷುಗಳಾದವರು ವೈರಾಗ್ಯವನ್ನು ಬಯಸುವಂತೆ ಪ್ರಾಜ್ಞರಾದ ಮನುಷ್ಯರು ಮಹಾಭಾರತವನ್ನು ಉಪಸತ್ತಿ ಮಾಡುತ್ತಾರೆ.
ಆತ್ಮೇವ ವೇದಿತವ್ಯೇಷು ಪ್ರಿಯೇಷ್ವಿವ ಹಿ ಜೀವಿತಮ್ |
ಇತಿಹಾಸಃ ಪ್ರಧಾನಾರ್ಥಃ ಶ್ರೇಷ್ಠಃ ಸರ್ವಾಗಮೇಷ್ವಪಿ ॥31॥
ತಿಳಿಯಬೇಕಾದ ವಸ್ತುಗಳಲ್ಲಿ ಹೇಗೆ ಪರಮಾತ್ಮನೇ ಶ್ರೇಷ್ಠನೋ, ಪ್ರಿಯವಾದ ವಸ್ತುಗಳಲ್ಲಿ ಹೇಗೆ ತನ್ನ ಜೀವನವೇ ಶ್ರೇಷ್ಠವೋ ಹಾಗೆ ಸರ್ವಾಗಮಗಳಲ್ಲಿ ಪ್ರಧಾನವಾದ ಅರ್ಥವನ್ನು ಹೇಳುವ ಈ ಭಾರತಇತಿಹಾಸವೇ ಶ್ರೇಷ್ಠವಾದುದು.
ಇತಿಹಾಸೋತ್ತಮೇ ಹ್ಯಸ್ಮಿನ್ನರ್ಪಿತಾ ಬುದ್ಧಿರುತ್ತಮಾ |
ಸ್ವರವ್ಯಂಜನಯೋಃ ಕೃತ್ಸ್ನಾ ಲೋಕಾನ್ ವೇದಾಶ್ರಯೇವ ವಾಕ್॥
ಈ ಶ್ರೇಷ್ಠವಾದ ಇತಿಹಾಸದಲ್ಲಿ ಸ್ವರವ್ಯಂಜನಗಳು ಪರಿಪೂರ್ಣವಾಗಿ ಉಚ್ಚರಿಸಲ್ಪಟ್ಟಿವೆ. ಇದರಲ್ಲಿ ಯಾರು ತಮ್ಮ ಶ್ರೇಷ್ಠವಾದ ಬುದ್ಧಿಯನ್ನು ಅರ್ಪಿಸುತ್ತಾರೋ, ಅಂತಹವರನ್ನು ವೇದವಾಣಿಯಂತೆ ಈ ಭಾರತವಾಣಿಯು ಪವಿತ್ರೀಕರಿಸುತ್ತದೆ.
ಅಸ್ಯ ಪ್ರಜ್ಞಾಭಿಪನ್ನಸ್ಯ ವಿಚಿತ್ರಪದಪರ್ವಣಃ |
ಭಾರತಸ್ಯೇತಿಹಾಸಸ್ಯ ಶ್ರೂಯತಾಂ ಪರ್ವಸಂಗ್ರಹಃ ॥33॥
ವೇದವ್ಯಾಸದೇವರ ಪ್ರಜ್ಞೆಯಿಂದ ರಚಿತವಾದ ವಿಚಿತ್ರವಾದ ಪದಗಳಿಂದ ಮತ್ತು ಪರ್ವಗಳಿಂದ ಕೂಡಿದ ಈ ಭಾರತಇತಿಹಾಸದ

ಪರ್ವಸಂಗ್ರಹವನ್ನು ಕೇಳಿ.
ಪರ್ವಾನುಕ್ರಮಣಂ ಪೂರ್ವಂ ದ್ವಿತೀಯಂ ಪವರ್ಸಂಗ್ರಹಃ |
ಪೌಷ್ಯಂ ಪೌಲೋಮಮಾಸ್ತೀಕಮಾದಿವಂಶಾವತಾರಣಮ್ ॥34॥
ಮೊದಲನೆಯದು ಪರ್ವಾನುಕ್ರಮಣ ಪರ್ವ, ಎರಡನೆಯದು ಪರ್ವಸಂಗ್ರಹಪರ್ವ. ಅನಂತರ ಪೌಷ್ಯ, ಪೌಲೋಮ ಮತ್ತು ಆಸ್ತೀಕಪರ್ವಗಳು ಇವೆ.
ತತಃ ಸಂಭವಪರ್ವೋಕ್ತಮದ್ಭುತಂ ದೇವನಿರ್ಮಿತಮ್ |
ದಾಹೋ ಜತುಗೃಹಸ್ಯಾತ್ರ ಹೈಡಿಂಬಂ ವರ್ಪ ಚೋಚ್ಯತೇ ॥35॥
ಅನಂತರ ಆದಿವಂಶ ಮತ್ತು ಅಂಶಾವತರಣಗಳಿಂದ ಕೂಡಿದ ವೇದವ್ಯಾಸದೇವರಿಂದ ನಿರ್ಮಿತವಾದ ಅದ್ಭುತವಾದ ಸಂಭವಪರ್ವವಿದೆ. ಅನಂತರ ಜತುಗೃಹದಾಹಪರ್ವ, ಮತ್ತು ಅನಂತರ ಹೈಡಿಂಬಪರ್ವವು ಬರುತ್ತದೆ.
ಸಂಭವಪರ್ವದಲ್ಲಿ ವಂಶ ಮತ್ತು ಅಂಶಾವತರಣಗಳು ನಿರೂಪಿಸಿಲ್ಪಟ್ಟಿವೆ. ಆದ್ದರಿಂದ ಅಂಶವಾತರಣವು ಸಂಭವಪರ್ವದ ಒಂದು ಭಾಗ ಹೊರತಾಗಿ ಅಂಶಾವತರಣವೇ ಒಂದು ಪರ್ವವಲ್ಲ ಎಂದು ಇಲ್ಲಿ ವಾದಿರಾಜರು ಸ್ಪಷ್ಟಪಡಿಸುತ್ತಾರೆ. `ತದಾ ನಿಃಕ್ಷತ್ರಿಯೇ ಲೋಕೇ.... ಗರ್ಭಾರ್ಥಿನ್ಯೋಽಭಿಚಕ್ರಮುಃ' ಮುಂತಾದ ಶ್ಲೋಕದಲ್ಲಿ ಹೇಳಿದ ಪರಶುರಾಮನಿಂದ ಕ್ಷತ್ರಿಯ ಸಂಹಾರವಾಗುತ್ತಿರಲು ಕ್ಷತ್ರಿಯಸ್ತ್ರೀಯರಲ್ಲಿ ಬ್ರಾಹ್ಮಣಪುರುಷರಿಂದ ಹುಟ್ಟಿದ ಕ್ಷತ್ರಿಯವಂಶವು ಒಂದು ಆದಿವಂಶ. `ತತೋ ಬ್ರಹ್ಮರ್ಷಿ ವಂಶೇಷು .... ಯಥಾಕಾಮಂ ದಿವೌಕಸಃ' ಮುಂತಾದ ಶ್ಲೋಕಗಳಲ್ಲಿ ಹೇಳಿದ ದೇವತೆಗಳ ಅಂಶಾತವರಣವು. ಒಂದು ಅಂಶಾವತರಣ. `ಹಂತ ತೇ ಕಥಯಿಷ್ಯಾಮಿ ಅತ್ರವಂಶಃ ಸಮಾಪ್ಯತೇ' ಎನ್ನುವವರೆಗೆ ಹೇಳಿದ ದೇವತೆಗಳ ಮತ್ತು ದಾನವರ ವಂಶವು ಇನ್ನೊಂದು ಆದಿವಂಶ. `ಶ್ರೋತುಮಿಚ್ಛಾಮಿ ತತ್ತ್ವೇನ .... ಆನುಪೂರ್ವಶಃ' ಎಂಬ ಶ್ಲೋಕದಿಂದ ಆರಂಭಿಸಿ `ಇತಿ ದೇವಾಸುರಾಣಾಂ ತೇ .... ಅಂಶಾವತರಣಂ ರಾಜನ್' ಎಂಬ ಶ್ಲೋಕದವರೆಗೆ ಹೇಳಿದ ಅದೇ ದೇವತೆ ಮತ್ತು ದಾನವರ ಭೂಮಿಯಲ್ಲಿ ಒಂದೊಂದು ಅಂಶದಿಂದ ಅವತರಣವು ಎರಡನೆಯ ಅಂಶಾವತರಣ. ಹೀಗೆ ಇಲ್ಲಿ ಎರಡು ಆದಿವಂಶಗಳು, ಮತ್ತು ಎರಡು ಅಂಶಾವತರಣಗಳು ಹೇಳಲ್ಪಟ್ಟಿವೆಯೆಂದು ವಾದಿರಾಜರು ಸ್ಪಷ್ಟಪಡಿಸುತ್ತಾರೆ.
ತತೋ ಬಕವಧಃ ಪರ್ವ ಪರ್ವ ಚೈತ್ರರಥಂ ತಥಾ |
ತತಃ ಸ್ವಯಂವರೋ ದೇವ್ಯಾಃ ಪಾಂಚಾಲ್ಯಾಃ ಪರ್ವ ಚೋಚ್ಯತೇ ॥36॥
ಅನಂತರ ಬಕವಧಪರ್ವ, ಅನಂತರ ಚೈತ್ರರಥಪರ್ವ, ಅನಂತರ ದ್ರೌಪದಿದೇವಿಯ ಸ್ವಯಂವರವನ್ನು ನಿರೂಪಿಸುವ ಸ್ವಯಂವರ ಪರ್ವವು ಹೇಳಲ್ಪಡುತ್ತದೆ.
ಕ್ಷತ್ರಧರ್ಮೇಣ ನಿರ್ಜಿತ್ಯ ತತೋ ವೈವಾಹಿಕಂ ಸ್ಮೃತಮ್ |
ವಿದುರಾಗಮನಂ ಪರ್ವ ರಾಜ್ಯಲಂಭಸ್ತಥೈವ ಚ ॥37॥
ಕ್ಷತ್ರಿಯಧರ್ಮದಂತೆ ಎಲ್ಲ ಶತ್ರುಗಳನ್ನೂ ಜಯಿಸಿ, ನಡೆದ ದ್ರೌಪದಿಯ ವಿವಾಹವು ವೈವಾಹಿಕಪರ್ವದಲ್ಲಿ ಹೇಳಲ್ಪಡುತ್ತದೆ. ಅನಂತರ ವಿದುರಾಗಮನ ಪರ್ವ, ಅನಂತರ ರಾಜ್ಯಲಾಭ ಪರ್ವವಿದೆ.
ಅರ್ಜುನಸ್ಯ ವನೇ ವಾಸಃ ಸುಭದ್ರಾಹರಣಂ ತಥಾ |
ಸುಭದ್ರಾಹರಣಾದೂರ್ಧ್ವಂ ಜ್ಞೇಯಂ ಹರಣಹಾರಿತಮ್ ॥38॥
ಅನಂತರ ಅರ್ಜುನ ವನವಾಸಪರ್ವ, ಅನಂತರ ಸುಭದ್ರಾಹರಣ ಪರ್ವ, ಅನಂತರ ಸುಭದ್ರೆಗೆ ಕೃಷ್ಣನ ಆಜ್ಞೆಯಂತೆ ಉಡುಗೊರೆಗಳನ್ನು ತೆಗೆದುಕೊಂಡು ಹೋಗಿ ಕೊಡುವ ಹರಣಹಾರಿ ಸುಭದ್ರಾಹರಣಕ್ಕೆ ಶ್ರೀಕೃಷ್ಣನ ಸಹಕಾರವು ಹರಣಹಾರಿತವೆನಿಸಿದೆ.
ತತಃ ಖಾಂಡವದಾಹಾಖ್ಯಂ ತತ್ರೈವ ಮಯದರ್ಶನಮ್ |
ಸಭಾಪರ್ವ ತತಃ ಪ್ರೋಕ್ತಂ ಮಂತ್ರಪರ್ವ ತತಃ ಪರಮ್ ॥39॥
ಅನಂತರ ಖಾಂಡವದಾಹಪರ್ವ ಮತ್ತು ಖಾಂಡವವನದಲ್ಲಿಯೇ ಮಯನದರ್ಶನವನ್ನು ನಿರೂಪಣೆ ಮಾಡುವ ಮಯದರ್ಶನ ಪರ್ವವಿದೆ. ಅನಂತರ ಸಭಾಪರ್ವವು ಪ್ರಾರಂಭವಾಗುತ್ತದೆ. ಅದರಲ್ಲಿ ಮೊದಲ ಪರ್ವವು ಮಂತ್ರಪರ್ವ. (ರಾಜಸೂಯಾದಿ ಆಲೋಚನ ಪರ್ವ)
ಜರಾಸಂಧವಧಃ ಪರ್ವ ಪರ್ವ ದಿಗ್ವಿಜಯಸ್ತಥಾ |
ಪರ್ವ ದಿಗ್ವಿಜಯಾದೂರ್ಧ್ವಂ ರಾಜಸೂಯಿಕಮುಚ್ಯತೇ ॥40॥
ಅನಂತರ ಜರಾಸಂಧವಧಃ ಪರ್ವ, ಅನಂತರ ದಿಗ್ವಿಜಯಪರ್ವವೂ ಇದೆ. ದಿಗ್ವಿಜಯಪರ್ವದ ಅನಂತರದಲ್ಲಿ ರಾಜಸೂಯಿಕಪರ್ವವು ಹೇಳಲ್ಪಡುತ್ತದೆ.
ತತೋಽರ್ಘ್ಯಾಹರಣಂ ಪರ್ವ ಶಿಶುಪಾಲವಧಸ್ತತಃ |
ದ್ಯೂತಪರ್ವ ತತಃ ಪ್ರೋಕ್ತಮನುದ್ಯೂತಮತಃ ಪರಮ್ ॥41॥
ಅನಂತರ ಅಗ್ರಪೂಜೆಯಲ್ಲಿ ಕೃಷ್ಣನಿಗೆ ಅರ್ಘ್ಯಾಹರಣ ನಡೆಸುವ ಪರ್ವ, ಅನಂತರ ಶಿಶುಪಾಲವಧಪರ್ವ, ಅನಂತರ ದ್ಯೂತಪರ್ವ, ಮತ್ತು ಅದರ ಅನಂತರ ಅನುದ್ಯೂತಪರ್ವವಿದೆ.
ತತ ಆರಣ್ಯಕಂ ಪರ್ವ ಕಿರ್ಮೀರವಧ ಏವ ಚ |
ಈಶ್ವರಾರ್ಜುನಯೋರ್ಯುದ್ಧಂ ಪರ್ವ ಕೈರಾತಮುಚ್ಯತೇ ॥42॥
ಅನಂತರ ವನಪರ್ವವು ಪ್ರಾರಂಭವಾಗುತ್ತದೆ. ಅದರಲ್ಲಿ ಮೊದಲನೆಯದು ಆರಣ್ಯಕಪರ್ವ. ಅನಂತರ ಕಿರ್ಮೀರವಧಪರ್ವ, ಅನಂತರ ರುದ್ರದೇವರಿಗೂ ಮತ್ತು ಅರ್ಜುನನಿಗೂ ನಡೆಯುವ ಯುದ್ಧವನ್ನು ವರ್ಣಿಸುವ ಕೈರಾತಪರ್ವವಿದೆ.
ಇಂದ್ರಲೋಕಾಭಿಗಮನಂ ಪರ್ವ ಜ್ಞೇಯಮತಃ ಪರಮ್ |

ತೀರ್ಥಯಾತ್ರಾ ತತಃ ಪರ್ವ ಕುರುರಾಜಸ್ಯ ಧೀಮತಃ ॥43॥
ಅನಂತರ ಇಂದ್ರಲೋಕಾಭಿಗಮನ ಎಂಬ ಪರ್ವವಿದೆ. ಅನಂತರ ಮೇಧಾವಿಯಾದ ಕುರುರಾಜನಾದ ಅರ್ಜುನನು ಮಾಡಿದ ತೀರ್ಥಯಾತ್ರೆಗಳನ್ನು ಹೇಳುವ ತೀರ್ಥಯಾತ್ರಾಪರ್ವವಿದೆ.
ಜಟಾಸುರವಧಃ ಪರ್ವ ಯಕ್ಷಯುದ್ಧಮತಃ ಪರಮ್ |
ತಥೈವಾಜಗರಂ ಪರ್ವ ವಿಜ್ಞೇಯಂ ತದನಂತರಮ್ ॥44॥
ಅನಂತರ ಜಟಾಸುರವಧ ಪರ್ವ, ಅನಂತರ ಯಕ್ಷನ ಜೊತೆ ಧರ್ಮನ ವಾಗ್ ಯುದ್ಧಪರ್ವ, ಅನಂತರಆಜಗರ ಪರ್ವವೆಂದು ತಿಳಿಯಬೇಕು.
ಮಾರ್ಕಂಡೇಯಸಮಾಖ್ಯಾ ಚ ಪರ್ವೋಕ್ತಂ ತದನಂತರಮ್ |
ಸಂವಾದಶ್ಚ ತತಃ ಪರ್ವ ದ್ರೌಪದೀಸತ್ಯಭಾಮಯೋಃ ॥45॥
ಅನಂತರ ಮಾರ್ಕಂಡೇಯಸಮಾಖ್ಯಾ (ಸ್ಯಾ) ಎಂಬ ಪರ್ವವು, ಅದರ ಅನಂತರ ದ್ರೌಪದಿ ಮತ್ತು ಸತ್ಯಭಾಮೆಯರ ಸಂವಾದವಿರುವ ದ್ರೌಪದೀ ಸತ್ಯಭಾಮಾ ಸಂವಾದಪರ್ವವೂ ಇದೆ.
ಘೋಷಯಾತ್ರಾ ತತಃ ಪರ್ವ ಪರ್ವ ಪ್ರಾಯೋಪವೇಶನಮ್ |
ವ್ರೀಹಿದ್ರೌಣಕಮಾಖ್ಯಾನಂ ತತೋಽನಂತರಮುಚ್ಯತೇ ॥46॥
ಅನಂತರ ಘೋಷಯಾತ್ರಾಪರ್ವ, ಅದರ ಅನಂತರ ದುರ್ಯೋಧನನ ಪ್ರಾಯೋಪವೇಶ ಪರ್ವ, ಮತ್ತು ಅದರ ಅನಂತರ ಮುದ್ಗಲ ಋಷಿಗಳು ದುರ್ವಾಸರಿಗೆ ಆತಿಥ್ಯ ಮಾಡುವ ವ್ರೀಹಿದ್ರೌಣಕಪರ್ವವೂ ಇದೆ.
ದ್ರೌಪದೀಹರಣಂ ಪರ್ವ ಸೈಂಧವೇನ ವನಾತ್ ತತಃ |
ಕುಂಡಲಾಹರಣಾತ್ ತತ್ರ ತತಃ ಪರಮಿಹೋಚ್ಯತೇ ॥47॥
ಅನಂತರ ಆ ಕಾಡಿನಲ್ಲಿ ಸೈಂಧವನು ದ್ರೌಪದಿಯನ್ನು ಅಪಹರಿಸಲು ಮಾಡಿದ ಪ್ರಯತ್ನದ ವಿಷಯವನ್ನು ಹೇಳುವ ದ್ರೌಪದೀಹರಣಪರ್ವವು, ಅನಂತರ  ಇಂದ್ರನಿಂದ ಕರ್ಣನ ಕುಂಡಲಾಹರಣಪರ್ವವೂ ಇದೆ.
ಆರಣೇಯಂ ತತಃ ಪರ್ವ ವೈರಾಟಂ ತದನಂತರಮ್ |
ಕೀಚಕಾನಾಂ ವಧಂ ಪರ್ವ ಪರ್ವ ಗೋಗ್ರಹಣಂ ತಥಾ ॥48॥
ಅನಂತರ ಯಮನಿಂದ ಬ್ರಾಹ್ಮಣನ ಅರಣಿ ಅಪಹರಿಸುವ ಆರಣೇಯಪರ್ವವಿದೆ. ಅನಂತರ  ವಿರಾಟಪರ್ವವು ಪ್ರಾರಂಭವಾಗುತ್ತದೆ. ಅದರಲ್ಲಿ ಕೀಚಕವಧಪರ್ವ, ಮತ್ತು ಅನಂತರ  ಗೋಗ್ರಹಣಪರ್ವವೂ ಇದೆ.
ಅಭಿಮನ್ಯೋಶ್ಚ  ವೈರಾಟ್ಯಾಃ ಪರ್ವ ವೈವಾಹಿಕಂ ಸ್ಮೃತಮ್ |
ಉದ್ಯೋಗಪರ್ವ ವಿಜ್ಞೇಯಮತ ಊರ್ಧ್ವಂ ಮಹಾದ್ಭುತಮ್ ॥49॥
ಅಭಿಮನ್ಯು ಮತ್ತು ಉತ್ತರೆಯ ವಿವಾಹವನ್ನು ಹೇಳುವ ವೈವಾಹಿಕಪರ್ವವು ಅನಂತರ ಇದೆ. ಅದರ ನಂತರ ಮಹಾದ್ಭುತವಾದ ಉದ್ಯೋಗಪರ್ವದ ಪ್ರಾರಂಭ ಎಂದು ತಿಳಿಯಬೇಕು.
ತತಃ ಸಂಜಯಯಾನಾಖ್ಯಂ  ಪರ್ವ ಜ್ಞೇಯಮನಂತರಮ್ |
ಪ್ರಜಾಗರಂ ತತಃ ಪರ್ವ ಧೃತರಾಷ್ಟ್ರಸ್ಯ ಚಿಂತಯಾ ॥50॥
ಅದರಲ್ಲಿ ಸಂಜಯಯಾನ ಪರ್ವ, ಅನಂತರ ಧೃತರಾಷ್ಟ್ರನು ಚಿಂತೆಯಿಂದ ನಿದ್ರೆಯನ್ನು ಕಳೆದುಕೊಂಡು ಪರಿತಪಿಸುವ ಪ್ರಜಾಗರಪರ್ವವೂ ಇದೆ.
ಪರ್ವ ಸಾನತ್ಸುಜಾತಂ ಚ ಗುಹ್ಯಮಧ್ಯಾತ್ಮದರ್ಶನಮ್ |
ಯಾನಸಂಧಿಸ್ತತಃ ಪರ್ವ ಭಗವದ್ದ್ಯಾನಮೇವ ಚ ॥51॥
ರಹಸ್ಯವಾದ ಅಧ್ಯಾತ್ಮವಿಷಯಗಳನ್ನು ಒಳಗೊಂಡ ಸಾನತ್ಸುಜಾತಪರ್ವ, ಅನಂತರ  ದ್ರುಪದ ಪುರೋಹಿತರನ್ನು ಸಂಧಿಸುವ ಯಾನಸಂಧಿಪರ್ವ, ಅನಂತರ ಭಗವದ್ಧ್ಯಾನಪರ್ವ.
ಜ್ಞೇಯಂ ವಿವಾದಪರ್ವಾತ್ರ ಕರ್ಣಸ್ಯಾಪಿ ಮಹಾತ್ಮನಃ |
ಮಂತ್ರಸ್ಯ ನಿಶ್ಚಯಂ ಕೃತ್ವಾ  ಕಾರ್ಯಸ್ಯ ಸಮಚಿಂತನಮ್ ॥52॥
ಅನಂತರ ಮಹಾತ್ಮನಾದ ಕರ್ಣನು ಮಾಡುವ ವಿವಾದವನ್ನು ಹೇಳುವ ವಿವಾದಪರ್ವ, ಮತ್ತು ಮಂತ್ರಾಲೋಚನೆಯನ್ನು ಮಾಡಿ ಮುಂದಿನ ಕಾರ್ಯವನ್ನು ನಿಶ್ಚಯಿಸುವ ಮಂತ್ರನಿಶ್ಚಯಪರ್ವವೂ ಇದೆ.
ಕೀರ್ತ್ಯತೇ ಚಾಪತ್ರೋಪಾಖ್ಯಾನಂ ಸೇನಾಪತ್ಯೇಽಭಿಷೇಚನಮ್ |
ಶ್ವೇತಸ್ಯ ವಾಸುದೇವಸ್ಯ ಚಿತ್ರಂ ಬಹುಕಥಾಶ್ರಯಮ್ ॥53॥
ಸೇನಾಪತಿಯಿಲ್ಲದ ಬ್ರಾಹ್ಮಣ, ವೈಶ್ಯಾದಿ ಸೈನ್ಯಕ್ಕೆ ಅಪಜಯವುಂಟಾಯಿತೆಂದು ಹೇಳುವ ಅಪತ್ರೋಪಾಖ್ಯಾನಪರ್ವ, ಅನಂತರ ಬಹುಕಥೆಗಳನ್ನು ಒಳಗೊಂಡ ಶ್ವೇತರಾಜನ ಮತ್ತು ವಾಸುದೇವನ ಮಹಿಮೆಯನ್ನು ಹೇಳುವ ಪರ್ವ. (ಅಥವಾ) ಬಲರಾಮ ಮತ್ತು ಕೃಷ್ಣರ ಮಹಿಮೆಯನ್ನು ಹೇಳುವ ಪರ್ವವೂ ಇದೆ.
ಭೀಷ್ಮಾಭಿಷೇಚನಂ ಪರ್ವ ತತಶ್ಚಾದ್ಭುತಮಿಷ್ಯತೇ |
ನಿರ್ಯಾಣಂ ಚ ತತಃ ಪರ್ವ ಕುರುಪಾಂಡವಸೇನಯೋಃ ॥54॥
ಅನಂತರ ಅದ್ಭುತವಾದ ಭೀಷ್ಮಾಭಿಷೇಚನಪರ್ವವಿದೆ. ಅನಂತರ  ಯುದ್ಧಕ್ಕಾಗಿ ಕುರುಪಾಂಡವಸೈನ್ಯಗಳು ಹೊರಟ ವಿಷಯವನ್ನು ಹೇಳುವ ನಿರ್ಯಾಣಪರ್ವ.
ರಥಾತಿರಥಸಂಖ್ಯಾ ಚ ಪರ್ವೋಕ್ತಂ ತದನಂತರಮ್ |
ಉಲೂಕದೂತಾಗಮನಂ ಪರ್ವಾಮರ್ಷವಿವರ್ಧನಮ್ ॥55॥

ಅನಂತರ ರಥ ಮತ್ತು ಅತಿರಥರ ಸಂಖ್ಯೆಯನ್ನು ಹೇಳುವ ರಥಾತಿರಥಸಂಖ್ಯಾಪರ್ವವಿದೆ. ಅನಂತರ ಕ್ರೋಧವನ್ನು ಹೆಚ್ಚಿಸುವ ಉಲೂಕದೂತಾಗಮನಪರ್ವ.
ಅಂಬೋಪಾಖ್ಯಾನಮಥ ಚ ಪರ್ವ ಜ್ಞೇಯಮತಃ ಪರಮ್ |
ಜಂಬೂಷಂಡವಿನಿರ್ಮಾಣಂ ಪರ್ವೋಕ್ತಂ ತದನಂತರಮ್ ॥56॥
ಅನಂತರ ಅಂಬೋಪಾಖ್ಯಾನಪರ್ವವು ಇದೆಯೆಂದು ತಿಳಿಯಬೇಕು. ಅದರ ನಂತರ ಜಂಬೂದ್ವೀಪ ನಿರ್ಮಾಣ ದರ್ಪಣನೆಯ ಪರ್ವವಿದೆ.
ಭೂಮಿಪರ್ವ ತತೋ ಜ್ಞೇಯಂ ದ್ವೀಪವಿಸ್ತಾರಕೀರ್ತನಮ್ |
ದಿವ್ಯಂ ಚಕ್ಷುರ್ದದೌ ಯತ್ರ ಸಂಜಯಾಯ ಮಹಾನೃಷಿಃ ॥57॥
ದ್ವೀಪಗಳ ವಿಸ್ತಾರವನ್ನು ಹೇಳುವ ಭೂಮಿಪರ್ವವು ಅನಂತರ ಇದೆಯೆಂದು ತಿಳಿಯಬೇಕು. ಅನಂತರ ಮಹರ್ಷಿಗಳಾದ ವೇದವ್ಯಾಸರು ಸಂಜಯನಿಗೆ ದಿವ್ಯ ಚಕ್ಷುಸ್ಸನ್ನು ಕೊಟ್ಟ ಚಕ್ಷುರ್ದಾನಪರ್ವವಿದೆ.
ಪರ್ವೋಕ್ತಂ ಭಗವದ್ಗೀತಾ ಪರ್ವ ಭೀಷ್ಮವಧಸ್ತತಃ |
ದ್ರೋಣಾಭಿಷೇಕಃ ಪರ್ವೋಕ್ತಂ ಸಂಶಪ್ತಕವಧಸ್ತತಃ ॥58॥
ಅನಂತರ ಭಗವದ್ಗೀತಾಪರ್ವ, ಭೀಷ್ಮವಧಪರ್ವ, ದ್ರೋಣಾಭಿಷೇಕ ಪರ್ವ ಮತ್ತು ಸಂಶಪ್ತಕವಧಪರ್ವವಿದೆ.
ಅಭಿಮನ್ಯುವಧಃ ಪರ್ವ ಪ್ರತಿಜ್ಞಾ ಪರ್ವ ಚೋಚ್ಯತೇ |
ಜಯದ್ರಥವಧಃ ಪರ್ವ ಘಟೋತ್ಕಚವಧಸ್ತಥಾ ॥59॥
ಅನಂತರ ಅಭಿಮನ್ಯುವಧಪರ್ವ, ಮತ್ತು ಪ್ರತಿಜ್ಞಾಪರ್ವಗಳು ಹೇಳಲ್ಪಡುತ್ತವೆ. ಅನಂತರ ಜಯದ್ರಥವಧಪರ್ವ, ಮತ್ತು ಘಟೋತ್ಕಚವಧಪರ್ವಗಳೂ ಇವೆ.
ತತೋ ದ್ರೋಣವಧಃ ಪರ್ವ ವಿಜ್ಞೇಯಂ ಲೋಮಹರ್ಷಣಮ್|
ಮೋಕ್ಷೋ ನಾರಾಯಣಾಸ್ತ್ರಸ್ಯ ಪರ್ವಾನಂತರಮುಚ್ಯತೇ ॥60॥
ಅನಂತರ ರೋಮಾಂಚಕಾರಿಯಾದ ದ್ರೋಣವಧಪರ್ವವು ಇದೆಯೆಂದು ತಿಳಿಯಬೇಕು. ಅನಂತರ ನಾರಾಯಣಾಸ್ತ್ರ ಮೋಚನಪರ್ವವು ಇದೆ.
ಕರ್ಣಪರ್ವ ತತೋ ಜ್ಞೇಯಂ ಶಲ್ಯಪರ್ವ ತತಃ ಪರಮ್ |
ಹ್ರದಪ್ರವೇಶನಂ ಪರ್ವ ಗದಾಯುದ್ಧಮತಃ ಪರಮ್ ॥61॥
ಅನಂತರ ಕರ್ಣಪರ್ವ, ಅನಂತರ ಶಲ್ಯಪರ್ವ, ಅನಂತರ ಹ್ರದಪ್ರವೇಶನಪರ್ವ, ಮತ್ತು ಅದರ ಅನಂತರ ಗದಾಯುದ್ಧಪರ್ವವಿದೆ.
ಸಾರಸ್ವತಂ ತತಃ ಪರ್ವ ತೀರ್ಥವಂಶಗುಣಾನ್ವಿತಮ್ |
ಅತ ಊರ್ಧ್ವಂ ತು ಬೀಭತ್ಸಂ ಪರ್ವ ಸೌಪ್ತಿಕಮುಚ್ಯತೇ ॥62॥
ಪ್ರತ್ಯಕ್‌ಸರಸ್ವತೀ ನದಿಗೆ ಸಂಬಂಧಿಸಿದ ತೀರ್ಥಗಳನ್ನು ಮತ್ತು ವಂಶಗಳನ್ನು ಹೇಳುವ ಸಾರಸ್ವತಪರ್ವವಿದೆ. ಅನಂತರ ಅತಿಭಯಂಕರವಾದ ಸೌಪ್ತಿಕಪರ್ವವಿದೆ.
ಐಷೀಕಂ ಪರ್ವ ನಿರ್ದಿಷ್ಟಮತ ಊರ್ಧ್ವಂ ಸುದಾರುಣಮ್ |
ಜಲಪ್ರದಾನಿಕಂ ಪರ್ವ ಸ್ತ್ರೀಪರ್ವ ಚ ತತಃ ಪರಮ್ ॥63॥
ಅನಂತರ ಅತ್ಯಂತ ದಾರುಣವಾದ ಐಷೀಕಪರ್ವ, ಅನಂತರ ಜಲಪ್ರದಾನಿಕಪರ್ವ ಮತ್ತು ಸ್ತ್ರೀಪರ್ವಗಳೂ ಇವೆ.
ಶ್ರಾದ್ಧಪರ್ವ ತತೋ ಜ್ಞೇಯಂ ಕುರೂಣಾಮೌರ್ಧ್ವದೈಹಿಕಮ್ |
ಆಭಿಷೇಚನಿಕಂ ಪರ್ವ ಕುರುರಾಜಸ್ಯ ಧೀಮತಃ ॥64॥
ಅನಂತರ ಕುರುಗಳಿಗೆ ಔರ್ಧ್ವದೈಹಿಕಕ್ರಿಯೆಗಳನ್ನು ಮಾಡಿದ ರೀತಿಯನ್ನು ಹೇಳುವ ಶ್ರಾದ್ಧಪರ್ವ, ಅನಂತರ ಕುರುರಾಜನನಾದ ಧರ್ಮರಾಜನ ಅಭಿಷೇಕವನ್ನು ಹೇಳುವ ಆಭಿಷೇಚನಿಕಪರ್ವವೂ ಇದೆ.
ಚಾರ್ವಾಕನಿಗ್ರಹಃ ಪರ್ವ ರಕ್ಷಸೋ ಬ್ರಹ್ಮರೂಪಿಣಃ |
ಪ್ರವಿಭಾಗೋ ಗೃಹಾಣಾಂ ಚ ಪರ್ವೋಕ್ತಂ ತದನಂತರಮ್ ॥65॥
ವಿಪ್ರದೇಹವನ್ನು ಧರಿಸಿದ ಅಸುರನಾದ ಚಾರ್ವಾಕನ ನಿಗ್ರಹವನ್ನು ಹೇಳುವ ಚಾರ್ವಾಕನಿಗ್ರಹಪರ್ವ. ಅನಂತರ ಗೃಹಗಳನ್ನು ವಿಭಾಗಮಾಡಿಕೊಳ್ಳುವ ಗೃಹವಿಭಾಗಪರ್ವವೂ ಇದೆ.
ಶಾಂತಿಪರ್ವ ತತೋ ಯತ್ರ ರಾಜಧರ್ಮಾನುಕೀರ್ತನಮ್ |
ಆಪದ್ಧರ್ಮಶ್ಚ ಪರ್ವೋಕ್ತಂ ಮೋಕ್ಷಧರ್ಮಸ್ತತಃ ಪರಮ್ ॥66॥
ಅನಂತರ ಶಾಂತಿಪರ್ವವಿದೆ. ಅದರಲ್ಲಿ ರಾಜಧರ್ಮಗಳನ್ನು ತಿಳಿಸುವ ರಾಜಧರ್ಮಪರ್ವ, ಆಪದ್ಧರ್ಮಪರ್ವ, ಮತ್ತು ಅನಂತರ ಮೋಕ್ಷಧರ್ಮಪರ್ವಗಳಿವೆ.
ತತಃ ಪರ್ವ ಪರಿಜ್ಞೇಯಮಾನುಶಾಸನಿಕಂ ಪರಮ್ |
ಸ್ವರ್ಗಾರೋಹಣಿಕಂ ಪರ್ವ ತತೋ ಭೀಷ್ಮಸ್ಯ ಧೀಮತಃ ॥67॥
ಅನಂತರ ಆನುಶಾಸನಿಕಪರ್ವವಿದೆಯೆಂದು ತಿಳಿಯಬೇಕು. ಅನಂತರ ಮೇಧಾವಿಯಾದ ಭೀಷ್ಮರು ಸ್ವರ್ಗಕ್ಕೆ ಹೋಗುವ ಸ್ವರ್ಗಾರೋಹಣಿಕ ಪರ್ವವಿದೆ.
ತತೋಽಶ್ವಮೇಧಿಕಂ ಪರ್ವ ಸರ್ವಪಾಪಪ್ರಣಾಶನಮ್ |
ಅನುಗೀತಾ ತತಃ ಪರ್ವ ಜ್ಞೇಯಮಧ್ಯಾತ್ಮವಾಚಕಮ್ ॥68॥
ಅನಂತರ ಸರ್ವಪಾಪಪರಿಹಾರಕವಾದ ಆಶ್ವಮೇಧಿಕಪರ್ವ, ಅನಂತರ ಅಧ್ಯಾತ್ಮವಿಷಯಗಳನ್ನು ನಿರೂಪಿಸುವ ಅನುಗೀತಾಪರ್ವವು

ಇದೆಯೆಂದು ತಿಳಿಯಬೇಕು.
ಪರ್ವ ಚಾಶ್ರಮವಾಸಾಖ್ಯಂ ಪುತ್ರದರ್ಶನಮೇವ ಚ |
ನಾರದಾಗಮನಂ ಪರ್ವ ತತಃ ಪರಮಿಹೋಚ್ಯತೇ ॥69॥
ಅನಂತರ ಆಶ್ರಮವಾಸ ಪರ್ವ, ಧೃತರಾಷ್ಟ್ರನು ಮಾಡುವ ಪುತ್ರದರ್ಶನಪರ್ವ ಮತ್ತು ಅದರ ಅನಂತರ ನಾರದಾಗಮನಪರ್ವವು ಎಂದು ಹೇಳಲ್ಪಡುತ್ತದೆ.
ಮೌಸಲಂ ಪರ್ವ ಚ ತತೋ ಘೋರಂ ಸಮನುವರ್ಣ್ಯತೇ |
ಮಹಾಪ್ರಸ್ಥಾನಿಕಂ ಪರ್ವ ಸ್ವರ್ಗಾರೋಹಣಿಕಂ ತತಃ ॥70॥
ಅನಂತರ ಘೋರವಾದ ಮೌಸಲಪರ್ವವು ವರ್ಣಿಸಲ್ಪಡುತ್ತದೆ. ಅನಂತರ ಮಹಾಪ್ರಸ್ಥಾನಿಕಪರ್ವ ಮತ್ತು ಅದರ ಅನಂತರ ಸ್ವರ್ಗಾರೋಹಣ ಪರ್ವವಿದೆ.
ಹರಿವಂಶಸ್ತತಃ ಪರ್ವ ಪುರಾಣಂ ಖಿಲಸಂಜ್ಞಿತಮ್ |
ಭವಿಷ್ಯತ್ಪರ್ವ ಚಾಪ್ಯುಕ್ತಂ ಖಿಲೇಷ್ವೇವಾದ್ಭುತಂ ಮಹತ್ ॥71॥
ಅನಂತರ ಮಹಾಭಾರತದ ಖಿಲವೆಂದು ಕರೆಯಲ್ಪಡುವ, ಪುರಾಣವೆಂದೂ ಕರೆಯಲ್ಪಡುವ ಹರಿವಂಶಪರ್ವವಿದೆ. ಅದ್ಭುತವಾದ ಮತ್ತು ವಿಸ್ತಾರವಾದ ಭವಿಷ್ಯತ್‌ಪರ್ವವೂ ಸಹ ಖಿಲಗಳಲ್ಲಿಯೇ ಸೇರಿದೆ
ಏತತ್ ಪರ್ವಶತಂ ಪೂರ್ಣಂ ವ್ಯಾಸೇನೋಕ್ತಂ ಮಹಾತ್ಮನಾ |
ಯಥಾವತ್ ಸೂತಪುತ್ರೇಣ ಲೋಮಹರ್ಷಣಿನಾ ಪುನಃ ॥72॥
ಕಥಿತಂ ನೈಮಿಶಾರಣ್ಯೇ ಪರ್ವಾಣ್ಯಷ್ಟಾದಶೈವ ತು |
ಸಮಾಸೋ ಭಾರತಸ್ಯಾಯಂ ತತ್ರೋಕ್ತಃ ಪರ್ವಸಂಗ್ರಹಃ ॥73॥
ಇಲ್ಲಿಗೆ ಮಹಾತ್ಮರಾದ ವ್ಯಾಸರು ಹೇಳಿದ ನೂರುಪರ್ವಗಳು ಸಮಾಪ್ತವಾದವು. ಸೂತರಾದ ಲೋಮಹರ್ಷಣರ ಪುತ್ರರಾದ ಲೋಮಹರ್ಷಣಿಗಳಿಂದಲೂ ನೈಮಿಶಾರಣ್ಯದಲ್ಲಿ ಅಷ್ಟಾದಶ- ಪರ್ವಾತ್ಮಕವಾದ ಈ ಮಹಾಭಾರತವು ಗುರುಗಳ ಉಪದೇಶಕ್ಕನುಸಾರವಾಗಿ ಹೇಳಲ್ಪಟ್ಟಿತು. ಇದು ಮಹಾಭಾರತ ಗ್ರಂಥದ ಸಂಕ್ಷೇಪ. ಅದರಲ್ಲಿ ಈ ಅಧ್ಯಾಯದಲ್ಲಿ ಪರ್ವಗಳ ಸಂಗ್ರಹವಿದೆ. (ಆದ್ದರಿಂದ ಇದನ್ನು ಪರ್ವಸಂಗ್ರಹಪರ್ವ ಎಂದು ಕರೆಯುತ್ತಾರೆ.)
ಪೌಷ್ಯೇ ಪರ್ವಣಿ ಮಾಹಾತ್ಮ್ಯಂ ಉದಂಕಸ್ಯೋಪವರ್ಣಿತಮ್ |
ಪೌಲೋಮೇ ಭೃಗುವಂಶಸ್ಯ ವಿಸ್ತಾರಃ ಪರಿಕೀರ್ತಿತಃ ॥74॥
ಪೌಷ್ಯಪರ್ವದಲ್ಲಿ ಉದಂಕನ ಮಹಿಮೆಯು ಹೇಳಲ್ಪಡುತ್ತದೆ. ಪೌಲೋಮಪರ್ವದಲ್ಲಿ ಭೃಗುವಂಶದ ವಿಸ್ತಾರವು ಕೀರ್ತಿತವಾಗಿದೆ.
ಶ್ಲೋಕಾಗ್ರಂ ಚ ಸಹಸ್ರಸ್ಯ ಪಂಚಾಶಚ್ಚತಮೇವ ಚ |
ಅಧ್ಯಾಯಾನಾಂ ತಥಾಷ್ಟೌ ಚ ಪರ್ವಣ್ಯಸ್ಮಿನ್ ಪ್ರಕೀರ್ತಿತಾಃ ॥75॥
ಪೌಲೋಮಪರ್ವದಲ್ಲಿ ಇರುವ ಅಧ್ಯಾಯಗಳ ಸಂಖ್ಯೆ ಎಂಟು. ಮತ್ತು ಶ್ಲೋಕಗಳ ಸಂಖ್ಯೆ ಒಂದು ಸಾವಿರದ ಐದುನೂರು ಎಂದು ಹೇಳಲ್ಪಡುತ್ತದೆ.
ಆಸ್ತೀಕೇ ಸರ್ವನಾಗಾನಾಂ ಗರುಡಸ್ಯ ಚ ಸಂಭವಃ |
ಕ್ಷೀರೋದಮಥನಂ ಚೈವ ಜನ್ಮೋಚ್ಚೈಃಶ್ರವಸಸ್ತಥಾ ॥76॥
ಆಸ್ತೀಕಪರ್ವದಲ್ಲಿ ಎಲ್ಲ ನಾಗಗಳ ಮತ್ತು ಗರುಡನ ಉತ್ಪತ್ತಿಯೂ, ಕ್ಷೀರಸಮುದ್ರದ ಮಥನವೂ, ಮತ್ತು ಉಚ್ಚೈಃಶ್ರವಸ್ಸಿನ ಜನ್ಮವೂ ಹೇಳಲ್ಪಡುತ್ತದೆ.
ಯಜತಃ ಸರ್ಪಸತ್ರೇಣ ರಾಜ್ಞಃ ಪಾರೀಕ್ಷಿತಸ್ಯ ಹ |
ಕಥೇಯಮಭಿನಿರ್ವೃತ್ತಾ ಭಾರತಾನಾಂ ಮಹಾತ್ಮನಾಮ್ ॥77॥
ಪರೀಕ್ಷಿತನ ಮಗನಾದ ಜನಮೇಜಯನು ಸರ್ಪಸತ್ರವನ್ನು ಮಾಡುವ ಸಂದರ್ಭದಲ್ಲಿ ಮಹಾನುಭಾವರಾದ ಭರತವಂಶದಲ್ಲಿ ಉತ್ಪನ್ನರಾದ ಈ ಪಾಂಡವರ ಕಥೆಯು ಹೇಳಲ್ಪಟ್ಟಿತು.
ಶ್ಲೋಕಾಗ್ರಂ ಚ ಸಹಸ್ರಸ್ಯ ಚ ತ್ರಿಶತಂ ಚೋತ್ತರಂ ತಥಾ |
ಶ್ಲೋಕಾಶ್ಚ ಚತುರಾಶೀತಿಃ ಪರ್ವಣ್ಯಸ್ಮಿಂಸ್ತಥೈವ ಚ |
ಅಧ್ಯಾಯಾನಾಂ ತತಃ ಪ್ರೋಕ್ತಂ ಚತ್ವಾರಿಂಶನ್ಮಹರ್ಷಿಣಾ ॥78॥
ಈ ಆಸ್ತಿಕಪರ್ವದಲ್ಲಿ ಮಹರ್ಷಿಗಳಾದ ವೇದವ್ಯಾಸರು ನಲವತ್ತು ಅಧ್ಯಾಯಗಳಲ್ಲಿ ಒಂದು ಸಾವಿರದ ಮುನ್ನೂರ ಎಂಬತ್ತನಾಲ್ಕು ಶ್ಲೋಕಗಳಲ್ಲಿ ಈ ಕಥೆಯನ್ನು ನಿರೂಪಿಸಿದ್ದಾರೆ.
ವಿವಿಧಾಃ ಸಂಭವಾ ರಾಜ್ಞಾಮುಕ್ತಾಃ ಸಂಭವಪರ್ವಣಿ |
ಅನ್ಯೇಷಾಂ ಚೈವ ವಿಪ್ರಾಣಾಮೃಷೇರ್ದ್ವೈಪಾಯನಸ್ಯ ಚ |
ಅಂಶಾವತರಣಂ ಚಾತ್ರ ದೇವಾನಾಂ ಪರಿಕೀರ್ತಿತಮ್ ॥79॥
ಸಂಭವಪರ್ವದಲ್ಲಿ ಅನೇಕರಾಜರುಗಳ ಉತ್ಪತ್ತಿ, ಬ್ರಾಹ್ಮಣರ ಉತ್ಪತ್ತಿ ವೇದವ್ಯಾಸದೇವರ ಉತ್ಪತ್ತಿ, ಮತ್ತು ದೇವತೆಗಳ ಅಂಶಾವತರಣವು ಹೇಳಲ್ಪಡುತ್ತದೆ.
ದೈತ್ಯಾನಾಂ ದಾನವಾನಾಂ ಚ ಯಕ್ಷಾಣಾಂ ಚ ಮಹೌಜಸಾಮ್ |
ನಾಗಾನಾಮಥ ಸರ್ಪಾಣಾಂ ಗಂಧರ್ವಾಣಾಂ ಪತತ್ರಿಣಾಮ್ |
ಅನ್ಯೇಷಾಂ ಚೈವ ಭೂತಾನಾಂ ವಿವಿಧಾನಾಂ ಸಮುದ್ಭವಃ ॥80॥
ಹಾಗೆಯೇ ಮಹಾಸಾಮರ್ಥ್ಯಶಾಲಿಗಳಾದ ದೈತ್ಯರು, ದಾನವರು, ಯಕ್ಷರು, ನಾಗಗಳು, ಸರ್ಪಗಳು, ಗಂಧರ್ವರು, ಪಕ್ಷಿಗಳು ಮತ್ತು

ಇನ್ನೂ ಅನೇಕ ಪ್ರಾಣಿಗಳು ಇವರ ಉತ್ಪತ್ತಿಯನ್ನು ಹೇಳಲಾಗುತ್ತದೆ.
ವಸೂನಾಂ ಪುನರುತ್ಪತ್ತಿರ್ಭಾಗೀರಥ್ಯಾಂ ಮಹಾತ್ಮನಾಮ್ |
ಶಂತನೋರ್ವೇಶ್ಮನಿ ಪುನಸ್ತೇಷಾಂ ಚಾರೋಹಣಂ ದಿವಿ |
ತೇಜೋಂಶಾನಾಂ ಚ ಸಂಯೋಗಾದ್ಭೀಷ್ಮಸ್ಯಾಪ್ಯತ್ರ ಸಂಭವಃ ॥81॥
ಮಹಾತ್ಮರಾದ ವಸುಗಳು ಶಂತನುವಿನ ಮನೆಯಲ್ಲಿ ಗಂಗೆಯಲ್ಲಿ ಜನ್ಮವನ್ನು ಪಡೆದು ಪುನಃ ಸ್ವರ್ಗಾರೋಹಣವನ್ನು ಮಾಡುವುದೂ, ಉಳಿದೆಲ್ಲ ವಸುಗಳ ಸಾಮರ್ಥ್ಯದ ಅಂಶಗಳನ್ನು ತೆಗೆದುಕೊಂಡ ಭೀಷ್ಮನ ಉತ್ಪತ್ತಿಯೂ ಸಹ ಹೇಳಲ್ಪಡುತ್ತದೆ.
ರಾಜ್ಯಾನ್ನಿವರ್ತನಂ ಚೈವ ಬ್ರಹ್ಮಚರ್ಯವ್ರತೇ ಸ್ಥಿತಿಃ |
ಪ್ರತಿಜ್ಞಾಪಾಲನಂ ಚೈವ ರಕ್ಷಾ ಚಿತ್ರಾಂಗದಸ್ಯ ಚ ॥82॥
ಅನಂತರ ಭೀಷ್ಮರಿಂದ ರಾಜ್ಯದನಿರಾಕರಣೆ, ಬ್ರಹ್ಮಚರ್ಯವ್ರತ ಸ್ವೀಕಾರ, ಪ್ರತಿಜ್ಞಾಪಾಲನೆ, ಮತ್ತು ಚಿತ್ರಾಂಗದನ ರಕ್ಷಣೆಗಳು ಹೇಳಲ್ಪಡುತ್ತದೆ.
ಹತೇ ಚಿತ್ರಾಂಗದೇ ಚೈವ ರಕ್ಷಾ ಭ್ರಾತುರ್ಯವೀಯಸಃ |
ವಿಚಿತ್ರವೀರ್ಯಸ್ಯ ತಥಾ ರಾಜ್ಯೇ ಸಂಪ್ರತಿಪಾದನಮ್ ॥83॥
ಚಿತ್ರಾಂಗದನು ಹತನಾಗುತ್ತಿರಲು ಅವನ ತಮ್ಮನಾದ ವಿಚಿತ್ರವೀರ್ಯನ ರಕ್ಷಣೆ ಮತ್ತು ವಿಚಿತ್ರವೀರ್ಯನಿಗೆ ರಾಜ್ಯಪ್ರತಿಪಾದನವು ಹೇಳಲ್ಪಡುತ್ತದೆ.
ಧರ್ಮಸ್ಯ ನೃಷು ಸಂಭೂತಿರಾಣಿಮಾಂಡವ್ಯಶಾಪಜಾ |
ಕೃಷ್ಣದ್ವೈಪಾಯನಾಚ್ಚೈವ ಪ್ರಸೂತಿರ್ವರದಾನಜಾ |
ಧೃತರಾಷ್ಟ್ರಸ್ಯ ಪಾಂಡೋಶ್ಚ ಪಾಂಡವಾನಾಂ ಚ ಸಂಭವಃ ॥84॥
ಆಣಿಮಾಂಡವ್ಯ ಋಷಿಗಳ ಶಾಪದಿಂದ ಯಮನು ಕೃಷ್ಣದ್ವೈಪಾಯನರಿಂದ ಭೂಮಿಯಲ್ಲಿ ಜನ್ಮವನ್ನು ಪಡೆಯುವುದು ದುರ್ವಾಸರು ಕುಂತಿಗೆ ಕೊಟ್ಟ ವರದಿಂದ ಕೃಷ್ಣದ್ವೈಪಾಯನರಿಂದಲೇ ಧೃತರಾಷ್ಟ್ರ ಮತ್ತು ಪಾಂಡವರನ್ನು ಪಡೆಯುವುದು ಇಲ್ಲಿ ಹೇಳಲ್ಪಟ್ಟಿದೆ.
ವಾರಣಾವತಯಾತ್ರಾ ಚ ಮಂತ್ರೋ ದುರ್ಯೋಧನಸ್ಯ ಚ |
ವಿದುರಸ್ಯ ಚ ವಾಕ್ಯೇನ ಸುರಂಗೋಪಕ್ರಮಕ್ರಿಯಾ |
ಪಾಂಡವಾನಾಂ ವನೇ ಘೋರೇ ಹಿಡಿಂಬಾಯಾಶ್ಚ ದರ್ಶನಮ್ ॥85॥
ವಾರಣಾವತಯಾತ್ರೆ, ದುರ್ಯೋಧನನ ಮಂತ್ರಾಲೋಚನೆ, ವಿದುರನವಾಕ್ಯದಿಂದ ಗುಪ್ತವಾಗಿ ಸುರಂಗನಿರ್ಮಾಣ. ಜತುಗೃಹದಿಂದ ಓಡಿಹೋದ ಪಾಂಡವರ ಅರಣ್ಯಪ್ರವೇಶ. ಘೋರವಾದ ಅರಣ್ಯದಲ್ಲಿ ಹಿಡಿಂಬೆಯ ದರ್ಶನ ಇವು ಹೇಳಲ್ಪಡುತ್ತದೆ.
ಘಟೋತ್ಕಚಸ್ಯ ಚೋತ್ಪತ್ತಿರತ್ರೈವ ಪರಿಕೀರ್ತಿತಾ |
ಅಜ್ಞಾತಚರ್ಯಾ ಪಾಂಡೂನಾಂ ವಾಸೋ ಬ್ರಾಹ್ಮಣವೇಶ್ಮನಿ ॥86॥
ಅಲ್ಲಿಯೇ ಘಟೋತ್ಕಚನ ಉತ್ಪತ್ತಿಯೂ ಹೇಳಲ್ಪಡುತ್ತದೆ. ಪಾಂಡವರು ಬ್ರಾಹ್ಮಣನ ಮನೆಯಲ್ಲಿ ಯಾರಿಗೂ ತಿಳಿಯದಂತೆ ವಾಸಮಾಡುವುದೂ ಇಲ್ಲಿಯೇ ನಿರೂಪಿತವಾಗಿದೆ.
ಬಕಸ್ಯ ನಿಧನಂ ಚೈವ ನಾಗರಾಣಾಂ ಚ ವಿಸ್ಮಯಃ |
ಅಂಗಾರಪರ್ಣಂ ನಿರ್ಜಿತ್ಯ ಗಂಗಾಕೂಲೇಽರ್ಜುನಸ್ತದಾ ॥87॥
ಭ್ರಾತೃಭಿಃ ಸಹಿತಃ ಸರ್ವೈಃ ಪಾಂಚಾಲಾನಭಿತೋ ಯಯೌ |
ತಾಪತ್ಯಮಥ ವಾಸಿಷ್ಠಮೌರ್ವೋಪಾಖ್ಯಾನಮುತ್ತಮಮ್ ॥88॥
ಬಕನ ವಧೆ, ಪೌರಜನರ ವಿಸ್ಮಯಗಳು ನಿರೂಪಿತವಾಗಿವೆ. ಗಂಗಾತೀರದಲ್ಲಿ ಅರ್ಜುನನು ಅಂಗಾರಪರ್ಣನೆಂಬ ಗಂಧರ್ವನನ್ನು ಜಯಿಸುವುದು, ಎಲ್ಲಾ ಸಹೋದರರು ಸೇರಿ ಪಾಂಚಾಲನಗರಕ್ಕೆ ಪ್ರಯಾಣಮಾಡುವುದು, ಅನಂತರ ತಾಪತ್ಯೋಪಾಖ್ಯಾನ, ವಾಸಿಷ್ಠೋಪಾಖ್ಯಾನ ಮತ್ತು ಶ್ರೇಷ್ಠವಾದ ಅರ್ವೋಪಾಖ್ಯಾನಗಳು ಇಲ್ಲಿ ಹೇಳಲ್ಪಟ್ಟಿದೆ.
ಪಂಚೇಂದ್ರಾಣಾಮುಪಾಖ್ಯಾನಮತ್ರೈವಾದ್ಭುತಮುಚ್ಯತೇ |
ಪಂಚಾನಾಮೇಕಪತ್ನೀತ್ವೇ ವಿಮರ್ಶೋ ದ್ರುಪದಸ್ಯ ಚ ॥89॥
ಇಲ್ಲಿಯೇ ಅದ್ಭುತವಾದ ಪಂಚೇಂದ್ರೋಪಾಖ್ಯಾನವೂ ಮತ್ತು ದ್ರೌಪದಿಯು ಐದು ಜನರನ್ನು ಮದುವೆ ಮಾಡಿಕೊಳ್ಳುವ ವಿಷಯದಲ್ಲಿ ದ್ರುಪದನ ಚಿಂತನೆಯೂ ನಿರೂಪಿತವಾಗಿದೆ.
ದ್ರೌಪದ್ಯಾ ದೇವವಿಹಿತೋ ವಿವಾಹಶ್ಚಾಪ್ಯಮಾನುಷಃ |
ವಿದುರಸ್ಯ ಚ ಸಂಪ್ರಾಪ್ತಿರ್ದರ್ಶನಂ ಕೇಶವಸ್ಯ ಚ ॥90॥
ಮನುಷ್ಯರ ಕಣ್ಣಿಗೆ ಕಾಣದಂತೆ ದೇವತೆಗಳು ಮಾಡುವ ದ್ರೌಪದಿಯ ವಿವಾಹವೂ, ವಿದುರನ ಸಂಪ್ರಾಪ್ತಿಯೂ, ಕೃಷ್ಣನದರ್ಶನವೂ ಇಲ್ಲಿ ನಿರೂಪಿತವಾಗಿದೆ.
ದ್ರೌಪದಿಯ ವಿವಾಹ ಎರಡುರೀತಿಯಾದುದು. ಮನುಷ್ಯರ ಕಣ್ಣೆದುರಿಗೆ ನಡೆದ ಒಂದು ವಿವಾಹ. ಇದೂ ಸಹ ದೇವತೆಗಳು ತಮ್ಮ ದಿವ್ಯದೃಷ್ಟಿಯಿಂದ ದ್ರೌಪದಿಯ ಶರೀರದಲ್ಲಿ ಪಂಚಕನ್ಯೆಯರನ್ನು ನೋಡಿ ಮಾಡಿದ ವಿವಾಹವಾದ್ದರಿಂದ ಇದು ದೈವವಿಹಿತ ವಿವಾಹವೇ. ಇದಲ್ಲದೆ ಪ್ರತಿದಿನವೂ ಮನುಷ್ಯರಿಗೆ ಕಾಣದಂತೆ ದೇವತೆಗಳು ಆಗಮಿಸಿ ದ್ರೌಪದಿಗೆ ವಿವಾಹವನ್ನು ಮಾಡುತ್ತಿದ್ದುದು ಇನ್ನೊಂದು ದೈವವಿಹಿತವಿವಾಹ. ಈ ಎರಡು ವಿವಾಹಗಳನ್ನು ವಾದಿರಾಜರು ಸ್ಪಷ್ಟಪಡಿಸುತ್ತಾರೆ.
ಖಾಂಡವಪ್ರಸ್ಥವಾಸಶ್ಚ ತಥಾ ರಾಜ್ಯಾರ್ಧಶಾಸನಮ್ |
ನಾರದಸ್ಯ ಚ ವಾಕ್ಯೇನ ದ್ರೌಪದ್ಯಾಃ ಸಮಯಕ್ರಿಯಾ ॥91॥
ಅನಂತರ ಖಾಂಡವಪ್ರಸ್ಥದಲ್ಲಿ ವಾಸ. ಅರ್ಧರಾಜ್ಯಪರಿಪಾಲನೆ. ನಾರದರ ವಾಕ್ಯದಂತೆ ದ್ರೌಪದಿಯನ್ನು ಪರ್ಯಾಯ ವ್ಯವಸ್ಥೆಯಿಂದ

ಸ್ವೀಕಾರ ಮಾಡುವ ರೀತಿ ಇವು ಹೇಳಲ್ಪಟ್ಟಿವೆ.
ಸುಂದೋಪಸುಂದಯೋಸ್ತತ್ರ ಹ್ಯುಪಾಖ್ಯಾನಂ ಪ್ರಕೀರ್ತಿತಮ್ |
ಪಾರ್ಥಸ್ಯ ವನವಾಸಶ್ಚ ಉಲೂಪ್ಯಾ ಸಹ ಸಂಗಮಃ ॥92॥
ಅನಂತರ ಸುಂದೋಪಸುಂದರ ಉಪಾಖ್ಯಾನವು ಹೇಳಲ್ಪಡುತ್ತದೆ. ಅರ್ಜುನನ ವನವಾಸ. ಮತ್ತು ನಾಗಕನ್ಯೆಯಾದ ಉಲೂಪಿಯ ಜೊತೆಯಲ್ಲಿ ಸಂಗಮವು ನಿರೂಪಿತವಾಗಿದೆ.
ಪುಣ್ಯತೀರ್ಥಾನುಸಂಯಾನಂ ಬಭ್ರುವಾಹನಜನ್ಮ ಚ |
ದ್ವಾರಕಾಯಾಂ ಸುಭದ್ರಾ ಚ ಕಾಮಯಾನೇನ ಕಾಮಿನೀ |
ವಾಸುದೇವಸ್ಯಾನುಮತೇ ಪ್ರಾಪ್ತಾ ಚೈವ ಕಿರೀಟಿನಾ ॥93॥
ಅರ್ಜುನನ ತೀರ್ಥಯಾತ್ರಾ ಸಂಚಾರ, ಬಭ್ರುವಾಹನನ ಜನ್ಮ, ದ್ವಾರಕೆಯಲ್ಲಿ ಕಾಮಿನಿಯಾದ ಸುಭದ್ರೆಯನ್ನು ಕಾಮಿಸುವ ಅರ್ಜುನನಿಂದ ಕೃಷ್ಣನ ಸಮ್ಮತಿಯಂತೆ ಸುಭದ್ರೆಯ ಪ್ರಾಪ್ತಿ. ಇವು ನಿರೂಪಿತವಾಗಿವೆ.
ಹರಣಂ ಗೃಹ್ಯ ಸಂಪ್ರಾಪ್ತೇ ಕೃಷ್ಣೇ ದೇವಕಿನಂದನೇ |
ಸಂಪ್ರಾಪ್ತಿಃ ಶಕ್ರಧನುಷಃ ಖಾಂಡವಸ್ಯ ಚ ದಾಹನಮ್ |
ಅಭಿಮನ್ಯೋಃ ಸುಭದ್ರಾಯಾಂ ಜನ್ಮ ಚೋತ್ತಮತೇಜಸಃ ॥94॥
ಕೃಷ್ಣನು ಉಡುಗೊರೆಗಳನ್ನು ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಹೋಗುತ್ತಿರಲು, ಅಗ್ನಿಯ ಆಗಮನ. ಖಾಂಡವವನದ ದಹನ ಮತ್ತು ಪರಾಕ್ರಮಶಾಲಿಯಾದ ಅಭಿಮನ್ಯುವಿನ ಸುಭದ್ರೆಯಲ್ಲಿ ಉತ್ಪತ್ತಿಗಳು ಹೇಳಲ್ಪಡುತ್ತವೆ.
ಮಯಸ್ಯ ಮೋಕ್ಷೋ ಜ್ವಲನಾದ್ಭುಜಂಗಸ್ಯ ಚ ಮೋಕ್ಷಣಮ್ |
ಮಹರ್ಷೇರ್ಮಂದಪಾಲಸ್ಯ ಶಾಂಗ್ರ್ಯಾಂ ತನಯಸಂಭವಃ ॥95॥
ಅಗ್ನಿಯಿಂದ ಮಯಾಸುರನ ಮೋಚನೆ, ತಕ್ಷಕನ ಮೋಚನೆ ಮತ್ತು ಮಂದಪಾಲ ಮಹರ್ಷಿಗಳಿಗೆ ಶಾಂರ್ಗಿಪಕ್ಷಿಯಲ್ಲಿ ಪುತ್ರರ ಉತ್ಪತ್ತಿಯು ಇಲ್ಲಿ ಹೇಳಲ್ಪಡುತ್ತದೆ.
ಇತ್ಯೇತದಾದಿಪರ್ವೋಕ್ತಂ ಪ್ರಥಮಂ ಬಹುವಿಸ್ತರಮ್ ॥96॥
ಇದು ಮೊದಲನೆಯ ಆದಿಪರ್ವದಲ್ಲಿ ಬಹಳ ವಿಸ್ತಾರವಾಗಿ ಹೇಳಿದ ಕಥೆ.
ಅಧ್ಯಾಯಾನಾಂ ಶತೇ ದ್ವೇ ತು ಸಂಖ್ಯಾತೇ ಪರಮರ್ಷಿಣಾ |
ಅಷ್ಟಾದಶೈವ ಚಾಧ್ಯಾಯಾ ವ್ಯಾಸೇನೋತ್ತಮತೇಜಸಾ ॥97॥
ನವಶ್ಲೋಕಸಹಸ್ರಾಣಿ ಶತಾನ್ಯಷ್ಟೌ ತಥೈವ ಚ |
ಶ್ಲೋಕಾಶ್ಚ ಚತುರಾಶೀತಿರ್ದೃಷ್ಟೋ ಗ್ರಂಥೋ ಮಹಾತ್ಮನಾ ॥98॥
ಈ ಪರ್ವದಲ್ಲಿ ಪರಮರ್ಷಿಗಳಾದ ವ್ಯಾಸರು ಇನ್ನೂರ ಹದಿನೆಂಟು ಅಧ್ಯಾಯಗಳನ್ನೂ, ಒಂಭತ್ತುಸಾವಿರದ ಎಂಟುನೂರ ಎಂಬತ್ತಾನ್ಲು ಶ್ಲೋಕಗಳನ್ನೂ ರಚಿಸಿದ್ದಾರೆ.
ದ್ವಿತೀಯಂ ತು ಸಭಾಪರ್ವ ಸಮಾಖ್ಯಾತಂ ಮಹಾತ್ಮನಾ |
ಸಭಾಕ್ರಿಯಾ ಪಾಂಡವಾನಾಂ ಕಿಂಕರಾಣಾಂ ಚ ದರ್ಶನಮ್ |
ಲೋಕಪಾಲಸಭಾಖ್ಯಾನಂ ನಾರದಾದ್ದೇವದರ್ಶನಾತ್ ॥99॥
ಮಹಾತ್ಮರಾದ ವೇದವ್ಯಾಸರು ಎರಡನೆಯದ್ದಾದ ಸಭಾಪರ್ವವನ್ನು ರಚಿಸಿದ್ದಾರೆ. ಅದರಲ್ಲಿ ಪಾಂಡವರ ಸಭಾನಿರ್ಮಾಣ. ಕಿಂಕರರ ದರ್ಶನ, ದೇವತೆಗಳನ್ನು ನೋಡುವ ನಾರದರಿಂದ ಲೋಕಪಾಲರ ಸಭೆಗಳ ವರ್ಣನೆಗಳು ಇವೆ.
(ಕಿಂಕರರ ದರ್ಶನವೆಂದರೆ ಸಭೆಯಲ್ಲಿರುವ ಧರ್ಮರಾಜನ ಸೇವೆಗೋಸ್ಕರ ನಾನಾ ದೇಶಗಳಿಂದ ಬಂದಂತಹ ಮುನಿಗಳು ರಾಜರುಗಳು ಹಾಗೂ ದೇವಲೋಕದಿಂದ ಬಂದಂತಹ ಗಂಧರ್ವರು, ಕಿನ್ನರರು ಅಪ್ಸರೆಯರು ಇವರೆಲ್ಲರೂ ಸಭೆಯಲ್ಲಿ ಶೋಭಿಸುತ್ತಿದ್ದರು. ಇಂತಹ ಕಿಂಕರರ ವರ್ಣನೆ. ಇಲ್ಲಿ ಮೂಲರೂಪವನ್ನು ವಿವಕ್ಷಿಸಿದ್ದರಿಂದ ಋಷಿಗಳನ್ನೂ ಕೂಡ ಕಿಂಕರರು ಎಂದು ಹೇಳಿರುವುದು).
ರಾಜಸೂಯಸ್ಯ ಚಾರಂಭೋ ಜರಾಸಂಧವಧಸ್ತಥಾ |
ಗಿರಿವ್ರಜೇ ನಿರುದ್ಧಾನಾಂ ರಾಜ್ಞಾಂ ಕೃಷ್ಣೇನ ಮೋಕ್ಷಣಮ್ ॥100॥
ರಾಜಸೂಯಯಾಗದ ಪ್ರಾರಂಭ, ಜರಾಸಂಧವಧೆ, ಮಗಧದ ರಾಜಧಾನಿಯಾದ ಗಿರಿವ್ರಜದಲ್ಲಿ ಜರಾಸಂಧನಿಂದ ಬಂಧನದಲ್ಲಿಡಲ್ಪಟ್ಟ ರಾಜರುಗಳನ್ನು ಕೃಷ್ಣನು ವಿಮೋಚನಗೊಳಿಸುವುದು.
ರಾಜಸೂಯೇಽರ್ಘಸಂವಾದೇ ಶಿಶುಪಾಲವಧಸ್ತಥಾ |
ಯಜ್ಞೇ ವಿಭೂತಿಂ ದೃಷ್ಟ್ವಾ ತಾಂ ದುಃಖಾಮರ್ಷಾನ್ವಿತಸ್ಯ ಚ ॥101॥
ದುರ್ಯೋಧನಸ್ಯಾಪಹಾಸೋ ಭೀಮೇನ ಚ ಸಭಾತಳೇ |
ಯತ್ರಾಸ್ಯ ಮನ್ಯುರಭವದ್ ಯೇನ ದ್ಯೂತಮಕಲ್ಪಯನ್ ॥102॥
ಅಗ್ರಪೂಜೆಯ ಸಂದರ್ಭದಲ್ಲಿ ಶಿಶುಪಾಲನ ವಧೆ, ರಾಜಸೂಯಯಾಗದಲ್ಲಿ ಪಾಂಡವರ ಸಂಪತ್ತನ್ನು ನೋಡಿ ದುಃಖದಿಂದಲೂ ಮತ್ತು ಕ್ರೋಧದಿಂದಲೂ ಕೂಡಿದ ದುರ್ಯೋಧನನ್ನು ಕುರಿತು ಸಭಾತಳದಲ್ಲಿ ಭೀಮನ ಅಪಹಾಸ, ಆ ಸಿಟ್ಟಿಗೆ ಒಳಗಾದ ದುರ್ಯೋಧನನಿಂದ ದ್ಯೂತದ ವ್ಯವಸ್ಥೆಯು ಹೇಳಲ್ಪಟ್ಟಿದೆ.
ಯತ್ರ ಧರ್ಮಸುತಂ ದ್ಯೂತೇ ಶಕುನಿಃ ಕಿತವೋಽಜಯತ್ |
ಯತ್ರ ದ್ಯೂತಾಸ್ರವೇ ಮಗ್ನಾನ್ ದ್ರೌಪದೀ ನೌರಿವಾರ್ಣವೇ ॥103॥
ಆ ದ್ಯೂತದಲ್ಲಿ ಧರ್ಮರಾಜನನ್ನು ಶಕುನಿಯು ಮೋಸದಿಂದ ಜಯಿಸಿದನು. ಆ ದ್ಯೂತವೆಂಬ ಜಲದಲ್ಲಿ ಮುಳುಗಿದ ಪಾಂಡವರಿಗೆ ದ್ರೌಪದಿಯು ನಾವೆಯಾದಳು.

ಗಚ್ಛತಶ್ಚಾತಿಸೃಷ್ಟಾಂಸ್ತಾನ್ ಜ್ಞಾತ್ವಾ ದುರ್ಯೋಧನೋ ನೃಪಃ |
ಪುನರೇವ ತತೋ ದ್ಯೂತೇ ಸಮಾಹ್ವಯತ ಪಾಂಡವಾನ್ ॥104॥
ಧೃತರಾಷ್ಟ್ರನಿಂದ ಬಿಡುಗಡೆಮಾಡಲ್ಪಟ್ಟು ಹೊರಟುಹೋಗುತ್ತಿದ್ದ ಪಾಂಡವರನ್ನು ನೋಡಿ ದುರ್ಯೋಧನನು ಪುನಃ ಅವರನ್ನು ದ್ಯೂತಕ್ಕೆ ಕರೆದನು.
ಏತತ್ಸರ್ವಂ ಸಭಾಪರ್ವ ಣ್ಯಾಖ್ಯಾತಂ ಪರಮರ್ಷಿಣಾ |
ಅಧ್ಯಾಯಾಃ ಸಪ್ತತಿರ್ಜ್ಞೇಯಾ ದ್ವೌ ಚಾತ್ರ ಪರಿಸಂಖ್ಯಯಾ ॥105॥
ಚತುಃಶ್ಲೋಕಸಹಸ್ರಾಣಿ ಪಂಚ ಶ್ಲೋಕಶತಾನಿ ಚ |
ಶ್ಲೋಕಾಶ್ಚೈಕಾದಶ ಜ್ಞೇಯಾಃ ಪರ್ವಣ್ಯಸ್ಮಿನ್ಪ್ರಕೀರ್ತಿತಾಃ ॥106॥
ಈ ಎಲ್ಲ ವಿಷಯವು ಪರಮರ್ಷಿಗಳಾದ ವ್ಯಾಸರಿಂದ ಸಭಾಪರ್ವದಲ್ಲಿ ಹೇಳಲ್ಪಟ್ಟಿದೆ. ಈ ಪರ್ವದಲ್ಲಿ ಎಪ್ಪತ್ತೆರಡು ಅಧ್ಯಾಯಗಳು ನಾಲ್ಕುಸಾವಿರದ ಐದುನೂರ ಹನ್ನೊಂದು ಶ್ಲೋಕಗಳು ಇವೆ.
ಅತಃ ಪರಂ ತೃತೀಯಂ ತು ಜ್ಞೇಯಮಾರಣ್ಯಕಂ ಪರಮ್ |
ವನವಾಸಂ ಪ್ರಯಾತೇಷು ಪಾಂಡವೇಷು ಮಹಾತ್ಮಸು |
ಪೌರಾನುಕಂಪಾ ನಿರ್ವೇದೋ ಧರ್ಮರಾಜಸ್ಯ ಧೀಮತಃ ॥107॥
ಇಲ್ಲಿಂದ ಮುಂದಕ್ಕೆ ಮೂರನೆಯ ವನಪರ್ವ. ಮಹಾತ್ಮರಾದ ಪಾಂಡವರು ವನವಾಸಕ್ಕೆ ಹೋಗುತ್ತಿರಲು ಪೌರರ ಅನುಕಂಪ, ಮತ್ತು ಮೇಧಾವಿಯಾದ ಧರ್ಮರಾಜನ ನಿರ್ವೇದ.
ಅನ್ನೌಷಧೀನಾಂ ಚ ಕೃತೇ ಪಾಂಡವೇನ ಮಹಾತ್ಮನಾ |
ದ್ವಿಜಾನಾಂ ಭರಣಾರ್ಥಂ ಚ ಕೃತಮಾರಾಧನಂ ರವೇಃ |
ಧೌಮ್ಯೋಪದೇಶಾತ್ ತಿಗ್ಮಾಂಶುಪ್ರಸಾದಾದನ್ನಸಂಭವಃ ॥108॥
ಜೊತೆಯಲ್ಲಿದ್ದ ಬ್ರಾಹ್ಮಣರ ಮತ್ತು ತಮ್ಮ ಪೋಷಣೆಗಾಗಿ ಧೌಮ್ಯರ ಮಾತಿನಂತೆ ಮಹಾತ್ಮನಾದ ಧರ್ಮರಾಜನಿಂದ ಸೂರ್ಯನ ಆರಾಧನೆ. ಮತ್ತು ಸೂರ್ಯನ ಅನುಗ್ರಹದಿಂದ ಅನ್ನಪ್ರಾಪ್ತಿ.
ಮೈತ್ರೇಯಶಾಪೋತ್ಸರ್ಗಶ್ಚ ವಿದುರಸ್ಯ ಪ್ರವಾಸನಮ್ |
ಶ್ರುತ್ವಾ ಶಕುನಿನಾ ದ್ಯೂತೇ ನಿಕೃತ್ಯಾ ನಿರ್ಜಿತಾಂಶ್ಚ ತಾನ್ ॥109॥
ಮೈತ್ರೇಯರಿಂದ ದುರ್ಯೋಧನನಿಗೆ ಶಾಪದಾನ. ಪಾಂಡವರನ್ನು ಶಕುನಿಯು ದ್ಯೂತದಲ್ಲಿ ಮೋಸದಿಂದ ಸೋಲಿಸಿದ ಕಾರಣ. ಹಸ್ತಿನಾವತಿಯಿಂದ ವಿದುರನ ಪ್ರಯಾಣ.
ತತ್ಕಿರ್ಮ್ಮೀರಕವಧಾಖ್ಯಾನಂ ವೃಷ್ಣೀನಾಮಾಗಮಸ್ತಥಾ |
ಪಾಂಚಾಲಾನಾಂ ಚ ಸರ್ವೇಷಾಂ ಸೌಭಾಖ್ಯಾನಂ ತಥೈವ ಚ ॥110॥
ಅನಂತರ ಕಾಮ್ಯಕವನದಲ್ಲಿ ಕಿರ್ಮ್ಮೀರವಧಾ ನಿರೂಪಣ, ವೃಷ್ಣಿಗಳ ಆಗಮನ. ಮತ್ತು ಎಲ್ಲಾ ಪಾಂಚಾಲರ ಆಗಮನ. ಅನಂತರ ಸೌಭಾಖ್ಯಾನ.
ಪಾಂಚಾಲಾಗಮನಂ ಚೈವ ದ್ರೌಪದ್ಯಾಶ್ಚಾಶ್ರುಮೋಕ್ಷಣಮ್ |
ಅಸ್ತ್ರಹೇತೋರ್ವಿವಾಸಶ್ಚ ಪಾರ್ಥಸ್ಯಾಮಿತತೇಜಸಃ ॥111॥
ದ್ರುಪದನ ಆಗಮನ. ದ್ರೌಪದಿಯ ಅಶ್ರುಪಾತ. ಪಾಶುಪತಾಸ್ತ್ರವನ್ನು ಪಡೆಯುವ ಸಲುವಾಗಿ ಅಮಿತಪರಾಕ್ರಮಿಯಾದ ಅರ್ಜುನನ ಪ್ರಯಾಣ.
ಮಹಾದೇವೇನ ಯುದ್ಧಂ ಚ ಕಿರಾತವಪುಷಾ ಸಹ |
ದರ್ಶನಂ ಲೋಕಪಾಲಾನಾಂ ಸ್ವರ್ಗಾರೋಹಣಮೇವ ಚ ॥112॥
ಕಿರಾತರೂಪಿಯಾದ ರುದ್ರದೇವರ ಜೊತೆಯಲ್ಲಿ ಯುದ್ಧ ಲೋಕಪಾಲಕರ ದರ್ಶನ. ಮತ್ತು ಸ್ವರ್ಗಾರೋಹಣ.
ದರ್ಶನಂ ಬೃಹದಶ್ವಸ್ಯ ಮಹರ್ಷೇರ್ಭಾವಿತಾತ್ಮನಃ |
ಯುಧಿಷ್ಠಿರಸ್ಯ ಚಾರ್ತಸ್ಯ ವ್ಯಸನೇ ಪರಿದೇವನಮ್ ॥113॥
ಮಹರ್ಷಿಯಾದ ಉದಾರಮನಸ್ಕನಾದ ಬೃಹದಶ್ವನ ದರ್ಶನ. ಸರ್ವವನ್ನು ಕಳೆದುಕೊಂಡು ಆರ್ತನಾದ ಯುಧಿಷ್ಠಿರನ ವಿಲಾಪ.
ನಲೋಪಾಖ್ಯಾನಮತ್ರೈವ ಧರ್ಮಿಷ್ಠಂ ಕರುಣೋದಯಮ್ |
ದಮಯಂತ್ಯಾಃ ಸ್ಥಿತಿರ್ಯತ್ರ ನಲಸ್ಯ ವ್ಯಸನಾಗಮೇ ॥114॥
ಇಲ್ಲಿಯೇ ಕುರುಣಾಜನಕವಾದ ಧರ್ಮಿಷ್ಠವಾದ ನಲೋಪಾಖ್ಯಾನವು ನಲನು ವ್ಯಸನದಲ್ಲಿ ಮಗ್ನನಾದಾಗ, ದಮಯಂತಿಯ ಪಾತಿವ್ರತ್ಯವು ಹೇಳಲ್ಪಟ್ಟಿದೆ.
ವನವಾಸಗತಾನಾಂ ಚ ಪಾಂಡವಾನಾಂ ಮಹಾತ್ಮನಾಮ್ |
ಸ್ವರ್ಗೇ ಪ್ರವೃತ್ತಿರಾಖ್ಯಾತಾ ಲೋಮಶೇನಾರ್ಜುನಸ್ಯ ಚ ॥115॥
ವನವಾಸದಲ್ಲಿದ್ದ ಮಹಾತ್ಮರಾದ ಪಾಂಡವರಿಗೆ ಲೋಮಶರಿಂದ ಅರ್ಜುನನಿಂದ ಸ್ವರ್ಗದಲ್ಲಿ ನಡೆದ ವೃತ್ತಾಂತಗಳ ಕಥನ.
ತೀರ್ಥಯಾತ್ರಾ ತಥೈವಾತ್ರ ಪಾಂಡವಾನಾಂ ಮಹಾತ್ಮನಾಮ್ |
ಆಗಸ್ತ್ಯಮಪಿ ಚಾಖ್ಯಾನಂ ಯತ್ರ ವಾತಾಪಿಭಕ್ಷಣಮ್ ॥116॥
ಮಹಾತ್ಮರಾದ ಪಾಂಡವರ ತೀರ್ಥಯಾತ್ರೆ. ಅಗಸ್ತ್ಯೋಪಖ್ಯಾನ, ಮತ್ತು ವಾತಾಪಿಯ ಭಕ್ಷಣ.
ಲೋಪಾಮುದ್ರಾಭಿಗಮನಂ ಅಪತ್ಯಾರ್ಥಮೃಷೇರಪಿ |
ತತಃ ಶ್ಯೇನಕಪೋತೀಯಮುಪಾಖ್ಯಾನಮನಂತರಮ್ ॥117॥

ಇಂದ್ರಾಗ್ನೀ ಯತ್ರ ಧರ್ಮಶ್ಚ ಜಿಜ್ಞಾಸಂತೌ ಶಿಬಿಂ ನೃಪಮ್ |
ಋಶ್ಯಶೃಂಗಸ್ಯ ಚರಿತಂ ಕೌಮಾರಬ್ರಹ್ಮಚಾರಿಣಃ ||118||
ಮಕ್ಕಳನ್ನು ಪಡೆಯುವ ಸಲುವಾಗಿ ಅಗಸ್ತ್ಯರಿಂದ ಲೋಪಾಮುದ್ರೆಯ ಸಮಾಗಮ. ಮತ್ತು ಶ್ಯೇನಕಪೋತ ಉಪಾಖ್ಯಾನ. ಆ ಉಪಾಖ್ಯಾನದಲ್ಲಿ ಇಂದ್ರ ಮತ್ತು ಅಗ್ನಿಯು ಶಿಬಿಯ ಧರ್ಮವನ್ನು ಪರೀಕ್ಷಿಸಲು ಶ್ಯೇನ ಮತ್ತು ಕಪೋತ ರೂಪದಲ್ಲಿ ಪ್ರಾಪ್ತವಾದದ್ದು ಮತ್ತು ಶಿಬಿಯ ಧರ್ಮವು ಹೇಳಲ್ಪಡುತ್ತದೆ. ಕೌಮಾರಬ್ರಹ್ಮಚಾರಿಯಾದ ಋಷ್ಯಶೃಂಗರ ಚರಿತ್ರೆಯು ಇಲ್ಲಿಯೇ ಇದೆ.
ಜಾಮದಗ್ನ್ಯಸ್ಯ ರಾಮಸ್ಯ ಚರಿತಂ ಭೂರಿತೇಜಸಃ |
ಕಾರ್ತವೀರ್ಯವಧೋ ಯತ್ರ ಹೇಹಯಾನಾಂ ಚ ವರ್ಣ್ಯತೇ ||119||
ಅನಂತರ ಮಹಾಪರಾಕ್ರಮಶಾಲಿಗಳಾದ ಪರಶುರಾಮರ ಚರಿತ್ರೆ, ಕಾರ್ತವೀರ್ಯ ಮತ್ತು ಹೇಹಯಕುಲದ ರಾಜರ ವಧೆಯು ಇಲ್ಲಿ ಹೇಳಲ್ಪಡುತ್ತದೆ.
ಕರ್ಣಸ್ಯ ಪರಿಮೋಕ್ಷೋಽತ್ರ ಕುಂಡಲಾಭ್ಯಾಂ ಪುರಂದರಾತ್ |
ನಿಯುಕ್ತೋ ಭೀಮಸೇನಶ್ಚ ದ್ರೌಪದ್ಯಾ ಗಂಧಮಾದನೇ ||120||
ಯತ್ರ ಮಂದಾರಪುಷ್ಪಾರ್ಥಂ ನಲಿನೀಂ ತಾಮಧರ್ಷಯತ್ |
ಯತ್ರಾಸ್ಯ ಸುಮಹದ್ಯುದ್ಧಂ ಅಭವದ್ರಾಕ್ಷಸೈಃ ಸಹ ||121||
ಇಂದ್ರನಿಂದ ಕರ್ಣನ ಕುಂಡಲಗಳ ಸ್ವೀಕಾರ. ದ್ರೌಪದಿಯಿಂದ ಪ್ರಾರ್ಥಿತನಾದ ಭೀಮಸೇನನಿಂದ ಗಂಧಮಾದನಪರ್ವತದಲ್ಲಿ ಸರೋವರದ ಬಳಿ ಹೋಗಿ ರಾಕ್ಷಸರ ಜೊತೆಯಲ್ಲಿ ನಡೆದ ದೊಡ್ಡ ಯುದ್ಧವು ಇಲ್ಲಿ ಹೇಳಲ್ಪಡುತ್ತದೆ.
ಯಕ್ಷೈಶ್ಚಾಪಿ ಮಹಾವೀರ್ಯೈರ್ಮಣಿಮತ್ಪ್ರಮುಖೈಸ್ತಥಾ ||122||
ಅನಂತರ ಮಣಿಮಂತನೇ ಪ್ರಮುಖನಾದ ಮಹಾಪರಾಕ್ರಮ- ಶಾಲಿಗಳಾದ ಯಕ್ಷರ ಜೊತೆಯಲ್ಲಿ ಭೀಮಸೇನನು ಮಾಡಿದ ಯುದ್ಧವು ಇಲ್ಲಿ ಹೇಳಲ್ಪಡುತ್ತದೆ.
ಸೌಕನ್ಯಕಮುಪಾಖ್ಯಾನಂ ಚ್ಯವನೋ ಯತ್ರ ಭಾರ್ಗವಃ |
ಶರ್ಯಾತಿಯಜ್ಞೇ ನಾಸತ್ಯೌ ಕೃತವಾನ್ಸೋಮಪೀಥಿನೌ |
ತಾಭ್ಯಾಂ ಚ ಯತ್ರ ಸ ಮುನಿರ್ಯೌವನಂ ಪ್ರತಿಪಾದಿತಃ ||123||
ಅನಂತರ ಕರ್ಮಾತಿ ರಾಜನ ಮಗಳಾದ ಸುಕನ್ಯೆಯ ಉಪಾಖ್ಯಾನ. ಅದರಲ್ಲಿ ಭೃಗುಕುಲೋತ್ಪನ್ನರಾದ ಚ್ಯವನೃಷಿಗಳು, ಶರ್ಯಾತಿಯಜ್ಞದಲ್ಲಿ ಅಶ್ವಿನೀದೇವತೆಗಳನ್ನು ಯಜ್ಞಭಾಗಾರ್ಹರನ್ನಾಗಿ ಮಾಡಿ ಅವರಿಬ್ಬರಿಂದ ಯೌವನವನ್ನು ಪಡೆದ ಬಗೆಯನ್ನು ನಿರೂಪಿಸಲಾಗಿದೆ.
ಜಂತೂಪಾಖ್ಯಾನಮತ್ರೈವ ಯತ್ರ ಪುತ್ರೇಣ ಸೋಮಕಃ |
ಪುತ್ರಾರ್ಥಮಯಜದ್ ರಾಜಾ ಲೇಭೇ ಪುತ್ರಶತಂ ಚ ಸಃ ||124||
ಅನಂತರ ಅರಣ್ಯ ಪರ್ವದಲ್ಲಿ ಜಂತೂಪಾಖ್ಯಾನ. ಸೋಮಕರಾಜನ ಮಗನಾದ ಜಂತುವನ್ನು ಪಶುವನ್ನಾಗಿ ಮಾಡಿ. ಸೋಮಕನು ಹೆಚ್ಚು ಮಕ್ಕಳನ್ನು ಪಡೆಯುವ ಉದ್ದೇಶದಿಂದ ಯಾಗವನ್ನು ಮಾಡಿ ಜಂತುವಿನ ವಪೆಯನ್ನು ಆಹುತಿಯಾಗಿ ಅರ್ಪಿಸಿದಾಗ, ಆ ಹೋಮಗಂಧವನ್ನು ಆಘ್ರಾಣಿಸಿದ ಅವನ ಪತ್ನಿಯರೆಲ್ಲರೂ ಗರ್ಭಿಣಿಯರಾಗಿ ಪುನಃ ಜಂತುವನ್ನು ಸೇರಿದಂತೆ ನೂರುಮಕ್ಕಳನ್ನು ಪಡೆದರು ಎಂಬ ಕಥೆಯು ಇಲ್ಲಿ ಹೇಳಲ್ಪಡುತ್ತದೆ. ದೇಹದಲ್ಲಿ, ಎದೆ ಮತ್ತು ಕರುಳಿನ ಮಧ್ಯಭಾಗದಲ್ಲಿರುವ `ಪರದೆ'ಯನ್ನು `ವಪೆ' ಎಂದು ಕರೆಯುತ್ತಾರೆ.
ಅಷ್ಟಾವಕ್ರೀಯಮತ್ರೈವ ವಿವಾದೇ ಯತ್ರ ವಂದಿನಃ |
ವಿಜಿತ್ಯ ಸಾಗರಂ ಪ್ರಾಪ್ತಂ ಪಿತರಂ ಲಬ್ಧವಾನೃಷಿಃ ||125||
ಇಲ್ಲಿ ಅಷ್ಟಾವಕ್ರನ ಉಪಾಖ್ಯಾನವೂ ಇದೆ. ವರುಣನ ಪುತ್ರನೊಬ್ಬನು ಭೂಮಿಗೆ ಬಂದು ಜನಕರಾಜನ ವಂದಿಯಾಗಿ ಕೆಲಸ ಮಾಡುತ್ತಿದ್ದು. ಬಂದ ಬ್ರಾಹ್ಮಣರಿಗೆಲ್ಲಾ ಪ್ರಶ್ನೆಯನ್ನು ಕೇಳಿ, ನಿರುತ್ತರರನ್ನಾಗಿ ಮಾಡಿ ಅವರು ಉತ್ತರವನ್ನು ಕೊಡದಿದ್ದಾಗ ಸಮುದ್ರದ ಜಲದಲ್ಲಿ ಎಸೆಯುತ್ತಿದ್ದನು. ಆಗ ಅಷ್ಟಾವಕ್ರರು ಸಭೆಗೆ ಹೋಗಿ, ಅವನನ್ನು ಸೋಲಿಸಿ ಸಮುದ್ರದಿಂದ ತನ್ನ ತಂದೆಯನ್ನು ಮತ್ತು ಉಳಿದ ಬ್ರಾಹ್ಮಣರನ್ನು ಕರೆದುಕೊಂಡು ಬಂದರು. ತನ್ನ ಮಗನ ಮೇಲೆ ಪ್ರೀತಿಯಿಂದ ವರುಣನು ತನ್ನ ಜಲದಲ್ಲಿ ಹಾಕಿದ ಯಾವ ಬ್ರಾಹ್ಮಣರನ್ನೂ ಸಂಹಾರ ಮಾಡಿರಲಿಲ್ಲ ಎಂಬ ಈ ಕಥೆಯು ಇಲ್ಲಿ ಹೇಳಲ್ಪಡುತ್ತದೆ.
ಅಜಾಸುರಸ್ಯ ಚಾತ್ರೈವ ವಧಃ ಸಮುಪವರ್ಣ್ಯತೇ |
ಅವಾಪ್ಯ ದಿವ್ಯಾನ್ಯಸ್ತ್ರಾಣಿ ಗುರ್ವರ್ಥೇ ಸವ್ಯಸಾಚಿನಾ ||126||
ನಿವಾತಕವಚೈರ್ಯುದ್ಧಂ ಹಿರಣ್ಯಪುರವಾಸಿಭಿಃ |
ಸಮಾಗಮಶ್ಚ ಪಾರ್ಥಸ್ಯ ಭ್ರಾತೃಭಿರ್ಗಂಧಮಾದನೇ ||127||
ಇಲ್ಲಿಯೇ ಅಜಾಸುರನ ವಧೆಯು ಹೇಳಲ್ಪಡುತ್ತದೆ. ಇಂದ್ರನ ಸಲುವಾಗಿ ಅರ್ಜುನನು ದಿವ್ಯಾಸ್ತ್ರಗಳನ್ನು ಸಂಪಾದಿಸಿ ಹಿರಣ್ಯಪುರವಾಸಿಗಳಾದ ನಿವಾತಕವಚರ ಜೊತೆಯಲ್ಲಿ ಮಾಡಿದ ಯುದ್ಧವು ಮತ್ತು ಗಂಧಮಾದನ ಪರ್ವತದಲ್ಲಿ ಅರ್ಜುನನಿಗೆ ಸಹೋದರರ ಸಮಾಗಮವು ಹೇಳಲ್ಪಡುತ್ತದೆ.
ಘೋಷಯಾತ್ರಾ ಚ ಗಂಧರ್ವೈರ್ಯತ್ರ ಯುದ್ಧಂ ಕಿರೀಟಿನಃ |
ಜಯದ್ರಥೇನಾಪಹಾರೋ ದ್ರೌಪದ್ಯಾಶ್ಚಾಶ್ರಮಾಂತರಾತ್ | ಯತ್ರೈನಮನ್ವಗಾದ್ ಭೀಮೋ ವಾಯುವೇಗಸಮೋ ಜವೇ ||128||
ಅನಂತರ ಘೋಷಯಾತ್ರೆಗೆ ಹೋಗುತ್ತಾ ಅರ್ಜುನನು ಗಂಧರ್ವರ ಜೊತೆಯಲ್ಲಿ ಮಾಡಿದ ಯುದ್ಧ ಮತ್ತು ಆಶ್ರಮದಲ್ಲಿ ವಾಸಿಸುತ್ತಿದ್ದ ದ್ರೌಪದಿಯನ್ನು ಸೈಂಧವನು ಅಪಹಾರ ಮಾಡಿದ ಕಥೆಯೂ ಇದೆ. ಆಗ ವಾಯುವೇಗ ಸಮಾನವುಳ್ಳ ಭೀಮಸೇನನು ಸೈಂಧವನನ್ನು

ಹಿಂಬಾಲಿಸಿದುದೂ  ಸಹ ಇಲ್ಲಿ ಎಂದು ಹೇಳಲ್ಪಟ್ಟಿದೆ.
ಮಾರ್ಕಂಡೇಯಸಮಾಸ್ಯಾಯಾಮುಪಾಖ್ಯಾನಾನಿ ಸರ್ವಶಃ |
ಸಂದರ್ಶನಂ ಚ ಕೃಷ್ಣಸ್ಯ ಸಂವಾದಶ್ಚೈವ ಸತ್ಯಯಾ |
ವ್ರೀಹಿದ್ರೋಣಕಮಾಖ್ಯಾನಮೈಂದ್ರದ್ಯುಮ್ನಂ ತಥೈವ ಚ          ||129||
ಅನಂತರ ಮಾರ್ಕಂಡೆಯಸಮಾಸ್ಯಾಯಲ್ಲಿ ಅನೇಕ ಉಪಾಖ್ಯಾನಗಳು ಹೇಳಲ್ಪಟ್ಟಿವೆ. ಕೃಷ್ಣನ ಸಂದರ್ಶನ ಸತ್ಯಭಾಮೆಯ ಜೊತೆಯಲ್ಲಿ ದ್ರೌಪದಿಯ ಸಂವಾದ. ವ್ರೀಹಿದ್ರೋಣಾಖ್ಯಾನ ಮತ್ತು ಐಂದ್ರದ್ಯುಮ್ನಾಖ್ಯಾನಗಳು ಹೇಳಲ್ಪಟ್ಟಿವೆ.
ಸಾವಿತ್ರ್ಯೌದ್ದಾಲಕೀಯೇ ಚ ವೈನ್ಯೋಪಾಖ್ಯಾನಮೇವ ಚ |
ರಾಮಾಯಣಮುಪಾಖ್ಯಾನಮತ್ರೈವ ಬಹುವಿಸ್ತರಮ್          ||130||
ಅನಂತರ ಸಾವಿತ್ರಿಯ ಉಪಾಖ್ಯಾನ, ಉದ್ದಾಲಕರ ಉಪಾಖ್ಯಾನ, ವೈನ್ಯೋಪಾಖ್ಯಾನಗಳು ಇವೆ. ಇಲ್ಲಿಯೇ ಬಹುವಿಸ್ತಾರವಾದ ರಾಮಾಯಣದ ಉಪಾಖ್ಯಾನವೂ ಇದೆ.
ಪುನರಾಗಮನಂ ಚೈವ ತೇಷಾಂ ದ್ವೈತವನೇ ಸರಃ |
ಆರಣೇಯಮುಪಾಖ್ಯಾನಂ ಯತ್ರ ಧರ್ಮೋऽನ್ವಗಾತ್ ಸುತಮ್ ||
ಪಾಂಡವರಿಂದ ಪುನಃ ದ್ವೈತವನದ ಸರೋವರಕ್ಕೆ ಆಗಮನ. ಮತ್ತು  ಅರಣಿಪ್ರಾಪ್ತಿಗಾಗಿ ಯಮನನ್ನು ಹಿಂಬಾಲಿಸಿದ ಯುಧಿಷ್ಠಿರನ ಕಥೆಯನ್ನೊಳಗೊಂಡ ಆರಣೇಯ ಉಪಾಖ್ಯಾನವೂ ಇದೆ.
ಜಗ್ಮುರ್ಲಬ್ಧವರಾ ಯತ್ರ ಪಾಂಡವಾಃ ಪಶ್ಚಿಮಾಂ ದಿಶಮ್ |
ಏತದಾರಣ್ಯಕಂ ಪರ್ವ ತೃತೀಯಂ ಪರಿಕೀರ್ತಿತಮ್          ||132||
ಯಮನಿಂದ ವರವನ್ನು ಪಡೆದ ಪಾಂಡವರ ಪಶ್ಚಿಮದಿಕ್ಕಿಗೆ ಪ್ರಯಾಣ.  ಇಷ್ಟು ವಿಷಯಗಳು ಮೂರನೆಯ ಪರ್ವವಾದ ಆರಣ್ಯಕಪರ್ವದಲ್ಲಿ ಹೇಳಲ್ಪಟ್ಟಿವೆ.
ಅತ್ರಾಧ್ಯಾಯಶತೇ ದ್ವೇ ತು ಸಂಖ್ಯಾತೇ ಪರಮರ್ಷಿಣಾ |
ಏಕೋನಸಪ್ತತಿಶ್ಚೈವ ತಥಾಧ್ಯಾಯಾಃ ಪ್ರಕೀರ್ತಿತಾಃ          ||133||
ಈ ಆರಣ್ಯಪರ್ವದಲ್ಲಿ ವೇದವ್ಯಾಸ್ಯರು ಇನ್ನೂರ ಅರವತ್ತೊಂಬತ್ತು ಅಧ್ಯಾಯಗಳಲ್ಲಿ ಕಥೆಯನ್ನು ನಿರೂಪಿಸಿದ್ದಾರೆ.
ಏಕಾದಶಸಹಸ್ರಾಣಿ ಶ್ಲೋಕಾನಾಂ ಷಟ್ಶತಾನಿ ಚ |
ಚತುಃಷಷ್ಟಿಸ್ತಥಾ ಶ್ಲೋಕಾಃ ಪರ್ವಣ್ಯಸ್ಮಿನ್ ಪ್ರಕೀರ್ತಿತಾಃ          ||134||
ಈ ಪರ್ವದಲ್ಲಿ ಹನ್ನೊಂದು ಸಾವಿರದ ಆರುನೂರ ಅರವತ್ತಾಲ್ಕು ಶ್ಲೋಕಗಳಿವೆ.
ಅತಃ ಪರಂ ನಿಬೋಧೇದಂ ವೈರಾಟಂ ಪರ್ವ ವಿಸ್ತರಮ್ |
ವಿರಾಟನಗರಂ ಗತ್ವಾ ಶ್ಮಶಾನೇ ವಿಪುಲಾಂ ಶಮೀಮ್          ||135||
ದೃಷ್ಟ್ವಾ ಸನ್ನ್ಯದಧುಸ್ತತ್ರ ಪಾಂಡವಾ ಆಯುಧಾನ್ಯುತ |
ಯತ್ರ  ಪ್ರವಿಶ್ಯ ನಗರಂ ಛದ್ಮಭಿರ್ನ್ಯವಸಂಸ್ತದಾ     ||136||
ಅನಂತರ ವಿಸ್ತಾರವಾದ ವಿರಾಟಪರ್ವವೆಂದು ತಿಳಿ. ಪಾಂಡವರ ವಿರಾಟನಗರ ಗಮನ. ದಾರಿಯಲ್ಲಿ ಸ್ಮಶಾನದಲ್ಲಿ ದೊಡ್ಡ ಶಮೀವೃಕ್ಷದಲ್ಲಿ ಪಾಂಡವರ ಆಯುಧಗಳ ಸ್ಥಾಪನೆ. ಮತ್ತು ನಗರವನ್ನು ಪ್ರವೇಶಿಸಿ ಛದ್ಮವೇಷದಲ್ಲಿ ವಾಸ.
ದುರಾತ್ಮನೋ ವಧೋ ಯತ್ರ ಕೀಚಕಸ್ಯ ವೃಕೋದರಾತ್ |
ಗೋಗ್ರಹೇ ಯತ್ರ ಪಾರ್ಥೇನ ನಿರ್ಜಿತಾಃ ಕುರವೋ ಯುಧಿ          ||137||
ಭೀಮಸೇನನಿಂದ ದುರಾತ್ಮನಾದ ಕೀಚಕನ ವಧೆ. ಗೋಗ್ರಹಣದಲ್ಲಿ ಅರ್ಜುನನಿಂದ ಯುದ್ಧದಲ್ಲಿ ಎಲ್ಲಾ ಕೌರವರ ಅಪಜಯ. ಇಲ್ಲಿ ಹೇಳಲ್ಪಟ್ಟಿದೆ.
ಗೋಧನಂ ಚ ವಿರಾಟಸ್ಯ ಮೋಕ್ಷಿತಂ ಯತ್ರ ಪಾಂಡವೈಃ |
ವಿರಾಟೇನೋತ್ತರಾ ದತ್ತಾ ಸ್ನುಷಾ ಯತ್ರ ಕಿರೀಟಿನಃ ||138||
ಅಭಿಮನ್ಯುಂ ಸಮುದ್ದಿಶ್ಯ ಸೌಭದ್ರಮರಿಘಾತಿನಮ್ |
ಚತುರ್ಥಮೇತದ್ವಿಪುಲಂ ವೈರಾಟಂ ಪರ್ವ ವರ್ಣಿತಮ್          ||139||
ವಿರಾಟನ ಗೋಧನವನ್ನು ಪಾಂಡವರು ವಿಮೋಚನೆಗೊಳಿಸಿದುದು, ಅರ್ಜುನನಿಗೆ ವಿರಾಟನು ಉತ್ತರೆಯನ್ನು ಕೊಡುವೆನೆಂದು ಹೇಳಿದುದು,  ಅರ್ಜುನನು ಶತ್ರುಘಾತಿಯಾದ ಸುಭದ್ರೆಯ ಮಗನಾದ ಅಭಿಮನ್ಯುವಿನ ಸಲುವಾಗಿ ಸೊಸೆಯಾಗಿ ಸ್ವೀಕಾರ ಮಾಡಿದುದು ಹೇಳಲ್ಪಟ್ಟಿದೆ. ಇವೆಲ್ಲವೂ ವಿಸ್ತಾರವಾದ ನಾಲ್ಕನೆಯ ಪರ್ವವಾದ ವಿರಾಟಪರ್ವದಲ್ಲಿ ವರ್ಣಿತವಾಗಿವೆ.
ಅತ್ರ ಚೋಪರಿ ಸಂಖ್ಯಾನಂ ಅಧ್ಯಾಯಾನಾಂ ಮಹಾತ್ಮನಾ |
ಸಪ್ತಷಷ್ಟಿರಥೋ ಪೂರ್ಣಾ ಶ್ಲೋಕಾಗ್ರಮಪಿ ಮೇ ಶೃಣು          ||140||
ಈ ಪರ್ವದಲ್ಲಿ ಮಹಾತ್ಮರಾದ ವ್ಯಾಸರು ಅರವತ್ತೇಳು ಅಧ್ಯಾಯಗಳನ್ನು ರಚಿಸಿದ್ದಾರೆ. ಈ ಪರ್ವದಲ್ಲಿರುವ ಶ್ಲೋಕಸಂಖ್ಯೆಯನ್ನು ಹೇಳುತ್ತೇನೆ ಕೇಳು.
ತ್ರೀಣಿ ಶ್ಲೋಕಸಹಸ್ರಾಣಿ ಪಂಚಶ್ಲೋಕಶತಾನಿ ಚ |
ಪರ್ವಣ್ಯಸ್ಮಿನ್ ಸಮಾಖ್ಯಾತಂ ಸಂಖ್ಯಯಾ ಪರಮರ್ಷಿಣಾ          ||141||
ಮಹರ್ಷಿಗಳಾದ ವ್ಯಾಸರು ಈ ಪರ್ವದಲ್ಲಿ ಮೂರುಸಾವಿರ ಮತ್ತು   ಮೂರು ಐದುನೂರು ಎಂದರೆ ಒಟ್ಟು ನಾಲ್ಕುಸಾವಿರದ ಐದುನೂರು ಶ್ಲೋಕಗಳನ್ನು ರಚಿಸಿದ್ದಾರೆ.
ಉದ್ಯೋಗಪರ್ವ  ವಿಜ್ಞೇಯಂ ಪಂಚಮಂ ಶೃಣ್ವತಃ ಪರಮ್ |

ಉಪಪ್ಲಾವ್ಯೇ ನಿವಿಷ್ಟೇಷು ಪಾಂಡವೇಷು ಜಿಗೀಷಯಾ ॥142॥
ದುರ್ಯೋಧನೋಽರ್ಜುನಶ್ಚೈವ ವಾಸುದೇವಮುಪಸ್ಥಿತೌ |
ಸಾಹಾಯ್ಯಮಸ್ಮಿನ್ ಸಮರೇ ಭವಾನ್ ನೋ ದಾತುಮರ್ಹತಿ ॥
ಮುಂದಿನ ಪರ್ವವು ಐದನೆಯದಾದ ಕೇಳುಗರಿಗೆ ಒಳ್ಳೆಯ ಫಲವನ್ನು ಕೊಡುವ ಉದ್ಯೋಗಪರ್ವವೆಂದು ತಿಳಿಯಬೇಕು. ಪಾಂಡವರು ಯುದ್ಧದಲ್ಲಿ ಜಯವನ್ನು ಗಳಿಸಿ ಉಪಪ್ಲಾವ್ಯನಗರದಲ್ಲಿ ಇರುತ್ತಿರಲು ದುರ್ಯೋಧನ ಮತ್ತು ಅರ್ಜುನರಿಂದ ಶ್ರೀಕೃಷ್ಣನ ಸಮೀಪಗಮನ ಮತ್ತು ಯುದ್ಧದಲ್ಲಿ ನಮಗೆ ಸಹಾಯ ಮಾಡಬೇಕೆಂದು ಇಬ್ಬರ ಪ್ರಾರ್ಥನೆ.
ಇತ್ಯುಕ್ತೇ ವಚನೇ ಕೃಷ್ಣೋ ಯತ್ರೋವಾಚ ಮಹಾಮನಾಃ |
ಆಯುಧ್ಯಮಾನಮಾತ್ಮಾನಂ ಮಂತ್ರಿಣಂ ಪುರುಷರ್ಷಭೌ ॥144॥
ಅಕ್ಷೋಹಿಣೀಂ ಚ ಸೈನ್ಯಸ್ಯ ಕಸ್ಯ ವಾ ಕಿಂ ದದಾಮ್ಯಹಮ್ |
ವವ್ರೇ ದುರ್ಯೋಧನಃ ಸೈನ್ಯಂ ಮಂದಾತ್ಮಾ ಯತ್ರ ದುರ್ಮತಿಃ ॥145॥
ಹೀಗೆ ಕೇಳಿದಾಗ ಮಹಾಮನನಾದ ಕೃಷ್ಣನು ಆ ಪುರುಷಶ್ರೇಷ್ಠರನ್ನು ಕುರಿತು ಹೀಗೆ ಹೇಳಿದನು - `ಯುದ್ಧಮಾಡದಿರುವ ಮಂತ್ರಿಯಾದ ನಾನು ಮತ್ತು ನನ್ನ ಇಬ್ಬರು ಮಂತ್ರಿಗಳು ಒಂದು ಕಡೆ. ನನ್ನ ಅಕ್ಷೋಹಿಣಿಸೈನ್ಯವು ಇನ್ನೊಂದು ಕಡೆ. ಯಾರಿಗೆ ಯಾವುದನ್ನು ಕೊಡಲಿ' ಎಂದು ಆಗ ದುರ್ಮತಿಯೂ ಮಂದಮತಿಯೂ ಆದ ದುರ್ಯೋಧನನು ಸೈನ್ಯವನ್ನೇ ಬೇಡಿದನು.
ಅಯುಧ್ಯಮಾನಂ ಸಚಿವಂ ವವ್ರೇ ಕೃಷ್ಣಂ ಧನಂಜಯಃ ॥146॥
ಅರ್ಜುನನಾದರೋ ಯುದ್ಧವನ್ನು ಮಾಡದಿರುವ ಕೃಷ್ಣನನ್ನೇ ಮಂತ್ರಿಯನ್ನಾಗಿ ವರಿಸಿದನು.
ಸಂಜಯಂ ಪ್ರೇಷಯಾಮಾಸ ಶಮಾರ್ಥಂ ಪಾಂಡವಾನ್ ಪ್ರತಿ |
ಯತ್ರ ದೂತಂ ಮಹಾರಾಜೋ ಧೃತರಾಷ್ಟ್ರಃ ಪ್ರತಾಪವಾನ್ ॥147॥
ಪ್ರತಾಪಶಾಲಿಯಾದ ಧೃತರಾಷ್ಟ್ರ ಮಹಾರಾಜನು ಶಾಂತಿಯ ಸಲುವಾಗಿ ಪಾಂಡವರ ಬಳಿಗೆ ಸಂಜಯನನ್ನು ದೂತನನ್ನಾಗಿ ಕಳುಹಿಸಿದ ಕಥೆಯು ಇಲ್ಲಿದೆ.
ಶ್ರುತ್ವಾ ಚ ಪಾಂಡವಾನ್ ಯಾತಾನ್ ವಾಸುದೇವಪುರೋಗಮಾನ್|
ಪ್ರಜಾಗರಃ ಸಂಪ್ರಜಜ್ಞೇ ಧೃತರಾಷ್ಟ್ರಸ್ಯ ಚಿಂತಯಾ |
ವಿದುರೋ ಯತ್ರ ವಾಕ್ಯಾನಿ ಚಿತ್ರಾಣಿ ವಿವಿಧಾನಿ ಚ ॥148॥
ಕೃಷ್ಣನೇ ಮೊದಲಾದ ಪಾಂಡವರು ಹೊರಟುಹೋದುದನ್ನು ಕೇಳಿ ಚಿಂತೆಯಿಂದ ಧೃತರಾಷ್ಟ್ರನ ಜಾಗರಣೆ, ಚಿತ್ರವಿಚಿತ್ರವಾಕ್ಯಗಳಿಂದ ವಿದುರನಿಂದ ಅವನಿಗೆ ಉಪದೇಶ.
ಶ್ರಾವಯಾಮಾಸ ರಾಜಾನಂ ಧೃತರಾಷ್ಟ್ರಂ ಮನೀಷಿಣಮ್ |
ತಥಾ ಸನತ್ಸುಜಾತೇನ ಯತ್ರಾಧ್ಯಾತ್ಮಮನುತ್ತಮಮ್ |
ಮನಸ್ತಾಪಾನ್ವಿತೋ ರಾಜಾ ಶ್ರಾವಿತಃ ಶೋಕಲಾಲಸಃ ॥149॥
ಮೇಧಾವಿಯಾದ ಧೃತರಾಷ್ಟ್ರನಿಗೆ ವಿದುರನು ಮಾಡಿದ ಉಪದೇಶ. ಮತ್ತು ಶ್ರೇಷ್ಠವಾದ ಅಧ್ಯಾತ್ಮರಸವನ್ನು ಹೊಂದಿರುವ ಸನತ್ಸುಜಾತ ಉಪಾಖ್ಯಾನವು ಇಲ್ಲಿದೆ. ಹಾಗೆಯೇ ಸನತ್ಸುಜಾತರಿಂದ ಶ್ರೇಷ್ಠವಾದ ಅಧ್ಯಾತ್ಮತತ್ವವನ್ನೊಳಗೊಂಡ ಉಪದೇಶವು ಶೋಕಲಾಲಸನಾದ ಮನಸ್ತಾಪದಿಂದ ಕೂಡಿದ ಧೃತರಾಷ್ಟ್ರನಿಗೆ ಹೇಳಲ್ಪಟ್ಟದ್ದನ್ನು ಇಲ್ಲಿಯೇ ಹೇಳಲಾಗಿದೆ.
ಪ್ರಭಾತೇ ರಾಜಸಮಿತೌ ಸಂಜಯೋ ಯತ್ರ ಚ ಪ್ರಭುಃ |
ಐಕಾತ್ಮ್ಯಂ ವಾಸುದೇವಸ್ಯ ಪ್ರೋಕ್ತವಾನರ್ಜುನಸ್ಯ ಚ ॥150॥
ಮರುದಿನ ಪ್ರಾತಃಕಾಲದಲ್ಲಿ ಪ್ರಭುವಾದ ಸಂಜಯನು ರಾಜಸಭೆಯಲ್ಲಿ ಕೃಷ್ಣಾರ್ಜುನರ ಸ್ನೇಹಭಾವವನ್ನು ನಿರೂಪಣೆ ಮಾಡಿದನು.
ಯತ್ರ ಕೃಷ್ಣೋ ದಯಾಪನ್ನಃ ಸಂಧಿಮಿಚ್ಛನ್ ಮಹಾಯಶಾಃ |
ಸ್ವಯಮಾಗಾಚ್ಛಮಂ ಕರ್ತುಂ ನಗರಂ ನಾಗಸಾಹ್ವಯಮ್ ॥151॥
ಪ್ರತ್ಯಾಖ್ಯಾನಂ ಚ ಕೃಷ್ಣಸ್ಯ ರಾಜ್ಞಾ ದುರ್ಯೋಧನೇನ ವೈ
ಶಮಾರ್ಥಂ ಯಾಚಮಾನಸ್ಯ ಪಕ್ಷಯೋರುಭಯೋರ್ಹಿತಮ್ ॥152॥
ಮಹಾಕೀರ್ತಿವಂತನಾದ ಕೃಷ್ಣನು ದಯೆಯಿಂದ ಕೂಡಿದವನಾಗಿ, ಸಂಧಿಯನ್ನು ಬಯಸಿ, ತಾನೇ ಹಸ್ತಿನಾವತಿಗೆ ವಿರೋಧವನ್ನು ಪರಿಹಾರ ಮಾಡಲು ಬಂದ ಕಥೆಯೂ ಇಲ್ಲಿ ನಿರೂಪಿಸಲ್ಪಟ್ಟಿದೆ. ಅನಂತರ ಎರಡೂ ಪಕ್ಷದ ಹಿತದೃಷ್ಟಿಯಿಂದ ಸಂಧಿಯನ್ನು ಬೇಡುತ್ತಿರುವ ಕೃಷ್ಣನಿಗೆ ದುರ್ಯೋಧನನಿಂದ ನಿರಾಕರಣೆ.
ಕರ್ಣದುರ್ಯೋಧನಾದೀನಾಂ ದುಷ್ಟಂ ವಿಜ್ಞಾಯ ಮಂತ್ರಿತಮ್ |
ಯೋಗೇಶ್ವರತ್ವಂ ಕೃಷ್ಣೇನ ಯತ್ರ ರಾಜಸು ದರ್ಶಿತಮ್ ॥153॥
ಕರ್ಣದುರ್ಯೋಧನಾದಿಗಳ ದುಷ್ಟಮಂತ್ರಾಲೋಚನೆಯನ್ನು ತಿಳಿದು ನೆರೆದಿದ್ದ ರಾಜರ ಮಧ್ಯೆ ಕೃಷ್ಣನಿಂದ ವಿಶ್ವರೂಪದರ್ಶನ.
ರಥಮಾರೋಪ್ಯ ಕೃಷ್ಣೇನ ಯತ್ರ ಕರ್ಣೋಽನುಮಂತ್ರಿತಃ |
ಉಪಾಯಪೂರ್ವಂ ಶೌಂಡಃ ಸ್ವಾತ್ ಪ್ರತ್ಯಾಖ್ಯಾತಶ್ಚ ತೇನ ಸಃ ॥
ಸಾಮಾದಿ ಉಪಾಯಗಳಿಂದ ಮನುಷ್ಯನು ಕುಶಲನಾಗುತ್ತಾನೆ ಎಂದು ಲೋಕಶಿಕ್ಷಣವನ್ನು ಮಾಡಲು, ಕೃಷ್ಣನಿಂದ ಕರ್ಣನನ್ನು ರಥದಲ್ಲಿ ಕೂಡಿಸಿಕೊಂಡು ಮಂತ್ರಾಲೋಚನೆ ಮತ್ತು ಕರ್ಣನಿಂದ ನಿರಾಕರಣೆ.
ಶ್ವೇತಾಭಿಷೇಕಃ ಕೃಷ್ಣೋಕ್ತೋ ವಿಚಿತ್ರೋ ಬಹುವಿಸ್ತರಃ |
ತತಶ್ಚಾತ್ರಾಭಿನಿರ್ಯಾಣಂ ನರಾಶ್ವರಥದಂತಿನಾಮ್ |
ನಗರಾದ್ಧಸ್ತಿನಪುರಾದ್ ಬಲಸಂಖ್ಯಾನಮೇವ ಚ ॥155॥

ಕೃಷ್ಣನಿಂದ ಬಹುವಿಸ್ತಾರವಾದ ಮತ್ತು ವಿಚಿತ್ರವಾದ ಶ್ವೇತರಾಜನ ಅಭಿಷೇಕದ ನಿರೂಪಣೆ. ಅನಂತರ ಗಜಾಶ್ವರಥಪದಾತಿಗಳು ಹಸ್ತಿನಾವತಿಯಿಂದ ಹೊರಟು, ಯುದ್ಧಭೂಮಿಯ ಕಡೆಗೆ ಪ್ರಯಾಣ ಮಾಡುವುದು ಮತ್ತು ಸೈನ್ಯದ ಗಣನೆಯು ಹೇಳಲ್ಪಟ್ಟಿದೆ.
ಯತ್ರ ರಾಜ್ಞಾ ಉಲೂಕಶ್ಚ ಪ್ರೇಷಿತಃ ಪಾಂಡವಾನ್ ಪ್ರತಿ |
ಶ್ವೋಭಾವಿನಿ ಮಹಾಯುದ್ಧೇ ದೂತಸ್ತು ಕ್ರೂರವಾದಿನಾ ॥156॥
ಮರುದಿವಸ ಯುದ್ಧವು ನಡೆಯಬೇಕಾಗಿರಲು ದುರ್ಯೋಧನನಿಂದ ಪಾಂಡವರನ್ನು ಕುರಿತು ಉಲೂಕನನ್ನು ದೂತನನ್ನಾಗಿ ಕಳುಹಿಸಿ, ಕ್ರೂರವಾದ ಮಾತನ್ನು ಆಡುವಂತೆ ಪ್ರಚೋದನೆ.
ರಥಾತಿರಥಸಂಖ್ಯಾನಂ ಅಂಬೋಪಾಖ್ಯಾನಮೇವ ಚ |
ಏತತ್ಸುಬಹುವೃತ್ತಾಂತಂ ಪಂಚಮಂ ಪರ್ವ ಚೋಚ್ಯತೇ ॥157॥
ರಥ ಮತ್ತು ಅತಿರಥರ ಪರಿಗಣನೆ. ಮತ್ತು ಅಂಬೋಪಾಖ್ಯಾನ. ಇದೆಲ್ಲವೂ ಈ ಐದನೆಯ ಉದ್ಯೋಗಪರ್ವದಲ್ಲಿ ಹೇಳಲ್ಪಡುತ್ತದೆ.
ಉದ್ಯೋಗಪರ್ವ ನಿರ್ದಿಷ್ಟಂ ಸಂಧಿವಿಗ್ರಹಸಂಜ್ಞಿತಮ್ |
ಅಧ್ಯಾಯಾಃ ಸಂಖ್ಯಯಾ ತತ್ರ ಷಡಶೀತಿಶತಂ ಸ್ಮೃತಮ್ ॥158॥
ಈ ಉದ್ಯೋಗಪರ್ವಕ್ಕೆ ಸಂಧಿವಿಗ್ರಹಪರ್ವ ಎಂದೂ ಹೆಸರಿದೆ. ಇದರಲ್ಲಿ ಇರುವ ಅಧ್ಯಾಯಗಳು ನೂರೆಂಭತ್ತಾರು ಎಂದು ಹೇಳುತ್ತಾರೆ.
ಶ್ಲೋಕಾಃ ಸಪ್ತಸಹಸ್ರಾಣಿ ನವಶ್ಲೋಕಶತಾನಿ ಚ |
ಶ್ಲೋಕಾಶ್ಚ ನವತಿಃ ಪ್ರೋಕ್ತಾಸ್ತಥೈವಾಷ್ಟೌ ಮಹಾತ್ಮನಾ |
ವ್ಯಾಸೇನೋದಾರಮತಿನಾ ಪರ್ವಣ್ಯಸ್ಮಿಂಸ್ತಪೋಧನಾಃ ॥159॥
ಎಲೈ ತಪೋಧನರೇ, ಮಹಾತ್ಮರೂ, ಉದಾರಬುದ್ಧಿಯುಳ್ಳವರೂ, ಆದ ವ್ಯಾಸರು. ಈ ಪರ್ವದಲ್ಲಿ ಏಳುಸಾವಿರದ ಒಂಭೈನೂರ ತೊಂಭತ್ತೆಂಟು ಶ್ಲೋಕಗಳನ್ನು ರಚಿಸಿದ್ದಾರೆ.
ಅತ ಊರ್ಧ್ವಂ ವಿಚಿತ್ರಾರ್ಥಂ ಭೀಷ್ಮಪರ್ವ ಪ್ರಚಕ್ಷತೇ |
ಜಂಬೂಷಂಡವಿನಿರ್ಮಾಣಂ ಯತ್ರೋಕ್ತಂ ಸಂಜಯೇನ ಹ ॥160॥
ಅದರಿಂದ ಮುಂದಕ್ಕೆ ವಿಚಿತ್ರವಾದ ಭೀಷ್ಮಪರ್ವವು ಇದೆ. ಅದರಲ್ಲಿ ಸಂಜಯನಿಂದ ಜಂಬೂದ್ವೀಪದ ನಿರ್ಮಾಣವು ಹೇಳಲ್ಪಡುತ್ತದೆ.
ಯತ್ರ ಯುದ್ಧಮಭೂದ್ಘೋರಂ ದಶಾಹಾನ್ಯತಿದಾರುಣಮ್ |
ಯತ್ರ ಯೌಧಿಷ್ಠಿರಂ ಸೈನ್ಯಂ ವಿಷಾದಮಗಮತ್ಪರಮ್ ॥161॥
ಹತ್ತುದಿನಗಳ ಕಾಲ ಅತಿದಾರುಣವಾದ ಯುದ್ಧವು ನಡೆದು
ಯುಧಿಷ್ಠಿರನ ಸೈನ್ಯವು ವಿಷಾದವನ್ನು ಹೊಂದಿದ ವಿಷಯವು ಹೇಳಲ್ಪಡುತ್ತದೆ.
ಕಶ್ಮಲಂ ಯತ್ರ ಪಾರ್ಥಸ್ಯ ವಾಸುದೇವೋ ಮಹಾದ್ಯುತಿಃ |
ಮೋಹಜಂ ನಾಶಯಾಮಾಸ ಹೇತುಭಿರ್ಮೋಕ್ಷದರ್ಶಕೈಃ ॥162॥
ಯುದ್ಧದ ಪ್ರಾರಂಭದಲ್ಲಿ ಮೋಹಕ್ಕೆ ಒಳಗಾದ ಅರ್ಜುನನಿಗೆ ಮಹಾದ್ಯುತಿಯಾದ ಕೃಷ್ಣನು ಮೋಕ್ಷಪ್ರಾಪಕವಾದ ಹೇತುಗಳಿಂದ ಮೋಹವನ್ನು ನಾಶಮಾಡಿದ ವಿಷಯವು ಇಲ್ಲಿ ಹೇಳಲ್ಪಡುತ್ತದೆ.
ಶಿಖಂಡಿನಂ ಪುರಸ್ಕೃತ್ಯ ಯದಾ ಪಾರ್ಥೋ ಮಹಾರಥಃ |
ವಿನಿಘ್ನನ್ ನಿಶಿತೈರ್ಬಾಣೈ ರಥಾದ್ ಭೀಷ್ಮಮಪಾತಯತ್ |
ಷಷ್ಠಮೇತನ್ಮಹಾಪರ್ವ ಭಾರತೇ ಪರಿಕೀರ್ತಿತಮ್ ॥163॥
ಮಹಾರಥನಾದ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ನಿಶಿತವಾದ ಬಾಣಗಳಿಂದ ರಥದಿಂದ ಭೀಷ್ಮರನ್ನು ಬೀಳಿಸುತ್ತಾನೆ. ಮಹಾಭಾರತದಲ್ಲಿ ಇದನ್ನು ಆರನೆಯ ಪರ್ವವೆಂದು ಕರೆಯುತ್ತಾರೆ.
ಅಧ್ಯಾಯಾನಾಂ ಶತಂ ಪ್ರೋಕ್ತಂ ಅಷ್ಟಾದಶ ತಥಾಪರೇ |
ಪಂಚ ಶ್ಲೋಕಸಹಸ್ರಾಣಿ ಸಂಖ್ಯಯಾಷ್ಟೌ ಶತಾನಿ ಚ ॥164॥
ಶ್ಲೋಕಾಶ್ಚ ಚತುರಾಶೀತಿರಸ್ಮಿನ್ ಪರ್ವಣಿ ಕೀರ್ತಿತಾಃ |
ವ್ಯಾಸೇನ ವೇದವಿದುಷಾ ಸಂಖ್ಯಯಾ ಭೀಷ್ಮಪರ್ವಣಿ ॥165॥
ವೇದಜ್ಞರಾದ ವ್ಯಾಸರು ಈ ಭೀಷ್ಮಪರ್ವದಲ್ಲಿ ನೂರಹದಿನೆಂಟು ಅಧ್ಯಾಯವನ್ನು ಮತ್ತು ಐದುಸಾವಿರದ ಎಂಟುನೂರ ಎಂಭತ್ತಾಲ್ಕು ಶ್ಲೋಕಗಳನ್ನು ರಚಿಸಿದ್ದಾರೆ.
ದ್ರೋಣಪರ್ವ ತತಶ್ಚಿತ್ರಂ ಬಹುವೃತ್ತಾಂತಮುಚ್ಯತೇ |
ಯತ್ರ ಸಂಶಪ್ತಕಾಃ ಪಾರ್ಥಂ ಅಭಿಜಗ್ಮೂ ರಣಾಜಿರೇ ॥166॥
ಅನಂತರ ಬಹುವಿಷಯವನ್ನು ಒಳಗೊಂಡ ವಿಚಿತ್ರಾರ್ಥವನ್ನು ಹೊಂದಿರುವ ದ್ರೋಣಪರ್ವವಿದೆ. ಅದರಲ್ಲಿ ಯುದ್ಧಭೂಮಿಯಲ್ಲಿ ಸಂಶಪ್ತಕರು ಅರ್ಜುನನ ಎದುರಾಗಿ ಹೋಗುತ್ತಾರೆ.
ಭಗದತ್ತೋ ಮಹಾರಾಜೋ ಯತ್ರ ಶಕ್ರಸಮೋ ಯುಧಿ |
ಸುಪ್ರತೀಕೇನ ನಾಗೇನ ಸಹ ಶಸ್ತಃ ಕಿರೀಟಿನಾ ॥167॥
ಅಲ್ಲಿಯೇ ಇಂದ್ರನ ಸಮಾನವಾದ ಪರಾಕ್ರಮವುಳ್ಳ ಭಗದತ್ತ ಮಹಾರಾಜನು ಯುದ್ಧದಲ್ಲಿ ಅರ್ಜುನನಿಂದ ಸುಪ್ರತೀಕಗಜದ ಜೊತೆಯಲ್ಲಿಯೇ ಸಂಹರಿಸಲ್ಪಡುತ್ತಾನೆ.
ಯತ್ರಾಭಿಮನ್ಯುಂ ಬಹವೋ ಜಘ್ನುರ್ಲೋಕಮಹಾರಥಾಃ |
ಜಯದ್ರಥಮುಖಾ ಬಾಲಂ ಶೂರಮಪ್ರಾಪ್ತಯೌವನಮ್ ॥166॥
ಅದರಲ್ಲಿಯೇ ಬಾಲನೂ ಇನ್ನೂ ಯೌವನವನ್ನು ಪಡೆಯದಿರುವವನೂ ಆದ ಅಭಿಮನ್ಯುವನ್ನು ಜಯದ್ರಥನೇ ಮೊದಲಾದ ಅನೇಕ

ಮಹಾರಥರು ಒಟ್ಟಿಗೆ ಸೇರಿ ಸಂಹರಿಸುತ್ತಾರೆ.
ಹತೇಽಭಿಮನ್ಯೌ ಕ್ರುದ್ಧೇನ ಯತ್ರ ಪಾರ್ಥೇನ ಸಂಯುಗೇ |
ಅಕ್ಷೋಹಿಣೀಃ ಸಪ್ತ ಹತ್ವಾ ಹತೋ ರಾಜಾ ಜಯದ್ರಥಃ ॥169॥
ಅಭಿಮನ್ಯುವು ಹತನಾಗುತ್ತಿರಲು ಅರ್ಜುನನು ಕ್ರೋಧದಿಂದ ಏಳು ಅಕ್ಷೋಹಿಣಿ ಸೈನ್ಯವನ್ನು ಕೊಂದು, ಜಯದ್ರಥನನ್ನೂ ಕೊಲುತ್ತಾನೆ.
ಸಂಶಪ್ತಕಾವಶೇಷಂ ಚ ಕೃತ್ವಾ ನಿಃಶೇಷಮಾಹವೇ |
ಅಲಂಬುಸಃ ಶ್ರುತಾಯುಶ್ಚ ಜಲಸಂಧಿಶ್ಚ ವೀರ್ಯವಾನ್ ॥170॥
ಸೌಮದತ್ತಿರ್ವಿರಾಟಶ್ಚ ದ್ರುಪದಶ್ಚ ಮಹಾರಥಃ |
ಘಟೋತ್ಕಚಾದಯಶ್ಚಾನ್ಯೇ ನಿಹತಾ ದ್ರೋಣಪರ್ವಣಿ ॥171॥
ಅಳಿದುಳಿದ ಸಂಶಪ್ತಕಗಳನ್ನು ನಿಃಶೇಷವಾಗಿ ಕೊಂದು ಅರ್ಜುನನು ಅಲಂಬುಸ, ಶ್ರುತಾಯು, ಪರಾಕ್ರಮಶಾಲಿಯಾದ ಜಲಸಂಧಿ ಸೋಮದತ್ತನ ಪುತ್ರ ಭೂರಿಶ್ರವ, ಮಹಾರಥರಾದ ವಿರಾಟದ್ರುಪದರು, ಘಟೋತ್ಕಚ ಮೊದಲಾದ ಎಲ್ಲರನ್ನೂ ಸಂಹರಿಸುವ ಕಥೆಯು ಈ ದ್ರೋಣಪರ್ವದಲ್ಲಿದೆ.
ಅತ್ರ ತೇ ಪೃಥಿವೀಪಾಲಾಃ ಪ್ರಾಯಶೋ ನಿಧನಂ ಗತಾಃ |
ದ್ರೋಣಪರ್ವಣಿ ಯೇ ಶೂರಾ ನಿರ್ದಿಷ್ಟಾಃ ಪುರುಷರ್ಷಭಾಃ ॥172॥
ಶೂರರಾದ, ಪುರುಷಶ್ರೇಷ್ಠರಾದ ದೊಡ್ಡ ದೊಡ್ಡ ರಾಜರೆಲ್ಲರೂ ಪ್ರಾಯಶಃ ದ್ರೋಣಪರ್ವದಲ್ಲಿಯೇ ನಿಧನರಾಗುತ್ತಾರೆ.
ಅಶ್ವತ್ಥಾಮಾ ಪಿತರಿ ವೈ ದ್ರೋಣೇ ಯುದ್ಧೇ ನಿಪಾತಿತೇ |
ಅಸ್ತ್ರಂ ಪ್ರಾದುಶ್ಚಕಾರೋಗ್ರಂ ನಾರಾಯಣಮನುತ್ತಮಮ್ ॥173॥
ತನ್ನ ತಂದೆಯು ಯುದ್ಧದಲ್ಲಿ ಬೀಳಿಸಲ್ಪಡುತ್ತಿರಲು ಅಶ್ವತ್ಥಾಮಾಚಾರ್ಯರು ಉಗ್ರವಾದ ಮತ್ತು ಶ್ರೇಷ್ಠವಾದ ನಾರಾಯಣಾಸ್ತ್ರವನ್ನು ಪ್ರಯೋಗಿಸುತ್ತಾರೆ.
ಸಪ್ತಮಂ ಭಾರತಂ ಪರ್ವ ಮಹದೇತದುದಾಹೃತಮ್ |
ಅಧ್ಯಾಯಾನಾಂ ಶತಂ ಪ್ರೋಕ್ತಮಧ್ಯಾಯಾಃ ಸಪ್ತತಿಃ ಸ್ಮೃತಾಃ ॥174॥
ಈ ದೊಡ್ಡ ಪರ್ವವನ್ನು ಮಹಾಭಾರತದ ಏಳನೆಯ ಪರ್ವವೆಂದು ಕರೆಯುತ್ತಾರೆ. ಈ ದ್ರೋಣಪರ್ವದಲ್ಲಿ ನೂರಎಪ್ಪತ್ತು ಅಧ್ಯಾಯಗಳಿವೆ.
ಅಷ್ಟೌ ಶ್ಲೋಕಸಹಸ್ರಾಣಿ ತಥಾ ನವ ಶತಾನಿ ಚ |
ಶ್ಲೋಕಾ ನವ ತಥೈವಾತ್ರ ಸಂಖ್ಯಾತಾಸ್ತತ್ತ್ವದರ್ಶಿನಾ |
ಪಾರಾಶರ್ಯೇಣ ಮುನಿನಾ ಸಂಚಿಂತ್ಯ ದ್ರೋಣಪರ್ವಣಿ ॥175॥
ಹಾಗೆಯೇ ಪರಾಶರರ ಪುತ್ರರಾದ ವ್ಯಾಸಮಹರ್ಷಿಗಳು ಚೆನ್ನಾಗಿ ಆಲೋಚಿಸಿ ದ್ರೋಣಪರ್ವದಲ್ಲಿ ಎಂಟುಸಾವಿರದ ಒಂಭೈನೂರ ಒಂಭತ್ತು ಶ್ಲೋಕಗಳನ್ನು ರಚಿಸಿದ್ದಾರೆ.
ಅತಃ ಪರಂ ಕರ್ಣಪರ್ವ ಪ್ರೋಚ್ಯತೇ ಪರಮಾದ್ಭುತಮ್ |
ಸಾರಥ್ಯೇ ವಿನಿಯೋಗಶ್ಚ ಮದ್ರರಾಜಸ್ಯ ಧೀಮತಃ |
ಆಖ್ಯಾನಂ ಯತ್ರ ಪೌರಾಣಂ ತ್ರಿಪುರಸ್ಯ ನಿಪಾತನಮ್ ॥176॥
ಅನಂತರ ಪರಮಾದ್ಭುತವಾದ ಕರ್ಣಪರ್ವವು ನಿರೂಪಿಸಲ್ಪಡುತ್ತದೆ. ಕರ್ಣನ ಸಾರಥ್ಯದಲ್ಲಿ ಮೇಧಾವಿಯಾದ ಶಲ್ಯನ ವಿನಿಯೋಗ. ಮತ್ತು ಪುರಾಣಪ್ರಸಿದ್ಧವಾದ ತ್ರಿಪುರಸಂಹಾರರೂಪದ ಆಖ್ಯಾನವು ಇಲ್ಲಿ ಹೇಳಲ್ಪಡುತ್ತದೆ.
ಪ್ರಾಯೇಣ ಪರುಷಶ್ಚಾತ್ರ ಸಂವಾದಃ ಕರ್ಣಶಲ್ಯಯೋಃ |
ಹಂಸಕಾಕೀಯಮಾಖ್ಯಾನಮತ್ರೈವಾಕ್ಷೇಪಸಂಯುತಮ್ ॥177॥
ಇಲ್ಲಿ ಪ್ರಾಯಶಃ ಕ್ರೂರವಾದ ಕರ್ಣ-ಶಲ್ಯರ ಸಂವಾದವು ಆಕ್ಷೇಪಸಂಯುತವಾದ ಹಂಸಕಾಕೀಯ ಉಪಾಖ್ಯಾನವೂ ಹೇಳಲ್ಪಡುತ್ತದೆ. ಒಂದು ಹಂಸ ಮತ್ತು ಕಾಗೆಯು ದೂರ ಹಾರುವ ಸ್ಪರ್ಧೆಯನ್ನು ಮಾಡಿ, ಹಾರಲು ಪ್ರಾರಂಭಿಸಿದವು. ಕಾಗೆಯು ಬಹಳ ಬೇಗ ಹಾರಿ ದಣಿದು ಒಂದು ಮರದ ಮೇಲೆ ಕುಳಿತುಕೊಂಡಿತು. ಹಂಸವು ಮೊದಲಿನಿಂದಲೂ ನಿಧಾನವಾಗಿ ಹೋಗುತ್ತಾ ಆಯಾಸವಿಲ್ಲದೆ ಮಾನಸಸರೋವರವನ್ನು ತಲುಪಿತು. ಹಾಗೇ ಗರ್ವಿಷ್ಠನಾದ ನೀನು ಯುದ್ಧದ ಅಂತವನ್ನು ತಲುಪುವುದಿಲ್ಲ. ವಿನಯಶೀಲನಾದ ಅರ್ಜುನನು ಯುದ್ಧದ ಅಂತವನ್ನು ತಲುಪುತ್ತಾನೆ ಎಂಬ ಆಕ್ಷೇಪದಿಂದ ಕೂಡಿದ ಹಂಸಕಾಕೋಪಾಖ್ಯಾನವನ್ನು ಶಲ್ಯನು ಕರ್ಣನಿಗೆ ಹೇಳಿದನು.
ಅನ್ಯೋನ್ಯಂ ಪ್ರತಿ ಚ ಕ್ರೋಧೋ ಯುಧಿಷ್ಠಿರಕಿರೀಟಿನೋಃ |
ದ್ವೈರಥೇ ಯತ್ರ ಪಾರ್ಥೇನ ಹತಃ ಕರ್ಣೋ ಮಹಾರಥಃ ॥178॥
ಅರ್ಜುನ ಮತ್ತು ಧರ್ಮರಾಜರ ಪರಸ್ಪರ ಕ್ರೋಧವೂ ಅರ್ಜುನನಿಂದ ದ್ವಂದ್ವಯುದ್ಧದಲ್ಲಿ ಮಹಾರಥನಾದ ಕರ್ಣನ ವಧೆಯೂ ಇಲ್ಲಿ ಹೇಳಲ್ಪಡುತ್ತದೆ.
ಅಷ್ಟಮಂ ಪರ್ವ ನಿರ್ದಿಷ್ಟಮೇತದ್ಭಾರತಚಿಂತಕೈಃ |
ಏಕೋನಸಪ್ತತಿಃ ಪ್ರೋಕ್ತಾ ಅಧ್ಯಾಯಾಃ ಕರ್ಣಪರ್ವಣಿ ॥179॥
ಭಾರತದ ಚಿಂತನೆಯನ್ನು ಮಾಡುವವರು ಈ ಎಂಟನೆಯ ಕರ್ಣಪರ್ವದಲ್ಲಿ ಅರವತ್ತೊಂಭತ್ತು ಅಧ್ಯಾಯಗಳು ಇವೆಯೆಂದು ಹೇಳುತ್ತಾರೆ.
ಚತ್ವಾರ್ಯೇವ ಸಹಸ್ರಾಣಿ ನವ ಶ್ಲೋಕಶತಾನಿ ಚ |

ಚತುಷ್ಪಷ್ಟಿಸ್ತಥಾ ಶ್ಲೋಕಾಃ ಪರ್ವಣ್ಯಸ್ಮಿನ್ ಪ್ರಕೀರ್ತಿತಾಃ ॥180॥
ಹಾಗೆಯೇ ಈ ಪರ್ವದಲ್ಲಿ ನಾಲ್ಕು ಸಾವಿರದ ಒಂಭೈನೂರ ಅರವತ್ನಾಲ್ಕು ಶ್ಲೋಕಗಳು ಇವೆಯೆಂದು ಹೇಳಲ್ಪಡುತ್ತದೆ.
ಅತಃ ಪರಂ ವಿಚಿತ್ರಾರ್ಥಂ ಶಲ್ಯಪರ್ವ ಪ್ರಕೀರ್ತಿತಮ್ |
ಹತಪ್ರವೀರೇ ಸೈನ್ಯೇ ತು ನೇತಾ ಮದ್ರೇಶ್ವರೋಽಭವತ್ ॥181॥
ಅನಂತರ ವಿಚಿತ್ರಾರ್ಥವುಳ್ಳ ಶಲ್ಯಪರ್ವವಿದೆ. ಪ್ರಮುಖರನ್ನು ಕಳೆದುಕೊಂಡ ಕೌರವ ಸೈನ್ಯಕ್ಕೆ ಮದ್ರೇಶ್ವರನಾದ ಶಲ್ಯನು ನಾಯಕನಾದನು.
ವೃತ್ತಾನಿ ರಥಯುದ್ಧಾನಿ ಕೀರ್ತ್ಯಂತೇ ಯತ್ರ ಭಾಗಶಃ |
ವಿನಾಶಃ ಕುರುಮುಖ್ಯಾನಾಂ ಶಲ್ಯಪರ್ವಣಿ ಕೀರ್ತಿತಃ ॥182॥
ಆಗ ನಡೆದ ರಥಯುದ್ಧಗಳು ಇಲ್ಲಿ ಭಾಗಶಃ ಹೇಳಲ್ಪಡುತ್ತವೆ. ಕುರುಮುಖ್ಯರನಾಶವು ಈ ಶಲ್ಯಪರ್ವದಲ್ಲಿ ಕೀರ್ತಿತವಾಗಿದೆ.
ಶಲ್ಯಸ್ಯ ನಿಧನಂ ಚಾತ್ರ ಧರ್ಮರಾಜಾನ್ಮಹಾರಥಾತ್ |
ಗದಾಯುದ್ಧಂ ತು ತುಮುಲಮತ್ರೈವ ಪರಿಕೀರ್ತಿತಮ್ ॥183॥
ಮಹಾರಥನಾದ ಧರ್ಮರಾಜನಿಂದ ಶಲ್ಯನ ನಿಧನವೂ ತೀವ್ರವಾದ ಗದಾಯುದ್ಧವೂ ಇಲ್ಲಿಯೇ ಹೇಳಲ್ಪಟ್ಟಿದೆ.
ಸಮವಾಯೇ ತು ಯದ್ಧಸ್ಯ ರಾಮಸ್ಯಾಗಮನಂ ಸ್ಮೃತಮ್ |
ಸರಸ್ವತ್ಯಾಶ್ಚ ತೀರ್ಥಾನಾಂ ಪುಣ್ಯತಾ ಪರಿಕೀರ್ತಿತಾ ॥184॥
ಯುದ್ಧವು ಇಷ್ಟು ತೀವ್ರವಾಗಿರುವಾಗ ಬಲರಾಮನ ಆಗಮನ ಮತ್ತು ಪ್ರತ್ಯಕ್ ಸರಸ್ವತೀನದಿಯ ಸಮೀಪದಲ್ಲಿರುವ ಪುಣ್ಯಕ್ಷೇತ್ರ ಮತ್ತು ತೀರ್ಥಗಳ ನಿರೂಪಣೆಯೂ ಇಲ್ಲಿದೆ.
ನವಮಂ ಪರ್ವ ನಿರ್ದಿಷ್ಟಂ ಏತದದ್ಭುತಮರ್ಥವತ್ |
ಏಕೋನಷಷ್ಟಿರಧ್ಯಾಯಾಸ್ತತ್ರ ಸಂಖ್ಯಾವಿಶಾರದೈಃ ॥185॥
ಸಂಖ್ಯಾತಾ ಬಹುವೃತ್ತಾಂತಾಃ ಶ್ಲೋಕಾಗ್ರಂ ಯತ್ರ ಶಸ್ಯತೇ |
ತ್ರೀಣಿ ಶ್ಲೋಕಸಹಸ್ರಾಣಿ ದ್ವೇ ಶತೇ ವಿಂಶತಿಸ್ತಥಾ |
ಮುನಿನಾ ಸಂಪ್ರಣೀತಾನಿ ಕೌರವಾಣಾಂ ಯಶೋಭೃತಾ ॥186॥
ಅದ್ಭುತಾರ್ಥವುಳ್ಳ ಈ ಶಲ್ಯಪರ್ವವನ್ನು ಒಂಭತ್ತನೆಯ ಪರ್ವವೆಂದು ಹೇಳುತ್ತಾರೆ. ಸಂಖ್ಯಾವಿಶಾರದರು ಈ ಪರ್ವದಲ್ಲಿ ಐವತ್ತೊಂಭತ್ತು ಅಧ್ಯಾಯಗಳನ್ನು ಪರಿಗಣಿಸುತ್ತಾರೆ. ಇಲ್ಲಿ ಅನೇಕ ವೃತ್ತಾಂತಗಳು ಹೇಳಲ್ಪಟ್ಟಿವೆ. ಇದರಲ್ಲಿ ಕೌರವವಂಶದಲ್ಲಿ ಬಂದ ಪಾಂಡವರ ಕೀರ್ತಿವರ್ಧನರಾದ ವೇದವ್ಯಾಸರಿಂದ ಮೂರುಸಾವಿರದ ಇನ್ನೂರ ಇಪ್ಪತ್ತು ಶ್ಲೋಕಗಳು ರಚಿಸಲ್ಪಟ್ಟಿವೆ.
ಅತಃ ಪರಂ ಪ್ರವಕ್ಷ್ಯಾಮಿ ಸೌಪ್ತಿಕಂ ಪರ್ವ ದಾರುಣಮ್|
ಭಗ್ನೋರುಂ ಯತ್ರ ರಾಜಾನಂ ದುರ್ಯೋಧನಮಮರ್ಷಿಣಮ್॥
ವ್ಯಪಯಾತೇಷು ಪಾರ್ಥೇಷು ತ್ರಯಸ್ತೇ ಹ್ಯಾಯಯುೂ ರಥಾಃ |
ಕೃತವರ್ಮಾ ಕೃಪೋ ದ್ರೌಣಿಃ ಸಾಯಾಹ್ನೇ ರುಧಿರೋಕ್ಷಿತಾಃ ॥188॥
ಅಲ್ಲಿಂದ ಮುಂದಕ್ಕೆ ದಾರುಣವಾದ ಸೌಪ್ತಿಕ ಪರ್ವವನ್ನು ಹೇಳುವೆನು. ತೊಡೆಯನ್ನು ಮುರಿದುಕೊಂಡು ಕ್ರೋಧದಿಂದ ದುರ್ಯೋಧನನು ರಣರಂಗದಲ್ಲಿ ಬಿದ್ದಿರಲು, ಪಾರ್ಥರೆಲ್ಲರೂ ಹೊರಟುಹೋಗುತ್ತಿರಲು ರಕ್ತಸಿಕ್ತರಾದ ಮಹಾರಥರಾದ ಕೃತವರ್ಮ, ಕೃಪ ಮತ್ತು ಅಶ್ವಾತ್ಥಾಮಾಚಾರ್ಯರು ಸಾಯಂಕಾಲದ ವೇಳೆಗೆ ಅಲ್ಲಿಗೆ ಬರುತ್ತಾರೆ.
ಪ್ರತಿಜಜ್ಞೇ ಧೃತಕ್ರೋಧೋ ದ್ರೌಣಿರ್ಯತ್ರ ಮಹಾರಥಃ |
ಅಹತ್ವಾ ಸರ್ವಪಾಂಚಾಲಾನ್ ಧೃಷ್ಟದ್ಯುಮ್ನಪುರೋಗಮಾನ್ |
ಪಾಂಡವಾಂಶ್ಚ ತಥಾಮಾತ್ಯಾನ್ನವಿಮೋಕ್ಷ್ಯಾಮಿ ದಂಸನಮ್ ॥189॥
ಅಲ್ಲಿ ಮಹಾರಥರಾದ ಅಶ್ವತ್ಥಾಮಾಚಾರ್ಯರು ಕ್ರೋಧದಿಂದ ಧೃಷ್ಟದ್ಯುಮ್ನನೇ ಮೊದಲಾದ ಎಲ್ಲಾ ಪಾಂಚಾಲರನ್ನೂ, ಮತ್ತು ಎಲ್ಲಾ ಪಾಂಡವರನ್ನೂ ಮತ್ತು ಅವರ ಎಲ್ಲಾ ಮಂತ್ರಿಗಳನ್ನೂ ಕೊಲ್ಲುವವರೆಗೆ ನಾನು ಕವಚವನ್ನು ತೆಗೆಯುವುದಿಲ್ಲ ಎಂದು ಪ್ರತಿಜ್ಞೆಯನ್ನು ಮಾಡುತ್ತಾರೆ.
ಪ್ರಸುಪ್ತಾನ್ ನಿಶಿ ವಿಸ್ರಬ್ಧಾನ್ ಯತ್ರ ತೇ ಪುರುಷರ್ಷಭಾಃ |
ಪಾಂಚಾಲಾನ್ ಸಪರೀವಾರಾನ್ ಜಘ್ನು ದ್ರೌಣಿಪುರೋಗಮಾಃ ॥
ಆ ಪುರುಷಶ್ರೇಷ್ಠರಾದ ಅಶ್ವತ್ಥಾಮಾಚಾರ್ಯರೇ ಮೊದಲಾದವರು ರಾತ್ರಿಯ ವೇಳೆಯಲ್ಲಿ ಸುಖನಿದ್ರೆಯಲ್ಲಿದ್ದ ಪಾಂಚಾಲರನ್ನೂ ಅವರ ಪರಿವಾರವನ್ನೂ ಕೊಲ್ಲುತ್ತಾರೆ.
ಯತ್ರಾಮುಚ್ಯಂತ ಪಾರ್ಥಾಸ್ತೇ ಪಂಚ ಕೃಷ್ಣಬಲಾಶ್ರಯಾತ್ |
ಸಾತ್ಯಕಿಶ್ಚ ಮಹೇಷ್ವಾಸಃ ಶೇಷಾಸ್ತೇ ನಿಧನಂ ಗತಾಃ ॥191॥
ಕೃಷ್ಣನ ಅನುಗ್ರಹದಿಂದ ಆ ವಧೆಯ ಸಂದರ್ಭದಲ್ಲಿ ಪಂಚಪಾಂಡವರು ಮತ್ತು ಮಹೇಷ್ವಾಸನಾದ ಸಾತ್ಯಕಿಯು ಮಾತ್ರ ಉಳಿಯುತ್ತಾರೆ. ಉಳಿದವರೆಲ್ಲರೂ ನಿಧನವನ್ನು ಹೊಂದುತ್ತಾರೆ.
ದ್ರೌಪದೀ ಪುತ್ರಶೋಕಾರ್ತಾ ಪುತ್ರಭ್ರಾತೃವಧಾರ್ದಿತಾ |
ಕೃತಾನಶನಸಂಕಲ್ಪಾ ಯತ್ರ ಭರ್ತೄನುಪಾವಿಶತ್ ॥192॥
ಪುತ್ರವಧೆಯಿಂದ ದುಃಖಕ್ಕೆ ಒಳಗಾದ ದ್ರೌಪದಿಯು ಶೋಕದಿಂದ ತನ್ನ ಪತಿಯರ ಮುಂದೆ ನಿರಶನವ್ರತವನ್ನು ಸಂಕಲ್ಪಿಸಿ ಕುಳಿತುಕೊಳ್ಳುತ್ತಾಳೆ.
ದ್ರೌಪದೀವಚನಾದ್ ಯತ್ರ ಭೀಮೋ ಭೀಮಪರಾಕ್ರಮಃ |

ಅನ್ವಧಾವತ ಸಂಕ್ರುದ್ಧೋ ಭಾರದ್ವಾಜಂ ಗುರೋಃ ಸುತಮ್॥193॥
ದ್ರೌಪದಿಯ ವಚನದಂತೆ ಭೀಮಪರಾಕ್ರಮನಾದ ಭೀಮನು ಸಂಕ್ರುದ್ಧನಾಗಿ ದ್ರೋಣಾಚಾರ್ಯರ ಮಕ್ಕಳಾದ
ಅಶ್ವತ್ಥಾಮಾಚಾರ್ಯರನ್ನು ಹಿಡಿಯಲು ಓಡಿಹೋಗುತ್ತಾನೆ.
ಭೀಮಸೇನಭಯಾದ್ಯತ್ರ ದೈವೇನ ಪ್ರತಿಚೋದಿತಃ |
ಅಪಾಂಡವಾಯ ಚ ರುಷಾ ದ್ರೌಣಿರಸ್ತ್ರಮವಾಸೃಜತ್ ॥194॥
ಭೀಮಸೇನನ ಭಯದಿಂದಲೂ, ದೈವಪ್ರೇರಣೆಯಿಂದಲೂ ಅಶ್ವತ್ಥಾಮರು ಪಾಂಡವರನ್ನು ವಿನಾಶಮಾಡಲು ರೋಷದಿಂದ
ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾರೆ.
ಮೈವಮಿತ್ಯಬ್ರುವೀತ್ ಕೃಷ್ಣಃ ಶಮಯಂಸ್ತಸ್ಯ ತದ್ವಚಃ |
ಯತ್ರಾಸ್ತ್ರಮಸ್ತ್ರೇಣ ಚ ತಚ್ಛಮಯಾಮಾಸ ಫಲ್ಗುನಃ |
ಕೃಷ್ಣದ್ವೈಪಾಯನಾದೀನಾಂ ಶಾಪಾಚ್ಚಾನ್ಯೋನ್ಯಕಾರಿತಾಃ ॥195॥
ಅಶ್ವತ್ಥಾಮಾಚಾರ್ಯರು ಆಡಿದ ಕೆಟ್ಟಮಾತುಗಳನ್ನು ಹಿಂದಕ್ಕೆ ತೆಗೆದುಕೊಳ್ಳಿ ಎಂದು ಹೇಳಿ, ಕೃಷ್ಣನು ಅರ್ಜುನನ ಅಸ್ತ್ರದಿಂದ
ಅಶ್ವತ್ಥಾಮಾಚಾರ್ಯರ ಅಸ್ತ್ರವನ್ನು ಉಪಶಮನಗೊಳಿಸುತ್ತಾನೆ. ಕೃಷ್ಣನು ರಕ್ತ ಮತ್ತು ಕೀವುಗಳ ವಾಸನೆಯುಳ್ಳ ದೇಹವುಳ್ಳವನಾಗು
ಎಂದು ಅಶ್ವತ್ಥಾಮರಿಗೆ ಕೊಟ್ಟ ಶಾಪವನ್ನು ವೇದವ್ಯಾಸರು ಅನುಮೋದಿಸುತ್ತಾರೆ. (ಅಶ್ವತ್ಥಾಮರ ಪ್ರತಿಜ್ಞೆಯನ್ನು ಕೃಷ್ಣ ತನ್ನ
ಸಾಮರ್ಥ್ಯದಿಂದ ವ್ಯರ್ಥ ಮಾಡಿದ. ಒಟ್ಟಿನಲ್ಲಿ ಸತ್ಯಸಂಧನಾದ ಕೃಷ್ಣನ ಪ್ರತಿಜ್ಞೆಯ ಮುಂದೆ ಅಶ್ವತ್ಥಾಮರ ಪ್ರತಿಜ್ಞೆಯು
ಸುಳ್ಳಾಯಿತು ಎಂದು ಭಾವ).
ತೋಯಕರ್ಮಣಿ ಸರ್ವೇಷಾಂ ರಾಜ್ಞಾಮುದಕದಾನಿಕೇ |
ಗೂಢೋತ್ಪನ್ನಸ್ಯ ಚಾಖ್ಯಾನಂ ಕರ್ಣಸ್ಯ ಪೃಥಯಾತ್ಮನಃ |
ಸುತಸ್ಯೈತದಿಹ ಪ್ರೋಕ್ತಂ ದಶಮಂ ಪರ್ವ ಸೌಪ್ತಿಕಮ್ ॥196॥
ಮೃತರಾದ ಎಲ್ಲ ರಾಜರುಗಳಿಗೆ ಉದಕಕ್ರಿಯೆಯನ್ನು ಮಾಡುವಾಗ ಕುಂತಿಯು ರಹಸ್ಯವಾದ ಕರ್ಣನ ಜನ್ಮವೃತ್ತಾಂತವನ್ನು
ಹೇಳುತ್ತಾಳೆ. ಈ ಹತ್ತನೆಯ ಪರ್ವವು ಸೌಪ್ತಿಕಪರ್ವವೆಂದು ಕರೆಯಲ್ಪಡುತ್ತದೆ.
ಅಷ್ಟಾದಶಾಸ್ಮಿನ್ನಧ್ಯಾಯಾಃ ಪರ್ವಣ್ಯುಕ್ತಾ ಮಹಾತ್ಮನಾ |
ಶ್ಲೋಕಾಗ್ರಂ ಚಾತ್ರ ಕಥಿತಂ ಶತಾನ್ಯಷ್ಟೌ ತಥೈವ ಚ ॥197॥
ಶ್ಲೋಕಾಶ್ಚ ಸಪ್ತತಿಃ ಪ್ರೋಕ್ತಾ ಯಥಾವದನುಸಂಖ್ಯಯಾ |
ಸೌಪ್ತಿಕೈಷೀಕಸಂಬಂಧೇ ಪರ್ವಣ್ಯುತ್ತಮತೇಜಸೀ ॥198॥
ಮಹಾತ್ಮರಾದ ವ್ಯಾಸರು ಈ ಸೌಪ್ತಿಕ ಪರ್ವದಲ್ಲಿ ಹದಿನೆಂಟು ಅಧ್ಯಾಯಗಳನ್ನು ಮತ್ತು ಎಂಟನೂರ ಎಪ್ಪತ್ತು ಶ್ಲೋಕಗಳನ್ನು
ರಚಿಸಿದ್ದಾರೆ. ಈ ಪರ್ವದಲ್ಲಿ ಶಿಬಿರದಲ್ಲಿ ಪಾಂಡವ ಸೈನ್ಯವು ಮಲಗಿದ್ದಾಗ ಧೃಷ್ಟದ್ಯುಮ್ನಾದಿಗಳ ಹನನ ಮುಂತಾದ ಘಟನೆಗಳು,
ಮತ್ತು ಹುಲ್ಲು ಕಡ್ಡಿಯಿಂದ ಬ್ರಹ್ಮಾಸ್ತ್ರದ ಪ್ರಯೋಗವನ್ನು ತಿಳಿಸುವ ಐಷೀಕೋಪಾಖ್ಯಾನವು ಹೇಳಲ್ಪಟ್ಟಿದೆ.
ಅತ ಊರ್ಧ್ವಮಿದಂ ಪ್ರೋಕ್ತಂ ಸ್ತ್ರೀಪರ್ವ ಕರುಣೋದಯಮ್ |
ವಿಲಾಪೋ ವೀರಪತ್ನೀನಾಂ ಯತ್ರಾತಿಕರುಣಂ ಸ್ಮೃತಮ್ ॥199॥
ಅನಂತರ ಮುಂದಿನದು ಕರುಣಾಜನಕವಾದ ಸ್ತ್ರೀಪರ್ವ ಎಂದು ಹೇಳಲ್ಪಡುತ್ತದೆ. ಅಲ್ಲಿ ವೀರಪತ್ನಿಯರ ಕರುಣಾಜನಕವಾದ
ವಿಲಾಪವು ಇದೆ.
ಕ್ರೋಧವೇಗಃ ಪ್ರಸಾದಶ್ಚ ಗಾಂಧಾರೀಧೃತರಾಷ್ಟ್ರಯೋಃ |
ಯತ್ರ ತಾನ್ ಕುರವಃ ಶ್ರುತ್ವಾ ವಿನಷ್ಟಾನತಿವರ್ತಿನಃ |
ಪುತ್ರಾನ್ ಭ್ರಾತೄನ್ ಪಿತೄಂಶ್ಚೈವ ನಿಹತಾನ್ ದದೃಶೂ ರಣೇ ॥200॥
ಗಾಂಧಾರಿ ಮತ್ತು ಧೃತರಾಷ್ಟ್ರರ ಕ್ರೋಧವೇಗವೂ ಮತ್ತು ಸಮಾಧಾನವೂ ಅಲ್ಲಿದೆ. ಧರ್ಮವನ್ನು ಮೀರಿ ನಡೆದ ಮಕ್ಕಳು,
ಸಹೋದರರು, ತಂದೆಗಳು ಮುಂತಾದವರು ಯುದ್ಧದಲ್ಲಿ ಹತರಾದುದನ್ನು ಕುರುಗಳು ನೋಡುತ್ತಾರೆ.
ಯತ್ರ ರಾಜಾ ಮಹಾಪ್ರಾಜ್ಞಃ ಸರ್ವಧರ್ಮವಿದಾಂ ವರಃ |
ರಾಜ್ಞಾಂ ತಾನಿ ಶರೀರಾಣಿ ದಾಹಯಾಮಾಸ ಶಾಸ್ತ್ರತಃ |
ಏತದೇಕಾದಶಂ ಪ್ರೋಕ್ತಂ ಪರ್ವಾತಿಕರುಣಂ ಮಹತ್ ॥201॥
ಅಲ್ಲಿಯೇ ಮಹಾಪ್ರಾಜ್ಞನೂ, ಸರ್ವಧರ್ಮಜ್ಞರಲ್ಲಿ ಶ್ರೇಷ್ಠನೂ ಆದ ಧರ್ಮರಾಜನು ಮೃತಶರೀರಗಳಿಗೆ ಶಾಸ್ತ್ರರೀತಿಯಿಂದ ಮಾಡಿಸಿದ
ಸಂಸ್ಕಾರವು ಹೇಳಲ್ಪಟ್ಟಿದೆ. ಇದು ಅತಿ ಕರುಣವಾದ ವಿಸ್ತಾರವಾದ ಹನ್ನೊಂದನೆಯ ಪರ್ವ.
ಸಪ್ತವಿಂಶತಿರಧ್ಯಾಯಾಃ ಪರ್ವಣ್ಯಸ್ಮಿನ್ನುದಾಹೃತಾ ಃ |
ಶ್ಲೋಕಾಃ ಸಪ್ತಶತಂ ಚಾಪಿ ಪಂಚಸಪ್ತತಿರುಚ್ಯತೇ ॥202॥
ಸಂಖ್ಯಯಾ ಭಾರತಾಖ್ಯಾನಂ ಕೃತಂ ಚಾತ್ರ ಮಹಾತ್ಮನಾ |
ಪ್ರಣೀತಂ ಸಜ್ಜನಮನೋವೈಕ್ಲವ್ಯಾಶ್ರುಪ್ರವರ್ತನಮ್ ॥203॥
ಈ ಪರ್ವದಲ್ಲಿ ಇಪ್ಪತ್ತೇಳು ಅಧ್ಯಾಯಗಳಿವೆ. ಮಹಾತ್ಮರಾದ ವ್ಯಾಸರು ಸಜ್ಜನರ ಮನಸ್ಸಿನ ವೈಫಲ್ಯಕ್ಕೂ ಮತ್ತು ಅಶ್ರುಧಾರೆಗೂ
ಕಾರಣವಾದ ಏಳುನೂರು ಎಪ್ಪತ್ತೈದು ಶ್ಲೋಕಗಳನ್ನು ಇಲ್ಲೇ ರಚಿಸಿದ್ದಾರೆ.
ಅತಃ ಪರಂ ಶಾಂತಿಪರ್ವ ದ್ವಾದಶಂ ಬುದ್ಧಿವರ್ತನಮ್ |
ಯತ್ರ ನಿರ್ವೇದಮಾಪೇದೇ ಧರ್ಮರಾಜೋ ಯುಧಿಷ್ಠಿರಃ |
ಘಾತಯಿತ್ವಾ ಪಿತೄನ್ ಭ್ರಾತೄನ್ ಪುತ್ರಾನ್ ಸಂಬಂಧಿಬಾಂಧವಾನ್ ॥

ಅನಂತರ, ಸದ್ಬುದ್ಧಿಯನ್ನು ಪ್ರಚೋದಿಸುವ ಹನ್ನೆರಡನೆಯ ಶಾಂತಿ ಪರ್ವವಿದೆ. ತಂದೆಗಳನ್ನೂ, ಸಹೋದರರನ್ನೂ, ಮಕ್ಕಳನ್ನೂ, ಸಂಬಂಧಿಬಾಂಧವರನ್ನೂ, ಸಂಹಾರಮಾಡಿಸಿದ ಧರ್ಮರಾಜನಾದ ಯುಧಿಷ್ಠಿರನು ಅಲ್ಲಿ ವೈರಾಗ್ಯವನ್ನು ತಾಳುತ್ತಾನೆ.
ಶಾಂತಿಪರ್ವಣಿ ಧರ್ಮಾಶ್ಚ ವ್ಯಾಹೃತಾಃ ಶರತಲ್ಪಿಕಾಃ |
ರಾಜಭಿರ್ವೇದಿತವ್ಯಾ ಯೇ ಸಮ್ಯಗರ್ಥಂ ಬುಭುತ್ಸುಭಿಃ ॥205॥
ಶಾಂತಿಪರ್ವದಲ್ಲಿ ಶರತಲ್ಪದಲ್ಲಿ ಮಲಗಿದ ಭೀಷ್ಮರು ರಾಜರು ಅವಶ್ಯವಾಗಿ ತಿಳಿಯಬೇಕಾದ ಧರ್ಮಗಳನ್ನೂ, ಬುಭುತ್ಸುಗಳು ಅವಶ್ಯವಾಗಿ ತಿಳಿಯಬೇಕಾದ ವಿಷಯಗಳನ್ನು ನಿರೂಪಿಸಿದ್ದಾರೆ.
ಆಪದ್ಧರ್ಮಾಶ್ಚ ತತ್ರೈವ ಕಾಲಭೇದಪ್ರದರ್ಶಕಾಃ |
ಯಾನ್ ಬುದ್ಧ್ವಾ ಪುರುಷಃ ಸಮ್ಯಕ್ ಸರ್ವಜ್ಞತ್ವಮವಾಪ್ನುಯಾತ್ |
ಮೋಕ್ಷಧರ್ಮಶ್ಚ ವಿವಿಧಾ ವಿಚಿತ್ರಾ ಬಹುವಿಸ್ತರಾಃ ॥206॥
ಕಾಲಭೇದದಿಂದ ಭಿನ್ನವಾದ ಆಪದ್ಧರ್ಮಗಳೂ, ಬಹುವಿಧವಾದ ವಿಚಿತ್ರವಾದ, ಬಹುವಿಸ್ತಾರವಾದ ಮೋಕ್ಷಧರ್ಮಗಳೂ ಸಹ ಅಲ್ಲಿ ಹೇಳಲ್ಪಟ್ಟಿದೆ. ಅವುಗಳನ್ನು ಕೇಳಿದ ಪುರುಷನು ಒಳ್ಳೆಯ ಸರ್ವಜ್ಞತ್ವವನ್ನು ಹೊಂದಬಹುದು.
ದ್ವಾದಶಂ ಪರ್ವ ನಿರ್ದಿಷ್ಟಮೇತತ್ ಪ್ರಾಜ್ಞಜನಪ್ರಿಯಮ್ |
ಪರ್ವಣ್ಯತ್ರ ಪರಿಜ್ಞೇಯಮಧ್ಯಾಯಾನಾಂ ಶತತ್ರಯಮ್ |
ತ್ರಿಂಶಚ್ಚೈವ ತಥಾಧ್ಯಾಯಾ ನವ ಚೈವ ತಪೋಧನಾಃ ॥207॥
ಇದು ಪ್ರಾಜ್ಞಜನಪ್ರಿಯವಾದ ಹನ್ನೆರಡನೆಯ ಪರ್ವವೆಂದು ಹೇಳಲ್ಪಡುತ್ತದೆ. ಎಲೈ ತಪೋಧನರೇ, ಈ ಪರ್ವದಲ್ಲಿ ಮುನ್ನೂರಮೂವತ್ತೊಂಬತ್ತು ಅಧ್ಯಾಯಗಳಿವೆ.
ಶ್ಲೋಕಾನಾಂ ಚ ಸಹಸ್ರಾಣಿ ಕೀರ್ತಿತಾನಿ ಚತುರ್ದಶ |
ಪಂಚ ಚೈವ ಶತಾನ್ಯಾಹುಃ ಪಂಚವಿಂಶತಿಸಂಖ್ಯಯಾ ॥208॥
ಈ ಪರ್ವದಲ್ಲಿ ಗಣನೆ ಮಾಡಿದರೆ ಹದಿನಾಲ್ಕುಸಾವಿರದ ಐನೂರ ಇಪ್ಪತ್ತೈದು ಶ್ಲೋಕಗಳಿವೆ.
ಅತ ಊರ್ಧ್ವಂ ತು ವಿಜ್ಞೇಯಮಾನುಶಾಸನಿಕಂ ಪರಮ್ |
ಯತ್ರ ಪ್ರಕೃತಿಮಾಪನ್ನಃ ಶ್ರುತ್ವಾ ಧರ್ಮವಿನಿಶ್ಚಯಾನ್ |
ಭೀಷ್ಮಾದ್ ಭಾಗೀರಥೀಪುತ್ರಾತ್ ಕುರುರಾಜೋ ಯುಧಿಷ್ಠಿರಃ ॥209॥
ಅಲ್ಲಿಂದ ಮುಂದಕ್ಕೆ ಆನುಶಾಸನಿಕಪರ್ವವೆಂದು ತಿಳಿಯಬೇಕು. ಎಲ್ಲಿ ಕುರುರಾಜನಾದ ಯುಧಿಷ್ಠಿರನು ಗಂಗಾಪುತ್ರರಾದ ಭೀಷ್ಮರಿಂದ ಧರ್ಮನಿಶ್ಚಯವನ್ನು ಕೇಳಿ ಸಮಾಧಾನವನ್ನು ಹೊಂದುತ್ತಾನೋ ಅದು ಅಂತಹ ಪರ್ವ.
ವ್ಯವಹಾರೋಽತ್ರ ಕಾತ್ಸ್ನ್ಯೇನ ಧರ್ಮಾರ್ಥೋ ಯೋ ನಿದರ್ಶಿತಃ |
ವಿವಿಧಾನಾಂ ಚ ದಾನಾನಾಂ ಫಲಯೋಗಾಃ ಪೃಥಗ್ವಿಧಾಃ ॥210॥
ಇಲ್ಲಿ ಎಲ್ಲರೀತಿಯ ವ್ಯವಹಾರಗಳೂ, ಧರ್ಮ ಮತ್ತು ಅರ್ಥಗಳೂ ಸಂಪೂರ್ಣವಾಗಿ ನಿರೂಪಿಸಲ್ಪಟ್ಟಿವೆ. ವಿವಿಧವಾದ ದಾನಗಳಿಗೆ ಉಂಟಾಗುವ ವಿವಿಧ ಫಲಗಳೂ ಸಹ ನಿರೂಪಿಸಲ್ಪಟ್ಟಿವೆ.
ತಥಾ ಪಾತ್ರವಿಶೇಷಾಶ್ಚ ದಾನಾನಾಂ ಚ ಪರೋ ವಿಧಿಃ |
ಆಚಾರವಿಧಿಯೋಗಶ್ಚ ಸತ್ಯಸ್ಯ ಚ ಪರಾ ಗತಿಃ |
ಏತತ್ ಸುಬಹುವೃತ್ತಾಂತಂ ಉತ್ತಮಂ ಧರ್ಮಶಾಸನಮ್ ॥211॥
ಇಲ್ಲಿ ದಾನಕ್ಕೆ ಅರ್ಹರಾದ ವಿಶೇಷಪಾತ್ರರನ್ನೂ, ದಾನಗಳನ್ನು ಮಾಡುವ ಉತ್ತಮ ರೀತಿಯನ್ನೂ, ಆಚಾರವಿಧಿಗಳನ್ನೂ, ಸತ್ಯದ ಸ್ವರೂಪವನ್ನೂ ಹೇಳಲಾಗಿದೆ. ಈ ಪರ್ವವು ಬಹುವೃತ್ತಾಂತಗಳಿಂದ ಕೂಡಿದ್ದು ಉತ್ತಮವಾದ ಧರ್ಮಶಾಸನವಾಗಿದೆ.
ಭೀಷ್ಮಸ್ಯಾತ್ರೈವ ಸಂಪ್ರಾಪ್ತಿಃ ಸ್ವರ್ಗಸ್ಯ ಪರಿಕೀರ್ತಿತಾ ॥212॥
ಭೀಷ್ಮರ ಸ್ವರ್ಗಪ್ರಾಪ್ತಿಯೂ ಸಹ ಇಲ್ಲಿಯೇ ಹೇಳಲ್ಪಟ್ಟಿದೆ.
ಏತತ್ ತ್ರಯೋದಶಂ ಪರ್ವ ಧರ್ಮನಿಶ್ಚಯಕಾರಣಮ್ |
ಅಧ್ಯಾಯಾನಾಂ ಶತಂ ತ್ವತ್ರ ಷಟ್‌ಪಂಚಾಶಚ್ಚತೋತ್ತರಮ್ |
ಶ್ಲೋಕಾನಾಂ ಚ ಸಹಸ್ರಾಣಿ ದ್ವಾದಶೌಚೇತಿ ಕೀರ್ತ್ಯತೇ ॥213॥
ಇದು ಧರ್ಮನಿಶ್ಚಯಕಾರಣವಾದ ಹದಿಮೂರನೆಯ ಪರ್ವ. ಇದರಲ್ಲಿ ನೂರೈವತ್ತಾರು ಅಧ್ಯಾಯಗಳು ಮತ್ತು ಹನ್ನೆರಡುಸಾವಿರ ಶ್ಲೋಕಗಳೂ ಇವೆ.
ಅತೋಽಶ್ವಮೇಧಿಕಂ ನಾಮ ಪರ್ವ ಪ್ರೋಕ್ತಂ ಚತುರ್ದಶಮ್ |
ತತ್ಸಂವರ್ತಮರುತ್ತೀಯಂ ಅತ್ರಾಖ್ಯಾನಮನುತ್ತಮಮ್ ॥214॥
ಅನಂತರ, ಅಶ್ವಮೇಧಿಕ ಪರ್ವವೆಂಬ ಹದಿನಾಲ್ಕನೆಯ ಪರ್ವವು ಇದೆ. ಅಲ್ಲಿ ಸಂವರ್ತೋಪಾಖ್ಯಾನವೂ, ಶ್ರೇಷ್ಠವಾದ ಮರುತ್ತರ ಉಪಾಖ್ಯಾನವೂ ಇದೆ.
ಸುವರ್ಣಕೋಶಸಂಪ್ರಾಪ್ತಿರ್ಜನ್ಮ ಚೋಕ್ತಂ ಪರೀಕ್ಷಿತಃ |
ದಗ್ಧಸ್ಯಾಸ್ತ್ರಾಗ್ನಿನಾ ಪೂರ್ವಂ ಕೃಷ್ಣಾತ್ ಸಂಜೀವನಂ ಪುನಃ ॥215॥
ಸುವರ್ಣಕೋಶದ ಸಂಪ್ರಾಪ್ತಿಯೂ , ಪರೀಕ್ಷಿತನ ಜನ್ಮವೂ ಹೇಳಲ್ಪಟ್ಟಿದೆ ಅಶ್ವತ್ಥಾಮಾಸ್ತ್ರದಿಂದ ದಗ್ಧನಾದ ಪರೀಕ್ಷಿತನಿಗೆ ಕೃಷ್ಣನಿಂದ ಪುನಃ ಜೀವನಪ್ರದಾನವು ಹೇಳಲ್ಪಟ್ಟಿದೆ.
ಚರ್ಯಾಯಾಂ ಹಯಮುತ್ಸೃಜ್ಯ ಪಾಂಡವಸ್ಯಾನುಗಚ್ಛತಃ |
ತತ್ರ ತತ್ರ ಚ ಯುದ್ಧಾನಿ ರಾಜಪುತ್ರೈರಮರ್ಷಣೈಃ ॥216॥

ಅಶ್ವಮೇಧದಲ್ಲಿ ಉತ್ಸೃಷ್ಟವಾದ ಕುದುರೆಯ ಹಿಂದೆ ಹೋಗುವ ಅರ್ಜುನನಿಗೆ ಕ್ರೋಧಯುಕ್ತರಾದ ರಾಜಪುತ್ರರಿಂದ ಅಲ್ಲಲ್ಲಿ ನಡೆದ ಯುದ್ಧಗಳು ಹೇಳಲ್ಪಟ್ಟಿವೆ.
ಚಿತ್ರಾಂಗದಾಯಾಃ ಪುತ್ರೇಣ ಪುತ್ರ್ಯೈಣೈವ ಧನಂಜಯಃ |
ಸಂಗ್ರಾಮೇ ಬಭ್ರುವಾಹೇನ ಸಂಶಯಂ ಚಾತ್ರ ಜಗ್ಮಿವಾನ್ |
ಮಣಿದರ್ಶನಂ ತಥಾ ಚೈವ ವೈಷ್ಣವಂ ಧರ್ಮಮೇವ ಚ ॥217॥
ಅರ್ಜುನನು ಚಿತ್ರಾಂಗದೆಯ ಮಗನಾದ ಬಭ್ರುವಾಹನನಿಂದ ಪ್ರಾಣಸಂಶಯವನ್ನು ಹೊಂದಿದುದು ಮತ್ತು ಪಾತಾಳಲೋಕದಿಂದ ತಂದ ಮೃತಸಂಜೀವಿನಿಮಣಿಯ ದರ್ಶನ, ಯುದ್ಧಮಾಡದಿರುವ ಪಿತಾಮಹರಾದ ಭೀಷ್ಮರನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತರೂಪವಾಗಿ ತನ್ನ ಪುತ್ರರಿಂದಲೇ ವಧ ಎಂಬ ವಿಷ್ಣುಪ್ರೀತಿಕರವಾದ ಧರ್ಮ ಎಲ್ಲವೂ ಇಲ್ಲಿ ಹೇಳಲ್ಪಟ್ಟಿದೆ.
ಅಶ್ವಮೇಧೇ ಮಹಾಯಜ್ಞೇ ನಕುಲಾಖ್ಯಾನಮೇವ ಚ |
ಮರುದ್ದರ್ಶನಮೇವಾತ್ರ ವೈಷ್ಣವಂ ಧರ್ಮಮೇವ ಚ ॥218॥
ಅಶ್ವಮೇಧ ಮಹಾಯಾಗದಲ್ಲಿ ನಕುಲ ಪ್ರಸಂಗವೂ, ದೇವತೆಗಳ ದರ್ಶನವೂ ಮತ್ತು ಪರ್ವದ ಕೊನೆಯವರೆಗೆ ವೈಷ್ಣವ ಧರ್ಮಗಳೂ ಹೇಳಲ್ಪಟ್ಟಿವೆ.
ಇತ್ಯಾಶ್ವಮೇಧಿಕಂ ಪರ್ವ ಪ್ರೋಕ್ತಮೇತನ್ಮಹಾದ್ಭುತಮ್ |
ಅತ್ರಾಧ್ಯಾಯಶತಂ ತ್ರಿಂಶತ್ ತ್ರಯೋऽಧ್ಯಾಯಾಶ್ಚ ಶಬ್ದಿತಾಃ ॥219॥
ಮಹಾದ್ಭುತವಾದ ಇದನ್ನು ಆಶ್ವಮೇಧಿಕ ಪರ್ವವೆಂದು ಕರೆಯುತ್ತಾರೆ. ಇದರಲ್ಲಿ ನೂರಮೂವತ್ಮೂರು ಅಧ್ಯಾಯಗಳು ಇವೆ.
ಚತ್ವಾರ್ಯೇವ ಸಹಸ್ರಾಣಿ ತಾವಂತ್ಯೇವ ಶತಾನಿ ಚ |
ವಿಂಶತಿಶ್ಚ ತಥಾ ಶ್ಲೋಕಾಃ ಸಂಖ್ಯಾತಾಸ್ತತ್ವದರ್ಶಿನಾ ॥220॥
ತತ್ವದರ್ಶಿಗಳಾದ ವೇದವ್ಯಾಸರು ಇದರಲ್ಲಿ ನಾಲ್ಕುಸಾವಿರದ ನಾನ್ನೂರ ಇಪ್ಪತ್ತು ಶ್ಲೋಕಗಳನ್ನು ರಚಿಸಿದ್ದಾರೆ.
ತತಶ್ಚಾಶ್ರಮವಾಸಾಖ್ಯಂ ಪರ್ವ ಪಂಚದಶಂ ಸ್ಮೃತಮ್ |
ಯತ್ರ ರಾಜ್ಯಂ ಪರಿತ್ಯಜ್ಯ ಗಾಂಧಾರೀಸಹಿತೋ ನೃಪಃ |
ಧೃತರಾಷ್ಟ್ರಾಶ್ರಮಪದಂ ವಿದುರಶ್ಚ ಜಗಾಮ ಹ ॥221॥
ಅನಂತರ, ಆಶ್ರಮವಾಸ ಪರ್ವವೆಂಬ ಹದಿನೈದನೆಯ ಪರ್ವವಿದೆ. ಅಲ್ಲಿ ಗಾಂಧಾರಿಸಹಿತನಾದ ಧೃತರಾಷ್ಟ್ರನು ರಾಜ್ಯವನ್ನು ಪರಿತ್ಯಾಗ ಮಾಡಿ ಆಶ್ರಮಕ್ಕೆ ಹೋಗುತ್ತಾನೆ. ವಿದುರನೂ ಆಶ್ರಮಕ್ಕೆ ಹೋಗುತ್ತಾನೆ.
ಯಂ ದೃಷ್ಟ್ವಾ ಪ್ರಸ್ಥಿತಂ ಸಾಧ್ವೀ ಪೃಥಾಪ್ಯನುಯಯೌ ತದಾ |
ಪುತ್ರರಾಜ್ಯಂ ಪರಿತ್ಯಜ್ಯ ಗುರುಶುಶ್ರೂಷಣೇ ರತಾ ॥222॥
ಅವನನ್ನು ನೋಡಿದ ಗುರುಶುಶ್ರೂಷೆಯಲ್ಲಿ ಆಸಕ್ತಳಾದ ಸಾಧ್ವಿಯಾದ ಕುಂತಿಯು ಪುತ್ರರನ್ನೂ ಮತ್ತು ರಾಜ್ಯವನ್ನೂ ತೊರೆದು ತಾನೂ ಆಶ್ರಮಕ್ಕೆ ಹೋಗುತ್ತಾಳೆ.
ಯತ್ರ ರಾಜಾ ಹತಾನ್ ಪುತ್ರಾನ್ ಪಿತೃನನ್ಯಾಂಶ್ಚ ಪಾರ್ಥಿವಾನ್|
ಲೋಕಾಂತರಗತಾನ್ ವೀರಾನಪಶ್ಯತ್ ಪುನರಾಗತಾನ್ |
ಋಷೇಃ ಪ್ರಸಾದಾತ್ ಕೃಷ್ಣಸ್ಯ ದೃಷ್ಟ್ವಾऽऽಶ್ಚರ್ಯಮನುತ್ತಮಮ್ ॥
ಅಲ್ಲಿ ರಾಜನು ಯುದ್ಧದಲ್ಲಿ ಹತರಾಗಿ ಲೋಕಾಂತರಕ್ಕೆ ಹೋದ, ವೇದವ್ಯಾಸದೇವರ ಅನುಗ್ರಹದಿಂದ ಪುನಃ ಹಿಂದಿರುಗಿ ಬಂದ ಪುತ್ರರನ್ನೂ, ಪಿತೃಗಳನ್ನೂ, ಬೇರೆರಾಜರನ್ನೂ, ಶ್ರೇಷ್ಠವಾದ ಆಶ್ಚರ್ಯಕರವಾದ ಘಟನೆಯ ನಿರೂಪಣೆಯಿದೆ.
ತ್ಯಕ್ತಶೋಕಃ ಸದಾರಶ್ಚ ಸಿದ್ಧಿಂ ಪರಮಿಕಾಂ ಗತಃ |
ಯತ್ರ ಧರ್ಮಂ ಸಮಾಶ್ರಿತ್ಯ ವಿದುರಃ ಸುಗತಿಂ ಗತಃ |
ಸಂಜಯಶ್ಚ ಮಹಾಮಾತ್ರೋ ವಿದ್ವಾನ್ ಗಾವದ್ಗಣಿರ್ವಶೀ ॥224॥
ಅಲ್ಲಿ ಶೋಕವನ್ನು ತೊರೆದು ಪತ್ನೀಸಹಿತನಾಗಿ ಧೃತರಾಷ್ಟ್ರನು ಪರಮಗತಿಯನ್ನು ಪಡೆಯುತ್ತಾನೆ. ವಿದುರನು ಧರ್ಮವನ್ನು ಅವಲಂಬಿಸಿ ಸದ್ಗತಿಯನ್ನು ಪಡೆಯುತ್ತಾನೆ. ಮಹಾಮಾತ್ರನೂ, ವಿದ್ವಾಂಸನೂ ಆದ ಸಂಜಯನೂ ಮತ್ತು ಅಕ್ರೂರನೂ ಸದ್ಗತಿಯನ್ನು ಪಡೆಯುತ್ತಾರೆ.
ದದರ್ಶ ನಾರದಂ ಯತ್ರ ಧರ್ಮರಾಜೋ ಯುಧಿಷ್ಠಿರಃ |
ನಾರದಾಚ್ಚೈವ ಶುಶ್ರಾವ ವೃಷ್ಣೀನಾಂ ಕದನಂ ಮಹತ್ ॥225॥
ಅಲ್ಲಿ ಧರ್ಮರಾಜನಾದ ಯುಧಿಷ್ಠಿರನು ನಾರದರನ್ನು ದರ್ಶನಮಾಡಿ ನಾರದರಿಂದ ವೃಷ್ಣಿಗಳಲ್ಲಿ ನಡೆದ ದೊಡ್ಡ ಕದನವನ್ನು ಹೇಳುತ್ತಾನೆ.
ಏತದಾಶ್ರಮವಾಸಾಖ್ಯಂ ಪರ್ವೋಕ್ತಂ ಸುಮಹಾದ್ಭುತಮ್|
ದ್ವಿಚತ್ವಾರಿಂಶದಧ್ಯಾಯಾಃ ಪರ್ವೈತದಭಿಸಂಖ್ಯಯಾ ॥226॥
ಸಹಸ್ರಮೇಕಂ ಶ್ಲೋಕಾನಾಂ ನವಶ್ಲೋಕಶತಾನಿ ಚ |
ಷಡೇವ ಚ ತಥಾ ಶ್ಲೋಕಾಃ ಸಂಖ್ಯಾತಾಸ್ತತ್ತ್ವದರ್ಶಿನಾ ॥227॥
ಈ ಅದ್ಭುತವಾದ ಪರ್ವಕ್ಕೆ ಆಶ್ರಮವಾಸಪರ್ವವೆಂದು ಹೆಸರು. ಈ ಪರ್ವದಲ್ಲಿ ನಲವತ್ತೆರಡು ಅಧ್ಯಾಯಗಳಿವೆ. ತತ್ವದರ್ಶಿಗಳಾದ ವ್ಯಾಸರು ಇಲ್ಲಿ ಸಾವಿರದ ಒಂಬೈನೂರ ಆರು ಶ್ಲೋಕಗಳನ್ನು ರಚಿಸಿದ್ದಾರೆ.
ಅತಃ ಪರಂ ನಿಬೋಧೇದಂ ಮೌಸಲಂ ಭೃಶದಾರುಣಮ್ |
ಯತ್ರ ತೇ ಪುರುಷವ್ಯಾಘ್ರಾಃ ಶಸ್ತ್ರಸ್ಪರ್ಶಹತಾ ಯುಧಿ ॥228॥

ಬ್ರಹ್ಮದಂಡವಿನಿಷ್ಪಿಷ್ಟಾಃ ಸಮೀಪೇ ಲವಣಾಂಭಸಃ |
ಆಪಾನೇ ಪಾನಗಲಿತಾ ದೈವೇನಾಭಿಪ್ರಚೋದಿತಾಃ |
ಏರಕಾರೂಪಿಭಿಃ ಶಸ್ತ್ರೈರ್ನಿಜಘ್ನುರಿತರೇತರಮ್ ॥229॥
ಅಲ್ಲಿಂದ ಮುಂದಕ್ಕೆ ದಾರುಣವಾದ ಮೌಸಲಪರ್ವವೆಂದು ತಿಳಿ. ಅಲ್ಲಿ ಪುರುಷವ್ಯಾಘ್ರರಾದ ಯಾದವರು ಲವಣಸಮುದ್ರದ ಸಮೀಪದಲ್ಲಿ ಬ್ರಾಹ್ಮಣಶಾಪಕ್ಕೆ ಒಳಗಾದವರಾಗಿ ಮದ್ಯಪಾನಮಾಡಿ ದುರ್ಬುದ್ಧಿಯನ್ನು ಹೊಂದಿದವರಾಗಿ ದೈವಪ್ರಚೋದಿತರಾಗಿ ಒಬ್ಬರನ್ನೊಬ್ಬರು ಶಸ್ತ್ರಗಳಂತಿದ್ದ (ಜೊಂಡಿನಿಂದ) ಕ್ರೂರವಾದ ತೃಣವಿಶೇಷದಿಂದ ಹೊಡೆದಾಡಿ ಕೊಂದರು.
ಯತ್ರ ಸರ್ವಕ್ಷಯಂ ಕೃತ್ವಾ ತಾವುಭೌ ರಾಮಕೇಶವೌ |
ನಾತಿಚಕ್ರಾಮತುಃ ಕಾಲಂ ಪ್ರಾಪ್ತಂ ಸರ್ವಹರಂ ಪರಮ್ ॥230॥
ಅಲ್ಲಿ ಸರ್ವಸಂಹಾರವನ್ನು ಮಾಡಿದ ರಾಮಕೃಷ್ಣರಿಬ್ಬರೂ ಸರ್ವಸಂಹಾರಕವಾದ, ಶ್ರೇಷ್ಠವಾದ ಕಾಲವನ್ನು ತಾವೂ ಮೀರಲಿಲ್ಲ.
ಯತ್ರಾರ್ಜುನೋ ದ್ವಾರವತೀಮೇತ್ಯ ಕೃಷ್ಣಾದ್ವಿನಾಕೃತಾಮ್ |
ದೃಷ್ಟ್ವಾ ವಿಷಾದಮಗಮತ್ ಪರಾಂ ಚಾರ್ತಿಂ ನರರ್ಷಭಃ ॥231॥
ನರಶ್ರೇಷ್ಠನಾದ ಅರ್ಜುನನು ಕೃಷ್ಣರಹಿತವಾದ ದ್ವಾರಕೆಗೆ ಬಂದು, ಅದನ್ನು ನೋಡಿ ಬಹಳ ದುಃಖವನ್ನೂ ಮತ್ತು ವಿಷಾದವನ್ನೂ ಹೊಂದಿದನು.
ಅಸತ್ಕೃತ್ಯ ಯದುಶ್ರೇಷ್ಠಂ ಮಾತುಲಂ ಶೌರಿಮಾತ್ಮನಃ |
ದದರ್ಶ ಯದುವೀರಾಣಾಮಾಪಾನೇ ವೈಶಸಂ ಮಹತ್ ॥232॥
ತನ್ನ ಸೋದರಮಾವನಾದ, ಯದುಶ್ರೇಷ್ಠನಾದ ವಸುದೇವನ ಮಾತನ್ನು ತಿರಸ್ಕರಿಸಿ ಮಧ್ಯಪಾನವನ್ನು ಮಾಡಿ ಯದುವೀರರಿಗೆ ಉಂಟಾದ ದೊಡ್ಡ ಕದನವನ್ನು ನೋಡಿದನು.
ಶರೀರಂ ವಾಸುದೇವಸ್ಯ ರಾಮಸ್ಯ ಚ ಮಹಾತ್ಮನಃ |
ಸಂಸ್ಕಾರಂ ಲಂಭಯಾಮಾಸ ವೃಷ್ಣೀನಾಂ ಚ ಪ್ರಧಾನತಃ ॥233॥
ಅರ್ಜುನನು ಮಹಾತ್ಮರಾದ ಬಲರಾಮ ಮತ್ತು ಕೃಷ್ಣರ ಶರೀರಕ್ಕೂ ಮತ್ತು ಪ್ರಧಾನರಾದ ವೃಷ್ಣಿಗಳ ಶರೀರಕ್ಕೂ ಅಂತ್ಯಸಂಸ್ಕಾರವನ್ನು ನೆರವೇರಿಸಿದನು. (ದುಷ್ಟಜನರ ಮೋಹಕ್ಕೋಸ್ಕರ ಕೃಷ್ಣನು ಪ್ರಾಕೃತ ಶರೀರವನ್ನು ತೋರಿದ, ಅದನ್ನು ದಹಿಸಿದ್ದೇ ಹೊರತು ಭಗವಂತನ ವಿಶ್ವಂಭರ ರೂಪವನ್ನಲ್ಲ. ಒಂದು ವೇಳೆ ಭಗವಂತನ ವಿಶ್ವಂಭರ ರೂಪವನ್ನು ಸುಟ್ಟರೆ ಆಗ ಆ ದೇಹದಲ್ಲಿರುವ ವಿಶ್ವದ ನಾಶವೂ ಆಗಬೇಕಿತ್ತು).
ಸವೃದ್ಧಬಾಲಮಾದಾಯ ದ್ವಾರವತ್ಯಾಸ್ತತೋ ಜನಮ್ |
ದದರ್ಶಾಪದಿ ಕಷ್ಟಾಯಾಂ ಗಾಂಡೀವಸ್ಯ ಪರಾಭವಮ್ ॥234॥
ದ್ವಾರಕೆಯಲ್ಲಿದ್ದ ವೃದ್ಧರನ್ನೂ, ಬಾಲರನ್ನೂ ಕರೆದುಕೊಂಡು ಬರುತ್ತಾ ಮಾರ್ಗದಲ್ಲಿ ಕೆಟ್ಟ ಆಪತ್ತಿಗೆ ಒಳಗಾದವನಾಗಿ ಗಾಂಡೀವದ ಪರಾಭವವನ್ನು ನೋಡಿದನು.
ಸರ್ವೇಷಾಂ ಚೈವ ದಿವ್ಯಾನಾಮಸ್ತ್ರಾಣಾಮಪ್ರಸನ್ನತಾಮ್ |
ನಾಶಂ ವೃಷ್ಣಿಕಳತ್ರಾಣಾಂ ಪ್ರಭಾವಾನಾಮನಿತ್ಯತಾಮ್ ॥235॥
ಎಲ್ಲಾ ದಿವ್ಯಾಸ್ತ್ರಗಳ ಅಪ್ರಸನ್ನತೆಯನ್ನೂ, ವೃಷ್ಣಿಪತ್ನಿಯರ ನಾಶವನ್ನೂ, ಶಕ್ತಿಸಾಮರ್ಥ್ಯಗಳ ಅನಿತ್ಯತೆಯನ್ನೂ ನೋಡಿ ತಿಳಿದನು.
ದೃಷ್ಟ್ವಾ ನಿರ್ವೇದಮಾಪನ್ನೋ ವ್ಯಾಸವಾಕ್ಯಪ್ರಚೋದಿತಃ |
ಧರ್ಮರಾಜಂ ಸಮಾಸಾದ್ಯ ಸಂನ್ಯಾಸಂ ಸಮಚೋದಯತ್ ॥236॥
ಇತೀದಂ ಮೌಸಲಂ ಪರ್ವ ಷೋಡಶಂ ಪರಿಕೀರ್ತಿತಮ್ |
ಅಷ್ಟಾಧ್ಯಾಯಾಃ ಪ್ರಸಂಖ್ಯಾತಾಃ ಶ್ಲೋಕಾಗ್ರಂ ಚ ಶತತ್ರಯಮ್ ॥237॥
ನೋಡಿ ವೈರಾಗ್ಯವನ್ನು ಹೊಂದಿದ ಅರ್ಜುನನು ವೇದವ್ಯಾಸರ ವಾಕ್ಯದಿಂದ ಪ್ರೇರಿತನಾಗಿ ಧರ್ಮರಾಜನನ್ನು ಸಮೀಪಿಸಿ ಭೂಮಿಯನ್ನು ತ್ಯಾಗಮಾಡಲು ಒತ್ತಾಯಿಸಿದನು. ಇದು ಹದಿನಾರನೆಯ ಮೌಸಲಪರ್ವ. ಈ ಪರ್ವದಲ್ಲಿ ಎಂಟು ಅಧ್ಯಾಯಗಳೂ ಮತ್ತು ಮುನ್ನೂರು ಶ್ಲೋಕಗಳೂ ಇವೆ.
ಮಹಾಪ್ರಸ್ಥಾನಿಕಂ ತಸ್ಮಾದೂರ್ಧ್ವಂ ಸಪ್ತದಶಂ ಸ್ಮೃತಮ್ |
ಯತ್ರ ರಾಜ್ಯಂ ಪರಿತ್ಯಜ್ಯ ಪಾಂಡವಾಃ ಪುರುಷರ್ಷಭಾಃ |
ದ್ರೌಪದ್ಯಾ ಸಹಿತಾ ದೇವ್ಯಾ ಸಿದ್ಧಿಂ ಪರಮಿಕಾಂ ಗತಾಃ ॥238॥
ಅಲ್ಲಿಂದ ಮುಂದಕ್ಕೆ ಇರುವ ಹದಿನೇಳನೆಯ ಪರ್ವವನ್ನು ಮಹಾಪ್ರಸ್ಥಾನಿಕ ಪರ್ವವೆಂದು ಹೇಳುತ್ತಾರೆ. ಅದರಲ್ಲಿ ಪುರುಷಶ್ರೇಷ್ಠರಾದ ಪಾಂಡವರು ರಾಜ್ಯವನ್ನು ಪರಿತ್ಯಾಗಮಾಡಿ ದ್ರೌಪದಿಯ ಜೊತೆಯಲ್ಲಿ ಪರಮಸಿದ್ಧಿಯನ್ನು ಪಡೆಯುತ್ತಾರೆ.
ಅಧ್ಯಾಯಾಶ್ಚ ತ್ರಯಃ ಪ್ರೋಕ್ತಾಃ ಶ್ಲೋಕಾನಾಂ ಚ ತಥಾ ಶತಮ್ |
ವಿಂಶತಿಶ್ಚ ತಥಾ ಶ್ಲೋಕಾಃ ಸಂಖ್ಯಾತಾಸ್ತತ್ತ್ವದರ್ಶಿನಾ ॥239॥
ಈ ಪರ್ವದಲ್ಲಿ ನೂರು ಅಧ್ಯಾಯಗಳು ಹಾಗೂ ಮುನ್ನೂರಿಪ್ಪತ್ತು ಶ್ಲೋಕಗಳು ತತ್ವದರ್ಶಿಗಳಾದ ವ್ಯಾಸರಿಂದ ರಚಿಸಲ್ಪಟ್ಟಿವೆ.
ಸ್ವರ್ಗಪರ್ವ ತತಃ ಪ್ರೋಕ್ತಂ ದಿವ್ಯಂ ಯತ್ತದಮಾನುಷಮ್ |
ಅಧ್ಯಾಯಾಃ ಪಂಚ ಸಂಖ್ಯಾತಾಃ ಪರ್ವೈತದಭಿಸಂಖ್ಯಯಾ |
ಶ್ಲೋಕಾನಾಂ ದ್ವೇ ಶತೇ ಚೈವ ಪ್ರಸಂಖ್ಯಾತೇ ತಪೋಧನಾಃ ॥240॥
ಅನಂತರ, ದಿವ್ಯವಾದ ಅಮಾನುಷವಾದ ಸ್ವರ್ಗಪರ್ವವಿದೆ. ಎಲೈ ತಪೋಧನರೇ, ಈ ಪರ್ವದಲ್ಲಿ ಐದು ಅಧ್ಯಾಯಗಳು ಮತ್ತು ಇನ್ನೂರು ಶ್ಲೋಕಗಳೂ ಇವೆ.

ಅಷ್ಟಾದಶೈವಮೇತಾನಿ ಪರ್ವಾಣ್ಯುಕ್ತಾನ್ಯಶೇಷತಃ |
ಖಿಲೇಷು ಹರಿವಂಶಶ್ಚ ಭವಿಷ್ಯಚ್ಚೈವ ಕೀರ್ತಿತಮ್ ||241||
ಹೀಗೆ ಹದಿನೆಂಟು ಪರ್ವಗಳನ್ನು ಸಮಗ್ರವಾಗಿ ಹೇಳಿದ್ದೇನೆ. ಖಿಲಗಳಲ್ಲಿ ಹರಿವಂಶವೂ ಮತ್ತು ಭವಿಷ್ಯತ್ಪರ್ವವೂ ಸೇರುತ್ತವೆ.
ಏತತ್ ಸಖಿಲಮಾಖ್ಯಾತಂ ಭಾರತಂ ಪರ್ವ ಸಂಗ್ರಹಾತ್ |
ಅಷ್ಟಾದಶ ಸಮಾಜಗ್ಮುರಕ್ಷೋಹಿಣ್ಯೋ ಯುಯುತ್ಸಯಾ |
ತನ್ಮಹದ್ ದಾರುಣಂ ಯುದ್ಧಮಹಾನ್ಯಷ್ಟಾದಶಾಭವತ್ ||242||
ಹೀಗೆ ಖಿಲವನ್ನೂ ಸೇರಿಸಿ ಭಾರತದ ಪರ್ವಸಂಗ್ರಹವು ನನ್ನಿಂದ ಹೇಳಲ್ಪಟ್ಟಿದೆ. ಯುದ್ಧವನ್ನು ಮಾಡಲು ಹದಿನೆಂಟು ಅಕ್ಷೋಹಿಣೀ ಸೈನ್ಯವು ಒಂದುಗೂಡಿತು. ಆ ದಾರುಣವಾದ ಮಹಾಯುದ್ಧವು ಹದಿನೆಂಟು ದಿವಸಗಳ ಕಾಲ ನಡೆಯಿತು.
ಯೋ ವಿದ್ಯಾಚ್ಚತುರೋ ವೇದಾನ್ ಸಾಂಗೋಪನಿಷದೋ ದ್ವಿಜಃ |
ನ ಚಾಖ್ಯಾನಮಿದಂ ವಿದ್ಯಾನ್ನೈವ ಸ ಸ್ಯಾದ್ ವಿಚಕ್ಷಣಃ ||243||
ಯಾವ ಬ್ರಾಹ್ಮಣನು ನಾಲ್ಕು ವೇದಗಳನ್ನು, ವೇದಾಂಗಗಳು ಮತ್ತು ಉಪನಿಷತ್ತುಗಳ ಜೊತೆಯಲ್ಲಿ ತಿಳಿದಿದ್ದರೂ ಈ ಭಾರತಾಖ್ಯಾನವನ್ನು ತಿಳಿಯದಿದ್ದರೆ ಅವನು ವಿದ್ವಾಂಸನೇ ಆಗುವುದಿಲ್ಲ.
ಶ್ರುತ್ವಾ ತ್ವಿದಮುಪಾಖ್ಯಾನಂ ಶ್ರಾವ್ಯಮನ್ಯನ್ನ ರೋಚತೇ |
ಪುಂಸ್ಕೋಕಿಲರುತಂ ಶ್ರುತ್ವಾ ರೂಕ್ಷಾ ಧ್ವಾಂಕ್ಷಸ್ಯ ವಾಗಿವ ||244||
ಪುಂಸ್ಕೋಕಿಲಸ್ವರವನ್ನು ಕೇಳಿ ಕಾಗೆಯ ಒರಟಾದ ಧ್ವನಿಯು ಹೇಗೆ ರುಚಿಸುವುದಿಲ್ಲವೋ ಹಾಗೆ ಈ ಮಹಾಭಾರತ ಆಖ್ಯಾನವನ್ನು ಕೇಳಿದ ಮೇಲೆ ಬೇರೆ ಯಾವುದನ್ನೂ ಕೇಳಲು ರುಚಿಸುವುದಲ್ಲ.
ಇತಿಹಾಸೋತ್ತಮಾದಸ್ಮಾಜ್ಜಾಯಂತೇ ಕವಿಬುದ್ಧಯಃ |
ಪಂಚಭ್ಯ ಇವ ಭೂತೇಭ್ಯೋ ಲೋಕಾಃ ಸಂವಿಧಯಸ್ತ್ರಯಃ ||245||
ಪಂಚಭೂತಗಳಿಂದ ಎಲ್ಲ ಲೋಕಗಳ ನಿರ್ಮಾಣವಾದಂತೆ ಎಲ್ಲ ಕವಿಗಳ ಬುದ್ಧಿಗಳೂ ಈ ಶ್ರೇಷ್ಠವಾದ ಇತಿಹಾಸದಿಂದ ಉಂಟಾಗುತ್ತವೆ.
ಅಸ್ಯಾಖ್ಯಾನಸ್ಯ ವಿಷಯೇ ಪುರಾಣಂ ವರ್ತತೇ ದ್ವಿಜಾಃ |
ಅಂತರಿಕ್ಷಸ್ಯ ವಿಷಯೇ ಪ್ರಜಾ ಇವ ಚತುರ್ವಿಧಾಃ ||246||
ಎಲೈ ಬ್ರಾಹ್ಮಣರೇ, ಅಂತರಿಕ್ಷದಲ್ಲಿ ಚಲಿಸುವ ಸೂರ್ಯನ ವಿಷಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವಿಧವಾದ ಪ್ರಜೆಗಳು ಗೌರವವನ್ನು ಹೊಂದಿರುವಂತೆ ಎಲ್ಲ ಪುರಾಣಗಳೂ ಈ ಭಾರತದ ಬಗ್ಗೆ ಗೌರವವನ್ನು ಸೂಚಿಸುತ್ತವೆ.
ಕ್ರಿಯಾಗುಣಾನಾಂ ಸರ್ವೇಷಾಮಿದಮಾಖ್ಯಾನಮಾಶ್ರಯಃ |
ಇಂದ್ರಿಯಾಣಾಂ ಚ ಸರ್ವೇಷಾಂ ಚಿತ್ರೈವ ಮನಸಃ ಕ್ರಿಯಾಃ ||247||
ಎಲ್ಲ ಇಂದ್ರಿಯಗಳ ವಿಚಿತ್ರಕ್ರಿಯೆಗಳಿಗೆ ಮನಸ್ಸು ಆಧಾರವಾದಂತೆ, ಗ್ರಂಥರಚನೆಯಲ್ಲಿರಬೇಕಾದ ಎಲ್ಲಾ ಗುಣಗಳಿಗೆ ಈ ಭಾರತದ ಆಖ್ಯಾನವು ಆಶ್ರಯವಾಗಿದೆ.
ಅನಾಶ್ರಿತ್ಯೈತದಾಖ್ಯಾನಂ ಕಥಾ ಭುವಿ ನ ವಿದ್ಯತೇ |
ಆಹಾರಮನಪಾಶ್ರಿತ್ಯ ಶರೀರಸ್ಯೇವ ಧಾರಣಮ್ ||248||
ಇದಂ ಸರ್ವೈಃ ಕವಿವರೈರಾಖ್ಯಾನಮುಪಜೀವ್ಯತೇ |
ಉದಯಪ್ರೇಪ್ಸುಭಿರ್ಭೃತ್ಯೈರಭಿಜಾತ ಇವೇಶ್ವರಃ ||249||
ಆಹಾರವನ್ನು ಆಶ್ರಯಿಸದೆ ಶರೀರವು ಹೇಗೆ ಉಳಿಯುವುದಿಲ್ಲವೋ ಹಾಗೆ ಈ ಭಾರತವನ್ನು ಉಪಜೀವಿಸದೆ ಭೂಮಿಯಲ್ಲಿ ಯಾವ ಕಥೆಯೂ ಇರುವುದಿಲ್ಲ. ಶ್ರೇಯಸ್ಕಾಮಿಗಳಾದ ಜನರು ಮತ್ಸ್ಯಕೂರ್ಮಾದಿ ಅವತಾರಗಳನ್ನು ಧರಿಸಿದ ನಾರಾಯಣನನ್ನು ಉಪಜೀವಿಸುವಂತೆ ಎಲ್ಲ ಶ್ರೇಷ್ಠ ಕವಿಗಳೂ ಈ ಭಾರತವನ್ನು ಉಪಜೀವಿಸುತ್ತಾರೆ.
ದ್ವೈಪಾಯನೌಷ್ಠಪುಟನಿಃಸೃತಮಪ್ರಮೇಯಂ
ಪುಣ್ಯಂ ಪವಿತ್ರಮಥ ಪಾಪಹರಂ ಶಿವಂ ಚ |
ಯೋ ಭಾರತಂ ಸಮಾಧಿಗಚ್ಛತಿ ವಾಚ್ಯಮಾನಂ
ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ ||250||
ಯಾವನು ವೇದವ್ಯಾಸರ ಓಷ್ಠಪುಟಗಳಿಂದ ಹೊರಗೆ ಹರಿದುಬಂದ ಪುಣ್ಯಪ್ರದವೂ, ಪವಿತ್ರವೂ, ಪಾಪಹರವೂ, ಮಂಗಳಪ್ರದವೂ ಆದ ಈ ಭಾರತದ ಕಥೆಯನ್ನು ನಿರೂಪಿಸುವುದನ್ನು ಕೇಳುತ್ತಾನೆಯೋ ಅವನಿಗೆ ಪುಷ್ಕರತೀರ್ಥದಜಲದ ಸ್ನಾನದಿಂದ ಆಗಬೇಕಾದ ಪ್ರಯೋಜನವೇನು?
ಆಖ್ಯಾನಂ ತದಿದಮನುತ್ತಮಂ ಮಹಾರ್ಥಂ
ವಿನ್ಯಸ್ತಂ ಮಹದಿಹ ಪರ್ವಸಂಗ್ರಹೇಣ |
ಶ್ರುತ್ವಾದೌ ಭವತಿ ನೃಣಾಂ ಸುಖಾವಗಾಹೋ
ವಿಸ್ತೀರ್ಣೇ ಲವಣಜಲೇ ಯಥಾ ಪ್ಲವೇನ ||251||
ಅನೇಕ ಅರ್ಥಗಳಿಂದ ಕೂಡಿದ ಶ್ರೇಷ್ಠವಾದ ಈ ಪರ್ವಸಂಗ್ರಹಪರ್ವವು ಇಲ್ಲಿ ಅನುಕ್ರಮಣಿಕಾಪರ್ವದ ನಂತರ ವಿನ್ಯಸ್ತವಾಗಿದೆ. ಈ ಪರ್ವಸಂಗ್ರಹಪರ್ವವನ್ನು ಮೊದಲು ಕೇಳಿದ ಅಧಿಕಾರಿಗಳಿಗೆ ಲವಣಸಮುದ್ರದಲ್ಲಿ ನೌಕೆಯಿಂದ ಪ್ರಯಾಣಮಾಡುವುದು ಎಷ್ಟು ಸುಲಭವಾಗುತ್ತದೆಯೋ ಹಾಗೆ ಮುಂದಿನ ಭಾರತದ ಕಥೆಯಲ್ಲಿ ಅವಗಾಹನೆ ಮಾಡುವುದು ಅಷ್ಟೇ ಸುಲಭವಾಗುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಮಾದಿಪರ್ವಣಿ ಪರ್ವಸಂಗ್ರಹೋ ನಾಮ ದ್ವಿತೀಯೋऽಧ್ಯಾಯಃ ||

॥ ಪರ್ವಸಂಗ್ರಹಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.

ಇಲ್ಲಿಗೆ ಪರ್ವಸಂಗ್ರಹಪರ್ವವು ಮುಗಿಯಿತು.
*****
3. ಪೌಷ್ಯಪರ್ವ
ಮೂರನೆಯ ಅಧ್ಯಾಯ
(ಜನಮೇಜಯನಿಗೆ ದೇವಶುನಿಯಾದ ಸರಮೆಯಿಂದ ಶಾಪ, ಶಾಪಫಲನಿವಾರಣೆಗಾಗಿ ಅವನಿಂದ ಸೋಮಶ್ರವ ಎಂಬ ಪುರೋಹಿತನ ವರಣ, ಸರ್ಪಯಾಗಕ್ಕೆ ಕಾರಣವನ್ನು ಹೇಳುತ್ತಾ ಪ್ರಸಂಗದಿಂದ ಧೌಮ್ಯಶಿಷ್ಯರಾದ ಆರುಣಿ, ಉಪಮನ್ಯು ಮತ್ತು ಬೈದರ ಚರಿತ್ರೆ, ಬೈದರ ಶಿಷ್ಯರಾದ ಉದಂಕರ ಚರಿತ್ರೆ, ಉದಂಕರಿಗೆ ಸರ್ಪಗಳ ಮೇಲೆ ದ್ವೇಷ ಮತ್ತು ಅವರಿಂದ ಸರ್ಪಯಾಗವನ್ನು ಮಾಡುವಂತೆ ಜನಮೇಜಯನಿಗೆ ಒತ್ತಾಯ)
ಸೂತಃ
ಜನಮೇಜಯಃ ಪಾರಿಕ್ಷಿತಃ ಸಹ ಭ್ರಾತೃಭಿಃ ಕುರುಕ್ಷೇತ್ರೇ
ದೀರ್ಘಸತ್ರಮಾಸ್ತೇ ಸ್ಮ | ತಸ್ಯ ಭ್ರಾತರಸ್ತ್ರಯಃ ಆಸನ್ |
ಶ್ರುತಸೇನ ಉಗ್ರಸೇನೋ ಭೀಮಸೇನ ಇತಿ ॥
ತೇಷು ತತ್ಸತ್ರಮುಪಾಸೀನೇಷು ತತ್ರಾಭ್ಯಾಗಚ್ಛತ್ಸಾರಮೇಯಃ ॥1॥
ಪರೀಕ್ಷಿತನ ಮಗನಾದ ಜನಮೇಜಯನು ತನ್ನ ತಮ್ಮಂದಿರಿಂದ ಸಹಿತನಾಗಿ ಕುರುಕ್ಷೇತ್ರದಲ್ಲಿ ದೀರ್ಘಸತ್ರವನ್ನು ಮಾಡಿದನು. ಅವನಿಗೆ ಮೂರು ಜನ ತಮ್ಮಂದಿರಿದ್ದರು. ಶ್ರುತಸೇನ, ಉಗ್ರಸೇನ, ಭೀಮಸೇನ ಎಂದು ಅವರ ಹೆಸರು. ಅವರು ಅಲ್ಲಿ ಕುಳಿತಿರಲು ದೇವಶುನಿಯಾದ ಸರಮೆಯ ಮಗನಾದ ಒಂದು ಶ್ವಾನವು ಅಲ್ಲಿಗೆ ಬಂದಿತು.
ಸ ಜನಮೇಜಯಸ್ಯ ಭ್ರಾತೃಭಿರ್ಹತೋ ರೋರೂಯಮಾಣೋ
ಮಾತುಃ ಸಮೀಪಮಗಮತ್ ॥2॥
ಆ ಶ್ವಾನವು ಜನಮೇಜಯನ ತಮ್ಮಂದಿರಿಂದ ಹೊಡೆಯಲ್ಪಟ್ಟು ರೋದನವನ್ನು ಮಾಡುತ್ತಾ ತಾಯಿಯ ಸಮೀಪಕ್ಕೆ ಹೋಯಿತು.
ತಂ ಮಾತಾ ರೋರೂಯಮಾಣಮುವಾಚ | ಕಿಂ ರೋದಿಷಿ, ಕೇನಾಸ್ಯಭಿಹತ ಇತಿ ॥3॥
ಅತಿಶಯವಾಗಿ ಅಳುತ್ತಿದ್ದ ಆ ಶ್ವಾನವನ್ನು ಕುರಿತು ತಾಯಿಯು ಏತಕ್ಕೆ ಅಳುತ್ತಿದ್ದೀಯೆ ಯಾರು ನಿನಗೆ ಹೊಡೆದರು ಎಂದು ಕೇಳಿತು
ಸ ಏವಮುಕ್ತೋ ಮಾತರಂ ಪ್ರತ್ಯುವಾಚ |
ಜನಮೇಜಯಸ್ಯ ಭ್ರಾತೃಭಿರ್ಹತೋಽಸ್ಮೀತಿ ॥4॥
ಹೀಗೆ ಕೇಳಲ್ಪಟ್ಟ ಸಾರಮೇಯವು ಜನಮೇಜಯನ ತಮ್ಮಂದಿರು ಹೊಡೆದರು ಎಂದು ತಾಯಿಗೆ ಹೇಳಿತು.
ತಂ ಮಾತಾ ಪ್ರತ್ಯವೋಚತ್ |
ವ್ಯಕ್ತಂ ತ್ವಯಾ ತತ್ರಾಪರಾದ್ಧಂ ಯೇನಾಸ್ಯಭಿಹತ ಇತಿ ॥5॥
ಅದನ್ನು ಕುರಿತು ತಾಯಿಯು ನೀನು ಖಂಡಿತವಾಗಿ ಅಲ್ಲಿ ಏನೋ ಅಪರಾಧವನ್ನು ಮಾಡಿದ್ದೀಯೆ ಅದರಿಂದ ಹೊಡೆದಿದ್ದಾರೆ ಎಂದು ಹೇಳಿತು.
ಸ ತಾಂ ಪುನರುವಾಚ | ನಾಪರಾದ್ಧಮಿತಿ ಕಿಂಚಿತ್,
ನಾವೇಕ್ಷೇ ಹವೀಂಷಿ, ನಾವಲೀಢೇಽಕ್ಷಮಿತಿ ॥6॥
ಸಾರಮೇಯವು ಪುನಃ ತಾಯಿಯನ್ನು ಕುರಿತು ನಾನು ಏನೂ ಅಪರಾಧವನ್ನು ಮಾಡಲಿಲ್ಲ, ಹವಿಸ್ಸನ್ನು ನೋಡಲಿಲ್ಲ,
ಯಾವುದನ್ನೂ (ಅಕ್ಷವನ್ನು) ನೆಕ್ಕಲಿಲ್ಲ ಎಂದು ಹೇಳಿತು.
ತಸ್ಯ ಮಾತಾ ಸರಮಾ ಪುತ್ರದುಃಖಾರ್ತಾ ತತ್ಸತ್ರಮಗಚ್ಛತ್ |
ಯತ್ರ ಜನಮೇಜಯಃ ಸಹ ಭ್ರಾತೃಭಿರ್ದೀರ್ಘಸತ್ರಮುಪಾಸ್ತೇ ಸ್ಮ ॥7॥
ಅದರ ತಾಯಿಯಾದ ಸರಮೆಯು ಮಗನ ದುಃಖದಿಂದ ಆರ್ತಳಾಗಿ ಜನಮೇಜಯನು ತಮ್ಮಂದಿರ ಜೊತೆಯಲ್ಲಿ ದೀರ್ಘಸತ್ರವನ್ನು ಮಾಡುತ್ತಿದ್ದ ಸ್ಥಳಕ್ಕೆ ಬಂದಿತು.
ಸ ತಯಾ ಕ್ರುದ್ಧಯಾ ತತ್ರೋಕ್ತಃ ಅಯಂ ಮೇ ಪುತ್ರೋ ನ ಕಿಂಚಿನ್ನಾಪರಾಧ್ಯತಿ ಕಿಮರ್ಥಮಭಿಹತ ಇತಿ ॥8॥
ಅದು ಅಲ್ಲಿ ಕೋಪದಿಂದ ಜನಮೇಜಯನನ್ನು ಕುರಿತು ಈ ನನ್ನ ಮಗನು ಯಾವ ಅಪರಾಧವನ್ನೂ ಮಾಡಿಲ್ಲ. ಏತಕ್ಕಾಗಿ ಹೊಡೆದಿರಿ ಎಂದು ಕೇಳಿತು.
ನ ಕಿಂಚಿದುಕ್ತವಂತಸ್ತೇ | ಸಾ ತಾನ್ ಪುನರುವಾಚ | ಯಸ್ಮಾದಯಮಭಿಹತೋ ನಾಪರಾಧೀ,
ತಸ್ಮಾದದೃಷ್ಟಂ ತ್ವಾಂ ಭಯಮಾಗಮಿಷ್ಯತೀತಿ ॥9॥
ಅವರು ಏನೂ ಮಾತನಾಡಲಿಲ್ಲ, ಸರಮೆಯು ಪುನಃ ಅವರನ್ನು ಕುರಿತು ನಿರಪರಾಧಿಯಾದ ನನ್ನ ಮಗನನ್ನು ಹೊಡೆದ ಕಾರಣದಿಂದ ನಿಮಗೆ ಅನಿರೀಕ್ಷಿತವಾದ ಭಯವು ಉಂಟಾಗುವುದು ಎಂದು ಹೇಳಿತು.
ಜನಮೇಜಯ ಏವಮುಕ್ತೋ ದೇವಶುನ್ಯಾ ಸರಮಯಾ
ದೃಢಂ ಸಂಭ್ರಾಂತೋ ವಿಷಣ್ಣಶ್ಚಾಸೀತ್ ॥10॥
ದೇವಶುನಿಯಾದ ಸರಮೆಯಿಂದ ಹೀಗೆ ಹೇಳಲಟ್ಟ ಜನಮೇಜಯನು ದಿಗ್ಭ್ರಾಂತನಾಗಿ ವಿಷಾದವನ್ನು ಹೊಂದಿದನು.
ಸ ತಸ್ಮಿನ್ ಸತ್ರೇ ಸಮಾಪ್ತೇ ಹಸ್ತಿನಪುರಮಭ್ಯೇತ್ಯ ಪುರೋಹಿತ-

ಮನುರೂಪಮನ್ವಿಚ್ಛಮಾನಃ ಪರಂ ಯತ್ನಮಕರೋತ್,
ಯೋ ಮೇ ಪಾಪಕೃತ್ಯಾಂ ನಾಶಯೇದಿತಿ ॥11॥
ಅವನು ಆ ಸತ್ರವು ಸಮಾಪ್ತವಾಗುತ್ತಿರಲು ಹಸ್ತಿನಪುರಕ್ಕೆ ಹಿಂದಿರುಗಿ ಯಾರು ನನ್ನ ಪಾಪಕೃತ್ಯವನ್ನು ಪರಿಹಾರ ಮಾಡುತ್ತಾರೆ ಎಂದು ಯೋಚಿಸುತ್ತಾ ಅನುರೂಪವಾದ ಪುರೋಹಿತನನ್ನು ಹುಡುಕುವಲ್ಲಿ ಬಹಳ ಪ್ರಯತ್ನ ಮಾಡಿದನು.
ಸ ಕದಾಚಿನ್ಮೃಗಯಾಂ ಗತಃ ಪಾರಿಕ್ಷಿತೋ ಜನಮೇಜಯಃ ಕಸ್ಮಿಂಶ್ಚ ಸ್ವವಿಷಯೋದ್ದೇಶೇ ಆಶ್ರಮಮಪಶ್ಯತ್ ॥12॥
ಒಮ್ಮೆ ಬೇಟೆಗೆ ಹೋದ ಪರೀಕ್ಷಿತನ ಮಗನಾದ ಜನಮೇಜಯನು ತನ್ನ ರಾಜ್ಯದ ಯಾವುದೋ ಒಂದು ಪ್ರದೇಶದಲ್ಲಿ ಒಂದು ಆಶ್ರಮವನ್ನು ನೋಡಿದನು.
ತತ್ರ ಕಶ್ಚಿದೃಷಿರಾಸಾಂಚಕಾರ ಶ್ರುತಶ್ರವಾ ನಾಮ | ತಸ್ಯಾಭಿಮತಃ ಪುತ್ರ ಉಪಾಸ್ತೇ ಸೋಮಶ್ರವಾ ನಾಮ ತಪೋಭಿಃ ಸಂವೃತಃ ॥13॥
ಅಲ್ಲಿ ಶ್ರುತಶ್ರವ ಎಂಬ ಋಷಿಯು ಕುಳಿತಿದ್ದರು. ಅವರಿಗೆ ಅವರ ಪ್ರೀತಿಪಾತ್ರನಾದ ಸೋಮಶ್ರವ ಎಂಬ ತಪೋಯುಕ್ತನಾದ ಪುತ್ರನಿದ್ದನು.
ತಸ್ಯ ತಂ ಪುತ್ರಮಭಿಗಮ್ಯ ಜನಮೇಜಯಃ
ಪಾರಿಕ್ಷಿತಃ ಪೌರೋಹಿತ್ಯಾಯ ವವ್ರೇ ॥14॥
ಪರೀಕ್ಷಿತನ ಪುತ್ರನಾದ ಜನಮೇಜಯನು ಆ ಋಷಿಪುತ್ರನನ್ನು ಸಮೀಪಿಸಿ ತನಗೆ ಪುರೋಹಿತನಾಗಬೇಕೆಂದು ಬೇಡಿದನು.
ಸ ನಮಸ್ಕೃತ್ಯ ತಮೃಷಿಮುವಾಚ |
ಭಗವನ್ನಯಂ ತವ ಪುತ್ರೋ ಮಮ ಪುರೋಹಿತೋಽಸ್ತ್ವಿತಿ ॥15॥
ಜನಮೇಜಯನು ಆ ಋಷಿಗೆ ನಮಸ್ಕರಿಸಿ ಪೂಜ್ಯರೇ, ತಮ್ಮ ಈ ಪುತ್ರನು ನನ್ನ ಪುರೋಹಿತನಾಗಲಿ ಎಂದು ಕೇಳಿದನು.
ಸ ಏವಮುಕ್ತಃ ಪ್ರತ್ಯುವಾಚ | ಭೋ ಜನಮೇಜಯ ಪುತ್ರೋ ಮಮ ಸರ್ಪ್ಯಾಂ ಜಾತೋ ಮಹಾತಪಸ್ವೀ ಸ್ವಾಧ್ಯಾಯಸಂಪನ್ನೋ ಮತ್ತಪೋವೀರ್ಯಸಂಭೃತೋ ಮಚ್ಛುಕ್ಲಂ ಪಿಬಂತ್ಯಾಃ ಸರ್ಪ್ಯಾಃ ಕುಕ್ಷೌ ಸಂವೃದ್ಧಃ, ಸಮರ್ಥೋಽಯಂ ಭವತಃ ಸರ್ವಾಃ ಕೃತ್ಯಾಃ ಶಮಯಿತುಂ, ಅಂತರೇಣ ಮಹಾದೇವಕೃತ್ಯಾಮ್ | ಅಸ್ಯ ವೈ ವಿದ್ಯತೇ ತ್ವೇಕಮುಪಾಂಶುವ್ರತಮ್ ಯದೇನಂ ಕಂಚಿತ್ ಬ್ರಾಹ್ಮಣಃ ಕಂಚಿದರ್ಥಮಭಿಯಾಚೇತ್ತಸ್ಮೈ ತದ್ ದದ್ಯಾದಯಮ್ |
ತಂ ಯದೇನಂ ತಸ್ಮಾತ್ ಸಹಸಿ ತತೋ ನಯಸ್ವೈನಮಿತಿ ॥16॥
ಹೀಗೆ ಕೇಳಲ್ಪಟ್ಟ ಋಷಿಗಳು ಹೇಳಿದರು, ಎಲೈ ಜನಮೇಜಯನೇ, ನನ್ನ ಪುತ್ರನು ನನಗೆ ಒಂದು ಸರ್ಪದಲ್ಲಿ ಹುಟ್ಟಿದವನು. ಮಹಾತಪಸ್ವಿಯೂ, ಸ್ವಾಧ್ಯಾಯಸಂಪನ್ನನೂ ನನ್ನ ತಪಸ್ಸು ಮತ್ತು ಸಾಮರ್ಥ್ಯಗಳಿಂದ ಕೂಡಿದವನೂ ಆಗಿದ್ದಾನೆ. ಒಂದು ಹೆಣ್ಣು ಸರ್ಪವು ನನ್ನ ವೀರ್ಯವನ್ನು ಕುಡಿದಾಗ ಇವನು ಅದರ ಹೊಟ್ಟೆಯಲ್ಲಿ ಬೆಳೆದನು. ನಾರಾಯಣ ದ್ರೋಹ ಒಂದು ಕೆಲಸವನ್ನು ಬಿಟ್ಟು ನಿನಗೆ ಬರಬಹುದಾದ ಎಲ್ಲಾ ಆಪತ್ತುಗಳನ್ನೂ ಪರಿಹಾರಮಾಡಲು ಇವನು ಸಮರ್ಥನಾದವನು. ಅವನಿಗೆ ಒಂದು ರಹಸ್ಯವಾದ ವ್ರತವಿದೆ. ಯಾವನಾದರೂ ಬ್ರಾಹ್ಮಣನು ಅವನನ್ನು ಏನಾದರೂ ಬೇಡಿದರೆ ಅವನು ಅದನ್ನು ಕೊಟ್ಟೇಕೊಡುತ್ತಾನೆ. ಈ ಬ್ರಾಹ್ಮಣನ ಅಭೀಷ್ಟದಾನವನ್ನು ನೀನು ಸಹಿಸುವುದಾದರೆ ಇವನನ್ನು ಕರೆದುಕೊಂಡು ಹೋಗು.
ತೇನೈವಮುಕ್ತೋ ಜನಮೇಜಯಸ್ತಂ ಪ್ರತ್ಯುವಾಚ
ಭಗವಂಸ್ತಥಾ ಭವಿಷ್ಯತೀತಿ ॥17॥
ಋಷಿಗಳಿಂದ ಹೀಗೆ ಹೇಳಲ್ಪಟ್ಟ ಜನಮೇಜಯನು ಋಷಿಗಳನ್ನು ಕುರಿತು ಪೂಜ್ಯರೇ ಹಾಗೆಯೇ ಆಗಲಿ ಎಂದು ಹೇಳಿದನು.
ಸ ತಂ ಪುರೋಹಿತಮುಪಾದಾಯೋಪಾವೃತ್ತೋ ಭ್ರಾತೄನುವಾಚ | ಮಯಾಯಂ ವೃತ ಉಪಾಧ್ಯಾಯಃ ಯದಯಂ ಬ್ರೂಯಾತ್ ತತ್ತತ್ ಕಾರ್ಯಮವಿಚಾರಯದ್ಭಿರಿತಿ ॥18॥
ಅವನು ಆ ಪುರೋಹಿತನನ್ನು ಕರೆದುಕೊಂಡು ಹಿಂದಿರುಗಿ ತನ್ನ ತಮ್ಮಂದಿರನ್ನು ಕುರಿತು, ನಾನು ಇವನನ್ನು ಪುರೋಹಿತನಾಗಿ ವರಣಮಾಡಿದ್ದೇನೆ. ಅವನು ಏನು ಹೇಳುತ್ತಾನೆಯೋ ಅದನ್ನು ವಿಚಾರಮಾಡದೆ ನೆರವೇರಿಸಬೇಕು ಎಂದು ಹೇಳಿದನು.
ತೇನೈವಮುಕ್ತಾ ಭ್ರಾತರತ್ರಯಸ್ತಸ್ಯ ತಥಾ ಚಕ್ರುಃ ॥19॥
ಅವನಿಂದ ಹೀಗೆ ಹೇಳಲ್ಪಟ್ಟ ಮೂರು ಜನ ತಮ್ಮಂದಿರು ಅವನ ವಿಷಯದಲ್ಲಿ ಹಾಗೆಯೇ ನಡೆದುಕೊಂಡರು.
ಸ ತಥಾ ಭ್ರಾತೄನ್ ಸಂದಿಶ್ಯ ತಕ್ಷಕಶಿಲಾಮಭಿಪ್ರತಸ್ಥೇ |
ತಂ ಚ ದೇಶಂ ಸ್ವಾಂ ವಶೇ ಸ್ಥಾಪಯಾಮಾಸ ॥20॥
ಜನಮೇಜಯನು ತನ್ನ ತಮ್ಮಂದಿರಿಗೆ ಈ ರೀತಿ ಆದೇಶವನ್ನು ನೀಡಿ ತಕ್ಷಕಶಿಲೆಯ ಮೇಲೆ ದಂಡೆತ್ತಿ ಹೋಗಿ, ಆ ದೇಶವನ್ನು ತನ್ನ ವಶವನ್ನಾಗಿ ಮಾಡಿಕೊಂಡನು.
ಏತಸ್ಮಿನ್ನಂತರೇ ಕಶ್ಚಿದೃಷಿರ್ಧೌಮ್ಯೋ ನಾಮಾಯೋದಃ |
ತಸ್ಯ ಶಿಷ್ಯಾಸ್ತ್ರಯೋ ಬಭೂವುರುಪಮನ್ಯುರಾರುಣಿಪಾಂಚಾಲ್ಯೋ
ಬೈದ ಇತಿ ॥21॥
ಈ ಮಧ್ಯದಲ್ಲಿ ಆಯೋದಧೌಮ್ಯ ಎಂಬ ಒಬ್ಬ ಋಷಿಗಳಿದ್ದರು. ಅವರಿಗೆ ಉಪಮನ್ಯು, ಆರುಣಿಪಾಂಚಾಲ್ಯಮತ್ತು ಬೈದ ಎಂಬ ಮೂವರು ಶಿಷ್ಯರಿದ್ದರು.
ಸ ಏಕಂ ಶಿಷ್ಯಮಾರುಣಿಪಾಂಚಾಲಂ ಪ್ರೇಷಯಾಮಾಸ |
ಗಚ್ಛ ಕೇದಾರಖಂಡಂ ಬಧಾನೇತಿ ॥22॥
ಅವರು ತಮ್ಮ ಶಿಷ್ಯರಲ್ಲಿ ಒಬ್ಬನಾದ ಆರುಣಿಪಾಂಚಾಲನನ್ನು ಕುರಿತು `ಹೋಗಿ ಗದ್ದೆಗೆ ನೀರನ್ನು ಕಟ್ಟು' ಎಂದು ಕಳುಹಿಸಿದರು.
ಸ ಉಪಾಧ್ಯಾಯೇನ ಸಂದಿಷ್ಟ ಆರುಣಿಪಾಂಚಾಲಸ್ತತ್ರ

ಗತ್ವಾ ತತ್ಕೇದಾರಖಂಡಂ ಬದ್ಧುಂ ನಾಶಕ್ನೋತ್ ॥23॥
ಉಪಾಧ್ಯಾಯರಿಂದ ಹೀಗೆ ಹೇಳಲ್ಪಟ್ಟ ಆರುಣಿಪಾಂಚಾಲನು ಗದ್ದೆಯ ಬಳಿಗೆ ಹೋದನು. ಆದರೆ ನೀರನ್ನು ಕಟ್ಟಲು ಸಮರ್ಥನಾಗಲಿಲ್ಲ.
ಸಂಕ್ಲಿಶ್ಯದುಪಾಯಮಪಶ್ಯತ್ | ಭವತ್ವೇವಂ ಕರಿಷ್ಯಾಮೀತಿ | ಸ ತತ್ರ ಸಂವಿವೇಶ ಕೇದಾರಖಂಡೇ ಶಯಾನೇ ತಸ್ಮಿಂಸ್ತದುದಕಂ ತಸ್ಥೌ ॥24॥
ಕ್ಲೇಶವನ್ನು ಪಡುತ್ತಾ ಒಂದು ಉಪಾಯವನ್ನು ಕಂಡು, ಆಗಲಿ ಹೀಗೆಯೇ ಗುರುಸೇವೆಯನ್ನು ಮಾಡುವೆನು ಎಂದು ಆಲೋಚಿಸಿದನು. ಅವನು ಗದ್ದೆಯಲ್ಲಿ ನೀರು ಹೋಗುವ ಕಡೆಯಲ್ಲಿ ಆ ನೀರಿನ ಮಧ್ಯದಲ್ಲಿ ಮಲಗಿಕೊಂಡನು. ಆಗ ನೀರು ನಿಂತಿತು.
ತತಃ ಕದಾಚಿದುಪಾಧ್ಯಾಯಸ್ತಸ್ಮಿನ್ನನಾಗತೇ ಆಯೋದಧೌಮ್ಯಃ ಶಿಷ್ಯಾವಪೃಚ್ಛತ್ | ಕ್ವಾರುಣಿಪಾಂಚಾಲೋ ಗತ ಇತಿ ॥25॥
ಅನಂತರ, ಅವನು ಮನೆಗೆ ಹಿಂದಿರುಗಿ ಬರದಿರಲು ಉಪಾಧ್ಯಾಯರಾದ ಆಯೋದಧೌಮ್ಯರು ಉಳಿದ ಇಬ್ಬರು ಶಿಷ್ಯರನ್ನು ಕುರಿತು ಆರುಣಿಪಾಂಚಾಲನು ಎಲ್ಲಿಗೆ ಹೋಗಿದ್ದಾನೆ ಎಂದು ಕೇಳಿದರು.
ತೌ ಪ್ರತ್ಯೂಚತುಃ | ಭಗವತೈವ ಪ್ರೇಷಿತಃ ಕೇದಾರಖಂಡಂ ಬಧಾನೇತಿ ॥
ಅವರಿಬ್ಬರೂ ಪೂಜ್ಯರೇ, ಗದ್ದೆಗೆ ನೀರನ್ನು ಕಟ್ಟು ಎಂದು ನೀವೇ ಕಳುಹಿಸಿದ್ದೀರಿ ಎಂದು ಉತ್ತರವನ್ನು ಕೊಟ್ಟರು.
ಏವಮುಕ್ತಸ್ತೌ ಶಿಷ್ಯೌ ಪ್ರತ್ಯುವಾಚ |
ತಸ್ಮಾತ್ ಸರ್ವೇ ತತ್ರ ಗಚ್ಛಾಮೋ ಯತ್ರ ಸ ಇತಿ ॥27॥
ಹೀಗೆ ಹೇಳಲ್ಪಟ್ಟ ಆಯೋದಧೌಮ್ಯರು ಆ ಇಬ್ಬರು ಶಿಷ್ಯರನ್ನು ಕುರಿತು ಹಾಗಾದರೆ ಎಲ್ಲರೂ ಅವನು ಇರುವ ಸ್ಥಳಕ್ಕೇ ಹೋಗೋಣ ಎಂದು ಹೇಳಿದರು.
ಸ ಗತ್ವಾ ತಸ್ಯಾಹ್ವಾನಾಯ ಶಬ್ದಂ ಚಕಾರ |
ಭೋ ಆರುಣೇ ಪಾಂಚಾಲ ಕ್ವಾಸಿ ವತ್ಸೈಹೀತಿ ॥28॥
ಅವರು ಹೋಗಿ ಅವನನ್ನು ಕರೆಯಲು ಗಟ್ಟಿಯಾಗಿ ವತ್ಸ ಆರುಣಿಪಾಂಚಾಲನೇ ಎಲ್ಲಿದ್ದೀಯೆ ! ಇಲ್ಲಿ ಬಾ, ಎಂದು ಕಿರುಚಿದರು.
ಸ ತಚ್ಛ್ರುತ್ವಾಽಥಾರುಣಿಪಾಂಚಾಲ ಉಪಾಧ್ಯಾಯವಾಕ್ಯಂ ತಸ್ಮಾತ್ ಕೇದಾರಖಂಡಾತ್ ಸಹಸೋತ್ಥಾಯ ತಮುಪತಸ್ಥೇ | ಪ್ರೋವಾಚ ಚೈನಮ್ | ಅಹಮಸ್ಮಾತ್ ಕೇದಾರಖಂಡಾನ್ನಿಃಸರಮಾಣ- ಮುದಕಮವಾರಣೀಯಂ ರೋದ್ಧುಂ ಸಂಪ್ರವಿಷ್ಟೋ ಭಗವತೋ ವಚಃ ಶ್ರುತ್ವಾ ಸಹಸಾ ವಿದಾರ್ಯ ಕೇದಾರಖಂಡಂ ಭಗವಂತಮುಪಸ್ಥಿತಃ | ತದಭಿವಾದಯೇ ಭಗವಂತಂ ಆಜ್ಞಾಪಯತು ಭವಾನ್ ಕಿಂ ಕರವಾಣೀತಿ ॥29॥
ಉಪಾಧ್ಯಾಯರ ವಾಕ್ಯವನ್ನು ಕೇಳಿದ ಆರುಣಿಪಾಂಚಾಲನು ಆಗ ಆ ಗದ್ದೆಯಿಂದ ಇದ್ದಕ್ಕಿದ್ದಂತೆ ಎದ್ದು ಗುರುಗಳ ಎದುರಿಗೆ ನಿಂತು ನಾನು ಈ ಗದ್ದೆಯಿಂದ ಹೊರಗೆ ಹೋಗುತ್ತಿದ್ದ ನೀರನ್ನು ಹೊರಗೆ ಹೋಗದಂತೆ ತಡೆಯಲು ಸಾಧ್ಯವಾಗದೆ ಇಲ್ಲಿಯೇ ಮಲಗಿದೆ, ಪೂಜ್ಯರಾದ ತಮ್ಮ ಮಾತನ್ನು ಕೇಳಿ ಆ ಗದ್ದೆಯ ಭಾಗವನ್ನು ಇದ್ದಕ್ಕಿದ್ದಂತೆಯೇ ಸೀಳಿಕೊಂಡು ತಮ್ಮ ಬಳಿಗೆ ಬಂದಿದ್ದೇನೆ. ಪೂಜ್ಯರಾದ ತಮಗೆ ನಮಸ್ಕರಿಸುತ್ತೇನೆ. ನಾನು ಏನು ಮಾಡಬೇಕೆಂದು ಆದೇಶವನ್ನು ನೀಡಿ ಎಂದು ಹೇಳಿದನು.
ತಮುಪಾಧ್ಯಾಯೋಽಬ್ರವೀತ್ | ಯಸ್ಮಾದ್ ಭವಾನಿದಂ ಕೇದಾರ ಖಂಡಮವದಾರ್ಯೋತ್ಥಿತಸ್ತಸ್ಮಾದುದ್ದಾಲಕ ಏವ ನಾಮ್ನಾ ಭವತ್ವಿತಿ ॥30॥
ಅವನನ್ನು ಕುರಿತು ಉಪಾಧ್ಯಾಯರು ನೀನು ಈ ಗದ್ದೆಯನ್ನು (ಕೇದಾರಖಂಡವನ್ನು) ಸೀಳಿಕೊಂಡು ಮೇಲೆ ಬಂದುದರಿಂದ ನಿನಗೆ ಉದ್ದಾಲಕನೆಂದೇ ಹೆಸರಾಗಲಿ ಎಂದು ಹೇಳಿದರು.
ಸ ಉಪಾಧ್ಯಾಯೇನಾನುಗೃಹೀತಃ | ಯಸ್ಮಾತ್ತ್ವಯಾ ಮದ್ವಚೋಽನುಷ್ಠಿತಂ ತಸ್ಮಾಚ್ಛ್ರೇಯೋಽವಾಪ್ಸ್ಯಸಿ, ಸರ್ವೇ ತೇ ವೇದಾಃ ಪ್ರತಿಭಾಸ್ಯಂತಿ, ಸರ್ವಾಣಿ ಚ ಧರ್ಮಶಾಸ್ತ್ರಾಣೀತಿ ॥31॥
ಆರುಣಿಪಾಂಚಾಲನು ಉಪಾಧ್ಯಾಯರ ಅನುಗ್ರಹಕ್ಕೆ ಪಾತ್ರನಾದನು. ಉಪಾಧ್ಯಾಯರು ಅವನನ್ನು ಕುರಿತು ನೀನು ನನ್ನ ಆದೇಶವನ್ನು ಅನುಷ್ಠಾನ ಮಾಡಿದ ಕಾರಣದಿಂದ ನಿನಗೆ ಮಂಗಳವಾಗುವುದು, ಎಲ್ಲ ವೇದಗಳೂ, ಎಲ್ಲ ಧರ್ಮಶಾಸ್ತ್ರಗಳೂ ನಿನಗೆ ಪ್ರತಿಭಾತವಾಗುವುವು ಎಂದು ಹೇಳಿದರು.
ಸ ಏವಮುಕ್ತ ಉಪಾಧ್ಯಾಯೇನೇಷ್ಟಂ ದೇಶಂ ಜಗಾಮ ॥32॥
ಉಪಾಧ್ಯಾಯರಿಂದ ಹೀಗೆ ಹೇಳಲ್ಪಟ್ಟ ಆರುಣಿಪಾಂಚಾಲನು ತನಗೆ ಇಷ್ಟವಾದ ದೇಶಕ್ಕೆ ಹೊರಟು ಹೋದನು.
ಅಥಾಪರಸ್ತಸ್ಯಾಯೋದಧೌಮ್ಯಸ್ಯ ಶಿಷ್ಯ ಉಪಮನ್ಯುರ್ನಾಮ | ತಮುಪಾಧ್ಯಾಯಃ ಪ್ರೇಷಯಾಮಾಸ ವತ್ಸೋಪಮನ್ಯೋ ಗಾರಕ್ಷೇತಿ ॥
ಇನ್ನು ಆ ಆಯೋದಧೌಮ್ಯರಿಗೆ ಉಪಮನ್ಯು ಎಂಬ ಇನ್ನೊಬ್ಬ ಶಿಷ್ಯನಿದ್ದನಷ್ಟೆ. ಅವನನ್ನು ಕುರಿತು ಉಪಾಧ್ಯಾಯರು, ವತ್ಸ ಉಪಮನ್ಯು ಗೋವುಗಳ ರಕ್ಷಣೆಯನ್ನು ಮಾಡು ಎಂದು ಹೇಳಿ ಕಳುಹಿಸಿದರು.
ಸ ಉಪಾಧ್ಯಾಯವಚನಾದರಕ್ಷದ್ ಗಾಃ | ಸ ಚಾಹ್ನಿ ಗಾ ರಕ್ಷಿತ್ವಾ ದಿವಸಕ್ಷಯೇಽಭ್ಯಾಗಮ್ಯೋಪಾಧ್ಯಾಯಸ್ಯಾಗ್ರತಃ ಸ್ಥಿತ್ವಾ ನಮಶ್ಚಕ್ರೇ ॥34॥
ಅವನು ಉಪಾಧ್ಯಾಯರ ವಚನದಂತೆ ಗೋವುಗಳ ರಕ್ಷಣೆಯನ್ನು ಮಾಡುತ್ತಿದ್ದನು. ಅವನು ಹಗಲೆಲ್ಲಾ ಗೋವುಗಳನ್ನು ನೋಡಿಕೊಂಡು ಸಾಯಂಕಾಲದ ವೇಳೆಯಲ್ಲಿ ಹಿಂದಿರುಗಿ ಉಪಾಧ್ಯಾಯರ ಎದುರಿಗೆ ನಿಂತು ಅವರಿಗೆ ನಮಸ್ಕಾರವನ್ನು ಮಾಡಿದನು.
ತಮುಪಾಧ್ಯಾಯಃ ಪೀವಾನಮಪಶ್ಯತ್ | ಉವಾಚ ಚೈನಮ್ | ವತ್ಸೋಪಮನ್ಯೋ ಕೇನ ವೃತ್ತಿಂ ಕಲ್ಪಯಸಿ ಪೀವಾನಸಿ ದೃಢಮಿತಿ ॥35॥
ಉಪಾಧ್ಯಾಯರು ಅವನು ಪುಷ್ಟನಾಗಿರುವುದನ್ನು ಗಮನಿಸಿದರು. ಅವರು ಅವನನ್ನು ಕುರಿತು ವತ್ಸ ಉಪಮನ್ಯು, ಯಾವ

ಆಹಾರದಿಂದ ಜೀವನವನ್ನು ನಡೆಸುತ್ತಿದ್ದೀಯೆ? ಸ್ಪಷ್ಟವಾಗಿ ಪುಷ್ಟನಾಗಿದ್ದೀಯಷ್ಟೆ ಎಂದು ಕೇಳಿದರು.
ಸ ಉಪಾಧ್ಯಾಯಂ ಪ್ರತ್ಯುವಾಚ ಭೈಕ್ಷ್ಯೇಣ ವೃತ್ತಿಂ ಕಲ್ಪಯಾಮೀತಿ ॥36॥
ಅವನು ಉಪಾಧ್ಯಾಯರನ್ನು ಕುರಿತು ಭಿಕ್ಷಾನ್ನದಿಂದ ಶರೀರ ವೃತ್ತಿಯನ್ನು ನೆರವೇರಿಸುತ್ತಿದ್ದೇನೆ ಎಂದು ಹೇಳಿದನು.
ತಮುಪಾಧ್ಯಾಯಃ ಪ್ರತ್ಯುವಾಚ |
ಮಮಾನಿವೇದ್ಯ ಭೈಕ್ಷಂ ನೋಪಯೋಕ್ತವ್ಯಮಿತಿ ॥37॥
ಅವನನ್ನು ಕುರಿತು ಉಪಾಧ್ಯಾಯರು ನನಗೆ ನಿವೇದನೆಯನ್ನು ಮಾಡದೆ ಭಿಕ್ಷಾನ್ನವನ್ನು ಊಟಮಾಡಬಾರದು ಎಂದು ಹೇಳಿದರು.
ಸ ತಥೇತ್ಯುಕ್ತ್ವಾ ಪುನರರಕ್ಷದ್ ಗಾಃ |
ರಕ್ಷಿತ್ವಾ ಚಾಗಮ್ಯ ತಥೈವೋಪಾಧ್ಯಾಯಸ್ಯಾಗ್ರತಃ ಸ್ಥಿತ್ವಾ ನಮಶ್ಚಕ್ರೇ ॥38॥
ಅವನು ಹಾಗೆಯೇ ಆಗಲಿ ಎಂದು ಹೇಳಿ ಪುನಃ ಹಸುಗಳನ್ನು ಕಾಯುತ್ತಿದ್ದನು. ಹಾಗೆಯೇ ಹಸುಗಳನ್ನು ಪಾಲನೆ ಮಾಡಿ ಗುರುಗಳ ಎದುರಿಗೆ ಬಂದು ನಿಂತು ನಮಸ್ಕರಿದನು.
ತತಸ್ತಮುಪಾಧ್ಯಾಯಸ್ತಥಾ ಪೀವಾನಮೇವ ದೃಷ್ಟ್ವೋವಾಚ | ವತ್ಸೋಪಮನ್ಯೋ ಸರ್ವಮಶೇಷತಸ್ತೇ ಭೈಕ್ಷಂ ಗೃಹ್ಣಾಮಿ |
ಕೇನಾದ್ಯ ವೃತ್ತಿಂ ಕಲ್ಪಯಸೀತಿ ॥39॥
ಉಪಾಧ್ಯಾಯರು ಅವನು ಪುನಃ ಪುಷ್ಟನಾಗಿರುವದನ್ನೇ ಗಮನಿಸಿ ಅವನನ್ನು ಕುರಿತು ವತ್ಸ ಉಪಮನ್ಯು, ನೀನು ತಂದ ಭಿಕ್ಷಾನ್ನವೆಲ್ಲವನ್ನೂ ನಾನೇ ಭುಂಜಿಸುತ್ತಿದ್ದೇನೆ, ಯಾವುದರಿಂದ ಶರೀರಯಾತ್ರೆಯನ್ನು ನಿರ್ವಹಿಸುತ್ತೀದ್ದೀಯೆ ಎಂದು ಕೇಳಿದರು.
ಸ ಏವಮುಕ್ತ ಉಪಾಧ್ಯಾಯಂ ಪ್ರತ್ಯುವಾಚ |
ಭೈಕ್ಷಂ ಸರ್ವಂ ಭಗವತೇ ನಿವೇದ್ಯ ಅಪರಂ ಗೃಹ್ಣಾಮಿ ತಂ ಚರಾಮಿ | ತೇನ ವೃತ್ತಿಂ ಕಲ್ಪಯಾಮೀತಿ ॥40॥
ಹೀಗೆ ಕೇಳಲ್ಪಟ್ಟ ಉಪಮನ್ಯುವು ಉಪಾಧ್ಯಾಯರನ್ನು ಕುರಿತು, ಒಮ್ಮೆ ಭಿಕ್ಷೆಯನ್ನು ಬೇಡಿ ಬಂದ ಅನ್ನವನ್ನೆಲ್ಲಾ ಪೂಜ್ಯರಾದ ತಮಗೆ ಕೊಟ್ಟು ಇನ್ನೊಮ್ಮೆ ಭಿಕ್ಷವನ್ನು ಬೇಡುತ್ತೇನೆ, ಅದರಿಂದ ನಾನು ಶರೀರವನ್ನು ಪೋಷಿಸುತ್ತಿದ್ದೇನೆ ಎಂದು ಹೇಳಿದನು.
ತಮುಪಾಧ್ಯಾಯಃ ಪ್ರತ್ಯುವಾಚ | ನೈಷಾ ನ್ಯಾಯ್ಯಾ ಗುರುವೃತ್ತಿಃ | ಅನ್ಯೇಷಾಮಪಿ ಭೈಕ್ಷ್ಯೋಪಜೀವಿನಾಂ ತ್ವಂ ವೃತ್ತ್ಯುಪರೋಧಂ ಕರೋಷಿ | ಏವಂ ವರ್ತಮಾನೋ ಲುಬ್ಧೋಽಸೀತಿ ॥41॥
ಅವನನ್ನು ಕುರಿತು ಉಪಾಧ್ಯಾಯರು, ಇದು ನ್ಯಾಯವಾದ ಗುರುವೃತ್ತಿಯಲ್ಲ, ಭಿಕ್ಷಾನ್ನವನ್ನು ಬೇಡುವ ಬೇರೆ ಬ್ರಹ್ಮಚಾರಿಗಳೂ ಇದ್ದಾರೆ. ನೀನು ಎರಡನೆಯ ಬಾರಿ ಭಿಕ್ಷೆಗೆ ಹೋಗುವುದರಿಂದ ಅವರ ಜೀವನಕ್ಕೆ ತೊಂದರೆಯನ್ನು ಮಾಡುತ್ತಿದ್ದೀಯೆ, ಹೀಗೆ ಮಾಡುತ್ತಿರುವ ನೀನು ಲೋಭಕ್ಕೆ ಒಳಗಾಗಿದ್ದೀಯೆ ಎಂದು ಹೇಳಿದರು.
ಸ ತಥೇತ್ಯುಕ್ತ್ವಾ ತಾ ಗಾ ಅರಕ್ಷತ್ |
ರಕ್ಷಿತ್ವಾ ಪುನರಾಗಮ್ಯೋಪಾಧ್ಯಾಯಸ್ಯಾಗ್ರತಃ ಸ್ಥಿತ್ವಾ ನಮಶ್ಚಕ್ರೇ ॥42॥
ಅವನು ಹಾಗೆಯೇ ಆಗಲಿ ಎಂದು ಹೇಳಿ ಪುನಃ ಗೋವುಗಳನ್ನು ಕಾಯುತ್ತಿದ್ದನು. ಗೋವುಗಳ ರಕ್ಷಣೆಯನ್ನು ಮಾಡಿ ಪುನಃ ಉಪಾಧ್ಯಾಯರ ಎದುರಿಗೆ ಬಂದು ನಿಂತು ನಮಸ್ಕಾರವನ್ನು ಮಾಡಿದನು.
ತಮುಪಾಧ್ಯಾಯಾಸ್ತಥಾ ಪೀವಾನಮೇವ ದೃಷ್ಟ್ವಾ ಪುನರುವಾಚ |
ಅಹಂ ತೇ ಸರ್ವಂ ಭೈಕ್ಷಂ ಗೃಹ್ಣಾಮಿ ನ ಚಾನ್ಯಚ್ಚರಸಿ |
ಪೀವಾನಸಿ | ಕೇನ ವೃತ್ತಿಂ ಕಲ್ಪಯಸೀತಿ ॥43॥
ಉಪಾಧ್ಯಾಯರು ಅವನು ಮೊದಲಿನಂತೆಯೇ ಪುಷ್ಟನಾಗಿರುವುದನ್ನು ಗಮನಿಸಿ ಪುನಃ ಅವನನ್ನು ಕುರಿತು ನಿನ್ನ ಎಲ್ಲಾ ಭಿಕ್ಷಾನ್ನವನ್ನು ನಾನೇ ಭುಂಜಿಸುತ್ತಿದ್ದೇನೆ. ನೀನು ಎರಡನೆಯ ಬಾರಿ ಭೈಕ್ಷ್ಯಚರ್ಯೆಯನ್ನು ಮಾಡುತ್ತಿಲ್ಲ ಆದರೂ ಪುಷ್ಟನಾಗಿದ್ದೀಯೆ, ಯಾವುದರಿಂದ ಜೀವನಮಾಡುತ್ತಿದ್ದೀಯೆ ಎಂದು ಕೇಳಿದರು.
ಸ ಉಪಾಧ್ಯಾಯಂ ಪ್ರತ್ಯುವಾಚ |
ಭೋ ಏತಾಸಾಂ ಗವಾಂ ಪಯಸಾ ವೃತ್ತಿಂ ಕಲ್ಪಯಾಮೀತಿ ॥44॥
ಅವನು ಉಪಾಧ್ಯಾಯರನ್ನು ಕುರಿತು ಪೂಜ್ಯರೇ, ಈ ಗೋವುಗಳ ಹಾಲಿನಿಂದ ಜೀವಿಸುತ್ತಿದ್ದೇನೆ ಎಂದು ಹೇಳಿದನು.
ತಮುಪಾಧ್ಯಾಯಃ ಪ್ರತ್ಯುವಾಚ | ನೈತನ್ನ್ಯಾಯ್ಯಂ ಪಯ ಉಪಯೋಕ್ತುಂ ಭವತೋ ಮಯಾ ನಾನುಜ್ಞಾತಮಿತಿ ॥45॥
ಆಗ ಉಪಾಧ್ಯಾಯರು ಅವನನ್ನು ಕುರಿತು ನನ್ನ ಅನುಮತಿಯಿಲ್ಲದೆ ಈ ಹಸುಗಳ ಹಾಲನ್ನು ಉಪಯೋಗಿಸುವುದು ನಿನಗೆ ನ್ಯಾಯವಲ್ಲ ಎಂದು ಹೇಳಿದರು.
ಸ ತಥೇತಿ ಪ್ರತಿಜ್ಞಾಯ ಗಾ ರಕ್ಷಿತ್ವಾ ಪುನರುಪಾಧ್ಯಾಯಗೃಹ- ಮಾಸಾದ್ಯಗುರೋರಗ್ರತಃ ಸ್ಥಿತ್ವಾ ನಮಶ್ಚಕ್ರೇ ॥46॥
ಅವನು ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ, ಗೋವುಗಳ ರಕ್ಷಣೆಯನ್ನು ಮಾಡಿ ಪುನಃ ಉಪಾಧ್ಯಾಯರ ಬಳಿಗೆ ಬಂದು ಅವರ ಎದುರಿಗೆ ನಿಂತು ನಮಸ್ಕಾರವನ್ನು ಮಾಡಿದನು.
ತಮುಪಾಧ್ಯಾಯಸ್ತಥಾ ಪೀವಾನಮೇವ ದೃಷ್ಟ್ವೋವಾಚ |
ಭೈಕ್ಷಂ ನಾಶ್ನಾಸಿ ನ ಚಾನ್ಯಚ್ಚರಸಿ ನ ಪಯಃ ಪಿಬಸಿ
ಪೀವಾಸಿ ಕೇನ ವೃತ್ತಿಂ ಕಲ್ಪಯಸೀತಿ ॥47॥
ಉಪಾಧ್ಯಾಯರು ಅವನು ಮೊದಲಿನಂತೆಯೇ ಪುಷ್ಟನಾಗಿರುವುದನ್ನು ಗಮನಿಸಿ ಅವನನ್ನು ಕುರಿತು, ಭಿಕ್ಷಾನ್ನವನ್ನು ತಿನ್ನುತ್ತಿಲ್ಲ, ಎರಡನೆಯ ಭಿಕ್ಷಾಚರ್ಯವನ್ನೂ ಮಾಡುತ್ತಿಲ್ಲ, ಹಾಲನ್ನೂ ಕುಡಿಯುತ್ತಿಲ್ಲ, ಆದರೂ ಸ್ಥೂಲನಾಗಿದ್ದೀಯೆ, ಯಾವುದರಿಂದ ಜೀವನವನ್ನು ಮಾಡುತ್ತಿದ್ದೀಯೆ ಎಂದು ಕೇಳಿದರು.
ಸ ಏವಮುಕ್ತ ಉಪಾಧ್ಯಾಯಂ ಪ್ರತ್ಯುವಾಚ |
ವತ್ಸಾನಾಂ ವದನಾಚ್ಚ್ಯುತಂ ಫೇನಂ ಪಿಬಾಮಿ |

ವತ್ಸಾ ಮಾತೄಣಾಂ ಸ್ತನಾನ್ ಪಿಬಂತ ಉದ್ಗಿರಂತೇ ಇತಿ ॥48॥
ಹೀಗೆ ಕೇಳಲ್ಪಟ್ಟ ಅವನು ಉಪಾಧ್ಯಾಯರನ್ನು ಕುರಿತು, ಕರುಗಳು ತಾಯಿಯ ಹಾಲನ್ನು ಕುಡಿಯುತ್ತಾ ಬಾಯಿಂದ ಹಾಲನ್ನು ಸುರಿಸುತ್ತವೆ. ಕರುಗಳ ಬಾಯಿಂದ ಸುರಿಯುವ ನೊರೆಯನ್ನು ಕುಡಿಯುತ್ತಿದ್ದೇನೆ ಎಂದು ಹೇಳಿದನು.
ತಮುಪಾಧ್ಯಾಯಃ ಪ್ರತ್ಯುವಾಚ | ಏತೇ ತ್ವದನುಕಂಪಯಾ ಗುಣವಂತಃ ಪ್ರಭೂತಂ ಫೇನಮುದ್ಗಿರಂತಿ | ತದೇವಮಪಿ ವತ್ಸಾನಾಂ ವೃತ್ತ್ಯುಪರೋಧಂ ಕರೋಷ್ಯೇವಂ ವರ್ತಮಾನಃ |
ಭವಾನ್ ಫೇನಂ ನೈವಂ ಪಾತುಮರ್ಹಸೀತಿ ॥49॥
ಉಪಾಧ್ಯಾಯರು ಅವನನ್ನು ಕುರಿತು ಈ ಕರುಗಳೆಲ್ಲವೂ ಒಳ್ಳೆಯ ಗುಣಗಳಿಂದ ಕೂಡಿದವುಗಳಾಗಿ ನಿನ್ನ ಮೇಲಿನ ಅನುಕಂಪದಿಂದ ತುಂಬಾ ಹಾಲನ್ನು ನೊರೆಯಾಗಿ ಸುರಿಸುತ್ತವೆ. ನೀನು ಹೀಗೆ ಮಾಡಿದರೆ ಕರುಗಳ ಜೀವನಕ್ಕೂ ತೊಂದರೆಯಾಗುತ್ತದೆ. ನೀನು ನೊರೆಯನ್ನು ಕುಡಿಯಬಾರದು ಎಂದು ಹೇಳಿದರು.
ಸ ತಥೇತಿ ಪ್ರತಿಜ್ಞಾಯ  ನಿರಾಹಾರೋ ಗಾ ಅರಕ್ಷತ್ ॥50॥
ಅವನು ಹಾಗೆಯೇ ಆಗಲಿ ಎಂದು ಹೇಳಿ ನಿರಾಹಾರನಾಗಿ ಗೋವುಗಳನ್ನು ಕಾಯುತ್ತಿದ್ದನು.
ತಥಾ ಪ್ರತಿಷಿದ್ಧೋ ಭೈಕ್ಷಂ ನಾಶ್ನಾತಿ | ನ ಚಾನ್ಯಚ್ಚರತಿ |
ನ ಪಯಃ ಪಿಬತಿ | ಫೇನಂ ನೋಪಯುಂಕ್ತೇ ॥51॥
ಹಾಗೆ ಎಲ್ಲದರಿಂದಲೂ ನಿಷಿದ್ಧನಾದ ಅವನು ಭಿಕ್ಷಾನ್ನವನ್ನು ತಿನ್ನುವುದಿಲ್ಲ, ಎರಡನೆ ಭಿಕ್ಷವನ್ನು ಸೇವಿಸುವುದಿಲ್ಲ, ಹಾಲನ್ನೂ ಕುಡಿಯುವುದಿಲ್ಲ, ನೊರೆಯನ್ನೂ ಕುಡಿಯುವುದಿಲ್ಲ.
ಸ ಕದಾಚಿದರಣ್ಯೇಷು ಕ್ಷುಧಾರ್ತೋಽರ್ಕಪರ್ಣಾನ್ ಭಕ್ಷಯತ್  ॥52॥
ಒಮ್ಮೆ ಅವನು ಕಾಡಿನಲ್ಲಿ ಹಸಿವೆಯಿಂದ ಬಳಲಿ ಎಕ್ಕದ ಗಿಡದ ಎಲೆಗಳನ್ನು ತಿಂದನು.
ಸ ತೈರರ್ಕಪರ್ಣೈರ್ಭಕ್ಷಿತೈಃ ಕ್ಷಾರಕಟುಕೋಷ್ಣಾವಿಪಾಕಾಚ್ಚಕ್ಷುಷ್ಯು- ಪಹತೋಽಂಧೋಽಭವತ್ ॥53॥
ತಿನ್ನಲ್ಪಟ್ಟ ಆ ಎಕ್ಕದ ಎಲೆಗಳ ಕ್ಷಾರ, ಕಟು ಮತ್ತು ಉಷ್ಣತೆಯ ಪ್ರಭಾವದಿಂದ ಅವನು ಕಣ್ಣಿನ ತೊಂದರೆಗೆ ಒಳಗಾಗಿ ಅಂಧನಾದನು.
ಸೋಽಂಧೋಽಪಿ ಚಂಕ್ರಮ್ಯಮಾಣಃ ಕೂಪೇಽಪತತ್ ॥54॥
ಅಂಧನಾದ ಅವನು ತಿರುಗಾಡುತ್ತಾ ಒಂದು ಕೂಪದಲ್ಲಿ ಬಿದ್ದನು.
ಅಥ ತಸ್ಮಿಂಸ್ತು ನಾಗಚ್ಛತ್ಯುಪಾಧ್ಯಾಯಃ ಶಿಷ್ಯಾನವೋಚತ್ | ನಾಯಾತ್ಯುಪಮನ್ಯುಃ | ತ ಊಚುರ್ವನಂ ಗತೋ ಗಾ ರಕ್ಷಿತುಮಿತಿ | ತಾನಾಹೋಪಾಧ್ಯಾಯೋಮಯೋಪಮನ್ಯುಃ ಸರ್ವತಃ ಪ್ರತಿಷಿದ್ಧಃ ಸನ್ ಯತಃ ಕುಪಿತಸ್ತತೋನಾಗಚ್ಛತಿ ಚಿರಂ ಗತಸಿತ್ವತಿ ॥55॥
ಅವನು ಬರದಿರುತ್ತಿರಲು ಆಯೋದಧೌಮ್ಯರು ಶಿಷ್ಯರನ್ನು ಕುರಿತು ಉಪಮನ್ಯುವು ಬರುತ್ತಿಲ್ಲ ಎಂದು ಹೇಳಿದರು. ಆ ಶಿಷ್ಯರು ಹಸುಗಳನ್ನು ಕಾಯಲು ಕಾಡಿಗೆ ಹೋಗಿದ್ದಾನೆ ಎಂದು ಹೇಳಿದರು.  ಆ ಶಿಷ್ಯರನ್ನು ಕುರಿತು ಉಪಾಧ್ಯಾಯರು ನಾನು ಉಪಮನ್ಯುವಿಗೆ ಸರ್ವರೀತಿಯಿಂದಲೂ ಆಹಾರವನ್ನು ನಿಷೇಧಮಾಡಿದ್ದೇನೆ, ಅದರಿಂದ ಕೋಪಗೊಂಡ ಅವನು ಹಿಂದಿರುಗಿ ಬರುತ್ತಿಲ್ಲ . ಅವನು ಹೋಗಿ ಬಹಳ ಸಮಯವಾಯಿತು ಎಂದು ಹೇಳಿದರು.
ಸ ಏವಮುಕತತ್ವ  ಗತ್ವಾರಣ್ಯಮುಪಮನ್ಯೋರಾಹ್ವಾನಂ ಚಕ್ರೇ |
ಭೋ ಉಪಮನ್ಯೋ ಕ್ವಾಸಿ ವತ್ಸೈಹೀತಿ ॥56॥
ಅವರು ಹೀಗೆ ಹೇಳಿ ಕಾಡಿಗೆ ಹೋಗಿ ಎಲೈ ಉಪಮನ್ಯುವೇ ಎಲ್ಲಿದ್ದೀಯೆ, ವತ್ಸ ಇಲ್ಲಿ ಬಾ, ಎಂದು ಅವನನ್ನು ಆಹ್ವಾನಿಸಿದರು.
ಸ ತದಾಹ್ವಾನಮುಪಾಧ್ಯಾಯಾಚ್ಛ್ರುತ್ವಾ  ಪ್ರತ್ಯುವಾಚೋಚ್ಚೈಃ | ಅಹಮಸ್ಮಿನ್ ಕೂಪೇ ಪತಿತ ಇತಿ ॥57॥
ಉಪಮನ್ಯುವು ಗುರುಗಳ ಆಹ್ವಾನ ಶಬ್ದವನ್ನು ಕೇಳಿ ಪೂಜ್ಯರೇ, ನಾನು ಈ ಕೂಪದಲ್ಲಿ ಬಿದ್ದಿದ್ದೇನೆ ಎಂದು ಗಟ್ಟಿಯಾಗಿ ಹೇಳಿದನು.
ಸ ತಮುಪಾಧ್ಯಾಯಃ ಪ್ರತ್ಯುವಾಚ | ಕಥಮಸಿ ಕೂಪೇ ಪತಿತ ಇತಿ ॥
ಆಗ ಉಪಾಧ್ಯಾಯರು ಅವನನ್ನು ಕುರಿತು ಕೂಪದಲ್ಲಿ ಹೇಗೆ ಬಿದ್ದೆ ಎಂದು ಕೇಳಿದರು.
ಸ ಚ ತಂ ಪ್ರತ್ಯುವಾಚ | ಅರ್ಕಪತ್ರಾಣಿ ಭಕ್ಷಯಿತ್ವಾಂಧೀಭೂತೋಽಸ್ಮಿ | ಅತಃ ಕೂಪೇ ಪತಿತ ಇತಿ ॥59॥
ಆಗ ಅವನು ಉಪಾಧ್ಯಾಯರನ್ನು ಕುರಿತು ಎಕ್ಕದ ಎಲೆಗಳನ್ನು ತಿಂದು ಕಣ್ಣುಗಳನ್ನು ಕಳೆದುಕೊಂಡೆ, ಆದ್ದರಿಂದ ಕೂಪದಲ್ಲಿ ಬಿದ್ದಿದ್ದೇನೆ ಎಂದು ಹೇಳಿದನು.
ತಮುಪಾಧ್ಯಾಯಃ ಪ್ರತ್ಯುವಾಚ | ಅಶ್ವಿನೌ ಸ್ತುಹಿ ತೌ ತ್ವಾ ದೇವಭಿಷಜೌ ಚಕ್ಷುಷ್ಮಂತಂ ಕರಿಷ್ಯತ ಇತಿ ॥60॥
ಅವನನ್ನು ಕುರಿತು ಉಪಾಧ್ಯಾಯರು, ಅಶ್ವಿನೀ ದೇವತೆಗಳನ್ನು ಸ್ತೋತ್ರಮಾಡು, ದೇವವೈದ್ಯರಾದ ಅವರು ನಿನಗೆ ದೃಷ್ಟಿಯನ್ನು ಕರುಣಿಸುವರು ಎಂದು ಹೇಳಿದರು.
ಸ ಏವಮುಕ್ತ ಉಪಾಧ್ಯಾಯೇನ ಸ್ತೋತುಮುಪಚಕ್ರಮೇ
ದೇವಾವಶ್ವಿನೌ ವಾಗ್ಭಿರ್ಋಗ್ಭಿಃ ॥61॥
ಉಪಾಧ್ಯಾಯರಿಂದ ಹೀಗೆ ಹೇಳಲ್ಪಟ್ಟ ಉಪಮನ್ಯುವು ಅಶ್ವಿನೀ ದೇವತೆಗಳನ್ನು ಋಗ್ವೇದದ ಮಂತ್ರಗಳಿಂದ ಸ್ತೋತ್ರಮಾಡಲು ಪ್ರಾರಂಭಿಸಿದನು.
ಪ್ರ ಪೂರ್ವಗೌ ಪೂರ್ವಜೌ ಚಿತ್ರಭಾನೂ
ಗಿರಾ ಶಂಸಾಮಿ ತಪನಾವನಂತೌ |
ದಿವ್ಯೌ ಸುಪರ್ಣಾವರಜೌ ವಿಮಾನಾ-
ವಧಿಕ್ಷಿಪಂತೌ ಭುವನಾನಿ ವಿಶ್ವಾ ॥62॥
ಎಲ್ಲರಿಗಿಂತಲೂ ಮುಂದೆ ಸಂಚರಿಸುವ, ಜಗತ್ತಿನಲ್ಲಿ ಮೊದಲೇ ಜನ್ಮವನ್ನು  ಪಡೆದ, ವಿಚಿತ್ರವಾದ ಪ್ರಕಾಶವನ್ನು ಹೊಂದಿದ,

ಶತ್ರುಗಳಿಗೆ ಸಂತಾಪವನ್ನು ಉಂಟುಮಾಡುವ, ಅಮೃತಪಾನ ಮಾಡಿದ ಕಾರಣದಿಂದ ನಾಶರಹಿತರಾದ, ದೇವತಾಗಣದಲ್ಲಿ ಸೇರಿರುವ, ಒಳ್ಳೆಯ ರಥವನ್ನು ಹೊಂದಿರುವ, ರಜೋಗುಣರಹಿತರಾದ, ಇಚ್ಛಾಜ್ಞಾನಸಹಿತರಾದ, ಎಲ್ಲ ಲೋಕಗಳನ್ನು ತಮ್ಮ ಪ್ರಭೆಯಿಂದ ಧಿಕ್ಕರಿಸುವ, ಎಲೈ ಅಶ್ವಿನೀ ದೇವತೆಗಳೇ ಶ್ರುತಿರೂಪವಾಕ್ಯಗಳಿಂದ ನಿಮ್ಮನ್ನು ಪ್ರಶಂಸಿಸುತ್ತೇನೆ.

ಹಿರಣ್ಮಯೌ ಶಕುನೀ ಸಾಂಪರಾಯೌ
ನಾಸತ್ಯದಸ್ರೌ ಸುನಸೌ ವೈಜಯಂತೌ |
ಶುಕ್ರಂ ವಯಂತೌ ತರಸಾ ಸುವೇಪಾ-
ವಭಿವ್ಯಯಂತಾವಸಿತಂ ವಿವಸ್ವತ್ ॥63॥

ಸುವರ್ಣಾಭರಣಗಳಿಂದ ಅಲಂಕೃತರಾದ, ಆರೋಗ್ಯವನ್ನು ದಯಪಾಲಿಸಿ ಶಕ್ತಿಯನ್ನು ಉಂಟುಮಾಡುವ, ಭಕ್ತರ ಆಪತ್ತಿನಲ್ಲಿ ಅವರನ್ನು ರಕ್ಷಣೆಮಾಡಲು ಬರುವ, ಸುಂದರವಾದ ನಾಸಿಕವನ್ನುಳ್ಳ, ವಿಶೇಷವಾಗಿ ಜಯಶೀಲರಾದ, ಶೋಕರಹಿತನಾದ ಪರಮಾತ್ಮನ ಜ್ಞಾನವನ್ನು ಹೊಂದಿರುವ, ವೇಗದಿಂದ ಶತ್ರುಗಳ ಭಯಕಂಪವನ್ನುಂಟುಮಾಡುವ, ಕೃಷ್ಣವರ್ಣದ ಸೂರ್ಯಮಂಡಲವನ್ನು ಪಿತೃಸೇವೆಗಾಗಿ ಸಮೀಪಿಸುವ, ನಾಸತ್ಯದಸ್ರರನ್ನು ಪ್ರಶಂಸಿಸುತ್ತೇನೆ.

ಗ್ರಸ್ತಾಂ ಸುಪರ್ಣಸ್ಯ ಬಲೇನ ವಾರ್ತಿಕಾ-
ಮಮುಂಚತಾವಶ್ವಿನೌ ಸೌಭಗಾಯ |
ತಾವತ್ಸುವೃತ್ತಾವನಮತ್ತಮಾಯ ಯೌ
ಸತ್ತಮಾ ಗಾ ಅರುಣಾ ಉದಾವಹನ್ ॥64॥

ಯಾವ ಅತ್ಯುತ್ತಮರಾದ ಋಷಿಗಳು ಅಪ್ರತಿರುದ್ಧವಾದ ವೇದವಾಕ್ಯಗಳನ್ನು ಅಧ್ಯಯನಾದಿಗಳಿಂದ ಶ್ರೇಷ್ಠವಾಗಿ ಎತ್ತಿಹಿಡಿದರೋ ಅವರ ಸೌಭಾಗ್ಯಕ್ಕೋಸ್ಕರವಾಗಿ ಮತ್ತು ಲೋಕದಲ್ಲಿ ಯಾರಿಗೂ ನಮಸ್ಕಾರ ಮಾಡದಿರುವ ಬ್ರಹ್ಮಾದಿ ದೇವತೆಗಳಲ್ಲಿ ಅಗ್ರಗಣ್ಯನಾದ ನಾರಾಯಣನ ಪ್ರೀತ್ಯರ್ಥವಾಗಿ ಒಳ್ಳೆಯ ಶೀಲವನ್ನು ಹೊಂದಿರುವ ಎಲೈ ಅಶ್ವಿನೀ ದೇವತೆಗಳೇ, ಪೂರ್ಣನಾದ ಪರಮಾತ್ಮನ ಸಂಕಲ್ಪಬಲದಿಂದ ಯಾಜ್ಞಿಕರು ತಡೆಹಿಡಿದಿದ್ದ ನಿಮ್ಮ ಯಜ್ಞಾಹುತಿಭಾಗವನ್ನು ಚ್ಯವನಋಷಿಗಳ ಕಾಲದವರೆಗೂ ನೀವು ಪರಿತ್ಯಾಗ ಮಾಡಿದಿರಿ, ಅಂತಹ ನಿಮ್ಮನ್ನು ಪ್ರಶಂಸಿಸುತ್ತೇನೆ.

ಷಷ್ಟಿಶ್ಚ ಗಾವಸ್ತ್ರಿಶತಂ ಚ ಧೇನವೋ
ಏಕಂ ವತ್ಸಂ ಸುವತೇ ತಂ ದುಹಂತಿ |
ನಾನಾಗೋಷ್ಠಾ ವಿಹಿತಾ ಏಕದೋಹನಾ-
ಸ್ತಾವಶ್ವಿನೌ ದುಹತೋ ಘರ್ಮ್ಯಮುಕ್ಥ್ಯಮ್ ॥65॥

ಜ್ಞಾನವೆಂಬ ಕ್ಷೀರದೋಹನಕ್ಕಾಗಿ ವಿಹಿತವಾದ ಮನುಷ್ಯಪಿತೃ ದೇವತಾ ಭೇದದಿಂದ ಬೇರೆ ಬೇರೆ ಘಳಿಗೆಗಳ ಪ್ರಮಾಣವುಳ್ಳ ಕಾರಣದಿಂದ ನಾನಾ ವಿಧವಾದ ಮುನ್ನೂರರವತ್ತು ದಿನಗಳು ಎಂಬ ಗೋವುಗಳು ಒಟ್ಟು ಸೇರಿ ಒಂದು ಕರುವನ್ನು ಪಡೆದವು. ಅನೇಕ ಗೋವುಗಳಿಂದ ಒಂದು ಕರುವಿನ ಪ್ರಸವವು ಆಶ್ಚರ್ಯಕರವಾದುದು. ಮೂರು ವಿಧವಾದ ಜೀವರು ಆ ಗೋವುಗಳಿಂದ ಬೇರೆಬೇರೆ ರೀತಿಯಾದ ಹಾಲನ್ನು ಕರೆಯುತ್ತಾರೆ. ಅಧಮ ಜೀವರು ತಮೋಗುಣ ಪ್ರಧಾನವಾದುದರಿಂದ ಎಲ್ಲ ದಿನಗಳಲ್ಲಿಯೂ ವಿಷಯಭೋಗವನ್ನೇ ಬಯಸಿ ಸಂಪಾದಿಸುತ್ತಾರೆ. ಮಧ್ಯಮಜೀವರು ರಜೋಗುಣೋದ್ರೇಕದ ಕಾರಣದಿಂದ ಈ ಲೋಕದ ಸ್ತ್ರೀಯರ ಮತ್ತು ಸ್ವರ್ಗಸ್ತ್ರೀಯರ ಭೋಗವನ್ನು ಸಂಕಲ್ಪಿಸಿ, ಯಜ್ಞಾದಿಗಳನ್ನು ಮಾಡಿ ಆ ಭೋಗವನ್ನು ಪಡೆಯುತ್ತಾರೆ. ಉತ್ತಮರಾದ ದೇವ, ಋಷಿ ಮೊದಲಾದ ಜೀವರು ಮಾತ್ರ ಸತ್ವಗುಣೋದ್ರೇಕದ ಕಾರಣದಿಂದ ಆಶ್ವಿನೀ ದೇವತೆಗಳ ಜೊತೆಯಲ್ಲಿ ಸರ್ವದೋಷಪರಿಹಾರಕವೂ ಮತ್ತು ವಾಯುದೇವರ ಉಪದೇಶದಿಂದ ಮಾತ್ರ ಲಭ್ಯವಾದುದೂ ಆದ ಜ್ಞಾನವನ್ನು ಸಂಪಾದಿಸುತ್ತಾರೆ. ಅಂತಹ ಆಶ್ವಿನೀದೇವತೆಗಳನ್ನು ಸ್ತೋತ್ರಮಾಡುತ್ತೇನೆ.

ಏಕಂ ನಾಭಿಂ ಸಪ್ತಶತಾ ಅರಾಃ ಶ್ರಿತಾಃ
ಪ್ರಧಿಷ್ವನ್ಯಾಂ ವಿಂಶತಿರರ್ಪಿತಾ ಅರಾಃ |
ಸುನೇಮಿ ಚಕ್ರಂ ಪರಿವರ್ತತೇಽಜರಂ
ಮಾಯಯಾಽಶ್ವಿನೌ ಸಮವರ್ತೀ ಚರ್ಷಣೀ ॥66॥

ಕಾಲವೆಂಬ ಚಕ್ರದ ಸಂವತ್ಸರವೆಂಬ ಸ್ಥೂಲನಾಭಿಯನ್ನು ಏಳುನೂರು ಅರಗಳು ಆಶ್ರಯಿಸಿವೆ. ಈ ನಾಭಿಯ ವಿಸ್ತಾರವಾದ ಪ್ರದೇಶದಲ್ಲಿ ಇಪ್ಪತ್ತು ಅರಗಳು ಆಶ್ರಿತವಾಗಿವೆ. (ವಿಸ್ತಾರವಾದ ದಿನವುಳ್ಳ ಗ್ರೀಷ್ಮ ಋತುವಿನಲ್ಲಿ ಹತ್ತು ಅರಗಳು, ವಿಸ್ತಾರವಾದ ರಾತ್ರಿಯುಳ್ಳ ಹೇಮಂತ ಋತುವಿನಲ್ಲಿ ಹತ್ತು ಅರಗಳು ಆಶ್ರಿತವಾಗಿವೆ) ಈ ಚಕ್ರವು ನಾಶರಹಿತವಾದುದು ಮತ್ತು ಒಳ್ಳೆಯ ಧಾರೆಗಳಿಂದ ಕೂಡಿದುದು. ಇದು ಯಾವಾಗಲೂ ತಿರುಗುತ್ತಿರುತ್ತದೆ. ಎಲೈ ಅಶ್ವಿನೀದೇವತೆಗಳೇ, ಈ ಚಕ್ರದಿಂದ ಎಲ್ಲ ಮನುಷ್ಯರನ್ನೂ ಸ್ಪರ್ಶಿಸಿ ಘಾತಿಸುವ ಯಮನು ನಿಮ್ಮನ್ನು ಮಾತ್ರ ಸ್ಪರ್ಶಿಸುವುದಿಲ್ಲ. ಅಂತಹ ನಿಮ್ಮನ್ನು ಸ್ತೋತ್ರಮಾಡುತ್ತೇನೆ.

ಏಕಂ ಚಕ್ರಂ ವರ್ತತೇ ದ್ವಾದಶಾರಂ
ಷಣ್ಣಾಭಮೇಕಾಕ್ಷಮೃತಸ್ಯ ಧಾರಮ್ |
ಯಸ್ಮಿನ್ ದೇವಾ ಅಧಿ ವಿಶ್ವೇ ವಿಷಕ್ತಾ-
ಸ್ತಾವಶ್ವಿನೌ ಮುಂಚತೋ ಮಾ ವಿಷೀದಥ ॥67॥

ಇನ್ನೊಂದು ವಿವಕ್ಷೆಯಿಂದ ಹನ್ನೆರಡು ಮಾಸಗಳೆಂಬ ಹನ್ನೆರಡು ಅರಗಳಿಂದ ಕೂಡಿದ ಈ ಸಂವತ್ಸರವೆಂಬ ಚಕ್ರವು ಆರು ಋತುಗಳಿಂದಲೂ, ಆರು ನಾಭಿಗಳಿಂದಲೂ ಪರಮಾತ್ಮನೆಂಬ ಒಂದು ಅಕ್ಷದಿಂದಲೂ (ತೂಬಿನಿಂದಲೂ) ಸತ್ಯಭೂತವಾದ ಜಗತ್ತಿಗೆ ಧಾರಕವಾಗಿದೆ. ಆ ರಥದಲ್ಲಿ ಸೂರ್ಯಚಂದ್ರಾದಿ ದೇವತೆಗಳು ಮನುಷ್ಯರ ದೃಷ್ಟಿಗೆ ಗೋಚರವಾಗುವಂತೆ ಸಂಬದ್ಧರಾಗಿದ್ದಾರೆ. ಎಲೈ ಅಶ್ವಿನೀದೇವತೆಗಳೇ ನೀವು ಆ ಚಕ್ರವನ್ನು ನನ್ನ ಮೇಲೆ ಪ್ರಯೋಗಿಸಬೇಡಿ. ವಿಶೇಷವಾಗಿ ನನ್ನ ಮೇಲೆ ಪ್ರಸನ್ನರಾಗಿ.

ಅಶ್ವಿನಾವಿಂದ್ರಮಮೃತಂ ತಂ ಪ್ರವೃತ್ತಂ
ತಿರೋಧತ್ತಾಮಶ್ವಿನೌ ದಾಸಪತ್ನೀಃ |
ಭಿತ್ವಾ ಗಿರೀನಾಶ್ವಿನೌ ಗಾ ಉಪಾಚರನ್
ಅದೃಷ್ಟಮಹ್ನಾ ಪ್ರಥಿತಾಽಬಲಸ್ಯ ॥68॥

ಎಲೈ ಅಶ್ವಿನೀದೇವತೆಗಳೇ, ಅಶ್ವಿನೀದೇವತೆಗಳ ಅಂತರ್ಯಾಮಿಯಾದ ಭಗವದ್ರೂಪಗಳೇ, ಆ ಗೋರೂಪವಾದ ವೇದವಿದ್ಯೆಗಳಿಂದ ಸಜ್ಜನರನ್ನು ಸಂತೋಷಪಡಿಸುವ ಜ್ಞಾನಾಮೃತವು ಪರಮೈಶ್ವರ್ಯೋಪೇತನಾದ ನಾರಾಯಣನ ಉದ್ದೇಶಿಸಿ ಪ್ರವೃತ್ತವಾಯಿತು. ಎಲೈ ಅಶ್ವಿನೀದೇವತೆಗಳೇ ಈ ವೇದವಿದ್ಯೆಯು ಶೂದ್ರರಿಗೂ ಮತ್ತು ಮನುಷ್ಯಸ್ತ್ರೀಯರಿಗೂ ತಿರೋಹಿತವಾಯಿತು. (ಏಕೆಂದರೆ ಅವರಿಗೆ ವೇದದ ಅಧಿಕಾರವಿಲ್ಲ) ಎಲೈ ಅಶ್ವಿನೀದೇವತೆಗಳೇ, (ಭಗವದ್ರೂಪಗಳೇ) ನಿಮ್ಮ ಅಂತರ್ಯಾಮಿಯಾದ ಮತ್ಸ್ಯ, ಹಯಗ್ರೀವ , ವ್ಯಾಸಾದಿ ರೂಪಗಳು ವೇದದ ಮೇಲಿನ ದ್ವೇಷದಿಂದ ವೇದವನ್ನು ತಮ್ಮ ಮುಖಗಳಿಂದ ಬಹಿಷ್ಕರಿಸಿದ ಮಧುಕೈಟಭಾದಿ ದೈತ್ಯರನ್ನು ಸಂಹರಿಸಿ ಸಜ್ಜನರನ್ನು ರಕ್ಷಣೆ ಮಾಡಲು ಲೋಕದಲ್ಲಿ ಸಜ್ಜನರ ಸಮೀಪದಲ್ಲಿ ಸಂಚರಿಸಿದವು. ಎಲೈ ಅಶ್ವಿನೀದೇವತೆಗಳೇ (ಭಗವದ್ರೂಪಗಳೇ) ಬ್ರಹ್ಮದೇವರ ಪ್ರಳಯರೂಪವಾದ ರಾತ್ರಿಯಲ್ಲಿ ಯಾರಿಂದಲೂ ನೋಡಲ್ಪಡದ ಆ ವೇದರಾಶಿಯನ್ನು ದಿನರೂಪವಾದ ಸೃಷ್ಟಿಕಾಲದಲ್ಲಿ ಹಯಗ್ರೀವ ರೂಪಿಯಾದ ನಾರಾಯಣನು ಅಸ್ವತಂತ್ರರಾದ ಬ್ರಹ್ಮಾದಿ ದೇವತೆಗಳಿಗೆ ಉಪದೇಶಮಾಡಿ ವಿಸ್ತಾರಮಾಡಿದನು. ಅಂತಹ ವೇದ ಪ್ರವರ್ತಕವಾದ ಭಗವಂತನ ಸನ್ನಿಧಾನ ವಿಶೇಷಪಾತ್ರರಾದ ಅಶ್ವಿನೀದೇವತೆಗಳೇ(ಅಂತಹ ಭಗವದ್ರೂಪಗಳೇ) ನಾನು ನಿಮ್ಮನ್ನು ಸ್ತೋತ್ರಮಾಡುತ್ತೇನೆ.

ಯುವಾಂ ದಿಶೋ ಜನಯಥೋ ದಶಾಗ್ರೇ
ಸಮಾನಮೂರ್ಧ್ನಿ ರಥತಾ ವಿಯಂತಿ |
ತಾಸಾಂ ಯಾನಮೃಷಯೋಽನುಪ್ರಯಾಂತಿ
ದೇವಾ ಮನುಷ್ಯಾಃ ಕ್ಷಿತಿಮಾಚರಂತಿ ॥69॥

ಎಲೈ ಅಶ್ವಿನೀದೇವತೆಗಳೇ, ಅಶ್ವಿನೀದೇವತೆಗಳ ಅಂತರ್ಗತವಾದ ಭಗವದ್ರೂಪಗಳೇ, ನೀವು ಮೊದಲು ಸೃಷ್ಟಿಕಾಲದಲ್ಲಿ ಹತ್ತು ದಿಕ್ಕುಗಳನ್ನೂ ಸೃಷ್ಟಿಸಿದಿರಿ. ಆ ಹತ್ತು ದಿಕ್ಕುಗಳ ತಲೆಯಮೇಲೆ ಸಂಚರಿಸುವ ಜ್ಯೋತಿಶ್ಚಕ್ರದಲ್ಲಿ ವಿಶಿಷ್ಟರಾದ ಸೂರ್ಯಚಂದ್ರಾದಿ ದೇವತೆಗಳು ಸಂಬದ್ಧರಾಗಿದ್ದಾರೆ. ಆ ಜ್ಯೋತಿಶ್ಚಕ್ರವು ಸಂಚರಿಸುತ್ತಿರಲು ಋಷಿಗಳು ಅದನ್ನು ಅನುಸರಿಸಿ ವಿಮಾನದಲ್ಲಿ ಸಂಚರಿಸುತ್ತಾರೆ. ಮನುಷ್ಯರೂ ಸಹ ಸತ್ಕರ್ಮಗಳಿಂದ, ತಮ್ಮ ಪುಣ್ಯಫಲದ ಭೋಗವಿರುವವರೆಗೆ ದೇವತೆಗಳಂತೆ ವಿಮಾನದಲ್ಲಿ ಸಂಚರಿಸುತ್ತಾರೆ. ದೇವತೆಗಳಾದರೊ ಯಾವಾಗಲೂ ಸಂಚರಿಸುತ್ತಾರೆ. ಮನುಷ್ಯರು ತಮ್ಮ ಪುಣ್ಯದ ಭೋಗವು ಮುಗಿದ ಮೇಲೆ ಭೂಮಿಯಲ್ಲಿ ವಾಸಿಸುತ್ತಾರೆ. ಅಂತಹ ಜ್ಯೋತಿಶ್ಚಕ್ರಪ್ರವರ್ತಕವಾದ ಅಶ್ವಿನೀದೇವತೆಗಳ ಅಂತರ್ಯಾಮಿಯಾದ ಭಗವದ್ರೂಪಗಳನ್ನು ಪ್ರಶಂಸಿಸುತ್ತೇನೆ.

ಯುವಾಂ ಪರ್ಣಾ ವೀರುಧೋ ವಿಶ್ವರೂಪಾ-
ಸ್ತೇ ವಿಕ್ಷಿಪಂತಾ ಭುವನಾನಿ ವಿಶ್ವಾ |
ತೇ ಭಾನವೋಽಪ್ಯನುಸೃತಾಶ್ಚರಂತಿ
ದೇವಾ ಮನುಷ್ಯಾಃ ಕ್ಷಿತಿಮಾಚರಂತಿ ॥70॥

ಎಲೈ ಅಶ್ವಿನೀದೇವತೆಗಳೇ, ನೀವು ಜಗತ್ತಿನಲ್ಲಿರುವ ರೋಗಾದಿಗಳನ್ನು ನಾಶಮಾಡುವವರಾಗಿದ್ದೀರಿ. ನಿಮ್ಮ ಆಶ್ರಮದಲ್ಲಿ ನಾನಾ ವರ್ಣಗಳಿಂದ ಕೂಡಿದ ಮರದಿಂದ ಉದುರಿದ ಎಲೆಗಳು ಬಳ್ಳಿಗಳು ಮತ್ತು ಪೊದೆಗಳು ಇವೆ. ಅವು ಸಹ ನಿಮ್ಮ ಮಂತ್ರೌಷಧದ ಪ್ರಭಾವದಿಂದ ಮತ್ತು ನಿಮ್ಮ ಮೇಲೆ ಬೀಸಿದ ಗಾಳಿಯ ಸಂಬಂಧದ ಪ್ರಭಾವದಿಂದ ರೋಗಗಳನ್ನು ನಾಶಮಾಡುತ್ತವೆ. ಸೂರ್ಯನ ಉಷ್ಣಕಿರಣಗಳೂ ಸಹ ನಿಮ್ಮನ್ನು ಅನುಸರಿಸಿ ನಿಮ್ಮ ಆಶ್ರಮದ ಲತಾವೃಕ್ಷಗಳನ್ನು ಒಣಗಿಸುವುದಿಲ್ಲ. ದೇವತೆಗಳು ಮತ್ತು ಮನುಷ್ಯರು ನಿಮ್ಮ ಆಶ್ರಮದಲ್ಲಿ ವಾಸಿಸುತ್ತಾರೆ. ಅಂತಹ ನಿಮ್ಮನ್ನು ಸ್ತೋತ್ರಮಾಡುತ್ತೇನೆ.

ಸಂತೌ ನಾಸತ್ಯಾವಶ್ವಿನಾ ವಾಹ್ವಯೇ ವಾಂ
ತತಃ ಸ್ರಜಂ ವಿಭೃಥಃ ಪುಷ್ಕರಸ್ಯ |
ಯೌ ನಾಸತ್ಯಾವಮೃತಾವೃತಾವೃಧಾ-
ವೃತೇ ದೇವಾಸ್ತತ್ಪ್ರಪದೇನ ಸೂತೇ ॥71॥

ಅಸಜ್ಜನರಿಗೆ ನಿಲುಕದ ಎಲೈ ಅಶ್ವಿನಿದೇವತೆಗಳೇ ಸತ್ಯವಾದ ನನ್ನ ಕಳೆದುಹೋದ ದೃಷ್ಟಿಯ ಪುನಃ ಪ್ರಾಪ್ತಿಯ ಸಲುವಾಗಿ ವಿಷ್ಣ್ವಾದಿ ದೇವತೆಗಳ ಜೊತೆಯಲ್ಲಿ ಅರವಿಂದಮಾಲೆಯನ್ನು ಧರಿಸಿದಂತಹ ಅಮೃತಪಾನವನ್ನು ಮಾಡುವುದರಿಂದ ಮರಣರಹಿತರಾದಂತಹ ಸತ್ಯದಿಂದ ಅಭಿವೃದ್ಧರಾದಂತಹ ನಿಮ್ಮನ್ನು ಸ್ಪರ್ಶಮಾತ್ರದಿಂದ ಗರ್ಭರಕ್ಷಣೆಯನ್ನು ಮಾಡಲು ಸಮರ್ಥವಾದ ಆ ನಿಮ್ಮ ಅರವಿಂದ ಮಾಲೆಯ ಜೊತೆಯಲ್ಲಿ ವಿಷ್ಣುಃವೀರ್ಯಂ ಕಲ್ಪಯತು ಎಂಬ ಮಂತ್ರದಿಂದ ಆಹ್ವಾನಿಸುತ್ತೇನೆ.

ಮುಖೇನ ಗರ್ಭಂ ಲಭತಾಂ ಯುವಾನೌ
ಗತಾಸುರಿಕ್ತಂ ಪ್ರಪದೇನ ಸೂತೇ |
ಸದ್ಯೋಽಜಾತೋ ಮಾತರಮತ್ತಿ ಗರ್ಭ-
ಸ್ತಾವಶ್ವಿನೌ ಮುಂಚಥೋ ಬೀಜಸೇಕಮ್ ॥72॥

ಎಲೈ ಅಶ್ವಿನಿದೇವತೆಗಳೇ ನಿಮ್ಮ ಅನುಗ್ರಹದಿಂದ ಯುವದಂಪತಿಗಳು ಗರ್ಭವನ್ನು ಹೊಂದಲಿ. ತಾಯಿಯು ಮೃತವಲ್ಲದ ಗರ್ಭವನ್ನು ಪಾದಗಳನ್ನು ಮುಂದೆ ಮಾಡಿಕೊಂಡು ಪ್ರಸವಿಸಲಿ. ಏಕೆಂದರೆ ಸುಖದಿಂದ ಹೊರಗೆ ಬರದ ಆ ಗರ್ಭವು ಕೆಲವು ಸಲ ತಾಯಿಯನ್ನೇ ಕೊಲ್ಲುತ್ತದೆ. ಮತ್ತು ತಾನೂ ಮೃತವಾಗುತ್ತದೆ. ಆದ್ದರಿಂದ ಅಶ್ವಿನಿದೇವತೆಗಳೇ ಆ ತಾಯಿ ಮತ್ತು ಗರ್ಭದ ಮೇಲೆ ಜೀವನಹೇತುಭೂತವಾದ ನಿಮ್ಮಿಂದ ಅಭಿಮಂತ್ರಿತವಾದ ಜಲವನ್ನು ಪ್ರೋಕ್ಷಣೆ ಮಾಡಿ. ಕಳೆದು ಹೋದ ನನ್ನ ಕಣ್ಣುಗಳಿಗೆ ಅಂತಹ

ಅಮೃತಸೇಕವನ್ನು ಮಾಡಿ ನನಗೆ ದೃಷ್ಟಿಯನ್ನು ನೀಡಿ ಎಂದು ನಿಮ್ಮನ್ನು ಆಹ್ವಾನಿಸುತ್ತಿದ್ದೇನೆ.
ಸೂತಃ
ಏವಮೃಗ್ಭಿಶ್ಚಾನ್ಯೈರಸ್ತುವತ್ ॥73॥
ಹೀಗೆ ಬೇರೆ ಮಂತ್ರಗಳಿಂದಲೂ ಸ್ತೋತ್ರವನ್ನು ಮಾಡಿದನು.
ಏವಂ ತೇನಾಭಿಷ್ಟುತಾವಶ್ವಿನಾವಾಜಗ್ಮತುಃ ॥74॥
ಹೀಗೆ ಉಪಮನ್ಯುವಿನಿಂದ ಸ್ತೋತ್ರ ಮಾಡಲ್ಪಟ್ಟ ಅಶ್ವಿನಿದೇವತೆಗಳು ಆಗಮಿಸಿದರು.
ಆಹತುಶ್ಚೈನಂ ಆವಾಂ ಪ್ರೀತೌ ಸ್ವಃ ಏಷ
ತೇಽಪೂಪಃ ಖಾದ್ಯೈನಮಿತಿ ॥75॥
ಅವರು ಅವನನ್ನು ಕುರಿತು ನಾವು ಪ್ರಸನ್ನರಾಗಿದ್ದೇವೆ. ಇದು ನಿನ್ನ ಸಲುವಾಗಿ ತಂದ ಅಪೂಪ. ಇದನ್ನು ತಿನ್ನು ಎಂದು ಹೇಳಿದರು.
ಸ ಏವಮುಕ್ತಸ್ತೌ ಪ್ರತ್ಯುವಾಚ | ನಾನೃತಮೂಚತುರ್ಭವಂತೌ |
ನ ತ್ವಹಮೇನಮಪೂಪಮುಪಯೋಕ್ತುಮುತ್ಸಹೇ
ಅನಿವೇದ್ಯ ಗುರವ ಇತಿ ॥76॥
ಹೀಗೆ ಹೇಳಲ್ಪಟ್ಟ ಉಪಮನ್ಯುವು ನೀವಿಬ್ಬರೂ ಸತ್ಯವನ್ನೇ ಹೇಳುತ್ತಿದ್ದೀರಿ. ಆದರೆ ನಾನು ಮಾತ್ರ ಗುರುಗಳಿಗೆ ನಿವೇದಿಸದೆ ಇದನ್ನು ತಿನ್ನಲು ಬಯಸುವುದಿಲ್ಲ ಎಂದು ಉತ್ತರವನ್ನು ಹೇಳಿದನು.
ತತಸ್ತಮಾಶ್ವಿನಾವೂಚತುಃ | ಆವಾಭ್ಯಾಂ ಭವತ ಉಪಾಧ್ಯಾಯೇನೈವಮಭಿಷ್ಟುತಾಭ್ಯಾಂ ಪ್ರೀತಾಭ್ಯಾಮಪೂಪೋ
ದತ್ತಃ ಉಪಯುಕ್ತಶ್ಚ ತೇನಾನಿವೇದ್ಯ ಗುರವೇ | ಅದ್ಯ ತ್ವಮಪಿ
ತಥೈವ ಕುರುಷ್ವ ಯಥಾ ಕೃತಮುಪಾಧ್ಯಾಯೇನೇತಿ ॥77॥
ಆಗ ಅವನನ್ನು ಕುರಿತ ಅಶ್ವಿನಿದೇವತೆಗಳು ನಾವಿಬ್ಬರೂ ನಿನ್ನ ಉಪಾಧ್ಯಾಯರು ಹೀಗೆಯೇ ಸ್ತೋತ್ರಮಾಡಿದಾಗ ಪ್ರಸನ್ನರಾಗಿ ಬಂದು ಅಪೂಪವನ್ನು ನೀಡಿದೆವು. ಅವರು ತಮ್ಮ ಗುರುಗಳಿಗೆ ನಿವೇದಿಸದೆಯೇ ಅದನ್ನು ಸ್ವೀಕರಿಸಿದರು. ಈ ದಿನ ನೀನೂ ಹಾಗೆಯೇ ಮಾಡು. ಉಪಾಧ್ಯಾಯರ ಮಾತು ಹಾಗಿರಲಿ ಎಂದು ಹೇಳಿದರು.
ಸ ಏವಮುಕ್ತಃ ಪ್ರತ್ಯುವಾಚ | ಏತೇನ ಪ್ರೀತ್ಯಾಽನುನಯೇನ ಭವಂತಾವಭಿಷ್ಟುತೌನೋತ್ಸಹೇಽಹಮನಿವೇದ್ಯೋಪಾಧ್ಯಾಯಾಯೋಪ-
ಭೋಕ್ತುಮಿತಿ ॥78॥
ಹೀಗೆ ಹೇಳಲ್ಪಟ್ಟ ಉಪಮನ್ಯುವು ಅವರನ್ನು ಕುರಿತು ನನ್ನ ಗುರುಗಳು ನನ್ನ ಮೇಲಿನ ಪ್ರೀತಿಯಿಂದ ಅಶ್ವಿನಿದೇವತೆಗಳನ್ನು ಸ್ತೋತ್ರ ಮಾಡು ಎಂದು ಹೇಳಿದ ಕಾರಣ ನಾನು ನಿಮ್ಮನ್ನು ಸ್ತೋತ್ರ ಮಾಡಿದೆ. (ಗುರುಗಳು ಮಾತ್ರ ಯಾರಿಂದಲೂ ಪ್ರೇರಿತರಾಗದೇ ನಿಮ್ಮನ್ನು ತಾವೇ ಸ್ತೋತ್ರ ಮಾಡಿದ್ದರು) ಆದ್ದರಿಂದ ನಾನು ಗುರುಗಳಿಗೆ ನಿವೇದಿಸದೆ ಇದನ್ನು ತಿನ್ನಲಾರೆ ಎಂದು ಹೇಳಿದನು.
ತಮಶ್ವಿನಾವಾಹತುಃ | ಪ್ರೀತೌ ಸ್ವಸ್ತವಾನಯಾ ಗುರುವೃತ್ತ್ಯಾಽಪೂಪಂ ಭಕ್ಷಯ | ಉಪಾಧ್ಯಾಯಸ್ಯ ತೇ ದೇಹಃ ಕಾರ್ಷ್ಣಾಯಸೋ ದತ್ತಃ | ಭವತೋ ಹಿರಣ್ಮಯೋ ಭವತಿ | ಚಕ್ಷುಷ್ಮಾಂಶ್ಚ ಭವಸಿ ಶ್ರೇಯಶ್ಚಾವಾಪ್ಸ್ಯಸೀತಿ ॥79॥
ಆಗ ಅಶ್ವಿನಿದೇವತೆಗಳು ಅವನನ್ನು ಕುರಿತು ನಿನ್ನ ಗುರುಭಕ್ತಿಯಿಂದ ನಾವು ಪ್ರಸನ್ನರಾಗಿದ್ದೇವೆ. ಈ ಅಪೂಪವನ್ನು ಭಕ್ಷಿಸು. ನಿನ್ನ ಉಪಾಧ್ಯಾಯರಿಗೆ ನಾವು ಕಬ್ಬಿಣದಂತಹ ದೇಹವನ್ನು ಕೊಟ್ಟಿದ್ದೇವೆ. ನಿನ್ನ ದೇಹವು ಸುವರ್ಣಮಯವಾಗುತ್ತದೆ. ನೀನು ನೇತ್ರಗಳನ್ನು ಹೊಂದುತ್ತೀಯೆ. ಶ್ರೇಯಸ್ಸನ್ನು ಪಡೆಯುವಿ ಎಂದು ಹೇಳಿದರು.
ಸ ಏವಮುಕ್ತೋಽಶ್ವಿಭ್ಯಾಂ ಲಬ್ಧಚಕ್ಷುರುಪಾಧ್ಯಾಯ- ಸಮೀಪಮಾಗತ್ಯೋಪಾಧ್ಯಾಯಮಭಿವಾದ್ಯಾಚಚ ಕ್ಷೇ ಚ ॥80॥
ಅಶ್ವಿನಿದೇವತೆಗಳಿಂದ ಹೀಗೆ ಹೇಳಲ್ಪಟ್ಟ ಆ ಉಪಮನ್ಯುವು ನೇತ್ರಗಳನ್ನು ಪಡೆದು, ಉಪಾಧ್ಯಾಯರ ಸಮೀಪಕ್ಕೆ ಬಂದು, ಉಪಾಧ್ಯಾಯರಿಗೆ ನಮಸ್ಕರಿಸಿ ಎಲ್ಲವನ್ನೂ ಹೇಳಿದನು.
ಸ ಚಾಸ್ಯ ಪ್ರೀತಿಮಾನಭೂತ್ | ಆಹ ಚೈನಂ ಯಥಾಶ್ವಿನಾವಾ- ಹತುಸ್ತಥಾತ್ವಂ ಶ್ರೇಯೋಽವಾಪ್ಸ್ಯಸಿ |
ಸರ್ವೇ ವೇದಾಃ ಪ್ರತಿಭಾಸ್ಯಂತೀತಿ ॥81॥
ಉಪಾಧ್ಯಾಯರು ಅವನಿಗೆ ಪ್ರಸನ್ನರಾದರು. ಅವರು ಅವನನ್ನು ಕುರಿತು ಅಶ್ವಿನಿದೇವತೆಗಳು ಹೇಳಿದಂತೆ ನಿನಗೆ ಶ್ರೇಯಸ್ಸು ಉಂಟಾಗುವುದು. ಎಲ್ಲಾ ವೇದಗಳೂ ನಿನಗೆ ಪ್ರತಿಭಾತವಾಗುವವು ಎಂದು ಹೇಳಿದರು.
ಏಷಾ ಪರೀಕ್ಷಾ ತಸ್ಯೋಪನ್ಯೋಃ ॥82॥
ಇದು ಆ ಉಪಮನ್ಯುವಿನ ಪರೀಕ್ಷೆ.
ಅಥಾಪರಃ ತಸ್ಯೈವಾಯೋದಸ್ಯ ಧೌಮ್ಯಸ್ಯ ಬೈದೋ ನಾಮ | ತಮುಪಾಧ್ಯಾಯಃ ಸಂದಿದೇಶ | ವತ್ಸ ಬೈದ ಇಹಾಸ್ಯತಾಂ ಭವತಾಽಸ್ಮದ್ಗೃಹೇ ಕಂಚಿತ್ಕಾಲಂ ಶುಶ್ರೂಷಣಪರೇಣ
ಭವಿತವ್ಯಂ ಶ್ರೇಯಸ್ತೇ ಭವಿಷ್ಯತೀತಿ ॥83॥
ಅನಂತರ ಅದೇ ಆಯೋದ ಧೌಮ್ಯರ ಇನ್ನೊಬ್ಬ ಶಿಷ್ಯನಿದ್ದನಷ್ಟೆ. ಅವನನ್ನು ಕುರಿತು ಉಪಾಧ್ಯಾಯರು ವತ್ಸ ಬೈದ ನನ್ನ ಮನೆಯಲ್ಲೇ ಸ್ವಲ್ಪ ಸಮಯ ಸುಶ್ರೂಷೆಯನ್ನು ಮಾಡಿಕೊಂಡಿರು ನಿನಗೆ ಶ್ರೇಯಸ್ಸು ಉಂಟಾಗುವುದು ಎಂದು ಆದೇಶವನ್ನು ನೀಡಿದರು.
ಸ ತಥೇತ್ಯುಕ್ತ್ವಾತ್ರ ದೀರ್ಘಕಾಲಂ ಗುರುಕುಲೇ ಗುರುಶುಶ್ರೂಷಾ- ಪರೋಽಭವತ್ ॥84॥
ಅವನು ಹಾಗೆಯೇ ಆಗಲಿ ಎಂದು ಗುರುಕುಲದಲ್ಲಿಯೇ ಬಹುಕಾಲ ಗುರುಶುಶ್ರೂಷಾರತನಾಗಿ ಇದ್ದನು.
ಸ ಗೌರಿವ ನಿತ್ಯಂ ಗುರುಧುರಿ ನಿಯುಜ್ಯಮಾನಃ ಶೀತೋಷ್ಣಕ್ಷುತ್ತೃ- ಷ್ಣಾದುಃಖಸಹಃ ಸರ್ವತ್ರಾಪ್ರತಿಕೂಲಃ | ತಸ್ಯ ಮಹತಾ ಕಾಲೇನ ಗುರುಃ ಪರಿತೋಷಂ ಜಗಾಮ ॥85॥
ಅವನು ಎತ್ತಿನಂತೆ ದೊಡ್ಡ ಭಾರವನ್ನು ಹೊತ್ತುಕೊಳ್ಳುವುದರಲ್ಲಿ ನಿಯೋಜಿಸಲ್ಪಟ್ಟನು. ಶೀತ, ಉಷ್ಣ, ಹಸಿವು, ನೀರಡಿಕೆ ಮೊದಲಾದ

ದುಃಖಗಳನ್ನು ಸಹಿಸಿಕೊಂಡು ಯಾವಾಗಲೂ ಪ್ರತಿಕೂಲನಾಗದೆಯೇ ಇದ್ದನು. ಎಷ್ಟೋ ಸಮಯ ಕಳೆದ ಮೇಲೆ ಗುರುಗಳು ಅವನಿಗೆ ಸಂತುಷ್ಟರಾದರು.
ತತ್ಪರಿತೋಷಾಚ್ಚ ಶ್ರೇಯಃ ಸರ್ವಜ್ಞತಾಂ ಚಾಪ |
ಏಷಾ ತಸ್ಯಾಪಿ ಪರೀಕ್ಷಾ ಬೈದಸ್ಯ ॥86॥
ಗುರುಗಳ ಪರಿತೋಷದಿಂದ ಅವನಿಗೆ ಶ್ರೇಯಸ್ಸು ಮತ್ತು ಸರ್ವಜ್ಞತ್ವವು ಉಂಟಾದವು. ಇದು ಆ ಬೈದನ ಪರೀಕ್ಷೆ.
ಸ ಉಪಾಧ್ಯಾಯೇನಾನುಜ್ಞಾತಃ ಸಮಾವೃತ್ತಸ್ತಸ್ಮಾದ್ ಗುರುಕುಲನಿವಾಸಾದ್ ಗೃಹಾಶ್ರಮಂ ಪ್ರತ್ಯಪದ್ಯತ ॥87॥
ಆ ಬೈದನು ಉಪಾಧ್ಯಾಯರ ಅನುಮತಿಯನ್ನು ಪಡೆದು ಆ ಗುರುಕುಲವಾಸದಿಂದ ಹಿಂದಿರುಗಿ ಬಂದು ಗೃಹಸ್ಥಾಶ್ರಮವನ್ನು ಸ್ವೀಕರಿಸಿದನು.
ತಸ್ಯಾಪಿ ಸ್ವಗೃಹೇ ವಸತಸ್ತ್ರಯಃ ಶಿಷ್ಯಾ ಬಭೂವುಃ | ಸ ಶಿಷ್ಯಾನ್ನ ಕಿಂಚಿದುವಾಚ ಕರ್ಮ ವಾ ಕ್ರಿಯತಾಂ ಶುಶ್ರೂಷಾ ವೇತಿ |
ದುಃಖಾಭಿಜ್ಞೋ ಗುರುಕುಲವಾಸಸ್ಯ ಶಿಷ್ಯಾನ್ ಪರಿಕ್ಲೇಶೇನ ಯೋಜಯಿತುಂ ನೇಯೇಷ ॥88॥
ತನ್ನ ಮನೆಯಲ್ಲಿ ವಾಸಿಸುವ ಅವನಿಗೂ ಸಹ ಮೂವರು ಶಿಷ್ಯರು ಇದ್ದರು. ಅವನು ಶಿಷ್ಯರನ್ನು ಕುರಿತು ಕೆಲಸವನ್ನು ಮಾಡಿ, ಅಥವಾ ಸೇವೆಯನ್ನು ಮಾಡಿ ಎಂಬ ಯಾವ ಮಾತನ್ನೂ ಆಡಲಿಲ್ಲ. ಗುರುಕುಲವಾಸದ ದುಃಖವನ್ನು ತಿಳಿದ ಅವನು ಶಿಷ್ಯರಿಗೆ ಕ್ಲೇಶವನ್ನುಂಟುಮಾಡಲು ಬಯಸಲಿಲ್ಲ.
ಅಥ ಕಸ್ಯಚಿತ್ಕಾಲಸ್ಯ ಬೈದಂ ಬ್ರಾಹ್ಮಣಂ ಜನಮೇಜಯಃ ಪೌಷ್ಯಶ್ಚ ಕ್ಷತ್ರಿಯಾವುಭಾವುಪಾಧ್ಯಾಯಂ ವರಯಾಂಚಕ್ರತುಃ ॥89॥
ಸ್ವಲ್ಪಸಮಯವು ಕಳೆದ ಮೇಲೆ ಕ್ಷತ್ರಿಯರಾದ ಜನಮೇಜಯ ಮತ್ತು ಪೌಷ್ಯ ಇಬ್ಬರೂ ಬ್ರಾಹ್ಮಣನಾದ ಬೈದನನ್ನು ಪುರೋಹಿತನನ್ನಾಗಿ ವರಿಸಿದರು. (ಸ್ವೀಕರಿಸಿದರು)
ಸ ಕದಾಚಿದ್ ಯಾಜ್ಯಕಾರ್ಯೇಣಾಭಿಪ್ರಸ್ಥಿತೋ ಹ್ಯುದಂಕಂ ನಾಮ ಶಿಷ್ಯಂ ಯೋಜಯಾಮಾಸ | ಭೋ ಉದಂಕ ಯತ್ಕಿಂಚಿದ್ ಗೃಹೇ ಮಾಂ ವಿನಾ ಪರಿಹೀಯತೇ ತದಿಚ್ಛಾಮಿ ಭವತಾಽ-
ಪರಿಹೀಯಮಾಣಂ ಕ್ರಿಯಮಾಣಮಿತಿ ॥90॥
ಅವನು ಒಮ್ಮೆ ಯಜ್ಞಸಂಬಂಧಿ ಕಾರ್ಯದ ಸಲುವಾಗಿ ಮನೆಯಿಂದ ಹೊರಗೆ ಹೊರಡುತ್ತಾ ಉದಂಕ ಎಂಬ ಶಿಷ್ಯನನ್ನು ಕುರಿತು, ಎಲೈ ಉದಂಕನೇ ನಾನು ಮನೆಯಲ್ಲಿ ಇಲ್ಲದಿದ್ದಾಗ ಏನಾದರೂ ನ್ಯೂನತೆ ಉಂಟಾದರೆ ನೀನು ಅದನ್ನು ಪರಿಪೂರ್ಣಗೊಳಿಸಬೇಕೆಂದು ನಾನು ಬಯಸುತ್ತೇನೆ ಎಂದು ನಿಯೋಜಿಸಿದನು.
ಸ ಏವಂ ಪ್ರತಿಸಮಾದಿಶ್ಯೋದಂಕಂ ಬೈದಃ ಪ್ರವಾಸಂ ಜಗಾಮ ॥
ಹೀಗೆ ಆ ಬೈದನು ಉದಂಕನಿಗೆ ಆದೇಶವನ್ನು ಕೊಟ್ಟು ಪ್ರವಾಸಕ್ಕೆ ಹೊರಟನು.
ಅಥೋದಂಕಃ ಶುಶ್ರೂಷುರ್ಗುರುನಿಯೋಗಮನುತಿಷ್ಠಮಾನಸ್ತತ್ರ ಗುರುಕುಲೇ ವಸತಿ ಸ್ಮ ॥92॥
ಅನಂತರ ಉದಂಕನು ಗುರುಗಳ ಆಜ್ಞೆಯಂತೆ ಗುರುಗಳ ಮನೆಯಲ್ಲಿ ಶುಶ್ರೂಷೆಯನ್ನು ಮಾಡುತ್ತಾ ಅಲ್ಲಿಯೇ ವಾಸಮಾಡಿದನು.
ಸ ವಸಂಸ್ತತ್ರೋಪಾಧ್ಯಾಯಸ್ತ್ರೀಭಿಃ ಸಹಿತಾಭಿರಾಹೂಯೋಕ್ತಃ | ಉಪಾಧ್ಯಾಯಾನೀ ತೇ ಋತುಮತೀ | ಉಪಾಧ್ಯಾಯಶ್ಚ ಪ್ರೋಷಿತಃ | ಅಸ್ಯಾ ಯಥಾಯಮೃತುರ್ವಂಧ್ಯೋ ನ ಭವಿಷ್ಯತಿ ತಥಾ ಕ್ರಿಯತಾಮೇತದು ನಾವಸೀದತೀತಿ ॥93॥
ಅವನು ಅಲ್ಲಿ ವಾಸಮಾಡುತ್ತಿರುವಾಗ ಉಪಾಧ್ಯಾಯರ ಸ್ತ್ರೀಯರೆಲ್ಲರೂ ಒಟ್ಟಿಗೆ ಬಂದು ಅವನನ್ನು ಕರೆದು ನಿನ್ನ ಉಪಾಧ್ಯಾಯರ ಪತ್ನಿಯು ಋತುಮತಿಯಾಗಿದ್ದಾಳೆ. ಉಪಾಧ್ಯಾಯರು ಪ್ರವಾಸಕ್ಕೆ ಹೋಗಿದ್ದಾರೆ. ಈ ಉಪಾಧ್ಯಾಯ ಪತ್ನಿಯ ಋತುವು ವ್ಯರ್ಥವಾಗಿ ನಾಶವಾಗಿ ಹೋಗದಂತೆ ನೀನು ಮಾಡಬೇಕು ಎಂದು ಹೇಳಿದರು.
ಸ ಏವಮುಕ್ತಃ ಸ್ತ್ರಿಯಃ ಪ್ರತ್ಯುವಾಚ | ನ ಮಯಾ ಸ್ತ್ರೀಣಾಂ ವಚನಾದಿದಮಕಾರ್ಯಂ ಕರ್ತವ್ಯಂ | ನ ಹ್ಯಹಮುಪಾಧ್ಯಾಯೇನ ಸಂದಿಷ್ಟಃ ಅಕಾರ್ಯಮಪಿ ತ್ವಯಾ ಕರ್ತವ್ಯಮಿತಿ ॥94॥
ಹೀಗೆ ಹೇಳಲ್ಪಟ್ಟ ಉದಂಕನು ಆ ವನಿತೆಯರನ್ನು ಕುರಿತು, ನಾನು ಸ್ತ್ರೀಯರಾದ ನಿಮ್ಮ ಮಾತಿನಂತೆ ಈ ಅಕಾರ್ಯವನ್ನು ಮಾಡಲಾರೆ. ನನಗೆ ಉಪಾಧ್ಯಾಯರು ನೀನು ಆಕಾರ್ಯವನ್ನು ಮಾಡಬೇಕೆಂಬ ಆದೇಶವನ್ನು ನೀಡಿಲ್ಲ ಎಂದು ಹೇಳಿದನು.
ತಸ್ಯ ಪುನರುಪಾಧ್ಯಾಯಃ ಕಾಲಾಂತರೇ ಗೃಹಾನುಪಜಗಾಮ
ತಸ್ಮಾತ್ ಪ್ರವಾಸಾತ್ ॥95॥
ಅವನ ಉಪಾಧ್ಯಾಯರು ಕಾಲಾಂತರದಲ್ಲಿ ಆ ಪ್ರವಾಸದಿಂದ ಮನೆಗೆ ಹಿಂದಿರುಗಿದರು.
ಸ ತಸ್ಯ ತದ್ ವೃತ್ತಾಂತಮಶೇಷತ ಉಪಲಭ್ಯ ಪ್ರೀತಿಮಾನಭೂತ್॥
ಅವರು ಉದಂಕನ ಎಲ್ಲಾ ವೃತ್ತಾಂತವನ್ನೂ ತಿಳಿದು ಅವನ ಮೇಲೆ ಸಂತುಷ್ಟರಾದರು.
ಉವಾಚ ಚೈನಂ ವತ್ಸೋದಂಕ ಕಿಂ ತೇ ಪ್ರಿಯಂ
ಕರವಾಣಿ ಧರ್ಮತಃ ಶುಶ್ರೂಷಿತೋಽಸ್ಮಿ ಭವತಾ |
ತೇನ ಪ್ರೀತಿಃ ಪರಸ್ಪರೇಣ ನೌ ಸಂವೃದ್ಧಾ |
ತದನುಜಾನೇ ಸರ್ವಾಮೇವ ಸಿದ್ಧಿಂ ಪ್ರಾಪ್ಸ್ಯಸಿ ಗಮ್ಯತಾಮಿತಿ ॥97॥
ಅವನನ್ನು ಕುರಿತು ವತ್ಸ ಉದಂಕ, ನಾನು ನಿನಗೆ ಏನು ಪ್ರಿಯವನ್ನು ಮಾಡಲಿ? ನೀನು ಧರ್ಮದಿಂದ ನನ್ನ ಸೇವೆಯನ್ನು ಮಾಡಿದ್ದೀಯೆ. ಅದರಿಂದ ನಮ್ಮಿಬ್ಬರಿಗೂ ಪರಸ್ಪರ ಪ್ರೀತಿಯುಂಟಾಗಿದೆ. ಆದ್ದರಿಂದ ನಾನು ಅನುಮತಿಯನ್ನು ನೀಡುತ್ತಿದ್ದೇನೆ. ನೀನು ಎಲ್ಲಾ ಸಿದ್ಧಿಗಳನ್ನೂ ಹೊಂದುವಿ. ಹೋಗಿ ಬಾ ಎಂದು ಹೇಳಿದರು.
ಸ ಏವಮುಕ್ತಃ ಪ್ರತ್ಯುವಾಚ | ಕಿಂ ತೇ ಪ್ರಿಯಂ ಕರವಾಣೀತಿ ॥98॥
ಹೀಗೆ ಹೇಳಲ್ಪಟ್ಟ ಉದಂಕನು ನಿಮಗೆ ನಾನು ಏನು ಪ್ರಿಯವನ್ನು ಮಾಡಲಿ ಎಂದು ಕೇಳಿದನು.

ಏವಮಪ್ಯಾಹ ಯಚ್ಚಾಧರ್ಮೇಣ ವಿಬ್ರೂತೇ ಯಚ್ಚಾಧರ್ಮೇಣ ಪೃಚ್ಛತಿ| ತಯೋರನ್ಯತರಃ ಪ್ರೈಷೀ ವಿದ್ವೇಷಂ ವಾ ನಿಗಚ್ಛತಿ ॥99॥
ಶಿಷ್ಯನು ಹೀಗೆ ಹೇಳಿದ ಮೇಲೆ ಗುರುಗಳು ಹೇಳಿದರು. ಯಾರು ಅಧರ್ಮದಿಂದ ಪ್ರಶ್ನೆಯನ್ನು ಮಾಡುತ್ತಾರೋ, ಮತ್ತು ಯಾರು ಅಧರ್ಮದಿಂದ ಉತ್ತರವನ್ನು ಹೇಳುತ್ತಾರೋ, ಅವರಲ್ಲಿ ಸೇವಕನಾಗಲೀ, ಸೇವ್ಯನಾಗಲೀ ದ್ವೇಷವನ್ನು ಹೊಂದುತ್ತಾರೆ ಎಂದು ಹೇಳಿದರು.
ನಾನು ಹೋಗಿ ಬಾ ಎಂದು ಅನುಮತಿಯನ್ನು ಕೊಟ್ಟಮೇಲೆ ನಿನ್ನ ಈ ಪ್ರಶ್ನೆಯು ಅಧರ್ಮವಾದುದು. ಅಧರ್ಮದ ಪ್ರಶ್ನೆಯನ್ನು ಕೇಳಿದರೆ, ಅಧರ್ಮದಿಂದ ಉತ್ತರವನ್ನು ಕೊಟ್ಟರೆ, ಶಿಷ್ಯನು ಅಧರ್ಮದ ಪ್ರಶ್ನೆಯನ್ನು ಕೇಳಿದನು ಎಂದು ಗುರುವಿಗಾಗಲೀ, ಗುರುವು ಅಸಾಧ್ಯವಾದ ಕಾರ್ಯವನ್ನು ಹೇಳಿದನೆಂದು ಶಿಷ್ಯನಿಗಾಗಲೀ ದ್ವೇಷವುಂಟಾಗುತ್ತದೆ ಎಂದು ಅಭಿಪ್ರಾಯ.
ಅಹಮನುಜ್ಞಾತೋ ಭವತಾ | ಇಷ್ಟಂ ತೇ ಗುರ್ವರ್ಥಮುಪಹರ್ತುಮಿತಿ ॥
ನಾನು ನಿಮ್ಮಿಂದ ಅನುಮತಿಯನ್ನು ಪಡೆದಿದ್ದೇನೆ. ನಿಮಗೆ ಇಷ್ಟವಾದ ಗುರುದಕ್ಷಿಣೆಯನ್ನು ತಂದುಕೊಡಲು ನಾನು ಬಯಸುತ್ತೇನೆ.
ತೇನೈವಮುಕ್ತ ಉಪಾಧ್ಯಾಯಃ ಪ್ರತ್ಯುವಾಚ |
ವತ್ಸೋದಂಕ ಉಷ್ಯತಾಂ ತಾವದಿತಿ ॥101॥
ಅವನಿಂದ ಹೀಗೆ ಹೇಳಲ್ಪಟ್ಟ ಉಪಾಧ್ಯಾಯರು ವತ್ಸ ಉದಂಕ ಸ್ವಲ್ಪ ಸಮಯ ಇಲ್ಲಿಯೇ ವಾಸಮಾಡು ಎಂದು ಹೇಳಿದರು.
ಸ ಕದಾಚಿತ್ ತಮುಪಾಧ್ಯಾಯಮಾಹೋದಂಕಃ ಆಜ್ಞಾಪಯತು ಭವಾನ್ ಕಿಮುಪಹರಾಮಿ ಗುರ್ವರ್ಥಮಿತಿ ॥102॥
ಆ ಉದಂಕನು ಒಮ್ಮೆ ಆ ಉಪಾಧ್ಯಾಯರನ್ನು ಕುರಿತು ನಿಮಗೆ ಏನು ಗುರುದಕ್ಷಿಣೆಯನ್ನು ಕೊಡಲಿ ಎಂದು ಆಜ್ಞೆಯನ್ನು ಮಾಡಿ ಎಂದು ಹೇಳಿದನು.
ತಮುಪಾಧ್ಯಾಯಃ ಪ್ರತ್ಯುವಾಚ | ವತ್ಸೋದಂಕ ಬಹುಶೋ ಮಾಂ ಚೋದಯಸಿ ಗುರ್ವರ್ಥಮುಪಹರೇಯಮಿತಿ |
ತಚ್ಛೈನಾಮುಪಾಧ್ಯಾಯಾನೀಂ ಗಚ್ಛ ಪೃಚ್ಛ ಕಿಮುಪಹರಾಮಿ ಗುರ್ವರ್ಥಮಿತಿ | ಏಷಾ ಯದ್ ಬ್ರವೀತಿ ತದುಪಹರಸ್ವೇತಿ ॥103॥
ಅವನನ್ನು ಕುರಿತು ಉಪಾಧ್ಯಾಯರು ವತ್ಸ ಉದಂಕ ನೀನು ಮತ್ತೆ ಮತ್ತೆ ಗುರುದಕ್ಷಿಣೆಯನ್ನು ತಂದುಕೊಡುತ್ತೇನೆಂದು ನನಗೆ ಒತ್ತಾಯವನ್ನು ಮಾಡುತ್ತಿದ್ದೀಯೆ, ನೀನು ಹೋಗಿ ನನ್ನ ಪತ್ನಿಯನ್ನು ಏನು ಗುರುದಕ್ಷಿಣೆಯನ್ನು ತಂದುಕೊಡಲಿ ಎಂದು ಕೇಳು. ಅವಳು ಏನು ಹೇಳುತ್ತಾಳೆಯೋ, ಅದನ್ನು ತೆಗೆದುಕೊಂಡು ಬಾ ಎಂದು ಉತ್ತರವನ್ನು ಕೊಟ್ಟರು.
ಏವಮುಕ್ತ ಉಪಾಧ್ಯಾಯೇನೋಪಾಧ್ಯಾಯಾನೀಮಪೃಚ್ಛತ್ |
ಭಗವತಿ ಉಪಾಧ್ಯಾಯೇನಾಸ್ಮ್ಯನುಜ್ಞಾತೋ ಗಂತುಮ್| ತದಿಚ್ಛಾಮೀಷ್ಟಂ ತೇ ಗುರ್ವರ್ಥಮುಪಹೃತ್ಯಾನೃಣೋ ಗಂತುಮ್ |
ತದಾಜ್ಞಾಪಯತು ಭವತೀ ಕಿಮುಪಹರಾಮಿ ಗುರ್ವರ್ಥಮಿತಿ ॥
ಉಪಾಧ್ಯಾಯರಿಂದ ಹೀಗೆ ಹೇಳಲ್ಪಟ್ಟವನಾಗಿ ಉದಂಕನು ಅವರ ಪತ್ನಿಯನ್ನು ಸಮೀಪಿಸಿ, ಪೂಜ್ಯರೇ, ಉಪಾಧ್ಯಾಯರು ನನಗೆ ಮನೆಗೆ ಹಿಂದಿರುಗುವುದಕ್ಕೆ ಅನುಮತಿಯನ್ನು ನೀಡಿದ್ದಾರೆ. ನಾನು ನಿಮಗೆ ಇಷ್ಟವಾದ ಗುರುದಕ್ಷಿಣೆಯನ್ನು ಕೊಟ್ಟು ಋಣಮುಕ್ತನಾಗಿ ಹೋಗಲು ಬಯಸುತ್ತೇನೆ. ಪೂಜ್ಯರಾದ ನೀವು ಏನು ಗುರುದಕ್ಷಿಣೆಯನ್ನು ತರಬೇಕೆಂದು ಆಜ್ಞೆಯನ್ನು ಮಾಡಬೇಕು ಎಂದು ಕೇಳಿದನು.
ಸೈವಮುಕ್ತೋಪಾಧ್ಯಾಯಾನ್ಯುದಂಕಂ ಪ್ರತ್ಯುವಾಚ |
ಗಚ್ಛ ಪೌಷ್ಯಂ ರಾಜಾನಮ್ |
ತಸ್ಯ ಕ್ಷತ್ರಿಯಯಾ ಪಿನದ್ಧೇ ಕುಂಡಲೇ ಸ್ತಃ |
ಕುಂಡಲೇ ಭಿಕ್ಷಿತ್ವಾ ಕ್ಷತ್ರಿಯಾಂ ತನ್ನಯಸ್ವ |
ಇತಶ್ಚತುರ್ಥೇಽಹನಿ ಪುಣ್ಯಕರ್ಮ ಭವಿತಾ
ಪಿನದ್ಧಾಭ್ಯಾಂ ತಾಭ್ಯಾಂ ಕುಂಡಲಾಭ್ಯಾಂ ತತ್ರ
ಶೋಭಮಾನಾ ಬ್ರಾಹ್ಮಣಾನ್ ಪರಿವೇಷ್ಟುಮಿಚ್ಛಾಮಿ |
ತಥಾ ತ್ವಂ ಸಂಪಾದಯಸ್ವ ಶ್ರೇಯೋ ಹಿ ತೇ ಭಿಕ್ಷಾಂ ಕುರ್ವತ ಇತಿ ॥
ಹೀಗೆ ಹೇಳಲ್ಪಟ್ಟ ಉಪಾಧ್ಯಾಯರ ಪತ್ನಿಯು ಉದಂಕನನ್ನು ಕುರಿತು ಪೌಷ್ಯರಾಜನ ಬಳಿಗೆ ಹೋಗು. ಅವನ ಹೆಂಡತಿಯು ಕಿವಿಯಲ್ಲಿ ಕುಂಡಲಗಳನ್ನು ಧರಿಸಿದ್ದಾಳೆ. ಅವಳ ಬಳಿ ಆ ಕುಂಡಲಗಳನ್ನು ಬೇಡಿ ತೆಗೆದುಕೊಂಡು ಬಾ. ಇವತ್ತಿಗೆ ನಾಲ್ಕನೆಯ ದಿವಸದಲ್ಲಿ ಇಲ್ಲಿ ಒಂದು ಪುಣ್ಯಕರ್ಮವಿದೆ. ನಾನು ಆ ಕುಂಡಲಗಳನ್ನು ಧರಿಸಿ ಕಂಗೊಳಿಸುತ್ತಾ ಬ್ರಾಹ್ಮಣರಿಗೆ ಭೋಜನವನ್ನು ಬಡಿಸಲು ಇಷ್ಟಪಡುತ್ತೇನೆ. ನೀನು ಹಾಗೆ ಆ ಕುಂಡಲಗಳನ್ನು ಸಂಪಾದಿಸು. ಅಂತಹ ಭಿಕ್ಷೆಯನ್ನು ತಂದುಕೊಟ್ಟರೆ ನಿನಗೆ ಶ್ರೇಯಸ್ಸಾಗುವುದು ಎಂದು ಹೇಳಿದಳು.
ಸ ಏವಮುಕ್ತ ಉಪಾಧ್ಯಾಯಾನ್ಯಾ ಪ್ರಾತಿಷ್ಠದುದಂಕಃ ॥106॥
ಉಪಾಧ್ಯಾಯಪತ್ನಿಯಿಂದ ಹೀಗೆ ಹೇಳಲ್ಪಟ್ಟವನಾಗಿ ಉದಂಕನು ಹೊರಟನು.
ಪಥಿ ಗಚ್ಛನ್ ಅಪಶ್ಯದೃಷಭಮತಿಪ್ರಮಾಣಂ ತಮಧಿರೂಢಂ ಚ
ಪುರುಷ ಮತಿಪ್ರಮಾಣಮೇವ ॥107॥
ದಾರಿಯಲ್ಲಿ ಹೋಗುತ್ತಾ ಒಂದು ದೊಡ್ಡಪ್ರಮಾಣದ ವೃಷಭವನ್ನೂ ಅದರ ಮೇಲೆ ಕುಳಿತಿದ್ದ ದೊಡ್ಡಪ್ರಮಾಣದ ಒಬ್ಬ ಪುರುಷನನ್ನೂ ನೋಡಿದನು.
ಪುರುಷ ಉದಂಕಮಭ್ಯಭಾಷತ | ಉದಂಕ ಏತಸ್ಯ
ಪುರೀಷಮೃಷಭಸ್ಯ ಭಕ್ಷಯಸ್ವೇತಿ ॥108॥

ಆ ಪುರುಷನು ಉದಂಕನನ್ನು ಕುರಿತು ಉದಂಕ ಈ ವೃಷಭದ ಸಗಣಿಯನ್ನು ತಿನ್ನು ಎಂದು ಹೇಳಿದನು.
ಸ ಏವಮುಕ್ತೋ ನೈಚ್ಛತ್ ॥109॥
ಹೀಗೆ ಹೇಳಲ್ಪಟ್ಟ ಉದಂಕನು ಅದನ್ನು ಬಯಸಲಿಲ್ಲ.
ತಮಾಹ ಪುರುಷೋ ಭೂಯಃ ಭಕ್ಷಯಸ್ವೋದಂಕ ಮಾ
ವಿಚಾರಯ ಉಪಾಧ್ಯಾಯೇನಾಪಿ ತೇ ಭಕ್ಷಿತಮಿತಿ ॥110॥
ಆಗ ಆ ಪುರುಷನು ಅವನನ್ನು ಕುರಿತು ಮತ್ತೆ ಉದಂಕ ಇದನ್ನು ತಿನ್ನು, ವಿಚಾರ ಮಾಡಬೇಡ. ನಿನ್ನ ಗುರುಗಳೂ ಇದನ್ನು ಭಕ್ಷಿಸಿದ್ದಾರೆ ಎಂದು ಹೇಳಿದನು.
ಸ ಏವಮುಕ್ತೋ ಬಾಢಮಿತ್ಯುಕ್ತ್ವಾ ತತಸ್ತಸ್ಯ ವೃಷಭಸ್ಯ ಪುರೀಷಂ ಮೂತ್ರಂ ಚ ಭಕ್ಷಯಿತ್ವೋದಂಕಃ ಪ್ರತಸ್ಥೇ ಯತ್ರ ಸ ಪೌಷ್ಯಃ ॥111॥
ಹೀಗೆ ಹೇಳಲ್ಪಟ್ಟ ಉದಂಕನು ಹಾಗೆಯೇ ಆಗಲಿ ಎಂದು ಹೇಳಿ ಆ ವೃಷಭದ ಗೋಮಯವನ್ನು ಮತ್ತು ಗೋಮೂತ್ರವನ್ನು ಸ್ವೀಕರಿಸಿ, ಪೌಷ್ಯರಾಜನು ಇದ್ದ ಕಡೆಗೆ ಹೊರಟನು.
ತಮುಪೇತ್ಯಾಪಶ್ಯದುದಂಕ ಆಸೀನಮ್ |
ಸ ತಮುಪೇತ್ಯಭಿನಂದ್ಯೋವಾಚ |
ಅರ್ಥೀ ಭಗವಂತಮಭಿಗತೋಽಸ್ಮೀತಿ ॥112॥
ಉದಂಕನು ಅವನನ್ನು ಸಮೀಪಿಸಿ ಕುಳಿತಿರುವ ಅವನನ್ನು ನೋಡಿದನು. ಅವನು ಅವನ ಸಮೀಪಕ್ಕೆ ಹೋಗಿ ಅವನನ್ನು ಜಯಶಬ್ದದಿಂದ ಅಭಿನಂದಿಸಿ, ನಾನು ಒಂದು ಅಪೇಕ್ಷೆಯಿಂದ ಭಾಗ್ಯವಂತನಾದ ನಿನ್ನ ಬಳಿಗೆ ಬಂದಿದ್ದೇನೆ ಎಂದು ಹೇಳಿದನು.
ಸ ತಮಭಿವಾದ್ಯೋವಾಚ | ಭಗವನ್ ಪೌಷ್ಯಃ ಖಲ್ವಹಂ ಕಿಂ ತೇ ಕರವಾಣಿ ತದಾಜ್ಞಾಪಯತು ಭವಾನಿತಿ ॥113॥
ಪೌಷ್ಯನು ಉದಂಕನಿಗೆ ನಮಸ್ಕರಿಸಿ, ಪೂಜ್ಯರೇ ನಾನು ಪೌಷ್ಯ. ನಿಮಗೆ ಏನು ಮಾಡಲಿ? ಅದನ್ನು ನೀವು ಆಜ್ಞಾಪಿಸಿ ಎಂದು ಹೇಳಿದನು.
ತಮುವಾಚೋದಂಕೋ ಗುರ್ವರ್ಥೇ ಕುಂಡಲಾಭ್ಯಾಮರ್ಥ್ಯಾ- ಗತೋಽಸ್ಮೀತಿ | ಕ್ಷತ್ರಿಯಯಾ ಪಿನದ್ಧೇ ಕುಂಡಲೇ ಭವಾನ್ ದಾತುಮರ್ಹತೀತಿ ॥114॥
ಅವನನ್ನು ಕುರಿತು ಉದಂಕನು ಗುರುದಕ್ಷಿಣೆಯ ಸಲುವಾಗಿ ಕುಂಡಲಗಳನ್ನು ಅಪೇಕ್ಷಿಸಿ ನಾನು ಬಂದಿದ್ದೇನೆ. ನಿನ್ನ ಪತ್ನಿಯು ಧರಿಸಿರುವ ಕುಂಡಲಗಳನ್ನು ನೀನು ನನಗೆ ಕೊಡಬೇಕು ಎಂದು ಹೇಳಿದನು.
ತಂ ಪೌಷ್ಯಃ ಪ್ರತ್ಯುವಾಚ | ಪ್ರವಿಶ್ಯಾಂತರಂ ಕ್ಷತ್ರಿಯಾ
ಯಾಚ್ಯತಾಮಿತಿ ॥115॥
ಅವನನ್ನು ಕುರಿತು ಪೌಷ್ಯನು ಒಳಗೆ ಹೋಗಿ ನನ್ನ ಪತ್ನಿಯನ್ನು ಯಾಚಿಸು ಎಂದು ಉತ್ತರವನ್ನು ನೀಡಿದನು.
ಸ ತೇನೈವಮುಕ್ತಃ ಪ್ರವಿಶ್ಯಾಂತಃಪುರಂ ಕ್ಷತ್ರಿಯಾಂ ತಾಂ ನಾಪಶ್ಯತ್ ॥
ಪೌಷ್ಯನಿಂದ ಹೀಗೆ ಹೇಳಲ್ಪಟ್ಟ ಉದಂಕನು ಅಂತಃಪುರವನ್ನು ಪ್ರವೇಶಿಸಿದಾಗ ಅಲ್ಲಿ ಪೌಷ್ಯಪತ್ನಿಯು ಕಾಣಲಿಲ್ಲ.
ಸ ಪೌಷ್ಯಂ ಪುನರುವಾಚ | ನ ಯುಕ್ತಂ ಭವತಾ ವಯಮನೃತೇನಾಚರ್ತುಮ್ | ನ ಹಿ ಸಾ ಕ್ಷತ್ರಿಯಾಽಂತಃಪುರೇ ಸನ್ನಿಹಿತಾ | ನೈನಾಂ ಪಶ್ಯಾಮೀತಿ ॥117॥
ಅವನು ಪುನಃ ಪೌಷ್ಯನಿದ್ದೆಡೆಗೆ ಬಂದು ನೀನು ನನಗೆ ಸುಳ್ಳನ್ನು ಹೇಳುವುದು ಯುಕ್ತವಲ್ಲ. ನಿನ್ನ ಪತ್ನಿಯು ಅಂತಃಪುರದಲ್ಲಿ ಇಲ್ಲ. ಅವಳನ್ನು ನಾನು ಕಾಣುತ್ತಿಲ್ಲ ಎಂದು ಹೇಳಿದನು.
ಏವಮುಕ್ತಃ ಪೌಷ್ಯಸ್ತಂ ಪ್ರತ್ಯುವಾಚ | ತತ್ರ ಸನ್ನಿಹಿತೈವ ಸಾ ಸಂಪ್ರತಿ ಉಚ್ಛಿಷ್ಟಃ ಸ್ಮರ ತಾವತ್ ನ ಹಿ ಸಾ ಕ್ಷತ್ರಿಯಾ ಉಚ್ಛಿಷ್ಟೇನಾಶುಚಿನಾ
ಶಕ್ಯಾ ದ್ರಷ್ಟುಂ ಪತಿವ್ರತಾತ್ವಾತ್ ಏಷಾ ನಾಶುಚಿನಾ ತ್ವಯಾ
ದೃಷ್ಟವ್ಯಾ ಭವಿಷ್ಯತೀತಿ ॥118॥
ಹೀಗೆ ಹೇಳಲ್ಪಟ್ಟ ಪೌಷ್ಯನು ಉದಂಕನನ್ನು ಕುರಿತು, ಅವಳು ಅಲ್ಲಿಯೇ ಇದ್ದಾಳೆ. ನೀನು ಎಲ್ಲಿ ಅಶುಚಿಯಾಗಿದ್ದೀಯೆ, ಹೇಗೆ ಅಶುಚಿಯಾಗಿದ್ದೀಯೆಂದು ಸ್ಮರಿಸಿಕೋ. ಪತಿವ್ರತೆಯಾದ ಅವಳು ಅಶುಚಿಗಳಾದವರಿಂದ ನೋಡಲ್ಪಡುವುದಿಲ್ಲ. ನೀನೂ ಸಹ ಅವಳನ್ನು ಅಶುಚಿಯಾಗಿ ನೋಡಬಾರದು ಎಂದು ಉತ್ತರವನ್ನು ಕೊಟ್ಟನು.
ಅಥೈವಮುಕ್ತ ಉದಂಕಃ ಸ್ಮೃತ್ವೋವಾಚ | ಅಸ್ತಿ ಖಲು ಮಯಾ ತು ಭಕ್ಷಿತಂ, ನೋಪಸ್ಪೃಷ್ಟಮಾಗಚ್ಛತೇತಿ ॥119॥
ಹೀಗೆ ಹೇಳಲ್ಪಟ್ಟ ಉದಂಕನು ನೆನಪಿಗೆ ತಂದುಕೊಂಡು, ಹೌದು ನಾನು ದಾರಿಯಲ್ಲಿ ಬರುತ್ತಾ ಭಕ್ಷಣವನ್ನು ಮಾಡಿದ್ದೇನೆ. ಕೈಕಾಲುಗಳನ್ನು ತೊಳೆದಿಲ್ಲ ಎಂದು ಹೇಳಿದನು.
ಪೌಷ್ಯಃ ಪ್ರತ್ಯುವಾಚ | ತದೇವ ಹಿ ಗಚ್ಛತೋಪಸ್ಪೃಷ್ಟಮಿತಿ ॥120॥
ಪೌಷ್ಯನು ಪುನಃ ಅವನನ್ನು ಕುರಿತು ನೀನು ಬರುವಾಗ ಅದೇ ಅಶುಚಿತ್ವವು ಉಂಟಾಗಿದೆಯೆಂದು ಹೇಳಿದನು.
ಅಥೋದಂಕಸ್ತಥೇತ್ಯುಕ್ತ್ವಾ ಪ್ರಾಂಙ್ಮುಖ ಉಪವಿಶ್ಯ ಪ್ರಕ್ಷಾಲಿತಪಾಣಿಪಾದವದನಃ ಶುದ್ಧಾಭಿಃ ಹೃದಯಂಗಮಾಭಿರ-ಫೇನಾಭಿರಮುಕ್ತಾಭಿರಶಬ್ದಾಭಿರದ್ಭಿರ್ದ್ವಿರುಪಸ್ಪೃಶ್ಯ ತ್ರಿಃ ಪೀತ್ವಾ ದ್ವಿಃ ಪರಿಮೃಜ್ಯ ಖಾನ್ಯದ್ಭಿರುಪಸ್ಪೃಶ್ಯಾಂತಃಪುರಂ ಪ್ರವಿಶ್ಯ ತಾಂ ಕ್ಷತ್ರಿಯಾಮಪಶ್ಯತ್ ॥121॥
ಆಗ ಉದಂಕನು ಹೌದು ಎಂದು ಹೇಳಿ, ಪೂರ್ವಾಭಿಮುಖವಾಗಿ ಕುಳಿತು ಕೈಕಾಲುಗಳನ್ನು ಮತ್ತು ಮುಖವನ್ನು ತೊಳೆದು ಶುದ್ಧವಾದ ಹೃದಯಂಗಮವಾದ, ನೊರೆಯಿಲ್ಲದ, ಸುರಿಯದಿದ್ದಂತಹ ಶಬ್ದರಹಿತವಾದ ನೀರಿನಿಂದ ಎರಡುಬಾರಿ ಉಪಸ್ಪರ್ಶನೆ ಮಾಡಿ, ಮೂರುಬಾರಿ ಆಚಮನವನ್ನು ಮಾಡಿ, ಎರಡುಬಾರಿ ಇಂದ್ರಿಯಗಳನ್ನು ಪರಿಮಾರ್ಜನೆ ಮಾಡಿ, ಅಂತಃಪುರವನ್ನು ಪ್ರವೇಶಿಸಿ, ಆ

ಪೌಷ್ಯಪತ್ನಿಯನ್ನು ನೋಡಿದನು.
ಸಾ ಚ ದೃಷ್ಟ್ವೋದಂಕಮಭ್ಯುತ್ಥಾಯಾಭಿವಾದ್ಯೋವಾಚ |
ಸ್ವಾಗತಂ ತೇ ಭಗವನ್ ಆಜ್ಞಾಪಯ ಕಿಂ ಕರವಾಣೀತಿ ॥122॥
ಅವಳಾದರೋ ಉದಂಕನನ್ನು ನೋಡಿ ಆಸನದಿಂದ ಮೇಲೆದ್ದು ಬಂದು ನಮಸ್ಕರಿಸಿ, ಪೂಜ್ಯನೇ ನಿನಗೆ ಸ್ವಾಗತ. ನಾನು ಏನು ಮಾಡಲಿ ಎಂದು ಆಜ್ಞಾಪಿಸು ಎಂದು ಹೇಳಿದಳು.
ಸ ತಾಮುವಾಚ | ಏತೇ ಕುಂಡಲೇ ಭಿಕ್ಷಿತೇ ಗುರ್ವರ್ಥಂ ಮೇ ದಾತುಮರ್ಹಸೀತಿ ॥123॥
ಉದಂಕನು ಅವಳನ್ನು ಕುರಿತು ಈ ನಿನ್ನ ಕುಂಡಲಗಳನ್ನು ಗುರುದಕ್ಷಿಣೆಯ ಸಲುವಾಗಿ ಬೇಡುತ್ತಿದ್ದೇನೆ. ಅವುಗಳನ್ನು ನನಗೆ ಕೊಡು ಎಂದು ಹೇಳಿದನು.
ಸಾ ಪ್ರೀತಾ ತೇನ ತಸ್ಯ ಸಂಭಾವನೇನಪಾತ್ರಮಯಮನತಿಕ್ರಮಣೀ- ಯಶ್ಚೇತಿ ಮತ್ವಾ ಸ್ವೇ ಕುಂಡಲೇ ಅವಮುಚ್ಯಾಸ್ಮೈ ಪ್ರಾಯಚ್ಛತ್ ॥
ಅವಳು ಸಂತೋಷಗೊಂಡು ಅವನ ಮೇಲಿದ್ದ ಪೂಜ್ಯಭಾವನೆಯಿಂದ ಇಂತಹ ಪಾತ್ರವು ದೊರಕಿದಾಗ ಎಂದೂ ಅತಿಕ್ರಮಣಮಾಡಬಾರದೆಂದು ತಿಳಿದು ತನ್ನ ಕುಂಡಲಗಳನ್ನು ಕಳಚಿ, ಅವನಿಗೆ ನೀಡಿದಳು.
ಆಹ ಚೈನಮ್ | ಏತೇ ಕುಂಡಲೇ ತಕ್ಷಕೋ ನಾಗರಾಜಃ
ಪ್ರಾರ್ಥಯತಿ | ಅಪ್ರಮತ್ತೋ ನೇತುಮರ್ಹಸೀತಿ ॥125॥
ಮತ್ತು ಅವನನ್ನು ಕುರಿತು ಈ ಕುಂಡಲಗಳನ್ನು ನಾಗರಾಜನಾದ ತಕ್ಷಕನು ಬೇಡುತ್ತಾನೆ. ಎಚ್ಚರಿಕೆಯಿಂದ ತೆಗೆದುಕೊಂಡು ಹೋಗಬೇಕು ಎಂದು ಹೇಳಿದಳು.
ಏವಮುಕ್ತಸ್ತಾಂ ಕ್ಷತ್ರಿಯಾಂಪ್ರತ್ಯುವಾಚ | ಭವತೀ ಸುನಿರ್ವೃತಾ ಭವತು ಭವತ್ಯಾ ಯದುಕ್ತಂ ತದಹಂ ಕರೋಮಿ |
ಮಾಮಶಕ್ತಸ್ತಕ್ಷಕೋ ನಾಗರಾಜೋ ಧರ್ಷಯಿತುಮಿತಿ ॥126॥
ಹೀಗೆ ಹೇಳಲ್ಪಟ್ಟ ಉದಂಕನು ಆ ಕ್ಷತ್ರಿಯಳನ್ನು ಕುರಿತು ನೀನು ಸಮಾಧಾನದಿಂದಿರು. ನೀನು ಹೇಳಿದಂತೆಯೇ ನಾನು ತೆಗೆದುಕೊಂಡು ಹೋಗುತ್ತೇನೆ. ನಾಗರಾಜನಾದ ತಕ್ಷಕನು ನನಗೆ ದರ್ಷಣವನ್ನು ಮಾಡಲು ಅಸಮರ್ಥನಾಗಿದ್ದಾನೆ ಎಂದು ಹೇಳಿದನು.
ಸ ಏವಮುಕತ್ವ ಕ್ಷತ್ರಿಯಾಮಾಮಂತ್ರ್ಯ ಪೌಷ್ಯಸಕಾಶಮಾಗಚ್ಛತ್ ॥
ಅವನು ಆ ಕ್ಷತ್ರಿಯಳನ್ನು ಕುರಿತು ಹೀಗೆ ಹೇಳಿ ಅವಳ ಅನುಮತಿಯನ್ನು ಪಡೆದು, ಪೌಷ್ಯರಾಜನ ಸಮೀಪಕ್ಕೆ ಬಂದನು.
ಸ ತಂ ದೃಷ್ಟ್ವೋವಾಚ | ಭೋಃ ಪೌಷ್ಯ ಪ್ರೀತೋಽಸ್ಮೀತಿ ॥128॥
ಉದಂಕನು ಅವನನ್ನು ನೋಡಿ ಎಲೈ ಪೌಷ್ಯರಾಜನೇ ನಾನು ಸಂತುಷ್ಟನಾಗಿದ್ದೇನೆ ಎಂದು ಹೇಳಿದನು.
ತಂ ಪೌಷ್ಯಃ ಪ್ರತ್ಯುವಾಚ | ಭಗವಂಶ್ಚಿರಮಾಸಾದ್ಯತೇ ಪಾತ್ರಮ್ | ಭವಾಂಶ್ಚ ಗುಣವಾನತಿಥಿಃ ಪ್ರಕರಿಷ್ಯೇಽಹಂ ಶ್ರಾದ್ಧಂ ಕ್ಷಣಃ ಕ್ರಿಯತಾಮಿತಿ ॥129॥
ಅವನನ್ನು ಕುರಿತು ಪೌಷ್ಯನು ಪೂಜ್ಯನೇ, ಬಹುಕಾಲದಲ್ಲಿ ಒಂದೊಂದು ಸತ್ಪಾತ್ರವು ದೊರೆಯುತ್ತದೆ. ನೀನು ಗುಣವುಳ್ಳ ಅತಿಥಿ. ಅದಕ್ಕಾಗಿ ಶ್ರಾದ್ಧವನ್ನು ಮಾಡುವೆನು. ಸ್ವಲ್ಪ ಅವಕಾಶವನ್ನು ಮಾಡಿಕೊಳ್ಳಬೇಕು ಎಂದು ಹೇಳಿದನು.
ತಮುದಂಕಃ ಪ್ರತ್ಯುವಾಚ | ಕೃತಕ್ಷಣ ಏವಾಸ್ಮಿ, ಶೀಘ್ರುಮಿಚ್ಛಾಮಿ | ಯಥೋಪಪನ್ನಮನ್ನಮುಪಹೃತಂ ಭವತೇತಿ ॥130॥
ಅವನನ್ನು ಕುರಿತು ಉದಂಕನು ಸ್ವಲ್ಪಸಮಯವನ್ನು ಇಟ್ಟುಕೊಂಡೇ ಬಂದಿದ್ದೇನೆ. ಹೇಗಾದರೂ ಸಿದ್ಧವಾಗಿರುವ ಅನ್ನವನ್ನು ಆದಷ್ಟು ಜಾಗ್ರತೆಯಾಗಿ ನೀನು ನನಗೆ ಕೊಡಬೇಕೆಂದು ನಾನು ಬಯಸುತ್ತೇನೆ ಎಂದು ಹೇಳಿದನು.
ಸ ತಥೇತ್ಯುಕತ್ವ ಯಥೋಪಪನ್ನೇನೈವ ಸಂಯೋಜಯಾಮಾಸ ॥
ಪೌಷ್ಯನು ಹಾಗೆಯೇ ಆಗಲಿ ಎಂದು ಹೇಳಿ, ಸಿದ್ಧವಾದ ಅನ್ನದಿಂದಲೇ ಶ್ರಾದ್ಧವನ್ನು ಮಾಡಿ ಅವನಿಗೆ ಬಡಿಸಿದನು.
ಅಥೋದಂಕಃ ಶೀತಮನ್ನಂ ಸಕೇಶಂ ದೃಷ್ಟ್ವಾ ಅಶುಚ್ಯೇತದನ್ನಮಿತಿ ಮತ್ವಾ ಪೌಷ್ಯಮುವಾಚ | ಯಸ್ಮಾನ್ಮೇಽಶುಚ್ಯನ್ನಂ ದದಾಸಿ ತಸ್ಮಾದಂಧೋ ಭವಿಷ್ಯಸೀತಿ ॥131॥
ಆಗ ಉದಂಕನು ತಣ್ಣಗಿದ್ದು, ಕೇಶದಿಂದ ಕೂಡಿದ ಆ ಅನ್ನವನ್ನು ನೋಡಿ ಇದು ಅಶುದ್ಧವೆಂದು ತಿಳಿದು ಪೌಷ್ಯನನ್ನು ಕುರಿತು ನನಗೆ ಅಶುದ್ಧವಾದ ಅನ್ನವನ್ನು ನೀಡಿದ ಕಾರಣದಿಂದ ನೀನು ಅಂಧನಾಗುವಿ ಎಂದು ಹೇಳಿದನು.
ತಂ ಪೌಷ್ಯಃ ಪ್ರತ್ಯುವಾಚ | ಯಸ್ಮಾತ್ ತ್ವಮದುಷ್ಟಮನ್ನಂ
ದೂಷಯಸಿ ತಸ್ಮಾದನಪತ್ಯೋ ಭವಿಷ್ಯಸೀತಿ ॥132॥
ಪೌಷ್ಯನು ಅವನನ್ನು ಕುರಿತು ಅದುಷ್ಟವಾದ ಅನ್ನವನ್ನು ದೂಷಣೆ ಮಾಡುತ್ತಿರುವುದರಿಂದ ನೀನು ಪುತ್ರರನ್ನು ಪಡೆಯುವುದಿಲ್ಲ ಎಂದು ಹೇಳಿದನು.
ಸೋಽಥ ತಸ್ಯಾನ್ನಸ್ಯಾಪ್ಯಶುಚಿಭಾವಮವಗಮಯಾಮಾಸ ॥133॥
ಉದಂಕನು ಆಗ ಆ ಅನ್ನವು ಅಶುಚಿಯಾಗಿರುವುದನ್ನು ರಾಜನಿಗೆ ತೋರಿಸಿದನು.
ಅಥ ತದನ್ನಂ ಮುಕ್ತಕೇಶ್ಯಾ ಸ್ತ್ರಿಯೋಪಹೃತಂ ಸಕೇಶಮಾಲೋಕ್ಯೋದಂಕಂ ಪ್ರಸಾದಯಾಮಾಸ | ಭಗವನ್ನಜ್ಞಾನಾದೇತದನ್ನಂ ಸಕೇಶಮುಪಹೃತಂ ಶೀತಂ ಚ | ತತ್ ಕ್ಷಾಮಯೇ ಭವಂತಂ ನ ಭವೇಯಮಂಧ ಇತಿ
॥134॥
ಆಗ ರಾಜನು ಆ ಅನ್ನವನ್ನು ಕೂದಲುಗಳನ್ನು ಕೆದರಿಕೊಂಡಿದ್ದ ವನಿತೆಯು ತಂದ ಕಾರಣದಿಂದ ಕೂದಲುಗಳಿಂದ ಸಹಿತವಾದುದನ್ನು ನೋಡಿ ಉದಂಕನನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದನು. ಪೂಜ್ಯನೇ ಅಜ್ಞಾನದಿಂದ ಈ ಆರಿಹೋದ ಮತ್ತು ಕೂದಲು ಸಹಿತವಾದ ಅನ್ನವನ್ನು ನಿನಗೆ ಬಡಿಸಿದ್ದಾಯಿತು. ನಿನ್ನ ಕ್ಷಮೆಯನ್ನು ಕೇಳುತ್ತಿದ್ದೇನೆ. ನಾನು ಅಂಧನಾಗುವುದು ಬೇಡ ಎಂದು ಪ್ರಾರ್ಥಿಸಿದನು.

ತಮುದಂಕಃ ಪ್ರತ್ಯುವಾಚ | ನ ಮೃಷಾ ಬ್ರವೀಮಿ ಭೂತ್ವಾಽಂಧೋ ಅಚಿರಾದನಂಧೋ ಭವಿಷ್ಯಸೀತಿ | ಮಮಾಪಿ ಶಾಪೋ ನ ಭವೇದ್ ಭವದ್ದತ್ತ ಇತಿ ॥135॥
ಅವನನ್ನು ಕುರಿತು ಉದಂಕನು ನನ್ನ ಮಾತು ಸುಳ್ಳಾಗುವುದಿಲ್ಲ ಸ್ವಲ್ಪ ಸಮಯ ಕುರುಡನಾಗಿ ನೀನು ಬೇಗ ದೃಷ್ಟಿಯನ್ನು ಹೊಂದುವಿ. ನನಗೂ ಸಹ ನೀನು ಕೊಟ್ಟ ಶಾಪವು ತಟ್ಟುವುದಿಲ್ಲ ಎಂದು ಹೇಳಿದನು.
ತಂ ಪೌಷ್ಯಃ ಪ್ರತ್ಯುವಾಚ | ನಾಹಂ ಶಕ್ತಃ ಶಾಪಂ ಪ್ರತ್ಯಾದಾತುಂ ನ ಹಿ ಮೇ ಮನ್ಯುರದ್ಯಾಪ್ಯುಪಶಮಂ ಗಚ್ಛತೀತಿ ॥136॥
ಪೌಷ್ಯನು ಅವನನ್ನು ಕುರಿತು ನನ್ನ ಶಾಪವನ್ನು ಹಿಂದೆ ತೆಗೆದುಕೊಳ್ಳಲು ನಾನು ಸಮರ್ಥನಲ್ಲ. ನನ್ನ ಕೋಪವು ಇನ್ನೂ ಉಪಶಮನವನ್ನು ಹೊಂದಿಲ್ಲ ಎಂದು ಹೇಳಿದನು.
ಕಿಮೇತದ್ ಭವತಾ ನ ಜ್ಞಾಯತೇ ಯಥಾ ॥137॥
ನೀನು ಈ ವಿಷಯವನ್ನು ಕೇಳಿಲ್ಲವೇ? ಅದೇನೆಂದರೆ -
ನವನೀತಂ ಹೃದಯಂ ಬ್ರಾಹ್ಮಣಸ್ಯ
ವಾಚಿ ಕ್ಷುರೋ ನಿಹಿತಸ್ತೀಕ್ಷ್ಣಧಾರಃ |
ವಿಪರೀತಮೇತದುಭಯಂ ಕ್ಷತ್ರಿಯಸ್ಯ
ವಾಙ್ ನವನೀತಂ ಹೃದಯಂ ತೀಕ್ಷ್ಣಧಾರಮ್ ॥138॥
ಬ್ರಾಹ್ಮಣನ ಮನಸ್ಸು ನವನೀತದಂತಿರುವುದು. ಅವನ ಮಾತಿನಲ್ಲಿ ಹರಿತವಾದ ಅಲುಗುಳ್ಳ ಕತ್ತಿಯು ಇಡಲ್ಪಟ್ಟಿದೆ. ಕ್ಷತ್ರಿಯನಿಗೆ ಎರಡೂ ವಿಪರೀತವಾದುದು. ಮಾತು ಬೆಣ್ಣೆಯಂತಿರುವುದು, ಹೃದಯವು ಮಾತ್ರ ಕತ್ತಿಯಂತೆ ತೀಕ್ಷ್ಣವಾದುದು.
ತದೇವಂಗತೇ ನ ಶಕ್ತೋಽಹಂ ತೀಕ್ಷ್ಣಹೃದಯತ್ವಾತ್ ತಂ ಶಾಪಂ ಪ್ರತ್ಯಾಖ್ಯಾತುಂ ಗಮ್ಯತಾಮಿತಿ ॥139॥
ಪರಿಸ್ಥಿತಿ ಹೀಗಿರುವಾಗ ಕ್ರೂರಹೃದಯನಾಗಿರುವ ಕಾರಣ ನಾನು ಆ ಶಾಪವನ್ನು ಹಿಂದಕ್ಕೆ ತೆಗೆದುಕೊಳ್ಳಲಾರೆ. ಹೋಗಿ ಬಾ ಎಂದು ಹೇಳಿದನು.
ತಮುದಂಕಃ ಪ್ರತ್ಯುವಾಚ | ಭವತಾಹಮನ್ನಸ್ಯಾಶುಚಿಭಾವಂ
ಗಮಯಿತ್ವಾ ಪ್ರತ್ಯನುನೀತಃ | ಪ್ರಾಕ್ ತ್ವೇತದಭಿಹಿತಮ್ | ಯಸ್ಮಾದ್ದುಷ್ಟಮನ್ನಂ ದೂಷಯಸಿ ತಸ್ಮಾದನಪತ್ಯೋ ಭವಿಷ್ಯಸೀತಿ | ದುಷ್ಟೇ ಚಾನ್ನೇ ಮಮ ಶಾಪೋ ನ ಭವಿಷ್ಯತಿ | ಸಾಧಯಾಮಸ್ತಾವದಿತ್ಯುಕ್ತ್ವಾ ಪ್ರಾತಿಷ್ಠದುದಂಕಃ ತೇ ಕುಂಡಲೇ ಗೃಹೀತ್ವಾ| ಸೋಽಪಶ್ಯತ್ಪಥಿ ನಗ್ನಂ ಶ್ರಮಣಂ ಪೃಷ್ಠತ ಆಗಚ್ಛಂತಂ ಮುಹುರ್ಮುಹುರ್ದೃಶ್ಯಮಾನಂ
ಮುಹುರ್ಮುಹುರದೃಶ್ಯಮಾನಂ ॥
ಅವನನ್ನು ಕುರಿತು ಉದಂಕನು ಹೀಗೆ ಹೇಳಿದನು. ನಾನು ನಿನಗೆ ಅನ್ನವು ಅಶುದ್ಧಿಯಾಗಿದೆ ಎಂದು ತೋರಿಸಿ ಅನುನಯವನ್ನು ಮಾಡಿದ್ದೇನೆ. ಅದಕ್ಕಿಂತ ಮೊದಲು ನೀನು ಹೇಳಿದ ಮಾತು ಅದುಷ್ಟವಾದ ಅನ್ನವನ್ನು ದೂಷಿಸುತ್ತಿರುವುದರಿಂದ ನಿನಗೆ ಮಕ್ಕಳಾಗದಿರಲಿ ಎಂದು. ಅನ್ನವು ದುಷ್ಟವಾಗಿರುವ ಕಾರಣ ನನಗೆ ನಿನ್ನ ಶಾಪವು ತಟ್ಟುವುದಿಲ್ಲ. ಈಗಂತೂ ಹೋಗಿಬರುತ್ತೇನೆ ಎಂದು ಹೇಳಿ ಆ ಕುಂಡಲಗಳನ್ನು ತೆಗೆದುಕೊಂಡು ಉದಂಕನು ಹೊರಟನು. ಅವನು ದಾರಿಯಲ್ಲಿ ಹೋಗುತ್ತಾ ತನ್ನನ್ನು ಹಿಂಬಾಲಿಸುತ್ತಿರುವ ಒಮ್ಮೊಮ್ಮೆ ಕಣ್ಣಿಗೆ ಕಾಣಿಸುವ, ಒಮ್ಮೊಮ್ಮೆ ಕಣ್ಣಿಗೆ ಕಾಣಿಸದಿರುವ ನಗ್ನವಾದ ಒಬ್ಬ ಸನ್ಯಾಸಿಯನ್ನು ನೋಡಿದನು.
ಅಥೋದಂಕಸ್ತೇ ಕುಂಡಲೇ ಭೂವೌ ನಿಕ್ಷಿಪ್ಯೋದಕಾರ್ಥಂ
ಪ್ರತಸ್ಥೇ ॥141॥
ಆಗ ಆ ಉದಂಕನು ಆ ಕುಂಡಲಗಳನ್ನು ನೆಲದ ಮೇಲಿಟ್ಟು ನೀರನ್ನು ಹುಡುಕಲು ಹೊರಟನು.
ತಸ್ಮಿನ್ನಂತರೇ ಶ್ರಮಣಉಪಸೃತ್ಯ ಕುಂಡಲೇ ಗೃಹೀತ್ವಾ ಪ್ರಾದ್ರುವತ್ ॥
ಆ ಮಧ್ಯದಲ್ಲಿ ಆ ಸನ್ಯಾಸಿಯು ಸಮೀಪಕ್ಕೆ ಬಂದು ಕುಂಡಲಗಳನ್ನು ಎತ್ತಿಕೊಂಡು ಓಡಿಹೋದನು.
ತಮುದಂಕೋಭಿಸೃತ್ಯ ಜಗ್ರಾಹ | ಸ ತದ್ರೂಪಂ ವಿಹಾಯ ತಕ್ಷಕರೂಪಂ ಗೃಹೀತ್ವಾ ಸಹಸಾ ಧರಣ್ಯಾಂ ವಿವೃತಂ ಮಹದ್ ಬಿಲಂ ಪ್ರವಿವೇಶ | ಪ್ರವಿಶ್ಯ ನಾಗಲೋಕೇ ಸ್ವಭವನಮಗಚ್ಛತ್ ॥143॥
ಉದಂಕನು ಅವನ ಹಿಂದೆ ಓಡಿಹೋಗಿ ಅವನನ್ನು ಹಿಡಿದುಕೊಂಡನು. ಆ ಸನ್ಯಾಸಿಯು ಆ ಸನ್ಯಾಸಿಯ ರೂಪವನ್ನು ತ್ಯಜಿಸಿ ತಕ್ಷಕನ ರೂಪವನ್ನು ಧರಿಸಿ ಇದ್ದಕ್ಕಿದ್ದಂತೆಯೇ ಭೂಮಿಯಲ್ಲಿದ್ದ ದೊಡ್ಡ ಬಿಲದೊಳಗೆ ಪ್ರವೇಶ ಮಾಡಿದನು. ಪ್ರವೇಶವನ್ನು ಮಾಡಿ ನಾಗಲೋಕದಲ್ಲಿ ತನ್ನ ಮನೆಗೆ ಹೋದನು.
ತದ್ಬಿಲಂ ದಂಡಕಾಷ್ಠೇನ ಚ ಸ ಖನಿತುಂ ನಾಶಕತ್ | ತಂ ಕ್ಲಿಶ್ಯಮಾನ-
ಮಿಂದ್ರೋಽಪಶ್ಯತ್ | ವಜ್ರಂ ಪ್ರೇಷಯಾಮಾಸ | ಗತ್ವಾಸ್ಯ ಬ್ರಾಹ್ಮಣಸ್ಯ ಸಾಹಾಯ್ಯಂ ಕುರುಷ್ವೇತಿ | ಅಥ ವಜ್ರಂ ದಂಡಕಾಷ್ಠಮಾವಿಶ್ಯ ತಂ ಬಿಲಂ ವಿದಾರಯಾಮಾಸ | ತಮುದಂಕೋಽನ್ವಾವಿವೇಶ | ತೇನೈವ ಬಿಲೇನ ಚ ಪ್ರವಿಶ್ಯ ತಂ ನಾಗಲೋಕಮನೇಕಬಂಧಪ್ರಾಸಾದಹರ್ಮ್ಯವಲಭೀ- ಭಿತ್ತಿಶತಸಂಕುಲಮುಚ್ಚಾವಚ ಸ್ಥಾನಾವಕೀರ್ಣಮಪಶ್ಯತ್ ॥144॥
ಉದಂಕನಿಗೆ ತನ್ನ ದಂಡಕಾಷ್ಠದಿಂದ ಆ ಬಿಲವನ್ನು ಅಗೆಯಲು ಸಾಧ್ಯವಾಗಲಿಲ್ಲ. ಹೀಗೆ ಕಷ್ಟಪಡುತ್ತಿದ್ದ ಅವನನ್ನು ಇಂದ್ರನು ನೋಡಿದನು. ಅವನು ನೀನು ಹೋಗಿ ಈ ಬ್ರಾಹ್ಮಣನಿಗೆ ಸಹಾಯವನ್ನು ಮಾಡು ಎಂದು ಹೇಳಿ ತನ್ನ ವಜ್ರಾಯುಧವನ್ನು ಕಳುಹಿಸಿಕೊಟ್ಟನು. ಆಗ ವಜ್ರವು ದಂಡಕಾಷ್ಠದಲ್ಲಿ ಸನ್ನಿಹಿತವಾಗಿ ಆ ಬಿಲವನ್ನು ಸೀಳಿಹಾಕಿತು. ಉದಂಕನು ಆ ಬಿಲದೊಳಗೆ ನಡೆದನು. ಆ ಬಿಲದ ಮೂಲಕವೇ ಪ್ರವೇಶಿಸಿ ನಾಗಲೋಕವನ್ನು ತಲುಪಿ ಅಲ್ಲಿ ಅನೇಕ ಪ್ರಾಸಾದಗಳನ್ನೂ, ಹರ್ಮ್ಯಗಳನ್ನೂ, ವಲಭೀಗಳನ್ನೂ, ನೂರಾರು ಗೋಡೆಗಳಿರುವ ಉಚ್ಚಾವಚ ಸ್ಥಾನಗಳನ್ನೂ ಎಲ್ಲವನ್ನೂ ನೋಡಿದನು.
ತೇನೈವ ಬಿಲೇನ ಪ್ರವಿಶ್ಯ ಚ ನಾಗಾನಸ್ತೌಷೀದೇಭಿಃ ಶ್ಲೋಕೈಃ ॥
ಆ ಬಿಲದಿಂದಲೇ ಪ್ರವೇಶ ಮಾಡಿದ ಅವನು ಆ ನಾಗಗಳನ್ನು ಈ ಶ್ಲೋಕಗಳಿಂದ ಸ್ತೋತ್ರಮಾಡಿದನು.

ಯಾವಂತೋ ನಾಗರಾಜಾನಃ ಸರ್ಪಾಸ್ತ್ವಮಿತವಿಕ್ರಮಾಃ |
ವರ್ಷಂತ ಇವ ಜೀಮೂತಾಃ ಸವಿದ್ಯುತ್ಪವನೇರಿತಾಃ ॥146॥
ಮಿಂಚು ಮತ್ತು ಗಾಳಿಯಿಂದ ಪ್ರೇರಿತವಾದ ಮಳೆಯನ್ನು ಸುರಿಸುವ ಮೋಡದಂತಿರುವ ಅಮಿತವಿಕ್ರಮವನ್ನು ಹೊಂದಿದ ಎಷ್ಟು ಸರ್ಪಗಳು ಮತ್ತು ಶ್ರೇಷ್ಠವಾದ ನಾಗಗಳು ಇವೆಯೋ.
ಸುರೂಪಾ ಬಹುರೂಪಾಶ್ಚಾಪ್ಯಥ ಕಲ್ಯಾಣಕುಂಡಲಾಃ
ಆದಿತ್ಯವನ್ನಾಗಲೋಕೇ ರೇಜುರೈರಾವತೋದ್ಭವಾಃ ॥147॥
ಒಳ್ಳೆಯ ರೂಪವನ್ನು ಧರಿಸಿದ, ಅನೇಕ ರೂಪವನ್ನು ಧರಿಸಿದ ಕಲ್ಯಾಣಕುಂಡಲಗಳುಳ್ಳ ಐರಾವತವಂಶದಲ್ಲಿ ಹುಟ್ಟಿದ ಆ ಸರ್ಪಗಳೆಲ್ಲವೂ ನಾಗಲೋಕದಲ್ಲಿ ಸೂರ್ಯನಂತೆ ಬೆಳಗುತ್ತವೆ.
ಬಹೂನಿ ನಾಗವೇಶ್ಮಾನಿ ಗಂಗಾಯಾಸ್ತೀರ ಉತ್ತರೇ |
ಇಚ್ಛಂತೋಽರ್ಕಾಂಶುಸೇವಾಯೈ ವಸ್ತುಮೈರಾವತಂ ವಿನಾ ॥148॥
ಗಂಗೆಯ ಉತ್ತರತೀರದಲ್ಲಿ ಅನೇಕ ನಾಗವೇಶ್ಮಗಳಿವೆ. ಐರಾವತವನ್ನು ಬಿಟ್ಟು ಉಳಿದ ನಾಗಗಳು ಸೂರ್ಯನ ಕಿರಣಗಳನ್ನು ಸೇವಿಸಲು ಅಲ್ಲಿ ವಾಸಿಸಲು ಇಷ್ಟಪಡುತ್ತವೆ.
ಶತಾನ್ಯಶೀತಿರಷ್ಟೌ ಚ ಸಹಸ್ರಾಣಿ ಚ ವಿಂಶತಿಃ |
ಸರ್ಪಾಣಾಂ ಪ್ರಗ್ರಹಾ ಯಾಂತಿ ಧೃತರಾಷ್ಟ್ರೋ ಜಯೇದಿತಿ ॥149॥
ಎಂಭತ್ತೆಂಟು ಸಹಸ್ರ ಮತ್ತು ಇನ್ನು ಇಪ್ಪತ್ತು ಸಹಸ್ರಸಂಖ್ಯೆಯ ಪರಿವಾರರೂಪವಾದ ಸರ್ಪಗಳು ನಾಗರಾಜನಾದ ಧೃತರಾಷ್ಟ್ರನಿಗೆ ಜಯವಾಗಲಿ ಎಂದು ಹೇಳುತ್ತಾ ಅವನ ಮುಂದೆ ಹೋಗುತ್ತಾರೆ.
ಯೇ ಚೇದಮುಪಶೃಣ್ವಂತಿ ಯೇ ಚ ದೂರಂ ಪರಾಗತಾಃ |
ಅಹಮೈರಾವತಜ್ಯೇಷ್ಠಭ್ರಾತೃಭ್ಯೋಽಕರವಂ ನಮಃ ॥150॥
ಈ ನನ್ನ ವಚನವನ್ನು ಯಾರು ಕೇಳುತ್ತಿದ್ದಾರೋ, ಮತ್ತು ಯಾರು ದೂರದಲ್ಲಿದ್ದಾರೆಯೋ, ನಾನು ಐರಾವತಕುಲದಲ್ಲಿ ಹುಟ್ಟಿದ ಐರಾವತನನ್ನೇ ಜ್ಯೇಷ್ಠವಾಗಿವುಳ್ಳ ಆ ಎಲ್ಲಾ ಸರ್ಪಗಳನ್ನು ನಮಸ್ಕರಿಸುತ್ತಿದ್ದೇನೆ.
ಯಸ್ಯ ವಾಸಃ ಕುರುಕ್ಷೇತ್ರೇ ಖಾಂಡವೇ ಚಾಭವತ್ ಸದಾ |
ತಂ ಕಾದ್ರವೇಯಮಸ್ತೌಷಂ ಕುಂಡಲಾರ್ಥಾಯ ತಕ್ಷಕಮ್ ॥151॥
ಯಾವ ತಕ್ಷಕನು ಕುರುಕ್ಷೇತ್ರದಲ್ಲಿ ಖಾಂಡವವನದಲ್ಲಿ ವಾಸಮಾಡುತ್ತಾನೆಯೋ, ಅಂತಹ ಕದ್ರುದೇವಿಯ ಮಗನಾದ ತಕ್ಷಕನನ್ನು ಕುಂಡಲಗಳನ್ನು ಪಡೆಯುವ ಸಲುವಾಗಿ ನಾನು ಸ್ತೋತ್ರಮಾಡುತ್ತಿದ್ದೇನೆ.
ತಕ್ಷಕಶ್ಚಾಶ್ವಸೇನಶ್ಚ ನಿತ್ಯಂ ಸಹಚರಾವುಭೌ |
ಕುರುಕ್ಷೇತ್ರೇ ನ್ಯವಸತಾಂ ನದೀಮಿಕ್ಷುಮತೀಮನು ॥152॥
ತಕ್ಷಕ ಮತ್ತು ಅಶ್ವಸೇನ ಇವರಿಬ್ಬರೂ ಯಾವಾಗಲೂ ಸಹಚರರು. ಅವರು ಕುರುಕ್ಷೇತ್ರದಲ್ಲಿ ಇಕ್ಷುಮತೀ ನದಿಯ ದಡದಲ್ಲಿ ವಾಸಿಸುತ್ತಾರೆ.
ನದೀಂ ಮಂದಾಕಿನೀಂ ರಮ್ಯಾಂ ಪ್ರಸನ್ನಸಲಿಲಾಮನು |
ಜಘನ್ಯಕಸ್ತಕ್ಷಕಸ್ಯ ಶ್ರುತಸೇನೇತಿ ವಿಶ್ರುತಃ ॥153॥
ಅವಸದ್ ಯೋ ಮಹಾನ್ ನಿಮ್ನೇ ಪ್ರಾರ್ಥಯನ್ನಾಗಮುಖ್ಯತಾಮ್ |
ಕರವಾಣಿ ಸದಾ ಚಾಹಂ ನಮಸ್ತಸ್ಮೈ ಮಹಾತ್ಮನೇ ॥154॥
ರಮ್ಯವಾದ ನಿರ್ಮಲವಾದ ನೀರನ್ನು ಹೊಂದಿದ ಮಂದಾಕಿನಿ ನದಿಯ ದಡದಲ್ಲಿ ತಕ್ಷಕನ ತಮ್ಮನಾದ ಶ್ರುತಸೇನನೆಂದು ಪ್ರಖ್ಯಾತನಾದ ಸರ್ಪರಾಜನು ನಾಗಾಧಿಪತಿಯನ್ನು ಪ್ರಾರ್ಥನೆ ಮಾಡುತ್ತಾ ದೊಡ್ಡಬಿಲದಲ್ಲಿ ವಾಸಿಸುತ್ತಿದ್ದಾನೆ. ಆ ಮಹಾತ್ಮನಿಗೂ ನಾನು ಸರ್ವದಾ ನಮಸ್ಕಾರವನ್ನು ಮಾಡುತ್ತೇನೆ.
ಏವಂ ಸ್ತುವನ್ನಪಿ ನಾಗಾನ್ ನಚಾಲಭತ ಕುಂಡಲೇ |
ಅಥಾಪಶ್ಯತ್ ಸ್ತ್ರಿಯೋ ತಂತ್ರೇ ಅಧಿರೋಪ್ಯ ಪಟಂ ವಯಂತ್ಯೌ ॥155॥
ಹೀಗೆ ನಾಗನನ್ನು ಸ್ತೋತ್ರ ಮಾಡುತ್ತಿದ್ದರೂ ಅವನು ಕುಂಡಲಗಳನ್ನು ಪಡೆಯಲಿಲ್ಲ. ಆಗ ಅವನು ರಾಟೆಯಲ್ಲಿ ಪಟವನ್ನು ಏರಿಸಿ ನೇಯುತ್ತಿದ್ದ ಇಬ್ಬರು ಸ್ತ್ರೀಯರನ್ನು ನೋಡಿದನು.
ತಸ್ಮಿಂಸ್ತಂತ್ರೇ ಕೃಷ್ಣಾಂಶ್ಚ ಸಿತಾಂಶ್ಚ ತಂತೂನ್ ಚಕ್ರಂ ಚಾಪಶ್ಯತ |
ದ್ವಾದಶಾರಂ ಷಡ್ಭಿಃ ಕುಮಾರೈಃ ಪರಿವರ್ತ್ಯಮಾನಮಶ್ವಾರೂಢಂ ಪುರುಷಂ ಚಾಪಶ್ಯತ್ ದುರ್ನಿರೀಕ್ಷ್ಯಮ್ ॥156॥
ಆ ರಾಟೆಯಲ್ಲಿ ಬಿಳಿಯ ಮತ್ತು ಕರಿಯ ನೂಲುಗಳನ್ನು ಮತ್ತು ಚಕ್ರಗಳನ್ನು ನೋಡಿದನು. ಆರು ಕುಮಾರರಿಂದ ತಿರುಗಿಸಲ್ಪಡುತ್ತಿದ್ದ ಹನ್ನೆರಡು ಅರಗಳುಳ್ಳ ಆ ಚಕ್ರವನ್ನೂ ಮತ್ತು ಅಶ್ವಾರೂಢನಾದ ನೋಡಲು ಅಸಾಧ್ಯನಾದ ಒಬ್ಬ ಪುರುಷನನ್ನೂ ನೋಡಿದನು.
ಸ ತಾನ್ ಸರ್ವಾಂಸ್ತುಷ್ಟಾವ ಏಭಿರ್ಮಂತ್ರವಾದ್ಯೈಃ ಶ್ಲೋಕೈಃ ॥157॥
ಅವನು ಅವರೆಲ್ಲರನ್ನೂ ಈ ಮಂತ್ರರೂಪವಾದ ಶ್ಲೋಕಗಳಿಂದ ಸ್ತೋತ್ರಮಾಡಿದನು.
ತ್ರೀಣ್ಯರ್ಪಿತಾನ್ಯತ್ರ ಶತಾನಿ ಮಧ್ಯೇ
ಷಷ್ಟಿಶ್ಚ ತಸ್ಮಿನ್ ಚರತಿ ಧ್ರುವೇಽಸ್ಮಿನ್ |
ಚಕ್ರೇ ಚತುರ್ವಿಂಶತಿಪರ್ವಯೋಗೇ
ತಂ ಷಟ್ ಕುಮಾರಾಃ ಪರಿವರ್ತಯಂತಿ ॥158॥
ಈ ಒಂದೇ ಕಡೆಯಲ್ಲಿ ತಿರುಗುತ್ತಿರುವ ಚಕ್ರದಲ್ಲಿ ಮೂನ್ನೂರರವತ್ತು ವಸ್ತುಗಳು ಮಧ್ಯದಲ್ಲಿ ಅರ್ಪಿಸಲ್ಪಟ್ಟಿವೆ. ಇಪ್ಪತ್ತನಾಲ್ಕು

ಪರ್ವಗಳು ಇರುವ ಈ ಚಕ್ರವನ್ನು ಆರು ಜನ ಕುಮಾರರು ತಿರುಗಿಸುತ್ತಾರೆ.
ಚಕ್ರವು ಸಂವತ್ಸರ. ಅದರಲ್ಲಿ ಮೂನ್ನೂರರವತ್ತು ದಿವಸಗಳು. ಆರು ಋತುಗಳಿಗೆ ಅಭಿಮಾನಿಗಳಾದ ದೇವತೆಗಳು ಅದನ್ನು ತಿರುಗಿಸುತ್ತಾರೆ. ಒಂದು ಸಂವತ್ಸರದಲ್ಲಿ ಹನ್ನೆರಡು ಪೂರ್ಣಿಮೆ ಮತ್ತು ಹನ್ನೆರಡು ಅಮಾವಾಸ್ಯೆಗಳು ಸೇರಿ ಇಪ್ಪತ್ತಾನ್ಲಲ್ಕು ಪರ್ವಗಳಾಗುತ್ತವೆ.
ತಂತ್ರಂ ಚೇದಂ ವಿಶ್ವರೂಪೇ ವಯಂತ್ಯೌ
ವಯತಸ್ತಂತೂನ್ ಸತತಂ ವರ್ತಯಂತ್ಯೌ |
ಇದಂ ವಯಂತ್ಯೌ ಪುನರಾವಯಂತ್ಯೌ
ಭೂತಾನ್ಯಜಸ್ರಂ ಭುವನಾನಿ ಚೈವ ॥159॥
ಈ ಇಬ್ಬರು ಸ್ತ್ರೀಯರು ಈ ರಾಟೆಯನ್ನು ವಿಶ್ವರೂಪದಲ್ಲಿ ನೇಯುತ್ತಾ ಸತತವಾಗಿ ನೂಲುಗಳನ್ನು ನೂಕುತ್ತಾರೆ. ಸತತವಾಗಿ ಎಲ್ಲ ಪ್ರಾಣಿಗಳನ್ನೂ, ಮತ್ತು ಎಲ್ಲ ಲೋಕಗಳನ್ನೂ ಮತ್ತೆ ಮತ್ತೆ ನೇಯುತ್ತಾರೆ.
ಕಪ್ಪು ಮತ್ತು ಬಿಳಿಯ ನೂಲುಗಳು ಹಗಲು, ರಾತ್ರಿಯ ಸಂಕೇತಗಳು. ಅದಕ್ಕೆ ಆ ಇಬ್ಬರು ಸ್ತ್ರೀಯರು ಧಾತೃ ಮತ್ತು ವಿಧಾತೃ ದೇವತೆಗಳು ಎಲ್ಲಾ ಲೋಕಗಳನ್ನೂ ಮತ್ತು ಎಲ್ಲಾ ಪ್ರಾಣಿಗಳನ್ನೂ ಪ್ರತಿಯೊಂದು ಬ್ರಹ್ಮಾಂಡವು ಸೃಷ್ಟಿಯಾದಾಗಲೂ ಪುನಃ ಪುನಃ ಅದರಲ್ಲಿ ತೊಡಗಿಸುತ್ತಾರೆ.
ವಜ್ರಸ್ಯ ಭರ್ತಾ ಭುವನಸ್ಯ ಗೋಪ್ತಾ
ವೃತ್ರಸ್ಯ ಹಂತಾ ನಮುಚೇರ್ಬಲಸ್ಯ |
ಕೃಷ್ಣೇ ವಸಾನೋ ವಸನೇ ಮಹಾತ್ಮಾ
ಸತ್ಯಾನೃತೇ ಯೋ ವಿವಿನಕ್ತಿ ಲೋಕೇ ॥160॥
ವಜ್ರವನ್ನು ಧರಿಸಿದವನು, ಭೂಮಿಯನ್ನು ರಕ್ಷಿಸುವವನು, ವೃತ್ರನನ್ನು ಸಂಹರಿಸಿದವನು, ಬಲನನ್ನು ಸಂಹರಿಸಿದವನು ಆದ ಮಹಾತ್ಮನಾದ ಇಂದ್ರನು ಕೃಷ್ಣವಸ್ತ್ರಗಳೆರಡನ್ನು ಧರಿಸಿ ಲೋಕದಲ್ಲಿ ಸತ್ಯ ಮತ್ತು ಅನೃತವನ್ನು ವಿವೇಚನೆ ಮಾಡುತ್ತಾನೆ.
ಯೋ ವಾಹನಂ ಗರ್ಭಮಪಾಂ ಪುರಾಣಂ
ವೈಶ್ವಾನರಂ ವಾಹನಮಭ್ಯುಪೈತಿ
ನಮೋಽಸ್ತು ತಸ್ಮೈ ಜಗದೀಶ್ವರಾಯ
ಲೋಕತ್ರಯೇಶಾಯ ಪುರಂದರಾಯ ಇತಿ ॥161॥
ಯಾವನು ಸಮುದ್ರದ ಗರ್ಭದಲ್ಲಿರುವ ಪ್ರಾಚೀನನಾದ ವೈಶ್ವಾನರನನ್ನು ವಾಹನವನ್ನಾಗಿ ಸ್ವೀಕರಿಸುತ್ತಾನೆಯೋ, ಅಂತಹ ಜಗದೀಶ್ವರನಾದ ಲೋಕತ್ರಯಕ್ಕೆ ಒಡೆಯನಾದ ಪುರಂದರನಿಗೆ ನನ್ನ ನಮಸ್ಕಾರಗಳು. (ಎಂದು ಸ್ತೋತ್ರಮಾಡಿದನು)
ತತ ಏನಂ ಸ ಪುರುಷಃ ಪ್ರಾಹ | ಪ್ರೀತೋಽಸ್ಮ್ಯಹಮನೇನ
ಸ್ತೋತ್ರೇಣ ಪ್ರಿಯಂ ತೇ ಕಿಂ ಕರವಾಣೀತಿ ॥162॥
ಆಗ ಈ ಉದಂಕನನ್ನು ಕುರಿತು ಆ ಪುರುಷನು ನಾನು ನಿನ್ನ ಸ್ತೋತ್ರಕ್ಕೆ ಮೆಚ್ಚಿದ್ದೇನೆ ನಿನಗೆ ಏನು ಪ್ರಿಯವನ್ನು ಮಾಡಲಿ ಎಂದು ಕೇಳಿದನು.
ಸ ತಮುವಾಚೋದಂಕಃ | ನಾಗಾ ಮೇ ವಶಮುಪೇಯುರಿತಿ ॥163॥
ಆಗ ಉದಂಕನು ಅವನನ್ನು ಕುರಿತು ನಾಗಗಳು ನನ್ನ ವಶವಾಗಬೇಕು ಎಂದು ಕೇಳಿದನು.
ಸ ಏನಂ ಪುರುಷಃ ಪ್ರೋವಾಚ ಏತಮಶ್ವಮಪಾನೇ ಧಮೇತಿ ॥164॥
ಆ ಪುರುಷನು ಅವನನ್ನು ಕುರಿತು ಈ ಅಶ್ವವನ್ನು ಗುದದ್ವಾರದಿಂದ ಊದು ಎಂದು ಹೇಳಿದನು.
ಸ ತಮಶ್ವಮಪಾನೇಽಧಮತ್ | ಅಥಾಸ್ಮಾದಶ್ವಾದ್
ಸರ್ವಸ್ರೋತೋಭ್ಯಃ ಸಧೂಮಾ ಅರ್ಚಿಷೋಽಗ್ನೇರ್ನಿಷ್ಪೇತುಃ |
ಯಾಭಿರ್ನಾಗಲೋಕ ಉಪಧೂಪಿತಃ ॥165॥
ಉದಂಕನು ಆ ಅಶ್ವವನ್ನು ಗುದದ್ವಾರದಲ್ಲಿ ಊದಿದನು. ಆಗ ಆ ಅಶ್ವದ ಎಲ್ಲಾ ನವದ್ವಾರಗಳಿಂದ ಧೂಮಸಹಿತವಾದ ಅಗ್ನಿಯ ಕಣಗಳು ಹೊರಹೊಮ್ಮಿದವು. ಆ ಅಗ್ನಿಯ ಕಣಗಳಿಂದ ನಾಗಲೋಕವೆಲ್ಲವೂ ಧೂಮದಿಂದ ಆವೃತವಾಯಿತು.
ಅಥ ಸಂಭ್ರಾಂತಸ್ತಕ್ಷಕೋಽಗ್ನಿತೇಜೋಭಯವಿಷಣ್ಣಶ್ಚಾಸೀತ್ |
ತೇ ಕುಂಡಲೇ ಗೃಹೀತ್ವಾ ಸಹಸಾ ಸ್ವಭವನಾನ್ನಿಷ್ಕ್ರಮ್ಯೋದಂಕಮುವಾಚ |
ಏತೇ ಮಣಿಕುಂಡಲೇ ಪ್ರತಿಗೃಹ್ಣಾತು ಭವಾನಿತಿ ॥166॥
ಆಗ ತಕ್ಷಕನು ದಿಗ್ಭ್ರಾಂತನಾಗಿ ಅಗ್ನಿಯ ತೇಜಸ್ಸಿನ ಭಯದಿಂದ ವಿಷಾದವನ್ನು ಹೊಂದಿದನು. ಆ ಎರಡು ಕುಂಡಲಗಳನ್ನು ತೆಗೆದುಕೊಂಡು ತಕ್ಷಣ ತನ್ನ ಮನೆಯಿಂದ ಹೊರಗೆ ಬಂದು, ಉದಂಕನನ್ನು ಕುರಿತು ಇದೇ ಆ ಮಣಿಕುಂಡಲಗಳು. ನೀನು ಸ್ವೀಕರಿಸು ಎಂದು ಹೇಳಿದನು.
ಸ ತೇ ಪ್ರತಿಜಗ್ರಾಹೋದಂಕಃ | ಕುಂಡಲೇ ಪ್ರತಿಗೃಹ್ಯಾಚಿಂತಯತ್ | ಅದ್ಯ ತತ್ಪುಣ್ಯಕಮೋಪಾಧ್ಯಾಯಿನ್ಯಾಃ ದೂರಂ ಚಾಹಮ-ಭ್ಯಾಗತಃ | ಕಥಂ ನು ಖಲು ಸಂಭಾವಯೇಯಮಿತಿ ॥167॥
ಉದಂಕನು ಆ ಕುಂಡಲವನ್ನು ಸ್ವೀಕರಿಸಿದನು. ಆ ಕುಂಡಲವನ್ನು ತೆಗೆದುಕೊಂಡ ಅವನು ಇಂದು ನನ್ನ ಗುರುಪತ್ನಿಯು ಹೇಳಿದ ಆ ಪುಣ್ಯಕರ್ಮದ ದಿವಸ. ನಾನು ಬಹಳ ದೂರ ಬಂದಿದ್ದೇನೆ. ನಾನು ಹೇಗೆ ನಿಭಾಯಿಸಲಿ ಎಂದು ಚಿಂತಿಸಿದನು.
ತತ ಏನಂ ಚಿಂತಯಾನಮೇವಂ ಪುರುಷ ಉವಾಚ | ಉದಂಕ ಏನಮಶ್ವಮಧಿರೋಹ ಏಷ ತ್ವಾಮೇತತ್ಕ್ಷಣಾ-ದೇವೋಪಾಧ್ಯಾಯಕುಲಂ ಪ್ರಾಪಯಿಷ್ಯತೀತಿ ॥168॥

ಹೀಗೆ ಚಿಂತಿಸುತ್ತಿದ್ದ ಉದಂಕನನ್ನು ಕುರಿತು, ಆ ಪುರುಷನು ಉದಂಕನೇ ಈ ಅಶ್ವವನ್ನು ಏರು. ಈ ಅಶ್ವವು ನಿನ್ನನ್ನು ಈ ಕ್ಷಣದಲ್ಲಿಯೇ ಉಪಾಧ್ಯಾಯರ ಮನೆಗೆ ತಲುಪಿಸುತ್ತದೆ ಎಂದು ಹೇಳಿದನು.
ಸ ತಥೇತ್ಯುಕ್ತ್ವಾ ತಮಶ್ವಮಧಿರುಹ್ಯ ಉಪಾಧ್ಯಾಯಿನೀಂ ಪ್ರತ್ಯಾಜಗಾಮ ॥169॥
ಅವನು ಹಾಗೆಯೇ ಆಗಲಿ ಎಂದು ಹೇಳಿ, ಆ ಅಶ್ವವನ್ನು ಏರಿ ಉಪಾಧ್ಯಾಯ ಪತ್ನಿಯ ಎದುರಿಗೆ ಬಂದನು.
ಉಪಾಧ್ಯಾಯಿನೀ ಸ್ನಾತ್ವಾ ಕೇಶಾನಾವಪಂತ್ಯುಪವಿಷ್ಟಾ | ಅದ್ಯಾಪ್ಯುದಂಕೋ ನಾಗಚ್ಛತೀತಿ ಶಾಪಾಯಾಸ್ಯ ಮತಿಂ ದಧ್ರೇ ॥170॥
ಉಪಾಧ್ಯಾಯ ಪತ್ನಿಯು ಸ್ನಾನವನ್ನು ಮಾಡಿ ತಲೆಯನ್ನು ಬಾಚಿಕೊಳ್ಳುತ್ತಿದ್ದಳು. ಈ ದಿನವೂ ಉದಂಕನು ಬರಲಿಲ್ಲ ಎಂದು ಅವನಿಗೆ ಶಾಪವನ್ನು ಕೊಡಲು ನಿಶ್ಚಯಿಸಿದಳು.
ಅಥೋದಂಕಃ ಪ್ರವಿಶ್ಯೋಪಾಧ್ಯಾಯಿನೀಮಭ್ಯವಾದಯತ್ | ತೇ ಚಾಸ್ಯೈ ಕುಂಡಲೇ ಪ್ರಾಯಚ್ಛತ್ ॥171॥
ಆ ವೇಳೆಗೆ ಉದಂಕನು ಪ್ರವೇಶಿಸಿ, ಉಪಾಧ್ಯಾಯಿನಿಗೆ ನಮಸ್ಕರಿಸಿದನು. ಆ ಎರಡು ಕುಂಡಲಗಳನ್ನು ಅವಳಿಗೆ ಕೊಟ್ಟನು.
ಸಾ ಚೈನಂ ಪ್ರತ್ಯುವಾಚ | ಉದಂಕ ದೇಶೇ ಕಾಲೇಽಭ್ಯಾಗತೋಽಸಿ | ಸ್ವಾಗತಂ ತೇ ವತ್ಸ | ಅನಾಗಾ ಅಸಿ | ಕಥಮಪಿ ಮಯಾ ನ ಶಪ್ತಃ | ಶ್ರೇಯಸ್ತವೋಪಸ್ಥಿತಂ ಸಿದ್ಧಿಮವಾಪ್ನುಹೀತಿ ॥172॥
ಅವಳು ಉದಂಕನನ್ನು ಕುರಿತು, ಉದಂಕನೇ ಸರಿಯಾದ ದೇಶಕ್ಕೆ, ಸರಿಯಾದ ಕಾಲದಲ್ಲಿ ಆಗಮಸಿದ್ದೀಯೆ. ವತ್ಸ ನಿನಗೆ ಸ್ವಾಗತ. ನೀನು ನಿರಪರಾಧಿಯಾಗಿದ್ದೀಯೆ. ಹೇಗೋ ನಾನು ನಿನಗೆ ಶಾಪವನ್ನು ಕೊಡಲಿಲ್ಲ. ನಿನಗೆ ಶ್ರೇಯಸ್ಸು ಸನ್ನಿಹಿತವಾಗಿದೆ. ನೀನು ಸಿದ್ಧಿಯನ್ನು ಪಡೆಯುವವನಾಗು ಎಂದು ಹೇಳಿದಳು.
ಅಥೋದಂಕ ಉಪಾಧ್ಯಾಯಮಭ್ಯವಾದಯತ್ | ತಮುಪಾಧ್ಯಾಯಃ ಪ್ರತ್ಯುವಾಚ | ವತ್ಸೋದಂಕ ಸ್ವಾಗತಂ ತೇ ಚಿರಂ ಕೃತಮಿತಿ ॥173॥
ಅನಂತರ ಉದಂಕನು ಉಪಾಧ್ಯಾಯರಿಗೆ ನಮಸ್ಕರಿಸಿದನು. ಆಗ ಉಪಾಧ್ಯಾಯನು ಅವನನ್ನು ಕುರಿತು, ವತ್ಸ ಉದಂಕ ನಿನಗೆ ಸ್ವಾಗತ. ಏಕೆ ತಡಮಾಡಿದೆ ಎಂದು ಕೇಳಿದರು.
ತಮುದಂಕಃ ಪ್ರತ್ಯುವಾಚ |ಭೋ ತಕ್ಷಕೇಣ ನಾಗರಾಜೇನ ವಿಘ್ನಃ
ಕೃತಃ ಅಸ್ಮಿನ್ಕರ್ಮಣಿ, ತೇನಾಸ್ಮಿ ನಾಗಲೋಕಗತಸ್ತತ್ರ ಚ ಮಯಾ
ದೃಷ್ಟೇ ಸ್ತ್ರಿಯೌ ತಂತ್ರೇಽಧಿರೋಪ್ಯ ತಂತೂನ್ ಪಟಂ ವಯಂತ್ಯೌ, ತಸ್ಮಿಂಶ್ಚ ತಂತ್ರೇ ಕೃಷ್ಣಾಃ ಶ್ವೇತಾಶ್ಚ ತಂತವಃ ಕಿಂ ತತ್ |
ತತ್ರ ಚಕ್ರಮಪಿ ದೃಷ್ಟಂ ದ್ವಾದಶಾರಂ ಷಟ್ ಚೈನಂ ಕುಮಾರಾಃ ಪರಿವರ್ತಯಂತಿ ತದಪಿ ಕಿಮ್ | ಪುರುಷಶ್ಚ ಮಯಾ ದೃಷ್ಟಃ |
ಸ ಪುನಃ ಕಃ | ಅಶ್ವಶ್ಚಾತಿಪ್ರಮಾಣಯುಕ್ತಃ ಸ ಚಾಪಿ ಕಃ |
ಪಥಿ ಗಚ್ಛತಾ ಮಯಾ ವೃಷಭೋ ದೃಷ್ಟಃ ತಂ ಚ ಪುರುಷೋಽಧಿರೂಢಃ ತೇನಾಸ್ಮಿ ಸೋಪಚಾರಮುಕ್ತಃ | ವೃಷಭಸ್ಯ ಪುರೀಷಂ ಭಕ್ಷಯ | ಉಪಾಧ್ಯಾಯೇನಾಪಿ ತೇ ಭಕ್ಷಿತಮಿತಿ | ತತಸ್ತಸ್ಯ ವಚನಾನ್ಮಯಾಽಪಿ ತದ್ವೃಷಭಸ್ಯ ಪುರೀಷಮುತ್ತಮಮುಪಯುಕ್ತಮ್ |
ತದಿಚ್ಛಾಮಿ ಭವತೋಪದಿಷ್ಟಂ ಕಿಂ ತದಿತಿ ॥174॥
ಆಗ ಉದಂಕನು ಪೂಜ್ಯರೇ ನಾಗರಾಜನಾದ ತಕ್ಷಕನು ಈ ಕಾರ್ಯದಲ್ಲಿ ವಿಘ್ನವನ್ನು ಮಾಡಿದನು. ಅದರಿಂದ ನಾನು ನಾಗಲೋಕಕ್ಕೆ ಹೋಗಿ ಅಲ್ಲಿ ನಾನು ರಾಟೆಯಲ್ಲಿ ನೂಲುಗಳನ್ನು ಸೇರಿಸಿ ಬಟ್ಟೆಗಳನ್ನು ನೇಯುತ್ತಿದ್ದ ಇಬ್ಬರು ಸ್ತ್ರೀಯರನ್ನು ನೋಡಿದೆನು. ಆ ರಾಟೆಯಲ್ಲಿ ಕಪ್ಪು-ಬಿಳಿಯ ಬಣ್ಣದ ನೂಲುಗಳಿದ್ದವು. ಅವು ಏನು? ಅಲ್ಲದೇ ನಾನು ಅಲ್ಲಿ ಹನ್ನೆರಡು ಅರಗಳುಳ್ಳ ಒಂದು ಚಕ್ರವನ್ನು ನೋಡಿದೆನು. ಆರುಕುಮಾರರು ಅದನ್ನು ತಿರುಗಿಸುತ್ತಿದ್ದರು ಅದು ಕೂಡ ಏನು? ಒಬ್ಬ ಪುರುಷನನ್ನು ನೋಡಿದೆ ಅವನು ಯಾರು? ಒಂದು ಮಹಾಪ್ರಮಾಣದ ಅಶ್ವವನ್ನೂ ನೋಡಿದೆ. ಆ ಅಶ್ವವು ಏನು? ನಾನು ದಾರಿಯಲ್ಲಿ ಬರುತ್ತಾ ಒಂದು ವೃಷಭವನ್ನು ನೋಡಿದೆ. ಅದರ ಮೇಲೆ ಒಬ್ಬ ಪುರುಷನು ಕುಳಿತಿದ್ದನು. ಅವನು ನನ್ನನ್ನು ಕುರಿತು ಉಪಚಾರಪೂರ್ವಕವಾಗಿ ಈ ವೃಷಭದ ಗೋಮಯವನ್ನು ತಿನ್ನು, ನಿನ್ನ ಉಪಾಧ್ಯಾಯನು ಕೂಡ ಹಿಂದೆ ತಿಂದಿದ್ದಾನೆ ಎಂದು ಹೇಳಿದನು. ಆಗ ಅವನ ವಚನದಂತೆ ನಾನೂ ಸಹ ಆ ವೃಷಭದ ಶ್ರೇಷ್ಠವಾದ ಗೋಮಯವನ್ನು ತಿಂದೆನು. ಅದು ಏನು ಎಂದು ನಿಮ್ಮ ಉಪದೇಶದಿಂದ ತಿಳಿದುಕೊಳ್ಳಲು ನಾನು ಇಚ್ಛಿಸುತ್ತೇನೆ ಎಂದು ಹೇಳಿದನು.
ತೇನೈವಮುಕ್ತ ಉಪಾಧ್ಯಾಯಃ ಪ್ರತ್ಯುವಾಚ | ಯೇ ತೇ ಸ್ತ್ರಿಯೌ ಧಾತಾ ವಿಧಾತಾ ಚ | ಯೇ ತೇ ಕೃಷ್ಣಾಸ್ಸಿತಾಶ್ಚ ತಂತವಃ ತೇ ರಾತ್ರ್ಯಹನೀ | ತದಪಿ ಚಕ್ರಂ ದ್ವಾದಶಾರಂ ಷಟ್‌ಕುಮಾರಾಃ ಪರಿವರ್ತಯಂತಿ ತೇ ಋತವಃ ಷಟ್ ದ್ವಾದಶಾರಾಣಿ ದ್ವಾದಶಮಾಸಾಃ ಸಂವತ್ಸರಶ್ಚಕ್ರಮ್ | ಯಃ ಪುರುಷಃ ಸ ಪರ್ಜನ್ಯಃ ಯೋಽಶ್ವಃ ಸೋಽಗ್ನಿಃ | ಯೋ ವೃಷಭಸ್ತ್ವಯಾ ಪಥಿ ದೃಷ್ಟಃ ಸ ಐರಾವತೋ ನಾಮ ನಾಗರಾಜಃ | ಯಶ್ಚೈನಮಧಿರೂಢಃ ಸ
ಇಂದ್ರಃ | ಯದಪಿ ತೇ ಪುರೀಷಂ ಭಕ್ಷಿತಂ ತದಮೃತಮ್ |
ತೇನ ಖಲ್ವಸಿ ನ ವ್ಯಾಪನ್ನಃ ತಸ್ಮಿನ್ ನಾಗಲೋಕೇ|
ಸ ಚಾಪಿ ಮಮ ಸಖೇಂದ್ರಃ | ತದನುಗ್ರಹಾತ್ ಕುಂಡಲೇ ಅಭಿಗೃಹ್ಯ ಪುನರಭ್ಯಾಗತೋಽಸಿ | ತತ್ಸೌಮ್ಯ ಗಮ್ಯತಾಮ್ |
ಅನುಜಾನೇ ಭವಂತಂ ಶ್ರೇಯೋಽವಾಪ್ಸ್ಯಸೀತಿ ॥175॥
ಅವನಿಂದ ಹೀಗೆ ಹೇಳಲ್ಪಟ್ಟ ಉಪಾಧ್ಯಾಯರು ಅವನನ್ನು ಕುರಿತು, ಆ ಇಬ್ಬರು ಸ್ತ್ರೀಯರು ಧಾತೃ ಮತ್ತು ವಿಧಾತೃ ದೇವತೆಗಳು. ಕಪ್ಪು ಮತ್ತು ಬಿಳಿಯ ದಾರಗಳು ರಾತ್ರಿ ಮತ್ತು ಹಗಲುಗಳು, ಆರು ಕುಮಾರರು ಋತುಗಳು. ದ್ವಾದಶ ಅರಗಳು ದ್ವಾದಶ ಮಾಸಗಳು. ಚಕ್ರವು ಸಂವತ್ಸರ. ಆ ಪುರುಷನು ಪರ್ಜನ್ಯ. ಆಶ್ವವು ಅಗ್ನಿ. ಯಾವ ವೃಷವನ್ನು ನೀನು ದಾರಿಯಲ್ಲಿ ನೋಡಿದೆಯೋ, ಅದು ಐರಾವತವೆಂಬ ಗಜರಾಜ. ಅದರ ಮೇಲೆ ಕುಳಿತಿದ್ದ ಪುರುಷನು ಇಂದ್ರ. ಅಲ್ಲಿ ನೀನು ಯಾವ ಗೋಮಯವನ್ನು ತಿಂದೆಯೋ ಅದು ಅಮೃತ. ಆ ಕಾರಣದಿಂದ ನೀನು ಆ ನಾಗಲೋಕದಲ್ಲಿ ಮೃತನಾಗಿಲ್ಲ. ಆ ಇಂದ್ರನಾದರೋ ನನ್ನ ಸ್ನೇಹಿತನಾಗಿದ್ದಾನೆ. ಅವನ ಅನುಗ್ರಹದಿಂದ ಕುಂಡಲವನ್ನು ತೆಗೆದುಕೊಂಡು ನೀನು ಹಿಂದಿರುಗಿ ಬಂದಿದ್ದೀಯೆ. ಪ್ರೀತಿಪಾತ್ರನೇ ನೀನು ಹೋಗಿಬಾ. ನಿನಗೆ ಅನುಮತಿಯನ್ನು

ನೀಡುತ್ತಿದ್ದೇನೆ. ನೀನು ಶ್ರೇಯಸ್ಸನ್ನು ಪಡೆಯುವಿ ಎಂದು ಹೇಳಿದರು.
ಸ ಉಪಾಧ್ಯಾಯೇನಾನುಜ್ಞಾತ ಉದಂಕಃ ತಸ್ಯ ತಕ್ಷಕಸ್ಯ ಪ್ರತಿಚಿಕೀರ್ಷಮಾಣೋ ಹಸ್ತಿನಪುರಂ ಪ್ರತಸ್ಥೇ ॥176॥
ಉಪಾಧ್ಯಾಯರ ಅನುಮತಿಯನ್ನು ಪಡೆದ ಆ ಉದಂಕನು ಆ ತಕ್ಷಕನಿಗೆ ಪ್ರತೀಕಾರವನ್ನು ಮಾಡಲು ಬಯಸಿ ಹಸ್ತಿನಪುರಕ್ಕೆ ಹೊರಟನು.
ಸ ಹಸ್ತಿನಪುರಂ ಪ್ರಾಪ್ಯ ನ ಚಿರಾದ್ ದ್ವಿಜಸತ್ತಮಃ |
ಸಮಾಗಚ್ಛತ ರಾಜಾನಮುದಂಕೋ ಜನಮೇಜಯಮ್ ॥177॥
ಆ ದ್ವಿಜಶ್ರೇಷ್ಠನು ಶೀಘ್ರವಾಗಿ ಹಸ್ತಿನಪುರವನ್ನು ತಲುಪಿ ಜನಮೇಜಯರಾಜನೊಂದಿಗೆ ಸಮಾಗಮವನ್ನು ಹೊಂದಿದನು.
ಪುರಾ ತಕ್ಷಶಿಲಾಯಾಸ್ತು ನಿವೃತ್ತಮಪರಾಜಿತಮ್ |
ಸಮ್ಯಗ್ವಿಜಯಿನಂ ದೃಷ್ಟ್ವಾ ಸಮಂತಾನ್ಮಂತ್ರಿಭಿರ್ವೃತಮ್ ॥178॥
ತಸ್ಮೈ ಜಯಾಶಿಷಃ ಪೂರ್ವಂ ಯಥಾನ್ಯಾಯಂ ಪ್ರಯುಜ್ಯ ಸಃ |
ಉವಾಚೈನಂ ವಚಃ ಕಾಲೇ ಶಬ್ದಸಂಪನ್ನಯಾ ಗಿರಾ ॥179॥
ಮೊದಲು ತಕ್ಷಶಿಲೆಗೆ ಹೋಗಿ, ಅಪರಾಜಿತನಾಗಿ ವಿಜಯವನ್ನು ಸಂಪಾದಿಸಿ ಹಿಂದಿರುಗಿ ಬಂದು ಸುತ್ತಲೂ ಮಂತ್ರಿಗಳಿಂದ ಸುತ್ತುವರಿಯಲ್ಪಟ್ಟಿದ್ದಂತಹ ಆ ರಾಜನಿಗೆ ಮೊದಲು ಸಂಪ್ರದಾಯಕ್ಕೆ ಅನುಗುಣವಾಗಿ ಜಯಾಶೀರ್ವಾದಗಳನ್ನು ಮಾಡಿ ಉಚಿತವಾದ ಕಾಲದಲ್ಲಿ ಒಳ್ಳೆಯ ಶಬ್ದಗಳಿಂದ ಕೂಡಿದ ಮಾತುಗಳಿಂದ ರಾಜನನ್ನು ಕುರಿತು ಮಾತನಾಡಿದನು.
ಅನ್ಯಸ್ಮಿನ್ ಕರಣೀಯೇ ತೇ ಕಾರ್ಯೇ ಪಾರ್ಥಿವಸತ್ತಮ |
ಬಾಲ್ಯಾದಿವಾನ್ಯದೇವ ತ್ವಂ ಕುರುಷೇ ನೃಪಸತ್ತಮ ॥180॥
ಎಲೈ ರಾಜಶ್ರೇಷ್ಠನೇ ಮಾಡಬೇಕಾದ ಕಾರ್ಯವು ಬೇರೆಯಿರುವಾಗ ನೀನು ಬಾಲ್ಯದಿಂದೆಂಬಂತೆ ಬೇರೆ ಕಾರ್ಯವನ್ನೇ ಮಾಡುತ್ತಿದ್ದೀಯೆ.
ಸೂತಃ
ಏವಮುಕ್ತಸ್ತು ವಿಪ್ರೇಣ ಸ ರಾಜಾ ಪ್ರತ್ಯುವಾಚ ಹ |
ಜನಮೇಜಯಃ ಪ್ರಸನ್ನಾತ್ಮಾ ಸಮ್ಯಕ್ ಸಂಪೂಜ್ಯ ತಂ ಮುನಿಮ್ ॥181॥
ಆ ಬ್ರಾಹ್ಮಣದಿಂದ ಹೀಗೆ ಹೇಳಲ್ಪಟ್ಟ ಜನಮೇಜಯರಾಜನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಆ ಋಷಿಗೆ ಯೋಗ್ಯವಾದ ಪೂಜೆಯನ್ನು ಮಾಡಿ, ಅವನನ್ನು ಕುರಿತು ಮಾತನಾಡಿದನು.
ಅಹಂ ಪ್ರಜಾನಾಂ ಪರಿಪಾಲನೇನ
ಸ್ವಂ ಕ್ಷತ್ರಧರ್ಮಂ ಪರಿಪಾಲಯಾಮಿ |
ಪ್ರಬ್ರೂಹಿ ಕಿಂ ವಾ ಕ್ರಿಯತಾಂ ದ್ವಿಜೇಂದ್ರ
ಶುಶ್ರೂಷುರಸ್ಮ್ಯದ್ಯ ವಚಸ್ತ್ವದೀಯಮ್ ॥182॥
ನಾನು ಪ್ರಜೆಗಳ ಪರಿಪಾಲನೆಯನ್ನು ಮಾಡಿ ನನ್ನ ಕ್ಷತ್ರಿಯಧರ್ಮವನ್ನು ಆಚರಿಸುತ್ತಿದ್ದೇನೆ. ಎಲೈ ಬ್ರಾಹ್ಮಣಶ್ರೇಷ್ಠನೇ ನಾನು ಏನು ಮಾಡಬೇಕೆಂದು ಹೇಳು. ನಿನ್ನ ಮಾತುಗಳನ್ನು ಕೇಳಲು ನಾನು ಆಸಕ್ತಿಯಿಂದ ಇದ್ದೇನೆ.
ಸೂತಃ
ಸ ಏವಮುಕ್ತಸ್ತು ನೃಪೋತ್ತಮೇನ
ದ್ವಿಜೋತ್ತಮಃ ಪುಣ್ಯಕೃತಾಂ ವರಿಷ್ಠಃ |
ಉವಾಚ ರಾಜಾನಮದೀನಸತ್ವಂ
ಸ್ವಮೇವ ಕಾರ್ಯಂ ನೃಪತೇಶ್ಚ ಯತ್ತತ್ ॥183॥
ಆ ರಾಜಶ್ರೇಷ್ಠನಿಂದ ಹೀಗೆ ಹೇಳಲ್ಪಟ್ಟ ಪುಣ್ಯಕಾರ್ಯವನ್ನು ಮಾಡುವ ಶ್ರೇಷ್ಠನಾದ ಆ ದ್ವಿಜೋತ್ತಮನು ಉದಾರಸತ್ವನಾದ ಆ ರಾಜನನ್ನು ಕುರಿತು ತನ್ನದೇ ಆದ ಮತ್ತು ರಾಜನು ಮಾಡಬೇಕಾದ ಕಾರ್ಯವು ಯಾವುದು ಇದ್ದಿತೋ ಅದನ್ನು ಹೇಳಿದನು.
ಉದಂಕಃ
ತಕ್ಷಕೇಣ ಹಿ ರಾಜೇಂದ್ರ ಯೇನ ತೇ ಹಿಂಸಿತಃ ಪಿತಾ |
ತಸ್ಮೈ ಪ್ರತಿಕುರುಷ್ವ ತ್ವಂ ಪನ್ನಗಾಯ ದುರಾತ್ಮನೇ ॥184॥
ಎಲೈ ರಾಜೇಂದ್ರನೇ ಯಾವ ತಕ್ಷಕನು ನಿನ್ನ ತಂದೆಯನ್ನು ಹಿಂಸಿಸಿದನೋ ಅಂತಹ ದುರಾತ್ಮನಾದ ಸರ್ಪಕ್ಕೆ ನೀನು ಪ್ರತೀಕಾರವನ್ನು ಮಾಡು.
ಕಾರ್ಯಕಾಲಂ ಚ ಮನ್ಯೇಽಹಂ ವಿಧಿದೃಷ್ಟಸ್ಯ ಕರ್ಮಣಃ |
ತದ್ ಗಚ್ಛಾಪಚಿತಿಂ ರಾಜನ್ ಪಿತುಸ್ತಸ್ಯ ಮಹಾತ್ಮನಃ ॥185॥
ವಿಧಿವಿಹಿತವಾದ ಅಂತಹ ಕರ್ಮವನ್ನು ಮಾಡಲು ಇದು ಯೋಗ್ಯವಾದ ಕಾಲವೆಂದು ನಾನು ಭಾವಿಸುತ್ತೇನೆ. ರಾಜನೇ ಅಂತಹ ಕಾರ್ಯವನ್ನು ಮಾಡಿ, ಮಹಾತ್ಮನಾದ ನಿನ್ನ ತಂದೆಗೆ ಉಂಟಾದ ಅಪಕಾರಕ್ಕೆ ಪ್ರತೀಕಾರವನ್ನು ಮಾಡು.
ತೇನ ಹ್ಯನಪರಾಧೀ ಸ ದಷ್ಟೋ ದುಷ್ಟಾಂತರಾತ್ಮನಾ |
ಪಂಚತ್ವಮಗಮದ್ ರಾಜಾ ವಜ್ರಾಹತ ಇವ ದ್ರುಮಃ ॥186॥
ನಿರಪರಾಧಿಯಾದ ನಿನ್ನ ತಂದೆಯಾದ ಪರೀಕ್ಷಿತರಾಜನು ದುಷ್ಟಾತ್ಮನಾದ ತಕ್ಷಕನಿಂದ ಕಚ್ಚಲ್ಪಟ್ಟು ವಜ್ರಾಯುಧದ ಹೊಡೆತಕ್ಕೆ ಒಳಗಾದ ವೃಕ್ಷದಂತೆ ಮರಣವನ್ನು ಹೊಂದಿದನು.
ಬಲದರ್ಪಸಮುತ್ಸಿಕ್ತಸ್ತಕ್ಷಕಃ ಪನ್ನಗಾಧಮಃ |

ಅಕಾರ್ಯಂ ಕೃತವಾನ್ ಪಾಪೋ ಯೋಽದಶತ್ ಪಿತರಂ ತವ ॥187॥
ಆ ಪನ್ನಗಾಧಮನಾದ ತಕ್ಷಕನು ಬಲದಿಂದಲೂ, ದರ್ಪದಿಂದಲೂ ಉಬ್ಬಿಹೋದವನಾಗಿ ನಿನ್ನ ತಂದೆಯನ್ನು ಕಚ್ಚಿ ಪಾಪಿಯಾದ ಅವನು ಅಕಾರ್ಯವನ್ನು ಮಾಡಿದ್ದಾನೆ.
ರಾಜರ್ಷಿವಂಶಗೋಪ್ತಾರಮಮರಪ್ರತಿಮಂ ನೃಪಮ್ |
ಜಘಾನ ಕಾಶ್ಯಪಂ ಚೈವ ನ್ಯವರ್ತಯತ ಪಾಪಕೃತ್ ॥188॥
ರಾಜರ್ಷಿಗಳ ವಂಶದ ರಕ್ಷಕನಾದಂತಹ ದೇವತೆಯಂತಿದ್ದ ರಾಜನನ್ನು ಕೊಂದನು. ಅಷ್ಟೇ ಅಲ್ಲದೇ ಪಾಪಕಾರ್ಯವನ್ನು ಮಾಡುವ ಅವನು ಕಾಶ್ಯಪಬ್ರಾಹ್ಮಣನನ್ನು ಹಿಂದಿರುಗಿಸಿದನು.
ದಗ್ಧುಮರ್ಹಸಿ ರಾಜಂಸ್ತ್ವಂ ಜ್ವಲಿತೇ ಹವ್ಯವಾಹನೇ |
ಸರ್ಪಸತ್ರೇ ಮಹಾರಾಜ ತ್ವಯಿ ತದ್ಧಿ ವಿಧೀಯತೇ ॥189॥
ಎಲೈ ರಾಜನೇ ನೀನು ಸರ್ಪಸತ್ರದಲ್ಲಿ ಜ್ವಲಿಸುವ ಅಗ್ನಿಯಲ್ಲಿ ಆ ಸರ್ಪಗಳನ್ನು ದಹಿಸಲು ಅರ್ಹನಾಗಿದ್ದೀಯೆ. ಮಹಾರಾಜನೇ ಇದು ಈಗ ನಿನಗೆ ವಿಹಿತವಾದ ಕಾರ್ಯ.
ಏವಂ ಪಿತುಶ್ಚಾಪಚಿತಿಂ ಗತವಾಂಸ್ತ್ವಂ ಭವಿಷ್ಯಸಿ |
ಮಮ ಪ್ರಿಯಂ ಚ ಸುಮಹತ್ ಕೃತಂ ರಾಜನ್ ಭವಿಷ್ಯತಿ ॥190॥
ಹೀಗೆ ಮಾಡಿದರೆ ನೀನು ನಿನ್ನ ತಂದೆಗೆ ಉಂಟಾದ ಅಪಕಾರಕ್ಕೆ ಪ್ರತೀಕಾರವನ್ನು ಮಾಡಿದಂತೆ ಆಗುವುದು. ರಾಜನೇ ನನಗೂ ಬಹಳ ಪ್ರಿಯವಾದ ಕಾರ್ಯವನ್ನು ಮಾಡಿದಂತಾಗುವುದು.
ಕರ್ಮಣಾ ಪೃಥಿವೀಪಾಲ ಮಮ ಯೇನ ದುರಾತ್ಮನಾ |
ವಿಘ್ನಃ ಕೃತೋ ಮಹಾರಾಜ ಗುರ್ವರ್ಥಂ ಚರತೋಽನಘ ॥191॥
ಎಲೈ ಮಹಾರಾಜನೇ, ಅನಘನೇ ಆ ದುರಾತ್ಮನು ತನ್ನ ಕರ್ಮದಿಂದ ಗುರುದಕ್ಷಿಣೆಯನ್ನು ಕೊಡಲು ಹೋಗುತ್ತಿದ್ದ ನನಗೆ ವಿಘ್ನವನ್ನು ಮಾಡಿದನು.
ಸೂತಃ
ಏತಚ್ಛ್ರುತ್ವಾ ತು ನೃಪತಿಸ್ತಕ್ಷಕಸ್ಯ ಚುಕೋಪ ಹ |
ಉದಂಕವಾಕ್ಯಹವಿಷಾ ದೀಪ್ತೋಽಗ್ನಿರ್ಹವಿಷಾ ಯಥಾ ॥192॥
ಈ ಮಾತುಗಳನ್ನು ಕೇಳಿದ ಜನಮೇಜಯ ರಾಜನು ಉರಿಯುವ ಅಗ್ನಿಯು ಹವಿಸ್ಸಿನಿಂದ ಜ್ವಲಿಸುವಂತೆ ಉದಂಕನ ವಾಕ್ಯವೆಂಬ ಹವಿಸ್ಸಿನಿಂದ ಕೋಪದಿಂದ ಜ್ವಲಿಸಿದನು.
ಅಪೃಚ್ಛಚ್ಚ ತದಾ ರಾಜಾ ಮಂತ್ರಿಣಸ್ತಾನ್ ಸುದುಃಖಿತಃ |
ಉದಂಕಸ್ಯೈವ ಸಾನ್ನಿಧ್ಯೇ ಪಿತುಃ ಸ್ವರ್ಗಗತಂ ಪ್ರತಿ ॥193॥
ಅತ್ಯಂತ ದುಃಖಿತನಾದ ಆ ರಾಜನು ಉದಂಕನ ಸನ್ನಿಧಿಯಲ್ಲಿಯೇ ಆ ಮಂತ್ರಿಗಳನ್ನು ಕುರಿತು ತನ್ನ ತಂದೆಯ ಸ್ವರ್ಗಗತಿಯ ಬಗ್ಗೆ ಪ್ರಶ್ನೆಯನ್ನು ಮಾಡಿದನು.
ತದೈವ ಹಿ ಸ ರಾಜೇಂದ್ರೋ ದುಃಖಶೋಕಾಪ್ಲುತೋಽಭವತ್ |
ಯದೈವಂ ಪಿತರಂ ವೃತ್ತಮುದಂಕಾದಶೃಣೋದ್ ದ್ವಿಜಾತ್ ॥194॥
ಆ ರಾಜೇಂದ್ರನು ಉದಂಕ ಬ್ರಾಹ್ಮಣನಿಂದ ತನ್ನ ತಂದೆಗೆ ಉಂಟಾದ ಇಂತಹ ಪರಿಸ್ಥಿತಿಯನ್ನು ಯಾವಾಗ ಕೇಳಿದನೋ, ಆಗಲೇ ಅವನು ದುಃಖದಿಂದಲೂ ಶೋಕದಿಂದಲೂ ತುಂಬಿಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ತೃತೀಯೋಽಧ್ಯಾಯಃ ॥
॥ ಪೌಷ್ಯಪರ್ವ ಸಮಾಪ್ತಮ್॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಪೌಷ್ಯಪರ್ವವು ಮುಗಿಯಿತು
4. ಪೌಲೋಮಪರ್ವ
ನಾಲ್ಕನೆಯ ಅಧ್ಯಾಯ
(ಸತ್ರಯಾಗದಲ್ಲಿದ್ದ ಋಷಿಗಳಿಂದ ಶೌನಾಕಾಗಮನದನಂತರ ಕಥೆಯನ್ನು ಹೇಳುವಂತೆ ಸೂತರಿಗೆ ಪ್ರಾರ್ಥನೆ ಮತ್ತು ಶೌನಕರ ಆಗಮನ)
ಸೂತಃ
ರೋಮಹರ್ಷಣಪುತ್ರ ಉಗ್ರಶ್ರವಾಃ ಸೂತಃ ಪೌರಾಣಿಕೋ ನೈಮಿಶಾರಣ್ಯೇ ಶೌನಕಸ್ಯ ಕುಲಪತೇಃ ಸತ್ರೇಃ ವರ್ತಮಾನೇ ಋಷೀನಭ್ಯಾಗತಾನುಪತಸ್ಥೇ ॥1॥
ನೈಮಿಶಾರಣ್ಯದಲ್ಲಿ ಕುಲಪತಿಗಳಾದ ಶೌನಕರ ಸತ್ರಯಾಗವು ನಡೆಯುತ್ತಿರಲು ರೋಮಹರ್ಷಣಪುತ್ರರಾದ ಉಗ್ರಶ್ರವಸ್ ಎಂಬ ಸೂತರು ಸಮಾಗತರಾದ ಋಷಿಗಳನ್ನು ಪ್ರಶಂಸಿಸಿದರು.
ಪೌರಾಣಿಕಃ ಪುರಾಣೇ ಕೃತಶ್ರಮಃ ಸ ತಾನ್ ಕೃತಾಂಜಲಿರುವಾಚ ॥2॥
ಪೌರಾಣಿರಕಾಗಿ ಪುರಾಣಗಳಲ್ಲಿ ಪರಿಶ್ರಮವನ್ನು ಹೊಂದಿದ ಅವರು ಆ ಋಷಿಗಳನ್ನು ಕುರಿತು ಕೈಗಳನ್ನು ಮುಗಿದು ಮಾತನಾಡಿದರು.
ಮಯೋದಂಕಸ್ಯ ಚರಿತಮಶೇಷಮುಕ್ತಂ ಜನಮೇಜಯಸ್ಯ ಸರ್ಪಸತ್ರಾಂತರಮಿದಮಸ್ತಿ ಕಿಂ ಭವಂತಃ ಶ್ರೋತುಮಿಚ್ಛಂತೀತಿ |
ಕಿಮಹಂ ಬ್ರುವಾಣಿ ॥3॥

ನಾನು ಉದಂಕನ ಚರಿತ್ರೆಯನ್ನು ಸಂಪೂರ್ಣವಾಗಿ ಹೇಳಿದ್ದೇನೆ. ಜನಮೇಜಯನ ಸರ್ಪಯಾಗಕ್ಕೆ ಅವಕಾಶವು ದೊರೆಯುವಂತಹ ಉದಂಕನ ಮುಖದಿಂದ ಜನಮೇಜಯನು ತನ್ನ ತಂದೆಯಾದ ಪರೀಕ್ಷಿತನ ಮರಣದ ವಾರ್ತೆಯನ್ನು ಕೇಳಿದ ಪ್ರಮೇಯವು ಇಲ್ಲಿಯೇ ಹೇಳಲ್ಪಟ್ಟಿದೆ. ನೀವು ಇನ್ನೇನನ್ನು ಕೇಳಲು ಬಯಸುತ್ತೀರಿ. ನಾನು ಏನನ್ನು ಹೇಳಲಿ?
ತಮೃಷಯ ಊಚುಃ | ಪರಂ ರೌಮಹರ್ಷಣೇ ಪ್ರವಕ್ಷ್ಯಾಮಸತತ್ವಂ ತ್ವಂ ವಕ್ಷ್ಯಸಿ ಪ್ರತಿ ವಚಃ ಶುಶ್ರೂಷತಾಂ ಕಥಾಯೋಗಂ ನಃ ಕಥಾಯೋಗೇ ಭಗವಾಂಶ್ಚ ತಾವಚ್ಛೌನಕೋಽಗ್ನಿಶರಣ ಏವಾಸ್ತೇ ॥4॥
ಅವನನ್ನು ಕುರಿತು ಋಷಿಗಳು ರೋಮಹರ್ಷಣ ಪುತ್ರನೇ ನಾವು ಅನಂತರ ನಿನಗೆ ಹೇಳುತ್ತೇವೆ. ಆಗ ನೀನು ನಿನ್ನ ಕಥೆಗಳನ್ನು ಕೇಳುವ ಆಸೆಯುಳ್ಳ ನಮಗೆ ಕಥೆಗಳನ್ನು ಹೇಳುವಿಯಂತೆ. ಕಥೆಯನ್ನು ಕೇಳುವ ಆಸೆಯುಳ್ಳ ಪೂಜ್ಯರಾದ ಶೌನಕರೂ ಸಹ ಸದ್ಯದಲ್ಲಿ ಅಗ್ನಿಶಾಲೆಯಲ್ಲಿ ಇದ್ದಾರೆ ಎಂದು ಹೇಳಿದರು.
ಯೋಽಸೌ ದಿವ್ಯಾಃ ಕಥಾ ವೇದ ದೇವತಾಸುರಸಂಭವಾಃ ॥5॥
ಮಾನುಷೀಃ ದೇವಗಾಂಧರ್ವೀಃ ಕಥಾ ವೇದ ಚ ಸರ್ವಶಃ ॥6॥
ಆ ಶೌನಕರು ದೇವತೆ ಮತ್ತು ಅಸುರರಿಗೆ ಸಂಬಂಧಿಸಿದ ದಿವ್ಯವಾದ ಕಥೆಗಳನ್ನೂ, ಮನುಷ್ಯರಿಗೆ ಮತ್ತು ದೇವಗಂಧರ್ವರಿಗೆ ಸಂಬಂಧಿಸಿದ ಎಲ್ಲಾ ಕಥೆಗಳನ್ನೂ ತಿಳಿದಿದ್ದಾರೆ.
ಸ ಚಾಪ್ಯಸ್ಮಿನ್ಮಖೇ ಸೌತೇ ವಿದ್ವಾನ್ ಕುಲಪತಿರ್ದ್ವಿಜಃ |
ದಕ್ಷೋ ಧೃತವ್ರತೋ ಧೀಮಾನ್ ಶಾಸ್ತ್ರೇ ಚಾರಣ್ಯಕೇ ಗುರುಃ |
ಸತ್ಯವಾದೀ ಶಮಪರಸ್ತಪಸ್ವೀ ನಿಯತವ್ರತಃ ॥7॥
ಎಲೈ ಸೂತಪುತ್ರನೇ, ಆ ಬ್ರಾಹ್ಮಣರಾದ ಶೌನಕರಾದರೂ ನಮ್ಮ ಈ ಸತ್ರಯಾಗದಲ್ಲಿ ಕುಲಪತಿಗಳಾಗಿ ಮಾಡಲ್ಪಟ್ಟಿದ್ದಾರೆ. ಅವರು ದಕ್ಷರೂ,ಧೃತವ್ರತರೂ, ಮೇಧಾವಿಗಳೂ,ಶಾಸ್ತ್ರದಲ್ಲೂ ಮತ್ತು ಉಪನಿಷತ್ತುಗಳಲ್ಲಿಯೂ ಗುರುಗಳಾದವರೂ, ಸತ್ಯವನ್ನು ಹೇಳುವವರೂ, ಭಗವನ್ನಿಷ್ಠೆಯುಳ್ಳವರೂ, ತಪಸ್ವಿಗಳೂ ಮತ್ತು ವ್ರತನಿಯಮಗಳನ್ನು ಆಚರಿಸುವವರು.
ಸರ್ವೇಷಾಮೇವ ನೋ ಮಾನ್ಯಃ ಸ ತಾವತ್ಪ್ರತಿಪಾಲ್ಯತಾಮ್ |
ತಸ್ಮಿನ್ನಧ್ಯಾಸತಿ ಗುರಾವಾಸನಂ ಪರಮಾರ್ಚಿತಮ್ |
ತತೋ ವಕ್ಷ್ಯಸಿ ಯತ್ ತ್ವಾಂ ಸ ಪ್ರಕ್ಷ್ಯತಿ ದ್ವಿಜಸತ್ತಮಃ ॥8॥
ಅವರು ನಮಗೆಲ್ಲರಿಗೂ ಮಾನ್ಯರಾದವರು. ಅವರು ಬರುವವರೆಗೆ ನಿರೀಕ್ಷೆಯನ್ನು ಮಾಡೋಣ. ಗುರುಗಳಾದ ಅವರು ಬಂದು ಶ್ರೇಷ್ಠವಾದ ಆಸನವನ್ನು ಸ್ವೀಕರಿಸಿದ ಮೇಲೆ, ಬ್ರಾಹ್ಮಣಶ್ರೇಷ್ಠರಾದ ಅವರು ನಿನ್ನನ್ನು ಏನು ಕೇಳುತ್ತಾರೆಯೋ ಅಂತಹ ಕಥೆಗಳನ್ನು ನೀನು ಹೇಳುವಿ.
ಸೂತ ಃ
ಏವಮಸ್ತು ಗುರೌ ತಸ್ಮಿನ್ನುಪವಿಷ್ಟೇ ಮಹಾತ್ಮನಿ |
ತೇನ ಪೃಷ್ಟಾ ಃ ಕಥಾಃ ಪುಣ್ಯಾ ವಕ್ಷ್ಯಾಮಿ ವಿವಿಧಾಶ್ರಯಾಃ ॥9॥
ನಾನು ಹಾಗೆಯೇ ಮಾಡುತ್ತೇನೆ. ಮಹಾತ್ಮರಾದ ಗುರುಗಳು ಕುಳಿತುಕೊಂಡ ಮೇಲೆ ಅವರು ಕೇಳಿದ ವಿವಿಧ ವಿಷಯಕ್ಕೆ ಸಂಬಂಧಿಸಿದ ಪುಣ್ಯ ಕಥೆಗಳನ್ನು ಹೇಳುವೆನು.
ಸೋಽಥ ವಿಪ್ರರ್ಷಭಃ ಕೃತ್ವಾ ಕಾರ್ಯಂ ಸರ್ವಂ ಯಥಾಕ್ರಮ |
ದೇವಾನ್ ವಾಗ್ಭಿಃ ಪಿತ್ರೂನದ್ಭಿಸ್ತರ್ಪಯಿತ್ವಾಽಽಜಗಾಮ ಹ ॥10॥
ಆ ಬ್ರಾಹ್ಮಣಶ್ರೇಷ್ಠರೂ ಸಹ ತಮ್ಮ ಎಲ್ಲಾ ಕಾರ್ಯಗಳನ್ನು ಕ್ರಮದಿಂದ ಮುಗಿಸಿ ದೇವತೆಗಳನ್ನು ಸ್ತೋತ್ರಗಳಿಂದಲೂ, ಪಿತೃಗಳನ್ನು ಜಲದಿಂದಲೂ ಸಂತೃಪ್ತಿಪಡಿಸಿ ಅಲ್ಲಿಗೆ ಬಂದರು.
ಯತ್ರ ಬ್ರಹ್ಮರ್ಷಯಃ ಸಿದ್ಧಾಸ್ತ ಆಸೀರನ್ ಯತವ್ರತಾಃ |
ಯಜ್ಞಾಯತನಮಾಶ್ರಿತ್ಯ ಸೂತಪುತ್ರಪುರಸ್ಸರಾಃ ॥11॥
ಎಲ್ಲಿ ಧೃತವ್ರತರೂ, ಸಿದ್ಧರೂ ಆದ ಬ್ರಹ್ಮರ್ಷಿಗಳು ಸೂತಪುತ್ರರನ್ನು ಮುಂದೆ ಮಾಡಿಕೊಂಡು ಯಾವ ಯಜ್ಞಶಾಲೆಯಲ್ಲಿ ಕುಳಿತಿದ್ದರೋ (ಅಲ್ಲಿಗೆ ಬಂದರು)
ಋತ್ವಿಕ್ಷು ಚ ಸದಸ್ಯೇಷು ಸ ವೈ ಗೃಹಪತಿಸ್ತತಃ |
ಉಪವಿಷ್ಟೇಷೂಪವಿಷ್ಟಃ ಶೌನಕೋಽಥಾಬ್ರವೀದಿದಮ್ ॥12॥
ಋತ್ವಿಜರು ಮತ್ತು ಸದಸ್ಯರು ಕುಳಿತುಕೊಂಡ ಮೇಲೆ ಗೃಹಪತಿಗಳಾದ ಶೌನಕರು ತಮ್ಮ ಆಸನದಲ್ಲಿ ಕುಳಿತು ಈ ಮಾತನ್ನು ಆಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಮಾದಿಪರ್ವಣಿ ಚತುರ್ಥೋಽಧ್ಯಾಯಃ ॥
॥ ಪೌಲೋಮಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು. *****

ಐದನೆಯ ಅಧ್ಯಾಯ
(ಭಾರತ ವಕ್ತೃಗಳಾದ ಉಗ್ರಶ್ರವರ ಪಿತೃಗಳ ಕಥನ ಮತ್ತು ಶೌನಕರ ವಂಶವೃತ್ತಾಂತಕಥನ, ಭೃಗುಭಾರ್ಯೆಯನ್ನು ಅಪಹರಿಸಲು ಪುಲೋಮ ರಾಕ್ಷಸನಿಂದ ಅಗ್ನಿಯನ್ನು ಕುರಿತು ಪ್ರಶ್ನೆ ಮತ್ತು ಅಗ್ನಿಯ ಉತ್ತರ)
ಶೌನಕಃ
ಪುರಾಣಮಖಿಲಂ ತಾತ ಪಿತಾ ತೇಽಧೀತವಾನ್ ಪುರಾ |
ಕಚ್ಚಿತ್ ತ್ವಮಪಿ ತತ್ಸರ್ವಂ ಅಧೀತೋ ರೋಮಹರ್ಷಣೇ ॥1॥

ಪ್ರೀತಿಪಾತ್ರನೇ, ನಿನ್ನ ತಂದೆಯು ಹಿಂದೆ ಎಲ್ಲಾ ಪುರಾಣಗಳನ್ನೂ ಅಧ್ಯಯನ ಮಾಡಿದ್ದನು. ಎಲೈ ರೋಮಹರ್ಷಣಿಯೇ ನೀನೂ ಸಹ ಆ ಎಲ್ಲವನ್ನು ಅಧ್ಯಯನ ಮಾಡಿದ್ದೀಯಾ ?
ಪುರಾಣೇ ಹಿ ಕಥಾ ದಿವ್ಯಾ ಆದಿವಂಶಾಶ್ಚ ಧೀಮತಾಮ್ |
ಕಥ್ಯಂತೇ ತಾಃ ಪುರಾऽಸ್ಮಾಭಿಃ ಶ್ರುತಾಃ ಪೂರ್ವಂ ಪಿತುಸ್ತವ ॥2॥
ಪುರಾಣಗಳಲ್ಲಿ ಮೇಧಾವಿಗಳಾದವರ ಆದಿವಂಶಗಳ ದಿವ್ಯವಾದ ಕಥೆಯು ಹೇಳಲ್ಪಡುತ್ತದೆ. ಆ ಕಥೆಗಳನ್ನು ನಾವು ಹಿಂದೆ ನಿನ್ನ ತಂದೆಯಿಂದ ಕೇಳಿದ್ದೇವೆ.
ತತ್ರ ವಂಶಮಹಂ ಪೂರ್ವಂ ಶ್ರೋತುಮಿಚ್ಛಾಮಿ ಭಾರ್ಗವಮ್ |
ಕಥಯಸ್ವ ಕಥಾಂ ಪುಣ್ಯಾಂ ಕಲ್ಯಾಃ ಸ್ಮಃ ಶ್ರವಣೇ ತವ ॥3॥
ನಾನು ಅದರಲ್ಲಿ ಮೊದಲು ಭಾರ್ಗವವಂಶದ ವಿಸ್ತಾರವನ್ನು ಕೇಳಲು ಬಯಸುತ್ತೇನೆ. ಆ ಪವಿತ್ರವಾದ ಕಥೆಯನ್ನು ಹೇಳು. ನಾವು ನಿನ್ನಿಂದ ಕೇಳಲು ಸಮರ್ಥರಾಗಿ ಕುಳಿತಿದ್ದೇವೆ.
ಸೂತಃ
ಯದಧೀತಂ ಸದಾ ಸಮ್ಯಗ್ ದ್ವಿಜಶ್ರೇಷ್ಠೈರ್ಮಹಾತ್ಮಭಿಃ |
ವೈಶಂಪಾಯನವಿಪ್ರಾದ್ಯೈಸ್ತೈಶ್ಚಾಪಿ ಕಥಿತಂ ತದಾ |
ಯದಧೀತಂ ಚ ಪಿತ್ರಾ ಮೇ ಸಮ್ಯಕ್ಚೈವ ತತೋ ಮಯಾ ॥4॥
ಮಹಾತ್ಮರಾದ, ದ್ವಿಜಶ್ರೇಷ್ಠರಾದ ವೈಶಂಪಾಯನ ಮೊದಲಾದವರು ಅಧ್ಯಯನ ಮಾಡಿರುವುದನ್ನೆಲ್ಲಾ ನಾನೂ ಅಧ್ಯಯನ ಮಾಡಿದ್ದೇನೆ. ವೈಶಂಪಾಯನ ಮೊದಲಾದ ಬ್ರಾಹ್ಮಣರಿಂದ ಆ ಕಥೆಗಳು ಹೇಳಲ್ಪಟ್ಟವು. ನನ್ನ ತಂದೆಯು ಅಧ್ಯಯನ ಮಾಡಿದ ಪುರಾಣಗಳನ್ನೂ ನಾನು ಅವರಿಂದ ಚೆನ್ನಾಗಿ ಅಧ್ಯಯನ ಮಾಡಿದ್ದೇನೆ.
ತಂ ತಾವಚ್ಛೃಣು ಯೋ ದೇವೈಃ ಸರ್ವೈಃ ಸಾಗ್ನಿಮರುದ್ಗಣೈಃ |
ಪೂಜಿತಃ ಪ್ರವರೋ ವಂಶೋ ಭಾರ್ಗವಃ ಪೃಥುನಂದನ |
ಇಮಂ ವಂಶಂ ಮಹದ್ದಿವ್ಯಂ ಭಾರ್ಗವಂ ತೇ ಮಹಾಮುನೇ ॥5॥
ಎಲೈ ಮಹಾಮುನಿಯೇ, ಅಗ್ನಿಯಿಂದಲೂ ಮತ್ತು ಮರುದ್ಗಣಗಳಿಂದಲೂ ಕೂಡಿದ ಎಲ್ಲಾ ದೇವತೆಗಳಿಂದಲೂ ಪೂಜಿತವಾದ ಶ್ರೇಷ್ಠವಾದ ಭಾರ್ಗವವಂಶವನ್ನು ಮೊದಲು ಕೇಳು. ಎಲೈ ಪೃಥುನಂದನನೇ, ಈ ದೊಡ್ಡದಾದ ಮತ್ತು ದಿವ್ಯವಾದ ಭಾರ್ಗವವಂಶವನ್ನು ನಾನು ನಿನಗೆ ಹೇಳುತ್ತೇನೆ.
ಭೃಗುರ್ಮಹರ್ಷಿರ್ಭಗವಾನ್ ಬ್ರಹ್ಮಣಾ ವೈ ಸ್ವಯಂಭುವಾ |
ವರುಣಸ್ಯ ಕ್ರತೌ ಜಾತಃ ಪಾವಕಾದಿತಿ ನಃ ಶ್ರುತಮ್ ॥6॥
ಪೂಜ್ಯರಾದ ಭೃಗುಮಹರ್ಷಿಗಳು ವರುಣನ ಯಜ್ಞದಲ್ಲಿ ಬ್ರಹ್ಮದೇವರ ದೆಸೆಯಿಂದ ಅಗ್ನಿಯಲ್ಲಿ ಹುಟ್ಟಿ ಬಂದರೆಂದು ನಾವು ಕೇಳಿದ್ದೇವೆ.
ನಿಗದಾಮಿ ಕಥಾಯುಕ್ತಂ ಪುರಾಣಾಶ್ರಯಮದ್ಭುತಮ್ |
ಭೃಗೋಶ್ಚ ದಯಿತಃ ಪುತ್ರಶ್ಚ್ಯವನೋ ನಾಮ ಭಾರ್ಗವಃ ॥7॥
ಪುರಾಣಗಳಲ್ಲಿ ಆಶ್ರಿತವಾದ ಅದ್ಭುತವಾದ ಆ ವಂಶದ ಕಥೆಯನ್ನು ಹೇಳುತ್ತೇನೆ. ಭೃಗುವಿಗೆ ಪ್ರೀತಿಪಾತ್ರನಾದ ಚ್ಯವನನೆಂಬ ಪುತ್ರನಿದ್ದನು. ಅವನೂ ಭಾರ್ಗವನಷ್ಟೆ.
ಚ್ಯವನಸ್ಯಾಪಿ ದಾಯಾದಃ ಪ್ರಮತಿರ್ನಾಮ ಧಾರ್ಮಿಕಃ |
ಪ್ರಮತೇರಪ್ಯಭೂತ್ ಪುತ್ರೋ ಘೃತಾಚ್ಯಾಂ ರುರುರಿತ್ಯುತ ॥8॥
ಚ್ಯವನನ ಪುತ್ರನು ಧಾರ್ಮಿಕನಾದ ಪ್ರಮತಿ. ಆ ಪ್ರಮತಿಗಳಾದರೊ ಘೃತಾಚಿಯಲ್ಲಿ ರುರುವು ಎಂಬ ಪುತ್ರನು ಜನಿಸಿದನು.
ರುರೋರಪಿ ಸುತೋ ಜಜ್ಞೇ ಶುನಕೋ ವೇದಪಾರಗಃ |
ಪ್ರಮದ್ವರಾಯಾಂ ಧರ್ಮಾತ್ಮಾ ತವ ಪೂರ್ವಃ ಪಿತಾಮಹಃ ॥9॥
ರುರುವಿಗೆ ಪ್ರಮದ್ವರೆಯಲ್ಲಿ ವೇದಪಾರಂಗತನಾದ ಶುನಕ ಎಂಬ ಪುತ್ರನು ಜನಿಸಿದನು. ಧರ್ಮಾತ್ಮನಾದ ಅವನು ನಿನ್ನ ಪೂರ್ವಪಿತಾಮಹನಾದವನು.
ತಪಸ್ವೀ ಚ ಯಶಸ್ವೀ ಚ ಶ್ರುತವಾನ್ ಧರ್ಮವಿತ್ತಮಃ |
ಧರ್ಮಿಷ್ಠಃ ಸತ್ಯವಾದೀ ಚ ನಿಯತೋ ನಿಯತೇಂದ್ರಿಯಃ ॥10॥
ಅವನು ತಪಸ್ವಿಯೂ, ಕೀರ್ತಿವಂತನೂ ಬಹಳ ಅಧ್ಯಯನವನ್ನು ಮಾಡಿದವನೂ, ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನೂ. ಸ್ವತಃ ಧರ್ಮಾಚರಣೆಯನ್ನು ಮಾಡುವವನೂ, ಜಿತೇಂದ್ರಿಯನೂ ಆಗಿದ್ದನು.
ಶೌನಕಃ
ಸೂತಪುತ್ರ ಯಥಾ ತಸ್ಯ ಭಾರ್ಗವಸ್ಯ ಮಹಾತ್ಮನಃ |
ಚ್ಯವನತ್ವಂ ಕಥಂ ಪ್ರಾಪ್ತಂ ತನ್ಮಮಾಚಕ್ಷ್ವ ಸುವ್ರತ ॥11॥
ಸೂತ ಪುತ್ರನೇ, ಸುವ್ರತನೇ ಆ ಮಹಾತ್ಮನಾದ ಭೃಗುಪುತ್ರನಿಗೆ ಚ್ಯವನತ್ವವು ಹೇಗೆ ಪ್ರಾಪ್ತವಾಯಿತು ಎಂಬುದನ್ನು ನನಗೆ ಹೇಳು.
ಸೂತಃ
ಭೃಗೋಸ್ಸುದಯಿತಾ ಭಾರ್ಯಾ ಪುಲೋಮೇತ್ಯಭಿವಿಶ್ರುತಾ |
ತಸ್ಯಾಂ ಗರ್ಭಃ ಸಮಭವದ್ಭೃಗೋರ್ವೀರ್ಯಸಮುದ್ಭವಃ ॥12॥
ಭೃಗುಗಳಿಗೆ ಪುಲೋಮಾ ಎಂಬ ಪ್ರೀತಿಪಾತ್ರಳಾದ ಹೆಂಡತಿಯಿದ್ದಳು. ಭೃಗುಗಳ ವೀರ್ಯದಿಂದ ಅವಳಲ್ಲಿ ಗರ್ಭವು ಉಂಟಾಯಿತು.

ತಸ್ಮಿನ್ ಗರ್ಭೇ ಸಮುದ್ಭೂತೇ ಪುಲೋಮಾಯಾಂ ಭೃಗೂದ್ವಹ |
ಸಮಯೇ ಸಮಶೀಲಿನ್ಯಾಂ ಧರ್ಮಪತ್ನ್ಯಾಂ ಯಶಸ್ವಿನಃ |
ಅಭಿಷೇಕಾಯ ನಿಷ್ಕ್ರಾಂತೇ ಭೃಗೌ ಧರ್ಮಭೃತಾಂ ವರೇ |
ಆಶ್ರಮಂ ತಸ್ಯ ರಕ್ಷೋಽಥ ಪುಲೋಮಾಭ್ಯಾಜಗಾಮ ಹ ॥ 13 ॥
ಎಲೈ ಭೃಗು ಕುಲೋತ್ಪನ್ನನೇ, ಕೀರ್ತಿವಂತರಾದ ಭೃಗುಗಳಿಗೆ ಅವರಿಗೆ ಅನುಗುಣವಾದ ಶೀಲವುಳ್ಳ ಧರ್ಮಪತ್ನಿಯಾದ ಪುಲೋಮೆಯಲ್ಲಿ ಯೋಗ್ಯವಾದ ಸಮಯದಲ್ಲಿ ಗರ್ಭವುಂಟಾದಾಗ ಒಮ್ಮೆ ಆಗ ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಭೃಗುಗಳು ಸ್ನಾನ ಮಾಡುವುದಕ್ಕೆ ಹೊರಗೆ ಹೋಗಿದ್ದಾಗ, ಆ ಆಶ್ರಮಕ್ಕೆ ಪುಲೋಮಾ ಎಂಬ ರಾಕ್ಷಸನು ಬಂದನು.
ತಂ ಪ್ರವಿಶ್ಯಾಶ್ರಮಂ ದೃಷ್ಟ್ವಾ ಭೃಗೋರ್ಭಾರ್ಯಾಮ ನಿಂದಿತಾಮ್
ಹೃಚ್ಛಯೇನ ಸಮಾವಿಷ್ಟೋ ವಿಚೇತಾಃ ಸಮಪದ್ಯತ ॥14॥
ಅವನು ಆಶ್ರಮವನ್ನು ಪ್ರವೇಶಿಸಿ, ಪರಿಶುದ್ಧವಾದ ಭೃಗುಗಳ ಪತ್ನಿಯನ್ನು ನೋಡಿ, ಕಾಮದಿಂದ ಸಮಾವಿಷ್ಟನಾಗಿ, ಬುದ್ಧಿಸ್ವಾಸ್ಥ್ಯವನ್ನು ಕಳೆದುಕೊಂಡನು.
ಅಭ್ಯಾಗತಂ ತು ತದ್ದೃಷ್ಟ್ವಾ ಪುಲೋಮಾ ಚಾರುಹಾಸಿನೀ |
ನ್ಯಮಂತ್ರಯತ ವನ್ಯೇನ ಫಲಮೂಲಾದಿನಾ ತದಾ ॥15॥
ಅಭ್ಯಾಗತನಾಗಿ ಬಂದ ಅವನನ್ನು ನೋಡಿ, ಚಾರುಹಾಸಿನಿಯಾದ ಪುಲೋಮೆಯು ಕಾಡಿನ ಫಲಮೂಲಗಳಿಂದ ಅವನನ್ನು ಆಹ್ವಾನಿಸಿ ಸತ್ಕರಿಸಿದಳು.
ತಾಂ ತು ರಕ್ಷಸ್ತದಾ ಬ್ರಹ್ಮನ್ ಹೃಚ್ಛಯೇನ ನಿಪೀಡಿತಃ |
ದೃಷ್ಟ್ವಾ ಹೃಷ್ಟಮನಾ ಭೂತ್ವಾ ಜಿಹೀರ್ಷುಸ್ತಾಮನಿಂದಿತಾಮ್ ॥16॥
ಎಲೈ ಬ್ರಾಹ್ಮಣನೇ ಕಾಮಪೀಡಿತವಾದ ಮನಸುಳ್ಳ ಆ ರಾಕ್ಷಸನು ಆ ಪುಲೋಮೆಯನ್ನು ನೋಡಿ ಮನಸ್ಸಿನಲ್ಲಿ ಹರ್ಷಗೊಂಡು, ಪರಿಶುದ್ಧಳಾದ ಅವಳನ್ನು ಅಪಹರಿಸಲು ಬಯಸಿದನು.
ಅಥಾಗ್ನಿಶರಣೇಽಪಶ್ಯಜ್ಜ್ವಲಿತಂ ಜಾತವೇದಸಮ್ |
ತಮಪೃಚ್ಛತ್ ತತೋ ರಕ್ಷಃ ಪಾವಕಂ ಜ್ವಲಿತಂ ತದಾ ॥17॥
ಅವನು ಆಗ ಅಗ್ನಿಶಾಲೆಯಲ್ಲಿ ಜ್ವಲಿಸುತ್ತಿದ್ದ ಅಗ್ನಿಯನ್ನು ನೋಡಿ, ಆ ಅಗ್ನಿಯನ್ನು ಕುರಿತು ಅವನು ಪ್ರಶ್ನೆ ಮಾಡಿದನು.
ಶಂಸ ಮೇ ಕಸ್ಯ ಭಾರ್ಯೇಯಮಗ್ನೇ ಪೃಚ್ಛ ಋತೇನ ವೈ |
ಸತ್ಯಸ್ತ್ವಮಸಿ ಸತ್ಯಂ ವೈ ವದ ಪಾವಕ ಪೃಚ್ಛತಃ ॥18॥
ಅಗ್ನಿಯೇ ಇವಳು ಯಾರ ಭಾರ್ಯೆಯೆಂದು ನನಗೆ ನಿಜವಾಗಿ ಹೇಳು. ಪಾವಕನೇ ನಿನ್ನನ್ನು ಸತ್ಯನೆಂದು ಕರೆಯುತ್ತಾರೆ. ಪ್ರಶ್ನೆ ಮಾಡುವ ನನಗೆ ಸತ್ಯವಾದ ಉತ್ತರವನ್ನು ಕೊಡು.
ಮಯಾ ಹೀಯಂ ವೃತಾ ಪೂರ್ವಂ ಭಾರ್ಯಾರ್ಥೇ ವರವರ್ಣಿನೀ |
ಪಶ್ಚಾತ್ ತ್ವಿಮಾಂ ಪಿತಾ ಪ್ರಾದಾದ್ ಭೃಗವೇಽನೃತಕಾರಿಣೇ ॥19॥
ಈ ಸುಂದರಿಯನ್ನು ನಾನು ಹಿಂದೆ ಪತ್ನಿಯಾಗಿ ಸ್ವೀಕರಿಸಲು ಯಾಚಿಸಿದ್ದೆನು. ಅನಂತರ ಅವಳ ತಂದೆಯು ಇವಳನ್ನು ಅನೃತ ಶೀಲನಾದ ಭೃಗುವಿಗೆ ಕೊಟ್ಟನು.
ಸೇಯಂ ಯದಿ ವರಾರೋಹಾ ಭೃಗೋರ್ಭಾರ್ಯಾ ರಹೋಗತಾ |
ತಥಾ ಸತ್ಯಂ ಮಮಾಖ್ಯಾಹಿ ಜಿಹೀರ್ಷಾಮ್ಯಾಶ್ರಮಾದಿಮಾಮ್ ॥20॥
ಈ ಏಕಾಂತದಲ್ಲಿರುವ ಸುಂದರಿಯು ಭೃಗುವಿನ ಭಾರ್ಯೆಯಾದರೆ, ಸತ್ಯವಾಗಿ ನನಗೆ ಹೇಳು. ಇವಳನ್ನು ಆಶ್ರಮದಿಂದ ಅಪಹರಿಸಲು ಬಯಸುತ್ತೇನೆ.
ಮನ್ಯುರ್ಹಿ ಹೃದಯಂ ಮೇಽದ್ಯ ನಿರ್ದಹನ್ನಿವ ತಿಷ್ಠತಿ |
ಮತ್ಪೂರ್ವಭಾರ್ಯಾಂ ಯದಿಮಾಂ ಭೃಗುಃ ಪ್ರಾಪ ಸುಮಧ್ಯಮಾಮ್ ॥
ಈ ದಿನ ನನ್ನ ಹೃದಯಲ್ಲಿ ಕೋಪವು ಜ್ವಲಿಸುತ್ತಿದೆ. ನನಗೆ ಭಾರ್ಯೆಯಾಗಿ ಸೇರಬೇಕಾಗಿದ್ದ ಈ ಸುಂದರಿಯನ್ನು ಭೃಗುವು ಪಡೆದಿದ್ದಾನೆ.
ತದ್ರಕ್ಷ ಏವಮಾಮಂತ್ರ್ಯ ಜ್ವಲಿತಂ ಜಾತವೇದಸಮ್ |
ಶಂಕಮಾನೋ ಭೃಗೋರ್ಭಾರ್ಯಾಂ ಪುನಃ ಪುನರಪೃಚ್ಛತ ॥22॥
ಆ ರಾಕ್ಷಸನು ಅವಳನ್ನು ಭೃಗುವಿನ ಭಾರ್ಯೆಯೆಂದು ಶಂಕಿಸುತ್ತಾ ಜ್ವಲಿಸುತ್ತಿದ್ದ ಅಗ್ನಿಯನ್ನು ಕುರಿತು ಪುನಃ ಪುನಃ ಪ್ರಶ್ನೆಯನ್ನು ಮಾಡಿದನು.
ತ್ವಮಗ್ನೇ ಸರ್ವಭೂತಾನಾಮಂತರ್ವಸಸಿ ನಿತ್ಯದಾ |
ಸಾಕ್ಷಿವತ್ ಪುಣ್ಯಪಾಪೇಷು ಸತ್ಯಂ ಬ್ರೂಹಿ ಕವೇ ವಚಃ ॥23॥
ಅಗ್ನಿಯೇ ನೀನು ಎಲ್ಲಾ ಜೀವರ ಒಳಗೂ ಯಾವಾಗಲೂ ಪುಣ್ಯ-ಪಾಪಗಳಿಗೆ ಸಾಕ್ಷಿಯಾಗಿ ವಾಸಮಾಡುತ್ತಿಯೆ, ಎಲೈ ಕವಿಯೇ ನನಗೆ ಸತ್ಯವಾದ ಮಾತನ್ನು ಹೇಳು.
ಮತ್ಪೂರ್ವಭಾರ್ಯಾಽಪಹೃತಾ ಭೃಗುಣಾಽನೃತಕಾರಿಣಾ |
ಸೇಯಂ ಯದಿ ತಥಾ ಮೇ ತ್ವಂ ಸತ್ಯಮಾಖ್ಯಾತುಮರ್ಹಸಿ ॥24॥
ನನಗೆ ಸೇರಬೇಕಾಗಿದ್ದ ಪತ್ನಿಯನ್ನು ಅನೃತಶೀಲನಾದ ಭೃಗುವು ಅಪಹರಿಸಿದ್ದಾನೆ. ಇವಳು ಭೃಗುವಿನ ಪತ್ನಿಯೇ ಆದರೆ ನೀನು ನನಗೆ ಸತ್ಯವನ್ನು ಹೇಳು.

ಶ್ರುತ್ವಾ ತ್ವತ್ತೋ ಭೃಗೋರ್ಭಾರ್ಯಾಂ ಹರಿಷ್ಯಾಮ್ಯಹಮಾಶ್ರಮಾತ್|
ಜಾತವೇದಃ ಪಶ್ಯತಸ್ತೇ ವದ ಸತ್ಯಾಂ ಗಿರಂ ಮಮ ॥25॥
ಇವಳು ಭೃಗುವಿನ ಭಾರ್ಯೆಯೆಂದು ನಿನ್ನಿಂದ ಕೇಳಿದ ಮೇಲೆ, ಎಲೈ ಅಗ್ನಿಯೇ ನಿನ್ನ ಕಣ್ಣೆದುರಿಗೆ ಇವಳನ್ನು ಆಶ್ರಮದಿಂದ ಅಪಹರಿಸುವೆನು. ನನಗೆ ಸತ್ಯವಾದ ಉತ್ತರವನ್ನು ನೀಡು.
ತಸ್ಯ ತದ್ವಚನಂ ಶ್ರುತ್ವಾ ಸಪ್ತಾರ್ಚಿರ್ದುಃಖಿತೋ ಭೃಶಮ್ |
ಭೀತೋಽನೃತಾಚ್ಚ ಶಾಪಾಚ್ಚ ಭೃಗೋರಿತ್ಯಬ್ರುವೀಚ್ಛನೈಃ ॥26॥
ಅವನ ಆ ಮಾತನ್ನು ಕೇಳಿ, ಅಗ್ನಿಯು ಪರಮ ದುಃಖಿತನಾದನು , ರಾಕ್ಷಸ ಭಾರ್ಯೆಯೆಂದು ಹೇಳಿದರೆ ಉಂಟಾಗುವ ಅನೃತದಿಂದಲೂ ಮತ್ತು ಅನೃತನಿಮಿತ್ತವಾದ ಶಾಪದಿಂದಲೂ ಹೆದರಿ ಭೃಗುವಿನ ಪತ್ನಿ ಎಂದು ಮೆಲ್ಲನೆ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚಮೋಽಧ್ಯಾಯಃ ॥
॥ ಇತಿ ಪೌಲೋಮಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
*****

ಆರನೆಯ ಅಧ್ಯಾಯ
(ರಾಕ್ಷಸನಾದ ಪುಲೋಮನಿಂದ ಭೃಗುಭಾರ್ಯೆಯಾದ ಪುಲೋಮೆಯ ಅಪಹರಣ. ಗರ್ಭಿಣಿಯಾದ ಅವಳ ಉದರದಿಂದ ಪುತ್ರನ ನಿಷ್ಕ್ರಮಣ. ರಾಕ್ಷಸನ ಮರಣ, ವಧೂಸರನದಿಯ ಉತ್ಪತ್ತಿ, ಭೃಗುವಿನಿಂದ ಅಗ್ನಿಗೆ ಶಾಪದಾನ)
ಸೂತಃ -
ಅಗ್ನೇರಥ ವಚಃ ಶ್ರುತ್ವಾ ತದ್‌ರಕ್ಷಃ ಪ್ರಜಹಾರ ತಾಮ್ |
ಬ್ರಹ್ಮನ್ ವರಾಹರೂಪೇಣ ಮನೋಮಾರುತರಂಹಸಾ ॥1॥
ಎಲೈ ಬ್ರಾಹ್ಮಣನೇ ಅಗ್ನಿಯ ಮಾತನ್ನು ಕೇಳಿ, ಮತ್ತು ಅಗ್ನಿಯ ಪ್ರತಿಷೇಧನೆಯ ಮಾತನ್ನು ಮೀರಿ, ಆ ರಾಕ್ಷಸನು ವರಾಹರೂಪವನ್ನು ಧರಿಸಿ ಮನೋವೇಗ ಮತ್ತು ವಾಯುವೇಗದಿಂದ ಕೂಡಿದವನಾಗಿ ಅವಳನ್ನು ಅಪಹರಿಸಿದನು.
ನಿವಸಂಶ್ಚೈವ ತತ್ಕುಕ್ಷೌ ಸ ವೈ ಭೃಗುಕುಲೋದ್ವಹಃ |
ರೋಷಾನ್ಮಾತುಶ್ಚ್ಯುತಃ ಕುಕ್ಷೇಶ್ಚ್ಯವನಸ್ತೇನ ಸೋಽಭವತ್ ॥2॥
ಅವಳ ಕುಕ್ಷಿದಲ್ಲಿ ವಾಸಿಸುತ್ತಿದ್ದ ಆ ಭೃಗುಕುಲೋದ್ವಹನು ರೋಷದಿಂದ ತಾಯಿಯ ಉದರದಿಂದ ಕೆಳಗೆ ಬಿದ್ದನು. ಆದ್ದರಿಂದ ಅವನಿಗೆ ಚ್ಯವನ (ಜಾರಿದವನು) ಎಂದು ಹೆಸರಾಯಿತು.
ತಂ ದೃಷ್ಟ್ವಾ ಮಾತುರುದರಾಚ್ಚ್ಯುತಮಾದಿತ್ಯವರ್ಚಸಮ್ |
ತದ್ ರಕ್ಷೋ ಭಸ್ಮಸಾದ್ ಭೂತಂ ಪಪಾತ ಪರಿಮುಚ್ಯ ತಾಮ್ ॥3॥
ತಾಯಿಯ ಉದರದಿಂದ ಜಾರಿಬಂದ ಸೂರ್ಯನ ತೇಜಸ್ಸನ್ನು ಹೊಂದಿದ್ದ ಆ ಮಗುವನ್ನು ನೋಡಿ, ಆ ರಾಕ್ಷಸನು ಪುಲೋಮೆಯನ್ನು ಬಿಟ್ಟು, ಭೂಮಿಯಲ್ಲಿ ಬಿದ್ದು ಭಸ್ಮವಾಗಿ ಹೋದನು.
ಸಾ ತಮಾದಯ ಸುಶ್ರೋಣೀ ಸಸಾರ ಭೃಗುನಂದನಮ್ |
ಚ್ಯವನಂ ಭಾರ್ಗವಂ ಬ್ರಹ್ಮನ್ ಪುಲೋಮಾ ದುಃಖಮೂರ್ಚ್ಛಿತಾ ॥4॥
ಎಲೈ ಬ್ರಾಹ್ಮಣನೇ ಅತಿಶಯವಾದ ದುಃಖದಿಂದ ಕೂಡಿದ ಸುಂದರಿಯಾದ ಪುಲೋಮೆಯು ಭೃಗುನಂದನನಾದ ಆ ಚ್ಯವನನನ್ನು ಎತ್ತಿಕೊಂಡು ಆಶ್ರಮದ ಕಡೆಗೆ ಹೊರಟಳು.
ತಾಂ ದದರ್ಶ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ |
ರುದಂತೀಂ ಬಾಷ್ಪಪೂರ್ಣಾಕ್ಷೀಂ ಭೃಗೋರ್ಭಾರ್ಯಾಮನಿಂದಿತಾಮ್ ॥
ಸರ್ವಲೋಕ ಪಿತಾಮಹರಾದ ಬ್ರಹ್ಮದೇವರು, ಪರಿಶುದ್ಧಳಾದ ಭೃಗುಪತ್ನಿಯು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅಳುತ್ತಿರುವುದನ್ನು ತಾವೇ ನೋಡಿದರು.
ಸಾಂತ್ವಯಾಮಾಸ ಭಗವಾನ್ ವಧೂಂ ಬ್ರಹ್ಮಾ ಪಿತಾಮಹಃ |
ಅಶ್ರುಬಿಂದೂದ್ಭವಾ ತಸ್ಯಾಃ ಪ್ರಾವರ್ತತ ಮಹಾನದೀ ॥6॥
ಪಿತಾಮಹರಾದ ಪೂಜ್ಯರಾದ ಬ್ರಹ್ಮದೇವರು ತಮ್ಮ ಸೊಸೆಯನ್ನು ತಾವೇ ಸಮಾಧಾನ ಮಾಡಿದರು. ಅವಳ ಕಣ್ಣೀರಿನಿಂದ ಒಂದು ಮಹಾನದಿಯು ಉದ್ಭವವಾಯಿತು.
ಅನುವರ್ತ್ಮ ಸೃತಾ ತಸ್ಯಾ ಭೃಗೋಃ ಪತ್ನ್ಯಾ ಯಶಸ್ವಿನಃ |
ತಸ್ಯಾ ಮಾರ್ಗಂ ದ್ರುತವತೀಂ ದೃಷ್ಟ್ವಾ ತು ಸರಿತಂ ತದಾ ॥7॥
ನಾಮ ತಸ್ಯಾಸ್ತದಾ ನದ್ಯಾಶ್ಚಕ್ರೇ ಲೋಕಪಿತಾಮಹಃ |
ವಧೂಸರೇತಿ ಭಗವಾನ್ ಚ್ಯವನಸ್ಯಾಶ್ರಮಂ ಪ್ರತಿ ॥8॥
ಅವಳು ಆಶ್ರಮದ ಕಡೆಗೆ ನಡೆದಂತೆ ಯಶಸ್ವಿನಿಯಾದ ಆ ಭೃಗುಪತ್ನಿಯು ಹೋದ ಮಾರ್ಗದಲ್ಲಿ ಅವಳನ್ನು ಅನುಸರಿಸಿಕೊಂಡು, ಆ ನದಿಯೂ ಹರಿಯಿತು. ಆಗ ಲೋಕಪಿತಾಮಹರಾದ ಪೂಜ್ಯರಾದ ಬ್ರಹ್ಮದೇವರು ಚ್ಯವನಾಶ್ರಮದ ಬಳಿ ಹರಿಯುವ ಆ ನದಿಯನ್ನು ನೋಡಿ ಅದಕ್ಕೆ ವಧೂಸರಾ ಎಂದು ನಾಮಕರಣವನ್ನು ಮಾಡಿದರು.
ಸ ಏಷ ಚ್ಯವನೋ ಜಜ್ಞೇ ಭೃಗೋಃ ಪುತ್ರಃ ಪ್ರತಾಪವಾನ್ |
ತಂ ದದರ್ಶ ಪಿತಾ ತತ್ರ ಚ್ಯವನಂ ತಾಂ ಚ ಭಾಮಿನೀಮ್ ॥9॥

ಪ್ರತಾಪಶಾಲಿಯಾದ ಭೃಗುಪುತ್ರನಾದ ಈ ಚ್ಯವನರು ಹೀಗೆ ಜನಿಸಿದರು.  ತಂದೆಯಾದ ಭೃಗುಗಳು ಆಶ್ರಮದಲ್ಲಿ ಆ ಚ್ಯವನರನ್ನು ಮತ್ತು ತಮ್ಮ ಪತ್ನಿಯನ್ನು ನೋಡಿದರು.
ಸ ಪುಲೋಮಾಂ ತತೋ ಭಾರ್ಯಾಂ ಪಪ್ರಚ್ಛ ಕುಪಿತೋ ಭೃಗುಃ |
ಕೇನಾಸಿ ರಕ್ಷಸೇ ತಸ್ಮೈ ಕಥಿತೇಹ ಜಿಹೀರ್ಷವೇ ||10||
ಕೋಪಗೊಂಡ ಭೃಗುಗಳು ಆಗ ತಮ್ಮ ಹೆಂಡತಿಯಾದ ಪುಲೋಮೆಯನ್ನು ಕುರಿತು, ನಿನ್ನನ್ನು ಅಪಹರಿಸಿಕೊಂಡು ಹೋಗಲು ಬಯಸಿದ ಆ ರಾಕ್ಷಸನಿಗೆ ನೀನು ನನ್ನ ಹೆಂಡತಿಯೆಂದು ಹೇಳಿದವರು ಯಾರು ಎಂದು ಕೇಳಿದರು.
ನ ಹಿ ತ್ವಾಂ ವೇದ ತದ್ರಕ್ಷೋ ಮದ್ಭಾರ್ಯಾಂ ಚಾರುಹಾಸಿನೀಮ್ |
ತತ್ತ್ವಮಾಖ್ಯಾಹಿ ತಂ ಹ್ಯದ್ಯ ಶಪ್ತುಮಿಚ್ಛಾಮ್ಯಹಂ ರುಷಾ |
ಬಿಭೇತಿ ಕೋ ನ ಶಾಪಾನ್ಮೇ ಕಸ್ಯ ಚಾಽಯಂ ವ್ಯತಿಕ್ರಮಃ ||11||
ಸುಂದರಿಯಾದ ನೀನು ನನ್ನ ಭಾರ್ಯೆಯೆಂದು ಆ ರಾಕ್ಷಸನಿಗೆ ತಿಳಿದಿರಲಿಲ್ಲ. ನನಗೆ ನಿಜವಾಗಿ ಹೇಳು. ನಾನು ಹಾಗೆ ಹೇಳಿದವನಿಗೆ ಶಾಪವನ್ನು ಕೊಡಲು ಬಯಸುತ್ತೇನೆ. ನನ್ನ ಶಾಪಕ್ಕೆ ಯಾರು ಹೆದರುವುದಿಲ್ಲ? ಯಾರು ಈ ಅತಿಕ್ರಮವನ್ನು ಮಾಡಿದವರು?
ಪುಲೋಮಾ
ಅಗ್ನಿನಾ ಭಗವಂಸ್ತಸ್ಮೈ ರಕ್ಷಸೇಽಹಂ ನಿವೇದಿತಾ |
ತತೋ ಮಾಮನಯದ್ ರಕ್ಷಃ ಕ್ರೋಶಂತೀಂ ಕುರರೀಮಿವ ||12||
ಪೂಜ್ಯರೇ ಅಗ್ನಿಯು ಆ ರಾಕ್ಷಸನಿಗೆ ನಾನು ಭೃಗುಭಾರ್ಯೆಯೆಂದು ಹೇಳಿದನು. ಆಗ ಆ ರಾಕ್ಷಸನು ಕುರರೀಪಕ್ಷಿಯಂತೆ ದುಃಖದಿಂದ ಕಿರುಚುವ ನನ್ನನ್ನು ತೆಗೆದುಕೊಂಡು ಹೋದನು.
ಸಾಽಹಂ ತವ ಸುತಸ್ಯಾಸ್ಯ ತೇಜಸಾಽಥಾಪಿ ಮೋಕ್ಷಿತಾ |
ಭಸ್ಮೀಭೂತಂ ತು ತದ್ರಕ್ಷೋ ಮಾಮುತ್ಸೃಜ್ಯ ಪಪಾತ ವೈ ||13||
ಆದರೂ ನಾನು ಈ ನಿಮ್ಮ ಪುತ್ರನ ಪ್ರಭಾವದಿಂದ ಅವನಿಂದ ಬಿಡುಗಡೆಯನ್ನು ಹೊಂದಿದ್ದೇನೆ. ಆ ರಾಕ್ಷಸನು ನನ್ನನ್ನು ಬಿಟ್ಟು ಭಸ್ಮವಾಗಿ ಬಿದ್ದುಹೋದನು.
ಸೂತಃ
ಇತಿ ಶ್ರುತ್ವಾ ಪುಲೋಮಾಯಾ ಭೃಗುಃ ಪರಮಮನ್ಯುಮಾನ್ |
ಶಶಾಪಾಗ್ನಿಮತಿಕ್ರುದ್ಧಃ ಸರ್ವಭಕ್ಷೋ ಭವಿಷ್ಯಸಿ ||14||
ಪುಲೋಮೆಯ ಈ ಮಾತುಗಳನ್ನು ಕೇಳಿ ಪರಮ ಕೋಪದಿಂದ ಕೂಡಿದ ಭೃಗುಗಳು ಇನ್ನೂ ಕೋಪದಿಂದ ಕೂಡಿದವರಾಗಿ ಅಗ್ನಿಯನ್ನು ಕುರಿತು ನೀನು ಸರ್ವಭಕ್ಷನಾಗು ಎಂದು ಶಾಪವನ್ನು ಕೊಟ್ಟರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಷಷ್ಠೋಽಧ್ಯಾಯಃ ||
|| ಇತಿ ಪೌಲೋಮಪರ್ವಣಿ ತೃತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
*****
ಏಳನೆಯ ಅಧ್ಯಾಯ
(ಶಾಪಗ್ರಸ್ತನಾದ ಅಗ್ನಿಯಿಂದ ತನ್ನ ಮಹಿಮಾ ಕಥನಪೂರ್ವಕವಾಗಿ ಅಗ್ನಿಕುಂಡಗಳಿಂದ ತಿರೋಧಾನ. ಋಷಿಗಳಿಂದ ಪ್ರಾರ್ಥಿಸಲ್ಪಟ್ಟ ಬ್ರಹ್ಮದೇವರಿಂದ ಶಾಪ ವಿಮುಕ್ತನಾಗಿ ಪುನಃ ಸ್ವಾತ್ಮಪ್ರಕಾಶ)
ಸೂತ
ಶಪ್ತಸ್ತು ಭೃಗುಣಾ ವಹ್ನಿಃ ಕ್ರುದ್ಧೋ ವಾಕ್ಯಮಥಾಬ್ರವೀತ್ |
ಕಿಮಿದಂ ಸಾಹಸಂ ಬ್ರಹ್ಮನ್ ಕೃತವಾನಸಿ ಸಾಂಪ್ರತಮ್ ||1||
ಭೃಗುಗಳಿಂದ ಶಾಪಕ್ಕೆ ಒಳಗಾದ ಅಗ್ನಿಯು ಕ್ರೋಧದಿಂದ ಅವರನ್ನು ಕುರಿತು ಬ್ರಾಹ್ಮಣನೇ ಈಗ ಇದೇನು ಸಾಹಸದ ಕಾರ್ಯವನ್ನು (ಆಲೋಚನೆಯಿಲ್ಲದ ಕಾರ್ಯವನ್ನು)  ಮಾಡುತ್ತಿದ್ದೀಯೆ ಎಂದು ಹೇಳಿದನು.
ಧರ್ಮೇಽಪಿ ಯತಮಾನಸ್ಯ ಸತ್ಯಂ ಚ ವದತಃ ಸಮಮ್ |
ಪೃಷ್ಟೋ ಯದಬ್ರುವಂ ಸತ್ಯಂ ವ್ಯಭಿಚಾರೋಽತ್ರ ಕೋ ಮಮ ||2||
ಯಾವಾಗಲೂ ಧರ್ಮದಲ್ಲಿಯೇ ಪ್ರಯತ್ನ ಪಡುವ ಮತ್ತು ಸತ್ಯವನ್ನು ಮಾತನಾಡುವ ನಾನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಸತ್ಯವನ್ನೇ ಹೇಳಿದಾಗ, ಇಲ್ಲಿ ನನ್ನ ಧರ್ಮದ ಅತಿಕ್ರಮವು ಏನಿದೆ?
ಪೃಷ್ಟೋ ಹಿ ಸಾಕ್ಷಿ ೀ ಯಃ  ಸಾಕ್ಷ್ಯೇ ಜಾನಮಾನೋಽನ್ಯಥಾ ವದೇತ್ |
ಸ ಪೂರ್ವಾನಾತ್ಮನಃ ಸಪ್ತ ಕುಲೇ ಹನ್ಯಾತ್ ತಥಾಽಪರಾನ್ ||3||
ಯಾವ ಸಾಕ್ಷಿಯು ಸಾಕ್ಷಿಯ ಸ್ಥಾನದಲ್ಲಿ ನಿಂತು ತನಗೆ ವಿಷಯವು ತಿಳಿದಿದ್ದರೂ ಅದಕ್ಕೆ ವಿರುದ್ಧವಾಗಿ ಹೇಳುತ್ತಾನೆಯೋ, ಅವನು ತನ್ನ ಕುಲದ ಹಿಂದಿನ ಏಳು ಪಿತೃಗಳನ್ನು ಮತ್ತು ಮುಂದಿನ ಏಳು ಪಿತೃಗಳನ್ನು  ಅಧಃಪಾತಕ್ಕೀಡು ಮಾಡುತ್ತಾನೆ.
ಯಶ್ಚ ಕಾರ್ಯಾರ್ಥತತ್ತ್ವಜ್ಞೋ ಜಾನಮಾನೋ ನ ಭಾಷತೇ |
ಸೋಽಪಿ ತೇನೈವ ಪಾಪೇನ ಲಿಪ್ಯತೇ ನಾತ್ರ ಸಂಶಯಃ ||4||
ಮತ್ತು ಯಾವನು ನಡೆದದ್ದನ್ನು ಚೆನ್ನಾಗಿ ತಿಳಿದಿದ್ದರೂ ಸಾಕ್ಷಿಯಾಗಿ ನಿಂತು ಮಾತನಾಡುವುದಿಲ್ಲವೋ, ಅವನೂ ಸಹ ಅದೇ ಪಾಪದಿಂದ ಯುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ಶಕ್ತೋऽಹಮಭಿಶಪ್ತುಂ ತ್ವಾಂ ಮಾನ್ಯಾಸ್ತು ಬ್ರಾಹ್ಮಣಾ ಮಮ |
ಜಾನತೋऽಪಿ ಚ ತೇ ವ್ಯಕ್ತಂ ಕಥಯಿಷ್ಯೇ ನಿಭೋಧ ತತ್ ॥5॥
ನಾನೂ ಕೂಡ ನಿನಗೆ ಶಾಪವನ್ನು ಕೊಡಲು ಸಮರ್ಥನಾಗಿದ್ದೇನೆ. ಆದರೆ ಕೊಡುವುದಿಲ್ಲ. ಏಕೆಂದರೆ ಬ್ರಾಹ್ಮಣರು ನನಗೆ ಪೂಜ್ಯರಾದವರು. ನಿನಗೆ ತಿಳಿದಿದ್ದರೂ ನನ್ನ ಮಹಿಮೆಯನ್ನು ಹೇಳುತ್ತೇನೆ ಕೇಳು.
ಯೋಗೇನ ಬಹುಧಾऽऽತ್ಮಾನಂ ಕೃತ್ವಾ ತಿಷ್ಠಾಮಿ ಮೂರ್ತಿಷು |
ಅಗ್ನಿಹೋತ್ರೇಷು ಸತ್ರೇಷು ಕ್ರಿಯಾಸು ಚ ಮಖೇಷು ಚ ॥6॥
ನನ್ನ ಯೋಗಶಕ್ತಿಯಿಂದ ಅನೇಕ ರೂಪಗಳನ್ನು ಧರಿಸಿ, ನಾನು ಅಗ್ನಿಹೋತ್ರಗಳಲ್ಲಿಯೂ, ಕ್ರತುಗಳಲ್ಲಿಯೂ, ವೈಶದೇವಾದಿ ಕ್ರಿಯೆಗಳಲ್ಲಿಯೂ, ಮತ್ತು ಯಜ್ಞಗಳಲ್ಲಿಯೂ ಇರುತ್ತೇನೆ.
ವೇದೋಕ್ತೇನ ವಿಧಾನೇನ ಮಯಿ ಯದ್ಹೂಯತೇ ಹವಿಃ |
ದೇವತಾಃ ಪಿತರಶ್ಚೈವ ತೃಪ್ತಾಸ್ತೇನ ಭವಂತಿ ವೈ ॥7॥
ವೇದೋಕ್ತವಿಧಾನದಿಂದ ನನ್ನಲ್ಲಿ ಯಾವ ಹವಿಸ್ಸು ಅರ್ಪಿಸಲ್ಪಡುತ್ತದೆಯೋ, ಅದರಿಂದ ದೇವತೆಗಳು ಮತ್ತು ಪಿತೃಗಳು ತೃಪ್ತರಾಗುತ್ತಾರೆ.
ಆಯುರ್ದೇವಗಣಾಃ ಸರ್ವೇ ಆಯುಃಪಿತೃಗಣಾಸ್ತಥಾ |
ದರ್ಶಶ್ಚ ಪೌರ್ಣಮಾಸಶ್ಚ ದೇವಾನಾಂ ಪಿತೃಭಿಃ ಸಹ ॥8॥
ದರ್ಶ ಮತ್ತು ಪೌರ್ಣಮಾಸಗಳು ಪಿತೃಗಳ ಮತ್ತು ದೇವತೆಗಳ ಪೂಜೆಗೆ ಯೋಗ್ಯವಾದ ತಿಥಿಗಳು. ದರ್ಶದಲ್ಲಿ ಪೂಜಿಸಲ್ಪಟ್ಟ ಪಿತೃಗಳು ಸ್ವರ್ಗಲೋಕದಲ್ಲಿ ಬಹುಕಾಲ ಇರುವಂತೆ ಆಯುರ್ದಾನವನ್ನು ಮಾಡುತ್ತಾರೆ. ಪೌರ್ಣಮಾಸದಲ್ಲಿ ಪೂಜಿಸಲ್ಪಟ್ಟ ದೇವತೆಗಳ ಗಣವು ಸ್ವರ್ಗಲೋಕದಲ್ಲಿ ಬಹುಕಾಲ ಇರುವಂತೆ ಆಯುರ್ದಾನವನ್ನು ಮಾಡುತ್ತಾರೆ.
ದೇವತಾಃ ಪಿತರಸ್ತಸ್ಮಾತ್ ಪಿತರಶ್ಚಾಪಿ ದೇವತಾಃ |
ಏಕೀಭೂತಾಶ್ಚ ದೃಶ್ಯಂತೇ ಪೃಥಕ್ತ್ವೇನ ಚ ಪರ್ವಸು ॥10॥
ಸೋಮಃಪಿತೃವಾನ್ ಎಂಬ ವೇದವಚನದಂತೆ ದೇವತೆಗಳೇ ಪಿತೃಗಳು, ಪಿತೃಗಳೇ ದೇವತೆಗಳು. ಅವರು ಒಂದಾಗಿ ಕಾಣುತ್ತಾರೆ. ಮತ್ತು ದರ್ಶ ಮತ್ತು ಪೌರ್ಣಮಾಸದಲ್ಲಿ ಭಿನ್ನಭಿನ್ನವಾಗಿ ಪಿತೃಗಳು ಮತ್ತು ದೇವತೆಗಳು ಕ್ರಮವಾಗಿ ಪೂಜಿಸಲ್ಪಡುತ್ತಾರೆ.
ದೇವಶ್ಚ ಪಿತರಶ್ಚೈವ ಜುಹ್ವತೇ ಮಯಿ ಸರ್ವದಾ |
ತ್ರಿದಶಾನಾಂ ಪಿತೄಣಾಂ ಚ ಮುಖಮೇವಮಹಂ ಪರಮ್ ॥11॥
ದೇವತೆಗಳೂ ಮತ್ತು ಪಿತೃಗಳೂ ಸಹ ನನ್ನಲ್ಲಿಯೇ ಹೋಮವನ್ನು ಮಾಡುತ್ತಾರೆ. ನಾನೇ ದೇವತೆಗಳಿಗೆ ಮತ್ತು ಪಿತೃಗಳಿಗೆ ಶ್ರೇಷ್ಠವಾದ ಮುಖ.
ದೇವತೆಗಳು ಮತ್ತು ಪಿತೃಗಳು ಎರಡು ರೂಪಗಳನ್ನು ತೆಗೆದುಕೊಂಡು ಹೋಮಮಾಡುವನಲ್ಲಿದ್ದು ಅವರೇ ಮುಖ್ಯವಾದ ಹರ್ವಿದಾರ್ತೃ- ಗಳಾಗುತ್ತಾರೆ. ತಮ್ಮನ್ನೇ ಉದ್ದೇಶಿಸಿ ಹೋಮವನ್ನು ಮಾಡುವುದರಿಂದ ಅವರೇ ಮುಖ್ಯ ಪ್ರತಿಗ್ರಹೀತೃಗಳಾಗುತ್ತಾರೆ.
ಅಮಾವಾಸ್ಯಾಯಾಂ ಚ ಪಿತರಃ ಪೌರ್ಣಮಾಸ್ಯಾಂ ಚ ದೇವತಾಃ |
ಮನ್ಮುಖೇನೈವ ಹೂಯಂತೇ ಭುಂಜತೇ ಯದ್ಹುತಂ ಹವಿಃ ॥12॥
ಅಮಾವಾಸ್ಯೆಯಂದು ಪಿತೃಗಳು, ಪೌರ್ಣಮಾಸಿ ಯಂದು ದೇವತೆಗಳು ನನ್ನ ಮುಖದಿಂದಲೇ ಹೋಮಿಸಲ್ಪಡುತ್ತಾರೆ. ಮತ್ತು ನನ್ನಲ್ಲಿ ಹೋಮಿಸಿದ ಹವಿಸ್ಸನ್ನು ಸ್ವೀಕರಿಸುತ್ತಾರೆ.
ಸರ್ವಭಕ್ಷಃ ಕಥಂ ತೇಷಾಂ ಭವಿಷ್ಯಾಮಿ ಮುಖಂ ತ್ವಹಮ್ |
ಚಿಂತಯಿತ್ವಾ ತತೋ ವಹ್ನಿಶ್ಚಕ್ರೇ ಸಂಹಾರಮಾತ್ಮನಃ ॥13॥
ಅವರಿಗೆ ಮುಖವಾಗಿರುವ ನಾನು ಹೇಗೆ ಸರ್ವಭಕ್ಷನಾಗುವೆನು? ಹೀಗೆ ಹೇಳಿ ಅಗ್ನಿಯು ಆಲೋಚಿಸಿ, ಅಗ್ನಿಕುಂಡಾದಿಗಳಿಂದ ಅಂತರ್ಧಾನನಾದನು.
ದ್ವಿಜಾನಾಮಗ್ನಿಹೋತ್ರೇಷು ಯಜ್ಞಸತ್ರಕ್ರಿಯಾಸು ಚ |
ನಿರೋಂಕಾರವಷಟ್ಕಾರಾಃ ಸ್ವಧಾಸ್ವಾಹಾವಿವರ್ಜಿತಾಃ ॥14॥
ಬ್ರಾಹ್ಮಣರ ಅಗ್ನಿಹೋತ್ರಗಳು, ಮತ್ತು ಯಜ್ಞಸತ್ರಕ್ರಿಯೆಗಳು ಓಂಕಾರ ವಷಟ್ಕಾರಗಳಿಂದ ಹೀನವಾಗಿ ಸ್ವಧಾಸ್ವಾಹಾ ಶಬ್ದಗಳಿಂದಲೂ ರಹಿತವಾದವು.
ವಿನಾಗ್ನಿನಾ ಪ್ರಜಾಃ ಸರ್ವಾಸ್ತ್ರಸ್ತಾಃ ಹ್ಯಾಸನ್ ಸುದುಃಖಿತಾಃ |
ಅಥರ್ಷಯಃ ಸಮುದ್ವಿಗ್ನಾ ದೇವಾನ್ ಗತ್ವಾऽಬ್ರುವನ್ ವಚಃ ॥15॥
ಅಗ್ನಿ ಇಲ್ಲದೆ ಎಲ್ಲ ಪ್ರಜೆಗಳು ಭಯಗ್ರಸ್ತರಾಗಿ ಬಹಳದುಃಖದಿಂದ ಕೂಡಿದವರಾದರು. ಆಗ ಋಷಿಗಳು ಉದ್ವಿಗ್ನರಾಗಿ, ದೇವತೆಗಳನ್ನು ಸಮೀಪಿಸಿ ಮಾತನಾಡಿದರು.
ಅಗ್ನಿನಾಶಾತ್ ಕ್ರಿಯಾಭ್ರಂಶಾನ್ನಷ್ಟಾ ಲೋಕಾಸ್ತ್ರಯೋऽನಘಾಃ |
ವಿದಧ್ವಮತ್ರ ಯತ್ ಕಾರ್ಯಂ ನ ಸ್ಯಾತ್ ಕಾಲಾತ್ಯಯೋ ಯಥಾ ॥
ಪರಿಶುದ್ಧರಾದ ದೇವತೆಗಳೇ, ಅಗ್ನಿನಾಶವಾಗಿರುವುದರಿಂದ ಕ್ರಿಯಾಲೋಪವಾಗಿ ಮೂರುಲೋಕಗಳೂ ನಾಶವಾಗುತ್ತಿವೆ. ವಿಳಂಬವನ್ನು ಮಾಡದೆ ಇದಕ್ಕೆ ಏನು ಪರಿಹಾರವನ್ನು ಮಾಡಬೇಕೋ, ಅದನ್ನು ಮಾಡಿ.
ಅಥರ್ಷಯಶ್ಚ ದೇವಾಶ್ಚ ಬ್ರಹ್ಮಾಣಮುಪಜಗ್ಮತುಃ |
ಅಗ್ನೇರಾವೇದಯನ್ ನಾಶಂ ಕ್ರಿಯಾಸಂಹಾರಮೇವ ಚ ॥17॥
ಭೃಗುಣಾ ವೈ ಮಹಾಭಾಗಾಃ ಶಪ್ತೋऽಗ್ನಿಃ ಕಾರಣಾಂತರೇ |

ಕಥಂ ದೇವಮುಖಂ ಭೂತ್ವಾ ಯಜ್ಞಭಾಗಾಗ್ರಭುಕ್ ತಥಾ |
ಹುತಭುಕ್ ಸರ್ವಲೋಕೇಷು ಸರ್ವಭಕ್ಷತ್ವಮೇಷ್ಯತಿ ॥18॥
ಆಗ ಋಷಿಗಳು ಮತ್ತು ದೇವತೆಗಳು ಬ್ರಹ್ಮದೇವರ ಸಮೀಪಕ್ಕೆ ಹೋದರು. ಮಹಾಭಾಗರಾದ ಭೃಗುಗಳಿಂದ ಅಗ್ನಿಯು ಬೇರೆ ಕಾರಣದಿಂದ ಶಪಿತನಾದನು. ದೇವಮುಖನು ಯಜ್ಞಭಾಗದಲ್ಲಿ ಅಗ್ರಭೋಕ್ತೃವಾದ ಅಗ್ನಿಯು ಎಲ್ಲ ಲೋಕಗಳಲ್ಲಿಯೂ ಹೇಗೆ ಸರ್ವಭಕ್ಷನಾಗುತ್ತಾನೆ?
ಶ್ರುತ್ವಾ ತು ತದ್ವಚಸ್ತೇಷಾಮಗ್ನಿ ಮಾಹೂಯ ಲೋಕಕೃತ್ |
ಉವಾಚ ವಚನಂ ಶ್ಲಕ್ಷ್ಣಂ ಭೂತಭಾವನಮವ್ಯಯಮ್ ॥19॥
ಅವರ ಆ ಮಾತನ್ನು ಕೇಳಿ ಸೃಷ್ಟಿಕರ್ತರಾದ ಬ್ರಹ್ಮದೇವರು ಅಗ್ನಿಯನ್ನು ಕರೆದು ಲೋಕದ ಉತ್ಪತ್ತಿಗೆ ಕಾರಣನಾದ ಶಾಶ್ವತನಾದ ಅವನನ್ನು ಕುರಿತು ಮಧುರವಾದ ಮಾತುಗಳನ್ನು ಆಡಿದನು.
ಬ್ರಹ್ಮಾ
ಲೋಕಾನಾಮಿಹ ಸರ್ವೇಷಾಂ ತ್ವಂ ಕರ್ತಾ ಚಾಂತ ಏವ ಚ ॥20॥
ಅಗ್ನಿಯೇ ನೀನು ಎಲ್ಲಾ ಲೋಕಗಳಿಗೂ ಸೃಷ್ಟಿಕರ್ತನು ಮತ್ತು ಸಂಹಾರಕರ್ತನು.
ತ್ವಂ ಧಾರಯಸಿ ಲೋಕಾಂಸ್ತ್ರೀನ್ ಗುಣಾನಾಂ ಚ ಪ್ರವರ್ತಕಃ |
ಸ ತಥಾ ಕುರು ಲೋಕೇಶ ನೋಚ್ಛಿದ್ಯೇರನ್ ಕ್ರಿಯಾ ಯಥಾ ॥21॥
ನೀನು ಮೂರು ಲೋಕಗಳನ್ನು ಪಾಲಿಸುವನು. ಮತ್ತು ಸತ್ವರಜಸ್ತಮೋಗುಣಗಳನ್ನು ಪ್ರವರ್ತನೆ ಮಾಡುವವನು. ಲೋಕೇಶನೇ, ಯಜ್ಞಾದಿಕ್ರಿಯೆಗಳು ಲೋಪವಾಗದಂತೆ ಮಾಡು.
ಕಸ್ಮಾದೇವಂ ಸ ಮೂಢಸ್ತ್ವಂ ಈಶಸ್ತ್ವಂ ಹಿ ಹುತಾಶನ |
ತ್ವಂ ಪವಿತ್ರಂ ಸದಾ ಲೋಕೇ ಸರ್ವಭೂತಗತಶ್ಚ ಹ ॥22॥
ಎಲೈ ಹುತಾಶನನೇ ಸಮರ್ಥನಾದ ನೀನು ಏಕೆ ಹೀಗೆ ಅಂತರ್ಧಾನವನ್ನು ಹೊಂದಿದ್ದೀಯೇ, ನೀನು ಲೋಕದಲ್ಲಿ ಸದಾ ಪವಿತ್ರನಾದವನು. ಮತ್ತು ಎಲ್ಲಾ ಪ್ರಾಣಿಗಳಲ್ಲೂ ಇರುವವನು.
ನ ತ್ವಂ ಸರ್ವಶರೀರೇಣ ಸರ್ವಭಕ್ಷತ್ವಮೇಷ್ಯಸಿ |
ಉಪಾದಾನಾऽರ್ಚಿಷೋ ಯಾಸ್ತೇ ಸರ್ವಂ ಭಕ್ಷ್ಯಂತಿ ತಾಃ ಶಿಖಾಃ ॥
ನಿನ್ನ ಎಲ್ಲಾ ಶರೀರದಿಂದ ಎಂದರೆ ಸರ್ವಪ್ರಾಣಿಗಳ ಉದರದಲ್ಲಿರುವ ವೈಶ್ವಾನರ ಶರೀರದಿಂದ, ಸಮುದ್ರದ ಮಧ್ಯದಲ್ಲಿ ವಡವಾನಲ ಶರೀರದಿಂದ, ಪಾತಾಳಾದಿ ಲೋಕದಲ್ಲಿರುವ ನಿನ್ನ ನಾನಾ ಶರೀರಗಳಿಂದ ಸರ್ವಭಕ್ಷನಾಗುವುದಿಲ್ಲ. ಸ್ಥೂಲತೇಜೋರೂಪನಾದ ನಿನಗೆ ಉಪಾದಾನವಾದ ಸೂಕ್ಷ್ಮವಾದ ಅಗ್ನಿಯ ಕಣಗಳು ಎಲ್ಲವನ್ನೂ ಭಕ್ಷಿಸುತ್ತವೆ.
ಯಥಾ ಸೂರ್ಯಾಂಶುಭಿಃ ಸ್ಪೃಷ್ಟಂ ಸರ್ವಂ ಶುಚಿ ವಿಭಾವ್ಯತೇ |
ತಥಾ ತ್ವದರ್ಚಿರ್ನಿರ್ದಗ್ಧಂ ಸರ್ವಂ ಶುಚಿ ಭವಿಷ್ಯತಿ ॥24॥
ಹೇಗೆ ಸೂರ್ಯಕಿರಣಗಳಿಂದ ಸಂಬಂಧವನ್ನು ಹೊಂದಿದ ಎಲ್ಲವೂ ಶುದ್ಧವಾಗುತ್ತವೆಯೋ, ಹಾಗೆ ನಿನ್ನ ಸೂಕ್ಷ್ಮಕಣಗಳ ಅಥವಾ ಸೂಕ್ಷ್ಮಜ್ವಾಲೆಗಳ ಸಂಬಂಧವನ್ನು ಹೊಂದಿದ ಎಲ್ಲವೂ ಶುದ್ಧವೇ ಆಗುತ್ತವೆ.
ನಿನಗೆ ಅಶುದ್ಧಿಯು ಬರುವುದಿಲ್ಲ. ಅದಕ್ಕೆ ಬದಲಾಗಿ ನಿನ್ನ ಸಂಬಂಧವನ್ನು ಹೊಂದಿದ ಪದಾರ್ಥಗಳಿಗೆ ಶುದ್ಧಿಯೇ ಉಂಟಾಗುತ್ತದೆ.
ತದಗ್ನೇ ತ್ವಂ ಮಹಾತೇಜಾಃ ಸ್ವಪ್ರಭಾವಾದ್ ವಿನಿರ್ಗತಮ್ |
ಸ್ವತೇಜಸೈವ ತಂ ಶಾಪಂ ಕುರು ಸತ್ಯಮೃಷೇರ್ವಿಭೋ |
ದೇವಾನಾಂ ಚಾತ್ಮನೋ ಭಾಗಂ ಗೃಹಣ ತ್ವಂ ಮುಖೇ ಹುತಮ್ ॥25॥
ಆದ್ದರಿಂದ ಎಲೈ ಅಗ್ನಿಯೇ ನೀನು ಮಹಾತೇಜಸ್ಸುವುಳ್ಳವನು. ನಿನ್ನ ಪ್ರಭಾವದಿಂದಲೇ ಹೊರಬಂದ ವಿಪ್ರಶಾಪವನ್ನು ನಿನ್ನ ತೇಜಸ್ಸಿನಿಂದಲೇ ಸತ್ಯವನ್ನಾಗಿ ಮಾಡು. ಎಲೈ ವಿಭುವೇ, ನೀನು ನಿನ್ನ ಮುಖದಲ್ಲಿ ಹೋಮವನ್ನು ಮಾಡಿದ, ನಿನ್ನ ಭಾಗವನ್ನು ಮತ್ತು ದೇವತೆಗಳ ಭಾಗವನ್ನು ಸ್ವೀಕರಿಸು.
ಸೂತಃ
ಏವಮಸ್ತ್ವಿತಿ ತಂ ವಹ್ನಿಃ ಪ್ರತ್ಯುವಾಚ ಪಿತಾಮಹಮ್ |
ಜಗಾಮ ಶಾಸನಂ ಕರ್ತುಂ ದೇವಸ್ಯ ಪರಮೇಷ್ಠಿನಃ ॥26॥
ಅಗ್ನಿಯು ಬ್ರಹ್ಮದೇವರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ, ಬ್ರಹ್ಮದೇವರ ಶಾಸನವನ್ನು ನೆರವೇರಿಸಲು ಹೋದನು. (ಎಲ್ಲಾ ಅಗ್ನಿಕುಂಡಗಳಲ್ಲಿ ಅಭಿವ್ಯಕ್ತನಾದನು.)
ದೇವರ್ಷಯಶ್ಚ ಮುದಿತಾಸ್ತತೋ ಜಗ್ಮುರ್ಯಥಾಗತಮ್ |
ಋಷಯಶ್ಚ ಯಥಾಪೂರ್ವಂ ಕ್ರಿಯಾಃ ಸರ್ವಾಃ ಪ್ರಚಕ್ರಿರೇ ॥27॥
ದೇವತೆಗಳು ಮತ್ತು ಋಷಿಗಳು ಸಂತೋಷದಿಂದ ಕೂಡಿದವರಾಗಿ ಅಲ್ಲಿಂದ ತಾವು ಬಂದಂತೆಯೇ ಹೊರಟು ಹೋದರು.
ಋಷಿಗಳೆಲ್ಲರೂ ಮೊದಲಿನಂತೆಯೇ ಯಜ್ಞಾದಿಕ್ರಿಯೆಗಳನ್ನು ಮಾಡಿದರು.
ದಿವಿ ದೇವಾ ಮುಮುದಿರೇ ಭೂತಸಂಘಾಶ್ಚ ಲೌಕಿಕಾಃ |
ಅಗ್ನಿಶ್ಚ ಪರಮಾಂ ಪ್ರೀತಿಮವಾಪ ಗತಕಲ್ಮಷಃ ॥28॥
ಏವಮೇಷ ಪುರಾವೃತ್ತ ಇತಿಹಾಸೋऽಗ್ನಿಶಾಪಜಃ |
ಪುಲೋಮ್ನೋऽಸ್ಯ ವಿನಾಶಶ್ಚ ಚ್ಯವನಸ್ಯ ಚ ಸಂಭವಃ ॥29॥
ಸ್ವರ್ಗಲೋಕದಲ್ಲಿ ದೇವತೆಗಳು ಸಂತೋಷ ಪಟ್ಟರು. ಭೂಲೋಕದಲ್ಲಿ ಎಲ್ಲಾ ಪ್ರಾಣಿಗಳೂ ಸಂತೋಷಪಟ್ಟವು. ಪರಿಶುದ್ಧನಾದ

ಅಗ್ನಿಯು ಪರಮ ಸಂತೋಷವನ್ನು ಹೊಂದಿದನು. ಹೀಗೆ ಅಗ್ನಿಗೆ ಕೊಟ್ಟ ಶಾಪವೂ ಅದರಿಂದ ಉಂಟಾದ ಪರಿಸ್ಥಿತಿಯು ಪುಲೋಮ ರಾಕ್ಷಸನ ವಿನಾಶವೂ, ಚ್ಯವನರ ಉತ್ಪತ್ತಿಯೂ, ಹಿಂದೆ ಜರುಗಿದ ಇತಿಹಾಸ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ॥
ಸಪ್ತಮೋಽಧ್ಯಾಯಃ ॥
॥ ಇತಿ ಪೌಲೋಮಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
*****

ಎಂಟನೆಯ ಅಧ್ಯಾಯ
(ಭೃಗುಪುತ್ರರಾದ ಚ್ಯವನರಿಂದ ಪ್ರಮತಿಯ ಪಿತಾಮಹನ ಪಿತನಾದ ಶೌನಕರ ಜನನ, ಪ್ರಮತಿಯ ಸುತನಾದ ರುರು ಮತ್ತು ಪ್ರಮದ್ವರೆಯ ವಿವಾಹ ನಿಶ್ಚಯ, ಪ್ರಮದ್ವರೆಯ ಮರಣ)
ಸೂತ
ಸ ಚಾಪಿ ಭಾರ್ಗವೋ ಬ್ರಹ್ಮನ್ ಚ್ಯವನೋಽಜನಯತ್ಸುತಮ್ |
ಸುಕನ್ಯಾಯಾಂ ಮಹಾತ್ಮಾನಂ ಪ್ರಮತಿಂ ದೀಪ್ತತೇಜಸಮ್ ॥1॥
ಎಲೈ ಬ್ರಾಹ್ಮಣನೇ, ಆ ಭಾರ್ಗವರಾದ ಚ್ಯವನರೂ ಸಹ ಸುಕನ್ಯೆಯಲ್ಲಿ ಮಹಾತ್ಮನೂ, ಕಾಂತಿಯುಕ್ತನೂ ಆದ ಪ್ರಮತಿ ಎಂಬ ಮಗನನ್ನು ಪಡೆದನು.
ಪ್ರಮತಿಸ್ತು ರುರುಂ ನಾಮ ಘೃತಾಚ್ಯಾಂ ಸಮಜೀಜನತ್ |
ರುರೋಃ ಪ್ರಮದ್ವರಾಯಾಂ ತು ಶುನಕಃ ಸಮಪದ್ಯತ |
ಶೌನಕಸ್ತ್ವಂ ಮಹಾಭಾಗಃ ಶುನಕಸ್ಯ ಸುತೋಽಭವಃ ॥2॥
ಪ್ರಮತಿಯ ಪತ್ನಿಯಾದ ಘೃತಾಚಿಯಲ್ಲಿ ರುರುವು ಜನಿಸಿದನು. ರುರುವಿಗೆ ಪ್ರಮದ್ವರೆಯಲ್ಲಿ ಶುನಕನು ಜನಿಸಿದನು. ಬ್ರಾಹ್ಮಣನೇ, ಮಹಾನುಭಾವನಾದ ನೀನು ಶುನಕನ ಮಗನಾಗಿ ಹುಟ್ಟಿ ಶೌನಕನೆಂದು ಕರೆಸಿಕೊಳ್ಳುತ್ತೀಯೆ.
ತಸ್ಯ ಬ್ರಹ್ಮನ್ ರುರೋಃ ಸರ್ವಂ ಚರಿತಂ ಭೂರಿತೇಜಸಃ |
ವಿಸ್ತರೇಣ ಪ್ರವಕ್ಷ್ಯಾಮಿ ತಚ್ಛೃಣು ತ್ವಮಶೇಷತಃ ॥3॥
ಎಲೈ ಬ್ರಾಹ್ಮಣನೇ, ಮಹಾತೇಜಸ್ವಿಯಾದ ಆ ರುರುವಿನ ಎಲ್ಲಾ ಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತೇನೆ, ಅದನ್ನು ಸಮಗ್ರವಾಗಿ ಕೇಳು.
ಋಷಿರಾಸೀನ್ಮಹಾನ್ ಪೂರ್ವಂ ತಪೋವಿದ್ಯಾವಿಶಾರದಃ |
ಸ್ಥೂಲಕೇಶ ಇತಿ ಖ್ಯಾತಃ ಸರ್ವಭೂತಹಿತೇ ರತಃ ॥4॥
ಹಿಂದೆ ತಪೋವಿದ್ಯಾವಿಶಾರದರಾದ ಸರ್ವಭೂತಹಿತದಲ್ಲಿ ರತರಾದ ಸ್ಥೂಲಕೇಶರೆಂಬ ದೊಡ್ಡ ಋಷಿಗಳು ಇದ್ದರು.
ಏತಸ್ಮಿನ್ನೇವ ಕಾಲೇ ತು ಮೇನಕಾಯಾಂ ಪ್ರಜಜ್ಞಿವಾನ್ |
ಗಂಧರ್ವರಾಜೋ ವಿಪ್ರರ್ಷೇ ವಿಶ್ವಾವಸುರಿತಿ ಶ್ರುತಃ ॥5॥
ಎಲೈ ವಿಪ್ರರ್ಷಿಯೇ, ಅದೇ ಸಮಯದಲ್ಲಿ ವಿಶ್ವಾವಸು ಎಂಬ ಗಂದರ್ವರಾಜನು ಮೇನಕೆಯಲ್ಲಿ ಗರ್ಭಾಧಾನವನ್ನು ಮಾಡಿದನು.
ಅಪ್ಸರಾ ಮೇನಕಾ ಚಾಪಿ ತಂ ಗರ್ಭಂ ಭೃಗುನಂದನ |
ಉತ್ಸಸರ್ಜ ಯಥಾಕಾಲಂ ಸ್ಥೂಲಕೇಶಾಶ್ರಮಂ ಪ್ರತಿ |
ಉತ್ಸೃಜ್ಯ ಚೈವ ಗರ್ಭಂ ಸ್ವಂ ನದ್ಯಾಸ್ತೀರೇ ಜಗಾಮ ಸಾ ॥6॥
ಎಲೈ ಭೃಗುನಂದನನೇ, ಅಪ್ಸರೆಯಾದ ಮೇನಕೆಯಾದರೂ ಆ ಗರ್ಭವನ್ನು ಯೋಗ್ಯವಾದ ಕಾಲದಲ್ಲಿ ಸ್ಥೂಲಕೇಶರ ಆಶ್ರಮದ ಬಳಿಯಲ್ಲಿ ಪರಿತ್ಯಜಿಸಿದಳು. ಅವಳು, ನದಿಯ ದಡದಲ್ಲಿ ಆ ಗರ್ಭವನ್ನು ಬಿಟ್ಟು ಹೊರಟುಹೋದಳು.
ಕನ್ಯಾಮಮರಗರ್ಭಾಭಾಂ ಜ್ವಲಂತೀಮಿವ ಚ ಶ್ರಿಯಾ |
ತಾಂ ದದರ್ಶ ಸಮುತ್ಸೃಷ್ಟಾಂ ನದ್ಯಾಸ್ತೀರೇ ಮಹಾನೃಷಿಃ |
ಸ್ಥೂಲಕೇಶಃ ಸುತೇಜಸ್ವೀ ವಿಜನೇ ಬಂಧುವರ್ಜಿತಾಮ್ ॥7॥
ಮಹಾಋಷಿಗಳಾದ ಸ್ಥೂಲಕೇಶರು ನದಿಯ ತೀರದಲ್ಲಿ ಪರಿತ್ಯಜಿಸಲ್ಪಟ್ಟಿದ್ದ ದೇವತೆಯ ಶಿಶುವಿನಂತೆ ಕಾಂತಿಯಿಂದ ಕಂಗೊಳಿಸುತ್ತಿದ್ದ ಆ ಹೆಣ್ಣು ಶಿಶುವನ್ನು ನೋಡಿದರು. ತೇಜಸ್ವಿಗಳಾದ ಅವರು ಬಂಧುವರ್ಜಿತಳಾಗಿ ನಿರ್ಜನವಾದ ಸ್ಥಳದಲ್ಲಿ ಆ ಶಿಶುವು ಇರುವುದನ್ನು ನೋಡಿದರು.
ಸ ತಾಂ ದೃಷ್ಟ್ವಾ ತದಾ ಕನ್ಯಾಂ ಸ್ಥೂಲಕೇಶೋ ದ್ವಿಜೋತ್ತಮಃ |
ಜಗ್ರಾಹಾಥ ಮುನಿಶ್ರೇಷ್ಠಃ ಕೃಪಾವಿಷ್ಟಃ ಪುಪೋಷ ಚ |
ವವೃಧೇ ಸಾ ವರಾರೋಹಾ ತಸ್ಯಾಶ್ರಮಪದೇ ಶುಭಾ ॥8॥
ದ್ವಿಜಶ್ರೇಷ್ಠರೂ ಮುನಿಶ್ರೇಷ್ಠರೂ ಆದ ಸ್ಥೂಲಕೇಶರು ಆ ಹೆಣ್ಣುಮಗುವನ್ನು ನೋಡಿ ಕರುಣೆಯಿಂದ ಕೂಡಿದವರಾಗಿ ಅದನ್ನು ತೆಗೆದುಕೊಂಡು ಬಂದು ತಮ್ಮ ಆಶ್ರಮದಲ್ಲಿ ಪೋಷಿಸಿದರು. ಆ ಕನ್ಯೆಯು ಅವರ ಆಶ್ರಮದಲ್ಲಿ ಪವಿತ್ರವಾದ ಸುಂದರಿಯಾಗಿ ಬೆಳೆದಳು.
ಪ್ರಮದಾಭ್ಯೋ ವರಾ ಸಾ ತು ರೂಪಶೀಲಾದಿಭಿರ್ಗುಣೈಃ |
ತತಃ ಪ್ರಮದ್ವರೇತ್ಯಸ್ಯಾ ನಾಮ ಚಕ್ರೇ ಮಹಾನೃಷಿಃ ॥9॥

ರೂಪಶೀಲಗುಣಗಳಿಂದ ಅವಳು ಉಳಿದ ಪ್ರಮದೆಯರನ್ನು ಮೀರಿದ್ದ ಕಾರಣ ಆ ದೊಡ್ಡ ಋಷಿಗಳು ಅವಳಿಗೆ ಪ್ರಮದ್ವರೆಯೆಂದು ನಾಮಕರಣ ಮಾಡಿದರು.
ತಾಮಾಶ್ರಮಪದೇ ತಸ್ಯ ರುರುರ್ದೃಷ್ಟ್ವಾ ಪ್ರಮದ್ವರಾಮ್ |
ಬಭೂವ ಕಿಲ ಧರ್ಮಾತ್ಮಾ ಮದನಾನುಗತಾತ್ಮವಾನ್ ॥10॥
ಪಿತರಂ ಸಖಿಭಿಃ ಸೋಽಥ ಯಾಚಯಾಮಾಸ ಭಾರ್ಗವಃ |
ಪ್ರಮತಿಶ್ಚಾಭ್ಯಯಾಜ್ಞಾತ್ವಾ ಸ್ಥೂಲಕೇಶಂ ಯಶಸ್ವಿನಮ್ ॥11॥
ಧರ್ಮಾತ್ಮನಾದ ರುರುವು ಆ ಆಶ್ರಮದ ಬಳಿ ಪ್ರಮದ್ವರೆಯನ್ನು ನೋಡಿ ಕಾಮಾವಿಷ್ಟನಾದನು. ಭಾರ್ಗವನಾದ ರುರುವು ತನ್ನ ತಂದೆಗೆ ತನ್ನ ಸ್ನೇಹಿತರ ಮೂಲಕ ಆ ವಿಷಯವನ್ನು ತಿಳಿಸಿ ಯಾಚಿಸಿದನು. ವಿಷಯವನ್ನು ತಿಳಿದ ಪ್ರಮತಿಯು ಕೀರ್ತಿಶಾಲಿಗಳಾದ ಸ್ಥೂಲಕೇಶರ ಬಳಿಗೆ ಹೋದನು.
ತತಃ ಪ್ರಾದಾತ್ ಪಿತಾ ಕನ್ಯಾಂ ರುರವೇ ತಾಂ ಪ್ರಮದ್ವರಾಮ್ |
ವಿವಾಹಂ ಸ್ಥಾಪಯಿತ್ವಾಗ್ರೇ ನಕ್ಷತ್ರೇ ಭಗದೈವತೇ ॥12॥
ಅನಂತರ, ಸ್ಥೂಲಕೇಶರು ವಿವಾಹವನ್ನು ಮುಂದಿನ ಭಗವದೇವತಾಕವಾದ ಉತ್ತರಾನಕ್ಷತ್ರದದಿನದಂದು ನಿಶ್ಚಯಿಸಿ ರುರುವಿಗೆ ಪ್ರಮದ್ವರೆಯನ್ನು ವಾಗ್ದಾನವನ್ನು ಮಾಡಿದರು.
ತತಃ ಕತಿಪಯಾಹಸ್ಸು ವಿವಾಹೇ ಸಮುಪಸ್ಥಿತೇ |
ಸಖೀಭಿಃ ಕ್ರೀಡತೀ ಸಾರ್ಧಂ ಸಾ ಕನ್ಯಾ ವರವರ್ಣಿನೀ ॥13॥
ನಾಪಶ್ಯತ ಪ್ರಸುಪ್ತಂ ವೈ ಭುಜಂಗಂ ತಿರ್ಯಗಾಯತಮ್ |
ಪದಾ ಚೈನಂ ಸಮಾಕ್ರಾಮನ್ ಮುಮೂರ್ಷುಃ ಕಾಲಚೋದಿತಾ ॥14॥
ಅನಂತರ, ವಿವಾಹಕ್ಕೆ ಇನ್ನು ಕೆಲವೇ ದಿನಗಳು ಉಳಿದಿರುವಾಗ ತನ್ನ ಸ್ನೇಹಿತೆಯರ ಜೊತೆಯಲ್ಲಿ ಆಡುತ್ತಿದ್ದ ಸುಂದರಿಯಾದ ಆ ಕನ್ಯೆಯು  ತನ್ನ ದಾರಿಗೆ ಅಡ್ಡವಾಗಿ ಉದ್ದವಾಗಿ ಮಲಗಿದ್ದ ಒಂದು ಸರ್ಪವನ್ನು ಗಮನಿಸದೆ ಕಾಲಚೋದಿತಳಾಗಿ ಮರಣವು ಸನ್ನಿಹಿತವಾದವಳಾಗಿ ಆ ಸರ್ಪವನ್ನು ಕಾಲಿನಿಂದ ತುಳಿದಳು.
ಸ ತಸ್ಯಾಃ ಸಂಪ್ರಮತ್ತಾಯಾಶ್ಚೋದಿತಃ ಕಾಲಧರ್ಮಣಾ |
ವಿಷೋಪಲಿಪ್ತದಂತಾಭ್ಯಾಂ ಭೃಶಮಂಗೇ ನ್ಯಪಾತಯತ್ ॥15॥
ಕಾಲಧರ್ಮದಿಂದ ಪ್ರೇರಿತವಾದ ಆ ಸರ್ಪವು ಮೈಮರೆತಿದ್ದ ಅವಳನ್ನು ತನ್ನ ವಿಷಪೂರಿತವಾದ ದಂತಗಳಿಂದ ಕಡಿದು ನೆಲಕ್ಕೆ ಉರುಳಿಸಿತು.
ಸಾ ದಷ್ಟಾ ಸಹಸಾ ಭೂಮೌ ಪಪಾತ ಗತಚೇತನಾ |
ವ್ಯಸುರಪ್ರೇಕ್ಷಣೀಯಾಚ ಪ್ರೇಕ್ಷಣೀಯತಮಾಕೃತಿಃ ॥16॥
ಸರ್ಪದಿಂದ ಕಡಿಯಲ್ಪಟ್ಟ ಅತ್ಯಂತ ಸುಂದರವಾದ ರೂಪವನ್ನು ಹೊಂದಿದ್ದ ಅವಳು ನೆಲದ ಮೇಲೆ ಬಿದ್ದು ಚೈತನ್ಯವನ್ನೂ, ಪ್ರಾಣವನ್ನೂ ಕಳೆದುಕೊಂಡು ನೋಡಲು ಸಾಧ್ಯವಿಲ್ಲದವಳಾಗಿ ಆದಳು.
ಪ್ರಸುಪ್ತೇವಾಭವಚ್ಚಾಪಿ ಭುವಿ ಸರ್ಪವಿಷಾರ್ದಿತಾ |
ಭೂಯೋಽಮನೋಹರತಮಾ ಬಭೂವ ತನುಮಧ್ಯಮಾ ॥17॥
ಸರ್ಪವಿಷದ ಭಾದೆಗೆ ಒಳಗಾದವಳಾಗಿ ಅವಳು ನಿದ್ರೆಮಾಡುವವಳಂತೆ ಮಲಗಿದಳು. ಕೃಶಮಧ್ಯವುಳ್ಳ ಅವಳು ನೋಡಲು ವಿಷಾದಕರವಾಗಿ ಕಂಡಳು.
ತಾಂ ದದರ್ಶ ಪಿತಾ ಚೈವ ತೇ ಚೈವಾನ್ಯೇ ತಪಸ್ವಿನಃ |
ವಿವೇಷ್ಟಮಾನಾಂ ಪತಿತಾಂ ಭೂತಳೇ ಪದ್ಮವರ್ಚಸಮ್ ॥28॥
ತಂದೆಯಾದ ಸ್ಥೂಲಕೇಶರೂ ಮತ್ತು ಉಳಿದ ತಪಸ್ವಿಗಳೂ ಭೂಮಿಯಮೇಲೆ ಬಿದ್ದು ಹೊರಳಾಡುವ ಪದ್ಮಕಾಂತಿಯುಳ್ಳ ಅವಳನ್ನು ನೋಡಿದರು.
ತತಃ ಸರ್ವೇ ದ್ವಿಜವರಾಃ ಸಮಾಜಗ್ಮುಃ ಕೃಪಾನ್ವಿತಾಃ |
ಸ್ವಸ್ತ್ಯಾತ್ರೇಯೋ ಮಹಾಜಾನುಃ ಕುಶಿಕಃ ಶಂಖಮೇಖಲಃ ॥29॥
ಉದ್ದಾಲಕೋಽಕ್ಷಕರಶ್ಚೈವ ಶ್ವೇತಕೇತುಸ್ತಥೈವ ಚ |
ಭರದ್ವಾಜಃ ಕೌಣಕುತ್ಸ ಆರ್ಷ್ಟಿಷೇಣೋಽಥ ಗೌತಮಃ ॥30 ॥
ಆಗ ಸ್ವಸ್ತ್ಯಾತ್ರೇಯ, ಮಹಾಜಾನು, ಕುಶಿಕ, ಶಂಖಮೇಖಳ, ಉದ್ದಾಲಕ, ಅಕ್ಷಕರ,ಶ್ವೇತಕೇತು, ಭರದ್ವಾಜ, ಕೌಣಕುತ್ಸ, ಆರ್ಷ್ಟಿಷೇಣ, ಗೌತಮ ಮೊದಲಾದ ಎಲ್ಲಾ ಬ್ರಾಹ್ಮಣಶ್ರೇಷ್ಠರೂ ದಯೆಯಿಂದ ಕೂಡಿದವರಾಗಿ ಅಲ್ಲಿಗೆ ಬಂದರು.
ಪ್ರಮತಿಃ ಸಹ ಪುತ್ರೇಣ ತಥಾನ್ಯೇ ವನವಾಸಿನಃ |
ತಾಂ ತೇ ಕನ್ಯಾಂ ವ್ಯಸುಂ ದೃಷ್ಟ್ವಾ ಭುಜಂಗಸ್ಯ ವಿಷಾರ್ದಿತಾಮ್ ॥
ರುರುದುಃ ಕೃಪಯಾಽಽವಿಷ್ಟಾ ರುರುಸ್ತ್ವಾರ್ತೋ ಬಹಿರ್ಯಯೌ |
ತೇ ಚ ಸರ್ವೇ ದ್ವಿಜಶ್ರೇಷ್ಠಾಸ್ತತ್ರೈವೋಪಾವಿಶಂಸ್ತದಾ ॥32॥
ಪ್ರಮತಿಯು ತನ್ನ ಪುತ್ರನಾದ ರುರುವಿನ ಜೊತೆಯಲ್ಲಿ ಅಲ್ಲಿಗೆ ಬಂದು ಸರ್ಪದ ವಿಷದಭಾದೆಯಿಂದ ಪ್ರಾಣವನ್ನು ತ್ಯಜಿಸಿದ್ದ ಆ ಕನ್ಯೆಯನ್ನು ನೋಡಿ ಕೃಪೆಯಿಂದ ಕೂಡಿದವರಾಗಿ ರೋದನವನ್ನು ಮಾಡಿದನು. ದುಃಖಪೂರ್ಣನಾದ ರುರುವು ಮಾತ್ರ ಅಲ್ಲಿಂದ ಎದ್ದು ಹೊರಗೆ ಹೋದನು. ಆ ಉಳಿದ ಎಲ್ಲಾ ದ್ವಿಜಶ್ರೇಷ್ಠರೂ ಆಗ ಅಲ್ಲಿಯೇ ಕುಳಿತುಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ

ಅಷ್ಟಮೋಽಧ್ಯಾಯಃ ॥
॥ ಇತಿ ಪೌಲೋಮಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
*****

ಒಂಭತ್ತನೆಯ ಅಧ್ಯಾಯ
(ರುರು ಶೋಕ, ದೇವದೂತನ ಪ್ರೇರಣೆಯಂತೆ ಪ್ರಮದ್ವರೆಗೆ ತನ್ನ ಅರ್ಧಾಯುಷ್ಯದದಾನ, ವಿವಾಹ, ರುರುವಿನ ಸರ್ಪದ್ವೇಷ ಮತ್ತು ಡುಂಡುಭ ವಧ ಪ್ರಯತ್ನ)
ಸೂತ ಉವಾಚ
ತೇಷು ತತ್ರೋಪವಿಷ್ಟೇಷು ಬ್ರಹ್ಮಣೇಷು ಸಮಂತತಃ |
ರುರುಶ್ಚುಕ್ರೋಶ ಗಹನಂ ವನಂ ಗತ್ವಾ ಸುದುಃಖಿತಃ ॥1॥
ಆ ಬ್ರಾಹ್ಮಣರೆಲ್ಲರೂ ಅಲ್ಲಿ ಸುತ್ತಲೂ ಕುಳಿತರು, ಬಹಳ ದುಖದಿಂದ ಕೂಡಿದ ರುರುವು ದಟ್ಟವಾದ ಕಾಡಿಗೆ ಹೋಗಿ ಕಿರುಚುತ್ತಾ ಅತ್ತನು.
ಶೋಕೇನಾಭಿಹತಃ ಸೋಽಥ ವಿಲಪನ್ ಕರುಣಂ ಸ್ವಯಮ್ |
ಅಬ್ರವೀದ್ ವಚನಂ ಶೋಚನ್ ಪ್ರಿಯಾಂ ಚಿಂತ್ಯ ಪ್ರಮದ್ವರಾಮ್ ॥
ಶೋಕಾಭಿಹತನಾದ ಅವನು ಕರುಣಾಜನಕವಾಗಿ ವಿಲಾಪವನ್ನು ಮಾಡುತ್ತಾ ತನ್ನ ಪ್ರಿಯೆಯಾದ ಪ್ರಮದ್ವರೆಯನ್ನು ಸ್ಮರಿಸಿ ಈ ಮಾತುಗಳನ್ನು ಆಡಿದನು.
ಶೇತೇ ಸಾ ಭುವಿ ತನ್ವಂಗೀ ಮಮ ಶೋಕವಿವರ್ಧಿನೀ |
ಬಾಂಧವಾನಾಂ ಚ ಸರ್ವೇಷಾಂ ಕಿಂ ನು ದುಃಖಮತಃ ಪರಮ್ ॥3॥
ಯದಿ ದತ್ತಂ ತಪಸ್ತಪ್ತಂ ಗುರವೋ ವಾ ಮಯಾ ಯದಿ |
ಸಮ್ಯಗಾರಾಧಿತಾಸ್ತೇನ ಸಾ ಜೀವತು ಮಮ ಪ್ರಿಯಾ ॥4॥
ನನ್ನ ಪ್ರಿಯಳಾದ ಆ ತನ್ವಂಗಿಯು ನನ್ನ ಮತ್ತು ಬಾಂಧವರೆಲ್ಲರ ಶೋಕವನ್ನು ವೃದ್ಧಿಮಾಡುತ್ತಾ ಭೂಮಿಯ ಮೇಲೆ ಮಲಗಿದ್ದಾಳೆ. ಇದಕ್ಕಿಂತ ಹೆಚ್ಚು ದುಃಖಕರವಾದದ್ದು ಯಾವುದು ? ನಾನು ದಾನವನ್ನು ಮಾಡಿದ್ದರೆ ಅಥವಾ ತಪಸ್ಸನ್ನು ಆಚರಿಸಿದ್ದರೆ ಅಥವಾ ಚೆನ್ನಾದ ರೀತಿಯಲ್ಲಿ ಗುರುಗಳನ್ನು ಆರಾಧನೆ ಮಾಡಿದ್ದರೆ ನನ್ನ ಪ್ರಿಯೆಯು ಮರಳಿ ಜೀವವನ್ನು ಪಡೆಯಲಿ.
ಯಥಾ ಚ ಜನ್ಮಪ್ರಭೃತಿ ಯತಾತ್ಮಾಽಹಂ ಧೃತವ್ರತಃ |
ಪ್ರಮದ್ವರಾ ತಥಾದ್ಯಾಸಾವುತ್ತಿಷ್ಠತು ಮಮ ಪ್ರಿಯಾ ॥5॥
ನಾನು ಜನ್ಮಾರಭ್ಯ ವ್ರತಗಳನ್ನು ಧರಿಸಿ ಒಳ್ಳೆಯ ನಿಯಮವನ್ನು ಉಳ್ಳವನಾದರೆ ನನ್ನ ಪ್ರಿಯೆಯಾದ ಈ ಪ್ರಮದ್ವರೆಯು ಮೇಲಕ್ಕೇಳಲಿ.
ಏವಂ ವಿಲಪತಸ್ತಸ್ಯ ಋಷಿಪುತ್ರಸ್ಯ ವೈ ತದಾ |
ದೇವದೂತಸ್ತದಾಽಭ್ಯೇತ್ಯ ವಾಕ್ಯಮಾಹ ರುರುಂ ವನೇ ॥6॥
ಹೀಗೆ ಆ ಋಷಿಪುತ್ರನು ವಿಲಾಪವನ್ನು ಮಾಡುತ್ತಿರಲು ದೇವದೂತನಾದ ಒಬ್ಬ ಗಂಧರ್ವನು ಆ ಕಾಡಿನಲ್ಲಿ ರುರುವನ್ನು ಸಮೀಪಿಸಿ ಹೀಗೆ ಮಾತನಾಡಿದನು.
ದೇವದೂತಃ
ಅಭಿಧತ್ಸೇ ಹ ಯದ್ವಾಚಾ ರುರೋ ದುಃಖೇನ ತನ್ಮೃಷಾ |
ನ ತು ಮರ್ತ್ಯಸ್ಯ ಧರ್ಮಾತ್ಮನ್ನಾಯುರಸ್ತಿ ಗತಾಯುಷಃ ॥7॥
ರುರುವೇ ದುಃಖದಿಂದ ಏನು ಮಾತನಾಡುತ್ತಿದ್ದೀಯೋ ಅದು ವ್ಯರ್ಥವಾದುದು. ಎಲೈ ಧರ್ಮಾತ್ಮನೇ, ಮರಣಶೀಲನಾದ ವ್ಯಕ್ತಿಯು ಆಯುಸ್ಸನ್ನು ಕಳೆದುಕೊಂಡು ಮರಣಹೊಂದಿದ ಮೇಲೆ ಪುನಃ ಅವನು ಬದುಕುವುದಿಲ್ಲ.
ಗತಾಸುರೇಷಾ ಕೃಪಣಾ ಗಂಧರ್ವಾಪ್ಸರಸೋಃ ಸುತಾ |
ತಸ್ಮಾಚ್ಛೋಕೇ ಮನಸ್ತಾತ ಮಾ ಕೃಥಾಸ್ತ್ವಂ ಕಥಂಚನ ॥8॥
ಪ್ರೀತಿಪಾತ್ರನೇ, ಗಂಧರ್ವ ಮತ್ತು ಅಪ್ಸರೆಯರ ಮಗಳಾದ ಈ ಪ್ರಮದ್ವರೆಯು ಮರಣವನ್ನು ಹೊಂದಿದ್ದಾಳೆ. ಆದ್ದರಿಂದ ಇನ್ನು ಯಾವ ರೀತಿಯಲ್ಲೂ ಮನಸ್ಸಿನಲ್ಲಿ ಶೋಕ ಪಡಬೇಡ.
ಉಪಾಯಶ್ಚಾತ್ರ ವಿಹಿತಃ ಪೂರ್ವಂ ದೇವೈರ್ಮಹಾತ್ಮಭಿಃ |
ತಂ ಯದೀಚ್ಛಸಿ ಕರ್ತುಂ ತ್ವಂ ಲಪ್ಸ್ಯಸೀಮಾಂ ಪ್ರಮದ್ವರಾಮ್ ॥9॥
ಮಹಾತ್ಮರಾದ ದೇವತೆಗಳು ಹಿಂದೆ ಈ ವಿಷಯದಲ್ಲಿ ಒಂದು ಉಪಾಯವನ್ನು ವಿಧಾನ ಮಾಡಿದ್ದಾರೆ. ನೀನು ಅದನ್ನು ಮಾಡಲು ಬಯಸುವುದಾದರೆ ಪ್ರಮದ್ವರೆಯನ್ನು ನೀನು ಮರಳಿ ಪಡೆಯುತ್ತೀಯೆ.
ರುರುಃ
ಕ ಉಪಾಯಃ ಕೃತೋ ದೇವೈರ್ಬ್ರೂಹಿ ತತ್ತ್ವೇನ ಖೇಚರ |
ಕರಿಷ್ಯೇಽಹಂ ತಥಾ ಶ್ರುತ್ವಾ ತ್ರಾತುಮರ್ಹತಿ ಮಾಂ ಭವಾನ್ ॥10॥
ಎಲೈ ಗಗನಚರನೇ, ದೇವತೆಗಳು ಏನು ಉಪಾಯವನ್ನು
ಮಾಡಿದ್ದಾರೆ ? ಅದನ್ನು ನನಗೆ ಸರಿಯಾಗಿ ಹೇಳು, ನಾನು ಕೇಳಿ ಅದರಂತೆಯೇ ಮಾಡುವೆನು. ನನ್ನನ್ನು ನೀನು ರಕ್ಷಿಸು.

ದೇವದೂತಃ
ಆಯುಷೋಽರ್ಧಂ ಪ್ರಯಚ್ಛಸ್ವ ಕನ್ಯಾಯೈ ಭೃಗುನಂದನ |
ಏವಮುತ್ಥಾಸ್ಯತಿ ರುರೋ ತವ ಭಾರ್ಯಾ ಪ್ರಮದ್ವರಾ ॥ 11 ॥
ಎಲೈ ಭೃಗುನಂದನನೇ, ನೀನು ಈ ಕನ್ಯೆಗೆ ನಿನ್ನ ಅರ್ಧಾಯುಷ್ಯವನ್ನು ಕೊಡು. ರುರುವೇ, ಹಾಗೆ ಮಾಡಿದರೆ ನಿನ್ನ ಭಾರ್ಯೆಯಾದ ಪ್ರಮದ್ವರೆಯು ಎದ್ದೇಳುತ್ತಾಳೆ.
ರುರುಃ
ಆಯುಷೋಽರ್ಧಂ ಪ್ರಯಚ್ಛಾಮಿ ಕನ್ಯಾಯೈ ಖೇಚರೋತ್ತಮ |
ಶೃಂಗರರೂಪಾಭರಣಾ ಚೋತ್ತಿಷ್ಠತು ಮಮ ಪ್ರಿಯಾ ॥12॥
ಎಲೈ ಗಗನಚರಶ್ರೇಷ್ಠನೇ, ನಾನು ನನ್ನ ಆಯುಷ್ಯದ ಅರ್ಧಭಾಗವನ್ನು ಈ ಕನ್ಯೆಗೆ ಕೊಡುತ್ತಿದ್ದೇನೆ. ಶೃಂಗಾರರೂಪವಾದ ಆಭರಣದಿಂದ ಯುಕ್ತಳಾಗಿ ನನ್ನ ಪ್ರಿಯೆಯು ಮೇಲಕ್ಕೇಳಲಿ.
ತತೋ ಗಂಧರ್ವರಾಜಶ್ಚ ದೇವದೂತಶ್ಚ ಸತ್ತಮ |
ಧರ್ಮರಾಜಮುಪೇತ್ಯೇದಂ ವಚನಂ ಪ್ರತ್ಯಭಾಷತಾಮ್ ॥13॥
ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಅನಂತರ ಗಂಧರ್ವರಾಜನಾದ ವಿಶ್ವಾವಸುವೂ ಮತ್ತು ಆ ದೇವದೂತನೂ ಯಮಧರ್ಮರಾಜನ ಬಳಿಗೆ ಹೋಗಿ ಹೀಗೆ ಮಾತನಾಡಿದರು.
ಧರ್ಮರಾಜಾಯುಷೋಽರ್ಧೇನ ರುರೋರ್ಭಾರ್ಯಾ ಪ್ರಮದ್ವರಾ |
ಸಮುತ್ತಿಷ್ಠತು ಕಲ್ಯಾಣೀ ಮೃತೈವ ಯದಿ ಮನ್ಯಸೇ ॥14॥
ಎಲೈ ಧರ್ಮರಾಜನೇ ನೀನು ಪ್ರಮದ್ವರೆಯನ್ನು ಮೃತಳಾಗಿದ್ದಾಳೆ ಎಂದು ಭಾವಿಸಿದ್ದರೆ ರುರುವಿನಭಾರ್ಯೆಯಾದ, ಕಲ್ಯಾಣಿಯಾದ ಅವಳು ರುರುವಿನ ಅರ್ಧಾಯುಷ್ಯದಿಂದ ಮೇಲಕ್ಕೇಳಲಿ.
ಯಮಃ
ಪ್ರಮದ್ವರಾ ರುರೋರ್ಭಾರ್ಯಾ ದೇವದೂತ ಯದೀಚ್ಛಸಿ |
ಉತ್ತಿಷ್ಠತ್ವಾಯುಷೋಽರ್ಧೇನ ರುರೋರೇವ ಸಮನ್ವಿತಾ ॥15॥
ಎಲೈ ದೇವದೂತನೇ, ನೀನು ಬಯಸುವುದಾದರೆ ರುರುವಿನ ಅರ್ಧಾಯುಷ್ಯದಿಂದ ಕೂಡಿದವಳಾಗಿ ರುರುವಿನ ಭಾರ್ಯೆಯಾದ ಈ ಪ್ರಮದ್ವರೆಯು ಮೇಲಕ್ಕೇಳಲಿ.
ಏವಮುಕ್ತೇ ತತಃ ಕನ್ಯಾ ಸೋದತಿಷ್ಠತ್ ಪ್ರಮದ್ವರಾ |
ರುರೋಸ್ತಸ್ಯಾಯುಷೋಽರ್ಧೇನ ಸುಪ್ತೇವ ವರವರ್ಣಿನೀ ॥16॥
ಯಮದೇವರು ಹೀಗೆ ಹೇಳುತ್ತಿರಲು, ಸುಂದರಿಯಾದ ಆ ಪ್ರಮದ್ವರೆಯು ರುರುವಿನ ಅರ್ಧ ಆಯುಷ್ಯವನ್ನು ತೆಗೆದುಕೊಂಡು ನಿದ್ರೆಯಿಂದ ಎದ್ದವಳಂತೆ ಮೇಲಕ್ಕೆದ್ದಳು.
ಏತದ್ ದೃಷ್ಟಂ ಹಿ ತದ್ವೀರ್ಯಂ ರುರೋರುತ್ತಮತೇಜಸಃ |
ಆಯುಷೋಽತಿಪ್ರವೃದ್ಧಸ್ಯ ಭಾರ್ಯಾರ್ಥೇಽರ್ಧಂ ಪ್ರದಾಸ್ಯತಃ ॥17॥
ಶ್ರೇಷ್ಠತೇಜಸ್ವಿಯಾದ ಆ ರುರುವಿನ ಈ ಪರಾಕ್ರಮವು ನೋಡಲ್ಪಟ್ಟಿತು. ಅತಿದೀರ್ಘವಾದ ಆಯುಷ್ಯವನ್ನು ಹೊಂದಿದ್ದ ಅವನು ತನ್ನ ಆಯುಷ್ಯದ ಅರ್ಧಭಾಗವನ್ನು ಕೊಟ್ಟು ಪ್ರಮದ್ವರೆಯನ್ನು ಬದುಕಿಸಿದನು.
ತಮುದ್ದಿಷ್ಟೇಽಹನಿ ತಯೋಃ ಪಿತರೌ ಚಕ್ರತುರ್ಮುದಾ |
ವಿವಾಹಂ ತೌ ಚ ರೇಮಾತೇ ಪರಸ್ಪರಹಿತೈಷಿಣೌ ॥18॥
ಉದ್ದಿಷ್ಟವಾದ ದಿನದಲ್ಲಿಯೇ ಅವರ ಪಿತೃಗಳು ರುರು ಮತ್ತು ಪ್ರಮದ್ವರೆಯ ವಿವಾಹವನ್ನು ಜರುಗಿಸಿದರು. ಅವರಿಬ್ಬರೂ ಪರಸ್ಪರ ಹಿತವನ್ನು ಮಾಡುತ್ತಾ ಸಂತೋಷದಿಂದ ಕೂಡಿದರು.
ಸ ಲಬ್ಧ್ವಾ ದುರ್ಲಭಾಂ ಭಾರ್ಯಾಂ ಪದ್ಮಕಿಂಜಲ್ಕಸಪ್ರಭಾಮ್ |
ವ್ರತಂ ಚಕ್ರೇ ವಿನಾಶಾಯ ಜಿಹ್ಮಗಾನಾಂ ಮಹಾವ್ರತಃ ॥19॥
ಪದ್ಮಕಿಂಜಲ್ಕ ಕಾಂತಿಯುಳ್ಳ ದುರ್ಲಭಳಾದ ಪತ್ನಿಯನ್ನು ಪಡೆದ ಮಹಾವ್ರತನಾದ ರುರುವು ಸರ್ಪಗಳ ವಿನಾಶಮಾಡುವೆನೆಂದು ವ್ರತವನ್ನು ಧರಿಸಿದನು. (ಪ್ರತಿಜ್ಞೆಯನ್ನು ಮಾಡಿದನು)
ಸ ದೃಷ್ಟ್ವಾ ಜಿಹ್ಮಗಾನ್ ಸರ್ವಾಂಸ್ತೀಕ್ಷ್ಣಕೋಪಸಮನ್ವಿತಃ |
ಅಭಿಹಂತಿ ಯದಾಸನ್ನಂ ಗೃಹ್ಯ ಪ್ರಹರಣಂ ತದಾ ॥20॥
ಅವನು ಸರ್ಪಗಳನ್ನು ನೋಡಿದ ಕೂಡಲೇ ಬಹಳ ಕೋಪದಿಂದ ಕೂಡಿದವನಾಗಿ ಕೈಗೆ ಸಿಲುಕಿದ ಒಂದು ಹೊಡೆಯುವ ಸಾಧನವನ್ನು ತೆಗೆದುಕೊಂಡು ಅವುಗಳನ್ನು ಕೊಲ್ಲುತ್ತಿದ್ದನು.
ಸ ಕದಾಚಿದ್ವನಂ ವಿಪ್ರೋ ರುರುರಭ್ಯಾಗಮದ್ ಗೃಹಾತ್ |
ಶಯಾನಂ ತತ್ರ ಚಾಪಶ್ಯತ್ ಡುಂಡುಭಂ ವಯಸಾಽನ್ವಿತಮ್ ॥21॥
ಒಮ್ಮೆ ಬ್ರಾಹ್ಮಣನಾದ ರುರುವು ಮನೆಯಿಂದ ಕಾಡಿಗೆ ಹೋದನು. ಅಲ್ಲಿ ಒಂದು ವಯಸ್ಸಾದ ಡುಂಡುಭವು (ನೀರು ಹಾವು-ವಿಷರಹಿತವಾದ ಸರ್ಪ) ಮಲಗಿರುವುದನ್ನು ನೋಡಿದನು.
ತತ ಉದ್ಯಮ್ಯ ದಂಡಂ ಸ ಕಾಲದಂಡೋಪಮಂ ತದಾ |
ಅತ್ಯಂತಂ ರುಷಿತೋ ವಿಪ್ರಸ್ತಮುವಾಚಾಥ ಡುಂಡುಭಃ ॥22॥
ಆಗ ರೋಷದಿಂದ ಕೂಡಿದ ಬ್ರಾಹ್ಮಣನಾದ ಆ ರುರುವು ಯಮದಂಡದಂತಿದ್ದ ತನ್ನ ಕೈಯಲ್ಲಿದ್ದ ದಂಡವನ್ನು ಎತ್ತಿ ಹೊಡೆಯಲು

ಉದ್ಯುಕ್ತನಾದನು. ಆಗ ಆ ಡುಂಡುಭವು ಅವನನ್ನು ಕುರಿತು ಮಾತನಾಡಿತು.
ನಾಪರಾಧ್ಯಾಮಿ ತೇ ಕಿಂಚಿದಹಮದ್ಯ ತಪೋಧನ |
ಸಂರಂಭೋಽತ್ರ ಕಿಮರ್ಥಂ ವೈ ಮಾಮಭಿಹಂಸಿ ರುಷಾನ್ವಿತಃ ॥23॥
ಎಲೈ ತಪೋಧನನೇ, ನಾನು ನಿನಗೆ ಯಾವ ಅಪರಾಧವನ್ನೂ ಮಾಡಿಲ್ಲ. ನೀನು ಕೋಪದಿಂದ ಕೂಡಿದವನಾಗಿ ನನ್ನನ್ನು ಕೊಲ್ಲಲು ಹೋಗುತ್ತಿದ್ದೀಯೆ, ನಿನಗೆ ಏಕೆ ಇಷ್ಟು ಕೋಪ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ನವಮೋಽಧ್ಯಾಯಃ ॥
॥ ಇತಿ ಪೌಲೋಮಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಒಂಭತ್ತನೆಯ ಅಧ್ಯಾಯ ಮುಗಿಯಿತು.
*****

ಹತ್ತನೆಯ ಅಧ್ಯಾಯ
(ಸಹಸ್ರಪಾತ್ ಋಷಿಗೆ ಶಾಪದಿಂದ ಸರ್ಪಶರೀರಪ್ರಾಪ್ತಿ)
ರುರುಃ
ಮಮ ಪ್ರಾಣಸಮಾ ಭಾರ್ಯಾ ದಷ್ಟಾಸೀದ್ ಭುಜಗೇನ ವೈ |
ತತ್ರ ಮೇ ಸಮಯೋ ಘೋರ ಆತ್ಮನೋರಗ ವೈ ಕೃತಃ ॥1॥
ಎಲೈ ಸರ್ಪವೇ, ನನ್ನ ಪ್ರಾಣಸಮಳಾದ ಪತ್ನಿಯನ್ನು ಒಂದು ಸರ್ಪವು ಕಚ್ಚಿ ಕೊಂದಿತು. ಆ ಕಾರಣದಿಂದ ನಾನು ಇಂತಹ ಒಂದು ಘೋರ ನಿಯಮವನ್ನು ಆಚರಿಸುತ್ತಿದ್ದೇನೆ.
ಭುಜಂಗಮಾನ್ ಸದಾ ಹನ್ಯಾಂ ಯಂ ಯಂ ಪಶ್ಯೇಯಮಿತ್ಯುತ |
ತತೋಽಹಂ ತ್ವಾಂ ಜಿಘಾಂಸಾಮಿ ಜೀವಿತೇನ ವಿಮೋಕ್ಷ್ಯಸೇ ॥2॥
ಯಾವಯಾವ ಸರ್ಪವನ್ನು ನೋಡುವೆನೊ ಅವುಗಳನ್ನು ಯಾವಾಗಲೂ ಕೊಲ್ಲುವೆನು ಎಂದು ನನ್ನ ನಿಯಮ. ಆದ್ದರಿಂದ ನಾನು ನಿನ್ನನ್ನು ಕೊಲ್ಲಲು ಇಚ್ಛಿಸುತ್ತೇನೆ, ನೀನು ಪ್ರಾಣವನ್ನು ತ್ಯಜಿಸುವಿ.
ಡುಂಡುಭಃ
ಅನ್ಯೇ ತೇ ಭುಜಗಾ ವಿಪ್ರ ಯೇ ದಶಂತಿಹ ಮಾನವಾನ್ |
ಡುಂಡುಭಾ ನಹಿ ಶಬ್ದೇನ ನ ತ್ವಂ ಹಿಂಸಿತುಮರ್ಹಸಿ ॥3॥
ಎಲೈ ಬ್ರಾಹ್ಮಣನೇ, ಬೇರೆ ಸರ್ಪಗಳು ಮನುಷ್ಯರನ್ನು ಕಡಿಯುತ್ತವೆ. ಡುಂಡುಭಗಳಾದ ನಾವು ಕಡಿಯುವುದಿಲ್ಲ. ಕೇವಲ ಸರ್ಪ ಎಂಬ ಒಂದು ಶಬ್ದ ಇರುವ ಮಾತ್ರಕ್ಕೆ ನಮ್ಮನ್ನು ನೀನು ಕೊಲ್ಲಬಾರದು.
ಏಕಾರ್ಥಾನ್ ಪೃಥಗರ್ಥಾನ್ ವಾ ಏಕದುಃಖಾನ್ ಪೃಥಕ್ಸುಖಾನ್ |
ಡುಂಡುಭಾನ್ ಧರ್ಮವಿದ್ ಭೂತ್ವಾ ನ ತ್ವಂ ಹಿಂಸಿತುಮರ್ಹಸಿ ॥
ನಮಗೆ ಸರ್ಪ ಎಂಬ ಸಾಮಾನ್ಯ ಹೆಸರಿದ್ದರೂ ಡುಂಡುಭ ಎಂಬ ವಿಶೇಷವಾದ ಹೆಸರೂ ಇದೆ. ಸರ್ಪಗಳನ್ನು ನೋಡುವುದರಿಂದ ಉಂಟಾಗುವ ಭಯವು ಎಲ್ಲ ಸರ್ಪಗಳಿಗೂ ಸಾಧಾರಣವಾಗಿದ್ದರೂ ಮರಣವನ್ನು ಉಂಟುಮಾಡುವ ಮತ್ತು ಮರಣವನ್ನು ಉಂಟುಮಾಡದೇ ಇರುವ ಪ್ರಭೇದವೂ ಅದರಲ್ಲಿದೆ. ಧರ್ಮವೇತ್ತನಾದ ನೀನು ಮರಣವನ್ನು ಉಂಟುಮಾಡದೆ ಸುಖವನ್ನು ಕೊಡುವ ಡುಂಡುಭಗಳಾದ ನಮ್ಮನ್ನು ಏಕೆ ಕೊಲ್ಲುತ್ತೀಯೆ?
ಸೂತಃ
ಇತಿ ಶ್ರುತ್ವಾ ವಚಸ್ತಸ್ಯ ಭುಜಗಸ್ಯ ರುರುಸ್ತದಾ |
ನಾವಧೀದ್ ಭೃಶಸಂವಿಗ್ನಂ ಋಷಿಂ ಮತ್ವಾಽಥ ಡುಂಡುಭಮ್ ॥5॥
ಆಗ ರುರುವು ಆ ಸರ್ಪದ ಮಾತನ್ನು ಕೇಳಿ, ಆ ಸರ್ಪವು ಬಹಳ ಉದ್ವೇಗಕ್ಕೆ ಒಳಗಾದ ಒಬ್ಬ ಋಷಿಯೆಂದು ತಿಳಿದು ಅದನ್ನು ಕೊಲ್ಲಲಿಲ್ಲ.
ಉವಾಚ ಚೈನಂ ಭಗವಾನ್ ರುರುಃ ಸಂಶಯವಾನ್ ಗಿರಾ |
ಕೇನ ತ್ವಂ ಭುಜಗ ಬ್ರೂಹಿ ಕೋಽಸೀಮಾಂ ವಿಕ್ರಿಯಾಂ ಗತಃ ॥6॥
ಪೂಜ್ಯನಾದ ರುರುವು ಆ ಸರ್ಪದ ಮಾತಿನಿಂದ ಸಂಶಯವನ್ನು ಹೊಂದಿದವನಾಗಿ ಅದನ್ನು ಕುರಿತು ಎಲೈ ಸರ್ಪವೇ, ನೀನು ಯಾರು, ಏತಕ್ಕೆ ಇಂತಹ ಸ್ಥಿತಿಯನ್ನು ಹೊಂದಿದ್ದೀಯೆ ಎಂದು ಕೇಳಿದನು.
ಡುಂಡುಭಃ
ಅಹಂ ಪುರಾ ರುರೋ ನಾಮ್ನಾ ಋಷಿರಾಸಂ ಸಹಸ್ರಪಾತ್ |
ಸೋಽಹಂ ಶಾಪೇನ ವಿಪ್ರಸ್ಯ ಭುಜಗತ್ವಮುಪಾಗತಃ ॥7॥
ಎಲೈ ರುರುವೇ ನಾನು ಹಿಂದೆ ಸಹಸ್ರಪಾತ್ ಎಂಬ ಋಷಿಯಾಗಿದ್ದೆ. ಅಂತಹ ನಾನು ಒಬ್ಬ ಬ್ರಾಹ್ಮಣನ ಶಾಪದಿಂದ ಹೀಗೆ ಸರ್ಪದ ಜನ್ಮವನ್ನು ಹೊಂದಿದೆ.
ರುರುಃ
ಕಿಮರ್ಥಂ ಶಪ್ತವಾನ್ ಕ್ರುದ್ಧೋ ದ್ವಿಜಸ್ತ್ವಂ ಭುಜಗೋತ್ತಮ |
ಕಿಯಂತಂ ಚೈವ ಕಾಲಂ ತೇ ವಪುರೇತದ್ ಭವಿಷ್ಯತಿ ॥8॥

ಎಲೈ ಭುಜಗಶ್ರೇಷ್ಠನೇ ಆ ಬ್ರಾಹ್ಮಣನು ಏತಕ್ಕಾಗಿ ನಿನಗೆ ಶಾಪವನ್ನು ಕೊಟ್ಟನು? ನೀನು ಎಷ್ಟು ಸಮಯದವರೆಗೆ ಈ ಶರೀರವನ್ನು ಧರಿಸಿರುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದಶಮೋಽಧ್ಯಾಯಃ ॥
॥ ಇತಿ ಪೌಲೋಮಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
*****

ಹನ್ನೊಂದನೆಯ ಅಧ್ಯಾಯ
(ಡುಂಡುಭನಿಂದ ತನಗೆ ಬಂದ ಶಾಪದ ಕಥನ. ರುರುವಿಗೆ ಶಾಂತಿಯಿಂದಿರಲು ಉಪದೇಶ. ಪ್ರಸಂಗದಿಂದ ಜನಮೇಜಯನ ಸರ್ಪಯಾಗದ ಉಲ್ಲೇಖ.)
ಡುಂಡುಭಃ
ಸಖಾ ಬಭೂವ ಮೇ ಪೂರ್ವಂ ಖಗಮೋ ನಾಮ ವೈ ದ್ವಿಜಃ |
ಭೃಶಂ ಸಂಶಿತವಾಕ್ ತಾತ ತಪೋಬಲಸಮನ್ವಿತಃ ॥1॥
ನನಗೆ ಹಿಂದೆ ಖಗಮ ಎಂಬ ಒಬ್ಬ ಬ್ರಾಹ್ಮಣನು ಸ್ನೇಹಿತನಾಗಿದ್ದನು. ಪ್ರೀತಿಪಾತ್ರನೇ, ಅವನು ತಪೋಬಲಯುಕ್ತನಾದವನೂ ಮತ್ತು ವಾಙ್ನಿಯಮವುಳ್ಳವನೂ ಆಗಿದ್ದನು.
ಸ ಮಯಾ ಕ್ರೀಡತಾ ಬಾಲ್ಯೇ ಕೃತ್ವಾ ತಾರ್ಣಮಥೋರಗಮ್ |
ಅಗ್ನಿಹೋತ್ರೇ ಪ್ರವೃತ್ತಃ ಸನ್ ಭೀಷಿತಃ ಪ್ರಮುಮೋಹ ವೈ ॥2॥
ನಾನು ಅವನ ಜೊತೆಯಲ್ಲಿ ಬಾಲ್ಯದಲ್ಲಿ ಆಟವನ್ನು ಆಡುತ್ತಾ ತೃಣಗಳಿಂದ ಒಂದು ಸರ್ಪವನ್ನು ರಚಿಸಿ ಅಗ್ನಿಹೋತ್ರದಲ್ಲಿ ನಿರತನಾಗಿದ್ದ ಅವನನ್ನು ಹೆದರಿಸಿದೆ. ಅವನು ಹೆದರಿಕೆಯಿಂದ ಮೂರ್ಛೆಹೋದ.
ಲಬ್ಧ್ವಾ ಚ ಸ ಪುನಃ ಸಂಜ್ಞಾಂ ಮಾಮುವಾಚ ತಪೋಧನಃ |
ನಿರ್ದಹನ್ನಿವ ಕೋಪೇನ ಸತ್ಯವಾಕ್ ಸಂಶಿತವ್ರತಃ ॥3॥
ತಪೋಧನನೂ, ಸತ್ಯವಚನನೂ, ಶ್ರೇಷ್ಠವ್ರತಧಾರಿಯೂ ಆದ ಅವನು ಪುನಃ ಪ್ರಜ್ಞೆಯನ್ನು ಪಡೆದು, ಕೋಪದಿಂದ ಪ್ರಜ್ವಲಿಸುತ್ತಾ ನನ್ನನ್ನು ಕುರಿತು ಮಾತನಾಡಿದನು.
ಯಥಾವೀರ್ಯಃ ಕೃತಃ ಸರ್ಪಃ ತ್ವಯಾಯಂ ಮದ್ವಿಭೀಷಯಾ |
ತಥಾವೀರ್ಯೋ ಭುಜಂಗಸ್ತ್ವಂ ಮಮ ಕೋಪಾದ್ ಭವಿಷ್ಯಸಿ ॥4॥
ನೀನು ನನ್ನನ್ನು ಹೆದರಿಸಲು ಎಂತಹ ಶಕ್ತಿಯುಳ್ಳ ಸರ್ಪವನ್ನು ಮಾಡಿದ್ದೀಯೋ, ನೀನು ನನ್ನ ಕೋಪದಿಂದ ಅಂತಹ ಸರ್ಪವೇ ಆಗುವಿ ಎಂದು ಹೇಳಿದನು.
ತಸ್ಯಾಹಂ ತಪಸೋ ವೀರ್ಯಂ ಜಾನಮಾನಸ್ತಪೋಧನ |
ಭೃಶಮುದ್ವಿಗ್ನಹೃದಯಸ್ತಮವೋಚಂ ತಪೋಧನಮ್ |
ಪ್ರಯತಃ ಸಂಭ್ರಮಾಚ್ಚೈವ ಪ್ರಾಂಜಲಿಃ ಪ್ರಣತಃ ಸ್ಥಿತಃ ॥5॥
ಎಲೈ ತಪೋಧನನೇ, ಅವನ ತಪಸ್ಸಿನ ವೀರ್ಯವನ್ನು ತಿಳಿದ ನಾನು ಮನಸ್ಸಿನಲ್ಲಿ ಬಹಳ ಉದ್ವೇಗಕ್ಕೆ ಒಳಗಾದವನಾಗಿ, ಆ ತಪೋಧನನನ್ನು ಕುರಿತು ವಿನಯದಿಂದ ಮತ್ತು ಗಾಬರಿಯಿಂದ ಕೈಗಳನ್ನು ಜೋಡಿಸಿ ನಮಸ್ಕಾರವನ್ನು ಮಾಡಿ ನಿಂತೆ.
ಸಖೇತಿ ಸಹಸೇದಂ ತೇ ಹಾಸ್ಯಾರ್ಥಂ ವೈ ಕೃತಂ ಮಯಾ |
ಕ್ಷಂತುಮರ್ಹಸಿ ಮೇ ಬ್ರಹ್ಮನ್ ಶಾಪೋಽಯಂ ವಿನಿವರ್ತ್ಯತಾಮ್ ॥6॥
ಎಲೈ ಬ್ರಾಹ್ಮಣನೇ, ನೀನು ನನ್ನ ಸ್ನೇಹಿತನೆಂಬ ಕಾರಣದಿಂದ ಹಾಸ್ಯದ ಸಲುವಾಗಿ ಈ ಕಾರ್ಯವನ್ನು ಇದ್ದಕ್ಕಿದ್ದಂತೆಯೇ ಮಾಡಿದೆ. ನೀನು ನನ್ನನ್ನು ಕ್ಷಮಿಸು. ಶಾಪವನ್ನು ಹಿಂದಕ್ಕೆ ತೆಗೆದುಕೋ.
ಸ ತು ಮಾಮಬ್ರವೀದ್ ದೃಷ್ಟ್ವಾ ಭೃಶಮುದ್ವಿಗ್ನಚೇತಸಂ |
ಮುಹುರುಷ್ಣಂ ವಿನಿಃಶ್ವಸ್ಯ ಸುಸಂಭ್ರಾಂತಸ್ತಪೋಧನಃ ॥8॥
ತಪೋಧನನಾದ ಅವನಾದರೋ ನನ್ನನ್ನು ನೋಡಿ ಉದ್ವಿಗ್ನ ಮನಸ್ಸುಳ್ಳವನಾಗಿ, ದಿಗ್ಭ್ರಮೆಯಿಂದ ಕೂಡಿದವನಾಗಿ, ಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತಾ ಮಾತನಾಡಿದನು.
ನಾನೃತಂ ವೈ ಮಯಾ ಪ್ರೋಕ್ತಂ ಭವಿತೇದಂ ಕಥಂಚನ |
ಯತ್ತು ವಕ್ಷ್ಯಾಮಿ ತೇ ವಾಕ್ಯಂ ಶೃಣು ತನ್ಮೇ ಧೃತವ್ರತ |
ಶ್ರುತ್ವಾ ಚ ಹೃದಿ ಮೇ ವಾಕ್ಯಮಿದಮಸ್ತು ತವಾನಘ॥9॥
ನನ್ನ ಈ ಮಾತು ಯಾವ ರೀತಿಯಲ್ಲೂ ಸುಳ್ಳಾಗುವುದಿಲ್ಲ. ಎಲೈ ಧೃತವ್ರತನೇ, ನಾನು ಹೇಳುವ ಮಾತನ್ನು ಕೇಳು. ಎಲೈ ಅನಘನೇ, ಆ ಮಾತನ್ನು ಕೇಳಿ ನಿನ್ನ ಮನಸ್ಸಿನಲ್ಲಿ ಅದನ್ನು ಧಾರಣೆ ಮಾಡು.
ಉತ್ಪತ್ಸ್ಯತಿ ರುರುರ್ನಾಮ ಪ್ರಮತೇರಾತ್ಮಜಃ ಶುಚಿಃ |
ತಂ ದೃಷ್ಟ್ವಾ ಶಾಪಮೋಕ್ಷಸ್ತೇ ಭವಿತಾ ನಚಿರಾದಿವ ॥10॥
ಮುಂದೆ ಪ್ರಮತಿಯ ಮಗನಾದ ಪರಿಶುದ್ಧನಾದ ರುರು ಎಂಬ ಬ್ರಾಹ್ಮಣನು ಜನಿಸುವನು. ನೀನು ಅವನನ್ನು ನೋಡಿದಾಗ ತಕ್ಷಣದಲ್ಲಿಯೇ ನಿನಗೆ ಶಾಪವಿಮೋಚನೆಯಾಗುವುದು.

ಸ ತ್ವಂ ರುರುರಿತಿ ಖ್ಯಾತಃ ಪ್ರಮತೇರಾತ್ಮಜಃ ಶುಚಿಃ |
ಸ್ವಂ ರೂಪಂ ಪ್ರತಿಲಭ್ಯಾಹಮತ್ರ ವಕ್ಷ್ಯಾಮಿ ತೇ ಹಿತಮ್ ||11||
ನೀನೇ ಪ್ರಮತಿಯ ಪುತ್ರನಾದ ಪರಿಶುದ್ಧನಾದ ರುರುವು. ನಾನು ಮೊದಲನೆಯ ರೂಪವನ್ನು ಪಡೆದು ನಿನಗೆ ಹಿತವನ್ನು ಹೇಳುವೆನು.
ಇತಿ ಸ್ವರೂಪಂ ಗೃಹ್ಯಾಶು ತತ್ರರ್ಷಿಂ ವಾಕ್ಯಮಬ್ರವೀತ್ |
ಅಹಿಂಸಾ ಪರಮೋ ಧರ್ಮಃ ಸರ್ವಪ್ರಾಣಭೃತಾಂವರಃ ||12||
ಹೀಗೆ ಆ ಡುಂಡುಭುವು ತನ್ನ ನಿಜಸ್ವರೂಪವನ್ನು ಪಡೆದು ಆ ಋಷಿಯಾದ ರುರುವನ್ನು ಕುರಿತು ಹೇಳಿತು. ಎಲ್ಲಾ ಪ್ರಾಣಿಗಳಿಗೂ ಶ್ರೇಷ್ಠವಾದ ಧರ್ಮವೆಂದರೆ ಅಹಿಂಸೆಯೇ.
ತಸ್ಮಾತ್ ಪ್ರಾಣಭೃತಃ ಸರ್ವಾನ್ನ ಹಿಂಸೇದ್ ಬ್ರಾಹ್ಮಣಃ ಕ್ವಚಿತ್ |
ಬ್ರಾಹ್ಮಣಃ ಸೌಮ್ಯಭಾವೇನ ಜಾಯೋತೇತಿ ಪರಾ ಶ್ರುತಿಃ ||13||
ಆದ್ದರಿಂದ ಬ್ರಾಹ್ಮಣನಾದವನು ಯಾವ ಪ್ರಾಣಿಯನ್ನೂ ಎಂದೂ ಹಿಂಸಿಸಬಾರದು. ಬ್ರಾಹ್ಮಣನು ಶಾಂತಭಾವವನ್ನು ಉಳ್ಳವನು ಎಂದು ವೇದವು ಹೇಳುತ್ತದೆ.
ವೇದವೇದಾಂಗವಿತ್ ತಾತ ಸರ್ವಭೂತಾಭಯಪ್ರದಃ |
ಅಹಿಂಸಾ ಸತ್ಯವಚನಂ ಕ್ಷಮಾ ಚೇತಿ ವಿನಿಶ್ಚಿತಮ್ ||14||
ಎಲೈ ಪ್ರೀತಿಪಾತ್ರನೇ, ಬ್ರಾಹ್ಮಣನಾದವನು ವೇದವೇದಾಂಗ- ಪಾರಗನಾಗಿರಬೇಕು. ಸರ್ವಭೂತಗಳಿಗೂ ಅಭಯವನ್ನು ಕೊಡಬೇಕು. ಅಹಿಂಸಾ, ಸತ್ಯವಚನ, ಮತ್ತು ಕ್ಷಮೆಯನ್ನು ಹೊಂದಿರಬೇಕು ಎಂಬುದು ನಿಶ್ಚಿತವಾದುದು.
ಬ್ರಾಹ್ಮಣಸ್ಯ ಪರೋ ಧರ್ಮೋ ವೇದಾನಾಂ ಧರಣಾದಪಿ |
ಕ್ಷತ್ರಿಯಸ್ಯ ಚ ಯೋ ಧರ್ಮಃ ಸ ನೇಹೇಷ್ಯತಿ ವೈ ತವ ||15||
ವೇದಗಳನ್ನು ಧಾರಣೆ ಮಾಡುವುದೇ ಬ್ರಾಹ್ಮಣರ ಶ್ರೇಷ್ಠವಾದ ಧರ್ಮ. ಕ್ಷತ್ರಿಯರಿಗೆ ಯಾವುದು ಧರ್ಮವೋ ಅದು ಬ್ರಾಹ್ಮಣನಾದ ನಿನಗೆ ಧರ್ಮವಲ್ಲ.
ದಂಡಧಾರಣಮತ್ಯುಗ್ರಂ ಪ್ರಜಾನಾಂ ಪರಿಪಾಲನಮ್ |
ತದಿದಂ ಕ್ಷತ್ರಿಯಸ್ಯಾಸೀತ್ ಕರ್ಮಣಾ ಶೃಣು ಮೇ ರುರೋ ||16||
ಎಲೈ ರುರುವೇ, ಪ್ರಜೆಗಳ ಪರಿಪಾಲನೆ ಮತ್ತು ಉಗ್ರವಾದ ದಂಡಧಾರಣೆ, ಇದು ಕ್ಷತ್ರಿಯನು ಮಾಡಬೇಕಾದ ಕರ್ಮ ಎಂದು ತಿಳಿ.
ಜನಮೇಜಯಸ್ಯ ಯಜ್ಞೇಽಸ್ಮಿನ್ ಸರ್ಪಾಣಾಂ ಹಿಂಸನಂ ಪುರಾ |
ಪರಿತ್ರಾಣಂ ಚ ಭೀತಾನಾಮುಪರಿ ಬ್ರಾಹ್ಮಣಾದಪಿ ||17||
ತಪೋವೀರ್ಯಬಲೋಪೇತಾದ್ ವೇದವೇದಾಂಗಪಾರಗಾತ್|
ಆಸ್ತೀಕಾದ್ ದ್ವಿಜಮುಖ್ಯಾದ್ ವೈ ಸರ್ಪಸತ್ರೇ ದ್ವಿಜೋತ್ತಮ ||18||
ಎಲೈ ವೀರೋತ್ತಮನೇ, ಜನಮೇಜಯನ ಅಂತಹ ಯಜ್ಞದಲ್ಲಿ ಹಿಂದೆ ಸರ್ಪಗಳ ವಧೆಯು ನಡೆಯಿತು. ಅನಂತರ ತಪೋವೀರ್ಯ-ಬಲಸಮನ್ವಿತನಾದ, ವೇದವೇದಾಂಗಪಾರಗನಾದ, ಬ್ರಾಹ್ಮಣಶ್ರೇಷ್ಠನಾದ ಆಸ್ತೀಕನಿಂದ ಸರ್ಪಸತ್ರದಲ್ಲಿ ಆ ಭಯಗ್ರಸ್ತವಾದ ಸರ್ಪಗಳಿಗೆ ರಕ್ಷಣೆಯು ದೊರೆಯಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಏಕಾದಶೋಽಧ್ಯಾಯಃ ||
|| ಇತಿ ಪೌಲೋಮಪರ್ವಣಿ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
*****

ಹನ್ನೆರಡನೆಯ ಅಧ್ಯಾಯ
(ರುರುವಿಗೆ ವಿಸ್ತಾರವಾಗಿ ಸರ್ಪಯಾಗವನ್ನು ಕೇಳುವ ಇಚ್ಛೆ. ಮುಂದೆ ಕೇಳುವಿ ಎಂದು ಹೇಳಿ ಸಹಸ್ರಪದನ ಅಂತರ್ಧಾನ. ತಂದೆಯಲ್ಲಿ ಪುನಃ ಸರ್ಪಯಾಗದ ಪ್ರಶ್ನೆ.)
ರುರುಃ
ಕಥಂ ಹಿಂಸಿತವಾನ್ ಸರ್ಪಾನ್ ಕ್ಷತ್ರಿಯೋ ಜನಮೇಜಯಃ |
ಸರ್ಪಾ ವಾ ಹಿಂಸಿತಾಸ್ತೇನ ಕಿಮರ್ಥಂ ಋಷಿಸತ್ತಮ ||1||
ಎಲೈ ಋಷಿಶ್ರೇಷ್ಠನೇ, ಕ್ಷತ್ರಿಯನಾದ ಜನಮೇಜಯನು ಸರ್ಪಗಳನ್ನು ಹೇಗೆ ಹಿಂಸಿಸಿದನು ಮತ್ತು ಅವನು ಸರ್ಪಗಳನ್ನು ನಾಶಮಾಡಲು ಕಾರಣವೇನು?
ಕಿಮರ್ಥಂ ಮೋಕ್ಷಿತಾಸ್ತೇನ ಪನ್ನಗಾಶ್ಚೈವ ಶಂಸ ಮೇ |
ಆಸ್ತೀಕೇನ ತದಾಚಕ್ಷ್ವ ಶ್ರೋತುಮಿಚ್ಛಾಮ್ಯಶೇಷತಃ ||2||
ಆಸ್ತೀಕನಿಂದ ಆ ಸರ್ಪಗಳಾದರೋ ಏಕೆ ಬಿಡುಗಡೆ ಮಾಡಲ್ಪಟ್ಟವು? ಎಲ್ಲವನ್ನೂ ನನಗೆ ಹೇಳು. ನಾನು ಕೇಳಲು ಬಯಸುತ್ತೇನೆ.
ಋಷಿಃ
ಶ್ರೋಷ್ಯಸೇ ತ್ವಂ ರುರೋ ವತ್ಸ ಆಸ್ತೀಕಚರಿತಂ ಮಹತ್ |
ಬ್ರಾಹ್ಮಣಾನಾಂ ಕಥಯತಾಮಿತ್ಯುಕ್ತ್ವಾಂತರಧೀಯತ ||3||
ವತ್ಸನೇ, ನೀನು ದೊಡ್ಡದಾದ ಆಸ್ತೀಕ ಚರಿತ್ರೆಯನ್ನು ಮುಂದೆ ಬ್ರಾಹ್ಮಣರ ಬಾಯಲ್ಲಿ ಕೇಳುವಿ ಎಂದು ಹೇಳಿ ಅಂತರ್ಧಾನವನ್ನು

ಹೊಂದಿದನು.
ಸೂತಃ
ರುರುಸ್ತ್ವಥ ವನಂ ಸರ್ವಂ ಪರ್ಯಧಾವತ್ ಸಮಂತತಃ |
ತಮೃಷಿಂ ನಷ್ಟಮನ್ವಿಚ್ಛನ್ ಸಂಶ್ರಾಂತೋ ನ್ಯಪತದ್ ಭುವಿ ॥4॥
ಅನಂತರ ರುರುವು ಆ ಅದೃಶ್ಯನಾದ ಋಷಿಯನ್ನು ಕಾಡಿನಲ್ಲಿ ಎಲ್ಲಾ ಕಡೆಯಲ್ಲೂ ಹುಡುಕುತ್ತಾ ತಿರುಗಾಡಿ ಬಳಲಿ ಭೂಮಿಯ ಮೇಲೆ ಬಿದ್ದನು.
ಸ ಮೋಹಂ ಪರಮಂ ಗತ್ವಾ ನಷ್ಟಸಂಜ್ಞ ಇವಾಭವತ್ |
ತದ್ ಋಷೇರ್ವಚನಂ ತದ್ ವೈ ಚಿಂತಯಾನಃ ಪುನಃ ಪುನಃ ॥5॥
ಅವನು ಆ ಋಷಿಗಳ ವಾಕ್ಯವನ್ನು ಮತ್ತೆ ಮತ್ತೆ ಆಲೋಚಿಸುತ್ತಾ ಮೋಹವಶನಾಗಿ ಮೂರ್ಛೆಹೊಂದಿದವನಂತೆ ಆದನು.
ಲಬ್ಧಸಂಜ್ಞೋ ರುರುಶ್ಚಾಯಾತ್ ತಚ್ಚಾಚಖ್ಯೌ ಪಿತುಸ್ತದಾ |
ಪಿತ್ರೇ ತು ಸರ್ವಮಾಖ್ಯಾಯ ಡುಂಡುಭಸ್ಯ ವಚೋಽರ್ಥವತ್ ॥6॥
ಅಪೃಚ್ಛತ್ಪಿತರಂ ಭೂಯಃ ಸೋಽಸ್ತೀಕಚರಿತಂ ಮಹತ್ |
ಯದ್ ತದಾಖ್ಯಾನಮಾಸ್ತೀಕಂ ಡುಂಡುಭೇನಾಥ ಕೀರ್ತಿತಮ್ ॥7॥
ಪುನಃ ಮನಸ್ಸಿನ ಸಮಾಧಾನ ಸ್ಥಿತಿಯನ್ನು ತಂದುಕೊಂಡು ಮನೆಗೆ ಬಂದು ತನ್ನ ತಂದೆಗೆ ಎಲ್ಲಾ ವಿಷಯವನ್ನೂ ತಿಳಿಸಿದನು. ತನ್ನ ತಂದೆಗೆ ಆ ಡುಂಡುಭದ ಅರ್ಥಪೂರ್ಣವಾದ ಎಲ್ಲಾ ಮಾತುಗಳನ್ನೂ ತಿಳಿಸಿ ಪುನಃ ಡುಂಡುಭನು ಉಲ್ಲೇಖಮಾಡಿದ ಆ ದೊಡ್ಡದಾದ ಆಸ್ತೀಕಚರಿತ್ರೆಯನ್ನು ಹೇಳುವಂತೆ ತಂದೆಯನ್ನು ಕೇಳಿದನು.
ತತ್ ಕೀರ್ತ್ಯಮಾನಂ ಭಗವನ್ ಶ್ರೋತುಮರ್ಹಸಿ ತತ್ತ್ವತಃ|
ಪಿತಾ ಚಾಸ್ಯ ತದಾಖ್ಯಾನಂ ಪೃಷ್ಟಃ ಸರ್ವಂ ನ್ಯವೇದಯತ್ ॥8॥
ಪೂಜ್ಯರಾದ ಶೌನಕರೇ, ನಾನು ಹೇಳುವ ಆ ಕಥೆಯನ್ನು ನೀವು ಯಥಾರ್ಥವಾಗಿ ಕೇಳಿ. ರುರುವಿಗಾದರೋ ಅವನ ತಂದೆಯು ಪ್ರಶ್ನಿಸಲ್ಪಟ್ಟವನಾಗಿ ಆ ಕಥೆಯನ್ನು ಸಮಗ್ರವಾಗಿ ನಿರೂಪಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದ್ವಾದಶೋಽಧ್ಯಾಯಃ ॥
॥ ಇತಿ ಪೌಲೋಮಪರ್ವಣಿ ನವಮೋಽಧ್ಯಾಯಃ ॥
॥ ಪೌಲೋಮಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಪೌಲೋಮಪರ್ವವು ಮುಗಿಯಿತು.
*****
5. ಆಸ್ತೀಕಪರ್ವ
ಹದಿಮೂರನೆಯ ಅಧ್ಯಾಯ
(ಆಸ್ತೀಕನು ಸರ್ಪಗಳನ್ನು ರಕ್ಷಿಸಿದ ಬಗ್ಗೆ ತಿಳಿಯಲು ಶೌನಕನ ಪ್ರಶ್ನೆ. ಜರತ್ಕಾರುವಿನ ವಿವಾಹ ಪ್ರಯತ್ನ. ವಾಸುಕಿಯ ತಂಗಿಯ ಜೊತೆಯಲ್ಲಿ ವಿವಾಹ. ಕದ್ರುವಿನಿಂದ ತನ್ನ ಮಕ್ಕಳಾದ ಸರ್ಪಗಳಿಗೆ ಶಾಪ. ಶಾಪವಿಮೋಚನೆಗಾಗಿ ಆಸ್ತೀಕನ ಜನನ.)
ಶೌನಕಃ
ಕಿಮರ್ಥಂ ಮುನಿಶಾರ್ದೂಲ ಸ ರಾಜಾ ಜನಮೇಜಯಃ |
ಸರ್ಪಸತ್ರೇಣ ಸರ್ಪಾಣಾಂ ಗಮಿತೋಽಂತಂ ವದಸ್ವ ಮೇ ॥1॥
ಎಲೈ ಮುನಿಶಾರ್ದೂಲನೇ, ಆ ಜನಮೇಜಯರಾಜನು ಏಕೆ ಸರ್ಪಸತ್ರವನ್ನು ಮಾಡಿ ಸರ್ಪಗಳನ್ನು ನಾಶಮಾಡಿದನು ಎಂದು ನನಗೆ ಹೇಳು.
ಆಸ್ತೀಕಶ್ಚ ದ್ವಿಜಶ್ರೇಷ್ಠಃ ಕಿಮರ್ಥಂ ಜಪತಾಂ ವರಃ |
ಮೋಕ್ಷಯಾಮಾಸ ಭುಜಗಾನ್ ಘೋರಾತ್ ತಸ್ಮಾದ್ಹುತಾಶನಾತ್ ॥2॥
ದ್ವಿಜಶ್ರೇಷ್ಠನೂ, ಜಪವನ್ನು ಮಾಡುವುದರಲ್ಲಿ ಅಗ್ರಗಣ್ಯನೂ ಆದ ಆಸ್ತೀಕನು ಏಕೆ ಆ ಘೋರವಾದ ಅಗ್ನಿಯಿಂದ ಸರ್ಪಗಳನ್ನು ವಿಮೋಚನೆಗೊಳಿಸಿದನು?
ಕಸ್ಯ ಪುತ್ರಃ ಸ ರಾಜಾಸೀತ್ ಸರ್ಪಸತ್ರಂ ಯ ಆಹರತ್ |
ಸ ಚ ದ್ವಿಜಾತಿಪ್ರವರಃ ಕಸ್ಯ ಪುತ್ರೋ ವದಸ್ವ ತಮ್ ॥3॥
ಸರ್ಪಸತ್ರವನ್ನು ಮಾಡಿದ ಆ ರಾಜನು ಯಾರ ಪುತ್ರ ಮತ್ತು ಆ ದ್ವಿಜಶ್ರೇಷ್ಠನೂ ಸಹ ಯಾರ ಪುತ್ರನೆಂದು ನನಗೆ ಹೇಳು.
ಶ್ರೋತುಮಿಚ್ಛಾಮ್ಯಶೇಷೇಣ ಕಥಾಮೇತಾಂ ಮನೋಹರಾಮ್ |
ಆಸ್ತೀಕಸ್ಯ ಪುರಾಣಸ್ಯ ಬ್ರಾಹ್ಮಣಸ್ಯ ತಪಸ್ವಿನಃ ॥4॥
ನಾನು ಬ್ರಾಹ್ಮಣನೂ, ತಪಸ್ವಿಯೂ, ಪ್ರಾಚೀನನೂ ಆದ ಈ ಆಸ್ತೀಕನ ಮನೋಹರವಾದ ಈ ಕಥೆಯನ್ನು ಸಮಗ್ರವಾಗಿ ಕೇಳಲು ಬಯಸುತ್ತೇನೆ.
ಸೂತಃ
ಮಹದಾಖ್ಯಾನಮಾಸ್ತೀಕಂ ಯತ್ರೈತತ್ ಪ್ರೋಚ್ಯತೇ ಬುಧೈಃ |
ಸರ್ವಮೇತದಶೇಷೇಣ ಶೃಣು ಮೇ ವದತಾಂ ವರ ॥5॥

ಜ್ಞಾನಿಗಳು ಹೇಳುವ ಈ ಆಸ್ತೀಕ ಕಥೆಯು ಬಹಳ ದೊಡ್ಡದಾದುದು. ಮಾತನಾಡುವವರಲ್ಲಿ ಶ್ರೇಷ್ಠನಾದ ಎಲೈ ಜನಮೇಜಯನೇ, ಆ ಸಮಗ್ರವಾದ ಕಥೆಯನ್ನು ನನ್ನಿಂದ ಕೇಳು
ಇತಿಹಾಸಮಿಮಂ ವೃದ್ಧಾಃ ಪುರಾಣಂ ಪರಿಚಕ್ಷತೇ |
ಕೃಷ್ಣದ್ವೈಪಾಯನಪ್ರೋಕ್ತಂ ನೈಮಿಶಾರಣ್ಯವಾಸಿಷು ॥6॥
ಈ ಇತಿಹಾಸವನ್ನು ನೈಮಿಷಾರಣ್ಯವಾಸಿಗಳಿಗೆ ಕೃಷ್ಣದ್ವೈಪಾಯನರು ಹೇಳಿದ ಪುರಾಣವೆಂದು ವೃದ್ಧರು ಕರೆಯುತ್ತಾರೆ.
ಪೂರ್ವಂ ಪ್ರಚೋದಿತಃ ಸೂತಃ ಪಿತಾ ಮೇ ರೋಮಹರ್ಷಣಃ |
ಶಿಷ್ಯೋ ವ್ಯಾಸಸ್ಯ ಮೇಧಾವೀ ಬ್ರಾಹ್ಮಣೇಷ್ವಿದಮುಕ್ತವಾನ್ ॥7॥
ನನ್ನ ತಂದೆಯಾದ, ವ್ಯಾಸಶಿಷ್ಯರಾದ, ಮೇಧಾವಿಯಾದ ರೋಮಹರ್ಷಣರು ಹಿಂದೆ ಬ್ರಾಹ್ಮಣರಿಂದ ಕೇಳಲ್ಪಟ್ಟವರಾಗಿ ಈ ಕಥೆಯನ್ನು ಹೇಳಿದರು.
ತಸ್ಮಾದಹಮುಪಶ್ರುತ್ಯ ಪ್ರವಕ್ಷ್ಯಾಮಿ ಯಥಾತಥಮ್ |
ಇದಮಾಸ್ತೀಕಮಾಖ್ಯಾನಂ ಶುಭಂ ಶೌನಕ ಪೃಚ್ಛತೇ ॥8॥
ಎಲೈ ಶೌನಕನೇ, ನಾನೂ ಅವರಿಂದ ಕೇಳಿ ಶುಭವಾದ ಈ ಆಸ್ತೀಕನ ಕಥೆಯನ್ನು ಕೇಳಲು ಬಯಸುವ ನಿನಗೆ ಸರಿಯಾಗಿ ಹೇಳುತ್ತೇನೆ.
ಕಥಯಿಷ್ಯಾಮ್ಯಶೇಷೇಣ ಸರ್ವಪಾಪಪ್ರಣಾಶನಮ್ |
ಆಸ್ತೀಕಸ್ಯ ಪಿತಾ ಹ್ಯಾಸೀತ್ ಪ್ರಜಾಪತಿಸಮಃ ಪ್ರಭುಃ ॥9॥
ಸರ್ವಪಾಪಪರಿಹಾರಕವಾದ ಈ ಕಥೆಯನ್ನು ಸಮಗ್ರವಾಗಿ ಹೇಳುವೆನು. ಆಸ್ತೀಕನ ತಂದೆಯು ಪ್ರಜಾಪತಿಗೆ ಸಮನಾದ, ಸಮರ್ಥನಾದವನು ಒಬ್ಬನಿದ್ದನು.
ಬ್ರಹ್ಮಚಾರೀ ಯತಾಹಾರಸ್ತಪಸ್ಯುಗ್ರೇ ರತಃ ಸದಾ |
ಜರತ್ಕಾರುರಿತಿ ಖ್ಯಾತ ಊರ್ಧ್ವರೇತಾ ಮಹಾನೃಷಿಃ ॥10॥
ಅವನು ಬ್ರಹ್ಮಚಾರಿ, ನಿಯತವಾದ ಆಹಾರವುಳ್ಳವನೂ, ಯಾವಾಗಲೂ ಉಗ್ರವಾದ ತಪಸ್ಸಿನಲ್ಲಿ ರತನಾದವನೂ, ಊರ್ಧ್ವರೇತಸ್ಕನೂ ಆದ ಮಹಾಋಷಿ. ಅವನು ಜರತ್ಕಾರು ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು.
ಯಾಯಾವರಾಣಾಂ ವಿಪ್ರಾಣಾಂ ಧರ್ಮಜ್ಞಃ ಸಂಶಿತವ್ರತಃ ॥11॥
ಶ್ರೇಷ್ಠವಾದ ವ್ರತಧಾರಿಯೂ, ಧರ್ಮಜ್ಞನೂ ಆದ ಅವನು ಯಾಯಾವರ ಬ್ರಾಹ್ಮಣರ ಧರ್ಮಗಳನ್ನು ತಿಳಿದವನಾಗಿದ್ದನು.
ಅಟಮಾನಃ ಕದಾಚಿತ್ ಸ ಸ್ವಾಂ ದದರ್ಶ ಪಿತಾಮಹಾನ್ |
ಲಂಬಮಾನಾನ್ ಮಹಾಗರ್ತೇ ಪಾದೈರೂರ್ಧ್ವೈರವಾಙ್ಮುಖಾನ್
ತಾನಬ್ರವೀತ್ ಸ ದೃಷ್ಟ್ವೈವ ಜರತ್ಕಾರುಃ ಪಿತಾಮಹಾನ್ ॥12॥
ಅವನು ಒಮ್ಮೆ ಸಂಚಾರಮಾಡುತ್ತಾ ಒಂದು ದೊಡ್ಡ ಹಳ್ಳದಲ್ಲಿ ತಲೆಕೆಳಗಾಗಿ ಜೋತುಬಿದ್ದಿದ್ದ ತನ್ನ ಪಿತಾಮಹರನ್ನು ನೋಡಿದನು. ಅವರನ್ನು ನೋಡಿದ ಕೂಡಲೇ, ಜರತ್ಕಾರುವು ಅವರನ್ನು ಕುರಿತು ಪ್ರಶ್ನಿಸಿದನು.
ಜರತ್ಕಾರುಃ
ಕೇ ವೈ ಭವಂತೋ ಲಂಬಂತೇ ಗರ್ತೇಽಸ್ಮಿನ್ ವೈ ಹ್ಯಧೋಮುಖಾಃ |
ಕಸ್ಯ ವೈ ಪಿತರೋ ಯೂಯಂ ಪರಿಭ್ರಷ್ಟಾಃ ಕುತೋ ದಿವಃ॥13॥
ನೀವು ಯಾರು? ಈ ಹಳ್ಳದಲ್ಲಿ ತಲೆಕೆಳಗಾಗಿ ಜೋತಾಡುತ್ತಿದ್ದೀರಿ. ನೀವು ಯಾರ ಪಿತೃಗಳು? ಏಕೆ ಸ್ವರ್ಗದಿಂದ ಭ್ರಷ್ಟರಾಗಿದ್ದೀರಿ?
ವೀರಣಸ್ತಂಬಕೇ ಲಗ್ನಾಃ ಸರ್ವತಃ ಪರಿಭಕ್ಷಿತೇ |
ಮೂಷಕೇಣ ನಿಗೂಢೇನ ಗರ್ತೇಽಸ್ಮಿನ್ ನಿತ್ಯವಾಸಿನಾ ॥14॥
ಈ ಹಳ್ಳದಲ್ಲಿ ಅವಿತುಕೊಂಡು ಯಾವಾಗಲೂ ವಾಸಮಾಡುವ ಮೂಷಿಕದಿಂದ ಎಲ್ಲಾ ಕಡೆಯಲ್ಲಿಯೂ ತಿನ್ನಲ್ಪಟ್ಟಿರುವ ಲಾವಂಚಹುಲ್ಲಿನ ಒಂದು ಪೊದೆಯಲ್ಲಿ ನೀವೆಲ್ಲರೂ ಜೋತಾಡುತ್ತಿದ್ದೀರಿ.
ಪಿತರಃ
ಯಾಯಾವರಾ ನಾಮ ವಯಂ ಋಷಯಃ ಸಂಶಿತವ್ರತಾಃ |
ಸಂತಾನಪ್ರಕ್ಷಯಾದ್ ಬ್ರಹ್ಮನ್ ಅಧೋ ಗಚ್ಛಾಮ ಸಂತತಮ್ ॥15॥
ನಾವು ಯಾಯಾವರ ಎಂಬ ಶ್ರೇಷ್ಠವ್ರತಧಾರಿಗಳಾದ ಋಷಿಗಳು. ಎಲೈ ಬ್ರಾಹ್ಮಣನೇ, ನಮ್ಮ ಸಂತಾನವು ನಾಶವಾದ ಕಾರಣ ಯಾವಾಗಲೂ ಅಧೋಗತಿಗೆ ಹೋಗುತ್ತಿದ್ದೇವೆ.
ಅಸ್ಮಾಕಂ ಸಂತತಿಸ್ತ್ವೇಕೋ ಜರತ್ಕಾರುರಿತಿ ಶ್ರುತಃ |
ಮಂದಭಾಗ್ಯೋಽಲ್ಪಭಾಗ್ಯಾನಾಂ ತಪ ಏವ ಸಮಾಸ್ಥಿತಃ ॥16॥
ಅಲ್ಪಭಾಗ್ಯರಾದ ನಮ್ಮ ಸಂತತಿಯಲ್ಲಿ ಜರತ್ಕಾರು ಎಂಬ ಒಬ್ಬನೇ ಒಬ್ಬನು ಉಳಿದಿದ್ದಾನೆ. ಅವನೂ ಕೂಡ ಮಂದಭಾಗ್ಯನಾದವನು. ಯಾವಾಗಲೂ ತಪಸ್ಸಿನಲ್ಲಿಯೇ ನಿರತನಾಗಿದ್ದಾನೆ.
ನ ಸ ಪುತ್ರಾನ್ ಜನಯಿತುಂ ದಾರಾನ್ ಮೂಢಶ್ಚಿಕೀರ್ಷತಿ |
ತೇನ ಲಂಬಾಮಹೇ ಗರ್ತೇ ಸಂತಾನಪ್ರಕ್ಷಯಾದಿಹ ॥17॥
ಅವನೂ ಕೂಡ ಮೌಢ್ಯದಿಂದ ಕೂಡಿದವನಾಗಿ, ವಿವಾಹವನ್ನು ಮಾಡಿಕೊಂಡು ಪುತ್ರನನ್ನು ಪಡೆಯಲು ಇಚ್ಛಿಸುತ್ತಿಲ್ಲ. ಆ ಕಾರಣದಿಂದ ಸಂತಾನನಾಶವಾಗಿ ನಾವು ಈ ಹಳ್ಳದಲ್ಲಿ ಜೋಲಾಡುತ್ತಿದ್ದೇವೆ.
ಅನಾಥಾಸ್ತೇನ ನಾಥೇನ ಯಥಾ ದುಷ್ಕೃತಿನಸ್ತಥಾ |
ಕಸ್ತ್ವಂ ಬಂಧುರಿವಾಸ್ಮಾಕಮನುಶೋಚಸಿ ಸತ್ತಮ ॥18॥

ಅವನಂತಹ ನಾಥನಿಂದ ಕೂಡಿದ್ದರೂ ಸಹ ನಾವು ಪಾಪವನ್ನು ಮಾಡಿದವರಂತೆ ಅನಾಥರಾಗಿದ್ದೇವೆ. ಎಲೈ ಸಜ್ಜನಶ್ರೇಷ್ಠನೇ, ಬಂಧುವಿನಂತೆ ನಮ್ಮ ಮೇಲೆ ಅನುಕಂಪವನ್ನು ತೋರಿಸುತ್ತಿದ್ದೀಯೆ. ನೀನು ಯಾರು?
ಜ್ಞಾತುಮಿಚ್ಛಾಮಹೇ ಬ್ರಹ್ಮನ್ ಕೋ ಭವಾನಿಹ ತಿಷ್ಠತಿ |
ಕಿಮರ್ಥಂ ಚೈವ ನಃ ಶೋಚ್ಯಾನ್ ಅನುಶೋಚಿತುಮರ್ಹತಿ ॥19॥
ಎಲೈ ಬ್ರಾಹ್ಮಣನೇ, ನೀನು ಯಾರು ಎಂದು ನಾವು ತಿಳಿಯಲು ಬಯಸುತ್ತೇವೆ. ಏತಕ್ಕೆ ಇಲ್ಲಿ ಇದ್ದೀಯೆ? ಶೋಚನೀಯರಾದ ನಮ್ಮ ಮೇಲೆ ಏಕೆ ಇಷ್ಟು ಅನುಕಂಪವನ್ನು ತೋರಿಸುತ್ತಿದ್ದೀಯೆ?
ಜರತ್ಕಾರುಃ
ಮಮ ಪೂರ್ವೇ ಭವಂತೋ ವೈ ಪಿತರಃ ಸಪಿತಾಮಹಾಃ |
ಬ್ರೂತ ಕಿಂ ಕರವಾಣ್ಯದ್ಯ ಜರತ್ಕಾರುರಹಂ ಸ್ವಯಮ್ ॥20॥
ನೀವೆಲ್ಲರೂ ನನ್ನ ಪಿತೃಪಿತಾಮಹರು. ನಾನೇ ಜರತ್ಕಾರು. ನಿಮಗೆ ಈಗ ಏನು ಮಾಡಬೇಕೆಂದು ಹೇಳಿ.
ಪಿತರಃ
ಯತಸ್ವ ಯತ್ನವಾಂಸ್ತಾತ ಸಂತಾನಾಯ ಕುಲಸ್ಯ ನಃ |
ಆತ್ಮನೋಽರ್ಥೇಽಸ್ಮದರ್ಥೇ ಚ ಧರ್ಮ ಇತ್ಯೇವ ವಾ ವಿಭೋ ॥21॥
ಪ್ರೀತಿಪಾತ್ರನೇ, ನೀನು ಸಂತಾನಕ್ಕೋಸ್ಕರವಾಗಿ ಬಹಳ ಪ್ರಯತ್ನವನ್ನು ಮಾಡು. ವಿಭುವೇ, ನಮ್ಮ ಕುಲದ ಸಲುವಾಗಿ ಮತ್ತು ನಮ್ಮ ಸಲುವಾಗಿ ಮತ್ತು ನಿನ್ನ ಸಲುವಾಗಿ, ಅಥವಾ ಧರ್ಮವೆಂದೇ ತಿಳಿದು ಸಂತಾನವನ್ನು ಪಡೆ.
ನ ಹಿ ಧರ್ಮಫಲೈಸ್ತಾತ ನ ತಪೋಭಿಃ ಸುಸಂಚಿತೈಃ |
ತಾಂ ಗತಿಂ ಪ್ರಾಪ್ನುವಂತೀಹ ಪುತ್ರಿಣೋ ಯಾಂ ವ್ರಜಂತಿ ಹ ॥22॥
ಪ್ರೀತಿಪಾತ್ರನೇ, ಪುತ್ರನಿಂದ ಎಂತಹ ಗತಿಯನ್ನು ಪಡೆಯುತ್ತಾರೆಯೋ ಅಂತಹ ಗತಿಯನ್ನು ಕೂಡಿಟ್ಟ ತಪಸ್ಸಿನಿಂದಾಗಲೀ ಅಥವಾ ಬೇರೆ ಧರ್ಮಫಲಗಳಿಂದಾಗಲೀ ಪಡೆಯುವುದಿಲ್ಲ.
ತದ್ ದಾರಗ್ರಹಣೇ ಯತ್ನಂ ಸಂತತ್ಯರ್ಥೇ ಮನಃ ಕುರು |
ಪುತ್ರಕ ತ್ವಾಂ ನಿಯೋಕ್ಷ್ಯಾಮ ಏತನ್ನಃ ಪರಮಂ ಹಿತಮ್ ॥23॥
ಆದ್ದರಿಂದ ಸಂತತಿಯ ಸಲುವಾಗಿ ಪತ್ನಿಯನ್ನು ಸಂಪಾದಿಸಲು ನಿರ್ಧರಿಸು. ಪುತ್ರನೇ, ನಾವು ನಿನಗೆ ಆಜ್ಞಾಪಿಸುತ್ತಿದ್ದೇವೆ. ಇದು ನಮಗೆ ಪರಮಹಿತವಾದ ಕಾರ್ಯ.
ಜರತ್ಕಾರುಃ
ನ ದಾರಾನ್ ವೈ ಕರಿಷ್ಯೇಽಹಂ ಇತಿ ಮೇ ಭಾವಿತಂ ಮನಃ |
ಭವತಾಂ ತು ಹಿತಾರ್ಥಾಯ ಕರಿಷ್ಯೇ ದಾರಸಂಗ್ರಹಮ್ ॥24॥
ನಾನು ವಿವಾಹವನ್ನು ಮಾಡಿಕೊಳ್ಳುವುದಿಲ್ಲ ಎಂದು ಮನಸ್ಸಿನಲ್ಲಿ ನಿಶ್ಚಯಿಸಿದ್ದೆ. ಆದರೆ ನಿಮ್ಮ ಹಿತಕ್ಕಾಗಿ ನಾನು ಪತ್ನಿಯನ್ನು ಸ್ವೀಕರಿಸುತ್ತೇನೆ.
ಸಮಯೇನ ಚ ಕರ್ತಾಽಹಮನೇನ ವಿಧಿಪೂರ್ವಕಂ |
ಯಥಾವದುಪಲಪ್ಸ್ಯಾಮಿ ಕರಿಷ್ಯೇ ನಾನ್ಯಥಾ ತ್ವಹಮ್ ॥25॥
ನನ್ನ ನಿಯಮಕ್ಕೆ ಅನುಸಾರವಾಗಿ ನಾನು ಒಂದು ಕನ್ಯೆಯನ್ನು ಪಡೆದರೆ, ವಿಧಿಪೂರ್ವಕವಾಗಿ ನಾನು ಸ್ವೀಕರಿಸುತ್ತೇನೆ. ಇಲ್ಲದಿದ್ದರೆ, ನಾನು ವಿವಾಹವನ್ನು ಮಾಡಿಕೊಳ್ಳುವುದಿಲ್ಲ.
ಸನಾಮ್ನೀ ಯಾ ಭವಿತ್ರೀ ಮೇ ದಿತ್ಸಿತಾ ಚೈವ ಬಂಧುಭಿಃ |
ಭೈಕ್ಷವತ್ ತಾಮಹಂ ಕನ್ಯಾಮುಪಯಂಸ್ಯೇ ವಿಧಾನತಃ ॥26॥
ನಾನು ವಿವಾಹವಾಗುವ ಕನ್ಯೆಯು ನನ್ನ ಹೆಸರಿನವಳೇ ಆಗಿರಬೇಕು. ಅವಳ ಬಂಧುಗಳೇ ಅವಳನ್ನು ನನಗೆ ಭಿಕ್ಷೆಯಂತೆ ಕೊಡಬೇಕು. ಹಾಗಿದ್ದರೆ ಮಾತ್ರ ನಾನು ವಿಧಿಪೂರ್ವಕವಾಗಿ ಆ ಕನ್ಯೆಯನ್ನು ವಿವಾಹವಾಗುವೆನು.
ದರಿದ್ರಾಯ ಚ ಮೇ ಕನ್ಯಾಂ ಕೋ ದಾಸ್ಯತಿ ವಿಶೇಷತಃ |
ಪ್ರತಿಗ್ರಹೀಷ್ಯೇ ಭಿಕ್ಷಾಂ ತು ಯದಿ ಕಶ್ಚಿತ್ ಪ್ರದಾಸ್ಯತಿ ॥27॥
ವಿಶೇಷವಾಗಿ ದರಿದ್ರನಾದ ನನಗೆ ಕನ್ಯೆಯನ್ನು ಕೊಡುವವರು ಯಾರು? ಆದರೂ, ಯಾರಾದರೂ ಭಿಕ್ಷೆಯಂತೆ ನನಗೆ ಕೊಟ್ಟರೆ, ನಾನು ಅವಳನ್ನು ಸ್ವೀಕರಿಸುತ್ತೇನೆ.
ಏವಂ ದಾರಕ್ರಿಯಾಹೇತೋಃ ಪ್ರಯತಿಷ್ಯೇ ಪಿತಾಮಹಾಃ |
ಅನೇನ ವಿಧಿನಾ ಶಶ್ವತ್ ಕರಿಷ್ಯೇ ನಾಹಮನ್ಯಥಾ ॥28॥
ಎಲೈ ಪಿತಾಮಹರೇ, ಈ ರೀತಿಯಲ್ಲಿ ನಾನು ವಿವಾಹಕ್ಕಾಗಿ ಪ್ರಯತ್ನಪಡುವೆನು. ಇದೇ ನಿಯಮಕ್ಕೆ ಅನುಸಾರವಾಗಿ ನಾನು ಪ್ರಯತ್ನಪಡುವೆನು. ಬೇರೆ ರೀತಿಯಲ್ಲಿ ನಾನು ವಿವಾಹವಾಗುವುದಿಲ್ಲ.
ತತ್ರೋತ್ಪತ್ಸ್ಯತಿ ಚೇಜ್ಜಂತುರ್ಭವತಾಂ ತಾರಣಾಯ ವೈ |
ಶಾಶ್ವತಂ ಸ್ಥಾನಮಾಸಾದ್ಯ ಮೋದಂತು ಪಿತರೋ ಮಮ ॥29॥
ಅವಳಲ್ಲಿ ನಿಮ್ಮನ್ನು ಕಷ್ಟದಿಂದ ದಾಟಿಸುವುದಕ್ಕೋಸ್ಕರ ಒಬ್ಬ ಪುತ್ರನು ಉತ್ಪನ್ನನಾದರೆ, ನನ್ನ ಪಿತೃಗಳಾದ ನೀವು ಶಾಶ್ವತವಾದ ಲೋಕವನ್ನು ಹೊಂದಿ ಸಂತೋಷದಿಂದ ಇರುವವರಾಗಿ.
ಸೂತಃ
ತತೋ ನಿವೇಶಾಯ ತದಾ ಸ ವಿಪ್ರಃ ಸಂಶಿತವ್ರತಃ |

ಮಹೀಂ ಚಚಾರ ದಾರಾರ್ಥೀ ನ ಚ ದಾರಾನವಿಂದತ ॥30॥
ಅನಂತರ ಮದುವೆ ಮಾಡಿಕೊಳ್ಳುವ ಸಲುವಾಗಿ ಕನ್ಯೆಯನ್ನು ಬಯಸಿ, ಆ ಶ್ರೇಷ್ಠವ್ರತಧಾರಿಯಾದ ಬ್ರಾಹ್ಮಣನು ಭೂಮಿಯನ್ನೆಲ್ಲಾ ಸಂಚರಿಸಿದನು. ಆದರೂ ಕನ್ಯೆಯು ದೊರೆಯಲಿಲ್ಲ.
ಸ ಕದಾಚಿದ್ ವನಂ ಗತ್ವಾ ವಿಪ್ರಃ ಪಿತೃವಚಃ ಸ್ಮರನ್ |
ಚುಕ್ರೋಶ ಕನ್ಯಾಭಿಕ್ಷಾರ್ಥೀ ತಿಸ್ರೋ ವಾಚಃ ಶನೈಃ ಶನೈಃ ॥31॥
ಅವನು ಒಮ್ಮೆ ಕಾಡಿಗೆ ಹೋಗಿ ಪಿತೃಗಳ ವಚನವನ್ನು ಸ್ಮರಿಸಿಕೊಂಡು, ಕನ್ಯಾಭಿಕ್ಷಾರ್ಥಿಯಾಗಿ ಮೂರು ಬಾರಿ ನಿಧಾನವಾಗಿ (ಕನ್ಯಾಂ ದೇಹಿ ಎಂದು) ಕಿರುಚಿದನು.
ತಾಂ ವಾಸುಕಿಃ ಪ್ರತ್ಯಗೃಹ್ಣಾದ್ ಉದ್ಯಮ್ಯ ಭಗಿನೀಂ ತದಾ |
ನ ಚ ತಾಂ ಪ್ರತಿಜಗ್ರಾಹ ನ ಸನಾಮ್ನೀತಿ ಚಿಂತಯನ್ ॥32॥
ಆಗ ವಾಸುಕಿಯು ತನ್ನ ತಂಗಿಯನ್ನು ಕರೆದುಕೊಂಡು ಬಂದು ಅವನಿಗೆ ಸಮರ್ಪಿಸಿದನು. ಆಗ ಜರತ್ಕಾರುವು ಅವಳು ತನ್ನ ಹೆಸರಿನವಳಲ್ಲ ಎಂದು ತಿಳಿದು ಅವಳನ್ನು ಸ್ವೀಕರಿಸಲಿಲ್ಲ.
ಸನಾಮ್ನೀಮುದ್ಯತಾಂ ಭಾರ್ಯಾಂ ಗೃಹ್ಣೀಯಾಮಿತಿ ತಸ್ಯ ಹಿ |
ಮನೋ ನಿವಿಷ್ಟಮಭವಜ್ಜರತ್ಕಾರೋರ್ಮಹಾತ್ಮನಃ ॥33॥
ಕನ್ಯೆಯು ನನ್ನ ಹೆಸರಿನವಳೇ ಆದರೆ ಮಾತ್ರ ಅವಳನ್ನು ಸ್ವೀಕರಿಸುತ್ತೇನೆ ಎಂಬುದು ಮಹಾತ್ಮನಾದ ಜರತ್ಕಾರುವಿನ ದೃಢವಾದ ಸಂಕಲ್ಪವಾಗಿದ್ದಿತು.
ತಮುವಾಚ ಮಹಾಪ್ರಾಜ್ಞೋ ಜರತ್ಕಾರುರ್ಮಹಾತಪಾಃ |
ಕಿಂನಾಮ್ನೀ ಭಗಿನೀಯಂ ತೇ ಬ್ರೂಹಿ ಸತ್ಯಂ ಭುಜಂಗಮ ॥34॥
ಮಹಾಪ್ರಾಜ್ಞನೂ, ಮಹಾತಪಸ್ವಿಯೂ, ಆದ ಜರತ್ಕಾರುವು ವಾಸುಕಿಯನ್ನು ಕುರಿತು ಎಲೈ ಸರ್ಪನೇ, ನಿನ್ನ ತಂಗಿಯ ಹೆಸರೇನು? ಸತ್ಯವಾಗಿ ಹೇಳು ಎಂದು ಕೇಳಿದನು.
ವಾಸುಕಿಃ
ಜರತ್ಕಾರೋ ಜರತ್ಕಾರುಃ ಸ್ವಸೇಯಮನುಜಾ ಮಮ |
ಪ್ರತಿಗೃಹೀಷ್ವ ಭದ್ರಂ ತೇ ಮಯಾ ದತ್ತಾಂ ಸುಮಧ್ಯಮಾಮ್ ॥35॥
ಎಲೈ ಜರತ್ಕಾರುವೇ, ಈ ನನ್ನ ತಂಗಿಯ ಹೆಸರು ಜರತ್ಕಾರು ಎಂದು. ನಿನಗೆ ಮಂಗಳವಾಗಲಿ. ನಾನು ಕೊಡುತ್ತಿರುವ ಈ ಸುಂದರಿಯನ್ನು ಸ್ವೀಕರಿಸು.
ತ್ವದರ್ಥಂ ರಕ್ಷಿತಾ ಪೂರ್ವಂ ಪ್ರತೀಚ್ಛೇಮಾಂ ದ್ವಿಜೋತ್ತಮ |
ಏವಮುಕತ್ವ ತತಃ ಪ್ರಾದಾದ್ ಭಾರ್ಯಾರ್ಥೇ ವರವರ್ಣಿನೀಮ್॥
ಎಲೈ ದ್ವಿಜಶ್ರೇಷ್ಠನೇ, ನಿನ್ನ ಸಲುವಾಗಿ ನಾನು ಇವಳನ್ನು ಇದುವರೆಗೂ ರಕ್ಷಿಸಿಕೊಂಡಿದ್ದೇನೆ. ಇವಳನ್ನು ಸ್ವೀಕರಿಸು ಹೀಗೆ ಹೇಳಿ ಆ ಸುಂದರಿಯನ್ನು ಪತ್ನಿಯಾಗಿ ಜರತ್ಕಾರುವಿಗೆ ದಾನಮಾಡಿದನು.
ಸೂತಃ
ಮಾತ್ರಾ ಹಿ ಭುಜಗಾಃ ಶಪ್ತಾಃ ಪೂರ್ವಂ ಬ್ರಹ್ಮವಿದಾಂ ವರ |
ಜನಮೇಜಯಸ್ಯ ವೋ ಯಜ್ಞೇ ಧಕ್ಷ್ಯತ್ಯನಿಲಸಾರಥಿಃ ॥37॥
ಎಲೈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಶೌನಕನೇ, ಹಿಂದೆ ತಾಯಿಯಾದ ಕದ್ರುದೇವಿಯು ಸರ್ಪಗಳನ್ನು ಕುರಿತು ಜನಮೇಜಯರಾಜನ ಯಜ್ಞದಲ್ಲಿ ನೀವು ಅಗ್ನಿಯಿಂದ ದಗ್ಧರಾಗಿ ನಾಶವನ್ನು ಹೊಂದುವಿರಿ ಎಂದು ಶಾಪವನ್ನು ಕೊಟ್ಟಿದ್ದಳು.
ತಸ್ಯ ಶಾಪಸ್ಯ ಶಾಂತ್ಯರ್ಥಂ ಪ್ರದದೌ ಪನ್ನಗೋತ್ತಮಃ |
ಸ್ವಸಾರಮೃಷಯೇ ತಸ್ಮೈ ಸುವ್ರತಾಯ ಮಹಾತ್ಮನೇ ॥38॥
ಆ ಶಾಪದ ವಿಮೋಚನೆಗಾಗಿ ಸರ್ಪಶ್ರೇಷ್ಠನಾದ ವಾಸುಕಿಯು ಒಳ್ಳೆಯ ಗುಣಶೀಲಗಳಿಂದ ಯುಕ್ತನಾದ ಮಹಾತ್ಮನಾದ ಆ ಋಷಿಗೆ ತನ್ನ ತಂಗಿಯನ್ನು ಕೊಟ್ಟನು.
ಸ ಚ ತಾಂ ಪ್ರತಿಜಗ್ರಾಹ ವಿಧಿದೃಷ್ಟೇನ ಕರ್ಮಣಾ |
ಆಸ್ತೀಕೋ ನಾಮ ಪುತ್ರಶ್ಚ ತಸ್ಯಾಂ ಜಜ್ಞೇ ಮಹಾಮನಾಃ ॥39॥
ಜರತ್ಕಾರುವಾದರೋ ವಿಧಿಪೂರ್ವಕವಾದ ಕರ್ಮದಿಂದ ಆ ಕನ್ಯೆಯನ್ನು ಸ್ವೀಕರಿಸಿದನು. ಅವಳಲ್ಲಿ ಅವನಿಗೆ ಧೈರ್ಯಶಾಲಿಯಾದ ಆಸ್ತೀಕ ಎಂಬ ಪುತ್ರನು ಜನಿಸಿದನು.
ತಪಸ್ವೀ ಚ ಮಹಾತ್ಮಾ ಚ ವೇದವೇದಾಂಗಪಾರಗಃ |
ಸಮಃ ಸರ್ವಸ್ಯ ಲೋಕಸ್ಯ ಪಿತೃಮಾತೃಭಯಾಪಹಃ ॥40॥
ಮಹಾತ್ಮನಾದ ಆಸ್ತೀಕನು ತಪಸ್ವಿಯೂ, ವೇದವೇದಾಂಗಪಾರಗನೂ ಆದನು. ಎಲ್ಲರ ಬಗ್ಗೆಯೂ ಸಮವಾಗಿರುತ್ತಿದ್ದನು (ರಾಗದ್ವೇಷಗಳಿಂದ ರಹಿತನಾಗಿದ್ದನು) ಮತ್ತು ಮಾತಾಪಿತೃಗಳ ಭಯವನ್ನು ನಿವಾರಣೆ ಮಾಡುವವನಾದನು.
ಅಥ ಕಾಲಸ್ಯ ಮಹತಃ ಪಾಂಡವೇಯೋ ನರಾಧಿಪಃ |
ಆಜಹಾರ ಮಹಾಯಜ್ಞಂ ಸರ್ಪಸತ್ರಮಿತಿ ಶ್ರುತಮ್ ॥41॥
ಅನಂತರ ಎಷ್ಟೋ ಕಾಲವು ಕಳೆದ ಮೇಲೆ ಪಾಂಡವರ ವಂಶದಲ್ಲಿ ಹುಟ್ಟಿದ ಜನಮೇಜಯರಾಜನು ಸರ್ಪಸತ್ರವೆಂಬ ದೊಡ್ಡ ಯಾಗವನ್ನು ಮಾಡಿದನೆಂದು ನಾವು ಕೇಳಿದ್ದೇವೆ.
ತಸ್ಮಿನ್ ಪ್ರವೃತ್ತೇ ಸತ್ರೇ ತು ಸರ್ಪಾಣಾಮಂತಕಾಯ ವೈ |

ಮೋಚಯಾಮಾಸ ತಂ ಶಾಪಂ ಆಸ್ತೀಕಃ ಸುಮಹಾತಪಾಃ ॥42॥
ಸರ್ಪಗಳ ವಿನಾಶಕ್ಕಾಗಿ ಆ ಯಜ್ಞವು ನಡೆಯುತ್ತಿರಲು, ಮಹಾತಪಸ್ವಿಯಾದ ಆಸ್ತೀಕನು ಅಲ್ಲಿಗೆ ಬಂದು ಸರ್ಪಗಳನ್ನು ಆ ಶಾಪದಿಂದ ವಿಮೋಚನೆಗೊಳಿಸಿದನು.
ನಾಗಾಂಶ್ಚ ಮಾತುಲಾಂಶ್ಚಾಪಿ ತಥಾ ಸಂಬಂಧಿಬಾಂಧವಾನ್|
ಪಿತೄಂಶ್ಚ ತಾರಯಾಮಾಸ ಸಂತತ್ಯಾ ತಪಸಾ ತಥಾ ॥43॥
ತನ್ನ ಸೋದರಮಾವಂದಿರಾದ ನಾಗಗಳನ್ನೂ ಹಾಗೂ ಸಂಬಂಧಿಬಾಂಧವರನ್ನೂ ಮತ್ತು ಪಿತೃಗಳನ್ನೂ ತನ್ನ ತಪಸ್ಸಿನಿಂದಲೂ ಮತ್ತು ಸಂತತಿಯಿಂದಲೂ ದುರವಸ್ಥೆಯಿಂದ ದಾಟಿಸಿದನು.
ವ್ರತೈಶ್ಚ ವಿವಿಧೈರ್ಬ್ರಹ್ಮನ್ ಸ್ವಾಧ್ಯಾಯೈಶ್ಚಾನೃಣೋऽಭವತ್ |
ದೇವಾಂಶ್ಚ ತರ್ಪಯಾಮಾಸ ಯಜ್ಞೈರ್ವಿವಿಧದಕ್ಷಿಣೈಃ ॥44॥
ಎಲೈ ಬ್ರಾಹ್ಮಣನೇ, ವಿವಿಧವಾದ ವ್ರತಗಳನ್ನು ಆಚರಿಸಿ, ಸ್ವಾಧ್ಯಾಯಗಳನ್ನು ಮಾಡಿ ಋಷಿ ಋಣವನ್ನು ತೀರಿಸಿದನು.
ಭೂರಿದಕ್ಷಿಣೆಯುಳ್ಳ ಯಜ್ಞಗಳನ್ನು ಆಚರಿಸಿ, ದೇವತೆಗಳನ್ನು ಸಂತೋಷಪಡಿಸಿ ದೇವ ಋಣವನ್ನು ತೀರಿಸಿದನು.
ಋಷೀಂಶ್ಚ ಬ್ರಹ್ಮಚರ್ಯೇಣ ಸಂತತ್ಯಾ ಚ ಪಿತಾಮಹಾನ್ |
ಅಪಹೃತ್ಯ ಗುರುಂ ಭಾರಂ ಪಿತೄಣಾಂ ಸಂಶಿತವ್ರತಃ ॥45॥
ಸಂಶಿತವ್ರತನಾದ ಅವನು ತನ್ನ ಬ್ರಹ್ಮಚರ್ಯದಿಂದ ಋಷಿಗಳನ್ನು ಸಂತೋಷಪಡಿಸಿದನು ಮತ್ತು ಸಂತತಿಯನ್ನು ಪಡೆದು ತನ್ನ ಪಿತಾಮಹರ ಮೇಲಿದ್ದ ದೊಡ್ಡ ಸಂಕಟದ ಭಾರವನ್ನು ಪರಿಹರಿಸಿ ಅವರನ್ನೂ ಸಂತೋಷಪಡಿಸಿದನು.
ಜರತ್ಕಾರುರ್ಗತಃ ಸ್ವರ್ಗಂ ಸಹಿತಃ ಸ್ವೈಃ ಪಿತಾಮಹೈಃ |
ಆಸ್ತೀಕಂ ಚ ಸುತಂ ಪ್ರಾಪ್ಯ ಧರ್ಮಂ ಚಾನುತ್ತಮಂ ಮುನಿಃ ॥46॥
ಜರತ್ಕಾರು ಮುನಿಯು ಆಸ್ತೀಕನೆಂಬ ಪುತ್ರನನ್ನು ಪಡೆದು ಶ್ರೇಷ್ಠವಾದ ಧರ್ಮವನ್ನು ಆಚರಿಸಿ ತನ್ನ ಪಿತಾಮಹರ ಜೊತೆಯಲ್ಲಿ ಸ್ವರ್ಗಕ್ಕೆ ಹೋದನು.
ಜರತ್ಕಾರುಃ ಸುಮಹತಾ ಕಾಲೇನ ಸ್ವರ್ಗಮೇಯಿವಾನ್ |
ಏತದಾಖ್ಯಾನಮಾಸ್ತೀಕಂ ಯಥಾವತ್ ಕೀರ್ತಿತಂ ಮಯಾ |
ಪ್ರಬ್ರೂಹಿ ಭೃಗುಶಾರ್ದೂಲ ಕಿಂ ಭೂಯಃ ಕಥ್ಯತಾಮಿತಿ ॥47॥
ಅನೇಕ ವರ್ಷಗಳ ಸಾಧನೆಯ ನಂತರ ಜರತ್ಕಾರುವು ಸ್ವರ್ಗಕ್ಕೆ ಹೋದನು. ಈ ಆಸ್ತೀಕ ಚರಿತ್ರೆಯನ್ನು ನಾನು ನಿನಗೆ ಯಥಾವತ್ತಾಗಿ ಹೇಳಿದ್ದೇನೆ. ಭೃಗುಶಾರ್ದೂಲನೇ, ನಾನು ಪುನಃ ಏನು ಹೇಳಬೇಕೆಂದು ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ತ್ರಯೋದಶೋऽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಪ್ರಥಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
*****

ಹದಿನಾಲ್ಕನೆಯ ಅಧ್ಯಾಯ
(ಇನ್ನೂ ವಿಸ್ತಾರವಾಗಿ ಆಸ್ತೀಕಚರಿತ್ರೆಯ ಕಥನದ ಉಪಕ್ರಮ. ಕದ್ರುವಿನತೆಯರ ಸ್ಪರ್ಧೆ. ಕದ್ರುವಿನಿಂದ ಸರ್ಪಗಳ ಜನನ. ವಿನತೆಗೆ ಮಗನಾದ ಅರುಣನಿಂದ ಶಾಪಪ್ರಾಪ್ತಿ. ಅರುಣನ ಸೂರ್ಯಸಾರಥ್ಯ ಮತ್ತು ಗರುಡನ ಜನ್ಮ.)
ಶೌನಕಃ
ಸೌಮ್ಯ ಕಥಯ ತತ್ತ್ವೇನ ವಿಸ್ತರೇಣ ಕಥಾಮಿಮಾಮ್ |
ಆಸ್ತೀಕಸ್ಯ ಮುನೇಃ ಸಾಧೋಃ ಶುಶ್ರೂಷಾ ಪರಮಾ ಹಿ ನಃ ॥1॥
ಪ್ರೀತಿಪಾತ್ರನೇ, ಈ ಸಾಧುವಾದ ಆಸ್ತೀಕ ಋಷಿಯ ಈ ಕಥೆಯನ್ನು ಇನ್ನೂ ವಿಸ್ತಾರವಾಗಿ ಹೇಳು. ಇದನ್ನು ಕೇಳಲು ನಮಗೆ ಬಹಳವಾದ ಕುತೂಹಲವಿದೆ.
ಮಧುರಂ ಕಥ್ಯತೇ ಸೂತ ಶ್ಲಕ್ಷ್ಣಾಕ್ಷರಪದಸ್ವರಮ್ |
ಪ್ರೀಯಾಮಹೇ ಭೃಶಂ ತಾತ ಪಿತೇವ ತ್ವಂ ಪ್ರಭಾಷಸೇ ॥2॥
ಸೂತನೇ, ನೀನು ಮಧುರವಾದ ಅಕ್ಷರ ಮತ್ತು ಸ್ವರಗಳಿಂದ ಕೂಡಿರುವ ಪದಗಳಿಂದ ಈ ಕಥೆಯನ್ನು ಸುಂದರವಾಗಿ ಹೇಳುತ್ತಿದ್ದೀಯೆ. ಪ್ರೀತಿಪಾತ್ರನೇ, ನೀನೂ ಸಹ ನಿನ್ನ ತಂದೆಯಂತೆಯೇ ಮಾತನಾಡುತ್ತಿದ್ದೀಯೆ. ನಮಗೆ ಬಹಳ ಸಂತೋಷವಾಗಿದೆ.
ಅಸ್ಮಚ್ಛುಶ್ರೂಷಣೇ ನಿತ್ಯಂ ಪಿತಾ ಹಿ ನಿರತಸ್ತವ |
ಆಚಷ್ಟೇ ತದ್ಯಥಾऽऽಖ್ಯಾನಂ ಪಿತಾ ತತ್ ತ್ವಂ ತಥಾ ವದ ॥3॥
ನಿನ್ನ ತಂದೆಯಾದ ರೋಮಹರ್ಷಣರೂ ಸಹ ಯಾವಾಗಲೂ ನಮ್ಮ ಶುಶ್ರೂಷೆಯಲ್ಲಿ ನಿರತರಾಗಿದ್ದರು. ನಿನ್ನ ತಂದೆಯು ನಿನಗೆ ಈ ಕಥೆಯನ್ನು ಹೇಗೆ ಹೇಳಿದ್ದರೋ ಹಾಗೆಯೇ ನಮಗೂ ಹೇಳು.
ಸೂತಃ
ಆಯುಷ್ಮನ್ನಿದಮಾಖ್ಯಾನಮಾಸ್ತೀಕಂ ಕಥಯಾಮಿ ತೇ |
ಯಥಾಶ್ರುತಂ ಕಥಯತಃ ಸಕಾಶಾಚ್ಚ ಪಿತುರ್ಮಯಾ ॥4॥
ಆಯುಷ್ಮಂತನೇ, ನಾನು ಈ ಆಸ್ತೀಕನ ಕಥೆಯನ್ನು ನನ್ನ ತಂದೆಯು ಹೇಳುವಾಗ ಅವನಿಂದ ಹೇಗೆ ಕೇಳಿದ್ದೆನೋ ಅದರಂತೆಯೇ

ಹೇಳುತ್ತೇನೆ.
ಪುರಾ ದೇವಯುಗೇ ಬ್ರಹ್ಮನ್ ಪ್ರಜಾಪತಿಸುತೇ ಶುಭೇ |
ಆಸ್ತಾಂ ಭಗಿನ್ಯೌ ರೂಪೇಣ ಸಮುಪೇತೇಽದ್ಭುತೇ ತದಾ ॥5॥
ಎಲೈ ಬ್ರಾಹ್ಮಣನೇ, ಹಿಂದೆ ಕೃತಯುಗದಲ್ಲಿ ದಕ್ಷಪ್ರಜಾಪತಿಯ ಇಬ್ಬರು ಹೆಣ್ಣುಮಕ್ಕಳಾದ ಕದ್ರು ಮತ್ತು ವಿನತೆಯರು ಅದ್ಭುತವಾದ ರೂಪಸಂಪತ್ತಿನಿಂದ ಕೂಡಿದವರಾಗಿ ಸಹೋದರಿಯರಾಗಿದ್ದರು.
ತೇ ಭಾರ್ಯೇ ಕಾಶ್ಯಪಸ್ಯಾಸ್ತಾಂ ಕದ್ರೂಶ್ಚ ವಿನತಾ ತಥಾ |
ಪ್ರಾದಾತ್ ತಾಭ್ಯಾಂ ವರಂ ಪ್ರೀತಃ ಪ್ರಜಾಪತಿಸಮಃ ಪತಿಃ |
ಕಾಶ್ಯಪೋ ಧರ್ಮಪತ್ನೀಭ್ಯಾಂ ಮುದಾ ಪರಮಯಾ ಯುತಃ ॥6॥
ಆ ಕದ್ರು ಮತ್ತು ವಿನತೆಯರು ಕಾಶ್ಯಪರ ಪತ್ನಿಯರಾಗಿದ್ದರು. ಪ್ರಜಾಪತಿಗೆ ಸಮಾನವಾದ ಪ್ರಭಾವವುಳ್ಳ ಕಾಶ್ಯಪರು ತಮ್ಮ ಧರ್ಮಪತ್ನಿಯರಾದ ಅವರಿಬ್ಬರಿಗೆ ಪರಮ ಸಂತೋಷದಿಂದ ಕೂಡಿದವರಾಗಿ ವರವನ್ನು ನೀಡಿದರು.
ವರಾತಿಸರ್ಗಂ ಶ್ರುತ್ವೈವ ಕಾಶ್ಯಪಾದುತ್ತಮಂ ಚ ತೇ |
ಹರ್ಷಾದಪ್ರತಿಮಾಂ ಪ್ರೀತಿಂ ಪ್ರಾಪತುಃ ಸ್ಮ ವರಸ್ತ್ರಿಯೌ |
ವವ್ರೇ ಕದ್ರೂಃ ಸುತಾನ್ ನಾಗಾನ್ ಸಹಸ್ರಂ ತುಲ್ಯತೇಜಸಃ ॥7॥
ಕಾಶ್ಯಪರು ಶ್ರೇಷ್ಠವಾದ ವರವನ್ನು ಕೊಡುವವರೆಂದು ಕೇಳಿದ ಕೂಡಲೇ ಆ ಇಬ್ಬರು ಶ್ರೇಷ್ಠವನಿತೆಯರು ಅತುಲವಾದ ಸಂತೋಷವನ್ನು ಪಡೆದರು. ಕದ್ರುವು ಸಮಾನವಾದ ಪರಾಕ್ರಮವುಳ್ಳ ಸಹಸ್ರನಾಗಗಳನ್ನು ಮಕ್ಕಳನ್ನಾಗಿ ವರಿಸಿದಳು.
ದ್ವೌ ಪುತ್ರೌ ವಿನತಾ ವವ್ರೇ ಕದ್ರೂಪುತ್ರಾಧಿಕೌ ಬಲೇ |
ಓಜಸಾ ತೇಜಸಾ ಚೈವ ವಿಕ್ರಮೇಣಾಧಿಕೌ ಸುತೌ ॥8॥
ವಿನತೆಯಾದರೋ ಪರಾಕ್ರಮದಿಂದಲೂ, ಶಕ್ತಿಯಿಂದಲೂ ಮತ್ತು ತೇಜಸ್ಸಿನಿಂದಲೂ ಕದ್ರುಪುತ್ರರಿಗಿಂತ ಅಧಿಕವಾದ ಬಲವುಳ್ಳ ಇಬ್ಬರು ಮಕ್ಕಳನ್ನು ಬೇಡಿದಳು.
ತಸ್ಯೈ ಭರ್ತಾ ವರಂ ಪ್ರಾದಾದ್ ಈದೃಶೌ ತೇ ಭವಿಷ್ಯತಃ |
ಏವಮಸ್ತ್ವಿತಿ ತಂ ಚಾಹ ಕಾಶ್ಯಪಂ ವಿನತಾ ತದಾ ॥9॥
ಕಾಶ್ಯಪರು ವಿನತೆಯನ್ನು ಕುರಿತು ನಿನಗೆ ಅಂತಹ ಇಬ್ಬರು ಮಕ್ಕಳೇ ಜನಿಸುವರು ಎಂದು ಹೇಳಿದರು. ವಿನತೆಯೂ ಸಹ ಕಾಶ್ಯಪರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದಳು.
ಕೃತಕೃತ್ಯಾ ತು ವಿನತಾ ಲಬ್ಧ್ವಾ ವೀರ್ಯಾತಿಗೌ ಸುತೌ |
ಕದ್ರೂಶ್ಚ ಲಬ್ಧ್ವಾ ಪುತ್ರಾಣಾಂ ಸಹಸ್ರಂ ತುಲ್ಯತೇಜಸಾಮ್ ॥10॥
ವಿನತೆಯು ಹೆಚ್ಚು ಬಲವೀರ್ಯವನ್ನುಳ್ಳ ಎರಡು ಮಕ್ಕಳ ವರವನ್ನು ಪಡೆದು ತಾನು ಧನ್ಯಳೆಂದು ಭಾವಿಸಿದಳು. ಕದ್ರುವೂ ಸಹ ಸಮಾನಪರಾಕ್ರಮವುಳ್ಳ ಸಹಸ್ರ ಪುತ್ರಪ್ರಾಪ್ತಿಯ ವರವನ್ನು ಪಡೆದು ತಾನೂ ಧನ್ಯಳೆಂದು ಭಾವಿಸಿದಳು.
ಧಾರ್ಯೌ ಪ್ರಯತ್ನತೋ ಗರ್ಭಾವಿತ್ಯುಕ್ತ್ವಾ ಸ ಮಹಾತಪಾಃ |
ತೇ ಭಾರ್ಯೇ ವರಸಂಹೃಷ್ಟೇ ಕಾಶ್ಯಪೋ ವನಮಾವಿಶತ್ ॥11॥
ಮಹಾತಪಸ್ವಿಗಳಾದ ಕಾಶ್ಯಪರು ವರದಿಂದ ಸಂತುಷ್ಟರಾದ ಆ ಭಾರ್ಯೆಯರನ್ನು ಕುರಿತು ಎಚ್ಚರಿಕೆಯಿಂದ ಗರ್ಭವನ್ನು ರಕ್ಷಣೆಮಾಡಿ ಎಂದು ಹೇಳಿ ಕಾಡಿಗೆ ಹೊರಟುಹೋದರು.
ಕಾಲೇನ ಮಹತಾ ಕದ್ರೂರಂಡಾನಾಂ ದಶತೀಃ ಶತಮ್ |
ಜನಯಾಮಾಸ ವಿಪ್ರೇಂದ್ರ ದ್ವೇ ತ್ವಂಡೇ ವಿನತಾ ತಥಾ ॥12॥
ಎಲೈ ಬ್ರಾಹ್ಮಣಶ್ರೇಷ್ಠನೇ, ಎಷ್ಟೋ ಕಾಲವು ಕಳೆದ ಮೇಲೆ ಕದ್ರುವು ಒಂದು ಸಹಸ್ರ ಅಂಡಗಳನ್ನು (ಮೊಟ್ಟೆಗಳನ್ನು) ಪ್ರಸವಿಸಿದಳು. ವಿನತೆಯೂ ಸಹ ಎರಡು ಅಂಡಗಳನ್ನು ಪ್ರಸವಿಸಿದಳು.
ತತೋಽಪ್ಯಂಡಾನಿ ನಿದಧುಃ ಪ್ರಹೃಷ್ಟಾಃ ಪರಿಚಾರಕಾಃ |
ಸೋಪಸ್ವೇದೇಷು ಕುಂಡೇಷು ಪಂಚವರ್ಷಶತಾನಿ ಚ ॥13॥
ಆಗ ಸಂತೋಷಗೊಂಡ ಪರಿಚಾರಕರು ಆ ಮೊಟ್ಟೆಗಳನ್ನು ಸ್ವಲ್ಪ ಶಾಖವಿರುವ ಕುಂಡಗಳಲ್ಲಿ ಐದುನೂರು ವರ್ಷಗಳ ಕಾಲ ಇಟ್ಟರು.
ತತಃ ಪಂಚಶತೇ ವರ್ಷೇ ಕದ್ರೂಪುತ್ರಾ ವಿನಿಃಸೃತಾಃ |
ಅಂಡೇಭ್ಯೋ ವಿನತಾಯಾಸ್ತು ಮಿಥುನಂ ನಾಭ್ಯಪದ್ಯತ ॥14॥
ಐದು ನೂರು ವರ್ಷಗಳು ಕಳೆಯುತ್ತಿರಲು ಕದ್ರುವಿನ ಪುತ್ರರು ಮೊಟ್ಟೆಗಳನ್ನು ಒಡೆದುಕೊಂಡು ಹೊರಗೆ ಬಂದರು. ಆದರೆ, ವಿನತೆಯ ಎರಡು ಮೊಟ್ಟೆಗಳು ಮಾತ್ರ ಒಡೆಯಲಿಲ್ಲ.
ತತಃ ಪುತ್ರಾರ್ಥಿನೀ ದೇವೀ ವ್ರೀಡಿತಾ ಸಾ ತಪಸ್ವಿನೀ |
ಅಂಡಂ ಬಿಭೇದ ವಿನತಾ ತತ್ರ ಪುತ್ರಮಪಶ್ಯತ ॥15॥
ಆಗ ನಾಚಿಕೆಗೊಂಡ, ತಪಸ್ವಿನಿಯಾದ, ಪುತ್ರರನ್ನು ಬಯಸುವ, ವಿನತಾದೇವಿಯು ಒಂದು ಅಂಡವನ್ನು ಒಡೆದು ಅದರಲ್ಲಿ ಒಬ್ಬ ಮಗನನ್ನು ನೋಡಿದಳು.
ಪೂರ್ವಾರ್ಧಕಾಯಸಂಪನ್ನಮಿತರೇಣಾಪ್ರಕಾಶತಾ |
ಸ ಪುತ್ರೋ ರೋಷಸಂರಬ್ಧಃ ಶಶಾಪೈನಾಮಿತಿ ಶ್ರುತಿಃ ॥16॥
ತಲೆಯಿಂದ ತೊಡೆಯವರೆಗೆ ಅರ್ಧದೇಹವು ಮಾತ್ರ ಬೆಳೆದಿದ್ದ, ಉಳಿದ ಭಾಗವು ಕಾಣಿಸದಿರುವ ಪುತ್ರನನ್ನು ನೋಡಿದಳು. ಆ ಪುತ್ರನಾದರೋ ರೋಷದಿಂದ ಕೂಡಿದವನಾಗಿ ತನ್ನ ತಾಯಿಗೆ ಶಾಪವನ್ನು ಕೊಟ್ಟನು ಎಂದು ನಾವು ಕೇಳಿದ್ದೇವೆ.

ಸೋಽಹಮೇವಂಕೃತೋ ಮಾತಸ್ತ್ವಯಾ ಲೋಭಪರೀತಯಾ |
ಶರೀರೇಣಾಸಮಗ್ರೋಽದ್ಯ ತಸ್ಮಾದ್ ದಾಸೀ ಭವಿಷ್ಯಸಿ ॥17॥
ಎಲೌ ತಾಯಿಯೇ, ಲೋಭದಿಂದ ಕೂಡಿದ ನಿನ್ನಿಂದ ನಾನು ಹೀಗೆ ಪರಿಪೂರ್ಣ ಶರೀರವಿಲ್ಲದವನಾಗಿ ಮಾಡಲ್ಪಟ್ಟಿದ್ದೇನೆ. ಆದ್ದರಿಂದ ನೀನು ದಾಸಿಯಾಗುವಿ.
ಪಂಚ ವರ್ಷಶತಾನ್ಯದ್ಯ ಯವೀಯಾನ್ ವರ್ಧತೇ ಮಮ |
ಏಷ ಚ ತ್ವಾಂ ಸುತೋ ಮಾತರ್ದಾಸೀತ್ವಾನ್ಮೋಕ್ಷಯಿಷ್ಯತಿ ॥18॥
ನನ್ನ ತಮ್ಮನು ಈ ದಿನದಿಂದ ಇನ್ನೂ ಐದು ನೂರು ವರ್ಷಗಳ ಕಾಲ ಅಂಡದಲ್ಲಿಯೇ ಬೆಳೆಯುತ್ತಾನೆ. ನಿನ್ನ ಮಗನಾದ ಅವನಾದರೋ ನಿನ್ನನ್ನು ದಾಸ್ಯದಿಂದ ವಿಮೋಚನೆಗೊಳಿಸುವನು.
ಯದ್ಯೇನಮಪಿ ಮಾತಸ್ತ್ವಂ ಮಾಮಿವಾಂಡವಿಭೇದನಾಂ |
ನ ಕರಿಷ್ಯಸ್ಯದೇಹಂ ವಾ ವ್ಯಂಗಂ ವಾಪಿ ತಪಸ್ವಿನಮ್ ॥19॥
ತಾಯಿಯೇ, ನನ್ನನ್ನು ಒಡೆದಂತೆ ನೀನು ಆ ತಪಸ್ವಿಯಾದ ಅವನನ್ನೂ ಸಹ ಮೊಟ್ಟೆಯನ್ನು ಒಡೆದು ಅವಯವಶೂನ್ಯನಾಗಿ ಅಥವಾ ದೇಹಶೂನ್ಯನಾಗಿ ಮಾಡದಿದ್ದರೆ (ಅವನು ದಾಸ್ಯದಿಂದ ಮೋಚನೆಗೊಳಿಸುತ್ತಾನೆ.)
ಪ್ರತಿಪಾಲಯಿತವ್ಯಸ್ತೇ ಜನ್ಮಕಾಲೋಽಸ್ಯ ಧೀರಯಾ |
ವಿಶಿಷ್ಟಂ ಫಲಮೀಕ್ಷಂತ್ಯಾ ಪಂಚವರ್ಷಶತಾತ್ ಪರಮ್ ॥20॥
ವಿಶಿಷ್ಟವಾದ ಫಲವನ್ನು ಬಯಸುವ ನೀನು ಇನ್ನೂ ಐದು ನೂರು ವರ್ಷಗಳ ಕಾಲ ಧೈರ್ಯವನ್ನು ವಹಿಸಿ. ಅವನ ಜನ್ಮವು ಉಂಟಾಗುವವರೆಗೆ ನಿರೀಕ್ಷೆಯನ್ನು ಮಾಡಬೇಕು.
ಏವಂ ಶಪ್ತ್ವಾ ತತಃ ಪುತ್ರೋ ವಿನತಾಮಂತರಿಕ್ಷಗಃ |
ಅರುಣೋ ದೃಶ್ಯತೇ ಬ್ರಹ್ಮನ್ ಪ್ರಭಾತಸಮಯೇ ಸದಾ ॥21॥
ಹೀಗೆ ತಾಯಿಯನ್ನು ಶಪಿಸಿ ಆ ಅರುಣನು ಅಂತರಿಕ್ಷಕ್ಕೆ ಹೊರಟುಹೋದನು. ಬ್ರಾಹ್ಮಣನೇ, ಆ ಅರುಣನು ಪ್ರಭಾತ ಸಮಯದಲ್ಲಿ ಈಗಲೂ ಸರ್ವದಾ ಕಾಣಿಸುತ್ತಾನೆ.
ಆದಿತ್ಯರಥಮಧ್ಯಾಸ್ತೇ ಸಾರಥ್ಯಂ ಸಮಕಲ್ಪಯನ್ |
ಗರುಡೋಽಪಿ ಯಥಾಕಾಲಂ ಜಜ್ಞೇ ಪನ್ನಗಸೂದನಃ ॥22॥
ಅವನು ಸಾರಥ್ಯವನ್ನು ಮಾಡುತ್ತಾ ಆದಿತ್ಯನ ರಥದಲ್ಲಿ ಕುಳಿತಿರುತ್ತಾನೆ. ಸರ್ಪಶತ್ರುವಾದ ಗರುಡನೂ ಸಹ ಯೋಗ್ಯವಾದ ಕಾಲದಲ್ಲಿ (ಐದು ನೂರು ವರ್ಷಗಳ ನಂತರ) ಜನಿಸಿದನು.
ಸ ಜಾತಮಾತ್ರೋ ವಿನತಾಂ ಪರಿತ್ಯಜ್ಯ ಖಮಾವಿಶತ್ |
ಆದಾಸ್ಯನ್ನಾತ್ಮನೋ ಭೋಜ್ಯಮನ್ನಂ ವಿಹಿತಮಸ್ಯ ಯತ್ |
ವಿಧಾತ್ರಾ ಭೃಗುಶಾರ್ದೂಲ ಕ್ಷುಧಿತಸ್ಯ ಬುಭುಕ್ಷತಃ ॥23॥
ಎಲೈ ಭೃಗುಶಾರ್ದೂಲನೇ, ಅವನು ಹುಟ್ಟಿದ ಕೂಡಲೇ ಬಹಳ ಹಸಿವೆಯಿಂದ ಕೂಡಿದವನಾಗಿ, ಬ್ರಹ್ಮದೇವರು ಹಸಿದಿರುವ ಅವನಿಗೆ ಕ್ಲುಪ್ತಿ ಮಾಡಿದ್ದ ಆಹಾರವನ್ನು ಸ್ವೀಕರಿಸಲು ಅಂತರಿಕ್ಷಕ್ಕೆ ಹಾರಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಚತುರ್ದಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಹದಿನೈದನೆಯ ಅಧ್ಯಾಯ
(ಕದ್ರುವಿನತೆಯರ ಪಣ. ಅಮೃತವನ್ನು ಪಡೆಯಲು ಕ್ಷೀರಸಮುದ್ರವನ್ನು ಮಥಿಸಲು ದೇವಾಸುರರ ನಿರ್ಧಾರ.)
ಸೂತಃ
ಏತಸ್ಮಿನ್ನೇವ ಕಾಲೇ ತು ಭಗಿನ್ಯೌ ತೇ ತಪೋಧನ |
ಅಪಶ್ಯತಾಂ ಸಮಾಯಾಂತಂ ಉಚ್ಚೈಃಶ್ರವಸಮಂತಿಕಾತ್ ॥1॥
ಆ ಸಮಯದಲ್ಲಿ ಆ ಅಕ್ಕತಂಗಿಯರಾದ ಕದ್ರುವಿನತೆಯರು ಸಮೀಪದಲ್ಲಿ ಉಚ್ಚೈಃಶ್ರವಸ್ ಅಶ್ವವು ಬರುತ್ತಿರುವುದನ್ನು ನೋಡಿದರು.
ಯಂ ತು ದೇವಗಣಾಃ ಸರ್ವೇ ಹೃಷ್ಟರೂಪಾ ಹ್ಯಪೂಜಯನ್ |
ಮಥ್ಯಮಾನೇಽಮೃತೇ ಜಾತಮಶ್ವರತ್ನಮನುತ್ತಮಮ್ ॥2॥
ಯಾವ ಅಶ್ವಶ್ರೇಷ್ಠವು ಅಮೃತಮಥನವನ್ನು ಮಾಡುವಾಗ ಕ್ಷೀರಸಮುದ್ರದಿಂದ ಉತ್ಪನ್ನವಾಯಿತೋ ಮತ್ತು ಯಾವ ಅಶ್ವವನ್ನು ದೇವತೆಗಳು ಸಂತೋಷದಿಂದ ಪೂಜಿಸಿದರೋ (ಅಂತಹ ಅಶ್ವವನ್ನು ನೋಡಿದರು.)
ಅಮೋಘಬಲಮಶ್ವಾನಾಮುತ್ತಮಂ ಜವವತಾಂ ವರಮ್ |
ಶ್ರೀಮಂತಮಜರಂ ದಿವ್ಯಂ ಸರ್ವಲಕ್ಷಣಲಕ್ಷಿತಮ್ ॥3॥
ಅಶ್ವಜಾತಿಯಲ್ಲಿಯೇ ಅತ್ಯಂತ ಉತ್ಕೃಷ್ಟವಾದಂತಹ, ಶ್ರೇಷ್ಠವಾದ ವೇಗವನ್ನು ಹೊಂದಿದಂತಹ, ಸರ್ವಲಕ್ಷಣಭೂಷಿತವಾದಂತಹ, ಕಾಂತಿಯುಕ್ತವಾದ, ಜರಾರಹಿತವಾದ ದಿವ್ಯವಾದ (ಅಶ್ವವನ್ನು ನೋಡಿದರು.)

ಶೌನಕಃ
ಕಥಂ ತದಮೃತಂ ದೇವೈರ್ಮಥಿತಂ ಕ್ವ ಚ ಶಂಸ ಮೇ |
ಯತ್ರ ಜಜ್ಞೇ ಮಹಾವೀರ್ಯಃ ಸೋಽಶ್ವರಾಜೋ ಮಹಾದ್ಯುತಿಃ ॥4॥
ಸೂತರೇ, ದೇವತೆಗಳು ಹೇಗೆ ಮತ್ತು ಎಲ್ಲಿ ಅಮೃತವನ್ನು ಮಥನಮಾಡಿದರು? ಎಲ್ಲಿ ಈ ಮಹಾಕಾಂತಿಯುಕ್ತವಾದ ಅಶ್ವಶ್ರೇಷ್ಠವು ಉತ್ಪನ್ನವಾಯಿತೋ, ಅಂತಹ ಅಮೃತಮಥನವು ಎಲ್ಲಿ ಆಯಿತು ಎಂದು ನನಗೆ ಹೇಳಿ.
ಸೂತಃ
ಜ್ವಲಂತಮಚಲಂ ಮೇರುಂ ತೇಜೋರಾಶಿಮನುತ್ತಮಮ್ |
ಆಕ್ಷಿಪಂತಂ ಪ್ರಭಾಂ ಭಾನೋಃ ಸ್ವಶೃಂಗೈಃ ಕಾಂಚನೋಜ್ಜ್ವಲೈಃ ॥5॥
ಕಾಂಚನಾಭರಣಂ ದಿವ್ಯಂ ದೇವಗಂಧರ್ವಸೇವಿತಮ್ |
ಅಪ್ರಮೇಯಮನಾಧೃಷ್ಯಮಧರ್ಮಬಹುಲೈರ್ಜನೈಃ ॥6॥
ವ್ಯಾಲೈರಾಚರಿತಂ ಘೋರೈರ್ದಿವ್ಯೌಷಧವಿದೀಪಿತಮ್ |
ನಾಕಮಾವೃತ್ಯ ತಿಷ್ಠಂತಮುಚ್ಛ್ರಾಯೇಣ ಮಹಾಗಿರಿಮ್ ॥7॥
ಅಗಮ್ಯಂ ಮನಸಾಪ್ಯನ್ಯೈರ್ನದಿವೃಕ್ಷಗಣಾನ್ವಿತಮ್ |
ನಾನಾಪತಂಗಸ್ಯೆಂಂಶ್ಚ ನಾದಿತಂ ಸುಮನೋಹರೈಃ ॥8॥
ತೇಜೋರಾಶಿಯಾದ, ಅತ್ಯಂತ ಶ್ರೇಷ್ಠವಾದ, ಪ್ರಕಾಶಿಸುವ ಮೇರುಪರ್ವತವಿದೆ. ತನ್ನ ಕಾಂಚನಮಯವಾದ ಶೃಂಗಗಳಿಂದ ಅದು ಸೂರ್ಯನ ಪ್ರಭೆಯನ್ನು ಧಿಕ್ಕರಿಸುವಂತೆ ಇದೆ. ಅದು ಸುವರ್ಣಮಯವಾದ ಆಭರಣದಿಂದ ಕಂಗೊಳಿಸುವಂತೆ ಇದ್ದು, ದೇವಗಂಧರ್ವರಿಂದ ಸೇವಿತವಾಗಿದೆ. ಅಧರ್ಮಿಷ್ಠರಾದ ಜನರು ಅದನ್ನು ತಿಳಿಯಲು ಅಥವಾ ಪರಾಭವಗೊಳಿಸಲು ಸಾಧ್ಯವಿಲ್ಲದಂತಹ ದಿವ್ಯಪರ್ವತವು ಅದಾಗಿದೆ. ಅಲ್ಲಿ ಘೋರವಾದ ವ್ಯಾಲಮೃಗಗಳು ಸಂಚರಿಸುತ್ತವೆ. ಶ್ರೇಷ್ಠವಾದ ಔಷಧಿವನಸ್ಪತಿಗಳಿವೆ. ಆ ಮಹಾಗಿರಿಯು ತನ್ನ ಔನ್ನತ್ಯದಿಂದ ಸ್ವರ್ಗವನ್ನು ಆವರಿಸಿಕೊಂಡು ನಿಂತಿರುವಂತಿದೆ. ಅದು ನದಿಗಳಿಂದಲೂ, ವೃಕ್ಷಸಮೂಹದಿಂದಲೂ ಕೂಡಿದುದಾಗಿದೆ. ಯಾರೂ ಕೂಡ ಮನಸ್ಸಿನಿಂದಲೂ ಅಲ್ಲಿಗೆ ಹೋಗಲು ಸಾಧ್ಯವಿಲ್ಲ. ಅದು ನಾನಾವಿಧವಾದ ಪಕ್ಷಿಗಳ ಮನೋಹರವಾದ ನಾದದಿಂದ ತುಂಬಿದೆ.
ತಸ್ಯ ಪೃಷ್ಠಂ ಸಮಾರುಹ್ಯ ಬಹುರತ್ನಾಚಿತಂ ದ್ಯುಮತ್ |
ಅನಂತಕಲ್ಪಮದ್ವಂದ್ವಂ ಸುರಾಃ ಸರ್ವೇ ಮಹೌಜಸಃ ॥9॥
ತೇ ಮಂತ್ರಯಿತುಮಾರಬ್ಧಾಸ್ತತ್ರಾಸೀನಾ ದಿವೌಕಸಃ |
ಅಮೃತಾರ್ಥಂ ಸಮಾಗಮ್ಯ ಸರ್ವೇ ಚಂದ್ರಪುರೋಗಮಾಃ ॥10॥
ಮಹಾಬಲಶಾಲಿಗಳಾದ ದೇವತೆಗಳೆಲ್ಲರೂ ಅಸದೃಶವಾದ, ಬಹುರತ್ನಭರಿತವಾದ, ಕಾಂತಿಯುಕ್ತವಾದ, ವಿಶಾಲವಾದ ಆ ಪರ್ವತದ ಪೃಷ್ಠದಲ್ಲಿ ಕುಳಿತು ಮಂತ್ರಾಲೋಚನೆಯನ್ನು ಪ್ರಾರಂಭಿಸಿದರು. ಚಂದ್ರ ಮೊದಲಾದ ಎಲ್ಲಾ ದೇವತೆಗಳು ಅಲ್ಲಿಗೆ ಬಂದು ಕುಳಿತು ಅಮೃತದ ಸಲುವಾಗಿ ಮಂತ್ರಾಲೋಚನೆಯನ್ನು ಮಾಡಿದರು.
ತತ್ರ ನಾರಾಯಣೋ ದೇವೋ ಬ್ರಹ್ಮಾಣಮಿದಮಬ್ರವೀತ್ |
ಚಿಂತಯತ್ಸು ಸುರೇಷ್ವೇವಂ ಮಂತ್ರಯತ್ಸು ಚ ಸರ್ವಶಃ ॥11॥
ಎಲ್ಲಾ ದೇವತೆಗಳೂ ಈ ರೀತಿ ಮಂತ್ರಾಲೋಚನೆಯನ್ನು ನಡೆಸುತ್ತಿರಲು ನಾರಾಯಣನು ಬ್ರಹ್ಮದೇವರನ್ನು ಕುರಿತು ಈ ಮಾತನ್ನು ಆಡಿದನು.
ದೇವೈರಸುರಸ್ಯೆಂಂಶ್ಚ ಮಥ್ಯತಾಂ ಕಲಶೋದಧಿಃ |
ಭವಿಷ್ಯತ್ಯಮೃತಂ ತತ್ರ ಮಥ್ಯಮಾನೇ ಮಹೋದಧೌ ॥12॥
ಸರ್ವೌಷಧೀಃ ಸಮಾವಾಪ್ಯ ಸರ್ವರತ್ನಾನಿ ಚೈವ ಹಿ |
ಮಂಥಧ್ವಮುದಧಿಂ ದೇವಾ ಲಪ್ಸ್ಯಧ್ವಮಮೃತಂ ತತಃ ॥13॥
ದೇವತೆಗಳೂ ಮತ್ತು ಅಸುರರೂ ಸೇರಿ ಕ್ಷೀರಸಮುದ್ರವನ್ನು ಮಥನಮಾಡಿ. ಆ ಮಹಾಸಮುದ್ರವನ್ನು ಮಥನ ಮಾಡಿದರೆ, ಅಮೃತವು ಉಂಟಾಗುತ್ತದೆ. ಎಲೈ ದೇವತೆಗಳೇ, ಎಲ್ಲಾ ಔಷಧಿಗಳನ್ನೂ ಮತ್ತು ಎಲ್ಲಾ ರತ್ನಗಳನ್ನೂ ತಂದು ಹಾಕಿ ಕ್ಷೀರಸಮುದ್ರವನ್ನು ಮಥನಮಾಡಿ ಅದರಿಂದ ಅಮೃತವನ್ನು ಪಡೆಯಿರಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಪಂಚದಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ
ಅಧ್ಯಾಯ-10
ದ್ವಾಪರೇಽಥ ಯುಗೇ ಪ್ರಾಪ್ತೇ ತ್ವಷ್ಟಾವಿಂಶತಿಮೇ ಪುನಃ |
ಸ್ವಯಂಭು ಶರ್ವ ಶಕ್ರಾದ್ಯಾ ದುಗ್ಧಾಬ್ಧೇಸ್ತೀರಮಾಯಯುಃ ॥ 1 ॥
ಶ್ರೀವೇದವ್ಯಾಸರು ಹಿಂದೆ ಅನೇಕ ದ್ವಾಪರಗಳಲ್ಲಿ ಅನೇಕ ಬಾರಿ ಅವತರಿಸಿದ್ದರು. ಪುನಃ ಇಪ್ಪತ್ತೆಂಟನೆ ದ್ವಾಪರದಲ್ಲಿಯೂ ಆ ಯುಗದ

ಕೊನೆಯಲ್ಲಿ ಅವತರಿಸಲಿ ಎಂದು ಪ್ರಾರ್ಥಿಸುವುದಕ್ಕಾಗಿ ಬ್ರಹ್ಮರುದ್ರ ಇಂದ್ರಾದಿಗಳು ಕ್ಷೀರಸಮುದ್ರತೀರಕ್ಕೆ ಬಂದರು.
ಪಯೋಬ್ಧೇರುತ್ತರಂ ತೀರಮಾಸಾದ್ಯ ವಿಬುಧರ್ಷಭಾಃ |
ತುಷ್ಟುವುಃ ಪುಂಡರೀಕಾಕ್ಷಮಕ್ಷಯಂ ಪುರುಷೋತ್ತಮಮ್ ॥ 2 ॥
ಕ್ಷೀರಸಮುದ್ರದ ಉತ್ತರತೀರವನ್ನು ಸೇರಿ ದೇವಶ್ರೇಷ್ಠರು ನಾಶರಹಿತನಾದ ಕಮಲಾಕ್ಷನಾದ ಪುರೋಷತ್ತಮನನ್ನು ಸ್ತುತಿಸಿದರು.
ನಮೋ ನಮೋಽಗಣ್ಯಗುಣೈಕಧಾಮ್ನೇ ಸಮಸ್ತ ವಿಜ್ಞಾನಮರೀಚಿಮಾಲಿನೇ |
ಅನಾದ್ಯವಿಜ್ಞಾನತಮೋ ನಿಹಂತ್ರೇ ಪರಾಮೃತಾನಂದಪದಪ್ರದಾಯಿನೇ ॥3॥
ಅಗಣಿತ ಗುಣಗಳಿಗೆ ಮುಖ್ಯಾಶ್ರಯನೂ ಪೂರ್ಣಜ್ಞಾನ ಪ್ರಕಾಶಗಳ ಮಾಲೆ ಉಳ್ಳವನೂ ಅನಾದಿ ಅಜ್ಞಾನದ ಕತ್ತಲನ್ನು ನಾಶಪಡಿಸುವವನೂ ಉತ್ತಮ ಜೀವರಿಗೆ ಶ್ರೇಷ್ಠವಾದ ಶಾಶ್ವತಾನಂದ ರೂಪ ಮೋಕ್ಷ ನೀಡುವವನೂ ಆದ ಹರಿಗೆ ನಮೋನಮಃ.
ಸ್ವದತ್ತಮಾಲಾಭುವಿಪಾತಕೋಪತೋ
 ದುರ್ವಾಸಸಃ ಶಾಪತ ಆಶು ಹಿ ಶ್ರಿಯಾ|
ಶಕ್ರೇ ವಿಹೀನೇ ದಿತಿಜೈಃ ಪರಾಜಿತೇ ಪುರಾ
 ವಯಂ ತ್ವಾಂ ಶರಣಂ ಗತಾಃ ಸ್ಮಃ ॥4॥
ತಾನು ದೇವೇಂದ್ರನಿಗೆ ಕೊಟ್ಟ ಹೂಮಾಲೆ ನೆಲದಲ್ಲಿ ಬಿದ್ದುದನ್ನು ಕಂಡು ಕೋಪದಿಂದ ದುರ್ವಾಸರು ಶಪಿಸಿದರು. ಒಡನೆ ಇಂದ್ರ ಐಶ್ವರ್ಯದಿಂದ ಚ್ಯುತನಾಗಿ ದೈತ್ಯರಿಂದ ಪರಾಜಿತನಾದ. ಅದರಿಂದ ನಾವು ನಿನ್ನನ್ನು ಶರಣು ಹೊಂದಿದ್ದೇವೆ.
ತ್ವದಾಜ್ಞಯಾ ಬಲಿನಾ ಸಂದಧಾನಾ
 ವರಾದ್ ಗಿರೀಶಸ್ಯ ಪರೈರಚಾಲ್ಯಮ್ |
ವೃಂದಾರಕಾ ಮಂದರಮೇತ್ಯ
 ಬಾಹುಭಿರ್ನಶೇಕುರುದ್ವರ್ತುಮಿಮೇ ಸಮೇತಾ ॥5॥
ತದಾ ತ್ವಯಾ ನಿತ್ಯಬಲತ್ವಹೇತುತೋ
 ಯೋಽನಂತನಾಮಾ ಗರುಡಸ್ತದಂಸಕೇ|
ಉತ್ಪಾಟ್ಯ ಚೈಕೇನ ಕರೇಣ ಮಂದರೋ
 ನಿಧಾಪಿತಸ್ತಂ ಸ ಸಹ ತ್ವಯಾವಹತ್ ॥6॥
ನಿನ್ನಾಜ್ಞೆಯಂತೆ ಈ ದೇವತೆಗಳು ಬಲಿಚಕ್ರವರ್ತಿಯೊಡನೆ ಸಂಧಿ ಮಾಡಿಕೊಂಡರು. ದೈತ್ಯರಿಂದೊಡಗೂಡಿ. ಶಿವವರದಿಂದ ಬೇರೆಯವರಿಗೆ ಅಲ್ಲಾಡಿಸಲು ಬಾರದ ಮಂದರ ಪರ್ವತವನ್ನು ತಮ್ಮ ಕೈಗಳಿಂದ ಎತ್ತಿಕೊಳ್ಳಲು ಪ್ರಯತ್ನಿಸಿದರು. ಆದರೆ ಶಕ್ತರಾಗಲಿಲ್ಲ. ಆಗ ನಿತ್ಯಶಕ್ತಿಶಾಲಿಯಾದ ನೀನು ಮಂದರವನ್ನು ಒಂದು ಎಡಗೈಯಿಂದಲೆ ಕಿತ್ತು ಅನಂತ ಎಂಬ ಇನ್ನೊಂದು ಹೆಸರುಳ್ಳ ಗರುಡನ ಹೆಗಲ ಮೇಲೆ ಇಟ್ಟೆ. ಅವನು ನಿನ್ನ ಜೊತೆಗೆ ಬೆಟ್ಟವನ್ನೂ ಹೊತ್ತ.
ಪುನಃ ಪರೀಕ್ಷದ್ಭಿರಸೌ ಗಿರಿಃ ಸುರೈಃ
 ಸಹಾಸುರೈರುನ್ನಮಿತಸ್ತದಂಸತಃ |
ವ್ಯಚೂರ್ಣಯತ್ ತಾನಖಿಲಾನ್ ಪುನಶ್ಚ ತೇ
 ತ್ವದೀಕ್ಷಯಾ ಪೂರ್ವವದುತ್ಥಿತಾಃ ಪ್ರಭೋ ॥7॥
ಪುನಃ ದೇವತೆಗಳೂ, ಅಸುರರೂ ಕೂಡಿ ತಮ್ಮ ಶಕ್ತಿಯನ್ನು ಪರೀಕ್ಷಿಸಿಕೊಳ್ಳಲು ಗರುಡನ ಹೆಗಲಮೇಲಿಂದ ಬೆಟ್ಟವನ್ನು ಎತ್ತಿದರು. ಆದರೆ ಬೆಟ್ಟ ಬಿದ್ದು ಅವರೆಲ್ಲರನ್ನೂ ಪುಡಿ ಮಾಡಿತು. ಬಳಿಕ ನಿನ್ನ ದಯೆಯ ನೋಟದಿಂದ ಮೊದಲಿನಂತಾಗಿ ಎದ್ದರು.
ಪುನಶ್ಚ ವಾಮೇನ ಕರೇಣ ವೀಶ್ವರೇ
 ನಿಧಾಯ ತಂ ಸ್ಕಂಧಗತಸ್ತ್ವಮಸ್ಯ |
ಅಗಾಃ ಪಯೋಬ್ಧಿಂ ಸಹಿತಃ ಸುರಾಸುರೈ
 ರ್ಮಥ್ನಾ ಚ ತೇನಾಬ್ಧಿಮಥಾಪ್ಯಮಥ್ನಾಃ ॥8॥
ಪುನಃ ನೀನು ಎಡಗೈಯಿಂದ ಆ ಬೆಟ್ಟವನ್ನೆತ್ತಿ ಗರುಡನ ಮೇಲಿಟ್ಟು ಅವನ ಹೆಗಲ ಮೇಲೇರಿ ದೇವಾಸುರರೊಂದಿಗೆ ಕ್ಷೀರಸಮುದ್ರಕ್ಕೆ ಹೋದೆ. ಆ ಬೆಟ್ಟವನ್ನು ಕಡಗೋಲನ್ನಾಗಿ ಮಾಡಿ ದೇವಾಸುರರೊಂದಿಗೆ ನೀನೂ ಸಮುದ್ರವನ್ನು ಕಡೆದೆ.
ಕೃತಶ್ಚ ಕದ್ರ್ವಾಸ್ತನಯೋಽತ್ರ ವಾಸುಕಿ
 ರ್ನೇತ್ರಂ ತ್ವಯಾ ಕಶ್ಯಪಜಃ ಸ ನಾಗರಾಟ್ |
ಮಮಂಥುರಬ್ಧಿಂ ಸಹಿತಾಸ್ತ್ವಯಾ ಸುರಾಃ
 ಸಹಾಸುರಾ ದಿವ್ಯಪಯೋಘೃತಾಧಿಕಮ್ ॥9॥
ಕದ್ರೂದೇವಿಯ ಪುತ್ರನಾಗಿ ಕಶ್ಯಪನಿಂದ ಜನಿಸಿದ ನಾಗರಾಜನಾದ ವಾಸುಕಿಯನ್ನು ನೀನು ಈ ಸಮುದ್ರಮಥನದಲ್ಲಿ ನೇಣನ್ನಾಗಿ ಮಾಡಿದೆ. ದೇವಾಸುರರು ನಿನ್ನೊಡನೆ ಸೇರಿ ಬಹಳ ತುಪ್ಪದಿಂದ ಯುಕ್ತವಾದ ಎಂದೂ ಕೆಡದಿರುವ ಹಾಲಿನಿಂದ ತುಂಬಿದ್ದು ಶ್ರೇಷ್ಠವೆನಿಸಿದ ಕ್ಷೀರಸಮುದ್ರವನ್ನು ಕಡೆದರು.
ನೈಚ್ಛಂತ ಪುಚ್ಛಂ ದಿತಿಜಾ ಅಮಂಗಲಂ
 ತದಿತ್ಯಥಾಗ್ರಂ ಜಗೃಹುರ್ವಿಷೋಲ್ಬಣಮ್ |
ಶ್ರಾಂತಾಶ್ಚ ತೇಽತೋ ವಿಬುಧಾಸ್ತು ಪುಚ್ಛಂ
 ತ್ವಯಾ ಸಮೇತಾ ಜಗೃಹುಸ್ತ್ವದಾಶ್ರಯಾಃ ॥10॥
ಹಾವಿನ ಬಾಲ ಅಮಂಗಲವೆಂಬ ಭಾವನೆಯಿಂದ ದೈತ್ಯರು ವಾಸುಕಿಯ ಬಾಲ ಹಿಡಿಯಲು ಒಪ್ಪಲಿಲ್ಲ. ವಿಷದಿಂದ ಕ್ರೂರವಾದ

ಹೆಡೆಯನ್ನೆ ಹಿಡಿದರು. ಅದರಿಂದ ಆಯಾಸಗೊಂಡರು. ನಿನ್ನನ್ನೆ ಆಶ್ರಯಿಸಿದ ದೇವತೆಗಳು ಮಾತ್ರ ನಿನ್ನೊಂದಿಗೆ ಬಾಲವನ್ನೆ ಹಿಡಿದರು.
ಅಥಾತಿಭಾರಾದವಿಶತ್ ಸುಕಾಂಚನೋ ಗಿರಿಃ ಸ ಪಾತಾಲಮಥ ತ್ವಮೇವ |
ತಂ ಕಚ್ಛಪಾತ್ಮಾ ತ್ವಭರಃ ಸ್ವಪೃಷ್ಠೇ ಹ್ಯನನ್ಯಧಾರ್ಯಂ ಪುರುಲೀಲಯೈವ ॥
ಬಳಿಕ ಅತಿಯಾದ ಭಾರದಿಂದ ಆ ಚಿನ್ನದ ಬೆಟ್ಟ ಕೆಳಗಿಳಿದು ಪಾತಾಲವನ್ನು ಪ್ರವೇಶಿಸಿತು. ಆಗ ಬೇರೆಯವರಿಗೆ ಹೊರಲು ಅಶಕ್ಯವಾದ ಆ ಬೆಟ್ಟವನ್ನು ನೀನು ಕೂರ್ಮರೂಪನಾಗಿ ಮಹಾಲೀಲೆಯಿಂದಲೆ ನಿನ್ನ ಬೆನ್ನ ಮೇಲೆ ಹೊತ್ತುಕೊಂಡೆ.
ಉಪರ್ಯಧಶ್ಚಾತ್ಮನಿ ನೇತ್ರಗೋತ್ರಯೋ
ಸ್ತ್ವಯಾ ಪರೇಣಾವಿಶತಾ ಸಮೇಧಿತಾಃ |
ಮಮಂಥುರಬ್ಧಿಂ ತರಸಾ ಮದೋತ್ಕಟಾಃ
ಸುರಾಸುರಾಃ ಕ್ಷೋಭಿತನಕ್ರಚಕ್ರಮ್ ॥12॥
ನೇಣು ಮತ್ತು ಬೆಟ್ಟಗಳ ಒಳಗೂ ಮೇಲೂ ಕೆಳಗೂ ನಮ್ಮೆಲ್ಲರಲ್ಲಿಯೂ ಸರ್ವೋತ್ತಮನಾದ ನೀನು ಪ್ರವೇಶಿಸಿ ಬಲಪಡಿಸಿದ್ದರಿಂದ ದೇವಾಸುರರು ಮದಭರಿತರಾಗಿ ಸಮುದ್ರವನ್ನು ಅದರೊಳಗಿರುವ ಜಲಚರಗಳ ಸಮೂಹ ಕ್ಷೋಭೆಗೊಳ್ಳುವಂತೆ ವೇಗದಿಂದ ಕಡೆದರು.
ಶ್ರಾಂತೇಷು ತೇಷ್ವೇಕ ಉರುಕ್ರಮ ತ್ವಂ
ಸುಧಾರಸಾಪ್ತ್ಯೈ ಮುದಿತೋ ಹ್ಯಮಥ್ನಾಃ |
ತದಾ ಜಗದ್ವ್ಯಾಪಿ ವಿಷಂ ಸಮುತ್ಥಿತಂ
ತ್ವದಾಜ್ಞಯಾ ವಾಯುರಧಾತ್ ಕರೇ ನಿಜೇ ॥13॥
ಅವರೆಲ್ಲರೂ ಆಯಾಸಗೊಂಡಾಗ ಸರ್ವಶಕ್ತನಾದ ನೀನೊಬ್ಬನೆ ಆನಂದದಿಂದ ಅಮೃತರಸಪ್ರಾಪ್ತಿಗಾಗಿ ಕಡೆದೆ. ಆಗ ಜಗತ್ತನ್ನೆ ನಾಶಮಾಡಬಲ್ಲ ವಿಷ ಎದ್ದಿತು. ನಿನ್ನಾಜ್ಞೆಯಿಂದ ವಾಯು ಅದನ್ನು ತನ್ನ ಕೈಯಲ್ಲಿ ಎತ್ತಿಕೊಂಡ.
ಕಲೇಃ ಸ್ವರೂಪಂ ತದತೀವ ದುಷ್ಟಹಂ
ವರಾದ್ ವಿಧಾತುಃ ಸಕಲೈಶ್ಚ ದುಸ್ಪ್ರಶಮ್ |
ಕರೇ ವಿಮಥ್ಯಾಸ್ತಬಲಂ ವಿಧಾಯ ದದೌ ಸ
ಕಿಂಚಿದ್ ಗಿರಿಶಾಯ ವಾಯುಃ ॥14॥
ಆ ವಿಷ ಕಲಿಯಿಂದ ಅಭಿಮನ್ಯಮಾನವಾಗಿದ್ದು ಬ್ರಹ್ಮನ ವರದಿಂದ ಯಾರಿಗೂ ಅದನ್ನು ತಡೆದುಕೊಳ್ಳಲಾಗುತ್ತಿದ್ದಿಲ್ಲ. ಮುಟ್ಟಲೂ ಸಾಧ್ಯವಿರಲಿಲ್ಲ. ವಾಯು ಅದರಲ್ಲಿ ಸ್ವಲ್ಪವೆ ಕೈಗೆತ್ತಿಕೊಂಡು ಹಿಂಡಿ ನಿರ್ವೀರ್ಯವನ್ನಾಗಿ ಮಾಡಿ ಶಿವನಿಗೆ ಇತ್ತ.
ಸ ತತ್ ಪಿಬತ್ ಕಂಠಗತೇನ ತೇನ ನಿಪಾತಿತೋ ಮೂರ್ಚ್ಛಿತ ಆಶು ರುದ್ರಃ |
ಹರೇಃ ಕರಸ್ಪರ್ಶಬಲಾತ್ನ ಸಂಜ್ಞಾಮವಾಪ ನೀಲೋಽಸ್ಯ ಗಳಸ್ತದಾಸೀತ್ ॥
ಆ ಹಾಲಾಹಲ ವಿಷವನ್ನು ಶಿವ ಕುಡಿದಾಗ ಅದು ಕುತ್ತಿಗೆಯಲ್ಲಿಯೆ ನಿಂತಿತು. ಆದರೆ ತಕ್ಷಣವೆ ಅದು ಅವನನ್ನು ಮೂರ್ಛೆಗೊಳಿಸಿತು. ಹರಿಯ ಕರಸ್ಪರ್ಶ ಬಲದಿಂದ ಆತ ಎಚ್ಚೆತ್ತ. ಆತನ ಕಂಠ ನೀಲವಾಯಿತು.
ಅಥ ತ್ವದಾಜ್ಞಾಂ ಪುರತೋ ನಿಧಾಯ
ನಿಧಾಯ ಪಾತ್ರೇ ತಪನೀಯ ರೂಪೇ |
ಸ್ವಯಂ ನಿರ್ಮಥ್ಯ ಬಲೋಪಪನ್ನಂ
ಪಪೌ ಸ ವಾಯುಸ್ತದುಚಾಸ್ಯ ಜೀರ್ಣಮ್ ॥16॥
ಬಲಿಕ ನಿನ್ನಾಜ್ಞೆಯನ್ನು ಪುರಸ್ಕರಿಸಿ ವಾಯುದೇವ ಚಿನ್ನದ ಬಟ್ಟಲಲ್ಲಿ ವಿಷವನ್ನು ಇಟ್ಟುಕೊಂಡು ಹಿಂಡದೆಯೆ ಪ್ರಬಲವಾಗಿದ್ದು ಆ ವಿಷವನ್ನು ತಾನೇ ಕುಡಿದ. ಅದೂ ಅವನಿಗೆ ಜೀರ್ಣವಾಯಿತು.
ಅತ್ಯಲ್ಪ ಪಾನಾಚ್ಚ ಬಭೂವ ಶೂಲಾ
ಶಿವಸ್ಯ ಶೀರ್ಷ್ಣಶ್ಚ ಕರಾವಶಿಷ್ಟಮ್ |
ಅಭೂತ್ ಕಲಿಃ ಸರ್ವ ಜಗತ್ಸುಪೂರ್ಣಂ
ಪೀತ್ವಾ ವಿಕಾರೋ ನ ಬಭೂವ ವಾಯೋಃ ॥17॥
ಅತ್ಯಲ್ಪವಾಗಿ ವಿಷ ಕುಡಿದಿದ್ದರೂ ಶಿವನಿಗೆ ತಲೆನೋವು ಉಂಟಾಯಿತು. ಅವನ ಕೈಯಲ್ಲಿ ಇನ್ನೂ ವಿಷ ಉಳಿದಿತ್ತು. ಮುಂದೆ ಅದು ಕಲಿಯ ಶರೀರವಾಗಿ ಎಲ್ಲ ಜಗತ್ತಿನಲ್ಲಿ ಹಬ್ಬಿತು. ಬಳಿಕ ಎಲ್ಲ ವಿಷವನ್ನೂ ವಾಯುದೇವ ಕುಡಿದ. ಆದರೂ ಅದರಿಂದ ಅವನಿಗೆ ಏನೂ ದುಷ್ಪರಿಣಾಮವಾಗಲಿಲ್ಲ.
ಕಲೇಃ ಶರೀರಾದಭವನ್ ಕುನಾಗಾಃ ಸವೃಶ್ಚಿಕಾಃ ಶ್ವಾಪದ ಯಾತುಧಾನಾಃ |
ಅಥ ತ್ವಯಾಬ್ಧೌ ತು ವಿಮಥ್ಯಮಾನೇ ಸುರಾಽಭವತ್ ತಾಮಸುರಾ ಅವಾಪುಃ॥
ಕಲಿಯ ಶರೀರವಾದ ಆ ವಿಷದಿಂದ ದುಷ್ಟ ಸರ್ಪಗಳು ಚೇಳುಗಳು ತೋಳ ಹುಲಿ ಮುಂತಾದವು ಮತ್ತು ರಾಕ್ಷಸರು ಹುಟ್ಟಿದರು. ಬಳಿಕ ನೀನು ಸಮುದ್ರ ಮಥನ ಮಾಡುತ್ತಿದ್ದಂತೆ ಮದ್ಯ ಉದ್ಭವಿಸಿತು. ಅದನ್ನು ಅಸುರರು ಸ್ವೀಕರಿಸಿದರು.
ಉಚ್ಚೈಃಶ್ರವಾ ನಾಮ ತುರಂಗಮೋಽಥ ಕರೀ ತಥೈರಾವತನಾಮಧೇಯಃ
ಅನ್ಯೇ ಚ ದಿಕ್ಪಾಲಗಜಾ ಬಭೂವುರ್ವರಂ ತಥೈವಾಪ್ಸರಸಾಂ ಸಹಸ್ರಮ್ ॥
ಉಚ್ಚೈಃಶ್ರವ ಎಂಬ ಕುದುರೆ, ಐರಾವತ ಎಂಬ ಹೆಸರಿನ ಆನೆ, ಬೇರೆ ದಿಕ್ಪಾಲಕರ ಆನೆಗಳು ಹುಟ್ಟಿದವು. ಹಾಗೇ ಸಹಸ್ರ ಶ್ರೇಷ್ಠ ಅಪ್ಸರೆಯರೂ ಹುಟ್ಟಿದರು.
ತಥಾಯುಧಾನ್ಯಾಭರಣಾನಿ ಚೈವ ದಿವೌಕಸಾಂ ಪಾರಿಜಾತಸ್ತರುಶ್ಚ |

ತಥೈವ ಸಾಕ್ಷಾತ್ಸುರಭಿರ್ನಿಶೇಶೋ ಬಭೂವ ತತ್ಕೌಸ್ತುಭಂ ಲೋಕಸಾರಮ್ ॥
ಹಾಗೇ ದೇವತೆಗಳ ಆಯುಧಗಳು, ಆಭರಣಗಳು ಮತ್ತು ಪಾರಿಜಾತ ವೃಕ್ಷಗಳು ಹುಟ್ಟಿದವು. ಹಾಗೇ ಮುಖ್ಯಕಾಮಧೇನು ಜನಿಸಿದಳು. ಚಂದ್ರ ಜನಿಸಿದ. ಲೋಕದಲ್ಲೆಲ್ಲ ಶ್ರೇಷ್ಠವಾದ ಕೌಸ್ತುಭಮಣಿಯೂ ಹುಟ್ಟಿತು.
ಅಥೇಂದಿರಾ ಯದ್ಯಪಿ ನಿತ್ಯದೇಹಾ ಬಭೂವ ತತ್ರಾಪರಯಾ ಸ್ವತನ್ವಾ |
ತತೋ ಭವಾನ್ ದಕ್ಷಿಣಬಾಹುನಾ ಸುಧಾಕಮಂಡಲುಂ ಕಲಶಂ ಚಾಪರೇಣ|
ಪ್ರಗೃಹ್ಯ ತಸ್ಮಾನ್ನಿರಗಾತ್ ಸಮುದ್ರಾದ್ ಧನ್ವಂತರಿರ್ನಾಮ ಹರಿನ್ಮಣಿದ್ಯುತಿಃ ॥
ಬಳಿಕ ಮಹಾಲಕ್ಷ್ಮೀ ನಿತ್ಯಸ್ವರೂಪಳಾಗಿದ್ದರೂ ಇನ್ನೊಂದು ರೂಪದಿಂದ ಕ್ಷೀರ ಸಮುದ್ರದಲ್ಲಿ ಪ್ರಾದುರ್ಭವಿಸಿದಳು. ಬಳಿಕ ಇಂದ್ರನೀಲ ಮಣಿಯಂಥ ಕಾಂತಿಯುಳ್ಳ ಧನ್ವಂತರಿಯಾಗಿ ನೀನು ಬಲಗೈಯಿಂದ ಅಮೃತ ಬಡಿಸುವ ಕಮಂಡಲುವನ್ನೂ ಎಡಗೈಯಿಂದ ಅಮೃತ ತುಂಬಿದ ಕಲಶವನ್ನೂ ಹಿಡಿದು ಸಮುದ್ರದಿಂದ ಉದ್ಭವಿಸಿದೆ.
ತತೋ ಭವದ್ಧಸ್ತಗತಂ ದಿತೇಃ ಸುತಾಃ
ಸುಧಾಭಾರಂ ಕಲಶಂ ಚಾಪಜಹ್ರುಃ |
ಮುಕ್ತಂ ತ್ವಯಾ ಶಕ್ತಿಮತಾಪಿ ದೈತ್ಯಾನ್
ಸತ್ಯಚ್ಯುತಾನ್ ಕಾರಯತಾಂ ವಧಾಯ ॥22॥
ಆಗ ನಿನ್ನ ಕೈಯಲ್ಲಿದ್ದ ಅಮೃತಪೂರ್ಣ ಕಲಶವನ್ನು ದೈತ್ಯರು ಅಪಹರಿಸಿದರು. ನೀನು ಶಕ್ತಿ ಉಳ್ಳವನಾದರೂ ಬಿಟ್ಟುಬಿಟ್ಟೆ, ದೈತ್ಯರನ್ನು ಸತ್ಯಭ್ರಷ್ಟರನ್ನಾಗಿಸಿ ಮುಂದೆ ಅವರನ್ನು ವಧಿಸುವುದಕ್ಕಾಗಿ.
ತತೋ ಭವಾನನುಪಮಮುತ್ತಮಂ ವಪು-
ರ್ಬಭೂವ ದಿವ್ಯಪ್ರಮದಾತ್ಮಕಂ ತ್ವರನ್ |
ಶ್ಯಾಮಂ ನಿತಂಬಾರ್ಪಿತ ರತ್ನಮೇಖಲಂ
ಚಾಂಬೂನದಾಭಾಂಬರಭೃತ್ ಸುಮಧ್ಯಮಮ್ ॥23॥
ಆಗ ನೀನು ಬೇಗನೆ ಅನುಪಮ ಉತ್ತಮ ದಿವ್ಯಸ್ತ್ರೀರೂಪವಾದೆ. ಆ ರೂಪ ನೀಲವರ್ಣದ್ದು, ನಿತಂಬದಲ್ಲಿ ರತ್ನದ ಒಡ್ಯಾಣ ಧರಿಸಿತ್ತು. ಬಂಗಾರದಂತೆ ಹೊಳೆವ ಸೀರೆ ಉಟ್ಟಿತ್ತು. ಚೆಲುವಾದ ನಡುವಿನದಾಗಿತ್ತು.
ಬೃಹನ್ನಿತಂಬಂ ಕಲಶೋಪಮಸ್ತನಂ
ಸತ್ಪುಂಡರೀಕಾಯತನೇತ್ರಮುಜ್ವಲಮ್ |
ಸಮಸ್ತಸಾರಂ ಪರಿಪೂರ್ಣಸದ್ಗುಣಂ
ದೃಷ್ಟ್ವೈವತತ್ ಸಂಮುಮುಹುಃ ಸುರಾರಯಃ ॥24॥
ಹರಿಯ ಆ ಸ್ತ್ರೀರೂಪ ವಿಶಾಲ ನಿತಂಬ, ಕಲಶದಂಥ ಸ್ತನ, ಒಳ್ಳೆಯ ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳದ್ದು. ಉಜ್ವಲ, ಸರ್ವಶ್ರೇಷ್ಠ, ಪರಿಪೂರ್ಣ ಸದ್ಗುಣ ಭರಿತ. ಅದನ್ನು ನೋಡಿಯೆ ದೈತ್ಯರು ಮೋಹಗೊಂಡರು.
ಪರಸ್ಪರಂ ತೇಽಮೃತಹೇತುತೋಽಖಿಲಾ
ವಿರುಧ್ಯಮಾನಾಃ ಪ್ರದದುಃ ಸ್ಮ ತೇ ಕರೇ |
ಸಮಂ ಸುಧಾಯಾಃ ಕಲಶಂ ವಿಭಜ್ಯ
ನಿಪಾಯಯಾಸ್ಮಾನಿತಿ ವಂಚಿತಾಸ್ತ್ವಯಾ ॥25॥
ನಿನ್ನಿಂದ ವಂಚಿತರಾದ ಅವರೆಲ್ಲರೂ ಅಮೃತನಿಮಿತ್ತವಾಗಿ ಜಗಳಾಡುತ್ತಿದ್ದವರು `ನೀನು ನಮ್ಮಲ್ಲಿ ಸರಿಯಾಗಿ ಹಂಚಿ ಉಣಿಸು' ಎನ್ನುತ್ತ ನಿನ್ನ ಕೈಯಲ್ಲಿ ಅಮೃತ ಕಲಶವನ್ನಿತ್ತರು.
ಧರ್ಮಚ್ಛಲಂ ಪಾಪಜನೇಷು ಧರ್ಮ
ಇತಿ ತ್ವಯಾ ಜ್ಞಾಪಯಿತುಂ ತದೋಕ್ತಮ್ |
ಯದ್ಯತ್ಕೃತಂ ಮೇ ಭವತಾಂ ಯದೀಹ
ಸಂವಾದ ಏವೋದ್ವಿಭಜೇ ಸುಧಾಮಿಮಾಮ್ ॥26॥
ಧರ್ಮರಕ್ಷಣೆಗಾಗಿ ಪಾಪಿಜನರಲ್ಲಿ ವಂಚನೆ ಮಾಡುವುದೂ ಧರ್ಮವೆ ಎಂದು ತೋರಿಸುವುದಕ್ಕಾಗಿ ನೀನು ನುಡಿದೆ - `ನಾನೇನು ಮಾಡಿದರೂ ಅದನ್ನು ನೀವು ಒಪ್ಪುವುದಾಗಿದ್ದರೆ ಮಾತ್ರ ಅಮೃತವನ್ನು ಹಂಚುತ್ತೇನೆ'.
ಯಥೇಷ್ಟತೋಽಹಂ ವಿಭಜಾಮಿ ಸರ್ವಥಾ ನ
ವಿಶ್ವಸಧ್ವಂ ಮಯಿ ಕೇನಚಿತ್ಕ್ವಚಿತ್ |
ಇತಿ ಪ್ರಹಸ್ಯಾಭಿಹಿತಂ ನಿಶಮ್ಯ
ಸ್ತ್ರೀಭಾವಮುಗ್ಧಾಸ್ತು ತಥೇತಿ ತೇಽವದನ್ ॥27॥
`ನಾನು ನನ್ನಿಚ್ಛಾನುಸಾರವೆ ಹಂಚುವೆ. ನೀನು ಯಾವ ರೀತಿಯಿಂದಲೂ ಯಾವ ವಿಷಯದಲ್ಲಿಯೂ ನನ್ನಲ್ಲಿ ಸರ್ವಥಾ ವಿಶ್ವಾಸವಿಡಬೇಡಿ' ಎಂದು ನಗುತ್ತ ನೀನು ಹೇಳಿದುದನ್ನು ಕೇಳಿ ಅವರು ಸ್ತ್ರೀಸ್ವಭಾವಕ್ಕೆ ಮರುಳಾಗಿ `ಹಾಗೇ ಆಗಲಿ' ಎಂದರು.
ತತಶ್ಚ ಸಂಸ್ಥಾಪ್ಯ ಪೃಥಕ್ ಸುರಾಸುರಾಂ-
ಸ್ತವಾತಿರೂಪೋಚ್ಚಲಿತಾನ್ ಸುರೇತರಾನ್ |
ಸರ್ವಾನ್ ಭವದ್ದರ್ಶಿನ ಈಕ್ಷ್ಯಲಜ್ಜಿತಾ-
ಸ್ತ್ಯಹಂ ದೃಶೋ ಮೀಲಯತೇತ್ಯವೋಚಃ ॥28॥
ಬಳಿಕ ದೇವತೆಗಳನ್ನೂ ಅಸುರರನ್ನೂ ಬೇರೆ ಬೇರೆಯಾಗಿ ಕುಳ್ಳಿರಿಸಿ, ನಿನ್ನ ಅತಿಯಾದ ಸೌಂದರ್ಯದಿಂದ ಮನಸ್ಸಿನಲ್ಲಿ ಬಹಳ

ವಿಚಲಿತರಾದ ಅಸುರರಿಗೆ ನೀನು ಹೇಳಿದೆ. `ನೀನು ನನ್ನನ್ನು ಹೀಗೆ ನೋಡುತ್ತಿದ್ದರೆ ನೋಡಿ ನಾನು ನಾಚುವೆ. ಕಣ್ಣು ಮುಚ್ಚಿಕೊಳ್ಳಿ'.
ನಿಮೀಲಿತಾಕ್ಷೇಷ್ವಸುರೇಷು ದೇವತಾ
ನ್ಯಪಾಯಯಃ ಸಾಧ್ವಮೃತಂ ತತಃ ಪುಮಾನ್ |
ಕ್ಷಣೇನ ಭೂತ್ವಾಪಿಬತಃ ಸುಧಾಂ ಶಿರೋ
ರಾಹೋರ್ನ್ಯಕೃಂತಶ್ಚ ಸುದರ್ಶನೇನ ॥29॥
ಅಸುರರು ಕಣ್ಣು ಮುಚ್ಚಿಕೊಂಡಿರಲು ನೀನು ದೇವತೆಗಳಿಗೇ ಚೆನ್ನಾಗಿ ಅಮೃತವನ್ನು ಉಣಿಸಿದೆ. ಬಳಿಕ ಕ್ಷಣದಲ್ಲಿ ಪುರುಷನಾಗಿ, ಅಮೃತ ಕುಡಿಯುತ್ತಿದ್ದ ರಾಹುವಿನ ಶಿರಸ್ಸನ್ನು ಸುದರ್ಶನದಿಂದ ಕತ್ತರಿಸಿದೆ.
ತೇನಾಮೃಥಾರ್ಥಂ ಹಿ ಸಹಸ್ರ ಜನ್ಮಸು
ಪ್ರತಪ್ಯ ಭೂಯಸ್ತಪ ಆರಿತೋ ವರಃ |
ಸ್ವಯಂಭುವಸ್ತೇನ ಭವಾನ್ ಕರೇಽಸ್ಯ
ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ ॥30॥
ರಾಹು ಅಮೃತಕ್ಕಾಗಿ ಸಾವಿರ ಜನ್ಮಗಳಲ್ಲಿ ಬಹಳ ಚೆನ್ನಾಗಿ ತಪಸ್ಸು ಮಾಡಿ ಬ್ರಹ್ಮನಿಂದ ವರ ಪಡೆದಿದ್ದ. ಅದರಿಂದ ನೀನು ಅವನ ಕೈಗೆ ಒಂದು ತೊಟ್ಟು ಅಮೃತವನ್ನು ಬಡಿಸಿ ಶಿರಸ್ಸನ್ನು ತೆಗೆದೆ.
ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ
ಸಮಾವಿಷ್ಟಮಥೋ ಸಬಾಹು |
ಕ್ಷಿಪ್ತಃ ಕವಂಧೋಽಸ್ಯ ಶುಭೋದಸಾಗರೇ
ತ್ವಯಾ ಸ್ಥಿತೋಽದ್ಯಾಪಿ ಹಿ ತತ್ರ ಸಾಮೃತಃ ॥31॥
ರಾಹುವಿನ ಶಿರಸ್ಸು ಮಾತ್ರ ದೇವತೆಗಳಿಂದ ಆವಿಷ್ಟವಾಗಿ ಗ್ರಹವಾಯಿತು. ಬಳಿಕ ಬಾಹುಸಮೇತವಾದ ಮುಂಡವನ್ನು ನೀನು ಸ್ವಾದೂದಕ ಸಮುದ್ರದಲ್ಲಿ ಎಸೆದೆ. ಅದರಲ್ಲಿ ಅಮೃತ ಪ್ರವೇಶಿಸಿದ್ದರಿಂದ ಇಂದಿಗೂ ನಶಿಸದೆ ಅಲ್ಲಿ ಇದೆ.
ಅಥಾಸುರಾಃ ಪ್ರತ್ಯಪತನ್ನುದಾಯುಧಾಃ
ಸಮಸ್ತಶಸ್ತೇ ಚ ಹತಾಸ್ತ್ವಯಾ ರಣೇ
ಕಲಿಸ್ತು ಸ ಬ್ರಹ್ಮವರಾದಜೇಯೋ ಋತೇ
ಭವಂತಂ ಪುರುಷೇಷು ಸಂಸ್ಥಿತಃ ॥32॥
ಬಳಿಕ ಅಸುರರು ಆಯುಧಗಳನ್ನು ಎತ್ತಿಕೊಂಡು ಏರಿಬಂದರು. ಅವರೆಲ್ಲರೂ ನಿನ್ನಿಂದ ಹತರಾದರು. ಕಲಿ ಮಾತ್ರ ಬ್ರಹ್ಮನ ವರದಿಂದ ನಿನಗೆ ಹೊರತು ಇನ್ನಾರಿಗೂ ಅಜೇಯನೇ ಆಗಿದ್ದುದರಿಂದ ಮನುಷ್ಯರಲ್ಲಿ ಸ್ಥಿರವಾಗಿ ನೆಲೆಸಿದ್ದಾನೆ.
ತಸ್ಯಾರ್ಧದೇಹಾತ್ ಸಮಭೂದಲಕ್ಷ್ಮೀಸ್ತತ್ಪುತ್ರಕಾ
ದೋಷಗಣಾಶ್ಚ ಸರ್ವಶಃ |
ಅಥೇಂದಿರಾ ವಕ್ಷಸಿ ತೇ ಸಮಾಸ್ಥಿತಾ
ತ್ವತ್ಕಂಠಗಂ ಕೌಸ್ತುಭಮಾಸ ಧಾತಾ ॥33॥
ಕಲಿಯ ಅರ್ಧಾಂಗಿನಿಯಾದ ಅಲಕ್ಷ್ಮಿಯೂ ಅವಳ ಮಕ್ಕಳಾದ ಸಕಲ ದೋಷಾಭಿಮಾನಿ ದೈತ್ಯ ಸಮೂಹಗಳೂ ಕ್ಷೀರಸಮುದ್ರದಿಂದ ಎದ್ದು ಬಂದರು. ಬಳಿಕ ಮಹಾಲಕ್ಷ್ಮಿ ನಿನ್ನ ಎದೆಯಲ್ಲಿ ನೆಲೆಸಿದಳು. ಬ್ರಹ್ಮನಿಂದ ಅಭಿಮನ್ಯಮಾನವಾದ ಕೌಸ್ತುಭ ನಿನ್ನ ಕಂಠದಲ್ಲಿ ಶೋಭಿಸಿತು.
ಯಥಾವಿಭಾಗಂ ಚ ಸುರೇಷು ದತ್ತಾಸ್ತ್ವಯಾ
ತಥಾನ್ಯೇಽಪಿ ಹಿ ತತ್ರ ಜಾತಾಃ |
ಇತ್ಥಂ ತ್ವಯಾ ಸಾಧ್ವಮೃತಂ ಸುರೇಷು
ದತ್ತಂ ಹಿ ಮೋಕ್ಷಸ್ಯ ನಿದರ್ಶನಾಯ ॥34॥
ಕ್ಷೀರಸಮುದ್ರದಲ್ಲಿ ಉದ್ಭವಿಸಿದ ಬೇರೆ ರತ್ನಗಳನ್ನೂ ನೀನು ಯಥಾಯೋಗ್ಯವಾಗಿ ವಿಭಾಗ ಮಾಡಿ ಸುರರಿಗೆ ನೀಡಿದೆ. ಹೀಗೆ ಸುರರಿಗೆ ಮಾತ್ರ ಅಮೃತವನ್ನು ಚೆನ್ನಾಗಿ ಉಣಿಸಿದೆ, ಮೋಕ್ಷಕ್ಕೆ ನಿದರ್ಶನ ನೀಡುವುದಕ್ಕಾಗಿ.
ಭವೇದ್ಧಿ ಮೋಕ್ಷೋ ನಿಯತಂ ಸುರಾಣಾಂ
ನೈವಾಸುರಾಣಾಂ ಸ ಕಥಂಚನ ಸ್ಯಾತ್ |
ಉತ್ಸಾಹಯುಕ್ತಸ್ಯ ಚ ತತ್ಪ್ರತೀಪಂ ಭವೇದ್ಧಿ
ರಾಹೋರಿವ ದುಃಖರೂಪಮ್ ॥35॥
ಸುರರಿಗೆ ಮೋಕ್ಷ ನಿಶ್ಚಯವಾಗಿ ಸಿಗುತ್ತದೆ. ಅಸುರ ಸ್ವಭಾವದವರಿಗೆ ಯಾವ ರೀತಿಯಿಂದಲೂ ಮೋಕ್ಷ ಸಿಗಲಾರದು. ಅವರು ಮೋಕ್ಷ ಪಡೆಯಲು ಉತ್ಸಾಹ ಯುಕ್ತರಾದರೆ ಫಲವಿಲ್ಲ. ರಾಹುವಿಗೆ ಹೇಗೋ ಹಾಗೆ ಮೋಕ್ಷಕ್ಕೆ ವಿಪರೀತವಾಗಿ ದುಃಖ ರೂಪವಾದ ತಮಸ್ಸೇ ಸಿಗುವುದು.
* * * * *

## ಹದಿನಾರನೆಯ ಅಧ್ಯಾಯ

(ಮಂದರವನ್ನು ಕಡೆಗೋಲನ್ನಾಗಿ ಮಾಡಿ, ವಾಸುಕಿಯನ್ನು ಹಗ್ಗವನ್ನು ಮಾಡಿ, ಸರ್ವೌಷಧಿಗಳನ್ನು ಹಾಕಿ ಸಮುದ್ರಮಥನ,

ಪಾರಿಜಾತಾದಿ ಉತ್ಪತ್ತಿ, ಧನ್ವಂತರಿಯ ಪ್ರಾದುರ್ಭಾವ, ದೈತ್ಯರಿಗೆ ವಂಚನೆ.)
ಸೂತಃ
ತತೋಽಭ್ರಶಿಖರಾಕಾರೈರ್ಗಿರಿಶೃಂಗೈರಲಂಕೃತಮ್ |
ಮಂದರಂ ಪರ್ವತವರಂ ಲತಾಜಾಲಸಮಾವೃತಮ್ ॥1॥
ನಾನಾವಿಹಂಗಸಂಘುಷ್ಟಂ ನಾನಾದಂಷ್ಟ್ರಿಸಮಾಕುಲಮ್ |
ಕಿನ್ನರೈರಪ್ಸರೋಭಿಶ್ಚ ದೇವೈರಪಿ ಚ ಶೋಭಿತಮ್ ॥2॥
ಏಕಾದಶ ಸಹಸ್ರಾಣಿ ಯೋಜನಾನಾಂ ಸಮುಚ್ಛ್ರಿತಮ್ |
ಅಧೋಭೂಮೇಃ ಸಹಸ್ರೇಷು ತಾವತ್ಸ್ವೇವ ಪ್ರತಿಷ್ಠಿತಮ್ ॥3॥
ಸಮುದ್ದರ್ತುಮಶಕ್ತಾ ವೈ ಸರ್ವೇ ದೇವಗಣಾಸ್ತದಾ |
ವಿಷ್ಣುಮಾಸೀನಮಭ್ಯೇತ್ಯ ಬ್ರಹ್ಮಾಣಂ ಚೇದಮಬ್ರುವನ್ ॥4॥
ಅನಂತರ ಮೇಘಶಿಖರದಂತಿದ್ದ, ಅನೇಕ ಶಿಖರಗಳಿಂದ ಅಲಂಕೃತವಾದ, ಲತಾಜಾಲಗಳಿಂದ ಯುಕ್ತವಾದ, ನಾನಾ ಪಕ್ಷಿಗಳ ಘೋಷದಿಂದ ಕೂಡಿದ, ನಾನಾ ಕ್ರೂರಮೃಗಗಳಿಂದ ಸಮಾಕುಲವಾದ, ದೇವತೆಗಳು, ಕಿನ್ನರರು ಮತ್ತು ಅಪ್ಸರೆಯರಿಂದ ಶೋಭಿತವಾದ, ಹನ್ನೊಂದು ಸಹಸ್ರಯೋಜನ ಎತ್ತರವಾದ, ಭೂಮಿಯೊಳಗೆ, ಅಷ್ಟೇ ಆಳದವರೆಗೆ ನೆಡಲ್ಪಟ್ಟಿದ್ದ, ಮಂದರಪರ್ವತವನ್ನು ಎತ್ತಲು ಸಾಧ್ಯವಾಗದೆ, ಎಲ್ಲಾ ದೇವತಾಗಣಗಳು ವಿಷ್ಣುಬ್ರಹ್ಮರನ್ನು ಸಮೀಪಿಸಿ ಹೀಗೆ ಮಾತನಾಡಿದರು.
ಭವಂತಾವತ್ರ ಕುರುತಾಂ ಬುದ್ಧಿಂ ನೈಶ್ರೇಯಸೀಂ ಪರಾಮ್ |
ಮಂದರೋದ್ಧರಣೇ ಯತ್ನಃ ಕ್ರಿಯತಾಂ ಚ ಹಿತಾಯ ನಃ ॥5॥
ನೀವಿಬ್ಬರೂ ನಮ್ಮನ್ನು ಈ ಸಂಕಟದಿಂದ ಪಾರುಗಾಣಿಸುವ ಆಲೋಚನೆಯನ್ನು ಮಾಡಿ. ನಮ್ಮ ಹಿತಕ್ಕೋಸ್ಕರವಾಗಿ ಮಂದರಪರ್ವತವನ್ನು ಎತ್ತುವ ಪ್ರಯತ್ನವನ್ನು ಮಾಡಿ.
ತಥೇತಿ ಚಾಬ್ರವೀದ್ ವಿಷ್ಣುರ್ಬ್ರಹ್ಮಣಾ ಸಹ ಭಾರ್ಗವ |
ಅಚೋದಯದಮೇಯಾತ್ಮಾ ಫಣೀಂದ್ರಂ ಪದ್ಮಲೋಚನಃ ॥6॥
ಎಲೈ ಶೌನಕನೇ, ಆಗ ವಿಷ್ಣುವು ಬ್ರಹ್ಮನ ಜೊತೆಯಲ್ಲಿ `ಹಾಗೆಯೇ ಆಗಲಿ' ಎಂದು ಹೇಳಿ ಪುಂಡರೀಕಾಕ್ಷನೂ, ಅಪ್ರಮೇಯಸ್ವರೂಪನೂ ಆದ ಅವನು ಗರುಡನನ್ನು ಪ್ರೇರಿಸಿದನು.
ಇಲ್ಲಿ ಫಣೀಂದ್ರ ಎಂದರೆ, ಫಣಿ = ಸರ್ಪಗಳ, ಈ = ಐಶ್ವರ್ಯವನ್ನು ದ್ರ = ನಾಶಮಾಡುವವನು ಎಂಬ ಅರ್ಥವನ್ನು ತೆಗೆದುಕೊಂಡು ಗರುಡ ಎಂದು ಅರ್ಥವನ್ನು ಮಾಡಬೇಕು. ಇಲ್ಲದಿದ್ದರೆ, ಭಾಗವತ ಮತ್ತು ಇಲ್ಲಿಯ ಮುಂದಿನ ಶ್ಲೋಕಗಳಿಂದ ವಿರೋಧವು ಬರುತ್ತದೆ. ಆಚಾರ್ಯರೂ ಸಹ `ಯೋನಂತನಾಮಾ ಗರುಡಸ್ತದಂಸಕೇ' ಎಂದು ಹೇಳಿ ಅನಂತನಾಮಕನಾದ ಗರುಡನ ಹೆಗಲಿನ ಮೇಲೆ ಮಂದರಪರ್ವತವನ್ನು ವಿಷ್ಣುವು ತೆಗೆದುಕೊಂಡು ಬಂದನು ಎಂದು ಹೇಳಿದ್ದಾರೆ. ಇಲ್ಲಿಯೂ ಸಹ ಮುಂದಿನ ಶ್ಲೋಕಗಳಲ್ಲಿ ಗರುಡನಿಗೆ ಅನಂತ ಎಂಬ ಶಬ್ದ ಪ್ರಯೋಗವೇ ಇದೆ. ಮಂದರಪರ್ವತವನ್ನು ಎತ್ತಲು ಮಹಾಬಲವು ಅವಶ್ಯಕವಾದ್ದರಿಂದ ನಿಸ್ಸೀಮಬಲನಾದ, ಅನಂತನಾಮಕ, ವಿಷ್ಣುವಿನ ಸನ್ನಿಧಾನಕ್ಕೆ ಪಾತ್ರನಾದ ಮಹಾಬಲವುಳ್ಳ ಗರುಡನು ಅನಂತನೆಂದು ಹೇಳಲ್ಪಡುತ್ತಾನೆ.
ತತೋಽನಂತಃ ಸಮುತ್ಥಾಯ ಬ್ರಹ್ಮಣಾ ಪರಿಚೋದಿತಃ |
ನಾರಾಯಣೇನ ಚಾಪ್ಯುಕ್ತಸ್ತಸ್ಮಿನ್ ಕರ್ಮಣಿ ವೀರ್ಯವಾನ್ ॥7॥
ಅನಂತರ ಬ್ರಹ್ಮದೇವರಿಂದಲೂ ಮತ್ತು ಆ ಕಾರ್ಯದಲ್ಲಿ ನಾರಾಯಣನಿಂದಲೂ ಪ್ರೇರಿಸಲ್ಪಟ್ಟವನಾಗಿ, ಪರಾಕ್ರಮಶಾಲಿಯಾದ ಗರುಡನು ಅಲ್ಲಿಂದ ಎದ್ದನು.
ಅಥ ಪರ್ವತರಾಜಾನಂ ತಮನಂತೋ ಮಹಾಬಲಃ |
ಉಜ್ಜಹಾರ ಬಲಾದ್ ಬ್ರಹ್ಮನ್ ಸವನಂ ಸವನೌಕಸಮ್ ॥8॥
ಎಲೈ ಬ್ರಾಹ್ಮಣನೇ, ಅನಂತರ, ಮಹಾಬಲನಾದ, ಅನಂತನಾಮಕನಾದ ಗರುಡನು ವನ ಮತ್ತು ವನವಾಸಿಗಳಿಂದ ಸಹಿತವಾದ ಆ ಶ್ರೇಷ್ಠಪರ್ವತವನ್ನು ತನ್ನಲ್ಲಿ ಆವಿಷ್ಟನಾದ ವಿಷ್ಣುವಿನ ಮತ್ತು ತನ್ನ ಬಲದಿಂದ ಕಿತ್ತನು.
ಭಾಗವತ ಮತ್ತು ಮಹಾಭಾರತಕ್ಕೆ ಮತ್ತು ಆಚಾರ್ಯರ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಅನುಗುಣವಾಗಿ ದೇವಾಸುರರು ತಮ್ಮ ಬಲದಿಂದ ಮಂದರಪರ್ವತವನ್ನು ಕೀಳಲು ಸಾಧ್ಯವಿಲ್ಲದೇ ಹೋದಾಗ ವಿಷ್ಣುವೇ ಅದನ್ನು ಕಿತ್ತು, ಗರುಡನ ಮೇಲೆ ಇಟ್ಟನು. ಗರುಡನ ಮೇಲೆ ಮಂದರಪರ್ವತವನ್ನು ತೆಗೆದುಕೊಂಡು ಬರುತ್ತಿರುವಾಗ ಪುನಃ ದೇವತೆಗಳು ಗರುಡನ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡಿದ್ದರಿಂದ ಆ ಪರ್ವತವನ್ನು ಕೆಳಗಿಳಿಸಿದನು. ಆ ಕೆಳಗಿಳಿಸಿದ ಪರ್ವತವನ್ನು ದೇವತೆಗಳು ಎತ್ತಲು ಸಾಧ್ಯವಾಗಲಿಲ್ಲ. ಇನ್ನು ಭೂಮಿಯಲ್ಲಿ ಹನ್ನೊಂದುಸಾವಿರ ಯೋಜನ ಆಳದಲ್ಲಿ ನೆಡಲ್ಪಟ್ಟ ಮಂದರಪರ್ವತವನ್ನು ಎತ್ತುವುದು ಹೇಗೆ? ಆಗ ಪುನಃ ವಿಷ್ಣುವು ಮಂದರಪರ್ವತವನ್ನು ಎತ್ತಿಕೊಂಡು ಗರುಡನ ಮೇಲೆ ಇಟ್ಟು ಕ್ಷೀರಸಮುದ್ರದ ಬಳಿಗೆ ಬಂದು ಆ ಪರ್ವತವನ್ನು ಇಳಿಸಿದನು ಎಂದು ತಿಳಿಯಬೇಕು.
ತತಸ್ತೇನ ಸುರಾಃ ಸಾರ್ಧಂ ಸಮುದ್ರಮುಪತಸ್ಥಿರೇ |
ತಮೂಚುರಮೃತಸ್ಯಾರ್ಥೇ ನಿರ್ಮಥಿಷ್ಯಾಮ ತೇ ಜಲಮ್ ॥9॥
ಆಗ ಗರುಡನ ಜೊತೆಯಲ್ಲಿ ದೇವತೆಗಳೆಲ್ಲರೂ ಕ್ಷೀರಸಮುದ್ರದ ದಡಕ್ಕೆ ಬಂದು ಅಮೃತದ ಸಲುವಾಗಿ ನಾವೆಲ್ಲರೂ ನಿನ್ನ ಜಲವನ್ನು ಮಥನವನ್ನು ಮಾಡುತ್ತೇವೆ ಎಂದು ಅವನನ್ನು ಕುರಿತು ಹೇಳಿದರು.
ಅಪಾಂಪತಿರಥೋವಾಚ ಮಮಾಪ್ಯಂಶೋ ಭವೇತ್ ತತಃ |
ಸೋಢಾಽಸ್ಮಿ ವಿಪುಳಂ ಮರ್ದಂ ಮಂದರಭ್ರಮಣಾದಿಹ ॥10॥

ಜಲಪತಿಯಾದ ವರುಣನೂ ಸಹ ನಾನು ಮಂದರಪರ್ವತದ ಪರಿಭ್ರಮಣದಿಂದ ಉಂಟಾಗುವ ವಿಪುಲವಾದ ಮರ್ದನವನ್ನು ಸಹಿಸಬೇಕಾಗುವುದು, ಆದ್ದರಿಂದ ನನಗೂ ಅಮೃತದ ಒಂದು ಭಾಗವು ಬೇಕು ಎಂದು ಹೇಳಿದನು.
ಊಚುಶ್ಚ ಕೂರ್ಮರಾಜಾನಮಕೂಪಾರಂ ಸುರಾಸುರಾಃ |
ಅಧಿಷ್ಠಾನಂ ಗಿರೇರಸ್ಯ ಭವಾನ್ ಭವಿತುಮರ್ಹತಿ ॥11॥
ದೇವಾಸುರರು ಒಟ್ಟಿಗೆ ಸೇರಿ, ಅಕೂಪಾರನೆಂದು ಕರೆಸಿಕೊಳ್ಳಲ್ಪಡುವ ಕೂರ್ಮರಾಜನಾದ ವಿಷ್ಣುವನ್ನು ಸಮೀಪಿಸಿ, ಈ ಪರ್ವತವನ್ನು ಕೆಳಗೆ ಮುಳುಗದಂತೆ ನೀನು ಎತ್ತಿ ಹಿಡಿಯಬೇಕು ಎಂದು ಪ್ರಾರ್ಥಿಸಿದರು.
ಕೂರ್ಮೇಣ ತು ತಥೇತ್ಯುಕ್ತೇ ಪೃಷ್ಠೇ ತಸ್ಯ ಸಮರ್ಪಿತಃ |
ಸ ಶೈಲಸ್ತಸ್ಯ ಚಾಗ್ರಂ ವೈ ವಜ್ರೇಣೇಂದ್ರೋ ಹ್ಯಪೀಡಯತ್ ॥12॥
ಕೂರ್ಮರೂಪಿಯಾದ ವಿಷ್ಣುವು `ಹಾಗೆಯೇ ಆಗಲಿ' ಎಂದು ಹೇಳುತ್ತಿರಲು, ದೇವಾಸುರರು ಆ ಮಂದರಪರ್ವತವನ್ನು ಅವನ ಬೆನ್ನಿನ ಮೇಲೆ ಇಟ್ಟರು. ಆ ಪರ್ವತದ ಅಗ್ರಭಾಗವನ್ನು ಇಂದ್ರನು ತನ್ನ ವಜ್ರಾಯುಧದಿಂದ ಸರಿಮಾಡಿದನು. (ಹಗ್ಗವನ್ನು ಕಟ್ಟಲು ಅನುಕೂಲವನ್ನಾಗಿ ಮಾಡಿದನು.)
ಮಂಥಾನಂ ಮಂದರಂ ಕೃತ್ವಾ ಯೋಕ್ತ್ರಂ ಕೃತ್ವಾ ತು ವಾಸುಕಿಮ್|
ದೇವಾ ಮಥಿತುಮಾರಬ್ಧಾಃ ಸಮುದ್ರಂ ನಿಧಿಮಂಭಸಾಮ್ ॥13॥
ದೇವತೆಗಳು ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಿ, ವಾಸುಕಿಯನ್ನು ಹಗ್ಗವನ್ನಾಗಿ ಮಾಡಿ ಕ್ಷೀರಸಮುದ್ರವನ್ನು ಮಥನಮಾಡಲು ಪ್ರಾರಂಭಿಸಿದರು.
ಅಮೃತಾರ್ಥಿನಸ್ತತೋ ಬ್ರಹ್ಮನ್ ಸಹಿತಾ ದೈತ್ಯದಾನವೈಃ |
ಅನಂತೋ ಭಗವಾನ್ ದೇವೋ ಯತೋ ನಾರಾಯಣಃ ಸ್ಥಿತಃ |
ವಿಬುಧಾಃ ಸಹಿತಾಃ ಸರ್ವೇ ಯತಃ ಪುಚ್ಛಂ ತತಃ ಸ್ಥಿತಾಃ ॥14॥
ಎಲೈ ಬ್ರಾಹ್ಮಣನೇ, ಅಮೃತಾರ್ಥಿಗಳಾದ ದೇವತೆಗಳೂ ಮತ್ತು ದಾನವರೂ ಒಟ್ಟುಗೂಡಿದರು. ಗರುಡನೂ, ಭಗವಂತನಾದ ನಾರಾಯಣನೂ, ಎಲ್ಲಾ ದೇವತೆಗಳೂ, ವಾಸುಕಿಯ ಪುಚ್ಛದ ಬಳಿ ನಿಂತರು.
ವಾಸುಕೇರಂಗಮಾಶ್ಲಿಷ್ಯ ನಾಗರಾಜ್ಞೋ ಮಹಾಸುರಾಃ |
ಶಿರ ಉದ್ಯಮ್ಯ ನಾಗಸ್ಯ ಪುನಃ ಪುನರವಾಕ್ಷಿಪನ್ ॥15॥
ಮಹಾಸುರರೆಲ್ಲರೂ ತಲೆಯ ಬಳಿ ನಾಗರಾಜನಾದ ವಾಸುಕಿಯ ಶರೀರವನ್ನು ಹಿಡಿದು ಅದನ್ನು ಮೇಲಕ್ಕೆತ್ತಿ ಪುನಃ ಕೆಳಮುಖವಾಗಿ ತಳ್ಳುತ್ತಿದ್ದರು.
ವಾಸುಕೇರಥ ನಾಗಸ್ಯ ಸಹಸಾ ಕ್ಷಿಪ್ಯತೋಽಸುರೈಃ |
ಸಧೂಮಾಶ್ಚಾರ್ಚಿಷೋ ವಾತಾ ನಿಷ್ಪೇತುರಸಕೃನ್ಮುಖಾತ್ ॥16॥
ಹೀಗೆ ಮತ್ತೆ ಮತ್ತೆ ಮೇಲಕ್ಕೆತ್ತಿ ಕೆಳಗೆ ತಳ್ಳಲ್ಪಡುತ್ತಿದ್ದ ವಾಸುಕಿಯ ಮುಖದಿಂದ ವಿಷಪೂರಿತವಾದ, ಧೂಮಸಹಿತವಾದ, ಅಗ್ನಿಯಿಂದ ಕೂಡಿದ ವಾತವು ಇದ್ದಕ್ಕಿದ್ದಂತೆಯೇ ಹೊರಹೊಮ್ಮಿತು.
ವಾಸುಕೇರ್ಮಥ್ಯಮಾನಸ್ಯ ನಿಸ್ಸೃತೇನ ವಿಷೇಣ ಚ |
ಅಭವನ್ ಮಿಶ್ರಿತಂ ತೋಯಂ ತದಾ ಭಾರ್ಗವನಂದನ ॥17॥
ಎಲೈ ಭಾರ್ಗವನಂದನನೇ, ಹೀಗೆ ಕಡೆಯಲ್ಪಟ್ಟ ವಾಸುಕಿಯ ಮುಖದಿಂದ ಹೊರಟ ವಿಷದಿಂದ ಕ್ಷೀರಸಮುದ್ರದ ಜಲವು ಮಿಶ್ರಿತವಾಯಿತು.
ಮಥನಾನ್ಮಂದರೇಣಾಥ ದೇವದಾನವಬಾಹುಭಿಃ |
ವಿಷಂ ತೀಕ್ಷ್ಣಂ ಸಮುದ್ಭೂತಂ ಹಾಲಾಹಲಮಿತಿ ಶ್ರುತಮ್॥18॥
ದೇವದಾನವರು ತಮ್ಮ ಬಾಹುಗಳಿಂದ ಮಂದರಪರ್ವತವನ್ನು ಹೀಗೆ ಕಡೆಯುತ್ತಿರಲು ಹಾಲಾಹಲವೆಂದು ಪ್ರಖ್ಯಾತವಾದ ತೀಕ್ಷ್ಣವಾದ ವಿಷವು ಉದ್ಭವಿಸಿತು.
ದೇವಾಶ್ಚ ದಾನವಾಶ್ಚೈವ ದಗ್ಧಾಸ್ತೇನ ವಿಷೇಣ ಹ |
ಅಪಕ್ರಾಮಂಸ್ತತೋ ಭೀತಾ ವಿಷಾದಮಗಮಂಸ್ತದಾ ॥19॥
ದೇವತೆಗಳೂ ಮತ್ತು ದಾನವರೂ ಆ ವಿಷದಿಂದ ದಗ್ಧರಾಗಿ ಭಯದಿಂದ ಹಿಂದಕ್ಕೆ ಸರಿದು ವಿಷಾದವನ್ನು ಹೊಂದಿದರು.
ಬ್ರಹ್ಮಾಣಮಬ್ರುವನ್ ದೇವಾಃ ಸಮೇತ್ಯ ಮುನಿಪುಂಗವೈಃ |
ಮಥ್ಯಮಾನೇಽಮೃತೇ ಜಾತಂ ವಿಷಂ ಕಾಲಾನಲಪ್ರಭಮ್ |
ತೇನ ವೈ ತಾಪಿತಾ ಲೋಕಾಸ್ತಸ್ಯ ಪ್ರತಿಕುರುಷ್ವ ಹ ॥20॥
ದೇವತೆಗಳು ಋಷಿಶ್ರೇಷ್ಠರ ಜೊತೆಯಲ್ಲಿ ಆಗ ಬ್ರಹ್ಮದೇವರನ್ನು ಸಮೀಪಿಸಿ ಅಮೃತಕ್ಕಾಗಿ ಮಥನಮಾಡುತ್ತಿರಲು ಕಾಲಾನಲ ತೇಜಸ್ಸುಳ್ಳ ವಿಷವು ಉತ್ಪನ್ನವಾಯಿತು. ಅದರಿಂದ ನಾವೂ ಮತ್ತು ಎಲ್ಲಾ ಲೋಕಗಳೂ ತಾಪಕ್ಕೆ ಒಳಗಾಗಿದ್ದೇವೆ. ಆ ವಿಷದ ಬಾಧೆಯನ್ನು ಪರಿಹರಿಸು ಎಂದು ಹೇಳಿದರು.
ಏವಮುಕ್ತಸ್ತತೋ ಬ್ರಹ್ಮಾ ದಧ್ಯೌ ಲೋಕೇಶ್ವರಂ ಹರಮ್ |
ತ್ರ್ಯಕ್ಷಂ ತ್ರಿಶೂಲಿನಂ ರುದ್ರಂ ದೇವದೇವಮುಮಾಪತಿಮ್ ॥21॥
ಹೀಗೆ ಹೇಳಲ್ಪಟ್ಟ ಬ್ರಹ್ಮನು ಆಗ ತ್ರಿಶೂಲಿಯೂ, ತ್ರಿನೇತ್ರನೂ, ದೇವದೇವನೂ, ಲೋಕೇಶ್ವರನೂ ಆದ ರುದ್ರನನ್ನು ಸ್ಮರಿಸಿದನು.
ತದಾಽಥ ಚಿಂತಿತೋ ದೇವಸ್ತಜ್ಞಾತ್ವಾ ದ್ರುತಮಾಯಯೌ |
ತಸ್ಯಾಥ ದೇವಸ್ತತ್ಸರ್ವಮಾಚಚಕ್ಷೇ ಪ್ರಜಾಪತಿಃ ॥22॥

ಆಗ ಬ್ರಹ್ಮದೇವರು ತನ್ನನ್ನು ಸ್ಮರಿಸುತ್ತಿರುವುದನ್ನು ತಿಳಿದು ಶಂಕರನು ಬೇಗ ಅಲ್ಲಿಗೆ ಬಂದನು. ಅನಂತರ, ಪ್ರಜಾಪತಿಯಾದ ಬ್ರಹ್ಮದೇವರು ರುದ್ರನಿಗೆ ಎಲ್ಲ ವಿಷಯವನ್ನೂ ತಿಳಿಸಿದರು.
ತಚ್ಛ್ರುತ್ವಾ ದೇವದೇವೇಶೋ ಲೋಕಸ್ಯಾಸ್ಯ ಹಿತೇ ರತಃ |
ಅಪಿಬತ್ ತದ್ವಿಷಂ ರುದ್ರಃ ಕಾಲಾನಲಸಮಪ್ರಭಮ್ ‖23‖
ಬ್ರಹ್ಮದೇವರ ಮಾತನ್ನು ಕೇಳಿದ ಈ ಲೋಕದ ಹಿತದಲ್ಲಿಯೇ ರತನಾದ ದೇವದೇವೇಶನಾದ ಶಂಕರನು ಕಾಲಾಗ್ನಿಯ ಕಾಂತಿಯುಕ್ತವಾದ ಆ ವಿಷವನ್ನು ಪಾನಮಾಡಿದನು.
ಕಂಠೇ ಸ್ಥಾಪಿತವಾನ್ ದೇವೋ ಲೋಕಾನಾಂ ಹಿತಕಾಮ್ಯಯಾ |
ಯಸ್ಮಾತ್ತು ನೀಲತಾ ಕಂಠೇ ನೀಲಕಂಠಸ್ತತಃ ಸ್ಮೃತಃ ‖24‖
ಲೋಕಗಳಿಗೆ ಹಿತವನ್ನು ಉಂಟುಮಾಡುವ ದೃಷ್ಟಿಯಿಂದ ರುದ್ರದೇವನು ಆ ವಿಷವನ್ನು ಕಂಠದಲ್ಲಿಯೇ ಉಳಿಸಿಕೊಂಡನು. ನೀಲವಾದ ವಿಷವನ್ನು ಕಂಠದಲ್ಲಿ ಧರಿಸಿದ ಕಾರಣ ಅವನಿಗೆ ನೀಲಕಂಠನೆಂದು ಹೆಸರು ಬಂದಿತು.
ಪೀತಮಾತ್ರೇ ವಿಷೇ ತತ್ರ ರುದ್ರೇಣಾಮಿತತೇಜಸಾ |
ದೇವಾಃ ಪ್ರೀತಾಃ ಪುನರ್ಜಗ್ಮುಶ್ಚಕ್ರುರ್ವೈ ಕರ್ಮ ತತ್ತಥಾ ‖25‖
ಅಮಿತಪರಾಕ್ರಮಿಯಾದ ರುದ್ರನು ಅಲ್ಲೇ ಆ ವಿಷವನ್ನು ಕುಡಿಯುತ್ತಿರಲು ದೇವತೆಗಳು ಸಂತುಷ್ಟರಾಗಿ ಪುನಃ ಕ್ಷೀರಸಮುದ್ರದ ಬಳಿಗೆ ಬಂದು ಮಥನವನ್ನು ಮುಂದುವರೆಸಿದರು.
ಮಥ್ಯಮಾನೇऽಮೃತಸ್ಯಾರ್ಥೇ ಭೂಯೋ ವೈ ದೇವದಾನವೈಃ |
ವಾಸುಕೇರಥ ನಾಗಸ್ಯ ಸಹಸಾ ಕ್ಷಿಪ್ಯತಸ್ತು ತೈಃ |
ಸಧೂಮಾಃ ಸಾರ್ಚಿಷೋ ವಾತಾ ನಿಷ್ಪೇತುರಸಕೃನ್ಮುಖಾತ್ ‖26‖
ದೇವದಾನವರು ಅಮೃತದ ಸಲುವಾಗಿ ಮಥನವನ್ನು ಮಾಡಿ ವಾಸುಕಿಯನ್ನು ಬಹಳವಾಗಿ ಎಳೆದಾಡುತ್ತಿರಲು ವಾಸುಕಿಯ ಮುಖದಿಂದ ವಿಷಧೂಮಸಹಿತವಾದ ಅಗ್ನಿಯ ಕಿಡಿಗಳುಳ್ಳ ವಾಯುವು ಹೊರಹೊಮ್ಮಿತು.
ತೇ ಧೂಮಸಂಘಾಃ ಸಂಭೂತಾ ಮಹಾಮೇಘಾಃ ಸವಿದ್ಯುತಃ |
ಅಭ್ಯವರ್ಷನ್ ಸುರಗಣಾನ್ ಶ್ರಮಸಂತಾಪಕರ್ಶಿತಾನ್ ‖
ತಸ್ಮಾಚ್ಚ ಗಿರಿಕೂಟಾಗ್ರಾತ್ ಪ್ರಚ್ಯುತಾಃ ಪುಷ್ಪವೃಷ್ಟಯಃ |
ಸುರಾಸುರಗಣಾನ್ ಮಾಲ್ಯೈ ಸರ್ವತಃ ಸಮವಾಕಿರನ್ ‖27‖
ಆ ಧೂಮವೆಲ್ಲವೂ ಒಟ್ಟುಗೂಡಿ ಮಹಾಮೇಘವಾಗಿ ಪರಿಣಮಿಸಿ, ವಿದ್ಯುತ್‌ಗಳ ಜೊತೆಯಲ್ಲಿ ಸೇರಿ, ದೇವತಾಗಣದ ಮೇಲೆ ಮಳೆಯನ್ನು ಸುರಿಸಿ ಅವರ ಶ್ರಮಸಂತಾಪಗಳನ್ನು ನಾಶಗೊಳಿಸಿದವು. ಮಂದರಪರ್ವತದ ಶಿಖರದಲ್ಲಿದ್ದ ಮರಗಳಿಂದ ಉದುರಿದ ಪುಷ್ಪಗಳು ಸುರಾಸುರಗಣಗಳಿಗೆ ಪುಷ್ಪವೃಷ್ಟಿಯನ್ನು ಮಾಡಿ ಅವರ ತಾಪವನ್ನು ಕಡಿಮೆ ಮಾಡಿದವು.
ಬಭೂವಾತ್ರ ಮಹಾಘೋಷೋ ಮಹಾಮೇಘರವೋಪಮಃ |
ಉದಧೇರ್ಮಥ್ಯಮಾನಸ್ಯ ಮಂದರೇಣ ಸುರಾಸುರೈಃ ‖28‖
ಸುರಾಸುರರು ಮಂದರಪರ್ವತದಿಂದ ಉದಧಿಯನ್ನು ಮಥನ ಮಾಡುತ್ತಿರಲು, ಆ ಕಡೆಯುವ ಘೋಷವು ಮಹಾಮೇಘ ಘೋಷದಂತೆ ಇದ್ದಿತು.
ತತ್ರ ನಾನಾಜಲಚರಾ ವಿನಿರ್ಧೂತಾ ಮಹಾದ್ರಿಣಾ |
ವಿಲಯಂ ಸಮುಪಾಜಗ್ಮುಃ ಶತಶೋ ಲವಣಾಂಭಸಿ ‖29‖
ಆ ಮಹಾಪರ್ವತದ ಭಾರಕ್ಕೆ ಸಿಲುಕಿದ ಅನೇಕ ಜಲಚರಪ್ರಾಣಿಗಳು, ನೂರಾರರ ಸಂಖ್ಯೆಯಲ್ಲಿ ಅಲ್ಲಿ ನಾಶವನ್ನು ಹೊಂದಿದವು.
ವಾರುಣಾನಿ ಚ ಭೂತಾನಿ ವಿವಿಧಾನಿ ಮಹೀಧರಾತ್ |
ಪಾತಾಳತಳವಾಸೀನಿ ವಿಲಯಂ ಸಮುಪಾಗಮನ್ ‖30‖
ಅನೇಕ ಜಲಚರಪ್ರಾಣಿಗಳೂ, ಪಾತಾಳತಳವಾಸಿಯಾದ ಪ್ರಾಣಿಗಳೂ, ಸಮುದ್ರದ ಭಾರದಿಂದ ನಾಶವನ್ನು ಹೊಂದಿದವು.
ತಸ್ಮಿಂಶ್ಚ ಭ್ರಾಮ್ಯಮಾಣೇऽದ್ರೌ ಸಂಘೃಷ್ಯಂತಃ ಪರಸ್ಪರಮ್ |
ನ್ಯಪತನ್‌ಪತಗೋಪೇತಾಃ ಪರ್ವತಾಗ್ರಾನ್ಮಹಾದ್ರುಮಾಃ ‖ 31‖
ಆ ಮಂದರವು ತಿರುಗಿಸಲ್ಪಡುತ್ತಿರಲು ಪರ್ವತದ ಶಿಖರದಲ್ಲಿದ್ದ ಮಹಾವೃಕ್ಷಗಳು ಒಂದರ ಮೇಲೊಂದು ಬೀಳುತ್ತಾ ತಮ್ಮಲ್ಲಿ ವಾಸಮಾಡಿದ ಪಕ್ಷಿಗಳ ಜೊತೆಯಲ್ಲಿ ಸಮುದ್ರದೊಳಗೆ ಬಿದ್ದವು.
ತೇಷಾಂ ಸಂಘರ್ಷತಶ್ಚಾಗ್ನಿರುತ್ಥಿತಃ ಪ್ರಜ್ವಲನ್ ಮುಹುಃ |
ವಿದ್ಯುದ್ಭಿರಿವ ನೀಲಭ್ರಮಾವೃಣೋನ್ಮಂದರಂ ಗಿರಿಮ್ ‖32‖
ಮರಗಳ ಪರಸ್ಪರ ಸಂಘರ್ಷದಿಂದ ಉಂಟಾದ ಅಗ್ನಿಯು ಮಿಂಚುಗಳೋಪಾದಿಯಲ್ಲಿದ್ದು, ಮಂದರಪರ್ವತವನ್ನು ಆವರಿಸಿತು.
ದದಾಹ ಕುಂಜರಾಂಶ್ಚೈವ ಸಿಂಹಾಂಶ್ಚೈವ ವಿನಿರ್ಗತಾನ್ |
ವಿಗತಾಸೂನಿ ಸತ್ವಾನಿ ಸರ್ವಾಣಿ ವಿವಿಧಾನಿ ಚ ‖33‖
ತಮ್ಮ ವಾಸಸ್ಥಾನಗಳಿಂದ ಹೊರಬಂದ ಆನೆಗಳನ್ನೂ ಮತ್ತು ಸಿಂಹಗಳನ್ನೂ ಮತ್ತು ಅನೇಕ ವಿಧವಾದ ಪ್ರಾಣಿಗಳನ್ನೂ ಆ ಅಗ್ನಿಯು ನಾಶಮಾಡಿತು.
ತಮಗ್ನಿಂ ಮಂದರಶ್ರೇಷ್ಠಂ ಪ್ರದಹಂತಮಿತಸ್ತತಃ |
ವಾರಿಣಾ ಮೇಘಜೇನೇಂದ್ರಃ ಶಮಯಾಮಾಸ ಸರ್ವಶಃ ‖34‖
ಎಲ್ಲಾ ಕಡೆಯಲ್ಲಿಯೂ ಆ ಮಂದರಪರ್ವತವನ್ನು ದಹಿಸುತ್ತಿರುವ ಅಗ್ನಿಯನ್ನು ಇಂದ್ರನು ಮೇಘಜನ್ಯವಾದ ಜಲದಿಂದ

ಶಮನಗೊಳಿಸಿದನು.
ತತೋ ನಾನಾವಿಧಾಸ್ತತ್ರ ಸುಸ್ರುವುಃ ಸಾಗರಾಂಭಸಿ |
ಮಹಾದ್ರುಮಾಣಾಂ ನಿರ್ಯಾಸಾ ಬಹವಶ್ಚೌಷಧೀರಸಾಃ ॥35॥
ಅನಂತರ ಆ ಸಾಗರದ ನೀರಿನಲ್ಲಿ ಅನೇಕ ವಿಧವಾದ ವೃಕ್ಷಗಳ ರಸಗಳೂ ಮತ್ತು ಅನೇಕ ಔಷಧಿಗಳ ರಸಗಳೂ ಸಹ, ಆಯಾ ಮರಗಳಿಂದ ಮತ್ತು ಲತೆಗಳಿಂದ ಸ್ರವಿಸಿ ಸೇರಿಕೊಂಡವು.
ತೇಷಾಮಮೃತವೀರ್ಯಾಣಾಂ ರಸಾನಾಮಾಸವೇನ ಚ |
ಅಮೃತತ್ವಂ ಸುರಾ ಜಗ್ಮುಃ ಕಾಂಚನಸ್ಯ ಚ ನಿಸ್ರವಾತ್ ॥36॥
ಆ ವೃಕ್ಷಗಳ ಮಹಾಪರಿಣಾಮವುಳ್ಳ ರಸಗಳಿಂದಲೂ, ಕಾಂಚನರಸದಿಂದಲೂ, ದೇವತೆಗಳು ಅಮೃತತತ್ವವನ್ನು ಹೊಂದಿದರು (ಬಲಿಷ್ಠರಾದರು)
ಅಥ ತಸ್ಯ ಸಮುದ್ರಸ್ಯ ಸಂಜಾತಮುದಕಂ ಪಯಃ |
ರಸೋಪಮದ್ರ್ಯೈರ್ಮಿಶ್ರಂ ಚ ತತಃ ಕ್ಷೀರಾದಭೂದ್ ಘೃತಮ್ ॥37॥
ಅನಂತರ ಈ ಅನೇಕ ರಸಗಳಿಂದ ಮಿಶ್ರಿತವಾದ ಆ ಸಮುದ್ರದ ಕ್ಷೀರರೂಪವಾದ ಜಲವು ಘೃತವಾಗಿ ಪರಿಣಮಿಸಿತು.
ತತೋ ಬ್ರಹ್ಮಾಣಮಾಸೀನಂ ದೇವಾ ವರದಮಬ್ರುವನ್ |
ಶ್ರಾಂತಾಃ ಸ್ಮ ಸುಭೃಶಂ ಬ್ರಹ್ಮನ್ನ ಭವತ್ಯಮೃತಂ ಜಲಾತ್ ॥38॥
ಆಗ ದೇವತೆಗಳು ವರದನಾದ ಬ್ರಹ್ಮದೇವರನ್ನು ಸಮೀಪಿಸಿ ಬ್ರಹ್ಮದೇವನೇ, ನಾವು ಬಹಳವಾಗಿ ಬಳಲಿದ್ದೇವೆ. ಸಮುದ್ರದಿಂದ ಅಮೃತವು ಉಂಟಾಗುತ್ತಿಲ್ಲ ಎಂದು ಹೇಳಿದರು.
ಋತೇ ನಾರಾಯಣಂ ದೇವಂ ದೈತ್ಯಾ ನಾಗೋತ್ತಮೋ ವಯಮ್ |
ಚಿರಾರಬ್ಧಮಿದಂ ಚಾಪಿ ಸಾಗರಸ್ಯ ವಿಮಂಥನಮ್ ॥39॥
ನಾರಾಯಣನನ್ನೊಬ್ಬನನ್ನು ಬಿಟ್ಟು ದೈತ್ಯರೂ, ನಾವೂ ಮತ್ತು ವಾಸುಕಿಯೂ ಸೇರಿ ಸಾಗರದ ಮಂಥನವನ್ನು ಪ್ರಾರಂಭಿಸಿ ಬಹಳ ಕಾಲವು ಕಳೆಯಿತು ಎಂದು ಹೇಳಿದರು.
ದೇವಾನಾಂ ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ |
ತತೋ ನಾರಾಯಣಂ ದೇವಂ ವಚನಂ ಚೇದಮಬ್ರವೀತ್ |
ವಿಧತ್ಸ್ವೈಷಾಂ ಬಲಂ ವಿಷ್ಣೋ ಭವಾನತ್ರ ಪರಾಯಣಃ ॥40॥
ದೇವತೆಗಳ ವಚನವನ್ನು ಕೇಳಿದ ಲೋಕಪಿತಾಮಹನಾದ ಬ್ರಹ್ಮದೇವನು ಆಗ ನಾರಾಯಣನನ್ನು ಕುರಿತು ವಿಷ್ಣುವೇ, ನೀನೇ ಎಲ್ಲರಿಗೂ ಶ್ರೇಷ್ಠನಾದ ಪರಾಯಣನಾದವನು. ಆದ್ದರಿಂದ ಇವರಿಗೆ ಸಾಮರ್ಥ್ಯವನ್ನು ಕೊಡು ಎಂದು ಹೇಳಿದನು.
ಶ್ರೀಭಗವನ್
ಬಲಂ ದದಾಮಿ ಸರ್ವೇಷಾಂ ಕರ್ಮೈತದ್ ಯೇ ಸಮಾಸ್ಥಿತಾಃ |
ಕ್ಷೋಭ್ಯತಾಂ ಕಲಶಃ ಸರ್ವೈರ್ಮಂದರಃ ಪರಿವರ್ತ್ಯತಾಮ್ ॥ 41॥
ನಾನು ಈ ಕಾರ್ಯದಲ್ಲಿ ಉದ್ಯುಕ್ತರಾದವರಿಗೆಲ್ಲಾ ಬಲವನ್ನು ಕೊಡುತ್ತೇನೆ. ಎಲ್ಲರೂ ಸೇರಿ ಮಂದರವನ್ನು ತಿರುಗಿಸಿ ಸಮುದ್ರವನ್ನು ಕಡೆಯಿರಿ.
ಸೂತಃ
ನಾರಾಯಣವಚಃ ಶ್ರುತ್ವಾ ಬಲಿನಸ್ತೇ ಮಹೋದಧೇಃ |
ತತ್ಪಯಃ ಸಹಿತಾ ಭೂಯಶ್ಚಕ್ರಿರೇ ಭೃಶಮಾಕುಲಮ್ ॥42॥
ನಾರಾಯಣನ ಮಾತನ್ನು ಕೇಳಿ ಬಲಿಷ್ಠರಾದ ದೇವಾಸುರರು ಪುನಃ ಆ ಮಹೋದಧಿಯ ಜಲವನ್ನು ಕಡೆದು ಪ್ರಕ್ಷುಬ್ಧವನ್ನಾಗಿ ಮಾಡಿದರು.
ತತ್ರ ಪೂರ್ವಂ ವಿಷಂ ಜಾತಂ ತದ್ ಬ್ರಹ್ಮವಚನಾಚ್ಛಿವಃ |
ಪ್ರಾಗ್ರಸಲ್ಲೋಕರಕ್ಷಾರ್ಥಂ ತತೋ ಜ್ಯೇಷ್ಠಾ ಸಮುತ್ಥಿತಾ |
ಕೃಷ್ಣರೂಪಧರಾ ದೇವೀ ಸರ್ವಾಭರಣಭೂಷಿತಾ ॥43॥
ಆಗ ಅಲ್ಲಿ ಮೊದಲು ವಿಷವು ಉತ್ಪನ್ನವಾಯಿತು. ಬ್ರಹ್ಮದೇವರ ವಚನದಂತೆ ಶಿವನು ಲೋಕವನ್ನು ರಕ್ಷಿಸುವ ಸಲುವಾಗಿ ಅದನ್ನು ಪಾನಮಾಡಿದನು. ಅನಂತರ ಕೃಷ್ಣವರ್ಣೋಪೇತಳಾದ, ಸರ್ವಾಭರಣಭೂಷಿತಳಾದ ಜ್ಯೇಷ್ಠಾದೇವಿ ಉತ್ಪನ್ನಳಾದಳು.
ತತಃ ಶತಸಹಸ್ರಾಂಶುಃ ಸಮಾನ ಇವ ಸಾಗಾರಾತ್ |
ಪ್ರಸನ್ನಾಭಃ ಸಮುತ್ಪನ್ನಃ ಸೋಮಃ ಶೀತಾಂಶುರುಜ್ಜ್ವಲನ್ ॥44॥
ಅನಂತರ ಸಹಸ್ರಾರು ಕಿರಣಗಳುಳ್ಳ, ತನ್ನ ಶ್ವೇತವರ್ಣದಿಂದ ಕ್ಷೀರಸಮುದ್ರಕ್ಕೆ ಸಮಾನನಾದ, ಪ್ರಸನ್ನವಾದ ಕಾಂತಿಯನ್ನು ಹೊಂದಿದ ಶೀತಕಿರಣಗಳನ್ನುಳ್ಳ ಚಂದ್ರನು ಪ್ರಕಾಶಿಸುತ್ತಾ ಮೇಲೆ ಬಂದನು.
ಶ್ರೀರನಂತರಮುತ್ಪನ್ನಾ ಘೃತಾತ್ ಪಾಂಡರವಾಸಿನೀ |
ಸುರಾ ದೇವೀ ಸಮುತ್ಪನ್ನಾ ತುರಗಃ ಪಾಂಡರಸ್ತಥಾ |
ಕೌಸ್ತುಭಶ್ಚ ಮಣಿರ್ದಿವ್ಯ ಉತ್ಪನ್ನೋಽಮೃತಸಂಭವಃ |
ಮರೀಚಿವಿಕಚಃ ಶ್ರೀಮಾನ್ ಸ ಚ ನಾರಾಯಣಂ ಗತಃ ॥45॥
ಅನಂತರ ಶುಭ್ರ ಶ್ವೇತವಸ್ತ್ರವನ್ನು ಧರಿಸಿದ ಲಕ್ಷ್ಮೀದೇವಿಯು ಆ ಘೃತದಿಂದ ಮೇಲೆದ್ದು ಬಂದಳು. ಅನಂತರ ಮದ್ಯಾಭಿಮಾನಿ ದೇವತೆಯೂ ಮೇಲೆ ಬಂದಳು. ಬಿಳಿಯ ಬಣ್ಣದ ಉಚ್ಚೈಃಶ್ರವ ಕುದುರೆಯೂ ಮತ್ತು ದಿವ್ಯವಾದ ಕೌಸ್ತುಭಮಣಿಯೂ

ಅಮೃತಸಮುದ್ರದಿಂದ ಮೇಲೆ ಬಂದವು.ಒಳ್ಳೆಯ ಕಿರಣಗಳಿಂದ ಕೂಡಿದ ಪ್ರಕಾಶವಾದ ಆ ಮಣಿಯನ್ನು ನಾರಾಯಣನು ಧರಿಸಿದನು.
ಪಾರಿಜಾತಶ್ಚ ತತ್ರೈವ ಸುರಭಿಶ ್ಚ ಮಹಾಮುನೇ |
ಜಜ್ಞಾತೇ ತೌ ತದಾ ಬ್ರಹ್ಮನ್ ಸರ್ವಕಾಮಫಲಪ್ರದೌ ॥46॥
ಎಲೈ ಮಹರ್ಷಿಯೇ, ಅಲ್ಲಿಯೇ ಪಾರಿಜಾತ ವೃಕ್ಷವೂ ಮತ್ತು ಧೇನುವಾದ ಸುರಭಿಯೂ ಜನಿಸಿದವು. ಬ್ರಾಹ್ಮಣನೇ, ಅವೆರಡೂ ವಸ್ತುಗಳೂ ಸರ್ವಕಾಮಪ್ರದವಾದುವು.
ತತೌ ಜಜ್ಞೇ ಮಹಾಭಾಗ ಚತುರ್ದಂತೋ ಮಹಾಗಜಃ |
ಐರಾವತಃ ಸ ವೈ ನಾಗೋ ನಾಗಾನಾಂ ಪ್ರವರಃ ಶುಚಿಃ ॥47॥
ಎಲೈ ಮಹಾನುಭಾವನೇ, ಅನಂತರ ನಾಲ್ಕುದಂತಗಳುಳ್ಳ ಗಜಜಾತಿಯಲ್ಲೇ ಶ್ರೇಷ್ಠವಾದ ಶ್ವೇತವರ್ಣದ, ಪರಿಶುದ್ಧವಾದ ಐರಾವತಗಜವು ಉತ್ಪನ್ನವಾಯಿತು.
ಕೌಸ್ತುಭಶ್ಚಾಪ್ಸರಾಶ್ಚೈವ ಐರಾವತಮಹಾಗಜಃ |
ಯತೋ ದೇವಾಸ್ತತೋ ಜಗ್ಮುರಾದಿತ್ಯಪಥಮಾಶ್ರಿತಾಃ ॥48॥
ಕೌಸ್ತುಭವೂ, ಅಪ್ಸರೆಯರೂ, ಐರಾವತಗಜವೂ, ಸೂರ್ಯಮಾರ್ಗವನ್ನು ಆಶ್ರಯಿಸಿ ದೇವತೆಗಳ ಕಡೆಗೆ ಹೋದವು.
ಧನ್ವಂತರಿಸ್ತತೋ ದೇವೋ ವಪುಷ್ಮಾನುದತಿಷ್ಠತ |
ಶ್ವೇತಂ ಕಮಂಡಲುಂ ಬಿಭ್ರದಮೃತಂ ಯತ್ರ ತಿಷ್ಠತಿ ॥49॥
ಅನಂತರ ದೇವನಾದ ಧನ್ವಂತರಿಯು ಒಂದು ಮೂರ್ತಿಯನ್ನು ಧರಿಸಿ ಅಮೃತವು ತುಂಬಿದ ಶ್ವೇತ ಕಮಂಡಲುವನ್ನು ಕೈಯಲ್ಲಿ ಹಿಡಿದು ಎದ್ದು ಬಂದನು.
ಏತದತ್ಯದ್ಭುತಂ ದೃಷ್ಟ್ವಾ ದಾನವಾನಾಂ ಸಮುತ್ಥಿತಃ |
ಅಮೃತಾರ್ಥೇ ಮಹಾನ್ ನಾದೋ ಮಮೇದಮಿತಿ ಜಲ್ಪತಾಮ್ ॥
ಈ ಅದ್ಭುತವಾದ ದೃಶ್ಯವನ್ನು ನೋಡಿದ ದಾನವರ ಸಮೂಹದಿಂದ ಅಮೃತದ ಸಲುವಾಗಿ `ಇದು ನನ್ನದು ಇದು ನನ್ನದು' ಎಂಬ ಕಿರುಚಾಟವು ಕೇಳಿಬಂದಿತು.
ತತೋ ನಾರಾಯಣೋ ಮಾಯಾಮಾಸ್ಥಿತೋ ಮೋಹಿನೀಂ ಪ್ರಭುಃ|
ಸ್ತ್ರೀರೂಪಮದ್ಭುತಂ ಕೃತ್ವಾ ದಾನವಾನಭಿಸಂಶ್ರಿತಃ ॥51॥
ಆಗ ನಾರಾಯಣನು ತನ್ನ ಇಚ್ಛೆಯಿಂದ ಮೋಹಕವಾದ, ಅದ್ಭುತವಾದ ಒಂದು ಸ್ತ್ರೀರೂಪವನ್ನು ಧರಿಸಿ ದಾನವರ ಕಡೆಗೆ ಬಂದನು.
ತತಸ್ತದಮೃತಂ ತಸ್ಯೈ ದದುಸ್ತೇ ಮೂಢಚೇತಸಃ |
ಸ್ತ್ರಿಯೈ ದಾನವದೈತೇಯಾಃ ಸರ್ವೇ ತದ್ಗತಮಾನಸಾಃ ॥52॥
ಆಗ ಆ ದಾನವದೈತೇಯರೆಲ್ಲರೂ ಅವಳಲ್ಲೇ ನೆಟ್ಟ ಮನಸ್ಸುಳ್ಳವರಾಗಿ ಮೌಢ್ಯದಿಂದ ಕೂಡಿದವರಾಗಿ ಅವಳ ಕೈಯಲ್ಲಿ ಅಮೃತಕಲಶವನ್ನು ಕೊಟ್ಟರು.
ಸಾ ತು ನಾರಾಯಣೀ ಮಾಯಾ ಧಾರಯಂತೀ ಕಮಂಡಲುಮ್|
ಅಸ್ಯಮಾನೇಷು ದೇವೇಷು ಪಂಕ್ತ್ಯಾ ಚ ಸಹ ದಾನವೈಃ |
ದೇವಾನಪಾಯಯದ್ ದೇವೀ ನ ದೈತ್ಯಾಂಸ್ತೇ ಚ ಚುಕ್ರುಶುಃ ॥53॥
ದೇವತೆಗಳೂ ಮತ್ತು ದಾನವರೂ ಬೇರೆ ಬೇರೆ ಪಂಕ್ತಿಗಳಲ್ಲಿ ಕುಳಿತಿರಲು ಮೋಹಿನಿಯ ರೂಪವನ್ನು ಧರಿಸಿದ ನಾರಾಯಣನು ದೇವತೆಗಳಿಗೆ ಅಮೃತವನ್ನು ಪಾನಮಾಡಿಸಿದನು. ದೈತ್ಯರಿಗೆ ಅಮೃತವು ದೊರೆಯಲಿಲ್ಲ. ಅವರು ಆಕ್ರೋಶವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಷೋಡಷೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
*****

ಹದಿನೇಳನೆಯ ಅಧ್ಯಾಯ
(ದೇವತೆಗಳಿಂದ ಅಮೃತಪಾನ, ದೇವಾಸುರ ಸಂಗ್ರಾಮ, ಅಸುರರ ಪರಾಭವ, ಮಂದರಪರ್ವತದ ಯಥಾಸ್ಥಾನಗಮನ ಮತ್ತು ಅಮೃತದ ರಕ್ಷಣೆ.)
ಸೂತಃ
ಅಥಾವರಣಮುಖ್ಯಾನಿ ನಾನಾಪ್ರಹರಣಾನಿ ಚ |
ಪ್ರಗೃಹ್ಯಾಭ್ಯದ್ರವನ್ ದೇವಾನ್ ಸಹಿತಾ ದೈತ್ಯದಾನವಾಃ ॥1॥
ಅನಂತರ ದೈತ್ಯದಾನವರು ಅನೇಕ ಆಯುಧಗಳನ್ನೂ ಮತ್ತು ಆಯುಧಪ್ರಹಾರಗಳನ್ನು ನಿವಾರಣೆ ಮಾಡುವ ಸಾಧನಗಳನ್ನೂ ತೆಗೆದುಕೊಂಡು ಒಂದುಗೂಡಿ ದೇವತೆಗಳ ಮೇಲೆ ಎರಗಿದರು.
ತತಸ್ತದಮೃತಂ ದೇವೋ ವಿಷ್ಣುರಾದಾಯ ವೀರ್ಯವಾನ್ |
ಜಗಾಮ ದಾನವೇಂದ್ರೇಭ್ಯೋ ನರೇಣ ಸಹಿತಃ ಪ್ರಭುಃ ॥2॥
ಆಗ ಪರಾಕ್ರಮಶಾಲಿಯಾದ ವಿಷ್ಣುವು ಆಗತಾನೇ ಧರಿಸಿದ್ದ ಪುರುಷರೂಪವನ್ನು ತೆಗೆದುಕೊಂಡು, ಅಮೃತವನ್ನು ತೆಗೆದುಕೊಂಡು

ನರನಿಂದ ಸಹಿತನಾಗಿ ದಾನವೇಂದ್ರರ ಸಮೀಪದಿಂದ ದೇವತೆಗಳ ಬಳಿಗೆ ಹೋದನು.
ತತೋ ದೇವಗಣಾಃ ಸರ್ವೇ ಪಪುಸ್ತದಮೃತಂ ತದಾ |
ವಿಷ್ಣೋಃ ಸಕಾಶಾತ್ ಸಂಪ್ರಾಪ್ಯ ಸಂಗ್ರಾಮೇ ತುಮುಲೇ ಸತಿ ॥3॥
ಆಗ ದೇವತೆಗಳೆಲ್ಲರೂ ತುಮುಲವಾದ ಸಂಗ್ರಾಮವು ಜರುಗುತ್ತಿರಲು, ಆ ದೊಡ್ಡ ಕೋಲಾಹಲ ಮಧ್ಯದಲ್ಲಿ ವಿಷ್ಣುವಿನ ಕೈಯಿಂದ ಅಮೃತವನ್ನು ಪಡೆದು ಪಾನಮಾಡಿದರು.
ಪಾಯಯತ್ಯಮೃತಂ ದೇವಾನ್ ಹರೌ ಬಾಹುಬಲೇನ ಚ |
ನರೋ ರಕ್ಷತಿ ಚಾಪೇನ ದೂರೀಕೃತ್ಯ ಧನುರ್ಧರಾನ್ ॥4॥
ಹರಿಯು ದೇವತೆಗಳಿಗೆ ಅಮೃತವನ್ನು ಪಾನಮಾಡಿಸುತ್ತಿರಲು ನರನು ತನ್ನ ಬಾಹುಬಲದಿಂದ ಕೈಯಲ್ಲಿ ಚಾಪವನ್ನು ಧರಿಸಿ ಧನುರ್ಧರರಾದ ದಾನವರನ್ನು ದೂರಕ್ಕಟ್ಟುತ್ತಿದ್ದನು.
ತತಃ ಪಿಬತ್ಸು ತತ್ಕಾಲೇ ದೇವೇಷ್ವಮೃತಮುತ್ತಮಮ್ |
ರಾಹುರ್ವಿಬುಧರೂಪೇಣ ದಾನವಃ ಪ್ರಾಪಿಬತ್ ತದಾ ॥5॥
ಆಗ ದೇವತೆಗಳು ಶ್ರೇಷ್ಠವಾದ ಅಮೃತವನ್ನು ಪಾನಮಾಡುತ್ತಿರಲು ಆ ಕಾಲದಲ್ಲಿ ದಾನವನಾದ ರಾಹುವು ದೇವತೆಯ ರೂಪವನ್ನು ಧರಿಸಿ ಅಮೃತವನ್ನು ಪಾನಮಾಡಿದನು.
ತಸ್ಯ ಕಂಠಮನುಪ್ರಾಪ್ತೇ ದಾನವಸ್ಯಾಮೃತೇ ಸತಿ |
ಆಖ್ಯಾತಂ ಚಂದ್ರಸೂರ್ಯಾಭ್ಯಾಂ ಸುರಾಣಾಂ ಹಿತಕಾಮ್ಯಯಾ ॥
ಅಮೃತವು ಆ ದಾನವನ ಕಂಠದವರೆಗೆ ಹೋಗುತ್ತಿರಲು ದೇವತೆಗಳ ಹಿತದ ಕಾಮನೆಯಿಂದ ಸೂರ್ಯಚಂದ್ರರು ಆ ವಿಷಯವನ್ನು ನಾರಾಯಣನಿಗೆ ತಿಳಿಸಿದರು.
ತತೋ ಭಗವತಾ ತಸ್ಯ ಶಿರಶ್ಛಿನ್ನಮಲಂಕೃತಮ್ |
ಚಕ್ರಾಯುಧೇನ ಚಕ್ರೇಣ ಪಿಬತೋಽಮೃತಮೋಜಸಾ ॥7॥
ಆಗ ಭಗವಂತನಾದ ನಾರಾಯಣನು ಬಲಾತ್ಕಾರದಿಂದ ಅಮೃತವನ್ನು ಪಾನಮಾಡುತ್ತಿರುವ ರಾಹುವಿನ ಅಲಂಕೃತವಾದ ಶಿರಸ್ಸನ್ನು ಚಕ್ರಾಯುಧನಾದ ಅವನು ತನ್ನ ಚಕ್ರದಿಂದ ಕತ್ತರಿಸಿದನು.
ತಚ್ಛೈಲಶೃಂಗಪ್ರತಿಮಂ ದಾನವಸ್ಯ ಶಿರೋ ಮಹತ್ |
ಚಕ್ರೇಣೋತ್ಕೃತ್ತಮಪತಚ್ಚಾಲಯದ್ ವಸುಧಾತಳಮ್ ॥8॥
ದಾನವನ ಗಿರಿಶಿಖರಸದೃಶವಾದ ಆ ದೊಡ್ಡ ಶಿರಸ್ಸು ಚಕ್ರದಿಂದ ಕತ್ತರಿಸಲ್ಪಟ್ಟು ಭೂಮಿಯನ್ನು ನಡುಗಿಸುತ್ತಾ ನೆಲದ ಮೇಲೆ ಬಿದ್ದಿತು.
ತತ್ ಕಬಂಧಂ ಪಪಾತಾಸ್ಯ ವಿಸ್ಫುರದ್ ಧರಣಿತಳೇ |
ಸಪರ್ವತವನದ್ವೀಪಾಂ ದೈತ್ಯಸ್ಯಾಕಂಪಯನ್ ಮಹೀಮ್ ॥9॥
ಆ ದೈತ್ಯನ ಚಂಚಲವಾದ ಕಬಂಧವೂ ಸಹ ಪರ್ವತವನದ್ವೀಪಗಳಿಂದ ಸಹಿತವಾದ ಭೂಮಿಯನ್ನು ನಡುಗಿಸುತ್ತಾ ಭೂಮಿಯ ಮೇಲೆ ಬಿದ್ದಿತು.
ತತೋ ವೈರವಿನಿರ್ಬಂಧಃ ಕೃತೋ ರಾಹುರ್ಮುಖೇನ ವೈ |
ಶಾಶ್ವತಶ್ಚಂದ್ರಸೂರ್ಯಾಭ್ಯಾಂ ಗ್ರಸತ್ಯದ್ಯಾಪಿ ಚೈವ ತೌ ॥10॥
ಆ ಕಾರಣದಿಂದ ರಾಹುವು ಚಂದ್ರಸೂರ್ಯರ ಮೇಲೆ ತನ್ನ ಶಿರಸ್ಸಿನಿಂದಲೇ ಆಗ್ರಹದಿಂದ ವೈರವನ್ನು ಸಾಧಿಸಿದನು. ಈಗಲೂ ಸಹ ಅವರಿಬ್ಬರನ್ನೂ ಅವನು ತನ್ನ ಮುಖದಿಂದಲೇ ನುಂಗುತ್ತಾನೆ.
ವಿಹಾಯ ಭಗವಾಂಶ್ಚಾಪಿ ಸ್ತ್ರೀರೂಪಮತುಳಂ ಹರಿಃ |
ನಾನಾಪ್ರಹರಣೈರ್ಭೀಮೈರ್ದಾನವಾನ್ ಸಮಕಂಪಯತ್ ॥11॥
ಹರಿಯೂ ಸಹ ತನ್ನ ಅಸದೃಶವಾದ ಸ್ತ್ರೀರೂಪವನ್ನು ತೊರೆದು ಭಯಂಕರವಾದ ನಾನಾಯುಧಗಳನ್ನು ಹಿಡಿದು ದಾನವರನ್ನು ನಡುಗಿಸಿದನು.
ತತಃ ಪ್ರವೃತ್ತಃ ಸಂಗ್ರಾಮಃ ಸಮೀಪೇ ಲವಣಾಂಭಸಃ |
ಸುರಾಣಾಮಸುರಾಣಾಂ ಚ ಸ ವೈ ಘೋರತರೋ ಮಹಾನ್ ॥12॥
ಅನಂತರ ಲವಣಸಮುದ್ರದ ಸಮೀಪದಲ್ಲಿ ದೇವತೆಗಳಿಗೂ ಮತ್ತು ಅಸುರರಿಗೂ ಘೋರವಾದ ಒಂದು ದೊಡ್ಡಯುದ್ಧವು ಜರುಗಿತು.
ಪ್ರಾಸಾಃ ಸುನೀಲಾಸ್ತೀಕ್ಷ್ಣಾಗ್ರಾ ನ್ಯಪತಂತ ಸಹಸ್ರಶಃ |
ತೋಮರಾಶ್ಚ ಸುತೀಕ್ಷ್ಣಾಗ್ರಾಃ ಶಸ್ತ್ರಾಣಿ ವಿವಿಧಾನಿ ಚ ॥13॥
ಹರಿತವಾದ ಕೃಷ್ಣವರ್ಣೋಪೇತವಾದ ಪ್ರಾಸಗಳೂ, ಅತ್ಯಂತ ಹರಿತವಾದ ತೋಮರಗಳೂ, ಅನೇಕವಿಧವಾದ ಶಸ್ತ್ರಗಳೂ ಪ್ರಯೋಗಿಸಲ್ಪಟ್ಟವು.
ತತೋಽಸುರಾಶ್ಚಕ್ರಭಿನ್ನಾ ವಮಂತೋ ರುಧಿರಂ ಬಹು |
ಅಸಿಶಕ್ತಿಗದಾರುಗ್ಣಾ ನಿಪೇತುರ್ಧರಣೀತಳೇ ॥14॥
ಆಗ ಅಸುರರು ಚಕ್ರದಿಂದ ಕತ್ತರಿಸಲ್ಪಟ್ಟರಾಗಿ ರಕ್ತವನ್ನು ಕಾರುತ್ತಾ, ಖಡ್ಗದಿಂದ, ಶಕ್ತಿಯಿಂದ ಮತ್ತು ಗದೆಯಿಂದ ಪೀಡಿತರಾಗಿ ಭೂಮಿಯ ಮೇಲೆ ಬಿದ್ದರು.
ಛಿನ್ನಾನಿ ಪಟ್ಟಿಶೈಶ್ಚಾಪಿ ಶಿರಾಂಸಿ ವಿಬುಧದ್ವಿಷಾಮ್ |
ತಪ್ತಕಾಂಚನಮಾಲ್ಯಾನಿ ನಿಪೇತುರನಿಶಂ ತದಾ ॥15॥

ವಿಬುಧಶತ್ರುಗಳಾದ ದಾನವರ ತಪ್ತಕಾಂಚನದ ಮಾಲೆಗಳನ್ನು ಧರಿಸಿದ ಶಿರಸ್ಸುಗಳು ಪಟ್ಟಿಸ ಎಂಬ ಆಯುಧದಿಂದ ಭಿನ್ನವಾಗಿ ಭೂಮಿಯ ಮೇಲೆ ಸತತವಾಗಿ ಬಿದ್ದವು.
ರುಧಿರೇಣೋಪಲಿಪ್ತಾಂಗಾ ನಿಹತಾಶ್ಚ ಮಹಾಸುರಾಃ |
ಅದ್ರೀಣಾಮಿವ ಕೂಟಾನಿ ಧಾತುರಕ್ತಾನಿ ಶೇರತೇ ॥16॥
ರಕ್ತದಿಂದ ಎಲ್ಲ ಕಡೆಯಲ್ಲೂ ತೊಯ್ದ ಅವಯವವುಳ್ಳವರಾಗಿ ಮಡಿದ ಮಹಾಸುರರು ವೇಗೈರಿಕಾದಿ ಧಾತುವಿನಿಂದ ಕೆಂಪಾದ ಗಿರಿಶಿಖರಗಳಂತೆ ಅಲ್ಲಲ್ಲಿ ಬಿದ್ದಿದ್ದರು.
ತತೋ ಹಲಹಲಾಶಬ್ದಃ ಸಂಬಭೂವ ಸಮಂತತಃ |
ಹಾಹಾರವಃ ಸಂಬಭೂವ ತತ್ರ ತತ್ರ ಸಮಂತತಃ ॥17॥
ಆಗ ಎಲ್ಲ ಕಡೆಯಲ್ಲೂ ಹಲಾಹಲಾ ಶಬ್ದವೂ ಮತ್ತು ಹಾಹಾಕಾರವೂ ಉಂಟಾಯಿತು.
ಅನ್ಯೋನ್ಯಂ ಛಿಂದತಾಂ ಶಸ್ತ್ರೈರಾದಿತ್ಯೇ ಲೋಹಿತಾಯತಿ |
ಪರ್ಯಿಶ್ಚಾಯಸೈಃ ಪೀನೈಃ ಸನ್ನಿಕೃಷ್ಟೈಶ್ಚ ಮುಷ್ಟಿಭಿಃ |
ನಿಘ್ನತಾಂ ಸಮರೇಽನ್ಯೋನ್ಯಂ ಶಬ್ದೋ ದಿವಮಥಾಸ್ಪೃಶತ್ ॥18॥
ಸೂರ್ಯನು ಮುಳುಗುತ್ತಾ ಕೆಂಪಾಗುತ್ತಿರಲು ಶಸ್ತ್ರಗಳಿಂದಲೂ, ಆಯಸವಾದ ಪರಿಘಗಳಿಂದಲೂ, ಮುಷ್ಟಿಗಳಿಂದಲೂ ಪರಸ್ಪರವಾಗಿ ಭೇದನೆ ಮಾಡುವ ಮತ್ತು ಪೀಡಿಸುವ ಅವರಿಂದ ಉಂಟಾದ ಶಬ್ದವು ಆಕಾಶವನ್ನು ಮುಟ್ಟಿತು.
ಛಿಂಧಿ ಭಿಂಧಿ ಪ್ರಧಾವಧ್ವಂ ಪಾತಯಾಭಿಸರೇತಿ ಚ |
ವ್ಯಶ್ರೂಯಂತ ಮಹಾಘೋರಾಃ ಶಬ್ದಾಸ್ತತ್ರ ಸಮಂತತಃ ॥19॥
`ಕತ್ತರಿಸು', `ಹೊಡೆದು ಹಾಕು', `ಧಾವಿಸಿಹೋಗು', `ಕೆಳಗೆ ಉರುಳಿಸು' `ಹಿಂಬಾಲಿಸು' ಎಂಬ ಮಹಾಘೋರವಾದ ಶಬ್ದಗಳು ಅಲ್ಲಿ ಎಲ್ಲಾಕಡೆಗಳಲ್ಲಿಯೂ ಕೇಳಿಬಂದವು.
ಏವಂ ಸುತುಮುಲೇ ಯುದ್ಧೇ ವರ್ತಮಾನೇ ಭಯಾವಹೇ |
ನರನಾರಾಯಣೌ ದೇವೌ ಸಮಾಜಗ್ಮತುರಾಹವಮ್ |
ತತ್ರ ದಿವ್ಯಂ ಧನುರ್ದೃಷ್ಟ್ವಾ ನರಸ್ಯ ಭಗವಾನಪಿ |
ಚಿಂತಯಾಮಾಸ ತಚ್ಚಕ್ರಂ ವಿಷ್ಣುರ್ದಾನವಸೂದನಃ ॥20॥
ಹೀಗೆ ಭಯಂಕರವಾದ, ತುಮುಲವಾದ ಯುದ್ಧವು ನಡೆಯುತ್ತಿರಲು,ಆ ಯುದ್ಧಪ್ರದೇಶಕ್ಕೆ ನರನಾರಾಯಣರು ಆಗಮಿಸಿದರು. ಭಗವಂತನಾದ ನಾರಾಯಣನು ನರನ ದಿವ್ಯವಾದ ಧನುಸ್ಸನ್ನು ನೋಡಿ ದಾನವಸೂದನನಾದ ವಿಷ್ಣುವಾದ ಅವನು ತನ್ನ ಚಕ್ರವನ್ನು ಸ್ಮರಿಸಿದನು.
ತತೋಽಂಬರಾಚ್ಚಿಂತಿತಮಾತ್ರಮಾಗತಂ
ಮಹಾಪ್ರಭಂ ಚಕ್ರಮಭಿತ್ರನಾಶನಮ್ |
ವಿಭಾವಸೋಸ್ತುಲ್ಯಮಕುಂಠಮಂಡಲಂ
ಸುದರ್ಶನಂ ಭೀಮಮಜಯ್ಯಮುತ್ತಮಮ್ ॥21॥
ಆಗ ವಿಷ್ಣುವು ಸ್ಮರಿಸಿದ ಕೂಡಲೇ ಮಹಾಪ್ರಭೆಯುಳ್ಳ, ಶತ್ರುನಾಶಕವಾದ, ಅಗ್ನಿಗೆ ಸಮಾನವಾದ ಪರಾಕ್ರಮವುಳ್ಳ, ಪೂರ್ಣಮಂಡಲವನ್ನು ಹೊಂದಿದ, ಭಯಂಕರವಾದ, ಯಾರೂ ಜಯಿಸಲು ಸಾಧ್ಯವಿಲ್ಲದ, ಶ್ರೇಷ್ಠವಾದ ಆ ಸುದರ್ಶನಚಕ್ರವು ಪ್ರಾಪ್ತವಾಗಿ ಬಂದಿತು.
ತದಾಗತಂ ಜ್ವಲಿತಹುತಾಶನಪ್ರಭಂ
ಭಯಂಕರಂ ಕರಿಕರಬಾಹುರಚ್ಯುತಃ |
ಮುಮೋಚ ವೈ ವಿಪುಳಮುದಗ್ರತೇಜವನ್-
ಮಹಾಪ್ರಭಂ ಪರನಗರಾವದಾರಣಮ್ ॥22॥
ಹೀಗೆ ಆಗತವಾದ, ಜ್ವಲಿಸುವ ಅಗ್ನಿಯ ಕಾಂತಿಯುಳ್ಳ, ಭಯಂಕರವಾದ, ವಿಸ್ತಾರವಾದ, ಉದೀರ್ಣವಾದ ತೇಜಸ್ಸುಳ್ಳ, ಮಹಾಪ್ರಭೆಯುಳ್ಳ, ಶತ್ರುನಗರವಿನಾಶಕವಾದ ಆ ಚಕ್ರವನ್ನು ಕರಿಕರದಂತಹ ಬಾಹುಗಳುಳ್ಳ ಅಚ್ಯುತನು ಕೈಯಲ್ಲಿ ಹಿಡಿದು ಶತ್ರುಸೈನ್ಯದ ಮೇಲೆ ಪ್ರಯೋಗಿಸಿದನು.
ತದರ್ಕಕೋಟಿಜ್ವಲಿತಹುತಾಶಸನ್ನಿಭಂ
ಪುನಃ ಪುನರ್ನ್ಯಪತದುದಗ್ರವೇಗವತ್ |
ವ್ಯದಾರಯದ್ ದಿತಿದನುಜಾನ್ ಸಹಸ್ರಶಃ
ಕರೇರಿತಂ ಪುರುಷವರೇಣ ಸಂಯುಗೇ ॥23॥
ಆ ಚಕ್ರವಾದರೋ ಕೋಟಿಸೂರ್ಯಪ್ರಭೆಯುಳ್ಳದ್ದಾಗಿ, ಜ್ವಲಿಸುವ ಅಗ್ನಿಯ ಕಾಂತಿಯುಳ್ಳದ್ದಾಗಿ, ಮಹಾವೇಗವುಳ್ಳದ್ದಾಗಿ, ಯುದ್ಧದಲ್ಲಿ ಪುರುಷೋತ್ತಮನ ಕರದಿಂದ ಪ್ರಯೋಗಿಸಲ್ಪಟ್ಟಿದ್ದಾಗಿ, ಪುನಃ ಪುನಃ ಶತ್ರುಗಳ ಸೇನೆಯ ಮೇಲೆ ಬೀಳುತ್ತಾ, ಸಹಸ್ರಸಂಖ್ಯೆಯಲ್ಲಿ ದಿತಿಜರನ್ನೂ ಮತ್ತು ದನುಜರನ್ನೂ ಸೀಳಿಹಾಕಿತು.
ದಹತ್ ಕ್ವಚಿಜ್ಜ್ವಲನ ಇವಾವಲೇಲಿಹತ್
ಪ್ರಸಹ್ಯ ತಾನಸುರಗಣಾನ್ ನ್ಯಕೃಂತತ |
ಪ್ರವೇಪಿತಂ ವಿಯತಿ ಮುಹುಃ ಕ್ಷಿತೌ ತದಾ
ಪಪೌ ರಣೇ ರುಧಿರಮಥೋ ಪಿಶಾಚವತ್ ॥24॥

ಒಮ್ಮೊಮ್ಮೆ ಅಗ್ನಿಯಂತೆ ಜ್ವಲಿಸುತ್ತಾ, ಒಮ್ಮೊಮ್ಮೆ ಅಗ್ನಿಯ ಜ್ವಾಲೆಗಳಂತೆ ನೆಕ್ಕುತ್ತಾ, ತನ್ನ ಬಲದಿಂದ ಆ ಅಸುರಗಣಗಳನ್ನೆಲ್ಲಾ ಅದು ಕತ್ತರಿಸಿ ಹಾಕಿತು. ಒಮ್ಮೊಮ್ಮೆ ಭೂಮಿಯಲ್ಲಿ, ಒಮ್ಮೊಮ್ಮೆ ಆಕಾಶದಲ್ಲಿ ಸಂಚರಿಸುತ್ತಾ ಪಿಶಾಚಿಯಂತೆ ಅದು ದೈತ್ಯರ ರಕ್ತವನ್ನು ಪಾನಮಾಡಿತು.

ಅಥಾಸುರಾ ಗಿರಿಭಿರದೀನಚೇತಸಾ
ಮುಹುರ್ಮುಹುಃ ಸುರಗಣಮರ್ದಯಂಸ್ತದಾ |
ಮಹಾಬಲಾ ವಿಗಳಿತಮೇಘವರ್ಚಸಃ
ಸಹಸ್ರಶೋ ಗಗನಮಭಿಪ್ರಪದ್ಯ ತೇ ॥25॥

ಆಗ ಅಸುರರು ಎದೆಗುಂದದೆ, ಮಹಾಬಲವುಳ್ಳವರಾಗಿ ಆಕಾಶದಿಂದ ಕೆಳಗುರುಳಿದ ಮೇಘಗಳಂತೆ ಕಾಂತಿಯುಳ್ಳ ಅವರು ಸಹಸ್ರಸಂಖ್ಯೆಯಲ್ಲಿ ಆಕಾಶವನ್ನು ಏರಿ, ದೇವತಾಗಣವನ್ನು ಪುನಃ ಪುನಃ ಘಾತಿಸಿದರು.

ಅಥಾಂಬರಾದ್ ಭಯಜನನಾಃ ಪ್ರಪೇದಿರೇ
ಸಪಾದಪಾ ಬಹುವಿಧಮೇಘರೂಪಿಣಃ |
ಮಹಾದ್ರಯಃ ಪ್ರವಿಗಳಿತಾಗ್ರಸಾನವಃ
ಪರಸ್ಪರಂ ದ್ರುತಮಭಿಹತ್ಯ ಸಸ್ವನಾಃ ॥26॥

ಆಗ ಆಕಾಶದಿಂದ ಭಯಂಕರವಾದ ಅನೇಕವಿಧವಾದ ಮೇಘಗಳಂತಿರುವ ವೃಕ್ಷಗಳ ಮಳೆಯು ಉಂಟಾಯಿತು. ದೊಡ್ಡ ದೊಡ್ಡ ಪರ್ವತಗಳು ತಮ್ಮ ಶಿಥಿಲವಾದ ಶಿಖರಗಳ ಜೊತೆಯಲ್ಲಿ ಮರಗಳ ಮೇಲೆ ಬೀಳುತ್ತಾ ದೊಡ್ಡ ಶಬ್ದವನ್ನುಂಟು ಮಾಡಿ ಕೆಳಗೆ ಉರುಳಿದವು.

ತತೋ ಮಹೀ ಪ್ರವಿಚಲಿತಾ ಸಕಾನನಾ
ಮಹಾದ್ರಿಪಾತಾಭಿಹತಾ ಸಮಂತತಃ |
ಪರಸ್ಪರಂ ಭೃಶಮಭಿಗಮ್ಯ ಸಸ್ವನಂ
ವಿಮರ್ದನಂ ಭೃಶಮಭಿಸಂಪ್ರವರ್ತತೇ ॥27॥

ಆಗ ಮಹಾಪರ್ವತಪಾತದಿಂದ ಎಲ್ಲ ಕಡೆಯಲ್ಲಿಯೂ ಪ್ರಹಾರಕ್ಕೆ ಒಳಗಾದ ಕಾನನಸಹಿತವಾದ ಭೂಮಿಯು ಕಂಪಿಸಿತು. ದೇವದಾನವರು ಪರಸ್ಪರವಾಗಿ ಒಬ್ಬರನ್ನೊಬ್ಬರು ಸಮೀಪಿಸಿ ಘೋರಶಬ್ದಸಹಿತವಾಗಿ ಪರಸ್ಪರವಾಗಿ ವಿಮರ್ದನವನ್ನು ಮಾಡಿದರು.

ನರಸ್ತತೋ ವರಕನಕಾಗ್ರಭೂಷಣೈ-
ರ್ಮಹೇಷುಭಿಃ ಪವನಪಥಂ ಸಮಾವೃಣೋತ್ |
ವಿದಾರಯನ್ ಗಿರಿಶಿಖರಾಣಿ ಪತ್ರಿಭಿ-
ರ್ಮಹಾಹವೇಽಸುರಗಣವಿಗ್ರಹೇ ತದಾ ॥28॥

ಆಗ ನರನು ಶ್ರೇಷ್ಠವಾದ ಸುವರ್ಣಾಭರಣಗಳಿಂದ ಅಲಂಕೃತವಾದ ಬಾಣಗಳಿಂದ ವಾಯುಪಥವಾದ ಆಕಾಶವನ್ನೇ ಮುಚ್ಚಿಹಾಕಿದನು. ಅಸುರರ ಜೊತೆಯಲ್ಲಿ ನಡೆದ ಆ ದೊಡ್ಡ ಯುದ್ಧದಲ್ಲಿ ತನ್ನ ಬಾಣಗಳಿಂದ ಆ ಗಿರಿಶಿಖರಗಳನ್ನು ಸೀಳುತ್ತಾ ಯುದ್ಧವನ್ನು ಮಾಡಿದನು.

ತತೋ ಮಹೀಂ ಲವಣಜಲಂ ಚ ಸಾಗರಂ
ಮಹಾಸುರಾಃ ಪ್ರವಿವಿಶುರರ್ದಿತಾಃ ಸುರೈಃ |
ವಿಯದ್ಗತಂ ಜ್ವಲಿತಹುತಾಶನಪ್ರಭಂ
ಸುದರ್ಶನಂ ಪರಿಕುಪಿತಂ ನಿಶಾಮ್ಯ ಚ ॥29॥

ಜ್ವಲಿಸುವ ಅಗ್ನಿಯ ಕಾಂತಿಯುಳ್ಳ, ಕ್ರೋಧೋದ್ದೀಪ್ತವಾದ ಸುದರ್ಶನ ಚಕ್ರವು ಆಕಾಶದಲ್ಲಿರುವುದನ್ನು ನೋಡಿದ ಮಹಾಸುರರು ದೇವತೆಗಳ ಶಸ್ತ್ರಗಳಿಂದ ಘಾತಿತರಾಗಿ ಭೂಮಿಯನ್ನೂ ಮತ್ತು ಲವಣಸಮುದ್ರವನ್ನೂ ಸೇರಿದರು.

ತತಸ್ತು ತೈರ್ವಿಜಯಮವಾಪ್ಯ ಮಂದರಃ
ಸ್ವಮೇವ ದೇಶಂ ಗಮಿತಃ ಸುಪೂಜಿತಃ |
ವಿನಾದ್ಯ ಖಂ ದಿವಮಪಿ ಚೈವ ಸರ್ವಶ-
ಸ್ತತೋ ಗತಾಃ ಸಲಿಲಧರಾ ಯಥಾಗತಮ್ ॥30॥

ಆಗ ದೇವತೆಗಳು ವಿಜಯವನ್ನು ಪಡೆದು ಮಂದರಪರ್ವತವನ್ನು ಅದರ ಮೂಲಸ್ಥಾನಕ್ಕೆ ಸೇರಿಸಿದರು. ಆಕಾಶದಲ್ಲಿ ಸೇರಿದ್ದ ಮೋಡಗಳು ದಿಕ್ಕುದಿಕ್ಕುಗಳು ಪ್ರತಿಧ್ವನಿಸುವಂತೆ ಗುಡುಗಿ ತಮ್ಮ ದಾರಿಯನ್ನು ಹಿಡಿದು ಹೊರಟುಹೋದವು.

ತತೋಽಮೃತಂ ಸುನಿಹಿತಮೇವ ಚಕ್ರಿರೇ
ಸುರಾಃ ಪರಾಂ ಮುದಮಧಿಗಮ್ಯ ಪುಷ್ಕಳಾಮ್ |
ದದುಶ್ಚ ತಂ ನಿಧಿಮಮೃತಸ್ಯ ರಕ್ಷಿತುಂ
ಕಿರೀಟಿನೇ ಬಲಿಭಿರಥಾಮರಾರಿಭಿಃ ॥31॥

ಆಗ ದೇವತೆಗಳು ಬಹಳವಾದ ಸಂತೋಷವನ್ನು ಪಡೆದು ಅಮೃತವನ್ನು ಸರಿಯಾದ ಸ್ಥಳದಲ್ಲಿ ಸ್ಥಾಪನೆಮಾಡಿದರು ಮತ್ತು ಬಲಿಷ್ಠರಾದ ದೇವಶತ್ರುಗಳಿಂದ ಆ ಅಮೃತವನ್ನು ರಕ್ಷಿಸಲು ಇಂದ್ರನಿಗೆ ಆ ಅಮೃತದ ಕಲಶವನ್ನು ನೀಡಿದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತದಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.

*****

## ಹದಿನೆಂಟನೆಯ ಅಧ್ಯಾಯ

(ಉಚ್ಚೈಃಶ್ರವಸ್ಸಿನ ಬಾಲದ ಬಣ್ಣದ ವಿಷಯದಲ್ಲಿ ಕದ್ರುವಿನತೆಯರ ಪಣ, ಕದ್ರುವಿನಿಂದ ತನ್ನ ಮಕ್ಕಳಿಗೆ ಶಾಪ, ಬ್ರಹ್ಮದೇವರ ಅನುಮೋದನೆ. ಕಾಶ್ಯಪರಿಗೆ ಬ್ರಹ್ಮದೇವರ ಸಮಾಧಾನವಚನ, ಕಾರ್ಕೋಟಕನಿಂದ ತಾಯಿಗೆ ಆಶ್ವಾಸನೆ)

ಸೂತಃ

ಏತತ್ತೇ ಸರ್ವಮಾಖ್ಯಾತಮಮೃತಂ ಮಥಿತಂ ಯಥಾ ।
ತತ್ರ ಸೋಽಶ್ವಃ ಸಮುತ್ಪನ್ನಃ ಶ್ರೀಮಾನತುಲವಿಕ್ರಮಃ ॥1॥
ತಂ ನಿಶಮ್ಯ ತದಾ ಕದ್ರೂರ್ವಿನತಾಮಿದಮಬ್ರವೀತ್ ।
ಉಚ್ಚೈಃಶ್ರವಾಸ್ತು ಕಿಂವರ್ಣೋ ಭದ್ರೇ ಜಾನೀಹಿ ಮಾಚಿರಮ್ ॥2॥

ಶೌನಕರೇ, ಅಮೃತಮಥನವು ಹೇಗೆ ನಡೆಯಿತೆಂದು ನಾನು ನಿಮಗೆ ಸಮಗ್ರವಾಗಿ ಹೇಳಿದ್ದೇನೆ. ಅಂತಹ ಅತುಲ ಪರಾಕ್ರಮವುಳ್ಳ, ಕಾಂತಿಯುಕ್ತವಾದ ಉಚ್ಚೈಃಶ್ರವಸ್ ಅಶ್ವವು ಅಲ್ಲಿ ಉತ್ಪನ್ನವಾಯಿತು. ಅದನ್ನು ಕೇಳಿದ ಕದ್ರುವು ವಿನತೆಯನ್ನು ಕುರಿತು, `ಭದ್ರೇ, ಉಚ್ಚೈಃಶ್ರವದ ಬಣ್ಣವು ಯಾವುದು ಎಂದು ಬೇಗ ಹೇಳು' ಎಂದು ಹೇಳಿದಳು.

ವಿನತಾ

ಶ್ವೇತ ಏವಾಶ್ವರಾಜೋಽಯಂ ಕಿಂ ವಾ ತ್ವಂ ಮನ್ಯಸೇ ಶುಭೇ ।
ಬ್ರೂಹಿ ವರ್ಣಂ ತ್ವಮಪ್ಯಸ್ಯ ತತಽಽವಾಂ ವಿಪಣಾವಹೇ ॥3॥

ಶುಭಳಾದವಳೇ, ಈ ಅಶ್ವರಾಜನ ಬಣ್ಣ ಶ್ವೇತವೇ. ನಿನ್ನ ಅಭಿಪ್ರಾಯವೇನು? ನೀನು ಅದರ ಬಣ್ಣವನ್ನು ಹೇಳು. ನಾವಿಬ್ಬರೂ ಈ ವಿಷಯದಲ್ಲಿ ಪಣವನ್ನು ಕಟ್ಟೋಣ (ಬಾಜಿಯನ್ನು ಕಟ್ಟೋಣ.)

ಕದ್ರೂಃ

ಕೃಷ್ಣಬಾಲಮಹಂ ಮನ್ಯೇ ಹಯಮೇನಂ ಶುಚಿಸ್ಮಿತೇ ।
ಏಹಿ ಸಾರ್ಧಂ ಮಯಾ ಪಶ್ಯ ದಾಸಭಾವಾಯ ಭಾಮಿನಿ ॥4॥

ಶುಚಿಸ್ಮಿತೆಯೇ, ನಾನು ಅದರ ಬಾಲವನ್ನು ಮಾತ್ರ ಕಪ್ಪೆಂದು ತಿಳಿಯುತ್ತೇನೆ. ಬಂದು ನನ್ನ ಜೊತೆಯಲ್ಲಿ ನೋಡು. ಎಲೌ ಭಾಮಿನಿಯೇ, ಸೋತವರ ದಾಸ್ಯವನ್ನು ಪಣವಾಗಿಟ್ಟು (ನಾವು) ಆಡೋಣ.

ಸೂತಃ

ಏವಂ ತೇ ಸಮಯಂ ಕೃತ್ವಾ ದಾಸಭಾವಾಯ ವೈ ಮಿಥಃ ।
ಜಗ್ಮತುಃ ಸ್ವಗೃಹಾನೇವ ಶ್ವೋ ದ್ರಕ್ಷ್ಯಾವ ಇತಿ ಸ್ಮ ಹ ॥5॥

ಹೀಗೆ ಅವರು ಪರಸ್ಪರವಾಗಿ ದಾಸ್ಯದ ಪಣವನ್ನು ತೊಟ್ಟು ನಾಳೆ ನೋಡೋಣ ಎಂದು ಯೋಚಿಸಿ ತಮ್ಮ ಮನೆಗಳಿಗೆ ಹೋದರು.

ತತ್ರ ಪುತ್ರಸಹಸ್ರಂ ತತ್ ಕದ್ರೂರ್ಜಿಹ್ಮಂ ಚಿಕೀರ್ಷತೀ ।
ಆಜ್ಞಾಪಯಾಮಾಸ ತದಾ ಬಾಲೇ ಭೂತ್ವಾಽಂಜನಪ್ರಭಾಃ ।
ಪ್ರವಿಶಧ್ವಂ ಹಯಂ ಶೀಘ್ರಂ ದಾಸೀ ನ ಸ್ಯಾಮಹಂ ಯಥಾ ॥6॥

ಆಗ ತನ್ನ ಸಹಸ್ರಪುತ್ರರಿಂದ ಆ ಪಣದಲ್ಲಿ ವಂಚನೆಯನ್ನು ಮಾಡಲು ಬಯಸಿದ ಕದ್ರೂದೇವಿಯು ಮಕ್ಕಳನ್ನು ಕುರಿತು ನೀವೆಲ್ಲರೂ ಕಪ್ಪುಬಣ್ಣದ ಸರ್ಪಗಳಾಗಿ ಆ ಅಶ್ವದ ಬಾಲದಲ್ಲಿ ನಾನು ದಾಸಿಯಾಗದಿರುವಂತೆ ಶೀಘ್ರವಾಗಿ ಸೇರಿಕೊಳ್ಳಿ ಎಂದು ಹೇಳಿದಳು.

ತದ್ವಾಕ್ಯಂ ನಾನ್ವಪದ್ಯಂತ ತಾನ್ ಶಶಾಪ ಭುಜಂಗಮಾನ್ ।
ಸರ್ಪಸತ್ರೇ ವರ್ತಮಾನೇ ಪಾವಕೋ ವಃ ಪ್ರಧಕ್ಷ್ಯತಿ ।
ಜನಮೇಜಯಸ್ಯ ರಾಜರ್ಷೇಃ ಪಾಂಡವೇಯಸ್ಯ ಧೀಮತಃ ॥7॥

ಆ ಮಕ್ಕಳು ಆ ವಾಕ್ಯವನ್ನು ಕೇಳದೇ ಇರುತ್ತಿರಲು, ಕದ್ರೂದೇವಿಯು ಆ ಸರ್ಪಗಳನ್ನು ಕುರಿತು ಮೇಧಾವಿಯಾದ ಪಾಂಡುವಂಶದಲ್ಲಿ ಉದ್ಭವಿಸಿದ ರಾಜರ್ಷಿಯಾದ ಜನಮೇಜಯನ ಸರ್ಪಯಾಗದಲ್ಲಿ ಅಗ್ನಿಯು ನಿಮ್ಮನ್ನು ಸುಟ್ಟು ಬೂದಿಮಾಡುವನು ಎಂದು ಶಾಪವನ್ನು ಕೊಟ್ಟಳು.

ಶಾಪಮೇನಂ ತು ಶುಶ್ರಾವ ಸ್ವಯಮೇವ ಪಿತಾಮಹಃ ।
ಅತಿಕ್ರೂರಂ ಸಮುದ್ದಿಷ್ಟಂ ಕದ್ರ್ವಾ ದೈವಾದಿತೀವ ಹ ॥8॥

ಕದ್ರುವು ದೈವಪ್ರೇರಿತಳಾಗಿ ಕೊಟ್ಟ ಈ ಅತಿಕ್ರೂರವಾದ ಶಾಪವನ್ನು ಬ್ರಹ್ಮದೇವರು ತಾವೇ ಕೇಳಿದರು.

ಸಾರ್ಧಂ ದೇವಗಣೈಃ ಸರ್ವೈರ್ವಚನಂ ಚಾನ್ವಮೋದತ ।
ಬಹುತ್ವಂ ಪ್ರೇಕ್ಷ್ಯ ಸರ್ಪಾಣಾಂ ಪ್ರಜಾನಾಂ ಹಿತಕಾಮ್ಯಯಾ ॥9॥

ಸರ್ಪಗಳು ಬಹುಸಂಖ್ಯೆಯಲ್ಲಿರುವುದನ್ನು ಗಮನಿಸಿ ಪ್ರಜೆಗಳ ಹಿತದೃಷ್ಟಿಯಿಂದ ದೇವಗಣಗಳಿಂದ ಕೂಡಿದ ಬ್ರಹ್ಮದೇವರು ಕದ್ರುವಿನ ವಚನವನ್ನು ಅನುಮೋದಿಸಿದರು.

ತಿಗ್ಮವೀರ್ಯವಿಷಾ ಹ್ಯೇತೇ ದಂದಶೂಕಾ ಮಹಾಬಲಾಃ ।
ತೇಷಾಂ ತೀಕ್ಷ್ಣವಿಷತ್ವಾದ್ಧಿ ಪ್ರಜಾನಾಂ ಚ ಹಿತಾಯ ವೈ ॥10॥
ಯುಕ್ತಂ ಮಾತೃಕೃತಂ ತೇಷಾಂ ಪರಪೀಡಾಪ್ರಸರ್ಪತಾಮ್ ।
ಅನ್ಯೇಷಾಮಪಿ ಸತ್ತ್ವಾನಾಂ ನಿತ್ಯಂ ದೋಷಕರಾಶ್ಚ ಯೇ ।

ತೇಷಾಂ ಪ್ರಾಣಾಂತಿಕೋ ದಂಡೋ ದೈವೇನ ವಿನಿಪಾತ್ಯತೇ ॥11॥
ಈ ಸರ್ಪಗಳು ಮಹಾಬಲಿಷ್ಠವಾಗಿ ಕಚ್ಚುವ ಸ್ವಭಾವವನ್ನು ಹೊಂದಿ ಬಹಳ ಪ್ರಬಲವಾದ ವಿಷವನ್ನು ಹೊಂದಿವೆ. ಅವುಗಳ ವಿಷತೀಕ್ಷ್ಣತೆಯಿಂದಲೂ ಮತ್ತು ಪ್ರಜೆಗಳ ಹಿತದೃಷ್ಟಿಯಿಂದಲೂ ಪರಪೀಡೆಗಾಗಿ ಸಂಚರಿಸುವ ಅವುಗಳಿಗೆ ತಾಯಿಯು ಕೊಟ್ಟ ಶಾಪವು ಯುಕ್ತವಾಗಿಯೇ ಇದೆ. ಈ ಸರ್ಪಗಳು ಉಳಿದ ಪ್ರಾಣಿಗಳಿಗೂ ಹಿಂಸೆಯನ್ನುಂಟು ಮಾಡುತ್ತವೆ. ಆದ್ದರಿಂದ ಅವುಗಳಿಗೆ ದೈವೇಚ್ಛೆಯಿಂದ ಪ್ರಾಣಾಂತಿಕವಾದ ಶಿಕ್ಷೆಯು ಹೀಗೆ ವಿಧಿಸಲ್ಪಡುತ್ತದೆ.
ಏವಮುಕತ್ತ್ವಾ ಸ ದೇವಸ್ತು ಪೂರ್ವಂ ಕದ್ರೂಂ ಚ ತಾಂ ತದಾ |
ಆಹೂಯ ಕಾಶ್ಯಪಂ ದೇವೋ ವಚನಂ ಚೇದಮಬ್ರವೀತ್ ॥12॥
ಬ್ರಹ್ಮದೇವರು ದೇವತೆಗಳಿಗೆ ಮೊದಲು ಹೀಗೆ ಹೇಳಿ, ಅನಂತರ ಕಾಶ್ಯಪರನ್ನೂ ಮತ್ತು ಕದ್ರುವನ್ನೂ ಕರೆದು ಹೀಗೆ ಮಾತನಾಡಿದರು.
ಯದಿ ತೇ ದಂದಶೂಕಾಶ್ಚ ಸರ್ಪಾ ಜಾತಾಶ್ಚ ತೇಽನಘ |
ವಿಷೋದ್ಬಣಾ ಮಹಾಭೋಗಾ ಮಾತ್ರಾ ಶಪ್ತಾಃ ಪರಂತಪ ॥13॥
ತತ್ರ ಮನ್ಯುಸ್ತ್ವಯಾ ತಾತ ನ ಕರ್ತವ್ಯಃ ಕಥಂಚನ |
ದೃಷ್ಟಂ ಪುರಾತನೇ ಹ್ಯೇತತ್ ಯಜ್ಞೇ ಸರ್ಪವಿನಾಶನಮ್ ॥14॥
ಪರಿಶುದ್ಧನಾದ ಕಾಶ್ಯಪನೇ, ನಿನ್ನ ಪುತ್ರರಾಗಿ ಜನಿಸಿದ ಕಡಿಯುವ ಸ್ವಭಾವವುಳ್ಳ ಸರ್ಪಗಳು ಉಲ್ಬಣವಾದ ವಿಷದಿಂದ ಕೂಡಿದ್ದು, ದೊಡ್ಡ ಶರೀರಗಳಿಂದ ಕೂಡಿದವುಗಳಾಗಿ ತಾಯಿಯಿಂದ ಶಪಿಸಲ್ಪಟ್ಟಿವೆ. ಎಲೈ ಪರಂತಪನೇ ಮತ್ತು ಪ್ರೀತಿಪಾತ್ರನೇ, ನೀನು ಈ ವಿಷಯದಲ್ಲಿ ಕೋಪಗೊಳ್ಳಬಾರದು. ಯಜ್ಞದಲ್ಲಿ ಸರ್ಪವಿನಾಶವು ಹಿಂದಿನಿಂದಲೂ ನಡೆದು ಬಂದಿರುವುದು ಕಂಡಿದೆ.
ಇತ್ಯುಕತ್ತ್ವಾ ಸೃಷ್ಟಿಕೃದ್ ದೇವಸ್ತಂ ಪ್ರಸಾದ್ಯ ಪ್ರಶಸ್ಯ ಚ |
ಪ್ರಾದಾದ್ ವಿಷಹಣೀಂ ವಿದ್ಯಾಂ ಕಾಶ್ಯಪಾಯ ಮಹಾತ್ಮನೇ ॥15॥
ಹೀಗೆ ಹೇಳಿ ಸೃಷ್ಟಿಕರ್ತನಾದ ಬ್ರಹ್ಮದೇವರು ಅವರನ್ನು ಸಮಾಧಾನಗೊಳಿಸಿ, ಅವರನ್ನು ಪ್ರಶಂಸೆಮಾಡಿ, ಮಹಾತ್ಮರಾದ ಆ ಕಾಶ್ಯಪರಿಗೆ ವಿಷಹರವಿದ್ಯೆಯನ್ನು ಉಪದೇಶಮಾಡಿದರು.
ಏವಂ ಶಪ್ತೇಷು ನಾಗೇಷು ಕದ್ರ್ವಾ ಚ ದ್ವಿಜಸತ್ತಮ
ಉದ್ವಿಗ್ನಃ ಶಾಪತಸ್ತಸ್ಯಾಃ ಕದ್ರೂಂ ಕಾರ್ಕೋಟಕೋಽಬ್ರವೀತ್ |
ಮಾತರಂ ಪರಮಪ್ರೀತಸ್ತಥಾ ಭುಜಗಸತ್ತಮಃ ॥16॥
ಎಲೈ ಬ್ರಾಹ್ಮಣಶ್ರೇಷ್ಠರೇ, ಹೀಗೆ ನಾಗಗಳು ತಾಯಿಯಿಂದ ಶಪಿಸಲ್ಪಡುತ್ತಿರಲು ಆ ಶಾಪವನ್ನು ಕೇಳಿ ಉದ್ವಿಗ್ನನಾದ ಭುಜಗಶ್ರೇಷ್ಠನಾದ ಕಾರ್ಕೋಟಕನು ತಾಯಿಯನ್ನು ಸಮೀಪಿಸಿ ಸಂತೋಷದಿಂದ ಮಾತನಾಡಿದನು.
ಆವಿಶ್ಯ ವಾಜಿನಂ ಮುಖ್ಯಂ ಬಾಲೋ ಭೂತ್ವಾಽಂಜನಪ್ರಭಃ |
ದರ್ಶಯಿಷ್ಯಾಮಿ ತತ್ರಾಹಮಾತ್ಮಾನಂ ಕಾಮಮಾಶ್ವಸ |
ಏವಮಸಿತ್ವತಿ ಸಾ ಪುತ್ರಂ ಪ್ರತ್ಯುವಾಚ ಯಶಸ್ವಿನೀ ॥17॥
ತಾಯಿಯೇ, ನಾನು ಕಪ್ಪುಬಣ್ಣವನ್ನು ಧರಿಸಿ ಆ ಅಶ್ವದ ಬಾಲವನ್ನು ಸೇರಿ ನಾನು ಆ ಬಾಲವನ್ನು ಕಪ್ಪಾಗಿ ತೋರಿಸುತ್ತೇನೆ. ನೀನು ಸಮಾಧಾನದಿಂದಿರು ಎಂದು ಹೇಳಿದನು. ಈ ಮಾತುಗಳನ್ನು ಕೇಳಿದ ಯಶಸ್ವಿನಿಯಾದ ಕದ್ರುದೇವಿಯು ಮಗನನ್ನು ಕುರಿತು `ಹಾಗೆಯೇ ಆಗಲಿ' ಎಂದು ಹೇಳಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟಾದಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.

## ಹತ್ತೊಂಭತ್ತನೆಯ ಅಧ್ಯಾಯ

(ಕದ್ರುವಿನತೆಯರಿಂದ ಸಮುದ್ರಗಮನ ಮತ್ತು ಸಮುದ್ರದ ವರ್ಣನೆ.)
ಸೂತಃ
ತತೋ ರಾತ್ರ್ಯಾಂ ವ್ಯತೀತಾಯಾಂ ಪ್ರಭಾತೇಽಭ್ಯುದಿತೇ ರವೌ |
ಕದ್ರೂಶ್ಚ ವಿನತಾ ಚೈವ ಭಗಿನ್ಯೌ ತೇ ತಪೋಧನ ॥1॥
ಅಮರ್ಷಿತೇ ಸುಸಂರಬ್ಧೇ ದಾಸ್ಯೇ ಕೃತಪಣೇ ತದಾ |
ಜಗ್ಮತುಸ್ತುರಗಂ ದ್ರಷ್ಟುಮುಚ್ಚೈಃಶ್ರವಸಮಂತಿಕಾತ್ ॥2॥
ಎಲೈ ತಪೋಧನನೇ, ಅನಂತರ ರಾತ್ರಿಯು ಕಳೆದು ಪ್ರಾತಃಕಾಲದಲ್ಲಿ ರವಿಯು ಉದಯಿಸುತ್ತಿರಲು, ಕೋಪದಿಂದ ಕೂಡಿದ ಅಕ್ಕತಂಗಿಯರಾದ ಕದ್ರು ಮತ್ತು ವಿನತೆಯರು ದಾಸ್ಯದ ಪಣವನ್ನು ತೊಟ್ಟು ಉಚ್ಚೈಃಶ್ರವಸ್ ಕುದುರೆಯನ್ನು ಹತ್ತಿರದಿಂದ ನೋಡಲು ಹೊರಟರು.
ದದೃಶಾತೇ ಉಭೇ ತತ್ರ ಸಮುದ್ರಂ ನಿಧಿಮಂಭಸಾಮ್ |
ಮಹಾಂತಮುದಕಾಗಾಧಂ ಕ್ಷೋಭ್ಯಮಾಣಂ ಮಹಾಸ್ವನಮ್ ॥3॥
ಅವರಿಬ್ಬರೂ ಅಲ್ಲಿ ಜಲನಿಧಿಯಾದ ಮಹಾಜಲರಾಶಿಯಿಂದ ಕೂಡಿದ ಆಳವೇ ತಿಳಿಯದಿದ್ದಂತಹ, ಅಲೆಗಳಿಂದ ಪ್ರಕ್ಷುಬ್ಧವಾಗಿ ಗರ್ಜಿಸುತ್ತಿದ್ದ ಸಮುದ್ರವನ್ನು ನೋಡಿದರು.
ತಿಮಿಂಗಿಲಝುಷಾಕೀರ್ಣಂ ಮಕರೈರಾವೃತಂ ತಥಾ |

ಸತ್ತ್ವೈಶ್ಚ  ಬಹುಸಾಹಸ್ರೈರ್ನಾನಾರೂಪೈಃ ಸಮಾವೃತಮ್ ॥4॥
ಉಗ್ರೈರ್ನಿತ್ಯಮನಾಧೃಷ್ಯಂ ಕೂರ್ಮಗ್ರಾಹಸಮಾಕುಲಮ್ |
ಆಕರಂ ಸರ್ವರತ್ನಾನಾಮಾಲಯಂ ವರುಣಸ್ಯ ಚ ॥5॥
ನಾಗಾನಾಮಾಶ್ರಯಂ ರಮ್ಯಮುತ್ತಮಂ ಸರಿತಾಂ ಪತಿಮ್ |
ಪಾತಾಳಜ್ವಲನಾವಾಸಮಸುರಾಣಾಂ ಚ ಬಂಧನಮ್ ॥6॥
ಭಯಂಕರಂ ಚ ಸತಹತ್ವನಾಂ ಪಯಸಾಂ ನಿಧಿಮದ್ಭುತಮ್ |
ಶುಭ್ರಂ ದಿವ್ಯಮಮರ್ತ್ಯಾನಾಮಮೃತಸ್ಯಾಕರಂ ಪರಮ್ ॥7॥
ಅಪ್ರಮೇಯಮಚಿಂತ್ಯಂ ಚ ಸುಪುಣ್ಯಜಲಮದ್ಭುತಮ್ |
ಘೋರಂ ಜಲಚರಾಕೀರ್ಣಂ ರೌದ್ರಂ ಭೈರವನಿಸ್ವನಮ್ ॥8॥
ಸಮುದ್ರವು ತಿಮಿಂಗಲಗಳಿಂದಲೂ, ಮೀನುಗಳಿಂದಲೂ ಕೂಡಿದ್ದು, ಮೊಸಳೆಗಳಿಂದಲೂ, ಅನೇಕ ಸಹಸ್ರಸಂಖ್ಯೆಯ ನಾನಾರೂಪದ ಪ್ರಾಣಿಗಳಿಂದಲೂ ತುಂಬಿಹೋಗಿದ್ದಿತು. ಉಗ್ರವಾದ ಕೂರ್ಮ, ಮೊಸಳೆ ಮೊದಲಾದ ಪ್ರಾಣಿಗಳಿಂದ ತುಂಬಿ, ಯಾರೂ ಅದನ್ನು ಪರಾಭವಗೊಳಿಸುವಂತಿರಲಿಲ್ಲ. ಅದು ಸರ್ವರತ್ನಗಳಿಗೂ ಆಶ್ರಯವಾಗಿ ವರುಣನ ಆಲಯವಾಗಿದ್ದಿತು. ಅದು ಅನೇಕ ಸರ್ಪಗಳಿಗೂ ಆಶ್ರಯವಾಗಿದ್ದಿತು. ಎಲ್ಲ ನದಿಗಳಿಗೂ ಪತಿಯಾಗಿದ್ದಿತು. ಪಾತಾಳಾಗ್ನಿಗೂ ಆವಾಸವಾಗಿ ರಾಕ್ಷಸರ ಬಂಧನದ ಸ್ಥಾನವಾಗಿದ್ದಿತು. ಜಲಚರಪ್ರಾಣಿಗಳಿಂದ ಭಯಂಕರವಾಗಿದ್ದು, ಜಲಗಳಿಗೆ ಅದ್ಭುತವಾದ ಆಶ್ರಯವಾಗಿದ್ದಿತು. ಶುಭ್ರವಾಗಿ, ದಿವ್ಯವಾಗಿ, ದೇವತೆಗಳ ಆಹಾರವಾದ ಅಮೃತಕ್ಕೂ ಆಕರವಾಗಿದ್ದಿತು. ಪೂರ್ಣವಾಗಿ ತಿಳಿಯಲು ಸಾಧ್ಯವಾಗದೆ, ಚಿಂತನೆಗೂ ನಿಲುಕದಂತೆ ಇದ್ದಿತು. ಪುಣ್ಯಜಲದಿಂದ ಪೂರ್ಣವಾಗಿ ಅದ್ಭುತವೂ, ಘೋರವೂ, ಭಯಂಕರವಾದ ಶಬ್ದವನ್ನು ಹೊಂದಿರುವುದರಿಂದ ರೌದ್ರವೂ ಆಗಿ ಜಲಚರಪ್ರಾಣಿಗಳಿಂದ ತುಂಬಿದ್ದಿತು.
ಗಂಭೀರಾವರ್ತಸಲಿಲಂ ಸರ್ವಭೂತಭಯಂಕರಮ್ |
ವೇಲಾಡೋಲಾನಿಲಬಲಕ್ಷೋಭವೇಗಸಮುತ್ಥಿತೈಃ ॥9॥
ವೀಚೀಹಸ್ತೈಃ ಪ್ರಚಲಿತೈರ್ನೃತ್ಯಂತಮಿವ ಸರ್ವತಃ |
ಚಂದ್ರವೃದ್ಧಿಕ್ಷಯವಶಾದುದ್ವೃತೋರ್ಮಿಂ ದುರಾಸದಮ್ ॥10॥
ಪಾಂಚಜನ್ಯಸ್ಯ ಜನನಂ ರತ್ನಾಕರಮನುತ್ತಮಮ್ |
ಗಾಂ ವಿಂದತಾ ಭಗವತಾ ಗೋವಿಂದೇನಾಮಿತೌಜಸಾ |
ವರಾಹರೂಪಿಣಾ ಚಾಂತರ್ವಿಲೋಳಿತಜಲಾವಿಲಮ್ ॥11॥
ಆಳವಾದ ಅನೇಕ ಸುಳಿಗಳಿಂದ ಕೂಡಿದ ನೀರನ್ನು ಹೊಂದಿ ಎಲ್ಲರಿಗೂ ಭಯವನ್ನುಂಟುಮಾಡುವುದಾಗಿ, ಅಲೆಗಳೆಂಬ ಉಯ್ಯಾಲೆಯ ಮೇಲೆ ಸಂಚರಿಸುವ ವಾಯುವೇಗದಿಂದ, ವೀಚೀತರಂಗಗಳೆಂಬ ಹಸ್ತಗಳಿಂದ ಎಲ್ಲ ಕಡೆಯಲ್ಲಿಯೂ ನೃತ್ಯಮಾಡುವಂತೆ ಕಾಣುತ್ತಿದ್ದಿತು. ಚಂದ್ರನ ವೃದ್ಧಿಯನ್ನು ಅನುಸರಿಸಿ ವೃದ್ಧಿಯನ್ನು ಪಡೆದು ಹತ್ತಿರ ಹೋಗಲು ದುಸ್ಸಾಧ್ಯವಾಗಿದ್ದಿತು. ಅದು ಪಾಂಚಜನ್ಯ ಶಂಖದ ಉತ್ಪತ್ತಿ ಭೂಮಿಯೂ, ರತ್ನಗಳಿಗೆ ಶ್ರೇಷ್ಠವಾದ ಆಶ್ರಯವೂ ಆಗಿದ್ದಿತು. ಭೂಮಿಯನ್ನು ಮೇಲಕ್ಕೆ ತರಲು ಹೋದ ಅಮಿತಪರಾಕ್ರಮಿಯಾದ ವರಾಹರೂಪಿಯಾದ ಭಗವಂತನಿಂದ ಒಳಗೆ ಕಲಕಲ್ಪಟ್ಟ ಜಲವನ್ನು ಹೊಂದಿದ್ದಾಗಿದ್ದಿತು.
ಬ್ರಹ್ಮರ್ಷಿಣಾ ಚ ತಪತಾ ವರ್ಷಾಣಾಂ ಶತಮತ್ರಿಣಾ |
ಅನಾಸಾದಿತಪರ್ಯಂತಂ ಪಾತಾಳತಳಮವ್ಯಯಮ್ | |12॥
ಅಧ್ಯಾತ್ಮಯೋಗನಿದ್ರಾಂ ಚ ಪದ್ಮನಾಭಸ್ಯ ಸೇವತಃ |
ಯುಗಾಂತಕಾಲಶಯನಂ ವಿಷ್ಣೋರಮಿತತೇಜಸಃ ॥13॥
ವಡವಾಮುಖದೀಪ್ತಾಗ್ನೇಸ್ತೋಯಹವ್ಯಪ್ರದಂ ಶುಭಮ್ | ಅಗಾಧಪಾರವಿಸ್ತೀರ್ಣಮಪ್ರಮೇಯಂ ಸರಿತ್ಪತಿಮ್
॥14॥
ಮಹಾನದೀಭಿರ್ಬಹ್ವೀಭಿಃ ಸ್ಪರ್ಧಯೇವ ಸಹಸ್ರಶಃ |
ಅಭಿಸಾರ್ಯಮಾಣಮನಿಶಂ ತತ್ರ ತತ್ರ ಸಮಂತತಃ ॥15॥
ಬ್ರಹ್ಮರ್ಷಿಗಳಾದ ಅತ್ರಿಗಳು ನೂರುವರ್ಷ ತಪಸ್ಸನ್ನು ಮಾಡಿದರೂ, ಅದರ ವಿಸ್ತಾರವನ್ನಾಗಲಿ, ಆಳವನ್ನಾಗಲಿ, ಅದರ ತಳವನ್ನಾಗಲಿ ತಿಳಿಯಲು ಸಾಧ್ಯವಾಗದೆ, ನಿತ್ಯವಾಗಿದ್ದಿತು. ಯೋಗನಿದ್ರೆಯನ್ನು ಮಾಡುವ ಪದ್ಮನಾಭರೂಪಿಯಾದ ಅಮಿತಪರಾಕ್ರಮಿಯಾದ ವಿಷ್ಣುವಿಗೆ ಯುಗಾಂತಕಾಲದ ಶಯನವಾಗಿದ್ದಿತು. ವಡವಾ ಮುಖದಿಂದ ಹೊರಬರುವ ಜ್ವಲಿಸುವ ಅಗ್ನಿಗೆ ಜಲವೆಂಬ ಹವಿಸ್ಸನ್ನು ಪ್ರದಾನ ಮಾಡುತ್ತಾ ಶುಭವಾಗಿದ್ದಿತು. ಆಳವಾಗಲಿ, ಎಲ್ಲೆಯಾಗಲಿ ತಿಳಿಯದೆ, ಸಹಸ್ರಾರು ನದಿಗಳಿಂದ ಪರಸ್ಪರ ಸ್ಪರ್ಧೆಯಿಂದ ಬಂದು ಎಲ್ಲಾ ಕಡೆಗಳಲ್ಲಿಯೂ ಅಲ್ಲಲ್ಲಿ ಸೇರಲ್ಪಟ್ಟ ಆ ಸರಿತ್ಪತಿಯನ್ನು ನೋಡಿದರು.
ಇತ್ಯೇವಂ ಝಷಮಕರೋರ್ಮಿಸಂಕುಲಂ ತಂ
ಗಂಭೀರಂ ವಿಲಸಿತಮಂಬರಪ್ರಕಾಶಮ್ |
ಪಾತಾಲಜ್ವಲನಶಿಖಾವಿದೀಪಿತಾಂತಂ
ಪಶ್ಯಂತ್ಯೌ ದ್ರುತಮಭಿಪೇತತುಸ್ತದಾಬ್ಧಿಮ್ ॥16॥
ಹೀಗೆ ಮೀನು ಮೊಸಳೆಗಳು ಮತ್ತು ಅಲೆಗಳಿಂದ ನಿಬಿಡವಾದಂತಹ ಅಗಾಧವಾದ, ಆಕಾಶದಂತೆ ವಿಸ್ತಾರವಾಗಿ ಶೋಭಿಸುವ, ಪಾತಾಳಾಗ್ನಿಯ ಶಿಖೆಗಳಿಂದ ಜ್ವಲಿಸುವ ಅಲೆಗಳ ತುದಿಗಳನ್ನುಳ್ಳಂತಹ ಆ ಸಮುದ್ರವನ್ನು ನೋಡುತ್ತಾ ಅವರಿಬ್ಬರೂ ಶೀಘ್ರವಾಗಿ ಅದರ ಬಳಿಗೆ ಹೋದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ಇಪ್ಪತ್ತನೆಯ ಅಧ್ಯಾಯ
(ಪಣದಲ್ಲಿ ಕುಟಿಲೋಪಾಯದಿಂದ ಕದ್ರುವಿನ ಜಯ, ವಿನತೆಯ ದಾಸ್ಯ, ಗರುಡನ ಉತ್ಪತ್ತಿ. ಗರುಡನಿಗೆ ಹೆದರಿ ದೇವತೆಗಳಿಂದ ಅವನ ಸ್ತುತಿ. ಗರುಡನಿಂದ ತನ್ನ ದೇಹದ ಮತ್ತು ತೇಜಸ್ಸಿನ ಉಪಸಂಹಾರ.)
ಸೂತಃ
ತಂ ಸಮುದ್ರಮತಿಕ್ರಮ್ಯ ಕದ್ರೂರ್ವಿನತಯಾ ಸಹ |
ನ್ಯಪತತ್ ತುರಗಾಭ್ಯಾಶೇ ನಚಿರಾದಿವ ಶೀಘ್ರಗಾ ॥1॥
ಕದ್ರುವು ವಿನತೆಯ ಜೊತೆಯಲ್ಲಿ ಆ ಸಮುದ್ರವನ್ನು ದಾಟಿ ಶೀಘ್ರವಾಗಿ ಹೋಗುತ್ತಾ ಅಲ್ಪಕಾಲದಲ್ಲಿಯೇ ಆ ತುರಗದ ಸಮೀಪಕ್ಕೆ ಹೋದಳು.
ನಾಗಾಸ್ತು ಸಹಿತಾಃ ಕೃತ್ವಾ ಕರ್ತವ್ಯಮಿತಿ ತದ್ವಚಃ |
ನಿಸ್ಸ್ನೇಹಾ ವೈ ದಹೇನ್ಮಾತಾ ಹ್ಯಸಂಪ್ರಾಪ್ತಮನೋರಥಾ ॥2॥
ಸಪತ್ನೀ ನ ಜಯೇದಸ್ಮಾನ್ ತಸ್ಮಾಜ್ಜಯ್ಯಾದ್ಯ ಭಾಮಿನೀ |
ಕೃಷ್ಣಂ ಪುಚ್ಛಂ ಕರಿಷ್ಯಾಮಸ್ತುರಗಸ್ಯ ನ ಸಂಶಯಃ |
ತಥೇತಿ ಗತ್ವಾ ತೇ ತಸ್ಯ ಪುಚ್ಛೇ ಬಾಲಾ ಇವಾಸ್ಥಿತಾಃ ॥3॥
ನಾಗಗಳೆಲ್ಲವೂ ಸೇರಿ ಅವಳ ಮಾತನ್ನು ನೆರವೇರಿಸಬೇಕೆಂದು ನಿಶ್ಚಯಿಸಿದವು. ನಾವು ಅವಳ ಮಾತಿನಂತೆ ನಡೆಯದಿದ್ದರೆ, ಸ್ನೇಹರಹಿತಳಾದ ನಮ್ಮ ತಾಯಿಯು ನಮ್ಮನ್ನು ಸುಡುವಳು. ನಮ್ಮ ತಾಯಿಯ ಸವತಿಯು ನಮ್ಮನ್ನು ಜಯಿಸಬಾರದು. ಆದ್ದರಿಂದ ಈ ದಿನ ನಾವು ಭಾಮಿನಿಯಾದ ವಿನತೆಯನ್ನು ಜಯಿಸಬೇಕು. ಅಶ್ವದ ಬಾಲವನ್ನು ಸೇರಿ ಒಂದೊಂದು ಕೂದಲಿನಲ್ಲಿಯೂ ಕಪ್ಪುಶರೀರವನ್ನು ಹೊಂದಿದ ನಾವು ಸೇರಿ ಒಟ್ಟು ಬಾಲವನ್ನು ಕಪ್ಪಾಗಿ ಮಾಡೋಣ. ಹೀಗೆ ಯೋಚಿಸಿ ಆ ಅಶ್ವದ ಬಳಿಗೆ ಹೋಗಿ, ಅದರ ಬಾಲದಲ್ಲಿ ಕಪ್ಪುಕೂದಲುಗಳಾಗಿ ನಾಗಗಳು ನೆಲೆಸಿದವು.
ಏತಸ್ಮಿನ್ನಂತರೇ ತೇ ತು ಸಪತ್ನ್ಯೌ ಪಣಿತೇ ತದಾ |
ಜಗ್ಮತುಃ ಪರಯಾ ಪ್ರೀತ್ಯಾ ಪರಂ ಪಾರಂ ಮಹೋದಧೇಃ ॥4॥
ಆ ಸಮಯಕ್ಕೆ ಸರಿಯಾಗಿ ಪಣವನ್ನು ಕಟ್ಟಿದ್ದ ಸಪತ್ನಿಯರು ಬಹಳ ಸಂತೋಷದಿಂದ ಸಮುದ್ರದ ಆಚೆಯ ದಡವನ್ನು ತಲುಪಿದರು.
ನಿಶಾಮ್ಯ ಚ ಬಹೂನ್ ವಾಲಾನ್ ಕೃಷ್ಣಾನ್ ಪುಚ್ಛಮುಪಾಶ್ರಿತಾನ್ |
ವಿನತಾಂ ವಿಷಣ್ಣವದನಾಂ ಕದ್ರೂರ್ದಾಸ್ಯೇ ನ್ಯಯೋಜಯತ್ ॥5॥
ಬಾಲದಲ್ಲಿದ್ದ ಅನೇಕ ಕೂದಲುಗಳು ಕಪ್ಪಾಗಿರುವುದನ್ನು ನೋಡಿ, ವಿಷಾದದಿಂದ ಕೂಡಿದ ವಿನತೆಯನ್ನು ಕದ್ರುವು ದಾಸ್ಯದಲ್ಲಿ ನಿಯೋಜಿಸಿದಳು.
ತತಃ ಸಾ ವಿನತಾ ತಸ್ಮಿನ್ ಪಣಿತೇನ ಪರಾಜಿತಾ |
ಅಭವದ್ ದುಃಖಸಂತಪ್ತಾ ದಾಸೀಭಾವೇ ಸಮಾಸ್ಥಿತಾ ॥6॥
ಆಗ ಆ ಪಣದಲ್ಲಿ ಪರಾಜಿತಳಾದ ವಿನತೆಯು ದುಃಖಸಂತಪ್ತಳಾಗಿ ದಾಸ್ಯವನ್ನು ಸ್ವೀಕರಿಸಿದಳು.
ಏತಸ್ಮಿನ್ನಂತರೇ ಚೈವ ಗರುಡಃ ಕಾಲ ಆಗತೇ |
ವಿನಾ ಮಾತ್ರಾ ಮಹಾತೇಜಾ ವಿದಾರ್ಯಾಂಡಮಜಾಯತ ॥7॥
ಅಗ್ನಿರಾಶಿರಿವೋದ್ಭಾಸಃ ಸಮಿದ್ಧೋಽತಿಭಯಂಕರಃ |
ಪ್ರವೃದ್ಧಃ ಸಹಸಾ ಪಕ್ಷೀ ಮಹಾಕಾಯೋ ನಭೋಗತಃ ॥8॥
ಆ ಸಮಯಕ್ಕೆ ಸರಿಯಾಗಿ (ಅರುಣನು ಹೇಳಿದಂತೆ ಐದುನೂರು ವರ್ಷಗಳು ಕಳೆಯುತ್ತಿರಲು) ತಾಯಿಯು ಇಲ್ಲದ ಸಂದರ್ಭದಲ್ಲಿಯೇ ಮಹಾತೇಜಸ್ವಿಯಾದ ಗರುಡನು ಮೊಟ್ಟೆಯನ್ನು ಒಡೆದುಕೊಂಡು ಹೊರಗೆ ಬಂದನು. ಅವನು ಅಗ್ನಿಯ ರಾಶಿಯಂತೆ ಕಾಂತಿಯನ್ನು ಹೊಂದಿ ಅತಿಭಯಂಕರನಾಗಿದ್ದನು. ತಕ್ಷಣದಲ್ಲಿಯೇ ದೇಹವೃದ್ಧಿಯನ್ನು ಪಡೆದು ದೊಡ್ಡ ದೇಹವನ್ನು ಧರಿಸಿ ಪಕ್ಷಿಯಾಗಿ ಆಕಾಶಕ್ಕೆ ಹಾರಿದನು.
ತಂ ದೃಷ್ಟ್ವಾ ಶರಣಂ ಜಗ್ಮುಃ ಪ್ರಜಾಃ ಸರ್ವಾ ವಿಭಾವಸುಮ್ |
ಪ್ರಣಿಪತ್ಯಾಬ್ರುವಂಶ್ಚೈನಮಾಸೀನಂ ವಿಶ್ವರೂಪಿಣಮ್ ॥9॥
ಮಾ ತ್ವಮಗ್ನೇ ಪ್ರವರ್ಧಿಷ್ಠಾಃ ಕಚ್ಚಿನ್ನೋ ನ ದಿಧಕ್ಷಸಿ |
ಅಸೌ ಹಿ ರಾಶಿಃ ಸುಮಹಾನ್ ಸಮಿದ್ಧಸ್ತವ ಸರ್ಪತಿ ॥10॥
ಅವನನ್ನು ನೋಡಿ ಎಲ್ಲಾ ಪ್ರಜೆಗಳೂ ಆಗ್ನೇಯ ದಿಕ್ಪಾಲಕನಾದ ಅಗ್ನಿಗೆ ಶರಣಾಗತರಾದರು. ವಿಶ್ವರೂಪಿಯಾಗಿ ಸಮಾಸೀನನಾದ ಅಗ್ನಿಯನ್ನು ಕುರಿತು ನಮಸ್ಕಾರವನ್ನು ಮಾಡಿ ಅವರು ಅಗ್ನಿಯೇ, ಹೀಗೆ ಅಭಿವೃದ್ಧಿಯನ್ನು ಹೊಂದಬೇಡ. ನಮ್ಮನ್ನು ನೀನು ದಹಿಸುವುದಿಲ್ಲವಷ್ಟೇ. ನಿನ್ನ ತೇಜೋರಾಶಿಯು ಬಹಳ ಪ್ರವೃದ್ಧವಾಗಿ ನಮ್ಮ ಕಡೆಗೆ ಬರುತ್ತಿದೆ ಎಂದು ಹೇಳಿದರು.
ಅಗ್ನಿಃ
ನೈತದೇವಂ ಯಥಾ ಯೂಯಂ ಮನ್ಯಧ್ವಮಸುರಾರ್ದನಾಃ |

ಗರುಡೋ ಭಗವಾನೇಷ ಮಮ ತುಲ್ಯಃ ಸ್ವತೇಜಸಾ ॥11॥
ನಾಗಕ್ಷಯಕರಸ್ತ್ವೇಷಃ ಕಾಶ್ಯಪೇಯೋ ಮಹಾಬಲಃ |
ದೇವಾನಾಂ ಚ ಹಿತೇ ಯುಕ್ತಸ್ತ್ವಹಿತೋ ದೈತ್ಯರಕ್ಷಸಾಮ್ ॥12॥
ಎಲೈ ಅಸುರಶತ್ರುಗಳೇ, ಇದು ನೀವು ತಿಳಿದುಕೊಂಡಂತೆ ಅಲ್ಲ. ಇವನು ಪೂಜ್ಯನಾದ ಗರುಡ. ನನಗೆ ಸಮಾನವಾದ ತೇಜಸ್ಸುಳ್ಳವನು.ಕಾಶ್ಯಪರಿಂದ ಮಹಾಬಲನಾಗಿ ಜನಿಸಿದ ಇವನು ಸರ್ಪಗಳ ನಾಶವನ್ನು ಮಾಡುವವನು. ಇವನು ದೇವತೆಗಳಿಗೆ ಹಿತವನ್ನೂ ದೈತ್ಯರಾಕ್ಷಸರಿಗೆ ಅಹಿತವನ್ನೂ ಮಾಡುವನು. (ಇವನನ್ನು ನೀವು ಅಗ್ನಿಯಾದ ನಾನೆಂದು ಭ್ರಮಿಸಿದ್ದೀರಿ.)
ಸೂತಃ
ಏವಮುಕ್ತಾಸ್ತತೋ ಗತ್ವಾ ಗರುಡಂ ವಾಗ್ಭಿರಸ್ತುವನ್ |
ಅದೂರಾದಭ್ಯುಪೇತ್ಯೈನಂ ಗತ್ವಾ ಸರ್ಷಿಗಣಾಸ್ತದಾ ॥13॥
ಹೀಗೆ ಹೇಳಲ್ಪಟ್ಟ ದೇವತೆಗಳು ಮತ್ತು ಋಷಿಗಣಗಳು ಆಗ ಗರುಡನ ಸಮೀಪಕ್ಕೆ ಹೋಗಿ ಮುಂದೆ ನಿಂತು ತಮ್ಮ ವಾಕ್ಯಗಳಿಂದ ಗರುಡನನ್ನು ಸ್ತೋತ್ರಮಾಡಿದರು.
ದೇವಾಃ
ತ್ವಮೃಷಿಸ್ತ್ವಂ ಮಹಾಭಾಗಸ್ತ್ವಂ ದೇವಃ ಪತಗೋತ್ತಮಃ |
ತ್ವಂ ಪ್ರಭುಸ್ತಪನಃ ಸೂರ್ಯಃ ಪರಮೇಷ್ಠೀ ಪ್ರಜಾಪತಿಃ ॥14॥
ಎಲೈ ಮಹಾನುಭಾವನೇ, ನೀನು ಋಷಿ. ನೀನು ದೇವತೆ. ನೀನು ಪಕ್ಷಿಶ್ರೇಷ್ಠನಾದವನು. ನೀನು ಪ್ರಭು. ನೀನು ತಾಪವನ್ನು ಕೊಡುವ ಸೂರ್ಯ. ನೀನು ಪ್ರಜಾಪತಿಯಾದ ಬ್ರಹ್ಮದೇವರು.
ತ್ವಮಿಂದ್ರಸ್ತ್ವಂ ಹಯಮುಖಸ್ತ್ವಂ ಸರ್ವಸ್ತ್ವಂ ಜಗತ್ಪತಿಃ |
ತ್ವಂ ಮುಖಂ ಪದ್ಮಜೋ ವಿಪ್ರಸ್ತ್ವಮಗ್ನಿಃ ಪವನಸ್ತಥಾ ॥15॥
ನೀನು ಇಂದ್ರ. ನೀನು ಹಯಗ್ರೀವ. ನೀನೇ ಸರ್ವವೂ ಆದ ಜಗತ್ಪತಿ. ನೀನು ಬ್ರಹ್ಮನ ಮುಖದಿಂದ ಹುಟ್ಟಿದ ಬ್ರಾಹ್ಮಣನಾದ ಪಚನವನ್ನು ಮಾಡುವ ವೈಶ್ವಾನರಾಗ್ನಿ. ನೀನೇ ಪವನ.
ತ್ವಂ ವಿಧಾತಾ ಚ ಧಾತಾ ಚ ತ್ವಂ ವಿಷ್ಣುಃ ಸುರಸತ್ತಮಃ |
ತ್ವಂ ಮಹಾನಭಿಭೂಃ ಶಶ್ವದಮೃತಂ ತ್ವಂ ಮಹದ್ ಯಶಃ ॥16॥
ನೀನೇ ವಿಧಾತೃ, ನೀನೇ ಧಾತೃ. ನೀನೇ ಸುರಶ್ರೇಷ್ಠನಾದ ವಿಷ್ಣು. ನೀನೇ ಮಹೋತ್ತಮನಾದವನು. ಎಲ್ಲರನ್ನೂ ಪರಾಭವಗೊಳಿಸುವವನು. ನೀನೇ ಶಾಶ್ವತನಾಗಿ ನಾಶರಹಿತನಾದವನು. ನೀನೇ ಕೀರ್ತಿವಂತನಾದವನು.
ಈ ಎಲ್ಲಾ ಶ್ಲೋಕಗಳಿಗೆ ಎಲ್ಲಾ ದೇವತೆಗಳ ಸನ್ನಿಧಾನವು ಗರುಡನಲ್ಲಿ ಇದೆ ಎಂದು ತಾತ್ಪರ್ಯ. ವಿಷ್ಣುವಿನ ವಾಹನವಾದ ಗರುಡನು ಎಂದೂ ವಿಷ್ಣುವಾಗುವುದಿಲ್ಲ. ಮಹಾಭಾರತದಲ್ಲಿಯೇ `ನಾಸ್ತಿ ನಾರಾಯಣ ಸಮಂ' ಎಂಬ ಪ್ರತಿಜ್ಞೆಯಿದೆ. ಆದ್ದರಿಂದ ಹೀಗೆಯೇ ಅರ್ಥವನ್ನು ಮಾಡಬೇಕು.
ತ್ವಂ ಪ್ರಭಾಸ್ತ್ವಮಭಿಪ್ರೇತಸ್ತ್ವಂ ನಸಾತ್ರಣಮನುತ್ತಮಮ್ |
ತ್ವಂ ಗತಿಃ ಸತತಂ ತ್ವತ್ತಃ ಕಥಂ ನಃ ಪ್ರಾಪ್ನುಯಾದ್ ಭಯಮ್ ॥17॥
ನೀನೇ ಕಾಂತಿ, ನೀನೇ ಎಲ್ಲರಿಗೂ ಇಷ್ಟನಾದವನು. ನೀನೇ ಶ್ರೇಷ್ಠನಾದ ರಕ್ಷಕ. ನೀನೇ ಶಾಶ್ವತವಾದ ಗತಿ. ನಿನ್ನಿಂದ ನಮಗೆ ಹೇಗೆ ಭಯವು ಉಂಟಾಗದೇ ಇರಬಹುದು ?
ಬಲೋತ್ತಮಃ ಸಾಧುರದೀನಸತ್ತ್ವಃ
ಸಮೃದ್ಧಿಮಾನ್ ದುಷ್ಪ್ರಸಹಸ್ತ್ವಮೇವ |
ತಪಃ ಶ್ರುತಂ ಸರ್ವಮಹೀನಕೀರ್ತೇಃ
ಅನಾಗತಂ ಚೋಪಗತಂ ಚ ಸರ್ವಮ್ ॥18॥
ನೀನು ಶ್ರೇಷ್ಠವಾದ ಬಲವುಳ್ಳವನು. ಸಜ್ಜನನಾದವನು. ದೈನ್ಯರಹಿತವಾದ ಪರಾಕ್ರಮವುಳ್ಳವನು. ಸಮೃದ್ಧಿಯುಳ್ಳವನು. ಯಾರಿಂದಲೂ ತಡೆಯಲು ಸಾಧ್ಯವಾಗದವನು. ಕೀರ್ತಿನಾಶವಾಗದವನು. ಅತೀತಾನಾಗತವಾದ ಎಲ್ಲಾ ವಿದ್ಯೆಗಳನ್ನೂ, ತಪಸ್ಸನ್ನೂ ಸಂಪಾದಿಸಿದವನು.
ತ್ವಮುತ್ತಮಃ ಸತ್ತ್ವಮಿದಂ ಚರಾಚರಂ
ಗಭಸ್ತಿಭಿರ್ಭಾನುರಿವಾವಭಾಸಸೇ |
ಸಮಾಕ್ಷಿಪನ್ ಭಾನುಮತಃ ಪ್ರಭಾಂ ಮುಹುಃ
ತ್ವಮಂತತಃ ಸರ್ವಮಿದಂ ಧ್ರುವಾಧ್ರುವಮ್ ॥19॥
ನೀನೇ ಸರ್ವೋತ್ತಮನಾದವನು. ನೀನೇ ಚರಾಚರಪ್ರಾಣ್ಯಾತ್ಮಕವಾದ ಈ ಜಗತ್ತನ್ನು ಸೂರ್ಯನಂತೆ ನಿನ್ನ ಕಿರಣಗಳಿಂದ ಪ್ರಕಾಶಿಸುತ್ತಿದ್ದೀಯೆ. ನಿನ್ನ ಪ್ರಭೆಯಿಂದ ಸೂರ್ಯನ ಪ್ರಭೆಯನ್ನು ಪರಾಭವಗೊಳಿಸುತ್ತಿದ್ದೀಯೆ. ನಿತ್ಯಾನಿತ್ಯವಾದ ಎಲ್ಲವೂ ನೀನೇ. (ಎಲ್ಲವೂ ನಿನ್ನ ಅಧೀನ.)
ದಿವಾಕರಃ ಪರಿಕುಪಿತೋ ಯಥಾ ದಹೇತ್
ಪ್ರಜಾಸ್ತಥಾ ದಹಸಿ ಹುತಾಶನಪ್ರಭಃ |
ಭಯಂಕರಃ ಪ್ರಲಯ ಇವಾಗ್ನಿರುತ್ಥಿತೋ
ವಿನಾಶಯನ್ ಯುಗಪರಿವರ್ತನಾಂತಕೃತ್ ॥20॥
ಅಗ್ನಿಗೆ ಸಮಾನವಾದ ತೇಜಸ್ಸುಳ್ಳ ನೀನು ಕೋಪಗೊಂಡ ಸೂರ್ಯನು ಪ್ರಜೆಗಳನ್ನು ದಹಿಸುವಂತೆ ದಹಿಸುತ್ತಿದ್ದೀಯೆ.

ಪ್ರಳಯಕಾಲದಲ್ಲಿ ಉತ್ಥಿತವಾದ ಭಯಂಕರವಾದ ಅಗ್ನಿಯಂತೆ ಪ್ರಜೆಗಳನ್ನು ವಿನಾಶಮಾಡುತ್ತಾ ಯುಗಗಳ ಪರಿವರ್ತನೆಯನ್ನೂ ಮತ್ತು ಯುಗಾಂತವನ್ನೂ ಮಾಡುವವನಾಗಿದ್ದೀಯೆ.

ಖಗೇಶ್ವರಂ ಶರಣಮುಪಸ್ಥಿತಾ ವಯಂ
ಮಹೌಜಸಂ ವಿತಿಮಿರದಭ್ರಗೋಚರಮ್ ।
ಮಹಾಬಲಂ ಗರುಡಮುಪೇತ್ಯ ಖೇಚರಂ
ಪರಾವರಂ ವರದಮಜೇಯವಿಕ್ರಮಮ್ ॥21॥

ಪಕ್ಷಿರಾಜನಾದ ನಿನಗೆ ನಾವು ಶರಣಾಗತರಾಗಿದ್ದೇವೆ. ಮಹಾಪರಾಕ್ರಮವುಳ್ಳ, ತಿಮಿರರಹಿತವಾದ ಸ್ಥಳದಲ್ಲಿ ಅಲ್ಪವಾಗಿ ಗೋಚರಿಸುವ ಮಹಾಬಲವುಳ್ಳ, ಅಂತರಿಕ್ಷಚಾರಿಯಾದ, ಅನೇಕರಿಗಿಂತ ಶ್ರೇಷ್ಠನಾದ, ವರದನಾದ, ಅಜೇಯಪರಾಕ್ರಮವುಳ್ಳ ಗರುಡನಾದ ನಿನಗೆ ನಾವು ಶರಣಾಗತರಾಗಿದ್ದೇವೆ.

ಸೂತಃ
ಸ್ತವಂ ಶ್ರುತ್ವಾತ್ಮನೋ ದೇಹಂ ಸುಪರ್ಣಃ ಪ್ರೇಕ್ಷ್ಯ ಚ ಸ್ವಯಮ್।
ತತಃ ಸಂಪರಿಹರ್ತುಂ ಸ ಸರ್ವತಃ ಪರಿಚಕ್ರಮೇ ॥22॥

ಗರುಡನು ತನ್ನ ಈ ಸ್ತೋತ್ರವನ್ನು ಕೇಳಿ ತನ್ನ ದೇಹವನ್ನು ತಾನೇ ನೋಡಿ, ತನ್ನ ದೇಹವನ್ನು ಎಲ್ಲ ಕಡೆಗಳಿಂದಲೂ ಸಂಕೋಚಗೊಳಿಸಲು ಉಪಕ್ರಮಿಸಿದನು.

ಸುಪರ್ಣಃ
ನ ಮೇ ಸರ್ವಾಣಿ ಭೂತಾನಿ ಬಿಭಿಯುರ್ದೇಹದರ್ಶನಾತ್ ।
ಸಮುದ್ವಿಗ್ನಾನಿ ರೂಪಾನ್ಮೇ ಇತಿ ತೇಜಃ ಸಮಾಹರತ್ ॥23॥

ನನ್ನ ದೇಹವನ್ನು ನೋಡಿ ಎಲ್ಲಾ ಪ್ರಾಣಿಗಳು ಭಯಪಡಬಾರದು. ಎಲ್ಲಾ ಪ್ರಾಣಿಗಳೂ ನನ್ನ ರೂಪದಿಂದ ಬಹಳ ಉದ್ವಿಗ್ನವಾಗಿವೆ ಎಂದು ತನ್ನ ತೇಜಸ್ಸನ್ನು ಉಪಸಂಹರಿಸಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.

## ಇಪ್ಪತ್ತೊಂದನೆಯ ಅಧ್ಯಾಯ

(ವಿನತೆಯಿಂದ ಕದ್ರುವಿನ ವಹನ ಮತ್ತು ಗರುಡನಿಂದ ಸರ್ಪಗಳ ವಹನ. ಸೂರ್ಯತಾಪಕ್ಕೆ ಒಳಗಾದ ಸರ್ಪಗಳ ಶಾಂತಿಗಾಗಿ ಕದ್ರುವಿನಿಂದ ಇಂದ್ರಸ್ತುತಿ)

ಸೂತಃ
ತತಃ ಕಾಮಗಮಃ ಪಕ್ಷೀ ಮಹಾವೀರ್ಯೋ ಮಹಾಬಲಃ ।
ಅರುಣಂ ಚಾತ್ಮನಃ ಪೃಷ್ಠಮುಪಾರೋಪ್ಯ ಪಿತುರ್ಗೃಹಾತ್ ॥1॥
ಮಾತುರಂತಿಕಮಾಗಚ್ಛತ್ ಪರಂ ಪಾರಂ ಮಹೋದಧೇಃ ।
ಯತ್ರ ಸಾ ವಿನತಾ ತಸ್ಮಿನ್ ಪಣಿತೇ ವೈ ಪರಾಜಿತಾ ॥2॥

ಅನಂತರ ಮಹಾಪರಾಕ್ರಮದಿಂದ ಮತ್ತು ಮಹಾಬಲದಿಂದ ಕೂಡಿದ ಕಾಮಗಮನಾದ ಪಕ್ಷಿಯಾದ ಗರುಡನು ಅರುಣನನ್ನು ತನ್ನ ಬೆನ್ನಿನ ಮೇಲೆ ಕೂಡಿಸಿಕೊಂಡು ತನ್ನ ತಂದೆಯ ಮನೆಯಿಂದ ಹೊರಟು ಸಮುದ್ರದ ಆಚೆಯ ದಡದಲ್ಲಿ ಎಲ್ಲಿ ವಿನತೆಯು ಕದ್ರುವಿಗೆ ಪಣದಲ್ಲಿ ಸೋತಿದ್ದಳೋ ಅಂತಹ ಸ್ಥಳದಲ್ಲಿ ತಾಯಿಯ ಸಮೀಪಕ್ಕೆ ಹೋದನು.

ಅತೀವ ದುಃಖಸಂತಪ್ತಾ ದಾಸೀಭಾವಮುಪಾಗತಾ ।
ತತಃ ಕದಾಚಿದ್ ವಿನತಾಂ ಪ್ರವಣಾಂ ಪುತ್ರಸನ್ನಿಧೌ ।
ಕಾಲ ಆಹೂಯ ವಚನಂ ಕದ್ರೂರಿದಮಭಾಷತ ॥3॥

ವಿನತೆಯಾದರೋ ದಾಸ್ಯವನ್ನು ಹೊಂದಿ ಬಹಳ ದುಃಖಸಂತಪ್ತಳಾಗಿದ್ದಳು. ಅನಂತರ ಒಮ್ಮೆ ಪುತ್ರಸನ್ನಿಧಿಯಲ್ಲಿ ತನಗೆ ವಿನಯಶಾಲಿನಿಯಾಗಿದ್ದ ವಿನತೆಯನ್ನು ಕರೆದು ಕದ್ರುವು ಈ ಮಾತುಗಳನ್ನು ಆಡಿದಳು.

ನಾಗಾನಾಮಾಲಯಂ ಭದ್ರೇ ಸುರಮ್ಯಂ ರಮಣೀಯಕಮ್ ।
ಸಮುದ್ರಕುಕ್ಷಾವೇಕಾಂತೇ ತತ್ರ ಮಾಂ ವಿನತೇ ವಹ ॥4॥

ಭದ್ರೆಯೇ, ಸಮುದ್ರಕುಕ್ಷಿಯಲ್ಲಿ ಒಂದು ಪ್ರದೇಶದಲ್ಲಿ ನಾಗಾಲಯವಿದೆ. ಅದು ಬಹಳ ಸುಂದರವಾಗಿದೆ. ವಿನತೆಯೇ ನನ್ನನ್ನು ಅಲ್ಲಿಗೆ ಎತ್ತಿಕೊಂಡು ಹೋಗು.

ತತಃ ಸುಪರ್ಣಮಾತಾ ತಾಮವಹತ್ ಸರ್ಪಮಾತರಮ್ ।
ಪನ್ನಗಾನ್ ಗರುಡಶ್ಚಾಪಿ ಮಾತುರ್ವಚನಚೋದಿತಃ ॥5॥

ಆಗ ಗರುಡನ ತಾಯಿಯಾದ ವಿನತೆಯು ಸರ್ಪಮಾತೆಯಾದ ಕದ್ರುವನ್ನು ಎತ್ತಿಕೊಂಡು ಹೊರಟಳು. ತಾಯಿಯ ಮಾತಿನಂತೆ ಗರುಡನೂ ಸಹ ಸರ್ಪಗಳನ್ನು ಎತ್ತಿಕೊಂಡು ಹೊರಟನು.

ಸ ಸೂರ್ಯಮಭಿತೋ ಯಾತಿ ವೈನತೇಯೋ ವಿಹಂಗಮಃ ।
ಸೂರ್ಯರಶ್ಮಿಪರೀತಾಶ್ಚ ಮೂರ್ಚ್ಛಿತಾಃ ಪನ್ನಗಾಽಭವನ್ ।

ತದವಸ್ಥಾನ್ ಸುತಾನ್ ದೃಷ್ಟ್ವಾ ಕದ್ರೂಃ ಶಕ್ರಮಥಾಸ್ತುವತ್ ॥6॥
ಆ ವಿನತೆಯ ಮಗನಾದ ಪಕ್ಷಿಯಾದ ಗರುಡನು ಸೂರ್ಯನಿಗೆ ಅಭಿಮುಖವಾಗಿ ಹೋಗಲು ಪ್ರಾರಂಭಿಸಿದನು. ಸರ್ಪಗಳೆಲ್ಲವೂ ಸೂರ್ಯರಶ್ಮಿಯಿಂದ ಬಳಲಿ ಮೂರ್ಛಿತವಾದವು. ತನ್ನ ಮಕ್ಕಳ ಅಂತಹ ಸ್ಥಿತಿಯನ್ನು ನೋಡಿ ಕದ್ರುವು ಇಂದ್ರನನ್ನು ಸ್ತೋತ್ರಮಾಡಿದಳು.
ಕದ್ರೂಃ
ನಮಸ್ತೇ ದೇವದೇವೇಶ ನಮಸ್ತೇ ಬಲಸೂದನ |
ನಮುಚಿಘ್ನ ನಮಸ್ತೇಽಸ್ತು ಸಹಸ್ರಾಕ್ಷ ಶತಕ್ರತೋ ॥7॥
ದೇವದೇವೇಶನಾದ ನಿನಗೆ ನಮಸ್ಕಾರ. ಬಲಸೂದನನಾದ ನಿನಗೆ ನಮಸ್ಕಾರ. ನಮುಚಿಹಂತಕನಾದ ನಿನಗೆ ನಮಸ್ಕಾರ. ಸಹಸ್ರಾಕ್ಷನೂ, ಶತಕ್ರತುವೂ ಆದ ನಿನಗೆ ನಮಸ್ಕಾರ.
ಸರ್ಪಾಣಾಂ ಸೂರ್ಯತಪ್ತಾನಾಂ ವಾರಿಣಾ ತ್ವಂ ಪ್ಲವೋ ಭವ |
ತ್ವಮೇವ ಪರಮಂ ತ್ರಾಣಮಸ್ಮಾಕಮಮರೋತ್ತಮ ॥8॥
ಸೂರ್ಯನ ತಾಪಕ್ಕೆ ಒಳಗಾದ ಸರ್ಪಗಳಿಗೆ ಜಲವನ್ನು ದಯಪಾಲಿಸಿ ನೀನು ಹಡಗಿನಂತೆ ದಾಟಿಸು. ದೇವಶ್ರೇಷ್ಠನೇ, ನಮಗೆ ನೀನೇ ಪರಮರಕ್ಷಕನಾದವನು.
ಈಶೋ ಹ್ಯಸಿ ಪಯಃ ಸ್ರಷ್ಟುಮನಲ್ಪಂ ಚ ಪುರಂದರ |
ತ್ವಮೇವ ಮೇಘಸ್ತ್ವಂ ವಾಯುಸ್ತ್ವಮಗ್ನಿರ್ವೈದ್ಯುತಃ ಪುರಾ ॥9॥
ಪುರಂದರನೇ, ಅಗಾಧವಾದ ನೀರನ್ನು ಸೃಷ್ಟಿಸಲು ನೀನು ಸಮರ್ಥನಾಗಿದ್ದೀಯೆ. ನೀನೇ ಮೇಘ. ನೀನೇ ವಾಯು. ನೀನೇ ಶ್ರೇಷ್ಠವಾದ ವಿದ್ಯುತ್ತಿನ ಅಗ್ನಿ. (ಇವೆಲ್ಲವೂ ನಿನ್ನ ಅಧೀನ ಎಂದು ತಿಳಿಯಬೇಕು.)
ತ್ವಮೇವ ಘನವಿಕ್ಷೇಪ್ತಾ ತ್ವಾಮೇವಾಹುರ್ಘನಂ ಪುರಾ |
ತ್ವಂ ವಜ್ರಮತುಲಂ ಘೋರಂ ಮಘವಾಂಸ್ತ್ವಂ ಬಲಾಹಕಃ ॥10॥
ನೀನೇ ಮೋಡಗಳನ್ನು ಚದುರಿಸುವವನು. ನಿನ್ನನ್ನೇ ಮೋಡವೆಂದು ಕರೆಯುತ್ತಾರೆ. ನೀನೇ ಅಸದೃಶವಾದ, ಘೋರವಾದ ವಜ್ರ. ನೀನೇ ಮೋಡಗಳು.
ಸ್ರಷ್ಟಾ ತ್ವಮೇವ ಲೋಕಾನಾಂ ಸಂಹರ್ತಾ ಚಾಪರಾಜಿತಃ |
ತ್ವಂ ಯೋನಿಃ ಸರ್ವಭೂತಾನಾಂ ತ್ವಮಾದಿತ್ಯೋ ವಿಭಾವಸುಃ ॥11॥
ನೀನೇ ಲೋಕಗಳನ್ನು ಸೃಷ್ಟಿಸುವವನು ಮತ್ತು ಸಂಹರಿಸುವವನು. ನೀನು ಅಪರಾಜಿತನಾದವನು. ನೀನು ಎಲ್ಲಾ ಜೀವರಿಗೂ ಸೃಷ್ಟಿಕರ್ತನಾದವನು. ನೀನೇ ಆದಿತ್ಯ. ನೀನೇ ಅಗ್ನಿ. (ಯೋಗ್ಯವಾದ ಈ ವಿಶೇಷಣಗಳನ್ನು ಇಂದ್ರನ ಅಂತರ್ಯಾಮಿಗೆ ಅನ್ವಯಮಾಡಬೇಕು. ಆದಿತ್ಯ, ವಿಭಾವಸು ಮೊದಲಾದ ಎಲ್ಲಾ ಶಬ್ದಗಳಿಂದಲೂ ವಿಷ್ಣುವೇ ವಾಚ್ಯನೆಂದು ತಿಳಿಯಬೇಕು. ಮುಂದೆಯೂ ಹೀಗೆಯೆ.)
ತ್ವಂ ಮಹಾಭೂತಮಾಶ್ಚರ್ಯಂ ತ್ವಂ ರಾಜಾ ತ್ವಂ ಸುರೋತ್ತಮಃ |
ತ್ವಂ ವಿಷ್ಣುಸ್ತ್ವಂ ಸುರಾರಿಘ್ನಸ್ತ್ವಂ ದೇವಸ್ತ್ವಂ ಪರಾಯಣಮ್ ॥12॥
ನೀನೇ ಮಹಾಭೂತಗಳು. ನೀನೇ ಆಶ್ಚರ್ಯನಾದವನು. ನೀನೇ ಎಲ್ಲರನ್ನೂ ರಂಜಿಸುವವನು. ನೀನೇ ಸುರಶ್ರೇಷ್ಠನಾದವನು. ನೀನೇ ವಿಷ್ಣುವು. ನೀನೇ ಅಸುರರನ್ನು ಸಂಹಾರಮಾಡುವವನು. ನೀನೇ ದೇವನಾದವನು. ನೀನೇ ಶ್ರೇಷ್ಠನಾದ ಆಶ್ರಯನು.
ತ್ವಂ ಸರ್ವಮಮೃತಂ ದೇವ ತ್ವಂ ಸೋಮಃ ಪರಮಾರ್ಚಿತಃ |
ತ್ವಂ ಮುಹೂರ್ತಸ್ತಿಥಿಸ್ತ್ವಂ ಚ ತ್ವಂ ಲವಸ್ತ್ವಂ ಪುನಃ ಕ್ಷಣಃ ॥13॥
ನೀನೇ ಎಲ್ಲವೂ. ದೇವನೇ, ನೀನೇ ಮುಕ್ತಸಮುದಾಯವು. ನೀನೇ ಪರಮಾರ್ಚಿತನಾದ ಚಂದ್ರನು. ನೀನೇ ಮುಹೂರ್ತ, ನೀನೇ ತಿಥಿ. ನೀನೇ ಲವ ಮತ್ತು ನೀನೇ ಕ್ಷಣ.
ಶುಕ್ಲಸ್ತ್ವಂ ಬಹುಳಶ್ಚೈವ ಕಲಾಃ ಕಾಷ್ಠಾ ತಥಾ ತ್ರುಟಿಃ |
ಸಂವತ್ಸರಸ್ತು ಮಾಸಾಶ್ಚ ರಜನ್ಯಶ್ಚ ದಿನಾನಿ ಚ ॥14॥
ನೀನೇ ಶುಕ್ಲಪಕ್ಷ. ನೀನೇ ಕೃಷ್ಣಪಕ್ಷ. ಕಲಾ, ಕಾಷ್ಠ ಮತ್ತು ತ್ರುಟಿಗಳೂ ನೀನೇ. ಸಂವತ್ಸರಗಳೂ, ಮಾಸಗಳೂ, ರಾತ್ರಿಗಳೂ, ಹಗಲುಗಳೂ, ಎಲ್ಲವೂ ನೀನೇ.
ತ್ವಮುತ್ತಮಃ ಸಗಿರಿವನಾ ವಸುಂಧರಾ
ಸುಭಾಸ್ವರಂ ವಿತಿಮಿರಮಂಬರಂ ತಥಾ |
ಮಹೋದಧಿಃ ಸತಿಮಿತಿಮಿಂಗಲಸ್ತಥಾ
ಮಹೋರ್ಮಿಮಾನ್ ಬಹುಮಕರೋ ಝುಷಾಲಯಃ ॥15॥
ಪರ್ವತ ಮತ್ತು ಕಾಡುಗಳಿಂದ ಕೂಡಿದ ವಸುಂಧರೆಯೂ ನೀನೇ. ನೀನೇ ಸರ್ವೋತ್ತಮನಾದವನು. ನೀನೇ ಪ್ರಕಾಶರೂಪವಾದ, ಅಂಧಕಾರಶೂನ್ಯವಾದ ಆಕಾಶನು. ತಿಮಿಂಗಲಗಳನ್ನು ಹೊಂದಿದ ಅನೇಕ ಅಲೆಗಳನ್ನೂ, ಅನೇಕ ಮೊಸಳೆಗಳನ್ನೂ ಮತ್ತು ಅನೇಕ ಮೀನುಗಳನ್ನೂ ಹೊಂದಿದ ಸಮುದ್ರವೂ ನೀನೇ.
ಮನೀಷಿಭಿಸ್ತ್ವಮಿತಿ ಸದಾಽಭಿಪೂಜ್ಯಸೇ
ಮಹರ್ಷಿಭಿರ್ಮುದಿತಹೃದಂಬುಜೇ ವಿಭೋ |
ಅಭಿಷ್ಟುತಃ ಪಿಬಸಿ ಚ ಸೋಮಮಧ್ವರೇ
ವಷಟ್ಕೃತಾನ್ಯಪಿ ಚ ಹವೀಂಷಿ ಭೂತಳೇ ॥16॥

ಎಲೈ ವಿಭುವೇ, ವಿವೇಕಿಗಳಾದ ಮಹರ್ಷಿಗಳು ಅವರ ಹೃದಯಕಮಲದಲ್ಲಿ ನಿನ್ನನ್ನು ಸದಾ ಹೀಗೆ ಪೂಜೆಮಾಡುತ್ತಾರೆ. ಅವರಿಂದ ಸ್ತೋತ್ರಮಾಡಲ್ಪಟ್ಟು ಯಜ್ಞದಲ್ಲಿ ನೀನು ಸೋಮಭಾಗವನ್ನು ಸ್ವೀಕರಿಸುತ್ತೀಯೆ. ಭೂಮಿಯಲ್ಲಿ ವಷಟ್ಕಾರಸಹಿತವಾಗಿ ಕೊಟ್ಟ ಹವಿಸ್ಸುಗಳನ್ನೂ ಸ್ವೀಕರಿಸುತ್ತೀಯೆ.
ಅಜಾಯ ಲೋಕತ್ರಯಭಾವನಾಯ
ಭೂತಾತ್ಮನೇ ಗೋಪತಯೇ ವೃಷಾಯ |
ಸೂರ್ಯಾಯ ಸರ್ಗಪ್ರಳಯಾನಲಾಯ
ನಮೋ ಮಹಾಕಾರುಣಿಕೋತ್ತಮಾಯ ॥17॥
ಜನ್ಮರಹಿತನಾದ, ಲೋಕತ್ರಯಗಳ ಸೃಷ್ಟಿಕರ್ತನಾದ, ಸರ್ವಸ್ವಾಮಿಯಾದ ಕಿರಣಗಳಿಗೆ ಒಡೆಯನಾದ, ಸರ್ವಶ್ರೇಷ್ಠನಾದ, ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ, ಮಹಾಕಾರುಣಿಕನಾದ, ಸರ್ವೋತ್ತಮನಾದ ಸೂರ್ಯರೂಪನಾದ ನಿನಗೆ ನಮಸ್ಕಾರ.
ವಿವಸ್ವತೇ ಜ್ಞಾನಭೃದಂತರಾತ್ಮನೇ
ಜಗತ್ಪ್ರದೀಪಾಯ ಜಗದ್ಧಿತೈಷಿಣೇ |
ಸ್ವಯಂಭುವೇ ದೀಪ್ತಸಹಸ್ರಚಕ್ಷುಷೇ
ಸುರೋತ್ತಮಾಯಾಮಿತತೇಜಸೇ ನಮಃ ॥18॥
ಜ್ಞಾನಿಗಳ ಅಂತರಾತ್ಮನಾದ, ಜಗತ್ತಿನ ಹಿತವನ್ನು ಬಯಸುವ, ಜಗತ್ತಿಗೆ ದೀಪಪ್ರಾಯನಾಗಿರುವ, ದೀಪ್ತವಾದ ಸಹಸ್ರಚಕ್ಷುಸ್ಸುಗಳನ್ನು ಹೊಂದಿದ, ಸ್ವಯಂಭುವಾದ, ಸುರೋತ್ತಮನಾದ, ಅಮಿತ ತೇಜಸ್ಸುಳ್ಳ, ವಿವಸ್ವಾನ್ ಎಂಬ ಸೂರ್ಯನಾಮಕನಾದ ನಿನಗೆ ನಮಸ್ಕಾರ.
ತ್ವಂ ವಿಪ್ರೈಃ ಸತತಮಿಹೇಜ್ಯಸೇ ಫಲಾರ್ಥಂ
ವೇದಾಂತೇಷ್ವತುಲಬಲೌಘ ಗೀಯಸೇ ತ್ವಮ್ |
ತ್ವದ್ಪ್ರೀತ್ಯೈರ್ಯಜನಪರಾಯಣಾ ದ್ವಿಜೇಂದ್ರಾ
ವೇದಾಂತಾನ್ಯಭಿಗಮಯಂತಿ ಸರ್ವವೇದೈಃ ॥19॥
ನೀನು ಅಪೇಕ್ಷಿತ ಫಲಗಳ ಪ್ರಾಪ್ತಿಗಾಗಿ ವಿಪ್ರರಿಂದ ಇಲ್ಲಿ ಯಾವಾಗಲೂ ಆರಾಧಿಸಲ್ಪಡುತ್ತೀಯೆ. ಎಲೈ ಅಸದೃಶಬಲರಾಶಿರೂಪನಾದವನೇ, ವೇದಾಂತಗಳಲ್ಲಿ ನೀನೇ ಗಾನಮಾಡಲ್ಪಡುತ್ತೀಯೆ. ನಿನ್ನ ಪ್ರೀತಿಯ ಸಲುವಾಗಿ ಯಜನಶೀಲರಾದ ದ್ವಿಜೇಂದ್ರರು ಸರ್ವವೇದಗಳಿಂದ ವೇದಾಂತವನ್ನು ಸಂಯೋಜಿಸಿ ನಿನ್ನನ್ನು ಶಿಷ್ಯರಲ್ಲಿ ಉಪದೇಶಮಾಡುತ್ತಾರೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.

## ಇಪ್ಪತ್ತೆರಡನೆಯ ಅಧ್ಯಾಯ

(ಇಂದ್ರನು ಸುರಿಸಿದ ಮಳೆಯಿಂದ ಸರ್ಪಗಳ ತಾಪ ಪರಿಹಾರ.)
ಸೂತಃ
ಏವಂ ಸ್ತುತಸ್ತದಾ ಕದ್ರ್ವಾವಾ ಭಗವಾನ್ ಹರಿವಾಹನಃ |
ನೀಲಜೀಮೂತಸಂಘಾತೈರ್ವ್ಯೋಮ ಸರ್ವಂ ಸಮಾವೃಣೋತ್ ॥1॥
ಕದ್ರುವಿನಿಂದ ಹೀಗೆ ಸ್ತೋತ್ರಮಾಡಲ್ಪಟ್ಟ ಭಗವಾನ್ ಇಂದ್ರನು ನೀಲಮೇಘಗಳ ಸಮುದಾಯದಿಂದ ಎಲ್ಲಾ ಆಕಾಶವನ್ನೂ ತುಂಬಿದನು.
ತೇ ಮೇಘಾ ಮುಮುಚುಸ್ತೋಯಂ ಮುಹೂರ್ತಂ ವಿದ್ಯುದುಜ್ಜ್ವಲಾಃ |
ಪರಸ್ಪರಮಿವಾತ್ಯರ್ಥಂ ಗರ್ಜಂತಃ ಸತತಂ ದಿವಿ ॥2॥
ಆ ಮೋಡಗಳು ಸ್ಪರ್ಧೆಯಿಂದಲೋ ಎಂಬಂತೆ ಪರಸ್ಪರವಾಗಿ ಗರ್ಜಿಸುತ್ತಾ ಆಕಾಶದಲ್ಲಿ ಗುಡುಗುಗಳನ್ನು ಉಂಟುಮಾಡಿ ಒಂದು ಮುಹೂರ್ತದ ಕಾಲ ಮಿಂಚಿನಿಂದ ಕೂಡಿದವುಗಳಾಗಿ ಉಜ್ವಲವಾದ ಮಳೆಯನ್ನು ಸುರಿಸಿದವು.
ಅದ್ರಿಸ್ಯರಿಂರಿವಾಕಾಶಂ ಜಲದೈಸ್ತು ಮಹಾದ್ಭುತೈಃ |
ಸೃಜದ್ಭಿರತುಲಂ ತೋಯಮಜಸ್ರಂ ಸುಮಹಾರವೈಃ ॥3॥
ಮಹಾದ್ಭುತಗಳಾದ, ಬಹಳ ಗರ್ಜನೆಯಿಂದ ಕೂಡಿದ ಪರ್ವತಪ್ರಾಯವಾದ ಮೇಘಗಳಿಂದ ಅಸಾಧಾರಣವಾದ ಜಲರಾಶಿಯು ಸತತವಾಗಿ ಸೃಷ್ಟಿಸಲ್ಪಟ್ಟಿತು.
ಸಂಪ್ರವೃತ್ತಮಿವಾಕಾಶಂ ಧಾರಾತ್ಮಭಿರನೇಕಶಃ |
ಮೇಘಸ್ತನಿತನಿರ್ಘೋಷಮಂಬರಂ ಸಮಪದ್ಯತ ॥4॥
ಆಕಾಶವು ನೀರಿನಿಂದಲೂ, ಮೇಘಗಳ ಗರ್ಜನೆಯ ನಿರ್ಘೋಷದಿಂದಲೂ ತುಂಬಿಹೋದಂತೆ ಕಾಣುತ್ತಿತ್ತು.
ನಾಗಾನಾಮುತ್ತಮೋ ಹರ್ಷಸ್ತಥಾ ವರ್ಷತಿ ವಾಸವೇ |
ಆಪೂರ್ಯತ ಮಹೀ ಚಾಪಿ ಸಲಿಲೇನ ಸಮಂತತಃ ॥5॥

ಇಂದ್ರನು ಹಾಗೆ ಮಳೆಯನ್ನು ಸುರಿಸುತ್ತಿರಲು ಸರ್ಪಗಳಿಗೆ ಬಹಳ ಸಂತೋಷವಾಯಿತು. ಭೂಮಿಯೂ ಕೂಡ ಎಲ್ಲ ಕಡೆಯಲ್ಲಿಯೂ ನೀರಿನಿಂದ ತುಂಬಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದ್ವಾವಿಂಶೋऽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ದಶಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು. *****

ಇಪ್ಪತ್ಮೂರನೆಯ ಅಧ್ಯಾಯ
(ಸರ್ಪಗಳ ಮಾತಿನಂತೆ ತಾಯಿಯನ್ನು ದಾಸ್ಯದಿಂದ ಬಿಡಿಸಲು ಅಮೃತವನ್ನು ತರಲು ಗರುಡನ ಪ್ರಯತ್ನ. ತಾಯಿಯನ್ನು ಕುರಿತು ಆಹಾರ ಪ್ರಾರ್ಥನೆ. ತಾಯಿಯ ಮಾತಿನಂತೆ ಸಮುದ್ರಮಧ್ಯದಲ್ಲಿದ್ದ ನಿಷಾದರ ಭಕ್ಷಣ)
ಸೂತಃ
ಸುಪರ್ಣೇನೋಹ್ಯಮಾನಾಸ್ತೇ ಜಗ್ಮುಸ್ತಂ ದೇಶಮಾಶು ವೈ |
ಸಾಗರಾಂಬುಪರಿಕ್ಷಿಪ್ತಂ ಪಕ್ಷಿಸಂಘನಿನಾದಿತಮ್ ॥1॥
ಸುಪರ್ಣನಿಂದ ಹೊತ್ತುಕೊಂಡು ಹೋಗಲ್ಪಟ್ಟ ಆ ಸರ್ಪಗಳು ಸಾಗರದ ಜಲದ ಮಧ್ಯದಲ್ಲಿರುವ ಪಕ್ಷಿಸಮೂಹದ ನಾದದಿಂದ ಕೂಡಿದ್ದ ಆ ಪ್ರದೇಶವನ್ನು ತಲುಪಿದವು.
ವಿಚಿತ್ರಫಲಪುಷ್ಪಾಭಿರ್ವನರಾಜಿಭಿರಾವೃತಮ್ |
ಭವನೈಶ್ಚಾವೃತಂ ದಿವ್ಯೈಸ್ತಥಾ ಪದ್ಮಾಕರೈರಪಿ ॥2॥
ಪ್ರಸನ್ನಸಲಿಲೈಶ್ಚಾಪಿ ಹ್ರದೈಶ್ಚಿತ್ರೈರ್ವಿಭೂಷಿತಮ್ |
ದಿವ್ಯಗಂಧವಹೈಃ ಪುಣ್ಯೈರ್ಮಾರುತೈರುಪವೀಜಿತಮ್ ॥3॥
ಆಜಿಘ್ರದ್ಭಿರಿವಾಕಾಶಂ ವೃಕ್ಷೈರ್ಮಲಯಜೈರಪಿ |
ಶೋಭಿತಂ ಪುಷ್ಪವರ್ಷಾಣಿ ಮುಂಚದ್ಭಿರ್ಮಾರುತೋದ್ಧೃತೈಃ ॥4॥
ಆ ಪ್ರದೇಶವು ವಿಚಿತ್ರವಾದ ಫಲಪುಷ್ಪಗಳನ್ನು ಹೊಂದಿದ್ದ ಮರಗಳ ಶ್ರೇಣಿಗಳಿಂದ ಆವೃತವಾಗಿದ್ದಿತು. ಅದು ದಿವ್ಯವಾದ ಭವನಗಳಿಂದಲೂ ಮತ್ತು ಪದ್ಮಸರೋವರಗಳಿಂದಲೂ ಕೂಡಿದ್ದಿತು. ಸ್ವಚ್ಛವಾದ ನೀರಿನಿಂದ ಕೂಡಿದ ವಿಚಿತ್ರವಾದ ಅನೇಕ ಮಡುಗಳಿಂದ ಭೂಷಿತವಾಗಿದ್ದಿತು. ವಾಯುವು ವೃಕ್ಷಗಳ ಮೇಲಿನ ದಿವ್ಯಗಂಧವನ್ನು ತೆಗೆದುಕೊಂಡು ಬೀಸುತ್ತಿದ್ದಿತು. ಮಲಯಜವೃಕ್ಷಗಳು ಆಕಾಶವನ್ನೇ ಆಘ್ರಾಣಿಸುವಂತೆ ಎತ್ತರವಾಗಿ ಬೆಳೆದಿದ್ದವು. ವಾಯುವಿನಿಂದ ಕಂಪಿಸಲ್ಪಟ್ಟ ಮರಗಳಿಂದ ಬಿದ್ದ ಪುಷ್ಪವರ್ಷದಿಂದ ಆ ಪ್ರದೇಶವು ಶೋಭಿತವಾಗಿದ್ದಿತು.
ಕಿರದ್ಭಿರಿವ ತತ್ರಸ್ಥಾನ್ ನಾಗಾನ್ ಪುಷ್ಪಾಂಬುವೃಷ್ಟಿಭಿಃ |
ಮನಃಸಂಹರ್ಷಣಂ ಪುಣ್ಯಂ ಗಂಧರ್ವಾಪ್ಸರಸಾಂ ಪ್ರಿಯಮ್ ॥5॥
ನಾನಾಪಕ್ಷಿರುತಂ ರಮ್ಯಂ ಕದ್ರೂಪುತ್ರಪ್ರಹರ್ಷಣಮ್ |
ತತ್ತೇ ವನಂ ಸಮಾಸಾದ್ಯ ವಿಜಹ್ರುಃ ಪನ್ನಗಾ ಮುದಾ |
ಅಬ್ರುವಂಶ್ಚ ಮಹಾವೀರ್ಯಂ ಸುಪರ್ಣಂ ಪತಗೋತ್ತಮಮ್ ॥6॥
ಆ ಪ್ರದೇಶದಲ್ಲಿದ್ದ ಸರ್ಪಗಳನ್ನು ಪುಷ್ಪವೃಷ್ಟಿ ಮತ್ತು ಜಲವೃಷ್ಟಿಗಳಿಂದ ತುಂಬುವಂತೆ ಆ ವೃಕ್ಷಗಳಿದ್ದವು. ಅದು ಮನಸ್ಸಿಗೆ ಸಂತೋಷದಾಯಕವೂ, ಪವಿತ್ರವೂ, ಗಂಧರ್ವರಿಗೆ ಮತ್ತು ಅಪ್ಸರೆಯರಿಗೆ ಪ್ರಿಯವೂ ಆಗಿದ್ದಿತು. ಅನೇಕ ವಿಧವಾದ ಪಕ್ಷಿಗಳ ಕಲರವದಿಂದ ರಮ್ಯವಾಗಿದ್ದಿತು. ಕದ್ರುವಿನ ಮಕ್ಕಳಾದ ನಾಗಗಳಿಗೆ ಸಂತೋಷವನ್ನುಂಟುಮಾಡುವುದಾಗಿದ್ದಿತು. ನಾಗಗಳು ಆ ಪ್ರದೇಶವನ್ನು ತಲುಪಿ ಸಂತೋಷದಿಂದ ವಿಹರಿಸಿ ಪುನಃ ಪಕ್ಷಿಶ್ರೇಷ್ಠನಾದ, ಮಹಾಬಲಶಾಲಿಯಾದ ಗರುಡನನ್ನು ಕುರಿತು ಹೇಳಿದವು.
ನಾಗಾಃ
ವಹಾಸ್ಮಾನಪರಂ ದ್ವೀಪಂ ಸುರಮ್ಯಂ ವಿಪುಲೋದಕಮ್ |
ತ್ವಂ ಹಿ ದೇಶಾನ್ ಬಹೂನ್ ರಮ್ಯಾನ್ ಪತನ್ ಪಶ್ಯಸಿ ಖೇಚರ ॥7॥
ಖೇಚರನೇ, ನಮ್ಮನ್ನು ಸುಂದರವಾದ, ಬಹಳ ಜಲವಿರುವ ಇನ್ನೊಂದು ದ್ವೀಪಕ್ಕೆ ಎತ್ತಿಕೊಂಡು ಹೋಗು. ನೀನು ಆಕಾಶದಲ್ಲಿ ಸಂಚರಿಸುತ್ತಾ ಅನೇಕ ಸುಂದರವಾದ ದೇಶಗಳನ್ನು ನೋಡಿರುವಿಯಷ್ಟೆ.
ಸೂತಃ
ಸ ವಿಚಿಂತ್ಯಾಬ್ರವೀತ್ ಪಕ್ಷೀ ಮಾತರಂ ವಿನತಾಂ ತದಾ |
ಕಿಂ ಕಾರಣಂ ಮಯಾ ಮಾತಃ ಕರ್ತವ್ಯಂ ಸರ್ಪಭಾಷಿತಮ್ ॥8॥
ಪಕ್ಷಿಯಾದ ಗರುಡನು ಆ ಮಾತನ್ನು ಚಿಂತಿಸಿ ತಾಯಿಯಾದ ವಿನತೆಯನ್ನು ಕುರಿತು ಅಮ್ಮಾ ಸರ್ಪಗಳು ಹೇಳಿದಂತೆ ನಾನು ಏಕೆ ಕೇಳಬೇಕು ಎಂದು ಕೇಳಿದನು.
ವಿನತಾ
ದಾಸೀಭೂತಾಸ್ಮ್ಯನಾರ್ಯಾಯಾ ಭಗಿನ್ಯಾಃ ಪತಗೋತ್ತಮ |
ಪಣಂ ವಿತಥಮಾಸ್ಥಾಯ ಸರ್ಪೈರುಪಧಿನಾ ಕೃತಮ್ ॥9॥
ಎಲೈ ಪಕ್ಷಿಶ್ರೇಷ್ಠನೇ, ಅನಾರ್ಯಳಾದ ಸಹೋದರಿಯು ಒಂದು ವ್ಯರ್ಥವಾದ ಪಣವನ್ನು ಒಡ್ಡಿ ವಂಚನೆಯಿಂದ ನನ್ನನ್ನು ಸೋಲಿಸಿದ್ದಾಳೆ. ಆದ್ದರಿಂದ ದಾಸಿಯಾಗಿದ್ದೇನೆ.

ಸೂತಃ
ತಸ್ಮಿಂಸ್ತು ಕಥಿತೇ ಮಾತ್ರಾ ಕಾರಣೇ ಗಗನೇಚರಃ |
ಉವಾಚ ವಚನಂ ಸರ್ಪಾಂಸ್ತೇನ ದುಃಖೇನ ದುಃಖಿತಃ ॥10॥
ತಾಯಿಯಿಂದ ಆ ಮಾತುಗಳನ್ನು ಕೇಳಿದ ಗರುಡನು ತಾಯಿಯ ದುಃಖದಿಂದ ದುಃಖಿತನಾಗಿ, ಸರ್ಪಗಳನ್ನು ಕುರಿತು ಹೀಗೆ ಮಾತನಾಡಿದನು.
ಕಿಂ ವಾऽऽಹೃತ್ಯ ವಿಜಿತ್ವಾ ಕಿಂ ಕಿಂ ವಾ ಕೃತ್ವೇಹ ಪೌರುಷಮ್ |
ದಾಸ್ಯಾದ್ ವಾ ವಿಪ್ರಮುಚ್ಯೇಯಂ ಸತ್ಯಂ ಶಂಸಥ ಲೇಲಿಹಾಃ ॥
ಏನನ್ನು ತಂದುಕೊಂಡು ಅಥವಾ ಏನನ್ನು ಜಯಿಸಿ ಅಥವಾ ಇಲ್ಲಿ ಯಾವ ಪರಾಕ್ರಮದ ಕೆಲಸವನ್ನು ಮಾಡಿದರೆ, ನನ್ನ ತಾಯಿಯು ದಾಸ್ಯದಿಂದ ಬಿಡುಗಡೆಯನ್ನು ಹೊಂದುವಳು? ಎಲೈ ಸರ್ಪಗಳೇ, ಸತ್ಯವನ್ನು ಹೇಳಿ.
ಶ್ರುತ್ವಾ  ತಮಬ್ರುವನ್ ಸರ್ಪಾ ಆಹರಾಮೃತಮೋಜಸಾ |
ತದಾ ದಾಸ್ಯಾದ್ ವಿಪ್ರಮೋಕ್ಷೋ ತವ ಮಾತುರ್ಭವಿಷ್ಯತಿ ॥12॥
ಈ ಮಾತನ್ನು ಕೇಳಿದ ಸರ್ಪಗಳು ನಿನ್ನ ಸಾಮರ್ಥ್ಯದಿಂದ ಅಮೃತವನ್ನು ತೆಗೆದುಕೊಂಡು ಬಾ, ಆಗ ನಿನ್ನ ತಾಯಿಗೆ ದಾಸ್ಯದಿಂದ ವಿಮೋಚನೆಯಾಗುವುದು ಎಂದು ಹೇಳಿದವು.
ಸೂತಃ
ಇತ್ಯುಕ್ತೋ ಗರುಡಃ ಸರ್ಪೈಸ್ತತೋ ಮಾತರಮಬ್ರವೀತ್ |
ಗಚ್ಛಾಮ್ಯಮೃತಮಾಹರ್ತುಂ ಭಕ್ಷ್ಯಮಿಚ್ಛಾಮಿ ದೇಹಿ ತತ್ ॥13॥
ಸರ್ಪಗಳಿಂದ ಹೀಗೆ ಹೇಳಲ್ಪಟ್ಟ ಗರುಡನು ತಾಯಿಯನ್ನು ಕುರಿತು, ಅಮ್ಮಾ, ಅಮೃತವನ್ನು ತರಲು ಹೋಗುತ್ತಿದ್ದೇನೆ. ಏನಾದರೂ ತಿನ್ನಲು ಕೊಡು ಎಂದು ಹೇಳಿದನು.
ವಿನತಾ
ಸಮುದ್ರಕುಕ್ಷಾವೇಕಾಂತೇ ನಿಷಾದಾಲಯಮುತ್ತಮಮ್ |
ಸಹಸ್ರಾಣಾಮನೇಕೇಷಾಂ ತಾನ್ ಭುಕತ್ವ್ವಾऽಮೃತಮಾಹರ ॥14॥
ಸಮುದ್ರಕುಕ್ಷಿಯಲ್ಲಿ ಒಂದು ಏಕಾಂತಪ್ರದೇಶದಲ್ಲಿ ಶ್ರೇಷ್ಠವಾದ ನಿಷಾದಾಲಯವಿದೆ. ಅಲ್ಲಿ ನಿಷಾದರು ಅನೇಕ ಸಹಸ್ರಸಂಖ್ಯೆಯಲ್ಲಿದ್ದಾರೆ. ಅವರನ್ನು ತಿಂದು ಅಮೃತವನ್ನು ತೆಗೆದುಕೊಂಡು ಬಾ.
ನ ತು ತೇ ಬ್ರಾಹ್ಮಣಾನ್ ಹಂತುಂ ಕಾರ್ಯಾ ಬುದ್ಧಿಃ ಕಥಂಚನ |
ಅವಧ್ಯಃ ಸರ್ವಭೂತಾನಾಂ ಬ್ರಾಹ್ಮಣೋ ಹ್ಯನಲೋಪಮಃ ॥15॥
ಎಂದಿಗೂ ಬ್ರಾಹ್ಮಣರನ್ನು ಕೊಲ್ಲುವ ಬುದ್ಧಿಯನ್ನು ಮಾಡಬೇಡ. ಬ್ರಾಹ್ಮಣನು ಅಗ್ನಿಗೆ ಸಮಾನನಾದವನು. ಅವನು ಎಲ್ಲರಿಂದಲೂ ಅವಧ್ಯನಾದವನು.
ಅಗ್ನಿರರ್ಕೋ ವಿಷಂ ಶಸ್ತ್ರಂ ವಿಪ್ರೋ ಭವತಿ ಕೋಪಿತಃ |
ಭೂತಾನಾಮಗ್ರಭುಗ್ ವಿಪ್ರೋ ವರ್ಣಶ್ರೇಷ್ಠಸ್ತಥಾ ಗುರುಃ ॥16॥
ಕೋಪಗೊಂಡ ಬ್ರಾಹ್ಮಣನು ಅಗ್ನಿಯಾಗುತ್ತಾನೆ. ಸೂರ್ಯನಾಗುತ್ತಾನೆ. ವಿಷವಾಗುತ್ತಾನೆ ಮತ್ತು ಶಸ್ತ್ರನಾಗುತ್ತಾನೆ. ಬ್ರಾಹ್ಮಣನು ಎಲ್ಲರಿಗಿಂತ ಮೊದಲು ಭೋಜನಮಾಡುವ ಅರ್ಹತೆಯುಳ್ಳವನು, ಎಲ್ಲಾ ವರ್ಣಗಳಲ್ಲಿಯೂ ಶ್ರೇಷ್ಠನಾದವನು ಮತ್ತು ಎಲ್ಲರಿಗೂ ಗುರುವಾದವನು.
ಏವಮಾದಿಭೀ ರೂಪೈಸ್ತು ಸದ್ಗುಣೋ ಬ್ರಾಹ್ಮಣೋ ವರಃ |
ಸ ತೇ ತಾತ ನ ಹಂತವ್ಯಃ ಸಂಕ್ರುದ್ಧೇನಾಪಿ ಸರ್ವಶಃ ॥17॥
ಇಂತಹ ರೂಪವನ್ನೂ ಮತ್ತು ಸದ್ಗುಣಗಳನ್ನೂ ಹೊಂದಿದ ಬ್ರಾಹ್ಮಣನು ಶ್ರೇಷ್ಠನಾದವನು. ಪ್ರೀತಿಪಾತ್ರನೇ, ನಿನಗೆ ಎಲ್ಲರ ಮೇಲೆ ಕೋಪವುಂಟಾದರೂ ಬ್ರಾಹ್ಮಣರನ್ನು ಮಾತ್ರ ಕೊಲ್ಲಬಾರದು.
ಬ್ರಾಹ್ಮಣಾನಾಮಭಿದ್ರೋಹೋ ನ ಕರ್ತವ್ಯಃ ಕದಾಚನ |
ನಚೈವಾಗ್ನಿರ್ನಚಾದಿತ್ಯೋ ಭಸ್ಮೀಕುರ್ಯಾತ್ ತಥಾऽನಘ ॥18॥
ಯಥಾ ಕುರ್ಯಾದಭಿಕ್ರುದ್ಧೋ ಬ್ರಾಹ್ಮಣಃ ಸಂಶಿತವ್ರತಃ |
ತದೇತೈರ್ವಿವಿಧೈರ್ಲಿಂಗೈಃ ಸಂವಿದ್ಯಾತ್ ತಂ ದ್ವಿಜೋತ್ತಮಮ್ ॥19॥
ಯಾವ ಕಾರಣದಿಂದಲೂ ಬ್ರಾಹ್ಮಣರಿಗೆ ದ್ರೋಹವನ್ನು ಉಂಟು ಮಾಡಬಾರದು. ಎಲೈ ಅನಘನೇ, ವ್ರತಧಾರಿಯಾದ, ಶ್ರೇಷ್ಠನಾದ ಬ್ರಾಹ್ಮಣನು ಕೋಪಗೊಂಡರೆ, ಹೇಗೆ ಎಲ್ಲವನ್ನೂ ನಿಶ್ಶೇಷವಾಗಿ ದಹಿಸುತ್ತಾನೋ, ಹಾಗೇ ಅಗ್ನಿಯಾಗಲೀ ಅಥವಾ ಆದಿತ್ಯನಾಗಲೀ ದಹಿಸಲು ಸಾಧ್ಯವಿಲ್ಲ. ಇಂತಹ ಅನೇಕ ಚಿಹ್ನೆಗಳಿಂದ ದ್ವಿಜೋತ್ತಮನಾದ ಬ್ರಾಹ್ಮಣನನ್ನು ಗುರುತಿಸು.
ವೈನತೇಯ
ಯಥಾಹಮನುಜಾನೀಯಾಂ ಬ್ರಾಹ್ಮಣಂ ಲಕ್ಷಣೈಃ ಶುಭೈಃ |
ಏತನ್ಮೇ ಕಾರಣಂ ಮಾತಃ ಪೃಚ್ಛತೇ ವಕ್ತುಮರ್ಹಸಿ |
ಕಿಂರೂಪೋ ಬ್ರಾಹ್ಮಣೋ ಮಾತಃ ಕಿಂಶೀಲಃ ಕಿಂಪರಾಯಣಃ ॥20॥
ತಾಯಿಯೇ, ನಾನು ಯಾವ ಲಕ್ಷಣಗಳಿಂದ ಬ್ರಾಹ್ಮಣನನ್ನು ತಿಳಿದುಕೊಳ್ಳಬಹುದೋ ಅಂತಹ ಲಕ್ಷಣಗಳನ್ನು ನನಗೆ ಹೇಳು. ಬ್ರಾಹ್ಮಣನು ಯಾವ ರೂಪವನ್ನು ಧರಿಸಿರುತ್ತಾನೆ, ಯಾವ ಶೀಲದವನಾಗಿರುತ್ತಾನೆ, ಮತ್ತು ಯಾರನ್ನು ಆಶ್ರಯಿಸಿರುತ್ತಾನೆ?
ವಿನತಾ

ಯಸ್ತೇ ಕಂಠಮನುಪ್ರಾಪ್ತೋ ನಿಗೀರ್ಣಂ ಬಡಿಶಂ ಯಥಾ |
ದಹೇದಂಗಾರವತ್ ಪುತ್ರ ತಂ ವಿದ್ಯಾದ್ ಬ್ರಾಹ್ಮಣರ್ಷಭಮ್ ||
ಪುತ್ರನೇ, ಯಾರು ನಿನ್ನ ಕಂಠದೇಶವನ್ನು ಸಮೀಪಿಸಿದಾಗ ಮತ್ಸ್ಯಯಂತ್ರದಂತೆ, ಅಗ್ನಿಯಂತೆ ಸುಡುತ್ತಾನೆಯೋ, ಅವನನ್ನು ಬ್ರಾಹ್ಮಣಶ್ರೇಷ್ಠನೆಂದು ತಿಳಿ.
ಸೂತಃ
ಪ್ರೋವಾಚ ಚೈನಂ ವಿನತಾ ಪುತ್ರಸ್ನೇಹಾದಿದಂ ವಚಃ |
ಜಾನಂತ್ಯಪ್ಯತುಲಂ ವೀರ್ಯಮಾಶೀರ್ವಾದಸಮನ್ವಿತಮ್ ||22||
ವಿನತೆಯು ಮಗನ ಅತುಲಪರಾಕ್ರಮವನ್ನು ತಿಳಿದಿದ್ದರೂ, ಮಗನ ಮೇಲಿನ ಸ್ನೇಹದಿಂದ ಆಶೀರ್ವಾದಯುಕ್ತವಾದ ಈ ಮಾತುಗಳನ್ನು ಆಡಿದಳು.
ಪಕ್ಷೌ ತೇ ಪಾತು ಭಗವಾನ್ ಚಂದ್ರಃ ಪೃಷ್ಠಂ ತು ಪುತ್ರಕ |
ಶಿರಸ್ತು ಪಾತು ತೇ ವಹ್ನಿರ್ಮಾರುತಃ ಪ್ರಾಣಮೇವ ಚ ||23||
ಭಗವಂತನಾದ ನಾರಾಯಣನು ನಿನ್ನ ಪಕ್ಷಗಳನ್ನು ರಕ್ಷಿಸಲಿ. ಪ್ರೀತಿಪಾತ್ರನಾದ ಪುತ್ರನೇ, ಚಂದ್ರನು ನಿನ್ನ ಪೃಷ್ಠವನ್ನು ರಕ್ಷಿಸಲಿ. ವಹ್ನಿಯು ನಿನ್ನ ಶಿರಸ್ಸನ್ನು ರಕ್ಷಿಸಲಿ. ಮಾರುತನು ನಿನ್ನ ಪ್ರಾಣವನ್ನು ರಕ್ಷಿಸಲಿ.
ಅಹಂ ಚ ತೇ ಸದಾ ಪುತ್ರ ಶಾಂತಿಸ್ವಸ್ತಿಪರಾಯಣಾ |
ಇಹಾಸೀನಾ ಭವಿಷ್ಯಾಮಿ ಸ್ವಸ್ತಿಕಾರೇ ರತಾ ಸದಾ |
ಅರಿಷ್ಟಂ ವ್ರಜ ಪಂಥಾನಂ ವತ್ಸ ಕಾರ್ಯಾರ್ಥಸಿದ್ಧಯೇ ||24||
ಎಲೈ ಪುತ್ರನೇ ನಾನು ಯಾವಾಗಲೂ ನಿನ್ನ ಶಾಂತಿ ಮತ್ತು ಕ್ಷೇಮವನ್ನು ಆಶಂಸಿಸುತ್ತಾ ಇಲ್ಲಿಯೇ ಸ್ವಸ್ತಿಕಾಸನದಲ್ಲಿ ಕುಳಿತುಕೊಳ್ಳುತ್ತೇನೆ. ವತ್ಸನೇ, ನಿರ್ವಿಘ್ನವಾಗಿ ಹೋಗಿ ಬಾ. ನಿನ್ನ ಕಾರ್ಯವು ಸಿದ್ಧಿಸಲಿ.
ಸೂತಃ
ತತಃ ಸ ಮಾತುರ್ವಚನಂ ನಿಶಮ್ಯ
ವಿತತ್ಯ ಪಕ್ಷೌ ನಭ ಉತ್ಪಪಾತ |
ತತೋ ನಿಷಾದಾನ್ ಬಲವಾನುಪಾಗಮತ್
ಬುಭುಕ್ಷಿತಃ ಕಾಲ ಇವಾಂತಕೋ ಮಹಾನ್ ||25||
ಆಗ ಗರುಡನು ತಾಯಿಯ ಮಾತನ್ನು ಕೇಳಿ ತನ್ನ ರೆಕ್ಕೆಗಳನ್ನು ಹರಡಿ ಆಕಾಶಕ್ಕೆ ಹಾರಿದನು. ಅನಂತರ, ಬಹಳ ಹಸಿದಿದ್ದ ಬಲಶಾಲಿಯಾದ ಅವನು ಸರ್ವವನ್ನೂ ನಾಶಮಾಡುವ ದೊಡ್ಡ ಯಮನಂತೆ ಆ ನಿಷಾದರ ಸಮೀಪಕ್ಕೆ ಬಂದನು.
ಸ ತಾನ್ ನಿಷಾದಾನುಪಸಂಹರಂಸ್ತದಾ
ರಜಃ ಸಮುದ್ಧೂಯ ನಭಃಸ್ಪೃಶಂ ಮುಹುಃ |
ಸಮುದ್ರಕುಕ್ಷೌ ಚ ವಿಶೋಷಯನ್ ಪಯಃ
ಸಮೀಪಗಾನ್ ಭೂಮಿಧರಾನ್ ವಿಚಾಲಯನ್ ||26||
ಅವನು ತನ್ನ ರೆಕ್ಕೆಯ ಚಲನೆಯಿಂದ ಆಕಾಶಕ್ಕೆ ಏರುವಷ್ಟು ಧೂಳನ್ನು ಎಬ್ಬಿಸುತ್ತಾ ಸಮುದ್ರದ ಕುಕ್ಷಿಯಲ್ಲಿದ ಜಲವನ್ನು ಶೋಷಿಸುತ್ತಾ, ಸಮೀಪದಲ್ಲಿದ್ದ ಮರಗಳನ್ನು ಅಲ್ಲಾಡಿಸುತ್ತಾ, ಆ ನಿಷಾದರನ್ನು ಭಕ್ಷಣೆಮಾಡಿದನು.
ತತಃ ಸ ಚಕ್ರೇ ಮಹದಾನನಂ ತದಾ
ನಿಷಾದಮಾರ್ಗಂ ಪ್ರತಿರುಧ್ಯ ಪಕ್ಷಿರಾಟ್ |
ತತೋ ನಿಷಾದಾಸ್ತ್ವರಿತಂ ಪ್ರವವ್ರಜುಃ
ಯತೋ ಮುಖಂ ತಸ್ಯ ಭುಜಂಗಭೋಜಿನಃ ||27||
ಆಗ ಪಕ್ಷಿಗಳ ರಾಜನಾದ ಅವನು ನಿಷಾದರ ಮಾರ್ಗಕ್ಕೆ ಎದುರಾಗಿ ನಿಂತು ತನ್ನ ಬಾಯಿಯನ್ನು ದೊಡ್ಡದಾಗಿ ತೆರೆದನು. ಆಗ ನಿಷಾದರು ತ್ವರಿತವಾಗಿ ಸರ್ಪಭಕ್ಷಣನಾದ ಆ ಗರುಡನ ಮುಖದೊಳಗೆ ಪ್ರವೇಶಿಸಿದರು.
ತದಾನನಂ ವಿವೃತಮತಿಪ್ರಮಾಣವತ್
ಸಮಭ್ಯಯುರ್ಗಗನಮಿವಾರ್ದಿತಾಃ ಖಗಾಃ |
ಸಹಸ್ರಶಃ ಪವನರಯೇಣ ಮೋಹಿತಾ
ಮಹಾನಿಲಪ್ರಚಲಿತಪಾದಪೇ ವನೇ ||28||
ಪೀಡೆಗೆ ಒಳಗಾದ ಪಕ್ಷಿಗಳು ಆಕಾಶವನ್ನು ಸೇರುವಂತೆ ಮತ್ತು ವಾಯುವೇಗದಿಂದ ಮೋಹಿತವಾದ ಪ್ರಚಲಿಸುವ ವೃಕ್ಷಗಳಂತೆ, ಆ ನಿಷಾದರು ಅವನ ಅತಿದೊಡ್ಡದಾಗಿ ತೆರೆದ ಬಾಯಿಯೊಳಗೆ ಪ್ರವೇಶಿಸಿದರು.
ತತಃ ಖಗೋ ವದನಮಮಿತ್ರತಾಪನಃ
ಸಮಾಹರತ್ ಪರಿಚಪಲೋ ಮಹಾಬಲಃ |
ನಿಷೂದಯನ್ ಬಹುವಿಧಮತ್ಸ್ಯಭಕ್ಷಿಣೋ
ಬುಭುಕ್ಷಿತೋ ಗಗನಚರೇಶ್ವರಸ್ತದಾ ||29||
ಆಗ ಮಹಾಬಲನೂ, ಶತ್ರುತಾಪನನೂ, ಅತಿವೇಗವುಳ್ಳವನೂ ಆದ ಆ ಪಕ್ಷಿಯು ತನ್ನ ಬಾಯಿಯನ್ನು ಮುಚ್ಚಿದನು. ಆಗ, ಹಸಿವಿನಿಂದ ಕೂಡಿದ ಗಗನಚರೇಶ್ವರನಾದ ಗರುಡನು ಬಹುವಿಧವಾದ ಮತ್ಸ್ಯವನ್ನು ಭಕ್ಷಣಮಾಡುವ ಆ ನಿಷಾದರನ್ನು ಸಂಹರಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ

ತ್ರಯೋವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****

ಇಪ್ಪತ್ತನಾಲ್ಕನೆಯ ಅಧ್ಯಾಯ
(ನಿಷಾದರ ಮಧ್ಯದಲ್ಲಿದ್ದ ಬ್ರಾಹ್ಮಣನೊಬ್ಬನನ್ನು ಬಿಟ್ಟು ಗರುಡನಿಂದ ಎಲ್ಲಾ ನಿಷಾದರ ಭಕ್ಷಣ. ಆಹಾರಕ್ಕಾಗಿ ಪುನಃ ತಂದೆಯನ್ನು ಕುರಿತು ಪ್ರಾರ್ಥನೆ. ತಂದೆಯ ಆಜ್ಞೆಯಂತೆ ಗಜ ಮತ್ತು ಕೂರ್ಮಗಳ ಭಕ್ಷಣ. ವಟವೃಕ್ಷದ ಆಹ್ವಾನದಂತೆ ವಟವೃಕ್ಷದ ಮೇಲೆ ಉಪವೇಶನ. ವೃಕ್ಷದ ಶಾಖಾಭಂಗ.)
ಸೂತಃ
ತಸ್ಯ ಕಂಠಮನುಪ್ರಾಪ್ತೋ ಬ್ರಾಹ್ಮಣಃ ಸಹ ಭಾರ್ಯಯಾ |
ದಹನ್ ದೀಪ್ತ ಇವಾಂಗಾರಸ್ತಮುವಾಚಾಂತರಿಕ್ಷಗಃ ॥1॥
ಒಬ್ಬ ಬ್ರಾಹ್ಮಣನು ತನ್ನ ಭಾರ್ಯೆಯ ಜೊತೆಯಲ್ಲಿ ಗರುಡನ ಕಂಠಪ್ರದೇಶವನ್ನು ತಲುಪಿ ಉರಿಯುವ ಅಗ್ನಿಯಂತೆ ದಹಿಸಲು ಪ್ರಾರಂಭಿಸಿದಾಗ ಅಂತರಿಕ್ಷಚಾರಿಯಾದ ಗರುಡನು ಅವನನ್ನು ಕುರಿತು ಹೇಳಿದನು.
ದ್ವಿಜೋತ್ತಮ ವಿನಿರ್ಗಚ್ಛ ತೂರ್ಣಮಾಸ್ಯಾದಪಾವೃತಾತ್ |
ನ ಹಿ ಮೇ ಬ್ರಾಹ್ಮಣೋ ವಧ್ಯಃ ಪಾಪೇಷ್ವಭಿರತಃ ಸದಾ ॥2॥
ಬ್ರಾಹ್ಮಣಶ್ರೇಷ್ಠನೇ, ನನ್ನ ತೆರೆದ ಬಾಯಿಯಿಂದ ಬೇಗ ಹೊರಗೆ ಬಾ. ಬ್ರಾಹ್ಮಣನು ಪಾಪದಲ್ಲಿ ಆಸಕ್ತನಾಗಿದ್ದರೂ ಸಹ ಅವನು ನನಗೆ ವಧ್ಯನಲ್ಲ.
ಬ್ರುವಾಣಮೇವಂ ಗರುಡಂ ಬ್ರಾಹ್ಮಣಃ ಸಮಭಾಷತ |
ನಿಷಾದೀ ಮಮ ಭಾರ್ಯೇಯಂ ನಿರ್ಗಚ್ಛತು ಮಯಾ ಸಹ ॥3॥
ಹೀಗೆ ಹೇಳುವ ಗರುಡನನ್ನು ಕುರಿತು ಬ್ರಾಹ್ಮಣನು ನನ್ನ ಈ ಹೆಂಡತಿಯು ನಿಷಾದಜಾತಿಗೆ ಸೇರಿದವಳು. ಅವಳೂ ಸಹ ನನ್ನ ಜೊತೆಯಲ್ಲಿ ಹೊರಗೆ ಬರಬೇಕು.
ಗರುಡಃ
ಏತಾಮಪಿ ನಿಷಾದೀಂ ತ್ವಂ ಪ್ರತಿಗೃಹ್ಯಾಶು ನಿಷ್ಪತ |
ತೂರ್ಣಂ ಸಂಭಾವಯಾತ್ಮಾನಮಜೀರ್ಣಂ ಮಮ ತೇಜಸಾ ॥4॥
ಆ ನಿಷಾದಿಯನ್ನು ಕರೆದುಕೊಂಡು ಬೇಗ ಹೊರಗೆ ಬಾ. ನನ್ನ ತೇಜಸ್ಸಿನಿಂದ ಅರಗಿಹೋಗದಂತೆ ಬೇಗ ನಿನ್ನನ್ನು ನೀನು ನಿರ್ವಹಿಸು.
ಸೂತಃ
ನಿಶ್ಚಕ್ರಾಮ ತತೋ ವಿಪ್ರೋ ನಿಷಾದೀಸಹಿತಸ್ತದಾ |
ವರ್ಧಯಿತ್ವಾ ಚ ಗರುಡಮಿಷ್ಟಂ ದೇಶಂ ಜಗಾಮ ಹ ॥5॥
ಆಗ ಆ ಬ್ರಾಹ್ಮಣನು ನಿಷಾದಿಯ ಜೊತೆಯಲ್ಲಿ ಹೊರಗೆ ಬಂದು ಗರುಡನನ್ನು ಆಶೀರ್ವಾದಗಳಿಂದ ಅಭಿವೃದ್ಧಿಗೊಳಿಸಿ ತನಗೆ ಇಷ್ಟವಾದ ದೇಶಕ್ಕೆ ಹೊರಟುಹೋದನು.
ಸಭಾರ್ಯೇಽಭಿವಿನಿಷ್ಕ್ರಾಂತೇ ತಸ್ಮಿನ್ ವಿಪ್ರೇ ಸ ಪಕ್ಷಿರಾಟ್ |
ವಿತತ್ಯ ಪಕ್ಷಾವಾಕಾಶಮುತ್ಪಪಾತ ಮನೋಜವಃ ॥6॥
ತನ್ನ ಭಾರ್ಯೆಯಿಂದ ಸಹಿತನಾದ ಆ ಬ್ರಾಹ್ಮಣನು ಹೊರಗೆ ಬರುತ್ತಿರಲು ಪಕ್ಷಿರಾಜನಾದ ಮನೋಜವವುಳ್ಳ ಗರುಡನು, ತನ್ನ ರೆಕ್ಕೆಗಳನ್ನು ಹರಡಿ ಆಕಾಶಕ್ಕೆ ಹಾರಿದನು.
ತತೋಽಪಶ್ಯತ್ ಸ ಪಿತರಂ ಪೃಷ್ಟಶ್ಚಾಖ್ಯಾತವಾನ್ ಪಿತುಃ |
ಅಹಂ ಹಿ ಸರ್ಪೈಃ ಪ್ರಹಿತಃ ಸೋಮಮಾಹರ್ತುಮುದ್ಯತಃ ॥7॥
ಆಗ ಅವನು ತಂದೆಯನ್ನು ನೋಡಿ ಅವನಿಂದ ಪ್ರಶ್ನಿಸಲ್ಪಟ್ಟು ನಾನು ಸರ್ಪಗಳಿಂದ ಅಮೃತವನ್ನು ತರಲು ಆಜ್ಞಾಪಿಸಲ್ಪಟ್ಟಿದ್ದೇನೆ. ಅದಕ್ಕಾಗಿ ಪ್ರಯತ್ನ ಪಡುತ್ತಿದ್ದೇನೆ ಎಂದು ಹೇಳಿದನು.
ಮಾತುರ್ದಾಸ್ಯವಿಮೋಕ್ಷಾರ್ಥಮಾಹರಿಷ್ಯೇ ತದದ್ಯ ವೈ |
ಮಾತ್ರಾ ಚಾಸ್ಮಿ ಸಮಾದಿಷ್ಟೋ ನಿಷಾದಾನ್ ಭಕ್ಷಯೇತಿ ವೈ ॥7॥
ತಾಯಿಯನ್ನು ದಾಸ್ಯದಿಂದ ವಿಮೋಚನೆ ಮಾಡಲು ನಾನು ಈ ದಿನ ಅಮೃತವನ್ನು ತರುವೆನು. ತಾಯಿಯಾದರೋ ನನಗೆ ನಿಷಾದರನ್ನು ಭಕ್ಷಿಸು ಎಂದು ಆದೇಶವನ್ನು ನೀಡಿದ್ದಳು.
ನ ಚ ಮೇ ತೃಪ್ತಿರಭವದ್ ಭಕ್ಷಯಿತ್ವಾ ಸಹಸ್ರಶಃ |
ತಸ್ಮಾದ್ ಭೋಕ್ತವ್ಯಮಪರಂ ಭಗವನ್ ಪ್ರವಿಧತ್ಸ್ವ ಮೇ |
ಯದ್ ಭುಕ್ತ್ವಾಽಮೃತಮಾಹರ್ತುಂ ಸಮರ್ಥಃ ಸ್ಯಾಮಹಂ ಪ್ರಭೋ ॥
ಸಾವಿರಾರು ನಿಷಾದರನ್ನು ಭಕ್ಷಿಸಿದರೂ ನನಗೆ ತೃಪ್ತಿಯಾಗಿಲ್ಲ. ಆದ್ದರಿಂದ ಪೂಜ್ಯನಾದ ತಂದೆಯೇ, ಬೇರೆ ಏನಾದರೂ ಆಹಾರವನ್ನು ನನಗೆ ಕಲ್ಪಿಸು. ನಾನು ಅದನ್ನು ಸ್ವೀಕರಿಸಿ ಅಮೃತವನ್ನು ತರಲು ಸಮರ್ಥನಾಗುತ್ತೇನೆ.
ಕಾಶ್ಯಪಃ
ಆಸೀದ್ ವಿಭಾವಸುರ್ನಾಮ ಮಹರ್ಷಿಃ ಕೋಪನೋ ಭೃಶಮ್ |

ಭ್ರಾತಾ ತಸ್ಯಾನುಜಶ್ಚಾಸೀತ್ ಸುಪ್ರತೀಕೋ ಮಹಾತಪಾಃ ॥9॥
ಹಿಂದೆ ವಿಭಾವಸು ಎಂಬ ಬಹಳ ಕೋಪಶೀಲರಾದ ಮಹರ್ಷಿಗಳಿದ್ದರು. ಅವರಿಗೆ ಸುಪ್ರತೀಕನೆಂಬ ಮಹಾತಪಸ್ವಿಯಾದ ತಮ್ಮನಿದ್ದನು.
ಸ ನೇಚ್ಛತಿ ಧನಂ ಭ್ರಾತ್ರಾ ಸಹೈಕಸ್ಥಂ ಮಹಾದ್ಯುತಿಃ |
ವಿಭಾಗಂ ಕೀರ್ತಯತ್ಯೇವ ಸುಪ್ರತೀಕಃ ಸ ನಿತ್ಯಶಃ ॥10॥
ಮಹಾದ್ಯುತಿಯಾದ ಅವನು ತನ್ನ ಅಣ್ಣನ ಜೊತೆಯಲ್ಲಿ ಒಟ್ಟಿಗೆ ಇದ್ದು ಧನವನ್ನು ಭೋಗಿಸಲು ಇಚ್ಛೆಪಡಲಿಲ್ಲ. ಸುಪ್ರತೀಕನು ಯಾವಾಗಲೂ ವಿಭಾಗವನ್ನು (ಪಾಲನ್ನು) ಕೊಡಬೇಕೆಂದು ಹೇಳುತ್ತಲೇ ಇದ್ದನು.
ಅಥಾಬ್ರುವೀತ್ ಸ ತಂ ಭ್ರಾತಾ ಸುಪ್ರತೀಕಂ ವಿಭಾವಸುಃ |
ವಿಭಾಗೇ ಬಹವೋ ದೋಷಾ ಭವಿಷ್ಯಂತಿ ಮಹಾತಪಃ ॥11॥
ಆಗ ಅಣ್ಣನಾದ ವಿಭಾವಸುವು ಸುಪ್ರತೀಕನನ್ನು ಕುರಿತು ಎಲೈ ಮಹಾತಪಸ್ವಿಯೇ, ವಿಭಾಗವನ್ನು ಮಾಡಿಕೊಂಡರೆ, ಅನೇಕ ದೋಷಗಳು ಉಂಟಾಗುವುವು.
ವಿಭಾಗಂ ಬಹವೋ ಮೋಹಾತ್ ಕರ್ತುಮಿಚ್ಛಂತಿ ನಿತ್ಯಶಃ |
ತತೋ ವಿಭಕ್ತಾಶ್ಚಾನ್ಯೋನ್ಯಂ ನ ಪ್ರೀಯಂತೇಽರ್ಥಮೋಹಿತಾಃ ॥12॥
ಮೋಹಕ್ಕೆ ಒಳಗಾದ ಅನೇಕ ಜನರು ನಿತ್ಯವೂ ವಿಭಾಗವನ್ನು ಮಾಡಿಕೊಳ್ಳುತ್ತಾರೆ. ವಿಭಾಗವನ್ನು ಮಾಡಿಕೊಂಡ ಮೇಲೆ, ಧನದ ಮೋಹಕ್ಕೆ ಒಳಗಾದವರಾಗಿ ಒಬ್ಬರನ್ನೊಬ್ಬರು ಪ್ರೀತಿಸುವುದಿಲ್ಲ.
ತತಃ ಸ್ವಾರ್ಥಪರಾನ್ ಮೂಢಾನ್ ಪೃಥಗ್ಭೂತಾನ್ ಸ್ವಕೈರ್ಜನೈಃ |
ವಿದಿತ್ವಾ ಭೇದಯನ್ತ್ಯೇನಾನಮಿತ್ರಾ ಮಿತ್ರರೂಪಿಣಃ ॥13॥
ಆಗ ಸ್ವಾರ್ಥಪರರಾಗಿ ಮೌಢ್ಯದಿಂದ ವಿಭಕ್ತರಾಗಿ ತಮ್ಮ ಜನರಿಂದಲೂ ದೂರರಾದ ಇವರನ್ನು ತಿಳಿದು ಶತ್ರುಗಳು ಮಿತ್ರರೂಪವನ್ನು ಧರಿಸಿ ಇವರಲ್ಲಿ ಭೇದವನ್ನುಂಟುಮಾಡುತ್ತಾರೆ.
ವಿದೀರ್ಣಾಶ್ಚಾಪರೇ ಭಿನ್ನಾನಂತರೇಷು ಪತಂತ್ಯಥ |
ಭಿನ್ನಾನಾಮಭಿತೋ ನಾಶಃ ಕ್ಷಿಪ್ರಮೇವ ಪ್ರವರ್ತತೇ ॥14॥
ಹೀಗೆ ವಿಭಾಗವನ್ನು ಹೊಂದಿ ವಿದೀರ್ಣರಾಗಿ ಕೆಳಗೆ ಬೀಳುತ್ತಾರೆ. ಹೀಗೆ ವಿಭಕ್ತರಾದ ಮೇಲೆ ಬಹಳ ಬೇಗ ನಾಶವು ಉಂಟಾಗುತ್ತದೆ.
ತಸ್ಮಾಚ್ಚೈವ ವಿಭಾಗಂ ತಂ ನ ಪ್ರಶಂಸಂತಿ ಪಂಡಿತಾಃ |
ಏವಮುಕ್ತಃ ಸುಪ್ರತೀಕೋ ಭಾಗಂ ಕೀರ್ತಯತೇಽನಿಶಮ್ ॥15॥
ಆದ್ದರಿಂದಲೇ, ತಿಳಿದವರು ವಿಭಾಗವನ್ನು ಎಂದೂ ಪ್ರಶಂಸಿಸುವುದಿಲ್ಲ ಎಂದು ಹೇಳಿದನು. ಹೀಗೆ ಹೇಳಿದರೂ ಸಹ ಸುಪ್ರತೀಕನು ನನ್ನ ಪಾಲನ್ನು ಕೊಡು ಎಂದು ಹೇಳುತ್ತಲೇ ಇದ್ದನು.
ಏವಂ ನಿರ್ಬಧ್ಯಮಾನಸ್ತು ಶಶಾಪೈನಂ ವಿಭಾವಸುಃ |
ಗುರುಶಾಸ್ತ್ರೇಣ ಬದ್ಧಾನಾಮನ್ಯೋನ್ಯಮವಶಂಕಿನಾಮ್ ॥16॥
ಹೀಗೆ ನಿರ್ಬಂಧಕ್ಕೆ ಒಳಗಾದ ವಿಭಾವಸುವು ಸುಪ್ರತೀಕನಿಗೆ ಶಾಪವನ್ನು ನೀಡಿದನು. ಶಾಸ್ತ್ರಕೋವಿದರಾದಂತಹ ಇನ್ನೊಬ್ಬರನ್ನು ಶಂಕಿಸದಂತಹ ಜನಗಳಿಂದ ನಿನ್ನನ್ನು ನಿಯಂತ್ರಿಸುವುದು ಸಾಧ್ಯವಿಲ್ಲ.
ತೇಷಾಂ ಮಧ್ಯೇ ತ್ವಮಪ್ಯೇಕಶ್ಛದ್ಮಕೃಚ್ಚ ಮಹಾತ್ಮಭಿಃ |
ನಿಯಂತುಂ ನ ಹಿ ಶಕ್ಯಸ್ತ್ವಂ ಭೇದತೋ ಧನಮಿಚ್ಛಸಿ ॥17॥
ನಿಯಂತ್ರಿಸಲು ಸಾಧ್ಯವಿಲ್ಲದವರ ಮಧ್ಯದಲ್ಲಿ ನೀನೂ ಒಬ್ಬನು. ಮೋಸವನ್ನು ಮಾಡುವವನೂ ಆಗಿದ್ದೀಯೆ. ಮಹಾತ್ಮರು ನಿನ್ನನ್ನು ನಿಯಂತ್ರಿಸಲಾರರು. ಭೇದವನ್ನು ಮಾಡಿ ನೀನು ಧನವನ್ನು ಬಯಸುತ್ತಿದ್ದೀಯೆ.
ಯಸ್ಮಾತ್ ತಸ್ಮಾತ್ ಸುಪ್ರತೀಕ ಹಸ್ತಿತ್ವಂ ಸಮವಾಪ್ಸ್ಯಸಿ |
ಶಪ್ತಸ್ತ್ವೇವಂ ಸುಪ್ರತೀಕೋ ವಿಭಾವಸುಮಥಾಬ್ರುವೀತ್ |
ತ್ವಮಪ್ಯಂತರ್ಜಲಚರಃ ಕಚ್ಛಪಃ ಸಂಭವಿಷ್ಯಸಿ ॥18॥
ಆ ಕಾರಣದಿಂದ, ಎಲೈ ಸುಪ್ರತೀಕನೇ, ನೀನು ಒಂದು ಗಜವಾಗುತ್ತೀಯೆ. ಹೀಗೆ ಶಾಪಕ್ಕೆ ಒಳಗಾದ ಸುಪ್ರತೀಕನು ವಿಭಾವಸುವನ್ನು ಕುರಿತು ಹೇಳಿದನು. ನೀನೂ ಸಹ ಅಂತರ್ಜಲದಲ್ಲಿ ಸಂಚರಿಸುವ ಒಂದು ಕೂರ್ಮನಾಗಿ ಜನಿಸುವಿ.
ಏವಮನ್ಯೋನ್ಯಶಾಪಾತ್ ತೌ ಸುಪ್ರತೀಕವಿಭಾವಸೂ |
ಗಜಕಚ್ಛಪತಾಂ ಪ್ರಾಪ್ತಾವರ್ಥಾರ್ಥೌ ಮೂಢಚೇತಸೌ ॥19॥
ಹೀಗೆ ಅನ್ಯೋನ್ಯಶಾಪದಿಂದ ಆ ಸುಪ್ರತೀಕ ಮತ್ತು ವಿಭಾವಸುಗಳಿಬ್ಬರೂ, ಮೂಢಚೇತನರಾಗಿ, ಅರ್ಥಾರ್ಥಿಗಳಾಗಿ ಗಜ ಮತ್ತು ಕೂರ್ಮದ ಜನ್ಮವನ್ನು ತಾಳಿದರು.
ರೋಷರೋಷಾನುಷಂಗೇಣ ತಿರ್ಯಗ್ಯೋನಿಗತಾವಪಿ |
ಪರಸ್ಪರದ್ವೇಷರತೌ ಪ್ರಮಾಣಬಲದರ್ಪಿತೌ ॥20॥
ಒಬ್ಬನ ರೋಷ. ಅದಕ್ಕೆ ಪ್ರತಿಯಾಗಿ ಇನ್ನೊಬ್ಬನ ರೋಷ. ಆ ಕಾರಣದಿಂದ ತಿರ್ಯಗ್ಯೋನಿಯಲ್ಲಿದ್ದರೂ ಸಹ, ಪರಿಮಾಣದಿಂದಲೂ ಮತ್ತು ಬಲದಿಂದಲೂ ದರ್ಪಿತರಾದ ಅವರಿಬ್ಬರೂ ಪರಸ್ಪರ ದ್ವೇಷವುಳ್ಳವರಾದರು.
ಸರಸ್ಯಸ್ಮಿನ್ ಮಹಾಕಾಯೌ ಪೂರ್ವವೈರಾನುಸಾರಿಣೌ |
ತಯೋರೇಕತರಃ ಶ್ರೀಮಾನ್ ಸಮುಪೈತಿ ಮಹಾಗಜಃ ॥21॥
ಈ ಸರೋವರದಲ್ಲಿ ದೊಡ್ಡಶರೀರವನ್ನು ಹೊಂದಿದ ಅವರಿಬ್ಬರೂ ಹಿಂದಿನ ಜನ್ಮದ ವೈರವನ್ನು ಸ್ಮರಿಸಿಕೊಂಡಿದ್ದಾರೆ. ಅವರಲ್ಲಿ

ಒಬ್ಬನಾದ ಕಾಂತಿಯುಕ್ತನಾದ ಮಹಾಗಜವು ಸಮೀಪಕ್ಕೆ ಬರುತ್ತದೆ.
ತಸ್ಯ ಬೃಂಹಿತಶಬ್ದೇನ ಕೂರ್ಮೋಽಪ್ಯಂತರ್ಜಲೇಚರಃ |
ಉತ್ಥಿತೋಽಸೌ ಮಹಾಕಾಯಃ ಕೃತ್ಸ್ನಂ ಸಂಕ್ಷೋಭಯನ್ ಸರಃ ॥22॥
ಆ ಗಜದ ಬೃಂಹಿತನಾದವನ್ನು ಕೇಳಿ ನೀರಿನ ಒಳಗೆ ಸಂಚರಿಸುವ ಕೂರ್ಮವೂ ಸಹ ತನ್ನ ದೊಡ್ಡಶರೀರವನ್ನು ಮೇಲಕ್ಕೆತ್ತಿ ಸರೋವರದ ನೀರನ್ನೆಲ್ಲಾ ಕ್ಷೋಭೆಗೆ ಒಳಪಡಿಸಿ ಮೇಲಕ್ಕೇಳುತ್ತದೆ.
ಯಂ ದೃಷ್ಟ್ವಾಽಽವೇಷ್ಟಿತಕರಃ ಪತತ್ಯೇಷ ಗಜೋ ಜಲಮ್ |
ದಂತಹಸ್ತಾಗ್ರಲಾಂಗೂಲಪಾದವೇಗೇನ ವೀರ್ಯವಾನ್ |
ತಂ ವಿಕ್ಷೋಭಯಮಾಣಂ ತು ಸರೋ ಬಹುಝಷಾಕುಲಮ್ ॥23॥
ಆ ಕೂರ್ಮವನ್ನು ನೋಡಿದ ತಕ್ಷಣ ಈ ಗಜವು ಸೊಂಡಿಲನ್ನು ಸುತ್ತಿ ದಂತ, ಸೊಂಡಿಲನ ತುದಿ, ಬಾಲ ಮತ್ತು ಪಾದಗಳ ವೇಗದಿಂದ ಪರಾಕ್ರಮಶಾಲಿಯಾಗಿ, ಆ ಅನೇಕ ಮೀನುಗಳಿಂದ ಕೂಡಿದ ಆ ಸರೋವರದ ನೀರನ್ನು ವಿಕ್ಷೋಭಿಸುತ್ತಾ ಸರೋವರವನ್ನು ಪ್ರವೇಶಿಸಿ ಆ ಕೂರ್ಮಕ್ಕೆ ಎದುರಾಗುತ್ತದೆ.
ಸ ಕೂರ್ಮೋಽಪ್ಯಭ್ಯುದ್ಯತಶಿರಾ ಯುದ್ಧಾಯಾಭ್ಯೇತಿ ವೀರ್ಯವಾನ್ |
ಷಡುಚ್ಛ್ರಿತೋ ಯೋಜನಾನಿ ಗಜಸ್ತದ್ದ್ವಿಗುಣಾಯತಃ |
ಕೂರ್ಮಸ್ತ್ರಿಯೋಜನೋತ್ಸೇಧೋ ದಶಯೋಜನಮಂಡಲಃ ॥24॥
ಆ ಆನೆಯನ್ನು ನೋಡಿದ ಪರಾಕ್ರಮಶಾಲಿಯಾದ ಕೂರ್ಮವೂ ಸಹ ತಲೆಯನ್ನು ಎತ್ತಿ ಯುದ್ಧಕ್ಕೆ ಸನ್ನದ್ಧವಾಗುತ್ತದೆ. ಆ ಗಜವು ಆರುಯೋಜನ ಎತ್ತರವಿದೆ. ಕೂರ್ಮವಾದರೋ ಅದರ ಎರಡರಷ್ಟು ವಿಸ್ತಾರವನ್ನು ಹೊಂದಿದೆ. ಮೂರುಯೋಜನ ಎತ್ತರ ಮತ್ತು ಹತ್ತುಯೋಜನ ಪರಿಮಂಡಲವುಳ್ಳದ್ದಾಗಿದೆ.
ತಾವುಭೌ ಯುದ್ಧಸಂಯುಕ್ತೌ ಪರಸ್ಪರವಧೈಷಿಣೌ |
ಉಪಯುಜ್ಯ ಸುಕರ್ಮೇದಂ ಸಾಧಯೇಪ್ಸಿತಮಾತ್ಮನಃ ॥25॥
ಪರಸ್ಪರ ವಧೆಯನ್ನು ಬಯಸುವ ಯುದ್ಧಸನ್ನದ್ಧರಾದ ಆ ಕೂರ್ಮ ಮತ್ತು ಗಜಗಳನ್ನು ತಿಂದು ನಿನಗೆ ಇಷ್ಟವಾದ ಈ ಶುಭಕರ್ಮವನ್ನು ಮಾಡು.
ಸೂತಃ
ಸ ತಚ್ಛ್ರುತ್ವಾ ಪಿತುರ್ವಾಕ್ಯಂ ಭೀಮವೇಗೋಽಂತರಿಕ್ಷಗಃ |
ನಖೇನ ಗಜಮೇಕೇನ ಕೂರ್ಮಮೇಕೇನ ಚಾಕ್ಷಿಪತ್ ॥26॥
ತಂದೆಯ ಈ ವಾಕ್ಯವನ್ನು ಕೇಳಿದ ಭಯಂಕರ ವೇಗವುಳ್ಳ ಪಕ್ಷಿಯಾದ ಗರುಡನು ಒಂದು ನಖದಿಂದ ಗಜವನ್ನೂ ಇನ್ನೊಂದು ನಖದಿಂದ ಕೂರ್ಮವನ್ನೂ ಎತ್ತಿಕೊಂಡು ಹೊರಟನು.
ಸಮುತ್ಪಪಾತ ಚಾಕಾಶಂ ತತ ಉಚ್ಚೈರ್ವಿಹಂಗಮಃ |
ಸೋಽಲಂಭತೀರ್ಥಮಾಸಾದ್ಯ ದೇವವೃಕ್ಷಾನುಪಾಗಮತ್ ॥27॥
ಅನಂತರ ಆ ಪಕ್ಷಿಯಾದ ಗರುಡನು ಆಕಾಶದಲ್ಲಿ ಎತ್ತರಕ್ಕೆ ಹಾರಿ, ಅಲಂಭತೀರ್ಥವನ್ನು ಸಮೀಪಿಸಿ ದೇವವೃಕ್ಷಗಳ ಬಳಿಗೆ ಹೋದನು.
ತೇ ಭೀತಾಃ ಸಮಕಂಪಂತ ತಸ್ಯ ಪಕ್ಷಾನಿಲಾಹತಾಃ |
ನ ನೋಽಭಾಂಕ್ಷೀದಿತಿ ತದಾ ದಿವ್ಯಾಃ ಕಾನನಶಾಖಿನಃ ॥28॥
ಆ ದಿವ್ಯವಾದ ಕಾನನದಲ್ಲಿದ್ದ ದೇವವೃಕ್ಷಗಳು ಗರುಡನ ರೆಕ್ಕೆಯ ವಾಯುವಿನಿಂದ ಆಹತರಾಗಿ, ಹೆದರಿ ನಮ್ಮನ್ನು ಇವನು ಮುರಿಯದಿರಲಿ ಎಂದು ಚಿಂತಿಸಿದವು.
ಪ್ರಚಲಾಂಗಾನ್ ಸ ತಾನ್ ದೃಷ್ಟ್ವಾ ಮನೋಹರಫಲಾಂಕುರಾನ್ |
ಅನ್ಯಾನತುಲರೂಪಾಂಗಾನುಪಚಕ್ರಾಮ ಖೇಚರಃ ॥29॥
ಅಂತರಿಕ್ಷಚಾರಿಯಾದ ಗರುಡನು ನಡುಗುತ್ತಿದ್ದ ಮನೋಹರವಾದ ಫಲಾಂಕುರಗಳನ್ನುಳ್ಳ ಆ ವೃಕ್ಷಗಳನ್ನು ನೋಡಿ ಅವುಗಳನ್ನು ಬಿಟ್ಟು, ಅಂತಹ ಅಸದೃಶವಾದ ಆಕಾರ ಮತ್ತು ಅವಯವಗಳುಳ್ಳ ಬೇರೆ ಮರಗಳ ಸಮೀಪಕ್ಕೆ ಹೋದನು.
ಕಾಂಚನೈ ರಾಜತೈಶ್ಚೈವ ಫಲೈರ್ವೈಡೂರ್ಯಶಾಖಿನಃ |
ಸಾಗರಾಂಬುಪರಿಕ್ಷಿಪ್ತಾನ್ ಭ್ರಾಜಮಾನಾನ್ ಮಹಾದ್ರುಮಾನ್ ॥30॥
ಆ ಮರಗಳು ಸುವರ್ಣಮಯವಾದ ಮತ್ತು ರಜತಮಯವಾದ, ಫಲಗಳಿಂದ ಶೋಭಿತವಾಗಿದ್ದವು. ವೈಡೂರ್ಯದ ಶಾಖೆಗಳಿಂದ ಕೂಡಿದ್ದವು. ಸಾಗರದ ಜಲದ ಸುತ್ತಲೂ ಇದ್ದ ಕಂಗೊಳಿಸುತ್ತಿದ್ದ ಆ ಮಹಾವೃಕ್ಷಗಳ ಕಡೆಗೆ (ಗರುಡನು ಹೋದನು).
ತಮುವಾಚ ಖಗಶ್ರೇಷ್ಠಃ ತತ್ರ ರೋಹಿಣಪಾದಪಃ |
ಅತಿಪ್ರವೃದ್ಧಃ ಸುಮಹಾನ್ ಆಪತಂತಂ ಮನೋಜವಮ್ ॥31॥
ಅಲ್ಲಿ ಬಹಳ ದೊಡ್ಡದಾಗಿ ಬೆಳೆದಿದ್ದ ಒಂದು ವಟವೃಕ್ಷವು, ಹಾರಿಬರುತ್ತಿದ್ದ, ಮನೋಜವವುಳ್ಳ ಗರುಡನನ್ನು ನೋಡಿ ಹೀಗೆ ಹೇಳಿತು.
ರೋಹಿಣಃ
ಏಷಾ ಮಮ ಮಹಾಶಾಖಾ ಶತಯೋಜನಮಾಯತಾ |
ಏತಾಮಾಸ್ಥಾಯ ಶಾಖಾಂ ತ್ವಂ ಖಾದೇಮೌ ಗಜಕಚ್ಛಪೌ ॥32॥
ಈ ನನ್ನ ದೊಡ್ಡ ಕೊಂಬೆಯು ನೂರುಯೋಜನ ವಿಸ್ತಾರವಾಗಿದೆ. ಈ ಕೊಂಬೆಯ ಮೇಲೆ ಕುಳಿತುಕೊಂಡು ಈ ಗಜಕೂರ್ಮಗಳನ್ನು ತಿನ್ನು.
ತತೋ ದ್ರುಮಂ ಪತಗಸಹಸ್ರಸೇವಿತಂ

ಮಹೀಧರಪ್ರತಿಮವಪುಃ ಪ್ರಕಂಪಯನ್ |
ಖಗೋತ್ತಮೋ ದ್ರುತಮಭಿಗಮ್ಯ ವೇಗವಾನ್
ಬಭಂಜ ತಾಮವಿರಲಪತ್ರಸಂಯುತಾಮ್ ॥ 34 ॥
ಆಗ ಗರುಡನು ಸಹಸ್ರಾರು ಪಕ್ಷಿಗಳಿಂದ ಸೇವಿತವಾದ ಒಂದು ಬೆಟ್ಟದಂತೆ ತೋರುತ್ತಿದ್ದ, ಆ ಮರದ ಬಳಿಗೆ ವೇಗದಿಂದ ಸಾಗಿಬಂದು ಕೊಂಬೆಯ ಮೇಲೆ ಕುಳಿತುಕೊಂಡನು. ಆಗ ಬಹಳ ಪತ್ರಗಳಿಂದ ಮತ್ತು ರೆಂಬೆಗಳಿಂದ ಕೂಡಿದ ಆ ಶಾಖೆಯು (ಕೊಂಬೆಯು) ಮುರಿದುಹೋಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುರ್ವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಇಪ್ಪತ್ತೈದನೆಯ ಅಧ್ಯಾಯ
(ಕಾಶ್ಯಪರಿಂದ ವಾಲಖಿಲ್ಯರ ಸಾಂತ್ವನ. ಕಾಶ್ಯಪರ ವಚನದಂತೆ ಹಿಮಾಲಯದಲ್ಲಿ ಗರುಡನಿಂದ ಶಾಖೆಯ ಮೋಚನ. ವಾಲಖಿಲ್ಯರಿಗೆ ಇಂದ್ರನು ಮಾಡಿದ ಅಪರಾಧ. ಅಮೃತ ರಕ್ಷಣೆಗಾಗಿ ದೇವತೆಗಳ ಪ್ರಯತ್ನ)
ಸೂತಃ
ಸ್ಪೃಷ್ಟಮಾತ್ರೇಣ ಪದ್ಭ್ಯಾಂ ಸಾ ಗರುಡೇನ ಬಲೀಯಸಾ |
ಅಭಜ್ಯತ ತರೋಃ ಶಾಖಾ ಭಗ್ನಾಂ ಚೈನಾಮಧಾರಯತ್ ॥1॥
ಬಲಿಷ್ಠನಾದ, ಗರುಡನು ಆ ವಟವೃಕ್ಷದ ಕೊಂಬೆಯ ಮೇಲೆ ತನ್ನ ಪಾದಗಳನ್ನು ಇಟ್ಟ ಕೂಡಲೇ ಆ ಶಾಖೆಯು ಮುರಿಯಿತು. ಅದನ್ನು ಗರುಡನು ತನ್ನ ಕೊಕ್ಕಿನಿಂದ ಹಿಡಿದುಕೊಂಡನು.
ತಾಂ ಭಂಕತ್ವ ಮಹತೀಂ ಶಾಖಾಂ ವಿಸ್ಮಯಾತ್ ಸಮಲೋಕಯನ್|
ಅಥಾಽತ್ರ ಲಂಬತೋಽಪಶ್ಯದ್ ವಾಲಖಿಲ್ಯಾಂಸ್ತ್ವಧೋಮುಖಾನ್ ॥
ಗರುಡನು ಆ ದೊಡ್ಡಕೊಂಬೆಯನ್ನು ಮುರಿದು ವಿಸ್ಮಯದಿಂದ ನೋಡುತ್ತಾ ಆ ಕೊಂಬೆಯಲ್ಲಿ ತಲೆಕೆಳಕಾಗಿ ನೇತಾಡುತ್ತಿರುವ ವಾಲಖಿಲ್ಯರನ್ನು ನೋಡಿದನು.
ವೈಖಾನಸಾಂಶ್ಚ ಶಾಖಾಯಾಂ ಲಂಬಮಾನಾನವಾಙ್ಮುಖಾನ್ |
ಸ ತದ್ವಿನಾಶಸಂತ್ರಾಸಾದನುಪಶ್ಯನ್ ಖಗಾಧಿಪಃ ॥3॥
ಶಾಖಾಮಾಸ್ಯೇನ ಜಗೃಹೇ ತೇಷಾಮೇವಾನುಕಂಪಯಾ |
ಶನೈಃ ಪರ್ಯಚರತ್ ಪಕ್ಷೀ ಪರ್ವತಾನ್ ಪ್ರವಿಚಾಲಯನ್ ॥4॥
ಅದೇ ಶಾಖೆಯಲ್ಲಿ ತಲೆಕೆಳಕಾಗಿ ಜೋಲಾಡುತ್ತಿದ್ದ ವೈಖಾನಸರನ್ನು ನೋಡಿ, ಅವರ ವಿನಾಶವು ಉಂಟಾಗಬಹುದೆಂಬ ಭಯದಿಂದ ಪಕ್ಷಿರಾಜನಾದ ಗರುಡನು ಅವರ ಮೇಲಿನ ಅನುಕಂಪದಿಂದ ಕೊಂಬೆಯನ್ನು ತನ್ನ ಬಾಯಿಯಲ್ಲಿ ಹಿಡಿದು ಪರ್ವತವನ್ನು ಅಲುಗಾಡಿಸುತ್ತಿದ್ದರೂ, ಮೆಲ್ಲನೆ ಮುಂದೆ ಸಾಗಿದನು.
ಏವಂ ಸೋಽಭ್ಯಪತದ್ ದೇಶಾನ್ ಪಕ್ಷೀ ಸಗಜಕಚ್ಛಪಃ |
ಯದರ್ಥಂ ವಾಲಖಿಲ್ಯಾನಾಂ ನಾವಸ್ಥಾನಮವಿಂದತ ॥5॥
ಹೀಗೆ ಆ ಪಕ್ಷಿಯಾದ ಗರುಡನು ಗಜ ಮತ್ತು ಕೂರ್ಮಗಳ ಜೊತೆಯಲ್ಲಿ ಆ ಕೊಂಬೆಯನ್ನೂ ತೆಗೆದುಕೊಂಡು ಹೋಗುತ್ತಿದ್ದರೂ, ವಾಲಖಿಲ್ಯರನ್ನು ಸುರಕ್ಷಿತವಾಗಿಡುವ ಒಂದು ಸ್ಥಾನವು ದೊರೆಯಲಿಲ್ಲ.
ಸ ಗತ್ವಾ ಪರ್ವತಶ್ರೇಷ್ಠಂ ಗಂಧಮಾದನಮವ್ಯಯಮ್ |
ದದರ್ಶ ಕಾಶ್ಯಪಂ ತತ್ರ ಪಿತರಂ ಸಂಶಿತವ್ರತಮ್ ॥6॥
ಅವನು ಪರ್ವತಶ್ರೇಷ್ಠವಾದ ಮತ್ತು ನಿತ್ಯವಾದ ಗಂಧಮಾದನಕ್ಕೆ ಹೋಗಿ ಅಲ್ಲಿ ಶ್ರೇಷ್ಠವ್ರತಧಾರಿಯಾದ, ತನ್ನ ತಂದೆಯಾದ ಕಾಶ್ಯಪರನ್ನು ನೋಡಿದನು.
ದದರ್ಶ ತಂ ಪಿತಾ ಚಾಪಿ ದಿವ್ಯರೂಪಂ ವಿಹಂಗಮಮ್ |
ತೇಜೋವೀರ್ಯಬಲೋಪೇತಂ ಮನೋಮಾರುತರಂಹಸಮ್ ॥
ಶೈಲಶೃಂಗಪ್ರತೀಕಾಶಂ ಬ್ರಹ್ಮದಂಡಮಿವೋದ್ಯತಮ್ |
ಅಚಿಂತ್ಯಮನಭಿಜ್ಞೇಯಂ ಸರ್ವಭೂತಭಯಂಕರಮ್ ॥8॥
ಆ ತಂದೆಯೂ ಕೂಡ ದಿವ್ಯರೂಪವನ್ನು ಧರಿಸಿದ, ತೇಜೋವೀರ್ಯಬಲ ಸಮನ್ವಿತನಾದ, ಮನೋವೇಗ ಮತ್ತು ವಾಯುವೇಗವುಳ್ಳ, ಪರ್ವತದ ಶಿಖರದಂತೆ ತೋರುತ್ತಿರುವ ಉದ್ಯತವಾದ ಬ್ರಹ್ಮದಂಡದಂತೆ ಇರುವ, ಅಚಿಂತ್ಯನಾದ ತಿಳಿಯಲು ಸಾಧ್ಯವಿಲ್ಲದ, ಸರ್ವಭೂತಭಯಂಕರನಾದ, ದಿವ್ಯರೂಪವುಳ್ಳ ಗರುಡನನ್ನು ನೋಡಿದನು.
ಮಹಾವೀರ್ಯಧರಂ ಸಾಕ್ಷಾದ್ ಅಗ್ನಿಮಿದ್ಧಮಿವೋದ್ಯತಮ್ |
ಅಪ್ರಧೃಷ್ಯಮಜೇಯಂ ಚ ದೇವದಾನವರಾಕ್ಷಸೈಃ ॥9॥
ಭೇತ್ತಾರಂ ಗಿರಿಶೃಂಗಾಣಾಂ ನದೀಜಲವಿಶೋಷಣಮ್ |
ಲೋಕಸಂಕ್ಷೋಭಣಂ ಘೋರಂ ಕೃತಾಂತಸಮದರ್ಶನಮ್ ॥10॥

ಮಹಾಬಲದಿಂದ ಕೂಡಿದ, ಸಾಕ್ಷಾತ್ ಅಗ್ನಿಯಂತೆ ಜ್ವಲಿಸುವ, ಯಾರಿಂದಲೂ ಸೋಲಿಸಲು ಅಸಾಧ್ಯವಾದ ಮತ್ತು ದೇವದಾನವ-ರಾಕ್ಷಸರಿಂದ ಸೋಲಿಸಲ್ಪಡದ, ಪರ್ವತಶಿಖರಗಳನ್ನು ಭೇದಿಸುವ, ನದೀಜಲವನ್ನು ಶೋಷಿಸುವ, ಲೋಕವನ್ನೆಲ್ಲಾ ಸಂಕ್ಷೋಭಗೊಳಿಸುವ, ಘೋರನಾದ ಯಮನಂತೆ ತೋರುವ (ಗರುಡನನ್ನು ನೋಡಿದನು.)

ತಮಾಗತಮಭಿಪ್ರೇತ್ಯ ಭಗವಾನ್ ಕಾಶ್ಯಪಸ್ತದಾ |
ವಿದಿತ್ವಾ ಚಾಸ್ಯ ಸಂಕಲ್ಪಮಿದಂ ವಚನಮಬ್ರವೀತ್ ॥11॥

ಸಮೀಪಕ್ಕೆ ಬಂದ ಅವನನ್ನು ನೋಡಿ, ಪೂಜ್ಯರಾದ ಕಾಶ್ಯಪರು ಅವನ ಮನಸ್ಸಿನ ಸಂಕಲ್ಪವನ್ನು ತಿಳಿದು ಅವನನ್ನು ಕುರಿತು ಹೀಗೆ ಹೇಳಿದರು.

ಕಾಶ್ಯಪಃ
ಪುತ್ರ ಮಾ ಸಾಹಸಂ ಕಾರ್ಷೀಸ್ತ್ವಂ ಸದ್ಯೋ ಲಪ್ಸ್ಯಸೇ ವ್ಯಥಾಮ್ |
ನ ತ್ವಾಂ ದಹೇಯುಃ ಸಂಕ್ರುದ್ಧಾ ವಾಲಖಿಲ್ಯಾ ಮರೀಚಿಪಾಃ ॥12॥

ಪುತ್ರನೇ, ಇದ್ದಕ್ಕಿದ್ದಂತೆಯೇ ಕೊಂಬೆಯನ್ನು ಕೆಳಗೆ ಹಾಕಬೇಡ. ಹಾಗೆ ಮಾಡಿದರೆ, ತಕ್ಷಣದಲ್ಲಿಯೇ ನಿನಗೆ ವ್ಯಥೆಯುಂಟಾಗುತ್ತದೆ. ಸೂರ್ಯನ ಕಿರಣಗಳನ್ನು ಪಾನಮಾಡಿ ತಪಸ್ಸುಮಾಡುವ ವಾಲಖಿಲ್ಯರು ಕ್ರೋಧದಿಂದ ನಿನ್ನನ್ನು ಸುಡದಿರಲಿ.

ಸೂತಃ
ಪ್ರಸಾದಯಾಮಾಸ ಸ ತಾನ್ ಕಾಶ್ಯಪಃ ಪುತ್ರಕಾರಣಾತ್ |
ವಾಲಖಿಲ್ಯಾಂಸ್ತಪಃಸಿದ್ಧಾನಿದಂ ವಚನಮಬ್ರವೀತ್ ॥13॥

ಕಾಶ್ಯಪರು ತನ್ನ ಮಗನ ಸಲುವಾಗಿ ತಪಸ್ಸಿದ್ಧರಾದ ಆ ವಾಲಖಿಲ್ಯರನ್ನು ಕುರಿತು, ಅವರನ್ನು ಸಮಾಧಾನಪಡಿಸುತ್ತಾ ಈ ಮಾತನ್ನು ಆಡಿದರು.

ಕಾಶ್ಯಪಃ
ಪ್ರಜಾಹಿತಾರ್ಥಮಾರಂಭೋ ಗರುಡಸ್ಯ ತಪೋಧನಾಃ |
ಚಿಕೀರ್ಷತಿ ಮಹತ್ಕರ್ಮ ತದನುಜ್ಞಾತುಮರ್ಹಥ ॥14॥

ಎಲೈ ತಪೋಧನರೇ, ಗರುಡನ ಈ ಪ್ರಯತ್ನವು ಪ್ರಜೆಗಳ ಹಿತಕ್ಕೋಸ್ಕರವಾಗಿ ಆಗಿದೆ. ಈ ಮಹತ್ಕಾರ್ಯವನ್ನು ಮಾಡಲು ಹೊರಟ ಗರುಡನಿಗೆ ನೀವು ಅನುಮತಿಯನ್ನು ಕೊಡಬೇಕು.

ಗರುಡ ಮತ್ತು ವಿನತೆಯರನ್ನು ದಾಸ್ಯದಿಂದ ವಿಮೋಚನೆ ಮಾಡುವುದು ಈ ಪ್ರಯತ್ನದ ಫಲ. ಗರುಡನು ದಾಸ್ಯದಿಂದ ಮುಕ್ತನಾಗದಿದ್ದರೆ, ಸರ್ಪಗಳು ನಿರಂಕುಶವಾಗಿ ಯಾವ ಭಯವೂ ಇಲ್ಲದೆ ಪ್ರಜೆಗಳಿಗೆ ಇನ್ನೂ ಹಿಂಸೆಯನ್ನು ಮಾಡುತ್ತವೆ. ದಾಸ್ಯದಿಂದ ವಿಮೋಚನೆ ಮಾಡಿದರೆ, ಸರ್ಪಗಳ ಭಯವು ಕಡಿಮೆಯಾಗುವುದಾದ್ದರಿಂದ ಗರುಡನ ದಾಸ್ಯಮೋಚನೆಯು ಪ್ರಜೆಗಳ ಹಿತಾರ್ಥಕ್ಕಾಗಿಯೇ ಇದೆ ಎಂದು ತಾತ್ಪರ್ಯ.

ಸೂತಃ
ಏವಮುಕ್ತಾ ಭಗವತಾ ಮುನಯಸ್ತೇ ಸಮಭ್ಯಯುಃ |
ಮುಕತ್ವಾ ಶಾಖಾಂ ಗಿರಿಂ ಪುಣ್ಯಂ ಹಿಮವಂತಂ ತಪೋಧನಾಃ ॥15॥

ಹೀಗೆ ಪೂಜ್ಯರಾದ ಕಾಶ್ಯಪರಿಂದ ಹೇಳಲ್ಪಟ್ಟ ತಪೋಧನರಾದ ಆ ಋಷಿಗಳು ಆ ಶಾಖೆಯನ್ನು ಬಿಟ್ಟು ಪವಿತ್ರವಾದ ಹಿಮಾಲಯಪರ್ವತಕ್ಕೆ ಹೊರಟುಹೋದರು.

ತತಸ್ತೇಷ್ವಪಯಾತೇಷು ಪಿತರಂ ವಿನತಾತ್ಮಜಃ |
ಶಾಖಾವ್ಯಾಕ್ಷಿಪ್ತವದನಃ ಪರ್ಯಪೃಚ್ಛತ ಕಾಶ್ಯಪಮ್ ॥16॥

ಆ ತಪೋಧನರು ಹೊರಟುಹೋಗುತ್ತಿರಲು, ವಿನತೆಯ ಪುತ್ರನಾದ ಗರುಡನು, ಶಾಖೆಯನ್ನು ತನ್ನ ಬಾಯಿಯಲ್ಲಿಯೇ ಇನ್ನೂ ಇಟ್ಟುಕೊಂಡು ತಂದೆಯನ್ನು ಕುರಿತು ಕೇಳಿದನು.

ಭಗವಾನ್ ಕ್ವ ವಿಮುಂಚಾಮಿ ತರುಶಾಖಾಮಿಮಾಮಹಮ್ |
ವರ್ಜಿತಂ ಬ್ರಾಹ್ಮಣೈರ್ದೇಶಮಾಖ್ಯಾತು ಭಗವಾನ್ ಮಮ ॥17॥

ಪೂಜ್ಯನಾದ ತಂದೆಯೇ, ಈ ಮರದ ಕೊಂಬೆಯನ್ನು ಬ್ರಾಹ್ಮಣರಿರದ ಯಾವ ದೇಶದಲ್ಲಿ ನಾನು ಹಾಕಬೇಕು ಎಂದು ಪೂಜ್ಯರಾದ ನೀವು ಅಪ್ಪಣೆಯನ್ನು ಕೊಡಬೇಕು.

ಸೂತಃ
ತತೋ ನಿಷ್ಪುರುಷಂ ಶೈಲಂ ಹಿಮಸಂರುದ್ಧಕಂದರಮ್ |
ಅಗಮ್ಯಂ ಮನಸಾಪ್ಯನ್ಯೈಸ್ತಸ್ಯಾಚಖ್ಯೌ ಸ ಕಾಶ್ಯಪಃ ॥18॥

ಕಾಶ್ಯಪರು ಪುರುಷಪ್ರವೇಶವಿಲ್ಲದ ಮನಸ್ಸಿನಿಂದಲೂ ಅಗಮ್ಯವಾದ ಹಿಮಾಲಯಪರ್ವತದ ಒಂದು ಕಣಿವೆಯನ್ನು ಗರುಡನಿಗೆ ತಿಳಿಸಿದರು.

ತಂ ಪರ್ವತಂ ಮಹಾಕುಕ್ಷಿಮಾದಿಶ್ಯ ಮನಸಾ ಖಗಃ |
ಜವೇನಾಭ್ಯಪತತ್ ತಾರ್ಕ್ಷ್ಯಃ ಸಶಾಖಾಗಜಕಚ್ಛಪಃ ॥19॥

ಆಗ ಗರುಡನು ಮನಸ್ಸಿನಿಂದ ಆ ಪರ್ವತದ ಮಹಾಕುಕ್ಷಿಯನ್ನು ಉದ್ದೇಶಿಸಿ, ಶಾಖೆ, ಗಜ ಮತ್ತು ಕೂರ್ಮಗಳನ್ನು ಎತ್ತಿಕೊಂಡೇ ವೇಗವಾಗಿ ಆ ಪ್ರದೇಶದ ಕಡೆಗೆ ಹೊರಟನು.

ನ ತಾಂ ವಾರ್ಧಃ ಪರಿಣಾಹೇಚ್ಛತಚರ್ಮಾ ಮಹಾನಣುಃ |
ಶಾಖಿನೋ ಮಹತೀಂ ಶಾಖಾಂ ಯಾಂ ಪ್ರಗೃಹ್ಯ ಯಯೌ ಖಗಃ ॥20॥

ಯಾವ ಕೊಂಬೆಯನ್ನು ಗರುಡನು ಎತ್ತಿಕೊಂಡು ಹೊರಟನೋ, ಆ ಕೊಂಬೆಯನ್ನು ನೂರು ಎಮ್ಮೆಗಳ ಚರ್ಮದಿಂದ ಒಂದು ಕನಿಷ್ಠ ಅಂಗುಲಿಯ ಗಾತ್ರದಲ್ಲಿ ಮಾಡಲ್ಪಟ್ಟ ಚರ್ಮಮಯವಾದ ಹಗ್ಗವು ಒಂದು ಬಾರಿ ಸುತ್ತಲು ಸಾಧ್ಯವಾಗುತ್ತಿರಲಿಲ್ಲ.
ತತಃ ಶತಸಹಸ್ರಂ ಸ ಯೋಜನಾಂತರಮಾಗತಃ |
ಕಾಲೇನ ನಾತಿಮಹತಾ ಗರುಡಃ ಪತತಾಂ ವರಃ ॥21॥
ಆಗ ಹಾರುವವರಲ್ಲಿ ಅಗ್ರಗಣ್ಯನಾದ ಗರುಡನು ಒಂದು ಲಕ್ಷಯೋಜನ ದೂರವನ್ನು ಅಲ್ಪಕಾಲದಲ್ಲಿಯೇ ಅತಿಕ್ರಮಿಸಿ ಬಂದನು.
ಸ ತಂ ಗತ್ವಾ ಕ್ಷಣೇನೈವ ಪರ್ವತಂ ವಚನಾತ್ ಪಿತುಃ |
ಪ್ರಾಮುಂಚನ್ ಮಹತೀಂ ಶಾಖಾಂ ಸಸ್ವನಾಂ ತತ್ರ ಖೇಚರಃ ॥22॥
ತಂದೆಯ ಮಾತಿನಂತೆ, ಆ ಪರ್ವತದ ಸಮೀಪಕ್ಕೆ ಒಂದು ಕ್ಷಣದಲ್ಲಿ ಬಂದು ಆ ದೊಡ್ಡ ಶಾಖೆಯನ್ನು ಅಲ್ಲಿ ಪರಿತ್ಯಜಿಸಿದನು.
ಗಗನಚರನಾದ ಗರುಡನು ಆ ಕೊಂಬೆಯನ್ನು ಕೆಳಗೆ ಹಾಕುತ್ತಿರಲು, ದೊಡ್ಡ ಶಬ್ದವುಂಟಾಯಿತು.
ತಸ್ಯ ಪಕ್ಷಾನಿಲಹತಃ ಪ್ರಾಕಂಪತ ಸ ಶೈಲರಾಟ್ |
ಮುಮುಚುಃ ಪುಷ್ಪವರ್ಷಂ ಚ ಸಮಾಗಾಳಿತಪಾದಪಾಃ ॥23॥
ಗರುಡನ ರೆಕ್ಕೆಯ ಅನಿಲದಿಂದ ಹೊಡೆಯಲ್ಪಟ್ಟ ಶೈಲರಾಜನಾದ ಹಿಮಾಲಯವು ಕಂಪಿಸಿತು. ವೃಕ್ಷಗಳು ಅಲ್ಲಾಡಿಸಲ್ಪಟ್ಟು ಪುಷ್ಪಗಳ ವೃಷ್ಟಿಯನ್ನು ಕರೆದವು.
ಶೃಂಗಾಣಿ ಚ ವ್ಯಶೀರ್ಯಂತ ಗಿರೇಸ್ತಸ್ಯ ಸಮಂತತಃ |
ಮಣಿಕಾಂಚನಚಿತ್ರಾಣಿ ಶೋಭಯಂತಿ ಮಹಾಗಿರಿಮ್ ॥24॥
ಮಣಿಕಾಂಚನಮಯವಾದ ಆ ಪರ್ವತದ ಶಿಖರಗಳು ಬಿರಿದು ಆ ದೊಡ್ಡಪರ್ವತಕ್ಕೆ ಶೋಭೆಯನ್ನು ಉಂಟು ಮಾಡಿದವು.
ಶಾಖಿನೋ ಬಹವಶ್ಚಾಪಿ ಶಾಖಯಾ ನಿಹತಾಸ್ತಯಾ |
ಕಾಂಚನೈಃ ಕುಸುಮೈರ್ಭಾಂತಿ ವಿದ್ಯುತ್ವಂತ ಇವಾಂಬುದಾಃ ॥25॥
ಇನ್ನೂ ಅನೇಕ ವೃಕ್ಷಗಳೂ ಸಹ, ಬೀಳುತ್ತಿದ್ದ ಆ ಕೊಂಬೆಯಿಂದ ಮುರಿಯಲ್ಪಟ್ಟವು. ಕಾಂಚನಮಯವಾದ ಕುಸುಮಗಳಿಂದ ಕೂಡಿದ ಆ ವೃಕ್ಷಗಳು ಮಿಂಚಿನಿಂದ ಕೂಡಿದ ಮೋಡಗಳಂತೆ ಹೊಳೆದು ಶೋಭಿಸುತ್ತಿದ್ದವು.
ತೇ ಹೇಮರಜಸಾ ಭೂಯೋ ಯುಕ್ತಾಃ ಪರ್ವತಧಾತುಭಿಃ |
ವ್ಯರಾಜನ್ ಶಾಖಿನಸ್ತತ್ರ ಸೂರ್ಯಾಂಶುಪ್ರತಿರಂಜಿತಾಃ ॥26॥
ಸುವರ್ಣದ ಧೂಳಿನಿಂದಲೂ, ಪರ್ವತಧಾತುಗಳಿಂದಲೂ ಯುಕ್ತವಾಗಿ ಸೂರ್ಯಕಿರಣಗಳಿಂದ ರಂಜಿತವಾದ ಆ ವೃಕ್ಷಗಳು ಅಲ್ಲಿ ಶೋಭಿಸಿದವು.
ತತಸ್ತಸ್ಯ ಗಿರೇಃ ಶೃಂಗಂ ಸಮಾಸ್ಥಾಯ ಖಗೋತ್ತಮಃ |
ಭಕ್ಷಯಾಮಾಸ ಗರುಡಸ್ತಾವುಭೌ ಗಜಕಚ್ಛಪೌ ॥27॥
ಅನಂತರ ಪಕ್ಷಿಶ್ರೇಷ್ಠನಾದ ಗರುಡನು ಆ ಪರ್ವತಶಿಖರದಲ್ಲಿ ಕುಳಿತು ಆ ಕೂರ್ಮ ಮತ್ತು ಗಜಗಳನ್ನು ಭಕ್ಷಿಸಿದನು.
ತಾವುಭೌ ಭಕ್ಷಯಿತ್ವಾ ತು ಸ ತಾರ್ಕ್ಷ್ಯಃ ಕೂರ್ಮಕುಂಜರೌ |
ತತಃ ಪರ್ವತಕೂಟಾಗ್ರಾದುತ್ಪಪಾತ ಮನೋಜವಃ ॥28॥
ಮನೋಜವವುಳ್ಳ ಗರುಡನು ಆ ಗಜಕೂರ್ಮಗಳನ್ನು ಭಕ್ಷಿಸಿ, ಆ ಪರ್ವತಶಿಖರದಿಂದ ಪುನಃ ಮೇಲಕ್ಕೆ ಹಾರಿದನು.
ಪ್ರಾವರ್ತಂತಾಥ ದೇವಾನಾಮುತ್ಪಾತ ಭಯವೇದಿನಃ |
ಇಂದ್ರಸ್ಯ ವಜ್ರಂ ದಯಿತಂ ಪ್ರಜಜ್ವಾಲ ವ್ಯಥಾನ್ವಿತಮ್ ॥29॥
ಆಗ ದೇವತೆಗಳಿಗೆ ಭಯವನ್ನು ಸೂಚಿಸುವ ಅನೇಕ ಅಪಶಕುನಗಳಾದವು. ಇಂದ್ರನಿಗೆ ಪ್ರಿಯವಾದ ವಜ್ರಾಯುಧವು ವ್ಯಥೆಯಿಂದ ಕೂಡಿ ಪ್ರಜ್ವಲಿಸಿತು.
ಸಧೂಮಾ ಚಾಪತತ್ ಸಾರ್ಚಿರ್ದಿವಿ ಚೋಲ್ಕಾ ನಭಶ್ಚ್ಯುತಾ |
ತಥಾ ವಸೂನಾಂ ರುದ್ರಾಣಾಮಾದಿತ್ಯಾನಾಂ ಚ ಸರ್ವಶಃ ॥30॥
ಸಾಧ್ಯಾನಾಂ ಮರುತಾಂ ಚೈವ ಯೇ ಚಾನ್ಯೇ ದೇವತಾಗಣಾಃ |
ಸ್ವಂ ಸ್ವಂ ಪ್ರಹರಣಂ ತೇಷಾಂ ಪರಸ್ಪರಮುಪಾದ್ರವನ್ ॥31॥
ಆಕಾಶದಿಂದ ಧೂಮಾಗ್ನಿಗಳ ಸಹಿತವಾದ ಉಲ್ಕಾಪಾತವಾಯಿತು. ವಸು, ರುದ್ರ, ಆದಿತ್ಯ, ಸಾಧ್ಯ, ಮರುತ್ ಮೊದಲಾದ ದೇವತೆಗಳ ಆಯುಧಗಳು ಪರಸ್ಪರವಾಗಿ ಒಂದರ ಕಡೆಗೆ ಒಂದು ಧಾವಿಸಿದವು.
ಅಭೂತಪೂರ್ವಃ ಸಂಗ್ರಾಮೋ ಯಥಾ ದೇವಾಸುರೇಷ್ವಪಿ |
ವವುರ್ವಾತಾಃ ಸನಿರ್ಘಾತಾಃ ಪೇತುರುಲ್ಕಾಃ ಸಮಂತತಃ ॥32॥
ಅಭೂತಪೂರ್ವವಾದ ದೇವಾಸುರ ಸಂಗ್ರಾಮದಲ್ಲಿ ಎಂತಹ ಅಪಶಕುನಗಳಾದವೋ, ಅಂತಹ ಅಪಶಕುನಗಳು ಸಂಭವಿಸಿದವು.
ಬಹಳ ಒರಟಾದ ಗಾಳಿಯು ಬೀಸಿತು. ಎಲ್ಲಾ ಕಡೆಗಳಲ್ಲಿಯೂ ಉಲ್ಕಾಪಾತವಾಯಿತು.
ನಿರಭ್ರಮೇವ ಚಾಕಾಶಂ ಪ್ರಜಗರ್ಜ ಮಹಾಸ್ವನಮ್ |
ದೇವಾನಾಮಪಿ ಯೋ ದೇವಃ ಸೋಽಪ್ಯವರ್ಷದಸೃಕ್ ತದಾ ॥33॥
ಮೋಡವಿಲ್ಲದ ಆಕಾಶದಲ್ಲಿ ದೊಡ್ಡ ಗುಡುಗಿನ ಶಬ್ದಗಳಾದವು. ದೇವದೇವನಾದ ನಾರಾಯಣನು ರಕ್ತದ ಮಳೆಯನ್ನು ಸುರಿಸಿದನು.
ಮಮ್ಲುರ್ಮಾಲ್ಯಾನಿ ದೇವಾನಾಂ ತೇಜಸ್ತೇಜಾಂಸಿ ಚೈವ ಹ |
ಉತ್ಪಾತಮೇಘಾ ರೌದ್ರಾಶ್ಚ ವವೃಷುಃ ಶೋಣಿತಂ ಬಹು ॥34॥
ದೇವತೆಗಳ ಪುಷ್ಪಮಾಲೆಗಳು ಬಾಡಿಹೋದವು. ಅವರ ತೇಜಸ್ಸು ಕಳೆಗುಂದಿತು. ಉತ್ಪಾತಕಾಲದ ಭಯಂಕರವಾದ ಮೋಡಗಳು

ರಕ್ತದಮಳೆಯನ್ನು ಸುರಿಸಿದವು.
ರಜಾಂಸಿ ಮಕುಟಾಂಶ್ಚೈಷಾಮುತ್ಥಿತಾನಿ ವ್ಯಕರ್ಷಯನ್ |
ತತಸ್ತ್ರಸಸಮುದ್ವಿಗ್ನಃ ಸಹ ದೇವೈಃ ಶತಕ್ರತುಃ ॥35॥
ಗಾಳಿಯಿಂದ ಎದ್ದ ಧೂಳಿನಿಂದ ದೇವತೆಗಳ ಕೀರಿಟಗಳು ಅಸ್ತವ್ಯಸ್ತವಾದವು. ಆಗ ಇಂದ್ರನು ದೇವತೆಗಳ ಜೊತೆಯಲ್ಲಿ ಭಯಗ್ರಸ್ತನಾದನು.
ಉತ್ಪಾತಾನ್ ದಾರುಣಾನ್ ಪಶ್ಯನ್ನಿತ್ಯುವಾಚ ಬೃಹಸ್ಪತಿಮ್ |
ಕಿಮರ್ಥಂ ಭಗವನ್ ಘೋರಾ ಮಹೋತ್ಪಾತಾಃ ಸಮುತ್ಥಿತಾಃ |
ನ ಹಿ ಪಶ್ಯಾಮಿ ಶತ್ರುಂ ಮೇ ಯುಧಿ ಯೋ ನಃ ಪ್ರಧರ್ಷಯೇತ್ ॥
ದಾರುಣವಾದ ಇಂತಹ ಉತ್ಪಾತಗಳನ್ನು ನೋಡಿದ ಇಂದ್ರನು ಬೃಹಸ್ಪತ್ಯಾಚಾರ್ಯರನ್ನು ಕುರಿತು ಹೀಗೆ ಹೇಳಿದನು. ಪೂಜ್ಯರೇ, ಏಕೆ ಇಂತಹ ಘೋರವಾದ ದೊಡ್ಡ ಅಪಶಕುನಗಳು ಸಂಭವಿಸುತ್ತಿವೆ? ನನ್ನನ್ನು ಯುದ್ಧದಲ್ಲಿ ಸೋಲಿಸಬಹುದಾದ ಯಾವ ಶತ್ರುವನ್ನೂ ನಾನು ಕಾಣುತ್ತಿಲ್ಲವಷ್ಟೆ?
ಬೃಹಸ್ಪತಿಃ
ತವಾಪರಾಧಾದ್ ದೇವೇಶ ಪ್ರಮಾದಾಚ್ಚ ಶತಕ್ರತೋ |
ತಪಸಾ ವಾಲಖಿಲ್ಯಾನಾಂ ಭಯಮುತ್ಪನ್ನಮದ್ಭುತಮ್ ॥37॥
ದೇವೇಶನೇ, ಶತಕ್ರತುವೇ, ನೀನು ವಾಲಖಿಲ್ಯರ ತಪಸ್ಸನ್ನು ಗಮನಿಸದೇ ಅವರಿಗೆ ಮಾಡಿದ ಅಪರಾಧದಿಂದಲೂ ಮತ್ತು ವಾಲಖಿಲ್ಯರ ತಪಸ್ಸಿನಿಂದಲೂ, ಈ ಅದ್ಭುತವಾದ ಉತ್ಪಾತಗಳು ಭಯವನ್ನು ಹುಟ್ಟಿಸುತ್ತಿವೆ.
ಕಾಶ್ಯಪಸ್ಯ ಮುನೇಃ ಪುತ್ರೋ ವಿನತಾಯಾಃ ಖಗೇಶ್ವರಃ |
ಹರ್ತುಂ ಸೋಮಮನುಪ್ರಾಪ್ತೋ ಬಲವಾನ್ ಕಾಮರೂಪವಾನ್ ॥
ಕಾಶ್ಯಪ ಮತ್ತು ವಿನತೆಯರ ಮಗನಾದ, ಬಲಿಷ್ಠನಾದ, ಇಚ್ಛಾರೂಪವನ್ನು ಧರಿಸಲು ಸಮರ್ಥನಾದ, ಪಕ್ಷಿರಾಜನಾದ ಗರುಡನು ಅಮೃತವನ್ನು ಅಪಹರಿಸುವುದಕ್ಕೆ ಬರುತ್ತಿದ್ದಾನೆ.
ಸಮರ್ಥೋ ಬಲಿನಾಂ ಶ್ರೇಷ್ಠೋ ಹರ್ತುಂ ಸೋಮಮಿಹಾಗತಃ |
ಸರ್ವಂ ಸಂಭಾವಯಾಮ್ಯಸ್ಮಿನ್ನಸಾಧ್ಯಮಪಿ ಸಾಧಯೇತ್ ॥39॥
ಬಲಿಷ್ಠರಲ್ಲಿ ಶ್ರೇಷ್ಠನೂ, ಸಮರ್ಥನೂ ಆದ ಅವನು ಅಮೃತವನ್ನು ಅಪಹರಿಸಲು ಇಲ್ಲಿಗೆ ಬರುತ್ತಿದ್ದಾನೆ. ಅವನಲ್ಲಿ ಎಲ್ಲವೂ ಸಂಭಾವಿತ ಎಂದು ನನಗೆ ತೋರುತ್ತದೆ. ಅವನು ಅಸಾಧ್ಯವಾದುದನ್ನೂ ಸಾಧಿಸುತ್ತಾನೆ.
ಸೂತಃ
ಶ್ರುತ್ವೈತದ್ವಚನಂ ಶಕ್ರಃ ಪ್ರೋವಾಚಾಮೃತರಕ್ಷಿಣಃ |
ಮಹವೀರ್ಯಬಲಃ ಪಕ್ಷೀ ಹರ್ತುಂ ಸೋಮಮಿಹೋದ್ಯತಃ ॥40॥
ಯುಷ್ಮಾನ್ ಸಂಭೋಧಯಾಮ್ಯೇಷ ಯಥಾ ನ ಸ ಹರೇದ್ ಬಲಾತ್ |
ಅತುಲಂ ಹಿ ಬಲಂ ತಸ್ಯ ಬೃಹಸ್ಪತಿರುವಾಚ ಮೇ ॥41॥
ಈ ಮಾತನ್ನು ಕೇಳಿದ ಇಂದ್ರನು ಅಮೃತದ ಕಾವಲುಗಾರರಾದ ದೇವತೆಗಳನ್ನು ಕುರಿತು, ಮಹಾವೀರ್ಯಬಲಯುಕ್ತವಾದ ಪಕ್ಷಿಯೊಂದು ಅಮೃತವನ್ನು ಅಪಹರಿಸಲು ಉದ್ಯುಕ್ತನಾಗಿ ಇಲ್ಲಿಗೆ ಬರುತ್ತಿದ್ದಾನೆ. ಅವನ ಬಲವು ಅಪ್ರತಿಮವೆಂದು ಬೃಹಸ್ಪತಿಗಳು ಹೇಳಿದ್ದಾರೆ. ಅವನು ತನ್ನ ಸಾಮರ್ಥ್ಯದಿಂದ ಅಮೃತವನ್ನು ಅಪಹಾರಮಾಡದಂತೆ ನೀವು ನೋಡಿಕೊಳ್ಳಬೇಕು ಎಂದು ನಿಮಗೆ ಎಚ್ಚರಿಕೆಯನ್ನು ನೀಡುತ್ತಿದ್ದೇನೆ ಎಂದು ಹೇಳಿದನು.
ಸೂತಃ
ತಚ್ಛ್ರುತ್ವಾ ವಿಬುಧಾ ವಾಕ್ಯಂ ವಿಸ್ಮಿತಾ ಯತ್ನಮಾಸ್ಥಿತಾಃ |
ಪರಿವಾರ್ಯಾಮೃತಂ ತಸ್ಥುಃ ಸರ್ವೇ ಕ್ಷುಭಿತಮಾನಸಾಃ ॥42॥
ಆ ವಾಕ್ಯವನ್ನು ಕೇಳಿದ ದೇವತೆಗಳು, ವಿಸ್ಮಯಾವಿಷ್ಟರಾಗಿ ಅಮೃತದ ಕಲಶದ ಸುತ್ತಲೂ ಮನಸ್ಸಿನಲ್ಲಿ ಕ್ಷೋಭೆಗೊಂಡವರಾಗಿದ್ದರೂ ಪ್ರಯತ್ನಪೂರ್ವಕವಾಗಿ ಅಮೃತವನ್ನು ರಕ್ಷಿಸಲು ನಿಂತರು.
ಧಾರಯಂತೋ ಮಹಾರ್ಹಾಣಿ ಕವಚಾನಿ ಮನಸ್ವಿನಃ |
ಕಾಂಚನಾನಿ ವಿಚಿತ್ರಾಣಿ ವೈಢೂರ್ಯವಿಕೃತಾನಿ ಚ ॥43॥
ವಿವಿಧಾನಿ ಚ ಶಸ್ತ್ರಾಣಿ ಸಮುದ್ಯಮ್ಯ ಸಹಸ್ರಶಃ |
ಸಿತತೀಕ್ಷ್ಣಾಗ್ರಧಾರಾಣಿ ಸಮುದ್ಯಮ್ಯ ಸಹಸ್ರಶಃ ॥44॥
ಸವಿಷ್ಫುಲಿಂಗಜ್ವಾಲಾನಿ ಘೋರರೂಪಾಣ್ಯನೇಕಶಃ |
ಚಕ್ರಾಣಿ ಪರಿಘಾಂಶ್ಚೈವ ತ್ರಿಶೂಲಾನಿ ಪರಶ್ವಧಾನ್ ॥45॥
ಶಕ್ತೀಶ್ಚ ವಿಮಲಾಸ್ತೀಕ್ಷ್ಣಾಃ ಕರವಾಳಾಂಶ್ಚ ನಿರ್ಮಲಾನ್ |
ಸ್ವದೇಹರೂಪಾಣ್ಯಾದಾಯ ಗದಾಶ್ಚೋಗ್ರಪ್ರದರ್ಶನಾಃ ॥46॥
ಧೈರ್ಯಶಾಲಿಗಳಾದ ಅವರು ಅನರ್ಘ್ಯವಾದ, ಕಾಂಚನದಿಂದಲೂ, ವೈಢೂರ್ಯಾದಿಗಳಿಂದಲೂ ಖಚಿತವಾದ, ವಿಚಿತ್ರವಾದ, ಕವಚಗಳನ್ನು ತೊಟ್ಟು, ಅನೇಕವಿಧವಾದ ಶಸ್ತ್ರಗಳನ್ನು ಸಹಸ್ರಸಂಖ್ಯೆಯಲ್ಲಿ ಕೈಗಳಲ್ಲಿ ಹಿಡಿದರು. ಹರಿತವಾದ, ತೀಕ್ಷ್ಣವಾದ ತುದಿಯುಳ್ಳ ಸಹಸ್ರಾರು ಸಂಖ್ಯೆಯ ಅಸ್ತ್ರವನ್ನು ಹಿಡಿದರು. ಧೂಮಸಹಿತವಾದ ಅಗ್ನಿಯನ್ನು ಉಗುಳುವ, ಘೋರರೂಪವಾದ ಅನೇಕ ಚಕ್ರಗಳನ್ನೂ, ಪರಿಘಗಳನ್ನೂ, ತ್ರಿಶೂಲಗಳನ್ನೂ, ಪರಶ್ವಧಗಳನ್ನೂ, ಶಕ್ತ್ಯಾಯುಧಗಳನ್ನೂ, ಹರಿತವಾದ ಮತ್ತು ಸ್ವಚ್ಛವಾದ ಮತ್ತು

ನಿರ್ಮಲವಾದ ಖಡ್ಗಗಳನ್ನೂ, ತಮ್ಮ ದೇಹದ ಮೇಲೆ ಪ್ರಕಾಶವನ್ನು ಚೆಲ್ಲುವಂತೆ ಹೊಳೆಯುವ ಗದೆಗಳನ್ನೂ ಧರಿಸಿ ಉಗ್ರರಾಗಿ ಕಾಣುವಂತೆ ನಿಂತರು.
ತೈಃ ಶಸ್ತ್ರೈರ್ಭಾನುಮದ್ಭಿಸ್ತೇ ದಿವ್ಯಾಭರಣಭೂಷಿತಾಃ |
ಭಾನುಮಂತಃ ಸುರಗಣಾಸ್ತಸ್ಥುರ್ವಿಗತಕಲ್ಮಷಾಃ ॥47॥
ಆ ಪ್ರಕಾಶಮಾನವಾದ ಶಸ್ತ್ರಗಳನ್ನು ಹಿಡಿದು, ದಿವ್ಯಾಭರಣಭೂಷಿತರಾದ ಆ ಕಾಂತಿಯುಕ್ತರಾದ, ದೋಷರಹಿತರಾದ ಸುರಗಣಗಳು, ಉದ್ಯುಕ್ತರಾಗಿ ನಿಂತರು.
ಅನುಪಮಬಲವೀರ್ಯತೇಜಸೋ
ಧೃತಮನಸಃ ಪರಿರಕ್ಷಣೇಽಮೃತಸ್ಯ |
ಅಸುರಪುರವಿದಾರಣಾಃ ಸುರಾಸ್ತೇ
ಜ್ವಲನಸಮಿದ್ಧವಪುಃಪ್ರಕಾಶಿನಃ ॥48॥
ಅನುಪಮವಾದ ಬಲವೀರ್ಯಪರಾಕ್ರಮವುಳ್ಳವರೂ, ಮನಸ್ಸಿನ ಸ್ಥೈರ್ಯವುಳ್ಳವರೂ, ಅಸುರರ ಪಟ್ಟಣವನ್ನು ನಾಶಗೊಳಿಸುವವರೂ, ಸಮಿದ್ಧವಾದ ಅಗ್ನಿಯಂತೆ ಪ್ರಕಾಶಿಸುವ ತೇಜಃ ಪ್ರಚುರವಾದ ದೇಹವುಳ್ಳವರೂ ಆದ ದೇವತೆಗಳು,ಅಮೃತದ ರಕ್ಷಣೆಗಾಗಿ ನಿಂತರು.
ಇತಿ ಸಮರಪರಂ ಸುರಾಸ್ಥಿತಂ
ಪರಿಘಸಹಸ್ರಶತೈಃ ಸಮಾಕುಲಮ್ |
ವಿಗಳಿತಮಿವ ಚಾಂಬರಾಂತರಂ
ತಪನಮರೀಚಿಭಿರಾರ್ಚಿತಂ ಬಭೌ ॥49॥
ಹೀಗೆ, ಸಹಸ್ರಾರು ಪರಿಘಗಳಿಂದ ಕೂಡಿದ, ಯುದ್ಧದಲ್ಲಿ ತಾತ್ಪರ್ಯವುಳ್ಳ, ದೇವತೆಗಳ ಸಮೂಹವು, ಆಕಾಶದಿಂದ ಕಳಚಿಬಿದ್ದ ಅಗ್ನಿಯ ಕಿರಣಗಳಿಂದ ಹೊಳೆಯುವ ತೇಜಸ್ಸಿನ ಸಮೂಹದಂತೆ ಕಂಗೊಳಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು. *****

ಇಪ್ಪತ್ತಾರನೆಯ ಅಧ್ಯಾಯ
(ಗರುಡನ ಉತ್ಪತ್ತಿಗೆ ಕಾರಣವನ್ನು ಕುರಿತು ಶೌನಕರ ಪ್ರಶ್ನೆ ಮತ್ತು ಸೂತರ ಉತ್ತರ.)
ಶೌನಕಃ
ಅಪರಾಧೋ ಮಹೇಂದ್ರಸ್ಯ ಕಃ ಪ್ರಮಾದಶ್ಚ ಸೂತಜ |
ತಪಸಾ ವಾಲಖಿಲ್ಯಾನಾಂ ಸಂಭೂತೋ ಗರುಡಃ ಕಥಮ್ ॥1॥
ಎಲೈ ಸೂತಪುತ್ರನೇ, ಮಹೇಂದ್ರನ ಪ್ರಮಾದ ಮತ್ತು ಅವನು ಮಾಡಿದ ಅಪರಾಧಗಳೇನು? ವಾಲಖಿಲ್ಯರ ತಪಸ್ಸಿನಿಂದ ಗರುಡನು ಹೇಗೆ ಜನಿಸಿದನು?
ಕಾಶ್ಯಪಸ್ಯ ದ್ವಿಜಾತೇಶ್ಚ ಕಥಂ ವೈ ಪಕ್ಷಿರಾಟ್ ಸುತಃ |
ಅಧೃಷ್ಯಃ ಸರ್ವಭೂತಾನಾಮವಧ್ಯಶ್ಚಾಭವತ್ ಕಥಮ್ ॥2॥
ಬ್ರಾಹ್ಮಣರಾದ ಕಾಶ್ಯಪರಿಗೆ ಪಕ್ಷಿರಾಜನು ಹೇಗೆ ಪುತ್ರನಾದನು? ಅವನು ಹೇಗೆ ಎಲ್ಲಾ ಪ್ರಾಣಿಗಳಿಂದಲೂ ಅಧೃಶ್ಯನೂ ಮತ್ತು ಅವಧ್ಯನೂ ಆದನು?
ಕಥಂ ಚ ಕಾಮರೂಪೀ ಸ ಕಾಮವೀರ್ಯಶ್ಚ ಖೇಚರಃ |
ಏತದಿಚ್ಛಾಮ್ಯಹಂ ಶ್ರೋತುಂ ಪುರಾಣೇ ಯದಿ ಪಠ್ಯತೇ ॥3॥
ಖೇಚರನಾದ ಗರುಡನು ಹೇಗೆ ಕಾಮರೂಪವುಳ್ಳವನೂ ಮತ್ತು ಕಾಮವೀರ್ಯವುಳ್ಳವನೂ ಆದನು? ಪುರಾಣಗಳಲ್ಲಿ ಈ ವಿಷಯವು ಹೇಳಲ್ಪಟ್ಟಿದ್ದರೆ, ನಾನು ಅದನ್ನು ತಿಳಿಯಲು ಇಚ್ಛಿಸುತ್ತೇನೆ.
ಸೂತಃ
ವಿಷಯೋಽಯಂ ಪುರಾಣಸ್ಯ ಯನ್ಮಾಂ ತ್ವಂ ಪರಿಪೃಚ್ಛಸಿ |
ಶೃಣು ಮೇ ವದತಃ ಸರ್ವಮೇತತ್ ಸಂಕ್ಷೇಪತೋ ದ್ವಿಜ ॥4॥
ಬ್ರಾಹ್ಮಣನಾದ ಶೌನಕನೇ, ನೀನು ಕೇಳುತ್ತಿರುವ ವಿಷಯವು ಪುರಾಣಗಳಲ್ಲಿ ಉಕ್ತವಾಗಿದೆ. ನಾನು ಎಲ್ಲವನ್ನೂ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು.
ಯಜತಃ ಪುತ್ರಕಾಮಸ್ಯ ಕಾಶ್ಯಪಸ್ಯ ಪ್ರಜಾಪತೇಃ |
ಸಾಹಾಯ್ಯಮೃಷಯೋ ದೇವಾ ಗಂಧರ್ವಾಶ್ಚ ದದುಃ ಕಿಲ ॥5॥
ಪ್ರಜಾಪತಿಗಳಾದ ಕಾಶ್ಯಪರು ಪುತ್ರಕಾಮನೆಯಿಂದ ಯಾಗವನ್ನು ಮಾಡುವಾಗ, ದೇವತೆಗಳೂ, ಗಂಧರ್ವರೂ ಮತ್ತು ಋಷಿಗಳೂ ಸಹಾಯವನ್ನು ಮಾಡಿದರಷ್ಟೆ.
ತತ್ರೇಧ್ಮಾನಯನೇ ಶಕ್ರೋ ನಿಯುಕ್ತಃ ಕಾಶ್ಯಪೇನ ಹಿ |

ಮುನಯೋ ವಾಲಖಿಲ್ಯಾಶ್ಚ ಯೇ ಚಾನ್ಯೇ ದೇವತಾಗಣಾಃ ॥6॥
ಆಗ ಕಾಶ್ಯಪರು ಇಂದ್ರನನ್ನೂ, ಉಳಿದ ದೇವತಾಗಣವನ್ನೂ ಮತ್ತು ವಾಲಖಿಲ್ಯಋಷಿಗಳನ್ನೂ ಇಧ್ಮವನ್ನು ತರಲು ಆದೇಶಿಸಿದರು.
ಶಕ್ರಸ್ತು ವೀರ್ಯಸದೃಶಮಿಧ್ಮಭಾರಂ ಗಿರಿಪ್ರಭಮ್ |
ಸಮುದ್ಯಮ್ಯಾನಯಾಮಾಸ ನಾತಿಕೃಚ್ಛ್ರಾದಿವ ಪ್ರಭುಃ ॥7॥
ಇಂದ್ರನಾದರೋ, ತನ್ನ ಪರಾಕ್ರಮಕ್ಕೆ ಸದೃಶವಾದ ಒಂದು ಪರ್ವತಪ್ರಮಾಣದ ಕಟ್ಟಿಗೆಗಳ ಭಾರವನ್ನು ಆಯಾಸ ಪಡದೆಯೇ ಎತ್ತಿ ತಂದನು.
ಅಥಾಪಶ್ಯದೃಷೀನ್ ಸರ್ವಾನ್ ಹ್ರಸ್ವಾನಂಗುಷ್ಠಮಾತ್ರಕಾನ್ |
ಪಾಲಾಶವ್ಯಂತಿಕಾಮೇಕಾಂ ವಹತಃ ಸಹಿತಾನ್ ಪಥಿ ॥8॥
ಆಗ ಅವನು ಒಂದು ಅಂಗುಷ್ಠದ ಮಾತ್ರವೇ ಎತ್ತರವಿದ್ದ ಅನೇಕ ಋಷಿಗಳು ಸೇರಿ ಒಂದು ಮುತ್ತುಗದ ಮರದ ಹೂವಿನ ದಂಟನ್ನು ತೆಗೆದುಕೊಂಡು ಬರುವುದನ್ನು ದಾರಿಯಲ್ಲಿ ನೋಡಿದನು.
ಪ್ರಲೀನಾನ್ ಸ್ವೇಷು ಚಾಂಗೇಷು ನಿರಾಹಾರಾಂಸ್ತಪೋಧನಾನ್ |
ಕ್ಲಿಶ್ಯಮಾನಾನ್ ಮೃದುಬಲಾನ್ ಗೋಷ್ಪದೇ ಸಂಪ್ಲುತೋದಕೇ ॥9॥
ಅವರು ತಮ್ಮ ಅಂಗಗಳಲ್ಲಿಯೇ ಲೀನವಾಗಿ ಹೋಗುವಂತಿದ್ದ ನಿರಾಹಾರರಾದ ಆ ತಪೋಧನರು ಬಹಳ ಅಲ್ಪಬಲವುಳ್ಳವರಾಗಿ ಒಂದು ಗೋವಿನ ಹೆಜ್ಜೆಯಷ್ಟು ಆಳದ ನೀರಿನಲ್ಲಿ ಬಹಳ ಕಷ್ಟಪಡುತ್ತಾ ಮುಂದೆ ಬರುತ್ತಿದ್ದರು.
ತಾನ್ ಸರ್ವಾನ್ ವಿಸ್ಮಯಾವಿಷ್ಟೋ ವೀರ್ಯಮತ್ತಃ ಪುರಂದರಃ |
ಅಪಹಸ್ಯಾಭ್ಯಗಾಚ್ಛೀಘ್ರಂ ಲಂಘಯಿತ್ವಾಽವಮತ್ಯ ಚ ॥10॥
ತನ್ನ ಪರಾಕ್ರಮದಿಂದ ಮತ್ತನಾದ ಪುರಂದರನು ಆಶ್ಚರ್ಯವನ್ನು ಹೊಂದಿದವನಾಗಿ, ಅವರೆಲ್ಲರನ್ನೂ ಅಪಹಾಸ ಮಾಡಿ, ಅವರನ್ನು ಅವಮಾನಗೊಳಿಸಿ, ಅವರನ್ನು ದಾಟಿ ಶೀಘ್ರವಾಗಿ ಬಂದನು.
ತೇ ತು ರೋಷಸಮಾವಿಷ್ಟಾ ಸುಭೃಶಂ ಜಾತಮನ್ಯವಃ |
ಆರೇಭಿರೇ ಮಹತ್ಕರ್ಮ ತದಾ ಶಕ್ರಭಯಂಕರಮ್ ॥11॥
ಆಗ ರೋಷಾವಿಷ್ಟರಾದ ಆ ಋಷಿಗಳೆಲ್ಲರೂ ಬಹಳ ಸಿಟ್ಟಿನಿಂದ ಕೂಡಿದವರಾಗಿ ಇಂದ್ರನಿಗೆ ಭಯವನ್ನುಂಟು ಮಾಡುವ ದೊಡ್ಡಕರ್ಮವನ್ನು ಆರಂಭಿಸಿದರು.
ಜುಹುವುಸ್ತೇ ಸುತಪಸೋ ವಿಧಿವಜ್ಜಾತವೇದಸಿ |
ಮಂತ್ರೈರುಚ್ಚಾವಚೈರ್ವಿಪ್ರಾ ಯೇನ ಕಾಮೇನ ತಚ್ಛೃಣು ॥12॥
ಎಲೈ ಬ್ರಾಹ್ಮಣರೇ, ಸಮಿದ್ಧವಾದ ಅಗ್ನಿಯಲ್ಲಿ ಶ್ರೇಷ್ಠವಾದ ಮತ್ತು ಕನಿಷ್ಠವಾದ ಮಂತ್ರಗಳಿಂದ ವಿಧಿಪೂರ್ವಕವಾಗಿ ಅವರು ಯಾವ ಕಾಮನೆಯಿಂದ ಹೋಮ ಮಾಡಿದರೆಂದು ಹೇಳುತ್ತೇನೆ ಕೇಳಿ.
ಕಾಮವೀರ್ಯಃ ಕಾಮವೇಗೋ ದೇವರಾಜಭಯಪ್ರದಃ |
ಇಂದ್ರೋಽನ್ಯಃ ಸರ್ವಭೂತಾನಾಂ ಭವೇದಿತಿ ಯತವ್ರತಾಃ ॥13॥
ಇಂದ್ರಾಚ್ಛತಗುಣೋ ವೀರ್ಯೇ ಶೌರ್ಯೇ ಚೈವ ಮನೋಜವಃ |
ತಪಸೋ ನಃ ಫಲೇನಾದ್ಯ ದಾರುಣಃ ಸಂಭವತ್ವಿತಿ ॥14॥
ಕಾಮವೀರ್ಯನೂ, ಕಾಮವೇಗವುಳ್ಳವನೂ, ದೇವರಾಜನಾದ ಇಂದ್ರನಿಗೆ ಸಮಾನವಾದ ಸಾಮರ್ಥ್ಯವುಳ್ಳವನೂ ಆದ ಎಲ್ಲಾಪ್ರಾಣಿಗಳಿಗೂ ನಾಯಕನಾದ ಇಂದ್ರನಿಗಿಂತ ನೂರುಪಟ್ಟು ಶೌರ್ಯ ಮತ್ತು ಬಲಗಳನ್ನು ಹೊಂದಿರುವ ಮನೋಜವವನ್ನುಳ್ಳ ಇನ್ನೊಬ್ಬ ಇಂದ್ರನು ನಮ್ಮ ತಪಸ್ಸಿನ ಬಲದಿಂದ ಜನಿಸಲಿ ಎಂದು ವ್ರತಧಾರಿಗಳಾದ ಅವರು ಸಂಕಲ್ಪವನ್ನು ಮಾಡಿದರು.
ತಚ್ಛ್ರುತ್ವಾ ಭೃಶಸಂವಿಗ್ನೋ ದೇವರಾಜಃ ಪುರಂದರಃ |
ಜಗಾಮ ಶರಣಂ ತತ್ರ ಕಾಶ್ಯಪಂ ಸಂಶಿತವ್ರತಮ್ ॥15॥
ಅದನ್ನು ಕೇಳಿದ ದೇವರಾಜನಾದ ಪುರಂದರನು ಬಹಳ ಉದ್ವೇಗಕ್ಕೆ ಒಳಗಾದವನಾಗಿ ಶ್ರೇಷ್ಠವ್ರತಧಾರಿಗಳಾದ ಕಾಶ್ಯಪರನ್ನು ಶರಣುಹೊಂದಿದನು.
ತಚ್ಛ್ರುತ್ವಾ ದೇವರಾಜಸ್ಯ ಕಾಶ್ಯಪೋಽಥ ಪ್ರಜಾಪತಿಃ |
ವಾಲಖಿಲ್ಯಾನುಪಾಗಮ್ಯ ಕರ್ಮಸಿದ್ಧಿಮಪೃಚ್ಛತ ॥16॥
ದೇವರಾಜನಾದ ಇಂದ್ರನ ಮೊರೆಯನ್ನು ಕೇಳಿ ಪ್ರಜಾಪತಿಗಳಾದ ಕಾಶ್ಯಪರು ವಾಲಖಿಲ್ಯರನ್ನು ಸಮೀಪಿಸಿ ಅವರ ಕರ್ಮಸಿದ್ಧಿಯನ್ನು ಕುರಿತು ಪ್ರಶ್ನೆಮಾಡಿದರು.
ಏವಮಸ್ತ್ವಿತಿ ತಂ ಚಾಪಿ ಪ್ರತ್ಯೂಚುಃ ಸತ್ಯವಾದಿನಃ |
ತಾನ್ ಕಾಶ್ಯಪ ಉವಾಚೇದಂ ಸಾಂತ್ವಪೂರ್ವಂ ಪ್ರಜಾಪತಿಃ ॥17॥
ಸತ್ಯವಾದಿಗಳಾದ ವಾಲಖಿಲ್ಯರು ನಿಮ್ಮ ಪ್ರಶ್ನೆಗಳಿಗೆ ನಾವು ಉತ್ತರಕೊಡುತ್ತೇವೆ ಎಂದು ಹೇಳಿದರು. ಆಗ ಪ್ರಜಾಪತಿಗಳಾದ ಕಾಶ್ಯಪರು ಸಮಾಧಾನಪೂರ್ವಕವಾಗಿ ಈ ಮಾತನ್ನು ಆಡಿದರು.
ಅಯಮಿಂದ್ರಸ್ತ್ರಿಭುವನೇ ನಿಯೋಗಾದ್ ಬ್ರಹ್ಮಣಃ ಕೃತಃ |
ಇಂದ್ರಾರ್ಥಂ ಚ ಭವಂತೋಽಪಿ ಯತ್ನವಂತಸ್ತಪೋಧನಾಃ ॥18॥
ಬ್ರಹ್ಮದೇವರ ಅಪ್ಪಣೆಯಂತೆ ಪುರಂದರನು ಮೂರು
ಲೋಕಾಧಿಪತಿಯಾದ ಇಂದ್ರನಾಗಿ ಮಾಡಲ್ಪಟ್ಟಿದ್ದಾನೆ. ಈಗ ತಪೋಧನರಾದ ನೀವೂ ಸಹ ಇನ್ನೊಬ್ಬ ಇಂದ್ರನ ಉತ್ಪತ್ತಿಯ ಸಲುವಾಗಿ ಪ್ರಯತ್ನವನ್ನು ಮಾಡುತ್ತಿದ್ದೀರಿ.

ನ ಮಿಥ್ಯಾಂ ಬ್ರಹ್ಮಣೋ ವಾಕ್ಯಂ ಕರ್ತುಮರ್ಹಥ ಸತ್ತಮಾಃ |
ಭವತಾಂ ಚ ನ ಮಿಥ್ಯಾಽಯಂ ಸಂಕಲ್ಪೋ ವಿಚಿಕೀರ್ಷಿತಃ ॥19॥
ಸಜ್ಜನರಲ್ಲಿ ಶ್ರೇಷ್ಠರಾದ ನೀವು ಬ್ರಹ್ಮದೇವರ ವಾಕ್ಯವನ್ನು ಸುಳ್ಳುಮಾಡಬಾರದು ಮತ್ತು ನಿಮ್ಮ ಸಂಕಲ್ಪವೂ ಸಹ ಸುಳ್ಳಾಗಬಾರದು.
ಭವತ್ವೇಷ ಪತತ್ರೀಣಾಮಿಂದ್ರೋಽತಿಬಲವಿಕ್ರಮಃ |
ಪ್ರಸಾದಃ ಕ್ರಿಯತಾಂ ಚೈವ ದೇವರಾಜಾಯ ಯಾಚತೇ ॥20॥
ಆದ್ದರಿಂದ ನೀವು ಉತ್ಪತ್ತಿಮಾಡಲು ಹೊರಟಿರುವವನು ಅಮಿತಬಲಪರಾಕ್ರಮವುಳ್ಳನಾಗಿ ಪಕ್ಷಿಗಳಿಗೆ ಇಂದ್ರನಾಗಲಿ.
ಯಾಚನೆಯನ್ನು ಮಾಡುತ್ತಿರುವ ದೇವರಾಜನಿಗೆ ನೀವು ಅನುಗ್ರಹವನ್ನು ಮಾಡಿ.
ಏವಮುಕ್ತಾಃ ಕಾಶ್ಯಪೇನ ವಾಲಖಿಲ್ಯಾಸ್ತಪಸ್ವಿನಃ |
ಪ್ರತ್ಯೂಚುರಭಿಸಂಪೂಜ್ಯ ಮುನಿಶ್ರೇಷ್ಠಂ ಪ್ರಜಾಪತಿಮ್ ॥21॥
ಕಾಶ್ಯಪರಿಂದ ಹೀಗೆ ಹೇಳಲ್ಪಟ್ಟ ತಪಸ್ವಿಗಳಾದ ವಾಲಖಿಲ್ಯರು ಮುನಿಶ್ರೇಷ್ಠರಾದ, ಪ್ರಜಾಪತಿಗಳಾದ ಕಾಶ್ಯಪರನ್ನು ಪೂಜಿಸಿ ಮಾತನಾಡಿದರು.
ವಾಲಖಿಲ್ಯಾಃ
ಇಂದ್ರಾರ್ಥೋಽಯಂ ಸಮಾರಂಭಃ ಸರ್ವೇಷಾಂ ನಃ ಪ್ರಜಾಪತೇ |
ಅಪತ್ಯಾರ್ಥಂ ಸಮಾರಂಭೋ ಭವತಶ್ಚಾಯಮೀಪ್ಸಿತಃ ॥22॥
ಎಲೈ ಪ್ರಜಾಪತಿಯೇ, ನಮ್ಮೆಲ್ಲರ ಈ ಪ್ರಯತ್ನವು ಇಂದ್ರನ ಉತ್ಪತ್ತಿಯ ಸಲುವಾಗಿದೆ. ಪುತ್ರನನ್ನು ಅಪೇಕ್ಷಿಸುತ್ತಿರುವ ನಿಮಗೂ ಸಹ ಈ ನಮ್ಮ ಪ್ರಯತ್ನವು ಅಭೀಷ್ಟವೇ ಆಗಿರುತ್ತದೆ.
ತದಿದಂ ಸಕಲಂ ಕರ್ಮ ತ್ವಯಾ ವೈ ಪ್ರತಿಗೃಹ್ಯತಾಮ್ |
ತಥಾ ಚೈವಂ ವಿಧತ್ಸ್ವಾತ್ರ ಯಥಾ ಶ್ರೇಯೋಽನುಪಶ್ಯಸಿ ॥23॥
ಆದ್ದರಿಂದ ಈ ಸಮಗ್ರವಾದ ಕರ್ಮದ ಜವಾಬ್ದಾರಿಯನ್ನು ನೀವೇ ತೆಗೆದುಕೊಳ್ಳಿ. ಹೇಗೆ ಮಾಡಿದರೆ ಎಲ್ಲರಿಗೂ ಶ್ರೇಯಸ್ಸು ಉಂಟಾಗುತ್ತದೆ ಎಂದು ನೀವು ಭಾವಿಸುತ್ತೀರೋ ಅದರಂತೆಯೇ ಕರ್ಮವನ್ನು ಮಾಡಿ.
ಏತಸ್ಮಿನ್ನೇವ ಕಾಲೇ ತು ದೇವೀ ದಾಕ್ಷಾಯಣೀ ಶುಭಾ |
ವಿನತಾ ನಾಮ ಕಲ್ಯಾಣೀ ಪುತ್ರಕಾಮಾ ಯಶಸ್ವಿನೀ ॥24॥
ತಪಸ್ತಪ್ತ್ವಾ ವ್ರತಪರಾ ಸ್ನಾತಾ ಪುಂಸವನೇ ಶುಚಿಃ |
ಉಪಚಕ್ರಾಮ ಭರ್ತಾರಂ ತಾಮುವಾಚಾಥ ಕಾಶ್ಯಪಃ ॥25॥
ಇದೇ ಸಮಯದಲ್ಲಿ ದಕ್ಷಪ್ರಜಾಪತಿಯ ಪುತ್ರಿಯಾದ, ಪರಿಶುದ್ಧಳೂ, ಮಂಗಳಸ್ವರೂಪಳೂ, ಕೀರ್ತಿವಂತಳೂ ಆದ ವಿನತಾದೇವಿಯು, ವ್ರತಗಳನ್ನು ಧರಿಸಿ ತಪಸ್ಸನ್ನು ಮಾಡಿ, ಋತುಸ್ನಾತಳಾಗಿ ಪತಿಗಳಾದ ಕಾಶ್ಯಪರನ್ನು ಸಮೀಪಿಸಿದಳು. ಕಾಶ್ಯಪರು ಅವಳನ್ನು ಕುರಿತು ಹೇಳಿದರು.
ಆರಂಭಃ ಸಫಲೋ ದೇವಿ ಭವಿತಾಽಯಂ ತವೇಪ್ಸಿತಃ |
ಜನಯಿಷ್ಯಸಿ ಪುತ್ರೌ ದ್ವೌ ವೀರೌ ತ್ರಿಭುವನೇಶ್ವರೌ ॥26॥
ದೇವಿ, ನಿನ್ನ ಈ ಪ್ರಯತ್ನವು ಸಫಲವಾಗುತ್ತದೆ. ನಿನಗೆ ಅಭೀಷ್ಟರಾದ ಮೂರುಲೋಕಕ್ಕೂ ಒಡೆಯರಾದ ಮತ್ತು ವೀರರಾದ ಇಬ್ಬರು ಕುಮಾರರನ್ನು ಪಡೆಯುವಿ.
ತಪಸಾ ವಾಲಖಿಲ್ಯಾನಾಂ ಮಮ ಸಂಕಲ್ಪಜೌ ತಥಾ |
ಭವಿಷ್ಯತೋ ಮಹಾಭಾಗೌ ಪುತ್ರೌ ತೇ ಲೋಕಪೂಜಿತೌ ॥27॥
ವಾಲಖಿಲ್ಯರ ತಪಸ್ಸಿನಿಂದಲೂ ಮತ್ತು ನನ್ನ ಸಂಕಲ್ಪದಿಂದಲೂ ಸಹ, ನಿನಗೆ ಲೋಕಪೂಜಿತರಾದ, ಮಹಾನುಭಾವರಾದ ಇಬ್ಬರು ಮಕ್ಕಳು ಜನಿಸುವರು.
ಉವಾಚ ಚೈನಾಂ ಭಗವಾನ್ ಮಾರೀಚಃ ಪುನರೇವ ಹ |
ಧಾರ್ಯತಾಮಪ್ರಮಾದೇನ ಗರ್ಭೋಽಯಂ ಸುಮಹೋದಯಃ ॥
ಮರೀಚಿಋಷಿಗಳ ಪುತ್ರರಾದ, ಪೂಜ್ಯರಾದ ಕಾಶ್ಯಪರು ಪುನಃ ಅವಳನ್ನು ಕುರಿತು, ಬಹಳಶ್ರೇಯಸ್ಸನ್ನು ಉಂಟುಮಾಡುವ ಈ ಗರ್ಭವನ್ನು ಎಚ್ಚರಿಕೆಯಿಂದ ಧರಿಸು ಎಂದು ಹೇಳಿದರು.
ಏತೌ ಸರ್ವಪತತ್ರೀಣಾಮಿಂದ್ರತ್ವಂ ಕಾರಯಿಷ್ಯತಃ |
ಲೋಕಸಂಭಾವಿತೌ ವೀರೌ ಕಾಮವೀರ್ಯೌ ವಿಹಂಗಮೌ ॥29॥
ಇವರಿಬ್ಬರೂ ಎಲ್ಲಾ ಪಕ್ಷಿಗಳ ಮೇಲೆಯೂ ಪ್ರಭುತ್ವವನ್ನು ಹೊಂದಿರುವವರು ಆಗುತ್ತಾರೆ. ಇವರಿಬ್ಬರೂ ಆಕಾಶದಲ್ಲಿ ಸಂಚರಿಸುತ್ತಾ ತಮಗೆ ಇಷ್ಟಬಂದಷ್ಟು ಬಲವನ್ನು ಹೊಂದಿದವರಾಗಿ, ವೀರರಾಗಿ ಎಲ್ಲರಿಂದಲೂ ಪೂಜಿಸಲ್ಪಡುತ್ತಾರೆ.
ಶತಕ್ರತುಮಥೋವಾಚ ಪ್ರೀಯಮಾಣಃ ಪ್ರಜಾಪತಿಃ |
ತ್ವತ್ಸಹಾಯೌ ಸಖಾಯೌ ತೌ ಖಗಾವೇತೌ ಭವಿಷ್ಯತಃ ॥30॥
ನೈತಾಭ್ಯಾಂ ಭವಿತಾ ದೋಷಃ ಸಕಾಶಾತ್ ತೇ ಪುರಂದರ |
ವ್ಯೇತು ತೇ ಶಕ್ರ ಸಂತಾಪಸ್ತ್ವಮೇವೇಂದ್ರೋ ಭವಿಷ್ಯಸಿ ॥31॥
ಅನಂತರ ಪ್ರಜಾಪತಿಗಳಾದ ಕಾಶ್ಯಪರು ಸಂತೋಷದಿಂದ ಇಂದ್ರನನ್ನು ಕುರಿತು, ಈ ಎರಡು ಪಕ್ಷಿಗಳೂ ನಿನ್ನ ಸ್ನೇಹಿತರಾಗುತ್ತಾರೆ. ಪುರಂದರನೇ, ನಿನಗೆ ಈ ಪಕ್ಷಿಗಳಿಂದ ಯಾವ ಭಯವೂ ಇಲ್ಲ. ನಿನ್ನ ಮನಸ್ಸಿನ ಸಂತಾಪವನ್ನು ತ್ಯಜಿಸು. ನೀನೇ ಇಂದ್ರನಾಗಿರುವಿ ಎಂದು ಹೇಳಿದರು.

ನ ಚಾಪ್ಯೇವಂ ತ್ವಯಾ ಭೂಯಃ ಕ್ಷೇಪ್ತವ್ಯಾ ಬ್ರಹ್ಮವಾದಿನಃ |
ನ ಚಾವಮಾನ್ಯಾ ದರ್ಪಾತ್ ತೇ ವಾಗ್ವಿಷಾ ಭೃಶಕೋಪನಾಃ ||32||
ನೀನು ಇನ್ನೊಮ್ಮೆ ಬ್ರಹ್ಮವಾದಿಗಳನ್ನು ನಿಂದನೆ ಮಾಡಬಾರದು ಅಥವಾ ದರ್ಪದಿಂದ ಹೀಗೆ ಅವಮಾನ ಮಾಡಬಾರದು. ಬೇಗ ಕೋಪಗೊಳ್ಳುವ ಬ್ರಾಹ್ಮಣರ ವಾಣಿಯಲ್ಲಿಯೇ ವಿಷವಿರುತ್ತದೆ.
ಸೂತಃ
ಏವಮುಕ್ತೋ ಜಗಾಮೇಂದ್ರೋ ನಿರ್ವಿಶಂಕಸ್ತ್ರಿವಿಷ್ಟಪಮ್ |
ವಿನತಾ ಚಾಪಿ ಸಿದ್ಧಾರ್ಥಾ ಬಭೂವ ಮುದಿತಾ ತದಾ ||33||
ಹೀಗೆ ಹೇಳಲ್ಪಟ್ಟ ಇಂದ್ರನು ನಿಶ್ಶಂಕೆಯಿಂದ ಸ್ವರ್ಗಕ್ಕೆ ಹಿಂದಿರುಗಿದನು. ವಿನತೆಯೂ ಸಹ, ತನ್ನ ಅಭೀಷ್ಟವನ್ನು ಪಡೆದವಳಾಗಿ ಸಂತುಷ್ಟಳಾದಳು.
ಜನಯಾಮಾಸ ಪುತ್ರೌ ದ್ವಾವರುಣಂ ಗರುಡಂ ತಥಾ |
ವಿಕಲಾಂಗೋಽರುಣಸ್ತತ್ರ ಆದಿತ್ಯಸ್ಯ ಪುರಸ್ಸರಃ ||34||
ಕಾಲಕ್ರಮದಲ್ಲಿ ಅವಳು ಅರುಣ ಮತ್ತು ಗರುಡನೆಂಬ ಎರಡು ಪಕ್ಷಿಗಳಿಗೆ ಜನ್ಮವಿತ್ತಳು. ವಿಕಲಾವಯವವುಳ್ಳ ಅರುಣನು ಸೂರ್ಯನಿಗೆ ಸಾರಥಿಯಾದನು.
ಪತತ್ರಿಣಾಂ ತು ಗರುಡ ಇಂದ್ರತ್ವೇನಾಭ್ಯಷಿಚ್ಯತ |
ತಸ್ಯೈತತ್ ಸುಮಹತ್ಕರ್ಮ ಶ್ರೂಯತಾಂ ಭೃಗುನಂದನ ||35||
ಗರುಡನು ಪಕ್ಷಿಗಳ ರಾಜನಾಗಿ ಅಭಿಷೇಕಮಾಡಲ್ಪಟ್ಟನು. ಎಲೈ ಭೃಗುನಂದನನೇ, ಅವನು ಮಾಡಿದ ಈ ಮಹಾಕಾರ್ಯವನ್ನು ಕೇಳು.

|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಷಡ್ವಿಂಶೋಽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಚತುರ್ದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.

## ಇಪ್ಪತ್ತೇಳನೆಯ ಅಧ್ಯಾಯ

(ಗರುಡನ ಜೊತೆಯಲ್ಲಿ ಯುದ್ಧಮಾಡಿದ ದೇವತೆಗಳ ಮತ್ತು ಅಮೃತರಕ್ಷಕರ ಪರಾಭವ.)
ಸೂತಃ
ತತಸ್ತಸ್ಮಾದ್ ದ್ವಿಜಶ್ರೇಷ್ಠಃ ಸಮುತ್ತೀರ್ಣೋ ಮಹಾಬಲಃ |
ಗರುತ್ಮಾನ್ ಪಕ್ಷಿರಾಟ್ ತೂರ್ಣಂ ಸಂಪ್ರಾಪ್ತೋ ವಿಬುಧಾನ್ ಪ್ರತಿ ||
ಮಹಾಬಲನಾದ ಪಕ್ಷಿರಾಜನಾದ ಗರುಡನು, ಆ ಪರ್ವತಶ್ರೇಣಿಗಳನ್ನು ದಾಟಿ ಶೀಘ್ರವಾಗಿ ದೇವತೆಗಳ ಸಮೀಪಕ್ಕೆ ಬಂದನು.
ತಂ ದೃಷ್ಟ್ವಾತಿಬಲಂ ಚೈವ ಪ್ರಾಕಂಪಂತ ಸುರಾಸ್ತತಃ |
ಪರಸ್ಪರಂ ಚ ಪ್ರತ್ಯಘ್ನನ್ ಸರ್ವಪ್ರಹರಣಾನ್ವಿತಾಃ ||2||
ಅತಿಬಲಿಷ್ಠನಾದ ಅವನನ್ನು ನೋಡಿ ದೇವತೆಗಳು ನಡುಗಿದರು. ಅನಂತರ ಎಲ್ಲಾ ಆಯುಧಗಳಿಂದಲೂ ಕೂಡಿದವರಾಗಿ ಗರುಡನ ಜೊತೆಯಲ್ಲಿ ಪರಸ್ಪರವಾಗಿ ಯುದ್ಧಮಾಡಿದರು.
ತತ್ರ ಚಾಸೀದಮೇಯಾತ್ಮಾ ವಿದ್ಯುದಗ್ನಿಸಮಪ್ರಭಃ |
ಭೌವನಃ ಸುಮಹಾವೀರ್ಯಃ ಸೋಮಸ್ಯ ಪರಿರಕ್ಷಿತಾ ||3||
ಅಲ್ಲಿ ವಿದ್ಯುತ್ ಮತ್ತು ಅಗ್ನಿಗಳ ಸಮಾನವಾದ ಕಾಂತಿಯುಳ್ಳ, ಅಪರಿಮಿತವಾದ ಬಲವನ್ನೂ ಮಹಾಪರಾಕ್ರಮವನ್ನು ಹೊಂದಿದ್ದ ವಿಶ್ವಕರ್ಮನು ಅಮೃತದ ರಕ್ಷಕನಾಗಿದ್ದನು.
ಸ ತೇನ ಪತಗೇಂದ್ರೇಣ ಪಕ್ಷತುಂಡನಖೈಃ ಕ್ಷತಃ |
ಮುಹೂರ್ತಮತುಳಂ ಯುದ್ಧಂ ಕೃತ್ವಾ ವಿನಿಹತೋ ಯುಧಿ ||4||
ಅವನು ಒಂದು ಮುಹೂರ್ತದ ಕಾಲ ಗರುಡನ ಜೊತೆ ಯುದ್ಧಮಾಡಿ ಗರುಡನ ರೆಕ್ಕೆ, ಕೊಕ್ಕು ಮತ್ತು ಉಗುರುಗಳ ಹೊಡೆತಕ್ಕೆ ಸಿಲುಕಿ, ಯುದ್ಧದಲ್ಲಿ ನೆಲದ ಮೇಲೆ ಬಿದ್ದನು.
ರಜಶ್ಚೋದ್ಧೂಯ ಸುಮಹತ್ ಪಕ್ಷವಾತೇನ ಖೇಚರಃ |
ಕೃತ್ವಾ ಲೋಕಾನ್ ನಿರಾಲೋಕಾನ್ ತೇನ ದೇವಾನವಾಕಿರತ್ ||5||
ಗಗನಚರನಾದ ಗರುಡನು ತನ್ನ ರೆಕ್ಕೆಗಳ ಗಾಳಿಯಿಂದ ಬಹಳವಾದ ಧೂಳನ್ನು ಎಬ್ಬಿಸಿ, ಎಲ್ಲ ಲೋಕಗಳನ್ನು ಕತ್ತಲೆಯಿಂದ ಮುಚ್ಚಿ ದೇವತೆಗಳ ಮೇಲೆ ಆ ರಜೋರಾಶಿಯನ್ನು ಸುರಿಸಿದನು.
ತೇನಾವಕೀರ್ಣಾ ರಜಸಾ ದೇವಾ ಮೋಹಮುಪಾವಿಶನ್ |
ನ ಚೈನಂ ದದೃಶುಶ್ಛನ್ನಾ ರಜಸಾಽಮೃತರಕ್ಷಿಣಃ ||6||
ಆ ರಜೋರಾಶಿಯಿಂದ ಆವೃತರಾದ ದೇವತೆಗಳು ಮೋಹಕ್ಕೆ ಒಳಗಾದರು. ದೇವತೆಗಳಾಗಲೀ, ಅಮೃತಕಲಶದ ಕಾವಲುಗಾರರಾಗಲೀ, ಧೂಳಿನಿಂದ ತುಂಬಿದ ಕಾರಣದಿಂದ ಗರುಡನನ್ನು ನೋಡಲು ಸಾಧ್ಯವಾಗಲಿಲ್ಲ.
ಏವಂ ಸಂಲೋಳಯಾಮಾಸ ಗರುಡಸ್ತ್ರಿದಶಾಲಯಾನ್ |

ಪಕ್ಷತುಂಡಪ್ರಹಾರೈಶ್ಚ  ದೇವಾನ್ ಸ ವಿರರಾದ ಹ  ॥7॥
ಹೀಗೆ ಗರುಡನು ಸ್ವರ್ಗವಾಸಿಗಳನ್ನು ಅಲ್ಲೋಲಕಲ್ಲೋಲ ಮಾಡಿದನು. ತನ್ನ ರೆಕ್ಕೆಗಳ ಹೊಡೆತ ಮತ್ತು ಕೊಕ್ಕಿನ ಪ್ರಹಾರಗಳಿಂದ ದೇವತೆಗಳನ್ನು ಸೀಳಿದನು.
ತತೋ ದೇವಃ ಸಹಸ್ರಾಕ್ಷಃ  ತೂರ್ಣಂ ವಾಯುಮಚೋದಯತ್ |
ಪ್ರಕ್ಷಿಪೇಮಾಂ ರಜೋವೃಷ್ಟಿಂ ತವೈತತ್ ಕರ್ಮ ಮಾರುತ        ॥8॥
ಆಗ ಸಹಸ್ರಾಕ್ಷನಾದ ಇಂದ್ರನು ಶೀಘ್ರವಾಗಿ ವಾಯುವನ್ನು ಸಮೀಪಿಸಿ, ಮಾರುತನೇ, ಈ ರಜೋರಾಶಿಯನ್ನು ದೂರಕ್ಕೆ ಎಸೆ. ಇದು ನಿನ್ನ ಕೆಲಸ ಎಂದು ಹೇಳಿದನು.
ಅಥ ವಾಯುರಪೋವಾಹ ತದ್ರಜಸ್ತರಸಾ ಬಲೀ |
ತತೋ ವಿತಿಮಿರೇ ಜಾತೇ ದೇವಾಃ ಶಕುನಿಮರ್ದಯನ್             ॥9॥
ಅನಂತರ ಬಲಿಷ್ಠನಾದ ವಾಯುವು ಶೀಘ್ರವಾಗಿ ಆ ರಜೋರಾಶಿಯನ್ನು ನಿವಾರಿಸಿದನು. ಆಗ ಪುನಃ ಬೆಳಕು ಉಂಟಾದ ಮೇಲೆ ದೇವತೆಗಳು ಗರುಡನ ಮೇಲೆ ಎರಗಿ ಅವನನ್ನು ಹಿಂಸಿಸಿದರು. ಆಗ, ಮೇಘದಂತೆ ಗಂಭೀರನಾದವುಳ್ಳ, ಬಲಿಷ್ಠನಾದ ಗರುಡನು ಉಚ್ಚಸ್ವರದಲ್ಲಿ ಗರ್ಜಿಸಿದನು.
ನನಾದ ಚೋಚ್ಚೈರ್ಬಲವಾನ್ ಮೇಘನಾದರವಃ ಖಗಃ |
ವಧ್ಯಮಾನಃ ಸುರಗಣೈಸ್ಸರ್ವಭೂತಾನಿ ಭೀಷಯನ್ |
ಉತ್ಪಪಾತ ಮಹಾವೀರ್ಯಃ ಪಕ್ಷಿರಾಟ್ ಪರವೀರಹಾ             ॥10॥
ಎಲ್ಲಾ ದೇವತೆಗಳಿಂದ ಪ್ರಹಾರಕ್ಕೆ ಒಳಗಾದ ಮಹಾಬಲನಾದ, ಶತ್ರುಸೂದನನಾದ ಗರುಡನು, ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟು ಮಾಡುತ್ತಾ, ಅಲ್ಲಿಂದ ಮೇಲಕ್ಕೆ ಹಾರಿದನು.
ತಮುಪೇತ್ಯಾಂತರಿಕ್ಷಸ್ಥಂ ದೇವಾನಾಮುಪರಿ ಸ್ಥಿತಮ್ |
ವರ್ಮಿಣೋ ವಿಬುಧಾಃ ಸರ್ವೇ ನಾನಾಶಸ್ತ್ರೈರವಾಕಿರನ್         ॥11॥
ಪಟ್ಟಸೈಃ ಪರ್ರೈಿಃ ಶೂಲೈರ್ಗದಾಭಿಶ್ಚ  ಸವಾಸವಾಃ |
ಕ್ಷುರಪ್ರೈರ್ಜ್ವಲಿತೈಶ್ಚಾಪಿ ಚಕ್ರೈರಾದಿತ್ಯರೂಪಿಭಿಃ   ॥12॥
ಅಂತರಿಕ್ಷಕ್ಕೆ ಹಾರಿ ದೇವತೆಗಳ ತಲೆಯ ಮೇಲೆ ನಿಂತ ಅವನನ್ನು, ಕವಚಗಳನ್ನು ಧರಿಸಿದ್ದ ದೇವತೆಗಳು, ಪಟ್ಟಿಸ, ಪರಿಘ, ಶೂಲ, ಗದಾ, ಚೆನ್ನಾಗಿ ಮಸೆದ ಚಕ್ರಗಳು, ಸೂರ್ಯನಂತೆ ಜ್ವಲಿಸುವ ಚಕ್ರಗಳು, ಮೊದಲಾದ ಅನೇಕ ಶಸ್ತ್ರಗಳಿಂದ ಅವನನ್ನು ಅರ್ದಿಸಿದರು. (ನಾನಾ ಶಸ್ತ್ರಗಳ ಮಳೆಯನ್ನು ಅವನ ಮೇಲೆ ಸುರಿಸಿದರು.)
ನಾನಾಶಸ್ತ್ರವಿಸರ್ಗೈಶ್ಚ ವಧ್ಯಮಾನಃ ಸಮಂತತಃ |
ಕುರ್ವನ್ ಸುತುಮುಲಂ ಯುದ್ಧಂ ಪಕ್ಷಿರಾಣ್ಣ  ಹ್ಯಕಂಪತ       ॥13॥
ಎಲ್ಲಾ ಕಡೆಯಿಂದಲೂ ಹೀಗೆ ಅನೇಕ ಶಸ್ತ್ರಗಳ ಪ್ರಹಾರಕ್ಕೆ ಒಳಗಾದ ಪಕ್ಷಿರಾಜನಾದ ಗರುಡನು, ಸ್ವಲ್ಪವೂ ಅಲುಗಾಡದೆ, ಘೋರವಾದ ಯುದ್ಧವನ್ನು ಮಾಡಿದನು.
ವಿನರ್ದನ್ನಿವ ಚಾಕಾಶೇ ವೈನತೇಯಃ ಪ್ರತಾಪವಾನ್ |
ಪಕ್ಷಾಭ್ಯಾಮುರಸಾ ಚೈವ ಸಮಂತಾದ್ ವ್ಯಾಕ್ಷಿಪತ್ ಸುರಾನ್    ॥14॥
ಪ್ರತಾಪಶಾಲಿಯಾದ ಗರುಡನು ಆಕಾಶದಲ್ಲಿ ಗರ್ಜಿಸುತ್ತಾ ಎಲ್ಲಾ ಕಡೆಗಳಲ್ಲಿಯೂ ಇದ್ದ ದೇವತೆಗಳನ್ನು ತನ್ನ ರೆಕ್ಕೆಯಿಂದಲೂ, ತನ್ನ ಎದೆಯಿಂದಲೂ ದೂರಕ್ಕೆ ಎಸೆದನು.
ತೇ ವಿಕ್ಷಿಪ್ತಾಸ್ತತೋ ದೇವಾಃ ಪ್ರಜಗ್ಮುರ್ಗರುಡಾರ್ದಿತಾಃ |
ನಖತುಂಡಹತಾಶ್ಚೈವ ಸುಸ್ರುವುಃ ಶೋಣಿತಂ ಬಹು             ॥15॥
ಹೀಗೆ ದೂರಕ್ಕೆ ಎಸೆಯಲ್ಪಟ್ಟ ದೇವತೆಗಳು, ನಖತುಂಡಪ್ರಹಾರಗಳಿಗೆ ಒಳಗಾದವರಾಗಿ, ಬಹಳವಾಗಿ ರಕ್ತವನ್ನು ಸುರಿಸುತ್ತಾ, ಅಲ್ಲಿಂದ ಹೊರಟುಹೋದರು.
ಸಾಧ್ಯಾಃ ಪ್ರಾಚೀಂ ಸಗಂಧರ್ವಾ ವಸವೋ ದಕ್ಷಿಣಾಂ ದಿಶಮ್ |
ಪ್ರಜಗ್ಮುಃ ಸಹಿತಾ ರುದ್ರೈಃ ಪತಗೇಂದ್ರಪ್ರಧರ್ಷಿತಾಃ |
ದಿಶಂ ಪ್ರತೀಚೀಮಾದಿತ್ಯಾ ನಾಸತ್ಯೌ ಚೋತ್ತರಾಂ ದಿಶಾಮ್      ॥16॥
ಸಾಧ್ಯರು ಮತ್ತು ಗಂಧರ್ವರು ಪೂರ್ವದಿಕ್ಕಿಗೆ ಹೊರಟುಹೋದರು. ವಸುಗಳು ದಕ್ಷಿಣದಿಕ್ಕಿಗೆ ಹೊರಟುಹೋದರು. ಗರುಡನಿಂದ ಪ್ರಧರ್ಷಿತರಾದ ಆದಿತ್ಯರು ರುದ್ರರ ಜೊತೆಯಲ್ಲಿ ಪಶ್ಚಿಮದಿಕ್ಕಿಗೆ ಹೊರಟುಹೋದರು. ಅಶ್ವಿನಿದೇವತೆಗಳು ಉತ್ತರದಿಕ್ಕಿಗೆ ಹೊರಟುಹೋದರು.
ಮುಹುರ್ಮುಹುಃ ಪ್ರೇಕ್ಷಮಾಣಾ ಯುದ್ಧ್ಯಮಾನಮನೇಕಶಃ       ॥17॥
ಹೀಗೆ ಹೋದವರು ಇನ್ನೂ ಯುದ್ಧಮಾಡುವವರನ್ನು ತಿರುತಿರುಗಿ ನೋಡುತ್ತಾ, ತಮ್ಮ ದಾರಿಯಲ್ಲಿ ತಾವು ಹೊರಟರು.
ಅಶ್ವಕ್ರಂದೇನ ವೀರೇಣ ರೇಣುಕೇನ ಚ ಪಕ್ಷಿಣಾ  |
ಉಲೂಕಶ್ವಸನಾಭ್ಯಾಂ ಚ ನಿಮೇಷೇಣ ಚ ಪಕ್ಷಿಣಾ             ॥18॥
ಕಥನೇನ ಚ ಶೂರೇಣ ತಪನೇನ ಚ ಖೇಚರಃ |
ಪುರುಜೇನ ಚ ಸಂಯುದ್ಧಂ ಚಕಾರ ಪ್ರಹಿಲೇನ ಚ  ॥19॥
ತಾನ್ ಪಕ್ಷನಖತುಂಡಾಗ್ರೈಃ ರರಾದ ವಿನತಾಸುತಃ |
ಯುಗಾಂತಕಾಲೇ ಸಂಕ್ರುದ್ಧಃ ಪಿನಾಕೀವ ಮಹಾಬಲಃ             ॥20॥

ಅಮೃತರಕ್ಷಕರಾದ ವೀರರಾದ ಅಶ್ವಕ್ರುಂದ, ರೇಣುಕ, ಉಲೂಕ, ಶ್ವಸನ, ನಿಮೇಷ, ಕಥನ, ಶೂರ, ತಪನ, ಪುರುಜ, ಪುಲಿಹ, ಈ ಎಲ್ಲಾ ಪಕ್ಷಿಗಳ ಜೊತೆಯಲ್ಲಿಯೂ ಯುದ್ಧಮಾಡಿ, ಯುಗಾಂತಕಾಲದಲ್ಲಿ ಕೋಪಗೊಂಡ ರುದ್ರನಂತೆ ಇದ್ದ, ಮಹಾಬಲನಾದ, ವಿನತೆಯ ಪುತ್ರನಾದ ಗರುಡನು ಅವರೆಲ್ಲರನ್ನೂ ತನ್ನ ಪಕ್ಷ, ನಖತುಂಡಗಳಿಂದ ಸೀಳಿದನು.
ಮಹಾವೀರ್ಯಾ ಮಹೋತ್ಸಾಹಾಸ್ತೇನ ತೇ ಬಹುಧಾ ಕ್ಷತಾಃ |
ರೇಜುರಭ್ರಘನಪ್ರಖ್ಯಾ ರುಧಿರೌಘಪ್ರವರ್ಷಿಣಃ ||21||
ಮಹಾಬಲವುಳ್ಳವರೂ, ಮಹಾಉತ್ಸಾಹವುಳ್ಳವರೂ ಆದ ಅವರೆಲ್ಲರೂ, ಗರುಡನಿಂದ ಬಹಳ ಗಾಯಗೊಂಡವರಾಗಿ ರಕ್ತವನ್ನು ಸುರಿಸುತ್ತಾ, ಮೋಡಗಳ ಪಂಕ್ತಿಯಂತೆ ಕಂಗೊಳಿಸಿದರು.
ತಾನ್ ಕೃತ್ವಾ ಪತಗಶ್ರೇಷ್ಠಃ ಸರ್ವಾನುತ್ಕ್ರಾಂತಜೀವಿತಾನ್ |
ಅತಿಕ್ರಾಂತೋಽಮೃತಸ್ಯಾರ್ಥೇ ಸರ್ವತೋಽಗ್ನಿಮಪಶ್ಯತ ||22||
ಆವೃಣ್ವಾನಂ ಮಹಾಜ್ವಾಲಮರ್ಚಿರ್ಭಿಃ ಸರ್ವತೋ ದಿಶಮ್ |
ದಹಂತಮಿವ ದೀಪ್ತಾಂಶುಂ ಘೋರವಾಯುಸಮೀರಿತಮ್ ||23||
ಪಕ್ಷಿಶ್ರೇಷ್ಠನಾದ ಗರುಡನು ಅವರೆಲ್ಲರನ್ನೂ ಸಂಹರಿಸಿ, ಅವರನ್ನು ದಾಟಿ, ಅಮೃತದ ಕಲಶದ ಬಳಿಗೆ ಹೋಗುತ್ತಾ, ಮಹಾಜ್ವಾಲೆಗಳಿಂದ ಎಲ್ಲಾ ದಿಕ್ಕುಗಳಲ್ಲೂ ವ್ಯಾಪಿಸಿದ ಉರಿಯುತ್ತಿರುವ ಸೂರ್ಯನಂತೆ ತೋರುವ, ಘೋರವಾಯುವಿನಿಂದ ಉದ್ದೀಪ್ತವಾದ ಅಗ್ನಿಯನ್ನು ನೋಡಿದನು.
ತತೋ ನವತ್ಯಾ ನವತಿಂ ಮುಖಾನಾಂ
ಕೃತ್ವಾ ತರಸ್ವೀ ಗರುಡೋ ಮಹಾತ್ಮಾ |
ನದೀಃ ಸಮಾಪೀಯ ಮುಖೈಸ್ತತಸ್ತೈಃ
ಸ ಶೀಘ್ರಮಾಗತ್ಯ ಪುನರ್ಜವೇನ ||24||
ಜ್ವಲಂತಮಗ್ನಿಂ ತಮಮಿತ್ರತಾಪನಃ
ಸಮಾವೃಣೋತ್ ಪತ್ರರಥೋ ನದೀಭಿಃ |
ತತಃ ಸ ಚಕ್ರೇ ವಪುರನ್ಯದಲ್ಪಂ
ಪ್ರವೇಷ್ಟುಕಾಮೋಽಗ್ನಿಮಭಿಪ್ರಶಾಮ್ಯ ||25||
ಆಗ, ಮಹಾತ್ಮನೂ, ವೇಗಶಾಲಿಯೂ ಆದ ಗರುಡನು ದೊಡ್ಡರೂಪವನ್ನು ಧರಿಸಿ, ಎಂಟುಸಾವಿರದ ನೂರು ಮುಖಗಳನ್ನು ಮಾಡಿಕೊಂಡು, ಆ ಎಲ್ಲಾ ಮುಖಗಳಲ್ಲಿಯೂ ನದಿಯ ನೀರನ್ನು ತುಂಬಿಕೊಂಡು, ಶೀಘ್ರವಾಗಿ ಹಿಂದಕ್ಕೆ ಬಂದು ಆ ನದಿಯ ನೀರಿನಿಂದ ಅಗ್ನಿಯನ್ನು ಶಮನಗೊಳಿಸಿದನು. ಶತ್ರುತಾಪನನಾದ, ಪತ್ರರಥನಾದ ಗರುಡನು, ಅಗ್ನಿಯನ್ನು ಶಮನಗೊಳಿಸಿ, ಅಮೃತದ ಕಲಶದ ಬಳಿಗೆ ಹೋಗಲು ಒಂದು ಅಲ್ಪವಾದ ರೂಪವನ್ನು ಧರಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತವಿಂಶೋಽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಪಂಚದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
*****
ಇಪ್ಪತ್ತೆಂಟನೆಯ ಅಧ್ಯಾಯ
(ಯಂತ್ರವನ್ನು ಭೇದಿಸಿ ಗರುಡನಿಂದ ಅಮೃತಹರಣ. ವಿಷ್ಣು ಗರುಡರ ಸಂವಾದ, ಗರುಡನಲ್ಲಿ ವಜ್ರದ ವೈಫಲ್ಯ.)
ಸೂತಃ
ಜಾಂಬೂನದಮಯೋ ಭೂತ್ವಾ ಮರೀಚಿವಿಕಚೋಜ್ಜ್ವಲಃ |
ಸ ಚಕ್ರಂ ಕ್ಷುರಪರ್ಯಂತಮಪಶ್ಯದಮೃತಾಂತಿಕೇ ||1||
ಗರುಡನು ಕಿರಣಗಳ ಸಮೂಹದಿಂದ ಕಂಗೊಳಿಸುವ ಸುವರ್ಣಮಯವಾದ ಒಂದು ಸಣ್ಣರೂಪವನ್ನು ತಳೆದು ಅಮೃತದ ಸಮೀಪದಲ್ಲಿ ಕತ್ತಿಯ ಅಲುಗಿನಂತೆ ಹರಿತವಾದ ಅಂಚುಗಳನ್ನು ಹೊಂದಿರುವ ಒಂದು ಚಕ್ರವನ್ನು ನೋಡಿದನು.
ಪರಿಭ್ರಮಂತಮನಿಶಂ ತೀಕ್ಷ್ಣಧಾರಮಯಸ್ಮಯಮ್ |
ಜ್ವಲನಾರ್ಕಪ್ರಭಂ ಘೋರಂ ಚ್ಛೇದನಂ ಸೋಮಹಾರಿಣಾಮ್ ||2||
ಘೋರರೂಪಂ ತದತ್ಯರ್ಥಂ ಯಂತ್ರಂ ದೇವೈಃ ಸುನಿರ್ಮಿತಮ್ |
ತಸ್ಯಾಂತರಂ ಸ ದೃಷ್ಟ್ವೈವ ಪರ್ಯವರ್ತತ ಖೇಚರಃ ||3||
ತೀಕ್ಷ್ಣಧಾರೆಯುಳ್ಳ, ಕಬ್ಬಿಣದಿಂದ ಮಾಡಲ್ಪಟ್ಟ, ಯಾವಾಗಲೂ ಸುತ್ತುತ್ತಿರುವ, ಅಗ್ನಿಸೂರ್ಯರ ತೇಜಸ್ಸನ್ನು ಹೊಂದಿದ, ಘೋರವಾದ, ಅಮೃತವನ್ನು ಕದಿಯಲು ಪ್ರಯತ್ನಿಸಿದವರನ್ನು ಕತ್ತರಿಸುವ, ಘೋರರೂಪವಾದ, ದೇವತೆಗಳಿಂದ ನಿರ್ಮಿಸಿ ಸ್ಥಾಪಿಸಲ್ಪಟ್ಟ ಆ ಯಂತ್ರವನ್ನು ನೋಡಿ, ಅಲ್ಲಿ ಅವಕಾಶವನ್ನು ನೋಡುವ ದೃಷ್ಟಿಯಿಂದಲೇ ಆ ಚಕ್ರದ ಸುತ್ತಲೂ ಸಂಚರಿಸಿದನು.
ಪ್ರವಿವೇಶ ಬಲಾತ್ ಪಕ್ಷೀ ವಾರಿವೇಗ ಇವಾರ್ಣವಃ |
ಅರಾಂತರೇಣಾಭ್ಯಪತತ್ ಸಂಕ್ಷಿಪ್ಯಾಂಗಂ ಕ್ಷಣೇನ ಹ ||4||
ಜಲಪ್ರವಾಹವೇಗವು ಸಮುದ್ರವನ್ನು ಪ್ರವೇಶಿಸುವಂತೆ, ವೇಗ ಮತ್ತು ಬಲಗಳಿಂದ ಕೂಡಿದವನಾಗಿ ತನ್ನ ಶರೀರವನ್ನು ಇನ್ನೂ ಕುಗ್ಗಿಸಿ ಗರುಡನು ಒಂದು ಕ್ಷಣದಲ್ಲಿ ಆ ತಿರುಗುತ್ತಿದ್ದ ಚಕ್ರದ ಅರಗಳ ಮಧ್ಯದಲ್ಲಿ ಪ್ರವೇಶಿಸಿದನು.
ಅಧಶ್ಚಕ್ರಸ್ಯ ಚೈವಾತ್ರ ದೀಪ್ತಾನಲಸಮದ್ಯುತೀ |
ವಿದ್ಯುಜ್ಜಿಹ್ವೌ ಮಹಾಕಾಯೌ ದೀಪ್ತಾಸ್ಯೌ ದೀಪ್ತಲೋಚನೌ ||5||

ಚಕ್ಷುರ್ವಿಷೌ ಮಹಾವೀರ್ಯೌ ನಿತ್ಯಂ ಕ್ರುದ್ಧೌ ತರಸ್ವಿನೌ |
ರಕ್ಷಾರ್ಥಮೇವಾಮೃತಸ್ಯ ದದರ್ಶ ಭುಜಗೋತ್ತಮೌ ॥6॥
ಅವನು ಹಾಗೆ ಪ್ರವೇಶಿಸಿ, ಚಕ್ರದ ಕೆಳಗಿದ್ದ, ಉರಿಯುವ ಅಗ್ನಿಯ ಕಾಂತಿಯನ್ನು ಹೊಂದಿದ್ದ, ವಿದ್ಯುತ್ತಿನಂತಹ ನಾಲಿಗೆಗಳನ್ನು ಹೊಂದಿದ್ದ, ಉರಿಯುವ ಕಣ್ಣುಗಳನ್ನೂ ಮತ್ತು ಮುಖವನ್ನೂ ಹೊಂದಿ, ಕಣ್ಣಿನಲ್ಲಿಯೇ ವಿಷವನ್ನು ಹೊಂದಿದ್ದ, ಮಹಾಬಲವುಳ್ಳ, ಯಾವಾಗಲೂ ಸಂಕ್ರುದ್ಧವಾಗಿರುವ, ವೇಗದಿಂದ ಕೂಡಿರುವ, ಅಮೃತಕಲಶದ ರಕ್ಷಣೆಯನ್ನು ಮಾಡುತ್ತಿರುವ, ಎರಡು ಶ್ರೇಷ್ಠವಾದ ಸರ್ಪಗಳನ್ನು ನೋಡಿದನು.
ಸದಾ ಸಂರಬ್ಧನಯನೌ ಸದಾ ಚಾನಿಮಿಷೇಕ್ಷಣೌ |
ತಯೋರೇಕೋಽಪಿ ಯಂ ಪಶ್ಯೇತ್ ಸ ತೂರ್ಣಂ ಭಸ್ಮಸಾದ್ ಭವೇತ್ ॥
ಅವು ಯಾವಾಗಲೂ ಕೋಪದಿಂದ ಕೂಡಿದ ನಯನವುಳ್ಳವುಗಳಾಗಿ, ಎಂದೂ ಕಣ್ಣುಗಳನ್ನು ಮುಚ್ಚದೆ ನೋಡುತ್ತಿದ್ದವು. ಅವುಗಳಲ್ಲಿ ಒಂದು ಸರ್ಪವನ್ನು ನೋಡಿದ ಮನುಷ್ಯನೂ, ತಕ್ಷಣವೇ ಭಸ್ಮವಾಗುತ್ತಾನೆ.
ತಯೋಶ್ಚಕ್ಷೂಂಷಿ ರಜಸಾ ಸುಪರ್ಣಸ್ತೂರ್ಣಮಾವೃಣೋತ್ |
ಅದೃಷ್ಟಪೂರ್ವಸ್ತೌ ಜಾಪಿ ಸರ್ವತಃ ಪರ್ಯಕಾಲಯತ್ ॥8॥
ಹಿಂದೆ ಎಂದೂ ನೋಡದಿದ್ದ, ಆ ಸರ್ಪಗಳನ್ನು ನೋಡಿ ಗರುಡನು ಧೂಳಿನಿಂದ ಅವುಗಳ ಕಣ್ಣುಗಳನ್ನು ಮುಚ್ಚಿ ಎಲ್ಲಾ ಕಡೆಗಳಲ್ಲಿಯೂ ಅವುಗಳನ್ನು ಘಾಸಿಗೊಳಿಸಿದನು.
ತಯೋರಂಗೇ ಸಮಾಕ್ರಮ್ಯ ವೈನತೇಯೋಽಂತರಿಕ್ಷಗಃ |
ಆಚ್ಛಿನತ್ ತರಸಾ ಮಧ್ಯೇ ಸೋಮಮಭ್ಯದ್ರವತ್ ತತಃ ॥9॥
ಅಂತರಿಕ್ಷಚಾರಿಯಾದ ಗರುಡನು ಅವುಗಳ ಶರೀರದ ಮೇಲೆ ಕುಳಿತು ತನ್ನ ಕೊಕ್ಕಿನಿಂದ ಮಧ್ಯಭಾಗವನ್ನು ಸೀಳಿ, ಅಮೃತಕಲಶದ ಕಡೆಗೆ ಧಾವಿಸಿದನು.
ಸಮುತ್ಪಾಟ್ಯಾಮೃತಂ ತತ್ತು ವೈನತೇಯಸ್ತತೋ ಬಲೀ |
ಉತ್ಪಪಾತ ಜವೇನೈವ ಯಂತ್ರಮುನ್ಮಥ್ಯ ವೀರ್ಯವಾನ್ ॥10॥
ಬಲಿಷ್ಠನಾದ ವೈನತೇಯನು ಅಮೃತಕಲಶವನ್ನು ಅಲ್ಲಿಂದ ಎತ್ತಿ, ಯಂತ್ರವನ್ನು ನಾಶಗೊಳಿಸಿ, ಪರಾಕ್ರಮಶಾಲಿಯಾದ ಅವನು ವೇಗದಿಂದ ಅಂತರಿಕ್ಷಕ್ಕೆ ಹಾರಿದನು.
ಅಪೀತ್ವೈವಾಮೃತಂ ಪಕ್ಷೀ ಪರಿಗೃಹ್ಯಾಶು ವೀರ್ಯವಾನ್ |
ಆಗಚ್ಛದಪರಿಶ್ರಾಂತ ಆಚ್ಛಾದ್ಯಾರ್ಕಪ್ರಭಾಂ ಖಗಃ ॥11॥
ಗಗನಚಾರಿಯಾದ ಮತ್ತು ಪರಾಕ್ರಮಶಾಲಿಯಾದ ಗರುಡನು, ಅಮೃತದ ಕಲಶವನ್ನು ತೆಗೆದುಕೊಂಡು ಅಮೃತವನ್ನು ಪಾನಮಾಡದೆಯೇ, ಸೂರ್ಯನ ಕಾಂತಿಯನ್ನು ಆಚ್ಛಾದಿಸಿ, ಯಾವ ಶ್ರಮವಿಲ್ಲದೆ, ಮುಂದೆ ಹೊರಟನು.
ವಿಷ್ಣುನಾ ಚ ತದಾಕಾಶೇ ವೈನತೇಯಃ ಸಮೇಯಿವಾನ್ |
ತಸ್ಯ ನಾರಾಯಣಸ್ತುಷ್ಟಸ್ತೇನಾತುಲ್ಯೇನ ಕರ್ಮಣಾ ॥12॥
ಹಾಗೆ ಹೊರಟ ಗರುಡನು ಆಕಾಶದಲ್ಲಿ ವಿಷ್ಣುವನ್ನು ಸಂಧಿಸಿದನು. ನಾರಾಯಣನಾದರೋ ಅವನ ಅಸದೃಶಕರ್ಮದಿಂದ ಅವನಿಗೆ ಸಂತುಷ್ಟನಾದನು.
ತಮುವಾಚಾವ್ಯಯೋ ದೇವೋ ವರದೋಽಸ್ಮೀತಿ ಖೇಚರಮ್ |
ಸ ವವ್ರೇ ತವ ತಿಷ್ಠೇಯಮುಪರೀತ್ಯಂತರಿಕ್ಷಗಃ ॥13॥
ಅವ್ಯಯನಾದ ನಾರಾಯಣನು ಗರುಡನನ್ನು ಕುರಿತು, ನಾನು ವರವನ್ನು ಕೊಡುತ್ತೇನೆ, ಕೇಳು ಎಂದು ಹೇಳಿದನು.
ಅಂತರಿಕ್ಷಚಾರಿಯಾದ ಆ ಗರುಡನು, ನಾನು ನಿನ್ನ ಶಿರಸ್ಸಿನ ಮೇಲೆ ಇರುತ್ತೇನೆ ಎಂದು ವರವನ್ನು ಕೇಳಿದನು.
ವಿಷ್ಣುವಿನ ರಥದ ಧ್ವಜದಲ್ಲಿ ಮೇಲ್ಭಾಗದಲ್ಲಿ ಗರುಡನು ಇರುವುದರಿಂದ ವಿಷ್ಣುವಿನ ಶಿರಸ್ಸಿಗಿಂತಲೂ ಎತ್ತರದ ಪ್ರದೇಶದಲ್ಲಿ ಇದ್ದಂತಾಗುತ್ತದೆ ಎಂದು ಅಭಿಪ್ರಾಯ.
ಉವಾಚ ಚೈನಂ ಭೂಯೋಽಪಿ ನಾರಾಯಣಮಿದಂ ವಚಃ |
ಅಜರಶ್ಚಾಮೃತಶ್ಚ ಸ್ಯಾಮಮೃತೇನ ವಿನಾಽಪ್ಯಹಮ್ ॥14॥
ಪುನಃ ನಾರಾಯಣನನ್ನು ಕುರಿತು, ನಾನು ಅಮೃತಪಾನ ಮಾಡದೆಯೂ ಜರಾಮರಣರಹಿತನಾಗಬೇಕು ಎಂದು ಹೇಳಿದನು (ವರವನ್ನು ಕೇಳಿದನು).
ಏವಮಸ್ತ್ವಿತಿ ತಂ ವಿಷ್ಣುರುವಾಚ ವಿನತಾಸುತಮ್ |
ಪ್ರತಿಗೃಹ್ಯ ವರೌ ತೌ ತು ಗರುಡೋ ವಿಷ್ಣುಮಬ್ರವೀತ್ ॥15॥
ವಿಷ್ಣುವು ವಿನತೆಯ ಪುತ್ರನಾದ ಗರುಡನನ್ನು ಕುರಿತು ``ಹಾಗೆಯೇ ಆಗಲಿ'' ಎಂದು ಹೇಳಿದನು. ಗರುಡನು ಆ ಎರಡು ವರಗಳನ್ನು ಸ್ವೀಕರಿಸಿ ವಿಷ್ಣುವನ್ನು ಕುರಿತು ಹೇಳಿದನು.
ಭವತೋಽಪಿ ವರಂ ದದ್ಮಿ ವೃಣೋತು ಭಗವಾನಪಿ |
ತಂ ವವ್ರೇ ವಾಹನಂ ಕೃಷ್ಣೋ ಗರುತ್ಮಂತಂ ಮಹಾಬಲಮ್ ॥16॥
ನಿನಗೂ ವರವನ್ನು ಕೊಡುತ್ತೇನೆ. ಭಗವಂತನಾದ ನೀನೂ ವರವನ್ನು ಕೇಳು ಎಂದು ಹೇಳಲು, ಕೃಷ್ಣನು ಮಹಾಬಲನಾದ ಗರುಡನನ್ನು ನೀನು ನನ್ನ ವಾಹನವಾಗಿರು ಎಂದು ವರವನ್ನು ಕೇಳಿದನು.
ಧ್ವಜಂ ಚ ಚಕ್ರೇ ಭಗವಾನ್ ಉಪರಿ ಸ್ಥಾಸ್ಯಸೀತಿ ತಮ್ |
ತಥೇತ್ಯೇವಾಬ್ರವೀತ್ ಪಕ್ಷೀ ಭಗವಂತಂ ಸನಾತನಮ್ ॥17॥

ಭಗವಂತನು ``ಅಷ್ಟೇ ಅಲ್ಲದೆ, ನೀನು ನನ್ನ ಧ್ವಜದಲ್ಲಿಯೂ ಇರಬೇಕು. ಆಗ ನನ್ನ ಮೇಲೆ ಇರುತ್ತಿಯೆ'' ಎಂದು ಹೇಳಿದನು. ಗರುಡನು ಸನಾತನನಾದ ಭಗವಂತನನ್ನು ಕುರಿತು ``ಹಾಗೆಯೇ ಆಗಲಿ'' ಎಂದು ಹೇಳಿದನು.
ಅನುಗಮ್ಯ ಖಗಂ ತ್ವಿಂದ್ರೋ ವಜ್ರೇಣಾಂಗೇ ನ್ಯಪಾತಯತ್ |
ವಿಹಂಗಮಂ ಸುರಾನ್ ಜಿತ್ವಾ ಹರಂತಮಮೃತಂ ಬಲಾತ್ ॥18॥
ಆ ವೇಳೆಗೆ ದೇವತೆಗಳನ್ನು ಜಯಿಸಿ ತನ್ನ ಬಲದಿಂದ ಅಮೃತವನ್ನು ಅಪಹರಿಸಿಕೊಂಡು ಹೋಗುತ್ತಿದ್ದಂತಹ, ಗರುಡನನ್ನು ಹಿಂಬಾಲಿಸಿ ಇಂದ್ರನು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು.
ತಮುವಾಚೇಂದ್ರಮಾಲೋಕ್ಯ ಗರುಡಃ ಪತತಾಂ ವರಃ |
ಪ್ರಹಸನ್ ಶ್ಲಕ್ಷ್ಣಯಾ ವಾಚಾ ತಥಾ ವಜ್ರಸಮಾಹತಃ ॥19॥
ವಜ್ರದಿಂದ ಹೀಗೆ ಹೊಡೆಯಲ್ಪಟ್ಟ ಪಕ್ಷಿಶ್ರೇಷ್ಠನಾದ ಗರುಡನು, ಇಂದ್ರನನ್ನು ನೋಡಿ ನಗುತ್ತಾ ಮಧುರವಾದ ಮಾತುಗಳಿಂದ ಅವನನ್ನು ಕುರಿತು ಹೇಳಿದನು.
ಋಷೇರ್ಮಾನಂ ಕರಿಷ್ಯಾಮಿ ವಜ್ರಂ ಯಸ್ಯಾಸ್ಥಿಸಂಭವಮ್ |
ವಜ್ರಸ್ಯ ಚ ಕರಿಷ್ಯಾಮಿ ತವ ಚೈವ ಶತಕ್ರತೋ ॥20॥
ಶತಕ್ರತುವೇ, ನಾನು ಯಾವ ದಧೀಚಿಋಷಿಗಳ ಅಸ್ಥಿಯಿಂದ ವಜ್ರಾಯುಧವು ನಿರ್ಮಿತವಾಗಿದೆಯೋ, ಆ ಋಷಿಗಳಿಗೂ, ವಜ್ರಾಯುಧಕ್ಕೂ ಮತ್ತು ನಿನಗೂ ಗೌರವವನ್ನು ಕೊಡುತ್ತೇನೆ.
ಏತತ್ ಪತ್ರಂ ತ್ಯಜಾಮ್ಯೇಕಂ ಯಸ್ಯಾಂತಂ ನೋಪಲಪ್ಸ್ಯಸೇ |
ನ ಹಿ ವಜ್ರನಿಪಾತೇನ ವೇದನಾ ಮೇಽಸ್ತಿ ಕಾಚನ ॥21॥
ಎಲೈ ಶತಕ್ರತುವೇ, ನನ್ನ ಒಂದು ಗರಿಯನ್ನು ನಾನೇ ಕೆಳಗೆ ಉದುರಿಸುತ್ತೇನೆ. ಆ ಗರಿಯ ಅಂತವನ್ನೂ ನೀನು ನೋಡಲಾರೆ. ನಿನ್ನ ವಜ್ರಾಯುಧಪ್ರಯೋಗದಿಂದ ನನಗೆ ಯಾವ ವೇದನೆಯೂ ಉಂಟಾಗುವುದಿಲ್ಲ.
ಇತ್ಯೇವಮುಕತ್ತ್ವ ಗರುಡಃ ಪತ್ರಂ ತ್ವೇಕಂ ವ್ಯಸರ್ಜಯತ್ |
ತತ್ರೈವ ಸರ್ವಭೂತಾನಿ ವಿಸ್ಮಿತಾನ್ಯಬ್ರುವಂಸ್ತದಾ ॥22॥
ಸುರೂಪಂ ಪತ್ರಮಾಲಕ್ಷ್ಯ ಸುಪರ್ಣೋಽಯಂ ಭವತ್ವಿತಿ |
ತ್ರಿಧಾಕೃತ್ವಾ ತದಾ ವಜ್ರಂ ಗತಂ ಸ್ಥಾನಂ ಸ್ವಮೇವ ಹಿ | ॥23॥
ಹೀಗೆ ಹೇಳಿ ಗರುಡನು ತನ್ನ ರೆಕ್ಕೆಯಿಂದ ಒಂದು ಗರಿಯನ್ನು ಉದುರಿಸಿದನು. ಅದನ್ನು ನೋಡಿದ ಎಲ್ಲರೂ ವಿಸ್ಮಿತರಾಗಿ ತಮ್ಮ ತಮ್ಮೊಳಗೆ ಮಾತನಾಡಿಕೊಂಡು ಇಂತಹ ಸುಂದರವಾದ ರೆಕ್ಕೆ (ಪತ್ರವನ್ನು)ಹೊಂದಿರುವ ಇವನಿಗೆ `ಸುಪರ್ಣ'ನೆಂದು ಹೆಸರಾಗಲಿ ಎಂದು ಹೇಳಿದರು. ವಜ್ರವು ಆ ಗರಿಯನ್ನು ಮೂರುಭಾಗವಾಗಿ ಕತ್ತರಿಸಿ ತನ್ನ ಸ್ವಸ್ಥಾನಕ್ಕೆ ಹೊರಟುಹೋಯಿತು.
ದೃಷ್ಟ್ವಾ ತದದ್ಭುತಂ ಚಾಪಿ ಸಹಸ್ರಾಕ್ಷಃ ಪುರಂದರಃ |
ಖಗೋ ಮಹದಿದಂ ಭೂತಮಿತಿ ಮತ್ವಾಽಭ್ಯಭಾಷತ ॥24॥
ಸಹಸ್ರಾಕ್ಷನಾದ ಪುರಂದರನು ಈ ಅದ್ಭುತವನ್ನು ನೋಡಿ ಈ ಪಕ್ಷಿಯು ವಿಷ್ಣು ಮೊದಲಾದವರ ಶ್ರೇಷ್ಠರ ಗುಂಪಿನಲ್ಲಿ ಸೇರಿದುದು ಎಂದು ತಿಳಿದು ಪಕ್ಷಿಯನ್ನು ಕುರಿತು ಮಾತನಾಡಿದನು.
ಬಲಂ ವಿಜ್ಞಾತುಮಿಚ್ಛಾಮಿ ಯತ್ ತೇ ಪರಮನುತ್ತಮಮ್ |
ಸಖ್ಯಂ ಚಾನಂತ್ಯಮಿಚ್ಛಾಮಿ ತ್ವಯಾ ಸಹ ಖಗೋತ್ತಮ ॥25॥
ಎಲೈ ಪಕ್ಷಿಶ್ರೇಷ್ಠನೇ, ನಿನ್ನ ಶ್ರೇಷ್ಠವಾದ ಮತ್ತು ಉತ್ತಮವಾದ ಬಲವನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಹಾಗೆಯೇ, ನಿನ್ನ ಜೊತೆಯಲ್ಲಿ ಶಾಶ್ವತವಾದ ಸ್ನೇಹವನ್ನು ಹೊಂದಲು ಬಯಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು. *****

ಇಪ್ಪತ್ತೊಂಭತ್ತನೆಯ ಅಧ್ಯಾಯ
(ಇಂದ್ರಗರುಡಸಂವಾದ, ಅವರ ಸ್ನೇಹ, ಇಂದ್ರನಿಗೆ ವರದಾನ, ಗರುಡಕಥಾ ಸಮಾಪ್ತಿ.)
ಸೂತಃ
ಇತ್ಯೇವಮುಕ್ತೋ ಗರುಡಃ ಪ್ರತ್ಯುವಾಚ ಶಚೀಪತಿಮ್ |
ಸಖ್ಯಂ ಮೇಽಸ್ತು ತ್ವಯಾ ದೇವ ಯಥೇಚ್ಛಸಿ ಪುರಂದರ |
ಬಲಂ ತು ಮಮ ಜಾನೀಹಿ ಮಹಚ್ಚಾನಂತ್ಯಮೇವ ಚ ॥1॥
ಹೀಗೆ ಹೇಳಲ್ಪಟ್ಟ ಗರುಡನು ಶಚೀಪತಿಯನ್ನು ಕುರಿತು ದೇವನೇ, ಪುರಂದರನೇ, ನೀನು ಬಯಸಿದಂತೆ ನಿನ್ನ ಜೊತೆಯಲ್ಲಿ ನನಗೆ ಸಖ್ಯವೇ ಇರಲಿ. ನನ್ನ ಅಪರಿಮಿತವಾದ, ಶ್ರೇಷ್ಠವಾದ ಬಲವನ್ನು ತಿಳಿದುಕೋ.
ಕಾಮಂ ನೈವ ಪ್ರಶಂಸಂತಿ ಸಂತಃ ಸ್ವಗುಣಸಂಸ್ತವಮ್ |
ಗುಣಸಂಕೀರ್ತನಂ ಚಾಪಿ ಸ್ವಯಮೇವ ಶತಕ್ರತೋ |
ಸಖೇತಿ ಕೃತ್ವಾ ತು ಸಖೇ ಪೃಷ್ಟೋ ವಕ್ಷ್ಯಾಮ್ಯಹಂ ತ್ವಯಾ ॥2॥
ಸಜ್ಜನರು ತಮ್ಮ ಗುಣವನ್ನು ತಾವೇ ಸ್ತೋತ್ರಮಾಡುವುದನ್ನು ಎಂದೂ ಪ್ರಶಂಸಿಸುವುದಿಲ್ಲ ಅಥವಾ ತಮ್ಮ ಗುಣವನ್ನು ಇನ್ನೊಬ್ಬರು

ಸ್ತೋತ್ರಮಾಡುವುದನ್ನೂ ಪ್ರಶಂಸಿಸುವುದಿಲ್ಲ. ಆದರೆ, ಎಲೈ ಇಂದ್ರನೇ, ಸ್ನೇಹಿತನಾದ ನೀನು ಕೇಳುತ್ತಿದ್ದೀಯೆ ಎಂಬ ಕಾರಣದಿಂದ ನಾನು ಹೇಳುವೆನು.

ನ ಹ್ಯಾತ್ಮಸ್ತವಸಂಯುಕ್ತಂ ವಕ್ತವ್ಯಮನಿಮಿತ್ತತಃ |
ಸಪರ್ವತವನಾಮುರ್ವೀಂ ಸಸಾಗರನದೀಮಿಮಾಮ್ ॥3॥
ಪಕ್ಷೇಣೈಕೇನ ವೈ ಶಕ್ರ ತ್ವಾಂ ಚೈವಾತ್ರಾವಲಂಬಿನಮ್ |
ಸರ್ವಾನ್ ಸಪಿಂಡಿತಾನ್ ವಾಪಿ ಲೋಕಾನ್ ಸಸ್ಥಾಣುಜಂಗಮಾನ್|
ವಹೇಯಮಪರಿಶ್ರಾಂತೋ ವಿದ್ಧೀದಂ ಮೇ ಮಹದ್ಬಲಮ್ ॥4॥

ಯಾವ ನಿಮಿತ್ತವೂ ಇಲ್ಲದೆ, ತನ್ನ ಗುಣದ ಸ್ತೋತ್ರರೂಪವಾದ ಮಾತುಗಳನ್ನು ಆಡಬಾರದು. ಎಲೈ ಶಕ್ರನೇ, ಈ ಎಲ್ಲಾ ಪರ್ವತಕಾನನಗಳಿಂದ ಕೂಡಿದ, ಸಾಗರನದಿಗಳಿಂದ ಕೂಡಿದ ಭೂಮಿಯನ್ನೂ, ಅದನ್ನು ಅವಲಂಬಿಸುವ ನಿನ್ನನ್ನೂ ಸೇರಿ ಒಂದೇ ರೆಕ್ಕೆಯಿಂದ ಎತ್ತುತ್ತೇನೆ. ಸ್ಥಾವರಜಂಗಮಾತ್ಮಕವಾದ ಪ್ರಾಣಿಗಳಿಂದ ಸಹಿತವಾದ ಎಲ್ಲಾಲೋಕಗಳನ್ನೂ ಒಟ್ಟುಗೂಡಿಸಿ ನಾನು ಹೊತ್ತುಕೊಂಡು ಹೋಗುತ್ತೇನೆ. ಇದು ನನ್ನ ಶ್ರೇಷ್ಠವಾದ ಬಲವೆಂದು ತಿಳಿ.

ಸೂತಃ

ಇತ್ಯುಕ್ತೋ ವಚನಂ ವೀರಃ ಕಿರೀಟೀ ಶ್ರೀಮತಾಂ ವರಃ |
ಆಹ ಶೌನಕ ದೇವೇಂದ್ರಃ ಸರ್ವಭೂತಹಿತಃ ಪ್ರಭುಃ ॥5॥

ಎಲೈ ಶೌನಕನೇ, ಹೀಗೆ ಹೇಳಲ್ಪಟ್ಟ ಸರ್ವಭೂತಹಿತದಲ್ಲಿ ರತನಾದ, ಪ್ರಭುವಾದ, ಸಂಪದ್ಯುಕ್ತರಲ್ಲಿ ಶ್ರೇಷ್ಠನಾದ, ವೀರನಾದ, ಸರ್ವಾಭರಣಭೂಷಿತನಾದ ದೇವೇಂದ್ರನು ಗರುಡನನ್ನು ಕುರಿತು ಹೀಗೆ ಹೇಳಿದನು.

ಏವಮೇವ ಯಥಾಽಽಹ ತ್ವಂ ಸರ್ವಂ ಸಂಭಾವಯೇ ತ್ವಯಿ |
ಪ್ರಗೃಹ್ಯತಾಮಿದಾನೀಂ ಮೇ ಸಖ್ಯಮಾನಂತ್ಯಮುತ್ತ್ತಮಮ್ ॥6॥

ನೀನು ಹೇಗೆ ಹೇಳಿದೆಯೋ ಅವೆಲ್ಲವೂ ನಿನ್ನಲ್ಲಿ ಸಂಭಾವಿತವಾದುದು ಎಂದು ತಿಳಿಯುತ್ತೇನೆ. ಈಗಂತೂ ನನ್ನ ಶ್ರೇಷ್ಠವಾದ ಮತ್ತು ಶಾಶ್ವತವಾದ ಸಖ್ಯವನ್ನು ಸ್ವೀಕರಿಸು.

ನ ಕಾರ್ಯಂ ತವ ಸೋಮೇನ ಮಮ ಸೋಮಃ ಪ್ರದೀಯತಾಮ್|
ಅಸ್ಮಾಂಸ್ತೇ ಹಿ ಪ್ರಬಾಧೇಯುರ್ಯೇಭ್ಯೋ ದದ್ಯಾದ್ ಭವಾನಿದಮ್ ॥

ನಿನಗೆ ಅಮೃತದಿಂದ ಆಗಬೇಕಾದುದೇನೂ ಇಲ್ಲ. ಆದ್ದರಿಂದ ಅಮೃತವನ್ನು ನನಗೇ ಕೊಟ್ಟುಬಿಡು. ಏಕೆಂದರೆ, ನೀನು ಯಾರಿಗೆ ಈ ಅಮೃತವನ್ನು ಕೊಡುವೆಯೋ ಅವರು ನಮ್ಮನ್ನು ಬಾಧಿಸಬಹುದು.

ಗರುಡಃ

ಕಿಂಚಿತ್ ಕಾರಣಮುದ್ದಿಶ್ಯ ಸೋಮೋಽಯಂ ನೀಯತೇ ಮಯಾ |
ನ ದಾಸ್ಯಾಮಿ ಸಮಾಪಾತುಂ ಸೋಮಂ ಕಸ್ಮೈಚಿದಪ್ಯಹಮ್ ॥8॥
ಯತ್ರೇಮಂ ತು ಸಹಸ್ರಾಕ್ಷ ನಿಕ್ಷಿಪೇಯಮಹಂ ಶುಭಮ್ |
ತ್ವಮಾದಾಯ ತತಸ್ತೂರ್ಣಂ ಹರೇಥಾಸ್ತ್ರಿದಿವೇಶ್ವರ ॥9॥

ಒಂದು ನಿರ್ದಿಷ್ಟವಾದ ಕಾರಣದಿಂದಾಗಿ ನಾನು ಈ ಅಮೃತವನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. ನಾನು ಯಾರಿಗೂ ಅಮೃತವನ್ನು ಕುಡಿಯಲು ಕೊಡುವುದಿಲ್ಲ. ಎಲೈ ಸಹಸ್ರಾಕ್ಷನೇ, ನಾನು ಈ ಪರಿಶುದ್ಧವಾದ ಅಮೃತವನ್ನು ಎಲ್ಲಿ ಇಡುತ್ತೇನೆಯೋ ದೇವೇಶ್ವರನಾದ ನೀನು ಅಲ್ಲಿಗೆ ಬಂದು ಆ ಅಮೃತವನ್ನು ಅಪಹರಿಸಿಕೊಂಡು ಹೋಗು.

ಶಕ್ರಃ

ವಾಕ್ಯೇನಾನೇನ ತುಷ್ಟೋಽಹಂ ಯತ್ತ್ವಯೋಕ್ತಮಿಹಾಂಡಜ |
ಯದಿಚ್ಛಸಿ ವರಂ ಮತ್ತಸ್ತದ್ ಗೃಹಾಣ ಖಗೋತ್ತಮ ॥10॥

ಪಕ್ಷಿಶ್ರೇಷ್ಠನಾದ ಗರುಡನೇ, ನಿನ್ನ ಈ ಮಾತಿನಿಂದ ನಾನು ಸಂತುಷ್ಟನಾಗಿದ್ದೇನೆ. ನೀನು ನನ್ನಿಂದ ಬೇಕಾದ ವರವನ್ನು ಸ್ವೀಕರಿಸು.

ಸೂತಃ

ಇತ್ಯುಕ್ತಃ ಪ್ರತ್ಯುವಾಚೇದಂ ಕದ್ರೂಪುತ್ರಾನನುಸ್ಮರನ್ |
ಸ್ಮೃತ್ವಾ ಚೈವೋಪಧಿಕೃತಂ ಮಾತುರ್ದಾಸ್ಯನಿಮಿತ್ತತಃ ॥11॥

ಹೀಗೆ ಹೇಳಲ್ಪಟ್ಟ ಗರುಡನು ಕದ್ರುವಿನ ಮಕ್ಕಳು ಮಾಡಿದ ಮೋಸದ ನಿಮಿತ್ತದಿಂದ ತನ್ನ ತಾಯಿಗೆ ಉಂಟಾದ ದಾಸ್ಯವನ್ನು ಸ್ಮರಣೆಮಾಡಿಕೊಂಡು ಉತ್ತರವನ್ನು ಕೊಟ್ಟನು.

ಗರುಡಃ

ಈಶೋಽಹಮಪಿ ಸರ್ವಸ್ಯ ಕರಿಷ್ಯಾಮಿ ತ್ವದರ್ಥಿತಮ್ |
ಭವೇಯುರ್ಭುಜಗಾಃ ಶಕ್ರ ಮಮ ಭಕ್ಷ್ಯಾ ನ ಸಂಶಯಃ ॥12॥

ನಾನು ಎಲ್ಲಾಲೋಕಗಳಿಗೂ ಪ್ರಭುವಾದರೂ, ನೀನು ಹೇಳುವಂತೆ ನಡೆದುಕೊಳ್ಳುವೆನು. ಎಲೈ ಶಕ್ರನೇ, ಸರ್ಪಗಳು ನನಗೆ ಆಹಾರವಾಗಲಿ. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

ಸೂತಃ

ತಥೇತ್ಯುಕತ್ವಽನ್ವಗಚ್ಛತ್ ತಂ ತದಾ ದಾನವಸೂದನಃ |
ಹರಿಷ್ಯಾಮಿ ವಿನಿಕ್ಷಿಪ್ತಂ ಸೋಮಮಿತ್ಯನುಭಾಷ್ಯ ತಮ್ ॥13॥
ಆಜಗಾಮ ತತಸ್ತೂರ್ಣಂ ಸುಪರ್ಣೋ ಮಾತುರಂತಿಕಮ್ |

ಅಥ ಸರ್ಪಾನುವಾಚೇದಂ ಸರ್ವಾನ್ ಪರಮಹೃಷ್ಟವತ್ ॥14॥
ಆಗ ದಾನವಸೂದನನಾದ ಇಂದ್ರನು ``ಹಾಗೆಯೇ ಆಗಲಿ'' ನೀನು ಇಟ್ಟಕಡೆಯಿಂದ ನಾನು ಅಮೃತವನ್ನು ಅಪಹರಿಸುತ್ತೇನೆ ಎಂದು ಗರುಡನನ್ನು ಕುರಿತು ಹೇಳಿ ಅವನನ್ನು ಹಿಂಬಾಲಿಸಿದನು. ಅನಂತರ ಗರುಡನು ಶೀಘ್ರವಾಗಿ ತನ್ನ ತಾಯಿಯ ಬಳಿಗೆ ಬಂದನು.
ಇದಮಾನೀತಮಮೃತಂ ನಿಕ್ಷಿಪಾಮಿ ಕುಶೇಷು ವಃ |
ಸ್ನಾತಾ ಮಂಗಲಸಂಯುಕ್ತಾಸ್ತತಃ ಪ್ರಾಶ್ನೀತ ಪನ್ನಗಾಃ ॥15॥
ಅನಂತರ, ಪರಮಸಂತೋಷದಿಂದ ಕೂಡಿದವನಂತೆ, ಎಲ್ಲಾ ಸರ್ಪಗಳನ್ನು ಉದ್ದೇಶಿಸಿ, ``ಇದೋ, ಈ ಅಮೃತವನ್ನು ತಂದಿದ್ದೇನೆ. ಇದನ್ನು ನಿಮಗೋಸ್ಕರವಾಗಿ ದರ್ಭೆಗಳ ಮೇಲೆ ಇಡುತ್ತೇನೆ. ಎಲೈ ಸರ್ಪಗಳೇ, ನೀವು ಸ್ನಾನವನ್ನು ಮಾಡಿ ಮಂಗಳಸಂಯುಕ್ತರಾಗಿ ಅನಂತರ ಅಮೃತವನ್ನು ಪಾನಮಾಡಿ'' ಎಂದು ಹೇಳಿದನು.
ಅದಾಸೀ ಚೈವ ಮಾತೇಯಮದ್ಯಪ್ರಭೃತಿ ಚಾಸ್ತು ಮೇ |
ಯಥೋಕ್ತಂ ಭವತಾಮೇತದ್ ವಚೋ ಮೇ ಪ್ರತಿಪಾದಿತಮ್ ॥16॥
ನನ್ನ ತಾಯಿಯು ಇಂದಿನಿಂದ ದಾಸ್ಯದಿಂದ ವಿಮುಕ್ತಳಾಗಲಿ. ನೀವು ಹೇಳಿದಂತೆಯೇ ನಾನು ನಡೆದುಕೊಂಡಿದ್ದೇನೆ(ಎಂದು ಹೇಳಿದನು).
ಸೂತಃ
ತತಃ ಸ್ನಾತುಂ ಗತಾಃ ಸರ್ಪಾಃ ಪ್ರತ್ಯುಕ್ತ್ವಾ ತಂ ತಥೇತ್ಯುತ |
ಶಕ್ರೋಽಪ್ಯಮೃತಮಾದಾಯ ಜಗಾಮ ತ್ರಿದಿವಂ ಪುನಃ ॥17॥
ಆಗ ಸರ್ಪಗಳೆಲ್ಲವೂ ``ಹಾಗೆಯೇ ಆಗಲಿ'' ಎಂದು ಹೇಳಿ ಸ್ನಾನವನ್ನು ಮಾಡಲು ಹೊರಟವು. ಇಂದ್ರನಾದರೋ ಆ ಮಧ್ಯದಲ್ಲಿ ಬಂದು ಅಮೃತವನ್ನು ತೆಗೆದುಕೊಂಡು ಸ್ವರ್ಗಕ್ಕೆ ಹೊರಟುಹೋದನು.
ಅಥಗತಾಸ್ತಮುದ್ದೇಶಂ ಸರ್ಪಾಃ ಸೋಮಾರ್ಥಿನಸ್ತದಾ |
ಸ್ನಾತಾಶ್ಚ ಕೃತಜಪ್ಯಾಶ್ಚ ಪ್ರಹೃಷ್ಟಾಃ ಕೃತಮಂಗಲಾಃ ॥18॥
ಅನಂತರ ಅಮೃತಾರ್ಥಿಗಳಾದ ಸರ್ಪಗಳು, ಸ್ನಾನವನ್ನು ಮಾಡಿ, ಜಪವನ್ನು ಮಾಡಿ, ಮಂಗಳವನ್ನು ಮಾಡಿಕೊಂಡು, ಸಂತೋಷದಿಂದ ಆ ಪ್ರದೇಶಕ್ಕೆ ಬಂದವು.
ತದ್ ವಿಜ್ಞಾಯ ಹೃತಂ ಸರ್ಪಾಃ ಶಕ್ರಮಾಯಾಕೃತಂ ಚ ತತ್ |
ಸೋಮಸ್ಥಾನಮಿದಂ ಚೇತಿ ದರ್ಭಾಂಸ್ತೇ ಲಿಲಿಹುಸ್ತದಾ ॥19॥
ಸರ್ಪಗಳು ಇಂದ್ರನು ಮೋಸದಿಂದ ಮಾಡಿದ ಕಾರ್ಯವನ್ನು ತಿಳಿದು, ಇದು ಅಮೃತವನ್ನಿಟ್ಟ ಜಾಗ ಎಂದು ತಿಳಿದು, ಆ ದರ್ಭೆಗಳನ್ನೇ ನೆಕ್ಕಿದವು.
ತತೋ ದ್ವೈಧೀಕೃತಾ ಜಿಹ್ವಾಃ ಸರ್ಪಾಣಾಂ ತೇನ ಕರ್ಮಣಾ |
ಏವಂ ತದಮೃತಂ ತೇನಾಹೃತಂ ಮಾತ್ರರ್ಥಮೇವ ಚ ॥20॥
ದ್ವಿಜಿಹ್ವಾಶ್ಚ ಕೃತಾಃ ಸರ್ಪಾ ಗರುಡೇನ ಮಹಾತ್ಮನಾ |
ಅಭವಂಶ್ಚಾಮೃತಸ್ಪರ್ಶಾದ್ ದರ್ಭಾಸ್ತೇಽಥ ಪವಿತ್ರಿಣಃ ॥21॥
ಆ ಕ್ರಿಯೆಯಿಂದ ಸರ್ಪಗಳ ಜಿಹ್ವೆಗಳು ಸೀಳಿಹೋಗಿ ಎರಡೆರಡಾದವು. ಹೀಗೆ ಮಹಾತ್ಮನಾದ ಗರುಡನು ತಾಯಿಯ ಸಲುವಾಗಿ ಅಮೃತವನ್ನು ತೆಗೆದುಕೊಂಡು ಹೋದನು. ಸರ್ಪಗಳು ದ್ವಿಜಿಹ್ವಗಳಾದವು ಮತ್ತು ಅಮೃತಸ್ಪರ್ಶದಿಂದ ದರ್ಭೆಗಳು ಪವಿತ್ರವಾದವು.
ತತಃ ಸುಪರ್ಣಃ ಪರಮಪ್ರಹೃಷ್ಟವಾನ್
ವಿಹೃತ್ಯ ಮಾತ್ರಾ ಸಹ ತತ್ರ ಕಾನನೇ |
ಭುಜಂಗಭಕ್ಷಃ ಪರಮಾರ್ಚಿತಃ ಖಗೈ-
ರದೀನಕೀರ್ತಿರ್ವಿನತಾಮನಂದಯತ್ ॥22॥
ಅನಂತರ ಗರುಡನು ಪರಮಸಂತೋಷದಿಂದ ತಾಯಿಯ ಜೊತೆಯಲ್ಲಿ ವಿಹರಿಸಿ, ಸರ್ಪಗಳನ್ನು ಭಕ್ಷಿಸುತ್ತಾ ಎಲ್ಲಾ ಪಕ್ಷಿಗಳಿಂದಲೂ ಪೂಜಿಸಲ್ಪಟ್ಟು ತಾಯಿಯಾದ ವಿನತೆಗೆ ಆನಂದವನ್ನು ನೀಡಿದನು.
ಇಮಾಂ ಕಥಾಂ ಯಃ ಶೃಣುಯಾನ್ನರಃ ಸದಾ
ಪಠೇತ ವಾ ದ್ವಿಜಗಣಮುಖ್ಯಸಂಸದಿ |
ಅಸಂಶಯಂ ತ್ರಿದಿವಮಿಯಾತ್ ಸುಪುಣ್ಯಭಾಕ್-
ಮಹಾತ್ಮನಃ ಪತಗಪತೇಃ ಪ್ರಕೀರ್ತನಾತ್ ॥23॥
ಯಾವ ಮನುಷ್ಯನು ಮಹಾತ್ಮನಾದ ಗರುಡನ ಈ ಕಥೆಯನ್ನು ಕೇಳುತ್ತಾನೆಯೋ ಅಥವಾ ಬ್ರಾಹ್ಮಣರ ಸಮೂಹದಲ್ಲಿ ಇದನ್ನು ಪಠಿಸುತ್ತಾನೆಯೋ ಅವನು ಆ ಕಾರಣದಿಂದ ನಿಸ್ಸಂಶಯವಾಗಿ ಪುಣ್ಯವನ್ನು ಸಂಪಾದಿಸಿ ಸ್ವರ್ಗವನ್ನು ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****
ಮೂವತ್ತನೆಯ ಅಧ್ಯಾಯ
(ಸರ್ಪಗಳ ವಂಶವಿಸ್ತಾರ)
ಶೌನಕಃ

ಭುಜಂಗಮಾನಾಂ ಶಾಪಸ್ಯ ಮಾತ್ರಾ ಚೈವ ಸುತೇನ ಚ |
ವಿನತಾಯಾಸ್ತ್ವಯಾ ಪ್ರೋಕ್ತಂ ಕಾರಣಂ ಸೂತನಂದನ ॥1॥
ವರಪ್ರದಾನಂ ಭರ್ತ್ರಾ ಚ ಕದ್ರೂವಿನತಯೋಸ್ತಥಾ |
ನಾಮನೀ ಚೈವ ತೇ ಪ್ರೋಕ್ತೇ ಪಕ್ಷಿಣೋರ್ವೈನತೇಯಯೋಃ | |2॥
ಪನ್ನಗಾನಾಂ ತು ನಾಮಾನಿ ನ ಕೀರ್ತಯಸಿ ಸೂತಜ |
ಪ್ರಾಧಾನ್ಯೇನಾಪಿ ನಾಮಾನಿ ಶ್ರೋತುಮಿಚ್ಛಾಮಹೇ ವಯಮ್ ॥3॥
ಎಲೈ ಸೂತನಂದನನೇ, ನೀನು ತಾಯಿಯಾದ ಕದ್ರುವು ಸರ್ಪಗಳಿಗೆ ಕೊಟ್ಟ ಶಾಪವನ್ನೂ ಮತ್ತು ಪುತ್ರನಾದ ಅರುಣನು ತಾಯಿಯಾದ ವಿನತೆಗೆ ಕೊಟ್ಟ ಶಾಪವನ್ನೂ ಮತ್ತು ಅದರ ಕಾರಣವನ್ನೂ ಹೇಳಿದ್ದೀಯೆ ಮತ್ತು ಕದ್ರುವಿನತೆಯರಿಗೆ ಪತಿಯಾದ ಕಾಶ್ಯಪರು ಕೊಟ್ಟ ವರವನ್ನೂ, ವಿನತೆಯ ಪಕ್ಷಿರೂಪರಾದ ಎರಡು ಮಕ್ಕಳ ಹೆಸರುಗಳನ್ನೂ ಹೇಳಿದ್ದೀಯೆ. ಆದರೆ, ಎಲೈ ಸೂತಪುತ್ರನೇ, ಸರ್ಪಗಳ ಹೆಸರುಗಳನ್ನು ಮಾತ್ರ ಹೇಳುತ್ತಿಲ್ಲ. ನಾವು ಪ್ರಧಾನವಾದ ಸರ್ಪಗಳ ಹೆಸರನ್ನಾದರೂ ಕೇಳಲು ಬಯಸುತ್ತೇವೆ.
ಸೂತಃ
ಬಹುತ್ವಾನ್ನಾಮಧೇಯಾನಿ ಭುಜಂಗಾನಾಂ ತಪೋಧನ |
ನ ಕೀರ್ತಯಿಷ್ಯೇ ಸರ್ವೇಷಾಂ ಪ್ರಾಧಾನ್ಯೇನ ತು ಮೇ ಶೃಣು ॥4॥
ತಪೋಧನನೇ, ಸರ್ಪಗಳು ಬಹುವಾಗಿರುವುದರಿಂದ ಆ ಎಲ್ಲಾ ಸರ್ಪಗಳ ಹೆಸರನ್ನು ನಾನು ಹೇಳುವುದಿಲ್ಲ. ಪ್ರಧಾನವಾದ ಸರ್ಪಗಳ ಹೆಸರನ್ನು ಮಾತ್ರ ಹೇಳುತ್ತೇನೆ. ಅದನ್ನು ಕೇಳು.
ಶೇಷಃ ಪ್ರಥಮತೋ ಜಾತೋ ವಾಸುಕಿಸ್ತದನಂತರಮ್ |
ಐರಾವತಸ್ತಕ್ಷಕಶ್ಚ ಕಾರ್ಕೋಟಕಧನಂಜಯೌ ॥5॥
ಕಾಳಿಯೋ ಮಣಿನಾಗಶ್ಚ ನಾಗಶ್ಚಾಪೂರಣಸ್ತಥಾ |
ನಾಗಸ್ತಥಾ ಪಂಚಶಿರಾ ಏಲಾಪತ್ರೋಽಥ ವಾಮನಃ ॥6॥
ಶೇಷನು ಮೊದಲು ಜನಿಸಿದವನು. ಅನಂತರ ವಾಸುಕಿ. ಅನಂತರ ಐರಾವತ, ತಕ್ಷಕ, ಕಾರ್ಕೋಟಕ, ಧನಂಜಯ, ಕಾಳೀಯ, ಮಣಿನಾಗ, ಆಪೂರಣ, ಪಂಚಶಿರಾ, ಏಲಾಪತ್ರ, ವಾಮನ,
ನೀಲಾನೀಲೌ ತಥಾ ನಾಗೌ ಕಲ್ಮಾಷಶಬಳೌ ತಥಾ |
ಆರ್ಯಕಶ್ಚಾರ್ದ್ರಕಶ್ಚೈವ ನಾಗೌ ವೈ ಶಲಪೋತಕೌ ॥7॥
ಸುಮನಾ ವೈ ದಧಿಮುಖಸ್ತಥಾ ವಿಮಲಪಿಂಡಕಃ |
ವಿಮಲಃ ಪಿಂಡಕಶ್ಚೈವ ಶಂಖೋ ವಾಲಶಿಖಸ್ತಥಾ ॥8॥
ನೀಲ ಮತ್ತು ಅನೀಲ ಎಂಬ ಎರಡು ಸರ್ಪಗಳೂ, ಕಲ್ಮಾಷ ಮತ್ತು ಶಬಳ ಎಂಬ ಎರಡು ಸರ್ಪಗಳೂ, ಹಾಗೆಯೇ, ಆರ್ಯಕ, ಆರ್ದ್ರಕ ಎಂಬ ಎರಡು ಸರ್ಪಗಳೂ ಮತ್ತು ಶಲ, ಪೋತಕ ಎಂಬ ಎರಡು ಸರ್ಪಗಳೂ, ಸುಮನ, ದಧಿಮುಖ, ವಿಮಲಪಿಂಡಕ, ವಿಮಲ, ಪಿಂಡಕ, ಶಂಖ, ಬಾಲಶಿಖ
ಆಪ್ತಃ ಕೋಟರಕಶ್ಚೈವ ಶಂಖಪಾಲಶಿಖಿಸ್ತಥಾ |
ನಿಷ್ಠೂರಕೋ ಹೇಮಗುಹೋ ನಹುಷಃ ಪಿಂಗಲಸ್ತಥಾ ॥9॥
ಬಾಹ್ಯಕಂಠೋ ಹಸ್ತಿಬಕಸ್ತಥಾ ಮುದ್ಗರಪಿಂಡಕಃ |
ಕಂಬಲಾಶ್ವತರೌ ಚಾಪಿ ನಾಗಃ ಕಾಳಿಕಟಸ್ತಥಾ ॥10॥
ಆಪ್ತ, ಕೋಟರಕ, ಶಂಖಪಾಲ, ಶಿಖಿ, ನಿಷ್ಠೂರಕ, ಹೇಮಗುಹ, ನಹುಷ, ಪಿಂಗಲ, ಬಾಹ್ಯಕಂಠ, ಹಸ್ತಿಬಕ, ಮುದ್ಗರಪಿಂಡಕ, ಕಂಬಲ, ಅಶ್ವತರ, ಕಾಳಿಕಟ,
ವೃತ್ತಸಂವೃತ್ತಕೌ ಚಾಪಿ ದ್ವೌ ಚ ಪದ್ಮಾವಿತಿ ಶ್ರುತೌ |
ನಾಗಃ ಶಂಖಣಕಶ್ಚೈವ ತಥಾ ಕೂಷ್ಮಾಂಡಕೂರ್ಪಕೌ ॥11॥
ಕ್ಷೇಮಕಶ್ಚ ಮಹಾನಾಗೋ ನಾಗಾಃ ಪಾಂಡರಕಸ್ತಥಾ |
ಕರವೀರಃ ಪುಷ್ಪದಂಷ್ಟ್ರ ಏಲಕೋ ಬಿಲ್ವಪಿಂಡಕಃ ॥12॥
ವೃತ್ತ ಮತ್ತು ಸಂವೃತ್ತ, ಈ ಎರಡು ಸರ್ಪಗಳಿಗೆ ಪದ್ಮ ಎಂದೂ ಹೆಸರು, ಶಂಖಣಕ, ಕೂಷ್ಮಾಂಡ, ಕೂರ್ಪಕ, ಕ್ಷೇಮಕ, ಮಹಾನಾಗ, ಪಾಂಡರಕ, ಕರವೀರ, ಪುಷ್ಪದಂಷ್ಟ್ರ, ಏಲಕ, ಬಿಲ್ವಪಿಂಡಕ,
ಮೂಷಿಕಾದಃ ಶಂಖಶಿರಾಃ ಪೂರ್ಣದಂಷ್ಟ್ರೋ ಹರಿದ್ರಕಃ |
ಕುಮುದಃ ಕುಮುದಾಕ್ಷಶ್ಚ ತಿತ್ತಿರಿರ್ಹಲಿಕಸ್ತಥಾ ॥13॥
ಅಪರಾಜಿತೋ ಜ್ಯೋತಿಕಶ್ಚ ಪನ್ನಗಃ ಶ್ರೀವಹಸ್ತಥಾ |
ಕೌರವ್ಯೋ ಧೃತರಾಷ್ಟ್ರಶ್ಚ ಪುಷ್ಕರಃ ಶಲ್ಯಕಸ್ತಥಾ ॥14॥
ಮೂಷಿಕಾದ, ಶಂಖಶಿರ, ಪೂರ್ಣದಂಷ್ಟ್ರ, ಹರಿದ್ರಕ, ಕುಮುದ, ಕುಮುದಾಕ್ಷ, ತಿತ್ತಿರಿ, ಹಲಿಕ, ಅಪರಾಜಿತ, ಜ್ಯೋತಿಕ, ಶ್ರೀವಹ, ಕೌರವ್ಯ, ಧೃತರಾಷ್ಟ್ರ, ಪುಷ್ಕರ, ಶಲ್ಯಕ.
ವಿರಾಜಶ್ಚ ಸುಬಾಹುಶ್ಚ ಸಾಲಿಪಿಂಡಶ್ಚ ವೀರ್ಯವಾನ್ |
ಹಸ್ತಿಭದ್ರಃ ಪಿಠರಕಃ ಮುಖರಃ ಕೋಣನಾಶಕಃ ॥15॥
ಕುಂಜರಃ ಕುರಕಃ ಶೈಲಃ ತಥಾ ನಾಗಃ ಪ್ರಭಾಕರಃ |
ಕುಮುದಃ ಕುಮುದಾಕ್ಷಶ್ಚ ತಿಕಿರಿರ್ಮಧ್ಯತಿತ್ತಿರಿಃ ॥16॥

ವಿರಾಜ, ಸುಬಾಹು, ಸಾಲಿಪಿಂಡ, ವೀರ್ಯವಾನ್, ಹಸ್ತಿಭದ್ರ, ಪಿಠರಕ, ಮುಖರ, ಕೋಣನಾಶಕ, ಕುಂಜರ, ಕುರಕ, ಶೈಲ, ಪ್ರಭಾಕರ, ಕುಮುದ, ಕುಮುದಾಕ್ಷ, ತಿಕಿರಿ, ಮಧ್ಯತಿತ್ತಿರಿ,
ಕರ್ಕರಾಕರ್ಕರೌ ಲೋಹೌ ಕುಂಡೋದರಮಹೋದರೌ |
ಏತೇ ಪ್ರಾಧಾನ್ಯತೋ ನಾಗಾಃ ಕೀರ್ತಿತಾ ದ್ವಿಜಸತ್ತಮ ॥17॥
ಕರ್ಕರ, ಅಕರ್ಕರ ಮತ್ತು ಕೆಂಪುಬಣ್ಣದ ಕುಂಡೋದರ, ಮಹೋದರ. ಎಲೈ ವೀರಶ್ರೇಷ್ಠನೇ, ಈ ಪ್ರಧಾನವಾದ ನಾಗಗಳ ಹೆಸರನ್ನು ಹೇಳಿದ್ದೇನೆ.
ಬಹುತ್ವಾನ್ನಾಮಧೇಯಾನಾಮಿತರೇ ನಾನುಕೀರ್ತಿತಾಃ |
ಏತೇಷಾಂ ಪ್ರಸವೋ ಯಶ್ಚ ಪ್ರಸವಸ್ಯ ಚ ಸಂತತಿಃ ॥18॥
ಅಸಂಖ್ಯೇಯೇತಿ ಮತ್ವಾ ತಾನ್ ನ ಬ್ರವೀಮಿ ದ್ವಿಜೋತ್ತಮ |
ಬಹೂನಿ ಚ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಅಶಕ್ಯಾನ್ಯೇವ ಸಂಖ್ಯಾತುಂ ಭುಜಂಗಾನಾಂ ತಪೋಧನ ॥19॥
ಅವುಗಳ ಹೆಸರುಗಳು ಇನ್ನೂ ಅನೇಕವಿರುವುದರಿಂದ ನಾನು ಅದನ್ನು ಹೇಳಲಿಲ್ಲ. ಇವುಗಳ ಮಕ್ಕಳು ಮತ್ತು ಅವರ ಸಂತತಿಯಂತೂ ಅಸಂಖ್ಯೇಯವಾಗಿದೆ. ಎಲೈ ದ್ವಿಜೋತ್ತಮನೇ, ಆ ಕಾರಣದಿಂದ ನಾನು ನಿನಗೆ ಅದನ್ನು ಹೇಳುವುದಿಲ್ಲ. ಎಲೈ ತಪೋಧನನೇ, ಸರ್ಪಗಳು ಅನೇಕ ಸಹಸ್ರಸಂಖ್ಯೆಯಲ್ಲಿ, ಪ್ರಯುತಗಳ ಸಂಖ್ಯೆಯಲ್ಲಿ, ಅರ್ಬುದಗಳ ಸಂಖ್ಯೆಯಲ್ಲಿ ಇವೆ. ಸರ್ಪಗಳ ಸಂಖ್ಯೆಯನ್ನು ಎಣಿಸುವುದು ಅಶಕ್ಯವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
*****

ಮೂವತ್ತೊಂದನೆಯ ಅಧ್ಯಾಯ
(ಸರ್ಪಗಳ ದುರ್ನಡತೆಯಿಂದ ತಪ್ತರಾದ ಶೇಷದೇವರ ತಪಸ್ಸು. ಬ್ರಹ್ಮದೇವರ ವರದಿಂದ ಗರುಡನ ಜೊತೆಯಲ್ಲಿ ಸಖ್ಯ. ಭೂಮಿಯ ವಿವರದಲ್ಲಿಳಿದು ಭೂಮಿಯ ಧಾರಣೆ.)
ಶೌನಕಃ
ಏತೇ ವೈ ಭುಜಗಾಸ್ತಾತ ವೀರ್ಯವಂತೋ ದುರಾಸದಾಃ |
ಶಾಪಂ ತಂ ತ್ವಮವಿಜ್ಞಾಯ ಕೃತವಂತೋ ನು ಕಿಂ ಪರಮ್ ॥1॥
ಪ್ರೀತಿಪಾತ್ರನಾದ ಸೂತಪುತ್ರನೇ, ಈ ಸರ್ಪಗಳು ಮಹಾಪರಾಕ್ರಮಶಾಲಿಗಳೆಂದೂ, ಅವುಗಳ ಸಮೀಪಕ್ಕೆ ಹೋಗಲೂ ಸಾಧ್ಯವಿಲ್ಲವೆಂದೂ ತಿಳಿಸಿದ್ದೀಯೆ. ಈ ಶಾಪವನ್ನು ತಿಳಿದ ಆ ಸರ್ಪಗಳು ಮುಂದೇನು ಮಾಡಿದವು?
ಸೂತಃ
ತೇಷಾಂ ತು ಭಗವಾನ್ ಶೇಷಸ್ತ್ಯಕತ್ವ ಸರ್ವಾನ್ ಮಹಾಯಶಾಃ |
ತಪೋ ವಿಪುಲಮಾತಸ್ಥೇ ವಾಯುಭಕ್ಷೋ ಜಿತೇಂದ್ರಿಯಃ |
ಗಂಧಮಾದನಮಾಸಾದ್ಯ ಬದರ್ಯಾಂ ಚ ತಪೋರತಃ ॥2॥
ಮಹಾಕೀರ್ತಿಶಾಲಿಯಾದ, ಪೂಜ್ಯನಾದ ಶೇಷನು, ಆ ಎಲ್ಲಾ ಸರ್ಪಗಳನ್ನೂ ತ್ಯಜಿಸಿ, ಜಿತೇಂದ್ರಿಯನಾಗಿ, ವಾಯುಭಕ್ಷನಾಗಿ, ಗಂಧಮಾದನಪರ್ವತಕ್ಕೆ ಹೋಗಿ, ಬದರೀಕ್ಷೇತ್ರದಲ್ಲಿ ಅಗಾಧವಾದ ತಪಸ್ಸಿನಲ್ಲಿ ನಿರತನಾದನು.
ದಶಾರ್ಣೇ ಪುಷ್ಕರಾರಣ್ಯೇ ತಥಾ ಹಿಮವತಸ್ತಟೇ |
ತೇಷು ತೇಷು ಚ ಪುಣ್ಯೇಷು ತೀರ್ಥೇಷ್ವಾಯತನೇಷು ಚ |
ಏಕಾಂತಶೀಲೋ ನಿಯತಃ ಸತತಂ ವಿಜಿತೇಂದ್ರಿಯಃ ॥3॥
ಅವನು ದಶಾರ್ಣದಲ್ಲಿ, ಪುಷ್ಕರಕ್ಷೇತ್ರದಲ್ಲಿ, ಹಿಮಾಲಯದ ತಪ್ಪಲಿನಲ್ಲಿ ಮತ್ತು ಬೇರೆ ಬೇರೆ ಪುಣ್ಯಕ್ಷೇತ್ರಗಳಲ್ಲಿ ಮತ್ತು ತೀರ್ಥಗಳಲ್ಲಿ ಏಕಾಂತಪ್ರಿಯನಾಗಿ, ಮೌನವ್ರತಧಾರಿಯಾಗಿ, ಇಂದ್ರಿಯಜಯದಿಂದ ಕೂಡಿದವನಾಗಿ ಸತತವಾಗಿ ತಪಸ್ಸನ್ನು ಆಚರಿಸಿದನು.
ತಪ್ಯಮಾನಂ ತಪೋ ಘೋರಂ ತಂ ದದರ್ಶ ಪಿತಾಮಹಃ |
ಪರಿಶುಷ್ಕಮಾಂಸತ್ವಕ್ಸ್ನಾಯುಂ ಜಟಾಚೀರಧರಂ ಪ್ರಭುಃ ॥4॥
ಘೋರವಾದ ತಪಸ್ಸನ್ನು ಆಚರಿಸುತ್ತಾ, ದೇಹದ ಮಾಂಸ, ಸ್ನಾಯುಗಳೆಲ್ಲವೂ ಒಣಗಿಹೋದ ಜಟಾಚೀರಧಾರಿಯಾದ ಅವನನ್ನು ಪ್ರಭುಗಳೂ, ಪಿತಾಮಹರೂ ಆದ ಬ್ರಹ್ಮದೇವರು ನೋಡಿದರು.
ತಮಬ್ರವೀತ್ಸತ್ಯಧೃತಿಂ ತಪ್ಯಮಾನಂ ಪಿತಾಮಹಃ |
ಕಿಮಿದಂ ಕುರುಷೇ ಶೇಷ ಪ್ರಜಾನಾಂ ಸ್ವಸ್ತಿ ವೈ ಕುರು ॥5॥
ತ್ವಂ ಹಿ ತೀವ್ರೇಣ ತಪಸಾ ಪ್ರಜಾಸ್ತಾಪಯಸೇಽನಘ |
ಬ್ರೂಹಿ ಕಾಮಂ ಚ ಮೇ ಶೇಷ ಯತ್ತೇ ಹೃದಿ ಚಿರಸ್ಥಿತಮ್ ॥ 6॥
ಬಹಳ ಧೈರ್ಯದಿಂದ ಕೂಡಿದವನಾಗಿ ಹಾಗೆ ತಪಸ್ಸನ್ನು ಮಾಡುತ್ತಿದ್ದ ಶೇಷನನ್ನು ಕುರಿತು ಬ್ರಹ್ಮದೇವರು ಮಾತನಾಡಿದರು. ಶೇಷನೇ, ಇದೇನು ಮಾಡುತ್ತಿದ್ದೀಯೆ? ಪ್ರಜೆಗಳಿಗೆ ಹಿತವನ್ನು ಮಾಡು. ಅನಘನೇ, ನಿನ್ನ ತೀವ್ರವಾದ ತಪಸ್ಸಿನಿಂದ ಪ್ರಜೆಗಳು ತಪ್ತರಾಗಿದ್ದಾರೆ. ಶೇಷನೇ, ನಿನ್ನ ಮನಸ್ಸಿನಲ್ಲಿ ಬಹಳ ದಿನದಿಂದ ಇರುವ ಆಸೆಯನ್ನು ಹೇಳು.

ಶೇಷಃ
ಸೋದರ್ಯಾ ಮಮ ಸರ್ವೇ ಹಿ ಭ್ರಾತರೋ ಮಂದಚೇತಸಃ |
ಸಹ ತೈರ್ನೋತ್ಸಹೇ ವಸ್ತುಂ ತದ್ ಭವಾನನುಮನ್ಯತಾಮ್ ॥7॥
ನನ್ನ ಸಹೋದರರೆಲ್ಲರೂ ಮಂದಬುದ್ಧಿಯುಳ್ಳವರು. ನಾನು ಅವರ ಜೊತೆಯಲ್ಲಿ ವಾಸಿಸಲು ಇಷ್ಟಪಡುವುದಿಲ್ಲ. ತಾವು ಅದಕ್ಕೆ ಅನುಮತಿಯನ್ನು ಕೊಡಬೇಕು.
ಅಭ್ಯಸೂಯಂತಿ ಸತತಂ ಪರಸ್ಪರಮಮಿತ್ರವತ್ |
ತತೋಽಹಂ ತಪ ಆತಿಷ್ಠೇ ನೈತಾನ್ ಪಶ್ಯೇಯಮಿತ್ಯುತ ॥8॥
ಅವರು ಶತ್ರುಗಳಂತೆ ಪರಸ್ಪರವಾಗಿ ಅಸೂಯೆಪಡುತ್ತಿದ್ದಾರೆ. ಆದ್ದರಿಂದ ನಾನು ಅವರನ್ನು ನೋಡಬಾರದು ಎಂಬ ಉದ್ದೇಶದಿಂದ ತಪಸ್ಸನ್ನು ಮಾಡುತ್ತಿದ್ದೇನೆ.
ಅಮರ್ಷಯಂತಿ ಸತತಂ ಸಸುತಾಂ ವಿನತಾಂ ಚ ತೇ |
ಅಸ್ಮಾಕಂ ಚಾಪರೋ ಭ್ರಾತಾ ವೈನತೇಯಃ ಪಿತಾಮಹ ॥9॥
ತಂ ಚ ದ್ವಿಷಂತಿ ಚಾತ್ಯರ್ಥಂ ಸ ಚಾಪಿ ಸುಮಹಾಬಲಃ |
ವರಪ್ರದಾನಾತ್ ಸ್ವಪಿತುಃ ಕಾಶ್ಯಪಸ್ಯ ಮಹಾತ್ಮನಃ ॥10॥
ಅವರು ವಿನತೆಯನ್ನೂ, ಅವಳ ಮಗನಾದ ಗರುಡನನ್ನೂ ಸತತವಾಗಿ ಕೋಪಗೊಳಿಸುತ್ತಿದ್ದಾರೆ. ಪಿತಾಮಹನೇ, ವಿನತೆಯ ಮಗನಾದ ಗರುಡನು ನಮ್ಮ ಇನ್ನೊಬ್ಬ ಸಹೋದರನಷ್ಟೆ. ಇವರು ಅವನನ್ನೂ ಬಹಳವಾಗಿ ದ್ವೇಷಿಸುತ್ತಿದ್ದಾರೆ. ಅವನಾದರೋ, ನಮ್ಮ ತಂದೆಯಾದ ಮಹಾತ್ಮರಾದ ಕಾಶ್ಯಪರಾದ ವರಪ್ರದಾನದಿಂದ ಮಹಾಬಲಶಾಲಿಯಾಗಿದ್ದಾನೆ.
ಸೋಽಹಂ ತಪಃ ಸಮಾಸ್ಥಾಯ ಮೋಕ್ಷ್ಯಾಮೀದಂ ಕಳೇಬರಮ್ |
ಕಥಂ ಮೇ ಪ್ರೇತ್ಯಭಾವೇಽಪಿ ತೈರ್ನ ಸ್ಯಾತ್ ಸಹ ಸಂಗಮಃ ॥11॥
ಆದ್ದರಿಂದ ನಾನು ತಪಸ್ಸನ್ನು ಆಚರಿಸಿ ಈ ಶರೀರವನ್ನು ಪರಿತ್ಯಜಿಸುವುದೆಂದು ನಿರ್ಧರಿಸಿದ್ದೇನೆ. ಮರಣವನ್ನು ಹೊಂದಿದ ಮೇಲೆಯೂ ನನಗೆ ಅವರ ಜೊತೆಯಲ್ಲಿ ಸಂಗಮವು ಹೇಗೆ ಆಗದೆ ಇದ್ದೀತು?
ಬ್ರಹ್ಮಾ
ಜಾನಾಮಿ ಶೇಷ ಸರ್ವೇಷಾಂ ಭ್ರಾತೄಣಾಂ ತೇ ವಿಚೇಷ್ಟಿತಮ್ |
ಮಾತುಶ್ಚಾಪ್ಯಪರಾಧಾದ್ವೈ ಭ್ರಾತೄಣಾಂ ತೇ ಮಹದ್ಭಯಮ್ ॥12॥
ಎಲೈ ಶೇಷನೇ, ನಾನು ನಿನ್ನ ಎಲ್ಲಾ ಸಹೋದರರ ನಡತೆಯನ್ನೂ ತಿಳಿದಿದ್ದೇನೆ. ತಾಯಿಯಾದ ವಿನತೆಗೆ ಮಾಡಿದ ಅಪರಾಧದಿಂದ ಆ ನಿನ್ನ ಸಹೋದರರಿಗೆ ದೊಡ್ಡ ಭಯವು ಪ್ರಾಪ್ತವಾಗಿದೆ.
ಕೃತೋಽತ್ರ ಪರಿಹಾರಶ್ಚ ಪೂರ್ವಮೇವ ಭುಜಂಗಮ |
ಭ್ರಾತೄಣಾಂ ತವ ಸರ್ವೇಷಾಂ ಸುವೃತ್ತಾನಾಂ ವಿಮೋಕ್ಷಣಮ್ ॥13॥
ಎಲೈ ಭುಜಂಗಮನೇ, ಈ ವಿಷಯದಲ್ಲಿ ಮೊದಲೇ ಪರಿಹಾರವನ್ನು ವ್ಯವಸ್ಥೆ ಮಾಡಿದ್ದೇನೆ. ಒಳ್ಳೆಯ ನಡತೆಯುಳ್ಳ ನಿನ್ನ ಎಲ್ಲಾ ಸಹೋದರರನ್ನೂ ಈ ಭಯದಿಂದ ಪಾರುಮಾಡಿದ್ದೇನೆ.
ಶಾಪಾತ್ ತಸ್ಮಾನ್ಮಹಾಘೋರಾತ್ ಮುಕ್ತಾತ್ಮಾ ತ್ವಂ ಮಹಾಬಲ |
ವೃಣೀಷ್ವ ಚ ವರಂ ಮತ್ತಃ ಶೇಷ ಯತ್ತೇಽಭಿಕಾಂಕ್ಷಿತಮ್ ॥14॥
ಎಲೈ ಮಹಾಬಲನೇ, ನೀನು ಆ ಮಹಾಘೋರವಾದ ಶಾಪದಿಂದ ಮುಕ್ತನಾಗಿದ್ದೀಯೆ. ಶೇಷನೇ, ನಿನಗೆ ಇಷ್ಟವಾದ ವರವನ್ನು ನನ್ನಿಂದ ಕೇಳಿ ಪಡೆದುಕೋ.
ದಿತ್ಸಾಮಿ ಹಿ ವರಂ ತೇಽದ್ಯ ಪ್ರೀತಿರ್ಮೇ ಪರಮಾ ತ್ವಯಿ |
ದಿಷ್ಟ್ಯಾ ಚ ಬುದ್ಧಿರ್ಧರ್ಮೇ ತೇ ನಿವಿಷ್ಟಾ ಭುಜಗೋತ್ತಮ |
ಅತೋ ಭೂಯಶ್ಚ ತೇ ಬುದ್ಧಿರ್ಧರ್ಮೇ ಭವತು ಸುಸ್ಥಿರಾ ॥15॥
ನಾನು ಈ ದಿನ ವರವನ್ನು ಕೊಡಲು ಬಯಸುತ್ತಿದ್ದೇನೆ. ನಿನ್ನಲ್ಲಿ ನನಗೆ ಬಹಳ ಪ್ರೀತಿಯಿದೆ. ಎಲೈ ಭುಜಗಶ್ರೇಷ್ಠನೇ, ದೇವರ ದಯದಿಂದ ನಿನಗೆ ಧರ್ಮದಲ್ಲಿಯೇ ಬುದ್ಧಿಯು ನೆಲೆಸಿದೆ. ನಿನ್ನ ಬುದ್ಧಿಯು ಇದಕ್ಕಿಂತ ಹೆಚ್ಚಾಗಿ ಸ್ಥಿರವಾಗಿ ಧರ್ಮದಲ್ಲಿ ನೆಲೆಸಲಿ.
ಶೇಷಃ
ಧರ್ಮೇ ಮೇ ರಮತಾಂ ಬುದ್ಧಿಃ ಶಮೇ ತಪಸಿ ಚೇಶ್ವರ ॥16॥
ಎಲೈ ಪ್ರಭುವೇ, ನನ್ನ ಬುದ್ಧಿಯು ಧರ್ಮದಲ್ಲಿಯೂ, ಭಗವನ್ನಿಷ್ಠೆಯಲ್ಲಿಯೂ, ತಪಸ್ಸಿನಲ್ಲಿಯೂ ಸಂತೋಷವನ್ನು ಪಡೆಯಲಿ.
ಬ್ರಹ್ಮಾ
ಪ್ರೀತೋಽಸ್ಮ್ಯನೇನ ತೇ ಶೇಷ ದಮೇನ ಪ್ರಶಮೇನ ಚ |
ತ್ವಯಾ ತ್ವಿದಂ ವಚಃ ಕಾರ್ಯಂ ಮನ್ನಿಯೋಗಾತ್ ಪ್ರಜಾಹಿತಮ್ ॥
ಎಲೈ ಶೇಷನೇ, ನಾನು ನಿನ್ನ ಇಂದ್ರಿಯನಿಗ್ರಹದಿಂದಲೂ ಮತ್ತು ಭಗವನ್ನಿಷ್ಠೆಯಿಂದಲೂ ಸಂತುಷ್ಟನಾಗಿದ್ದೇನೆ. ನನ್ನ ಆದೇಶದಂತೆ, ನೀನು ಪ್ರಜೆಗಳಿಗೆ ಹಿತವಾದ ಈ ಕಾರ್ಯವನ್ನು ಮಾಡಬೇಕು.
ಇಮಾಂ ಮಹೀಂ ಶೈಲವನೋಪಪನ್ನಾಂ
ಸಸಾಗರಾಂ ಸನಗರಪತ್ತನಾಂ ಚ |
ತ್ವಂ ಶೇಷ ಸಮ್ಯಕ್ ಚಲಿತಾಂ ಯಥಾವತ್
ಸಂಗೃಹ್ಯ ತಿಷ್ಠಸ್ವ ಯಥಾಽಚಲಾ ಸ್ಯಾತ್ ॥18॥

ಎಲೈ ಶೇಷನೇ, ಶೈಲವನಕಾನನಗಳಿಂದಲೂ, ಸಾಗರನಗರ ಪಟ್ಟಣಗಳಿಂದಲೂ ಕೂಡಿದ ಈ ಭೂಮಿಯು ಅಲುಗಾಡುತ್ತಿದೆ. ನೀನು ಈ ಭೂಮಿಯು ಸ್ಥಿರವಾಗಿರುವಂತೆ ಅದನ್ನು ಧರಿಸಿ ಕುಳಿತುಕೊಳ್ಳಬೇಕು.
ಶೇಷಃ
ಯಥಾಹ ದೇವೋ ವರದಃ ಪ್ರಜಾಪತಿ -
ರ್ಮಹೀಪತಿರ್ಭುವನಪತಿರ್ಜಗತ್ಪತಿಃ |
ತಥಾ ಮಹೀಂ ಧಾರಯಿತಾಽಸ್ಮಿ ನಿಶ್ಚಲಾಂ
ಪ್ರಯಚ್ಛ ತಾಂ ಮೇ ಶಿರಸಿ ಪ್ರಜಾಪತೇ ॥19॥
ನನಗೆ ವರವನ್ನು ನೀಡಿದ ಪ್ರಜಾಪತಿಯೂ, ಮಹೀಪತಿಯೂ, ಭುವನಪತಿಯೂ, ಜಗತ್ಪತಿಯೂ ಆದ ತಾವು ಹೇಳಿದಂತೆ, ನಾನು ಭೂಮಿಯನ್ನು ಅಲುಗಾಡದಂತೆ ಧರಿಸುತ್ತೇನೆ. ಎಲೈ ಪ್ರಜಾಪತಿಯೇ, ನನ್ನ ಶಿರಸ್ಸಿನಲ್ಲಿ ಭೂಮಿಯನ್ನು ಇಡು.
ಬ್ರಹ್ಮಾ
ಅಧೋ ಮಹೀಂ ಗಚ್ಛ ಭುಜಂಗಮೋತ್ತಮ
ಸ್ವಯಂ ತವೈಷಾ ವಿವರಂ ಪ್ರದಾಸ್ಯತಿ |
ಇಮಾಂ ಧರಾಂ ಧಾರಯತಾ ತ್ವಯಾ ಹಿ ಮೇ
ಮಹತ್ ಪ್ರಿಯಂ ಶೇಷ ಕೃತಂ ಭವಿಷ್ಯತಿ ॥20॥
ಎಲೈ ಭುಜಗಶ್ರೇಷ್ಠನೇ, ನೀನು ಭೂಮಿಯ ಕೆಳಗೆ ಹೋಗು. ಭೂಮಿಯು ತಾನಾಗಿಯೇ ನಿನಗೆ ದಾರಿಯನ್ನು ಕೊಡುವುದು. ಎಲೈ ಶೇಷನೇ, ಈ ಭೂಮಿಯನ್ನು ಧರಿಸುವ ನಿನ್ನಿಂದ ನನಗೆ ಬಹಳ ಪ್ರಿಯವಾದ ಕಾರ್ಯವು ಮಾಡಲ್ಪಡುತ್ತದೆ.
ಶೇಷೋಽಸಿ ನಾಗೋತ್ತಮ ಧರ್ಮದೇವೋ
ಮಹೀಮಿಮಾಂ ಧಾರಯಸೇ ಮದೇಕಃ |
ಅನಂತಭೋಗಂ ಪರಿಗೃಹ್ಯ ಸರ್ವಂ
ಯಥಾಽಹಮೇವಂ ಬಲಭಿತ್ ತಥಾ ಭವಾನ್ ॥21॥
ಎಲೈ ನಾಗೋತ್ತಮನೇ, ನೀನು ಧರ್ಮದೇವನಾದ ಶೇಷನಾಗಿದ್ದೀಯೆ. ಹೇಗೆ ನಾನು ಪ್ರಜೆಗಳಿಂದ ಭೋಜ್ಯವಾದ ಭೋಗಗಳ ಒಂದೊಂದು ಅಂಶವನ್ನು ತೆಗೆದುಕೊಂಡು ಎಲ್ಲಾ ಲೋಕಗಳನ್ನೂ ಧರಿಸಿದ್ದೇನೆಯೋ ಮತ್ತು ಹೇಗೆ ಇಂದ್ರನು ಪ್ರಜೆಗಳ ಭೋಗಾಂಶವನ್ನು ತೆಗೆದುಕೊಂಡು ಜಗತ್ತನ್ನು ಧರಿಸಿದ್ದಾನೆಯೋ, ಅದರಂತೆ ನೀನು ಸಹ ಪ್ರಜೆಗಳ ಭೋಗಗಳಿಂದ ಒಂದೊಂದು ಅಂಶವನ್ನು ತೆಗೆದುಕೊಂಡು ಒಬ್ಬನೇ ಈ ಭೂಮಿಯನ್ನು ಶಿರಸ್ಸಿನಲ್ಲಿ ಧರಿಸು.
ಸೂತಃ
ತಥೇತಿ ಚೋಕ್ತ್ವಾ ವಿವರಂ ಪ್ರವಿಶ್ಯ ಸ
ಪ್ರಭುರ್ಭುವೋ ಭುಜಗವರಾಗ್ರಜಃ ಸ್ಥಿತಃ |
ಬಿಭರ್ತಿ ದೇವೀಂ ಶಿರಸಾ ಮಹೀಮಿಮಾಂ
ಸಮುದ್ರನೇಮಿಂ ಪರಿಗೃಹ್ಯ ಸರ್ವಶಃ ॥22॥
ಶೇಷನು ``ಹಾಗೆಯೇ ಆಗಲಿ'' ಎಂದು ಹೇಳಿ ಭೂಮಿಯ ವಿವರವನ್ನು ಪ್ರವೇಶಿಸಿ, ಸರ್ಪಜಾತಿಯಲ್ಲಿ ಮೊದಲು ಜನಿಸಿದವನೂ ಆದ ಅವನು ಸಮುದ್ರಪರಿಖೆಯಾದ ಈ ಭೂಮಿಯನ್ನು ಶಿರಸ್ಸಿನಲ್ಲಿ ಧರಿಸಿ ಸ್ಥಿರನಾಗಿರುತ್ತಾನೆ.
ಅಧೋ ಭೂಮೇರ್ವಸತ್ಯೇವ ನಾಗೋಽನಂತಃ ಪ್ರತಾಪವಾನ್ |
ಧಾರಯನ್ ವಸುಧಾಮೇಕಃ ಶಾಸನಾದ್ ಬ್ರಹ್ಮಣೋ ವಿಭುಃ ॥23॥
ಪ್ರತಾಪಶಾಲಿಯಾದ, ಈ ಅನಂತನಾಗನು ಬ್ರಹ್ಮದೇವರ ಶಾಸನದಂತೆ ಭೂಮಿಯ ಕೆಳಗೆ ಇದ್ದು, ಭೂಮಿಯನ್ನು ಧರಿಸಿದ್ದಾನೆ.
ಸುಪರ್ಣಂ ಚ ಸಖಾಯಂ ವೈ ಭಗವಾನಮರೋತ್ತಮಃ |
ಪ್ರಾದಾದೇನಮನಂತಾಯ ವೈನತೇಯಂ ಪಿತಾಮಹಃ ॥24॥
ಪಿತಾಮಹರೂ, ದೇವಶ್ರೇಷ್ಠರೂ, ಪೂಜ್ಯರೂ ಆದ ಬ್ರಹ್ಮದೇವರು ವಿನತೆಯ ಪುತ್ರನಾದ ಗರುಡನನ್ನು ಶೇಷನಿಗೆ ಸ್ನೇಹಿತನನ್ನಾಗಿ ನೀಡಿದರು.
ಅನಂತೇ ಚ ಪ್ರಯಾತೇ ತು ವಾಸುಕಿಃ ಸುಮಹಾಬಲಃ |
ಅಭ್ಯಗಚ್ಛತ ನಾಗೈಸ್ತು ದೇವೈರಿವ ಚ ವಾಸವಃ ॥25॥
ಅನಂತನು ಹೊರಟುಹೋಗುತ್ತಿರಲು ಮಹಾಬಲಶಾಲಿಯಾದ ವಾಸುಕಿಯು ದೇವತೆಗಳ ಜೊತೆಯಲ್ಲಿ ಇಂದ್ರನು ಮಂತ್ರಾಲೋಚನೆ ಮಾಡಿದಂತೆ ಉಳಿದ ನಾಗಗಳ ಜೊತೆಯಲ್ಲಿ ಮಂತ್ರಾಲೋಚನೆ ನಡೆಸಲು ಸೇರಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
*****

ಮೂವತ್ತೆರಡನೆಯ ಅಧ್ಯಾಯ
(ತಾಯಿಯ ಶಾಪದ ಪರಿಹಾರಕ್ಕಾಗಿ ಸರ್ಪಗಳ ಜೊತೆಯಲ್ಲಿ ವಾಸುಕಿಯ ಮಂತ್ರಾಲೋಚನೆ. ಸರ್ಪಯಾಗವನ್ನು ನಿವಾರಿಸಲು ಸರ್ಪಗಳಿಂದ ಬೇರೆಬೇರೆ ಉಪಾಯಗಳ ಸೂಚನೆ.)

ಸೂತಃ
ಮಾತುಃ ಸಕಾಶಾತ್ ತಂ ಶಾಪಂ ಶ್ರುತ್ವಾ ಪನ್ನಗಸತ್ತಮಃ |
ವಾಸುಕಿಶ್ಚಿಂತಯಾಮಾಸ ಶಾಪೋಽಯಂ ನ ಭವೇತ್ ಕಥಮ್ ॥1॥
ತತಃ ಸ ಮಂತ್ರಯಾಮಾಸ ಭ್ರಾತೃಭಿಃ ಸಹ ಸರ್ವಶಃ |
ಐರಾವತಪ್ರಭೃತಿಭಿರ್ಯೇ ಸ್ಮ ಧರ್ಮಪರಾಯಣಾಃ ॥2॥
ತಾಯಿಯ ಶಾಪವನ್ನು ತಿಳಿದ ಸರ್ಪಶ್ರೇಷ್ಠನಾದ ವಾಸುಕಿಯು ಈ ಶಾಪವನ್ನು ನಿವಾರಿಸುವುದು ಹೇಗೆ ಎಂದು ಚಿಂತಿಸಿದನು. ಆಗ ಅವನು ಐರಾವತ ಮೊದಲಾದ ಧರ್ಮಪರಾಯಣರಾದ ಎಲ್ಲಾ ಸಹೋದರ ಸರ್ಪಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು.
ವಾಸುಕಿಃ
ಅಯಂ ಶಾಪೋ ಯಥೋತ್ಸೃಷ್ಟೋ ವಿದಿತೋ ವಸ್ತಥಾಽನಘಾಃ |
ತಸ್ಯ ಶಾಪಸ್ಯ ಮೋಕ್ಷಾರ್ಥಂ ಮಂತ್ರಯಿತ್ವಾ ಯತಾಮಹೇ ॥3॥
ಎಲೈ ಪರಿಶುದ್ಧರಾದವರೇ, ಈ ಶಾಪವು ಬಂದ ರೀತಿಯು ನಿಮಗೆ ತಿಳಿದಿದೆ. ನಾವು ಮಂತ್ರಾಲೋಚನೆಯನ್ನು ಮಾಡಿ ಆ ಶಾಪದ ವಿಮೋಚನೆಗಾಗಿ ಪ್ರಯತ್ನವನ್ನು ಮಾಡೋಣ.
ಸರ್ವೇಷಾಮಪಿ ಶಾಪಾನಾಂ ಪ್ರತಿಘಾತೋ ಹಿ ವಿದ್ಯತೇ |
ನ ತು ಮಾತ್ರಾಽಭಿಶಪ್ತಾನಾಂ ಮೋಕ್ಷೋ ವಿದ್ಯೇತ ಪನ್ನಗಾಃ ॥4॥
ಸರ್ವಶಾಪಗಳಿಗೂ ಒಂದು ಪ್ರತೀಕಾರವು ಇರುತ್ತದೆ. ಆದರೆ, ಎಲೈ ಸರ್ಪಗಳೇ, ತಾಯಿಯು ಕೊಟ್ಟ ಶಾಪಕ್ಕೆ ಯಾವ ಪ್ರತೀಕಾರವೂ ಕಾಣುವುದಿಲ್ಲ.
ಅವ್ಯಯಸ್ಯಾಪ್ರಮೇಯಸ್ಯ ಸತ್ಯಸ್ಯ ಚ ತಥಾಗ್ರತಃ |
ಶಪ್ತಾ ಇತ್ಯೇವ ಮೇ ಶ್ರುತ್ವಾ ಜಾಯತೇ ಹೃದಿ ವೇಪಥುಃ ॥5॥
ಅಪ್ರಮೇಯಮಹಿಮರೂ, ಶಾಶ್ವತರೂ ಆದ ಬ್ರಹ್ಮದೇವರ ಎದುರಿನಲ್ಲಿ ತಾಯಿಯು ಶಾಪವನ್ನು ಕೊಟ್ಟಳು ಎಂದು ಕೇಳಿ ನನ್ನ ಹೃದಯವು ನಡುಗುತ್ತಿದೆ.
`ಸತ್ಯಃ ಕೋ ಹಂಸವಾಹನಃ' ಎಂಬ ಕೋಶಕ್ಕೆ ಅನುಗುಣವಾಗಿ ಸತ್ಯ ಎಂದರೆ ಬ್ರಹ್ಮದೇವರು ಎಂದು ಅರ್ಥ. ಕದ್ರುವು ಶಾಪವನ್ನು ಕೊಟ್ಟಾಗ ಅಲ್ಲಿ ದೈವವಶಾತ್ ಬ್ರಹ್ಮದೇವರು ಇದ್ದರು ಎಂಬ ಸಂಗತಿಯು ಈ ಶ್ಲೋಕದಿಂದ ತಿಳಿದುಬರುತ್ತದೆ.
ನೂನಂ ಸರ್ವವಿನಾಶೋಽಯಮಸ್ಮಾಕಂ ಸಮುದಾಹೃತಃ |
ನ ಹ್ಯಸ್ಮಾನ್ ಸೋಽವ್ಯಯೋ ದೇವಃ ಶಪಂತೀಂ ಪ್ರತ್ಯಷೇಧಯತ್ ॥6॥
ನಿಶ್ಚಿತವಾಗಿ ನಮ್ಮೆಲ್ಲರ ವಿನಾಶವು ಉದ್ದಿಷ್ಟವಾಗಿದೆ ಎಂದು ತೋರುತ್ತದೆ. ಅವ್ಯಯರಾದ ಬ್ರಹ್ಮದೇವರು ನಮಗೆ ಶಾಪವನ್ನು ಕೊಡುವ ನಮ್ಮ ತಾಯಿಯನ್ನು ಪ್ರತಿಷೇಧಿಸಲಿಲ್ಲ.
ತಸ್ಮಾತ್ ಸಮ್ಮಂತ್ರಯಾಮೋಽದ್ಯ ಭುಜಂಗಾನಾಮನಾಮಯಮ್ |
ಯಥಾ ಭವೇಚ್ಚ ಸರ್ವೇಷಾಂ ಮಾ ನಃ ಕಾಲೋಽತ್ಯಗಾದಯಮ್ ॥
ಆದ್ದರಿಂದ ನಾವೆಲ್ಲರೂ ಸೇರಿ ಸರ್ಪಗಳಿಗೆ ಏನು ಮಾಡಿದರೆ ಕ್ಷೇಮವಾಗುತ್ತದೆ ಎಂದು ಈ ದಿನ ಮಂತ್ರಾಲೋಚನೆ ಮಾಡೋಣ. ಈ ಕಾಲವನ್ನು ವ್ಯರ್ಥವಾಗಿ ಕಳೆಯುವುದು ಬೇಡ.
ಅಪಿ ಮಂತ್ರಯಮಾಣಾ ಹಿ ಹೇತುಂ ಪಶ್ಯಾಮ ಮೋಕ್ಷಣೇ |
ಯಥಾ ನಷ್ಟಂ ಪುರಾ ದೇವೋ ಗೂಢಮಗ್ನಿಂ ಗುಹಾಗತಮ್ ॥8॥
ಹೀಗೆ ಮಂತ್ರಾಲೋಚನೆಯನ್ನು ಮಾಡಿದರೆ, ಹಿಂದೆ ಭೃಗುಋಷಿಗಳ ಶಾಪದಿಂದ ನಷ್ಟನಾಗಿ ಪರ್ವತದ ಗುಹೆಯಲ್ಲಿ ಅಡಗಿದ್ದ ಅಗ್ನಿಯನ್ನು ಬ್ರಹ್ಮದೇವರು ನೋಡಿದಂತೆ ನಮಗೂ ಒಂದು ಉಪಾಯವು ಗೋಚರಿಸುತ್ತದೆ.
ಯಥಾ ಸ ಯಜ್ಞೋ ನ ಭವೇದ್ ಯಥಾ ಚಾಪಿ ಪರಾಭವೇತ್ |
ಜನಮೇಜಯಸ್ಯ ಸರ್ಪಾಣಾಂ ವಿನಾಶಕರಣಂ ಹಿತಮ್ ॥9॥
ಹೇಗೆ ಮಾಡಿದರೆ ಆ ಯಜ್ಞವೇ ನಡೆಯುವುದಿಲ್ಲವೋ ಅಥವಾ ಜನಮೇಜಯನಿಗೆ ಹಿತವಾದ ಎಲ್ಲಾ ಸರ್ಪಗಳ ವಿನಾಶಕ್ಕೆ ಕಾರಣವಾದ ಆ ಯಜ್ಞವು ಪ್ರಾರಂಭವಾದರೂ ಮಧ್ಯದಲ್ಲಿಯೇ ನಿಂತುಹೋಗುತ್ತದೆಯೋ ಅಂತಹ ಉಪಾಯವನ್ನು ಕುರಿತು ಮಂತ್ರಾಲೋಚನೆಯನ್ನು ಮಾಡೋಣ.
ಸೂತಃ
ತಥೇತ್ಯುಕತ್ವ ತತಃ ಸರ್ವೇ ಕಾದ್ರವೇಯಾಃ ಸಮಾಗತಾಃ |
ಸಮಯಂ ಚಕ್ರಿರೇ ತತ್ರ ಮಂತ್ರಬುದ್ಧಿವಿಶಾರದಾಃ ॥10॥
ಆಗ ಕದ್ರುವಿನ ಮಕ್ಕಳಾದ ಎಲ್ಲಾ ಸರ್ಪಗಳೂ ಅಲ್ಲಿಗೆ ಬಂದು ಮಂತ್ರಾಲೋಚನೆಯಲ್ಲಿ ನಿಪುಣರಾದ ಅವರೆಲ್ಲರೂ ಒಂದು ಉಪಾಯವನ್ನು ಹುಡುಕುತ್ತೇವೆ ಎಂದು ಪ್ರತಿಜ್ಞೆ ಮಾಡಿ ಅಲ್ಲಿ ಕುಳಿತರು.
ಏಕೇ ತತ್ರಾಬ್ರುವನ್ ನಾಗಾ ವಯಂ ಭೂತ್ವಾ ದ್ವಿಜೋತ್ತಮಾಃ |
ಜನಮೇಜಯಂ ತಂ ಭಿಕ್ಷಾಮೋ ಯಜ್ಞಸ್ತೇ ನ ಭವೇದಿತಿ ॥11॥
ಅಲ್ಲಿ ಕೆಲವು ಸರ್ಪಗಳು ನಾವು ಬ್ರಾಹ್ಮಣಶ್ರೇಷ್ಠರಾಗಿ ರೂಪವನ್ನು ತಾಳಿ ಜನಮೇಜಯನ ಬಳಿಗೆ ಹೋಗಿ ಈ ಯಜ್ಞವು ನಡೆಯುವುದು ಬೇಡ ಎಂದು ಅವನಲ್ಲಿ ಭಿಕ್ಷೆಯನ್ನು ಬೇಡೋಣ ಎಂದು ಹೇಳಿದವು.
ಅಪರೇ ತ್ವಬ್ರುವನ್ ನಾಗಾಸ್ತತ್ರ ಪಂಡಿತಮಾನಿನಃ |

ಮಂತ್ರಿಣೋಽಸ್ಯ ವಯಂ ಸರ್ವೇ ಭವಿಷ್ಯಾಮಃ ಸುಸತ್ತಮಾಃ ॥12॥
ತಾವು ಮೇಧಾವಿಗಳೆಂದು ಭಾವಿಸಿದ್ದ ಇನ್ನೂ ಕೆಲವು ಸರ್ಪಗಳು ನಾವು ಅವನ ಬಳಿಗೆ ಹೋಗಿ ಅವನ ಶ್ರೇಷ್ಠರಾದ ಮಂತ್ರಿಗಳಾಗೋಣ.
ಸ ನಃ ಪೃಚ್ಛತಿ ಕಾರ್ಯೇಷು ಸರ್ವೇಷ್ವರ್ಥವಿನಿಶ್ಚಯಮ್ |
ತತ್ರ ಬುದ್ಧಿಂ ಪ್ರವಕ್ಷ್ಯಾಮೋ ಯಥಾ ಯಜ್ಞೋ ನ ವರ್ತತೇ ॥13॥
ಅವನ ಎಲ್ಲಾ ಕಾರ್ಯಗಳಲ್ಲಿಯೂ, ಅದರ ಅನುಷ್ಠಾನದ ವಿಷಯದಲ್ಲಿ ನಮ್ಮನ್ನು ಕೇಳುತ್ತಾನೆ. ಆಗ ಅವನಿಗೆ ಬುದ್ಧಿಯನ್ನು ಹೇಳಿ ಯಜ್ಞವು ನಡೆಯದಂತೆ ಮಾಡೋಣ.
ಸ ನೋ ಬಹುಮತಾನ್ ರಾಜಾ ಬುದ್ಧೌ ಬುದ್ಧಿಮತಾಂ ವರಃ |
ಯಜ್ಞಾರ್ಥಂ ಪೃಚ್ಛತಿ ವ್ಯಕ್ತಂ ನೇತಿ ವಕ್ಷ್ಯಾಮಹೇ ವಯಮ್ ॥14॥
ಮೇಧಾವಿಗಳಲ್ಲಿ ಶ್ರೇಷ್ಠನಾದ ಆ ರಾಜನು ನಮ್ಮನ್ನು ಬುದ್ಧಿವಿಶಾರದರೆಂದು ತಿಳಿದವನಾಗಿ ಯಜ್ಞದ ಸಲುವಾಗಿ ನಮ್ಮನ್ನು ಕೇಳುತ್ತಾನೆ. ಆಗ ನಾವು ಯಜ್ಞವನ್ನು ಮಾಡುವುದು ಬೇಡ ಎಂದು ಹೇಳೋಣ.
ದರ್ಶಯಂತೋ ಬಹೂನ್ ಪ್ರೇತ್ಯ ಚೇಹ ಸುದಾರುಣಾನ್ |
ಹೇತುಭಿಃ ಕಾರಣೈಶ್ಚೈವ ಯಥಾ ಯಜ್ಞೋ ಭವೇನ್ನ ಸಃ ॥15॥
ಯಜ್ಞದಲ್ಲಿ ಪ್ರಾಣಿಹಿಂಸೆ ಇರುವುದರಿಂದ ಅದರಿಂದ ದಾರುಣವಾದ ದೋಷವು ಉಂಟಾಗುವುದೆಂದೂ, ಒಂದುಪಕ್ಷ ಯಜ್ಞವನ್ನು ಮಾಡಿದರೂ ಮೃತನಾದ ನಿನ್ನ ತಂದೆಯು ಪುನಃ ಬರುವುದಿಲ್ಲವೆಂದೂ ಹೇಳಿ, ಆ ಯಜ್ಞವು ನಡೆಯದಂತೆ ಮಾಡೋಣ.
ಅಥವಾ ಯ ಉಪಾಧ್ಯಾಯೋ ಯಜ್ಞೇ ತಸ್ಯ ಭವಿಷ್ಯತಿ |
ಸರ್ಪಸತ್ರವಿಧಾನಜ್ಞೋ ರಾಜಕಾರ್ಯಹಿತೇ ರತಃ ॥16॥
ತಂ ಗತ್ವಾ ದಶತಾಂ ಕಶ್ಚಿದ್ ಭುಜಗಃ ಸ ಮರಿಷ್ಯತಿ |
ತಸ್ಮಿನ್ ಹತೇ ಯಜ್ಞಕಾರೇ ಯಜ್ಞೋಽಸೌ ನ ಭವಿಷ್ಯತಿ ॥17॥
ಅಥವಾ ಅವನ ಯಜ್ಞದಲ್ಲಿ ರಾಜಕಾರ್ಯದಲ್ಲಿ ನಿರತನಾದ ಮತ್ತು ರಾಜಹಿತದಲ್ಲೇ ತತ್ಪರನಾದ, ಸರ್ಪಯಾಗ ವಿಧಾನವನ್ನು ತಿಳಿದ ಒಬ್ಬ ಪುರೋಹಿತನಿರುತ್ತಾನಷ್ಟೇ. ನಮ್ಮಲ್ಲಿ ಯಾವುದಾದರೂ ಒಂದು ಸರ್ಪವು ಹೋಗಿ ಅವನನ್ನು ಕಡಿಯಬೇಕು. ಅವನು ಮರಣವನ್ನು ಹೊಂದುವನು. ಯಜ್ಞವನ್ನು ಮಾಡುವ ಪುರೋಹಿತನು ಮರಣವನ್ನು ಹೊಂದುತ್ತಿರಲು ಯಜ್ಞವು ತಾನಾಗಿಯೇ ನಿಂತುಹೋಗುವುದು.
ಯೇ ಚಾನ್ಯೇ ಸರ್ಪಸತ್ರಜ್ಞಾ ಭವಿಷ್ಯಂತ್ಯತ್ರ ಋತ್ವಿಜಃ |
ತಾನ್ ಸರ್ವಾನ್ ವೈ ದಶಿಷ್ಯಾಮಃ ಕೃತುರ್ನೈವಂ ಭವಿಷ್ಯತಿ ॥18॥
ಅಲ್ಲಿ ಸರ್ಪಸತ್ರ ವಿಧಾನವನ್ನು ತಿಳಿದ ಬೇರೆ ಋತ್ವಿಜರು ಯಾರಾದರೂ ಇದ್ದರೆ, ಅವರೆಲ್ಲರನ್ನೂ ಕಡಿದು ಮೃತ್ಯುವಶರನ್ನಾಗಿ ಮಾಡೋಣ. ಹಾಗೆ ಮಾಡಿದರೆ, ಯಾಗವು ನಡೆಯುವುದಿಲ್ಲ.
ತತ್ರಾಪರೇ ಮಂತ್ರಯಂತಿ ಧರ್ಮಾತ್ಮಾನೋ ಭುಜಂಗಮಾಃ |
ಅಬುದ್ಧಿರೇಷಾ ಯುಷ್ಮಾಕಂ ಬ್ರಹ್ಮಹತ್ಯಾ ನ ಶೋಭನಾ ॥19॥
ಆಗ ಅಲ್ಲಿ ಧರ್ಮಬುದ್ಧಿಯುಳ್ಳ ಬೇರೆ ಅನೇಕ ಸರ್ಪಗಳು ಹೀಗೆ ಮಂತ್ರಾಲೋಚನೆಯನ್ನು ಮಾಡಿ ಹೇಳಿದವು. ಈ ನಿಮ್ಮ ಬುದ್ಧಿಯು ಸರಿಯಾದುದಲ್ಲ. ಬ್ರಹ್ಮಹತ್ಯವು ಎಂದೂ ಒಳ್ಳೆಯದಲ್ಲ.
ಸಂಪತ್ ಸುಧರ್ಮಮೂಲಾ ವೈ ವ್ಯಸನೇ ಶಾಂತಿರುತ್ತಮಾ |
ಅಧರ್ಮೋತ್ತರತಾ ನಾಮ ವ್ಯಕ್ತಂ ವ್ಯಾಪಾದ್ಯತೇ ಜಗತ್ ॥20॥
ಶ್ರೇಷ್ಠವಾದ ಧರ್ಮದಿಂದಲೇ ಸಂಪತ್ತು ಉಂಟಾಗುತ್ತದೆ. ಕಷ್ಟಕ್ಕೆ ಸಿಲುಕಿದಾಗ ಶಾಂತಿಯಿಂದಿರುವುದು ಶ್ರೇಷ್ಠವಾದುದು. ಅಧರ್ಮವನ್ನು ಆಚರಿಸಿದರೆ, ಅನಂತರದಲ್ಲಿ ಆ ಅಧರ್ಮವು ಜಗತ್ತನ್ನೇ (ನಮ್ಮನ್ನೇ) ನಾಶಮಾಡುತ್ತದೆ.
ಅಪರೇ ತ್ವಬ್ರುವನ್ ನಾಗಾಃ ಸಮಿದ್ಧಂ ಜಾತವೇದಸಮ್ |
ವರ್ಷೈರ್ನಿರ್ವಾಪಯಿಷ್ಯಾಮೋ ಮೇಘಾ ಭೂತ್ವಾ ಸವಿದ್ಯುತಃ ॥21॥
ಇನ್ನೂ ಕೆಲವು ಸರ್ಪಗಳು, ನಾವು ಮಿಂಚುಗಳಿಂದ ಕೂಡಿದ ಮೇಘಗಳಾಗಿ ಉರಿಯುತ್ತಿರುವ ಅಗ್ನಿಯನ್ನು ಮಳೆಯ ಧಾರೆಗಳಿಂದ ಶಾಂತವನ್ನಾಗಿ ಮಾಡೋಣ ಎಂದು ಹೇಳಿದವು.
ಸ್ರುಗ್ಭಾಂಡಾನ್ ನಿಶಿ ಗತ್ವಾ ಚಾಪ್ಯಪರೇ ಭುಜಗೋತ್ತಮಾಃ |
ಪ್ರಮತ್ತಾನಾಂ ಹರಂತ್ವಾಶು ವಿಘ್ನ ಏವಂ ಭವಿಷ್ಯತಿ ॥22॥
ಕೆಲವು ಸರ್ಪಗಳು ರಾತ್ರಿಯಲ್ಲಿ ಹೋಗಿ ಋತ್ವಿಜರು ಗಮನಿಸದಿರುವಂತೆ ಅವರ ಸ್ರುಗ್ಭಾಂಡಗಳನ್ನು ಅಪಹರಿಸೋಣ. ಆಗ ಯಜ್ಞಕ್ಕೆ ವಿಘ್ನವು ಉಂಟಾಗುವುದು.
ಯಜ್ಞೇ ವಾ ಭುಜಗಾಸ್ತಸ್ಮಿನ್ ಶತಶೋಽಥ ಸಹಸ್ರಶಃ |
ಜನಂ ದಶಂತು ವೈ ಸರ್ವಮೇವಂ ತ್ರಾಸೋ ಭವಿಷ್ಯತಿ ॥23॥
ಅಥವಾ ಆ ಯಜ್ಞದಲ್ಲಿ ನೂರಾರು ಸಾವಿರಾರು ಸಂಖ್ಯೆಯಲ್ಲಿ ಹೋಗಿ ಅಲ್ಲಿಗೆ ಬಂದ ಜನಗಳನ್ನೆಲ್ಲಾ ಸರ್ಪಗಳು ಕಡಿಯಲಿ. ಆಗ ಎಲ್ಲರಿಗೂ ಹೆದರಿಕೆ ಉಂಟಾಗಿ ಯಜ್ಞವು ನಿಂತು ಹೋಗುತ್ತದೆ.
ಅಥವಾ ಸಂಸ್ಕೃತಂ ಭೋಜ್ಯಂ ದೂಷಯಂತು ಭುಜಂಗಮಾಃ |
ಸ್ವೇದಮೂತ್ರಪುರೀಷೇಣ ಸರ್ವಭೋಜ್ಯವಿನಾಶನಮ್ ॥24॥
ಅಥವಾ ಸರ್ಪಗಳು ಅಲ್ಲಿ ಸಿದ್ಧಪಡಿಸಿದ ಅನ್ನವನ್ನು ತಮ್ಮ ಬೆವರು, ಮೂತ್ರ ಮತ್ತು ಮಲಗಳಿಂದ ದೂಷಿಸಿ, ಎಲ್ಲಾ

ಭೋಜ್ಯಪದಾರ್ಥಗಳನ್ನೂ ನಾಶಮಾಡಲಿ.
ಅಪರೇ ತ್ವಬ್ರುವಂಸ್ತತ್ರ ಋತ್ವಿಜೋಽಸ್ಯ ಭವಾಮಹೇ |
ಯಜ್ಞವಿಘ್ನಂ ಕರಿಷ್ಯಾಮೋ ದೀಯತಾಂ ದಕ್ಷಿಣಾ ಇತಿ |
ವಶ್ಯತಾಂ ಚಾಗಾತೋಽಸೌ ನಃ ಕರಿಷ್ಯತಿ ಯಥೇಪ್ಸಿತಮ್ ॥25॥
ಆಗ ಇನ್ನೂ ಕೆಲವು ಸರ್ಪಗಳು ನಾವು ಹೋಗಿ ಅವನ ಋತ್ವಿಜರಾಗಿ ನಮಗೆ ದಕ್ಷಿಣೆಯನ್ನು ಕೊಡು ಎಂದು ಕೇಳಿ ಯಜ್ಞವನ್ನು ಅರ್ಧದಲ್ಲಿಯೇ ನಿಲ್ಲಿಸೋಣ. ನಮಗೆ ವಶವಾಗಿರುವ ಅವನು ನಾವು ಹೇಳಿದಂತೆಯೇ ಮಾಡಬೇಕಾಗುವುದು ಎಂದು ಹೇಳಿದವು.
ಅಪರೇ ತ್ವಬ್ರುವನ್ ನಾಗಾ ಜಲೇ ಪ್ರಕ್ರೀಡಿತಂ ನೃಪಮ್ |
ಗೃಹಮಾನೀಯ ಬಧ್ನೀಮಃ ಕ್ರತುರೇವಂ ಭವೇನ್ನ ಸಃ ॥26॥
ಇನ್ನೂ ಕೆಲವು ಸರ್ಪಗಳು ಜಲಕ್ರೀಡೆಗಾಗಿ ನೀರಿನಲ್ಲಿ ಇಳಿದ ರಾಜನನ್ನು ನಮ್ಮ ಮನೆಗೆ ತಂದು ಕಟ್ಟಿಹಾಕೋಣ. ಹೀಗೆ ಮಾಡಿದರೆ, ಆ ಯಜ್ಞವು ನಡೆಯುವುದಿಲ್ಲ ಎಂದು ಹೇಳಿದವು.
ಅಪರೇ ತ್ವಬ್ರುವಂಸ್ತತ್ರ ನಾಗಾಃ ದುಷ್ಕೃತಕಾರಿಣಃ |
ದಶಾಮ್ಯೈನಂ ಪ್ರಗೃಹ್ಯಾಶು ಕ್ರತುರ್ನೈವ ಭವಿಷ್ಯತಿ ॥27॥
ಇನ್ನೂ ಕೆಲವು ದುಷ್ಟಬುದ್ಧಿಯುಳ್ಳ ಸರ್ಪಗಳು ಅವನನ್ನು ಹಿಡಿದು ಕಚ್ಚೋಣ. ಆಗ ಯಜ್ಞವು ನಡೆಯುವುದಿಲ್ಲ ಎಂದು ಹೇಳಿದವು.
ಏಷಾ ನೋ ನೈಷ್ಠಿಕೀ ಬುದ್ಧಿಃ ಸರ್ವೇಷಾಮೇವ ಸಮ್ಮತಾ |
ಯಥಾ ವಾ ಮನ್ಯಸೇ ರಾಜಂಸ್ತತ್ ಕ್ಷಿಪ್ರಂ ಸಂವಿಧೀಯತಾಮ್ |
ಸರ್ಪರಾಜನಾದ ವಾಸುಕಿಯೇ, ಇದು ನಮ್ಮೆಲ್ಲರಿಗೂ ಸಮ್ಮತವಾದ, ದೃಢವಾದ ನಿರ್ಧಾರ. ನಿನ್ನ ಅಭಿಪ್ರಾಯವು ಹೇಗಿದೆಯೋ ಅದರಂತೆ ಬೇಗ ಏನಾದರೂ ಮಾಡು.
ಇತ್ಯುಕತ್ವ ಸಮುದೈಕ್ಷಂತ ವಾಸುಕಿಂ ಪನ್ನಗೇಶ್ವರಮ್ |
ವಾಸುಕಿಶ್ಚಾಪಿ ಸಂಚಿಂತ್ಯ ತಾನುವಾಚ ಭುಜಂಗಮಾನ್ ॥29॥
ಹೀಗೆ ಹೇಳಿ ಆ ಸರ್ಪಗಳು ಸರ್ಪರಾಜನಾದ ವಾಸುಕಿಯ ಮುಖವನ್ನು ನೋಡಿದವು. ವಾಸುಕಿಯಾದರೋ, ಚೆನ್ನಾಗಿ ಚಿಂತಿಸಿ ಆ ಸರ್ಪಗಳನ್ನು ಕುರಿತು ಮಾತನಾಡಿದನು.
ವಾಸುಕಿಃ
ನೈಷಾ ವೋ ನೈಷ್ಠಿಕೀ ಬುದ್ಧಿರ್ಮತಾ ಕರ್ತುಂ ಭುಜಂಗಮಾಃ |
ಸರ್ವೇಷಾಮೇವ ಮೇ ಬುದ್ಧಿಃ ಪನ್ನಗಾನಾಂ ನ ರೋಚತೇ ॥30॥
ಕಿಂ ತ್ವತ್ರ ಸಂವಿಧಾತವ್ಯಂ ಭವತಾಂ ಯದ್ಧಿತಂ ಭವೇತ್ |
ಅನೇನಾಹಂ ಭೃಶಂ ತಪ್ಯೇ ಗುಣದೋಷೌ ಮದಾಶ್ರಿತೌ ॥31॥
ಎಲೈ ಸರ್ಪಗಳೇ, ನಿಮ್ಮ ಈ ನಿರ್ಧಾರಿತವಾದ ಬುದ್ಧಿಯಂತೆ ನಡೆದುಕೊಳ್ಳಲು ಸಾಧ್ಯವಿಲ್ಲ. ನೀವು ಹೇಳಿದ ಯಾವ ಮಾತುಗಳೂ ನನಗೆ ಶೋಭಿಸುತ್ತಿಲ್ಲ. ಆದರೂ ನಿಮಗೆ ನಾನು ಹಿತವನ್ನು ಮಾಡಲೇಬೇಕು. ಅದಕ್ಕಾಗಿ ನಾನು ಬಹಳ ತಾಪವನ್ನು ಅನುಭವಿಸುತ್ತಿದ್ದೇನೆ. ನಾನು ಏನು ಮಾಡುವೆನೋ ಅದರ ಗುಣದೋಷಗಳ ಜವಾಬ್ದಾರಿಯು ನನ್ನದೇ ಆಗಿರುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ದ್ವಾತ್ರಿಂಶೋಽಧ್ಯಾಯಃ॥
॥ ಇತಿ ಆಸ್ತೀಕಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.

ಮೂವತ್ಮೂರನೆಯ ಅಧ್ಯಾಯ
(ಏಲಾಪತ್ರನೆಂಬ ನಾಗನಿಂದ ಶಾಪಮೋಕ್ಷೋಪಾಯ ಸೂಚನೆ.)
ಸೂತಃ
ಶ್ರುತ್ವಾ ತು ವಚನಂ ತೇಷಾಂ ಸರ್ವೇಷಾಮಪಿ ಚೈವ ಹಿ |
ವಾಸುಕೇಶ್ಚ ವಚಃ ಶ್ರುತ್ವಾ ಏಲಾಪತ್ರೋಽಬ್ರವೀದಿದಮ್ ॥1॥
ಅವರೆಲ್ಲರ ಮಾತುಗಳನ್ನೂ ಕೇಳಿ, ವಾಸುಕಿಯ ಮಾತನ್ನೂ ಕೇಳಿ, ಏಲಾಪತ್ರನೆಂಬ ನಾಗನು ಈ ಮಾತುಗಳನ್ನು ಆಡಿದನು.
ಏಲಾಪತ್ರಃ
ನ ಸ ಯಜ್ಞೋ ನ ಭವಿತಾ ಸ ಚ ರಾಜಾ ತಥಾವಿಧಃ |
ಜನಮೇಜಯಃ ಪಾಂಡವೇಯೋ ಯತೋಽಸ್ಮಾಕಮಿದಂ ಭಯಮ್ ॥
ಆ ಯಜ್ಞವು ನಡೆಯುವುದಿಲ್ಲ ಎಂಬುದು ಇಲ್ಲ. ಪಾಂಡುವಂಶದಲ್ಲಿ ಹುಟ್ಟಿದ, ನಮ್ಮ ಭಯಕ್ಕೆ ಕಾರಣನಾದ ಜನಮೇಜಯರಾಜನಾದರೋ ಮೃತ್ಯುವಶನಾಗುತ್ತಾನೆ ಎಂಬುದೂ ಇಲ್ಲ. (ಯಜ್ಞವನ್ನು ನಿಲ್ಲಿಸಲು ಅಥವಾ ರಾಜನನ್ನು ಕೊಲ್ಲಲು ಸಾಧ್ಯವಾಗುವುದಿಲ್ಲ ಎಂದು ಅಭಿಪ್ರಾಯ.)
ದೈವೇನೋಪಹತಂ ರಾಜನ್ ನ ಕರ್ತವ್ಯಂ ಚ ಪೌರುಷಮ್ |
ಸ ದೈವಮೇವಾಶ್ರಿಯೇತ ನಾನ್ಯತ್ ತತ್ರ ಪರಾಯಣಮ್ ॥3॥
ಎಲೈ ರಾಜನಾದ ವಾಸುಕಿಯೇ, ದೈವವು ವಿರುದ್ಧವಾಗಿರುವಾಗ ಪುರುಷಪ್ರಯತ್ನವನ್ನು ಮಾಡಬಾರದು. ನಾವೂ ದೈವವನ್ನೇ ಆಶ್ರಯಿಸಬೇಕು. ಅದನ್ನು ಬಿಟ್ಟು ಬೇರೆ ಶ್ರೇಷ್ಠವಾದ ಗತಿಯಿಲ್ಲ

ತದಿದಂ ದೈವಮಸ್ಮಾಕಂ ಭಯಂ ಪನ್ನಗಸತ್ತಮಾಃ |
ದೈವಮೇವಾಶ್ರಯಾಮೋಽತ್ರ ಶೃಣುಧ್ವಂ ಚ ವಚೋ ಮಮ ॥4॥
ಎಲೈ ಪನ್ನಗಶ್ರೇಷ್ಠರೇ, ನಮಗೆ ಉಂಟಾಗಿರುವ ಈ ಭಯವು ದೈವದಿಂದಲೇ ಉಂಟಾಗಿದೆ. ಆದ್ದರಿಂದ ನಾವು ದೈವವನ್ನೇ ಆಶ್ರಯಿಸೋಣ. ನನ್ನ ಮಾತನ್ನು ಕೇಳಿ.
ಅಹಂ ಶಾಪೇ ಸಮುತ್ಸೃಷ್ಟೇ ಸಮಶ್ರೌಷಂ ವಚಸ್ತದಾ |
ಮಾತುರುತ್ಸಂಗಮಾರೂಢೋ ಭಯಾತ್ ಪನ್ನಗಸತ್ತಮಾಃ ॥5॥
ದೇವಾನಾಂ ಪನ್ನಗಶ್ರೇಷ್ಠಾ ತೀಕ್ಷ್ಣಾ ಇತಿ ವಚಃ ಪ್ರಭೋ
ಪಿತಾಮಹಮುಪಾಗಮ್ಯ ದುಃಖಾರ್ತಾನಾಂ ಮಹಾತ್ಮನಾಮ್ ॥6॥
ನಾನು ನನ್ನ ತಾಯಿಯು ಶಾಪವನ್ನು ಕೊಟ್ಟಾಗ ಅವಳ ತೊಡೆಯ ಮೇಲೆ ಕುಳಿತು ದೇವತೆಗಳ ಜೊತೆಯಲ್ಲಿ ಬಂದ ಬ್ರಹ್ಮದೇವರನ್ನು ನೋಡಿ, ಗಾಬರಿಯಿಂದ ತಾಯಿಯ ತೊಡೆಯ ಮೇಲೆ ಕುಳಿತು, ದೇವತೆಗಳು ಆಡಿದ ಈ ದಿತಿಯು ಬಹಳ ಕ್ರೂರಳಾದವಳು ಎಂಬ ಮಾತನ್ನು ಕೇಳಿದೆ.
ದೇವಾಃ
ಕಾ ಹಿ ಲಬ್ಧ್ವಾ ಪ್ರಿಯಾನ್ಪುತ್ರಾನ್ ಶಪೇದೇವಂ ಪಿತಾಮಹ |
ಋತೇ ಕದ್ರೂಂ ತೀಕ್ಷ್ಣರೂಪಾಂ ದೇವದೇವ ತವಾಗ್ರತಃ ॥7॥
ಎಲೈ ದೇವದೇವರಾದ ಬ್ರಹ್ಮದೇವರೇ, ಈ ಕದ್ರು ಒಬ್ಬಳನ್ನು ಬಿಟ್ಟು ಪ್ರಿಯಳಾದ ಪುತ್ರರನ್ನು ಪಡೆದ ಯಾವ ತಾಯಿಯು ತಾನೇ ನಿನ್ನ ಎದುರಿಗೆ ಇಂತಹ ಉಗ್ರವಾದ ಶಾಪವನ್ನು ಕೊಡುತ್ತಾಳೆ?
ತಥೇತಿ ಚ ವಚಸ್ತಸ್ಯಾಸ್ತ್ವಯಾಪ್ಯುಕ್ತಂ ಪಿತಾಮಹ |
ಏತದಿಚ್ಛಾಮ ವಿಜ್ಞಾತುಂ ಕಾರಣಂ ಯನ್ನ ವಾರಿತಾ ॥8॥
ಎಲೈ ಪಿತಾಮಹನೇ, ನೀನೂ ಸಹ ``ಹಾಗೆಯೇ ಆಗಲಿ'' ಎಂದು ಹೇಳಿದೆ. ನೀನು ಆ ಶಾಪವನ್ನು ತಡೆಯದೆ ಇರುವುದಕ್ಕೆ ನಾವು ಕಾರಣವನ್ನು ತಿಳಿಯಲು ಇಚ್ಛಿಸುತ್ತೇವೆ.
ಕದ್ರುದೇವಿಯು ಶಾಪವನ್ನು ಕೊಡುವಾಗ ದುಷ್ಟಸರ್ಪಗಳ ನಾಶವನ್ನು ಮಾಡಿ ಧಾರ್ಮಿಕವಾದ ಸರ್ಪಗಳ ರಕ್ಷಣೆಯನ್ನು ಮಾಡಲು ದೇವತೆಗಳ ಜೊತೆಯಲ್ಲಿ ಬ್ರಹ್ಮದೇವರು ಕದ್ರುವಿನ ನಿವಾಸಕ್ಕೆ ಬಂದಿದ್ದರು ಎಂಬ ಕಥೆಯನ್ನು ಹೇಳದಿದ್ದರೂ ಸಹ ಹೇಳಿದಂತೆಯೇ ಆಗಿದೆ.
ಬ್ರಹ್ಮಾ
ಬಹವಃ ಪನ್ನಗಾಸ್ತೀಕ್ಷ್ಣಾ ಭೀಮವೀರ್ಯಾ ವಿಷೋದ್ಬಣಾಃ |
ಪ್ರಜಾನಾಂ ಹಿತಕಾಮೋಽಹಂ ನ ಚ ವಾರಿತವಾಂಸ್ತದಾ ॥9॥
ಅನೇಕ ಸರ್ಪಗಳು ಭಯಂಕರ ಪರಾಕ್ರಮವುಳ್ಳವೂ, ತೀಕ್ಷ್ಣವಾದ ವಿಷವುಳ್ಳವೂ ಆಗಿವೆ. ಆದ್ದರಿಂದ ಪ್ರಜೆಗಳ ಹಿತವನ್ನು ಬಯಿಸಿದ ನಾನು ಆ ಸಮಯದಲ್ಲಿ ಆ ಶಾಪವನ್ನು ಪ್ರತಿಷೇಧಿಸಲಿಲ್ಲ.
ಯೇ ದಂದಶೂಕಾಃ ಕ್ಷುದ್ರಾಶ್ಚ ಪಾಪಚಾರಾ ವಿಷೋದ್ಬಣಾಃ |
ತೇಷಾಂ ವಿನಾಶೋ ಭವಿತಾ ನ ತು ಯೇ ಧರ್ಮಚಾರಿಣಃ ॥10॥
ಯಾವ ಸರ್ಪಗಳು ಕಚ್ಚುವ ಸ್ವಭಾವವುಳ್ಳದ್ದಾಗಿ, ಕ್ಷುದ್ರಗಳಾಗಿ, ಪಾಪರತಗಳಾಗಿ, ಉಲ್ಬಣವಾದ ವಿಷವನ್ನು ಹೊಂದಿರುತ್ತವೆಯೋ ಅಂತಹ ಸರ್ಪಗಳಿಗೆ ವಿನಾಶವುಂಟಾಗುವುದು. ಧರ್ಮಚಾರಿಗಳಾದ ಸರ್ಪಗಳಿಗೆ ವಿನಾಶವುಂಟಾಗುವುದಿಲ್ಲ.
ಯನ್ನಿಮಿತ್ತಶ್ಚ ಭವಿತಾ ಮೋಕ್ಷಸ್ತೇಷಾಂ ಮಹಾಭಯಾತ್ |
ಪನ್ನಗಾನಾಂ ನಿಬೋಧಧ್ವಂ ಯಥಾ ವೈ ಗದಿತಂ ಮಯಾ ॥11॥
ಅಂತಹ ಧರ್ಮಚಾರಿಗಳಾದ ಸರ್ಪಗಳಿಗೆ ಯಾವ ಕಾರಣದಿಂದ ಅಂತಹ ಮಹಾಭಯದಿಂದ ಮೋಚನೆಯುಂಟಾಗುವುದೆಂಬುದನ್ನು ನಾನು ತಿಳಿಸುತ್ತೇನೆ. ಅದನ್ನು ನೀವು ತಿಳಿಯಿರಿ.
ಯಾಯಾವರಕುಲೇ ಧೀಮಾನ್ ಭವಿಷ್ಯತಿ ಮಹಾನೃಷಿಃ |
ಜರತ್ಕಾರುರಿತಿ ಖ್ಯಾತಸ್ತೇಜಸ್ವೀ ವಿಜಿತೇಂದ್ರಿಯಃ ॥12॥
ಯಾಯಾವರಕುಲದಲ್ಲಿ ಮೇಧಾವಿಯಾದ ಜರತ್ಕಾರು ಎಂಬ ಹೆಸರಿನ ದೊಡ್ಡ ಋಷಿಗಳು ಜನಿಸುತ್ತಾರೆ. ತೇಜಸ್ವಿಗಳಾದ ಅವರು ಜಿತೇಂದ್ರಿಯರೂ, ಪ್ರಖ್ಯಾತರೂ ಆಗಿರುತ್ತಾರೆ.
ತಸ್ಯ ಪುತ್ರೋ ಜರತ್ಕಾರೋರುತ್ಪತ್ಸ್ಯತಿ ಮಹಾತಪಾಃ |
ಆಸ್ತೀಕೋ ನಾಮ ಯಜ್ಞಂ ಸ ಪ್ರತಿಷೇತ್ಸ್ಯತಿ ತಂ ತದಾ |
ತತ್ರ ಮೋಕ್ಷ್ಯಂತಿ ಭುಜಗಾ ಯೇ ಭವಿಷ್ಯಂತಿ ಧಾರ್ಮಿಕಾಃ ॥13॥
ಆ ಜರತ್ಕಾರುವಿಗೆ ಮಹಾತಪಸ್ವಿಯಾದ ಆಸ್ತೀಕನೆಂಬ ಪುತ್ರನು ಜನಿಸುವನು. ಅವನು ಹೋಗಿ ಯಜ್ಞವನ್ನು ಪ್ರತಿಷೇಧಮಾಡುತ್ತಾನೆ. ಆಗ ಧಾರ್ಮಿಕ ಸರ್ಪಗಳೆಲ್ಲವೂ ವಿಮೋಚನೆಯನ್ನು ಹೊಂದುವವು.
ದೇವಾಃ
ಸ ಮುನಿಪ್ರವರೋ ದೇವ ಜರತ್ಕಾರುರ್ಮಹಾತಪಾಃ |
ಕಸ್ಯಾಂ ಪುತ್ರಂ ಮಹಾತ್ಮಾನಂ ಜನಯಿಷ್ಯತಿ ವೀರ್ಯವಾನ್ ॥14॥
ಎಲೈ ಬ್ರಹ್ಮದೇವನೇ, ಮಹಾತಪಸ್ವಿಯೂ, ಶ್ರೇಷ್ಠಋಷಿಯೂ ವೀರ್ಯವಂತನೂ ಆದ ಜರತ್ಕಾರುವು ಯಾವ ಪತ್ನಿಯಲ್ಲಿ ಮಹಾತ್ಮನಾದ ಪುತ್ರನನ್ನು ಪಡೆಯುವನು?

ಬ್ರಹ್ಮಾ
ಸನಾಮಾಯಾಂ ಸನಾಮಾ ಸ ಕನ್ಯಾಯಾಂ ದ್ವಿಜಸತ್ತಮಃ |
ಅಪತ್ಯಂ ವೀರ್ಯವಾನ್ ದೇವಾ ವೀರ್ಯವಜ್ಜನಯಿಷ್ಯತಿ ॥15॥
ಆ ದ್ವಿಜಶ್ರೇಷ್ಠನಾದ ಜರತ್ಕಾರುವು ತನ್ನ ಹೆಸರಿನ ಕನ್ಯೆಯನ್ನೇ ವಿವಾಹ ಮಾಡಿಕೊಂಡು ಸಾಮರ್ಥ್ಯೋಪೇತನಾದ ಮಗನನ್ನು ಪಡೆಯುವವನು.
ಏಲಾಪತ್ರಃ
ಏವಮಸ್ತ್ವಿತಿ ತಂ ದೇವಾಃ ಪಿತಾಮಹಮಥಾಬ್ರುವನ್ |
ಉಕತ್ವ ಚೈವಂ ಗತಾ ದೇವಾಃ ಸ ಚ ದೇವಃ ಪಿತಾಮಹಃ ॥16॥
ಆಗ ದೇವತೆಗಳು ಬ್ರಹ್ಮದೇವರನ್ನು ಕುರಿತು ``ಹಾಗೆಯೇ ಆಗಲಿ'' ಎಂದು ಹೇಳಿದರು. ಹೀಗೆ ಹೇಳಿ ದೇವತೆಗಳೂ ಮತ್ತು ಬ್ರಹ್ಮದೇವರೂ ಸಹ ತಮ್ಮ ತಮ್ಮ ಸ್ಥಾನಗಳಿಗೆ ಹೋದರು.
ಸೋಽಹಮೇವಂ ಪ್ರಪಶ್ಯಾಮಿ ವಾಸುಕೇ ಭಗಿನೀಂ ತವ |
ಜರತ್ಕಾರುರಿತಿ ಖ್ಯಾತಾಂ ತಾಂ ತಸ್ಮೈ ಪ್ರತಿಪಾದಯ ॥17॥
ಆದ್ದರಿಂದ ನನಗೆ ಇದು ಉಪಾಯವಾಗಿ ತೋರುತ್ತದೆ. ಎಲೈ ವಾಸುಕಿಯೇ, ಜರತ್ಕಾರು ಎಂಬ ಹೆಸರಿನ ಪ್ರಸಿದ್ಧಳಾದ ನಿನ್ನ ತಂಗಿಯನ್ನು ಅವನಿಗೆ ದಾನಮಾಡು.
ಭೈಕ್ಷವದ್ ಭಿಕ್ಷಮಾಣಾಯ ನಾಗಾನಾಂ ಭಯಶಾಂತಯೇ |
ಋಷಯೇ ಸುವ್ರತಾಯ ತ್ವಮೇಷ ಮೋಕ್ಷ ಃ ಶ್ರುತೋ ಮಯಾ ॥18॥
ನಾಗಗಳಿಗೆ ಉಂಟಾದ ಭಯದ ಪರಿಹಾರಕ್ಕೋಸ್ಕರವಾಗಿ ಭಿಕ್ಷೆಯಂತೆ ಕನ್ಯೆಯನ್ನು ಬೇಡುವ ಒಳ್ಳೆಯ ವ್ರತಧಾರಿಯಾದ ಆ ಋಷಿಗೆ ನೀನು ತಂಗಿಯನ್ನು ಕೊಡು. ಇದು ಶಾಪಮೋಚನೆಯ ಉಪಾಯ. ಇದನ್ನು ನಾನು ಹಿಂದೆ ಕೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ತ್ರಯತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತಮೂರನೆಯ ಅಧ್ಯಾಯ ಮುಗಿಯಿತು.
*****

ಮೂವತ್ನಾಲ್ಕನೆಯ ಅಧ್ಯಾಯ
(ಏಲಾಪತ್ರನ ವಚನದಂತೆ ವಾಸುಕಿಯಿಂದ ತಂಗಿಯ ರಕ್ಷಣೆ. ದೇವತೆಗಳಿಗೆ ಬ್ರಹ್ಮದೇವರ ಹಿತವಚನ.)
ಸೂತಃ
ಏಲಾಪತ್ರಸ್ಯ ತು ವಚಃ ಶ್ರುತ್ವಾ ನಾಗಾ ದ್ವಿಜೋತ್ತಮ |
ಸರ್ವೇ ತೇ ಹೃಷ್ಟಮನಸಃ ಸಾಧು ಸಾಧ್ವಿತ್ಯಪೂಜಯನ್ ॥ 1 ॥
ಎಲೈ ಬ್ರಾಹ್ಮಣಶ್ರೇಷ್ಠನೇ, ಏಲಾಪತ್ರನ ಮಾತುಗಳನ್ನು ಕೇಳಿ ಎಲ್ಲಾ ನಾಗಗಳೂ ಸಂತೋಷದಿಂದ ಕೂಡಿದವುಗಳಾಗಿ ``ಒಳ್ಳೆಯದು, ಒಳ್ಳೆಯದು'' ಎಂದು ಪ್ರಶಂಸಿಸಿದವು.
ತತಃ ಪ್ರಭೃತಿ ತಾಂ ಕನ್ಯಾಂ ವಾಸುಕಿಃ ಪರ್ಯರಕ್ಷತ |
ಜರತ್ಕಾರುಂ ಸ್ವಸಾರಂ ವೈ ಮಹದ್ ಹರ್ಷಮವಾಪ ಸಃ ॥2 ॥
ಅಲ್ಲಿಂದ ಮುಂದಕ್ಕೆ ವಾಸುಕಿಯು ಬಹಳ ಸಂತೋಷದಿಂದ ಕೂಡಿದವನಾಗಿ ತಂಗಿಯಾದ ಜರತ್ಕಾರುವನ್ನು ಎಚ್ಚರಿಕೆಯಿಂದ ರಕ್ಷಣೆಮಾಡಿದನು.
ತತೋಽತೀವಮಹಾನ್ ಕಾಲಃ ಸಮತೀತ ಇವಾಭವತ್ |
ತತೋ ದೇವಾಸುರಾಃ ಸರ್ವೇ ಮಮಂಥುರ್ವರುಣಾಲಯಮ್ ॥3॥
ಅನಂತರ ಬಹಳ ಕಾಲವು ಕಳೆಯಿತು. ಆಗ ದೇವಾಸುರರು ಎಲ್ಲರೂ ಸೇರಿ ಸಮುದ್ರಮಥನವನ್ನು ಮಾಡಿದರು.
ತತ್ರ ನೇತ್ರಮಭೂನ್ನಾಗೋ ವಾಸುಕಿರ್ಬಲಿನಾಂ ವರಃ |
ಸುಸಂಸ್ಥಾಪ್ಯ ಚ ತತ್ಕರ್ಮ ಪಿತಾಮಹಮಥಾಬ್ರುವನ್ ॥4॥
ಆಗ ಬಲಿಷ್ಠನಾದ ವಾಸುಕಿಯು ಹಗ್ಗವಾಗಿ ಮಾಡಲ್ಪಟ್ಟನು. ದೇವತೆಗಳು ಸಮುದ್ರಮಥನ ಕಾರ್ಯವನ್ನು ಮುಗಿಸಿ ಬ್ರಹ್ಮದೇವರನ್ನು ಕುರಿತು ಹೇಳಿದರು.
ಭಗವನ್ ಶಾಪಭೀತೋಽಯಂ ವಾಸುಕಿಸ್ತಪ್ಯತೇ ಭೃಶಮ್ |
ತಸ್ಯೇದಂ ಮನಸಃ ಶಲ್ಯಂ ಸಮುದ್ಧರ್ತುಂ ತ್ವಮರ್ಹಸಿ ॥5॥
ಪೂಜ್ಯನೇ, ಈ ವಾಸುಕಿಯು ತಾಯಿಯ ಶಾಪದಿಂದ ಬಹಳವಾಗಿ ಹೆದರಿ ಹೋಗಿದ್ದಾನೆ. ಅವನ ಮನಸ್ಸಿನಲ್ಲಿ ಶಲ್ಯದಂತೆ ನಾಟಿರುವ ಈ ದುಃಖವನ್ನು ನೀನು ಪರಿಹರಿಸಬೇಕು.
ಜನನ್ಯಾಃ ಶಾಪಜಂ ದೇವ ಜ್ಞಾತೀನಾಂ ಹಿತಕಾಂಕ್ಷಿಣಃ |
ಭೀತೋ ಹ್ಯಯಂ ಸದಾಽಸ್ಮಾಕಂ ಪ್ರಿಯಕಾರೀ ಚ ನಾಗರಾಟ್ |
ಕುರು ಪ್ರಸಾದಂ ದೇವೇಶ ಶಮಯಾಸ್ಯ ಮನೋಜ್ವರಮ್ ॥6॥
ಎಲೈ ದೇವನೇ, ತನ್ನ ಬಂಧುಗಳ ಹಿತಕಾಂಕ್ಷಿಯಾದ ಇವನು ತಾಯಿಯ ಶಾಪದಿಂದ ಹೆದರಿದ್ದಾನೆ. ಈ ನಾಗರಾಜನು ಯಾವಾಗಲೂ

ನಮಗೆ ಪ್ರಿಯವನ್ನು ಮಾಡುವವನು ಆಗಿದ್ದಾನೆ. ಅವನ ಮನೋಜ್ವರವನ್ನು ಉಪಶಮನಗೊಳಿಸು.
ಬ್ರಹ್ಮಾ
ಮಯ್ಯೈವ ತತ್ ವಿತೀರ್ಣಂ ವೈ ವಚನಂ ಮನಸಾಽಮರಾಃ |
ಏಲಾಪತ್ರೇಣ ನಾಗೇನ ಯದತ್ರಾಭಿಹಿತಂ ಪುರಾ ॥7॥
ತತ್ ಕರೋತ್ವೇಷ ನಾಗೇಂದ್ರಃ ಕಾಲೇ ಪ್ರಾಪ್ತೇ ವಚಸ್ತದಾ |
ವಿನಶಿಷ್ಯಂತಿ ಯೇ ಪಾಪಾ ನ ತು ತೇ ಧರ್ಮಚಾರಿಣಃ ॥8॥
ಎಲೈ ದೇವತೆಗಳೇ, ಈ ಶಾಪವಿಮೋಚನೆಯು ನನ್ನಿಂದಲೇ ಮೊದಲು ಮನಸ್ಸಿನಲ್ಲಿಯೇ ಸಂಕಲ್ಪಿಸಲ್ಪಟ್ಟಿದೆ. ಹಿಂದೆ ಏಲಾಪತ್ರನಾಗನು ಏನನ್ನು ಹೇಳಿದನೋ ಅದನ್ನು ಯೋಗ್ಯವಾದ ಕಾಲದಲ್ಲಿ ನಾಗೇಂದ್ರನಾದ ಈ ವಾಸುಕಿಯು ಅನುಷ್ಠಾನ ಮಾಡಲಿ. ಪಾಪಿಷ್ಠರಾದ ನಾಗಗಳು ವಿನಾಶವನ್ನು ಹೊಂದುತ್ತವೆ. ಧರ್ಮಚಾರಿಗಳಾದ ನಾಗಗಳು ವಿನಾಶವನ್ನು ಹೊಂದುವುದಿಲ್ಲ.
ಉತ್ಪನ್ನಃ ಸ ಜರತ್ಕಾರುಸ್ತಪಸ್ಯುಗ್ರೇ ರತೋ ದ್ವಿಜಃ |
ತಸ್ಯೈತಾಂ ಭಗಿನೀಂ ಕಾಲೇ ಜರತ್ಕಾರುಂ ಪ್ರಯಚ್ಛತು ॥9॥
ಆ ಜರತ್ಕಾರು ಎಂಬ ಬ್ರಾಹ್ಮಣನು ಉತ್ಪನ್ನನಾಗಿ, ಉಗ್ರವಾದ ತಪಸ್ಸಿನಲ್ಲಿ ನಿರತನಾಗಿದ್ದಾನೆ. ಯೋಗ್ಯವಾದ ಕಾಲದಲ್ಲಿ ವಾಸುಕಿಯು ಅವನಿಗೆ ತನ್ನ ತಂಗಿಯಾದ ಜರತ್ಕಾರುವನ್ನು ಕೊಡಲಿ.
ಏಲಾಪತ್ರೇಣ ಚ ವಚಸ್ತದೋಕ್ತಂ ಭುಜಗೋತ್ತಮ |
ಪನ್ನಗಾನಾಂ ಹಿತಂ ದೇವಾಸ್ತಥಾ ತನ್ನ ತದನ್ಯಥಾ ॥10॥
ಎಲೈ ಭುಜಗೋತ್ತಮನಾದ ವಾಸುಕಿಯೇ, ಏಲಾಪತ್ರನು ಆಗ ಹೇಳಿದ ಮಾತುಗಳೇ ನಾಗಗಳಿಗೆ ಹಿತವನ್ನು ಮಾಡುವಂತಹವು. ಎಲೈ ದೇವತೆಗಳೇ, ಅದನ್ನು ಹಾಗೆಯೇ ಮಾಡಬೇಕು. ಬೇರೆ ಯಾವ ದಾರಿಯೂ ಇಲ್ಲ.
ಸೂತಃ
ಏತಚ್ಛ್ರುತ್ವಾ ಸ ನಾಗೇಂದ್ರಃ ಪಿತಾಮಹವಚಸ್ತದಾ |
ಸರ್ಪಾನ್ ಬಹೂನ್ ಜರತ್ಕಾರೋರ್ನಿತ್ಯಯುಕ್ತಃ ಸಮಾದಧಾತ್ ॥
ಜರತ್ಕಾರುರ್ಯದಾ ಭಾರ್ಯಾಮಿಚ್ಛೇದ್ ವರಯಿತುಂ ಪ್ರಭುಃ |
ಶೀಘ್ರಮೇತ್ಯ ಮಮಾಽಽಖ್ಯೇಯಂ ತನ್ನಃ ಶ್ರೇಯೋ ಭವಿಷ್ಯತಿ ॥
ಬ್ರಹ್ಮದೇವರ ಈ ಮಾತುಗಳನ್ನು ಕೇಳಿದ ನಾಗೇಂದ್ರನಾದ ವಾಸುಕಿಯು ಜರತ್ಕಾರುವು ಯಾವಾಗ ಕನ್ಯಾಪೇಕ್ಷೆಯನ್ನು ಸೂಚಿಸುತ್ತಾನೆಯೋ, ಆಗ ಬೇಗ ಬಂದು ನನಗೆ ಆ ವಿಷಯವನ್ನು ತಿಳಿಸಬೇಕು. ಅದರಿಂದ ನಮಗೆ ಶ್ರೇಯಸ್ಸು ಉಂಟಾಗುವುದು ಎಂದು ಹೇಳಿ ಅನೇಕ ಸರ್ಪಗಳನ್ನು ಅಲ್ಲಲ್ಲಿ ಜರತ್ಕಾರುವಿನ ವಿಷಯವನ್ನು ತಿಳಿಯಲು ನಿಯೋಜಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುಃತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ದ್ವಾವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಮೂವತ್ತೈದನೆಯ ಅಧ್ಯಾಯ
(ಪರೀಕ್ಷಿತನ ಕಥೆ. ಶಮೀಕರ ಕುತ್ತಿಗೆಯಲ್ಲಿ ಮೃತಸರ್ಪದ ಪ್ರಕ್ಷೇಪ.)
ಶೌನಕಃ
ಜರತ್ಕಾರುರಿತಿ ಪ್ರೋಕ್ತೋ ಯಸ್ತ್ವಯಾ ಸೂತನಂದನ |
ಇಚ್ಛಾಮ್ಯೇತದಹಂ ತಸ್ಯ ಋಷೇಃ ಶ್ರೋತುಂ ಮಹಾತ್ಮನಃ ॥1॥
ಕಿಂ ಕಾರಣಂ ಜರತ್ಕಾರೋರ್ನಾಮೈತತ್ ಪ್ರಥಿತಂ ಭುವಿ |
ಜರತ್ಕಾರುನಿರುಕ್ತಂ ತ್ವಂ ಯಥಾವದ್ ವಕ್ತುಮರ್ಹಸಿ ॥2॥
ಎಲೈ ಸೂತನಂದನನೇ, ನೀನು ಜರತ್ಕಾರು ಎಂದು ಹೇಳಿದೆಯಷ್ಟೆ. ನಾನು ಮಹಾತ್ಮನಾದ ಆ ಋಷಿಯ ವಿಷಯದಲ್ಲಿ ಇನ್ನೂ ಹೆಚ್ಚು ಕೇಳಲು ಬಯಸುತ್ತೇನೆ. ಜರತ್ಕಾರು ಎಂಬ ಹೆಸರು ಭೂಮಿಯಲ್ಲಿ ಹೇಗೆ ಪ್ರಸಿದ್ಧವಾಯಿತು? ಜರತ್ಕಾರು ಎಂಬ ಶಬ್ದದ ಅರ್ಥವನ್ನು ನೀನು ನನಗೆ ಸರಿಯಾಗಿ ಹೇಳಬೇಕು.
ಸೂತಃ
ಜರೇತಿ ಕ್ಷಯಮಾಹುರ್ವೈ ದಾರುಣಂ ಕಾರುಸಂಜ್ಞಿತಮ್ |
ಶರೀರಂ ಕಾರು ತಸ್ಯಾಸೀತ್ ತತ್ ಸ ಧೀಮಾನ್ ಶನೈಃ ಶನೈಃ ॥3॥
ಕ್ಷಪಯಾಮಾಸ ತೀವ್ರೇಣ ತಪಸ್ಯೇತ್ಯೇವಮುಚ್ಯತೇ |
ಜರತ್ಕಾರುರಿತಿ ಬ್ರಹ್ಮನ್ ವಾಸುಕೇರ್ಭಗಿನೀಪತಿಃ ॥4॥
`ಜರಾ' ಎಂದರೆ ಕ್ಷಯ (ನಾಶ) ಎಂದು ಅರ್ಥ. `ಕಾರು' ಎಂದರೆ ದಾರುಣವಾದುದು ಎಂದು ಅರ್ಥ. ಅವನ ಶರೀರವು ದಾರುಣವಾಗಿದ್ದಿತು. ಮೇಧಾವಿಯಾದ ಅವನು ತೀವ್ರವಾದ ತಪಸ್ಸನ್ನು ಮಾಡುತ್ತಾ ದೇಹವನ್ನು ಸವೆಸುತ್ತಿದ್ದನು. ಆದ್ದರಿಂದ ವಾಸುಕಿಯ ತಂಗಿಯ ಪತಿಯಾದ ಅವನಿಗೆ ಜರತ್ಕಾರು ಎಂದು ಹೆಸರು.
ಏವಮುಕ್ತಸ್ತು ಧರ್ಮಾತ್ಮಾ ಶೌನಕಃ ಪ್ರಾಹ ತಂ ತದಾ |

ಉಗ್ರಶ್ರವಸಮಾಮಂತ್ರ್ಯ ಉಪಪನ್ನಮಿತಿ ಬ್ರುವನ್ |
ಉಕ್ತಂ ತಾತ ತ್ವಯಾ ಯಂ ತ್ವಾಮರ್ಥಂ ಸಂಪೃಷ್ಟವಾನಹಮ್ ॥5॥
ಹೀಗೆ ಹೇಳಲ್ಪಟ್ಟ ಧರ್ಮಾತ್ಮನಾದ ಶೌನಕರು ಸೂತಪುತ್ರರಾದ ಉಗ್ರಶ್ರವರನ್ನು ಕುರಿತು ಯುಕ್ತವಾದುದು ಎಂದು ಹೇಳಿ ಅವರನ್ನು ಅಭಿಮುಖೀಕರಿಸಿಕೊಂಡು, ಪ್ರೀತಿಪಾತ್ರನೇ, ನಾನು ಯಾವ ಪ್ರಶ್ನೆಯನ್ನು ಕೇಳಿದ್ದೇನೋ ಅದಕ್ಕೆ ನೀನು ಉತ್ತರವನ್ನು ಹೇಳಿದ್ದೀಯೆ ಎಂದು ಹೇಳಿದರು.
ಸೂತಃ
ಅಥ ಕಾಲಸ್ಯ ಮಹತಃ ಸ ಮುನಿಃ ಸಂಶಿತವ್ರತಃ |
ತಪಸ್ಯಭಿರತೋ ಧೀಮಾನ್ ನ ದಾರಾನಭ್ಯಕಾಂಕ್ಷತ ॥6॥
ಅನಂತರ ಶ್ರೇಷ್ಠವ್ರತಧಾರಿಯಾದ, ಋಷಿಯಾದ, ಮೇಧಾವಿಯಾದ ಆ ಜರತ್ಕಾರುವು ತಪಸ್ಸಿನಲ್ಲಿ ಅಭಿರತರಾಗಿ ಬಹುಕಾಲವು ಕಳೆದರೂ ಪತ್ನಿಯನ್ನೇ ಬಯಸಲಿಲ್ಲ.
ಸ ಹ್ಯೂರ್ಧ್ವರೇತಾಸ್ತಪಸಿ ಪ್ರವೃತ್ತಃ
ಸ್ವಾಧ್ಯಾಯವಾನ್ ವೀತಭಯಕ್ಲಮಶ್ಚ |
ಚಚಾರ ಸರ್ವಾಂ ಪೃಥಿವೀಂ ಮಹಾತ್ಮಾ
ನ ಚಾಪಿ ದಾರಾನ್ ಮನಸಾಽಭ್ಯಕಾಂಕ್ಷತ್ ॥7॥
ಊರ್ಧ್ವರೇತಸ್ಕರಾಗಿ ತಪಸ್ಸಿನಲ್ಲಿ ನಿರತರಾದ ಅವರು ಭಯ, ಶ್ರಮಗಳಿಂದ ರಹಿತರಾಗಿ ಯಾವಾಗಲೂ ಸ್ವಾಧ್ಯಾಯಶೀಲರಾಗಿ ಎಲ್ಲಾ ಭೂಮಿಯಲ್ಲಿಯೂ ಸಂಚರಿಸಿದರು. ಮಹಾತ್ಮರಾದ ಅವರು ಮನಸ್ಸಿನಲ್ಲಿಯೂ ಸಹ ಪತ್ನಿಯನ್ನು ಬಯಸಲಿಲ್ಲ.
ತತಃ ಪರಸ್ಮಿನ್ ಸಂಪ್ರಾಪ್ತೇ ಕಾಲೇ ಕಸ್ಮಿಂಶ್ಚಿದೇವ ತು |
ಪರೀಕ್ಷಿದಿತಿ ವಿಖ್ಯಾತೋ ರಾಜಾ ಕೌರವವಂಶಭೃತ್ ॥8॥
ಯಥಾ ಪಾಂಡುರ್ಮಹಾಬಾಹುರ್ಧನುರ್ಧರವರೋ ಯುಧಿ |
ಪಾಂಡುಸ್ತು ಮೃಗಯಾಶೀಲಃ ಪುರಾಸ್ಯ ಪ್ರಪಿತಾಮಹಃ ॥9॥
ಮೃಗಾನ್ ವಿಧ್ಯನ್ ವರಾಹಾಂಶ್ಚ ತರಕ್ಷೂನ್ ಮಹಿಷಾಂಸ್ತದಾ |
ಅನ್ಯಾಂಶ್ಚ ವಿವಿಧಾನ್ ವನ್ಯಾನ್ ಜಘಾನ ಪೃಥಿವೀಪತಿಃ ॥10॥
ಅನಂತರ ಅವರಿಗೆ ಪರವಯಸ್ಸು ಪ್ರಾಪ್ತವಾಗುತ್ತಿರಲು, ಒಮ್ಮೆ ಕೌರವವಂಶಸಂಭೂತನಾದ, ಪರೀಕ್ಷಿತನೆಂಬ ಪ್ರಖ್ಯಾತನಾದ ರಾಜನು, ಪಾಂಡುವಿನಂತೆ ಮಹಾಬಾಹುವೂ, ಶ್ರೇಷ್ಠವಾದ ಧನುಸ್ಸನ್ನು ಧರಿಸಿದವನೂ, ಯುದ್ಧಕುಶಲನೂ ಆಗಿದ್ದನು. ಅವನು ತನ್ನ ಪ್ರಪಿತಾಮಹನಾದ ಪಾಂಡುವಿನಂತೆ ಬೇಟೆಯಾಡುವ ಚಟವನ್ನು ಹೊಂದಿದವನಾಗಿ ಜಿಂಕೆಗಳನ್ನೂ, ವರಾಹಗಳನ್ನೂ. ಹುಲಿಗಳನ್ನೂ, ಕಾಡುಕೋಣಗಳನ್ನೂ ಮತ್ತೂ ಇನ್ನೂ ಅನೇಕವಿಧವಾದ ವನ್ಯಪ್ರಾಣಿಗಳನ್ನೂ ಸಂಹರಿಸಿದನು.
ಸ ಕದಾಚಿನ್ಮೃಗಾನ್ ವಿದ್ಧ್ವಾ ಬಾಣೇನ ನತಪರ್ವಣಾ |
ಪೃಷ್ಠತೋ ಧನುರಾದಾಯ ಸಸಾರ ಗಹನೇ ವನೇ ॥11॥
ಅವನು ಒಮ್ಮೆ ತನ್ನ ಬಾಗಿದ ತುದಿಯುಳ್ಳ ಬಾಣದಿಂದ ಮೃಗಗಳನ್ನು ಹೊಡೆದು ಗಹನವಾದ ವನದಲ್ಲಿ ಗಾಯಗೊಂಡ ಒಂದು ಮೃಗವನ್ನು ಅದರ ಹಿಂದೆ ಧನುಸ್ಸನ್ನು ತೆಗೆದುಕೊಂಡು ಹಿಂಬಾಲಿಸಿದನು.
ಯಥಾ ಹಿ ಭಗವಾನ್ ರುದ್ರೋ ವಿದ್ಧ್ವಾ ಯಜ್ಞಮೃಗಂ ದಿವಿ |
ಅನ್ವಗಚ್ಛದ್ ಧನುಷ್ಪಾಣಿಃ ಪರ್ಯಟನ್ ವೇಷವಾಂಸ್ತತಃ ॥12॥
ಹೇಗೆ ಪರಮಪೂಜ್ಯರಾದ ರುದ್ರದೇವರು ಯಜ್ಞಮೃಗವನ್ನು ಬಾಣಪ್ರಯೋಗದಿಂದ ಹಿಂಸಿಸಿ ಕಿರಾತನ ವೇಷವನ್ನು ಧರಿಸಿ, ಕೈಯಲ್ಲಿ ಧನುಸ್ಸನ್ನು ಹಿಡಿದು ಆ ಮೃಗವನ್ನು ಹಿಂಬಾಲಿಸಿದರೋ, ಅದರಂತೆ ಪರೀಕ್ಷಿತರಾಜನೂ ಹಿಂಬಾಲಿಸಿದನು.
ನ ಹಿ ತೇನ ಮೃಗೋ ವಿದ್ಧೋ ಜೀವನ್ ಗಚ್ಛತಿ ವೈ ವನಮ್ |
ಅಪೂರ್ವರೂಪಂ ತತ್ರಾಸೀದ್ ರಾಜ್ಞಃ ಸ್ವರ್ಗಗತಿಂ ಪ್ರತಿ ॥13॥
ಅವನ ಬಾಣದ ಪ್ರಹಾರವನ್ನು ಪಡೆದ ಯಾವ ಮೃಗವೂ ಜೀವಸಹಿತವಾಗಿ ಕಾಡಿಗೆ ಹೋಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ರಾಜನ ಸ್ವರ್ಗಗಮನಕ್ಕೆ ಕಾರಣವಾದ ಒಂದು ಅಪೂರ್ವವಾದ ಘಟನೆಯು ಅಲ್ಲಿ ನಡೆಯಿತು.
ಪಾಂಡವೇಯಸ್ಯ ರಾಜರ್ಷೇಃ ವಿದ್ಧೋ ಯನ್ನಷ್ಟವಾನ್ ಮೃಗಃ |
ದೂರಂ ಚಾಪಹೃತಸ್ತೇನ ಮೃಗೇಣ ಸ ಮಹೀಪತಿಃ ॥14॥
ಪಾಂಡವಕುಲದಲ್ಲಿ ಜನಿಸಿದ ಆ ರಾಜರ್ಷಿಯಿಂದ ಹೊಡೆಯಲ್ಪಟ್ಟ ಮೃಗವು ಆ ಕಾಡಿನಲ್ಲಿ ಕಣ್ಮರೆಯಾಯಿತು. ಅದು ಆ ರಾಜನನ್ನು ಬಹಳ ದೂರದವರೆಗೆ ಎಳೆಯಿತು.
ಪರಿಶ್ರಾಂತಃ ಪಿಪಾಸಾರ್ತ ಆಸಸಾದ ಮುನಿಂ ವನೇ |
ಗವಾಂ ಪ್ರಚಾರೇಷ್ವಾಸೀನಂ ವತ್ಸಾನಾಂ ಮುಖನಿಸ್ಸೃತಮ್ |
ಭೂಯಿಷ್ಠಮುಪಯುಂಜಾನಂ ಫೇನಂ ವೈ ಪಿಬತಾಂ ಪಯಃ ॥15॥
ಬಳಲಿಕೆಯಿಂದಲೂ ಮತ್ತು ಬಾಯಾರಿಕೆಯಿಂದಲೂ ಪೀಡಿತನಾದ ಆ ರಾಜನು ಗೋವುಗಳ ಸಂಚಾರಪ್ರದೇಶದಲ್ಲಿ ಕರುಗಳ ಮುಖದಿಂದ ಹೊರಬಂದ ಬಹಳವಾದ ಹಾಲಿನ ನೊರೆಯನ್ನು ಪಾನಮಾಡುತ್ತಿದ್ದಂತಹ ಒಬ್ಬ ಋಷಿಯ ಸಮೀಪಕ್ಕೆ ಬಂದನು.
ತಮಭಿದ್ರುತ್ಯ ವೇಗೇನ ಸ ರಾಜಾ ಸಂಶಿತವ್ರತಃ |
ಅಪೃಚ್ಛದ್ ಧನುರುದ್ಯಮ್ಯ ತಂ ಮೃಗಂ ಕ್ಷುಚ್ಛ್ರಮಾನ್ವಿತಃ ॥16॥
ಸಂಶಿತವ್ರತನಾದ ಆ ರಾಜನು ವೇಗವಾಗಿ ಅವನ ಸಮೀಪಕ್ಕೆ ಬಂದು ಹಸಿವು ಶ್ರಮಗಳಿಂದ ಬಳಲಿದವನಾಗಿ ಕೈಯಲ್ಲಿದ್ದ ಧನುಸ್ಸನ್ನು

ಎತ್ತಿ ಕಳೆದುಹೋದ ಮೃಗದ ವಿಷಯದಲ್ಲಿ ವಿಚಾರಿಸಿದನು.
ಭೋ ಭೋ ಬ್ರಹ್ಮನ್ನಹಂ ರಾಜಾ ಪರೀಕ್ಷಿದಭಿಮನ್ಯುಜಃ |
ಮಯಾ ವಿದ್ಧೋ ಮೃಗೋ ನಷ್ಟಃ ಕಚ್ಚಿತ್ ತ್ವಂ ದೃಷ್ಟವಾನಸಿ ॥17॥
ಎಲ್ಲೈ ಬ್ರಾಹ್ಮಣನೇ, ನಾನು ಅಭಿಮನ್ಯುವಿನ ಮಗನಾದ ಪರೀಕ್ಷಿತ್ ಎಂಬ ರಾಜ. ನನ್ನ ಬಾಣದಿಂದ ಹೊಡೆಯಲ್ಪಟ್ಟ ಒಂದು ಮೃಗವು ಕಣ್ಮರೆಯಾಯಿತು. ನೀನೇನಾದರೂ ಅದನ್ನು ನೋಡಿದ್ದೀಯಾ?
ಸ ಮುನಿಸ್ತಸ್ಯ ನೋವಾಚ ಕಿಂಚಿನ್ಮೌನವ್ರತೇ ಸ್ಥಿತಃ |
ತಸ್ಯ ಸ್ಕಂಧೇ ಮೃತಂ ಸರ್ಪಂ ಕ್ರುದ್ಧೋ ರಾಜಾ ಸಮಾಸೃಜತ್ |
ಧನುಷ್ಕೋಟ್ಯಾ ಸಮುತ್ಕ್ಷಿಪ್ಯ ಸ ಚೈನಂ ಸಮುದೈಕ್ಷತ ॥18॥
ಮೌನವ್ರತದಲ್ಲಿದ್ದ ಆ ಮುನಿಯು ಅವನನ್ನು ಕುರಿತು ಏನೂ ಮಾತನಾಡಲಿಲ್ಲ. ಕೋಪಗೊಂಡ ರಾಜನು ತನ್ನ ಬಿಲ್ಲಿನ ತುದಿಯಿಂದ ಒಂದು ಮೃತವಾದ ಸರ್ಪವನ್ನು ಎತ್ತಿ ಅದನ್ನು ಅವನ ಕೊರಳಿಗೆ ಹಾಕಿದನು. ಆ ಮುನಿಯಾದರೋ ರಾಜನನ್ನು ನೋಡಿದನು.
ನ ಚ ಕಿಂಚಿದುವಾಚೈನಂ ಶುಭಂ ವಾ ಯದಿ ವಾಽಶುಭಮ್ |
ಸ ರಾಜಾ ಕ್ರೋಧಮುತ್ಸೃಜ್ಯ ವ್ಯಥಿತಸ್ತಂ ತಥಾಗತಮ್ |
ದೃಷ್ಟ್ವಾ ಜಗಾಮ ನಗರೀಂ ಋಷಿಸ್ತತ್ವಸ್ತೇ ತಥೈವ ಸಃ ॥19॥
ಆದರೆ, ಒಳ್ಳೆಯದನ್ನಾಗಲೀ, ಕೆಟ್ಟದನ್ನಾಗಲೀ, ಯಾವ ಮಾತನ್ನೂ ರಾಜನನ್ನು ಕುರಿತು ಆಡಲಿಲ್ಲ. ರಾಜನು ತನ್ನ ಕೋಪವನ್ನು ತ್ಯಜಿಸಿ ಅಂತಹ ಪರಿಸ್ಥಿತಿಯಲ್ಲಿದ್ದ ಋಷಿಯನ್ನು ನೋಡಿ ವ್ಯಥಿತನಾಗಿ ತನ್ನ ನಗರಕ್ಕೆ ಹಿಂದಿರುಗಿದನು. ಋಷಿಯು ಮಾತ್ರ ಅದೇ ಸ್ಥಿತಿಯಲ್ಲಿಯೇ ಇದ್ದನು.
ತರುಣಸ್ತಸ್ಯ ಪುತ್ರೋಽಭೂತ್ ತಿಗ್ಮತೇಜಾ ಮಹಾತಪಾಃ |
ಶೃಂಗೀ ನಾಮ ಮಹಾಕ್ರೋಧೋ ದುಷ್ಪ್ರಸಾದೋ ಮಹಾವ್ರತಃ ॥20॥
ಆ ಮುನಿಗೆ ಕ್ರೂರಪರಾಕ್ರಮವುಳ್ಳವನೂ, ಮಹಾತಪಸ್ವಿಯೂ, ಮಹಾಕ್ರೋಧವುಳ್ಳವನೂ, ಸಮಾಧಾನಪಡಿಸಲು ಅಸಾಧ್ಯನಾದವನೂ, ಮಹಾವ್ರತಗಳನ್ನು ಧರಿಸಿದವನೂ, ತರುಣನೂ ಆದ, ಶೃಂಗಿ ಎಂಬ ಒಬ್ಬ ಪುತ್ರನಿದ್ದನು.
ಸ ದೇವವರಮೀಶಾನಂ ಸರ್ವಭೂತಹಿತೇ ರತಃ |
ಬ್ರಹ್ಮಾಣಮುಪತಸ್ಥೇ ವೈ ಕಾಲೇ ಕಾಲೇ ಸುಸಂಯತಃ ॥21॥
ಸರ್ವಭೂತಹಿತದಲ್ಲಿ ರತನಾದ ಅವನು ಬೇರೆ ಬೇರೆ ಕಾಲಗಳಲ್ಲಿ ಮೌನವ್ರತದಿಂದ ಕೂಡಿದವನಾಗಿ, ದೇವಶ್ರೇಷ್ಠನಾದ, ಸರ್ವಪ್ರಭುವಾದ ಬ್ರಹ್ಮದೇವರನ್ನು ಕುರಿತು ಸ್ತೋತ್ರಮಾಡಿ ತಪಸ್ಸನ್ನು ಮಾಡುತ್ತಿದ್ದನು.
ಸ ತೇನ ಸಮನುಜ್ಞಾತೋ ಬ್ರಹ್ಮಣಾ ಗೃಹಮೇಯಿವಾನ್ |
ಸಖ್ಯೋಕ್ತಃ ಕ್ರೀಡಮಾನೇನ ಸ ತತ್ರ ಹಸತಾ ಕಿಲ ॥22॥
ಸಂರಬ್ಧಃ ಕೋಪನೋಽತೀವ ವಿಷಕಲ್ಪೋ ಮುನೇಃ ಸುತಃ |
ಋಷಿಪುತ್ರೇಣ ಚರ್ಮಾರ್ಥಂ ಕೃಶೇನ ದ್ವಿಜಸತ್ತಮ ॥23॥
ಅವನು ಬ್ರಹ್ಮದೇವರನ್ನು ನೋಡಿ ಅವರಿಂದ ಅನುಮತಿಯನ್ನು ಪಡೆದು ಆಶ್ರಮಕ್ಕೆ ಹಿಂದಿರುಗಿದನು. ಆಗ ಜೊತೆಯಲ್ಲಿ ಆಡುತ್ತಿದ್ದ ಅವನ ಸ್ನೇಹಿತನು ನಗುತ್ತಾ ಅವನನ್ನು ಕುರಿತು ಮಾತನಾಡಿದನು. ಎಲ್ಯೆ ಬ್ರಾಹ್ಮಣಶ್ರೇಷ್ಠನೇ, ಮೊದಲು ಬಹಳ ಕೋಪವುಳ್ಳವನೂ, ವಿಷಕಲ್ಪನೂ, ಋಷಿಪುತ್ರನೂ ಆದ ಆ ಶೃಂಗಿಯು ಒಂದು ಕೃಷ್ಣಾಜಿನದ ಸಲುವಾಗಿ ಕೃಶ ಎಂಬ ಇನ್ನೊಬ್ಬ ಋಷಿಕುಮಾರನ ಜೊತೆಯಲ್ಲಿ ಕಲಹವನ್ನು ಮಾಡಿದ್ದನು.
ಕೃಶಃ
ತೇಜಸ್ವಿನಸ್ತವ ಪಿತಾ ತಥೈವ ಚ ತಪಸ್ವಿನಃ |
ಶವಂ ಸ್ಕಂಧೇನ ವಹತಿ ಮಾ ಶೃಂಗಿನ್ ಗರ್ವಿತೋ ಭವ ॥24॥
ತೇಜಸ್ವಿಯಾದ ಮತ್ತು ತಪಸ್ವಿಯಾದ, ನಿನ್ನಂತೆಯೇ ಇರುವ ನಿನ್ನ ತಂದೆಯು ತನ್ನ ಕೊರಳಿನಲ್ಲಿ ಶವವನ್ನು ಧರಿಸಿದ್ದಾನೆ. ಶೃಂಗಿಯೇ ಅಹಂಕಾರ ಪಡಬೇಡ.
ವ್ಯಾಹರತ್ಸ್ವೃಷಿಪುತ್ರೇಷು ಮಾಽತ್ರ ಕಿಂಚಿದ್ವಚೋ ವದೀಃ |
ಅಸ್ಮದ್ವಿಧೇಷು ಸಿದ್ಧೇಷು ಬ್ರಹ್ಮವಿತ್ಸು ತಪಸ್ವಿಷು ॥25॥
ನನ್ನಂತಹ ಬ್ರಹ್ಮಜ್ಞಾನಿಗಳಾದ, ತಪಸ್ವಿಗಳಾದ, ಸಿದ್ಧರಾದ ಋಷಿಕುಮಾರರು ಹೀಗೆ ಮಾತನಾಡುತ್ತಿರುವಾಗ ನೀನು ಯಾವ ಪ್ರತ್ಯುತ್ತರವನ್ನೂ ಕೊಡಬೇಡ.
ಕ್ವ ತೇ ಪುರುಷಮಾನಿತ್ವಂ ಕ್ವ ತೇ ವಾಚಸ್ತಥಾವಿಧಾಃ |
ದರ್ಪಜಾಃ ಪಿತರಂ ದೃಷ್ಟ್ವಾ ಯಸ್ತ್ವಂ ಶವಧರಂ ತಥಾ ॥26॥
ನಿನ್ನ ಪೌರುಷವು ಎಲ್ಲಿ ಹೋಯಿತು? ನಿನ್ನ ಗರ್ವದಿಂದ ಕೂಡಿದ ಅಂತಹ ಮಾತುಗಳು ಎಲ್ಲಿ ಹೋದವು? ನೀನು ಆ ರೀತಿಯಲ್ಲಿ ಶವವನ್ನು ಧರಿಸಿರುವ ನಿನ್ನ ತಂದೆಯನ್ನು ನೋಡುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ತ್ರಯವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
*****

ಮೂವತ್ತಾರನೆಯ ಅಧ್ಯಾಯ
(ಪುತ್ರನ ಶಾಪಪ್ರದಾನವನ್ನು ಕೇಳಿದ ತಂದೆಯಾದ ಶಮೀಕರ ಅಸಂತೋಷ ಮತ್ತು ಶೃಂಗಿಯನ್ನು ಕುರಿತು ಉಪದೇಶ.)
ಸೂತಃ
ಏವಮುಕ್ತಃ ಸ ತೇಜಸ್ವೀ ಶೃಂಗೀ ಕೋಪಸಮನ್ವಿತಃ |
ಮೃತಧಾರಂ ಗುರುಂ ಶ್ರುತ್ವಾ ಪರ್ಯತಪ್ಯತ ಮನ್ಯುನಾ ॥1॥
ಇದನ್ನು ಕೇಳಿದ ತೇಜಸ್ವಿಯಾದ ಶೃಂಗಿಯು ಕೋಪಸಮನ್ವಿತನಾಗಿ ತಂದೆಯು ಶವವನ್ನು ಧರಿಸಿರುವನೆಂದು ಕೇಳಿ, ಸಿಟ್ಟಿನಿಂದ ಉರಿದನು.
ಸ ತಂ ಕೃಶಮಭಿಪ್ರೇಕ್ಷ್ಯ ಸೂನೃತಾಂ ವಾಚಮುತ್ಸೃಜನ್ |
ಅಪೃಚ್ಛತ ಕಥಂ ತಾತಃ ಸ ಮೇಽದ್ಯ ಮೃತಭಾರಕಃ ॥2॥
ಅವನು ಆ ಕೃಶನನ್ನು ಉದ್ದೇಶಿಸಿ ಮಧುರವಾದ ಮಾತನ್ನಾಡುತ್ತಾ ನನ್ನ ತಂದೆಯು ಈ ದಿನ ಹೇಗೆ ಆ ಮೃತವಾದ ಸರ್ಪವನ್ನು ಧರಿಸಿದನು ಎಂದು ಕೇಳಿದನು.
ಕೃಶಃ
ರಾಜ್ಞಾ ಪರೀಕ್ಷಿತಾ ತತ್ರ ಮೃಗಯಾಂ ಪರಿಧಾವತಾ |
ಅವಸಕ್ತಃ ಪಿತುಸ್ತೇಽದ್ಯ ಮೃತಃ ಸ್ಕಂಧೇ ಭುಜಂಗಮಃ ॥3॥
ಬೇಟೆಯನ್ನು ಆಡುತ್ತಾ ಸಂಚರಿಸುತ್ತಿದ್ದ ಪರೀಕ್ಷಿತರಾಜನು ನಿನ್ನ ತಂದೆಯ ಕೊರಳಿನಲ್ಲಿ ಮೃತವಾದ ಸರ್ಪವನ್ನು ಹಾಕಿದನು.
ಶೃಂಗೀ
ಕಿಂ ಮೇ ಪಿತ್ರಾ ಕೃತಂ ತಸ್ಯ ರಾಜ್ಞೋಽನಿಷ್ಟಂ ದುರಾತ್ಮನಃ |
ಬ್ರೂಹಿ ತ್ವಂ ಕೃಶ ತತ್ತ್ವೇನ ಪಶ್ಯ ಮೇ ತಪಸೋ ಬಲಮ್ ॥4॥
ಆ ದುರಾತ್ಮನಾದ ರಾಜನಿಗೆ ನನ್ನ ತಂದೆಯು ಏನು ಅಪರಾಧವನ್ನು ಮಾಡಿದ್ದನು ಎಂದು ನೀನು ಹೇಳು. ಎಲೈ ಕೃಶನೇ, ನನ್ನ ತಪಸ್ಸಿನ ಬಲವನ್ನು ಸರಿಯಾಗಿ ನೋಡು.
ಕೃಶಃ
ಸ ರಾಜಾ ಮೃಗಯಾಂ ಯಾತಃ ಪರೀಕ್ಷಿದಭಿಮನ್ಯುಜಃ |
ಸಸಾರ ಮೃಗಮೇಕಾಕೀ ವಿದ್ಧೋಽಯಾನ್ನಷ್ಟವಾನ್ ಮೃಗಃ ॥5॥
ಅಭಿಮನ್ಯುವಿನ ಪುತ್ರನಾದ ಆ ಪರೀಕ್ಷಿತ್‌ರಾಜನು ಬೇಟೆಯಾಡುತ್ತಾ ಏಕಾಕಿಯಾಗಿ ಒಂದು ಮೃಗವನ್ನು ಹಿಂಬಾಲಿಸಿದನು. ಅವನಿಂದ ಹೊಡೆಯಲ್ಪಟ್ಟ ಆ ಮೃಗವು ಕಣ್ಮರೆಯಾಯಿತು.
ನ ಚಾಪ ಸ ಮೃಗಂ ರಾಜಾ ಚರಂಸ್ತಸ್ಮಿನ್ಮಹಾವನೇ |
ಪಿತರಂ ತೇ ಸ ದೃಷ್ಟ್ವೈವ ಪಪ್ರಚ್ಛಾನಭಿಭಾಷಿಣಮ್ ॥6॥
ಆ ರಾಜನು ಆ ದೊಡ್ಡ ಕಾಡಿನಲ್ಲಿ ಎಷ್ಟು ತಿರುಗಾಡಿದರೂ ಆ ಮೃಗವು ಗೋಚರಿಸಲಿಲ್ಲ. ಆಗ ಮೌನವ್ರತವನ್ನು ಧರಿಸಿದ್ದ ನಿನ್ನ ತಂದೆಯನ್ನು ನೋಡಿ ಅವನು ಪ್ರಶ್ನೆಯನ್ನು ಮಾಡಿದನು.
ತಂ ಸ್ಥಾಣುಭೂತಂ ತಿಷ್ಠಂತಂ ಕ್ಷುತ್ಪಿಪಾಸಾಶ್ರಮಾನ್ವಿತಃ |
ಪುನಃಪುನರ್ಮೃಗಂ ನಷ್ಟಂ ಪಪ್ರಚ್ಛ ಪಿತರಂ ತವ ॥7॥
ಅವನು ಹಸಿವುನೀರಡಿಕೆ ಮತ್ತು ಆಯಾಸದಿಂದ ಬಳಲಿದವನಾಗಿ ಅಲುಗಾಡದೇ ಕಂಬದಂತೆ ಕುಳಿತಿದ್ದ ನಿನ್ನ ತಂದೆಯನ್ನು ಪುನಃ ಪುನಃ ಕಣ್ಮರೆಯಾದ ಮೃಗದ ಬಗ್ಗೆ ಕೇಳಿದನು.
ಸ ಚ ಮೌನವ್ರತೋಪೇತೋ ನೈವ ತಂ ಪ್ರತ್ಯಭಾಷತ |
ತಸ್ಯ ರಾಜಾ ಧನುಷ್ಕೋಟ್ಯಾ ಸರ್ಪ್ಪಂ ಸ್ಕಂಧೇ ಸಮಾಸೃಜತ್ ॥8॥
ಮೌನವ್ರತಧಾರಿಯಾದ ನಿನ್ನ ತಂದೆಯು ಅವನಿಗೆ ಉತ್ತರವನ್ನು ಕೊಡಲಿಲ್ಲ. ಆಗ ರಾಜನು ತನ್ನ ಬಿಲ್ಲಿನ ತುದಿಯಿಂದ ಒಂದು ಮೃತಸರ್ಪವನ್ನು ಎತ್ತಿ ಅವನ ಕೊರಳಿಗೆ ಹಾಕಿದನು.
ಶೃಂಗಿನ್ ತವ ಪಿತಾ ಸೌಮ್ಯ ತಥೈವಾಸ್ತೇ ಯತವ್ರತಃ |
ಸೋಽಪಿ ರಾಜಾ ಸ್ವನಗರಂ ಪ್ರತಿಯಾತೋ ಗಜಾಹ್ವಯಮ್ ॥9॥
ಎಲೈ ಶೃಂಗಿಯೇ ನಿನ್ನ ವ್ರತಧಾರಿಯಾದ ತಂದೆಯು ಇನ್ನೂ ಅದೇ ರೀತಿಯಲ್ಲಿಯೇ ಇದ್ದಾನೆ. ಪ್ರೀತಿಪಾತ್ರನೇ, ಆ ರಾಜನಾದರೋ ತನ್ನ ನಗರವಾದ ಹಸ್ತಿನಪುರಕ್ಕೆ ಹೊರಟುಹೋದನು.
ಸೂತಃ
ಶ್ರುತ್ವೈತದ್ ಋಷಿಪುತ್ರಃ ಸ ಭೃಶಂ ಕ್ರುದ್ಧೋ ವ್ಯತಿಷ್ಠತ |
ಕೋಪಸಂರಕ್ತನಯನಃ ಪ್ರಜ್ವಲನ್ನಿವ ಮನ್ಯುನಾ ॥10॥
ಇದನ್ನು ಕೇಳಿದ ಕೂಡಲೇ ಆ ಋಷಿಕುಮಾರನು ಅತ್ಯಂತ ಕ್ರುದ್ಧನಾದನು. ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಕ್ರೋಧದಿಂದ ಅಗ್ನಿಯಂತೆ ಪ್ರಜ್ವಲಿಸಿದನು.
ಆವಿಷ್ಟಃ ಸ ತು ಕೋಪೇನ ಶಶಾಪ ನೃಪತಿಂ ತದಾ |
ವಾರ್ಯುಪಸ್ಪೃಶ್ಯ ತೇಜಸ್ವೀ ಕ್ರೋಧೇನ ಚ ಬಲಾತ್ಕೃತಃ ॥11॥
ಆ ತೇಜಸ್ವಿಯಾದ ಶೃಂಗಿಯು ಕ್ರೋಧಕ್ಕೆ ವಶನಾಗಿ ಕೈಕಾಲುಗಳನ್ನು ತೊಳೆದು ಶುದ್ಧನಾಗಿ ಆ ರಾಜನಿಗೆ ಕೋಪದಿಂದ ಶಾಪವನ್ನು

ಕೊಟ್ಟನು.
ಶೃಂಗೀ
ಯೋಽಸೌ ವೃದ್ಧಸ್ಯ ತಾತಸ್ಯ ತಥಾ ಕೃಚ್ಛ್ರಗತಸ್ಯ ಚ |
ಸ್ಕಂಧೇ ಮೃತಮವಾಸ್ರಾಕ್ಷೀತ್ ಪನ್ನಗಂ ರಾಜಕಿಲ್ಬಿಷೀ ॥12॥
ತಂ ಪಾಪಮತಿಸಂರಬ್ಧಸ್ತಕ್ಷಕಃ ಪನ್ನಗೋತ್ತಮಃ |
ಆಶೀವಿಷಸ್ತಿಗ್ಮತೇಜಾ ಮದ್ವಾಕ್ಯಬಲಚೋದಿತಃ ॥13॥
ಸಪ್ತರಾತ್ರಾದಿತೋ ನೇತಾ ಯಮಸ್ಯ ಸದನಂ ಪ್ರತಿ |
ದ್ವಿಜಾನಾಮವಮಂತಾರಂ ಕುರೂಣಾಮಯಶಸ್ಕರಮ್ ॥14॥
ಯಾವ ದುಷ್ಟನಾದ ರಾಜನು ವೃದ್ಧನಾದ, ಕಷ್ಟದಲ್ಲಿರುವ ನನ್ನ ತಂದೆಯ ಕೊರಳಿನಲ್ಲಿ ಮೃತವಾದ ಸರ್ಪವನ್ನು ಹಾಕಿದನೋ ಆ ಪಾಪಮತಿಯಾದ ರಾಜನನ್ನು ನನ್ನ ವಾಕ್ಯದ ಬಲದಿಂದ ಪ್ರೇರಿತನಾದ, ದೃಷ್ಟಿಯಲ್ಲಿಯೇ ವಿಷವನ್ನು ಹೊಂದಿದ, ಕ್ರೂರಪರಾಕ್ರಮವನ್ನು ಹೊಂದಿದ ಪನ್ನಗಶ್ರೇಷ್ಠನಾದ ತಕ್ಷಕನು ಇಂದಿನಿಂದ ಏಳು ದಿನಗಳಲ್ಲಿ ಕುರುವಂಶಕ್ಕೆ ಅಪಕೀರ್ತಿಯನ್ನು ತಂದ ಮತ್ತು ಬ್ರಾಹ್ಮಣರಿಗೆ ಅವಮಾನವನ್ನು ಮಾಡಿದ ಆ ರಾಜನನ್ನು ಯಮಪಟ್ಟಣಕ್ಕೆ ಕರೆದೊಯ್ಯಲಿ.
ಸೂತಃ
ಇತಿ ಶಪತ್ವಾ ನೃಪಂ ಕ್ರುದ್ಧಃ ಶೃಂಗೀ ಪಿತರಮಭ್ಯಗಾತ್ |
ಆಸೀನಂ ಗೋಚರೇ ತಸ್ಮಿನ್ ವಹಂತಂ ಶವಪನ್ನಗಮ್ ॥15॥
ಹೀಗೆ ಕೋಪದಿಂದ ರಾಜನಿಗೆ ಶಾಪವನ್ನು ಕೊಟ್ಟು ಶೃಂಗಿಯು ಗೋಚಾರಪ್ರದೇಶದಲ್ಲಿ ಸ್ಕಂಧದಲ್ಲಿ ಸರ್ಪವನ್ನು ಧರಿಸಿಕುಳಿತಿದ್ದ ತನ್ನ ತಂದೆಯ ಸಮೀಪಕ್ಕೆ ಬಂದನು.
ಸ ತಮಾಲಕ್ಷ್ಯ ಪಿತರಂ ಶೃಂಗೀ ಸ್ಕಂಧಗತೇನ ವೈ |
ಶವೇನ ಭುಜಗೇನಾಸೀದ್ ಭೂಯಃ ಕ್ರೋಧಸಮನ್ವಿತಃ |
ದುಃಖಾಚ್ಚಾಶ್ರೂಣಿ ಮುಂಚನ್ ವೈ ಪಿತರಂ ಚೇದಮಬ್ರವೀತ್ ॥16॥
ಅವನು ಕೊರಳಿನಲ್ಲಿ ಶವವನ್ನು ಧರಿಸಿದ ತಂದೆಯನ್ನು ನೋಡಿ, ಇನ್ನೂ ಹೆಚ್ಚುಕೋಪವುಳ್ಳವನಾಗಿ ದುಃಖದಿಂದ ಕಣ್ಣೀರನ್ನು ಸುರಿಸುತ್ತಾ ತಂದೆಯನ್ನು ಕುರಿತು ಈ ಮಾತುಗಳನ್ನು ಆಡಿದನು.
ಶೃಂಗೀ
ಶ್ರುತ್ವೇಮಾಂ ಧರ್ಷಣಾಂ ತಾತ ತವ ತೇನ ದುರಾತ್ಮನಾ |
ರಾಜ್ಞಾ ಪರೀಕ್ಷಿತಾ ಕೋಪಾದಶಪಂ ತಮಹಂ ನೃಪಮ್ ॥17॥
ತಂದೆಯೇ, ಆ ದುರಾತ್ಮನಾದ ಪರೀಕ್ಷಿತ್‌ರಾಜನು ನಿನಗೆ ಇಂತಹ ಅವಮಾನ ಮಾಡಿದುದನ್ನು ಕೇಳಿ, ನಾನು ಆ ರಾಜನಿಗೆ ಕೋಪದಿಂದ ಶಾಪವನ್ನು ನೀಡಿದೆನು.
ತದರ್ಹತಿ ಸದಾ ಚೋಗ್ರಂ ಶಾಪಂ ಕುರುಕುಲಾಧಮಃ |
ಸಪ್ತಮೇಽಹನಿ ತಂ ಪಾಪಂ ತಕ್ಷಕಃ ಪನ್ನಗೋತ್ತಮಃ |
ವೈವಸ್ವತಸ್ಯ ಭವನಂ ನೇತಾ ಪರಮದಾರುಣಮ್ ॥18॥
ಕುರುಕುಲಾಧಮನಾದ ಆ ರಾಜನು ಉಗ್ರವಾದ ಶಾಪಕ್ಕೆ ಯೋಗ್ಯನಾಗಿದ್ದಾನೆ. ಇವತ್ತಿಗೆ ಏಳನೆಯ ದಿವಸ ಪರಮಕ್ರೂರಿಯೂ, ಪಾಪಿಯೂ ಆದ ಆ ರಾಜನನ್ನು ಪನ್ನಗಶ್ರೇಷ್ಠನಾದ ತಕ್ಷಕನು ಯಮನ ಪಟ್ಟಣಕ್ಕೆ ಕಳುಹಿಸುತ್ತಾನೆ.
ಸೂತಃ
ತಮಬ್ರವೀತ್ ಪಿತಾ ಬ್ರಹ್ಮಂಸ್ತಥಾ ಕೋಪಸಮನ್ವಿತಮ್ |
ನ ಮೇ ಪ್ರಿಯಂ ಕೃತಂ ತಾತ ನೈಷ ಧರ್ಮಸ್ತಪಸ್ವಿನಾಮ್ ॥19॥
ಹಾಗೆ ಕೋಪದಿಂದ ಕೂಡಿದ್ದ ಮಗನನ್ನು ನೋಡಿ ತಂದೆಯು, ಪ್ರೀತಿಪಾತ್ರನೇ, ನೀನು ಮಾಡಿದ ಕೆಲಸವು ನನಗೆ ಸಂತೋಷವನ್ನುಂಟು ಮಾಡುವುದಿಲ್ಲ. ಇದು ತಪಸ್ವಿಗಳ ಧರ್ಮವಲ್ಲ ಎಂದು ಹೇಳಿದನು.
ವಯಂ ತಸ್ಯ ನರೇಂದ್ರಸ್ಯ ವಿಷಯೇ ನಿವಸಾಮಹೇ |
ನ್ಯಾಯತೋ ರಕ್ಷಿತಾಸ್ತೇನ ತಸ್ಯ ಶಾಪಂ ನ ರೋಚಯೇ ॥20॥
ನಾವು ಆ ನರೇಂದ್ರನ ರಾಜ್ಯದಲ್ಲಿ ವಾಸವನ್ನು ಮಾಡುತ್ತಿದ್ದೇವೆ. ಅವನು ನಮ್ಮನ್ನು ನ್ಯಾಯದಿಂದ ರಕ್ಷಿಸಿದ್ದಾನೆ. ಅವನಿಗೆ ಶಾಪವನ್ನು ಕೊಟ್ಟಿದುದು ನನಗೆ ಇಷ್ಟವಾಗುವುದಿಲ್ಲ.
ಸರ್ವಥಾ ವರ್ತಮಾನಸ್ಯ ರಾಜ್ಞೋ ಹಿ ವಿಷಯೇ ಸದಾ |
ಕ್ಷಂತವ್ಯಂ ಪುತ್ರ ಧರ್ಮೋ ಹಿ ಹತೋ ಹಂತಿ ನ ಸಂಶಯಃ ॥21॥
ರಾಜನ ರಾಜ್ಯದಲ್ಲಿ ವಾಸಮಾಡುವ ನಮ್ಮಿಂದ ರಾಜನ ದೋಷವು ಸರ್ವಥಾ ಕ್ಷಮಿಸಲ್ಪಡಬೇಕು. ಪುತ್ರನೇ, ನಾವು ಧರ್ಮವನ್ನು ಕೊಂದರೆ, ಅದು ನಮ್ಮನ್ನು ನಿಸ್ಸಂಶಯವಾಗಿ ಕೊಲ್ಲುತ್ತದೆ. (ಒಬ್ಬ ಪುರುಷನನ್ನು ಕೊಂದರೆ, ಅವನು ಕೊಂದ ವ್ಯಕ್ತಿಗೆ ದೇಹನಾಶವನ್ನಾಗಲೀ ಅಥವಾ ತಪೋನಾಶವನ್ನಾಗಲೀ ಉಂಟುಮಾಡಿ ಕೊಲ್ಲುತ್ತಾನೆ.)
ಯದಿ ರಾಜಾ ನ ರಕ್ಷೇತ ಪೀಡಾ ವೈ ನಃ ಪರಾ ಭವೇತ್ |
ನ ಶಕ್ನುಯಾಮ ಚರಿತುಂ ಧರ್ಮಂ ಪುತ್ರ ಯಥಾಸುಖಮ್ ॥22॥
ರಾಜನು ಒಂದುಪಕ್ಷ ನಮ್ಮನ್ನು ರಕ್ಷಿಸದಿದ್ದರೆ, ನಮಗೆ ಬಹಳ ಪೀಡೆಯಾಗುತ್ತಿತ್ತು. ಪುತ್ರನೇ, ನಾವು ಸುಖವಾಗಿ ಧರ್ಮಾಚರಣೆಯನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ.

ರಕ್ಷ್ಯಮಾಣಾ ವಯಂ ತಾತ ರಾಜಭಿಃಶಾಸ್ತ್ರದೃಷ್ಟಿಭಿಃ |
ಚರಾಮೋ ವಿಪುಲಂ ಧರ್ಮಂ ತೇಷಾಂ ನಾಶೋಽಸ್ತಿ ಧರ್ಮತಃ ||
ಪ್ರೀತಿಪಾತ್ರನೇ, ಶಾಸ್ತ್ರದೃಷ್ಟಿಯುಳ್ಳ ರಾಜರುಗಳಿಂದ ಪಾಲಿಸಲ್ಪಡುವ  ನಾವು ವಿಪುಲವಾದ ಧರ್ಮವನ್ನು ಆಚರಿಸುತ್ತೇವೆ. ಎಲ್ಲಾ ಪ್ರಜೆಗಳ ರಕ್ಷಣಾರೂಪವಾದ ಅನೇಕ ಕಾರ್ಯಗಳನ್ನು ಮಾಡುವ ರಾಜರು ಒಮ್ಮೊಮ್ಮೆ ಧರ್ಮದಿಂದ ಎಡವುತ್ತಾರೆ.
ಪರೀಕ್ಷಿತ್ತು ವಿಶೇಷೇಣ ಯಥಾಽಸ್ಯ ಪ್ರಪಿತಾಮಹಃ |
ರಕ್ಷತ್ಯಸ್ಮಾನ್ ಯಥಾ ರಾಜ್ಞಾ ರಕ್ಷಿತವ್ಯಾಃ ಪ್ರಜಾಸ್ತಥಾ              ||24||
ಪರೀಕ್ಷಿತ್ ರಾಜನಾದರೋ ಅವನ ಪ್ರಪಿತಾಮಹನಾದ ಪಾಂಡುವಿನಂತೆ ರಾಜನು ಪ್ರಜೆಗಳನ್ನು ಹೇಗೆ ರಕ್ಷಿಸಬೇಕೋ ಹಾಗೆ ನಮ್ಮನ್ನು ವಿಶೇಷವಾಗಿ ರಕ್ಷಿಸುತ್ತಿದ್ದಾನೆ.
ತೇನೇಹ ಕ್ಷುಧಿತೇನೈತ್ಯ ಶ್ರಾಂತೇನ ಮೃಗಾಲಿಪ್ಸುನಾ |
ಆಜಾನತಾ ವ್ರತಮಿದಂ ಕೃತಮೇತದಸಂಶಯಮ್  ||25||
ಅವನು ಮೃಗವನ್ನು ಹಿಂಬಾಲಿಸಿ ಹಸಿದು ಬಳಲಿ ಬಂದು ನನ್ನ ಮೌನವ್ರತವನ್ನು ತಿಳಿಯದೆ, ಈ ಕೆಲಸವನ್ನು ಮಾಡಿದನೆಂಬ ವಿಷಯದಲ್ಲಿ ಸಂಶಯವಿಲ್ಲ.
ಕಸ್ಮಾದಿದಂ ತ್ವಯಾ ಬಾಲ್ಯಾತ್ ಸಹಸಾ ದುಷ್ಕೃತಂ ಕೃತಮ್ |
ನ ಹ್ಯರ್ಹತಿ ನೃಪಃ ಶಾಪಮ್ ಅಸ್ಮತ್ತಃ ಪುತ್ರ ಸರ್ವಥಾ              ||26||
ನೀನು ಏಕೆ ಬಾಲ್ಯದಿಂದ ಮತ್ತು ವಿಚಾರಮಾಡದೆ ಇಂತಹ ದುಷ್ಕಾರ್ಯವನ್ನು ಮಾಡಿದೆ? ಪುತ್ರನೇ, ಆ ರಾಜನು ನಮ್ಮಿಂದ ಯಾವುದೇ ರೀತಿಯ ಶಾಪಕ್ಕೂ ಅರ್ಹನಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಷಡ್‌ತ್ರಿಂಶೋಽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಚತುರ್ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ  ಮುಗಿಯಿತು.
*****

ಮೂವತ್ತೇಳನೆಯ ಅಧ್ಯಾಯ
(ತಂದೆಯಿಂದ ಶೃಂಗಿಗೆ ಮುಂದುವರೆದ ಉಪದೇಶ. ಶಿಷ್ಯನಿಂದ ರಾಜನಿಗೆ ವಾರ್ತಾಹರಣ. ತಕ್ಷಕ ಮತ್ತು ಕಾಶ್ಯಪಬ್ರಾಹ್ಮಣರ ಸಂವಾದ.)
ಶೃಂಗೀ
ಯದ್ಯೇತತ್ ಸಾಹಸಂ ತಾತ ಯದಿ ವಾ ದುಷ್ಕೃತಂ ಕೃತಮ್ |
ಪ್ರಿಯಂ ವಾಪ್ಯಪ್ರಿಯಂ ವಾಪಿ ವಾಗುಕ್ತಾ ನ ಮೃಷಾ ಮಮ         ||1||
ತಂದೆಯೇ ನಾನು ಮಾಡಿದ ಈ ಕಾರ್ಯವು ವಿಚಾರಪೂರ್ವಕವಲ್ಲದ್ದೇ ಆಗಲಿ ಅಥವಾ ಪಾಪವೇ ಆಗಲಿ ಅಥವಾ ನಿನಗೆ ಪ್ರಿಯವೇ ಆಗಲಿ ಅಥವಾ ಅಪ್ರಿಯವೇ ಆಗಲಿ, ಏನಾದರೂ ನಾನು ಆಡಿದ ಮಾತು ಎಂದೂ ಸುಳ್ಳಾಗುವುದಿಲ್ಲ.
ನೈವಾನ್ಯಥಾ ತದ್ ಭವಿತಾ ಪಿತರೇತದ್ ಬ್ರವೀಮಿ ತೇ |
ನಾಹಂ ಮೃಷಾ ಬ್ರುವನ್ ಸ್ವಾಮಿನ್ ಸ್ವೈರೇಷ್ವಪಿ ಕುತಃ ಶಪನ್  ||2||
ತಂದೆಯೇ, ಈ ಮಾತು ವ್ಯತ್ಯಾಸವಾಗುವುದಿಲ್ಲ. ಇದನ್ನು ನಿನಗೆ ಹೇಳುತ್ತಿದ್ದೇನೆ. ಸ್ವಾಮಿಯೇ, ನಾನು ವಿನೋದಕ್ಕಾಗಿಯೂ ಸುಳ್ಳನ್ನು ಆಡಿದವನಲ್ಲ. ಇನ್ನು ಶಾಪವನ್ನು ಕೊಡುವಾಗ ಹೇಗೆ ಸುಳ್ಳನ್ನು ಹೇಳುತ್ತೇನೆ?
ಶಮೀಕಃ
ಜಾನಾಮ್ಯತ್ಯುಗ್ರಭಾವಂ ತ್ವಾಂ ತಾತ ಸತ್ಯಗಿರಂ ತಥಾ |
ನಾನೃತಂ ಹ್ಯುಕ್ತಪೂರ್ವಂ ತೇ ನೈತನ್ಮಿಥ್ಯಾ ಭವಿಷ್ಯತಿ              ||3||
ಪ್ರೀತಿಪಾತ್ರನೇ, ನೀನು ಉಗ್ರಸ್ವಭಾವದವನೆಂದೂ, ಸತ್ಯವಚನನೆಂದೂ ನಾನು ತಿಳಿದಿದ್ದೇನೆ. ನೀನು ಎಂದೂ ಸುಳ್ಳು ಮಾತನಾಡಿಲ್ಲ. ಆದ್ದರಿಂದ ಈ ಮಾತೂ ಸಹ ಸುಳ್ಳಾಗುವುದಿಲ್ಲ.
ಪಿತ್ರಾ ಪುತ್ರೋ ವಯಃಸ್ಥೋಽಪಿ ಸತತಂ ವಾಚ್ಯ ಏವ ಚ |
ಯಥಾ ಸ್ಯಾದ್ ಗುಣಯುಕ್ತಶ್ಚ  ಪ್ರಾಪ್ನುಯಾಚ್ಚ ಮಹದ್ಯಶಃ        ||4||
ತಂದೆಯಾದವನು ಮಗನು ಪ್ರಾಪ್ತವಯಸ್ಕನಾದರೂ ಅವನು ಗುಣಯುಕ್ತನಾಗುವಂತೆ, ಮಹಾಕೀರ್ತಿಯನ್ನು ಪಡೆಯುವಂತೆ ಅವನಿಗೆ ಉಪದೇಶವನ್ನು ಮಾಡಲೇಬೇಕು.
ಕಿಂ ಪುನರ್ಬಾಲ ಏವ ತ್ವಂ ತಪಸಾ ಭಾವಿತಃ ಪ್ರಭೋ |
ವರ್ಧತೇ ಚ ಪ್ರಭವತಾಂ ಕೋಪೋಽತೀವ ಮಹಾತ್ಮನಾಮ್         ||5||
ಹೀಗಿರುವಾಗ ನೀನು ಬಾಲಕನಾಗಿ, ತಪಸ್ಸಿನಿಂದ ಬೆಳೆಯುತ್ತಿದ್ದೀಯೆ. ಪ್ರಭುವೇ, ತಪಸ್ಸಿನಿಂದ ಅಭಿವೃದ್ಧಿಯನ್ನು ಹೊಂದುವ ಮಹಾತ್ಮರಿಗೆ ಜೊತೆಯಲ್ಲಿಯೇ ಕೋಪವೂ ಬೆಳೆಯುತ್ತದೆ.
ಸೋಽಹಂ ವಕ್ಷ್ಯಾಮಿ ವಕ್ತವ್ಯಂ ತ್ವಯಿ ಧರ್ಮವತಾಂ ವರ |
ಪುತ್ರತ್ವಂ ಬಾಲಕತ್ವಂ ಚ ತವಾವೇಕ್ಷ್ಯ ಚ ಸಾಹಸಮ್              ||6||
ಧರ್ಮವಂತರಲ್ಲಿ ಶ್ರೇಷ್ಠನಾದವನೇ, ನೀನು ನನ್ನ ಪುತ್ರನೆಂಬುದನ್ನೂ, ಬಾಲಕನೆಂಬುದನ್ನೂ, ವಿಚಾರವಿಲ್ಲದೇ ಕಾರ್ಯವನ್ನು

ಮಾಡುವವನು ಎಂಬುದನ್ನೂ ಗಮನಿಸಿ ನಾನು ಹೇಳಬೇಕಾದ ವಿಷಯವನ್ನು ನಿನಗೆ ಹೇಳುವೆನು.
ಸ ತ್ವಂ ಶಮಪರೋ ಭೂತ್ವಾ ವನ್ಯಮಾಹಾರಮಾಚರನ್ |
ಚರನ್ ಕ್ರೋಧಮಿಮಂ ತ್ಯಕ್ತ್ವಾ ನೈವ ಧರ್ಮಂ ಪ್ರಹಾಸ್ಯಸಿ ॥7॥
ನೀನು ಶಾಂತಿಯನ್ನು ಹೊಂದಿ, ಕಾಡಿನಲ್ಲಿ ಸಿಕ್ಕುವ ಆಹಾರವನ್ನು ಸೇವಿಸಿ, ತಪಸ್ಸನ್ನು ಮಾಡಿ ಕ್ರೋಧವನ್ನು ತ್ಯಜಿಸಿದರೆ, ಆಗ ಧರ್ಮದಿಂದ ಚ್ಯುತನಾಗುವುದಿಲ್ಲ.
ಕ್ರೋಧೋ ಹಿ ಧರ್ಮಂ ಹರತಿ ಯತೀನಾಂ ದುಃಖಸಂಚಿತಮ್ |
ತತೋ ಧರ್ಮವಿಹೀನಾನಾಂ ಗತಿರಿಷ್ಟಾ ನ ವಿದ್ಯತೇ ॥8॥
ಆಧ್ಯಾತ್ಮಮಾರ್ಗದಲ್ಲಿ ಪ್ರಯತ್ನಶೀಲರಾದವರು ಕಷ್ಟಪಟ್ಟು ಸಂಪಾದಿಸಿದ ಧರ್ಮವನ್ನು ಕ್ರೋಧವು ನಾಶಮಾಡುತ್ತದೆ. ಅನಂತರ ಧರ್ಮರಹಿತರಾದವರಿಗೆ ಇಷ್ಟವಾದ ಪರಗತಿಯು ಉಂಟಾಗುವುದಿಲ್ಲ.
ಶಮ ಏವ ಯತೀನಾಂ ಹಿ ಕ್ಷಮಿಣಾಂ ಸಿದ್ಧಿಕಾರಕಃ |
ಕ್ಷಮಾವತಾಮಯಂ ಲೋಕಃ ಪರಶ್ಚೈವ ಕ್ಷಮಾವತಾಮ್ ॥9॥
ಯತ್ನಶೀಲರಾದವರಿಗೂ ಮತ್ತು ಸಹನಶೀಲರಾದವರಿಗೂ ಶಾಂತಿಯೇ ಸಿದ್ಧಿಯನ್ನುಂಟು ಮಾಡುವಂತಹುದು. ಸಹನಶೀಲರಾದವರಿಗೆ ಈ ಲೋಕವೂ ಇರುತ್ತದೆ, ಪರಲೋಕವೂ ಇರುತ್ತದೆ.
ತಸ್ಮಾಚ್ಚರೇಥಾಃ ಸತತಂ ಕ್ಷಮಾಶೀಲೋ ಜಿತೇಂದ್ರಿಯಃ |
ಕ್ಷಮಯಾ ಪ್ರಾಪ್ಸ್ಯತೇ ಲೋಕಂ ಬ್ರಹ್ಮಣಃ ಸಮನಂತರಮ್ ॥10॥
ಆದ್ದರಿಂದ ಕ್ಷಮಾಶೀಲನಾಗಿ, ಜಿತೇಂದ್ರಿಯನಾಗಿ, ಯಾವಾಗಲೂ ಧರ್ಮವನ್ನು ಆಚರಿಸು. ಕ್ಷಮೆಯಿಂದ ಅನಂತರದಲ್ಲಿ ಬ್ರಹ್ಮಲೋಕವೂ ಪ್ರಾಪ್ತವಾಗುತ್ತದೆ.
ಮಯಾ ತು ಶಮಮಾಸ್ಥಾಯ ಯಚ್ಛಕ್ಯಂ ಕರ್ತುಮದ್ಯ ವೈ |
ತತ್ ಕರಿಷ್ಯಾಮಿ ತಾತಾಹಂ ಪ್ರೇಷಯಿಷ್ಯೇ ನೃಪಾಯ ವೈ ॥11॥
ಪ್ರೀತಿಪಾತ್ರನೇ, ಈ ದಿನ ನಾನು ಶಾಂತಿಯನ್ನು ಹೊಂದಿ ಏನು ಮಾಡಲು ಸಾಧ್ಯವೋ ಅದನ್ನು ಮಾಡುವೆನು. ರಾಜನಿಗೆ ಈ ಸಂದೇಶವನ್ನು ಕಳುಹಿಸುವೆನು.
ಮಮ ಪುತ್ರೇಣ ಶಪ್ತೋಽಸಿ ಬಾಲೇನಾಕೃತಬುದ್ಧಿನಾ |
ಮಮೇಮಾಂ ಧರ್ಷಣಾಂ ತ್ವತ್ತಃ ಪ್ರೇಕ್ಷ್ಯ ರಾಜನ್ನಮರ್ಷಿಣಾ ॥12॥
ಎಲೈ ರಾಜನೇ, ನೀನು ನನಗೆ ಮಾಡಿದ ಅವಮಾನದ ನಿಮಿತ್ತದಿಂದಾಗಿ ಕ್ರೋಧಶೀಲನಾದ, ಬಾಲಕನಾದ, ಪಕ್ವಬುದ್ಧಿಯಿಲ್ಲದ ನನ್ನ ಪುತ್ರನಿಂದ ಶಪಿಸಲ್ಪಟ್ಟಿದ್ದೀಯೆ. (ಎಂದು ಸಂದೇಶವನ್ನು ಕಳುಹಿಸುವೆನು.)
ಸೂತಃ
ಏವಮಾದಿಶ್ಯ ಶಿಷ್ಯಂ ಸ ಪ್ರೇಷಯಾಮಾಸ ಸುವ್ರತಃ |
ಪರೀಕ್ಷಿತೇ ನೃಪತಯೇ ದಯಾಪೂರ್ಣೋ ಮಹಾತಪಾಃ ॥13॥
ಸಂದಿಶ್ಯ ಕುಶಲಪ್ರಶ್ನಂ ಕಾರ್ಯವೃತ್ತಾಂತಮೇವ ಚ |
ಶಿಷ್ಯಂ ಗೌರಮುಖಂ ನಾಮ ಶೀಘ್ರವಂತಂ ಗುಣಾನ್ವಿತಮ್ ॥14॥
ಸುವ್ರತನೂ, ದಯಾಪೂರ್ಣನೂ, ಮಹಾತಪಸ್ವಿಯೂ ಆದ ಆ ಶಮೀಕಋಷಿಯು ಶಿಷ್ಯನಿಗೆ ಆದೇಶವನ್ನು ನೀಡಿ, ಜೊತೆಗೆ ಪರೀಕ್ಷಿತನಿಗೆ ತಿಳಿಸಬೇಕಾದ ಸಂದೇಶವನ್ನು ತಿಳಿಸಿ, ಕುಶಲಪ್ರಶ್ನೆಯನ್ನು ಮಾಡಿ, ಅನಂತರ ಬಂದ ಉದ್ದೇಶವನ್ನು ತಿಳಿಸಬೇಕೆಂದು ತಿಳಿಸಿ, ಗುಣವಂತನಾದ, ಶೀಘ್ರಗಾಮಿಯಾದ ಗೌರಮುಖನೆಂಬ ಶಿಷ್ಯನನ್ನು ಕಳುಹಿಸಿದನು.
ಸೋಽಪಗಮ್ಯ ತತಃ ಶೀಘ್ರಂ ನರೇಂದ್ರಂ ಕುರುವರ್ಧನಮ್ |
ವಿವೇಶ ಭವನಂ ರಾಜ್ಞಃ ಪೂರ್ವಂ ದ್ವಾಃಸ್ಥೈರ್ನಿವೇದಿತಃ ॥15॥
ಆ ಶಿಷ್ಯನಾದರೋ, ಅಲ್ಲಿಂದ ಶೀಘ್ರವಾಗಿ ಹೊರಟು ಕುರುವಂಶವರ್ಧನನಾದ ಪರೀಕ್ಷಿತ್ ರಾಜನ ಅರಮನೆಯನ್ನು ತಲುಪಿ, ದ್ವಾರಪಾಲಕರಿಂದ ಮೊದಲು ನಿವೇದಿಸಲ್ಪಟ್ಟು, ರಾಜಭವನವನ್ನು ಪ್ರವೇಶಿಸಿದನು.
ಪೂಜಿತಸ್ತು ನರೇಂದ್ರೇಣ ದ್ವಿಜೋ ಗೌರಮುಖಸ್ತತಃ |
ಆಚಖ್ಯೌ ಚ ಪರಿಶ್ರಾಂತೋ ರಾಜ್ಞಃ ಸರ್ವಂವಿಶೇಷತಃ |
ಶಮೀಕವಚನಂ ಘೋರಂ ಯಥೋಕ್ತಂ ಮಂತ್ರಿಸನ್ನಿಧೌ ॥16॥
ಆ ನರೇಂದ್ರನಿಂದ ಪೂಜಿತನಾದ, ಮಾರ್ಗಾಯಾಸದಿಂದ ಬಳಲಿದ್ದ ಗೌರಮುಖನು, ಮಂತ್ರಿಗಳ ಸನ್ನಿಧಿಯಲ್ಲಿ ಆ ರಾಜನಿಗೆ ಎಲ್ಲಾ ವಿಷಯಗಳನ್ನೂ ಶಮೀಕರ ಘೋರವಾದ ವಚನವನ್ನೂ, ಅವರು ಹೇಳಿದಂತೆಯೇ ನಿವೇದಿಸಿದನು.
ಗೌರಮುಖಃ
ಶಮೀಕೋ ನಾಮ ರಾಜೇಂದ್ರ ವಿಷಯೇ ವರ್ತತೇ ತವ |
ಋಷಿಃ ಶಮದಮೋಪೇತೋ ಮೌನವ್ರತಸಮನ್ವಿತಃ ॥17॥
ಎಲೈ ರಾಜೇಂದ್ರನೇ, ಶಮದಮೋಪೇತರೂ, ಮೌನವ್ರತಧಾರಿಗಳೂ ಆದ ಶಮೀಕರೆಂಬ ಋಷಿಗಳು ನಿನ್ನ ರಾಜ್ಯದಲ್ಲಿ ವಾಸಿಸುತ್ತಿದ್ದಾರೆ.
ತಸ್ಯ ತ್ವಯಾ ನರವ್ಯಾಘ್ರ ಸ್ಕಂಧೇ ಭರತಸತ್ತಮ |
ಅವಸಕ್ತೋ ಧನುಷ್ಕೋಟ್ಯಾ ಸರ್ಪಃ ಪ್ರಾಣೈರ್ವಿಯೋಜಿತಃ ॥18॥
ಎಲೈ ಭರತಶ್ರೇಷ್ಠನಾದ ನರವ್ಯಾಘ್ರನೇ, ನೀನು ಅವರ ಕೊರಳಿನಲ್ಲಿ ಒಂದು ಮೃತವಾದ ಸರ್ಪವನ್ನು ಬಿಲ್ಲಿನ ತುದಿಯಿಂದ ಎತ್ತಿ ಹಾಕಿದ್ದೀಯೆ.

ಕ್ಷಾಂತವಾಂಸ್ತವ ತತ್ಕರ್ಮ ಪುತ್ರಸ್ತಸ್ಯ ನ ಚಕ್ಷಮೇ |
ತೇನ ಶಪ್ತೋಽಸಿ ರಾಜೇಂದ್ರ ಪಿತುರಜ್ಞಾತಮದ್ಯ ವೈ ॥19॥
ಅವರು ನಿನ್ನ ಅಪರಾಧವನ್ನು ಕ್ಷಮಿಸಿದ್ದಾರೆ. ಆದರೆ, ಅವರ ಪುತ್ರನು ಕ್ಷಮಿಸಲಿಲ್ಲ. ರಾಜೇಂದ್ರನೇ, ತಂದೆಗೆ ತಿಳಿಯದಂತೆಯೇ ಆ ಪುತ್ರನು ನಿನಗೆ ಶಾಪವನ್ನು ನೀಡಿದ್ದಾನೆ.
ತಕ್ಷಕಾತ್ ಸಪ್ತರಾತ್ರೇಣ ಮೃತ್ಯುರ್ವೈ ತೇ ಭವಿಷ್ಯತಿ |
ತತ್ರ ರಕ್ಷಾಂ ಕುರುಷ್ವೇತಿ ಪುನಃ ಪುನರಥಾಬ್ರವೀತ್ ॥20॥
ಇವತ್ತಿಗೆ ಏಳನೆಯ ದಿನದಲ್ಲಿ ತಕ್ಷಕನಿಂದ ನಿನಗೆ ಮೃತ್ಯುವು ಉಂಟಾಗುವುದು. ಅದಕ್ಕೆ ಬೇಕಾದ ರಕ್ಷಣೆಯನ್ನು ಮಾಡಿಕೋ ಎಂದು ಗುರುಗಳು ಪುನಃ ಪುನಃ ಹೇಳಿಕಳುಹಿಸಿದ್ದಾರೆ.
ತದನ್ಯಥಾ ನ ಶಕ್ಯಂ ಚ ಕರ್ತುಂ ಕೇನಚಿದಪ್ಯುತ |
ನ ಹಿ ಶಕ್ನೋತಿ ಸಂಯಂತುಂ ಪುತ್ರಂ ಕೋಪಸಮನ್ವಿತಮ್ |
ತತೋಽಹಂ ಪ್ರೇಷಿತಸ್ತೇನ ತವ ರಾಜನ್ ಹಿತಾರ್ಥಿನಾ ॥21॥
ಆ ಶಾಪವನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲ. ಋಷಿಗಳು ಕೋಪಯುಕ್ತನಾದ ತಮ್ಮ ಪುತ್ರನನ್ನು ನಿಯಂತ್ರಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಎಲೈ ರಾಜನೇ, ನಿನ್ನ ಹಿತವನ್ನು ಬಯಸಿದ ಅವರು ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾರೆ.
ಸೂತಃ
ಇತಿ ಶ್ರುತ್ವಾ ವಚೋ ಘೋರಂ ಸ ರಾಜಾ ಕುರುನಂದನಃ |
ಪರ್ಯತಪ್ಯತ ತತ್ಪಾಪಂ ಕೃತ್ವಾ ಬ್ರಹ್ಮನ್ ಮಹಾತ್ಮನಃ ॥22॥
ಎಲೈ ಬ್ರಾಹ್ಮಣನೇ, ಕುರುನಂದನನಾದ ಆ ರಾಜನು ಈ ಘೋರವಾದ ವಚನವನ್ನು ಕೇಳಿ, ಆ ಮಹಾತ್ಮರಿಗೆ ತಾನು ಮಾಡಿದ ಅಪರಾಧದ ನಿಮಿತ್ತದಿಂದ ಬಹಳ ಪರಿತಾಪವನ್ನು ಹೊಂದಿದನು.
ತಂ ಚ ಮೌನವ್ರತಧರಂ ಶ್ರುತ್ವಾ ಮುನಿವರಂ ತದಾ |
ಭೂಯ ಏವಾಭವದ್ ರಾಜಾ ಶೋಕಸಂತಪ್ತಮಾನಸಃ ॥23॥
ಅವರಾದರೋ ಮೌನವ್ರತವನ್ನು ಧರಿಸಿದ ಮುನಿಶ್ರೇಷ್ಠರು ಎಂದು ತಿಳಿದು ಅವನ ಮನಸ್ಸಿನ ಶೋಕ ಮತ್ತು ಸಂತಾಪಗಳು ಇನ್ನೂ ಹೆಚ್ಚಾದವು.
ಅನುಕ್ರೋಶಾನ್ವಿತಂ ತಸ್ಯ ಶಮೀಕಸ್ಯೋಪಧಾರ್ಯ ತು |
ಪರ್ಯತಪ್ಯತ ಭೂಯೋಽಪಿ ಕೃತ್ವಾ ತತ್ ಕಿಲ್ಬಿಷಂ ಮುನೇ ॥24॥
ಎಲೈ ಶೌನಕರೇ, ಶಮೀಕಋಷಿಗಳ ಕರುಣೆಯನ್ನು ತಿಳಿದು ಅವನು ತಾನು ಆ ಋಷಿಗಳಿಗೆ ಅಪರಾಧವನ್ನು ಮಾಡಿದವನಾಗಿ ಇನ್ನೂ ಹೆಚ್ಚು ಪರಿತಾಪವನ್ನು ಹೊಂದಿದನು.
ನ ಹಿ ಮೃತ್ಯುಂ ತಥಾ ರಾಜಾ ಶ್ರುತ್ವಾ ವೈ ಸೋಽನ್ವತಪ್ಯತ |
ಅಶೋಚದಮರಪ್ರಖ್ಯೋ ಯಥಾ ಕೃತ್ವೇಹ ಕರ್ಮ ತತ್ ॥25॥
ಆ ರಾಜನು ತನ್ನ ಮೃತ್ಯುವನ್ನು ಕುರಿತು ಹೆಚ್ಚು ಸಂತಾಪವನ್ನು ಹೊಂದಲಿಲ್ಲ. ಆದರೆ, ಅಮರಸದೃಶನಾದ ಅವನು ತಾನು ಮಾಡಿದ ಪಾಪಕೃತ್ಯದ ನಿಮಿತ್ತದಿಂದಾಗಿ ಬಹಳ ದುಃಖಪಟ್ಟನು.
ತತಸ್ತಂ ಪೂಜಯಾಮಾಸ ರಾಜಾ ಗೌರಮುಖಂ ತದಾ |
ಭೂಯಃ ಪ್ರಸಾದಂ ಭಗವಾನ್ ಕರೋತ್ವಿತಿ ಮಮ್ಯೈಷ ವೈ ॥26॥
ಅನಂತರ ರಾಜನು ಗೌರಮುಖನನ್ನು ಸತ್ಕರಿಸಿ, ಪೂಜ್ಯರು (ನಿಮ್ಮ ಗುರುಗಳು) ನನ್ನ ಮೇಲೆ ಇನ್ನೂ ಅನುಗ್ರಹವನ್ನು ಮಾಡಬೇಕು ಎಂದು ಕೇಳಿಕೊಂಡನು.
ಶ್ರುತ್ವಾ ತದ್ವಚನಂ ರಾಜ್ಞೋ ಮುನಿರ್ಗೌರಮುಖಸ್ತದಾ |
ತಮನುಜ್ಞಾಪ್ಯ ವೇಗೇನ ಪ್ರಜಗಾಮಾಶ್ರಮಂ ಗುರೋಃ ॥27॥
ಮುನಿಯಾದ ಗೌರಮುಖನು ಆಗ ರಾಜನ ಆ ಮಾತುಗಳನ್ನು ಕೇಳಿ, ರಾಜನ ಅನುಮತಿಯನ್ನು ಪಡೆದು ವೇಗವಾಗಿ ಗುರುಗಳ ಆಶ್ರಮಕ್ಕೆ ಹಿಂದಿರುಗಿದನು.
ತಸ್ಮಿಂಸ್ತು ಗತಮಾತ್ರೇ ತು ರಾಜಾ ಗೌರಮುಖೇ ತದಾ |
ಮಂತ್ರಿಭಿರ್ಮಂತ್ರಯಾಮಾಸ ಸಹ ಸಂವಿಗ್ನಮಾನಸಃ ॥28॥
ಗೌರಮುಖನು ಅರಮನೆಯಿಂದ ಹೋಗುತ್ತಿರಲು ರಾಜನು ಮನಸ್ಸಿನಲ್ಲಿ ಉದ್ವೇಗಕ್ಕೆ ಒಳಗಾದವನಾಗಿ ಮಂತ್ರಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು.
ನಿಶ್ಚಿತ್ಯ ಮಂತ್ರಿಭಿಶ್ಚೈವ ಸಹಿತೋ ಮಂತ್ರತತ್ತ್ವವಿತ್ |
ಪ್ರಾಸಾದಂ ಕಾರಯಾಮಾಸ ಏಕಸ್ತಂಭಂ ಸುರಕ್ಷಿತಮ್ ॥29॥
ಮಂತ್ರದ ರಹಸ್ಯವನ್ನು ತಿಳಿದ ಅವನು ಮಂತ್ರಿಗಳ ಜೊತೆಯಲ್ಲಿ ಆಲೋಚಿಸಿ, ಏಕಸ್ತಂಭದ ಮೇಲೆ ಸುರಕ್ಷಿತವಾದ ಒಂದು ಪ್ರಾಸಾದವನ್ನು ನಿರ್ಮಿಸಿದನು.
ರಕ್ಷಾಂ ಚ ವಿದಧೇ ತತ್ರ ಭಿಷಜಶ್ಚೌಷಧಾನಿ ಚ |
ಬ್ರಾಹ್ಮಣಾನ್ ಸಿದ್ಧಮಂತ್ರಾಂಶ್ಚ ಸರ್ವತೋ ವೈ ನ್ಯವೇಶಯತ್ ॥30॥
ಅಲ್ಲಿ ಅನೇಕ ವಿಧವಾದ ರಕ್ಷೆಗಳನ್ನೂ, ವೈದ್ಯರನ್ನೂ ಮತ್ತು
ಔಷಧಿಗಳನ್ನೂ ಇರಿಸಿದನು. ಮಂತ್ರಸಿದ್ಧರಾದ ಬ್ರಾಹ್ಮಣರನ್ನು ಎಲ್ಲಾ ಕಡೆಗಳಲ್ಲಿಯೂ ಇರಿಸಿದನು.

ರಾಜಕಾರ್ಯಾಣಿ ತತ್ರಸ್ಥಃ ಸರ್ವಾಣ್ಯೇವಾಕರೋಚ್ಚ ಸಃ |
ಮಂತ್ರಿಭಿಃ ಸಹ ಮಂತ್ರಜ್ಞೈಃ ಸಮಂತಾತ್ ಪರಿರಕ್ಷಿತಃ ||31||
ಮಂತ್ರಜ್ಞರಾದ ಮಂತ್ರಿಗಳಿಂದ ಎಲ್ಲಾ ರೀತಿಯಲ್ಲಿಯೂ ರಕ್ಷಿಸಲ್ಪಟ್ಟ ಅವನು ಆ ಪ್ರಾಸಾದದಿಂದಲೇ ಎಲ್ಲಾ ರಾಜಕಾರ್ಯಗಳನ್ನೂ ನೆರವೇರಿಸಿದನು.
ಪ್ರಾಪ್ತೇ ತು ದಿವಸೇ ತಸ್ಮಿನ್ ಸಪ್ತಮೇ ದ್ವಿಜಸತ್ತಮ |
ಕಾಶ್ಯಪೋऽಭ್ಯಾಗಮದ್ ವಿದ್ವಾಂಸ್ತಂ ರಾಜಾನಂ ಚಿಕಿತ್ಸಿತುಮ್ ||32||
ಎಲೈ ಬ್ರಾಹ್ಮಣಶ್ರೇಷ್ಠನೇ, ಏಳನೆಯ ದಿವಸವು ಪ್ರಾಪ್ತವಾಗುತ್ತಿರಲು, ವಿದ್ವಾಂಸನಾದ ಒಬ್ಬ ಕಾಶ್ಯಪಬ್ರಾಹ್ಮಣನು ರಾಜನಿಗೆ ಚಿಕಿತ್ಸೆಯನ್ನು ನೀಡುವುದಕ್ಕೋಸ್ಕರ ಬೇಗ ಬರುತ್ತಿದ್ದನು.
ಶ್ರುತಂ ಹಿ ತೇನ ತದಭೂದದ್ಯ ತಂ ರಾಜಸತ್ತಮಮ್ |
ತಕ್ಷಕಃ ಪನ್ನಗಶ್ರೇಷ್ಠೋ ನೇಷ್ಯತೇ ಯಮಸಾದನಮ್ ||33||
ತಂ ದಷ್ಟಂ ಭುಜಗೇಂದ್ರೇಣ ಕರಿಷ್ಯೇऽಹಮಪಜ್ವರಮ್ |
ತತ್ರ ಮೇऽರ್ಥಶ್ಚ ಧರ್ಮಶ್ಚ ಭವೇದಿತಿ ವಿಚಿಂತಯನ್ ||34||
ಈ ದಿನ ಪನ್ನಗಶ್ರೇಷ್ಠನಾದ ತಕ್ಷಕನು ರಾಜನನ್ನು ಯಮಲೋಕಕ್ಕೆ ಕಳುಹಿಸುತ್ತಾನೆ ಎಂಬ ವಾರ್ತೆಯನ್ನು ಅವನು ಕೇಳಿದ್ದನು. ಸರ್ಪದಿಂದ ಕಚ್ಚಲ್ಪಟ್ಟ ಆ ರಾಜನನ್ನು ನಾನು ನೀರೋಗಿಯನ್ನಾಗಿ ಮಾಡುವೆನು. ಅದರಿಂದ ನನಗೆ ಅರ್ಥವೂ, ಧರ್ಮವೂ ಪ್ರಾಪ್ತವಾಗುತ್ತದೆ ಎಂದು ಯೋಚಿಸುತ್ತಾ (ಬರುತ್ತಿದ್ದನು).
ತಂ ದದರ್ಶ ಸ ನಾಗೇಂದ್ರಸ್ತಕ್ಷಕಃ ಕಾಶ್ಯಪಂ ಪಥಿ |
ಗಚ್ಛಂತಮೇಕಮನಸಂ ದ್ವಿಜೋ ಭೂತ್ವಾ ವಯೋऽಧಿಕಃ ||35||
ತಮಬ್ರವೀತ್ ಪನ್ನಗೇಂದ್ರಃ ಕಾಶ್ಯಪಂ ಮುನಿಸತ್ತಮ |
ಕ್ವ ಭವಾಂಸ್ತ್ವರಿತೋ ಯಾತಿ ಕಿಂ ಚ ಕಾರ್ಯಂ ಚಿಕೀರ್ಷತಿ ||36||
ಆ ಕಾಶ್ಯಪಬ್ರಾಹ್ಮಣನು ಏಕಾಗ್ರಮನಸ್ಸಿನಿಂದ ಮಾರ್ಗದಲ್ಲಿ ಬರುತ್ತಿದ್ದುದನ್ನು ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿದ್ದ ತಕ್ಷಕನು ನೋಡಿದನು. ಅವನನ್ನು ನೋಡಿದ ಪನ್ನಗೇಂದ್ರನು ಋಷಿಶ್ರೇಷ್ಠನಾದ ಆ ಕಾಶ್ಯಪನನ್ನು ಕುರಿತು ಎಲ್ಲಿಗೆ ಇಷ್ಟು ಶೀಘ್ರವಾಗಿ ಹೋಗುತ್ತಿದ್ದೀಯೆ? ಏನು ಕಾರ್ಯವನ್ನು ಮಾಡಲು ಬಯಸುತ್ತಿದ್ದೀಯೆ ಎಂದು ಕೇಳಿದನು.
ಕಾಶ್ಯಪಃ
ನೃಪಂ ಕುರುಕುಲೋತ್ಪನ್ನಂ ಪರೀಕ್ಷಿತಮರಿಂದಮಮ್ |
ತಕ್ಷಕಃ ಪನ್ನಗಶ್ರೇಷ್ಠಸ್ತೇಜಸಾऽದ್ಯ ಪ್ರಧಕ್ಷ್ಯತಿ ||37||
ಕುರುಕುಲೋತ್ತಮನಾದ, ಅರಿಂದಮನಾದ ಪರೀಕ್ಷಿತ್ ರಾಜನನ್ನು ಈ ದಿನ ಪನ್ನಗಶ್ರೇಷ್ಠನಾದ ತಕ್ಷಕನು ತನ್ನ ತೇಜಸ್ಸಿನಿಂದ ಸುಡುವನು.
ತಂ ದಷ್ಟಂ ಪನ್ನಗೇಂದ್ರೇಣ ತೇನಾಗ್ನಿಸಮತೇಜಸಾ |
ಪಾಂಡವಾನಾಂ ಕುಲಕರಂ ರಾಜಾನಮಮಿತೌಜಸಮ್ |
ಗಚ್ಛಾಮಿ ಸೋऽಹಂ ತ್ವರಿತಃ ಸದ್ಯಃ ಕರ್ತುಮಪಜ್ವರಮ್ ||38||
ಅಗ್ನಿ ಸಮಾನವಾದ ತೇಜಸ್ಸನ್ನು ಹೊಂದಿದ, ಪನ್ನಗೇಂದ್ರನಾದ ತಕ್ಷಕನಿಂದ ಕಡಿಯಲ್ಪಟ್ಟ, ಪಾಂಡವರ ವಂಶೋದ್ಧಾರಕನಾದ, ಅಮಿತಪರಾಕ್ರಮಿಯಾದ ಆ ರಾಜನನ್ನು ತಕ್ಷಣ ವಿಷದಿಂದ ಮುಕ್ತನನ್ನಾಗಿ ಮಾಡಲು ನಾನು ತ್ವರಿತವಾಗಿ ಹೋಗುತ್ತಿದ್ದೇನೆ.
ತಕ್ಷಕಃ
ಅಹಂ ಸ ತಕ್ಷಕೋ ಬ್ರಹ್ಮಂಸ್ತಂ ಧಕ್ಷ್ಯಾಮಿ ಮಹೀಪತಿಮ್ |
ನಿವರ್ತಸ್ವ ಮಯ ದಷ್ಟಂ ನ ಶಕ್ಯಂ ಸ್ಯಾಚ್ಚಿಕಿತ್ಸಿತುಮ್ ||39||
ಎಲೈ ಬ್ರಾಹ್ಮಣನೇ, ನಾನೇ ಆ ತಕ್ಷಕ. ನಾನು ರಾಜನನ್ನು ಸುಡುವೆನು. ನೀನು ಹಿಂದಿರುಗು. ನಾನು ಕಚ್ಚಿದ ಮೇಲೆ ಯಾರೂ ಚಿಕಿತ್ಸೆಯನ್ನು ಮಾಡಲು ಸಾಧ್ಯವಿಲ್ಲ.
ಕಾಶ್ಯಪಃ
ಅಹಂ ತು ನೃಪತಿಂ ನಾಗ ತ್ವಯಾ ದಷ್ಟಮಪಜ್ವರಮ್ |
ಕರಿಷ್ಯ ಇತಿ ಮೇ ಬುದ್ಧಿರ್ವಿದ್ಯಾಬಲಮುಪಾಶ್ರಿತಃ ||40||
ಎಲೈ ನಾಗನೇ, ನೀನು ಕಚ್ಚಿದ ಆ ರಾಜನನ್ನು ನಾನು ಬದುಕಿಸುತ್ತೇನೆ. ನನ್ನ ಬುದ್ಧಿ ಮತ್ತು ವಿದ್ಯೆಯ ಬಲಗಳಿಂದ ಕೂಡಿದವನಾಗಿ ನಾನು ಅವನನ್ನು ಈ ದಿನ ಅಪಜ್ವರನನ್ನಾಗಿ ಮಾಡುತ್ತೇನೆ ಎಂದು ನನ್ನ ಭಾವನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತತ್ರಿಂಶೋऽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಪಂಚವಿಂಶೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
*****

ಮೂವತ್ತೆಂಟನೆಯ ಅಧ್ಯಾಯ

(ತಕ್ಷಕನಿಂದ ಕಾಶ್ಯಪ ಪರೀಕ್ಷೆ. ಧನವನ್ನು ಕೊಟ್ಟು ಅವನ ನಿವರ್ತನೆ. ಫಲದಲ್ಲಿ ಕ್ರಿಮಿರೂಪದಿಂದ ಪ್ರವೇಶಿಸಿ ರಾಜನ ಕಂಠವೇಷ್ಟನೆ.)

ತಕ್ಷಕಃ
ದಷ್ಟಂ ಯದಿ ಮಯೇಹ ತ್ವಂ ಶಕ್ತಃ ಕಿಂಚಿಚ್ಚಿಕಿತ್ಸಿತುಮ್ |
ತತೋ ದಗ್ಧಂ ಮಯಾ ವೃಕ್ಷಮಿಮಂ ಜೀವಯ ಕಾಶ್ಯಪ ॥1॥
ನಾನು ಕಚ್ಚಿದ ವಸ್ತುವನ್ನು ನೀನು ಚಿಕಿತ್ಸೆ ಮಾಡಲು ಸಾಧ್ಯವಾಗುವುದಾದರೆ, ಎಲೈ ಕಾಶ್ಯಪನೇ, ನಾನು ಕಚ್ಚಿ ವಿಷದಿಂದ ಸುಡುವ ಈ ಮರವನ್ನು ಬದುಕಿಸು.
ಪರಂ ಮಂತ್ರಬಲಂ ಯತ್ ತೇ ದರ್ಶಯಸ್ವ ಯತಸ್ವ ಚ |
ನ್ಯಗ್ರೋಧಮೇನಂ ಧಕ್ಷ್ಯಾಮಿ ಪಶ್ಯತಸ್ತೇ ದ್ವಿಜೋತ್ತಮ ॥2॥
ದ್ವಿಜಶ್ರೇಷ್ಠನೇ, ಈ ವಟವೃಕ್ಷವನ್ನು ನಿನ್ನ ಕಣ್ಣೆದುರಿಗೆ ಸುಡುವೆನು. ನಿನ್ನ ಶ್ರೇಷ್ಠವಾದ ಮಂತ್ರಬಲವನ್ನು ತೋರಿಸು. ಪ್ರಯತ್ನಮಾಡು.
ಕಾಶ್ಯಪಃ
ದಶ ನಾಗೇಂದ್ರ ವೃಕ್ಷಂ ತ್ವಂ ಯಮೇನಮಭಿಮನ್ಯಸೇ |
ಅಹಮೇನಂ ತ್ವಯಾ ದಗ್ಧಂ ಜೀವಯಿಷ್ಯೇ ಭುಜಂಗಮ ॥3॥
ಎಲೈ ನಾಗೇಂದ್ರನೇ, ನಿನಗೆ ಯಾವುದು ಬೇಕೋ ಆ ಮರವನ್ನು ಕಚ್ಚು. ಎಲೈ ಸರ್ಪರಾಜನೇ, ಆ ಮರವನ್ನು ನಾನು ಬದುಕಿಸುವೆನು.
ಸೂತಃ
ಏವಮುಕ್ತಃ ಸ ನಾಗೇಂದ್ರಃ ಕಾಶ್ಯಪೇನ ಮಹಾತ್ಮನಾ |
ಅದಶದ್ ವೃಕ್ಷಮಭ್ಯೇತ್ಯ ನ್ಯಗ್ರೋಧಂ ಪನ್ನಗೋತ್ತಮಃ ॥4॥
ಮಹಾತ್ಮನಾದ ಕಾಶ್ಯಪನಿಂದ ಹೀಗೆ ಹೇಳಲ್ಪಟ್ಟ ಸರ್ಪರಾಜನಾದ ಆ ತಕ್ಷಕನು ವಟವೃಕ್ಷವನ್ನು ಸಮೀಪಿಸಿ ಅದನ್ನು ಕಚ್ಚಿದನು.
ಸ ವೃಕ್ಷಸ್ತೇನ ದಷ್ಟಃ ಸನ್ ಸದ್ಯ ಏವ ಮಹಾದ್ಯುತೇ |
ಆಶೀವಿಷವಿಷೋಪೇತಃ ಪ್ರಜಜ್ವಾಲ ಸಮಂತತಃ ॥5॥
ಮಹಾದ್ಯುತಿಯಾದ ಶೌನಕನೇ, ಆ ವೃಕ್ಷವು ಅವನು ಕಚ್ಚಿದ ತಕ್ಷಣ ಸರ್ಪದ ವಿಷದ ಪ್ರಭಾವಕ್ಕೆ ಒಳಗಾಗಿ ಎಲ್ಲಾ ಕಡೆಯಲ್ಲಿಯೂ ಉರಿಯಲು ಪ್ರಾರಂಭಿಸಿತು.
ತಂ ದಗ್ಧ್ವಾ ಸ ನಗಂ ನಾಗಃ ಕಾಶ್ಯಪಂ ಪುನರಬ್ರವೀತ್ |
ಕುರು ಯತ್ನಂ ದ್ವಿಜಶ್ರೇಷ್ಠ ಜೀವಯೈನಂ ವನಸ್ಪತಿಮ್ ॥6॥
ಆ ವೃಕ್ಷವನ್ನು ದಹಿಸಿ ತಕ್ಷಕನು ಕಾಶ್ಯಪನನ್ನು ಕುರಿತು ಎಲೈ ಬ್ರಾಹ್ಮಣೋತ್ತಮನೇ, ಪ್ರಯತ್ನವನ್ನು ಮಾಡಿ ಈ ವನಸ್ಪತಿಯನ್ನು ಬದುಕಿಸು ಎಂದು ಪುನಃ ಹೇಳಿದನು.
ಸೂತಃ
ಭಸ್ಮೀಭೂತಂ ತತೋ ವೃಕ್ಷಂ ಪನ್ನಗೇಂದ್ರಸ್ಯ ತೇಜಸಾ |
ಭಸ್ಮ ಸರ್ವಂ ಸಮಾಹೃತ್ಯ ಕಾಶ್ಯಪೋ ವಾಕ್ಯಮಬ್ರವೀತ್ ॥7॥
ಆಗ ಪನ್ನಗೇಂದ್ರನ ತೇಜಸ್ಸಿನಿಂದ ಭಸ್ಮವಾದ ಆ ವೃಕ್ಷದ ಭಸ್ಮವನ್ನೆಲ್ಲಾ ಒಂದುಗೂಡಿಸಿ ಕಾಶ್ಯಪನು ಈ ಮಾತನ್ನು ಆಡಿದನು.
ಕಾಶ್ಯಪಃ
ವಿದ್ಯಾಬಲಂ ಪನ್ನಗೇಂದ್ರ ಪಶ್ಯ ಮೇಽಸ್ಮಿನ್ ವನಸ್ಪತೌ |
ಅಹಂ ಸಂಜೀವಯಾಮ್ಯೇನಂ ಪಶ್ಯತಸ್ತೇ ಭುಜಂಗಮ ॥8॥
ಎಲೈ ಪನ್ನಗೇಂದ್ರನೇ, ಈ ವನಸ್ಪತಿಯಲ್ಲಿ ನನ್ನ ವಿದ್ಯೆಯ ಸಾಮರ್ಥ್ಯವನ್ನು ನೋಡು. ಎಲೈ ಸರ್ಪರಾಜನೇ, ನಿನ್ನ ಕಣ್ಣೆದುರಿಗೇ ನಾನು ಈ ವೃಕ್ಷವನ್ನು ಬದುಕಿಸುತ್ತೇನೆ.
ಸೂತಃ
ತತಃ ಸ ಭಗವಾನ್ ವಿದ್ವಾನ್ ಕಾಶ್ಯಪೋ ದ್ವಿಜಸತ್ತಮಃ |
ಭಸ್ಮರಾಶೀಕೃತಂ ವೃಕ್ಷಂ ವಿದ್ಯಯಾ ಸಮಜೀವಯತ್ ॥9॥
ಅನಂತರ ಜ್ಞಾನಿಯಾದ, ಬ್ರಾಹ್ಮಣಶ್ರೇಷ್ಠನಾದ, ಪೂಜ್ಯನಾದ ಆ ಕಾಶ್ಯಪನು ಒಂದು ಭಸ್ಮದ ರಾಶಿಯಾಗಿ ಮಾಡಲ್ಪಟ್ಟ ಆ ವೃಕ್ಷವನ್ನು ತನ್ನ ವಿದ್ಯೆಯಿಂದ ಬದುಕಿಸಿದನು.
ಸಹಾಂಕುರಂ ಚ ಕೃತವಾನ್ ವಿದ್ವಾನ್ ಪರ್ಣದ್ವಯಾನ್ವಿತಮ್ |
ಪಲಾಶಿನಂ ಶಾಖಿನಂ ಚ ತಥಾ ವಿಟಪಿನಂ ಪುನಃ ॥10॥
ಅವನು ಮೊದಲು ಅಂಕುರ, ಅನಂತರ ಎರಡು ಎಲೆಗಳು, ಅನಂತರ ಸಣ್ಣ ರೆಂಬೆ, ಅನಂತರ ರೆಂಬೆಗಳೂ ಮತ್ತು ಶಾಖೆಗಳೂ ಇವುಗಳಿಂದ ಕೂಡಿ ಮೊದಲಿನಂತೆ ವೃಕ್ಷವನ್ನು ಮಾಡಿದನು.
ತಂ ದೃಷ್ಟ್ವಾ ಜೀವಿತಂ ವೃಕ್ಷಂ ಕಾಶ್ಯಪೇನ ಮಹಾತ್ಮನಾ |
ಉವಾಚ ತಕ್ಷಕೋ ಬ್ರಹ್ಮನ್ನೇತದತ್ಯದ್ಭುತಂ ತ್ವಯಿ ॥11॥
ಮಹಾತ್ಮನಾದ ಕಾಶ್ಯಪನು ಆ ವೃಕ್ಷವನ್ನು ಬದುಕಿಸಿದುದನ್ನು ನೋಡಿ ತಕ್ಷಕನು ಬ್ರಾಹ್ಮಣನೇ, ಈ ವೃಕ್ಷದಲ್ಲಿ ನೀನು ತೋರಿಸಿದ ಸಾಮರ್ಥ್ಯವು ಅದ್ಭುತವಾಗಿದೆ ಎಂದು ಹೇಳಿದನು.
ವಿಪ್ರೇಂದ್ರ ಯದ್ ವಿಷಂ ಹನ್ಯಾ ಮಮ ವಾ ಮದ್ವಿಧಸ್ಯ ವಾ |
ಕಂ ತ್ವಮರ್ಥಮಭಿಪ್ರೇಕ್ಷ್ಯ ಯಾಸಿ ತತ್ರ ದ್ವಿಜೋತ್ತಮ ॥12॥
ಎಲೈ ಬ್ರಾಹ್ಮಣಶ್ರೇಷ್ಠನೇ, ನೀನು ಯಾವ ಉದ್ದೇಶದಿಂದ ನನ್ನ ಅಥವಾ ನನ್ನಂತಹವನ ವಿಷವನ್ನು ಪರಿಹಾರಮಾಡಲು

ಹೊರಟಿದ್ದೀಯೆ?
ಯತ್ ತೇಽಭಿಲಷಿತಂ ಬ್ರಹ್ಮನ್ ಫಲಂ ತಸ್ಮಾನ್ನೃಪೋತ್ತಮಾತ್ |
ಅಹಮೇವ ಪ್ರದಾಸ್ಯಾಮಿ ನಿವರ್ತಸ್ವ ದ್ವಿಜೋತ್ತಮ ॥13॥
ಎಲೈ ಬ್ರಾಹ್ಮಣಶ್ರೇಷ್ಠನೇ, ಆ ನೃಪಶ್ರೇಷ್ಠನಿಂದ ನೀನು ಯಾವ ಫಲವನ್ನು ಬಯಸುವಿಯೋ ಅದನ್ನು ನಾನೇ ನಿನಗೆ ಕೊಡುವೆನು. ಇಲ್ಲಿಂದ ಹಿಂದಿರುಗು.
ವಿಪ್ರಶಾಪಾಭಿಭೂತೇ ಚ ಕ್ಷೀಣಾಯುಷಿ ನರಾಧಿಪೇ |
ಅಟಮಾನಸ್ಯ ತೇ ವಿದ್ಯಾಸಿದ್ಧಿಃ ಸಂಶಯಿತಾ ಭವೇತ್ ॥14॥
ರಾಜನು ಬ್ರಾಹ್ಮಣಶಾಪಕ್ಕೆ ಒಳಗಾಗಿ ಆಯುಸ್ಸನ್ನು ಕಳೆದುಕೊಂಡಿರುವಾಗ ಅಲ್ಲಿಗೆ ಹೋಗುತ್ತಿರುವ ನಿನ್ನ ವಿದ್ಯಾಸಿದ್ಧಿಯು ಸಂಶಯಗ್ರಸ್ತವಾಗುತ್ತದೆ.
ತತೋ ಯಶಃ ಪ್ರದೀಪ್ತಂ ತೇ ತ್ರಿಷು ಲೋಕೇಷು ವಿಶ್ರುತಮ್ |
ವಿರಶ್ಮಿರಿವ ತಿಗ್ಮಾಂಶುರಂತರ್ಧಾನಮಿತೋ ವ್ರಜೇತ್ ॥15॥
ಆಗ ಮೂರುಲೋಕದಲ್ಲೂ ಪ್ರಖ್ಯಾತವಾದ ನಿನ್ನ ಕೀರ್ತಿಯು ರಶ್ಮಿಗಳನ್ನು ಕಳೆದುಕೊಂಡ ಸೂರ್ಯನಂತೆ ಅಂತರ್ಧಾನವನ್ನು ಹೊಂದುತ್ತದೆ.
ಕಾಶ್ಯಪಃ
ಧನಾರ್ಥೀಂ ಯಾಮ್ಯಹಂ ತತ್ರ ತನ್ಮೇ ದಿಶ ಭುಜಂಗಮ |
ತತೋಽಹಂ ವಿನಿವರ್ತಿಷ್ಯೇ ಗೃಹಾಯೋರಗಸತ್ತಮ ॥16॥
ಎಲೈ ಸರ್ಪರಾಜನೇ, ನಾನು ಧನಾರ್ಥಿಯಾಗಿ ಅಲ್ಲಿಗೆ ಹೋಗುತ್ತಿದ್ದೇನೆ. ಅದನ್ನು ನನಗೆ ಕೊಡು. ಎಲೈ ಉರಗಶ್ರೇಷ್ಠನೇ, ಆಗ ನಾನು ನನ್ನ ಮನೆಗೆ ಹಿಂದಿರುಗುವೆನು.
ತಕ್ಷಕಃ
ಯಾವದ್ ಧನಂ ಪ್ರಾರ್ಥಯಸೇ ತಸ್ಮಾದ್ ರಾಜ್ಞಸ್ತತೋಽಧಿಕಮ್ |
ಅಹಂ ತೇಽದ್ಯ ಪ್ರದಾಸ್ಯಾಮಿ ನಿವರ್ತಸ್ವ ದ್ವಿಜೋತ್ತಮ ॥17॥
ಎಲೈ ಬ್ರಾಹ್ಮಣಶ್ರೇಷ್ಠನೇ, ಆ ರಾಜನಿಂದ ಎಷ್ಟು ಧನವನ್ನು ನೀನು ಬಯಸುವೆಯೋ ಅದಕ್ಕಿಂತ ಹೆಚ್ಚಿನ ಧನವನ್ನು ನಾನು ಈ ದಿನ ನಿನಗೆ ಕೊಡುವೆನು, ಹಿಂದಿರುಗು.
ಸೂತಃ
ತಕ್ಷಕಸ್ಯ ವಚಃ ಶ್ರುತ್ವಾ ಕಾಶ್ಯಪೋ ದ್ವಿಜಸತ್ತಮಃ |
ಪ್ರದಧ್ಯೌ ಸುಮಹಾತೇಜಾ ರಾಜಾನಂ ಪ್ರತಿ ಬುದ್ಧಿಮಾನ್ ॥18॥
ದ್ವಿಜಶ್ರೇಷ್ಠನಾದ, ಮೇಧಾವಿಯೂ, ಮಹಾತೇಜಸ್ವಿಯೂ ಆದ ಆ ಕಾಶ್ಯಪನು ತಕ್ಷಕನ ಮಾತನ್ನು ಕೇಳಿ ಆ ರಾಜನನ್ನು ಕುರಿತು ಧ್ಯಾನಮಾಡಿದನು.
ದಿವ್ಯಜ್ಞಾನೇನ ತೇಜಸ್ವೀ ಜ್ಞಾತ್ವಾ ತಂ ನೃಪತಿಂ ತದಾ |
ಕ್ಷೀಣಾಯುಷಂ ಪಾಂಡವೇಯಮಪಾವರ್ತತ ಕಾಶ್ಯಪಃ |
ಲಬ್ಧ್ವಾ ವಿತ್ತಂ ಮುನಿವರಸ್ತಕ್ಷಕಾದ್ ಯಾವದೀಪ್ಸಿತಮ್ ॥19॥
ತೇಜಸ್ವಿಯಾದ ಅವನು ತನ್ನ ದಿವ್ಯಜ್ಞಾನದಿಂದ ರಾಜನ ಆಯುಸ್ಸು ಮುಗಿದಿರುವುದನ್ನು ಗಮನಿಸಿ, ತಕ್ಷಕನಿಂದ ಅಪೇಕ್ಷಿತವಾದಷ್ಟು ಧನವನ್ನು ಪಡೆದು ಹಿಂದಿರುಗಿದನು.
ನಿವೃತ್ತೇ ಕಾಶ್ಯಪೇ ತಸ್ಮಿನ್ ಸಮಯೇನ ಮಹಾತ್ಮನಿ |
ಜಗಾಮ ತಕ್ಷಕಸ್ತೂರ್ಣಂ ನಗರಂ ನಾಗಸಾಹ್ವಯಮ್ ॥20॥
ಮಹಾತ್ಮನಾದ ಕಾಶ್ಯಪನು ತನ್ನ ಷರತ್ತಿನ ಪ್ರಕಾರ ಹಿಂದಿರುಗುತ್ತಿರಲು ತಕ್ಷಕನು ಬೇಗ ಹಸ್ತಿನಪುರವನ್ನು ತಲುಪಿದನು.
ಅಥ ಶುಶ್ರಾವ ಗಚ್ಛನ್ ಸ ತಕ್ಷಕೋ ಜಗತೀಪತಿಮ್ |
ಮಂತ್ರೈರ್ವಿಷಹರೈರ್ದಿವ್ಯೈ ರಕ್ಷ್ಯಮಾಣಂ ಪ್ರಯತ್ನತಃ ॥21॥
ಆಗ ಆ ತಕ್ಷಕನು ಹೋಗುತ್ತಾ, ರಾಜನು ದಿವ್ಯವಾದ ವಿಷಹರ ಮಂತ್ರಗಳಿಂದ ಪ್ರಯತ್ನಪೂರ್ವಕವಾಗಿ ರಕ್ಷಿಸಲ್ಪಡುತ್ತಿದ್ದಾನೆಂಬ ವಾರ್ತೆಯನ್ನು ಕೇಳಿದನು.
ಸಂಚಿಂತಯಾಮಾಸ ತದಾ ಮಾಯಾಯೋಗೇನ ಪಾರ್ಥಿವಃ |
ಮಯಾ ವಂಚಯಿತವ್ಯೋಽಸೌ ಕ ಉಪಾಯೋ ಭವೇದಿತಿ ॥22॥
ಆಗ ಅವನು, ನಾನು ಈ ರಾಜನನ್ನು ಮಾಯೆಯಿಂದ ವಂಚಿಸಬೇಕು. ಅದಕ್ಕೆ ಏನು ಉಪಾಯವನ್ನು ಮಾಡುವುದು ಎಂದು ಆಲೋಚಿಸಿದನು.
ತತಸ್ತಾಪಸರೂಪೇಣ ಪ್ರಾಹಿಣೋತ್ ಸ ಭುಜಂಗಮಾನ್ |
ಫಲಪತ್ರೋದಕಂ ಗೃಹ್ಯ ರಾಜ್ಞೇ ನಾಗೋಽಥ ತಕ್ಷಕಃ ॥23॥
ಅನಂತರ ತಾಪಸರೂಪವನ್ನು ಧರಿಸಿದ ಸರ್ಪಗಳನ್ನು ಕಳುಹಿಸಿ ರಾಜನಿಗೆ ಫಲಪತ್ರೋದಕಗಳನ್ನು ತೆಗೆದುಕೊಂಡು ಹೋಗುವಂತೆ ಸರ್ಪಗಳಿಗೆ ಹೇಳಿ ಅವರು ತೆಗೆದುಕೊಂಡು ಹೋಗುವ ಒಂದು ಫಲದಲ್ಲಿ ತಾನೂ ಪ್ರವಿಷ್ಟನಾದನು.
ತಕ್ಷಕಃ
ಗಚ್ಛಧ್ವಂ ಯೂಯಮವ್ಯಗ್ರಾ ರಾಜಾನಂ ಕಾರ್ಯವತ್ತಯಾ |

ಫಲಪತ್ರೋದಕಂ ನಾಗಾಃ ಪ್ರತಿಗ್ರಾಹಯಿತುಂ ನೃಪಮ್ ॥24॥
ಎಲೈ ಸರ್ಪಗಳೇ, ನೀವು ನಮಗೆ ಅಭೀಷ್ಟವಾದ ಕಾರ್ಯವನ್ನು ನೆರವೇರಿಸಲು ರಾಜನಿಗೆ ಫಲಪತ್ರೋದಕಗಳನ್ನು ಕೊಡಲು ಬಹಳ ಎಚ್ಚರಿಕೆಯಿಂದ ಹೊರಡಿ.
ಸೂತಃ
ತೇ ತಕ್ಷಕಸಮಾದಿಷ್ಟಾಸ್ತಥಾ ಚಕ್ರುರ್ಭುಜಂಗಮಾಃ |
ಉಪನಿನ್ಯುಸ್ತದಾ ರಾಜ್ಞೇ ದರ್ಭಾನಾಪಃ ಫಲಾನಿ ಚ ॥25॥
ತಕ್ಷಕನಿಂದ ಹೀಗೆ ಆದೇಶಿಸಲ್ಪಟ್ಟ ಆ ಸರ್ಪಗಳು ಹಾಗೆಯೇ ಮಾಡಿ ರಾಜನಿಗೆ ದರ್ಭೆಗಳನ್ನೂ, ಜಲವನ್ನೂ, ಫಲಗಳನ್ನೂ ತೆಗೆದುಕೊಂಡು ಹೋದರು.
ತಚ್ಚ ಸರ್ವಂ ಸ ರಾಜೇಂದ್ರಃ ಪ್ರತಿಜಗ್ರಾಹ ವೀರ್ಯವಾನ್ |
ಶ್ರುತ್ವಾ ತು ತೇಷಾಂಕಾರ್ಯಾಣಿ ಗಮ್ಯತಾಮಿತ್ಯುವಾಚ ತಾನ್ ॥26॥
ಪರಾಕ್ರಮಶಾಲಿಯಾದ ಆ ರಾಜೇಂದ್ರನು ಅವೆಲ್ಲವನ್ನೂ ಸ್ವೀಕರಿಸಿದನು. ಅನಂತರ ಅವರ ಯೋಗಕ್ಷೇಮವನ್ನು ವಿಚಾರಿಸಿ ನೀವು ಹೊರಡಬಹುದು ಎಂದು ಹೇಳಿದನು.
ಗತೇಷು ತೇಷು ನಾಗೇಷು ತಾಪಸಚ್ಛದ್ಮರೂಪಿಷು |
ಅಮಾತ್ಯಾನ್ ಸುಹೃದಶ್ಚೈವ ಪ್ರೋವಾಚ ಸ ನರಾಧಿಪಃ ॥27॥
ತಾಪಸವೇಷವನ್ನು ಧರಿಸಿದ್ದ ಆ ಸರ್ಪಗಳು ಹೊರಟುಹೋಗುತ್ತಿರಲು, ರಾಜನು ತನ್ನ ಅಮಾತ್ಯರನ್ನೂ ಮತ್ತು ಸ್ನೇಹಿತರನ್ನೂ ಕುರಿತು ಮಾತನಾಡಿದನು.
ಭಕ್ಷಯಂತು ಭವಂತೋ ವೈ ಫಲಾನೀಮಾನಿ ಸರ್ವಶಃ |
ತಾಪಸೈರುಪನೀತಾನಿ ಫಲಾನಿ ಸಹಿತಾ ಮಯಾ ॥28॥
ನೀವೆಲ್ಲರೂ ತಾಪಸರು ತಂದು ಕೊಟ್ಟ ಈ ಫಲಗಳನ್ನು ನನ್ನ ಜೊತೆಯಲ್ಲಿ ಭಕ್ಷಿಸಿ.
ತತೋ ರಾಜಾ ಸಸಚಿವಃ ಫಲಾನ್ಯತ್ತುಮಿಯೇಷ ಸಃ |
ತದ್ ಗೃಹೀತಂ ಫಲಂ ರಾಜ್ಞಾ ಯದಾ ಕೃಮಿರಭೂದಣುಃ |
ಹ್ರಸ್ವಕಃ ಕೃಷ್ಣನಯನಸ್ತಾಮ್ರೋ ವರ್ಣೇನ ಶೌನಕ ॥29॥
ಅನಂತರ ರಾಜನು ಸಚಿವರ ಜೊತೆಯಲ್ಲಿ ಆ ಹಣ್ಣನ್ನು ತಿನ್ನಲು ಬಯಸಿದನು. ಎಲೈ ಶೌನಕನೇ, ರಾಜನು ತನ್ನ ಕೈಯಲ್ಲಿ ಯಾವ ಹಣ್ಣನ್ನು ತೆಗೆದುಕೊಂಡನೋ ಅದರಲ್ಲಿ ಒಂದು ಸಣ್ಣ ಕಪ್ಪುಬಣ್ಣದ ಕಣ್ಣುಳ್ಳ, ಕೆಂಪುಬಣ್ಣದ ಒಂದು ಕ್ರಿಮಿ ಇದ್ದಿತು.
ಸ ತಂ ಗೃಹ್ಯ ನೃಪಶ್ರೇಷ್ಠಃ ಸಚಿವಾನಿದಮಬ್ರವೀತ್ |
ಅಸ್ತಮಭ್ಯೇತಿ ಸವಿತಾ ವಿಷಾದದ್ಯ ನ ಮೇ ಭಯಮ್ |
ಸತ್ಯವಾಗಸ್ತು ಸ ಮುನಿಃ ಕೃಮಿಕೋ ಮಾಂ ದಶತ್ವಯಮ್ ॥30॥
ಆ ರಾಜಶ್ರೇಷ್ಠನು ಆ ಹಣ್ಣನ್ನು ಕೈಯಲ್ಲಿ ಹಿಡಿದು ಸಚಿವರನ್ನು ಕುರಿತು ಸೂರ್ಯನು ಅಸ್ತಂಗತನಾಗುತ್ತಿದ್ದಾನೆ. ಈ ದಿನ ಇನ್ನು ನನಗೆ ವಿಷದ ಭಯವಿಲ್ಲ. ಆ ಋಷಿಕುಮಾರನ ಮಾತು ಸತ್ಯವಾಗಲಿ. ಈ ಕ್ರಿಮಿಯು ನನ್ನನ್ನು ಕಚ್ಚಲಿ ಎಂದು ಹೇಳಿದನು.
ತಕ್ಷಕೋ ನಾಮ ಭೂತ್ವಾ ವೈ ತಥಾ ಪರಿಹೃತಂ ಭವೇತ್ |
ತೇ ಚೈನಮನ್ವವರ್ತಂತ ಮಂತ್ರಿಣಃ ಕಾಲಚೋದಿತಾಃ ॥31॥
ಈ ಕ್ರಿಮಿಗೆ ತಕ್ಷಕನೆಂದು ಹೆಸರಾಗಲಿ. ಆ ವಿಪ್ರಶಾಪವು ಪರಿಹಾರವನ್ನು ಹೊಂದುತ್ತದೆ (ತಕ್ಷಕನು ಕಚ್ಚಿದಂತೆಯೂ ಆಗುತ್ತದೆ ಮತ್ತು ನನ್ನ ಪ್ರಾಣವೂ ಉಳಿಯುತ್ತದೆ.) ಎಂದು ಹೇಳಿದನು. ಕಾಲಪ್ರೇರಿತರಾದ ಆ ಮಂತ್ರಿಗಳು ಹಾಗೆಯೇ ಆಗಲಿ ಎಂದು ಅವನನ್ನು ಅನುಮೋದಿಸಿದರು.
ಏವಮುಕತ್ತ್ವ ಸ ರಾಜೇಂದ್ರೋ ಗ್ರೀವಾಯಾಂ ಸನ್ನಿವೇಶ್ಯ ಹ |
ಕೃಮಿಂ ತಂ ಪ್ರಾಹಸತ್ ತೂರ್ಣಂ ಮುಮೂರ್ಷುರ್ನಷ್ಟಚೇತನಃ |
ಹಸನ್ನೇವ ಚ ಕೋಪೇನ ತಕ್ಷಕೇಣಾಭಿವೇಷ್ಟಿತಃ ॥32॥
ಹೀಗೆ ಹೇಳಿದ ರಾಜನು ತನ್ನ ಕತ್ತಿನ ಬಳಿ ಆ ಹಣ್ಣನ್ನು ಇಟ್ಟುಕೊಂಡು ಮರಣವು ಸನ್ನಿಹಿತವಾಗಿದ್ದ, ಪ್ರಜ್ಞೆಯನ್ನು ಕಳೆದುಕೊಳ್ಳುತ್ತಿದ್ದ ಅವನು ಆ ಕ್ರಿಮಿಯನ್ನು ನೋಡಿ ಗಟ್ಟಿಯಾಗಿ ನಕ್ಕನು. ಅವನು ನಗುತ್ತಿರುವಂತೆಯೇ, ತಕ್ಷಕನು ಶೀಘ್ರವಾಗಿ ಕೋಪದಿಂದ ಅವನನ್ನು ಸುತ್ತಿಕೊಂಡನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ಮೂವತ್ತೊಂಭತ್ತನೆಯ ಅಧ್ಯಾಯ
(ಪರೀಕ್ಷಿತನ ಮರಣ. ಜನಮೇಜಯನ ರಾಜ್ಯಾಭಿಷೇಕ. ವಪುಷ್ಟಮೆಯ ಜೊತೆಯಲ್ಲಿ ವಿವಾಹ.)
ಸೂತಃ
ತಂ ತಥಾ ಮಂತ್ರಿಣೋ ದೃಷ್ಟ್ವಾ ಭೋಗೇನ ಪರಿವೇಷ್ಟಿತಮ್ |

ವಿವರ್ಣವದನಾಃ ಸರ್ವೇ ರುರುದುರ್ಭೃಶದುಃಖಿತಾಃ ॥1॥
ರಾಜನು ಆ ಸರ್ಪದಿಂದ ವೇಷ್ಟಿತನಾಗಿರುವುದನ್ನು ನೋಡಿದ ಮಂತ್ರಿಗಳೆಲ್ಲರೂ ತಮ್ಮ ಮುಖದ ಕಾಂತಿಯನ್ನು ಕಳೆದುಕೊಂಡು ಬಹಳ ದುಃಖಿತರಾಗಿ ರೋದನವನ್ನು ಮಾಡಿದರು.
ತಂ ತು ನಾಗಂ ತಥಾ ದೃಷ್ಟ್ವಾ ಮಂತ್ರಿಣಸ್ತೇ ಪ್ರದುದ್ರುವುಃ |
ಅಪಶ್ಯಂಶ್ಚೈವ ತೇ ಯಾಂತಮಾಕಾಶೇ ನಾಗಮದ್ಭುತಮ್ ॥2॥
ಸೀಮಂತಮಿವ ಕುರ್ವಾಣಂ ನಭಸಃ ಪದ್ಮವರ್ಚಸಾ |
ತಕ್ಷಕಂ ಪನ್ನಗಶ್ರೇಷ್ಠಂ ಭೃಶಂ ಶೋಕಪರಾಯಣಾಃ ॥3॥
ಆ ರೀತಿಯಲ್ಲಿರುವ ಆ ಸರ್ಪವನ್ನು ನೋಡಿದ ಮಂತ್ರಿಗಳು ಶೋಕಪರಾಯಣರಾಗಿ ಅಲ್ಲಿಂದ ಓಡಿಹೋದರು. ಹಾಗೆ ಓಡುತ್ತಾ ಅವರು ಪದ್ಮಕಾಂತಿಯುಳ್ಳ ಪನ್ನಗಶ್ರೇಷ್ಠನಾದ, ಅದ್ಭುತನಾದ ತಕ್ಷಕನು ಆಕಾಶಮಾರ್ಗದಲ್ಲಿ, ಆಕಾಶಕ್ಕೆ ಬೈತಲೆಯನ್ನು ತೆಗೆದಂತೆ ಹೋಗುತ್ತಿರುವುದನ್ನು ನೋಡಿದರು.
ತತಸ್ತು ತೇ ತದ್ಗೃಹಮಗ್ನಿನಾ ವೃತಂ
ಪ್ರದೀಪ್ಯಮಾನಂ ವಿಷಜೇನ ಭೋಗಿನಃ |
ಭಯಾತ್ ಪರಿತ್ಯಜ್ಯ ದಿಶಃ ಪ್ರಪೇದಿರೇ
ಪಪಾತ ತಚ್ಚಾಶನಿತಾಡಿತಂ ಯಥಾ ॥4॥
ಅನಂತರ ಅವರು ಆ ಗೃಹವು ಸರ್ಪದ ವಿಷದಿಂದ ಉಂಟಾದ ಅಗ್ನಿಯಿಂದ ಉರಿಯುತ್ತಿರುವುದನ್ನು ನೋಡಿ ಭಯದಿಂದ ಆ ಗೃಹವನ್ನು ತ್ಯಜಿಸಿ ದಿಕ್ಕುದಿಕ್ಕುಗಳಿಗೆ ಓಡಿಹೋದರು. ಸಿಡಿಲು ಬಡಿದ ವೃಕ್ಷದಂತೆ ಆ ಗೃಹವು ಬಿದ್ದುಹೋಯಿತು.
ತತೋ ನೃಪೇ ತಕ್ಷಕತೇಜಸಾ ಹತೇ
ಪ್ರಯುಜ್ಯ ಸರ್ವಾಃ ಪರಲೋಕಸತ್ಕ್ರಿಯಾಃ |
ಶುಚಿರ್ದ್ವಿಜೋ ರಾಜಪುರೋಹಿತಸ್ತದಾ
ತಥೈವ ತೇ ತಸ್ಯ ನೃಪಸ್ಯ ಮಂತ್ರಿಣಃ ॥5॥
ನೃಪಂ ಶಿಶುಂ ತಸ್ಯ ನೃಪಸ್ಯ ಚಕ್ರಿರೇ
ಸಮಂತ್ರಿಣಸ್ತತ್ಪುರವಾಸಿನೋ ಜನಾಃ |
ನೃಪಂ ಯಮಾಹುಸ್ತಮಮಿತ್ರಘಾತಿನಂ
ಕುರುಪ್ರವೀರಂ ಜನಮೇಜಯಂ ನೃಪಾಃ ॥6॥
ಅನಂತರ ತಕ್ಷಕನ ವೀರ್ಯದಿಂದ ರಾಜನು ಮೃತನಾಗುತ್ತಿರಲು, ಎಲ್ಲಾ ಉತ್ತರ ಕ್ರಿಯೆಗಳನ್ನೂ ಮಾಡಿದರು. ಆ ರಾಜನ ಮಂತ್ರಿಗಳೂ ಮತ್ತು ರಾಜಪುರೋಹಿತನಾದ ಬ್ರಾಹ್ಮಣನೂ ಶುಚಿರ್ಭೂತರಾಗಿ ಆ ರಾಜನ ಶಿಶುವನ್ನು ಪುರವಾಸಿಗಳ ಜೊತೆಯಲ್ಲಿ ಸೇರಿ ರಾಜನನ್ನಾಗಿ ಮಾಡಿದರು. ಕುರುಪ್ರವೀರನಾದ ಆ ರಾಜನನ್ನು ಶತ್ರುಸೂದನನಾದ ಜನಮೇಜಯನೆಂದು ಎಲ್ಲರೂ ಕರೆಯುತ್ತಾರೆ.
ಸ ಬಾಲ ಏವಾರ್ಯಮತಿರ್ನೃಪೋತ್ತಮಃ
ಸಹೈವ ತೈರ್ಮಂತ್ರಿಪುರೋಹಿತೈಸ್ತದಾ |
ಶಶಾಸ ರಾಜ್ಯಂ ಕುರುಪುಂಗವಾಗ್ರಜೋ
ಯಥಾऽಸ್ಯ ವೀರಃ ಪ್ರಪಿತಾಮಹಸ್ತಥಾ ॥7॥
ಬಾಲಕನಾಗಿದ್ದರೂ ಸಹ ಆ ರಾಜೋತ್ತಮನು ಶ್ರೇಷ್ಠವಾದ ಬುದ್ಧಿಯುಳ್ಳವನಾಗಿ, ಮಂತ್ರಿಗಳ ಮತ್ತು ಪುರೋಹಿತರ ಬಲದಿಂದ ತನ್ನ ಪ್ರಪಿತಾಮಹರಾದ ಕುರುಪುಂಗವರಾದ ಪಾಂಡವರಲ್ಲಿ ಅಗ್ರಜನಾದ ವೀರನಾದ ಧರ್ಮರಾಜನಂತೆ ರಾಜ್ಯವನ್ನು ಆಳಿದನು.
ತತಸ್ತು ರಾಜಾನಮಮಿತ್ರತಾಪನಂ
ಸಮೀಕ್ಷ್ಯ ತೇ ತಸ್ಯ ನೃಪಸ್ಯ ಮಂತ್ರಿಣಃ |
ಸುವರ್ಣವರ್ಮಾಣಮುಪೇತ್ಯ ಕಾಶಿಪಂ
ವಪುಷ್ಟಮಾರ್ಥೇ ವರಯಾಂಪ್ರಚಕ್ರಮುಃ ॥8॥
ಆಗ ಶತ್ರುತಾಪನನಾದ ಆ ಜನಮೇಜಯರಾಜನನ್ನು ನೋಡಿ ಅವನ ಮಂತ್ರಿಗಳು ಕಾಶೀರಾಜನಾದ ಸುವರ್ಣವರ್ಮನನ್ನು ಸಮೀಪಿಸಿ, ಅವನ ಮಗಳಾದ ವಪುಷ್ಟಮೆಯನ್ನು ವಿವಾಹಮಾಡಿಕೊಡುವಂತೆ ಪ್ರಾರ್ಥಿಸಿದರು.
ತತಃ ಸ ರಾಜಾ ಪ್ರದದೌ ವಪುಷ್ಟಮಾಂ
ಕುರುಪ್ರವೀರಾಯ ಪರೀಕ್ಷ್ಯ ಧರ್ಮತಃ |
ಸ ಚಾಪಿ ತಾಂ ಪ್ರಾಪ್ಯ ಮುದಾ ಯುತೋऽಭವತ್
ನ ಚಾನ್ಯನಾರೀಷು ಮನೋ ದಧೇ ಕ್ವಚಿತ್ ॥9॥
ಆಗ ಆ ಕಾಶೀರಾಜನು ಶಾಸ್ತ್ರರೀತಿಯಿಂದ ಮಾಡಬೇಕಾದ ವರಪರೀಕ್ಷೆಯನ್ನು ಮಾಡಿ ಕುರುಪ್ರವೀರನಾದ ಜನಮೇಜಯನಿಗೆ ವಪುಷ್ಟಮೆಯನ್ನು ವಿವಾಹ ಮಾಡಿಕೊಟ್ಟನು. ಜನಮೇಜಯನಾದರೋ ವಪುಷ್ಟಮೆಯನ್ನು ಪಡೆದು ಸಂತೋಷದಿಂದ ಕೂಡಿದವನಾಗಿ ಬೇರೆ ಯಾವ ಸ್ತ್ರೀಯರನ್ನೂ ಮನಸ್ಸಿನಲ್ಲಿಯೂ ಎಣಿಸಲಿಲ್ಲ.
ಸರಸ್ಸು ಫುಲ್ಲೇಷು ನಗೇಷು ಸಾನುಷು
ಪ್ರಸನ್ನಚೇತಾ ವಿಜಹಾರ ವೀರ್ಯವಾನ್ |
ತಥಾ ಸ ರಾಜಪ್ರವರೋ ವಿಜಹ್ರಿವಾನ್
ಯಥೋರ್ವಶೀಂ ಪ್ರಾಪ್ಯ ಪುರಾ ಪುರೂರವಾಃ ॥10॥

ರಾಜಶ್ರೇಷ್ಠನಾದ ಅವನು ಸರೋವರಗಳಲ್ಲಿ, ಅರಳಿದ ವೃಕ್ಷಗಳುಳ್ಳ ಪರ್ವತಶಿಖರಗಳಲ್ಲಿ, ಪ್ರಸನ್ನಮನಸ್ಸಿನಿಂದಲೂ ಮತ್ತು ಅಧಿಕಬಲದಿಂದಲೂ ಕೂಡಿದವನಾಗಿ, ಊರ್ವಶಿಯನ್ನು ಪಡೆದು ಪುರೂರವನು ಹಿಂದೆ ಅವಳ ಜೊತೆಯಲ್ಲಿ ವಿಹರಿಸಿದಂತೆ ವಪುಷ್ಟಮೆಯ ಜೊತೆಯಲ್ಲಿ ವಿಹರಿಸಿದನು.

ವಪುಷ್ಟಮಾ ಚಾಪಿ ವರಂ ಪತಿಂ ತದಾ
ಪ್ರತೀತರೂಪಂ ತಮವಾಪ್ಯ ಭೂಮಿಪಮ್ |
ಅನನ್ಯಭಾವಾ ರಮಯಾಂಬಭೂವ ಸಾ
ವಿಹಾರಕಾಲೇಷ್ವವರೋಧಸುಂದರೀ ||11||

ವಪುಷ್ಟಮೆಯಾದರೋ ಪ್ರಸಿದ್ಧನಾದ ಮತ್ತು ಶ್ರೇಷ್ಠನಾದ ಆ ರಾಜನನ್ನು ಪತಿಯಾಗಿ ಪಡೆದು ಅವನಲ್ಲಿ ಅನನ್ಯವಾದ ಮನಸ್ಸನ್ನು ಇಟ್ಟವಳಾಗಿ ಅಂತಃಪುರದಲ್ಲಿ ಸುಂದರಿಯಾಗಿದ್ದ ಅವಳು ವಿಹಾರಕಾಲದಲ್ಲಿ ರಾಜನನ್ನು ಸಂತೋಷಪಡಿಸಿದಳು.

|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋನತ್ವಾರಿಂಶೋऽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಸಪ್ತವಿಂಶೋऽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಮೂವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.

*****

## ನಲವತ್ತನೆಯ ಅಧ್ಯಾಯ

(ಜರತ್ಕಾರುವಿನ ಕಥೆ. ಪಿತೃಗಳ ಜೊತೆಯಲ್ಲಿ ಅವನ ಸಂವಾದ.)

ಸೂತಃ

ಏತಸ್ಮಿನ್ನೇವ ಕಾಲೇ ತು ಜರತ್ಕಾರುರ್ಮಹಾತಪಾಃ |
ಚಚಾರ ಪೃಥಿವೀಂ ಕೃತ್ಸ್ನಾಂ ಯತ್ರಸಾಯಂಗೃಹೋ ಮುನಿಃ ||1||

ಈ ಸಮಯಕ್ಕೆ ಸರಿಯಾಗಿ ಮಹಾತಪಸ್ವಿಯಾದ ಜರತ್ಕಾರುವು ಸಾಯಂಕಾಲದಲ್ಲಿ ಎಲ್ಲಿರುತ್ತಾನೆಯೋ ಅಲ್ಲಿಯೇ ಬಿಡಾರವನ್ನು ಮಾಡುತ್ತಾ ಸಮಸ್ತವಾದ ಭೂಮಿಯನ್ನು ಸಂಚರಿಸಿದನು.

ಚರನ್ ದೀಕ್ಷಾಂ ಮಹಾತೇಜಾ ದುಶ್ಚರಾಮಕೃತಾತ್ಮಭಿಃ |
ತೀರ್ಥೇಷ್ವಾಯತನಂ ಕುರ್ವನ್ ಪುಣ್ಯೇಷು ವಿಚಚಾರ ಹ ||2||

ಮನೋನಿಗ್ರಹವಿಲ್ಲದ ಪುರುಷರಿಂದ ಆಚರಿಸಲ್ಪಡಲು ಅಸಾಧ್ಯವಾದ ತಪಸ್ಸನ್ನು ಆಚರಿಸುತ್ತಾ ಮಹಾತೇಜಸ್ವಿಯಾದ ಅವನು ಪುಣ್ಯತೀರ್ಥಗಳಲ್ಲಿ ನಿವಾಸ ಮಾಡುತ್ತಾ ಸಂಚರಿಸಿದನು.

ವಾಯುಭಕ್ಷೋ ನಿರಾಹಾರಃ ಶುಷ್ಯನ್ನಹರಹರ್ಮುನಿಃ |
ಸ ದದರ್ಶ ಪಿತೄನ್ ಗರ್ತೇ ಲಂಬಮಾನಾನಧೋಮುಖಾನ್ ||3||

ವಾಯುಭಕ್ಷನೂ, ನಿರಾಹಾರನೂ ಆದ ಅವನು ದಿನದಿನಕ್ಕೆ ಒಣಗುತ್ತಾ, ತನ್ನ ಪಿತೃಗಳು ಒಂದು ಹಳ್ಳದಲ್ಲಿ ಅಧೋಮುಖವಾಗಿ ಜೋಲಾಡುತ್ತಿರುವುದನ್ನು ನೋಡಿದನು.

ಏಕತಂತ್ವವಶಿಷ್ಟಾನ್ ವೈ ವೀರಣಸ್ತಂಬಮಾಶ್ರಿತಾನ್ |
ತಂ ತಂತುಂ ಚ ಶನೈರಾಖುಮಾದದಾನಂ ಬಿಲೇಶಯಮ್ ||4||
ನಿರಾಹಾರಾನ್ ಕೃಶಾನ್ ಜೀರ್ಣಾನ್ ಗರ್ತೇऽಸ್ಮಿನ್ ತ್ರಾಣಮಿಚ್ಛತಃ|
ಉಪಸೃತ್ಯ ಸ ತಾನ್ ದೀನಾನನುರೂಪೋऽಭ್ಯಭಾಷತ ||5||

ಒಂದೇ ಒಂದು ಕಡ್ಡಿಯು ಉಳಿದಿದ್ದ ಒಂದು ಲಾವಂಚದ ಪೊದೆಯನ್ನು ಆಶ್ರಯಿಸಿದ, ನಿರಾಹಾರರೂ, ಕೃಶರೂ, ಜೀರ್ಣರೂ ಮತ್ತು ರಕ್ಷಣೆಯನ್ನು ಬಯಸುವವರೂ ಆದ ತನ್ನ ಪಿತೃಗಳನ್ನೂ, ಆ ಉಳಿದ ಒಂದು ಕಡ್ಡಿಯನ್ನೂ ನಿಧಾನವಾಗಿ ಕಚ್ಚುತ್ತಿದ್ದ ಒಂದು ಮೂಷಿಕವನ್ನೂ ಗಮನಿಸಿ, ದೀನರಾದ ಆ ಪುರುಷರನ್ನು ಸಮೀಪಿಸಿ ಅನುರೂಪವಾಗಿ ಮಾತನಾಡಿದನು.

ಜರತ್ಕಾರುಃ

ಕೇ ಭವಂತೋऽವಲಂಬಂತೇ ವೀರಣಸ್ತಂಬಮಾಶ್ರಿತಾಃ |
ದುರ್ಬಲಂ ಖಾದಿತಂ ಮೂಲೇ ಹ್ಯಾಖುನಾ ಬಿಲವಾಸಿನಾ ||6||

ನೀವು ಯಾರು? ಈ ವೀರಣಸ್ತಂಬವನ್ನು ಆಶ್ರಯಿಸಿ ಎಲ್ಲರೂ ಜೋಲಾಡುತ್ತಿದ್ದೀರಿ. ಈ ವೀರಣಸ್ತಂಬವನ್ನೂ ಸಹ ಬಿಲವಾಸಿಯಾದ ಮೂಷಿಕವು ಮೂಲದಲ್ಲಿ ಭಕ್ಷಿಸಿದೆ.

ವೀರಣಸ್ತಂಬಕೇ ಮೂಲಂ ಯದಪ್ಯೇಕಮಿಹ ಸ್ಥಿತಮ್ |
ತದಪ್ಯಯಂ ಶನೈರಾಖುರಾದತ್ತೇ ದಶನೈಃ ಶಿತೈಃ ||7||

ಈ ವೀರಣಸ್ತಂಭದಲ್ಲಿ ಒಂದು ತೃಣವು ಮಾತ್ರ ಉಳಿದಿದೆ. ಅದನ್ನೂ ಸಹ ಈ ಮೂಷಿಕವು ತನ್ನ ಹರಿತವಾದ ದಂತಗಳಿಂದ ಕಡಿಯುತ್ತಿದೆ.

ಛಿದ್ಯತೇऽಲ್ಪಾವಶಿಷ್ಟತ್ವಾದೇತದಪ್ಯಚಿರಾದಿವ |
ತತಃ ಸಂಪತಿತಾರೋ ವೈ ಗರ್ತೇ ಹ್ಯಸ್ಮಿನ್ನಧೋಮುಖಾಃ ||8||

ಆ ಹುಲ್ಲುಕಡ್ಡಿಯಲ್ಲಿ ಇನ್ನು ಸ್ವಲ್ಪಭಾಗವೇ ಉಳಿದಿರುವುದರಿಂದ ಸದ್ಯದಲ್ಲಿಯೇ ಅದೂ ಛೇದಿಸಲ್ಪಡುತ್ತದೆ. ಆಗ ನೀವೆಲ್ಲರೂ ಈ ಹಳ್ಳದಲ್ಲಿ ಅಧೋಮುಖರಾಗಿ ಬೀಳುವಿರಿ.

ತೇನ ಮೇ ದುಃಖಮುತ್ಪನ್ನಂ ದೃಷ್ಟ್ವಾ ಯುಷ್ಮಾನಧೋಮುಖಾನ್ |

ಕೃಚ್ಛ್ರಮಾಪದಮಾಪನ್ನಾನ್ ಪ್ರಿಯಂ ಕಿಂ ಕರವಾಣಿ ವಃ ॥9॥
ಅದರಿಂದ ಅಧೋಮುಖರಾಗಿ ಜೋಲಾಡುತ್ತಾ ಈ ಕೆಟ್ಟ ಆಪತ್ತಿಗೆ ಸಿಲುಕಿದ ನಿಮ್ಮನ್ನು ನೋಡಿ ನನಗೆ ದುಃಖವಾಗಿದೆ. ನಿಮಗೆ ನಾನು ಏನು ಪ್ರಿಯವನ್ನು ಮಾಡಲಿ?
ತಪಸೋಽಸ್ಯ ಚತುರ್ಥೇನ ತೃತೀಯೇನಾಪಿ ವಾ ಪುನಃ |
ಅರ್ಧೇನ ವಾಪಿ ಸಂತರ್ತುಮ್ ಆಪದಂ ಬ್ರೂತ ಮಾ ಚಿರಮ್ ॥
ನನ್ನ ತಪಸ್ಸಿನ ನಾಲ್ಕನೆಯ ಒಂದು ಭಾಗದಿಂದಲಾಗಲಿ ಅಥವಾ ಮೂರನೆಯ ಒಂದು ಭಾಗದಿಂದಲಾಗಲಿ ಅಥವಾ ಅರ್ಧಭಾಗದಿಂದಲಾಗಲಿ ನಿಮ್ಮನ್ನು ಆಪತ್ತಿನಿಂದ ದಾಟಿಸಲು ಇಚ್ಛಿಸುತ್ತೇನೆ. ಬೇಗ ಹೇಳಿ.
ಅಥವಾಽಪಿ ಸಮಗ್ರೇಣ ತರಂತು ತಪಸಾ ಮಮ |
ಭವಂತಃ ಸರ್ವ ಏವಾಸ್ಮಾತ್ ಕಾಮಮೇವಾಭಿಧೀಯತಾಮ್
ಅಥವಾ ನನ್ನ ಸಮಗ್ರವಾದ ತಪಸ್ಸಿನ ಫಲದಿಂದಲೇ ನೀವೆಲ್ಲರೂ ಈ ಆಪತ್ತಿನಿಂದ ದಾಟಿ. ತಕ್ಷಣದಲ್ಲಿಯೇ ನೀವು ಯಾರು ಎಂದು ತಿಳಿಸಿ.
ಪಿತರಃ
ವೃದ್ಧೋ ಭವಾನ್ ಬ್ರಹ್ಮಚಾರೀ ಯೋ ನಸ್ತ್ರಾತುಮಿಹೇಚ್ಛತಿ |
ನ ತು ವಿಪ್ರಾಗ್ರ್ಯ ತಪಸಾ ಶಕ್ಯಮೇತದ್ ವ್ಯಪೋಹಿತುಮ್ ॥12॥
ಬ್ರಾಹ್ಮಣಶ್ರೇಷ್ಠನೇ, ವೃದ್ಧಬ್ರಹ್ಮಚಾರಿಯಾದ ನೀನು ನಮ್ಮನ್ನು ರಕ್ಷಿಸಲು ಬಯಸುತ್ತಿದ್ದೀಯೆ. ಆದರೆ ನಮ್ಮ ಆಪತ್ತನ್ನು ತಪೋಬಲದಿಂದ ಪರಿಹರಿಸಲು ಸಾಧ್ಯವಿಲ್ಲ.
ಅಸ್ತಿ ನಸ್ತಾತ ತಪಸಃ ಫಲಂ ಪ್ರವದತಾಂ ವರ |
ಸಂತಾನಪ್ರಕ್ಷಯಾದ್ ಬ್ರಹ್ಮನ್ ಪತಾಮ ನಿರಯೇಽಶುಭೇ ॥13॥
ಮಾತನಾಡುವವರಲ್ಲಿ ಶ್ರೇಷ್ಠನಾದವನೇ, ನಮಗೆ ನಮ್ಮ ತಪಸ್ಸಿನ ಫಲವೇ ಇದೆ. ಆದರೆ, ಬ್ರಾಹ್ಮಣನೇ, ನಮ್ಮ ಸಂತಾನವು ನಾಶವಾಗಿರುವುದರಿಂದ ನಾವು ಅಶುಚಿಯಾದ ನರಕದಲ್ಲಿ ಬೀಳುತ್ತಿದ್ದೇವೆ.
ಲಂಬತಾಮಿಹ ನಸ್ತಾತ ನ ಜ್ಞಾನಂ ಪ್ರತಿಭಾತಿ ವೈ |
ತೇನ ತ್ವಾಂ ನಾಭಿಜಾನೀಮೋ ಲೋಕೇ ವಿಖ್ಯಾತಪೌರುಷಮ್ ॥14॥
ಪ್ರೀತಿಪಾತ್ರನೇ, ಈ ಹಳ್ಳದಲ್ಲಿ ಜೋಲಾಡುತ್ತಿರುವ ನಮಗೆ ಜ್ಞಾನವು ಅಸ್ಪಷ್ಟವಾಗಿದೆ. ಆದ್ದರಿಂದ ಪ್ರಪಂಚದಲ್ಲಿ ವಿಖ್ಯಾತವಾದ ಕೀರ್ತಿಯುಳ್ಳ ನಿನ್ನನ್ನು ನಾವು ಯಾರು ಎಂದು ಗುರುತಿಸುತ್ತಿಲ್ಲ.
ವೃದ್ಧೋ ಭವಾನ್ ಮಹಾಯೋಗೀ ಯೋ ನಃ
ಶೋಚ್ಯಾನ್ ಸುದುಃಖಿತಾನ್ |
ಶೋಚಸ್ಯುಪೇತ್ಯ ಕಾರುಣ್ಯಾಚ್ಛೃಣು ಯೇ ವೈ ವಯಂ ದ್ವಿಜ |
ಶೋಚ್ಯಾನ್ ಸುದುಃಖಿತಾನಸ್ಮಾನ್ ಕಸ್ಮಾದ್ ವೇದವಿದಾಂ ವರ ॥15॥
ನೀನು ವೃದ್ಧನಾದ ಮಹಾಯೋಗಿ. ಎಲೈ ವೇದವೇತ್ತರಲ್ಲಿ ಶ್ರೇಷ್ಠನಾದವನೇ, ಶೋಚನೀಯರೂ, ದುಃಖಗ್ರಸ್ತರೂ ಆದ ನಮ್ಮನ್ನು ಕುರಿತು ನೀನು ಏಕೆ ಕರುಣೆಯಿಂದ ಶೋಕವನ್ನು ಪಡುತ್ತಿದ್ದೀಯೆ? ನಾವು ಯಾರೆಂದು ಹೇಳುತ್ತೇವೆ, ಕೇಳು.
ಯಾಯಾವರಾ ನಾಮ ವಯಮ್ ಋಷಯಃ ಸಂಶಿತವ್ರತಾಃ |
ಲೋಕಾತ್ ಪುಣ್ಯಾದಿಹ ಭ್ರಷ್ಟಾಃ ಸಂತಾನಪ್ರಕ್ಷಯಾನ್ವಿತಾಃ |
ಪ್ರಣಷ್ಟಂ ನಸ್ತಪಃ ಪುಣ್ಯಂ ನ ಹಿ ನಸ್ತಂತುರಸ್ತಿ ವೈ ॥17॥
ನಾವು ಶ್ರೇಷ್ಠವಾದ ವ್ರತಧಾರಿಗಳಾದ ಯಾಯಾವರ ಎಂಬ ಋಷಿಗಳು. ನಮ್ಮ ಸಂತಾನವು ನಾಶಹೊಂದಿದ ಕಾರಣ ಪುಣ್ಯಲೋಕದಿಂದ ಕೆಳಗೆ ಬಿದ್ದಿದ್ದೇವೆ. ನಮ್ಮ ತಪಸ್ಸು ಮತ್ತು ಪುಣ್ಯವು ನಷ್ಟವಾಗಿದೆ. ನಮ್ಮ ಕುಲದಲ್ಲಿ ಸಂತಾನವಿಲ್ಲ.
ಅಸ್ತಿ ತ್ವೇಕೋಽದ್ಯ ನಸ್ತಂತುಃ ಸೋಽಪಿ ನಾಸ್ತಿ ಯಥಾ ತಥಾ |
ಮಂದಭಾಗ್ಯೋಽಲ್ಪಭಾಗ್ಯಾನಾಂ ಬಂಧುಃ ಸ ಕಿಲ ನಃ ಕುಲಮ್ ॥18॥
ನಮ್ಮ ಕುಲತಂತುವಾಗಿ ಒಬ್ಬನೇ ಒಬ್ಬನು ಉಳಿದಿದ್ದಾನೆ. ಅವನು ಯಾವ ರೀತಿಯಲ್ಲಿರಬೇಕೋ ಆ ರೀತಿಯಲ್ಲಿ ಇಲ್ಲ. ಮಂದಭಾಗ್ಯನಾದ ಅವನೊಬ್ಬನೇ ಅಲ್ಪಭಾಗ್ಯರಾದ ನಮಗೆ ಬಂಧು. ಅವನೇ ನಮ್ಮ ಕುಲ.
ಜರತ್ಕಾರುರಿತಿ ಖ್ಯಾತೋ ವೇದವೇದಾಂಗಪಾರಗಃ |
ನಿಯತಾತ್ಮಾ ಮಹಾತ್ಮಾ ಚ ಸುವ್ರತಃ ಸುಮಹಾತಪಾಃ ॥19॥
ಅವನು ವೇದವೇದಾಂಗ ಪಾರಂಗತನಾದವನು. ಜರತ್ಕಾರು ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದಾನೆ. ಅವನು ಮನೋನಿಗ್ರಹವುಳ್ಳ ವ್ರತಧಾರಿಯಾದ, ಮಹಾತಪಸ್ವಿಯಾದ ಮಹಾನುಭಾವನು.
ತೇನ ಸ್ಮ ತಪಸೋ ಲೋಭಾತ್ ಕೃಚ್ಛ್ರಮಾಪಾದಿತಾ ವಯಮ್ |
ನ ತಸ್ಯ ಭಾರ್ಯಾ ಪುತ್ರೋ ವಾ ಬಾಂಧವೋ ವಾಽಪಿ ಕಶ್ಚನ ॥20॥
ಅವನ ತಪಸ್ಸಿನ ಲೋಭದಿಂದ ನಾವು ಈ ಕಷ್ಟಕ್ಕೆ ಸಿಲುಕಿದ್ದೇವೆ. ಅವನಿಗೆ ಪತ್ನಿಯಾಗಲಿ, ಪುತ್ರನಾಗಲಿ, ಅಥವಾ ಯಾವ ಬಂಧುವಾಗಲಿ ಇಲ್ಲ.
ತಸ್ಮಾಲ್ಲಂಬಾಮಹೇ ಗರ್ತೇ ನಷ್ಟಸಂಜ್ಞಾ ಹ್ಯನಾಥವತ್ |
ಸ ವಕ್ತವ್ಯಸ್ತ್ವಯಾ ದೃಷ್ಟ್ವಾ ಹ್ಯಸ್ಮಾಕಂ ನಾಥವತ್ತಯಾ ॥21॥
ಆದ್ದರಿಂದ ಈ ಹಳ್ಳದಲ್ಲಿ ಸಂಜ್ಞೆಯನ್ನು ಕಳೆದುಕೊಂಡು ಅನಾಥರಂತೆ ಜೋಲಾಡುತ್ತಿದ್ದೇವೆ. ಅವನನ್ನು ನೀನು ಎಲ್ಲಾದರೂ

ನೋಡಿದರೆ, ಅವನು ನಮ್ಮ ಪ್ರಭುವೆಂದು ಅವನಿಗೆ ತಿಳಿಸಬೇಕು.
ಪಿತರಸ್ತೇಽವಲಂಬಂತೇ ಗರ್ತೇ ದೀನಾ ಅಧೋಮುಖಾಃ |
ಸಾಧು ದಾರಾನ್ ಕುರುಷ್ವೇತಿ ಪ್ರಜಾಯಸ್ವೇತಿ ಚಾಭಿಭೋ ||22||
ನಿನ್ನ ಪಿತೃಗಳು ದೀನರಾಗಿ ಹಳ್ಳದಲ್ಲಿ ಅಧೋಮುಖರಾಗಿ ಜೋಲಾಡುತ್ತಿದ್ದಾರೆ. ನೀನು ಬೇಗ ವಿವಾಹವನ್ನು ಮಾಡಿಕೊಂಡು ಮಕ್ಕಳನ್ನು ಪಡೆಯಬೇಕು ಎಂದು ಅವನಿಗೆ ತಿಳಿಸಬೇಕು.
ಕುಲತಂತುರ್ಹಿ ನಃ ಶಿಷ್ಟಃ ಸ ಏಕಸ್ತು ತಪೋಧನಃ |
ಯಂ ತು ಪಶ್ಯಸಿ ನೋ ಬ್ರಹ್ಮನ್ ವೀರಣಸ್ತಂಬಮಾಶ್ರಿತಾನ್ |
ಏಷೋಽಸ್ಮಾಕಂ ಕುಲಸ್ತಂಬ ಆಸೀತ್ ಸ ಕುಲವರ್ಧನಃ ||23||
ನಮ್ಮ ಕುಲತಂತುವಾಗಿ ಉಳಿದವನು ತಪೋಧನನಾದ ಅವನೊಬ್ಬನೇ. ಎಲೈ ಬ್ರಾಹ್ಮಣನೇ, ಯಾವ ವೀರಣಸ್ತಂಬವನ್ನು ನೋಡುತ್ತಿದ್ದೀಯೋ ಇದು ನಮ್ಮ ಕುಲ. ಅದು ಹಿಂದೆ ಅನೇಕ ತೃಣಗಳಿಂದ ಕೂಡಿ ಪುಷ್ಟವಾಗಿದ್ದಿತು.
ಯಾನಿ ಪಶ್ಯಸಿ ವೈ ಬ್ರಹ್ಮನ್ ಮೂಲಾನೀಹಾಸ್ಯ ವೀರುಧಃ |
ಏತೇ ನಸ್ತಂತವಸ್ತಾತ ಕಾಲೇನ ಪರಿಭಕ್ಷಿತಾಃ ||24||
ಎಲೈ ಬ್ರಾಹ್ಮಣನೇ, ನೀನು ಯಾವ ಮೂಲಗಳನ್ನು ಮಾತ್ರ ನೋಡುತ್ತಿದ್ದೀಯೋ ಅವೆಲ್ಲವೂ ಕಾಲದಿಂದ ಭಕ್ಷಿತವಾದ ನಮ್ಮ ಕುಲತಂತುಗಳು.
ಯತ್ತ್ವೇಕಂ ಪಶ್ಯಸಿ ಬ್ರಹ್ಮನ್ ಮೂಲಮಸ್ಯಾರ್ಧಭಕ್ಷಿತಮ್ |
ತಸ್ಯ ಲಂಬಾಮಹೇ ಸರ್ವೇ ಸೋಽಪ್ಯೇಕಸ್ತಪ ಆಸ್ಥಿತಃ ||25||
ಎಲೈ ಬ್ರಾಹ್ಮಣನೇ, ಯಾವ ಉಳಿದ ಒಂದು ಹುಲ್ಲುಕಡ್ಡಿಯು ಅರ್ಧಭಕ್ಷಿತವಾಗಿರುವುದನ್ನು ನೋಡುತ್ತಿದ್ದೀಯೋ, ಅವನೇ ನಮ್ಮ ಕುಲತಂತುವಾದ ಆ ತಪಸ್ವಿ. ಅವನನ್ನು ಆಶ್ರಯಿಸಿ ನಾವು ಇಲ್ಲಿ ಜೋತಾಡುತ್ತಿದ್ದೇವೆ.
ಯಮಾಖುಂ ಪಶ್ಯಸಿ ಬ್ರಹ್ಮನ್ ಕಾಲ ಏವ ಮಹಾಬಲಃ |
ಜರತ್ಕಾರುಂ ತಪೋಲುಬ್ಧಂ ಮಂದಾತ್ಮಾನಮಚೇತಸಮ್ ||26||
ಬ್ರಾಹ್ಮಣನೇ, ಯಾವ ಮೂಷಿಕವನ್ನು ನೋಡುತ್ತಿದ್ದೀಯೋ ಅದು ಮಹಾಬಲವುಳ್ಳ ಕಾಲ. ಅದು ಮಂದಭಾಗ್ಯನಾದ, ಪ್ರಜ್ಞಾಶೂನ್ಯನಾದ, ತಪಸ್ಸಿನ ದುರಾಶೆಯನ್ನು ಹೊಂದಿರುವ ಜರತ್ಕಾರುವನ್ನು ಭಕ್ಷಿಸುತ್ತಿದೆ.
ನ ಹಿ ನಸ್ತತ್ತಪಸ್ತಸ್ಯ ತಾರಯಿಷ್ಯತಿ ಸತ್ತಮ |
ಛಿನ್ನಮೂಲಾನ್ ಪರಿಭ್ರಷ್ಟಾನ್ ಕಾಲೋಪಹತಚೇತಸಃ |
ಅಪ್ರತಿಷ್ಠಾನ್ ಪ್ರಪಶ್ಯಾಸ್ಮಾನ್ ಯಥಾ ದುಷ್ಕೃತಿನಸ್ತಥಾ ||27||
ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ಅವನ ತಪಸ್ಸು ಮೂಲವನ್ನು ಕಳೆದುಕೊಂಡು ಪರಿಭ್ರಷ್ಟರಾದ, ಕಾಲಪ್ರಭಾವದಿಂದ ಬುದ್ಧಿಶೂನ್ಯರಾದ ನಮ್ಮನ್ನು ಆಪತ್ತಿನಿಂದ ದಾಟಿಸುವುದಿಲ್ಲ. ಪಾಪವನ್ನು ಮಾಡಿದವರಂತೆ, ನೆಲೆಯಿಲ್ಲದ ನಮ್ಮನ್ನು ನೋಡು.
ಅಸ್ಮಾಸು ಪತಿತೇಷ್ವತ್ರ ಸಹ ಪೂರ್ವೈಃ ಪಿತಾಮಹೈಃ |
ಛಿನ್ನಃ ಕಾಲೇನ ಸೋಽಪ್ಯತ್ರ ಗಂತಾ ವೈ ನರಕಂ ತತಃ ||28||
ನಾವು ನಮ್ಮ ಪೂರ್ವಪಿತಾಮಹರ ಜೊತೆಯಲ್ಲಿ ಈ ಹಳ್ಳದಲ್ಲಿ ಬಿದ್ದ ಮೇಲೆ ಅವನೂ ಸಹ ಮೂಲಚ್ಛೇದವನ್ನು ಹೊಂದಿದವನಾಗಿ ಇಲ್ಲಿ ಬಿದ್ದು ಕಾಲಕ್ರಮದಲ್ಲಿ ನರಕವನ್ನು ಸೇರುವನು.
ತಪೋ ವಾಽಪ್ಯಥ ವಾ ಯಜ್ಞೋ ಯಚ್ಚಾನ್ಯತ್ಪಾವನಂ ಮಹತ್ |
ತತ್ಸರ್ವಂ ನ ಸಮಂ ತಾತ ಸಂತತ್ಯೈತತ್ ಸತಾಂ ಮತಮ್ ||30||
ಪ್ರೀತಿಪಾತ್ರನೇ, ತಪಸ್ಸಾಗಲೀ ಅಥವಾ ಯಜ್ಞವಾಗಲೀ ಅಥವಾ ಬೇರೆ ಯಾವ ಪವಿತ್ರವಾದ ಕರ್ಮವೇ ಆಗಲಿ, ಅವೆಲ್ಲವೂ ಸತ್ಸಂತತಿಗೆ ಸಮಾನವಾದುದಲ್ಲ ಎಂದು ಸಜ್ಜನರ ಅಭಿಪ್ರಾಯ.
ಸ ತಾತ ದೃಷ್ಟ್ವಾ ಬ್ರೂಯಾಸ್ತ್ವಂ ಜರತ್ಕಾರುಂ ತಪಸ್ವಿನಮ್ |
ಯಥಾ ದೃಷ್ಟಮಿದಂ ಚಾದ್ಯ ತ್ವಯಾಽಽಖ್ಯೇಯಮಶೇಷತಃ ||31||
ಎಲೈ ಪ್ರೀತಿಪಾತ್ರನೇ, ನೀನು ತಪಸ್ವಿಯಾದ ಆ ಜರತ್ಕಾರುವನ್ನು ನೋಡಿದರೆ, ನೀನು ಇಲ್ಲಿ ಏನನ್ನು ನೋಡುತ್ತಿದ್ದೀಯೋ ಅವೆಲ್ಲವನ್ನೂ ಪೂರ್ಣವಾಗಿ ಅವನಿಗೆ ಹಾಗೆಯೇ ಹೇಳು.
ಯಥಾ ದಾರಾನ್ ಪ್ರಕುರ್ಯಾತ್ ಸ ಪುತ್ರಾಂಶ್ಚೋತ್ಪಾದಯೇದ್ ಯಥಾ |
ತಥಾ ಬ್ರಹ್ಮಂಸ್ತ್ವಯಾ ವಾಚ್ಯಃ ಸೋಽಸ್ಮಾಕಂ ನಾಥವತ್ತಯಾ ||32||
ಬ್ರಾಹ್ಮಣನೇ, ಅವನು ವಿವಾಹವನ್ನು ಮಾಡಿಕೊಂಡು ಪುತ್ರರನ್ನು ಪಡೆಯುವಂತೆ ನೀನು ಅವನಿಗೆ ತಿಳಿಸಬೇಕು. ಅವನೇ ನಮಗೆ ನಾಥನೆಂದೂ ತಿಳಿಸಬೇಕು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಮಾದಿಪರ್ವಣಿ ಚತ್ವಾರಿಂಶೋಽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಅಷ್ಟಾವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
*****

## ನಲವತ್ತೊಂದನೆಯ ಅಧ್ಯಾಯ

(ಪಿತೃಗಳ ಮಾತಿನಂತೆ ಜರತ್ಕಾರುವಿನ ಕನ್ಯಾನ್ವೇಷಣೆ. ವಿವಾಹದಲ್ಲಿ ಸಮಯಬಂಧ.)
ಸೂತಃ
ಏತಚ್ಛ್ರುತ್ವಾ ಜರತ್ಕಾರುಃ ಭೃಶಂ ಶೋಕಪರಾಯಣಃ |
ಉವಾಚ ಸ್ವಾನ್ ಪಿತೄನ್ ದುಃಖಾದ್ ಬಾಷ್ಪಸಂದಿಗ್ಧಯಾ ಗಿರಾ ||1||
ಇದನ್ನು ಕೇಳಿದ ಜರತ್ಕಾರುವು ಬಹಳ ಶೋಕತಪ್ತನಾಗಿ ತನ್ನ ಪಿತೃಗಳನ್ನು ಕುರಿತು ಕಣ್ಣೀರಿನಿಂದ ಗದ್ಗದವಾದ ಕಂಠದಿಂದ ಮಾತನಾಡಿದನು.
ಪೂರ್ವೇ ಭವಂತಃ ಸರ್ವೇ ವೈ ಪಿತರಃ ಸಪಿತಾಮಹಾಃ |
ತದ್ ಬ್ರೂತ ಯನ್ಮಯಾ ಕಾರ್ಯಂ ಭವತಾಂ ಪ್ರಿಯಕಾಮ್ಯಯಾ ||2||
ನೀವೆಲ್ಲರೂ ನನ್ನ ಪೂರ್ವ ಪಿತೃಗಳು ಮತ್ತು ಪಿತಾಮಹರು. ನಾನು ಈ ದಿನ ನಿಮಗೆ ಹಿತವನ್ನು ಮಾಡಲು ಏನು ಮಾಡಬೇಕೆಂಬುದನ್ನು ತಿಳಿಸಿ.
ಅಹಮೇವ ಜರತ್ಕಾರುಃ ಕಿಲ್ಬಿಷೀ ಭವತಾಂ ಸುತಃ |
ತಂ ದಂಡಂ ಧಾರಯತ ಮೇ ದುಷ್ಕೃತೇರಕೃತಾತ್ಮನಃ ||3||
ನಾನೇ ಜರತ್ಕಾರು. ನಿಮ್ಮ ವಂಶದ ಪಾಪಿಯಾದ ಪುತ್ರ. ದುಷ್ಟನಾದ ಮತ್ತು ಪರೋಪಕಾರಿಯಲ್ಲದ ನನಗೆ ಶಿಕ್ಷೆಯನ್ನು ಕೊಡಿ.
ಪಿತರಃ
ಪುತ್ರ ದಿಷ್ಟ್ಯಾಽಸಿ ಸಂಪ್ರಾಪ್ತ ಇಮಂ ದೇಶಂ ಯದೃಚ್ಛಯಾ |
ಕಿಮರ್ಥಂ ಚ ತ್ವಯಾ ಬ್ರಹ್ಮನ್ ನ ಕೃತೋ ದಾರಸಂಗ್ರಹಃ ||4||
ಪುತ್ರನೇ, ಸುದೈವದಿಂದ ನೀನು ಈ ದಿನ ಇಲ್ಲಿಗೆ ಯದೃಚ್ಛೆಯಿಂದ ಪ್ರಾಪ್ತನಾಗಿ ಬಂದಿದ್ದೀಯೆ. ಬ್ರಾಹ್ಮಣನೇ, ನೀನು ಏಕೆ ವಿವಾಹವನ್ನು ಮಾಡಿಕೊಳ್ಳಲಿಲ್ಲ?
ಧರ್ಮಾರ್ಥಕಾಮೈಸ್ತು ಸುಖೈಃ ಪ್ರಹೀನಾ
ಭಿಕ್ಷಾಟನಾ ಕರ್ಪಟಬದ್ಧಗಾತ್ರಾಃ |
ಕ್ಷುತ್ಕ್ಷಾಮಕಂಠಾ ವಸುಧಾಂ ಭ್ರಮಂತೋ
ದಾರಾನ್ ಪರಿತ್ಯಜ್ಯ ಗತಾ ನರಾ ಯೇ ||5||
ಪತ್ನಿಯನ್ನು ಪರಿತ್ಯಾಗ ಮಾಡಿ ಹೋದ ಜನರು ಧರ್ಮಾರ್ಥಕಾಮಗಳಿಂದಲೂ ಸುಖಗಳಿಂದಲೂ ಹೀನರಾಗಿ ಒಂದು ಕೆಟ್ಟ ವಸ್ತ್ರವನ್ನು ಉಟ್ಟುಕೊಂಡು ಹಸಿವಿನಿಂದ ಸೊರಗಿದ ದೇಹವುಳ್ಳವರಾಗಿ ಭಿಕ್ಷಾಟನೆಯನ್ನು ಮಾಡುತ್ತಾ ಭೂಮಿಯಲ್ಲೆಲ್ಲಾ ಸಂಚರಿಸುತ್ತಾರೆ.
ನ ತು ಕ್ರತುಶತೈರ್ಲೋಕಾನ್ ಸ್ವರ್ಗಂ ಪ್ರಾಪ್ಸ್ಯಂತಿ ಮಾನವಾಃ |
ತಪೋಭಿರ್ವಿವಿಧೈಶ್ಚಾಪಿ ಯಾನ್ ಲೋಕಾನ್ ಪುತ್ರಿಣೋ ಗತಾಃ ||6||
ಸತ್ಪುತ್ರರನ್ನು ಪಡೆದವರು ಯಾವ ಸ್ವರ್ಗಲೋಕವನ್ನು ಹೊಂದುತ್ತಾರೆಯೋ ಅಂತಹ ಲೋಕಗಳನ್ನು ನೂರು ಯಾಗಗಳಿಂದಲಾಗಲೀ, ವಿವಿಧವಾದ ತಪಸ್ಸುಗಳಿಂದಾಗಲೀ ಪಡೆಯಲು ಸಾಧ್ಯವಿಲ್ಲ.
ಜರತ್ಕಾರುಃ
ಮಮಾಯಂ ಪಿತರೋ ನಿತ್ಯಂ ಹೃದ್ಯರ್ಥಃ ಪರಿವರ್ತತೇ |
ಊರ್ಧ್ವರೇತಾಃ ಶರೀರಂ ವೈ ಪ್ರಾಪಯೇಯಮಮುತ್ರ ಹ ||7||
ಪಿತೃಗಳೇ, ನಾನು ಊರ್ಧ್ವರೇತಸ್ಕನಾಗಿ, ಶರೀರವನ್ನು ತಪಸ್ಸಿನಿಂದ ಸವೆಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪವನ್ನು ಮಾಡಿದ್ದೇನೆ.
ಏವಂ ದೃಷ್ಟ್ವಾ ತು ಭವತಃ ಶಕುಂತಾನಿವ ಲಂಬಿತಾನ್ |
ಮಯಾ ನಿವರ್ತಿತಾ ಬುದ್ಧಿರ್ಬ್ರಹ್ಮಚರ್ಯಾತ್ ಪಿತಾಮಹಾಃ
ಎಲೈ ಪಿತಾಮಹರೇ, ಆದರೆ ಕಪೋತಪಕ್ಷಿಗಳಂತೆ ನೇತಾಡುತ್ತಿರುವ ನಿಮ್ಮನ್ನು ನೋಡಿ ನನ್ನ ಆ ಬುದ್ಧಿಯನ್ನು ಬದಲಾಯಿಸಿ ಬ್ರಹ್ಮಚರ್ಯದಿಂದ ಹಿಂದಕ್ಕೆ ಸರಿದಿದ್ದೇನೆ.
ಕರಿಷ್ಯೇ ವಃ ಪ್ರಿಯಂ ಕಾರ್ಯಂ ನಿಯೋಜ್ಯೋ ನಾತ್ರ ಸಂಶಯಃ |
ಸನಾಮಾಂ ಯದ್ಯಹಂ ಕನ್ಯಾಮುಪಲಪ್ಸ್ಯೇ ಕದಾಚನ ||9||
ನಾನು ನಿಮಗೆ ವಿಧೇಯನಾದವನು. ಇದರಲ್ಲಿ ಸಂಶಯವಿಲ್ಲ. ನನಗೆ ನನ್ನ ಹೆಸರಿನ ಕನ್ಯೆಯೊಬ್ಬಳು ದೊರೆತರೆ, ನಾನು ನಿಮಗೆ ಪ್ರಿಯವಾದ ಕಾರ್ಯವನ್ನು ಮಾಡುವೆನು.
ಭವಿಷ್ಯತಿ ಚ ಯಾ ಕಾಚಿದ್ ಭೈಕ್ಷವತ್ ಸ್ವಯಮುದ್ಯತಾ |
ಪ್ರತಿಗ್ರಹೀತಾ ತಾಮಸ್ಮಿ ನ ಭರೇಯಂ ಚ ತಾಮಹಮ್ ||10||
ಯಾವ ಕನ್ಯೆಯು ಭಿಕ್ಷೆಯಂತೆ ನನಗೆ ಸ್ವಯಂ ಕೊಡಲ್ಪಡುತ್ತಾಳೆಯೋ ಅಂತಹ ಕನ್ಯೆಯನ್ನು ನಾನು ವಿವಾಹ ಮಾಡಿಕೊಳ್ಳುತ್ತೇನೆ. ಆದರೆ, ಅವಳನ್ನು ಪೋಷಿಸುವುದಿಲ್ಲ.
ಏವಂವಿಧಮಹಂ ಕುರ್ಯಾಂ ನಿವೇಶಂ ಪ್ರಾಪ್ನುಯಾಂ ಯದಿ |
ಅನ್ಯಥಾ ನ ಕರಿಷ್ಯೇಽಹಂ ಸತ್ಯಮೇತತ್ ಪಿತಾಮಹಾಃ ||11||
ಇಂತಹ ಒಂದು ಅವಕಾಶವು ದೊರೆತರೆ, ನಾನು ವಿವಾಹವನ್ನು ಮಾಡಿಕೊಳ್ಳುತ್ತೇನೆ. ಪಿತಾಮಹರೇ, ಇಲ್ಲದಿದ್ದರೆ, ಮಾಡಿಕೊಳ್ಳುವುದಿಲ್ಲ. ಇದು ಸತ್ಯವಾದ ಮಾತು.
ತತ್ರ ಚೋತ್ಪತ್ಸ್ಯತೇ ಜಂತುರ್ಭವತಾಂ ತಾರಣಾಯ ವೈ |

ಸಾಂತ್ವಿತಾಶ್ಚಾವ್ಯಥಾಶ್ಚೈವ ತಿಷ್ಠಂತು ಪಿತರೋ ಮಮ ॥12॥
ಅವಳಲ್ಲಿ ನಿಮ್ಮನ್ನು ಈ ದುಃಖದಿಂದ ಪಾರುಮಾಡುವ ಒಂದು ಶಿಶುವು ಜನಿಸಿದರೆ, ನನ್ನ ಪಿತೃಗಳಾದ ನೀವು ದುಃಖವನ್ನು ದಾಟಿ, ಸಮಾಧಾನದಿಂದ ಇರಿ.
ಸೂತಃ
ಏವಮುಕತ್ವ ತು ಸ ಪಿತ್ರೂಂಶ್ಚಚಾರ ಪೃಥಿವೀಂ ಮುನಿಃ |
ನ ಚ ಸ್ಮ ಲಭತೇ ಭಾರ್ಯಾಂ ವೃದ್ಧೋಽಯಮಿತಿ ಶೌನಕ ॥13॥
ಪಿತೃಗಳನ್ನು ಕುರಿತು ಹೀಗೆ ಹೇಳಿ ಆ ಋಷಿಯು ಭೂಮಿಯಲ್ಲೆಲ್ಲಾ ಸಂಚರಿಸಿದನು. ಎಲೈ ಶೌನಕನೇ, ಅವನು ವೃದ್ಧನಾದವನು ಎಂಬ ಕಾರಣದಿಂದ ಕನ್ಯೆಯನ್ನು ಪಡೆಯಲಿಲ್ಲ.
ಯದಾ ನಿರ್ವೇದಮಾಪನ್ನಃ ಪಿತೃಭಿಶ್ಚೋದಿತಸ್ತಥಾ |
ತದಾಽರಣ್ಯಂ ಸ ಗತ್ವೋಚ್ಚೈಃ ಚುಕ್ರೋಶ ಭೃಶದುಃಖಿತಃ ॥14॥
ಪಿತೃಗಳಿಂದ ಪ್ರೇರಿಸಲ್ಪಟ್ಟು ಪ್ರಯತ್ನಮಾಡಿದರೂ ಕನ್ಯೆಯು ದೊರೆಯದಿದ್ದಾಗ, ಅವನು ಬೇಸರಗೊಂಡು ಅರಣ್ಯಕ್ಕೆ ಹೋಗಿ, ಬಹಳ ದುಃಖದಿಂದ ಕೂಡಿದವನಾಗಿ ಗಟ್ಟಿಯಾಗಿ ಕಿರುಚಿದನು.
ಯಾನಿ ಭೂತಾನಿ ಸಂತೀಹ ಜಂಗಮಸ್ಥಾವರಾಣಿ ಚ |
ಅಂತರ್ಹಿತಾನಿ ವಾ ಯಾನಿ ತಾನಿ ಶೃಣ್ವಂತು ಮೇ ವಚಃ ॥15॥
ಈ ಅರಣ್ಯದಲ್ಲಿ ಜಂಗಮ ಮತ್ತು ಸ್ಥಾವರಗಳಾದ ಯಾವ ಭೂತಗಳಿವೆಯೋ ಅಥವಾ ಅಂತರ್ಧಾನವನ್ನು ಹೊಂದಿದ ಯಾವ ಭೂತಗಳಿವೆಯೋ, ಅವರೆಲ್ಲರೂ ನನ್ನ ಮಾತನ್ನು ಕೇಳಿ.
ಉಗ್ರೇ ತಪಸಿ ವರ್ತಂತಂ ಪಿತರಶ್ಚೋದಯಂತಿ ಮಾಮ್ |
ನಿವಿಶಸ್ವೇತಿ ದುಃಖಾರ್ತಾಸ್ತೇಷಾಂ ಪ್ರಿಯಚಿಕೀರ್ಷಯಾ ॥16॥
ನಿವೇಶಾರ್ಥ್ಯಖಿಲಾಂ ಭೂಮಿಂ ಕನ್ಯಾಭೈಕ್ಷಂ ಚರಾಮಿ ಭೋ |
ದರಿದ್ರೋ ದುಃಖಶೀಲಶ್ಚ ಪಿತೃಭಿಃ ಸುನಿಯೋಜಿತಃ ॥17॥
ಉಗ್ರವಾದ ತಪಸ್ಸಿನಲ್ಲಿ ರತನಾಗಿರುವ ನನ್ನನ್ನು ದುಃಖಾರ್ತರಾದ ನನ್ನ ಪಿತೃಗಳು ವಿವಾಹವನ್ನು ಮಾಡಿಕೋ ಎಂದು ಒತ್ತಾಯವನ್ನು ಮಾಡುತ್ತಿದ್ದಾರೆ. ಅವರಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಅವರ ಆ ಆಜ್ಞೆಗೆ ಒಳಗಾದ, ದರಿದ್ರನೂ, ದುಃಖಶೀಲನೂ ಆದ ನಾನು ವಿವಾಹವನ್ನು ಮಾಡಿಕೊಳ್ಳಲು ಇಚ್ಚಿಸಿ ಕನ್ಯಾಭಿಕ್ಷದ ಸಲುವಾಗಿ ಭೂಮಿಯಲ್ಲಿ ಸಂಚರಿಸುತ್ತಿದ್ದೇನೆ.

ಯಸ್ಯ ಕನ್ಯಾಽಸ್ತಿ ಭೂತಸ್ಯ ಗುಣೈಃ ಸಮ್ಯಕ್ ಪ್ರಕೀರ್ತಿತಾ |
ಪ್ರಯಚ್ಛತು ಸ ಮೇ ಕನ್ಯಾಂ ಚರತಃ ಸರ್ವತೋ ದಿಶಮ್ ॥18॥
ಯಾರಿಗಾದರೂ ನಾನು ಹೇಳಿದಂತಹ ಗುಣವುಳ್ಳ ಕನ್ಯೆಯಿದ್ದರೆ, ಎಲ್ಲಾ ದಿಕ್ಕುಗಳಲ್ಲಿಯೂ ಸಂಚಾರ ಮಾಡುತ್ತಿರುವ ನನಗೆ ಆ ಕನ್ಯೆಯನ್ನು ಕೊಡಿ.
ಮಮ ಕನ್ಯಾ ಸನಾಮಾ ಯಾ ಭೈಕ್ಷವಚ್ಚೋದ್ಯತಾ ಭವೇತ್ |
ಭರೇಯಂ ಚೈವ ಯಾಂ ನಾಹಂ ತಾಂ ಮೇ ಕನ್ಯಾಂ ಪ್ರಯಚ್ಛತು ॥
ಆ ಕನ್ಯೆಯು ನನ್ನ ಹೆಸರಿನವಳೇ ಆಗಿರಬೇಕು. ಭಿಕ್ಷೆಯಂತೆ ನನಗೆ ಕೊಡಲ್ಪಡಬೇಕು. ನಾನು ಅವಳನ್ನು ಪೋಷಿಸುವುದಿಲ್ಲ. ಅಂತಹ ಕನ್ಯೆಯನ್ನು ನನಗೆ ಕೊಡಿ.
ತತಸ್ತೇ ಪನ್ನಗಾ ಯೇ ವೈ ಜರತ್ಕಾರೌ ಸಮಾಹಿತಾಃ |
ತಾಮಾದಾಯ ಪ್ರವೃತ್ತಿಂ ತೇ ವಾಸುಕೇಃ ಪ್ರತ್ಯವೇದಯನ್ ॥20॥
ಆಗ ಜರತ್ಕಾರುವಿನ ವಾರ್ತೆಯನ್ನು ತಿಳಿಯಲು ವಾಸುಕಿಯು ಅಲ್ಲಲ್ಲಿ ನೇಮಿಸಿದ್ದ ಸರ್ಪಗಳು ಈ ವಾರ್ತೆಯನ್ನು ತೆಗೆದುಕೊಂಡು ಹೋಗಿ ವಾಸುಕಿಗೆ ತಲುಪಿಸಿದವು.
ತೇಷಾಂ ಶ್ರುತ್ವಾಽಥ ನಾಗೇಂದ್ರಃ ತಾಂ ಕನ್ಯಾಂ ಸಮಲಂಕೃತಾಮ್ |
ಪ್ರಗೃಹ್ಯಾರಣ್ಯಮಗಮತ್ ಸಮೀಪಂ ತಸ್ಯ ಪನ್ನಗಃ ॥21॥
ಅವರ ಮಾತುಗಳನ್ನು ಕೇಳಿದ ನಾಗೇಂದ್ರನಾದ ವಾಸುಕಿಯು ಚೆನ್ನಾಗಿ ಅಲಂಕೃತಳಾದ ಆ ಕನ್ಯೆಯನ್ನು ಕರೆದುಕೊಂಡು ಅರಣ್ಯದಲ್ಲಿ ಜರತ್ಕಾರುವಿನ ಸಮೀಪಕ್ಕೆ ಬಂದನು.
ತಾಂ ತಸ್ಮೈ ಭೈಕ್ಷವತ್ ಕನ್ಯಾಂ ಪ್ರಾದಾತ್ ತತ್ರ ಮಹಾತ್ಮನೇ |
ನಾಗೇಂದ್ರೋ ವಾಸುಕಿರ್ಬ್ರಹ್ಮನ್ ನ ಸ ತಾಂ ಪ್ರತ್ಯಗೃಹ್ಣತ ॥22॥
ಅಸನಾಮೇತಿ ವೈ ಕೃತ್ವಾ ಭರಣೇ ಚಾವಿಚಾರಿತೇ |
ಮೋಕ್ಷಭಾವೇ ಸ್ಥಿತಶ್ಚಾಪಿ ಮಂದೀಭೂತಃ ಪರಿಗ್ರಹೇ ॥23॥
ಎಲೈ ಬ್ರಾಹ್ಮಣಶ್ರೇಷ್ಠನೇ, ನಾಗೇಂದ್ರನಾದ ವಾಸುಕಿಯು ಮಹಾತ್ಮನಾದ ಜರತ್ಕಾರುವಿಗೆ ಆ ಕನ್ಯೆಯನ್ನು ಭಿಕ್ಷೆಯಂತೆ ನೀಡಿದನು. ಆದರೆ ಜರತ್ಕಾರುವು ಸ್ವೀಕರಿಸಲಿಲ್ಲ. ಅವಳ ಹೆಸರನ್ನು ತಿಳಿಯದೆ, ಅವಳ ಪೋಷಣೆಯ ಬಗ್ಗೆ ತನ್ನ ಷರತ್ತನ್ನು ಹೇಳದೆ, ಮೋಕ್ಷಸಾಧನೆಯಲ್ಲಿಯೇ ನಿರತನಾದ ಅವನು ವಿವಾಹದಲ್ಲಿ ಮಾಂದ್ಯವನ್ನು ತಾಳಿದನು.
ತತೋ ನಾಮ ಸ ಕನ್ಯಾಯಾಃ ಪಪ್ರಚ್ಛ ಭೃಗುನಂದನ |
ವಾಸುಕೇ ಭರಣಂ ಚಾಸ್ಯಾ ನ ಕುರ್ಯಾಮಿತ್ಯುವಾಚ ಹ ॥24॥
ಎಲೈ ಭೃಗುನಂದನನೇ, ಆಗ ಅವನು ಅವಳ ಹೆಸರನ್ನು ಕೇಳಿದನು ಮತ್ತು ವಾಸುಕಿಯೇ, ನಾನು ಇವಳ ಪೋಷಣೆಯನ್ನು

ಮಾಡುವುದಿಲ್ಲ ಎಂದೂ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಮಾದಿಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
*****

ನಲವತ್ತೆರಡನೆಯ ಅಧ್ಯಾಯ
(ಜರತ್ಕಾರುವಿನ ವಿವಾಹ, ಪತ್ನಿಯ ಗರ್ಭೋತ್ಪತ್ತಿ ಮತ್ತು ವ್ಯಾಜದಿಂದ ಪತ್ನಿಯ ಪರಿತ್ಯಾಗ.)
ಸೂತಃ
ವಾಸುಕಿಸ್ತ್ವಬ್ರವೀದ್ ವಾಕ್ಯಂ ಜರತ್ಕಾರುಮೃಷಿಂ ತದಾ ।
ಸನಾಮಾ ತವ ಕನ್ಯೇಯಂ ಸ್ವಸಾ ಮೇ ತಪಸಾನ್ವಿತಾ ॥1॥
ಪ್ರದಾಸ್ಯಾಮಿ ಚ ತೇ ಭಾರ್ಯಾಂ ಪ್ರತೀಚ್ಛೇಮಾಂ ದ್ವಿಜೋತ್ತಮ ।
ರಕ್ಷಣಂ ಚ ಕರಿಷ್ಯೇಽಸ್ಯಾಃ ಸರ್ವಶಕ್ತ್ಯಾ ತಪೋಧನ ।
ತ್ವದರ್ಥಂ ರಕ್ಷ್ಯತೇ ಚೈಷಾ ಮಯಾ ಮುನಿವರ ಪ್ರಭೋ ॥2॥
ವಾಸುಕಿಯು ಆಗ ಜರತ್ಕಾರುಮುನಿಯನ್ನು ಕುರಿತು ಮಾತನಾಡಿದನು. ದ್ವಿಜೋತ್ತಮನೇ, ಇವಳು ನಿನ್ನ ಹೆಸರಿನವಳೇ ಆದ ನನ್ನ ತಂಗಿ. ತಪಸ್ಸಿನಿಂದ ಕೂಡಿದವಳಾಗಿದ್ದಾಳೆ. ನಾನು ಅವಳನ್ನು ನಿನಗೆ ಪ್ರದಾನಮಾಡುತ್ತಿದ್ದೇನೆ. ಪತ್ನಿಯಾಗಿ ಸ್ವೀಕರಿಸು. ತಪೋಧನನೇ, ನಾನು ಸರ್ವರೀತಿಯಿಂದಲೂ ಇವಳ ರಕ್ಷಣೆಯನ್ನು ಮಾಡುತ್ತೇನೆ. ಮುನಿಶ್ರೇಷ್ಠನೇ, ಪ್ರಭುವೇ, ನಾನು ಇಲ್ಲಿಯವರೆಗೆ ನಿನ್ನ ಸಲುವಾಗಿಯೇ ಇವಳನ್ನು ರಕ್ಷಿಸಿಕೊಂಡಿದ್ದೆ.
ಋಷಿಃ
ನ ಭರಿಷ್ಯೇಽಹಮೇತಾಂ ವೈ ಏಷ ಮೇ ಸಮಯಃ ಕೃತಃ ।
ಅಪ್ರಿಯಂ ನ ಚ ಕರ್ತವ್ಯಂ ಕೃತೇ ಚೈವ ತ್ಯಜಾಮ್ಯಹಮ್ ॥3॥
ನಾನು ಇವಳನ್ನು ಪೋಷಿಸುವುದಿಲ್ಲ. ಇದು ನನ್ನ ಷರತ್ತು. ಅವಳು ನನಗೆ ಯಾವ ಅಪ್ರಿಯವನ್ನೂ ಮಾಡಬಾರದು. ಹಾಗೆ ಮಾಡಿದರೆ, ನಾನು ಅವಳನ್ನು ಬಿಡುತ್ತೇನೆ.
ಸೂತಃ
ಪ್ರತಿಶ್ರುತೇ ತು ನಾಗೇನ ಭರಿಷ್ಯೇ ಭಗಿನೀಮಿತಿ ।
ಜರತ್ಕಾರುಸ್ತದಾ ವೇಶ್ಮ ಭುಜಗಸ್ಯ ಜಗಾಮ ಹ ॥4॥
ವಾಸುಕಿಯು ನನ್ನ ತಂಗಿಯನ್ನೂ ನಾನೇ ಪೋಷಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿದ ಮೇಲೆ ಜರತ್ಕಾರುವು ವಾಸುಕಿಯ ಗೃಹಕ್ಕೆ ಹೋದನು.
ತತ್ರ ಮಂತ್ರವಿದಾಂ ಶ್ರೇಷ್ಠಸ್ತಪೋವೃದ್ಧೋ ಮಹಾಮತಿಃ ।
ಜಗ್ರಾಹ ಪಾಣಿಂ ಧರ್ಮಾತ್ಮಾ ವಿಧಿಮಂತ್ರಪುರಸ್ಕೃತಃ ॥5॥
ಅಲ್ಲಿ ಮೇಧಾವಿಯೂ, ತಪೋವೃದ್ಧನೂ, ಮಂತ್ರಜ್ಞರಲ್ಲಿ ಶ್ರೇಷ್ಠನೂ, ಧರ್ಮಾತ್ಮನೂ ಆದ ಅವನು ವಿಧಿಮಂತ್ರಪೂರ್ವಕವಾಗಿ ಅವಳ ಪಾಣಿಗ್ರಹಣವನ್ನು ಮಾಡಿದನು.
ತತೋ ವಾಸಗೃಹಂ ಶುಭ್ರಂ ಪನ್ನಗೇಂದ್ರಸ್ಯ ಧೀಮತಃ ।
ಜಗಾಮ ಭಾರ್ಯಾಮಾದಾಯ ಸ್ತೂಯಮಾನೋ ಮಹರ್ಷಿಭಿಃ ॥6॥
ಅನಂತರ, ಮಹರ್ಷಿಗಳಿಂದ ಸ್ತೋತ್ರಮಾಡಲ್ಪಟ್ಟು, ತನ್ನ ಪತ್ನಿಯನ್ನು ಕರೆದುಕೊಂಡು ಮೇಧಾವಿಯಾದ, ಸರ್ಪರಾಜನಾದ ವಾಸುಕಿಯ ಶುಭ್ರವಾದ ಶಯನಗೃಹಕ್ಕೆ ಹೋದನು.
ಶಯನಂ ತತ್ರ ವೈ ಕ್ಲೃಪ್ತಂ ಸ್ಪರ್ಧ್ಯಾಸ್ತರಣಸಂವೃತಮ್ ।
ತತ್ರ ಭಾರ್ಯಾಸಹಾಯಃ ಸ ಜರತ್ಕಾರುರುವಾಸ ಹ ।
ಸ ತತ್ರ ಸಮಯಂ ಚಕ್ರೇ ಭಾರ್ಯಯಾ ಸಹ ಸತ್ತಮಃ ॥7॥
ಅವನು ಒಳ್ಳೆಯ ಹೊದಿಕೆಗಳಿಂದ ಕೂಡಿದ ಹಾಸಿಗೆಯುಳ್ಳ ಶಯನಗೃಹವನ್ನು ತಲುಪಿ, ಅಲ್ಲಿ ಭಾರ್ಯೆಯ ಜೊತೆಯಲ್ಲಿ ವಾಸಮಾಡಿದನು. ಸಜ್ಜನರಲ್ಲಿ ಶ್ರೇಷ್ಠನಾದ ಅವನು ಪತ್ನಿಯ ಜೊತೆಯಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂಡನು.
ಜರತ್ಕಾರುಃ
ವಿಪ್ರಿಯಂ ಮೇ ನ ಕರ್ತವ್ಯಂ ನ ಚ ವಾಚ್ಯಂ ಕದಾಚನ ।
ತ್ಯಜೇಯಮಪ್ರಿಯೇ ಹಿತ್ವಾ ಕೃತೇ ವಾಸಂ ಚ ತೇ ಗೃಹೇ ।
ಏತದ್ ಗೃಹಾಣ ವಚನಂ ಮಯಾ ಯತ್ ಸಮುದೀರಿತಮ್ ॥8॥
ನನಗೆ ಎಂದೂ ಅಪ್ರಿಯವನ್ನು ಮಾಡಬಾರದು ಮತ್ತು ಅಪ್ರಿಯವಾಗಿ ಮಾತನಾಡಬಾರದು. ಏನಾದರೂ ಅಪ್ರಿಯವನ್ನು ಮಾಡಿದರೆ, ನಿನ್ನ ಮನೆಯಲ್ಲಿ ವಾಸಿಸುವುದನ್ನು ಬಿಟ್ಟು ನಿನ್ನನ್ನು ಪರಿತ್ಯಾಗಮಾಡುತ್ತೇನೆ. ನಾನು ಹೇಳುತ್ತಿರುವ ಈ ಮಾತುಗಳನ್ನು ಚೆನ್ನಾಗಿ ನೆನಪಿಡು.
ಸೂತಃ
ತತಃ ಪರಮಸಂವಿಗ್ನಾ ಸ್ವಸಾ ನಾಗಪತೇಸ್ತು ಸಾ ।

ಅತಿದುಃಖಾನ್ವಿತಾ ವಾಕ್ಯಂ ತಮುವಾಚೈವಮುಸಿತ್ವತಿ ॥9॥
ಆಗ ಬಹಳ ಉದ್ವೇಗಕ್ಕೆ ಒಳಗಾದ ವಾಸುಕಿಯ ತಂಗಿಯಾದ ಅವಳು ಬಹಳ ದುಃಖದಿಂದ ಕೂಡಿದವಳಾಗಿ ಹಾಗೆಯೇ ಆಗಲಿ ಎಂದು ಹೇಳಿದಳು.
ತಥೈವ ಸಾ ಚ ಭರ್ತಾರಂ ದುಃಖಶೀಲಮುಪಾಚರತ್ |
ಉಪಾಯೈಃ ಶ್ವೇತಕಾಕೀಯೈಃ ಪ್ರಿಯಕಾಮಾ ಮನಸ್ವಿನೀ ॥10॥
ಹಾಗೆಯೇ ಅವಳು ದುಃಖಶೀಲನಾದ ತನ್ನ ಪತಿಯನ್ನು ಉಪಚರಿಸಿದಳು. ಧೈರ್ಯಶಾಲಿಯಾದ ಅವಳು ಪತಿಗೆ ಹಿತವನ್ನು ಮಾಡಲು ಬಯಸಿ, ಶ್ವೇತಕಾಕೀಯ ಉಪಾಯಗಳಿಂದಲೂ ಅವನನ್ನು ಉಪಚರಿಸಿದಳು.
`ಶ್ವೇತಕಾಕೀಯ' ಎಂದರೆ ಅನುಕೂಲವಾಗಿ ಮಾತನಾಡುವುದು ಎಂದು ಅರ್ಥ. ಕಾಗೆಯು ಬೆಳ್ಳಗಿದೆ ಎಂದು ಹೇಳಿದರೆ, ನಿಷೇಧವನ್ನು ಮಾಡದೆ ಹೌದು ಎಂದು ಹೇಳುವುದು ಒಂದು ಅನುಕೂಲವಚನದ ಪ್ರಕಾರ.
ಋತುಕಾಲೇ ತತಃ ಸ್ನಾತಾ ಕದಾಚಿದ್ ವಾಸುಕೇಃ ಸ್ವಸಾ |
ಭರ್ತಾರಂ ತು ಯಥಾನ್ಯಾಯಮ್ ಉಪತಸ್ಥೇ ಮಹಾಮುನಿಮ್ ॥
ಒಮ್ಮೆ ವಾಸುಕಿಯ ತಂಗಿಯಾದ ಅವಳು ಋತುಸ್ನಾತಳಾಗಿ ಮಹಾಮುನಿಯಾದ ತನ್ನ ಪತಿಯನ್ನು ವಿಧಿವತ್ತಾಗಿ ಸಮೀಪಿಸಿದಳು.
ತತಸ್ತಸ್ಯಾಂ ಸಮಭವದ್ ಗರ್ಭೋ ಜ್ವಲನಸನ್ನಿಭಃ |
ಅತೀವ ತಪಸಾ ಯುಕ್ತೋ ವೈಶ್ವಾನರಸಮದ್ಯುತಿಃ |
ಶುಕ್ಲಪಕ್ಷೇ ಯಥಾ ಸೋಮೋ ವ್ಯವರ್ಧತ ತಥೈವ ಸಃ ॥12॥
ಆಗ ಅವಳಲ್ಲಿ ಅಗ್ನಿಸದೃಶವಾದ ಗರ್ಭವು ಉಂಟಾಯಿತು. ಋಷಿಯ ತಪಸ್ಸಿನಿಂದ ಅಗ್ನಿಗೆ ಸಮಾನವಾದ ಕಾಂತಿಯುಳ್ಳದ್ದಾಗಿ ಆ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯನ್ನು ಹೊಂದಿತು.
ತತಃ ಕತಿಪಯಾಹಸ್ಸು ಜರತ್ಕಾರುರ್ಮಹಾತಪಾಃ |
ಉತ್ಸಂಗೇಽಸ್ಯಾಃ ಶಿರಃ ಕೃತ್ವಾ ಸುಷ್ವಾಪ ಪರಿಖಿನ್ನವತ್ ॥13॥
ಅನಂತರ ಕೆಲವು ದಿನಗಳು ಕಳೆದ ಮೇಲೆ ಮಹಾತಪಸ್ವಿಯಾದ ಜರತ್ಕಾರುವು ಅವಳ ತೊಡೆಯ ಮೇಲೆ ತಲೆಯನ್ನಿಟ್ಟು ದಣಿದವನಂತೆ ಮಲಗಿ ನಿದ್ರೆಮಾಡಿದನು.
ತಸ್ಮಿಂಶ್ಚ ಸುಪ್ತೇ ವಿಪ್ರೇಂದ್ರೇ ಸವಿತಾಽಸ್ತಮಿಯಾದ್ ಗಿರಿಮ್ |
ಅಹ್ನಃ ಪರಿಕ್ಷಯೇ ಬ್ರಹ್ಮಂಸ್ತತಃ ಸಾಽಚಿಂತಯತ್ ತದಾ ॥14॥
ವಾಸುಕೇರ್ಭಗಿನೀ ಭೀತಾ ಧರ್ಮಲೋಪಾನ್ಮನಸ್ವಿನೀ |
ಕಿಂ ನು ಮೇ ಸುಕೃತಂ ಭೂಯಾದ್ ಭರ್ತುರುತ್ಥಾಪನೇನ ವಾ ॥15॥
ಆ ವಿಪ್ರೇಂದ್ರನು ನಿದ್ರಿಸುತ್ತಿರಲು ಸೂರ್ಯನು ಅಸ್ತಗಿರಿಯನ್ನು ಸಮೀಪಿಸಿದನು. ಬ್ರಾಹ್ಮಣನೇ, ದಿನವು ಪರಿಕ್ಷಯವನ್ನು ಹೊಂದುವ ಸ್ಥಿತಿಯಲ್ಲಿರಲು ವಾಸುಕಿಯ ತಂಗಿಯಾದ ಧೈರ್ಯಶಾಲಿನಿಯಾದ ಜರುತ್ಕಾರವು ಧರ್ಮಲೋಪದಿಂದ ಭೀತಳಾಗಿ, ನಾನು ಏನು ಮಾಡಿದರೆ ಒಳ್ಳೆಯದಾಗುತ್ತದೆ. ಪತಿಯನ್ನು ಎಬ್ಬಿಸಲೋ ಅಥವಾ ಧರ್ಮಲೋಪವನ್ನು ಸಹಿಸಲೋ ಎಂದು ಚಿಂತಿಸಿದಳು.
ದುಃಖಶೀಲೋ ಹಿ ಧರ್ಮಾತ್ಮಾ ಕಥಂ ನಾಸ್ಯಾಪರಾಧ್ನುಯಾಮ್ |
ಕೋಪೋ ವಾ ಧರ್ಮಶೀಲಸ್ಯ ಧರ್ಮಲೋಪೋಽಥವಾ ಪುನಃ |
ಧರ್ಮಲೋಪೋ ಗರೀಯಾನ್ ವೈ ಸ್ಯಾದಿತ್ಯತ್ರಾಕರೋನ್ಮತಿಮ್ ॥16॥
ಧರ್ಮಾತ್ಮನಾದ ನನ್ನ ಪತಿಯು ಯಾವಾಗಲೂ ದುಃಖಶೀಲನಾದವನು (ಕಷ್ಟಗಳನ್ನು ಅನುಭವಿಸುವವನು). ನಾನು ಏನು ಮಾಡಿದರೆ ಅವನಿಗೆ ಅಪರಾಧವಾಗದೇ ಇರಬಹುದು? ಎಬ್ಬಿಸಿದರೆ ಅವನಿಗೆ ಕೋಪವುಂಟಾಗುತ್ತದೆ ಅಥವಾ ಎಬ್ಬಿಸದಿದ್ದರೆ, ಧರ್ಮಶೀಲನಾದ ಅವನಿಗೆ ಧರ್ಮಲೋಪವುಂಟಾಗುತ್ತದೆ. ಪತಿಯ ಕೋಪಕ್ಕಿಂತ ಪತಿಯ ಧರ್ಮಲೋಪವು ಹೆಚ್ಚು ಅನಿಷ್ಟವಾದುದು ಎಂದು ಮನಸ್ಸಿನಲ್ಲಿ ನಿರ್ಧರಿಸಿದಳು.
ಉತ್ಥಾಪಯಿಷ್ಯೇ ಯದ್ಯೇನಂ ಧ್ರುವಂ ಕೋಪೋ ಭವಿಷ್ಯತಿ |
ಧರ್ಮಲೋಪೋ ಭವೇದಸ್ಯ ಸಂಧ್ಯಾತಿಕ್ರಮಣೇ ಧ್ರುವಮ್ ॥17॥
ನಾನು ಇವನನ್ನು ಎಬ್ಬಿಸಿದರೆ, ಖಂಡಿತವಾಗಿ ಇವನು ಕೋಪಗೊಳ್ಳುವನು. ಆದರೆ, ಸಂಧ್ಯಾಕಾಲವನ್ನು ಅತಿಕ್ರಮ ಮಾಡಿದರೆ, ಅವನಿಗೆ ಖಂಡಿತವಾಗಿ ಧರ್ಮಲೋಪವುಂಟಾಗುತ್ತದೆ.
ಇತಿ ನಿಶ್ಚಿತ್ಯ ಮನಸಾ ಜರತ್ಕಾರುರ್ಭುಜಂಗಮಾ |
ತಮೃಷಿಂ ದೀಪ್ತತಪಸಂ ಶಯಾನಮನಲೋಪಮಮ್ |
ಉವಾಚೇದಂ ವಚಃ ಶ್ಲಕ್ಷ್ಣಂ ತತೋ ಮಧುರಭಾಷಿಣೀ ॥18॥
ಹೀಗೆ ಸರ್ಪಿಣಿಯಾದ ಜರತ್ಕಾರುವು ಮನಸ್ಸಿನಲ್ಲಿ ನಿಶ್ಚಯಿಸಿ, ಅಗ್ನಿಗೆ ಸದೃಶವಾದಂತಹ, ದೀಪ್ತವಾದ ತಪಸ್ಸನ್ನು ಹೊಂದಿದ ನಿದ್ರಿಸುತ್ತಿರುವ ಆ ಋಷಿಯನ್ನು ಕುರಿತು ಮಧುರಭಾಷಿಣಿಯಾದ ಅವಳು ಮಧುರವಾದ ಈ ಮಾತುಗಳನ್ನು ಆಡಿದಳು.
ಉತ್ತಿಷ್ಠ ತ್ವಂ ಮಹಾಭಾಗ ಸೂರ್ಯೋಽಸ್ತಮುಪಗಚ್ಛತಿ |
ಸಂಧ್ಯಾಮುಪಾಸ್ವ ಭಗವನ್ ಅಪಃ ಸ್ಪೃಷ್ಟ್ವಾ ಮಹಾವ್ರತಃ |
ಪ್ರಾದುಷ್ಕೃತಾಗ್ನಿಹೋತ್ರೋಽಯಂ ಮುಹೂರ್ತೋ ರಮ್ಯದಾರುಣಃ ॥
ಮಹಾಭಾವನೇ, ಸೂರ್ಯನು ಅಸ್ತಂಗತನಾಗುತ್ತಿದ್ದಾನೆ. ಪೂಜ್ಯನೇ, ಮಹಾವ್ರತಧಾರಿಯಾದ ನೀನು ಎದ್ದು ನೀರಿನಿಂದ ಶುದ್ಧಿಯನ್ನು ಹೊಂದಿ ಸಂಧ್ಯೋಪಾಸನೆಯನ್ನು ಮಾಡು. ಈ ಮುಹೂರ್ತವು ಪ್ರಾದುರ್ಭೂತವಾದ ಅಗ್ನಿಹೋತ್ರವುಳ್ಳದ್ದಾಗಿದೆ. ಇದು ಸಕಾಲದಲ್ಲಿ ಅಗ್ನಿಹೋತ್ರವನ್ನು ಮಾಡಿದರೆ ರಮ್ಯವೂ, ಇಲ್ಲದಿದ್ದರೆ ದಾರುಣವೂ ಆಗುತ್ತದೆ.

ಅಗ್ನಿಹೋತ್ರವನ್ನು ಇಟ್ಟವರು ಸೂರ್ಯಾಸ್ತಕ್ಕಿಂತ ಮೊದಲೇ ಅಗ್ನಿಯ ಪ್ರಾದುರ್ಭಾವವನ್ನು ಮಾಡಬೇಕು. ಹೋಮವನ್ನು ಸೂರ್ಯಾಸ್ತಕ್ಕಿಂತ ಮೊದಲು ಅಥವಾ ಅನಂತರವೂ ಮಾಡಬಹುದು.
ಸಂಧ್ಯಾ ಪ್ರವರ್ತತೇ ಚೇಯಂ ಪಶ್ಚಿಮಸ್ಯಾಂ ದಿಶಿ ಪ್ರಭೋ |
ಏವಮುಕ್ತಃ ಸ ಭಗವಾನ್ ಜರತ್ಕಾರುರ್ಮಹಾತಪಾಃ |
ಭಾರ್ಯಾಂ ತಾಂ ಸ್ಫುರಮಾಣೋಷ್ಠ ಇದಂ ವಚನಮಬ್ರವೀತ್ ॥
ಪ್ರಭುವೇ, ಪಶ್ಚಿಮದಿಕ್ಕಿನಲ್ಲಿ ಸಂಧ್ಯೆಯು ಪ್ರವೃತ್ತವಾಗಿದೆ. ಹೀಗೆ ಹೇಳಲ್ಪಟ್ಟ ಮಹಾತಪಸ್ವಿಯಾದ ಪೂಜ್ಯನಾದ ಜರತ್ಕಾರುವು, ಕೋಪದಿಂದ ಅದುರುವ ತುಟಿಗಳಿಂದ ಪತ್ನಿಯನ್ನು ಕುರಿತು ಹೀಗೆ ಮಾತನಾಡಿದನು.
ಜರತ್ಕಾರುಃ
ಅವಮಾನಃ ಪ್ರಯುಕ್ತೋಽಯಂ ತ್ವಯಾ ಮೇಽದ್ಯ ಭುಜಂಗಮೇ |
ಸಮೀಪೇ ತೇ ನ ವತ್ಸ್ಯಾಮಿ ಗಮಿಷ್ಯಾಮಿ ಯಥಾಗತಮ್ ॥21॥
ಎಲೌ ಸರ್ಪಿಣಿಯೇ, ನೀನು ಈ ದಿನ ನನಗೆ ಅವಮಾನವನ್ನು ಮಾಡಿದ್ದೀಯೆ. ಇನ್ನು ನಿನ್ನ ಸಮೀಪದಲ್ಲಿ ನಾನು ವಾಸವನ್ನು ಮಾಡುವುದಿಲ್ಲ. ನಾನು ಬಂದಂತೆಯೇ ಹೊರಟುಹೋಗುವೆನು.
ನ ಹಿ ತೇಜೋಽಸ್ತಿ ವಾಮೋರು ಮಯಿ ಸುಪ್ತೇ ವಿಭಾವಸೋಃ |
ಅಸ್ತಂ ಗಂತುಂ ಯಥಾಕಾಲಮಿತಿ ಮೇ ವರ್ತತೇ ಮತಿಃ ॥22॥
ಸುಂದರಿಯೇ, ನಾನು ನಿದ್ರಿಸುತ್ತಿರುವಾಗ ಸೂರ್ಯನಿಗೆ ಕಾಲಕ್ಕೆ ಸರಿಯಾಗಿ ಅಸ್ತಂಗತನಾಗಲು ಸಾಮರ್ಥ್ಯವಿಲ್ಲ ಎಂದು ನನ್ನ ಅಭಿಪ್ರಾಯ.
ನ ಚಾಹ್ಯವಮತಸ್ಯೇಹ ವಸ್ತುಂ ರೋಚೇತ ಕಸ್ಯಚಿತ್ |
ಕಿಂ ಪುನರ್ಧರ್ಮಶೀಲಸ್ಯ ಮಮ ವಾ ಮದ್ವಿಧಸ್ಯ ವಾ ॥23॥
ಎಲೌ ಸರ್ಪಕುಮಾರಿಯೇ, ಅವಮಾನವಾದ ಸ್ಥಳದಲ್ಲಿ ಯಾರೂ ವಾಸವನ್ನು ಮಾಡಬಾರದು. ಹೀಗಿರುವಾಗ ನಾನಾಗಲೀ ಧರ್ಮಶೀಲನಾದ ನನ್ನಂತಹವನಾಗಲೀ ಹೇಗೆ ವಾಸಮಾಡಲು ಸಾಧ್ಯ?
ಸೂತಃ
ಏವಮುಕ್ತಾ ಜರತ್ಕಾರುರ್ಭರ್ತ್ರಾ ಹೃದಯಕಂಪನಮ್ |
ಅಬ್ರವೀದ್ ಭಗಿನೀ ತತ್ರ ವಾಸುಕೇಸ್ತು ನಿವೇಶನೇ ॥24॥
ಹೀಗೆ ಪತಿಯಾದ ಜರತ್ಕಾರುವಿನಿಂದ ಹೃದಯವನ್ನು ನಡುಗಿಸುವ ಮಾತುಗಳನ್ನು ಕೇಳಿದ ವಾಸುಕಿಯ ತಂಗಿಯು ಆ ಗೃಹದಲ್ಲಿ ಅವನನ್ನು ಕುರಿತು ಮಾತನಾಡಿದಳು.
ನಾವಮಾನಾತ್ ಕೃತವತೀ ತವಾಹಂ ಪ್ರತಿಬೋಧನಮ್ |
ಧರ್ಮಲೋಪೋ ನ ತೇ ವಿಪ್ರ ಸ್ಯಾದಿತ್ಯೇವಂ ಕೃತಂ ಮಯಾ ॥25॥
ನಿನಗೆ ಅವಮಾನವನ್ನು ಮಾಡುವುದಕ್ಕೋಸ್ಕರ ನಾನು ನಿನ್ನನ್ನು ಎಬ್ಬಿಸಲಿಲ್ಲ. ಎಲೈ ಬ್ರಾಹ್ಮಣನೇ, ಎಬ್ಬಿಸದಿದ್ದರೆ ಧರ್ಮಲೋಪವಾಗುವುದು ಎಂಬ ಕಾರಣದಿಂದ ಹೀಗೆ ಮಾಡಿದೆ.
ಉವಾಚ ಭಾರ್ಯಾಮಿತ್ಯುಕ್ತೋ ಜರತ್ಕಾರುರ್ಮಹಾತಪಾಃ |
ಋಷಿಃ ಕೋಪಸಮಾವಿಷ್ಟಃ ತ್ಯಕ್ತುಕಾಮೋ ಭುಜಂಗಮಾಮ್ ॥26॥
ಪತ್ನಿಯಿಂದ ಹೀಗೆ ಹೇಳಲ್ಪಟ್ಟ ಮಹಾತಪಸ್ವಿಯಾದ ಜರತ್ಕಾರುವು ಸರ್ಪಕನ್ಯೆಯಾದ ಅವಳನ್ನು ಪರಿತ್ಯಾಗ ಮಾಡಲು ನಿಶ್ಚಯಿಸಿ, ಕೋಪದಿಂದ ಕೂಡಿದವನಾಗಿ ಅವಳನ್ನು ಕುರಿತು ಮಾತನಾಡಿದನು.
ನ ಮೇ ವಾಗನೃತಂ ಪ್ರಾಹ ಗಮಿಷ್ಯೇಽಹಂ ಭುಜಂಗಮೇ |
ಸಮಯೋ ಹ್ಯೇಷ ಮೇ ಪೂರ್ವಂ ತ್ವಯಾ ಸಹ ಮಿಥಃ ಕೃತಃ ॥27॥
ಎಲೌ ಸರ್ಪಿಣಿಯೇ, ನನ್ನ ಮಾತು ಎಂದೂ ಸುಳ್ಳಾಗುವುದಿಲ್ಲ. ನಾನು ಹೊರಟುಹೋಗುವೆನು. ನಾನು ಮೊದಲೇ ನಿನ್ನ ಜೊತೆಯಲ್ಲಿ ಈ ರೀತಿ ಒಪ್ಪಂದವನ್ನು ಮಾಡಿಕೊಂಡಿದ್ದೆನಷ್ಟೆ.
ಸುಖಮಧ್ಯುಷಿತೋ ಭದ್ರೇ ಬ್ರೂಯಾಸ್ತ್ವಂ ಭ್ರಾತರಂ ಶುಭೇ |
ಇತೋ ಮಯಿ ಗತೇ ಭೀರು ಗತಃ ಸ ಭಗವಾನಿತಿ |
ತ್ವಂ ಚಾಪಿ ಮಯಿ ನಿಷ್ಕ್ರಾಂತೇ ನ ಶೋಕಂ ಕರ್ತುಮರ್ಹಸಿ ॥28॥
ಮಂಗಳಸ್ವರೂಪಳೇ, ನಾನು ನಿನ್ನ ಜೊತೆಯಲ್ಲಿ ಈ ಮನೆಯಲ್ಲಿ ಸುಖವಾಗಿ ವಾಸಮಾಡಿದೆ. ನಾನು ಹೊರಟುಹೋದ ಮೇಲೆ ನೀನು ನಿನ್ನ ಅಣ್ಣನಿಗೆ ಪೂಜ್ಯರು ಹೊರಟುಹೋದರು ಎಂದು ಹೇಳು. ಎಲೌ ಭೀರುವೇ, ನಾನು ಹೊರಟುಹೋದ ಮೇಲೆ ನೀನು ದುಃಖವನ್ನು ಪಡಬೇಡ.
ಸೂತಃ
ಇತ್ಯುಕ್ತಾ ಸಾಽನವದ್ಯಾಂಗೀ ಪ್ರತ್ಯುವಾಚ ಪತಿಂ ತದಾ |
ಜರತ್ಕಾರುಂ ಜರತ್ಕಾರುಃ ಚಿಂತಾಶೋಕಸಮನ್ವಿತಾ ॥29॥
ಬಾಷ್ಪಗದ್ಗದಯಾ ವಾಚಾ ಮುಖೇನ ಪರಿಶುಷ್ಯತಾ |
ಕೃತಾಂಜಲಿರ್ವರಾರೋಹಾ ಪರ್ಯಶ್ರುನಯನಾ ತತಃ ॥30॥
ಹೀಗೆ ಹೇಳಲ್ಪಟ್ಟ ಆ ನಿರ್ದುಷ್ಟವಾದ ಶರೀರವುಳ್ಳ ಜರತ್ಕಾರುವು ಚಿಂತಾಶೋಕಗಳಿಂದ ಕೂಡಿದವಳಾಗಿ, ಬಾಷ್ಪಗದ್ಗದವಾದ ಕಂಠದಿಂದ ಮತ್ತು ಬಾಡಿದ ಮುಖದಿಂದ ಕೂಡಿದವಳಾಗಿ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಸುಂದರಿಯಾದ ಆ ಜರತ್ಕಾರುವು

ಕೈಗಳನ್ನು ಮುಗಿದು ಹೇಳಿದಳು.
ಧೈರ್ಯಮಾಲಂಭ್ಯ ವಾಮೋರುಃ ಹೃದಯೇನ ಪ್ರದೂಯತಾ |
ನ ಮಾಮರ್ಹಸಿ ಧರ್ಮಜ್ಞ ಪರಿತ್ಯಕ್ತುಮನಾಗಸೀಮ್ |
ಧರ್ಮೇ ಸ್ಥಿತಾಂ ಸ್ಥಿತೋ ಧರ್ಮೇ ಸದಾ ಪ್ರಿಯಹಿತೇ ರತಾಮ್ ॥31॥
ಸುಂದರಿಯಾದ ಆ ಕನ್ಯೆಯು ಮನಸ್ಸಿನಲ್ಲಿ ಬಹಳ ದುಃಖವಿದ್ದರೂ, ಧೈರ್ಯವನ್ನು ತಂದುಕೊಂಡು ಪತಿಯನ್ನು ಕುರಿತು, ಧರ್ಮಜ್ಞನೇ,
ನಿರಪರಾಧಿಯಾದ ನನ್ನನ್ನು ಪರಿತ್ಯಾಗ ಮಾಡಬೇಡ. ನಾನು ಯಾವಾಗಲೂ ಧರ್ಮದಲ್ಲೇ ಇದ್ದು, ಯಾವಾಗಲೂ ನಿನ್ನ ಪ್ರಿಯದಲ್ಲಿಯೂ, ಹಿತದಲ್ಲಿಯೂ ರತಳಾಗಿದ್ದೆನಷ್ಟೆ.
ಪ್ರದಾನೇ ಕಾರಣಂ ಯಚ್ಚ ಮಮಂ ತುಭ್ಯಂ ದ್ವಿಜೋತ್ತಮ |
ತದಲಬ್ಧವತೀಂ ಮಂದಾಂ ಕಿಂ ಮಾಂ ವಕ್ಷ್ಯತಿ ವಾಸುಕಿಃ ॥32॥
ಎಲೈ ದ್ವಿಜೋತ್ತಮನೇ, ನನ್ನನ್ನು ನಿನಗೆ ವಿವಾಹ ಮಾಡಿಕೊಡಲು ಯಾವ ಪ್ರಯೋಜನದ ಉದ್ದೇಶವಿದ್ದಿತೋ, ನಾನು ಆ ಪ್ರಯೋಜನವನ್ನು ಪಡೆಯದಿದ್ದರೆ, ದೌರ್ಭಾಗ್ಯಶಾಲಿನಿಯಾದ ನನ್ನನ್ನು ಕುರಿತು ವಾಸುಕಿಯು ಏನು ಹೇಳುತ್ತಾನೆ?
ಮಾತೃಶಾಪಾಭಿಭೂತಾನಾಂ ಜ್ಞಾತೀನಾಂ ಮಮ ಸತ್ತಮ |
ಅಪತ್ಯಮೀಪ್ಸಿತಂ ತ್ವತ್ತಃ ತಚ್ಚ ತಾವನ್ನ ದೃಶ್ಯತೇ ॥33॥
ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ತಾಯಿಯ ಶಾಪಕ್ಕೆ ಒಳಗಾಗಿ ದುಃಖತಪ್ತರಾದ ನನ್ನ ಬಂಧುಗಳನ್ನು ಈ ದುಃಖದಿಂದ ದಾಟಿಸಲು ನಿನ್ನಿಂದ ನಾನು ಪುತ್ರಲಾಭವನ್ನು ಬಯಸಿದ್ದೆ. ಆದರೆ, ಅದರ ಯಾವ ಸೂಚನೆಯೂ ಕಾಣುತ್ತಿಲ್ಲ.
ತ್ವತ್ತೋ ಹ್ಯಪತ್ಯಲಾಭೇನ ಜ್ಞಾತೀನಾಂ ಮೇ ಸುಖಂ ಭವೇತ್ |
ಸಂಪ್ರಯೋಗೋ ಭವೇನ್ನಾಯಂ ಮಮ ಮೋಘಸ್ತ್ವಯಾ ದ್ವಿಜ |
ಜ್ಞಾತೀನಾಂ ಹಿತಮಿಚ್ಛಂತೀ ಭಗವಂಸ್ತತ್ವಂ ಪ್ರಸಾದಯೇ ॥34॥
ನಿನ್ನಿಂದ ನಾನು ಒಬ್ಬ ಮಗನನ್ನು ಪಡೆದರೆ, ನನ್ನ ಬಂಧುಗಳಿಗೆ ಸುಖವಾದೀತು. ಎಲೈ ಬ್ರಾಹ್ಮಣನೇ, ನನಗೆ ಉಂಟಾದ ನಿನ್ನ ಸಮಾಗಮವು ಎಂದೂ ವ್ಯರ್ಥವಾಗಬಾರದಷ್ಟೆ? ಪೂಜ್ಯನೇ, ಬಂಧುಗಳ ಹಿತವನ್ನು ಬಯಸುವ ನಾನು ನೀನು ಪ್ರಸನ್ನನಾಗು ಎಂದು ಪ್ರಾರ್ಥಿಸುತ್ತಿದ್ದೇನೆ.
ಇಮಮವ್ಯಕ್ತರೂಪಂ ಮೇ ಗರ್ಭಮಾಧಾಯ ಸತ್ತಮ |
ಕಥಂ ತ್ಯಕ್ತ್ವಾ ಮಹಾಭಾಗ ಗಂತುಮಿಚ್ಛಸ್ಯನಾಗಸೀಮ್ ॥35॥
ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ನನ್ನಲ್ಲಿ ಅವ್ಯಕ್ತವಾದ ಗರ್ಭವನ್ನು ಆಧಾನಮಾಡಿ ನಿರಪರಾಧಿಯಾದ ನನ್ನನ್ನು ಬಿಟ್ಟು ನೀನು ಹೇಗೆ ಹೋಗಲು ಇಚ್ಛಿಸುತ್ತೀಯೆ.
(ಈ ಶ್ಲೋಕವು ಬಹಳ ಕೋಶಗಳಲ್ಲಿ ಕಂಡುಬರುವುದಿಲ್ಲ.)
ಸೂತಃ
ಏವಮುಕ್ತಸ್ತು ಸ ಮುನಿರ್ಭಾರ್ಯಾಂ ವಚನಮಬ್ರವೀತ್ |
ಯದ್ ಯುಕ್ತಮನುರೂಪಂ ಚ ಜರತ್ಕಾರುಂ ತಪೋಧನಃ ॥36॥
ಪತ್ನಿಯಿಂದ ಹೀಗೆ ಹೇಳಲ್ಪಟ್ಟ ತಪೋಧನನಾದ ಜರತ್ಕಾರುವು ಅವಳನ್ನು ಕುರಿತು ಯುಕ್ತವೂ ಅನುರೂಪವೂ ಆದ ಈ ಮಾತನ್ನು ಆಡಿದನು.
ಅಸ್ತ್ಯೇಷ ಗರ್ಭಃ ಸುಭಗೇ ತವ ವೈಶ್ವಾನರೋಪಮಃ |
ಋಷಿಃ ಪರಮಧರ್ಮಾತ್ಮಾ ವೇದವೇದಾಂಗಪಾರಗಃ ॥37॥
ಸುಂದರಿಯೇ, ನಿನ್ನ ಗರ್ಭದಲ್ಲಿ ಅಗ್ನಿಸದೃಶನಾದ, ವೇದವೇದಾಂಗ ಪಾರಂಗತನಾದ, ಪರಮ ಧರ್ಮಾತ್ಮನಾದ ಒಬ್ಬ ಋಷಿ ಇದ್ದಾನೆ.
ಏವಮುಕ್ತ್ವಾ ಸ ಧರ್ಮಾತ್ಮಾ ಜರತ್ಕಾರುರ್ಮಹಾಮುನಿಃ |
ವಿಹಾಯ ತಪಸೇ ಭೂಯೋ ಜಗಾಮ ಕೃತನಿಶ್ಚಯಃ ॥38॥
ಹೀಗೆ ಹೇಳಿ ಧರ್ಮಾತ್ಮನಾದ ಜರತ್ಕಾರು ಮಹಾಮುನಿಯು ಪುನಃ ತಪಸ್ಸು ಮಾಡುವುದೆಂದೇ ನಿರ್ಧರಿಸಿ ಅಲ್ಲಿಂದ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
*****

## ನಲವತ್ಮೂರನೆಯ ಅಧ್ಯಾಯ

(ತಂಗಿಯಿಂದ ವಾಸುಕಿಗೆ ವೃತ್ತಾಂತ ಕಥನ. ಗರ್ಭೋತ್ಪತ್ತಿ ಶ್ರವಣದಿಂದ ವಾಸುಕಿಯ ಹರ್ಷ. ಆಸ್ತೀಕನ ಉತ್ಪತ್ತಿ.)
ಸೂತಃ
ಗತಮಾತ್ರಂ ತು ಭರ್ತಾರಂ ಜರತ್ಕಾರುರವೇದಯತ್ |
ಭ್ರಾತುಸ್ತ್ವರಿತಮಾಗಮ್ಯ ಯಥಾತಥ್ಯಂ ತಪೋಧನ ॥1॥
ಎಲೈ ತಪೋಧನನನೇ, ಪತಿಯು ಹೊರಟುಹೋಗುತ್ತಿರಲು ಜರತ್ಕಾರುವು ಶೀಘ್ರವಾಗಿ ಬಂದು ಅಣ್ಣನಿಗೆ ನಡೆದ ಸಂಗತಿಯನ್ನು

ತಿಳಿಸಿದಳು.
ತದಾ ಸ ಭುಜಗಶ್ರೇಷ್ಠಃ ಶ್ರುತ್ವಾ ಸುಮಹದಪ್ರಿಯಮ್ |
ಉವಾಚ ಭಗಿನೀಂ ದೀನಾಂ ತಥಾ ದೀನತರಃ ಸ್ವಯಮ್ ॥2॥
ಆಗ ಆ ಭುಜಗಶ್ರೇಷ್ಠನು ಅತ್ಯಂತ ಅಪ್ರಿಯವಾದ ಆ ವಾರ್ತೆಯನ್ನು ಕೇಳಿ, ತಂಗಿಗಿಂತಲೂ ದೀನನಾಗಿ ದೀನಳಾದವಳನ್ನು ಕುರಿತು ಮಾತನಾಡಿದನು.
ವಾಸುಕಿಃ
ಜಾನಾಸಿ ಭದ್ರೇ ಯತ್ ಕಾರ್ಯಂ ಪ್ರದಾನೇ ಕಾರಣಂ ಚ ಯತ್ |
ಪನ್ನಗಾನಾಂ ಹಿತಾರ್ಥಾಯ ಪುತ್ರಃ ಸ್ಯಾತ್ ತೇ ತತೋ ಯದಿ ॥3॥
ಸ ಸರ್ಪಸತ್ರಾತ್ ಕಿಲ ನೋ ಮೋಕ್ಷಯಿಷ್ಯತಿ ವೀರ್ಯವಾನ್ |
ಏವಂ ಪಿತಾಮಹಃ ಪೂರ್ವಮ್ ಉಕ್ತವಾನ್ ಮಾಂ ಸುರೈಃ ಸಹ ॥4॥
ಮಂಗಳಸ್ವರೂಪಳೇ, ನಿನ್ನನ್ನು ಅವನಿಗೆ ಮದುವೆ ಮಾಡಿಕೊಡಲು ಏನು ಉದ್ದೇಶವೆಂದು ತಿಳಿದಿರುವಿಯಷ್ಟೇ. ನಿನಗೆ ಸರ್ಪಗಳ ಹಿತಕ್ಕೋಸ್ಕರವಾಗಿ ಅವನಿಂದ ಒಬ್ಬ ಪುತ್ರನು ಜನಿಸಿದರೆ, ವೀರ್ಯಶಾಲಿಯಾದ ಆ ಪುತ್ರನು ಸರ್ಪಸತ್ರದಿಂದ ನಮ್ಮನ್ನು ವಿಮೋಚನೆಗೊಳಿಸುವನು. ಹೀಗೆ ಬ್ರಹ್ಮದೇವರು ದೇವತೆಗಳ ಜೊತೆಯಲ್ಲಿದ್ದ ನನ್ನನ್ನು ಕುರಿತು ಹಿಂದೆ ಹೇಳಿದ್ದರು.
ಅಪ್ಯಸ್ತಿ ಗರ್ಭಃ ಸುಭಗೇ ತಸ್ಮಾತ್ ತೇ ಮುನಿಸತ್ತಮಾತ್ |
ನ ಚೇಚ್ಛಾಮ್ಯಫಲಂ ತಸ್ಯ ದಾರಕರ್ಮ ಮನೀಷಿಣಃ ॥5॥
ಸೌಭಾಗ್ಯಶಾಲಿನಿಯೇ, ಆ ಶ್ರೇಷ್ಠವಾದ ಮುನಿಗಳಿಂದ ನಿನಗೇನಾದರೂ ಗರ್ಭವು ಉಂಟಾಗಿದೆಯೇ? ಮೇಧಾವಿಯಾದ ಅವನು ಮಾಡಿಕೊಂಡ ವಿವಾಹಕರ್ಮವು ನಿಷ್ಫಲವಾಗುವುದೆಂದು ನಾನು ಎಣಿಸುವುದಿಲ್ಲ.
ಕಾಮಂ ಚ ಮಮ ನ ನ್ಯಾಯ್ಯಂ ಪ್ರಷ್ಟುಂ ತ್ವಾಂ ಕಾರ್ಯಮೀದೃಶಮ್ |
ಕಿಂತು ಕಾರ್ಯಗರೀಯಸ್ತ್ವಾತ್ ತಸ್ಮಾದಹಮಚೂಚುದಮ್ ॥6॥
ನಾನು ನಿನ್ನನ್ನು ಕುರಿತು ಇಂತಹ ಪ್ರಶ್ನೆಯನ್ನು ಕೇಳುವುದು ಖಂಡಿತವಾಗಿ ನ್ಯಾಯವಲ್ಲ. ಆದರೂ ಮುಂದಾಗಬೇಕಾದ ಕಾರ್ಯದ ಗೌರವದಿಂದ ನಾನು ಈ ಪ್ರಶ್ನೆಯನ್ನು ಕೇಳಿದೆ.
ದುರ್ವಾಸತಾಂ ವಿದಿತ್ವಾ ಚ ಭರ್ತುಸ್ತೇಽತಿತಪಸ್ವಿನಃ |
ನೈನಮನ್ವಾಗಮಿಷ್ಯಾಮಿ ಕದಾಚಿದ್ಧಿ ಶಪೇತ್ ಸ ಮಾಮ್ ॥7॥
ಅತಿ ತಪಸ್ವಿಯಾದ ನಿನ್ನ ಪತಿಯು ಎಲ್ಲಾ ಸ್ಥಳಗಳಲ್ಲಿಯೂ ಕಷ್ಟದಿಂದ ವಾಸಿಸುವುದನ್ನು ತಿಳಿದು ನಾನು ಅವನನ್ನು ಹಿಂಬಾಲಿಸುವುದಿಲ್ಲ. ಅವನು ಒಂದುಪಕ್ಷ ನನಗೆ ಶಾಪವನ್ನೂ ಕೊಡಬಹುದು.
ಆಚಕ್ಷ್ವ ಭದ್ರೇ ಭರ್ತುಸ್ತ್ವಂ ಸರ್ವಮೇವ ವಿಚೇಷ್ಟಿತಮ್ |
ಶಲ್ಯಮುದ್ಧರ ಮೇ ಘೋರಮಿದಂ ಹೃದಯಸಂಸ್ಥಿತಮ್ ॥8॥
ಮಂಗಳಸ್ವರೂಪಳೇ, ನಿನ್ನ ಪತಿಯ ಎಲ್ಲಾ ನಡವಳಿಕೆಯನ್ನೂ ನನಗೆ ಹೇಳು. ನನ್ನ ಹೃದಯದಲ್ಲಿ ಶಲ್ಯದಂತೆ ನಾಟಿರುವ ಈ ಘೋರವಾದ ಚಿಂತೆಯನ್ನು ದೂರಮಾಡು.
ಸೂತಃ
ಜರತ್ಕಾರುಸ್ತತೋ ವಾಕ್ಯಮ್ ಇತ್ಯುಕ್ತಾ ಪ್ರತ್ಯುವಾಚ ಹ |
ಆಶ್ವಾಸಯಂತೀ ಸಂತಪ್ತಂ ವಾಸುಕಿಂ ಪನ್ನಗೋತ್ತಮಮ್ ॥9॥
ಹೀಗೆ ಹೇಳಲ್ಪಟ್ಟ ಜರತ್ಕಾರುವು ಸಂತಪ್ತನಾಗಿದ್ದ, ಪನ್ನಗಶ್ರೇಷ್ಠನಾದ ವಾಸುಕಿಯನ್ನು ಸಮಾಧಾನಮಾಡುತ್ತಾ ಹೀಗೆ ಉತ್ತರವನ್ನು ಕೊಟ್ಟಳಷ್ಟೇ.
ಜರತ್ಕಾರುಃ
ಪೃಷ್ಟೋ ಮಯಾಽಪತ್ಯಹೇತೋಃ ಸ ಮಹಾತ್ಮಾ ಮಹಾತಪಾಃ |
ಅಸ್ತೀತ್ಯುದರಮುದ್ದಿಶ್ಯ ಮಮೇದಂ ಗತವಾಂಶ್ಚ ಸಃ ॥10॥
ನಾನು ಪುತ್ರನ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದಾಗ ಮಹಾತ್ಮರಾದ ಆ ತಪಸ್ವಿಗಳು ನನ್ನ ಉದರವನ್ನು ತೋರಿಸಿ ಇದೆ ಎಂದು ಹೇಳಿ ಹೊರಟುಹೋದರು.
ಸ್ವೈರೇಷ್ವಪಿ ತತೋ ನಾಹಂ ಸ್ಮರಾಮಿ ವಿತಥಂ ಕ್ವಚಿತ್ |
ಉಕ್ತಪೂರ್ವಂ ಕುತೋ ವಾಕ್ಯಂ ಸಾಂಪರಾಯೇ ಸ ವಕ್ಷ್ಯತಿ ॥11॥
ಅವರು ನನ್ನ ಜೊತೆಯಲ್ಲಿ ವಿನೋದ ಸಂದರ್ಭಗಳಲ್ಲಿಯೂ ಸುಳ್ಳು ಮಾತನ್ನು ಆಡಿಲ್ಲ. ಹೀಗಿರುವಾಗ ನನ್ನನ್ನು ಬಿಟ್ಟು ಹೊರಡುವ ಕಾಲದಲ್ಲಿ ಒಳ್ಳೆಯ ವಾಕ್ಯವನ್ನು ಹೇಳುವ ಸಂದರ್ಭವಿರುವಾಗ ಏಕೆ ಅವರು ಸುಳ್ಳನ್ನು ಹೇಳುತ್ತಾರೆ?
ನ ಸಂತಾಪಸ್ತ್ವಯಾ ಕಾರ್ಯಃ ಕಾರ್ಯಂ ಪ್ರತಿ ಭುಜಂಗಮೇ |
ಉತ್ಪತ್ಸ್ಯತಿ ಹಿ ಮೇ ಪುತ್ರೋ ಜ್ವಲನಾರ್ಕಸಮದ್ಯುತಿಃ ॥12॥
ಎಲೌ ಸರ್ಪಿಣಿಯೇ, ನಿನ್ನ ಉದ್ದೇಶದ ಬಗ್ಗೆ ಸಂತಾಪ ಪಡಬೇಡ. ನಿನಗೆ ಜ್ವಲಿಸುವ ಅಗ್ನಿಯ ಸಮಾನವಾದ ಕಾಂತಿಯುಳ್ಳ ಒಬ್ಬ ಪುತ್ರನು ಜನಿಸುವನು.
ಇತ್ಯುಕ್ತ್ವಾ ಹಿ ಸ ಮಾಂ ಭ್ರಾತರ್ಗತೋ ಭರ್ತಾ ತಪೋಧನಃ |
ತಸ್ಮಾದ್ ವ್ಯೇತು ಪರಂ ದುಃಖಂ ತವೇದಂ ಮನಸಿ ಸ್ಥಿತಮ್ ॥13॥
ಅಣ್ಣನೇ, ಹೀಗೆ ಹೇಳಿ ಆ ತಪೋಧನನಾದ ಆ ನನ್ನ ಪತಿಯು ಹೊರಟುಹೋದನು. ಆದ್ದರಿಂದ ನಿನ್ನ ಮನಸ್ಸಿನಲ್ಲಿ ಇರುವ ಈ

ದುಃಖವನ್ನು ಪರಿತ್ಯಜಿಸು.
ಸೂತಃ
ಏತಚ್ಛ್ರುತ್ವಾ ಸ ನಾಗೇಂದ್ರೋ ವಾಸುಕಿಃ ಪರಯಾ ಮುದಾ |
ಏವಮಸ್ತ್ವಿತಿ ತದ್ವಾಕ್ಯಂ ಭಗಿನ್ಯಾಃ ಪ್ರತ್ಯಗೃಹ್ಣತ ॥14॥
ಈ ಮಾತುಗಳನ್ನು ಕೇಳಿದ ನಾಗೇಂದ್ರನಾದ ವಾಸುಕಿಯು ಬಹಳ ಸಂತೋಷದಿಂದ ಕೂಡಿದವನಾಗಿ, ನೀನು ಹೇಳಿದಂತೆಯೇ ಆಗಲಿ ಎಂದು ತಂಗಿಯ ಮಾತುಗಳನ್ನು ಸ್ವೀಕರಿಸಿದನು.
ಸಾಂತ್ವಮಾನಾರ್ಥದಾನೈಶ್ಚ ಪೂಜಯಾ ಚಾನುರೂಪಯಾ |
ಸೋದರ್ಯಾಂ ಪೂಜಯಾಮಾಸ ಸ್ವಸಾರಂ ಪನ್ನಗೋತ್ತಮಃ ॥15॥
ಪನ್ನಗಶ್ರೇಷ್ಠನಾದ ವಾಸುಕಿಯು ಅನುರೂಪವಾದ ಸಮಾಧಾನದ ಮಾತುಗಳು, ಸಮ್ಮಾನ ಮತ್ತು ಅರ್ಥದಾನಗಳಿಂದ ತನ್ನ ತಂಗಿಯನ್ನು ಸತ್ಕರಿಸಿದನು.
ತತಃ ಪ್ರವವೃಧೇ ಗರ್ಭೋ ವೈಶ್ವಾನರಸಮಪ್ರಭಃ |
ಯಥಾ ಸೋಮೋ ದ್ವಿಜಶ್ರೇಷ್ಠ ಶುಕ್ಲಪಕ್ಷೋದಿತೋ ದಿವಿ ॥16॥
ಎಲೈ ದ್ವಿಜಶ್ರೇಷ್ಠನೇ, ಅನಂತರ ವೈಶ್ವಾನರನಿಗೆ ಸಮಾನವಾದ ಕಾಂತಿಯುಳ್ಳ ಆ ಗರ್ಭವು, ಶುಕ್ಲಪಕ್ಷದಲ್ಲಿ ಆಕಾಶದಲ್ಲಿ ಉದಯಿಸುವ ಚಂದ್ರನಂತೆ ದಿನೇ ದಿನೇ ಅಭಿವೃದ್ಧಿಯನ್ನು ಹೊಂದಿತು.
ಯಥಾಕಾಲಂ ತು ಸಾ ಬ್ರಹ್ಮನ್ ಪ್ರಜಜ್ಞೇ ಭುಜಗಸ್ವಸಾ |
ಕುಮಾರಂ ದೇವಗರ್ಭಾಭಂ ಪಿತೃಮಾತೃಭಯಾಪಹಮ್ ॥17॥
ಎಲೈ ಬ್ರಾಹ್ಮಣನೇ, ವಾಸುಕಿಯ ತಂಗಿಯಾದ ಜರತ್ಕಾರುವು ಯೋಗ್ಯವಾದ ಕಾಲದಲ್ಲಿ ದೇವಕುಮಾರನಂತೆ ಕಂಗೊಳಿಸುವ, ತಂದೆತಾಯಿಗಳ ಭಯವನ್ನು ಹೋಗಲಾಡಿಸುವ ಒಬ್ಬ ಸುಪುತ್ರನನ್ನು ಪಡೆದಳು.
ವವೃಧೇ ಸ ಚ ತತ್ರೈವ ನಾಗರಾಜನಿವೇಶನೇ |
ವೇದಾಂಶ್ಚಾಧಿಜಗೌ ಸಾಂಗಾನ್ ಭಾರ್ಗವಚ್ಯವನಾದ್ ದ್ವಿಜಾತ್ ॥
ಆ ಕುಮಾರನು ನಾಗರಾಜನಾದ ವಾಸುಕಿಯ ಗೃಹದಲ್ಲಿಯೇ ಬೆಳೆದನು. ಭಾರ್ಗವಚ್ಯವನ ವಂಶದ ಒಬ್ಬ ಬ್ರಾಹ್ಮಣರಿಂದ ಸಾಂಗವಾದ ವೇದಗಳ ಅಧ್ಯಯನವನ್ನೂ ಮಾಡಿದನು.
ಚರಿತವ್ರತೋ ಬಾಲ ಏವ ಬುದ್ಧಿಸತ್ತ್ವಸಮನ್ವಿತಃ |
ನಾಮ ತಸ್ಯಾಭವತ್ ಖ್ಯಾತಂ ಲೋಕೇಷ್ವಸ್ತೀಕ ಇತ್ಯುತ ॥19॥
ಬಾಲ್ಯದಿಂದಲೇ ವ್ರತಗಳನ್ನು ಆಚರಿಸುವ ಅವನು ಬುದ್ಧಿ ಮತ್ತು ಸದ್ಗುಣಗಳಿಂದ ಕೂಡಿದವನಾಗಿದ್ದನು ಮತ್ತು ಲೋಕದಲ್ಲಿ ಅವನಿಗೆ ಅಸ್ತೀಕ (ಆಸ್ತೀಕ) ಎಂಬ ಹೆಸರು ಪ್ರಖ್ಯಾತವಾಯಿತು.
ಅಸ್ತೀತ್ಯುಕತ್ವ ಗತೋ ಯಸ್ಮಾತ್ ಪಿತಾ ಗರ್ಭಸ್ಥಮೇವ ತಮ್ |
ಏವಂ ತಸ್ಮಾದಿದಂ ತಸ್ಯ ನಾಮಾಸ್ತಿಕೇತಿ ವಿಶ್ರುತಮ್ ॥20॥
ಅವನ ತಂದೆಯು ಗರ್ಭದಲ್ಲಿದ್ದ ಅವನನ್ನು ಕುರಿತು `ಅಸ್ತಿ' ಎಂದು ಹೇಳಿ ಹೊರಟುಹೋದ ಕಾರಣದಿಂದ ಅವನಿಗೆ ಅಸ್ತೀಕನೆಂಬ ಹೆಸರೇ ಪ್ರಸಿದ್ಧವಾಯಿತು.
ಸ ಬಾಲ ಏವ ತತ್ರಸ್ಥಃ ಚರನ್ನಮಿತ ಬುದ್ಧಿಮಾನ್ |
ಗೃಹೇ ಪನ್ನಗರಾಜಸ್ಯ ಪ್ರಯತ್ನಾತ್ಪರ್ಯರಕ್ಷ್ಯತ ॥21॥
ಅಮಿತ ಮೇಧಾವಿಯಾದ ಅವನು ಸರ್ಪರಾಜನಾದ ವಾಸುಕಿಯ ಮನೆಯಲ್ಲಿಯೇ ಇದ್ದವನಾಗಿ, ಪ್ರಯತ್ನಪೂರ್ವಕವಾಗಿ ವಾಸುಕಿಯಿಂದ ರಕ್ಷಿಸಲ್ಪಟ್ಟನು.
ಭಗವಾನಿವ ದೇವೇಶಃ ಶೂಲಪಾಣಿರಿವ ಪ್ರಭುಃ |
ವಿವರ್ಧಮಾನಃ ಸರ್ವಾಂಸ್ತಾನ್ ಪನ್ನಗಾನಭ್ಯಹರ್ಷಯತ್ ॥22॥
ದೇವತೆಗಳ ಒಡೆಯನಾದ ಬ್ರಹ್ಮನಂತೆ, ಶೂಲಪಾಣಿಯಾದ ಪ್ರಭುವಾದ ರುದ್ರದೇವರಂತೆ, ಬೆಳೆಯುತ್ತಿದ್ದ ಅವನು ಎಲ್ಲಾ ಸರ್ಪಗಳಿಗೂ ಸಂತೋಷವನ್ನುಂಟು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
*****
ನಲವತ್ತನಾಲ್ಕನೆಯ ಅಧ್ಯಾಯ
(ಪರೀಕ್ಷಿದ್ರಾಜನ ಮರಣವಿಷಯದಲ್ಲಿ ಮಂತ್ರಿಗಳನ್ನು ಕುರಿತು ಜನಮೇಜಯನ ಪ್ರಶ್ನೆ. ಮಂತ್ರಿಗಳ ಉತ್ತರ.)
ಶೌನಕಃ
ಯದಪೃಚ್ಛತ್ ತದಾ ರಾಜಾ ಮಂತ್ರಿಣೋ ಜನಮೇಜಯಃ |
ಪಿತುಃ ಸ್ವರ್ಗಗತಿಂ ತನ್ಮೇ ವಿಸ್ತರೇಣ ಪುನರ್ವದ ॥1॥
ಜನಮೇಜಯರಾಜನು ಮಂತ್ರಿಗಳನ್ನು ಕುರಿತು ತನ್ನ ತಂದೆಯ ಮರಣದ ಬಗ್ಗೆ ಕೇಳಿದ ಸಂಗತಿಯನ್ನು ನನಗೆ ವಿಸ್ತಾರವಾಗಿ ಇನ್ನೊಮ್ಮೆ ಹೇಳು.
ಸೂತಃ

ಶೃಣು ಬ್ರಹ್ಮನ್ ಯಥಾಪೃಷ್ಟಾ ಮಂತ್ರಿಣೋ ನೃಪತೇಸ್ತದಾ |
ಆಖ್ಯಾತವಂತಸ್ತೇ ಸರ್ವೇ ನಿಧನಂ ತತ್ ಪರೀಕ್ಷಿತಃ ॥2 ॥
ಎಲೈ ಬ್ರಾಹ್ಮಣನೇ, ರಾಜನಿಂದ ಕೇಳಲ್ಪಟ್ಟ ಮಂತ್ರಿಗಳು ಅವನ ಪ್ರಶ್ನೆಗೆ ಅನುಗುಣವಾಗಿ ಪರೀಕ್ಷಿದ್ರಾಜನ ನಿಧನವನ್ನು ಹೇಗೆ ಹೇಳಿದರು ಎಂಬುದನ್ನು ಕೇಳು.
ಜನಮೇಜಯಃ
ಜಾನಂತಿ ತು ಭವಂತಸ್ತದ್ ಯಥಾವೃತ್ತಃ ಪಿತಾ ಮಮ |
ಆಸೀದ್ ಯಥಾ ಸ ನಿಧನಂ ಗತಃ ಕಾಲೇ ಮಹಾಯಶಾಃ ॥3॥
ನೀವೆಲ್ಲರೂ ನನ್ನ ತಂದೆಯು ಎಂತಹ ನಡತೆಯಿಂದ ಕೂಡಿದ್ದನೆಂದೂ, ಮಹಾಕೀರ್ತಿವಂತನಾದ ಅವನಿಗೆ ಕಾಲಕ್ರಮದಲ್ಲಿ ಮೃತ್ಯುವು ಹೇಗೆ ಉಂಟಾಯಿತು ಎಂಬುದನ್ನೂ ತಿಳಿದಿದ್ದೀರಿ.
ಶ್ರುತ್ವಾ ಭವತ್ಸಕಾಶಾದ್ಧಿ ಪಿತುರ್ವಧಮಶೇಷತಃ |
ಕಲ್ಯಾಣಂ ಪ್ರತಿಪತ್ಸ್ಯಾಮಿ ವಿಪರೀತಂ ನ ಜಾತುಚಿತ್ ॥4॥
ನಿಮ್ಮ ಮುಖದಿಂದ ತಂದೆಯ ವಧೆಯನ್ನು ಸಂಪೂರ್ಣವಾಗಿ ಕೇಳಿ, ಅನಂತರ ಮಂಗಳವಾದ ಯಾವ ಕಾರ್ಯವನ್ನು ಮಾಡಬೇಕೆಂದು ನಿರ್ಧರಿಸುವೆನು. ಅದಕ್ಕೆ ವಿಪರೀತವಾಗಿ ಎಂದರೆ ಅದನ್ನು ತಿಳಿಯದೆ ಏನನ್ನೂ ಮಾಡುವುದಿಲ್ಲ.
ಸೂತಃ
ಮಂತ್ರಿಣೋಽಥಾಬ್ರುವನ್ ವಾಕ್ಯಂ ಪೃಷ್ಟಾಸ್ತೇನ ಮಹಾತ್ಮನಾ |
ಸರ್ವಧರ್ಮವಿದಃ ಪ್ರಾಜ್ಞಾ ರಾಜಾನಂ ಜನಮೇಜಯಮ್ ॥5॥
ಮಹಾತ್ಮನಾದ ರಾಜನಿಂದ ಪ್ರಶ್ನೆ ಮಾಡಲ್ಪಟ್ಟ, ಸರ್ವಧರ್ಮಜ್ಞರಾದ, ಪ್ರಾಜ್ಞರಾದ ಅವನ ಮಂತ್ರಿಗಳು ಜನಮೇಜಯರಾಜನನ್ನು ಕುರಿತು ಅನಂತರ ಮಾತನಾಡಿದರು.
ಶೃಣು ಪಾರ್ಥಿವ ಯದ್ರೂಪಂ ಪಿತುಸ್ತವ ಮಹಾತ್ಮನಃ |
ಚರಿತಂ ಪಾರ್ಥಿವೇಂದ್ರಸ್ಯ ಯಥಾ ಸ ನಿಧನಂ ಗತಃ ॥ 6॥
ಎಲೈ ರಾಜನೇ, ಮಹಾತ್ಮನಾದ ನಿನ್ನ ತಂದೆಯ ಆಕೃತಿಯನ್ನೂ, ಪಾರ್ಥಿವೇಂದ್ರನಾದ ಅವನ ಚರಿತ್ರೆಯನ್ನೂ ಮತ್ತು ಅವನು ಹೇಗೆ ನಿಧನ ಹೊಂದಿದನು ಎಂಬ ವಿಷಯವನ್ನೂ ಕೇಳು.
ಮಂತ್ರಿಣಃ
ಧರ್ಮಾತ್ಮಾ ಚ ಮಹಾತ್ಮಾ ಚ ಪ್ರಜಾಪಾಲಃ ಪಿತಾ ತವ |
ಆಸೀದಿಹ ಯಥಾವೃತ್ತಃ ಸ ಮಹಾತ್ಮಾ ಶೃಣುಷ್ವ ತತ್ ॥7॥
ಧರ್ಮಾತ್ಮನೂ, ಮಹಾತ್ಮನೂ, ಪ್ರಜಾಪಾಲಕನೂ ಆದ ನಿನ್ನ ತಂದೆಯು ಎಂತಹ ನಡತೆಯಿಂದ ಕೂಡಿದ್ದನು ಎಂಬುದನ್ನು ಕೇಳು.

ಚಾತುರ್ವರ್ಣ್ಯಂ ಸ್ವಧರ್ಮಸ್ಥಂ ಕೃತ್ವಾ ತತ್ ಪರ್ಯರಕ್ಷತ |
ಧರ್ಮತೋ ಧರ್ಮವಿದ್ ರಾಜಾ ಧರ್ಮೋ ವಿಗ್ರಹವಾನಿವ ॥8॥
ಚಾತರ್ವರ್ಣ್ಯವನ್ನು, ತಮ್ಮ ತಮ್ಮ ಧರ್ಮಗಳನ್ನು ಅನುಷ್ಠಾನವನ್ನು ಮಾಡುವವರನ್ನಾಗಿ ಮಾಡಿ, ಧರ್ಮವನ್ನು ತಿಳಿದ ಆ ರಾಜನು ಶರೀರವನ್ನು ಧರಿಸಿದ ಧರ್ಮದಂತೆ ಧರ್ಮದಿಂದಲೇ ಎಲ್ಲರನ್ನೂ ರಕ್ಷಿಸಿದನು.
ಅರಕ್ಷತ್ ಪೃಥಿವೀಂ ದೇವೀಂ ಶ್ರೀಮಾನತುಲವಿಕ್ರಮಃ |
ದ್ವೇಷ್ಟಾರಸ್ತಸ್ಯ ನೈವಾಸನ್ ಸ ಚ ನ ದ್ವೇಷ್ಟಿ ಕಂಚನ ॥9॥
ಅತುಲ ಪರಾಕ್ರಮಿಯಾದ, ಕಾಂತಿಯುಕ್ತನಾದ ಅವನು ದೇವಿಯಾದ ಭೂಮಿಯನ್ನು ರಕ್ಷಿಸಿದನು. ಅವನನ್ನು ಯಾರೂ ದ್ವೇಷಿಸುತ್ತಿರಲಿಲ್ಲ. ಅವನೂ ಸಹ ಯಾರನ್ನೂ ದ್ವೇಷಿಸುತ್ತಿರಲಿಲ್ಲ.
ಸಮಃ ಸರ್ವೇಷು ಭೂತೇಷು ಪ್ರಜಾಪ್ರತಿರಿವಾಭವತ್ |
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಸ್ವಕರ್ಮಸು ॥10॥
ಸ್ಥಿತಾಃ ಸುಮನಸೋ ರಾಜಂಸ್ತೇನ ರಾಜ್ಞಾ ಸ್ವನುಷ್ಠಿತಾಃ |
ವಿಧವಾನಾಥಕೃಪಣಾನ್ ವಿಕಲಾಂಶ್ಚ ಬಭಾರ ಸಃ ॥11॥
ಅವನು ಪ್ರಜಾಪತಿಯಾದ ಬ್ರಹ್ಮನಂತೆ ಎಲ್ಲಾ ಪ್ರಜೆಗಳಲ್ಲಿಯೂ ಸಮಾನನಾಗಿದ್ದನು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾಗಿದ್ದರು. ಎಲೈ ರಾಜನೇ, ರಾಜನಾದ ಅವನು ಅವರಿಂದ ಅವರವರಿಗೆ ಯೋಗ್ಯವಾದ ಕರ್ಮಗಳನ್ನು ಮಾಡಿಸಿದನು. ಅವನು ವಿಧವೆಯರನ್ನೂ, ಅನಾಥರನ್ನೂ, ಕೃಪಣರನ್ನೂ ಮತ್ತು ವಿಕಲಾಂಗರನ್ನೂ ಪೋಷಿಸಿದನು.
ಸುದರ್ಶಃ ಸರ್ವಭೂತಾನಾಮಾಸೀತ್ ಸೋಮ ಇವಾಪರಃ |
ಹೃಷ್ಟಪುಷ್ಟಜನಃ ಶ್ರೀಮಾನ್ ಸತ್ಯವಾಗ್ ದೃಢವಿಕ್ರಮಃ ॥12॥
ಅವನು ನೋಡುವುದಕ್ಕೆ ಇನ್ನೊಬ್ಬ ಚಂದ್ರನಂತೆ ಸುಂದರನಾಗಿದ್ದನು. ಹೃಷ್ಟಪುಷ್ಟರಾದ ಪ್ರಜೆಗಳಿಂದ ಕೂಡಿದವನಾಗಿದ್ದನು. ಕಾಂತಿಯುಕ್ತನೂ, ಸತ್ಯವಚನನೂ, ದೃಢವಾದ ವಿಕ್ರಮವುಳ್ಳವನೂ ಆಗಿದ್ದನು.
ಧನುರ್ವೇದೇ ಚ ಶಿಷ್ಯೋಽಭೂತ್ ನೃಪಃ ಶಾರದ್ವತಸ್ಯ ಸಃ |
ಜೀತೇಂದ್ರಿಯಶ್ಚಾತ್ಮವಾಂಶ್ಚ ಮೇಧಾವೀ ವೃದ್ಧಸೇವಯಾ ॥13॥
ಆ ರಾಜನು ಧನುರ್ವಿದ್ಯೆಯಲ್ಲಿ ಕೃಪಾಚಾರ್ಯರ ಶಿಷ್ಯನಾದನು. ಅವನು ಜಿತೇಂದ್ರಿಯನೂ, ಜಿತಮನಸ್ಕನೂ ಮತ್ತು

ವೃದ್ಧಸೇವೆಯನ್ನು ಮಾಡಿದ ಕಾರಣದಿಂದ ಮೇಧಾವಿಯೂ ಆಗಿದ್ದನು.
ಷಡ್ವರ್ಗಜಿನ್ಮಹಬುದ್ಧಿರ್ನೀತಿಕರ್ಮವಿದುತ್ತಮಃ |
ಗೋವಿಂದಸ್ಯ ಪ್ರಿಯಶ್ಚಾಸೀತ್ ಪಿತಾ ತೇ ಜನಮೇಜಯ |
ಲೋಕಸ್ಯ ಚೈವ ಸರ್ವಸ್ಯ ಪ್ರಿಯ ಆಸೀನ್ಮಹಾಯಶಾಃ ॥14॥
ಎಲೈ ಜನಮೇಜಯನೇ, ನಿನ್ನ ತಂದೆಯು ಕಾಮಾದಿ ಷಡ್ವರ್ಗವನ್ನು ಜಯಿಸಿದ್ದನು. ಮಹಾಬುದ್ಧಿಯುಳ್ಳವನಾಗಿದ್ದನು.
ನೀತಿಶಾಸ್ತ್ರವನ್ನೂ ಮತ್ತು ಎಲ್ಲಾ ಕಾರ್ಯಗಳನ್ನೂ ತಿಳಿದವರಲ್ಲಿ ಶ್ರೇಷ್ಠನಾಗಿದ್ದನು. ಅಲ್ಲದೇ, ಕೃಷ್ಣನಿಗೆ ಪ್ರಿಯನೂ ಆಗಿದ್ದನು.
ಮಹಾಯಶಸ್ವಿಯಾದ ಅವನು ಎಲ್ಲಾ ಜನರಿಗೂ ಪ್ರಿಯನಾಗಿದ್ದನು.
ಪರಿಕ್ಷೀಣೇಷು ಕುರುಷು ಉತ್ತರಾಯಾಮಜಾಯತ |
ಪರೀಕ್ಷಿದಭವತ್ ತೇನ ಸೌಭದ್ರಸ್ಯಾತ್ಮಜೋ ಬಲೀ |
ರಾಜಧರ್ಮಾರ್ಥಕುಶಲೋ ಯುಕ್ತಃ ಸರ್ವಗುಣೈರ್ನೃಪ ॥15॥
ಕುರುವಂಶವು ಪರಿಕ್ಷಯಯನ್ನು ಹೊಂದುತ್ತಿರಲು ಅವನು ಉತ್ತರೆಯಲ್ಲಿ ಜನಿಸಿದನು. ಆದ್ದರಿಂದ ಸುಭದ್ರೆಯ ಮಗನಾದ
ಬಲಿಷ್ಠನಾದ ಅವನಿಗೆ ಪರೀಕ್ಷಿತ್ ಎಂಬ ಹೆಸರು ಬಂದಿತು. ಎಲೈ ರಾಜನೇ, ಅವನು ರಾಜಕಾರ್ಯಗಳಲ್ಲಿಯೂ,
ಧರ್ಮಶಾಸ್ತ್ರದಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ಕುಶಲನಾಗಿ ಎಲ್ಲಾ ಗುಣಗಳಿಂದಲೂ ಕೂಡಿದವನಾಗಿದ್ದನು.
ಪ್ರಜಾ ಇಮಾಸ್ತವ ಪಿತಾ ಷಷ್ಟಿವರ್ಷಾಣ್ಯಪಾಲಯತ್ |
ತತೋ ದಿಷ್ಟಾಂತಮಾಪನ್ನಃ ಸರ್ಪೇಣಾನತಿವರ್ತಿನಾ ॥16॥
ನಿನ್ನ ತಂದೆಯು ಅವನಿಗೆ ಅರವತ್ತು ವರ್ಷಗಳಾಗುವವರೆಗೆ ಈ ಪ್ರಜೆಗಳನ್ನು ರಕ್ಷಿಸಿದನು. ಅನಂತರ ವಿಧಿಯನ್ನು ಮೀರಲಾರದ
ಸರ್ಪದಿಂದ ನಾಶವನ್ನು ಹೊಂದಿದನು.
ತತಸ್ತ್ವಂ ಪುರುಷಶ್ರೇಷ್ಠ ಧರ್ಮೇಣ ಪ್ರತಿಪೇದಿವಾನ್ |
ಇದಂ ವರ್ಷಸಹಸ್ರಾಯ ರಾಜ್ಯಂ ಕುಲಧರಾಗತಮ್|
ಬಾಲ ಏವಭಿಜಾತೋಽಸಿ ಸರ್ವಭೂತಾನುಕಂಪನಃ ॥17॥
ಪುರುಷಶ್ರೇಷ್ಠನೇ, ಅನಂತರ ಒಂದು ಸಹಸ್ರವರ್ಷಗಳ ಕಾಲ ಕುಲಪರಂಪರೆಯಿಂದ ಪ್ರಾಪ್ತವಾಗಿ ಮುಂದುವರೆಯುವ ಈ ಪಾಂಡವರ
ರಾಜ್ಯವನ್ನು ನೀನು ಬಾಲಕನಾಗಿರುವಾಗಲೇ ಧರ್ಮದಿಂದ ಪಡೆದಿದ್ದೀಯೆ. ನೀನು ಎಲ್ಲಾ ಪ್ರಾಣಿಗಳಲ್ಲಿಯೂ
ದಯೆಯುಳ್ಳವನಾಗಿದ್ದೀಯೆ.
ಜನಮೇಜಯಃ
ನಾಸ್ಮಿನ್ ಕುಲೇ ಜಾತು ಬಭೂವ ರಾಜಾ
ಯೋ ನ ಪ್ರಜಾನಾಂ ಪ್ರಿಯಕೃತ್ ಪ್ರಿಯಶ್ಚ |
ವಿಶೇಷತಃ ಪ್ರೇಕ್ಷ್ಯ ಪಿತಾಮಹಾನಾಂ
ವೃತ್ತಂ ಮಹದ್ವೃತ್ತಪರಾಯಣಾನಾಮ್ ॥18॥
ಈ ಕುಲದಲ್ಲಿ ಪ್ರಜೆಗಳಲ್ಲಿ ಹಿತವನ್ನು ಮಾಡದ ಮತ್ತು ಪ್ರಜೆಗಳಲ್ಲಿ ಪ್ರಿಯವನ್ನು ಮಾಡದ ಯಾವ ರಾಜನೂ ಇರಲಿಲ್ಲ. ವಿಶೇಷವಾಗಿ
ಮಹಾನಡತೆಯನ್ನು ಹೊಂದಿದ್ದ ಪಿತಾಮಹರಾದ ಪಾಂಡವರ ನಡತೆಯನ್ನು ತಿಳಿದವನು ಎಂದೂ ಅದಕ್ಕೆ ವಿರುದ್ಧವಾಗಿ
ನಡೆಯಲಿಲ್ಲ.
ಕಥಂ ನಿಧನಮಾಪನ್ನಃ ಪಿತಾ ಮಮ ತಥಾವಿಧಃ |
ಆಚಕ್ಷಧ್ವಂ ಯಥಾವನ್ಮೇ ಶ್ರೋತುಮಿಚ್ಛಾಮಿ ತತ್ತ್ವತಃ ॥19॥
ಅಂತಹ ನನ್ನ ತಂದೆಯು ಹೇಗೆ ನಿಧನನಾದನು ಎಂದು ನನಗೆ ಸರಿಯಾಗಿ ತಿಳಿಸಿ. ನಾನು ಅದನ್ನು ಸರಿಯಾಗಿ ತಿಳಿಯಲು
ಬಯಸುತ್ತೇನೆ.
ಸೂತಃ
ಏವಂ ಸಂಬೋಧಿತಾ ರಾಜ್ಞಾ ಮಂತ್ರಿಣಸ್ತೇ ನರಾಧಿಪಮ್ |
ಊಚುಃ ಸರ್ವೇ ಯಥಾತತ್ತ್ವಂ ರಾಜ್ಞಃ ಪ್ರಿಯಹಿತೇ ರತಾಃ ॥20॥
ಹೀಗೆ ರಾಜನಿಂದ ಸಂಬೋಧಿಸಲ್ಪಟ್ಟ ರಾಜನ ಪ್ರಿಯ ಮತ್ತು ಹಿತಗಳಲ್ಲಿಯೇ ಆಸಕ್ತರಾದ ಅವನ ಎಲ್ಲಾ ಮಂತ್ರಿಗಳೂ ರಾಜನನ್ನು
ಕುರಿತು ಘಟನೆಗಳು ನಡೆದ ರೀತಿಯನ್ನು ಹೇಳಿದರು.
ಮಂತ್ರಿಣಃ
ಸ ರಾಜಾ ಪೃಥಿವೀಪಾಲಃ ಸರ್ವಶಸ್ತ್ರವಿದಾಂ ವರಃ |
ಬಭೂವ ಮೃಗಯಾಶೀಲಃ ತವ ರಾಜನ್ ಪಿತಾ ಸದಾ ॥21॥
ಯಥಾ ಪಾಂಡುರ್ಮಹಾಭಾಗೋ ಧನುರ್ಧರವರೋ ಯುಧಿ |
ಅಸ್ಮಾಸ್ವಾಸಜ್ಯ ಸರ್ವಾಣಿ ರಾಜಕಾರ್ಯಾಣ್ಯಶೇಷತಃ ॥22॥
ರಾಜನೇ, ಪೃಥಿವೀಪಾಲನೂ, ಸರ್ವಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನೂ ಆದ ನಿನ್ನ ತಂದೆಯು ಬೇಟೆಯಾಡುವ ವ್ಯಸನವನ್ನು
ಹೊಂದಿದ್ದನು. ಅವನು ಎಲ್ಲಾ ರಾಜಕಾರ್ಯಗಳನ್ನೂ ನಮಗೇ ಒಪ್ಪಿಸಿ ಮಹಾನುಭಾವನಾದ ಪಾಂಡುವಿನಂತೆ ಯುದ್ಧದಲ್ಲಿ
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅವನು (ಮೃಗಯಾಶೀಲನಾದನು).
ಸ ಕದಾಚಿದ್ ವನಚರೋ ಮೃಗಂ ವಿವ್ಯಾಧ ಪತ್ರಿಣಾ |
ವಿದ್ಧ್ವಾ ಚಾನ್ವಸರತ್ ತೂರ್ಣಂ ಸ ಮೃಗಂ ಗಹನೇ ವನೇ ॥23॥

ಒಮ್ಮೆ ಕಾಡಿನಲ್ಲಿ ಸಂಚರಿಸುತ್ತಿದ್ದ ಅವನು ಬಾಣದಿಂದ ಒಂದು ಮೃಗವನ್ನು ಹೊಡೆದು ಆ ದಟ್ಟವಾದ ಕಾಡಿನಲ್ಲಿ ಆ ಮೃಗವನ್ನು ಶೀಘ್ರವಾಗಿ ಹಿಂಬಾಲಿಸಿದನು.
ಪದಾತಿರ್ಬದ್ಧನಿಸ್ತ್ರಿಂಶಃ ಶರಪಾಣಿರ್ಧನುರ್ಧರಃ |
ನ ಚಾಸಸಾದ ಗಹನೇ ಮೃಗಂ ನಷ್ಟಂ ಪಿತಾ ತವ ॥24॥
ಸೊಂಟದಲ್ಲಿ ಕತ್ತಿಯನ್ನು ಕಟ್ಟಿಕೊಂಡು, ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು ಪದಾತಿಯಾಗಿ ಹೊರಟ ಆ ನಿನ್ನ ತಂದೆಗೆ ಕಾಡಿನಲ್ಲಿ ಕಣ್ಮರೆಯಾದ ಆ ಮೃಗವು ದೊರೆಯಲಿಲ್ಲ.
ಪರಿಶ್ರಾಂತೋ ವಯಃಸ್ಥಶ್ಚ ಷಷ್ಟಿವರ್ಷೋ ಜರಾನ್ವಿತಃ |
ಕ್ಷುಧಿತಃ ಸ ಮಹಾರಣ್ಯೇ ದದರ್ಶ ಮುನಿಮಂತಿಕೇ ॥25॥
ಅರವತ್ತು ವರ್ಷ ವಯಸ್ಸಿನವನಾಗಿ ಮುಪ್ಪಿನಿಂದ ಕೂಡಿ, ಅಪರ ವಯಃಸ್ಥನಾಗಿ ಬಳಲಿ, ಹಸಿದ ಅವನು ಆ ಮಹಾರಣ್ಯದಲ್ಲಿ ಸಮೀಪದಲ್ಲಿ ಒಬ್ಬ ಮುನಿಯನ್ನು ನೋಡಿದನು.
ಸ ತಂ ಪಪ್ರಚ್ಛ ರಾಜೇಂದ್ರೋ ಮುನಿಂ ಮೌನವ್ರತಾನ್ವಿತಮ್ |
ನ ಚ ಕಿಂಚಿದುವಾಚೈನಂ ಸ ಮುನಿಃ ಪೃಚ್ಛತೋಽಪಿ ಸನ್ ॥26॥
ಆ ರಾಜೇಂದ್ರನು ಮೌನವ್ರತಧಾರಿಯಾದ ಆ ಋಷಿಯನ್ನು ಮೃಗದ ವಿಷಯದಲ್ಲಿ ಪ್ರಶ್ನೆಮಾಡಿದನು. ಆ ಮುನಿಯು ಪ್ರಶ್ನೆಮಾಡುವ ರಾಜನಿಗಿಂತ ಬಹಳ ಉತ್ತಮನಾಗಿದ್ದರೂ, ರಾಜನನ್ನು ಕುರಿತು ಏನನ್ನೂ ಮಾತನಾಡಲಿಲ್ಲ.
ತತೋ ರಾಜಾ ಕ್ಷುಚ್ಛ್ರಮಾರ್ತಃ ತಂ ಮುನಿಂ ಸ್ಥಾಣುವತ್ ಸ್ಥಿತಮ್ |
ಮೌನವ್ರತಧರಂ ಶ್ರಾಂತಃ ಸದ್ಯೋ ಮನ್ಯುವಶಂ ಗತಃ ॥27॥
ನ ಬುಬೋಧ ಚ ತಂ ರಾಜಾ ಮೌನವ್ರತಧರಂ ಮುನಿಮ್ |
ಸ ತಂ ಮನ್ಯುಸಮಾವಿಷ್ಟೋ ಧರ್ಷಯಾಮಾಸ ತೇ ಪಿತಾ ॥28॥
ಅನಂತರ ಹಸಿವು ಮತ್ತು ಆಯಾಸದಿಂದ ಪೀಡಿತನಾದ ಆ ರಾಜನು ತಕ್ಷಣದಲ್ಲಿ ಕೋಪಕ್ಕೆ ಒಳಗಾದವನಾಗಿ, ಬಳಲಿದವನಾಗಿ, ಮೌನವ್ರತವನ್ನು ಧರಿಸಿ ಮರದ ಬುಡದಂತೆ ಅಲುಗಾಡದೇ ಕುಳಿತಿದ್ದ ಆ ಮುನಿಯನ್ನು ಮೌನವ್ರತಧರನೆಂದು ತಿಳಿಯಲಿಲ್ಲ. ಕೋಪಕ್ಕೆ ವಶನಾದ ನಿನ್ನ ತಂದೆಯು ಆ ಮುನಿಗೆ ಅವಮಾನವನ್ನು ಮಾಡಿದನು.
ಮೃತಂ ಸರ್ಪಂ ಧನುಷ್ಕೋಟ್ಯಾ ಸಮುತ್ಕ್ಷಿಪ್ಯ ಧರಾತಳಾತ್ |
ತಸ್ಯ ಶುದ್ಧಾತ್ಮನಃ ಪ್ರಾದಾತ್ ಸ್ಕಂಧೇ ಭಾರತಸತ್ತಮ ॥29॥
ಎಲೈ ಭಾರತಸತ್ತಮನೇ, ಅವನು ಭೂಮಿಯ ಮೇಲೆ ಬಿದ್ದಿದ್ದ ಒಂದು ಮೃತಸರ್ಪವನ್ನು ತನ್ನ ಬಿಲ್ಲಿನ ತುದಿಯಿಂದ ಎತ್ತಿ ಆ ಪರಿಶುದ್ಧನಾದ ಮುನಿಯ ಕೊರಳಿನಲ್ಲಿ ಹಾಕಿದನು.
ತಂ ನೋವಾಚ ಸ ಧರ್ಮಾತ್ಮಾ ರಾಜಾನಂ ಸಾಧ್ವಸಾಧು ವಾ |
ತಸ್ಥೌ ತಥೈವ ನಾಕ್ರುಧ್ಯತ್ ಸರ್ಪಂ ಸ್ಕಂಧೇನ ಧಾರಯನ್ ॥30॥
ಆ ಧರ್ಮಾತ್ಮನಾದ ಮುನಿಯು ರಾಜನನ್ನು ಕುರಿತು ಒಳ್ಳೆಯದನ್ನಾಗಲೀ, ಕೆಟ್ಟದ್ದನ್ನಾಗಲೀ ಏನೂ ಮಾತನಾಡಲಿಲ್ಲ. ಕೋಪಗೊಳ್ಳದೆ ಅವನು ಸರ್ಪವನ್ನು ತನ್ನ ಕೊರಳಿನಲ್ಲಿ ಧರಿಸಿ ಹಾಗೆಯೇ ಕುಳಿತಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.

ನಲವತ್ತೈದನೆಯ ಅಧ್ಯಾಯ
(ಮಂತ್ರಿಗಳ ವಚನವನ್ನು ಕೇಳಿ ತಕ್ಷಕನ ಮೇಲೆ ರಾಜನ ಕೋಪ ಮತ್ತು ಸರ್ಪಯಾಗ ಸಂಕಲ್ಪ.)
ಮಂತ್ರಿಣಃ
ತತಃ ಸ ರಾಜಾ ರಾಜೇಂದ್ರ ಸ್ಕಂಧೇ ತಸ್ಯ ಭುಜಂಗಮಮ್ |
ಮುನೇಃ ಕ್ಷುತ್ಕ್ಷಾಮ ಆಸಜ್ಯ ಸ್ವಪುರಂ ಪುನರಾಯಯೌ ॥1॥
ಎಲೈ ರಾಜೇಂದ್ರನೇ, ಆಗ ಹಸಿವಿನಿಂದ ಸೊರಗಿದ ರಾಜನು ಮುನಿಯ ಕೊರಳಿನಲ್ಲಿ ಆ ಸರ್ಪವನ್ನು ಹಾಕಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.
ಋಷೇಸ್ತಸ್ಯ ತು ಪುತ್ರೋಽಭೂದ್ ಭುವಿ ಜಾತೋ ಮಹಾಯಶಾಃ|
ಶೃಂಗೀ ನಾಮ ಮಹಾತೇಜಾಃ ತಿಗ್ಮವೀರ್ಯೋಽತಿಕೋಪನಃ ॥2॥
ಆ ಋಷಿಗೆ ಮಹಾಕೀರ್ತಿಶಾಲಿಯಾದ (ಗೋವಿನಲ್ಲಿ ಜನಿಸಿದ) ಶೃಂಗೀ ಎಂಬ ಒಬ್ಬ ಪುತ್ರನಿದ್ದನು. ಅವನು ಮಹಾತೇಜಸ್ವಿಯೂ, ಬಹಳ ಕೋಪವುಳ್ಳವನೂ ಮತ್ತು ಕ್ರೂರವಾದ ಶಕ್ತಿಯುಳ್ಳವನೂ ಆಗಿದ್ದನು.
ಬ್ರಹ್ಮಾಣಂ ಸೋಽಭ್ಯುಪಾಗಮ್ಯ ಮುನಿಃ ಪೂಜಾಂ ಚಕಾರ ಹ |
ಸೋಽನುಜ್ಞಾತೋ ಗತಸ್ತತ್ರ ಶೃಂಗೀ ಶುಶ್ರಾವ ತಂ ತದಾ ॥3॥
ಸಖ್ಯುಃ ಸಕಾಶಾತ್ ಪಿತರಂ ಪಿತ್ರಾ ತೇ ಧರ್ಷಿತಂ ತದಾ |
ಮೃತಂ ಸರ್ಪಂ ಸಮಾಸಕ್ತಂ ಪಿತ್ರಾ ತೇ ಜನಮೇಜಯ |
ವಹಂತಂ ಕುರುಶಾರ್ದೂಲ ಸ್ಕಂಧೇನಾನಪಕಾರಿಣಮ್ ॥4॥

ಅವನು ಬ್ರಹ್ಮದೇವರನ್ನು ಸಮೀಪಿಸಿ ಅವರ ಪೂಜೆಯನ್ನು ಮಾಡಿದನು. ಬ್ರಹ್ಮದೇವರ ಅನುಮತಿಯನ್ನು ಪಡೆದು ಮರಳಿ ಬಂದ ಶೃಂಗಿಯು ನಿನ್ನ ತಂದೆಯಿಂದ ತನ್ನ ತಂದೆಯು ಅವಮಾನಕ್ಕೆ ಒಳಗಾಗಿರುವ ವಾರ್ತೆಯನ್ನು ತನ್ನ ಸ್ನೇಹಿತನಿಂದ ಕೇಳಿದನು. ಎಲೈ ಜನಮೇಜಯನೇ, ಕುರುಶಾರ್ದೂಲನೇ, ಆ ಸ್ನೇಹಿತನು ಅನಪಕಾರಿಯಾದ ನಿನ್ನ ತಂದೆಯು ಅವನು ಹಾಕಿದ ಮೃತಸರ್ಪವನ್ನು ಇನ್ನೂ ಹಾಗೆಯೇ ಹೊತ್ತುಕೊಂಡಿದ್ದಾನೆ ಎಂದೂ ಹೇಳಿದನು.
ತಪಸ್ವಿನಂ ಮಹಾತ್ಮಾನಂ ತಂ ಮುನಿಪ್ರವರಂ ನೃಪ |
ಜಿತೇಂದ್ರಿಯಂ ವಿಶುದ್ಧಂ ಚ ಸ್ಥಿತಂ ಕರ್ಮಣ್ಯಥಾದ್ಭುತೇ |
ತಪಸಾ ದ್ಯೋತಿತಾತ್ಮಾನಂ ಸ್ವೇಷ್ವಂಗೇಷು ಯುತಂ ತದಾ ॥5॥
ಶುಭಾಚಾರಂ ಶುಭಕಥಂ ಸುಸ್ಥಿರಂ ತಮಲೋಲುಪಮ್ |
ಅಕ್ಷುದ್ರಮನಸೂಯಂ ಚ ವೃದ್ಧಂ ಮೌನವ್ರತೇ ಸ್ಥಿತಮ್ ॥6॥
ಶರಣ್ಯಂ ಸರ್ವಭೂತಾನಾಂ ಪಿತ್ರಾ ವಿಪ್ರಕೃತಂ ತವ |
ಶಶಾಪಾಥ ಸ ತಚ್ಛ್ರುತ್ವಾ ಪಿತರಂ ತೇ ರುಷಾನ್ವಿತಃ ॥7॥
ಎಲೈ ರಾಜನೇ, ತಪಸ್ವಿಯೂ, ಮಹಾತ್ಮನೂ, ಮುನಿಶ್ರೇಷ್ಠನೂ, ಜಿತೇಂದ್ರಿಯನೂ, ವಿಶುದ್ಧನೂ, ಅದ್ಭುತಕರ್ಮಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿದವನೂ, ತಪಸ್ಸಿನಿಂದ ಮನಸ್ಸಿನ ಪ್ರಕಾಶವನ್ನು ಪಡೆದವನೂ, ತನಗೆ ಪ್ರಿಯವಾದ ವೇದಾಂಗಗಳಲ್ಲಿಯೇ ನಿರತನಾದವನೂ, ಒಳ್ಳೆಯ ಆಚಾರವುಳ್ಳವನೂ, ಒಳ್ಳೆಯ ಮಾತನ್ನುಳ್ಳವನೂ, ಒಳ್ಳೆಯ ಸ್ಥೈರ್ಯವಿರುವವನೂ, ವಿಷಯಾಸಕ್ತನಾಗದವನೂ, ಕ್ಷುದ್ರತನವಿಲ್ಲದವನೂ, ಅಸೂಯಾಪರನಲ್ಲದವನೂ, ವೃದ್ಧನೂ, ಮೌನವ್ರತವನ್ನು ಧರಿಸಿದವನೂ, ಎಲ್ಲಾ ಪ್ರಾಣಿಗಳಿಗೂ ಆಶ್ರಯದಾತನೂ, ಆದ ತನ್ನ ತಂದೆಯು ನಿನ್ನ ತಂದೆಯಿಂದ ಅವಮಾನಕ್ಕೆ ಒಳಗಾಗಿರುವುದನ್ನು ಕೇಳಿದ ಅವನು ಕೋಪದಿಂದ ಕೂಡಿದವನಾಗಿ ಆಗ ಶಾಪವನ್ನು ಕೊಟ್ಟನು.
ಋಷೇಃ ಪುತ್ರೋ ಮಹಾತೇಜಾ ಬಾಲೋऽಪಿ ಸ್ಥವಿರೈರ್ವರಃ |
ಸ ಕ್ಷಿಪ್ರಮುದಕಂ ಸ್ಪೃಷ್ಟ್ವಾ ರೋಷಾದಿದಮುವಾಚ ಹ |
ಪಿತರಂ ತೇऽಭಿಸಂಧಾಯ ತೇಜಸಾ ಪ್ರಜ್ವಲನ್ನಿವ ॥8॥
ಋಷಿಕುಮಾರನಾಗಿ ಬಾಲಕನಾಗಿದ್ದರೂ, ವೃದ್ಧರಿಗಿಂತ ಶ್ರೇಷ್ಠನಾದ, ಮಹಾತೇಜಸ್ವಿಯಾದ ಅವನು ಬೇಗ ಕೈಯಲ್ಲಿ ನೀರನ್ನು ತೆಗೆದುಕೊಂಡು, ನಿನ್ನ ತಂದೆಯನ್ನು ಉದ್ದೇಶಿಸಿ, ತೇಜಸ್ಸಿನಿಂದ ಉರಿಯುವವನಂತೆ ರೋಷದಿಂದ ಈ ಮಾತುಗಳನ್ನು ಹೇಳಿದನಷ್ಟೆ.
ಅನಾಗಸಿ ಗುರೌ ಯೋ ಮೇ ಮೃತಂ ಸರ್ಪಮವಾಸೃಜತ್ |
ತಂ ನಾಗಸ್ತಕ್ಷಕಃ ಕ್ರುದ್ಧಸ್ತೇಜಸಾ ಸಾದಯಿಷ್ಯತಿ |
ಸಪ್ತರಾತ್ರಾದಿತಃ ಪಾಪಂ ಪಶ್ಯ ಮೇ ತಪಸೋ ಬಲಮ್ ॥9॥
ಅನಪರಾಧಿಯಾದ ನನ್ನ ತಂದೆಯ ಕೊರಳಿನಲ್ಲಿ ಯಾವನು ಮೃತಸರ್ಪವನ್ನು ಹಾಕಿದನೋ, ಆ ಪಾಪಿಗೆ ಇವತ್ತಿಗೆ ಏಳನೆಯ ದಿವಸದಲ್ಲಿ ತನ್ನ ತೇಜಸ್ಸಿನಿಂದ ಕ್ರುದ್ಧನಾದ ತಕ್ಷಕನಾಗನು ಮರಣವನ್ನು ಉಂಟುಮಾಡುತ್ತಾನೆ. ನನ್ನ ತಪಸ್ಸಿನ ಬಲವನ್ನು ನೋಡು.
ಇತ್ಯುಕ್ತ್ವಾ ಪ್ರಯಯೌ ತತ್ರ ಪಿತಾ ಯತ್ರಾಸ್ಯ ಸೋऽಭವತ್ |
ದೃಷ್ಟ್ವಾ ಚ ಪಿತರಂ ತಸ್ಮೈ ಶಾಪಂ ತಂ ಪ್ರತ್ಯವೇದಯತ್ ॥10॥
ಹೀಗೆ ಹೇಳಿ ಅವನು ತನ್ನ ತಂದೆ ಇದ್ದ ಕಡೆಗೆ ಹೋದನು ಮತ್ತು ತಂದೆಯನ್ನು ನೋಡಿ ಅವನಿಗೆ ರಾಜನಿಗೆ ತಾನು ಕೊಟ್ಟ ಶಾಪವನ್ನು ನಿವೇದಿಸಿದನು.
ಸ ಚಾಪಿ ಮುನಿಶಾರ್ದೂಲಃ ಪ್ರೇಷಯಾಮಾಸ ತೇ ಪಿತುಃ |
ಶಪ್ತೋऽಸಿ ಮಮ ಪುತ್ರೇಣ ಯತ್ತೋ ಭವ ಮಹೀಪತೇ |
ತಕ್ಷಕಸ್ತ್ವಾಂ ಮಹಾರಾಜ ಸಪ್ತರಾತ್ರೇಣ ಧಕ್ಷ್ಯತಿ ॥11॥
ತಂದೆಯಾದ ಆ ಮುನಿಶಾರ್ದೂಲನಾದರೋ, ನಿನ್ನ ತಂದೆಗೆ ರಾಜನೇ, ನನ್ನ ಪುತ್ರನಿಂದ ಶಪಿಸಲ್ಪಟ್ಟಿದ್ದೀಯೆ. ಮಹಾರಾಜನೇ, ಈ ದಿನಕ್ಕೆ ಏಳನೆಯ ದಿನ ತಕ್ಷಕನು ನಿನ್ನನ್ನು ದಹಿಸುತ್ತಾನೆ. ಎಚ್ಚರಿಕೆಯಿಂದ ಇರು ಎಂಬ ವಾರ್ತೆಯನ್ನು ಹೇಳಿ ಕಳುಹಿಸಿದನು.
ಶ್ರುತ್ವಾ ತು ತದ್ವಚೋ ಘೋರಂ ಪಿತಾ ತೇ ಜನಮೇಜಯ |
ಯತ್ತೋऽಭವತ್ ಪರಿತ್ರಸ್ತಃ ತಕ್ಷಕಾತ್ ಪನ್ನಗೋತ್ತಮಾತ್ ॥12॥
ಎಲೈ ಜನಮೇಜಯನೇ, ಆ ಘೋರವಾದ ಮಾತನ್ನು ಕೇಳಿದ ನಿನ್ನ ತಂದೆಯು, ಪನ್ನಗಶ್ರೇಷ್ಠನಾದ ತಕ್ಷಕನಿಗೆ ಹೆದರಿ, ಬಹಳ ಎಚ್ಚರಿಕೆಯಿಂದಿದ್ದನು.
ತತಸ್ತಸ್ಮಿಂಸ್ತು ದಿವಸೇ ಸಪ್ತಮೇ ಸಮುಪಸ್ಥಿತೇ |
ರಾಜ್ಞಃ ಸಮೀಪಂ ಬ್ರಹ್ಮರ್ಷಿಃ ಕಾಶ್ಯಪೋ ಗಂತುಮೈಚ್ಛತ ॥13॥
ಅನಂತರ ಆ ಏಳನೆಯ ದಿವಸವು ಪ್ರಾಪ್ತವಾಗುತ್ತಿರಲು, ಬ್ರಹ್ಮರ್ಷಿಯಾದ ಕಾಶ್ಯಪನು ರಾಜನ ಸಮೀಪಕ್ಕೆ ಹೋಗಲು ಬಯಸಿದನು.
ತಂ ದದರ್ಶಾಥ ನಾಗೇಂದ್ರಃ ತಕ್ಷಕಃ ಕಾಶ್ಯಪಂ ತದಾ |
ತಮಬ್ರುವೀತ್ ಪನ್ನಗೇಂದ್ರಃ ಕಾಶ್ಯಪಂ ತ್ವರಿತಂ ವ್ರಜನ್ |
ಕ್ವ ಭವಾಂಸ್ತ್ವರಿತೋ ಯಾತಿ ಕಿಂ ಚ ಕಾರ್ಯಂ ಚಿಕೀರ್ಷತಿ ॥14॥
ನಾಗೇಂದ್ರನಾದ ತಕ್ಷಕನು ಆ ಕಾಶ್ಯಪಬ್ರಾಹ್ಮಣನನ್ನು ನೋಡಿದನು. ಪನ್ನಗೇಂದ್ರನು ತ್ವರಿತವಾಗಿ ಹೋಗುತ್ತಿದ್ದ ಆ ಕಾಶ್ಯಪನನ್ನು ಕುರಿತು ನೀನು ಎಲ್ಲಿಗೆ ವೇಗವಾಗಿ ಹೋಗುತ್ತಿದ್ದೀಯೆ? ಏನು ಮಾಡಲು ಬಯಸುತ್ತಿದ್ದೀಯೆ ಎಂದು ಕೇಳಿದನು.
ಕಾಶ್ಯಪಃ
ಯತ್ರ ರಾಜಾ ಕುರುಶ್ರೇಷ್ಠಃ ಪರೀಕ್ಷಿನ್ನಾಮ ವೈ ಧೃತಃ |

ತಕ್ಷಕೇಣ ಭುಜಂಗೇಣ ಧಕ್ಷ್ಯತೇ ಕಿಲ ತತ್ರ ವೈ ॥15॥
ಗಚ್ಛಾಮ್ಯಹಂ ತಂ ತ್ವರಿತಃ ಸದ್ಯಃ ಕರ್ತುಮಪಜ್ವರಮ್ |
ಮಯಾಽಭಿಮಂತ್ರಿತಂ ಚಾಪಿ ನ ಸರ್ಪೋ ಧರ್ಷಯಿಷ್ಯತಿ ॥16॥
ಕುರುಶ್ರೇಷ್ಠನಾದ ಪರೀಕ್ಷಿದ್ರಾಜನು ಏಕಸ್ತಂಭನಿವಾಸದಲ್ಲಿ ಇರುವನಷ್ಟೆ. ಅಲ್ಲಿ ಅವನು ತಕ್ಷಕನಾಗನಿಂದ ದಹಿಸಲ್ಪಡುವನು. ನಾನು ರಾಜನಿಗೆ ವಿಷದ ಬಾಧೆಯನ್ನು ನಿವಾರಿಸಲು ಶೀಘ್ರವಾಗಿ ಅಲ್ಲಿಗೆ ಹೋಗುತ್ತಿದ್ದೇನೆ. ನಾನು ಅಭಿಮಂತ್ರಣವನ್ನು ಮಾಡಿದರೆ, ಸರ್ಪವು ಅವನ ಮೇಲೆ ಯಾವ ಪ್ರಭಾವವನ್ನೂ ಬೀರಲಾರದು.
ತಕ್ಷಕಃ
ಕಿಮರ್ಥಂ ತಂ ಮಯಾ ದಷ್ಟಂ ಸಂಜೀವಯಿತುಮಿಚ್ಛಸಿ |
ಬ್ರೂಹಿ ಕಾಮಮಹಂ ತೇಽದ್ಯ ದದ್ಮಿ ಸ್ವಂ ವೇಶ್ಮ ಗಮ್ಯತಾಮ್ ॥17॥
ನೀನು ನನ್ನಿಂದ ಕಚ್ಚಲ್ಪಟ್ಟ ಆ ರಾಜನನ್ನು ಏತಕ್ಕೆ ಬದುಕಿಸಲು ಬಯಸುತ್ತೀಯೆ? ನಿನ್ನ ಮನಸ್ಸಿನಲ್ಲಿ ಏನು ಆಸೆಯಿದೆಯೋ ಹೇಳು, ಅದನ್ನು ನಾನು ಕೊಡುತ್ತೇನೆ. ನಿನ್ನ ಮನೆಗೆ ಹಿಂದಿರುಗು.
ಮಂತ್ರಿಣಃ
ಧನಲಿಪ್ಸುರಹಂ ತತ್ರ ಯಾಮೀತ್ಯುಕ್ತಶ್ಚ ತೇನ ಸಃ |
ತಮುವಾಚ ಮಹಾತ್ಮಾನಂ ವಾರಯನ್ ಶ್ಲಕ್ಷ್ಣಯಾ ಗಿರಾ ॥18॥
ನಾನು ಧನಾಪೇಕ್ಷಿಯಾಗಿ ಅಲ್ಲಿಗೆ ಹೋಗುತ್ತಿದ್ದೇನೆ ಎಂದು ಹೇಳಲ್ಪಟ್ಟ ತಕ್ಷಕನು ಮಹಾತ್ಮನಾದ ಆ ಬ್ರಾಹ್ಮಣನನ್ನು ಮಧುರವಾದ ಮಾತುಗಳಿಂದ ಹೋಗದಂತೆ ನಿಷೇಧಮಾಡುತ್ತಾ ಅವನನ್ನು ಕುರಿತು ಹೇಳಿದನು.
ಯಾವದ್ಧನಂ ಪ್ರಾರ್ಥಯಸೇ ರಾಜ್ಞಸ್ತಸ್ಮಾತ್ ತತೋಽಧಿಕಮ್ |
ಗೃಹಾಣ ಮತ್ತ ಏವ ತ್ವಂ ಸನ್ನಿವರ್ತಸ್ವ ಚಾನಘ ॥19॥
ದೋಷದೂರನಾದವನೇ, ಆ ರಾಜನಿಂದ ಎಷ್ಟು ಧನವನ್ನು ಬಯಸುವೆಯೋ, ಅದಕ್ಕಿಂತ ಅಧಿಕವಾದ ಧನವನ್ನು ನನ್ನಿಂದಲೇ ಸ್ವೀಕರಿಸು. ನೀನು ಮನೆಗೆ ಹಿಂದಿರುಗು.
ಸ ಏವಮುಕ್ತೋ ನಾಗೇನ ಕಾಶ್ಯಪೋ ದ್ವಿಪದಾಂ ವರಃ |
ಲಬ್ಧ್ವಾ ವಿತ್ತಂ ನಿವವೃತೇ ತಕ್ಷಕಾದ್ ಯಾವದೀಪ್ಸಿತಮ್ ॥20॥
ತಕ್ಷಕನಾಗನಿಂದ ಹೀಗೆ ಹೇಳಲ್ಪಟ್ಟ ದ್ವಿಪದಶ್ರೇಷ್ಠನಾದ ಕಾಶ್ಯಪಬ್ರಾಹ್ಮಣನು ತಕ್ಷಕನಿಂದ ತನಗೆ ಅಪೇಕ್ಷಿತವಾದಷ್ಟು ಧನವನ್ನು ಪಡೆದು ಹಿಂದಿರುಗಿದನು.
ತಸ್ಮಿನ್ ಪ್ರತಿಗತೇ ವಿಪ್ರೇ ತಕ್ಷಕಃ ಛದ್ಮನಾಽಽಕೃತಃ |
ತಂ ನೃಪಂ ನೃಪತಿಶ್ರೇಷ್ಠಂ ಪಿತರಂ ಧಾರ್ಮಿಕಂ ತವ ॥21॥
ಪ್ರಾಸಾದಸ್ಥಂ ಕ್ಷಣೇನೈವ ದಗ್ಧವಾನ್ ವಿಷವಹ್ನಿನಾ |
ತತಸ್ತ್ವಂ ಪುರುಷವ್ಯಾಘ್ರ ವಿಜಯಾಯಾಭಿಷೇಚಿತಃ ॥22॥
ಆ ಬ್ರಾಹ್ಮಣನು ಹೊರಟುಹೋಗುತ್ತಿರಲು ತಕ್ಷಕನು ಒಂದು ಕ್ರಿಮಿಯ ಛದ್ಮರೂಪವನ್ನು ಧರಿಸಿ ಪ್ರಾಸಾದದಲ್ಲಿದ್ದ ನೃಪತಿಶ್ರೇಷ್ಠನಾದ, ಧಾರ್ಮಿಕನಾದ ನಿನ್ನ ತಂದೆಯನ್ನು ಒಂದು ಕ್ಷಣದಲ್ಲಿ ತನ್ನ ವಿಷಾಗ್ನಿಯಿಂದ ದಹಿಸಿದನು. ಪುರುಷವ್ಯಾಘ್ರನೇ, ಅನಂತರ ನೀನು ವಿಜಯದ ಸಲುವಾಗಿ ರಾಜ್ಯದಲ್ಲಿ ಅಭಿಷೇಕ ಮಾಡಲ್ಪಟ್ಟೆ.
ಏತದ್ ದೃಷ್ಟಂ ಶ್ರುತಂ ಚಾಪಿ ಯಥಾವನ್ನೃಪಸತ್ತಮ ॥
ಅಸ್ಮಾಭಿರ್ನಿಖಿಲಂ ವೃತ್ತಂ ಕಥಿತಂ ತೇಽತಿದಾರುಣಮ್ ॥23॥
ಎಲೈ ರಾಜಶ್ರೇಷ್ಠನೇ, ಇದು ನಾವು ನೋಡಿದ ಮತ್ತು ಕೇಳಿದ ವೃತ್ತಾಂತ. ಈ ಅತಿದಾರುಣವಾದ ವೃತ್ತಾಂತವನ್ನು ಸಮಗ್ರವಾಗಿ ನಿನಗೆ ಹೇಳಿದ್ದೇವೆ.
ಶ್ರುತ್ವಾ ಚೈತನ್ನೃಪಶ್ರೇಷ್ಠ ಪಾರ್ಥಿವಸ್ಯ ಪರಾಭವಮ್ |
ಅಸ್ಯ ಚರ್ಷೇರುದಂಕಸ್ಯ ವಿಧತ್ಸ್ವ ಯದನಂತರಮ್ ॥24॥
ಎಲೈ ನೃಪಶ್ರೇಷ್ಠನೇ, ರಾಜನಾದ ನಿನ್ನ ತಂದೆಯ ಪರಾಭವವನ್ನೂ, ಉದಂಕಋಷಿಗಳ ಪರಾಭವವನ್ನೂ ಕೇಳಿ ಏನು ಕಾರ್ಯವನ್ನು ಮಾಡಬೇಕೋ ಅದನ್ನು ಮಾಡು.
ಜನಮೇಜಯಃ
ಏತತ್ತು ಶ್ರೋತುಮಿಚ್ಛಾಮಿ ಹ್ಯಟವ್ಯಾಂ ನಿರ್ಜನೇ ವನೇ |
ಸಂವಾದಃ ಪನ್ನಗೇಂದ್ರಸ್ಯ ಕಾಶ್ಯಪಸ್ಯ ಚ ಯಸ್ತದಾ ॥25॥
ಕೇನ ದೃಷ್ಟಃ ಶ್ರುತಶ್ಚಾಪಿ ಭವತಾಂ ಶ್ರೋತ್ರಮಾಗತಮ್ |
ಶ್ರುತ್ವಾಽಹಂ ಪ್ರವಿಧಾಸ್ಯಾಮಿ ಪನ್ನಗಾಂತಕರೀಂ ಮತೀಮ್ ॥26॥
ನಾನು ಈ ವಿಷಯವನ್ನು ಕೇಳಲು ಬಯಸುತ್ತೇನೆ. ನಿರ್ಜನವಾದ ಆ ಕಾಡಿನಲ್ಲಿ ಪನ್ನಗೇಂದ್ರನಾದ ತಕ್ಷಕನಿಗೂ ಮತ್ತು ಕಾಶ್ಯಪರಿಗೂ ನಡೆದ ಸಂಭಾಷಣೆಯು ಯಾರಿಂದ ಕೇಳಲ್ಪಟ್ಟು ಅಥವಾ ನೋಡಲ್ಪಟ್ಟು, ನಿಮ್ಮ ಕಿವಿಯನ್ನು ತಲುಪಿತು? ಅದನ್ನು ಕೇಳಿ ನಾನು ಸರ್ಪನಾಶಕರವಾದ ಬುದ್ಧಿಯನ್ನು ತಳೆಯುತ್ತೇನೆ.
ಮಂತ್ರಿಣಃ
ಶೃಣು ರಾಜನ್ ಯಥಾಽಸ್ಮಾಕಂ ಯೇನೈತತ್ ಕಥಿತಂ ಪುರಾ |
ಸಮಾಗಮಂ ದ್ವಿಜೇಂದ್ರಸ್ಯ ಪನ್ನಗೇಂದ್ರಸ್ಯ ಚಾಧ್ವನಿ ॥27॥

ರಾಜನೇ, ಯಾರಿಂದ ಮತ್ತು ಹೇಗೆ ಮಾರ್ಗದಲ್ಲಿ ದ್ವಿಜೇಂದ್ರನ ಮತ್ತು ನಾಗೇಂದ್ರನ ಸಮಾಗಮವು ಹಿಂದೆ ಉಂಟಾಯಿತೆಂಬುದನ್ನೂ, ಹೇಳಲ್ಪಟ್ಟಿತೆಂಬುದನ್ನೂ, ನೀನೂ ಕೇಳು.
ತಸ್ಮಿನ್ ವನೇಚರಃ ಕಶ್ಚಿದಿಂಧನಾರ್ಥಾಯ ಪಾರ್ಥಿವ |
ವಿಚಿನ್ವನ್ ಪೂರ್ವಮಾರೂಢಃ ಶುಷ್ಕಶಾಖಂ ವನಸ್ಪತಿಮ್ ॥28॥
ಅಬುಧ್ಯಮಾನೌ ತತ್ರಾಸ್ತಾಂ ವೃಕ್ಷಸ್ಥಂ ಪನ್ನಗದ್ವಿಜೌ |
ಸ ತು ತೇನೈವ ವೃಕ್ಷೇಣ ಭಸ್ಮೀಭೂತೋಽಭವತ್ ತದಾ ॥29॥
ಎಲೈ ರಾಜನೇ, ಆ ಕಾಡಿನಲ್ಲಿ ವನಚರನಾದ ಒಬ್ಬನು ಕಟ್ಟಿಗೆಯನ್ನು ಹುಡುಕುತ್ತಾ ಒಣಗಿದ ಕೊಂಬೆಯನ್ನುಳ್ಳ ಆ ವೃಕ್ಷದ ಮೇಲೆ ಮೊದಲೇ ಹತ್ತಿ ಕುಳಿತಿದ್ದನು. ತಕ್ಷಕ ಮತ್ತು ಕಾಶ್ಯಪಬ್ರಾಹ್ಮಣರಿಬ್ಬರೂ ವೃಕ್ಷದ ಮೇಲಿದ್ದ ಆ ವನಚರನನ್ನು ಗಮನಿಸಲಿಲ್ಲ. ಆ ವನಚರನಾದರೋ, ಆ ವೃಕ್ಷದ ಜೊತೆಯಲ್ಲಿಯೇ ಭಸ್ಮವಾದನು.
ದ್ವಿಜಪ್ರಭಾವಾದ್ ರಾಜೇಂದ್ರ ಜೀವಿತಃ ಸವನಸ್ಪತಿಃ |
ತೇನಾಗತ್ಯ ನರಶ್ರೇಷ್ಠ ನಗರೇಽಸ್ಮಿನ್ ನಿವೇದಿತಮ್ ॥30॥
ಎಲೈ ರಾಜೇಂದ್ರನೇ, ಕಾಶ್ಯಪರ ಪ್ರಭಾವದಿಂದ ಆ ವನಸ್ಪತಿಯು ಪುನಃ ಜೀವನವನ್ನು ಪಡೆಯಿತು. ಆ ವನಚರನು ನಗರಕ್ಕೆ ಬಂದು ತಕ್ಷಕನಿಗೂ ಮತ್ತು ಆ ಬ್ರಾಹ್ಮಣನಿಗೂ ನಡೆದ ಎಲ್ಲಾ ವೃತ್ತಾಂತವನ್ನೂ ನಿವೇದಿಸಿದನು.
ಯಥಾವೃತ್ತಂ ತು ತತ್ ಸರ್ವಂ ತಕ್ಷಕಸ್ಯ ದ್ವಿಜಸ್ಯ ಚ |
ಏತತ್ ತೇ ಕಥಿತಂ ರಾಜನ್ ಯಥಾವೃತ್ತಂ ಯಥಾಶ್ರುತಮ್ |
ಶ್ರುತ್ವಾ ತು ನೃಪಶಾರ್ದೂಲ ಪ್ರಕುರುಷ್ವ ಯಥೇಪ್ಸಿತಮ್ ॥31॥
ಎಲೈ ರಾಜನೇ, ಹೀಗೆ ಆ ಘಟನೆಯು ನಡೆದಂತೆ ಮತ್ತು ನಾವು ಕೇಳಿದಂತೆ, ನಿನಗೆ ನಿರೂಪಿಸಿದ್ದೇವೆ. ನೃಪಶಾರ್ದೂಲನೇ, ಇದನ್ನು ಕೇಳಿ ನಿನಗೆ ಇಷ್ಟಬಂದಂತೆ ಮಾಡು.
ಸೂತಃ
ಮಂತ್ರಿಣಾಂ ವಚನಂ ಶ್ರುತ್ವಾ ಸ ರಾಜಾ ಜನಮೇಜಯಃ |
ಪರ್ಯತಪ್ಯತ ದುಃಖಾರ್ತಃ ಪ್ರತ್ಯಪಿಂಕ್ಷತ್ ಕರೇ ಕರಮ್ ॥32॥
ಮಂತ್ರಿಗಳ ಮಾತನ್ನು ಕೇಳಿದ ಆ ಜನಮೇಜಯರಾಜನು ದುಃಖದಿಂದ ಆರ್ತನಾಗಿ ಪರಿತಾಪವನ್ನು ಹೊಂದಿ, ಕೈಯಲ್ಲಿ ಕೈಯನ್ನು ಹಿಸುಕಿದನು.
ನಿಃಶ್ವಸನ್ನುಷ್ಣಮಸಕೃದ್ ದೀರ್ಘಂ ರಾಜೀವಲೋಚನಃ |
ಮುಮೋಚಾಶ್ರೂಣಿ ಚ ತದಾ ನೇತ್ರಾಭ್ಯಾಂ ಪ್ರರುದನ್ ನೃಪಃ |
ಉವಾಚ ಚ ಮಹೀಪಾಲೋ ದುಃಖಶೋಕಸಮನ್ವಿತಃ ॥33॥
ಪದ್ಮನೇತ್ರನಾದ ಅವನು ಅನೇಕ ಬಾರಿ ದೀರ್ಘವಾದ ನಿಟ್ಟುಸಿರನ್ನು ಬಿಡುತ್ತಾ, ಕಣ್ಣಿಂದ ನೀರನ್ನು ಸುರಿಸಿ ಆಗ ರೋದನವನ್ನು ಮಾಡಿದನು. ದುಃಖಶೋಕಸಮನ್ವಿತವಾದ ರಾಜನು ಆಗ ಹೀಗೆ ಹೇಳಿದನು.
ಶ್ರುತ್ವೈತದ್ ಭವತಾಂ ವಾಕ್ಯಂ ಪಿತುಃ ಸ್ವರ್ಗಗತಿಂ ಪ್ರತಿ |
ನಿಶ್ಚಿತೇಯಂ ಮಮ ಮತಿರ್ಯಾ ವೈ ತಾಂ ಮೇ ನಿಬೋಧತ ॥34॥
ಮಂತ್ರಿಗಳೇ, ನನ್ನ ತಂದೆಯ ಸ್ವರ್ಗಗಮನದ ವಿಷಯದಲ್ಲಿ ನಿಮ್ಮ ಈ ಮಾತುಗಳನ್ನು ಕೇಳಿ ನನಗೆ ಯಾವ ಬುದ್ಧಿಯು ಉಂಟಾಗಿದೆ ಎಂಬುದನ್ನು ಹೇಳುತ್ತೇನೆ ಕೇಳಿ.
ಅನಂತರಮಹಂ ಮನ್ಯೇ ತಕ್ಷಕಸ್ಯ ದುರಾತ್ಮನಃ |
ಪ್ರತಿಕರ್ತವ್ಯಮಿತ್ಯೇವಂ ಯೇನ ಮೇ ಹಿಂಸಿತಃ ಪಿತಾ ॥35॥
ಯಾವ ತಕ್ಷಕನು ನನ್ನ ತಂದೆಯನ್ನು ವಧೆಮಾಡಿದನೋ ಅಂತಹ ದುರಾತ್ಮನಾದ ತಕ್ಷಕನಿಗೆ ತಕ್ಷಣವೇ ಪ್ರತಿಕಾರವನ್ನು ಮಾಡುವುದು ಯೋಗ್ಯವೆಂದು ನಾನು ಭಾವಿಸುತ್ತೇನೆ.
ಋಷೇರ್ಹಿ ಶೃಂಗೇರ್ವಚನಂ ಕೃತ್ವಾ ದಷ್ಟ್ವಾ ಚ ಪಾರ್ಥಿವಃ |
ಯದ್ಯಾಗಚ್ಛೇದ್ಯಸೌ ವಿಪ್ರೋ ನನು ಜೀವೇತ್ ಪಿತಾ ಮಮ ॥36॥
ಪರಿಹೀಯೇತ ಕಿಂ ತಸ್ಯ ಯದಿ ಜೀವೇತ್ ಸ ಪಾರ್ಥಿವಃ |
ಕಾಶ್ಯಪಸ್ಯ ಪ್ರಯೋಗೇಣ ಮಂತ್ರಿಣಃ ಸುನಯೇನ ಚ |
ಸ ಚ ವಾರಿತವಾನ್ ಮೋಹಾತ್ ಕಾಶ್ಯಪಂ ದ್ವಿಜಸತ್ತಮಮ್ ॥37॥
ಆ ಸರ್ಪವು ಶೃಂಗಿಋಷಿಯ ವಚನದಂತೆ ಮಾಡಿ ಅವನನ್ನು ಕಚ್ಚಿದ ಮೇಲೆ ಈ ಬ್ರಾಹ್ಮಣನು ಅಲ್ಲಿಗೆ ಹೋಗಿದ್ದರೆ, ನನ್ನ ತಂದೆಯು ಬದುಕಿರುತ್ತಿದ್ದನಷ್ಟೆ. ಮಂತ್ರಸಿದ್ಧಿಯುಳ್ಳ ಕಾಶ್ಯಪರ ಮಂತ್ರಪ್ರಯೋಗ- ದಿಂದಲೂ ಮತ್ತು ತನ್ನ ವಿನಯಾದಿಶೋಭನ ಗುಣಗಳಿಂದಲೂ ರಾಜನಾದ ನನ್ನ ತಂದೆಯು ಬದುಕಿದ್ದರೆ, ತಕ್ಷಕನಿಗೆ ಆಗುತ್ತಿದ್ದ ಹಾನಿಯೇನು?
ಸಂಜಿಜೀವಯಿಷುಂ ಪ್ರಾಪ್ತಂ ರಾಜಾನಮಪರಾಜಿತಮ್ |
ಮಹಾನತಿಕ್ರಮೋ ಹ್ಯೇಷ ತಕ್ಷಕಸ್ಯ ದುರಾತ್ಮನಃ |
ದ್ವಿಜಸ್ಯ ಯೋಽದದಾದ್ ವಿತ್ತಂ ಮಾ ನೃಪಂ ಜೀವಯೇದಿತಿ ॥38॥
ಅವನು ಮೋಹದಿಂದ ಅಪರಾಜಿತನಾದ ರಾಜನನ್ನು ಬದುಕಿಸಲು ಬಂದ ಬ್ರಾಹ್ಮಣಶ್ರೇಷ್ಠನಾದ ಕಾಶ್ಯಪನನ್ನು ನಿಷೇಧಿಸಿದನು. ಬ್ರಾಹ್ಮಣನಿಗೆ ರಾಜನನ್ನು ಬದುಕಿಸಬೇಡ ಎಂದು ಹೇಳಿ ಧನವನ್ನು ಕೊಟ್ಟುದುದು ದುರಾತ್ಮನಾದ ತಕ್ಷಕನು ಮಾಡಿದ ಮಹಾಪರಾಧ.

ಉದಂಕಸ್ಯ ಪ್ರಿಯಂ ಕುರ್ವನ್ ಆತ್ಮನಶ್ಚ ಮನಃಪ್ರಿಯಮ್ |
ಭವತಾಂ ಚೈವ ಸರ್ವೇಷಾಂ ಯಾಸ್ಯಾಮ್ಯಪಚಿತಿಂ ಪಿತುಃ ॥39॥
ಉದಂಕನಿಗೆ ಪ್ರಿಯವನ್ನು ಮಾಡುತ್ತಾ, ನನ್ನ ಮನಸ್ಸಿಗೆ ಪ್ರಿಯವನ್ನು ಮಾಡುತ್ತಾ, ನಿಮ್ಮೆಲ್ಲರಿಗೆ ಪ್ರಿಯವನ್ನು ಮಾಡುತ್ತಾ ತಂದೆಯ ಮರಣಕ್ಕೆ ಪ್ರತೀಕಾರವನ್ನು ಮಾಡಿ ತಂದೆಯನ್ನು ಪೂಜಿಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
*****

ನಲವತ್ತಾರನೆಯ ಅಧ್ಯಾಯ
(ಜನಮೇಜಯನಿಂದ ಋತ್ವಿಜರ ಮೂಲಕ ಸರ್ಪಯಾಗ ಪ್ರಾರಂಭ. ಅನೇಕ ಸರ್ಪಗಳ ಹೋಮ.)
ಸೂತಃ
ಏವಮುಕತ್ವ ತತಃ ಶ್ರೀಮಾನ್ ಮಂತ್ರಿಭಿಶ್ಚಾನುಮೋದಿತಃ |
ಆರುರೋಹ ಪ್ರತಿಜ್ಞಾಂ ಚ ಸರ್ಪಸತ್ರಾಯ ಪಾರ್ಥಿವಃ ॥1॥
ಸಂಪದ್ಯುಕ್ತನಾದ ಆ ರಾಜನು ಹೀಗೆ ಹೇಳಿ, ಮಂತ್ರಿಗಳಿಂದಲೂ ಅನುಮೋದಿತನಾಗಿ, ಸರ್ಪಸತ್ರಕ್ಕಾಗಿ ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಿದನು.
ಬ್ರಹ್ಮನ್ ಭರತಶಾರ್ದೂಲೋ ರಾಜಾ ಪಾರಿಕ್ಷಿತಸ್ತದಾ |
ಪುರೋಹಿತಮಥಾಹೂಯ ಋತ್ವಿಜೋ ವಸುಧಾಧಿಪಃ |
ಅಬ್ರವೀದ್ ವಾಕ್ಯಸಂಪನ್ನಃ ಸಂಪನ್ನಾರ್ಥಕರಂ ವಚಃ ॥2॥
ಎಲೈ ಬ್ರಾಹ್ಮಣನೇ, ಭರತಶಾರ್ದೂಲನಾದ, ವಸುಧಾಧಿಪತಿಯಾದ, ಪರೀಕ್ಷಿತನ ಮಗನಾದ, ವಾಕ್ಯಸಂಪನ್ನನಾದ ಜನಮೇಜಯನು ಆಗ ಪುರೋಹಿತರನ್ನೂ ಮತ್ತು ಋತ್ವಿಜರನ್ನೂ ಕರೆದು, ಶ್ರೇಷ್ಠವಾದ ಮತ್ತು ಅರ್ಥಗರ್ಭಿತವಾದ ಈ ಮಾತನ್ನು ಆಡಿದನು.
ಜನಮೇಜಯಃ
ಯೋ ನೋ ಹಿಂಸಿತವಾಂಸ್ತಾತಂ ತಕ್ಷಕಃ ಸ ದುರಾತ್ಮವಾನ್ |
ಪ್ರತಿಕುರ್ಯಾಂ ತಥಾ ತಸ್ಯ ತದ್ ಭವಂತೋ ಬ್ರುವಂತು ಮೇ ॥3॥
ಯಾವ ದುರಾತ್ಮನಾದ ತಕ್ಷಕನು ನನ್ನ ತಂದೆಯನ್ನು ದಹಿಸಿದನೋ (ಹಿಂಸಿಸಿದನೋ) ಅವನಿಗೆ ನಾನು ಪ್ರತೀಕಾರವನ್ನು ಮಾಡಲು ಬಯಸುತ್ತೇನೆ. ಅದನ್ನು ನೀವು ನನಗೆ ಹೇಳಿ.
ಅಪಿ ತತ್ಕರ್ಮ ವಿದಿತಂ ಭವತಾಂ ಯೇನ ಪನ್ನಗಮ್ |
ತಕ್ಷಕಂ ಸಂಪ್ರದೀಪ್ತೇಽಗ್ನೌ ಪ್ರಾಪಯೇಯಂ ಸಬಾಂಧವಾನ್ ॥4॥
ಯಾವ ಕರ್ಮವನ್ನು ಮಾಡಿದರೆ, ತಕ್ಷಕನೂ, ಅವನ ಬಾಂಧವರೂ, ಸಂಪ್ರದೀಪ್ತವಾದ ಅಗ್ನಿಯಲ್ಲಿ ಬೀಳುವರೋ ಅಂತಹ ಕರ್ಮವು ನಿಮಗೆ ತಿಳಿದಿದೆಯೆ?
ಯಥಾ ಯೇನ ಪಿತಾ ಮಹ್ಯಂ ಪೂರ್ವಂ ದಗ್ಧೋ ವಿಷಾಗ್ನಿನಾ |
ತಥಾಽಹಮಪಿ ತಂ ಪಾಪಂ ದಗ್ಧುಮಿಚ್ಛಾಮಿ ಪನ್ನಗಮ್ ॥5॥
ಹೇಗೆ ಹಿಂದೆ ನನ್ನ ತಂದೆಯು ಅವನ ವಿಷಾಗ್ನಿಯಿಂದ ದಗ್ಧನಾದನೋ, ಅದರಂತೆ ನಾನೂ ಸಹ ಆ ಪಾಪಿಯಾದ ನಾಗನನ್ನು ಅಗ್ನಿಯಲ್ಲಿ ದಹನಮಾಡಲು ಬಯಸುತ್ತೇನೆ.
ಋತ್ವಿಜಃ
ಅಸ್ತಿ ರಾಜನ್ ಮಹತ್ ಸತ್ರಂ ತದರ್ಥಂ ದೇವನಿರ್ಮಿತಮ್ |
ಸರ್ಪಸತ್ರಮಿತಿ ಖ್ಯಾತಂ ಪುರಾಣೇ ಕಥ್ಯತೇ ನೃಪ ॥6॥
ರಾಜನೇ, ಆ ಉದ್ದೇಶದಿಂದ ದೇವತೆಗಳಿಂದ ನಿರ್ಮಿತವಾದ ಒಂದು ದೊಡ್ಡ ಯಾಗವಿದೆ. ಎಲೈ ರಾಜನೇ, ಅದು ಸರ್ಪಸತ್ರವೆಂಬ ಹೆಸರಿನಿಂದ ಪ್ರಖ್ಯಾತವಾಗಿದೆ ಮತ್ತು ಅದು ಪುರಾಣಗಳಲ್ಲಿ ಹೇಳಲ್ಪಡುತ್ತದೆ.
ಆಹರ್ತಾ ತಸ್ಯ ಸತ್ರಸ್ಯ ತ್ವನ್ನಾನ್ಯೋಽದ್ಯ ಜನಾಧಿಪ |
ಇತಿ ಪೌರಾಣಿಕಾಃ ಪ್ರಾಹುರಸ್ಮಾಕಂ ಚಾಸ್ತಿ ಸ ಕ್ರತುಃ ॥7॥
ಎಲೈ ರಾಜನೇ, ನಿನ್ನನ್ನು ಬಿಟ್ಟು ಬೇರೆ ಯಾರೂ ಆ ಯಾಗವನ್ನು ಮಾಡುವವರು ಇಲ್ಲವೆಂದು ಪೌರಾಣಿಕರು ಹೇಳುತ್ತಾರೆ. ನಮ್ಮಲ್ಲಿಯೂ ಆ ಯಾಗದ ವಿದ್ಯೆಯು ಇದೆ.
ಸೂತಃ
ಏವಮುಕ್ತಃ ಸ ರಾಜರ್ಷಿರ್ಮೇನೇ ಸರ್ಪಂ ಹಿ ತಕ್ಷಕಮ್ |
ಹುತಾಶನಮುಖಂ ದೀಪ್ತಂ ಪ್ರವಿಷ್ಟಂ ದ್ವಿಜಸತ್ತಮ ॥8॥
ಎಲೈ ಬ್ರಾಹ್ಮಣಶ್ರೇಷ್ಠನೇ, ಹೀಗೆ ಹೇಳಲ್ಪಟ್ಟ ರಾಜರ್ಷಿಯಾದ ಅವನು ತಕ್ಷಕನಾಗನು ಜ್ವಲಿಸುವ ಅಗ್ನಿಯಮುಖದಲ್ಲಿ ಪ್ರವಿಷ್ಟನಾದನು ಎಂದೇ ತಿಳಿದನು.
ತತೋಽಬ್ರವೀನ್ಮಂತ್ರವಿದಃ ಕರ್ಮಜ್ಞಾನ್ ಬ್ರಾಹ್ಮಣಾಂಸ್ತದಾ |

ಆಹರಿಷ್ಯಾಮಿ ತತ್ಸತ್ರಂ ಸಂಭಾರಾಃ ಸಂಭ್ರಿಯಂತು ಮೇ ॥9॥
ಅನಂತರ ಅವನು ಮಂತ್ರವೇತ್ತರೂ, ಕರ್ಮವನ್ನು ತಿಳಿದವರೂ ಆದ ಬ್ರಾಹ್ಮಣರನ್ನು ಕುರಿತು ಆ ಯಾಗವನ್ನು ನಾನು ಆಚರಿಸುವೆನು. ಅದಕ್ಕೆ ಬೇಕಾದ ಸಾಮಗ್ರಿಗಳನ್ನು ನನ್ನ ಸಲುವಾಗಿ ಸಂಗ್ರಹಿಸಿ ಎಂದು ಹೇಳಿದನು.
ತತಸ್ತ ಋತ್ವಿಜಸ್ತಸ್ಯ ಶಾಸ್ತ್ರೇಣ ದ್ವಿಜಸತ್ತಮ |
ದೇಶಂ ತಂ ಮಾಪಯಾಮಾಸುರ್ಯಜ್ಞಾಯತನಕಾರಣಾತ್ ॥10॥
ಎಲೈ ಬ್ರಾಹ್ಮಣಶ್ರೇಷ್ಠನೇ, ಅನಂತರ ಅವನ ಋತ್ವಿಜರು ಶಾಸೊತ್ರೇಕ್ತವಿಧಾನದಿಂದ ಯಜ್ಞಶಾಲೆಯನ್ನು ನಿರ್ಮಾಣಮಾಡಲು ಭೂಮಿಯನ್ನು ಅಳೆಸಿದರು.
ಯಥಾವಜ್ಞಾನವಿದ್ವಾಂಸಃ ಸರ್ವೇ ವಿದ್ಯಾಪರಾಂಗತಾಃ |
ಋದ್ಧ್ಯಾ ಪರಮಯಾ ಯುಕ್ತಮಿಷ್ಟಂ ವಿದ್ವಜ್ಜನಾಯುತಮ್ ॥11॥
ಪ್ರಭೂತಧನಧಾನ್ಯಾಢ್ಯಮ್ ಋತ್ವಿಜಃ ಸುನಿವೇಶಿತಮ್ |
ನಿರ್ಮಾಯ ಚಾಪಿ ವಿಧಿವದ್ ಯಜ್ಞಾಯತನಮುತ್ತಮಮ್ |
ರಾಜಾನಂ ದೀಕ್ಷಯಾಮಾಸುಃ ಸರ್ಪಸತ್ರಾಯ ವೈ ದ್ವಿಜಾಃ ॥12॥
ಸರಿಯಾದ ಜ್ಞಾನವನ್ನು ಹೊಂದಿದ್ದ, ವಿದ್ಯಾಪಾರಂಗತರಾದ, ಆ ಎಲ್ಲಾ ಋತ್ವಿಜರು ಪರಮಸಮೃದ್ಧಿಯಿಂದ ಕೂಡಿದ, ವಿದ್ವಜ್ಜನಾಶ್ರಯವಾದ, ಬಹಳವಾದ ಧನಧಾನ್ಯಗಳಿಂದ ತುಂಬಿದ, ಭದ್ರವಾಗಿ ಕಟ್ಟಲ್ಪಟ್ಟ ಶ್ರೇಷ್ಠವಾದ ಯಜ್ಞಶಾಲೆಯನ್ನು ವಿಧಿಪೂರ್ವಕವಾಗಿ ನಿರ್ಮಾಣಮಾಡಿ ಸರ್ಪಸತ್ರದ ಸಲುವಾಗಿ ರಾಜನನ್ನು ದೀಕ್ಷಿತನನ್ನಾಗಿ ಮಾಡಿದರು.
ಇದಂ ಚಾಸೀತ್ ತತ್ರ ಪೂರ್ವಂ ಸರ್ಪಸತ್ರೇ ಭವಿಷ್ಯತಿ |
ನಿಮಿತ್ತಂ ಮಹದುತ್ಪನ್ನಂ ಯಜ್ಞವಿಘ್ನಕರಂ ತದಾ ॥13॥
ಇನ್ನೂ ಸರ್ಪಸತ್ರವು ಮುಂದೆ ನಡೆಯಬೇಕಾಗಿದ್ದ ಆ ಸಂದರ್ಭದಲ್ಲಿ ಮೊದಲೇ ಅಲ್ಲಿ ಯಜ್ಞಕ್ಕೆ ವಿಘ್ನವನ್ನು ತರುವ ದೊಡ್ಡ ಸೂಚನೆಯು ಉಂಟಾಯಿತು.
ಯಜ್ಞಸ್ಯಾಯತನೇ ತಸ್ಮಿನ್ ಕ್ರಿಯಮಾಣೇ ವಚೋಽಬ್ರವೀತ್|
ಸ್ಥಪತಿರ್ಬುದ್ಧಿಸಂಪನ್ನೋ ವಾಸ್ತುವಿದ್ಯಾವಿಶಾರದಃ |
ಇತ್ಯಬ್ರವೀತ್ ಸೂತ್ರಧಾರಃ ಸೂತಃ ಪೌರಾಣಿಕಸ್ತದಾ ॥14॥
ಯಜ್ಞಶಾಲೆಯ ನಿರ್ಮಾಣ ಮಾಡಲ್ಪಡುತ್ತಿರಲು ವಾಸ್ತುವಿದ್ಯಾ- ವಿಶಾರದನೂ, ಮೇಧಾವಿಯೂ ಆದ ಸ್ಥಪತಿಯು (ತಾನೇ ರಾಜನಿಗೆ ಹೇಳುವುದಕ್ಕೆ ಹೆದರಿ) ರಾಜನ ವೃದ್ಧಸಾರಥಿಯ ಮೂಲಕ ಈ ಮಾತನ್ನು ಹೇಳಿದನು.
ಯಸ್ಮಿನ್ ಕಾಲೇ ಚ ದೇಶೇ ವಃ ಸ್ಥಾಪನೇಯಂ ಪ್ರಕೀರ್ತಿತಮ್ |
ಬ್ರಾಹ್ಮಣಂ ಕಾರಣಂ ಕೃತ್ವಾ ನಾಯಂ ಸಂಸ್ಥಾಪ್ಯತೇ ಕ್ರತುಃ ॥15॥
ಈ ನಿಮ್ಮ ಯಜ್ಞವು ಯಾವ ದೇಶದಲ್ಲಿ ಮತ್ತು ಕಾಲದಲ್ಲಿ ಸಮಾಪ್ತಿಗೊಳ್ಳಬೇಕೆಂದು ಸಂಕಲ್ಪಿತವಾಗಿದೆಯೋ, ಒಬ್ಬ ಬ್ರಾಹ್ಮಣ-ನಿಮಿತ್ತದಿಂದ ಈ ಯಜ್ಞವು ಹಾಗೆ ಸಮಾಪ್ತಿಗೊಳ್ಳುವುದಿಲ್ಲ.
ಏತಚ್ಛ್ರುತ್ವಾ ಚ ರಾಜಾ ಸ ಪ್ರಾಗ್ದೀಕ್ಷಾ ಕಾಲಮಬ್ರವೀತ್ |
ಕ್ಷತ್ತಾರಂ ನೇಹ ಮೇ ಕಶ್ಚಿದಜ್ಞಾತಃ ಪ್ರವಿಶೇದಿತಿ ॥16॥
ಯಜ್ಞದೀಕ್ಷೆಗಿಂತ ಪೂರ್ವದಲ್ಲಿಯೇ ಈ ಮಾತನ್ನು ಕೇಳಿದ ರಾಜನು ಸಾರಥಿಯನ್ನು ಕುರಿತು ನನಗೆ ತಿಳಿಯದಂತೆ ಇಲ್ಲಿ ಯಾರೂ ಪ್ರವೇಶವನ್ನು ಮಾಡಬಾರದು ಎಂದು ಹೇಳಿದನು.
ತತಃ ಕರ್ಮ ಪ್ರವವೃಧೇ ಸರ್ಪಸತ್ರೇ ವಿಧಾನತಃ |
ಪರ್ಯಕ್ರಾಮಂಶ್ಚ ವಿಧಿವತ್ ಸ್ವೇ ಸ್ವೇ ಕರ್ಮಣಿ ಯಾಜಕಾಃ ॥17॥
ಅನಂತರ ಸರ್ಪಸತ್ರದಲ್ಲಿ ಶಾಸ್ತ್ರವಿಧಾನದಿಂದ ಕರ್ಮವು ಪ್ರಾರಂಭವಾಯಿತು. ಯಾಜಕರು ವಿಧಿವತ್ತಾಗಿ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾದರು.
ವಿಧಾಯ ಕೃಷ್ಣವಾಸಾಂಸಿ ಧೂಮಸಂರಕ್ತಲೋಚನಾಃ |
ಜುಹುವುರ್ಮಂತ್ರವಚ್ಚೈವ ಸಮಿದ್ಧಂ ಜಾತವೇದಸಮ್ ॥18॥
ಕೃಷ್ಣವಸ್ತ್ರಗಳನ್ನು ಧರಿಸಿ, ಧೂಮದಿಂದ ಕೆಂಪಾದ ಕಣ್ಣುಳ್ಳವರಾಗಿ ಸಮಿದ್ಧವಾದ ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಹೋಮವನ್ನು ಮಾಡಿದರು.
ಕಂಪಯಂತಶ್ಚ ಸರ್ವೇಷಾಮುರಗಾಣಾಂ ಮನಾಂಸಿ ತೇ |
ಸರ್ಪಾನಾಜುಹುವುಸ್ತತ್ರ ಸರ್ವಾನಗ್ನಿಮುಖೇ ತದಾ ॥19॥
ಅವರು ಎಲ್ಲಾ ಉರಗಗಳ ಮನಸ್ಸನ್ನು ನಡುಗಿಸುತ್ತಾ, ಅಲ್ಲಿ ಅಗ್ನಿಮುಖದಲ್ಲಿ ಆ ಎಲ್ಲಾ ಸರ್ಪಗಳನ್ನೂ ಆಹ್ವಾನಿಸಿದರು.
ತತಃ ಸರ್ಪಾಃ ಸಮಾಪೇತುಃ ಪ್ರದೀಪ್ತೇ ಹವ್ಯವಾಹನೇ |
ವಿವೇಷ್ಟಮಾನಾಃ ಕೃಪಣಾ ಆಹ್ವಯಂತಃ ಪರಸ್ಪರಮ್ ॥20॥
ಆಗ ಉರಿಯುತ್ತಿರುವ ಅಗ್ನಿಯಲ್ಲಿ ಸರ್ಪಗಳು ಹೊರಳಾಡುತ್ತಾ, ಕಾರ್ಪಣ್ಯದಿಂದ ಕೂಡಿ, ಒಬ್ಬರನ್ನೊಬ್ಬರು ಕರೆಯುತ್ತಾ ಬಿದ್ದವು.
ವಿಸ್ಫುರಂತಃ ಶ್ವಸಂತಶ್ಚ ವೇಷ್ಟಯಂತಸ್ತಥಾಪರೇ |
ಪುಚ್ಛೈಃ ಶಿರೋಭಿಶ್ಚ ಭೃಶಂ ಚಿತ್ರಭಾನುಂ ಪ್ರಪೇದಿರೇ ॥21॥
ಇನ್ನೂ ಕೆಲವು ಸರ್ಪಗಳು ಒದ್ದಾಡುತ್ತಾ, ನಿಟ್ಟುಸಿರನ್ನು ಬಿಡುತ್ತಾ, ಸಿಂಬಿಗಳನ್ನು ಸುತ್ತಿಕೊಂಡು, ತಲೆ ಮತ್ತು ಬಾಲಗಳನ್ನು ಅಲ್ಲಾಡಿಸುತ್ತಾ, ಎಲ್ಲವೂ ಅಗ್ನಿಯೊಳಗೆ ಬಿದ್ದವು.

ಶ್ವೇತಾಃ ಕೃಷ್ಣಾಶ್ಚ ರಕ್ತಾಶ್ಚ ಸ್ಥವಿರಾಃ ಶಿಶವಸ್ತಥಾ |
ರವಂತೋ ಭೈರವಾನ್ ನಾದಾನ್ ಪೇತುರ್ದೀಪ್ತೇ ವಿಭಾವಸೌ ॥22॥
ಬಿಳಿಯ ಬಣ್ಣದ, ಕಪ್ಪುಬಣ್ಣದ, ಕೆಂಪುಬಣ್ಣದ, ವಯಸ್ಸಾದ ಮತ್ತು ಶಿಶುಗಳಾದ ಸರ್ಪಗಳು ಭೈರವನಾದವನ್ನು ಮಾಡುತ್ತಾ ಪ್ರದೀಪ್ತವಾದ ಅಗ್ನಿಯಲ್ಲಿ ಬಿದ್ದವು.
ಕ್ರೋಶೋ ಯೋಜನಮಾತ್ರೋ ಹಿ ಗೋಕರ್ಣಸ್ಯ ಪ್ರಮಾಣತಃ |
ಪತಂತ್ಯಜಸ್ರಂ ವೇಗೇನ ಚಾಶ್ನಾವಗ್ನಿಮತೋಽಪರೇ ॥23॥
ಒಂದು ಕ್ರೋಶದಷ್ಟು ಉದ್ದವಾದಂತಹ, ಒಂದು ಯೋಜನದಷ್ಟು ಉದ್ದವಾದಂತಹ, ಒಂದು ಗೇಣಿನಷ್ಟು ಚಿಕ್ಕದಾದಂತಹ ಸರ್ಪಗಳು ಸತತವಾಗಿ ವೇಗದಿಂದ ಸುಕ್ಕಿನಲ್ಲಿ ಬಿದ್ದು ಅಲ್ಲಿಂದ ಅಗ್ನಿಯೊಳಗೆ ಬಿದ್ದವು. ಉಳಿದ ಸರ್ಪಗಳೂ ಅಗ್ನಿಯಲ್ಲಿ ಬಿದ್ದವು.
ಏವಂ ಶತಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಅವಶಾನಿ ಪ್ರವಿಷ್ಟಾನಿ ಪನ್ನಗಾನಾಂ ದ್ವಿಜೋತ್ತಮ ॥24॥
ಎಲೈ ಬ್ರಾಹ್ಮಣಶ್ರೇಷ್ಠನೇ, ಹೀಗೆ ನೂರು ಸಾವಿರಗಟ್ಟಲೆ ಅಥವಾ ಪ್ರಯುತಗಟ್ಟಲೆ ಅಥವಾ ಅರ್ಬುದಗಳಗಟ್ಟಲೆ ಸರ್ಪಗಳು ಅವಶವಾಗಿ ಅಗ್ನಿಯನ್ನು ಪ್ರವೇಶಿಸಿದವು.
ಉಂದುರಾ ಇವ ತತ್ರಾನ್ಯೇ ಹಸ್ತಿಹಸ್ತಾ ಇವಾಪರೇ |
ಮತ್ತಾ ಇವ ಚ ಮಾತಂಗಾ ಮಹಾಕಾಯಾ ಮಹಾಬಲಾಃ ॥25॥
ಉಚ್ಚಾವಚಾಶ್ಚ ಬಹವೋ ನಾನಾವರ್ಣಾ ವಿಷೋಲ್ಬಣಾಃ |
ಘೋರಾಶ್ಚ ಪರಿಘಪ್ರಖ್ಯಾ ದಂದಶೂಕಾ ಮಹಾಬಲಾಃ |
ಪ್ರಪೇತುರಗ್ನಾವುರಗಾ ಮಾತೃವಾಗ್ದಂಡಪೀಡಿತಾಃ ॥26॥
ಒಂದು ಮೂಷಿಕಪ್ರಮಾಣದ ಗಾತ್ರದ ಸರ್ಪಗಳೂ, ಇನ್ನೂ ಕೆಲವು ಆನೆಯ ಸೊಂಡಿಲಿನ ಗಾತ್ರದ ಸರ್ಪಗಳೂ, ಇನ್ನೂ ಕೆಲವು ಮದಿಸಿದ ಆನೆಗಳಂತೆ ದೊಡ್ಡ ದೇಹವನ್ನೂ ಮಹಾಬಲವನ್ನು ಹೊಂದಿದ ಸರ್ಪಗಳೂ, ಶ್ರೇಷ್ಠವಾದ ಮತ್ತು ಕನಿಷ್ಠವಾದ ಅನೇಕವರ್ಣಗಳಿಂದ ಕೂಡಿದ, ವಿಷ ಉಲ್ಬಣವಾದ ಸರ್ಪಗಳೂ, ಕ್ರೂರರಾದ, ಒನಕೆಯಂತಿರುವ, ಯಾವಾಗಲೂ ಕಚ್ಚುವ ಸ್ವಭಾವವುಳ್ಳ, ಮಹಾಬಲವುಳ್ಳ ಸರ್ಪಗಳೂ, ತಾಯಿಯಾದ ಕದ್ರುವಿನ ಶಾಪಕ್ಕೆ ಒಳಗಾಗಿ ಅಗ್ನಿಯಲ್ಲಿ ಬಿದ್ದವು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
*****

## ನಲವತ್ತೇಳನೆಯ ಅಧ್ಯಾಯ

(ಸರ್ಪಸತ್ರದಲ್ಲಿ ಭಾಗವಹಿಸಿದ ಋತ್ವಿಜರ ನಾಮಕೀರ್ತನೆ. ವಾಸುಕಿಯಿಂದ ತನ್ನ ತಂಗಿಯನ್ನು ಕುರಿತು ಆಸ್ತೀಕನನ್ನು ಕಳುಹಿಸಿ ಸರ್ಪಯಾಗವನ್ನು ನಿಲ್ಲಿಸುವಂತೆ ಸೂಚನೆ.)
ಶೌನಕಃ
ಸರ್ಪಸತ್ರೇ ತು ವೈ ರಾಜ್ಞಃ ಪಾಂಡವೇಯಸ್ಯ ಧೀಮತಃ |
ಜನಮೇಜಯಸ್ಯ ಕೇ ವಾಽಽಸನ್ ಋತ್ವಿಜಃ ಪರಮರ್ಷಯಃ ॥1॥
ಮೇಧಾವಿಯಾದ ಪಾಂಡುವಂಶೋದ್ಭವನಾದ ಜನಮೇಜಯರಾಜನ ಸರ್ಪಸತ್ರದಲ್ಲಿ ಯಾವ ಶ್ರೇಷ್ಠರಾದ ಋಷಿಗಳು ಋತ್ವಿಜರಾಗಿದ್ದರು?
ಕೇ ಸದಸ್ಯಾ ಬಭೂವುಶ್ಚ ತಸ್ಮಿನ್ ಸತ್ರೇ ಸುದಾರುಣೇ |
ವಿಷಾದಜನನೇಽತ್ಯರ್ಥಂ ಪನ್ನಗಾನಾಂ ಭಯಾವಹೇ ॥2॥
ಅತ್ಯಂತ ವಿಷಾದಕರವಾದ, ಸರ್ಪಗಳಿಗೆ ಭಯವನ್ನುಂಟು ಮಾಡುವ, ಘೋರವಾದ ಆ ಸತ್ರದಲ್ಲಿ ಯಾರು ಸದಸ್ಯರಾಗಿದ್ದರು?
ಸರ್ವಂ ವಿಸ್ತರತಸ್ತಾತ ಭವಾನ್ ವ್ಯಾಖ್ಯಾತುಮರ್ಹತಿ |
ಸರ್ಪಸತ್ರವಿಧಾನಜ್ಞಾ ವಿಜ್ಞೇಯಾಸ್ತೇಽಪಿ ಸೂತಜ ॥3॥
ಪ್ರೀತಿಪಾತ್ರನೇ, ಇವೆಲ್ಲವನ್ನೂ ನೀನು ವಿಸ್ತಾರವಾಗಿ ಹೇಳಬೇಕು. ಎಲೈ ಸೂತಪುತ್ರನೇ, ಸರ್ಪಸತ್ರದ ವಿಧಾನವನ್ನು ತಿಳಿದವರನ್ನೂ ನಾನು ತಿಳಿದುಕೊಳ್ಳಬೇಕಾಗಿದೆ.
ಸೂತಃ
ಅಹಂ ತೇ ಕಥಯಿಷ್ಯಾಮಿ ನಾಮಾನೀಹ ಮನೀಷಿಣಾಮ್ |
ಯ ಋತ್ವಿಜಃ ಸದಸ್ಯಾಶ್ಚ ತಸ್ಯಾಸನ್ ನೃಪತೇಸ್ತದಾ ॥4॥
ಆ ರಾಜನ ಸರ್ಪಸತ್ರದಲ್ಲಿ ಮೇಧಾವಿಗಳಾದ ಋತ್ವಿಜರೂ ಮತ್ತು ಸದಸ್ಯರೂ ಯಾರಾಗಿದ್ದರೆಂದು ಅವರ ಹೆಸರುಗಳನ್ನು ನಿನಗೆ ಹೇಳುವೆನು.
ತತ್ರ ಹೋತಾ ಬಭೂವಾಥ ಬ್ರಾಹ್ಮಣಶ್ಚಂಡಭಾರ್ಗವಃ |
ಚ್ಯವನಸ್ಯಾನ್ವಯೇ ಜಾತಃ ಖ್ಯಾತೋ ವೇದವಿದಾಂ ವರಃ ॥5॥

ಅಲ್ಲಿ ಚ್ಯವನಕುಲದಲ್ಲಿ ಜನಿಸಿದ, ವೇದವೇತ್ತೃಗಳಲ್ಲಿ ಶ್ರೇಷ್ಠನಾದ, ಪ್ರಖ್ಯಾತನಾದ, ಚಂಡಭಾರ್ಗವನೆಂಬ ಬ್ರಾಹ್ಮಣನು ಹೋತೃವಾಗಿದ್ದನು.
ಉದ್ಗಾತಾ ಬ್ರಾಹ್ಮಣೋ ವೃದ್ಧೋ ವಿದ್ವಾನ್ ಕೌತ್ಸೋಽಥ ಜೈಮಿನಿಃ |
ಬ್ರಹ್ಮಾಽಭವಚ್ಛಾರ್ಙ್ಗರವೋಽಥಾಧ್ವರ್ಯುರ್ಬೋಧಿಪಿಂಗಲಃ ॥6॥
ವಿದ್ವಾಂಸನೂ, ಕುತ್ಸಕುಲದಲ್ಲಿ ಜನಿಸಿದವನೂ, ವೃದ್ಧನೂ, ಬ್ರಾಹ್ಮಣನೂ ಆದ ಜೈಮಿನಿಯು ಉದ್ಗಾತೃವಾಗಿದ್ದನು. ಶಾರ್ಙ್ಗರವನು ಬ್ರಹ್ಮನಾಗಿದ್ದನು. ಬೋಧಿಪಿಂಗಳನು ಅಧ್ವರ್ಯುವಾಗಿದ್ದನು.
ಸದಸ್ಯಶ್ಚಾಭವದ್ ವ್ಯಾಸಃ ಪುತ್ರಶಿಷ್ಯಸಹಾಯವಾನ್ |
ಉದ್ದಾಲಕಃ ಕಾಮಠಕಃ ಶ್ವೇತಕೇತುಶ್ಚ ಶಾಂಡಿಲಃ ॥7॥
ಅಸಿತೋ ದೇವಲಶ್ಚೈವ ನಾರದಃ ಪರ್ವತಸ್ತಥಾ |
ಆತ್ರೇಯಃ ಕುಂಡಜಠರೌ ದ್ವಿಜಃ ಕಿರಿಕಟಸ್ತಥಾ ॥8॥
ವಾತ್ಸ್ಯಃ ಶ್ರುತಶ್ರವಾ ವೃದ್ಧಃ ತಪಸ್ಸ್ವಾಧ್ಯಾಯಶೀಲವಾನ್ |
ಕಹೋಲೋ ದೇವಶರ್ಮಾ ಚ ಮೌದ್ಗಲ್ಯಃ ಶಮಠೋರಗಃ ॥9॥
ಏತೇ ಚಾನ್ಯೇ ಚ ಬಹವೋ ಬ್ರಾಹ್ಮಣಾಃ ಸಂಶಿತವ್ರತಾಃ |
ಸದಸ್ಯಾಶ್ಚಾಭವಂಸ್ತತ್ರ ಸತ್ರೇ ಪಾರಿಕ್ಷಿತಸ್ಯ ಹ ॥10॥
ಪುತ್ರ ಮತ್ತು ಶಿಷ್ಯರಿಂದ ಒಡಗೂಡಿದ ವೇದವ್ಯಾಸರು ಅಲ್ಲಿ ಸದಸ್ಯರಾಗಿದ್ದರು. ಉದ್ದಾಲಕ, ಕಾಮಠಕ, ಶ್ವೇತಕೇತು, ಶಾಂಡಿಲ, ಅಸಿತ, ದೇವಲ, ನಾರದ, ಪರ್ವತ, ಆತ್ರೇಯ, ಕುಂಡಜಟರರು, ಕಿರಿಕಟ, ವಾತ್ಸ್ಯ, ತಪಸ್ವಾಧ್ಯಾಯಶೀಲನಾದ, ವೃದ್ಧನಾದ ಶ್ರುತಶ್ರವ, ಕಹೋಳ, ದೇವಶರ್ಮ, ಮೌದ್ಗಲ್ಯ, ಶಮಠೋರಗ ಇವರೂ ಮತ್ತು ಇನ್ನೂ ಅನೇಕ ವ್ರತಧಾರಿಗಳಾದ ಶ್ರೇಷ್ಠಬ್ರಾಹ್ಮಣರು ಪರೀಕ್ಷಿದ್ರಾಜನ ಸರ್ಪಸತ್ರದಲ್ಲಿ ಅಲ್ಲಿ ಸದಸ್ಯರಾಗಿದ್ದರು.
ಜುಹ್ವತ್ಸ್ವೃತ್ವಿಕ್ಷ್ವಥ ತದಾ ಸರ್ಪಸತ್ರೇ ಮಹಾಕ್ರತೌ |
ಅಹಯಃ ಪ್ರಾಪತಂಸ್ತತ್ರ ಸರ್ವಪ್ರಾಣಿಭಯಾವಹಾಃ ॥11॥
ಋತ್ವಿಜರು ಮಹಾಕ್ರತುವಾದ ಆ ಸರ್ಪಸತ್ರದಲ್ಲಿ ಹೋಮವನ್ನು ಮಾಡುತ್ತಿರಲು ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟು ಮಾಡುವ ಸರ್ಪಗಳು ಅಲ್ಲಿ ಅಗ್ನಿಯೊಳಗೆ ಬಿದ್ದವು.
ವಸಾಮೇದೋವಹಾಃ ಕುಲ್ಯಾ ನಾಗಾನಾಂ ಸಂಪ್ರವರ್ತಿತಾಃ |
ವವೌ ಗಂಧಸ್ತು ತುಮುಲೋ ದಹ್ಯತಾಮನಿಶಂ ತದಾ ॥12॥
ಸರ್ಪಗಳ ಕೊಬ್ಬು ಮತ್ತು ಮೇದಸ್ಸಿನಿಂದ ಉಂಟಾದ ಸಣ್ಣನದಿಗಳು ಅಲ್ಲಿ ಹರಿದವು. ಸತತವಾಗಿ ದಹಿಸಲ್ಪಡುವ ಆ ಸರ್ಪಗಳ ತೀವ್ರವಾದ ಗಂಧವು ಎಲ್ಲಾ ಕಡೆಯಲ್ಲಿಯೂ ಹರಡಿತು.
ಪತತಾಂ ಚೈವ ನಾಗಾನಾಂ ವಿಷ್ಠಿತಾನಾಂ ತಥಾಂಬರೇ |
ಅಶ್ರೂಯತಾನಿಶಂ ಶಬ್ದೋ ದಹ್ಯತಾಂ ಚಾಗ್ನಿನಾ ಭೃಶಮ್ ॥13॥
ಬೀಳುತ್ತಿರುವ ಮತ್ತು ಆಕಾಶದಲ್ಲಿ ನಿಂತಿರುವ ಮತ್ತು ಅಗ್ನಿಯಲ್ಲಿ ದಹಿಸಲ್ಪಡುವ ಸರ್ಪಗಳ ತೀವ್ರವಾದ ಶಬ್ದವು ಸತತವಾಗಿ ಕೇಳಿಬರುತ್ತಿದ್ದಿತು.
ತಕ್ಷಕಸ್ತು ಸ ನಾಗೇಂದ್ರಃ ಪುರಂದರನಿವೇಶನಮ್ |
ಗತಃ ಶ್ರುತ್ವೈವ ರಾಜಾನಂ ದೀಕ್ಷಿತಂ ಜನಮೇಜಯಮ್ ॥14॥
ನಾಗೇಂದ್ರನಾದ ತಕ್ಷಕನು ಜನಮೇಜಯರಾಜನು ಸರ್ಪಸತ್ರಕ್ಕಾಗಿ ದೀಕ್ಷಿತನಾಗಿದ್ದಾನೆ ಎಂಬ ವಾರ್ತೆಯನ್ನು ಕೇಳಿದ ತಕ್ಷಣವೇ ಇಂದ್ರನ ಮನೆಗೆ ಹೋದನು.
ತತಃ ಸರ್ವಂ ಯಥಾವೃತ್ತಮಾಖ್ಯಾಯ ಭುಜಗೋತ್ತಮಃ |
ಅಗಚ್ಛತ್ ಶರಣಂ ಭೀತೋ ನಮಸ್ಕೃತ್ವಾ ಪುರಂದರಮ್ ॥15॥
ಭುಜಗಶ್ರೇಷ್ಠನಾದ ಅವನು ನಡೆದುದೆಲ್ಲವನ್ನೂ ಇಂದ್ರನಿಗೆ ಯಥಾವತ್ತಾಗಿ ನಿರೂಪಿಸಿ ಭೀತನಾಗಿ, ಇಂದ್ರನನ್ನು ನಮಸ್ಕರಿಸಿ ಅವನಿಗೆ ಶರಣಾಗತನಾದನು.
ತಮಿಂದ್ರಃ ಪ್ರಾಹ ಸುಪ್ರೀತೋ ನ ತವಾಸ್ತೀಹ ತಕ್ಷಕ |
ಭಯಂ ನಾಗೇಂದ್ರ ತಸ್ಮಾದ್ ವೈ ಸರ್ಪಸತ್ರಾತ್ ಕಥಂಚನ ॥16॥
ಸುಪ್ರೀತನಾದ ಇಂದ್ರನು ಅವನನ್ನು ಕುರಿತು ನಾಗೇಂದ್ರನಾದ ತಕ್ಷಕನೇ, ಆ ಸರ್ಪಸತ್ರದಿಂದ ನಿನಗೆ ಯಾವ ರೀತಿಯಲ್ಲಿಯೂ ಭಯವಿಲ್ಲ ಎಂದು ಹೇಳಿದನು.
ಪ್ರಸಾದಿತೋ ಮಯಾ ಪೂರ್ವಂ ತವಾರ್ಥಾಯ ಪಿತಾಮಹಃ |
ತಸ್ಮಾತ್ ತವ ಭಯಂ ನಾಸ್ತಿ ವ್ಯೇತು ತೇ ಮಾನಸೋ ಜ್ವರಃ ॥17॥
ನಾನು ಹಿಂದೆ ನಿನ್ನ ಸಲುವಾಗಿ ಬ್ರಹ್ಮದೇವರನ್ನು ಕೇಳಿ ಅವರನ್ನು ಪ್ರಸನ್ನೀಕರಿಸಿಕೊಂಡೆ. ಆದ್ದರಿಂದ ನಿನಗೆ ಭಯವಿಲ್ಲ. ಮನಸ್ಸಿನ ಸಂತಾಪವನ್ನು ತ್ಯಜಿಸು.
ಏವಮಾಶ್ವಾಸಿತಸ್ತೇನ ತತಃ ಸ ಭುಜಗೋತ್ತಮಃ |
ಉವಾಸ ಭವನೇ ತಸ್ಯ ಶಕ್ರಸ್ಯ ಮುದಿತಃ ಸುಖೀ ॥18॥
ಹೀಗೆ ಆಶ್ವಾಸನೆಯನ್ನು ಪಡೆದ ಆ ಭುಜಗಶ್ರೇಷ್ಠನಾದ ತಕ್ಷಕನು ಇಂದ್ರನ ಮನೆಯಲ್ಲಿ ಸಂತೋಷದಿಂದ ಸುಖವಾಗಿ ವಾಸಮಾಡಿದನು.

ಅಜಸ್ರಂ ನಿಪತತ್ಸ್ವಗ್ನೌ  ನಾಗೇಷು ಭೃಶದುಃಖಿತಃ |
ಅಲ್ಪಶೇಷಪರೀವಾರೋ ವಾಸುಕಿಃ ಪರ್ಯತಪ್ಯತ   ||19||
ನಾಗಗಳು ಸತತವಾಗಿ ಅಗ್ನಿಯಲ್ಲಿ ಬೀಳುತ್ತಿರಲು ಈಗ ಅಲ್ಪ ಪರಿವಾರವನ್ನು ಹೊಂದಿದ್ದ ವಾಸುಕಿಯು ಬಹಳ ದುಃಖಿತನಾಗಿ ಪರಿತಾಪವನ್ನು ಪಟ್ಟನು.
ಕಶ್ಮಲಂ ಪ್ರಾವಿಶದ್ ಘೋರಂ ವಾಸುಕಿಃ ಪನ್ನಗೇಶ್ವರಃ |
ಸ ಘೂರ್ಣಮಾನಹೃದಯೋ ಭಗಿನೀಮಿದಮಬ್ರವೀತ್           ||20||
ಪನ್ನಗೇಶ್ವರನಾದ ವಾಸುಕಿಯು ಘೋರವಾದ ಮೋಹಕ್ಕೆ ಒಳಗಾದನು. ಅವನು ಬಿರಿಯುತ್ತಿರುವ ಹೃದಯದಿಂದ ತಂಗಿಯನ್ನು ಕುರಿತು ಈ ಮಾತನ್ನು ಆಡಿದನು.
ವಾಸುಕಿಃ
ದಹ್ಯಂತೇಽಂಗಾನಿ ಮೇ  ಭದ್ರೇ ದಿಶೋ ನ ಪ್ರತಿಭಾಂತಿ ಮಾಮ್ |
ಸೀದಾಮೀವ ಚ ಸಮ್ಮೋಹಾದ್ ಘೂರ್ಣತೀವ ಚ ಮೇ ಮನಃ ||
ಮಂಗಳಸ್ವರೂಪಳೇ, ನನ್ನ ಶರೀರದ ಅವಯವಗಳು ಉರಿಯುತ್ತಿವೆ. ನನಗೆ ದಿಕ್ಕುಗಳು ತೋಚುತ್ತಿಲ್ಲ. ಮೋಹದಿಂದ ನಾನು ನಾಶಹೊಂದುವಂತೆ ಕಾಣುತ್ತದೆ. ನನ್ನ ಮನಸ್ಸು ಬಿರಿದುಹೋಗುತ್ತಿದೆ.
ದೃಷ್ಟಿರ್ಭ್ರಮತಿ ಮೇಽತೀವ ಹೃದಯಂ ದೀರ್ಯತೀವ ಚ |
ಪತಿಷ್ಯಾಮ್ಯವಶೋಽದ್ಯಾಹಂ ತಸ್ಮಿನ್ ದೀಪ್ತೇ ವಿಭಾವಸೌ        ||22||
ನನ್ನ ಕಣ್ಣಿನ ದೃಷ್ಟಿಯು ಬಹಳವಾಗಿ ತಿರುಗುತ್ತಿದೆ. ನನ್ನ ಹೃದಯವು ಬಿರಿಯುವಂತೆ ತೋರುತ್ತದೆ. ಆ ದೀಪ್ತವಾದ ಅಗ್ನಿಯಲ್ಲಿ ನಾನೂ ಸಹ ಅವಶವಾಗಿ ಬೀಳುವೆನು.
ಪಾರೀಕ್ಷಿತಸ್ಯ ಯಜ್ಞೋಽಸೌ ವರ್ತತೇಽಸ್ಮಜ್ಜಿಘಾಂಸಯಾ |
ವ್ಯಕ್ತಂ ಮಯಾಽಪಿ ಗಂತವ್ಯಂ ಪಿತೃರಾಜನಿವೇಶನಮ್           ||23||
ಪರೀಕ್ಷಿತನ ಮಗನಾದ ಜನಮೇಜಯನ ಈ ಯಜ್ಞವು ನಮ್ಮನ್ನು ಕೊಲ್ಲುವ ಸಲುವಾಗಿ ನಡೆಯುತ್ತಿದೆ. ಖಂಡಿತವಾಗಿ ನಾನೂ ಸಹ ಯಮದೇವರ ಮನೆಗೆ ಹೋಗಬೇಕಾಗುತ್ತದೆ.
ಅಯಂ ಸ ಕಾಲಃ ಸಂಪ್ರಾಪ್ತೋ ಯದರ್ಥಮಸಿ ಮೇ ಸ್ವಸಃ |
ಜರತ್ಕಾರೋಃ ಪುರಾ ದತ್ತಾ ತ್ರಾಹ್ಯಸ್ಮಾನ್ ಸಹ ಬಾಂಧವಾನ್     ||24||
ತಂಗಿಯೇ, ಯಾವ ಉದ್ದೇಶದಿಂದ ನೀನು ಹಿಂದೆ ಜರತ್ಕಾರು ಋಷಿಗಳಿಗೆ ವಿವಾಹ ಮಾಡಿಕೊಡಲ್ಪಟ್ಟೆಯೋ ಅದರ ಪ್ರಯೋಜನದ ಕಾಲವು ಈಗ ಪ್ರಾಪ್ತವಾಗಿದೆ. ನನ್ನನ್ನೂ ಮತ್ತು ಬಂಧುಗಳನ್ನೂ ರಕ್ಷಿಸು.
ಆಸ್ತೀಕಃ ಕಿಲ ತಂ ಯಜ್ಞಂ ವರ್ತಮಾನಂ ಭುಜಂಗಮೇ |
ಪ್ರತಿಷೇತ್ಸ್ಯತಿ ಮಾಂ ಪೂರ್ವಂ ಸ್ವಯಮಾಹ ಪಿತಾಮಹಃ        ||25||
ಎಲೌ ಸರ್ಪಿಣಿಯೇ, ಆ ಯಜ್ಞವು ನಡೆಯುತ್ತಿರುವಾಗ ಆಸ್ತೀಕನು ಹೋಗಿ ಅದನ್ನು ನಿಲ್ಲಿಸುವನು ಎಂದು ಹಿಂದೆ ಬ್ರಹ್ಮದೇವರು ತಾವೇ ನನ್ನನ್ನು ಕುರಿತು ಹೇಳಿದ್ದರು.
ತದ್ ವತ್ಸೇ ಬ್ರೂಹಿ ವತ್ಸಂ ತದಾಸ್ತೀಕಂ ವೃದ್ಧಸಮ್ಮತಮ್ |
ಮಮಾದ್ಯ ತ್ವಂ ಸಭೃತ್ಯಸ್ಯ ಮೋಕ್ಷಾರ್ಥಂ ವೇದವಿತ್ತಮಮ್     ||26||
ಆದ್ದರಿಂದ ಎಲೌ ವತ್ಸೇ, ವೃದ್ಧಸಮ್ಮತನಾದ, ವೇದಜ್ಞರಲ್ಲಿ ಶ್ರೇಷ್ಠನಾದ, ವತ್ಸನಾದ ಆಸ್ತೀಕನಿಗೆ ಪರಿವಾರದಿಂದ ಕೂಡಿನ ನನ್ನನ್ನು ಈ ಸಂಕಟದಿಂದ ಮೋಚನೆಮಾಡಲು ಅಲ್ಲಿಗೆ ಹೋಗುವಂತೆ ಹೇಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ||
|| ಇತಿ ಆಸ್ತೀಕಪರ್ವಣಿ ಪಂಚತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
*****

ನಲವತ್ತೆಂಟನೆಯ ಅಧ್ಯಾಯ
(ಸರ್ಪಗಳನ್ನು ರಕ್ಷಿಸಲು ತಾಯಿಯಿಂದ ಆಸ್ತೀಕನಿಗೆ ಚೋದನೆ. ಆಸ್ತೀಕನಿಂದ ಸರ್ಪವೃತ್ತಾಂತವೇದನೆ.)
ಸೂತಃ
ತತ ಆಹೂಯ ಪುತ್ರಂ ಸ್ವಂ ಜರತ್ಕಾರುರ್ಭುಜಂಗಮಾ |
ವಾಸುಕೇರ್ನಾಗರಾಜಸ್ಯ ವಚನಾದಿದಮಬ್ರವೀತ್  ||1||
ಅನಂತರ ಸರ್ಪಿಣಿಯಾದ ಜರತ್ಕಾರುವು ಮಗನನ್ನು ಕರೆದು ನಾಗರಾಜನಾದ ವಾಸುಕಿಯ ಮಾತಿನಂತೆ ಹೀಗೆ ಮಾತನಾಡಿದಳು.
ಅಹಂ ತವ ಪಿತುಃ ಪುತ್ರ ಭ್ರಾತ್ರಾ ದತ್ತಾ ನಿಮಿತ್ತತಃ |
ಕಾಲಃ ಸ ಏಷ ಸಂಪ್ರಾಪ್ತಃ ತತ್ ಕುರುಷ್ವ  ಯಥಾತಥಮ್         ||2||
ಪುತ್ರನೇ, ನಾನು ನನ್ನ ಅಣ್ಣನಿಂದ ಒಂದು ಪ್ರಯೋಜನವನ್ನು ಉದ್ದೇಶಿಸಿ ನಿನ್ನ ತಂದೆಗೆ ಕೊಡಲ್ಪಟ್ಟೆ. ಆ ಪ್ರಯೋಜನದ ಕಾಲವು ಈಗ ಒದಗಿಬಂದಿದೆ. ಅದನ್ನು ಸರಿಯಾಗಿ ನೆರವೇರಿಸು.
ಆಸ್ತೀಕಃ
ಕಿನ್ನಿಮಿತ್ತಂ ಮಮ ಪಿತುಃ ದತ್ತಾ ತ್ವಂ ಮಾತುಲೇನ ಮೇ |

ತನ್ಮಮಾಚಕ್ಷ್ವ ತತ್ತ್ವೇನ ಶ್ರುತ್ವಾ ಕರ್ತಾಽಸ್ಮಿ ತತ್ ತಥಾ ॥3॥
ನೀನು ಯಾವ ಉದ್ದೇಶದಿಂದ ನನ್ನ ಸೋದರಮಾವನಿಂದ ನನ್ನ ತಂದೆಗೆ ಕೊಡಲ್ಪಟ್ಟೆ ಎಂಬುದನ್ನು ನನಗೆ ಹೇಳು. ಅದನ್ನು ಸರಿಯಾಗಿ ಕೇಳಿ ಅದರಂತೆ ಮಾಡುವೆನು.
ಸೂತಃ
ತತ ಆಚಷ್ಟ ಸಾ ತಸ್ಮೈ ಬಾಂಧವಾನಾಂ ಹಿತೈಷಿಣೀ |
ಭಗಿನೀ ನಾಗರಾಜಸ್ಯ ಜರತ್ಕಾರುರವಿಕ್ಲವಾ ॥4॥
ಆಗ ನಾಗರಾಜನಾದ ವಾಸುಕಿಯ ತಂಗಿಯಾದ ಜರತ್ಕಾರುವು ತನ್ನ ಬಂಧುಗಳ ಹಿತವನ್ನು ಬಯಸಿ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು, ಅವನಿಗೆ ಹೇಳಿದಳು.
ಭುಜಂಗಾನಾಮಶೇಷಾಣಾಂ ಮಾತಾ ಕದ್ರೂರಿತಿ ಸ್ಮೃತಾ |
ತಯಾ ಶಪ್ತಾ ಕ್ರುಧಿತಯಾ ಪುತ್ರಾ ಯಸ್ಮಾನ್ನಿಬೋಧ ತತ್ ॥5॥
ಎಲ್ಲಾ ಸರ್ಪಗಳಿಗೆ ತಾಯಿಯಾದವಳು ಕದ್ರು ಎಂದು ಶ್ರುತವಾಗಿದೆ. ಕೋಪಗೊಂಡ ಅವಳು ತನ್ನ ಪುತ್ರರನ್ನು ಏಕೆ ಶಪಿಸಿದಳು ಎಂಬುದನ್ನು ಕೇಳು.
ಉಚ್ಚೈಃಶ್ರವಸೋಽಶ್ವರಾಜ್ಞೋ ಯನ್ಮಿಥ್ಯಾ ಕುರುತೇ ಹ ಮಾ |
ವಿನತಾನಿಮಿತ್ತಂ ಪಣಿತೇ ದಾಸಭಾವಾಯ ಪುತ್ರಕಾಃ ॥6॥
ಜನಮೇಜಯಸ್ಯ ವೋ ಯಜ್ಞೇ ಧಕ್ಷ್ಯತ್ಯನಿಲಸಾರಥಿಃ |
ತತ್ರ ಪಂಚತ್ವಮಾಪನ್ನಾಃ ಪ್ರೇತಲೋಕಂ ಗಮಿಷ್ಯಥ ॥7॥
ಎಲೈ ಪುತ್ರರೇ, ವಿನತೆಯ ಜೊತೆಯಲ್ಲಿ ಅಶ್ವಶ್ರೇಷ್ಠವಾದ ಉಚ್ಚೈಃಶ್ರವಸ್ಸಿನ ಬಾಲದ ಬಣ್ಣದ ವಿಷಯದಲ್ಲಿ ದಾಸ್ಯಭಾವದ ಪಣವನ್ನು ಒಡ್ಡಿ, ಸ್ಪರ್ಧಿಸಿದಾಗ ಅದರ ಬಾಲವನ್ನು ಕಪ್ಪುವರ್ಣವುಳ್ಳದ್ದನ್ನಾಗಿ ನೀವು ಮಾಡಲಿಲ್ಲವಾದ ಕಾರಣ, ಜನಮೇಜಯನ ಯಜ್ಞದಲ್ಲಿ ಅಗ್ನಿಯು ನಿಮ್ಮನ್ನೆಲ್ಲಾ ಸುಡುವನು. ಅಲ್ಲಿ ಮರಣವನ್ನು ಹೊಂದಿ ನೀವು ಯಮಲೋಕವನ್ನು ಸೇರುವಿರಿ.
ತಾಂ ಚ ಶಪ್ತವತೀಮೇವಂ ಸಾಕ್ಷಾಲ್ಲೋಕಪಿತಾಮಹಃ |
ಏವಮಸ್ತ್ವಿತಿ ತದ್ವಾಕ್ಯಂ ಪ್ರೋವಾಚಾನುಮುಮೋದ ಚ ॥8॥
ಕದ್ರುವು ಹೀಗೆ ಶಾಪವನ್ನು ಕೊಡುತ್ತಿರಲು ಲೋಕಪಿತಾಮಹರಾದ ಬ್ರಹ್ಮದೇವರು ``ಹಾಗೆಯೇ ಆಗಲಿ'' ಎಂದು ಅದೇ ವಾಕ್ಯವನ್ನು ತಾವೂ ಒಮ್ಮೆ ಉಚ್ಚರಿಸಿ ಅನುಮೋದಿಸಿದರು.
ವಾಸುಕಿಶ್ಚಾಪಿ ತಚ್ಛ್ರುತ್ವಾ ಪಿತಾಮಹವಚಸ್ತದಾ |
ಅಮೃತೇ ಮಥಿತೇ ತಾತ ದೇವಾನ್ ಶರಣಮೇಯಿವಾನ್ ॥9॥
ಎಲೈ ಪ್ರೀತಿಪಾತ್ರನೇ, ಬ್ರಹ್ಮದೇವರ ಮಾತನ್ನು ಕೇಳಿದ ವಾಸುಕಿಯಾದರೋ, ಅಮೃತಮಥನವನ್ನು ಮಾಡಿದ ಮೇಲೆ ದೇವತೆಗಳಿಗೆ ಶರಣಾದನು.
ಸಿದ್ಧಾರ್ಥಾಶ್ಚ ಸುರಾಃ ಸರ್ವೇ ಪ್ರಾಪ್ಯಾಮೃತಮನುತ್ತಮಮ್ |
ಭ್ರಾತರಂ ಮೇ ಪುರಸ್ಕೃತ್ಯ ಪ್ರಜಾಪತಿಮುಪಾಗಮನ್ ॥10॥
ಶ್ರೇಷ್ಠವಾದ ಅಮೃತವನ್ನು ಪಡೆದು ಕೃತಕೃತ್ಯರಾಗಿದ್ದ ಎಲ್ಲಾ ದೇವತೆಗಳು ನನ್ನ ಅಣ್ಣನನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರ ಬಳಿಗೆ ಹೋದರು.
ತೇ ತಂ ಪ್ರಸಾದಯಾಮಾಸುಃ ದೇವಾಃ ಸರ್ವೇ ಪಿತಾಮಹಮ್ |
ರಾಜ್ಞಾ ವಾಸುಕಿನಾ ಸಾರ್ಧಂ ಸ ಶಾಪೋ ನ ಭವೇದಿತಿ ॥11॥
ಸರ್ಪರಾಜನಾದ ವಾಸುಕಿಯ ಜೊತೆಯಲ್ಲಿ ಹೋದ ಎಲ್ಲಾ ದೇವತೆಗಳು ಬ್ರಹ್ಮದೇವರನ್ನು ಪ್ರಸನ್ನೀಕರಿಸಿಕೊಂಡು, ಆ ಶಾಪದ ಕಾರ್ಯವು ಉಂಟಾಗದೇ ಇರಲಿ ಎಂದು ಒತ್ತಾಯಿಸಿದರು.
ದೇವಾಃ
ವಾಸುಕಿರ್ನಾಗರಾಜೋಽಯಂ ದುಃಖಿತೋ ಜ್ಞಾತಿಕಾರಣಾತ್ |
ಅಭಿಶಾಪಃ ಸ್ವಮಾತ್ರಾಽಸ್ಯ ಭಗವನ್ ನ ಭವೇತ್ ತಥಾ ॥12॥
ಈ ನಾಗರಾಜನಾದ ವಾಸುಕಿಯು ತನ್ನ ಬಂಧುಗಳ ನಾಶದ ನಿಮಿತ್ತದಿಂದ ದುಃಖಿತನಾಗಿದ್ದಾನೆ. ಪೂಜ್ಯರೇ, ತನ್ನ ತಾಯಿಯಿಂದ ಕೊಡಲ್ಪಟ್ಟ ಶಾಪವು ಇವನಿಗೆ ಹಾಗೆ ಆಗುವುದು ಬೇಡ.
ಬ್ರಹ್ಮಾ
ಜರತ್ಕಾರುರ್ಜರತ್ಕಾರುಂ ಯೋ ಭಾರ್ಯಾಂ ಸಮವಾಪ್ಸ್ಯತಿ |
ತತ್ರ ಜಾತೋ ದ್ವಿಜಃ ಶಾಪಾದ್ ಭುಜಗಾನ್ ಮೋಕ್ಷಯಿಷ್ಯತಿ ॥13॥
ಜರತ್ಕಾರು ಋಷಿಯು ಜರತ್ಕಾರು ಎಂಬ ಭಾರ್ಯೆಯನ್ನು ಪಡೆಯುವನು. ಅವಳಲ್ಲಿ ಹುಟ್ಟಿದ ಒಬ್ಬ ಬ್ರಾಹ್ಮಣನು ಸರ್ಪಗಳನ್ನು ಮೋಚನೆಗೊಳಿಸುವನು.
ಜರತ್ಕಾರುಃ
ಏತಚ್ಛ್ರುತ್ವಾ ತು ವಚನಂ ವಾಸುಕಿಃ ಪನ್ನಗೇಶ್ವರಃ |
ಪ್ರಾದಾನ್ಮಾಮಮರಪ್ರಖ್ಯ ತವ ಪಿತ್ರೇ ಮಹಾತ್ಮನೇ ॥14॥
ದೇವತೆಗಳಿಗೆ ಸಮಾನನಾದವನೇ, ಇದನ್ನು ಕೇಳಿ ಸರ್ಪರಾಜನಾದ ವಾಸುಕಿಯು ನನ್ನನ್ನು ಮಹಾತ್ಮನಾದ ನಿನ್ನ ತಂದೆಗೆ ವಿವಾಹ ಮಾಡಿಕೊಟ್ಟನು.

ಪ್ರಾಗೇವಾನಾಗತೇ ಕಾಲೇ ತತ್ರ ತ್ವಂ ಮಯ್ಯಜಾಯಥಾಃ |
ಅಯಂ ಸ ಕಾಲಃ ಸಂಪ್ರಾಪ್ತೋ ಭವಾನ್ನಸ್ತತ್ರತುಮರ್ಹತಿ |
ಭ್ರಾತರಂ ಚೈವ ಮೇ ತಸ್ಮಾತ್ ತ್ರಾತುಮರ್ಹಸಿ ಪಾವಕಾತ್ ॥15॥
ಇದು ಸರ್ಪಯಾಗಕ್ಕಿಂತಲೂ ಬಹಳ ಹಿಂದೆಯೇ ನಡೆದ ಘಟನೆ. ಆಗ ನೀನು ನನ್ನಲ್ಲಿ ಜನಿಸಿದೆ. ಆ ಪ್ರಯೋಜನದ ಕಾಲವು ಈಗ ಒದಗಿ ಬಂದಿದೆ. ನೀನು ನಮ್ಮೆಲ್ಲರನ್ನೂ ರಕ್ಷಿಸಬೇಕು. ನನ್ನ ಅಣ್ಣನನ್ನೂ ಆ ಅಗ್ನಿಯ ಭಯದಿಂದ ರಕ್ಷಿಸಬೇಕು.
ಅಮೋಘಂ ನಃ ಕೃತಂ ನ ತತ್ಸ್ಯಾತ್ ಯದಹಂ ತವ ಧೀಮತೇ |
ಪಿತ್ರೇ ದತ್ತಾ ವಿಮೋಕ್ಷಾರ್ಥಂ ಕಥಂ ವಾ ಪುತ್ರ ಮನ್ಯಸೇ ॥16॥
ನೀನು ಹಾಗೆ ಮಾಡಿದರೆ, ನಾನು ಮೇಧಾವಿಯಾದ ನಿನ್ನ ತಂದೆಗೆ ಸರ್ಪಗಳ ವಿಮೋಚನೆಯ ಉದ್ದೇಶದಿಂದ ಕೊಡಲ್ಪಟ್ಟದ್ದು ವ್ಯರ್ಥವಾಗುವುದಿಲ್ಲ. ಪುತ್ರನೇ, ನಿನ್ನ ಅಭಿಪ್ರಾಯವೇನು?
ಸೂತಃ
ಏವಮುಕ್ತಸ್ತಥೇತ್ಯುಕ್ತ್ವಾ ಸೋಽಸ್ತೀಕೋ ಮಾತರಂ ತದಾ |
ಅಬ್ರವೀದ್ ದುಃಖಸಂತಪ್ತಂ ವಾಸುಕಿಂ ಜೀವಯನ್ನಿವ ॥17॥
ಹೀಗೆ ಹೇಳಲ್ಪಟ್ಟ ಆಸ್ತೀಕನು ತಾಯಿಯನ್ನು ಕುರಿತು ಹಾಗೆಯೇ ಮಾಡುವೆನು ಎಂದು ಹೇಳಿ ದುಃಖಸಂತಪ್ತನಾದ ವಾಸುಕಿಯನ್ನು ಬದುಕಿಸುವವನಂತೆ ಅವನಿಗೆ ಹೇಳಿದನು.
ಅಹಂ ತ್ವಾಂ ಮೋಕ್ಷಯಿಷ್ಯಾಮಿ ವಾಸುಕೇ ಪನ್ನಗೋತ್ತಮ |
ತಸ್ಮಾಚ್ಛಾಪಾನ್ಮಹಾಸತ್ತ್ವಾತ್ ಸತ್ಯಮೇತದ್ ಬ್ರವೀಮಿ ತೇ ॥18॥
ಪನ್ನಗಶ್ರೇಷ್ಠನಾದ ವಾಸುಕಿಯೇ, ಆ ಮಹಾಘೋರವಾದ ಶಾಪದಿಂದ ನಾನು ನಿನ್ನನ್ನು ವಿಮೋಚನೆಗೊಳಿಸುವೆನು. ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ.
ಸ್ವಸ್ಥೋ ಭವ ಮಹಾಭಾಗ ನ ಹಿ ತೇ ವಿದ್ಯತೇ ಭಯಮ್ |
ಪ್ರಯತಿಷ್ಯೇ ತಥಾ ಸೌಮ್ಯ ಯಥಾ ಶ್ರೇಯೋ ಭವಿಷ್ಯತಿ ॥19॥
ಮಹಾನುಭಾವನೇ, ಆತಂಕವನ್ನು ತೊರೆ. ನಿನಗೆ ಭಯವುಂಟಾಗುವುದಿಲ್ಲ. ಎಲ್ಲರಿಗೂ ಶ್ರೇಯಸ್ಸು ಉಂಟಾಗುವಂತೆ ನಾನು ಪ್ರಯತ್ನಪಡುವೆನು.
ನ ಮೇ ವಾಗನೃತಂ ಪ್ರಾಹ ಸ್ವೈರೇಷ್ವಪಿ ಕುತೋಽನ್ಯಥಾ |
ತಂ ವೈ ನೃಪವರಂ ಗತ್ವಾ ದೀಕ್ಷಿತಂ ಜನಮೇಜಯಮ್ ॥20॥
ವಾಗ್ಭಿರ್ಮಂಗಲಯುಕ್ತಾಭಿಃ ತೋಷಯಿಷ್ಯಾಮಿ ಮಾತುಲ |
ಯಥಾ ಸ ಯಜ್ಞೋ ನೃಪತೇಃ ನಿವರ್ತಿಷ್ಯತಿ ಸತ್ತಮ ॥21॥
ನಾನು ಹಾಸ್ಯಕ್ಕಾಗಿಯೂ ಎಂದೂ ಸುಳ್ಳು ಮಾತನ್ನು ಆಡಿಲ್ಲ. ಈಗ ಬೇರೆ ಸಂದರ್ಭದಲ್ಲಿ ಹೇಗೆ ಸುಳ್ಳನ್ನು ಆಡುವೆನು? ಸೋದರಮಾವನೇ, ನಾನು ಯಜ್ಞದೀಕ್ಷಿತನಾದ ಆ ಜನಮೇಜಯರಾಜನ ಬಳಿಗೆ ಹೋಗಿ ಮಂಗಳಯುಕ್ತ ವಾಕ್ಯಗಳಿಂದ ಅವನನ್ನು ಸಂತೋಷಗೊಳಿಸುವೆನು. ಸಜ್ಜನರಲ್ಲಿ ಶ್ರೇಷ್ಠನಾದವನೇ, ಆ ರಾಜನ ಯಜ್ಞವು ನಿವೃತ್ತಿಯನ್ನು ಹೊಂದುವಂತೆ ನಾನು ಅವನನ್ನು ಸಂತೋಷಗೊಳಿಸುವೆನು.
ಸಂಭಾವಯ ಸುನಾಗೇಂದ್ರ ಮಯಿ ಸರ್ವಂ ಮಹಾದ್ಯುತೇ |
ನ ತೇ ಮಯಿ ಮನೋ ಜಾತು ಮಿಥ್ಯಾ ಭವಿತುಮರ್ಹತಿ ॥22॥
ಮಹಾದ್ಯುತಿಯಾದ, ಶ್ರೇಷ್ಠನಾದ ನಾಗೇಂದ್ರನೇ, ನನ್ನಿಂದ ಎಲ್ಲವೂ ಸಾಧ್ಯ ಎಂದು ತಿಳಿ. ಇವನಿಗೆ ಈ ಶಕ್ತಿಯು ಇಲ್ಲವೆಂದು ನಿನ್ನ ಮನಸ್ಸಿನಲ್ಲಿ ಭಾವಿಸಬೇಡ.
ವಾಸುಕಿಃ
ಆಸ್ತೀಕ ಪರಿಪೂರ್ಣೋಽಸ್ಮಿ ಹೃದಯಂ ಮೇ ವಿದೀರ್ಯತೇ |
ದಿಶಶ್ಚ ನ ಪ್ರಜಾನಾಮಿ ಬ್ರಹ್ಮದಂಡೇನ ಪೀಡಿತಃ ॥23॥
ಎಲೈ ಆಸ್ತೀಕನೇ, ನಾನು ದುಃಖದಿಂದ ಪರಿಪೂರ್ಣನಾಗಿದ್ದೇನೆ. ನನ್ನ ಹೃದಯವು ಬಿರಿಯುತ್ತಿದೆ. ಬ್ರಾಹ್ಮಣನಾದ ಚಂಡಭಾರ್ಗವನು ಮಾಡುತ್ತಿರುವ ಶಿಕ್ಷೆಯಿಂದ ಪೀಡಿತನಾಗಿ ನನಗೆ ದಿಕ್ಕುಗಳು ತೋಚುತ್ತಿಲ್ಲ.
ಆಸ್ತೀಕಃ
ನ ಸಂತಾಪಸ್ತ್ವಯಾ ಕಾರ್ಯಃ ಕಥಂಚಿತ್ ಪನ್ನಗೋತ್ತಮ |
ಪ್ರದೀಪ್ತಾಗ್ನೇಃ ಸಮುತ್ಪನ್ನಂ ನಾಶಯಿಷ್ಯಾಮಿ ತೇ ಭಯಮ್ ॥24॥
ಪನ್ನಗಶ್ರೇಷ್ಠನೇ, ನೀನು ಯಾವರೀತಿಯಿಂದಲೂ ಸಂತಾಪವನ್ನು ಪಡಬೇಡ. ಪ್ರದೀಪ್ತವಾದ ಅಗ್ನಿಯಿಂದ ಉಂಟಾದ ಭಯವನ್ನು ನಾನು ಶಮನಗೊಳಿಸುವೆನು.
ಬ್ರಹ್ಮದಂಡಂ ಮಹಾಘೋರಂ ಕಾಲಾಗ್ನಿಸಮತೇಜಸಮ್ |
ನಾಶಯಿಷ್ಯಾಮಿ ಮಾಽನ್ಯಸ್ತ್ವಂ ಭಯಂ ಕಾರ್ಷೀಃ ಕಥಂಚನ ॥25॥
ಮಹಾಘೋರವಾದ, ಕಾಲಾಗ್ನಿಗೆ ಸಮಾನವಾದ ತೇಜಸ್ಸನ್ನು ಹೊಂದಿದ ಆ ಬ್ರಹ್ಮದಂಡವನ್ನು ನಾಶಗೊಳಿಸುವೆನು. ನೀನು ಬೇರೆಯವನಲ್ಲ. ನನ್ನ ಸೋದರಮಾವ. ಆದ್ದರಿಂದ ಸರ್ವಥಾ ಭಯಪಡಬೇಡ.
ಸೂತಃ
ತತಃ ಸ ವಾಸುಕೇರ್ಘೋರಮಪನೀಯ ಮನೋಜ್ವರಮ್ |

ಆಧಾಯ ಚಾತ್ಮನೋಽಂಗೇಷು ಜಗಾಮ ತ್ವರಿತೋ ಭೃಶಮ್ ॥
ಜನಮೇಜಯಸ್ಯ ತಂ ಯಜ್ಞಂ ಸರ್ವೈಃ ಸಮುದಿತಂ ಗುಣೈಃ |
ಮೋಕ್ಷಾಯ ಭುಜಗೇಂದ್ರಾಣಾಮಾಸ್ತೀಕೋ ದ್ವಿಜಸತ್ತಮಃ ॥27॥
ಅನಂತರ ಅವನು ವಾಸುಕಿಯ ಘೋರವಾದ ಮನೋಜ್ವರವನ್ನು ಪರಿಹರಿಸಿ, ಆತಂಕರಹಿತವಾದ ತನ್ನ ಮನಸ್ಸಿನಲ್ಲಿ ರಾಜನನ್ನು ಸ್ತೋತ್ರ ಮಾಡಲು ಬೇಕಾದ ಶಿಕ್ಷಾಕಲ್ಪ ಮೊದಲಾದ ಅಂಗಗಳನ್ನು ಸರಿಯಾಗಿ ಇರಿಸಿಕೊಂಡು, ಸರ್ಪಯಾಗದ ಸ್ತೋತ್ರಕ್ಕೆ ಅಂಗಗಳಾದ ಪುಣ್ಯಶ್ಲೋಕರಾದ ದೇವಾದಿಗಳ ಯಜ್ಞದಲ್ಲಿ ಸನ್ನಿಹಿತನಾದ ಪರಮಾತ್ಮನ ಅವಯವಗಳಲ್ಲಿ ತನ್ನ ಮನಸ್ಸನ್ನು ಸ್ಥಾಪಿಸಿ, ಆ ದ್ವಿಜಶ್ರೇಷ್ಠನಾದ ಆಸ್ತೀಕನು, ಶ್ರೇಷ್ಠವಾದ ಸರ್ಪಗಳನ್ನು ಮೋಚನೆಗೊಳಿಸುವುದಕ್ಕೋಸ್ಕರ, ಎಲ್ಲಾ ಗುಣಗಳಿಂದಲೂ ಸಂಪನ್ನನಾದ ಜನಮೇಜಯರಾಜನ ಆ ಯಜ್ಞಕ್ಕೆ ಶೀಘ್ರವಾಗಿ ಹೊರಟನು.
ಸ ಗತ್ವಾಽಪಶ್ಯದಾಸ್ತೀಕೋ ಯಜ್ಞಾಯತನಮುತ್ತಮಮ್ |
ವೃತಂ ಸದಸ್ಯೈರ್ಬಹುಭಿಃ ಸೂರ್ಯವಹ್ನಿಸಮಪ್ರಭೈಃ ॥28॥
ಅವನು ಹೋಗಿ ಸೂರ್ಯವಹ್ನಿಗಳಿಗೆ ಸಮಾನವಾದ ಕಾಂತಿಯುಳ್ಳ, ಅನೇಕ ಸದಸ್ಯರಿಂದ ಆವೃತವಾದ, ಶ್ರೇಷ್ಠವಾದ ಯಜ್ಞಶಾಲೆಯನ್ನು ನೋಡಿದನು.
ಸ ತತ್ರ ವಾರಿತೋ ದ್ವಾಃಸ್ಥೈರತಿಷ್ಠದ್ ದ್ವಿಜಸತ್ತಮಃ |
ಅಭಿತುಷ್ಟಾವ ಯಜ್ಞಂ ತಂ ಪ್ರವೇಶಾರ್ಥಂ ದ್ವಿಜೋತ್ತಮಃ ॥29॥
ಆ ದ್ವಿಜಶ್ರೇಷ್ಠನು ದ್ವಾರಪಾಲಕರಿಂದ ತಡೆಯಲ್ಪಟ್ಟವನಾಗಿ ಪ್ರವೇಶವನ್ನು ಪಡೆಯುವ ಉದ್ದೇಶದಿಂದ ಅಲ್ಲಿಯೇ ನಿಂತು ಆ ಯಜ್ಞವನ್ನು ಸ್ತೋತ್ರಮಾಡಿದನು.
ಸ ಪ್ರಾಪ್ಯ ಯಜ್ಞಾಯತನಂ ವರಿಷ್ಠೋ ದ್ವಿಜಸತ್ತಮಃ |
ತುಷ್ಟಾವ ರಾಜಾನಮಮುಂ ಸದಸ್ಯಾನಗ್ನಿಮೇವ ಚ ॥30॥
ಆ ಗುಣವಂತನಾದ ದ್ವಿಜಶ್ರೇಷ್ಠನು ಯಜ್ಞಶಾಲೆಯನ್ನು ಸಮೀಪಿಸಿ ಆ ರಾಜನನ್ನೂ, ಸದಸ್ಯರನ್ನೂ ಮತ್ತು ಅಗ್ನಿಯನ್ನೂ ಸ್ತೋತ್ರಮಾಡಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ನಲವತ್ತೊಂಭತ್ತನೆಯ ಅಧ್ಯಾಯ
(ಆಸ್ತೀಕನಿಂದ ಜನಮೇಜಯನ ಯಾಗದ ಪ್ರಶಂಸೆ.)
ಆಸ್ತೀಕಃ
ಸೋಮಸ್ಯ ಯಜ್ಞೋ ವರುಣಸ್ಯ ಯಜ್ಞಃ
ಪ್ರಜಾಪತೇರ್ಯಜ್ಞ ಆಸೀತ್ ಪ್ರಯಾಗೇ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥1॥
ಹಿಂದೆ ಪ್ರಯಾಗದಲ್ಲಿ ಚಂದ್ರನ ಯಜ್ಞವೂ, ವರುಣನ ಯಜ್ಞವೂ ಮತ್ತು ಬ್ರಹ್ಮದೇವರ ಯಜ್ಞವೂ ನಡೆದಿದ್ದಿತು. ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.
ಶಕ್ರಸ್ಯ ಯಜ್ಞಃ ಶತಸಂಖ್ಯ ಉಕ್ತಃ
ತಥಾ ಪುರೋಸ್ತುಲ್ಯಸಂಖ್ಯಃ ಶತಂ ವೈ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥2॥
ಇಂದ್ರನು ನೂರು ಸಂಖ್ಯೆಗಳಲ್ಲಿ ಯಜ್ಞಗಳನ್ನು ಮಾಡಿದನೆಂದು ಹೇಳಲ್ಪಡುತ್ತದೆ. ಪೂರುವೂ ಸಹ ಸಮಾನವಾದ ನೂರು ಸಂಖ್ಯೆಯ ಯಜ್ಞಗಳನ್ನು ಮಾಡಿದವನು. ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.
ಯಮಸ್ಯ ಯಜ್ಞೋ ಹರಿಮೇಧಸಶ್ಚ
ಯಥಾ ಯಜ್ಞೋ ರಂತಿದೇವಸ್ಯ ರಾಜ್ಞಃ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥3॥
ಹರಿಯಲ್ಲೇ ಲಗ್ನವಾದ ಬುದ್ಧಿಯುಳ್ಳ ಯಮದೇವರ ಯಜ್ಞವೂ ಹಾಗೆಯೇ ರಾಜನಾದ ರಂತಿದೇವನ ಯಜ್ಞವೂ ಹಿಂದೆ ನಡೆಯಿತು. ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.

ಗಯಸ್ಯ ಯಜ್ಞಃ ಶತಬಿಂದುರಾಜ್ಞೋ |
ಯಜ್ಞಸ್ತಥಾ ವೈಶ್ರವಣಸ್ಯ ರಾಜ್ಞಃ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥4॥
ಗಯನ ಯಜ್ಞವೂ, ಶತಬಿಂದು ರಾಜನ ಯಜ್ಞವೂ, ಕುಬೇರನ ಯಜ್ಞವೂ ಹಿಂದೆ ಹೇಗೆ ನಡೆಯಿತೋ, ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.
ನೃಗಸ್ಯ ರಾಜ್ಞೋ ಹ್ಯಜಮೀಢಸ್ಯ ಚಾಸೀತ್
ಯಥಾ ಯಜ್ಞೋ ದಾಶರಥೇಶ್ಚ ರಾಜ್ಞಃ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥5॥
ಹಿಂದೆ ಅಜಮೀಢನಾದ ನೃಗರಾಜನ ಯಜ್ಞವೂ ಮತ್ತು ದಾಶರಥಿಯಾದ ರಾಜನಾದ ರಾಮನ ಯಜ್ಞವೂ ಹೇಗೆ ನಡೆಯಿತೋ, ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.
ಯಜ್ಞಃ ಶ್ರುತೋ ಯೋ ದಿವಿ ದೇವಯೋನೇ-
ರ್ಯುಧಿಷ್ಠಿರಸ್ಯಾಜಮೀಢಸ್ಯ ರಾಜ್ಞಃ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥6॥
ದೇವತಾವತಾರನಾದ ಆಜಮೀಢನಾದ ಯುಧಿಷ್ಠಿರರಾಜನ ಯಜ್ಞವು ದೇವಲೋಕದಲ್ಲಿ ಹೇಗೆ ಪ್ರಖ್ಯಾತವಾಗಿದೆಯೋ, ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.
ಕೃಷ್ಣಸ್ಯ ಯಜ್ಞಃ ಸತ್ಯವತ್ಯಾಃ ಸುತಸ್ಯ
ಸ್ವಯಂ ಸ್ವಕರ್ಮ ಪ್ರಚಚಾರ ಯತ್ರ |
ತಥಾ ಯಜ್ಞೋಽಯಂ ತವ ಭಾರತಾಗ್ರ್ಯ
ಪಾರೀಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥7॥
ಸತ್ಯವತೀಸುತರಾದ ವಾಸಿಷ್ಠಕೃಷ್ಣರಾದ ವೇದವ್ಯಾಸರು ತಾವೇ ತಮ್ಮ ಪೂಜಾತ್ಮಕವಾದ ಕರ್ಮಗಳನ್ನು ಮಾಡಿ ಯಜ್ಞವನ್ನು ಮಾಡಿದರು. ಭರತ ಕುಲೋತ್ಪನ್ನನಾದ ಪರೀಕ್ಷಿತನ ಮಗನಾದ ಎಲೈ ಜನಮೇಜಯರಾಜನೇ, ನಿನ್ನ ಈ ಯಜ್ಞವು ಅದರಂತೆಯೇ ಇದೆ. ನಿನ್ನ ಹಿತೈಷಿಗಳಾದ ನಮಗೆ ಮಂಗಳವಾಗಲಿ.
ತಮ್ಮ ಪೂಜೆಯನ್ನು ತಾವೇ ಮಾಡಿದುದರಿಂದ ವೇದವ್ಯಾಸರು ಪೂಜ್ಯರೂ ಹೌದು, ಪೂಜಕರೂ ಹೌದು. ಲೋಕಶಿಕ್ಷಾರ್ಥವಾಗಿ ಮಾತ್ರ ಅವರು ಯಜ್ಞವನ್ನು ಆಚರಿಸಿದರು. ಯಜ್ಞಭೋಕ್ತೃಗಳಾದ ಕಾರಣದಿಂದ ವ್ಯಾಸರು ಕೇವಲ ಋಷಿಗಳಲ್ಲ ಸಾಕ್ಷಾತ್ ನಾರಾಯಣನೇ ಎಂದು ಇಲ್ಲಿ ಸೂಚನೆ ಮಾಡುತ್ತಾರೆ.
ಇಮೇ ಹಿ ತೇ ಸೂರ್ಯಹುತಾಶವರ್ಚಸಃ
ಸಮಾಸತೇ ವೃತ್ರಹಣಃ ಕ್ರತುಂ ಯಥಾ |
ನೈಷಾಂ ಯಜ್ಞೋ ವಿದ್ಯತೇ ಜ್ಞಾನಮತ್ರಾ-
ದಾನಂ ಚೈಭ್ಯೋ ನ ಪ್ರಣಶ್ಯೇತ್ ಕದಾಚಿತ್ ॥8॥
ಸೂರ್ಯಾಗ್ನಿ ಸಮಾನ ತೇಜಸ್ಕರಾದ ಈ ಸದಸ್ಯರೆಲ್ಲರೂ ಇಂದ್ರನ ಯಜ್ಞದಲ್ಲಿ ಕುಳಿತಂತೆ ಇಲ್ಲಿ ಕುಳಿತಿದ್ದಾರೆ. ಈ ಸದಸ್ಯರು ಮಾಡುವ ಯಜ್ಞವೂ ಸಹ ಯಾವ ವಿಘ್ನಗಳಿಂದಲೂ ಉಪಹತವಾಗುವುದಿಲ್ಲ. ಇವರಿಂದ ಸ್ವೀಕರಿಸಿದ ಅಪರೋಕ್ಷಜ್ಞಾನವಾಗಲಿ ಅಥವಾ ಪರೋಕ್ಷಜ್ಞಾನವಾಗಲಿ ಎಂದೂ ನಾಶವನ್ನು ಹೊಂದುವುದಿಲ್ಲ.
ಋತ್ವಿಕ್ಸಮೋ ನಾಸ್ತಿ ಲೋಕೇಷು ಚೈವ
ದ್ವೈಪಾಯನೇನೇತಿ ವಿನಿಶ್ಚಿತಂ ಮೇ |
ಏತಸ್ಯ ಶಿಷ್ಯಾ ಕ್ಷಿತಿಮಾಸತೇ ತೇ
ಯೇ ಋತ್ವಿಜಃ ಕರ್ಮಸು ಸ್ವೇಷು ದಕ್ಷಾಃ ॥9॥
ಎಲ್ಲ ಲೋಕಗಳಲ್ಲಿಯೂ ವೇದವ್ಯಾಸರಿಗೆ ಸಮಾನವಾದ ಋತ್ವಿಜರು ಇಲ್ಲವೆಂದು ನನ್ನ ನಿಶ್ಚಿತವಾದ ಅಭಿಪ್ರಾಯ. ಅಂತಹ ವೇದವ್ಯಾಸರ ತಮ್ಮ ತಮ್ಮ ಕರ್ಮಗಳಲ್ಲಿ ದಕ್ಷರಾದ ಶಿಷ್ಯರು ಋತ್ವಿಜರಾಗಿ ನಿನ್ನ ಯಜ್ಞಶಾಲೆಯಲ್ಲಿ ಕುಳಿತಿದ್ದಾರೆ.
ವಿಭಾವಸುಶ್ಚಿತ್ರಭಾನುರ್ಮಹಾತ್ಮಾ
ಹಿರಣ್ಯರೇತಾ ಹುತಭುಕ್ ಕೃಷ್ಣವರ್ತ್ಮಾ |
ಪ್ರದಕ್ಷಿಣಾವರ್ತಶಿಖಃ ಪ್ರದೀಪ್ತೋ
ಹವ್ಯಂ ತವೇದಂ ಹುತಭುಗ್ ಭುನಕ್ತಿ ॥10॥
ವಿಭಾವಸು, ಚಿತ್ರಭಾನು, ಮಹಾತ್ಮ, ಹಿರಣ್ಯರೇತ, ಹುತಭುಕ್, ಕೃಷ್ಣವರ್ತ್ಮ, ಪ್ರದಕ್ಷಿಣಾವರ್ತಶಿಖ, ಪ್ರದೀಪ್ತ ಮುಂತಾದ ನಾಮಗಳಿಂದ ಶ್ರುತಿಸ್ಮೃತಿಗಳಲ್ಲಿ ಪ್ರಶಂಸಿಸಲ್ಪಡುವ ಅಗ್ನಿದೇವನು ನಿನ್ನ ಈ ಹವ್ಯವನ್ನು ಭುಂಜಿಸುತ್ತಿದ್ದಾನೆ.

ನೇಹ ತ್ವದನ್ಯೋ ವಿದ್ಯತೇ ಜೀವಲೋಕೇ
ಸಮೋ ನೃಪಃ ಪಾಲಯಿತಾ ಪ್ರಜಾನಾಮ್ ।
ಧೃತ್ಯಾ ಚ ತೇ ಪ್ರೀತಮನಾಃ ಸದಾಽಹಂ
ತ್ವಂ ವಾ ರಾಜಾ ಧರ್ಮರಾಜೋ ಯಮಶ್ಚ ॥11॥
ಎಲೈ ಜನಮೇಜಯನೇ, ನಿನಗೆ ಸಮಾನವಾಗಿ ಪ್ರಜೆಗಳನ್ನು ಪಾಲಿಸುವ ಇನ್ನೊಬ್ಬ ರಾಜನು ಜೀವಲೋಕದಲ್ಲಿ ಇಲ್ಲ. ನಿನ್ನ ಧೈರ್ಯವನ್ನು ನಾನು ಯಾವಾಗಲೂ ನನ್ನ ಮನಸ್ಸಿನಲ್ಲಿ ಮೆಚ್ಚಿದ್ದೇನೆ. ನೀನೇ ಧರ್ಮರಾಜನಾದ ಯಮನಿಗೆ ಸಮನಾದ ರಾಜ.
ಶಕ್ರಃ ಸಾಕ್ಷಾದ್ ವಜ್ರಪಾಣಿರ್ಯಥೈವ
ತ್ರಾತಾ ಲೋಕೇ ತ್ವಂ ತಥೈವ ಪ್ರಜಾನಾಮ್ ।
ಅತಸ್ತ್ವಂ ನಾಥಃ ಪುಣ್ಯತಮಶ್ಚ ಲೋಕೇ
ನ ಚ ತ್ವದನ್ಯೋ ಗೃಹಪತಿರಸ್ತಿ ಯಜ್ಞೇ ॥12॥
ಕೈಯಲ್ಲಿ ವಜ್ರವನ್ನು ಹಿಡಿದು ಮೂರುಲೋಕಗಳನ್ನೂ ಪಾಲನೆ ಮಾಡುವ ಇಂದ್ರನಂತೆ ನೀನು ಪ್ರಜೆಗಳನ್ನು ಪಾಲನೆಮಾಡುತ್ತಿದ್ದೀಯೆ. ಆದ್ದರಿಂದ ನೀನು ಲೋಕದಲ್ಲಿ ಸ್ವಾಮಿಯಾದವನು ಮತ್ತು ಬಹಳ ಪುಣ್ಯವಂತನು. ಯಜ್ಞದಲ್ಲಿ ನಿನ್ನಂತಹ ಯಜಮಾನನು ಎಂದೂ ದೊರೆಯುವುದಿಲ್ಲ.
ಖಟ್ವಾಂಗನಾಭಾಗದಿಲೀಪಕಲ್ಪ
ಯಯಾತಿಮಾಂಧಾತೃಸಮಪ್ರಭಾವ ।
ಆದಿತ್ಯತೇಜಃ ಪ್ರತಿಮಾನತೇಜಾ
ಭೀಷ್ಮೋ ಯಥಾ ಭ್ರಾಜಸಿ ಸುವ್ರತತ್ವೇ ॥13॥
ಖಟ್ವಾಂಗ, ನಾಭಾಗ, ದಿಲೀಪರಿಗೆ ಸಮನಾದವನೇ, ಯಯಾತಿ, ಮಾಂಧಾತೃಗಳಿಗೆ ಸಮಾನವಾದ ಪ್ರಭಾವವುಳ್ಳವನೇ, ಆದಿತ್ಯನ ತೇಜಸ್ಸನ್ನು ಹೊಂದಿದವನೇ, ಇನ್ನೊಬ್ಬರಿಗೆ ಉಪಮಾನವನ್ನು ಕೊಡಬಹುದಾದ ತೇಜಸ್ಸನ್ನು ಹೊಂದಿದವನೇ, ಒಳ್ಳೆಯ ವ್ರತವನ್ನು ಧರಿಸುವ ವಿಷಯದಲ್ಲಿ ನೀನು ಭೀಷ್ಮನಂತೆ ಶೋಭಿಸುತ್ತಿದ್ದೀಯೆ.
ವಾಲ್ಮೀಕಿವತ್ ತೇ ನಿಭೃತಂ ಸ್ವವೀರ್ಯಂ
ವಸಿಷ್ಠವತ್ ತೇ ನಿಯತಶ್ಚ ಕೋಪಃ ।
ಪ್ರಭುತ್ವಮಿಂದ್ರೇಣ ಸಮಂ ಮತಂ ಮೇ
ದ್ಯುತಿಶ್ಚ ನಾರಾಯಣವದ್ ವಿಭಾತಿ ॥14॥
ವಾಲ್ಮೀಕಿಯಂತೆ ನೀನು ನಿನ್ನ ಪರಾಕ್ರಮವನ್ನು ತುಂಬಿಕೊಂಡಿದ್ದೀಯೆ. ವಸಿಷ್ಠರಂತೆ ಕೋಪವನ್ನು ಜಯಿಸಿದ್ದೀಯೆ. ನಿನ್ನ ಪ್ರಭುತ್ವವು ಇಂದ್ರನ ಪ್ರಭುತ್ವಕ್ಕೆ ಸಮಾನವಾದುದು. ನಿನ್ನ ಕಾಂತಿಯು ನಾರಾಯಣನ ಕಾಂತಿಯಂತೆ ತೋರುತ್ತದೆ.
ಯಮೋ ಯಥಾ ಧರ್ಮವಿನಿಶ್ಚಯಜ್ಞಃ
ಕೃಷ್ಣೋ ಯಥಾ ಸರ್ವಗುಣೋಪಪನ್ನಃ ।
ಶ್ರಿಯಾಂ ನಿಕೇತೋಽಸಿ ಯಥಾ ವಸೂನಾಂ
ನಿಧಾನಭೂತೋಽಸಿ ತಥಾ ಕ್ರತೂನಾಮ್ ॥15॥
ಯಮನು ಎಲ್ಲಾ ಧರ್ಮಗಳ ವಿನಿಶ್ಚಯಕ್ಕೆ ಹೇಗೆ ಆಶ್ರಯನಾಗಿದ್ದಾನೆಯೋ, ಹೇಗೆ ವೇದವ್ಯಾಸರು ಎಲ್ಲಾ ಗುಣಗಳಿಗೆ ಆಶ್ರಯರಾಗಿದ್ದಾರೆಯೋ, ಹಾಗೆ ನೀನು ಎಲ್ಲಾ ಸಂಪತ್ತಿಗೂ ಆಶ್ರಯನಾಗಿದ್ದೀಯೆ. ಎಲ್ಲಾ ವಸುಗಳಿಗೂ ಮತ್ತು ಯಾಗಗಳಿಗೂ ನಿಧಾನ ವಾಗಿದ್ದೀಯೆ. (ಸ್ಥಾಪಿಸುವ ಭೂಮಿಯಾಗಿದ್ದೀಯೆ.)
ದಂಭೋದ್ಭವೇನಾಸಿ ಸಮೋ ಬಲೇನ
ರಾಮೋ ಯಥಾ ಶಸ್ತ್ರವಿದಸ್ತ್ರವಿಚ್ಚ ।
ಔರ್ವತ್ರಿಜಾಭ್ಯಾಮಸಿ ತುಲ್ಯತೇಜಾ ।
ದುಷ್ಪ್ರೇಕ್ಷಣೀಯೋಽಸಿ ಭಗೀರಥೇನ ॥16॥
ನೀನು ಬಲದಲ್ಲಿ ಅಗಸ್ತ್ಯರಿಗೆ ಸಮನಾಗಿದ್ದೀಯೆ. ರಾಮನಂತೆ ಶಸ್ತ್ರಜ್ಞಾನವನ್ನೂ, ಅಸ್ತ್ರಜ್ಞಾನವನ್ನೂ ಹೊಂದಿದ್ದೀಯೆ. ಔರ್ವರಿಗೆ ಮತ್ತು ಅತ್ರಿಜನಾದ ಚಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನಾಗಿದ್ದೀಯೆ. ದೂರದಿಂದ ಬಂದ ನನಗೆ ನೋಡಲು ಅಸಾಧ್ಯವಾದ ತೇಜಸ್ಸುಳ್ಳವನಾಗಿದ್ದೀಯೆ.
ಸೂತಃ
ಏವಂ ಸ್ತುತಾಃ ಸರ್ವ ಏವ ಪ್ರಸನ್ನಾ
ರಾಜಾ ಸದಸ್ಯಾಃ ಸರ್ತ್ವಿಜೋ ಹವ್ಯವಾಹಃ ।
ತೇಷಾಂ ದೃಷ್ಟ್ವಾ ಭಾವಿತಾನೀಂಗಿತಾನಿ
ಪ್ರೋವಾಚ ರಾಜಾ ಜನಮೇಜಯೋಽಥ ॥17॥
ಹೀಗೆ ಸ್ತೋತ್ರಮಾಡಲ್ಪಟ್ಟ ರಾಜನೂ, ಸದಸ್ಯರೂ, ಋತ್ವಿಜರೂ, ಅಗ್ನಿಯೂ ಎಲ್ಲರೂ ಪ್ರಸನ್ನರಾದರು. ಅವರೆಲ್ಲರ ಪರಿಶುದ್ಧವಾದ ಇಂಗಿತಗಳನ್ನು ತಿಳಿದ ಜನಮೇಜಯರಾಜನು ಅನಂತರ ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋನಪಂಚಾಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನಲವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.

*****

ಐವತ್ತನೆಯ ಅಧ್ಯಾಯ
(ಜನಮೇಜಯನ ಹರ್ಷ. ಬ್ರಾಹ್ಮಣವಚನದಂತೆ ಆಸ್ತೀಕನಿಗೆ ಸರ್ಪಯಾಗವಿರಾಮ ವರದಾನ.)
ಜನಮೇಜಯಃ
ಬಾಲೋ ವಾಕ್ಯಂ ಸ್ಥವಿರ ಇವ ಪ್ರಭಾಷಸೇ
ನಾಯಂ ಬಾಲಃ ಸ್ಥವಿರೋ ಧರ್ಮತೋ ಮೇ |
ಇಚ್ಛಾಮ್ಯಹಂ ವರಮಸ್ಮೈ ಪ್ರದಾತುಂ
ತದ್ ವೈ ವಿಪ್ರಾಃ ಪ್ರವದಧ್ವಂ ಸಮೇತಾಃ ॥1॥
ಬಾಲಕನಾದ ನೀನು ವೃದ್ಧನಂತೆ ಮಾತನಾಡುತ್ತಿದ್ದೀಯೆ. ಎಲೈ ಬ್ರಾಹ್ಮಣರೇ, ಇವನು ಬಾಲನಲ್ಲ. ಧರ್ಮದ ದೃಷ್ಟಿಯಿಂದ ಇವನು ವೃದ್ಧನೆಂದೇ ಭಾವಿಸುತ್ತೇನೆ. ಇವನಿಗೆ ವರವನ್ನು ಕೊಡಲು ನಾನು ಬಯಸುತ್ತೇನೆ. ನೀವೆಲ್ಲರೂ ಸೇರಿ ಅನುಮತಿಯನ್ನು ಕೊಡಿ.
ಸದಸ್ಯಾಃ
ಬಾಲೋಽಪಿ ವಿಪ್ರೋ ಮಾನ್ಯ ಏವೇಹ ರಾಜ್ಞಾ
ಯಶ್ಚಾವಿದ್ವಾನ್ ಯಶ್ಚ ವಿದ್ವಾನ್ ಯಥಾವತ್ |
ಸರ್ವಾನ್ ಕಾಮಾಂಸ್ತ್ವತ್ತ ಏವಾರ್ಹತೇಽದ್ಯ
ಯಥಾ ಚ ನಸ್ತಕ್ಷಕ ಏತಿ ಶೀಘ್ರಮ್ ॥2॥
ಬ್ರಾಹ್ಮಣನಾದವನು ಬಾಲಕನಾದರೂ ರಾಜನಿಂದ ಇಲ್ಲಿ ಮಾನ್ಯನೇ ಆಗುತ್ತಾನೆ. ಅವನು ವಿದ್ವಾಂಸನಾಗಿರಲಿ ಅಥವಾ ವಿದ್ವಾಂಸನಾಗದೇ ಇರಲಿ, ಆದರೂ ರಾಜನಿಂದ ಮಾನ್ಯನಾಗುತ್ತಾನೆ. ಇವನು ನಿನ್ನಿಂದ ಎಲ್ಲಾ ಕಾಮಗಳನ್ನೂ ಪಡೆಯಲು ಅರ್ಹನಾಗಿದ್ದಾನೆ. ತಕ್ಷಕನು ನಮ್ಮ ಬಳಿಗೆ ಶೀಘ್ರವಾಗಿ ಬರುವಂತೆ (ಅವನಿಗೆ ವರವನ್ನು ಕೊಡು).
ಸೂತಃ
ವ್ಯಾಹರ್ತುಕಾಮೇ ವರದೇ ನೃಪೇ ದ್ವಿಜಂ
ವರಂ ವೃಣೀಷ್ವೇತಿ ತಮಭ್ಯುವಾಚ |
ಹೋತಾ ವಾಚಾ ನಾತಿಹೃಷ್ಟಾಂತರಾತ್ಮಾ
ಕರ್ಮಣ್ಯಸ್ಮಿಂಸ್ತಕ್ಷಕೋ ನೈತಿ ರಾಜನ್ ॥3॥
ಆಗ ವರವನ್ನು ಕೊಡುವ ರಾಜನು ಬ್ರಾಹ್ಮಣನನ್ನು ಕುರಿತು ವರವನ್ನು ಕೇಳು ಎಂದು ಹೇಳಲು ಉದ್ಯುಕ್ತನಾಗುತ್ತಿರಲು ಹೋತೃವು ಅಸಂತುಷ್ಟವಾದ ಮನಸ್ಸಿನಿಂದ ಎಲೈ ರಾಜನೇ, ಈ ನಮ್ಮ ಕರ್ಮದಲ್ಲಿ ತಕ್ಷಕನು ಬರುತ್ತಿಲ್ಲ ಎಂದು ಹೇಳಿದನು.
ಜನಮೇಜಯಃ
ಯಥಾ ಚೇದಂ ಕರ್ಮ ಸಮಾಪ್ಯತೇ ಮೇ
ಯಥಾ ಚ ನಸ್ತಕ್ಷಕ ಏತಿ ಶೀಘ್ರಮ್ |
ತಥಾ ಭವಂತಃ ಪ್ರಯತಂತು ಸರ್ವೇ
ಪರಂ ಶಕ್ತ್ಯಾ ಸ ಹಿ ಮೇ ವಿದ್ವಿಷಾಣಃ ॥4॥
ಹೇಗೆ ಇಲ್ಲಿಗೆ ತಕ್ಷಕನು ಶೀಘ್ರವಾಗಿ ಬರುತ್ತಾನೋ ಮತ್ತು ಹೇಗೆ ಈ ನನ್ನ ಕರ್ಮವು ಸಮಾಪ್ತಿಗೊಳ್ಳುತ್ತದೋ ಅದರಂತೆ ನೀವೆಲ್ಲರೂ ಶಕ್ತಿಮೀರಿ ಪ್ರಯತ್ನಮಾಡಿ. ತಕ್ಷಕನು ನನ್ನ ವಿಶೇಷ ದ್ವೇಷಕ್ಕೆ ಪಾತ್ರನಾದವನು.
ಋತ್ವಿಜಃ
ಯಥಾ ಶಾಸ್ತ್ರಾಣಿ ನಃ ಪ್ರಾಹುರ್ನಿಮಿತ್ತಾನಿ ತಥೈವ ಚ |
ಇಂದ್ರಸ್ಯ ಭವನೇ ರಾಜಂಸ್ತಕ್ಷಕೋ ಭಯಪೀಡಿತಃ ॥5॥
ಎಲೈ ರಾಜನೇ, ನಮಗೆ ಶಾಸ್ತ್ರಗಳೂ ಮತ್ತು ಶಕುನಗಳೂ ತಿಳಿಸುವಂತೆ ತಕ್ಷಕನು ಭಯಪೀಡಿತನಾಗಿ ಇಂದ್ರನ ಮನೆಯಲ್ಲಿ ಇದ್ದಾನೆ.
ಯಥಾ ಸೂತೋ ಲೋಹಿತಾಕ್ಷೋ ಮಹಾತ್ಮಾ
ಪೌರಾಣಿಕೋ ವೇದಿತವಾನ್ ಪುರಸ್ತಾತ್ |
ಸ ರಾಜಾನಂ ಪ್ರಾಹ ಹೃಷ್ಟಸ್ತದಾನೀಂ
ಯಥಾಹುರ್ವಿಪ್ರಾಸ್ತದ್ವದೇತನ್ನರೇಂದ್ರ ॥6॥
ಹಿಂದೆ ಯಜ್ಞಭೂಮಿಯನ್ನು ಅಳೆಯುವಾಗ ಯಾವ ಮಹಾತ್ಮನೂ, ವೃದ್ಧನೂ ಆದ ಲೋಹಿತಾಕ್ಷ ಎಂಬ ಸೂತನು ರಾಜನಿಗೆ ತಿಳಿಸಿದ್ದನೋ ಅವನು ಈಗ ಸಂತೋಷದಿಂದ ರಾಜನನ್ನು ಕುರಿತು ನರೇಂದ್ರನೇ, ಬ್ರಾಹ್ಮಣರು ಹೇಳುತ್ತಿರುವುದು ಸತ್ಯವಾಗಿದೆ ಎಂದು ಹೇಳಿದನು.
ಪುರಾಣಮಾಗಮ್ಯ ತತೋ ಬ್ರವೀಮ್ಯಹಂ
ದತ್ತಂ ತಸ್ಮೈ ವರಮಿಂದ್ರೇಣ ರಾಜನ್ |
ವಸೇಹ ತ್ವಂ ಮತ್ಸಕಾಶೇ ಸುಗುಪ್ತೋ
ನ ಪಾವಕಸ್ತ್ವಾಂ ಪ್ರದಹಿಷ್ಯತೀತಿ ॥7॥
ಸ್ವರ್ಗಲೋಕದಿಂದ ಬಂದ ವಾರ್ತಾಹರರಿಂದ ನಾನು ತಿಳಿದು ಹೇಳುತ್ತಿದ್ದೇನೆ. ರಾಜನೇ, ನೀನು ನನ್ನ ಸಮೀಪದಲ್ಲಿ ಸುರಕ್ಷಿತನಾಗಿ

ವಾಸಮಾಡು. ಅಗ್ನಿಯು ನಿನ್ನನ್ನು ದಹಿಸುವುದಿಲ್ಲ ಎಂದು ಇಂದ್ರನು ಅವನಿಗೆ ವರವನ್ನು ಕೊಟ್ಟಿದ್ದಾನೆ.
ಏತಚ್ಛ್ರುತ್ವಾ ದೀಕ್ಷಿತಸ್ತಪ್ಯಮಾನ
ಆಸ್ತೇ ಹೋತಾರಂ ಚೋದಯನ್ ಕರ್ಮಕಾಲೇ |
ಹೋತಾ ಯತ್ತಃ ಸ ಜುಹಾವ ಮಂತ್ರೈ-
ರಥಾನ್ವಿಂದ್ರಃ ಸ್ವಯಮೇವಾಜಗಾಮ ॥8॥
ಇದನ್ನು ಕೇಳಿದ ಯಜ್ಞದೀಕ್ಷಿತನಾದ ಜನಮೇಜಯನು ಸಂತಾಪಪಡುತ್ತಾ ಆ ಕರ್ಮಕಾಲದಲ್ಲಿ ಹೋತೃಋತ್ವಿಜನನ್ನು ಒತ್ತಾಯಪಡಿಸಿದನು. ಹೋತೃವು ಅವಧಾನದಿಂದ ಮಂತ್ರಗಳಿಂದ ಇಂದ್ರನನ್ನು ಆಹ್ವಾನಮಾಡಿದನು. ಆಗ ಇಂದ್ರನು ತಾನಾಗಿಯೇ ಬಂದನು.
ಆಯಾತು ಚೇಂದ್ರೋಽಪಿ ಸತಕ್ಷಕಃ ಪತೇದ್
ವಿಭಾವಸೌ ನಾಗರಾಜೇನ ತೂರ್ಣಮ್ |
ಜಂಭಸ್ಯ ಹಂತೇತಿ ಜುಹಾವ ಹೋತಾ
ತದಾ ಜಗಾಮಾಹಿದತ್ತಾಭಯಃ ಪ್ರಭುಃ ॥9॥
ಜಂಭಾರಿಯಾದ ಇಂದ್ರನು ಇಲ್ಲಿಗೆ ಬರಲಿ ಮತ್ತು ನಾಗರಾಜನಾದ ತಕ್ಷಕನ ಜೊತೆಯಲ್ಲಿ ಶೀಘ್ರವಾಗಿ ಅಗ್ನಿಯಲ್ಲಿ ಬೀಳಲಿ ಎಂದು ಹೋತೃವು ಇಂದ್ರನನ್ನು ಆಹ್ವಾನಿಸಿದನು. ಆಗ ತಕ್ಷಕನಿಗೆ ಅಭಯವನ್ನು ಕೊಟ್ಟಿದ್ದ ಪ್ರಭುವಾದ ಇಂದ್ರನು ತಾನಾಗಿಯೇ ಬಂದನು.
ವಿಮಾನಮಾರುಹ್ಯ ಮಹಾನುಭಾವಃ
ಸರ್ವೈರ್ದೇವೈಃ ಪರಿಸಂಸ್ತೂಯಮಾನಃ |
ಬಲಾಹಕೈಶ್ಚಾಪ್ಯನುಗಮ್ಯಮಾನೋ
ವಿದ್ಯಾಧರೈರಪ್ಸರಸಾಂ ಗಣೈಶ್ಚ ॥10॥
ಮಹಾನುಭಾವನಾದ ಇಂದ್ರನು ವಿಮಾನವನ್ನೇರಿ ಎಲ್ಲಾ ದೇವತೆಗಳಿಂದಲೂ ಬಹಳವಾಗಿ ಸ್ತೋತ್ರಮಾಡಲ್ಪಟ್ಟು, ಮೋಡಗಳಿಂದಲೂ (ಮೇಘಾಭಿಮಾನಿ ದೇವತೆಗಳಿಂದಲೂ), ವಿದ್ಯಾಧರರ ಮತ್ತು ಅಪ್ಸರರ ಗಣಗಳಿಂದಲೂ ಹಿಂಬಾಲಿಸಲ್ಪಟ್ಟು (ಬಂದನು).
ತಸ್ಯೋತ್ತರೀಯೇ ನಿಹಿತಃ ಸ ನಾಗೋ
ಭಯೋದ್ವಿಗ್ನಃ ಶರ್ಮ ನೈವಾಭ್ಯಗಚ್ಛತ್ |
ತತೋ ರಾಜಾ ಮಂತ್ರವಿದೋಽಬ್ರವೀಚ್ಚ
ಕ್ರುದ್ಧಸ್ತದಾ ತಕ್ಷಕಸ್ಯಾಂತಮಿಚ್ಛನ್ ॥11॥
ಅವನ ಉತ್ತರೀಯದಲ್ಲಿ ಅವಿತುಕೊಂಡಿದ್ದ ತಕ್ಷಕನು ಭಯೋದ್ವಿಗ್ನನಾಗಿ, ಸುಖವನ್ನು ಕಳೆದುಕೊಂಡನು. ಆಗ ರಾಜನು ಮಂತ್ರವೇತ್ತರಾದ ಬ್ರಾಹ್ಮಣರನ್ನು ಕುರಿತು ಕ್ರೋಧದಿಂದ ತಕ್ಷಕನ ನಾಶವನ್ನು ಬಯಸಿ ಮಾತನಾಡಿದನು.
ಜನಮೇಜಯಃ
ಇಂದ್ರಸ್ಯ ಭವನೇ ವಿಪ್ರ ಯದಿ ತಸ್ಥೌ ಸ ತಕ್ಷಕಃ |
ತಮಿಂದ್ರೇಣೈವ ಸಹಿತಂ ಪಾತಯಧ್ವಂ ವಿಭಾವಸೌ |
ಪಾಲಯೇದ್ ಯದಿ ತತ್ರೇಂದ್ರಃ ಸ ನಾಗಂ ತಕ್ಷಕಂ ತಥಾ ॥12॥
ಬ್ರಾಹ್ಮಣರೇ, ಆ ತಕ್ಷಕನಾಗನು ಇಂದ್ರನ ಮನೆಯಲ್ಲಿ ಇರುವುದಾದರೆ ಮತ್ತು ಅವನಿಗೆ ಇಂದ್ರನು ರಕ್ಷಣೆಯನ್ನು ಕೊಡುವುದಾದರೆ, ಆ ತಕ್ಷಕನನ್ನು ಇಂದ್ರನ ಜೊತೆಯಲ್ಲಿಯೇ ಅಗ್ನಿಯಲ್ಲಿ ಬೀಳಿಸಿ.
ಸೂತಃ
ಜನಮೇಜಸಯಸ್ಯ ರಾಜ್ಞಾ ತು ಚೋದಿತಸ್ತಕ್ಷಕಂ ಪ್ರತಿ |
ಹೋತಾಽಽಜುಹಾವ ತತ್ರಸ್ಥಂ ಸಶಕ್ರಂ ತಕ್ಷಕಂ ತಥಾ ॥13॥
ತಕ್ಷಕನ ವಿಷಯದಲ್ಲಿ ಜನಮೇಜಯರಾಜನಿಂದ ಪ್ರೇರಿಸಲ್ಪಟ್ಟವನಾಗಿ ಹೋತೃವು ಅಲ್ಲಿದ್ದ ಇಂದ್ರನನ್ನೂ ಮತ್ತು ತಕ್ಷಕನನ್ನೂ ಆಹ್ವಾನಮಾಡಿದನು.
ಹೂಯಮಾನೇ ತಥಾ ಚೈವ ತಕ್ಷಕಃ ಸಪುರಂದರಃ |
ಆಕಾಶೇ ದದೃಶೇ ತತ್ರ ಕ್ಷಣೇನ ವ್ಯಥಿತಸ್ತದಾ ॥14॥
ಈ ರೀತಿಯಾಗಿ ಆಹ್ವಾನ ಮಾಡಲ್ಪಡುತ್ತಿರಲು ತಕ್ಷಣದಲ್ಲಿಯೇ ವ್ಯಥೆಯಿಂದ ಕೂಡಿದ ತಕ್ಷಕನು ಇಂದ್ರನ ಜೊತೆಯಲ್ಲಿ ಆಕಾಶದಲ್ಲಿ ಕಾಣಿಸಿಕೊಂಡನು.
ಪುರಂದರಸ್ತು ತಂ ಯಜ್ಞಂ ದೃಷ್ಟ್ವಾ ತು ಭಯಮಾವಿಶತ್ |
ಹಿತ್ವಾ ತು ತಕ್ಷಕಂ ನಾಗಂ ಸ್ವಮೇವ ಭವನಂ ಯಯೌ ॥15॥
ಇಂದ್ರನು ಆ ಯಜ್ಞವನ್ನು ನೋಡಿ ಭಯಸಾಗರದಲ್ಲಿ ಮುಳುಗಿದನು. ತಕ್ಷಕನನ್ನು ಅಲ್ಲಿಯೇ ಬಿಟ್ಟು ತನ್ನ ಮನೆಗೆ ಹಿಂದಿರುಗಿದನು.
ಇಂದ್ರೇ ಗತೇ ತು ನಾಗೇಂದ್ರಃ ತಕ್ಷಕೋ ಭಯಮೋಹಿತಃ |
ಮಂತ್ರಶಕ್ತ್ಯಾ ತು ಸಪ್ತಾರ್ಚೇಃ ಸಮೀಪಮವಶೋಽಗಮತ್ ॥16॥
ಇಂದ್ರನು ಹೊರಟುಹೋಗುತ್ತಿರಲು ಭಯಮೋಹಿತನಾದ ತಕ್ಷಕನಾಗೇಂದ್ರನು ಮಂತ್ರಶಕ್ತಿಯಿಂದ ಎಳೆಯಲ್ಪಟ್ಟವನಾಗಿ ಅವಶನಾಗಿ ಅಗ್ನಿಯ ಸಮೀಪಕ್ಕೆ ಬಂದನು.
ತಂ ದೃಷ್ಟ್ವಾ ಋತ್ವಿಜಸ್ತತ್ರ ವಚನಂ ಚೇದಮಬ್ರುವನ್ |

ಅಯಮಾಯಾತಿ ವೈ ತೂರ್ಣಂ ತಕ್ಷಕಸ್ತೇ ವಶಂ ಗತಃ |
ಶ್ರೂಯತೇಽಸ್ಯ ಮಹಾನ್ ನಾದೋ ಭೈರವಂ ರುವತೋ ಮಹತ್ ॥
ಅವನನ್ನು ನೋಡಿದ ಋತ್ವಿಜರು ರಾಜನನ್ನು ಕುರಿತು ಈ ತಕ್ಷಕನು ನಿನಗೆ ವಶನಾಗಿ ಶೀಘ್ರವಾಗಿ ಬರುತ್ತಿದ್ದಾನೆ. ಭೈರವನಾದವನ್ನು ಮಾಡುತ್ತಿರುವ ಅವನ ಮಹಾನಾದವು ಕೇಳಿಬರುತ್ತಿದೆ.
ನೂನಂ ಯುಕ್ತೋಽಯಂ ಯಜ್ಞಭೂವೌ ಸ ನಾಗೋ
ಭ್ರಷ್ಟೋ ಮಹಾಮಂತ್ರವಿತ್ರಸ್ತಕಾಯಃ
ಆಘೂರ್ಣಮಾನೋ ಹಿ ಸಮಭ್ಯುಪೈತಿ
ತೀವ್ರಾನ್ ನಿಶ್ವಾಸಾನ್ ನಿಶ್ವಸನ್ ಪನ್ನಗೇಂದ್ರಃ ॥18॥
ಆ ನಾಗನು ನಮ್ಮ ಮಹಾಮಂತ್ರಗಳಿಂದ ಶಿಥಿಲವಾದ ದೇಹವುಳ್ಳವನಾಗಿ ನಮ್ಮ ಮಂತ್ರಶಕ್ತಿಯಿಂದ ಬಿರಿದುಹೋಗುತ್ತಾ, ತೀವ್ರವಾದ ನಿಟ್ಟುಸಿರುಗಳನ್ನು ಬಿಡುತ್ತಾ ಯಜ್ಞಭೂಮಿಯಲ್ಲಿ ಬೀಳುತ್ತಿದ್ದಾನೆ.
ವರ್ತತೇ ತವ ರಾಜೇಂದ್ರ ಕರ್ಮೈತದ್ ವಿಧಿವತ್ ಪ್ರಭೋ |
ಅಸ್ಮೈ ಚ ದ್ವಿಜಮುಖ್ಯಾಯ ವರಂ ದಾತುಂ ತ್ವಮರ್ಹಸಿ ॥19॥
ಎಲೈ ಪ್ರಭುವಾದ ರಾಜೇಂದ್ರನೇ, ನಮ್ಮ ಯಜ್ಞವು ವಿಧಿವತ್ತಾಗಿ ನಡೆಯುತ್ತಿದೆ. ಈ ಬ್ರಾಹ್ಮಣಶ್ರೇಷ್ಠನಿಗೆ ನೀನು ವರವನ್ನು ಕೊಡು.
ರಾಜಾ
ಬಾಲಾಭಿರೂಪಸ್ಯ ತವಾಪ್ರಮೇಯ
ವರಂ ಪ್ರಯಚ್ಛಾಮಿ ಯಥಾನುರೂಪಮ್ |
ವೃಣೀಷ್ವ ಯತ್ ತೇಽಭಿಮತಂ ಹೃದಿಸ್ಥಂ
ತತ್ ತೇ ಪ್ರದಾಸ್ಯಾಮ್ಯಪಿ ಚೇದದೇಯಮ್ ॥20॥
ಬಾಲರೂಪವನ್ನು ಧರಿಸಿರುವ ಎಲೈ ಅಪ್ರಮೇಯಮಹಿಮನೇ, ನಿನಗೆ ಅನುರೂಪವಾದ ವರವನ್ನು ಕೊಡುತ್ತೇನೆ. ನಿನ್ನ ಮನಸ್ಸಿನಲ್ಲಿರುವ ಅಭೀಷ್ಟವಾದ ವರವನ್ನು ಕೇಳು. ಅದು ಕೊಡಬಾರದ ವಸ್ತುವಾದರೂ ಸಹ ನಾನು ನಿನಗೆ ಅದನ್ನು ಕೊಡುವೆನು.
ಸೂತಃ
ಪತಿಷ್ಯಮಾಣೇ ನಾಗೇಂದ್ರೇ ತಕ್ಷಕೇ ಜಾತವೇದಸಿ|
ಇದಮಂತರಮಿತ್ಯೇವಂ ತದಾಽಽಸ್ತೀಕೋ ನ್ಯವೇದಯತ್ ॥21॥
ತಕ್ಷಕನಾಗೇಂದ್ರನು ಅಗ್ನಿಯಲ್ಲಿ ಇನ್ನೇನು ಬೀಳುತ್ತಾನೆ ಎನ್ನುವ ಸಂದರ್ಭದಲ್ಲಿ ಇದೇ ಸರಿಯಾದ ಸಮಯವೆಂದು ತಿಳಿದು ಆಸ್ತೀಕನು ರಾಜನಿಗೆ ನಿವೇದಿಸಿದನು.
ಆಸ್ತೀಕಃ
ವರಂ ದದಾಸಿ ಚೇನ್ಮಹ್ಯಂ ವೃಣೋಮಿ ಜನಮೇಜಯ |
ಸತ್ರಂ ತೇ ವಿರಮತ್ವೇತನ್ನ ಪತೇಯುರಿಹೋರಗಾಃ ॥22॥
ಜನಮೇಜಯನೆ, ನನಗೆ ವರವನ್ನು ಕೊಡುವುದಾದರೆ, ನಾನು ಈ ವರವನ್ನು ಕೇಳುತ್ತೇನೆ. ಈ ನಿನ್ನ ಸತ್ರವು ಇಲ್ಲಿಗೇ ನಿಲ್ಲಲಿ. ಇನ್ನು ಯಾವ ಸರ್ಪಗಳೂ ಅಗ್ನಿಯಲ್ಲಿ ಬೀಳುವುದು ಬೇಡ.
ಸೂತಃ
ಏವಮುಕ್ತಸ್ತದಾ ರಾಜಾ ಬ್ರಹ್ಮನ್ ಪಾರೀಕ್ಷಿತಸ್ತದಾ |
ನಾತಿಹೃಷ್ಟಮನಾ ವಾಕ್ಯಮಾಸ್ತೀಕಮಿದಮಬ್ರವೀತ್ ॥23॥
ಎಲೈ ಬ್ರಾಹ್ಮಣನೇ, ಆಸ್ತೀಕನಿಂದ ಹೀಗೆ ಹೇಳಲ್ಪಟ್ಟ ಜನಮೇಜಯರಾಜನು ಮನಸ್ಸಿನಲ್ಲಿ ಬಹಳ ಸಂತೋಷಗೊಳ್ಳದೆ, ಆಸ್ತೀಕನನ್ನು ಕುರಿತು ಹೀಗೆ ಮಾತನಾಡಿದನು.
ಸುವರ್ಣಂ ರಜತಂ ಗಾಶ್ಚ ಯಚ್ಚಾನ್ಯನ್ಮನ್ಯಸೇ ದ್ವಿಜ |
ತತ್ ತೇ ದದ್ಯಾಂ ಸುವಾಸಾಂಸಿ ನ ನಿವರ್ತೇತ್ ಕ್ರತುರ್ಮಮ ॥24॥
ಎಲೈ ಬ್ರಾಹ್ಮಣನೇ, ನಿನಗೆ ಸುವರ್ಣವನ್ನಾಗಲಿ, ರಜತವನ್ನಾಗಲಿ, ಗೋವುಗಳನ್ನಾಗಲಿ ಅಥವಾ ಅಭೀಷ್ಟವಾದ ಇನ್ನಾವುದೇ ವಸ್ತುವನ್ನಾಗಲಿ ಅಥವಾ ವಸ್ತ್ರಗಳನ್ನಾಗಲಿ ಕೊಡುವೆನು. ನನ್ನ ಈ ಯಾಗವು ಇಲ್ಲಿಗೆ ವಿರಾಮವನ್ನು ಹೊಂದದಿರಲಿ.
ಆಸ್ತೀಕಃ
ಸುವರ್ಣಂ ರಜತಂ ಗಾಶ್ಚ ನ ತ್ವಾಂ ರಾಜನ್ ವೃಣೋಮ್ಯಹಮ್ |
ಸತ್ರಂ ತೇ ವಿರಮತ್ವೇತತ್ ಸ್ವಸ್ತಿ ಮಾತೃಕುಲಸ್ಯ ನಃ ॥25॥
ರಾಜನೇ, ನಾನು ಸುವರ್ಣವನ್ನಾಗಲಿ, ರಜತವನ್ನಾಗಲಿ, ಗೋವುಗಳನ್ನಾಗಲಿ ನಿನ್ನನ್ನು ಬೇಡುತ್ತಿಲ್ಲ. ಈ ಸತ್ರವು ಇಲ್ಲಿಗೆ ನಿಲ್ಲಲಿ. ನಮ್ಮ ತಾಯಿಯ ವಂಶಕ್ಕೆ ಕ್ಷೇಮವಾಗಲಿ.
ಸೌತಿಃ
ಆಸ್ತೀಕೇನೈವಮುಕ್ತಸ್ತು ರಾಜಾ ಪಾರೀಕ್ಷಿತಸ್ತದಾ |
ಪುನಃಪುನರುವಾಚೇದಮಾಸ್ತೀಕಂ ವದತಾಂ ವರಃ ॥26॥
ಅನ್ಯಂ ವರಯ ಭದ್ರಂ ತೇ ವರಂ ದ್ವಿಜವರೋತ್ತಮ |
ಅಯಾಚತ್ ನಚಾಪ್ಯನ್ಯಂ ವರಂ ಸ ಭೃಗುನಂದನ ॥27॥
ಆಸ್ತೀಕನಿಂದ ಹೀಗೆ ಹೇಳಲ್ಪಟ್ಟ ಜನಮೇಜಯರಾಜನು ಆಸ್ತೀಕನನ್ನು ಕುರಿತು ಪುನಃ ಪುನಃ ದ್ವಿಜಶ್ರೇಷ್ಠರಲ್ಲಿ ಶ್ರೇಷ್ಠನೇ,

ಮಂಗಳಸ್ವರೂಪನೇ, ಬೇರೆಯ ವರವನ್ನು ಕೇಳು ಎಂದು ಒತ್ತಾಯಪಡಿಸಿದನು. ಎಲೈ ಭೃಗುನಂದನನಾದ ಶೌನಕನೇ, ಆಸ್ತೀಕನು ಬೇರೆ ಯಾವ ವರವನ್ನೂ ಕೇಳಲಿಲ್ಲ.
ತತೋ ವೇದವಿದಸ್ತಾತ ಸದಸ್ಯಾಃ ಸರ್ವ ಏವ ತಮ್ |
ರಾಜಾನಮೂಚುಃ ಸಹಿತಾ ಲಭತಾಂ ಬ್ರಾಹ್ಮಣೋ ವರಮ್ ॥28॥
ಆಗ ವೇದಜ್ಞರಾದ ಸದಸ್ಯರೆಲ್ಲರೂ ಒಟ್ಟಿಗೇ ರಾಜನನ್ನು ಕುರಿತು ಈ ಬ್ರಾಹ್ಮಣನಿಗೆ ಅವನು ಕೇಳಿದ ವರವನ್ನು ಕೊಡು ಎಂದು ಹೇಳಿದರು.
ಶ್ರುತ್ವಾ ತನ್ನೃಪತಿರ್ವಾಕ್ಯಂ ದದೌ ತಸ್ಮೈ ವರಂ ತದಾ |
ಸರ್ವೇಷಾಂ ಪಶ್ಯತಾಂ ತತ್ರ ಪೂರ್ಣಕಾಮೋ ದ್ವಿಜೋಽಭವತ್ ॥29॥
ಬ್ರಾಹ್ಮಣರ ಮಾತನ್ನು ಕೇಳಿದ ರಾಜನು ಆಸ್ತೀಕನಿಗೆ ಆ ವರವನ್ನು ನೀಡಿದನು. ಎಲ್ಲರೂ ನೋಡುತ್ತಿರುವಂತೆ ಬ್ರಾಹ್ಮಣನು ಇಷ್ಟಾರ್ಥಗಳನ್ನು ಪೂರ್ಣಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚಾಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
*****

ಐವತ್ತೊಂದನೆಯ ಅಧ್ಯಾಯ
(ಸರ್ಪಸತ್ರದಲ್ಲಿ ದಗ್ಧರಾದ ಸರ್ಪಗಳ ನಾಮಕೀರ್ತನೆ)
ಶೌನಕಃ
ಯೇ ಸರ್ಪಾಃ ಸರ್ಪಸತ್ರೇಽಸ್ಮಿನ್ ಪತಿತಾ ಹವ್ಯವಾಹನೇ |
ತೇಷಾಂ ನಾಮಾನಿ ಸರ್ವೇಷಾಂ ಶ್ರೋತುಮಿಚ್ಛಾಮಿ ಸೂತಜ ॥1॥
ಎಲೈ ಸೂತಕುಮಾರನೇ, ಆ ಸರ್ಪಯಾಗದಲ್ಲಿ ಅಗ್ನಿಯಲ್ಲಿ ಬಿದ್ದ ಎಲ್ಲಾ ಸರ್ಪಗಳ ಹೆಸರನ್ನು ನಾನು ಕೇಳಲು ಬಯಸುತ್ತೇನೆ.
ಸೂತಃ
ಸಹಸ್ರಾಣಿ ಬಹೂನ್ಯಸ್ಮಿನ್ ಪ್ರಯುತಾನ್ಯರ್ಬುದಾನಿ ಚ |
ನ ಶಕ್ಯಂ ಪರಿಸಂಖ್ಯಾತುಂ ಬಹುತ್ವಾದ್ ವೇದವಿತ್ತಮ ॥2॥
ವೇದವೇತ್ತರಲ್ಲಿ ಶ್ರೇಷ್ಠನಾದ ಶೌನಕನೇ, ಆ ಯಜ್ಞದಲ್ಲಿ ಸಾವಿರಗಟ್ಟಲೆ ಅಥವಾ ಕೋಟಿಗಟ್ಟಲೆ ಅಥವಾ ಅರ್ಬುದಗಟ್ಟಲೆ ಸರ್ಪಗಳು ಅಗ್ನಿಯಲ್ಲಿ ಬಿದ್ದವು. ಅವುಗಳ ಸಂಖ್ಯೆ ಅಪಾರವಾಗಿರುವುದರಿಂದ ಅದನ್ನು ಎಣಿಸಲು ಸಾಧ್ಯವಿಲ್ಲ. ನನ್ನ ಸ್ಮೃತಿಗೆ ಬಂದಷ್ಟು ಅವುಗಳ ಹೆಸರನ್ನು ಹೇಳುತ್ತೇನೆ ಕೇಳು.
ಯಥಾಸ್ಮೃತಿ ತು ನಾಮಾನಿ ಪನ್ನಗಾನಾಂ ನಿಬೋಧ ಮೇ |
ನೀಲರಕ್ತಾನ್ ಸಿತಾನ್ ಘೋರಾನ್ ಮಹಾಕಾಯಾನ್ ವಿಷೋಲ್ಬಣಾನ್ ॥
ನೀಲವರ್ಣದ, ರಕ್ತವರ್ಣದ, ಶ್ವೇತವರ್ಣದ, ಘೋರವೂ, ಮಹಾಶರೀರವುಳ್ಳವೂ, ಪ್ರಬಲವಾದ ವಿಷವುಳ್ಳವೂ ಆದ ಸರ್ಪಗಳ ಹೆಸರನ್ನು ನನ್ನ ಸ್ಮೃತಿಯಲ್ಲಿದಷ್ಟು ಹೇಳುವೆನು, ಅದನ್ನು ನನ್ನಿಂದ ತಿಳಿದುಕೋ.
ಕೋಟಿಕೋ ಮನಸಃ ಪೂರ್ಣಃ ಸದಯಾಲೋ ಹಲೀಢಕಃ |
ಪಿಚ್ಛಲಃ ಕೌಣಪಃ ಶಕ್ರಃ ಕೋಣವೇಗಃ ಪ್ರಕಾಲನಃ ॥4॥
ಹಿರಣ್ಯವಾಹಃ ಶರಣಃ ಕಕ್ಷಕಃ ಕಾಲದಂತಕಃ |
ಏತೇ ವಾಸುಕಿಜಾ ನಾಗಾಃ ಪ್ರವಿಷ್ಟಾ ಹವ್ಯವಾಹನಮ್ ॥5॥
ಕೋಟಿಕ, ಮನಸ, ಪೂರ್ಣ, ದಯಾಲ, ಹಳೀಡಕ, ಪಿಚ್ಛಲ, ಕೌಣಪ, ಶಕ್ರ, ಕೋಣವೇಗ, ಪ್ರಕಾಲನ, ಹಿರಣ್ಯವಾಹ, ಶರಣ, ಕಕ್ಷಕ, ಕಾಲಗ್ರಂಥಕ ಇವು ವಾಸುಕಿಯ ವಂಶದಲ್ಲಿ ಜನಿಸಿ ಅಗ್ನಿಯಲ್ಲಿ ಪ್ರವಿಷ್ಟವಾದ ಸರ್ಪಗಳು.
ತಕ್ಷಕಸ್ಯ ಕುಲಂ ತದ್ ವೈ ಪ್ರವಕ್ಷ್ಯಾಮಿ ನಿಬೋಧ ತಾನ್ |
ಪುಚ್ಛಾಣ್ಡಲೋ ಮಂಡಲಿಕಃ ಪಿಂಡಿಭೇತ್ತಾ ರಭೇಣಕಃ ॥6॥
ಉಚ್ಛಿಖಃ ಸುರಸೋ ಭೃಂಗೋ ವಲ್ಲಿಹೋಽಥಾವಗೇಹಣಃ |
ಸೀಲಃ ಸೀಲಹಣೋ ಮೂಕಃ ಸುಕುಮಾರಃ ಪ್ರವೇಪನಃ ॥7॥
ಮುದ್ಗಿರಃ ಶರರೋಮಾ ಚ ಸುಮನೋ ವೇಗವಾಹನಃ |
ಏತೇ ತಕ್ಷಕಜಾ ನಾಗಾಃ ಪ್ರವಿಷ್ಟಾ ಹವ್ಯವಾಹನಮ್ ॥8॥
ನಾನು ತಕ್ಷಕನ ಕುಲವನ್ನು ಹೇಳುತ್ತೇನೆ, ಕೇಳು, ಪುಚ್ಛಾಣ್ಡನಲ, ಮಂಡಲಿಕ, ಪಿಂಡಿಭೇತ್ತ, ರಭೇಣಕ, ಉಚ್ಛಿಖ, ಸುರಸ, ಭೃಂಗ, ವಲ್ಲಿಹ, ಅವಗೇಹಣ, ಸೀಲ, ಸೀಲಹಣ, ಮೂಕ, ಸುಕುಮಾರ, ಪ್ರವೇಪನ, ಮುದ್ಗಿರ, ಶರರೋಮ, ಸುಮನ, ವೇಗವಾಹನ ತಕ್ಷಕನ ಕುಲಕ್ಕೆ ಸೇರಿದ ಈ ಸರ್ಪಗಳು ಅಗ್ನಿಯನ್ನು ಪ್ರವೇಶಿಸಿದವು.
ಪಾರಾವತಃ ಪಾರಿಯಾತ್ರಃ ಪಾಂಡರೋ ಹರಿಣಃ ಕೃಶಃ |
ವಿಹಂಗಃ ಶರಭೋ ಮೋದಃ ಪ್ರಮೋದಃ ಸಂಹತಾಂಗದಃ |
ಐರಾವತಕುಲಾ ಏತೇ ಪತಿತಾ ಹವ್ಯವಾಹನಮ್ ॥9॥

ಪಾರಾವತ, ಪಾರಿಯಾತ್ರ, ಪಾಂಡರ, ಹರಿಣ, ಕೃಶ, ವಿಹಂಗ, ಶರಭ, ಮೋದ, ಪ್ರಮೋದ, ಸಂಹತಾಂಗದ - ಐರಾವತಕುಲಕ್ಕೆ ಸೇರಿದ ಈ ಸರ್ಪಗಳು ಅಗ್ನಿಯಲ್ಲಿ ಬಿದ್ದವು.
ಕೌರವ್ಯಕುಲಜಾನ್ ಜಾತಾನ್ ಶೃಣು  ನಾಗಾನ್ ದ್ವಿಜೋತ್ತಮ |
ಜಟಿಲಃ ಕುಂಡಲೋ ಮುಂಡೋ ವೇಣಿಗ್ರಂಥಃ ಕುಮಾರಕಃ ॥10॥
ಬಾಹುಕಃ ಶೃಂಗಯಷ್ಟಿಶ್ಚ ಧೂರ್ತಕಃ ಪೋತಪೀವರೌ |
ಏತೇ ಕೌರವ್ಯಜಾ ನಾಗಾಃ ಪ್ರವಿಷ್ಟಾ ಹವ್ಯವಾಹನಮ್ ॥11॥
ಎಲೈ ದ್ವಿಜಶ್ರೇಷ್ಠನೇ, ಕೌರವ್ಯಕುಲದಲ್ಲಿ ಜನಿಸಿದ ಸರ್ಪಗಳ ಹೆಸರನ್ನು ಕೇಳು. ಜಟಿಲ, ಕುಂಡಲ, ಮುಂಡ, ವೇಣಿಗ್ರಂಥ, ಕುಮಾರಕ, ಬಾಹುಕ, ಶೃಂಗಯಷ್ಟಿ, ಧೂರ್ತಕ, ಪೋತ, ಪೀವರ - ಕೌರವ್ಯವಂಶದಲ್ಲಿ ಜನಿಸಿದ ಈ ನಾಗಗಳು ಅಗ್ನಿಯನ್ನು ಪ್ರವೇಶಿಸಿದವು.
ಧೃತರಾಷ್ಟ್ರಕುಲೇ ಜಾತಾನ್ ಶೃಣು ನಾಗಾನ್ ಯಥಾಯಥಮ್ |
ಕೀರ್ತ್ಯಮಾನಾನ್ ಮಯಾ ಬ್ರಹ್ಮನ್ ವಾತವೇಗಾನ್ ವಿಷೋಲ್ಬಣಾನ್ |
ಶಂಕುಕರ್ಣಃ ಪಿಂಗಲಕಃ ಕುಠಾರಮುಖಸೇವಕೌ ॥12॥
ಪೂರ್ಣಾಂಗದಃ ಪೂರ್ಣಮುಖಃ ಪ್ರಹಸ್ತಃ ಶಕುನಿರ್ಭರಃ |
ಅಮಾವಕಃ ಕೌಮುದಕಃ ಶ್ವಸನೋ ಮಾನವೋ ನಟಃ ॥13॥
ಭೈರವೋ ಮಂಡಲೀ ಪಿಂಡಃ ಪಿಂಗಲಶ್ಚೋಡುಪಾರಕಃ |
ಋಷಭೋ ವೇಗವಾನ್ ನಾಥಃ ಪಿಂಡಾರಕಮಹಾಹನೂ ॥14॥
ರಕ್ತಾಂಗಃ ಸರ್ವಸಾರಂಗಃ ಸಮೃದ್ಧಃ ಪಟಲಾಕ್ಷಕಃ |
ವಗಾಹಕೋ ವಾರುಣಕಃ ಸುಮಿತ್ರಶ್ಚಿತ್ರವೇದಿಕಃ ॥15॥
ಪರಾಶರಸ್ತರುಣಕೋ ಮಣಿಸ್ಕಂಧಸ್ತಥಾಽರುಣಿಃ |
ಇತಿ ನಾಗಾ ಮಯಾ ಬ್ರಹ್ಮನ್ ಕೀರ್ತಿತಾಃ ಕೀರ್ತಿವರ್ಧನ ॥16॥
ಎಲೈ ಬ್ರಾಹ್ಮಣನೇ, ಧೃತರಾಷ್ಟ್ರಕುಲದಲ್ಲಿ ಜನಿಸಿದ ವಾಯುವೇಗವುಳ್ಳ ಮತ್ತು ವಿಷಉಲ್ಬಣವಾದ ನಾಗಗಳನ್ನು ತಿಳಿದಷ್ಟು ಹೇಳುತ್ತೇನೆ ಕೇಳು. ಶಂಕುಕರ್ಣ, ಪಿಂಗಲಕ, ಕುಠಾರಮುಖ, ಸೇವಕ, ಪೂರ್ಣಾಂಗದ, ಪೂರ್ಣಮುಖ, ಪ್ರಹಸ್ತ, ಶಕುನಿ, ಭರ, ಅಮಾವಕ, ಕೌಮುದಕ, ಶ್ವಸನ, ಮಾನವ, ನಟ, ಭೈರವ, ಮಂಡಲೀ, ಪಿಂಡ, ಪಿಂಗಲ, ಉಡುಪಾರಕ, ಋಷಭ, ವೇಗವಾನ್, ನಾಥ, ಪಿಂಡಾರಕ, ಮಹಾಹನು, ರಕ್ತಾಂಗ, ಸರ್ವಸಾರಂಗ, ಸಮೃದ್ಧ, ಪಟಲಾಕ್ಷ, ವಗಾಹಕ, ವಾರುಣಕ, ಸುಮಿತ್ರ, ಚಿತ್ರವೇದಿಕ, ಪರಾಶರ, ತರುಣಕ, ಮಣಿಸ್ಕಂಧ ಮತ್ತು ಅರುಣಿ. ಎಲೈ ಕೀರ್ತಿವರ್ಧನನಾದ ಬ್ರಾಹ್ಮಣನೇ, ನಾನು ಇಷ್ಟು ನಾಗಗಳ ಹೆಸರನ್ನು ಹೇಳಿದ್ದೇನೆ.
ಪ್ರಾಧಾನ್ಯೇನ ಬಹುತ್ವಾತ್ ತು ಸರ್ವೇ ನ ಪರಿಕೀರ್ತಿತಾಃ |
ಏತೇಷಾಂ ಪುತ್ರಪೌತ್ರಾಶ್ಚ  ಪ್ರಸವಸ್ಯ ಚ ಸಂತತಿಃ |
ನ ಶಕ್ಯಾಃ ಪರಿಸಂಖ್ಯಾತುಂ ಯೇ ದೀಪ್ತಂ ಪಾವಕಂ ಗತಾಃ ॥17॥
ಸರ್ಪಗಳ ಸಂಖ್ಯೆಯು ಅಪಾರವಾಗಿರುವುದರಿಂದ ನಾನು ಎಲ್ಲಾ ಹೆಸರುಗಳನ್ನೂ ಹೇಳದೆ, ಪ್ರಧಾನರಾದವರ ಹೆಸರನ್ನೇ ಹೇಳಿದ್ದೇನೆ. ಈ ಸರ್ಪಗಳ ಪುತ್ರಪೌತ್ರರೂ, ಅವರ ಮಕ್ಕಳೂ, ಅವರ ಸಂತತಿಯೂ ಪರಿಗಣಿಸಲು ಸಾಧ್ಯವಿಲ್ಲ. ಅವರೆಲ್ಲರೂ ದೀಪ್ತವಾದ ಅಗ್ನಿಯಲ್ಲಿ ನಷ್ಟರಾದರು.
ಸಪ್ತಶೀರ್ಷಾಽಷ್ಟಶೀರ್ಷಾಶ್ಚ  ದ್ವಿಷಟ್‌ಶೀರ್ಷಾಸ್ತಥಾಪರೇ |
ದಶಶೀರ್ಷಾಃ ಶತಶೀರ್ಷಾಸ್ತಥಾನ್ಯೇ ಬಹುಶೀರ್ಷಕಾಃ |
ಕಾಲಾನಲವಿಷಾ ಘೋರಾ ಹುತಾಃ ಶತಸಹಸ್ರಶಃ ॥18॥
ಏಳು ಹೆಡೆಗಳುಳ್ಳ, ಎಂಟು ಹೆಡೆಗಳುಳ್ಳ, ಹನ್ನೆರಡು ಹೆಡೆಗಳುಳ್ಳ, ಹತ್ತು ಹೆಡೆಗಳುಳ್ಳ, ನೂರು ಹೆಡೆಗಳುಳ್ಳ ಮತ್ತು ಅದಕ್ಕಿಂತಲೂ ಹೆಚ್ಚು ಹೆಡೆಗಳುಳ್ಳ, ಪ್ರಳಯಕಾಲದ ವಹ್ನಿಯಂತೆ ವಿಷಪೂರಿತವಾದ ಘೋರವಾದ ಸರ್ಪಗಳು, ನೂರು ಸಹಸ್ರಾರು ಸಂಖ್ಯೆಯಲ್ಲಿ ಅಗ್ನಿಯಲ್ಲಿ ಹೋಮಮಾಡಲ್ಪಟ್ಟವು.
ಮಹಾಕಾಯಾ ಮಹಾವೀರ್ಯಾಃ ಶೈಲಶೃಂಗಸಮುಚ್ಛ್ರಯಾಃ |
ಯೋಜನಾಯಾಮವಿಸ್ತಾರಾ ದ್ವಿಯೋಜನಸಮಾಯತಾಃ ॥19॥
ಕಾಮರೂಪಾಃ ಕಾಮಬಲಾ ದೀಪ್ತರೂಪಾ ವಿಷೋಲ್ಬಣಾಃ |
ದಗ್ಧಾಸ್ತತ್ರ ಮಹಾಸತ್ರೇ ಬ್ರಹ್ಮದಂಡನಿಪೀಡಿತಾಃ ॥20॥
ಮಹಾಶರೀರವುಳ್ಳ, ಮಹಾಪರಾಕ್ರಮವುಳ್ಳ, ಪರ್ವತದ ಶಿಖರದಂತೆ ಎತ್ತರವಾದ, ಒಂದು ಯೋಜನ ಅಗಲ ಮತ್ತು ಒಂದು ಯೋಜನ ಎತ್ತರವುಳ್ಳ, ಎರಡು ಯೋಜನ ವಿಸ್ತಾರವುಳ್ಳ, ಕಾಮರೂಪವುಳ್ಳ, ಕಾಮಬಲವುಳ್ಳ ಪ್ರಕಾಶಮಾನವಾದ ರೂಪವುಳ್ಳ, ವಿಷ ಉಲ್ಬಣವಾದ ಅನೇಕ ಸರ್ಪಗಳು ಚಂಡಭಾರ್ಗವನ ಮಂತ್ರಶಕ್ತಿಗೆ ಒಳಗಾಗಿ ಆ ಮಹಾಸತ್ರದಲ್ಲಿ ಅಗ್ನಿಯಲ್ಲಿ ದಗ್ಧವಾದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕಪಂಚಾಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
*****

ಐವತ್ತೆರಡನೆಯ ಅಧ್ಯಾಯ
(ಸರ್ಪಸತ್ರ ಸಮಾಪ್ತಿ. ಆಸ್ತೀಕನಿಂದ ಸರ್ಪಗಳಿಗೆ ವರದಾನ.)

ಸೂತಃ
ಇದಮತ್ಯದ್ಭುತಂ ಚಾನ್ಯದಸ್ತೀಕಸ್ಯಾಥ ಶುಶ್ರುಮಃ |
ತಥಾ ವರೈಶ್ಛಂದ್ಯಮಾನೋ ರಾಜ್ಞಾ  ಪಾರೀಕ್ಷಿತೇನ ಹ ॥1॥
ಆಸ್ತೀಕನ ವಿಷಯದಲ್ಲಿ ಪರೀಕ್ಷಿತರಾಜನು ವರವನ್ನು ಕೇಳು ಎಂದು ಅವನನ್ನು ಕುರಿತು ಹೇಳುತ್ತಿರುವಾಗ ಇನ್ನೊಂದು ಆಶ್ಚರ್ಯದ ಘಟನೆಯು ನಡೆಯಿತೆಂದು ನಾವು ಕೇಳಿದ್ದೇವೆ.
ಇಂದ್ರಹಸ್ತಾಚ್ಚ್ಯುತೋ ನಾಗಃ ಸ ಖ ಏವ ವ್ಯವಸ್ಥಿತಃ |
ತತಶ್ಚಿಂತಾಪರೋ ರಾಜಾ ಬಭೂವ ಜನಮೇಜಯಃ ॥2॥
ಇಂದ್ರನ ಕೈಯಿಂದ ಜಾರಿದ ಆ ತಕ್ಷಕನು ಆಕಾಶದಲ್ಲಿಯೇ ನಿಂತನು. ಆಗ ಜನಮೇಜಯರಾಜನು ಚಿಂತಾಕ್ರಾಂತನಾದನು.
ಹೂಯಮಾನೇ ಭೃಶಂ ದೀಪ್ತೇ ವಿಧಿವತ್ ಪಾವಕೇ ತದಾ |
ನ ಸಂಪ್ರಾಪತ್ ತದಾ ವಹ್ನೌ  ತಕ್ಷಕೋ ಭಯಪೀಡಿತಃ ॥3॥
ದೀಪ್ತವಾದ ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಆಹ್ವಾನವನ್ನು ಮಾಡಿದಾಗ ಭಯಪೀಡಿತನಾದ ತಕ್ಷಕನು ಆಗ ಅಗ್ನಿಯ ಬಳಿಗೆ ಬರಲಿಲ್ಲ.
ಶೌನಕಃ
ಕಿಂ ಸೂತ ತೇಷಾಂ ವಿಪ್ರಾಣಾಂ ಮಂತ್ರಗ್ರಾಮೋ ಮಹಾತ್ಮನಾಮ್ |
ನ ಪ್ರತ್ಯಭಾದ್ ಹುತೇಽಗ್ನೌ ಯನ್ನ  ಪಪಾತ ಸ ತಕ್ಷಕಃ ॥4॥
ಸೂತರೇ, ಇದೇನು ಆ ಮಹಾತ್ಮರಾದ ಬ್ರಾಹ್ಮಣರಿಗೆ ಮಂತ್ರಗಳು ಮರೆತುಹೋದವೋ? ತಕ್ಷಕನು ದೀಪ್ತವಾದ ಅಗ್ನಿಯಲ್ಲಿ ಏಕೆ ಬೀಳಲಿಲ್ಲ?
ಸೂತಃ
ತಮಿಂದ್ರಹಸ್ತಾದ್ ವಿಸ್ರಸ್ತಂ ವಿಪತ್ಸ್ವಂ ಪನ್ನಗೋತ್ತಮಮ್ |
ಅಸ್ತೀಕಸ್ತಿಷ್ಠತಿಷ್ಠೇತಿ ವಾಚಸ್ತಿಸ್ರೋಽಭ್ಯುವಾಚ ಹ ॥5॥
ಇಂದ್ರನ ಕೈಯಿಂದ ಜಾರಿದ ವಿಪತ್ತಿಗೊಳಗಾದ ಆ ಪನ್ನಗಶ್ರೇಷ್ಠನಾದ ತಕ್ಷಕನನ್ನು ಕುರಿತು ಆಸ್ತೀಕನು `ನಿಲ್ಲು, ನಿಲ್ಲು, ನಿಲು'ಲ ಎಂದು ಮೂರುಬಾರಿ ಹೇಳಿದನು.
ವಿತಸ್ಥೇ ಸೋಽಂತರಿಕ್ಷೇಽಥ ಹೃದಯೇನ ವಿದೂಯತಾ |
ಯಥಾ ತಿಷ್ಠೇತಿ ವಾಚೋಕ್ತಸ್ತಥಾ ತಸ್ಥೌ  ನಭೋಽಂತರೇ ॥6॥
ಆಗ ಆಸ್ತೀಕನು ನಿಲ್ಲು ಎಂದು ಹೇಳಿದ ಮಾತಿನಂತೆ ತಕ್ಷಕನು ಆಕಾಶದ ಮಧ್ಯದಲ್ಲಿ ಅಂತರಿಕ್ಷದಲ್ಲಿಯೇ ದುಃಖಗೊಂಡ ಮನಸ್ಸಿನಿಂದ ನಿಂತನು.
ತತೋ ರಾಜಾಽಬ್ರವೀದ್ ವಾಕ್ಯಂ ಸದಸ್ಯೈಶ್ಚೋದಿತೋ ಭೃಶಮ್ |
ಕಾಮಮೇವಂ ಭವತ್ವೇತದ್ ಯಥಾಽಸ್ತೀಕಸ್ಯ ಭಾಷಿತಮ್ ॥7॥
ಸಮಾಪ್ಯತಾಮಿದಂ ಕರ್ಮ ಪನ್ನಗಾಃ ಸಂತ್ವನಾಮಯಾಃ |
ಪ್ರೀಯತಾಮಯಮಸ್ತೀಕಃ ಸತ್ಯಂ ಮಮ ವಚೋಽಸ್ತು ತತ್ ॥8॥
ಆಗ ರಾಜನು ಸದಸ್ಯರಿಂದ ಬಹಳ ಪ್ರೇರಿಸಲ್ಪಟ್ಟವನಾಗಿ ಆಸ್ತೀಕನು ಏನನ್ನು ಕೇಳುತ್ತಿದ್ದಾನೆಯೋ ಅದರಂತೆಯೇ ಆಗಲಿ. ಈ ಯಜ್ಞವು ಇಲ್ಲಿಗೇ ಸಮಾಪ್ತಿಗೊಳ್ಳಲಿ. ಉಳಿದ ಸರ್ಪಗಳಿಗೆ ಕ್ಷೇಮವಾಗಲಿ. ಈ ಆಸ್ತೀಕನಿಗೆ ಸಂತೋಷವಾಗಲಿ ಮತ್ತು ನನ್ನ ಮಾತು ಸತ್ಯವಾಗಲಿ ಎಂದು ಹೇಳಿದನು.
ತತೋ ಹಲಹಲಾಶಬ್ದಃ ಪ್ರೀತಿಜಃ ಸಮವರ್ಧತ |
ಅಸ್ತೀಕಸ್ಯ ವರೇ ದತ್ತೇ ತಥೈವ ವಿರರಾಮ ಚ ॥9॥
ರಾಜನು ಆಸ್ತೀಕನಿಗೆ ಹೀಗೆ ವರವನ್ನು ಕೊಡುತ್ತಿರಲು ಎಲ್ಲಾ ಕಡೆಯಲ್ಲಿಯೂ ಸಂತೋಷದಿಂದ ಉಂಟಾದ ಸುಘೋಷವು ಉಂಟಾಯಿತು.
ಸ ಯಜ್ಞಃ ಪಾಂಡವೇಯಸ್ಯ ರಾಜ್ಞಃ ಪಾರೀಕ್ಷಿತಸ್ಯ ಹ |
ಪ್ರೀತಿಮಾನಭವದ್ರಾಜಾ ಭಾರತೋ ಜನಮೇಜಯಃ ॥10॥
ಪಾಂಡವವಂಶದಲ್ಲಿ ಹುಟ್ಟಿದ, ಪರೀಕ್ಷಿತನ ಮಗನಾದ, ಜನಮೇಜಯನ ಯಜ್ಞವು ಅಲ್ಲಿಗೇ ಸಮಾಪ್ತವಾಯಿತು. ಭರತವಂಶದಲ್ಲಿ ಜನಿಸಿದ ಜನಮೇಜಯನು ಸಂತೋಷಗೊಂಡನು.
ಋತ್ವಿಗ್ಭ್ಯಃ ಸ ಸದಸ್ಯೇಭ್ಯೋ ಯೇ ತತ್ರಾಸನ್ ಸಮಾಗತಾಃ |
ತೇಭ್ಯಶ್ಚ ಪ್ರದದೌ ವಿತ್ತಂ ಶತಶೋಽಥ ಸಹಸ್ರಶಃ ॥11॥
ಲೋಹಿತಾಕ್ಷಾಯ ಸೂತಾಯ ತಥಾ ಸ್ಥಪತಯೇ ವಿಭುಃ |
ಯೇನೋಕ್ತಂ ತತ್ರ ಸತ್ರಾಗ್ರೇ ಯಜ್ಞಸ್ಯ ವಿನಿವರ್ತನಮ್ ॥12॥
ಅವನು ಋತ್ವಿಜರಿಗೂ, ಸದಸ್ಯರಿಗೂ, ಅಲ್ಲಿ ಬಂದ ಉಳಿದ ಬ್ರಾಹ್ಮಣರಿಗೂ ಮತ್ತು ಎಲ್ಲರಿಗೂ ನೂರರಗಟ್ಟಲೆಯಲ್ಲಿ, ಸಾವಿರದಗಟ್ಟಲೆಯಲ್ಲಿ ಧನವನ್ನು ದಾನಮಾಡಿದನು. ಯಜ್ಞವು ಮಧ್ಯದಲ್ಲಿಯೇ ನಿಲ್ಲುವುದು ಎಂದು ಹೇಳಿದ ಸೂತನಾದ ಲೋಹಿತಾಕ್ಷನಿಗೂ ಮತ್ತು ಸ್ಥಪತಿಗೂ ಬಹುವಿಧವಾದ ದಾನವನ್ನು ಕೊಟ್ಟನು.
ತತಶ್ಚಕಾರಾವಭೃಥಂ ವಿಧಿದೃಷ್ಟೇನ ಕರ್ಮಣಾ |
ಅಸ್ತೀಕಂ ಪ್ರೇಷಯಾಮಾಸ ಗೃಹಾನೇವ ಸುಸತ್ಕೃತಮ್ ॥13॥

ರಾಜಾ ಪ್ರೀತಮನಾಃ ಪ್ರೀತಂ ಕೃತಕೃತ್ಯಂ ಮನೀಷಿಣಮ್ |
ಪುನರಾಗಮನಂ ಕಾರ್ಯಮಿತಿ ಚೈನಂ ವಚೋಽಬ್ರವೀತ್ ॥14॥
ಭವಿಷ್ಯಸಿ ಸದಸ್ಯೋ ಮೇ ವಾಜಿಮೇಧೇ ಮಹಾಕ್ರತೌ |
ತಥೇತ್ಯುಕ್ತ್ವಾ ಪ್ರದುದ್ರಾವ ಸ ಚಾಸ್ತೀಕೋ ಮುದಾ ಯುತಃ ॥15॥
ಅನಂತರ ರಾಜನು ವಿಧಿಪೂರ್ವಕವಾಗಿ ಅವಭೃತಸ್ನಾನವನ್ನು ಮಾಡಿದನು. ಆಸ್ತೀಕನನ್ನು ಚೆನ್ನಾಗಿ ಸತ್ಕರಿಸಿ ಅವನ ಮನೆಗೆ ಕಳುಹಿಸಿಕೊಟ್ಟನು. ರಾಜನು ಬಹಳ ಸಂತೋಷದಿಂದ ಕೂಡಿದವನಾಗಿ, ಸಂತೋಷದಿಂದ ಕೂಡಿದ್ದ, ಕೃತಕೃತ್ಯನಾದ, ಮೇಧಾವಿಯಾದ ಆಸ್ತೀಕನನ್ನು ಕುರಿತು ಪುನಃ ನನ್ನ ರಾಜ್ಯಕ್ಕೆ ಬರಬೇಕು, ನಾನು ಮುಂದೆ ಮಾಡುವ ಅಶ್ವಮೇಧಮಹಾಯಾಗದಲ್ಲಿ ನೀನು ಸದಸ್ಯನಾಗಿರಬೇಕು ಎಂದು ಹೇಳಿದನು. ಹಾಗೆಯೇ ಆಗಲಿ ಎಂದು ಹೇಳಿ ಆಸ್ತೀಕನು ಸಂತೋಷದಿಂದ ಕೂಡಿದವನಾಗಿ ಅಲ್ಲಿಂದ ಓಡಿದನು.
ಕೃತ್ವಾ ಸ್ವಕಾರ್ಯಮತುಳಂ ತೋಷಯಿತ್ವಾ ಚ ಪಾರ್ಥಿವಮ್ |
ಸ ಗತ್ವಾ ಪರಮಪ್ರೀತೋ ಮಾತರಂ ಮಾತುಲಂ ಚ ತಮ್ |
ಅಭಿಗಮ್ಯೋಪಸಂಗೃಹ್ಯ ಯಥಾವೃತ್ತಂ ನ್ಯವೇದಯತ್ ॥16॥
ಅಸದೃಶವಾದ ರೀತಿಯಲ್ಲಿ ತನ್ನ ಕಾರ್ಯವನ್ನು ಸಾಧಿಸಿ, ರಾಜನನ್ನು ಸಂತೋಷಪಡಿಸಿ, ಪರಮಸಂತೋಷವುಳ್ಳವನಾಗಿ ಅವನು ಹೋಗಿ ತಾಯಿಗೂ ಮತ್ತು ಸೋದರಮಾವನಿಗೂ ನಮಸ್ಕರಿಸಿ ನಡೆದ ಘಟನೆಯನ್ನೆಲ್ಲಾ ಯಥಾವತ್ತಾಗಿ ನಿರೂಪಿಸಿದನು.
ಏತಚ್ಛ್ರುತ್ವಾ ಪ್ರೀಯಮಾಣಾಃ ಸಮೇತಾ
ಯೇ ತತ್ರಾಸನ್ ಪನ್ನಗಾ ವೀತಮೋಹಾಃ |
ತ ಅಸ್ತೀಕೇ ಪ್ರೀತಿಮಂತೋ ಬಭೂವು-
ರಾಹುಶ್ಚೈನಂ ವರಮಿಷ್ಟಂ ವೃಣೀಷ್ವ ॥17॥
ಇದನ್ನು ಕೇಳಿದ ಅಲ್ಲಿ ಇದ್ದ ನಾಗಗಳೆಲ್ಲವೂ ಭಯವನ್ನು ಕಳೆದುಕೊಂಡು ಬಹಳ ಸಂತೋಷದಿಂದ ಕೂಡಿ, ಆಸ್ತೀಕನ ಮೇಲೆ ಬಹಳ ಸಂತೋಷವನ್ನು ಹೊಂದಿ ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದವು.
ಭೂಯೋಭೂಯಃ ಸಂಸ್ತವೈರಬ್ರುವಂಸ್ತಂ
ಕಿಂ ತೇ ಪ್ರಿಯಂ ಕರವಾಮಾದ್ಯ ವಿದ್ವನ್ |
ಪ್ರೀತಾ ವಯಂ ಮೋಕ್ಷಿತಾಶ್ಚೈವ ಸರ್ವೇ
ಕಾಮಂ ಕಿಂ ತೇ ಕರವಾಮಾದ್ಯ ವತ್ಸ ॥18॥
ಪುನಃ ಪುನಃ ಅನೇಕ ರೀತಿಯಲ್ಲಿ ಅವನನ್ನು ಸ್ತೋತ್ರಮಾಡಿ, ವಿದ್ವಾಂಸನೇ, ನಿನಗೆ ನಾವು ಯಾವ ಪ್ರಿಯವನ್ನು ಮಾಡೋಣ? ನಾವೆಲ್ಲರೂ ಸಂತೋಷಗೊಂಡಿದ್ದೇವೆ. ನಾವೆಲ್ಲರೂ ಸಂಕಟದಿಂದ ಪಾರಾಗಿದ್ದೇವೆ. ವತ್ಸ, ನಿನ್ನ ಮನಸ್ಸಿರುವ ಯಾವ ಆಸೆಯನ್ನು ನಾವು ಪೂರೈಸೋಣ ಎಂದು ಕೇಳಿದವು.
ಅಸ್ತೀಕಃ
ಸಾಯಂ ಪ್ರಾತಃ ಪನ್ನಗೇಂದ್ರಾ ನರೇಂದ್ರಾ
ಲೋಕೇ ವಿಪ್ರಾ ಮಾನವಾಶ್ಚೇತರೇಪಿ |
ಧರ್ಮಾಖ್ಯಾನಂ ಯೇ ವದೇಯುರ್ಮಮೇದಂ
ತೇಷಾಂ ಯಷ್ಮನ್ನೈವ ಕಿಂಚಿದ್ ಭಯಂ ಸ್ಯಾತ್ ॥19॥
ಎಲೈ ಪನ್ನಗಶ್ರೇಷ್ಠರೇ, ರಾಜರಾಗಲಿ, ಬ್ರಾಹ್ಮಣರಾಗಲಿ ಅಥವಾ ಉಳಿದ ಮಾನವರಾಗಲಿ, ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿ ಯಾರು ನನ್ನ ಈ ಧರ್ಮಾಖ್ಯಾನವನ್ನು ಹೇಳುತ್ತಾರೆಯೋ ಅವರಿಗೆ ನಿಮ್ಮಿಂದ ಯಾವ ಭಯವೂ ಇರಬಾರದು.
ಸೂತಃ
ತೈಶ್ಚಾಪ್ಯುಕ್ತೋ ಭಾಗಿನೇಯಃ ಪ್ರಸನ್ನೈ-
ರೇತತ್ ಸತ್ಯಂ ವಚನಂ ತೇ ಚರಾಮ |
ಪ್ರೀತ್ಯಾ ಯುಕ್ತಾ ಈಪ್ಸಿತಂ ಸರ್ವತಸ್ತೇ
ಕರ್ತಾರಃ ಸ್ಮ ಪ್ರವಣಾ ಭಾಗಿನೇಯ ॥20॥
ಪ್ರಸನ್ನರಾದ ಆ ಸರ್ಪಗಳಿಂದಲೂ, ವಾಸುಕಿಯ ಭಾಗಿನೇಯನಾದ ಆಸ್ತೀಕನನ್ನು ಕುರಿತು ಸತ್ಯವಾಗಿ ನಿನ್ನ ವಚನವನ್ನು ಪಾಲಿಸುತ್ತೇವೆ. ಭಾಗಿನೇಯನೇ, ನಾವು ಅತ್ಯಂತ ಪ್ರೀತರಾಗಿ ನಿನ್ನ ಬಗ್ಗೆ ವಿನಯವನ್ನು ತೋರಿಸಿ ನಿನಗೆ ಇಷ್ಟವಾದ ಕಾರ್ಯವನ್ನು ಎಲ್ಲರೂ ಮಾಡುತ್ತೇವೆ ಎಂದು ಹೇಳಿದವು.
ಅಸ್ತೀಕಃ
ಜರತ್ಕಾರೋರ್ಜರತ್ಕಾರ್ವಾಂ ಸಮುತ್ಪನ್ನೋ ಮಹಾಯಶಾಃ |
ಅಸ್ತೀಕಃ ಸತ್ಯಸಂಧೋ ಮಾಂ ಪನ್ನಗೇಭ್ಯೋಽಭಿರಕ್ಷತು ॥21॥
ಜರತ್ಕಾರುವಿನಿಂದ ಜರತ್ಕಾರುವಿನಲ್ಲಿ ಜನಿಸಿದ ಮಹಾಕೀರ್ತಿ- ಶಾಲಿಯಾದ, ಸತ್ಯಸಂಧನಾದ ಆಸ್ತೀಕನು ನನ್ನನ್ನು ಸರ್ಪಗಳಿಂದ ರಕ್ಷಿಸಲಿ.
ಅಸ್ತೀಕಂ ಚಾರ್ತಿಮಂತಂ ಚ ಸುನೀಥಂ ಚಾಪಿ ಯಃ ಸ್ಮರೇತ್ |
ದಿವಾ ವಾ ಯದಿ ವಾ ರಾತ್ರೌ ನಾಸ್ತಿ ಸರ್ಪಭಯಂ ಕ್ವಚಿತ್ ॥22॥
ಆಸ್ತೀಕನನ್ನೂ, ದುಃಖದಲ್ಲಿದ್ದ ತಕ್ಷಕನನ್ನೂ ಮತ್ತು ಸುನೀಥನನ್ನೂ ಯಾರು ಹಗಲಿನಲ್ಲಾಗಲಿ, ಅಥವಾ ರಾತ್ರಿಯಲ್ಲಾಗಲಿ

ಸ್ಮರಿಸುವರೋ ಅವರಿಗೆ ಸರ್ಪಭಯವಿಲ್ಲ.
ಅಪಸರ್ಪಸ್ವ ಭದ್ರಂ ತೇ ದೂರಂ ಗಚ್ಛ ಮಹಾಯಶಾಃ |
ಅಸ್ತೀಕಃ ಸರ್ಪಸತ್ರೇವಃ ಪನ್ನಗಾನ್ ಯೋಽಭ್ಯರಕ್ಷತ ॥23॥
ಎಲೈ ಸರ್ಪವೇ, ನೀನು ದೂರಸರಿದು ಹೋಗು. ನಿನಗೆ ಮಂಗಳವಾಗಲಿ. ಮಹಾಕೀರ್ತಿಶಾಲಿಯಾದ ಆಸ್ತೀಕನು ಸರ್ಪಸತ್ರದಲ್ಲಿ ನಿಮ್ಮನ್ನು ರಕ್ಷಿಸಿದ್ದಾನೆ.
ಜನಮೇಜಯಸ್ಯ ಯಜ್ಞಾಂತ ಆಸ್ತೀಕವಚನಂ ಶೃಣು |
ಆಸ್ತೀಕವಚನಂ ಶ್ರುತ್ವಾ ಯಃ ಸರ್ಪೋ ನ ನಿವರ್ತತೇ ॥24॥
ಶತಧಾ ಭಿದ್ಯತೇ ಮೂರ್ಧಾ ಗಿರಿರ್ವಜ್ರಹತೋ ಯಥಾ |
ಇತಿಸ್ಮರಂ ಮಹಾನಾಗಾ ನೈನಂ ಹಿಂಸಿತುಮರ್ಹಥ |
ಆಸ್ತೀಕಂ ಯಃ ಸ್ಮರೇನ್ನಿತ್ಯಂ ತಮಪ್ಯಾಕಾಶಗೋಚರೇ ॥25॥
ಜನಮೇಜಯನ ಸರ್ಪಯಾಗದ ಕೊನೆಯಲ್ಲಿ ಆಸ್ತೀಕನು ಹೇಳಿದ ಮಾತನ್ನು ಕೇಳು. ಆಸ್ತೀಕನ ಮಾತನ್ನು ಕೇಳಿ ಯಾವ ಸರ್ಪವು ಹಿಂದೆ ಸರಿಯುವುದಿಲ್ಲವೋ ಅದರ ತಲೆಯು ವಜ್ರದಿಂದ ಹೊಡೆಯಲ್ಪಟ್ಟ ಪರ್ವತದಂತೆ ನೂರುಭಾಗವಾಗಿ ಸೀಳುತ್ತದೆ. ಎಲೈ ಮಹಾನಾಗಗಳೇ, ಹೀಗೆ ಯಾರು ಸ್ಮರಣೆಮಾಡುತ್ತಾರೆಯೋ ಮತ್ತು ಆಸ್ತೀಕನನ್ನು ಯಾರು ನಿತ್ಯವೂ ಸ್ಮರಣೆಮಾಡುತ್ತಾರೆಯೋ, ಆ ಮನುಷ್ಯನನ್ನು ಭೂಮಿಯಲ್ಲಾಗಲಿ, ಆಕಾಶದಲ್ಲಾಗಲಿ, ನೀವು ಹಿಂಸಿಸಬಾರದು.
ಅಸ್ತೀಕೇನೋರಗೈಃ ಸಾರ್ಧಂ ಯಃ ಪುರಾ ಸಮಯಃ ಕೃತಃ |
ಯದಿ ಸತ್ಯಂ ಮಹಾನಾಗಾ ನೈನಂ ಹಿಂಸಿತುಮರ್ಹಥ ॥26॥
ಎಲೈ ಮಹಾಸರ್ಪಗಳೇ, ಆಸ್ತೀಕನು ಸರ್ಪಗಳ ಜೊತೆಯಲ್ಲಿ ಹಿಂದೆ ಮಾಡಿಕೊಂಡ ನಿಬಂಧನೆಯು ಸತ್ಯವಾದರೆ, ನೀವು ಇಂತಹವರನ್ನು ಹಿಂಸಿಸಬಾರದು.
ಸೂತಃ
ಮೋಕ್ಷಯಿತ್ವಾ ಸ ಭಗವಾನ್ ಸರ್ಪಸತ್ರಾದ್ ಭುಜಂಗಮಾನ್ |
ಜಗಾಮ ಕಾಲೇ ಧರ್ಮಾತ್ಮಾ ದಿಷ್ಟಾಂತಂ ಪುತ್ರಪೌತ್ರವಾನ್ ॥27॥
ಹೀಗೆ ಪೂಜ್ಯನೂ, ಧರ್ಮಾತ್ಮನೂ ಆದ ಆಸ್ತೀಕನು ಸರ್ಪಗಳನ್ನು ಸರ್ಪಸತ್ರದಿಂದ ಮೋಚನೆಗೊಳಿಸಿ, ಪುತ್ರಪೌತ್ರರನ್ನು ಹೊಂದಿ ಕಾಲಕ್ರಮದಲ್ಲಿ ನಾಶವನ್ನು ಹೊಂದಿದನು.
ಅತ್ಯಾಸ್ತೀಕಂ ಮುಯಾಽಽಖ್ಯಾನಂ ಯಥಾವತ್ ತವ ಕೀರ್ತಿತಮ್ |
ಯತ್ ಕೀರ್ತಯಿತ್ವಾ ಸರ್ಪೇಭ್ಯೋ ನ ಭಯಂ ವಿದ್ಯತೇ ಕ್ವಚಿತ್ ॥
ನಾನು ಆಸ್ತೀಕನ ಶ್ರೇಷ್ಠವಾದ ಈ ಆಖ್ಯಾನವನ್ನು ಯಥಾರ್ಥವಾಗಿ ನಿನಗೆ ನಿರೂಪಿಸಿದ್ದೇನೆ. ಇದನ್ನು ಕೀರ್ತಿಸುವವರಿಗೆ ಎಂದೂ ಸರ್ಪಭಯವು ಉಂಟಾಗುವುದಿಲ್ಲ.
ಶ್ರುತ್ವಾ ಧರ್ಮಿಷ್ಠಮಾಖ್ಯಾನಮಾಸ್ತೀಕಂ ಪುಣ್ಯವರ್ಧನಮ್ |
ಆಸ್ತೀಕಸ್ಯ ಕವೇರ್ವಿಪ್ರ ಶ್ರೀಮಚ್ಚರಿತಮಾದಿತಃ ॥29॥
ಸರ್ವಪಾಪವಿನಿರ್ಮುಕ್ತೋ ದೀರ್ಘಮಾಯುಷ್ಯಮಾಪ್ನುಯಾತ್ |
ಗಾರ್ಹಸ್ಥ್ಯಂ ಧರ್ಮಮಖಿಲಂ ಪ್ರಯಾಯಾತ್ ಪುತ್ರಪೌತ್ರವಾನ್॥
ಈ ಆಸ್ತೀಕನ ಧರ್ಮಿಷ್ಠವಾದ ಆಖ್ಯಾನವನ್ನು ಕೇಳಿದರೆ, ಪುಣ್ಯವು ಅಭಿವೃದ್ಧಿಯಾಗುತ್ತದೆ. ಎಲೈ ಬ್ರಾಹ್ಮಣನೇ, ಜ್ಞಾನಿಯಾದ ಆಸ್ತೀಕನ ಶ್ರೀಮದ್‌ಚರಿತ್ರೆಯನ್ನು ಮೊದಲು ಕೇಳಿದರೆ, ಎಲ್ಲಾ ಪಾಪಗಳಿಂದಲೂ ನಿರ್ಮುಕ್ತನಾಗಿ ದೀರ್ಘಾಯುಷ್ಯವನ್ನು ಹೊಂದುತ್ತಾನೆ. ಎಲ್ಲಾ ಗೃಹಸ್ಥಧರ್ಮಗಳನ್ನೂ ಪಾಲಿಸುವವನಾಗಿ, ಪುತ್ರಪೌತ್ರರ ಸಂಪತ್ತನ್ನೂ ಪಡೆಯುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ದ್ವಿಪಂಚಾಶೋಽಧ್ಯಾಯಃ ॥
॥ ಇತಿ ಆಸ್ತೀಕಪರ್ವಣಿ ಚತ್ವಾರಿಂಶೋಽಧ್ಯಾಯಃ ॥
॥ ಆಸ್ತೀಕಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಆಸ್ತೀಕಪರ್ವವು ಮುಗಿಯಿತು.

ಮಹಾಭಾರತ ತಾತ್ಪರ್ಯ ನಿರ್ಣಯ
ಅಧ್ಯಾಯ-10
ಕಲಿಸ್ತ್ವಯಂ ಬ್ರಹ್ಮವರಾದಿದಾನೀಂ
ವಿಬಾಧತೇಽಸ್ಮಾನ್ ಸಕಲಾನ್ ಪ್ರಜಾಶ್ಚ |
ಅಜ್ಞಾನ ಮಿಥ್ಯಾಮತಿರೂಪತೋಽಸೌ
ಪ್ರವಿಶ್ಯ ಸಜ್ಞಾನವಿರುದ್ಧರೂಪಃ ॥36॥
ಯಥಾರ್ಥಜ್ಞಾನಕ್ಕೆ ವಿರುದ್ಧ ಸ್ವರೂಪನಾದ ಈ ಕಲಿ ಬ್ರಹ್ಮವರದಿಂದ ಈಗ ಅಜ್ಞಾನ ಮಿಥ್ಯಾಜ್ಞಾನರೂಪದಿಂದ ನಮ್ಮನ್ನೂ ಎಲ್ಲ ಜನರನ್ನೂ ಪ್ರವೇಶಿಸಿ ಬಾಧಿಸುತ್ತಿದ್ದಾನೆ.

ತ್ವದಾಜ್ಞಯಾ ತಸ್ಯ ವರೋಽಬ್ಜಜೇನ ದತ್ತಃ ಸ ಆವಿಶ್ಯ ಶಿವಂ ಚಕಾರ |
ಕದಾಗಮಾಂಸ್ತಸ್ಯ ಕುಯುಕ್ತಿಬಾಧಾನ್ ನ ಹಿ ತ್ವದನ್ಯಶ್ಚರಿತುಂ ಸಮರ್ಥಃ ॥
ನಿನ್ನ ಆಜ್ಞೆಯಿಂದಲೆ ಬ್ರಹ್ಮ ಅವನಿಗೆ ವರವಿತ್ತಿದ್ದ. ಅದರಿಂದ ಆತ ಶಿವನಲ್ಲಿ ಆವೇಶಗೊಂಡು ದುಷ್ಟಶಾಸ್ತ್ರಗಳನ್ನು ರಚಿಸಿದ. ಅವನ ಕುಯುಕ್ತಿಗಳನ್ನು ಖಂಡನ ಮಾಡಲು ನಿನಗಿಂತ ಬೇರೆ ಸಮರ್ಥರಿಲ್ಲ.
ವೇದಾಶ್ಚ ಸರ್ವೇ ಸಹಶಾಸ್ತ್ರ ಸಂಘಾ ಉತ್ಸಾದಿತಾಸ್ತೇನ ನ ಸಂತಿ ತೇಽದ್ಯ |
ತತ್ಸಾಧು ಭೂಮಾವವತೀರ್ಯ ವೇದಾನುದ್ಧೃತ್ಯ ಶಾಸ್ತ್ರಾಣಿ ಕುರುಷ್ವ ಸಮ್ಯಕ್
ಶಾಸ್ತ್ರ ಸಮೂಹಗಳ ಜೊತೆಗೆ ಸಕಲ ವೇದಗಳೂ ಕಲಿಯಿಂದ ನಾಶಹೊಂದಿವೆ. ಅವು ಈಗ ಇಲ್ಲ. ಅದರಿಂದ ನೀನು ಭೂಮಿಯಲ್ಲಿ ಅವತರಿಸಿ ವೇದಗಳನ್ನು ಉದ್ಧರಿಸಿ ಶಾಸ್ತ್ರಗಳನ್ನೂ ಚೆನ್ನಾಗಿ ರಚಿಸು.
ಅದೃಶ್ಯಮಜ್ಞೇಯಮತರ್ಕ್ಯರೂಪಂ ಕಲಿಂ ನಿಲೀನಂ ಹೃದಯೇಽಖಿಲಸ್ಯ |
ಸಚ್ಛಾಸ್ತ್ರಶಸ್ತ್ರೇಣ ನಿಹತ್ಯ ಶೀಘ್ರಂ ಪದಂ ನಿಜಂ ದೇಹಿ ಮಹಾಜನಸ್ಯ ॥
ಕಲಿ ಅದೃಶ್ಯ, ಅಜ್ಞೇಯ. ಅವನ ರೂಪವನ್ನು ಊಹಿಸಲೂ ಸಾಧ್ಯವಿಲ್ಲ. ಎಲ್ಲರ ಹೃದಯದಲ್ಲಿ ಅಡಗಿರುತ್ತಾನೆ. ಅವನನ್ನು ಸಚ್ಛಾಸ್ತ್ರವೆಂಬ ಶಸ್ತ್ರದಿಂದ ವಧಿಸಿ ಬೇಗನೆ ಭಕ್ತಜನರಿಗೆ ನಿನ್ನ ಲೋಕವನ್ನು ನೀಡು.
ಋತೇ ಭವಂತಂ ನ ಹಿ ತಂ ನಿಹಂತಾ
ತ್ವಮೇಕ ಏವಾಖಿಲಶಕ್ತಿಪೂರ್ಣಃ |
ತತೋ ಭವಂತಂ ಶರಣಂ ಗತಾ ವಯಂ
ತಮೋನಿಹತ್ಯೈ ನಿಜಬೋಧವಿಗ್ರಹಮ್ ॥40॥
ನೀನು ಹೊರತು ಇನ್ನಾರೂ ಕಲಿಯನ್ನು ಕೊಲ್ಲುವವರಿಲ್ಲ. ನೀನೊಬ್ಬನೆ ಸರ್ವಶಕ್ತಿ ಪೂರ್ಣ. ಅದರಿಂದ ಅಜ್ಞಾನನಾಶಕ್ಕಾಗಿ ಸ್ವರೂಪಜ್ಞಾನ ಶರೀರಯಾದ ನಿನ್ನನ್ನೆ ನಾನು ಶರಣುಹೊಂದಿರುವೆವು.
ಇತೀರಿತಸ್ತೈರಭಯಂ ಪ್ರದಾಯ ಸುರೇಶ್ವರಾಣಾಂ ಪರಮೋಽಪ್ರಮೇಯಃ |
ಪ್ರಾದುರ್ಬಭೂವಾಮೃತಭೂರಿಳಾಯಾಂ ವಿಶುದ್ಧ ವಿಜ್ಞಾನ ಘನಸ್ವರೂಪಃ ॥
ದೇವತೆಗಳು ಹೀಗೆ ಹೇಳಿದಾಗ ಶುದ್ಧಜ್ಞಾನ ಸ್ವರೂಪನೂ ಮುಕ್ತರಿಗೆ ಆಶ್ರಯನೂ ಅಪ್ರಮೇಯನೂ ಸರ್ವೋತ್ತಮನೂ ಆದ ಶ್ರೀಹರಿ ದೇವೋತ್ತಮರಿಗೆ ಅಭಯ ನೀಡಿ. ಭೂಮಿಯಲ್ಲಿ ಪ್ರಾದುರ್ಭವಿಸಿದ.
ವಸಿಷ್ಠನಾಮಾ ಕಮಳೋದ್ಭವಾತ್ಮಜಃ
ಸುತೋಽಸ್ಯ ಶಕ್ತಿಸ್ತನಯಃ ಪರಾಶರಃ |
ತಸ್ಯೋತ್ತಮಂ ಸೋಽಪಿ ತಪೋಽಚರದ್ಧರಿಃ
ಸುತೋ ಮಮ ಸ್ಯಾದಿತಿ ತದ್ದರಿರ್ದದೌ ॥42॥
ಬ್ರಹ್ಮನ ಪುತ್ರ ವಸಿಷ್ಠ. ವಸಿಷ್ಠನ ಪುತ್ರ ಶಕ್ತಿ. ಶಕ್ತಿಯ ಪುತ್ರ ಪರಾಶರ. ಪರಾಶರನು ಶ್ರೀಹರಿ ತನಗೆ ಪುತ್ರನಾಗಿ ಅವತರಿಸಬೇಕೆಂದು ಉತ್ತಮವಾದ ತಪಸ್ಸು ಮಾಡಿದ. ಹರಿ ಅವನಿಗೆ ಆ ವರವನ್ನಿತ್ತ.
ಉವಾಚ ಚೈನಂ ಭಗವಾನ್ ಸುತೋಷಿತೋ
ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ |
ವನೇ ಮೃಗಾರ್ಥಂ ಚರತೋಽಸ್ಯ ವೀರ್ಯಂ
ಪಪಾತ ಭಾರ್ಯಾಂ ಮನಸಾ ಗತಸ್ಯ ॥43॥
ಭಗವಂತ ಸಂತುಷ್ಟನಾಗಿ ಪರಾಶರನಿಗೆ ನುಡಿದ- `ನನ್ನ ಭಕ್ತನಾದ ವಸುಚಕ್ರವರ್ತಿಗೆ ಪುಣ್ಯವತಿಯಾದ ಮಗಳಿದ್ದಾಳೆ. ಹೇಗೆಂದರೆ ಅವನು ಬೇಟೆಗಾಗಿ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಮಡದಿಯ ನೆನಪಾದುದರಿಂದ ವೀರ್ಯ ಪತನ ಹೊಂದಿತು.
ತಚ್ಛ್ಯೇನ ಹಸ್ತೇ ಪ್ರದದೌ ಸ ತಸ್ಯೈ
ದಾತುಂ ತದನ್ಯೇನ ತು ಯುಧ್ಯತೋಽಪತತ್ |
ಜಗ್ರಾಸ ತನ್ಮತ್ಸ್ಯವಧೂರ್ಯಮಸ್ವಸು
ರ್ಜಲಸ್ಥಮೇನಾಂ ಜಗೃಹುಃಶ್ಚ ದಾಶಾಃ ॥44॥
ವೀರ್ಯವನ್ನು ರಾಣಿಗೆ ಕೊಡಲು ಒಂದು ಗಿಡುಗನ ಕೈಗಿತ್ತ ರಾಜ. ಆ ಗಿಡುಗ ಇನ್ನೊಂದು ಗಿಡುಗನೊಡನೆ ಹೋರಾಡುವಾಗ ವೀರ್ಯ ಕೆಳಗೆ ಯಮುನೆಯ ನೀರಲ್ಲಿ ಬಿದ್ದಿತು. ಅದನ್ನು ಒಂದು ಹೆಣ್ಣು ಮೀನು ನುಂಗಿತು. ಮೀನನನ್ನು ಬೆಸ್ತರು ಹಿಡಿದರು.
ತದ್ಗರ್ಭತೋಽಭೂನ್ಮಿಥುನಂ ಸ್ವರಾಜ್ಞೇ
ನ್ಯವೇದಯನ್‌ಸೋಽಪಿ ವಸೋಃ ಸಮರ್ಪಯತ್ |
ಪುತ್ರಂ ಸಮಾದಾಯ ಸುತಾಂ ಸ ತಸ್ಮೈ
ದದೌ ಸುತೋಽಭೂದಥ ಮತ್ಸ್ಯರಾಜಃ ॥45॥
ಮೀನಿನ ಹೊಟ್ಟೆಯಿಂದ ಹೆಣ್ಣುಗಂಡು ಅವಳಿಮಕ್ಕಳು ಜನಿಸಿದರು. ಅವರನ್ನು ಬೆಸ್ತರು ತಮ್ಮ ಒಡೆಯನಿಗಿತ್ತರು. ಅವನು ವಸುರಾಜನಿಗೆ ನೀಡಿದ. ಆತ ಮಗನನ್ನು ಮಾತ್ರ ಇಟ್ಟುಕೊಂಡು ಮಗಳನ್ನು ಅವನಿಗೇ ಕೊಟ್ಟ. ಬಳಿಕ ಮಗ ಮತ್ಸ್ಯದ ಉದರದಿಂದ ಬಂದವನ್ನಾದ್ದರಿಂದ ಮತ್ಸ್ಯರಾಜನೆನಿಸಿದ.
ಕನ್ಯಾ ತು ಸಾ ದಾಶರಾಜಸ್ಯ ಸದ್ಮ-
ನ್ಯವರ್ಧತಾತೀವ ಸುರೂಪಯುಕ್ತಾ |
ನಾಮ್ನಾ ಚ ಸಾ ಸತ್ಯವತೀತಿ ತಸ್ಯಾಂ

ತವಾತ್ಮಜೋಽಹಂ ಭವಿತಾಸ್ಮ್ಯಜೋಽಪಿ ॥46॥

`ಆ ಕನ್ಯೆ ಬೆಸ್ತರ ಒಡೆಯನ ಮನೆಯಲ್ಲಿ ಅತ್ಯಂತ ಸೌಂದರ್ಯಯುಕ್ತಳಾಗಿ ಬೆಳೆದಿರುವಳು. ಅವಳ ಹೆಸರು ಸತ್ಯವತಿ ಎಂದು. ನಾನು ಜನನರಹಿತನಾಗಿದ್ದರೂ ಅವಳಲ್ಲಿ ನಿನ್ನ ಮಗನಾಗಿ ಹುಟ್ಟುತ್ತೇನೆ' ಎಂದು ಹರಿ ಪರಾಶರನಿಗೆ ವರವಿತ್ತ.

ಇತೀರಿತಶ್ಚಕ್ರಧರೇಣ ತಾಂ ಮುನಿ

ರ್ಜಗಾಮ ಮಾರ್ತಾಂಡಸುತಾಂ ಸಮುದ್ರಗಾಮ್ |

ಉತ್ತಾರಯಂತೀಮಥ ತತ್ರ ವಿಷ್ಣುಃ

ಪ್ರಾದುರ್ಬಭೂವಾಶು ವಿಶುದ್ಧ ಚಿದ್ಘನಃ ॥47॥

ಚಕ್ರಧಾರಿ ಶ್ರೀಹರಿ ಹೀಗೆ ಹೇಳಿದಾಗ ಪರಾಶರ ಸಮುದ್ರಗಾಮಿಯಾದ ಯಮುನಾ ನದಿಯನ್ನು ದಾಟಿಸುತ್ತಿದ್ದ ಸತ್ಯವತಿಯನ್ನು ಕಂಡು ವಿವಾಹ ಮಾಡಿಕೊಂಡ ಬಳಿಕ ಸಂಗ ಮಾಡಿದ. ಅವಳಲ್ಲಿ ತಕ್ಷಣವೆ ಶುದ್ಧ ಜ್ಞಾನ ಸ್ವರೂಪನಾದ ಹರಿ ಪ್ರಾದುರ್ಭವಿಸಿದ.

ವಿಸ್ತೀರ್ಣವಕ್ಷಾಃ ಕಮಳಾಯತಾಕ್ಷೋ

ಬೃಹದ್ಭುಜಃ ಕಂಬುಸಮಾನಕಂಠಃ |

ಸಮಸ್ತವೇದಾನ್ಮುಖತಃ ಸಮುದ್ಗಿರನ್

ಅನಂತಚಂದ್ರಾಧಿಕಕಾಂತಸನ್ಮುಖಃ ॥54॥

ವಿಶಾಲವಾದ ಎದೆಯವರು, ಕಮಲದಂಥ ನಿಡಿದಾದ ಕಣ್ಣಿನವರು, ನಿಡಿದಾದ ತೋಳಿನವರು, ಶಂಖವನ್ನು ಹೋಲುವ ಕಂಠದವರು, ಸಮಸ್ತ ವೇದಗಳನ್ನು ಮುಖದಿಂದ ಉಪದೇಶಿಸುವವರು, ಅನಂತ ಚಂದ್ರರಿಗಿಂತಲೂ ಅಧಿಕಕಾಂತಿಯ ಮುಖವುಳ್ಳವರು, ವೇದವ್ಯಾಸರು.

ಪ್ರಬೋಧಮುದ್ರಾಭಯದೋರ್ದ್ವಯಾನ್ವಿತೋ

ಯಜ್ಞೋಪವೀತಾಜಿನಮೇಖಲೋಲ್ಲಸನ್ |

ದೃಶಾ ಮಹಾಜ್ಞಾನಭುಜಂಗದಷ್ಟ-

ಮುಜ್ಜೀವಯಾನೋ ಜಗದತ್ಯರೋಚತ ॥55॥

ಜ್ಞಾನ ಅಭಯ ಮುದ್ರೆಗಳನ್ನು ತೋರುವ ಎರಡು ಕೈಗಳುಳ್ಳವರು, ಯಜ್ಞೋಪವೀತ ಕೃಷ್ಣಾಜಿನ ಮುಂಜಿಗಳಿಂದ ಶೋಭಿಸುತ್ತ, ಮಹಾ ಅಜ್ಞಾನವೆಂಬ ಹಾವಿನ ಕಡಿತಕ್ಕೆ ತುತ್ತಾದ ಜಗತ್ತನ್ನು ಕಣ್ಣನೋಟದಿಂದಲೆ ಪುನರುಜ್ಜೀವನಗೊಳಿಸುವವರು, ಇಂಥ ವೇದವ್ಯಾಸರು ಜಗತ್ತನ್ನೇ ಮೀರಿಸುವ ಪ್ರಕಾಶದಿಂದ ಬೆಳಗಿದರು.

ಸ ಲೋಕಧರ್ಮಾಭಿರಿರಕ್ಷಯಾ ಪಿತು-

ರ್ದ್ವಿಜತ್ವಮಾಪ್ಯಾಶು ಪಿತುರ್ದದೌ ನಿಜಮ್ |

ಜ್ಞಾನಂ ತಯೋಃ ಸಂಸ್ಮೃತಿಮಾತ್ರತಃಸ್ಸದಾ

ಪ್ರತ್ಯಕ್ಷಭಾವಂ ಪರಮಾತ್ಮನೋ ದದೌ ॥56॥

ಲೋಕಮರ್ಯಾದೆಯನ್ನು ಕಾಪಾಡುವ ಇಚ್ಛೆಯಿಂದ ವೇದವ್ಯಾಸರು ತಕ್ಷಣವೆ, ಅಂದರೆ ಪ್ರಾದುರ್ಭವಿಸಿ ಏಳುದಿನಗಳೊಳಗೆ, ತಂದೆಯಿಂದ ಉಪನಯನ ಸಂಸ್ಕಾರ ಪಡೆದು ತಂದೆಗೆ ತನ್ನ ಜ್ಞಾನವನ್ನು ಉಪದೇಶಿಸಿದರು. ತಂದೆ ತಾಯಿಗಳಿಬ್ಬರಿಗೂ ತಾನು ಸ್ಮರಣಮಾತ್ರದಿಂದಲೆ ಪ್ರತ್ಯಕ್ಷನಾಗುವ ವರವಿತ್ತರು.

ದ್ವೈಪಾಯನಃ ಸೋಽಥ ಜಗಾಮ ಮೇರುಂ

ಚತುರ್ಮುಖಾದ್ಯೈರನುಗಮ್ಯಮಾನಃ |

ಉದ್ಧೃತ್ಯ ವೇದಾನಖಿಲಾನ್ಸುರೇಭ್ಯೋ

ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ ॥57॥

ಬಳಿಕ ದ್ವೀಪದಲ್ಲಿ ಅವತರಿಸಿದ ವೇದವ್ಯಾಸರು ಬ್ರಹ್ಮಾದಿಗಳು ತನ್ನನ್ನು ಹಿಂಬಾಲಿಸುತ್ತಿದ್ದಂತೆ ಮೇರು ಪರ್ವತಕ್ಕೆ ಹೋಗಿ ಆದಿ ಸೃಷ್ಟಿಯಲ್ಲಿ ಹೇಗೋ ಹಾಗೆ ಎಲ್ಲ ವೇದಗಳನ್ನೂ ಉದ್ಧರಿಸಿ ದೇವತೆಗಳಿಗೂ ಮುನಿಗಳಿಗೂ ಉಪದೇಶಿಸಿದರು.

ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ

ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ |

ತಚ್ಛುಶ್ರುವುರ್ಬ್ರಹ್ಮಗಿರೀಶಮುಖ್ಯಾಃ

ಸುರಾ ಮುನೀನಾಂ ಪ್ರವರಾಶ್ಚ ತಸ್ಮಾತ್ ॥58॥

ವೇದವ್ಯಾಸರು ಸಕಲ ಶಾಸ್ತ್ರಗಳನ್ನೂ ನಿರ್ಮಿಸಿ ಅವೆಲ್ಲಕ್ಕೂ ವಿಶೇಷವಾಗಿ ತಾತ್ಪರ್ಯ ನಿರ್ಣಾಯಕವಾದ ಬ್ರಹ್ಮಸೂತ್ರವನ್ನೂ ರಚಿಸಿದರು. ಅದನ್ನು ಬ್ರಹ್ಮರುದ್ರಾದಿ ದೇವತೆಗಳೂ ಮುನಿಶ್ರೇಷ್ಠರೂ ವೇದವ್ಯಾಸರಿಂದಲೆ ಶ್ರವಣ ಮಾಡಿದರು.

ಸಮಸ್ತ ಶಾಸ್ತ್ರಾರ್ಥನಿದರ್ಶನಾತ್ಮಕಂ

ಚಕ್ರೇ ಮಹಾಭಾರತ ನಾಮಧೇಯಮ್ |

ವೇದೋತ್ತಮಂ ತಚ್ಚ ವಿಧಾತೃಶಂಕರ-

ಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಮ್ ॥59॥

ಸಕಲ ಶಾಸ್ತ್ರಾರ್ಥಗಳಿಗೂ ನಿದರ್ಶನ ರೂಪವಾಗಿ ವೇದಕ್ಕಿಂತಲೂ ಉತ್ತಮವಾದ ಮಹಾಭಾರತವೆಂಬ ಗ್ರಂಥವನ್ನೂ ವೇದವ್ಯಾಸರು ರಚಿಸಿದರು. ಅದನ್ನೂ ಬ್ರಹ್ಮರುದ್ರಾದಿ ದೇವತೆಗಳು ವೇದವ್ಯಾಸರ ಮುಖದಿಂದಲೆ ಶ್ರವಣ ಮಾಡಿದರು.

ಅಥೋ ಗಿರೀಶಾದಿ ಮನೋನುಶಾಯೀ

ಕಲಿರ್ಮಮಾರಾಶು ಸುವಾಙ್ಮಯೈ ಶರೈಃ |

ನಿಕೃತ್ತಶೀರ್ಷೋ ಭಗವನ್ಮುಖೇರಿತೈ

ಸುರಾಶ್ಚ ಸಜ್ಞಾನಸುಧಾರಸಂ ಪಪುಃ ॥60॥

ಭಗವಂತನ ಮುಖದಿಂದ ಹೊರಹೊಮ್ಮಿದ ಒಳ್ಳೆಯ ವಾಙ್ಮಯ ಬಾಣಗಳಿಂದ ರುದ್ರಾದಿಗಳ ಮನದಲ್ಲಿ ಮನೆಮಾಡಿದ್ದ ಕಲಿ ಶಿರಶ್ಛೇದಗೊಂಡು ಬೇಗನೆ ಮರಣ ಹೊಂದಿದ. ದೇವತೆಗಳು ಒಳ್ಳೆಯ ಜ್ಞಾನಾಮೃತ ರಸವನ್ನು ಪಾನಮಾಡಿದರು.

ಅಥೋ ಮನುಷ್ಯೇಷು ತಥಾಸುರೇಷು

ರೂಪಾಂತರೈಃ ಕಲಿರೇವಾವಶಿಷ್ಟಃ |

ತತೋ ಮನುಷ್ಯೇಷು ಚ ಸತ್ಸು ಸಂಸ್ಥಿತೋ

ವಿನಾಶ್ಯ ಇತ್ಯೇಷ ಹರಿರ್ವ್ಯಚಿಂತಯತ್ ॥61॥

ಆದರೂ ಮನುಷ್ಯರಲ್ಲಿ ಮತ್ತು ಅಸುರರಲ್ಲಿ ಬೇರೆ ರೂಪಗಳಿಂದ ಇದ್ದ ಕಲಿ ಇನ್ನೂ ಸಾಯದೆ ಉಳಿದೇ ಇದ್ದ. ಅದರಿಂದ ಮನುಷ್ಯೋತ್ತಮರಲ್ಲಿ ಇರುವ ಕಲಿಯನ್ನು ನಾಶಪಡಿಸಬೇಕೆಂದು ವೇದವ್ಯಾಸರು ಆಲೋಚಿಸಿದರು.

ತತೋ ನೃಣಾಂ ಕಾಲಬಲಾತ್ ಸುಮಂದ-

ಮಾಯುರ್ಮತಿಂ ಕರ್ಮ ಚ ವೀಕ್ಷ್ಯ ಕೃಷ್ಣಃ |

ವಿವ್ಯಾಸ ವೇದಾನ್ ಸ ವಿಭುಶ್ಚತುರ್ಧಾ

ಚಕ್ರೇ ತಥಾ ಭಾಗವತಂ ಪುರಾಣಮ್ ॥62॥

ಮನುಷ್ಯೋತ್ತಮರಿಗೆ ಕಾಲಪ್ರಭಾವದಿಂದ ಆಯುಷ್ಯ ಬುದ್ಧಿ ಕರ್ಮಾಚರಣೆ ಎಲ್ಲವೂ ಕಡಿಮೆಯಾಗಿರುವುದನ್ನು ಕಂಡು ಸರ್ವಶಕ್ತರಾದ ವೇದವ್ಯಾಸರು ಮೂಲವೇದಗಳನ್ನು ನಾಲ್ಕು ಭಾಗವಾಗಿ ವಿಭಾಗಿಸಿದರು ಮತ್ತು ವೈಷ್ಣವ ಪುರಾಣಗಳನ್ನು ರಚಿಸಿದರು.

ಯೇ ಯೇ ಚ ಸಂತಸ್ತಮಸಾನುವಿಷ್ಟಾಸ್ತಾಂ

ಸ್ತಾನ್ಸ್ವವಾಕ್ಯೈಸ್ತಮಸೋ ವಿಮುಂಚನ್ |

ಚಚಾರ ಲೋಕಾನ್ ಸ ಪಥಿ ಪ್ರಯಾಂತಂ

ಕೀಟಂ ವ್ಯಪಶ್ಯತ್ತಮುವಾಚ ಕೃಷ್ಣಃ ॥63॥

ಯಾವ ಯಾವ ಸಜ್ಜನರು ಅಜ್ಞಾನಾವೇಶಕ್ಕೊಳಗಾಗಿದ್ದರೋ ಅವರನ್ನೆಲ್ಲ ಒಳ್ಳೆಯ ಉಪದೇಶಗಳಿಂದ ಅಜ್ಞಾನಮುಕ್ತರನ್ನಾಗಿ ಮಾಡುತ್ತ ವೇದವ್ಯಾಸರು ಲೋಕಸಂಚಾರ ಮಾಡಿದರು. ಒಮ್ಮೆ ದಾರಿಯಲ್ಲಿ ಓಡಾಡುತ್ತಿದ್ದ ಒಂದು ಕೀಟವನ್ನು ಕಂಡರು. ಅದಕ್ಕೆ ಹೀಗೆ ಹೇಳಿದರು.

ಭವಸ್ವ ರಾಜಾ ಕುಶರೀರಮೇತತ್ ತ್ಯಕ್ತ್ವೇತಿ ನೈಚ್ಛತ್ ತದಸೌ ತತಸ್ತಮ್ |

ಅತ್ಯಕ್ತದೇಹಂ ನೃಪತಿಂ ಚಕಾರ ಪುರಾ ಸ್ವಭಕ್ತಂ ವೃಷಲಂ ಸುಲುಬ್ಧಮ್ ॥64॥

`ಈ ಕೆಟ್ಟ ಶರೀರವನ್ನು ತೊರೆದು ರಾಜನಾಗು' ಎಂದು ವೇದವ್ಯಾಸರು ಕೀಟಕ್ಕೆ ಹೇಳಿದರು. ಆದರೆ ಅದು ಶರೀರತ್ಯಾಗ ಮಾಡಲು ಒಪ್ಪಲಿಲ್ಲ. ಅದರಿಂದ ಶರೀರ ತ್ಯಾಗ ಮಾಡಿಸದೆಯೆ ರಾಜನನ್ನಾಗಿ ಮಾಡಿದರು. ಏಕೆಂದರೆ ಅವನು ಹಿಂದಿನ ಜನ್ಮದಲ್ಲಿ ತನ್ನ ಭಕ್ತನೆ ಆದ ಒಬ್ಬ ಶೂದ್ರನಾಗಿದ್ದ. ಆದರೆ ಮಹಾಲೋಭಿ.

ಲೋಭಾತ್ ಸ ಕೀಟತ್ವಮುಪೇತ್ಯ ಕೃಷ್ಣಪ್ರಸಾದತಶ್ಚಾಶು ಬಭೂವ ರಾಜಾ |

ತದ್ಯೈವ ತಂ ಸರ್ವನೃಪಾಃ ಪ್ರಣೇಮುರ್ದದುಃ ಕರಂ ಚಾಸ್ಯ ಯಥೈವ ವೈಶ್ಯಾ ॥

ಲೋಭದಿಂದ ಕೀಟಜನ್ಮ ಹೊಂದಿದ್ದರೂ ವೇದವ್ಯಾಸರ ಅನುಗ್ರಹದಿಂದ ತಕ್ಷಣವೆ ರಾಜನಾದ. ಆಗಲೆ ಅವನಿಗೆ ಎಲ್ಲ ರಾಜರೂ ತಲೆಬಾಗಿದರು. ವೈಶ್ಯರಂತೆ ಕರವನ್ನೂ ಸಲ್ಲಿಸಿದರು.

ಉವಾಚ ತಂ ಭಗವಾನ್ ಮುಕ್ತಿಮಸ್ಮಿಂಸ್ತವ

ಕ್ಷಣೇ ದಾತುಮಹಂ ಸಮರ್ಥಃ |

ತಥಾಪಿ ಸೀಮಾರ್ಥಮವಾಪ್ಯ ವಿಪ್ರತನುಂ

ವಿಮುಕ್ತೋ ಭವ ಮತ್ಪ್ರಸಾದಾತ್ ॥66॥

ಭಗವಾನ್ ವ್ಯಾಸರು ಆ ಕೀಟಕ್ಕೆ ಹೇಳಿದರು, `ನಾನು ನಿನಗೆ ಮುಕ್ತಿಯನ್ನು ಈ ಕ್ಷಣವೆ ಕೊಡಲು ಸಮರ್ಥ. ಆದರೂ ಲೋಕಮರ್ಯಾದಾರಕ್ಷಣೆಗಾಗಿ ಬ್ರಾಹ್ಮಣ ಜನ್ಮ ಹೊಂದಿಯೆ ನನ್ನ ಅನುಗ್ರಹದಿಂದ ಮುಕ್ತನಾಗು'.

ಜ್ಞಾನಂ ಚ ತಸ್ಮೈ ವಿಮಲಂ ದದೌ

ಸ ಮಹೀಂ ಚ ಸರ್ವಾಂ ಬುಭುಜೇ ತದಂತೇ |

ತ್ಯಕತ್ವ ತನುಂ ವಿಪ್ರವರತ್ವಮೇತ್ಯ ಪದಂ ಹರೇರಾಪ ಸುತತ್ವವೇದೀ ॥

ಆ ಕೀಟರಾಜನಿಗೆ ವೇದವ್ಯಾಸರು ನಿರ್ಮಲ ಜ್ಞಾನವಿತ್ತರು. ಆತ ಇಡಿ ಭೂಮಿಯನ್ನು ಆಳಿದ. ಕೊನೆಯಲ್ಲಿ ಆ ಶರೀರವನ್ನು ತೊರೆದು ಶ್ರೇಷ್ಠ ಬ್ರಾಹ್ಮಣ ಜನ್ಮ ಹೊಂದಿ ಒಳ್ಳೆಯ ತತ್ವಜ್ಞಾನಿಯಾಗಿ ಹರಿಪದವನ್ನು ಹೊಂದಿದ.

ಏವಂ ಬಹೂನ್ ಸಂಸ್ಕೃತಿ ಬಂಧತಃ ಪ್ರಭು-

ರ್ವ್ಯಮೋಚಯದ್ ವ್ಯಾಸತನುರ್ಜನಾರ್ದನಃ |

ಬಹೂನ್ಯಚಿಂತ್ಯಾನಿ ಚ ತಸ್ಯ ಕರ್ಮಾ-

ಣ್ಯಶೇಷದೇವೇಶಸದೋದಿತಾನಿ ॥68॥

ಹೀಗೆ ಸರ್ವಶಕ್ತನಾದ ವ್ಯಾಸರೂಪಿ ಹರಿ ಅನೇಕ ಮಂದಿಯನ್ನು ಸಂಸಾರ ಬಂಧನದಿಂದ ಬಿಡುಗಡೆ ಹೊಂದಿಸಿದ. ಅವನ ಲೀಲೆಗಳು ಬಹಳ ಅಚಿಂತ್ಯ. ಎಲ್ಲ ದೇವಶ್ರೇಷ್ಠರು ಅವುಗಳನ್ನು ಸದಾ ಸ್ತುತಿಸುತ್ತಿದ್ದಾರೆ.

ಅಥಾಸ್ಯ ಪುತ್ರತ್ವಮವಾಪ್ತುಮಿಚ್ಛಂ-

ಶ್ಚಚಾರ ರುದ್ರಃ ಸುತಪಸ್ತದೀಯಮ್ |
ದದೌ ಚ ತಸ್ಮೈ ಭಗವಾನ್ ವರಂ ತಂ
ಸ್ವಯಂ ಚ ತಪ್ಯೇವ ತಪೋ ವಿಮೋಹಯನ್ ॥69॥
ರುದ್ರನು ವ್ಯಾಸರ ಮಗನಾಗಿ ಹುಟ್ಟಲು ಬಯಸಿ ಉತ್ತಮ ತಪಸ್ಸನ್ನು ಮಾಡಿದ ವ್ಯಾಸರು ತಾವು ಶಿವನನ್ನು ಕುರಿತು ತಪಸ್ಸು ಮಾಡಿದಂತೆ ತೋರಿ ಅಯೋಗ್ಯರನ್ನು ಮೋಹಗೊಳಿಸುತ್ತಲೆ ಶಿವನಿಗೆ ಅವನು ಬಯಸಿದ ವರ ನೀಡಿದರು.
ವಿಮೋಹನಾಯಾಸುರಸರ್ಗಿಣಾಂ ಪ್ರಭುಃ
ಸ್ವಯಂ ಕರೋತೀವ ತಪಃ ಪ್ರದರ್ಶಯೇತ್ |
ಕಾಮಾದಿದೋಷಾಂಶ್ಚ ಮೃಷೈವ ದರ್ಶಯೇ-
ನ್ನ ತಾವತಾ ತೇऽಸ್ಯ ಹಿ ಸಂತಿ ಕುತ್ರಚಿತ್ ॥70॥
ಸರ್ವಶಕ್ತರಾದ ವ್ಯಾಸರು ಅಸುರ ಸ್ವಭಾವದವರಿಗೆ ಮೋಹ ಉಂಟುಮಾಡುವುದಕ್ಕಾಗಿಯೇ ಸ್ವತಃ ತಪಗೈಯುವಂತೆ ತೋರಿಸಿಕೊಳ್ಳುತ್ತಾರೆ. ಕಾಮಾದಿ ದೋಷಗಳನ್ನು ಸುಮ್ಮನೆ ಪ್ರದರ್ಶನ ಮಾಡುತ್ತಾರೆ. ಅಷ್ಟರಿಂದಲೆ ಅವರಿಗೆ ಈ ದೋಷಗಳು ಯಾವ ಕಾಲದಲ್ಲಿಯೂ ಇವೆ ಎಂದಾಗುವುದಿಲ್ಲ.
ತತಸ್ತ್ವರಣ್ಯೋಃ ಸ ಬಭೂವ ಪುತ್ರಕಃ
ಶಿವಸ್ಯ ಸೋऽಭೂಚ್ಛುಕನಾಮಧೇಯಃ |
ಶುಕೀ ಹಿ ಭೂತ್ವಾ ಹ್ಯಭ್ಯಗಮದ್ಘೃತಾಚೀ
ವ್ಯಾಸಂ ವಿಮಥ್ನಂತಮುತಾರಣೀ ತಮ್ ॥71॥
ಹೀಗೆ ಶಿವನಿಗೆ ವ್ಯಾಸರು ವರ ಕೊಟ್ಟಿದ್ದರಿಂದ ಅರಣಿಗಳಲ್ಲಿ ಶಿವ ವ್ಯಾಸರಿಗೆ ಮಗನಾಗಿ ಹುಟ್ಟಿದ. ಮುಂದೆ ಅವನು ಶುಕ ಎಂಬ ಹೆಸರಿನವನಾದ. ಏಕೆಂದರೆ ಅರಣಿ ಮಥನ ಮಾಡುತ್ತಿದ್ದ ವ್ಯಾಸರ ಬಳಿಗೆ ಘೃತಾಚಿ ಎಂಬ ಅಪ್ಸರೆ ಹೆಣ್ಣು ಗಿಳಿಯಾಗಿ ತಾನೆ ಬಂದಿದ್ದಳು!
ಅಕಾಮಯನ್ ಕಾಮುಕವತ್ ಸ ಭೂತ್ವಾ
ತಯಾರ್ಥಿತಸ್ತಂ ಶುಕನಾಮಧೇಯಮ್ |
ಚಕ್ರೇ ಹ್ಯರಣ್ಯೋಸ್ತನಯಂ ಚ ಸೃಷ್ಟ್ವಾ
ವಿಮೋಹಯಂ ಸ್ತತ್ವಮಾರ್ಗೇಷ್ವಯೋಗ್ಯಾನ್ ॥72॥
ಘೃತಾಚಿಯನ್ನು ವೇದವ್ಯಾಸರು ಕಾಮಿಸಲಿಲ್ಲ. ತತ್ವಮಾರ್ಗಗಳಲ್ಲಿ ಅಯೋಗ್ಯರಾದವರನ್ನು ಮೋಹಗೊಳಿಸುವುದಕ್ಕಾಗಿ ಕಾಮಿಸಿದಂತೆ ತೋರಿಕೊಂಡು ಒಬ್ಬ ಮಗನನ್ನು ಅರಣಿಗಳಲ್ಲಿ ಹುಟ್ಟಿಸಿ ಆ ಮಗನಿಗೆ ಘೃತಾಚಿಯ ಅಪೇಕ್ಷೆಯಂತೆ ಶುಕ ಎಂದೇ ಹೆಸರಿಟ್ಟರು.
ಶುಕಂ ತಮಾಶು ಪ್ರವಿವೇಶ ವಾಯು-
ರ್ವ್ಯಾಸಸ್ಯ ಸೇವಾರ್ಥಮಥಾಸ್ಯ ಸರ್ವಮ್ |
ಜ್ಞಾನಂ ದದೌ ಭಗವಾನ್ ಸರ್ವ ವೇದಾನ್
ಸ ಭಾರತಂ ಭಾಗವತಂ ಪುರಾಣಮ್ ॥73॥
ವೇದವ್ಯಾಸರ ಸೇವೆಗಾಗಿ ವಾಯು ಬೇಗನೆ ಶುಕನಲ್ಲಿ ಆವೇಶಗೊಂಡ. ಭಗವಾನ್ ವ್ಯಾಸರು. ಆ ಶುಕನಿಗೆ ಸರ್ವಜ್ಞತ್ವವನ್ನು ನೀಡಿದರು. ಎಲ್ಲ ವೇದಗಳನ್ನೂ ಭಾರತವನ್ನೂ ಭಾಗವತ ಮುಂತಾದ ವೈಷ್ಣವ ಪುರಾಣಗಳನ್ನೂ ಉಪದೇಶಿಸಿದರು.
ಶೇಷೋऽಥ ಪೈಲಂ ಮುನಿಮಾವಿಶತ್ ತದಾ
ವೀಶಃ ಸುಮಂತುಮಪಿ ವಾರುಣಿಂ ಮುನಿಮ್ |
ಬ್ರಹ್ಮಾವಿಶತ್ ತಮುತ ವೈಶಪಾಯನಂ
ಶಕ್ರಶ್ಚ ಜೈಮಿನಿಮಥಾವಿಶದ್ ವಿಭುಃ ॥74॥
ಬಳಿಕ ವೇದವ್ಯಾಸರು ಉಪದೇಶ ಮಾಡುವ ಕಾಲದಲ್ಲಿ ಶೇಷ ಪೈಲಮುನಿಯನ್ನು ಪ್ರವೇಶಿಸಿದ. ಆಗಲೆ ವರುಣಪುತ್ರನಾದ ಸುಮಂತುಮುನಿಯನ್ನು ಗರುಡ ಪ್ರವೇಶಿಸಿದ. ಬ್ರಹ್ಮ ವೈಶಂಪಾಯನನನ್ನೂ ಇಂದ್ರ ಜೈಮಿನಿಯನ್ನೂ ಪ್ರವೇಶಿಸಿದ.
ಕೃಷ್ಣಸ್ಯ ಪಾದಪರಿಸೇವನೋತ್ಸುಕಾಃ
ಸುರೇಶ್ವರಾ ವಿವಿಶುರಾಶು ತಾನ್ ಮುನೀನ್ |
ಸಮಸ್ತವಿದ್ಯಾಃ ಪ್ರತಿಪಾದ್ಯ ತೇಷ್ವಸೌ
ಪ್ರವರ್ತಕಾಂಸ್ತಾನ್ವಿದಧೇ ಹರಿಃ ಪುನಃ ॥75॥
ಶ್ರೀವೇದವ್ಯಾಸರ ಪಾದಸೇವೆ ಮಾಡುವ ತವಕವುಳ್ಳವರಾಗಿ ದೇವೋತ್ತಮರು ಆ ಮುನಿಗಳನ್ನು ಬೇಗನೆ ಪ್ರವೇಶ ಮಾಡಿದರು. ವ್ಯಾಸರು ಎಲ್ಲ ಶಾಸ್ತ್ರಗಳನ್ನೂ ಅವರಿಗೆ ಉಪದೇಶಿಸಿ ಅವರನ್ನು ಆ ಶಾಸ್ತ್ರಗಳಿಗೆ ಪ್ರವರ್ತಕರನ್ನಗಿ ಮಾಡಿದರು.
ಋಚಾಂ ಪ್ರವರ್ತಕಂ ಪೈಲಂ ಯಜುಷಾಂ ಚ ಪ್ರವರ್ತಕಮ್ |
ವೈಶಂಪಾಯನಮೇವೈಕಂ ದ್ವಿತೀಯಂ ಸೂರ್ಯಮೇವ ಚ ॥76॥
ಶ್ರೀವ್ಯಾಸರು ಋಗ್ವೇದಕ್ಕೆ ಪೈಲಮುನಿಯನ್ನು ಪ್ರವರ್ತಕನನ್ನಾಗಿ ಮಾಡಿದರು. ಯಜುರ್ವೇದಗಳಿಗೆ ವೈಶಂಪಾಯನನನ್ನು ಒಬ್ಬ ಪ್ರವರ್ತಕನನ್ನಾಗಿಯೂ ಸೂರ್ಯನನ್ನು ಇನ್ನೊಬ್ಬ ಪ್ರವರ್ತಕನನ್ನಾಗಿಯೂ ಮಾಡಿದರು.
ಚಕ್ರೇऽಥ ಜೈಮಿನಿಂ ಸಾಮ್ನಾಮಥರ್ವಾಂಗಿರಸಾಮಪಿ |
ಸುಮಂತುಂ ಭಾರತಸ್ಯಾಪಿ ವೈಶಂಪಾಯನಮಾದಿಶತ್ ॥77॥

ಸಾಮವೇದಕ್ಕೆ ಜೈಮಿನಿಯನ್ನೂ ಅಥರ್ವಾಂಗಿರಸ ವೇದಕ್ಕೆ ಸುಮಂತವನ್ನೂ ಭಾರತಕ್ಕೆ ಪುನಃ ವೈಶಂಪಾಯನನನ್ನೂ ಪ್ರವರ್ತಕರನ್ನಾಗಿ ಮಾಡಿದರು.
ಪ್ರವರ್ತನೇ ಮಾನುಷೇಷು ಗಂಧರ್ವಾದಿಷು ಚಾತ್ಮಜಮ್ |
ನಾರದಂ ಪಾಠಯಿತ್ವಾ ಚ ದೇವಲೋಕ ಪ್ರವೃತ್ತಯೇ ॥78॥
ಆದಿಶತ್ ಸಸೃಜೇ ಸೋಽಥ ರೋಮಾಂಚಾದ್ ರೋಮಹರ್ಷಣಮ್
ತಂ ಭಾರತಪುರಾಣಾನಾಂ ಮಹಾರಾಮಾಯಣಸ್ಯ ಚ ॥79॥
ಪಂಚರಾತ್ರಸ್ಯ ಕೃತ್ಸ್ನಸ್ಯ ಪ್ರವೃತ್ತ್ಯರ್ಥಮಥಾದಿಶತ್ |
ತಮಾವಿಶತ್ ಕಾಮದೇವಃ ಕೃಷ್ಣಸೇವಾಸಮುತ್ಸುಕಃ ॥80॥
ಮಗನಾದ ಶುಕಮುನಿಗೆ ಎಲ್ಲ ಶಾಸ್ತ್ರಗಳನ್ನು ಉಪದೇಶಿಸಿ ಮನುಷ್ಯರಲ್ಲಿಯೂ ಗಂಧರ್ವಾದಿಗಳಲ್ಲಿಯೂ ಅವುಗಳನ್ನು ಪ್ರಸಾರ ಮಾಡಲು ಆದೇಶಿಸಿದರು. ನಾರದರಿಗೂ ಉಪದೇಶಿಸಿ ದೇವಲೋಕದಲ್ಲಿ ಪ್ರವರ್ತಿಸಲು ಆದೇಶಿಸಿದರು. ಬಳಿಕ ರೋಮಾಂಚದಿಂದ ರೋಮಹರ್ಷಣವನ್ನು ಹುಟ್ಟಿಸಿದರು. ಅವನಿಗೆ ಭಾರತ ಪುರಾಣಗಳ ಮಹಾರಾಮಾಯಣದ ಮತ್ತು ಸಕಲ ಪಂಚರಾತ್ರಗಳ ಪ್ರವೃತ್ತಿಗೆ ಆದೇಶಿಸಿದರು. ವೇದವ್ಯಾಸರ ಸೇವೆಗೆ ಉತ್ಸುಕನಾದ ಕಾಮದೇವ ರೋಮಹರ್ಷಣನಲ್ಲಿ ಪ್ರವೇಶಿಸಿದ.
ಸ ತಸ್ಮೈಜ್ಞಾನಮಖಿಲಂ ದದೌ ದ್ವೈಪಾಯನಃ ಪ್ರಭುಃ |
ಸನತ್ಕುಮಾರಪ್ರಮುಖಾಂಶ್ಚಕ್ರೇ ಯೋಗಪ್ರವರ್ತಕಾನ್ ॥81॥
ಭೃಗ್ವಾದೀನ್ ಕರ್ಮ ಯೋಗಸ್ಯ ಜ್ಞಾನಂ ದತ್ವಾಮಲಂ ಶುಭಮ್ |
ಜೈಮಿನಿಂ ಕರ್ಮಮೀಮಾಂಸಾಕರ್ತಾರಮಕರೋತ್ ಪ್ರಭುಃ ॥82॥
ಪ್ರಭು ವೇದವ್ಯಾಸರು ರೋಮಹರ್ಷಣನಿಗೆ ಸಕಲ ಶಾಸ್ತ್ರಗಳ ಜ್ಞಾನವನ್ನೂ ನೀಡಿದರು. ನಿರ್ಮಲವಾದ ಪುಣ್ಯಕರವಾದ ಜ್ಞಾನ ನೀಡಿ ಸನತ್ಕುಮಾರ ಮುಂತಾದವರನ್ನು ಧ್ಯಾನಯೋಗ ಪ್ರವರ್ತಕರನ್ನಾಗಿಯೂ ಭೃಗು ಮುಂತಾದವರನ್ನು ಕರ್ಮಯೋಗ ಪ್ರವರ್ತಕರನ್ನಾಗಿಯೂ ಜೈಮಿನಿಯನ್ನು ಕರ್ಮಮೀಮಾಂಸಾ ಕರ್ತನನ್ನಾಗಿಯೂ ಮಾಡಿದರು.
ದೇವಮೀಮಾಂಸಿಕಾದ್ಯಂತಂ ಕೃತ್ವಾ ಪೈಲಮಥಾದಿಶತ್ |
ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥83॥
ದೇವಮೀಮಾಂಸೆಯ ಆದ್ಯಂತ ಭಾಗಗಳನ್ನು ತಾನೆ ರಚಿಸಿ ಮಧ್ಯಭಾಗವನ್ನು ರಚಿಸಲು ಪೈಲಮುನಿಯನ್ನೂ ಶೇಷನನ್ನೂ ಆದೇಶಿಸಿದರು. ಬಳಿಕ ಪುರಾಣಗಳನ್ನು ರಚಿಸಿದರು.
ಶೈವಾನ್ ಪಾಶುಪತಾಚ್ಚಕ್ರೇ ಸಂಶಯಾರ್ಥಂ ಸುರದ್ವಿಷಾಮ್ |
ವೈಷ್ಣವಾನ್ ಪಂಚರಾತ್ರಾಚ್ಚ ಯಥಾರ್ಥಜ್ಞಾನಸಿದ್ಧಯೇ ॥84॥
ದೈತ್ಯರಿಗೆ ತತ್ವವಿಷಯದಲ್ಲಿ ಸಂಶಯ ಭ್ರಾಂತಿಗಳನ್ನು ಉಂಟುಮಾಡುವುದಕ್ಕಾಗಿ ಪಾಶುಪತಾಗಮದಿಂದ ಶಿವಸರ್ವೋತ್ತಮತ್ವವನ್ನು ಹೇಳುವ ಪುರಾಣ ಗ್ರಂಥ ಸಂಗ್ರಹಗಳನ್ನು ವ್ಯಾಸರು ಮಾಡಿದರು. ಸಜ್ಜನರಿಗೆ ಯಥಾರ್ಥ ಜ್ಞಾನಸಿದ್ಧಿಗಾಗಿ ಪಂಚರಾತ್ರಾಗಮದಿಂದ ವಿಷ್ಣು ಸರ್ವೋತ್ತಮತ್ವವನ್ನು ಹೇಳುವ ಪುರಾಣ ಗ್ರಂಥ ಸಂಗ್ರಹಗಳನ್ನು ಮಾಡಿದರು.
ಬ್ರಾಹ್ಮಾಂಶ್ಚ ವೇದತಶ್ಚಕ್ರೇ ಪುರಾಣಗ್ರಂಥಸಂಗ್ರಹಾನ್ |
ಏವಂ ಜ್ಞಾನಂ ಪುನಃ ಪ್ರಾಪುರ್ದೇವಾಶ್ಚ ಋಷಯಸ್ತಥಾ ॥85॥
ವೇದದಿಂದ ಬ್ರಾಹ್ಮ ಪುರಾಣ ಗ್ರಂಥ ಸಂಗ್ರಹಗಳನ್ನು ರಚಿಸಿದರು. ಹೀಗೆ ದೇವತೆಗಳೂ ಋಷಿಗಳೂ ಪುನಃ ಜ್ಞಾನವನ್ನು ಪಡೆದರು.
ಸನತ್ಕುಮಾರಪ್ರಮುಖಾ ಯೋಗಿನೋ ಮಾನುಷಾಸ್ತಥಾ |
ಕೃಷ್ಣದ್ವೈಪಾಯನಾತ್ ಪ್ರಾಪ್ಯ ಜ್ಞಾನಂ ತೇ ಮುಮುದುಃ ಸುರಾಃ ॥86॥
ಸನತ್ಕುಮಾರ ಮುಂತಾದ ಯೋಗಿಗಳೂ, ದೇವತೆಗಳೂ ಮಾನವರೂ ಪುನಃ ಜ್ಞಾನವನ್ನು ಪಡೆದರು. ಅವರೆಲ್ಲರೂ ವೇದವ್ಯಾಸರಿಂದ ಜ್ಞಾನವನ್ನು ಪಡೆದು ಸುಖಿಗಳಾದರು.
ಸಮಸ್ತ ವಿಜ್ಞಾನ ಗಭಸ್ತಿ ಚಕ್ರಂ
ವಿತಾಯ ವಿಜ್ಞಾನಮಹಾದಿವಾಕರಃ |
ನಿಪೀಯ ಚಾಜ್ಞಾನತಮೋ ಜಗತ್ತತಂ
ಪ್ರಭಾಸತೇ ಭಾನುರಿವಾವಭಾಸಯನ್ ॥87॥
ಜ್ಞಾನಮಯ ಮಹಾಸೂರ್ಯರಾದ ವೇದವ್ಯಾಸರು ಪೂರ್ಣಜ್ಞಾನ ರೂಪದ ಪ್ರಕಾಶ ಪುಂಜವನ್ನು ಎಲ್ಲೆಡೆ ಹರಡಿ ಜಗತ್ತಿನಲ್ಲಿ ವ್ಯಾಪಿಸಿದ ಅಜ್ಞಾನದ ಕತ್ತಲನ್ನು ಪಾನ ಮಾಡಿ ಸೂರ್ಯನಂತೆ ಎಲ್ಲವನ್ನೂ ಬೆಳಗಿಸುತ್ತ ಹೊಳೆಯುತ್ತಾರೆ.
ಚತುರ್ಮುಖೇಶಾನ ಸುರೇಂದ್ರ ಪೂರ್ವಕೈಃ
ಸದಾ ಸುರೈಃ ಸೇವಿತಪಾದಪಲ್ಲವಃ |
ಪ್ರಕಾಶಯಂಸ್ತೇಷು ಸದಾತ್ಮಗುಹ್ಯಂ
ಮುಮೋದ ಮೇರೌ ಚ ತಥಾ ಬದರ್ಯಾಮ್ ॥88॥
ಬ್ರಹ್ಮರುದ್ರ ದೇವೇಂದ್ರ ಮುಂತಾದ ದೇವತೆಗಳಿಂದ ಸೇವಿತವಾದ ಎಳೆ ಚಿಗುರಿನಂಥ ಪಾದಗಳುಳ್ಳ ವೇದವ್ಯಾಸರು ಆ ದೇವತೆಗಳಲ್ಲಿ ತನ್ನ ರಹಸ್ಯವನ್ನು ಸದಾ ಪ್ರಕಟಪಡಿಸುತ್ತ ಮೇರು ಪರ್ವತದಲ್ಲಿಯೂ ಬದರೀಕ್ಷೇತ್ರದಲ್ಲಿಯೂ ಆನಂದಿಸಿದರು.
* * * *

ಐವತ್ತೇಳನೆಯ ಅಧ್ಯಾಯ
(ಉಪರಿಚರೋಪಾಖ್ಯಾನ ಮತ್ತು ವೇದವ್ಯಾಸದೇವರ ಪ್ರಾದುರ್ಭಾವ.)
ವೈಶಂಪಾಯನಃ
ರಾಜೋಪರಿಚರೋ ನಾಮ ಧರ್ಮನಿತ್ಯೋ ಮಹೀಪತಿಃ |
ಬಭೂವ ಮೃಗಯಾಶೀಲಃ ಶಶ್ವತ್ ಸ್ವಾಧ್ಯಾಯವಾಂಛುಚಿಃ ॥1॥
ರಾಜೋಪರಿಚರ ಎಂಬ ರಾಜನು ನಿತ್ಯವೂ ಧರ್ಮವನ್ನು ಆಚರಿಸುವವನೂ, ಯಾವಾಗಲೂ ಸ್ವಾಧ್ಯಾಯವನ್ನು ಮಾಡುವವನೂ, ಶುಚಿಯಾದವನೂ, ಮತ್ತು ಮೃಗಯಾಶೀಲನೂ ಆಗಿದ್ದನು.
ಸ ಚೇದಿವಿಷಯಂ ರಮ್ಯಂ ವಸುಃ ಪೌರವನಂದನಃ |
ಇಂದ್ರೋಪದೇಶಾಜ್ಜಗ್ರಾಹ ಸ್ಪೃಹಣೀಯಂ ಮಹೀಪತಿಃ ॥2॥
ಎಲೈ ಪೌರವಕುಲದಲ್ಲಿ ಜನಿಸಿದವನೇ, ಆ ವಸುವಾದ ರಾಜನು ರಮ್ಯವಾದ ಎಲ್ಲರೂ ಅಪೇಕ್ಷೆ ಪಡುವ ಚೇದಿದೇಶವನ್ನು ಇಂದ್ರನ ಆದೇಶದಂತೆ ತನ್ನ ರಾಜ್ಯವಾಗಿ ಸ್ವೀಕರಿಸಿದನು.
ತಮಾಶ್ರಮೇ ನ್ಯಸ್ತಶಸ್ತ್ರಂ ನಿವಸಂತಂ ತಪೋರತಿಮ್ |
ದೇವರಾಡ್ ಯಜ್ಞಸಹಿತ ಉಪತಸ್ಥೇ ಮರುದ್ಗಣೈಃ ॥3॥
ಶಸ್ತ್ರತ್ಯಾಗವನ್ನು ಮಾಡಿ, ತಪಸ್ಸಿನಲ್ಲಿ ರತನಾಗಿ ಆಶ್ರಮದಲ್ಲಿ ವಾಸಮಾಡುವ, ಆ ವಸುರಾಜನ ಸಮೀಪಕ್ಕೆ ಮರುದ್ಗಣಸಹಿತನಾಗಿ ಮತ್ತು ಯಜ್ಞಾಭಿಮಾನಿದೇವತೆಗಳ ಸಹಿತನಾಗಿ ಇಂದ್ರನು ಬಂದು ಅವನನ್ನು ಓಲೈಸಿದನು.
ಇಂದ್ರೋಽಹಮಿತಿ ಧೈರ್ಯೇಣ ತಪಸಾ ಚೇತ್ಯಮನ್ಯತ |
ತಂ ವೈ ದೇವಪತಿಃ ಸಾಕ್ಷಾತ್ ತಪಸಃ ಸನ್ನ್ಯವರ್ತಯತ್ ॥4॥
ಉಪರಿಚರ ವಸುವು ತನ್ನ ಧೈರ್ಯ ಮತ್ತು ತಪಸ್ಸುಗಳ ನಿಮಿತ್ತದಿಂದ ತಾನೇ ಇಂದ್ರಪದವಿಯನ್ನು ಪಡೆದಿದ್ದೇನೆ ಎಂದು ತಿಳಿದಿದ್ದನು. ಅವನನ್ನು ದೇವರಾಜನಾದ ಇಂದ್ರನು ತಾನಾಗಿ ಬಂದು, ತಪಸ್ಸಿನಿಂದ ನಿವೃತ್ತನಾಗುವಂತೆ ಮಾಡಿದನು.
ಇಂದ್ರಃ
ನ ಸಂಕೀರ್ಯೇತ ಧರ್ಮೋಽಯಂ ಪೃಥಿವ್ಯಾಂ ಪೃಥಿವೀಪತೇ |
ತಂ ಪಾಹಿ ಧರ್ಮೋ ಹಿ ಧೃತಃ ಕೃತ್ಸ್ನಂ ಪಾಲಯತೇ ಜಗತ್ ॥5॥
ಎಲೈ ರಾಜನೇ ಭೂಮಿಯಲ್ಲಿ ಧರ್ಮದ ಸಂಕರ ಉಂಟಾಗಬಾರದು. ಬ್ರಹ್ಮದೇವರೇ ಬ್ರಹ್ಮದೇವರಾಗಬೇಕು, ಇಂದ್ರನೇ ಇಂದ್ರನಾಗಬೇಕು. ಚಕ್ರವರ್ತಿಯು ಚಕ್ರವರ್ತಿಯಾಗಬೇಕು ಎಂಬ ನಿಯಮವಿದೆ. ಇದು ವ್ಯತ್ಯಾಸವಾಗಿ, ಚಕ್ರವರ್ತಿ ಇಂದ್ರನಾದರೆ ಧರ್ಮದ ಸಂಕರವಾಗುತ್ತದೆ. ಹಾಗಾಗಬಾರದು. ನೀನು ಧರ್ಮವನ್ನು ರಕ್ಷಿಸು. ರಕ್ಷಿಸಲ್ಪಟ್ಟ ಧರ್ಮವು ಸಮಸ್ತ ಜಗತ್ತನ್ನು ರಕ್ಷಿಸುತ್ತದೆ. (ಆದ್ದರಿಂದ ನೀನು ನಿನ್ನನ್ನು ಇಂದ್ರನೆಂದು ತಿಳಿಯಬೇಡ.)
ಲೌಕ್ಯಂ ಧರ್ಮಂ ಪಾಲಯ ತ್ವಂ ನಿತ್ಯಯುಕ್ತಃ ಸಮಾಹಿತಃ |
ಧರ್ಮಯುಕ್ತಸ್ತತೋ ಲೋಕಾನ್ ಪುಣ್ಯಾನ್ ಪ್ರಾಪ್ಸ್ಯಸಿ ಶಾಶ್ವತಾನ್ ॥6॥
ನಿತ್ಯವೂ ಯೋಗಯುಕ್ತನಾಗಿ ಸಮಾಧಾನದಿಂದ ಕೂಡಿದ್ದು, ಲೋಕದ ಧರ್ಮವನ್ನು ಪಾಲಿಸು. ಈ ಧರ್ಮಾಚರಣೆಯಿಂದ ನೀನು ಅನಂತರ ಶಾಶ್ವತವಾದ ಪುಣ್ಯಲೋಕಗಳನ್ನು ಹೊಂದುವಿ.
ದಿವಿಷ್ಠಸ್ಯ ಭುವಿಷ್ಠಶ್ಚ ಸಖಾ ಭೂತ್ವಾ ಮಮ ಪ್ರಿಯಃ |
ಊಧಃ ಪೃಥಿವ್ಯಾ ಯೋ ದೇಶಸ್ತಮಾವಸ ನರಾಧಿಪ ॥7॥
ಸ್ವರ್ಗಲೋಕದಲ್ಲಿರುವ ನನಗೆ ಭೂಲೋಕದಲ್ಲಿರುವ ನೀನು ಸ್ನೇಹಿತನೂ ಮತ್ತು ಪ್ರಿಯನೂ ಆಗಿದ್ದು, ಭೂಮಿಯ ಕೆಚ್ಚಲಿನಂತಿರುವ ಈ ಚೇದಿದೇಶವನ್ನು ಸ್ವೀಕರಿಸಿ ವಾಸಮಾಡು.
ಉತ್ತರಾಭಿಮುಖವಾಗಿ ಗೋರೂಪವಾದ ಭೂಮಿಗೆ ಪರಶುರಾಮದೇವರು ಸೃಷ್ಟಿಸಿದ ಈ ಸ್ಥಳವು ಎತ್ತರವಾಗಿದ್ದು ವೇದಿಕೆಯಂತಿದೆ. ಆದ್ದರಿಂದ ಅದಕ್ಕೆ ವೇದಿ ಎಂತಲೂ, ಚೇದಿ ಎಂತಲೂ ಹೆಸರು. ಪಶುಗಳಿಗೆ ಬೇಕಾದ ಧನಧಾನ್ಯಗಳನ್ನು ಕೊಡುವುದರಿಂದ ಅದು ಗೋವಿನ ಕೆಚ್ಚಲಿನಂತೆ ಇದೆ.
ಪಶವ್ಯಶ್ಚೈವ ಪುಣ್ಯಶ್ಚ ಸುಸ್ಥಿರೋ ಧನಧಾನ್ಯವಾನ್ |
ಸುರಕ್ಷಶ್ಚೈವ ಧನ್ಯಶ್ಚ ಭಾಗ್ಯೈರ್ಭೂಮಿಗಣೈರ್ಯುತಃ ॥8॥
ಈ ದೇಶವು ಪುಣ್ಯಪ್ರದವಾದದ್ದು. ಪ್ರಕೃತಿಬಾಧೆಯಿಲ್ಲದಂತಹದು. ಪಶುಗಳಿಗೆ ಹಿತವಾದುದು. ಧನಧಾನ್ಯ ಸಮೃದ್ಧಿವುಳ್ಳದ್ದು, ರಕ್ಷಿಸಲು ಸುಲಭವಾದದ್ದು, ಧನ್ಯವಾದದ್ದು. ಮತ್ತು ಬೇರೆ ಗಣಗಳಿಂದ ಆವೃತವಾದದ್ದು.
ಅತ್ಯನ್ಯಾನೇಷ ದೇಶೋ ಹಿ ಧನರತ್ನಾದಿಭಿರ್ಯುತಃ |
ವಸುಪೂರ್ಣಾಂ ಹಿ ವಸುಧಾಂ ವಸ ವೇದಿಷು ವೇ (ಚೇ) ದಿಪ ॥9॥
ಎಲೈ ಚೇದಿಪಾಲನೇ ಈ ದೇಶವು ಧನರತ್ನಾದಿಗಳಿಂದ ಸಂಯುತವಾಗಿ ಬೇರೆ ದೇಶಗಳನ್ನು ಮೀರಿದೆ. ಆದ್ದರಿಂದ ವಸುಪೂರ್ಣವಾದ ಈ ಭಾಗದಲ್ಲಿ ವಾಸವನ್ನು ಮಾಡು.
ಧರ್ಮಶೀಲಾ ಜನಪದಾಃ ಸುಸಂತುಷ್ಟಾಶ್ಚ ಸಾಧವಃ |
ನ ಚ ಮಿಥ್ಯಾಪ್ರಲಾಪೋಽತ್ರ ಸ್ವೈರೇಷ್ವಪಿ ತತೋಽನ್ಯಥಾ ॥10॥
ಇಲ್ಲಿ ವಾಸಿಸುವ ಜನರು ಧರ್ಮಶೀಲರು, ಸಾಧುಗಳು ಮತ್ತು ಸುಸಂತುಷ್ಟರಾದವರು. ಇಲ್ಲಿ ವಿನೋದಕ್ಕಾದರೂ ಸಹ ಯಾರೂ ಸುಳ್ಳು ಮಾತನಾಡುವುದಿಲ್ಲ.

ನ ಚ ಪಿತ್ರಾ ವಿಭಜ್ಯಂತೇ ನರಾ ಗುರುಹಿತೇ ರತಾಃ |
ಯುಂಜಂತಿ ಧುರಿ ನಾಗಾಶ್ಚ ಕೃಶಾನ್ ಸಂಧುಕ್ಷಯಂತಿ ಚ ॥11॥
ತಂದೆಯನ್ನು ಬಿಟ್ಟು ಮಕ್ಕಳು ಬೇರೆಕಡೆಗೆ ಹೋಗುವುದಿಲ್ಲ. ಎಲ್ಲರೂ ಹಿರಿಯರ ಸೇವೆಯಲ್ಲಿ ನಿರತರಾಗಿರುವವರು. ಹಸುಗಳನ್ನು ಭಾರ ಎಳೆಯಲು ಉಪಯೋಗಿಸುವುದಿಲ್ಲ. ಕೃಶವಾದವರನ್ನು ಪೋಷಿಸುತ್ತಾರೆ. ಸರ್ಪಗಳು ದರಿದ್ರರಾದವರಿಗೆ ನಿಧಿಯನ್ನು ತಂದುಕೊಟ್ಟು ಪೋಷಿಸುತ್ತವೆ.
ಸರ್ವೇ ವರ್ಣಾಃ ಸ್ವಧರ್ಮಸ್ಥಾಃ ಸದಾ ಚೇದಿಷು ಮಾನವಾಃ |
ನ ತೇಷ್ವವಿದಿತಂ ಕಿಂಚಿತ್ ತ್ರಿಷು ಲೋಕೇಷು ಯದ್ ಭವೇತ್ ॥12॥
ಚೇದಿ ದೇಶದಲ್ಲಿ ಬೇರೆ ಬೇರೆ ವರ್ಣಕ್ಕೆ ಸೇರಿದ ಎಲ್ಲ ಮಾನವರೂ ತಮ್ಮ ತಮ್ಮ ಧರ್ಮಗಳಲ್ಲಿ ನಿರತರಾಗಿರುತ್ತಾರೆ. ಅವರು ಮೂರು ಲೋಕದಲ್ಲಿ ತಿಳಿಯದ ವಿಷಯವು ಯಾವುದೂ ಇಲ್ಲ.
ದೇವೋಪಭೋಗ್ಯಂ ದಿವ್ಯಂ ತ್ವಮಾಕಾಶಂ ಸ್ಫಾಟಿಕಂ ಮಹತ್ |
ಆಕಾಶಗಂ ಚ ದಿವ್ಯಂ ಚ ವಿಮಾನಮುಪಲಪ್ಸ್ಯಸಿ ॥13॥
ನೀನು ದೇವತೆಗಳ ಭೋಗಕ್ಕೆ ಯೋಗ್ಯವಾದ ದಿವ್ಯವಾದ ಆಕಾಶದಲ್ಲಿ ಸಂಚರಿಸುವ ದಿವ್ಯವಾದ ಪ್ರಕಾಶಿಸುವ ವಿಮಾನವನ್ನು ಪಡೆಯುತ್ತೀಯೆ.
ತ್ವಮೇಕಃ ಸರ್ವಮರ್ತ್ಯೇಷು ವಿಮಾನವರಮಾಸ್ಥಿತಃ |
ಚರಿಷ್ಯಸ್ಯುಪರಿಸ್ಥೋ ವೈ ದೇವೋ ವಿಗ್ರಹವಾನಿವ ॥14॥
ಎಲ್ಲ ಮಾನವರಲ್ಲಿ ನೀನೊಬ್ಬನೇ ಶ್ರೇಷ್ಠವಾದ ವಿಮಾನವನ್ನು ಏರಿದವನಾಗಿ ಶರೀರವುಳ್ಳ ದೇವತೆಯಂತೆ ಎಲ್ಲರ ಮೇಲಿದ್ದು ಸಂಚರಿಸುವಿ.
ದದಾಮಿ ತೇ ವೈಜಯಂತೀಂ ಮಾಲಾಮಮ್ಲಾನಪಂಕಜಾಮ್ |
ಧಾರಯಿಷ್ಯಸಿ ಸಂಗ್ರಾಮೇ ಯಾಂ ತ್ವಂ ಶಸ್ತ್ರೈರವಿಕ್ಷತಃ ॥15॥
ನಿನಗೆ ಎಂದೂ ಬಾಡದಿದ್ದ ಕಮಲಪುಷ್ಪಗಳಿಂದ ಕೂಡಿದ ವೈಜಯಂತೀ ಮಾಲೆಯನ್ನು ಕೊಡುತ್ತೇನೆ. ನೀನು ಅದನ್ನು ಧರಿಸಿದರೆ ಯುದ್ಧದಲ್ಲಿ ಯಾವ ಶಸ್ತ್ರಗಳಿಂದಲೂ ಗಾಯಗೊಳ್ಳುವುದಿಲ್ಲ.
ಲಕ್ಷಣಂ ಚೈತದೇವೇಹ ಭವಿತಾ ತೇ ನರಾಧಿಪ |
ಇಂದ್ರಮಾಲೇತಿ ವಿಖ್ಯಾತಾಂ ಧನ್ಯಾಮಪ್ರತಿಮಾಂ ವಹ ॥16॥
ಎಲೈ ರಾಜನೇ ನಿನಗೆ ಇದೇ ಲಕ್ಷಣವಾಗುತ್ತದೆ. ಇಂದ್ರಮಾಲೆಯೆಂದು ಪ್ರಸಿದ್ಧವಾದ ಧನ್ಯವಾದ ಅಸದೃಶವಾದ ಈ ಮಾಲೆಯನ್ನು ಧರಿಸು.
ಏವಂ ತು ಸಾಂತ್ವಾನ್ನೃಪತಿಂ ತಪಸಃ ಸನ್ನ್ಯವರ್ತಯತ್ |
ಪ್ರಯಯೌ ದೈವತೈಃ ಸಾರ್ಧಂ ಕೃತ್ವಾ ಕಾರ್ಯಂ ದಿವೌಕಸಾಮ್ ॥17॥
ಹೀಗೆ ಸಮಾಧಾನದ ಮಾತುಗಳಿಂದ ವಸುವನ್ನು ತಪಸ್ಸಿನಿಂದ ಹಿಂದಿರುಗಿಸಿ ದೇವತೆಗಳ ಕಾರ್ಯವನ್ನು ಸಾಧಿಸಿ, ದೇವತೆಗಳ ಜೊತೆಯಲ್ಲಿ ಇಂದ್ರನು ಸ್ವರ್ಗಕ್ಕೆ ಹೋದನು.
ವೈಶಂಪಾಯನಃ
ತಸ್ಮೈ ಚ ವೈಷ್ಣವೀಂ ಯಷ್ಟಿಂ ದದೌ ವೃತ್ರನಿಷೂದನಃ |
ಇಷ್ಟಪ್ರದಾನಮುದ್ದಿಶ್ಯ ಶಿಷ್ಟಾನಾಂ ಪರಿಪಾಲಿನೀಮ್ ॥18॥
ವೃತ್ರಹರ್ತೃವಾದ ಇಂದ್ರನು ಅವನಿಗೆ ಇಷ್ಟಪ್ರಾಪ್ತಿಯಾಗಲಿ ಎಂಬ ಉದ್ದೇಶದಿಂದ ಶಿಷ್ಟರನ್ನು ಪರಿಪಾಲಿಸುವ ಒಂದು ವೈಷ್ಣವ ಯಷ್ಟಿಯನ್ನು ಕೊಟ್ಟನು.
ತತಸ್ತು ರಾಜಾ ಚೇದೀನಾಮಿಂದ್ರಾಭರಣಭೂಷಿತಃ |
ಇಂದ್ರದತ್ತಂ ವಿಮಾನಂ ತದಾಸ್ಥಾಯ ಪ್ರಯಯೌ ಪುರೀಮ್ ॥19॥
ಅನಂತರ ಚೇದಿರಾಜನು, ಇಂದ್ರನು ಕೊಟ್ಟ ಆಭರಣಗಳಿಂದ ಭೂಷಿತನಾಗಿ, ಇಂದ್ರನು ಕೊಟ್ಟ ವಿಮಾನವನ್ನು ಏರಿ ತನ್ನ ಪಟ್ಟಣಕ್ಕೆ ಬಂದನು.
ಸ ತು ಶಕ್ರಸ್ಯ ಪೂಜಾರ್ಥಂ ಭೂಮೌ ಭೂಮಿಪತಿಸ್ತದಾ |
ಪ್ರವೇಶಂ ಕಾರಯಾಮಾಸ ಸರ್ವೋತ್ಸವವರಂ ತದಾ |
ಮಾರ್ಗಶೀರ್ಷೇ ಮಹಾರಾಜ ಗತೇ ಸಂವತ್ಸರೇ ತದಾ ॥20॥
ತನಗೆ ಉಪಕಾರವನ್ನು ಮಾಡಿದ ಇಂದ್ರನನ್ನು ಪೂಜಿಸಲು ಆ ಭೂಮಿಪತಿರಾಜನು ಒಂದು ವರ್ಷ ಕಳೆದ ನಂತರ ಮಾರ್ಗಶಿರ ಮಾಸದಲ್ಲಿ ಎಲ್ಲಾ ಉತ್ಸವಗಳಿಗಿಂತ ಮಿಗಿಲಾದ ಒಂದು ಉತ್ಸವವನ್ನು ಮಾಡಿಸಿದನು.
ತದಾ ಪ್ರಭೃತಿ ಚಾದ್ಯಾಪಿ ಯಷ್ಟ್ಯಾಃ ಕ್ಷಿತಿಪಸತ್ತಮೈಃ |
ಪ್ರವೇಶಃ ಕ್ರಿಯತೇ ರಾಜನ್ ಯಥಾ ತೇನ ಪ್ರವರ್ತಿತಃ |
ಅಪರೇದ್ಯುಸ್ತತಸ್ತಸ್ಯಾಃ ಕ್ರಿಯತೇಽತ್ಯುಚ್ಛ್ರಯೋ ನರೈಃ ॥21॥
ಅಲಂಕೃತಾಯಾಃ ಪುಲಕೈರ್ಗಂಧಮಾಲ್ಯೈಶ್ಚ ಭೂಷಣೈಃ |
ಮಾಲ್ಯದಾಮಪರಿಕ್ಷಿಪ್ತಾಂ ದ್ವಾತ್ರಿಂಶತ್ಕಿಷ್ಕುಸಂಯುತಾಮ್ ॥22॥
ಅಂದಿನಿಂದ ಪ್ರಾರಂಭಿಸಿ ಇಂದಿನವರೆಗೂ ರಾಜರು ಆ ಇಂದ್ರಯಷ್ಟಿಗೆ ಉತ್ಸವವನ್ನು ಮಾಡುತ್ತಾರೆ. ಪೂಜೆ ಮಾಡಿದ ಮರುದಿವಸ ಆ ಇಂದ್ರಯಷ್ಟಿಯನ್ನು (ಇಂದ್ರ ಧ್ವಜವನ್ನು) ಮೇಲಕ್ಕೆ ಎತ್ತುತ್ತಾರೆ. ಆ ಇಂದ್ರಯಷ್ಟಿಯನ್ನು ಕಸ್ತೂರಿಗಂಧ ಮಾಲೆ, ಮತ್ತು

ಭೂಷಣಗಳಿಂದ ಅಲಂಕರಿಸಿ, ಹೂವಿನ ಮಾಲೆಗಳನ್ನು ಸುತ್ತುತ್ತಾರೆ.
ಉದ್ಧೃತ್ಯ ಪೀಠಕೇ ಚಾಪಿ ದ್ವಾದಶಾರತ್ನಿಕೋಚ್ಛ್ರಿತೇ |
ಮಹಾರಜನವಾಸಾಂಸಿ ಪರಿಕ್ಷಿಪ್ಯ ಧ್ವಜೋತ್ತಮಮ್ ॥23॥
ವಾಸೋಭಿರನ್ನಪಾನೈಶ್ಚ ಪೂಜಿತೈರ್ಬ್ರಾಹ್ಮಣರ್ಷಭೈಃ |
ಪುಣ್ಯಾಹವಾಚನಂ ಕೃತ್ವಾ ಧ್ವಜ ಉಚ್ಛ್ರೀಯತೇ ತದಾ ॥24॥
ಮೂವತ್ತೆರಡು ಕಿಷ್ಕು (ಒಂದು ಹಸ್ತ ಪರಿಮಿತ ದೇಶ) ಎತ್ತರವಿರುವ ಆ ಇಂದ್ರಧ್ವಜವನ್ನು ಹನ್ನೆರಡು ಮೊಳ ಎತ್ತರದ ಪೀಠದಲ್ಲಿ ಎತ್ತಿನಿಲ್ಲಿಸಿ ಬೆಲೆ ಬಾಳುವ ವಸ್ತ್ರಗಳಿಂದ ಆ ಧ್ವಜವನ್ನು ಸುತ್ತಿ ಅಲಂಕರಿಸುತ್ತಾರೆ. ಬ್ರಾಹ್ಮಣಶ್ರೇಷ್ಠರಿಂದ ಪುಣ್ಯಾಹವಾಚನವನ್ನು ಮಾಡಿಸಿ, ಅನ್ನ , ಪಾನ, ವಸ್ತ್ರಗಳಿಂದ ಅವರನ್ನು ಪೂಜಿಸಿ ಅನಂತರ ಧ್ವಜವನ್ನು ಮೇಲಕ್ಕೆ ಎತ್ತುತ್ತಾರೆ.
ಶಂಖಭೇರೀಮೃದಂಗೈಶ್ಚ ಸನ್ನಾಹಃ ಕ್ರಿಯತೇ ತದಾ |
ಭಗವಾನ್ ಪೂಜ್ಯತೇ ಚಾತ್ರ ಯಷ್ಟಿರೂಪೇಣ ವಾಸವಃ ॥25॥
ಆಗ ಶಂಖಭೇರಿ ಮತ್ತು ಮೃದಂಗಗಳ ಘೋಷಗಳನ್ನು ಮಾಡುತ್ತಾರೆ. ಆ ಧ್ವಜದಲ್ಲಿ ಇಂದ್ರನನ್ನೇ ಆವಾಹಿಸಿ ಅವನನ್ನು ಪೂಜಿಸುತ್ತಾರೆ.

ಮಾಣಿಭದ್ರಾದಯೋ ಯಕ್ಷಾಃ ಪೂಜ್ಯಂತೇ ದೈವತೈಃ ಸಹ |
ನಾನಾವಿಧಾನಿ ದಾನಾನಿ ದತ್ತಾತ್ವಽರ್ಥಿಭ್ಯಃ ಸುಹೃಜ್ಜನೈಃ ॥26॥
ಅಲಂಕೃತ್ವಾ ಮಾಲ್ಯದಾಮೈರ್ವಸ್ತ್ರೈರ್ನಾನಾವಿಧೈಸ್ತಥಾ |
ದೃತಿಭಿಃ ಸಜಲೈಃ ಸರ್ವೇ ಕ್ರೀಡಿತ್ವಾ ನೃಪಶಾಸನಾತ್ ॥27॥
ಇಂದ್ರನೇ ಅಲ್ಲದೇ ಆ ಧ್ವಜದಲ್ಲಿ ಇನ್ನೂ ಕೆಲವು ದೇವತೆಗಳೂ ಮಣಿಭದ್ರ ಮೊದಲಾದ ಯಕ್ಷರೂ ಪೂಜಿಸಲ್ಪಡುತ್ತಾರೆ. ಅದಕ್ಕೆ ಮೊದಲು ಅನೇಕ ವಿಧವಾದ ದಾನಗಳನ್ನು ಯೋಗ್ಯರಿಗೆ ಕೊಡುತ್ತಾರೆ. ಸುಹೃಜ್ಜನರು ನಾನಾವಿಧಗಳಾದ ಮಾಲ್ಯವಸ್ತ್ರಗಳಿಂದ ಅಲಂಕಾರವನ್ನು ಮಾಡಿಕೊಂಡು ರಾಜಶಾಸನದಂತೆ ಎಲ್ಲರೂ ಓಕುಳಿಯಾಡುತ್ತಾರೆ.
ಸಂಭಾಜಯಿತ್ವಾ ರಾಜಾನಂ ಕೃತ್ವಾ ನರ್ಮಾಶ್ರಯಾಃ ಕಥಾಃ |
ರಮಂತೇ ನಾಗರಾಃ ಸರ್ವೇ ತಥಾ ಜಾನಪದೈಃ ಸಹ ॥28॥
ರಾಜನನ್ನು ಗೌರವಿಸಿ ವಿವಿಧ ಹಾಸ್ಯದ ಮಾತುಗಳನ್ನು ಆಡಿ ಎಲ್ಲಾ ನಗರವಾಸಿಗಳು ಮತ್ತು ಗ್ರಾಮವಾಸಿಗಳು ಸಂತೋಷ ಪಡುತ್ತಾರೆ.
ಸೂತಾಶ್ಚ ಮಾಗಧಾಶ್ಚೈವ ರಮಂತೇ ನಟನರ್ತಕಾಃ |
ಪ್ರೀತ್ಯಾ ತು ನೃಪಶಾರ್ದೂಲ ಸರ್ವೇ ಚಕ್ರುರ್ಮಹೋತ್ಸವಮ್ ॥29॥
ಎಲೈ ರಾಜಶ್ರೇಷ್ಠನೇ ಸೂತರು, ಮಾಗಧರು, ನಟನರ್ತಕರು ಎಲ್ಲರೂ ಸಂತೋಷ ಪಡುತ್ತಾರೆ. ಎಲ್ಲರೂ ಪ್ರೀತಿಯಿಂದ ಈ ಮಹೋತ್ಸವವನ್ನು ಆಚರಿಸಿದರು.
ಸಾಂತಃಪುರಃ ಸಹಾಮಾತ್ಯಃ ಸರ್ವಾಭರಣಭೂಷಿತಃ |
ಮಹಾರಜನವಾಸಾಂಸಿ ವಸಿತ್ವಾ ವೇದಿರಾಟ್ ತಥಾ ॥30॥
ರೇಜೇ ವೇದಿಪತಿಸ್ತತ್ರ ದಿವಿ ದೇವಪತಿರ್ಯಥಾ |
ಜಾತಿಭಿಸ್ತೂಲಿಕೇನಾಕ್ತಸ್ತಥಾ ಸ ಮುಮುದೇ ಸದಾ ॥31॥
ವೇದಿಪತಿಯಾದ ಉಪರಿಚರನೂ ಸಹ ಸರ್ವಾಭರಣಭೂಷಿತನಾಗಿ ದಿವ್ಯವಾದ ವಸ್ತ್ರಗಳನ್ನು ಧರಿಸಿ ಅಂತಃಪುರದ ಜನರು ಮತ್ತು ಅಮಾತ್ಯರ ಜೊತೆಯಲ್ಲಿ ಸ್ವರ್ಗಲೋಕದಲ್ಲಿ ಇಂದ್ರನಂತೆ ಮೆರೆದನು. ಸುಗಂಧದ್ರವ್ಯಗಳಿಂದ ಲಿಪ್ತನಾಗಿ ಅವನು ಸಂತೋಷಪಟ್ಟನು.
ಏವಂ ಜಾನಪದಾಃ ಸರ್ವೇ ಚಕ್ರುರಿಂದ್ರಮಖಂ ತಥಾ |
ಯಥಾ ವೇದಿಪತಿಃ ಪ್ರೀತ್ಯಾ ಚಕಾರೇಂದ್ರಮಖಂ ವಸುಃ ॥32॥
ವೇದಿಪತಿಯಾದ ಉಪರಿಚರವಸುವು ಇಂದ್ರನಿಗೆ ಉತ್ಸವವನ್ನು ಮಾಡಿದಂತೆ ಎಲ್ಲಾ ಗ್ರಾಮಗಳಲ್ಲಿಯೂ ಇಂದ್ರನಿಗೆ ಉತ್ಸವವನ್ನು ಮಾಡಿದರು.
ಏತಾಂ ಪೂಜಾಂ ಮಹೇಂದ್ರಸ್ತು ದೃಷ್ಟ್ವಾ ತೇನ ಕೃತಾಂ ಶುಭಾಮ್ |
ಹರಿಭಿರ್ವಾಜಿಭಿರ್ಯುಕ್ತಮಂತರಿಕ್ಷಗತಂ ರಥಮ್ ॥33॥
ಆಸ್ಥಾಯ ಸಹ ಶಚ್ಯಾ ಚ ವೃತೋ ಹ್ಯಪ್ಸರಸಾಂ ಗಣೈಃ |
ವಸುನಾ ರಾಜಮುಖ್ಯೇನ ಪ್ರೀತಿಮಾನಭವದ್ ವಿಭುಃ ॥34॥
ಮಹೇಂದ್ರನಾದರೋ ಅಶ್ವಗಳನ್ನು ಹೂಡಿದ ತನ್ನ ರಥದಲ್ಲಿ ಅಂತರಿಕ್ಷದಲ್ಲಿ ಶಚಿಯ ಜೊತೆಯಲ್ಲಿ ಯುಕ್ತನಾಗಿ ಅಪ್ಸರೆಯರ ಸಮೂಹದಿಂದ ಸುತ್ತುವರಿಯಲ್ಪಟ್ಟವನಾಗಿ ರಾಜನು ಮಾಡಿದ ಈ ಮಹೋತ್ಸವವನ್ನು ನೋಡಿ ರಾಜಶ್ರೇಷ್ಠನಾದ ವಸುವಿನ ಜೊತೆಯಲ್ಲಿ ಪ್ರೀತಿಯುಳ್ಳವನಾದನು.
ಇಂದ್ರಃ
ಯೇ ಪೂಜಯಿಷ್ಯಂತಿ ನರಾ ರಾಜಾನಶ್ಚ ಮಖಂ ಮಮ |
ಕಾರಯಿಷ್ಯಂತಿ ಚ ಮುದಾ ಯಥಾ ವೇದಿಪತಿರ್ನೃಪಃ ॥35॥
ತೇಷಾಂ ಶ್ರೀರ್ವಿಜಯಶ್ಚೈವ ಸ್ವರಾಷ್ಟ್ರಾಣಾಂ ಭವಿಷ್ಯತಿ |
ತೇಷಾಂ ಸ್ಫೀತಾ ಜನಪದಾ ಮುದಿತಾಶ್ಚ ಭವಂತ್ಯುತ ॥36॥
ಎಲೈ ರಾಜನೇ ಯಾವ ರಾಜನು ನನಗೆ ವೇದಿಪತಿಯಾದ ವಸುವು ಮಾಡಿದಂತೆ ಸಂತೋಷದಿಂದ ಉತ್ಸವವನ್ನು ಮಾಡುತ್ತಾರೋ ಅವರಿಗೂ, ಅವರ ರಾಷ್ಟ್ರದವರಿಗೆಲ್ಲರಿಗೂ ಸಂಪತ್ತು ಮತ್ತು ವಿಜಯಗಳು ಉಂಟಾಗುತ್ತದೆ. ಅವರ ಜನಪದರೆಲ್ಲರೂ

ಪರಿಶುದ್ಧರಾಗಿದ್ದು ಸಂತೋಷದಿಂದ ಇರುತ್ತಾರೆ.
ನಿರೀತಿಕಾನಿ ಸಸ್ಯಾನಿ ಭವಂತಿ ಬಹುಧಾ ನೃಪ |
ರಾಕ್ಷಸಾಶ್ಚ ಪಿಶಾಚಾಶ್ಚ ನ ಲುಂಪಂತೇ ಕಥಂಚನ ॥37॥
ಅಲ್ಲಿ ಈತಿಬಾಧೆಗಳು ಇರುವುದಿಲ್ಲ. ಸಸ್ಯಗಳು ಚೆನ್ನಾಗಿ ಬೆಳೆಯುತ್ತವೆ. ರಾಕ್ಷಸರು ಮತ್ತು ಪಿಶಾಚಿಗಳು ಆ ದೇಶವನ್ನು ಎಂದೂ ಲೂಟಿಮಾಡುವುದಿಲ್ಲ.
ವೈಶಂಪಾಯನಃ
ಏವಮುಕ್ತೋ ಮಹಾತ್ಮಾಽಥ ಮಹೇಂದ್ರೇಣ ನರಾಧಿಪ |
ವಸುಃ ಪ್ರೀತ್ಯಾ ಮಘವತಾ ಮಹೇಂದ್ರೇಣಾಭಿಷೇಚಿತಃ ॥38॥
ಎಲೈ ರಾಜನೇ ಮಹೇಂದ್ರನು ಈ ರೀತಿಯಲ್ಲಿ ಮಾತನಾಡಿ ಪ್ರೀತಿಯಿಂದ ತಾನೇ ವಸುವಿಗೆ ಅಭಿಷೇಕವನ್ನು ಮಾಡಿದನು.
ಉತ್ಸವಂ ಕಾರಯಿಷ್ಯಂತಿ ಸದಾ ಶಕ್ರಸ್ಯ ಯೇ ಜನಾಃ |
ಭೂಮಿದಾನಾದಿಭಿರ್ದಾನೈರ್ಯಥಾ ತತ್ರ ಭವಂತಿ ವೈ ॥39॥
ಯಾವ ಜನರು ಯಾವಾಗಲೂ ಹೀಗೆ ಭೂಮಿದಾನಾದಿಗಳನ್ನು ಕೊಟ್ಟು ಇಂದ್ರನಿಗೆ ಉತ್ಸವವನ್ನು ಮಾಡುತ್ತಾರೆಯೋ, ಅಲ್ಲಿ ಎಲ್ಲಾ ಮಂಗಳಗಳೂ ಉಂಟಾಗುತ್ತವೆ.
ವರದಾನಮಹಾಯಜ್ಞೈಸ್ತಥಾ ಶಕ್ರೋತ್ಸವೇನ ಚ |
ಇಂದ್ರಪ್ರೀತ್ಯಾ ಭೂಮಿಪತಿಶ್ಚಕಾರೇಂದ್ರಮಹೋತ್ಸವಮ್ ॥40॥
ಉಪರಿಚರ ರಾಜನು ಕೇಳಿದವರಿಗೆ ಬೇಕಾದ ವರಗಳನ್ನು ಕೊಟ್ಟು, ಮಹಾಯಜ್ಞಗಳನ್ನು ಮಾಡಿ, ಇಂದ್ರನ ಪ್ರೀತಿಗಾಗಿ ಹೀಗೆ ಇಂದ್ರ ಮಹೋತ್ಸವವನ್ನು ಜರುಗಿಸಿದನು.
ಪುತ್ರಾಶ್ಚಾಸ್ಯ ಮಹಾವೀರ್ಯಾಃ ಪಂಚಾಸನ್ನಮಿತೌಜಸಃ |
ನಾನಾರಾಜ್ಯೇಷು ಚ ಸುತಾನ್ ಸ ಸಮ್ರಾಡಭ್ಯಷೇಚಯತ್ ॥41॥
ಅವನಿಗೆ ಮಹಾಪರಾಕ್ರಮಿಗಳೂ, ಅಮಿತ ಸಾಮರ್ಥ್ಯವುಳ್ಳವರೂ ಆದ ಐದು ಮಕ್ಕಳು. ಅವನು ಅವರನ್ನು ಬೇರೆ ಬೇರೆ ರಾಜ್ಯಗಳಲ್ಲಿ ಅಭಿಷೇಕ ಮಾಡಿದನು.
ಮಹಾರಥೋ ಮಗಧರಾಡ್ ವಿಶ್ರುತೋ ಯೋ ಬೃಹದ್ರಥಃ |
ಪ್ರತ್ಯಗ್ರಶ್ಚ ಕುಶಾಗ್ರಶ್ಚ ಯಮಾಹುರ್ಮಣಿವಾಹನಮ್ ॥42॥
ಮಚ್ಚಿಲ್ಲಶ್ಚ ಯದುಶ್ಚೈವ ರಾಜನ್ಯಶ್ಚಾಪರಾಜಿತಃ |
ಏವಂ ಪಂಚ ಸುತಾಸ್ತಸ್ಯ ರಾಜರ್ಷೇರ್ಭೂರಿತೇಜಸಃ ॥43॥
ಮಹಾರಥಿಕನಾದ ಮಗಧದೇಶಾಧಿಪತಿಯಾದ ಬೃಹದ್ರಥನು ಒಬ್ಬನು. (ಇವನು ಜರಾಸಂಧನ ತಂದೆ) ಪ್ರತ್ಯಗ್ರ ಎರಡನೆಯವನು. ಮಣಿವಾಹನನೆಂದು ಕರೆಯಲ್ಪಡುವ ಕುಶಾಗ್ರನು ಮೂರನೆಯವನು. ಮಚ್ಚಿಲ್ಲ ಮತ್ತು ಅಪರಾಜಿತನಾದ ಯದು ಎಂಬುವರು ನಾಲ್ಕು ಮತ್ತು ಐದನೆಯವರು. ಹೀಗೆ ಭೂರಿಪರಾಕ್ರಮವುಳ್ಳ ವಸುರಾಜನಿಗೆ ಐವರು ಮಕ್ಕಳು.
ನ್ಯವೇಶಯನ್ ನಾಮಭಿಃ ಸ್ವೈರ್ದೇಶಾಂಶ್ಚೈವ ಪುರಾಣಿ ಚ |
ವಾಸವಾಃ ಪಂಚ ರಾಜಾನಃ ಸರ್ವೇ ವಂಶಕರಾಃ ಪೃಥಕ್ ॥44॥
ಅವರವರ ಹೆಸರುಗಳಿಂದಲೇ ಪ್ರಸಿದ್ಧವಾದ ದೇಶ ಮತ್ತು ಪಟ್ಟಣಗಳಲ್ಲಿ ಅವರನ್ನು ಸ್ಥಾಪಿಸಿದನು. ವಸುವಿನ ಮಕ್ಕಳಾದ ಈ ಐದು ಜನರೂ ತಮ್ಮ ಬೇರೆ ಬೇರೆ ವಂಶಗಳಿಗೆ ಪ್ರವರ್ತಕರಾದರು.
ವರದಾದಿಂದ್ರಪ್ರಾಸಾದಾದಾಕಾಶಸ್ಫಾಟಿಕೇ ರಥೇ |
ಉಪತಸ್ಥುರ್ಮಹಾತ್ಮಾನಂ ಗಂಧರ್ವಾಪ್ಸರಸೋ ನೃಪಮ್ |
ರಾಜೋಪರಿಚರೇತ್ಯೇವಮವೋಚನ್ ಪಾರ್ಥಿವಾ ನೃಪಮ್ ॥45॥
ಇಂದ್ರನ ಅನುಗ್ರಹದಿಂದ ಹೊಳೆಯುವ ಸ್ಫಟಿಕದ ವಿಮಾನದಲ್ಲಿ ಕುಳಿತ ಮಹಾತ್ಮನಾದ ಉಪರಿಚರವಸುವನ್ನು ಗಂಧರ್ವರು ಮತ್ತು ಅಪ್ಸರೆಯರು ಓಲೈಸಿದರು. ರಾಜರೆಲ್ಲರೂ ಎಲ್ಲ ರಾಜರ ಮೇಲೆ ಅವನು ಸಂಚರಿಸುವುದರಿಂದ ಅವನನ್ನು ರಾಜೋಪರಿಚರ ಎಂದು ಕರೆದರು.
ಪುರೋಪವಾಹಿನೀಂ ತಸ್ಯ ನದೀಂ ಶುಕ್ತಿಮತೀಂ ಗಿರಿಃ |
ಅರೌತ್ಸೀಚ್ಚೇತನಾಯುಕ್ತಃ ಕಾಮಾತ್ ಕೋಲಾಹಲಃ ಕಿಲ |
ಗಿರಿಂ ಕೋಲಾಹಲಂ ತಂ ತು ಪದಾ ವಸುರತಾಡಯತ್ ॥46॥
ಅವನ ಪಟ್ಟಣದ ಸಮೀಪದಲ್ಲಿ ಹರಿಯುವ ಶುಕ್ತಿಮತೀ ನದಿಯನ್ನು ಅವನ ಪಟ್ಟಣದಲ್ಲಿದ್ದ ಕೋಲಾಹಲವೆಂಬ ಪರ್ವತವು ಚೈತನ್ಯವುಳ್ಳ ದೇಹವನ್ನು ಧರಿಸಿ, ನನ್ನಲ್ಲಿಯೇ ಈ ನದಿಯು ಹರಿಯಬೇಕು ಎಂಬ ಬಯಕೆಯಿಂದ ಸುತ್ತುವರೆದನು. ಆಗ ಉಪರಿಚರನು ತನ್ನ ಪಾದದಿಂದ ಪರ್ವತವನ್ನು ಒದ್ದು ಶುಕ್ತಿಮತಿಯು ಹೊರಗೆ ಬರುವಂತೆ ಮಾಡಿದನು.
ನಿಶ್ಚಕ್ರಾಮ ನದೀ ತಸ್ಯ ಪ್ರಹಾರವಿವರೇಣ ಸಾ |
ತಸ್ಯಾಂ ನದ್ಯಾಮಜನಯನ್ಮಿಥುನಂ ಪರ್ವತಃ ಸ್ವಯಮ್ ॥47॥
ಅವನ ಪಾದಪ್ರಹಾರದಿಂದ ಉಂಟಾದ ವಿವರದಿಂದ ಶುಕ್ತಿಮತಿಯು ಹೊರಗೆ ಬಂದಳು. ದೇಹವನ್ನು ಧರಿಸಿದ ಆ ನದಿಯಲ್ಲಿ ಕೋಲಾಹಲ ಪರ್ವತನು ಎರಡು ಮಕ್ಕಳನ್ನು ಪಡೆದನು.
ತಸ್ಮಾದ್ ವಿಮೋಕ್ಷಣಾತ್ ಪ್ರೀತಾ ನದೀ ರಾಜ್ಞೇ ನ್ಯವೇದಯತ್ |
ಮಹಿಷೀ ಭವಿತಾ ಕನ್ಯಾ ಪೌಷ್ಯಃ ಸೇನಾಪತಿರ್ಭವತ್ ॥48॥

ಕೋಲಾಹಲ ಪರ್ವತದಿಂದ ಬಿಡಿಸಿದ ರಾಜನ ಮೇಲಿನ ಪ್ರೀತಿಯಿಂದ  ಶುಕ್ತಿಮತಿಯು ಎರಡು ಮಕ್ಕಳನ್ನು ರಾಜನಿಗೆ ಒಪ್ಪಿಸಿದಳು. ಅದರಲ್ಲಿ ಹೆಣ್ಣುಮಗುವು ಉಪರಿಚರನ ರಾಣಿಯಾದಳು. ಗಂಡುಮಗುವು ಪೌಷ್ಯನೆನಿಸಿಕೊಂಡು ಅವನ ಸೇನಾಪತಿಯಾದನು.
ಶುಕ್ತಿಮತ್ಯಾ ವಚಃ ಶ್ರುತ್ವಾ ದೃಷ್ಟ್ವಾ ತೌ ರಾಜಸತ್ತಮಃ |
ಯಃ ಪುಮಾನಭವತ್ ತತ್ರ ತಂ ಸ ರಾಜರ್ಷಿಸತ್ತಮಃ ॥49॥
ವಸುರ್ವಸುಪ್ರದಶ್ಚಕ್ರೇ ಸೇನಾಪತಿಮರಿಂದಮಮ್ |
ಚಕಾರ ಪತ್ನೀಂ ಕನ್ಯಾಂ ತು ದಯಿತಾಂ ಗಿರಿಕಾಂ ನೃಪಃ ॥50॥
ಶುಕ್ತಿಮತಿಯ ಮಾತನ್ನು ಕೇಳಿ ಆ ರಾಜಶ್ರೇಷ್ಠನು ಆ ಮಕ್ಕಳನ್ನು ನೋಡಿ  ಅವರಲ್ಲಿ ಗಂಡುಮಗುವನ್ನು ಶತ್ರುಸಂಹಾರಕನಾದ ಸೇನಾಪತಿಯನ್ನಾಗಿ ಮಾಡಿದನು. ಆ ಹೆಣ್ಣನ್ನು ತನ್ನ ಪ್ರಿಯಳಾದ ಗಿರಿಕಾ ಎಂಬ ಪತ್ನಿಯನ್ನಾಗಿ ಮಾಡಿಕೊಂಡನು.
ವಸೋಃ ಪತ್ನೀ ತು ದಯಿತಾ ಕಾಮಾತ್ ಕಾಲೇ ನ್ಯವೇದಯತ್ |
ಋತುಕಾಲಮನುಪ್ರಾಪ್ತಾ ಸ್ನಾತಾ ಪುಂಸವನೇ ಶುಚಿಃ ॥51॥
ವಸುವಿನ ಪ್ರಿಯಳಾದ ಪತ್ನಿಯು ಋತುಸ್ನಾತಳಾಗಿ ಕಾಮಾವಿಷ್ಟಳಾಗಿ ಶುಚಿಯಾಗಿ ತನ್ನ ಪರಿಸ್ಥಿತಿಯನ್ನು ವಸುವಿಗೆ ತಿಳಿಸಿದಳು.
ತದಹಃ ಪಿತರಶ್ಚೈನಮೂಚುರ್ಜಹಿ ಮೃಗಾನಿತಿ |
ಶ್ರುತ್ವಾ  ಪಿತೃವಚಃ ಪ್ರೀತಸ್ತದಾ ಮತಿಮತಾಂ ವರಃ ॥52॥
ಸ ಪಿತೄಣಾಂ ನಿಯೋಗಂ ತಮನತಿಕ್ರಮ್ಯ ಪಾರ್ಥಿವಃ |
ಚಚಾರ ಮೃಗಯಾಂ ಕಾಮೀ ಗಿರಿಕಾಮೇವ ಸಂಸ್ಮರನ್ ॥53॥
ಅದೇ ದಿವಸ ವಸುವಿನ ತಂದೆಯು ಜಿಂಕೆಗಳನ್ನು ಬೇಟೆಯಾಡಿಕೊಂಡು ತೆಗೆದುಕೊಂಡು ಬಾ ಎಂದು ಹೇಳಿದರು. ತಂದೆಯ ಆಜ್ಞೆಯನ್ನು ಕೇಳಿ, ಸಂತೋಷಗೊಂಡ ವಿವೇಕಿಯಾದ ವಸುವು ತಂದೆಯ ಆಜ್ಞೆಯನ್ನು ಮೀರದೆ  ಕಾಡಿಗೆ ಹೋಗಿ ಕಾಮಾರ್ತನಾಗಿ ತನ್ನ ಪತ್ನಿಯಾದ ಗಿರಿಕೆಯನ್ನೇ ಸ್ಮರಿಸಿಕೊಂಡು ಬೇಟೆಯಾಡಿದನು.
ಅತೀವ ರೂಪಸಮಪನ್ನಾಂ ಸಾಕ್ಷಾಚ್ಛ್ರಿಯಮಿವಾಪರಾಮ್ |
ಭಾರ್ಯಾಂ ಚಿಂತಯಮಾನಸ್ಯ ಮನ್ಮಥಾಗ್ನಿರವರ್ಧತ ॥54॥
ಇನ್ನೊಬ್ಬ ಲಕ್ಷ್ಮೀದೇವಿಯಂತೆ ಅತ್ಯಂತ ಸುಂದರಿಯಾದ ತನ್ನ ಪತ್ನಿಯನ್ನು ಸ್ಮರಿಸುತ್ತಿದ್ದ ಅವನಿಗೆ ಕಾಮಾಗ್ನಿಯು ಅಭಿವೃದ್ಧವಾಯಿತು. ಮತ್ತು ಮನೋಹರವಾದ ಕಾಡಿನಲ್ಲಿ ತಿರುಗುವ ಅವನಿಗೆ ರೇತಃಸ್ಖಲನವಾಯಿತು.
ತಸ್ಯ ರೇತಃ ಪ್ರಚಸ್ಕಂದ ಚರತೋ ರುಚಿರೇ ವನೇ |
ಸ್ಕನ್ನಮಾತ್ರೇಣ ತದ್ರೇತೋ ವೃಕ್ಷಪರ್ಣೇನ ಭೂಮಿಪಃ ॥55॥
ಪ್ರತಿಜಗ್ರಾಹ ಮಿಥ್ಯಾ ಮೇ ನ ಸ್ಕಂದೇದ್ ರೇತ ಇತ್ಯುತ |
ಋತುಶ್ಚ  ತಸ್ಯಾಃ ಪತ್ನ್ಯಾ ಮೇ ನ ಮೋಘಃ ಸ್ಯಾದಿತಿ ಪ್ರಭುಃ ॥56॥
ರೇತಸ್ಸು ಸ್ಖಲನವಾದ ಕೂಡಲೇ ರಾಜನು ಅದನ್ನು ಒಂದು ಎಲೆಯಲ್ಲಿ ಹಿಡಿದು ನನ್ನ ರೇತಸ್ಸು ವ್ಯರ್ಥವಾಗಬಾರದು. ಮತ್ತು ನನ್ನ ಪತ್ನಿಯ ಋತುಕಾಲವು ವ್ಯರ್ಥವಾಗಬಾರದೆಂದು ಯೋಚಿಸಿದನು.
ಸಂಚಿಂತ್ಯೈವ ತದಾ ರಾಜಾ ವಿಚಾರ್ಯ ಚ ಪುನಃ ಪುನಃ |
ಅಮೋಘತ್ವಂ ಚ ವಿಜ್ಞಾಯ ತೇಜಸೋ ರಾಜಸತ್ತಮಃ ॥57॥
ಶುಕ್ರಪ್ರಸ್ಥಾಪನೇ ಕಾಲಂ ಮಹಿಷ್ಯಾಃ ಪ್ರಸಮೀಕ್ಷ್ಯ ಚ |
ಅಭಿಮಂತ್ರ್ಯ ಚ ತಚ್ಛುಕ್ರಮಾರಾತ್ ತಿಷ್ಠಂತಮಾಶುಗಮ್ |
ಸೂಕ್ಷ್ಮಧರ್ಮಾರ್ಥತತ್ವಜ್ಞೋ ಜ್ಞಾತ್ವಾ ಶ್ಯೇನಂ ತತೋಽಬ್ರವೀತ್ ॥58॥
ರಾಜನು ಹೀಗೆ ಚಿಂತಿಸಿ ಮತ್ತೆ ಮತ್ತೆ ವಿಚಾರ ಮಾಡಿ ತನ್ನ ರೇತಸ್ಸಿನ ಅಮೋಘತ್ವವನ್ನು ತಿಳಿದು ಆ ರೇತಸ್ಸನ್ನು ತನ್ನ ಪತ್ನಿಗೆ ತಲುಪಿಸುವುದು ಸೂಕ್ತವೆಂದು ಭಾವಿಸಿ ಅದನ್ನು ಅಭಿಮಂತ್ರಿಸಿ ಹತ್ತಿರದಲ್ಲಿದ್ದ ಒಂದು ಶ್ಯೇನ (ಗಿಡುಗ) ಪಕ್ಷಿಯನ್ನು ಕುರಿತು ಸೂಕ್ಷ್ಮಧರ್ಮಾರ್ಥವನ್ನು ತಿಳಿದ ಅವನು ಹೀಗೆ ಹೇಳಿದನು.
ಮತ್ಪ್ರಿಯಾರ್ಥಮಿದಂ ಸೌಮ್ಯ ಶುಕ್ರಂ ಮಮ ಗೃಹಂ ನಯ |
ಗಿರಿಕಾಯಾಃ ಪ್ರಯಚ್ಛಾಶು ತಸ್ಯಾ ಹ್ಯಾರ್ತವಮದ್ಯ ವೈ ॥59॥
ಎಲೌ ಪ್ರೀತಿಪಾತ್ರನೇ ನನಗೆ ಸಂತೋಷವುಂಟು ಮಾಡಲು ಈ ನನ್ನ ರೇತಸ್ಸನ್ನು ಮನೆಗೆ ತೆಗೆದುಕೊಂಡು ಹೋಗಿ ಗಿರಿಕೆಗೆ ಕೊಡು. ಈ ದಿನ ಅವಳ ಋತುಕಾಲವಾಗಿದೆ.
ಗೃಹೀತ್ವಾ ತತ್ ತದಾ ಶ್ಯೇನಸ್ತೂರ್ಣಮುತ್ಪತ್ಯ ವೇಗವಾನ್ |
ಜವಂ ಪರಮಮಾಸ್ಥಾಯ ಪ್ರದುದ್ರಾವ ವಿಹಂಗಮಃ |
ತಮಪಶ್ಯದಥಾಯಾಂತಂ ಶ್ಯೇನಂ ಶ್ಯೇನಸ್ತಥಾಽಪರಃ ॥60॥
ಅಭ್ಯದ್ರವಚ್ಚ ತಂ ಸದ್ಯೋ ದೃಷ್ಟ್ವೈವಾಮಿಷಶಂಕಯಾ |
ತುಂಡಯುದ್ಧಮಥಾಕಾಶೇ ತಾವುಭೌ ಸಂಪ್ರಚಕ್ರತುಃ ॥61॥
ಯುದ್ಧ್ಯತೋರಪತದ್ ರೇತಸ್ತಚ್ಚಾಪಿ ಯಮುನಾಂಭಸಿ |
ತತ್ರಾದ್ರಿಕೇತಿ ವಿಖ್ಯಾತಾ ಬ್ರಹ್ಮಶಾಪಾದ್ ವರಾಪ್ಸರಾಃ |
ಮೀನಭಾವಮನುಪ್ರಾಪ್ತಾ ಬಭೂವ ಯಮುನಾಚರೀ ॥62॥
ಆಗ ಆ ಶ್ಯೇನನು ಅದನ್ನು ತೆಗೆದುಕೊಂಡು ಮೇಲಕ್ಕೆ ಹಾರಿ ವೇಗವನ್ನು ಸಾಧಿಸಿ ಹಾರಲು ಪ್ರಾರಂಭಿಸಿತು. ಹಾಗೇ ಹೋಗುತ್ತಿರುವ ಆ ಶ್ಯೇನವನ್ನು  ಇನ್ನೊಂದು ಶ್ಯೇನಪಕ್ಷಿಯು ನೋಡಿ ಅದರ ಕಾಲಿನಲ್ಲಿರುವುದು ಮಾಂಸವೆಂದು ಶಂಕಿಸಿ ಅದರ ಹಿಂದೆ

ಹಾರಿಹೋಯಿತು. ಆಕಾಶದಲ್ಲಿ ಆ ಎರಡು ಶ್ಯೇನ ಪಕ್ಷಿಗಳು ಕೊಕ್ಕುಗಳಿಂದ ಯುದ್ಧಮಾಡಿದವು. ಹಾಗೆ ಯುದ್ಧಮಾಡುವಾಗ ಆ ರೇತಸ್ಸು ಯಮುನಾನದಿಯ ನೀರಿನಲ್ಲಿ ಬಿದ್ದುಹೋಯಿತು. ಆ ಯಮುನೆಯ ನೀರಿನಲ್ಲಿ ಅದ್ರಿಕೆಯೆಂಬ ಶ್ರೇಷ್ಠಳಾದ ಅಪ್ಸರೆಯು ಬ್ರಹ್ಮದೇವರ ಶಾಪದಿಂದ ಮೀನಿನ ರೂಪದಲ್ಲಿ ಜನ್ಮವೆತ್ತಿ ಸಂಚರಿಸುತ್ತಿದ್ದಳು.

ಶ್ಯೇನಪಾದಾತ್ ಪರಿಭ್ರಷ್ಟಂ ತದ್ವೀರ್ಯಮಥ ವಾಸವಮ್ |
ಜಗ್ರಾಹ ತರಸೋತ್ಪತ್ಯ ಸಾಽದ್ರಿಕಾ ಮತ್ಸ್ಯರೂಪಿಣೀ ॥63॥

ಶ್ಯೇನಪಾದದಿಂದ ಕೆಳಗೆ ಬಿದ್ದ ಆ ವಸುವೀರ್ಯವನ್ನು ಮತ್ಸ್ಯರೂಪದಲ್ಲಿದ್ದ ಅದ್ರಿಕೆಯು ಬೇಗ ಮೇಲಕ್ಕೆ ಹಾರಿ ಸ್ವೀಕರಿಸಿದಳು.

ಕದಾಚಿದಥ ಮತ್ಸ್ಯೀಂ ತಾಂ ಬಬಂಧುರ್ಮತ್ಸ್ಯಘಾತಕಾಃ |
ಉಜ್ಜಹ್ರುರುದರಾತ್ ತಸ್ಯಾ ಸ್ತ್ರೀಪುಮಾಂಸೌ ಚ ಮಾನುಷೌ |
ಆಶ್ಚರ್ಯಭೂತಂ ಮತ್ವಾ ತತ್ ರಾಜ್ಞಸ್ತೇ ಪ್ರತ್ಯವೇದಯನ್ ॥64॥

ಕಾಲಕ್ರಮದಲ್ಲಿ ಒಂದು ಸಲ ಮೀನು ಹಿಡಿಯುವವರು ಆ ಹೆಣ್ಣುಮೀನನ್ನು ಹಿಡಿದು ಎತ್ತಿ ಅದರ ಉದರದಲ್ಲಿ ಮನುಷ್ಯರೂಪದ ಒಂದು ಹೆಣ್ಣು ಮತ್ತು ಗಂಡುಶಿಶುವನ್ನು ನೋಡಿ ಆಶ್ಚರ್ಯಚಕಿತರಾಗಿ ಅದನ್ನು ದಾಶರಾಜನಿಗೆ ನಿವೇದಿಸಿದರು.

ಕಾಯೇ ಮತ್ಸ್ಯಾ ಇಮೌ ರಾಜನ್ ಸಂಭೂತೌ ಮಾನುಷಾವಿತಿ |
ತಯೋಃ ಪುಮಾಂಸಂ ಜಗ್ರಾಹ ರಾಜೋಪರಿಚರಸ್ತದಾ ॥65॥

ಎಲೈ ರಾಜನೇ ಹೆಣ್ಣು ಮೀನಿನ ಉದರದಲ್ಲಿ ಇವೆರಡು ಮನುಷ್ಯ ಶಿಶುಗಳಿದ್ದವು ಎಂದು ಹೇಳಿದರು. ಆಗ ಉಪರಿಚರ ರಾಜನು ಅದರಲ್ಲಿ ಗಂಡುಮಗುವನ್ನು ಸ್ವೀಕರಿಸಿದನು.

ಸ ಮಾತ್ಸ್ಯೋ ನಾಮ ರಾಜಾಽಽಸೀದ್ ಧಾರ್ಮಿಕಃ ಸತ್ಯಸಂಗರಃ |
ಸಾಽಪ್ಸರಾ ಮುಕ್ತಶಾಪಾ ಚ ಕ್ಷಣೇನ ಸಮಪದ್ಯತ ॥66॥

ಆ ಗಂಡುಮಗುವು ಕಾಲಕ್ರಮದಲ್ಲಿ ಧಾರ್ಮಿಕನೂ, ಸತ್ಯಸಂಧನೂ ಆದ ಮತ್ಸ್ಯರಾಜನಾದನು. ಆ ಹೆಣ್ಣು ಶಿಶುವು ಶಾಪದಿಂದ ಮುಕ್ತಳಾಗಿ ತಕ್ಷಣ ಅಪ್ಸರೆಯಾದಳು.

ಪುರೋಕ್ತಾ ಸಾ ಭಗವತಾ ತಿರ್ಯಗ್ಯೋನಿಗತಾಽಽಶು ವೈ |
ಮಾನುಷೌ ಜನಯಿತ್ವಾ ತು ಮುಕ್ತಶಾಪಾ ಭವಿಷ್ಯಸಿ ॥67॥

ಹಿಂದೆ ಬ್ರಹ್ಮದೇವರು ಅವಳಿಗೆ ನೀನು ಮಾನವ ಶಿಶುಗಳನ್ನು ಪ್ರಸವಿಸಿದ ತಕ್ಷಣ ಶಾಪಮುಕ್ತಳಾಗುವಿ ಎಂದು ಹೇಳಿದ್ದರು.

ಸುತೌ ಸಂಜನಯಿತ್ವಾ ಸಾ ವಿಶಸ್ತಾ ಮತ್ಸ್ಯಘಾತಿಭಿಃ |
ಸಂತ್ಯಜ್ಯ ಮತ್ಸ್ಯರೂಪಂ ಸಾ ದಿವ್ಯಂ ರೂಪಮವಾಪ್ಯ ಚ |
ಸಿದ್ಧರ್ಷಿಚಾರಣಪಥಂ ಜಗಾಮಾಪ್ಸರಸಾಂವರಾ ॥68॥

ಮಕ್ಕಳನ್ನು ಪಡೆದ ಮೇಲೆ ಬೆಸ್ತರು ಅವಳನ್ನು ಸೀಳಿದಾಗ ಅವಳು ಮತ್ಸ್ಯರೂಪವನ್ನು ಬಿಟ್ಟು ದಿವ್ಯರೂಪವನ್ನು ಧರಿಸಿ ಶ್ರೇಷ್ಠಳಾದ ಅಪ್ಸರೆಯಾಗಿ ಸಿದ್ಧಚಾರಣ ಮಾರ್ಗದಲ್ಲಿ ಹೊರಟುಹೋದಳು.

ಯಾ ಕನ್ಯಾ ದುಹಿತಾ ಮತ್ಸ್ಯಾ ಸಾ ಚಾಸೀನ್ಮತ್ಸ್ಯಗಂಧಿನೀ |
ರಾಜ್ಞಾ ದತ್ತಾ ಚ ದಾಶಾಯ ಸುತೇಯಂ ತೇ ಭವತ್ವಿತಿ |
ಸಾ ತು ರೂಪಸಮಾಯುಕ್ತಾ ಸರ್ವೈಃ ಸಮುದಿತಾ ಗುಣೈಃ ॥69॥

ಆ ಹೆಣ್ಣುಮೀನಿನ ಉದರದಲ್ಲಿದ್ದ ಹೆಣ್ಣು ಶಿಶುವು ಮತ್ಸ್ಯಕನ್ಯೆಯೆಂದು ಪ್ರಸಿದ್ಧಳಾದಳು. ಉಪರಿಚರರಾಜನು ಅವಳನ್ನು ದಾಶರಾಜನಿಗೆ ಕೊಟ್ಟು ಇವಳು ನಿನ್ನ ಮಗಳಾಗಿರಲಿ ಎಂದನು. ಅವಳು ಎಲ್ಲಾ ಗುಣಗಳಿಂದಲೂ ಯುಕ್ತಳಾಗಿ ಒಳ್ಳೆಯ ರೂಪವನ್ನು ಧರಿಸಿದವಳಾಗಿ ಬೆಳೆದಳು.

ಸಾ ತು ಸತ್ಯವತೀ ನಾಮ ಮತ್ಸ್ಯಗಾತ್ರಾಭಿಸಂಶ್ರಯಾತ್ |
ಆಸೀತ್ ಸಾ ಮತ್ಸ್ಯಗಂಧೈವ ಕಂಚಿತ್ಕಾಲಂ ಶುಚಿಸ್ಮಿತಾ ॥70॥

ಅವಳು ಸತ್ಯವತೀ ಎಂಬ ಹೆಸರುಳ್ಳವಳಾಗಿ ಮತ್ಸ್ಯದೇಹದ ಸಂಬಂಧದಿಂದ ಮತ್ಸ್ಯಗಂಧವನ್ನೇ ಉಳ್ಳವಳಾಗಿ ನಗುನಗುತ್ತಾ ಕೆಲವು ಕಾಲ ಬೆಳೆದಳು.

ಶುಶ್ರೂಷಾರ್ಥಂ ಪಿತುರ್ನಾವಂ ತಾಂ ತು ವಾಹಯತೀಂ ಜಲೇ |
ತೀರ್ಥಯಾತ್ರಾಂ ಪರಿಕ್ರಾಮನ್ನಪಶ್ಯದ್ ವೈ ಪರಾಶರಃ ॥71॥

ತಂದೆಯ ಸೇವೆಯನ್ನು ಮಾಡಲು ನೀರಿನಲ್ಲಿ ನಾವೆಯನ್ನು ನಡೆಸುತ್ತಿದ್ದ ಅವಳನ್ನು ತೀರ್ಥಯಾತ್ರೆಯ ಕ್ರಮದಿಂದ ಅಲ್ಲಿಗೆ ಬಂದ ಪರಾಶರರು ನೋಡಿದರು.

ಅತೀವ ರೂಪಸಂಪನ್ನಾಂ ಸಿದ್ಧಾನಾಮಪಿ ಕಾಂಕ್ಷಿತಾಮ್ |
ದೃಷ್ಟ್ವೈವ ಸ ಚ ತಾಂ ಧೀಮಾಂಶ್ಚಕಮೇ ಚಾರುದರ್ಶನಾಮ್ ॥72॥

ತುಂಬ ಸುಂದರಿಯೂ, ಸಿದ್ಧರಿಗೂ ಅಪೇಕ್ಷಿತಳಾದವಳೂ, ಸುನೇತ್ರೆಯೂ ಆದ ಅವಳನ್ನು ನೋಡಿ ಮೇಧಾವಿಗಳಾದ ಅವರು ಅವಳನ್ನು ಕಾಮಿಸಿದರು.

ವಿದ್ವಾಂಸ್ತಾಂ ವಾಸವೀಂ ಕನ್ಯಾಂ ಕಾರ್ಯವಾನ್ ಮುನಿಪುಂಗವಃ |
ಸಂಭವಂ ಚಿಂತಯಿತ್ವಾ ತಾಂ ಜ್ಞಾತ್ವಾ ಪ್ರೋವಾಚ ಶಕ್ತಿಜಃ |
ಕ್ವ ಕರ್ಣಧಾರೋ ನೌರ್ಯೇನ ನೀಯತೇ ಬ್ರೂಹಿ ಭಾಮಿನಿ ॥73॥

ಆ ಮುನಿಪುಂಗವರು ಅವಳು ವಸುವಿನ ಮಗಳೆಂದು ತಿಳಿದು ಮುಂದೆ ಆಗಲಿರುವ ದೇವತಾಕಾರ್ಯವನ್ನು ಗಮನಿಸಿ (ವ್ಯಾಸರ ಉತ್ಪತ್ತಿಯನ್ನು ಗಮನಿಸಿ), ಅವಳನ್ನು ಕುರಿತು ಎಲೈ ಸುಂದರಿಯೆ ಈ ನಾವೆಯನ್ನು ನಡೆಸುವ ನಾವಿಕನು ಎಲ್ಲಿ ಎಂದು ಕೇಳಿದರು.

ಮತ್ಸ್ಯಗಂಧಾ
ಅನಪತ್ಯಸ್ಯ ದಾಶಸ್ಯ ಸುತಾ ತತ್ಪ್ರಿಯಕಾಮ್ಯಯಾ |
ಸಹಸ್ರಜನಸಂಪೂರ್ಣಾ ನೌರ್ಮಯಾ ವಾಹ್ಯತೇ ದ್ವಿಜ ॥74॥
ನಾನು ದಾಶರಾಜನ ಮಗಳು. ಅವನಿಗೆ ಗಂಡುಮಕ್ಕಳಿಲ್ಲ. ಎಲೈ ಬ್ರಾಹ್ಮಣರೇ ನಾನು ಸಾವಿರ ಜನರಿರುವ ನಾವೆಯನ್ನೂ ಕೂಡ ನಡೆಸುತ್ತೇನೆ ಎಂದು ಹೇಳಿದಳು.
ಪರಾಶರಃ
ಶೋಭನಂ ವಾಸವಿ ಶುಭೇ ಕಿಂ ಚಿರಾಯಸಿ ವಾಹ್ಯತಾಮ್ |
ಕಲಶಂ ಭವಿತಾ ಭದ್ರೇ ಸಹಸ್ರಾರ್ಧೇನ ಸಮ್ಮಿತಮ್ |
ಅಹಂ ಶೇಷೋ ಭವಿಷ್ಯಾಮಿ ನೀಯತಾಮಚಿರೇಣ ನೌಃ ॥75॥
ಎಲೌ ವಸುಪುತ್ರಿಯೇ ಒಳ್ಳೆಯದು. ಮಂಗಳಸ್ವರೂಪಳೇ ಏಕೆ ತಡಮಾಡುತ್ತಿದ್ದೀಯೇ? ನಾವೆಯನ್ನು ನಡೆಸು. ನನ್ನ ಕಮಂಡಲುವು ಐನೂರು ಜನ ಭಾರವುಳ್ಳದ್ದು. ನಾನು ಐನೂರ ಜನರ ಭಾರವನ್ನು ಹೊಂದಿದ್ದೇನೆ. ಸಾವಿರಜನವಾಯಿತು. ನಾವೆಯನ್ನು ಶೀಘ್ರವಾಗಿ ನಡೆಸು. (ಇದು ವಿನೋದದ ಅರ್ಥ) ಯಮುನಾ ನದಿಯ ಆಚೆಯ ದಡದಲ್ಲಿ ಐನೂರು ಋಷಿಗಳಿಂದ ಮಂಗಳಕಾರ್ಯದ ಕಲಶ ಪೂಜೆಯು ನಡೆಯುತ್ತದೆ. ನಾನು ಇಲ್ಲಿಯೇ ಉಳಿದುಬಿಡುತ್ತೇನೆ. ಆದ್ದರಿಂದ ಶೀಘ್ರವಾಗಿ ನಾವೆಯನ್ನು ನಡೆಸು. ಅಥವಾ ಅಭಿವೃದ್ಧವಾದ ಸಹಸ್ರಪಾದಾದಿಗಳಿಂದ ಕೂಡಿದ ನಾರಾಯಣನು ವೇದವ್ಯಾಸನಾಗಿ ಅವತರಿಸುತ್ತಾನೆ. ನೀನು ಅವನಿಗೆ ತಾಯಿಯಾಗುತ್ತೀಯೆ, ನಾನು ತಂದೆಯಾಗುತ್ತೇನೆ. ಆದ್ದರಿಂದ ನಾವೆಯನ್ನು ಶೀಘ್ರವಾಗಿ ನಡೆಸು.(ಇದು ಗೂಢಾರ್ಥ)
ವೈಶಂಪಾಯನಃ
ಮತ್ಸ್ಯಗಂಧಾ ತಥೇತ್ಯುಕತ್ವ ನಾವಂ ವಾಹಯತೀ ಜಲೇ |
ವೀಕ್ಷಮಾಣಂ ಮುನಿಂ ದೃಷ್ಟ್ವಾ ಪ್ರೋವಾಚೇದಂ ವಚಸ್ತದಾ ॥76॥
ಮತ್ಸ್ಯಗಂಧೆಯು ಹಾಗೆಯೇ ಆಗಲಿ ಎಂದು ಹೇಳಿ, ಜಲದಲ್ಲಿ ನಾವೆಯನ್ನು ನಡೆಸುತ್ತಾ, ಋಷಿಗಳು ತನ್ನನ್ನೇ ನೋಡುತ್ತಿರುವುದನ್ನು ಕಂಡು ಈ ಮಾತನ್ನು ಆಡಿದಳು.
ಮತ್ಸ್ಯಗಂಧಾ
ಮತ್ಸ್ಯಗಂಧೇತಿ ಮಾಮಾಹುರ್ದಾಶರಾಜಸುತಾಂ ಜನಾಃ |
ಜನ್ಮ ಶೋಕಾಭಿತಪ್ತಾಯಾಃ ಕಥಂ ಜ್ಞಾಸ್ಯಸಿ ಕಥ್ಯತಾಮ್ ॥77॥
ದಾಶರಾಜನ ಮಗಳಾದ ನನ್ನನ್ನು ಜನರು ಮತ್ಸ್ಯಗಂಧಾ ಎಂದು ಕರೆಯುತ್ತಾರೆ. ಶೋಕತಪ್ತಳಾದ ನನ್ನ ಜನ್ಮವನ್ನು ದಿವ್ಯದೃಷ್ಟಿಯಿಂದ ನೀವು ಹೇಗೆ ತಿಳಿಯುತ್ತೀರಿ ಹೇಳಿ.
ಪರಾಶರಃ
ದಿವ್ಯಜ್ಞಾನೇನ ದೃಷ್ಟಂ ಹಿ ದೃಷ್ಟಮಾತ್ರೇಣ ತೇ ವಪುಃ |
ಪ್ರಣಯಗ್ರಹಣಾರ್ಥಾಯ ವಕ್ಷ್ಯೇ ವಾಸವಿ ತಚ್ಛೃಣು ॥78॥
ಎಲೌ ವಸುಕುಮಾರಿಯೇ ಸಕಲ ಸೂಕ್ಷ್ಮವಿಷಯಗಳನ್ನು ಗಮನಿಸುವ ನನ್ನ ದಿವ್ಯಜ್ಞಾನದಿಂದ ನಿನ್ನ ದೇಹವನ್ನು ನೋಡಿದೆನು. ನಿನ್ನ ಮೇಲಿನ ಪ್ರೀತಿಯಿಂದ ಹೇಳುತ್ತೇನೆ ಅದನ್ನು ಕೇಳು.
ಬರ್ಹಿಷದ್ ಇತಿ ವಿಖ್ಯಾತಾಃ ಪಿತರಃ ಸೋಮಪಾಸ್ತು ತೇ |
ತೇಷಾಂ ತ್ವಂ ಮಾನಸೀ ಕನ್ಯಾ ಅಚ್ಛೋದಾ ನಾಮ ವಿಶ್ರುತಾ ॥79॥
ಬರ್ಹಿಷದರು ಎಂದು ಪ್ರಖ್ಯಾತರಾದ ಸೋಮಪರು ನಿನ್ನ ಪಿತೃಗಳು. ನೀನು ಅವರ ಮಾನಸೀ ಕನ್ಯಾ. ಅಚ್ಛೋದಾ ಎಂದು ವಿಖ್ಯಾತಳಾಗಿದ್ದೆ.
ಅಚ್ಛೋದಂ ನಾಮ ತದ್ ದಿವ್ಯಂ ಸರೋ ಯಸ್ಮಾತ್ ಸಮುತ್ಥಿತಮ್|
ಭಗವಾನ್ ಪೂಜ್ಯತೇ ಚಾತ್ರ ಹರರೂಪೇಣ ಶಂಕರಃ ॥80॥
ಅಚ್ಛೋದ ಎಂಬ ದಿವ್ಯಸರೋವರವು ನಿನ್ನಿಂದಲೇ ಉತ್ಪನ್ನವಾಯಿತು. ಅಲ್ಲಿ ಅಘಹರರೂಪನಾದ ಭಗವಂತನಾದ ಶಂಕರನು ಪೂಜಿಸಲ್ಪಡುತ್ತಾನೆ.
ತ್ವಯಾ ನ ದೃಷ್ಟಪೂರ್ವಾಸ್ತು ಪಿತರಸ್ತೇ ಕದಾಚನ |
ಸಂಭೂತಾ ಮನಸಾ ತೇಷಾಂ ಪಿತೄನ್ ಸ್ವಾನ್ ನಾಭಿಜಾನತೀ ॥81॥
ನೀನು ಎಂದೂ ನಿನ್ನ ಆ ಪಿತೃಗಳನ್ನು ನೋಡಿರಲಿಲ್ಲ. ಅವರ ಮಾನಸ ಕನ್ಯೆಯಾದ ಕಾರಣದಿಂದ, ಆ ಪಿತೃಗಳ ಗುರುತೂ ನಿನಗೆ ಇರಲಿಲ್ಲ.
ಸಾ ತ್ವನ್ಯಂ ಪಿತರಂ ವವ್ರೇ ಸ್ವಾನತಿಕ್ರಮ್ಯ ತಾನ್ ಪಿತೄನ್ |
ನಾಮ್ನಾ ವಸುರಿತಿ ಖ್ಯಾತಂ ಮನುಪುತ್ರಂ ಮಹೀಶ್ವರಮ್ |
ಅದ್ರಿಕಾಽಪ್ಸರಸಾ ಯುಕ್ತಂ ವಿಮಾನೇ ದಿವಿ ವಿಷ್ಠಿತಮ್ ॥82॥
ಅಂತಹ ನೀನು ನಿನ್ನ ಸ್ವಂತ ಪಿತೃಗಳನ್ನು ಬಿಟ್ಟು, ಭಿನ್ನನಾದ ಅಪ್ಸರೆಯಾದ ಅದ್ರಿಕೆಯ ಜೊತೆಯಲ್ಲಿ ವಿಮಾನದಲ್ಲಿ ಅಂತರಿಕ್ಷದಲ್ಲಿ ಇದ್ದಂತಹ ಮನುಪುತ್ರನಾದ ವಸು ಎಂಬ ರಾಜನನ್ನು ಪಿತೃ ಎಂದು ಅಂಗೀಕರಿಸಿದೆ.
ಸಾ ತೇನ ವ್ಯಭಿಚಾರೇಣ ಮನಸಾ ಕಾಮಚಾರಿಣೀ
ಪಿತರಂ ಪ್ರಾರ್ಥಯಿತ್ವಾಽನ್ಯಂ ಯೋಗಾದ್ ಭ್ರಷ್ಟಾ ಪಪಾತ ಹ ॥83॥
ಈ ಮಾನಸ ಅಪರಾಧದಿಂದ ತಂದೆಯನ್ನು ಬಿಟ್ಟು ಬೇರೆಯವನನ್ನು ತಂದೆಯೆಂದು ಪ್ರಾರ್ಥಿಸಿದುದರಿಂದ ಯೋಗಭ್ರಷ್ಟಳಾಗಿ ಕೆಳಗೆ

ಬಿದ್ದೆ.
ಅಪಶ್ಯತ್ ಪತಮಾನಾ ಸಾ ವಿಮಾನತ್ರಯಮಂತಿಕಾತ್ |
ತ್ರಸರೇಣುಪ್ರಮಾಣಾಂಸ್ತಾಂಸ್ತತ್ರಾಪಶ್ಯತ್ ಸ್ವಕಾನ್ ಪಿತೄನ್ |
ಸುಸೂಕ್ಷ್ಮಾನಪರಿವ್ಯಕ್ತಾನಂಗೈರಂಗೇಷ್ವಿವಾಹಿತಾನ್ ॥84॥
ಕೆಳಗೆ ಬೀಳುತ್ತಾ ನೀನು ಹತ್ತಿರದಲ್ಲಿ ಮೂರು ವಿಮಾನಗಳಿದ್ದಂತಹ, ಸಣ್ಣ ಕಣದಷ್ಟು ಪರಿಮಾಣದ ಶರೀರವುಳ್ಳ, ಶರೀರದ ಒಂದು ಅಂಗದಲ್ಲಿ ಇನ್ನೊಂದು ಅಂಗವು ಸೇರಿಕೊಂಡಂತಿರುವ ನಿನ್ನ ನಿಜವಾದ ಪಿತೃಗಳನ್ನು ನೋಡಿದೆ.
ತಾತೇತಿ ತಾನುವಾಚಾರ್ತಾ ಪತಂತೀ ಸಾ ಹ್ಯಧೋಮುಖೀ |
ತೈರುಕ್ತಾ ಸಾ ತು ಮಾ ಭೈಷೀಸ್ತೇನ ಸಾ ಸಂಸ್ಥಿತಾ ದಿವಿ ॥85॥
ಅಧೋಮುಖಿಯಾಗಿ ಕೆಳಗೆ ಬೀಳುತ್ತಿದ್ದ ನೀನು, ಆರ್ತ ಸ್ವರದಿಂದ ಅವರನ್ನು ತಂದೆಯೆಂದು ಕರೆದೆ. ಅವರು ಹೆದರಬೇಡ ಎಂದು ಅಭಯವಿತ್ತರು. ಆಗ ನೀನು ಅಂತರಿಕ್ಷದಲ್ಲಿಯೇ ನಿಂತೆ.
ತತಃ ಪ್ರಸಾದಯಾಮಾಸ ಸ್ವಾನ್ ಪಿತೄನ್ ದೀನಯಾ ಗಿರಾ |
ತ ಊಚುಃ ಪಿತರಃ ಕನ್ಯಾಂ ಭ್ರಷ್ಟೈಶ್ವರ್ಯಾಂ ವ್ಯತಿಕ್ರಮಾತ್ |
ಭ್ರಷ್ಟೈಶ್ವರ್ಯಾ ಸ್ವದೋಷೇಣ ತಪ್ಯಸೇ ತ್ವಂ ಶುಚಿಸ್ಮಿತೇ ॥86॥
ಅನಂತರ ಅವಳು ದೈನ್ಯದ ಮಾತುಗಳಿಂದ ತನ್ನ ಪಿತೃಗಳನ್ನು ಪ್ರಸನ್ನೀಕರಿಸಲು ಪ್ರಯತ್ನಿಸಿದಳು. ಮಾನಸ ವ್ಯಭಿಚಾರದಿಂದ ಐಶ್ವರ್ಯಚ್ಯುತಳಾದ ಅವಳನ್ನು ಕುರಿತು ಪಿತೃಗಳು ಹೇಳಿದರು. ಎಲೌ ಶುಚಿಸ್ಮಿತೆಯೇ ನಿನ್ನ ದೋಷದಿಂದ ನೀನು ಐಶ್ವರ್ಯಭ್ರಷ್ಟಳಾಗಿ ತಾಪ ಪಡುತ್ತಿದ್ದೀಯೆ.
ಯೈರಾರಭಂತೇ ಕರ್ಮಾಣಿ ಶರೀರೈರಿಹ ದೇವತಾಃ |
ತೈರೇವ ತತ್ಕರ್ಮಫಲಂ ಪ್ರಾಪ್ನುವಂತಿ ಸ್ಮ ದೇವತಾಃ |
ಮನುಷ್ಯಾಸ್ತ್ವನ್ಯದೇಹೇನ ಶುಭಾಶುಭಮಿತಿ ಸ್ಥಿತಿಃ ॥87॥
ದೇವತೆಗಳು ಯಾವ ಶರೀರದಿಂದ ಕರ್ಮವನ್ನು ಮಾಡುತ್ತಾರೋ, ಆ ಕರ್ಮಗಳ ಫಲಗಳನ್ನು ಭಗವನ್ನಿಯತವಾಗಿ ಅದೇ ಶರೀರದಲ್ಲಿ ಅನುಭವಿಸುತ್ತಾರೆ. (ಏಕೆಂದರೆ ಅವರು ಕಲ್ಪಾಂತಜೀವಿಗಳು) ಆದರೆ ಮನುಷ್ಯರು ಒಂದು ಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ಇನ್ನೊಂದು ದೇಹದಲ್ಲಿ ಅನುಭವಿಸುತ್ತಾರೆ.
ಸದ್ಯಃ ಫಲಂತಿ ಕರ್ಮಾಣಿ ದೇವತ್ವೇ ಪ್ರೇತ್ಯ ಮಾನುಷೇ |
ತಸ್ಮಾತ್ ತ್ವಂ ಪತಸೇ ಪುತ್ರಿ ಪ್ರೇತ್ಯ ತ್ವಂ ಪ್ರಾಪ್ಸ್ಯಸೇ ಫಲಮ್ ॥88॥
ದೇವತೆಗಳಿಗೆ ಕರ್ಮಗಳು ತಕ್ಷಣ ಫಲಗಳನ್ನು ಕೊಡುತ್ತವೆ. ಮನುಷ್ಯರು ಮರಣ ಹೊಂದಿದ ಮೇಲೆ ಫಲವನ್ನು ಹೊಂದುತ್ತಾರೆ. ಎಲೌ ಮಗಳೆ ಆದ್ದರಿಂದ ನೀನು ದುಃಖಪಡುತ್ತಿದ್ದೀಯೆ. ಮರಣ ಹೊಂದಿದ ಮೇಲೆ ಫಲವನ್ನು (ಸುಖವನ್ನು) ಪಡೆಯುತ್ತೀಯೆ.
ಪಿತೃಹೀನಾ ತು ಕನ್ಯಾತ್ವಂ ವಸೋರ್ಹಿ ಸಮುಪಾಗತಾ |
ಮತ್ಸ್ಯಯೋನೌ ಸಮುತ್ಪನ್ನಾ ಸುತಾ ರಾಜ್ಞೋ ಭವಿಷ್ಯಸಿ ॥89॥
ನೀನು ಪಿತೃಹೀನೆಯಾದ ಕನ್ಯೆಯಾಗಿ ಜನಿಸಿ ವಸುವಿನ ಸಮೀಪವನ್ನು ಸೇರುತ್ತೀಯೆ. ಮತ್ಸ್ಯಯೋನಿಯಲ್ಲಿ ಜನಿಸಿ ದಾಶರಾಜನ ಮಗಳಾಗಿ ಬೆಳೆಯುತ್ತೀಯೆ.
ಅದ್ರಿಕಾ ಮತ್ಸ್ಯರೂಪಾಽಭೂದ್ ಗಂಗಾಯಮುನಸಂಗಮೇ |
ಪರಾಶರಸ್ಯ ದಾಯಾದಂ ತ್ವಂ ಪುತ್ರಂ ಜನಯಿಷ್ಯಸಿ ॥90॥
ಗಂಗಾಯಮುನಾ ಸಂಗಮದಲ್ಲಿ ಅದ್ರಿಕಾ ಅಪ್ಸರೆಯು ಮತ್ಸ್ಯರೂಪಳಾಗಿದ್ದಳು. ನೀನು ಅವಳಲ್ಲಿ ಜನಿಸಿ ಪರಾಶರರ ಪುತ್ರರಾದ ವ್ಯಾಸರನ್ನು ಮಗನಾಗಿ ಪಡೆಯುತ್ತೀಯೆ.
ವ್ಯತಿಕ್ರಮಾತ್ ಪಿತೄಣಾಂ ಚ ಪ್ರಾಪ್ಸ್ಯತೇ ಜನ್ಮ ಕುತ್ಸಿತಮ್ |
ಅಸ್ಯೈವ ರಾಜ್ಞಸ್ತ್ವಂ ಕನ್ಯಾ ಹ್ಯದ್ರಿಕಾಯಾಂ ಭವಿಷ್ಯಸಿ ॥91॥
ಪಿತೃಗಳಿಗೆ ತಪ್ಪಾಗಿ ತಿಳಿದು ವ್ಯತಿಕ್ರಮವನ್ನು ಮಾಡಿದ್ದರಿಂದ ನಿನಗೆ ನೀಚ ಜನ್ಮವು ಬರುತ್ತದೆ. ನೀನು ಇದೇ ರಾಜನ ಮಗಳಾಗಿ (ವಸುರಾಜನ) ಅದ್ರಿಕೆಯಲ್ಲಿ ಜನಿಸುತ್ತೀಯೆ.
ಅಷ್ಟಾವಿಂಶೇ ಭವಿತ್ರೀ ತ್ವಂ ದ್ವಾಪರೇ ಮತ್ಸ್ಯಯೋನಿಜಾ |
ಏವಮುಕ್ತಾ ಪುರಾ ತೈಸ್ತ್ವಂ ಜಾತಾ ಸತ್ಯವತೀ ಶುಭಾ ॥92॥
ಅದ್ರಿಕೇತ್ಯಭಿವಿಖ್ಯಾತಾ ಬ್ರಹ್ಮಶಾಪಾದ್ ವರಾಪ್ಸರಾಃ |
ಮೀನಭಾವಮನುಪ್ರಾಪ್ತಾ ತ್ವಾಂ ಜನಿತ್ವಾ ಗತಾ ದಿವಮ್ ॥93॥
ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ನೀನು ಮತ್ಸ್ಯಯೋನಿಯಲ್ಲಿ ಜನಿಸುತ್ತೀಯೆ ಹೀಗೆ ನಿನ್ನ ಪಿತೃಗಳು ಹಿಂದೆ ಹೇಳಿದ್ದರು. ಆದ್ದರಿಂದ ಈಗ ಶುಭಫಲವನ್ನು ಹೊಂದಿ ಸತ್ಯವತಿಯಾಗಿ ಜನಿಸಿದ್ದೀಯೆ. ಬ್ರಹ್ಮಶಾಪಕ್ಕೆ ಒಳಗಾಗಿದ್ದ ಅಪ್ಸರೆಯಾದ ಅದ್ರಿಕೆಯು ಮತ್ಸ್ಯವಾಗಿ ಜನಿಸಿ ನಿನ್ನನ್ನು ಪ್ರಸವಿಸಿ ಸ್ವರ್ಗವನ್ನು ಸೇರಿದಳು.
ತಸ್ಯಾಂ ಜಾತಾಽಸಿ ಯಾ ಕನ್ಯಾ ರಾಜ್ಞೋ ವೀರ್ಯೇಣ ಚೈವ ಹಿ |
ತಸ್ಮಾದ್ ವಾಸವಿ ಭದ್ರಂ ತೇ ಯಾಚೇ ತ್ವಾಂ ಶಂಕರಂ ಸುತಮ್ ॥94॥
ಆ ಅದ್ರಿಕೆಯಲ್ಲಿ ವಸುರಾಜನ ವೀರ್ಯದಿಂದ ನೀನು ಜನಿಸಿದ್ದೀಯೆ. ಆದ್ದರಿಂದ ವಸುಪುತ್ರಿಯೇ ನಿನಗೆ ಮಂಗಳವಾಗಲಿ. ಜಗತ್ತಿಗೆ ಕ್ಷೇಮವನ್ನುಂಟು ಮಾಡುವ ಮಗನನ್ನು ನಿನ್ನಿಂದ ಅಪೇಕ್ಷಿಸುತ್ತೇನೆ.
ವೈಶಂಪಾಯನಃ

ವಿಸ್ಮಯಾದ್ ಹೃಷ್ಟಸರ್ವಾಂಗೀ ಜಾತಿಸ್ಮರಣತಾಂ ಗತಾ |
ಸಾಽಬ್ರವೀತ್ ಪಶ್ಯ ಭಗವನ್ ಪರೇ ಪಾರೇ ಮುನೀನಿಮಾನ್ |
ಆವಯೋರ್ದೃಶ್ಯಯೋರೇಭಿಃ ಕಥಂ ನು ಸ್ಯಾತ್ ಸಮಾಗಮಃ ॥95॥
ಸತ್ಯವತಿಯು ಪೂರ್ವಜನ್ಮದ ಸ್ಮರಣೆಯನ್ನು ಪಡೆದು ವಿಸ್ಮಯ ಮತ್ತು ಸಂತೋಷದಿಂದ ಕೂಡಿದವಳಾಗಿ ಪರಾಶರರನ್ನು ಕುರಿತು ಪೂಜ್ಯರೇ, ಯಮುನೆಯ ಆಚೆಯ ದಡದಲ್ಲಿರುವ ಈ ಋಷಿಗಳನ್ನು ನೋಡಿ. ಅವರಿಗೆ ನಾವು ಕಾಣಿಸುತ್ತಿರುವಾಗ ನಮ್ಮ ಸಮಾಗಮವು ಹೇಗೆ ಸಾಧ್ಯ ಎಂದು ಕೇಳಿದಳು.
ಏವಂ ತಯೋಕ್ತೋ ಭಗವಾನ್ ನೀಹಾರಮಸೃಜತ್ ಪ್ರಭುಃ |
ಯೇನ ದೇಶಃ ಸ ಸರ್ವಸ್ತು ತಮೋವೃತ ಇವಾಭವತ್ ॥96॥
ಹೀಗೆ ಅವಳಿಂದ ಹೇಳಲ್ಪಟ್ಟವರಾಗಿ, ಪೂಜ್ಯರಾದ ಮತ್ತು ಸಮರ್ಥರಾದ ಪರಾಶರರು ಮಂಜನ್ನು ಸೃಷ್ಟಿಸಿದರು. ಅದರಿಂದ ಆ ಪ್ರದೇಶವೆಲ್ಲವೂ ಕತ್ತಲು ಕವಿದಂತಾಯಿತು.
ದೃಷ್ಟ್ವಾ ಸೃಷ್ಟಂ ತು ನೀಹಾರಂ ತತಸ್ತಂ ಪರಮರ್ಷಿಣಾ |
ವಿಸ್ಮಿತಾ ತ್ವಬ್ರವೀತ್ ಕನ್ಯಾ ವ್ರೀಡಿತಾ ಚ ಮನಸ್ವಿನೀ ॥97॥
ವಿದ್ಧಿ ಮಾಂ ಭಗವನ್ ಕನ್ಯಾಂ ಸದಾ ಪಿತೃವಶಾನುಗಾಮ್ |
ತ್ವತ್ಸಂಯೋಗಾಚ್ಚ ದುಷ್ಯೇತ ಕನ್ಯಾಭಾವೋ ಮಮಾಽನಘ ॥98॥
ಪರಮ ಋಷಿಗಳಿಂದ ಸೃಷ್ಟವಾದ ಆ ಮಂಜನ್ನು ನೋಡಿ ಆಶ್ಚರ್ಯಗೊಂಡವಳಾಗಿ ಧೈರ್ಯಶಾಲಿನಿಯಾದ ಆ ಕನ್ಯೆಯು ನಾಚಿಕೆಯಿಂದ ಹೀಗೆ ಮಾತನಾಡಿದಳು - ಪೂಜ್ಯರೇ ನಾನು ಯಾವಾಗಲೂ ತಂದೆಯ ವಶದಲ್ಲಿರುವ ಕನ್ಯೆ. ಎಲೈ ದೋಷರಹಿತರೇ ನಿಮ್ಮ ಸಮಾಗಮದಿಂದ ನನ್ನ ಕನ್ಯಾಭಾವವು ದೂಷಿತವಾಗುತ್ತದೆ.
ಕನ್ಯಾತ್ವೇ ದೂಷಿತೇ ಚಾಹಂ ಕಥಂ ಶಕ್ಷ್ಯೇ ದ್ವಿಜೋತ್ತಮ |
ಗಂತುಂ ಗೃಹಂ ಗೃಹೇ ಚಾಪಿ ಧೀಮನ್ ನ ಸ್ಥಾತುಮುತ್ಸಹೇ ॥99॥
ಎಲೈ ಬ್ರಾಹ್ಮಣ ಶ್ರೇಷ್ಠರೇ ನನ್ನ ಕನ್ಯಾಭಾವವು ದೂಷಿತವಾದ ಮೇಲೆ ನಾನು ಮನೆಗೆ ಹೇಗೆ ಹೋಗಲಿ? ಮೇಧಾವಿಗಳಾದ ಋಷಿಗಳೇ, ನಾನು ಮನೆಯಲ್ಲಿ ಹೇಗೆ ಇರಲಿ?
ಏವಮುಕ್ತವತೀಂ ತಾಂ ತು ಪ್ರೀತಿಮಾನ್ ಋಷಿಸತ್ತಮಃ |
ಉವಾಚ ಮತ್ಪ್ರಿಯಂ ಕೃತ್ವಾ ಪುನಃ ಕನ್ಯಾ ಭವಿಷ್ಯಸಿ |
ವೃಣೀಷ್ವ ಚ ವರಂ ಭದ್ರೇ ಯಂ ತ್ವಮಿಚ್ಛಸಿ ಭಾಮಿನಿ ॥100॥
ಹೀಗೆ ಹೇಳಿದ ಆ ಕನ್ಯೆಯನ್ನು ಕುರಿತು ಸಂತೋಷಗೊಂಡ ಋಷಿಶ್ರೇಷ್ಠರು ಎಲೌ ಸುಂದರಿಯೆ ಮತ್ತು ಮಂಗಳಸ್ವರೂಪಳೇ, ನನಗೆ ಪ್ರಿಯವನ್ನು ಉಂಟುಮಾಡುವುದರಿಂದ ನೀನು ಪುನಃ ಕನ್ಯೆಯೇ ಆಗುತ್ತೀಯೆ. ನಿನಗೆ ಅಭೀಷ್ಟವಾದ ವರವನ್ನು ಕೇಳು ಎಂದು ಹೇಳಿದರು.
ವೃಥಾ ಹಿ ನ ಪ್ರಸಾದೋ ಮೇ ಭೂತಪೂರ್ವಃ ಶುಚಿಸ್ಮಿತೇ |
ಏವಮುಕ್ತಾ ವರಂ ವವ್ರೇ ಗಾತ್ರಸೌಗಂಧ್ಯಮುತ್ತಮಮ್ ॥101॥
ಎಲೌ ಶುಚಿಸ್ಮಿತೆಯೇ ಹಿಂದೆ ಎಂದೂ ನನ್ನ ಅನುಗ್ರಹವು ವ್ಯರ್ಥವಾಗಿಲ್ಲ. ಹೀಗೆ ಹೇಳಲ್ಪಟ್ಟ ಸತ್ಯವತಿಯು ತನ್ನ ದೇಹಕ್ಕೆ ಉತ್ತಮವಾದ ಸುಗಂಧವನ್ನು ವರವಾಗಿ ಕೇಳಿದಳು.
ಸ ಚಾಸ್ಯೈ ಭಗವಾನ್ ಪ್ರಾದಾದ್ ಮನಸಾ ಕಾಂಕ್ಷಿತಂ ಪ್ರಭುಃ |
ತತೋ ಲಬ್ಧವತೀ ಪ್ರೀತಾ ಸ್ತ್ರೀಭಾವಗುಣಭೂಷಿತಾ |
ಜಗಾಮ ಸಹ ಸಂಸರ್ಗಂ ಋಷಿಣಾಽದ್ಭುತಕರ್ಮಣಾ ॥102॥
ಸಮರ್ಥರಾದ ಋಷಿಗಳು ಅವಳಿಗೆ ಅವಳ ಮನಸ್ಸಿಗೆ ಇಷ್ಟವಾದ ವರವನ್ನು ಕೊಟ್ಟರು. ವರವನ್ನು ಪಡೆದ ಅವಳು ಸಂತುಷ್ಟಳಾಗಿ ಸ್ತ್ರೀಸಹಜವಾದ ಗುಣಗಳಿಂದ ಭೂಷಿತಳಾಗಿ ಅದ್ಭುತಕರ್ಮವುಳ್ಳ ಋಷಿಗಳಿಂದ ಸಂಸರ್ಗವನ್ನು ಹೊಂದಿದಳು.
ತೇನ ಗಂಧವತೀತ್ಯೇವಂ ನಾಮಾಸ್ಯಾಃ ಪ್ರಥಿತಂ ಭುವಿ |
ತಸ್ಯಾಸ್ತು ಯೋಜನಾದ್ ಗಂಧಮಾಜಿಘ್ರಂತಿ ನರಾ ಭುವಿ |
ತತೋ ಯೋಜನಗಂಧೇತಿ ದ್ವಿತೀಯಂ ನಾಮ ವಿಶ್ರುತಮ್ ॥103॥
ಅನಂತರ ಅವಳಿಗೆ ಗಂಧವತೀ ಎಂದೇ ಹೆಸರು ಪ್ರಸಿದ್ಧವಾಯಿತು. ಅವಳ ದೇಹದ ಸುಗಂಧವನ್ನು ಮನುಷ್ಯರು ಒಂದು ಯೋಜನ ದೂರದಿಂದಲೂ ಆಘ್ರಾಣಿಸುತ್ತಿದ್ದರು. ಆದ್ದರಿಂದ ಅವಳಿಗೆ ಯೋಜನಗಂಧಾ ಎಂಬ ಎರಡನೆಯ ಹೆಸರು ಪ್ರಸಿದ್ಧವಾಯಿತು.
ವೈಶಂಪಾಯನಃ
ವೀರಾಸನಮುಪಾಸ್ಥಾಯ ಯೋಗೀ ಧ್ಯಾನಪರೋಽಭವತ್ |
ತೂಷ್ಣೀಂಭೂತಾಂ ತದಾ ಕಾಳೀಂ ಜ್ವಲಂತೀಂ ಯೋಗತೇಜಸಾ ॥104॥
ಆ ಯೋಗಿಗಳಾದ ಋಷಿಗಳು ವೀರಾಸನದಲ್ಲಿ ಕುಳಿತು ಧ್ಯಾನಪರರಾದರು. ಸತ್ಯವತಿಯಾದರೋ ಯೋಗತೇಜಸ್ಸಿನಿಂದ ಬೆಳಗುತ್ತಾ ಸಮ್ಮುಖದಲ್ಲಿ ಮೌನವಾಗಿ ನಿಂತಳು.
(ಸತ್ಯವತಿಯ ಸಮಾಗಮಕ್ಕಿಂತ ಮುಂಚೆ ನಡೆದ ಘಟನೆಗಳನ್ನು ಈ ಶ್ಲೋಕದಿಂದ ಪ್ರಾರಂಭಿಸಿ ವಿಸ್ತಾರವಾಗಿ ನಿರೂಪಿಸುತ್ತಾರೆ.)
ದೃಷ್ಟ್ವಾ ತಾಂ ಚ ಸಮಾಧಾಯ ವಿಚಾರ್ಯ ಚ ಪುನಃ ಪುನಃ |
ಸ ಚಿಂತಯಾಮಾಸ ಮುನಿಃ ಕಿಂಕೃತೇ ಚ ಕೃತಂ ಭವೇತ್ ॥105॥
ಋಷಿಗಳು ಅವಳನ್ನು ನೋಡಿ ಸಮಾಧಾನವನ್ನು ಹೊಂದಿ ಮತ್ತೆ ಮತ್ತೆ ವಿಚಾರ ಮಾಡಿ ಏನು ಮಾಡಿದರೆ ಎಲ್ಲವೂ ಸರಿಯಾಗುತ್ತದೆ

ಎಂದು ಚಿಂತಿಸಿದರು.
ಶಿಷ್ಟಾನಾಂ ತು ಸಮಾಚಾರಃ ಶಿಷ್ಟಾಚಾರ ಇತಿ ಸ್ಮೃತಃ |
ಶ್ರುತಿಸ್ಮೃತಿವಿದೋ ವಿಪ್ರಾಃ ಜ್ಞಾನಾದ್ ಧರ್ಮಿಷ್ಠ ಉಚ್ಯತೇ ॥106॥
ಶಿಷ್ಟರು ನಡೆದುಕೊಳ್ಳುವ ರೀತಿಗೆ ಶಿಷ್ಟಾಚಾರ ಎಂದು ಕರೆಯುತ್ತಾರೆ. ಶ್ರುತಿ-ಸ್ಮೃತಿಗಳನ್ನು ತಿಳಿದವರನ್ನು ವಿಪ್ರರೆಂದು ಕರೆಯುತ್ತಾರೆ. ಜ್ಞಾನವಂತನಾದವನನ್ನು ಧರ್ಮಿಷ್ಠನೆಂದು ಕರೆಯುತ್ತಾರೆ.
ಧರ್ಮಜ್ಞೈರ್ವಿಹಿತೋ ಧರ್ಮಃ ಶ್ರೌತಃ ಸ್ಮಾರ್ತೋ ದ್ವಿಧಾ ದ್ವಿಜೈಃ |
ದಾರಾಗ್ನಿಹೋತ್ರಮಿಜ್ಯಾ ಚ ಶ್ರೌತಮೇತದ್ಧಿ ಲಕ್ಷಣಮ್ ॥107॥
ಧರ್ಮಜ್ಞರು ವಿಧಾನ ಮಾಡಿದ ಧರ್ಮವನ್ನು ಬ್ರಾಹ್ಮಣರು ಶ್ರೌತ, ಸ್ಮಾರ್ತ ಎಂದು ಎರಡು ರೀತಿ ವಿಭಾಗಿಸುತ್ತಾರೆ. ವಿವಾಹ, ಅಗ್ನಿಹೋತ್ರ ಮತ್ತು ಹೋಮಗಳು ಶ್ರೌತಕರ್ಮದಲ್ಲಿ ಜರುಗುತ್ತವೆ.
ಸ್ಮಾರ್ತೋ ವರ್ಣಾಶ್ರಮಾಚಾರೋ ಯಮೈಶ್ಚ ನಿಯಮೈರ್ಯುತಃ |
ಧರ್ಮೇತಿ ಧಾರಣೇ ಧಾತುರ್ಮಹತ್ತ್ವೇ ಚೈವ ಪಠ್ಯತೇ ॥108॥
ಆಯಾ ವರ್ಣಾಶ್ರಮಗಳಿಗೆ ಅನುಗುಣವಾದ ಧರ್ಮಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಯಮನಿಯಮಗಳನ್ನೂ ಸೇರಿಸಿ ಸ್ಮಾರ್ತ ಆಚಾರವೆಂದು ಕರೆಯುತ್ತಾರೆ. ಧರ್ಮ ಎಂಬ ಪದದಲ್ಲಿ ಇರುವ ಧಾತುವು, ಧಾರಣ ಎಂದರೆ ಲೋಕವನ್ನು ಧರಿಸುವುದು ಎಂಬ ಅರ್ಥದಲ್ಲಿದೆ. ಆ ಧಾತುವಿಗೆ ಮಹತ್ವವನ್ನುಂಟು ಮಾಡುವುದು ಎಂದೂ ಅರ್ಥವಿದೆ.
ತತ್ರೇಷ್ಟಫಲದೋ ಧರ್ಮ ಆಚಾರ್ಯೈರುಪದಿಶ್ಯತೇ |
ಅನಿಷ್ಟಫಲಭಾಕ್ ಚೇತಿ ತೈರಧರ್ಮೋ ವಿಭಾಷ್ಯತೇ | ತಸ್ಮಾದಿಷ್ಟಫಲಾರ್ಥಾಯ ಧರ್ಮಮೇವ ಸಮಾಚರೇತ್ ॥109॥
ಆ ಆಚಾರಗಳಲ್ಲಿ ಒಳ್ಳೆಯ ಫಲವನ್ನು ಕೊಡುವ ಆಚಾರಗಳನ್ನು ಜ್ಞಾನಿಗಳು ಧರ್ಮವೆಂದು ಕರೆಯುತ್ತಾರೆ. ಅನಿಷ್ಟಫಲವನ್ನು ಕೊಡುವ ಆಚಾರಗಳು ಅಧರ್ಮವೆಂದು ಕರೆಯಲ್ಪಡುತ್ತವೆ. ಆದ್ದರಿಂದ ಇಷ್ಟಫಲವನ್ನು ಪಡೆಯಲು ಧರ್ಮವನ್ನೇ ಆಚರಿಸಬೇಕು.
ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಜಾಪತ್ಯಶ್ಚ ಧಾರ್ಮಿಕಃ
ವಿವಾಹೋ ಬ್ರಾಹ್ಮಣಾನಾಂ ತು ಗಾಂಧರ್ವೋ ನೈವ ಧಾರ್ಮಿಕಃ ॥
ತ್ರಿವರ್ಣೇತರಜಾತೀನಾಂ ಗಾಂಧರ್ವೋಽಸುರರಕ್ಷಸಾಮ್ |
ಪೈಶಾಚೋ ನೈವ ಕರ್ತವ್ಯೋ ವಿವಾಹಶ್ಚಾಷ್ಟಮೋಽಧಮಃ ॥111॥
ವಿವಾಹಗಳಲ್ಲಿ ಬ್ರಾಹ್ಮ, ದೈವ, ಆರ್ಷ, ಪ್ರಜಾಪತ್ಯ ವಿವಾಹಗಳು ಧಾರ್ಮಿಕವೆಂದು ಕರೆಯಲ್ಪಡುತ್ತವೆ. ಈ ವಿವಾಹಗಳು ಬ್ರಾಹ್ಮಣರಿಗೆ ವಿಹಿತವಾಗಿದೆ. ಗಾಂಧರ್ವವಿವಾಹವು ಎಂದೂ ಬ್ರಾಹ್ಮಣರಿಗೆ ಧಾರ್ಮಿಕವಾದುದಲ್ಲ. ಮೂರು ವರ್ಣವನ್ನು ಬಿಟ್ಟು ಉಳಿದವರಿಗೂ, ಅಸುರ, ರಾಕ್ಷಸರಿಗೂ, ಗಾಂಧರ್ವವಿವಾಹವು ವಿಹಿತವಾಗಿದೆ. ಪೈಶಾಚವಿವಾಹವೆಂಬ ಎಂಟನೆಯ ವಿವಾಹವನ್ನು ಎಂದೂ ಮಾಡಬಾರದು. ಅದು ಅತ್ಯಂತ ಅಧಮವಾದುದು.
ಸಾಮರ್ಷಾಂ ವ್ಯಂಗಿಕಾಂ ಕನ್ಯಾಂ ಮಾತುಶ್ಚ ಕುಲಜಾಂ ತಥಾ |
ವೃದ್ಧಾಂ ಪತಿವ್ರತಾಂ ವಂಧ್ಯಾಂ ಪತಿತಾಂ ಚ ರಜಸ್ವಲಾಮ್ ॥112॥
ಅಪಸ್ಮಾರಕುಲೇ ಜಾತಾಂ ಪಿಂಗಲಾಂ ಕುಷ್ಠಿನೀಂ ವ್ರಣೀಮ್ |
ನ ಚಾಸ್ನಾತಾಂ ಸ್ತ್ರಿಯಂ ಗಚ್ಛೇದಿತಿ ಧರ್ಮಾನುಶಾಸನಮ್ ॥113॥
ಸಿಟ್ಟಿನಿಂದ ಕೂಡಿದ ಕನ್ಯೆಯನ್ನು, ಅಂಗವಿಕಲಳಾದವಳನ್ನು, ತಾಯಿಯ ಕುಲದಲ್ಲಿ ಹುಟ್ಟಿದವಳನ್ನು, ತನಗಿಂತ ವಯಸ್ಸಿನಲ್ಲಿ ಅಧಿಕಳಾದವಳನ್ನು ಬೇರೆಯವರನಿಗೆ ವಾಚಾದತ್ತಳಾದವಳನ್ನು, ಜಾತಕಾದಿ ಲಕ್ಷಣಗಳಿಂದ ವಂಧ್ಯೆ ಎಂದು ತಿಳಿದವಳನ್ನು, ಮಹಾಪಾಪಗಳಿಂದ ಪತಿತಳಾದವಳನ್ನು, ರಜಸ್ವಲೆಯಾಗಿರುವವಳನ್ನು, ವಂಶಪರಂಪರೆಯಿಂದ ಮೂರ್ಛೆಯುಳ್ಳ ವಂಶದಲ್ಲಿ ಬಂದವಳನ್ನು, ಪೈಷ್ಯೆಯನ್ನು, ಕುಷ್ಠರೋಗವುಳ್ಳವಳನ್ನು, ಮೈಯೆಲ್ಲಾ ಗಾಯವಿರುವವಳನ್ನು, ಸ್ನಾನ ಮಾಡದಿರುವವಳನ್ನು ಸಮಾಗಮ ಮಾಡಬಾರದೆಂದು ಧರ್ಮಾನುಶಾಸನವಿದೆ.
ಪಿತಾ ಪಿತಾಮಹೋ ಭ್ರಾತಾ ಮಾತಾ ಮಾತುಲ ಏವ ಚ |
ಉಪಾಧ್ಯಾಯತ್ವಿಜಶ್ಚೈವ ಕನ್ಯಾದಾನೇ ಪ್ರಭೂತ್ತಮಾಃ |
ಏತೈರ್ದತ್ತಾಂ ನಿಷೇವೇತ ನಾದತ್ತಾಮಾದದೀತ ಚ ॥114॥
ತಂದೆ, ತಾತ, ಅಣ್ಣ, ತಾಯಿ, ಸೋದರಮಾವ, ಗುರುಗಳು ಮತ್ತು ಪುರೋಹಿತರು ಕನ್ಯಾದಾನ ಮಾಡುವುದಕ್ಕೆ ಅಧಿಕಾರಿಗಳು. ಇವರು ದಾನ ಮಾಡಿದ ಕನ್ಯೆಯನ್ನು ಸ್ವೀಕರಿಸಬೇಕು. ದಾನ ಮಾಡದಿದ್ದ ಕನ್ಯೆಯನ್ನು ಎಂದೂ ಸ್ವೀಕರಿಸಬಾರದು.
ಇತ್ಯೇವಮೃಷಯಃ ಪ್ರಾಹುರ್ವಿವಾಹೇ ಧರ್ಮವಿತ್ತಮಾಃ |
ಅಸ್ಯಾ ನಾಸ್ತಿ ಪಿತಾ ಭ್ರಾತಾ ಮಾತಾ ಮಾತುಲ ಏವ ಚ ॥115॥
ಧರ್ಮವನ್ನು ವಿಶೇಷವಾಗಿ ತಿಳಿದ ಋಷಿಗಳು ವಿವಾಹದ ಅಧಿಕಾರದ ವಿಷಯದಲ್ಲಿ ಹೀಗೆ ಹೇಳುತ್ತಾರೆ - ಈ ಸತ್ಯವತಿಗಾದರೋ (ಸತ್ಯವತಿಗೆ ಕಾಳೀ ಎಂದು ಹೆಸರು) ತಂದೆಯಾಗಲೀ, ಅಣ್ಣನಾಗಲೀ, ತಾಯಿಯಾಗಲೀ, ಸೋದರಮಾವನಾಗಲೀ ಇಲ್ಲ.
ಗಾಂಧರ್ವೇಣ ವಿವಾಹೇನ ನ ಸ್ಪೃಶಾಮಿ ಯದೃಚ್ಛಯಾ |
ಕ್ರಿಯಾಹೀನಂ ತು ಗಾಂಧರ್ವಂ ನ ಕರ್ತವ್ಯಮನಾಪದಿ ॥116॥
ನನ್ನ ಮನಸ್ಸಿಗೆ ಬಂದಂತೆ ನಾನು ಗಾಂಧರ್ವವಿವಾಹವನ್ನು ಎಂದೂ ಮಾಡಿಕೊಳ್ಳುವುದಿಲ್ಲ. ಕ್ರಿಯಾಹೀನವಾದ ಗಾಂಧರ್ವವಿವಾಹವನ್ನು ಆಪತ್ತು ಇಲ್ಲದಿರುವಾಗ ಎಂದೂ ಮಾಡಿಕೊಳ್ಳಬಾರದು.
ಯದಸ್ಯಾಂ ಜಾಯತೇ ಪುತ್ರೋ ವೇದವ್ಯಾಸೋ ಭವೇದೃಷಿಃ |

ಕ್ರಿಯಾಹೀನಃ ಕಥಂ ವಿಪ್ರೋ ಭವೇದೃಷಿರುದಾರಧೀಃ ॥117॥
ಇವಳಲ್ಲಿ ಮಹಾಋಷಿಗಳಾದ ವೇದವ್ಯಾಸರು ಅವತರಿಸುವವರಿದ್ದಾರೆ. ಕ್ರಿಯಾಹೀನವಾದರೆ ಮೇಧಾವಿಗಳೂ, ಉದಾರಬುದ್ಧಿಯುಳ್ಳವರೂ, ಆದ ಋಷಿಗಳು ಹೇಗೆ ಜನಿಸುತ್ತಾರೆ.
ಏವಂ ಚಿಂತಯತೋ ಭಾವಂ ಮಹರ್ಷೇರ್ಭಾವಿತಾತ್ಮನಃ |
ಜ್ಞಾತ್ವಾ ಚೈವಾಭ್ಯವರ್ತಂತ ಪಿತರೋ ಬರ್ಹಿಷದಸ್ತದಾ |
ಪೂರ್ವಂ ಸ್ವಾಗತಮಿತ್ಯುಕ್ತ್ವಾ ವಸಿಷ್ಠಃ ಪ್ರತ್ಯಭಾಷತ ॥118॥
ಹೀಗೆ ಚಿಂತಿಸುತ್ತಿರುವ ಶುದ್ಧವಾದ ಮನಸ್ಸಿನ ಆ ಮಹರ್ಷಿಗಳ ಅಭಿಪ್ರಾಯವನ್ನು ತಿಳಿದು ಸತ್ಯವತಿಯ ಪಿತೃಗಳಾಗಿದ್ದ ಬರ್ಹಿಷದರು ತಾವಾಗಿಯೇ ಅಲ್ಲಿಗೆ ಬಂದರು. ವಸಿಷ್ಠರು ಅವರಿಗೆ ಸ್ವಾಗತವನ್ನು ಕೋರಿ ಮಾತನಾಡಿದರು.
ಪಿತೃಗಣಾಃ
ಅಸ್ಮಾಕಂ ಮಾನಸೀಂ ಕನ್ಯಾಮಸ್ಮಚ್ಛಾಸನವಾಸಸೀಮ್ |
ಯದೀಚ್ಛೇಚ್ಛಸಿ ಪುತ್ರಾರ್ಥಂ ಕನ್ಯಾಂ ಗೃಹ್ಣೀಷ್ವ ಮಾಚಿರಮ್ ॥119॥
ನಮ್ಮ ಮಾನಸಪುತ್ರಿಯಾದ ನಮ್ಮ ಶಾಸನದಲ್ಲಿಯೇ ಇರುವ ಈ ಕನ್ಯೆಯನ್ನು ಪುತ್ರನನ್ನು ಪಡೆಯುವ ಸಲುವಾಗಿ ಸ್ವೀಕರಿಸಬೇಕೆಂಬ ಇಚ್ಛೆಯು ಇದ್ದರೆ ತಡಮಾಡದೇ ಈ ಕನ್ಯೆಯನ್ನು ಸ್ವೀಕರಿಸಿ.
ಪಿತೄಣಾಂ ವಚನಂ ಶ್ರುತ್ವಾ ವಸಿಷ್ಠಃ ಪ್ರತ್ಯಭಾಷತ |
ಮಹರ್ಷೀಣಾಂ ವಚಃ ಸತ್ಯಂ ಪುರಾಣೇಽಪಿ ಮಯಾ ಶ್ರುತಮ್ |
ಪರಾಶರೋ ಬ್ರಹ್ಮಚಾರೀ ಪ್ರಜಾರ್ಥೀ ಮಮ ವಂಶಧೃಕ್ ॥120॥
ಪಿತೃಗಳ ಆ ವಚನವನ್ನು ಕೇಳಿ ವಸಿಷ್ಠರು ಮಾತನಾಡಿದರು. ಮಹರ್ಷಿಗಳ ವಚನವು ಯಾವಾಗಲೂ ಸತ್ಯವೆಂದು ಪುರಾಣಗಳಲ್ಲಿ ಕೇಳಿದ್ದೇವೆ. ಬ್ರಹ್ಮಚಾರಿಗಳಾದ ಪರಾಶರರು ಪ್ರಜಾರ್ಥಿಗಳಾಗಿದ್ದಾರೆ. ಮತ್ತು ನನ್ನ ವಂಶದವರಾಗಿದ್ದಾರೆ.
ಏವಂ ಸಂಭಾಷಮಾಣೇ ತು ವಸಿಷ್ಠೇ ಪಿತೃಭಿಃ ಸಹ |
ಋಷಯೋಽಭ್ಯಾಗಮಂಸ್ತತ್ರ ನೈಮಿಶಾರಣ್ಯವಾಸಿನಃ ॥121॥
ವಿವಾಹಂ ದ್ರಷ್ಟುಮಿಚ್ಛಂತಃ ಶಕ್ತಿಪುತ್ರಸ್ಯ ಧರ್ಮತಃ |
ಅರುಂಧತೀ ಮಹಾಭಾಗಾ ಅದೃಶ್ಯಂತ್ಯಾ ಸಹೈವ ಸಾ ॥122॥
ಹೀಗೆ ವಸಿಷ್ಠರು ಪಿತೃಗಳ ಜೊತೆಯಲ್ಲಿ ಮಾತನಾಡುತ್ತಿರುವಾಗ, ವಸಿಷ್ಠರ ಮಕ್ಕಳಾದ ಶಕ್ತಿಯಮಕ್ಕಳಾದ ಪರಾಶರರ ಧಾರ್ಮಿಕವಿವಾಹವನ್ನು ನೋಡುವ ಇಚ್ಛೆಯುಳ್ಳವರಾಗಿ, ನೈಮಿಶಾರಣ್ಯವಾಸಿಗಳಾದ ಋಷಿಗಳು ಅಲ್ಲಿಗೆ ಬಂದರು.
ಮಹಾನುಭಾವಳಾದ ಅರುಧಂತಿಯು ತನ್ನ ಸೊಸೆಯಾದ ಶಕ್ತಿಋಷಿಗಳ ಪತ್ನಿಯಾದ ಅದೃಶ್ಯಂತಿಯ ಜೊತೆಯಲ್ಲಿ ಅಲ್ಲಿಗೆ ಬಂದಳು.
ವಿಶ್ವಕರ್ಮಕೃತಾಂ ದಿವ್ಯಾಂ ಪರ್ಣಶಾಲಾಂ ಪ್ರವಿಶ್ಯ ಸಾ |
ವೈವಾಹಿಕಾಂಶ್ಚ ಸಂಭಾರಾನ್ ಸಂಕಲ್ಪ್ಯ ಚ ಯಥಾಕ್ರಮಮ್ ॥123॥
ಅರುಂಧತೀ ಸತ್ಯವತೀಂ ವಧೂಂ ಸಂಗೃಹ್ಯ ಪಾಣಿನಾ |
ಭದ್ರಾಸನೇ ಪ್ರತಿಷ್ಠಾಪ್ಯ ಇಂದ್ರಾಣೀಂ ಸಮಕಾರಯತ್ ॥124॥
ವಿಶ್ವಕರ್ಮನಿಂದ ನಿರ್ಮಿತವಾದ ದಿವ್ಯವಾದ ಪರ್ಣಶಾಲೆಯನ್ನು ಪ್ರವೇಶಿಸಿ, ಅವಳು ವೈವಾಹಿಕ ಸಿದ್ಧತೆಗಳನ್ನು ಯಥಾಕ್ರಮವಾಗಿ ನಡೆಸಿದಳು. ಅರುಂಧತಿಯು ವಧುವಾದ ಸತ್ಯವತಿಯನ್ನು ಕೈಯಲ್ಲಿ ಹಿಡಿದು ಮಂಗಳವಾದ ಆಸನದಲ್ಲಿ ಕುಳ್ಳಿರಿಸಿ, ಶಚೀದೇವಿಯ ಸನ್ನಿಧಾನವು ಉಂಟಾಗುವಂತೆ ಮಾಡಿದಳು.
ಆಪೂರ್ಯಮಾಣಪಕ್ಷೇ ತು ವೈಶಾಖೇ ಸೋಮದೈವತೇ |
ಶುಭಗ್ರಹೇ ತ್ರಯೋದಶ್ಯಾಂ ಮುಹೂರ್ತೇ ಮೈತ್ರ ಆಗತೇ |
ವಿವಾಹಕಾಲ ಇತ್ಯುಕ್ತ್ವಾ ವಸಿಷ್ಠೋ ಮುನಿಭಿಃ ಸಹ ॥125॥
ವೈಶಾಖಮಾಸದ ಶುಕ್ಲಪಕ್ಷದಲ್ಲಿ ಸೋಮವಾರದಂದು ಶುಭಗ್ರಹಗಳ ಯೋಗವಿರುವಾಗ ತ್ರಯೋದಶಿಯ ದಿವಸ ಮೈತ್ರಮುಹೂರ್ತವು ವಿವಾಹಕಾಲ ಎಂದು ವಸಿಷ್ಠರು ಋಷಿಗಳ ಜೊತೆಯಲ್ಲಿ ನಿರ್ಧರಿಸಿದರು.
ಯಮುನಾದ್ವೀಪಮಾಸಾದ್ಯ ಶಿಷ್ಯೈಶ್ಚ ಮುನಿಪತ್ನಿಭಿಃ |
ಸ್ಥಂಡಿಲಂ ಚತುರಶ್ರಂ ಚ ಗೋಮಯೇನೋಪಲಿಪ್ಯ ಚ ॥126॥
ಅಕ್ಷತೈಃ ಫಲಪುಷ್ಪೈಶ್ಚ ಸ್ವಸ್ತಿಕೈರಾಮ್ರಪಲ್ಲವೈಃ |
ಜಲಪೂರ್ಣಘಟೈಶ್ಚೈವ ಸರ್ವತಸ್ಸೂಪಶೋಭಿತಮ್ ॥127॥
ಯಮುನೆಯಲ್ಲಿ (ಪರಾಶರರು ತಮ್ಮ ತಪಶ್ಶಕ್ತಿಯಿಂದ ಸೃಷ್ಟಿಮಾಡಿದ್ದ) ದ್ವೀಪವನ್ನು ತಲುಪಿ ಮುನಿಪತ್ನಿಯರಿಂದಲೂ, ಶಿಷ್ಯರಿಂದಲೂ ಸಹಕೃತರಾಗಿ, ಚತುರಶ್ರ ಮಂಡಲವನ್ನು ಮಾಡಿ, ಗೋಮಯದಿಂದ ಅದನ್ನು ಸಾರಿಸಿ, ಅಕ್ಷತೆಗಳಿಂದಲೂ, ಫಲಪುಷ್ಪಗಳಿಂದಲೂ, ಸ್ವಸ್ತಿಕಗಳಿಂದಲೂ, ಮಾವಿನ ಚಿಗುರುಗಳಿಂದಲೂ, ಜಲಪೂರ್ಣಘಟಗಳಿಂದಲೂ ಅದನ್ನು ಸಂಪೂರ್ಣವಾಗಿ ಅಣಿಗೊಳಿಸಿದರು.
ತಸ್ಯ ಮಧ್ಯೇ ಪ್ರತಿಷ್ಠಾಪ್ಯ ಬ್ರುಸ್ಯಾಂ ಮುನಿವರಂ ತದಾ |
ಸಿದ್ಧಾರ್ಥಯವಕಲ್ಕೈಶ್ಚ ಸ್ನಾತಂ ಸರ್ವೌಷಧೈರಪಿ ॥128॥
ಅದರ ಮಧ್ಯೆ ಋಷಿಯ ಅಸನದಲ್ಲಿ ಋಷಿಶ್ರೇಷ್ಠರಾದ ಪರಾಶರರನ್ನು ಕುಳ್ಳಿರಿಸಿ, ಸಾಸಿವೆ ಮತ್ತು ಗೋಧಿಯ ಚೂರ್ಣಗಳಿಂದ ಮತ್ತು ಎಲ್ಲಾ ಓಷಧಿಗಳಿಂದಲೂ ಸ್ನಾನವನ್ನು ಮಾಡಿಸಿದರು.
ಕೃತ್ವಾಽರ್ಜುನಾನಿ ವಸಾತ್ರಣಿ ಪರಿಧಾಪ್ಯ ಮಹಾಮುನಿಃ |

ವಾಚಯಿತ್ವಾ ತು ಪುಣ್ಯಾಹಮಕ್ಷತೈಶ್ಚ ಸಮರ್ಚ್ಯ ತಮ್ ॥129॥
ಸ್ನಾನವನ್ನು ಮಾಡಿದ ಪರಾಶರರು ಶುಭ್ರವಾದ ಬಿಳಿಯ ವಸ್ತ್ರಗಳನ್ನು ಧರಿಸಿದರು. ಅನಂತರ ಋಷಿಗಳು ಪುಣ್ಯಾಹವಾಚನವನ್ನು ಮಾಡಿಸಿ, ಅಕ್ಷತೆಗಳಿಂದ ಪರಾಶರರನ್ನು ಅರ್ಚಿಸಿದರು.
ಗಂಧಾನುಲಿಪ್ತಃ ಸ್ರಗ್ವೀ ಚ ಸರ್ವತೋದೋವಧೂಗೃಹೇ |
ಸಪದಾತಿಸ್ತದಾ ಗತ್ವಾ ವಧೂಜ್ಞಾತಿಭಿರರ್ಚಿತಃ ॥130॥
ಶರೀರಕ್ಕೆ ಗಂಧವನ್ನು ಲೇಪಿಸಿಕೊಂಡು, ಕೊರಳಿನಲ್ಲಿ ಹೂಮಾಲೆಯನ್ನು ಧರಿಸಿದ ಪರಾಶರರು ಆ ವಧೂಗೃಹಕ್ಕೆ ನಡೆದುಕೊಂಡು ಹೋಗಿ, ವಧುವಿನ ಬಂಧುಗಳಿಂದ ಪೂಜಿಸಲ್ಪಟ್ಟರು.
ಸ್ನಾತಾಮಹತಸಂವೀತಾಂ ಗಂಧಾಲಿಪ್ತಾಂ ಸ್ರಗುಜ್ಜ್ವಲಾಮ್ |
ವಧೂಂ ಮಂಗಲಸಂಯುಕ್ತಾಮಿಷುಹಸ್ತಾಂ ಸಮೀಕ್ಷ್ಯ ಚ |
ಉವಾಚ ವಚನಂ ಕಾಲೇ ಕಾಲಜ್ಞಃ ಸರ್ವಧರ್ಮವಿತ್ ॥131॥
ಸ್ನಾತಳಾಗಿದ್ದ ಖಂಡಿಸದ ವಸ್ತ್ರಗಳನ್ನು ಧರಿಸಿದ್ದ, ಗಂಧಾನುಲೇಪಿತಳಾಗಿದ್ದ ಉಜ್ವಲವಾದ ಹೂಮಾಲೆಯನ್ನು ಧರಿಸಿದ್ದ, ಮಂಗಲದ್ರವ್ಯ ಸಂಯುಕ್ತಳಾಗಿ ಕೈಯಲ್ಲಿ ಬಾಣವನ್ನು ಹಿಡಿದಿದ್ದ, ವಧುವಾದ ಸತ್ಯವತಿಯನ್ನು ನೋಡಿ ಸರ್ವಧರ್ಮವನ್ನೂ ತಿಳಿದಿದ್ದ ಮತ್ತು ಸಮಯಪ್ರಜ್ಞೆಯುಳ್ಳ ಪರಾಶರರು ಆಗ ಹೀಗೆ ಮಾತನಾಡಿದರು. (ಸತ್ಯವತಿಯು ಕ್ಷತ್ರಿಯ ಕನ್ಯೆಯಾದುದರಿಂದ ಮಂಗಳ ಸಮಯದಲ್ಲಿ ಕೈಯಲ್ಲಿ ಬಾಣವನ್ನು ಹಿಡಿದಿರುತ್ತಾಳೆ.)
ಪ್ರತಿಗ್ರಹೋ ದಾತೃವಶಃ ಶ್ರುತಮೇವಂ ಮಯಾ ಪುರಾ |
ಯಥಾ ವಕ್ಷ್ಯಂತಿ ಪಿತರಸ್ತತ್ ಕರಿಷ್ಯಾಮಹೇ ವಯಮ್ |
ತದ್ ಧರ್ಮಿಷ್ಠಂ ಯಶಸ್ಯಂ ಚ ವಚನಂ ಸತ್ಯವಾದಿನಾಮ್ ॥132॥
ಪ್ರತಿಗ್ರಹವು ದಾತೃವಶ ಎಂದು ನಾನು ಹಿಂದೆ ಕೇಳಿದ್ದೇನೆ. ಇವಳ ಪಿತೃಗಳು ಹೇಗೆ ಹೇಳುತ್ತಾರೆಯೋ, ಹಾಗೇ ನಡೆದುಕೊಳ್ಳುತ್ತೇನೆ. ಸತ್ಯವಾದಿಗಳಾದ ಅವರ ಮಾತು, ಧರ್ಮಿಷ್ಠವಾದುದು. ಮತ್ತು ಕೀರ್ತಿಕರವಾದುದು.
ವೈಶಂಪಾಯನಃ
ಶ್ರುತ್ವಾ ತು ವಚನಂ ಸರ್ವೇ ನಿಸ್ಸಂಗಾ ನಿಷ್ಪರಿಗ್ರಹಾಃ |
ವಸುಂ ಪರಮಧರ್ಮಿಷ್ಠಮಾನೀಯೇದಂ ವಚೋಽಬ್ರುವನ್ ॥133॥
ನಿಸ್ಸಂಗರೂ, ನಿಷ್ಪರಿಗ್ರಹರೂ ಆದ ಆ ಪಿತೃಗಳು ಪರಾಶರರ ಮಾತನ್ನು ಕೇಳಿ, ಪರಮಧರ್ಮಿಷ್ಠನಾದ ವಸುವನ್ನು ಕರೆತಂದು ಹೀಗೆ ಮಾತನಾಡಿದರು.
ಮತ್ಸ್ಯಯೋನೌ ತು ಸಾ ಭೂತಾ ತವ ಪುತ್ರೀ ವಿಶೇಷತಃ |
ಪರಾಶರಾಯ ಮುನಯೇ ದಾತುಮರ್ಹಸಿ ಧರ್ಮತಃ ॥134॥
ಮತ್ಸ್ಯಯೋನಿಯಲ್ಲಿ ಜನಿಸಿದ ಇವಳು ವಿಶೇಷವಾಗಿ ನಿನ್ನ ಮಗಳು. ಪಾರಶರ ಋಷಿಗಳಿಗೆ ದಾನವನ್ನು ಮಾಡಲು ಆದ್ದರಿಂದ ನೀನೇ ಯೋಗ್ಯನಾದ ಅಧಿಕಾರಿ.
ವಸುಃ
ಸತ್ಯಂ ಮಮ ಸುತಾ ಸಾ ಹಿ ದಾಶರಾಜೇನ ವರ್ದ್ಧಿತಾ |
ಅಹಂ ಪ್ರಭುಃ ಪ್ರದಾನೇ ತು ಪ್ರಜಾಪಾಲಃ ಪ್ರಜಾರ್ಥಿನಾಮ್ ॥135॥
ನಿಶ್ಚಯವಾಗಿ ಅವಳು ನನ್ನ ಮಗಳು. ದಾಶರಾಜನು ಬೆಳೆಸಿದ್ದಾನೆ. ಪ್ರಜಾರ್ಥಿಗಳಾದ ಋಷಿಗಳಿಗೆ ಅವಳನ್ನು ದಾನ ಮಾಡಲು ಪ್ರಜಾಪಾಲಕನಾದ ನಾನು ಅಧಿಕಾರವನ್ನು ಹೊಂದಿದ್ದೇನೆ.
ಪಿತರಃ
ನಿರಾಶಿಷೋ ವಯಂ ಸರ್ವೇ ಯೋಗಿನಃ ಸತತಂ ವಿಭೋ |
ಕನ್ಯಾದಾನೇನ ಸಂಬಂಧೋ ದಕ್ಷಿಣಾಬಂಧ ಉಚ್ಯತೇ ॥136॥
ಎಲೈ ರಾಜನೇ ನಾವೆಲ್ಲರೂ ಯೋಗಿಗಳು ನಮಗೆ ಯಾವ ಆಸೆಯೂ ಇಲ್ಲ. ಕನ್ಯಾದಾನದಿಂದ ಉಂಟಾಗುವ ಸಂಬಂಧವನ್ನು ದಕ್ಷಿಣಾಬಂಧವೆಂದು ಕರೆಯುತ್ತಾರೆ.
ಕರ್ಮಭೂಮಿರ್ಹಿ ಮಾನುಷ್ಯಂ ಭೋಗಭೂಮಿಸ್ತ್ರಿವಿಷ್ಟಪಮ್ |
ಇಹ ಪುಣ್ಯಕೃತೋ ಯಾಂತಿ ಸ್ವರ್ಗಲೋಕಂ ನ ಸಂಶಯಃ ॥137॥
ಮನುಷ್ಯಲೋಕವು ಕರ್ಮಭೂಮಿ. ಸ್ವರ್ಗಲೋಕವು ಭೋಗಭೂಮಿ ಮನುಷ್ಯಲೋಕದಲ್ಲಿ ಪುಣ್ಯವನ್ನು ಮಾಡಿದವರು ಸ್ವರ್ಗಲೋಕವನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ.
ಮನುಷ್ಯಲೋಕೇ ನಿಷ್ಕೃತಿನೋ ನರಕಂ ಯಾಂತಿ ನಿರ್ಘೃಣಾಃ |
ದಕ್ಷಿಣಾಬಂಧ ಇತ್ಯುಕ್ತೇ ಇಮೇ ಸುಕೃತದುಷ್ಕೃತೇ |
ದಕ್ಷಿಣಾಬಂಧಸಂಯುಕ್ತಾ ಯೋಗಿನಃ ಪ್ರತಿವರ್ತತೇ ॥138॥
ಮನುಷ್ಯಲೋಕದಲ್ಲಿ ದುಷ್ಕರ್ಮವನ್ನು ಮಾಡುವವರು ಮತ್ತು ದಯಾಹೀನರು ನರಕಕ್ಕೆ ಹೋಗುತ್ತಾರೆ. ವಧುವಿನ ಕಡೆಯವರು ವರನಿಗೆ ಧರ್ಮದ ಕೆಲಸವನ್ನು ಮಾಡು. ಅಧರ್ಮದಿಂದ ದೂರವಿರು ಎಂದು ಆಶೀರ್ವಾದ ಮಾಡುವುದೇ ದಕ್ಷಿಣಾಬಂಧವೆನಿಸುತ್ತದೆ. ವಿಶೇಷವಾಗಿ ಯೋಗಿಗಳು ಮಾಡುವ ವಿವಾಹಕ್ರಿಯೆಯು ದಕ್ಷಿಣಾಬಂಧದಿಂದ ಕೂಡಿರುತ್ತದೆ.
ತಸ್ಮಾನ್ನೋ ಮಾನಸೀಂ ಕನ್ಯಾಂ ಯೋಗಭ್ರಷ್ಟಾಂ ವಿಶಾಂಪತೇ |
ಸುತಾಂ ತಾಂ ತವ ಸಂಪ್ರಾಪ್ತಾಂ ಸತೀಂ ಭಿಕ್ಷಾಂ ದದಸ್ವ ವೈ |

ಇತ್ಯುಕ್ತತ್ವಾ ಪಿತರಃ ಸರ್ವೇ ಕ್ಷಣಾದಂತರ್ಹಿತಾಸ್ತದಾ ॥139॥
ಎಲೈ ರಾಜನೇ ಆದ್ದರಿಂದ ಯೋಗಭ್ರಷ್ಟರಾದ ನಮ್ಮ ಮಾನಸಕನ್ಯೆಯಾದ ನಿನ್ನ ಮಗಳಾಗಿ ನಿನ್ನ ಕೈ ಸೇರಿದ ಈ ಸಾಧ್ವಿಯನ್ನು ಭಿಕ್ಷೆಯಾಗಿ ಕೊಡು. ಹೀಗೆ ಹೇಳಿ ಎಲ್ಲಾ ಪಿತೃಗಳು ತಕ್ಷಣದಲ್ಲಿಯೇ ಅಂತರ್ಧಾನ ಹೊಂದಿದರು.
ವೈಶಂಪಾಯನಃ
ಯಾಜ್ಞವಲ್ಕ್ಯಂ ಸಮಾಹೂಯ ವಿವಾಹಾಚಾರ್ಯಮಿತ್ಯುತ |
ವಸುಂ ಚಾಪಿ ಸಮಾಹೂಯ ವಸಿಷ್ಠೋ ಮುನಿಭಿಃ ಸಹ |
ವಿವಾಹಂ ಕಾರಯಾಮಾಸ ಶ್ರುತಿದೃಷ್ಟೇನ ಕರ್ಮಣಾ ॥140॥
ವಸಿಷ್ಠರು, ಯಾಜ್ಞವಲ್ಕ್ಯರನ್ನು ವಿವಾಹಪುರೋಹಿತರೆಂದು ಕರೆದು ವಸುವನ್ನೂ ಆಹ್ವಾನಿಸಿ, ಋಷಿಗಳ ಜೊತೆಯಲ್ಲಿ ಸೇರಿ ಶ್ರೌತವಿಧಾನದಿಂದ ವಿವಾಹವನ್ನು ಮಾಡಿಸಿದರು.
ವಸುಃ
ಪರಾಶರ ಮಹಾಪ್ರಾಜ್ಞ ತವ ಪುತ್ರಪ್ರದಾಮಿಮಾಮ್ |
ಪ್ರತೀಚ್ಛಸ್ವೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ॥141॥
ಮಹಾಪ್ರಾಜ್ಞರಾದ ಪರಾಶರರೇ, ನಿಮಗೆ ಪುತ್ರಪ್ರದಳಾದ ಇವಳನ್ನು ಸ್ವೀಕರಿಸಿ. ನಿಮಗೆ ಮಂಗಳವಾಗಲಿ. ಇವಳ ಪಾಣಿಯನ್ನು ನಿಮ್ಮ ಪಾಣಿಯಿಂದ ಗ್ರಹಣ ಮಾಡಿ.
ವೈಶಂಪಾಯನಃ
ವಸೋಸ್ತು ವಚನಂ ಶ್ರುತ್ವಾ ಯಾಜ್ಞವಲ್ಕ್ಯಮತೇ ಸ್ಥಿತಃ |
ಕೃತಕೌತುಕಮಾಂಗಲ್ಯಃ ಪಾಣಿನಾ ಪಾಣಿಮಸ್ಪೃಶತ್ ॥142॥
ಪರಾಶರರು ವಸುವಿನ ಮಾತನ್ನು ಕೇಳಿ ಯಾಜ್ಞವಲ್ಕ್ಯರ ಅಭಿಪ್ರಾಯದಂತೆ ಕಂಕಣಬಂಧವುಳ್ಳ ತಮ್ಮ ಪಾಣಿಯಿಂದ ಸತ್ಯವತಿಯ ಪಾಣಿಯನ್ನು ಗ್ರಹಣಮಾಡಿದರು.
ಪ್ರಭೂತಾಜ್ಯೇನ ಹವಿಷಾ ಹುತ್ವಾ ಮಂತ್ರೈರ್ಹುತಾಶನಮ್ |
ತ್ರಿರಗ್ನಿಂ ತು ಪರಿಕ್ರಮ್ಯ ಸಮಭ್ಯರ್ಚ್ಯ ಹುತಾಶನಮ್ ॥143॥
ಮಹರ್ಷೀನ್ ಯಾಜ್ಞವಲ್ಕ್ಯಾದೀನ್ ದಕ್ಷಿಣಾಭಿಃ ಪ್ರತೋಷ್ಯ ಚ |
ಲಬ್ಧಾನುಜ್ಞೋ ವಿವಾಹ್ಯಾಶು ಪ್ರದಕ್ಷಿಣಮಥಾಕರೋತ್ ॥144॥
ಮಂತ್ರಪೂರ್ವಕವಾಗಿ ಒಳ್ಳೆಯ ಆಜ್ಯರೂಪ ಹವಿಸ್ಸಿನಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿ, ಮೂರುಸಲ ಅಗ್ನಿಪ್ರದಕ್ಷಿಣೆಯನ್ನು ಮಾಡಿ, ಅಗ್ನಿಗೆ ನಮಸ್ಕರಿಸಿ ಮಹರ್ಷಿಗಳಾದ ಯಾಜ್ಞವಲ್ಕ್ಯ ಮೊದಲಾದವರನ್ನು ದಕ್ಷಿಣೆಯಿಂದ ಸಂತೋಷಪಡಿಸಿ ಅವರ ಅನುಮತಿಯನ್ನು ಪಡೆದು, ವಿವಾಹವನ್ನು ಮಾಡಿಕೊಂಡು ಪರಾಶರರು ಅವರಿಗೆ ಪ್ರದಕ್ಷಿಣೆಯನ್ನು ಮಾಡಿದರು.
ಪರಾಶರೇ ಕೃತೋದ್ವಾಹೇ ದೇವಾಃ ಸರ್ಷಿಗಣಾಸ್ತದಾ |
ಹೃಷ್ಟಾ ಜಗ್ಮುಃ ಕ್ಷಣಾದೇವ ವೇದವ್ಯಾಸೋ ಭವತ್ವಿತಿ ॥145॥
ಪರಾಶರರು ವಿವಾಹಮಾಡಿಕೊಳ್ಳುತ್ತಿರಲು ಬಂದಿದ್ದ ದೇವತೆಗಳು ಮತ್ತು ಋಷಿಗಣಗಳು ಸಂತುಷ್ಟರಾಗಿ, ವೇದವ್ಯಾಸರ ಅವತಾರವಾಗಲಿ ಎಂದು ಹೇಳಿ ಒಂದು ಕ್ಷಣದಲ್ಲಿ ಹೊರಟುಹೋದರು.
ಏವಂ ಸತ್ಯವತೀ ಹೃಷ್ಟಾ ಪೂಜಾಂ ಲಬ್ಧ್ವಾ ಯಥೇಷ್ಟತಃ |
ಪರಾಶರೇಣ ಸಂಯುಕ್ತಾ ಸದ್ಯೋ ಗರ್ಭಂ ಸುಷಾವ ಸಾ ॥146॥
ಹೀಗೆ ಸತ್ಯವತಿಯು ತನ್ನ ಮನಸ್ಸಿಗೆ ಒಪ್ಪುವಂತೆ ಸತ್ಕಾರವನ್ನು ಪಡೆದು ಸಂತುಷ್ಟಳಾಗಿ ಪರಾಶರರ ಸಮಾಗಮವನ್ನು ಹೊಂದಿ, ತಕ್ಷಣದಲ್ಲಿಯೇ ಗರ್ಭವನ್ನು ಪ್ರಸವಿಸಿದಳು.
ಜಜ್ಞೇ ಚ ಯಮುನಾದ್ವೀಪೇ ಪಾರಾಶರ್ಯಃ ಸುವೀರ್ಯವಾನ್ |
ಜಾತಮಾತ್ರಃ ಸ ವವೃಧೇ ಸಪ್ತವರ್ಷೋಽಭವತ್ ತದಾ ॥147॥
ಯಮುನಾನದಿಯ ಆ ದ್ವೀಪದಲ್ಲಿ ಮಹಾಸಾಮರ್ಥ್ಯೋಪೇತರಾದ ಪರಾಶರರ ಮಗನಾಗಿ ವ್ಯಾಸರು ಜನಿಸಿದರು. ಹುಟ್ಟಿದ ತಕ್ಷಣವೇ ಅವರು ಬೆಳೆದು ಏಳುವರ್ಷದವರಾದರು.
ಸ್ನಾತ್ವಾಽಭಿವಾದ್ಯ ಪಿತರಂ ತಸ್ಥೌ ವ್ಯಾಸಃ ಸಮಾಹಿತಃ |
ಸ್ವಸ್ತೀತಿ ವಚನಂ ಚೋಕ್ತ್ವಾ ದದೌ ಕಲಶಮುತ್ತಮಮ್ ॥148॥
ವ್ಯಾಸರು ಸ್ನಾನವನ್ನು ಮಾಡಿ, ತಂದೆಗೆ ನಮಸ್ಕರಿಸಿ ಸಮಾಧಾನದಿಂದ ಕೂಡಿದವರಾಗಿ ನಿಂತುಕೊಂಡರು. ಪರಾಶರರು ಮಂಗಳವಾಗಲಿ ಎಂದು ಹೇಳಿ ಒಳ್ಳೆಯ ಕಮಂಡಲುವನ್ನು ನೀಡಿದರು.
ಗೃಹೀತ್ವಾ ಕಲಶಂ ಪಾರ್ಶ್ವೇ ತಸ್ಥೌ ವ್ಯಾಸಃ ಸಮಾಹಿತಃ |
ತತೋ ದಾಶಭಯಾತ್ ಪತ್ನೀ ಸ್ನಾತ್ವಾ ಕನ್ಯಾ ಬಭೂವ ಸಾ ॥149॥
ವ್ಯಾಸರು ಕಮಂಡಲುವನ್ನು ಸ್ವೀಕರಿಸಿ ಪಾರ್ಶ್ವದಲ್ಲಿ ವಿನಯಶೀಲರಾಗಿ ನಿಂತರು. ಅನಂತರ ದಾಶನ ಭಯದಿಂದ ಸತ್ಯವತಿಯು ಸ್ನಾನವನ್ನು ಮಾಡಿ ಪುನಃ ಕನ್ಯೆಯೇ ಆದಳು.
ಅಭಿವಾದ್ಯ ಮುನೇಃ ಪಾದೌ ಪುತ್ರಂ ಜಗ್ರಾಹ ಪಾಣಿನಾ |
ಸ್ಪೃಷ್ಟಮಾತ್ರೇ ಸ ನಿರ್ಭತ್ಸ್ಯ ಮಾತರಂ ವಾಕ್ಯಮಬ್ರವೀತ್ ॥150॥
ಋಷಿಗಳ ಪಾದಗಳಿಗೆ ನಮಸ್ಕರಿಸಿ ತನ್ನ ಹಸ್ತಗಳಿಂದ ಪುತ್ರನನ್ನು ಎತ್ತಿಕೊಳ್ಳಲು ಉದ್ಯುಕ್ತಳಾದಳು. ತಾಯಿಯು ಮುಟ್ಟಿದ ತಕ್ಷಣ ಅವಳನ್ನು ಗದರಿಸಿ ತಾಯಿಯನ್ನು ಕುರಿತು ವ್ಯಾಸರು ಮಾತನಾಡಿದರು.

ಮಮ ಪಿತ್ರಾ ತು ಸಂಸ್ಪರ್ಶಾನ್ನಾತಸ್ತ್ವಮಭವಃ ಶುಚಿಃ |
ಅದ್ಯ ದಾಶಸುತಾ ಕನ್ಯಾ ನ ಸ್ಪೃಶೇರ್ಮಾಮನಿಂದಿತೇ ॥151॥
ತಾಯಿಯೇ ನನ್ನ ತಂದೆಯ ಸಂಸ್ಪರ್ಶದಿಂದ ನೀನು ಶುದ್ಧಳಾಗಿದ್ದೆ. ಈಗ ಪುನಃ ಕನ್ಯೆಯಾಗಿ ದಾಶಸುತೆಯಾಗಿದ್ದೀಯೆ. ಆದ್ದರಿಂದ ಏಲೌ ಅನಿಂದಿತಳಾದವಳೇ ನನ್ನನ್ನು ಮುಟ್ಟಬೇಡ.
ವೈಶಂಪಾಯನಃ
ವ್ಯಾಸಸ್ಯ ವಚನಂ ಶ್ರುತ್ವಾ ಬಾಷ್ಪಪೂರ್ಣಮುಖೀ ತದಾ |
ಮನುಷ್ಯಭಾವಾತ್ ಸಾ ಯೋಷಿತ್ ಪಪಾತ ಮುನಿಪಾದಯೋಃ ॥
ವ್ಯಾಸರ ವಚನವನ್ನು ಕೇಳಿ ಕಣ್ಣುಗಳಲ್ಲಿ ನೀರುತುಂಬಿಕೊಂಡು ಸತ್ಯವತಿಯು ಮನುಷ್ಯಭಾವದಿಂದ ಪರಾಶರರ ಪಾದಗಳ ಮೇಲೆ ಬಿದ್ದಳು.
ವೈಶಂಪಾಯನಃ
ಮಹಾಪ್ರಸಾದೋ ಭಗವಾನ್ ಪುತ್ರಂ ಪ್ರೋವಾಚ ಧರ್ಮವಿತ್ |
ಮಾ ತ್ವಮೇವಂವಿಧಂ ಕಾರ್ಷೀರ್ನೈತದ್ ಧರ್ಮ್ಯಂ ಮತಂ ಹಿ ನಃ ॥
ಮಹಾನುಗ್ರಹಶಾಲಿಗಳಾದ ಧರ್ಮಜ್ಞರಾದ ಪೂಜ್ಯರಾದ ಪರಾಶರರು ಮಗು, ಹೀಗೆ ಮಾಡಬೇಡ. ನೀನು ಮಾಡುತ್ತಿರುವುದು ನನ್ನ ದೃಷ್ಟಿಯಲ್ಲಿ ಧರ್ಮವಲ್ಲ ಎಂದು ಹೇಳಿದರು.
ದೂಷ್ಯೌ ನ ಮಾತಾಪಿತರೌ ತಥಾ ಪೂರ್ವೋಪಕಾರಿಣೌ |
ಧಾರಣಾದ್ ದುಃಖಸಹನಾತ್ ತಯೋರ್ಮಾತಾ ಗರೀಯಸೀ ॥154॥
ತಂದೆತಾಯಿಗಳನ್ನು ಹಾಗೆಯೇ ಹಿಂದೆ ಉಪಕಾರಮಾಡಿದವರನ್ನು ಎಂದೂ ದೂಷಿಸಬಾರದು. ಗರ್ಭದಲ್ಲಿ ಹೊರುವುದರಿಂದ ಮತ್ತು ಪ್ರಸವದ ವೇದನೆಯನ್ನು ಅನುಭವಿಸುವುದರಿಂದ ಅವರಲ್ಲಿ ತಾಯಿಯು ಶ್ರೇಷ್ಠಳಾದವಳು.
ಬೀಜಕ್ಷೇತ್ರಸಮಾಯೋಗೇ ಸಸ್ಯಂ ಜಾಯತಿ ಲೌಕಿಕಮ್ |
ಜಾಯತೇ ಚ ಸುತಸ್ತದ್ವತ್ ಪುರುಷಸ್ತ್ರೀಸಮಾಗಮೇ ॥155॥
ಭೂಮಿ ಮತ್ತು ಬೀಜದ ಸಂಯೋಗವು ಉಂಟಾದಾಗ ಲೋಕದಲ್ಲಿ ಸಸ್ಯವು ಹುಟ್ಟುತ್ತದೆ. ಹಾಗೆಯೇ ಸ್ತ್ರೀಪುರುಷರ ಸಮಾಗಮದಿಂದ ಸುತನು ಜನಿಸುತ್ತಾನೆ.
ಮೃಗೀಣಾಂ ಪಕ್ಷಿಣಾಂ ಚೈವ ಅಪ್ಸರಾಣಾಂ ತಥೈವ ಚ |
ಶೂದ್ರಯೋನ್ಯಾಂ ಚ ಜಾಯಂತೇ ಮುನಯೋ ವೇದಪಾರಗಾಃ ॥156|
ವೇದಪಾರಂಗತರಾದ ಋಷಿಗಳು ಮೃಗಯೋನಿಯಲ್ಲಿಯೂ, ಪಕ್ಷಿಯೋನಿಯಲ್ಲಿಯೂ, ಅಪ್ಸರೆಯರ ಯೋನಿಯಲ್ಲಿಯೂ, ಅಥವಾ ಶೂದ್ರಯೋನಿಯಲ್ಲಿಯೂ ಜನಿಸುತ್ತಾರೆ.
ಋಷ್ಯಶೃಂಗೋ ಮೃಗೀಪುತ್ರಃ ಕಣ್ವೋ ಬಾರ್ಹಿಸುತಸ್ತಥಾ |
ಅಗಸ್ತ್ಯಶ್ಚ ವಸಿಷ್ಠಶ್ಚ ಊರ್ವಶ್ಯಾಂ ಜನಿತಾವುಭೌ ॥157॥
ಋಷ್ಯಶೃಂಗರು ಹೆಣ್ಣುಜಿಂಕೆಯ ಪುತ್ರ. ಕಣ್ವರು ನವಿಲಿನ ಗರ್ಭದಲ್ಲಿ ಜನಿಸಿದರು. ಅಗಸ್ತ್ಯ ಮತ್ತು ವಸಿಷ್ಠರು ಊರ್ವಶಿಯಲ್ಲಿ ಜನಿಸಿದರು.
ಸೋಮಶ್ರವಾಸ್ತು ಸರ್ಪ್ಯಾಂ ತು ಅಶ್ವಿನಾವಶ್ವಸಂಭವೌ |
ಸ್ಕಂದಃ ಸ್ಕನ್ನೇನ ಶುಕ್ಲೇನ ಜಾತಃ ಶರವಣೇ ಪುರಾ ॥158॥
ಸೋಮಶ್ರವನು ಹೆಣ್ಣುಸರ್ಪದಲ್ಲಿ ಜನಿಸಿದರು. ಅಶ್ವಿನಿದೇವತೆಗಳು ಅಶ್ವಯೋನಿಯಲ್ಲಿ ಜನಿಸಿದರು. ಸ್ಕಂದನು ಸ್ಖಲನಗೊಂಡ ವೀರ್ಯವು ಬಿದ್ದ ಶರವಣದಲ್ಲಿ ಜನಿಸಿದನು.
ಏವಮೇವ ಚ ದೇವಾನಾಮೃಷೀಣಾಂ ಚೈವ ಸಂಭವಃ |
ಲೋಕವಾದಪ್ರವೃತ್ತಿರ್ಹಿ ನ ಮೀಮಾಂಸ್ಯಾ ಬುಧೈಃ ಸದಾ ॥159॥
ಋಷಿಗಳು ಮತ್ತು ದೇವತೆಗಳು ಹುಟ್ಟುವುದು ಈ ರೀತಿಯಲ್ಲಿಯೇ. ಇದು ಸ್ಮೃತಿವಚನಗಳಲ್ಲಿ ಪ್ರಸಿದ್ಧವಾಗಿದೆ. ವಿವೇಕಿಗಳಾದವರು ಇದನ್ನು ವಿಚಾರ ಮಾಡಬಾರದು.
ವೇದವ್ಯಾಸ ಇತಿ ಪ್ರೋಕ್ತಃ ಪುರಾಣೇ ಚ ಸ್ವಯಂಭುವಾ |
ಧರ್ಮನೇತಾ ಮಹರ್ಷೀಣಾಂ ಮನುಷ್ಯಾಣಾಂ ತ್ವಮೇವ ಚ ॥
ಪುರಾಣಗಳಲ್ಲಿ ನಿನ್ನನ್ನು ವೇದವ್ಯಾಸರೆಂದು ಕರೆದಿದ್ದಾರೆ. ಮಹರ್ಷಿಗಳಿಗೂ ಮತ್ತು ಮನುಷ್ಯರಿಗೂ ಧರ್ಮಮಾರ್ಗ ಪ್ರದರ್ಶಕನು ನೀನೇ ಆಗಿರುವಿ.
ತಸ್ಮಾತ್ ಪುತ್ರ ನ ದೂಷ್ಯೇತ ವಾಸವೀ ಯೋಗಚಾರಿಣೀ |
ಮತ್ಪ್ರೀತ್ಯರ್ಥಂ ಮಹಾಪ್ರಾಜ್ಞ ಸಸ್ನೇಹಂ ವಕ್ತುಮರ್ಹಸಿ ॥161॥
ಪುತ್ರನೇ, ಆದ್ದರಿಂದ ಯೋಗಚಾರಿಣಿಯಾದ ವಸುಪುತ್ರಿಯಾದ ಸತ್ಯವತಿಯನ್ನು ದೂಷಿಸಬೇಡ. ಎಲೈ ಮಹಾಪ್ರಾಜ್ಞನೇ, ನನ್ನನ್ನು ಸಂತೋಷಪಡಿಸುವುದಕ್ಕಾದರೂ ಪ್ರೀತಿಯಿಂದ ಅವಳ ಜೊತೆ ಮಾತನಾಡು.
ಪ್ರಜಾಹಿತಾರ್ಥಂ ಸಂಭೂತೋ ವಿಷ್ಣೋರ್ಭಾಗೋ ಮಹಾನೃಷಿಃ |
ತಸ್ಮಾತ್ ಸ್ವಮಾತರಂ ಸ್ನೇಹಾತ್ ಪ್ರಬ್ರುವೀಹಿ ತಪೋಧನ ॥162॥
ಲೋಕಹಿತಕ್ಕಾಗಿ ವಿಷ್ಣುವಿನ ಅಂಶರೂಪದಿಂದ ಮಹಾಋಷಿಯಾಗಿ ಅವತರಿಸಿದ್ದೀಯೆ. ಆದ್ದರಿಂದ ಎಲೈ ತಪೋಧನನೇ, ತಾಯಿಯ ಜೊತೆಯಲ್ಲಿ ಸ್ನೇಹದಿಂದ ಮಾತನಾಡು.

ವೈಶಂಪಾಯನಃ
ಗುರೋರ್ವಚನಮಾಜ್ಞಾಯ ವ್ಯಾಸಃ ಪ್ರೀತೋऽಭವತ್ ತದಾ |
ಚಿಂತಾಯಿತ್ವಾ ಲೋಕವೃತ್ತಂ ಮಾತುರಂಕಮಥಾವಿಶತ್ ॥163॥
ತಂದೆಯ ಮಾತುಗಳನ್ನು ಕೇಳಿ ವ್ಯಾಸರು ಆಗ ಸಂತುಷ್ಟರಾದರು. ಲೋಕದ ನಡತೆಯನ್ನು ಚಿಂತಿಸಿ ತಾಯಿಯ ತೊಡೆಯ ಮೇಲೆ ಕುಳಿತುಕೊಂಡರು.
ಪುತ್ರಸ್ಪರ್ಶಾತ್ ತು ಲೋಕೇಷು ನಾನ್ಯತ್ ಸುಖಮತೀವ ಹಿ |
ವ್ಯಾಸಂ ಕಮಲಪತ್ರಾಕ್ಷೀ ಪರಿಷ್ವಜ್ಯಾಶ್ರು ವರ್ತಯತ್ |
ಸ್ತನ್ಯಾಸಾರೈಃ ಕ್ಲಿದ್ಯಮಾನಾ ಪುತ್ರಮಾಘ್ರಾಯ ಮೂರ್ಧನಿ ॥164॥
ಪುತ್ರಸ್ಪರ್ಶಕ್ಕಿಂತ ಹೆಚ್ಚಿನ ಸುಖವು ಲೋಕದಲ್ಲಿ ಇಲ್ಲವಷ್ಟೇ? ಕಮಲನಯನೆಯಾದ ಸತ್ಯವತಿಯು ವ್ಯಾಸರನ್ನು ಆಲಿಂಗಿಸಿ ಕಣ್ಣೀರನ್ನು ಸುರಿಸಿದಳು. ತಾನಾಗಿ ಹರಿಯುವ ಸ್ತನ್ಯರಸದಿಂದ ಒದ್ದೆಯಾದವಳಾಗಿ ಮಗನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿದಳು.
ವಾಸವೀ
ಪುತ್ರಲಾಭಾತ್ ಪರಂ ಲೋಕೇ ನಾಸ್ತೀಹ ಪ್ರಸವಾರ್ಥಿನಾಮ್ |
ದುರ್ಲಭಂ ವೇತಿ ಮನ್ಯೇऽಹಂ ಮಯಾ ಪ್ರಾಪ್ತಂ ಮಹತ್ತಪಃ ॥165॥
ಸಂತಾನವನ್ನು ಅಪೇಕ್ಷಿಸುವವರಿಗೆ ಪುತ್ರಲಾಭಕ್ಕಿಂತ ದೊಡ್ಡದು ಲೋಕದಲ್ಲಿ ಯಾವುದೂ ಇಲ್ಲ. ಪುತ್ರಲಾಭವು ಬಹುದುರ್ಲಭವೆಂದೇ ತಿಳಿಯುತ್ತೇನೆ. ನಾನು ಈ ದಿನ ಮಹಾತಪಸ್ಸಿನ ಫಲವನ್ನು ಪಡೆದಿದ್ದೇನೆ.
ಮಹತಾ ತಪಸಾ ತಾತ ಮಹಾಯೋಗಬಲೇನ ಚ |
ಮಯಾ ತ್ವಂ ಹಿ ಮಹಾಪ್ರಾಜ್ಞ ಲಬ್ಧೋऽಮೃತಮಿವಾಮರೈಃ |
ತಸ್ಮಾತ್ ತ್ವಂ ಮಾಮೃಷೇಃ ಪುತ್ರ ತ್ಯಕ್ತುಂ ನಾರ್ಹಸಿ ಸಾಂಪ್ರತಮ್ ॥
ಎಲೈ ಮಹಾಪ್ರಾಜ್ಞನೇ ಎಲೈ ಮಗುವೇ, ನಾನು ಮಹಾತಪಸ್ಸಿನಿಂದಲೂ ಮಹಾಯೋಗಬಲದಿಂದಲೂ ಈ ದಿನ ದೇವತೆಗಳು ಅಮೃತವನ್ನು ಪಡೆದಂತೆ ನಿನ್ನನ್ನು ಪಡೆದಿದ್ದೇನೆ. ಆದ್ದರಿಂದ ಪುತ್ರನೇ ಈಗ ನೀನು ನನ್ನನ್ನು ಬಿಟ್ಟು ಹೋಗಬೇಡ.
ವೈಶಂಪಾಯನಃ
ಏವಮುಕ್ತಸ್ತತಃ ಸ್ನೇಹಾದ್ ವ್ಯಾಸೋ ಮಾತರಮಬ್ರವೀತ್ |
ತ್ವಯಾ ಸ್ಪೃಷ್ಟಃ ಪರಿಷ್ವಕ್ತೋ ಮೂರ್ಧ್ನಿ ಚಾಘ್ರಾಣಿತೋ ಮುಹುಃ ॥167॥
ಏತಾವನ್ಮಾತ್ರಯಾ ಪ್ರೀತಾ ಭವಿಷ್ಯೇಥಾ ನೃಪಾತ್ಮಜೇ |
ಸ್ಮೃತೋऽಹಂ ದರ್ಶಯಿಷ್ಯಾಮಿ ಕೃತ್ಯೇಷ್ವಿತಿ ಚ ಸೋऽಬ್ರವೀತ್ ॥168॥
ಹೀಗೆ ಹೇಳಲ್ಪಟ್ಟ ವ್ಯಾಸರು ತಾಯಿಯನ್ನು ಕುರಿತು ಪ್ರೀತಿಯಿಂದ ನೀನು ನನ್ನನ್ನು ಸ್ಪರ್ಶಮಾಡಿದ್ದೀಯೆ, ಆಲಿಂಗಿಸಿದ್ದೀಯೆ, ಮತ್ತೆ ಮತ್ತೆ ಶಿರಸ್ಸಿನಲ್ಲಿ ಆಘ್ರಾಣಿಸಿದ್ದಿಯೆ, ರಾಜಕುಮಾರಿಯೇ ನೀನು ಇಷ್ಟರಿಂದಲೇ ಸಂತುಷ್ಟಳಾಗಬೇಕು. ನಿನಗೆ ಅವಶ್ಯಕವಾದಾಗ ನೀನು ಸ್ಮರಣೆ ಮಾಡಿದರೆ ನಾನು ನಿನಗೆ ದರ್ಶನವನ್ನು ಕೊಡುತ್ತೇನೆ ಎಂದು ಹೇಳಿದರು.
ಸ ಮಾತರಮನುಜ್ಞಾಪ್ಯ ತಪಸ್ಯೇವ ಮನೋ ದಧೇ |
ತತಃ ಕನ್ಯಾಮನುಜ್ಞಾಯ ಪುನಃ ಕನ್ಯಾ ಭವತ್ವಿತಿ |
ಪರಾಶರೋऽಪಿ ಭಗವಾನ್ ಪುತ್ರೇಣ ಸಹಿತೋ ಯಯೌ ॥169॥
ವ್ಯಾಸರು ತಾಯಿಯ ಅನುಮತಿಯನ್ನು ಪಡೆದು ತಪಸ್ಸನ್ನೇ ಮಾಡಲು ನಿರ್ಧರಿಸಿದರು. ಆಗ ಪರಾಶರರು ಸತ್ಯವತಿಯನ್ನು ಪುನಃ ಕನ್ಯೆಯೇ ಆಗು ಎಂದು ಆಶೀರ್ವದಿಸಿ ಮಗನ ಜೊತೆಯಲ್ಲಿಯೇ ಪ್ರಯಾಣ ಮಾಡಿದರು.
ಗತ್ವಾऽऽಶ್ರಮಪದಂ ಪುಣ್ಯಂ ದೃಶ್ಯಂತ್ಯಾಶ್ಚ ಪರಾಶರಃ |
ಜಾತಕರ್ಮಾದಿಸಂಸ್ಕಾರಂ ಕಾರಯಾಮಾಸ ಧರ್ಮತಃ ॥170॥
ತಮ್ಮ ಪವಿತ್ರವಾದ ಆಶ್ರಮಕ್ಕೆ ಹಿಂದಿರುಗಿ ತಾಯಿಯಾದ ಸತ್ಯವತಿಯು ನೋಡುತ್ತಿರುವಂತೆಯೇ ಪರಾಶರರು ವ್ಯಾಸರಿಗೆ ಜಾತಕರ್ಮ ಮೊದಲಾದ ಧಾರ್ಮಿಕವಿಧಿಗಳನ್ನು ಮಾಡಿಸಿದರು.
ಕೃತೋಪನಯನೋ ವ್ಯಾಸೋ ಯಾಜ್ಞವಲ್ಕ್ಯೇನ ಭಾರತ |
ವೇದಾನಧಿಜಗೌ ಸಾಂಗಾನ್ ಓಂಕಾರೇಣ ತ್ರಿಮಾತ್ರಯಾ |
ಗುರವೇ ದಕ್ಷಿಣಾಂ ದತ್ತತ್ವ ತಪಃ ಕರ್ತುಂ ಪ್ರಚಕ್ರಮೇ ॥171॥
ಎಲೈ ಭಾರತನೇ ಯಾಜ್ಞವಲ್ಕ್ಯರಿಂದ ಉಪನೀತರಾದ ವ್ಯಾಸರು ತ್ರಿಮಾತ್ರೆಯಿಂದ ಕೂಡಿದ ಓಂಕಾರವನ್ನೂ, ಸಾಂಗವೇದಗಳನ್ನೂ ಅಧ್ಯಯನ ಮಾಡಿದರು. ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟು ತಪಸ್ಸನ್ನು ಮಾಡಲು ಹೊರಟರು.
ಏವಂ ದ್ವೈಪಾಯನೋ ಜಜ್ಞೇ ಸತ್ಯವತ್ಯಾಂ ಪರಾಶರಾತ್ |
ದ್ವೀಪೇ ನ್ಯಸ್ತಃ ಸ ಯದ್ ಬಾಲಸ್ತಸ್ಮಾದ್ ದ್ವೈಪಾಯನೋऽಭವತ್ ॥172॥
ಹೀಗೆ ವ್ಯಾಸರು ಪರಾಶರರಿಂದ ಸತ್ಯವತಿಯಲ್ಲಿ ಜನಿಸಿದರು. ದ್ವೀಪದಲ್ಲಿ ಬಾಲಕರಾಗಿ ಜನಿಸಿದ ಕಾರಣ ಅವರಿಗೆ ದ್ವೈಪಾಯನ ಎಂದು ಹೆಸರು ಬಂದಿತು.
ಪಾದಾಪಸಾರಿಣಂ ಧರ್ಮಂ ವಿದ್ವಾನ್ ಸ ತು ಯುಗೇ ಯುಗೇ |
ಆಯುಃಶಕ್ತಿಂ ಚ ಮರ್ತ್ಯಾನಾಂ ಯುಗಾದ್ ಯುಗಮವೇಕ್ಷ್ಯ ಚ ॥
ಬ್ರಹ್ಮರ್ಷಿರ್ಬ್ರಾಹ್ಮಣಾನಾಂ ಚ ತಥಾನುಗ್ರಹಕಾಮ್ಯಯಾ |
ವಿವ್ಯಾಸ ವೇದಾನ್ ಯಸ್ಮಾಚ್ಚ ತಸ್ಮಾದ್ ವ್ಯಾಸ ಇತಿ ಸ್ಮೃತಃ ॥174॥

ಯುಗದಿಂದ ಯುಗಕ್ಕೆ ಧರ್ಮವು ಒಂದು ಪಾದ ಹ್ರಾಸ ಹೊಂದುವುದನ್ನು ಕಂಡು ಹಾಗೆಯೇ ಯುಗದಿಂದ ಯುಗಕ್ಕೆ ಮನುಷ್ಯರ ಆಯುಸ್ಸು ಕಡಿಮೆಯಾಗುವುದನ್ನು ಕಂಡು ಜ್ಞಾನಿಗಳಾದ ಅವರು ಬ್ರಹ್ಮರ್ಷಿಗಳಿಗೂ ಮತ್ತು ಬ್ರಾಹ್ಮಣರಿಗೂ ಅನುಗ್ರಹಮಾಡುವ ಇಚ್ಛೆಯಿಂದ  ವೇದಗಳನ್ನು ವಿಭಾಗಮಾಡಿದರು. ಆ ಕಾರಣದಿಂದ ಅವರಿಗೆ ವ್ಯಾಸರು ಎಂಬ ಹೆಸರೂ ಬಂದಿತು.
ತತಃ ಸ ಮಹರ್ಷಿರ್ವಿದ್ವಾಂಶ್ಛಿಷ್ಯಾನಾಹೂಯ ಧರ್ಮವಿತ್ |
ಸುಮಂತುಂ  ಜೈಮಿನಿಂ ಪೈಲಂ ಶುಕಂ ಚೈವ ಸ್ವಮಾತ್ಮಜಮ್   ॥175॥
ಪ್ರಭುರ್ವರಿಷ್ಠೋ ವರದೋ ವೈಶಂಪಾಯನಮೇವ ಚ |
ವೇದಾನಧ್ಯಾಪಯಾಮಾಸ ಮಹಾಭಾರತಪಂಚಮಾನ್ |
ಸಂಹಿತಾಸ್ತೈಃ  ಪೃಥಕ್ತ್ವೇನ ಭಾರತಸ್ಯ ಪ್ರಕೀರ್ತಿತಾಃ ॥176॥
ಅನಂತರ ಜ್ಞಾನಿಗಳೂ, ಮಹರ್ಷಿಗಳೂ, ಧರ್ಮವೇತ್ತರೂ ಆದ ಆ ಮಹರ್ಷಿಗಳು ಸುಮಂತು, ಜೈಮಿನಿ, ಪೈಲ, ತಮ್ಮ ಸುತನಾದ ಶುಕ, ಮತ್ತು ವೈಶಂಪಾಯನರು ಇವರನ್ನು ಕರೆದು ಎಲ್ಲಾ ವೇದಗಳನ್ನು ಮತ್ತು ಮಹಾಭಾರತವನ್ನೂ ಅಧ್ಯಯನ ಮಾಡಿಸಿದರು. ಪ್ರಭುಗಳೂ ಶ್ರೇಷ್ಠರೂ ಮತ್ತು ವರದರೂ ಆದ ವ್ಯಾಸರಿಂದ ಅವರೆಲ್ಲರೂ ಜ್ಞಾನವನ್ನು ಸಂಪಾದಿಸಿದರು.  ಅವರೆಲ್ಲರೂ ಅಧ್ಯಯನ ಮಾಡಿದ ಮಹಾಭಾರತವು ಮಹಾಭಾರತದ ಬೇರೆ ಬೇರೆ ಸಂಹಿತೆಗಳೆಂದು ಹೇಳಲ್ಪಡುತ್ತವೆ.
ತತಃ ಸತ್ಯವತೀ ಹೃಷ್ಟಾ ಜಗಾಮ ಸ್ವಂ ನಿವೇಶನಮ್ |
ತಸ್ಯಾಸ್ತತ್ವಯೋಜನಾದ್ ಗಂಧಮಾಜಿಘ್ರಂತಿ ನರಾ ಭುವಿ |
ದಾಶರಾಜಸ್ತು ತದ್ಗಂಧಮಾಜಿಘ್ರನ್ ಪ್ರೀತಿಮಾವಹತ್ ॥177॥
ಅನಂತರ ಸತ್ಯವತಿಯು ಸಂತೋಷದಿಂದ ತನ್ನ ಮನೆಗೆ ಹಿಂದಿರುಗಿದಳು.  ಅವಳ ಶರೀರದ ಸುಗಂಧವು ಒಂದು ಯೋಜನದೂರದಿಂದ ಮನುಷ್ಯರಿಗೆ ಆಘ್ರಾಣಿಸಲು ಸಾಧ್ಯವಾಯಿತು. ದಾಶರಾಜನೂ ಸಹ ಆ ಗಂಧವನ್ನು ಆಘ್ರಾಣಿಸಿ ಸಂತೋಷಗೊಂಡನು.
ದಾಶಃ
ತ್ವಾಮಾಹುರ್ಮತ್ಸ್ಯಗಂಧೇತಿ ಕಥಂ ಬಾಲೇ ಸುಗಂಧತಾ |
ಅಪಾಸ್ಯ ಮತ್ಸ್ಯಗಂಧತ್ವಂ ಕೇನ ದತ್ತಾ ಸುಗಂಧತಾ ॥178॥
ಕುಮಾರಿಯೇ ನಿನ್ನನ್ನು ಎಲ್ಲರೂ ಮತ್ಸ್ಯಗಂಧಾ ಎಂದು ಕರೆಯುತ್ತಾರೆ. ಈ ಸುಗಂಧವು ಎಲ್ಲಿಂದ ಬಂದಿತು? ಈ ಮತ್ಸ್ಯಗಂಧವನ್ನು ನಾಶಮಾಡಿ ನಿನಗೆ ಸುಗಂಧವನ್ನು ಕೊಟ್ಟವರು ಯಾರು?
ಸತ್ಯವತೀ
ಶಕ್ತೇಃ ಪುತ್ರೋ ಮಹಾಪ್ರಾಜ್ಞಃ ಪರಾಶರ ಇತಿ ಸ್ಮೃತಃ |
ನಾವಂ ವಾಹಯಮಾನಾಯಾ ಮಮ ದೃಷ್ಟ್ವಾ  ಸುಶಿಕ್ಷಿತಮ್   ॥179॥
ಸ ಋಷಿಃ ಪರಮಪ್ರೀತಃ ಯೋಜನಾದ್ ಗಂಧತಾಂ ದದೌ |
ಋಷೇಃ ಪ್ರಸಾದಂ ದೃಷ್ಟ್ವಾ ತು ಜನಾಃ ಪ್ರೀತಿಮುಪಾಗಮನ್ |
ಏವಂ ಲಬ್ಧೋ ಮಹಾಗಂಧೋ ನ ರೋಷಂ ಕರ್ತುಮರ್ಹಸಿ   ॥180॥
ಶಕ್ತಿಋಷಿಗಳ ಮಕ್ಕಳಾದ ಮಹಾಪ್ರಾಜ್ಞರಾದ ಪರಾಶರರೆಂಬುವರು ನಾನು ನಾವೆಯನ್ನು ನಡೆಸುವಾಗ ನನ್ನ ಕೌಶಲವನ್ನು ನೋಡಿ ಪರಮಪ್ರಸನ್ನರಾಗಿ ಯೋಜನದಿಂದ ಆಘ್ರಾಣಿಸಬಹುದಾದ ಗಂಧವನ್ನು ಕೊಟ್ಟರು. ಋಷಿಯ ಅನುಗ್ರಹವನ್ನು ನೋಡಿದ ಜನಗಳು ಬಹಳ ಸಂತೋಷಗೊಂಡರು. ಹೀಗೆ ನನಗೆ ದಿವ್ಯಗಂಧವು ಲಭಿಸಿತು. ನೀನು ಕೋಪಗೊಳ್ಳುವ ಅವಶ್ಯಕತೆಯಿಲ್ಲ.
ವೈಶಂಪಾಯನಃ
ದಾಶರಾಜಸ್ತು ತದ್ವಾಕ್ಯಂ ಪ್ರಶಶಂಸ ನನಂದ ಚ |
ಏತತ್ ಪವಿತ್ರಂ ಪುಣ್ಯಂ ಚ ವ್ಯಾಸಸಂಭವಮುತ್ತಮಮ್ |
ಇತಿಹಾಸಮಿಮಂ ಶ್ರುತ್ವಾ ಪ್ರಜಾವಂತೋ ಭವಂತಿ ವೈ ॥181॥
ದಾಶರಾಜನು ಮಗಳ ಆ ವಾಕ್ಯವನ್ನು ಕೇಳಿ ಅದನ್ನು ಪ್ರಶಂಸಿಸಿ ಸಂತೋಷ ಪಟ್ಟನು. ಈ ವ್ಯಾಸರ ಜನನದ ಆಖ್ಯಾನವು ಶ್ರೇಷ್ಠವಾದುದು. ಪವಿತ್ರವಾದುದು. ಮತ್ತು ಪುಣ್ಯಪ್ರದವಾದುದು. ಈ ಇತಿಹಾಸವನ್ನು ಕೇಳಿದವರು ನಿಶ್ಚಯವಾಗಿ ಮಕ್ಕಳನ್ನು ಪಡೆಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಸಪ್ತಪಂಚಾಶತ್ತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ  ಮುಗಿಯಿತು.
*****

ಐವತ್ತೆಂಟನೆಯ ಅಧ್ಯಾಯ
(ಸಂಕ್ಷೇಪವಾಗಿ ಭೀಷ್ಮರ ಮತ್ತು ಪಾಂಡವರ ಜನ್ಮಕಥನ.)
ವೈಶಂಪಾಯನಃ
ತತೋ ಭೀಷ್ಮಃ ಶಾಂತನವೋ ಗಂಗಾಯಾಮಮಿತದ್ಯುತಿಃ |

ವಸುವೀರ್ಯಾತ್ ಸಮಭವನ್ಮಹಾವೀರ್ಯೋ ಮಹಾಯಶಾಃ ॥1॥
ಅನಂತರ ಅಮಿತಪರಾಕ್ರಮಿಯೂ, ಮಹಾಶೂರನೂ, ಮಹಾಕೀರ್ತಿವಂತನೂ ಆದ ಭೀಷ್ಮನು ಶಂತನುವಿನ ಮಗನಾಗಿ ಎಲ್ಲಾ ವಸುಗಳ ಸಾಮರ್ಥ್ಯವನ್ನು ಪಡೆದುಕೊಂಡು ಗಂಗೆಯಲ್ಲಿ ಅವತಾರ ಮಾಡಿದನು.
ಶೂಲೇ ಪ್ರೋತಃ ಪುರಾಣರ್ಷಿರಚೋರಶ್ಚೋರಶಂಕಯಾ |
ಆಣಿಮಾಂಡವ್ಯ ಇತಿ ವೈ ವಿಖ್ಯಾತಃ ಸುಮಹಾಯಶಾಃ ॥2॥
ಪ್ರಖ್ಯಾತರಾದಂತಹ ಮತ್ತು ಮಹಾಕೀರ್ತಿವಂತರಾದಂತಹ ಆಣಿಮಾಂಡವ್ಯ ಎಂಬ ಪ್ರಾಚೀನ ಋಷಿಗಳು ಕಳ್ಳತನವನ್ನು ಮಾಡದಿದ್ದರೂ ಸಹ ಇವನೇ ಕಳ್ಳ ಎಂಬ ಶಂಕೆಯಿಂದ ರಾಜಭಟರು ಅವರನ್ನು ಶೂಲಕ್ಕೆ ಏರಿಸಿದರು.
ಸ ಧರ್ಮಮಾಹೂಯ ಪುರಾ ಮಹರ್ಷಿರಿದಮುಕ್ತವಾನ್ |
ಇಷೀಕಯಾ ಮಯಾ ಬಾಲ್ಯಾದೇಕಾ ವಿದ್ಧಾ ಶಕುಂತಿಕಾ ॥3॥
ಕಿಲ್ಬಿಷಂ ತತ್ ಸ್ಮರೇ ಧರ್ಮ ನಾನ್ಯತ್ ಪಾಪಮಹಂ ಸ್ಮರೇ |
ತನ್ಮೇ ಸಹಸ್ರಸಮಿತಂ ಕಸ್ಮಾನ್ನೇಹಾಜಯತ್ ತಪಃ ॥4॥
ಆ ಆಣಿಮಾಂಡವ್ಯರು ಯಮಧರ್ಮರಾಜನನ್ನು ಕರೆದು ಹಿಂದೆ ಹೀಗೆ ಇದನ್ನು ಹೇಳಿದರು - ನಾನು ಬಾಲ್ಯದಲ್ಲಿ ಒಂದು ಹಕ್ಕಿಯನ್ನು ಒಂದು ಕಡ್ಡಿಯಿಂದ ಚುಚ್ಚಿದ್ದೆ. ಇದೊಂದರ ಸ್ಮರಣೆ ನನಗಿದೆ. ಇದನ್ನು ಬಿಟ್ಟು ನಾನು ಬೇರೆ ಯಾವ ಪಾಪವನ್ನೂ ಮಾಡಿಲ್ಲ. ನಾನು ಮಾಡಿದ ಸಹಸ್ರ ಸಹಸ್ರ ತಪಸ್ಸುಗಳು ಏಕೆ ಈ ಪಾಪವನ್ನು ಪರಿಹಾರ ಮಾಡಲಿಲ್ಲ?
ಗರೀಯಾನ್ ಬ್ರಾಹ್ಮಣವಧಃ ಸರ್ವಭೂತವಧಾದ್ ಯತಃ |
ತಸ್ಮಾತ್ ತ್ವಂ ಕಿಲ್ಬಿಷಾದಸ್ಮಾಚ್ಛೂದ್ರಯೋನೌ ಜನಿಷ್ಯಸಿ ॥5॥
ಬ್ರಾಹ್ಮಣವಧವು ಉಳಿದ ಎಲ್ಲಾ ಪ್ರಾಣಿಗಳ ವಧಕ್ಕಿಂತಲೂ ಘೋರವಾದ ಹೀನಾಯವಾದ ಕರ್ಮ. ಆದ್ದರಿಂದ ಈ ದೋಷದಿಂದ ನೀನು ಶೂದ್ರಯೋನಿಯಲ್ಲಿ ಅವತಾರವನ್ನು ಮಾಡು.
ತೇನ ಶಾಪೇನ ಧರ್ಮೋಽಪಿ ಶೂದ್ರಯೋನಾವಜಾಯತ |
ವಿದ್ವಾನ್ ವಿದುರರೂಪೇಣ ಧಾರ್ಮಿಕಃ ಕಿಲ್ಬಿಷಾತ್ ತತಃ ॥6॥
ಈ ದೋಷದಿಂದ ಮತ್ತು ಈ ಶಾಪದಿಂದ ಯಮಧರ್ಮನೂ ಕೂಡ ಶೂದ್ರಯೋನಿಯಲ್ಲಿ ವಿದ್ವಾಂಸನಾದ ವಿದುರನರೂಪದಿಂದ ಧಾರ್ಮಿಕನಾಗಿ ಅವತಾರ ಮಾಡಿದನು.
ಸಂಜಯೋ ಮುನಿಕಲ್ಪಸ್ತು ಜಜ್ಞೇ ಶೂದ್ರೋ ಗವಲ್ಗಣಾತ್ |
ಸೂರ್ಯಾಚ್ಚ ಕುಂತ್ಯಾಂ ಕನ್ಯಾಯಾಂ ಜಜ್ಞೇ ಕರ್ಣೋ ಮಹಾರಥಃ|
ಸಹಜಂ ಕವಚಂ ಬಿಭ್ರತ್ ಕಂಡಲದ್ಯೋತಿತಾನನಃ ॥7॥
ಋಷಿಗೆ ಸಮಾನವಾಗಿದ್ದ ಸಂಜಯನು ಗವಲ್ಗಣನ ಮಗನಾಗಿ ಶೂದ್ರಯೋನಿಯಲ್ಲಿ ಜನಿಸಿದನು. ಕುಂತಿಯು ಇನ್ನೂ ಕನ್ಯೆಯಾಗಿರುವಾಗಲೇ ಸೂರ್ಯನಿಂದ ಮಹಾರಥನಾದ ಸಹಜವಾದ ಕವಚ ಮತ್ತು ಕುಂಡಲಗಳಿಂದ ಶೋಭಿಸುವ ಮುಖವುಳ್ಳ ಕರ್ಣನನ್ನು ಪಡೆದಳು.
ಅನುಗ್ರಹಾರ್ಥಂ ಲೋಕಾನಾಂ ವಿಷ್ಣುರ್ಲೋಕನಮಸ್ಕೃತಃ |
ವಸುದೇವಾತ್ತು ದೇವಕ್ಯಾಂ ಪ್ರಾದುರ್ಭೂತೋ ಮಹಾಯಶಾಃ ॥8॥
ಲೋಕವನ್ನು ಅನುಗ್ರಹಿಸಲು ಸರ್ವಲೋಕನಮಸ್ಕೃತನಾದ ವಿಷ್ಣುವು ವಸುದೇವನಿಂದ ದೇವಕಿಯಲ್ಲಿ ಮಹಾಕೀರ್ತಿವಂತನಾಗಿ ಪ್ರಾದುರ್ಭೂತನಾದನು.
ಅನಾದಿನಿಧನೋ ದೇವಃ ಸ ಕರ್ತಾ ನಕೃತಃ ಪ್ರಭುಃ |
ಅವ್ಯಕ್ತಂ ತ್ವ ಕ್ಷರಂ ಬ್ರಹ್ಮ ಪ್ರಧಾನಂ ನಿರ್ಗುಣಾತ್ಮಕಮ್ |
ಆತ್ಮಾನಮವ್ಯಯಂ ಚೈವ ಪ್ರಕೃತೇಃ ಪ್ರಭವಂ ಪರಮ್ ॥9॥
ಪುರುಷಂ ವಿಶ್ವಕರ್ಮಾಣಂ ಸತ್ಯಯೋನಿಂ ಧ್ರುವಾಕ್ಷರಮ್ |
ಅನಂತಮಚಲಂ ಮೇರುಂ ಹಂಸಂ ನಾರಾಯಣಂ ಪ್ರಭುಮ್ ॥10॥
ಧಾತಾರಮಜರಂ ದಿವ್ಯಂ ಯಮಾಹುಃ ಪರಮವ್ಯಯಮ್ |
ಪುರುಷಃ ಸ ವಿಭುಃ ಕರ್ತಾ ಸರ್ವಭೂತಪಿತಾಮಹಃ |
ಧರ್ಮಸಂಸ್ಥಾಪನಾರ್ಥಾಯ ಪ್ರಜಜ್ಞೇಽಂಧಕವೃಷ್ಣಿಷು ॥11॥
ಅನಾದಿನಿಧನನಾದ ದೇವನು ಎಲ್ಲವನ್ನೂ ಮಾಡುವವನು ಯಾರಿಂದಲೂ ಮಾಡಲ್ಪಡದವನು. ಸರ್ವಸಮರ್ಥನೂ, ಅವ್ಯಕ್ತನೂ, ನಾಶರಹಿತನೂ, ಗುಣಪೂರ್ಣನೂ, ಪ್ರಧಾನನಾದವನೂ, ಪ್ರಕೃತಿಯ ಗುಣತ್ರಯಗಳಿಂದ ವರ್ಜಿತನಾದವನೂ, ಮತ್ತು ಸ್ವಾಮಿಯೆಂದೂ, ನಾಶರಹಿತನೆಂದೂ, ಪ್ರಕೃತಿಗೂ ಕಾರಣನೆಂದೂ, ಷಡ್ಗುಣೈಶ್ವರ್ಯ ಸಂಪನ್ನನೆಂದೂ ಸರ್ವಕರ್ತೃವೆಂದೂ, ಸತ್ಯದ ಉಗಮಸ್ಥಾನವೆಂದೂ, ಪ್ರಣವಪ್ರತಿಪಾದ್ಯನೆಂದೂ, ಅನಂತನೆಂದೂ, ವ್ಯಾಪ್ತನೆಂದೂ, ಲಕ್ಷ್ಮೀದೇವಿಗೂ ಪ್ರೇರಕನೆಂದೂ, ಪರಿಶುದ್ಧ ಸ್ವಭಾವದವನೆಂದೂ, ನಾರಾಯಣನೆಂದೂ, ಸರ್ವಲೋಕಗಳನ್ನು ರಕ್ಷಿಸುವನೆಂದೂ, ದಿವ್ಯಮೂರ್ತಿಯೆಂದೂ, ಸರ್ವೋತ್ತಮನೆಂದು ಯಾರನ್ನು ಹೇಳುತ್ತಾರೆಯೋ, ಅವನೇ ವ್ಯಾಪ್ತನಾಗಿ, ಸರ್ವಕರ್ತೃವಾಗಿ, ಸರ್ವಭೂತಗಳಿಗೆ ಪಿತಾಮಹನೆನಿಸಿಕೊಂಡವನಾಗಿ, ಪೂರ್ಣ-ಷಡ್ಗುಣೈಶ್ವರ್ಯಸಂಪನ್ನನಾಗಿ ಧರ್ಮಸಂಸ್ಥಾಪನವನ್ನು ಮಾಡುವುದಕ್ಕೋಸ್ಕರ ಅಂಧಕ ವೃಷ್ಣಿಗಳ ಕುಲದಲ್ಲಿ ಅವತಾರ ಮಾಡಿದನು.
ಅಸ್ತ್ರಜ್ಞೌ ತು ಮಹಾವೀರ್ಯೌ ಸರ್ವಶಾಸ್ತ್ರವಿಶಾರದೌ |
ಸಾತ್ಯಕಿಃ ಕೃತವರ್ಮಾ ಚ ನಾರಾಯಣಮನುವ್ರತೌ |

ಸತ್ಯಕಾದ್ಧೃದಿಕಾಚ್ಚೈವ ಜಜ್ಞಾತೇಽಸ್ತ್ರವಿಶಾರದೌ ॥12॥
ಮಹಾಪರಾಕ್ರಮಶಾಲಿಗಳೂ, ಎಲ್ಲಾ ಶಾಸ್ತ್ರಗಳನ್ನು ತಿಳಿದವರೂ, ಎಲ್ಲಾ ಅಸ್ತ್ರಗಳನ್ನು ತಿಳಿದವರೂ ಆದ ಯಾವಾಗಲೂ ನಾರಾಯಣನ ಭಕ್ತರಾದ ಸಾತ್ಯಕಿ ಮತ್ತು ಕೃತವರ್ಮರು ಸತ್ಯಕ ಮತ್ತು ಹೃದಿಕರಿಂದ ಜನಿಸಿದರು.
ಭರದ್ವಾಜಸ್ಯ ಚ ಸ್ಕನ್ನಂ ದ್ರೋಣ್ಯಾಂ ಶುಕ್ರಮವರ್ಧತ |
ಮಹರ್ಷೇರುಗ್ರತಪಸಸ್ತಸ್ಮಾದ್ ದ್ರೋಣೋ ವ್ಯಜಾಯತ ॥13॥
ಮಹರ್ಷಿಗಳೂ ಉಗ್ರವಾದ ತಪಸ್ಸನ್ನು ಆಚರಿಸುವವರೂ ಆದ ಭರದ್ವಾಜರ ವೀರ್ಯವು ಒಂದು ಕಲಶದಲ್ಲಿ ಬಿದ್ದು ಅಲ್ಲೇ ಅಭಿವೃದ್ಧಿಯನ್ನು ಹೊಂದಿತು. ಅದರಿಂದ ದ್ರೋಣರು ಜನಿಸಿದರು.
ಗೌತಾಮಾನ್ಮಿಥುನಂ ಜಜ್ಞೇ ಶರಸ್ತಂಬಾಚ್ಛರದ್ವತಃ |
ಅಶ್ವತ್ಥಾಮ್ನಶ್ಚ ಜನನೀ ಕೃಪಶ್ಚೈವ ಮಹಾರಥಃ ॥14॥
ಗೌತಮವಂಶದವರಾದ ಶರದ್ವಂತರಿಂದ ಅವಳಿಮಕ್ಕಳು ಉಂಟಾದವು. ಅವುಗಳಲ್ಲಿ ಹೆಣ್ಣುಮಗುವು ಅಶ್ವತ್ಥಾಮನ ತಾಯಿಯಾದ ಕೃಪಿ ಮತ್ತು ಗಂಡುಮಗುವು ಮಹಾರಥರಾದ ಕೃಪಾಚಾರ್ಯರು
ಅಶ್ವತ್ಥಾಮಾ ತತೋ ಜಜ್ಞೇ ದ್ರೋಣಾದಸ್ತ್ರಭೃತಾಂ ವರಾತ್ |
ಧೃಷ್ಟದ್ಯುಮ್ನವಿನಾಶಾಯ ಸೃಷ್ಟೋ ಧಾತ್ರಾ ಮಹಾತ್ಮನಾ ॥15॥
ಅನಂತರ ಅಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರಿಂದ ಮಹಾನುಭಾವರಾದ ಬ್ರಹ್ಮದೇವರು ಧೃಷ್ಟದ್ಯುಮ್ನನ ವಿನಾಶಕ್ಕೆಂದೇ ಸೃಷ್ಟಿಮಾಡಿದ ಅಶ್ವತ್ಥಾಮಾಚಾರ್ಯರು ಜನಿಸಿದರು.
ತಥೈವ ಧೃಷ್ಟದ್ಯುಮ್ನೋಽಪಿ ಸಾಕ್ಷಾದಗ್ನಿಸಮದ್ಯುತಿಃ |
ವೈತಾನೇ ಕರ್ಮಣಿ ತತಃ ಪಾವಕಾತ್ ಸಮಜಾಯತ ॥16॥
ಹಾಗೆಯೇ ಅಗ್ನಿಗೆ ಸಮಾನವಾದ ಕಾಂತಿಯುಳ್ಳ ಧೃಷ್ಟದ್ಯುಮ್ನನು ಯಜ್ಞಕಾಲದಲ್ಲಿ ಅಗ್ನಿಕುಂಡದಿಂದ ಉದ್ಭವಿಸಿದನು.
ವೀರೋ ದ್ರೋಣವಿನಾಶಾಯ ಧನುಷಾ ಸಹ ವೀರ್ಯವಾನ್ |
ತಥೈವ ವೇದ್ಯಾಂ ಕೃಷ್ಣಾಪಿ ಜಜ್ಞೇ ತೇಜಸ್ವಿನೀ ಶುಭಾ ॥17॥
ಧೃಷ್ಟದ್ಯುಮ್ನನು ವೀರನಾಗಿ, ಪರಾಕ್ರಮಶಾಲಿಯಾಗಿ, ಧನುಸ್ಸಿನ ಜೊತೆಯಲ್ಲೇ ಜನಿಸಿದನು. ಹಾಗೆಯೇ ಕಾಂತಿಯುಕ್ತಳೂ ಮತ್ತು ಮಂಗಳಸ್ವರೂಪಳೂ ಆದ ದ್ರೌಪದಿಯು ವೇದಿ ಮಧ್ಯದಿಂದ ಜನಿಸಿದಳು.
ವಿಭ್ರಾಜಮಾನಾ ವಪುಷಾ ಬಿಭ್ರತೀ ರೂಪಮುತ್ತಮಮ್ |
ಪ್ರಹ್ಲಾದಶಿಷ್ಯೋ ನಗ್ನಜಿತ್ ಸುಬಲಶ್ಚಾಭವತ್ ತದಾ ॥18॥
ಅವಳು ಉತ್ತಮರೂಪವನ್ನು ಧರಿಸಿ ಹೊಳೆಯುವ ಶರೀರದಿಂದ ಜನಿಸಿದಳು. ಹಾಗೆಯೇ ಪ್ರಹ್ಲಾದಶಿಷ್ಯನಾದ ನಗ್ನಜಿತ್ ಮತ್ತು ಸುಬಲರೂ ಜನಿಸಿದರು.
ತಸ್ಯ ಪ್ರಜಾಽಧರ್ಮಧಾತ್ರೀ ಜಜ್ಞೇ ದೇವಪ್ರಕೋಪನಾತ್ |
ಗಾಂಧಾರರಾಜಾತ್ ಪುತ್ರೋಽಭೂಚ್ಛಕುನಿಃ ಸೌಬಲಸ್ತಥಾ ॥19॥
ಗಾಂಧಾರರಾಜನಾದ ಸುಬಲನಿಗೆ ದೇವತೆಗಳಿಗೆಸಗಿದ ದ್ರೋಹದಿಂದ ಅಧರ್ಮವನ್ನೇ ಧರಿಸಿದ ಶಕುನಿಯೆಂಬ ಪುತ್ರನು ಮಗನಾಗಿ ಜನಿಸಿದನು.
ದುರ್ಯೋಧನಸ್ಯ ಮಾತಾ ಚ ಜಜ್ಞಾತೇಽರ್ಥವಿದಾವುಭೌ |
ಕೃಷ್ಣದ್ವೈಪಾಯನಾಜ್ಜಜ್ಞೇ ಧೃತರಾಷ್ಟ್ರೋ ಜನೇಶ್ವರಃ |
ಕ್ಷೇತ್ರೇ ವಿಚಿತ್ರವೀರ್ಯಸ್ಯ ಪಾಂಡುಶ್ಚೈವ ಮಹಾಬಲಃ ॥20॥
ಅಲ್ಲಿಯೇ ದುರ್ಯೋಧನನ ತಾಯಿಯಾದ ಗಾಂಧಾರಿಯೂ ಜನಿಸಿದಳು. ಅವರಿಬ್ಬರೂ ಅರ್ಥಶಾಸ್ತ್ರವನ್ನು ಚೆನ್ನಾಗಿ ತಿಳಿದವರು. ವೇದವ್ಯಾಸರಿಂದ ವಿಚಿತ್ರವೀರ್ಯನ ಪತ್ನಿಯರಲ್ಲಿ ಧೃತರಾಷ್ಟ್ರರಾಜನು, ಮಹಾಬಲಿಷ್ಠನಾದ ಪಾಂಡುವೂ ಜನಿಸಿದರು. ಅವರಿಬ್ಬರೂ ಧರ್ಮಾರ್ಥಕುಶಲರು.
ಧರ್ಮಾರ್ಥಕುಶಲೋ ಧೀಮಾನ್ ಮೇಧಾವೀ ವೀತಕಲ್ಮಷಃ |
ವಿದುರಃ ಶೂದ್ರಯೋನೌ ತು ಜಜ್ಞೇ ದ್ವೈಪಾಯನಾದಪಿ |
ಪಾಂಡೋಸ್ತು ಜಜ್ಞಿರೇ ಪಂಚ ಪುತ್ರಾ ದೇವಸಮಾಃ ಪೃಥಕ್ ॥21॥
ಮೇಧಾವಿಯೂ, ದೋಷರಹಿತನೂ ಮಹಾಬುದ್ಧಿಶಾಲಿಯೂ ಆದ ವಿದುರನು ಕೃಷ್ಣದ್ವೈಪಾಯನರಿಂದ ಶೂದ್ರಯೋನಿಯಲ್ಲಿ ಜನಿಸಿದನು. ಪಾಂಡುವಿಗೆ ದೇವತೆಗಳಿಗೆ ಸಮಾನರಾದ ಐದು ಮಕ್ಕಳು ಜನಿಸಿದರು.
ದ್ವಯೋಃ ಸ್ತ್ರಿಯೋರ್ಗುಣಜ್ಯೇಷ್ಠಸ್ತೇಷಾಮಾಸೀದ್ ಯುಧಿಷ್ಠಿರಃ |
ಧರ್ಮಾದ್ ಯುಧಿಷ್ಠಿರೋ ಜಜ್ಞೇ ಮಾರುತಾತ್ ತು ವೃಕೋದರಃ ॥
ಕುಂತೀ ಮತ್ತು ಮಾದ್ರಿ ಈ ಇಬ್ಬರು ಪತ್ನಿಯರಲ್ಲಿ ಪಾಂಡುವಿಗೆ ಜನಿಸಿದ ಐದುಮಕ್ಕಳಲ್ಲಿ ಯುಧಿಷ್ಠಿರನು ವಯಸ್ಸಿನಿಂದಲೂ, ಗುಣಗಳಿಂದಲೂ ಜ್ಯೇಷ್ಠನಾದನು. ಯುಧಿಷ್ಠಿರನು ಯಮಧರ್ಮನಿಂದ ಜನಿಸಿದನು. ಭೀಮಸೇನನು ವಾಯುದೇವರಿಂದ ಜನಿಸಿದನು.
ಇಂದ್ರಾದ್ ಧನಂಜಯೋ ಜಜ್ಞೇ ಸರ್ವಶಾಸ್ತ್ರವಿಶಾರದಃ |
ಜಜ್ಞಾತೇ ರೂಪಸಂಪನ್ನಾವಶ್ವಿಭ್ಯಾಂ ತು ಯಮಾವಪಿ ॥23॥
ಸರ್ವಶಾಸ್ತ್ರವಿಶಾರದನಾದ ಅರ್ಜುನನು ಇಂದ್ರನಿಂದ ಜನಿಸಿದನು. ರೂಪಸಂಪನ್ನರೂ, ಗುರುಶುಶ್ರೂಷಾತತ್ಪರರೂ ಆದ ನಕುಲ-ಸಹದೇವರು ಅವಳಿಮಕ್ಕಳಾಗಿ ಅಶ್ವಿನಿದೇವತೆಗಳಿಂದ ಮಾದ್ರಿಯಲ್ಲಿ ಜನಿಸಿದರು.
ನಕುಲಃ ಸಹದೇವಶ್ಚ ಗುರುಶುಶ್ರೂಷಣೇ ರತೌ |

ತಥಾ ಪುತ್ರಶತಂ ಜಜ್ಞೇ ಧೃತರಾಷ್ಟ್ರಸ್ಯ ಧೀಮತಃ ॥24॥
ದುರ್ಯೋಧನಪ್ರಭೃತಯೋ ಯುಯುತ್ಸುಃ ಕರುಣಸ್ತಥಾ |
ತತ್ರ ದುಶ್ಶಾಸನಶ್ಚೈವ ದುಸ್ಸಹಶ್ಚೈವ ಭಾರತ ॥25॥
ದುರ್ಮರ್ಷಣೋ ವಿಕರ್ಣಶ್ಚ ಚಿತ್ರಸೇನೋ ವಿವಿಂಶತಿಃ |
ಜಯಃ ಸತ್ಯವ್ರತಶ್ಚೈವ ಪುರುಮಿತ್ರಶ್ಚ ಭಾರತ ॥26॥
ಹಾಗೆಯೇ ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ದುರ್ಯೋಧನ ಮೊದಲಾದ ನೂರು ಮಕ್ಕಳು ಜನಿಸಿದರು. ಹಾಗೆಯೇ ಕರುಣಾಪಾತ್ರನಾದ ಯುಯುತ್ಸುವು ಜನಿಸಿದನು. ಆ ನೂರು ಮಕ್ಕಳಲ್ಲಿ, ದುಶ್ಶಾಸನ, ದುಸ್ಸಹ, ದುರ್ಮರ್ಷಣ, ವಿಕರ್ಣ, ಚಿತ್ರಸೇನ, ವಿವಿಂಶತಿ, ಜಯ, ಸತ್ಯವ್ರತ, ಪುರುಮಿತ್ರ ಮೊದಲಾದವರು ಪ್ರಸಿದ್ಧರಾದವರು

ವೈಶ್ಯಾಪುತ್ರೋ ಯುಯುತ್ಸುಶ್ಚ ಏಕಾದಶಮಹಾರಥಾಃ |
ಅಭಿಮನ್ಯುಃ ಸುಭದ್ರಾಯಾಮರ್ಜುನಾದಭ್ಯಜಾಯತ ॥27॥
ದುರ್ಯೋಧನಾದಿ ಹತ್ತುಮಕ್ಕಳು ಮತ್ತು ವೈಶ್ಯೆಯಲ್ಲಿ ಜನಿಸಿದ ಯುಯುತ್ಸುವೂ ಸೇರಿ ಹನ್ನೊಂದು ಜನರೂ ಮಹಾರಥರು. ಅರ್ಜುನನಿಗೆ ಸುಭದ್ರೆಯಲ್ಲಿ ಅಭಿಮನ್ಯುವು ಜನಿಸಿದನು.
ಸ್ವಸ್ರೀಯೋ ವಾಸುದೇವಸ್ಯ ಪೌತ್ರಃ ಪಾಂಡೋರ್ಮಹಾತ್ಮನಃ |
ಪಾಂಡವೇಭ್ಯೋ ಹಿ ಪಂಚಭ್ಯಃ ಕೃಷ್ಣಾಯಾಂ ಪಂಚ ಜಜ್ಞಿರೇ ॥28॥
ಅಭಿಮನ್ಯುವು ಶ್ರೀಕೃಷ್ಣನ ತಂಗಿಯಾದ ಸುಭದ್ರೆಯ ಮಗ. ಮತ್ತು ಮಹಾತ್ಮನಾದ ಪಾಂಡುವಿನ ಪೌತ್ರ. ಪಾಂಡವರಿಗೆ ದ್ರೌಪದಿಯಲ್ಲಿ ಕ್ರಮವಾಗಿ ಐದು ಮಕ್ಕಳು ಜನಿಸಿದರು.
ಕುಮಾರಾ ರೂಪಸಂಪನ್ನಾಃ ಸರ್ವಶಾಸ್ತ್ರವಿಶಾರದಾಃ |
ಪ್ರತಿವಿಂಧ್ಯೋ ಯುಧಿಷ್ಠಿರಾತ್ ಸುತಸೋಮೋ ವೃಕೋದರಾತ್ ॥29॥
ಎಲ್ಲ ಕುಮಾರರೂ ರೂಪಸಂಪನ್ನರೂ ಮತ್ತು ಎಲ್ಲಾ ಶಾಸ್ತ್ರಗಳಲ್ಲೂ ವಿಶಾರದರು. ಯುಧಿಷ್ಠಿರನಿಗೆ ಪ್ರತಿವಿಂಧ್ಯ ಎಂಬ ಮಗನು, ಭೀಮಸೇನನಿಗೆ ಸುತಸೋಮನೆಂಬ ಮಗನೂ ಜನಿಸಿದರು.
ಅರ್ಜುನಾಚ್ಛ್ರುತಕೀರ್ತಿಶ್ಚ ಶತಾನೀಕಸ್ತು ನಾಕುಲಿಃ |
ತಥೈವ ಸಹದೇವಾಚ್ಚ ಶ್ರುತಕರ್ಮಾ ಪ್ರತಾಪವಾನ್ ॥30॥
ಅರ್ಜುನನಿಗೆ ಶ್ರುತಕೀರ್ತಿಯೆಂಬ ಮಗನೂ, ನಕುಲನಿಗೆ ಶತಾನೀಕ ಎಂಬ ಮಗನೂ, ಹಾಗೆಯೇ ಸಹದೇವನಿಗೆ ಪ್ರತಾಪಶಾಲಿಯಾದ ಶ್ರುತಕರ್ಮನೆಂಬ ಮಗನೂ ಜನಿಸಿದರು.
ಹಿಡಿಂಬಾಯಾಂ ತು ಭೀಮಸ್ಯ ವನೇ ಜಜ್ಞೇ ಘಟೋತ್ಕಚಃ |
ಶಿಖಂಡೀ ದ್ರುಪದಾಜ್ಜಜ್ಞೇ ಕನ್ಯಾ ಪುತ್ರತ್ವಮಾಗತಾ ॥31॥
ಭೀಮಸೇನನಿಗೆ ಕಾಡಿನಲ್ಲಿ ಹಿಡಿಂಬೆಯಲ್ಲಿ ಘಟೋತ್ಕಚನು ಜನಿಸಿದನು. ಶಿಖಂಡಿಯು ದ್ರುಪದನ ಮಗಳಾಗಿ ಜನಿಸಿ ಅನಂತರ ಪುಂಸ್ತ್ವವನ್ನು ಪಡೆದು ಮಗನಾದನು.
ಯಾಂ ಯಕ್ಷಃ ಪುರುಷಂ ಚಕ್ರೇ ಸ್ಥೂಣಪ್ರಿಯಚಿಕೀರ್ಷಯಾ |
ಕುರೂಣಾಂ ವಿಗ್ರಹೇ ತಸ್ಮಿನ್ ಸಮಾಗಚ್ಛನ್ ಬಹೂನ್ಯಥ |
ರಾಜ್ಞಾಂ ಶತಸಹಸ್ರಾಣಿ ಯೋತ್ಸ್ಯಮಾನಾನಿ ಸಂಯುಗೇ ॥32॥
ದ್ರುಪದನ ಆ ಮಗಳನ್ನು ಗಂಧರ್ವನು ರುದ್ರದೇವರಿಗೆ ಸಂತೋಷವನ್ನುಂಟುಮಾಡುವ ಸಲುವಾಗಿ ಪುರುಷನನ್ನಾಗಿ ಮಾಡಿದನು. ಕುರುಪಾಂಡವರಿಗೆ ಯುದ್ಧವಾದಾಗ ಅನೇಕ ಶತಸಹಸ್ರ ರಾಜರುಗಳು ಮತ್ತು ಕ್ಷತ್ರಿಯರು ಯುದ್ಧದಲ್ಲಿ ಒಟ್ಟಿಗೆ ಸೇರಿದರು.
ತೇಷಾಮಪರಿಮೇಯಾನಿ ನಾಮಧೇಯಾನಿ ಸರ್ವಶಃ |
ನ ಶಕ್ಯಂ ಪರಿಸಂಖ್ಯಾತುಂ ವರ್ಷಾಣಾಮರ್ಬುದೈರಪಿ |
ಏತೇ ತು ಕೀರ್ತಿತಾ ಮುಖ್ಯಾ ಯೈರಾಖ್ಯಾನಮಿದಂ ತತಮ್ ॥33॥
ಅನಾದಿಕಾಲದಿಂದ ಅನೇಕ ಕಲ್ಪಗಳಲ್ಲಿ ಜರುಗಿದ ಮಹಾಭಾರತ ಯುದ್ಧದಲ್ಲಿ ಪಾಲ್ಗೊಂಡವರ ಹೆಸರುಗಳನ್ನು ಎಣಿಸಲು ಅನೇಕ ಅರ್ಬುದವರ್ಷಗಳಾದರೂ ಸಾಧ್ಯವಿಲ್ಲ. (ಒಂದು ಅರ್ಬುದ ಎಂದರೆ ಹತ್ತುಕೋಟಿ ವರ್ಷ ಇಂತಹ ಅನೇಕ ಅರ್ಬುದಗಳು) ನಾನು ಹೇಳಿದ ಈ ವ್ಯಕ್ತಿಗಳು ಮುಖ್ಯರಾದವರು. ಇವರ ಚರಿತೆಯಿಂದ ಮಹಾಭಾರತದ ಆಖ್ಯಾನವು ತುಂಬಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟಪಂಚಾಶತ್ತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ಐವತ್ತೊಂಭತ್ತನೆಯ ಅಧ್ಯಾಯ
(ಭೂಭಾರ ಹರಣವನ್ನು ಮಾಡಲು ಅವತಾರ ಮಾಡುವಂತೆ

ನಾರಾಯಣನಲ್ಲಿ ಇಂದ್ರನ ಪ್ರಾರ್ಥನೆ.)
ಜನಮೇಜಯಃ
ಯ ಏತೇ ಕೀರ್ತಿತಾ ಬ್ರಹ್ಮನ್ ಯೇ ಚಾನ್ಯೇ ನಾನುಕೀರ್ತಿತಾಃ |
ಸಮ್ಯಕ್ ತಾನ್ ಜ್ಞಾತುಮಿಚ್ಛಾಮಿ ರಾಜ್ಞಶ್ಚಾನ್ಯಾನ್ ಸುವರ್ಚಸಃ ॥1॥
ಯದರ್ಥಮಿಹ ಸಂಭೂತಾ ದೇವಕಲ್ಪಾ ಮಹಾರಥಾಃ |
ಭುವಿ ತಾನ್ ಮೇ ಮಹಾಭಾಗ ಸಮ್ಯಗಾಖ್ಯಾತುಮರ್ಹಸಿ ॥2॥
ಎಲೈ ಬ್ರಾಹ್ಮಣರಾದ ವೈಶಂಪಾಯನರೇ, ಇದುವರೆಗೆ ಯಾರ ಅವತಾರಗಳನ್ನು ಹೇಳಿದ್ದಾರೋ, ಮತ್ತು ಯಾರ ಜನ್ಮಗಳನ್ನು ಹೇಳಿಲ್ಲವೋ, ಅಂತಹ ಎಲ್ಲಾ ವರ್ಚಸ್ವಿಗಳಾದ ಬೇರೆ ರಾಜರ ವಿಷಯವನ್ನು ನಾನು ಇನ್ನೂ ಚೆನ್ನಾಗಿ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಎಲೈ ಮಹಾನುಭಾವನೇ ದೇವತೆಗಳಿಗೆ ಸಮಾನರಾದ ಆ ಮಹಾರಥರು ಈ ಭೂಮಿಯಲ್ಲಿ ಯಾವ ಕಾರಣಕ್ಕಾಗಿ ಜನ್ಮತಾಳಿದರೆಂದು ನನಗೆ ಇನ್ನೂ ವಿಸ್ತಾರವಾಗಿ ತಿಳಿಯಬೇಕು.
ವೈಶಂಪಾಯನಃ
ರಹಸ್ಯಂ ಯದಿದಂ ರಾಜನ್ ದೇವಾನಾಮೃಷಿತಃ ಶ್ರುತಮ್ |
ತತ್ತು ತೇ ಕಥಯಿಷ್ಯಾಮಿ ನಮಸ್ಕೃತ್ವಾ ಸ್ವಯಂಭುವೇ ॥3॥
ಎಲೈ ರಾಜನೇ ಇದು ದೇವರಹಸ್ಯ, ನಾನು ಇದನ್ನು ಋಷಿಗಳಿಂದ ಕೇಳಿದ್ದೇನೆ. ದೇವರಿಗೆ ಮತ್ತು ಬ್ರಹ್ಮದೇವರಿಗೆ ನಮಸ್ಕರಿಸಿ ನಾನು ಆ ವಿಷಯವನ್ನು ನಿನಗೆ ನಿರೂಪಿಸುತ್ತೇನೆ.
ತ್ರಿಃ ಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪುರಾ |
ಜಾಮದಗ್ನ್ಯಸ್ತಪಸ್ತೇಪೇ ಮಹೇಂದ್ರೇ ಪರ್ವತೋತ್ತಮೇ ॥4॥
ಜಮದಗ್ನಿಗಳ ಮಗನಾದ ಪರಶುರಾಮದೇವರು ಹಿಂದೆ ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಕ್ಷತ್ರಿಯರನ್ನು ಸಂಹರಿಸಿ, ಪರ್ವತಶ್ರೇಷ್ಠವಾದ ಮಹೇಂದ್ರಪರ್ವತಕ್ಕೆ ಹೋಗಿ, ತಪಸ್ಸನ್ನು ಮಾಡಿದರು.
ತದಾ ನಿಃಕ್ಷತ್ರಿಯೇ ಲೋಕೇ ಭಾರ್ಗವೇಣ ಕೃತೇ ಸತಿ |
ಬ್ರಾಹ್ಮಣಾನ್ ಕ್ಷತ್ರಿಯಾ ರಾಜನ್ ಗರ್ಭಾರ್ಥಿನ್ಯೋSಭಿಚಕ್ರಮುಃ ॥5॥
ಎಲೈ ರಾಜನೇ ಪರಶುರಾಮದೇವರು ಹೀಗೆ ಭೂಮಿಯಲ್ಲಿ ಕ್ಷತ್ರಿಯರನ್ನು ಸಂಹಾರ ಮಾಡಿದ ಮೇಲೆ ಕ್ಷತ್ರಿಯಸ್ತ್ರೀಯರು ಗರ್ಭಧಾರಣೆಯನ್ನು ಉದ್ದೇಶಿಸಿ ಬ್ರಾಹ್ಮಣರನ್ನು ಸಮೀಪಿಸಿದರು.
ತಾಭಿಃ ಸಹ ಸಮಾಪೇತುರ್ಬ್ರಾಹ್ಮಣಾಃ ಸಂಶಿತವ್ರತಾಃ |
ಋತಾವೃತೌ ನರವ್ಯಾಘ್ರ ನ ಕಾಮಾನ್ನಾನೃತೌ ತಥಾ ॥6॥
ಎಲೈ ನರೇಂದ್ರನೇ, ಒಳ್ಳೆಯ ವ್ರತಧಾರಿಗಳಾದ ಬ್ರಾಹ್ಮಣರು ಆ ಕ್ಷತ್ರಿಯಸ್ತ್ರೀಯರ ಜೊತೆಯಲ್ಲಿ ಪ್ರತಿ ಋತುಕಾಲದಲ್ಲಿ ಮಾತ್ರ ಸಮಾಗಮವನ್ನು ಮಾಡಿದರು. ಕಾಮದಿಂದಲಾಗಲೀ, ಋತುಕಾಲವನ್ನು ಬಿಟ್ಟು ಬೇರೆ ಕಾಲದಲ್ಲಿ ಆಗಲೀ, ಸಮಾಗಮವನ್ನು ಮಾಡಲಿಲ್ಲ.
ತೇಭ್ಯಸ್ತು ಲೇಭಿರೇ ಗರ್ಭಾನ್ ಕ್ಷತ್ರಿಯಾಸ್ತಾಃ ಸಹಸ್ರಶಃ |
ತತಃ ಸುಷುವಿರೇ ರಾಜನ್ ಕ್ಷತ್ರಿಯಾನ್ ವೀರಸತ್ತಮಾನ್ ॥7॥
ಅನಂತರ ಆ ಕ್ಷತ್ರಿಯ ಸ್ತ್ರೀಯರು ಸಹಸ್ರ ಸಂಖ್ಯೆಯಲ್ಲಿ ಬ್ರಾಹ್ಮಣರಿಂದ ಗರ್ಭವನ್ನು ಧರಿಸಿದರು. ಎಲೈ ರಾಜನೇ ಅನಂತರ ಕಾಲಕ್ರಮದಲ್ಲಿ ವೀರಶ್ರೇಷ್ಠರಾದ ಕ್ಷತ್ರಿಯರನ್ನು ಪ್ರಸವಿಸಿದರು.
ಕುಮಾರಾಂಶ್ಚ ಕುಮಾರೀಶ್ಚ ಪುನಃ ಕ್ಷತ್ರಿಯವೃದ್ಧಯೇ |
ಏವಂ ತದ್ ಬ್ರಾಹ್ಮಣೈಃ ಕ್ಷತ್ರಂ ಕ್ಷತ್ರಿಯಾಸು ತಪಸ್ವಿಭಿಃ ॥8॥
ಹಾಗೇ ಪಡೆದ ಮಕ್ಕಳು ಪುನಃ ಕ್ಷತ್ರಿಯಜಾತಿಯ ಅಭಿವೃದ್ಧಿಗಾಗಿ ಕುಮಾರರೂ ಮತ್ತು ಕುಮಾರಿಯರೂ ಆಗಿದ್ದರು. ಹೀಗೆ ಕ್ಷತ್ರಿಯಸ್ತ್ರೀಯರಲ್ಲಿ ತಪಸ್ವಿಗಳಾದ ಬ್ರಾಹ್ಮಣರಿಂದ ಹುಟ್ಟಿದ ಆ ಕ್ಷತ್ರಿಯ ಕುಲವು ಧರ್ಮದಿಂದಲೂ, ದೀರ್ಘಾಯುಷ್ಯದಿಂದಲೂ ಕೂಡಿ ಅಭಿವೃದ್ಧಿಯನ್ನು ಹೊಂದಿತು.
ಜಾತಮೃಧ್ಯತ ಧರ್ಮೇಣ ಸುದೀರ್ಘೇಣಾಯುಷಾSನ್ವಿತಮ್ |
ಚತ್ವಾರೋSಪಿ ತದಾ ವರ್ಣಾ ಬಭೂವುರ್ಬ್ರಾಹ್ಮಣೋತ್ತಮಾಃ |
ಅಭ್ಯಗಚ್ಛನ್ ಋತೌ ನಾರೀಂ ನಾಕಾಮಾಂ ನಾನೃತೌ ತಥಾ ॥9॥
ಆಗ ನಾಲ್ಕುವರ್ಣಗಳು ಇದ್ದು, ಬ್ರಾಹ್ಮಣರು ಪೂಜ್ಯಸ್ಥಾನದಲ್ಲಿದ್ದರು. ಯಾವ ಪುರುಷನೂ ಋತುಕಾಲವನ್ನು ಬಿಟ್ಟು, ಬೇರೆ ಕಾಲದಲ್ಲಿಯಾಗಲೀ, ಅಥವಾ ಕಾಮವಿಲ್ಲದಿದ್ದಾಲಾಗಲೀ ತಮ್ಮ ಪತ್ನಿಯ ಸಮಾಗಮವನ್ನು ಮಾಡುತ್ತಿರಲಿಲ್ಲ.
ತಥೈವಾನ್ಯಾನಿ ಭೂತಾನಿ ತಿರ್ಯಗ್ಯೋನಿಗತಾನ್ಯಪಿ |
ಋತೌ ಹಿ ದಾರಾನ್ ಗಚ್ಛಂತಿ ತದಾ ಸ್ಮ ಭರತರ್ಷಭ ॥10॥
ಎಲೈ ಭರತಶ್ರೇಷ್ಠನೇ ಆಕಾಲದಲ್ಲಿ ತಿರ್ಯಗ್ ಯೋನಿಯಲ್ಲಿರುವ ಪ್ರಾಣಿಗಳೂ ಸಹ ಆ ಸಮಯದಲ್ಲಿ ಋತುಕಾಲವನ್ನು ಬಿಟ್ಟು ಬೇರೆ ಕಾಲದಲ್ಲಿ ಸಾಮಾಗಮವನ್ನು ಮಾಡುತ್ತಿರಲಿಲ್ಲ.
ತತೋSವರ್ಧಂತ ಧರ್ಮೇಣ ಸಹಸ್ರಶತಜೀವಿನಃ |
ತಾಃ ಪ್ರಜಾಃ ಪೃಥಿವೀಪಾಲ ಧರ್ಮವ್ರತಪರಾಯಣಾಃ |
ಆಧಿಭಿರ್ವ್ಯಾಧಿಭಿಶ್ಚೈವ ವಿಮುಕ್ತಾಃ ಶತಶೋ ನರಾಃ ॥11॥
ಎಲೈ ಪೃಥಿವೀ ಪಾಲನೇ ಆ ಪ್ರಜೆಗಳು ಶತಸಹಸ್ರ ವರ್ಷಜೀವಿಗಳಾಗಿ, ಧರ್ಮವ್ರತ ಪರಾಯಣರಾಗಿ, ಶಾರೀರ ಮತ್ತು ಮಾನಸ

ರೋಗಗಳಿಂದ ಮುಕ್ತರಾಗಿ, ನೂರಾರು ಸಂಖ್ಯೆಯಲ್ಲಿ ಅಭಿವೃದ್ಧಿಯನ್ನು ಹೊಂದಿದರು.
ಅಥೇಮಾಂ ಸಾಗರೋಪಾಂತಾಂ ನರೇಂದ್ರೇಂದ್ರ ಧರಾಂ ಕಿಲ |
ಅಧ್ಯತಿಷ್ಠತ್ ಪುನಃ ಕ್ಷತ್ರಂ ಸಶೈಲವನಕಾನನಾಮ್ ॥12॥
ಎಲೈ ರಾಜಶ್ರೇಷ್ಠನಾದವನೇ ಅನಂತರ ಸಾಗರಮೇಖಲೆಯಾದ ವನ ಮತ್ತು ಪರ್ವತಗಳಿಂದ ಕೂಡಿರುವ ಈ ಭೂಮಿಯನ್ನು ಕ್ಷತ್ರಿಯರು ಪುನಃ ಆಳಿದರು.
ಪ್ರಶಾಸತಿ ಪುನಃ ಕ್ಷತ್ರೇ ಧರ್ಮೇಣೇಮಾಂ ವಸುಂಧರಾಮ್ |
ಬ್ರಾಹ್ಮಣಾದ್ಯಾಸ್ತತೋ ವರ್ಣಾ ಲೇಭಿರೇ ಮುದಮುತ್ತಮಾಮ್ ॥13॥
ಪುನಃ ಕ್ಷತ್ರಿಯರು ಈ ಭೂಮಿಯನ್ನು ಧರ್ಮದಿಂದ ಆಳುತ್ತಿರಲು ಬ್ರಾಹ್ಮಣಾದಿ ಎಲ್ಲ ವರ್ಣಗಳು ಬಹಳ ಸಂತೋಷವನ್ನು ಹೊಂದಿದವು.
ಕಾಮಕ್ರೋಧೋದ್ಭವಾನ್ ದೋಷಾನ್ ನಿರಸ್ಯ ಚ ನರಾಧಿಪಾಃ |
ಧರ್ಮೇಣ ದಂಡಂ ದಂಡ್ಯೇಷು ವಿತರಂತೋಽನ್ವಪಾಲಯನ್ ॥14॥
ರಾಜರುಗಳು ಕಾಮಕ್ರೋಧಗಳಿಂದ ಉಂಟಾಗುವ ವೈಶಮ್ಯ ಪಕ್ಷಪಾತ ಮೊದಲಾದ ದೇಶಗಳನ್ನು ಬಿಟ್ಟು, ಶಿಕ್ಷೆಗೆ ಅರ್ಹರಾದವರಿಗೆ ಧರ್ಮಶಾಸ್ತ್ರಕ್ಕೆ ಅನುಗುಣವಾಗಿ ಶಿಕ್ಷೆಯನ್ನು ಕೊಡುತ್ತಾ ಭೂಮಿಯನ್ನು ಆಳಿದರು.
ತಥಾ ಧರ್ಮಪರೇ ಕ್ಷತ್ರೇ ಸಹಸ್ರಾಕ್ಷಃ ಶತಕ್ರತುಃ |
ಸ್ವಾದು ದೇಶೇ ಚ ಕಾಲೇ ಚ ಹವಿಷಾಽಽಪ್ಯಾಯಯನ್ ಪ್ರಜಾಃ ॥15॥
ಕ್ಷತ್ರಿಯರು ಧರ್ಮಪರರಾಗಿದ್ದ ಆ ಕಾಲದಲ್ಲಿ ಶತಕ್ರತುವಾದ ಇಂದ್ರನು ಯೋಗ್ಯವಾದ ದೇಶ ಮತ್ತು ಕಾಲಗಳಲ್ಲಿ ಮಧುರವಾದ ಹವಿಸ್ಸನ್ನು ನೀಡಿ ಪ್ರಜೆಗಳನ್ನು ಸಂತೋಷ ಪಡಿಸಿದನು.
ನ ಬಾಲ ಏವ ಮ್ರಿಯತೇ ತದಾ ಕಶ್ಚಿನ್ನರಾಧಿಪ |
ನ ಚ ಸ್ತ್ರಿಯಂ ಪ್ರಜಾನಾತಿ ಕಶ್ಚಿದಪ್ರಾಪ್ತಯೌವನಾಮ್ ॥16॥
ಎಲೈ ರಾಜನೇ, ಆ ಕಾಲದಲ್ಲಿ ಯಾರೂ ಬಾಲ್ಯದಲ್ಲಿ ಮೃತರಾಗುತ್ತಿರಲಿಲ್ಲ. ಮತ್ತು ಪ್ರೌಢಳಾಗದ ಕನ್ಯೆಯ ಮೇಲೆ ಯಾರೂ ಅತ್ಯಾಚಾರ ಮಾಡುತ್ತಿರಲಿಲ್ಲ.
ಏವಮಾಯುಷ್ಮತೀಭಿಸ್ತು ಪ್ರಜಾಭಿರ್ಭರತರ್ಷಭ |
ಇಯಂ ಸಾಗರಪರ್ಯಂತಾ ಸಮಾಪೂರ್ಯತ ಮೇದಿನೀ ॥17॥
ಎಲೈ ಭರತಶ್ರೇಷ್ಠನೇ, ಹೀಗೆ ದೀರ್ಘಾಯುಷ್ಯವುಳ್ಳ ಪ್ರಜೆಗಳಿಂದ ಸಾಗರಪರ್ಯಂತವಾದ ಈ ಭೂಮಿಯು ತುಂಬಿಹೋಯಿತು.
ಈಜಿರೇ ಚ ಮಹಾಯಜ್ಞೈಃ ಕ್ಷತ್ರಿಯಾ ಭೂರಿದಕ್ಷಿಣೈಃ |
ಸಾಂಗೋಪನಿಷದಾನ್ ವೇದಾನ್ ವಿಪ್ರಾಶ್ಚಾಧೀಯಿರೇ ತದಾ ॥18॥
ಕ್ಷತ್ರಿಯರು ಬಹಳ ದಕ್ಷಿಣೆಗಳನ್ನು ಕೊಟ್ಟು, ಮಹಾಯಜ್ಞಗಳನ್ನು ಆಚರಿಸಿದರು. ಆಗ ಬ್ರಾಹ್ಮಣರು ವೇದ, ವೇದಾಂಗ ಮತ್ತು ಉಪನಿಷತ್ತುಗಳನ್ನು ಅಧ್ಯಯನ ಮಾಡುತ್ತಿದ್ದರು.
ನ ಚ ವಿಕ್ರೀಣತೇ ಬ್ರಹ್ಮ ಬ್ರಾಹ್ಮಣಾಶ್ಚ ತದಾ ನೃಪ |
ನ ಚ ಶೂದ್ರಸಮಭ್ಯಾಶೇ ವೇದಾನುಚ್ಚಾರಯಂತ್ಯುತ ॥19॥
ಎಲೈ ರಾಜನೇ, ಬ್ರಾಹ್ಮಣರು ಆ ಕಾಲದಲ್ಲಿ ಎಂದೂ ಹಣಕ್ಕಾಗಿ ವೇದವನ್ನು ಮಾರುತ್ತಿರಲಿಲ್ಲ. ಮತ್ತು ಶೂದ್ರರ ಸಮೀಪದಲ್ಲಿದ್ದಾಗ ವೇದಗಳ ಉಚ್ಚಾರಣೆಯನ್ನೂ ಮಾಡುತ್ತಿರಲಿಲ್ಲ.
ಕಾರಯಂತಃ ಕೃಷಿಂ ಗೋಭಿಸ್ತಥಾ ವೈಶ್ಯಾಃ ಕ್ಷಿತಾವಿಹ |
ನ ಗಾಂ ಯುಂಜಂತಿ ಧುರಿ ಕೃಶಾಂಗಾಂ ಚಾಪ್ಯಜೀವಯನ್ ॥20॥
ಎತ್ತುಗಳಿಂದ ಭೂಮಿಯಲ್ಲಿ ಕೃಷಿಯನ್ನು ಮಾಡುವ ವೈಶ್ಯರು ಹಸುವನ್ನು  ಎಂದೂ ನೊಗಕ್ಕೆ ಕಟ್ಟುತ್ತಿರಲಿಲ್ಲ. ಮತ್ತು ಕೃಶವಾದ ಹಸುಗಳನ್ನು ಪಾಲಿಸುತ್ತಿದ್ದರು.
ಫೇನಪಾಂಶ್ಚ ತದಾ ವತ್ಸಾನ್ ನ ದುಹಂತಿ ಸ್ಮ ಮಾನವಾಃ |
ನ ಕೂಟಮಾನೈರ್ವಣಿಜಃ ಪಣ್ಯಂ ವಿಕ್ರೀಣತೇ ತದಾ ॥21॥
ಹಸುಗಳ ಕರುಗಳು ಚಿಕ್ಕದಾಗಿದ್ದು ಇನ್ನೂ ಹಾಲಿನ ನೊರೆಯನ್ನು ಮಾತ್ರ ಕುಡಿಯುತ್ತಿರುವಾಗ ಮನುಷ್ಯರು ಆ ಹಸುಗಳಿಂದ ಹಾಲನ್ನು ಕರೆಯುತ್ತಿರಲಿಲ್ಲ.  ಆ ಕಾಲದಲ್ಲಿ ವರ್ತಕರು ಮೋಸದ ಅಳತೆಯಿಂದ ಎಂದೂ ವ್ಯಾಪಾರ ಮಾಡುತ್ತಿರಲಿಲ್ಲ.
ಕರ್ಮಾಣಿ ಚ ನರವ್ಯಾಘ್ರ ಧರ್ಮೋಪೇತಾನಿ ಮಾನವಾಃ |
ಧರ್ಮಮೇವಾನುಪಶ್ಯಂತಶ್ಚಕ್ರುರ್ಧರ್ಮಪರಾಯಣಾಃ ॥22॥
ಎಲೈ ನರೇಂದ್ರನೇ, ಮಾನವರು ಧರ್ಮದ ಒಂದೇ ದೃಷ್ಟಿಯುಳ್ಳವರಾಗಿ  ಧರ್ಮಪರಾಯಣರಾಗಿ, ಧರ್ಮದಿಂದ ಯುಕ್ತವಾದ ಕರ್ಮವನ್ನು ಮಾತ್ರ ಮಾಡುತ್ತಿದ್ದರು.
ಸ್ವಕರ್ಮನಿರತಾಶ್ಚಾಸನ್ ಸರ್ವೇ ವರ್ಣಾ ನರಾಧಿಪ |
ಏವಂ ತದಾ ನರವ್ಯಾಘ್ರ ಧರ್ಮೋ ನ ಹ್ರಸತೇ ಕ್ವಚಿತ್ ॥23॥
ಎಲೈ ನರಾಧಿಪನೇ ಆಗ ಎಲ್ಲಾ ವರ್ಣದವರೂ ತಮ್ಮ ತಮ್ಮ ವರ್ಣಕ್ಕೆ ಉಚಿತವಾದ ಕರ್ಮಗಳನ್ನೇ ಮಾಡುತ್ತಿದ್ದರು. ಎಲೈ ನರೇಂದ್ರನೇ ಆ ಕಾರಣದಿಂದ ಆಗ ಧರ್ಮಕ್ಕೆ ಹ್ರಾಸವುಂಟಾಗಲಿಲ್ಲ.
ಕಾಲೇ ಗಾವಃ ಪ್ರಸೂಯಂತೇ ನಾರ್ಯಶ್ಚ ಭರತರ್ಷಭ |
ಫಲಂತ್ಯೃತುಷು ವೃಕ್ಷಾಶ್ಚ ಪುಷ್ಪಾಣಿ ಚ ಫಲಾನಿ ಚ ॥24॥

ಎಲೈ ಭರತಶ್ರೇಷ್ಠನೇ ಗೋವುಗಳು ಮತ್ತು ಸ್ತ್ರೀಯರು ಸರಿಯಾದ ಕಾಲದಲ್ಲಿ ಪ್ರಸವಿಸುತ್ತಿದ್ದರು. ವೃಕ್ಷಗಳು ಋತುಕಾಲಕ್ಕೆ ಸರಿಯಾಗಿ ಪುಷ್ಪಗಳನ್ನು ಮತ್ತು ಫಲಗಳನ್ನು ಕೊಡುತ್ತಿದ್ದವು.
ಏವಂ ಕೃತಯುಗೇ ಸಮ್ಯಗ್ ವರ್ತಮಾನೇ ತದಾ ನೃಪ |
ಆಪೂರ್ಯತ ಮಹೀ ಕೃತ್ಸ್ನಾ ಪ್ರಾಣಿಭಿರ್ಬಹುಭಿರ್ಭೃಶಮ್ ॥25॥
ಎಲೈ ರಾಜನೇ ಹೀಗೆ ಕೃತಯುಗವು ಚೆನ್ನಾಗಿ ಪ್ರತಿಷ್ಠಿತವಾಗಿದ್ದ ಆ ಕಾಲದಲ್ಲಿ ಭೂಮಿಯೆಲ್ಲವೂ ಬಹುವಿಧಪ್ರಾಣಿಗಳಿಂದ ತುಂಬಿಹೋಯಿತು.
ತತಃ ಸಮುದಿತೇ ಲೋಕೇ ಮಾನುಷೈರ್ಭರತರ್ಷಭ |
ಅಸುರಾ ಜಜ್ಞಿರೇ ಕ್ಷೇತ್ರೇ ರಾಜ್ಞಾಂ ಮನುಜಪುಂಗವ ॥26॥
ಎಲೈ ಭರತರ್ಷಭನೇ, ಮನುಜಶ್ರೇಷ್ಠನೇ ಹೀಗೆ ಮನುಷ್ಯರು ಉನ್ನತಸ್ಥಿತಿಯಲ್ಲಿದ್ದಾಗ ಅಸುರರು ರಾಜಪತ್ನಿಯರಲ್ಲಿ ಜನಿಸಿದರು.
ಆದಿತ್ಯೈರ್ಹಿ ತದಾ ದೈತ್ಯಾ ಬಹುಶೋ ನಿರ್ಜಿತಾ ಯುಧಿ |
ಐಶ್ವರ್ಯಾದ್ ಭ್ರಂಶಿತಾಶ್ಚೈವ ಸಂಬಭೂವುಃ ಕ್ಷಿತಾವಿಹ ॥27॥
ದೇವತೆಗಳಿಂದ ಅನೇಕ ಬಾರಿ ಯುದ್ಧದಲ್ಲಿ ಪರಾಜಿತರಾಗಿ ಐಶ್ವರ್ಯಭ್ರಷ್ಟರಾದ ದೈತ್ಯರು ಈ ಭೂಮಿಯಲ್ಲಿ ಜನಿಸಿದರು.
ಇಹ ದೇವತ್ವಮಿಚ್ಛಂತೋ ಮಾನುಷೇಷು ಪ್ರಜಜ್ಞಿರೇ |
ಜಜ್ಞಿರೇ ಭುವಿ ಭೂತೇಷು ತೇಷು ತೇಷ್ವಸುರಾ ವಿಭೋ ॥28॥
ಎಲೈ ಪ್ರಭುವೇ ಮನುಷ್ಯರಾಗಿ ಜನಿಸಿ ತಪಸ್ಸನ್ನು ಮಾಡಿ ದೇವತ್ವವನ್ನು ಪಡೆಯುವೆವು ಎಂಬ ಆಸೆಯಿಂದ ಅಸುರರು ಮನುಷ್ಯ ಜನ್ಮದಲ್ಲಿ ಜನಿಸಿದರು. ಅಲ್ಲದೇ ಭೂಮಿಯಲ್ಲಿ ಬೇರೆ ಬೇರೆ ಪ್ರಾಣಿಗಳ ರೂಪದಲ್ಲೂ ಜನಿಸಿದರು.
ಗೋಷ್ವಶ್ವೇಷು ಚ ರಾಜೇಂದ್ರ ಖರೋಷ್ಟ್ರಮಹಿಷೇಷು ಚ |
ಕ್ರವ್ಯಾದೇಷು ಚ ಭೂತೇಷು ಗಜೇಷು ಚ ಮೃಗೇಷು ಚ ॥29॥
ಎಲೈ ರಾಜೇಂದ್ರನೇ ದೈತ್ಯರು ಗೋವುಗಳಲ್ಲಿಯೂ ಅಶ್ವಗಳಲ್ಲಿಯೂ ಕತ್ತೆಗಳಲ್ಲಿಯೂ, ಒಂಟೆಗಳಲ್ಲಿಯೂ, ಎಮ್ಮೆಗಳಲ್ಲಿಯೂ, ಮಾಂಸಾಹಾರಿ ಪ್ರಾಣಿಗಳಲ್ಲಿಯೂ ಆನೆಗಳಲ್ಲಿಯೂ ಜಿಂಕೆಗಳಲ್ಲಿಯೂ ಜನಿಸಿದರು.
ಜಾತೈರಿಹ ಮಹೀಪಾಲ ಜಾಯಮಾನೈಶ್ಚ ತೈರ್ಮಹೀ |
ನ ಶಶಾಕಾತ್ಮನಾತ್ಮಾನಮಿಯಂ ಧಾರಯಿತುಂ ಧರಾ ॥30॥
ಎಲೈ ಮಹೀಪಾಲನೇ ಹುಟ್ಟಿದ ಮತ್ತು ಹುಟ್ಟುತ್ತಿರುವ ಈ ದೈತ್ಯರ ಭಾರವನ್ನು ಎಷ್ಟು ಪ್ರಯತ್ನ ಪಟ್ಟರೂ ಭರಿಸಲು ಆಗ ಭೂಮಿಗೆ ಸಾಧ್ಯವಾಗಲಿಲ್ಲ.
ಅಥ ಜಾತಾ ಮಹೀಪಾಲಾಃ ಕೇಚಿನ್ಮದಬಲಾನ್ವಿತಾಃ |
ದಿತೇಃ ಪುತ್ರಾ ದನೋಶ್ಚೈವ ದೇವಲೋಕಾದಿಹಾಗತಾಃ ॥31॥
ವೀರ್ಯವಂತೋಽವಲಿಪ್ತಾಸ್ತೇ ನಾನಾರೂಪಧರಾ ಮಹೀಮ್ |
ಇಮಾಂ ಸಾಗರಪರ್ಯಂತಾಂ ಪರೀಯುರರಿಮರ್ದನಾಃ ॥32॥
ಅನಂತರ ದಿತಿಯ ಮತ್ತು ದನುವಿನ ಮಕ್ಕಳಾದ ಅಸುರರು ದೇವಲೋಕದಿಂದ ಇಲ್ಲಿಗೆ ಬಂದು, ಮದಬಲಾನ್ವಿತರಾಗಿ ಪರಾಕ್ರಮದಿಂದ ಅಹಂಕಾರಿಗಳಾಗಿ, ರಾಜರುಗಳಾಗಿ ಇನ್ನು ಕೆಲವರು ಬೇರೆ ಬೇರೆ ರೂಪಗಳನ್ನು ಧರಿಸಿದವರಾಗಿ ಶತ್ರುಗಳ ಸಂಹಾರವನ್ನು ಮಾಡುತ್ತಾ, ಸಾಗರಪರ್ಯಂತವಾದ ಈ ಭೂಮಿಯಲ್ಲಿ ತಿರುಗಾಡಿದರು.
ಬ್ರಾಹ್ಮಣಾನ್ ಕ್ಷತ್ರಿಯನ್ ವೈಶ್ಯಾಂಸ್ತಥಾ ಶೂದ್ರಾನಪೀಡಯನ್ |
ಅನ್ಯಾನಿ ಚೈವ ಭೂತಾನಿ ಪೀಡಯಾಮಾಸುರೋಜಸಾ ॥33॥
ಅವರು ತಮ್ಮ ಬಲದಿಂದ ಬ್ರಾಹ್ಮಣರನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ, ಶೂದ್ರರನ್ನೂ ಮತ್ತು ಇನ್ನೂ ಅನೇಕ ಪ್ರಾಣಿಗಳನ್ನೂ ಪೀಡಿಸಿದರು.
ತ್ರಾಸಯಂತೋ ವಿನಿಘ್ನಂತಸ್ತಾಂಸ್ತಾನ್ ಭೂತಗಣಾಂಶ್ಚ ತೇ |
ವಿಚೇರುಃ ಸರ್ವತೋ ರಾಜನ್ ಮಹೀಂ ಶತಸಹಸ್ರಶಃ ॥34॥
ಎಲೈ ರಾಜನೇ ಅವರು ಆ ಪ್ರಾಣಿಗಳ ಸಮೂಹವನ್ನು ಹೆದರಿಸುತ್ತಾ ಮತ್ತು ಕೊಲ್ಲುತ್ತಾ ನೂರು ಸಾವಿರ ಸಂಖ್ಯೆಗಳಲ್ಲಿ ಒಟ್ಟಾಗಿ ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ತಿರುಗಿದರು.
ಆಶ್ರಮಸ್ಥಾನ್ ಮಹರ್ಷೀಂಶ್ಚ ಧರ್ಷಯಂತಸ್ತತಸ್ತತಃ |
ಅಬ್ರಹ್ಮಣ್ಯಾ ವೀರ್ಯಮದಾ ಮತ್ತಾ ಮದಬಲೇನ ಚ ॥35॥
ಅವರು ಅಬ್ರಹ್ಮಣ್ಯರಾಗಿ ತಮ್ಮ ಶೌರ್ಯದ ಮದದಿಂದಲೂ, ಸೇನೆಯ ಬಲದಿಂದಲೂ ಅಲ್ಲಲ್ಲಿ ಆಶ್ರಮಗಳಲ್ಲಿದ್ದ ಮಹರ್ಷಿಗಳನ್ನು ಅವಮಾನಿಸುತ್ತಾ ತಿರುಗಾಡಿದರು.
ಏವಂ ವೀರ್ಯಬಲೋತ್ಸಿಕ್ತೈರ್ಭೂರಿಯಂ ತೈರ್ಮಹಾಸುರೈಃ |
ಪೀಡ್ಯಮಾನಾ ಮಹೀಪಾಲ ಬ್ರಹ್ಮಾಣಮುಪಚಕ್ರಮೇ ॥36॥
ಎಲೈ ಮಹೀಪಾಲನೇ, ಹೀಗೆ ವೀರ್ಯ ಮತ್ತು ಬಲಗಳ ಮದದಿಂದ ದುರಹಂಕಾರಿಗಳಾದ ಆ ಮಹಾಸುರರ ಪೀಡೆಯನ್ನು ತಾಳಲಾರದೆ ಭೂದೇವಿಯು ಬ್ರಹ್ಮದೇವರ ಸಮೀಪಕ್ಕೆ ಹೋದಳು.
ಇಮಾಂ ಮಹೀಂ ತದಾ ರಾಜನ್ ನಾಗಾಶ್ಚ ನ ನಗಾ ಗಜಾಃ |
ತದಾ ಧಾರಯಿತುಂ ಶೇಕುರಾಕ್ರಾಂತಾಂ ದಾನವೈರ್ಬಲಾತ್ ॥37॥
ಎಲೈ ರಾಜನೇ ಆಗ ದಾನವರ ಭಾರದಿಂದ ತುಂಬಿದ ಈ ಭೂಮಿಯನ್ನು ದಿಗ್ಗಜಗಳಾಗಲೀ, ಶೇಷ ಮೊದಲಾದ ಸರ್ಪಗಳಾಗಲೀ,

ಕುಲಾಚಲಗಳಾದ ಪರ್ವತಗಳಾಗಲೀ ಧರಿಸಲು ಸಾಧ್ಯವಾಗಲಿಲ್ಲ.
ತತೋ ಮಹೀ ಮಹೀಪಾಲ ಭಾರಾರ್ತಾ ಭಯಪೀಡಿತಾ |
ಜಗಾಮ ಶರಣಂ ದೇವಂ ಸರ್ವಭೂತಪಿತಾಮಹಮ್ ॥38॥
ಎಲೈ ಮಹೀಪಾಲನೇ ಆಗ ದೈತ್ಯರ ಭಾರದಿಂದ ಖಿನ್ನಳಾದ ಮತ್ತು ಭಯಗ್ರಸ್ತಳಾದ ಭೂದೇವಿಯು ಸರ್ವಭೂತಪಿತಾಮಹರಾದ ಬ್ರಹ್ಮದೇವರನ್ನು ಶರಣು ಹೊಂದಿದಳು.
ಸಾ ಸಂಯುತಂ ಮಹಾಭಾಗೈರ್ದೇವದ್ವಿಜಮಹರ್ಷಿಭಿಃ |
ದದರ್ಶ ದೇವಂ ಬ್ರಹ್ಮಾಣಂ ಲೋಕಕರ್ತಾರಮವ್ಯಯಮ್ ॥39॥
ಭೂದೇವಿಯು ಸೃಷ್ಟಿಕರ್ತನಾದಂತಹ, ನಾಶರಹಿತನಾದಂತಹ ಮಹಾನುಭಾವರಾದ ದೇವತೆಗಳಿಂದಲೂ, ಬ್ರಾಹ್ಮಣರಿಂದಲೂ, ಮಹರ್ಷಿಗಳಿಂದಲೂ ಸುತ್ತುವರಿಯಲ್ಪಟ್ಟಿದ್ದಂತಹ ಬ್ರಹ್ಮದೇವರನ್ನು ನೋಡಿದಳು.
ಗಂಧರ್ವೈರಪ್ಸರೋಭಿಶ್ಚ ವಂದಿಕರ್ಮಸು ನಿಷ್ಠಿತೈಃ |
ವಂದ್ಯಮಾನಂ ಮುದೋಪೇತೈರ್ವವಂದೇ ಚೈನಮೇತ್ಯ ಸಾ ॥40॥
ಅವಳು ಸೂತಮಾಗಧವಂದಿಗಳ ಕರ್ಮಗಳಲ್ಲಿ ನಿರತರಾದ ಸಂತೋಷಯುಕ್ತರಾದ, ಗಂಧರ್ವರು ಮತ್ತು ಅಪ್ಸರೆಯರಿಂದ ವಂದಿಸಲ್ಪಡುವ ಬ್ರಹ್ಮದೇವರನ್ನು ಸಮೀಪಿಸಿ ನಮಸ್ಕರಿಸಿದಳು.
ಅಥ ವಿಜ್ಞಾಪಯಾಮಾಸ ಭೂಮಿಸ್ತಂ ಶರಣೈಷಿಣೀ |
ಸನ್ನಿಧೌ ಲೋಕಪಾಲಾನಾಂ ಸರ್ವೇಷಾಮೇವ ಭಾರತ ॥41॥
ಅನಂತರ ಬ್ರಹ್ಮದೇವರಿಂದ ರಕ್ಷಣೆಯನ್ನು ಬಯಸುವವಳಾಗಿ, ಎಲ್ಲಾ ಲೋಕಪಾಲಕರ ಸನ್ನಿಧಿಯಲ್ಲಿ ಬ್ರಹ್ಮದೇವರನ್ನು ಕುರಿತು ವಿಜ್ಞಾಪಿಸಿದಳು.
ತತ್ ಪ್ರಧಾನಾತ್ಮನಸ್ತಸ್ಯ ಭೂಮೇಃ ಕೃತ್ಯಂ ಸ್ವಯಂಭುವಃ |
ಪೂರ್ವಮೇವಾಭವದ್ ರಾಜನ್ ವಿದಿತಂ ಪರಮೇಷ್ಠಿನಃ ॥42॥
ಎಲೈ ರಾಜನೇ ದೇವೋತ್ತಮರಾದ ಬ್ರಹ್ಮದೇವರಿಗೆ ಭೂದೇವಿಯ ಈ ಪರಿಸ್ಥಿತಿಯು ಮೊದಲೇ ತಿಳಿದಿದ್ದಿತು.
ಸ್ರಷ್ಟಾ ಹಿ ಜಗತಃ ಕಸ್ಮಾನ್ನ ಸಂಬುಧ್ಯೇತ ಭಾರತ |
ಸಾಸುರಾಣಾಂ ಚ ಲೋಕಾನಾಮಶೇಷೇಣ ಮನೋಗತಮ್ ॥43॥
ಎಲೈ ಭಾರತನೇ ಎಲ್ಲಾ ಲೋಕಗಳನ್ನೂ ಸೃಷ್ಟಿಸುವ ಬ್ರಹ್ಮದೇವರಿಗೆ ಎಲ್ಲಾ ಅಸುರರ ಮತ್ತು ಇತರ ಜೀವರ ಮನಸ್ಸಿನ ಅಭಿಪ್ರಾಯವು ತಿಳಿಯದೇ ಇರಲು ಹೇಗೆ ಸಾಧ್ಯ?
ತಾಮುವಾಚ ಮಹಾರಾಜ ಭೂಮಿಂ ಭೂಮಿಪತಿರ್ವಿಭುಃ |
ಪ್ರಭವಃ ಸರ್ವಭೂತಾನಾಮೀಶಃ ಶಂಭುಃ ಪ್ರಜಾಪತಿಃ ॥44॥
ಎಲೈ ಮಹಾರಾಜನೇ ಭೂಮಿಗೆ ಒಡೆಯನಾದಂತಹ, ಎಲ್ಲಾ ಪ್ರಾಣಿಗಳಿಗೂ ಜನಕನಾದಂತಹ, ಎಲ್ಲಾ ಪ್ರಾಣಿಗಳೂ ಒಡೆಯನಾದಂತಹ, ಸುಖನಿಧಿಯಾದ ಪ್ರಜಾಪತಿಯಾದ ಬ್ರಹ್ಮದೇವರು ಭೂಮಿಯನ್ನು ಕುರಿತು ಮಾತನಾಡಿದರು.
ಯದರ್ಥಮಸಿ ಸಂಪ್ರಾಪ್ತಾ ಮತ್ಸಕಾಶಂ ವಸುಂಧರೇ |
ತದರ್ಥಂ ಸನ್ನಿಯೋಕ್ಷ್ಯಾಮಿ ಸರ್ವಾನೇವ ದಿವೌಕಸಃ ॥45॥
ಎಲೌ ಭೂಮಿಯೇ ಯಾವ ಉದ್ದೇಶದಿಂದ ನೀನು ನನ್ನ ಬಳಿಗೆ ಬಂದಿದ್ದೀಯೋ ಅದರ ಸಲುವಾಗಿ, ನಾನು ಎಲ್ಲಾ ದೇವತೆಗಳಿಗೆ ಆದೇಶವನ್ನು ಕೊಡುತ್ತೇನೆ.
ಇತ್ಯುಕತ್ವಾ ಸ ಮಹೀಂ ದೇವೋ ಬ್ರಹ್ಮಾ ರಾಜನ್ ವಿಸೃಜ್ಯ ಚ |
ಆದಿದೇಶ ತದಾ ಸರ್ವಾನ್ ವಿಬುಧಾನ್ ಭೂತಕೃತ್ ಸ್ವಯಮ್ ॥46॥
ಎಲೈ ರಾಜನೇ ಭೂಮಿಯನ್ನು ಕುರಿತು ಹೀಗೆ ಹೇಳಿ, ಅವಳನ್ನು ಕಳುಹಿಸಿಕೊಟ್ಟು ಸೃಷ್ಟಿಕರ್ತರಾದ ಬ್ರಹ್ಮದೇವರು ಎಲ್ಲಾ ದೇವತೆಗಳಿಗೂ ತಾವೇ ಆದೇಶವನ್ನು ನೀಡಿದರು.
ಅಸ್ಯಾ ಭೂಮೇರ್ನಿರಸಿತುಂ ಭಾರಂ ಭಾಗೈಃ ಪೃಥಕ್ಪೃಥಕ್ |
ಅಸ್ಯಾಮೇವ ಪ್ರಸೂಯಧ್ವಂ ತಿರೋಧಾಯೇತಿ ಚಾಬ್ರುವೀತ್ ॥47॥
ಎಲೈ ದೇವತೆಗಳೇ ಈ ಭೂಮಿಯ ಭಾರವನ್ನು ಪರಿಹರಿಸಲು ನಿಮ್ಮ ನಿಮ್ಮ ಅಂಶಗಳಿಂದ ಬೇರೆ ಬೇರೆಯಾಗಿ ವೇಷಾಂತರ ಮಾಡಿಕೊಂಡು ಇದೇ ಭೂಮಿಯಲ್ಲಿ ಜನಿಸಿ ಎಂದು ಹೇಳಿದರು.
ತಥೈವ ಚ ಸಮಾನೀಯ ಗಂಧರ್ವಾಪ್ಸರಸಾಂ ಗಣಾನ್ |
ಉವಾಚ ಭಗವಾನ್ ಸರ್ವಾನಿದಂ ವಚನಮುತ್ತರಮ್ ॥48॥
ಹಾಗೆಯೇ ಗಂಧರ್ವರ ಮತ್ತು ಅಪ್ಸರೆಯರ ಗಣಗಳನ್ನು ಕರೆಸಿ, ಪೂಜ್ಯರಾದ ಬ್ರಹ್ಮದೇವರು ಅವರೆಲ್ಲರನ್ನೂ ಕುರಿತು ಈ ಶ್ರೇಷ್ಠವಾದ ಮಾತನ್ನು ಆಡಿದರು.
ಸ್ವೈಃಸ್ವೈಃರಂಶೈಃ ಪ್ರಸೂಯಧ್ವಂ ಯಥೇಷ್ಟಂ ಮಾನುಷೇಷ್ವಿತಿ |
ಅಥ ಶಕ್ರಾದಯಃ ಸರ್ವೇ ಶ್ರುತ್ವಾ ಸುರಗುರೋರ್ವಚಃ |
ತಥ್ಯಮರ್ಥ್ಯಂ ಚ ಪಥ್ಯಂ ಚ ತಸ್ಯ ತೇ ಜಗೃಹುಸ್ತದಾ ॥49॥
ನಿಮ್ಮ ನಿಮ್ಮ ಅಂಶಗಳಿಂದ ನಿಮಗೆ ಇಷ್ಟವಾದಂತೆ ಭೂಮಿಯಲ್ಲಿ ಮನುಷ್ಯರಲ್ಲಿ ಅವತಾರ ಮಾಡಿ ಎಂದು ಹೇಳಿದರು. ಆಗ ಇಂದ್ರ ಬಳಗದವರೆಲ್ಲರೂ ದೇವತೆಗಳ ಗುರುವಾದ ಬ್ರಹ್ಮದೇವರ ಯಥಾರ್ಥವಾದ ಕಾರ್ಯಸಾಧಕವಾದ ಮತ್ತು ಹಿತವಾದ ವಚನಗಳನ್ನು ಅಂಗೀಕರಿಸಿದರು.

ತಥಾ ತೇ ಸರ್ವಶೋಂಽಶೈಃ ಸ್ವೈರ್ಗಂತುಂ ಭೂಮಿಂ ಕೃತಕ್ಷಣಾಃ |
ನಾರಾಯಣಮಮಿತ್ರಘ್ನಂ ವೈಕುಂಠಮುಪಚಕ್ರಮುಃ ॥50॥
ಯಃ ಸ ಚಕ್ರಗದಾಪಾಣಿಃ ಪೀತವಾಸಾಸಿತಪ್ರಭಃ |
ಪದ್ಮನಾಭಃ ಸುರಾರಿಘ್ನಃ ಪೃಥುಚಾರ್ವಂಚಿತೇಕ್ಷಣಃ ॥51॥
ಹಾಗೆಯೇ ಅವರೆಲ್ಲರೂ ತಮ್ಮ ತಮ್ಮ ಅಂಶಗಳಿಂದ ಭೂಮಿಗೆ ಬರಲು ನಿರ್ಧರಿಸಿದವರಾಗಿ ಚಕ್ರಗದಾಪಾಣಿಯೂ, ಪೀತಾಂಬರಧಾರಿಯೂ, ನೀಲಮೇಘಶ್ಯಾಮನೂ, ಪದ್ಮನಾಭನೂ, ರಾಕ್ಷಸಾರಿಯೂ, ವಿಶಾಲನೇತ್ರನೂ, ಶತ್ರುಸಂಹಾರಿಯೂ ಆದ ನಾರಾಯಣನನ್ನು ಸಮೀಪಿಸಿದರು.
ತಂ ಭುವಃ ಶೋಧನಾಯೇಂದ್ರ ಉವಾಚ ಪುರುಷೋತ್ತಮಮ್ |
ಅಂಶೇನಾವತರಸ್ವೇತಿ ತಥೇತ್ಯಾಹ ಚ ತಂ ಹರಿಃ ॥52॥
ಇಂದ್ರನು ಭೂಭಾರವನ್ನು ಹರಣಮಾಡಲು ಅಂಶದಿಂದ ಅವತಾರ ಮಾಡಬೇಕೆಂದು ಪುರುಷೋತ್ತಮನಾದ ನಾರಾಯಣನನ್ನು ಪ್ರಾರ್ಥಿಸಿದನು. ಹರಿಯು ಇಂದ್ರನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಏಕೋನಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
* * * *

ಅರವತ್ತನೆಯ ಅಧ್ಯಾಯ
(ಅದಿತಿ ಮೊದಲಾದ ದಕ್ಷಕನ್ಯೆಯರ ವಂಶದ ಕಥನ.)
ವೈಶಂಪಾಯನಃ
ಅಥ ನಾರಾಯಣೇನೇಂದ್ರಶ್ಚಕಾರ ಸಹ ಸಂವಿದಮ್ |
ಅವತರ್ತುಂ ಮಹೀಂ ಸ್ವರ್ಗಾದಂಶತಃ ಸಹಿತಃ ಸುರೈಃ ॥1॥
ಅನಂತರ ಇಂದ್ರನು ದೇವತೆಗಳ ಸಹಿತವಾಗಿ ಸ್ವರ್ಗವನ್ನು ಬಿಟ್ಟು ಭೂಮಿಯಲ್ಲಿ ಅಂಶದಿಂದ ಅವತಾರವನ್ನು ಮಾಡಲು ನಾರಾಯಣನ ಜೊತೆಯಲ್ಲಿ ಮಾತುಕಥೆಯನ್ನು ನಡೆಸಿದನು.
ಆದಿಶ್ಯ ಚ ಸ್ವಯಂ ಶಕ್ರಃ ಸರ್ವಾನೇವ ದಿವೌಕಸಃ |
ನಿರ್ಜಗಾಮ ಪುನಸ್ತಸ್ಮಾತ್ ಕ್ಷಯಾನ್ನಾರಾಯಣಸ್ಯ ಹ ॥2॥
ಇಂದ್ರನು ಎಲ್ಲಾ ದೇವತೆಗಳಿಗೂ ತಾನೇ ಆದೇಶವನ್ನು ನೀಡಿ, ಆ ನಾರಾಯಣನ ಮನೆಯಿಂದ ಹೊರಗೆ ಬಂದನು.
ತೇಽಮರಾರಿವಿನಾಶಾಯ ಸರ್ವಲೋಕಹಿತಾಯ ಚ |
ಅವತೇರುಃ ಕ್ರಮೇಣೈವ ಮಹೀಂ ಸ್ವರ್ಗಾದ್ ದಿವೌಕಸಃ ॥3॥
ಆ ದೇವತೆಗಳು ಅಸುರರ ವಿನಾಶಕ್ಕಾಗಿ ಮತ್ತು ಸರ್ವಲೋಕದ ಹಿತಕ್ಕಾಗಿ ಸ್ವರ್ಗವನ್ನು ಬಿಟ್ಟು ಕ್ರಮವಾಗಿ ಭೂಮಿಯಲ್ಲಿ ಅವತಾರ ಮಾಡಿದರು.
ತತೋ ಬ್ರಹ್ಮರ್ಷಿವಂಶೇಷು ಪಾರ್ಥಿವರ್ಷಿಕುಲೇಷು ಚ |
ಜಜ್ಞಿರೇ ರಾಜಶಾರ್ದೂಲ ಯಥಾಕಾಮಂ ದಿವೌಕಸಃ ॥4॥
ಎಲೈ ರಾಜಶಾರ್ದೂಲನೇ ಅನಂತರ ದೇವತೆಗಳು ಬ್ರಹ್ಮರ್ಷಿವಂಶದಲ್ಲಿಯೂ, ಮತ್ತು ರಾಜರ್ಷಿವಂಶದಲ್ಲಿಯೂ ತಮ್ಮ ತಮ್ಮ ಇಚ್ಛೆಗೆ ಅನುಗುಣವಾಗಿ ಜನಿಸಿದರು.
ದಾನವಾನ್ ರಾಕ್ಷಸಾಂಶ್ಚೈವ ಗಂಧರ್ವಾನ್ ಪನ್ನಗಾಂಸ್ತಥಾ |
ಪುರುಷಾದಾನಿ ಚಾನ್ಯಾನಿ ಜಘ್ನುಃ ಸತ್ವಾನ್ಯನೇಕಶಃ ॥5॥
ಅವರು ದಾನವರನ್ನೂ, ರಾಕ್ಷಸರನ್ನೂ, ಗಂಧರ್ವರನ್ನೂ, ಸರ್ಪಗಳನ್ನೂ, ನರಭಕ್ಷಕರನ್ನೂ ಮತ್ತು ಬೇರೆ ಪ್ರಾಣಿಗಳನ್ನೂ ಅನೇಕ ಸಂಖ್ಯೆಯಲ್ಲಿ ಕೊಂದರು.
ದಾನವಾ ರಾಕ್ಷಸಾಶ್ಚೈವ ಗಂಧರ್ವಾಃ ಪನ್ನಗಾಸ್ತಥಾ |
ನ ತಾನ್ ಬಲಸ್ಥಾನ್ ಬಾಲ್ಯೇಽಪಿ ಜಘ್ನುರ್ಭರತಸತ್ತಮ ॥6॥
ಎಲೈ ಭರತಶ್ರೇಷ್ಠನೇ ದಾನವರು, ರಾಕ್ಷಸರು, ಗಂಧರ್ವರು ಮತ್ತು ಸರ್ಪಗಳು ಬಾಲ್ಯದಲ್ಲಿಯೇ ಬಲಿಷ್ಠರಾದ ಆ ದೇವತೆಗಳನ್ನು ಕೊಲ್ಲಲು ಸಾಧ್ಯವಾಗಲಿಲ್ಲ.
ಜನಮೇಜಯಃ
ದೇವದಾನವಸಂಘಾನಾಂ ಗಂಧರ್ವಾಪ್ಸರಸಾಂ ತಥಾ |
ದಾನವಾನಾಂ ಚ ಸರ್ವೇಷಾಂ ತಥಾ ವೈ ಯಕ್ಷರಕ್ಷಸಾಮ್ ॥7॥
ಶ್ರೋತುಮಿಚ್ಛಾಮಿ ತತ್ವೇನ ಸಂಭವಂ ಕೃತ್ಸ್ನಮಾದಿತಃ |

ಪ್ರಾಣಿನಾಂ ಚೈವ ಸರ್ವೇಷಾಂ ಸರ್ವಶಃ ಸರ್ವವಿದ್ಘ್ಯಸಿ ॥8॥
ದೇವ, ದಾನವ ಸಮೂಹಗಳ ಹಾಗೂ ಗಂಧರ್ವ, ಅಪ್ಸರಗಣಗಳ ಹಾಗೆಯೇ ಎಲ್ಲಾ ದಾನವರ ಮತ್ತು ಯಕ್ಷರಾಕ್ಷಸರ ಉತ್ಪತ್ತಿಯನ್ನು ಮೊದಲಿನಿಂದ ಸಮಗ್ರವಾಗಿ ಬಯಸುತ್ತೇನೆ. ಉಳಿದ ಪ್ರಾಣಿಗಳ ಉತ್ಪತ್ತಿಯನ್ನು ಸಮಗ್ರವಾಗಿ ಕೇಳಬಯಸುತ್ತೇನೆ. ನೀವು ಎಲ್ಲವನ್ನೂ ತಿಳಿದವರಾಗಿದ್ದೀರಿ.
ವೈಶಂಪಾಯನಃ
ಹಂತ ತೇ ಕಥಯಿಷ್ಯಾಮಿ ನಮಸ್ಕೃತ್ಯ ಸ್ವಯಂಭುವೇ |
ಸುರಾದೀನಾಮಹಂ ಸಮ್ಯಕ್ ಸಂಭವಂ ಕೃತ್ಸ್ನಮಾದಿತಃ ॥9॥
ಸಂತೋಷ. ಸ್ವಯಂಭುವಿಗೆ ನಮಸ್ಕಾರವನ್ನು ಮಾಡಿ ದೇವತೆಗಳು ಮೊದಲಾದವರ ಸಮಗ್ರವಾದ ಉತ್ಪತ್ತಿಯನ್ನು ಮೊದಲಿನಿಂದ ನಿಮಗೆ ಹೇಳುವೆನು.
ಬ್ರಹ್ಮಣೋ ಮಾನಸಾಃ ಪುತ್ರಾ ವಿದಿತಾಃ ಷಣ್ಮಹರ್ಷಯಃ |
ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ॥10॥
ಮರೀಚಿಯು, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ ಮತ್ತು ಕ್ರತು ಈ ಆರು ಮಹರ್ಷಿಗಳು ಬ್ರಹ್ಮದೇವರ ಮಾನಸಪುತ್ರರೆಂದು ಪ್ರಸಿದ್ಧರಾದವರು.
ಮರೀಚೇಃ ಕಾಶ್ಯಪಃ ಪುತ್ರಃ ಕಾಶ್ಯಪಾತ್ತು ಇಮಾಃ ಪ್ರಜಾಃ |
ಪ್ರಜಜ್ಞಿರೇ ಮಹಾಭಾಗಾ ದಕ್ಷಕನ್ಯಾಸ್ತ್ರಯೋದಶ ॥11॥
ಮರೀಚಿಯ ಮಕ್ಕಳು ಕಾಶ್ಯಪರು. ಕಾಶ್ಯಪರ ಪತ್ನಿಯರಾದ ಮಹಾನುಭಾವರಾದ ದಕ್ಷಪ್ರಜಾಪತಿಯ ಹದಿಮೂರು ಕನ್ನಿಕೆಯರು ಈ ಎಲ್ಲಾ ಪ್ರಜೆಗಳನ್ನೂ ಪ್ರಸವಿದರು.
ಅದಿತಿರ್ದಿತಿರ್ದನುಃ ಕಾಲಾ ಅನಾಯುಃ ಸಿಂಹಿಕಾ ಮುನಿಃ |
ಕ್ರೋಧಾ ಧ್ರುವಾ ಅರಿಷ್ಟಾ ಚ ವಿನತಾ ಕಪಿಲಾ ತಥಾ ॥12॥
ಕದ್ರೂಶ್ಚ ಪುರುಷವ್ಯಾಘ್ರ ದಕ್ಷಕನ್ಯಾಶ್ಚ ಭಾರತ |
ಏತಾಸಾಂ ವೀರ್ಯಸಂಪನ್ನಂ ಪುತ್ರಪೌತ್ರಮನಂತಕಮ್ ॥13॥
ಅದಿತಿ, ದಿತಿ, ದನು, ಕಾಲಾ, ಅನಾಯು, ಸಿಂಹಿಕಾ, ಮುನಿ, ಕ್ರೋಧ, ಧ್ರುವಾ, ಅರಿಷ್ಟ, ವಿನತಾ, ಕಪಿಲಾ ಮತ್ತು ಕದ್ರು ಇವರೇ ಆ ದಕ್ಷಕನ್ಯೆಯರು. ಎಲೈ ಪುರುಷವ್ಯಾಘ್ರನೇ ಇವರುಗಳ ಶೌರ್ಯಸಂಪನ್ನರಾದ ಮಕ್ಕಳು ಮತ್ತು ಮೊಮ್ಮಕಳು ಅನಂತವಾಗಿದ್ದಾರೆ.
ಅದಿತ್ಯಾಂ ದ್ವಾದಶಾದಿತ್ಯಾಃ ಸಂಭೂತಾ ಭುವನೇಶ್ವರಾಃ |
ಯೇ ರಾಜನ್ ನಾಮತಸ್ತಾಂಸ್ತೇ ಕೀರ್ತಯಿಷ್ಯಾಮಿ ಭಾರತ ॥14॥
ಎಲೈ ರಾಜನೇ ಅದಿತಿಯಲ್ಲಿ ಜನಿಸಿದ ಲೋಕೇಶ್ವರರಾದ ದ್ವಾದಶಾದಿತ್ಯರ ನಾಮಗಳನ್ನು ನಿನಗೆ ಹೇಳುವೆನು.
ಧಾತಾ ಮಿತ್ರೋಽರ್ಯಮಾ ಶಕ್ರೋ ವರುಣಸ್ತ್ವಂಶ ಏವ ಚ |
ಭಗೋ ವಿವಸ್ವಾ ನ್ ಪೂಷಾ ಚ ಸವಿತಾ ದಶಮಸ್ತಥಾ ॥15॥
ಏಕಾದಶಸ್ತಥಾ ತ್ವಷ್ಟಾ ವಿಷ್ಣುರ್ದ್ವಾದಶ ಉಚ್ಯತೇ |
ಜಘನ್ಯಜಶ್ಚ ಸರ್ವೇಷಾಮಾದಿತ್ಯಾನಾಂ ಗುಣಾಧಿಕಃ ॥16॥
ಧಾತಾ, ಮಿತ್ರ, ಅರ್ಯಮಾ, ಇಂದ್ರ, ವರುಣ, ಅಂಶ, ಭಗ, ವಿವಸ್ವಾನ್, ಪೂಷಾ, ಸವಿತಾ ಹತ್ತನೆಯವನು, ಹನ್ನೊಂದನೆಯ ತ್ವಷ್ಟಾ, ಮತ್ತು ಹನ್ನೆರಡನೆಯವನಾದ ವಿಷ್ಣು. ವಿಷ್ಣುವು ಅದಿತಿಯ ಮಕ್ಕಳಲ್ಲಿ ಚಿಕ್ಕವನಾದರೂ ಗುಣಗಳಿಂದ ಯಾವಾಗಲೂ ದೊಡ್ಡವನು.
ಏಕ ಏವ ದಿತೇಃ ಪುತ್ರೋ ಹಿರಣ್ಯಕಶಿಪುಃ ಸ್ಮೃತಃ |
ನಾಮ್ನಾ ಖ್ಯಾತಾಸ್ತು ತಸ್ಯೈತೇ ಪುತ್ರಾ ಪಂಚ ಮಹಾತ್ಮನಃ ॥17॥
ದಿತಿಗೆ ಹಿರಣ್ಯಕಶಿಪು ಎಂದು ಪ್ರಖ್ಯಾತನಾದ ಒಬ್ಬನೇ ಮಗ. ಆ ಮಹಾತ್ಮನಿಗೆ ಪ್ರಸಿದ್ಧರಾದ ಈ ಐದುಜನ ಮಕ್ಕಳು.
ಪ್ರಹ್ಲಾದಃ ಪೂರ್ವಜಸ್ತೇಷಾಂ ಸಂಹ್ಲಾದಸ್ತದನಂತರಃ |
ಅನುಹ್ಲಾದಸ್ತೃತೀಯೋಽಭೂತ್ ತಸ್ಮಾಚ್ಚ ಶಿವಿಬಾಷ್ಕಲೌ ॥18॥
ಅವರಲ್ಲಿ ಪ್ರಹ್ಲಾದನು ಮೊದಲನೆಯವನು. ಸಂಹ್ಲಾದನು ಅನಂತರದವನು, ಅನುಹ್ಲಾದನು ಮೂರನೆಯವನು. ಮತ್ತು ಶಿವಿ(ಶಿಬಿ), ಬಾಷ್ಕಲರು ನಾಲ್ಕು, ಐದನೆಯವರು.
ಪ್ರಹ್ಲಾದಸ್ಯ ತ್ರಯಃ ಪುತ್ರಾಃ ಖ್ಯಾತಾಃ ಸರ್ವತ್ರ ಭಾರತ |
ವಿರೋಚನಶ್ಚ ಕುಂಭಶ್ಚ ನಿಕುಂಭಶ್ಚೇತಿ ವಿಶ್ರುತಾಃ ॥19॥
ಎಲೈ ಭಾರತನೇ ಪ್ರಹ್ಲಾದನಿಗೆ ಎಲ್ಲೆಡೆಯಲ್ಲಿಯೂ ಪ್ರಖ್ಯಾತರಾದ ಮೂರುಜನ ಮಕ್ಕಳು. ಅವರು ವಿರೋಚನ, ಕುಂಭ, ನಿಕುಂಭ ಎಂದು ಪ್ರಖ್ಯಾತರಾದವರು.
ವಿರೋಚನಸ್ಯ ಪುತ್ರೋಽಭೂದ್ ಬಲಿರೇಕಃ ಪ್ರತಾಪವಾನ್ |
ಬಲೇಶ್ಚ ಪ್ರಥಿತಃ ಪುತ್ರೋ ಬಾಣೋ ನಾಮ ಮಹಾಸುರಃ ॥20॥
ವಿರೋಚನನಿಗೆ ಪ್ರತಾಪಶಾಲಿಯಾದ ಬಲಿಯು ಒಬ್ಬನೇ ಮಗ. ಬಲಿಯ ಮಗನಾದರೂ ಪ್ರಖ್ಯಾತನಾದ ಬಾಣನೆಂಬ ಮಹಾಸುರ.
ಚತ್ವಾರಿಂಶದ್ ದನೋಃ ಪುತ್ರಾಃ ಖ್ಯಾತಾಃ ಸರ್ವತ್ರ ಭಾರತ |
ತೇಷಾಂ ಪ್ರಥಮಜೋ ರಾಜನ್ ವಿಪ್ರಚಿತ್ತಿರ್ಮಹಾಸುರಃ ॥21॥
ಎಲೈ ಭಾರತರಾಜನೇ ದನುವಿನ ಮಕ್ಕಳು ನಲವತ್ತು ಮಂದಿಯೆಂದು ಎಲ್ಲ ಕಡೆ ಪ್ರಖ್ಯಾತರಾದವರು. ಅವರಲ್ಲಿ ಮಹಾಸುರನಾದ ವಿಪ್ರಚಿತ್ತಿಯು ಮೊದಲನೆಯವನು.

ಶಂಬರೋ ನಮುಚಿಶ್ಚೈವ ಪುಲೋಮಾ ಚೇತಿ ವಿಶ್ರುತಾಃ |
ಅಸಿಲೋಮಾ ಚ ಕೇಶೀ ಚ ದುರ್ಜಯಶ್ಚೈವ ದಾನವಃ ॥22॥
ಅಯಶ್ಶಿರಾ ಅಶ್ವಶಿರಾ ಅಯಶ್ಶಂಕುಶ್ಚ ವೀರ್ಯವಾನ್ |
ತಥಾ ಗಗನಮೂರ್ಧಾ ಚ ವೇಗವಾನ್ ಕೇತುಮಾಂಸ್ತಥಾ ॥23॥
ಸ್ವರ್ಭಾನುರಶ್ವೋಽಶ್ವಪತಿರ್ವೃಷಪರ್ವಾಽಜಕಸ್ತಥಾ |
ಅಶ್ವಗ್ರೀವಶ್ಚ ಸೂಕ್ಷ್ಮಶ್ಚ ತುಹುಂಡಶ್ಚ ಮಹಾಸುರಃ ॥24॥
ಸ್ವಸೃಪಶ್ಚೈಕಪಿತ್ತಶ್ಚ ವಿರೂಪಾಕ್ಷೋ ಗರಾಗರೌ |
ನಿಚಂದ್ರಶ್ಚ ನಿಕುಂಭಶ್ಚ ಕುಪಥಃ ಕಾಪಥಸ್ತಥಾ ॥25॥
ಶರಭಃ ಶಲಭಶ್ಚೈವ ಸೂರ್ಯಾಚಂದ್ರಮಸೌ ತಥಾ |
ಇತ್ಯಾಖ್ಯಾತಾಃ ದನೋರ್ವಂಶೇ ದಾನವಾಃ ಪರಿಕೀರ್ತಿತಾಃ ॥26॥
ಶಂಬರ, ನಮುಚಿ ಮತ್ತು ಪುಲೋಮಾ ಎಂದು ಪ್ರಸಿದ್ಧರಾದವರು. ಅತಿಲೋಮ, ಕೇಶೀ, ದುರ್ಜಯ, ಅಯಶ್ಶಿರಾ, ಅಶ್ವಶಿರಾ, ಅಯಶ್ಶಂಕು, ಗನನಮೂರ್ಧಾ, ವೇಗವಾನ್, ಕೇತುಮಾನ್, ಸ್ವರ್ಭಾನು, ಅಶ್ವ, ಅಶ್ವಪತಿ, ವೃಷಪರ್ವಾ, ಅಜಕ, ಅಶ್ವಗ್ರೀವ, ಸೂಕ್ಷ್ಮ, ತುಹುಂಡ, ಸ್ವಸೃಪ, ಏಕಪಿತ್ತ, ವಿರೂಪಾಕ್ಷ, ಗರ, ಅಗರ, ನಿಚಂದ್ರ, ನಿಕುಂಭ, ಕುಪಥ, ಕಾಪಥ, ಶರಭ, ಶಲಭ, ಸೂರ್ಯ, ಚಂದ್ರ ಹೀಗೆ ದನುವಿನ ಮಕ್ಕಳು ಹೆಸರಿಸಲ್ಪಡುತ್ತಾರೆ.
ಅನ್ಯೌ ತು ಖಲು ದೇವಾನಾಂ ಸೂರ್ಯಾಚಂದ್ರಮಸೌ ಸ್ಮೃತೌ |
ಅನ್ಯೌ ದಾನವಮುಖ್ಯಾನಾಂ ಸೂರ್ಯಾಚಂದ್ರಮಸೌ ತಥಾ ॥27॥
ದೇವತೆಗಳ ಗುಂಪಿನಲ್ಲಿದ್ದು ಹಗಲು, ರಾತ್ರಿಗೆ ಕಾರಣರಾದ ಸೂರ್ಯ, ಚಂದ್ರರು ಬೇರೆ. ದನುವಿನ ಮಕ್ಕಳಾದ ಸೂರ್ಯ, ಚಂದ್ರರು ಬೇರೆ.
ಇಮೇ ಚ ವಂಶೇ ಪ್ರಥಿತಾಃ ಸತ್ಯವಂತೋ ಮಹಾಬಲಾಃ |
ದನೋಃ ಪುತ್ರಾನ್ವಯೇ ಜಾತಾ ದಶ ದಾನವಪುಂಗವಾಃ ॥28॥
ಇವರು ಈ ವಂಶದಲ್ಲಿ ಸತ್ಯವಂತರು ಮತ್ತು ಮಹಾಬಲಿಷ್ಠರೆಂದು ಪ್ರಸಿದ್ಧರಾದವರು. ದನುವಿನ ಮಕ್ಕಳ ವಂಶದಲ್ಲಿ ಈ ಹತ್ತುಜನ ದಾನವಶ್ರೇಷ್ಠರು ಜನಿಸಿದರು.
ಏಕಾಕ್ಷೋ ಮೃತಪೋ ವೀರಃ ಪ್ರಲಂಬನರಕಾವಪಿ |
ವಾತಾಪಿಃ ಶತ್ರುತಪನಃ ಸದಶ್ವಶ್ಚ ಮಹಾಸುರಃ ॥29॥
ಗವಿಷ್ಠಶ್ಚ ವನಾಯುಶ್ಚ ದೀರ್ಘಜಿಹ್ವಶ್ಚ ವೀರ್ಯವಾನ್ |
ಅಸಂಖ್ಯೇಯಾಃ ಸ್ಮೃತಾಸ್ತೇಷಾಂ ಪುತ್ರಪೌತ್ರಾಶ್ಚ ಭಾರತ ॥30॥
ಏಕಾಕ್ಷ, ಮೃತಪ, ವೀರ, ಪ್ರಲಂಬ, ನರಕ, ವಾತಾಪಿ, ಶತ್ರುತಪನ, ಸದಶ್ವ, ಗವಿಷ್ಠ, ವನಾಯು, ದೀರ್ಘಜಿಹ್ವ ಈ ಶೌರ್ಯಶಾಲಿಗಳು ಪರಾಕ್ರಮಶಾಲಿಗಳು ಅವರು. ಎಲೈ ಭಾರತನೇ ಅವರ ಮಕ್ಕಳು ಮತ್ತು ಮೊಮ್ಮಕ್ಕಳ ಸಂಖ್ಯೆಗೆ ಲೆಕ್ಕವೇ ಇಲ್ಲ.
ಸಿಂಹಿಕಾ ಸುಷುವೇ ಪುತ್ರಂ ರಾಹುಂ ಚಂದ್ರಾರ್ಕಸೂದನಮ್ |
ಸುಚಂದ್ರಂ ಚಂದ್ರಹರ್ತಾರಂ ತಥಾ ಚಂದ್ರವಿಮರ್ದನಮ್ ॥31॥
ಸಿಂಹಿಕೆಯು ಚಂದ್ರ ಸೂರ್ಯರ ವೈರಿಯಾದ ರಾಹುವನ್ನೂ, ಮತ್ತು ಸುಚಂದ್ರ, ಚಂದ್ರಹರ್ತಾ ಮತ್ತು ಚಂದ್ರವಿಮರ್ದನ ಎಂಬ ಬೇರೆ ಮಕ್ಕಳನ್ನೂ ಪಡೆದಳು.
ಕ್ರೂರಸ್ವಭಾವಂ ಕ್ರೂರಾಯಾಃ ಪುತ್ರಪೌತ್ರಮನಂತಕಮ್ |
ಗಣಃ ಕ್ರೋಧವಶೋ ನಾಮ ರೌದ್ರಕರ್ಮಾಽರಿಮರ್ದನಃ ॥32॥
ಕಾಶ್ಯಪರ ಪತ್ನಿಯಾದ ಕ್ರೂರಾ ಎಂಬುವಳಲ್ಲಿ ಜನಿಸಿದ ಪುತ್ರ ಪೌತ್ರರು ಅನಂತವಾಗಿದ್ದಾರೆ. ಉಗ್ರಕರ್ಮರಾದ ಶತ್ರುಮರ್ದನರಾದ ಕ್ರೋಧವಶ ಎಂಬ ಗಣವು ಕ್ರೋಧಾ ಎಂಬ ಪತ್ನಿಯ ಮಕ್ಕಳು.
ಅನಾಯುಷಶ್ಚ ಪುತ್ರಾಸ್ತು ಚತ್ವಾರೋಽಸುರಸತ್ತಮಾಃ |
ಪುಕ್ಷರೋ ಬಲವೀರೌ ಚ ವೃತ್ರಶ್ಚೈವ ಮಹಾಸುರಃ ॥33॥
ಅನಾಯುವಿನ ಮಕ್ಕಳು ನಾಲ್ವರು ಅಸುರಶ್ರೇಷ್ಠರು. ಅವರು ಪುಕ್ಷರ, ಬಲ, ವೀರ ಮತ್ತು ವೃತ್ರಾಸುರ.
ಕಾಲಾಯಾಃ ಪ್ರಥಿತಾಃ ಪುತ್ರಾಃ ಕಾಲಕಲ್ಪಾಃ ಪ್ರಹಾರಿಣಃ |
ಭುವಿ ಖ್ಯಾತಾ ಮಹಾವೀರ್ಯಾ ದಾನವೇಷು ಪರಂತಪ ॥34॥
ಕಾಲಾ ಎಂಬ ಪತ್ನಿಯ ಮಕ್ಕಳು ಯಮಕಲ್ಪರಾಗಿ, ಸಂಹಾರಕರಾಗಿ, ಭೂಮಿಯಲ್ಲಿ ಪ್ರಸಿದ್ಧರಾಗಿ, ದಾನವರಲ್ಲಿ ಮಹಾಪರಾಕ್ರಮಶಾಲಿಗಳಾಗಿ ಇರುವವರು.
ವಿನಾಶನಶ್ಚ ಕ್ರೋಧಶ್ಚ ಕ್ರೊಧಹಂತಾ ಚ ವೀರ್ಯವಾನ್ |
ವಿವರ್ಧನಃ ಕ್ರೋಧಶತ್ರುಃ ಕಾಲಕೇಯಾ ಮಹಾಸುರಾಃ ॥35॥
ಕಾಲಾ ಎಂಬ ಪತ್ನಿಯ ಮಕ್ಕಳಲ್ಲಿ ಮುಖ್ಯರಾದವರು, ವಿನಾಶನ, ಕ್ರೋಧ, ಕ್ರೋಧಹಂತಾ, ವಿವರ್ಧನ ಮತ್ತು ಕ್ರೋಧಶತ್ರು ಎಂಬ ಪರಾಕ್ರಮಶಾಲಿಗಳಾದ ಮಹಾಸುರರು.
ಅಸುರಾಣಾಮುಪಾಧ್ಯಾಯಶ್ಶುಕ್ರಃ ಪುತ್ರಃ ಕವೇರಿತಿ |
ಖ್ಯಾತಾಶ್ಚೋಶನಸಃ ಪುತ್ರಾಶ್ಚತ್ವಾರೋಽಸುರಯಾಜಕಾಃ ॥36॥
ಅಸುರರ ಉಪಾಧ್ಯಾಯರಾದ ಶುಕ್ರಾಚಾರ್ಯರು ಭೃಗುವಿನ ಮಕ್ಕಳಾದ ಕವಿಯ ಮಕ್ಕಳು. ಶುಕ್ರಾಚಾರ್ಯರಿಗೆ ಪ್ರಸಿದ್ಧರಾದ ನಾಲ್ಕು

ಮಕ್ಕಳು. ಅವರೆಲ್ಲರೂ ಅಸುರರಿಗೆ ಪುರೋಹಿತರು.
ತ್ವಷ್ಟಾಽವರಸ್ತಥಾತ್ರಿಶ್ಚ ದ್ವಾವನ್ಯೌ ಭದ್ರಕರ್ಮಿಣೌ |
ತೇಜಸಾ ಸೂರ್ಯಸಂಕಾಶಾ ಬ್ರಹ್ಮಲೋಕಪ್ರಭಾವನಾಃ ॥37॥
ಚಿಕ್ಕವನಾದ ತ್ವಷ್ಟ್ರ, ಅತ್ರಿ, ಮತ್ತಿಬ್ಬರು ಮಂಗಳಕರ್ಮವನ್ನು ಮಾಡುವವರು, ತಮ್ಮ ಕಾಂತಿಯಿಂದ ಸೂರ್ಯನಂತೆ ಬೆಳಗಿ ಬ್ರಹ್ಮಲೋಕವನ್ನು ಉಂಟುಮಾಡಿಕೊಡುವವರು.
ಇತ್ಯೇಷ ವಂಶಪ್ರಭವಃ ಕಥಿತಸ್ತೇ ತರಸ್ವಿನಾಮ್ |
ಅಸುರಾಣಾಂ ಸುರಾಣಾಂ ಚ ಪುರಾಣೇ ಸಂಶ್ರುತೋ ಮಯಾ ॥38॥
ಇದು ಪುರಾಣಗಳಲ್ಲಿ ನಾನು ಕೇಳಿದ ದೇವತೆಗಳ ಮತ್ತು ಅಸುರರ ವಂಶವಿಸ್ತಾರ. ಇದನ್ನು ನಾನು ನಿನಗೆ ತಿಳಿಸಿದ್ದೇನೆ.
ಏತೇಷಾಂ ಯದಪತ್ಯಂ ತು ನ ಶಕ್ಯಂ ತದಶೇಷತಃ |
ಪ್ರಸಂಖ್ಯಾತುಂ ಮಹೀಪಾಲ ಗಣಭೂತಮನಂತಕಮ್ ॥39॥
ಎಲೈ ರಾಜನೇ ಇವರ ಮಕ್ಕಳನ್ನು ಸಂಪೂರ್ಣವಾಗಿ ಎಣಿಸಲು ಸಾಧ್ಯವಿಲ್ಲ. ಅವರು ಅನಂತ ಗಣರೂಪರಾಗಿದ್ದಾರೆ.
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ತಥೈವ ಗರುಡಾರುಣೌ |
ಆರುಣಿರ್ವಾರುಣಿಶ್ಚೈವ ವೈನತೇಯಾಃ ಪ್ರಕೀರ್ತಿತಾಃ ॥40॥
ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ಅರುಣ, ಆರುಣಿ ಮತ್ತು ವಾರುಣಿ ಇವರು ವಿನತಾದೇವಿಯ ಮಕ್ಕಳು.
ಶೇಷೋಽನಂತೋ ವಾಸುಕಿಶ್ಚ ತಕ್ಷಕಶ್ಚ ಭುಜಂಗಮಃ |
ಕೂರ್ಮಶ್ಚ ಕುಲಿಕಶ್ಚೈವ ಕಾದ್ರವೇಯಾ ಇತಿ ಸ್ಮೃತಾಃ ॥41॥
ಶೇಷ, ಅನಂತ, ವಾಸುಕಿ, ತಕ್ಷಕ, ಭುಜಂಗಮ, ಕೂರ್ಮ, ಕುಲಿಕ ಮೊದಲಾದವರು ಕದ್ರೂ ದೇವಿಯ ಮಕ್ಕಳು.
ಭೀಮಸೇನೋಗ್ರಸೇನೌ ಚ ಸುಪರ್ಣೋ ವರುಣಸ್ತಥಾ |
ಗೋಪತಿರ್ಧೃತರಾಷ್ಟ್ರಶ್ಚ ಸೂರ್ಯವರ್ಚಾಶ್ಚ ಸಪ್ತಮಃ ॥42॥
ಪತ್ರವಾನರ್ಕವರ್ಣಶ್ಚ ಪ್ರಯುತಶ್ಚೈವ ವಿಶ್ರುತಃ |
ಭೀಮಶ್ಚಿತ್ರರಥಶ್ಚೈವ ವಿಖ್ಯಾತಃ ಸರ್ವವಿದ್ ವಶೀ ॥43॥
ತಥಾ ಶಾಲಿಶಿರಾ ರಾಜನ್ ಪ್ರದ್ಯುಮ್ನಶ್ಚ ಚತುರ್ದಶಃ |
ಕಲಿಃ ಪಂಚದಶಶ್ಚೈವ ನಾರದಶ್ಚೈವ ಷೋಡಶಃ ॥44॥
ಇತ್ಯೇತೇ ದೇವಗಂಧರ್ವಾ ಮೌನೇಯಾಃ ಪರಿಕೀರ್ತಿತಾಃ
ಅತಸ್ತ್ವನ್ಯಾನಿ ಭೂತಾನಿ ಕೀರ್ತಯಿಷ್ಯಾಮಿ ಭಾರತ ॥45॥
ಭೀಮಸೇನ, ಉಗ್ರಸೇನ, ಸುಪರ್ಣ, ವರುಣ, ಗೋಪತಿ, ಧೃತರಾಷ್ಟ್ರ, ಸೂರ್ಯವರ್ಚ, ಪತ್ರವಾನ್, ಅರ್ಕವರ್ಣ, ಪ್ರಯುತ, ಭೀಮ, ವಿಖ್ಯಾತನಾದ ಚಿತ್ರರಥ, ಸರ್ವವಿದ್, ವಶೀ, ಶಾಲಿಶಿರಾ, ಪ್ರದ್ಯುಮ್ನ, ಕಲ, ಮತ್ತು ಹದಿನಾರನೆಯವರಾದ ನಾರದರು. ಇವರೆಲ್ಲರೂ ಕಶ್ಯಪರ ಪತ್ನಿಯಾದ ಮುನಿದೇವಿಯ ಮಕ್ಕಳು ಮತ್ತು ದೇವಗಂಧರ್ವರೆಂದು ಪ್ರಸಿದ್ಧರಾದವರು. ಇನ್ನು ಮುಂದೆ ಬೇರೆಯ ಮಕ್ಕಳ ವಿಷಯವನ್ನು ಹೇಳುತ್ತೇನೆ.
ಅನವದ್ಯಾಮನುವಶಾಮನೂನಾಮರುಣಾಂ ಪ್ರಿಯಾಮ್ |
ಅನೂಪಾಂ ಸುಭಗಾಂ ಭಾಸೀಮಿತಿ ಪ್ರಾವಾ ವ್ಯಜಾಯತ ॥46॥
ಕಶ್ಯಪರ ಪತ್ನಿಯಾದ ಪ್ರಾವಾದೇವಿಯು, ಅನವದ್ಯಾ, ಅನುವಶಾ, ಅನೂನಾ, ಅರುಣಾ, ಪ್ರಿಯಾ, ಅನೂಪಾ, ಸುಭಗಾ ಮತ್ತು ಭಾಸೀ ಎಂಬ ಹೆಣ್ಣುಮಕ್ಕಳನ್ನು ಪಡೆದಳು.
ಸಿದ್ಧಃ ಪೂರ್ಣಶ್ಚ ವರ್ಹೀ ಚ ಪೂರ್ಣಾಶಶ್ಚ ಮಹಾಯಶಾಃ |
ಬ್ರಹ್ಮಚಾರೀ ರತಿಗುಣಃ ಸುಪರ್ಣಶ್ಚೈವ ಸಪ್ತಮಃ ॥47॥
ವಿಶ್ವಾವಸುಶ್ಚ ಭಾನುಶ್ಚ ಸುಚಂದ್ರೋ ದಶಮಸ್ತಥಾ |
ಇತ್ಯೇತೇ ದೇವಗಂಧರ್ವಾಃ ಪ್ರಾವೇಯಾಃ ಪರಿಕೀರ್ತಿತಾಃ ॥48॥
ಸಿದ್ಧ, ಪೂರ್ಣ, ವರ್ಹೀ, ಮಹಾಯಶಸ್ವಿಯಾದ ಪೂರ್ಣಾಶ, ಬ್ರಹ್ಮಚಾರಿ, ರತಿಗುಣ, ಏಳನೆಯವನಾದ ಸುಪರ್ಣ, ವಿಶ್ವಾವಸು, ಭಾನು, ಮತ್ತು ಹತ್ತನೆಯವನಾದ ಸುಚಂದ್ರ. ಈ ದೇವಗಂಧರ್ವರು ಕಶ್ಯಪರ ಪತ್ನಿಯಾದ ಪ್ರಾವಾದೇವಿಯ ಮಕ್ಕಳು.
ಇಮಂ ತ್ವಪ್ಸರಸಾಂ ವಂಶಂ ಪ್ರಥಿತಂ ಪುಣ್ಯಲಕ್ಷಣಮ್ |
ಅರಿಷ್ಟಾ ಸುಮಹಾಭಾಗಾ ದೇವೀ ದೇವರ್ಷಿತಃ ಪುರಾ ॥49॥
ಮಹಾನುಭಾವಳಾದ ಅರಿಷ್ಟಾದೇವಿಯು ದೇವರ್ಷಿಗಳಾದ ಕಾಶ್ಯಪರಿಂದ ಅಪ್ಸರೆಯರನ್ನು ಪಡೆದಳು.
ಅಲಂಬುಸಾ ಮಿಶ್ರಕೇಶೀ ವಿದ್ಯುದ್ವರ್ಣಾ ತಿಲೋತ್ತಮಾ |
ಅರುಣಾ ರಕ್ಷಿತಾ ಚೈವ ರಂಭಾ ತದ್ವನ್ಮನೋರಮಾ ॥50॥
ಅಸಿತಾ ಚ ಸುಬಾಹುಶ್ಚ ಸುವ್ರತಾ ಸುಭುಜಾ ತಥಾ |
ಸುಪ್ರಿಯಾ ಚ ಸುಬಾಹುಶ್ಚ ವಿಖ್ಯಾತೌ ಚ ಹಹಾ ಹುಹೂ |
ತುಂಬುರುಶ್ಚೇತಿ ಚತ್ವಾರಃ ಸ್ಮೃತಾ ಗಂಧರ್ವಸತ್ತಮಾಃ ॥51॥
ಅಪ್ಸರೆಯರಾದ ಅಲಂಬುಸಾ, ಮಿಶ್ರಕೇಶೀ, ವಿದ್ಯುದ್ವರ್ಣಾ, ತಿಲೋತ್ತಮಾ, ಅರುಣಾ, ರಕ್ಷಿತಾ, ಮನೋರಮೆಯಾದ ರಂಭೆ, ಅಸಿತಾ, ಸುಬಾಹು, ಸುವ್ರತಾ, ಸುಭುಜಾ, ಸುಪ್ರಿಯಾ ಮತ್ತು ಸುಬಾಹು ಪ್ರಖ್ಯಾತರಾದ ಹಹಾ ಹುಹೂ ಮತ್ತು ತುಂಬುರು ಈ ನಾಲ್ವರು ಗಂಧರ್ವಶ್ರೇಷ್ಠರು ಅರಿಷ್ಟಾದೇವಿಯ ಮಕ್ಕಳು.

ಅಮೃತಂ ಬ್ರಾಹ್ಮಣಾ ಗಾವೋ ಗಂಧರ್ವಾಪ್ಸರಸಸ್ತಥಾ |
ಅಪತ್ಯಂ ಕಪಿಲಾಯಾಸ್ತು ಪುರಾಣೇ ಪರಿಕೀರ್ತಿತಮ್ |
ಇತಿ ತೇ ಸರ್ವಭೂತಾನಾಂ ಸಂಭವಃ ಕಥಿತೋ ಮಯಾ ॥52॥
ಕಪಿಲಾ ಎಂಬ ಪತ್ನಿಯ ಮಕ್ಕಳು ಬ್ರಾಹ್ಮಣರು, ಗೋವುಗಳು, ಗಂಧರ್ವರು, ಅಪ್ಸರೆಯರು, ಮತ್ತು ಅಮೃತಾಭಿಮಾನಿದೇವತೆಯೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಹೀಗೆ ನಾನು ನಿನಗೆ ಎಲ್ಲಾ ಜೀವರ ಉತ್ಪತ್ತಿಯನ್ನು ತಿಳಿಸಿದ್ದೇನೆ.
ಯಥಾವತ್ ಪರಿಸಂಖ್ಯಾತೋ ಗಂಧರ್ವಾಪ್ಸರಸಾಂ ತಥಾ |
ಭುಜಂಗಾನಾಂ ಸುಪರ್ಣಾನಾಮಸುರಾಣಾಂ ತಥೈವ ಚ ॥53॥
ಗವಾಂ ಚ ಬ್ರಾಹ್ಮಣಾನಾಂ ಚ ಶ್ರೀಮತಾಂ ಪುಣ್ಯಕರ್ಮಣಾಮ್ |
ಆಯುಷ್ಯಶ್ಚೈವ ಪುಣ್ಯಶ್ಚ ಧನ್ಯಃ ಶ್ರುತಿಸುಖಾವಹಃ |
ಶ್ರೋತವ್ಯಶ್ಚೈವ ಸತತಂ ಶ್ರಾವ್ಯಶ್ಚೈವಾನಸೂಯತಾ ॥54॥
ಗಂಧರ್ವರ, ಅಪ್ಸರೆಯರ, ಸರ್ಪಗಳ, ಪಕ್ಷಿಗಳ, ಅಸುರರ, ಗೋವುಗಳ, ಬ್ರಾಹ್ಮಣರ ಮತ್ತು ಸಂಪದ್ಯುಕ್ತರಾದ ಪುಣ್ಯಶಾಲಿಗಳ ಉತ್ಪತ್ತಿಯನ್ನು ನಿನಗೆ ತಿಳಿಸಿದ್ದೇನೆ. ಈ ವಂಶದ ಶ್ರವಣವು ಶ್ರುತಿಗೆ ಇಂಪಾಗಿದ್ದು, ಆಯುಷ್ಯವನ್ನೂ, ಪುಣ್ಯವನ್ನೂ ಮತ್ತು ಧನವನ್ನೂ ಕೊಡುವಂತಹುದು. ಇದು ಅಸೂಯೆಯನ್ನು ಬಿಟ್ಟು ಯಾವಾಗಲೂ ಕೇಳಬೇಕಾದದ್ದು.
ಇಮಂ ತು ವಂಶಂ ನಿಯಮೇನ ಯಃ ಪಠೇತ್
ಮಹಾತ್ಮನಾಂ ಬ್ರಾಹ್ಮಣದೇವಸನ್ನಿಧೌ |
ಅಪತ್ಯಲಾಭಂ ಲಭತೇ ಚ ಪುಷ್ಕಳಂ
ಶ್ರಿಯಂ ಯಶಂ ಪ್ರೇತ್ಯ ಚ ಶೋಭನಾಂ ಗತಿಮ್ ॥55॥
ಮಹಾತ್ಮರ ಈ ವಂಶವನ್ನು ಯಾವನು ನಿಯಮದಿಂದ ಪಠಿಸುತ್ತಾನೆಯೋ, ಅವನು ಮಕ್ಕಳನ್ನು ಪಡೆಯುತ್ತಾನೆ. ಪುಷ್ಕಳವಾದ ಸಂಪತ್ತನ್ನು ಮತ್ತು ಕೀರ್ತಿಯನ್ನು ಪಡೆಯುತ್ತಾನೆ. ದೇಹತ್ಯಾಗವನ್ನು ಮಾಡಿದ ಮೇಲೆ ಸದ್ಗತಿಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
*****

ಅರವತ್ತೊಂದನೆಯ ಅಧ್ಯಾಯ
(ಋಷ್ಯಾದಿ ವಂಶಕಥನ.)
ವೈಶಂಪಾಯನಃ
ಬ್ರಹ್ಮಣೋ ಮಾನಸಾಃ ಪುತ್ರಾ ವಿದಿತಾಃ ಷಣ್ಮಹರ್ಷಯಃ |
ಏಕಾದಶ ತಥಾ ರುದ್ರಾಃ ಸ್ಥಾಣೋಶ್ಚೈವ ಹಿ ಮಾನಸಾಃ ॥1॥
ಷಣ್ಮಹರ್ಷಿಗಳು ಬ್ರಹ್ಮದೇವರ ಮಾನಸಪುತ್ರರೆಂದು ಪ್ರಸಿದ್ಧರಾದವರು. ಹಾಗೆಯೇ ಏಕಾದಶಾರುದ್ರರೂ ಸಹ ಬ್ರಹ್ಮದೇವರ ಮಾನಸ ಪುತ್ರರು.
ಮೃಗವ್ಯಾಧಶ್ಚ ಶರ್ವಶ್ಚ ನಿರೃತಿಶ್ಚ ಮಹಾಯಶಾಃ |
ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚ ಪರಂತಪಃ ॥2॥
ದಹನಶ್ಚೇಶ್ವರಶ್ಚೈವ ಕಪಾಲೀ ಚ ಮಹಾದ್ಯುತಿಃ |
ಸ್ಥಾಣುರ್ಭವಶ್ಚ ಭಗವಾನ್ ರುದ್ರಾ ಏಕಾದಶ ಸ್ಮೃತಾಃ ॥3॥
ಮೃಗವ್ಯಾಧ, ಶರ್ವ, ನಿರೃತಿ, ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕೀ, ದಹನ, ಈಶ್ವರ, ಕಪಾಲೀ, ಸ್ಥಾಣು, ಪೂಜ್ಯನಾದ ಭವ ಇವರು ಏಕಾದಶ ರುದ್ರರೆಂದು ಪ್ರಸಿದ್ಧರಾಗಿದ್ದಾರೆ.
ಮರೀಚಿರಂಗಿರಾಥಾತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ |
ಷಡೇತೇ ಬ್ರಹ್ಮಣಃ ಪುತ್ರಾ ವೀರ್ಯವಂತೋ ಮಹರ್ಷಯಃ ॥4॥
ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು ಈ ಆರು ಜನ ಪರಾಕ್ರಮಶಾಲಿಗಳಾದ ಮಹರ್ಷಿಗಳು ಬ್ರಹ್ಮದೇವರ ಪುತ್ರರು.
ತ್ರಯಸ್ತ್ವಂಗಿರಸಃ ಪುತ್ರಾ ಲೋಕೇ ಸರ್ವತ್ರ ವಿಶ್ರುತಾಃ |
ಬೃಹಸ್ಪತಿರುಚಥ್ಯಶ್ಚ ಸಂವರ್ತಶ್ಚ ದೃಢವ್ರತಾಃ ॥5॥
ಅಂಗಿರಸರ ಮಕ್ಕಳು ಸರ್ವಲೋಕದಲ್ಲಿಯೂ ಪ್ರಸಿದ್ಧರಾದ ಮೂವರು. ಅವರು ಒಳ್ಳೆಯ ವ್ರತಧಾರಿಗಳಾದ ಬೃಹಸ್ಪತಿ, ಉಚಥ್ಯ ಮತ್ತು ಸಂವರ್ತ ಎಂಬುವರು.
ಅತ್ರೇಸ್ತು ಬಹವಃ ಪುತ್ರಾಃ ಶ್ರೂಯಂತೇ ಮನುಜಾಧಿಪ |
ಸರ್ವೇ ವೇದವಿದಃ ಸಿದ್ಧಾಃ ಶಾಂತಾತ್ಮಾನೋ ಮಹರ್ಷಯಃ ॥6॥
ಎಲೈ ರಾಜನೇ, ಅತ್ರಿಋಷಿಗಳಿಗೆ ಅನೇಕ ಮಕ್ಕಳೆಂದು ಕೇಳಿದ್ದೇನೆ. ಅವರೆಲ್ಲರೂ ವೇದವಿದ್ವಾಂಸರೂ, ಶಾಂತಮನಸ್ಸುಳ್ಳವರೂ, ಸಿದ್ಧರೂ ಆದ ಮಹರ್ಷಿಗಳು.
ರಾಕ್ಷಸಾಸ್ತು ಪುಲಸ್ತ್ಯಸ್ಯ ವಾನರಾಃ ಕಿನ್ನರಾಸ್ತಥಾ |

ಯಕ್ಷಾಶ್ಚ ಮನುಜವ್ಯಾಘ್ರ ಹ್ಯಪತ್ಯಂ ತಸ್ಯ ಧೀಮತಃ ॥7॥
ಎಲೈ ಪುರುಷಶ್ರೇಷ್ಠನೇ ಮೇಧಾವಿಗಳಾದ ಪುಲಸ್ತ್ಯರ ಮಕ್ಕಳು ರಾಕ್ಷಸರು, ವಾನರರು, ಕಿನ್ನರರು ಮತ್ತು ಯಕ್ಷರು.
ಪುಲಹಸ್ಯ ಸುತಾ ರಾಜನ್ ಶರಭಾಃ ಪರಿಕೀರ್ತಿತಾಃ |
ಸಿಂಹಾ ಕಿಂಪುರುಷಾ ವ್ಯಾಘ್ರಾ ರೂಕ್ಷಾ ಈಹಾಮೃಗಾ ವೃಕಾಃ ॥8॥
ಎಲೈ ರಾಜನೇ ಶರಭಗಳು, ಸಿಂಹಗಳು, ಕಿಂಪುರುಷಗಳು, ವ್ಯಾಘ್ರಗಳು, ಉಗ್ರವಾದ ಈಹಾಮೃಗಗಳು ಮತ್ತು ತೋಳಗಳು ಪುಲಹರ ಮಕ್ಕಳೆಂದು ಹೇಳಲ್ಪಡುತ್ತಾರೆ.
ಕ್ರತೋಃ ಕ್ರತುಸಮಾಃ ಪುತ್ರಾಃ ಪತಂಗಸಹಚಾರಿಣಃ |
ವಿಶ್ರುತಾಸ್ತ್ರಿಷು ಲೋಕೇಷು ಸತ್ಯವ್ರತಪರಾಯಣಾಃ ॥9॥
ಕ್ರತುವಿಗೆ ಆತ್ಮಸಮಾನರಾದ ಸೂರ್ಯನ ಜೊತೆಯಲ್ಲೇ ಸಂಚರಿಸುವ ಮೂರುಲೋಕದಲ್ಲೂ ಪ್ರಸಿದ್ಧರಾದ ಸತ್ಯವ್ರತಪರಾಯಣರಾದ ಅನೇಕ ಮಕ್ಕಳು.
ಅಂಗುಷ್ಠಾದ್ ದಕ್ಷಿಣಾದ್ ದಕ್ಷ ಉತ್ಪನ್ನೋ ಭಗವಾನೃಷಿಃ |
ಬ್ರಹ್ಮಣಃ ಪೃಥಿವೀಪಾಲ ಪುತ್ರಃ ಪುತ್ರವತಾಂ ವರಃ ॥10॥
ಎಲೈ ರಾಜನೇ ಪೂಜ್ಯನಾದ ಮತ್ತು ಋಷಿಯಾದ ಮತ್ತು ಮಕ್ಕಳನ್ನು ಹೊಂದಿದವರಲ್ಲಿ ಶ್ರೇಷ್ಠನಾದ ದಕ್ಷಪ್ರಜಾಪತಿಯು ಬ್ರಹ್ಮದೇವರ ದಕ್ಷಿಣಾಂಗುಷ್ಠದಿಂದ ಪುತ್ರನಾಗಿ ಜನಿಸಿದನು.
ಮಹರ್ಷೇಸ್ತಸ್ಯ ಭಾರ್ಯಾ ತು ವಾಮಾಂಗುಷ್ಠಾದಜಾಯತ |
ತಸ್ಯಾಂ ಪಂಚಾಶತಂ ಕನ್ಯಾಃ ಸ ಏವಾಜನಯನ್ಮುನಿಃ ॥11॥
ಮಹರ್ಷಿಯಾದ ಅವನ ಪತ್ನಿಯು ಬ್ರಹ್ಮದೇವನ ವಾಮಾಂಗುಷ್ಠದಿಂದ ಜನಿಸಿದಳು. ಅವಳಲ್ಲಿ ಮುನಿ ಸಮಾನನಾದ ಅವನು ಐವತ್ತು ಹೆಣ್ಣುಮಕ್ಕಳನ್ನು ಪಡೆದನು.
ತಾಃ ಸರ್ವಾಸ್ತ್ವನವದ್ಯಾಂಗ್ಯಃ ಕನ್ಯಾಃ ಕಮಲಲೋಚನಾಃ |
ಪುತ್ರಿಕಾಃ ಸ್ಥಾಪಯಾಮಾಸ ನಷ್ಟಪುತ್ರಃ ಪ್ರಜಾಪತಿಃ ॥12॥
ಆ ಎಲ್ಲಾ ಕನ್ಯೆಯರೂ ನಿರ್ದುಷ್ಟವಾದ ದೇಹವುಳ್ಳವರು. ಮತ್ತು ಕಮಲನಯನೆಯರು. ಗಂಡುಮಕ್ಕಳನ್ನು ಕಳೆದುಕೊಂಡ ದಕ್ಷಪ್ರಜಾಪತಿಯು ತನ್ನ ಹೆಣ್ಣುಮಕ್ಕಳನ್ನು ಪ್ರಪಂಚದಲ್ಲಿ ಸ್ಥಾಪಿಸಿದನು.
ದದೌ ಸ ದಶ ಧರ್ಮಾಯ ಸಪ್ತವಿಂಶತಿ ಚೇಂದವೇ |
ದಿವ್ಯೇನ ವಿಧಿನಾ ರಾಜನ್ ಕಾಶ್ಯಪಾಯ ತ್ರಯೋದಶ ॥13॥
ಎಲೈ ರಾಜನೇ ದಕ್ಷಪ್ರಜಾಪತಿಯು ಹತ್ತು ಕನ್ಯೆಯರನ್ನು ಯಮಧರ್ಮನಿಗೂ, ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೂ, ಹದಿಮೂರು ಕನ್ಯೆಯರನ್ನು ಕಾಶ್ಯಪರಿಗೂ ದಿವ್ಯವಾದ ವಿಧಾನದಿಂದ ವಿವಾಹ ಮಾಡಿಕೊಟ್ಟನು.
ನಾಮತೋ ಧರ್ಮಪತ್ನ್ಯಸ್ತಾಃ ಕೀರ್ತ್ಯಮಾನಾ ನಿಬೋಧ ಮೇ |
ಮೂರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ತಥಾ ॥14॥
ಬುದ್ಧಿರ್ಲಜ್ಜಾ ಮತಿಶ್ಚೈವ ಪತ್ನ್ಯೋ ಧರ್ಮಸ್ಯ ತಾ ದಶ |
ಭಾರ್ಯಾ ಹ್ಯೇತಾಶ್ಚ ಧರ್ಮಸ್ಯ ವಿಹಿತಾಶ್ಚ ಸ್ವಯಂಭುವಾ ॥15॥
ಯಮಧರ್ಮಪತ್ನಿಯರ ನಾಮಗಳನ್ನು ಹೇಳುತ್ತೇನೆ ಕೇಳು - ಮೂರ್ತಿ, ಲಕ್ಷ್ಮೀ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಬುದ್ಧಿ, ಲಜ್ಜಾ ಮತ್ತು ಮತಿ ಈ ಹತ್ತುಜನರು ಧರ್ಮರಾಜನ ಪತ್ನಿಯರು. ಇವರು ಯಮಧರ್ಮನ ಪತ್ನಿಯರಾಗಬೇಕೆಂದು ಬ್ರಹ್ಮದೇವರು ಮೊದಲೇ ನಿರ್ಧಾರಮಾಡಿದ್ದರು.
ಸಪ್ತವಿಂಶತಿ ಸೋಮಸ್ಯ ಪತ್ನ್ಯೋ ಲೋಕಪರಿಶ್ರುತಾಃ |
ಕಾಲಸ್ಯ ನಯನೇ ಯುಕ್ತಾ ಧರ್ಮಪತ್ನ್ಯಃ ಶುಚಿವ್ರತಾಃ ॥16॥
ಸರ್ವಾ ನಕ್ಷತ್ರಯೋಗಿನ್ಯೋ ಲೋಕಯಾತ್ರಾವಿಧೌ ಸ್ಥಿತಾಃ |
ಪಿತಾಮಹೋ ಮುನಿರ್ದೇವಃ ತಸ್ಯ ಪುತ್ರಃ ಪ್ರಜಾಪತಿಃ ॥17॥
ಚಂದ್ರನ ಪತ್ನಿಯರು ಲೋಕಪ್ರಸಿದ್ಧರಾದ ಇಪ್ಪತ್ತೇಳುಮಂದಿ. ಕಾಲಚಕ್ರದಲ್ಲಿ ನಿಯೋಜಿಸಲ್ಪಟ್ಟ ಅವರೆಲ್ಲರೂ ಧಾರ್ಮಿಕರು ಮತ್ತು ಒಳ್ಳೆಯ ವ್ರತವನ್ನು ಧರಿಸಿದವರು. ಎಲ್ಲರೂ ನಕ್ಷತ್ರದ ಹೆಸರನ್ನು ಹೊಂದಿದವರು. ಮತ್ತು ಲೋಕಯಾತ್ರೆಗೆ ಸಹಕಾರಿಗಳಾದವರು. ಋಷಿಗಳಾದ ಬ್ರಹ್ಮದೇವರ ಮಕ್ಕಳು ಕಾಶ್ಯಪರು. ಅವರೂ ಒಬ್ಬ ಪ್ರಜಾಪತಿಗಳು.
ತಸ್ಯಾಪ್ಯಷ್ಟೌ ವಸವಃ ಪುತ್ರಾಸ್ತೇಷಾಂ ವಕ್ಷ್ಯಾಮಿ ವಿಸ್ತರಮ್ |
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಿಲೋಽನಲಃ ॥18॥
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟಾವಿತಿ ಸ್ಮೃತಾಃ |
ಧೂಮ್ರಾಯಾಶ್ಚ ಧರಃ ಪುತ್ರೋ ಬ್ರಹ್ಮವಿದ್ಯಾಸುತೋ ಧ್ರುವಃ ॥19॥
ಅವರಿಗೆ ಅಷ್ಟವಸುಗಳು ಪುತ್ರರು. ಅವರ ವಿಸ್ತಾರವನ್ನು ಹೇಳುವೆನು ಕೇಳು. ಧರ, ಧ್ರುವ, ಸೋಮ, ಆಪ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ ಇವರು ಅಷ್ಟವಸುಗಳೆಂದು ಪ್ರಸಿದ್ಧರಾದವರು. ದಕ್ಷಪ್ರಜಾಪತಿಯ ಇತರ ಹೆಣ್ಣುಮಕ್ಕಳಲ್ಲಿ ಒಬ್ಬಳಾದ ಧೂಮ್ರ ಎಂಬುವಳ ಪುತ್ರ ಧರ. ಬ್ರಹ್ಮಜಾ ಎಂಬುವಳ ಮಗ ಧ್ರುವ.
ಚಂದ್ರಮಾಶ್ಚ ಮನಸ್ವಿನ್ಯಾಃ ಶ್ವಸಾಯಾಃ ಶ್ವಸನಸ್ತಥಾ |
ರಸಾಯಾಶ್ಚ ರಸಃ ಪುತ್ರಃ ಶಾಂಡಿಲ್ಯಾಯಾ ಹುತಾಶನಃ ॥20॥
ಮನಸ್ವಿನಿ ಎಂಬುವಳ ಪುತ್ರಚಂದ್ರ, ಶ್ವಸಾ ಎಂಬುವಳ ಪುತ್ರ ಶ್ವಸನ. ರಸಾ ಎಂಬುವಳ ಪುತ್ರ ರಸ, ಶಾಂಡಿಲ್ಯಾ ಎಂಬುವಳ ಪುತ್ರ

ಹುತಾಶನ.
ಪ್ರತ್ಯೂಷಶ್ಚ ಪ್ರಭಾಸಶ್ಚ ಪ್ರಭಾಸಾಯಾಃ ಸುತೌ ಸ್ಮೃತೌ |
ಧರಸ್ಯ ಪುತ್ರೋ ದ್ರವಿಣೋ ಹುತಹವ್ಯವಹಸ್ತಥಾ ॥21॥
ಪ್ರತ್ಯೂಷ ಮತ್ತು ಪ್ರಭಾಸ ಇವರಿಬ್ಬರು ಪ್ರಭಾಸಾ ಎಂಬುವಳ ಮಕ್ಕಳು ಎಂದು ಪ್ರಸಿದ್ಧರು. ಧರನಿಗೆ ದ್ರವಿಣ ಮತ್ತು ಹುತಹವ್ಯವಹ ಎಂಬ ಎರಡು ಮಕ್ಕಳು.
ಆಪಸ್ಯ ಪುತ್ರೋ ವೈತಂಡ್ಯಃ ಶ್ರಮಃ ಶಾಂತೋ ಮುನಿಸ್ತಥಾ |
ಧ್ರುವಸ್ಯ ಪುತ್ರೋ ಭಗವಾನ್ ಕಾಲೋ ಲೋಕಪ್ರಕಾಲನಃ ॥22॥
ವೈತಂಡ್ಯ, ಶ್ರಮ, ಶಾಂತ ಮತ್ತು ಮುನಿ ಇವರು ಆಪ ವಸುವಿನ ಮಕ್ಕಳು. ಲೋಕವನ್ನು ಕಂಪಿಸುವ ಪೂಜ್ಯನಾದ ಕಾಲನು ಧ್ರುವನ ಪುತ್ರ.
ಸೋಮಸ್ಯ ತು ಸುತೋ ವರ್ಚಾ ವರ್ಚಸ್ವೀ ಯೇನ ಜಾಯತೇ |
ಮನೋಹರಾಯಾಃ ಶಿಶಿರಃ ಪ್ರಾಣೋಽಥ ರಮಣಸ್ತಥಾ ॥23॥
ಸೋಮನ ಮಗ ಎಲ್ಲರ ವರ್ಚಸ್ಸಿಗೂ ಕಾರಣನಾದ ವರ್ಚ ಎಂಬುವನು. ಮನೋಹರ ಎಂಬುವಳಿಗೆ ಶಿಶಿರ, ಪ್ರಾಣ ಮತ್ತು ರಮಣ ಎಂಬ ಮೂರು ಮಕ್ಕಳು.
ಅಹ್ನಃ ಸುತಃ ಸ್ಮೃತೋ ಜ್ಯೋತಿಃ ಶ್ರುತಃ ಶಾಂತಸ್ತಥಾ ಮುನಿಃ |
ಅಗ್ನೇಃ ಪುತ್ರಃ ಕುಮಾರಶ್ಚ ಶ್ರೀಮಾಂಛರವಣಾಲಯಃ ॥24॥
ಅಹನ್ನಾಮಕ ವಸುವಿನ ಪುತ್ರರು ಜ್ಯೋತಿ, ಶ್ರುತ, ಶಾಂತ ಮತ್ತು ಮುನಿ ಎಂಬುವರು. ಶರವಣಭವನಾದ ಷಣ್ಮುಖನೂ ಸಹ ಅಗ್ನಿಯ ಪುತ್ರ.
ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠತಃ |
ಕೃತ್ತಿಕಾಸ್ತನ್ಯಪಾನೇನ ಕಾರ್ತಿಕೇಯ ಇತಿ ಸ್ಮೃತಃ ॥25॥
ಕುಮಾರನಿಗೆ ಶಾಖಾ, ವಿಶಾಖ ಮತ್ತು ನೈಗಮೇಯ ಎಂಬ ಮೂರು ಮಕ್ಕಳು. ಆರು ಕೃತ್ತಿಕೆಯರ ಸ್ತನ್ಯಪಾನವನ್ನು ಮಾಡಿದುದರಿಂದ ಅವನಿಗೆ ಕಾರ್ತಿಕೇಯ ಎಂದೂ ಹೆಸರು.
ಅನಿಲಸ್ಯ ಶಿವಾ ಭಾರ್ಯಾ ತಸ್ಯಾಃ ಪುತ್ರಃ ಪುರೋಜವಃ |
ಅವಿಜ್ಞಾತಗತಿಶ್ಚೈವ ದ್ವೌ ಪುತ್ರಾವನಿಲಸ್ಯ ತು ॥26॥
ಅನಿಲನ ಭಾರ್ಯೆ ಶಿವಾ. ಅವನಿಗೆ ಪುರೋಜವ, ಅವಿಜ್ಞಾತ ಮತ್ತು ಗತಿ ಎಂಬ ಮೂರುಮಕ್ಕಳು.
ಪ್ರತ್ಯೂಷಸ್ಯ ವಿದುಃ ಪುತ್ರಮೃಷಿಂ ನಾಮ್ನಾ ತು ದೇವಲಮ್ |
ದ್ವೌ ಪುತ್ರೌ ದೇವಲಸ್ಯಾಪಿ ಕ್ಷಮಾವಂತೌ ಮನೀಷಿಣೌ ॥27॥
ಪ್ರತ್ಯೂಷನ ಪುತ್ರರು ದೇವಲಋಷಿಗಳು. ದೇವಲರಿಗೂ ಸಹ ಕ್ಷಮಾಶೀಲರೂ ಮತ್ತು ಮೇಧಾವಿಗಳೂ ಆದ ಇಬ್ಬರು ಪುತ್ರರು.
ಬೃಹಸ್ಪತೇಸ್ತು ಭಗಿನೀ ವರಸ್ತ್ರೀ ಬ್ರಹ್ಮಚಾರಿಣೀ |
ಯೋಗಸಿದ್ಧಾ ಜಗತ್ಸರ್ವಮಸಕ್ತಾ ವಿಚರತ್ಯುತ ॥28॥
ಬೃಹಸ್ಪತಿಗಳ ತಂಗಿಯು ರೂಪವತಿಯಾಗಿದ್ದು ಯೋಗಸಿದ್ಧಳಾಗಿ ಬ್ರಹ್ಮಚಾರಿಣಿಯಾಗಿ ವೈರಾಗ್ಯವನ್ನು ತಾಳಿ ಜಗತ್ತಿನಲ್ಲೆಲ್ಲಾ ಸಂಚರಿಸಿದಳು.
ಪ್ರಭಾಸಸ್ಯ ತು ಭಾರ್ಯಾಯಾಂ ವಸೂನಾಮಷ್ಟಮಸ್ಯ ತು |
ವಿಶ್ವಕರ್ಮಾ ಮಹಾಭಾಗೋ ಜಜ್ಞೇ ಶಿಲ್ಪವಿದಾಂ ವರಃ ॥29॥
ಎಂಟನೆಯ ವಸುವಾದ ಪ್ರಭಾಸನ ಮಗ ಶಿಲ್ಪವಿದ್ಯೆಯನ್ನು ತಿಳಿದವರಲ್ಲಿ ಶ್ರೇಷ್ಠನಾದ ಮಹಾನುಭಾವನಾದ ವಿಶ್ವಕರ್ಮ.
ಕರ್ತಾ ಶಿಲ್ಪಸಹಸ್ರಾಣಾಂ ತ್ರಿದಶಾನಾಂ ಚ ವರ್ಧಕಿಃ |
ಭೂಷಣಾನಾಂ ಚ ಸರ್ವೇಷಾಂ ಕರ್ತಾ ಶಿಲ್ಪವತಾಂ ವರಃ ॥30॥
ಅವನು ಸಹಸ್ರಾರು ಶಿಲ್ಪಗಳನ್ನು ಮಾಡುವವನು. ದೇವತೆಗಳ ಬಡಗಿ. ಎಲ್ಲಾ ಭೂಷಣಗಳನ್ನು ಸಿದ್ಧಪಡಿಸುವ ಶಿಲ್ಪಿಶ್ರೇಷ್ಠನಾದವನು.
ಯೋ ದಿವ್ಯಾನಿ ವಿಮಾನಾನಿ ದೇವತಾನಾಂ ಚಕಾರ ಹ |
ಮನುಷ್ಯಾಶ್ಚೋಪಜೀವಂತಿ ತಸ್ಯ ಶಿಲ್ಪಂ ಮಹಾತ್ಮನಃ |
ಪೂಜಯಂತಿ ಚ ಯಂ ನಿತ್ಯಂ ವಿಶ್ವಕರ್ಮಾಣಮವ್ಯಯಮ್ ॥31॥
ಅವನು ದೇವತೆಗಳ ಸಲುವಾಗಿ ದಿವ್ಯವಾದ ವಿಮಾನಗಳನ್ನು ನಿರ್ಮಿಸಿದನು. ಆ ಮಹಾನುಭಾವನ ಶಿಲ್ಪವಿದ್ಯೆಯ ಒಂದು ಅಂಶವನ್ನು ಮನುಷ್ಯರು ಪ್ರತಿನಿಧಿಸುತ್ತಾರೆ. ಗುಣಗಳ ಚ್ಯುತಿಯನ್ನು ಹೊಂದದ ಆ ವಿಶ್ವಕರ್ಮನನ್ನು ಯಾವಾಗಲೂ ಪೂಜಿಸುತ್ತಾರೆ.
ಸ್ತನಂ ತು ದಕ್ಷಿಣಂ ಭಿತ್ತ್ವಾ ಬ್ರಹ್ಮಣಃ ಪುರುಷೋತ್ತಮಃ |
ನಿಸ್ಸೃತೋ ಭಗವಾನ್ ಧರ್ಮಃ ಸರ್ವಲೋಕಸುಖಾವಹಃ |
ತ್ರಯಸ್ತಸ್ಯ ವರಾಃ ಪುತ್ರಾಃ ಸರ್ವಭೂತಮನೋಹರಾಃ ॥32॥
ಪುರುಷರ ಶ್ರೇಷ್ಠತೆಗೆ ಕಾರಣನಾದ ಭಗವಾನ್ ಧರ್ಮನು ಸರ್ವಲೋಕಕ್ಕೆ ಸುಖವನ್ನುಂಟುಮಾಡುವವನಾಗಿ ಬ್ರಹ್ಮದೇವನ ದಕ್ಷಿಣ ಸ್ತನವನ್ನು ಬೇಧಿಸಿಕೊಂಡು ಹೊರಗೆ ಬಂದನು. ಎಲ್ಲಾ ಪ್ರಾಣಿಗಳಿಗೂ ಮನೋಹರರಾದ ಮೂವರು ಅವನ ಶ್ರೇಷ್ಠರಾದ ಪುತ್ರರು.
ಶಮಃ ಕಾಮಶ್ಚ ಹರ್ಷಶ್ಚ ಮನಸಃ ಪ್ರೀತಿವರ್ಧನಾಃ |

ಕಾಮಸ್ಯ ತು ರತಿರ್ಭಾರ್ಯಾ ಶಮಸ್ಯ ಪ್ರೀತಿರಂಗನಾ ॥33॥
ಎಲ್ಲರ ಮನಸ್ಸಿಗೂ ಸಂತೋಷವನ್ನುಂಟು ಮಾಡುವ ಅವರ ಹೆಸರು ಶಮ, ಕಾಮ ಮತ್ತು ಹರ್ಷ ಎಂದು. ಕಾಮನ ಪತ್ನಿಯು ರತಿ. ಶಮನ ಪತ್ನಿಯ ಹೆಸರು ಪ್ರೀತಿ.
ನಂದೀ ತು ಭಾರ್ಯಾ ಹರ್ಷಸ್ಯ ಯತ್ರ ಲೋಕಾಃ ಪ್ರತಿಷ್ಠಿತಾಃ |
ಮರೀಚೇಃ ಕಾಶ್ಯಪಃ ಪುತ್ರಃ ಕಾಶ್ಯಪಸ್ಯ ಸುರಾಸುರಾಃ |
ಜಜ್ಞಿರೇ ನೃಪಶಾರ್ದೂಲ ಲೋಕಾನಾಂ ಪ್ರಭವಸ್ತು ಸಃ ॥34॥
ಹರ್ಷನ ಪತ್ನಿಯ ಹೆಸರು ನಂದೀ. ಇವರಲ್ಲಿ ಲೋಕವು ಪ್ರತಿಷ್ಠಿತವಾಗಿದೆ. ಮರೀಚಿಯ ಮಕ್ಕಳಾದ ಕಾಶ್ಯಪರಲ್ಲಿ ದೇವತೆಗಳು ಮತ್ತು ಅಸುರರು ಜನಿಸಿದರು. ಎಲೈ ನೃಪಶ್ರೇಷ್ಠನೇ ಕಾಶ್ಯಪರು ಎಲ್ಲ ಜೀವರಿಗೂ ಉತ್ಪತ್ತಿಸ್ಥಾನರಾದವರು.
ತ್ವಾಷ್ಟ್ರೀ ತು ಸವಿತುರ್ಭಾರ್ಯಾ ವಡವಾರೂಪಧಾರಿಣೀ |
ಅಸೂಯತ ಮಹಾಭಾಗಾ ಸಾಽಂತರಿಕ್ಷೇಽಶ್ವಿನಾವುಭೌ ॥35॥
ಸವಿತೃವಿನ ಪತ್ನಿಯಾದ ತ್ವಾಷ್ಟ್ರಿಯು ಹೆಣ್ಣು ಕುದುರೆಯ ರೂಪವನ್ನು ಧರಿಸಿ ಅಂತರಿಕ್ಷಲೋಕದಲ್ಲಿ ಅಶ್ವಿನಿದೇವತೆಗಳನ್ನು ಪಡೆದಳು.
ದ್ವಾದಶೈವಾದಿತೇಃ ಪುತ್ರಾಃ ಶಕ್ರಮುಖ್ಯಾ ನರಾಧಿಪ |
ತೇಷಾಮವರಜೋ ವಿಷ್ಣುರ್ಯತ್ರ ಲೋಕಾಃ ಪ್ರತಿಷ್ಠಿತಾಃ ॥36॥
ಅದಿತಿಯ ಮಕ್ಕಳು ಇಂದ್ರ ಮೊದಲಾದ ಹನ್ನೆರಡೇ ಮಂದಿ. ಎಲೈ ರಾಜನೇ ಅವರಲ್ಲಿ ಚಿಕ್ಕವನಾದ ವಿಷ್ಣುವನ್ನು ಎಲ್ಲಾ ಲೋಕಗಳೂ ಆಧರಿಸಿಕೊಂಡಿವೆ.
ತ್ರಯಸ್ತ್ರಿಂಶತ ಇತ್ಯೇತೇ ದೇವಾಸ್ತೇಷಾಮಹಂ ತವ |
ಅನ್ವಯಂ ಸಂಪ್ರವಕ್ಷ್ಯಾಮಿ ಪಕ್ಷೈಶ್ಚ ಕುಲತೋ ಗಣೈಃ ॥37॥
ಈ ಮೂವತ್ತೂರು ವ್ಯಕ್ತಿಗಳೇ (ಪ್ರಧಾನರಾದ) ದೇವತೆಗಳು. ಅವರ ವಂಶವನ್ನು ಕುಲದ ದೃಷ್ಟಿಯಿಂದಲೂ, ಗಣದ ದೃಷ್ಟಿಯಿಂದಲೂ ಮತ್ತು ಯಾವ ಪಕ್ಷಕ್ಕೆ ಸೇರಿದವರು ಎಂಬ ದೃಷ್ಟಿಯಿಂದಲೂ ನಾನು ನಿನಗೆ ಹೇಳುತ್ತೇನೆ.
ರುದ್ರಾಣಾಮಪರಂ ಪಕ್ಷಂ ಸಾಧ್ಯಾನಾಂ ಮರುತಾಂ ತಥಾ |
ವಸೂನಾಂ ಭಾರ್ಗವಂ ವಿದ್ಯಾದ್ ವಿಶ್ವೇದೇವಾಂಸ್ತಥೈವ ಚ ॥38॥
ಏಕಾದಶರುದ್ರರು ಕೃಷ್ಣಪಕ್ಷದ ದೇವತೆಗಳ ಗುಂಪಿಗೆ ಸೇರಿದವರು. ಸಾಧ್ಯರು, ಮರುತ್‌ಗಳು ಮತ್ತು ವಸುಗಳು ಹಾಗೇ ವಿಶ್ವೇದೇವತೆಗಳೂ ಸಹ ಭಾರ್ಗವರ ಪಕ್ಷಕ್ಕೆ ಸೇರಿದವರು.
ವೈನತೇಯಸ್ತು ಗರುಡೋ ಬಲವಾನರುಣಸ್ತಥಾ |
ಬೃಹಸ್ಪತಿಶ್ಚ ಭಗವಾನ್ ಆದಿತ್ಯೇಷ್ವೇವ ಗಣ್ಯತೇ |
ಅಶ್ವಿಭ್ಯಾಂ ಗುಹ್ಯಕಾನ್ ವಿದ್ಧಿ ಸರ್ವೌಷಧ್ಯಸ್ತಥಾ ಪಶೂನ್ ॥39॥
ಬಲಿಷ್ಠನಾದ ಗರುಡನೂ ಅರುಣನೂ, ಪೂಜ್ಯರಾದ ಬೃಹಸ್ಪತಿಗಳೂ ಆದಿತ್ಯರ ಗುಂಪಿನಲ್ಲಿಯೇ ಸೇರುತ್ತಾರೆ. ಗುಹ್ಯಕರು, ಎಲ್ಲಾ ಓಷಧಿಗಳು ಮತ್ತು ಎಲ್ಲಾ ಪಶುಗಳು ಅಶ್ವಿನಿದೇವತೆಗಳ ಪಕ್ಷಕ್ಕೆ ಸೇರಿದವರೆಂದು ತಿಳಿ.
ಏಷ ದೇವಗಣಾ ರಾಜನ್ ಕೀರ್ತಿತಾಸ್ತೇಽನುಪೂರ್ವಶಃ |
ಯಂ ಕೀರ್ತಯಿತ್ವಾ ಮನುಜಃ ಸರ್ವಪಾಪೈಃ ಪ್ರಮುಚ್ಯತೇ ॥40॥
ಎಲೈ ರಾಜನೇ ಇದು ದೇವತೆಗಳ ಗಣ. ನಾನು ನಿನಗೆ ಇದನ್ನು ಅನುಕ್ರಮವಾಗಿ ಹೇಳಿದ್ದೇನೆ. ಇದನ್ನು ಕೇಳುವ ಮನುಷ್ಯನು ಎಲ್ಲಾ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ಬ್ರಹ್ಮಣೋ ಹೃದಯಂ ಭಿತ್ತ್ವಾ ನಿಃಸೃತೋ ಭಗವಾನ್ ಭೃಗುಃ |
ಭೃಗೋಃ ಪುತ್ರಃ ಕವಿರ್ವಿದ್ವಾನ್ ಶುಕ್ರಃ ಕವಿಸುತಃ ಸ್ಮೃತಃ ॥41॥
ಪೂಜ್ಯರಾದ ಭೃಗುಋಷಿಗಳು ಬ್ರಹ್ಮದೇವರ ಹೃದಯವನ್ನು
ಭೇದಿಸಿಕೊಂಡು ಹೊರಗೆ ಬಂದರು. ಭೃಗುಗಳ ಮಕ್ಕಳು ಖ್ಯಾತರಾದ ಕವಿಗಳು ಕವಿಯ ಮಕ್ಕಳು ಶುಕ್ರಾಚಾರ್ಯರು. ಆದ್ದರಿಂದ ಅವನಿಗೆ ಕಾವ್ಯ ಎಂದೂ ಹೆಸರು.
ತ್ರೈಲೋಕ್ಯಪ್ರಾಣಯಾತ್ರಾರ್ಥಂ ವರ್ಷಾವರ್ಷೇ ನಯಾನಯೇ |
ಸ್ವಯಂಭುವಾ ನಿಯುಕ್ತಃ ಸನ್ ಭುವನಂ ಪರಿಧಾವತಿ ॥42॥
ಶುಕ್ರಾಚಾರ್ಯರು ಮೂರುಲೋಕಗಳ ಪ್ರಾಣಯಾತ್ರೆಯನ್ನು ನಡೆಸುವ ಸಲುವಾಗಿ, ಮಳೆ ಮತ್ತು ಬರ ಹಾಗೆಯೇ ನ್ಯಾಯ ಮತ್ತು ಅನ್ಯಾಯಗಳಿಗೆ ಅಧಿಪತಿಗಳಾಗಿ ಬ್ರಹ್ಮದೇವರಿಂದ ನಿಯಮಿಸಲ್ಪಟ್ಟು ಲೋಕದಲ್ಲಿ ಸಂಚರಿಸುತ್ತಾರೆ.
ಯೋಗಾಚಾರ್ಯೋ ಮಹಾಬುದ್ಧಿರ್ದೈತ್ಯಾನಾಮಭವದ್ ಗುರುಃ |
ಸುರಾಣಾಂ ಚಾಹಿತೇ ಯುಕ್ತೋ ಬ್ರಹ್ಮಚಾರೀ ಯತವ್ರತಃ ॥43॥
ಯೋಗಾಚಾರ್ಯರೂ ಮಹಾಬುದ್ಧಿಶಾಲಿಗಳೂ ಆದ ಅವರು ದೈತ್ಯರಿಗೆ ಗುರುಗಳಾದರು. ಅವರು ಭಗವನ್ನಿಷ್ಠರಾಗಿ, ವ್ರತಗಳನ್ನು ಧರಿಸಿದವರಾಗಿ ದೇವತೆಗಳಿಗೆ ಅಪ್ರಿಯವನ್ನುಂಟು ಮಾಡುವುದರಲ್ಲಿ ನಿರತರಾಗಿರುತ್ತಾರೆ.
ತಸ್ಮಿನ್ ನಿಯುಕ್ತೇ ಗುರುಣಾ ಯೋಗಕ್ಷೇಮಾಯ ಭಾರ್ಗವೇ |
ಅನ್ಯಮುತ್ಪಾದಯಾಮಾಸ ಪುತ್ರಂ ಭೃಗುರನಿಂದಿತಮ್ ॥44॥
ಭೃಗುಕುಲದಲ್ಲಿ ಜನಿಸಿದ ಶುಕ್ರಾಚಾರ್ಯರು ಜಗತ್ತಿನ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ಬ್ರಹ್ಮದೇವರಿಂದ ನಿಯಮಿಸಲ್ಪಡುತ್ತಿರಲು, ಭೃಗುಋಷಿಗಳು ದೋಷರಹಿತನಾದ ಇನ್ನೊಬ್ಬ ಪುತ್ರನನ್ನು ಪಡೆದರು.

ಚ್ಯವನಂ ದೀಪ್ತತಪಸಂ ಧರ್ಮಾತ್ಮಾನಮತೀಂದ್ರಿಯಮ್ |
ಯಃ ಸ ರೋಷಾಚ್ಚ್ಯುತೋ ಗರ್ಭಾತ್ ಮಾತುಃ ಕ್ಷೇಮಾಯ ಭಾರತ ॥
ಅವರೇ ದೀಪ್ತ ತಪಸ್ಸುಳ್ಳ ಧರ್ಮನಿಷ್ಠೆಯುಳ್ಳ ಜಿತೇಂದ್ರಿಯರಾದ ಚ್ಯವನರು. ಅವರು ರೋಷದಿಂದ ತಾಯಿಯ ಗರ್ಭದಿಂದ ಹೊರಗೆ ಬಂದು ತಾಯಿಗೆ ಕ್ಷೇಮವನ್ನು ಉಂಟುಮಾಡಿದರು.
ಆರುಷೀ ತು ಮನೋಃ ಕನ್ಯಾ ತಸ್ಯ ಪತ್ನೀ ಮನೀಷಿಣಃ |
ಔರ್ವಸ್ತಸ್ಯ ಋಷಿಃ ಪುತ್ರ ಊರುಂ ಭಿತ್ತ್ವಾ ವಿನಿರ್ಗತಃ ॥46॥
ಆ ಮೇಧಾವಿಗಳಾದ ಚ್ಯವನರ ಪತ್ನಿಯು ಮನುವಿನ ಮಗಳಾದ ಆರುಷೀ ಎಂಬುವಳು. ಅವಳ ಪುತ್ರರಾದ ಔರ್ವಋಷಿಗಳು ಅವಳ ತೊಡೆಯನ್ನು ಬೇಧಿಸಿಕೊಂಡು ಹೊರಗೆ ಬಂದವರು.
ಮಹಾಬಲೋ ಮಹಾತೇಜಾ ಬಾಲ ಏವ ಗುಣೈರ್ಯುತಃ |
ಋಚೀಕಸ್ತಸ್ಯ ಪುತ್ರಸ್ತು ಜಮದಗ್ನಿಸ್ತತೋಽಭವತ್ ॥47॥
ಮಹಾಬಲಿಷ್ಠರೂ, ಮಹಾತೇಜಸ್ವಿಗಳೂ ಆದ ಅವರು ಬಾಲ್ಯದಿಂದಲೇ ಬಹಳಗುಣಗಳಿಂದ ಕೂಡಿದ್ದರು. ಅವರ ಮಕ್ಕಳು ಋಚೀಕರು. ಋಚೀಕರ ಪುತ್ರರು ಜಮದಗ್ನಿ ಋಷಿಗಳು.
ಜಮದಗ್ನೇಸ್ತು ಚತ್ವಾರ ಆಸನ್ ಪುತ್ರಾ ಮಹಾತ್ಮನಃ |
ರಾಮಸ್ತೇಷಾಂ ಜಘನ್ಯೋಽಭೂದಜಘನ್ಯೈರ್ಗುಣೈರ್ವೃತಃ ॥48॥
ಮಹಾತ್ಮರಾದ ಜಮದಗ್ನಿಗಳಿಗೆ ನಾಲ್ವರು ಮಕ್ಕಳಾದರು. ಅವರಲ್ಲಿ ಚಿಕ್ಕವನಾದ ಪರಶುರಾಮನು ಅನೇಕ ಗುಣಗಳಿಂದ ಕೂಡಿದವನಾಗಿ, ಸರ್ವಶ್ರೇಷ್ಠನಾಗಿದ್ದನು.
ಸರ್ವಶಾಸ್ತ್ರಾಸ್ತ್ರಕುಶಲಃ ಕ್ಷತ್ರಿಯಾಂತಕರೋ ಬಲೀ |
ಔರ್ವಸ್ಯಾಸೀತ್ ಪುತ್ರಶತಂ ಜಮದಗ್ನಿಪುರೋಗಮಮ್ ॥49॥
ಪರಶುರಾಮನು ಬಲಿಷ್ಠನಾಗಿಯೂ, ಸರ್ವಶಸತ್ರಸ್ತ್ರ ಕುಶಲನಾಗಿಯೂ, ಮತ್ತು ಕ್ಷತ್ರಿಯಕುಲವನ್ನು ಸಂಹಾರ ಮಾಡುವನಾಗಿಯೂ ಇದ್ದನು. ಔರ್ವಋಷಿಗಳಿಗೆ ಜಮದಗ್ನಿಯೇ ಮೊದಲಾದ ನೂರು ಮಕ್ಕಳಾದರು,
ತೇಷಾಂ ಪುತ್ರಸಹಸ್ರಾಣಿ ಬಭೂವುರ್ಭುವಿ ಭೂಸುರಾಃ |
ದ್ವೌ ಪುತ್ರೌ ಬ್ರಹ್ಮಣಸ್ತ್ವನ್ಯೌ ಯಯೋಸ್ತಿಷ್ಠತಿ ವೈ ಜಗತ್ ॥50॥
ಆ ನೂರುಮಕ್ಕಳಿಗೆ ಸಾವಿರಾರು ಮಕ್ಕಳು ಜನಿಸಿದರು. ಅವರೆಲ್ಲರೂ ಭೂಮಿಯಲ್ಲಿ ಶ್ರೇಷ್ಠ ಬ್ರಾಹ್ಮಣರಾಗಿದ್ದರು. ಕಾಶ್ಯಪರಿಗೆ ಲೋಕಧಾರಕರಾದ ಇನ್ನಿಬ್ಬರು ಪುತ್ರರಾದರು.
ಲೋಕೇ ಧಾತಾ ವಿಧಾತಾ ಚ ಚರತೋ ಮನುನಾ ಸಹ |
ತಯೋಸ್ತು ಭಗಿನೀ ಜ್ಯೇಷ್ಠಾ ಲಕ್ಷ್ಮೀಃ ಪದ್ಮಗೃಹಾ ಶುಭಾ ॥51॥
ಅವರ ಹೆಸರು ಧಾತಾ ಮತ್ತು ವಿಧಾತಾ ಎಂದು. ಅವರು ಲೋಕದಲ್ಲಿ ಯಾವಾಗಲೂ ಮನುವಿನ ಜೊತೆಯಲ್ಲಿ ಸಂಚರಿಸುವವರು. ಅವರಿಬ್ಬರ ಅಕ್ಕನಾಗಿ ಪದ್ಮಾಲಯಳಾದ ಮಂಗಳಸ್ವರೂಪಳಾದ ಲಕ್ಷ್ಮಿಯು ಜನಿಸಿದಳು.
ತಸ್ಯಾಸ್ತು ಮಾನಸಾಃ ಪುತ್ರಾ ಯೇ ಚಾಶ್ವಾ ವ್ಯೋಮಚಾರಿಣಃ |
ವರುಣಸ್ಯ ಭಾರ್ಯಾ ಜ್ಯೇಷ್ಠಾ ತು ಶಕ್ರದೇವೀ ವ್ಯಜಾಯತ ॥52॥
ಆ ಲಕ್ಷ್ಮಿಯ ಮಾನಸಪುತ್ರರು ಆಕಾಶದಲ್ಲಿ ಸಂಚರಿಸುವ ಅಶ್ವಗಳು. ವರುಣನ ಜ್ಯೇಷ್ಠಪತ್ನಿಯಾದ ಶಕ್ರದೇವಿಯು ಅನೇಕ ಮಕ್ಕಳನ್ನು ಪಡೆದಳು.
ತಸ್ಯಾಃ ಪುತ್ರಶತಂ ವಿದ್ಧಿ ಸುರಾಂ ಚಾಸುರನಂದಿನೀಮ್ |
ಪ್ರಜಾನಾಮನ್ನಕಾಮಾನಾಮನ್ಯೋನ್ಯಪರಿಭಕ್ಷಣಾತ್ |
ಅಧರ್ಮಸ್ತತ್ರ ಸಂಜಾತಃ ಸರ್ವಭೂತವಿನಾಶನಃ ॥53॥
ಅವರಿಗೆ ನೂರು ಗಂಡುಮಕ್ಕಳೆಂದು ತಿಳಿ. ಅಸುರರಿಗೆ ಸಂತೋಷವನ್ನುಂಟು ಮಾಡುವ ಮದ್ಯದ ದೇವತೆಯಾದ ವಾರುಣೀ ಎಂಬುವಳೂ ಅವರ ಮಗಳು. ಅನ್ನವನ್ನು ಬಯಸುವ ಪ್ರಜೆಗಳು ಪರಸ್ಪರವಾಗಿ ಒಬ್ಬರನ್ನೊಬ್ಬರು ಭಕ್ಷಣೆ ಮಾಡುವುದರಿಂದ ಉಂಟಾದ ಅಧರ್ಮಕ್ಕೆ ಅಭಿಮಾನಿಯಾದ ಅಧರ್ಮನು ವಾರುಣೀ ಮಗ. ಅವನು ಸರ್ವಭೂತವಿನಾಶಕನಾದವನು.
ತಸ್ಯಾಪಿ ನಿರ್ಋತಿರ್ಭಾರ್ಯಾ ನೈರೃತಾ ಯೇ ತು ರಾಕ್ಷಸಾಃ |
ಘೋರಾಸ್ತಸ್ಯಾಸ್ತ್ರಯಃ ಪುತ್ರಾಃ ಪಾಪಕರ್ಮರತಾಃ ಸದಾ |
ಭಯೋ ಮಹಾಭಯಶ್ಚೈವ ಮೃತ್ಯುರ್ಭೂತಾಂತಕಸ್ತಥಾ ॥54॥
ಅಧರ್ಮನ ಪತ್ನಿ ನಿರೃತಿ. ನಿರೃತಿಯ ಮಕ್ಕಳು ಘೋರವಾದ ಮೂರು ರಾಕ್ಷಸರು. ಅವರು ಯಾವಾಗಲೂ ಪಾಪಕರ್ಮದಲ್ಲಿ ನಿರತರಾದವರು. ಅವರ ಹೆಸರು, ಭಯ, ಮಹಾಭಯ ಮತ್ತು ಮೃತ್ಯು ಎಂದು. ಈ ಮೃತ್ಯುವು ಸರ್ವಭೂತವಿನಾಶಕನಾದವನು.
ನ ತಸ್ಯ ಭಾರ್ಯಾ ಪುತ್ರೋ ವಾ ಕಶ್ಚಿದಸ್ತ್ಯಂತಕಸ್ತು ಸಃ |
ಶ್ಯೇನಾಂ ಕ್ರೌಂಚೀಂ ಚ ಭಾಸೀಂ ಚ ಧೃತರಾಷ್ಟ್ರೀಮಥೋ ಶುಕೀಮ್ ॥55॥
ತಾಮ್ರಾಽಪಿ ಸುಷುವೇ ಕನ್ಯಾಃ ಪಂಚೈತಾ ಲೋಕವಿಶ್ರುತಾಃ |
ದ್ವೌ ಪುತ್ರೌ ವಿನತಾಯಾಸ್ತು ವಿಖ್ಯಾತೌ ಗರುಡಾರುಣೌ ॥56॥
ಮೃತ್ಯುವಿಗೆ ಹೆಂಡತಿಯಾಗಲೀ, ಮಕ್ಕಳಾಗಲೀ ಇಲ್ಲ. ಅವನು ಎಲ್ಲರನ್ನೂ ಮುಗಿಸುವವನು. ಕಾಶ್ಯಪನ ಪತ್ನಿಯಾದ ತಾಮ್ರೆಯು, ಶ್ಯೇನೀ (ಶ್ಯೇನಾ) ಕ್ರೌಂಚೀ, ಭಾಸೀ, ಧೃತರಾಷ್ಟ್ರೀ, ಮತ್ತು ಶುಕೀ ಎಂಬ ಐದು ಹೆಣ್ಣುಮಕ್ಕಳನ್ನು ಪಡೆದಳು. ವಿನತೆಗೆ ಪ್ರಸಿದ್ಧರಾದ ಗರುಡ ಮತ್ತು ಅರುಣ ಎಂಬ ಇಬ್ಬರು ಮಕ್ಕಳು.

ಭಾರ್ಯಾಽರುಣಸ್ಯ ಶ್ಯೇನೀ ತು ವೀರ್ಯವಂತೌ ಮಹಾಬಲೌ |
ಸಂಪಾತಿಂ ಜನಯಾಮಾಸ ತಥೈವ ಚ ಜಟಾಯುಷಮ್ ॥57॥
ಅರುಣನ ಭಾರ್ಯೆಯಾದ ಶ್ಯೇನಿಯು ವೀರ್ಯವಂತರೂ, ಮಹಾಬಲವುಳ್ಳವರೂ ಆದ ಸಂಪಾತಿ ಮತ್ತು ಜಟಾಯು ಎಂಬ ಇಬ್ಬರು ಮಕ್ಕಳನ್ನು ಪಡೆದಳು.
ಭಾರ್ಯಾ ಗರುತ್ಮತಶ್ಚೈವ ಭಾಸೀ ಕ್ರೌಂಚೀ ತಥಾ ಶುಕೀ |
ಚತುರ್ಥೀ ಧೃತರಾಷ್ಟ್ರೀ ಚ ತಾಸ್ವಪತ್ಯಂ ನಿಬೋಧ ಮೇ ॥58॥
ಭಾಸೀ, ಕ್ರೌಂಚೀ, ಶುಕೀ ಮತ್ತು ಧೃತರಾಷ್ಟ್ರೀ ಇವರು ಗರುಡನ ಪತ್ನಿಯರು. ಅವರ ಮಕ್ಕಳನ್ನು ತಿಳಿಸುತ್ತೇನೆ ಕೇಳು.
ಉಲೂಕಾನ್ ಸುಷುವೇ ಕ್ರೌಂಚೀ ಭಾಸೀ ಭಾಸಾನ್ ವ್ಯಜಾಯತ |
ಶ್ಯೇನೀ ಶ್ಯೇನಾಂಶ್ಚ ಗೃಧ್ರಾಂಶ್ಚ ಜನಯಾಮಾಸ ತೇಜಸಾ ॥59॥
ಕ್ರೌಂಚಿಯು ಗೂಬೆಗಳನ್ನು ಪ್ರಸವಿಸಿದಳು. ಭಾಸಿಯು ಭಾಸಾ ಪಕ್ಷಿಗಳನ್ನು ಪಡೆದಳು. ಶ್ಯೇನಿಯು ತನ್ನ ತೇಜಸ್ಸಿನಿಂದ ಗಿಡುಗಗಳನ್ನು ಮತ್ತು ಹದ್ದುಗಳನ್ನು ಮಕ್ಕಳಾಗಿ ಪಡೆದಳು.
ಧೃತರಾಷ್ಟ್ರೀ ತು ಹಂಸಾಂಶ್ಚ ಕಲಹಂಸಾಂಶ್ಚ ಸರ್ವಶಃ |
ಚಕ್ರವಾಕಾಂಶ್ಚ ಭದ್ರಂ ತೇ ಪ್ರಜಜ್ಞೇ ಸಾ ಚ ಭಾಮಿನೀ ॥60॥
ಎಲೈ ರಾಜನೇ ನಿನಗೆ ಮಂಗಳವಾಗಲಿ. ಧೃತರಾಷ್ಟ್ರಿಯಾದರೋ ಹಂಸಗಳನ್ನೂ ಎಲ್ಲಾ ಕಲಹಂಸಗಳನ್ನೂ, ಚಕ್ರವಾಕಗಳನ್ನೂ ಪ್ರಸವಿಸಿದಳು.
ಶುಕೀ ವಿಜಜ್ಞೇ ಧರ್ಮಜ್ಞ ಶುಕಾನೇವ ಯಶಸ್ವಿನೀ |
ಕಲ್ಯಾಣಗುಣಸಂಪನ್ನಾ ಸರ್ವಲಕ್ಷಣಪೂಜಿತಾ ॥61॥
ಎಲೈ ಧರ್ಮಜ್ಞನೇ ಕಲ್ಯಾಣಗುಣಸಂಪನ್ನಳಾದ ಮತ್ತು ಸರ್ವಲಕ್ಷಣಭರಿತಳಾದ, ಕೀರ್ತಿಶಾಲಿನಿಯಾದ ಶುಕಿಯು ಗಿಳಿಗಳನ್ನೇ ಪ್ರಸವಿಸಿದಳು.
ತತಃ ಕ್ರೋಧವಶಾ ನಾಮ ವಿಜಜ್ಞೇ ಹ್ಯಾತ್ಮಸಂಭವಾನ್ |
ಮೃಗೀಂ ಚ ಮೃಗಮಂದ್ರಾಂ ಚ ಹರೀಂ ಭದ್ರಮದಾಮಪಿ ॥62॥
ಮಾತಂಗೀಮಪಿ ಶಾರ್ದೂಲೀಂ ಶ್ವೇತಾಂ ಸುರಭಿಮೇವ ಚ |
ಸರ್ವಲಕ್ಷಣಸಂಪನ್ನಾಂ ಸುರಸಾಂ ವ ಯಶಸ್ವಿನೀಮ್ ॥63॥
ಅನಂತರ ಕ್ರೋಧವಶಾ ಎಂಬ ಕಾಶ್ಯಪರ ಪತ್ನಿಯು ತನಗೆ ಅನುರೂಪಳಾದ ಮಕ್ಕಳನ್ನು ಪಡೆದಳು. ಅವರು ಮೃಗೀ, ಮೃಗಮಂದ್ರಾ, ಹರೀ, ಭದ್ರಮದಾ, ಮಾತಂಗೀ, ಶಾರ್ದೂಲೀ, ಶ್ವೇತಾ, ಸುರಭಿ ಮತ್ತು ಸರ್ವಲಕ್ಷಣಸಂಪನ್ನಳಾದ ಕೀರ್ತಿಶಾಲಿನಿಯಾದ ಸುರಸಾ.
ಅಪತ್ಯಂ ತು ಮೃಗಾಃ ಸರ್ವೇ ಮೃಗ್ಯಾ ನರವರಾತ್ಮಜ |
ಋಕ್ಷಾಶ್ಚ ಮೃಗಮಂದ್ರಾಯಾಃ ಸೃಮರಾಶ್ಚಮರಾ ಅಪಿ ॥64॥
ಎಲೈ ರಾಜಕುಮಾರನೇ ಎಲ್ಲಾ ಮೃಗಗಳೂ ಮೃಗಿಯ ಮಕ್ಕಳು. ಕರಡಿಗಳು, ಗವಯಗಳು, ಮತ್ತು ಚಮರೀಮೃಗಗಳು ಮೃಗಮಂದ್ರಾ ಎನ್ನುವಳ ಮಕ್ಕಳು.
ತತಸ್ತ್ವೈರಾವತಂ ನಾಗಂ ಜಜ್ಞೇ ಭದ್ರಮದಾ ಸುತಮ್ |
ಐರಾವತಃ ಸುತಸ್ತಸ್ಯಾ ದೇವನಾಗೋ ಮಹಾಗಜಃ ॥65॥
ಭದ್ರಮದೆಯು ಐರಾವತವೆಂಬ ಆನೆಯನ್ನು ಪಡೆದಳು. ಭದ್ರಮದೆಗೆ ದೇವಲೋಕದ ಮಹಾಗಜವೆನಿಸಿದ ಆನೆಯು ಮಗನಾದನು.
ಹರ್ಯಾಶ್ಚ ಹರಯೋಽಪತ್ಯಂ ವಾನರಾಶ್ಚ ಮನಸ್ವಿನಃ |
ಗೋಲಾಂಗೂಲಾಶ್ಚ ಭದ್ರಂ ತೇ ವಿಜ್ಞಾತವ್ಯಾ ಹರೀಸುತಾಃ ॥66॥
ಎಲೈ ರಾಜನೇ ನಿನಗೆ ಮಂಗಳವಾಗಲಿ. ಹರೀ ಎಂಬುವಳ ಮಕ್ಕಳು. ಹರಿಗಳು (ಕಪಿವಿಶೇಷ) ಧೈರ್ಯಶಾಲಿಗಳಾದ ವಾನರರು, ಮತ್ತು ಗೋಲಾಂಗೂಲಗಳು (ಕಪಿವಿಶೇಷ) ಇವರನ್ನು ಹರಿಯ ಮಕ್ಕಳೆಂದು ತಿಳಿಯಬೇಕು.
ಪ್ರಜಜ್ಞೇ ತ್ವಥ ಶಾರ್ದೂಲೀ ಸಿಂಹಾನ್ ವ್ಯಾಘ್ರಾಂಶ್ಚ ಭಾರತ |
ದ್ವೀಪಿನಶ್ಚ ಮಹಾಸತತತ್ವನ್ ಸರ್ವಾನೇವ ನ ಸಂಶಯಃ ॥67॥
ಅನಂತರ ಶಾರ್ದೂಲಿಯು ನಿಸ್ಸಂಶಯವಾಗಿ ಸಿಂಹಗಳನ್ನೂ, ವ್ಯಾಘ್ರಗಳನ್ನೂ, ಮಹಾಬಲಿಷ್ಠವಾದ ದ್ವೀಪಿ ಎಂಬ ಎಲ್ಲಾ ಮೃಗಗಳನ್ನೂ ಪ್ರಸವಿಸಿದಳು. (ದೇಹದಲ್ಲಿ ಅಡ್ಡದಾದ ನೂರಾರು ಕಪ್ಪು ರೇಖೆಗಳಿಂದ ಕೂಡಿರುವ ಬೃಹದ್ಗಾತ್ರದ ಶಾರ್ದೂಲಗಳೇ ಹುಲಿಗಳೆನಿಸಿವೆ). (ದುಂಡು ದುಂಡಾದ ಬಗೆಬಗೆ ಬಣ್ಣದ ರೋಮದ ಚಿಹ್ನೆಗಳುಳ್ಳಂತಹ ಸಣ್ಣಗಾತ್ರದ ಶಾರ್ದೂಲಗಳೇ ದ್ವೀಪಗಳು).
ಮಾತಂಗಾಸ್ತ್ವಥ ಮಾತಂಗ್ಯಾ ಅಪತ್ಯಾನಿ ನರಾಧಿಪ |
ದಿಶಾಗಜಂ ತು ಶ್ವೇತಾಕ್ಷಂ ಶ್ವೇತಾಽಜನಯದಾಶುಗಮ್ ॥68॥
ಮಾತಂಗಗಳು (ಆನೆಗಳು) ಮಾತಂಗೆಯ ಮಕ್ಕಳು. ಎಲೈ ರಾಜನೇ ವೇಗವಾಗಿ ಚಲಿಸುವ ಶ್ವೇತಾಕ್ಷ ಎಂಬ ದಿಗ್ಗಜವು ಶ್ವೇತೆಯ ಮಗ.
ತಥಾ ದುಹಿತರೌ ರಾಜನ್ ಸುರಭಿರ್ವೈ ವ್ಯಜಾಯತ |
ರೋಹಿಣೀಂ ಚೈವ ಭದ್ರಂ ತೇ ಗಂಧರ್ವೀಂ ತು ಯಶಸ್ವಿನೀಮ್ ॥69॥
ಎಲೈ ರಾಜನೇ ನಿನಗೆ ಮಂಗಳವಾಗಲಿ. ಹಾಗೆಯೇ ಸುರಭಿಯು ರೋಹಿಣಿ ಮತ್ತು ಗಂಧರ್ವೀ ಎಂಬ ಕೀರ್ತಿಶಾಲಿನಿಯರಾದ ಎರಡು ಹೆಣ್ಣುಮಕ್ಕಳನ್ನು ಪಡೆದಳು.
ರೋಹಿಣ್ಯಾಂ ಜಜ್ಞಿರೇ ಗಾವೋ ಗಂಧರ್ವ್ಯಾಂ ವಾಜಿನಃ ಸುತಾಃ |
ಸುರಸಾಽಜನಯದ್ ನಾಗಾನ್ ಕದ್ರೂ ರಾಜಂಶ್ಚ ಪನ್ನಗಾನ್ ॥70॥

ಎಲ್ಲ ಗೋವುಗಳು ರೋಹಿಣಿಯ ಮಕ್ಕಳು. ಎಲ್ಲಾ ಕುದುರೆಗಳು ಗಂಧರ್ವಿಯ ಮಕ್ಕಳು. ಸುರಸೆಯು ನಾಗಗಳನ್ನು, ಕದ್ರುವು ಪನ್ನಗಗಳನ್ನು ಪ್ರಸವಿಸಿದರು.
ಸುರಸಾಽಜನಯತ್ ಸರ್ಪಾನ್ ಶತಮೇಕಶಿರೋಧರಾನ್ |
ಇಳಾಯಾಃ ಕನ್ಯಕಾ ಜಾತಾಃ ತಿಸ್ರಃ ಕಮಲಲೋಚನಾಃ ॥71॥
ಸುರಸೆಯ ಮಕ್ಕಳು ಒಂದರಿಂದ ನೂರರವರೆಗೆ ಶಿರಸ್ಸುಗಳನ್ನು ಹೊಂದಿರುವ ಸರ್ಪಗಳು. ಇಳೆಯಲ್ಲಿ ಕಮಲಲೋಚನೆಯರಾದ ಮೂರು ಹೆಣ್ಣುಮಕ್ಕಳು ಜನಿಸಿದರು.
ವನಸ್ಪತೀನಾಂ ವೃಕ್ಷಾಣಾಂ ವೀರುಧಾಂ ಚೈವ ಮಾತರಃ |
ಲತಾ ರುಹಾ ಚ ದ್ವೇ ಪ್ರೋಕ್ತೇ ವೀರುಧಾಂ ಚೈವ ತಾಃ ಸ್ಮೃತಾಃ ॥72॥
ಅವರು ವನಸ್ಪತಿಗಳ ಮತ್ತು ವೃಕ್ಷಗಳ, ವೀರುಧಗಳ (ಬಳ್ಳಿಗಳ ಮತ್ತು ಪೊದೆಗಳ ತಾಯಿಯರು) ಅವರ ಹೆಸರುಗಳು ಕ್ರಮವಾಗಿ ಲತಾ, ರುಹಾ, ವೀರುಧಾ ಎಂದು. (ಹೂ ಬಿಡದೇ ಫಲವನ್ನು ನೀಡುವಂತಹ ಅಶ್ವತ್ಥಾದಿ ವೃಕ್ಷಗಳಿಗೆ ವನಸ್ಪತಿಗಳೆಂದು ಹೆಸರು. ವೀರುಧವೆಂದರೆ ಪೊದೆಗಳು).
ಗೃಹ್ಣಂತಿ ಯೇ ವಿನಾ ಪುಷ್ಪಂ ಫಲಾನಿ ತರವಃ ಪೃಥಕ್ |
ಲತಾಸುತಾಸ್ತೇ ವಿಜ್ಞೇಯಾಸ್ತಾನೇವಾಹುರ್ವನಸ್ಪತೀನ್ ॥73॥
ಯಾವ ವೃಕ್ಷಗಳು ಪುಷ್ಪವನ್ನು ಕೊಡದೇ ಫಲವನ್ನು ಕೊಡುತ್ತವೆಯೋ ಅವುಗಳಿಗೆ ವಸನ್ಪತಿಗಳು ಎಂದು ಹೆಸರು. ಅವೆಲ್ಲವೂ ಲತೆಯ ಮಕ್ಕಳು.
ಪುಷ್ಪಫಲಗ್ರಹಾನ್ ವೃಕ್ಷಾನ್ ರುಹಾಯಾಃ ಪ್ರಸವಾನ್ ವಿದುಃ |
ಲತಾ ಗುಲ್ಮಾನಿ ವಲ್ಲ್ಯಶ್ಚ ತ್ವಕ್ಸಾರತೃಣಜಾತಯಃ |
ವೀರುಧಾಯಾಃ ಪ್ರಜಾಸ್ತಾಃ ಸ್ಯುರತ್ರ ವಂಶಃ ಸಮಾಪ್ಯತೇ ॥74॥
ಯಾವ ವೃಕ್ಷಗಳು ಪುಷ್ಪಗಳನ್ನು ಕೊಟ್ಟು ಫಲಗಳನ್ನು ಕೊಡುತ್ತವೆಯೋ, ಅವೆಲ್ಲವೂ ರುಹಾ ಎಂಬುವಳ ಮಕ್ಕಳು. ಬಳ್ಳಿಗಳು, ಪೊದೆಗಳು, ಲತೆಗಳು, ತ್ವಕ್ಸಾರವಾದ ಬಿದಿರು ಮೊದಲಾದವುಗಳು ವೀರುಧಾ ಎಂಬುವಳ ಮಕ್ಕಳು. ಇಲ್ಲಿಗೆ ವಂಶಗಳು ಮುಗಿಯುತ್ತವೆ.
ಅರುಣಸ್ಯ ಭಾರ್ಯಾ ಶ್ಯೇನೀ ತು ವೀರ್ಯವಂತೌ ಮಹಾಬಲೌ |
ಸಂಪಾತಿಂ ಜನಯಾಮಾಸ ತಥೈವ ಚ ಜಟಾಯುಷಮ್ |
ದ್ವೌ ಪುತ್ರೌ ವಿನತಾಯಾಸ್ತು ವಿಖ್ಯಾತೌ ಗರುಡಾರುಣೌ ॥75॥
ಅರುಣನ ಭಾರ್ಯೆಯಾದ ಶ್ಯೇನೆಯು ಪರಾಕ್ರಮಶಾಲಿಗಳಾದ, ಬಲಿಷ್ಠರಾದ ಸಂಪಾತಿ ಮತ್ತು ಜಟಾಯು ಎಂಬ ಎರಡು ಮಕ್ಕಳನ್ನು ಪಡೆದಳು. ವಿನತೆಯ ಮಕ್ಕಳು ಪ್ರಸಿದ್ಧರಾದ ಗರುಡ ಮತ್ತು ಅರುಣ ಎಂಬುವರು.
ಇತ್ಯೇಷ ಸರ್ವಭೂತಾನಾಂ ಮಹತಾಂ ಮನುಜಾಧಿಪ |
ಸಂಭವಃ ಕೀರ್ತಿತಃ ಸಮ್ಯಕ್ ಮಯಾ ಮತಿಮತಾಂ ವರ ॥76॥
ಎಲೈ ಮನುಜಾಧಿಪನೇ ಎಲ್ಲಾ ಮಹಾತ್ಮರ ಮತ್ತು ಎಲ್ಲಾ ಜೀವರ (ಮಹಾಭಾರತದಲ್ಲಿ ಪಾಲ್ಗೊಂಡವರ) ಉತ್ಪತ್ತಿಯ ಕ್ರಮ. ಎಲೈ ಬುದ್ಧಿವಂತರಲ್ಲಿ ಶ್ರೇಷ್ಠನಾದವನೇ ನಾನು ಇದನ್ನು ನಿನಗೆ ಚೆನ್ನಾಗಿ ತಿಳಿಸಿದ್ದೇನೆ.
ಯಂ ಶ್ರುತ್ವಾ ಪುರುಷಃ ಸಮ್ಯಕ್ ಪೂತೋ ಭವತಿ ಪಾಪತಃ |
ಸರ್ವಜ್ಞತಾಂ ಚ ಲಭತೇ ಗತಿಮಗ್ರ್ಯಾಂ ಚ ವಿಂದತಿ ॥77॥
ಇದನ್ನು ಕೇಳಿದ ಪುರುಷನು ಎಲ್ಲಾ ಪಾಪಗಳಿಂದಲೂ ನಿರ್ಮುಕ್ತನಾಗಿ ಪವಿತ್ರನಾಗುತ್ತಾನೆ. ಅವನು ಸರ್ವಜ್ಞತ್ವವನ್ನು ಪಡೆಯುತ್ತಾನೆ. ಮತ್ತು ಮರಣಾನಂತರದಲ್ಲಿ ಸದ್ಗತಿಯನ್ನು ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
*****
ಅರವತ್ತೆರಡನೆಯ ಅಧ್ಯಾಯ
(ಭೂಮಿಯಲ್ಲಿ ದೇವತೆಗಳ ಮತ್ತು ದಾನವರ ಅಂಶಾವತರಣ ಕಥನ.)
ಜನಮೇಜಯಃ
ದೇವಾನಾಂ ದಾನವಾನಾಂ ಚ ಯಕ್ಷಾಣಾಮಥ ರಕ್ಷಸಾಮ್ |
ಅನ್ಯೇಷಾಂ ಚೈವ ಭೂತಾನಾಂ ಸರ್ವೇಷಾಂ ಭಗವನ್ನಹಮ್ ॥1॥
ಶ್ರೋತುಮಿಚ್ಛಾಮಿ ತತ್ತ್ವೇನ ಮಾನುಷೇಷು ಮಹಾತ್ಮನಾಮ್ |
ಜನ್ಮ ಕರ್ಮ ಚ ಭೂತಾನಾಮೇತೇಷಾಮನುಪೂರ್ವಶಃ ॥2॥
ಪೂಜ್ಯರಾದ ವೈಶಂಪಾಯನರೇ, ಮನುಷ್ಯಲೋಕದಲ್ಲಿ ಮಹಾತ್ಮರಾದ ದೇವತೆಗಳ, ದಾನವರ, ಯಕ್ಷರ, ರಾಕ್ಷಸರ ಮತ್ತು ಉಳಿದ ಎಲ್ಲಾ ಜೀವರ ಅವತಾರವನ್ನೂ ಅವರು ಮಾಡಿದ ಎಲ್ಲ ಕರ್ಮಗಳನ್ನೂ ವಿಸ್ತಾರವಾಗಿ ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಮಾನುಷೇಷು ಮನುಷ್ಯೇಂದ್ರ ಸಂಭೂತಾ ಯೇ ದಿವೌಕಸಃ |
ನಾಮತೋ ಬಲತಶ್ಚೈವ ತಾಂಸ್ತೇ ವಕ್ಷ್ಯಾಮಿ ಸರ್ವಶಃ ॥3॥

ಎಲೈ ರಾಜನೇ ಮನುಷ್ಯಲೋಕದಲ್ಲಿ ಅವತಾರ ಮಾಡಿದ ದೇವತೆಗಳ ನಾಮವನ್ನು ಮತ್ತು ಬಲವನ್ನು ನಿನಗೆ ಎಲ್ಲವನ್ನೂ ಹೇಳುವೆನು.
ಪ್ರಥಮಂ ದಾನವಾಂಶ್ಚೈತಾಂಸ್ತೇಽದ್ಯ ವಕ್ಷ್ಯಾಮಿ ಸರ್ವಶಃ |
ವಿಪ್ರಚಿತ್ತಿರಿತಿ ಖ್ಯಾತೋ ಯ ಅಸೀದ್ ದಾನವರ್ಷಭಃ ॥4॥
ಜರಾಸಂಧ ಇತಿ ಖ್ಯಾತಃ ಸ ಆಸೀನ್ಮನುಜರ್ಷಭಃ |
ಮೊದಲು ನಿನಗೆ ಎಲ್ಲಾ ದಾನವರ ಅಂಶಾವತರಣವನ್ನು ಹೇಳುವೆನು. ವಿಪ್ರಚಿತ್ತಿ ಎಂದು ಪ್ರಸಿದ್ಧನಾದ ದಾನವಶ್ರೇಷ್ಠನು ಜರಾಸಂಧನೆಂಬ ಪ್ರಸಿದ್ಧನಾಮದಿಂದ ರಾಜನಾಗಿ ಅವತರಿಸಿದನು.
ದಿತೇಃ ಪುತ್ರಸ್ತು ಯೋ ರಾಜನ್ ಹಿರಣ್ಯಕಶಿಪುಃ ಪುರಾ |
ಸ ಜಜ್ಞೇ ಮಾನುಷೇ ಲೋಕೇ ಶಿಶುಪಾಲ ಇತಿ ಸ್ಮೃತಃ ॥5॥
ಹಿಂದೆ ದಿತಿಯ ಪುತ್ರನಾಗಿದ್ದ ಹಿರಣ್ಯಕಶಿಪು ಮನುಷ್ಯಲೋಕದಲ್ಲಿ ಶಿಶುಪಾಲನಾಗಿ ಜನಿಸಿದನು.
ಸಂಹ್ಲಾದ ಇತಿ ವಿಖ್ಯಾತಃ ಪ್ರಹ್ಲಾದಸ್ಯಾನುಜಶ್ಚ ಯಃ |
ಸ ಶಲ್ಯ ಇತಿ ವಿಖ್ಯಾತೋ ಜಜ್ಞೇ ಮದ್ರೇಶ್ವರೋ ಬಲೀ ॥6॥
ಪ್ರಹ್ಲಾದನ ತಮ್ಮನಾದ ಸಂಹ್ಲಾದ ಎಂಬುವನು ಮದ್ರದೇಶಾಧಿಪತಿಯಾಗಿ ಬಲಿಷ್ಠನಾಗಿ ಶಲ್ಯ ಎಂಬ ಹೆಸರಿಂದ ವಿಖ್ಯಾತನಾದನು.
ಅನುಹ್ಲಾದಸ್ತು ತೇಜಸ್ವೀ ಯೋಽಭೂತ್ ಖ್ಯಾತೋ ಜಘನ್ಯಜಃ |
ಧೃಷ್ಟಕೇತುರಿತಿ ಖ್ಯಾತಃ ಸ ಬಭೂವ ನರೇಶ್ವರಃ ॥7॥
ಪ್ರಹ್ಲಾದನ ಕೊನೆಯ ತಮ್ಮನಾದ ತೇಜಸ್ವಿಯಾದ ಅನುಹ್ಲಾದನು ಧೃಷ್ಟಕೇತು ಎಂಬ ರಾಜನಾಗಿ ಜನಿಸಿದನು.
ಯಸ್ತು ರಾಜನ್ ಶಿವಿರ್ನಾಮ ದೈತೇಯಃ ಪರಿಕೀರ್ತಿತಃ |
ದ್ರುಮ ಇತ್ಯಭಿವಿಖ್ಯಾತಃ ಸ ಆಸೀದ್ ಭುವಿ ಪಾರ್ಥಿವ ॥8॥
ಎಲೈ ರಾಜನೇ ದಿತಿಯ ಮಗನಾದ ಶಿವಿ ಎಂಬುವನು ಭೂಮಿಯಲ್ಲಿ ದ್ರುಮ ಎಂಬ ಹೆಸರಿನಿಂದ ಜನಿಸಿ ಪ್ರಸಿದ್ಧನಾದನು.
ಬಾಷ್ಕಲೋ ನಾಮ ಯಸ್ತೇಷಾಮಾಸೀದಸುರಸತ್ತಮಃ |
ಭಗದತ್ತ ಇತಿ ಖ್ಯಾತಃ ಸ ಆಸೀನ್ಮನುಜೇಶ್ವರಃ ॥9॥
ಬಾಷ್ಕಲ ಎಂಬ ಹೆಸರಿನಿಂದ ಪ್ರಸಿದ್ಧನಾದವನು ಭಗದತ್ತರಾಜನಾಗಿ ಅವತರಿಸಿದನು. (ಭಗದತ್ತನು ಬಾಷ್ಕಲ ಅಂಶಯುತನಾದ ಕುಬೇರ)
ಅಯಃಶಿರಾ ಅಶ್ವಶಿರಾ ಅಯಃಶಂಕುಶ್ಚ ಭಾರತ |
ತಥಾ ಗಗನಮೂರ್ಧಾ ಚ ವೇಗವಾಂಶ್ಚೈವ ಪಂಚಮಃ ॥10॥
ಪಂಚೈತೇ ಜಜ್ಞಿರೇ ರಾಜನ್ ವೀರ್ಯವಂತೋ ಮಹಾಸುರಾಃ |
ಕೇಕಯೇಷು ಮಹಾತ್ಮಾನಃ ಪಾರ್ಥಿವರ್ಷಭಸತ್ತಮಾಃ ॥11॥
ಆಯಃಶಿರಾ, ಅಶ್ವಶಿರಾ, ಅಯಃಶಂಕು, ಗಗನಮೂರ್ಧಾ ಮತ್ತು ವೇಗವಾನ್ ಈ ಐವರು ಕೇಕಯ ದೇಶದ ರಾಜರುಗಳಾಗಿ ಜನಿಸಿದರು.
ಕೇತುಮಾನಿತಿ ವಿಖ್ಯಾತೋ ಯಸ್ತತೋಽನ್ಯಃ ಪ್ರತಾಪವಾನ್ |
ಅಮಿತೌಜಾ ಇತಿ ಖ್ಯಾತಃ ಸ ಜಜ್ಞೇ ಮನುಜರ್ಷಭ ॥12॥
ಆ ಗಣದಲ್ಲಿಯೇ ಸೇರಿದ ಕೇತುಮಾನ್ ಎಂಬ ಪ್ರತಾಪಶಾಲಿಯಾದವನು ಇಲ್ಲಿ ಅಮಿತೌಜಾ ಎಂಬ ಹೆಸರಿನಿಂದ ಜನಿಸಿದನು.
ಸ್ವರ್ಭಾನುರಿತಿ ವಿಖ್ಯಾತಃ ಶ್ರೀಮಾನ್ ಯಸ್ತು ಮಹಾಸುರಃ |
ಉಗ್ರಸೇನ ಇತಿ ಖ್ಯಾತಃ ಸೋಗ್ರಕರ್ಮಾ ನರಾಧಿಪ ॥13॥
ರಾಹು ಎಂಬ ಹೆಸರಿನಿಂದ ಪ್ರಖ್ಯಾತನಾದ ಮಹಾಸುರನು ಇಲ್ಲಿ ಉಗ್ರಸೇನನೆಂದು ಪ್ರಸಿದ್ಧನಾದನು. (ಇವನು ಕಂಸನ ತಂದೆಯಾದ ಉಗ್ರಸೇನನಗಿಂತ ಬೇರೆಯಾದವನು) ರಾಜನೇ ಇವನು ಉಗ್ರಸ್ವಭಾವದವನು ಮತ್ತು ಉಗ್ರಕರ್ಮಗಳನ್ನು ಮಾಡುವವನು.
ಯಸ್ತ್ವಶ್ವ ಇತಿ ವಿಖ್ಯಾತಃ ಸರ್ವಶಸ್ತ್ರಭೃತಾಂ ವರಃ |
ಅಶೋಕೋ ನಾಮ ರಾಜಾಸೀನ್ಮಹಾವೀರ್ಯಪರಾಕ್ರಮಃ ॥14॥
ಅಶ್ವ ಎಂಬ ರಥದಿಂದ ಸರ್ವಶಸ್ತ್ರಧಾರಿಗಳಲ್ಲಿ ಪ್ರಖ್ಯಾತನಾದ ಅಸುರನು ಅಶೋಕ ಎಂಬ ಹೆಸರಿನ ಮಹಾಬಲಪರಾಕ್ರಮವುಳ್ಳ ರಾಜನಾದನು.
ತಸ್ಮಾದವರಜೋ ಯಸ್ತು ರಾಜನ್ ಅಶ್ವಪತಿಸ್ಸ್ಮೃತಃ |
ದೈತೇಯಃ ಸೋಽಭವದ್ ರಾಜಾ ಹಾರ್ದಿಕ್ಯೋ ಮನುಜರ್ಷಭಃ ॥15॥
ಅವನ ತಮ್ಮನಾದ ಅಶ್ವಪತಿ ಎಂಬ ಹೆಸರಿನ ದೈತೇಯನು ಹಾರ್ದಿಕ್ಯ ಎಂಬ ಹೆಸರಿನಿಂದ ರಾಜನಾದನು. (ಇವನು ಕೃತವರ್ಮನಲ್ಲ. ಕೃತವರ್ಮನ ತಮ್ಮನಾದ ಹೃದಿಕನ ಇನ್ನೊಬ್ಬ ಮಗ.)
ವೃಷಪರ್ವೇತಿ ವಿಖ್ಯಾತ ಆಸೀದ್ ಯಸ್ತು ಮಹಾಸುರಃ |
ದೀರ್ಘಪ್ರಜ್ಞ ಇತಿ ಖ್ಯಾತಃ ಪೃಥಿವ್ಯಾಂ ಸೋಽಭವನ್ನೃಪಃ ॥16॥
ವೃಷಪರ್ವ ಎಂದು ಪ್ರಖ್ಯಾತನಾದ ಮಹಾಸುರನು ಭೂಮಿಯಲ್ಲಿ ದೀರ್ಘಪ್ರಜ್ಞ ಎಂಬ ರಾಜನಾದನು.
ಅಜಕಸ್ತ್ವನುಜೋ ರಾಜನ್ ಯ ಆಸೀದ್ ವೃಷಪರ್ವಣಃ |
ಸ ಮಲ್ಲ ಇತಿ ವಿಖ್ಯಾತಃ ಪೃಥಿವ್ಯಾಮಭವನ್ನೃಪಃ ॥17॥
ಎಲೈ ರಾಜನೇ ವೃಷಪರ್ವನ ತಮ್ಮನಾದ ಅಜಕನೆಂಬ ದೈತೇಯನು ಭೂಮಿಯಲ್ಲಿ ಮಲ್ಲ ಎಂಬ ಹೆಸರಿನ ರಾಜನಾದನು.
ಅಶ್ವಗ್ರೀವ ಇತಿ ಖ್ಯಾತಃ ಸತ್ತ್ವವಾನ್ ಯೋ ಮಹಾಸುರಃ |

ರೋಚಮಾನ ಇತಿ ಖ್ಯಾತಃ ಪೃಥಿವ್ಯಾಮಭವನ್ನೃಪಃ ॥18॥
ಅಶ್ವಗ್ರೀವ ಎಂಬ ಹೆಸರಿನ ಸತ್ವಶಾಲಿಯಾದ ಮಹಾಸುರನು ಭೂಮಿಯಲ್ಲಿ ರೋಚಮಾನ ಎಂಬ ಹೆಸರಿನಿಂದ ಪ್ರಖ್ಯಾತನಾದ ರಾಜನಾದನು.
ಸೂಕ್ಷ್ಮಸ್ತು ಸುಮತೀ ರಾಜನ್ ಕೀರ್ತಿಮಾನ್ ಯಃ ಪ್ರಕೀರ್ತಿತಃ |
ಬೃಹಂತ ಇತಿ ವಿಖ್ಯಾತಃ ಕ್ಷಿತಾವಾಸೀತ್ ಸ ಪಾರ್ಥಿವಃ ॥19॥
ಎಲೈ ರಾಜನೇ ಬುದ್ಧಿವಂತನೆಂದು ಪ್ರಸಿದ್ಧನಾದ ಸೂಕ್ಷ್ಮ ಎಂಬ ದೈತೇಯನು ಭೂಮಿಯಲ್ಲಿ ಬೃಹಂತ ಎಂಬ ಹೆಸರಿನ ರಾಜನಾದನು.
ತುಹುಂಡ ಇತಿ ವಿಖ್ಯಾತೋ ಯ ಆಸೀದಸುರೋತ್ತಮಃ |
ಸೇನಾಬಿಂದುರಿತಿ ಖ್ಯಾತಃ ಸ ಬಭೂವ ನರಾಧಿಪಃ ॥20॥
ತುಹುಂಡ ಎಂಬ ಹೆಸರಿನಿಂದ ಪ್ರಖ್ಯಾತನಾದವನು ಭೂಮಿಯಲ್ಲಿ ಸೇನಾಬಿಂದು ಎಂಬ ಹೆಸರಿನ ರಾಜನಾದನು.
ಖಸ್ರುವೋ ನಾಮ ಯಸ್ತೇಷಾಮಸುರಾಣಾಂ ಪುರೋಗಮಃ |
ರಿಪುಜಿನ್ನಾಮ ರಾಜರ್ಷಿರ್ಬಭೂವ ಭುವಿ ವಿಶ್ರುತಃ ॥21॥
ಅಸುರರ ನಾಯಕನಾಗಿದ್ದ ಖಸ್ರುವ ಎಂಬುವನು ಭೂಮಿಯಲ್ಲಿ ರಿಪುಜಿತ್ ಎಂಬ ಹೆಸರಿನಿಂದ ಪ್ರಖ್ಯಾತನಾದ ರಾಜನಾದನು.
ಏಕಚಕ್ರ ಇತಿ ಖ್ಯಾತೋ ಯ ಆಸೀಚ್ಚ ಮಹಾಸುರಃ |
ಪ್ರತಿವಿಂಧ್ಯ ಇತಿ ಖ್ಯಾತೋ ಬಭೂವ ಪ್ರಥಿತಃ ಕ್ಷಿತೌ ॥22॥
ಏಕಚಕ್ರ ಎಂಬ ಹೆಸರಿನಿಂದ ಪ್ರಸಿದ್ಧನಾದ ಮಹಾಸುರನು ಭೂಮಿಯಲ್ಲಿ ಪ್ರತಿವಿಂಧ್ಯನಾಮಕ ರಾಜನಾದನು. (ಇವನು ಧರ್ಮರಾಜನ ಮಗನಾದ ಪ್ರತಿವಿಂಧ್ಯನಿಗಿಂತ ಬೇರೆಯಾದವನು.)
ವಿರೂಪಾಕ್ಷಸ್ತು ದೈತೇಯಃ ಚಿತ್ರಯೋಧೀ ಮಹಾಸುರಃ |
ಚಿತ್ರವರ್ಮೇತಿ ವಿಖ್ಯಾತಃ ಕ್ಷಿತಾವಾಸೀತ್ ಸ ಪಾರ್ಥಿವಃ ॥23॥
ವಿರೂಪಾಕ್ಷನೆಂಬ ವಿಚಿತ್ರಯುದ್ಧವನ್ನು ಮಾಡುವ ಮಹಾಸುರನು ಭೂಮಿಯಲ್ಲಿ ಚಿತ್ರವರ್ಮ ಎಂಬ ಹೆಸರಿನ ರಾಜನಾದನು.
ನಾಮ್ನಾ ಹರಿಹಯೋ ರಾಜನ್ ಆಸೀದ್ ಯೋ ದಾನವರ್ಷಭಃ |
ಸುವಾಸ್ತುರಿತಿ ವಿಖ್ಯಾತಃ ಸ ಜಜ್ಞೇ ಮನುಜರ್ಷಭಃ ॥24॥
ಎಲೈ ರಾಜನೇ ದಾನವಶ್ರೇಷ್ಠನಾದ ಹರಿಹಯ ಎಂಬುವನು ಭೂಮಿಯಲ್ಲಿ ಸುವಾಸ್ತು ಎಂಬ ಹೆಸರಿನಿಂದ ಜನಿಸಿ ಪ್ರಖ್ಯಾತನಾದ ರಾಜನಾದನು.
ಪ್ರಹ್ಲಾದಸ್ತು ಮಹಾತೇಜಾಃ ಶತ್ರುಪಕ್ಷಭಯಂಕರಃ |
ಬಾಹ್ಲೀಕೋ ನಾಮ ರಾಜಾ ಸ ಬಭೂವ ಪ್ರಥಿತಃ ಕ್ಷಿತೌ ॥25॥
ಶತ್ರುಪಕ್ಷಭಯಂಕರನೂ, ಮಹಾತೇಜಸ್ವಿಯೂ ಆದ ಪ್ರಹ್ಲಾದನು ಭೂಮಿಯಲ್ಲಿ ಬಾಹ್ಲೀಕರಾಜನಾಗಿ ಅವತರಿಸಿ ಪ್ರಖ್ಯಾತನಾದನು.
ನಿಚಂದ್ರಶ್ಚಂದ್ರವಕ್ತ್ರಸ್ತು ಯ ಆಸೀದ್ದಾನವೋತ್ತಮಃ |
ಸುಚಂದ್ರ ಇತಿ ವಿಖ್ಯಾತೋ ಭೂಮಾವಾಸೀತ್ ಸ ಪಾರ್ಥಿವಃ ॥26॥
ನಿಚಂದ್ರ ಎಂಬ ಹೆಸರಿನಿಂದ ಪ್ರಸಿದ್ಧನಾದ ಚಂದ್ರಮುಖನಾದ ದಾನವನು ಭೂಮಿಯಲ್ಲಿ ಸುಚಂದ್ರ ಎಂಬ ಹೆಸರಿನಿಂದ ಜನಿಸಿ ರಾಜನಾದನು.
ನಿಕುಂಭಸ್ತ್ವಜಿತಃ ಸಂಖ್ಯೇ ಮಹಾಮತಿರಜಾಯತ |
ಭೂಮೌ ಭೂಮಿಪತಿಶ್ರೇಷ್ಠೋ ದೇವಾಧಿಕ ಇತಿ ಶ್ರುತ: ॥27॥
ಯುದ್ಧದಲ್ಲಿ ಸೋಲನ್ನು ಕಾಣದ ಬುದ್ಧಿಶಾಲಿಯಾದ ನಿಕುಂಭ ಎಂಬ ಅಸುರನು ಭೂಮಿಯಲ್ಲಿ ದೇವಾಧಿಕನೆಂಬ ರಾಜನಾಗಿ ಅವತರಿಸಿದನು.
ಶರಭೋ ನಾಮ ಯಸ್ತೇಷಾಂ ದೈತೇಯಾನಾಂ ಮಹಾಸುರಃ |
ಪೌರವೋ ನಾಮ ರಾಜರ್ಷಿಃ ಸ ಬಭೂವ ನರೇಷ್ವಿಹ ॥28॥
ದೈತೇಯರ ಗಣಕ್ಕೆ ಸೇರಿದ ಶರಭ ಎಂಬ ಮಹಾಸುರನು ಇಲ್ಲಿ ಪೌರವ ಎಂಬ ಹೆಸರಿನ ರಾಜರ್ಷಿಯಾದನು.
ಕಾಪಥಸ್ತು ಮಹಾವೀರಃ ಶ್ರೀಮಾನ್ ರಾಜೋ ಮಹಾಸುರಃ |
ಸುಪಾರ್ಶ್ವ ಇತಿ ವಿಖ್ಯಾತಃ ಕ್ಷಿತೌ ಜಜ್ಞೇ ಮಹೀಪತಿಃ ॥29॥
ಕಾಪಥ ಎಂಬ ಮಹಾವೀರನೂ, ಕಾಂತಿಯುಕ್ತನೂ ಆದ ಮಹಾಸುರನು ಸುಪಾರ್ಶ್ವ ಎಂಬ ಹೆಸರಿನಿಂದ ಭೂಮಿಯಲ್ಲಿ ಪ್ರಖ್ಯಾತನಾದ ರಾಜನಾದನು.
ಕ್ರತುಸ್ತು ರಾಜನ್ ರಾಜರ್ಷಿಃ ಕ್ಷಿತೌ ಜಜ್ಞೇ ಮಹಾಸುರಃ |
ಪಾರ್ವತೇಯ ಇತಿ ಖ್ಯಾತಃ ಕಾಂಚನಾಚಲಸನ್ನಿಭಃ ॥30॥
ಎಲೈ ರಾಜನೇ ಕ್ರತು ಎಂಬ ಹೆಸರಿನ ಮಹಾಸುರನು ಚಿನ್ನದ ಗಿರಿಯಂತೆ ಉನ್ನತವಾಗಿದ್ದು ಪಾರ್ವತೇಯ ರಾಜನಾಗಿ ಜನಿಸಿದನು. (ಈ ಕ್ರಥನು ಕೃಷ್ಣದೇವರಿಗೆ ಅಭಿಷೇಕ ಮಾಡಿದ ಕ್ರಥನಿಗಿಂತ ಭಿನ್ನನಾದವನು.)
ದ್ವಿತೀಯಃ ಶರಭಸ್ತೇಷಾಮಸುರಾಣಾಂ ಬಭೂವ ಯಃ |
ಪ್ರಹ್ಲಾದೋ ನಾಮ ಬಾಹ್ಲೀಕೋ ಜಜ್ಞೇ ಭೂಪಃ ಪರಂತಪ ॥31॥
ಆ ಅಸುರ ಗುಂಪಿಗೆ ಸೇರಿದ ಅವನ ಅನಂತರದ ಶರಭ ಎಂಬುವನು ಭೂಮಿಯಲ್ಲಿ ಬಾಹ್ಲೀಕಾಧಿಪತಿಯಾಗಿ ಪ್ರಹ್ಲಾದ ಎಂಬ ಹೆಸರಿನಿಂದ ಜನಿಸಿದನು. (ಈ ಪ್ರಹ್ಲಾದನು ನರಸಿಂಹದೇವರ ಅನುಗ್ರಹ ಪಡೆದ ಪ್ರಹ್ಲಾದನಲ್ಲ. ಬಾಹ್ಲೀಕದೇಶದಲ್ಲಿ ಯಾವುದೋ ಕಡೆ ರಾಜನಾಗಿದ್ದ ಇನ್ನೊಬ್ಬ ವ್ಯಕ್ತಿ.)

ಚಂದ್ರಸ್ತು ದಿತಿಜಶ್ರೇಷ್ಠೋ ಲೋಕೇ ತಾರಾಧಿಪೋಽಪರಃ |
ಚಂದ್ರವರ್ಮೇತಿ ವಿಖ್ಯಾತಃ ಕಾಂಭೋಜಾನಾಂ ನರಾಧಿಪಃ ॥32॥
ಅಸುರರ ಗಣಕ್ಕೆ ಸೇರಿದ ದಕ್ಷಪ್ರಜಾಪತಿಯಾದ ಚಂದ್ರನು ಚಂದ್ರವರ್ಮ ಎಂಬ ಹೆಸರಿನಿಂದ ಜನಿಸಿ ಕಾಂಭೋಜರಾಜನಾದನು. (ಇವನು ಅಸುರ ಗುಂಪಿಗೆ ಸೇರಿದ ಚಂದ್ರ. ದೇವತೆಗಳ ಗಣಕ್ಕೆ ಸೇರಿದ ಸೂರ್ಯ, ಚಂದ್ರರು ಬೇರೆ, ಅಸುರರ ಗಣಕ್ಕೆ ಸೇರಿದ ಸೂರ್ಯ, ಚಂದ್ರರು ಬೇರೆ.)
ಅರ್ಕ ಇತ್ಯಭಿವಿಖ್ಯಾತೋ ಯಸ್ತು ದಾನವಪುಂಗವಃ |
ಇಷೀಕೋ ನಾಮ ರಾಜರ್ಷಿರ್ಬಭೂವ ಋಷಿಸತ್ತಮಃ ॥33॥
ಅರ್ಕ ಎಂಬ ಹೆಸರಿನಿಂದ ಪ್ರಸಿದ್ಧನಾದ ದಾನವಶ್ರೇಷ್ಠನು ಇಷೀಕ ಎಂಬ ಹೆಸರಿನಿಂದ ಭೂಮಿಯಲ್ಲಿ ಜನಿಸಿ ರಾಜರ್ಷಿಯೆನಿಸಿಕೊಂಡನು.
ಮೃತಪಾ ಇತಿ ವಿಖ್ಯಾತೋ ಯ ಆಸೀದಸುರೋತ್ತಮಃ |
ಪಶ್ಚಿಮಾನೂಪಕಂ ವಿದ್ಧಿ ತಂ ನೃಪಂ ನೃಪಸತ್ತಮ ॥34॥
ಮೃತಪಾ ಎಂಬ ಹೆಸರಿನಿಂದ ಪ್ರಖ್ಯಾತನಾದ ಅಸುರಶ್ರೇಷ್ಠನು ಅನೂಪಕನೆಂದು ಹೆಸರಿನಿಂದ ಜನಿಸಿ ಪಶ್ಚಿಮ ಸಮುದ್ರದ ತೀರಪ್ರದೇಶಗಳಿಗೆ ರಾಜನಾದನು.
ಗವಿಷ್ಠಸ್ತು ಮಹಾತೇಜಾ ಯಃ ಪ್ರಖ್ಯಾತೋ ಮಹಾಸುರಃ |
ದ್ರುಮಸೇನ ಇತಿ ಖ್ಯಾತಃ ಪೃಥಿವ್ಯಾಂ ಸೋಽಭವನ್ನೃಪಃ ॥35॥
ಗವಿಷ್ಠ ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದ ಮಹಾತೇಜಸ್ವಿಯಾದ ಅಸುರನು ದ್ರುಮಸೇನ ಎಂಬ ಹೆಸರಿನಿಂದ ಪ್ರಖ್ಯಾತನಾಗಿ ಭೂಮಿಯಲ್ಲಿ ರಾಜನಾದನು.
ಮಯೂರ ಇತಿ ವಿಖ್ಯಾತಃ ಶ್ರೀಮಾನ್ ಯಸ್ತು ಮಹಾಸುರಃ |
ಸ ವಿಶ್ವ ಇತಿ ವಿಖ್ಯಾತೋ ಬಭೂವ ಪೃಥಿವೀಪತಿಃ ॥36॥
ಮಯೂರ ಎಂಬ ಹೆಸರಿನಿಂದ ಪ್ರಖ್ಯಾತನಾದ ಮಹಾಸುರನು ವಿಶ್ವ ಎಂಬ ಹೆಸರಿನ ಪ್ರಖ್ಯಾತನಾದ ರಾಜನಾದನು.
ದೀರ್ಘಜಿಹ್ವಸ್ತು ಕೌರವ್ಯ ಯ ಉಕ್ತೋ ದಾನವರ್ಷಭಃ |
ಕಾಶಿರಾಜ ಇತಿ ಖ್ಯಾತಃ ಪೃಥಿವ್ಯಾಮಭವನ್ನೃಪಃ ॥37॥
ಎಲೈ ಕೌರವ್ಯನೇ ದೀರ್ಘಜಿಹ್ವ ಎಂಬ ಹೆಸರಿನ ದಾನವಶ್ರೇಷ್ಠನು ಭೂಮಿಯಲ್ಲಿ ಕಾಶೀರಾಜನಾಗಿ ಅವತಾರ ಮಾಡಿದನು.
ಸಿಂಹಿಕಾ ಸುಷುವೇ ಯಂ ತು ಗ್ರಹಂ ಚಂದ್ರಾರ್ಕಮರ್ದನಮ್ |
ಕ್ರಥ ಇತ್ಯಭಿವಿಖ್ಯಾತಃ ಸ ಬಭೂವ ನರಾಧಿಪಃ ॥38॥
ಚಂದ್ರ, ಸೂರ್ಯರನ್ನು ಪೀಡಿಸುವ ಸಿಂಹಿಕೆಯ ಮಗನಾದ ರಾಹುವು ಕ್ರಥ ಎಂಬ ಹೆಸರಿನ ರಾಜನಾದನು. (ಈ ಕ್ರಥನೂ ಸಹ ಕೃಷ್ಣದೇವರಿಗೆ ಅಭಿಷೇಕ ಮಾಡಿದ ಕ್ರಥನಿಗಿಂತ ಭಿನ್ನನಾದವನು.)
ಸುಪರ್ಣ ಇತಿ ವಿಖ್ಯಾತಃ ತಸ್ಮಾದವರಜಸ್ತು ಯಃ |
ಕ್ರೋಧಕೀರ್ತಿರಿತಿ ಖ್ಯಾತಃ ಪೃಥಿವ್ಯಾಮಭವನ್ನೃಪಃ ॥39॥
ಅವನ ತಮ್ಮನಾಗಿ ಸುಪರ್ಣ ಎಂಬ ಹೆಸರಿನಿಂದ ಪ್ರಖ್ಯಾತನಾದವನು ಭೂಮಿಯಲ್ಲಿ ಕ್ರೋಧಕೀರ್ತಿ ಎಂಬ ಹೆಸರಿನ ರಾಜನಾದನು.
ಚಂದ್ರಹಂತೇತಿ ಯಸ್ತೇಷಾಂ ಕೀರ್ತಿತಃ ಪ್ರವರೋಽಸುರಃ |
ನರಕೋ ನಾಮ ರಾಜರ್ಷಿಃ ಪೃಥಿವ್ಯಾಂ ಸೋಽಭವನ್ನೃಪಃ ॥40॥
ಚಂದ್ರಹಂತಾ ಎಂಬ ಹೆಸರಿನಿಂದ ಪ್ರಖ್ಯಾತನಾದ ಅಸುರಶ್ರೇಷ್ಠನು ಭೂಮಿಯಲ್ಲಿ ನರಕ ಎಂಬ ಹೆಸರಿನಿಂದ ಪ್ರಖ್ಯಾತನಾದನು.
ವಿನಾಶನಸ್ತು ಚಂದ್ರಸ್ಯ ಯ ಆಖ್ಯಾತೋ ಮಹಾಸುರಃ |
ಜಾನಕಿರ್ನಾಮ ವಿಖ್ಯಾತಃ ಸೋಽಭವನ್ಮನುಜಾಧಿಪಃ ॥41॥
ಚಂದ್ರವಿನಾಶನ ಎಂಬ ಹೆಸರಿನಿಂದ ಪ್ರಖ್ಯಾತನಾದ ಮಹಾಸುರನು ಜಾನಕಿ ಎಂಬ ಹೆಸರಿನಿಂದ ಭೂಮಿಯಲ್ಲಿ ಪ್ರಖ್ಯಾತನಾದನು.
ಅನಾಯುಷಸ್ತು ಪುತ್ರಾಣಾಂ ಚತುರ್ಣಾಂ ಪ್ರವರೋಽಸುರಃ |
ವಿಕ್ಷರೋ ನಾಮ ರಾಜರ್ಷಿರ್ವಸುಮಿತ್ರೋಽಭವನ್ನೃಪಃ ॥42॥
ಅನಾಯುವಿನ ನಾಲ್ವರು ಪುತ್ರರ ಮಧ್ಯದಲ್ಲಿ ಶ್ರೇಷ್ಠನಾದ ವಿಕ್ಷರ ಎಂಬ ಅಸುರನು ವಸುಮಿತ್ರನೆಂಬ ಹೆಸರಿನ ರಾಜರ್ಷಿಯಾದನು.
ದ್ವಿತೀಯೋ ವಿಕ್ಷರಾದ್ ಯಸ್ತು ನರಾಧಿಪ ಮಹಾಸುರಃ |
ವರಃ ಸುರಾಷ್ಟ್ರಾಧಿಪತಿರ್ವಿಶ್ರುತಃ ಸೋಽಭವನ್ನೃಪಃ ॥43॥
ಎಲೈ ರಾಜನೇ ವಿಕ್ಷರನ ತಮ್ಮನಾದ ವರನೆಂಬ ಅಸುರನು ಸುರಾಷ್ಟ್ರಾಧಿಪತಿಯಾಗಿ ಭೂಮಿಯಲ್ಲಿ ಅವತಾರ ಮಾಡಿದನು.
ಬಲವೀರ ಇತಿ ಖ್ಯಾತೋ ಯಸ್ತತ್ವಸೀದಸುರೋತ್ತಮಃ |
ಪೌಂಡ್ರಕೋ ಮೇರುಸಂಕಾಶೋ ಬಭೂವ ಸ ನರಾಧಿಪಃ ॥44॥
ಬಲವೀರ ಎಂಬ ಹೆಸರಿನಿಂದ ಪ್ರಖ್ಯಾತನಾದ ಅಸುರಶ್ರೇಷ್ಠನಾದ ವೀರನು ಪೌಂಡ್ರಕ ಎಂಬ ಹೆಸರಿನಿಂದ ಮೇರುವಿನಂತೆ ಉನ್ನತ ಆಕಾರವನ್ನು ಹೊಂದಿದ್ದ ರಾಜನಾದನು.
ವೃತ್ರ ಇತ್ಯಭಿವಿಖ್ಯಾತೋ ಯಸ್ತು ರಾಜನ್ ಮಹಾಸುರಃ |
ಮಣಿಮಾನ್ನಾಮ ರಾಜರ್ಷಿಃ ಸ ಬಭೂವ ನರಾಧಿಪಃ ॥45॥
ರಾಜನೇ ವೃತ್ರ ಎಂಬ ಹೆಸರಿನಿಂದ ಪ್ರಖ್ಯಾತನಾದ ಮಹಾಸುರನು ಮಣಿಮಾನ್ ಎಂಬ ಹೆಸರಿನಿಂದ ರಾಜರ್ಷಿಯಾದನು. (ಇವನು

ಕ್ರೋಧವಶಗಣದಲ್ಲಿ ಸೇರಿದ ಮಣಿಮಂತನಿಗಿಂತ ಭಿನ್ನನಾದವನು.)
ಕ್ರೋಧಹಂತೇತಿ ಯಸ್ತಸ್ಯ ಬಭೂವಾವರಜೋಽಸುರಃ|
ದಂಡ ಇತ್ಯಭಿವಿಖ್ಯಾತಃ ಸ ಬಭೂವ ನರಾಧಿಪಃ ॥46॥
ಅವನ ತಮ್ಮನಾದ ಕ್ರೋಧಹಂತಾ ಎಂಬ ಮಹಾಸುರನು ದಂಡ ಎಂಬ ಹೆಸರಿನಿಂದ ಭೂಮಿಯಲ್ಲಿ ಪ್ರಖ್ಯಾತನಾದ ರಾಜನಾದನು.
ಕ್ರೋಧವರ್ಧನ ಇತ್ಯೇವ ಯಸ್ತ್ವನ್ಯಃ ಪರಿಕೀರ್ತಿತಃ|
ದಂಡಧಾರ ಇತಿ ಖ್ಯಾತಃ ಸೋಽಭವನ್ಮನುಜೇಶ್ವರಃ ॥47॥
ಕ್ರೋಧವರ್ಧನ ಇನ್ನೊಬ್ಬ ತಮ್ಮನು ದಂಡಧಾರ ಎಂಬ ಹೆಸರಿನ ರಾಜನಾಗಿ ಅವತರಿಸಿದನು.
ಕಾಲಕೇಯಾಸ್ತು ಯೇ ಪುತ್ರಾಃ ತೇಷಾಮಷ್ಟೌ ನರಾಧಿಪಾಃ|
ಜಜ್ಞಿರೇ ರಾಜಶಾರ್ದೂಲ ಶಾರ್ದೂಲಸಮವಿಕ್ರಮಾಃ ॥48॥
ಕಾಲೇಯ ಅಥವಾ ಕಾಲಕೇಯರೆನಿಸಿದ ಎಂಟು ಮಕ್ಕಳು ಭೂಮಿಯಲ್ಲಿ ಶಾರ್ದೂಲವಿಕ್ರಮರಾಗಿ ಅವತರಿಸಿದರು.
ಮಾಗಧೇಷು ಜಯತ್ಸೇನಃ ಶ್ರೀಮಾನಾಸೀತ್ ಸ ಪಾರ್ಥಿವಃ|
ಅಷ್ಟಾನಾಂ ಪ್ರವರಸ್ತೇಷಾಂ ಕಾಲೇಯಾನಾಂ ಮಹಾಸುರಃ ॥49॥
ಕಾಲೇಯರಲ್ಲಿ ಶ್ರೇಷ್ಠನಾದ ಮಹಾಸುರನು ಮಗಧದೇಶದಲ್ಲಿ ಜಯತ್ಸೇನ ಎಂಬ ರಾಜನಾದನು.
ದ್ವಿತೀಯಸ್ತು ತತಸ್ತೇಷಾಂ ಶ್ರೀಮಾನ್ ಹರಿಹಯೋಪಮಃ|
ಅಪರಾಜಿತ ಇತ್ಯೇವ ಸ ಬಭೂವ ನರಾಧಿಪಃ ॥50॥
ಅವರಲ್ಲಿ ಎರಡನೆಯವನಾದ ಕಾಂತಿಯುಕ್ತನೂ, ಇಂದ್ರನಿಗೆ ಸಮನೂ ಆದ ಅಸುರನು ಅಪರಾಜಿತ ಎಂಬ ಹೆಸರಿನಿಂದ ಭೂಮಿಯಲ್ಲಿ ರಾಜನಾದನು.
ತೃತೀಯಸ್ತು ಮಹಾರಾಜ ಮಹಾಬಾಹುರ್ಮಹಾಸುರಃ|
ನಿಷಾದಾಧಿಪತಿರ್ಜಜ್ಞೇ ಭುವಿ ಭೀಮಪರಾಕ್ರಮಃ ॥51॥
ಎಲೈ ಮಹಾರಾಜನೇ ಅವರಲ್ಲಿ ಮೂರನೆಯವನಾದ ಮಹಾಸುರನು ಭೂಮಿಯಲ್ಲಿ ಭೀಮಪರಾಕ್ರಮವುಳ್ಳ ನಿಷಾದಾಧಿಪತಿಯಾಗಿ ಜನಿಸಿದನು.
ತೇಷಾಮನ್ಯತಮೋ ಯಸ್ತು ಚತುರ್ಥಃ ಪರಿಕೀರ್ತಿತಃ|
ಶ್ರೋಣಿಮಾನಿತಿ ವಿಖ್ಯಾತಃ ಕ್ಷಿತೌ ರಾಜರ್ಷಿಸತ್ತಮಃ ॥52॥
ಅವರಲ್ಲಿ ನಾಲ್ಕನೆಯವನಾದವನು ಭೂಮಿಯಲ್ಲಿ ಶ್ರೋಣಿಮಾನ್ ಎಂಬ ಹೆಸರಿನ ರಾಜನಾದನು.
ಪಂಚಮಸ್ತು ಬಭೂವೈಷಾಂ ಪ್ರವರೋ ಯೋ ಮಹಾಸುರಃ|
ಮಹೌಜಾ ಇತಿ ವಿಖ್ಯಾತೋ ಬಭೂವೇಹ ಪರಂತಪಃ ॥53॥
ಅವರಲ್ಲಿ ಐದನೆಯವನಾದ ಮಹಾಸುರನು ಭೂಮಿಯಲ್ಲಿ ಮಹೌಜ ಎಂಬ ಹೆಸರಿನ ಶತ್ರುತಾಪಕನಾದ ರಾಜನಾದನು.
ಷಷ್ಠಸ್ತು ಮತಿಮಾನ್ ಯೋ ವೈ ತೇಷಾಮಾಸೀನ್ಮಹಾಸುರಃ|
ಅಭಿರೂಪ ಇತಿ ಖ್ಯಾತಃ ಕ್ಷಿತೌ ರಾಜರ್ಷಿಸತ್ತಮಃ ॥54॥
ಅವರಲ್ಲಿ ಆರನೆಯವನಾದ ಮೇಧಾವಿಯಾದ ಮತಿಮಾನ್ ಎಂಬ ಮಹಾಸುರನು ಭೂಮಿಯಲ್ಲಿ ಅಭಿರೂಪ ಎಂಬ ಹೆಸರಿನ ರಾಜನಾದನು.
ಸಪ್ತಮಸ್ತು ಬಭೂವೈಷಾಂ ಪ್ರವರೋ ಯೋ ಮಹಾಸುರಃ|
ಸಮುದ್ರಸೇನಸ್ತು ನೃಪಃ ತೇಷಾಮೇವಾಭವದ್ ಗಣಾತ್|
ವಿಶ್ರುತಃ ಸಾಗರಾಂತಾಯಾಂ ಕ್ಷಿತೌ ಧರ್ಮಾರ್ಥತತ್ತ್ವವಿತ್ ॥55॥
ಅವರಲ್ಲಿ ಏಳನೆಯವನಾದ ಮಹಾಸುರನು ಸಮುದ್ರಸೇನನೆಂಬ ಹೆಸರಿನ ರಾಜನಾಗಿ ಭೂಮಿಯಲ್ಲಿ ಜನಿಸಿದನು. ಸಾಗರಾಂತವಾದ ಭೂಮಿಯಲ್ಲಿ ಅವನು ಧರ್ಮಾರ್ಥತತ್ತ್ವಗಳನ್ನು ತಿಳಿದವನು ಎಂದು ಪ್ರಸಿದ್ಧನಾಗಿದ್ದನು.
ಬೃಹನ್ನಾಮಾಽಷ್ಟಮಸ್ತೇಷಾಂ ಕಾಲೇಯಾನಾಂ ಮಹಾಸುರಃ|
ಬಭೂವ ರಾಜಾ ಧರ್ಮಾತ್ಮಾ ಸರ್ವಭೂತಹಿತೇ ರತಃ ॥56॥
ಅವರಲ್ಲಿ ಎಂಟನೆಯವನಾದ ಮಹಾಸುರನು ಭೂಮಿಯಲ್ಲಿ ಬೃಹತ್ ಎಂಬ ಹೆಸರಿನ ಧರ್ಮಾತ್ಮನಾದ ಸರ್ವಭೂತಹಿತನಾದ ರಾಜನಾದನು.
ಗಣಃ ಕ್ರೋಧವಶೋ ನಾಮ ಯಸ್ತು ರಾಜನ್ ಪ್ರಕೀರ್ತಿತಃ|
ತತಃ ಸಂಜಜ್ಞಿರೇ ವೀರಾಃ ಕ್ಷಿತಾವಿಹ ನರಾಧಿಪಾಃ ॥57॥
ಎಲೈ ರಾಜನೇ ಕ್ರೋಧವಶ ಎಂದು ಪ್ರಸಿದ್ಧವಾದ ಗಣದಿಂದ ಅನೇಕರು ಭೂಮಿಯಲ್ಲಿ ರಾಜರಾಗಿ ಅವತರಿಸಿದರು.
ನಂದಕಃ ಕರ್ಣವೇಷ್ಟಶ್ಚ ಸಿದ್ಧಾರ್ಥಃ ಕ್ರೀಡಕಸ್ತಥಾ|
ಸುವೀರಶ್ಚ ಸುಬಾಹುಶ್ಚ ಮಹಾವೀರೋಽಥ ಬಾಹ್ಲಿಕಃ|
ಕ್ರೋಧೋ ವಿಚಿತ್ರಸ್ತುವರಃ ಶ್ರೀಮಾನ್ ನೀಲಶ್ಚ ಭೂಮಿಪಃ ॥58॥
ವೀರಧಾಮಾ ಚ ಕೌರವ್ಯ ಭೂರಿವಾಲಶ್ಚ ನಾಮತಃ|
ದಂತವಕ್ರಶ್ಚ ನಾಮಾಸೀದ್ ದುರ್ಜಯಶ್ಚೈವ ನಾಮತಃ ॥59॥
ರುಗ್ಮೀ ಚ ನರಶಾರ್ದೂಲ ರಾಜಾ ಚ ಜನಮೇಜಯಃ|
ಆಷಾಢೋ ವಾಯುವೇಗಶ್ಚ ಭೂರಿತೇಜಸ್ತಥೈವ ಚ ॥60॥

ಏಕಲವ್ಯಃ ಸುಮಿತ್ರಸ್ತು ವಾಟಧಾನೋऽಥ ಗೋಮುಖಃ |
ಕರೂಶಕಾಶ್ಚ ರಾಜಾನಃ ಕ್ಷೇಮಧೂರ್ತಿಸ್ತಥೈವ ಚ ॥61॥
ಶ್ರುತಾಯುರುದ್ಧವಶ್ಚೈವ ಬೃಹತ್ಸೇನಸ್ತಥೈವ ಚ |
ಕ್ಷೇಮೋಗ್ರತೀರ್ಥಃ ಕುಹಕಃ ಕಳಿಂಗೇಷು ನರಾಧಿಪಃ ॥62॥
ಎಲೈ ರಾಜನೇ ನಂದಕ, ಕರ್ಣವೇಷ್ಟ, ಸಿದ್ಧಾರ್ಥ, ಕ್ರೀಡಕ, ಸುವೀರ, ಸುಬಾಹು, ಮಹಾವೀರ, ಬಾಹ್ಲಿಕ, ಕ್ರೋಧ, ವಿಚಿತ್ರ, ತುವರ, ನೀಲ, ವೀರಧಾಮಾ, ಭೂರಿವಾಲ, ದಂತವಕ್ರ, ದುರ್ಜಯ, ರುಗ್ಮಿ, ಜನಮೇಜಯ, ಆಷಾಢ, ವಾಯುವೇಗ, ಭೂರಿತೇಜ, ಏಕಲವ್ಯ, ಸುಮಿತ್ರ, ವಾಟಧಾನ, ಗೋಮುಖ, ಕರೂಶಕ ರಾಜರುಗಳು, ಕ್ಷೇಮಧೂರ್ತಿ, ಶ್ರುತಾಯು, ಉದ್ಧವ, ಬೃಹತ್ಸೇನ, ಕ್ಷೇಮ, ಉಗ್ರತೀರ್ಥ, ಕುಹಕ, ಕಳಿಂಗಾಧಿಪತಿ ಇವರೆಲ್ಲರೂ ಕ್ರೋಧವಶಗಣಕ್ಕೆ ಸೇರಿದ ರಾಜರುಗಳು.
ಮತಿಮಾಂಶ್ಚ ಮನುಷ್ಯಾಣಾಮೀಶ್ವರಶ್ಚೇತಿ ವಿಶ್ರುತಃ |
ಗಣಾತ್ ಕ್ರೋಧವಶಾದೇವ ರಾಜಪೂಗಃ ಕ್ಷಿತಾವಿಹ |
ಜಾತಃ ಪುರಾ ಮಹಾರಾಜ ಮಹಾಕೀರ್ತಿರ್ಮಹಾಬಲಃ ॥63॥
ಈಶ್ವರ ಎಂಬ ಹೆಸರಿನಿಂದ ಪ್ರಖ್ಯಾತನಾದ ಬುದ್ಧಿವಂತನಾದ ರಾಜನೂ ಸಹ ಕ್ರೋಧವಶಗಣಕ್ಕೆ ಸೇರಿದವನು. ರಾಜನೇ, ಕ್ರೋಧವಶಗಣದಿಂದಲೇ ಭೂಮಿಯಲ್ಲಿ ಮಹಾಕೀರ್ತಿ ಮತ್ತು ಬಲಗಳುಳ್ಳ ರಾಜರ ಸಮುದಾಯವು ಉಂಟಾಯಿತು.
ಕಾಲನೇಮಿರಿತಿ ಖ್ಯಾತೋ ಯೋऽಸಾವಸುರಸತ್ತಮಃ |
ಸ ಕಂಸ ಇತಿ ವಿಖ್ಯಾತ ಉಗ್ರಸೇನಸುತೋ ಬಲೀ ॥64॥
ಕಾಲನೇಮಿ ಎಂಬ ಹೆಸರಿನ ಪ್ರಖ್ಯಾತನಾದ ಅಸುರನು ಉಗ್ರಸೇನನ ಮಗನಾಗಿ ಬಲಿಷ್ಠನಾಗಿ ಜನಿಸಿ ಕಂಸ ಎಂಬ ಹೆಸರಿನಿಂದ ಪ್ರಸಿದ್ಧನಾದನು.
ಯಸ್ತ್ವಾಸೀದ್ ದೇವಕೋ ನಾಮ ದೇವರಾಜಸಮದ್ಯುತಿಃ |
ಸ ಗಂಧರ್ವಪತಿರ್ಮುಖ್ಯಃ ಕ್ಷಿತೌ ಜಜ್ಞೇ ನರಾಧಿಪಃ ॥65॥
ದೇವಕ ಎಂಬ ಹೆಸರಿನ ಇಂದ್ರನಿಗೆ ಸಮಾನವಾದ ಕಾಂತಿಯುಳ್ಳ ಗಂಧರ್ವಾಧಿಪತಿಯು ಭೂಮಿಯಲ್ಲಿ ದೇವಕನೆಂಬ ಹೆಸರಿನ ರಾಜನಾಗಿ ಜನಿಸಿದನು.
ಬೃಹಸ್ಪತೇರ್ಬೃಹತ್ಕೀರ್ತೇರ್ದೇವರ್ಷೇರ್ವಿದ್ಧಿ ಭಾರತ |
ಅಂಶಾದ್ ದ್ರೋಣಂ ಸಮುತ್ಪನ್ನಂ ಭಾರದ್ವಾಜಮಯೋನಿಜಮ್ ॥66॥
ಮಹಾಕೀರ್ತಿವಂತರಾದ ದೇವರ್ಷಿಗಳಾದ ಬೃಹಸ್ಪತಿಗಳ ಅಂಶದಿಂದ ಭೂಮಿಯಲ್ಲಿ ದ್ರೋಣರು ಅಯೋನಿಜರಾಗಿ ಅವತರಿಸಿದರು.
ಧನ್ವಿನಾಂ ನೃಪಶಾರ್ದೂಲ ಯಸ್ತು ಸರ್ವಾಸ್ತ್ರವಿತ್ತಮಃ |
ಬೃಹತ್ಕೀರ್ತಿರ್ಮಹಾತೇಜಾಃ ಸ ಜಜ್ಞೇ ಮನುಜೇಷ್ವಿಹ ॥67॥
ಧನುರ್ವೇದೇ ಚ ವೇದೇ ಚ ಯಂ ತಂ ವೇದವಿದೋ ವಿದುಃ |
ವರಿಷ್ಠಮಿಷ್ಟಕರ್ಮಾಣಂ ದ್ರೋಣಂ ಸ್ವಕುಲವರ್ಧನಮ್ ॥68॥
ಎಲೈ ನೃಪಶಾರ್ದೂಲನೇ ಅವರು ಧನುರ್ಧಾರಿಗಳಲ್ಲಿ ಶ್ರೇಷ್ಠರಾದವರು. ಎಲ್ಲಾ ಅಸ್ತ್ರಗಳನ್ನೂ ತಿಳಿದವರಲ್ಲಿ ಶ್ರೇಷ್ಠರಾದವರು. ಮಹಾಕೀರ್ತಿವಂತರಾಗಿ ಭೂಮಿಯಲ್ಲಿ ಜನಿಸಿದರು. ವೇದವನ್ನು ತಿಳಿದವರು ಧನುರ್ವೇದದಲ್ಲಿಯೂ ಮತ್ತು ವೇದದಲ್ಲಿಯೂ ಶ್ರೇಷ್ಠರಾದವರು ದ್ರೋಣರು ಎಂದು ಹೇಳುವಂತೆ ಪ್ರಖ್ಯಾತರಾಗಿ ದೇವತೆಗಳಿಗೆ ಇಷ್ಟವಾದ ಕರ್ಮಗಳನ್ನು ಮಾಡಿ, ತಮ್ಮ ಕುಲವನ್ನು ವರ್ಧಿಸಿದರು.
ಮಹಾದೇವಾಂತಕಾಭ್ಯಾಂ ಚ ಕಾಮಾತ್ ಕ್ರೋಧಾಚ್ಚ ಭಾರತ |
ಏಕತ್ವಮುಪಸಂಪದ್ಯ ಜಜ್ಞೇ ವೈ ಮಾನುಷೇಷ್ವಿಹ ॥69॥
ಅಶ್ವತ್ಥಾಮಾ ಮಹಾವೀರ್ಯಃ ಶತ್ರುಪಕ್ಷಭಯಂಕರಃ |
ವೀರಃ ಕಮಲಪತ್ರಾಕ್ಷಃ ಕ್ಷಿತಾವಾಸೀನ್ನರಾಧಿಪ ॥70॥
ರುದ್ರದೇವರ ಕಾಮ ಮತ್ತು ಕ್ರೋಧಪ್ರವರ್ತಕವಾದ ಮಹಾದೇವ ಮತ್ತು ಅಂತಕ ಎಂಬ ಎರಡು ಅಂಶಗಳು ಒಟ್ಟಿಗೆ ಸೇರಿ ಮನುಷ್ಯಲೋಕದಲ್ಲಿ ಅಶ್ವತ್ಥಾಮರಾಗಿ ಜನಿಸಿದರು. ಅವರು ಮಹಾವೀರ್ಯವುಳ್ಳವರೂ, ಶತ್ರುಪಕ್ಷ ಭಯಂಕರರೂ, ವೀರರೂ ಮತ್ತು ಕಮಲನಯನರೂ ಆಗಿದ್ದರು.

ರುದ್ರದೇವರ ಅರ್ಧನಾರೀಶ್ವರರೂಪ ಕಾಮಪ್ರವರ್ತಕವಾದ ಮಹಾದೇವ ಎಂಬ ರೂಪ. ರುದ್ರದೇವರ ಜಗತ್‌ಸಂಹಾರಕಾರಕವಾದ ಕಾಲಾಗ್ನಿರೂಪ ಅಂತಕವಾದ ರೂಪ. ಅಶ್ವತ್ಥಾಮರಲ್ಲಿ ಕಲಿಯಾದ ದುರ್ಯೋಧನನಲ್ಲಿ ಸ್ನೇಹವನ್ನು ಮಾಡಲು ಪ್ರಚೋದಿಸಿದ ರೂಪ ಮಹಾದೇವರೂಪ. ಯೋಗ್ಯರಾದ ಪಾಂಡವರಲ್ಲಿ ವಿರೋಧವನ್ನು ಮಾಡುವಂತೆ ಪ್ರಚೋದಿಸಿದ ರೂಪ ಅಂತಕರೂಪ. ಅವೆರಡೂ ರೂಪಗಳಿಂದ ರುದ್ರದೇವರೇ ಅಶ್ವತ್ಥಾಮರಾಗಿ ಜನಿಸಿದರು.
ಜಜ್ಞಿರೇ ವಸವಸ್ತ್ವಷ್ಟೌ ಗಂಗಾಯಾಂ ಶಂತನೋಃ ಸುತಾಃ |
ವಸಿಷ್ಠಸ್ಯ ಚ ಶಾಪೇನ ನಿಯೋಗಾದ್ ವಾಸವಸ್ಯ ಚ ॥71॥
ಅಷ್ಟವಸುಗಳು ವಸಿಷ್ಠರ ಶಾಪದ ನಿಮಿತ್ತದಿಂದ ಮತ್ತು ಇಂದ್ರನ ಆದೇಶದ ನಿಮಿತ್ತದಿಂದ ಗಂಗೆಯಲ್ಲಿ ಶಂತನುವಿನ ಮಕ್ಕಳಾಗಿ ಜನಿಸಿದರು.
ತೇಷಾಮವರಜೋ ಭೀಷ್ಮಃ ಕುರೂಣಾಮಭಯಂಕರಃ |
ಮತಿಮಾನ್ ವೇದವಿದ್ ವಾಗ್ಮೀ ಸರ್ವಶತ್ರುಭಯಂಕರಃ ॥72॥
ಅವರಲ್ಲಿ ಕೊನೆಯವನಾದ ಭೀಷ್ಮನು ಕುರುಗಳಿಗೆ ಯಾವಾಗಲೂ ಕ್ಷೇಮವನ್ನು ಮಾಡುವವನಾಗಿದ್ದನು. ಅವನು ಮೇಧಾವಿಯೂ,

ವೇದಜ್ಞನೂ, ವಾಗ್ಮಿಯೂ, ಸರ್ವಶತ್ರುಭಯಂಕರನೂ ಆದನು.
ಜಾಮದಗ್ನ್ಯೇನ ರಾಮೇಣ ಸರ್ವಶಸ್ತ್ರಭೃತಾಂ ವರಃ |
ಅಯುಧ್ಯತ ಮಹಾತೇಜಾ ಭಾರ್ಗವೇಣ ಮಹಾತ್ಮನಾ ॥73॥
ಭೃಗುಕುಲೋತ್ಪನ್ನರಾದ ಜಮದಗ್ನಿಗಳ ಪುತ್ರರಾದ ಮಹಾತ್ಮರಾದ ಪರಶುರಾಮರ ಜೊತೆಯಲ್ಲಿ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಅವನು ಯುದ್ಧವನ್ನು ಮಾಡಿದರು.
ಯಸ್ತು ರಾಜನ್ ಕೃಪೋ ನಾಮ ಬ್ರಹ್ಮರ್ಷಿರಭವತ್ ಕ್ಷಿತೌ |
ರುದ್ರಾಣಾಂ ಭಾಗತೋ ವಿದ್ಧಿ ಸಂಭೂತಮಮಿತೌಜಸಮ್ ॥74॥
ರಾಜನೇ ಕೃಪ ಎಂಬ ಹೆಸರಿನ ಭೂಮಿಯಲ್ಲಿ ಜನಿಸಿದ ಬ್ರಹ್ಮರ್ಷಿಗಳನ್ನು ಏಕಾದಶರುದ್ರರಲ್ಲಿ ವಿಷ್ಕಂಬನಾಮಕ ರುದ್ರನ ಅಂಶದಿಂದ ಅಮಿತಪರಾಕ್ರಮಿಗಳಾಗಿ ಭೂಮಿಯಲ್ಲಿ ಜನಿಸಿದವರು ಎಂದು ತಿಳಿ.
ಶಕುನಿರ್ನಾಮ ಯಸತತ್ವಸೀದ್ ರಾಜಾ ಲೋಕೇ ಮಹಾರಥಃ |
ದ್ವಾಪರಂ ವಿದ್ಧಿ ತಂ ರಾಜನ್ ಸಂಭೂತಮರಿಮರ್ದನಮ್ ॥75॥
ಭೂಮಿಯಲ್ಲಿ ಮಹಾರಥನಾದ ಶಕುನಿ ಎಂಬ ರಾಜನು ದ್ವಾಪರ ಎಂಬ ಅಸುರನ ಅಂಶದಿಂದ ಜನಿಸಿದವನು ಎಂದು ತಿಳಿ.
ಸಾತ್ಯಕಿಃ ಸತ್ಯಸಂಧಸ್ತು ಯಃ ಕ್ಷಿತೌ ಪರಿಕೀರ್ತಿತಃ |
ಪಕ್ಷಾತ್ ಸ ಜಜ್ಞೇ ಮರುತಾಂ ದೇವನಾಮರಿಮರ್ದನಃ ॥76॥
ಭೂಮಿಯಲ್ಲಿ ಸಾತ್ಯಕಿ ಎಂಬ ಹೆಸರಿನಿಂದ ಪ್ರಸಿದ್ಧನಾದ ಸತ್ಯಸಂಧನಾದ ವಿಷ್ಣುಭಕ್ತನು ಮರುದ್ಗಣಗಳಿಗೆ ಸೇರಿದವನು ಎಂದು ತಿಳಿ.
ದ್ರುಪದಶ್ಚಾಪಿ ರಾಜರ್ಷಿಸ್ತತ ಏವಾಭವದ್ ಗಣಾತ್ |
ಮಾನುಷೇ ನೃಪ ಲೋಕೇऽಸ್ಮಿನ್ ಸರ್ವಶಸ್ತ್ರಭೃತಾಂ ವರಃ ॥77॥
ರಾಜರ್ಷಿಯಾದ ದ್ರುಪದನೂ ಸಹ ಅದೇ ಗಣಕ್ಕೆ ಸೇರಿದ ಆವಹ ಎಂಬ ಮರುತ್ ಎಂದು ತಿಳಿ. ದ್ರುಪದನು ಆವಹ ಎಂಬ ಮರುತ್‌ನ ಆವೇಶದಿಂದ ಕೂಡಿದ ಹೂಹೂ ಎಂಬ ಗಂಧರ್ವ.
ತತಶ್ಚ ಕೃತವರ್ಮಾಣಂ ವಿದ್ಧಿ ರಾಜನ್ ಮರುದ್ಗಣಾತ್ |
ಜಾತಮಭ್ಯಧಿಕರ್ಮಾಣಂ ಕ್ಷತ್ರಿಯರ್ಷಭಸತ್ತಮಮ್ ॥78॥
ಎಲೈ ರಾಜನೇ ಅಧಿಕವಾದ ಕ್ರಿಯಾಶಕ್ತಿಯುಳ್ಳ ಕ್ಷತ್ರಿಯಶ್ರೇಷ್ಠನಾದ ಕೃತವರ್ಮನನ್ನು, ಅದೇ ಗಣದಿಂದ ಅವತರಿಸಿದವನೆಂದು ತಿಳಿ. ಕೃತವರ್ಮನು ಪಾಂಚಜನ್ಯಾವೇಶಯುಕ್ತನಾದ ಪ್ರವಹನೆಂಬ ಮರುತ್.
ಮರುತಾಂ ತು ಗಣಾದ್ ವಿದ್ಧಿ ಸ ಜಜ್ಞೇ ರಿಪುಮರ್ದನಃ |
ವಿರಾಟೋ ನಾಮ ರಾಜರ್ಷಿಃ ಪರರಾಷ್ಟ್ರವಿಮರ್ದನಃ ॥79॥
ಪರರಾಷ್ಟ್ರ ವಿಮರ್ದನನಾದ ರಿಪುಮರ್ದನನಾದ ವಿರಾಟನೆಂಬ ರಾಜರ್ಷಿಯು ಮರುದ್ಗಣಕ್ಕೆ ಸೇರಿದವನೆಂದು ತಿಳಿ. ವಿರಾಟನು ವಿವಹ ಎಂಬ ಮರುದಂಶಯುಕ್ತನಾದ ಹಾಹಾ ಎಂಬ ಗಂಧರ್ವ.
ಅರಿಷ್ಟಾಯಾಸ್ತು ಯಃ ಪುತ್ರೋ ಹಂಸ ಇತ್ಯಭಿವಿಶ್ರುತಃ |
ಸ ಗಂಧರ್ವಪತಿರ್ಜಜ್ಞೇ ಕುರುವಂಶವಿವರ್ಧನಃ ॥80॥
ಧೃತರಾಷ್ಟ್ರ ಇತಿ ಖ್ಯಾತಃ ಕೃಷ್ಣದ್ವೈಪಾಯನಾತ್ಮಜಃ |
ದೀರ್ಘಬಾಹುರ್ಮಹಾತೇಜಾಃ ಪ್ರಜ್ಞಾಚಕ್ಷುರ್ನರಾಧಿಪಃ |
ಮಾತುರ್ದೋಷೇಣೈವ ಚರ್ಷೇರಂಧ ಏವ ವ್ಯಜಾಯತ ॥81॥
ಅರಿಷ್ಟೆಯ ಮಗನಾದ ಹಂಸ ಎಂಬ ಪ್ರಖ್ಯಾತವಾದ ಹೆಸರಿನ ಗಂಧರ್ವರಾಜನು ಭೂಮಿಯಲ್ಲಿ ಕುರುವಂಶವಿವರ್ಧನನಾಗಿ ಕೃಷ್ಣದ್ವೈಪಾಯನರ ಪುತ್ರನಾಗಿ ಧೃತರಾಷ್ಟ್ರ ಎಂಬ ನಾಮದಿಂದ ಜನಿಸಿದನು. ದೀರ್ಘಬಾಹುವೂ, ಮಹಾತೇಜಸ್ವಿಯೂ, ಪ್ರಜ್ಞಾಚಕ್ಷುಸ್ಸನ್ನು ಹೊಂದಿದವನಾದ ಆ ರಾಜನು ತಾಯಿಯ ದೋಷದಿಂದ ವ್ಯಾಸರ ಮಗನಾಗಿ ಅಂಧನಾಗಿ ಜನಿಸಿದನು. (ಧೃತರಾಷ್ಟ್ರನು ಹಂಸನಾಮಕ ಮರುದಂಶಯುತನಾದ ಧೃತರಾಷ್ಟ್ರನೆಂಬ ಗಂಧರ್ವ.)
ಧರ್ಮಾತ್ ತು ಸುಮಹಾಭಾಗಂ ಪುತ್ರಂ ಪುತ್ರವತಾಂ ವರಮ್ |
ವಿದುರಂ ವಿದ್ಧಿ ಲೋಕೇऽಸ್ಮಿನ್ ಜಾತಂ ಧರ್ಮಭೃತಾಂ ವರಂ ॥82॥
ಮಹಾನುಭಾವನಾದ ವಿದುರನನ್ನು ಯಮಧರ್ಮನಿಂದ ಉತ್ಪನ್ನನಾದವನು. ಯಮಧರ್ಮನ ಅಂಶ ಎಂದು ತಿಳಿ. ಅವನು ಲೋಕದಲ್ಲಿ ಧರ್ಮಿಷ್ಠರಲ್ಲಿ ಶ್ರೇಷ್ಠನಾದವನು. ಮತ್ತು ಮಕ್ಕಳನ್ನು ಪಡೆದವರಲ್ಲಿಯೂ ಶ್ರೇಷ್ಠನಾದವನು.
ತಸ್ಯೈವಾವರಜೋ ಭ್ರಾತಾ ಮಹಾಸತೊತ್ವೋ ಮಹಾಬಲಃ |
ಮರುತಾಂ ತು ಗಣಾದ್ವಿದ್ಧಿ ಸರ್ವಶಸ್ತ್ರಭೃತಾಂವರಮ್ |
ಪಾಂಡುರ್ಜಜ್ಞೇ ಮಹಾಭಾಗಸ್ತವ ಪೂರ್ವಪಿತಾಮಹಃ ॥83॥
ಮಹಾಸತ್ತ್ವವನ್ನು, ಮಹಾಬಲವನ್ನು ಹೊಂದಿದ ಧೃತರಾಷ್ಟ್ರನ ತಮ್ಮನಾದ ಪಾಂಡುವನ್ನೂ ಸಹ ಮರುದ್ಗಣದಿಂದ ಜನಿಸಿದವನು ಎಂದು ತಿಳಿ. ಆ ಮಹಾನುಭಾವನು ನಿನ್ನ ಪೂರ್ವಪಿತಾಮಹನು. (ಪಾಂಡುವು ಪರಾವಹ ಎಂಬ ಮರುತ್‌ನ ಅಂಶವಾಗಿ ಜನಿಸಿದನು.)
ಕಲೇರಂಶಾತ್ ತು ಸಂಜಜ್ಞೇ ಭುವಿ ದುರ್ಯೋಧನೋ ನೃಪಃ |
ದುರ್ಬುದ್ಧಿರ್ದುರ್ಮತಿಶ್ಚೈವ ಕುರೂಣಾಮಯಶಸ್ಕರಃ ॥84॥
ದುರ್ಬುದ್ಧಿಯೂ, ದುರ್ಮತಿಯೂ ಮತ್ತು ಕುರುವಂಶಕ್ಕೆ ಕಳಂಕವನ್ನು ತಂದ ದುರ್ಯೋಧನನು ಕಲಿಯ ಅಂಶದಿಂದ ಜನಿಸಿದವನು ಎಂದು ತಿಳಿ.
ಜಗತೋ ಯಶ್ಚ ಸರ್ವಸ್ಯ ವಿದ್ವೇಷಕರಪೂರುಷಃ |

ಯಃ ಸರ್ವಾನ್ ಘಾತಯಾಮಾಸ ಪೃಥಿವ್ಯಾಂ ಕ್ಷತ್ರಿಯಾನ್ ಭೃಶಮ್|
ಯೇನ ಯುದ್ಧಂ ಸಮುದ್ದಿಷ್ಟಂ ಭೂತಾಂತಕರಣಂ ಮಹತ್ ॥85॥
ಅವನು ಎಲ್ಲ ಜಗತ್ತನ್ನು ದ್ವೇಷವನ್ನು ಮಾಡುವವನು. ಭೂಮಿಯಲ್ಲಿದ್ದ ಎಲ್ಲ ರಾಜರನ್ನು ಸರ್ವಭೂತಕ್ಷಯಕರವಾದ ಯುದ್ಧವನ್ನು ಪ್ರಚೋದಿಸಿ ಕೊಲ್ಲಿಸಿದವನು.
ಪೌಲಸ್ತ್ಯಾ ಭ್ರಾತರಃ ಸರ್ವೇ ಜಜ್ಞಿರೇ ಮನುಜೇಷ್ವಿಹ |
ಶತಂ ದುಃಶಾಸನಾದೀನಾಂ ಸರ್ವೇಷಾಂ ಕ್ರೂರಕರ್ಮಣಾಮ್ ॥86॥
ರಾವಣನ ಮಕ್ಕಳಾದ ನೂರು ಜನ ಅಣ್ಣತಮ್ಮಂದಿರೆಲ್ಲರೂ ಮನುಷ್ಯ ಲೋಕದಲ್ಲಿ ಕ್ರೂರಕರ್ಮಿಗಳಾದ ದುಶ್ಶಾಸನ ಮೊದಲಾದ ನೂರುಮಂದಿಯಾಗಿ ಜನಿಸಿದರು.
ದುರ್ಮುಖೋ ದುಃಸಹಶ್ಚೈವ ಯೇ ಚಾನ್ಯೇ ನಾನುಕೀರ್ತಿತಾಃ |
ದುರ್ಯೋಧಸಹಾಯಾಸ್ತೇ ಪೌಲಸ್ತ್ಯಾ ಭರತರ್ಷಭ ॥87॥
ಎಲೈ ಭರತರ್ಷಭನೇ ದುರ್ಯೋಧನನಿಗೆ ಸಹಾಯವನ್ನು ಮಾಡಿದ ದುರ್ಮುಖ, ದುಃಸಹ ಮತ್ತು ಉಳಿದವರೆಲ್ಲರೂ ರಾವಣನ ಪುತ್ರರು.
ಧರ್ಮಸ್ಯಾಂಶಾತ್ ತು ರಾಜಾನಂ ವಿದ್ಧಿ ರಾಜನ್ ಯುಧಿಷ್ಠಿರಮ್ |
ಭೀಮಸೇನಂ ಚ ವಾತಸ್ಯ ದೇವರಾಜಸ್ಯ ಚಾರ್ಜುನಮ್ ॥88॥
ರಾಜನೇ ಧರ್ಮರಾಜನನ್ನು ಯಮನ ಅಂಶದಿಂದ ಜನಿಸಿದವನೆಂದು, ಭೀಮಸೇನನನ್ನು ವಾಯುದೇವರ ಅಂಶದಿಂದ ಜನಿಸಿದವನೆಂದು, ಅರ್ಜುನನ್ನು ಇಂದ್ರನ ಅಂಶದಿಂದ ಜನಿಸಿದವನೆಂದು ತಿಳಿ.
ಅಶ್ವಿನೋಸ್ತು ತಥೈವಾಂಶೌ ರೂಪೇಣಾಪ್ರತಿಮೌ ಭುವಿ |
ನಕುಲಃ ಸಹದೇವಶ್ಚ ಸರ್ವಭೂತಮನೋಹರೌ ॥89॥
ಹಾಗೆಯೇ ಅತ್ಯಂತ ಸುಂದರರಾದ ಎಲ್ಲರ ಮನಸ್ಸನ್ನೂ ಸೆಳೆಯುವ ಅಸದೃಶವಾದ ಸೌಂದರ್ಯವುಳ್ಳ ನಕುಲ, ಸಹದೇವರನ್ನು ಅಶ್ವಿನಿದೇವತೆಗಳ ಅಂಶದಿಂದ ಜನಿಸಿದವರೆಂದು ತಿಳಿ.
ಯಃ ಸುವರ್ಚ ಇತಿ ಖ್ಯಾತಃ ಸೋಮಪುತ್ರಃ ಪ್ರತಾಪವಾನ್ |
ಅಭಿಮನ್ಯುರ್ಬೃಹತ್ಕೀರ್ತಿರರ್ಜುನಸ್ಯ ಸುತೋऽಭವತ್ ॥90॥
ಸುವರ್ಚ ಎಂಬ ಹೆಸರಿನಿಂದ ಪ್ರಖ್ಯಾತನಾದ ಚಂದ್ರನ ಮಗನು ಅಭಿಮನ್ಯು ಎಂಬ ಹೆಸರಿನಿಂದ ಅರ್ಜುನನ ಮಗನಾಗಿ ಪ್ರತಾಪಶಾಲಿಯೂ, ಕೀರ್ತಿಶಾಲಿಯೂ ಆಗಿ ಜನಿಸಿದನು. (ಅಭಿಮನ್ಯುವು ಚಂದ್ರಾಂಶಯುಕ್ತನಾದ ಬುಧ. ಬುಧನೂ ಸುಂದರನಾದವನು. ಚಂದ್ರನೂ ಸುಂದರನಾದವನು ಆದ್ದರಿಂದ ಅಭಿಮನ್ಯುವಿನಲ್ಲಿ ಮಹಾಸೌಂದರ್ಯ.)
ಯಸ್ಯಾವತರಣೇ ರಾಜನ್ ಸುರಾನ್ ಸೋಮೋऽಬ್ರವೀದ್ ವಚಃ |
ಅಹಂ ದೃಷ್ಟ್ವಾಪಿ ಯಂ ಪುತ್ರಂ ಮಮ ಪ್ರಾಣೈರ್ಗರೀಯಸಮ್ |
ಮಯಾ ಸ ಭವತಾಮೇವ ನ ಶಕ್ಯಶ್ಚಾತಿವರ್ತಿತುಮ್ ॥91॥
ಸುರಕಾರ್ಯಂ ಹಿ ನಃ ಕಾರ್ಯಂ ದಾನವಾನಾಂ ಹಿ ಸೂದನಮ್ |
ತತ್ರ ಯಾಸ್ಯತ್ಯಯಂ ಸರ್ವಾನ್ ಸಂಸ್ಥಾಪ್ಯಾತಿರಣೇ ಚಿರಮ್ ॥92॥
ಎಲೈ ರಾಜನೇ ಅಭಿಮನ್ಯುವಿನ ಅವತಾರ ವಿಷಯದಲ್ಲಿ ಚಂದ್ರನು ದೇವತೆಗಳನ್ನು ಕುರಿತು ಹೀಗೆ ಹೇಳಿದನು - ನನ್ನ ಮಗನು ನನಗೆ ಪ್ರಾಣಕ್ಕಿಂತಲೂ ಪ್ರಿಯನಾದವನು. ನೀವಾಗಲೀ ಅಥವಾ ನಾನಾಗಲೀ ಅವನನ್ನು ಮೀರಲು ಸಾಧ್ಯವಿಲ್ಲ. ನಮಗೆ ಆಗಬೇಕಾದ ಸುರಕಾರ್ಯವೆಂದರೆ ದಾನವರ ನಾಶ. ಇವನು ಘೋರಯುದ್ಧದಲ್ಲಿ ದಾನವರನ್ನು ನಾಶಮಾಡಿ ಆ ಕಾರ್ಯವನ್ನು ಯಶಸ್ವಿಯಾಗಿ ಮಾಡುತ್ತಾನೆ.
ಯಶ್ಚೈಂದ್ರಿರ್ಭವಿತಾ ಲೋಕೇ ಯಸ್ಯ ನಾರಾಯಣಃ ಸಖಾ |
ಸೋऽರ್ಜುನೇತ್ಯಭಿವಿಖ್ಯಾತಃ ಪಾಂಡೋಃ ಪುತ್ರೋ ಭವಿಷ್ಯತಿ ॥93॥
ಅವನು ಅರ್ಜುನನೆಂಬ ಹೆಸರಿನಿಂದ ಪ್ರಖ್ಯಾತನಾದ ಪಾಂಡುಪುತ್ರನ ಮಗನಾಗಿ ಜನಿಸುವನು. ಅವನಿಗೆ ನಾರಾಯಣನು ಮಿತ್ರನಾಗುವನು.
ತಸ್ಯಾಯಂ ಭವಿತಾ ಪುತ್ರೋ ಬಾಲೋ ಭುವಿ ಮಹಾರಥಃ |
ತತ್ರ ಷೋಡಶವರ್ಷಾಣಿ ವತ್ಸ್ಯತೇ ಸುರಸತ್ತಮಃ ॥94॥
ಇವನು ಅರ್ಜುನನ ಮಗನಾಗಿ ಭೂಮಿಯಲ್ಲಿ ಜನಿಸಿ ಬಾಲನಾದರೂ ಮಹಾರಥಿಕನೆನಿಸುತ್ತಾನೆ. ದೇವಶ್ರೇಷ್ಠನಾದ ಇವನು ಭೂಮಿಯಲ್ಲಿ ಹದಿನಾರು ವರ್ಷ ವಾಸಮಾಡುತ್ತಾನೆ.
ತಸ್ಯ ಷೋಡಶವರ್ಷಸ್ಯ ಸುಸಂಗ್ರಾಮೋ ಭವಿಷ್ಯತಿ |
ಕರಿಷ್ಯತಿ ಸ ಆಶ್ಚರ್ಯಂ ಕರ್ಮ ದಾನವಸೂದನಃ ॥95॥
ಅವನಿಗೆ ಹದಿನಾರು ವರ್ಷವಾದಾಗ ಭೂಮಿಯಲ್ಲಿ ಘೋರವಾದ ಸಂಗ್ರಾಮವುಂಟಾಗುವುದು. ದಾನವಸೂದನನಾದ ಅವನು ಆ ಯುದ್ಧದಲ್ಲಿ ಆಶ್ಚರ್ಯಕರವಾದ ಕರ್ಮವನ್ನು ಮಾಡುವನು.
ನರನಾರಾಯಣಾಭ್ಯಾಂ ಚ ಸಂಗ್ರಾಮೋ ಭವಿತಾ ಸಕೃತ್ |
ಚಕ್ರವ್ಯೂಹಂ ಸಮಾಸಾದ್ಯ ಯೋಧಯಿಷ್ಯತಿ ವೈ ಸುರಾಃ ॥96॥
ಎಲೈ ದೇವತೆಗಳೇ, ನರನಾರಾಯಣರ ನೇತೃತ್ವದಲ್ಲಿ ನಡೆಯುವ ಆ ಯುದ್ಧದಲ್ಲಿ ಇವನು ಚಕ್ರವ್ಯೂಹವನ್ನು ಬೇಧಿಸಿ ಶತ್ರುಗಳ ಜೊತೆಯಲ್ಲಿ ಯುದ್ಧಮಾಡುವನು.

ವಿಮುಖಾಂಶ್ಚಾತ್ರ ತಾನ್ ಸರ್ವಾನ್ ಕಾರಯಿಷ್ಯತಿ ಮೇ ಸುತಃ |
ಬಾಲಃ ಪ್ರವಿಶ್ಯ ತಂ ವ್ಯೂಹಮಭೇದ್ಯಂ ವಿಚರಿಷ್ಯತಿ॥97॥
ನನ್ನ ಮಗನಾದ ಇವನು ಬಾಲಕನಾಗಿದ್ದರೂ ಅಭೇದ್ಯವಾದ ಚಕ್ರವ್ಯೂಹವನ್ನು ಭೇದಿಸಿ ಶತ್ರುಗಳನ್ನೆಲ್ಲಾ ಹಿಮ್ಮೆಟ್ಟಿಸಿ, ಶತ್ರುಗಳ ಮಧ್ಯೆ ಸಂಚರಿಸುವನು.
ಮಹಾರಥಾನಾಂ ವೀರಾಣಾಂ ಕದನಂ ಸ ಕರಿಷ್ಯತಿ |
ಸರ್ವೇಷಾಂ ಚೈವ ಶತ್ರೂಣಾಂ ಚತುರ್ಥಾಂಶಂ ವಿನೇಷ್ಯತಿ |
ದಿನಾರ್ಧೇನ ಮಹಾಬಾಹುಃ ಧರ್ಮರಾಜಪುರಂ ಪ್ರತಿ ॥98॥
ಅವನು ಮಹಾರಥರಾದ ವೀರರ ಜೊತೆಯಲ್ಲಿ ಯುದ್ಧವನ್ನು ಮಾಡಿ ಅರ್ಧದಿನದ ಕಾಲದಲ್ಲಿ ಆ ವೀರರ ಸೈನ್ಯದ ನಾಲ್ಕನೆಯ ಒಂದು ಭಾಗವನ್ನು ಯಮಪಟ್ಟಣಕ್ಕೆ ಕಳುಹಿಸುವನು.
ತತೋ ಮಹಾರಥೈರ್ವೀರೈಃ ಸಮೇತ್ಯ ಚ ಮಹಾರಣೇ ॥99॥
ದಿನಕ್ಷಯೇ ಮಹಾಬಾಹುರ್ಮಮ ರೂಪಂ ಸಮೇಷ್ಯತಿ |
ಅನಂತರ ಸಾಯಂಕಾಲದ ವೇಳೆಗೆ ಎಲ್ಲಾ ಮಹಾರಥರಿಂದ ಒಟ್ಟಿಗೇ ಸೇರಿ ಹತನಾಗಿ ಈ ಮಹಾಬಾಹುವು ಪುನಃ ಬಂದು ನನ್ನ ರೂಪವನ್ನು ಸೇರುವನು.
ಏಕಂ ವಂಶಧರಂ ಪುತ್ರಂ ವೀರಂ ಸಂಜನಯಿಷ್ಯತಿ |
ಪ್ರನಷ್ಟಂ ಭಾರತಂ ವರ್ಷಂ ಸ ಭೂಯೋ ಧಾರಯಿಷ್ಯತಿ |
ಏವಂ ಸೋಮವಚಃ ಶ್ರುತ್ವಾ ತಥೇತ್ಯೂಚುರ್ದಿವೌಕಸಃ ॥100॥
ಇವನು ವಂಶಧರನಾದ ಒಬ್ಬ ಪುತ್ರನನ್ನು ಪಡೆಯುವನು. ಆ ಪುತ್ರನಾದರೋ ನಷ್ಟವಾದ ಭರತಕುಲವನ್ನು ಪುನಃ ಮುಂದುವರೆಸುವನು. ಹೀಗೆ ಚಂದ್ರನ ಮಾತನ್ನು ಕೇಳಿ ದೇವತೆಗಳೆಲ್ಲರೂ ಹಾಗೆಯೇ ಆಗಲಿ ಎಂದು ಹೇಳಿದರು.
ಏತತ್ ತೇ ಕಥಿತಂ ರಾಜನ್ ಮಯಾ ಜನ್ಮ ಪಿತುಃಪಿತುಃ |
ಅಗ್ನೇರಂಶಾತ್ ತು ವಿದ್ಧಿ ತ್ವಂ ಧೃಷ್ಟದ್ಯುಮ್ನಂ ಮಹಾರಥಮ್ ॥101॥
ರಾಜನೇ ನಿನ್ನ ತಂದೆಯ ತಂದೆಯ ಜನ್ಮದ ಬಗ್ಗೆ ನಾನು ನಿನಗೆ ತಿಳಿಸಿದ್ದೇನೆ. ಮಹಾರಥನಾದ ಧೃಷ್ಟದ್ಯುಮ್ನನು ಅಗ್ನಿಯ ಅಂಶದಿಂದ ಜನಿಸಿದವನೆಂದು ತಿಳಿ.
ಶಿಖಂಡಿನಮಥೋ ರಾಜನ್ ಸ್ತ್ರೀಪುಂಸಂ ವಿದ್ಧಿ ಗುಹ್ಯಕಮ್ |
ದ್ರೌಪದೇಯಾಸ್ತು ಯೇ ಪಂಚ ಬಭೂವುರ್ಭರತರ್ಷಭ |
ವಿಶ್ವೇದೇವಗಣಾನ್ ವಿದ್ಧಿ ಸಂಜಾತಾನ್ ಭರತರ್ಷಭ ॥102॥
ನಪುಂಸಕನಾದ ಶಿಖಂಡಿಯು ಗುಹ್ಯಕ ಅಂಶದಿಂದ ಜನಿಸಿದವನೆಂದು ತಿಳಿ. (ಶಿಖಂಡಿಯು ದ್ಯುನಾಮಕವಸುವಿನ ವರಾಂಗಿ ಎಂಬ ಪತ್ನಿ. ಅವಳಲ್ಲಿ ಗುಹ್ಯಕನ ಆವೇಶವಿದೆ.) ಎಲೈ ಭರತರ್ಷಭನೇ ದ್ರೌಪದಿಯ ಮಕ್ಕಳಾದ ಪಂಚ ಉಪಪಾಂಡವರನ್ನು ವಿಶ್ವೇದೇವತೆಗಳ ಅಂಶದಿಂದ ಜನಿಸಿದವರೆಂದು ತಿಳಿ.
ಆಮುಕ್ತಕವಚಃ ಕರ್ಣೋ ಯಸ್ತು ಜಜ್ಞೇ ಮಹಾರಥಃ |
ದಿವಾಕರಸ್ಯ ತಂ ಕರ್ಣಮಂಶಂ ವಿದ್ಧಿ ನರೋತ್ತಮಮ್ ॥103॥
ಕವಚವನ್ನು ಧರಿಸಿಯೇ ಜನಿಸಿದ ಮಹಾರಥನು ಪುರುಷಶ್ರೇಷ್ಠನಾದ ಕರ್ಣನನ್ನು ಸೂರ್ಯನ ಅಂಶವೆಂದು ತಿಳಿ.
ಯಸ್ತು ನಾರಾಯಣೋ ನಾಮ ದೇವದೇವಃ ಸನಾತನಃ |
ತಸ್ಯಾಂಶೋ ಮಾನುಷೇಷ್ವಾಸೀದ್ ವಾಸುದೇವಃ ಪ್ರತಾಪವಾನ್ ॥104॥
ಸನಾತನ ದೇವದೇವನಾದ ನಾರಾಯಣನು ಮನುಷ್ಯಲೋಕದಲ್ಲಿ ವಸುದೇವನ ಪುತ್ರನಾಗಿ ಪ್ರತಾಪಶಾಲಿಯಾಗಿ ಕೃಷ್ಣನೆಂಬ ನಾಮದಿಂದ ಅವತರಿಸಿದನು.
ಶೇಷಸ್ಯಾಂಶಸ್ತು ನಾಗಸ್ಯ ಬಲದೇವೋ ಮಹಾಬಲಃ |
ಸನತ್ಕುಮಾರಂ ಪ್ರದ್ಯುಮ್ನಂ ವಿದ್ಧಿ ರಾಜನ್ ಮಹೌಜಸಮ್ ॥105॥
ಮಹಾಬಲಿಷ್ಠನಾದ ಬಲರಾಮನು ಶೇಷದೇವರ ಅಂಶ. ಎಲೈ ರಾಜನೇ ಕೃಷ್ಣನ ಮಗನಾದ ಮಹಾಪರಾಕ್ರಮಶಾಲಿಯಾ ಪ್ರದ್ಯುಮ್ನನನ್ನು ಸನತ್ಕುಮಾರನ ಅಂಶವೆಂದು ತಿಳಿ.
ಏವಮನ್ಯೇ ಮನುಷ್ಯೇಂದ್ರ ಬಹವೋಂಶಾ ದಿವೌಕಸಾಮ್ |
ಜಜ್ಞಿರೇ ವಸುದೇವಸ್ಯ ಕುಲೇ ಕುಲವಿವರ್ಧನ ॥106॥
ಎಲೈ ರಾಜನೇ ಕುಲವಿವರ್ಧನನೇ, ಹೇಗೆ ಇನ್ನೂ ಅನೇಕ ದೇವತೆಗಳು ತಮ್ಮ ಅಂಶದಿಂದ ಭೂಮಿಯಲ್ಲಿ ವಸುದೇವನ ಕುಲದಲ್ಲಿ ಜನಿಸಿದರು.
ಗಣಸ್ತ್ವಪ್ಸರಸಾಂ ಯೋ ವೈ ಮಹಾರಾಜ ಪ್ರಕೀರ್ತಿತಃ |
ತಸ್ಯ ಭಾಗಃ ಕ್ಷಿತೌ ಜಜ್ಞೇ ನಿಯೋಗಾದ್ ವಾಸವಸ್ಯ ಚ ॥106॥
ತಾನಿ ಷೋಡಶದೇವೀನಾಂ ಸಹಸ್ರಾಣಿ ನರಾಧಿಪ |
ಬಭೂವುರ್ಮಾನುಷೇ ಲೋಕೇ ನಾರಾಯಣಪರಿಗ್ರಹಾಃ ॥108॥
ಎಲೈ ಮಹಾರಾಜನೇ ಇಂದ್ರನ ಆದೇಶದಂತೆ ಅಪ್ಸರೆಯರ ಗಣಕ್ಕೆ ಸೇರಿದ ಗೋಪಸ್ತ್ರೀಯರ ಸಮುದಾಯಕ್ಕೆ ಸೇರಿದ ಹದಿನಾರು ಸಾವಿರ ಅಪ್ಸರೆಯರು ಭೂಮಿಯಲ್ಲಿ ಜನಿಸಿ ಕೃಷ್ಣದೇವರ ಪತ್ನಿಯರಾದರು.
ಶ್ರಿಯಸ್ತು ಭಾಗಃ ಸಂಜಜ್ಞೇ ರತ್ಯರ್ಥಂ ಪೃಥಿವೀತಳೇ |

ದ್ರುಪದಸ್ಯ ಕುಲೇ ಕನ್ಯಾ ವೇದಿಮಧ್ಯಾತ್ ಸಮುತ್ಥಿತಾ |
ನಾತಿಹ್ರಸ್ವಾ ನ ಮಹತೀ ನೀಲೋತ್ಪಲಸುಗಂಧಿನೀ ॥109॥
ಭೂಮಿಯಲ್ಲಿ ಪಾಂಡವರ ಸುಖಕ್ಕಾಗಿ ಭಾರತೀದೇವಿಯೂ ದ್ರುಪದನ ಕುಲದಲ್ಲಿ ವೇದಿಮಧ್ಯದಿಂದ ಎದ್ದುಬಂದಳು. ಅವಳು ಅತಿ ಎತ್ತರವೂ ಅಲ್ಲದೆ ಅತಿ ಸ್ಥೌಲ್ಯವೂ ಇಲ್ಲದೆ ನೀಲೋತ್ಪಲ ಪುಷ್ಪಗಂಧವುಳ್ಳವಳಾಗಿದ್ದಳು.
ಪದ್ಮಾಯತಾಕ್ಷೀ ಸುಶ್ರೋಣೀ ಅಸಿತಾಯತಮೂರ್ಧಜಾ |
ಸರ್ವಲಕ್ಷಣಸಂಪನ್ನಾ ವೈಡೂರ್ಯಮಣಿಸನ್ನಿಭಾ |
ಪಂಚಾನಾಂ ಪುರುಷೇಂದ್ರಾಣಾಂ ಚಿತ್ತಪ್ರಮಥನೀ ರಹಃ ॥110॥
ಪದ್ಮದಂತೆ ಆಯತವಾದ ಕಣ್ಣುಳ್ಳವಳು. ಸುಂದರವಾದ ಕಟಿಯುಳ್ಳವಳು, ಕಪ್ಪಾದ ದೀರ್ಘವಾದ ಕೂದಲುಳ್ಳವಳು, ಎಲ್ಲ ಲಕ್ಷಣಗಳಿಂದಲೂ ಸಹಿತಳಾದವಳು. ವೈಢೂರ್ಯದ ಮಣಿಯಂತೆ ಬೆಳಗುವವಳು. ಏಕಾಂತದಲ್ಲಿ ಪಂಚಪಾಂಡವರ ಮನಸ್ಸನ್ನು ಕಲಕುವವಳೂ ಆಗಿದ್ದಳು.
ಸಿದ್ಧಿರ್ವೃದ್ಧಿಶ್ಚ ಯೇ ದೇವ್ಯೌ ಪಂಚಾನಾಂ ಮಾತರೌ ತು ತೇ |
ಕುಂತೀ ಮಾದ್ರೀ ಚ ಜಜ್ಞಾತೇ ಮಾದ್ರೀ ಮದ್ರಪತೇಃ ಸುತಾ ॥111॥
ದೇವತೆಗಳ ಗಣಕ್ಕೆ ಸೇರಿದ ಸಿದ್ಧಿ ಮತ್ತು ವೃದ್ಧಿ ಎಂಬ ದೇವಿಯರು ಕುಂತಿ ಮತ್ತು ಮಾದ್ರಿಯರಾಗಿ ಜನಿಸಿದರು. ಅವರು ಪಂಚಪಾಂಡವರ ತಾಯಿಯರು. ಮಾದ್ರಿಯು ಮದ್ರದೇಶಾಧಿಪತಿಯ ಮಗಳು.
ಇತಿ ದೇವಾಸುರಾಣಾಂ ತೇ ಗಂಧರ್ವಾಪ್ಸರಸಾಂ ತಥಾ |
ಅಂಶಾವತರಣಂ ರಾಜನ್ ರಾಕ್ಷಸಾನಾಂ ಚ ಕೀರ್ತಿತಮ್ ॥112॥
ಎಲೈ ರಾಜನೇ ಹೀಗೆ ನಿನಗೆ ದೇವಾಸುರರ ಗಂಧರ್ವಾಪ್ಸರರ ಹಾಗೂ ರಾಕ್ಷಸರ ಅಂಶಾವತರಣವನ್ನು ತಿಳಿಸಿದ್ದೇನೆ.
ಯೇ ಪೃಥಿವ್ಯಾಂ ಸಮುದ್ಭೂತಾ ರಾಜಾನೋ ಯುದ್ಧದುರ್ಮದಾಃ |
ಮಹಾತ್ಮನಾಂ ಯದೂನಾಂ ಚ ಯೇ ಜಾತಾ ವಿಪುಲೇ ಕುಲೇ |
ಏತೇ ತು ಮುಖ್ಯಾಃ ಕಥಿತಾ ಮಯಾ ತೇ ರಾಜಸತ್ತಮಾಃ ॥113॥
ಇವರು ಯುದ್ಧದುರ್ಮದರಾದ ಭೂಮಿಯಲ್ಲಿ ಜನಿಸಿದ ಶ್ರೇಷ್ಠರಾದ ರಾಜರುಗಳು. ಮಹಾತ್ಮರ ಮತ್ತು ಯದುಗಳ ವಿಸ್ತಾರವಾದ ಕುಲದಲ್ಲಿ ಜನಿಸಿದವರು. ಅವರುಗಳಲ್ಲಿ ಮುಖ್ಯರಾದ ರಾಜರ ಹೆಸರುಗಳನ್ನು ಮಾತ್ರ ನಿನಗೆ ತಿಳಿಸಿದ್ದೇನೆ.
ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಚ ವಿಜಯಾವಹಮ್ |
ಇದಮಂಶಾವತರಣಂ ಶ್ರೋತವ್ಯಮನಸೂಯಯಾ ॥114॥
ಈ ಅಂಶಾವತರಣವು ಧನ್ಯವಾದುದು. ಕೀರ್ತಿಯನ್ನು, ಆಯುಷ್ಯವನ್ನು, ಪುಣ್ಯವನ್ನು, ಮತ್ತು ವಿಜಯವನ್ನು ತಂದುಕೊಡುತ್ತದೆ. ಇದನ್ನು ಅಸೂಯೆಯನ್ನು ಬಿಟ್ಟು ಶುದ್ಧವಾದ ಮನಸ್ಸಿನಿಂದ ಕೇಳಬೇಕು.
ಅಂಶಾವರತಣಂ ಶ್ರುತ್ವಾ ದೇವಗಂಧರ್ವರಕ್ಷಸಾಮ್ |
ಪ್ರಭಾತೇ ನಯವಿತ್ ಪ್ರಾಜ್ಞೋ ನ ಕೃಚ್ಚ್ರೇಷ್ವವಸೀದತಿ ॥115॥
ಪ್ರಾತಃಕಾಲದಲ್ಲಿ ದೇವಗಂಧರ್ವರಾಕ್ಷಸರ ಅಂಶಾವತರಣವನ್ನು ಶ್ರವಣವನ್ನು ಮಾಡಿದ ನೀತಿಜ್ಞನಾದ ಪ್ರಾಜ್ಞನು ಕಷ್ಟದಲ್ಲಿ ಸಿಲುಕುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದ್ವಿಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.
*****

ಅರವತ್ಮೂರನೆಯ ಅಧ್ಯಾಯ
(ಸಿಂಹಾವಲೋಕನ ನ್ಯಾಯದಿಂದ ಪುನಃ ಪೂರುವಂಶ ಕಥನ.)
ಜನಮೇಜಯಃ
ಪುತ್ರಂ ಯಯಾತೇಃ ಪ್ರಬ್ರೂಹಿ ಪೂರುಂ ಧರ್ಮಭೃತಾಂ ವರಮ್|
ಆನುಪೂರ್ವ್ಯೇಣ ಯೇ ಚಾನ್ಯೇ ಪೂರುವಂಶವಿವರ್ಧನಾಃ ॥1॥
ಯಯಾತಿಯ ಮಗನಾದ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಪೂರುವಿನ ವಂಶವಿವರ್ಧನರಾದ ರಾಜರುಗಳನ್ನು ಕ್ರಮವಾಗಿ ಹೇಳು.
ವಿಸ್ತರೇಣ ಪುನಬ್ರೂಹಿ ದೌಷ್ಯಂತೇರ್ಜನಮೇಜಯಾತ್ |
ಸಂಬಭೂವ ಯಥಾ ರಾಜಾ ಭರತೋ ದ್ವಿಜಸತ್ತಮಃ ॥2॥
ಎಲೈ ಬ್ರಾಹ್ಮಣಶ್ರೇಷ್ಠನೇ, ದುಷ್ಯಂತನ ಮಗನಾದ ಜನಮೇಜಯನ ನಂತರ ಭರತನು ಹೇಗೆ ರಾಜನಾದನು ಎಂಬ ಕಥೆಯನ್ನು ವಿಸ್ತಾರವಾಗಿ ಹೇಳು. (ಈ ಜನಮೇಜಯನು, ಪರೀಕ್ಷಿತನ ಪುತ್ರನಲ್ಲದ ಇನ್ನೊಬ್ಬ ಜನಮೇಜಯ)
ವೈಶಂಪಾಯನಃ
ಪೂರುರ್ನೃಪತಿಶಾರ್ದೂಲೋ ಯಥೈವಾಸ್ಯ ಪಿತಾ ನೃಪ |
ಧರ್ಮನಿತ್ಯಃ ಸ್ಥಿತೋ ರಾಜ್ಯೇ ಶಕ್ರತುಲ್ಯಪರಾಕ್ರಮಃ ॥3॥

ಎಲೈ ರಾಜನೇ, ನೃಪತಿಶಾರ್ದೂಲನಾದ ಪೂರುವು ಅವನ ತಂದೆಯಂತೆಯೇ ಶಕ್ರನಿಗೆ ಸಮಾನವುಳ್ಳ ಪರಾಕ್ರಮವುಳ್ಳವನಾಗಿ, ಧರ್ಮನಿತ್ಯನಾಗಿ, ರಾಜ್ಯವನ್ನಾಳಿದನು.
ಪ್ರವೀರಃ ಶತರುಜ್ಯೌ ಚ ತ್ರಯಃ ಪುತ್ರಾ ಮಹಾಬಲಾಃ |
ಪೂರೋಃ ಪೌಷ್ಯಾಮಜಾಯಂತ ಪ್ರವೀರಸ್ತತ್ರ ವಂಶಭಾಕ್ ॥4॥
ಪೂರುವಿಗೆ ಪೌಷ್ಯೆಯಲ್ಲಿ ಮಹಾಬಲರಾದ ಪ್ರವೀರ, ಶತ ಮತ್ತು ರುಜ್ಯ ಎಂಬ ಮೂರು ಮಕ್ಕಳು. ಅವರಲ್ಲಿ ಪ್ರವೀರನು ವಂಶಕರ್ತ.
ನಮಸ್ಯುರಭವನ್ ತಸ್ಮಾದ್ ಧುರಃ ಶೈವ್ಯಾಸುತಸ್ತತಃ |
ಪೃಥಿವ್ಯಾಂ ಸಾಗರಾಂತಾಯಾಂ ರಾಜಾ ರಾಜೀವಲೋಚನಃ ॥5॥
ಪ್ರವೀರನ ಪುತ್ರ ನಮಸ್ಯು. ನಮಸ್ಯುವಿಗೆ ಶೈಬ್ಯೆಯಲ್ಲಿ ಜನಿಸಿದ ಪುತ್ರ ಧುರ. ರಾಜೀವಲೋಚನನಾದ ಅವನು ಸಾಗರಾಂತವಾದ ಪೃಥಿವಿಗೆ ರಾಜನಾಗಿದ್ದನು.
ಸುಭ್ರುಶ್ಚೋಭಯದೋ ವೀರಃ ಸೌವೀರತನಯಾಸ್ತ್ರಯಃ |
ನಮಸ್ಯೋರಭವನ್ ಪುತ್ರಾಃ ಶೂರಾಃ ಸರ್ವೇ ಮಹಾರಥಾಃ ॥6॥
ನಮಸ್ಯುವಿಗೆ ಸೌವೀರೆಯಲ್ಲಿ, ಸುಭ್ರು, ಉಭಯದ ಮತ್ತು ವೀರ ಎಂಬ ಶೂರರೂ, ಮಹಾರಥರೂ ಆದ ಮೂರು ಪುತ್ರರು ಜನಿಸಿದರು.
ಸುನ್ವಂತಂ ವಸುನಾಭಂ ಚ ಗರ್ಗರಮ್ಯೌ ಯಶಸ್ವಿನೌ |
ಶೂರಾನುಭಯದೋ ರಾಜಾ ಜನಯಾಮಾಸ ವೀರ್ಯವಾನ್ ॥7॥
ವೀರ್ಯಶಾಲಿಯಾದ ಉಭಯದನು, ಸುನ್ವಂತ, ವಸುನಾಭ, ಗರ್ಗ ಮತ್ತು ರಮ್ಯ ಎಂಬ ನಾಲ್ಕು ಮಕ್ಕಳನ್ನು ಪಡೆದನು.
ಯವೀಯಾನ್ ಸುನ್ವತಃ ಪುತ್ರೋ ರಥಂತರ್ಯಾಮಜಾಯತ |
ಶೂರಶ್ಚ ದೃಢಧನ್ವಾ ಚ ವಪುಷ್ಮಾಂಶ್ಚ ನೃಪೋತ್ತಮಃ ॥8॥
`ಯವೀಯಾನ್' ಎಂಬ ಸುನ್ವಂತನ ಪುತ್ರನು ರಥಂತರೆಯಲ್ಲಿ ಜನಿಸಿದನು. ಅವನು ಶೂರನೂ, ದೃಢಧನ್ವನೂ, ಒಳ್ಳೆಯ ದೇಹವನ್ನು ಹೊಂದಿದ್ದ ರಾಜನೂ ಆಗಿದ್ದನು.
ರುದ್ರಾಶ್ವಂ ಪೃಷದಶ್ವಂ ಚ ರಥದಶ್ವಂ ಗಯಂ ಮನುಮ್ |
ಯವೀಯಾನ್ ಜನಯಾಮಾಸ ಗಂಧರ್ವಾನ್ ಭೀಮವಿಕ್ರಮಾನ್ ॥
ಯವೀಯಾನ್‌ರಾಜನು ಭೀಮ ಪರಾಕ್ರಮಿಗಳಾದ `ರುದ್ರಾಶ್ವ', `ಪೃಷದಶ್ವ', `ರಥದಶ್ವ', `ಗಯ' ಮತ್ತು `ಮನು' ಎಂಬ ಐದು ಗಂಧರ್ವರನ್ನು ಮಕ್ಕಳನ್ನಾಗಿ ಪಡೆದನು.
ರುದ್ರಾಶ್ವಸ್ಯ ಮಹಾಬಾಹೋರ್ದಶಾಪ್ಸರಸಿ ಸೂನವಃ |
ಋತೇಯುರಥ ಕಕ್ಷೇಯುಃ ಕೃಪಣೇಯುಶ್ಚ ವೀರ್ಯವಾನ್ ॥10॥
ಸ್ಥಂಡಿಲೇಯುರ್ಜಲೇಯುಶ್ಚ ಸ್ಥಲೇಯುಶ್ಚ ಮಹಾಬಲಃ |
ತೇಜೋಯುರ್ಬಲವಾನ್ ವೀರಃ ರಥೇಯುಶ್ಚೇಂದ್ರವಿಕ್ರಮಃ ॥11॥
ಧರ್ಮೇಯುಃ ಸಂತತೇಯುಶ್ಚ ದಶಮೋ ದೇವವಿಕ್ರಮಃ |
ಅನಾಘೃಷ್ಯಾಃ ಸುತಾಸ್ತೇ ತು ರಾಜಸೂಯಾಶ್ವಮೇಧಿನಃ ॥12॥
ಮಹಾಬಾಹುವಾದ ರುದ್ರಾಶ್ವನಿಗೆ ಅಪ್ಸರೆಯಲ್ಲಿ ಹತ್ತು ಮಕ್ಕಳು. ಅವರಿಗೆ ಋತೇಯು, ಕಕ್ಷೇಯು, ಕೃಪಣೇಯು, ಸ್ಥಂಡಿಲೇಯು, ಜಲೇಯು, ಸ್ಥಲೇಯು, ತೇಜೋಯು, ರಥೇಯು, ಧರ್ಮೇಯು, ಸಂತತೇಯು ಎಂದು ಹೆಸರು. ಅವರೆಲ್ಲರೂ ಅನಾಘೃಷಾ ಎಂಬ ಅಪ್ಸರೆಯ ಮಕ್ಕಳು. ಎಲ್ಲರೂ ರಾಜಸೂಯ, ಅಶ್ವಮೇಧಗಳನ್ನು ಆಚರಿಸಿದವರು.
ಅಂತಿನಾರಸ್ತತೋ ರಾಜನ್ ವಿದ್ವಾಂಶ್ಚರ್ತೇಯುತೋऽಭವತ್ |
ತ್ರಸ್ನುಂ ಮೋದ್ಯಂ ಪ್ರತಿರಥಂ ದ್ರುಮಂ ಚಾಪ್ರತಿಮಂ ಯುಧಿ ॥13॥
ಏತಾನ್ ವೈ ಸುಷುವೇ ಸಾಧ್ವೀ ಹ್ಯಂತಿನಾರಾದ್ ಯಶಸ್ವಿನೀ |
ತೇಷಾಂ ತ್ರಸ್ನುರ್ಮಹಾವೀರ್ಯಃ ಪೌರವಂ ವಂಶಮುದ್ವಹನ್ ॥14॥
ಋತೇಯುವಿನಿಂದ ಅಂತಿನಾರನು ಜನಿಸಿದನು. ಅಂತಿನಾರನ ಪತ್ನಿಯಾದ ಯಶಸ್ವಿನಿಯು, ತ್ರಸ್ನು, ಮೋದ್ಯ, ಪ್ರತಿರಥ, ದ್ರುಮ ಎಂಬ ಮಕ್ಕಳನ್ನು ಪಡೆದಳು. ಅವರಲ್ಲಿ ಮಹಾವೀರ್ಯನಾದ ತ್ರಸ್ನುವು ಪೌರವ ವಂಶಧಾರಕನು.
ಆಜಹಾರ ಯಶೋ ದೀಪ್ತಂ ಜಿಗಾಯ್ಯೆನಾಂ ವಸುಂಧರಾಮ್ |
ಇಲಿಲಂ ಸುಷುವೇ ತ್ರಸ್ನೋರ್ಯಮುನಾ ಚ ಯಶಸ್ವಿನೀ ॥15॥
ಅವನು ದೀಪ್ತವಾದ ಯಶಸ್ಸನ್ನು ಸಂಪಾದಿಸಿ, ಸಮಗ್ರವಾದ ಭೂಮಿಯನ್ನು ಗೆದ್ದನು. ತ್ರಸ್ನುವಿನ ಪತ್ನಿಯಾದ ಯಮುನೆಯು ಇಲಿಲನನ್ನು ಪ್ರಸವಿಸಿದಳು.
ಸೋऽಪಿ ಕೃತ್ಸ್ನಾಮಿಮಾಂ ಭೂಮಿಂ ವಿಜಿಗ್ಯೇ ಜಯತಾಂ ವರಃ |
ರಥಂತರ್ಯಾಮೃಷೀನ್ ಪಂಚ ಪಂಚಭೂತೋಪಮಾಂಸ್ತತಃ ॥16॥
ಇಲಿಲೋ ಜನಯಾಮಸ ದುಷ್ಯಂತಪ್ರಮುಖಾಂಸ್ತಥಾ |
ದುಷ್ಯಂತಮನಘಂ ಶೂರಂ ಪ್ರಶೂರಂ ಚಾಪಿ ಪಂಚಮಮ್ ॥17॥
ಅವನೂ ಸಹ, ಜಯಶೀಲರಲ್ಲಿ ಶ್ರೇಷ್ಠನಾದವನಾಗಿ, ಸಮಗ್ರವಾದ ಭೂಮಿಯನ್ನು ಗೆದ್ದನು. ರಥಂತರೆಯಲ್ಲಿ ಇಲಿಲನು ಪಂಚಭೂತಗಳಂತೆ ಇರುವ ದುಷ್ಯಂತ ಮೊದಲಾದ ಐದು ಮಕ್ಕಳನ್ನು ಪಡೆದನು. ದುಷ್ಯಂತ, ಅನಘ, ಶೂರ, ಪ್ರಶೂರ, ಇವರಲ್ಲಿ ದುಷ್ಯಂತನು ಪ್ರಮುಖನಾದವನು.
ತೇಷಾಂ ಜ್ಯೇಷ್ಠೋ ಮಹಾರಾಜ ದುಷ್ಯಂತೋ ದುರ್ಜಯೋ ಯುಧಿ|

ದುಷ್ಪಂತಾಲ್ಲಕ್ಷಣಾಯಾಂ ತು ಜಜ್ಞೇ ವೈ ಜನಮೇಜಯಃ ॥18॥
ಶಕುಂತಲಾಯಾಂ ಭರತೋ ದೌಷ್ಪಂತಿರಭವತ್ ಸುತಃ।
ತಸ್ಮಾದ್ ಭರತವಂಶಸ್ಯ ವಿಪ್ರತಸ್ಥೇ ಮಹದ್ಯಶಃ ॥19॥
ಎಲ್ಲೈ ಮಹಾರಾಜನೇ, ಅವರಲ್ಲಿ ಜ್ಯೇಷ್ಠನಾದ ದುಷ್ಪಂತನು ಯುದ್ಧದಲ್ಲಿ ದುರ್ಜಯನಾಗಿದ್ದನು. ದುಷ್ಪಂತನಿಗೆ ಲಕ್ಷಣೆಯಲ್ಲಿ ಜನಮೇಜಯನು ಜನಿಸಿದನು. ಶಕುಂತಲೆಯಲ್ಲಿ ದುಷ್ಪಂತನಿಗೆ ಭರತನು ಜನಿಸಿದನು. ಭರತನಿಂದ ಭರತವಂಶದ ಕೀರ್ತಿಯು ವಿಸ್ತಾರವಾಗಿ ಹರಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ತ್ರಿಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ
ಆದಿಪರ್ವ - ಭಾಗ-2
ಅರವತ್ತನಾಲ್ಕನೆಯ ಅಧ್ಯಾಯ
(ಕುರುವಂಶ ಕಥನ ಪ್ರಾರಂಭ. ಸಂಕ್ಷೇಪವಾಗಿ ಯಾಯಾತಿಯ ಚರಿತೆಯ ನಿರೂಪಣೆ.)
ಜನಮೇಜಯಃ
ತ್ವತ್ತಃ ಶ್ರುತಮಿದಂ ಬ್ರಹ್ಮನ್ ದೇವದಾನವರಕ್ಷಸಾಮ್।
ಅಂಶಾವತರಣಂ ಸಮ್ಯಗ್ ಗಂಧರ್ವಾಪ್ಸರಸಾಂ ತಥಾ ॥1॥
ಇಮಂ ತು ಭೂಯ ಇಚ್ಛಾಮಿ ಕುರೂಣಾಂ ವಂಶಮಾದಿತಃ।
ಕಥ್ಯಮಾನಂ ತ್ವಯಾ ವಿಪ್ರ ವಿಪ್ರರ್ಷಿಗಣಸನ್ನಿಧೌ ॥2॥
ಬ್ರಾಹ್ಮಣಶ್ರೇಷ್ಠರೇ ತಮ್ಮಿಂದ ದೇವ, ದಾನವ, ರಾಕ್ಷಸರ ಮತ್ತು ಗಂಧರ್ವಾಪ್ಸರಸರ ಈ ಅಂಶಾವತರಣವನ್ನು ಚೆನ್ನಾಗಿ ಕೇಳಿದ್ದೇನೆ. ಎಲ್ಲೈ ಬ್ರಾಹ್ಮಣರೇ, ಪುನಃ ನಾನು ಈ ವಿಪ್ರರ್ಷಿಗಳ ಸಮ್ಮುಖದಲ್ಲಿ ಕುರುಗಳ ವಂಶವನ್ನು ಮೊದಲಿನಿಂದಲೂ ಕೇಳ ಬಯಸುತ್ತೇನೆ.
ವೈಶಂಪಾಯನಃ
ಧರ್ಮಕಾಮಾರ್ಥಸಹಿತಂ ರಾಜರ್ಷೀಣಾಂ ಪ್ರಕೀರ್ತಿತಮ್।
ಪವಿತ್ರಂ ಕೀರ್ತ್ಯಮಾನಂ ಮೇ ನಿಬೋಧೇದಂ ಮನೀಷಿಣಾಮ್ ॥3॥
ಎಲ್ಲೈ ರಾಜನೇ ಮೇಧಾವಿಗಳೂ, ರಾಜರ್ಷಿಗಳೂ ಆದ ಅವರ ಪವಿತ್ರವಾದ ಧರ್ಮಾರ್ಥಕಾಮಸಹಿತವಾದ ಚರಿತ್ರೆಯನ್ನು ಹೇಳುತ್ತೇನೆ. ಅದನ್ನು ಕೇಳು.
ಪ್ರಜಾಪತೇಶ್ಚ ದಕ್ಷಸ್ಯ ಮನೋರ್ವೈವಸ್ವತಸ್ಯ ಚ।
ಭರತಸ್ಯ ಕುರೋಃ ಪೂರೋರಾಜಮೀಢಸ್ಯ ಚಾನ್ವಯೇ ॥4॥
ಯಾದವಾನಾಮಿಮಂ ವಂಶಂ ಪೌರವಾಣಾಂ ಚ ಸರ್ವಶಃ।
ತಥೈವ ಭರತಾನಾಂ ಚ ಪುಣ್ಯಂ ಸ್ವಸ್ತ್ಯಯನಂ ಮಹತ್ ॥5॥
ದಕ್ಷಪ್ರಜಾಪತಿಯ, ವೈವಸ್ವತ ಮನುವಿನ ಭರತನ, ಕುರು, ಪೂರು, ಆಜಮೀಢನ ವಂಶದಲ್ಲಿ ಬಂದ ಪೌರವರ ಮತ್ತು ಯಾದವರ ವಂಶವನ್ನೂ ಹಾಗೆಯೇ ಭರತನ ವಂಶವನ್ನೂ ಸಮಗ್ರವಾಗಿ ಹೇಳುತ್ತೇನೆ. ಈ ಮಹತ್ತಾದ ಚರಿತ್ರೆಯು ಪುಣ್ಯಪ್ರದವಾದುದು. ಮತ್ತು ಮಂಗಳಪ್ರದವಾದುದು. ಧನಪ್ರದವಾದುದು, ಕೀರ್ತಿ ಮತ್ತು ಆಯುಷ್ಯವನ್ನು ಪ್ರಧಾನ ಮಾಡುವಂತಹುದು.
ಧನ್ಯಂ ಯಶಸ್ಯಮಾಯುಷ್ಯಂ ಕೀರ್ತಯಿಷ್ಯಾಮಿ ತೇಽನಘ।
ತೇಜೋಭಿರುದಿತಾಃ ಸರ್ವೇ ಮಹರ್ಷಿಸಮತೇಜಸಃ ॥6॥
ಎಲ್ಲೈ ನಿರ್ದುಷ್ಟನಾದವನೇ ಈ ರಾಜರುಗಳೆಲ್ಲರೂ ಮಹರ್ಷಿಗಳಿಗೆ ಸಮವಾದ ತೇಜಸುಳ್ಳವರು. ತೇಜಸ್ವಿಗಳಾಗಿಯೇ ಜನಿಸಿದರು. ಅವರ ಚರಿತ್ರೆಗಳನ್ನು ಹೇಳುತ್ತೇನೆ.
ದಶ ಪ್ರಚೇತಸಃ ಪುತ್ರಾ ಆಸನ್ ಪ್ರಾಚೀನಬರ್ಹಿಷಃ।
ಮೇಘಜೇನಾಗ್ನಿನಾ ಹ್ಯೇತೇ ಪೂರ್ವಂ ದಗ್ಧಾ ಮಹೌಜಸಃ ॥7॥
ಪ್ರಾಚೀನ ಬರ್ಹಿ ರಾಜನಿಗೆ ಪ್ರಚೇತಸ ಎಂಬ ಸಮಾನವಾದ ಹೆಸರಿನ ಹತ್ತು ಮಕ್ಕಳಾದರು. ಮಹಾಸಾಮರ್ಥ್ಯಶಾಲಿಗಳಾದ ಅವರು ಮೇಘದಿಂದ ಉಂಟಾದ ಅಗ್ನಿಯಿಂದ ದಹಿಸಲ್ಪಟ್ಟರು.
ತೇಭ್ಯಃ ಪ್ರಾಚೇತಸೋ ಜಜ್ಞೇ ದಕ್ಷೋ ದಕ್ಷಾದಿಮಾಃ ಪ್ರಜಾಃ।
ಸಂಭೂತಾಃ ಪುರುಷವ್ಯಾಘ್ರ ಸ ಹಿ ಲೋಕಪಿತಾಮಹಃ ॥8॥
ಆ ಹತ್ತುಜನ ಪ್ರಚೇತಸರ ಮಗನಾಗಿ ದಕ್ಷಪ್ರಜಾಪತಿಯು ಜನಿಸಿದನು. ಎಲ್ಲೈ ಪುರುಷಶ್ರೇಷ್ಠನೇ ದಕ್ಷನಿಂದ ಈ ಎಲ್ಲಾ ಪ್ರಜೆಗಳು ಉದ್ಭವಿಸಿದರು. ದಕ್ಷನೇ ಲೋಕಪಿತಾಮಹ.
ಪರಿಕ್ನ್ಯಾ ಸಹ ಸಂಗಮ್ಯ ದಕ್ಷಃ ಪ್ರಾಚೇತಸೋ ಮುನಿಃ।
ಆತ್ಮತುಲ್ಯಾನಜನಯತ್ ಸಹಸ್ರಂ ಸಂಶಿತವ್ರತಾನ್ ॥9॥
ತನ್ನ ಪತ್ನಿಯಾದ ಪರಿಕ್ನಿಯ ಸಂಗದಿಂದ ಪ್ರಾಚೇತಸ ಮುನಿಯು ತನಗೆ ಸಮಾನರಾದಂತಹ ಒಳ್ಳೆಯ ವ್ರತನಿಷ್ಠರಾದಂತಹ ಸಹಸ್ರಪುತ್ರರನ್ನು ಪಡೆದನು.

ಸಹಸ್ರಸಂಖ್ಯಾನ್ ಸಹಿತಾನ್ ಪುತ್ರಾನ್ ದಕ್ಷಸ್ಯ ನಾರದಃ |
ಮೋಕ್ಷಮಧ್ಯಾಪಯಾಮಾಸ ಸಾಂಖ್ಯಂ ಜ್ಞಾನಮನುತ್ತಮಮ್ ॥10॥
ನಾರದರು ಆ ಸಹಸ್ರಪುತ್ರರಿಗೆ ಒಟ್ಟಿಗೆ ಮೋಕ್ಷಸಾಧನವಾದ ಶ್ರೇಷ್ಠವಾದ ಪರಿಶುದ್ಧಜ್ಞಾನವನ್ನು ಉಪದೇಶಿಸಿದರು.
ನಾಶೀಸ್ತ್ವಂ ಯೋಜಯಾಮಾಸ ದಿಗಂತಜ್ಞಾನಕರ್ಮಸು |
ತತಃ ಪಂಚಾಶತಂ ಕನ್ಯಾ ಪುತ್ರಿಕಾಃ ಸಸೃಜೇ ಪುನಃ ॥11॥
ಅಗಾಧವಾದ ಜ್ಞಾನವನ್ನು ಸಂಪಾದಿಸುವುದೇ ಕರ್ತವ್ಯವೆಂದು ಹೇಳಿ ನಾರದರು ಅವರೆಲ್ಲರಿಗೂ ಸಂನ್ಯಾಸದೀಕ್ಷೆಯನ್ನು ಕೊಟ್ಟರು. ಅನಂತರ ದಕ್ಷಪ್ರಜಾಪತಿಯು ಐವತ್ತು ಹೆಣ್ಣುಮಕ್ಕಳನ್ನು ಪಡೆದನು.
ಪ್ರಜಾಪತಿಃ ಪ್ರಜಾ ದಕ್ಷಃ ಸಿಸೃಕ್ಷುರ್ಜನಮೇಜಯ |
ದದೌ ಸ ದಶ ಧರ್ಮಾಯ ಕಾಶ್ಯಪಾಯ ತ್ರಯೋದಶ |
ಕಾಲಸ್ಯ ನಯನೇ ಯುಕ್ತಾಃ ಸಪ್ತವಿಂಶತಿ ಚೇಂದವೇ ॥12॥
ಜನಮೇಜಯನೇ ದಕ್ಷಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸುವ ಇಚ್ಛೆಯಿಂದ ಹತ್ತುಕನ್ಯೆಯರನ್ನು ಯಮನಿಗೂ ಹದಿಮೂರು ಕನ್ಯೆಯರನ್ನು ಕಾಶ್ಯಪರಿಗೂ, ಕಾಲಚಕ್ರದಲ್ಲಿ ನಿಯೋಜಿಸಲ್ಪಟ್ಟ ಅಶ್ವಿನ್ಯಾದಿ ನಕ್ಷತ್ರನಾಮವುಳ್ಳ ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೂ ಕೊಟ್ಟನು.
ತ್ರಯೋದಶಾನಾಂ ಪತ್ನೀನಾಂ ಯಾ ತು ದಾಕ್ಷಾಯಣೀ ವರಾ |
ಮಾರೀಚಃ ಕಾಶ್ಯಪಸ್ತಸ್ಯಾಮದಿತ್ಯಾಂ ಸಮಜೀಜನತ್ |
ಇಂದ್ರಾದೀನ್ ವೀರ್ಯಸಂಪನ್ನಾನ್ ವಿವಸ್ವಂತಮಥಾಪಿ ಚ ॥13॥
ಹದಿಮೂರು ಕನ್ಯೆಯರಲ್ಲಿ ಶ್ರೇಷ್ಠಳಾದ ದಕ್ಷಕುಮಾರಿಯಾದ ಅದಿತಿಯನ್ನು ವಿವಾಹ ಮಾಡಿಕೊಂಡ ಮರೀಚಿಪುತ್ರರಾದ ಕಾಶ್ಯಪರು ಅವಳಲ್ಲಿ ಪರಾಕ್ರಮಿಗಳಾದ ಇಂದ್ರಾದಿಗಳನ್ನು ಮತ್ತು ವಿವಸ್ವಂತನನ್ನು ಮಗನನ್ನಾಗಿ ಪಡೆದರು.
ವಿವಸ್ವತಃ ಸುತೋ ಜಜ್ಞೇ ಯಮೋ ವೈವಸ್ವತಃ ಪ್ರಭುಃ |
ಮಾರ್ತಾಂಡಸ್ಯ ಯಮೀ ಚಾಪಿ ಸುತಾ ರಾಜನ್ನಜಾಯತ ॥14॥
ಎಲೈ ರಾಜನೇ ವಿವಸ್ವಾನ್‌ನಾಮಕ ಸೂರ್ಯನಿಗೆ ಯಮ ಮತ್ತು ಯಮಿ ಎಂಬ ಎರಡು ಮಕ್ಕಳಾದರು.
ಮಾರ್ತಾಂಡಸ್ಯ ಮನುರ್ಧೀಮಾನ್ ಅಜಾಯತ ಸುತಃ ಪ್ರಭುಃ |
ಮನೋರ್ವಂಶೋ ಮಾನವಾನಾಂ ತತೋಽಯಂ ಪ್ರಥಿತೋ ಭುವಿ ॥15॥
ವಿವಸ್ವಾನ್‌ನಾಮಕ ಸೂರ್ಯನ ಮಗನಾಗಿ ಸಮರ್ಥನಾದ ವೈವಸ್ವತಮನುವು ಜನಿಸಿದನು. ಮನುವಿನ ವಂಶವೇ ಮಾನವರ ವಂಶ. ಮಾನವವಂಶವು ಭೂಮಿಯಲ್ಲಿ ಮನುವಿನ ಹೆಸರಿನಿಂದಲೇ ಪ್ರಸಿದ್ಧವಾಗಿದೆ.
ಬ್ರಹ್ಮಕ್ಷತ್ರಾದಯಸ್ತಸ್ಮಾನ್ಮನೋರ್ಜಾತಾಸ್ತು ಮಾನವಾಃ |
ತತ್ರಾಽಭವತ್ ತದಾ ರಾಜನ್ ಬ್ರಹ್ಮ ಕ್ಷತ್ರೇಣ ಸಂಹಿತಮ್ |
ಬ್ರಾಹ್ಮಣಾ ಮಾನವಾಸ್ತೇಷಾಂ ಸಾಂಗಂ ವೇದಮಧಾರಯನ್ ॥16॥
ಮನುವಿನಿಂದ ಬ್ರಾಹ್ಮಣ ಕ್ಷತ್ರಿಯ ಮೊದಲಾದ ಮಾನವರು ಜನಿಸಿದರು. ಆಗ ಬ್ರಾಹ್ಮಣರು ಮತ್ತು ಕ್ಷತ್ರಿಯರು ಜೊತೆಯಲ್ಲಿಯೇ ಇದ್ದರು. ಅವರಲ್ಲಿ ಬ್ರಾಹ್ಮಣರಾದ ಮಾನವರು ವೇದಗಳನ್ನು ಮತ್ತು ವೇದಾಂಗಗಳನ್ನು ಅಧ್ಯಯನ ಮಾಡಿ ಆ ವಿದ್ಯೆಯನ್ನು ಧರಿಸಿದರು.
ವೇನಂ ತ್ರಸ್ನುಂ ನರಿಷ್ಯಂತಂ ನಾಭಾಗೇಕ್ಷ್ವಾಕುಮೇವ ಚ |
ಕರೂಶಮಥ ಶರ್ಯಾತಿಂ ತಥೈವಾತ್ರಾಷ್ಟಮೀಮಿಳಾಮ್ ॥17॥
ವೃಷಧ್ರನವಮಾನಾಹುಃ ಕ್ಷತ್ರಧರ್ಮಪರಾಯಣಾನ್ |
ತಥೈವ ದಿಷ್ಟದಶಮಾನ್ ಮನೋಃ ಪುತ್ರಾನ್ ಮಹಾಬಲಾನ್ ॥18॥
ವೇನ, ತ್ರಸ್ನು, ನರಿಷ್ಯಂತ, ನಾಭಾಗ, ಇಕ್ಷ್ವಾಕು, ಕರೂಶ, ಶರ್ಯಾತಿ, ಎಂಟನೆಯವಳಾದ ಇಳಾ, ಒಂಭತ್ತನೆಯವನಾದ ವೃಷಧ್ರ, ಮತ್ತು ಹತ್ತನೆಯವನಾದ ದಿಷ್ಟ. ಇವರೆಲ್ಲರೂ ಮಹಾಬಲಿಷ್ಠರಾದ ಕ್ಷತ್ರಿಯಧರ್ಮಪರಾಯಣರಾದ ಮನುವಿನ ಪುತ್ರರು.
ಪಂಚಾಶತಂ ಮನೋಃ ಪುತ್ರಾಃ ತಥೈವಾನ್ಯೇಽಭವನ್ ಕ್ಷಿತೌ |
ಅನ್ಯೋನ್ಯಭೇದಾತ್ ತೇ ಸರ್ವೇ ವಿನೇಶುರಿತಿ ನಃ ಶ್ರುತಮ್ ॥19॥
ಇವರಲ್ಲದೆ ಮನುವಿಗೆ ಇನ್ನೂ ಐವತ್ತು ಮಕ್ಕಳಾದರು. ಪರಸ್ಪರ ವಿರೋಧದಿಂದ ಅವರೆಲ್ಲರೂ ನಾಶಹೊಂದಿದರೆಂದು ಕೇಳಿದ್ದೇವೆ.
ಪುರೂರವಾಸ್ತತೋ ವಿದ್ವಾನಿಳಾಯಾಂ ಸಮಪದ್ಯತ |
ಸೈವ ತಸ್ಯಾಭವನ್ಮಾತಾ ಪಿತಾ ಬುಧ ಇತಿ ಶ್ರುತಮ್ ॥20॥
ಅನಂತರ ಇಳೆಯಲ್ಲಿ ಪುರೂರವನು ಜನಿಸಿದನು. ಇಳೆಯು ಅವನ ತಾಯಿ, ಬುಧನು ಅವನ ತಂದೆಯೆಂದು ಕೇಳಿದ್ದೇವೆ.
ತ್ರಯೋದಶ ಸಮುದ್ರಸ್ಯ ದ್ವೀಪಾನಶ್ನನ್ ಪುರೂರವಾಃ |
ಅಮಾನುಷೈರ್ವೃತಾನ್ ಸರ್ವಾನ್ ಮಾನುಷಃ ಸ ಮಹಾಯಶಾಃ ॥
ಮಾನುಷನಾದ ಪುರೂರವನು ಅಮಾನುಷದಿಂದ ನಿಬಿಡವಾದ ಸಮುದ್ರದ ಹದಿಮೂರು ದ್ವೀಪಗಳನ್ನು ಆಳಿದನು. ಅವನು ಮಹಾಯಶಸ್ವಿಯಾಗಿದ್ದನು.
ವಿಪ್ರೈಃ ಸ ವಿಗ್ರಹಂ ಚಕ್ರೇ ವೀರ್ಯೋನ್ಮತ್ತಃ ಪುರೂರವಾಃ |
ಪ್ರಜಹಾರ ಸ ವಿಪ್ರಾಣಾಂ ರತ್ನಾನ್ಯುತ್ಕ್ರೋಶತಾಮಪಿ |
ತುತೋಷ ನೈವ ರತ್ನಾನಾಂ ಲೋಭಾದಿತಿ ಚ ನಃ ಶ್ರುತಮ್ ॥22॥

ವೀರ್ಯೋನ್ನತ್ತನಾದ ಪುರೂರವನು ಬ್ರಾಹ್ಮಣರ ಜೊತೆಯಲ್ಲಿ ವಿರೋಧವನ್ನು ಮಾಡಿಕೊಂಡನು. ಬ್ರಾಹ್ಮಣರು ಕಿರುಚುತ್ತಿದ್ದರೂ ಅದನ್ನು ಎಣಿಸದೇ ಅವರ ರತ್ನವನ್ನು ಅಪಹಾರ ಮಾಡಿದನು. ಅವನ ಲೋಭವು ಎಷ್ಟಿತ್ತೆಂದರೆ ಅವನಿಗೆ ಎಂದೂ ಅದರಿಂದ ತೃಪ್ತಿಯಾಗಲಿಲ್ಲ.
ಸನತ್ಕುಮಾರಸ್ತಂ ರಾಜನ್ ಬ್ರಹ್ಮಲೋಕಾದುಪೇತ್ಯ ಚ |
ಅನುನೀತಿಂ ತತಶ್ಚಕ್ರೇ ಪ್ರತ್ಯಗೃಹ್ಣಾನ್ನ ಚಾಪ್ಯಸೌ ॥23॥
ಆಗ ಎಲೈ ರಾಜನೇ ಸನತ್ಕುಮಾರನು ಬ್ರಹ್ಮಲೋಕದಿಂದ ಬಂದು, ಅವನಿಗೆ ಹಿತವಾದ ನೀತಿಯನ್ನು ಬೋಧಿಸಿದನು. ಆದರೆ ಪುರೂರವನು ಅದನ್ನು ಸ್ವೀಕರಿಸಲಿಲ್ಲ.
ತತಃ ಸ ಋಷಿಭಿಃ ಕ್ರುದ್ಧೈಃ ಶಪ್ತಃ ಸದ್ಯೋ ವ್ಯನಶ್ಯತ |
ಲೋಭಾನ್ವಿತೋ ಮಂದಬುದ್ಧಿರ್ನಷ್ಟಸಂಜ್ಞೋ ನರಾಧಿಪಃ ॥24॥
ಆಗ ಲೋಭಯುಕ್ತನೂ, ಮಂದಬುದ್ಧಿಯೂ, ಪ್ರಜ್ಞಾನಾಶವನ್ನು ಹೊಂದಿದವನೂ ಆದ ಆ ರಾಜನು ಕ್ರುದ್ಧರಾದ ಋಷಿಗಳಿಂದ ಶಪ್ತನಾಗಿ ತಕ್ಷಣದಲ್ಲಿ ರಾಜ್ಯಭ್ರಷ್ಟನಾದನು.
ಸ ಚ ಗಂಧರ್ವಲೋಕಸ್ಥ ಉರ್ವಶ್ಯಾ ಸಹಿತೋ ಚಿರಾತ್ |
ಆನಿನಾಯ ಕ್ರಿಯಾರ್ಥೇಽಗ್ನೀನ್ ಯಥಾವದ್ ವಿಹಿತಾಂಸ್ತಥಾ ॥25॥
ಅವನು ಗಂಧರ್ವಲೋಕ ವಾಸಿಯಾದ ಉರ್ವಶಿ ಜೊತೆಯಲ್ಲಿ ಬಹುಕಾಲ ಜೀವಿಸಿ, ಯಜ್ಞಾರ್ಥವಾಗಿ ವಿಹಿತವಾದ ಮೂರು ಅಗ್ನಿಗಳನ್ನು ಯಥಾವತ್ತಾಗಿ ಸಂಪಾದಿಸಿದನು.
ಷಟ್ ಸುತಾ ಜಜ್ಞಿರೇ ಚೈಲಾದ್ ಆಯುರ್ಧೀಮಾನ್ ನರಸ್ತಥಾ |
ಗೃಹಾಯುಶ್ಚ ವನಾಯುಶ್ಚ ಶ್ರುತಾಯುಶ್ಚೋರ್ವಶೀಸುತಾಃ ॥26॥
ಇಳೆಯ ಮಗನಾದ ಪುರೂರವನಿಗೆ ಉರ್ವಶಿಯಲ್ಲಿ ಆರುಮಕ್ಕಳು ಜನಿಸಿದರು. ಅವರು ಆಯು, ಧೀಮಾನ್, ನರ, ಗೃಹಾಯು, ವನಾಯು ಮತ್ತು ಶ್ರುತಾಯು ಎಂಬುವರು.
ನಹುಷಂ ವೃದ್ಧಶರ್ಮಾಣಮಜಿನಂ ರಜಿಮೇನಸಮ್ |
ಸ್ವರ್ಭಾನವೀಸುತಾನೇತಾನಾಯೋಃ ಪುತ್ರಾನ್ ಪ್ರಚಕ್ಷತೇ ॥27॥
ಅವರಲ್ಲಿ ಆಯು ಸ್ವರ್ಭಾನುವಿನ ಮಗಳನ್ನು (ರಾಹುವಿನ ಮಗಳನ್ನು) ವಿವಾಹವಾಗಿ ನಹುಷ, ವೃದ್ಧಶರ್ಮಾ, ಅಜಿನ, ರಜಿ, ಏನಸ ಎಂಬ ಮಕ್ಕಳನ್ನು ಪಡೆದನು.
ಆಯುಷೋ ನಹುಷಃ ಪುತ್ರೋ ಧೀಮಾನ್ ಸತ್ಯಪರಾಕ್ರಮಃ |
ರಾಜ್ಯಂ ಶಶಾಸ ಸುಮಹದ್ ಧರ್ಮೇಣ ಪೃಥಿವೀಪತಿಃ ॥28॥
ಆಯುವಿನ ಪುತ್ರನಾದ ನಹುಷನು ಮೇಧಾವಿ ಮತ್ತು ಸತ್ಯಪರಾಕ್ರಮ- ವುಳ್ಳವನಾಗಿದ್ದು, ವಿಶಾಲವಾದ ಪೃಥಿವಿಯನ್ನು ಧರ್ಮದಿಂದ ಆಳಿದನು.
ಪಿತೄನ್ ದೇವಾನೃಷೀನ್ ವಿಪ್ರಾನ್ ಗಂಧರ್ವೋರಗರಾಕ್ಷಸಾನ್ |
ನಹುಷಃ ಪಾಲಯಾಮಾಸ ಬ್ರಹ್ಮಕ್ಷತ್ರಮಥೋ ವಿಶಃ ॥29॥
ನಹುಷನು ಪಿತೃಗಳನ್ನು, ದೇವತೆಗಳನ್ನು, ವಿಪ್ರರನ್ನು, ಗಂಧರ್ವೋರಗರಾಕ್ಷಸರನ್ನು, ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರನ್ನು ಪಾಲನೆ ಮಾಡಿದನು.
ಸ ಹತ್ವಾ ಶತ್ರುಸಂಘಾತಾನ್ ಋಷೀನ್ ಕರಮದಾಪಯತ್ |
ಪಶುವಚ್ಚೈವ ತಾನ್ ಪೃಷ್ಠೇ ವಾಹಯಾಮಾಸ ವೀರ್ಯವಾನ್ ॥30॥
ಅವನು ಶತ್ರುಗಳ ಸಮೂಹವನ್ನು ಸಂಹಾರ ಮಾಡಿ ಋಷಿಗಳೂ ಸಹ ಕಪ್ಪಕೊಡುವಂತೆ ಮಾಡಿದನು. ಪರಾಕ್ರಮಶಾಲಿಯಾದ ಅವನು ಋಷಿಗಳು ತನ್ನ ವಾಹನವನ್ನು (ಪಲ್ಲಕ್ಕಿಯನ್ನು) ಹೊತ್ತುತಿರುಗುವಂತೆ ಮಾಡಿದನು.
ಕಾರಯಾಮಾಸ ಚೇಂದ್ರತ್ವಮಭಿಭೂಯ ದಿವೌಕಸಃ |
ತೇಜಸಾ ತಪಸಾ ಚೈವ ವಿಕ್ರಮೇಣೌಜಸಾ ತಥಾ |
ವಿಶ್ಲಿಷ್ಟೋ ನಹುಷೋ ಶಪ್ತಃ ಸದ್ಯೋ ಹ್ಯಜಗರೋಽಭವತ್ ॥31॥
ದೇವತೆಗಳನ್ನು ಪರಾಭವಗೊಳಿಸಿ, ಇಂದ್ರನ ಸ್ಥಾನವನ್ನು ಆಕ್ರಮಿಸಿ ರಾಜ್ಯವಾಳಿದನು. ಆದರೆ ಋಷಿಗಳ ಶಾಪಕ್ಕೆ ಒಳಗಾಗಿ ತೇಜಸ್ಸಿನಿಂದಲೂ, ತಪಸ್ಸಿನಿಂದಲೂ, ವಿಕ್ರಮದಿಂದಲೂ, ಬಲದಿಂದಲೂ, ಚ್ಯುತನಾಗಿ ತಕ್ಷಣದಲ್ಲಿಯೇ ಅಜಗರನಾದನು.
ಯತಿಂ ಯಯಾತಿಂ ಸಂಯಾತಿಮಾಯಾತಿಂ ಯಾತಿಮುದ್ಧವಮ್ |
ನಹುಷೋ ಜನಯಾಮಾಸ ಷಟ್ ಪುತ್ರಾನಿಂದ್ರಿಯಾನಿವ ॥32॥
ನಹುಷನು ಯತಿ, ಯಯಾತಿ, ಸಂಯಾತಿ, ಆಯಾತಿ, ಯಾತಿ ಮತ್ತು ಉದ್ಧವ ಎಂಬ ಆರು ಇಂದ್ರಿಯಗಳಂತಿರುವ ಆರುಮಕ್ಕಳನ್ನು ಪಡೆದನು.
ಯಯಾತಿರ್ನಾಹುಷಃ ಸಮ್ರಾಡಾಸೀತ್ ಸತ್ಯಪರಾಕ್ರಮಃ |
ಸ ಪಾಲಯಾಮಾಸ ಮಹೀಮೀಜೇ ಚ ವಿವಿಧೈರ್ಮಖೈಃ ॥33॥
ನಹುಷನ ಮಗನಾದ ಯಯಾತಿಯು ಸತ್ಯಪರಾಕ್ರಮನಾಗಿದ್ದು ಚಕ್ರವರ್ತಿಯಾದನು. ಅವನು ಭೂಮಿಯನ್ನು ಪಾಲಿಸಿ ಅನೇಕ ಯಜ್ಞಗಳಿಂದ ಭಗವಂತನನ್ನು ಆರಾಧಿಸಿದನು.
ಅತಿಭಕ್ತ್ಯಾ ಪಿತೄನಿಷ್ಟ್ವಾ ದೇವಾಂಶ್ಚ ಪ್ರಯತಃ ಸದಾ |
ಅನ್ವಗೃಹ್ಣಾತ್ ಪ್ರಜಾಃ ಸರ್ವಾ ಯಯಾತಿರಪರಾಜಿತಃ ॥34॥

ಅವನು ಅತಿಭಕ್ತಿಯಿಂದ ದೇವತೆಗಳನ್ನೂ, ಅತಿಶ್ರದ್ಧೆಯಿಂದ ಪಿತೃಗಳನ್ನೂ ಪೂಜಿಸಿ, ಯಾವಾಗಲೂ ವಿನಯಶೀಲನಾಗಿದ್ದು, ಅಪರಾಜಿತನಾಗಿದ್ದು, ಎಲ್ಲಾ ಪ್ರಜೆಗಳಿಗೂ ಅನುಗ್ರಹವನ್ನು ಮಾಡಿದನು.

ತಸ್ಯ ಪುತ್ರಾ ಮಹೇಷ್ವಾಸಾಃ ಸರ್ವೈಃ ಸಮುದಿತಾ ಗುಣೈಃ |
ದೇವಯಾನ್ಯಾಂ ಮಹಾರಾಜ ಶರ್ಮಿಷ್ಠಾಯಾಂ ಚ ಜಜ್ಞಿರೇ ||35||

ಎಲೈ ಮಹಾರಾಜನೇ ಅವನಿಗೆ ದೇವಯಾನಿಯಲ್ಲಿಯೂ ಮತ್ತು ಶರ್ಮಿಷ್ಠೆಯಲ್ಲಿಯೂ ಮಹಾಧನುರ್ವಿದ್ಯೆಯನ್ನು ಬಲ್ಲ, ಎಲ್ಲಾ ಗುಣಗಳಿಂದ ಕೂಡಿದ ಮಕ್ಕಳುಗಳಾದರು.

ದೇವಯಾನ್ಯಾಮಜಾಯೇತಾಂ ಯದುಸ್ತುರ್ವಶುರೇವ ಚ |
ದ್ರುಹ್ಯುಶ್ಚಾನುಶ್ಚ ಪೂರುಶ್ಚ ಶರ್ಮಿಷ್ಠಾಯಾಂ ಪ್ರಜಜ್ಞಿರೇ ||36||

ದೇವಯಾನಿಯಲ್ಲಿ ಯದು ಮತ್ತು ತುರ್ವಶು ಎಂಬ ಮಕ್ಕಳು, ಶರ್ಮಿಷ್ಠೆಯಲ್ಲಿ ದ್ರುಹ್ಯು, ಅನು ಮತ್ತು ಪೂರು ಎಂಬ ಮಕ್ಕಳು ಅವನಿಗೆ ಜನಿಸಿದರು.

ಸ ಶಾಶ್ವತೀಃ ಸಮಾ ರಾಜನ್ ಪ್ರಜಾ ಧರ್ಮೇಣ ಪಾಲಯತ್ |
ಜರಾಮಗಚ್ಛದ್ ಘೋರಾಂ ತು ನಾಹುಷೋ ರೂಪನಾಶಿನೀಮ್ ||

ಎಲೈ ರಾಜನೇ ಅವನು ಬಹುಕಾಲ ಧರ್ಮದಿಂದ ಪ್ರಜೆಗಳನ್ನು ಆಳಿ, ಜೀವನದ ಮಧ್ಯದಲ್ಲಿಯೇ ರೂಪ ಮತ್ತು ಬಲವನ್ನು ನಾಶಮಾಡುವ ಘೋರವಾದ ಮುಪ್ಪನ್ನು ಪಡೆದನು.

ಜರಾಭಿಭೂತಃ ಪುತ್ರಾನ್ ಸ ರಾಜಾ ವಚನಮಬ್ರವೀತ್ |
ಯದುಂ ಪೂರುಂ ತುರ್ವಶುಂ ಚ ದ್ರುಹ್ಯುಂ ಚಾನುಂ ಚ ಭಾರತ ||
ಯೌವನೇನ ಚರನ್ ಕಾಮಾನ್ ಯುವಾ ಯುವತಿಭಿಃ ಸಹ |
ವಿಹರ್ತುಮಹಮಿಚ್ಛಾಮಿ ಸಾಹ್ಯಂ ಕುರುತ ಪುತ್ರಕಾಃ ||39||

ಮುಪ್ಪಿನಿಂದ ಬಳಲಿದ ಅವನು ಮಕ್ಕಳಾದ ಯದು, ಪೂರು, ತುರ್ವಶು, ದ್ರುಹ್ಯು, ಅನುಗಳನ್ನು ಕರೆದು ಮಾತನಾಡಿದನು. ಮಕ್ಕಳೇ, ನಾನು ನಿಮ್ಮ ಯೌವನದಿಂದ ಕೂಡಿ ಯುವಕನಾಗಿ, ವಿಷಯಗಳನ್ನು ಅನುಭೋಗಿಸುತ್ತಾ ಯುವತಿಯರ ಜೊತೆಯಲ್ಲಿ ಸುಖವನ್ನು ಪಡೆಯಲು ಬಯಸುತ್ತೇನೆ. ನನಗೆ ಸಹಾಯವನ್ನು ಮಾಡಿ ಎಂದು ಕೇಳಿದನು.

ತಂ ಪುತ್ರೋ ದೈವಯಾನೇಯಃ ಪೂರ್ವಜೋ ಯದುರಬ್ರವೀತ್ |
ಯತ್ ಕಾರ್ಯಂ ಭವತಾ ಕಾರ್ಯಮಸ್ಮಾಕಂ ಯೌವನೇನ ಚ ||

ಅವನನ್ನು ಕುರಿತು ದೇವಯಾನಿಯ ಹಿರಿಯ ಮಗನಾದ ಯದುವು ತಂದೆಯೇ ಯೌವನದಿಂದ ನಿನಗೆ ಏನು ಪ್ರಯೋಜನ ಆಗಬೇಕಾಗಿದೆಯೋ, ಅದೇ ಪ್ರಯೋಜನವು ನಮಗೂ ಆಗಬೇಕಾಗಿದೆ. ಆದ್ದರಿಂದ ಕೊಡುವುದಿಲ್ಲ ಎಂದು ಹೇಳಿದನು.

ಯೌವನೇನ ತ್ವದೀಯೇನ ಚರೇಯಂ ವಿಷಯಾನಹಮ್ |
ಯಜತೋ ದೀರ್ಘಸತ್ರೈರ್ಮೇ ಶಾಪಾಚ್ಚೋಶನಸೋ ಮುನೇಃ ||41||
ಕಾಮಾರ್ಥಃ ಪರಿಹೀಣೋ ವೈ ತಪ್ಯೇಽಹಂ ತೇನ ಪುತ್ರಕಾಃ |
ಮಾಮಕೇನ ಶರೀರೇಣ ರಾಜ್ಯಮೇತತ್ ಪ್ರಶಾಸ್ತು ವಃ |
ಅಹಂ ತನ್ವಾಽಭಿನವಯಾ ಯುವಾ ಕಾಮಮವಾಪ್ನುಯಾಮ್ ||42||

ಯಯಾತಿಯು ಪುನಃ ಅವರನ್ನು ಕುರಿತು ನನ್ನ ಮುಪ್ಪನ್ನು ತೆಗೆದುಕೋ. ನಿನ್ನ ಯೌವನದಿಂದ ನಾನು ಸುಖವನ್ನು ಅನುಭವಿಸುತ್ತೇನೆ. ಬಹುಕಾಲ ದೀರ್ಘಸತ್ರಗಳನ್ನು ನಡೆಸಿದ್ದರಿಂದಲೂ ಮತ್ತು ಶುಕ್ರಾಚಾರ್ಯರ ಶಾಪದಿಂದಲೂ ನಾನು ಕಾಮಭೋಗದಿಂದ ವಂಚಿತನಾಗಿ ಕಾಮಾರ್ಥಿಯಾಗಿದ್ದೇನೆ. ಆದ್ದರಿಂದ ನಾನು ಬಹಳ ತಾಪವನ್ನು ಪಡುತ್ತಿದ್ದೇನೆ. ಮಕ್ಕಳೇ, ನನ್ನ ಶರೀರವನ್ನು ತೆಗೆದುಕೊಂಡು ರಾಜ್ಯವನ್ನು ಪಾಲಿಸಿ. ನಿಮ್ಮ ತರುಣಶರೀರದಿಂದ ನಾನು ಯುವಕನಾಗಿ ಕಾಮತೃಪ್ತಿಯನ್ನು ಪಡೆಯುವೆನು ಎಂದು ಹೇಳಿದನು.

ನ ತೇ ತಸ್ಯ ಪ್ರತ್ಯಗೃಹ್ಣನ್ ಯದುಪ್ರಭೃತಯೋ ಜರಾಮ್ ||43||

ಆದರೆ ಯದು ಮೊದಲಾದ ನಾಲ್ಕು ಮಕ್ಕಳು ಅವನ ಜರೆಯನ್ನು ಸ್ವೀಕರಿಸಲಿಲ್ಲ.

ತಮಬ್ರವೀತ್ ತತಃ ಪೂರುಃ ಕನೀಯಾನ್ ಸತ್ಯವಿಕ್ರಮಃ |
ರಾಜಂಶ್ಚರಾಭಿನವಯಾ ಕಾಮಾನ್ ಯೌವನಗೋಚರಾನ್ |
ಅಹಂ ಜರಾಂ ಸಮಾಸ್ಥಾಯ ರಾಜ್ಯೇ ಸ್ಥಾಸ್ಯಾಮಿ ತೇ ಜ್ಞಯಾ ||

ಆಗ ಕಿರಿಯ ಮಗನಾದ ಸತ್ಯವಿಕ್ರಮನಾದ ಪೂರುವು ರಾಜನೇ, ನನ್ನ ತರುಣಶರೀರದಿಂದ ಯೌವನಸುಖವನ್ನು ಅನುಭವಿಸು. ನಿನ್ನ ಜರೆಯನ್ನು ತೆಗೆದುಕೊಂಡು ನಿನ್ನ ಆಜ್ಞೆಯಿಂದ ನಾನು ರಾಜ್ಯವನ್ನು ಆಳುವೆನು ಎಂದು ಹೇಳಿದನು.

ಏವಮುಕ್ತಃ ಸ ರಾಜರ್ಷಿಸ್ತಪೋವೀರ್ಯಸಮಾಶ್ರಯಾತ್ |
ಸಂಚಾರಯಾಮಾಸ ಜರಾಂ ತದಾ ಪುತ್ರೇ ಮಹಾತ್ಮನಿ ||45||
ಪೌರವೇಣಾಥ ವಯಸಾ ರಾಜಾ ಯೌವನಮಾಸ್ಥಿತಃ |
ಯಾಯಾತೇನಾಪಿ ವಯಸಾ ರಾಜ್ಯಂ ಪೂರುರಕಾರಯತ್ ||46||

ಹೀಗೆ ಹೇಳಲ್ಪಟ್ಟ ರಾಜರ್ಷಿಯಾದ ಯಯಾತಿಯು ತನ್ನ ತಪೋವೀರ್ಯಬಲದಿಂದ ತನ್ನ ಮುಪ್ಪನ್ನು ಮಹಾತ್ಮನಾದ ಪುರುವಿಗೆ ವರ್ಗಾಯಿಸಿದನು. ಮತ್ತು ಪೌರವನ ವಯಸ್ಸನ್ನು ತೆಗೆದುಕೊಂಡು ರಾಜನು ಯುವಕನಾದನು. ಯಯಾತಿಯ ವಯಸ್ಸಿನಿಂದ ಪೂರುವು ರಾಜ್ಯವನ್ನು ಆಳಿದನು.

ಯಯಾತಿರಪಿ ಪತ್ನೀಭ್ಯಾಂ ದೀರ್ಘಕಾಲಂ ವಿಹೃತ್ಯ ಚ |

ವಿಶ್ವಾಚ್ಯಾ ಸಹಿತೋ ರೇಮೇ ಪುನಶ್ಚೈತ್ರರಥೇ ವನೇ |
ನಾಧ್ಯಗಚ್ಚತ್ ತದಾ ತೃಪ್ತಿಂ ಕಾಮಾನಾಂ ಸ ಮಹಾಯಶಾಃ ॥47|
ಯಯಾತಿಯಾದರೂ ಸಹ ತನ್ನ ಇಬ್ಬರು ಪತ್ನಿಯರು ಅದರಲ್ಲಿಯೂ ವಿಶ್ವಾಚಿಯ (ಶರ್ಮಿಷ್ಠೆಯ) ಸಹಿತನಾಗಿ, ಚೈತ್ರರಥ ಮೊದಲಾದ ವನಗಳಲ್ಲಿ ಬಹುಕಾಲ ರಮಿಸಿದನು. ಮಹಾಕೀರ್ತಿವಂತನಾದ ಅವನು ಇಷ್ಟಾದರೂ ಕಾಮದ ತೃಪ್ತಿಯನ್ನು ಹೊಂದಲಿಲ್ಲ. ಮನಸ್ಸಿನಲ್ಲಿಯೇ ಅದನ್ನು ಗಮನಿಸಿ ಅವನು ದಿವ್ಯವಾದ ಒಂದುಗಾಥೆಯನ್ನು ಹಾಡಿದನು.
ಅವೇಕ್ಷ್ಯ ಮನಸಾ ತಸ್ಯ ದಿವ್ಯಾಂ ಗಾಥಾಂ ತತೋ ಜಗೌ |
ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ॥48॥
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ |
ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ |
ನಾಲಮೇಕಸ್ಯ ತತ್ ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥49॥
ಪ್ರೀತಿಯ ವಸ್ತುಗಳ ಉಪಭೋಗದಿಂದ ಕಾಮವು ಎಂದಿಗೂ ಶಾಂತವಾಗುವುದಿಲ್ಲ. ಅದಕ್ಕೆ ಬದಲಾಗಿ ಅಗ್ನಿಗೆ ಆಜ್ಯರೂಪಹವಿಸ್ಸನ್ನು ಹಾಕಿದಂತೆ ಅಭಿವೃದ್ಧಿಯನ್ನೇ ಹೊಂದುತ್ತದೆ. ಭೂಮಿಯ ಮೇಲೆ ಎಷ್ಟು ಧನಧಾನ್ಯ ಹಿರಣ್ಯವು, ಎಷ್ಟು ಪಶುಗಳು, ಎಷ್ಟು ಸ್ತ್ರೀಯರು ಇದ್ದಾರೆಯೋ ಅವೆಲ್ಲವನ್ನೂ ಭೋಗಿಸಿದರೂ ಮನುಷ್ಯನಿಗೆ ಸಾಕು ಎಂಬ ಬುದ್ಧಿಯು ಬರುವುದಿಲ್ಲ.
ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥50॥
ಯಾವಾಗ ಎಲ್ಲ ಪ್ರಾಣಿಗಳ ವಿಷಯದಲ್ಲಿ ಪಾಪದ ಆಲೋಚನೆಗಳನ್ನು ಕರ್ಮದಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ತ್ಯಜಿಸುತ್ತಾನೆಯೋ ಆಗ ಅವನು ಪರಮಾತ್ಮನನ್ನು ಹೊಂದುತ್ತಾನೆ.
ನ ಬಿಭೇತಿ ಯದಾ ಚಾಯಂ ಯದಾ ವಾऽಸ್ಮಾನ್ನ ಬಿಭ್ಯತಿ |
ಯದಾ ನೇಚ್ಚತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥51॥
ಯಾವಾಗ ಅವನು ಯಾರಿಗೂ ಹೆದರುವುದಿಲ್ಲವೋ, ಅವನಿಂದ ಯಾರಿಗೂ ಹೆದರಿಕೆವುಂಟಾಗುವುದಿಲ್ಲವೋ, ಯಾವಾಗ ಯಾವುದನ್ನೂ ಪ್ರೀತಿಸುವುದಿಲ್ಲವೋ, ಅಥವಾ ದ್ವೇಷಿಸುವುದಿಲ್ಲವೋ, ಆಗ ಪರಮಾತ್ಮನನ್ನು ಹೊಂದುತ್ತಾನೆ.
ಇತ್ಯವೇಕ್ಷ್ಯ ಮಹಾರಾಜಃ ಕಾಮಾನಾಂ ಫಲ್ಗುತಾಂ ನೃಪ |
ತತೋ ವರ್ಷಸಹಸ್ರಾಂತೇ ಯಯಾತಿರಪರಾಜಿತಃ |
ಅತೃಪ್ತ ಏವ ಕಾಮಾನಾಂ ಪೂರುಂ ಪುತ್ರಮುವಾಚ ಹ ॥52॥
ಹೀಗೆ ಆಲೋಚಿಸಿ ಕಾಮಗಳ ಅಲ್ಪತೆಯನ್ನು ತಿಳಿದ ಮಹಾರಾಜನಾದ ಅಪರಾಜಿತನಾದ ಯಯಾತಿಯು ಒಂದು ಸಹಸ್ರವರ್ಷಗಳು ತುಂಬುತ್ತಿರಲು ಕಾಮದ ತೃಪ್ತಿಯನ್ನು ಪಡೆಯದೆಯೇ ಮಗನಾದ ಪೂರುವನ್ನು ಕುರಿತು ಹೇಳಿದನು.
ತ್ವಯಾ ದಾಯಾದವಾನಸ್ಮಿ ತ್ವಂ ಮೇ ವಂಶಕರಃ ಸುತಃ |
ಪೌರವೋ ವಂಶ ಇತಿ ತೇ ಲೋಕೇ ಖ್ಯಾತಿಂ ಗಮಿಷ್ಯತಿ ॥53॥
ನಿನ್ನಂತಹ ಮಗನಿಂದ ನಾನು ಪುತ್ರವಂತನಾಗಿದ್ದೇನೆ. ನೀನು ನನ್ನ ವಂಶಕರನಾದ ಪುತ್ರ. ಇನ್ನು ಮುಂದೆ ಈ ವಂಶವು ಪೌರವವಂಶ ಎಂದು ನಿನ್ನ ಹೆಸರಿನಿಂದಲೇ ಖ್ಯಾತಿಯನ್ನು ಗಳಿಸುವುದು.
ತತಃ ಸ ನೃಪಶಾರ್ದೂಲ ಪುತ್ರಂ ರಾಜ್ಯೇऽಭಿಷಿಚ್ಯ ಚ |
ಕಾಲೇನ ಮಹತಾ ಪಶ್ಚಾತ್ ಕಾಲಧರ್ಮಮುಪೇಯಿವಾನ್ ॥54॥
ಎಲೈ ನೃಪಶಾರ್ದೂಲನೇ ಅನಂತರ ಅವನು ಪೂರುವನ್ನು ರಾಜ್ಯದಲ್ಲಿ ಅಭಿಷೇಕಮಾಡಿ, ಬಹುಕಾಲ ತಪಸ್ಸನ್ನು ಮಾಡಿ ಸ್ವರ್ಗಸ್ಥನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಚತುಃಷಷ್ಟಿತಮೋऽಧ್ಯಾಯಃ ॥
॥ ಇತಿ ಸಂಭವಪರ್ವಣಿ ದ್ವಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಅರವತ್ತೈದನೆಯ ಅಧ್ಯಾಯ
(ಯಯಾತಿಯ ಚರಿತ್ರೆಯನ್ನು ವಿಸ್ತಾರವಾಗಿ ಹೇಳಲು ಪ್ರಾರಂಭ. ಕಚನು ಶುಕ್ರಾಚಾರ್ಯರಲ್ಲಿ ಶಿಷ್ಯವೃತ್ತಿಯನ್ನು ಮಾಡಿ, ಮೃತಸಂಜೀವನೀವಿದ್ಯೆಯನ್ನು ಸಂಪಾದಿಸುವುದು.)
ಜನಮೇಜಯಃ
ಯಯಾತಿಃ ಪೂರ್ವಕೋऽಸ್ಮಾಕಂ ದಶಮೋ ಯಃ ಪ್ರಜಾಪತೇಃ |
ಕಥಂ ಸ ಶುಕ್ರತನಯಾಂ ಲೇಭೇ ಪರಮದುರ್ಲಭಾಮ್ ॥1॥
ಪೂಜ್ಯರೇ ನಮ್ಮ ಪೂರ್ವಿಕನಾದ ಮತ್ತು ಪ್ರಜಾಪತಿಯಾದ ನಾರಾಯಣನಿಂದ ಹತ್ತನೆಯವನಾದ ಯಯಾತಿಯು ಪರಮದುರ್ಲಭಳಾದ ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನು ಹೇಗೆ ಪಡೆದನು ?
ನಾರಾಯಣ, ಬ್ರಹ್ಮ, ಮರೀಚಿ, ಕಶ್ಯಪ, ಚಂದ್ರ, ಬುಧ, ಪೂರುರವ, ಆಯು, ನಹುಷ, ಯಯಾತಿ ಈ ಕ್ರಮದಲ್ಲಿ ಯಯಾತಿಯು ಹತ್ತನೆಯವನು.

ಏತದಿಚ್ಛಾಮ್ಯಹಂ ಶ್ರೋತುಂ ವ್ಯಾಸತೋ ದ್ವಿಜಸತ್ತಮ |
ಆನುಪೂರ್ವ್ಯೇಣ ಯೇ ಚಾನ್ಯೇ ರಾಜಾನೋ ವಂಶಧಾರಿಣಃ ॥2॥
ಎಲ್ಲೈ ಬ್ರಾಹ್ಮಣಶ್ರೇಷ್ಠರೇ ಈ ವಿಷಯವನ್ನು ನಾನು ವಿಸ್ತಾರವಾಗಿ ಕೇಳಬಯಸುತ್ತೇನೆ. ಮತ್ತು ವಂಶಧರರಾದ ಬೇರೆ ರಾಜರ ಚರಿತ್ರೆಯನ್ನೂ ಕ್ರಮವಾಗಿ ಕೇಳಬಯಸುತ್ತೇನೆ.
ವೈಶಂಪಾಯನಃ
ಯಯಾತಿರ್ನಾಹುಷೋ ರಾಜಾ ದೇವರಾಜಸಮದ್ಯುತಿಃ |
ತಂ ಶುಕ್ರವೃಷಪರ್ವಾಣೌ ವವ್ರಾತೇ ವರಮುತ್ತಮಮ್ ॥3॥
ನಹುಷನ ಮಗನಾದ ಯಯಾತಿರಾಜನು ಇಂದ್ರನಿಗೆ ಸಮಾನವಾದ ಕಾಂತಿಯುಳ್ಳವನಾಗಿದ್ದನು. ಅವನನ್ನು ಶುಕ್ರಾಚಾರ್ಯರು ಮತ್ತು ವೃಷಪರ್ವ ಇಬ್ಬರೂ ಶ್ರೇಷ್ಠನಾದ ಅಳಿಯನನ್ನಾಗಿ ವರಿಸಿದರು.
ತದಹಂ ಸಂಪ್ರವಕ್ಷ್ಯಾಮಿ ಪೃಚ್ಛತಸ್ತೇ ಮಹೀಪತೇ |
ದೇವಯಾನ್ಯಾಶ್ಚ ಸಂಯೋಗಂ ಯಯಾತೇರ್ನಾಹುಷಸ್ಯ ಚ ॥4॥
ಎಲ್ಲೈ ರಾಜನೇ ಈ ಪ್ರಶ್ನೆಯನ್ನು ಮಾಡುವ ನಿನಗೆ ದೇವಯಾನಿಗೂ, ಮತ್ತು ನಹುಷನ ಪುತ್ರನಾದ ಯಯಾತಿಗೂ ಹೇಗೆ ಸಂಬಂಧವುಂಟಾಯಿತೆಂದು ಚೆನ್ನಾಗಿ ತಿಳಿಸುವೆನು.
ಸುರಾಣಾಮಸುರಾಣಾಂ ಚ ಭೇದೋ ವೈ ಸಮಜಾಯತ |
ಐಶ್ವರ್ಯಸ್ಯ ಚ ಸಂಘರ್ಷಾತ್ ತ್ರೈಲೋಕ್ಯಸ್ಯ ಚ ಕಾರಣಾತ್ ॥5॥
ಸಂಪತ್ತಿನ ನಿಮಿತ್ತವಾದ ವಿರೋಧದಿಂದ, ಮತ್ತು ತ್ರಿಲೋಕಾಧಿಪತ್ಯದ ಕಾರಣದಿಂದ ದೇವತೆಗಳಿಗೂ ಮತ್ತು ಅಸುರರಿಗೂ ವೈರವುಂಟಾಯಿತು.
ದೇವಾ ದೈತ್ಯೈರ್ಯೋರ್ತ್ಸ್ಯಮಾನಾ ವವ್ರಿರೇಽಂಗಿರಸಂ ಮುನಿಮ್ |
ಪೌರೋಹಿತ್ಯೇನ ರಾಜ್ಯಾರ್ಥಂ ಕಾವ್ಯಂ ತೂಶನಸಂ ಪರೇ ॥6॥
ದೈತ್ಯರ ಜೊತೆಯಲ್ಲಿ ಯುದ್ಧವನ್ನು ಮಾಡುವ ದೇವತೆಗಳು ಅಂಗೀರಸರ ಮಕ್ಕಳಾದ ಬೃಹಸ್ಪತ್ಯಾಚಾರ್ಯರನ್ನು ಗುರುಗಳನ್ನಾಗಿ ವರಿಸಿದರು. ದೈತ್ಯರು ರಾಜ್ಯಲಾಭದ ಸಲುವಾಗಿ ಕವಿಯ ಮಕ್ಕಳಾದ ಶುಕ್ರಾಚಾರ್ಯರನ್ನು ಪುರೋಹಿತರನ್ನಾಗಿ ಆರಿಸಿಕೊಂಡರು.
ಬ್ರಾಹ್ಮಣೌ ತಾವುಭೌ ನಿತ್ಯಮನ್ಯೋನ್ಯಸ್ಪರ್ಧಿನೌ ಭೃಶಮ್ |
ತತ್ರ ದೇವಾ ನಿಜಘ್ನುರ್ಯಾನ್ ದಾನವಾನ್ ಯುಧಿ ಸಂಗತಾನ್ ॥
ತಾನ್ ಪುನರ್ಜೀವಯಾಮಾಸ ಕಾವ್ಯೋ ವಿದ್ಯಾಬಲಾಶ್ರಯಾತ್ |
ತತಸ್ತೇ ಪುನರುತ್ಥಾಯ ಯೋಧಯಾಂಚಕ್ರಿರೇ ಸುರಾನ್ ॥8॥
ಅವರಿಬ್ಬರೂ ಬ್ರಾಹ್ಮಣರು ಮತ್ತು ಯಾವಾಗಲೂ ಪರಸ್ಪರವಾಗಿ ಬಹಳಸ್ಪರ್ಧೆಯುಳ್ಳವರು.ಅವರಲ್ಲಿ ದೇವತೆಗಳು ಯಾವ ದಾನವರನ್ನು ಯುದ್ಧದಲ್ಲಿ ಸಂಹಾರ ಮಾಡಿದರೋ ಅವರನ್ನು ಶುಕ್ರಾಚಾರ್ಯರು ತಮ್ಮ ವಿದ್ಯಾಬಲವನ್ನು ಆಶ್ರಯಿಸಿ ಬದುಕಿಸುತ್ತಿದ್ದರು. ಆಗ ಅವರು ಮೊದಲು ಮೃತರಾಗಿದ್ದವರು ಪುನಃ ಎದ್ದು ದೇವತೆಗಳ ಜೊತೆಯಲ್ಲಿ ಯುದ್ಧಮಾಡುತ್ತಿದ್ದರು.
ಅಸುರಾಸ್ತು ನಿಜಘ್ನುರ್ಯಾನ್ ಸುರಾನ್ ಸಮರಮೂರ್ಧನಿ |
ಸ ತಾನ್ ನ ಜೀವಯಾಮಾಸ ಬೃಹಸ್ಪತಿರುದಾರಧೀಃ ॥9॥
ಆದರೆ ಘೋರಯುದ್ಧದಲ್ಲಿ ಅಸುರರು ಯಾವ ದೇವತೆಗಳನ್ನು ಸಂಹಾರ ಮಾಡಿದರೋ ಅವರನ್ನು ಮೇಧಾವಿಗಳಾದ ಬೃಹಸ್ಪತ್ಯಾಚಾರ್ಯರು ಬದುಕಿಸುತ್ತಿರಲಿಲ್ಲ.
ನ ಹಿ ವೇದ ಸ ತಾಂ ವಿದ್ಯಾಂ ಯಾಂ ಕಾವ್ಯೋ ವೇದ ವೀರ್ಯವಾನ್ |
ಸಂಜೀವಿನೀಂ ತತೋ ದೇವಾ ವಿಷಾದಮಗಮನ್ ಪರಮ್ ॥10॥
ವೀರ್ಯವಂತರಾದ ಶುಕ್ರಾಚಾರ್ಯರು ಯಾವ ಮೃತಸಂಜೀವಿನಿ ವಿದ್ಯೆಯನ್ನು ತಿಳಿದಿದ್ದರೋ ಅದನ್ನು ಬೃಹಸ್ಪತಿಗಳು ತಿಳಿದಿರಲಿಲ್ಲ. ಆ ಕಾರಣದಿಂದ ದೇವತೆಗಳು ಬಹಳ ವಿಷಾದಕ್ಕೆ ಒಳಗಾದರು.
ತೇ ದೇವಾಽಥ ಭಯೋದ್ವಿಗ್ನಾಃ ಕಾವ್ಯಾದೌಶನಸಾತ್ ತದಾ |
ಊಚುಃ ಕಚಮುಪಾಗಮ್ಯ ಜ್ಯೇಷ್ಠಂ ಪುತ್ರಂ ಬೃಹಸ್ಪತೇಃ ॥11॥
ಶುಕ್ರಾಚಾರ್ಯರ ಭಯದಿಂದ ಬಳಲಿದ ಆ ದೇವತೆಗಳು ಆಗ ಬೃಹಸ್ಪತಿಯ ಜ್ಯೇಷ್ಠಪುತ್ರನಾದ ಕಚನ ಸಮೀಪಕ್ಕೆ ಬಂದು, ಹೀಗೆ ಮಾತನಾಡಿದರು.
ಭಜಮಾನಾನ್ ಭಜಸ್ವಾಸ್ಮಾನ್ ಕುರು ಸಾಹ್ಯಮನುತ್ತಮಮ್ |
ಯಾ ವೈ ವಿದ್ಯಾ ನಿವಸತಿ ಬ್ರಾಹ್ಮಣೇಽಮಿತತೇಜಸಿ ॥12॥
ಶುಕ್ರೇ ತಾಮಾಹರ ಕ್ಷಿಪ್ರಂ ಭಾಗಭಾಕ್ ನೋ ಭವಿಷ್ಯಸಿ|
ವೃಷಪರ್ವಸಮೀಪೇ ತು ಶಕ್ಯೋ ದ್ರಷ್ಟುಂ ತ್ವಯಾ ದ್ವಿಜಃ ॥13॥
ಎಲ್ಲೈ ಕಚನೇ ನಿನ್ನನ್ನು ಉಪಸತ್ತಿ ಮಾಡಿರುವ ನಮಗೆ ಶ್ರೇಷ್ಠವಾದ ಸಹಾಯವನ್ನು ಮಾಡಿ, ನೀನು ಉಪಕಾರವನ್ನು ಮಾಡಬೇಕು. ಅಮಿತ ತೇಜಸುಳ್ಳ ಶುಕ್ರಾಚಾರ್ಯರಲ್ಲಿ ಯಾವ ಮೃತಸಂಜೀವಿನಿ ವಿದ್ಯೆಯು ಇದೆಯೋ, ನೀನು ಅದನ್ನು ಬೇಗ ಸಂಪಾದಿಸಿಕೊಂಡು ಬಂದು ನಮ್ಮ ಭಾಗ್ಯಕ್ಕೆ ಹಕ್ಕುದಾರನಾಗಬೇಕು. ಬ್ರಾಹ್ಮಣರಾದ ಶುಕ್ರಾಚಾರ್ಯರು ನಿನಗೆ ವೃಷಪರ್ವ ರಾಜನ ಬಳಿ ಕಾಣಲು ಸಿಗುತ್ತಾರೆ.
ರಕ್ಷತೇ ದಾನವಾಂಸ್ತತ್ರ ನ ಸ ರಕ್ಷತ್ಯದಾನವಾನ್ |
ತಮಾರಾಧಯಿತುಂ ಶಕ್ತೋ ಭವಾನ್ ಪೂರ್ವವಯೋ ಮುನಿಃ ॥14॥

ಅವರು ದಾನವರನ್ನು ರಕ್ಷಿಸುತ್ತಾರೆ. ದೇವತೆಗಳನ್ನು ರಕ್ಷಿಸುವುದಿಲ್ಲ. ಅವರನ್ನು ಸಂತೋಷಪಡಿಸಲು ಚಿಕ್ಕವಯಸ್ಸಿನವನೂ, ಋಷಿಯೂ ಆದ ನೀನೇ ಸಮರ್ಥನಾದವನು.
ದೇವಯಾನೀಮೌಶನಸೀಂ ಭಕ್ತ್ಯಾಽಽರಾಧಯ ಸುವ್ರತ |
ತಾಮಾರಾಧಯಿತುಂ ಶಕ್ತೋ ನಾನ್ಯಃ ಕಶ್ಚನ ವಿದ್ಯತೇ ॥15॥
ಎಲೈ ಒಳ್ಳೆಯ ವ್ರತವನ್ನು ಧರಿಸಿದವನೇ, ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನು ಆದರದಿಂದ ಆರಾಧಿಸು. ಅವಳನ್ನು ಸಂತೋಷಪಡಿಸಲು ನಿನ್ನನ್ನು ಹೊರತು ಬೇರೆ ಯಾರಿಗೂ ಸಾಧ್ಯವಿಲ್ಲ.
ಶೀಲಮಾಧುರ್ಯದಾಕ್ಷಿಣ್ಯೈರಾದರೇಣ ದಮೇನ ಚ |
ದೇವಯಾನ್ಯಾಂ ಹಿ ತುಷ್ಟಾಯಾಂ ವಿದ್ಯಾಂ ತಾಮಾಪ್ಸ್ಯಸಿ ಧ್ರುವಮ್ ॥
ಒಳ್ಳೆಯ ನಡತೆ, ಮಧುರವಾದ ಮಾತು ಮಾದರ್ವ, ಆದರ ಮತ್ತು ಇಂದ್ರಿಯನಿಗ್ರಹಗಳಿಂದ ಅವಳನ್ನು ಒಲಿಸು. ದೇವಯಾನಿಯು ತುಷ್ಟಳಾದರೆ ನೀನು ನಿಶ್ಚಯವಾಗಿಯೂ ಆ ವಿದ್ಯೆಯನ್ನು ಪಡೆಯುತ್ತೀಯೆ.
ತಥೇತ್ಯುಕ್ತ್ವಾ ಕಚಃ ಪ್ರಾಯಾನ್ಮುಹೂರ್ತೇಽಲಘುಮಾರ್ದವೇ |
ತಥಾಽಭಿಪೂಜಿತೋ ದೇವೈಃ ಸಮೀಪಂ ವೃಷಪರ್ವಣಃ ॥17॥
ಹಾಗೆಯೇ ಆಗಲಿ ಎಂದು ಕಚನು ಮೃದುವಾದ ಕಾರ್ಯಕ್ಕೆ ಅತ್ಯಂತ ಅನುಕೂಲವಾದ ಒಂದು ಮುಹೂರ್ತದಲ್ಲಿ ದೇವತೆಗಳಿಂದ ಪೂಜಿಸಿ ಬೀಳ್ಕೊಡಲ್ಪಟ್ಟು ವೃಷಪರ್ವನ ಸಮೀಪಕ್ಕೆ ಹೋದನು.
ಸ ಗತ್ವಾ ತ್ವರಿತೋ ರಾಜನ್ ದೇವೈಃ ಸಂಪ್ರೇಷಿತಃ ಕಚಃ |
ಅಸುರೇಂದ್ರಪುರೇ ಶುಕ್ರಮಭಿವಾದ್ಯೇದಮಬ್ರವೀತ್ ॥18॥
ಎಲೈ ರಾಜನೇ ದೇವತೆಗಳಿಂದ ಕಳುಹಿಸಲ್ಪಟ್ಟ ಆ ಕಚನು ಕ್ಷಿಪ್ರವಾಗಿ ಅಸುರೇಂದ್ರ ಪಟ್ಟಣಕ್ಕೆ ಹೋಗಿ, ಶುಕ್ರಾಚಾರ್ಯರಿಗೆ ನಮಸ್ಕರಿಸಿ ಹೀಗೆ ಮಾತನಾಡಿದನು.
ಋಷೇರಂಗಿರಸಃ ಪೌತ್ರಃ ಪುತ್ರಶ್ಚಾಹಂ ಬೃಹಸ್ಪತೇಃ |
ನಾಮ್ನಾ ಕಚ ಇತಿ ಖ್ಯಾತಃ ಶಿಷ್ಯಂ ಗೃಹ್ಣಾತು ಮಾಂ ಋಷೇ ॥19॥
ಎಲೈ ಋಷಿಶ್ರೇಷ್ಠರೇ ನಾನು ಅಂಗೀರಸ ಋಷಿಗಳ ಮೊಮ್ಮಗ. ಬೃಹಸ್ಪತ್ಯಾಚಾರ್ಯರ ಮಗ. ನನ್ನ ಹೆಸರು ಕಚ ಎಂದು ಪ್ರಸಿದ್ಧವಾಗಿದೆ. ತಾವು ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕು.
ಬ್ರಹ್ಮಚರ್ಯಂ ಚರಿಷ್ಯಾಮಿ ತ್ವತ್ಸಮೀಪೇ ಯಥಾಽಽತ್ಥ ಮಾಮ್ |
ಅನುಮನ್ಯಸ್ವ ಮಾಂ ಬ್ರಹ್ಮನ್ ಸಹಸ್ರಪರಿವತ್ಸರಮ್ ॥20॥
ತಮ್ಮ ಬಳಿಯಲ್ಲಿ ತಾವು ಹೇಳಿದಂತೆ ಕೇಳಿಕೊಂಡು ಒಂದು ಸಹಸ್ರವರ್ಷಗಳ ಕಾಲ ಶಿಷ್ಯವೃತ್ತಿಯನ್ನು ಮಾಡುತ್ತೇನೆ. ಪೂಜ್ಯರಾದ ತಾವು ಸಮ್ಮತಿಸಬೇಕು.
ಶುಕ್ರಃ
ಕಚ ಸ್ವಾಗತಮದ್ಯಾಸ್ತು ಪ್ರತಿಗೃಹ್ಣಾಮಿ ತೇ ವಚಃ |
ಅರ್ಚಯಿಷ್ಯೇಽಹಮರ್ಚ್ಯಂ ತ್ವಾಮರ್ಚಿತೋಽಸ್ತು ಬೃಹಸ್ಪತಿಃ ॥21॥
ಎಲೈ ಕಚನೇ ನಿನಗೆ ಸ್ವಾಗತ. ಈ ದಿನ ನಿನ್ನ ಮಾತನ್ನು ಸ್ವೀಕರಿಸುತ್ತೇನೆ. ಪೂಜನೀಯನಾದ ನಿನ್ನನ್ನು ಪೂಜಿಸುತ್ತೇನೆ. ಅದರಿಂದ ಬೃಹಸ್ಪತಿಗಳು ಪೂಜಿತರಾಗಲಿ.
ವೈಶಂಪಾಯನಃ
ಕಚಸ್ತು ತಂ ತಥೇತ್ಯುಕ್ತ್ವಾ ಪ್ರತಿಜಗ್ರಾಹ ತಂ ವ್ರತಮ್ |
ಆದಿಷ್ಟಂ ಭೃಗುಪುತ್ರೇಣ ಶುಕ್ರೇಣೋಶನಸಾ ಸ್ವಯಮ್ ॥22॥
ಕಚನಾದರೂ ಅವರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ ಭೃಗುಕುಲಪ್ರಸೂತರಾದ ಶುಕ್ರಾಚಾರ್ಯರು ತಾವೇ ಆದೇಶ ಮಾಡಿದಂತೆ ಆ ಶಿಷ್ಯವ್ರತವನ್ನು ಕೈಗೊಂಡನು.
ವ್ರತಂ ಸಂವ್ರತಕಾಲೇ ಸ ಯಥೋಕ್ತಂ ಸಂಗೃಹೀತವಾನ್ |
ಆರಾಧಯನ್ನುಪಾಧ್ಯಾಯಂ ದೇವಯಾನೀಂ ಚ ಭಾರತ ॥23॥
ವ್ರತಕಾಲವಾದ ಸಹಸ್ರವರ್ಷಗಳಲ್ಲಿ ಶುಕ್ರಾಚಾರ್ಯರನ್ನು ದೇವಯಾನಿಯನ್ನೂ ಸಂತೋಷಪಡಿಸುತ್ತಾ, ಗುರುಗಳು ಹೇಳಿದಂತೆ ವ್ರತವನ್ನು ಸರಿಯಾಗಿ ಆಚರಿಸಿದನು.
ನಿತ್ಯಮಾರಾಧಯಿಷ್ಯಂಸ್ತಾಂ ಯುವಾ ಯೌವನಗಾಂ ಮಖೇ |
ಗಾಯನ್ ನೃತ್ಯನ್ ವಾದಯಂಶ್ಚ ದೇವಯಾನೀಮತೋಷಯತ್ ॥24॥
ಯುವಕನಾದ ಅವನು ಯುವತಿಯಾದ ದೇವಯಾನಿಯನ್ನು ನಿತ್ಯಾಗ್ನಿಹೋತ್ರದ ಸಂದರ್ಭದಲ್ಲಿ ಯಾವಾಗಲೂ ಗಾನವನ್ನು ಮಾಡಿ, ನೃತ್ಯವನ್ನು ಮಾಡಿ, ವಾದ್ಯಗಳನ್ನು ನುಡಿಸಿ, ಸಂತೋಷಪಡಿಸಿದನು.
ತತ್ಸಹಸ್ರಂ ಗುರುಗವಾಂ ರಕ್ಷಿತ್ವಾ ವನ್ಯಮಾಹರತ್ |
ದೇವಯಾನ್ಯಪಿ ತಂ ವಿಪ್ರಂ ನಿಯತವ್ರತಚಾರಿಣಮ್ |
ಅನುಗಾಯಮಾನಾ ಲಲನಾ ರಹಃ ಪರ್ಯಚರತ್ ತಥಾ ॥25॥
ಗುರುಗಳ ಸಹಸ್ರಗೋವುಗಳನ್ನು ಕಾಡಿನಲ್ಲಿ ರಕ್ಷಿಸಿ ಆಶ್ರಮಕ್ಕೆ ಕರೆತರುತ್ತಿದ್ದನು. ಲಲನೆಯಾದ ದೇವಯಾನಿಯಾದರೂ ನಿಯತವ್ರತಧಾರಿಯಾದ ಆ ಕಚನನ್ನು ಏಕಾಂತದಲ್ಲಿ ಅವನ ಜೊತೆಯಲ್ಲಿ ಗಾನವನ್ನು ಮಾಡುತ್ತಾ ಪರಿಚರಿಸಿದಳು.
ಗಾಯಂತಂ ಚೈವ ಶಲ್ಕಂ ಚ ದಾತಾರಂ ಪ್ರಿಯವಾದಿನಮ್ |

ನಾರ್ಯೋ ನರಂ ಕಾಮಯಂತೇ ರೂಪಿಣಂ ಸ್ರಗ್ವಿಣಂ ತಥಾ ॥26॥
ನಾರಿಯರು ಗಾನವನ್ನು ಮಾಡುವ ಮತ್ತೆ ಮತ್ತೆ ಪ್ರಿಯವನ್ನು ಮಾತನಾಡುವ ಮತ್ತು ಕೇಳಿದ ವಸ್ತುಗಳನ್ನು ತಂದುಕೊಡುವ ಸುಂದರರಾದ ಮಾಲೆಯನ್ನು ಧರಿಸಿದ ಪುರುಷರನ್ನು ಬಯಸುತ್ತಾರೆ.
ಪಂಚವರ್ಷಶತಾನ್ಯೇವಂ ಕಚಸ್ಯ ಚರತೋ ವ್ರತಮ್ |
ತತ್ರಾತೀಯುರಥೋ ಬುದ್ಧ್ವಾ ದಾನವಾಸ್ತಂ ತತಃ ಕಚಮ್ |
ತತಸ್ತೇ ಗಾಸ್ತು ರಕ್ಷಂತಂ ದಾನವಾಃ ಸಂಶಿತವ್ರತಮ್ ॥27॥
ಜಘ್ನುರ್ಬೃಹಸ್ಪತೇರ್ದ್ವೇಷಾದ್ ವಿದ್ಯಾರಕ್ಷಾರ್ಥಮೇವ ಚ |
ಹತ್ವಾ ಸಾಲಾವೃಕೇಭ್ಯಸ್ತಂ ಪ್ರಾಯಚ್ಛಂಸ್ತಿಲಶಃ ಕೃತಮ್ ॥28॥
ವ್ರತವನ್ನು ಆಚರಿಸುವ ಕಚನಿಗೆ ಆಶ್ರಮದಲ್ಲಿ ಐನೂರು ವರ್ಷಗಳು ಹೀಗೆ ಕಳೆದವು. ಆಗ ದಾನವರು ಅವನನ್ನು ಗುರುತಿಸಿದರು. ಅನಂತರ ಅವರು ಬೃಹಸ್ಪತಿಗಳ ಮೇಲಿನ ದ್ವೇಷದಿಂದಲೂ ಮತ್ತು ಮೃತಸಂಜೀವಿನೀ ವಿದ್ಯೆಯನ್ನು ತಮ್ಮಲ್ಲೇ ರಕ್ಷಣೆ ಮಾಡುವ ಉದ್ದೇಶದಿಂದಲೂ ಗೋವುಗಳನ್ನು ರಕ್ಷಿಸುತ್ತಿದ್ದ ಕಚನನ್ನು ಕೊಂದು, ಎಳ್ಳಿನಷ್ಟು ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ತೋಳಗಳಿಗೆ ಎಸೆದರು.
ತತೋ ಗಾವೋ ನಿವೃತ್ತಾಸ್ತಾ ಅಗೋಪಾಃ ಸ್ವಂ ನಿವೇಶನಮ್ |
ದೃಷ್ಟ್ವಾ ಸ್ಮ ರಹಿತಾ ಗಾಸ್ತು ಕಚೇ ನಾಭ್ಯಾಗತೇ ವನಾತ್ |
ಉವಾಚ ವಚನಂ ಕಾಲೇ ದೇವಯಾನ್ಯಥ ಭಾರತ ॥29॥
ಎಲೈ ಭಾರತನೇ, ದೇವಯಾನಿಯು ಗೋವುಗಳು ಹಿಂದಿರುಗಿದುದನ್ನೂ, ಮತ್ತು ಕಚನು ಕಾರ್ಯದಿಂದ ಬಾರದಿರುವುದನ್ನೂ ನೋಡಿ, ಆ ಸಮಯದಲ್ಲಿ ಶುಕ್ರಾಚಾರ್ಯರನ್ನು ಕುರಿತು ಮಾತನಾಡಿದಳು.
ಆಹುತಂ ಚಾಗ್ನಿಹೋತ್ರಂ ತೇ ಸೂರ್ಯಶ್ಚಾಸ್ತಂ ಗತಃ ಪ್ರಭೋ |
ಅಗೋಪಾಶ್ಚಾಗತಾ ಗಾವಃ ಕಚಸ್ತಾತ ನ ದೃಶ್ಯತೇ ॥30॥
ವ್ಯಕ್ತಂ ಗತೋ ಮೃತೋ ವಾಪಿ ಕಚಸ್ತಾತ ಭವಿಷ್ಯತಿ |
ತಂ ವಿನಾ ನ ಚ ಜೀವೇಯಂ ಕಚಂ ಸತ್ಯಂ ಬ್ರವೀಮ್ಯಹಮ್ ॥31॥
ಸಾಯಂಕಾಲದ ಅಗ್ನಿಹೋತ್ರವು ಜರುಗಿದೆ. ಸೂರ್ಯನು ಅಸ್ತಂಗತನಾಗಿದ್ದಾನೆ. ಎಲೈ ಸಮರ್ಥನೇ ಗೋವುಗಳು ರಕ್ಷಕನಿಲ್ಲದೇ ಹಿಂದೆ ಬಂದಿವೆ. ತಂದೆಯೇ ಆದರೆ ಕಚ ಮಾತ್ರ ಕಾಣಿಸುತ್ತಿಲ್ಲ. ಎಲೈ ತಂದೆಯೇ ನಿಶ್ಚಯವಾಗಿ ಕಚನು ಹೊರಟುಹೋಗಿದ್ದಾನೆ. ಅಥವಾ ಮೃತನಾಗಿದ್ದಾನೆ. ಅವನಿಲ್ಲದೇ ನಾನು ಬದುಕುವುದಿಲ್ಲ. ಈ ಮಾತು ಸತ್ಯ.
ಶುಕ್ರಃ
ಅಯಮೇಹೀತಿ ಶಬ್ದೇನ ಕಚಂ ಸಂಜೀವಯಾಮ್ಯಹಮ್ ॥32॥
ಕಚ ಇಲ್ಲಿ ಬಾ ಎಂಬ ಶಬ್ದದಿಂದ ನಾನು ಕಚನನ್ನು ಬದುಕಿಸುತ್ತೇನೆ.
ವೈಶಂಪಾಯನಃ
ತತಃ ಸಂಜೀವಿನೀಂ ವಿದ್ಯಾಂ ಪ್ರಜಪತ್ವ ಕಚಮಾಹ್ವಯತ್ |
ಭಿತಶತ್ವ ಭಿತಶತ್ವ ಶರೀರಾಣಿ ವೃಕಾಣಾಂ ಸ ವಿನಿಷ್ಪತನ್ ॥33॥
ಅನಂತರ ಶುಕ್ರಾಚಾರ್ಯರು ಸಂಜೀವಿನಿ ವಿದ್ಯೆಯನ್ನು ಜಪಿಸಿ ಕಚನನ್ನು ಆಹ್ವಾನ ಮಾಡಿದರು. ಕಚನು ತೋಳಗಳ ಶರೀರಗಳನ್ನು ಭೇದಿಸಿಕೊಂಡು ಹೊರಗೆ ಬಂದು ಪ್ರತ್ಯಕ್ಷನಾದನು.
ಆಹೂತಃ ಪ್ರಾದುರಭೂತ್ ಕಚೋ ರಿಷ್ಟೋಽಥ ವಿದ್ಯಯಾ |
ಹತೋಽಹಮಿತಿ ಚಾಚಷ್ಟ ಪೃಷ್ಟೋ ಭಾರ್ಗವಕನ್ಯಯಾ ॥34॥
ಮೊದಲು ನಷ್ಟವಾಗಿದ್ದ ಅವನು ಶುಕ್ರಾಚಾರ್ಯರ ವಿದ್ಯೆಯಿಂದ ಆಹೂತನಾಗಿ ಬದುಕಿದನು. ದೇವಯಾನಿಯು ಕೇಳಲಾಗಿ ನಾನು ಮೃತನಾಗಿದ್ದೆ ಎಂದು ನಿರೂಪಿಸಿದನು.
ಕಚಃ
ಸಮಿತ್ಪುಷ್ಪಫಲಾದೀನಿ ಕಾಷ್ಠಭಾರಂ ಚ ಭಾಮಿನಿ |
ಗೃಹೀತ್ವಾ ಭೂರಿಭಾರಾರ್ತೋ ವಟವೃಕ್ಷಂ ಸಮಾಶ್ರಿತಃ ॥35॥
ಎಲೌ ಸುಂದರಿಯೇ ಸಮಿತ್ತು, ಪುಷ್ಪ, ಫಲ ಮತ್ತು ಕಟ್ಟಿಗೆಗಳನ್ನು ತರಲು ಕಾಡಿಗೆ ಹೋದ ನಾನು ಅವೆಲ್ಲವನ್ನೂ ತೆಗೆದುಕೊಂಡು ಬಹಳ ಭಾರದಿಂದ ಬಳಲಿ ಒಂದು ಆಲದ ಮರದ ಬುಡವನ್ನು ಸೇರಿದೆನು.
ಗಾವಶ್ಚ ಸಹಿತಾಃ ಸರ್ವಾ ವೃಕ್ಷಚ್ಛಾಯಾಂ ಸಮಾಶ್ರಿತಾಃ |
ಅಸುರಾಸ್ತತ್ರ ಮಾಂ ದೃಷ್ಟ್ವಾ ಕಸ್ತ್ವಮಿತ್ಯಭ್ಯಚೋದಯನ್ ॥36॥
ಎಲ್ಲಾ ಗೋವುಗಳು ಒಟ್ಟಾಗಿ ಆ ಮರದ ನೆರಳಿನಲ್ಲಿ ಸೇರಿದವು. ಅಸುರರು ಅಲ್ಲಿ ನನ್ನನ್ನು ನೋಡಿ, ನೀನು ಯಾರು ಎಂದು ಕೇಳಿದರು.

ಬೃಹಸ್ಪತಿಸುತಶ್ಚಾಹಂ ಕಚ ಇತ್ಯಭಿವಿಶ್ರುತಃ |
ಇತ್ಯುಕ್ತಮಾತ್ರೇ ಮಾಂ ಪೇಶೀಕೃತ್ವಾ ತು ದಾನವಾಃ |
ದತಶತ್ವ ಸಾಲಾವೃಕೇಭ್ಯಸ್ತೇ ಸುಖಂ ಜಗ್ಮುಃ ಸ್ವಮಾಲಯಮ್॥37॥
ನಾನು ಬೃಹಸ್ಪತಿಗಳ ಮಗನಾದ ಕಚ ಎಂಬುವನು ಎಂದು ಹೇಳಿದ ಕೂಡಲೇ ನನ್ನನ್ನು ದಾನವರು ಕೊಂದು ಒಂದು ಮಾಂಸದ ಮುದ್ದೆಯನ್ನಾಗಿ ಮಾಡಿ, ತೋಳಗಳಿಗೆ ಎಸೆದು ಸುಖವಾಗಿ ತಮ್ಮ ಮನೆಗಳಿಗೆ ಹೊರಟುಹೋದರು.

ಆಹೂತೋ ವಿದ್ಯಯಾऽನೇನ ಭಾರ್ಗವೇಣ ಮಹಾತ್ಮನಾ |
ತ್ವತ್ಸಮೀಪಮಿಹಾಯಾತಃ ಕಥಂಚಿತ್ ಪ್ರಾಪ್ತಜೀವಿತಃ ॥38॥
ಈ ಮಹಾತ್ಮರಾದ ನಿನ್ನ ತಂದೆಯಾದ ಶುಕ್ರಾಚಾರ್ಯರಿಂದ ತಮ್ಮ ವಿದ್ಯೆಯ ಬಲದಿಂದ ಆಹೂತನಾಗಿ ಹೀಗೆ ಜೀವವನ್ನು ಪಡೆದು, ನಿನ್ನ ಸಮೀಪಕ್ಕೆ ಬಂದಿದ್ದೇನೆ.
ಪುನಶ್ಚ ದೇವಯಾನ್ಯೋಕ್ತಃ ಪುಷ್ಪಾಣ್ಯಾಹರ ಮೇ ದ್ವಿಜ |
ತಥೇತಿ ಸ ಗತಃ ಕೇಚಿದ್ ದಾನವಾ ದದೃಶುರ್ವನೇ |
ಪುನಶ್ಚ ಪೋಥಯಿತ್ವಾ ತಂ ಸಮುದ್ರೇऽಂಭಸ್ಯಮಿಶ್ರಯನ್ ॥39॥
ಪುನಃ ದೇವಯಾನಿಯು ಬ್ರಾಹ್ಮಣನೇ ನನಗೆ ಪುಷ್ಪಗಳನ್ನು ತೆಗೆದುಕೊಂಡು ಬಾ ಎಂದು ಹೇಳಿದಳು. ಹಾಗೆಯೇ ಆಗಲಿ ಎಂದು ಹೇಳಿ ಕಾಡಿಗೆ ಹೋದ ಕಚನನ್ನು ದಾನವರು ನೋಡಿದರು. ಪುನಃ ಅವನನ್ನು ಗುದ್ದಿ ಕೊಂದು ಸಮುದ್ರದ ನೀರಿನಲ್ಲಿ ಕದಡಿಬಿಟ್ಟರು.
ಚಿರಂ ಗತಂ ಪುನಃ ಕನ್ಯಾ ಪಿತ್ರೇ ತಂ ಸನ್ನ್ಯವೇದಯತ್ |
ವಿಪ್ರೇಣ ಪುನರಾಹೂತೋ ವಿದ್ಯಯಾ ಬ್ರಾಹ್ಮಣಸ್ತದಾ |
ಪುನರಾವೃತ್ತ್ಯ ವೃತ್ತಾಂತಂ ನ್ಯವೇದಯತ ತತ್ತ್ವತಃ ॥40॥
ಕಚನು ಹೋಗಿ ಬಹಳ ಸಮಯವಾಯಿತೆಂದು ದೇವಯಾನಿಯು ಪುನಃ ತಂದೆಗೆ ನಿವೇದಿಸಿದಳು. ಪುನಃ ಶುಕ್ರಾಚಾರ್ಯರು ತಮ್ಮ ವಿದ್ಯೆಯಿಂದ ಅವನನ್ನು ಪುನಃ ಕರೆದಾಗ ಕಚನು ಹಿಂದಿರುಗಿ ಬಂದು ವೃತ್ತಾಂತವೆಲ್ಲವನ್ನೂ ಯಥಾರ್ಥವಾಗಿ ನಿವೇದಿಸಿದನು.
ದೇವಯಾನ್ಯಾ ಪುನರಪಿ ವನ್ಯಂ ಪುಷ್ಪಂ ಸಮಾಹರ |
ಅಗಚ್ಛದ್ ವನಮಿತ್ಯುಕ್ತೋ ದಾನವಾ ದದೃಶುಃ ಪುನಃ ॥41॥
ತೃತೀಯಮಪಿ ಹತ್ವಾ ತಂ ದಗ್ಧ್ವಾ ಪಿಷ್ಟ್ವಾ ಚ ಸೂಕ್ಷ್ಮತಃ |
ಪ್ರಾಯಚ್ಛನ್ ಬ್ರಾಹ್ಮಣಾಯೈವ ಸುರಾಯಾಮಸುರಾಸ್ತದಾ ॥42॥
ದೇವಯಾನಿಯು ಪುನಃ ಕಚನನ್ನು ಕುರಿತು ಕಾಡಿನಿಂದ ಹೂಗಳನ್ನು ತೆಗೆದುಕೊಂಡು ಬಾ ಎಂದು ಹೇಳಿದಳು. ಹೀಗೆ ಹೇಳಲ್ಪಟ್ಟ ಕಚನು ಕಾಡಿಗೆ ಹೋಗಲು ಪುನಃ ದಾನವರು ಅವನನ್ನು ನೋಡಿದರು. ಈ ಬಾರಿ ಅವನನ್ನು ಕೊಂದು, ಸುಟ್ಟು ಸಣ್ಣ ಪುಡಿಯನ್ನು ಮಾಡಿ, ಶುಕ್ರಾಚಾರ್ಯರಿಗೆ ಮದ್ಯದಲ್ಲಿ ಬೆರೆಸಿ ಸೇವಿಸಲು ಕೊಟ್ಟರು.
ದೇವಯಾನೀ ಶಂಕಮಾನಾ ದೃಷ್ಟ್ವಾ ಪಿತರಮಬ್ರವೀತ್ |
ಪುಷ್ಪಾಹರಃ ಪ್ರೇಷಿತೋ ಮೇ ಕಚಸ್ತಾತ ನ ದೃಶ್ಯತೇ |
ವ್ಯಕ್ತಂ ಗತೋ ಮೃತೋ ವಾಪಿ ಕಚಸ್ತಾತ ಮಹಾತಪಾಃ ॥43॥
ದೇವಯಾನಿಯು ಪುನಃ ಸಂಶಯವುಳ್ಳವಳಾಗಿ, ತಂದೆಯನ್ನು ನೋಡಿ ತಂದೆಯೇ ಪುಷ್ಪವನ್ನು ತರಲು ನಾನು ಕಚನನ್ನು ಕಳುಹಿಸಿದ್ದೆ. ಆದರೆ ಕಚನು ಕಾಣಿಸುತ್ತಿಲ್ಲ. ಮಹಾತಪಸ್ವಿಯಾದ ಆ ಕಚನು ಎಲ್ಲಿಗೋ ಹೊರಟುಹೋಗಿದ್ದಾನೆ. ಅಥವಾ ಮೃತನಾಗಿದ್ದಾನೆ ಎಂದು ಹೇಳಿದಳು.
ಶುಕ್ರಃ
ಆಹೂತೋ ವಿದ್ಯಯಾऽಪೀಹ ನಾಭ್ಯೇತಿ ಕರವಾಣಿ ಕಿಮ್ |
ಬೃಹಸ್ಪತೇಃ ಸುತಃ ಪುತ್ರಿ ಕಚಃ ಪ್ರೇತಗತಿಂ ಗತಃ |
ವಿದ್ಯಯಾ ಜೀವಿತೋ ಹ್ಯೇಷ ಹನ್ಯತೇ ಕರವಾಣಿ ಕಿಮ್ ॥44॥
ನಾನು ವಿದ್ಯೆಯಿಂದ ಕರೆದರೂ ಕಚನು ಬರುತ್ತಿಲ್ಲ. ಏನು ಮಾಡಲಿ? ಬೃಹಸ್ಪತಿಯ ಮಗನಾದ ಕಚನು ಮೃತನಾಗಿದ್ದಾನೆ. ಮಗಳೇ ಎಷ್ಟು ಸಲ ಬದುಕಿಸಿದರೂ ಪುನಃ ಅವನು ಕೊಲ್ಲಲ್ಪಡುತ್ತಾನೆ. ನಾನು ಏನು ಮಾಡಲಿ?
ತನ್ಮಾ ಶುಚೋ ಮಾ ರುದ ದೇವಯಾನಿ
ನ ತ್ವಾದೃಶೀ ಮರ್ತ್ಯಮನುಪ್ರಶೋಚೇತ್ |
ಸುರಾಶ್ಚ ವಿಶ್ವೇ ಚ ಜಗಚ್ಚ ಸರ್ವ-
ಮುಪಸ್ಥಿತಾಂ ವೈ ವಿಪದಂ ಪ್ರಜಂತಿ ॥45॥
ಆದ್ದರಿಂದ ದೇವಯಾನಿಯು ಶೋಕಪಡಬೇಡ. ಮತ್ತು ಅಳಬೇಡ. ನಿನ್ನಂತಹವರು ಮರಣಶೀಲನಾದ ವ್ಯಕ್ತಿಯನ್ನು ಕುರಿತು ಶೋಕಿಸಬಾರದು. ದೇವತೆಗಳೇ ಆಗಲಿ, ಸಮಸ್ತ ಜಗತ್ತೇ ಆಗಲಿ ವಿಧಿಬರೆದ ವಿಪತ್ತನ್ನು ಹೊಂದಿಯೇ ಹೊಂದುತ್ತಾರೆ.
ದೇವಯಾನೀ
ಯಸ್ಯಾಂಗಿರಾ ವೃದ್ಧತಮಃ ಪಿತಾಮಹೋ
ಬೃಹಸ್ಪತಿಶ್ಚಾಪಿ ಪಿತಾ ಮಹರ್ಷಿಃ |
ಋಷೇಃ ಪುತ್ರಂ ತವ ಶಿಷ್ಯಂ ಕಥಂ ನು
ಪಿತರ್ನ ಶೋಚಾಮಿ ಕಥಂ ನ ರುದ್ಯಾಮ್ ॥46॥
ತಂದೆಯೇ ಯಾರಿಗೆ ವೃದ್ಧತಮನಾದ ಅಂಗೀರಸರು ಪಿತಾಮಹರೋ, ಮಹರ್ಷಿಗಳಾದ ಬೃಹಸ್ಪತಿಗಳು ಯಾರಿಗೆ ತಂದೆಯೋ, ಅಂತಹ ನಿನ್ನ ಶಿಷ್ಯನಾದ ಕಚನನ್ನು ಕುರಿತು ಹೇಗೆ ಶೋಕಪಡದಿರಲು ಸಾಧ್ಯ? ಹೇಗೆ ಅಳದೇ ಇರಲು ಸಾಧ್ಯ?
ಸ ಬ್ರಹ್ಮಚಾರೀ ಚ ತಪೋಧನಶ್ಚ
ನಿತ್ಯೋತ್ಥಿತಃ ಕರ್ಮಸು ಚೈವ ದಕ್ಷಃ |
ಕಚಸ್ಯ ಮಾರ್ಗಂ ಪ್ರತಿಪತ್ಸ್ಯೇ ನ ಮೋಕ್ಷ್ಯೇ
ಪ್ರಿಯೋ ಹಿ ಮೇ ತಾತ ಕಚೋऽಭಿರೂಪಃ ॥47॥

ಅವನು ಬ್ರಹ್ಮಚಾರಿ. ತಪೋಧನನಾದವನು. ನಿತ್ಯ ಉದ್ಯಮಶೀಲ. ಎಲ್ಲಾ ಕಾರ್ಯಗಳನ್ನು ದಕ್ಷತೆಯಿಂದ ಮಾಡುವವನು. ನಾನು ಕಚನ ಮಾರ್ಗವನ್ನೇ ಅನುಸರಿಸಿ ಹೋಗುತ್ತೇನೆ ಬಿಡುವುದಿಲ್ಲ. ಎಲ್ಲೈ ತಂದೆಯೇ ಕಚನು ನನಗೆ ಅನುರೂಪನಾದವನು ಮತ್ತು ಪ್ರಿಯನಾದವನು.
ಶುಕ್ರಃ
ಅಸಂಶಯಂ ಮಾಮಸುರಾ ದ್ವಿಷಂತಿ
ಯೇ ಶಿಷ್ಯಂ ಮೇಽನಾಗಸಂ ಸೂದಯಂತಿ |
ಅಬ್ರಾಹ್ಮಣಂ ಲೋಕಮಿಚ್ಛಂತಿ ಪಾಪಾ
ರೌದ್ರೀ ತಥಾ ದಾನವಾನಾಂ ಪ್ರವೃತ್ತಿಃ |
ಅಪ್ಯಸ್ಯ ಪಾಪಸ್ಯ ಭವೇದಿಹಾಂತಃ
ಕಂ ಬ್ರಹ್ಮಹತ್ಯಾ ನ ದಹೇದಪೀಂದ್ರಮ್ ॥48॥
ನಿಶ್ಚಯವಾಗಿ ನನ್ನನ್ನು ದಾನವರು ದ್ವೇಷಿಸುತ್ತಾರೆ. ಆದ್ದರಿಂದಲೇ ಅವರು ನಿರಪರಾಧಿಯಾದ ನನ್ನ ಶಿಷ್ಯನನ್ನು ಕೊಲ್ಲುತ್ತಿದ್ದಾರೆ. ಪಾಪಿಷ್ಠರಾದ ಅವರು ಲೋಕದಲ್ಲಿ ಯಾರೂ ಬ್ರಾಹ್ಮಣರು ಇರಬಾರದೆಂದು ಬಯಸುತ್ತಾರೆ. ಅವರ ನಡೆವಳಿಕೆಯು ಯಾವಾಗಲೂ ಉಗ್ರವಾಗಿಯೇ ಇರುತ್ತದೆ. ಈಗ ಮಾಡಿದ ಪಾಪಕ್ಕೆ ಫಲವು ಸದ್ಯದಲ್ಲಿಯೇ ದೊರೆಯುತ್ತದೆ. ಬ್ರಹ್ಮಹತ್ಯವು ಯಾರನ್ನು ತಾನೇ ದಹಿಸುವುದಿಲ್ಲ? ಅದು ಇಂದ್ರನನ್ನೂ ಬಿಡುವುದಿಲ್ಲ.
ವೈಶಂಪಾಯನಃ
ಸಂಚೋದಿತೋ ದೇವಯಾನ್ಯಾ ಮಹರ್ಷಿಃ ಸಮುಪಾಹ್ವಯತ್ |
ಸಂರಂಭೇಣೈವ ಕಾವ್ಯೋ ಹಿ ಬೃಹಸ್ಪತಿಸುತಂ ಕಚಮ್ ॥49॥
ದೇವಯಾನಿಯಿಂದ ಪ್ರೇರಿತರಾಗಿ ಮಹರ್ಷಿಗಳಾದ ಶುಕ್ರಾಚಾರ್ಯರು ಸಿಟ್ಟಿನಿಂದ ಕೂಡಿದವರಾಗಿ ಬೃಹಸ್ಪತಿಯ ಮಗನಾದ ಕಚನನ್ನು ಆಹ್ವಾನಿಸಿದರು.
ಗುರೋರ್ಭೀತೋ ವಿದ್ಯಯಾ ಚೋಪಹೂತಃ |
ಶನೈರ್ವಾಚಂ ಜಠರೇ ವ್ಯಾಜಹಾರ ॥50॥
ಗುರುಗಳಿಗೆ ಹೆದರಿದವನಾಗಿ ಮತ್ತು ವಿದ್ಯೆಯಿಂದ ಕರೆಯಲ್ಪಟ್ಟವನಾಗಿ, ಅವರ ಜಠರದಲ್ಲಿದ್ದ ಕಚನು ಮೆಲ್ಲನೆ ಮಾತನಾಡಿದನು.
ಕಚಃ
ಪ್ರಸೀದ ಭಗವನ್ ಮಹ್ಯಂ ಕಚೋಽಹಮಭಿವಾದಯೇ |
ಯಥಾ ಬಹುಮತಃ ಪುತ್ರಸ್ತಥಾ ಮನ್ಯತು ಮಾಂ ಭವಾನ್ ॥51॥
ಪೂಜ್ಯರೇ ನನಗೆ ಅನುಗ್ರಹವನ್ನು ಮಾಡಿ. ಕಚನಾದ ನಾನು ನಮಸ್ಕರಿಸುತ್ತೇನೆ. ಹೇಗೆ ನಿಮ್ಮ ಪುತ್ರನು ನಿಮಗೆ ಪ್ರೀತ್ಯಾಸ್ಪದನಾಗಬಹುದೋ, ಹಾಗೆಯೇ ನನ್ನನ್ನು ಭಾವಿಸಿ.
ವೈಶಂಪಾಯನಃ
ತಮಬ್ರವೀತ್ ಕೇನ ಪಥೋಪನೀತೋ
ಮಮೋದರೇ ತಿಷ್ಠಸಿ ಬ್ರೂಹಿ ವಿಪ್ರ |
ಅಸ್ಮಿನ್ ಮುಹೂರ್ತೇ ಹ್ಯಸುರಾನ್ ವಿನಾಶ್ಯ
ಗಚ್ಛಾಮಿ ದೇವಾನಹಮದ್ಯ ವಿಪ್ರ ॥52॥
ಶುಕ್ರಾಚಾರ್ಯರು ಕಚನನ್ನು ಕುರಿತು, ಎಲ್ಲೈ ಬ್ರಾಹ್ಮಣನೇ ಯಾವ ಮಾರ್ಗದಿಂದ ನೀನು ನನ್ನ ಉದರವನ್ನು ಸೇರಿದ್ದೀಯೆ ಹೇಳು. ಈ ಕ್ಷಣದಲ್ಲಿ ಎಲ್ಲಾ ಅಸುರರನ್ನು ವಿನಾಶ ಮಾಡಿ ನಾನು ದೇವತೆಗಳ ಪಕ್ಷಕ್ಕೆ ಹೋಗುತ್ತೇನೆ.
ಕಚಃ
ತವ ಪ್ರಸಾದಾನ್ನ ಜಹಾತಿ ಮಾಂ ಸ್ಮೃತಿಃ
ಸ ವೈ ಸರ್ವಂ ವೇದ್ಮಿ ಯಥಾ ಚ ವೃತ್ತಮ್ |
ನನ್ವೇವ ತು ಸ್ಯಾತ್ ತಪಸೋ ವ್ಯಯೋ ಮೇ
ತತಃ ಕ್ಲೇಶಂ ಘೋರಮಿಮಂ ಸಹಾಮಿ ॥53॥
ತಮ್ಮ ಅನುಗ್ರಹದಿಂದ ನನಗೆ ಸ್ಮೃತಿಯು ನಶಿಸಿಹೋಗಿಲ್ಲ. ಏನೇನು ನಡೆಯಿತೆಂದು ಎಲ್ಲವೂ ಜ್ಞಾಪಕದಲ್ಲಿದೆ. ನಾನೇ ನಿಮಗೆ ದೂರನ್ನು ಹೇಳಿದರೆ ನನ್ನ ತಪಸ್ಸು ವ್ಯಯವಾಗುವುದೆಂದು ತಿಳಿದು ಈ ಘೋರವಾದ ಕ್ಲೇಶವನ್ನು ಸಹಿಸಿಕೊಂಡಿದ್ದೇನೆ.
ಅಸುರೈಃ ಸುರಾಯಾಂ ಭವತೋಽಸ್ಮಿ ದತ್ತೋ
ಹತ್ವಾ ದಗ್ಧ್ವಾ ಚೂರ್ಣಯಿತ್ವಾ ಚ ಕಾವ್ಯ |
ಬ್ರಾಹ್ಮೀಂ ಮಾಯಾಮಾಸುರೀ ಚಾದ್ಯ ಮಾಯಾ |
ತ್ವಯಿ ಸ್ಥಿತೇ ಕಥಮೇವಾತಿವರ್ತೇತ್ ॥54॥
ಅಸುರರು ನನ್ನನ್ನು ಕೊಂದು ಸುಟ್ಟು, ಪುಡಿ ಮಾಡಿ ನಿಮಗೆ ಮದ್ಯದಲ್ಲಿ ಸೇರಿಸಿಕೊಟ್ಟಿದ್ದಾರೆ. ಎಲ್ಲೈ ಶುಕ್ರಾಚಾರ್ಯರೇ ಬ್ರಾಹ್ಮಣರ ಮಹಾತ್ಮ್ಯೆಯನ್ನು ಅಸುರರ ಮಹಾತ್ಮ್ಯೆಯು ಈ ದಿನ ಗೆದ್ದಿದೆ. ತಾವು ಬದುಕಿರುವಾಗ ಇದು ಹೇಗೆ ನಡೆಯಲು ಸಾಧ್ಯ?
ಶುಕ್ರಃ
ಕಿಂ ತೇ ಪ್ರಿಯಂ ಕರವಾಣ್ಯದ್ಯ ವತ್ಸೇ
ವಧೇನ ಮೇ ಜೀವಿತಂ ಸ್ಯಾತ್ ಕಚಸ್ಯ |

ನಾನ್ಯತ್ರ ಕುಕ್ಷೇರ್ಮಮ ಭೇದಾದ್ವಿ ದೃಶ್ಯೇತ್
ಕನ್ಯೇ ಕಚೋ ಮದ್ಗತೋ ದೇವಯಾನಿ ॥55॥
ಮಗಳೇ, ಈಗ ನಿನಗೆ ಏನು ಪ್ರಿಯವನ್ನುಂಟು ಮಾಡಲಿ? ನಾನು ಮೃತನಾದರೆ ಕಚನು ಬದುಕುತ್ತಾನೆ. ನನ್ನ ಕುಕ್ಷಿಯನ್ನು ಭೇದಿಸಿಕೊಂಡು ಬರುವುದನ್ನು ಬಿಟ್ಟು ಬೇರೆ ಉಪಾಯವಿಲ್ಲ. ಮಗಳೇ, ಕಚನು ನನ್ನ ಉದರದಲ್ಲಿದ್ದಾನೆ.
ದ್ವೌ ಮೇ ಶೋಕೌ ವಹ್ನಿಕಲ್ಪೌ ದಹೇತಾಂ
ಕಚಸ್ಯ ನಾಶಸ್ತವ ಚೈವೋಪಘಾತಃ |
ಕಚಸ್ಯ ನಾಶೇ ಮಮ ಶರ್ಮ ನಾಸ್ತಿ
ತವೋಪಘಾತೇ ಜೀವಿತುಂ ನಾಸ್ಮಿ ಶಕ್ತಾ ॥56|
ಎರಡು ಶೋಕಗಳು ನನ್ನನ್ನು ಅಗ್ನಿಯಂತೆ ಸುಡುತ್ತಿವೆ. ಮೊದಲನೆಯದು ಕಚನ ನಾಶ. ಕಚನ ನಾಶದಿಂದ ನಿನಗೆ ಆಗುವ ಅಪಘಾತವೂ ನನ್ನ ನಾಶೇ. ಕಚನನ್ನು ಉಳಿಸಬೇಕಾದರೆ ನನ್ನ ನಾಶವಾಗಬೇಕು. ನನ್ನ ಉದರವನ್ನು ಸೀಳಿಕೊಂಡು ಬರುತ್ತಾನೆ. ಆದ್ದರಿಂದ ನನ್ನ ನಾಶದಿಂದ ನಿನಗೆ ಆಗುವ ಆಘಾತವೂ ನನ್ನ ನಾಶವೇ. ನಿನಗೆ ಆಘಾತವಾದರೆ ನಾನು ಜೀವಿಸಲಾರೆ.
ಸಂಸಿದ್ಧರೂಪೋಽಸಿ ಬೃಹಸ್ಪತೇಃ ಸುತಃ
ಯತ್ ತ್ವಾಂ ಭಕ್ತ್ಯಾ ಭಜತೇ ದೇವಯಾನೀ |
ವಿದ್ಯಾಮಿಮಾಂ ಪ್ರಾಪ್ನುಹಿ ಜೀವನೀಂ ತ್ವಂ
ನ ಚೇದಿಂದ್ರಃ ಕಚರೂಪೀ ತ್ವಮದ್ಯ ॥57॥
ಬೃಹಸ್ಪತಿಯ ಸುತನಾದ ಎಲೈ ಕಚನೇ, ದೇವಯಾನಿ ನಿನ್ನನ್ನು ಇಷ್ಟು ಪ್ರೀತಿಸುವ ಕಾರಣದಿಂದ ನೀನು ವಿದ್ಯೆಯಲ್ಲಿ ಸಿದ್ಧಿಯನ್ನು ಪಡೆದಿರುವಿ. ನೀನು ಕಚರೂಪದಿಂದ ಬಂದ ಇಂದ್ರನಲ್ಲದಿದ್ದರೆ ಈ ನನ್ನ ಮೃತಸಂಜೀವಿನಿ ವಿದ್ಯೆಯನ್ನು ಪಡೆ.
ನ ನಿವರ್ತೇತ್ ಪುನರ್ಜೀವನ್ ಕಶ್ಚಿದನ್ಯೋ ಮಮೋದರಾತ್ |
ಬ್ರಾಹ್ಮಣಂ ವರ್ಜಯಿತ್ವಾ ತು ತಸ್ಮಾದ್ ವಿದ್ಯಾಮವಾಪ್ನುಹಿ ॥58॥
ನನ್ನ ಉದರವನ್ನು ಸೇರಿದವನು ಬ್ರಾಹ್ಮಣನನ್ನು ಬಿಟ್ಟು ಬೇರೆ ಯಾವನೂ ಬದುಕಿ ಹೊರಗೆ ಬರಲು ಸಾಧ್ಯವಿಲ್ಲ. ಆದ್ದರಿಂದ ವಿದ್ಯೆಯನ್ನು ಪಡೆ.
ಪುತ್ರೋ ಭೂತ್ವಾ ಭಾವಯ ಭಾವಿತೋ ಮಾಂ
ಅಸ್ಮದ್ದೇಹಾದುಪನಿಷ್ಕ್ರಮ್ಯ ತಾತ |
ಸಮೀಕ್ಷೇಥಾ ಧರ್ಮವತೀಮವೇಕ್ಷಾಂ
ಗುರೋಃ ಸಕಾಶಾತ್ ಪ್ರಾಪ್ಯ ವಿದ್ಯಾಃ ಸವಿದ್ಯಃ ॥59॥
ನನ್ನಿಂದ ಗೌರವಿಸಲ್ಪಟ್ಟ ನೀನು ಮಗನಾಗಿ ನನ್ನನ್ನು ಗೌರವಿಸು. ಮಗು, ಈ ದೇಹದಿಂದ ಹೊರಗೆ ಬಂದು ಗುರುವಿನ ಅನುಗ್ರಹದಿಂದ ವಿದ್ಯೆಯನ್ನು ಪಡೆದವನಾಗಿ, ಧರ್ಮದ ದೃಷ್ಟಿಯನ್ನೇ ಹೊಂದುವವನಾಗು. (ಧರ್ಮವನ್ನು ವೀಕ್ಷಿಸಿ ಅದೇ ವಿದ್ಯೆಯಿಂದ ನನ್ನನ್ನು ಬದುಕಿಸು.)
ವೈಶಂಪಾಯನಃ
ಗುರೋಃ ಸಕಾಶಾತ್ ಸಮವಾಪ್ಯ ವಿದ್ಯಾಂ
ಭಿತ್ತ್ವಾ ಕುಕ್ಷಿಂ ನಿರ್ವಿಚಕ್ರಾಮ ವಿಪ್ರಃ |
ಕಚೋಽಭಿರೂಪೋ ತತ್ಕ್ಷಣಾದ್ ಬ್ರಾಹ್ಮಣಸ್ಯ
ಶುಕ್ಲಾತ್ಯಯೇ ಪೌರ್ಣಮಾಸ್ಯಾಮಿವೇಂದುಃ ॥60॥
ಗುರುಗಳಿಂದ ವಿದ್ಯೆಯನ್ನು ಸಿದ್ಧಿಸಹಿತವಾಗಿ ಹೊಂದಿದವನಾಗಿ ಗುರುಗಳ ಪಾರ್ಶ್ವವನ್ನು ಭೇದಿಸಿಕೊಂಡು ಕಚನು ಹೊರಗೆ ಬಂದನು. ಆಕ್ಷಣದಲ್ಲಿಯೇ ಸುಂದರರೂಪವನ್ನು ಧರಿಸಿದ ಕಚನು ಶುಕ್ರಾಚಾರ್ಯರಿಂದ ಹೊರಗೆ ಬಂದು ಶುಕ್ಲಪಕ್ಷದ ಕೊನೆಯ ದಿವಸ ಪೌರ್ಣಮಿಯಲ್ಲಿ ಇರುವ ಚಂದ್ರನಂತೆ ಬೆಳಗಿದನು.
ದೃಷ್ಟ್ವಾ ಶಯಾನಂ ಬ್ರಾಹ್ಮಣಂ ಬ್ರಹ್ಮರಾಶಿ-
ಮುತ್ಥಾಪಯಾಮಾಸ ಮೃತಂ ಕಚಶ್ಚ |
ವಿದ್ಯಾಂ ಸಿದ್ಧಾಂ ಸಮವಾಪ್ಯಾಭಿವಾದ್ಯ
ತತಃ ಕಚಸ್ತಂ ಗುರುಮಿತ್ಯುವಾಚ ॥66॥
ನೆಲದ ಮೇಲೆ ಮಲಗಿರುವ ಬ್ರಹ್ಮಜ್ಞಾನಿಗಳಾದ ಶುಕ್ರಾಚಾರ್ಯರನ್ನು ಕಚನು ವಿದ್ಯೆಯಿಂದ ಬದುಕಿಸಿದನು. ಸಿದ್ಧವಾದ ವಿದ್ಯೆಯನ್ನು ಪಡೆದು ಗುರುಗಳಿಗೆ ನಮಸ್ಕರಿಸಿ, ಅನಂತರ ಕಚನು ಈ ಮಾತುಗಳನ್ನು ಹೇಳಿದನು.
ಕಚಃ
ಯಃ ಶ್ರೋತ್ರಯೋರಮೃತಂ ಸನ್ನಿಷಿಂಚೇದ್
ವಿದ್ಯಾಮವಿದ್ಯಸ್ಯ ಯಥಾ ಮಮಾಯಮ್ |
ತಂ ಮನ್ಯೇಽಹಂ ಪಿತರಂ ಮಾತರಂ ಚ
ತಸ್ಮೈ ನ ದ್ರುಹ್ಯೇತ್ ಕೃತಮಸ್ಯ ಜಾನನ್ ॥67॥
ಈ ಗುರುಗಳು ನನಗೆ ಮಾಡಿದಂತೆ ಅವಿದ್ಯಾವಂತನಿಗೆ ವಿದ್ಯೆಯೆಂಬ ಅಮೃತವನ್ನು ಕಿವಿಗಳಲ್ಲಿ ಸುರಿಯುತ್ತಾರೋ, ಅವರನ್ನು ನಾನು ತಂದೆಯೆಂದೂ, ತಾಯಿಯೆಂದೂ ತಿಳಿಯುತ್ತೇನೆ. ಅವರು ಮಾಡಿದ ಉಪಕಾರವನ್ನು ಸ್ಮರಣೆ ಮಾಡುವವನು ಎಂದೂ ಅವರಿಗೆ ದ್ರೋಹವನ್ನು ಮಾಡಬಾರದು.

ಋತಸ್ಯ ದಾತಾರಮನುತ್ತಮಸ್ಯ
ನಿಧಿಂ ನಿಧೀನಾಂ ಚತುರನ್ವಯಾನಾಮ್ |
ಯೇ ನಾದ್ರಿಯಂತೇ ಗುರುಮರ್ಚನೀಯಂ
ಪಾಪಾನ್ ಲೋಕಾಂಸ್ತೇ ವ್ರಜಂತ್ಯಪ್ರತಿಷ್ಠಾನ್ ॥68॥
ನಾಲ್ಕು ವೇದಗಳ ಸಾರವಾದ ಶಾಸ್ತ್ರಗಳೆಂಬ ನಿಧಿಯನ್ನು, ಮತ್ತು ಶ್ರೇಷ್ಠವಾದ ಯಥಾರ್ಥಜ್ಞಾನವನ್ನು ಯಾರು ಕೊಡುತ್ತಾರೆಯೋ, ಅಂತಹ ಆದರಣೀಯವಾದ ಗುರುವನ್ನು ಯಾರು ಆದರಿಸುವುದಿಲ್ಲವೋ, ಅವರು ಪಾಪಿಷ್ಠವಾದ ಲೋಕಗಳನ್ನು ಹೊಂದುತ್ತಾರೆ.
ವೈಶಂಪಾಯನಃ
ಶೃಣ್ವತ್ಸು ಭೂತೇಷ್ವಿದಮಾಹ ಕಾವ್ಯಃ
ಸಮುತ್ಥಿತೋ ಬ್ರಹ್ಮರಾಶಿಃ ಪುರಾಣಃ |
ಸುರಾಪಾನಾದ್ ವಂಚನಾಂ ಪ್ರಾಪ್ಯತೀವ್ರಾಂ
ಸಂಜ್ಞಾನಾಶಂ ಪಾಪಕೃತ್ಯಾಫಲಂ ಯತ್ ॥69॥
ಎಲ್ಲರೂ ಕೇಳುತ್ತಿರುವಂತೆ ಶುಕ್ರಾಚಾರ್ಯರು ಪುರಾತನವಾದ ವೇದಗಳ ರಾಶಿಯಂತೆ ಎದ್ದವರಾಗಿ ಮದ್ಯಪಾನದಿಂದ ವಂಚನೆಗೊಳಗಾಗಿ ತೀವ್ರವಾದ ಸ್ಮೃತಿನಾಶವನ್ನು ಹೊಂದಿದವರಾಗಿ, ಆ ಪಾಪಕರ್ಮದ ಫಲವನ್ನು ನೋಡಿ ಹೀಗೆ ಮಾತನಾಡಿದರು -
ದೃಷ್ಟ್ವಾ ಕಚಂ ಚಾಪಿ ತಥಾ ಸಜೀವಿತಂ
ಪೀತ್ವಾ ಸುರಾಂ ಸುರಯಾ ಮೋಹಿತಃ ಸನ್ |
ಸಮನ್ಯುರುತ್ಥಾಯ ಮಹಾನುಭಾವಃ
ತದೋಶನಾ ವಿಪ್ರಹಿತಂ ಚಿಕೀರ್ಷುಃ |
ಕಾವ್ಯಃ ಸ್ವಯಂ ವಾಕ್ಯಮಿದಂ ಜಗಾದ
ಸುರಾಪಾನಂ ವೈ ಪ್ರತಿಶಂಕಮಾನಃ ॥70॥
ಕಚನು ಹಾಗೇ ಬದುಕಿರುವುದನ್ನು ನೋಡಿ, ಮೊದಲು ಸುರಾಪಾನ ಮಾಡುವುದರಿಂದ ಮೋಹಿತರಾಗಿದ್ದ ಅವರು ಸಿಟ್ಟಿನಿಂದ ಎದ್ದುನಿಂತು, ವಿಪ್ರಕಾರ್ಯವನ್ನು ಮಾಡುವವರಾಗಿ, ಈ ಸುರಾಪಾನದ ದೋಷವನ್ನು ಗಮನಿಸಿದವರಾಗಿ ಮಹಾನುಭಾವರಾದ ಅವರು ಈ ಮಾತುಗಳನ್ನು ಹೇಳಿದರು.
ಯೋ ಬ್ರಾಹ್ಮಣೋಽದ್ಯಪ್ರಭೃತೀಹ ಕಶ್ಚಿ-
ನ್ಮೋಹಾತ್ ಸುರಾಂ ಪಾಸ್ಯತಿ ಮಂದಬುದ್ಧಿಃ |
ಅಪೇತಧರ್ಮಾ ಬ್ರಹ್ಮಹಾ ಚೈವ ಸ ಸ್ಯಾದ್
ಅಸ್ಮಿಂಲ್ಲೋಕೇ ಗರ್ಹಿತಃ ಸ್ಯಾತ್ ಪರೇ ಚ ॥71॥
ಇಂದಿನಿಂದ ಪ್ರಾರಂಭಿಸಿ ಯಾವ ಬ್ರಾಹ್ಮಣನು ಮಂದಬುದ್ಧಿಯಾಗಿ ಮೋಹದಿಂದ ಸುರಾಪಾನವನ್ನು ಮಾಡುತ್ತಾನೆಯೋ, ಅವನು ಧರ್ಮಭ್ರಷ್ಟನೂ, ಬ್ರಹ್ಮಹತ್ಯಾದೋಷಭಾಗಿಯೂ ಆಗಿ ಭೂಲೋಕದಲ್ಲಿಯೂ, ಪರಲೋಕದಲ್ಲಿಯೂ ಗರ್ಹಿತನಾಗುವನು.
ಮಯಾ ಚೇಮಾಂ ವಿಪ್ರಧರ್ಮೋಕ್ತಸೀಮಾಂ
ಮರ್ಯಾದಾಂ ವೈ ಸ್ಥಾಪಿತಾಂ ಸರ್ವಲೋಕೇ |
ಸಂತೋ ವಿಪ್ರಾಃ ಶುಶ್ರುವಾಂಸೋ ಗುರೂಣಾಂ
ದೇವಾ ಲೋಕಾಶ್ಚೋಪಶೃಣ್ವಂತು ಸರ್ವೇ ॥72॥
ನಾನು ಈ ದಿನ ಸ್ಥಾಪಿಸಿದ ಈ ಬ್ರಾಹ್ಮಣ ಧರ್ಮದ ಮರ್ಯಾದೆಯನ್ನು ಎಲ್ಲ ಲೋಕಗಳಲ್ಲಿರುವ ಸಜ್ಜನರಾದ ಬ್ರಾಹ್ಮಣರು ಗುರುಗಳನ್ನು ಶುಶ್ರೂಷೆ ಮಾಡುವ ಶಿಷ್ಯರು, ದೇವತೆಗಳು ಮತ್ತು ಉಳಿದ ಎಲ್ಲಾ ಜನರೂ ಕೇಳಬೇಕು.
ಇತೀದಮುಕ್ತ್ವಾ ತು ಮಹಾನುಭಾವ-
ಸ್ತಪೋನಿಧೀನಾಂ ನಿಧಿರಪ್ರಮೇಯಃ |
ತಾನ್ ದಾನವಾನ್ ದೈವವಿಮೂಢಬುದ್ಧೀನ್ |
ಇದಂ ಸಮಾಹೂಯ ವಚೋಽಭ್ಯುವಾಚ ॥73॥
ಇಷ್ಟು ಹೇಳಿ ತಪೋನಿಧಿಗಳಿಗೆ ನಿಧಿಗಳಾದ ಅಪ್ರಮೇಯರಾದ ಮಹಾನುಭಾವರಾದ ಶುಕ್ರಾಚಾರ್ಯರು ದೈವವಿಮೋಹಿತ ಬುದ್ಧಿಯುಳ್ಳ ಆ ದಾನವರನ್ನು ಕರೆದು ಹೀಗೆ ಮಾತನಾಡಿದರು -
ಆಚಕ್ಷೇ ವೋ ದಾನವಾ ಬಾಲಿಶಾಃ ಸ್ಥ
ಸಿದ್ಧಃ ಕಚೋ ಯಾಸ್ಯತಿ ಮತ್ಸಕಾಶಾತ್ |
ಸಂಜೀವಿನೀಂ ಪ್ರಾಪ್ಯ ವಿದ್ಯಾಂ ಮಹಾರ್ಥಾಂ
ತುಲ್ಯಪ್ರಭಾವೋ ಬ್ರಹ್ಮಣಾ ಬ್ರಹ್ಮಭೂತಃ ॥74॥
ಎಲೈ ದಾನವರೇ ನಿಮ್ಮನ್ನು ಕುರಿತು ಹೇಳುತ್ತಿದ್ದೇನೆ. ನೀವು ಬಹಳ ಬುದ್ಧಿಯುಳ್ಳವರು. ಕಚನು ನನ್ನಿಂದ ಸಂಜೀವಿನಿ ವಿದ್ಯೆಯ ಸಿದ್ಧಿಯನ್ನು ಪಡೆದು ಹೋಗುತ್ತಿದ್ದಾನೆ. ಮಹಾಪ್ರಯೋಜನವನ್ನು ಕೊಡುವ ಈ ವಿದ್ಯೆಯನ್ನು ಸಂಪಾದಿಸಿದ ಅವನು ಭಗವನ್ನಿಷ್ಠನಾಗಿ ಬೃಹಸ್ಪತಿಗಳಿಗೆ ಸಮಾನವಾದ ಸಾಮರ್ಥ್ಯವುಳ್ಳವನಾಗುತ್ತಾನೆ.
ಯೋಽಕಾರ್ಷೀದ್ ದುಷ್ಕರಂ ಕರ್ಮ ದೇವಾನಾಂ ಕಾರಣಾತ್ ಕಚಃ |
ನ ಚೇತ್ ಕಿಂಚಿಚ್ಚಿರಾಂ ಗಚ್ಛೇಃ ಯಾಜ್ಞೀಯಶ್ಚ ಭವಿಷ್ಯಸಿ ॥75॥

ಎಲೈ ಕಚನೇ ನೀನು ದೇವತೆಗಳ ಸಲುವಾಗಿ ದುಷ್ಕರವಾದ ಕರ್ಮವನ್ನು ಮಾಡಿದೆ. ನೀನು ನಿನಗಿಂತ ವಯಸ್ಸಿನಲ್ಲಿ ಅಧಿಕಳಾದ, ವನಿತೆಯ ಸಮಾಗಮವನ್ನು ಮಾಡದಿದ್ದರೆ ನೀನು ಯಜ್ಞಫಲಕ್ಕೆ ಭಾಗಿಯಾಗುತ್ತೀಯೆ ಎಂದು ಆಶೀರ್ವಾದವನ್ನು ಮಾಡಿದರು.
ಗುರೋರುಷ್ಯ ಸಕಾಶೇ ತು ದಶ ವರ್ಷಶತಾನಿ ಚ |
ಅನುಜ್ಞಾತಃ ಕಚೋ ಗಂತುಮಿಯೇಷ ತ್ರಿದಶಾಲಯಮ್ ॥76॥
ಗುರುಗಳ ಸಮೀಪದಲ್ಲಿ ಒಂದುಸಾವಿರ ವರ್ಷಗಳ ಕಾಲ ಇದ್ದು ಗುರುಗಳ ಅನುಜ್ಞೆಯನ್ನು ಪಡೆದು ಕಚನು ಸ್ವರ್ಗಕ್ಕೆ ಹೋಗಲು ಬಯಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಪಂಚಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
*****

ಅರವತ್ತಾರನೆಯ ಅಧ್ಯಾಯ
(ಕಚನಲ್ಲಿ ದೇವಯಾನಿಯ ಪ್ರೀತಿ ಮತ್ತು ಪರಸ್ಪರ ಶಾಪದಾನ.)
ವೈಶಂಪಾಯನಃ
ಸಮಾವೃತ್ತವ್ರತಂ ತಂ ತು ನಿಸೃಷ್ಟಂ ಗುರುಣಾ ಕಚಮ್ |
ಪ್ರಸ್ಥಿತಂ ತ್ರಿದಶಾವಾಸಂ ದೇವಯಾನೀದಮಬ್ರವೀತ್ ॥1॥
ತನ್ನ ವ್ರತವನ್ನು ಪೂರ್ತಿಗೊಳಿಸಿ. ಗುರುಗಳ ಅನುಜ್ಞೆಯನ್ನು ಪಡೆದು, ಸ್ವರ್ಗವನ್ನು ಕುರಿತು ಹೊರಟ ಕಚನನ್ನು ಕುರಿತು ದೇವಯಾನಿಯು ಹೀಗೆ ಹೇಳಿದಳು -
ಋಷೇರಂಗಿರಸಃ ಪೌತ್ರ ವೃತ್ತೇನಾಭಿಜನೇನ ಚ |
ಭ್ರಾಜಸೇ ವಿದ್ಯಯಾ ಚೈವ ತಪಸಾ ಚ ದಮೇನ ಚ ॥2॥
ಅಂಗೀರಸಋಷಿಗಳ ಮೊಮ್ಮಗನಾದ ನೀನು, ನಿನ್ನ ಶ್ರೇಷ್ಠವಾದ ಜನ್ಮದಿಂದ ನಡತೆಯಿಂದ ವಿದ್ಯೆಯಿಂದ ತಪಸ್ಸಿನಿಂದ ಮತ್ತು ಇಂದ್ರಿಯನಿಗ್ರಹದಿಂದ ಕಂಗೊಳಿಸುತ್ತಿದ್ದೀಯೆ.
ಋಷಿರ್ಯಥಾಂಗಿರಾ ಮಾನ್ಯಃ ಪಿತುರ್ಮಮ ಮಹಾತಪಾಃ |
ತಥಾ ಮಾನ್ಯಶ್ಚ ಪೂಜ್ಯಶ್ಚ ಭೂಯೋ ಮಮ ಬೃಹಸ್ಪತಿಃ ॥3॥
ಮಹಾತಪಸ್ವಿಯಾದ ಅಂಗಿರಸಋಷಿಗಳು ಹೇಗೆ ನನ್ನ ತಂದೆಗೆ ಮಾನ್ಯರೋ, ಹಾಗೇ ನನಗೆ ನಿನ್ನ ತಂದೆಯಾದ ಬೃಹಸ್ಪತಿಯು ಇನ್ನೂ ಹೆಚ್ಚು ಮಾನ್ಯನೂ, ಪೂಜ್ಯನೂ ಆಗಿದ್ದಾನೆ.
ಏವಂ ಜ್ಞಾತ್ವಾ ವಿಜಾನೀಹಿ ಯದ್ ಬ್ರವೀಮಿ ತಪೋಧನ |
ವ್ರತಸ್ಥೇ ನಿಯಮೋಪೇತೇ ಯಥಾ ವರ್ತಾಮ್ಯಹಂ ತ್ವಯಿ ॥4॥
ತ್ವಂ ಸಮಾವೃತ್ತವಿದ್ಯೋ ಮಾಂ ಭಕ್ತಾಂ ಭಜಿತುಮರ್ಹಸಿ |
ಗೃಹಾಣ ಪಾಣಿಂ ವಿಧಿವನ್ಮಮ ಮಂತ್ರಪುರಸ್ಕೃತಮ್ ॥5॥
ಎಲೈ ತಪೋಧನನೇ, ಇದನ್ನು ಗಮನಿಸಿ ನಾನು ಹೇಳುವುದನ್ನು ಕೇಳು. ನೀನು ರಥವನ್ನು ಧರಿಸಿ, ನಿಯಮಯುಕ್ತನಾಗಿದ್ದಾಗ ನಿನ್ನ ಜೊತೆಯಲ್ಲಿ ನಾನು ಸರಿಯಾಗಿ ವರ್ತಿಸಿದ್ದರೆ ವ್ರತವನ್ನು ಮುಗಿಸಿ ವಿದ್ಯೆಯನ್ನು ಸಂಪಾದಿಸಿದ ನೀನು ನಿನ್ನಲ್ಲಿ ಅನುರಕ್ತಳಾದ ನನ್ನನ್ನು ಅನುರಾಗದಿಂದ ಸ್ವೀಕರಿಸಬೇಕು. ವಿಧಿವತ್ತಾಗಿ ಮಂತ್ರಪುರಸ್ಸರವಾಗಿ ನನ್ನ ಪಾಣಿಗ್ರಹಣವನ್ನು ಮಾಡಿಕೋ.
ಕಚಃ
ಪೂಜ್ಯೋ ಮಾನ್ಯಶ್ಚ ಭಗವಾನ್ ಯಥಾ ತವ ಪಿತಾ ಮಮ |
ತಥಾ ತ್ವಮನವದ್ಯಾಂಗಿ ಪೂಜನೀಯತಮಾ ಮಮ ॥6॥
ಎಲೌ ಸುಂದರಿಯೇ ನಿನ್ನ ತಂದೆಯಾದ ಪೂಜ್ಯನಾದ ಶುಕ್ರನು ನನಗೆ ಹೇಗೆ ಮಾನ್ಯನೋ, ಹಾಗೆಯೇ ನೀನು ಅವನಿಗಿಂತಲೂ ಹೆಚ್ಚು ಮಾನ್ಯಳಾದವಳು.
ಆತ್ಮಪ್ರಾಣೈಃ ಪ್ರಿಯತಮಾ ಭಾರ್ಗವಸ್ಯ ಶುಚಿಸ್ಮಿತೇ |
ತ್ವಂ ಭದ್ರೇ ಧರ್ಮತಃ ಪೂಜ್ಯಾ ಗುರುಪುತ್ರೀ ಮತಾ ಮಮ ॥7॥
ಎಲೈ ಶುಚಿಸ್ಮಿತೆಯೇ ನೀನು ಶುಕ್ರಾಚಾರ್ಯರಿಗೆ ತಮ್ಮ ಪ್ರಾಣಕ್ಕಿಂತ ಪ್ರಿಯಳಾದವಳು. ಮಂಗಳಸ್ವರೂಪಳೇ ಗುರುಪುತ್ರಿಯಾದ ನೀನು ಧರ್ಮದ ದೃಷ್ಟಿಯಿಂದ ನನ್ನಿಂದ ಪೂಜ್ಯಳು ಎಂದು ನನ್ನ ಅಭಿಪ್ರಾಯ.
ಗುರೋರ್ಗರೀಯಸೀ ವೃತ್ತ್ಯಾ ತಸ್ಮಾದ್ ಗುರುತರೀ ಮಮ |
ನ ಮಾಮರ್ಹಸಿ ಕಲ್ಯಾಣಿ ವಕ್ತುಮೇವಂ ಶುಚಿಸ್ಮಿತೇ ॥8॥
ನಿನ್ನ ನಡತೆಯಿಂದ ನನ್ನ ಗುರುಗಳನ್ನೂ ಮೀರಿಸಿದ್ದೀಯೆ, ಆದ್ದರಿಂದ ಗುರುಗಳಿಗಿಂತ ಮಿಗಿಲಾದವಳು ನೀನು. ಕಲ್ಯಾಣಿಯೇ ಮತ್ತು ಶುಚಿಸ್ಮಿತೆಯೇ ನನ್ನನ್ನು ಕುರಿತು ಹೀಗೆ ಮಾತನಾಡಬಾರದು.
ಯಥಾ ಮಮ ಗುರುರ್ನಿತ್ಯಂ ಶುಕ್ರೋ ಮಾನ್ಯಃ ಪಿತಾ ತವ |
ದೇವಯಾನಿ ತಥಾ ತ್ವಂ ಹಿ ನೈವಂ ವಕ್ತುಮಿಹಾರ್ಹಸಿ ॥9॥

ದೇವಯಾನಿ ನಿನ್ನ ತಂದೆಯಾದ ಶುಕ್ರನು ನನಗೆ ಗುರುವಾಗಿ ಹೇಗೆ ಯಾವಾಗಲೂ ಮಾನ್ಯನಾಗಿದ್ದಾನೆಯೋ, ಹಾಗೆಯೇ ನೀನೂ ಸಹ. ಆದ್ದರಿಂದ ಹೀಗೆ ಮಾತನಾಡಬೇಡ.
ದೇವಯಾನೀ
ಗುರುಪುತ್ರಸ್ಯ ಪುತ್ರೋ ಮೇ ನನು ತ್ವಮಸಿ ಮೇ ಪಿತುಃ |
ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ಮಮಾಪಿ ತ್ವಂ ದ್ವಿಜೋತ್ತಮ ॥10॥
ಎಲೈ ಬ್ರಾಹ್ಮಣಶ್ರೇಷ್ಠನೇ ನನ್ನ ತಂದೆಯ ಗುರುಸ್ಥಾನದಲ್ಲಿರುವ ಆಂಗಿರಸ ಪುತ್ರರಾದ ಬೃಹಸ್ಪತಿಗಳ ಪುತ್ರನು ನೀನು. ಆದ್ದರಿಂದ ನೀನು ನನಗೂ ಸಹ ಮಾನ್ಯನೂ, ಪೂಜ್ಯನೂ ಆಗಿದ್ದೀಯೆ.
ವಿಶಸ್ಯಮಾನೇ ತ್ವಸುರೈಃ ಕಚ ತ್ರಯಿ ಪುನಃ ಪುನಃ |
ತದಾಪ್ರಭೃತಿ ಯಾ ಪ್ರೀತಿಸ್ತಾಂ ತ್ವಮೇವ ಸ್ಮರಸ್ವ ಮೇ ॥11॥
ನಿನ್ನನ್ನು ಅಸುರರು ಮತ್ತೆ ಮತ್ತೆ ಕೊಂದು ಕತ್ತರಿಸಿದಾಗಿನಿಂದ ನಿನ್ನಲ್ಲಿ ನನಗೆ ಎಂತಹ ಪ್ರೀತಿಯಿದೆ ಎಂದು ನೀನೇ ಸ್ಮರಿಸಿಕೋ.
ಸೌಹೃದೇನಾನುರಕ್ತಾಂ ಚ ಭಕ್ತಾಂ ಭಜಿತುಮರ್ಹಸಿ |
ನ ಮಾಮರ್ಹಸಿ ಧರ್ಮಜ್ಞ ತ್ಯಕ್ತುಂ ಭಕ್ತಾಮನಾಥವತ್ ॥12॥
ಪ್ರಣಯದಿಂದ ಅನುರಕ್ತಳಾದ ನನ್ನನ್ನು ನಿನ್ನ ಸೇವಕಿಯಾಗಿ, ಪ್ರಿಯೆಯಾಗಿ ಸ್ವೀಕರಿಸು. ಧರ್ಮಜ್ಞನಾದ ನೀನು ಅನುರಕ್ತಳಾದ ನನ್ನನ್ನು ಅನಾಥಳಂತೆ ತ್ಯಾಗಮಾಡುವುದು ಉಚಿತವಲ್ಲ.
ಕಚಃ
ಅನಿಯೋಜ್ಯೇ ನಿಯೋಕ್ತುಂ ಮಾಂ ದೇವಯಾನಿ ನ ಚಾರ್ಹಸಿ |
ಪ್ರಸೀದ ಸುಭ್ರು ತ್ವಂ ಮಹ್ಯಂ ಗುರೋರ್ಗುರುತರೀ ಶುಭೇ ॥13॥
ಎಲೌ ದೇವಯಾನಿಯೇ, ಮಾಡಬಾರದ ಕೆಲಸವನ್ನು ಮಾಡುವಂತೆ ನೀನು ನನಗೆ ಒತ್ತಾಯ ಮಾಡಬಾರದು. ಸುಂದರಿಯೇ, ಮಂಗಳಸ್ವರೂಪಳೇ ನನ್ನ ಮೇಲೆ ದಯೆಯನ್ನು ತೋರು. ನೀನು ನನ್ನ ಗುರುಗಳಿಗಿಂತ ಶ್ರೇಷ್ಠಳಾದವಳು.
ಯತ್ರೋಷಿತಂ ವಿಶಾಲಾಕ್ಷಿ ತ್ವಯಾ ಚಂದ್ರನಿಭಾನನೇ |
ತತ್ರಾಹಮುಷಿತೋ ಭದ್ರೇ ಕುಕ್ಷೌ ಕಾವ್ಯಸ್ಯ ಭಾಮಿನಿ ॥14॥
ಎಲೌ ಚಂದ್ರಮುಖಿಯೇ, ಸುಂದರಿಯೇ, ಮಂಗಳಸ್ವರೂಪಳೇ ನೀನು ಶುಕ್ರಾಚಾರ್ಯರ ಯಾವ ಉದರದಲ್ಲಿ ವಾಸಮಾಡಿದೆಯೋ, ನಾನೂ ಸಹ ಅಲ್ಲಿಯೇ ವಾಸಮಾಡಿದೆ.
ಮಮ ತ್ವಂ ಭಗಿನೀ ಭದ್ರೇ ಮೈವಂ ವೋಚಃ ಶುಭಾನನೇ |
ಸುಖಮಸ್ಮ್ಯುಷಿತೋ ಭದ್ರೇ ನ ಮನ್ಯುರ್ಮಮ ವಿದ್ಯತೇ ॥15॥
ಆದ್ದರಿಂದ ಸುಂದರಮುಖವುಳ್ಳವಳೇ, ನನಗೆ ನೀನು ತಂಗಿಯಾಗಿ ಹೀಗೆ ಮಾತನಾಡಬೇಡ. ಮಂಗಳಸ್ವರೂಪಳೇ ನಿಮ್ಮ ಮನೆಯಲ್ಲಿ ನಾನು ಸುಖವಾಗಿ ಕಾಲ ಕಳೆದಿದ್ದೇನೆ. ನನಗೆ ನಿನ್ನ ಮೇಲೆ ಕೋಪವಿಲ್ಲ.
ಆಪೃಚ್ಛೇ ತ್ವಾಂ ಗಮಿಷ್ಯಾಮಿ ಶಿವಮಾಶಾಸ್ವ ಮೇ ಪಥಿ |
ಅವಿರೋಧೇನ ಧರ್ಮಸ್ಯ ಸ್ಮರ್ತವ್ಯೋಽಹಂ ಕಥಾಂತರೇ |
ಅಪ್ರಮತ್ತೋತ್ಥಿತಾ ನಿತ್ಯಮಾರಾಧಯ ಗುರುಂ ಮಮ ॥16॥
ನಿನ್ನ ಅನುಮತಿಯನ್ನು ಕೇಳುತ್ತಿದ್ದೇನೆ. ನನಗೆ ದಾರಿಯಲ್ಲಿ ಶುಭವಾಗಲಿ ಎಂದು ಆಶೀರ್ವಾದ ಮಾಡು. ಧರ್ಮಕ್ಕೆ ವಿರೋಧ ಬರದಂತೆ ಬೇರೆ ಮಾತುಗಳ ಮಧ್ಯದಲ್ಲಿ ನನ್ನನ್ನು ಒಮ್ಮೆ ಸ್ಮರಿಸಿಕೋ. ಜಾಗರೂಕಳಾಗಿದ್ದು ನನ್ನ ಗುರುಗಳನ್ನು ಆರಾಧಿಸುವುದರಲ್ಲಿ ಯಾವಾಗಲೂ ಉದ್ಯುಕ್ತಳಾಗಿರು.
ದೇವಯಾನೀ
ಧರ್ಮಕಾರ್ಯೇ ನಿಯುಂಜಾನಾ ಕನ್ಯಾ ಸಂಪ್ರಾಪ್ತಯೌವನಾ |
ಧರ್ಮಮೇವ ಪ್ರಯುಂಜಾನಾ ಪ್ರತ್ಯಾಖ್ಯಾತಾ ತ್ವಯಾಽನಘ |
ತಸ್ಮಾತ್ ಕಚ ನ ತೇ ವಿದ್ಯಾ ಸಿದ್ಧಿಮೇಷಾ ಗಮಿಷ್ಯತಿ ॥17॥
ಯೌವನವನ್ನು ಪಡೆದ ಕನ್ಯೆಯಾದ ನಾನು ನಿನ್ನನ್ನು ಧರ್ಮಕಾರ್ಯದಲ್ಲಿಯೇ ಒತ್ತಾಯ ಮಾಡಿದರೂ ನೀನು ನನ್ನನ್ನು ನಿರಾಕರಿಸಿದ್ದೀಯೆ. ಆದ್ದರಿಂದ ಅನಘನಾದ ಎಲೈ ಕಚನೇ, ನೀನು ಪಡೆದ ಮೃತಸಂಜೀವಿನಿ ವಿದ್ಯೆಯು ನಿನಗೆ ಫಲಿಸುವುದಿಲ್ಲ.
ಕಚಃ
ಶುಕ್ರಪುತ್ರೀತಿ ಮತ್ವಾಽಹಂ ಪ್ರತ್ಯಾಖ್ಯಾಸ್ಯೇ ನ ದೋಷತಃ |
ಗುರುಣಾ ಚಾಭ್ಯನುಜ್ಞಾತೋ ಧರ್ಮತಃ ಪ್ರಬ್ರವೀಮ್ಯಹಮ್ ॥18॥
ಶುಕ್ರಾಚಾರ್ಯರ ಮಗಳೆಂದು ತಿಳಿದು ನಿನ್ನ ಮಾತನ್ನು ನಿರಾಕರಿಸಿದೆ ಹೊರತು ದೋಷಬುದ್ಧಿಯಿಂದಲ್ಲ. ಗುರುಗಳ ಅಪ್ಪಣೆಯನ್ನು ಪಡೆದು ನಾನು ಧರ್ಮದಿಂದಲೇ ಮಾತನಾಡುತ್ತಿದ್ದೇನೆ.
ಆರ್ಷಂ ಧರ್ಮಂ ಬ್ರುವಾಣೋಽಹಂ ದೇವಯಾನಿ ಯಥಾ ತ್ವಯಾ|
ಶಪ್ತೋಽಸ್ಮ್ಯನರ್ಹಃ ಶಾಪಸ್ಯ ಕಾಮತೋಽದ್ಯ ನ ಧರ್ಮತಃ ॥19॥
ದೇವಯಾನಿಯೇ, ಋಷಿಧರ್ಮವನ್ನು ಹೇಳುವ, ಶಾಪಕ್ಕೆ ಅನರ್ಹನಾದ ನನ್ನನ್ನು ನೀನು ಕಾಮದಿಂದ ಶಪಿಸಿದ್ದೀಯೆ. ಧರ್ಮದಿಂದಲ್ಲ.
ತಸ್ಮಾದ್ ಭವತ್ಯಾ ಯಃ ಕಾಮೋ ನ ತಥಾ ಸಂಭವಿಷ್ಯತಿ |
ಋಷಿಪುತ್ರೋ ನ ತೇ ಕಶ್ಚಿದ್ ದ್ವಿಜಃ ಪಾಣಿಂ ಗ್ರಹೀಷ್ಯತಿ ॥20॥

ಆದ್ದರಿಂದ ನಿನ್ನ ಕಾಮವು ಹೇಗಿದೆಯೋ ಹಾಗೇ ಎಂದೂ ಪೂರೈಸುವುದಿಲ್ಲ. ಋಷಿಪುತ್ರನಾದ ಯಾವ ಬ್ರಾಹ್ಮಣನೂ ನಿನ್ನನ್ನು ಪಾಣಿಗ್ರಹಣ ಮಾಡಿಕೊಳ್ಳುವುದಿಲ್ಲ.
ಫಲಿಷ್ಯತಿ ಚ ವೈ ವಿದ್ಯಾ ನೇತಿ ಯಚ್ಚಾತ್ಥ ಮಾಂ ತಥಾ |
ಅಧ್ಯಾಪಯಿಷ್ಯಾಮಿ ತು ಯಂ ತಸ್ಯ ವಿದ್ಯಾ ಫಲಿಷ್ಯತಿ ||21||
ನಿನ್ನ ವಿದ್ಯೆಯು ಫಲಿಸದೇ ಹೋಗಲಿ ಎಂದು ನೀನು ನನಗೆ ಶಾಪವಿತ್ತಿದ್ದೀಯೆ. ಅದು ಹಾಗೆಯೇ ಆಗಲಿ. ಆದರೆ ನಾನು ಯಾರಿಗೆ ಆ ವಿದ್ಯೆಯನ್ನು ಉಪದೇಶಿಸುತ್ತೇನೆಯೋ, ಅವರಿಗೆ ಆ ವಿದ್ಯೆಯು ಫಲಿಸುತ್ತದೆ.
ವೈಶಂಪಾಯನಃ
ಏವಮುಕತ್ವ ದ್ವಿಜಶ್ರೇಷ್ಠೋ ದೇವಯಾನೀಂ ಕಚಸ್ತದಾ |
ತ್ರಿದಶೇಶಾಲಯಂ ಶೀಘ್ರಂ ಜಗಾಮ ದ್ವಿಜಸತ್ತಮಃ ||22||
ದ್ವಿಜಶ್ರೇಷ್ಠನಾದ ಕಚನು ದೇವಯಾನಿಯನ್ನು ಕುರಿತು ಹೀಗೆ ಹೇಳಿ ಸ್ವರ್ಗವನ್ನು ಕುರಿತು ಶೀಘ್ರವಾಗಿ ಪ್ರಯಾಣ ಮಾಡಿದನು.
ತಮಾಗತಮಭಿಪ್ರೇತ್ಯ ದೇವಾಶ್ಚೇಂದ್ರಪುರೋಗಮಾಃ |
ಬೃಹಸ್ಪತಿಂ ಸಭಾಜ್ಯೇದಂ ಕಚಮಾಹುರ್ಮುದಾನ್ವಿತಾಃ ||23||
ಕಚನು ಹಿಂದಿರುಗಿದುದನ್ನು ನೋಡಿ ಇಂದ್ರ ಮೊದಲಾದ ದೇವತೆಗಳು ಬೃಹಸ್ಪತ್ಯಾಚಾರ್ಯರರನ್ನು ಸತ್ಕರಿಸಿ ಕಚನನ್ನು ಕುರಿತು ಸಂತೋಷದಿಂದ ಹೀಗೆ ಹೇಳಿದರು -
ದೇವಾಃ
ಯತ್ತ್ವಮಸ್ಮದ್ಧಿತಂ ಕರ್ಮ ಕೃತವಾನ್ ಪರಮಂ ಮಹತ್ |
ನ ತೇ ಯಶೋ ಜರಾಂ ಗಂತಾ ಭಾಗಭಾಕ್ ತ್ವಂ ಭವಿಷ್ಯಸಿ ||24||
ನೀನು ನಮ್ಮ ಸಲುವಾಗಿ ಬಹುದೊಡ್ಡದಾದ ಹಿತವಾದ ಕಾರ್ಯವನ್ನು ಮಾಡಿದುದರಿಂದ ನಿನ್ನ ಕೀರ್ತಿಯು ಎಂದೂ ಮುಪ್ಪನ್ನು ಹೊಂದದಿರಲಿ. ನಮ್ಮ ಭಾಗಕ್ಕೆ (ಸ್ವತ್ತಿಗೆ, ಸಂಪತ್ತಿಗೆ, ಐಶ್ವರ್ಯಕ್ಕೆ) ನೀನು ಭಾಗಧಾರಿಯಾಗು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಷಟ್‌ಷಷ್ಟಿತಮೋಽಧ್ಯಾಯಃ ||
|| ಇತಿ ಸಂಭವಪರ್ವಣಿ ಚತುರ್ದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ಅರವತ್ತೇಳನೆಯ ಅಧ್ಯಾಯ
(ಶರ್ಮಿಷ್ಠೆ ದೇವಯಾನಿಯರ ಕಲಹ, ಯಯಾತಿಯಿಂದ ದೇವಯಾನಿಯ ಉದ್ಧರಣ)
ವೈಶಂಪಾಯನಃ
ಕೃತವಿದ್ಯೇ ಕಚೇ ಪ್ರಾಪ್ತೇ ಹೃಷ್ಟರೂಪಾ ದಿವೌಕಸಃ |
ಕಚಾದಧೀತ್ಯ ತಾಂ ವಿದ್ಯಾಂ ಕೃತಾರ್ಥಾ ಭರತರ್ಷಭ ||1||
ಎಲೈ ಭರತರ್ಷಭನೇ, ಕಚನು ವಿದ್ಯೆಯನ್ನು ಸಂಪಾದಿಸಿ ಹಿಂದಿರುಗುತ್ತಿರಲು ದೇವತೆಗಳು ಕಚನಿಂದ ಆ ವಿದ್ಯೆಯನ್ನು ಕಲಿತು ಕೃತಾರ್ಥರಾದರು.
ತತೋ ದೇವಾಃ ಸಮಾಗಮ್ಯ ಶತಕ್ರತುಮಥಾಬ್ರುವನ್ |
ಕಾಲಸ್ತೇ ವಿಕ್ರಮಸ್ಯಾಯಂ ಜಹಿ ಶತ್ರೂನ್ ಪುರಂದರ ||2||
ಅನಂತರ ದೇವತೆಗಳು ಇಂದ್ರನನ್ನು ಸಮೀಪಿಸಿ ಎಲೈ ಪುರಂದರನೇ, ಇದು ನಿನ್ನ ವಿಕ್ರಮದಕಾಲ, ಶತ್ರುಗಳನ್ನು ಸಂಹರಿಸು ಎಂದು ಹೇಳಿದರು.
ಏವಮುಕ್ತಸ್ತು ಭಗವಾನ್ ಸಹ ತೈಸ್ತ್ರಿದಿವೇಶ್ವರೈಃ |
ತಥೇತ್ಯುಕತ್ವಽಭಿಚಕ್ರಾಮ ಸೋಽಪಶ್ಯತ ವನೇ ಸ್ತ್ರಿಯಃ ||3||
ಹೀಗೆ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಪೂಜ್ಯನಾದ ಇಂದ್ರನು ಹಾಗೆಯೇ ಆಗಲಿ ಎಂದು ಹೇಳಿ ಹೊರಟು ಕಾಡಿನಲ್ಲಿ ಸ್ತ್ರೀಯರನ್ನು ನೋಡಿದನು.
ಕ್ರೀಡಂತೀನಾಂ ಕನ್ಯಕಾನಾಮಾರಾಮೇ ನಂದನೋಪಮೇ |
ವಾಯುಭೂತ್ವಾ ಸ ವಸತ್ರಣಿ ಸರ್ವಾಣ್ಯೇವ ವ್ಯಮಿಶ್ರಯತ್ ||4||
ನಂದನವನಸದೃಶವಾದ ಕನ್ಯಾಗಾರದ ವನದಲ್ಲಿ ಜಲಕ್ರೀಡೆ- ಯಾಡುತ್ತಿರುವ ಅವರನ್ನು ನೋಡಿ ಇಂದ್ರನು ವಾಯುರೂಪವನ್ನು ತಾಳಿ ದಡದ ಮೇಲಿದ್ದ ಅವರ ವಸ್ತ್ರಗಳನ್ನು ಮಿಶ್ರಣವನ್ನು ಮಾಡಿದನು.
ತತೋ ಜಲಾತ್ ಸಮುತ್ತೀರ್ಯ ತಾಃ ಕನ್ಯಾಃ ಸಹಿತಾಸ್ತದಾ |
ವಸತ್ರಣಿ ಜಗೃಹುಸ್ತಾನಿ ಯಥಾಽಽಸನ್ನಾನ್ಯನೇಕಶಃ ||5||
ಅನಂತರ ಆ ಕನ್ಯೆಯರೆಲ್ಲರೂ ನೀರಿನಿಂದ ಮೇಲಕ್ಕೆ ಎದ್ದು ಬಂದು ತಮ್ಮತಮ್ಮ ಸಮೀಪವಿದ್ದ ವಸ್ತ್ರಗಳನ್ನು ಕೈಗೆತ್ತಿಕೊಂಡರು.
ತತ್ರ ವಾಸೋ ದೇವಯಾನ್ಯಾಃ ಶರ್ಮಿಷ್ಠಾ ಜಗೃಹೇ ತದಾ |
ವ್ಯತಿಮಿಶ್ರಮಜಾನಂತೀ ದುಹಿತಾ ವೃಷಪರ್ವಣಃ ||6||
ಅವರಲ್ಲಿ ವೃಷಪರ್ವನ ಮಗಳಾದ ಶರ್ಮಿಷ್ಠೆಯು ವಸ್ತ್ರಗಳ ಮಿಶ್ರಣವನ್ನು ತಿಳಿಯದೆ ದೇವಯಾನಿಯ ವಸ್ತ್ರವನ್ನು

ತೆಗೆದುಕೊಂಡಳು.
ತತಸ್ತಯೋರ್ಮಿಥಸ್ತತ್ರ ವಿರೋಧಃ ಸಮಜಾಯತ |
ದೇವಯಾನ್ಯಾಶ್ಚ ರಾಜೇಂದ್ರ ಶರ್ಮಿಷ್ಠಾಯಾಶ್ಚ ತತ್ಕೃತೇ ॥7॥
ಅನಂತರ ಅಲ್ಲಿ ವಸ್ತ್ರದ ಸಲುವಾಗಿ ದೇವಯಾನಿ ಮತ್ತು ಶರ್ಮಿಷ್ಠೆಯರಿಗೆ ಪರಸ್ಪರವಾಗಿ ಕಲಹವು ಉಂಟಾಯಿತು.
ದೇವಯಾನೀ
ಕಸ್ಮಾದ್ ಗೃಹ್ಣಾಸಿ ಮೇ ವಸ್ತ್ರಂ ಶಿಷ್ಯಭೂತಾ ಮಮಾಸುರಿ |
ಸಮುದಾಚಾರಹೀನಾಯಾ ನ ತೇ ಶ್ರೇಯೋ ಭವಿಷ್ಯತಿ ॥8॥
ಎಲೌ ಅಸುರಪುತ್ರಿಯೇ ನನ್ನ ಶಿಷ್ಯಳಾಗಿದ್ದು ನನ್ನ ವಸ್ತ್ರಗಳನ್ನು ಏಕೆ ತೆಗೆದುಕೊಳ್ಳುತ್ತಿದ್ದೀಯೆ? ಶ್ರೇಷ್ಠ ಆಚಾರಹೀನಳಾದ ನಿನಗೆ ಒಳ್ಳೆಯದಾಗುವುದಿಲ್ಲ.
ಶರ್ಮಿಷ್ಠಾ
ಆಸೀನಂ ಚ ಶಯಾನಂ ಚ ಪಿತಾ ತೇ ಪಿತರಂ ಮಮ |
ಸ್ತೌತಿ ವಂದತಿ ಚಾಭೀಕ್ಷ್ಣಂ ನೀಚೈಃ ಸ್ಥಿತ್ವಾ ವಿನೀತವತ್ ॥9॥
ಕುಳಿತಿರುವ ಅಥವಾ ಮಲಗಿರುವ ನನ್ನ ತಂದೆಯನ್ನು ನಿನ್ನ ತಂದೆಯು ಕೆಳಗೆ ನಿಂತು ವಿನಯದಿಂದ ಯಾವಾಗಲೂ ಸ್ತೋತ್ರಮಾಡುತ್ತಾನೆ ಮತ್ತು ನಮಸ್ಕರಿಸುತ್ತಾನೆ.
ಸ್ತುವತೋ ದುಹಿತಾ ತ್ವಂ ವೈ ಯಾಚತಃ ಪ್ರತಿಗೃಹ್ಣತಃ |
ಸುತಾಽಹಂ ಸ್ತೂಯಮಾನಸ್ಯ ದದತೋಽಪ್ರತಿಗೃಹ್ಣತಃ ॥10॥
ನೀನು ಸ್ತೋತ್ರಮಾಡುವವನ, ಬೇಡುವವನ ಮತ್ತು ಸ್ವೀಕರಿಸುವವನ ಮಗಳು. ನಾನು ಸ್ತೋತ್ರಮಾಡಲ್ಪಡುವವನ, ಕೊಡುವವನ ಸ್ವೀಕಾರಮಾಡದಿರುವವನ ಮಗಳು.
ಆಧೂನ್ವಸ್ವ ವಿಧೂನ್ವಸ್ವ ದ್ರುಹ್ಯ ಕುಪ್ಯ ಚ ಯಾ ಕಿಲ |
ಅನಾಯುಧಾ ಸಾಯುಧಾಯಾ ರಿಕ್ತಾ ಕ್ಷುಭ್ಯಸಿ ಭಿಕ್ಷುಕಿ ॥11॥
ಎಲೌ ಭಿಕ್ಷುಕಿಯೇ, ಹಾರಾಡು, ತೂರಾಡು, ಕೋಪವನ್ನು ಮಾಡು, ದ್ರೋಹವನ್ನು ಮಾಡು, ಏನು ಬೇಕಾದರೂ ಮಾಡು. ಅನಾಯುಧಳಾಗಿ ಬರಿಗೈಯಲ್ಲಿರುವ ನೀನು ಆಯುಧಹಸ್ತಳಾದ ನನ್ನ ಮೇಲೆ ಹೊಟ್ಟೆಕಿಚ್ಚು ಪಡುತ್ತಿದ್ದೀಯೆ.
ಲಪ್ಸ್ಯಸೇ ಪ್ರತಿಯೋದ್ಧಾರಂ ನ ಹಿ ತ್ವಾಂ ಗಣಯಾಮ್ಯಹಮ್ |
ಪ್ರತಿಕೂಲಂ ವದಸಿ ಚೇದಿತಃ ಪ್ರಭೃತಿ ಯಾಚಕಿ |
ಆಕೃಷ್ಯ ಮಮ ದಾಸೀಭಿಃ ಪ್ರಸ್ಥಾಪ್ಯಾಮಿ ಬಹಿರ್ಬಹಿಃ ॥12॥
ನಿನಗೆ ಬ್ರಾಹ್ಮಣ ಕನ್ಯೆಯರ ಸಮುದಾಯವೇ ನನ್ನ ವಿರುದ್ಧ ಪ್ರತಿಭಟಿಸಲು ದೊರೆಯಬಹುದು. ಬೇರೆ ಯಾರಾದರೂ ದೊರೆಯಬಹುದು, ನಾನು ನಿನ್ನನ್ನು ಗಣನೆಗೇ ತಂದುಕೊಳ್ಳುವುದಿಲ್ಲ. ಭಿಕ್ಷೆಬೇಡುವವಳೇ, ಇನ್ನು ಮುಂದೆ ನನಗೇನಾದರೂ ವಿರೋಧವಾಗಿ ಮಾತನಾಡಿದರೆ ನಿನ್ನನ್ನು ನನ್ನ ದಾಸಿಯರಿಂದ ಎಳೆಸಿ ಊರಿನ ಹೊರಗೆ ಬಹುದೂರದಲ್ಲಿ ಹಾಕಿಸುತ್ತೇನೆ.
ವೈಶಂಪಾಯನಃ
ಸಾ ಮೂರ್ಚ್ಛಿತಾ ದೇವಯಾನೀಂ ಗತ್ವಾ ಹೃತ್ವಾ ಚ ವಾಸಸೀ |
ಶರ್ಮಿಷ್ಠಾ ಪ್ರಾಕ್ಷಿಪತ್ ಕೂಪೇ ತತಃ ಸ್ವಂ ಪುರಮಾವಿಶತ್ ॥13॥
ಕ್ರೋಧಮೂರ್ಚ್ಛಿತಳಾದ ಶರ್ಮಿಷ್ಠೆಯು ದೇವಯಾನಿಯ ಸಮೀಪಕ್ಕೆ ಹೋಗಿ ಅವಳ ಕೈಯಲ್ಲಿದ್ದ ವಸ್ತ್ರಗಳನ್ನು ಕಿತ್ತುಕೊಂಡು ಅವಳನ್ನು ಒಂದು ಬಾವಿಗೆ ಎಸೆದು ತನ್ನ ಪಟ್ಟಣಕ್ಕೆ ಹಿಂದಿರುಗಿದಳು.
ಹತೇಯಮಿತಿ ವಿಜ್ಞಾಯ ಶರ್ಮಿಷ್ಠಾ ಪಾಪನಿಶ್ಚಯಾ |
ಅನವೇಕ್ಷ್ಯ ಯಯೌ ವೇಶ್ಮ ಕ್ರೋಧವೇಗಪರಾಯಣಾ ॥14॥
ಪಾಪನಿಶ್ಚಯವುಳ್ಳ ಶರ್ಮಿಷ್ಠೆಯು ಕ್ರೋಧವೇಗಕ್ಕೆ ವಶವಾಗಿ ಅವಳು ಮೃತಳಾದಳೆಂದು ತಿಳಿದು ಕೂಪದ ಕಡೆಗೆ ನೋಡದೇ ಮನೆಗೆ ಹಿಂದಿರುಗಿದಳು.
ಪ್ರವಿಶ್ಯ ಸ್ವಗೃಹಂ ಸ್ವಸ್ಥಾ ಧರ್ಮಮಾಸುರಮಾಶ್ರಿತಾ |
ಅಥ ತಂ ದೇಶಮಾಗಚ್ಛದ್ ಯಯಾತಿರ್ನಹುಷಾತ್ಮಜಃ ॥15॥
ಆಸುರಸ್ವಭಾವದವಳಾಗಿದ್ದ ಕಾರಣದಿಂದ ತನ್ನ ಮನೆಗೆ ಹಿಂದಿರುಗಿ ಸಮಾಧಾನದಿಂದಲೇ ಇದ್ದಳು. ಅನಂತರ ಆ ಪ್ರದೇಶಕ್ಕೆ ನಹುಷನ ಮಗನಾದ ಯಯಾತಿಯು ಬಂದನು.
ಶ್ರಾಂತಯುಗ್ಯಹಯಃ ಶ್ರೀಮಾನ್ ಮೃಗಲಿಪ್ಸುಃ ಪಿಪಾಸಿತಃ |
ಸ ನಾಹುಷಃ ಪ್ರೇಕ್ಷಮಾಣ ಉದಪಾನಂ ಗತೋದಕಮ್ |
ದದರ್ಶ ಕನ್ಯಾಂ ರೂಪೇಣ ದೀಪ್ತಾಮಗ್ನಿಶಿಖಾಮಿವ ॥16॥
ಬೇಟೆಯಾಡಲು ಹೊರಟಿದ್ದ ಅವನ ರಥಕ್ಕೆ ಹೂಡಲು ಯೋಗ್ಯವಾದ ಕುದುರೆಗಳು ದಣಿದು, ಅವನೂ ಬಾಯಾರಿಕೆಯಿಂದ ಕೂಡಿದವನಾಗಿದ್ದು ನೀರಿನ ಪಾತ್ರವನ್ನು ಹುಡುಕುತ್ತಾ ನೀರು ಇಂಗಿಹೋಗಿದ್ದ ಆ ಕೂಪದ ಬಳಿಗೆ ಬಂದು ನೋಡಿದನು. ಅದರಲ್ಲಿ ಅವನು ರೂಪದಿಂದ ಅಗ್ನಿಶಿಖೆಯಂತೆ ಬೆಳಗುತ್ತಿದ್ದ ಕನ್ಯೆಯನ್ನು ನೋಡಿದನು.
ತಾಂ ದೃಷ್ಟ್ವಾ ರೂಪಸಂಪನ್ನಾಂ ಸರ್ವಾಲಂಕಾರಭೂಷಿತಾಮ್ |
ಸರ್ವಲಕ್ಷಣಸಂಪನ್ನಾಮಪೃಚ್ಛತ್ ಸ ನರಾಧಿಪಃ ॥17॥
ಸರ್ವಲಕ್ಷಣಸಂಪನ್ನಳೂ, ಸರ್ವಾಲಂಕಾರಭೂಷಿತಳೂ ಸೌಂದರ್ಯವತಿಯೂ ಆದ ಅವಳನ್ನು ನೋಡಿ ಯಯಾತಿ ರಾಜನು

ಅವಳನ್ನು ಕೇಳಿದನು.
ತಾಮಪೃಚ್ಛತ್ ಸ ದೃಷ್ಟ್ವೈವ ಕನ್ಯಾಮಮರವರ್ಣಿನೀಮ್ |
ಸಾಂತ್ವಯಿತ್ವಾ ನರಶ್ರೇಷ್ಠ ಸಾಮ್ನಾ ಪರಮವಲ್ಗುನಾ ॥18॥
ದೇವತೆಯಂತಿರುವ ಕನ್ಯೆಯನ್ನು ನೋಡಿದ ರಾಜನು ಅವಳನ್ನು ಮಧುರವಾದ ಮಾತುಗಳಿಂದ ಸಮಾಧಾನಪಡಿಸಿ ಅವಳನ್ನು ಕೇಳಿದನು.
ಕಾ ತ್ವಂ ತಾಮ್ರನಖೀ ಶ್ಯಾಮಾ ಸುಮೃಷ್ಟಮಣಿಕುಂಡಲಾ |
ದೀರ್ಘಂ ಧ್ಯಾಯಸಿ ಚಾತ್ಯರ್ಥಂ ಕಸ್ಮಾಚ್ಛ್ವಸಸಿ ಚಾತುರಾ ॥19॥
ಕಥಂ ಚ ಪತಿತಾ ಹ್ಯಸ್ಮಿನ್ ಕೂಪೇ ವೀರುತ್ತೃಣಾವೃತೇ |
ದುಹಿತಾ ಚೈವ ಕಸ್ಯ ತ್ವಂ ಸರ್ವಂ ವದ ಸುಮಧ್ಯಮೇ ॥20॥
ಕೆಂಪಾದ ಉಗುರುಗಳುಳ್ಳ, ಶ್ಯಾಮರೂಪವುಳ್ಳ, ಒಳ್ಳೆಯ ಕರ್ಣಕುಂಡಲಗಳನ್ನು ಧರಿಸಿದ ನೀನು ಯಾರು ? ತುಂಬಾ ಯೋಚನೆಯನ್ನು ಮಾಡುತ್ತಿದ್ದೀಯೆ. ಏಕೆ ಉದ್ವೇಗದಿಂದ ಉಸಿರಾಡುತ್ತಿದ್ದೀಯೆ?
ಈ ಹುಲ್ಲು ಗಿಡಗಳಿಂದ ತುಂಬಿರುವ ಬಾವಿಯೊಳಗೆ ನೀನು ಹೇಗೆ ಬಿದ್ದೆ? ನೀನು ಯಾರ ಮಗಳು? ಸುಂದರಿಯೇ ನನಗೆ ಎಲ್ಲವನ್ನು ಹೇಳು.
ದೇವಯಾನೀ
ಯೋಽಸೌ ದೇವೈರ್ಹತಾನ್ ದೈತ್ಯಾನುತ್ಥಾಪಯತಿ ವಿದ್ಯಯಾ |
ತಸ್ಯ ಶುಕ್ರಸ್ಯ ಕನ್ಯಾಽಹಮಿದಮಾಸಾದಿತಂ ಮಯಾ ॥21॥
ದೇವತೆಗಳಿಂದ ಕೊಲ್ಲಲ್ಪಟ್ಟ ದೈತ್ಯರನ್ನು ಯಾರು ತಮ್ಮ ವಿದ್ಯೆಯ ಬಲದಿಂದ ಬದುಕಿಸುತ್ತಾರೋ ಅಂತಹ ಶುಕ್ರಾಚಾರ್ಯರ ಮಗಳು ನಾನು. ನನಗೆ ಇಂತಹ ಪರಿಸ್ಥಿತಿಯು ಪ್ರಾಪ್ತವಾಗಿದೆ.
ಪೃಚ್ಛಸೇ ಮಾಂ ಕಸ್ತ್ವಮಸಿ ರೂಪವೀರ್ಯಬಲಾನ್ವಿತಃ |
ಬ್ರೂಹ್ಯತ್ರಾಗಮನಂ ಕಿಂ ವಾ ಶ್ರೋತುಮಿಚ್ಛಾಮಿ ತತ್ವತಃ ॥22॥
ನೀನು ಯಾರು ಎಂದು ನನ್ನನ್ನು ಕೇಳುತ್ತಿದ್ದೀಯೆ. ನಾನೂ ಸಹ ರೂಪವೀರ್ಯಬಲಾನ್ವಿತನಾದ ನೀನು ಯಾರು? ಇಲ್ಲಿಗೆ ಏಕೆ ಬಂದೆ ಎಂಬುದನ್ನು ಯಥಾರ್ಥವಾಗಿ ಕೇಳಲು ಬಯಸುತ್ತೇನೆ.
ಯಯಾತಿಃ
ಯಯಾತಿರ್ನಾಹುಷೋಽಹಂ ತು ಶ್ರಾಂತೋಽದ್ಯ ಮೃಗಕಾಂಕ್ಷಯಾ|
ಅತ್ರಾಹಮಾಗತೋ ಭದ್ರೇ ದೃಷ್ಟ್ವಾನಸ್ಮಿ ತ್ವಾಮಿಹ ॥23॥
ಎಲೈ ಮಂಗಳಸ್ವರೂಪಳೇ, ನಾನು ನಹುಷನ ಮಗನಾದ ಯಯಾತಿ. ಬೇಟೆಯಾಡಲು ಹೊರಟ ನಾನು ಶ್ರಾಂತನಾಗಿ ಇಲ್ಲಿಗೆ ಬಂದು ಈ ಕೂಪದಲ್ಲಿ ನಿನ್ನನ್ನು ನೋಡಿದೆ.
ದೇವಯಾನೀ
ಏಷ ಮೇ ದಕ್ಷಿಣೋ ರಾಜನ್ ಪಾಣಿಸ್ತಾಮ್ರನಖಾಂಗುಲಿಃ |
ಸಮುದ್ಧರ ಗೃಹೀತ್ವಾ ತು ಕುಲೀನಸ್ತ್ವಂ ಹಿ ಮೇ ಮತಃ ॥24॥
ಎಲೈ ರಾಜನೇ, ಇದು ಕೆಂಪಾದ ಉಗುರುಗಳುಳ್ಳ ಬೆರಳುಳ್ಳ ನನ್ನ ಹಸ್ತ. ಇದನ್ನು ಹಿಡಿದುಕೊಂಡು ನನ್ನನ್ನು ಮೇಲಕ್ಕೆತ್ತು. ನೀನು ಸತ್ಕುಲಪ್ರಸೂತನಾಗಿದ್ದೀಯೆ ಎಂದು ನನ್ನ ಅಭಿಪ್ರಾಯ.
ಭೂಯೋಽಪಿ ತ್ವಾಮುಪಾಗಮೇ ವೀರ್ಯವಂತಂ ಮನಸ್ವಿನಮ್ |
ಅಸ್ಮಾನ್ನಾಂ ಸಂಶಯಾದ್ ರಾಜನ್ ಮೋಕ್ಷಯಾಶು ವಿಶಾಂಪತೇ॥25॥
ಪರಾಕ್ರಮಶಾಲಿಯೂ, ಧೈರ್ಯಶಾಲಿಯೂ ಆದ ನಿನ್ನನ್ನು ಮತ್ತೂ ಪ್ರಾರ್ಥಿಸುತ್ತೇನೆ. ಎಲೈ ಪ್ರಜಾಪಾಲಕನಾದ ರಾಜನೇ, ನನ್ನನ್ನು ಈ ಸಂಕಟದಿಂದ ಪಾರುಮಾಡು.
ವೈಶಂಪಾಯನಃ
ಸ್ತ್ರೀ ಚೈಷಾ ಬ್ರಾಹ್ಮಣೀ ಚೇತಿ ವಿಜ್ಞಾಯೈನಾಂ ಸ ನಾಹುಷಃ |
ಗೃಹೀತ್ವಾ ದಕ್ಷಿಣಂ ಪಾಣಿಮುಜ್ಜಹಾರ ತತೋಽವಟಾತ್ ॥26॥
ಅವಳು ಬ್ರಾಹ್ಮಣ ಸ್ತ್ರೀ ಎಂದು ತಿಳಿದು ಯಯಾತಿಯು ಅವಳ ದಕ್ಷಿಣಪಾಣಿಯನ್ನು ಹಿಡಿದು ಕೂಪದಿಂದ ಅವಳನ್ನು ಮೇಲಕ್ಕೆತ್ತಿದನು.
ಉದ್ಧೃತ್ಯ ಚೈನಾಂ ತರಸಾ ತಸ್ಮಾತ್ ಕೂಪಾನ್ನರಾಧಿಪಃ |
ಗಚ್ಛ ಭದ್ರೇ ಯಥಾಕಾಮಂ ನ ಭಯಂ ವಿದ್ಯತೇ ತವ ॥27॥
ಆ ರಾಜನು ಶೀಘ್ರವಾಗಿ ಅವಳನ್ನು ಕೂಪದಿಂದ ಮೇಲೆತ್ತಿ ಮಂಗಳಸ್ವರೂಪಳೇ, ಶೀಘ್ರವಾಗಿ ನಿನಗೆ ಬೇಕಾದ ಕಡೆ ಹೋಗು, ನಿನಗೆ ಯಾವ ಭಯವೂ ಇಲ್ಲ ಎಂದು ಹೇಳಿದನು.
ಇತ್ಯುಚ್ಯಮಾನಾ ನೃಪತಿಂ ದೇವಯಾನೀದಮುತ್ತರಮ್ |
ಉವಾಚ ಮಾಮುಪಾದಾಯ ಗಚ್ಛ ಶೀಘ್ರಂ ಪ್ರಿಯೋಽಸಿ ಮೇ ॥28॥
ಹೀಗೆ ಹೇಳಲ್ಪಟ್ಟ ದೇವಯಾನಿಯು ಆ ರಾಜನನ್ನು ಕುರಿತು ನೀನು ನನಗೆ ಪ್ರಿಯನಾದವನು, ಆದ್ದರಿಂದ ನನ್ನನ್ನು ಕರೆದುಕೊಂಡೇ ಬೇಗ ಹೋಗು ಎಂದು ಉತ್ತರವನ್ನು ಕೊಟ್ಟಳು.
ಗೃಹೀತಾಽಹಂ ತ್ವಯಾ ಪಾಣೌ ತಸ್ಮಾದ್ ಭರ್ತಾ ಭವಿಷ್ಯಸಿ |

ಇತ್ಯೇವಮುಕ್ತೋ ನೃಪತಿರಾಹ ಕ್ಷತ್ರಕುಲೋದ್ಭವಃ ॥29॥
ನೀನು ನನ್ನ ಪಾಣಿಗ್ರಹಣವನ್ನು ಮಾಡಿದ್ದೀಯೆ, ಆದ್ದರಿಂದ ನೀನೇ ನನ್ನ ಪತಿ. ಅವಳ ಈ ಮಾತುಗಳನ್ನು ಕೇಳಿ ಕ್ಷತ್ರಿಯಕುಲದಲ್ಲಿ ಜನಿಸಿದ ರಾಜನು ಹೀಗೆ ಮಾತನಾಡಿದನು -
ತ್ವಂ ಭದ್ರೇ ಬ್ರಾಹ್ಮಣೀ ತಸ್ಮಾನ್ಮಯಾ ನಾರ್ಹಸಿ ಸಂಗಮಮ್ |
ಸರ್ವಲೋಕಗುರುಃ ಕಾವ್ಯಸ್ತ್ವಂ ತಸ್ಯ ದುಹಿತಾ ಹಿ ವೈ |
ತಸ್ಮಾದಪಿ ಭಯಂ ಮೇಽದ್ಯ ತಸ್ಮಾತ್ ಕಲ್ಯಾಣಿ ನಾರ್ಹಸಿ ॥30॥
ಮಂಗಳಸ್ವರೂಪಳೇ, ನೀನು ಬ್ರಾಹ್ಮಣಸ್ತ್ರೀ ಆಗಿದ್ದೀಯೆ. ಆದ್ದರಿಂದ ನನ್ನ ಸಮಾಗಮವು ನಿನಗೆ ಯೋಗ್ಯವಲ್ಲ, ಅಷ್ಟೇ ಅಲ್ಲದೆ ಸರ್ವಲೋಕಗುರುಗಳಾದ ಶುಕ್ರಾಚಾರ್ಯರ ಮಗಳು ನೀನು. ನನಗೆ ಶುಕ್ರಾಚಾರ್ಯರ ಭಯವೂ ಇದೆ. ಆದ್ದರಿಂದ ಎಲೌ ಕಲ್ಯಾಣಿಯೇ ಹೀಗೆ ಮಾತನಾಡಬೇಡ.
ದೇವಯಾನೀ
ಯದಿ ಮದ್ವಚನಾದದ್ಯ ಮಾಂ ನೇಚ್ಛಸಿ ನರಾಧಿಪ |
ತ್ವಾಮೇವ ವರಯೇ ಪಿತ್ರಾ ಪಶ್ಚಾಜ್ಜ್ಞಾಸ್ಯಸಿ ಗಚ್ಛ ಹಿ ॥31॥
ಎಲೈ ರಾಜನೇ ನನ್ನ ಮಾತಿನಂತೆ ನೀನು ನನ್ನನ್ನು ಬಯಸದಿದ್ದರೆ ನನ್ನ ತಂದೆಯ ಮೂಲಕ ನಾನು ನಿನ್ನನ್ನೇ ವರಿಸುತ್ತೇನೆ. ಈ ವಿಷಯವು ನಿನಗೆ ಮತ್ತೆ ತಿಳಿಯುತ್ತದೆ. ಈಗ ಹೋಗು.
ವೈಶಂಪಾಯನಃ
ಆಮಂತ್ರಯಿತ್ವಾ ಸುಶ್ರೋಣೀಂ ಯಯಾತಿಃ ಸ್ವಪುರಂ ಯಯೌ |
ನೃಪೇ ತು ಗತಮಾತ್ರೇ ಸಾ ದೇವಯಾನೀ ಶುಚಿಸ್ಮಿತಾ |
ಕ್ವಚಿದಾರ್ತಾ ಚ ರುದತೀ ವೃಕ್ಷಮಾಶ್ರಿತ್ಯ ತಿಷ್ಠತಿ ॥32॥
ಸುಂದರಿಯಾದ ದೇವಯಾನಿಯ ಅನುಮತಿಯನ್ನು ಪಡೆದು ಯಯಾತಿಯು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ರಾಜನು ಹೊರಟ ತಕ್ಷಣವೇ ಅಲ್ಲಿಯವರೆಗೂ ನಗುತ್ತಿದ್ದ ದೇವಯಾನಿಯು ತಕ್ಷಣ ಆರ್ತಳಾಗಿ ಅಳುತ್ತಾ ಒಂದು ವೃಕ್ಷಮೂಲವನ್ನು ಸೇರಿದಳು.
ತತಶ್ಚಿರಾಯಮಾಣಾಯಾಂ ದುಹಿತರ್ಯಾಹ ಭಾರ್ಗವಃ |
ಧಾತ್ರಿ ತ್ವಮಾನಯ ಕ್ಷಿಪ್ರಂ ದೇವಯಾನೀಂ ಸುಮಧ್ಯಮಾಮ್ |
ಇತ್ಯುಕ್ತಮಾತ್ರೇ ಸಾ ಧಾತ್ರೀ ತ್ವರಿತಾ ಹ್ವಯಿತುಂ ಗತಾ ॥33॥
ಮಗಳು ಬಹಳ ಸಮಯವಾದರೂ ಬರದಿರುವುದನ್ನು ನೋಡಿ ಶುಕ್ರಾಚಾರ್ಯರು ಅವಳ ಧಾತ್ರಿಯನ್ನು ಕರೆದು ಸುಂದರಿಯಾದ ದೇವಯಾನಿಯನ್ನು ಶೀಘ್ರವಾಗಿ ಕರೆದುಕೊಂಡು ಬಾ ಎಂದು ಹೇಳಿದರು. ಹೀಗೆ ಹೇಳಲ್ಪಟ್ಟ ಧಾತ್ರಿಯು ದೇವಯಾನಿಯನ್ನು ಕರೆಯಲು ಶೀಘ್ರವಾಗಿ ಹೋದಳು.
ಯತ್ರ ಯತ್ರ ಸಖೀಭಿಃ ಸಾ ಗತಾ ಪದಮಮಾರ್ಗತ |
ಸಾ ದದರ್ಶ ತಥಾ ದೀನಾಂ ಶ್ರಮಾರ್ತಾಂ ರುದತೀಂ ಸ್ಥಿತಾಮ್ ॥34॥
ಅವಳು ಸ್ನೇಹಿತೆಯರ ಜೊತೆಯಲ್ಲಿ ಹೋಗಿದ್ದ ಸ್ಥಳಗಳಲ್ಲೆಲ್ಲಾ ಹುಡುಕಿಕೊಂಡು ಹೋಗಿ ಒಂದು ಮರದ ಕೆಳಗೆ ದೀನಳಾಗಿ ನಿಂತು ಶ್ರಮದಿಂದ ಕೂಡಿ ಅಳುತ್ತಿರುವ ದೇವಯಾನಿಯನ್ನು ನೋಡಿದಳು.
ಧಾತ್ರೀ
ವೃತ್ತಂ ತೇ ಕಿಮಿದಂ ಭದ್ರೇ ಶೀಘ್ರಂ ವದ ಪಿತಾಽಽಹ್ವಯತ್ |
ಧಾತ್ರೀಮಾಹ ಸಮಾಹೂಯ ಶರ್ಮಿಷ್ಠಾವೃಜಿನಂ ಕೃತಮ್ ॥35॥
ಮಂಗಳಸ್ವರೂಪಳೇ, ಇದೇನು ನಿನ್ನ ರೀತಿ? ಬೇಗ ಹೇಳು. ತಂದೆಯು ಕರೆಯುತ್ತಿದ್ದಾರೆ ಎಂದು ಹೇಳಿದಳು. ಆಗ ದೇವಯಾನಿಯು ಅವಳನ್ನು ಹತ್ತಿರ ಕರೆದು ಶರ್ಮಿಷ್ಠೆಯು ಮಾಡಿದ ದುಷ್ಟಕೆಲಸವನ್ನು ಹೇಳಿದಳು.
ತ್ವರಿತಾ ಘೂರ್ಣಿಕೇ ಗಚ್ಛ ಸರ್ವಮಾಚಕ್ಷ್ವ ಮೇ ಪಿತುಃ |
ನಹೀದಾನೀಂ ಪ್ರವೇಕ್ಷ್ಯಾಮಿ ನಗರಂ ವೃಷಪರ್ವಣಃ ॥36॥
ಘೂರ್ಣಿಕೆಯೇ ಬೇಗ ಹೋಗಿ ಎಲ್ಲವನ್ನೂ ನನ್ನ ತಂದೆಗೆ ತಿಳಿಸು. ನಾನು ಈಗ ವೃಷಪರ್ವನ ಪಟ್ಟಣಕ್ಕೆ ಬರುವುದಿಲ್ಲ.
ವೈಶಂಪಾಯನಃ
ಧಾತ್ರೀ ಪ್ರತ್ವರಿತಂ ಗತ್ವಾ ಘೂರ್ಣಿಕಾಽಸುರಮಂದಿರಮ್ |
ದೃಷ್ಟ್ವಾ ಕಾವ್ಯಮುವಾಚೇದಂ ಸಂಭ್ರಮಾವಿಷ್ಟಚೇತನಾ ॥37॥
ಧಾತ್ರಿಯಾದ ಘೂರ್ಣಿಕೆಯು (ಇದು ಧಾತ್ರಿಯ ಹೆಸರು) ಬೇಗ ವೃಷಪರ್ವನ ಮಂದಿರಕ್ಕೆ ಹೋಗಿ ಗಾಬರಿಗೊಂಡವಳಾಗಿ ಶುಕ್ರಾಚಾರ್ಯರನ್ನು ನೋಡಿ, ಹೀಗೆ ಹೇಳಿದಳು -
ಆಚಷ್ಟ ತೇ ಮಹಾಪ್ರಾಜ್ಞ ದೇವಯಾನೀ ವನೇ ಗತಾ |
ಶರ್ಮಿಷ್ಠಯಾ ಮಹಾಭಾಗ ದುಹಿತ್ರಾ ವೃಷಪರ್ವಣಃ ॥38॥
ಎಲೈ ಮಹಾಪ್ರಾಜ್ಞರೇ ಮತ್ತು ಭಾಗ್ಯಶಾಲಿಗಳೇ, ವೃಷಪರ್ವನ ಮಗಳಾದ ಶರ್ಮಿಷ್ಠೆಯ ನಿಮಿತ್ತದಿಂದ ದೇವಯಾನಿಯು ಕಾಡಿಗೆ ಹೋಗಿದ್ದಾಳೆ.
ಶ್ರುತ್ವಾ ದುಹಿತರಂ ಕಾವ್ಯೋ ಹತಾಂ ಶರ್ಮಿಷ್ಠಯಾ ತತಃ
ತ್ವರಯಾ ನಿರ್ಯಯೌ ದುಃಖಾನ್ಮಾರ್ಗಮಾಣಃ ಸುತಾಂ ವನೇ ॥39॥
ಶುಕ್ರಾಚಾರ್ಯರು ತನ್ನ ಮಗಳು ದೇವಯಾನಿಯಿಂದ ಘರ್ಷಿತಳಾದ ವಿಷಯವನ್ನು ಕೇಳಿ ದುಃಖದಿಂದ ಕಾಡಿನಲ್ಲಿ ಅವಳನ್ನು

ಹುಡುಕಿಕೊಂಡು ಬೇಗ ಹೊರಟರು.
ದೃಷ್ಟ್ವಾ ದುಹಿತರಂ ಕಾವ್ಯೋ ದೇವಯಾನೀಂ ತಥಾಗತಾಮ್ |
ವಾಹುಭ್ಯಾಂ ಸಂಪರಿಷ್ವಜ್ಯ ದುಃಖಿತೋ ವಾಕ್ಯಮಬ್ರವೀತ್ ॥40॥
ಶುಕ್ರಾಚಾರ್ಯರು ಆ ಪರಿಸ್ಥಿತಿಯಲ್ಲಿದ್ದ ತನ್ನ ಮಗಳಾದ ದೇವಯಾನಿಯನ್ನು ನೋಡಿ ಬಾಹುಗಳಿಂದ ಆಲಿಂಗಿಸಿ ದುಃಖದಿಂದ ಈ ಮಾತುಗಳನ್ನು ಆಡಿದರು.
ಆತ್ಮದೋಷೈರ್ಹಿ ಗಚ್ಛಂತಿ ಸರ್ವೇ ದುಃಖಸುಖೇ ಜನಾಃ |
ಪುರಾ ದುಶ್ಚರಿತಂ ಮನ್ಯೇ ಯಸ್ಮಾತ್ ತೇ ನಿಷ್ಕೃತಿಃ ಕೃತಾ ॥41॥
ಎಲ್ಲ ಜೀವರು ತಾವು ಮಾಡಿದ ತಪ್ಪುಗಳಿಂದ ಅಥವಾ ಒಳ್ಳೆಯ ಕೆಲಸದಿಂದ ಜೀವನದಲ್ಲಿ ಸುಖದುಃಖಗಳನ್ನು ಹೊಂದುತ್ತಾರೆ. ನೀನು ಹಿಂದೆ ಮಾಡಿದ ಒಂದು ಪಾಪ ಇರಬೇಕು. ಆದ್ದರಿಂದ ನಿನಗೆ ಇಂತಹ ಅವಮಾನ ಉಂಟಾಯಿತು.
ದೇವಯಾನೀ
ದುಷ್ಕೃತಿರ್ವಾಸ್ತು ವಾ ಮಾಸ್ತು ಶೃಣುಷ್ವ ವಚನಂ ಮಮ |
ಶರ್ಮಿಷ್ಠಯಾ ದುರುಕ್ತಾಸ್ಮಿ ದುಹಿತ್ರಾ ವೃಷಪರ್ವಣಃ |
ಸತ್ಯಂ ಕಿಲೈತತ್ ಸಾ ಪ್ರಾಹ ದೈತ್ಯಾನಾಮಸಿ ಗಾಯನಃ ॥42॥
ಪಾಪವು ಇರಲಿ ಅಥವಾ ಬಿಡಲಿ ನನ್ನ ಮಾತನ್ನು ಕೇಳು. ವೃಷಪರ್ವನ ಮಗಳಾದ ಶರ್ಮಿಷ್ಠೆಯು ನನ್ನನ್ನು ನಿಂದಿಸಿದ್ದಾಳೆ. ನೀನು ನೀನು ದೈತ್ಯರ ಗಾಯಕ ಎಂದು ಹೇಳಿದ ಅವಳ ಮಾತು ಸತ್ಯವೇ. ನೀನೇ ಹೇಳು.
ಏವಂ ಮಾಮವದತ್ ಕ್ರೋಧಾದ್ ಬಹುಶೋ ವಾರ್ಷಪರ್ವಣೀ |
ವಚನಂ ತೀಕ್ಷ್ಣಪರುಷಂ ಕ್ರೋಧರಕ್ತೇಕ್ಷಣಾ ಭೃಶಮ್ ॥43॥
ವೃಷಪರ್ವನ ಮಗಳಾದ ಅವಳು ಕ್ರೋಧದಿಂದ ತುಂಬಾ ಕೆಂಪಾದ ಕಣ್ಣುಳ್ಳವಳಾಗಿ ಮತ್ತೆ ಮತ್ತೆ ನನ್ನನ್ನು ಕುರಿತು, ಈ ಮಾತುಗಳನ್ನು ಆಡಿದಳು.
ಸ್ತುವತೋ ದುಹಿತಾ ತ್ವಂ ವೈ ಯಾಚತಃ ಪ್ರತಿಗೃಹ್ಣತಃ |
ಸುತಾऽಹಂ ಸ್ತೂಯಮಾನಸ್ಯ ದದತೋऽಪ್ರತಿಗೃಹ್ಣತಃ ॥44॥
ನೀನು ಸ್ತೋತ್ರಮಾಡುವವನ, ಭಿಕ್ಷೆಬೇಡುವವನ ಮತ್ತು ಸ್ವೀಕಾರ ಮಾಡುವವನ ಮಗಳು. ನಾನು ಸ್ತೋತ್ರಮಾಡಲ್ಪಡುವವಳ, ಕೊಡುವವನ, ಸ್ವೀಕಾರ ಮಾಡದವನ ಮಗಳು.
ಇತಿ ಮಾಮಾಹ ಶರ್ಮಿಷ್ಠಾ ಬಹುಶೋ ವಾರ್ಷಪರ್ವಣೀ |
ಕ್ರೋಧಸಂರಕ್ತನಯನಾ ದರ್ಪಪೂರ್ಣಾನನಾ ತತಃ ॥45॥
ಹೀಗೆ ವೃರ್ಷಪರ್ವನ ಮಗಳಾದ ಶರ್ಮಿಷ್ಠೆಯು ಕೋಪದಿಂದ ಕೆಂಪಾದ ಕಣ್ಣುಗಳಿಂದ ಮುಖದಲ್ಲಿ ಅಹಂಕಾರವನ್ನು ತುಂಬಿಕೊಂಡು ಅನೇಕಬಾರಿ ನನಗೆ ಹೇಳಿದಳು.
ಯದ್ಯಹಂ ಸ್ತುವತಸ್ತಾತ ದುಹಿತಾ ಪ್ರತಿಗೃಃಹ್ಣತಃ |
ಪ್ರಸಾದಯಿಷ್ಯೇ ಶರ್ಮಿಷ್ಠಾಮಿತ್ಯುಕ್ತಾ ಹಿ ಸಖೀ ಮಯಾ ॥46॥
ಎಲೈ ಪೂಜ್ಯನೇ! ಹೀಗೆ ಹೇಳುತ್ತಿರುವ ಶರ್ಮಿಷ್ಠೆಗೆ ಅಂಜಿ ಅವಳ ಸಖಿಯ ಮೂಲಕ ಹೀಗೆ ಪ್ರಾರ್ಥಿಸಿದೆ. `ಬೇಡುವವನ ಮಗಳಾದ ನಾನೂ ನಿನ್ನ ಬಳಿ ಬೇಡುತ್ತೇನೆ. ಸಿಟ್ಟು ಬಿಡು' ಎಂದು.
ಉಕ್ತಾऽಪ್ಯೇವಂ ಭೃಶಂ ಕ್ರುದ್ಧಾ ಮಾಂ ಗೃಹ್ಯ ವಿಜನೇ ವನೇ |
ಕೂಪೇ ಪ್ರಕ್ಷೇಪಯಾಮಾಸ ಪ್ರಕ್ಷಿಪ್ಯೈವ ಗೃಹಂ ಯಯೌ ॥47॥
ನಾನು ಹೀಗೆ ಹೇಳಿದರೂ ಸಹ ಅವಳು ಬಹಳ ಸಿಟ್ಟಿನಿಂದ ನನ್ನನ್ನು ಎತ್ತಿ, ನನ್ನನ್ನು ನಿರ್ಜನವಾದ ವನದಲ್ಲಿ ಒಂದು ಕೂಪದಲ್ಲಿ ಎಸೆದು ಮನೆಗೆ ಹೊರಟು ಹೋದಳು.
ಶುಕ್ರಃ
ಸ್ತುವತೋ ದುಹಿತಾ ನ ತ್ವಂ ವಂದಿನಃ ಪ್ರತಿಗೃಹ್ಣತಃ |
ಅಸ್ತೋತುಃ ಸ್ತೂಯಮಾನಸ್ಯ ದುಹಿತಾ ದೇವಯಾನ್ಯಸಿ ॥48॥
ದೇವಯಾನಿ ನೀನು ಸ್ತೋತ್ರಮಾಡುವವನ ವಂದಿಯ ಸ್ವೀಕಾರ ಮಾಡುವವನ ಮಗಳಲ್ಲ. ನೀನು ಯಾರನ್ನೂ ಸ್ತೋತ್ರಮಾಡದಿರುವ ಎಲ್ಲರಿಂದಲೂ ಸ್ತೋತ್ರಮಾಡಲ್ಪಡುವ ನನ್ನ ಮಗಳು.
ವೃಷಪರ್ವಾ ಚ ತದ್ ವೇದ ಶಕ್ರೋ ರಾಜಾ ಚ ನಾಹುಷಃ |
ಅಚಿಂತ್ಯಂ ಬ್ರಹ್ಮ ಕಲ್ಯಾಣಿ ಐಶ್ವರ್ಯಂ ಹಿ ಬಲಂ ಮಮ ॥49॥
ಈ ವಿಷಯವು ವೃಷಪರ್ವನಿಗೆ ಗೊತ್ತು. ಇಂದ್ರನಿಗೆ ತಿಳಿದಿದೆ. ಯಯಾತಿಗೂ ಈ ವಿಷಯವು ತಿಳಿದಿದೆ. ನನ್ನ ಬಲವೆಂದರೆ ನನ್ನ ಬ್ರಾಹ್ಮಣ ತೇಜಸ್ಸು. ಕಲ್ಯಾಣಿಯೇ ಅದು ನನ್ನ ಐಶ್ವರ್ಯ.
ದೇವಯಾನಿ! ನೀಚನಾದ ವೃಷಪರ್ವನ ಸ್ತೋತ್ರವನ್ನು ನಾನು ವಂದಿ ಮಾಗದರಂತೆ ಮಾಡಬೇಕಿಲ್ಲ. ನನ್ನ ಬಳಿ ವೇದವಿದೆ. ಪರಬ್ರಹ್ಮ ಪ್ರತಿಪಾದಕವಾದ ವೇದಗಳಿಂದ ಹರಿಯನ್ನು ಸ್ತುತಿಸುವ ನಾನು ಈ ಅಸುರನನ್ನು ಸ್ತುತಿಸಲಾರೆ. ಇದು ನಿಂದ್ಯ ಕರ್ಮ.
ವೃಷಪರ್ವಾ ಚ ತಂ ವೇದ ಶಕ್ರೋ ರಾಜಾ ಚ ನಾಹುಷಃ |
ಅಚಿಂತ್ಯಂ ಬ್ರಹ್ಮ ಕಲ್ಯಾಣಿ ನಾಹಂ ಗಾಯೀ ನ ವಂದಿಕಃ ॥50॥
ಕಲ್ಯಾಣಿ, ಇದನ್ನು ವೃಷಪರ್ವನೂ, ಇಂದ್ರನೂ, ಯಯಾತಿರಾಜನೂ ತಿಳಿದಿದ್ದಾರೆ. ಬ್ರಹ್ಮತೇಜಸ್ಸು ಯಾರ ಚಿಂತನೆಗೂ ನಿಲುಕದ್ದು. ನಾನು ಇನ್ನೊಬ್ಬರನ್ನು ಗಾನಮಾಡುವವನಲ್ಲ. ಹೊಗಳುವವನೂ ಅಲ್ಲ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಸಪ್ತಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
*****

ಅರವತ್ತೆಂಟನೆಯ ಅಧ್ಯಾಯ
(ಶುಕ್ರದೇವಯಾನಿಯರ ಸಂವಾದ)
ಶುಕ್ರಃ
ಅಚಿಂತ್ಯಂ ಬ್ರಹ್ಮ ನಿರ್ದ್ವಂದ್ವಮೈಶ್ವರಂ ಹಿ ಬಲಂ ಮಮ |
ದೈನ್ಯಂ ಗರ್ಹ್ಯಂ ಚ ಮೇ ಜೈಹ್ಮ್ಯಂ ನ ಮೇಽಸ್ತಿ ಯದಧರ್ಮತಃ ॥1॥
ದೇವಯಾನಿ, ಈಶ್ವರನನ್ನು ಪ್ರತಿವಾದಿಸುವ ಅಸದೃಶವಾದ ವೇದವು ನನ್ನ ಅಚಿಂತ್ಯವಾದ ಬಲ. ಅಧರ್ಮದ ಚಿಹ್ನೆಗಳಾದ ದೈನ್ಯ, ನಿಂದೆ ಮತ್ತು ಕುಟಿಲತೆಗಳು ನನ್ನಲ್ಲಿ ಇಲ್ಲ.
ಯಃ ಪರೇಷಾಂ ನರೋ ನಿತ್ಯಮತಿವಾದಾಂಸ್ತಿತಿಕ್ಷತಿ |
ದೇವಯಾನಿ ವಿಜಾನೀಹಿ ಸರ್ವಂ ತಸ್ಯ ಜಿತಂ ಭವೇತ್ ॥2॥
ದೇವಯಾನಿ, ಯಾವನು ಇನ್ನೊಬ್ಬರ ನಿಂದೆಯ ಮಾತುಗಳನ್ನು ಸತತವಾಗಿ ಸಹಿಸುತ್ತಾನೋ ಆ ಮನುಷ್ಯನು ಎಲ್ಲವನ್ನೂ ಜಯಿಸುತ್ತಾನೆ.
ಯಃ ಸಮುತ್ಪತಿತಂ ಕ್ರೋಧಂ ನಿಗೃಹ್ಣಾತಿ ಹಯಂ ಯಥಾ |
ಸ ಯಂತೇತ್ಯುಚ್ಯತೇ ಸದ್ಭಿರ್ನ ಹಯೇ ರಶ್ಮಿಲಂಬಿತೇ ॥3॥
ಯಾವನು ಒಮ್ಮೆಲೇ ಉಂಟಾದ ಕ್ರೋಧವನ್ನು ಕುದುರೆಯನ್ನು ಹಿಡಿದಂತೆ ನಿಗ್ರಹ ಮಾಡುತ್ತಾನೆಯೋ ಅವನನ್ನು ಸಜ್ಜನರು ಸಾರಥಿ ಎಂದು ಕರೆಯುತ್ತಾರೆ. ರಥದ ಕುದುರೆಯನ್ನು ಹಗ್ಗದಲ್ಲಿ ಹಿಡಿದವನನ್ನು ಸಾರಥಿ ಎಂದು ಕರೆಯುವುದಿಲ್ಲ.
ಯಃ ಸಮುತ್ಪತಿತಂ ಕ್ರೋಧಮಕ್ರೋಧೇನ ವ್ಯಪಾಸ್ಯತಿ |
ಯಥೋರಗಸ್ತ್ವಚಂ ಜೀರ್ಣಾಂ ಸ ವೈ ಪುರುಷ ಉಚ್ಯತೇ ॥4॥
ಒಮ್ಮೆಲೇ ಉಂಟಾದ ಕ್ರೋಧವನ್ನು ಯಾರು ಸರ್ಪವು ಜೀರ್ಣವಾದ ಪೊರೆಯನ್ನು ದೂರಮಾಡಿದಂತೆ ಶಾಂತಿಯಿಂದ ದೂರಮಾಡುತ್ತಾನೋ ಅವನನ್ನು ಪುರುಷ ಎಂದು ಕರೆಯುತ್ತಾರೆ.
ಯೋ ವೈ ಮನ್ಯುಂ ಧಾರಯತಿ ಯೋಽತಿವಾದಾಂಸ್ತಿತಿಕ್ಷತಿ |
ಯಶ್ಚ ತಪ್ತೋ ನ ತಪತಿ ಸ ವೈ ಸರ್ವಜಿತಃ ಖಲು ॥5॥
ಯಾವನು ಕ್ರೋಧವನ್ನು ತಡೆಯುತ್ತಾನೆಯೋ, ಯಾವನು ನಿಂದೆಯ ಮಾತುಗಳನ್ನು ಸಹಿಸುತ್ತಾನೆಯೋ, ಯಾವನು ಇನ್ನೊಬ್ಬರಿಂದ ತಾಪಕ್ಕೆ ಒಳಗಾದರೂ ತಾಪಪಡುವುದಿಲ್ಲವೋ ಅವನು ಸರ್ವವನ್ನೂ ಜಯಿಸುತ್ತಾನೆ.
ಯೋ ಯಜೇತಾಶ್ವಮೇಧೇನ ಮಾಸಿಮಾಸಿ ಶತಂ ಸಮಾಃ |
ತಸ್ಮಾದಕ್ರೋಧನಃ ಶ್ರೇಷ್ಠಃ ಕಾಮಕ್ರೋಧೌ ಹಿ ಗರ್ಹಿತೌ ॥6॥
ಯಾವನು ಅಶ್ವಮೇಧಯಾಗವನ್ನು ನೂರು ವರ್ಷಗಳವರೆಗೆ ಪ್ರತಿ ಮಾಸದಲ್ಲಿಯೂ ಮಾಡುತ್ತಾನೆಯೋ ಅವನಿಗಿಂತ ಕ್ರೋಧಕ್ಕೆ ಒಳಗಾಗದವನು ಶ್ರೇಷ್ಠನಾದವನು. ಕಾಮಕ್ರೋಧಗಳು ನಿಂದ್ಯವಾದವು.
ಕ್ರುದ್ಧಸ್ಯ ನಿಷ್ಫಲಾನ್ಯೇವ ದಾನಯಜ್ಞತಪಾಂಸಿ ಚ |
ತಸ್ಮಾದಕ್ರೋಧನೇ ಯಜ್ಞಸ್ತಪೋ ದಾನಂ ಮಹತ್ಫಲಮ್ ॥7॥
ಕೋಪಕ್ಕೆ ಒಳಗಾಗುವವನಿಗೆ ಅವನು ಮಾಡಿದ ದಾನ, ಯಜ್ಞ ಮತ್ತು ತಪಸ್ಸುಗಳು ನಿಷ್ಫಲವಾಗುತ್ತವೆ. ದಾನ, ಯಜ್ಞ ಮತ್ತು ತಪಸ್ಸುಗಳು ಕ್ರೋಧಕ್ಕೆ ಒಳಗಾಗದಿದ್ದವನಿಗೆ ಮಹಾಫಲವನ್ನು ಕೊಡುತ್ತದೆ.
ನ ಪೂತೋ ನ ತಪಸ್ವೀ ಚ ನ ಯಜ್ವಾ ನ ಚ ಧರ್ಮಕೃತ್ |
ಕ್ರೋಧಸ್ಯ ಯೋ ವಶಂ ಗಚ್ಛೇತ್ ತಸ್ಯ ಲೋಕದ್ವಯಂ ನ ಚ ॥
ಯಾರು ಕ್ರೋಧಕ್ಕೆ ವಶನಾಗುತ್ತಾನೆಯೋ ಅವನು ಎಂದೂ ಪವಿತ್ರನಾಗುವುದಿಲ್ಲ. ತಪಸ್ವಿಯಾಗುವುದಿಲ್ಲ. ಯಾಗವನ್ನಾಗಲೀ, ಧರ್ಮವನ್ನಾಗಲೀ ಮಾಡುವುದಿಲ್ಲ. ಅವನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ.
ಪುತ್ರಭೃತ್ಯಸುಹೃನ್ಮಿತ್ರಭಾರ್ಯಾ ಧರ್ಮಶ್ಚ ಸತ್ಯತಾ |
ತಸ್ಯೈತಾನ್ಯಪಯಾಸ್ಯಂತಿ ಕ್ರೋಧಶೀಲಸ್ಯ ನಿಶ್ಚಿತಮ್ ॥9॥
ಕ್ರೋಧಶೀಲನಾದ ಮನುಷ್ಯನನ್ನು, ಮಕ್ಕಳು, ಭೃತ್ಯರು, ಸ್ನೇಹಿತರು, ಪತ್ನಿ, ಧರ್ಮ, ಸತ್ಯ ಎಲ್ಲವೂ ಬಿಟ್ಟು ಹೋಗುತ್ತವೆ. ಇದು ನಿಶ್ಚಿತವಾದುದು.
ಯತ್ ಕುಮಾರಾಃ ಕುಮಾರ್ಯಶ್ಚ ವೈರಂ ಕುರ್ಯುಃ ಸ್ತ್ರಿಯೋಽಪಿ ವಾ |
ನ ತತ್ ಪ್ರಾಜ್ಞೋಽನುಕುರ್ವೀತ ವಿದ್ವಾಂಸ್ತಸ್ಯ ಬಲಾಬಲಮ್ ॥10॥

ಸಣ್ಣ ವಯಸ್ಸಿನ ಗಂಡು, ಹೆಣ್ಣು ಮಕ್ಕಳು ಮತ್ತು ಸ್ತ್ರೀಯರು ಯಾವ ಕ್ರೋಧವನ್ನು ಮಾಡುತ್ತಾರೆಯೋ ಅದನ್ನು ಪ್ರಾಜ್ಞನಾದವನು ಅಕ್ರೋಧ ಮತ್ತು ಕ್ರೋಧಗಳ, ಬಲ ಮತ್ತು ಅಬಲಗಳನ್ನು ತಿಳಿದವನು ಎಂದೂ ಮಾಡಬಾರದು.
ದೇವಯಾನೀ
ವೇದಾಹಂ ತಾತ ಬಾಲಾऽಪಿ ಧರ್ಮಾಣಾಂ ಯದಿಹಾಂತರಮ್ |
ಆಕ್ರೋಶೇ ಚಾತಿವಾದೇ ಚ ವೇದ ಚಾಪಿ ಬಲಾಬಲಮ್ ||11||
ತಂದೆಯೇ, ನಾನು ಚಿಕ್ಕವಳಾದರೂ ಧರ್ಮಗಳ ಅಂತರವನ್ನು ತಿಳಿದಿದ್ದೇನೆ. ಸಿಟ್ಟಿನಿಂದ ಕಿರುಚುವುದರಲ್ಲಿಯೂ, ನಿಂದನೆಯನ್ನು ಮಾಡುವುದರಲ್ಲಿಯೂ ಇರುವ ದೌರ್ಬಲ್ಯವನ್ನೂ ಹಾಗೆ ಮಾಡದಿದ್ದರೆ ಇರುವ ಬಲವನ್ನೂ ತಿಳಿದಿದ್ದೇನೆ.
ಸ್ವವೃತ್ತಿಮನನುಷ್ಠಾಯ ಧರ್ಮಮುತ್ಸೃಜ್ಯ ತತ್ವತಃ |
ಶಿಷ್ಯಸ್ಯಾಶಿಷ್ಯವೃತ್ತಿರ್ಹಿ ನ ಕ್ಷಂತವ್ಯಾ ಬುಭೂಷತಾ ||12||
ಪ್ರೇಷ್ಯೇ ಶಿಷ್ಯಾರ್ಯವೃತ್ತಿಂ ಹಿ ಉತ್ಸೃಜ್ಯ ವಿಪಥಂ ಗತೇ |
ತಸ್ಮಾತ್ ಸಂಕೀರ್ಣವೃತ್ತೇಷು ವಾಸೋ ಮಮ ನ ರೋಚತೇ ||13||
ತನ್ನ ನಡತೆಯನ್ನು ಬಿಟ್ಟು ಶುದ್ಧವಾದ ಧರ್ಮವನ್ನು ತೊರೆದು ಸೇವಕನಾದವನು ಶಿಷ್ಯನ ಉದಾರವಾದ ಮಾರ್ಗವನ್ನು ಬಿಟ್ಟು ದುರ್ಮಾರ್ಗಗತನಾದರೆ ಶಿಷ್ಯನ ಆ ದುರ್ವರ್ತನೆಯನ್ನು ವಿವೇಕಿಯಾದವನು ಕ್ಷಮಿಸಬಾರದು. ಆದ್ದರಿಂದ ಸಂಶಯಾಸ್ಪದ ನಡತೆಯುಳ್ಳವರಲ್ಲಿ ನಾನು ವಾಸಮಾಡಲು ಬಯಸುವುದಿಲ್ಲ.
ದಹ್ಯಮಾನಾಃ ಸುತೀವ್ರೇಣ ನೀಚಾಃ ಪರಯಶೋಽಗ್ನಿನಾ |
ಅಶಕ್ತಾಸ್ತತ್ಪದಂ ಗಂತುಂ ತತೋ ನಿಂದಾಂ ಪ್ರಕುರ್ವತೇ ||14||
ನೀಚರು ಇನ್ನೊಬ್ಬರ ಕೀರ್ತಿಯನ್ನು ಕಂಡು ತೀವ್ರವಾದ ಅಗ್ನಿಯಿಂದ ಬೆಂದಂತೆ ಅದರಿಂದ ಬೆಂದು ಅವರ ಸ್ಥಾನವನ್ನು ಪಡೆಯಲು ಸಾಧ್ಯವಾಗದೇ ನಿಂದೆಯನ್ನು ಮಾಡುತ್ತಾರೆ.
ಭೂಯಾಂಸಂ ಯೇ ಹಿ ನಿಂದಂತಿ ವೃತ್ತೇನಾಭಿಜನೇನ ಚ |
ನ ತೇಷು ನಿವಸೇತ್ ಪ್ರಾಜ್ಞಃ ಶ್ರೇಯೋಽರ್ಥೀ ಪಾಪಬುದ್ಧಿಷು ||15||
ಯಾರು ನಡತೆಯಿಂದ ಮತ್ತು ಜನ್ಮದಿಂದ ತನಗಿಂತ ಶ್ರೇಷ್ಠರಾದವರನ್ನು ನಿಂದಿಸುತ್ತಾರೆಯೋ ಸುವ್ರತಿಯಾದ ಪ್ರಾಜ್ಞನಾದವನು ಅಂತಹ ಪಾಪಬುದ್ಧಿಯುಳ್ಳವರಲ್ಲಿ ವಾಸವನ್ನು ಮಾಡಬಾರದು.
ಯೇ ತ್ವೇನಮಭಿನಂದಂತಿ ವೃತ್ತೇನಾಭಿಜನೇನ ಚ |
ತೇಷು ಸಾಧುಷು ವಸ್ತವ್ಯಂ ಸ ವಾಸಃ ಶ್ರೇಷ್ಠ ಉಚ್ಯತೇ ||16||
ಯಾವನ ನಡತೆ ಮತ್ತು ಜನ್ಮಗಳಿಂದ ಯಾರು ಸಂತೋಷಪಡುತ್ತಾರೋ ಅಂತಹ ಸಜ್ಜನರಲ್ಲಿ ವಾಸವನ್ನು ಮಾಡಬೇಕು. ಆ ವಾಸವು ಶ್ರೇಷ್ಠವೆಂದು ಕರೆಯಲ್ಪಡುತ್ತದೆ.
ಸುಯಂತ್ರಿತಾ ವರಾ ನಿತ್ಯಂ ವಿಹೀನಾಶ್ಚ ಧನೈರ್ನರಾಃ |
ದುರ್ವೃತ್ತಾಃ ಪಾಪಕರ್ಮಾಣಃ ಚಂಡಾಲಾ ಧನಿನೋಽಪಿ ಚ ||17||
ತಮ್ಮನ್ನು ತಾವು ಪುಣ್ಯದಿಂದ ನಿಯಂತ್ರಿಸುವ ನರರು ಧನವಿಹೀನರಾದರೂ ಶ್ರೇಷ್ಠರಾದವರು. ಧನಿಕರು ದುರ್ನಡತೆಯುಳ್ಳವರಾಗಿ ಪಾಪಕರ್ಮಗಳನ್ನು ಮಾಡಿದರೆ ಅವರು ಚಂಡಾಲರೇ ಸರಿ.
ನ ಹಿ ಜಾತ್ಯಾ ಹಿ ಚಂಡಾಲಾಃ ಸ್ವಕರ್ಮವಿಹಿತೈರ್ವಿನಾ |
ಧನಾಭಿಜನವಿದ್ಯಾಸು ಸಕ್ತಾಶ್ಚಂಡಾಲಧರ್ಮಿಣಃ ||18||
ತಮಗೆ ವಿಹಿತವಾದ ಕರ್ಮಗಳಲ್ಲಿ ಧನ, ಅಭಿಜನ ಮತ್ತು ವಿದ್ಯೆಯನ್ನು ಉಪಯೋಗಿಸದೇ ಭೋಗಾದಿಗಳಿಗೋಸ್ಕರ ಧನ, ಅಭಿಜನ ಮತ್ತು ವಿದ್ಯೆಯಲ್ಲಿ ನಿರತರಾದವರು ಚಂಡಾಲಧರ್ಮಿಗಳು. ಕೇವಲ ಜಾತಿಯಿಂದ ಚಂಡಾಲನಾಗುವುದಿಲ್ಲ.
ಅಕಾರಣಾದ್ ಯೇ ದ್ವಿಷ್ಯಂತಿ ಪರಿವಾದಂ ವದಂತಿ ಚ |
ನ ತತ್ರಾಸ್ಯ ನಿವಾಸೋಽಸ್ತಿ ಪಾಪ್ಮಭಿಃ ಪಾಪತಾಂ ವ್ರಜೇತ್ ||19||
ನಿರ್ನಿಮಿತ್ತವಾಗಿ ಯಾರು ನಿಂದಿಸುತ್ತಾರೋ ಮತ್ತು ದ್ವೇಷ ಮಾಡುತ್ತಾರೋ ಅವರ ಜೊತೆಯಲ್ಲಿ ವಾಸವನ್ನು ಮಾಡಬಾರದು. ಪಾಪಿಗಳ ಜೊತೆಯಲ್ಲಿ ವಾಸಮಾಡುವುದರಿಂದ ಪಾಪವುಂಟಾಗುತ್ತದೆ.
ಸುಕೃತೇ ದುಷ್ಕೃತೇ ವಾऽಪಿ ಯತ್ರ ಸಜ್ಜತಿ ಯೋ ನರಃ |
ಧ್ರುವಂ ರತಿರ್ಭವೇತ್ ತತ್ರ ತಸ್ಮಾತ್ ತೇಷಾಂ ನ ರೋಚಯೇತ್ ||
ಒಳ್ಳೆಯ ಕಾರ್ಯದಲ್ಲಾಗಲೀ, ಅಥವಾ ಕೆಟ್ಟಕಾರ್ಯದಲ್ಲಾಗಲೀ, ಯಾವ ಮನುಷ್ಯನು ಮತ್ತೆ ಮತ್ತೆ ಆಸಕ್ತನಾಗುತ್ತಾನೆಯೋ, ಅವನಿಗೆ ಅದರಲ್ಲಿ ರತಿಯುಂಟಾಗುತ್ತದೆ. ಆದ್ದರಿಂದ ದುಷ್ಕರ್ಮಿಗಳ ಸಹವಾಸವನ್ನು ಎಂದೂ ಬಯಸಬಾರದು.
ವಾಚಾ ದುರುಕ್ತಂ ತಾತೇಹ ದುಹಿತ್ರಾ ವೃಷಪರ್ವಣಃ |
ತತೋ ದುಃಖತರಂ ಮನ್ಯೇ ತ್ರಿಷು ಲೋಕೇಷ್ವಪಿ ಧ್ರುವಮ್ ||21||
ತಂದೆಯೇ, ವೃಷಪರ್ವನ ಮಗಳು ನನ್ನನ್ನು ದುಷ್ಟಮಾತುಗಳಿಂದ ಚುಚ್ಚಿದ್ದಾಳೆ. ಅದಕ್ಕಿಂತ ದುಃಖಕರವಾದುದು ಮೂರುಲೋಕದಲ್ಲಿ ಯಾವುದೂ ಇಲ್ಲ.
ನಿಃಸಂಶಯೋ ವಿಶೇಷೇಣ ಪರುಷಂ ಮರ್ಮಕೃಂತನಮ್ |
ಸುಹೃನ್ಮಿತ್ರಜನಾಸ್ತೇಷು ಸೌಹೃದಂ ಚ ನ ವಿದ್ಯತೇ ||22||
ಸ್ನೇಹಿತರು ಮತ್ತು ಉಪಕಾರಿಗಳಾದ ಜನರ ಕ್ರೂರವಾದ ಮಾತುಗಳು ವಿಶೇಷವಾಗಿ ಮರ್ಮಭೇದವನ್ನು ಮಾಡುತ್ತವೆ ಎಂಬ ವಿಷಯದಲ್ಲಿ ಸಂಶಯವಿಲ್ಲ. ಅವರಿಗೆ ಸೌಹಾರ್ದವಿರುವುದಿಲ್ಲ.

ಯಃ ಸಪತ್ನೇ ಶ್ರಿಯಂ ದೀಪ್ತಾಂ ಹೀನಶ್ರೀಃ ಪರ್ಯುಪಾಸತೇ |
ಅವಮಾನಮವಾಪ್ನೋತಿ ಶನೈರ್ನೀಚಸಮಾಗಮಾತ್ ॥23॥
ಯಾವ ಧನಹೀನನಾದವನು ತನ್ನ ಶತ್ರುವಿನ ಸಂಪತ್ತನ್ನು ಆಶ್ರಯಿಸುತ್ತಾನೋ, ಅವನು ನೀಚಸಮಾಗಮದಿಂದ ನಿಧಾನವಾಗಿ ಅವಮಾನವನ್ನು ಹೊಂದುತ್ತಾನೆ.
ಅತಿವಾದಾ ಯೇ ವಕ್ತ್ರತೋ ನಿಃಸರಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ |
ಶನೈರ್ದುಃಖಂ ಶಸ್ತ್ರವಿಷಾಗ್ನಿಜಾತಂ
ರೋಹೇನ್ನ ಸಂರೋಹತಿ ವಾಗ್ವ್ರಣಂ ತು ॥24॥
ಶಸ್ತ್ರ, ವಿಷ ಮತ್ತು ಅಗ್ನಿಗಳಿಂದ ಉಂಟಾದ ಗಾಯವು ಕ್ರಮೇಣ ವಾಸಿಯಾಗಿ ಅಂಗವು ಬೆಳೆಯುತ್ತದೆ. ಆದರೆ ಪರರ ಬಾಯಿಂದ ಬಂದ ನಿಂದೆಯ ಮಾತುಗಳಿಂದ ವಿದ್ದನಾಗಿ ಹಗಲೂ, ರಾತ್ರಿಯೂ ಯಾರು ದುಃಖಪಡುತ್ತಾನೋ, ಅವನಿಗೆ ಉಂಟಾದ ಮಾತಿನ ಗಾಯವು ವಾಸಿಯಾಗಿ ಮೊದಲಿನ ಪ್ರೀತಿಯ ಅಂಕುರವನ್ನು ಎಂದೂ ಹುಟ್ಟಿಸುವುದಿಲ್ಲ.
ಸಂರೋಹೇದಾಯುಧೈಶ್ಛಿನ್ನಂ ಸಂರೋಹೇದ್ ದಗ್ಧಮಗ್ನಿನಾ |
ವಾಕ್ಕ್ಷತಂ ತು ನ ಸಂರೋಹೇದಾಶರೀರಂ ಶರೀರಿಣಾಮ್ ॥25॥
ಆಯುಧದಿಂದ ಕತ್ತರಿಸಲ್ಪಟ್ಟ ಮರವು ಬೆಳೆಯುತ್ತದೆ. ಅಗ್ನಿಯಿಂದ ದಹಿಸಲ್ಪಟ್ಟ ವನವು ಪುನಃ ಬೆಳೆಯುತ್ತದೆ. ಆದರೆ ವಾಗ್ಬಾಣದಿಂದ ದಹಿಸಲ್ಪಟ್ಟ ಪ್ರೇಮಾಂಕುರವು ಎಂದೂ ಬೆಳೆಯುವುದಿಲ್ಲ. ಆ ದಾಹವು ಶರೀರವಿರುವರೆಗೂ ಉಳಿಯುತ್ತದೆ.
ಸಂರೋಹತಿ ಶನೈರ್ವಿದ್ಧಂ ವನಂ ಪರಶುನಾ ಹತಮ್ |
ವಾಚಾ ದುರುಕ್ತಂ ಬೀಭತ್ಸಂ ನ ಸಂರೋಹತಿ ವಾಕ್ಕ್ಷತಮ್ ॥26॥
ಬಾಣದಿಂದ ಕತ್ತರಿಸಲ್ಪಟ್ಟ ಅಥವಾ ಕೊಡಲಿಯಿಂದ ಕಡಿಯಲ್ಪಟ್ಟ ವನವು ನಿಧಾನವಾಗಿ ಬೆಳೆಯುತ್ತದೆ. ಆದರೆ ದುರ್ವಚನಗಳಿಂದ ಉಂಟಾದ ಹೇಯವಾದ ವ್ರಣವು ಎಂದೂ ಪ್ರೇಮಾಂಕುರವನ್ನು ಬೆಳೆಸುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಅಷ್ಟಷಷ್ಟಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ಅರವತ್ತೊಂಭತ್ತನೆಯ ಅಧ್ಯಾಯ
(ಶುಕ್ರರ ಕೋಪವಚನ, ವೃಷಪರ್ವನ ಕ್ಷಮಾಯಾಚನೆ
ಮತ್ತು ಶರ್ಮಿಷ್ಠೆಯ ದಾಸ್ಯಭಾವ)
ವೈಶಂಪಾಯನಃ
ತತಃ ಕಾವ್ಯೋ ಭೃಗುಶ್ರೇಷ್ಠಃ ಸಮನ್ಯುರುಪಗಮ್ಯ ಚ |
ಪ್ರವಿಶ್ಯಾಂತಃಪುರಂ ಶುಕ್ರೋ ವಂದಿತೋ ವೃಷಪರ್ವಣಾ ॥1॥
ಅನಂತರ ಕವಿಗಳ ಮಕ್ಕಳಾದ ಭೃಗುಶ್ರೇಷ್ಠರಾದ ಶುಕ್ರಾಚಾರ್ಯರು ಸಿಟ್ಟಿನಿಂದ ವೃಷಪರ್ವನ ಅಂತಃಪುರಕ್ಕೆ ಬಂದು ಅವನಿಂದ ನಮಸ್ಕರಿಸಲ್ಪಟ್ಟರು.
ವೃಷಪರ್ವಾಣಮಾಸೀನಮಿತ್ಯುವಾಚಾವಿಚಾರಯನ್ |
ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿ ಗೌರಿವ ॥2॥
ಪುತ್ರೇಷು ಯಾ ನಪ್ತೃಷು ವಾ ನ ಚೇದಾತ್ಮನಿ ಪಶ್ಯತಿ |
ಫಲತ್ಯೇವ ಧ್ರುವಂ ಪಾಪಂ ಗುರುಭುಕ್ತಮಿವೋದರೇ ॥3॥
ಕುಳಿತಿದ್ದ ವೃಷಪರ್ವನನ್ನು ಕುರಿತು ಏನೂ ವಿಚಾರ ಮಾಡದೆ ಹೀಗೆ ಮಾತನಾಡಿದರು. ಎಲೈ ರಾಜನೇ, ಆಚರಿಸಿದ ಅಧರ್ಮವು ತಕ್ಷಣದಲ್ಲಿ ಫಲವನ್ನು ಕೊಡುವುದಿಲ್ಲ. ಆ ಫಲವು ಮಕ್ಕಳಲ್ಲಾಗಲೀ, ಮೊಮ್ಮಕ್ಕಳಲ್ಲಾಗಲೀ ಅಥವಾ ತನ್ನಲ್ಲೇ ಆಗಲಿ ಕಾಣಿಸಿಕೊಳ್ಳುತ್ತದೆ. ಆದರೆ, ದುರುಕ್ತಿಯು ತಕ್ಷಣದಲ್ಲಿ ಫಲವನ್ನು ಕೊಡುತ್ತದೆ. ಅತಿಯಾದ ಭೋಜನವು ಉದರದಲ್ಲಿ ತನ್ನ ಫಲವನ್ನು ತೋರಿಸಿದಂತೆ ದುರುಕ್ತಿಯು ನಿಶ್ಚಯವಾಗಿ ಪಾಪದ ಫಲವನ್ನು ಉಂಟುಮಾಡುತ್ತದೆ.
ಅಧೀಯಾನಂ ಹಿತಂ ರಾಜನ್ ಕ್ಷಾಂತಂ ದಾಂತಂ ಜಿತೇಂದ್ರಿಯಮ್|
ಯದಘಾತಯಥಾ ಕಚಂ ವಿಪ್ರಮಾಂಗಿರಸಂ ತಥಾ |
ಅಪಾಪಶೀಲಂ ಧರ್ಮಜ್ಞಂ ಶುಶ್ರೂಷುಂ ಮದ್ಗೃಹಾಗತಮ್ ॥4॥
ಎಲೈ ರಾಜನೇ, ನನ್ನ ಬಳಿ ಅಧ್ಯಯನವನ್ನು ಮಾಡುತ್ತಿದ್ದ ಕ್ಷಮಾಶೀಲನೂ, ಜಿತೇಂದ್ರಿಯನೂ, ಅಂಗಿರಸರ ಪುತ್ರನೂ ಆದ ಪ್ರಿಯನಾದ ಕಚನನ್ನು ನೀನು ಕೊಲ್ಲಿಸಿದೆ. ಅವನು ಅಪಾಪಶೀಲನೂ, ಧರ್ಮವನ್ನು ತಿಳಿದವನೂ ಮತ್ತು ಗುರು ಶುಶ್ರೂಷೆಯನ್ನೂ ಮಾಡುವವನೂ ಆಗಿ ನನ್ನ ಮನೆಗೆ ಬಂದಿದ್ದನು.
ಶರ್ಮಿಷ್ಠಯಾ ದೇವಯಾನೀ ಕ್ರೂರಮುಕ್ತಾ ಬಹು ಪ್ರಭೋ |
ವಿಪ್ರಕೃತ್ಯ ಚ ಸಂರಂಭಾತ್ ಕೂಪೇ ಕ್ಷಿಪ್ತಾ ಮನಸ್ವಿನೀ ॥5॥

ಎಲೈ ರಾಜನೇ, ಶರ್ಮಿಷ್ಠೆಯು  ದೇವಯಾನಿಯನ್ನು ಕುರಿತು ಅನೇಕ ದುರ್ವಚನಗಳನ್ನು ಆಡಿದ್ದಾಳೆ. ಅವಳಿಗೆ ಅಪಕಾರವನ್ನು ಮಾಡಿ ಧೈರ್ಯಶಾಲಿನಿಯಾದ ಶರ್ಮಿಷ್ಠೆಯು ಅವಳನ್ನು ಕೂಪದೊಳಗೆ ಎಸೆದಿದ್ದಾಳೆ.
ಸಾ ನ ಕಲ್ಪೇತ ವಾಸಾಯ ತಯಾ ವಾ ರಹಿತಃ ಕಥಮ್ |
ವಸೇಯಮಿಹ ತಸ್ಮಾಚ್ಚ ತ್ಯಜೇಯಂ ವಿಷಯಂ ತವ ॥6॥
ಅವಳು ನಿನ್ನ ಮನೆಯಲ್ಲಿ ವಾಸಿಸಲು ಇಷ್ಟಪಡುವುದಿಲ್ಲ. ಅವಳಿಲ್ಲದೆ ನಾನೂ ಸಹ ಇಲ್ಲಿ ವಾಸಮಾಡುವುದಿಲ್ಲ. ಆದ್ದರಿಂದ ನಿನ್ನ ರಾಜ್ಯವನ್ನು ಬಿಟ್ಟು ಹೋಗುತ್ತೇನೆ.
ವೃಷಪರ್ವನ್ ನಿಬೋಧೇದಂ ತ್ಯಕ್ಷ್ಯಾಮಿ ತ್ವಾಂ ಸಬಾಂಧವಮ್ |
ಮಾ ಶೋಚ ವೃಷಪರ್ವಂಸ್ತ್ವಂ ಮಾ ಕ್ರುಧಸ್ತ್ವಂ ವಿಶಾಂಪತೇ ॥7॥
ಎಲೈ ವೃಷಪರ್ವನೇ ನಿನ್ನನ್ನೂ ಮತ್ತು ನಿನ್ನ ಬಾಂಧವರನ್ನೂ ನಾನು ಬಿಟ್ಟು ಹೋಗುತ್ತೇನೆ. ಇದನ್ನು ತಿಳಿ. ಎಲೈ ರಾಜನೇ, ನೀನು ಶೋಕಪಡಬೇಡ ಅಥವಾ ಕೋಪಗೊಳ್ಳಲೂ ಬೇಡ.
ಸ್ಥಾತುಂ ತೇ ವಿಷಯೇ ರಾಜನ್ ನ ಶಕ್ಷ್ಯಾಮಿ ವಿನಾ ತಯಾ |
ಅಸ್ಯಾ ಗತಿರ್ಗತಿರ್ಮಹ್ಯಂ ಪ್ರಿಯಮಸ್ಯಾಃ ಪ್ರಿಯಂ ಮಮ ॥8॥
ದೇವಯಾನಿಯು ಇಲ್ಲದೇ ನಿನ್ನ ರಾಜ್ಯದಲ್ಲಿ ನಾನು ನಿಲ್ಲಲಾರೆ. ಅವಳಿಗೆ ಏನು ಗತಿಯೋ ಅದೇ ನನಗೂ ಗತಿ. ಅವಳಿಗೆ ಯಾವುದು ಪ್ರಿಯವೋ ಅದೇ ನನಗೂ ಪ್ರಿಯ.
ವೃಷಪರ್ವಾ
ಯದಿ ಬ್ರಹ್ಮನ್ ಘಾತಯಾಮಿ ಯದಿ ಚೋಪದಿಶಾಮ್ಯಹಮ್ |
ಶರ್ಮಿಷ್ಠಯಾ ದೇವಯಾನೀಂ ತತೋ ಗಚ್ಛಾಮ್ಯಸದ್ಗತಿಮ್ ॥9॥
ಬ್ರಾಹ್ಮಣರೇ, ಒಂದು ಪಕ್ಷ ನಾನು ಕಚನನ್ನು ಕೊಲ್ಲಿಸಿದ್ದರೆ ಅಥವಾ ಶರ್ಮಿಷ್ಠೆಗೆ ದೇವಯಾನಿಯನ್ನು ಬಾವಿಗೆ ತಳ್ಳುವಂತೆ ಉಪದೇಶಮಾಡಿದ್ದರೆ ನನಗೆ ದುರ್ಗತಿಯೇ ಆಗಲಿ.
ಶುಕ್ರಃ
ಅಹೋ ಮಾಮಭಿಜಾನಾಸಿ ದೈತ್ಯ ಮಿಥ್ಯಾಪ್ರಲಾಪಿನಮ್ |
ತಥೇಮಮಾತ್ಮನೋ ದೋಷಂ ಮಯಿ ಕರ್ತುಂ ಚಿಕೀರ್ಷಸಿ ॥10॥
ಎಲೈ ದೈತ್ಯನೇ, ಆಶ್ಚರ್ಯ! ನಾನು ಸುಳ್ಳು ಮಾತಾಡುವವನೆಂದು ಕಲ್ಪಿಸುತ್ತಿದ್ದೀಯೆ, ಹಾಗೆಯೇ ನಿನ್ನ ಈ ತಪ್ಪನ್ನು ನನ್ನ ಮೇಲೆ ಹೊರಿಸಲು ಬಯಸುತ್ತಿದ್ದೀಯೆ.
ವೃಷಪರ್ವಾ
ನಾಧರ್ಮಂ ನ ಮೃಷೋಕ್ತಂ ವಾ ತ್ವಯಿ ಜಾನಾಮಿ ಭಾರ್ಗವ |
ತ್ವಯಿ ಸತ್ಯಂ ಚ ಧರ್ಮಂ ಚ ವಿಜಾನಾಮಿ ಪ್ರಸೀದ ಮೇ ॥11॥
ಎಲೈ ಶುಕ್ರಾಚಾರ್ಯರೇ, ನಾನು ನಿಮ್ಮನ್ನು ಕುರಿತು ಅಧರ್ಮವನ್ನಾಗಲೀ, ಮಿಥ್ಯಾವಚನಗಳನ್ನಾಗಲೀ ಎಂದೂ ಆರೋಪಿಸಿಲ್ಲ ಎಂದು ನಿಮಗೆ ತಿಳಿದಿದೆ. ತಮ್ಮಲ್ಲಿ ಸತ್ಯವೂ, ಧರ್ಮವೂ ಪ್ರತಿಷ್ಠಿತವಾಗಿದೆ ಎಂದು ತಿಳಿದಿದ್ದೇನೆ. ನನಗೆ ಅನುಗ್ರಹವನ್ನು ಮಾಡಿ.
ಯದ್ಯಸ್ಮಾನಪಹಾಯ ತ್ವಮಿತೋ ಗಚ್ಛಸಿ ಭಾರ್ಗವ |
ಸಮುದ್ರಂ ಸಂಪ್ರವೇಕ್ಷ್ಯಾಮಿ ನಾನ್ಯದಸ್ತಿ ಪರಾಯಣಮ್ ॥12॥
ಎಲೈ ಶುಕ್ರಾಚಾರ್ಯರೇ, ನೀವು ನಮ್ಮನ್ನು ಬಿಟ್ಟು ಇಲ್ಲಿಂದ ಹೋಗುವುದಾದರೆ ನಾನು ಸಮುದ್ರವನ್ನು ಪ್ರವೇಶಿಸುತ್ತೇನೆ. ನನಗೆ ಬೇರೆ ಉಪಾಯವಿಲ್ಲ.
ಯದ್ಯೇವ ದೇವಾನ್ ಗಚ್ಛೇಸ್ತ್ವಂ ಮಾಂ ಚ ತ್ಯಕ್ತ್ವಾ ಗೃಹಾಧಿಪ |
ಸರ್ವತ್ಯಾಗಂ ತತಃ ಕೃತ್ವಾ ಪ್ರವಿಶಾಮಿ ಹುತಾಶನಮ್ ॥13॥
ಗೃಹಾಧಿಪರೇ, ಒಂದು ಪಕ್ಷ ನನ್ನನ್ನು ಬಿಟ್ಟು ನೀವು ದೇವತೆಗಳ ಪಕ್ಷಕ್ಕೆ ಹೋಗುವುದಾದರೆ ನಾನು ಸರ್ವತ್ಯಾಗವನ್ನು ಮಾಡಿ ಅಗ್ನಿಯನ್ನು ಪ್ರವೇಶಿಸುತ್ತೇನೆ.
ಶುಕ್ರಃ
ಸಮುದ್ರಂ ಪ್ರವಿಶ ತ್ವಂ ವಾ ಅಗ್ನಿಂ ಪ್ರಜ್ವಲಿತಂ ತಥಾ |
ದುಹಿತುರ್ನಾಪ್ರಿಯಂ ಸೋಢುಂ ಶಕ್ತೋಽಹಂ ದಯಿತಾ ಹಿ ಮೇ॥
ಸಮುದ್ರವನ್ನು ಬೇಕಾದರೂ ಪ್ರವೇಶಿಸು, ಪ್ರಜ್ವಲಿತವಾದ ಅಗ್ನಿಯನ್ನು ಬೇಕಾದರೂ ಪ್ರವೇಶಿಸು. ನನ್ನ ಮಗಳಿಗೆ ಅಪ್ರಿಯವುಂಟಾದರೆ ನಾನು ಅದನ್ನು ಸಹಿಸಲಾರೆ. ಅವಳು ನನಗೆ ಪ್ರಿಯಳಾದವಳು.
ಪ್ರಸಾದ್ಯತಾಂ ದೇವಯಾನೀ ಜೀವಿತಂ ಹ್ಯತ್ರ ಮೇ ಸ್ಥಿತಮ್ |
ಪ್ರಸನ್ನಾ ದೇವಯಾನೀ ಚೇತ್ ಪ್ರಿಯಂ ನಾನ್ಯತರಂ ಮಮ | ಭ
ಯೋಗಕ್ಷೇಮರತಸ್ತೇಽಹಮಿಂದ್ರಸ್ಯೇವ ಬೃಹಸ್ಪತಿಃ ॥15॥
ದೇವಯಾನಿಯನ್ನು ಒಲಿಸು. ನನ್ನ ಜೀವವು ಅವಳಲ್ಲಿದೆ. ದೇವಯಾನಿಯು ಸಂತೋಷಗೊಂಡರೆ ನನಗೆ ಅದಕ್ಕಿಂತ ಪ್ರಿಯವಾದುದು ಯಾವುದೂ ಇಲ್ಲ. ಇಂದ್ರನ ಯೋಗಕ್ಷೇಮವನ್ನು ಬೃಹಸ್ಪತಿಯು ನೋಡಿದಂತೆ ನಾನು ಇಲ್ಲೇ ಇದ್ದು ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ.
ವೃಷಪರ್ವಾ
ಯತ್ಕಿಂಚಿದಸುರೇಂದ್ರಾಣಾಂ ವಸು ವಿದ್ಯೇತ ಭಾರ್ಗವ |

ಮಮ ಹಸ್ತಿಗವಾಶ್ವಂ ವಾ ತಸ್ಯ ತ್ವಂ ಮಮ ಚೇಶ್ವರಃ ॥16॥
ಎಲೈ ಶುಕ್ರಾಚಾರ್ಯರೇ, ಅಸುರೇಂದ್ರರಿಗೆ ಯಾವ ಸಂಪತ್ತು, ಭೋಗಗಳು, ಅಶ್ವಗಳು ಮತ್ತು ಗಜಗಳು ಇವೆಯೋ ನೀವು ಅವೆಲ್ಲಕ್ಕೂ ಮತ್ತೂ ನನಗೂ ಒಡೆಯರಾದವರು.
ಶುಕ್ರಃ
ಯತ್ಕಿಂಚಿದಸ್ತಿ ದ್ರವಿಣಂ ದೈತ್ಯೇಂದ್ರಾಣಾಮಿಹಾಸುರ |
ತಸ್ಯೇಶ್ವರೋಽಹಂ ಯದಿ ಚೇದ್ ದೇವಯಾನೀ ಪ್ರಸಾದ್ಯತಾಮ್ ॥17॥
ದೈತ್ಯೇಂದ್ರರ ಬಳಿ ಇರುವ ಎಲ್ಲಾ ಸಂಪತ್ತಿಗೂ ನಾನು ಒಡೆಯನಾದರೆ ದೇವಯಾನಿಯನ್ನು ಸಂತೋಷಪಡಿಸು.
ವೈಶಂಪಾಯನಃ
ಶ್ರುತ್ವಾ ಶುಕ್ರಸ್ಯ ವಚನಂ ವೃಷಪರ್ವಾ ಸಬಾಂಧವಃ |
ದೇವಯಾನೀಂ ಪ್ರಸೀದೇತಿ ಪಪಾತ ಭುವಿ ಪಾದಯೋಃ ॥18॥
ಶುಕ್ರಾಚಾರ್ಯರ ಮಾತನ್ನು ಕೇಳಿ ವೃಷಪರ್ವನು ತನ್ನ ಬಾಂಧವರೊಡಗೂಡಿ ದೇವಯಾನಿಯ ಪಾದಗಳ ಮೇಲೆ ಬಿದ್ದು ಪ್ರಸನ್ನಳಾಗು ಎಂದು ಕೇಳಿಕೊಂಡನು.
ದೇವಯಾನೀ
ಯದಿ ತ್ವಮೀಶ್ವರಸ್ತಾತ ರಾಜ್ಞೋ ವಿತ್ತಸ್ಯ ಭಾರ್ಗವ |
ನಾಭಿಜಾನಾಮಿ ತತ್ತೇಽಹಂ ರಾಜಾ ತು ವದತು ಸ್ವಯಮ್ ॥19॥
ತಂದೆಯೇ, ನೀನು ಒಂದು ಪಕ್ಷ ರಾಜನ ಎಲ್ಲಾ ಸಂಪತ್ತಿಗೂ ಒಡೆಯನಾದರೆ ನಾನು ಆ ನಿನ್ನ ಮಾತನ್ನು ನಂಬುವುದಿಲ್ಲ. ರಾಜನು ತಾನೇ ಆ ಮಾತನ್ನು ಹೇಳಲಿ.
ವೃಷಪರ್ವಾ
ಸ್ತುತ್ಯೋ ವಂದ್ಯಶ್ಚ ಸತತಂ ಮಯಾ ತಾತಶ್ಚ ತೇ ಶುಭೇ |
ಯತ್ಕಾಮಮಭಿಕಾಮಾಽಸಿ ದೇವಯಾನಿ ಶುಚಿಸ್ಮಿತೇ |
ತತ್ ತೇಽಹಂ ಸಂಪ್ರದಾಸ್ಯಾಮಿ ಯದಿ ಚೇದಪಿ ದುರ್ಲಭಮ್ ॥20॥
ಮಂಗಳಸ್ವರೂಪಳಾದವಳೇ, ನಿನ್ನ ತಂದೆಯು ನನಗೆ ಯಾವಾಗಲೂ ಸ್ತುತ್ಯನೂ, ವಂದ್ಯನೂ ಆಗಿದ್ದಾನೆ. ಶುಚಿಸ್ಮಿತೆಯಾದ ದೇವಯಾನಿಯೇ, ನಿನ್ನ ಮನಸ್ಸಿನಲ್ಲಿ ಏನು ಆಸೆ ಇದೆ ಎಂದು ಹೇಳು. ದುರ್ಲಭವಾದರೂ ನಾನು ನಿನಗೆ ಅದನ್ನು ಕೊಡುತ್ತೇನೆ.
ದೇವಯಾನೀ
ದಾಸೀಂ ಕನ್ಯಾಸಹಸ್ರೇಣ ಶರ್ಮಿಷ್ಠಾಮಭಿಕಾಮಯೇ |
ಅನುಗಚ್ಛೇತ್ ತು ಸಾ ಮಹ್ಯಂ ಯತ್ರ ದಾಸ್ಯತಿ ಮೇ ಪಿತಾ ॥21॥
ನನ್ನನ್ನು ನನ್ನ ತಂದೆ ಯಾರಿಗೆ ದಾನಮಾಡುತ್ತಾನೋ ಅಲ್ಲಿಗೆ ಶರ್ಮಿಷ್ಠೆಯು ಕನ್ಯಾಸಹಸ್ರದಿಂದ ಕೂಡಿ ದಾಸಿಯಾಗಿ ನನ್ನ ಹಿಂದೆ ಬರಬೇಕು. ಇದು ನನ್ನ ಆಸೆ.
ವೃಷಪರ್ವಾ
ಉತ್ತಿಷ್ಠ ಹಂಸಗತಿಕೇ ಶರ್ಮಿಷ್ಠಾಂ ಶೀಘ್ರಮಾನಯ |
ಯಚ್ಚ ಕಾಮಯತೇ ಕರ್ತುಂ ದೇವಯಾನೀ ಕರೋತು ತತ್ ॥22॥
ಹಂಸಗತಿಕೇ, ಎದ್ದು ಹೋಗಿ ಬೇಗ ಶರ್ಮಿಷ್ಠೆಯನ್ನು ಕರೆದುಕೊಂಡು ಬಾ, ದೇವಯಾನಿಯು ಅವಳು ಏನು ಮಾಡಬೇಕೆಂದು ಬಯಸುತ್ತಾಳೋ ಅವಳು ಅದನ್ನು ಮಾಡಲಿ.
ವೈಶಂಪಾಯನಃ
ತತೋ ಧಾತ್ರೀ ಗೃಹಂ ಗತ್ವಾ ಶರ್ಮಿಷ್ಠಾಂ ವಾಕ್ಯಮಬ್ರವೀತ್ |
ಉತ್ತಿಷ್ಠ ಭದ್ರೇ ಶರ್ಮಿಷ್ಠೇ ಜ್ಞಾತೀನಾಂ ಸುಖಮಾವಹ ॥23॥
ತ್ಯಜತಿ ಬ್ರಾಹ್ಮಣಃ ಶಿಷ್ಯಾನ್ ದೇವಯಾನ್ಯಾ ಪ್ರಚೋದಿತಃ |
ಸಾ ಯಂ ಕಾಮಯತೇ ಕಾಮಂ ದೇವಯಾನೀ ಕುರುಷ್ವ ತತ್ ॥24॥
ಅನಂತರ ಧಾತ್ರಿಯು ಶರ್ಮಿಷ್ಠೆಯ ಮನೆಗೆ ಹೋಗಿ ಅವಳನ್ನು ಕುರಿತು ಮಂಗಳಸ್ವರೂಪಳಾದ ಶರ್ಮಿಷ್ಠೆಯೇ, ಎದ್ದು ಬಾಂಧವರಿಗೆ ಸುಖವನ್ನು ಉಂಟುಮಾಡು. ದೇವಯಾನಿಯ ಪ್ರೇರಣೆಗೆ ಒಳಗಾದ ಶುಕ್ರಾಚಾರ್ಯರು ಶಿಷ್ಯರನ್ನು ಬಿಟ್ಟು ಹೋಗುತ್ತಿದ್ದಾರೆ. ದೇವಯಾನಿಯು ಏನು ಬಯಸುತ್ತಾಳೋ ನೀನು ಅದನ್ನು ನೆರವೇರಿಸು ಎಂದು ಹೇಳಿದಳು.
ಶರ್ಮಿಷ್ಠಾ
ಯಂ ಸಾ ಕಾಮಯತೇ ಕಾಮಂ ಕರವಾಣ್ಯಹಮದ್ಯ ತಮ್ |
ಮಾ ತ್ವೇವೋಪಗಮೇಚ್ಛುಕ್ರೋ ದೇವಯಾನ್ಯಾ ಪ್ರಚೋದಿತಃ ॥25॥
ದೇವಯಾನಿಯು ಏನನ್ನು ಅಪೇಕ್ಷಿಸುತ್ತಾಳೆಯೋ ಅದನ್ನು ನಾನು ಈ ದಿನ ಮಾಡುವೆನು. ದೇವಯಾನಿಯಿಂದ ಪ್ರೇರಿತರಾದ ಶುಕ್ರಾಚಾರ್ಯರು ಎಲ್ಲಿಗೂ ಹೋಗದಿರಲಿ.
ವೈಶಂಪಾಯನಃ
ತತಃ ಕನ್ಯಾಸಹಸ್ರೇಣ ವೃತಾ ಶಿಬಿಕಯಾ ತದಾ |
ಪಿತುರ್ನಿಯೋಗಾತ್ ತ್ವರಿತಾ ನಿಶ್ಚಕ್ರಾಮ ಪುರೋತ್ತಮಾತ್ ॥26॥
ಅನಂತರ ಕನ್ಯಾಸಹಸ್ರದಿಂದ ಸುತ್ತುವರಿಯಲ್ಪಟ್ಟು ಶಿಬಿಕೆಯನ್ನೇರಿ ತಂದೆಯ ಅಪ್ಪಣೆಯಂತೆ ಶರ್ಮಿಷ್ಠೆಯು ಶ್ರೇಷ್ಠವಾದ ತಮ್ಮ

ಪಟ್ಟಣದಿಂದ  ಶೀಘ್ರವಾಗಿ ಹೊರಗೆ ಬಂದಳು.
ಶರ್ಮಿಷ್ಠಾ
ಅಹಂ ದಾಸೀಸಹಸ್ರೇಣ ದಾಸೀ ತೇ ಪರಿಚಾರಿಕಾ |
ಅನು ತ್ವಾಂ ತತ್ರ ಯಾಸ್ಯಾಮಿ ಯತ್ರ ದಾಸ್ಯತಿ ತೇ ಪಿತಾ ॥27॥
ನಾನು ಸಹಸ್ರದಾಸಿಯರೊಡಗೂಡಿ ನಿನಗೆ ದಾಸಿಯಾಗಿ ಪರಿಚಾರಿಕೆಯನ್ನು ಮಾಡುತ್ತೇನೆ. ನಿನ್ನ ತಂದೆಯು ನಿನ್ನನ್ನು ಯಾರಿಗೆ ಕೊಡುತ್ತಾನೋ ಅಲ್ಲಿಗೆ ನಾನೂ ಸಹ ನಿನ್ನನ್ನು ಹಿಂಬಾಲಿಸುತ್ತೇನೆ.
ದೇವಯಾನೀ
ಸ್ತುವತೋ ದುಹಿತಾ ಚಾಹಂ ವಂದಿನಃ ಪ್ರತಿಗೃಹ್ಣತಃ
ಸ್ತೂಯಮಾನಸ್ಯ ದುಹಿತಾ ಕಥಂ ದಾಸೀ ಭವಿಷ್ಯಸಿ॥28॥
ನಾನು ಸ್ತೋತ್ರಮಾಡುವವನ, ವಂದಿಯಾದವನ, ದಾನವನ್ನು ಸ್ವೀಕಾರಮಾಡುವವನ ಮಗಳು. ಸ್ತೋತ್ರಮಾಡಲ್ಪಡುವವನ ಮಗಳಾದ ನೀನು ನನಗೆ ಹೇಗೆ ದಾಸಿಯಾಗುತ್ತೀಯೆ?
ಶರ್ಮಿಷ್ಠಾ
ಯೇನ ಕೇನ ಚಿದಾರ್ತಾನಾಂ ಜ್ಞಾತೀನಾಂ ಯತ್ ಸುಖಾವಹಮ್|
ಸರ್ವಮಾದೃತ್ಯ ಕರ್ತವ್ಯಮೇಷ ಧರ್ಮಃ ಸನಾತನಃ ॥29॥
ಏವಂ ಕೃತ್ವಾ ಕರಿಷ್ಯಾಮಿ ಯನ್ಮಾಂ ವಕ್ಷ್ಯಸಿ ಶೋಭನೇ |
ಅತಸ್ತ್ವಾಮನುಯಾಸ್ಯಾಮಿ ಯತ್ರ ದಾಸ್ಯತಿ ತೇ ಪಿತಾ ॥30॥
ಯಾವ ಪ್ರಕಾರದಿಂದಲಾಗಲೀ ಆರ್ತರಾದ ಬಂಧುಗಳಿಗೆ ಸುಖವನ್ನು ಉಂಟುಮಾಡಬೇಕು. ಇದು ಸನಾತನ ಧರ್ಮ. ಎಲೈ ಶೋಭನಳೇ, ಇದನ್ನು ತಿಳಿದು ನಾನು ನೀನು ಹೇಳಿದಂತೆ ಮಾಡುತ್ತೇನೆ. ಆದ್ದರಿಂದ ನಿನ್ನ ತಂದೆಯು ನಿನ್ನನ್ನು ಯಾರಿಗೆ ಕೊಡುವನೋ ಅಲ್ಲಿ ನಿನ್ನನ್ನು ಹಿಂಬಾಲಿಸುವೆನು.
ವೈಶಂಪಾಯನಃ
ಪ್ರತಿಶ್ರುತೇ ದಾಸಭಾವೇ ದುಹಿತ್ರಾ ವೃಷಪರ್ವಣಃ
ದೇವಯಾನೀ ನೃಪಶ್ರೇಷ್ಠ ಪಿತರಂ ತಮಥಾಬ್ರವೀತ್ ॥31॥
ಜನಮೇಜಯನೇ, ಹೀಗೆ ವೃಷಪರ್ವನ ಮಗಳಾದ ಶರ್ಮಿಷ್ಠೆಯು ದಾಸ್ಯಭಾವವನ್ನು ಪ್ರತಿಜ್ಞೆಮಾಡುತ್ತಿರಲು ದೇವಯಾನಿಯು ತಂದೆಯನ್ನು ಕುರಿತು ಹೀಗೆ ಹೇಳಿದಳು.
ದೇವಯಾನೀ
ಪ್ರವಿಶಾಮ ಪುರಂ ತಾತ ತುಷ್ಟಾಽಸ್ಮಿ ದ್ವಿಜಸತ್ತಮ |
ಅಮೋಘಂ ತವ ವಿಜ್ಞಾನಮಸ್ತಿ ವಿದ್ಯಾಬಲಂ ಚ ತೇ ॥32॥
ಬ್ರಾಹ್ಮಣಶ್ರೇಷ್ಠರಾದ ತಂದೆಯೇ, ನಾನು ಸಂತುಷ್ಟಳಾಗಿದ್ದೇನೆ. ಮತ್ತೆ ಪಟ್ಟಣವನ್ನು ಪ್ರವೇಶಿಸೋಣ. ನಿಮ್ಮ ವಿದ್ಯಾಬಲವು ಮತ್ತು ಜ್ಞಾನಬಲವು ಅಮೋಘವಾದದ್ದು.
ವೈಶಂಪಾಯನಃ
ಏವಮುಕ್ತೋ ದುಹಿತ್ರಾ ಸ ಭೃಗುಶ್ರೇಷ್ಠೋ ಮಹಾತಪಾಃ |
ಪ್ರವಿವೇಶ ಪುರಂ ಹೃಷ್ಟಃ ಪೂಜಿತಃ ಸರ್ವದಾನವೈಃ ॥33॥
ಹೀಗೆ ಮಗಳಿಂದ ಹೇಳಲ್ಪಟ್ಟ ಮಹಾತಪಸ್ವಿಗಳಾದ ಭೃಗುಶ್ರೇಷ್ಠರಾದ ಶುಕ್ರಾಚಾರ್ಯರು ಸಂತೋಷದಿಂದ ಪಟ್ಟಣವನ್ನು ಪ್ರವೇಶಿಸಿ ಎಲ್ಲ ದಾನವರಿಂದಲೂ ಪೂಜಿಸಲ್ಪಟ್ಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಏಕೋನಸಪ್ತತಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಅರವತ್ತೊಂಭತ್ತನೆಯ  ಅಧ್ಯಾಯ ಮುಗಿಯಿತು.
*****

ಎಪ್ಪತ್ತನೆಯ ಅಧ್ಯಾಯ
(ಯಯಾತಿ ದೇವಯಾನಿಯರ ವಿವಾಹ,
ಯಯಾತಿಯನ್ನು ಕುರಿತು ಶುಕ್ರಾಚಾರ್ಯರ ಆದೇಶ)
ವೈಶಂಪಾಯನಃ
ಅಥ ದೀರ್ಘೇಣ ಕಾಲೇನ ದೇವಯಾನೀ ನೃಪೋತ್ತಮ |
ವನಂ ತದೇವ ನಿರ್ಯಾತಾ ಕ್ರೀಡಾರ್ಥಂ ವರವರ್ಣಿನೀ ॥1॥
ಎಲೈ ರಾಜನೇ, ಅನಂತರ ಬಹಳ ದಿನಗಳು ಕಳೆದ ಮೇಲೆ ಸುಂದರಿಯಾದ ದೇವಯಾನಿಯು ಕ್ರೀಡೆಗೋಸ್ಕರವಾಗಿ ಅದೇ ವನಕ್ಕೆ ಹೊರಟಳು.

ತೇನ ದಾಸೀಸಹಸ್ರೇಣ ಸಾರ್ಧಂ ಶರ್ಮಿಷ್ಠಯಾ ತದಾ |
ತಮೇವ ದೇಶಂ ಸಂಪ್ರಾಪ್ತಾ ಯಥಾಕಾಮಂ ಚಚಾರ ಸಾ ॥2॥
ಆ ಸಹಸ್ರದಾಸಿಯರಿಂದಲೂ, ಮತ್ತು ಶರ್ಮಿಷ್ಠೆಯಿಂದಲೂ ಕೂಡಿದವಳಾಗಿ ಕಾಡಿನ ಅದೇ ಪ್ರದೇಶಕ್ಕೆ ಬಂದು ತನ್ನ ಮನಸ್ಸಿಗೆ ಬಂದಂತೆ ತಿರುಗಾಡಿದಳು.
ತಾಭಿಃ ಸಖೀಭಿಃ ಸಹಿತಾಃ ಸರ್ವಾಭಿರ್ಮುದಿತಾ ಭೃಶಮ್ |
ಕ್ರೀಡಿತ್ವೋಪರತಾಃ ಸರ್ವಾಃ ಪಿಬಂತ್ಯೋ ಮಧು ಮಾಧವಮ್ |
ಖಾದಂತ್ಯೋ ವಿವಿಧಾನ್ ಭಕ್ಷ್ಯಾನ್ ವಿದಂಶಂತ್ಯಃ ಫಲಾನಿ ಚ ॥3॥
ಹರ್ಷಗೊಂಡಿದ್ದ ಆ ಎಲ್ಲ ಸಖಿಯರ ಜೊತೆಯಲ್ಲಿ ಆಟಗಳನ್ನಾಡಿ, ಆಟವನ್ನು ಮುಗಿಸಿ ಎಲ್ಲರೂ ವಸಂತಕಾಲದ ಮಧುವನ್ನು ಪಾನಮಾಡುತ್ತಾ ಅನೇಕ ವಿಧವಾದ ಭಕ್ಷ್ಯಗಳನ್ನು ತಿನ್ನುತ್ತಾ, ಫಲಗಳನ್ನು ಕಚ್ಚಿ ತಿನ್ನುತ್ತಾ ಸಂತೋಷಪಟ್ಟರು.
ಪುನಶ್ಚ ನಾಹುಷೋ ರಾಜಾ ಮೃಗಲಿಪ್ಸುರ್ಯದೃಚ್ಛಯಾ |
ತಮೇವ ದೇಶಂ ಸಂಪ್ರಾಪ್ತೋ ಜಲಾರ್ಥೀ ಶ್ರಮಕರ್ಶಿತಃ |
ದದರ್ಶ ದೇವಯಾನೀಂ ಚ ಶರ್ಮಿಷ್ಠಾಂ ತಾಶ್ಚ ಯೋಷಿತಾಃ ॥4॥
ಪುನಃ ರಾಜನಾದ ಯಯಾತಿಯು ಯದೃಚ್ಛೆಯಿಂದ ಮೃಗಗಳನ್ನು ಹುಡುಕುತ್ತಾ ಶ್ರಮದಿಂದ ಕೂಡಿದವನಾಗಿ ನೀರನ್ನು ಬಯಸಿ ಅದೇ ದೇಶಕ್ಕೆ ಬಂದನು. ಅವನು ದೇವಯಾನಿಯನ್ನೂ, ಶರ್ಮಿಷ್ಠೆಯನ್ನೂ ಮತ್ತು ಉಳಿದ ಕನ್ಯೆಯರನ್ನೂ ನೋಡಿದನು.
ಪಿಬಂತೀರ್ಲಪಮಾನಾಶ್ಚ ಸರ್ವಾಭರಣಭೂಷಿತಾಃ |
ಆಸನೇ ಪ್ರವರೇ ದಿವ್ಯೇ ಸರ್ವಾಭರಣಭೂಷಿತೇ ॥5॥
ಉಪವಿಷ್ಟಾಂ ಸುಕೇಶಾಂತಾಂ ದೇವಯಾನೀಂ ಶುಚಿಸ್ಮಿತಾಮ್ |
ರೂಪೇಣಾಪ್ರತಿಮಾಂ ತಾಸಾಂ ಸ್ತ್ರೀಣಾಂ ಮಧ್ಯೇ ವರಾಂಗನಾಮ್ ॥6॥
ಆಸನಾಚ್ಚ ತತಃ ಕಿಂಚಿದ್ ವಿಹೀನಾಂ ಹೇಮಭೂಷಿತಾಮ್ |
ಅಸುರೇಂದ್ರಸುತಾಂ ಚಾಪಿ ನಿಷಣ್ಣಾಂ ಚಾರುಹಾಸಿನೀಮ್ |
ದದರ್ಶ ಪಾದೌ ವಿಪ್ರಾಯಾಃ ಸಂವಹಂತೀಮನಿಂದಿತಾಮ್ ॥7॥
ಅವರೆಲ್ಲರೂ ಸರ್ವಾಭರಣಭೂಷಿತರಾಗಿ ಪಾನವನ್ನು ಮಾಡುತ್ತಾ ಮಾತನಾಡುತ್ತಿದ್ದರು. ದಿವ್ಯವಾದ ಆಸನದಲ್ಲಿ ಸರ್ವಾಭರಣಭೂಷಿತರಾಗಿ ಸುಂದರಿಯಾದ ದೇವಯಾನಿಯನ್ನೂ ಅದೇ ಸ್ತ್ರೀಯರ ಮಧ್ಯದಲ್ಲಿ ದೇವತಾಸ್ತ್ರೀಯಂತೆ ಅಸಧೃಶವಾದ ರೂಪದಿಂದ ಕೂಡಿದ ದೇವಯಾನಿಯ ಆಸನದಿಂದ ಸ್ವಲ್ಪ ದೂರದಲ್ಲಿ ಹೇಮಭೂಷಿತಳಾಗಿ ನಗುತ್ತಾ ನೆಲದ ಮೇಲೆ ಕುಳಿತಿದ್ದ ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನೂ ನೋಡಿದನು. ಅನಿಂದಿತಳಾದ ಶರ್ಮಿಷ್ಠೆಯು ದೇವಯಾನಿಯ ಪಾದಗಳನ್ನು ಒತ್ತುತ್ತಿದ್ದಳು.
ಗಾಯಂತ್ಯೋಽಥ ಪ್ರನೃತ್ಯಂತ್ಯೋ ವಾದಯಂತ್ಯಶ್ಚ ಭಾರತ |
ದೃಷ್ಟ್ವಾ ಯಯಾತಿಮತುಲಂ ಲಜ್ಜಯಾಽವನತಾಃ ಸ್ಥಿತಾಃ ॥8॥
ಎಲೈ ಭಾರತನೇ ಹಾಡುತ್ತಾ, ವಾದ್ಯಗಳನ್ನು ನುಡಿಸುತ್ತಾ, ಕುಣಿಯುತ್ತಾ ಇದ್ದ ಆ ಕನ್ಯೆಯರು ಅಸದೃಶವಾದ ಯಯಾತಿಯನ್ನು ನೋಡಿ ಲಜ್ಜೆಯಿಂದ ತಲೆತಗ್ಗಿಸಿ ನಿಂತರು.
ಯಯಾತಿಃ
ಯುವಾಂ ಕನ್ಯಾಸಹಸ್ರೇಣ ದ್ವೇ ಕನ್ಯೇ ಪರಿವಾರಿತೇ |
ಗೋತ್ರೇ ಚ ನಾಮಧೇಯೇ ಚ ದ್ವಯೋಃ ಪೃಚ್ಛಾಮಿ ವಾಮಹಮ್ ॥
ಒಂದು ಸಹಸ್ರ ಕನ್ಯೆಯರಿಂದ ನೀವಿಬ್ಬರೂ ಕನ್ಯೆಯರು ಸುತ್ತುವರಿಯಲ್ಪಟ್ಟಿದ್ದೀರಿ. ನಿಮ್ಮಿಬ್ಬರ ನಾಮವನ್ನೂ ಮತ್ತು ಗೋತ್ರವನ್ನೂ ನಾನು ಕೇಳಲು ಬಯಸುತ್ತೇನೆ.
ದೇವಯಾನೀ
ಆಖ್ಯಾಸ್ಯಾಮ್ಯಹಮಾದತ್ಸ್ವ ವಚನಂ ಮೇ ನರೋತ್ತಮ |
ಶುಕ್ರೋ ನಾಮಾಸುರಗುರುಃ ಸುತಾಂ ಜಾನೀಹಿ ತಸ್ಯ ಮಾಮ್ ॥10॥
ಇಯಂ ಚ ಮೇ ಸಖೀ ದಾಸೀ ಯತ್ರಾಹಂ ತತ್ರ ಗಾಮಿನೀ |
ದುಹಿತಾ ದಾನವೇಂದ್ರಸ್ಯ ಶರ್ಮಿಷ್ಠಾ ವೃಷಪರ್ವಣಃ ॥11॥
ಎಲೈ ರಾಜನೇ, ನಾನು ಉತ್ತರವನ್ನು ಕೊಡುತ್ತೇನೆ. ನನ್ನ ಮಾತನ್ನು ಸ್ವೀಕರಿಸು. ನನ್ನನ್ನು ಅಸುರಗುರುಗಳಾದ ಶುಕ್ರಾಚಾರ್ಯರ ಮಗಳೆಂದು ತಿಳಿ. ಇವಳು ನನ್ನ ಸಖಿ ಮತ್ತು ದಾಸಿ. ದಾನವೇಂದ್ರನಾದ ವೃಷಪರ್ವನ ಮಗಳಾದ ಶರ್ಮಿಷ್ಠೆ. ನಾನು ಎಲ್ಲಿ ಹೋಗುತ್ತೇನೆಯೋ ಅಲ್ಲಿಗೆ ಇವಳು ಬರುತ್ತಾಳೆ.
ಯಯಾತಿಃ
ಕಥಂ ನು ತೇ ಸಖೀ ದಾಸೀ ಕನ್ಯೇಯಂ ವರವರ್ಣಿನೀ |
ನೈವ ದೇವೀ ನ ಗಂಧರ್ವೀ ನ ಯಕ್ಷೀ ನ ಚ ಕಿನ್ನರೀ ॥12॥
ನೈವಂರೂಪಾ ಮಯಾ ನಾರೀ ದೃಷ್ಟಪೂರ್ವಾ ಮಹೀತಳೇ |
ಶ್ರೀರಿವಾಯತಪದ್ಮಾಕ್ಷೀ ಸರ್ವಲಕ್ಷಣಶೋಭಿತಾ ॥13॥
ಈ ಸುಂದರಿಯಾದ ನಿನ್ನ ಸಖಿಯಾದ ಕನ್ಯೆಯು ಹೇಗೆ ನಿನಗೆ ದಾಸಿಯಾಗುತ್ತಾಳೆ? ಇಂತಹ ರೂಪವುಳ್ಳ ಕನ್ಯೆಯನ್ನು ನಾನು ಭೂತಳದಲ್ಲಿ ದೇವತಾಸ್ತ್ರೀಯನ್ನಾಗಲೀ, ಗಂಧರ್ವಸ್ತ್ರೀಯನ್ನಾಗಲೀ, ಯಕ್ಷಿಯನ್ನಾಗಲೀ, ಕಿನ್ನರಿಯನ್ನಾಗಲೀ ಹಿಂದೆ ಎಂದೂ

ನೋಡಲಿಲ್ಲ. ಲಕ್ಷ್ಮೀದೇವಿಯಂತೆ ವಿಶಾಲವಾದ ನೇತ್ರಗಳನ್ನುಳ್ಳ ಇವಳು ಸರ್ವಲಕ್ಷಣಗಳಿಂದ ಶೋಭಿಸುತ್ತಿದ್ದಾಳೆ.
ಅಸುರೇಂದ್ರಸುತಾ ಕನ್ಯಾ ಸರ್ವಾಲಂಕಾರಭೂಷಿತಾ |
ದೈವೇನೋಪಹತಾ ಸುಭ್ರೂರುತಾಹೋ ತಪಸಾಽಪಿ ವಾ |
ಅನ್ಯಥೈಷಾಽನವದ್ಯಾಂಗೀ ದಾಸೀ ತೇ ನ ಭವಿಷ್ಯತಿ ॥14॥
ಸರ್ವಾಲಂಕಾರಭೂಷಿತಳಾದ ಈ ಅಸುರೇಂದ್ರನ ಮಗಳಾದ ಕನ್ಯೆಯು ದೈವಶಾಪಕ್ಕಾಗಲೀ ಅಥವಾ ಬೇರೆಯವರ ತಪಸ್ಸಿನ ಪ್ರಭಾವಕ್ಕಾಗಲೀ ಒಳಗಾಗಿದ್ದಾಳೆಯೇ ? ಇಲ್ಲದಿದ್ದರೆ ಇಂತಹ ನಿರ್ದುಷ್ಟವಾದ ಶರೀರವುಳ್ಳವಳು  ನಿನ್ನ ದಾಸಿಯಾಗಲಾರಳು.
ದೇವಯಾನೀ
ಸರ್ವಮೇತನ್ನರವ್ಯಾಘ್ರ ವಿಧಾನಮನುವರ್ತತೇ |
ವಿಧಾನವಿಹಿತಂ ಮತ್ವಾ ಮಾ ವಿಚಾರಯ ಸುವ್ರತ ॥15॥
ರಾಜವದ್ ರೂಪವೇಷೌ ತೇ ಬ್ರಾಹ್ಮೀಂ ವಾಚಂ ಬಿಭರ್ಷಿ ಚ |
ಕಿಂ ನಾಮ ತ್ವಂ ಕುತಶ್ಚಾಸಿ ಕಸ್ಯ ಪುತ್ರಶ್ಚ ಶಂಸ ಮೇ ॥16॥
ಎಲೈ ರಾಜನೇ, ಇದೆಲ್ಲವೂ ವಿಧಿಯ ಬರಹವನ್ನು ಅನುಸರಿಸಿದೆ. ಎಲೈ ಸುವ್ರತನೇ, ಇದನ್ನು ವಿಧಿವಿಹಿತವೆಂದು ತಿಳಿದು ವಿಚಾರಮಾಡುವುದನ್ನು ಬಿಡು. ನಿನ್ನ ರೂಪವೇಷಗಳು ರಾಜನಂತಿವೆ. ವೇದಪರಿಶುದ್ಧವಾದ ಬ್ರಾಹ್ಮಣ ಭಾಷೆಯಿಂದ ಮಾತನಾಡುತ್ತಿದ್ದೀಯೆ. ನಿನ್ನ ಹೆಸರೇನು, ನೀನು ಎಲ್ಲಿಂದ ಬಂದೆ, ನೀನು ಯಾರ ಮಗ ಎಂದು ನನಗೆ ಹೇಳು.
ಯಯಾತಿಃ
ಬ್ರಹ್ಮಚರ್ಯೇಣ ಸರ್ವಾನ್ ವೈ ಸಾಂಗಾನ್ ವೇದಾನ್ ವಿದಾಮ್ಯಹಮ್ |
ರಾಜಾಽಹಂ ರಾಜಪುತ್ರಶ್ಚ ಯಯಾತಿರಿತಿ ವಿಶ್ರುತಃ ॥17॥
ನಾನು ಬ್ರಹ್ಮಚರ್ಯದಿಂದ ಸಾಂಗವಾದ ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದ್ದೇನೆ. ನಾನು ನಹುಷನ ಮಗ, ಯಯಾತಿಯೆಂದು ನನ್ನ ಹೆಸರು ಪ್ರಸಿದ್ಧವಾಗಿದೆ. ನಾನು ರಾಜ ಮತ್ತು ರಾಜಪುತ್ರ.
ದೇವಯಾನೀ
ಕೇನಾಸ್ಯರ್ಥೇನ ನೃಪತೇ ಇಮಂ ದೇಶಮುಪಾಗತಃ |
ಜಿಘೃಕ್ಷುರ್ವಾ ರಿಪುಂ ಕಂಚಿದಥವಾ ಮೃಗಲಿಪ್ಸಯಾ ॥18॥
ಎಲೈ ರಾಜನೇ, ಯಾವ ಉದ್ದೇಶದಿಂದ ಈ ದೇಶಕ್ಕೆ ಬಂದಿದ್ದೀಯೆ? ಯಾರನ್ನಾದರೂ ಶತ್ರುವನ್ನು ಹಿಡಿಯುವುದಕ್ಕೋಸ್ಕರವೋ ಅಥವಾ ಬೇಟೆಯಾಡುವ ಉದ್ದೇಶದಿಂದಲೋ?
ಯಯಾತಿಃ
ಮೃಗಲಿಪ್ಸುರಹಂ ಭದ್ರೇ ಪಾನೀಯಾರ್ಥಮಿಹಾಗತಃ |
ಬಹು ಚಾಪ್ಯನುಯುಕ್ತೋಽಸ್ಮಿ ತನ್ಮಾಽನುಜ್ಞಾತುಮರ್ಹಸಿ ॥19॥
ಎಲೌ ಮಂಗಳಸ್ವರೂಪಳೇ, ಬೇಟೆಯಾಡಲು ಹೊರಟುಬಂದ ನಾನು ನೀರನ್ನು ಹುಡುಕುತ್ತಾ ಇಲ್ಲಿಗೆ ಬಂದೆ. ನನ್ನನ್ನು ಕುರಿತು ಬಹಳ ಪ್ರಶ್ನೆಗಳನ್ನು ಕೇಳಿದ್ದೀಯೆ. ನನಗೆ ಇಲ್ಲಿಂದ ಹೋಗಲು ಅಪ್ಪಣೆಯನ್ನು ಕೊಡು.
ದೇವಯಾನೀ
ಅಹಂ ದಾಸೀಸಹಸ್ರೇಣ ದಾಸ್ಯಾ ಶರ್ಮಿಷ್ಠಯಾ ಸಹ |
ತ್ವದಧೀನಾಽಸ್ಮಿ ಭದ್ರಂ ತೇ ಸಾಧು ಭರ್ತಾ ಚ ಮೇ ಭವ ॥20॥
ನಾನು ಈ ದಾಸೀಸಹಸ್ರದ ಜೊತೆಯಲ್ಲಿ ಮತ್ತು ದಾಸಿಯಾದ ಶರ್ಮಿಷ್ಠೆಯ ಜೊತೆಯಲ್ಲಿ ನಿನಗೆ ಅಧೀನಳಾಗಿದ್ದೇನೆ. ನಿನಗೆ ಮಂಗಳವಾಗಲಿ, ನನ್ನ ಪತಿಯಾಗು.
ವೈಶಂಪಾಯನಃ
ಅಸುರೇಂದ್ರಸುತಾಮೀಕ್ಷ್ಯ ತಸ್ಯಾಂ ಸಕ್ತೇನ ಚೇತಸಾ |
ಶರ್ಮಿಷ್ಠಾ ಮಹಿಷೀ ಮಹ್ಯಮಿತಿ ಮತ್ವಾ ವಚೋಽಬ್ರವೀತ್ ॥21॥
ರಾಜನು ಅಸುರೇಂದ್ರನಾದ ವೃಷಪರ್ವನ ಮಗಳನ್ನು ನೋಡಿದಾಗ ಅವಳಲ್ಲಿ ಮನಸ ಆಸಕ್ತವಾಯಿತು. ಶರ್ಮಿಷ್ಠೆಯು ತನಗೆ ಅನುರೂಪಳಾದ ಮಹಿಷಿ ಎಂದು ಚಿಂತಿಸಿ ಮಾತನಾಡಿದನು.
ಯಯಾತಿಃ
ವಿದ್ಧ್ಯೌಶನಸಿ ಭದ್ರಂ ತೇ ನ ತ್ವಮರ್ಹಸಿ ಭಾಮಿನಿ |
ಅವೈವಾಹ್ಯಾ ಹಿ ರಾಜಾನೋ ದೇವಯಾನಿ ಪಿತುಸ್ತವ ॥22॥
ಪರಭಾರ್ಯಾ ಸ್ವಸಾ ಶ್ರೇಷ್ಠಾ ಸಗೋತ್ರಾ ಪತಿತಾ ಸ್ನುಷಾ |
ಅವರಾ ಭಿಕ್ಷುಕಾಽಸ್ವಸ್ಥಾ ಅಗಮ್ಯಾಃ ಕೀರ್ತಿತಾ ಬುಧೈಃ ॥23॥
ಎಲೌ ಸುಂದರಿಯಾದ ಶುಕ್ರಾಚಾರ್ಯರ ಮಗಳೇ, ನಿನಗೆ ಮಂಗಳವಾಗಲಿ. ನೀನು ಹೀಗೆ ಮಾತನಾಡುವುದು ಸರಿಯಲ್ಲ ಎಂದು ತಿಳಿ. ನಿನ್ನ ತಂದೆಯು ನಿನ್ನನ್ನು ಕ್ಷತ್ರಿಯರಿಗೆ ವಿವಾಹ ಮಾಡಿಕೊಡಲಾರರು. ಪರಭಾರ್ಯೆಯೂ, ತಂಗಿಯೂ ತನಗಿಂತ ಉತ್ತಮಳಾದವಳೂ, ತನ್ನ ಗೋತ್ರದವಳೂ, ಪತಿತಳಾದವಳೂ, ಸೊಸೆಯೂ, ನೀಚಕುಲದಲ್ಲಿ ಜನಿಸಿದ ವೇಶ್ಯೆಯೂ, ಆರೋಗ್ಯವಿಲ್ಲದವಳೂ ಅಗಮ್ಯರೆಂದು ಜ್ಞಾನಿಗಳು ಹೇಳುತ್ತಾರೆ. (ನೀನು ನನಗಿಂತ ಶ್ರೇಷ್ಠಳಾದವಳು ಎಂದು ಯಯಾತಿಯ ಅಭಿಪ್ರಾಯ)
ದೇವಯಾನೀ
ಸಂಸೃಷ್ಟಂ ಬ್ರಹ್ಮಣಾ ಕ್ಷತ್ರಂ ಕ್ಷತ್ರೇಣ ಬ್ರಹ್ಮ ಸಂಹಿತಮ್ |

ಅನ್ಯತ್ವಮಸ್ತಿ ನ ತಯೋರೇಕಾಂತರಸಮಾಸ್ಥಿತೇ |
ಋಷಿಶ್ಚಾಪ್ಯೃಷಿಪುತ್ರಶ್ಚ ನಾಹುಷಾಂಗ ವಹಸ್ವ ಮಾಮ್ ॥24॥
ಕ್ಷತ್ರಿಯ ಕುಲವು ಬ್ರಾಹ್ಮಣ ಕುಲದೊಂದಿಗೆ ಸೇರಿಕೊಂಡಿದೆ. ಹಾಗೆಯೇ ಬ್ರಾಹ್ಮಣ ಕುಲವೂ ಕ್ಷತ್ರಿಯ ಕುಲದೊಂದಿಗೆ ಸೇರಿಕೊಂಡಿದೆ. ಅವೆರಡೂ ಬೇರೆಬೇರೆಯಲ್ಲ. ಮುಖಕ್ಕೂ ಮತ್ತು ಭುಜಗಳಿಗೂ ಕೇವಲ ಕಂಠದ ಅಂತರವಿದೆ. ಎಲೈ ಯಯಾತಿಯೇ, ಋಷಿಯೂ, ಋಷಿಪುತ್ರನೂ ಆದ ನೀನು ನನ್ನನ್ನು ವಿವಾಹ ಮಾಡಿಕೊ.
ಯಯಾತಿಃ
ಏಕತ್ರೈವೋದ್ಭವಾ ವರ್ಣಾಶ್ಚತ್ವಾರೋಽಪಿ ವರಾಂಗನೇ |
ಪೃಥಗ್ಧರ್ಮಾಃ ಪೃಥಕ್‌ಶೌಚಾಸ್ತೇಷಾಂ ತು ಬ್ರಾಹ್ಮಣೋ ಗುರುಃ ॥25॥
ಎಲೌ ಸುಂದರಿಯೇ, ನಾಲ್ಕು ವರ್ಣಗಳೂ ಒಬ್ಬ ನಾರಾಯಣನಿಂದಲೇ ಉದ್ಭವಿಸಿವೆ. ಆದರೆ ಆ ವರ್ಣಗಳ ಧರ್ಮಗಳು, ಶೌಚಾಚಾರಗಳು ಭಿನ್ನ ಭಿನ್ನವಾಗಿವೆ. ಆ ವರ್ಣಗಳಲ್ಲಿ ಬ್ರಾಹ್ಮಣನು ಗುರುವಾದವನು.
ದೇವಯಾನೀ
ಪಾಣಿರ್ಮೇ ನಾಹುಷಾಯಂ ವೈ ನ ಪುಂಭಿಃ ಸೇವಿತಃ ಪುರಾ |
ತ್ವಮೇವ ಚಾಗ್ರಹೀರಗ್ರೇ ವೃಣೋಮಿ ತ್ವಾಮಹಂ ತತಃ ॥26॥
ಕಥಂ ನು ಮೇ ಮನಸ್ವಿನ್ಯಾಃ ಪಾಣಿಮನ್ಯಃ ಪುಮಾನ್ ಸ್ಪೃಶೇತ್ |
ಗೃಹೀತಮೃಷಿಪುತ್ರೇಣ ಸ್ವಯಂ ಪೂರ್ವಂ ನೃಪ ತ್ವಯಾ ॥27॥
ಎಲೈ ಋಷಿಪುತ್ರನಾದ ಯಯಾತಿಯೇ, ಈ ನನ್ನ ಪಾಣಿಯನ್ನು ಹಿಂದೆ ಯಾರೂ ಹಿಡಿದಿಲ್ಲ. ಮೊದಲು ನೀನೇ ಒಮ್ಮೆ ಹಿಡಿದಿದ್ದೆ. ಆದ್ದರಿಂದ ನಿನ್ನನ್ನು ವರಿಸುತ್ತಿದ್ದೇನೆ. ಎಲೈ ರಾಜನೇ, ಋಷಿಪುತ್ರನಾದ ನೀನು ಹಿಡಿದ ಧೈರ್ಯಶಾಲಿನಿಯಾದ ನನ್ನ ಪಾಣಿಯನ್ನು ಇನ್ನೊಬ್ಬ ಪುರುಷನು ಹೇಗೆ ಹಿಡಿಯುತ್ತಾನೆ ?
ಯಯಾತಿಃ
ಕ್ರುದ್ಧಾದಾಶೀವಿಷಾಚ್ಛಸ್ತ್ರಾಜ್ಜ್ವಲನಾತ್ ಸರ್ವತೋಮುಖಾತ್ |
ದುರಾಧರ್ಷತರೋ ವಿಪ್ರಃ ಪುರುಷೇಣ ವಿಜಾನತಾ ॥28॥
ಕ್ರುದ್ಧವಾದ ಸರ್ಪಕ್ಕಿಂತಲೂ, ಶಸ್ತ್ರಕ್ಕಿಂತಲೂ, ಸರ್ವತೋಮುಖವಾಗಿ ಉರಿಯುವ ಅಗ್ನಿಗಿಂತಲೂ ಬ್ರಾಹ್ಮಣನು ಅತ್ಯಂತ ದುರಾಧರ್ಷನೆಂದು ವಿವೇಕವುಳ್ಳ ಪುರುಷರು ತಿಳಿಯುತ್ತಾರೆ.
ದೇವಯಾನೀ
ಕಥಮಾಶೀವಿಷಾಚ್ಛಸ್ತ್ರಾಜ್ಜ್ವಲನಾತ್ ಸರ್ವತೋಮುಖಾತ್ |
ದುರಾಧರ್ಷತರೋ ವಿಪ್ರ ಇತ್ಯಾತ್ಥ ಪುರುಷರ್ಷಭ ॥29॥
ಎಲೈ ಪುರುಷಶ್ರೇಷ್ಠನೇ, ಬ್ರಾಹ್ಮಣನು ಸರ್ಪಕ್ಕಿಂತಲೂ, ಶಸ್ತ್ರಗಳಿಗಿಂತಲೂ, ಸರ್ವತೋಮುಖವಾಗಿ ಜ್ವಲಿಸುಹ ವಹ್ನಿಗಿಂತಲೂ ದುರಾಧರ್ಷತರನು ಎಂದು ಹೇಗೆ ಹೇಳುತ್ತೀಯೆ?
ಯಯಾತಿಃ
ಏಕಮಾಶೀವಿಷೋ ಹಂತಿ ಶಸ್ತ್ರಮೇಕಂ ನಿಹಂತಿ ಚ |
ಸರಾಷ್ಟ್ರಂ ಸಪ್ರಜಂ ಹಂತಿ ವಿಪ್ರಃ ಕೋಪೇನ ಸಂಯುತಃ ॥30॥
ಸರ್ಪವು ಒಬ್ಬನನ್ನು ಕೊಲ್ಲುತ್ತದೆ, ಶಸ್ತ್ರವೂ ಒಬ್ಬನನ್ನು ಕೊಲ್ಲುತ್ತದೆ, ಆದರೆ ಕೋಪಗೊಂಡ ಬ್ರಾಹ್ಮಣನು ಪ್ರಜೆಗಳಿಂದ ಸಹಿತವಾದ ಸಮಗ್ರವಾದ ರಾಷ್ಟ್ರವನ್ನು ಸಂಹರಿಸುತ್ತಾನೆ.
ಕ್ವಚಿದಾಶೀವಿಷೋ ಹನ್ಯಾಚ್ಛಸ್ತ್ರಮೇವಂ ನಿಕೃಂತತಿ |
ಯದೃಚ್ಛಯಾಽಗ್ನಿರ್ದಹತಿ ಮನಸಾ ಹಂತಿ ವೈ ದ್ವಿಜಃ ॥31॥
ಸರ್ಪವು ಹತ್ತಿರಬಂದಾಗ ಒಮ್ಮೆ ಕಡಿಯುತ್ತದೆ. ಶಸ್ತ್ರವೂ ಸಹ ಸಂಪರ್ಕವುಂಟಾದಾಗ ಕತ್ತರಿಸುತ್ತದೆ, ಅಕಸ್ಮತ್ತಾಗಿ ಮುಟ್ಟಿದ ಅಗ್ನಿಯು ಸುಡುತ್ತದೆ, ಆದರೆ ಬ್ರಾಹ್ಮಣನು ಸಂಪರ್ಕವಿಲ್ಲದೇ ಎಲ್ಲವನ್ನೂ ಮನಸ್ಸಿನಿಂದಲೇ ಕೊಲ್ಲುತ್ತಾನೆ.
ದುರಾಧರ್ಷತರೋ ವಿಪ್ರಸ್ತಸ್ಮಾದ್ ಭೀರು ಮತೋ ಮಮ |
ಅತೋ ನದತ್ತಾಂ ಪಿತ್ರಾ ತ್ವಾಂ ಭದ್ರೇ ನ ವಿವಹಾಮ್ಯಹಮ್ ॥32॥
ಆದ್ದರಿಂದ ಎಲೌ ಭೀರುವೇ ಬ್ರಾಹ್ಮಣನು ದುರಾಧರ್ಷತರನು ಎಂದು ನನ್ನ ಅಭಿಪ್ರಾಯ. ಆದ್ದರಿಂದ ಮಂಗಳಸ್ವರೂಪಳೇ, ನಿನ್ನ ತಂದೆಯು ದಾನ ಮಾಡದಿದ್ದ ನಿನ್ನನ್ನು ನಾನೆಂದೂ ವಿವಾಹವಾಗುವುದಿಲ್ಲ.
ದೇವಯಾನೀ
ದತ್ತಾಂ ವಹಸ್ವ ರಾಜೇಂದ್ರ ಪಿತ್ರಾ ರಾಜನ್ ವೃತೋ ಮಯಾ |
ಅಯಾಚತೋ ಭಯಂ ನಾಸ್ತಿ ದತ್ತಾಂ ಚ ಪ್ರತಿಗೃಹ್ಣತಃ ॥33॥
ಎಲೈ ರಾಜೇಂದ್ರನೇ ನನ್ನ ತಂದೆಯಿಂದ ಕೊಡಲ್ಪಟ್ಟ ನನ್ನನ್ನು ವಿವಾಹ ಮಾಡಿಕೊ. ರಾಜನೇ, ನಿನ್ನನ್ನು ನಾನು ವರಿಸಿದ್ದೇನೆ. ನೀನಾಗಿ ಯಾಚನೆಯನ್ನು ಮಾಡದೇ ದತ್ತಳಾದ ನನ್ನನ್ನು ಸ್ವೀಕಾರ ಮಾಡಿದರೆ ನಿನಗೆ ಯಾವ ಭಯವೂ ಇಲ್ಲ.
ತಿಷ್ಠ ರಾಜನ್ ಮುಹೂರ್ತಂ ತ್ವಂ ಪ್ರೇಷಯಿಷ್ಯಾಮ್ಯಹಂ ಪಿತುಃ |
ಗಚ್ಛ ತ್ವಂ ಧಾತ್ರಿಕೇ ಶೀಘ್ರಂ ಬ್ರಹ್ಮಕಲ್ಪಮಿಹಾನಯ |
ಸ್ವಯಂವರೇ ವೃತಂ ಶೀಘ್ರಂ ನಿವೇದಯ ಚ ನಾಹುಷಮ್ ॥34॥
ರಾಜನೇ, ಸ್ವಲ್ಪಸಮಯ ಇಲ್ಲಿಯೇ ನಿಲ್ಲು. ನಾನು ತಂದೆಗೆ ಹೇಳಿಕಳುಹಿಸುತ್ತೇನೆ. ಎಲೌ ಧಾತ್ರಿಕೆಯೇ, ನೀನು ಶೀಘ್ರಳಾಗಿ ಹೋಗಿ

ವೇದರಾಶಿಯಂತಿರುವ ನನ್ನ ತಂದೆಯನ್ನು ಇಲ್ಲಿಗೆ ಕರೆದು ತಾ, ನಹುಷನ ಮಗನಾದ ಯಯಾತಿಯನ್ನು ನಾನು ಸ್ವಯಂವರದಲ್ಲಿ ವರಿಸಿದ್ದೇನೆ ಎಂದು ಅವರಿಗೆ ತಿಳಿಸು.
ವೈಶಂಪಾಯನಃ
ತ್ವರಿತಂ ದೇವಯಾನ್ಯಾ ತು ಪ್ರೇಷಿತಂ ಪಿತುರಾತ್ಮನಃ|
ಸಂಶ್ರುತ್ವೈವ ವಚಸ್ತಸ್ಯ ದರ್ಶಯಾಮಾಸ ಭಾರ್ಗವಃ ॥35॥
ದೇವಯಾನಿಯು ತನ್ನನ್ನು ಕರೆದುತರಲು ಧಾತ್ರಿಯನ್ನು ಕಳುಹಿಸಿದ್ದಾಳೆಂದು ಅವಳ ಮಾತನ್ನು ಕೇಳಿದ ತಕ್ಷಣ ಶುಕ್ರಾಚಾರ್ಯರು ಬಂದು ಪ್ರತ್ಯಕ್ಷರಾದರು.
ದೃಷ್ಟ್ವೈವ ಚಾಗತಂ ವಿಪ್ರಂ ಯಯಾತಿಃ ಪೃಥಿವೀಪತಿಃ|
ವವಂದೇ ಬ್ರಾಹ್ಮಣಂ ಕಾವ್ಯಂ ಪ್ರಾಂಜಲಿಃ ಪ್ರಣತಃ ಸ್ಥಿತಃ ॥36॥
ಬಂದ ಶುಕ್ರಾಚಾರ್ಯರನ್ನು ನೋಡಿದ ತಕ್ಷಣವೇ ರಾಜನಾದ ಯಯಾತಿಯು ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಮತ್ತೆ ನಮಸ್ಕಾರವನ್ನು ಮಾಡಿ ನಿಂತುಕೊಂಡನು.
ದೇವಯಾನೀ
ರಾಜಾಽಯಂ ನಾಹುಷಸ್ತಾತ ದುರ್ಗೇ ಮೇ ಪಾಣಿಮಸ್ಪೃಶತ್|
ನಾನ್ಯಪೂರ್ವಗೃಹೀತಂ ಮೇ ತೇನಾಹಮಭಯಾ ಕೃತಾ|
ನಮಸ್ತೇ ದೇಹಿ ಮಾಮಸ್ಮೈ ಲೋಕೇ ನಾನ್ಯಂ ಪತಿಂ ವೃಣೇ ॥37॥
ಎಲೈ ತಂದೆಯೇ, ನಹುಷನ ಮಗನಾದ ಈ ಯಯಾತಿ ರಾಜನು ಹಿಂದೆ ಕಾಡಿನಲ್ಲಿ ಕಷ್ಟದಲ್ಲಿದ್ದಾಗ ನನ್ನ ಕೈಯನ್ನು ಹಿಡಿದನು. ಅದಕ್ಕೆ ಮೊದಲು ಯಾರೂ ಹಿಡಿಯದಿದ್ದ ನನ್ನ ಕೈಯನ್ನು ಹಿಡಿದು ನನಗೆ ಅಭಯವನ್ನು ನೀಡಿದನು. ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ನನ್ನನ್ನು ಅವನಿಗೆ ಕೊಡು. ನಾನು ಬೇರೆ ಪತಿಯನ್ನು ಬಯಸುವುದಿಲ್ಲ.
ಶುಕ್ರಃ
ಅನ್ಯೋಃ ಧರ್ಮ್ಯಃ ಪ್ರಿಯಸ್ತ್ವನ್ಯೋ ವೃತಸ್ತ್ವನ್ನಾಹುಷಃ ಪತಿಃ|
ಕಚಶಾಪಾತ್ ತ್ವ ಯಾ ಪೂರ್ವಂ ನಾನ್ಯದ್ ಭವಿತುಮರ್ಹತಿ ॥38॥
ಬ್ರಾಹ್ಮಣರ ಧರ್ಮವೇ ಒಂದು, ನಿನಗೆ ಪ್ರಿಯವಾದುದೇ ಮತ್ತೊಂದು. ಕಚನ ಶಾಪದಿಂದ ನೀನು ಯಯಾತಿಯನ್ನು ಪತಿಯಾಗಿ ವರಿಸಿದ್ದೀಯೆ. ಇದು ಬೇರೆರೀತಿ ಆಗಲು ಸಾಧ್ಯವಿಲ್ಲ.
ವೃತೋ ರಾಜನ್ ವೃಣೀಷ್ವೇಮಾಂ ಮಹಿಷೀ ನಹುಷಾಸ್ತು ತೇ|
ಸ್ವಯಂ ಗೃಹೇ ಮಹಾನ್ ದೋಷೋ ಬ್ರಾಹ್ಮಣ್ಯಾ ವರ್ಣಸಂಕರಾತ್|
ಗೃಹಣೇಮಾಂ ಮಯಾ ದತ್ತಾಂ ಮಹಿಷೀಂ ನಹುಷಾತ್ಮಜ ॥39॥
ಎಲೈ ಯಯಾತಿಯೇ, ಇವಳು ನಿನ್ನನ್ನು ವರಿಸಿದ್ದಾಳೆ. ಆದ್ದರಿಂದ ಇವಳನ್ನು ರಾಣಿಯಾಗಿ ಸ್ವೀಕರಿಸು. ನೀನಾಗಿಯೇ ಬ್ರಾಹ್ಮಣಿಯಾದ ಅವಳನ್ನು ಸ್ವೀಕರಿಸಿದ್ದರೆ ವರ್ಣಸಂಕರದಿಂದ ಬಹಳ ದೋಷವುಂಟಾಗುತ್ತಿದ್ದಿತು. ಆದರೆ ನಾನು ಕೊಡುತ್ತಿದ್ದೇನೆ. ಆದ್ದರಿಂದ ನಹುಷಾತ್ಮಜನೇ ಇವಳನ್ನು ಸ್ವೀಕರಿಸು.
ಯಯಾತಿಃ
ಅಧರ್ಮೋ ನ ಸ್ಪೃಶೇದೇಷ ಮಹಾನ್ ಮಾಮಿಹ ಭಾರ್ಗವ|
ವರ್ಣಸಂಕರಜೋ ಬ್ರಹ್ಮನ್ ಭಯಾದೇತದ್ ಬ್ರವೀಮ್ಯಹಮ್ ॥40॥
ಎಲೈ ಭಾರ್ಗವರೇ, ದೊಡ್ಡ ಅಧರ್ಮವು ನನಗೆ ಉಂಟಾಗುವುದಿಲ್ಲವಷ್ಟೆ? ಎಲೈ ಬ್ರಾಹ್ಮಣರೇ, ವರ್ಣಸಂಕರದಿಂದ ಉಂಟಾಗಬಹುದಾದ ಅಧರ್ಮಕ್ಕೆ ಹದರಿ ನಾನು ಈ ಮಾತನ್ನು ಆಡುತ್ತಿದ್ದೇನೆ.
ಶುಕ್ರಃ
ಅಧರ್ಮಾತ್ ತ್ವಾಂ ಪ್ರಮೋಕ್ಷ್ಯಾಮಿ ವರಯ ತ್ವಂ ಯಥೇಪ್ಸಿತಮ್|
ತಸ್ಮಾತ್ ವಿವಾಹಾನ್ಮಾ ಭೈಷೀರಹಂ ಪಾಪಂ ನುದಾಮಿ ತೇ ॥41॥
ನಾನು ನಿನ್ನನ್ನು ಅಧರ್ಮದಿಂದ ಬಿಡಿಸುತ್ತೇನೆ. ನೀನು ನಿಸ್ಸಂಕೋಚವಾಗಿ ಇವಳನ್ನು ವರಿಸು. ವಿವಾಹಕ್ಕೆ ಹೆದರಬೇಡ. ನಿನ್ನ ಪಾಪವನ್ನು ನಾನು ಪರಿಹರಿಸುತ್ತೇನೆ.
ವಹಸ್ವ ಭಾರ್ಯಾಂ ಧರ್ಮೇಣ ದೇವಯಾನೀಂ ಸುಮಧ್ಯಮಾಮ್|
ಅನಯಾ ಸಹ ಸಂಪ್ರೀತಿಮತುಲಾಂ ತ್ವಮವಾಪ್ನುಹಿ ॥42॥
ಸುಂದರಿಯಾದ ದೇವಯಾನಿಯನ್ನು ಧಾರ್ಮಿಕವಾದ ವಿಧಿಯಿಂದ ಪತ್ನಿಯಾಗಿ ಸ್ವೀಕರಿಸು. ಅವಳ ಜೊತೆಯಲ್ಲಿ ಅಸದೃಶವಾದ ಸುಖಸಂತೋಷವನ್ನು ಹೊಂದು.
ಇಯಂ ಕುಮಾರೀ ಶರ್ಮಿಷ್ಠಾ ದುಹಿತಾ ವೃಷಪರ್ವಣಃ|
ತಾಂ ಪೂಜಯೇಥಾ ರಾಜೇಂದ್ರ ಮಾ ಚೈನಾಂ ಶಯನೇ ಹ್ವಯ ॥43॥
ವೃಷಪರ್ವನ ಮಗಳಾದ ಈ ಕುಮಾರಿಯ ಹೆಸರು ಶರ್ಮಿಷ್ಠೆ. ರಾಜೇಂದ್ರನೇ ಅವಳನ್ನು ಗೌರವಿಸು. ಆದರೆ ಎಂದೂ ಹಾಸಿಗೆಗೆ ಅವಳನ್ನು ಆಹ್ವಾನಿಸಬೇಡ.
ರಹಸ್ಯೇನಾಂ ಸಮಾಹೂಯ ನ ವದೇರ್ನ ಚ ಸಂಸ್ಪೃಶೇಃ|
ವಹಸ್ವ ಭಾರ್ಯಾಂ ಭದ್ರಂ ತೇ ಯಥಾ ಕಾಮಮವಾಪ್ನುಹಿ ॥44॥
ಏಕಾಂತದಲ್ಲಿ ಶರ್ಮಿಷ್ಠೆಯನ್ನು ಕರೆದು ಮಾತನಾಡಬೇಡ. ಅವಳನ್ನು ಸ್ಪರ್ಶಮಾಡಲೂಬೇಡ. ದೇವಯಾನಿಯನ್ನು ವಿವಾಹವಾಗು.

ನಿನಗೆ ಮಂಗಳವಾಗಲಿ. ಬಯಸಿದ ಎಲ್ಲಾ ಸುಖಗಳನ್ನೂ ಹೊಂದುವವನಾಗು.
ವೈಶಂಪಾಯನಃ
ತಥೇತ್ಯುಕತತ್ವ ಯಯಾತಿಸ್ತು ತತ್ ಸರ್ವಮಕರೋತ್ ಪ್ರಭುಃ |
ವಿವಾಹಂ ವಿಧಿವತ್ ಕೃತ್ವಾ ಪ್ರದಕ್ಷಿಣಮಥಾಕರೋತ್ |
ಯಯಾತಿಃ ಸ್ವಪುರಂ ಯಾಯಾದನುಜ್ಞಾತೋ ಮಹಾತ್ಮನಾ ॥45॥
ಯಯಾತಿಯು ಹಾಗೆಯೇ ಆಗಲಿ ಎಂದು ಹೇಳಿ ಅವೆಲ್ಲವನ್ನೂ ಹಾಗೆಯೇ ಮಾಡಿದನು. ವಿಧಿಪೂರ್ವಕವಾಗಿ ದೇವಯಾನಿಯನ್ನು ವಿವಾಹಮಾಡಿಕೊಂಡು, ಶುಕ್ರಾಚಾರ್ಯರಿಗೆ ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಿ ಮಹಾತ್ಮರಾದ ಅವರಿಂದ ಅನುಮತಿಯನ್ನು ಪಡೆದು ತನ್ನ ಪಟ್ಟಣಕ್ಕೆ ಹಿಂದಿರುಗಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಸಪ್ತತಿತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
*****

## ಎಪ್ಪತ್ತೊಂದನೆಯ ಅಧ್ಯಾಯ
(ದೇವಯಾನಿಗೆ ಪುತ್ರೋತ್ಪತ್ತಿ. ದೇವಯಾನಿಗೆ ತಿಳಿಯದಂತೆ
ಶರ್ಮಿಷ್ಠೆಗೂ ಪುತ್ರೋತ್ಪತ್ತಿ.)
ವೈಶಂಪಾಯನಃ
ಯಯಾತಿಃ ಸ್ವಪುರಂ ಗತ್ವಾ ಪತಾಕಾಭಿರಲಂಕೃತಮ್ |
ಪ್ರವಿಶ್ಯಾಂತಃಪುರಂ ರಾಜಾ ದೇವಯಾನೀಂ ನ್ಯವೇಶಯತ್ ॥1॥
ರಾಜನಾದ ಯಯಾತಿಯು ಪತಾಕೆಗಳಿಂದ ಅಲಂಕೃತವಾಗಿದ್ದ ತನ್ನ ಪಟ್ಟಣಕ್ಕೆ ಹೋಗಿ ಅಂತಃಪುರವನ್ನು ಪ್ರವೇಶಿಸಿ ದೇವಯಾನಿಯನ್ನು ಅಲ್ಲಿ ಇರಿಸಿದನು.
ದೇವಯಾನ್ಯಾಶ್ಚಾನುಮತೇ ಸುತಾಂ ತಾಂ ವೃಷಪರ್ವಣಃ |
ಅಶೋಕವನಿಕಾಭ್ಯಾಶೇ ಗೃಹಂ ಕೃತ್ವಾ ನ್ಯವೇಶಯತ್ ॥2॥
ವೃತಾಂ ದಾಸೀಸಹಸ್ರೇಣ ಶರ್ಮಿಷ್ಠಾಮಸುರಾಯಣೀಮ್ |
ವಾಸೋಭಿರನ್ನಪಾನೈಶ್ಚ ಸಂವಿಭಜ್ಯ ಸುಸತ್ಕೃತಾಮ್ ॥3॥
ದೇವಯಾನಿಯ ಅಭಿಪ್ರಾಯದಂತೆ ವೃಷಪರ್ವನ ಮಗಳನ್ನು ಅಶೋಕವನದ ಸಮೀಪದಲ್ಲಿ ಒಂದು ಗೃಹವನ್ನು ನಿರ್ಮಿಸಿ ಅಲ್ಲಿ ಇರಿಸಿದನು. ಅಸುರನ ಮಗಳಾದ ಸಹಸ್ರ ದಾಸಿಯರಿಂದ ಯುತಳಾದ ಶರ್ಮಿಷ್ಠೆಯನ್ನು ವಸ್ತ್ರಗಳಿಂದಲೂ ಅನ್ನಪಾನಗಳಿಂದಲೂ ಸಮವಾಗಿ ಸತ್ಕರಿಸಿದನು.
ದೇವಯಾನ್ಯಾಽಪಿ ಸಹಿತೋ ಯಯಾತಿರ್ನಹುಷಾತ್ಮಜಃ |
ಪ್ರೀತ್ಯಾ ಪರಮಯಾ ಯುಕ್ತೋ ಮುಮುದೇ ಶಾಶ್ವತೀಃ ಸಮಾಃ ॥4॥
ನಹುಷನ ಮಗನಾದ ಯಯಾತಿಯು ದೇವಯಾನಿಯ ಜೊತೆಯಲ್ಲಿ ಪರಮ ಪ್ರೀತಿಯುಳ್ಳವನಾಗಿ ಅನೇಕ ವರ್ಷಗಳ ಕಾಲ ಸಂತೋಷವನ್ನು ಅನುಭವಿಸಿದನು.
ಅಶೋಕವನಿಕಾಮಧ್ಯೇ ದೇವಯಾನೀ ಸಮಾಗತಾ |
ಶರ್ಮಿಷ್ಠಯಾ ಸಾ ಕ್ರೀಡಿತ್ವಾ ರಮಣೀಯೇ ಮನೋರಮೇ ॥5॥
ತತ್ರೈವ ತಾಂ ತು ನಿರ್ದಿಶ್ಯ ರಾಜ್ಞಾ ಸಹ ಯಯೌ ಗೃಹಮ್ |
ಏವಮೇವ ಸಹ ಪ್ರೀತ್ಯಾ ಮುಮುದೇ ಬಹುಕಾಲತಃ ॥6॥
ವಿಜಹಾರ ಬಹೂನ್ ವರ್ಷಾನ್ ದೇವವನ್ಮುಮುದೇ ಭೃಶಮ್ |
ಋತುಕಾಲೇ ತು ಸಂಪ್ರಾಪ್ತೇ ದೇವಯಾನೀ ಶುಚಿಸ್ಮಿತಾ ॥7॥
ಲೇಭೇ ಗರ್ಭಂ ವರ್ಷಸಹಸ್ರೇ ತು ಕುಮಾರಂ ಚಾಪ್ಯಜಾಯತ |
ಗತೇ ವರ್ಷಸಹಸ್ರೇ ತು ಶರ್ಮಿಷ್ಠಾ ವಾರ್ಷಪರ್ವಣೀ ॥8॥
ದೇವಯಾನಿಯು ಅಶೋಕವನದ ಮಧ್ಯದಲ್ಲಿ ಇದ್ದ ಮನೋಹರವಾದ ಗೃಹದಲ್ಲಿ ಶರ್ಮಿಷ್ಠೆಯ ಜೊತೆಯಲ್ಲಿ ಆಟವಾಡಿ ಅವಳಿಗೆ ನೀನು ಇಲ್ಲಿಯೇ ಇರು ಎಂದು ಆದೇಶಿಸಿ ರಾಜನ ಜೊತೆಯಲ್ಲಿ ಅರಮನೆಗೆ ಹಿಂದಿರುಗುತ್ತಿದ್ದಳು. ಹೀಗೆಯೇ ರಾಜನ ಜೊತೆಯಲ್ಲಿ ಬಹುಕಾಲ ಸಂತೋಷದಿಂದ ಇದ್ದಳು. ರಾಜನೂ ಸಹ ಅವಳ ಜೊತೆಯಲ್ಲಿ ಬಹುಕಾಲವನ್ನು ಸಂತೋಷದಿಂದ ಕಳೆದನು. ಋತು ಕಾಲವು ಪ್ರಾಪ್ತವಾದಾಗ ಶುಚಿಸ್ಮಿತೆಯಾದ ದೇವಯಾನಿಯು ಒಂದು ಸಹಸ್ರ ವರ್ಷ ಕಳೆದ ಮೇಲೆ ರಾಜನಿಂದ ಗರ್ಭವನ್ನು ಧರಿಸಿ ಕುಮಾರನನ್ನು ಪ್ರಸವಿಸಿದಳು.
ಸಾ ತು ಕಾಲೇ ಋತುಸ್ನಾತಾ ಭರ್ತಾರಂ ಸಮಚಿಂತಯತ್ |
ಶುದ್ಧಾ ಸ್ನಾತಾ ತು ಶರ್ಮಿಷ್ಠಾ ಸರ್ವಾಲಂಕಾರಭೂಷಿತಾ ॥9॥
ಅಶೋಕಶಾಖಾಮಾಲಂಬ್ಯ ಸುಪುಷ್ಪೈಃ ಸ್ತಬಕೈರ್ವೃತಾಮ್ |

ಆದರ್ಶೇ ಮುಖಮುದ್ವೀಕ್ಷ್ಯ ಭರ್ತೃದರ್ಶನಲಾಲಸಾ ॥10॥
ಶೋಕಮೋಹಸಮಾವಿಷ್ಟಾ ವಚನಂ ಚೇದಮಬ್ರವೀತ್ |
ಅಶೋಕ ಶೋಕಾಪನುದ ಶೋಕೋಪಹತಚೇತನಾಮ್ ॥11॥
ಇನ್ನೊಂದು ಸಹಸ್ರ ವರ್ಷವು ಕಳೆದ ಮೇಲೆ ವೃಷಪರ್ವನ ಮಗಳಾದ ಶರ್ಮಿಷ್ಠೆಯು ಋತುಕಾಲದಲ್ಲಿ ಸ್ನಾತಳಾಗಿ ಪತಿಯನ್ನು ಕುರಿತು ಚಿಂತಿಸಿದಳು. ಶುದ್ಧಳೂ, ಸ್ನಾತಳೂ, ಸರ್ವಾಲಂಕಾರಭೂಷಿತಳೂ ಆದ ಶರ್ಮಿಷ್ಠೆಯು ಚಿಗುರು ಮತ್ತು ಹೂವುಗಳಿಂದ ತುಂಬಿದ್ದ ಅಶೋಕವೃಕ್ಷದ ಶಾಖೆಯನ್ನು ಹಿಡಿದು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು ಪತಿಯ ಬಯಕೆ ಉಳ್ಳವಳಾಗಿ ಶೋಕದಿಂದಲೂ ಮತ್ತು ಮೋಹದಿಂದಲೂ ಕೂಡಿದವಳಾಗಿ ಈ ಮಾತುಗಳನ್ನು ಆಡಿದಳು.
ತ್ವನ್ನಾಮಾನಂ ಕುರು ಕ್ಷಿಪ್ರಂ ಪ್ರಿಯಸಂದರ್ಶನೇನ ಮಾಮ್ |
ಏವಮುಕ್ತವತೀ ಸಾ ತು ಶರ್ಮಿಷ್ಠಾ ಪುನರಬ್ರವೀತ್ ॥12॥
ಶೋಕದಿಂದ ಕೂಡಿದವರಿಗೆ ಶೋಕವನ್ನು ಪರಿಹಾರ ಮಾಡುವ ಎಲೈ ಅಶೋಕನೇ, ನನಗೆ ಬೇಗ ನನ್ನ ಪ್ರಿಯನನ್ನು ತೋರಿಸಿ ನನ್ನನ್ನೂ ನಿನ್ನ ಹೆಸರುಳ್ಳವಳಾಗಿಯೇ ಮಾಡು.
ಋತುಕಾಲಶ್ಚ ಸಂಪ್ರಾಪ್ತೋ ನಚ ಭರ್ತಾಸ್ತಿ ಕಶ್ಚನ |
ಕಿಂ ಪ್ರಾಪ್ತಂ ಕಿಂ ನು ಕರ್ತವ್ಯಂ ಕಿಂ ವಾ ಕೃತ್ವಾ ಕೃತಂ ಭವೇತ್ ॥13॥
ಹೀಗೆ ಹೇಳಿದ ಶರ್ಮಿಷ್ಠೆಯು ಪುನಃ ನನಗೆ ಋತುಕಾಲವು ಪ್ರಾಪ್ತವಾಗಿದೆ, ನನಗೆ ಯಾರೂ ಪತಿಯಿಲ್ಲ. ಈಗ ಏನಾಯಿತು, ನಾನು ಏನು ಮಾಡಬೇಕು, ಏನು ಮಾಡಿದರೆ ನನಗೆ ಒಳ್ಳೆಯದಾಗುತ್ತದೆ ಎಂದು ಗಟ್ಟಿಯಾಗಿ ಹೇಳಿದಳು.
ದೇವಯಾನೀ ಪ್ರಜಾತಾ ಸಾ ವೃಥಾऽಹಂ ಪ್ರಾಪ್ತಯೌವನಾ |
ದೇವಯಾನೀ ಪುಣ್ಯತಮಾ ಯಸ್ಯಾ ಭರ್ತಾ ಹಿ ನಾಹುಷಃ ॥14॥
ದೇವಯಾನಿಯು ಮಗನನ್ನು ಪಡೆದಿದ್ದಾಳೆ. ನನಗೆ ವ್ಯರ್ಥವಾಗಿ ಯೌವನ ಉಂಟಾಗಿದೆ. ಯಯಾತಿಯನ್ನು ಪತಿಯನ್ನಾಗಿ ಹೊಂದಿರುವ ದೇವಯಾನಿಯು ಬಹಳ ಪುಣ್ಯವನ್ನು ಮಾಡಿದವಳು.
ಯಥಾ ತಸ್ಯಾ ಭವೇದ್ ಭರ್ತಾ ಮಮಾಪ್ಯೇಷ ತಥಾ ಭವೇತ್ |
ರಾಜ್ಞಾ ಪುತ್ರಫಲಂ ದೇಯಮ್ ಇತಿ ಮೇ ನಿಶ್ಚಿತಾ ಮತಿಃ ॥15॥
ಯಯಾತಿಯು ಅವಳಿಗೆ ಹೇಗೆ ಪತಿಯಾಗಿದ್ದಾನೆಯೋ ಹಾಗೆಯೇ ನನಗೂ ಪತಿಯಾಗಬೇಕು. ರಾಜನು ನನಗೆ ಪುತ್ರಫಲವನ್ನು ಕೊಡಬೇಕೆಂದು ನನಗೆ ನಿಶ್ಚಯವಾಗಿ ತೋರುತ್ತಿದೆ.
ಅಪೀದಾನೀಂ ಸ ಧರ್ಮಾತ್ಮಾ ಇಯಾನ್ಮೇ ದರ್ಶನಂ ನೃಪಃ |
ಕೇಶೇ ಬದ್‌ಧ್ವಾ ತು ರಾಜಾನಂ ಯಾಚೇऽಹಂ ಸದೃಶಂ ಪತಿಮ್ ॥16॥
ಒಂದು ಪಕ್ಷ ಆ ಧರ್ಮಾತ್ಮನಾದ ರಾಜನು ಈಗ ನನ್ನ ದೃಷ್ಟಿಗೆ ಬಿದ್ದಿದ್ದೇ ಆದರೆ ಅವನನ್ನು ಜೋಡಿಸಿದ ಕೈಗಳನ್ನು ತಲೆಯ ಮೇಲಿರಿಸಿ (ಕೈ ಮುಗಿದು) ನನಗೆ ಸದೃಶವಾದ ಪತಿಯನ್ನು ಕೊಡು ಎಂದು ಬೇಡುತ್ತೇನೆ.
ಗೃಹೇ ಮುದಾ ದೇವಯಾನೀಪುತ್ರಮೀಕ್ಷ್ಯ ಪುನಃ ಪುನಃ |
ಕ್ರೀಡನ್ನಂತಃಪುರೇ ತಸ್ಯಾಃ ಕಂಚಿತ್ ಕ್ಷಣಮವಾಪ ಸಃ ॥17॥
ಅರಮನೆಯಲ್ಲಿ ದೇವಯಾನಿಯ ಮಗನನ್ನು ನೋಡಿ ಸಂತೋಷದಿಂದ ಅಂತಃಪುರದಲ್ಲಿ ಅವನೊಡನೆ ಆಟವಾಡಿ ಸ್ವಲ್ಪ ವಿರಾಮವನ್ನು ಯಯಾತಿಯು ಪಡೆದನು.
ಅಥ ನಿಷ್ಕ್ರಮ್ಯ ರಾಜಾ ಸ ತಸ್ಮಿನ್ ಕಾಲೇ ಯದೃಚ್ಛಯಾ |
ಅಶೋಕವನಿಕಾಭ್ಯಾಶೇ ಶರ್ಮಿಷ್ಠಾಂ ಪ್ರೇಕ್ಷ್ಯ ತಿಷ್ಠತೀಮ್ ॥18॥
ದೃಷ್ಟ್ವಾ ತಮೇಕಂ ರಹಸಿ ಶರ್ಮಿಷ್ಠಾ ಚಾರುಹಾಸಿನೀ |
ಪ್ರತ್ಯುದ್ಗಮ್ಯಾಂಜಲಿಂ ಕೃತ್ವಾ ರಾಜಾನಂ ವಾಕ್ಯಮಬ್ರವೀತ್ ॥19॥
ಆಗ ಅವನು ಯದೃಚ್ಛೆಯಿಂದ ಅರಮನೆಯಿಂದ ಹೊರಗೆ ಬಂದು ಅಶೋಕವನದ ಸಮೀಪದಲ್ಲಿ ಒಬ್ಬಳೇ ನಿಂತಿದ್ದ ಶರ್ಮಿಷ್ಠೆಯನ್ನು ನೋಡಿದನು. ಅವನು ಏಕಾಂತದಲ್ಲಿ ಒಬ್ಬನೇ ಇರುವುದನ್ನು ನೋಡಿ ಚಾರುಹಾಸಿನಿಯಾದ ಶರ್ಮಿಷ್ಠೆಯು ಅವನ ಸಮೀಪಕ್ಕೆ ಹೋಗಿ ಅವನಿಗೆ ಕೈಗಳನ್ನು ಮುಗಿದು ಮಾತನಾಡಿದಳು.
ಶರ್ಮಿಷ್ಠಾ
ಸೋಮಸ್ಯೇಂದ್ರಸ್ಯ ವಿಷ್ಣೋರ್ವಾ ಯಮಸ್ಯ ಧನದಸ್ಯ ಚ |
ತವ ವಾ ನಾಹುಷ ಕುಲೇ ಕಃ ಸ್ತ್ರಿಯಂ ಸ್ಪ್ರಷ್ಟುಮರ್ಹತಿ ॥20॥
ರೂಪಾಭಿಜನಶೀಲೈರ್ಹಿ ತ್ವಂ ರಾಜನ್ ವೇತ್ಥ ಮಾಂ ಸದಾ |
ತ್ವಾಂ ಯಾಚೇ ಸಂಪ್ರಸಾದ್ಯಾಹಂ ಋತುಂ ದೇಹಿ ನರಾಧಿಪ ॥21॥
ಸೋಮನ, ಇಂದ್ರನ, ವಿಷ್ಣುವಿನ, ಯಮನ, ಕುಬೇರನ ಅಥವಾ ನಿಮ್ಮ ಕುಲದ ಪತ್ನಿಯನ್ನಾಗಲೀ, ದಾಸಿಯನ್ನಾಗಲೀ ಬೇರೆ ಯಾವನು ಮುಟ್ಟಲು ಸಾಧ್ಯ. ಎಲೈ ರಾಜನೇ, ನೀನು ನನ್ನ ರೂಪವನ್ನೂ, ಜನ್ಮವನ್ನೂ, ಮತ್ತು ಶೀಲವನ್ನೂ, ಯಾವಾಗಲೂ ತಿಳಿದಿದ್ದೀಯೆ. ನಿನ್ನನ್ನು ಸಂತೋಷಪಡಿಸಿ ನಾನು ನನಗೆ ಪುತ್ರದಾನವನ್ನು ಮಾಡು ಎಂದು ರಾಜನಾದ ನಿನ್ನನ್ನು ಕೇಳುತ್ತಿದ್ದೇನೆ.
ಯಯಾತಿಃ
ವೇದ್ಮಿ ತ್ವಾಂ ಶೀಲಸಂಪನ್ನಾಂ ವೇದ್ಮಿ ಕನ್ಯಾಮನಿಂದಿತಾಮ್ |
ರೂಪೇಣ ತೇ ನ ಪಶ್ಯಾಮಿ ಸೂಚ್ಯಗ್ರಮಪಿ ನಿಂದಿತಮ್ ॥22॥
ನೀನು ಶೀಲಸಂಪನ್ನಳೆಂದೂ, ಅನಿಂದಿತಳಾದ ಕನ್ಯೆಯೆಂದೂ ನಾನು ತಿಳಿದಿದ್ದೇನೆ. ನಿನ್ನ ರೂಪದಲ್ಲಿ ಒಂದು ಸೂಜಿಯ ತುದಿಯನ್ನು

ಊರಬಹುದಾದಷ್ಟು ದೋಷವೂ ಕಾಣುತ್ತಿಲ್ಲ.
ತದಾಪ್ರಭೃತಿ ದೃಷ್ಟ್ವಾ ತ್ವಾಂ ಸ್ಮರಾಮ್ಯನಿಶಮುತ್ತಮೇ |
ಅಬ್ರುವೀದುಶನಾ ಕಾವ್ಯೋ ದೇವಯಾನೀಂ ಯದಾ ವಹೇಃ ॥23॥
ನೇಯಮಾಹ್ವಯಿತವ್ಯಾ ತೇ ಶಯನೇ ವಾಽನ್ಯಥಾಽಪಿ ವಾ |
ದೇವಯಾನ್ಯಾಃ ಪ್ರಿಯಂ ಕೃತ್ವಾ ಶರ್ಮಿಷ್ಠಾಮಪಿ ಪೋಷಯ ॥24॥
ನಿನ್ನನ್ನು ನೋಡಿದಾಗಿನಿಂದಲೂ ನಾನು ಯಾವಾಗಲೂ ನಿನ್ನನ್ನು ಸ್ಮರಿಸುತ್ತಿದ್ದೇನೆ. ಎಲೌ ಉತ್ತಮಳೇ, ದೇವಯಾನಿಯನ್ನು ಮದುವೆ ಮಾಡಿಕೊಂಡ ಮೇಲೆ ನೀನು ಇವಳನ್ನು ಯಾವಾಗಲೂ ಶಯನಕ್ಕಾಗಲೀ, ಬೇರೆಯ ಸಂದರ್ಭಗಳಲ್ಲಾಗಲೀ ಆಹ್ವಾನಿಸಬಾರದು. ದೇವಯಾನಿಗೆ ಎಲ್ಲಾ ಸಂತೋಷವನ್ನು ಕೊಡು. ಶರ್ಮಿಷ್ಠೆಯನ್ನು ಪೋಷಿಸಬೇಕು ಮಾತ್ರ ಎಂದು ಹೇಳಿದ್ದರು.
ಶರ್ಮಿಷ್ಠಾ
ನ ನರ್ಮಯುಕ್ತಮನೃತಂ ಹಿನಸ್ತಿ
ನ ಸ್ತ್ರೀಷು ರಾಜನ್ನ ವಿವಾಹಕಾಲೇ |
ಪ್ರಾಣಾತ್ಯಯೇ ಸರ್ವಧನಾತಿಪಾತೇ
ಪಂಚಾನೃತಾನ್ಯಾಹುರಪಾತಕಾನಿ ॥25॥
ವಿನೋದಕ್ಕಾಗಿ ಮಾತನಾಡಿದ ಅನೃತವು ದೋಷವನ್ನು ಉಂಟು ಮಾಡುವುದಿಲ್ಲ. ವಿನೋದದ ಪ್ರಸಂಗ, ಸ್ತ್ರೀಯರು, ವಿವಾಹಕಾಲ, ಪ್ರಾಣಾತ್ಯಯ ಸಂದರ್ಭ ಮತ್ತು ಸರ್ವಧನ ನಾಶ, ಈ ಐದು ಪ್ರಸಂಗಗಳಲ್ಲಿ ಹೇಳಿದ ಸುಳ್ಳುಗಳು ಎಂದೂ ಪಾಪವನ್ನುಂಟು ಮಾಡುವುದಿಲ್ಲ ಎಂದು ಹೇಳುತ್ತಾರೆ.
ಪೃಷ್ಟಸ್ತು ಸಾಕ್ಷ್ಯೇ ಪ್ರವದಂತಮನ್ಯಥಾ
ವದಂತಿ ಮಿಥ್ಯೋಪಚಿತಂ ನರೇಂದ್ರ |
ಏಕಾರ್ಥತಾಯಾಂ ಚ ಸಮಾಹಿತಾಯಾಂ
ಮಿಥ್ಯಾ ವದಂತಂ ಹ್ಯನೃತಂ ಹಿನಸ್ತಿ ॥26॥
ಸಾಕ್ಷಿಯಾಗಿ ನಿಂತು ಪ್ರಶ್ನೆಯನ್ನು ಕೇಳಿದಾಗ ಯಾರು ಸತ್ಯಕ್ಕೆ ವಿರುದ್ಧವಾಗಿ ಹೇಳುತ್ತಾರೋ ಅವರನ್ನು ಮಿಥ್ಯಾವಾದಿಗಳೆಂದು ಹೇಳುತ್ತಾರೆ. ಎಲೈ ರಾಜನೇ ಇದು ಇಂತಹವನ ವಸ್ತು ಎಂದು ನಿಶ್ಚಯವಾದ ಮೇಲೆ ಸುಳ್ಳು ಹೇಳುವವನನ್ನು ಅನೃತವು ಕೊಲ್ಲುತ್ತದೆ.
ಅನೃತಂ ನಾನೃತಂ ಸ್ತ್ರೀಷು ಪರಿಹಾಸವಿವಾಹಯೋಃ |
ಆತ್ಮಪ್ರಾಣಾರ್ಥಘಾತೇಷು ತದೇವೋತ್ತಮತಾಂ ವ್ರಜೇತ್ ॥27॥
ಸ್ತ್ರೀಯರಲ್ಲಿ, ಹಾಸ್ಯದ ಸಮಯದಲ್ಲಿ, ವಿವಾಹ ಸಂದರ್ಭದಲ್ಲಿ ತನ್ನ ಪ್ರಾಣ ಹೋಗುವಾಗ, ಸಂಪತ್ತು ನಶಿಸುವಾಗ ಈ ಐದು ಸ್ಥಳಗಳಲ್ಲಿ ಸುಳ್ಳು ಸುಳ್ಳಾಗುವುದಿಲ್ಲ. ಅದೇ ಉತ್ತಮವಾದ ಧರ್ಮವಾಗುತ್ತದೆ.
ಯಯಾತಿಃ
ರಾಜಾ ಪ್ರಮಾಣಂ ಭೂತಾನಾಂ ಸ ನಶ್ಯೇದನೃತಂ ವದನ್ |
ಅರ್ಥಕೃಚ್ಛ್ರಮಪಿ ಪ್ರಾಪ್ಯ ನ ಮೃಷಾ ಕರ್ತುಮುತ್ಸಹೇ ॥28॥
ರಾಜನು ಎಲ್ಲಾ ಪ್ರಜೆಗಳಿಗೂ ಆದರ್ಶಪ್ರಾಯನಾದವನು. ಅವನು ಸುಳ್ಳನ್ನು ಹೇಳಿದರೆ ನಾಶವನ್ನು ಹೊಂದುತ್ತಾನೆ. ಅರ್ಥಸಂಕಟ ಉಂಟಾದರೂ ನಾನು ಸುಳ್ಳನ್ನು ಹೇಳಲು ಬಯಸುವುದಿಲ್ಲ.
ಶರ್ಮಿಷ್ಠಾ
ಉಭೌ ಹಿ ಚ ಪತೀ ಲೋಕೇ ಪತಿಃ ಸಖ್ಯಾಃ ಪತಿಶ್ಚ ಯಃ |
ಸಮಂ ವಿವಾಹಮಿತ್ಯಾಹುಃ ಸಖ್ಯಾ ಮೇಽಸಿ ಪತಿರ್ವೃತಃ ॥29॥
ಲೋಕದಲ್ಲಿ ತನ್ನ ಪತಿಯೂ, ತನ್ನ ಸಖಿಯ ಪತಿಯೂ ಪತಿಗಳೆಂದು ಪರಿಗಣಿತರಾಗುತ್ತಾರೆ. ನನ್ನ ಸಖಿಯಾದ ದೇವಯಾನಿಯನ್ನು ವಿವಾಹ ಮಾಡಿಕೊಂಡಾಗ ನಿನ್ನನ್ನು ನಾನೂ ವರಿಸಿದ್ದೇನೆ. ನೀನು ಇಬ್ಬರಿಗೂ ಸಮಾನವಾದ ಪತಿ.
ತ್ರಯ ಏವಾಧನಾ ರಾಜನ್ ಭಾರ್ಯಾ ದಾಸಸ್ತಥಾ ಸುತಃ |
ಯತ್ ತೇ ಸಮಧಿಗಚ್ಛಂತಿ ಯಸ್ಯೈತೇ ತಸ್ಯ ತದ್ಧನಮ್ ॥30॥
ಎಲೈ ರಾಜನೇ ಪತ್ನಿ, ದಾಸ ಮತ್ತು ಸುತ, ಈ ಮೂವರೂ ಲೋಕದಲ್ಲಿ ಅಧನರೆನಿಸುತ್ತಾರೆ. ಅವರು ಯಾವ ಧನವನ್ನು ಸಂಪಾದನೆ ಮಾಡುತ್ತಾರೋ ಅದು ಅವರ ಸ್ವಾಮಿಗೆ ಸೇರುತ್ತದೆ.
ಸಹ ದತ್ತಾಸ್ಮಿ ಕಾವ್ಯೇನ ದೇವಯಾನ್ಯಾ ಮನೀಷಿಣಾ |
ಪೂಜ್ಯಾ ಪೋಷಯಿತವ್ಯೇತಿ ನ ಮೃಷಾ ಕರ್ತುಮರ್ಹಸಿ ॥31॥
ಮೇಧಾವಿಗಳಾದ ಶುಕ್ರಾಚಾರ್ಯರು ಅವರ ಮಗಳನ್ನು ನಿನಗೆ ಕೊಡುವಾಗ ಇವಳನ್ನು ಪೂಜಿಸಿ ಪೋಷಿಸಬೇಕೆಂದು ನನ್ನನ್ನೂ ನಿನಗೆ ದಾನ ಮಾಡಿದ್ದಾರೆ. ನೀನು ಅದನ್ನು ವ್ಯರ್ಥ ಮಾಡಬಾರದು.
ಸುವರ್ಣಮಣಿಮುಕ್ತಾನಿ ವಸ್ತ್ರಾಣ್ಯಾಭರಣಾನಿ ಚ |
ಯಾಚಿತ್ರೃಣಾಂ ದದಾಸಿ ತ್ವಂ ಗೋಭೂಮ್ಯಾದೀನಿ ಯಾನಿ ಚ ॥32॥
ನೀನು ಬೇಡಿದವರಿಗೆ ಸುವರ್ಣ ಮಣಿಮುತ್ತುಗಳನ್ನು, ವಸ್ತ್ರಾಭರಣಗಳನ್ನೂ, ಗೋ, ಭೂಮ್ಯಾದಿಗಳನ್ನೂ ಯಾವಾಗಲೂ ಕೊಡುತ್ತೀಯೆ.
ಬಹಿಃಸ್ಥಂ ದಾನಮಿತ್ಯುಕ್ತಂ ನ ಶರೀರಾಶ್ರಿತಂ ನೃಪ |
ಪುಷ್ಕಳಂ ಪುತ್ರದಾನಂ ಚ ಆತ್ಮದಾನಂ ಚ ಮಾರಿಷ ॥33॥

ಎಲೈ ಶ್ರೇಷ್ಠ ಯಯಾತಿಯೆ! ಹೊರಗಿನ ಪದಾರ್ಥವನ್ನು ಕೊಟ್ಟರೆ ಅದೂ ದಾನವೆನಿಸುತ್ತದೆ. ಅದು ಶರೀರಾಶ್ರಿತವಾಗಿರುವುದಿಲ್ಲ. ಆದರೆ, ಎಲೈ ವೀರನೇಶರೀರ ದಾನವನ್ನು ಮಾಡಿ ಪುತ್ರದಾನವನ್ನು ಮಾಡಿದರೆ ಅದು ಎಲ್ಲಕ್ಕಿಂತಲೂ ದೊಡ್ಡದಾದ ಶ್ರೀಹರಿಯು ಒಲಿಯುವ ದಾನ.
ಶರೀರದಾನಾತ್ ತತ್ಸರ್ವಂ ದತ್ತಂ ಭವತಿ ಮಾರಿಷ |
ಯಸ್ಯ ಯಸ್ಯ ಯಥಾ ಕಾಮಸ್ತಸ್ಯ ತಸ್ಯ ದದಾಮ್ಯಹಮ್ |
ಇತ್ಯುಕತತ್ವ ನಗರೇ ರಾಜಂಸ್ತ್ರಿಕಾಲಂ ಘೋಷಿತಂ ತ್ವಯಾ ॥34॥
ಎಲೈ ವೀರನೇಶರೀರ ದಾನವನ್ನು ಮಾಡಿದರೆ ಎಲ್ಲಾ ದಾನವನ್ನು ಮಾಡಿದಂತೆ ಆಗುತ್ತದೆ. ಎಲೈ ರಾಜನೇಯಾರು ಯಾರಿಗೆ ಏನೇನು ಕಾಮಗಳಿವೆಯೋ ನಾನು ಅವುಗಳನ್ನು ಕೊಡುತ್ತೇನೆ ಎಂದು ನೀನು ನಗರದಲ್ಲಿ ಪ್ರತಿದಿವಸ ಮೂರು ಬಾರಿ ಘೋಷಣೆಯನ್ನು ಮಾಡಿಸುತ್ತೀಯೆ.
ಅನೃತಂ ತ್ವಯೋಕ್ತಂ ರಾಜೇಂದ್ರ ವೃಥಾ ಘೋಷಿತಮೇವ ಚ |
ತತ್ ಸತ್ಯಂ ಕುರು ರಾಜೇಂದ್ರ ಯಥಾ ವೈಶ್ರವಣಸ್ತಥಾ ॥35॥
ನೀನು ನಾನು ಕೇಳಿದುದನ್ನು ಕೊಡದಿದ್ದರೆ, ಎಲೈ ರಾಜೇಂದ್ರನೇ,ನಿನ್ನ ಆ ಘೋಷಣೆಯು ಸುಳ್ಳಾಗಿ ವ್ಯರ್ಥವಾಗುತ್ತದೆ. ಎಲೈ ರಾಜೇಂದ್ರನೇ, ಕುಬೇರನಂತೆ ಆ ಘೋಷಣೆಯನ್ನು ಸತ್ಯವನ್ನಾಗಿ ಮಾಡು.
ಯಯಾತಿಃ
ದಾಸ್ಯಾಮಿ ಯಾಚತೇ ನಿತ್ಯಮಿತಿ ಮೇ ವ್ರತಮಾಹಿತಮ್ |
ತ್ವಂ ಚ ಯಾಚಸಿ ಮಾಂ ಕಾಮಂ ಬ್ರೂಹಿ ಕಿಂ ಕರವಾಣಿ ತೇ
ಧನಂ ವಾ ಯದಿ ವಾ ಕಿಂಚಿದ್ ರಾಜ್ಯಂ ವಾಽಪಿ ಶುಚಿಸ್ಮಿತೇ ॥36॥
ನಾನು ಬೇಡುವವರಿಗೆ ಯಾವಾಗಲೂ ಬೇಡಿದುದನ್ನು ಕೊಡುತ್ತೇನೆ ಎಂಬ ವ್ರತವನ್ನು ಧರಿಸಿದ್ದೇನೆ. ನೀನು ಸಹ ನಿನ್ನ ಆಸೆಯನ್ನು ಕೇಳುತ್ತಿದ್ದೀಯೆ. ನಾನು ಏನು ಕೊಡಲಿ ಎಂದು ಹೇಳು. ಎಲೌ ಶುಚಿಸ್ಮಿತೆಯೇ, ಧನವನ್ನು ಕೊಡಲೇ ಅಥವಾ ರಾಜ್ಯದ ಒಂದು ಭಾಗವನ್ನೇ ಕೊಡಲೇ.
ಶರ್ಮಿಷ್ಠಾ
ಅಧರ್ಮಾತ್ ತ್ರಾಹಿ ಮಾಂ ರಾಜನ್ ಧರ್ಮೇ ಚ ಪ್ರತಿಪಾದಯ |
ನಾನ್ಯಂ ವೃಣೇ ಪುತ್ರಕಾಮಾ ಪುತ್ರಾತ್ ಪರತರಂ ನಚ ॥38॥
ಎಲೈ ರಾಜನೇ, ನನ್ನನ್ನು ಅಧರ್ಮದ ದಾರಿಯಿಂದ ರಕ್ಷಣೆ ಮಾಡಿ ಧರ್ಮದ ಮಾರ್ಗದಲ್ಲಿ ನಡೆಸು. ಪುತ್ರಕಾಮಳಾದ ನಾನು ಬೇರೆ ಏನನ್ನೂ ಕೇಳುವುದಿಲ್ಲ. ಪುತ್ರರಿಗಿಂತ ಮಿಗಿಲಾದುದು ಯಾವುದೂ ಇಲ್ಲ.
ತ್ವತ್ತೋಽಪತ್ಯವತೀ ಲೋಕೇ ಚರೇಯಂ ಧರ್ಮಮುತ್ತಮಮ್ |
ಪುತ್ರಾರ್ಥಂ ಭರ್ತೃಪೋಷಾರ್ಥಂ ಸ್ತ್ರಿಯಃ ಸೃಷ್ಟಾಃ ಸ್ವಯಂಭುವಾ ॥39॥
ನಿನ್ನಿಂದ ಮಗನನ್ನು ಪಡೆದು ನಾನು ಲೋಕದಲ್ಲಿ ಶ್ರೇಷ್ಠವಾದ ಧರ್ಮವನ್ನು ಆಚರಿಸುತ್ತೇನೆ. ಬ್ರಹ್ಮದೇವರು ಮಕ್ಕಳನ್ನು ಪಡೆಯುವ ಸಲುವಾಗಿ ಮತ್ತು ಪತಿಯ ಪೋಷಣೆಯ ಸಲುವಾಗಿ ಸ್ತ್ರೀಯರನ್ನು ಸೃಷ್ಟಿಸಿದ್ದಾರೆ.
ಅಪತಿಶ್ಚಾಪಿ ಯಾ ಕನ್ಯಾ ಅನಪತ್ಯಾ ಚ ಯಾ ಭವೇತ್ |
ತಸ್ಯಾ ಜನ್ಮ ವೃಥಾ ಲೋಕೇ ಗತಿಸ್ತಸ್ಯಾ ನ ವಿದ್ಯತೇ ॥40॥
ಯಾವ ಕನ್ಯೆಗೆ ಪತಿಯೇ ಇಲ್ಲವೋ ಅಥವಾ ಮಕ್ಕಳೇ ಇಲ್ಲವೋ ಲೋಕದಲ್ಲಿ ಅವಳ ಜನ್ಮ ವ್ಯರ್ಥವಾದುದು. ಅವಳಿಗೆ ಸದ್ಗತಿಯಾಗುವುದಿಲ್ಲ.
ದೇವಯಾನ್ಯಾ ಭುಜಿಷ್ಯಾಽಸ್ಮಿ ವಶ್ಯಾ ಚ ತವ ಭಾರ್ಗವೀ |
ಸಾ ಚಾಹಂ ಚ ತ್ವಯಾ ರಾಜನ್ ಭರಣೀಯೇ ಭಜಸ್ವ ಮಾಮ್ ॥41॥
ನಾನು ದೇವಯಾನಿಯ ಸೇವಕಿಯಾಗಿದ್ದೇನೆ. ನಿನಗೆ ಅವಳು
ಅಧೀನಳಾಗಿದ್ದಾಳೆ. ನೀನು ಅವಳನ್ನೂ ಮತ್ತು ನನ್ನನ್ನೂ ಪೋಷಿಸಬೇಕು. ಆದ್ದರಿಂದ ನನ್ನ ಸಮಾಗಮವನ್ನು ಮಾಡು.
ವೈಶಂಪಾಯನಃ
ಏವಮುಕ್ತಸ್ತು ರಾಜಾ ಸ ತಥ್ಯಮಿತ್ಯೇವ ಜಜ್ಞಿವಾನ್ |
ಕಾವ್ಯಾಚ್ಚ ದೇವಯಾನ್ಯಾಶ್ಚ ಭೀತೋ ಧರ್ಮಭಯಾದಪಿ ॥42॥
ಪೂಜಯಾಮಾಸ ಶರ್ಮಿಷ್ಠಾಂ ಧರ್ಮೇ ಚ ಪ್ರತ್ಯಪಾದಯತ್ |
ಋತ್ವಿಕ್‌ಪುರೋಹಿತಾಚಾರ್ಯೈರ್ಮಂತ್ರಿಭಿಶ್ಚಾಪಿ ಸಂವೃತಃ ॥43॥
ವಿವಾಹಂ ವಿಧಿವತ್ ಕೃತ್ವಾ ದತ್ವಾ ಬ್ರಾಹ್ಮಣದಕ್ಷಿಣಾಮ್ |
ಪುಣ್ಯೇ ನಕ್ಷತ್ರಸಂಯೋಗೇ ಮುಹೂರ್ತೇ ವಿಪ್ರಪೂಜಿತೇ ॥44॥
ಹೀಗೆ ಹೇಳಲ್ಪಟ್ಟ ರಾಜನು ಅವಳ ಮಾತನ್ನು ತಥ್ಯವಾದುದೆಂದೇ ತಿಳಿದನು. ಶುಕ್ರಾಚಾರ್ಯರಿಗೂ, ದೇವಯಾನಿಗೂ ಮತ್ತು ಧರ್ಮಚ್ಯುತಿಗೂ ಹೆದರಿ ಶರ್ಮಿಷ್ಠೆಯನ್ನು ಪೂಜಿಸಿ ಧರ್ಮದ ಮಾರ್ಗದಲ್ಲಿ ನಡೆಸಿದನು. ಋತ್ವಿಕ್‌ಗಳಿಂದಲೂ ಆಚಾರ್ಯ, ಪುರೋಹಿತ, ಮಂತ್ರಿಗಳಿಂದಲೂ ಕೂಡಿಕೊಂಡು ವಿಧಿವತ್ತಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಒಳ್ಳೆಯ ನಕ್ಷತ್ರದಲ್ಲಿ ಬ್ರಾಹ್ಮಣ ಪೂಜಿತವಾದ ಸುಮುಹೂರ್ತದಲ್ಲಿ ಶರ್ಮಿಷ್ಠೆಯನ್ನು ವಿಧಿವತ್ತಾಗಿ ವಿವಾಹ ಮಾಡಿಕೊಂಡನು.
ಸಮಾಗಮ್ಯ ಚ ಶರ್ಮಿಷ್ಠಾಂ ಯಥಾ ಕಾಮಮವಾಪ್ಯ ಚ |
ಅನ್ಯೋನ್ಯಂ ಪೂಜಯಿತ್ವಾ ತು ಜಗ್ಮತುಸ್ತೌ ಯಥಾಗತಮ್ ॥45॥

ಅನಂತರ ಶರ್ಮಿಷ್ಠೆಯ ಸಮಾಗಮವನ್ನು ಮಾಡಿ ತನ್ನ ಮನಸ್ಸಿನ ಅಭಿಲಾಷೆಯನ್ನು ಪೂರೈಸಿಕೊಂಡನು. ಇಬ್ಬರೂ ಪರಸ್ಪರವಾಗಿ ಪೂಜಿಸಿ ತಾವು ಬಂದಂತೆ ತಮ್ಮ ದಾರಿಗಳನ್ನು ಹಿಡಿದುಹೋದರು.
ತಸ್ಮಿನ್ ಸಮಾಗಮೇ ಸುಭ್ರೂಃ ಶರ್ಮಿಷ್ಠಾ ಚಾರುಹಾಸಿನೀ |
ಲೇಭೇ ಗರ್ಭಂ ಪ್ರಥಮತಸ್ತಸ್ಮಾದ್ ರಾಜರ್ಷಿಸತ್ತಮಾತ್ ||46||
ಸುಂದರಿಯೂ, ಚಾರುಹಾಸಿನಿಯೂ ಆದ ಶರ್ಮಿಷ್ಠೆಯು, ಆ ಸಮಾಗಮದಲ್ಲಿ ರಾಜರ್ಷಿಶ್ರೇಷ್ಠನಾದ ಯಯಾತಿಯಿಂದ ಮೊದಲನೆಯ ಗರ್ಭವನ್ನು ಧರಿಸಿದಳು.
ಪ್ರಜಜ್ಞೇ ಚ ತತಃ ಕಾಲೇ ಕ್ರಿಯಾಃ ಕೃತ್ವಾ ವಿಶೇಷತಃ |
ಕುಮಾರಂ ದೇವಗರ್ಭಾಭಂ ರಾಜೀವನಿಭಲೋಚನಮ್ ||47||
ಅನಂತರ ಕಾಲಕ್ರಮದಲ್ಲಿ ಅನೇಕ ಧರ್ಮಗಳನ್ನು ಆಚರಿಸಿ ರಾಜೀವ ನೇತ್ರನಾದ ದೇವಕುಮಾರನಂತೆ ಶೋಭಿಸುವ ಕುಮಾರನನ್ನು ಪ್ರಸವಿಸಿದಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕಸಪ್ತತಿತಮೋऽಧ್ಯಾಯಃ ||
|| ಸಂಭವಪರ್ವಣಿ ಏಕೋನವಿಂಶೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು.
*****

ಎಪ್ಪತ್ತೆರಡನೆಯ ಅಧ್ಯಾಯ
(ಯಯಾತಿ ಶರ್ಮಿಷ್ಠೆಯರ ಪ್ರಣಯ ಪ್ರಸಂಗ. ದೇವಯಾನಿಯು ದೂರು, ಶುಕ್ರಾಚಾರ್ಯರ ಶಾಪ ಮತ್ತು ಪಾಕ್ಷಿಕ ಪರಿಹಾರ.)
ವೈಶಂಪಾಯನಃ
ತಸ್ಮಿನ್ ನಕ್ಷತ್ರಸಂಯೋಗೇ ಶುಕ್ಲೇ ಚಂದ್ರಸ್ತು ಯಾದೃಶಃ |
ತಾದೃಶೋ ಮುಮುದೇ ರಾಜಾ ತಯಾ ಶರ್ಮಿಷ್ಠಯಾ ಸಹ ||1||
ಶುಭನಕ್ಷತ್ರ ಸಂಯೋಗದಲ್ಲಿ ಶುಕ್ಲಪಕ್ಷದ ಚಂದ್ರನು ಹೇಗೆ ಶೋಭಿಸುತ್ತಾನೋ ಹಾಗೆ ರಾಜನು ಶರ್ಮಿಷ್ಠೆಯ ಜೊತೆಯಲ್ಲಿ ಸಂತೋಷವನ್ನು ಹೊಂದಿದನು.
ಯಯಾತಿಃ
ಪ್ರಜಾನಾಂ ಶ್ರೀರಿವಾಗ್ರ್ಯಾ ಮೇ ಶರ್ಮಿಷ್ಠಾ ಹ್ಯಭವದ್ ವಧೂಃ |
ಪನ್ನಗೀವೋಗ್ರರೂಪೇಯಂ ದೇವಯಾನೀ ಮಮ ಹ್ಯಭೂತ್ ||2||
ಪ್ರಜೆಗಳಿಗೆ ಶ್ರೇಷ್ಠಳಾದ ಲಕ್ಷ್ಮೀದೇವಿಯಂತೆ ಶರ್ಮಿಷ್ಠೆಯು ನನಗೆ ಪತ್ನಿಯಾದಳು. ದೇವಯಾನಿಯು ನನಗೆ ಉಗ್ರರೂಪದ ಸರ್ಪಿಣಿಯಂತೆ ಆಗಿದ್ದಾಳೆ.
ಪರ್ಜನ್ಯ ಇವ ಸಸ್ಯಾನಾಂ ದೇವಾನಾಮಮೃತಂ ಯಥಾ |
ತದ್ವನ್ಮಮಾಪಿ ಸಂಭೂತಾ ಶರ್ಮಿಷ್ಠಾ ವಾರ್ಷಪರ್ವಣೀ |
ಇತ್ಯೇವಂ ಮನಸಾ ಧ್ಯಾತ್ವಾ ದೇವಯಾನೀಮವರ್ಜಯತ್ ||3||
ಸಸ್ಯಗಳಿಗೆ ಮಳೆಯಂತೆ, ದೇವತೆಗಳಿಗೆ ಅಮೃತದಂತೆ, ನನ್ನ ಪಾಲಿಗೆ ಶರ್ಮಿಷ್ಠೆಯು ಆನಂದದಾಯಕಳಾದಳು. ಹೀಗೆ ಮನಸ್ಸಿನಲ್ಲಿ ಯೋಚಿಸಿ ದೇವಯಾನಿಯನ್ನು ವರ್ಜಿಸಿದನು.
ವೈಶಂಪಾಯನಃ
ಶ್ರುತ್ವಾ ಕುಮಾರಂ ಜಾತಂ ತು ದೇವಯಾನೀ ಶುಚಿಸ್ಮಿತಾ |
ಚಿಂತಾಂ ಬಹುವಿಧಾಂ ಚಕ್ರೇ ಶರ್ಮಿಷ್ಠಾಂ ಪ್ರತಿ ಭಾರತ ||4||
ಅಭಿಗಮ್ಯ ತು ಶರ್ಮಿಷ್ಠಾಂ ದೇವಯಾನೀ ತಥಾऽಬ್ರವೀತ್ |
ಕಿಮಿದಂ ವೃಜಿನಂ ಸುಭ್ರು ಕೃತಂ ತೇ ಕಾಮಲುಬ್ಧಯಾ ||5||
ಶುಚಿಸ್ಮಿತೆಯಾದ ದೇವಯಾನಿಯು ಶರ್ಮಿಷ್ಠೆಗೆ ಕುಮಾರನು ಜನಿಸಿದುದನ್ನು ಕೇಳಿ ಶರ್ಮಿಷ್ಠೆಯ ವಿಷಯದಲ್ಲಿ ಅನೇಕ ವಿಧವಾದ ಚಿಂತೆಗೆ ಒಳಗಾದಳು. ದೇವಯಾನಿಯು ಶರ್ಮಿಷ್ಠೆಯನ್ನು ಸಮೀಪಿಸಿ, ಸುಂದರಿಯೇ, ಕಾಮಲೋಭದಿಂದ ಎಂತಹ ಪಾಪಕೃತ್ಯವನ್ನು ಮಾಡಿದೆ ಎಂದು ಹೇಳಿದಳು.
ಶರ್ಮಿಷ್ಠಾ
ಋಷಿರಭ್ಯಾಗತಃ ಕಶ್ಚಿದ್ ಧರ್ಮಾತ್ಮಾ ವೇದಪಾರಗಃ |
ಸ ಮಯಾ ವರದಃ ಕಾಮಂ ಯಾಚಿತೋ ಧರ್ಮಸಂಹಿತಮ್ ||6||
ಅಪತ್ಯಾರ್ಥಂ ಸ ತು ಮಯಾ ವೃತೋ ವೈ ಚಾರುಹಾಸಿನಿ |
ನಾಹಮನ್ಯಾಯತಃ ಕಾಮಮಾಚರಾಮಿ ಶುಚಿಸ್ಮಿತೇ |
ತಸ್ಮಾಲ್ಲಬ್ಧಂ ಮಯಾಪತ್ಯಮಿದಂ ಸತ್ಯಂ ಶುಚಿಸ್ಮಿತೇ ||7||
ಧರ್ಮಾತ್ಮನೂ, ವೇದಪಾರಂಗತನೂ, ಆದ ಒಬ್ಬ ಋಷಿಯು ಬಂದಿದ್ದನು. ಕೇಳಿದ ವರವನ್ನು ಕೊಡುವ ಅವನನ್ನು ನಾನು ಧರ್ಮಸಮ್ಮತವಾದ ವರವನ್ನು ಕೇಳಿದೆ. ಚಾರುಹಾಸಿನಿಯೇ, ನಾನು ಸಂತಾನಾರ್ಥಿಯಾಗಿ ಅವನನ್ನು ವರಿಸಿದೆ. ಶುಚಿಸ್ಮಿತೆಯೇ, ನಾನು

ಅನ್ಯಾಯದಿಂದ ಕಾಮವನ್ನು ಆಚರಿಸಲಿಲ್ಲ. ಈ ಮಗು ನಾನು ಅವನಿಂದ ಪಡೆದದ್ದು. ಇದು ಸತ್ಯವಾದ ಮಾತು.
ದೇವಯಾನೀ
ಶೋಭನಂ ಭೀರು ಸತ್ಯಂ ಚೇದ್ ಅಥ ವಿಜ್ಞಾಯತೇ ದ್ವಿಜಃ |
ಗೋತ್ರನಾಮಾಭಿಜನತೋ ವೇತ್ತುಮಿಚ್ಛಾಮಿ ತಂ ದ್ವಿಜಮ್ ॥8॥
ಭೀರುವೇ, ನಿನ್ನ ಮಾತು ಸತ್ಯವಾದರೆ ಒಳ್ಳೆಯದೇ ಆಯಿತು. ಆ ಬ್ರಾಹ್ಮಣನು ಯಾವ ಕುಲದವನು, ಯಾವ ಗೋತ್ರದವನು, ಏನು ಹೆಸರುಳ್ಳವನು ಎಂದು ತಿಳಿದೆಯಾ. ನಾನು ಅದನ್ನು ತಿಳಿಯಲು ಬಯಸುತ್ತೇನೆ.
ಶರ್ಮಿಷ್ಠಾ
ಓಜಸಾ ತಪಸಾ ಚೈವ ದೀಪ್ಯಮಾನಂ ರವಿಂ ಯಥಾ |
ತಂ ದೃಷ್ಟ್ವಾ ಮಮ ಸಂಪ್ರಷ್ಟುಂ ಶಕ್ತಿರ್ನಾಸೀಚ್ಛುಚಿಸ್ಮಿತೇ ॥9॥
ಶುಚಿಸ್ಮಿತೆಯೇ, ಕಾಂತಿಯಿಂದಲೂ, ತಪಸ್ಸಿನಿಂದಲೂ ಸೂರ್ಯನಂತೆ ಬೆಳಗುತ್ತಿದ್ದ ಅವನನ್ನು ನೋಡಿ ಅವನಿಗೆ ಈ ಪ್ರಶ್ನೆಯನ್ನು ಕೇಳಲು ನನಗೆ ಶಕ್ತಿಯೇ ಇರಲಿಲ್ಲ.
ದೇವಯಾನೀ
ಯದ್ಯೇತದೇವಂ ಶರ್ಮಿಷ್ಠೇ ನ ಮನ್ಯುರ್ವಿದ್ಯತೇ ಮಮ |
ಅಪತ್ಯಂ ಯದಿ ತೇ ಲಬ್ಧಂ ಜ್ಯೇಷ್ಠಾಚ್ಛ್ರೇಷ್ಠಾಚ್ಚ ಭಾಮಿನಿ ॥10॥
ಶರ್ಮಿಷ್ಠೆ, ಅದು ಹಾಗೆಯೇ ಆದರೆ ನನಗೆ ಕೋಪವಿಲ್ಲ. ಸುಂದರಿಯೇ ಜ್ಯೇಷ್ಠನೂ, ಶ್ರೇಷ್ಠನೂ ಆದ ಋಷಿಯಿಂದ ನೀನು ಮಗನನ್ನು ಪಡೆದಿದ್ದಾದರೆ ಒಳ್ಳೆಯದೇ.
ವೈಶಂಪಾಯನಃ
ಅನ್ಯೋನ್ಯಮೇವಂ ಸಂಭಾಷ್ಯ ಸಂಪ್ರಹಸ್ಯ ಚ ತೇ ಮಿಥಃ |
ಜಗಾಮ ಭಾರ್ಗವೀ ವೇಶ್ಮ ತಥ್ಯಮಿತ್ಯೇ ವ ಜಜ್ಞುಷೀ ॥11॥
ಪರಸ್ಪರವಾಗಿ ಹಾಸ್ಯ ಮಾಡಿ ನಕ್ಕು ದೇವಯಾನಿಯು ಶರ್ಮಿಷ್ಠೆಯ ಮಾತು ಸತ್ಯವೆಂದೇ ತಿಳಿದುಕೊಂಡು ತನ್ನ ಮನೆಗೆ ಹೋದಳು.
ಯಯಾತಿರ್ದೇವಯಾನ್ಯಾಂ ದ್ವೌ ಪುತ್ರಾವಜನಯನ್ನೃಪಃ |
ಯದುಂ ಚ ತುರ್ವಶುಂ ಚೈವ ಇಂದ್ರವಿಷ್ಣೂ ಇವಾಪರೌ ॥12॥
ಯಯಾತಿಯು ದೇವಯಾನಿಯಲ್ಲಿ ಇಂದ್ರ ವಿಷ್ಣುಗಳಂತಿರುವ `ಯದು' ಮತ್ತು `ತುರ್ವಶು' ಎಂಬ ಎರಡು ಮಕ್ಕಳನ್ನು ಪಡೆದನು.
ತಸ್ಮಿನ್ ಕಾಲೇ ತು ರಾಜರ್ಷಿರ್ಯಯಾತಿಃ ಪೃಥಿವೀಪತಿಃ |
ಮಾಧ್ವೀಕರಸಸಂಯುಕ್ತಾಂ ಮದಿರಾಂ ಮದವರ್ಧನೀಮ್ ॥13॥
ಪಾಯಯಾಮಾಸ ಶುಕ್ರಸ್ಯ ತನಯಾಂ ರಕ್ತಪಿಂಜರಾಮ್ |
ಪೀತ್ವಾಪೀತ್ವಾ ಚ ಮದಿರಾಂ ದೇವಯಾನೀ ಮುಮೋಹ ಸಾ ॥14॥
ಆ ಕಾಲದಲ್ಲಿ ರಾಜರ್ಷಿಯಾದ ಯಯಾತಿಯು ಮದವನ್ನು ವರ್ಧಿಸುವ, ಕೆಂಪು ಮತ್ತು ಹಳದಿ ಬಣ್ಣದಿಂದ ಕೂಡಿದ ಗುಡದಿಂದ ಮಾಡಿದ ಮದಿರೆಯನ್ನು ದೇವಯಾನಿಗೆ ಕುಡಿಸಿದನು. ದೇವಯಾನಿಯು ಕುಡಿದು ಕುಡಿದು ಎಚ್ಚರವನ್ನು ಕಳೆದುಕೊಂಡಳು.
ರುದತೀ ಗಾಯಮಾನಾ ಚ ನೃತ್ಯಂತೀ ಚ ಮುಹುರ್ಮುಹುಃ |
ಬಹು ಪ್ರಲಪತೀ ದೇವೀ ರಾಜಾನಮಿದಮಬ್ರವೀತ್ ॥15॥
ಕೆಲವು ಸಲ ನಗುತ್ತಾ, ಕೆಲವು ಸಲ ಅಳುತ್ತಾ, ಮತ್ತೆ ಮತ್ತೆ ನೃತ್ಯವನ್ನು ಮಾಡುತ್ತಾ, ಬಹಳ ಮಾತನಾಡುತ್ತಾ, ದೇವಯಾನಿಯು ರಾಜನನ್ನು ಕುರಿತು ಹೀಗೆ ಹೇಳಿದಳು.
ರಾಜವದ್ ರೂಪವೇಷೌ ತೇ ಕಿಮರ್ಥಂ ತ್ವಮಿಹಾಗತಃ |
ಕೇನ ಕಾರ್ಯೇಣ ಸಂಪ್ರಾಪ್ತೋ ನಿರ್ಜನಂ ಗಹನಂ ವನಮ್ ॥16॥
ನಿನ್ನ ರೂಪವೇಷಗಳು ರಾಜನಂತಿವೆ. ನೀನು ಏತಕ್ಕೆ ಇಲ್ಲಿಗೆ ಬಂದಿದ್ದೀಯೇ? ಯಾವ ಉದ್ದೇಶದಿಂದ ನಿರ್ಜನವಾದ ಮತ್ತು ದಟ್ಟವಾದ ಈ ವನಕ್ಕೆ ಬಂದಿದ್ದೀಯೇ?
ದ್ವಿಜಶ್ರೇಷ್ಠ ನೃಪಶ್ರೇಷ್ಠೋ ಯಯಾತಿಶ್ಚೋಗ್ರದರ್ಶನಃ |
ತಸ್ಮಾದಿತಃ ಪಲಾಯಸ್ವ ಹಿತಮಿಚ್ಛಸಿ ಚೇದ್ ದ್ವಿಜ ॥17॥
ಇತ್ಯೇವಂ ಪ್ರಲಪಂತೀಂ ತಾಂ ದೇವಯಾನೀಂ ಸ ನಾಹುಷಃ |
ಭರ್ತ್ಸಯಾಮಾಸ ವಚನೈರಪಾಪಾಂ ಪಾಪವರ್ಧನೀಮ್ ॥18॥
ಎಲೈ ದ್ವಿಜಶ್ರೇಷ್ಠನೇ, ರಾಜಶ್ರೇಷ್ಠನಾದ ಯಯಾತಿಯು ಬಹಳ ಉಗ್ರ ಸ್ವಭಾವದವನು. ಆದ್ದರಿಂದ ಎಲೈ ದ್ವಿಜನೇ, ನೀನು ಹಿತವನ್ನು ಬಯುಸುವುದಾದರೆ, ಇಲ್ಲಿಂದ ಬೇಗ ಓಡಿಹೋಗು. ಹೀಗೆ ಮಾತನಾಡುತ್ತಿದ್ದ ಸ್ವತಃ ಪಾಪವಿಲ್ಲದ, ಮದಿರೆಯ ಬಲದಿಂದ ಪತಿಯ ಧಿಕ್ಕಾರ ಮಾಡಿ ಪಾಪವನ್ನು ಹೆಚ್ಚಿಸಿಕೊಳ್ಳುತ್ತಿದ್ದ ದೇವಯಾನಿಯನ್ನು ಯಯಾತಿಯು ಗದರಿಸಿ ನಿಂದಿಸಿದನು.
ತತೋ ವರ್ಷವರಾನ್ ಮೂಕಾನ್ ಪಂಗೂನ್ ವೃದ್ಧಾನ್ ಸಷಂಡಕಾನ್ |
ರಕ್ಷಣೇ ದೇವಯಾನ್ಯಾಃ ಸ ಪೋಷಣೇ ಚ ಶಶಾಸ ಹ ॥19॥
ಅನಂತರ ದೇವಯಾನಿಯ ರಕ್ಷಣೆ ಮತ್ತು ಪೋಷಣೆಗಾಗಿ ವೃದ್ಧರನ್ನೂ, ಮೂಕರನ್ನೂ, ಹೆಳವರನ್ನೂ ಮತ್ತು ನಪುಂಸಕರನ್ನೂ ನೇಮಿಸಿದನು.
ತತಸ್ತು ನಾಹುಷೋ ರಾಜಾ ಶರ್ಮಿಷ್ಠಾಂ ಪ್ರಾಪ್ಯ ಬುದ್ಧಿಮಾನ್ |

ರೇಮೇ ಚ ಸುಚಿರಂ ಕಾಲಂ ತಯಾ ಶರ್ಮಿಷ್ಠಯಾ ಸಹ ॥20॥
ಅನಂತರ ಬುದ್ಧಿವಂತನಾದ ಯಯಾತಿಯು ಶರ್ಮಿಷ್ಠೆಯನ್ನು ಹೊಂದಿ ಬಹಳ ಕಾಲ ಅವಳ ಜೊತೆಯಲ್ಲಿ ಸುಖವನ್ನು ಹೊಂದಿದನು.
ತಸ್ಮಾದೇವ ತು ರಾಜರ್ಷೇಃ ಶರ್ಮಿಷ್ಠಾ ವಾರ್ಷಪರ್ವಣೀ |
ದ್ರುಹ್ಯುಂ ಚಾನುಂ ಚ ಪೂರುಂ ಚ ತ್ರೀನ್ ಕುಮಾರಾನಜೀಜನತ್ ॥
ವೃಷಪರ್ವನ ಮಗಳಾದ ಶರ್ಮಿಷ್ಠೆಯು, ಅದೇ ರಾಜರ್ಷಿಯಿಂದ `ದ್ರುಹ್ಯು', `ಅನು' ಮತ್ತೆ `ಪೂರು' ಎಂಬ ಮೂರು ಗಂಡು ಮಕ್ಕಳನ್ನು ಪಡೆದಳು.
ತತಃ ಕಾಲೇ ತು ರಾಜೇಂದ್ರ ದೇವಯಾನೀ ವರಾಂಗನಾ |
ಯಯಾತಿಸಹಿತಾ ದೇವೀ ಜಗಾಮ ಪ್ರಮದಾವನಮ್ ॥22॥
ಎಲೈ ರಾಜೇಂದ್ರನೇ, ಅನಂತರ ಕೆಲವು ಕಾಲದ ಮೇಲೆ, ಸುಂದರಿಯಾದ ದೇವಯಾನಿಯು ಯಯಾತಿಯ ಜೊತೆಯಲ್ಲಿ ಪ್ರಮದಾವನಕ್ಕೆ ಹೋದಳು.
ಸಾ ದದರ್ಶ ವನೇ ತತ್ರ ಕುಮಾರಾನ್ ದೇವರೂಪಿಣಃ |
ಕ್ರೀಡಮಾನಾನ್ ಸುವಿಸ್ರಬ್ಧಾನ್ ವಿಸ್ಮಿತಾ ಚೇದಮಬ್ರವೀತ್ ॥23॥
ಅವಳು ಅಲ್ಲಿ ದೇವಕುಮಾರರಂತೆ ಇದ್ದು ನಿರ್ಭಯವಾಗಿ ಆಡುತ್ತಿದ್ದ ಮೂರು ಮಕ್ಕಳನ್ನು ನೋಡಿ ವಿಸ್ಮಿತಳಾಗಿ ಈ ಮಾತನ್ನು ಆಡಿದಳು.
ಕಸ್ಯೈತೇ ದಾರಕಾ ರಾಜನ್ ದೇವಪುತ್ರೋಪಮಾಃ ಶುಭಾಃ |
ವರ್ಚಸಾ ರೂಪತಶ್ಚೈವ ಸದೃಶಾ ಮೇ ಮತಾಸ್ತವ ॥24॥
ಎಲೈ ರಾಜನೇ, ದೇವಕುಮಾರರಂತೆ ಮಂಗಳಕರವಾಗಿರುವ ಈ ಮೂವರು ಯಾರ ಮಕ್ಕಳು, ರೂಪದಿಂದಲೂ ಮತ್ತು ವರ್ಚಸ್ಸಿನಿಂದಲೂ ನಿನ್ನನ್ನೇ ಹೋಲುತ್ತಾರೆ ಎಂದು ನನ್ನ ಅಭಿಪ್ರಾಯ.
ವೈಶಂಪಾಯನಃ
ಏವಂ ಪೃಷ್ಟ್ವಾ ತು ರಾಜಾನಂ ಕುಮಾರಾನ್ ಪರ್ಯಪೃಚ್ಛತ |
ತಸ್ಮಿನ್ ಕಾಲೇ ತು ತಚ್ಛ್ರುತ್ವಾ ಧಾತ್ರೀ ತೇಷಾಂ ವಚೋಽಬ್ರವೀತ್ |
ಕಿಂ ನ ಬ್ರೂತ ಕುಮಾರಾ ವಃ ಪಿತರಂ ವೈ ದ್ವಿಜರ್ಷಭಮ್ ॥25॥
ಹೀಗೆ ರಾಜನನ್ನು ಕೇಳಿ ಅನಂತರ ಮಕ್ಕಳನ್ನು ಕೇಳಿದಳು. ಆಗ ಆ ಮಕ್ಕಳ ಧಾತ್ರಿಯು ಆ ಮಾತನ್ನು ಕೇಳಿ ಮಕ್ಕಳನ್ನು ಕುರಿತು ಮಕ್ಕಳೇ, ನಿಮ್ಮ ತಂದೆಯಾದ ದ್ವಿಜಶ್ರೇಷ್ಠನು ಯಾರು ಎಂದು ಏಕೆ ಹೇಳುತ್ತಿಲ್ಲ ಎಂದು ಕೇಳಿದಳು.
ದೇವಯಾನೀ
ಕಿನ್ನಾಮಧೇಯಗೋತ್ರೋ ವಃ ಪುತ್ರಕಾಃ ಬ್ರಾಹ್ಮಣಃ ಪಿತಾ |
ವಿಬ್ರೂತ ತತ್ತ್ವತಃ ಕ್ಷಿಪ್ರಂ ಕಶ್ಚಾಸೌ ಕ್ವ ಚ ವರ್ತತೇ |
ವಿಬ್ರೂತ ಮೇ ಯಥಾತಥ್ಯಂ ಶ್ರೋತುಮಿಚ್ಛಾಮಿ ತಂ ಹ್ಯಹಮ್ ॥26॥
ಮಕ್ಕಳೇ, ನಿಮ್ಮ ತಂದೆಯಾದ ಬ್ರಾಹ್ಮಣನ ನಾಮ ಮತ್ತು ಗೋತ್ರಗಳೇನು? ಬೇಗ ಸರಿಯಾದ ಉತ್ತರವನ್ನು ಕೊಡಿ. ಅವನು ಯಾರು ಮತ್ತು ಎಲ್ಲಿರುತ್ತಾನೆ. ನೀವು ನನಗೆ ಸರಿಯಾಗಿ ಹೇಳಿ. ನಾನು ಅದನ್ನು ಕೇಳಲು ಇಷ್ಟಪಡುತ್ತೇನೆ.
ವೈಶಂಪಾಯನಃ
ಏವಮುಕ್ತಾಃ ಕುಮಾರಾಸ್ತೇ ದೇವಯಾನ್ಯಾ ಸುಮಧ್ಯಯಾ |
ತೇಽದರ್ಶಯನ್ ಪ್ರದೇಶಿನ್ಯಾ ತಮೇವ ಪಿತರಂ ನೃಪಮ್ ॥27॥
ಆ ಮಕ್ಕಳು ಸುಂದರಿಯಾದ ದೇವಯಾನಿಯಿಂದ ಹೀಗೆ ಹೇಳಲ್ಪಟ್ಟವರಾಗಿ ತಮ್ಮ ತೋರು ಬೆರಳಿನಿಂದ ರಾಜನನ್ನೇ ತಂದೆಯೆಂದು ತೋರಿಸಿದರು.
ಶರ್ಮಿಷ್ಠಾಂ ಮಾತರಂ ಚೈವ ತಸ್ಯಾ ಊಚುಶ್ಚ ದಾರಕಾಃ |
ಋಷಿಶ್ಚ ಬ್ರಾಹ್ಮಣಶ್ಚೈವ ದ್ವಿಜಾತಿಶ್ಚೈವ ನಃ ಪಿತಾ ॥28॥
ಶರ್ಮಿಷ್ಠಾ ನಾನೃತಂ ಬ್ರೂಯಾದ್ ದೇವಯಾನಿ ಕ್ಷಮಸ್ವ ವೈ |
ಇತ್ಯುಕ್ತ್ವಾ ಸಹಿತಾ ದೇವೀಂ ರಾಜಾನಮುಪಚಕ್ರಮುಃ ॥29॥
ಆ ಮಕ್ಕಳು ದೇವಯಾನಿಯನ್ನು ಕುರಿತು ತಮ್ಮ ತಾಯಿ ಶರ್ಮಿಷ್ಠೆ ಎಂದು ತಿಳಿಸಿದರು. ನಮ್ಮ ತಂದೆಯು, ಋಷಿಯೂ, ದ್ವಿಜನೂ ಮತ್ತು ಬ್ರಾಹ್ಮಣನೂ ಹೌದು. ಶರ್ಮಿಷ್ಠೆಯು ಅನೃತವನ್ನು ಹೇಳುವುದಿಲ್ಲ. ದೇವಯಾನಿ, ನಮ್ಮನ್ನು ಕ್ಷಮಿಸು ಎಂದು ಹೇಳಿ ಎಲ್ಲರೂ ಒಟ್ಟಿಗೆ ದೇವಿಯ ಸಮೀಪದಲ್ಲಿದ್ದ ರಾಜನ ಹತ್ತಿರ ಬರಲು ಹೊರಟರು.
ನಾಭ್ಯನಂದತ ತಾನ್ ರಾಜಾ ದೇವಯಾನ್ಯಾಸ್ತದಾಽಂತಿಕೇ |
ರುದಂತಸ್ತೇಽಥ ಶರ್ಮಿಷ್ಠಾಮಭ್ಯಯುರ್ಬಾಲಕಾಸ್ತತಃ ॥30॥
ಆಗ ದೇವಯಾನಿಯು ಹತ್ತಿರದಲ್ಲಿದ್ದುದರಿಂದ ರಾಜನು ತನ್ನ ಮಕ್ಕಳನ್ನು ಅಭಿನಂದಿಸಲಿಲ್ಲ. ಆಗ ಆ ಮಕ್ಕಳು ಅಳುತ್ತಾ ಶರ್ಮಿಷ್ಠೆಯ ಕಡೆಗೆ ಹೋದರು.
ಅವಿಬ್ರುವಂತಂ ಕಿಂಚಿಚ್ಚ ರಾಜಾನಂ ಚಾರುಲೋಚನಾ |
ನಾತಿದೂರಾಚ್ಚ ರಾಜಾನಂ ಸಾ ಚಾತಿಷ್ಠದವಾಙ್ಮುಖೀ ॥31॥
ಚಾರುನೇತ್ರೆಯಾದ ಶರ್ಮಿಷ್ಠೆಯು ಏನೂ ಮಾತನಾಡದಿರುವ ರಾಜನಿಗೆ ಅತಿದೂರವಲ್ಲದ ಸ್ಥಳದಲ್ಲಿ ಮುಖವನ್ನು ಕೆಳಗೆ ಹಾಕಿ

ನಿಂತಳು.
ಶ್ರುತ್ವಾ ತು ತೇಷಾಂ ಬಾಲಾನಾಂ ಸವ್ರೀಡ ಇವ ಪಾರ್ಥಿವಃ |
ಪ್ರತಿವಕ್ತುಮಶಕ್ತೋऽಭೂತ್ ತೂಷ್ಣೀಂಭೂತೋऽಭವನ್ನೃಪಃ ॥32॥
ಆ ಮಕ್ಕಳ ಮಾತನ್ನು ಕೇಳಿ ನಾಚಿಕೆಗೊಂಡ ರಾಜನು ಪ್ರತಿಯಾಗಿ ಮಾತನಾಡಲು ಶಕ್ತವಾಗದೆ ಸುಮ್ಮನೆ ನಿಂತಿದ್ದನು.
ದೃಷ್ಟ್ವಾ ತು ತೇಷಾಂ ಬಾಲಾನಾಂ ಪ್ರಣಯಂ ಪಾರ್ಥಿವಂ ಪ್ರತಿ |
ಬುಧ್ವಾ ತು ತತ್ತ್ವತೋ ದೇವೀ ಶರ್ಮಿಷ್ಠಾಮಿದಮಬ್ರವೀತ್ ॥33॥
ಆ ಮಕ್ಕಳಿಗೆ ರಾಜನಲ್ಲಿದ್ದ ಪ್ರೀತಿಯನ್ನು ಗಮನಿಸಿ ಎಲ್ಲವನ್ನೂ ಸರಿಯಾಗಿ ತಿಳಿದುಕೊಂಡ ದೇವಯಾನಿಯು ಶರ್ಮಿಷ್ಠೆಯನ್ನು ಕುರಿತು ಹೀಗೆ ಹೇಳಿದಳು.
ಗೃಹೀತ್ವಾ ತು ಕರೇ ರೋಷಾಚ್ಛರ್ಮಿಷ್ಠಾಂ ಪುನರಬ್ರವೀತ್ |
ಅನ್ಯೋ ಗಚ್ಛತಿ ಮಾಂ ಕಶ್ಚಿದ್ ಋಷಿರಿತ್ಯೇವಮಬ್ರವೀಃ ॥34॥
ರೋಷದಿಂದ ಅವಳ ಕೈಯನ್ನು ಹಿಡಿದು, ಶರ್ಮಿಷ್ಠೆಯನ್ನು ಕುರಿತು ನನ್ನ ಬಳಿಗೆ ಬೇರೊಬ್ಬ ಋಷಿಯು ಬರುತ್ತಾನೆ ಎಂದು ಹೇಳಿದೆ.
ಯಯಾತಿಮೇವಂ ನೂನಂ ತ್ವಂ ಪ್ರೋತ್ಸಾಹಯಸಿ ಭಾಮಿನಿ |
ಪೂರ್ವಮೇವ ಮಯಾ ಪ್ರೋಕ್ತಂ ತ್ವಯಾ ತು ವೃಜಿನಂ ಕೃತಮ್ ॥35॥
ಸುಂದರಿಯೇ, ಅವನು ಯಯಾತಿಯೇ ಸರಿ. ನೀನು ಅವನನ್ನು ಪ್ರೋತ್ಸಾಹಿಸುತ್ತಿದ್ದೀಯೇ. ನಾನು ಮೊದಲೇ ನಿನಗೆ ಆದೇಶವನ್ನು ನೀಡಿದ್ದೇನೆ. ನೀನು ಪಾಪಕಾರ್ಯವನ್ನು ಮಾಡಿದ್ದೀಯೇ.
ಮಯ್ಯಧೀನಾ ಸತೀ ಕಸ್ಮಾದಕಾರ್ಷೀರ್ಮಮ ವಿಪ್ರಿಯಮ್ |
ತಮೇವಾಸುರಧರ್ಮಂ ತ್ವಂ ಚರತೀ ನ ಬಿಭೇಷಿ ಮಾಮ್ ॥36॥
ನನಗೆ ಅಧೀನಳಾಗಿ ಏತಕ್ಕೆ ನನಗೆ ಅಪ್ರಿಯವಾದ ಕಾರ್ಯವನ್ನು ಮಾಡಿದೆ. ಮೊದಲಿನ ಅಸುರ ಧರ್ಮವನ್ನೇ ಆಚರಿಸುತ್ತಾ ನೀನು ನನಗೆ ಹೆದರುತ್ತಲೇ ಇಲ್ಲ.
ಶರ್ಮಿಷ್ಠಾ
ಯದುಕ್ತಮೃಷಿರಿತ್ಯೇವ ತತ್ಸತ್ಯಂ ಚಾರುಹಾಸಿನಿ |
ನ್ಯಾಯತೋ ಧರ್ಮತಶ್ಚೈವ ಚರಂತೀ ನ ಬಿಭೇಮಿ ತೇ ॥37॥
ವೃತಸ್ತ್ವಯಾ ಯದಾ ರಾಜಾ ತದೈವಾಯಂ ಮಯಾ ವೃತಃ |
ಮಮಾಪಿ ಚಾಭವದ್ ಭರ್ತಾ ಸಖೀಭರ್ತಾ ಹಿ ಶೋಭನೇ ॥38॥
ಪೂಜ್ಯಾ ಚ ಮಮ ಮಾನ್ಯಾ ಚ ಜ್ಯೇಷ್ಠಾ ಸಾಧ್ವೀ ಚ ಬ್ರಾಹ್ಮಣೀ |
ತ್ವತ್ತೋऽಪಿ ಮೇ ಪೂಜ್ಯತಮೋ ರಾಜರ್ಷಿಃ ಕಿಂ ನ ವೇತ್ಥ ತತ್ ॥39॥
ಎಲೌ ಚಾರುಹಾಸಿನಿ, ಋಷಿ ಎಂದು ಹೇಳಿದುದು ಸತ್ಯ. ನ್ಯಾಯದಿಂದಲೂ, ಧರ್ಮದಿಂದಲೂ ನಡೆಯುತ್ತಿರುವ ನಾನು ನಿನಗೆ ಹೆದರುವುದಿಲ್ಲ. ನೀನು ಯಾವಾಗ ರಾಜನನ್ನು ವರಿಸಿದೆಯೋ, ಆಗಲೇ ನಾನು ಅವನನ್ನು ವರಿಸಿದೆ. ಮಂಗಳಸ್ವರೂಪಳೇ, ನನ್ನ ಸಖಿಯ ಪತಿಯಾದವನು ನನಗೂ ಸಹ ಪತಿಯಾದನು. ಜ್ಯೇಷ್ಠಳೂ, ಸಾಧ್ವಿಯೂ, ಬ್ರಾಹ್ಮಣಿಯೂ ಆದ ನೀನು ನನಗೆ ಪೂಜ್ಯಳು ಮತ್ತು ಮಾನ್ಯಳು. ಆದರೆ ರಾಜರ್ಷಿಯಾದ ಯಯಾತಿಯು ನಿನಗಿಂತಲೂ ನನಗೆ ಪೂಜ್ಯತಮನಾದವನು. ಏಕೆ ಈ ವಿಷಯ ನಿನಗೆ ತಿಳಿಯುವುದಿಲ್ಲ.
ತವ ಪಿತ್ರಾ ಮೇ ಗುರುಣಾ ಸಹ ದತ್ತೇ ಉಭೇ ಶುಭೇ |
ತತೋ ಭರ್ತಾ ಚ ಪೂಜ್ಯಶ್ಚ ಪೋಷ್ಯಾಂ ಪೋಷಯತೀಹ ಮಾಮ್ ॥
ನನ್ನ ಗುರುಗಳಾದ ನಿನ್ನ ತಂದೆಯಿಂದ ನಾವಿಬ್ಬರೂ ಒಟ್ಟಿಗೆ ಕೊಡಲ್ಪಟ್ಟೆವು. ಆದ್ದರಿಂದ ನನಗೆ ಪತಿಯೂ ಮತ್ತು ಪೂಜ್ಯನೂ ಆದ ಯಯಾತಿಯು, ಪೋಷಿಸಬೇಕಾದ ನನ್ನನ್ನು ಪೋಷಿಸುತ್ತಾನೆ.
ವೈಶಂಪಾಯನಃ
ಏವಂ ಶ್ರುತ್ವಾ ತತೋ ವಾಕ್ಯಂ ದೇವಯಾನ್ಯಬ್ರವೀದಿದಮ್ |
ರಾಜನ್ ನಾದ್ಯೇಹ ವತ್ಸ್ಯಾಮಿ ವಿಪ್ರಿಯಂ ಮೇ ಕೃತಂ ತ್ವಯಾ |
ರಮಸ್ವೇಹ ಯಥಾಕಾಮಂ ದೇವ್ಯಾ ಶರ್ಮಿಷ್ಠಯಾ ಸಹ ॥41॥
ಈ ಮಾತನ್ನು ಕೇಳಿ ದೇವಯಾನಿಯು ಹೀಗೆ ಹೇಳಿದಳು. ರಾಜನೇ, ನೀನು ನನಗೆ ಅಪ್ರಿಯವನ್ನುಂಟುಮಾಡಿದ್ದೀಯೇ. ನಾನು ಇಂದಿನಿಂದ ಇಲ್ಲಿ ಇರುವುದಿಲ್ಲ. ಶರ್ಮಿಷ್ಠೆಯ ಜೊತೆಯಲ್ಲಿ ಬೇಕಾದಂತೆ ಸುಖವಾಗಿರು ಎಂದು ಹೇಳಿದಳು.
ಪ್ರತಿಜಜ್ವಾಲ ಕ್ರೋಧೇನ ದೇವಯಾನೀ ತದಾ ಭೃಶಮ್ |
ನಿರ್ದಹಂತೀವ ಶರ್ಮಿಷ್ಠಾಂ ಸವ್ರೀಡಾಂ ಸಮುದೈಕ್ಷತ |
ಅಪವಿಧ್ಯ ತು ಸರ್ವಾಣಿ ಭೂಷಣಾನ್ಯಸಿತೇಕ್ಷಣಾ ॥42॥
ಸಹಸೋತ್ಪತಿತಾ ಶ್ಯಾಮಾ ನೀಲಕುಂತಲಮೂರ್ಧಜಾ |
ರುಷ್ಟಾ ಸಕಾಶಂ ಕಾವ್ಯಸ್ಯ ಪ್ರಸ್ಥಿತಾ ವ್ಯಥಿತಾನನಾ ॥43॥
ಆಗ ದೇವಯಾನಿಯು ಬಹಳ ಸಿಟ್ಟಿನಿಂದ ಉರಿದು ನಾಚಿಕೆಯಿಂದ ಕೂಡಿದ ಶರ್ಮಿಷ್ಠೆಯನ್ನು ಸುಟ್ಟುಬಿಡುವಂತೆ ನೋಡಿದಳು. ಎಲ್ಲಾ ಆಭರಣಗಳನ್ನು ಎಸೆದು, ಕಪ್ಪು ಕಣ್ಣುಳ್ಳವಳೂ, ಶ್ಯಾಮವರ್ಣದವಳೂ ಮತ್ತು ಕಪ್ಪು ಗುಂಗುರು ಕೂದಲು ಉಳ್ಳವಳೂ ಆದ ಅವಳು ತಕ್ಷಣ ಎದ್ದು ರೋಷದಿಂದ ಕೂಡಿದವಳಾಗಿ ವ್ಯಥೆಯನ್ನು ಹೊತ್ತ ಮುಖದಿಂದ ಶುಕ್ರಾಚಾರ್ಯರ ಸಮೀಪಕ್ಕೆ ಹೊರಟಳು.
ಅನುವವ್ರಾಜ ಸಂಭ್ರಾಂತಃ ಪೃಷ್ಠತಃ ಸಾಂತ್ವಯನ್ ನೃಪಃ |

ನ ನ್ಯವರ್ತತ ವೈ ತಸ್ಮಾತ್ ಕ್ರೋಧಸಂರಕ್ತಲೋಚನಾ ॥44॥
ರಾಜನು ದಿಗ್ಭ್ರಮೆಯಿಂದ ಅವಳನ್ನು ಸಮಾಧಾನ ಮಾಡುತ್ತಾ ಅವಳ ಹಿಂದೆ ಹೊರಟನು. ಆದರೆ, ಸಿಟ್ಟಿನಿಂದ ಕೆಂಪಾದ ಕಣ್ಣುಳ್ಳ ದೇವಯಾನಿಯು ಹಿಂದಿರುಗಲಿಲ್ಲ.
ಅವಿಬ್ರುವಂತೀ ಕಿಂಚಿಚ್ಚ ರಾಜಾನಂ ಚಾರುಹಾಸಿನೀ।
ಅಚಿರಾದಿವ ಸಂಪ್ರಾಪ್ತಾ ಕಾವ್ಯಸ್ಯೋಶನಸೋಽಂತಿಕಮ್ ॥45॥
ಚಾರುಹಾಸಿನಿಯಾಗಿದ್ದ ಅವಳು ಹಿಂದಿನಿಂದ ಮಾತನಾಡಿಸುತ್ತಿದ್ದ ರಾಜನಿಗೆ ಏನೂ ಉತ್ತರವನ್ನು ಕೊಡದೆ, ಬಹಳ ಬೇಗ ಶುಕ್ರಾಚಾರ್ಯರ ಸಮೀಪಕ್ಕೆ ಬಂದಳು.
ಸಾ ತು ದೃಷ್ಟ್ವೈವ ಪಿತರಮಭಿವಾದ್ಯಾಗ್ರತಃ ಸ್ಥಿತಾ।
ಅನಂತರಂ ಯಯಾತಿಸ್ತು ಪೂಜಯಾಮಾಸ ಭಾರ್ಗವಮ್ ॥46॥
ಅವಳು ತಂದೆಯನ್ನು ನೋಡಿದ ತಕ್ಷಣ ನಮಸ್ಕರಿಸಿ ಮುಂದೆ ನಿಂತಳು. ಅನಂತರ ಬಂದ ಯಯಾತಿಯು ಶುಕ್ರಾಚಾರ್ಯರನ್ನು ಪೂಜಿಸಿದನು.
ದೇವಯಾನೀ
ಅಧರ್ಮೇಣ ಜಿತೋ ಧರ್ಮಃ ಪ್ರವೃತ್ತಮಧರೋತ್ತರಮ್।
ಶರ್ಮಿಷ್ಠಯಾ ನಿವೃತ್ತಾಽಸ್ಮಿ ದುಹಿತ್ರಾ ವೃಷಪರ್ವಣಃ ॥47॥
ಅಧರ್ಮವು ಧರ್ಮವನ್ನು ಗೆದ್ದಿದೆ. ಎಲ್ಲವೂ ತಲೆಕೆಳಗಾಯಿತು. ವೃಷಪರ್ವನ ಮಗಳಾದ ಶರ್ಮಿಷ್ಠೆಯ ಕಾರಣದಿಂದ ನಾನು ಹಿಂದೆ ಬಂದಿದ್ದೇನೆ.
ತ್ರಯೋಽಸ್ಯಾಂ ಜನಿತಾಃ ಪುತ್ರಾ ರಾಜ್ಞಾ ತೇನ ಯಯಾತಿನಾ।
ದುರ್ಭಗಾಯಾ ಮಮ ದ್ವೌ ತು ಪುತ್ರೌ ತಾತ ಬ್ರವೀಮಿ ತೇ ॥48॥
ಆ ರಾಜನಿಂದ ಅವಳಿಗೆ ಮೂರು ಮಕ್ಕಳು ಜನಿಸಿವೆ. ತಂದೆಯೇ, ದುರದೃಷ್ಟಶಾಲಿನಿಯಾದ ನನಗೆ ಎರಡೇ ಮಕ್ಕಳು ಎಂದು ನಿನಗೆ ತಿಳಿಸುತ್ತಿದ್ದೇನೆ.
ಧರ್ಮಿಷ್ಠ ಇತಿ ವಿಖ್ಯಾತ ಏಷ ರಾಜಾ ಭೃಗೂದ್ವಹ।
ಅತಿಕ್ರಾಂತಶ್ಚ ಮರ್ಯಾದಾಂ ಕಾವ್ಯೈತತ್ ಕಥಯಾಮಿ ತೇ ॥49॥
ಎಲೈ ಭೃಗುವಂಶೋತ್ತಮನೇ ಧರ್ಮಿಷ್ಠನೆಂದು ಪ್ರಖ್ಯಾತನಾದ ಈ ರಾಜನು ಧರ್ಮದ ಎಲ್ಲೆಯನ್ನು ಅತಿಕ್ರಮಿಸಿದ್ದಾನೆ. ತಂದೆಯೇ, ನಾನು ಇದನ್ನು ನಿನಗೆ ತಿಳಿಸುತ್ತಿದ್ದೇನೆ.
ಶುಕ್ರಃ
ಧರ್ಮಜ್ಞಃ ಸನ್ ಮಹಾರಾಜ ಯೋ ಧರ್ಮಂ ನಾಕೃಥಾಃ ಸ್ವಯಮ್।
ತಸ್ಮಾಜ್ಜರಾ ತ್ವಾಂ ನಚಿರಾದ್ ಧರ್ಷಯಿಷ್ಯತಿ ದುರ್ಜಯಾ ॥50॥
ಮಹಾರಾಜನೇ, ನೀನು ಧರ್ಮವನ್ನು ತಿಳಿದವನಾಗಿ ಸ್ವತಃ ಧರ್ಮವನ್ನು ಆಚರಿಸಲಿಲ್ಲ. ಆದ್ದರಿಂದ ಗೆಲ್ಲಲು ಸಾಧ್ಯವಿಲ್ಲದ ಮುಪ್ಪು ಸದ್ಯದಲ್ಲಿಯೇ ನಿನ್ನನ್ನು ನಿರ್ವೀರ್ಯನನ್ನಾಗಿ ಮಾಡುತ್ತದೆ.
ಯಯಾತಿಃ
ಋತುಂ ವೈ ಯಾಚಮಾನಾಯಾ ಭಗವನ್ ನಾನ್ಯಚೇತಸಾ।
ದುಹಿತುರ್ದಾನವೇಂದ್ರಸ್ಯ ಧರ್ಮ್ಯಮೇತತ್ ಕೃತಂ ಮಯಾ ॥51॥
ಪೂಜ್ಯರೇ, ಋತುಕಾಲದಲ್ಲಿ ಮಕ್ಕಳನ್ನು ಯಾಚಿಸುವ ಶರ್ಮಿಷ್ಠೆಯ ಜೊತೆಯಲ್ಲಿ ನಾನು ಸಮಾಗಮವನ್ನು ಮಾಡಿದೆ. ಬೇರೆ ಬುದ್ಧಿಯಿಂದ ಮಾಡಲಿಲ್ಲ. ನಾನು ಮಾಡಿದುದು ಧರ್ಮವೇ ಆಗಿದೆ.
ಋತುಂ ವೈ ಯಾಚಮಾನಾಯಾ ನ ದದಾತಿ ಪುಮಾನ್ ಋತುಮ್।
ಭ್ರೂಣಹೇತ್ಯುಚ್ಯತೇ ಬ್ರಹ್ಮನ್ ಸದಾ ವೈ ಬ್ರಹ್ಮವಾದಿಭಿಃ ॥52॥
ಎಲೈ ಬ್ರಾಹ್ಮಣನೇ ಋತುಕಾಲದಲ್ಲಿ ಮಕ್ಕಳನ್ನು ಯಾಚಿಸುವ ವನಿತೆಗೆ ಯಾವ ಪುರುಷನು ಗರ್ಭಾಧಾನ ಮಾಡುವುದಿಲ್ಲವೋ ಅವನನ್ನು ಬ್ರಹ್ಮವಾದಿಗಳು ಭ್ರೂಣಹತ್ಯವನ್ನು ಮಾಡಿದವನೆಂದು ಕರೆಯುತ್ತಾರೆ.
ಅಭಿಕಾಮಾಂ ಸ್ತ್ರಿಯಂ ಚೈವ ಗಮ್ಯಾಂ ರಹಸಿ ಯಾಚಿತಃ।
ಉಪೈತಿ ಯಃ ಸ್ವಧರ್ಮೇಷು ಕಿಲ್ಬಿಷೀ ನಚ ಸಃ ಪುಮಾನ್ ॥53॥
ಕಾಮನೆಯುಳ್ಳ ಸ್ತ್ರೀಯನ್ನು ಸಮಾಗಮಕ್ಕೆ ಯೋಗ್ಯಳಾದವಳನ್ನು, ಏಕಾಂತದಲ್ಲಿ ಅವಳಿಂದ ಪ್ರಾರ್ಥಿಸಲ್ಪಟ್ಟರೂ ಯಾವನು ಸಮಾಗಮವನ್ನು ಮಾಡುವುದಿಲ್ಲವೋ, ಆ ವ್ಯಕ್ತಿಯು ತನ್ನ ಧರ್ಮದಲ್ಲಿ ದೋಷಯುಕ್ತನಾಗುತ್ತಾನೆ. ಸಮಾಗಮ ಮಾಡಿದವನು ದೋಷಿಯಾಗುವುದಿಲ್ಲ.
ಯದ್ಯದ್ ಯಾಚತಿ ಮಾಂ ಕಶ್ಚಿತ್ ತತ್ತದ್ ದೇಯಮಿತಿ ವ್ರತಮ್।
ತ್ವಯಾಽಪಿ ಸಾ ಚ ದತ್ತಾ ಮೇ ನಾನ್ಯಂ ನಾಥಮಿಹೇಚ್ಛತಿ।
ಮತ್ವೈತನ್ಮಮ ಧರ್ಮೇಣ ಕೃತಂ ಬ್ರಹ್ಮನ್ ಕ್ಷಮಸ್ವ ಮೇ ॥54॥
ನನಗೆ ಯಾರು ಯಾರು ಏನನ್ನು ಕೇಳುತ್ತಾರೋ ಅದೆಲ್ಲವನ್ನೂ ಕೊಡುತ್ತೇನೆ ಎಂಬ ವ್ರತವಿದೆ. ನೀವು ಅವಳನ್ನು ನನಗೆ ದಾನ ಮಾಡಿದ್ದೀರಿ. ಅವಳು ಬೇರೆ ಪತಿಯನ್ನು ಬಯಸುವುದಿಲ್ಲ. ಇದನ್ನು ತಿಳಿದು ಧರ್ಮದಿಂದಲೇ ಅವಳ ಸಮಾಗಮವನ್ನು ಮಾಡಿದ್ದೇನೆ. ಪೂಜ್ಯರೇ, ನನ್ನನ್ನು ಕ್ಷಮಿಸಿ.
ಇತ್ಯೇತಾನಿ ಸಮೀಕ್ಷ್ಯಾಹಂ ಕಾರಣಾನಿ ಭೃಗೂದ್ವಹ।

ಅಧರ್ಮಭಯಸಂವಿಗ್ನಃ ಶರ್ಮಿಷ್ಠಾಮುಪಜಗ್ಮಿವಾನ್ ॥55॥
ಭೃಗುಶ್ರೇಷ್ಠರೇ, ಈ ಎಲ್ಲಾ ಕಾರಣಗಳನ್ನು ಚಿಂತಿಸಿ ಅಧರ್ಮದ ಭಯದಿಂದ ಸಂವಿಗ್ನನಾಗಿ ನಾನು ಶರ್ಮಿಷ್ಠೆಯ ಸಮಾಗಮವನ್ನು ಮಾಡಿದೆ.
ಶುಕ್ರಃ
ನನ್ವಹಂ ಪ್ರತ್ಯವೇಕ್ಷ್ಯಸ್ತೇ ಮಯ್ಯಧೀನೋಽಸಿ ಪಾರ್ಥಿವ |
ಮಿಥ್ಯಾಚಾರಸ್ಯ ಧರ್ಮೇಷು ಜರಾ ಭವತಿ ನಾಹುಷ ॥56॥
ರಾಜನೇ, ನನ್ನ ಅಧೀನನಾಗಿರುವ ನೀನು ನನ್ನ ಮಾತಿಗೆ ಬೆಲೆ ಕೊಡಬೇಕಷ್ಟೇ. ಎಲೈ ನಾಹುಷನೇ ಧರ್ಮದ ವಿಷಯದಲ್ಲಿ ಮಿಥ್ಯಾಚಾರವುಳ್ಳ ನಿನಗೆ ಮುಪ್ಪು ಬರುತ್ತದೆ.
ವೈಶಂಪಾಯನಃ
ಕ್ರುದ್ಧೇನೋಶನಸಾ ಶಪ್ತೋ ಯಯಾತಿರ್ನಾಹುಷಸ್ತದಾ |
ಪೂರ್ವಂ ವಯಃ ಪರಿತ್ಯಜ್ಯ ಜರಾಂ ಸದ್ಯೋಽನ್ವಪದ್ಯತ ॥57॥
ಸಿಟ್ಟಾದ ಶುಕ್ರಾಚಾರ್ಯರಿಂದ ಹೀಗೆ ಶಪ್ತನಾದ ಯಯಾತಿಯು ಆಗ ಪೂರ್ವ ವಯಸ್ಸನ್ನು ಪರಿತ್ಯಜಿಸಿ ತಕ್ಷಣದಲ್ಲಿಯೇ ಮುಪ್ಪನ್ನು ಹೊಂದಿದನು.
ಯಯಾತಿಃ
ಅತೃಪ್ತೋ ಯೌವನಸ್ಯಾಹಂ ದೇವಯಾನ್ಯಾಂ ಭೃಗೂದ್ವಹ |
ಪ್ರಸಾದಂ ಕುರು ಮೇ ಬ್ರಹ್ಮನ್ ಜರೇಯಂ ಮಾ ವಿಶೇತ ಮಾಮ್ ॥
ಎಲೈ ಭೃಗುಶ್ರೇಷ್ಠನೇ, ನಾನು ದೇವಯಾನಿಯಲ್ಲಿ ಯೌವನದ ತೃಪ್ತಿಯನ್ನು ಪೂರ್ಣವಾಗಿ ಪಡೆದಿಲ್ಲ. ಬ್ರಾಹ್ಮಣರೇ, ನನಗೆ ಅನುಗ್ರಹವನ್ನು ಮಾಡಿ. ನನಗೆ ಮುಪ್ಪು ಬಾರದಿರಲಿ.
ಶುಕ್ರಃ
ನಾಹಂ ಮೃಷಾ ಬ್ರವೀಮ್ಯೇನಾಂ ಜರಾಂ ಪ್ರಾಪ್ತೋಽಸಿ ನಾಹುಷ |
ಜರಾಂ ತ್ವೇತಾಂ ತ್ವಮನ್ಯಸ್ಮೈ ಸಂಕ್ರಾಮಯ ಯದೀಚ್ಛಸಿ ॥59॥
ನನ್ನ ಮಾತು ಎಂದೂ ಸುಳ್ಳಾಗುವುದಿಲ್ಲ. ಯಯಾತಿಯೇ, ನೀನು ಮುಪ್ಪನ್ನು ಹೊಂದುತ್ತೀಯೆ. ಬೇಕಾದರೆ ನೀನು ನಿನ್ನ ಈ ಮುಪ್ಪನ್ನು ಬೇರೆಯವರಿಗೆ ವರ್ಗಾಯಿಸಬಹುದು.
ಯಯಾತಿಃ
ರಾಜ್ಯಭಾಕ್ ಸ ಭವೇದ್ ಬ್ರಹ್ಮನ್ ಪುಣ್ಯಭಾಕ್ ಕೀರ್ತಿಭಾಕ್ ತಥಾ|
ಯೋ ಮೇ ದದ್ಯಾದ್ ವಯಃ ಪುತ್ರಸ್ತದ್ ಭವಾನನುಮನ್ಯತಾಮ್ ॥
ಎಲೈ ಬ್ರಾಹ್ಮಣರೇ, ನನಗೆ ಯಾವ ಪುತ್ರನು ತನ್ನ ಆಯುಸ್ಸನ್ನು ಕೊಡುತ್ತಾನೆಯೋ ಅವನು ನನ್ನ ರಾಜ್ಯಕ್ಕೆ ಅಧಿಕಾರಿಯೂ ಪುಣ್ಯಭಾಜನನೂ ಮತ್ತು ಕೀರ್ತಿಭಾಜನನೂ ಆಗುತ್ತಾನೆ. ಇದಕ್ಕೆ ನೀವು ಅನುಮತಿಯನ್ನು ಕೊಡಿ.
ಶುಕ್ರಃ
ಸಂಕ್ರಾಮಯಿಷ್ಯಸಿ ಜರಾಂ ಯಥೇಷ್ಟಂ ನಹುಷಾತ್ಮಜ |
ಮಾಮನುಧ್ಯಾಯ ಭಾವೇನ ನಚ ಪಾಪಮವಾಪ್ಸ್ಯಸಿ ॥61॥
ನಹುಷಾತ್ಮಜನೇ, ನಿನಗೆ ಬೇಕಾದಂತೆ ಈ ನಿನ್ನ ಮುಪ್ಪನ್ನು ನನ್ನನ್ನು ಭಕ್ತಿಯಿಂದ ಸ್ಮರಿಸಿ ಇನ್ನೊಬ್ಬರಿಗೆ ವರ್ಗಾಯಿಸಬಹುದು. ಅದರಿಂದ ನಿನಗೆ ಪಾಪವುಂಟಾಗುವುದಿಲ್ಲ.
ವಯೋ ದಾಸ್ಯತಿ ತೇ ಪುತ್ರೋ ಯಃ ಸ ರಾಜಾ ಭವಿಷ್ಯತಿ |
ಆಯುಷ್ಮಾನ್ ಕೀರ್ತಿಮಾಂಶ್ಚೈವ ಬಹ್ವಪತ್ಯಸ್ತಥೈವ ಚ ॥62॥
ಯಾವ ಮಗನು ನಿನಗೆ ತನ್ನ ವಯಸ್ಸನ್ನು ಕೊಡುತ್ತಾನೆಯೋ ಅವನು ಆಯುಷ್ಮಂತನೂ, ಕೀರ್ತಿವಂತನೂ ಮತ್ತು ಬಹಳ ಮಕ್ಕಳುಳ್ಳವನೂ ಆಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಾಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****

ಎಪ್ಪತ್ಮೂರನೆಯ ಅಧ್ಯಾಯ
(ಶಾಪದಿಂದ ಯಯಾತಿಯ ವಿಹ್ವಲತೆ, ಉಳಿದ ಮಕ್ಕಳಿಂದ ನಿರಾಕರಣೆ, ಪೂರುವಿನ ಪಿತೃಭಕ್ತಿ, ಅವನಿಗೆ ಯಯಾತಿಯ ವರಪ್ರದಾನ.)
ವೈಶಂಪಾಯನಃ
ಜರಾಂ ಪ್ರಾಪ್ಯ ಯಯಾತಿಸ್ತು ಸ್ವಪುರಂ ಪ್ರಾಪ್ಯ ಚೈವ ಹ |
ಪುತ್ರಂ ಜ್ಯೇಷ್ಠಂ ವರಿಷ್ಠಂ ಚ ಯದುಮಿತ್ಯಬ್ರವೀದ್ ವಚಃ ॥1॥
ಜರೆಯನ್ನು ಹೊಂದಿದ ಯಯಾತಿಯು ತನ್ನ ಪಟ್ಟಣಕ್ಕೆ ಹಿಂದಿರುಗಿ ಗುಣವಂತನಾದ ತನ್ನ ಜ್ಯೇಷ್ಠಪುತ್ರನಾದ ಯದುವನ್ನು ಕುರಿತು ಹೀಗೆ ಹೇಳಿದನು.
ಜರಾವಲೀ ಚ ಮೇ ತಾತ ಪಲಿತಾನಿ ಚ ಪರ್ಯಗುಃ |

ಕಾವ್ಯಸ್ಯೋಶನಸಃ ಶಾಪಾನ್ನ ತೃಪ್ತೋಽಸ್ಮಿ ಚ ಯೌವನೇ ॥2॥
ಮಗು, ನನಗೆ ಜರೆಯು, ವಲೀಗಳು (ಉಬ್ಬಿದ ನಾಡಿಗಳು) ಮತ್ತು ನೆರೆ ಕೂದಲು, ಶುಕ್ರಾಚಾರ್ಯರ ಶಾಪದಿಂದ ದೇಹವನ್ನೆಲ್ಲಾ ಆವರಿಸಿವೆ. ನನಗೆ ಯೌವನ ಸುಖದಲ್ಲಿ ಇನ್ನೂ ತೃಪ್ತಿ ಉಂಟಾಗಿಲ್ಲ.
ತ್ವಂ ಯದೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ |
ಯೌವನೇನ ತ್ವದೀಯೇನ ಚರೇಯಂ ವಿಷಯಾನಹಮ್ ॥3॥
ಪೂರ್ಣೇ ವರ್ಷಸಹಸ್ರೇ ತು ತ್ವದೀಯಂ ಯೌವನಂ ತ್ವಹಮ್ |
ದತ್ತ್ವಾ ಸ್ವಂ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥4॥
ಎಲೈ ಯದುವೇ ನನ್ನ ಪಾಪವನ್ನು ಮತ್ತು ಮುಪ್ಪನ್ನು ನೀನು ತೆಗೆದುಕೋ, ನಿನ್ನ ಯೌವನದಿಂದ ನಾನು ಸುಖವನ್ನು ಅನುಭವಿಸುತ್ತೇನೆ. ಒಂದು ಸಹಸ್ರವರ್ಷ ತುಂಬಿದ ಮೇಲೆ ನಿನ್ನ ಯೌವನವನ್ನು ನಿನಗೆ ಕೊಟ್ಟು ನಾನು ನನ್ನ ಪಾಪವನ್ನು ಮರಳಿ ಪಡೆಯುತ್ತೇನೆ.
ಯದುಃ
ಸಿತಶ್ಮಶ್ರುಶಿರೋ ದೀನೋ ಜರಯಾ ಶಿಥಿಲೀಕೃತಃ |
ವಲೀಸಂತತಿಗಾತ್ರಶ್ಚ ದುರ್ದರ್ಶೋ ದುರ್ಬಲಃ ಕೃಶಃ ॥5॥
ಅಶಕ್ತಃ ಕಾರ್ಯಕರಣೇ ಪರಿಭೂತಃ ಸಯೌವನೈಃ |
ಸಹೋಪಜೀವಿಭಿಶ್ಚೈವ ತಾಂ ಜರಾಂ ನೈವ ಕಾಮಯೇ ॥6॥
ಜರೆಯಿಂದ ನೆರೆತ ಮೀಸೆ, ಗಡ್ಡ, ತಲೆಯುಳ್ಳವನಾಗಿ, ದೇಹವೆಲ್ಲವೂ ಶಿಥಿಲವಾಗಿ, ಎಲ್ಲಾ ಕಡೆಗಳಲ್ಲಿಯೂ ವಲೀ (ಸುಕ್ಕು)ಗಳು ಕಾಣಿಸಿಕೊಂಡು ದುರ್ಬಲನೂ, ಕೃಶನೂ ಮತ್ತು ನೋಡುವುದಕ್ಕೆ ಅಸಹ್ಯನೂ ಆಗಿ, ತನ್ನ ಕೆಲಸವನ್ನು ತಾನು ಮಾಡಿಕೊಳ್ಳಲು ತನಗೆ ಶಕ್ತಿ ಇಲ್ಲದೆ ಯುವಕರಿಂದಲೂ, ಜೊತೆಯಲ್ಲಿ ವಾಸಿಸುವವರಿಂದಲೂ ಅವಮಾನಕ್ಕೆ ಒಳಗಾಗಿ ಜೀವಿಸುವಂತೆ ಮಾಡುವ ಆ ಮುಪ್ಪನ್ನು ನಾನು ಬಯಸುವುದಿಲ್ಲ.
ಯಯಾತಿಃ
ಯೋ ಮೇ ತ್ವಂ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ |
ತಸ್ಮಾದರಾಜ್ಯಭಾಕ್ ತಾತ ಪ್ರಜಾ ವೈ ತೇ ಭವಿಷ್ಯತಿ ॥7॥
ಮಗುವೇ, ನನ್ನ ಪ್ರೀತಿಯ ಮಗನಾದ ನೀನು ನಿನ್ನ ವಯಸ್ಸನ್ನು ನನಗೆ ಕೊಡುತ್ತಿಲ್ಲ. ಆದ್ದರಿಂದ ನಿನ್ನ ಪ್ರಜೆಗಳು ರಾಜ್ಯಭಾಗಿಗಳಾಗುವುದಿಲ್ಲ.
ವೈಶಂಪಾಯನಃ
ಪ್ರತ್ಯಾಖ್ಯಾತಶ್ಚ ರಾಜಾ ಸ ತುರ್ವಶುಂ ಪ್ರತ್ಯುವಾಚ ಹ |
ತುರ್ವಶೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ॥8॥
ಯೌವನೇನ ಚರೇಯಂ ವೈ ವಿಷಯಾಂಸ್ತವ ಪುತ್ರಕ |
ಪೂರ್ಣೇ ವರ್ಷಸಹಸ್ರೇ ತು ಪ್ರತಿದಾಸ್ಯಾಮಿ ಯೌವನಮ್ |
ಸ್ವಂ ಚೈವ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥9॥
ಯದುವಿನಿಂದ ನಿರಾಕೃತನಾದ ರಾಜನು ತುರ್ವಶುವನ್ನು ಸಮೀಪಿಸಿ ಮಾತನಾಡಿದನು. ತುರ್ವಶುವೇ, ನನ್ನ ಪಾಪವನ್ನು ಮತ್ತು ಜರೆಯನ್ನು ತೆಗೆದುಕೋ. ಮಗನೇ, ನಿನ್ನ ಯೌವನದಿಂದ ನಾನು ವಿಷಯಸುಖವನ್ನು ಅನುಭವಿಸುತ್ತೇನೆ. ಒಂದು ಸಹಸ್ರ ವರ್ಷಗಳು ತುಂಬಿದ ಮೇಲೆ ನಿನ್ನ ಯೌವನವನ್ನು ನಿನಗೆ ಕೊಟ್ಟು ನನ್ನ ಪಾಪವನ್ನು ಮತ್ತು ಜರೆಯನ್ನು ಮರಳಿ ಪಡೆಯುವೆನು.
ತುರ್ವಶುಃ
ನ ಕಾಮಯೇ ಜರಾಂ ತಾತ ಕಾಮಭೋಗವಿನಾಶಿನೀಮ್ |
ಬಲರೂಪಾಂತಕರಿಣೀಂ ಬುದ್ಧಿಪ್ರಾಣವಿನಾಶಿನೀಮ್ ॥10॥
ತಂದೆಯೇ, ಕಾಮಭೋಗಗಳನ್ನು ವಿನಾಶ ಮಾಡುವ, ಶಕ್ತಿ ಸೌಂದರ್ಯಗಳನ್ನು ನಾಶ ಮಾಡುವ, ಬುದ್ಧಿ ಪ್ರಾಣಗಳನ್ನು ವಿನಾಶ ಮಾಡುವ, ಜರೆಯನ್ನು ನಾನು ಬಯಸುವುದಿಲ್ಲ.
ಯಯಾತಿಃ
ಯೋ ಮೇ ತ್ವಂ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ |
ತುರ್ವಶೋ ತ್ವಂ ಪ್ರಿಯಂ ಕಾಮಂ ನೈವ ಸಂಪತ್ಸ್ಯಸೇ ಕ್ವಚಿತ್ ॥11॥
ಸ ಚೋಡುಪ್ಲವಸಂತಾರಸ್ತತ್ರ ನಿತ್ಯಂ ಭವಿಷ್ಯಸಿ |
ಅರಾಜಾ ಭೋಜಶಬ್ದಂ ತು ತತ್ರಾವಾಪ್ಸ್ಯಸಿ ಸಾನ್ವಯಃ ॥12॥
ತುರ್ವಶುವೇ, ನನ್ನ ಪ್ರೀತಿಯ ಪುತ್ರನಾದ ನೀನು ನಿನ್ನ ವಯಸ್ಸನ್ನು ನನಗೆ ಕೊಡುತ್ತಿಲ್ಲ. ಆದ್ದರಿಂದ ನಿನ್ನ ಪ್ರಿಯವಾದ ವಸ್ತು ವಿಷಯದ ಆಸೆಗಳು ಎಂದೂ ಪೂರೈಸದಿರಲಿ. ನಕ್ಷತ್ರದಂತೆ ಆ ಕಡೆಯಿಂದ ಈ ಕಡೆಗೆ ಸಂಚಾರ ಮಾಡುವ ನಾವೆಯನ್ನು ನೀನು ಯಾವಾಗಲೂ ನಡೆಸುವವನಾಗು. ನೀನು ಮತ್ತು ನಿನ್ನ ವಂಶದವರು ರಾಜರಾಗದೆ ಭೋಜ ಎಂಬ ಶಬ್ದವನ್ನು ಪಡೆಯುವರು.
ತಸ್ಮಾತ್ ಪ್ರಜಾ ಸಮುಚ್ಛೇದಂ ತುರ್ವಶೋ ತವ ಯಾಸ್ಯತಿ |
ಸಂಕೀರ್ಣಾಚಾರಧರ್ಮೇಷು ಪ್ರತಿಲೋಮಚರೇಷು ಚ ॥13॥
ಆದ್ದರಿಂದ ಎಲೈ ತುರ್ವಶುವೇ ನಿನ್ನ ಪ್ರಜೆಗಳು ನಾಶ ಹೊಂದುತ್ತಾರೆ. ಆಚಾರ ಧರ್ಮಗಳ ಸಂಕರವುಳ್ಳ, ಪ್ರತಿಲೋಮ ಧರ್ಮವನ್ನು ಆಚರಿಸುವಂತಹ, ಮಾಂಸಾಹಾರಿಗಳಾದ ಮ್ಲೇಚ್ಛದೇಶದಲ್ಲಿ ನೀನು ಜ್ಞಾನಶೂನ್ಯನಾಗಿ ರಾಜನಾಗುವಿ.

ಮ್ಲೇಚ್ಛೇಷು ಪಿಶಿತಾಶೇಷು ಮೂಢೋ ರಾಜಾ ಭವಿಷ್ಯಸಿ |
ಗುರುದಾರಪ್ರಸಕ್ತೇಷು ತಿರ್ಯಗ್ಯೋನಿಗತೇಷು ಚ |
ಛಿನ್ನಧರ್ಮಸ್ವರೂಪೇಷು ವ್ಯಾಧೇಷು ಜನಯಿಷ್ಯಸಿ ॥14॥
ಗುರುಪತ್ನಿಯರಲ್ಲಿ ಆಸಕ್ತರಾದಂತಹ, ನೀಚಯೋನಿಗಳಲ್ಲಿ ಗತರಾದಂತಹ, ಧರ್ಮಸ್ವರೂಪವನ್ನು ಬಿಟ್ಟಂತಹ, ವ್ಯಾಧರಲ್ಲಿ ನೀನು ಜನಿಸುವಿ.
ವೈಶಂಪಾಯನಃ
ಏವಂ ಸ ತುರ್ವಶುಂ ಶಪ್ತ್ವಾ ಯಯಾತಿಃ ಸುತಮಾತ್ಮನಃ |
ಶರ್ಮಿಷ್ಠಾಯಾಃ ಸುತಂ ದ್ರುಹ್ಯುಮಿದಂ ವಚನಮಬ್ರವೀತ್ ॥15॥
ಯಯಾತಿಯು ತನ್ನ ಮಗನಾದ ತುರ್ವಶುವಿಗೆ ಹೀಗೆ ಶಾಪವನ್ನು ನೀಡಿ ಶರ್ಮಿಷ್ಠೆಯ ಮಗನಾದ ದ್ರುಹ್ಯುವನ್ನು ಕುರಿತು ಹೀಗೆ ಮಾತನಾಡಿದನು.
ದ್ರುಹ್ಯೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ |
ಯೌವನೇನ ಚರೇಯಂ ವೈ ವಿಷಯಾಂಸ್ತವ ಪುತ್ರಕ ॥16॥
ಪೂರ್ಣೇ ವರ್ಷಸಹಸ್ರೇ ತು ಪ್ರತಿದಾಸ್ಯಾಮಿ ಯೌವನಮ್ |
ಸ್ವಂ ಚೈವ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥17॥
ಎಲೈ ದ್ರುಹ್ಯುವೇ, ನನ್ನ ಪಾಪವನ್ನು ಮತ್ತು ಜರೆಯನ್ನು ತೆಗೆದುಕೋ. ಮಗನೇ, ನಿನ್ನ ಯೌವನದಿಂದ ನಾನು ಸುಖವನ್ನು ಅನುಭವಿಸುತ್ತೇನೆ. ಒಂದು ಸಾವಿರ ವರ್ಷ ತುಂಬಿದ ಮೇಲೆ ನಿನ್ನ ಯೌವನವನ್ನು ನಿನಗೆ ಕೊಟ್ಟು ನನ್ನ ಪಾಪವನ್ನು ಮತ್ತು ಜರೆಯನ್ನು ಮರಳಿ ಪಡೆಯುವೆನು.
ದ್ರುಹ್ಯುಃ
ಜೀರ್ಣಃ ಶಿಶುವದಾದತ್ತೇಽಕಾಲೇಽನ್ನಮಶುಚಿರ್ಯಥಾ |
ನ ಜುಹೋತಿ ಚ ಕಾಲೇಽಗ್ನಿನ್ ನ ಬುಧ್ಯತಿ ಚ ಕಾಲತಃ |
ನಚ ಕೃತ್ಯಂ ಕರೋತ್ಯೇಷ ತಾಂ ಜರಾಂ ನೈವ ಕಾಮಯೇ ॥18॥
ಮುಪ್ಪನ್ನು ಹೊಂದಿದವನು ಅಶುಚಿಯಾದವನಂತೆ ಅಕಾಲದಲ್ಲಿ ಶಿಶುವಿನಂತೆ ಆಹಾರವನ್ನು ಸ್ವೀಕರಿಸುತ್ತಾನೆ. ಅವನು ಅಗ್ನಿಯಲ್ಲಿ ಹೋಮವನ್ನು ಮಾಡುವುದಿಲ್ಲ, ಕಾಲವನ್ನು ತಿಳಿಯುವುದಿಲ್ಲ. ಮಾಡಬೇಕಾದ ಯಾವ ಕೆಲಸವನ್ನೂ ಮಾಡುವುದಿಲ್ಲ. ಅಂತಹ ಮುಪ್ಪನ್ನು ನಾನು ಬಯಸುವುದಿಲ್ಲ.
ಯಯಾತಿಃ
ಯೋ ಮೇ ತ್ವಂ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ |
ಜರಾದೋಷಸ್ತ್ವಯೋಕ್ತೋಽಯಂ ತಸ್ಮಾನ್ನ ಪ್ರತಿಪದ್ಯಸೇ ॥19॥
ನನ್ನ ಪ್ರೀತಿಯ ಪುತ್ರನಾದ ನೀನು ನಿನ್ನ ವಯಸ್ಸನ್ನು ನನಗೆ ಕೊಡುತ್ತಿಲ್ಲ, ಜೊತೆಗೆ ಮುಪ್ಪಿನ ದೋಷಗಳನ್ನು ಹೇಳುತ್ತಿದ್ದೀಯೆ. ಆದ್ದರಿಂದ ನೀನು ರಾಜ್ಯವನ್ನು ಹೊಂದುವುದಿಲ್ಲ.
ಪ್ರಜಾಶ್ಚ ಯೌವನಂ ಪ್ರಾಪ್ತಾ ವಿನಶಿಷ್ಯಂತ್ಯತಸ್ತವ |
ಅಗ್ನಿಪ್ರಸ್ಕಂದನಪರಸ್ತ್ವಂ ಚಾಪಿ ನ ಭವಿಷ್ಯಸಿ ॥20॥
ನಿನ್ನ ಮಕ್ಕಳು ಯೌವನವನ್ನು ಹೊಂದಿ ಮೃತರಾಗುವರು. ನೀನು ಹೋಮ ಮೊದಲಾದ ಧರ್ಮಕಾರ್ಯಗಳಲ್ಲಿ ಆಸಕ್ತನಾಗಿರುವುದಿಲ್ಲ.
ಅನೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ |
ಏಕಂ ವರ್ಷಸಹಸ್ರಂ ವೈ ಚರೇಯಂ ತವ ರೂಪಧೃಕ್ ॥21॥
ಪೂರ್ಣೇ ವರ್ಷಸಹಸ್ರೇ ತು ಪುನಸ್ತೇ ಯೌವನಂ ತ್ವಹಮ್ |
ದತ್ತ್ವಾ ಚ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥22॥
(ಅನಂತರ ಯಯಾತಿಯು ಅನುವನ್ನು ಕರೆದು ಹೇಳಿದನು)
ಎಲೈ ಅನುವೇ, ನನ್ನ ಪಾಪವನ್ನೂ ಮತ್ತು ಜರೆಯನ್ನೂ ತೆಗೆದುಕೋ. ಒಂದು ಸಹಸ್ರ ವರ್ಷಗಳ ಕಾಲ ನಿನ್ನ ರೂಪವನ್ನು ಧರಿಸಿ ಸುಖವನ್ನು ಅನುಭವಿಸುವೆನು. ಒಂದು ಸಹಸ್ರ ವರ್ಷಗಳು ತುಂಬಿದ ಮೇಲೆ ನಿನ್ನ ಯೌವನವನ್ನು ನಿನಗೆ ಕೊಟ್ಟು ನನ್ನ ಪಾಪ ಮತ್ತು ಜರೆಯನ್ನು ಮರಳಿ ಪಡೆಯುವೆನು.
ಅನುಃ
ನ ಹಸ್ತಿನಂ ನರೋ ನಾಶ್ವಂ ಜೀರ್ಣೋ ಭುಂಕ್ತೇ ನ ಪೀಠಕಮ್ |
ವಾಗ್ ದುರ್ಭಗಾಽಸ್ಯ ಭವತಿ ತಾಂ ಜರಾಂ ನೈವ ಕಾಮಯೇ ॥23॥
ಮುದುಕನಾದವನು ಗಜವನ್ನು ಏರುವುದಿಲ್ಲ, ಅಶ್ವವನ್ನು ಏರುವುದಿಲ್ಲ, ವಿಮಾನವನ್ನು ಏರುವುದಿಲ್ಲ, ಮಾತುಗಳು ಅಸ್ಪಷ್ಟವಾಗುತ್ತವೆ. ಅಂತಹ ಮುಪ್ಪನ್ನು ನಾನು ಬಯಸುವುದಿಲ್ಲ.
ಯೋ ಮೇ ತ್ವಂ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ |
ಹಸ್ತ್ಯಶ್ವರಥಯುಗ್ಯಾನಾಮಧ್ವಾ ನ ಸ್ಯಾತ್ ಕದಾಚನ ॥24॥
ಹಸ್ತಿನಾಂ ಪೀಠಕಾನಾಂ ವಾ ಗರ್ದಭಾನಾಂ ತಥೈವ ಚ |
ಉಷ್ಟ್ರಾಣಾಂ ಚ ಗವಾಂ ಚೈವ ಶಿಬಿಕಾಯಾಸ್ತಥೈವ ಚ ॥25॥

ನನ್ನ ಪ್ರೀತಿಪಾತ್ರನಾದ ಮಗನಾಗಿ ನಿನ್ನ ವಯಸ್ಸನ್ನು ಕೊಡದಿರುವುದರಿಂದ ಆನೆ, ಕುದುರೆ ಮತ್ತು ರಥಗಳು ಸಂಚರಿಸುವ ಮಾರ್ಗವು ನಿನಗೆ ದೊರೆಯದಿರಲಿ. ಆನೆಗಳು, ವಿಮಾನಗಳು, ಗರ್ದಭಗಳು, ಉಷ್ಟ್ರಗಳು, ಗೋವುಗಳು ಮತ್ತು ಪಲ್ಲಕ್ಕಿಗಳು ಹೋಗುವ ಮಾರ್ಗವು ನಿನಗೆ ದೊರೆಯದಿರಲಿ.
ಯದ್ವಾಽನ್ಯದ್ ವಾಹನಂ ಕಿಂಚಿದ್ ದೇವೋ ಹನ್ಯಾತ್ ಕ್ವಚಿತ್ಕ್ವಚಿತ್|
ಅರಾಜಾ ತವ ಜಾತಿಶ್ಚ ಭವಿಷ್ಯತಿ ನ ಸಂಶಯಃ ॥26॥
ಅಥವಾ ಬೇರೆ ಯಾವುದಾದರೂ ವಾಹನವಿದ್ದರೂ ಅದನ್ನು ದೇವರು ನಾಶ ಮಾಡಲಿ. ನಿನ್ನ ವಂಶದವರು ರಾಜರಾಗುವುದು ಬೇಡ. ಈ ವಿಷಯದಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ಪ್ರತ್ಯಾಖ್ಯಾತಶ್ಚತುರ್ಭಿಸ್ತು ಶಪ್ತ್ವಾ ತಾನ್ ಯದುಪೂರ್ವಕಾನ್ |
ಪೂರೋಃ ಸಕಾಶಮಗಮದ್ ಧ್ಯಾತ್ವಾ ಪೂರುಮಲಂಘನಮ್ ॥27॥
ಯದು ಮೊದಲಾದ ನಾಲ್ಕು ಮಕ್ಕಳಿಂದ ನಿರಾಕೃತನಾಗಿ ಅವರನ್ನು ಶಪಿಸಿ, ಕೊನೆಯ ಮಗನಾದ ಪೂರುವು ತನ್ನ ಮಾತನ್ನು ಮೀರುವುದಿಲ್ಲವೆಂದು ಯೋಚಿಸಿ ಯಯಾತಿಯು ಪೂರುವಿನ ಬಳಿಗೆ ಬಂದನು.
ಯಯಾತಿಃ
ಪೂರೋ ತ್ವಂ ಮೇ ಪ್ರಿಯಂ ಪುತ್ರಃ ತ್ವಂ ಗರೀಯಾನ್ ಭವಿಷ್ಯಸಿ |
ಜರಾ ವಲೀ ಚ ಮೇ ತಾತ ಪಲಿತಾನಿ ಚ ಪರ್ಯಗುಃ ॥28॥
ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ |
ಪೂರೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ॥29॥
ಪೂರುವೇ, ನೀನು ನನ್ನ ಪ್ರಿಯನಾದ ಪುತ್ರ. ನೀನು ಇನ್ನೂ ಶ್ರೇಷ್ಠನಾಗುವಿ. ನನ್ನ ದೇಹವನ್ನು ಮುಪ್ಪು, ವಲೀ ಮತ್ತು ನೆರೆ ಕೂದಲುಗಳು ಆವರಿಸಿವೆ. ಇದಕ್ಕೆ ಶುಕ್ರಾಚಾರ್ಯರ ಶಾಪವು ಕಾರಣ. ಯೌವನಸುಖದಲ್ಲಿ ನನಗೆ ತೃಪ್ತಿಯಾಗಿಲ್ಲ. ಎಲೈ ಪೂರುವೇ, ನನ್ನ ಪಾಪವನ್ನು ಮತ್ತು ಜರೆಯನ್ನು ನೀನು ತೆಗೆದುಕೋ.
ಯಥಾಕಾಮಂ ಚರೇಯಂ ವೈ ವಿಷಯಾನ್ ವಯಸಾ ತವ |
ಪೂರ್ಣೇ ವರ್ಷಸಹಸ್ರೇ ತು ಪ್ರತಿದಾಸ್ಯಾಮಿ ಯೌವನಮ್ |
ಸ್ವಂ ಚೈವ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥30॥
ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ನಿನ್ನ ವಯಸ್ಸಿನಿಂದ ನಾನು ವಿಷಯ ಸುಖವನ್ನು ಅನುಭವಿಸುತ್ತೇನೆ. ಒಂದು ಸಹಸ್ರ ವರ್ಷಗಳು ತುಂಬಿದ ಮೇಲೆ ನಿನ್ನ ಯೌವನವನ್ನು ನಿನಗೆ ಕೊಟ್ಟು ನನ್ನ ಪಾಪವನ್ನು ಮತ್ತು ಜರೆಯನ್ನು ಮರಳಿ ಪಡೆಯುವೆನು.
ವೈಶಂಪಾಯನಃ
ಏವಮುಕ್ತಃ ಪ್ರತ್ಯುವಾಚ ಪುತ್ರಃ ಪಿತರಮಂಜಸಾ |
ಯಥಾತ್ಥ ಮಾಂ ಮಹಾರಾಜ ತತ್ ಕರಿಷ್ಯಾಮಿ ತೇ ವಚಃ ॥31॥
ಹೀಗೆ ಹೇಳಲ್ಪಟ್ಟ ಪುತ್ರನಾದ ಪೂರುವು ತಂದೆಯನ್ನು ಕುರಿತು ಚೆನ್ನಾಗಿ ಮಾತನಾಡಿದನು. ಮಹಾರಾಜನೇ ನೀನು ಏನು ಹೇಳಿದೆಯೋ ಅದರಂತೆ ನಿನ್ನ ಮಾತನ್ನು ನಡೆಸುವೆನು.
ಗುರೋರ್ವೈ ವಚನಂ ಪುಣ್ಯಂ ಸ್ವರ್ಗ್ಯಮಾಯುಷ್ಕರಂ ನೃಣಾಮ್ |
ಗುರುಪ್ರಸಾದಾತ್ ತ್ರೈಲೋಕ್ಯಮನ್ವಶಾಸಚ್ಛತಕ್ರತುಃ ॥32॥
ಹಿರಿಯರ ಆದೇಶವು ಮನುಷ್ಯರಿಗೆ ಪುಣ್ಯಪ್ರದವಾದುದು, ಸ್ವರ್ಗಸಾಧಕವಾದುದು ಮತ್ತು ದೀರ್ಘಾಯುಷ್ಯವನ್ನು ಕೊಡುವಂತಹುದು. ಇಂದ್ರನು ಗುರುಹಿರಿಯರ ಅನುಗ್ರಹದಿಂದಲೇ ಮೂರು ಲೋಕಗಳನ್ನು ಆಳುತ್ತಾನೆ.
ಗುರೋರನುಮತಂ ಪ್ರಾಪ್ಯ ಸರ್ವಾನ್ ಕಾಮಾನವಾಪ್ನುಯಾತ್ |
ಪ್ರತಿಪತ್ಸ್ಯಾಮಿ ತೇ ರಾಜನ್ ಪಾಪ್ಮಾನಂ ಜರಯಾ ಸಹ ॥33॥
ಗುರುಹಿರಿಯರ ಅಭಿಪ್ರಾಯದಂತೆ ನಡೆದರೆ ಎಲ್ಲಾ ಕಾಮಗಳೂ ಸಿದ್ಧಿಸುತ್ತವೆ. ನಾನು ನಿನ್ನ ಮುಪ್ಪು ಮತ್ತು ಪಾಪವನ್ನು ತೆಗೆದುಕೊಳ್ಳುತ್ತೇನೆ.
ಯಾವದಿಚ್ಛಸಿ ವಾಽಽಜೀವಂ ತಾವತ್ ತಾಂ ಧಾರಯಾಮ್ಯಹಮ್ |
ಗೃಹಾಣ ಯೌವನಂ ಮತ್ತಶ್ಚರ ಕಾಮಾನ್ ಯಥೇಪ್ಸಿತಾನ್ ॥34॥
ಒಂದು ಸಾವಿರ ವರ್ಷ ಮಾತ್ರವಲ್ಲ, ನೀನು ಎಲ್ಲಿಯವರೆಗೆ ಇಷ್ಟಪಡುತ್ತೀಯೋ ಅಲ್ಲಿಯವರೆಗೆ ಅಥವಾ ನಾನು ಬದುಕಿರುವವರೆಗೂ ನಿನ್ನ ಮುಪ್ಪನ್ನು ಧರಿಸುತ್ತೇನೆ. ನನ್ನ ಯೌವನವನ್ನು ಸ್ವೀಕಾರ ಮಾಡು, ಬೇಕಾದ ಸುಖವನ್ನು ಅನುಭವಿಸು.
ಜರಯಾಽಹಂ ಪ್ರತಿಚ್ಛನ್ನೋ ವಸೇ ರೂಪಧರಸ್ತವ |
ಯೌವನಂ ಭವತೇ ದತ್ತ್ವಾ ಚರಿಷ್ಯಾಮಿ ಯಥಾತ್ಥ ಮಾಮ್ ॥35॥
ನಾನು ಮುಪ್ಪಿನಿಂದ ಆವೃತನಾಗಿ ನಿನ್ನ ರೂಪವನ್ನು ಧರಿಸಿ ವಾಸಿಸುವೆನು. ನನ್ನ ಯೌವನವನ್ನು ನಿನಗೆ ಕೊಟ್ಟು ನೀನು ಹೇಳಿದಂತೆ ನಡೆದುಕೊಳ್ಳುವೆನು.
ಯಯಾತಿಃ
ಪೂರೋ ಪ್ರೀತೋಽಸ್ಮಿ ತೇ ಪುತ್ರ ಪ್ರೀತಶ್ಚೇದಂ ದದಾಮಿ ತೇ |
ಸರ್ವಕಾಮಸಮೃದ್ಧಾ ತೇ ಪ್ರಜಾ ರಾಜ್ಯೇ ಭವಿಷ್ಯತಿ ॥36॥
ಎಲೈ ಪೂರುವೇ, ನಿನಗೆ ನಾನು ಪ್ರಸನ್ನನಾಗಿದ್ದೇನೆ. ಪುತ್ರನೇ, ಪ್ರೀತಿಯಿಂದ ಈ ವರವನ್ನು ಕೊಡುತ್ತಿದ್ದೇನೆ. ನಿನ್ನ ರಾಜ್ಯದಲ್ಲಿ ಪ್ರಜೆಗಳು

ಸರ್ವಕಾಮ ಸಮೃದ್ಧರಾಗಿ ಬಾಳುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****

ಎಪ್ಪತ್ನಾಲ್ಕನೆಯ ಅಧ್ಯಾಯ
(ಯಯಾತಿಯ ವೈರಾಗ್ಯ, ಪೂರುವಿಗೆ ರಾಜ್ಯಾಭಿಷೇಕ
ಮತ್ತು ಯಯಾತಿಯ ವನಪ್ರಾಪ್ತಿ.)
ವೈಶಂಪಾಯನಃ
ಪೌರವೇಣಾಥ ವಯಸಾ ಯಯಾತಿರ್ನಹುಷಾತ್ಮಜಃ ।
ರೂಪಯೌವನಸಂಪನ್ನಃ ಕುಮಾರಃ ಸಹಸಾಽಭವತ್ ॥1॥
ನಹುಷನ ಮಗನಾದ ಯಯಾತಿಯು ಪೂರುವಿನ ವಯಸ್ಸನ್ನು ತೆಗೆದುಕೊಂಡು, ರೂಪ ಯೌವನ ಸಂಪನ್ನನಾಗಿ ತಕ್ಷಣ ಕುಮಾರನಾದನು.
ಪ್ರೀತಿಯುಕ್ತೋ ನೃಪಶ್ರೇಷ್ಠಶ್ಚಚಾರ ವಿಷಯಾನ್ ಪ್ರಿಯಾನ್ ।
ಯಥಾಕಾಮಂ ಯಥೋತ್ಸಾಹಂ ಯಥಾಕಾಲಂ ಯಥಾಸುಖಮ್ ॥2॥
ಧರ್ಮಾವಿರುದ್ಧಂ ರಾಜೇಂದ್ರೋ ಯಥಾಽರ್ಹಂ ಸೋಽನ್ವಸೇವತ ದೇವಾನತರ್ಪಯದ್ ಯಜ್ಞೈಃ ಶ್ರಾದ್ಧೈಃ ಸಂತರ್ಪಯನ್ ಪಿತೄನ್ ॥
ನೃಪಶ್ರೇಷ್ಠನಾದ ಯಯಾತಿಯು ಸಂತೋಷದಿಂದ ಪ್ರಿಯವಾದ ವಿಷಯಗಳನ್ನು ತನ್ನ ಆಸೆಗೆ, ತನ್ನ ಉತ್ಸಾಹಕ್ಕೆ, ಆಯಾ ಕಾಲಗಳಿಗೆ, ಆಯಾ ಸುಖಗಳಿಗೆ, ಅನುಕೂಲವಾಗುವಂತೆ ಧರ್ಮಕ್ಕೆ ಅವಿರುದ್ಧವಾಗಿ, ಯಥಾಯೋಗ್ಯವಾಗಿ ಸೇವಿಸಿದನು. ಯಜ್ಞಗಳಿಂದ ದೇವತೆಗಳನ್ನು ಸಂತೋಷಪಡಿಸಿದನು, ಪಿತೃಗಳನ್ನು ಶ್ರಾದ್ಧಗಳಿಂದ ಸಂತೋಷಡಿಸಿದನು.
ದೀನಾಂಧಕೃಪಣಾನ್ ವಿಪ್ರಾನನಾಥಾಂಶ್ಚಾಭ್ಯಪೂಜಯತ್ ।
ಅತಿಥೀನನ್ನಪಾನೈಶ್ಚ ವಿಶಃ ಶೂದ್ರಾನಪಾಲಯತ್ ।
ಆನೃಶಂಸ್ಯೇನ ಸರ್ವಾಂಶ್ಚ ದಸ್ಯೂನ್ ನಿಗ್ರಹಣೇನ ಚ ॥4॥
ದೀನರನ್ನೂ, ಕುರುಡರನ್ನೂ, ಸಂಕಷ್ಟಕ್ಕೆ ಒಳಗಾದವರನ್ನೂ, ಅನಾಥರನ್ನೂ ಮತ್ತು ಬ್ರಾಹ್ಮಣರನ್ನೂ ಪೂಜಿಸಿದನು. ಅತಿಥಿಗಳಿಗೆ ಅನ್ನಪಾನಗಳನ್ನು ನೀಡಿ ವೈಶ್ಯರನ್ನೂ ಮತ್ತು ಶೂದ್ರರನ್ನೂ ಪಾಲಿಸಿದನು. ಒಳ್ಳೆಯ ಮಾತುಗಳಿಂದ ಎಲ್ಲರನ್ನೂ ಸಂತೋಷಪಡಿಸಿದನು. ದಸ್ಯುಗಳನ್ನು ನಿಗ್ರಹಿಸಿದನು.
ಸ್ವಧರ್ಮೇಣ ಪ್ರಜಾಃ ಸರ್ವಾ ಯಥಾವದನುರಂಜಯನ್ ।
ಯಯಾತಿಃ ಪಾಲಯಾಮಾಸ ಸಾಕ್ಷಾದಿಂದ್ರ ಇವಾಪರಃ ॥5॥
ಯಯಾತಿಯು ಸ್ವಧರ್ಮಕ್ಕೆ ಅನುಗುಣವಾಗಿ ಎಲ್ಲಾ ಪ್ರಜೆಗಳನ್ನು ಸಂತೋಷಪಡಿಸಿ ಇನ್ನೊಬ್ಬ ಇಂದ್ರನಂತೆ ಅವರನ್ನು ಪಾಲಿಸಿದನು.
ಸ ರಾಜಾ ಸಿಂಹವಿಕ್ರಾಂತೋ ಯುವಾ ವಿಷಯಗೋಚರಃ ।
ಅವಿರೋಧೇನ ಧರ್ಮಸ್ಯ ಚಚಾರ ಸುಖಮುತ್ತಮಮ್ ।
ಸ ಸಂಪ್ರಾಪ್ಯ ಸುಖಾನ್ ಕಾಮಾನ್ ತೃಪ್ತಃ ಖಿನ್ನಶ್ಚ ಪಾರ್ಥಿವಃ ॥6॥
ಸಿಂಹಪರಾಕ್ರಮವುಳ್ಳ ಯುವಕನಾದ ಆ ರಾಜನು ವಿಷಯಗಳಲ್ಲಿ ಆಸಕ್ತನಾದರೂ, ಧರ್ಮಕ್ಕೆ ವಿರೋಧವಿಲ್ಲದಂತೆ ಶ್ರೇಷ್ಠವಾದ ವಿಷಯಸುಖಗಳನ್ನು ಅನುಭವಿಸಿದನು. ಅಭೀಷ್ಟವಾದ ಸುಖಗಳನ್ನು ಪಡೆದು ತೃಪ್ತನಾದರೂ ಆ ರಾಜನು ಖಿನ್ನನೂ ಆದನು.
ಕಾಲಂ ವರ್ಷಸಹಸ್ರಾಂತಂ ಸಸ್ಮಾರ ಮನುಜಾಧಿಪಃ ।
ಪರಿಸಂಖ್ಯಾಯ ಕಾಲಜ್ಞಃ ಕಲಾಃ ಕಾಷ್ಠಾಶ್ಚ ವೀರ್ಯವಾನ್ ।
ಪೂರ್ಣಂ ಮತ್ವಾ ತತಃ ಕಾಲಂ ಪೂರುಂ ಪುತ್ರಮುವಾಚ ಹ ॥7॥
ಸಹಸ್ರವರ್ಷಗಳನ್ನು ಕಲಾಕಾಷ್ಠಗಳನ್ನೂ ಎಣಿಸಿ, ಪೂರ್ಣವಾಗಿದೆಯೆಂದು ತಿಳಿದು ರಾಜನು ಪೂರುವನ್ನು ಕರೆದು ಮಾತನಾಡಿದನು.
ಯಥಾಕಾಲಂ ಯಥೋತ್ಸಾಹಂ ಯ7ಥಾಕಾಮಮರಿಂದಮ ।
ಸೇವಿತಾ ವಿಷಯಾಃ ಪುತ್ರ ಯೌವನೇನ ಮಯಾ ತವ ।
ತೇಜಸಾ ತವ ಸತ್ಪುತ್ರ ಪೂರ್ಣಂ ಯೌವನಮುತ್ತಮಮ್ ॥8॥
ಎಲೈ ಪುತ್ರನೇ, ಕಾಲಕ್ಕೆ, ಉತ್ಸಾಹಕ್ಕೆ ಮತ್ತು ನನ್ನ ಆಸೆಗೆ ಅನುಗುಣವಾಗಿ, ನಿನ್ನ ಯೌವನದಿಂದ ನಾನು ಬೇಕಾದ ಸುಖವನ್ನು ಅನುಭವಿಸಿದ್ದೇನೆ. ಶತ್ರುತಾಪನನಾದ ಸತ್ಪುತ್ರನೇ, ನಿನ್ನ ತೇಜಸ್ಸಿನಿಂದ, ನಿನ್ನ ಉತ್ತಮವಾದ ಮತ್ತು ಪೂರ್ಣವಾದ ಯೌವನವನ್ನು ನಾನು ಅನುಭವಿಸಿದೆ.
ಪೂರೋ ಪ್ರೀತೋಽಸ್ಮಿ ಭದ್ರಂ ತೇ ಗೃಹಾಣೇದಂ ಸ್ವಯೌವನಮ್ ।
ರಾಜ್ಯಂ ಚ ಮೇ ಗೃಹಾಣೇದಂ ಯಾವದಿಚ್ಛಸಿ ಯೌವನಮ್ ।
ತಾವದ್ ದೀರ್ಘಾಯುಷೋ ಭುಂಕ್ಷ್ವ ತ್ವಂ ಹಿ ಮೇ ಪ್ರಿಯಕೃತ್‌ಸುತಃ ॥
ಎಲೈ ಪೂರುವೇ, ನಿನಗೆ ಮಂಗಳವಾಗಲಿ. ನಾನು ನಿನ್ನ ಮೇಲೆ ಸಂತೋಷಗೊಂಡಿದ್ದೇನೆ. ನಿನ್ನ ಯೌವನವನ್ನು ಹಿಂದಕ್ಕೆ ಪಡೆ. ನಿನ್ನ

ರಾಜ್ಯವನ್ನೂ ಸ್ವೀಕರಿಸು. ಎಲ್ಲಿಯವರೆಗೆ ಬಯಸುತ್ತೀಯೋ, ಅಲ್ಲಿಯವರೆಗೆ ನಿನಗೆ ದೀರ್ಘಾಯುಷ್ಯದಿಂದ ಕೂಡಿದ ಯೌವನವಿರಲಿ. ಅದರಿಂದ ಸುಖವನ್ನು ಅನುಭವಿಸು. ನೀನು ನನಗೆ ಪ್ರಿಯವನ್ನುಂಟು ಮಾಡಿದ ಪುತ್ರ.
ವೈಶಂಪಾಯನಃ
ಪ್ರತಿಪೇದೇ ಜರಾಂ ರಾಜಾ ಯಯಾತಿರ್ನಹುಷಾತ್ಮಜಃ |
ಯೌವನಂ ಪ್ರತಿಪೇದೇ ಚ ಪೂರುಃ ಸ್ವಂ ಪುನರಾತ್ಮವಾನ್ ॥10॥
ನಹುಷನ ಪುತ್ರನಾದ ಯಯಾತಿಯು ತನ್ನ ಜರೆಯನ್ನು ಹಿಂದಕ್ಕೆ ಪಡೆದನು. ಧೈರ್ಯಶಾಲಿಯಾದ ಪೂರುವೂ ಕೂಡ ತನ್ನ ಯೌವನವನ್ನು ಹಿಂದೆ ಪಡೆದನು.
ಅಭಿಷೇಕ್ತುಕಾಮಂ ನೃಪತಿಂ ಪೂರುಂ ಪುತ್ರಂ ಕನೀಯಸಮ್ |
ಬ್ರಾಹ್ಮಣಪ್ರಮುಖಾಃ ಪೌರಾ ಇದಂ ವಚನಮಬ್ರುವನ್ ॥11॥
ತನ್ನ ಕಿರಿಯ ಮಗನಾದ ಪೂರುವಿಗೆ ಅಭಿಷೇಕವನ್ನು ಮಾಡಲು ಹೊರಟ ರಾಜನನ್ನು ಕುರಿತು ಬ್ರಾಹ್ಮಣರೇ ಮೊದಲಾದ ಪೌರರು ಹೀಗೆ ಮಾತನಾಡಿದರು.
ಕಥಂ ಶುಕ್ರಸ್ಯ ನಪ್ತಾರಂ ದೇವಯಾನ್ಯಾಃ ಸುತಂ ಪ್ರಭೋ |
ಜ್ಯೇಷ್ಠಂ ಯದುಮತಿಕ್ರಮ್ಯ ಪೂರೋಃ ರಾಜ್ಯಂ ಪ್ರದಾಸ್ಯಸಿ ॥12॥
ರಾಜನೇ, ಶುಕ್ರಾಚಾರ್ಯರ ಮೊಮ್ಮಗನೂ, ದೇವಯಾನಿಯ ಜ್ಯೇಷ್ಠಪುತ್ರನೂ ಆದ ಯದುವನ್ನು ಬಿಟ್ಟು, ಪೂರುವಿಗೆ ಹೇಗೆ ರಾಜ್ಯವನ್ನು ಕೊಡುತ್ತಿರುವೆ.
ಯದುರ್ಜ್ಯೇಷ್ಠಸ್ತವ ಸುತೋ ಜಾತಸ್ತಮನು ತುರ್ವಶುಃ |
ಶರ್ಮಿಷ್ಠಾಯಾಃ ಸುತೋ ದ್ರುಹ್ಯುರನುಃ ಪೂರುಶ್ಚ ಪಾರ್ಥಿವ ॥13॥
ನಿನ್ನ ಹಿರಿಯ ಮಗ ಯದು. ಅವನ ನಂತರ ಹುಟ್ಟಿದವನು ತುರ್ವಶು. ಎಲೈ ರಾಜನೇ ಶರ್ಮಿಷ್ಠೆಯ ಮಕ್ಕಳು ಕ್ರಮವಾಗಿ ದ್ರುಹ್ಯು, ಅನು ಮತ್ತು ಪೂರು.
ಕಥಂ ಜ್ಯೇಷ್ಠಾನತಿಕ್ರಮ್ಯ ಯವೀಯಾನ್ ರಾಜ್ಯಮರ್ಹತಿ |
ಏತತ್ ಸಂಬೋಧಯಾಮಸ್ತ್ವಾಂ ಧರ್ಮಂ ತ್ವಮನುಪಾಲಯ ॥14॥
ಹೇಗೆ ಎಲ್ಲಾ ಅಣ್ಣಂದಿರನ್ನೂ ಬಿಟ್ಟು ಕಿರಿಯನಾದವನು ರಾಜ್ಯಕ್ಕೆ ಅಧಿಕಾರಿಯಾಗುತ್ತಾನೆ? ನಾವು ನಿನಗೆ ಈ ವಿಷಯವನ್ನು ತಿಳಿಸುತ್ತಿದ್ದೇವೆ. ನೀನು ಧರ್ಮವನ್ನು ರಕ್ಷಿಸು.
ಯಯಾತಿಃ
ಬ್ರಾಹ್ಮಣಪ್ರಮುಖಾಃ ಪೌರಾಃ ಸರ್ವೇ ಶೃಣ್ವಂತು ಮೇ ವಚಃ |
ಜ್ಯೇಷ್ಠಂ ಪ್ರತಿ ಯಥಾ ರಾಜ್ಯಂ ನ ದೇಯಂ ಮೇ ಕಥಂಚನ ॥15॥
ಬ್ರಾಹ್ಮಣ ಪ್ರಮುಖರಾದ ಎಲ್ಲಾ ಪೌರರೂ ಜ್ಯೇಷ್ಠನಾದವನಿಗೆ ಏಕೆ ನಾನು ರಾಜ್ಯವನ್ನು ಕೊಡುತ್ತಿಲ್ಲ ಎಂಬ ವಿಷಯದಲ್ಲಿ ನನ್ನ ಮಾತನ್ನು ಕೇಳಿ.
ಮಮ ಜ್ಯೇಷ್ಠೇನ ಯದುನಾ ನಿಯೋಗೋ ನಾನುಪಾಲಿತಃ |
ಪ್ರತಿಕೂಲಃ ಪಿತುರ್ಯಶ್ಚ ನ ಸ ಪುತ್ರಃ ಸತಾಂ ಮತಃ ॥16॥
ನನ್ನ ಹಿರಿಯ ಮಗನಾದ ಯದುವು ನನ್ನ ಆದೇಶವನ್ನು ಪಾಲಿಸಲಿಲ್ಲ. ಯಾವ ಮಗನು ತಂದೆಗೆ ಪ್ರತಿಕೂಲನಾಗಿರುತ್ತಾನೆಯೋ ಅವನು ಮಗನೇ ಅಲ್ಲ ಎಂದು ಸಜ್ಜನರ ಅಭಿಪ್ರಾಯ.
ಮಾತಾಪಿತ್ರೋರ್ವಚನಕೃತ್ ಪಥ್ಯಸ್ಯ ವಿಹಿತಸ್ಯ ಚ |
ಸ ಪುತ್ರಃ ಪುತ್ರವದ್ ಯಶ್ಚ ವರ್ತತೇ ಪಿತೃಮಾತೃಷು ॥17॥
ತಂದೆತಾಯಿಗಳ ಮಾತನ್ನು ಪಾಲಿಸುವವನು ಮತ್ತು ವಿಹಿತವಾದ ಹಿತವಾದ ಕರ್ಮವನ್ನು ಆಚರಿಸುವವನು ನಿಜವಾದ ಮಗ, ಏಕೆಂದರೆ ಅವನು ತಂದೆತಾಯಿಗಳ ವಿಷಯದಲ್ಲಿ ಪುತ್ರನು ನಡೆಯಬೇಕಾದಂತೆ ನಡೆದುಕೊಳ್ಳುತ್ತಾನೆ.
(ತಂದೆ ತಾಯಂದಿರ ಮಾತನ್ನು ಕೇಳಬೇಕೆಂದು ತಿಳಿದು, ಜ್ವರದಲ್ಲಿರುವ ತಂದೆಯು ಹಾಲನ್ನು ಕೇಳಿದಾಗ ಕೊಡುವುದಿಲ್ಲ. ಹಾಗೆಯೇ ಮಾಂಸವನ್ನು ನೀಡು ಎಂದಾಗಲೂ ನೀಡಬಾರದು. ಒಟ್ಟಿನಲ್ಲಿ ಶಾಸ್ತ್ರವಿಹಿತವಾದ ಅವರಿಗೆ ಹಿತವಾದದ್ದನ್ನು ಮಾಡುವವನು ಎಂದರ್ಥ!)
ಪುತೀತಿ ನರಕಸ್ಯಾಖ್ಯಾ ದುಃಖಂ ಹಿ ನರಕಂ ವಿದುಃ |
ಪುತಿತ್ರಾಣಾತ್ ತತಃ ಪುತ್ರಮಿಹೇಚ್ಛಂತಿ ಪರತ್ರ ಚ ॥18॥
ಪುತಿ ಎಂದು ನರಕಕ್ಕೆ ಹೆಸರು. ದುಃಖವನ್ನು ನರಕವೆಂದು ಕರೆಯುತ್ತಾರೆ. ಯಾರು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ದುಃಖದಿಂದ ಪಾರುಮಾಡುತ್ತಾರೋ ಅಂತಹ ಮಗನನ್ನು ಜನರು ಅಪೇಕ್ಷಿಸುತ್ತಾರೆ.
ಆತ್ಮನಃ ಸದೃಶಃ ಪುತ್ರಃ ಪಿತೃದೇವರ್ಷಿಪೂಜನೇ |
ಯೋ ಬಹೂನಾಂ ಗುಣಕರಃ ಸ ಪುತ್ರೋ ಜ್ಯೇಷ್ಠ ಉಚ್ಯತೇ ॥19॥
ಪಿತೃದೇವತೆಗಳ ಮತ್ತು ಋಷಿಗಳ ಪೂಜೆಯ ವಿಷಯದಲ್ಲಿ ಮಗನು ತಂದೆಗೆ ಸದೃಶನಾದವನು. ಅನೇಕ ಮಕ್ಕಳಲ್ಲಿ ಯಾವನು ಬಹಳ ಗುಣಗಳಿಂದ ಕೂಡಿರುತ್ತಾನೆಯೋ ಅವನನ್ನೇ ಜ್ಯೇಷ್ಠ ಎಂದು ಕರೆಯುತ್ತಾರೆ.
ಮೂಕೋಽಂಧೋ ಬಧಿರಃ ಶ್ವಿತ್ರೀ ಸ್ವಧರ್ಮಂ ನಾನುತಿಷ್ಠತಿ |
ಚೋರಃ ಕಿಲ್ಬಿಷಿಕಃ ಪುತ್ರೋ ಜ್ಯೇಷ್ಠೋ ನ ಜ್ಯೇಷ್ಠ ಉಚ್ಯತೇ ॥20॥
ಮೂಕನಾದ, ಅಂಧನಾದ, ಬಧಿರನಾದ, ಕುಷ್ಠಿಯಾದ, ಸ್ವಧರ್ಮವನ್ನು ಅನುಸರಿಸದಿರುವಂತಹ, ಚೋರನಾದ, ಪಾಪಕರ್ಮಗಳನ್ನು

ಎಸಗುವ ಮಗನು ಜ್ಯೇಷ್ಠನಾದರೂ ಜ್ಯೇಷ್ಠನಲ್ಲ.
ಜ್ಯೇಷ್ಠಾಂಶಹಾರೀ ಗುಣಕೃದಿಹ ಲೋಕೇ ಪರತ್ರ ಚ |
ಶ್ರೇಯಾನ್ ಪುತ್ರೋ ಗುಣೋಪೇತಃ ಸ ಪುತ್ರೋ ನೇತರೋ ವೃಥಾ ॥21॥
ವದಂತಿ ಧರ್ಮಂ ಧರ್ಮಜ್ಞಾಃ ಪಿತೃಣಾಂ ಪುತ್ರಕಾರಣಾನ್ |
ಯದುನಾಽಹಮವಜ್ಞಾತಸ್ತಥಾ ತುರ್ವಶುನಾ ಪುನಃ ॥22॥
ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ, ಗುಣವಂತನಾದವನೇ ಜ್ಯೇಷ್ಠಪುತ್ರನ ಅಂಶಕ್ಕೆ ಭಾಗಿಯಾಗುತ್ತಾನೆ. ಗುಣೋಪೇತನಾದ ಪುತ್ರನೇ ಶ್ರೇಷ್ಠನಾದವನು. ಉಳಿದ ಮಕ್ಕಳು ವ್ಯರ್ಥ. ಪಿತೃಗಳು ಪುತ್ರರನ್ನು ಪಡೆಯುವ ವಿಷಯದಲ್ಲಿ ಧರ್ಮಜ್ಞರಾದವರು ಹೀಗೆ ಧರ್ಮವನ್ನು ಹೇಳುತ್ತಾರೆ.
ದ್ರುಹ್ಯುನಾ ಚಾನುನಾ ಚೈವ ಮಯ್ಯವಜ್ಞಾ ಕೃತಾ ಭೃಶಮ್ |
ಪೂರುಣಾ ಮೇ ಕೃತಂ ವಾಕ್ಯಂ ಮಾನಿತಶ್ಚ ವಿಶೇಷತಃ ॥23॥
ಯದುವು ನನಗೆ ಅವಮಾನವನ್ನು ಮಾಡಿದನು. ಹಾಗೆಯೇ, ತುರ್ವಶು, ದ್ರುಹ್ಯು, ಅನು ಇವರೂ ಕೂಡಾ ಚೆನ್ನಾಗಿ ಅವಮಾನವನ್ನು ಮಾಡಿದರು. ಪೂರುವು ನನ್ನ ಮಾತಿಗೆ ಬೆಲೆಯನ್ನು ಕೊಟ್ಟು ನನಗೆ ವಿಶೇಷವಾಗಿ ಸನ್ಮಾನವನ್ನು ಮಾಡಿದ್ದಾನೆ.
ಕನೀಯಾನ್ ಮಮ ದಾಯಾದೋ ಧೃತಾ ಯೇನ ಜರಾ ಮಮ |
ಪುತ್ರೋ ಯಸ್ತ್ವನುವರ್ತೇತ ಸ ರಾಜಾ ಪೃಥಿವೀಪತಿಃ |
ಯೋ ವಾನುವರ್ತೀ ಪುತ್ರಾಣಾಂ ಸ ಪುತ್ರೋ ದಾಯಭಾಗ್ ಭವೇತ್ ॥
ನನ್ನ ಮುಪ್ಪನ್ನು ಧರಿಸಿದ ನನ್ನ ಕಿರಿಯ ಮಗನೇ ನನ್ನ ಉತ್ತರಾಧಿಕಾರಿ. ಯಾರು ತಂದೆಯನ್ನು ಅನುಸರಿಸುತ್ತಾನೋ ಅಂತಹವನೇ ಪೃಥಿವೀಪತಿಯಾದ ರಾಜನಾಗುತ್ತಾನೆ. ಅನೇಕ ಪುತ್ರರ ಮಧ್ಯೆ ಅವನೇ ತಂದೆಯ ರಾಜ್ಯಕ್ಕೆ ಉತ್ತರಾಧಿಕಾರಿಯಾಗುತ್ತಾನೆ.

ವೇದೋಕ್ತಂ ಸಂಭವಂ ಮಹ್ಯಮನೇನ ಹೃದಯೋದ್ಭವಮ್ |
ತಸ್ಯ ಜಾತಮಿದಂ ಕೃತ್ಸ್ನಮಾತ್ಮಾ ಪುತ್ರ ಇತಿ ಶ್ರುತಿಃ |
ಮಮ ಕಾಮಃ ಸ ಚ ಕೃತಃ ಪೂರುಣಾ ಪಿತೃರೂಪಿಣಾ ॥25॥
ಈ ಪೂರುವಿನಿಂದ ಉಪಕೃತನಾಗಿ ನಾನು ವೇದೋಕ್ತವಾದ ಧರ್ಮಗಳನ್ನು ಆಚರಿಸಿದೆ ಮತ್ತು ಎಲ್ಲಾ ವಿಷಯಸುಖವನ್ನೂ ಅನುಭವಿಸಿದೆ. ಆತ್ಮನೇ ಮಗ ಎಂದು ವೇದವು ಹೇಳುತ್ತದೆ. ಆದ್ದರಿಂದ ಪಿತೃರೂಪನಾದ ಪೂರುವಿನಿಂದ ನನ್ನ ಎಲ್ಲಾ ಕಾಮಗಳು ಪೂರ್ಣವಾಗಿವೆ.
ಶುಕ್ರೇಣ ಚ ವರೋ ದತ್ತಃ ಕಾವ್ಯೇನೋಶನಸಾ ಸ್ವಯಮ್ |
ಭವತೋಽನುನಯಾಮ್ಯೇವಂ ಪೂರೂ ರಾಜ್ಯೇಽಭಿಷಿಚ್ಯತಾಮ್ ॥26॥
ಶುಕ್ರಾಚಾರ್ಯರು ಯಾರು ನಿನ್ನ ಜರೆಯನ್ನು ಸ್ವೀಕರಿಸುತ್ತಾರೋ ಅವನೇ ನಿನಗೆ ಉತ್ತರಾಧಿಕಾರಿ ಎಂದು ವರವನ್ನು ಕೊಟ್ಟಿದ್ದಾರೆ. ಆದ್ದರಿಂದ ನಿಮ್ಮೆಲ್ಲರ ಸಮ್ಮತಿಯನ್ನು ಬೇಡುತ್ತಿದ್ದೇನೆ. ಪುರುವಿಗೆ ರಾಜ್ಯಾಭಿಷೇಕವಾಗಲಿ.
ಪೌರಾಃ
ಯಃ ಪುತ್ರೋ ಗುಣಸಂಪನ್ನೋ ಮಾತಾಪಿತ್ರೋರ್ಹಿತಃ ಸದಾ |
ಸರ್ವಮರ್ಹತಿ ಕಲ್ಯಾಣಂ ಕನೀಯಾನಪಿ ಸ ಪ್ರಭೋ ॥27 ॥
ವೇದೇ ಧರ್ಮೇ ಚಾರ್ಥಶಾಸ್ತ್ರೇ ಮುನಿಭಿಃ ಕಥಿತಂ ಪುರಾ |
ಅರ್ಹಃ ಪೂರುರಿದಂ ರಾಜ್ಯಂ ಯಃ ಸುತಃ ಪ್ರಿಯಕೃತ್ ತವ |
ವರದಾನಾಚ್ಚ ಶುಕ್ರಸ್ಯ ನ ಶಕ್ಯಂ ವಕ್ತುಮುತ್ತರಮ್ ॥28॥
ಯಾವ ಮಗನು ಗುಣಸಂಪನ್ನನಾಗಿ, ಯಾವಾಗಲೂ ತಂದೆತಾಯಿಗಳಿಗೆ ಹಿತವನ್ನುಂಟು ಮಾಡುತ್ತಾನೆಯೋ ಅವನು ಚಿಕ್ಕವನಾದರೂ ಎಲ್ಲಾ ಮಂಗಳಕ್ಕೂ ಮತ್ತು ಭಾಗ್ಯಕ್ಕೂ ಅಧಿಕಾರಿಯಾಗುತ್ತಾನೆ. ಹೀಗೆ ಹಿಂದೆ ಋಷಿಗಳು ವೇದದಲ್ಲಿಯೂ, ಧರ್ಮಶಾಸ್ತ್ರದಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ಹೇಳಿದ್ದಾರೆ. ನಿನಗೆ ಪ್ರಿಯವನ್ನುಂಟುಮಾಡಿದ ಪೂರುವು ಈ ರಾಜ್ಯಕ್ಕೆ ನಿಶ್ಚಯವಾಗಿ ಅಧಿಕಾರಿಯಾಗಿದ್ದಾನೆ. ಶುಕ್ರಾಚಾರ್ಯರ ವರವೂ ಇರುವುದರಿಂದ ನಿನ್ನ ಮಾತಿಗೆ ಬೇರೆ ಉತ್ತರವನ್ನು ಹೇಳಲು ಸಾಧ್ಯವಿಲ್ಲ.
ವೈಶಂಪಾಯನಃ
ಪೌರಜಾನಪದೈಸ್ತುಷ್ಟೈರಿತ್ಯುಕ್ತೋ ನಾಹುಷಸ್ತದಾ |
ಅಭ್ಯಷಿಂಚತ್ ತದಾ ಪೂರುಂ ಯಯಾತಿರ್ದ್ವಿಜಪೂರ್ವಕಮ್ ॥
ಸಂತೋಷಗೊಂಡ ಪೌರಜಾನಪದರಿಂದ ಹೀಗೆ ಹೇಳಲ್ಪಟ್ಟ ಯಯಾತಿಯು ಆಗ ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಪೂರುವಿಗೆ ರಾಜ್ಯಾಭಿಷೇಕವನ್ನು ಮಾಡಿದನು.
ಯದುಂ ಚ ತುರ್ವಶುಂ ಚೋಭೌ ದ್ರುಹ್ಯುಂ ಚೈವ ಸಹಾನುಜಮ್|
ಅಂತೇಷು ಸ ವಿನಿಕ್ಷಿಪ್ಯ ನಾಹುಷಃ ಸ್ವಾತ್ಮಜಾನ್ ಸುತಾನ್ ॥32॥
ಯಯಾತಿಯು ತನ್ನ ಇತರ ಮಕ್ಕಳಾದ ಯದು, ತುರ್ವಶು, ದ್ರುಹ್ಯು ಮತ್ತು ಅನು ಇವರನ್ನು ಅಂತಪಾಲರನ್ನಾಗಿ ನೇಮಿಸಿದನು.
ದತ್ತ್ವಾ ಚ ಪೂರವೇ ರಾಜ್ಯಂ ವನವಾಸಾಯ ದೀಕ್ಷಿತಃ |
ಪುರಾತ್ ಸ ನಿರ್ಯಯೌ ತಸ್ಮಾದ್ ಬ್ರಾಹ್ಮಣೈಸ್ತಾಪಸೈಃ ಸಹ ॥33॥
ಯಯಾತಿಯು ಪೂರುವಿಗೆ ರಾಜ್ಯವನ್ನು ಕೊಟ್ಟು, ವನವಾಸದ ದೀಕ್ಷೆಯನ್ನು ಹೊಂದಿ, ತಾಪಸರಾದ ಬ್ರಾಹ್ಮಣರಿಂದ ಕೂಡಿಕೊಂಡು ಆ ಪಟ್ಟಣದಿಂದ ಹೊರಗೆ ಹೊರಟನು.

ಯದೋರ್ಜಾತಾ ಯಾದವಾಶ್ಚ ತುರ್ವಶೋರ್ಯವನಾಃ ಸುತಾಃ |
ದ್ರುಹ್ಯೋರಪಿ ಸುತಾ ಭೋಜಾ ಅನೋಸ್ತು ಮ್ಲೇಚ್ಛಜಾತಯಃ ॥34॥
ಯದುವಿನ ವಂಶದಲ್ಲಿ ಯಾದವರೂ, ತುರ್ವಶುವಿನ ವಂಶದಲ್ಲಿ ಯವನರೂ, ದ್ರುಹ್ಯುವಿನ ವಂಶದಲ್ಲಿ ಭೋಜರೂ, ಅನುವಿನ ವಂಶದಲ್ಲಿ ಮ್ಲೇಚ್ಛರೂ ಉಂಟಾದರು.
ಪುರೋಸ್ತು ಪೌರವೋ ವಂಶೋ ಯತ್ರ ಜಾತೋಽಸಿ ಪಾರ್ಥಿವ |
ಇದಂ ವರ್ಷಸಹಸ್ರಾಯ ರಾಜ್ಯಂ ಕಾರಯಿತಾ ಪ್ರಭೋ ॥35॥
ಪೂರುವಿನ ವಂಶಕ್ಕೆ ಪೌರವ ವಂಶವೆಂದು ಹೆಸರು. ಎಲೈ ರಾಜನೇ, ನೀನು ಆ ವಂಶದಲ್ಲಿ ಜನಿಸಿದ್ದೀಯೆ. ಎಲೈ ರಾಜನೇ, ನೀನು ಈ ರಾಜ್ಯವನ್ನು ಒಂದು ಸಹಸ್ರ ವರ್ಷಗಳ ಕಾಲ ಆಳುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಎಪ್ಪತ್ತೈದನೆಯ ಅಧ್ಯಾಯ
(ತಪಸ್ಸನ್ನು ಆಚರಿಸಿ, ಯಯಾತಿಯ ಸ್ವರ್ಗಗಮನ, ಇಂದ್ರನಿಂದ ಪತನ ಮತ್ತು ಪುನಃ ಸ್ವರ್ಗ ಪ್ರಾಪ್ತಿ.)
ವೈಶಂಪಾಯನಃ
ಏವಂ ಸ ನಾಹುಷೋ ರಾಜಾ ಯಯಾತಿಃ ಪೂರುಮೀಪ್ಸಿತಮ್ |
ರಾಜ್ಯೇಽಭಿಷಿಚ್ಯ ಮುದಿತೋ ವಾನಪ್ರಸ್ಥೋಽಭವನ್ಮುನಿಃ ॥1॥
ಹೀಗೆ ನಹುಷನ ಪುತ್ರನಾದ ಆ ಯಯಾತಿರಾಜನು ತನಗೆ ಅಭಿಪ್ರೇತನಾದ ಪೂರುವಿಗೆ ರಾಜ್ಯಾಭಿಷೇಕ ಮಾಡಿ ಸಂತೋಷದಿಂದ ಕಾಡಿಗೆ ಹೋಗಿ ವಾನಪ್ರಸ್ಥಮುನಿಯಾದನು.
ಉಷಿತ್ವಾ ಚ ವನೇ ವಾಸಂ ಬ್ರಾಹ್ಮಣೈಸ್ತಾಪಸೈಃ ಸಹ |
ಫಲಮೂಲಾಶನೋ ಭೂತ್ವಾ ತತಃ ಸ್ವರ್ಗಮಿತೋ ಗತಃ ॥2॥
ತಪಸ್ವಿಗಳಾದ ಬ್ರಾಹ್ಮಣರ ಜೊತೆಯಲ್ಲಿ ಫಲಮೂಲಾಶನನಾಗಿ ವನವಾಸವನ್ನು ಮಾಡಿ ಅಲ್ಲಿಂದ ಸ್ವರ್ಗಕ್ಕೆ ಹೋದನು.
ಸ ಗತಃ ಸ್ವರ್ಗವಾಸಾರ್ಥಂ ನಿವಸನ್ ಸುರವೇಶ್ಮನಿ |
ಕಾಲೇನ ನಾತಿಮಹತಾ ಪುನಃ ಶಕ್ರೇಣ ಪಾತಿತಃ |
ಸಾಧುಭಿಃ ಸಂಗತಿಂ ಲಬ್ಧ್ವಾ ಪುನಃ ಸ್ವರ್ಗಮಿತಿ ಶ್ರುತಿಃ ॥3॥
ಸ್ವರ್ಗವಾಸಕ್ಕಾಗಿ ಹೋದವನು ಇಂದ್ರನ ಮನೆಯಲ್ಲಿ ವಾಸಮಾಡುತ್ತಿದ್ದು, ಅಲ್ಪ ಕಾಲದಲ್ಲಿಯೇ ಪುನಃ ಇಂದ್ರನಿಂದ ಬೀಳಿಸಲ್ಪಟ್ಟನು. ಸಜ್ಜನರ ಸಂಗತಿಯನ್ನು ಪಡೆದು ಪುನಃ ಸ್ವರ್ಗವನ್ನು ಪಡೆದನೆಂದು ಕೇಳಿದ್ದೇವೆ.
ಜನಮೇಜಯಃ
ಸ್ವರ್ಗತಃ ಸ ಪುನರ್ಬ್ರಹ್ಮನ್ ನಿವಸನ್ ದೇವವೇಶ್ಮನಿ |
ಕಾಲೇನ ನಾತಿಮಹತಾ ಶಕ್ರೇಣ ಚ್ಯಾವಿತಃ ಕಥಮ್ ॥4॥
ಎಲೈ ಬ್ರಾಹ್ಮಣನೇ, ಸ್ವರ್ಗಕ್ಕೆ ಹೋಗಿ ದೇವೇಂದ್ರನ ಮನೆಯಲ್ಲಿ ವಾಸಮಾಡುವವನು ಅಲ್ಪ ಕಾಲದಲ್ಲಿಯೇ ಹೇಗೆ ಇಂದ್ರನಿಂದ ಬೀಳಿಸಲ್ಪಟ್ಟನು?
ನಿವಸನ್ ಪ್ರಚ್ಯುತಃ ಸ್ವರ್ಗಾದಪ್ರಾಪ್ತೋ ಮೇದಿನೀತಳಮ್ |
ಸ್ಥಿತ ಆಸೀದಂತರಿಕ್ಷೇ ಸ ತದೇತಿ ಶ್ರುತಂ ಮಯಾ |
ತತ ಏವ ಪುನಶ್ಚಾಪಿ ಗತಃ ಸ್ವರ್ಗಮಿತಿ ಶ್ರುತಮ್ ॥5॥
ಸ್ವರ್ಗವಾಸದಿಂದ ಪ್ರಚ್ಯುತನಾಗಿ ಬಿದ್ದ ಅವನು ಭೂಮಿಯನ್ನು ಸೇರದೆ ಅಂತರಿಕ್ಷಲೋಕದಲ್ಲೇ ನಿಂತನು ಎಂದು ಮುನಿಗಳಿಂದ ಕೇಳಿದ್ದೇನೆ ಮತ್ತು ಅಲ್ಲಿಂದಲೇ ಪುನಃ ಸ್ವರ್ಗಕ್ಕೆ ಹೋದನು ಎಂದೂ ಕೇಳಿದ್ದೇನೆ.
ತದಾ ಸಾರ್ಧಂ ವಸುಮತಾ ಶ್ರೀಮತಾ ಚಾಷ್ಟಕೇನ ಚ |
ಪ್ರತರ್ದನೇನ ಶಿಬಿನಾ ಸಮೇತ್ಯ ಕಿಲ ಸಂಸದಿ |
ಕಾರಣೇನ ದಿವಂ ಕೇನ ಸಂಪ್ರಾಪ್ತೋ ದ್ವಿಜಸತ್ತಮ ॥6॥
ಆಗ ವಸುಮಾನ್, ಅಷ್ಟಕ, ಪ್ರತರ್ದನ ಮತ್ತು ಶಿಬಿ ಇವರುಗಳ ಜೊತೆಯಲ್ಲಿ ಯಾವ ಕಾರಣದಿಂದ ಸ್ವರ್ಗಕ್ಕೆ ಹೋದನು ಎಂದು ತಿಳಿಸಿ.
ಸರ್ವಮೇತದಶೇಷೇಣ ಶ್ರೋತುಮಿಚ್ಛಾಮಿ ತತ್ತ್ವತಃ |
ಕಥ್ಯಮಾನಂ ತ್ವಯಾ ವಿಪ್ರ ದೇವರ್ಷಿಗಣಸನ್ನಿಧೌ ॥7॥
ಎಲೈ ಬ್ರಾಹ್ಮಣರೇ, ಈ ಎಲ್ಲಾ ವಿಷಯಗಳನ್ನೂ ಯಥಾರ್ಥವಾಗಿ ಈ ದೇವ ಸಮಾನರಾದ ಋಷಿಗಳ ಸಮೂಹದ ಸನ್ನಿಧಿಯಲ್ಲಿ ನಿಮ್ಮಿಂದ ಹೇಳಲ್ಪಡುವುದನ್ನು ನಾನು ಕೇಳಬೇಕೆಂದು ಬಯಸುತ್ತೇನೆ.
ದೇವರಾಜಸಮೋ ಹ್ಯಾಸೀದ್ ಯಯಾತಿಃ ಪೃಥಿವೀಪತಿಃ |
ವರ್ಧನಃ ಕುರುವಂಶಸ್ಯ ವಿಭಾವಸುಸಮದ್ಯುತಿಃ ॥8॥
ಪೃಥಿವೀಪತಿಯಾದ ಯಯಾತಿಯು ದೇವರಾಜ ಸಮನಾಗಿದ್ದು, ಪುರುವಂಶದ ಪ್ರವರ್ಧಕನೂ ಮತ್ತು ಅಗ್ನಿಗೆ ಸಮಾನವಾದ

ಕಾಂತಿಯನ್ನು ಹೊಂದಿದವನೂ ಆಗಿದ್ದನು.
ತಸ್ಯ ವಿಸ್ತೀರ್ಣಯಶಸಃ ಸತ್ಯಕೀರ್ತೇರ್ಮಹಾತ್ಮನ ಃ।
ಚರಿತಂ ಶ್ರೋತುಮಿಚ್ಛಾಮಿ ದಿವಿ ಚೇಹ ಚ ಸರ್ವಶಃ ॥9॥
ಆ ವಿಸ್ತಾರವಾದ ಕೀರ್ತಿಯುಳ್ಳ, ಸತ್ಯವಾದ ಕೀರ್ತಿಯುಳ್ಳ ಮಹಾತ್ಮನ, ಈ ಲೋಕದಲ್ಲಿ ಮತ್ತು ದೇವಲೋಕದಲ್ಲಿ ನಡೆದ ಚರಿತೆ ಎಲ್ಲವನ್ನೂ ನಾನು ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಹಂತ ತೇ ಕಥಯಿಷ್ಯಾಮಿ ಯಯಾತೇರುತ್ತರಾಂ ಕಥಾಮ್।
ದಿವಿ ಚೇಹ ಚ ಪೂರ್ಣಾರ್ಥಾಂ ಸರ್ವಪಾಪಪ್ರಣಾಶಿನೀಮ್ ॥10॥
ಸಂತೋಷ, ನಿನಗೆ ಯಯಾತಿಯು ಉತ್ತರಚರಿತೆಯನ್ನು ಹೇಳುವೆನು. ಇಲ್ಲಿಯೂ ಮತ್ತು ಸ್ವರ್ಗಲೋಕದಲ್ಲಿಯೂ ಅರ್ಥಪೂರ್ಣವಾದ ಆ ಕಥೆಯು ಎಲ್ಲಾ ಪಾಪಗಳನ್ನು ಪರಿಹಾರ ಮಾಡುತ್ತದೆ.
ಯಯಾತಿರ್ನಾಹುಷೋ ರಾಜಾ ಪೂರುಂ ಪುತ್ರಂ ಕನೀಯಸಮ್।
ರಾಜ್ಯೇಽಭಿಷಿಚ್ಯ ಮುದಿತಃ ಪ್ರವವ್ರಾಜ ವನಂ ತದಾ ॥11॥
ಯಯಾತಿರಾಜನು ಕಿರಿಯ ಮಗನಾದ ಪೂರುವಿಗೆ ಪಟ್ಟಾಭಿಷೇಕವನ್ನು ಮಾಡಿ ಸಂತೋಷದಿಂದ ಕಾಡಿಗೆ ಹೋದನು.
ಅಂತೇಷು ಸ ವಿನಿಕ್ಷಿಪ್ಯ ಪುತ್ರಾನ್ ಯೈ ಪೂರುಪೂರ್ವಜಾನ್।
ಫಲಮೂಲಾಶನೋ ಭೂತ್ವಾ ವನೇ ಸನ್ನ್ಯವಸಚ್ಚಿರಮ್ ॥12॥
ಪೂರುವಿನ ಅಣ್ಣಂದಿರಾದ ಉಳಿದ ನಾಲ್ವರು ಮಕ್ಕಳನ್ನು ಅಂತಪಾಲರನ್ನಾಗಿ ಮಾಡಿ ಕಾಡಿನಲ್ಲಿ ಫಲಮೂಲ ಆಹಾರನಾಗಿ ಬಹುಕಾಲ ವಾಸಿಸಿದನು.
ಸಂಯತಾತ್ಮಾ ಜಿತಕ್ರೋಧಃ ತರ್ಪಯನ್ ಪಿತೃದೇವತಾಃ।
ಅಗ್ನೀಂಶ್ಚ ವಿಧಿವಜ್ಜುಹ್ವನ್ ವಾನಪ್ರಸ್ಥವಿಧಾನತಃ ॥13॥
ಮನೋನಿಗ್ರಹವುಳ್ಳವನಾಗಿ, ಕ್ರೋಧವನ್ನು ಜಯಿಸಿ, ಪಿತೃದೇವತೆಗಳನ್ನು ಆರಾಧಿಸಿ, ವಾನಪ್ರಸ್ಥ ವಿಧಾನದಿಂದ ಅಗ್ನಿಯಲ್ಲಿ ಹೋಮಗಳನ್ನು ಮಾಡಿದನು.
ಅತಿಥೀನ್ ಪೂಜಯಾಮಾಸ ವನ್ಯೇನ ಹವಿಷಾ ದ್ವಿಜಾನ್।
ಸಿಲೋಂಛವೃತ್ತಿಮಾಸ್ಥಾಯ ಶೇಷಾನ್ನಕೃತಭೋಜನಃ ॥14॥
ಕಾಡಿನಲ್ಲಿ ದೊರೆಯುವ ಹವಿಸ್ಸಿನಿಂದ ಅತಿಥಿಗಳನ್ನೂ ಬ್ರಾಹ್ಮಣರನ್ನೂ ಪೂಜಿಸಿದನು. ಸಿಲೋಂಛ ವೃತ್ತಿಯನ್ನು ಆಶ್ರಯಿಸಿ ಅತಿಥಿಗಳ ಭೋಜನ ಶೇಷವನ್ನು ಸೇವಿಸುತ್ತಿದ್ದನು.
ಪೂರ್ಣಂ ವರ್ಷಸಹಸ್ರಂ ಚ ಏವಂವೃತ್ತಿರಭೂನ್ನೃಪಃ।
ಅಬ್ಭಕ್ಷಃ ಶರದಸಿತ್ರಂಶದ್ ಆಸೀನ್ನಿಯತವಾಙ್ಮನಃ ॥15॥
ಈ ರೀತಿ ಒಂದು ಸಹಸ್ರ ವರ್ಷಗಳ ಕಾಲ ತಪಸ್ಸನ್ನು ಮಾಡಿ, ಅನಂತರ ಮೂವತ್ತು ವರ್ಷಗಳ ಕಾಲ ವಾಙ್ಮನೋಜಯವುಳ್ಳವನಾಗಿ ನೀರನ್ನು ಮಾತ್ರ ಸೇವಿಸಿದನು.
ತತಶ್ಚ ವಾಯುಭಕ್ಷೋಽಭೂತ್ ಸಂವತ್ಸರಮತಂದ್ರಿತಃ।
ಪಂಚಾಗ್ನಿಮಧ್ಯೇ ಚ ತಪಸ್ತೇಪೇ ಸಂವತ್ಸರಂ ಮುನಿಃ ॥16॥
ಅನಂತರ ಒಂದು ವರ್ಷದ ಕಾಲ ಜಾಗರೂಕತೆಯಿಂದ ಕೇವಲ ವಾಯುವನ್ನು ಸೇವಿಸಿದನು. ಅನಂತರ ಒಂದು ವರ್ಷ ಮುನಿಯಾದ ಅವನು ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡಿದನು.
ಏಕಪಾದಸ್ಥಿತಶ್ಚಾಸೀತ್ ಷಣ್ಮಾಸಾಂಶ್ಚ ತತಃ ಪರಮ್।
ಏವಮೇವ ತದಾಬ್ದಾನಾಂ ಪರ್ಯಾಯೇಣ ತಪನ್ ವನೇ।
ಮಹಾಯೋಗೀ ಗತಃ ಸ್ವರ್ಗಂ ಜಗಾಮಾವೃತ್ಯ ರೋದಸೀ ॥17॥
ಅನಂತರ ಆರು ತಿಂಗಳ ಕಾಲ ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನು ಮಾಡಿದನು. ಹೀಗೆ ಪರ್ಯಾಯವಾಗಿ ಬೇರೆ ಬೇರೆ ರೀತಿಯ ತಪಸ್ಸನ್ನು ಆಚರಿಸುತ್ತಾ ಮಹಾಯೋಗಿಯಾದ ಅವನು ದೇಹವನ್ನು ತ್ಯಜಿಸಿ ಭೂಮಿ ಮತ್ತು ಅಂತರಿಕ್ಷಗಳ ಪ್ರದಕ್ಷಿಣೆ ಮಾಡಿ ಸ್ವರ್ಗಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****

ಎಪ್ಪತ್ತಾರನೆಯ ಅಧ್ಯಾಯ
(ಸ್ವರ್ಗದಲ್ಲಿ ಇಂದ್ರ ಯಯಾತಿಯ ಸಂವಾದ, ಪೂರುವಿಗೆ ರಾಜ್ಯವನ್ನು ಕೊಡುವಾಗ ಯಯಾತಿಯ ಉಪದೇಶದ ಕಥನ.)
ವೈಶಂಪಾಯನಃ

ಸ್ವರ್ಗತಃ ಸ ತು ರಾಜೇಂದ್ರೋ ನಿವಸನ್ ದೇವಸದ್ಮನಿ |
ಪೂಜಿತಃ ತ್ರಿದಶೈಃ ಸಾಧ್ಯೈರ್ಮರುದ್ಭಿರ್ವಸುಭಿಸ್ತಥಾ ॥1॥
ರಾಜೇಂದ್ರನಾದ ಯಯಾತಿಯು ಸ್ವರ್ಗವನ್ನು ಸೇರಿ ಇಂದ್ರನ ಮನೆಯಲ್ಲಿ ವಾಸಿಸುತ್ತಾ, ದೇವತೆಗಳಿಂದಲೂ, ಸಾಧ್ಯರಿಂದಲೂ, ಮರುತ್ತುಗಳಿಂದಲೂ ಮತ್ತು ವಸುಗಳಿಂದಲೂ, ಪೂಜಿಸಲ್ಪಟ್ಟನು.
ದೇವಲೋಕಾದ್ ಬ್ರಹ್ಮಲೋಕಂ ಸಂಚರನ್ ಪುಣ್ಯಕೃದ್ ವಶೀ |
ಅವಸತ್ ಪೃಥಿವೀಪಾಲೋ ದೀರ್ಘಕಾಲಮಿತಿ ಶ್ರುತಿಃ ॥2॥
ಪುಣ್ಯವನ್ನು ಮಾಡಿದವನೂ ಮತ್ತು ಜಿತವಾದ ಮನಸ್ಸುಳ್ಳವನೂ ಆದ ಆ ರಾಜನು ದೇವಲೋಕದಿಂದ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಧೀರ್ಘಕಾಲ ವಾಸಿಸಿದನು ಎಂದು ಕೇಳಿದ್ದೇವೆ.
ಸ ಕದಾಚಿನ್ನೃಪಶ್ರೇಷ್ಠೋ ಯಯಾತಿಃ ಶಕ್ರಮಾಗಮತ್ |
ಕಥಾಂತೇ ತತ್ರ ಶಕ್ರೇಣ ಸ ಪೃಷ್ಟಃ ಪೃಥಿವೀಪತಿಃ ॥3॥
ಆ ರಾಜಶ್ರೇಷ್ಠನಾದ ಯಯಾತಿಯು ಒಮ್ಮೆ ಇಂದ್ರನ ಸಮೀಪಕ್ಕೆ ಬಂದನು. ಬೇರೆ ವಿಷಯಗಳನ್ನು ಮಾತನಾಡಿದ ನಂತರ ಇಂದ್ರನು ರಾಜನನ್ನು ಕುರಿತು ಕೇಳಿದನು.
ಇಂದ್ರಃ
ಯದಾ ಸ ಪೂರುಸ್ತವ ರೂಪೇಣ ರಾಜನ್
ಜರಾಂ ಗೃಹೀತ್ವಾ ವಿಚಚಾರ ಭೂವೌ |
ತದಾ ರಾಜ್ಯಂ ಸಂಪ್ರದಾಯೈವ ತಸ್ಮೈ
ತ್ವಯಾ ಕಿಮುಕ್ತಃ ಕಥಯೇಹ ಸತ್ಯಮ್ ॥4॥
ಎಲೈ ರಾಜನೇ, ಪೂರುವು ನಿನ್ನ ಜರೆಯನ್ನು ಸ್ವೀಕರಿಸಿ, ನಿನ್ನ ರೂಪದಿಂದ ಭೂಮಿಯಲ್ಲಿ ತಿರುಗಾಡಿದನಷ್ಟೇ. ಅವನಿಗೆ ನೀನು ಪುನಃ ರಾಜ್ಯವನ್ನು ಕೊಟ್ಟಾಗ, ನೀನು ಅವನಿಗೆ ಏನು ಹೇಳಿದೆ. ಸತ್ಯವನ್ನು ನುಡಿ.
ಯಯಾತಿಃ
ಗಂಗಾಯಮುನಯೋರ್ಮಧ್ಯೇ ಕೃತ್ಸ್ನೋಽಯಂ ವಿಷಯಸ್ತವ |
ಮಧ್ಯೇ ಪೃಥಿವ್ಯಾಸ್ತ್ವಂ ರಾಜಾ ಭ್ರಾತರೋಽಂತಾಧಿಪಾಸ್ತವ ॥5॥
ಗಂಗಾಯಮುನ ನದಿಗಳ ಮಧ್ಯೆ ಇರುವ ಸಮಗ್ರ ದೇಶವು ನಿನ್ನದು. ಈ ಮಧ್ಯ ಭೂಮಿಗೆ ನೀನು ಒಡೆಯ. ನಿನ್ನ ಅಣ್ಣಂದಿರು ನಿನ್ನ ರಾಜ್ಯದ ಅಂತಪಾಲರು.
ನಚ ಕುರ್ಯಾನ್ನರೋ ದೈನ್ಯಂ ಶಾಠ್ಯಂ ಕ್ರೋಧಂ ತಥೈವ ಚ |
ಜೈಷ್ಠ್ಯಂ ಚ ಮತ್ಸರಂ ವೈರಂ ಸರ್ವತ್ರೈವ ನ ಕಾರಯೇತ್ ॥6॥
ಮನುಷ್ಯನು ಎಂದೂ ದೈನ್ಯವನ್ನಾಗಲೀ, ಶಾಠ್ಯವನ್ನಾಗಲೀ, ಕ್ರೋಧವನ್ನಾಗಲೀ ಮಾಡಬಾರದು. ಅಹಂಕಾರವನ್ನು, ಮಾತ್ಸರ್ಯವನ್ನು ಮತ್ತು ವೈರವನ್ನು ಯಾವಾಗಲೂ ವರ್ಜಿಸಬೇಕು.
ಮಾತರಂ ಪಿತರಂ ಚೈವ ವಿದ್ವಾಂಸಂ ಚ ತಪೋಧನಮ್ |
ಕ್ಷಮಾವಂತಂ ಚ ದೇವೇಂದ್ರ ನಾವಮನ್ಯೇತ ಬುದ್ಧಿಮಾನ್ ॥7॥
ಎಲೈ ದೇವೇಂದ್ರನೇ, ಬುದ್ಧಿವಂತನಾದವನು ತಂದೆಯನ್ನಾಗಲೀ, ತಾಯಿಯನ್ನಾಗಲೀ, ವಿದ್ವಾಂಸನನ್ನಾಗಲೀ, ತಪಸ್ವಿಯನ್ನಾಗಲೀ ಅಥವಾ ಕ್ಷಮಾಶೀಲನನ್ನಾಗಲೀ ಎಂದೂ ಅವಮಾನ ಮಾಡಬಾರದು.
ಶಕ್ತಸ್ತು ಬಾಧತೇ ನಿತ್ಯಮಶಕ್ತಃ ಕ್ರೋಶತೇ ನರಃ |
ದುರ್ಜನಃ ಸುಜನಂ ದ್ವೇಷ್ಟಿ ದುರ್ಬಲೋ ಬಲವತ್ತರಮ್ ॥8॥
ಸಮರ್ಥನಾದವನು ನಿತ್ಯವೂ ತೊಂದರೆ ಕೊಡುತ್ತಾನೆ. ಅಶಕ್ತನಾದವನು ಬಾಯಿಯಲ್ಲಿ ಕಿರುಚುತ್ತಾನೆ. ದುರ್ಜನನು ಸಜ್ಜನರನ್ನು ದ್ವೇಷ ಮಾಡುತ್ತಾನೆ. ದುರ್ಬಲನು ಬಲಿಷ್ಠನನ್ನು ದ್ವೇಷ ಮಾಡುತ್ತಾನೆ.
ರೂಪವಂತಮರೂಪೀ ಚ ಧನವಂತಂ ಚ ನಿರ್ಧನಃ |
ಅಕರ್ಮೀ ಕರ್ಮಿಣಂ ದ್ವೇಷ್ಟಿ ಧರ್ಮಿಣಂ ಚ ನಧಾರ್ಮಿಕಃ ॥9॥
ರೂಪಹೀನನಾದವನು ರೂಪವಂತನನ್ನೂ, ನಿರ್ಧನನಾದವನು ಧನಿಕನನ್ನೂ, ಕೆಲಸವನ್ನು ಮಾಡಲು ಬರದಿರುವವನು ಕೆಲಸ ಮಾಡುವವನನ್ನೂ, ಅಧಾರ್ಮಿಕನಾದವನು ಧಾರ್ಮಿಕನನ್ನೂ ದ್ವೇಷ ಮಾಡುತ್ತಾರೆ.
ನಿರ್ಗುಣೋ ಗುಣವಂತಂ ಚ ಶಕ್ರೈತತ್ ಕಲಿಲಕ್ಷಣಮ್ |
ವಿಪರೀತಂ ಚ ದೇವೇಂದ್ರ ಏತೇಷಾಂ ಕೃತಲಕ್ಷಣಮ್ ॥10॥
ನಿರ್ಗುಣನಾದವನು ಗುಣವಂತನನ್ನು ದ್ವೇಷಿಸುತ್ತಾನೆ. ಇಂದ್ರ, ಇದು ಕಲಿಯುಗದ ಲಕ್ಷಣ. ಇದಕ್ಕೆ ವಿಪರೀತವಾದದ್ದು ಕೃತಯುಗದ ಲಕ್ಷಣ.
ಬ್ರಾಹ್ಮಣೋ ವಾಽಥ ರಾಜಾ ವಾ ವೈಶ್ಯೋ ವಾ ಶೂದ್ರ ಏವ ವಾ|
ಪ್ರಶಸ್ತೇಷು ಪ್ರಶಸ್ತಾ ತೇ ಪ್ರಶಸ್ಯಂತೇ ಯಶಸ್ವಿನಃ ॥11॥
ಬ್ರಾಹ್ಮಣನಾಗಲೀ ಅಥವಾ ಕ್ಷತ್ರಿಯನಾಗಲೀ, ವೈಶ್ಯನಾಗಲೀ ಅಥವಾ ಶೂದ್ರನಾಗಲೀ, ಯಾವನು ಪ್ರಶಸ್ತರಲ್ಲಿ ಪ್ರಶಸ್ತನಾಗಿರುತ್ತಾನೋ ಕೀರ್ತಿವಂತನಾದ ಅವನನ್ನು ಎಲ್ಲರೂ ಹೊಗಳುತ್ತಾರೆ.
ತಸ್ಮಾತ್ ಪ್ರಶಸ್ತೇ ದೇವೇಂದ್ರ ನರಃ ಸಕ್ತಮನಾ ಭವೇತ್ |
ಅಲೋಕಜ್ಞಾ ಹ್ಯಪ್ರಶಸ್ತಾ ಭ್ರಾತರಸ್ತೇ ಹ್ಯಬುದ್ಧಯಃ |

ಅಂತಾಧಿಪತಯಃ ಸರ್ವೇ ಹ್ಯಭವನ್ ಮಮ ಶಾಸನಾತ್ ॥12॥
ಆದ್ದರಿಂದ ದೇವೇಂದ್ರನೇ, ಪ್ರಶಸ್ತರಾದ ಪುರುಷರಲ್ಲಿ ನಾವು ಆಸಕ್ತರಾಗಿರಬೇಕು. ಲೋಕದ ರೀತಿಯನ್ನು ತಿಳಿಯದ ಬುದ್ಧಿಶೂನ್ಯರಾದ ಅಪ್ರಶಸ್ತರಾದ ನಿನ್ನ ಎಲ್ಲಾ ಅಣ್ಣಂದಿರೂ ನನ್ನ ಶಾಸನದಿಂದ ಅಂತಪಾಲರಾದರು.
ಇಂದ್ರಃ
ತ್ವಂ ಹಿ ವೈ ಧರ್ಮವಿದೋ ರಾಜನ್ ಕತ್ಥಸೇ ಧರ್ಮಮುತ್ತಮಮ್ |
ಕಥಯಸ್ವ ಪುನರ್ಮೇಽದ್ಯ ಲೋಕವೃತ್ತಾಂತಮುತ್ತಮಮ್ ॥13॥
ಎಲೈ ರಾಜನೇ, ನೀನು ಧರ್ಮವನ್ನು ತಿಳಿದ ಪುರುಷನ ಧರ್ಮವನ್ನು ಹೇಳುತ್ತಿದ್ದೀಯೆ. ಈ ದಿನ ನನಗೆ ಶ್ರೇಷ್ಠವಾದ ಲೋಕನೀತಿಯನ್ನು ಹೇಳು.
ಯಯಾತಿಃ
ಅಕ್ರೋಧನಃ ಕ್ರೋಧನೇಭ್ಯೋ ವಿಶಿಷ್ಟ -
ಸ್ತಥಾ ತಿತಿಕ್ಷುರತಿತಿಕ್ಷೋರ್ವಿಶಿಷ್ಟಃ |
ಅಮಾನುಷೇಭ್ಯೋ ಮಾನುಷಾಶ್ಚ ಪ್ರಧಾನಾ
ವಿದ್ವಾಂಸ್ತಥೈವಾವಿದುಷಃ ಪ್ರಧಾನಃ ॥14॥
ಶಾಂತಸ್ವಭಾವದವನು ಕೋಪಗೊಳ್ಳುವವರಿಗಿಂತಲೂ ಶ್ರೇಷ್ಠನಾದವನು. ಸಹನೆಯಿರುವವನು ಸಹನೆಯಿಲ್ಲದವರಿಗಿಂತಲೂ ಶ್ರೇಷ್ಠನಾದವನು. ಮನುಷ್ಯಭಿನ್ನರಾದ ಪಶುಪಕ್ಷಿಗಳಿಗಿಂತ ಮನುಷ್ಯನು ಶ್ರೇಷ್ಠನಾದವನು. ಹಾಗೆಯೇ ಅಜ್ಞಾನಿಗಳಿಗಿಂತ ಜ್ಞಾನಿಯು ಶ್ರೇಷ್ಠನಾದವನು.
ಆಕ್ರುಶ್ಯಮಾನೋ ನಾಕ್ರೋಶೇನ್ಮನ್ಯುರೇವ ತಿತಿಕ್ಷತಃ |
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿಂದತಿ ॥15॥
ಇನ್ನೊಬ್ಬರು ಸಿಟ್ಟಿನಿಂದ ಕಿರುಚಿದರೂ ತಿರುಗಿ ಕಿರುಚಬಾರದು. ಅದನ್ನು ತಡೆದುಕೊಳ್ಳುವ ಮನುಷ್ಯನ ಮೇಲೆ ಇರುವ ಕೋಪವೇ ಆ ಕಿರುಚುವವನನ್ನು ಸುಟ್ಟು ಬಿಡುತ್ತದೆ ಮತ್ತು ಅವನ ಎಲ್ಲಾ ಪುಣ್ಯವನ್ನು ಸಹನಶೀಲನಿಗೆ ತಂದುಕೊಡುತ್ತದೆ.
ನಾರುಂತುದಃ ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ |
ಯಯಾಽಸ್ಯ ವಾಚಾ ಪರ ಉದ್ವಿಜೇತ
ನ ತಾಂ ವದೇದ್ ರುಶತೀಂ ಪಾಪಲೋಕ್ಯಾಮ್ ॥16॥
ಮರ್ಮಭೇದಿಯಾದ ಮಾತುಗಳನ್ನು ಆಡಬಾರದು. ಮೋಸದ, ನಿಷ್ಠುರದ ಮಾತುಗಳನ್ನು ಆಡಬಾರದು. ಹೀನ ಪುರುಷನ ದೋಷಗಳನ್ನು ಎತ್ತಿ ಆಡಬಾರದು. ತನ್ನ ಮಾತಿನಿಂದ ಇನ್ನೊಬ್ಬರಿಗೆ ಉದ್ವೇಗ ಉಂಟಾಗುವ ನರಕದಾಯಕವಾದ ಕ್ರೂರವಾದ ಮಾತುಗಳನ್ನು ಆಡಬಾರದು.
ಅರುಂತುದಂ ಪರುಷಂ ರೂಕ್ಷವಾಚಂ
ವಾಕ್ಕಂಟಕೈರ್ವಿತುದಂತಂ ಮನುಷ್ಯಮ್ |
ಕ್ಷಿಪ್ರಂ ಹ್ಯಲಕ್ಷ್ಮೀರ್ಭಜತೇ ಮನುಷ್ಯಂ
ಮುಖೇ ನಿಬದ್ಧಾಂ ನಿಕೃತಿಂ ವಹಂತಮ್ ॥17॥
ಮರ್ಮಭೇದಿಯಾಗಿ, ಉಗ್ರವಾಗಿ ಮತ್ತು ತೀಕ್ಷ್ಣವಾಗಿ ಮಾತನಾಡಿ, ಮಾತು ಎಂಬ ಮುಳ್ಳುಗಳಿಂದ ಇನ್ನೊಬ್ಬರನ್ನು ಚುಚ್ಚುವ ಮನುಷ್ಯನಿಗೆ ಬೇಗ ಅಲಕ್ಷ್ಮಿಯೋಗ ಉಂಟಾಗುತ್ತದೆ. ಅವನು ತನ್ನ ಬಾಯಿಯಲ್ಲಿಯೇ ಮೋಸವನ್ನು ಹೊತ್ತಿರುತ್ತಾನೆ.
ಸದ್ಭಿಃ ಪುರಸ್ತಾದಭಿಪೂಜಿತಃ ಸ್ಯಾತ್
ಸದ್ಭಿಃ ಸದಾ ಪೃಷ್ಠತೋ ರಕ್ಷಿತಃ ಸ್ಯಾತ್ |
ಸದಾಽಸತಾಮತಿವಾದಾಂಸ್ತಿತಿಕ್ಷೇತ್
ಸತಾಂ ವೃತ್ತಂ ಚಾದದೀತಾರ್ಯವೃತ್ತಃ ॥18॥
ಮುಂದುಗಡೆ ಇರುವ ಸಜ್ಜನರಿಂದ ಶ್ಲಾಘನೀಯನಾಗಿರಬೇಕು. ಹಿಂದುಗಡೆಯಿರುವ ಸಜ್ಜನರಿಂದ ಯಾವಾಗಲೂ ರಕ್ಷಿತನಾಗಿರಬೇಕು. ಅಸಜ್ಜನರ ನಿಂದೆಗಳನ್ನು ಸಹಿಸಿಕೊಳ್ಳಬೇಕು. ಉದಾರವಾದ ನಡತೆಯುಳ್ಳವನಾಗಿ ಸಜ್ಜನರ ನಡತೆಯನ್ನು ಅನುಸರಿಸಬೇಕು.
ವಾಕ್ಸಾಯಕಾ ವದನಾನ್ನಿಸ್ಸರಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ |
ಪರಸ್ಯ ಚಾಮರ್ಮಸು ಯೇ ಪತಂತಿ |
ತಾನ್ ಪಂಡಿತೋ ನಾವಸೃಜೇತ್ ಪರೇಷು ॥19॥
ದುಷ್ಟರ ವದನದಿಂದ ವಾಗ್ಬಾಣಗಳು ಹೊರಗೆ ಬರುತ್ತವೆ. ಅವುಗಳಿಂದ ಹೊಡೆಯಲ್ಪಟ್ಟ ಮನುಷ್ಯನು ಹಗಲೂ ರಾತ್ರಿಯೂ ದುಃಖಪಡುತ್ತಾನೆ. ಇನ್ನೊಬ್ಬರನ್ನು ಕುರಿತು ಮರ್ಮಭೇದಿಯಲ್ಲದ ಸಾಧಾರಣ ದುಷ್ಟ ಮಾತುಗಳನ್ನು ಕೂಡ ವಿವೇಕಿಯಾದವನು ಆಡಬಾರದು, ಹೀಗಿರುವಾಗ ಮರ್ಮಭೇದಿಯಾದ ಮಾತುಗಳನ್ನು ಆಡುವ ಪ್ರಸಂಗವೆಲ್ಲಿ?
ನೈತಾದೃಶಂ ಸಂವನನಂ ತ್ರಿಷು ಲೋಕೇಷು ವಿದ್ಯತೇ |
ದಯಾ ಮೈತ್ರೀ ಚ ಭೂತೇಷು ದಾನಂ ಚ ಮಧುರಾ ಚ ವಾಕ್ ॥20॥
ಮೂರು ಲೋಕಗಳಲ್ಲಿಯೂ ದಯ, ಸರ್ವಭೂತ ಮೈತ್ರಿ, ದಾನ ಮತ್ತು ಮಧುರ ವಚನಗಳು ಇವುಗಳಿಗೆ ಸಮವಾದ ಕ್ರಿಯಾ ಸಂಪತ್ತು (ಅನುನಯವು) ಬೇರೆ ಯಾವುದೂ ಇರುವುದಿಲ್ಲ.

ತಸ್ಮಾತ್ ಸಾಂತ್ವಂ ಸದಾ ವಾಚ್ಯಂ ನ ವಾಚ್ಯಂ ಪರುಷಂ ಕ್ವಚಿತ್ |
ಪೂಜ್ಯಾನ್ ಸಂಪೂಜಯೇನ್ನಿತ್ಯಂ ನ ಯಾಚೇಚ್ಚ ಕದಾಚನ ॥21॥
ಆದ್ದರಿಂದ ಯಾವಾಗಲೂ ಶಾಂತವಾದ ಮಾತುಗಳನ್ನೇ ಆಡಬೇಕು. ಉಗ್ರವಾದ ಮಾತುಗಳನ್ನು ಆಡಬಾರದು. ಪೂಜ್ಯರನ್ನು ಯಾವಾಗಲೂ ಪೂಜಿಸಬೇಕು. ಯಾರನ್ನೂ ಯಾವಾಗಲೂ ಬೇಡಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಟ್ಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು
*****

ಎಪ್ಪತ್ತೇಳನೆಯ ಅಧ್ಯಾಯ
(ಸಂವಾದದ ಮಧ್ಯದಲ್ಲಿ ಯಯಾತಿಯ ಅಹಂಕಾರವಚನ, ಸ್ವರ್ಗದಿಂದ ಸಜ್ಜನರ ಮಧ್ಯೆ ಪತನ, ಅಷ್ಟಕಪ್ರಶ್ನ.)
ಇಂದ್ರಃ
ಸರ್ವಾಣಿ ಕರ್ಮಾಣಿ ವಿಸೃಜ್ಯ ರಾಜನ್
ಗೃಹಾನ್ ಪರಿತ್ಯಜ್ಯ ವನಂ ಗತೋಽಸಿ |
ತತ್ ತ್ವಾಂ ಪೃಚ್ಛಾಮಿ ನಹುಷಸ್ಯ ಪುತ್ರ
ಕೇನಾಸಿ ತುಲ್ಯಸ್ತಪಸಾ ಯಯಾತೇ ॥1॥
ಎಲೈ ನಹುಷಪುತ್ರನಾದ ಯಯಾತಿರಾಜನೇ, ನೀನು ಎಲ್ಲಾ ಕರ್ಮಗಳನ್ನೂ ತ್ಯಾಗ ಮಾಡಿ ಗೃಹವನ್ನು ಬಿಟ್ಟು ಕಾಡಿಗೆ ಬಂದು ತಪಸ್ಸು ಮಾಡಿದೆ. ನಿನ್ನನ್ನು ಕುರಿತು ತಪಸ್ಸಿನಲ್ಲಿ ನಿನ್ನ ಸಮಾನರಾದವರು ಯಾರು ಎಂಬ ಪ್ರಶ್ನೆಯನ್ನು ಕೇಳುತ್ತಿದ್ದೇನೆ.
ಯಯಾತಿಃ
ನಾಹಂ ದೇವಮನುಷ್ಯೇಷು ನ ಗಂಧರ್ವಮಹರ್ಷಿಷು |
ಆತ್ಮನಸ್ತಪಸಾ ತುಲ್ಯಂ ಕಂಚಿತ್ ಪಶ್ಯಾಮಿ ವಾಸವ ॥2॥
ಎಲೈ ಇಂದ್ರನೇ, ದೇವತೆಗಳಲ್ಲಾಗಲೀ, ಗಂಧರ್ವರಲ್ಲಾಗಲೀ, ಮಹರ್ಷಿಗಳಲ್ಲಾಗಲೀ ಅಥವಾ ಮನುಷ್ಯರಲ್ಲಾಗಲೀ, ನನಗೆ ಸಮಾನವಾದ ತಪಸ್ಸನ್ನು ಮಾಡಿದವರು ಯಾರೂ ಇಲ್ಲವೆಂದು ಭಾವಿಸುತ್ತೇನೆ.
ಇಂದ್ರಃ
ಯದಾಽವಮಂಸ್ಥಾಃ ಸದೃಶಾಂಛ್ರೇಯಸಶ್ಚ
ವರೀಯಸಶ್ಚಾಪ್ಯಮಿತ ಪ್ರಭಾವಾನ್ |
ತಸ್ಮಾಲ್ಲೋಕಾ ಅಂತವಂತಸ್ತವೇಮೇ
ಕ್ಷೀಣೇ ಪುಣ್ಯೇ ಪತಿತೋಽಸ್ಯದ್ಯ ರಾಜನ್ ॥3॥
ಯಾವ ಕಾರಣದಿಂದ ನೀನು ನಿನಗೆ ಸಮಾನರಾದವರನ್ನೂ, ಉತ್ತಮರಾದವರನ್ನು ಮತ್ತು ಅಮಿತ ಪ್ರಭಾವವನ್ನು ಹೊಂದಿ ಶ್ರೇಷ್ಠರಾದವರನ್ನೂ ಬಹಳ ಅವಮಾನ ಮಾಡಿದೆಯೋ, ಆ ಕಾರಣದಿಂದ ನಿನ್ನ ಪುಣ್ಯವು ಮುಗಿದು ಸ್ವರ್ಗವಾಸವು ಅಂತ್ಯಗೊಂಡಿದೆ. ರಾಜನೇ, ನೀನು ಈಗ ಸ್ವರ್ಗದಿಂದ ಬೀಳುವಿ.
ಯಯಾತಿಃ
ಸುರರ್ಷಿಗಂಧರ್ವನರಾವಮಾನಾತ್
ಕ್ಷಯಂ ಗತಾ ಮೇ ಯದಿ ಶಕ್ರ ಲೋಕಾಃ |
ಇಚ್ಛೇಯಂ ವೈ ಸುರಲೋಕಾದ್ ವಿಹೀನಃ
ಸತಾಂ ಸಕಾಶೇ ಪತಿತುಂ ದೇವರಾಜ ॥4॥
ಎಲೈ ಇಂದ್ರನೇ, ದೇವತೆಗಳು, ಋಷಿಗಳು, ಗಂಧರ್ವರು ಮತ್ತು ಮನುಷ್ಯರನ್ನು ಅವಮಾನ ಮಾಡಿದುದರಿಂದ ನನ್ನ ಸ್ವರ್ಗವಾಸವು ಅಂತ್ಯವಾಗುವುದಾದರೆ, ನಾನು ಸುರಲೋಕದಿಂದ ಬೀಳುತ್ತಾ ಸಜ್ಜನರ ಮಧ್ಯದಲ್ಲಿ ಬೀಳಬೇಕೆಂದು ಬಯಸುತ್ತೇನೆ.
ಇಂದ್ರಃ
ಸತಾಂ ಸಕಾಶೇ ಪತಿತೋಽಸಿ ರಾಜನ್
ಚ್ಯುತಃ ಪ್ರತಿಷ್ಠಾಂ ಯತ್ರ ಲಬ್ಧಾಽಸಿ ಭೂಯಃ |
ಏವಂ ವಿದಿತ್ವಾ ನಾಹುಷ ಮಾ ಸ್ಮ ಸರ್ವಾನ್
ನ ಚಾಽವಮಂಸ್ಥಾಃ ಸದೃಶಾನ್ ಶ್ರೇಯಸಶ್ಚ ॥5॥
ಎಲೈ ರಾಜನೇ, ನೀನು ಸಜ್ಜನರ ಮಧ್ಯದಲ್ಲಿ ಬಿದ್ದು, ಪುನಃ ಅಲ್ಲಿ ಪ್ರತಿಷ್ಠೆಯನ್ನು ಪಡೆಯುವೆ. ಈ ವಿಷಯವನ್ನು ತಿಳಿದು ಇನ್ನೆಂದೂ ಸಮಾನರನ್ನಾಗಲೀ, ಉತ್ತಮರನ್ನಾಗಲೀ ಯಾರನ್ನೂ ಅವಮಾನಿಸಬೇಡ.
ವೈಶಂಪಾಯನಃ
ತತಃ ಪ್ರಹಾಯಾಮರರಾಜಜುಷ್ಟಾನ್
ಪುಣ್ಯಾಂಲ್ಲೋಕಾನ್ ಪತಮಾನಂ ಯಯಾತಿಮ್ |
ಸಂಪ್ರೇಕ್ಷ್ಯ ರಾಜರ್ಷಿವರೋಽಷ್ಟಕಸ್ತಂ
ಉವಾಚ ಸದ್ಧರ್ಮವಿಧಾನಗೋಪ್ತಾ ॥6॥
ಅನಂತರ ದೇವೇಂದ್ರನಿಂದ ಅಧ್ಯುಷಿತವಾದ ಪುಣ್ಯಲೋಕವನ್ನು ಬಿಟ್ಟು ಯಯಾತಿಯು ಕೆಳಗೆ ಬೀಳುತ್ತಿರುವುದನ್ನು ನೋಡಿ

ಸದ್ಧರ್ಮವಿಧಾನವನ್ನು ರಕ್ಷಿಸುವ ರಾಜರ್ಷಿಶ್ರೇಷ್ಠನಾದ ಅಷ್ಟಕನು ಅವನನ್ನು ಕುರಿತು ಮಾತನಾಡಿದನು. ಮುಂದೆ ಉದ್ಯೋಗ ಪರ್ವದಲ್ಲೇ ಹೇಳುವಂತೆ ಯಯಾತಿಯ ಮಗಳಾದ ಮಾಧವಿಯ ಮಗನು ಈ ಅಷ್ಟಕ).
ಅಷ್ಟಕಃ
ಕಸ್ತ್ವಂ ಯುವಾ ವಾಸವತುಲ್ಯರೂಪಃ
ಸ್ವತೇಜಸಾ ದೀಪ್ಯಮಾನೋ ಯಥಾಽಗ್ನಿಃ |
ಪತಸ್ಯುದೀರ್ಣಾಂಬುಧರಪ್ರಕಾರಃ
ಖಾತ್ ಖೇಚರಾಣಾಂ ಪ್ರವರೋ ಯಥಾಽರ್ಕಃ ॥7॥
ಇಂದ್ರನಿಗೆ ಸಮಾನವಾದ ರೂಪವನ್ನು ಹೊಂದಿ ತೇಜಸ್ಸಿನಿಂದ ಅಗ್ನಿಯಂತೆ ಬೆಳಗುತ್ತಿರುವ ನೀನು ಯಾರು? ಆಕಾಶದಿಂದ ಖೇಚರರಲ್ಲಿ ಶ್ರೇಷ್ಠನಾದ ಸೂರ್ಯನು ಬಿದ್ದಂತೆ, ದೊಡ್ಡ ಮೇಘಸಮೂಹವು ಬೀಳುತ್ತಿರುವಂತೆ ನೀನು ಬೀಳುತ್ತಿರುವಿ.
ದೃಷ್ಟ್ವಾ ಚ ತ್ವಾಂ ಸೂರ್ಯಪಥಾತ್ ಪತಂತಂ
ವೈಶ್ವಾನರಾರ್ಕದ್ಯುತಿಮಪ್ರಮೇಯಮ್ |
ಕಿಂ ನು ಸ್ವಿದೇತತ್ ಪತತೀತಿ ಸರ್ವೇ
ವಿತರ್ಕಯಂತಃ ಪರಿಮೋಹಿತಾಃ ಸ್ಮಃ ॥8॥
ಸೂರ್ಯಮಾರ್ಗದಿಂದ ಬೀಳುತ್ತಿರುವ ಸೂರ್ಯಾಗ್ನಿ ಸದೃಶವಾದ ಕಾಂತಿಯುಳ್ಳ ಅಪ್ರಮೇಯನಾದ ನಿನ್ನನ್ನು ನೋಡಿ ನಮಗೆಲ್ಲರಿಗೂ ಇದೇನು ಬೀಳುತ್ತಿದೆ ಎಂದು ಯೋಚಿಸುತ್ತಾ ದಿಗ್ಭ್ರಾಂತಿಯುಂಟಾಗಿದೆ.
ದೃಷ್ಟ್ವಾ ಚ ತ್ವಾಂ ವಿಷ್ಠಿತಂ ದೇವಮಾರ್ಗೇ
ಶಕ್ರಾರ್ಕವಿಷ್ಣುಪ್ರತಿಮಪ್ರಭಾವಮ್ |
ಅಭ್ಯುದ್ಗತಾಸ್ತ್ವಂ ವಯಮದ್ಯ ಸರ್ವೇ
ತತ್ವಂ ಪಾತೇ ತವ ಜಿಜ್ಞಾಸಮಾನಾಃ ॥9॥
ಇಂದ್ರ, ಸೂರ್ಯ ಮತ್ತು ವಿಷ್ಣುವಿಗೆ ಸದೃಶವಾದ ಪ್ರಭಾವವುಳ್ಳ ನೀನು ದೇವಮಾರ್ಗದಲ್ಲಿ ವಿಶೇಷವಾಗಿ ನಿಂತಿರುವುದನ್ನು ನೋಡಿ ನಾವೆಲ್ಲರೂ ನಿನ್ನ ಪಾತಕ್ಕೆ ಕಾರಣವನ್ನು ತಿಳಿಯುವ ಆಸೆಯಿಂದ ನಿನ್ನೆಡೆಗೆ ಎದ್ದು ಬರುತ್ತಿದ್ದೇವೆ.
ನ ಚಾಪಿ ತ್ವಾಂ ಧೃಷ್ಣುಮಪ್ರಷ್ಟುಮಗ್ರೇ
ನಚ ತ್ವಮಸ್ಮಾನ್ ಪೃಚ್ಛಸೇ ಯೇ ವಯಂ ಸ್ಮಃ |
ತೇ ತ್ವಾಂ ಪೃಚ್ಛಾಮಃ ಕಮನೀಯರೂಪ
ಕಸ್ಯ ತ್ವಂ ವಾ ಕಿನ್ನಿಮಿತ್ತಂ ತ್ವಿಹಾಗಾಃ ॥10॥
ಧೈರ್ಯಶಾಲಿಯಾದ ನಿನ್ನನ್ನು ಕುರಿತು ನೀನು ಯಾರು ಎಂದು ಕೇಳದಿರಲು ನಮಗೆ ಅಸಾಧ್ಯವಾಗಿದೆ. ನೀನಾದರೂ ನಾವು ಯಾರು ಎಂದೂ ಕೇಳುತ್ತಿಲ್ಲ. ಆದ್ದರಿಂದ ಸುಂದರ ರೂಪವುಳ್ಳವನೇ, ನಾವೇ ನಿನ್ನನ್ನು ಕೇಳುತ್ತಿದ್ದೇವೆ. ನೀನು ಯಾರಿಗೆ ಸೇರಿದವನು? ಯಾವ ಕಾರಣದಿಂದ ಈ ಕಡೆಗೆ ಬರುತ್ತಿರುವೆ?
ಭಯಂ ತು ತೇ ವ್ಯೇತು ವಿಷಾದಮೋಹೌ
ತ್ಯಜಾಶು ದೇವೇಂದ್ರಸಮಾನರೂಪ |
ತ್ವಾಂ ವರ್ತಮಾನಂ ಹಿ ಸತಾಂ ಸಕಾಶೇ
ನಾಲಂ ಪ್ರಸೋಢುಂ ಬಲಹಾಽಪಿ ಶಕ್ರಃ ॥11॥
ದೇವೇಂದ್ರನಿಗೆ ಸಮಾನವಾದ ರೂಪವುಳ್ಳವನೇ, ಭಯಪಡಬೇಡ. ನಿನ್ನ ವಿಷಾದಮೋಹಗಳನ್ನು ಬೇಗ ತ್ಯಜಿಸು. ನಮ್ಮ ಬಳಿಯೇ ಇರುವ ನಿನ್ನನ್ನು ಕೆಳಗೆ ಬೀಳುವಂತೆ ಮಾಡಲು ಬಲಸೂದನನಾದ ಇಂದ್ರನಿಗೂ ಸಾಧ್ಯವಿಲ್ಲ.
ಸಂತಃ ಪ್ರತಿಷ್ಠಾ ಹಿ ಸುಖಾಚ್ಚ್ಯುತಾನಾಂ
ಸತಾಂ ಸದೈವಾಮರರಾಜಕಲ್ಪ |
ತೇ ಸಂಗತಾಃ ಸ್ಥಾವರಜಂಗಮೇಶಾಃ
ಪ್ರತಿಷ್ಠಿತಾಸ್ತ್ವೇ ಸದೃಶೇಷು ಸತ್ಸು ॥12॥
ಸುಖವನ್ನು ಕಳೆದುಕೊಂಡ ಸಜ್ಜನರಿಗೆ ಯಾವಾಗಲೂ ಸಜ್ಜನರೇ ಆಧಾರರಾದವರು. ಯಾವ ಸ್ಥಾವರಜಂಗಮಪ್ರಭುಗಳು ಚೆನ್ನಾಗಿದ್ದಾರೆಯೋ ಅವರೆಲ್ಲರೂ ಸದೃಶರಾದ ಸಜ್ಜನರಲ್ಲಿ ಪ್ರತಿಷ್ಠಿತರಾಗಿದ್ದಾರೆ.
ಪ್ರಭುರಗ್ನಿಃ ಪ್ರತಪನೇ ಭೂಮಿರಾವಪನೇ ಪ್ರಭುಃ |
ಪ್ರಭುಃ ಸೂರ್ಯಃ ಪ್ರಕಾಶಿತ್ವೇ ಸತಾಮಭ್ಯಾಗತಃ ಪ್ರಭುಃ ॥13॥
ಸುಡುವ ವಿಷಯದಲ್ಲಿ ಅಗ್ನಿಯು ಪ್ರಭು. ಬೀಜವನ್ನು ಬಿತ್ತುವುದರಲ್ಲಿ ಭೂಮಿಯು ಪ್ರಭು. ಪ್ರಕಾಶವನ್ನು ಕೊಡುವುದರಲ್ಲಿ ಸೂರ್ಯನು ಪ್ರಭು. ಅಭ್ಯಾಗತನು ಸಜ್ಜನರಿಗೆ ಪ್ರಭು. (ನೀನು ನಮಗೆ ಅಭ್ಯಾಗತ. ಆದ್ದರಿಂದ ನಮಗೆ ಪ್ರಭು)
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತೆಂಟನೆಯ ಅಧ್ಯಾಯ
(ಯಯಾತಿಯಿಂದ ತನ್ನ ಪರಿಚಯ ಕಥನ, ಅಷ್ಟಕನೊಂದಿಗೆ ಸಂವಾದ.)

ಯಯಾತಿಃ
ಅಹಂ ಯಯಾತಿರ್ನಹುಷಸ್ಯ ಪುತ್ರಃ
ಪೂರೋಃ ಪಿತಾ ಸರ್ವಭೂತಾವಮಾನಾತ್ |
ಪ್ರಭ್ರಂಶಿತಃ ಸುರರ್ಷಿಸಿದ್ಧಲೋಕಾದ್
ಇತಶ್ಚ್ಯುತಃ ಪ್ರಪತಾಮ್ಯಲ್ಪಪುಣ್ಯಃ ||1||
ನಾನು ನಹುಷನ ಪುತ್ರನಾದ ಯಯಾತಿ, ಪೂರುವಿನ ತಂದೆ. ಸರ್ವರನ್ನೂ ಅವಮಾನ ಮಾಡಿದ ಕಾರಣದಿಂದಾಗಿ ನನ್ನ ಪುಣ್ಯವನ್ನು ಕಳೆದುಕೊಂಡು ಸುರರ್ಷಿಸಿದ್ಧಲೋಕದಿಂದ ಭ್ರಷ್ಟನಾಗಿ ಇಲ್ಲಿ ಬೀಳುತ್ತಿದ್ದೇನೆ.
ಅಹಂ ಹಿ ಪೂರ್ವೋ ವಯಸಾಽಭಿವಂದ್ಯಃ
ತೇನಾಭಿವಾದಂ ಭವತಾಂ ನ ಪ್ರಯುಂಜೇ |
ಯೋ ವಿದ್ಯಯಾ ತಪಸಾ ಜನ್ಮನಾ ವಾ
ವೃದ್ಧಃ ಸ ಪೂಜ್ಯೋ ಭವತಿ ದ್ವಿಜಾನಾಮ್ ||2||
ನಾನು ನಿಮಗಿಂತ ವಯಸ್ಸಿನಲ್ಲಿ ದೊಡ್ಡವನು. ಆದ್ದರಿಂದ ನಿಮಗೆ ನಮಸ್ಕಾರದ ಮಾತುಗಳನ್ನು ಆಡುವುದಿಲ್ಲ. ಬ್ರಾಹ್ಮಣರಲ್ಲಿ ವಿದ್ಯೆಯಿಂದ, ತಪಸ್ಸಿನಿಂದ ಮತ್ತು ಜನ್ಮದಿಂದ ಯಾರು ಅಧಿಕರೋ ಅವರು ಪೂಜ್ಯರಾಗುತ್ತಾರೆ.
ಅಷ್ಟಕಃ
ಅವಿದ್ವಾಂಶ್ಚೇದ್ ವಯಸಾ ಯಃ ಸ ವೃದ್ಧಃ
ಇತೀಹ ರಾಜನ್ ನಾಭಿವಾದ್ಯಃ ಕಥಂಚಿತ್ |
ಯೋ ವೈ ವಿದ್ವಾನ್ ವಯಸಾ ನ ಸ್ಮ ವೃದ್ಧಃ
ಸ ವೈ ಪೂಜ್ಯೋ ಭವತಿ ದ್ವಿಜಾನಾಮ್ ||3||
ಎಲೈ ರಾಜನೇ, ಅವಿದ್ವಾಂಸನಾದವನು ಅವನು ವಯಸ್ಸಿನಿಂದ ದೊಡ್ಡವನು ಎಂಬ ಕಾರಣದಿಂದ ಎಂದೂ ನಮಸ್ಕಾರಕ್ಕೆ ಅರ್ಹನಾಗುವುದಿಲ್ಲ. ಬ್ರಾಹ್ಮಣರಲ್ಲಿ ಯಾರು ವಯಸ್ಸಿನಿಂದ ಅಧಿಕನಾಗಿಲ್ಲದಿದ್ದರೂ ವಿದ್ಯೆಯಿಂದ ಅಧಿಕನಾಗಿರುತ್ತಾನೆಯೋ ಅವನೇ ಪೂಜ್ಯನಾಗುತ್ತಾನೆ.
ಯಯಾತಿಃ
ಪ್ರತಿಕೂಲಂ ಕರ್ಮಣಾಂ ಪಾಪಮಾಹುಃ
ತದ್ವರ್ತನೇ ಪ್ರಾಪಣೇ ಪಾಪಲೋಕ್ಯಮ್ |
ಸಂತೋಽಸತಾಂ ನಾತಿವರ್ತಂತಿ ಚೈತದ್
ಯದಾಽಽತ್ಮೈಷಾಮಪ್ಯನುಕೂಲವಾದೀ ||4||
ನರಕಾದಿ ಪಾಪಲೋಕಕ್ಕೆ ಸಾಧನವಾದ ಕರ್ಮಗಳನ್ನು ಪಾಪವೆಂದು ಹೇಳುತ್ತಾರೆ. ಆ ಪಾಪಗಳು ಸದ್ಧರ್ಮದ ಅನುಷ್ಠಾನಕ್ಕೂ ಹಾಗೂ ಅನುಷ್ಠಾನ ಮಾಡಿದ ಸದ್ಧರ್ಮದ ಫಲವನ್ನು ಪಡೆಯುವುದಕ್ಕೂ ಪ್ರತಿಕೂಲವಾಗಿರುತ್ತವೆ. ಅದ್ದರಿಂದ ಸಜ್ಜನರು ಅಸಜ್ಜನರ ಮಾರ್ಗವನ್ನು ಎಂದೂ ಅನುಸರಿಸುವುದಿಲ್ಲ. ಅನುಕೂಲವಾಗಿ ಮಾತನಾಡುವವರು ಸಿಕ್ಕಿದಾಗಲೂ ಸಜ್ಜನರು ಪಾಪವನ್ನು ಮಾಡುವುದಿಲ್ಲ. ಅನುಕೂಲ ವಚನವನ್ನು ಆಡುವವರು ಸಿಗುವುದೂ ಸಹ ದುರ್ಲಭವೇ ಸರಿ.
ಅಷ್ಟಕಃ
ಅಭೂದ್ ಧನಂ ಮೇ ವಿಪುಲಂ ಮಹದ್ ವೈ
ವಿಚೇಷ್ಟಮಾನೋ ನಾಧಿಗಂತಾ ತದಸ್ಮಿ |
ಏವಂ ಪ್ರಧಾರ್ಯಾತ್ಮಹಿತೇ ನಿವಿಷ್ಟೋ
ಯೋ ವರ್ತತೇ ನಾವಜಾನಾತಿ ಜೀವನ್ ||5||
ನನಗೆ ಹಿಂದೆ ವಿಪುಲವಾದ ಧನವಿದ್ದಿತು. ವಿಷಯಗಳಲ್ಲಿ ಆಸಕ್ತನಾದ ನನಗೆ ನಾನು ಪರಲೋಕಕ್ಕೆ ಹೋದಾಗ ಅವು ನನ್ನ ಹಿಂದೆ ಬರಲಿಲ್ಲ. ಹೀಗೆ ನಿಶ್ಚಯಿಸಿ ತನ್ನ ನಿಜವಾದ ಹಿತದಲ್ಲಿ ತಾತ್ಪರ್ಯವುಳ್ಳ ಮನುಷ್ಯನು ಬದುಕಿರುವವರೆಗೆ ಯಾರಿಗೂ ಅಪಮಾನ ಮಾಡುವುದಿಲ್ಲ.
ಮಹಾಧನೋ ಯೋ ಯಜತೇ ಸ ಯಜ್ಞೈ-
ರ್ಯಃ ಸರ್ವವಿದ್ಯಾಸು ವಿನೀತಬುದ್ಧಿಃ |
ವೇದಾನಧೀತ್ಯ ತಪಸಾ ಯೋಜ್ಯ ದೇಹಂ
ದಿವಮಿಯಾತ್ ಪುರುಷೋ ವೀತಮೋಹಃ ||6||
ಮಹಾಧನವುಳ್ಳವನು ಯಜ್ಞಗಳಿಂದ ದೇವತೆಗಳನ್ನು ಆರಾಧಿಸುತ್ತಾನೆ. ಆದರೆ ಎಲ್ಲಾ ವಿದ್ಯೆಗಳಲ್ಲೂ ಪಳಗಿದ ಬುದ್ಧಿಯುಳ್ಳವನು ವೇದವನ್ನು ಅಧ್ಯಯನ ಮಾಡಿ ದೇಹದಿಂದ ತಪಸ್ಸು ಮಾಡಿ ಮೋಹವನ್ನು ತೊರೆದು ಸ್ವರ್ಗಕ್ಕೆ ಹೋಗುತ್ತಾನೆ.
ನ ಜಾತು ಹೃಷ್ಯೇನ್ಮಹತಾ ಧನೇನ |
ವೇದಾನಧೀಯೀತ ನಾಹಂಕೃತಃ ಸ್ಯಾತ್ |
ನಾನಾಭಾವಾ ಬಹವೋ ಜೀವಲೋಕೇ
ದೈವಾಧೀನಾ ನಷ್ಟಚೇಷ್ಟಾಧಿಕಾರಾಃ ||7||
ಬಹಳ ಧನದಿಂದ ಯಾವಾಗಲೂ ಸಂತೋಷಪಡಬಾರದು. ವೇದವನ್ನು ಅಧ್ಯಯನ ಮಾಡಬೇಕು. ಅಹಂಕಾರವನ್ನು ಮಾಡಬಾರದು. ಜೀವಲೋಕದಲ್ಲಿ ಅನೇಕರಿಗೆ `ನಾನೇ ಈಶ್ವರ, ನಾನು ಅಮರ' ಎಂಬ ಅನೇಕ ಭಾವನೆಗಳು ಇರುತ್ತವೆ. ಆ ದುಷ್ಟರೆಲ್ಲರೂ ದೇವರ

ಅಧೀನರಾಗಿ ತಮ್ಮ ಜೀವನಾದಿ ಚೇಷ್ಟೆಗಳನ್ನೂ, ರಾಜ್ಯದ ಅಧಿಕಾರವನ್ನು ಕಳೆದುಕೊಳ್ಳುತ್ತಾರೆ.

ತತ್ತತ್ ಪ್ರಾಪ್ಯ ನ ವಿಹನ್ಯೇತ ಧೀರೋ
ದಿಷ್ಟಂ ಬಲೀಯ ಇತಿ ಮತ್ವಾಽಽತ್ಮಬುದ್ಧ್ಯಾ |
ಸುಖಂ ಹಿ ಜಂತುರ್ಯದಿ ವಾಽಪಿ ದುಃಖಂ
ದೈವಾಧೀನಂ ವಿಂದತಿ ನಾತ್ಮಶಕ್ತ್ಯಾ ॥8॥

ಆಯಾ ಕಾಲದಲ್ಲಿ ಒದಗುವ ದುಃಖವನ್ನು ಹೊಂದಿದರೂ ಧೀರನಾದವನು ನಮ್ಮ ಬುದ್ಧಿಗಿಂತಲೂ ದೇವರ ಇಚ್ಛೆಯು ಪ್ರಬಲವಾದುದು ಎಂದು ತಿಳಿದು ಮನಸ್ಸಿನಲ್ಲಿ ಅಳುಕಬಾರದು. ಯಾವುದೇ ಜಂತುವು ಸುಖವನ್ನಾಗಲೀ ಅಥವಾ ದುಃಖವನ್ನಾಗಲೀ ದೈವಕ್ಕೆ ಅಧೀನನಾಗಿ ಪಡೆಯುತ್ತಾನೆಯೇ ಹೊರತು ತನ್ನ ಸ್ವಂತ ಶಕ್ತಿಯಿಂದ ಪಡೆಯುವುದಿಲ್ಲ.

ತಸ್ಮಾದ್ ದಿಷ್ಟಂ ಬಲವನ್ಮನ್ಯಮಾನೋ
ನ ಸಂಜ್ವರೇನ್ನಾಪಿ ಹೃಷ್ಯೇತ್ ಕದಾಚಿತ್ |
ದುಃಖೇ ನ ತಪ್ಯೇತ ಸುಖೇ ನ ಹೃಷ್ಯೇತ್
ಸಮೇನ ವರ್ತೇತ ಸದೈವ ಧೀರಃ ॥9॥

ಆದ್ದರಿಂದ ದೈವೇಚ್ಛೆಯು ಪ್ರಬಲವಾದುದೆಂದು ತಿಳಿದವನು ದುಃಖ ಬಂದಾಗ ಪರಿತಪಿಸಬಾರದು, ಸುಖ ಬಂದಾಗ ಉಬ್ಬಲೂ ಬಾರದು. ಮನಸ್ಸಿಗೆ ಧೈರ್ಯವನ್ನು ತಂದುಕೊಂಡು ಯಾವಾಗಲೂ ಒಂದೇ ರೀತಿ ಇರಬೇಕು.

ಯಯಾತಿಃ

ಭಯೇ ನ ಮುಹ್ಯಾಮ್ಯಷ್ಟಕಾಹಂ ಕದಾಚಿತ್
ಸಂತಾಪೋ ಮೇ ಮಾನಸೋ ನಾಸ್ತಿ ಕಶ್ಚಿತ್ |
ಧಾತಾ ಯಥಾ ಮಾಂ ವಿದಧಾತಿ ಲೋಕೇ
ಧ್ರುವಂ ತಥಾಽಹಂ ಲಭಿತೇತಿ ಮತ್ವಾ ॥10॥

ಎಲೈ ಅಷ್ಟಕನೇ, ಭಯವುಂಟಾದಾಗ ನಾನು ಎಂದೂ ಮೋಹಕ್ಕೆ ಒಳಗಾಗುವುದಿಲ್ಲ. ನನ್ನ ಮನಸ್ಸಿಗೆ ಯಾವ ಸಂತಾಪವೂ ಇಲ್ಲ. ಏಕೆಂದರೆ, ದೇವರು ಹೇಗೆ ಅಣತಿ ಮಾಡುತ್ತಾನೆಯೋ ಅಂತಹ ಸುಖದುಃಖಗಳನ್ನು ನಾನು ಪಡೆಯುತ್ತೇನೆ ಎಂದು ತಿಳಿದಿದ್ದೇನೆ.

ಸಂಸ್ವೇದಜಾ ಅಂಡಜಾಶ್ಚೋದ್ಭಿದಶ್ಚ
ಸರೀಸೃಪಾಃ ಕೃಮಯೋಽಥಾಪ್ಸು ಮತ್ಸ್ಯಾಃ |
ತಥಾಶ್ಮಾನಸ್ತೃಣಕಾಷ್ಠಂ ಚ ಸರ್ವೇ
ದಿಷ್ಟಕ್ಷಯೇ ಸ್ವಾಂ ಪ್ರಕೃತಿಂ ಭಜಂತಿ ॥11॥

ಸ್ವೇದಜ, ಅಂಡಜ, ಉದ್ಭಿದ ಮತ್ತು ಜರಾಯುಜ ಪ್ರಾಣಿಗಳು, ಸರ್ಪಗಳು, ಕ್ರಿಮಿಗಳು, ನೀರಿನಲ್ಲಿರುವ ಮೀನುಗಳೂ, ಕಲ್ಲುಗಳು, ತೃಣಕಾಷ್ಠಗಳು ಎಲ್ಲವೂ ತಮ್ಮ ಅದೃಷ್ಟ ಕ್ಷಯವಾದಾಗ ತಮ್ಮ ನೈಜ ಸ್ಥಿತಿಯನ್ನು ಹೊಂದುತ್ತವೆ.

ಅನಿತ್ಯತಾಂ ಸುಖದುಃಖಸ್ಯ ಮತ್ವಾ
ಬುದ್ಧ್ಯಾ ಕಸ್ಮಾದಷ್ಟಕ ಸಂತಪೇಽಹಮ್ |
ಕಿಂ ಕಾರ್ಯಂ ವೈ ಕಿಂ ಚ ಕೃತ್ವಾ ನ ತಪ್ಯೇ
ತಸ್ಮಾತ್ ಸಂತಾಪಂ ವರ್ಜಯಾಮ್ಯಪ್ರಮತ್ತಃ ॥12॥

ಎಲೈ ಅಷ್ಟಕನೇ ಸುಖದುಃಖಗಳನ್ನು ಅನಿತ್ಯ ಎಂದು ಬುದ್ಧಿಯಿಂದ ತಿಳಿದ ನಾನು ಏತಕ್ಕೆ ಸಂತಾಪ ಪಡಲಿ. ಈಗ ಆಕಾಶದಲ್ಲಿ ನಿಂತಿರುವ ನಾನು ಏನನ್ನೂ ಮಾಡಲು ಸಾಧ್ಯವಿಲ್ಲ. ಮಾಡಿದ ಸಜ್ಜನ ಅವಮಾನಕ್ಕೆ ಪರಿಹಾರಕವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಎಚ್ಚರಿಕೆಯಿಂದಿದ್ದು ಸಂತಾಪವನ್ನು ವರ್ಜಿಸುತ್ತೇನೆ.

ದುಃಖೇ ನ ಖಿದ್ಯೇನ್ನ ಸುಖೇನ ಹೃಷ್ಯೇತ್
ಸಮೇನ ವರ್ತೇತ ಸದೈವ ಧೀರಃ |
ದಿಷ್ಟಂ ಬಲೀಯಃ ಸಮವೇಕ್ಷ್ಯ ಬುದ್ಧ್ಯಾ
ನ ಸಂಜ್ವರೇನ್ನಾಪಿ ಹೃಷ್ಯೇನ್ಮನುಷ್ಯಃ ॥13॥

ದುಃಖದಲ್ಲಿ ಖೇದ ಪಡಬಾರದು, ಸುಖ ಬಂದಾಗ ಹಿಗ್ಗಬಾರದು. ಧೀರನಾದವನು ಯಾವಾಗಲೂ ಒಂದೇ ರೀತಿ ಇರಬೇಕು. ವಿಧಿಯು ಬಲಿಷ್ಠವೆಂದು ಬುದ್ಧಿಯಿಂದ ಯೋಚನೆ ಮಾಡಿ ಮನುಷ್ಯನು ಹರ್ಷತಾಪಗಳನ್ನು ತ್ಯಜಿಸಬೇಕು.

ದೃಷ್ಟೋ ಹಿ ಮೇ ಪರಮಶ್ಚಾಪಿ ಲೋಕಃ
ಪ್ರಾಪ್ತಾ ಭೋಗಾಃ ಸರ್ವಶೋ ನಾಸ್ತಿ ನಿಷ್ಠಾ ॥14॥

ನಾನು ಶ್ರೇಷ್ಠವಾದ ಲೋಕಗಳನ್ನು ನೋಡಿದ್ದೇನೆ. ಎಲ್ಲಾ ಭೋಗಗಳನ್ನೂ ಅನುಭವಿಸಿದ್ದೇನೆ. ಆದರೆ ಎಲ್ಲಿಯೂ, ಯಾವುದೂ ಶಾಶ್ವತವಲ್ಲ.

ಅಷ್ಟಕಃ

ಯೇ ವೈ ಲೋಕಾಃ ಪಾರ್ಥಿವೇಂದ್ರ ಪ್ರಧಾನಾಃ
ತ್ವಯಾ ಭುಕ್ತಾ ಯಂ ಚ ಕಾಲಂ ಯಥಾವತ್
ತಂ ಮೇ ರಾಜನ್ ಬ್ರೂಹಿ ಸರ್ವಂ ಯಥಾವತ್
ಕ್ಷೇತ್ರಜ್ಞವದ್ ಭಾಷಸೇ ಸರ್ವಧರ್ಮಾನ್ ॥15॥

ಎಲೈ ರಾಜನೇ, ನೀನು ಪ್ರಧಾನವಾಗಿ ಯಾವ ಯಾವ ಲೋಕಗಳಿಗೆ ಹೋಗಿದ್ದೆ, ಅಲ್ಲಿ ಎಷ್ಟು ಕಾಲವನ್ನು ಕಳೆದೆ, ಅವೆಲ್ಲವನ್ನೂ ನನಗೆ

ಸರಿಯಾಗಿ ಹೇಳು. ಎಲೈ ರಾಜನೇ, ನೀನು ಕ್ಷೇತ್ರಜ್ಞನಾದ ಪರಮಾತ್ಮನಂತೆ ಎಲ್ಲಾ ಧರ್ಮಗಳ ವಿಷಯದಲ್ಲಿಯೂ ಮಾತನಾಡುತ್ತಿದ್ದೀಯೆ.

ಯಯಾತಿಃ

ರಾಜಾಽಹಮಾಸಮಿಹ ಸಾರ್ವಭೌಮ-
ಸ್ತತೋ ಲೋಕಾನ್ ಮಹತೋಽಜಯಂ ವೈ |
ತತ್ರಾವಸಂ ವರ್ಷಸಹಸ್ರಮಾತ್ರಂ
ತತೋ ಲೋಕಂ ಪರಮಸ್ಮ್ಯಭ್ಯುಪೇತಃ ॥16॥

ನಾನು ಈ ಲೋಕದಲ್ಲಿ ಸಾರ್ವಭೌಮನಾದ ರಾಜನಾಗಿದ್ದೆ. ಧರ್ಮಾಚರಣೆ ಮಾಡಿ ಮಹತ್ತಾದ ಲೋಕಗಳನ್ನು ಜಯಿಸಿದೆ. ಮೊದಲು ಸೂರ್ಯಚಂದ್ರಾದಿ ಲೋಕಕ್ಕೆ ಹೋದೆ. ಅಲ್ಲಿ ಒಂದು ಸಹಸ್ರವರ್ಷಕಾಲ ಇದ್ದು ಅಲ್ಲಿಂದ ಧ್ರುವಲೋಕವನ್ನು ತಲುಪಿದೆ.

ತತೋ ಪುರೀಂ ಪುರುಹೂತಸ್ಯ ರಮ್ಯಾಂ
ಸಹಸ್ರದ್ವಾರಾಂ ಶತಯೋಜನಾಯತಾಮ್ |
ಅಧ್ಯಾವಸಂ ವರ್ಷಸಹಸ್ರಮಾತ್ರಂ
ತತೋ ಲೋಕಂ ಪರಮಸ್ಮ್ಯಭ್ಯುಪೇತಃ ॥17॥

ಅನಂತರ ಅಲ್ಲಿಂದ ಶತಯೋಜನ ವಿಸ್ತಾರವಾದ ಸಹಸ್ರದ್ವಾರಗಳುಳ್ಳ ಮನೋಹರವಾದ ಇಂದ್ರನ ಪಟ್ಟಣಕ್ಕೆ ಹೋದೆ. ಅಲ್ಲಿ ಒಂದು ಸಹಸ್ರ ವರ್ಷವಿದ್ದು ಅಲ್ಲಿಂದ ಜನಲೋಕಾದಿಗಳಿಗೆ ಹೋದೆ.

ತತೋ ದಿವ್ಯಾಮಜರಂ ಪ್ರಾಪ್ಯ ಲೋಕಂ
ಪ್ರಜಾಪತೇರ್ಲೋಕಪತೇರ್ದುರಾಪಮ್ |
ತತ್ರಾವಸಂ ವರ್ಷಸಹಸ್ರಮಾತ್ರಂ
ತತೋ ಲೋಕಂ ಪರಮಸ್ಮ್ಯಭ್ಯುಪೇತಃ ॥18॥

ಅಲ್ಲಿಂದ ದಿವ್ಯವಾದ ಅಜರವಾದ ಪಡೆಯಲು ದುಸ್ಸಾಧ್ಯವಾದ ಬ್ರಹ್ಮಲೋಕಕ್ಕೆ ಹೋದೆ. ಅಲ್ಲಿ ಒಂದು ಸಹಸ್ರವರ್ಷವಿದ್ದು ಅಲ್ಲಿಂದ ಮುಂದೆ ಅದಕ್ಕಿಂತ ಶ್ರೇಷ್ಠವಾದ ಅಮುಕ್ತಗಮ್ಯವಾದ ಸಾಂತಾನಿಕ ಲೋಕಗಳಿಗೆ ಹೋದೆ.

ದೇವಸ್ಯ ದೇವಸ್ಯ ನಿವೇಶನೇ ಚ
ವಿಜಿತ್ಯ ಲೋಕಾನವಸಂ ಯಥೇಷ್ಟಮ್ |
ಸಂಪೂಜ್ಯಮಾನಸ್ತ್ರಿದಶೈಃ ಸಮೇತೈಃ
ತುಲ್ಯಪ್ರಭಾವದ್ಯುತಿರೀಶ್ವರಾಣಾಮ್ ॥19॥

ಸತ್ಕರ್ಮಗಳಿಂದ ಅನೇಕ ದೇವಲೋಕಗಳನ್ನು ಸಂಪಾದಿಸಿದ್ದರಿಂದ ಪ್ರತಿಯೊಬ್ಬ ದೇವನ ಗೃಹದಲ್ಲಿಯೂ ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಟ್ಟು ದೇವತೆಗಳಿಗೆ ಸಮಾನವಾದ ಪ್ರಭಾವ ಮತ್ತು ಕಾಂತಿಗಳಿಂದ ಕೂಡಿದವನಾಗಿ ಬಹುಕಾಲ ವಾಸವನ್ನು ಮಾಡಿದೆ.

ತಥಾಽವಸಂ ನಂದನೇ ಕಾಮರೂಪೀ
ಸಂವತ್ಸರಾಣಾಮಯುತಂ ಶತಾನಾಮ್ |
ಸಹಾಪ್ಸರೋಭಿರ್ವಿಹರನ್ ಪುಣ್ಯಗಂಧಾನ್
ಪಶ್ಯನ್ ನಗಾನ್ ಪುಷ್ಪಿತಾಗ್ರಾನ್ ಸುರೂಪಾನ್ ॥20॥

ಅಲ್ಲಿ ನಂದನವನದಲ್ಲಿ ಬೇಕಾದ ರೂಪವನ್ನು ತೆಗೆದುಕೊಂಡು ಹತ್ತು ಲಕ್ಷವರ್ಷಗಳ ಕಾಲ ವಾಸಮಾಡಿದೆ. ಅಪ್ಸರೆಯರ ಜೊತೆಯಲ್ಲಿ ವಿಹಾರಮಾಡುತ್ತಾ, ಪುಣ್ಯಗಂಧವನ್ನು ಆಘ್ರಾಣಿಸುತ್ತಾ, ಪುಷ್ಪಿತವಾದ ವೃಕ್ಷಗಳುಳ್ಳ ಪರ್ವತವನ್ನು ನೋಡುತ್ತಾ ಬಹುಕಾಲ ವಿಹರಿಸಿದೆ.

ತತ್ರಸ್ಥಂ ಮಾಂ ದೇವಸುಖೇಷು ಸಕ್ತಂ
ಕಾಲೇಽತೀತೇ ಮಹತಿ ತತೋಽತಿಮಾತ್ರಮ್ |
ದೂತೋ ದೇವಾನಾಮಬ್ರವೀದುಗ್ರರೂಪೋ
ಧ್ವಂಸೇತ್ಯುಚ್ಚೈಸ್ತ್ರಿಃ ಪ್ಲುತೇನ ಸ್ವರೇಣ ॥21॥

ದೇವತೆಗಳಿಗೆ ಸಮಾನವಾದ ಭೋಗದಲ್ಲಿ ಆಸಕ್ತನಾದ ಅಲ್ಲಿದ್ದ ನನ್ನನ್ನು ಕುರಿತು ಬಹುಕಾಲ ಕಳೆದ ಮೇಲೆ ಉಗ್ರರೂಪಿಯಾದ ಒಬ್ಬ ದೇವದೂತನು ಸಮೀಪಿಸಿ ಕೆಳಗೆ ಬೀಳು ಎಂದು ಉಚ್ಚವಾದ ಸ್ವರದಲ್ಲಿ ಮೂರು ಬಾರಿ ಹೇಳಿದನು.

ಏತಾವನ್ಮೇ ವಿದಿತಂ ರಾಜಸಿಂಹ
ತತೋ ಭ್ರಷ್ಟೋಽಹಂ ನಂದನಾತ್ ಕ್ಷೀಣಪುಣ್ಯಃ |
ವಾಚೋಽಶ್ರೌಷಂ ಚಾಂತರಿಕ್ಷೇ ಸುರಾಣಾ-
ಮನುಕ್ರೋಶಾಚ್ಛೋಚತಾಂ ಮಾನವೇಂದ್ರ ॥22॥

ಎಲೈ ರಾಜಸಿಂಹನೇ, ಇಷ್ಟು ಮಾತ್ರ ನನಗೆ ಗೊತ್ತು. ಪುಣ್ಯವನ್ನು ಕಳೆದುಕೊಂಡು ನಂದನವನದಿಂದ ಕೆಳಗೆ ಬೀಳುತ್ತಿದ್ದ ನಾನು, ಅಂತರಿಕ್ಷದಲ್ಲಿ ನನ್ನ ಮೇಲಿನ ದಯೆಯಿಂದ ದೇವತೆಗಳು ಮಾತನಾಡುವುದನ್ನು ಕೇಳಿದೆ-

ಅಹೋ ಕಷ್ಟಂ ಕ್ಷೀಣಪುಣ್ಯೋ ಯಯಾತಿಃ
ಪತತ್ಯಸೌ ಪುಣ್ಯಕೃತ್ ಪುಣ್ಯಕೀರ್ತಿಃ |
ತಾನಬ್ರುವಂ ಪತಮಾನಸ್ತಥಾಽಹಂ
ಸತಾಂ ಮಧ್ಯೇ ನಿಪತೇಯಂ ಕಥಂ ನು ॥23॥

`ಅಯ್ಯೋ ಕಷ್ಟ, ಪುಣ್ಯವನ್ನು ಮಾಡಿದವನೂ, ಪುಣ್ಯಕೀರ್ತಿಯೂ ಆದ ಯಯಾತಿಯು ಪುಣ್ಯವನ್ನು ಕಳೆದುಕೊಂಡು ಕೆಳಗೆ ಬೀಳುತ್ತಿದ್ದಾನೆ' ಎಂಬ ಮಾತುಗಳು ಕೇಳಿದವು. ಆಗ ನಾನು ಅವರನ್ನು ಕುರಿತು ಕೇಳಿದೆ. ನಾನು ಸಜ್ಜನರ ಮಧ್ಯದಲ್ಲಿ ಯಾವ ಉಪಾಯದಿಂದ ಬೀಳುತ್ತೇನೆ ಹೇಳಿ ಎಂದು.

ತೈರಾಖ್ಯಾತಾ ಭವತಾಂ ಯಜ್ಞಭೂಮಿಃ
 ಸಮೀಕ್ಷ್ಯೈನಾಂ ತ್ವರಿತಮುಪಾಗತೋಽಸ್ಮಿ |
ಹವಿರ್ಗಂಧಂ ದೇಶಿಕಂ ಯಜ್ಞಭೂಮೇಃ
 ಧೂಮಾವಾಪ್ತಂ ಪ್ರತಿಗೃಹ್ಣನ್ ಪ್ರತೀತಮ್ ॥24॥

ಅವರು ಇಲ್ಲಿ ನಿಮ್ಮ ಯಜ್ಞಭೂಮಿಯನ್ನು ಸೂಚಿಸಿದರು. ಅದನ್ನು ನೋಡಿ ನಾನು ಶೀಘ್ರವಾಗಿ ಈ ಕಡೆಗೆ ಬಂದೆ. ಯಜ್ಞಭೂಮಿಯ ದೇಶದಿಂದ ಉಂಟಾದ ಹವಿಸ್ಸಿನ ಗಂಧವು ಮೇಲೆ ಬಂದುದನ್ನು ನೋಡಿ ಆಘ್ರಾಣಿಸಿ ಇಲ್ಲಿಗೆ ಬಂದಿದ್ದೇನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.

ಎಪ್ಪತ್ತೊಂಭತ್ತನೆಯ ಅಧ್ಯಾಯ

(ಮೃತನಾದವನಿಗೆ ಸ್ವರ್ಗಾದಿಭೋಗಾನಂತರದಲ್ಲಿ ಶರೀರಾಂತರಪ್ರಾಪ್ತಿ ಮತ್ತು ಪುನರ್ಜನ್ಮ ಪ್ರಕಾರದ ಕಥನ)

ಅಷ್ಟಕಃ
ತಥಾ ವಸನ್ ನಂದನೇ ಕಾಮರೂಪೀ
 ಸಂವತ್ಸರಾಣಾಮಯುತಂ ಶತಾನಾಮ್ |
ಕಿಂ ಕಾರಣಂ ಕಾರ್ತಯುಗಪ್ರಧಾನ
 ಹಿತ್ವಾ ತ್ವಂ ತದ್ ಯೇನ ಧರಾಂ ಪ್ರಪನ್ನಃ ॥1॥

ಎಲೈ ಕೃತಯುಗವಾಸಿಗಳಲ್ಲಿ ಪ್ರಧಾನನಾದವನೇ, ನೀನು ಆ ರೀತಿಯಲ್ಲಿ ಕಾಮರೂಪವನ್ನು ಧರಿಸಿ ನಂದನವನದಲ್ಲಿ ವಿಹರಿಸುತ್ತಿದ್ದವನು ಅದನ್ನು ಬಿಟ್ಟು ಭೂಮಿಗೆ ಬರಲು ಏನು ಕಾರಣ?

ಯಯಾತಿಃ
ಸಂಬಂಧಿನೋ ಜ್ಞಾತಿಸುಹೃಜ್ಜನಾಶ್ಚ
 ಕ್ಷೀಣೇ ವಿತ್ತೇ ಸಂತ್ಯಜತೀಹ ಮರ್ತ್ಯಮ್ |
ತಥಾ ಚೈನಂ ಕ್ಷೀಣಪುಣ್ಯಂ ಮನುಷ್ಯಂ
 ತ್ಯಜಂತಿ ಸದ್ಯಃ ಸೇಶ್ವರಾ ದೇವಸಂಘಾಃ ॥2॥

ಈ ಲೋಕದಲ್ಲಿ ವಿತ್ತಹೀನನಾದ ಮನುಷ್ಯನನ್ನು ಬಾಂಧವರೂ, ದಾಯಾದರೂ ಮತ್ತು ಸುಹೃಜ್ಜನರೂ ಪರಿತ್ಯಜಿಸುತ್ತಾರೆ. ಅದರಂತೆ ಕ್ಷೀಣಪುಣ್ಯನಾದ ಮನುಷ್ಯನನ್ನು ಲೋಕಪಾಲಕರಿಂದ ಸಹಿತವಾದ ಎಲ್ಲಾ ದೇವತಾಗಣವೂ ಪರಿತ್ಯಜಿಸುತ್ತದೆ.

ಅಷ್ಟಕಃ
ಕಥಂ ತತ್ರ ಕ್ಷೀಣಪುಣ್ಯಾ ಭವಂತಿ
 ಸಂಮುಹ್ಯತೇ ಮೇಽತ್ರ ಮನೋಽತಿಮಾತ್ರಮ್ |
ಕೇ ವಾ ಶಿಷ್ಟಾಃ ಕಸ್ಯ ಧಾಮೋಪಯಾಂತಿ
 ತನ್ಮೇ ಬ್ರೂಹಿ ಕ್ಷೇತ್ರವಿತ್ ತ್ವಂ ಮತೋ ಮೇ ॥3॥

ಸ್ವರ್ಗಲೋಕದಲ್ಲಿ ಜನರು ಹೇಗೆ ಪುಣ್ಯಕ್ಷಯವನ್ನು ಹೊಂದಿ ಈ ಲೋಕವನ್ನು ಹೊಂದುತ್ತಾರೆ ? ಸ್ವರ್ಗಫಲವನ್ನು ಭೋಗಿಸಿ ಅಲ್ಲಿ ಉಳಿದವರು ಯಾರು ಯಾವ ಸ್ಥಾನಕ್ಕೆ ಹೋಗುತ್ತಾರೆ ? (ಯಾರು ಭೂಲೋಕಕ್ಕೆ, ಯಾರು ಅಂತರಿಕ್ಷಲೋಕಕ್ಕೆ, ಮತ್ತು ಯಾರು ನರಕಲೋಕಕ್ಕೆ ಹೋಗುತ್ತಾರೆ?) ನೀನು ನನ್ನ ಅಭಿಪ್ರಾಯದಲ್ಲಿ ಸರ್ವಜ್ಞನಾಗಿದ್ದೀಯೆ.

ಯಯಾತಿಃ
ಇಮಂ ಭೌಮಂ ನರಕಂ ತೇ ಪತಂತಿ
 ಲಾಲಪ್ಯಮಾನಾ ನರದೇವ ಸರ್ವೇ |
ತೇ ಕಂಕ ಗೋಮಾಯುಬಲಾಶನಾರ್ಥಂ
 ಕ್ಷೀಣೇ ಪುಣ್ಯೇ ಬಹುಧಾ ಪ್ರವ್ರಜಂತಿ ॥4॥

ಎಲೈ ನರದೇವನೇ, ಸ್ವರ್ಗಕ್ಕೆ ಹೋದವರೆಲ್ಲರೂ ಭೋಗದಿಂದ ಪುಣ್ಯಕ್ಷಯವನ್ನು ಹೊಂದುತ್ತಾರೆ. ಅವರು ಅಲ್ಲಿಂದ ಬೀಳುತ್ತಾ ಬಹಳವಾಗಿ ಪ್ರಲಾಪವನ್ನು ಮಾಡಿಕೊಂಡು ಬೀಳುತ್ತಾರೆ. ಅವರು ಅಂತರಿಕ್ಷದಲ್ಲಿ ನಿಲ್ಲುವುದಿಲ್ಲ ಅಥವಾ ಕೆಳಗಿನ ನರಕಲೋಕಕ್ಕೆ ಹೋಗುವುದಿಲ್ಲ. ಬಹುದುಃಖ ಮಿಶ್ರಿತವಾದ ಕಾರಣದಿಂದ ನರಕಪ್ರಾಯವಾದ ಈ ಭೂಲೋಕಕ್ಕೆ ಬರುತ್ತಾರೆ. ಇಲ್ಲಿ ಬಂದರೂ ಕೂಡ ಮತ್ತೂ ಹೆಂಡತಿ ಮಕ್ಕಳನ್ನು ಪೋಷಿಸುವ ಸಲುವಾಗಿ ಕಂಕ, ನರಿ, ಹದ್ದು ಮೊದಲಾದ ಪ್ರಾಣಿಪಕ್ಷಿಗಳಂತೆ ಅನ್ನದ ಸಲುವಾಗಿ ಹೆಂಡತಿ ಮಕ್ಕಳನ್ನು ತೊರೆದು ಸಂನ್ಯಾಸಿಗಳಂತೆ ದೇಶದೇಶಗಳಲ್ಲಿ ತಿರುಗುತ್ತಾರೆ.

ತಸ್ಮಾದೇತದ್ ವರ್ಜನೀಯಂ ನರೇಣ
 ದುಷ್ಟಂ ಲೋಕೇ ಗರ್ಹಣೀಯಂ ಚ ಕರ್ಮ |
ಆಖ್ಯಾತಂ ತೇ ಪಾರ್ಥಿವ ಸರ್ವಮೇತದ್
 ಭೂಯಶ್ಚೇದಾನೀಂ ವದ ಕಿಂ ತೇ ವದಾಮಿ ॥5॥

ಎಲೈ ರಾಜನೇ, ಆದ್ದರಿಂದ ಮನುಷ್ಯನಾದವನು ಲೋಕದಲ್ಲಿ ನಿಂದಿತವಾದ ನಿಷಿದ್ಧವಾದ ಕರ್ಮವನ್ನು ಮಾಡಬಾರದು. ನೀನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ಹೇಳಿದ್ದೇನೆ. ಇನ್ನೇನು ಹೇಳಲಿ ಎಂದು ಹೇಳು.
ಅಷ್ಟಕಃ
ಯದಾ ಸಮಂತಾತ್ ಪತಿತಾನ್ ತುದಂತಿ
ವಯಾಂಸಿ ಗೃಧ್ರಾಃ ಪಿಶಿತಾಶನಾಶ್ಚ |
ಕಥಂ ಭವಂತಿ ಕತಮಾ ಭವಂತಿ
ನ ಭೌಮಮಂತರ್ನರಕಂ ಶೃಣೋಮಿ ॥6॥
ಜೀವರು ಸ್ವರ್ಗದಿಂದ ಕೆಳಗೆ ಬೀಳುವಾಗ ಹದ್ದು ಮೊದಲಾದ ಪಕ್ಷಿಗಳೂ ಮತ್ತು ಮಾಂಸಭಕ್ಷಕರಾದ ರಾಕ್ಷಸರೂ ಅವರಿಗೆ ವ್ಯಥೆಯನ್ನು ಉಂಟುಮಾಡುತ್ತಾರೆ. ಈ ಪಕ್ಷಿ ಮೊದಲಾದವುಗಳೆಲ್ಲವೂ ಅಂತರಿಕ್ಷದಲ್ಲಿ ಸ್ವಚ್ಛಂದವಾಗಿ ತಿರುಗಾಡುತ್ತಿವೆ. ನಾನು ಮಾತ್ರ ಕೆಳಗೆ ಬೀಳುತ್ತಿದ್ದೇನೆ ಎಂದು ಒಂದು ವ್ಯಥೆ. ಕೆಳಗೆ ಬೀಳುವ ತನ್ನನ್ನು ಪಕ್ಷಿಗಳು ಮತ್ತು ರಾಕ್ಷಸರು ಅಂತರಿಕ್ಷದಲ್ಲಿ ಗಾಯಗೊಳಿಸುವರೆಂಬುದು ಇನ್ನೊಂದು ವ್ಯಥೆ. ಸ್ವರ್ಗದಲ್ಲಿ ಸುಖವಾಗಿದ್ದೆ. ಈ ಮಧ್ಯಮಾರ್ಗದಲ್ಲಿ ಆ ಸುಖವಿಲ್ಲವೆಂಬುದು ಮೂರನೆಯ ವ್ಯಥೆ. (ಇದು ಪ್ರಲಾಪಮಾಡುತ್ತಾ ಬೀಳುತ್ತಾರೆ ಎಂದು ಹೇಳಿದುದರ ವಿವರಣೆ) ಹಾಗೆ ಕೆಳಗೆ ಬೀಳುವವರು ಅಲ್ಪಕಾಲದಲ್ಲಿಯೇ ಬೀಳುತ್ತಾರೆಯೋ ಅಥವಾ ಬಹಳ ಕಾಲದಲ್ಲಿ ಬೀಳುತ್ತಾರೆಯೋ ? (ಇದು ಎರಡನೆಯ ಪ್ರಶ್ನೆ). ಬಹುಕಾಲದಲ್ಲಿ ಬೀಳುವವರಿಗೂ ಸಹ ಎಲ್ಲರಿಗೂ ಆ ಕಾಲವು ಸಮವಾಗಿರುತ್ತದೆಯೆ ಅಥವಾ ವಿಷಮವಾಗಿರುತ್ತದೆಯೆ ? (ಇದು ಎರಡನೆಯ ಪ್ರಶ್ನೆಯದೇ ವಿವರಣೆ) (ಅಲ್ಪಕಾಲವಾಗಲೀ ಅಥವಾ ಬಹುಕಾಲವಾಗಲೀ ಅದು ಎಲ್ಲರಿಗೂ ಸಮಾನವೇ ಅಥವಾ ಬೇರೆಬೇರೆಯವರಿಗೆ ಬೇರೆಬೇರೆ ಕಾಲವೇ ಎಂದು ಪ್ರಶ್ನೆಯ ಅಭಿಪ್ರಾಯ). ಭೂಮಿಯ ಒಳಗೆ (ಎಂದರೆ ಕೆಳಗೆ ಬಿಲದಲ್ಲಿ) ಇರುವ ನರಕವನ್ನು ನಾನು ಕೇಳುತ್ತಿಲ್ಲ. ಭೂಮಿಯ ಮೇಲೆ ಇರುವ ಸಂಸಾರವೇ ನರಕವೆಂದು ಕೇಳುತ್ತಿದ್ದೇನೆ.
ಊರ್ಧ್ವಂ ದೇಹಾತ್ ಪ್ರಾಣಿನೋ ಜೃಂಭಮಾಣಾ
ವ್ಯಕ್ತಂ ಪೃಥಿವ್ಯಾಮಿಹ ಸಂಚರಂತಃ |
ಇಮಂ ಭೌಮಂ ನರಕಂ ತೇ ಪತಂತಿ
ನಾವೇಕ್ಷಂತೇ ವರ್ಷಪೂಗಾನನೇಕಾನ್ ॥7॥
ಬಹುಕಾಲದ ನಂತರವೇ ಭೂಮಿಗೆ ಬರುತ್ತಾರೆ. ಅಲ್ಪಕಾಲದಿಂದಲ್ಲ. ಭೂಮಿಯಲ್ಲಿ ಜನ್ಮವನ್ನು ಪಡೆದು ದೇಹವು ಬೆಳೆದ ಮೇಲೆ ಈ ಭೂಮಿಯಲ್ಲಿಯೇ ಬಹಳವಾಗಿ ಸಂಚರಿಸುತ್ತಾರೆ. ಸಂಸಾರಾಸಕ್ತರಾಗಿರುವ ಕಾರಣದಿಂದ ಅವರಿಗೆ ಅನೇಕ ವರ್ಷಗಳು ಕಳೆದು ಹೋಗುವುದೂ ಸಹ ಗಮನಕ್ಕೆ ಬರುವುದಿಲ್ಲ.
ಷಷ್ಟಿಂ ಸಹಸ್ರಾಣಿ ಪತಂತಿ ವ್ಯೋಮ್ನಃ
ತಥಾಽಶೀತಿಂ ಪರಿವತ್ಸರಾಣಿ |
ತಾನ್ ವೈ ತುದಂತಿ ಪತತಃ ಪ್ರಪಾತೇ
ಭೀಮಾ ಭೌಮಾ ರಾಕ್ಷಸಾಸ್ತೀಕ್ಷ್ಣದಂಷ್ಟ್ರಾಃ ॥8॥
ಸ್ವರ್ಗದಿಂದ ಕೆಳಗೆ ಆಕಾಶಮಾರ್ಗದಲ್ಲಿ ಬೀಳುತ್ತಾ ಕೆಲವರು ಅರವತ್ತು ವರ್ಷಗಳವರೆಗೂ, ಇನ್ನು ಕೆಲವರು ಸಾವಿರವರ್ಷದವರೆಗೂ, ಇನ್ನು ಕೆಲವರು ಎಂಬತ್ತುವರ್ಷದವರೆಗೂ, ಇನ್ನು ಕೆಲವರು ಬೇರೆಬೇರೆ ಕಾಲಗಳವರೆಗೂ ಬೀಳುತ್ತಾರೆ. ಭೂಲೋಕದಲ್ಲಿ ಕೆಟ್ಟ ಪಾತವನ್ನು ಹೊಂದುವ ಅವರನ್ನು ಭೂಲೋಕದ ಪಕ್ಷಿಗಳು ಮತ್ತು ರಾಕ್ಷಸರು ಅಂತರಿಕ್ಷಲೋಕಕ್ಕೆ ಹೋಗಿ ವ್ಯಥೆಪಡಿಸುತ್ತಾರೆ.
ಯದ್ಯೆನಸಾ ತೇ ಪತತಸ್ತುದಂತಿ
ಭೀಮಾ ಭೌಮಾ ರಾಕ್ಷಸಾಸ್ತೀಕ್ಷ್ಣದಂಷ್ಟ್ರಾಃ |
ಕಥಂ ಭವಂತಿ ಕತಮಾ ಭವಂತಿ
ಕಥಂಭೂತಾ ಗರ್ಭಗತಾ ಭವಂತಿ ॥9॥
ಯಾವಾಗ ಪಾಪದ ಫಲವಾಗಿ ಅವರು ತೀಕ್ಷ್ಣದಂತಗಳುಳ್ಳ ಭಯಂಕರವಾದ ಭೂಲೋಕಸಂಬಂಧಿಗಳಾದ ರಾಕ್ಷಸಾದಿಗಳಿಂದ ಘಾಸಿಗೊಳಿಸಲ್ಪಡುತ್ತಾರೆಯೋ ಆಗ ಅವರು ಭೂಲೋಕದಲ್ಲಿ ಯಾವ ರೂಪದಿಂದ ಜನಿಸುತ್ತಾರೆ? ರೇತಸ್ಸಿನ ರೂಪದಿಂದಲೋ ಅಥವಾ ಬೇರೆಯ ರೂಪದಿಂದಲೋ? ರೇತೋರೂಪದಿಂದ ಜನಿಸಿದರೂ ಯಾವಯಾವ ದ್ವಾರಗಳಿಂದ (ಮೂಲಕವಾಗಿ) ರೇತಸ್ಸನ್ನು ತಲುಪುತ್ತಾರೆ? ರೇತಸ್ಸನ್ನು ಪ್ರವೇಶಿಸಿದ ಮೇಲೆಯೂ ಯಾವಯಾವ ಪ್ರಕಾರಗಳಿಂದ ಗರ್ಭಗತರಾಗುತ್ತಾರೆ?
ಯಯಾತಿಃ
ಅಸೃಗ್ ರೇತಃ ಪುಷ್ಪರಸಾನುಪೃಕ್ತ-
ಮನ್ವೇತಿ ತಾವತ್ ಪುರುಷೇಣ ಸೃಷ್ಟಮ್ |
ತಚ್ಚೈತಸ್ಯಾಂ ರಜ ಆಪಾದ್ಯತೇ ವೈ
ಸ ಗರ್ಭಭೂತಃ ಸಮುಪೈತಿ ತತ್ರ ॥10॥
ಪುರುಷನು ಉತ್ಸರ್ಗಮಾಡಿದ ರೇತಸ್ಸಿನ ಕಣವು ಋತುಸ್ನಾನಾನಂತರದ ಅನುಕೂಲಕರವಾದ ಕಾಲದಲ್ಲಿ ಸ್ತ್ರೀರೇತೋಕಣವಾದ ರಕ್ತದೊಡನೆ ಸಂಬಂಧವನ್ನು ಹೊಂದಿದಾಗ ಜೀವನು ಪುರುಷರೇತಃಕಣದಿಂದ ಸ್ತ್ರೀರೇತಃಕಣವನ್ನು ಪ್ರವೇಶಿಸುತ್ತಾನೆ. ಅನಂತರ ಅವೆರಡು ರೇತಃಕಣಗಳೂ ಸೇರಿ ಗರ್ಭವಾಗುತ್ತದೆ. ಹೀಗೆ ಯೋನಿಯ ಆಕಾಶದಿಂದ ಒಳಗೆ ಪ್ರವೇಶಿಸಿದ ಜೀವನು ಜರಾಯುವಿನಿಂದ ಪರಿವೃತವಾದ ಗರ್ಭಾಕಾಶದ ಪ್ರಾಪ್ತಿಯನ್ನು ಪಡೆಯುತ್ತಾನೆ.
ವನಸ್ಪತೀಂಶ್ಚೌಷಧೀಶ್ಚಾವಿಶಂತಿ
ಅಪೋ ವಾಯುಂ ಪೃಥಿವೀಂ ಚಾಂತರಿಕ್ಷಮ್ |

ಚತುಷ್ಪದಂ ದ್ವಿಪದಂ ಚಾಪಿ ಸರ್ವ-
ಮೇವಂ ಭೂತಾ ಗರ್ಭಭೂತಾ ಭವಂತಿ ॥11॥
ಗರ್ಭವಾಸವನ್ನು ಹೊಂದುವುದಕ್ಕೆ ಪುರುಷನ ರೇತಸ್ಸನ್ನು ಪ್ರವೇಶಿಸುವ ಜೀವನು ನಾನಾ ದ್ವಾರಗಳಿಂದ ಪ್ರವೇಶಿಸುತ್ತಾನೆ. ಫಲದ ಮೂಲಕ ಪುರುಷನ ರೇತಸ್ಸನ್ನು ಪ್ರವೇಶಿಸುವವರು ಮೊದಲು ವನಸ್ಪತಿಗಳನ್ನು ಪ್ರವೇಶಿಸುತ್ತಾರೆ. ಧಾನ್ಯದ್ವಾರಾ ಪ್ರವೇಶಿಸುವರು ಔಷಧಿಗಳನ್ನು ಪ್ರವೇಶಿಸುತ್ತಾರೆ. ಪಾನದ್ವಾರಾ ಪ್ರವೇಶಿಸುವವರು ನೀರನ್ನು ಪ್ರವೇಶಿಸುತ್ತಾರೆ. ಸೌರಭದ್ವಾರಾ ಪ್ರವೇಶಿಸುವವರು ವಾಯುವನ್ನು ಪ್ರವೇಶಿಸುತ್ತಾರೆ. ಪೃಥಿವಿಯ ಮೂಲಕ ಪ್ರವೇಶಿಸುವವರು (ಮಣ್ಣನ್ನು ತಿನ್ನುವುದರಿಂದ ಪ್ರವೇಶಿಸುವವರು) ಭೂಮಿಯನ್ನು ಪ್ರವೇಶಿಸುತ್ತಾರೆ. ಅಕಸ್ಮಾತ್ತಾಗಿ ಪ್ರವೇಶಿಸುವವರು ಆಕಾಶವನ್ನು ಪ್ರವೇಶಿಸುತ್ತಾರೆ. ಮಾಂಸಭಕ್ಷಣೆಯ ಮೂಲಕ ಪ್ರವೇಶಿಸುವವರು ಎರಡುಕಾಲಿನ ಅಥವಾ ನಾಲ್ಕುಕಾಲಿನ ಪ್ರಾಣಿಗಳನ್ನು ಪ್ರವೇಶಿಸುತ್ತಾರೆ (ಹೀಗೆ ನಾನಾ ದ್ವಾರಗಳಿಂದ ಪುರುಷನ ರೇತಸ್ಸನ್ನು ಪ್ರವೇಶಿಸುತ್ತಾರೆ)
ಅಷ್ಟಕಃ
ಅನ್ಯೋ ಹಿ ವೈ ನಿದಧಾತೀಹ ಗರ್ಭ-
ಮುತಾಹೋಸ್ವಿತ್ ಸ್ವೇನ ಕಾಮೇನ ಯಾತಿ |
ಆಪಾದ್ಯಮಾನೋ ನರಯೋನಿಮೇತಾ -
ಮಾಚಕ್ಷ್ವ ಮೇ ಸಂಶಯಾತ್ ಪ್ರಬ್ರವೀಮಿ ॥12॥
ಗರ್ಭವಾಸವನ್ನು ಹೊಂದುವವನು ತನ್ನ ಇಚ್ಛೆಯಿಂದಲೇ ಗರ್ಭವನ್ನು ಪ್ರವೇಶಿಸತ್ತಾನೆಯೋ ಅಥವಾ ಇನ್ನೊಬ್ಬನಿಂದ ಗರ್ಭದಲ್ಲಿ ಇಡಲ್ಪಡುತ್ತಾನೆಯೋ? ಈ ವಿಷಯದಲ್ಲಿ ನನಗೆ ಸಂಶಯವಿದೆ. ಆದ್ದರಿಂದ ಕೇಳುತ್ತಿದ್ದೇನೆ. ಇದಕ್ಕೆ ಉತ್ತರವನ್ನು ಹೇಳು.
ಶರೀರದೇಹಾದಿಸಮುಚ್ಛ್ರಯಂ ಚ
ಚಕ್ಷುಃಶ್ರೋತ್ರಂ ಲಭತೇ ಕೇನ ಸಂಜ್ಞಾಮ್ |
ಏತತ್ ಸರ್ವಂ ತತ್ವಮಾಚಕ್ಷ್ವ ಪೃಷ್ಟಃ
ಕ್ಷೇತ್ರಜ್ಞಂ ತ್ವಾಂ ತಾತ ಮನ್ಯಾಮ ಸರ್ವೇ ॥13॥
ಮೊದಲು ಶರೀರದ ಆಕಾರವನ್ನು ಪಡೆದ ಜೀವನು ಶರೀರದ ಕ್ರಮಿಕವಾದ ಸ್ಥೂಲತೆಯನ್ನು ಹೇಗೆ ಪಡೆಯುತ್ತಾನೆ? ಚಕ್ಷುಸ್ಸು, ಶ್ರೋತ್ರ ಮೊದಲಾದ ಜ್ಞಾನೇಂದ್ರಿಯಗಳನ್ನು ಹೇಗೆ ಪಡೆಯುತ್ತಾನೆ? ಜ್ಞಾನವನ್ನಾದರೂ ಹೇಗೆ ಪಡೆಯುತ್ತಾನೆ? ಪ್ರೀತಿಪಾತ್ರನೇ, ನಾನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ಹೇಳು. ನೀನು ಸರ್ವಜ್ಞನೆಂದು ನಾವೆಲ್ಲರೂ ಭಾವಿಸಿದ್ದೇವೆ.
ಯಯಾತಿಃ
ವಾಯುಃ ಸಮುತ್ಕರ್ಷತಿ ಗರ್ಭಯೋನಿಮ್
ಋತೌ ರೇತಃ ಪುಷ್ಪಕಾಲಾನುಪೃಕ್ತಮ್ |
ಸ ತತ್ರ ತನ್ಮಾತ್ರಕೃತಾಧಿಕಾರಃ
ಕ್ರಮೇಣ ಸಂವರ್ಧಯತೀಹ ಗರ್ಭಮ್॥14॥
ಋತುಸ್ನಾನಾನಂತರದ ಯೋಗ್ಯವಾದ ಕಾಲದಲ್ಲಿ (ಅಥವಾ ವಸಂತಾದಿ ತತ್ತದ್ಯೋಗ್ಯ ಋತುಗಳಲ್ಲಿ) ಮುಖ್ಯಪ್ರಾಣನೇ ಆ ರೇತಃಕಣವನ್ನು ಸ್ತ್ರೀಕಣದೊಂದಿಗೆ ಸೇರಿಸಿ ಗರ್ಭಸ್ಥಾನಕ್ಕೆ ಕೊಂಡೊಯ್ಯುತ್ತಾನೆ. ಪ್ರಾಣಾಪಾನಾದಿ ಪಂಚರೂಪಗಳಿಂದ ಶಬ್ದಸ್ಪರ್ಶಾದಿ ಪಂಚತನ್ಮಾತ್ರಗಳಿಗೆ ಅಭಿಮಾನಿಯಾದ ಅವನೇ ಆ ಗರ್ಭವನ್ನು ಕಲಲ (ಸಣ್ಣಕಣ) ಬುದ್ಬುದ (ನೀರಿನ ಗುಳ್ಳೆಯಷ್ಟು ಪರಿಮಾಣ) ನಂತರ ಕರಚರಣಾದಿ ಅವಯವಗಳನ್ನು ಹೊಂದುವಂತೆ ಬೆಳೆಸುತ್ತಾನೆ.
ಸ ಜಾಯಮಾನೋ ನಿಗೃಹೀತಗಾತ್ರಃ
ಪ್ರಜ್ಞಾನನಿಷ್ಠಾಯತನೋ ಮನುಷ್ಯಃ |
ಸ ಶ್ರೋತ್ರಾಭ್ಯಾಂ ವೇದಯತೀಹ ಶಬ್ದಂ
ಸ ವೈ ರೂಪಂ ಪಶ್ಯತಿ ಚಕ್ಷುಷಾ ಚ ॥15॥
ಗರ್ಭವನ್ನು ಪ್ರವೇಶಿಸಿ ಜನಿಸಲಿರುವ ಜೀವನು ಎಲ್ಲಾ ಕಡೆಯಿಂದಲೂ ಕಟ್ಟಲ್ಪಟ್ಟ ದೇಹವುಳ್ಳವನಾಗಿ ಆ ಮುಖ್ಯಪ್ರಾಣನಿಂದಲೇ ಜ್ಞಾನೋತ್ಕರ್ಷವನ್ನು ಪಡೆಯುವವನಾಗುತ್ತಾನೆ. ಅವನು ಶ್ರೋತ್ರದಿಂದ ಶಬ್ದವನ್ನೂ ಚಕ್ಷುಸ್ಸಿನಿಂದ ರೂಪವನ್ನೂ ಗ್ರಹಿಸುತ್ತಾನೆ.
ಘ್ರಾಣೇನ ಗಂಧಂ ಜಿಹ್ವಯಾ ವೈ ರಸಂ ಚ
ತ್ವಚಾ ಸ್ಪರ್ಶಂ ಮನಸಾ ವೇದ ಭಾವಮ್ |
ಇತ್ಯಷ್ಟಕೈತಾನ್ ವಿಹಿತಾಂಶ್ಚ ವಿದ್ಧಿ
ಸಹಾತ್ಮನಃ ಪ್ರಾಣಭೃತಃ ಶರೀರೇ ॥16॥
ಅವನು ಘ್ರಾಣದಿಂದ ಗಂಧವನ್ನೂ, ಜಿಹ್ವೆಯಿಂದ ರಸವನ್ನೂ, ತ್ವಚೆಯಿಂದ ಸ್ಪರ್ಶವನ್ನೂ, ಮನಸ್ಸಿನಿಂದ ಉಳಿದ ಭಾವಗಳನ್ನೂ ತಿಳಿಯುತ್ತಾನೆ. ಎಲೈ ಅಷ್ಟಕನೇ, ತಾಯಿಯ ಉದರದಲ್ಲಿ ಕರಚರಣಾದಿ ಅವಯವಲಾಭವೂ, ಇಂದ್ರಿಯಗಳೂ, ಗೋಲಕಗಳೂ, ಇಂದ್ರಿಯಜನ್ಯಜ್ಞಾನವೂ ಎಲ್ಲವೂ ಮುಖ್ಯಪ್ರಾಣನ ಕೃಪೆಯಿಂದಲೇ ಉಂಟಾಗುತ್ತವೆ. ತನ್ನ ಇಚ್ಛೆಯಿಂದಾಗಲೀ ಅಥವಾ ತಾಯಿಯ ಇಚ್ಛೆಯಿಂದಾಗಲೀ ಉಂಟಾಗುವುದಿಲ್ಲ.
ಅಷ್ಟಕಃ
ಯಃ ಸಂಸ್ಥಿತಃ ಪುರುಷೋ ದಹ್ಯತೇ ವಾ
ನಿಖನ್ಯತೇ ವಾ ವಿನಿಕೃಷ್ಯತೇ ವಾ |
ಅಭಾವಭೂತಃ ಸ ವಿನಾಶಮೇತ್ಯ

ಕೇನಾತ್ಮಾನಂ ಚೇತಯತೇ ಪರಸ್ತಾತ್ ॥17॥
ಯಾವ ಮನುಷ್ಯನು ಮೃತನಾಗುತ್ತಾನೆಯೋ ಅವನು ದಹಿಸಲ್ಪಡುತ್ತಾನೆ ಅಥವಾ ಭೂಮಿಯಲ್ಲಿ ಹೂಳಲ್ಪಡುತ್ತಾನೆ ಅಥವಾ ಪಶುಪಕ್ಷಿಗಳಿಂದ ಭಕ್ಷಿಸಲ್ಪಡುತ್ತಾನೆ. ಇಲ್ಲಿ ಅದರ್ಶನವನ್ನು ಹೊಂದಿದ ಅವನು ದೇಹಾಂತರದಲ್ಲಿ ಹೇಗೆ ಜ್ಞಾನವನ್ನು ಪಡೆಯುತ್ತಾನೆ?
ಯಯಾತಿಃ
ಹಿತ್ವಾ ಸೋಽಸೂನ್ ಸುಪ್ತವನ್ನಷ್ಟಸಂಜ್ಞಃ
ಪುರೋಧಾಯ ಸುಕೃತಂ ದುಷ್ಕೃತಂ ಚ |
ಅನ್ಯಾಂ ಯೋನಿಂ ಪವಮಾನಾನುಸಾರೀ
ಹಿತ್ವಾ ದೇಹಂ ಭಜತೇ ರಾಜಸಿಂಹ ॥18॥
ಎಲೈ ರಾಜಸಿಂಹನೇ, ಸುಪ್ತನಾದವನಂತೆ ಜ್ಞಾನವನ್ನು ಕಳೆದುಕೊಂಡು ಒಂದು ದೇಹದಲ್ಲಿ ಪ್ರಾಣಗಳನ್ನು ತ್ಯಜಿಸಿ, ಪುಣ್ಯಪಾಪಗಳನ್ನು ಮುಂದೆ ಮಾಡಿಕೊಂಡು, ಮುಖ್ಯಪ್ರಾಣನಿಂದಲೇ ಬೇರೆಯ ಯೋನಿಗೆ ಕರೆದುಕೊಂಡು ಹೋಗಲ್ಪಟ್ಟವನಾಗಿ ದೇಹವನ್ನು ಹೊಂದುತ್ತಾನೆ.
ಪುಣ್ಯಾಂ ಯೋನಿಂ ಪುಣ್ಯಕೃತೋ ಭಜಂತಿ
ಪಾಪಾಂ ಯೋನಿಂ ಪಾಪಕೃತೋ ವ್ರಜಂತಿ |
ಕೀಟಾಃ ಪತಂಗಾಶ್ಚ ಭವಂತಿ ಪಾಪಾ
ನ ಮೇ ವಿವಕ್ಷಾಽಸ್ತಿ ಮಹಾನುಭಾವ ॥19॥
ಪುಣ್ಯವನ್ನು ಮಾಡಿದವರು ಶ್ರೇಷ್ಠವಾದ ಯೋನಿಗಳನ್ನು ಹೊಂದುತ್ತಾರೆ. ಪಾಪವನ್ನು ಮಾಡಿದವರು ನೀಚವಾದ ಯೋನಿಗಳನ್ನು ಹೊಂದುತ್ತಾರೆ. ಅವರು ಕೀಟಗಳೂ ಪತಂಗಗಳೂ ಆಗುತ್ತಾರೆ. ಎಲೈ ಮಹಾನುಭಾವನೇ, ನನಗೆ ನರಕದ ಯಾತನೆಗಳನ್ನು ವರ್ಣಿಸುವ ಅಭಿಪ್ರಾಯವಿಲ್ಲ.
ಚತುಷ್ಪದಾ ದ್ವಿಪದಾಃ ಷಟ್‌ಪದಾಶ್ಚ
ತಥಾಭೂತಾ ಗರ್ಭಭೂತಾ ಭವಂತಿ |
ಆಖ್ಯಾತಮೇತನ್ನಿಖಿಲೇನ ಸರ್ವಂ
ಭೂಯಸ್ತು ಕಿಂ ಪೃಚ್ಛಸಿ ರಾಜಸಿಂಹ ॥20॥
ಗರ್ಭವನ್ನು ಪ್ರವೇಶಿಸಿದವರಲ್ಲಿ ಕೆಲವರು ಎರಡು ಕಾಲುಳ್ಳವರೂ, ನಾಲ್ಕು ಕಾಲುಳ್ಳವರೂ, ಆರು ಕಾಲುಳ್ಳವರೂ (ಅದಕ್ಕಿಂತಲೂ ಅಧಿಕವಾದ ಕಾಲುಳ್ಳವರೂ ಮತ್ತು ಪಾದವೇ ಇಲ್ಲದವರೂ) ಆಗುತ್ತಾರೆ. ಎಲೈ ರಾಜಸಿಂಹನೇ, ನೀನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಸಮಗ್ರವಾದ ಶಾಸ್ತ್ರದ ಆಧಾರದಿಂದ ಉತ್ತರವನ್ನು ಹೇಳಿದ್ದೇನೆ. ಇನ್ನು ಯಾವ ಪ್ರಶ್ನೆಯನ್ನು ಕೇಳುತ್ತೀಯೆ?
ಅಷ್ಟಕಃ
ಕಿಂಸ್ವಿತ್ ಕೃತ್ವಾ ಲಭತೇ ತಾತ ಲೋಕಾನ್
ಮರ್ತ್ಯಃ ಶ್ರೇಷ್ಠಾನ್ ತಪಸಾ ವಿದ್ಯಯಾ ಚ |
ತನ್ಮೇ ಪೃಷ್ಟಃ ಶಂಸ ಸರ್ವಂ ಯಥಾವ-
ಚ್ಛುಭಾಂಲ್ಲೋಕಾನ್ ಯೇನ ಗಚ್ಛೇತ್ ಕ್ರಮೇಣ ॥21॥
ಪ್ರೀತಿಪಾತ್ರನೇ, ಮನುಷ್ಯನು ಏನನ್ನು ಮಾಡಿ ಪುಣ್ಯಲೋಕಗಳನ್ನು ಸಂಪಾದಿಸುತ್ತಾನೆ? ತಪಸ್ಸಿನಿಂದಲೋ ಅಥವಾ ವಿದ್ಯೆಯಿಂದಲೋ? ನನ್ನ ಪ್ರಶ್ನೆಗೆ ಉತ್ತರವಾಗಿ ಯಾವ ಕ್ರಮದಿಂದ ಶುಭಲೋಕಗಳನ್ನು ಸಂಪಾದಿಸುತ್ತಾನೆ ಎಂಬುದನ್ನು ಯಥಾವಸ್ಥಿತವಾಗಿ ಹೇಳು.
ಯಯಾತಿಃ
ತಪಶ್ಚ ದಾನಂ ಚ ಶಮೋ ದಮಶ್ಚ
ಹ್ರೀರಾರ್ಜವಂ ಸರ್ವಭೂತಾನುಕಂಪಾ |
ಸ್ವರ್ಗಸ್ಯ ಲೋಕಸ್ಯ ವದಂತಿ ಸಂತೋ
ದ್ವಾರಾಣಿ ಸಪ್ತೈವ ಮಹಾಂತಿ ಪುಂಸಾಮ್ |
ನಶ್ಯಂತಿ ಮಾನೇನ ಸದಾಽಭಿಭೂತಾಃ
ಪುಂಸಃ ಸದೈವೇತಿ ವದಂತಿ ಸಂತಃ ॥22॥
ತಪಸ್ಸು, ದಾನ, ಶಮ, ದಮ, ವಿನಯ, ಆರ್ಜವ ಮತ್ತು ಸರ್ವಭೂತದಯ ಈ ಏಳನ್ನು ಸ್ವರ್ಗದ ಮಹಾದ್ವಾರಗಳೆಂದು ಸಜ್ಜನರು ಹೇಳುತ್ತಾರೆ. ಅಹಂಕಾರಕ್ಕೆ ವಶನಾದ ಮನುಷ್ಯನಿಗೆ ಇವೆಲ್ಲವೂ ಸರ್ವದಾ ಮುಚ್ಚಿಹೋಗುತ್ತವೆ ಎಂದೂ ಸಜ್ಜನರು ಹೇಳುತ್ತಾರೆ.
ಅಧೀಯಾನಃ ಪಂಡಿತಂ ಮನ್ಯಮಾನೋ
ಯೋ ವಿದ್ಯಯಾ ಹಂತಿ ಯಶಃ ಪರೇಷಾಮ್ |
ತಸ್ಯಾಂತವಂತಶ್ಚ ಭವಂತಿ ಲೋಕಾ
ನ ಚಾಸ್ಯ ತದ್ ಬ್ರಹ್ಮ ಫಲಂ ದದಾತಿ ॥23॥
ವೇದಶಾಸ್ತ್ರಾಧ್ಯಯನವನ್ನು ಮಾಡಿ ಯಾವ ವ್ಯಕ್ತಿಯು ತನ್ನನ್ನು ತಾನೇ ಪಂಡಿತನೆಂದು ತಿಳಿದು ತನ್ನ ವಿದ್ಯೆಯ ಬಲದಿಂದ ಇನ್ನೊಬ್ಬರಿಗೆ ಮಾನಭಂಗವನ್ನು ಮಾಡುತ್ತಾನೆಯೋ ಅವನು ಪಡೆದ ಲೋಕಗಳು ಅವನಿಗೆ ನಾಶವನ್ನು ಹೊಂದುತ್ತವೆ. ಅವನು ಅಧ್ಯಯನಮಾಡಿದ ವೇದವು ಅವನಿಗೆ ಫಲವನ್ನು ಕೊಡುವುದಿಲ್ಲ.

ಚತ್ವಾರಿ ಕರ್ಮಾಣ್ಯಭಯಂಕರಾಣಿ
ಭಯಂ ಪ್ರಯಚ್ಛಂತ್ಯಯಥಾಕೃತಾನಿ |
ಮಾನಾಗ್ನಿಹೋತ್ರಮುತ ಮಾನಮೌನಂ
ಮಾನೇನಾಧೀತಮುತ ಮಾನಯಜ್ಞಃ ॥24॥
ನಾಲ್ಕು ಕರ್ಮಗಳು ಲೋಕದಲ್ಲಿ ಅಭಯಪ್ರದವಾದವುಗಳು. ಅವುಗಳನ್ನು ಸರಿಯಾಗಿ ಮಾಡದಿದ್ದರೆ ಮಾತ್ರ ಅವೇ ಭಯವನ್ನು ಕೊಡುತ್ತವೆ. ಅವು ಅಹಂಕಾರದಿಂದ ಮಾಡಿದ ಅಗ್ನಿಹೋತ್ರ, ಅಹಂಕಾರದಿಂದ ಮಾಡಿದ ಮೌನಮೊದಲಾದ ತಪಸ್ಸು, ಅಹಂಕಾರದಿಂದ ಮಾಡಿದ ಅಧ್ಯಯನ ಮತ್ತು ಅಹಂಕಾರದಿಂದ ಮಾಡಿದ ಯಜ್ಞ.
ನ ಮಾನ್ಯಮಾನೋ ಮುದಮಾದದೀತ
ನ ಸಂತಾಪಂ ಪ್ರಾಪ್ನುಯಾಚ್ಚಾವಮಾನಾತ್ |
ತಂ ಸಾಧವಃ ಪೂಜಯಂತೀಹ ಲೋಕೇ
ನಾಸಾಧವಃ ಸಾಧುಬುದ್ಧಿಂ ಲಭಂತೇ ॥25॥
ತನಗೆ ಮರ್ಯಾದೆಯನ್ನು ಮಾಡುವುದರಿಂದ ಸಂತೋಷವನ್ನು ಪಡಬಾರದು. ಅವಮಾನ ಮಾಡಿದಾಗ ಸಂತಾಪವನ್ನು ಮಾಡಬಾರದು. ಅಂತಹ ಮನುಷ್ಯನನ್ನು ಲೋಕದಲ್ಲಿ ಸಜ್ಜನರು ಗೌರವಿಸುತ್ತಾರೆ. ದುಷ್ಟರಿಗೆ ಎಂದೂ ಸದ್ಬುದ್ಧಿಯು ಬರುವುದಿಲ್ಲ.
ಇತಿ ದದ್ಯಾದಿತಿ ಯಜೇದ್ ಇತ್ಯಧೀಯೀತ ಮೇ ವ್ರತಮ್ |
ಇತ್ಯಸ್ಮೀತಿ ಭಯಾನ್ಯಾಹುಸ್ತಾನಿ ವರ್ಜಯನಿ ನಿತ್ಯಶಃ ॥26॥
ಹೀಗೆ ದಾನ ಮಾಡಬೇಕು, ಹೀಗೆ ಯಾಗ ಮಾಡಬೇಕು, ಹೀಗೆ ಅಧ್ಯಯನ ಮಾಡಬೇಕು ಆದ್ದರಿಂದ ನಾನು ಹೀಗಿದ್ದೇನೆ ಎಂಬ ಅಹಂಕಾರದ ಮಾತುಗಳು ಭಯಪ್ರದವಾದವು ಎಂದು ಹೇಳುತ್ತಾರೆ. ಆದ್ದರಿಂದ ವಿವೇಕಿಯಾದವನು ಅವುಗಳನ್ನು ಯಾವಾಗಲೂ ವರ್ಜಿಸಬೇಕು.
ಯೇ ಚಾಶ್ರಮಾನ್ ವೇದಯಂತೇ ಪುರಾಣಾಃ
ಮನೀಷಿಣೋ ಮನಸಾ ಸಂವಿಭಕ್ತಾನ್ |
ತನ್ನಿಃಶ್ರೇಯಸ್ತೈಜಸಂ ದೇಹಮೇತ್ಯ
ಪರಾಂ ಶಾಂತಿಂ ಪ್ರಾಪ್ನುಯುಃ ಪ್ರೇತ್ಯ ಚೇಹ ॥27॥
ಯಾರು ಮರಣಕಾಲದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹೇಳಲ್ಪಟ್ಟ ಪ್ರಾಚೀನವಾದ ಆಶ್ರಮಧರ್ಮಗಳನ್ನು ವಿವೇಕಪೂರ್ವಕವಾಗಿ ಸ್ಮರಣೆ ಮಾಡುತ್ತಾರೋ ಅವರು ಮರಣಾನಂತರದಲ್ಲಿ ಶ್ರೇಷ್ಠವಾದ ತೇಜೋಮಯವಾದ ರೂಪವನ್ನು ಹೊಂದಿ ಹಿಂದೆ ಹೇಳಿದ ಸ್ವರ್ಗಾದಿ ಲೋಕಗಳಲ್ಲಿ ಶ್ರೇಷ್ಠವಾದ ಸುಖವನ್ನು ಪಡೆಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಾಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿಯಿತು
*****
ಎಂಭತ್ತನೆಯ ಅಧ್ಯಾಯ
(ಅಷ್ಟಕಯಯಾತಿಸಂವಾದ, ಬ್ರಹ್ಮಚರ್ಯಾದಿ ಆಶ್ರಮಧರ್ಮಕಥನ.)
ಅಷ್ಟಕಃ
ಚರನ್ ಗೃಹಸ್ಥಃ ಕಥಮೇತಿ ದೇವಾನ್
ತಥಾ ಭಿಕ್ಷುಃ ಕಥಮಾಚಾರ್ಯಕರ್ಮಾ |
ವಾನಪ್ರಸ್ಥಃ ಸತ್ಪಥೇ ಸನ್ನಿವಿಷ್ಟೋ
ಬಹೂನ್ಯಸ್ಮಿನ್ ಸಂಪ್ರತಿ ವೇದಯಂತಿ ॥1॥
ಎಲೈ ಯಯಾತಿಯೇ, ಗೃಹಸ್ಥಧರ್ಮವನ್ನು ಆಚರಿಸುವವನು ಹೇಗೆ ದೇವತೆಗಳನ್ನು ಹೊಂದುತ್ತಾನೆ, ಹಾಗೆಯೇ ಸಂನ್ಯಾಸಿಯು ಮತ್ತು ಬ್ರಹ್ಮಚಾರಿಯು ಹೇಗೆ ದೇವಲೋಕವನ್ನು ಹೊಂದುತ್ತಾರೆ. ಸನ್ಮಾರ್ಗದಲ್ಲಿರುವ ವಾನಪ್ರಸ್ಥನು ಹೇಗೆ ದೇವಲೋಕವನ್ನು ಹೊಂದುತ್ತಾನೆ. ಈ ನಾಲ್ಕು ಆಶ್ರಮಗಳಿಗೆ ಬಹಳ ಪುಣ್ಯಫಲಗಳನ್ನು ಹೇಳುತ್ತಾರಷ್ಟೇ.
ಯಯಾತಿಃ
ಆಹೂತಾಧ್ಯಾಯೀ ಗುರುಕರ್ಮಸ್ವಚೋದ್ಯಃ
ಪೂರ್ವೋತ್ಥಾಯೀ ಚರಮಂ ಚೋಪಶಾಯೀ |
ಮೃದುರ್ದಾಂತೋ ಧೃತಿಮಾನಪ್ರಮತ್ತಃ
ಸ್ವಾಧ್ಯಾಯಶೀಲಃ ಸಿಧ್ಯತಿ ಬ್ರಹ್ಮಚಾರೀ ॥2॥
ಗುರುಗಳು ಕರೆದಾಗ ಅಧ್ಯಯನಕ್ಕೆ ಬರುವುದು, ಹೇಳಿಸಿಕೊಳ್ಳದೇ ಗುರುಗಳ ಕೆಲಸವನ್ನು ಮಾಡುವುದು, ಗುರುಗಳಿಗಿಂತ ಮೊದಲು ಹಾಸಿಗೆಯಿಂದ ಏಳುವುದು, ಗುರುಗಳು ಮಲಗಿದ ನಂತರ ಮಲಗುವುದು, ಮೃದುವೂ, ಇಂದ್ರಿಯನಿಗ್ರಹವುಳ್ಳವನೂ, ಧೈರ್ಯವುಳ್ಳವನೂ, ಪ್ರಮಾದವುಳ್ಳವನೂ ಆಗಿರುವುದು ಮತ್ತು ಅಧ್ಯಯನಶೀಲನಾಗಿರುವುದು ಇವು ಬ್ರಹ್ಮಚಾರಿಯ ಮುಖ್ಯಧರ್ಮಗಳು. ಅಂತಹ ಬ್ರಹ್ಮಚಾರಿಯು ಸಿದ್ಧಿಯನ್ನು ಪಡೆಯುತ್ತಾನೆ.
ಧರ್ಮಾಗತಂ ಪ್ರಾಪ್ಯ ಧನಂ ಯಜೇತ
ದದ್ಯಾತ್ ಸದೈವಾಪ್ಯತಿಥೀನ್ ಭೋಜಯೇಚ್ಚ |

ಅನಾದದಾನಶ್ಚ ಪರೈರದತ್ತಂ
ಸೈಷಾ ಗೃಹಸ್ಥೋಪನಿಷತ್ ಪುರಾಣೀ ॥3॥
ಧರ್ಮದಿಂದ ಸಂಪಾದಿಸಿದ ಧನದಿಂದ ಯಾಗವನ್ನು ಮಾಡುವುದು, ದಾನವನ್ನು ಕೊಡುವುದು, ಯಾವಾಗಲೂ ಅತಿಥಿಗಳಿಗೆ ಭೋಜನವನ್ನು ಮಾಡಿಸುವುದು, ಇನ್ನೊಬ್ಬರು ಕೊಡದಿದ್ದುದನ್ನು ಸ್ವೀಕರಿಸದಿರುವುದು ಇವು ಪ್ರಾಚೀನ ಕಾಲದಿಂದಲೂ ರಹಸ್ಯವಾಗಿ ಬಂದಿರುವ ಗೃಹಸ್ಥಧರ್ಮಗಳು.
ಸ್ವವೀರ್ಯಜೀವೀ ವೃಜಿನಾನ್ನಿವೃತ್ತೋ
ದಾತಾ ಪರೇಷಾಂ ನ ಪರೋಪತಾಪೀ |
ಮೃಗೈಃ ಸಚಾರೀ ವನಜಾನ್ನಭೋಜೀ
ತಾದೃಙ್ಮುನಿಃ ಸಿದ್ಧಿಮುಪೈತ್ಯರಣ್ಯೇ ॥4॥
ತಾನೇ ಸಂಪಾದಿಸಿದ ಆಹಾರದಿಂದ ಜೀವಿಸುವುದು, ಪಾಪಕರ್ಮದಿಂದ ನಿವೃತ್ತನಾಗುವುದು, ಪರರಿಗೆ ದಾನಮಾಡುವುದು, ಪರರಿಗೆ ತಾಪವನ್ನು ಕೊಡದಿರುವುದು, ಮೃಗಗಳ ಜೊತೆಯಲ್ಲಿ ಸಂಚರಿಸುವುದು, ಕಾಡಿನಲ್ಲಿ ಸಿಕ್ಕಿದ ಆಹಾರವನ್ನು ಸೇವಿಸುವುದು, ಇವುಗಳನ್ನು ಮಾಡುವ ವಾನಪ್ರಸ್ಥನು ಅರಣ್ಯದಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ಅಶಿಲ್ಪಜೀವೀ ನ ಗೃಹಸ್ಥಶ್ಚ ನಿತ್ಯಂ
ಜಿತೇಂದ್ರಿಯಃ ಸರ್ವತೋ ವಿಪ್ರಮುಕ್ತಃ |
ವನೌಕಸಾರೀ ಲಘುರಲ್ಪಚಾರಃ
ಚರನ್ ದೇಶಾನೇಕಚರಃ ಸ ಭಿಕ್ಷುಃ ॥5॥
ವಿದ್ಯೆಯನ್ನು ಉಪಜೀವನಮಾಡದಿರುವುದು, ಒಂದೇ ಮನೆಯಲ್ಲಿ ಯಾವಾಗಲೂ ವಾಸಮಾಡದಿರುವುದು, ಜಿತೇಂದ್ರಿಯನಾಗಿರುವುದು, ಸರ್ವಥಾ ಅಸಂಗನಾಗಿರುವುದು, ಕಾಡಿನಲ್ಲಿ ವಾಸಿಸುವುದು, ಅಲ್ಪ ಪರಿಗ್ರಹವನ್ನು ಹೊಂದಿರುವುದು, ಅಲ್ಪಾಹಾರವನ್ನು ಸೇವಿಸುವುದು, ಒಬ್ಬನೇ ದೇಶಗಳನ್ನು ಸಂಚರಿಸುವುದು, ಇವು ಸನ್ಯಾಸಿಯ ಧರ್ಮಗಳು.
ರಾತ್ರ್ಯಾ ಯಯಾ ಚಾಭಿಜಾತಾಶ್ಚ ಲೋಕಾ
ಭವಂತಿ ಕಾಮಾ ವಿಜಿತಾಃ ಸುಖಾಶ್ಚ |
ತಾಮೇವ ರಾತ್ರಿಂ ಪ್ರಯತೇತ ವಿದ್ವಾನ್
ಅರಣ್ಯಸಂಸ್ಥೋ ಭವಿತುಂ ಯತಾತ್ಮಾ ॥6॥
ಯಾವರಾತ್ರಿಯಲ್ಲಿ ಲೋಕಗಳೂ, ಕಾಮವೂ ಮತ್ತು ಸುಖಗಳೂ ಜಿತವಾಗುತ್ತವೆಯೋ ಅದೇ ರಾತ್ರಿ ವಿವೇಕಿಯಾದವನು ವಿರಕ್ತನಾಗಿ ವನವಾಸವನ್ನು ಮಾಡಲು ಮನಸ್ಸಿನಲ್ಲಿ ನಿರ್ಧರಿಸಬೇಕು.
ದಶೈವ ಪೂರ್ವಾನಪರಾನ್ ದಶೈವ
ಜ್ಞಾತೀನ್ ಸಹಾತ್ಮಾನಮಥೈಕವಿಂಶಮ್ |
ಅರಣ್ಯಶೀಲಃ ಸುಕೃತೇ ದಧಾತಿ
ವಿಮುಚ್ಯಾರಣ್ಯೇ ಸ್ವಶರೀರಧಾತೂನ್ ॥7॥
ಅರಣ್ಯಶೀಲನಾದವನು ತನ್ನ ಹಿಂದಿನ ಹತ್ತು ಪೂರ್ವಜರನ್ನು, ತನ್ನ ಮುಂದಿನ ಹತ್ತು ಸಂತತಿಯನ್ನು ಮತ್ತು ತನ್ನನ್ನು ಸೇರಿ, ಇಪ್ಪತ್ತೊಂದು ಜನರನ್ನು ಅವನು ಅರಣ್ಯದಲ್ಲಿ ವಾಸಮಾಡಿ ಅಲ್ಲಿಯೇ ಶರೀರವನ್ನು ತ್ಯಾಗ ಮಾಡಿದ ಪಕ್ಷದಲ್ಲಿ ಪುಣ್ಯಭಾಗಿಗಳನ್ನಾಗಿ ಮಾಡುತ್ತಾನೆ.
ಅಷ್ಟಕಃ
ಕಥಂಸ್ವಿದ್ ವಸತೋಽರಣ್ಯಂ ಮೌನಾನಿ ಕತಿ ಚಾಪ್ಯುತ |
ಭವಂತೀಹ ತದಾಚಕ್ಷ್ವ ಶ್ರೋತುಮಿಚ್ಛಾಮಹೇ ವಯಮ್ ॥8॥
ಅರಣ್ಯವಾಸಮಾಡುವವನು ಹೇಗಿರಬೇಕು? ಅವನು ಮಾಡಬೇಕಾದ ಮೌನಗಳು ಯಾವುವು ಮತ್ತು ಎಷ್ಟು ವಿಧ? ಇದನ್ನು ಹೇಳಬೇಕು. ನಾವು ಕೇಳಲು ಬಯಸುತ್ತೇವೆ.
ಅರಣ್ಯೇ ವಸತೋ ಯಸ್ಯ ಗ್ರಾಮೋ ಭವತಿ ಪೃಷ್ಠತಃ |
ಗ್ರಾಮೇ ಚಾವಸತೋಽರಣ್ಯಂ ಸ ಮುನಿಃ ಸ್ಯಾಜ್ಜನಾಧಿಪ ॥9॥
ಅರಣ್ಯದಲ್ಲಿ ವಾಸಮಾಡುವ ಯಾವನಿಗೆ ಗ್ರಾಮವು ಹಿಂದೆ ಸರಿಯುತ್ತದೆಯೋ, ಗ್ರಾಮದಲ್ಲಿ ವಾಸಮಾಡುವ ಯಾವನಿಗೆ ಅರಣ್ಯವು ಹಿಂದೆ ಸರಿಯುತ್ತದೆಯೋ, ಎಲೈ ಜನಾಧಿಪನೇ, ಅವನೇ ಅರಣ್ಯವಾಸಿಯಾದ ಮುನಿ.
ಅಷ್ಟಕಃ
ಕಥಂಸ್ವಿದ್ ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ |
ಗ್ರಾಮೇ ಚಾವಸತೋಽರಣ್ಯಂ ಕಥಂ ಭವತಿ ಪೃಷ್ಠತಃ ॥10॥
ಅರಣ್ಯದಲ್ಲಿ ವಾಸಮಾಡುವವನಿಗೆ ಗ್ರಾಮವು ಹೇಗೆ ಹಿಂದೆ ಸರಿಯುತ್ತದೆ, ಗ್ರಾಮದಲ್ಲಿ ವಾಸಮಾಡುವವನಿಗೆ ಅರಣ್ಯವು ಹೇಗೆ ಹಿಂದೆ ಸರಿಯುತ್ತದೆ?
ಯಯಾತಿಃ
ನ ಗ್ರಾಮ್ಯಾನುಪಯುಂಜೀತ ಯ ಆರಣ್ಯೋ ಮುನಿರ್ಭವೇತ್ |
ತಥಾಽಸ್ಯ ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ ॥11॥
ಅರಣ್ಯದಲ್ಲಿ ವಾಸಿಸುವ ಮುನಿಯು ಗ್ರಾಮದ ಯಾವ ಪದಾರ್ಥಗಳನ್ನೂ ಉಪಯೋಗಿಸದಿದ್ದರೆ ಅವನಿಗೆ ಗ್ರಾಮವು ಹಿಂದೆ

ಸರಿಯುತ್ತದೆ.
ಅನಗ್ನಿರನಿಕೇತಶ್ಚ ಅಗೋತ್ರಾವರಣೋ ಮುನಿಃ |
ಕೌಪೀನಾಚ್ಛಾದನೀ ಚೀರೀ ಸರ್ವಸ್ವಾದುವಿವರ್ಜಿತಃ ||12||
ಯಾವತ್ಪ್ರಾಣಾಭಿಸಂಧಾನಂ ತಾವದಿಚ್ಛೇಚ್ಚ ಭೋಜನಮ್ |
ತಥಾಽಸ್ಯ ವಸತೋ ಗ್ರಾಮೇಽನರಣ್ಯಂ ಭವತಿ ಪೃಷ್ಠತಃ ||13||
ಅಗ್ನಿಗಳನ್ನು ಉಪಸಂಹಾರ ಮಾಡಿ, ಅನಿಕೇತನಾಗಿ, ಗೋತ್ರೋಚ್ಛಾರ ಇಲ್ಲದೆ ಚೀರ ವಸ್ತ್ರವನ್ನುಟ್ಟು ಕೌಪೀನಾಚ್ಛಾದನೆಯನ್ನು ಹೊಂದಿ ಎಲ್ಲಾ ಮಧುರವಾದ ಪದಾರ್ಥಗಳನ್ನು ವರ್ಜಿಸಿ, ಬದುಕುವುದಕ್ಕೆ ಬೇಕಾಗುವಷ್ಟು ಅಹಾರವನ್ನು ಮಾತ್ರ ಯಾವನು ಸ್ವೀಕರಿಸುತ್ತಾನೋ, ಗ್ರಾಮದಲ್ಲಿ ವಾಸಿಸುವ ಅಂತಹವನಿಗೆ ಅರಣ್ಯವು ಹಿಂದೆ ಸರಿಯುತ್ತದೆ (ಅಂತಹ ಮುನಿಯು ಇದ್ದ ಗ್ರಾಮವೇ ಅರಣ್ಯವೆನಿಸುತ್ತದೆ).
ಯಸ್ತು ಕಾಮಾನ್ ಪರಿತ್ಯಜ್ಯ ತ್ಯಕ್ತಕರ್ಮ ಜಿತೇಂದ್ರಿಯಃ |
ಆತಿಷ್ಠೇಚ್ಚ ಮುನಿರ್ಮೌನಂ ಸ ಲೋಕೇ ಸಿದ್ಧಿಮಾಪ್ನುಯಾತ್ ||14||
ಯಾವನು ಕಾಮ್ಯಪದಾರ್ಥಗಳನ್ನು ತ್ಯಜಿಸಿ, ಜಿತೇಂದ್ರಿಯನಾಗಿ ಕಾಮ್ಯಕರ್ಮವನ್ನು ಬಿಟ್ಟು ಲೋಕದಲ್ಲಿ ಮೌನವನ್ನು ಆಚರಿಸುತ್ತಾನೆಯೋ ಅಂತಹವನು ಸಿದ್ಧಿಯನ್ನು ಪಡೆಯುತ್ತಾನೆ.
ಧೌತದಂತಂ ಕೃತ್ತನಖಂ ಸದಾ ಸ್ನಾತಮಲಂಕೃತಮ್ |
ಅಸಿತಂ ಸಿತಕರ್ಮಸ್ಥಂ ಕಸ್ತಂ ನಾರ್ಚಿತುಮರ್ಹತಿ ||15||
ದಂತಧಾವನೆಯನ್ನು ಮಾಡಿ ನಖಗಳನ್ನು ಕತ್ತರಿಸಿ, ಸ್ನಾನವನ್ನು ಮಾಡಿ ಸದಾ ಅಲಂಕೃತನಾಗಿದ್ದು, ಸಂಸಾರಕ್ಕೆ ಕಟ್ಟಿಹಾಕಿಕೊಳ್ಳದೇ ಪರಿಶುದ್ಧವಾದ ಕರ್ಮವನ್ನು ಮಾಡುವವನನ್ನು ಯಾವನು ತಾನೇ ಪೂಜಿಸುವುದಿಲ್ಲ?
ತಪಸಾ ಕರ್ಶಿತಃ ಕ್ಷಾಮಃ ಕ್ಷೀಣಮಾಂಸಾಸ್ಥಿಶೋಣಿತಃ |
ಯದಾ ಭವತಿ ನಿರ್ದ್ವಂದ್ವೋ ಮುನಿರ್ಮೌನಂ ಸಮಾಸ್ಥಿತಃ |
ಅಥ ಲೋಕಮಿಮಂ ಜಿತ್ವಾ ಲೋಕಂ ವಿಜಯತೇ ಪರಮ್ ||16||
ತಪಸ್ಸಿನಿಂದ ದೇಹವನ್ನು ದಂಡಿಸಿ ಕೃಶನಾಗಿ, ಮಾಂಸಾಸ್ಥಿರಕ್ತಗಳನ್ನು ಕರಗಿಸಿ, ಮೌನವನ್ನು ಆಚರಿಸಿ, ಮುನಿಯು ಯಾವಾಗ ದ್ವಂದ್ವಾತೀತನಾಗುವನೋ, ಆಗ ಅವನು ಈ ಲೋಕವನ್ನೂ ಪರಲೋಕವನ್ನೂ ಜಯಿಸುತ್ತಾನೆ.
ಆಸ್ಯೇನ ತು ಯದಾಽಹಾರಂ ಗೋವನ್ಮೃಗಯತೇ ಮುನಿಃ |
ಅಥಾಸ್ಯ ಲೋಕಃ ಪೂರ್ವೋ ಯಃ ಸೋಽಮೃತತ್ವಾಯ ಕಲ್ಪತೇ ||17||
ಮುನಿಯಾದವನು ಗೋವುಗಳಂತೆ ಆ ಸಮಯಕ್ಕೆ ಬೇಕಾಗುವಷ್ಟು ಆಹಾರವನ್ನು ಮಾತ್ರ ಸೇವಿಸುತ್ತಾನೋ (ಮರುದಿನಕ್ಕೆ ಸಂಚಯ ಮಾಡುವುದಿಲ್ಲವೋ) ಆಗ ಅವನಿಗೆ ಪೂರ್ವಲೋಕವು ಭಯರಹಿತವಾಗುತ್ತದೆ ಮತ್ತು ಅವನು ಮೋಕ್ಷವನ್ನು ಪಡೆಯುತ್ತಾನೆ.
ಸಾಮಾನ್ಯಧರ್ಮಃ ಸರ್ವೇಷಾಂ ಕ್ರೋಧೋ ಲೋಭೋ ದ್ರುಹಾಽಕ್ಷಮಾ|
ವಿಹಾಯ ಮತ್ಸರಂ ಸ್ತೈನ್ಯಂ ಗರ್ವಂ ಡಂಭಂ ಚ ಪೈಶುನಮ್ |
ಕ್ರೋಧಂ ಲೋಭಂ ಮಮತ್ವಂ ಚ ಯಸ್ಯ ನಾಸ್ತಿ ಸ ಧರ್ಮವಿತ್ ||18||
ಕ್ರೋಧ, ಲೋಭ, ದ್ರೋಹ, ಅಸಹನೆ, ಮಾತ್ಸರ್ಯ, ಕಳ್ಳತನ, ಅಹಂಕಾರ, ಡಂಭ, ಮತ್ತು ಚಾಡಿಹೇಳುವುದು ಇವುಗಳನ್ನು ಬಿಡುವುದು ಎಲ್ಲರಿಗೂ ಸಾಧಾರಣವಾದ ಧರ್ಮ. ಯಾರಿಗೆ ಕ್ರೋಧವೂ, ಲೋಭವೂ ಮತ್ತು ಅಹಂಕಾರವೂ ಇವೆಯೋ ಅವರು ಎಂದೂ ಧರ್ಮವನ್ನು ತಿಳಿದವರಲ್ಲ.
ಅಷ್ಟಕಃ
ನಿತ್ಯಾಧ್ಯಾಯೀ ಬ್ರಹ್ಮಚಾರೀ ಗೃಹಸ್ಥೋ ವನಗೋ ಮುನಿಃ |
ನಾಧರ್ಮಮಶನಾತ್ ಪ್ರಾಪ್ನುಯಾತ್ ಕಥಂ ಬ್ರೂಹೀಹ ಪೃಚ್ಛತೇ ||19||
ನಿತ್ಯಾಧ್ಯಾಯಿಯಾದ ಬ್ರಹ್ಮಚಾರಿಯು, ಗೃಹಸ್ಥನೂ, ವಾನಪ್ರಸ್ಥನೂ ಮತ್ತು ಭಿಕ್ಷುವೂ ಸಹಾ ಆಹಾರ ಸೇವನೆಯಿಂದ ಅಧರ್ಮವನ್ನು ಸಂಪಾದಿಸದಿರುವ ರೀತಿಯನ್ನು ನನಗೆ ತಿಳಿಸು.
ಯಯಾತಿಃ
ಅಷ್ಟೌ ಗ್ರಾಸಾ ಮುನೇಃ ಪ್ರೋಕ್ತಾಃ ಷೋಡಶಾರಣ್ಯವಾಸಿನಃ |
ದ್ವಾತ್ರಿಂಶತ್ತು ಗೃಹಸ್ಥಸ್ಯ ಹ್ಯಮಿತಂ ಬ್ರಹ್ಮಚಾರಿಣಃ |
ಇತ್ಯೇತತ್ ಕಾರಣಂ ಜ್ಞೇಯಮಷ್ಟಕೈತಚ್ಛುಭಾಶುಭಮ್ ||20||
ಭಿಕ್ಷುವಿಗೆ ಎಂಟು ಗ್ರಾಸಗಳು ಎಂದು ಹೇಳಲ್ಪಡುತ್ತದೆ. ವಾನಪ್ರಸ್ಥನಿಗೆ ಹದಿನಾರು ಗ್ರಾಸಗಳು, ಗೃಹಸ್ಥನಿಗೆ ಮೂವತ್ತೆರಡು ತುತ್ತುಗಳು ಮತ್ತು ಬ್ರಹ್ಮಚಾರಿಗೆ ಅಮಿತವಾದದ್ದು. ಹೀಗೆ ಆಹಾರವನ್ನು ಸೇವಿಸಿದರೆ, ಅವರಿಗೆ ಅಧರ್ಮವು ಉಂಟಾಗುವುದಿಲ್ಲ. ಎಲೈ ಅಷ್ಟಕನೇ, ನೀನು ಕೇಳಿದ ಶುಭಾಶುಭಗಳಿಗೆ ಇವು ಕಾರಣಗಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಶೀತಿತಮೋಽಧ್ಯಾಯಃ ||
|| ಸಂಭವಪರ್ವಣಿ ಅಷ್ಟಾವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ತನೆಯ ಅಧ್ಯಾಯ ಮುಗಿಯಿತು
*****
ಎಂಭತ್ತೊಂದನೆಯ ಅಧ್ಯಾಯ
(ಅಷ್ಟಕ ಮತ್ತು ಪ್ರತರ್ದನರ ಜೊತೆಯಲ್ಲಿ ಯಯಾತಿಯ ಸಂವಾದ, ಅವರು ಕೊಡಲಿಚ್ಛಿಸಿದ ಪುಣ್ಯಲೋಕಗಳ ನಿರಾಕರಣೆ.)

ಅಷ್ಟಕಃ
ಕತರಸ್ತ್ವೇತಯೋಃ ಪೂರ್ವಂ ದೇವನಾಮೇತಿ ಸಾತ್ಮ್ಯತಾಮ್ |
ಉಭಯೋರ್ಧಾವತೋ ರಾಜನ್ ಸೂರ್ಯಾಚಂದ್ರಮಸೋರಿವ ॥1॥
ಎಲೈ ರಾಜನೇ, ಸೂರ್ಯಚಂದ್ರರಂತೆ ಧರ್ಮಾಚರಣೆಯಲ್ಲಿ ಧಾವಿಸುವ ಗೃಹಸ್ಥರು ಮತ್ತು ಸಂನ್ಯಾಸಿಗಳಲ್ಲಿ ಯಾರು ಮೊದಲು ದೇವಲೋಕವನ್ನು ಪಡೆಯುತ್ತಾರೆ.
ಯಯಾತಿಃ
ಅನಿಕೇತೋ ಗೃಹಸ್ಥೇಷು ಕಾಮವೃತ್ತೇಷ್ವಸಂಗತಃ |
ಗ್ರಾಮ ಏವ ವಸನ್ ಭಿಕ್ಷುಃ ತಯೋಃ ಪೂರ್ವತರಂ ಗತಃ ॥2॥
ಮನೆಯಲ್ಲಿ ವಾಸಮಾಡದೆ ಗೃಹಸ್ಥರ ಕಾಮ್ಯಕರ್ಮಗಳಲ್ಲಿ ಆಸಕ್ತನಾಗದೇ ಗ್ರಾಮದಲ್ಲಿಯೇ ವಾಸಮಾಡಿದರೂ ಸಹ ಯತಿಯು ಮೊದಲು ದೇವಲೋಕವನ್ನು ಸೇರುತ್ತಾನೆ.
ಅಪ್ರಾಪ್ಯ ದೀರ್ಘಮಾಯುಸ್ತು ಯಃ ಪ್ರಾಪ್ತೋ ವಿಕೃತಿಂ ಚರೇತ್ |
ತಪ್ಯೇತ ಯದಿ ತತ್ ಕೃತ್ವಾ ಚರೇತ್ ಸೋಽನ್ಯಸ್ತಪಸ್ತಥಾ ॥3॥
ಯಾವನು ದೀರ್ಘಾಯುಷ್ಯವನ್ನು ಹೊಂದದೆ ಪಾಪವನ್ನು ಮಾಡಿ ಪಶ್ಚಾತ್ತಾಪ ಪಡುತ್ತಾನೋ ಅವನ ಇನ್ನೊಂದು ದೇಹದಲ್ಲಿ ಪ್ರಾಯಶ್ಚಿತ್ತ ರೂಪದ ಬೇರೆ ತಪಸ್ಸನ್ನು ಮಾಡಬೇಕು.
ಪಾಪಾನಾಂ ಕರ್ಮಣಾಂ ನಿತ್ಯಂ ಬಿಭೀಯಾದ್ ಯಸ್ತು ಮಾನವಃ |
ಸುಖಮೇವಾಚರನ್ನಿತ್ಯಂ ಸೋಽತ್ಯಂತಂ ಸುಖಮಶ್ನುತೇ ॥4॥
ಯಾವ ಮನುಷ್ಯನು ಯಾವಾಗಲೂ ಪಾಪಕರ್ಮಕ್ಕೆ ಹೆದರಿ ನಿತ್ಯವೂ ಶುಭವನ್ನೇ ಆಚರಿಸುತ್ತಾನೋ, ಅವನು ಬಹಳ ಸುಖವನ್ನು ಹೊಂದುತ್ತಾನೆ.
ಯದ್ವೈ ನೃಶಂಸಂ ತದಸತ್ಯಮಾಹು-
ರ್ಯತ್ ಸೇವತೇ ಧರ್ಮಮನರ್ಥಬುದ್ಧಿಃ |
ಅಸ್ವೋಽಪ್ಯನೀಶಶ್ಚ ತಥೈವ ರಾಜನ್
ತದಾರ್ಜವಂ ಸ ಸಮಾಧಿಸ್ತದಾಢ್ಯಮ್ ॥5॥
ನಿಷ್ಠುರವಾದ ವಚನಗಳನ್ನೇ ಅಸತ್ಯವೆಂದು ಕರೆಯುತ್ತಾರೆ. ಯಾವನು ಅಸತ್ಯದಲ್ಲಿ ಅನರ್ಥಬುದ್ಧಿಯುಳ್ಳವನಾಗಿ, ಸ್ವರ್ಗದ ಅಪೇಕ್ಷೆಯೂ ಇಲ್ಲದೆ ಧರ್ಮವನ್ನು ಸೇವಿಸುತ್ತಾನೋ ಹಾಗೆಯೇ ಧನವಿಲ್ಲದೆ ಯಾಗಾದಿಗಳನ್ನು ಮಾಡಲು ಶಕ್ತನಾಗದಿದ್ದರೂ ಧರ್ಮವನ್ನೇ ಆಚರಿಸುತ್ತಾನೋ ಅದನ್ನೇ ಆರ್ಜವ, ಸಮಾಧಿ ಮತ್ತು ಆಢ್ಯತೆ ಎಂದು ಕರೆಯುತ್ತಾರೆ.
ಅಷ್ಟಕಃ
ಕೇನಾಸಿ ದೂತಪ್ರಹಿತೋಽದ್ಯ ರಾಜನ್
ಯುವಾ ಸ್ರಗ್ವೀ ದರ್ಶನೀಯಃ ಸುವರ್ಚಾಃ |
ಕುತ ಆಗತಃ ಕತರಸ್ಯಾಂ ದಿಶಿ ತ್ವಮ್
ಉತಾಹೋಸ್ವಿತ್ ಪಾರ್ಥಿವ ಸ್ಥಾನಮಸ್ತಿ ॥6॥
ಎಲೈ ರಾಜನೇ, ಯುವಕನೂ, ಮಾಲೆಯನ್ನು ಧರಿಸಿದವನೂ ಸುಂದರನೂ ಆದ ಒಳ್ಳೆಯ ಕಾಂತಿಯುಳ್ಳ ನೀನು ಯಾರಿಂದ ಇಲ್ಲಿಗೆ ದೂತನಾಗಿ ಕಳುಹಿಸಲ್ಪಟ್ಟಿದ್ದೀಯೆ, ನೀನು ಎಲ್ಲಿಂದ ಬರುತ್ತಿದ್ದೀಯೆ, ನಿನ್ನ ದಿಕ್ಕು ಯಾವುದು, ಅಥವಾ ಎಲೈ ರಾಜನೇ, ನಿನಗೆ ಬೇರೇನಾದರೂ ಸ್ಥಾನವಿದೆಯೆ?
ಯಯಾತಿಃ
ಇಮಂ ಭೌಮಂ ನರಕಂ ಕ್ಷೀಣಪುಣ್ಯಃ
ಪ್ರವೇಷ್ಟುಮುರ್ವೀಂ ಗಗನಾದ್ ವಿಪ್ರಹೀಣಃ |
ವಿದ್ಯಾ ಚೈವಮತಿಮಾನಾ ಚ ಬುದ್ಧಿಃ
ಮಮಾಭವತ್ ಕರ್ಮ ಲೋಕ್ಯಂ ಚ ಸರ್ವಮ್ |
ಉಕತ್ತ್ವಾಽಹಂ ವಃ ಪ್ರಪತಿಷ್ಯಾಮ್ಯನಂತರಂ
ತ್ವರಯಂತಿ ಮಾಂ ಬ್ರಾಹ್ಮಣಾ ಲೋಕಪಾಲಾಃ ॥7॥
ಈ ಭೂಲೋಕರೂಪವಾದ ನರಕವನ್ನು ಪ್ರವೇಶಿಸಲು ಪುಣ್ಯವನ್ನು ಕಳೆದುಕೊಂಡ ನಾನು ಸ್ವರ್ಗದಿಂದ ಕೆಳಗೆ ಬೀಳುತ್ತಿದ್ದೇನೆ. ನನಗೆ ವಿದ್ಯೆ, ಅಸಾಧಾರಣವಾದ ಬುದ್ಧಿ, ಪಾಪಲೋಕಪ್ರಾಪ್ತಿಗೆ ಸಾಧನವಾದ ಕರ್ಮ, ಎಲ್ಲವೂ ಇದ್ದಿತು. ಇದನ್ನು ಹೇಳಿ ಅನಂತರ ನಾನು ಕೆಳಗೆ ಬೀಳುತ್ತೇನೆ. ಬ್ರಹ್ಮಜ್ಞಾನಿಗಳಾದ ಲೋಕಪಾಲಕರು ನನಗೆ ತ್ವರೆ ಮಾಡುತ್ತಿದ್ದಾರೆ.
ಸತಾಂ ಸಕಾಶೇ ತು ವೃತಃ ಪ್ರಪಾತಃ
ತೇ ಸಂಗತಾ ಗುಣವಂತಶ್ಚ ಸರ್ವೇ |
ಶಕ್ರಾಚ್ಚ ಲಬ್ಧೋ ಹಿ ವರೋ ಮಯೈಷ
ಪತಿಷ್ಯತಾ ಭೂಮಿತಳೇ ನರೇಂದ್ರ ॥8॥
ಸಜ್ಜನರ ಸನ್ನಿಧಿಯಲ್ಲಿ ಪ್ರಪಾತವನ್ನು ವರವಾಗಿ ಪಡೆದಿದ್ದೇನೆ. ಸಂಗತರಾದ ನೀವೆಲ್ಲರೂ ಗುಣವಂತರು. ಎಲೈ ರಾಜನೇ, ಭೂಮಿಯಲ್ಲಿ ಬೀಳುವ ಸಮಯದಲ್ಲಿ ನಾನು ಇಂದ್ರನಿಂದ ಈ ವರವನ್ನು ಪಡೆದೆ.
ಅಷ್ಟಕಃ

ಪೃಚ್ಛಾಮಿ ತ್ವಾಂ ಪ್ರಪತಂತಂ ಪ್ರಪಾತಂ
ಯದಿ ಮೇ ಲೋಕಾ ಪಾರ್ಥಿವ ತತ್ರ ಸಂತಿ |
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ||9||
ಕೆಳಗೆ ಬೀಳುತ್ತಿರುವ ನಿನ್ನನ್ನು ಕೇಳುತ್ತಿದ್ದೇನೆ. ನನಗೆ ಗಗನದಲ್ಲಾಗಲೀ, ಅಂತರಿಕ್ಷದಲ್ಲಾಗಲೀ, ಸ್ವರ್ಗಲೋಕದಲ್ಲಾಗಲೀ ಪುಣ್ಯಲೋಕಗಳು ಇದ್ದರೆ ನೀನು ಆ ಪುಣ್ಯಲೋಕಗಳ ಪ್ರಾಪ್ತಿಗೆ ಸಾಧನವಾದ ಧರ್ಮಕ್ಕೆ ಒಡೆಯನೆಂದು ಭಾವಿಸುತ್ತೇನೆ.
ಯಯಾತಿಃ
ಯಾವತ್ ಪೃಥಿವ್ಯಾಂ ವ್ರೀಹಿಯವಂ ಗವಾಶ್ವಂ
ಸಹಾರಣ್ಯೈಃ ಪಶುಭಿಃ ಪರ್ವತೈಶ್ಚ |
ತಾವಂತೋ ಲೋಕಾಃ ದಿವಿ ಸಂಸ್ಥಿತಾಸ್ತೇ
ತಥಾ ವಿಜಾನೀಹಿ ನರೇಂದ್ರಸಿಂಹ ||10||
ಎಲೈ ರಾಜಶ್ರೇಷ್ಠನೇ, ಭೂಮಿಯಲ್ಲಿ ಗೋಧಿ, ಭತ್ತಗಳ ಎಷ್ಟು ಕಾಳುಗಳು ಇವೆಯೋ, ಅರಣ್ಯ ಪಶುಗಳನ್ನು ಸೇರಿಸಿ ಮತ್ತು ಪರ್ವತಗಳನ್ನು ಸೇರಿಸಿ ಎಷ್ಟು ಗೋವುಗಳೂ, ಅಶ್ವಗಳೂ ಇವೆಯೋ ಅಷ್ಟು ಲೋಕಗಳು ಸ್ವರ್ಗಲೋಕದಲ್ಲಿ ನಿನಗಾಗಿ ಸಿದ್ಧವಾಗಿವೆ ಎಂದು ತಿಳಿ.
ಅಷ್ಟಕಃ
ತಾಂಸ್ತೇ ದದಾಮಿ ಮಾ ಪ್ರಪತ ಪ್ರಪಾತಂ
ಯೇ ಮೇ ಲೋಕಾ ದಿವಿ ರಾಜೇಂದ್ರ ಸಂತಿ |
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ತಾನಾಕ್ರಮಸ್ವ ಕ್ಷಿಪ್ರಮಮಿತ್ರಸಾಹ ||11||
ಎಲೈ ರಾಜೇಂದ್ರನೇ, ನನಗೆ ಸ್ವರ್ಗದಲ್ಲಿ ಯಾವ ಲೋಕಗಳು ಇವೆಯೋ, ಅವುಗಳನ್ನು ನಿನಗೆ ಕೊಡುತ್ತೇನೆ. ಕೆಳಗೆ ಬೀಳಬೇಡ. ಅಥವಾ ಅಂತರಿಕ್ಷದಲ್ಲಿ ಅಥವಾ ಸ್ವರ್ಗಲೋಕದಲ್ಲಿ ಎಲ್ಲಿ ನನ್ನ ಲೋಕಗಳು ಇದ್ದರೂ ನೀನು ಬೇಗ ಅಲ್ಲಿಗೆ ಹೋಗು.
ಯಯಾತಿಃ
ನಾಸ್ಮದ್ವಿಧಃ ಕ್ಷತ್ರಿಯವಂಶಜಾತಃ
ಪ್ರತಿಗ್ರಹೇ ವರ್ತತೇ ಕ್ಷತ್ರಮುಖ್ಯ |
ಯಥಾ ಪ್ರದೇಯಂ ಸತತಂ ದ್ವಿಜೇಭ್ಯಃ
ತಥಾಽದದಂ ಪೂರ್ವಮಹಂ ದ್ವಿಜೇಭ್ಯಃ ||12||
ಎಲೈ ಕ್ಷತ್ರಿಯಶ್ರೇಷ್ಠನೇ, ಕ್ಷತ್ರಿಯವಂಶದಲ್ಲಿ ಜನಿಸಿದ ನನ್ನಂತಹ ಯಾವನೂ ಪ್ರತಿಗ್ರಹವನ್ನು ಮಾಡುವುದಿಲ್ಲ. ಹೇಗೆ ದಾನ ಮಾಡಬೇಕೋ ಆ ರೀತಿಯಲ್ಲಿ ನಾನು ಹಿಂದೆ ಬ್ರಾಹ್ಮಣರಿಗೆ ಬೇಕಾದಷ್ಟು ದಾನವನ್ನು ಮಾಡಿದ್ದೇನೆ.
ನಾಬ್ರಾಹ್ಮಣಃ ಕೃಪಣಂ ಜಾತು ಜೀವೇದ್
ದದ್ಯಾನ್ನ ಯಾಚೇದಿತಿ ಕ್ಷತ್ರಧರ್ಮಃ |
ಸೋಽಹಂ ಯಥಾ ಕೃತಪೂರ್ವಂ ಚರೇಯಂ
ವಿವಿತ್ಸಮಾನಃ ಕಿಮುತಾತ್ರ ಸಾಧು ||13||
ಕ್ಷತ್ರಿಯನಾದವನು ಎಂದೂ ಕಾರ್ಪಣ್ಯದಿಂದ ಜೀವಿಸಬಾರದು. ಅವನು ದಾನವನ್ನು ಕೊಡಬೇಕು. ಯಾಚನೆಯನ್ನು ಮಾಡಬಾರದು. ಇದು ಕ್ಷತ್ರಿಯಧರ್ಮ. ನಾನು ಈಗ ಏನು ಮಾಡಿದರೆ ಒಳ್ಳೆಯದಾಗುತ್ತದೆ ಎಂದು ಯೋಚಿಸುತ್ತಾ ಹಿಂದೆ ನಡೆದಂತೆಯೇ ನಡೆದುಕೊಳ್ಳುತ್ತೇನೆ.
ಪ್ರತರ್ದನಃ
ಪೃಚ್ಛಾಮಿ ತ್ವಾಂ ಕಾಶಿರಾಜೋಽಹಮಸ್ಮಿ
ಪ್ರತರ್ದನೋಽಹಂ ಯದಿ ಮೇ ಸಂತಿ ಲೋಕಾಃ |
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ||14||
ಯಯಾತಿಯೇ, ನಾನು ಕಾಶಿರಾಜನಾದ ಪ್ರತರ್ದನ. ನಿನ್ನನ್ನು ಕೇಳುತ್ತಿದ್ದೇನೆ. ನನಗೆ ಅಂತರಿಕ್ಷದಲ್ಲಾಗಲೀ, ಸ್ವರ್ಗದಲ್ಲಾಗಲೀ, ಏನಾದರೂ ಲೋಕಗಳು ಇವೆಯೇ, ಇದ್ದರೆ, ಅವೆಲ್ಲಕ್ಕೂ ನೀನೇ ಒಡೆಯನೆಂದು ಭಾವಿಸುತ್ತೇನೆ.
ಯಯಾತಿಃ
ಸಂತ್ಯೇವ ಲೋಕಾ ಬಹವಸ್ತೇ ನರೇಂದ್ರ
ಏಕೈಕಶಃ ಸಪ್ತ ಸಪ್ತೈವ ತೇ ಚ |
ಮಧುಚ್ಯುತಾ ಘೃತಪೃಕ್ತಾ ವಿಶೋಕಾಃ
ತೇ ತಾವಂತಸಂತ್ವಂ ಪ್ರತಿಪಾಲಯಂತಿ ||15||
ಎಲೈ ರಾಜನೇ, ನಿನಗೆ ಅಂತಹ ಅನೇಕ ಲೋಕಗಳಿವೆ. ಒಂದೊಂದೂ ಏಳು ಏಳರ ಗುಂಪಿನಲ್ಲಿವೆ. ಎಲ್ಲಾ ಲೋಕಗಳು ದುಃಖರಹಿತವಾದವುಗಳು. ಮಧುಘೃತಗಳಿಂದ ತುಂಬಿರುವಂತಹವು. ಆ ಲೋಕಗಳು ನಿನ್ನನ್ನು ನಿರೀಕ್ಷಿಸುತ್ತಿವೆ.
ಪ್ರತರ್ದನಃ

ತಾಂಸ್ತೇ ದದಾಮಿ ಮಾ ಪ್ರಪತ ಪ್ರಪಾತಂ
ಯೇ ಮೇ ಲೋಕಾಸ್ತವತೇ ವೈ ಭವಂತು |
ಯದ್ಯಂತರಿಕ್ಷೇ ಯದಿ ವಾ ದಿವಿ ಸ್ಥಿತಾಃ
ತಾನಾಕ್ರಮಸ್ವ ಪ್ರದದಾಮ್ಯಹಂ ತೇ ॥16॥
ಆ ಲೋಕಗಳನ್ನು ನಿನಗೆ ಕೊಡುತ್ತೇನೆ, ಕೆಳಗೆ ಬೀಳಬೇಡ. ನನಗೆ ಇರುವ ಲೋಕಗಳೆಲ್ಲವೂ ನಿನಗೇ ಆಗಲಿ. ಸ್ವರ್ಗದಲ್ಲಿರುವ ಅಥವಾ ಅಂತರಿಕ್ಷದಲ್ಲಿರುವ ನನ್ನ ಆ ಲೋಕಗಳನ್ನು ನೀನು ಆಕ್ರಮಿಸು. ನಾನು ಅವುಗಳನ್ನು ನಿನಗೆ ಕೊಡುತ್ತಿದ್ದೇನೆ.
ಯಯಾತಿಃ
ನ ತುಲ್ಯತೇಜಾಃ ಸುಕೃತಂ ಕಾಮಯೇತ
ಯೋಗಕ್ಷೇಮಂ ಪಾರ್ಥಿವ ಪಾರ್ಥಿವಃ ಸನ್ |
ದೈವಾದೇಶಾದಾಪದಂ ಪ್ರಾಪ್ಯ ವಿದ್ವಾನ್
ಚರೇನ್ನೃಶಂಸಂ ನಹಿ ಜಾತು ರಾಜಾ ॥17॥
ಎಲೈ ರಾಜನೇ, ಸಮಾನಪರಾಕ್ರಮವುಳ್ಳ ರಾಜನಾದವನು ಇನ್ನೊಬ್ಬನ ಪುಣ್ಯವನ್ನಾಗಲೀ, ಇನ್ನೊಬ್ಬನ ಯೋಗಕ್ಷೇಮವನ್ನಾಗಲೀ ಬಯಸಬಾರದು. ದೇವರ ಇಚ್ಛೆಯಂತೆ ಕಷ್ಟದಲ್ಲಿ ಸಿಲುಕಿದ್ದೇನೆಂದು ತಿಳಿದು ರಾಜನಾದವನು ಎಂದೂ ಕ್ರೂರಕರ್ಮವನ್ನು ಮಾಡಬಾರದು.
ಧರ್ಮ್ಯಂ ಮಾರ್ಗಂ ಚೇತಯಾಮೋ ಯಶಸ್ಯಂ
ಕುರ್ಯಾನ್ನೃಪೋ ಧರ್ಮಮವೇಕ್ಷಮಾಣಃ |
ನ ಮದ್ವಿಧೋ ಧರ್ಮಬುದ್ಧಿಃ ಪ್ರಜಾನನ್
ಕುರ್ಯಾದೇವಂ ಕೃಪಣಂ ಮಾಂ ಯಥಾಽಽತ್ಥ ॥18॥
ಯಶಸ್ಕರವಾದ ಧರ್ಮಮಾರ್ಗ ಯಾವುದು ಎಂದು ವಿಚಾರ ಮಾಡುತ್ತಿದ್ದೇನೆ. ಧರ್ಮದ ದೃಷ್ಟಿಯುಳ್ಳ ನನ್ನಂತಹ ರಾಜನು ಧರ್ಮವನ್ನು ತಿಳಿದವನಾಗಿ ನೀನು ಹೇಳಿದಂತೆ ಕಾರ್ಪಣ್ಯದ ಕಾರ್ಯವನ್ನು ಮಾಡಬಾರದು.
ಕುರ್ಯಾದೇವಂ ನ ಕೃತಂ ಯದನ್ಯೈ-
ರ್ವಿವಿತ್ಸಮಾನಃ ಕಿಮುತಾತ್ರ ಸಾಧು |
ಧರ್ಮಾಧರ್ಮೌ ಸುವಿನಿಶ್ಚಿತ್ಯ ಸಮ್ಯಕ್
ಕಾರ್ಯಾಕಾರ್ಯೇಷ್ವಪ್ರಮತ್ತಶ್ಚರೇದ್ ಯಃ ॥19॥
ಏನು ಮಾಡಿದರೆ ಒಳ್ಳೆಯದಾಗುತ್ತದೆ ಎಂದು ಯೋಚಿಸುತ್ತಿದ್ದೇನೆ. ಹಿಂದಿನ ಯಾವ ಕ್ಷತ್ರಿಯರೂ ಮಾಡದಿದ್ದ ಕಾರ್ಯವನ್ನು ನಾನು ಮಾಡುವುದಿಲ್ಲ. ಮನುಷ್ಯನು ಧರ್ಮಾಧರ್ಮಗಳನ್ನೂ, ಕಾರ್ಯಾಕಾರ್ಯಗಳನ್ನೂ ವಿಮರ್ಶೆ ಮಾಡಿ ಎಚ್ಚರಿಕೆಯಿಂದ ನಡೆಯಬೇಕು.
ಸ ವೈ ಧೀರಃ ಸತ್ಯಸಂಧಃ ಕೃತಾತ್ಮಾ
ರಾಜಾ ಭವೇಲ್ಲೋಕಪಾಲೋ ಮಹಿಮ್ನಾ |
ಯದಾ ಭವೇತ್ ಸಂಶಯೋ ಧರ್ಮಕಾರ್ಯೇ
ಕಾಮಾರ್ಥೌ ವಾ ಯತ್ರ ವಿಂದಂತಿ ಸಮ್ಯಕ್ |
ಕಾರ್ಯಂ ತತ್ರ ಪ್ರಥಮಂ ಧರ್ಮಕಾರ್ಯಂ
ಯನ್ನೋ ವಿರುದ್ಧ್ಯೇದರ್ಥಕಾಮೌ ಸ ಧರ್ಮಃ ॥20॥
ಅಂತಹ ಧೀರನೂ, ಸತ್ಯಸಂಧನೂ, ಮನೋನಿಗ್ರಹವುಳ್ಳವನೂ ಆದವನೇ, ತನ್ನ ಸಾಮರ್ಥ್ಯದಿಂದ ಲೋಕಪತಿಯಾದ ರಾಜನಾಗುತ್ತಾನೆ. ಧರ್ಮ, ಅರ್ಥ ಮತ್ತು ಕಾಮ ಕಾರ್ಯಗಳಲ್ಲಿ ಯಾವುದನ್ನು ಮಾಡಬೇಕೆಂದು ಸಂಶಯವುಂಟಾದಾಗ ಮೊದಲು ಧರ್ಮವನ್ನೇ ಆಚರಿಸಬೇಕು. ಯಾವ ಕಾರ್ಯವು ಅರ್ಥ, ಕಾಮಗಳನ್ನು ಬಾಧಿಸು- ವುದಿಲ್ಲವೋ ಅದೇ ಧರ್ಮ.
ವೈಶಂಪಾಯನಃ
ಬ್ರುವಾಣಮೇವಂ ನೃಪತಿಂ ಯಯಾತಿಂ
ನೃಪೋತ್ತಮೋ ವಸುಮನಾಶ್ಚಾಬ್ರವೀತ್ ತಮ್ ॥21॥
ಹೀಗೆ ಮಾತನಾಡುವ ಯಯಾತಿರಾಜನನ್ನು ಕುರಿತು, ರಾಜಶ್ರೇಷ್ಠನಾದ ವಸುಮನನು ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ತೊಂದನೆಯ ಅಧ್ಯಾಯ ಮುಗಿಯಿತು
*****
ಎಂಭತ್ತರಡನೆಯ ಅಧ್ಯಾಯ
(ವಸುಮನಾ ಮತ್ತು ಶಿಬಿಯೊಡನೆ ಯಯಾತಿಯ ಸಂವಾದ, ಅವರ ಪುಣ್ಯಲೋಕಗಳ ನಿರಾಕರಣೆ, ಪುನಃ ಅಷ್ಟಕನೊಡನೆ ಸಂವಾದ.)
ವಸುಮನಾಃ
ಪೃಚ್ಛಾಮಿ ತ್ವಾಂ ವಸುಮನ್ಯೈಕ್ಷ್ವಾಕವೋಽಸ್ಮಿ
ಯದಿ ಸಂತಿ ಲೋಕಾ ದಿವಿ ಮೇ ನರೇಂದ್ರ |
ಯದ್ಯಂತರಿಕ್ಷೇ ಪ್ರಥಿತಾ ಮಹಾತ್ಮನ್

ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ॥1॥
ಎಲೈ ರಾಜೇಂದ್ರನೇ, ನಾನು ಇಕ್ಷ್ವಾಕುವಂಶದ ವಸುಮನಸ್ ಎಂಬ ರಾಜ. ಎಲೈ ಮಹಾತ್ಮನೇ, ನನಗೇನಾದರೂ ಸ್ವರ್ಗಲೋಕದಲ್ಲಿ ಅಥವಾ ಅಂತರಿಕ್ಷಲೋಕದಲ್ಲಿ ಪ್ರಸಿದ್ಧವಾದ ಲೋಕಗಳು ಇವೆಯೇ ಎಂದು ನಿನ್ನನ್ನು ಕೇಳುತ್ತಿದ್ದೇನೆ. ಒಂದು ಪಕ್ಷ ಇದ್ದರೆ, ಆ ಲೋಕಗಳಿಗೆ ನೀನೇ ಒಡೆಯನೆಂದು ಭಾವಿಸುತ್ತೇನೆ.
ಯಯಾತಿಃ
ಯದಂತರಿಕ್ಷಂ ಪೃಥಿವೀಂ ದಿವಂ ಚ
ಯತ್ತೇಜಸಾ ತಪತೇ ಭಾನುಮಾಂಶ್ಚ |
ಲೋಕಸ್ತಾವಂತೋ ದಿವಿ ಸಂಸ್ಥಿತಾ ವೈ
ತೇ ತಾವಂತಸ್ತ್ವಂ ಪ್ರತಿಪಾದಯಂತಿ ॥2॥
ಅಂತರಿಕ್ಷಲೋಕವನ್ನು, ಪೃಥಿವೀಲೋಕವನ್ನು, ದೇವಲೋಕವನ್ನು ಸೂರ್ಯನು ತನ್ನ ಕಿರಣಗಳಿಂದ ಹೇಗೆ ಬೆಳಗುತ್ತಾನೋ, ಅಷ್ಟು ಲೋಕಗಳು ಸ್ವರ್ಗದಲ್ಲಿ ನಿನಗಿದ್ದು ನಿನ್ನನ್ನು ನಿರೀಕ್ಷಣೆ ಮಾಡುತ್ತಿವೆ.
ವಸುಮನಾಃ
ತಾಂಸ್ತೇ ದದಾಮಿ ಮಾ ಪ್ರಪತ ಪ್ರಪಾತಂ
ಯೇ ಮೇ ಲೋಕಾಸ್ತವ ತೇ ವೈ ಭವಂತು |
ಕ್ರೀಣೀಷ್ವೈನಾಂಸ್ತೃಣಕೇನಾಪಿ ಹಂತ
ಪ್ರತಿಗ್ರಹೋ ಯದಿ ರಾಜನ್ ನೃಷ ಇಷ್ಟಃ ॥3॥
ಆ ಲೋಕಗಳನ್ನು ನಿನಗೆ ಕೊಡುತ್ತೇನೆ. ಕೆಳಗೆ ಬೀಳಬೇಡ. ನನಗಿರುವ ಲೋಕಗಳೆಲ್ಲವೂ ನಿನಗೇ ಆಗಲಿ. ಎಲೈ ರಾಜನೇ, ಪ್ರತಿಗ್ರಹವನ್ನು ಮಾಡುವುದು ನಿನಗೆ ಇಷ್ಟವಿಲ್ಲದಿದ್ದರೆ, ಆ ಲೋಕಗಳನ್ನು ಒಂದು ಹುಲ್ಲುಕಡ್ಡಿಯಿಂದಲಾದರೂ ಖರೀದಿ ಮಾಡು.
ಯಯಾತಿಃ
ನ ಮಿಥ್ಯಾಽಹಂ ವಿಕ್ರಯಂ ತೇ ವೃಣೋಮಿ
ಯಥಾ ಗೃಹೀತಂ ಶಿಶುಕೇ ಶಂಕಮಾನಃ |
ಕುರ್ಯಾಂ ನ ಚೈವಾಕೃತಪೂರ್ವಮನ್ಯೈ-
ರ್ವಿವಿತ್ಸಮಾನಃ ಕಿಮುತಾತ್ರ ಸಾಧು ॥4॥
ನಾನು ಮಿಥ್ಯಾವಿಕ್ರಯವನ್ನು ಬಯಸುವುದಿಲ್ಲ. ಅದು ಮಗುವಿಗೆ ಮಾಡಿದ ಮೋಸದಂತೆ ಆಗುತ್ತದೆ. ಏನು ಮಾಡಿದರೆ ಒಳ್ಳೆಯದಾಗುತ್ತದೆ ಎಂದು ಯೋಚಿಸುತ್ತಿರುವ ನಾನು ಬೇರೆ ಯಾರೂ ಕ್ಷತ್ರಿಯರು ಮಾಡದಿದ್ದ ಕೆಲಸವನ್ನು ಮಾಡಲಾರೆ.
ವಸುಮನಾಃ
ತಾಂಸ್ತ್ವಂ ಲೋಕಾನ್ ಪ್ರತಿಪದ್ಯಸ್ವ ರಾಜನ್
ಮಯಾ ದತ್ತಾನ್ ಯದಿ ನೇಷ್ಟಃ ಕ್ರಯಸ್ತೇ |
ನ ಚಾಪ್ಯಹಂ ತಾನ್ ಪ್ರತಿಪದ್ಯೇ ಚ ದತ್ವಾ
ಯತ್ರ ಗಂತಾ ತ್ವಮಪಹಾಯಾತ್ಮಲೋಕಮ್ ॥5॥
ಎಲೈ ರಾಜನೇ, ನಿನಗೆ ಕ್ರಯವು ಇಷ್ಟವಾಗದಿದ್ದರೆ, ನೀನು ನನ್ನಿಂದ ದತ್ತವಾದ ಆ ಲೋಕಗಳನ್ನು ಪಡೆಯುವವನಾಗು. ನಿನ್ನ ಲೋಕವನ್ನು ಬಿಟ್ಟು ಆ ಲೋಕಗಳಿಗೆ ಹೋಗುವ ನಿನಗೆ ಒಮ್ಮೆ ದಾನ ಮಾಡಿದ ಮೇಲೆ, ನಾನು ಪುನಃ ಅವುಗಳನ್ನು ತೆಗೆದುಕೊಳ್ಳುವುದಿಲ್ಲ.
ಯಯಾತಿಃ
ಯದಾ ತ್ವಮಿಂದ್ರಪ್ರತಿಮಪ್ರಭಾವ -
ಸ್ತೇ ಚಾಪ್ಯನಂತಾ ನರದೇವ ಲೋಕಾಃ |
ತಥಾಽನ್ಯಲೋಕೇ ನ ರಮೇಽನ್ಯದತ್ತೇ
ತಸ್ಮಾತ್ ಸದಾ ನಾಭಿನಂದಾಮಿ ದಾಯಮ್ ॥6॥
ಎಲೈ ರಾಜನೇ ನೀನು ಇಂದ್ರನಿಗೆ ಸಮಾನವಾದ ಪ್ರಭಾವವುಳ್ಳವನಾಗಿದ್ದೀಯೆ. ನೀನು ಸಂಪಾದಿಸಿದ ಆ ಲೋಕಗಳು ಅನಂತವಾಗಿವೆ. ಆದರೂ, ಇನ್ನೊಬ್ಬರು ಸಂಪಾದಿಸಿಕೊಟ್ಟ ಬೇರೆ ಲೋಕದಲ್ಲಿ ನನಗೆ ಸಂತೋಷವಿಲ್ಲ. ಆದ್ದರಿಂದ ನಿನ್ನ ಭಾಗವನ್ನು ನಾನು ಬಯಸುವುದಿಲ್ಲ.
ಶಿಬಿಃ
ಅಹಂ ಶಿವಿರ್ಮಾ ಪ್ರಪತ ಪ್ರಪಾತಂ
ಪೃಚ್ಛಾಮಿ ತ್ವಾಂ ಮಮ ರಾಜೇಂದ್ರ ಲೋಕಾಃ |
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ತಾನಾಕ್ರಮಸ್ವಾಶು ಮಹೇಂದ್ರಕಲ್ಪ ॥7॥
ಪೃಚ್ಛಾಮಿ ತ್ವಾಂ ಶಿವಿರೌಶೀನರೋಽಸ್ಮಿ
ಮಮ ಲೋಕಾ ಯೇ ಪಾರ್ಥಿವಸ್ತತ್ರ ಸಂತಿ |
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ॥8॥

ರಾಜೇಂದ್ರನೇ, ನಾನು ಶಿಬಿ, ನೀನು ಕೆಳಗೆ ಬೀಳಬೇಡ. ಅಂತರಿಕ್ಷದಲ್ಲಿ ಅಥವಾ ಸ್ವರ್ಗದಲ್ಲಿ ನನಗೆ ಏನಾದರೂ ಲೋಕಗಳು ಆಶ್ರಿತವಾಗಿವೆಯೇ ಎಂದು ನಿನ್ನನ್ನು ಕೇಳುತ್ತಿದ್ದೇನೆ. ಇದ್ದ ಪಕ್ಷದಲ್ಲಿ ಮಹೇಂದ್ರಸದೃಶನಾದ ನೀನು ಅವುಗಳನ್ನು ಆಶ್ರಯಿಸು. ನಾನು ಔಶೀನರನಾದ ಶಿಬಿ. ನಿನ್ನನ್ನು ಅದೇ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ನನಗಿರುವ ಆ ಲೋಕಗಳಿಗೆಲ್ಲಾ ನೀನೇ ಒಡೆಯನೆಂದು ಭಾವಿಸುತ್ತೇನೆ.

ಯಯಾತಿಃ

ನೇಮಾನ್ ವಾಚಾ ಹೃದಯೇನ ವಾಪಿ
ಪರೀಪ್ಸಮಾನಸ್ತವ ಮನ್ಯೇ ನರೇಂದ್ರ |
ತೇ ಚಾನಂತಾ ದಿವಿ ಲೋಕಾಃ ಶ್ರಿತಾಸ್ತೇ
ವಿದ್ಯುದ್ರೂಪಾಃ ಸ್ವನವಂತೋ ನರೇಂದ್ರ ॥9॥

ಎಲೈ ನರೇಂದ್ರನೇ, ನಿನ್ನ ಮಾತುಗಳನ್ನು ಪರೀಕ್ಷಿಸುತ್ತಿರುವ ನಾನು ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ, ಆ ಲೋಕಗಳನ್ನು ಸ್ವೀಕರಿಸುವುದಿಲ್ಲ. ನಿನಗಾದರೋ ಮಿಂಚಿನಿಂದ ಹೊಳೆಯುವ ಸುಘೋಷದಿಂದ ಕೂಡಿದ ಅಂತಹ ಲೋಕಗಳು ಸ್ವರ್ಗದಲ್ಲಿ ಅನಂತವಾಗಿವೆ.

ಶಿಬಿಃ

ತಾಂಸ್ತೇ ದದಾಮಿ ಮಾ ಪ್ರಪತ ಪ್ರಪಾತಂ
ಯೇ ಮೇ ಲೋಕಾ ದಿವಿ ರಾಜೇಂದ್ರ ಸಂತಿ |
ಯದ್ಯಂತರಿಕ್ಷೇ ಯದಿ ವಾ ದಿವಿ ಶ್ರಿತಾಃ
ತಾನಾಕ್ರಮಸ್ವ ಪ್ರದದಾಮ್ಯಹಂ ತೇ ॥10॥

ಅವುಗಳನ್ನು ನಿನಗೆ ಕೊಡುತ್ತೇನೆ, ಬೀಳಬೇಡ. ಅಂತರಿಕ್ಷದಲ್ಲಿ ಮತ್ತು ಸ್ವರ್ಗದಲ್ಲಿ ಇರುವ ನನ್ನ ಲೋಕಗಳನ್ನು ನೀನು ಆಕ್ರಮಿಸು. ನಾನು ನಿನಗೆ ಅದನ್ನು ಕೊಡುತ್ತಿದ್ದೇನೆ.

ಯಯಾತಿಃ

ಯಥಾ ತ್ವಮಿಂದ್ರಪ್ರತಿಮಪ್ರಭಾವಃ
ತೇ ಚಾಪ್ಯನಂತಾ ನರದೇವ ಲೋಕಾಃ |
ತಥಾಽನ್ಯಲೋಕೇ ನ ರಮೇಽನ್ಯದತ್ತೇ
ತಸ್ಮಾಚ್ಛಿವೇ ನಾಭಿನಂದಾಮಿ ದಾಯಮ್ ॥11॥

ಎಲೈ ರಾಜನೇ, ನೀನು ಇಂದ್ರನಿಗೆ ಸಮಾನವಾದ ಪ್ರಭಾವವುಳ್ಳವನಾಗಿರುವೆ. ಆ ಲೋಕಗಳು ಅನಂತವಾಗಿವೆ. ಆದರೂ, ಇನ್ನೊಬ್ಬರು ಸಂಪಾದಿಸಿಕೊಟ್ಟ ಬೇರೆ ಲೋಕದಲ್ಲಿ ನನಗೆ ಸಂತೋಷವಿಲ್ಲ. ಆದ್ದರಿಂದ ಎಲೈ ಶಿಬಿಯೇ, ನಿನ್ನ ಭಾಗವನ್ನು ನಾನು ಅಂಗೀಕರಿಸುವುದಿಲ್ಲ.

ನ ಚೇದೇಕೈಕಶೋ ರಾಜಂಲ್ಲೋಕಾನ್ನಃ ಪ್ರತಿಗೃಹ್ಣಸಿ |
ಸರ್ವೇ ಪ್ರದಾಯ ಭವತೇ ಗಂತಾರೋ ನರಕಂ ವಯಮ್ ॥12॥

ಎಲೈ ರಾಜನೇ, ನಾವು ಒಬ್ಬೊಬ್ಬರು ಕೊಟ್ಟ ಲೋಕಗಳನ್ನು ನೀನು ತೆಗೆದುಕೊಳ್ಳದಿದ್ದರೆ, ಎಲ್ಲರೂ ಒಟ್ಟಿಗೆ ನಮ್ಮ ಲೋಕಗಳನ್ನು ಕೊಟ್ಟು ನಾವು ನರಕಕ್ಕೆ ಹೋಗುತ್ತೇವೆ.

ಯಯಾತಿಃ

ತದರ್ಹಾಯ ದದಧ್ವಂ ವೈ ಸತಃ ಸತ್ಯಾನೃಶಂಸ್ಯತಃ |
ಅಹಂ ತು ನಾಭಿಗೃಹ್ಣಾಮಿ ಯತ್ ಕೃತಂ ನ ಮಯಾ ಪುರಾ ॥13॥

ಸತ್ಯ ಮತ್ತು ಆನೃಶಂಸ್ಯವನ್ನು ಗಮನಿಸಿ, ಯೋಗ್ಯನಾದವನಿಗೆ ಅವುಗಳನ್ನು ಕೊಡಿ. ನಾನು ಹಿಂದೆ ಮಾಡದಿದ್ದುದರ ಫಲವಾದ ಆ ಲೋಕಗಳನ್ನು ನಾನು ಅಂಗೀಕರಿಸುವುದಿಲ್ಲ.

ಅಷ್ಟಕಃ

ಕಸ್ಯೈತೇ ಪ್ರತಿದೃಶ್ಯಂತೇ ರಥಾಃ ಯಯಾತಿಃ ಪಂಚ ಹಿರಣ್ಮಯಾಃ |
ಉಚ್ಚೈಃ ಸಂತಃ ಪ್ರಕಾಶಂತೇ ಜ್ವಲಂತೋಽಗ್ನಿಶಿಖಾ ಇವ ॥14॥

ಈ ಎತ್ತರವಾಗಿರುವ ಅಗ್ನಿಶಿಖೆಯಂತೆ ಹೊಳೆಯುವ ಹಿರಣ್ಮಯವಾದ ಐದು ರಥಗಳೂ ಕಾಣುತ್ತಿವೆಯಷ್ಟೇ. ಅವು ಯಾರಿಗೆ ಸೇರಿದವು?

ಯುಷ್ಮಾನೇತೇ ವಹಿಷ್ಯಂತಿ ರಥಾಃ ಪಂಚ ಹಿರಣ್ಮಯಾಃ |
ಉಚ್ಚೈಃ ಸಂತಃ ಪ್ರಕಾಶಂತೇ ಜ್ವಲಂತೋಽಗ್ನಿಶಿಖಾ ಇವ ॥15॥

ಈ ಹಿರಣ್ಮಯವಾದ ಐದು ರಥಗಳು ನಿಮ್ಮನ್ನೇ ಕರೆದುಕೊಂಡು ಹೋಗುತ್ತವೆ. ಆ ರಥಗಳು ಎತ್ತರವಾಗಿದ್ದು ಅಗ್ನಿಶಿಖೆಯಂತೆ ಪ್ರಕಾಶಿಸುತ್ತಿವೆ.

ವೈಶಂಪಾಯನಃ

ಅಶ್ವಮೇಧೇ ಮಹಾಯಜ್ಞೇ ಸ್ವಯಂಭುವಿಹಿತೇ ಪುರಾ |
ಹಯಸ್ಯ ಯಾನಿ ಚಾಂಗಾನಿ ಹೂಯಂತ ಚ ಯಥಾಕ್ರಮಮ್ ॥16॥
ಹೋತಾಽಧ್ವರ್ಯುಸ್ತಥೋದ್ಗಾತಾ ಬ್ರಹ್ಮಣಾ ಸಹ ಭಾರತ |
ಅಗ್ನೌ ಪ್ರಾಸ್ಯಂತಿ ವಿಧಿವತ್ ಸಮಸ್ತಾಃ ಷೋಡಶರ್ತ್ವಿಜಃ ॥17॥
ಧೂಮಗಂಧಂ ವಪಾಯಾಸ್ತು ಯೇ ಜಿಘ್ರಂತಿ ನರಾ ಭುವಿ |

ವಿಮುಕ್ತಪಾಪಾಃ ಪೂತಾಸ್ತೇ ತತ್ಕ್ಷಣೇನಾಭವನ್ ನೃಪ ॥18॥
ಮೊದಲು ಬ್ರಹ್ಮದೇವರು ಮಾಡಿದ ಅಶ್ವಮೇಧಯಾಗವನ್ನು ಈಗ ಅಷ್ಟಕ ರಾಜನು ಮಾಡುತ್ತಿರುವ ಸಂದರ್ಭದಲ್ಲಿ ಅಶ್ವದ ಬೇರೆ ಬೇರೆ ಅವಯವಗಳನ್ನು ಹೋತೃ, ಅಧ್ವರ್ಯು, ಉದ್ಗಾತೃ ಮತ್ತು ಬ್ರಹ್ಮ ಈ ನಾಲ್ಕು ಪ್ರಧಾನ ಋತ್ವಿಕ್ಕುಗಳು ಮತ್ತು ಎಲ್ಲಾ ಹದಿನಾರು ಋತ್ವಿಕ್ಕುಗಳು ಕ್ರಮಾನುಸಾರವಾಗಿ, ವಿಧಿಪೂರ್ವಕವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದರು. ಅಶ್ವದ ವಪೆಯ ಧೂಮಗಂಧವನ್ನು ಭೂಮಿಯಲ್ಲಿ ಯಾರು ಆಘ್ರಾಣಿಸುತ್ತಾರೋ, ಅಂತಹ ಮನುಷ್ಯರು ಆ ಕ್ಷಣದಲ್ಲಿಯೇ ಸಮಸ್ತ ಪಾಪಗಳಿಂದಲೂ ಮುಕ್ತರಾದರು. (ಈ ಶ್ಲೋಕಗಳಿಂದ ಅಷ್ಟಕನ ಅಶ್ವಮೇಧಯಾಗವು ಸಮಾಪ್ತಿಯನ್ನು ಹೊಂದಿತು ಎಂದು ತಿಳಿಸುತ್ತಿದ್ದಾರೆ)
ಏತಸ್ಮಿನ್ನಂತರೇ ಚೈವ ಮಾಧವೀ ತು ತಪೋಧನಾ |
ಮೃಗಚರ್ಮಪರೀತಾಂಗೀ ಪರಿಣಾಮೇ ಮೃಗವ್ರತಾ ॥19॥
ಮೃಗೈಃ ಸಹ ಚರಂತೀ ಸಾ ಮೃಗಾಹಾರವಿಚೇಷ್ಟಿತಾ |
ಯಜ್ಞವಾಟಂ ಮೃಗಗಣೈಃ ಪ್ರವಿಶ್ಯ ಭೃಶವಿಸ್ಮಿತಾ ॥20॥
ಈ ಮಧ್ಯದಲ್ಲಿ ತಪಸ್ವಿನಿಯಾದ ವಾರ್ಧಕ್ಯದಲ್ಲಿ ಮೃಗವ್ರತವನ್ನು ಧರಿಸಿದ್ದ ಮಾಧವಿಯು ಮೃಗಚರ್ಮವನ್ನು ಧರಿಸಿ ಮೃಗಾಹಾರ ಮತ್ತು ಚೇಷ್ಟೆಯುಳ್ಳವಳಾಗಿ ಮೃಗಗಳ ಜೊತೆಯಲ್ಲಿ ಯಜ್ಞಶಾಲೆಯನ್ನು ಪ್ರವೇಶಿಸಿ ಬಹಳ ವಿಸ್ಮಿತಳಾದಳು.
ಆಘ್ರಾಯಂತೀ ಧೂಮಗಂಧಂ ಮೃಗೈರೇವ ಚಚಾರ ಸಾ |
ಯಜ್ಞವಾಟಮಟಂತೀ ಸಾ ಪುತ್ರಾಂಸ್ತಾನಪರಾಜಿತಾನ್ |
ಪಶ್ಯಂತೀ ಯಜ್ಞಮಾಹಾತ್ಮ್ಯಂ ಮುದಂ ಲೇಭೇ ಚ ಮಾಧವೀ ॥21॥
ಧೂಮಗಂಧವನ್ನು ಆಘ್ರಾಣಿಸುತ್ತಾ ಮೃಗಗಳ ಜೊತೆಯಲ್ಲಿ ಯಜ್ಞಶಾಲೆಯಲ್ಲಿ ತಿರುಗಾಡುತ್ತಿದ್ದ ಅವಳು ಅಪರಾಜಿತರಾದ ತನ್ನ ಪುತ್ರರನ್ನು ನೋಡಿ ಯಜ್ಞಮಹಾತ್ಮೆಯನ್ನು ತಿಳಿದು ಸಂತೋಷವನ್ನು ಹೊಂದಿದಳು.
ಅಸಂಸ್ಪೃಶ್ಯಂತಂ ವಸುಧಾಂ ಯಯಾತಿಂ ನಾಹುಷಂ ತದಾ |
ದಿವಃ ಸಂಪ್ರಾಪ್ತಮಾಜ್ಞಾಯ ವವಂದೇ ಪಿತರಂ ತದಾ |
ತತೋ ವಸುಮನಾಽಪೃಚ್ಛನ್ಮಾತರಂ ವೈ ತಪಸ್ವಿನೀಮ್ ॥22॥
ಭೂಮಿಯನ್ನು ಸ್ಪರ್ಶಿಸದೇ ಆಕಾಶದಲ್ಲಿಯೇ ಇದ್ದ ತನ್ನ ತಂದೆಯನ್ನು ಕಂಡು ನಮಸ್ಕರಿಸಿದಳು. ಆಗ ವಸುಮನನು ತಪಸ್ವಿನಿಯಾದ ತನ್ನ ತಾಯಿಯನ್ನು ಕುರಿತು ಪ್ರಶ್ನೆ ಮಾಡಿದನು.
ವಸುಮನಾಃ
ಭವತ್ಯಾ ಯತ್ ಕೃತಮಿದಂ ವಂದನಂ ವರವರ್ಣಿನಿ |
ಕೋಽಯಂ ದೇವೋಪಮೋ ರಾಜಾ ಯದಿ ಜಾನಾಸಿ ಮೇ ವದ ॥
ಎಲೌ ಶ್ರೇಷ್ಠಳಾದವಳೇ, ನೀನು ನಮಸ್ಕಾರ ಮಾಡಿದ ದೇವ ಸದೃಶನಾದ ರಾಜನು ಯಾರು ಎಂದು ತಿಳಿದಿದ್ದರೆ ನನಗೆ ತಿಳಿಸು.
ಮಾಧವೀ
ಶೃಣುಧ್ವಂ ಸಹಿತಾಃ ಪುತ್ರಾ ನಾಹುಷೋಽಯಂ ಪಿತಾ ಮಮ |
ಯಯಾತಿರ್ಮಮ ಪುತ್ರಾಣಾಂ ಮಾತಾಮಹ ಇತಿ ಶ್ರುತಃ ॥24॥
ಪೂರುಂ ಮೇ ಭ್ರಾತರಂ ರಾಜ್ಯೇ ಸಮಾವೇಶ್ಯ ದಿವಂ ಗತಃ |
ಕೇನ ವಾ ಕಾರಣೇನೈವ ಇಹ ಪ್ರಾಪ್ತೋ ಮಹಾಯಶಾಃ ॥25॥
ಎಲ್ಲಾ ಮಕ್ಕಳೂ ಒಟ್ಟಿಗೇ ಕೇಳಿ ಇವನು ನನ್ನ ತಂದೆ. ನಹುಷನ ಮಗನಾದ ಯಯಾತಿ. ನನ್ನ ಪುತ್ರರಾದ ನಿಮಗೆ ಮಾತಾಮಹನಾದವನು. ನನ್ನ ಸೋದರನಾದ ಪೂರುವನ್ನು ರಾಜ್ಯದಲ್ಲಿ ಕೂಡಿಸಿ ಸ್ವರ್ಗಸ್ಥನಾದನು. ಮಹಾಕೀರ್ತಿಯುಳ್ಳ ಅವನು ಯಾವ ಕಾರಣದಿಂದ ಇಲ್ಲಿಗೆ ಬಂದಿದ್ದಾನೋ ತಿಳಿಯದು.
ವೈಶಂಪಾಯನಃ
ತಸ್ಯಾಸ್ತದ್ವಚನಂ ಶ್ರುತ್ವಾ ಮಾ ಮಾ ಭ್ರಷ್ಟೇತಿ ಚಾಬ್ರುವೀತ್ |
ಸಾ ಪುತ್ರಸ್ಯ ವಚಃ ಶ್ರುತ್ವಾ ಸನ್ನಮಾವಿಷ್ಟಚೇತನಾ |
ಮಾಧವೀ ಪಿತರಂ ಪ್ರಾಹ ದೌಹಿತ್ರಪರಿವಾರಿತಮ್ ॥26॥
ಅವಳ ಮಾತನ್ನು ಕೇಳಿ ವಸುಮನನು ಬೀಳಬೇಡ, ಬೀಳಬೇಡ ಎಂದು ಹೇಳಿದನು. ಅವಳು ಮಗನ ವಿಷಾದಯುಕ್ತವಾದ ಮಾತನ್ನು ಕೇಳಿ ವಿಷಾದದಿಂದ ಕೂಡಿದ ಮನಸ್ಸುಳ್ಳವಳಾಗಿ ದೌಹಿತ್ರಪರಿವಾರಿತನಾದ ತಂದೆಯನ್ನು ಕುರಿತು ಹೇಳಿದಳು.
ತಪಸಾ ನಿರ್ಜಿತಾಂಲ್ಲೋಕಾನ್ ಪ್ರತಿಗೃಹ್ಣೀಷ್ವ ಮಾಮಕಾನ್ |
ಪುತ್ರಾಣಾಮಪಿ ಪೌತ್ರಾಣಾಂ ಧರ್ಮಾದಧಿಗತಂ ಧನಮ್ ॥27॥
ಸ್ವಾರ್ಥಮೇವ ವದಂತೀಹ ಋಷಯೋ ಧರ್ಮಪಾಲಕಾಃ |
ತಸ್ಮಾದ್ ದಾನೇನ ತಪಸಾ ಅಸ್ಮಾಕಂ ದಿವಮಾವ್ರಜ ॥28॥
ನಾನು ತಪಸ್ಸಿನಿಂದ ಜಯಿಸಿದ ನನ್ನ ಲೋಕಗಳನ್ನು ನೀನು ಸ್ವೀಕರಿಸು. ಮಕ್ಕಳು ಮತ್ತು ಮೊಮ್ಮಕ್ಕಳು ಧರ್ಮದಿಂದ ಗಳಿಸಿದ ಧನವನ್ನು ತನ್ನ ಧನವೆಂದೇ ಧರ್ಮಪಾಲರಾದ ಋಷಿಗಳು ಹೇಳುತ್ತಾರೆ. ಆದ್ದರಿಂದ ನಮ್ಮ ದಾನ ಮತ್ತು ತಪಸ್ಸುಗಳಿಂದ ನೀನು ಸ್ವರ್ಗಕ್ಕೆ ಹೋಗು.
ಯಯಾತಿಃ
ಯದಿ ಧರ್ಮಫಲಂ ಹ್ಯೇತಚ್ಛೋಭನಂ ಭವಿತಾ ತಥಾ |
ದುಹಿತ್ರಾ ಚೈವ ದೌಹಿತ್ರೈಸ್ತಾರಿತೋಽಹಂ ಮಹಾತ್ಮಭಿಃ ॥29॥

ಇದು ಧರ್ಮದ ಫಲವಾದರೇ ಒಳ್ಳೆಯದೇ ಆಯಿತು. ನಾನು ಮಹಾತ್ಮರಾದ ಮಗಳು ಮತ್ತು ಮೊಮ್ಮಕ್ಕಳಿಂದ ದುಃಖದಿಂದ ದಾಟಿಸಲ್ಪಟ್ಟಿದ್ದೇನೆ.
ತಸ್ಮಾತ್ ಪವಿತ್ರಂ ದೌಹಿತ್ರಮದ್ಯಪ್ರಭೃತಿ ಪೈತೃಕೇ |
ಭವಿಷ್ಯತಿ ನ ಸಂದೇಹಃ ಪಿತೄಣಾಂ ಪ್ರೀತಿವರ್ಧನಮ್ ॥30॥
ಆದ್ದರಿಂದ ಈ ದಿನದಿಂದ ಪ್ರಾರಂಭಿಸಿ ಪಿತೃಕರ್ಮವನ್ನು ಮಾಡುವಾಗ ದೌಹಿತ್ರನು ಪವಿತ್ರನಾಗುವನು ಎಂಬ ವಿಷಯದಲ್ಲಿ ಸಂಶಯವಿಲ್ಲ. ಅವನು ಪಿತೃಗಳ ಸಂತೋಷಕ್ಕೆ ಕಾರಣನಾಗುತ್ತಾನೆ.
ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ |
ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾಮ್ ॥31॥
ದೌಹಿತ್ರ, ಕುತಪಕಾಲ ಮತ್ತು ತಿಲ, ಈ ಮೂರು ವಸ್ತುಗಳು ಶ್ರಾದ್ಧದಲ್ಲಿ ಪವಿತ್ರವಾದವು. ಶೌಚ, ಅಕ್ರೋಧ ಮತ್ತು ಅತ್ವರೆ ಈ ಮೂರನ್ನು ಶ್ರಾದ್ಧದಲ್ಲಿ ಪ್ರಶಂಸಿಸುತ್ತಾರೆ.
ಭೋಕ್ತಾರಃ ಪರಿವೇಷ್ಟಾರಃ ಶ್ರಾಪಿತಾರಃ ಪವಿತ್ರಕಾಃ |
ದಿವಸಸ್ಯಾಷ್ಟಮೇ ಭಾಗೇ ಮಂದೀಭವತಿ ಭಾಸ್ಕರೇ ॥32॥
ಸ ಕಾಲಃ ಕುತಪೋ ನಾಮ ಪಿತೄಣಾಂ ದತ್ತಮಕ್ಷಯಮ್ |
ತಿಲಾಃ ಪಿಶಾಚಾದ್ ರಕ್ಷಂತಿ ದರ್ಭಾ ರಕ್ಷಂತಿ ರಾಕ್ಷಸಾತ್ ॥33॥
ಶ್ರಾದ್ಧಭೋಕ್ತೃಗಳು, ಬಡಿಸುವವರು ಮತ್ತು ಅಡಿಗೆ ಮಾಡುವವರು ಎಲ್ಲರೂ ಪವಿತ್ರರಾಗಿರಬೇಕು. ದಿವಸದ ಕೊನೆಯ ಎಂಟನೇ ಒಂದು ಭಾಗವು ಸೂರ್ಯನು ಮಂದನಾಗುತ್ತಿರುವ ಸಮಯದಲ್ಲಿ ದೊರೆಯುತ್ತದೆ. ಅದಕ್ಕೆ ಕುತಪಕಾಲವೆಂದು ಹೆಸರು. ಆ ಸಮಯದಲ್ಲಿ ಪಿತೃಗಳಿಗೆ ಕೊಟ್ಟಿದ್ದು ಅಕ್ಷಯವಾಗುತ್ತದೆ. ತಿಲವು ಪಿಶಾಚಗಳಿಂದ ರಕ್ಷಣೆ ಮಾಡುತ್ತದೆ. ದರ್ಭೆಯು ರಾಕ್ಷಸರಿಂದ ನಮ್ಮನ್ನು ರಕ್ಷಿಸುತ್ತದೆ.
ರಕ್ಷಂತಿ ಶ್ರೋತ್ರಿಯಾಃ ಪಂಕ್ತಿಂ ಯತಿಭಿರ್ಭುಕ್ತಮಕ್ಷಯಮ್ |
ಲಬ್ಧ್ವಾ ಪಾತ್ರಂ ತು ವಿದ್ವಾಂಸಂ ಶ್ರೋತ್ರಿಯಂ ಸುವ್ರತಂ ಶುಚಿಮ್ |
ಸ ಕಾಲೇ ಕಾಲತೋ ದತ್ತಂ ನಾನ್ಯಥಾ ಕಾಲ ಇಷ್ಯತೇ ॥34॥
ಶೋತ್ರಿಯರು ಪಂಕ್ತಿಯನ್ನು ರಕ್ಷಿಸುತ್ತಾರೆ. ಯತಿಗಳು ಭೋಜನಮಾಡಿದರೆ ಅಕ್ಷಯಫಲವು ದೊರೆಯುತ್ತದೆ. ಯಾವಾಗ ಶೋತ್ರಿಯನಾದ, ಒಳ್ಳೆಯ ವ್ರತವನ್ನು ಧರಿಸಿದ, ಪರಿಶುದ್ಧನಾದ ವಿದ್ವಾಂಸನೆಂಬ ಪಾತ್ರವು ದೊರೆಯುತ್ತದೆಯೋ, ಅದೇ ಮುಖ್ಯವಾದ ಕಾಲವೆಂದು ತಿಳಿಯಬೇಕು. ಬೇರೆ ರೀತಿಯಲ್ಲಿ ಕಾಲವನ್ನು ಎಣಿಸಬಾರದು.
ವೈಶಂಪಾಯನಃ
ಏವಮುಕತ್ವ ಯಯಾತಿಸ್ತು ಪುನಃ ಪ್ರೋವಾಚ ಬುದ್ಧಿಮಾನ್ |
ಸರ್ವೇ ಹ್ಯವಭೃಥಸ್ನಾತಾಸ್ತ್ವರಧ್ವಂ ಕಾರ್ಯಗೌರವಾತ್ ॥35॥
ಹೀಗೆ ಹೇಳಿ ಮೇಧಾವಿಯಾದ ಆ ಯಯಾತಿಯು ಪುನಃ ಮಾತನಾಡಿದನು. ಎಲ್ಲರೂ ಅವಭೃಥ ಸ್ನಾನವನ್ನು ಮಾಡಿ, ಮುಂದಿನ ಕಾರ್ಯಕ್ಕಾಗಿ ತ್ವರೆ ಮಾಡಿರಿ.
ಅಷ್ಟಕಃ
ಆತಿಷ್ಠಸ್ವ ರಥಂ ರಾಜನ್ ವಿಕ್ರಮಸ್ವ ವಿಹಾಯಸಮ್ |
ವಯಮಪ್ಯತ್ರ ಯಾಸ್ಯಾಮೋ ಯದಾ ಕಾಲೋ ಭವಿಷ್ಯತಿ ॥36॥
ರಾಜನೇ, ರಥವನ್ನೇರಿ ನೀನು ಆಕಾಶಮಾರ್ಗದಲ್ಲಿ ಪ್ರಯಾಣ ಮಾಡು. ನಾವೂ ಸಹ, ಕಾಲ ಒದಗಿದಾಗ ಅಲ್ಲಿಗೆ ಬರುತ್ತೇವೆ.
ಯಯಾತಿಃ
ಸರ್ವೈರಿದಾನೀಂ ಗಂತವ್ಯಂ ಸಹ ಸ್ವರ್ಗಮಿತೋ ವಯಮ್ |
ಏಷ ನೋ ವಿರಜಾಃ ಪಂಥಾ ದೃಶ್ಯತೇ ದೇವಸದ್ಮನಃ॥37॥
ನಾವೆಲ್ಲರೂ ಒಟ್ಟಿಗೆ ಈಗಲೇ ಇಲ್ಲಿಂದ ಸ್ವರ್ಗಕ್ಕೆ ಹೋಗಬೇಕು. ದೇವಮಂದಿರದ ನಿರ್ಮಲವಾದ ಮಾರ್ಗವು ಎದುರಿಗೆ ತೋರುತ್ತಿದೆ.
ವೈಶಂಪಾಯನಃ
ಅಷ್ಟಕಶ್ಚ ಶಿವಿಶ್ಚೈವ ಕಾಶಿರಾಜಃ ಪ್ರತರ್ದನಃ |
ಐಕ್ಷ್ವಾಕವೋ ವಸುಮನಾಶ್ಚತ್ವಾರೋ ಭೂಮಿಪಾಶ್ಚ ಹ |
ಸರ್ವೇ ಹ್ಯವಭೃಥಸ್ನಾತಾಃ ಸ್ವರ್ಗತಾಃ ಸಾಧವಃ ಸಹ ॥38॥
ಅಷ್ಟಕನು, ಶಿಬಿಯು, ಕಾಶೀರಾಜನಾದ ಪ್ರತರ್ದನನು, ಇಕ್ಷ್ವಾಕುರಾಜನಾದ ವಸುಮನನು ಎಲ್ಲರೂ ಅವಭೃತಸ್ನಾತರಾಗಿ, ಸಜ್ಜನರಾದ ಅವರು ಯಯಾತಿಯ ಜೊತೆಯಲ್ಲಿ ಒಟ್ಟಿಗೆ ಸ್ವರ್ಗಕ್ಕೆ ಹೋದರು.
ತೇऽಧಿರುಹ್ಯ ರಥಾನ್ ಸರ್ವೇ ಪ್ರಯಾತಾ ನೃಪಸತ್ತಮಾಃ |
ಆಕ್ರಾಮಂತೋ ದಿವಂ ಭಾಂತಿ ಧರ್ಮೇಣಾವೃತ್ಯ ರೋದಸೀ ॥39॥
ಆ ಎಲ್ಲಾ ರಾಜಶ್ರೇಷ್ಠರೂ ರಥವನ್ನು ಏರಿ ಭೂಮಿ ಮತ್ತು ಅಂತರಿಕ್ಷವನ್ನು ಪ್ರದಕ್ಷಿಣೆ ಮಾಡಿ ಸ್ವರ್ಗಮಾರ್ಗದಲ್ಲಿ ಹೋಗುತ್ತಾ ಪ್ರಕಾಶಿಸಿದರು.
ಅಷ್ಟಕಃ
ಅಹಂ ಮನ್ಯೇ ಸ್ವರ್ಗತಾನಾಂ ವರಿಷ್ಠಃ
ಸಖಾ ಚೇಂದ್ರಃ ಸರ್ವಥಾ ವೈ ಮಹಾತ್ಮಾ |

ಕಸ್ಮಾದೇಷ ಶಿವಿರೌಶೀನರೋಽಯ-

ಮೇಕೋಽತಿಗಃ ಸರ್ವಮಸ್ಮಾನ್ ವ್ಯಪೋಹ್ಯ ॥40॥

ಸ್ವರ್ಗಕ್ಕೆ ಹೋದವರಿಗೆ ಮಹಾತ್ಮನಾದ ಮತ್ತು ಶ್ರೇಷ್ಠನಾದ ಇಂದ್ರನು ಎಲ್ಲರಿಗೂ ಸ್ನೇಹಿತನಾಗುತ್ತಾನೆ ಎಂದು ನಾನು ತಿಳಿದಿದ್ದೇನೆ. ಆದರೆ, ಈ ಔಶೀನರನಾದ ಶಿಬಿ ಮಾತ್ರ ನಮ್ಮೆಲ್ಲರನ್ನೂ ಹಿಂದೆ ಬಿಟ್ಟು ಏಕೆ ಒಬ್ಬನೇ ಮುಂದೆ ಹೋಗುತ್ತಿದ್ದಾನೆ?

ಯಯಾತಿಃ

ಅದದದ್ ಯಾಚಮಾನಾಯ ಯಾವದ್ವಿತ್ತಮವಿಂದತ |

ಉಶೀನರಸ್ಯ ಪುತ್ರೋಽಯಂ ತಸ್ಮಾಚ್ಛ್ರೇಷ್ಠೋ ಹಿ ನಃ ಶಿವಿಃ ॥41॥

ಉಶೀನರನ ಮಗನಾದ ಶಿಬಿಯು ರಾಜನಾಗಿದ್ದಾಗ ತನಗೆ ಎಷ್ಟು ವಿತ್ತವು ದೊರಕಿತೋ ಅವೆಲ್ಲವನ್ನೂ ಬೇಡುವವರಿಗೆ ದಾನ ಮಾಡಿದ್ದಾನೆ. ಆದ್ದರಿಂದ ಅವನು ನಮಗಿಂತಲೂ ಶ್ರೇಷ್ಠನಾಗಿದ್ದಾನೆ.

ದಾನಂ ತಪಃ ಸತ್ಯಮಥಾಽಪಿ ಧರ್ಮೋ

ಹ್ರೀಃ ಶ್ರೀಃ ಕ್ಷಮಾ ಸೌಮ್ಯಭಾವಸ್ತಿತಿಕ್ಷಾ |

ರಾಜನ್ನೇತಾನ್ಯಪ್ರಮತ್ತಸ್ಯ ರಾಜ್ಞಃ

ಶಿವೇಃ ಸ್ಥಿತಾನ್ಯಾನೃಶಂಸ್ಯಂ ಚ ಬುದ್ಧೌ ॥42॥

ಏವಂವೃತ್ತೋ ಹ್ರೀನಿಷೇಧಶ್ಚ ಯಸ್ಮಾತ್

ತಸ್ಮಾಚ್ಛಿವಿರತ್ಯಗಾದ್ ವೈ ರಥೇನ ॥43॥

ದಾನ, ತಪಸ್ಸು, ಸತ್ಯ, ಧರ್ಮ, ಲಜ್ಜೆ, ಸಂಪತ್ತು, ಕ್ಷಮೆ, ಸೌಮ್ಯತೆ, ತಿತಿಕ್ಷೆ, ಈ ಎಲ್ಲಾ ಗುಣಗಳೂ ಅಪ್ರಮತ್ತನಾದ ಶಿಬಿರಾಜನಲ್ಲಿ ನೆಲೆಸಿವೆ. ರಾಜನ್ನೇ, ಅವನ ಮನಸ್ಸಿನಲ್ಲಿ ಎಂದೂ ಕ್ರೌರ್ಯವಿಲ್ಲ. ಶಿಬಿಯು ಈ ಎಲ್ಲಾ ಗುಣಗಳಿಂದ ಕೂಡಿ ಲಜ್ಜೆಯ ಸ್ವಭಾವದವನಾದುದರಿಂದ ನಮ್ಮೆಲ್ಲರನ್ನೂ ಮೀರಿ ರಥದಲ್ಲಿ ಮುಂದೆ ಹೋಗುತ್ತಿದ್ದಾನೆ.

ವೈಶಂಪಾಯನಃ

ಅಥಾಷ್ಟಕಃ ಪುನರೇವಾನ್ವಪೃಚ್ಛ-

ನ್ಮಾತಾಮಹಂ ಕೌತುಕಾದಿಂದ್ರಕಲ್ಪಮ್ ॥44॥

ಆಗ ಅಷ್ಟಕನು ಕುತೂಹಲದಿಂದ ಇಂದ್ರಕಲ್ಪನಾದ ತನ್ನ ಮಾತಾಮಹನನ್ನು ಪುನಃ ಕೇಳಿದನು.

ಪೃಚ್ಛಾಮಿ ತ್ವಾಂ ನೃಪತೇ ಬ್ರೂಹಿ ಸತ್ಯಂ

ಪಿತಾಸಿ ಕಸ್ಯಾಸಿ ಸುತಶ್ಚ ಕಸ್ಯ |

ಕೃತಂ ತ್ವಯಾ ಯಚ್ಚ ನ ಯಸ್ಯ ಕರ್ತಾ

ಲೋಕೇ ತ್ವದನ್ಯಃ ಕ್ಷತ್ರಿಯೋ ಬ್ರಾಹ್ಮಣೋ ವಾ ॥45॥

ಎಲೈ ರಾಜನೇ, ಸತ್ಯವನ್ನು ಹೇಳು, ನಾನು ನಿನ್ನನ್ನು ಕೇಳುತ್ತಿದ್ದೇನೆ. ನಿನ್ನ ತಂದೆ ಯಾರು? ನಿನ್ನ ಮಗನು ಯಾರು? ಇನ್ನೊಬ್ಬ ಕ್ಷತ್ರಿಯನಾಗಲೀ ಅಥವಾ ಬ್ರಾಹ್ಮಣನಾಗಲೀ ಮಾಡದಿದ್ದ ಯಾವ ಕಾರ್ಯವನ್ನು ನೀನು ಮಾಡಿದ್ದೀಯೆ.

ಯಯಾತಿಃ

ಯಯಾತಿರಸ್ಮಿ ನಹುಷಸ್ಯ ಪುತ್ರಃ

ಪೂರೋಃ ಪಿತಾ ಸಾರ್ವಭೌಮಸಿತ್ವಹಾಸಮ್ |

ಗುಹ್ಯಮರ್ಥಂ ಬ್ರಾಹ್ಮಣೇಭ್ಯೋ ಬ್ರವೀಮಿ

ಮಾತಾಮಹೋಽಹಂ ಭವತಾಂ ಪ್ರಕಾಶಮ್ ॥46॥

ನಾನು ನಹುಷನ ಮಗನಾದ ಯಯಾತಿ. ಪೂರುವು ನನ್ನ ಪುತ್ರ. ನಾನು ಇಲ್ಲಿ ಸಾರ್ವಭೌಮನಾಗಿದ್ದೆ. ನಿಮ್ಮ ಮಾತಾಮಹನಾದ ನಾನು ರಹಸ್ಯವಾದ ವಿಷಯವನ್ನು ಬ್ರಾಹ್ಮಣರಿಗೆ ಗಟ್ಟಿಯಾಗಿ ಹೇಳುತ್ತಿದ್ದೇನೆ.

ಸರ್ವಾಮಿಮಾಂ ಪೃಥಿವೀಂ ನಿರ್ಜಿಗಾಯ

ಪ್ರಸ್ಥೇ ಬದ್ಧ್ವಾ ಹ್ಯದದಂ ಬ್ರಾಹ್ಮಣೇಭ್ಯಃ |

ಮೇಧ್ಯಾನಶ್ವಾನೇಕಶತಾನ್ ಸುರೂಪಾನ್

ತದಾ ದೇವಾಃ ಶತಯಜ್ವೇತ್ಯವೋಚನ್ ॥47॥

ನಾನು ಈ ಸಮಗ್ರವಾದ ಭೂಮಿಯನ್ನು ಗೆದ್ದೆ. ಬ್ರಾಹ್ಮಣರಿಗೆ ಕೊಳಗಗಳಲ್ಲಿ ತುಂಬಿ ಸುವರ್ಣಾದಿಗಳನ್ನು ದಾನ ಮಾಡಿದೆ. ಒಳ್ಳೆಯ ನೂರು ಅಶ್ವಗಳನ್ನು ಕಟ್ಟಿ ಅಶ್ವಮೇಧ ಯಾಗವನ್ನು ಮಾಡಿದೆ. ಆಗ ದೇವತೆಗಳು ನನ್ನನ್ನು `ಶತಯಜ್ವ' ಎಂದು ಕರೆದರು.

ಅದಾಮಿಮಾಂ ಪೃಥಿವೀಂ ಬ್ರಾಹ್ಮಣೇಭ್ಯಃ

ಪೂರ್ಣಾಮಿಮಾಮಖಿಲೈರ್ವಾಹನೈಶ್ಚ |

ಗೋಭಿಃ ಸುವರ್ಣೈಶ್ಚ ಧನೈಶ್ಚ ಮುಖ್ಯೈಃ

ತತ್ರಾಪಿ ನಾಗಾಯುತಮರ್ಬುದಾನಿ ॥48॥

ಸಮಗ್ರವಾದ ಭೂಮಿಯನ್ನು ನಾನು ಬ್ರಾಹ್ಮಣರಿಗೆ ದಾನ ಮಾಡಿದೆ. ಎಲ್ಲಾ ವಾಹನಗಳಿಂದಲೂ, ಸುವರ್ಣದಿಂದಲೂ, ಮುಖ್ಯವಾದ ಧನದಿಂದಲೂ, ಗೋವುಗಳಿಂದಲೂ ಕೂಡಿದ ಭೂಮಿಯನ್ನು ದಾನ ಮಾಡಿದೆ. ಒಂದು ಅರ್ಬುದ ಗಜಗಳನ್ನು ದಾನಮಾಡಿದೆ.

ಸತ್ಯೇನ ವೈ ದ್ಯೌಶ್ಚ ವಸುಂಧರಾ ಚ

ತಥೈವಾಗ್ನಿರ್ಜ್ವಲತೇ ಮಾನುಷೇಷು |

ನ ಮೇ ವೃಥಾ ವ್ಯಾಹೃತಮೇಕವಾಕ್ಯಂ

ಸತ್ಯಂ ಹಿ ಸಂತಃ ಪ್ರತಿಪೂಜಯಂತಿ ॥49॥
ಭೂಮಿಯು, ಆಕಾಶವೂ ಸತ್ಯದಿಂದ ನಿಂತಿವೆ. ಮನುಷ್ಯ ಲೋಕದಲ್ಲಿ ಅಗ್ನಿಯು ಸತ್ಯದಿಂದ ಜ್ವಲಿಸುತ್ತಾನೆ. ನನ್ನ ಜೀವನದಲ್ಲಿ ವ್ಯರ್ಥವಾದ ಒಂದು ಮಾತನ್ನೂ ಆಡಿಲ್ಲ. ಸಜ್ಜನರು ಸತ್ಯವನ್ನು ಪೂಜಿಸುತ್ತಾರೆ.
ಸರ್ವೇ ಚ ದೇವಾ ಮುನಯಶ್ಚ ಸರ್ವೇ
ಸತ್ಯೇನ ಪೂಜ್ಯಾ ಇತಿಮೇ ಮನೋಗತಮ್ ॥50॥
ಎಲ್ಲಾ ದೇವತೆಗಳು ಮತ್ತು ಋಷಿಗಳು, ಅವರ ಸತ್ಯದ ಸಲುವಾಗಿ ಪೂಜನೀಯರು ಎಂದು ನನ್ನ ಅಭಿಪ್ರಾಯ.
ಅಷ್ಟಕಃ
ಯೋ ನಃ ಸ್ವರ್ಗಜಿತಃ ಸರ್ವಾನ್ ಯಥಾವೃತ್ತಂ ನಿವೇದಯತ್ ।
ಅನಸೂಯುರ್ದ್ವಿಜಾಗ್ರ್ಯೇಭ್ಯಃ ಶ್ರುತ್ವಾ ಚೇಯಾತ್ ಸಲೋಕತಾಮ್ ॥
ಸ್ವರ್ಗವನ್ನು ಜಯಿಸಿದ ನಮ್ಮೆಲ್ಲರಿಗೂ ಯಥಾರ್ಥವಾಗಿ ವಿಷಯಗಳನ್ನು ತಿಳಿಸಿದ ಈ ಆಖ್ಯಾನವನ್ನು ಯಾವನು ಅಸೂಯೆಯಿಲ್ಲದೆ ಬ್ರಾಹ್ಮಣಶ್ರೇಷ್ಠರಿಗೆ ತಿಳಿಸುತ್ತಾನೆಯೋ ಅವನು ನಮ್ಮ ಸಲೋಕತೆಯನ್ನು ಹೊಂದುತ್ತಾನೆ.
ವೈಶಂಪಾಯನಃ
ಏವಂ ರಾಜಾ ಸ ಮಹಾತ್ಮಾ ಹ್ಯತೀವ
ಸ್ವೈರ್ದೌಹಿತ್ರೈಸ್ತಾರಿತೋಽಮಿತ್ರಸಾಹಃ ।
ತ್ಯಕ್ತ್ವಾ ಮಹೀಂ ಪರಮೋದಾರಕರ್ಮಾ
ಸ್ವರ್ಗಂ ಗತಃ ಕರ್ಮಭಿರ್ನಪ್ತೃಪೇತಃ ॥52॥
ಹೀಗೆ ಶತ್ರುಗಳನ್ನು ಸಹಿಸಿದ ಆ ಮಹಾತ್ಮನಾದ ರಾಜನು, ತನ್ನ ದೌಹಿತ್ರರಿಂದ ಆಪತ್ತನ್ನು ದಾಟಿ ಪರಮೋದಾರಕರ್ಮನಾದ ಅವನು ಭೂಮಿಯನ್ನು ಬಿಟ್ಟು ತಾನು ಮಾಡಿದ ಸತ್ಕರ್ಮಗಳಿಂದ ದೌಹಿತ್ರರ ಜೊತೆಯಲ್ಲಿ ಸ್ವರ್ಗಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಎಂಭತ್ತೂರನೆಯ ಅಧ್ಯಾಯ
(ಸಿಂಹಾವಲೋಕನ ನ್ಯಾಯದಿಂದ ಪುನಃ ಪೂರುವಂಶ ಕಥನ.)
ಜನಮೇಜಯಃ
ಪುತ್ರಂ ಯಯಾತೇಃ ಪ್ರಬ್ರೂಹಿ ಪೂರುಂ ಧರ್ಮಭೃತಾಂ ವರಮ್ ।
ಆನುಪೂರ್ವ್ಯೇಣ ಯೇ ಚಾನ್ಯೇ ಪೂರುವಂಶವಿವರ್ಧನಾಃ ॥1॥
ಯಯಾತಿಯ ಮಗನಾದ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಪೂರುವಿನ ವಂಶವಿವರ್ಧನರಾದ ರಾಜರುಗಳನ್ನು ಕ್ರಮವಾಗಿ ಹೇಳು.
ವಿಸ್ತರೇಣ ಪುನರ್ಬ್ರೂಹಿ ದೌಷ್ಯಂತೇರ್ಜನಮೇಜಯಾತ್ ।
ಸಂಬಭೂವ ಯಥಾ ರಾಜಾ ಭರತೋ ದ್ವಿಜಸತ್ತಮಃ ॥2॥
ಎಲೈ ಬ್ರಾಹ್ಮಣಶ್ರೇಷ್ಠನೇ, ದುಷ್ಯಂತನ ಮಗನಾದ ಜನಮೇಜಯನ ನಂತರ ಭರತನು ಹೇಗೆ ರಾಜನಾದನು ಎಂಬ ಕಥೆಯನ್ನು ವಿಸ್ತಾರವಾಗಿ ಹೇಳು. (ಈ ಜನಮೇಜಯನು, ಪರೀಕ್ಷಿತನ ಪುತ್ರನಲ್ಲದ ಇನ್ನೊಬ್ಬ ಜನಮೇಜಯ)
ವೈಶಂಪಾಯನಃ
ಪೂರುರ್ನೃಪತಿಶಾರ್ದೂಲೋ ಯಥೈವಾಸ್ಯ ಪಿತಾ ನೃಪ ।
ಧರ್ಮನಿತ್ಯಃ ಸ್ಥಿತೋ ರಾಜ್ಯೇ ಶಕ್ರತುಲ್ಯಪರಾಕ್ರಮಃ ॥3॥
ಎಲೈ ರಾಜನೇ, ನೃಪತಿಶಾರ್ದೂಲನಾದ ಪೂರುವು ಅವನ ತಂದೆಯಂತೆಯೇ ಶಕ್ರನಿಗೆ ಸಮಾನವುಳ್ಳ ಪರಾಕ್ರಮವುಳ್ಳವನಾಗಿ, ಧರ್ಮನಿತ್ಯನಾಗಿ, ರಾಜ್ಯವನ್ನಾಳಿದನು.
ಪ್ರವೀರಃ ಶತರುಜ್ಯೌ ಚ ತ್ರಯಃ ಪುತ್ರಾ ಮಹಾಬಲಾಃ ।
ಪೂರೋಃ ಪೌಷ್ಯಾಮಜಾಯಂತ ಪ್ರವೀರಸ್ತತ್ರ ವಂಶಭಾಕ್ ॥4॥
ಪೂರುವಿಗೆ ಪೌಷ್ಯೆಯಲ್ಲಿ ಮಹಾಬಲರಾದ ಪ್ರವೀರ, ಶತ ಮತ್ತು ರುಜ್ಯ ಎಂಬ ಮೂರು ಮಕ್ಕಳು. ಅವರಲ್ಲಿ ಪ್ರವೀರನು ವಂಶಕರ್ತ.
ನಮಸ್ಯುರಭವತ್ ತಸ್ಮಾದ್ ಧುರಃ ಶೈಬ್ಯಾಸುತಸ್ತತಃ ।
ಪೃಥಿವ್ಯಾಂ ಸಾಗರಾಂತಾಯಾಂ ರಾಜಾ ರಾಜೀವಲೋಚನಃ ॥5॥
ಆ ಪ್ರವೀರನಿಗೆ ಶೈಬ್ಯೆಯಲ್ಲಿ ನಮಸ್ಯು ಜನಿಸಿದನು. ರಾಜೀವಲೋಚನನಾದ ಅವನು ಸಾಗರಾಂತವಾದ ಪೃಥಿವಿಗೆ ರಾಜನಾಗಿದ್ದನು.
ಸುಭ್ರುಶ್ಚೋಭಯದೋ ವೀರಃ ಸೌವೀರತನಯಾಸ್ತ್ರಯಃ ।
ನಮಸ್ಯೋರಭವನ್ ಪುತ್ರಾಃ ಶೂರಾಃ ಸರ್ವೇ ಮಹಾರಥಾಃ ॥6॥
ನಮಸ್ಯುವಿಗೆ ಸೌವೀರೆಯಲ್ಲಿ, ಸುಭ್ರು, ಉಭಯದ ಮತ್ತು ವೀರ ಎಂಬ ಶೂರರೂ, ಮಹಾರಥರೂ ಆದ ಮೂರು ಪುತ್ರರು ಜನಿಸಿದರು.
ಸುನ್ವಂತಂ ವಸುನಾಭಂ ಚ ಗರ್ಗರವ್ಯೌ ಯಶಸ್ವಿನೌ ।
ಶೂರಾನುಭಯದೋ ರಾಜಾ ಜನಯಾಮಾಸ ವೀರ್ಯವಾನ್ ॥7॥
ವೀರ್ಯಶಾಲಿಯಾದ ಉಭಯದನು, ಸುನ್ವಂತ, ವಸುನಾಭ, ಗರ್ಗ ಮತ್ತು ರಮ್ಯ ಎಂಬ ನಾಲ್ಕು ಮಕ್ಕಳನ್ನು ಪಡೆದನು.
ಯವೀಯಾನ್ ಸುನ್ವತಃ ಪುತ್ರೋ ರಥಂತರ್ಯಾಮಜಾಯತ ।

ಶೂರಶ್ಚ ದೃಢಧನ್ವಾ ಚ ವಪುಷ್ಮಾಂಶ್ಚ ನೃಪೋತ್ತಮಃ ॥8॥
`ಯವೀಯಾನ್' ಎಂಬ ಸುನ್ವಂತನ ಪುತ್ರನು ರಥಂತರೆಯಲ್ಲಿ ಜನಿಸಿದನು. ಅವನು ಶೂರನೂ, ದೃಢಧನ್ವನೂ, ಒಳ್ಳೆಯ ದೇಹವನ್ನು ಹೊಂದಿದ್ದ ರಾಜನೂ ಆಗಿದ್ದನು.
ರುದ್ರಾಶ್ವಂ ಪೃಷದಶ್ವಂ ಚ ರಥದಶ್ವಂ ಗಯಂ ಮನುಮ್ ।
ಯವೀಯಾನ್ ಜನಯಾಮಾಸ ಗಂಧರ್ವಾನ್ ಭೀಮವಿಕ್ರಮಾನ್ ॥
ಯವೀಯಾನ್ರಾಜನು ಭೀಮ ಪರಾಕ್ರಮಿಗಳಾದ `ರುದ್ರಾಶ್ವ', `ಪೃಷದಶ್ವ', `ರಥದಶ್ವ', `ಗಯ' ಮತ್ತು `ಮನು' ಎಂಬ ಐದು ಗಂಧರ್ವರನ್ನು ಮಕ್ಕಳನ್ನಾಗಿ ಪಡೆದನು.
ರುದ್ರಾಶ್ವಸ್ಯ ಮಹಾಬಾಹೋರ್ದಶಾಪ್ಸರಸಿ ಸೂನವಃ ।
ಋತೇಯುರಥ ಕಕ್ಷೇಯುಃ ಕೃಪಣೇಯುಶ್ಚ ವೀರ್ಯವಾನ್ ॥10॥
ಸ್ಥಂಡಿಲೇಯುರ್ಜಲೇಯುಶ್ಚ ಸ್ಥಲೇಯುಶ್ಚ ಮಹಾಬಲಃ ।
ತೇಜೋಯುರ್ಬಲವಾನ್ ವೀರಃ ರಥೇಯುಶ್ಚೇಂದ್ರವಿಕ್ರಮಃ ॥11॥
ಧರ್ಮೇಯುಃ ಸಂತತೇಯುಶ್ಚ ದಶಮೋ ದೇವವಿಕ್ರಮಃ ।
ಅನಾಘೃಷ್ಟ್ಯಾಃ ಸುತಾಸ್ತೇ ತು ರಾಜಸೂಯಾಶ್ವಮೇಧಿನಃ ॥12॥
ಮಹಾಬಾಹುವಾದ ರುದ್ರಾಶ್ವನಿಗೆ ಅಪ್ಸರೆಯಲ್ಲಿ ಹತ್ತು ಮಕ್ಕಳು. ಅವರಿಗೆ ಋತೇಯು, ಕಕ್ಷೇಯು, ಕೃಪಣೇಯು, ಸ್ಥಂಡಿಲೇಯು, ಜಲೇಯು, ಸ್ಥಲೇಯು, ತೇಜೋಯು, ರಥೇಯು, ಧರ್ಮೇಯು, ಸಂತತೇಯು ಎಂದು ಹೆಸರು. ಅವರೆಲ್ಲರೂ ಅನಾಘೃಷ್ಟ್ಯಾ ಎಂಬ ಅಪ್ಸರೆಯ ಮಕ್ಕಳು. ಎಲ್ಲರೂ ರಾಜಸೂಯ, ಅಶ್ವಮೇಧಗಳನ್ನು ಆಚರಿಸಿದವರು.
ಅಂತಿನಾರಸ್ತತೋ ರಾಜನ್ ವಿದ್ವಾಂಶ್ಚರ್ತೇಯುತೋಽಭವತ್ ।
ತ್ರಸ್ನುಂ ಮೋದ್ಯಂ ಪ್ರತಿರಥಂ ದ್ರುಮಂ ಚಾಪ್ರತಿಮಂ ಯುಧಿ ॥13॥
ಏತಾನ್ ವೈ ಸುಷುವೇ ಸಾಧ್ವೀ ಹ್ಯಂತಿನಾರಾದ್ ಯಶಸ್ವಿನೀ ।
ತೇಷಾಂ ತ್ರಸ್ನುರ್ಮಹಾವೀರ್ಯಃ ಪೌರವಂ ವಂಶಮುದ್ವಹನ್ ॥14॥
ಋತೇಯುವಿನಿಂದ ಅಂತಿನಾರನು ಜನಿಸಿದನು. ಅಂತಿನಾರನ ಪತ್ನಿಯಾದ ಯಶಸ್ವಿನಿಯು, ತ್ರಸ್ನು, ಮೋಧ್ಯ, ಪ್ರತಿರಥ, ದ್ರುಮ ಎಂಬ ಮಕ್ಕಳನ್ನು ಪಡೆದಳು. ಅವರಲ್ಲಿ ಮಹಾವೀರ್ಯನಾದ ತ್ರಸ್ನುವು ಪೌರವ ವಂಶಧಾರಕನು.
ಆಜಹಾರ ಯಶೋ ದೀಪ್ತಂ ಜಿಗಾಯೈನಾಂ ವಸುಂಧರಾಮ್ ।
ಇಲಿಲಂ ಸುಷುವೇ ತ್ರಸ್ನೋರ್ಯಮುನಾ ಚ ಯಶಸ್ವಿನೀ ॥15॥
ಅವನು ದೀಪ್ತವಾದ ಯಶಸ್ಸನ್ನು ಸಂಪಾದಿಸಿ, ಸಮಗ್ರವಾದ ಭೂಮಿಯನ್ನು ಗೆದ್ದನು. ತ್ರಸ್ನುವಿನ ಪತ್ನಿಯಾದ ಯಮುನೆಯು ಇಲಿಲನನ್ನು ಪ್ರಸವಿಸಿದಳು.
ಸೋಽಪಿ ಕೃತ್ಸ್ನಾಮಿಮಾಂ ಭೂಮಿಂ ವಿಜಿಗ್ಯೇ ಜಯತಾಂ ವರಃ ।
ರಥಂತರ್ಯಾಮೃಷೀನ್ ಪಂಚ ಪಂಚಭೂತೋಪಮಾಂಸ್ತತಃ ॥16॥
ಇಲಿಲೋ ಜನಯಾಮಸ ದುಷ್ಮಂತಪ್ರಮುಖಾಂಸ್ತಥಾ ।
ದುಷ್ಮಂತಮನಘಂ ಶೂರಂ ಪ್ರಶೂರಂ ಚಾಪಿ ಪಂಚಮಮ್ ॥17॥
ಅವನೂ ಸಹ, ಜಯಶೀಲರಲ್ಲಿ ಶ್ರೇಷ್ಠನಾದವನಾಗಿ, ಸಮಗ್ರವಾದ ಭೂಮಿಯನ್ನು ಗೆದ್ದನು. ರಥಂತರೆಯಲ್ಲಿ ಇಲಿಲನು ಪಂಚಭೂತಗಳಂತೆ ಇರುವ ದುಷ್ಮಂತ ಮೊದಲಾದ ಐದು ಮಕ್ಕಳನ್ನು ಪಡೆದನು. ದುಷ್ಮಂತ, ಅನಘ, ಶೂರ, ಪ್ರಶೂರ, ಇವರಲ್ಲಿ ದುಷ್ಮಂತನು ಪ್ರಮುಖನಾದವನು.
ತೇಷಾಂ ಜ್ಯೇಷ್ಠೋ ಮಹಾರಾಜ ದುಷ್ಮಂತೋ ದುರ್ಜಯೋ ಯಧಿ ।
ದುಷ್ಮಂತಾಲ್ಲಕ್ಷಣಾಯಾಂ ತು ಜಜ್ಞೇ ವೈ ಜನಮೇಜಯಃ ॥18॥
ಶಕುಂತಲಾಯಾಂ ಭರತೋ ದೌಷ್ಮಂತಿರಭವತ್ ಸುತಃ ।
ತಸ್ಮಾದ್ ಭರತವಂಶಸ್ಯ ವಿಪ್ರತಸ್ಥೇ ಮಹದ್ಯಶಃ ॥19॥
ಎಲೈ ಮಹಾರಾಜನೇ, ಅವರಲ್ಲಿ ಜ್ಯೇಷ್ಠನಾದ ದುಷ್ಮಂತನು ಯುದ್ಧದಲ್ಲಿ ದುರ್ಜಯನಾಗಿದ್ದನು. ದುಷ್ಮಂತನಿಂದ ಲಕ್ಷಣೆಯಲ್ಲಿ ಜನಮೇಜಯನು ಜನಿಸಿದನು. ಶಕುಂತಲೆಯಲ್ಲಿ ದುಷ್ಮಂತನಿಗೆ ಭರತನು ಜನಿಸಿದನು. ಭರತನಿಂದ ಭರತವಂಶದ ಕೀರ್ತಿಯು ವಿಸ್ತಾರವಾಗಿ ಹರಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ಮೂರನೆಯ ಅಧ್ಯಾಯ ಮುಗಿಯಿತು.
*****

ಎಂಭತ್ನಾಲ್ಕನೆಯ ಅಧ್ಯಾಯ
(ದುಷ್ಮಂತನ ಸಾಮ್ರಾಜ್ಯದ ಸಂಕ್ಷೇಪವಾದ ವರ್ಣನೆ.)
ಜನಮೇಜಯಃ
ಭಗವನ್ ವಿಸ್ತರೇಣೇಹ ಭರತಸ್ಯ ಮಹಾತ್ಮನಃ ।

ಜನ್ಮ ಕರ್ಮ ಚ ಶುಶ್ರೂಷೋಸ್ತನ್ಮೇ ಶಂಸಿತುಮರ್ಹಸಿ ॥1॥
ಪೂಜ್ಯರೇ, ಭರತವಂಶದಲ್ಲಿ ಹುಟ್ಟಿದ ಮಹಾತ್ಮನಾದ ದುಷ್ಯಂತನ ಜನ್ಮ ಕರ್ಮಗಳನ್ನು ವಿಸ್ತಾರವಾಗಿ ಕೇಳಬಯಸುವ ನನಗೆ ಅದನ್ನು ತಿಳಿಸಬೇಕು.
ವೈಶಂಪಾಯನಃ
ಪೌರವಾಣಾಂ ವಂಶಕರೋ ದುಷ್ಯಂತೋ ನಾಮ ವೀರ್ಯವಾನ್ |
ಪೃಥಿವ್ಯಾಶ್ಚತುರಂತಾಯಾ ಗೋಪ್ತಾ ಭರತಸತ್ತಮ ॥2॥
ಎಲೈ ಭರತಸತ್ತಮನೇಮ ಪೌರವ ವಂಶಧರನಾದ ದುಷ್ಯಂತನೆಂಬ ಪರಾಕ್ರಮಶಾಲಿಯು ನಾಲ್ಕು ತುದಿಗಳವರೆಗೂ ಇದ್ದ ಭೂಮಿಗೆ ರಕ್ಷಕನಾಗಿದ್ದನು.
ಚತುರ್ಭಾಗಂ ಭುವಃ ಕೃತ್ಸ್ನಂ ಯೋ ಭುಂಕ್ತೇ ಮನುಜೇಶ್ವರಃ |
ಸಮುದ್ರವಸನಾಂಶ್ಚಾಪಿ ದೇಶಾನ್ ಸ ಸಮಿತಿಂಜಯಃ ॥3॥
ಯುದ್ಧದಲ್ಲಿ ಜಯಶೀಲನಾದ ಆ ರಾಜನು ಸಮಗ್ರವಾದ ಚತುರ್ಭಾಗವುಳ್ಳ ಭೂಮಿಯನ್ನೂ, ಸಮುದ್ರದ ಸಮೀಪದಲ್ಲಿರುವ ದೇಶಗಳನ್ನೂ ಆಳಿದನು.
ಮ್ಲೇಚ್ಛಾನಾಟವಿಕಾಂಶ್ಚಾಪಿ ಯೋ ಭುಂಕ್ತೇ ರಿಪುಮರ್ದನಃ |
ರತ್ನಾಕರಾನ್ ಸಮುದ್ರಾಂಶ್ಚ ಚಾತುರ್ವರ್ಣ್ಯಜನಾವೃತಾನ್ ॥4॥
ಶತ್ರುಮರ್ದನನಾದ ಅವನು ಮ್ಲೇಚ್ಛದೇಶವನ್ನೂ, ಅಡವಿಗಳ ದೇಶಗಳನ್ನೂ, ಚಾತುರ್ವರ್ಣ್ಯ ಜನರಿಂದ ಕೂಡಿದ ರತ್ನಾಕರಗಳಾದ ಸಮುದ್ರ ತೀರಗಳನ್ನೂ ಆಳಿದನು.
ನ ವರ್ಣಸಂಕರಕರೋ ನಾಕೃಷ್ಟಕರಕೃಜ್ಜನಃ |
ನ ಪಾಪಕೃತ್ ಕಶ್ಚಿದಾಸೀತ್ ತಸ್ಮಿನ್ ರಾಜನಿ ಶಾಸತಿ ॥5॥
ಅವನು ರಾಜ್ಯವಾಳುತ್ತಿರುವಾಗ ವರ್ಣಸಂಕರವನ್ನು ಮಾಡುವವರು ಯಾರೂ ಇರಲಿಲ್ಲ. ವ್ಯವಸಾಯವನ್ನು ಮಾಡಿ ಧಾನ್ಯ ಪಡೆಯದಿದ್ದವರು ಕರವನ್ನು ಕೊಡಬೇಕಾದ ಪ್ರಸಂಗವಿರಲಿಲ್ಲ. ಯಾರೂ ಪಾಪವನ್ನು ಮಾಡುತ್ತಿರಲಿಲ್ಲ.
ಧರ್ಮ್ಯಾಂ ವೃತ್ತಿಂ ಸೇವಮಾನಾಃ ಕಾಮಾರ್ಥೌ ಚ ಪ್ರಪೇದಿರೇ |
ತದಾ ನರಾ ನರವ್ಯಾಘ್ರ ತಸ್ಮಿನ್ ಜನಪದೇಶ್ವರೇ ॥6॥
ಎಲೈ ರಾಜನೇ, ದುಷ್ಯಂತನು ರಾಜನಾಗಿರುವಾಗ ಪ್ರಜೆಗಳು ಧರ್ಮದ ವೃತ್ತಿಯನ್ನೇ ಅವಲಂಬಿಸಿದ್ದರೂ, ಅರ್ಥ, ಕಾಮಗಳನ್ನು ಪಡೆಯುತ್ತಿದ್ದರು.
ನಾಸೀಚ್ಚೋರಭಯಂ ತಾತ ನ ಕ್ಷುಧಾಭಯಮಣ್ವಪಿ |
ನಾಸೀದ್ ವ್ಯಾಧಿಭಯಂ ಚಾಪಿ ತಸ್ಮಿನ್ ಜನಪದೇಶ್ವರೇ ॥7॥
ಪ್ರಿಯನೇ, ಆ ರಾಜನು ಆಳುತ್ತಿರುವಾಗ ಚೋರಭಯವಿರಲಿಲ್ಲ. ಹಸಿವೆಯ ಭಯವು ಸ್ವಲ್ಪವೂ ಇರಲಿಲ್ಲ. ವ್ಯಾಧಿಯ ಭಯವೂ ಇರಲಿಲ್ಲ.
ಸ್ವೈರ್ಧರ್ಮೈ ರೇಮಿರೇ ವರ್ಣಾ ದೈವೇ ಕರ್ಮಣಿ ನಿಷ್ಠಿತಾಃ |
ತಮಾಶ್ರಿತ್ಯ ಮಹೀಪಾಲಮಾಸಂಶ್ಚೈವಾಕುತೋಭಯಾಃ ॥8॥
ನಾಲ್ಕು ವರ್ಣದವರೂ ತಮ್ಮ ತಮ್ಮ ಧರ್ಮಗಳಿಗೆ ಅನುಸಾರವಾಗಿ ದೇವಕಾರ್ಯಗಳಲ್ಲಿ ನಿರತರಾಗಿದ್ದರು. ಆ ರಾಜನನ್ನು ಆಶ್ರಯಿಸಿ ಎಲ್ಲರೂ ನಿರ್ಭಯರಾಗಿದ್ದರು.
ಕಾಲವರ್ಷೀ ಚ ಪರ್ಜನ್ಯಃ ಸಸ್ಯಾನಿ ಫಲವಂತಿ ಚ |
ಸರ್ವಸಸ್ಯಸಮೃದ್ಧಾ ಚ ಮಹೀ ಪಶುಮತೀ ತಥಾ ॥9॥
ಪರ್ಜನ್ಯನು ಕಾಲಕ್ಕೆ ಸರಿಯಾಗಿ ಮಳೆಯನ್ನು ಕೊಡುತ್ತಿದ್ದನು, ಸಸ್ಯಗಳು ಫಲವನ್ನು ಕೊಡುತ್ತಿದ್ದವು, ಭೂಮಿಯು ಸಸ್ಯಸಮೃದ್ಧಿಯಿಂದಲೂ, ಪಶುಸಮೃದ್ಧಿಯಿಂದಲೂ ಕೂಡಿದ್ದಿತು.
ಸ ಚಾದ್ಭುತಮಹಾವೀರ್ಯೋ ವಜ್ರಸಂಹನನೋ ಯುವಾ |
ಉದ್ಯಮ್ಯ ಮಂದರಂ ದೋರ್ಭ್ಯಾಂ ಹರೇತ್ ಸವನಕಾನನಮ್ ॥10॥
ಯುವಕನೂ, ವಜ್ರಶರೀರನೂ, ಅದ್ಭುತ ಶಕ್ತಿಯುಳ್ಳವನೂ ಆದ ಅವನು ಬೇಕಾದರೆ ವನಕಾನನಗಳಿಂದ ಕೂಡಿದ ಮಂದರ ಪರ್ವತವನ್ನೂ ಕಿತ್ತು ತರಬಲ್ಲವನಾಗಿದ್ದನು.
ಧನುಷ್ಯಸ್ತ್ರೇ ಗದಾಯುದ್ಧೇ ಸರ್ವಪ್ರಹರಣೇಷು ಚ |
ನಾಗಪೃಷ್ಠೇಽಶ್ವಪೃಷ್ಠೇ ಚ ಬಭೂವ ಪರಿನಿಷ್ಠಿತಃ ॥11॥
ಧನುರ್ಯುದ್ಧದಲ್ಲಿ, ಅಸ್ತ್ರಯುದ್ಧದಲ್ಲಿ, ಗದಾಯುದ್ಧದಲ್ಲಿ, ಗಜಯುದ್ಧದಲ್ಲಿ ಮತ್ತು ಅಶ್ವಯುದ್ಧದಲ್ಲಿ ಅವನು ಪರಿಣತನಾಗಿದ್ದನು.
ಬಲೇ ವಿಷ್ಣುಸಮಶ್ಚಾಸೀತ್ ತೇಜಸಾ ಭಾಸ್ಕರೋಪಮಃ |
ಅಕ್ಷೋಭ್ಯತ್ವೇಽರ್ಣವಸಮಃ ಸಹಿಷ್ಣುತ್ವೇ ಧರಾಸಮಃ ॥12॥
ಅವನು ಬಲದಲ್ಲಿ ವಿಷ್ಣುವಿಗೆ ಸದೃಶನಾಗಿದ್ದನು, ತೇಜಸ್ಸಿನಲ್ಲಿ ಸೂರ್ಯನಿಗೆ ಸದೃಶನಾಗಿದ್ದನು, ಸಮುದ್ರದಂತೆ ಅಕ್ಷೋಭ್ಯನಾಗಿದ್ದನು, ಸಹನೆಯಲ್ಲಿ ಭೂಮಿಗೆ ಸಮನಾಗಿದ್ದನು.
ಸಮಂತಾತ್ ಸ ಮಹೀಪಾಲಃ ಪ್ರಸನ್ನಪುರರಾಷ್ಟ್ರವಾನ್ |
ಭೂಯೋ ಧರ್ಮಪರೈರ್ಭಾವೈರ್ವಿಹಿತಂ ಜನಮಾವಸತ್ ॥13॥
ಆ ರಾಜನು, ಪ್ರಸನ್ನರಾದ ಜನರಿಂದ ತುಂಬಿದ ಪುರ ಮತ್ತು ರಾಷ್ಟ್ರವುಳ್ಳವನಾಗಿದ್ದನು. ಎಲ್ಲಾ ಕಡೆಯಲ್ಲಿಯೂ ಮತ್ತೆ ಮತ್ತೆ

ಧರ್ಮಪರವಾದ ಅಭಿಪ್ರಾಯವನ್ನು ಹೊಂದಿದ್ದ ಜನರಿಂದ ತುಂಬಿದ ದೇಶವನ್ನು ಆಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಎಂಭತ್ತೈದನೆಯ ಅಧ್ಯಾಯ
(ದುಷ್ಯಂತನ ಬೇಟೆ, ಅರಣ್ಯ ಪ್ರವೇಶ ಮತ್ತು ಮೃಗಗಳ ವಧೆ.)
ವೈಶಂಪಾಯನಃ
ಸ ಕದಾಚಿನ್ಮಹಾಬಾಹುಃ ಪ್ರಭೂತಬಲವಾಹನಃ ।
ವನಂ ಜಗಾಮ ಗಹನಂ ಹಯನಾಗಶತೈರ್ವೃತಃ ॥1॥
ಆ ಮಹಾಬಾಹುವಾದ ದುಷ್ಯಂತನು ಒಮ್ಮೆ ಬಹಳ ಸೈನ್ಯ ಮತ್ತು ವಾಹನಗಳನ್ನು ತೆಗೆದುಕೊಂಡು ನೂರಾರು ಕುದುರೆಗಳು ಮತ್ತು ಆನೆಗಳಿಂದ ಸಹಿತನಾಗಿ ದಟ್ಟವಾದ ಕಾಡಿಗೆ ಬಂದನು.
ಖಡ್ಗಚಾಪಧರೈರ್ವೀರೈರ್ಗದಾಮುಸಲಪಾಣಿಭಿಃ ।
ಪ್ರಾಸತೋಮರಹಸ್ತೈಶ್ಚ ಯಯೌ ಯೋಧಗಣೈರ್ವೃತಃ ॥2॥
ಖಡ್ಗ ಮತ್ತು ಚಾಪಗಳನ್ನು ಧರಿಸಿದ ವೀರರಿಂದಲೂ, ಗದೆ ಮತ್ತು ಮುಸಲಗಳನ್ನು ಹಿಡಿದ ವೀರರಿಂದಲೂ, ಕೈಯಲ್ಲಿ ಪ್ರಾಸ ಮತ್ತು ತೋಮರಗಳನ್ನು ಹಿಡಿದ ಯೋಧರ ಗಣದಿಂದಲೂ ಸಹಿತನಾಗಿ ಕಾಡಿಗೆ ಹೊರಟನು.
ಸಿಂಹನಾದೈಶ್ಚ ಯೋಧಾನಾಂ ಶಂಖದುಂದುಭಿನಿಸ್ವನೈಃ ।
ರಥನೇಮಿನಿನಾದೈಶ್ಚ ಸ ನಾಗವರಬೃಂಹಿತೈಃ ॥3॥
ಹೇಷಿತಸ್ವನಮಿಶ್ರೈಶ್ಚ ಕ್ಷ್ವೇಡಿತಾಸ್ಫೋಟನಿಸ್ವನೈಃ ।
ಆಸೀತ್ ಕಿಲಕಿಲಾಶಬ್ದಃ ತಸ್ಮಿನ್ ಗಚ್ಛತಿ ಪಾರ್ಥಿವೇ ॥4॥
ಯೋಧರ ಸಿಂಹನಾದಗಳಿಂದಲೂ, ಶಂಖ ದುಂದುಭಿ ನಾದದಿಂದಲೂ, ರಥಚಕ್ರದ ಘೋಷದಿಂದಲೂ, ಗಜಗಳ ಬೃಂಹಿತಗಳಿಂದಲೂ, ಕುದುರೆಗಳ ಕೆನೆಯುವ ಶಬ್ದಗಳಿಂದಲೂ, ಯೋಧರ ಚಪ್ಪಾಳೆ ಮುಂತಾದ ಶಬ್ದಗಳಿಂದಲೂ ರಾಜನು ಹೋಗುತ್ತಿರುವಾಗ ದೊಡ್ಡ ಶಬ್ದದ ಕೋಲಾಹಲವುಂಟಾಯಿತು.
ಪ್ರಾಸಾದವರಶೃಂಗಸ್ಥಾ ಪರಯಾ ನೃಪಶೋಭಯಾ ।
ದದೃಶುಸ್ತಂ ಸ್ತ್ರಿಯಸ್ತತ್ರ ನೃಪಮಾತ್ಮಯಶಸ್ಕರಮ್ ॥5॥
ಮನೆಯ ಉಪ್ಪರಿಗೆಗಳನ್ನು ಏರಿದ ಸ್ತ್ರೀಯರು ತಮಗೆ ಕೀರ್ತಿಯನ್ನು ತಂದುಕೊಟ್ಟಂತಹ, ರಾಜಶೋಭೆಯಿಂದ ಬೆಳಗುತ್ತಿದ್ದಂತಹ ರಾಜನನ್ನು ನೋಡಿದರು.
ಶಕ್ರೋಪಮಮಮಿತ್ರಘ್ನಂ ಪರವಾರಣವಾರಣಮ್ ।
ಪಶ್ಯಂತಃ ಸ್ತ್ರೀಗಣಾಸ್ತತ್ರ ಶಕ್ತಿಪಾಣಿಂ ಸ್ಮ ಮೇನಿರೇ ॥6॥
ಶಕ್ರನಂತೆ ಶತ್ರುಸಂಹಾರಕನಾದ, ಶತ್ರುಗಳ ಆನೆಗಳನ್ನು ಸಂಹರಿಸುವ ಶಕ್ತಿಯುಳ್ಳ ಅವನನ್ನು ನೋಡಿದ ಸ್ತ್ರೀಯರ ಸಮೂಹವು, ಅವನನ್ನು ಕೈಯಲ್ಲಿ ಶಕ್ತ್ಯಾಯುಧವನ್ನು ಹಿಡಿದ ಷಣ್ಮುಖನೆಂದು ತಿಳಿದರು.
ಅಯಂ ಸ ಪುರುಷವ್ಯಾಘ್ರೋ ರಣೇಽದ್ಭುತಪರಾಕ್ರಮಃ ।
ಯಸ್ಯ ಬಾಹುಬಲಂ ಪ್ರಾಪ್ಯ ನ ಭವಂತ್ಯಸುಹೃದ್ಗಣಾಃ ॥7॥
ಇವನೇ ರಣದಲ್ಲಿ ಅದ್ಭುತ ಪರಾಕ್ರಮವುಳ್ಳ ಆ ಪುರುಷ ಶ್ರೇಷ್ಠನಾದವನು. ಇವನ ಬಾಹುಬಲಕ್ಕೆ ಒಳಗಾದ ಶತ್ರುಸಮೂಹವು ಬದುಕಿ ಉಳಿಯುವುದಿಲ್ಲ.
ಇತಿ ವಾಚೋ ಬ್ರುವಂತ್ಯಸ್ತಾಃ ಸ್ತ್ರಿಯಃ ಪ್ರೇಮ್ಣಾ ನರಾಧಿಪಮ್ ।
ತುಷ್ಟುವುಃ ಪುಷ್ಪವೃಷ್ಟೀಶ್ಚ ಸಸೃಜುಸ್ತಸ್ಯ ಮೂರ್ಧನಿ ॥8॥
ಆ ಸ್ತ್ರೀಯರು ಪ್ರೀತಿಯಿಂದ ಇಂತಹ ಮಾತುಗಳನ್ನು ಆಡುತ್ತಾ ರಾಜನನ್ನು ಸ್ತೋತ್ರಮಾಡಿ ಅವನ ತಲೆಯ ಮೇಲೆ ಪುಷ್ಪವೃಷ್ಟಿಯನ್ನು ಕರೆದರು.
ಸ ತತ್ರ ತತ್ರ ವಿಪ್ರೇಂದ್ರೈಃ ಸ್ತೂಯಮಾನಃ ಸಮಂತತಃ ।
ನಿರ್ಯಯೌ ಪರಯಾ ಪ್ರೀತ್ಯಾ ವನಂ ಮೃಗಜಿಘಾಂಸಯಾ ॥9॥
ಅವನು ಅಲ್ಲಲ್ಲಿ ಎಲ್ಲಾ ಕಡೆಗಳಲ್ಲಿಯೂ ಬ್ರಾಹ್ಮಣಶ್ರೇಷ್ಠರಿಂದ ಸ್ತೋತ್ರಮಾಡಲ್ಪಟ್ಟವನಾಗಿ ಮೃಗಗಳನ್ನು ಕೊಲ್ಲುವ ಉದ್ದೇಶದಿಂದ ಬಹಳ ಸಂತೋಷದಿಂದ ಕಾಡಿಗೆ ಹೊರಟನು.
ಅದೂರಮನುಜಗ್ಮುಸ್ತಂ ಪೌರಜಾನಪದಾಸ್ತದಾ ।
ನ್ಯವರ್ತಂತ ತತಃ ಪಶ್ಚಾದನುಜ್ಞಾತಾ ನೃಪೇಣ ಹ ॥10॥
ಸೌವರ್ಣಪ್ರತಿಮೇನಾಥ ರಥೇನ ವಸುಧಾಧಿಪಃ ।
ಮಹೀಮಾಪೂರಯಾಮಾಸ ಘೋಷೇಣೇಂದ್ರೋ ಯಥಾ ದಿವಮ್ ॥
ಸ್ವಲ್ಪ ದೂರ ಅವನನ್ನು ಹಿಂಬಾಲಿಸಿದ ಪೌರಜಾನಪದರು ಅವನ ಅನುಮತಿಯನ್ನು ಪಡೆದು ಹಿಂದಿರುಗಿದರು. ಅನಂತರ ವೇಗವಾಗಿ ಹೊರಟ ಆ ರಾಜನು ಇಂದ್ರನು ತನ್ನ ರಥದ ಘೋಷದಿಂದ ದೇವಲೋಕವನ್ನು ತುಂಬಿದಂತೆ ತನ್ನ ಚಿನ್ನದ ರಥದ ಘೋಷದಿಂದ

ಭೂಮಿಯನ್ನು ತುಂಬಿದನು.
ಸ ಗಚ್ಛನ್ ದದೃಶೇ ಶ್ರೀಮಾನ್ ನಂದನಪ್ರತಿಮಂ ವನಮ್ |
ಬಿಲ್ವಾರ್ಕಖದಿರಾಕೀರ್ಣಂ ಕಪಿತ್ಥವಟಸಂಕುಲಮ್ ॥12॥
ಅವನು ಮುಂದೆ ಹೋಗುತ್ತಾ ನಂದನದಂತಿದ್ದ ಒಂದು ವನವನ್ನು ನೋಡಿದನು. ಆ ವನವು ಬಿಲ್ವ, ಅರ್ಕ, ಖದಿರ, ಕಪಿತ್ಥ ಮತ್ತು ವಟವೃಕ್ಷಗಳಿಂದ ನಿಬಿಡವಾಗಿದ್ದಿತು.
ವಿಷಮಂ ಪರ್ವತಪ್ರಸ್ಥೈರಶ್ಮಭಿಶ್ಚ ಸಮಾವೃತಮ್ |
ನಿರ್ಜಲಂ ನಿರ್ಮನುಷ್ಯಂ ಚ ಬಹುಯೋಜನಮಾಯತಮ್ |
ಮೃಗಸ್ಯಂರ್ವೃತಂ ಘೋರೈರನ್ಯೈಶ್ಚಾಪಿ ವನೇಚರೈಃ ॥13॥
ಪರ್ವತದಿಂದ ಉರುಳಿದ ಬಂಡೆಗಳಿಂದ ಮಾರ್ಗವು ವಿಷಮವಾಗಿದ್ದಿತು. ಆ ವನವು ಬಹುವಿಸ್ತಾರವಾಗಿದ್ದು, ನಿತ್ಯವೂ ಹಸಿರಾಗಿದ್ದು ಮನುಷ್ಯರಹಿತವಾಗಿದ್ದಿತು. ಘೋರವಾದ ಮೃಗಸಂಘಗಳು ಮತ್ತು ಉಳಿದ ಕಾಡುಪ್ರಾಣಿಗಳು ಅಲ್ಲಿದ್ದವು.
ತದ್ ವನಂ ಮನುಜವ್ಯಾಘ್ರಃ ಸಾಮಾತ್ಯಬಲವಾಹನಃ |
ಲೋಳಯಾಮಾಸ ದುಷ್ಯಂತಃ ಸೂದಯನ್ ವಿವಿಧಾನ್ ಮೃಗಾನ್ ॥
ಮಂತ್ರಿ ಮತ್ತು ಸೈನ್ಯದಿಂದ ಕೂಡಿದ ರಾಜನಾದ ದುಷ್ಯಂತನು ಅನೇಕ ವಿಧವಾದ ಪ್ರಾಣಿಗಳನ್ನು ಕೊಲ್ಲುತ್ತಾ ಆ ವನವನ್ನು ಕಲಕಾಡಿದನು.
ಬಾಣಗೋಚರಸಂಪ್ರಾಪ್ತಾಂಸ್ತತ್ರ ವ್ಯಾಘ್ರಗಣಾನ್ ಬಹೂನ್ |
ಪಾತಯಾಮಾಸ ದುಷ್ಯಂತೋ ನಿರ್ಬಿಭೇದ ಚ ಸಾಯಕೈಃ |
ದೂರಸ್ಥಾನ್ ಸಾಯಕೈಃ ಕಾಂಶ್ಚಿದಭಿನತ್ ಸ ನರಾಧಿಪಃ ॥15॥
ಬಾಣದ ವ್ಯಾಪ್ತಿಗೆ ಸಿಲುಕಿದ ವ್ಯಾಘ್ರಸಮೂಹವನ್ನು ಅವನು ಕೆಳಗೆ ಉರುಳಿಸಿದನು. ದೂರದಲ್ಲಿದ್ದ ಮೃಗಗಳನ್ನು ಬಾಣಗಳಿಂದ ಕತ್ತರಿಸಿದನು. ಇನ್ನೂ ಕೆಲವು ಮೃಗಗಳನ್ನು ಆ ರಾಜನು ಬಾಣದಿಂದ ಭೇದಿಸಿದನು.
ಅಭ್ಯಾಶಮಾಗತಾಂಶ್ಚಾನ್ಯಾನ್ ಖಡ್ಗೇನ ನಿರಕೃಂತತ |
ಕಾಂಶ್ಚಿದೇತಾನ್ ಸ ನಿರ್ಜ್ಘ್ನೇ ಶಕ್ತ್ಯಾ ಶಕ್ತಿಮತಾಂ ವರಃ ॥16॥
ಸಮೀಪಕ್ಕೆ ಬಂದ ಕೆಲವು ಮೃಗಗಳನ್ನು ಖಡ್ಗದಿಂದ ಕತ್ತರಿಸಿದನು. ಶಕ್ತಿಯುಳ್ಳವರಲ್ಲಿ ಶ್ರೇಷ್ಠನಾದ ಅವನು ಇನ್ನೂ ಕೆಲವು ಪ್ರಾಣಿಗಳನ್ನು ಶಕ್ತ್ಯಾಯುಧಪ್ರಯೋಗದಿಂದ ಕೊಂದನು.
ಗದಾಮಂಡಲತತ್ತ್ವಜ್ಞಶ್ಚಚಾರಾಮಿತವಿಕ್ರಮಃ |
ತೋಮರೈರಸಿಭಿಶ್ಚಾಪಿ ಗದಾಮುಸಲಕರ್ಷಣೈಃ ॥17॥
ಚಚಾರ ನಿಘ್ನನ್ ವನ್ಯಾನ್ ವೈ ಸ್ವೈರಚಾರಾನ್ ವನದ್ವಿಪಾನ್ |
ರಾಜ್ಞಾ ಚಾದ್ಭುತವೀರ್ಯೇಣ ಯೌಧೈಶ್ಚ ಸಮರಪ್ರಿಯೈಃ ॥18॥
ಗದಾಯುದ್ಧ ನಿಪುಣನಾದ ಅವನು ಅಮಿತವಿಕ್ರಮನಾಗಿ ಗದಾಯುದ್ಧದ ಮಂಡಲಗಳಲ್ಲಿ ಚಲಿಸಿದನು. ಕಾಡುಮೃಗಗಳನ್ನೂ ಮತ್ತು ಮನಸ್ಸಿಗೆ ಬಂದಂತೆ ತಿರುಗುವ ಕಾಡಾನೆಗಳನ್ನೂ ತೋಮರ, ಖಡ್ಗ, ಗದಾ, ಮುಸಲ ಮತ್ತು ಕರ್ಷಣಗಳಿಂದ ಕೊಲ್ಲುತ್ತಾ ಕಾಡಿನಲ್ಲಿ ತಿರುಗಾಡಿದನು.
ಲೋಡ್ಯಮಾನಂ ಮಹಾರಣ್ಯಂ ತತ್ಯಜುಶ್ಚ ಮಹಾಮೃಗಾಃ |
ತತ್ರ ವಿದ್ರುತಯೂಥಾನಿ ಹತಯೂಥಪತೀನಿ ಚ ॥19॥
ಮಹಾಪರಾಕ್ರಮಿಯಾದ ರಾಜನಿಂದಲೂ, ಮತ್ತು ಯುದ್ಧಪ್ರಿಯರಾದ ಯೋಧರಿಂದಲೂ, ಆ ಮಹಾರಣ್ಯವು ಕಲಕಲ್ಪಡುತ್ತಿರಲು ಆ ಮಹಾರಣ್ಯದಲ್ಲಿದ್ದ ಮೃಗಗಳು ಕಾಡನ್ನು ಬಿಟ್ಟು ಓಡಿದವು.
ಮೃಗಯೂಥಾನ್ಯಥೌತ್ಸುಕ್ಯಾತ್ ಶಬ್ದಂ ಚಕ್ರುರನೇಕಶಃ |
ಶುಷ್ಕಾಂ ಚಾಪಿ ನದೀಂ ಗತ್ವಾ ಜಲನೈರಾಶ್ಯದುಃಖಿತಾಃ ॥20॥
ಹಾಗೆ ಓಡಿದ ಮೃಗಗುಂಪುಗಳು ತಮ್ಮ ತಮ್ಮ ನಾಯಕನನ್ನು ಕಳೆದುಕೊಂಡು ಎಲ್ಲಾ ಕಡೆಯಲ್ಲಿಯೂ ಓಡುತ್ತಾ ದಿಗ್ಭ್ರಮೆಯಿಂದ ಅನೇಕ ವಿಧವಾದ ಶಬ್ದಗಳನ್ನು ಮಾಡಿದವು.
ವ್ಯಾಯಾಮಕ್ಲಾಂತಹೃದಯಾಃ ಪತಂತಿ ಸ್ಮ ವಿಚೇತನಾಃ |
ಕ್ಷುತ್ಪಿಪಾಸಾಪರೀತಾಶ್ಚ ಶ್ರಾಂತಾಶ್ಚ ಪತಿತಾ ಭುವಿ ॥21॥
ಬಾಯಾರಿಕೆಯಿಂದ ನದಿಯ ಬಳಿಗೆ ಹೋಗಿ, ಶುಷ್ಕವಾದ ನದಿಯನ್ನು ಕಂಡು ನಿರಾಶೆಯಿಂದ ದುಃಖಿತವಾಗಿ ಓಡುವುದರಿಂದ ದಣಿದಿದ್ದ ಪ್ರಾಣಿಗಳು ವಿಚೇತನಗಳಾಗಿ ಬೀಳುತ್ತಿದ್ದವು. ಹಸಿವು, ನೀರಡಿಕೆಗಳಿಂದ ದಣಿದು ಪ್ರಾಣಿಗಳು ಬೇರೆ ಭೂಮಿಯಲ್ಲಿಯೂ ಬೀಳುತ್ತಿದ್ದವು.
ಕೇಚಿತ್ ತತ್ರ ನರವ್ಯಾಘ್ರೈರಭಕ್ಷ್ಯಂತ ಬಭುಕ್ಷಿತೈಃ |
ಕೇಚಿದಗ್ನಿಮಥೋತ್ಪಾದ್ಯ ಸಂಸಾಧ್ಯ ಚ ವನೇಚರಾಃ ॥22॥
ಅಂತಹ ಪ್ರಾಣಿಗಳನ್ನು ಹಸಿದ ಯೋಧರು ತಿನ್ನುತ್ತಿದ್ದರು. ಇನ್ನೂ ಕೆಲವರು ವನಚರರು ಅಲ್ಲಿಯೇ ಅಗ್ನಿಯನ್ನು ಉತ್ಪತ್ತಿಮಾಡಿ ಮಾಂಸವನ್ನು ವಿಧಿವತ್ತಾಗಿ ಬೇಯಿಸಿ ತಿನ್ನುತ್ತಿದ್ದರು.
ಭಕ್ಷಯಂತಿ ಸ್ಮ ಮಾಂಸಾನಿ ಪ್ರಕುಟ್ಯ ವಿಧಿವತ್ ತದಾ |
ತತ್ರ ಕೇಚಿದ್ ಗಜಾ ಮತ್ತಾ ಬಲಿನಃ ಶಸ್ತ್ರವಿಕ್ಷತಾಃ |
ಸಂಕೋಚ್ಯಾಗ್ರಕರಾನ್ ಭೀತಾಃ ಪ್ರಾದ್ರವಂತಿ ಸ್ಮ ವೇಗಿತಾಃ ॥23॥

ಶಕೃನ್ಮೂತ್ರಂ ಸೃಜಂತಶ್ಚ ಕ್ಷರಂತಃ ಶೋಣಿತಂ ಬಹು |
ವನ್ಯಾ ಗಜವರಾಸ್ತತ್ರ ಮಮೃದುರ್ಮನುಜಾನ್ ಬಹೂನ್ ॥24॥
ಅಲ್ಲಿ ಕೆಲವು ಬಲಿಷ್ಠವಾದ ಮದಿಸಿದ ಆನೆಗಳು ಶಸ್ತ್ರಗಳಿಂದ ಗಾಯಗೊಂಡು, ತಮ್ಮ ಸೊಂಡಿಲುಗಳನ್ನು ಮುದುರಿ ಭಯದಿಂದ ವೇಗವಾಗಿ ಓಡುತ್ತಿದ್ದವು. ಮಲಮೂತ್ರಗಳನ್ನು ಸುರಿಸುತ್ತಾ ಮತ್ತು ಬಹಳ ರಕ್ತವನ್ನು ಸುರಿಸುತ್ತಾ ಓಡಿದ ಕಾಡಾನೆಗಳು ಅಲ್ಲಿ ಅನೇಕ ಮನುಷ್ಯರನ್ನು ತುಳಿದು ಹಾಕಿದವು.
ತದ್ವನಂ ಬಲಮೇಘೇನ ಶರಧಾರೇಣ ಸಂವೃತಮ್ |
ವ್ಯರೋಚತ ಮೃಗಾಕೀರ್ಣಂ ರಾಜ್ಞಾ ಹತಮೃಗಾಧಿಪಮ್ ॥25॥
ಆ ಕಾಡು ಸೈನ್ಯ ಎಂಬ ಮೇಘದಿಂದ ಬಾಣಗಳೆಂಬ ವೃಷ್ಟಿಯಿಂದ ಆಚ್ಛಾದಿತವಾಗಿ ರಾಜನಿಂದ ಹತವಾದ ಮೃಗಪತಿಗಳಿಂದ ಕೂಡಿದ ಮೃಗಗಳಿಂದ ಎಲ್ಲಾ ಕಡೆಯೂ ತುಂಬಿ ಶೋಭಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಾಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ತೈದನೆಯ ಅಧ್ಯಾಯ ಮುಗಿಯಿತು
*****

ಎಂಭತ್ತಾರನೆಯ ಅಧ್ಯಾಯ
(ಬೇಟೆಯಾಡುವ ಪ್ರಸಂಗದಿಂದ ದುಷ್ಯಂತನ ಕಣ್ವಾಶ್ರಮ ಪ್ರಾಪ್ತಿ ಮತ್ತು ಆ ಆಶ್ರಮದ ವರ್ಣನೆ.)
ವೈಶಂಪಾಯನಃ
ತತೋ ಮೃಗಸಹಸ್ರಾಣಿ ಹತ್ವಾ ಸಬಲವಾಹನಃ |
ತತ್ರ ಮೇಘಘನಪ್ರಖ್ಯಂ ಸಿದ್ಧಚಾರಣಸೇವಿತಮ್ ॥1॥
ವನಮಾಲೋಕಯಾಮಾಸ ನಗರಾದ್ ಯೋಜನದ್ವಯೇ |
ಮೃಗಾನನುಚರನ್ ವನ್ಯಾಂಛ್ರಮೇಣ ಪರಿಪೀಡಿತಃ ॥2॥
ಅನಂತರ ಸೈನ್ಯ ಮತ್ತು ವಾಹನಗಳಿಂದ ಸುತ್ತುವರಿಯಲ್ಪಟ್ಟ ದುಷ್ಯಂತನು ಸಹಸ್ರಾರು ಮೃಗಗಳನ್ನು ಕೊಂದು ದಟ್ಟವಾದ ಮೋಡದಂತಿರುವ, ಸಿದ್ಧ, ಚಾರಣರಿಂದ ಸೇವಿತವಾದ ನಗರದಿಂದ ಎರಡು ಯೋಜನ ದೂರದಲ್ಲಿರುವ ವನವನ್ನು ನೋಡಿದನು.
ಮೃಗಾನನುಚರನ್ ರಾಜಾ ವೇಗೇನಾಶ್ವಾನಚೋದಯತ್ |
ರಾಜಾ ಮೃಗಪ್ರಸಂಗೇನ ವನಮನ್ಯದ್ ವಿವೇಶ ಹ ॥3॥
ಏಕ ಏವೋತ್ತಮಬಲಃ ಕ್ಷುತ್ಪಿಪಾಸಾಶ್ರಮಾನ್ವಿತಃ |
ವನಸ್ಯಾಂತಂ ಸಮಾಸಾದ್ಯ ಸೋಽಪಶ್ಯದಿರಿಣಂ ತತಃ ॥4॥
ವನ್ಯಮೃಗಗಳನ್ನು ಹಿಂಬಾಲಿಸಿದ ಅವನು ಶ್ರಮದಿಂದ ಪೀಡಿತನಾಗಿ ಮೃಗವನ್ನು ಹಿಂಬಾಲಿಸುತ್ತಾ, ವೇಗವಾಗಿ ಅಶ್ವಗಳನ್ನು ಓಡಿಸಿದನು. ಹೀಗೆ ರಾಜನು ಮೃಗದ ಆಸೆಯಿಂದ ಇನ್ನೊಂದು ಕಾಡನ್ನು ಸೇರಿದನು. ಹಸಿವು, ನೀರಡಿಕೆ ಮತ್ತು ಶ್ರಮದಿಂದ ಉತ್ತಮ ಬಲವುಳ್ಳ ಅವನು ಒಬ್ಬನೇ ಆ ಕಾಡಿನ ತುದಿಯವರೆಗೂ ಬಂದು ಅಲ್ಲಿಂದ ಮುಂದೆ ಒಂದು ಮರುಭೂಮಿಯನ್ನು ನೋಡಿದನು.
ತದಪ್ಯತೀತ್ಯ ನೃಪತಿರುತ್ತಮಾಶ್ರಮಸಂಯುತಮ್ |
ಮನಃಪ್ರಹ್ಲಾದಜನನಂ ದೃಷ್ಟಿಕಾಂತಮತೀವ ಚ ॥5॥
ಶೀತಮಾರುತಸಂಯುಕ್ತಂ ಜಗಾಮಾನ್ಯನ್ಮಹದ್ವನಮ್ |
ಪುಷ್ಪಿತೈಃ ಪಾದಪೈಃ ಕೀರ್ಣಮತೀವ ಸುಖಶಾದ್ವಲಮ್ ॥6॥
ಮರುಭೂಮಿಯನ್ನು ದಾಟಿ ಆ ರಾಜನು ಉತ್ತಮಾಶ್ರಮಯುಕ್ತವಾದ ಮನಸ್ಸಿಗೆ ಸಂತೋಷವನ್ನುಂಟು ಮಾಡುವ, ಕಣ್ಣುಗಳಿಗೆ ಮನೋಹರವಾದ, ಶೀತಮಾರುತದಿಂದ ಕೂಡಿದ್ದ ಇನ್ನೊಂದು ದೊಡ್ಡ ಕಾಡನ್ನು ಸೇರಿದನು. ಎಲ್ಲಾ ವೃಕ್ಷಗಳಲ್ಲಿಯೂ ತುಂಬಿದ ಪುಷ್ಪಗಳುಳ್ಳ ಆ ಕಾಡು ಸುಖಶೀತವಾಗಿದ್ದು, ಮೃದುವಾಗಿದ್ದಿತು.
ವಿಪುಲಂ ಮಧುರಾರಾವೈರ್ನಾದಿತಂ ವಿಹಗೈಸ್ತಥಾ |
ಪುಂಸ್ಕೋಕಿಲನಿನಾದೈಶ್ಚ ಝಿಲ್ಲೀಕಗಣನಾದಿತಮ್ ॥7॥
ಆ ವನವು ಮಧುರವಾಗಿ ಕೂಗುವ ಪಕ್ಷಿಗಳಿಂದಲೂ, ಪುಂಸ್ಕೋಕಿಲನಿನಾದಗಳಿಂದಲೂ, ಝಿಲ್ಲೀಕಗಣಗಳ (ಚಿಮ್ಮಂಡೆ ಹುಳುಗಳ) ನಾದದಿಂದಲೂ ಹೇರಳವಾಗಿ ತುಂಬಿದ್ದಿತು.
ಪ್ರವೃದ್ಧವಿಟಪೈರ್ವೃಕ್ಷೈಃ ಸುಖಚ್ಛಾಯೈಃ ಸಮಾವೃತಮ್ |
ಷಟ್ಪದಾಘೂರ್ಣಿತತಳಂ ಲಕ್ಷ್ಮ್ಯಾ ಪರಮಯಾ ಯುತಮ್ ॥8॥
ನಾಪುಷ್ಪಃ ಪಾದಪಃ ಕಶ್ಚಿನ್ನಾಫಲೋ ನಾಪಿ ಕಂಟಕೀ |
ಷಟ್ಪದೈರ್ನಾಪ್ಯಪಾಕೀರ್ಣಸ್ತಸ್ಮಿನ್ ವೈ ಕಾನನೇಽಭವತ್ ॥9॥
ಒಳ್ಳೆಯ ನೆರಳನ್ನು ಕೊಡುವ ಎತ್ತರಕ್ಕೆ ಬೆಳೆದ ಬಹಳ ಕೊಂಬೆಗಳುಳ್ಳ ವೃಕ್ಷಗಳಿಂದ ಕೂಡಿದ್ದಿತು. ಕೆಳಭಾಗದಲ್ಲಿ ದುಂಬಿಗಳು ಝೇಂಕರಿಸುತ್ತಿದ್ದವು. ಒಳ್ಳೆಯ ಕಾಂತಿಯಿಂದ ಕೂಡಿದ್ದಿತು. ಆ ವನದಲ್ಲಿ ಪುಷ್ಪವಿಲ್ಲದ ಅಥವಾ ಫಲವಿಲ್ಲದ ಮರವಿರಲಿಲ್ಲ. ಮುಳ್ಳಿನ ಮರಗಳೂ ಇರಲಿಲ್ಲ ಅಥವಾ ದುಂಬಿಗಳು ಇಲ್ಲದ ಮರಗಳೂ ಇರಲಿಲ್ಲ.

ವಿಹಗೈರ್ನಾದಿತಂ ಪುಷ್ಪೈರಲಂಕೃತಮತೀವ ಚ |
ಸರ್ವರ್ತುಕುಸುಮೈರ್ವೃಕ್ಷೈಃ ಸುಖಚ್ಛಾಯೈಃ ಸಮಾವೃತಮ್ ॥10॥
ಆ ಕಾಡು ಪಕ್ಷಿಗಳ ನಾದದಿಂದ ಕೂಡಿದ್ದಿತು. ಪುಷ್ಪಗಳಿಂದ ಬಹಳ ಅಲಂಕೃತವಾಗಿದ್ದಿತು. ಎಲ್ಲಾ ಋತುಗಳಲ್ಲೂ ಹೂಗಳನ್ನು ಕೊಡುವ ಸುಖದಾಯಕವಾದ ನೆರಳುಳ್ಳ ಮರಗಳಿಂದ ತುಂಬಿದ್ದಿತು.
ಮನೋರಮಂ ಮಹೇಷ್ವಾಸೋ ವಿವೇಶ ವನಮುತ್ತಮಮ್ |
ಮಾರುತಾಕಲಿತಾಸ್ತತ್ರ ದ್ರುಮಾಃ ಕುಸುಮಶಾಖಿನಃ |
ಪುಷ್ಪವೃಷ್ಟಿಂ ವಿಚಿತ್ರಾಂ ತು ವ್ಯಸೃಜಂಸ್ತೇ ಪುನಃಪುನಃ ॥11॥
ದುಷ್ಯಂತನು ದೊಡ್ಡ ಧನುಸ್ಸನ್ನು ಹಿಡಿದು ಆ ಮನೋಹರವಾದ ಕಾಡನ್ನು ಪ್ರವೇಶಿಸಿದನು. ವಾಯುವಿನಿಂದ ಅಲುಗಾಡಿಸಲ್ಪಟ್ಟ ಪುಷ್ಪಶಾಖೆಗಳುಳ್ಳ ಮರಗಳು ಅವನ ತಲೆಯ ಮೇಲೆ ಮತ್ತೆ ಮತ್ತೆ ವಿಚಿತ್ರವಾದ ಪುಷ್ಪವೃಷ್ಟಿಯನ್ನು ಕರೆದವು.
ದಿವಿಸ್ಪೃಶೋऽಥ ಸಂಘುಷ್ಟಾಃ ಪಕ್ಷಿಭಿರ್ಮಧುರಸ್ವನೈಃ |
ವಿರೇಜುಃ ಪಾದಪಾಸ್ತತ್ರ ವಿಚಿತ್ರಕುಸುಮಾಂಬರಾಃ |
ತೇಷಾಂ ತತ್ರ ಪ್ರವಾಲೇಷು ಪುಷ್ಪಭಾರಾವನಾಮಿಷು ॥12॥
ಆಕಾಶವನ್ನು ಮುಟ್ಟುವಷ್ಟು ಎತ್ತರವಾಗಿದ್ದ ಅಲ್ಲಿಯ ವೃಕ್ಷಗಳು ಪಕ್ಷಿಗಳ ಮಧುರಸ್ವರಗಳಿಂದಲೂ, ವಿಚಿತ್ರಪುಷ್ಪಗಳ ವಸ್ತ್ರಗಳಿಂದಲೂ ಅಲಂಕೃತವಾಗಿ ಶೋಭಿಸಿದವು.
ರುವಂತಿ ರಾವಾನ್ ಮಧುರಾನ್ ಷಟ್‌ಪದಾ ಮಧುಲಿಪ್ಸವಃ |
ತತ್ರ ಪ್ರದೇಶಾಂಶ್ಚ ಬಹೂನ್ ಕುಸುಮೋತ್ಕರಮಂಡಿತಾತ್ ॥13॥
ಆ ಮರಗಳ ಪುಷ್ಪಭಾರದಿಂದ ಬಗ್ಗಿದ ಎಳೆಯ ಕೊಂಬೆಗಳಲ್ಲಿ ಮಧುವನ್ನು ಪಡೆಯಲು ಬಂದ ದುಂಬಿಗಳು ಮಧುರವಾದ ಸ್ವರವನ್ನು ಮಾಡುತ್ತಿದ್ದವು.
ಲತಾಗೃಹಪರಿಕ್ಷಿಪ್ತಾನ್ ಮನಸಃ ಪ್ರೀತಿವರ್ಧನಾನ್ |
ಸಂಪಶ್ಯನ್ ಸುಮಹಾತೇಜಾ ಬಭೂವ ಮುದಿತಸ್ತದಾ ॥14॥
ಮಹಾತೇಜಸ್ವಿಯಾದ ರಾಜನು ಅಲ್ಲಿ ಪುಷ್ಪವೃಷ್ಟಿಯಿಂದ ಅಲಂಕೃತವಾದ ಅನೇಕ ಪ್ರದೇಶಗಳನ್ನೂ, ಮನಸ್ಸಿಗೆ ಸಂತೋಷವನ್ನುಂಟು ಮಾಡುವ ಲತಾಗೃಹಗಳನ್ನೂ ಸುತ್ತಲೂ ನೋಡಿ ಬಹಳ ಸಂತೋಷಗೊಂಡನು.
ಪರಸ್ಪರಾಶ್ಲಿಷ್ಟಶಾಖೈಃ ಪಾದಪೈಃ ಕುಸುಮಾನ್ವಿತೈಃ |
ಅಶೋಭತ ವನಂ ತತ್ ತು ಮಹೇಂದ್ರಧ್ವಜಸನ್ನಿಭೈಃ ॥15॥
ಪರಸ್ಪರವಾಗಿ ಆಲಿಂಗಿಸಿದಂತಿರುವ ಪುಷ್ಪಗಳಿಂದ ತುಂಬಿದ ಶಾಖೆಗಳಿಂದ ಕೂಡಿದ ಇಂದ್ರಧ್ವಜವನ್ನು ಹೋಲುವ ವೃಕ್ಷಗಳಿಂದ ಕೂಡಿದ ಆ ವನವು ಶೋಭಿಸಿತು.
ಸಿದ್ಧಚಾರಣಸಂಘೈಶ್ಚ ಗಂಧರ್ವಾಪ್ಸರಸಾಂ ಗಣೈಃ |
ಸೇವಿತಂ ವನಮತ್ಯರ್ಥಂ ಮತ್ತವಾನರಕಿನ್ನರೈಃ ॥16॥
ಸಿದ್ಧಚಾರಣಸಮೂಹದಿಂದಲೂ, ಗಂಧರ್ವಾಪ್ಸರಗಣದಿಂದಲೂ, ಮತ್ತಕಪಿ ಮತ್ತು ಕಿನ್ನರರಿಂದಲೂ ಆ ವನವು ಸೇವಿತವಾಗಿದ್ದಿತು.
ಸುಖಃ ಶೀತಃ ಸುಗಂಧೀ ಚ ಪುಷ್ಪರೇಣುವಹೋऽನಿಲಃ |
ಪರಿಕ್ರಾಮನ್ ವನೇ ವೃಕ್ಷಾನುಪೈತೀವ ರಿರಂಸಯಾ ॥17॥
ಸುಗಂಧವುಳ್ಳ ಪುಷ್ಪರೇಣುಗಳನ್ನು ಹೊತ್ತ ಸುಖಶೀತಮಾರುತನು ಅಲ್ಲಿ ಸಂಚರಿಸುತ್ತಾ ರಮಿಸುವ ಇಚ್ಛೆಯಿಂದ ವೃಕ್ಷಗಳ ಸಮೀಪಕ್ಕೆ ಹೋಗುವಂತೆ ತೋರುತ್ತಿತ್ತು.
ಏವಂಗುಣಸಮಾಯುಕ್ತಂ ದದರ್ಶ ಸ ವನಂ ನೃಪಃ |
ನದೀಕಚ್ಛೋದ್ಭವಂ ಕಾಂತಮುಚ್ಛ್ರಿತಧ್ವಜಸನ್ನಿಭಮ್ ॥18॥
ನದಿಯ ತೀರದಲ್ಲಿ ಇದ್ದಂತಹ ಎತ್ತಿದ ಧ್ವಜದಂತೆ ಎತ್ತರವಾಗಿದ್ದ, ಮನೋಹರವಾಗಿದ್ದ, ಮೇಲೆ ಹೇಳಿದ ಗುಣಗಳಿಂದ ಕೂಡಿದ್ದ ಆ ವನವನ್ನು ರಾಜನು ನೋಡಿದನು.
ಪ್ರೇಕ್ಷಮಾಣೋ ವನಂ ತತ್ ತು ಸುಪ್ರಹೃಷ್ಟವಿಹಂಗಮಮ್ |
ಆಶ್ರಮಪ್ರವರಂ ರಮ್ಯಂ ದದರ್ಶ ಚ ಮನೋರಮಮ್ ॥19॥
ಸಂತೋಷಗೊಂಡ ಪಕ್ಷಿಗಳಿಂದ ತುಂಬಿದ್ದ ಆ ವನವನ್ನು ನೋಡುತ್ತಿದ್ದಂತೆಯೇ ರಾಜನು ಅಲ್ಲಿ ಸುಂದರವಾದ ಮತ್ತು ಮನೋಹರವಾದ, ಶ್ರೇಷ್ಠವಾದ ಆಶ್ರಮವೊಂದನ್ನು ನೋಡಿದನು.
ನಾನಾವೃಕ್ಷಸಮಾಕೀರ್ಣಂ ಸಂಪ್ರಜ್ವಲಿತಪಾವಕಮ್ |
ತಂ ತದಾऽಪ್ರತಿಮಂ ಶ್ರೀಮಾನಾಶ್ರಮಂ ಪ್ರತ್ಯಪೂಜಯತ್ |
ಯತಿಭಿರ್ವಾಲಖಿಲ್ಯೈಶ್ಚ ವೃತಂ ಮುನಿಗಣಾನ್ವಿತಮ್ ॥20॥
ಅನೇಕ ವೃಕ್ಷಗಳಿಂದ ತುಂಬಿದ್ದ, ಅನೇಕ ಸ್ಥಳಗಳಲ್ಲಿ ಅಗ್ನಿಜ್ವಾಲೆಯಿದ್ದ, ಆ ಅಸದೃಶವಾದ ಆಶ್ರಮವನ್ನು ನೋಡಿ ರಾಜನು ಪೂಜ್ಯಭಾವವನ್ನು ಹೊಂದಿದನು. ಆ ಆಶ್ರಮವು ಯತಿಗಳಿಂದಲೂ, ವಾಲಖಿಲ್ಯರಿಂದಲೂ ಮತ್ತು ಮುನಿಗಣಗಳಿಂದಲೂ ತುಂಬಿದ್ದಿತು.
ಅಗ್ನ್ಯಗಾರೈಶ್ಚ ಬಹುಭಿಃ ಪುಷ್ಪಸಂಸ್ತರಸಂಸ್ತೃತಮ್ |
ಮಹಾಕಚ್ಛೈರ್ಬೃಹದ್ಭಿಶ್ಚ ವಿಭ್ರಾಜಿತಮತೀವ ಚ |
ಮಾಲಿನೀಮಭಿತೋ ರಾಜನ್ ನದೀಂ ಪುಣ್ಯಾಂ ಸುಖೋದಕಾಮ್ ॥

ಪವಿತ್ರವಾದ ಮತ್ತು ಸುಖೋದಕದಿಂದ ಕೂಡಿದ್ದ ಮಾಲಿನೀ ನದಿಯಿಂದ ಸುತ್ತುವರಿಯಲ್ಪಟ್ಟ ಆ ಆಶ್ರಮವು ಅನೇಕ ಅಗ್ನಿಶಾಲೆಗಳಿಂದ ಕೂಡಿದ್ದಿತು. ಪುಷ್ಪಮಂಡಲಗಳಿಂದ ಎಲ್ಲಾ ಕಡೆಯಲ್ಲಿಯೂ ತುಂಬಿದ್ದಿತು. ನದಿಯ ತೀರದಲ್ಲಿ ಬೆಳೆದ ಎತ್ತರವಾದ ಮರಗಳಿಂದ ಶೋಭಿಸುತ್ತಿತ್ತು.
ನೈಕಪಕ್ಷಿಗಣಾಕೀರ್ಣಾಂ ತಪೋವನಮನೋರಮಾಮ್ |
ತತ್ರ ವ್ಯಾಲಮೃಗಾನ್ ಸೌಮ್ಯಾನ್ ಪಶ್ಯನ್ ಪ್ರೀತಿಮವಾಪ ಸಃ ॥22॥
ಆ ನದಿಯ ಮನೋಹರವಾದ ತಪೋವನದಿಂದಲೂ ಅನೇಕ ವಿಧವಾದ ಪಕ್ಷಿಗಳ ಸಮೂಹದಿಂದಲೂ ತುಂಬಿದ್ದಿತು. ಅಲ್ಲಿ ದುಷ್ಟ ಗಜಗಳೂ ಶಾಂತವಾಗಿರುವುದನ್ನು ಕಂಡು ರಾಜನು ಸಂತೋಷಪಟ್ಟನು.
ತಂ ಚಾಪ್ರತಿರಥಃ ಶ್ರೀಮಾನಾಶ್ರಮಂ ಪ್ರತ್ಯಪದ್ಯತ |
ದೇವಲೋಕಪ್ರತೀಕಾಶಂ ಸರ್ವತಃ ಸುಮನೋಹರಮ್ ॥23॥
ಸಮಾನವಾದ ಪ್ರತಿರಥನಿಲ್ಲದೇ ಅಸದೃಶನಾದ ಆ ರಾಜನು ಎಲ್ಲಾ ಕಡೆಯಲ್ಲಿಯೂ ಮನೋಹರವಾಗಿ ದೇವಲೋಕದಂತಿರುವ ಆ ಆಶ್ರಮವನ್ನು ಸಮೀಪಿಸಿದನು.
ನದೀಂ ಚಾಶ್ರಮಸಂಶ್ಲಿಷ್ಟಾಂ ಪುಣ್ಯತೋಯಾಂ ದದರ್ಶ ಸಃ |
ಸರ್ವಪ್ರಾಣಭೃತಾಂ ತತ್ರ ಜನನೀಮಿವ ಧಿಷ್ಠಿತಾಮ್ ॥24॥
ಆಶ್ರಮದ ಪಕ್ಕದಲ್ಲಿಯೇ ಪುಣ್ಯವಾದ ನೀರಿನಿಂದ ಹರಿಯುತ್ತಿದ್ದ ಅಲ್ಲಿದ್ದ ಎಲ್ಲಾ ಪ್ರಾಣಿಗಳಿಗೂ ತಾಯಿಯಂತಿದ್ದ ಮಾಲಿನೀನದಿಯನ್ನು ನೋಡಿದನು.
ಸಚಕ್ರವಾಕಪುಲಿನಾಂ ಪುಷ್ಪಫೇನಪ್ರವಾಹಿನೀಮ್ |
ಸಕಿನ್ನರಗಣಾವಾಸಾಂ ವಾನರರ್ಕ್ಷನಿಷೇವಿತಾಮ್ ॥25॥
ಆ ಮಾಲಿನೀನದಿಯ ತೀರದ ಮರಳುಗಳು ಚಕ್ರವಾಕ ಪಕ್ಷಿಗಳಿಂದ ಕೂಡಿದ್ದವು. ಹರಿಯುವ ನದಿಯ ನೊರೆಯು ಪುಷ್ಪಗಳಂತೆ ಕಾಣುತ್ತಿದ್ದಿತು. ಆ ನದಿಯು ಕಿನ್ನರಗಣದಿಂದಲೂ, ವಾನರ ಮತ್ತು ಋಕ್ಷಗಳಿಂದಲೂ ಸೇವಿಸಲ್ಪಡುತ್ತಿತ್ತು.
ಪುಣ್ಯಸ್ವಾಧ್ಯಾಯಸಂಘುಷ್ಟಾಂ ಪುಲಿನೈರುಪಶೋಭಿತಾಮ್ |
ಮತ್ತವಾರಣಶಾರ್ದೂಲಭುಜಗೇಂದ್ರನಿಷೇವಿತಾಮ್ ॥26॥
ಆ ನದಿಯ ಬಳಿ ಪವಿತ್ರವಾದ ಸ್ವಾಧ್ಯಾಯದ ಶಬ್ದವು ಕೇಳಿಬರುತ್ತಿದ್ದಿತು. ತೀರದ ಮರಳು ಸುಂದರವಾಗಿದ್ದಿತು. ಆ ನದಿಯು ಮದಿಸಿದ ಗಜಗಳಿಂದಲೂ, ಶಾರ್ದೂಲಗಳಿಂದಲೂ ಮತ್ತು ಸರ್ಪಗಳಿಂದಲೂ ನಿಷೇವಿತವಾಗಿದ್ದಿತು.
ತಸ್ಯಾಸ್ತೀರೇ ಭಗವತಃ ಕಾಶ್ಯಪಸ್ಯ ಮಹಾತ್ಮನಃ |
ಆಶ್ರಮಪ್ರವರಂ ರಮ್ಯಂ ಮಹರ್ಷಿಗಣಸೇವಿತಮ್ ॥27॥
ಆ ನದಿಯ ತೀರದಲ್ಲಿ ಪೂಜ್ಯರೂ, ಮಹಾತ್ಮರೂ ಆದ ಕಾಶ್ಯಪರ, ರಮ್ಯವಾದ, ಮಹರ್ಷಿಗಣಸೇವಿತವಾದ ಆಶ್ರಮವಿದ್ದಿತು.
ನದೀಮಾಶ್ರಮಸಂಬದ್ಧಾಂ ದೃಷ್ಟ್ವಾಽಽಶ್ರಮಪದಂ ತಥಾ |
ಚಕಾರಾಭಿಪ್ರವೇಶಾಯ ಮತಿಂ ಸ ನೃಪತಿಸ್ತದಾ ॥28॥
ಆ ಆಶ್ರಮವನ್ನು ಹೊಂದಿಕೊಂಡು ಹರಿಯುತ್ತಿದ್ದ ನದಿಯನ್ನು ಮತ್ತು ಆಶ್ರಮವನ್ನು ನೋಡಿ, ಆ ರಾಜನು ಆಶ್ರಮವನ್ನು ಪ್ರವೇಶಿಸಲು ನಿರ್ಧರಿಸಿದನು.
ಅಲಂಕೃತಂ ದ್ವೀಪವತ್ಯಾ ಮಾಲಿನ್ಯಾ ರಮ್ಯತೀರಯಾ |
ನರನಾರಾಯಣಸ್ಥಾನಂ ಗಂಗಯೇವೋಪಶೋಭಿತಮ್ |
ಮತ್ತಬರ್ಹಿಣಸಂಘುಷ್ಟಂ ಪ್ರವಿವೇಶ ತದಾಶ್ರಮಮ್ ॥29॥
ಗಂಗೆಯಿಂದ ನರನಾರಾಯಣಾಶ್ರಮವು ಶೋಭಿಸಿದಂತೆ, ಸುಂದರವಾದ ತೀರವುಳ್ಳ ದ್ವೀಪವತಿಯಾದ ಮಾಲಿನೀನದಿಯಿಂದ ಅಲಂಕೃತವಾದ, ನವಿಲುಗಳ ಘೋಷದಿಂದ ತುಂಬಿದ ಆ ಆಶ್ರಮವನ್ನು ರಾಜನು ಪ್ರವೇಶಿಸಿದನು.
ತತ್ರ ಚೈತ್ರರಥಪ್ರಖ್ಯಂ ಸಮುಪೇತ್ಯ ನರರ್ಷಭಃ |
ಅತೀವ ಗುಣಸಂಪನ್ನಮನಿರ್ದೇಶ್ಯಂ ಚ ವರ್ಚಸಾ |
ಮಹರ್ಷಿಂ ಕಾಶ್ಯಪಂ ದ್ರಷ್ಟುಮಥ ಕಣ್ವಂ ತಪೋಧನಮ್ ॥30॥
ಧ್ವಜಿನೀಮಶ್ವಸಂಬಾಧಾಂ ಪದಾತಿಗಜಸಂಕುಲಾಮ್ |
ಅವಸ್ಥಾಪ್ಯ ವನದ್ವಾರಿ ಸೇನಾಮಿದಮುವಾಚ ಸಃ ॥31॥
ರಾಜನು ಚೈತ್ರರಥದಂತೆ ಎತ್ತರವಾಗಿದ್ದ ಆಶ್ರಮವನ್ನು ತಲುಪಿ, ಬಹಳ ಗುಣಸಂಪನ್ನನೂ, ತಿಳಿಯಲು ಅಸಾಧ್ಯವಾದ ವರ್ಚಸ್ಸುಳ್ಳವನೂ ಆದ ಮಹರ್ಷಿ ಕಾಶ್ಯಪರನ್ನು ಹಾಗೆಯೇ ತಪೋಧನರಾದ ಕಣ್ವರನ್ನು ನೋಡಲು, ತನ್ನ ಕುದುರೆಗಳಿಂದ ಕೂಡಿದ್ದ ಸೈನ್ಯವನ್ನು, ಪದಾತಿಗಳನ್ನು ಮತ್ತು ಗಜಗಳನ್ನು ಕಾಡನ್ನು ಪ್ರವೇಶಿಸುವ ಸ್ಥಾನದಲ್ಲಿಯೇ ಇಟ್ಟು ಸೈನ್ಯವನ್ನು ಕುರಿತು ಹೀಗೆ ಹೇಳಿದನು. ಕಾಶ್ಯಪ ಗೋತ್ರ, ಕಣ್ವನಾಮ ಎಂದು ತೋರುತ್ತದೆ.
ಮುನಿಂ ವಿರಜಸಂ ದ್ರಷ್ಟುಂ ಗಮಿಷ್ಯಾಮಿ ತಪೋಧನಮ್ |
ಕಾಶ್ಯಪಂ ಸ್ಥೀಯತಾಮತ್ರ ಯಾವದಾಗಮನಂ ಮಮ ॥32॥
ಪರಿಶುದ್ಧರೂ, ತಪೋಧನರೂ ಆದ ಕಾಶ್ಯಪರನ್ನು ನೋಡಲು ಹೋಗುತ್ತಿದ್ದೇನೆ. ನಾನು ಹಿಂದಿರುಗುವವರೆಗೂ ನೀವು ಇಲ್ಲಿಯೇ ನಿಲ್ಲಿ.
ತದ್ವನಂ ನಂದನಪ್ರಖ್ಯಮಾಸಾದ್ಯ ಮನುಜೇಶ್ವರಃ |
ಕ್ಷುತ್ಪಿಪಾಸೇ ಜಹೌ ರಾಜಾ ಮುದಂ ಚಾವಾಪ ಪುಷ್ಕಲಾಮ್ ॥33॥
ನಂದನವನಕ್ಕೆ ಸದೃಶವಾದ ಆ ಆಶ್ರಮ ಸ್ಥಾನವನ್ನು ತಲುಪಿದ ರಾಜನಿಗೆ ಹಸಿವು, ಬಾಯಾರಿಕೆಗಳು ಮಾಯವಾದವು. ಅವನು

ಮನಸ್ಸಿನಲ್ಲಿ ಬಹಳ ಸಂತೋಷವನ್ನು ಹೊಂದಿದನು.
ಸಾಮಾತ್ಯೋ ರಾಜಲಿಂಗಾನಿ ಸೋಪನೀಯ ನರಾಧಿಪಃ |
ಪುರೋಹಿತಸಹಾಯಶ್ಚ ಜಗಾಮಾಶ್ರಮಮುತ್ತಮಮ್ ॥34॥
ಅವನು ಮತ್ತು ಅವನ ಅಮಾತ್ಯರು ರಾಜಚಿಹ್ನೆಗಳನ್ನು ತೊರೆದ ಮೇಲೆ, ರಾಜನು ಪುರೋಹಿತನನ್ನು ಮುಂದೆ ಮಾಡಿಕೊಂಡು ಆಶ್ರಮವನ್ನು ಪ್ರವೇಶಿಸಿದನು.
ದಿದೃಕ್ಷುಸ್ತತ್ರ ತಮೃಷಿಂ ತಪೋರಾಶಿಮಥಾವ್ಯಯಮ್ |
ಬ್ರಹ್ಮಲೋಕಪ್ರತೀಕಾಶಮಾಶ್ರಮಂ ಸೋಽಭಿವೀಕ್ಷ್ಯ ಹ ॥35॥
ಷಟ್ಪದೋದ್ಗೀತಸಂಘುಷ್ಟಂ ನಾನಾದ್ವಿಜಗಣಾಯುತಮ್ |
ವಿಸ್ಮಯೋತ್ಫುಲ್ಲನಯನೋ ರಾಜಾ ಪ್ರೀತೋ ಬಭೂವ ಹ ॥36॥
ಅಲ್ಲಿ ತಪೋರಾಶಿಯೂ, ಶಾಶ್ವತನೂ ಆದ ಕಾಶ್ಯಪರನ್ನು ನೋಡಲು ಬಯಸಿದವನಾಗಿ, ದುಂಬಿಗಳ ಝೇಂಕಾರದಿಂದ ಕೂಡಿದ ನಾನಾ ಪಕ್ಷಿಗಳ ಗಣದಿಂದ ಯುತವಾದ ಬ್ರಹ್ಮಲೋಕದಂತಿರುವ ಆ ಆಶ್ರಮವನ್ನು ನೋಡಿ ಅರಳಿದ ಕಣ್ಣುಳ್ಳವನಾಗಿ ರಾಜನು ಸಂತೋಷಗೊಂಡನು.
ಋಚೋ ಬಹ್ವೃಚಮುಖ್ಯೈಶ್ಚ ಪ್ರೇರ್ಯಮಾಣಾಃ ಪದಕ್ರಮೈಃ |
ಶುಶ್ರಾವ ಮನುಜವ್ಯಾಘ್ರೋ ವಿತತೇಷ್ವಿಹ ಕರ್ಮಸು ॥37॥
ಆ ರಾಜನು ವೈದಿಕ ಕರ್ಮಗಳು ಅಲ್ಲಿ ಬೆಳೆಯುತ್ತಿರುವಾಗ ಋಗ್ವೇದಿಗಳು ಪದಕ್ರಮಪುರಸ್ಸರವಾಗಿ ಹೇಳುತ್ತಿದ್ದ ಋಗ್ವೇದದ ಮಂತ್ರಗಳನ್ನು ಕೇಳಿದನು.
ಯಜ್ಞವಿದ್ಯಾಂಗವಿದ್ಭಿಶ್ಚ ಯಜುರ್ವಿದ್ಭಿಶ್ಚ ಶೋಭಿತಮ್ |
ಮಧುರೈಃ ಸಾಮಗೀತೈಶ್ಚ ತಚ್ಛಿರೋಭಿಶ್ಚ ಶೋಭಿತಮ್ ॥38॥
ಆ ಆಶ್ರಮವು ಯಜ್ಞವಿದ್ಯೆಯನ್ನು ಮತ್ತು ಯಜ್ಞಗಳ ಅಂಗವಿದ್ಯೆಯನ್ನು ತಿಳಿದ ಯುಜುರ್ವೇದಗಳಿಂದ ಶೋಭಿತವಾಗಿದ್ದಿತು. ಆ ಆಶ್ರಮವು ಮಧುರವಾದ ಸಾಮಗಾನದಿಂದಲೂ, ಸಾಮವೇದದ ಉಪನಿಷತ್ತು- ಗಳಿಂದಲೂ ಶೋಭಿತವಾಗಿದ್ದಿತು.
ಭಾರುಂಡಸಾಮಗೀತಾಭಿಸ್ತಚ್ಛಿರೋಭಿರಥೋದ್ಗತೈಃ |
ಯತಾತ್ಮಭಿಃ ಸುನಿಯತೈಃ ಶುಶುಭೇ ಸ ತದಾಶ್ರಮಃ ॥39॥
ಭಾರುಂಡ ಎಂಬ ಸಾಮಗಾನದ ಪ್ರಭೇದದಿಂದಲೂ ಹಾಗೆಯೇ ಹೊರಹೊಮ್ಮಿದ ಸಾಮವೇದದ ಉಪನಿಷತ್ತುಗಳಿಂದಲೂ, ನಿಯಮವನ್ನು ಧರಿಸಿದ ಮಹಾತ್ಮರಿಂದಲೂ ಕೂಡಿದ ಆ ಆಶ್ರಮವು ಶೋಭಿಸುತ್ತಿತ್ತು.
ಅಥರ್ವದೇವಪ್ರವರಾಃ ಪೂಗಯಜ್ಞಿಯಸಾಮಗಾಃ |
ಸಂಹಿತಾಮೀರಯಂತಿ ಸ್ಮ ಪದಕ್ರಮಯುತಾಂ ತು ತೇ ॥40॥
ಅಥರ್ವವೇದದಲ್ಲಿ ನಿಷ್ಣಾತರಾದವರು ಮತ್ತು ಸಾಮೂಹಿಕ ಯಜ್ಞದ ಸಾಮಗಾನದಲ್ಲಿ ಪರಿಣಿತರಾದವರು ತಮ್ಮ ತಮ್ಮ ಸಂಹಿತೆಗಳನ್ನು ಪದಕ್ರಮಪುರಸ್ಸರವಾಗಿ ಅಲ್ಲಿ ಹೇಳುತ್ತಿದ್ದರು.
ಶಬ್ದಸಂಸ್ಕಾರಸಂಯುಕ್ತೈರ್ಬ್ರುವದ್ಭಿಶ್ಚಾಪರೈರ್ದ್ವಿಜೈಃ |
ಯಜ್ಞಸಂಸ್ಕಾರವಿದ್ಭಿಶ್ಚ ಕ್ರಮಶಿಕ್ಷಾವಿಶಾರದೈಃ ॥41॥
ಅಲ್ಲಿ ಕೆಲವು ಬ್ರಾಹ್ಮಣರು ಶಬ್ದಗಳ ಪ್ರಕೃತಿಪ್ರತ್ಯಯ ಸಂಸ್ಕಾರವನ್ನು ಹೇಳುತ್ತಿದ್ದರು. ಇನ್ನೂ ಕೆಲವರು ಯಜ್ಞದ ಸಂಸ್ಕಾರಗಳನ್ನು ಹೇಳುತ್ತಿದ್ದರು. ಇನ್ನೂ ಕೆಲವರು ಕ್ರಮಾದಿವಿಕಾರಗಳನ್ನೂ, ಶಿಕ್ಷಾದಿ ಅಂಗಗಳನ್ನೂ ತಿಳಿದವರಾಗಿದ್ದರು.
ದ್ರವ್ಯಕರ್ಮಗುಣಜ್ಞೈಶ್ಚ ಕಾರ್ಯಕಾರಣವೇದಿಭಿಃ |
ನ್ಯಾಯತತ್ತ್ವಾರ್ಥವಿಜ್ಞಾನಸಂಪನ್ನೈರ್ವೇದಪರಾಗೈಃ ॥42॥
ಅಲ್ಲಿ ಕೆಲವರು ದ್ರವ್ಯಕರ್ಮಗುಣಗಳನ್ನೂ, ಕಾರ್ಯಕಾರಣಭಾವವನ್ನೂ ತಿಳಿದು, ನ್ಯಾಯತತತ್ವಾರ್ಥವನ್ನು ಚೆನ್ನಾಗಿ ತಿಳಿದವರಾಗಿ ವೇದಪಾರಂಗತ- ರಾಗಿದ್ದರು.
ನಾನಾವಾಕ್ಯಸಮಾಹಾರತತ್ವಜ್ಞಾನವಿಶಾರದೈಃ |
ವೈಶೇಷಿಕಾರ್ಥವಿದ್ಭಿಶ್ಚ ಮೋಕ್ಷಧರ್ಮವಿಶಾರದೈಃ ॥43॥
ಅನೇಕ ವಾಕ್ಯಗಳನ್ನು ಕೂಡಿಸಿ ಅದರ ಅರ್ಥವನ್ನು ಹೇಳುವ ವಿಶಾರದರೂ, ವೈಶೇಷಿಕಾದಿ ಮತಗಳ ಗುಣದೋಷಗಳನ್ನು ತಿಳಿದವರೂ, ಮೋಕ್ಷಧರ್ಮ ವಿಶಾರದರೂ ಅಲ್ಲಿದ್ದರು.
ಸ್ಥಾಪನಾಕ್ಷೇಪಸಿದ್ಧಾಂತಪರಮಾರ್ಥಜ್ಞತಾಂ ಗತೈಃ |
ಶಬ್ದಚ್ಛಂದೋನಿರುಕ್ತಜ್ಞೈಃ ಕಾಲಜ್ಞಾನವಿಶಾರದೈಃ॥44॥
ಕೆಲವರು ತಮ್ಮ ಪಕ್ಷವನ್ನು ಸ್ಥಾಪನೆ ಮಾಡಿ ಪ್ರತಿಪಕ್ಷವನ್ನು ನಿರಾಕರಣೆ ಮಾಡುವುದರಲ್ಲಿ ಪರಮ ನಿಪುಣರಾಗಿದ್ದರು. ಶಬ್ದಶಾಸ್ತ್ರವಾದ ವ್ಯಾಕರಣವನ್ನೂ, ಛಂದಶಾಸ್ತ್ರವನ್ನೂ, ನಿರುಕ್ತ ಶಾಸ್ತ್ರವನ್ನೂ, ಜ್ಯೋತಿಷ್ಯ ಶಾಸ್ತ್ರವನ್ನೂ ಅಧ್ಯಯನ ಮಾಡಿ ವಿಶಾರದರಾದವರು ಅಲ್ಲಿದ್ದರು.
ಜಲ್ಪವಾದವಿತಂಡಜ್ಞೈರ್ವ್ಯಾಸಗ್ರಂಥಸಮಾಶ್ರಿತೈಃ |
ನಾನಾಶಾಸ್ತ್ರೇಷು ಮುಖ್ಯೈಶ್ಚ ಶುಶ್ರಾವ ಸ್ವನಮೀರಿತಮ್ ॥45॥
ವೇದವ್ಯಾಸರ ಗ್ರಂಥಗಳನ್ನು ಆಧರಿಸಿದ ವಾದ, ಜಲ್ಪ ಮತ್ತು ವಿತಂಡಗಳಲ್ಲಿ ನಿಪುಣರಾದವರು ಅಲ್ಲಿದ್ದರು. ಅನೇಕ ಶಾಸ್ತ್ರಗಳಲ್ಲಿ ಪರಿಣತರಾದವರಲ್ಲಿ ಮುಖ್ಯರಾದವರ ಶಬ್ದಗಳನ್ನು ರಾಜನು ಕೇಳಿದನು.
ಲೋಕಾಯತಿಕಮುಖ್ಯೈಶ್ಚ ಸಮಂತಾದಭಿನಾದಿತಮ್ |

ತತ್ರ ತತ್ರ ಚ ವಿಪ್ರೇಂದ್ರಾನ್ ನಿಯತಾನ್ ಸಂಶಿತವ್ರತಾನ್ |
ಜಪಹೋಮರತಾನ್ ಸಿದ್ಧಾನ್ ದದರ್ಶ ಪರವೀರಹಾ ||46||
ಅಲ್ಲಿ ಶ್ರೇಷ್ಠರಾದ ಯತಿಗಳೂ ಕೂಡ ವಿಚಾರದಲ್ಲಿ ಭಾಗವಹಿಸುತ್ತಿದ್ದರು. ಆ ಶತ್ರುಸಂಹಾರಕನಾದ ರಾಜನು ಅಲ್ಲಲ್ಲಿ ಜಪಹೋಮರತರಾದ ಸಿದ್ಧರನ್ನೂ, ನಿಯಮ ಮತ್ತು ವ್ರತಧಾರಿಗಳಾದ ಬ್ರಾಹ್ಮಣರನ್ನೂ ನೋಡಿದನು.
ಆಸನಾನಿ ಪವಿತ್ರಾಣಿ ಪುಷ್ಪವಂತಿ ಮಹೀಪತಿಃ |
ಪ್ರಯತ್ನೋಪಹಿತಾನಿ ಸ್ಮ ದೃಷ್ಟ್ವಾ ವಿಸ್ಮಯಮಾಗಮತ್ ||47||
ಪುಷ್ಪಗಳಿಂದ ಪ್ರಯತ್ನಪೂರ್ವಕವಾಗಿ ಅಲಂಕರಿಸಲ್ಪಟ್ಟ ಪವಿತ್ರವಾದ ಆಸನಗಳನ್ನು ನೋಡಿ ರಾಜನು ವಿಸ್ಮಯಗೊಂಡನು.
ದೇವತಾಯತನಾನಾಂ ಚ ಪ್ರೇಕ್ಷ್ಯ ಪೂಜಾಂ ಕೃತಾಂ ದ್ವಿಜೈಃ |
ಬ್ರಹ್ಮಲೋಕಸ್ಥಮಾತ್ಮಾನಂ ಮೇನೇ ಸ ನೃಪಸತ್ತಮಃ ||48||
ತಂ ಕಾಶ್ಯಪತಪೋಗುಪ್ತಮಾಶ್ರಮಪ್ರವರಂ ಶುಭಮ್ |
ನಾತೃಪ್ಯತ್ ಪ್ರೇಕ್ಷಮಾಣೋ ವೈ ತಪೋವನಗುಣೈರ್ಯುತಮ್ ||49||
ದೇವಾಲಯಗಳಲ್ಲಿ ಬ್ರಾಹ್ಮಣರು ಪೂಜೆಯನ್ನು ಮಾಡಿರುವುದನ್ನು ಕಂಡು ರಾಜನು ತಾನು ಬ್ರಹ್ಮಲೋಕದಲ್ಲಿಯೇ ಇದ್ದೇನೆ ಎಂದು ಭಾವಿಸಿದನು. ರಾಜನು ತಪೋವನದ ಗುಣಗಳಿಂದ ಕೂಡಿದ ಕಾಶ್ಯಪರ ತಪಸ್ಸಿನಿಂದ ರಕ್ಷಿತವಾದ ಪವಿತ್ರವಾದ ಆ ಶ್ರೇಷ್ಠವಾದ ಆಶ್ರಮವನ್ನು ನೋಡಿ ತೃಪ್ತಿಯನ್ನೇ ಪಡೆಯಲಿಲ್ಲ.
ಸ ಕಾಶ್ಯಪಸ್ಯಾಯತನಂ ಮಹಾವ್ರತೈ -
ರ್ವೃತಂ ಸಮಂತಾದೃಷಿಭಿಸ್ತಪೋಧನೈಃ |
ವಿವೇಶ ಸಾಮಾತ್ಯಪುರೋಹಿತೋಽರಿಹಾ
ವಿವಿಕ್ತಮತ್ಯರ್ಥಮನೋಹರಂ ಶಿವಮ್ ||50||
ಅವನು ಏಕಾಂತ ದೇಶದಲ್ಲಿ ಅತ್ಯಂತ ಮನೋಹರವೂ ಮತ್ತು ಮಂಗಳವೂ ಆಗಿದ್ದ, ಎಲ್ಲಾ ಕಡೆಗಳಿಂದಲೂ ತಪೋಧನರಾದ ಮಹಾವ್ರತಗಳನ್ನು ಧರಿಸಿದ್ದ, ಋಷಿಗಳಿಂದ ಆವೃತವಾದ ಕಶ್ಯಪರ ಸ್ಥಾನವನ್ನು (ಪರ್ಣಶಾಲೆಯನ್ನು) ಅಮಾತ್ಯ ಮತ್ತು ಪುರೋಹಿತರ ಜೊತೆಯಲ್ಲಿ ಪ್ರವೇಶಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಡಶೀತಿತಮೋಽಧ್ಯಾಯಃ ||
|| ಸಂಭವಪರ್ವಣಿ ಚತುಸಿತ್ರಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ತಾರನೆಯ ಅಧ್ಯಾಯ ಮುಗಿಯಿತು.
*****

ಎಂಭತ್ತೇಳನೆಯ ಅಧ್ಯಾಯ
(ಆಶ್ರಮದಲ್ಲಿ ದುಷ್ಯಂತ ಶಕುಂತಲೆಯರ ಸಮಾಗಮ, ಪರಸ್ಪರ ಸಂಭಾಷಣೆ.)
ವೈಶಂಪಾಯನಃ
ತತೋ ಗತ್ವಾ ಮಹಾಬಾಹುರೇಕೋಽಮಾತ್ಯಾನ್ ವಿಸೃಜ್ಯ ಸಃ |
ನಾಪಶ್ಯದಾಶ್ರಮೇ ತಸ್ಮಿಂಸ್ತಮೃಷಿಂ ಸಂಶಿತವ್ರತಮ್ ||1||
ಅನಂತರ ಆ ಮಹಾಬಾಹುವಾದ ದುಷ್ಯಂತನು ಅಮಾತ್ಯರನ್ನು ಹಿಂದೆ ನಿಲ್ಲಿಸಿ ಒಬ್ಬನೇ ಆಶ್ರಮವನ್ನು ಪ್ರವೇಶಿಸಿ ನೋಡಿದಾಗ ವ್ರತಧಾರಿಗಳಾದ ಕಾಶ್ಯಪರು ಅಲ್ಲಿ ಕಾಣಲಿಲ್ಲ.
ಸೋಽಪಶ್ಯಮಾನಸ್ತಮೃಷಿಂ ಶೂನ್ಯಂ ದೃಷ್ಟ್ವಾ ತಮಾಶ್ರಮಮ್ |
ಉವಾಚ ಕೋಽತ್ರ ಇತ್ಯುಚ್ಚೈರ್ವನಂ ಸನ್ನಾದಯನ್ನಿವ ||2||
ಅವನು ಆಶ್ರಮದಲ್ಲಿ ಆ ಋಷಿಗಳನ್ನು ಕಾಣದೆ, ಆಶ್ರಮದ ಆ ಪ್ರದೇಶವು ನಿರ್ಜನವಾಗಿರುವುದನ್ನು ಗಮನಿಸಿ ಇಲ್ಲಿ ಯಾರಿದ್ದಾರೆ ಎಂದು ಗಟ್ಟಿಯಾಗಿ ಕಾಡೆಲ್ಲವೂ ಪ್ರತಿಧ್ವನಿಸುವಂತೆ ಕೇಳಿದನು.
ಶ್ರುತ್ವಾಽಥ ತಸ್ಯ ತಂ ಶಬ್ದಂ ಕನ್ಯಾ ಶ್ರೀರಿವ ರೂಪಿಣೀ |
ನಿಶ್ಚಕ್ರಾಮಾಶ್ರಮಾತ್ ತಸ್ಮಾದ್ ಯಥಾ ವಿದ್ಯುದ್ ಘನಾಂತರಾತ್ ||3||
ಅವನ ಆ ಶಬ್ದವನ್ನು ಕೇಳಿ ಲಕ್ಷ್ಮಿಯಂತೆ ಸೌಂದರ್ಯವತಿಯಾದ ಕನ್ಯೆಯು ಮೋಡದ ಮಧ್ಯದಿಂದ ಮಿಂಚು ಬಂದಂತೆ ಆ ಆಶ್ರಮದಿಂದ (ಪರ್ಣಶಾಲೆಯಿಂದ) ಹೊರಗೆ ಬಂದಳು.
ಸಾ ತಂ ದೃಷ್ಟ್ವೈವ ರಾಜಾನಂ ದುಷ್ಯಂತಮಸಿತೇಕ್ಷಣಾ |
ಸುವ್ರತಾಽಭ್ಯಾಗತಂ ತಂ ತು ಪೂಜ್ಯಂ ಪ್ರಾಪ್ತಮಥೇಶ್ವರಮ್ ||4||
ನೀಲಾಪಾಂಗವುಳ್ಳವಳೂ, ಒಳ್ಳೆಯ ವ್ರತವನ್ನು ಧರಿಸಿದವಳೂ ಆದ ಅವಳು ಅಭ್ಯಾಗತನಾದ ರಾಜನನ್ನು ನೋಡಿ ಅವನು ಪೂಜ್ಯನಾಗಿ ಆಶ್ರಮಕ್ಕೆ ಬಂದ ಪ್ರಭುವೆಂದು ಎಣಿಸಿದಳು.
ರೂಪಯೌವನಸಂಪನ್ನಾ ಶೀಲಾಚಾರವತೀ ಶುಭಾ |
ಸಾ ತಮಾಯತಪದ್ಮಾಕ್ಷಂ ವ್ಯೂಢೋರಸ್ಕಂ ಸುಸಂಹಿತಮ್ ||5||
ಸಿಂಹಸ್ಕಂಧಂ ದೀರ್ಘಬಾಹುಂ ಸರ್ವಲಕ್ಷಣಪೂಜಿತಮ್ |
ವಿಸ್ಪಷ್ಟಂ ಮಧುರಾಂ ವಾಚಂ ಸಾಽಬ್ರವೀಜ್ಜನಮೇಜಯ ||6||
ಎಲೈ ಜನಮೇಜಯನೇ, ರೂಪಯೌವನಸಂಪನ್ನಳೂ, ಶೀಲ ಮತ್ತು ಆಚಾರವಂತಳೂ, ಮಂಗಳಸ್ವರೂಪಳೂ ಆದ ಅವಳು

ಕಮಲದಳದಂತೆ ವಿಸ್ತಾರದ ಕಣ್ಣುಳ್ಳ, ವಿಸ್ತಾರವಾದ ಉರಸ್ಸುಳ್ಳ, ದೃಢವಾದ ದೇಹವನ್ನೂ ಸಿಂಹಸ್ಕಂಧವನ್ನೂ, ದೀರ್ಘಬಾಹುಗಳನ್ನೂ ಮತ್ತು ಒಳ್ಳೆಯ ಸರ್ವಲಕ್ಷಣಗಳನ್ನೂ ಹೊಂದಿದ್ದ ಅವನನ್ನು ಕುರಿತು ಮಧುರವಾದ ಮಾತುಗಳನ್ನು ಆಡಿದಳು.

ಸ್ವಾಗತಂ ತ ಇತಿ ಕ್ಷಿಪ್ರಮುಕತ್ವ ತಂ ಪ್ರತ್ಯಪೂಜಯತ್ |
ಆಸನೇನಾರ್ಚಯಿತ್ವಾಽಥ ಪಾದ್ಯಾರ್ಘ್ಯಾಚಮನೈಸ್ತಥಾ ॥7॥
ನಿನಗೆ ಸ್ವಾಗತ ಎಂದು ಬೇಗ ಹೇಳಿ ಅವನನ್ನು ಆಸನ, ಅರ್ಘ್ಯ, ಪಾದ್ಯ, ಆಚಮನಗಳಿಂದ ಪೂಜಿಸಿದಳು.
ಪಪ್ರಚ್ಛಾನಾಮಯಂ ರಾಜನ್ ಕುಶಲಂ ಚ ನರಾಧಿಪಮ್ |
ಯಥಾವದರ್ಚಯಿತ್ವಾ ಸಾ ಲಜ್ಜಯಾಽವನತಾನನಾ ॥8॥
ಉವಾಚ ಸ್ಮಯಮಾನೇವ ಕಿಂ ಕಾರ್ಯಂ ಕ್ರಿಯತಾಂ ಮಯಾ |
ಆಶ್ರಮಸ್ಯಾಭಿಗಮನೇ ಕಿಂ ತ್ವಂ ಕಾರ್ಯಂ ಚಿಕೀರ್ಷಸಿ ॥9॥
ಎಲೈ ರಾಜನೇ,ಅವಳು ರಾಜನ ಯೋಗಕ್ಷೇಮವನ್ನು ವಿಚಾರಿಸಿ, ಯಥಾಯೋಗ್ಯವಾಗಿ ಪೂಜಿಸಿ ಲಜ್ಜೆಯಿಂದ ತಲೆಯನ್ನು ತಗ್ಗಿಸಿ, ಆಶ್ರಮಕ್ಕೆ ಬಂದ ನಿನಗೆ ನಾನು ಏನನ್ನು ಮಾಡಲಿ? ನೀನು ಯಾವ ಉದ್ದೇಶದಿಂದ ಇಲ್ಲಿ ಬಂದಿರುವೆ ಎಂದು ಕೇಳಿದಳು.
ಕಸ್ತ್ವಮದ್ಯೇಹ ಸಂಪ್ರಾಪ್ತೋ ಮಹರ್ಷೇರಾಶ್ರಮಂ ಶುಭಮ್ |
ತಾಮಬ್ರವೀತ್ ತತೋ ರಾಜಾ ಕನ್ಯಾಂ ಮಧುರಭಾಷಿಣೀಮ್ ॥10॥
ದೃಷ್ಟ್ವಾ ಸರ್ವಾನವದ್ಯಾಂಗೀಂ ಯಥಾವತ್ ಪ್ರತಿಪೂಜಿತಃ |
ರಾಜರ್ಷೇರಸ್ಮಿ ಪುತ್ರೋಽಹಮಿಲಿಲಸ್ಯ ಮಹಾತ್ಮನಃ |
ದುಷ್ಯಂತ ಇತಿ ಮೇ ನಾಮ ಸತ್ಯಂ ಪುಷ್ಕರಲೋಚನೇ ॥11॥
ಈ ಮಹರ್ಷಿಯ ಶುಭವಾದ ಆಶ್ರಮಕ್ಕೆ ಬಂದ ನೀನು ಯಾರು ಎಂದು ಕೇಳಿದಳು. ಆಗ ಮಧುರವಾಗಿ ಮಾತನಾಡಿದ ನಿರ್ದುಷ್ಟವಾದ ಅವಯವಗಳಿಂದ ಕೂಡಿದ ಅವಳಿಂದ ಯಥಾಯೋಗ್ಯವಾಗಿ ಪೂಜಿಸಲ್ಪಟ್ಟ ರಾಜನು ಅವಳನ್ನು ನೋಡಿ ಹೀಗೆ ಮಾತನಾಡಿದನು. ಎಲೌ ಪದ್ಮನೇತ್ರೆಯೇ, ನಾನು ಮಹಾತ್ಮನಾದ ರಾಜರ್ಷಿಯಾದ ಇಲಿಲನ ಪುತ್ರ. ನನ್ನ ಹೆಸರು ದುಷ್ಯಂತ. ಇದು ಸತ್ಯ.
ಶಕುಂತಲಾ
ಸ್ವಾಗತಂ ತೇ ಮಹಾರಾಜ ಫಲಮೂಲೋದಕಂ ಚ ನಃ |
ಪ್ರತಿಗೃಹ್ಯೋಪಭುಂಕ್ಷ್ವ ತ್ವಂ ಕಿಂ ಚ ತೇ ಕರವಾಣ್ಯಹಮ್ ॥12॥
ಮಹಾರಾಜನೇ,ನಿನಗೆ ಸ್ವಾಗತ, ನಮ್ಮಲ್ಲಿರುವ ಫಲ, ಮೂಲ ಮತ್ತು ಉದಕಗಳನ್ನು ತೆಗೆದುಕೊಂಡು ಸೇವಿಸು. ನಾನು ನಿನಗೆ ಬೇರೆ ಏನು ಮಾಡಲಿ.
ದುಷ್ಯಂತಃ
ಆಗತೋಽಹಂ ಮಹಾಭಾಗೇ ಋಷಿಂ ಕಣ್ವಮುಪಾಸಿತಮ್ |
ಕ್ವ ಗತೋ ಭಗವಾನ್ ಭದ್ರೇ ತನ್ಮಮಾಚಕ್ಷ್ವ ಶೋಭನೇ ॥13॥
ಮಹಾನುಭಾವಳೇಮತ್ತು ಶೋಭನಳಾದವಳೇ, ನಾನು ಮಹರ್ಷಿಗಳಾದ ಕಣ್ವರನ್ನು ನೋಡಲು ಆಶ್ರಮಕ್ಕೆ ಬಂದೆ. ಪೂಜ್ಯರು ಎಲ್ಲಿ ಹೋಗಿದ್ದಾರೆ ಎಂದು ನನಗೆ ಹೇಳು.
ಶಕುಂತಲಾ
ಗತಃ ಪಿತಾ ಮೇ ಭಗವಾನ್ ಫಲಾನ್ಯಾಹರ್ತುಮಾಶ್ರಮಾತ್ |
ಮುಹೂರ್ತಂ ತ್ವಂ ಪ್ರತೀಕ್ಷಸ್ವ ದ್ರಕ್ಷ್ಯಸೇ ತಮಿಹಾಗತಮ್ ॥14॥
ನನ್ನ ತಂದೆಯಾದ ಪೂಜ್ಯರು ಹಣ್ಣುಗಳನ್ನು ತರಲು ಆಶ್ರಮದಿಂದ ಹೊರಗೆ ಹೋಗಿದ್ದಾರೆ. ಒಂದು ಮುಹೂರ್ತ ನಿರೀಕ್ಷಿಸು. ಇಲ್ಲಿಗೆ ಬಂದ ಅವರನ್ನು ನೀನು ನೋಡುವಿ.
ವೈಶಂಪಾಯನಃ
ಅಪಶ್ಯಮಾನಸ್ತಮೃಷಿಂ ತಥಾ ಚೋಕ್ತಸ್ತಯಾ ನೃಪಃ |
ತಾಂ ಚ ದೃಷ್ಟ್ವಾ ವರಾರೋಹಾಂ ಶ್ರೀಮತೀಂ ಚಾರುಹಾಸಿನೀಮ್ ॥
ವಿಭ್ರಾಜಮಾನಾಂ ವಪುಷಾ ತಪಸಾ ಚ ದಮೇನ ಚ |
ರೂಪಯೌವನಸಂಪನ್ನಾಮಿತ್ಯುವಾಚ ಮಹೀಪತಿಃ ॥16॥
ರಾಜನು ಆಶ್ರಮದಲ್ಲಿ ಋಷಿಗಳನ್ನು ಕಾಣದೆ ಅವಳಿಂದ ಹಾಗೆ ಹೇಳಲ್ಪಟ್ಟವನಾಗಿ ಸುಂದರಿಯೂ, ಕಾಂತಿಮತಿಯೂ, ಚಾರುಹಾಸಿನಿಯೂ, ರೂಪಯೌವನಸಂಪನ್ನಳೂ, ತಪಸ್ಸು ಮತ್ತು ಇಂದ್ರಿಯನಿಗ್ರಹದಿಂದ ಬೆಳಗುತ್ತಿರುವ ದೇಹವು ಇರುವವಳೂ ಆದ ಅವಳನ್ನು ಕುರಿತು ಹೀಗೆ ಮಾತನಾಡಿದನು.
ಕಾಽಸಿ ಕಸ್ಯಾಸಿ ಸುಶ್ರೋಣಿ ಕಿಮರ್ಥಂ ಚಾಗತಾ ವನಮ್ |
ಏವಂರೂಪಗುಣೋಪೇತಾ ಕುತಸ್ತ್ವಮಸಿ ಶೋಭನೇ ॥17॥
ಎಲೌ ಸುಂದರಿಯೇ, ನೀನು ಯಾರು? ಯಾರ ಮಗಳು? ಈ ವನಕ್ಕೆ ಏಕೆ ಬಂದಿದ್ದೀಯೆ? ನಿನಗೆ ಇಂತಹ ರೂಪಗುಣಗಳು ಎಲ್ಲಿಂದ ಬಂದವು?
ದರ್ಶನಾದೇವ ಹಿ ಶುಭೇ ತ್ವಯಾ ಮೇಪಹೃತಂ ಮನಃ |
ಸ್ಥಿತೋಽಸ್ಮ್ಯಮಿತಸೌಭಾಗ್ಯೇ ವಿವಕ್ಷುಶ್ಚಾಸ್ಮಿ ಕಿಂಚನ ॥18॥
ಎಲೌ ಶುಭಳಾದವಳೇ, ದರ್ಶನಮಾತ್ರದಿಂದ ನೀನು ನನ್ನ ಮನಸ್ಸನ್ನು ಅಪಹರಿಸಿರುವೆ. ನಾನು ಬಹಳ ಸಂಪತ್ತಿಗೆ ಒಡೆಯನಾಗಿದ್ದೇನೆ.

ನಿನ್ನ ಹತ್ತಿರ ಒಂದು ವಿಷಯವನ್ನು ಮಾತನಾಡಬೇಕಾಗಿದೆ.
ಶೃಣು ಮೇ ನಾಗನಾಸೋರು ವಚನಂ ಮತ್ತಕಾಶಿನಿ |
ರಾಜರ್ಷೇರನ್ವಯೇ ಜಾತಃ ಪೂರೋರಸ್ಮಿ ವಿಶೇಷತಃ ॥19॥
ಒಳ್ಳೆಯ ನಾಸಿಕವುಳ್ಳ ಸುಂದರಿಯೇ,ನನ್ನ ಮಾತನ್ನು ಕೇಳು. ನಾನು ರಾಜರ್ಷಿಗಳ ವಂಶದಲ್ಲಿ ವಿಶೇಷವಾಗಿ ಬಂದ ಪೂರುವಿನ ವಂಶದವನಾಗಿದ್ದೇನೆ.
ವೃಣೇ ತ್ವಾಮದ್ಯ ಸುಶ್ರೋಣಿ ದುಷ್ಮಂತೋ ವರವರ್ಣಿನಿ |
ಮನೋಽನ್ಯತ್ರ ಕ್ಷತ್ರಿಯಾಯಾಂ ನ ಮೇ ಜಾತು ಪ್ರವರ್ತತೇ ॥20॥
ಋಷಿಪುತ್ರೀಷು ಚಾನ್ಯಾಸು ನಾವರ್ಣಾಸು ಪರಾಸು ವಾ |
ತಸ್ಮಾತ್ ಪ್ರಬ್ರೂಹಿ ಚಾತ್ಮಾನಂ ವಿದ್ಧಿ ಮಾಂ ಕಲಭಾಷಿಣಿ ॥21॥
ಸುಂದರಿಯೇ, ನನ್ನ ಹೆಸರು ದುಷ್ಮಂತ, ನಾನು ಈ ದಿನ ನಿನ್ನನ್ನು ವರಿಸುತ್ತೇನೆ. ಕ್ಷತ್ರಿಯ ಸ್ತ್ರೀಯನ್ನು ಬಿಟ್ಟು ಬೇರೆ ಕಡೆಗೆ ನನ್ನ ಮನಸ್ಸು ಎಂದೂ ಹೋಗುವುದಿಲ್ಲ. ಋಷಿಪುತ್ರಿಯರಲ್ಲಾಗಲೀ, ವರ್ಣಬಾಹಿರ ಸ್ತ್ರೀಯರಲ್ಲಾಗಲೀ ನನ್ನ ಮನಸ್ಸು ಎಂದೂ ಹೋಗುವುದಿಲ್ಲ. ಆದ್ದರಿಂದ ಕಲಭಾಷಿಣಿಯಾದ ಸುಂದರಿಯೇ, ನೀನು ಯಾರು ಎಂದು ಹೇಳಿ ನನ್ನ ಅಭಿಪ್ರಾಯವನ್ನು ಮನಸ್ಸಿಗೆ ತಂದುಕೋ.
ತಸ್ಯ ಮೇ ತ್ವಯಾ ಭಾವೋಽಸ್ತಿ ಕ್ಷತ್ರಿಯಾ ಹ್ಯಸಿ ಕಾ ವದ |
ನ ಹಿ ಮೇ ಭೀರು ವಿಪ್ರಾಯಾಂ ಮನಃ ಪ್ರಸಹತೇ ಗತಿಮ್ ॥22॥
ಅಂತಹ ನನಗೆ ನಿನ್ನಲ್ಲಿ ಪ್ರೀತಿಯುಂಟಾಗಿದೆ. ನೀನೇನಾದರೂ ಕ್ಷತ್ರಿಯಳೇ, ಅದನ್ನು ತಿಳಿಸು. ಭೀರುವೆ, ವಿಪ್ರಕನ್ಯೆಯಲ್ಲಿ ನನ್ನ ಮನಸ್ಸು ಎಂದೂ ಹೋಗುವುದಿಲ್ಲ.
ಭಜೇ ತ್ವಾಮಾಯತಾಪಾಂಗೇ ಭಕ್ತಂ ಭಜಿತುಮರ್ಹಸಿ |
ಭುಂಕ್ಷ್ವ ರಾಜ್ಯಂ ವಿಶಾಲಾಕ್ಷಿ ಬುದ್ಧಿಂ ಮಾ ತ್ವನ್ಯಥಾ ಕೃಥಾಃ ॥23॥
ವಿಶಾಲ ನೇತ್ರೆಯೇ, ನಾನು ನಿನ್ನಲ್ಲಿ ಅನುರಾಗವುಳ್ಳವನಾಗಿದ್ದೇನೆ. ನೀನು ನನ್ನನ್ನು ಸ್ವೀಕರಿಸಬೇಕು. ವಿಶಾಲಾಕ್ಷಿಯೇ, ನೀನು ನನ್ನ ರಾಜ್ಯದ ಭೋಗವನ್ನು ಅನುಭವಿಸು. ಬೇರೆ ರೀತಿಯಲ್ಲಿ ಚಿಂತಿಸಬೇಡ.
ವೈಶಂಪಾಯನಃ
ಏವಮುಕ್ತಾ ತದಾ ಕನ್ಯಾ ಏಕಾಕೀ ಸಾ ತಮಾಶ್ರಮೇ |
ಉವಾಚ ವಸತೀ ವಾಕ್ಯಮಿದಂ ಸುಮಧುರಾಕ್ಷರಮ್ ॥24॥
ಹೀಗೆ ಹೇಳಲ್ಪಟ್ಟ ಆ ಕನ್ಯೆಯು ಏಕಾಕಿಯಾಗಿ ಆಶ್ರಮದಲ್ಲಿ ವಾಸಮಾಡುತ್ತಿದ್ದವಳಾಗಿ ಮಧುರಾಕ್ಷರಗಳಿಂದ ಕೂಡಿದ ಈ ಮಾತುಗಳನ್ನು ಆಡಿದಳು.
ಶಕುಂತಲಾ
ಕಣ್ವಸ್ಯಾಹಂ ಭಗವತೋ ದುಷ್ಮಂತ ದುಹಿತಾ ಮತಾ |
ತಪಸ್ವಿನೋ ಧೃತಿಮತೋ ಧರ್ಮಜ್ಞಸ್ಯ ಯಶಸ್ವಿನಃ ॥25॥
ಎಲೈ ದುಷ್ಮಂತನೇ, ನಾನು ತಪಸ್ವಿಗಳೂ, ಧೈರ್ಯಶಾಲಿಗಳೂ, ಧರ್ಮಜ್ಞರೂ, ಕೀರ್ತಿವಂತರೂ, ಪೂಜ್ಯರೂ ಆದ ಕಣ್ವರ ಮಗಳು ಎಂದು ಪ್ರಸಿದ್ಧ.
ಅಸ್ವತಂತ್ರಾಽಸ್ಮಿ ರಾಜೇಂದ್ರ ಕಾಶ್ಯಪೋ ಮೇ ಗುರುಃ ಪಿತಾ |
ತಮೇವ ಪ್ರಾರ್ಥಯ ಸ್ವಾರ್ಥಂ ನಾಯುಕ್ತಂ ಕರ್ತುಮರ್ಹಸಿ ॥26॥
ರಾಜೇಂದ್ರನೇ, ನಾನು ಪರತಂತ್ರಳು. ಕಾಶ್ಯಪರು ನನ್ನ ತಂದೆ ಮತ್ತು ಗುರು. ನಿನ್ನ ಸ್ವಾರ್ಥವನ್ನು ಅವರಲ್ಲಿಯೇ ಪ್ರಾರ್ಥಿಸು. ಅಯುಕ್ತವಾದ ಏನನ್ನೂ ಆಚರಿಸಬೇಡ.
ದುಷ್ಮಂತಃ
ಊರ್ಧ್ವರೇತಾ ಮಹಾಭಾಗೋ ಭಗವಾಂಲ್ಲೋಕಪೂಜಿತಃ |
ಚಲೇದ್ಧಿ ಚಿತ್ತಂ ಧರ್ಮಾತ್ ತು ನ ಚಲೇತ್ ಸಂಶಿತವ್ರತಃ ॥27॥
ಕಥಂ ತ್ವಂ ತಸ್ಯ ದುಹಿತಾ ಸಂಭೂತಾ ವರವರ್ಣಿನೀ |
ಸಂಶಯೋ ಮೇ ಮಹಾನತ್ರ ಸತ್ಯಂ ವಕ್ತುಮಿಹಾರ್ಹಸಿ ॥28॥
ಎಲೌ ಸುಂದರಿಯೇ, ಮಹಾನುಭಾವರಾದ ಲೋಕಪೂಜ್ಯರಾದ ಕಶ್ಯಪರು ಊರ್ಧ್ವರೇತಸ್ಕರು ಎಂದು ಪ್ರಸಿದ್ಧವಾಗಿದೆ. ಮನಸ್ಸು ಒಂದು ಪುಣ್ಯದಿಂದ ಇನ್ನೊಂದು ಪುಣ್ಯದ ಕಡೆಗೆ ಚಲಿಸಬಹುದು, ಆದರೆ ಕಾಶ್ಯಪರ ವ್ರತವು ಎಂದೂ ಚಲಿಸುವುದಿಲ್ಲ. ನೀನು ಹೇಗೆ ಅವರ ಮಗಳಾಗಿ ಜನಿಸಿದೆ? ಈ ವಿಷಯದಲ್ಲಿ ನನಗೆ ಬಹಳ ಸಂಶಯವಿದೆ. ಸತ್ಯವನ್ನು ಹೇಳು.
ಶಕುಂತಲಾ
ಯಥಾಽಯಮಾಗಮೋ ಮಹ್ಯಂ ಯಥಾ ಚೇದಮಭೂತ್ ಪುರಾ |
ಶೃಣು ರಾಜನ್ ಯಥಾ ತತ್ ತ್ವಂ ಯಥಾಽಸ್ಮಿ ದುಹಿತಾ ಮುನೇಃ ॥
ನಾನು ಇಲ್ಲಿಗೆ ಹೇಗೆ ಬಂದೆ. ಈ ಘಟನೆಯು ಹಿಂದೆ ಹೇಗೆ ನಡೆಯಿತು, ನಾನು ಹೇಗೆ ಋಷಿಗಳಿಗೆ ಮಗಳಾಗಿದ್ದೇನೆ, ಎಲ್ಲವನ್ನೂ ನಿನಗೆ ಯಥಾರ್ಥವಾಗಿ ಹೇಳುತ್ತೇನೆ. ರಾಜನೇ ಅದನ್ನು ಕೇಳು.
ಅನ್ಯಥಾ ಸಂತಮಾತ್ಮಾನಮನ್ಯಥಾ ಸತ್ಸು ಭಾಷತೇ |
ಸ ಪಾಪೇನಾವೃತೋ ಮೂರ್ಖಸ್ತೇನ ಆತ್ಮಾಪಹಾರಕಃ ॥30॥

ಯಾವನು ತಾನು ಬೇರೆ ರೀತಿಯಾಗಿದ್ದು ಸಜ್ಜನರಲ್ಲಿ ಬೇರೆ ರೀತಿಯಾಗಿ ಹೇಳುತ್ತಾನೆಯೋ, ಆ ಮೂರ್ಖನು ಪಾಪವನ್ನು ಸಂಪಾದಿಸಿ ಆತ್ಮಘಾತುಕ ಎನಿಸುತ್ತಾನೆ.
ಋಷಿಃ ಕಶ್ಚಿದಿಹಾಗಮ್ಯ ಮಮ ಜನ್ಮಾಭ್ಯಚೋದಯತ್ |
ಊರ್ಧ್ವರೇತಾ ಯಥಾಸಿ ತ್ವಂ ಕುತಸ್ತ್ಯೇಯಂ ಶಕುಂತಲಾ |
ಪುತ್ರೀ ತ್ವತ್ತಃ ಕಥಂ ಜಾತಾ ತತ್ವಂ ಮೇ ಬ್ರೂಹಿ ಕಾಶ್ಯಪ ॥31॥
ಇಲ್ಲಿಗೆ ಒಬ್ಬ ಋಷಿಗಳು ಬಂದು ನನ್ನ ಜನ್ಮದ ಕಥೆಯನ್ನು ಹೇಳಿದರು. ಅವರು ಕಾಶ್ಯಪರನ್ನು ಕುರಿತು ಕಾಶ್ಯಪರೇ, ನೀವು ಊರ್ಧ್ವರೇತಸ್ಕರಾಗಿದ್ದೀರಿ, ನಿಮಗೆ ಹೇಗೆ ಶಕುಂತಲೆ ಮಗಳಾದಳು ? ಇದರ ತತ್ವವನ್ನು ಹೇಳಿ ಎಂದು ಕೇಳಿದರು.
ಕಣ್ವಃ
ತಪ್ಯಮಾನಸ್ತಪೋ  ಘೋರಂ ವಿಶ್ವಾಮಿತ್ರಃ ಸಖಾ ಮಮ |
ಕಂಪಯಾಮಾಸ ದೇವೇಂದ್ರ ಪುರಾ ಶಕ್ರಂ ಮಹಾತಪಾಃ ॥32॥
ನನ್ನ ಸ್ನೇಹಿತರಾದ ವಿಶ್ವಾಮಿತ್ರರು ಹಿಂದೆ ಘೋರವಾದ ತಪಸ್ಸನ್ನು ಮಾಡುತ್ತಾ ತಮ್ಮ ತಪಸ್ಸಿನಿಂದ ದೇವೇಂದ್ರನಾದ ಶಕ್ರನನ್ನು ಅಲುಗಾಡಿಸಿದರು.
ತಪಸಾ ದೀಪ್ತವೀರ್ಯೋಽಯಂ ಸ್ಥಾನಾನ್ಮಾಂ ಚ್ಯಾವಯೇದಿತಿ |
ಭೀತಃ ಪುರಂದರಸ್ತಸ್ಮಾನ್ಮೇನಕಾಮಿದಮಬ್ರವೀತ್ ॥33॥
ತಪಸ್ಸಿನ ಮಹಾಶಕ್ತಿಯುಳ್ಳ ಇವರು ನನ್ನನ್ನು ಸ್ಥಾನಭ್ರಷ್ಟನನ್ನಾಗಿ ಮಾಡಬಹುದೆಂಬ ಹೆದರಿಕೆಯಿಂದ ಇಂದ್ರನು ಮೇನಕೆಯನ್ನು ಕರೆದು ಹೀಗೆ ಹೇಳಿದನು.
ಗುಣೈರ್ದಿವ್ಯೈರಪ್ಸರಸಾಂ ಮೇನಕೇ ತ್ವಂ ವಿಶಿಷ್ಯಸೇ |
ಶ್ರೇಯೋ ಮೇ ಕುರು ಕಲ್ಯಾಣಿ ಯತ್ ತ್ವಾಂ ವಕ್ಷ್ಯಾಮಿ ತಚ್ಛೃಣು ॥
ಮೇನಕೆಯೇ, ನೀನು ಅಪ್ಸರೆಯರ ದಿವ್ಯ ಗುಣಗಳಿಂದ ಉಳಿದವರಿಗಿಂತ ಶ್ರೇಷ್ಠಳಾಗಿದ್ದೀಯೆ. ಕಲ್ಯಾಣಿಯೇ, ನನಗೆ ಶ್ರೇಯಸ್ಸನ್ನು ಮಾಡಬೇಕು. ನಾನು ಹೇಳುವುದನ್ನು ಕೇಳು.
ಅಸಾವಾದಿತ್ಯಸಂಕಾಶೋ ವಿಶ್ವಾಮಿತ್ರೋ ಮಹಾತಪಾಃ |
ತಪ್ಯಮಾನಸ್ತಪೋ ಘೋರಂ ಬ್ರಹ್ಮಚರ್ಯಂ ಚ ಸಂಶ್ರಿತಃ ॥35॥
ಈ ತಪಸ್ವಿಗಳಾದ, ಸೂರ್ಯನಂತೆ ತೇಜಸ್ಸುಳ್ಳ ವಿಶ್ವಾಮಿತ್ರರು ಬ್ರಹ್ಮಚರ್ಯವನ್ನು ಆಶ್ರಯಿಸಿ ಘೋರವಾದ ತಪಸ್ಸನ್ನು ಮಾಡುತ್ತಿದ್ದಾರೆ.
ಮೇನಕೇ ತವ ಭಾರೋಽಯಂ ವಿಶ್ವಾಮಿತ್ರಃ ಸುಮಧ್ಯಮೇ |
ಸಂಶಿತಾತ್ಮಾ ಸುದುರ್ಧರ್ಷಶ್ಚೋಗ್ರೇ ತಪಸಿ ವರ್ತತೇ ॥36॥
ಸ ಮಾಂ ನ ಚ್ಯಾವಯೇತ್ ಸ್ಥಾನಾತ್ ತಂ ಗತ್ವಾ ವಿಪ್ರಲೋಭಯ |
ಚರ ತಸ್ಯ ತಪೋವಿಘ್ನಂ ಕುರು ಮೇ ಪ್ರಿಯಮುತ್ತಮಮ್ ॥37॥
ಮೇನಕೆ, ಇದು ನಿನ್ನ ಜವಾಬ್ದಾರಿ. ಎಲೌ ಸುಂದರಿಯೇ, ಉಗ್ರವಾದ ತಪಸ್ಸಿನಲ್ಲಿ ನಿರತರಾದ ಶ್ರೇಷ್ಠವಾದ ಮನಸ್ಸುಳ್ಳ ದುರ್ಧರ್ಷರಾದ ವಿಶ್ವಾಮಿತ್ರರು ನನ್ನನ್ನು ನನ್ನ ಸ್ಥಾನದಿಂದ ಕೆಳಗೆ ಇಳಿಸದಂತೆ ನೀನು ಹೋಗಿ ಅವರನ್ನು ಮರುಳುಗೊಳಿಸಬೇಕು. ಅವರ ತಪಸ್ಸಿಗೆ ವಿಘ್ನವನ್ನುಂಟು ಮಾಡಿ ನನಗೆ ಶ್ರೇಷ್ಠವಾದ ಪ್ರಿಯವನ್ನು ಆಚರಿಸಬೇಕು.
ರೂಪಯೌವನಮಾಧುರ್ಯಚೇಷ್ಟಿತಸ್ಮಿತಭಾಷಿತೈಃ |
ಲೋಭಯಿತ್ವಾ ವರಾರೋಹೇ ತಪಸಃ ಸನ್ನಿವರ್ತಯ ॥38॥
ಎಲೌ ಸುಂದರಿಯೇ, ನಿನ್ನ ರೂಪ, ಯೌವನ, ಮಾಧುರ್ಯ, ಚೇಷ್ಟೆ, ಮುಗುಳ್ನಗೆ ಮತ್ತು ಮಾತುಗಳಿಂದ ಅವರನ್ನು ವಂಚಿಸಿ ತಪಸ್ಸಿನಿಂದ ನಿವೃತ್ತರಾಗುವಂತೆ ಮಾಡು.
ಮೇನಕಾ
ಮಹಾತೇಜಾ ಸ ಭಗವಾನ್ ಸದೈವ ಚ ಮಹಾತಪಾಃ |
ಕೋಪನಶ್ಚ ತಥಾ ಹ್ಯೇನಂ ಜಾನಾತಿ ಭಗವಾನಪಿ ॥39॥
ಪೂಜ್ಯರು, ಮಹಾತೇಜಸ್ವಿಗಳು ಮತ್ತು ಮಹಾತಪಸ್ವಿಗಳು, ಕೋಪಸ್ವಭಾವದವರೂ ಕೂಡ. ಇದನ್ನು ನೀವೂ ತಿಳಿದಿದ್ದೀರಿ.
ತೇಜಸಸ್ತಪಸಶ್ಚೈವ ಕೋಪಸ್ಯ ಚ ಮಹಾತ್ಮನಃ |
ತ್ವಮಪ್ಯುದ್ವಿಜಸೇ ಯಸ್ಯ ನೋದ್ವಿಜೇಯಮಹಂ ಕಥಂ ॥40॥
ಮಹಾತ್ಮರಾದ ಅವರ ತೇಜಸ್ಸು, ತಪಸ್ಸು ಮತ್ತು ಕೋಪಗಳಿಂದ ನೀವೂ ಭಯಪಡುತ್ತೀರಿ. ಇನ್ನು ನಾನು ಭಯಪಡದಿರಲು ಹೇಗೆ ಸಾಧ್ಯ?
ವಿಗೃಹ್ಯ ಚ ವಸಿಷ್ಠಂ ಚ ತಸ್ಯ ಪುತ್ರಾನ್ಶಶಾಪ ಹ |
ಕ್ಷತ್ರೇ ಜಾತಶ್ಚ ಯಃ ಪೂರ್ವಮಭವದ್ ಬ್ರಾಹ್ಮಣೋ ಬಲಾತ್ ॥41॥
ವಸಿಷ್ಠರ ಜೊತೆಯಲ್ಲಿ ವಿರೋಧವನ್ನು ಮಾಡಿ ಅವರ ಮಕ್ಕಳನ್ನು ಸಂಹರಿಸಿದರು. ಕ್ಷತ್ರಿಯಕುಲದಲ್ಲಿ ಜನಿಸಿ ತಮ್ಮ ಸಾಮರ್ಥ್ಯದಿಂದ ಅವರು ಬ್ರಾಹ್ಮಣರಾದರು.
ಶೌಚಾರ್ಥಂ ಯೋ ನದೀಂ ಚಕ್ರೇ ದುರ್ಗಮಾಂ ಪಾಪಕರ್ಮಭಿಃ |
ಯತ್ರತ್ ಪುಣ್ಯತಮಾಂ ಲೋಕೇ ಕೌಶಿಕೀತಿ ವಿದುರ್ಬುಧಾಃ ॥42॥
ಅವರು ಸ್ನಾನಾದಿಗಳ ಸಲುವಾಗಿ ಪಾಪಿಷ್ಠರಿಗೆ ಅಗಮ್ಯವಾದ ನದಿಯನ್ನೇ ಸೃಷ್ಟಿಮಾಡಿದರು. ಆ ಪುಣ್ಯತಮವಾದ ನದಿಯನ್ನು

ಈಗಲೂ ಜ್ಞಾನಿಗಳಾದವರು ಲೋಕದಲ್ಲಿ ಕೌಶಿಕೀ ಎಂದು ಕರೆಯುತ್ತಾರೆ.
ಬಭಾರ ಯತ್ರಾಸ್ಯ ಪುರಾ ಕಾಲೇ ದುರ್ಗೇ ಮಹಾತ್ಮನಃ |
ದಾರಾನ್ ಮತಂಗೋ ಧರ್ಮಾತ್ಮಾ ರಾಜರ್ಷಿರ್ವ್ಯಾಧತಾಂ ಗತಃ ॥43॥
ದುರ್ಭಿಕ್ಷದ ಕಷ್ಟಕಾಲದಲ್ಲಿ ವಿಶ್ವಾಮಿತ್ರರ ಪತ್ನಿಯನ್ನು ಧರ್ಮಾತ್ಮನೂ ರಾಜರ್ಷಿಯೂ ಆಗಿ ವ್ಯಾಧತ್ವವನ್ನು ಹೊಂದಿದ ಮತಂಗರು ಕುರುಕ್ಷೇತ್ರದಲ್ಲಿ ಪೋಷಿಸಿದರು.
ಅತೀತಕಾಲೇ ದುರ್ಭಿಕ್ಷೇ ಪ್ರತ್ಯೇತ್ಯ ಪುನರಾಶ್ರಮಮ್ |
ದುರ್ಗಪಾರೇತಿ ನದ್ಯಾ ವೈ ನಾಮ ಚಕ್ರೇ ತದಾ ಪ್ರಭುಃ ॥44॥
ದುರ್ಭಿಕ್ಷದ ಕಾಲವು ಕಳೆದ ಮೇಲೆ ವಿಶ್ವಾಮಿತ್ರರು ಪುನಃ ಆಶ್ರಮಕ್ಕೆ ಬಂದು ಆ ನದಿಗೆ ದುರ್ಗಪಾರಾ ಎಂದು ನಾಮಕರಣ ಮಾಡಿದರು.
ಮತಂಗಂ ಯಾಜಯಾಂಚಕ್ರೇ ತತ್ರ ಪ್ರೀತಮನಾಃ ಸ್ವಯಮ್ |
ತ್ವಂ ಚ ಸೋಮಂ ಭಯಾದ್ ಯಸ್ಯ ಗತಃ ಪಾತುಂ ಸುರೇಶ್ವರ ॥45॥
ಅಲ್ಲಿ ಮತಂಗರ ಮೇಲಿನ ಪ್ರೀತಿಯಿಂದ ತಾವೇ ಮತಂಗರಿಂದ ಯಾಗವನ್ನು ಮಾಡಿಸುವರು. ಎಲೈ ದೇವೇಂದ್ರನೇ, ನೀನು ಸಹಾ ವಿಶ್ವಾಮಿತ್ರರ ಭಯದಿಂದ ಆ ಯಾಗದಲ್ಲಿ ಸೋಮಪಾನವನ್ನು ಮಾಡಲು ಹೋಗಿದ್ದೆ.
ಅತಿನಕ್ಷತ್ರವಂಶಾನಿ ಕ್ರುದ್ಧೋ ನಕ್ಷತ್ರಸಂಪದಾ |
ಪ್ರತಿಶ್ರವಣಪೂರ್ವಾಣಿ ನಕ್ಷತ್ರಾಣಿ ಸಸರ್ಜ ಯಃ ॥46॥
ಅಶ್ವಿನ್ಯಾದಿ ನಕ್ಷತ್ರಸಮೂಹದಲ್ಲಿ, ಇಂತಹ ನಕ್ಷತ್ರದಲ್ಲಿ ಹುಟ್ಟುವವರು ಬ್ರಾಹ್ಮಣರು, ಇಂತಹ ನಕ್ಷತ್ರದಲ್ಲಿ ಹುಟ್ಟುವವರು ಕ್ಷತ್ರಿಯರು ಮೊದಲಾದ ವ್ಯವಸ್ಥೆಯಿದೆ. ವಿಶ್ವಾಮಿತ್ರರು ಅದನ್ನು ಒಪ್ಪದೆ ಶ್ರವಣಾದಿಯಾದ ಪ್ರತಿ ನಕ್ಷತ್ರಗಳನ್ನೇ ಸೃಷ್ಟಿಸಿದರು.
ಗುರುಶಾಪಹತಸ್ಯಾಪಿ ತ್ರಿಶಂಕೋಃ ಶರಣಂ ದದೌ |
ಬ್ರಹ್ಮರ್ಷಿಶಾಪಂ ರಾಜರ್ಷಿಃ ಕಥಂ ಮೋಕ್ಷ್ಯತಿ ಕೌಶಿಕಃ ॥47॥
ಅವಮತ್ಯ ತದಾ ದೇವೈರ್ಯಜ್ಞಾಂಗಂ ತದ್ ವಿನಾಶಿತಮ್ |
ಅನ್ಯಾನಿ ಚ ಮಹಾತೇಜಾ ಯಜ್ಞಾಂಗಾನ್ಯಸೃಜತ್ ಪ್ರಭುಃ ॥48॥
ಗುರುಗಳಿಂದ ಶಾಪಗ್ರಸ್ತನಾದ ತ್ರಿಶಂಕುವಿಗೆ ಆಶ್ರಯವನ್ನು ಕೊಟ್ಟರು. ಇಲ್ಲದಿದ್ದರೆ, ರಾಜರ್ಷಿಯಾದ ಕೌಶಿಕನಾದ ತ್ರಿಶಂಕುವು ಬ್ರಹ್ಮರ್ಷಿಗಳ ಶಾಪವನ್ನು ಹೇಗೆ ದಾಟುತ್ತಾನೆ. ಆಗ ದೇವತೆಗಳು ವಿಶ್ವಾಮಿತ್ರರ ಯಜ್ಞದ ಸಲಕರಣೆಗಳನ್ನೆಲ್ಲಾ ನಾಶಮಾಡಿದರು. ಸಮರ್ಥರೂ, ಮಹಾತೇಜಸ್ವಿಗಳೂ ಅದ ವಿಶ್ವಾಮಿತ್ರರು ಯಜ್ಞಕ್ಕಾಗಿ ಬೇರೆ ಅಂಗಗಳನ್ನೇ ಸೃಷ್ಟಿಮಾಡಿದರು.
ನಿನಾಯ ಚ ತದಾ ಸ್ವರ್ಗಂ ತ್ರಿಶಂಕುಂ ಸ ಮಹಾತಪಾಃ |
ಏತಾನ್ಯನ್ಯಾನಿ ಕರ್ಮಾಣಿ ಭೃಶಂ ದೇವ ಬಿಭೇಮ್ಯಹಮ್ ॥49॥
ಹಾಗೆ ಮಾಡಿ ತಪಸ್ವಿಗಳಾದ ಅವರು ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದರು. ಅವರು ಮಾಡಿದ ಇಂತಹ ಕರ್ಮಗಳು ಅನೇಕ ಇವೆ. ದೇವನೇ, ನಾನು ತುಂಬಾ ಹೆದರುತ್ತೇನೆ.
ಯಥಾ ಮಾಂ ನ ದಹೇತ್ ಕ್ರುದ್ಧಃ ತಥಾ ಪಶ್ಯ ಸುರೇಶ್ವರ |
ತೇಜಸಾ ನಿರ್ದಹೇಲ್ಲೋಕಾಂಶ್ಚಾಲಯೇದ್ ಧರಣೀಂ ತಥಾ ॥50॥
ಸಂಕ್ಷೇಪೇಚ್ಚ ಮಹಾಮೇರುಂ ಮಹೀಮಾವರ್ತಯೇತ್ ತಥಾ |
ತಾದೃಶಂ ತಪಸಾ ಯುಕ್ತಂ ಪ್ರದೀಪ್ತಮಿವ ಪಾವಕಮ್ ॥51॥
ಕಥಮಸ್ಮದ್ವಿಧಾ ಬಾಲಾ ಜಿತೇಂದ್ರಿಯಮಭಿಸ್ಪೃಶೇತ್ |
ಹುತಾಶನಮುಖಂ ದೀಪ್ತಂ ಸೂರ್ಯಚಂದ್ರಾಕ್ಷಿತಾರಕಮ್ |
ಕಾಲಜಿಹ್ವಂ ಸುರಶ್ರೇಷ್ಠ ಕಥಮಸ್ಮದ್ವಿಧಾ ಸ್ಪೃಶೇತ್ ॥52॥
ದೇವೇಂದ್ರನೇ, ಅವರು ನನ್ನನ್ನು ಸುಡದಿರುವಂತೆ ನೀನು ವ್ಯವಸ್ಥೆಯನ್ನು ಮಾಡು. ಅವರು ತಮ್ಮ ಸಾಮರ್ಥ್ಯದಿಂದ ಮೂರು ಲೋಕಗಳನ್ನೂ ಸುಡಬಹುದು. ಭೂಮಿಯನ್ನೇ ಅಲ್ಲಾಡಿಸಿಯಾರು. ಮಹಾಮೇರುವನ್ನೇ ಚಿಕ್ಕದಾಗಿ ಮಾಡಿಯಾರು. ಭೂಮಿಯನ್ನೇ ತಿರುಗಿಸಿಯಾರು. ಅಂತಹ ತಪಸ್ಸಿನಿಂದ ಯುಕ್ತರಾಗಿ ಉರಿಯುತ್ತಿರುವ ಅಗ್ನಿಯಂತಿರುವ ಜಿತೇಂದ್ರಿಯರಾದ ಋಷಿಗಳನ್ನು ನನ್ನಂತಹ ಬಾಲೆಯು ಹೇಗೆ ಮುಟ್ಟಲು ಸಾಧ್ಯ? ಅಗ್ನಿಮುಖವಾಗಿರುವ ಸೂರ್ಯಚಂದ್ರರನ್ನು ಕಣ್ಣುಗಳಾಗಿ ಹೊಂದಿದಂತಿರುವ, ಯಮನನ್ನು ಜಿಹ್ವೆಯಂತೆ ಹೊಂದಿರುವ ಆ ದೀಪ್ತರಾದವರನ್ನು ಎಲೈ ಸುರಶ್ರೇಷ್ಠನೇ, ನಮ್ಮಂತಹವರು ಹೇಗೆ ಮುಟ್ಟಲು ಸಾಧ್ಯ?
ಯಮಶ್ಚ ಸೋಮಶ್ಚ ಮಹರ್ಷಯಶ್ಚ
ವಿಶ್ವೇ ದೇವಾ ವಾಲಖಿಲ್ಯಾಶ್ಚ ಸರ್ವೇ |
ಯಸ್ಯೋದ್ವಿಜಂತೇ ಮುನಯಃ ಸದೈವ
ಕಸ್ಮಾದ್ ರಾಜನ್ ಮಾದೃಶೀ ನೋದ್ವಿಜೇತ ॥ 53॥
ಎಲೈ ರಾಜನೇ,ಯಾರಿಗೆ ಯಮನೂ, ಚಂದ್ರನೂ, ಮಹರ್ಷಿಗಳೂ, ವಿಶ್ವೇದೇವತೆಗಳೂ, ವಾಲಖಿಲ್ಯರೂ, ಎಲ್ಲಾ ಋಷಿಗಳೂ ಯಾವಾಗಲೂ ಹೆದರುತ್ತಾರೋ, ಅಂತಹವರಿಗೆ ನಾನು ಹೇಗೆ ಹೆದರದಿರಲು ಸಾಧ್ಯ?
ತ್ವಯೈವಮುಕ್ತಾ ತು ಕಥಂ ಸುರೇಶ
ಋಷೇರ್ನ ಗಚ್ಛೇಯಮಹಂ ಸಮೀಪಮ್ |
ರಕ್ಷಾಂ ತು ಮೇ ಚಿಂತಯ ದೇವರಾಜ
ಯಥಾ ತ್ವದರ್ಥೇ ಸುಖಿನೀ ಚರೇಯಮ್ ॥ 54॥
ಆದರೆ, ಸುರೇಶನೇ, ನೀನು ಹೀಗೆ ಹೇಳಿದ ಮೇಲೆ ನಾನು ಋಷಿಯ ಬಳಿ ಹೋಗದಿರಲು ಹೇಗೆ ಸಾಧ್ಯ? ದೇವರಾಜನೇ, ನನಗೆ ಹೇಗೆ

ರಕ್ಷಣೆಯನ್ನು ಕೊಡಬೇಕೆಂದು ಯೋಚಿಸು. ನಿನ್ನ ಕಾರ್ಯವನ್ನು ಸಾಧಿಸಿ ನಾನು ಸುಖವಾಗಿರಬೇಕು.
ಭವೇಚ್ಚ ಮೇ ಮನ್ಮಥಸ್ತತ್ರ ಕಾರ್ಯೇ
ಸಹಾಯಭೂತಸ್ತವ ಚ ಪ್ರಸಾದಾತ್ |
ವನಂ ಚ ವಾಯುಃ ಸುರಭಿಃ ಪ್ರವಾಪಯೇತ್
ತಸ್ಮಿನ್ ಕಾಲೇ ತಮೃಷಿಂ ಲೋಭಯಂತ್ಯಾಃ ॥55॥
ಈ ಕಾರ್ಯದಲ್ಲಿ ನನಗೆ ಅಲ್ಲಿ ಮನ್ಮಥನು ನಿನ್ನ ಅನುಗ್ರಹದಿಂದ ಸಹಾಯಕನಾಗಿರಬೇಕು. ವಾಯುವೂ ಆ ವನದಲ್ಲಿ ನಾನು ಆ ಋಷಿಗಳನ್ನು ವಂಚಿಸುವಾಗ ಸುಗಂಧಯುಕ್ತವಾಗಿ ಬೀಸಬೇಕು.
ಕಾಮಂ ತು ಮೇ ಮಾರುತಸ್ತತ್ರ ವಾಸಃ
ಪ್ರಕ್ರೀಡಿತಾಯಾ ವಿವೃಣೋತು ದೇವ |
ತಥೇತ್ಯುಕ್ತತ್ವ ವಿಹಿತೇ ಚೈವ ತಸ್ಮಿನ್
ತತೋ ಯಯೌ ಸಾಽಽಶ್ರಮಂ ಕೌಶಿಕಸ್ಯ ॥56॥
ಎಲೈ ದೇವನೇ,ನಾನು ಅಲ್ಲಿ ಆಡುತ್ತಿರುವಾಗ ಮಾರುತನು ನನ್ನ ವಸ್ತ್ರವನ್ನು ತೆಗೆಯಬೇಕು. ಹಾಗೆಯೇ ಆಗಲೆಂದು ಹೇಳಿ ಇಂದ್ರನು ವ್ಯವಸ್ಥೆ ಮಾಡಿದ ಮೇಲೆ ಮೇನಕೆಯು ಅಲ್ಲಿಂದ ವಿಶ್ವಾಮಿತ್ರರ ಆಶ್ರಮಕ್ಕೆ ಹೊರಟಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಭತ್ತೇಳನೆಯ ಅಧ್ಯಾಯ ಮುಗಿಯಿತು
*****
ಎಂಭತ್ತೆಂಟನೆಯ ಅಧ್ಯಾಯ
(ವಿಶ್ವಾಮಿತ್ರರಿಂದ ಮೇನಕೆಯಲ್ಲಿ ಶಕುಂತಲೆಯ ಜನ್ಮಕಥನ)
ಕಣ್ವಃ
ಏವಮುಕ್ತಸ್ತಯಾ ಶಕ್ರಃ ಸಂದಿದೇಶ ಸದಾಗತಿಮ್ |
ಪ್ರಾತಿಷ್ಠತ ತತಃ ಕಾಲೇ ಮೇನಕಾ ವಾಯುನಾ ಸಹ ॥1॥
ಹೀಗೆ ಹೇಳಲ್ಪಟ್ಟ ಇಂದ್ರನು ವಾಯುವಿಗೆ ಆದೇಶವನ್ನು ನೀಡಿದನು. ಅನಂತರ ಯೋಗ್ಯವಾದ ಕಾಲದಲ್ಲಿ ಮೇನಕೆಯು ವಾಯುವಿನ ಜೊತೆಯಲ್ಲಿ ಹೊರಟಳು.
ತಥಾಽಪಶ್ಯದ್ ವರಾರೋಹಾ ತಪಸೋಗ್ರೇಣ ಕರ್ಶಿತಮ್ |
ವಿಶ್ವಾಮಿತ್ರಂ ತಪಸ್ಯಂತಂ ದುರ್ಧರ್ಷಂ ಸಂಶಿತವ್ರತಮ್ ॥2॥
ಅವಳು ಆಶ್ರಮಕ್ಕೆ ಹೋಗಿ ಒಳ್ಳೆಯ ವ್ರತಧಾರಿಯೂ, ದುರ್ಧರ್ಷನೂ, ತಪಸ್ಸಿನಿಂದ ಕೃಶನೂ ಆದ, ತಪಸ್ಸನ್ನು ಮಾಡುತ್ತಿರುವ ವಿಶ್ವಾಮಿತ್ರನನ್ನು ನೋಡಿದಳು.
ತತೋಽಭಿವಾದ್ಯ ಸಾ ತಸ್ಮೈ ಪ್ರಾಕ್ರೀಡದ್ ಋಷಿಸನ್ನಿಧೌ |
ಅಪೋವಾಹ ಚ ವಾಸೋಽಸ್ಯಾ ಮಾರುತಃ ಶಶಿಸನ್ನಿಭಮ್ ॥3॥
ಅವಳು ವಿಶ್ವಾಮಿತ್ರರಿಗೆ ನಮಸ್ಕರಿಸಿ ಅವರ ಸನ್ನಿಧಿಯಲ್ಲಿ ಆಡುತ್ತಿದ್ದಳು. ಆಗ ಮಾರುತನು ಚಂದ್ರನಂತಿದ್ದ ಅವಳ ಸೂಕ್ಷ್ಮವಸ್ತ್ರವನ್ನು ಹಾರಿಸಿದನು.
ಸಾಽಗಚ್ಛತ್ ತ್ವರಿತಾ ಭೂಮಿಂ ವಾಸಸ್ತದವಲಂಬತೀ |
ಕುತ್ಸಯಂತೀವ ಸವ್ರೀಳಂ ಮಾರುತಂ ದೇವವರ್ಣಿನೀ ॥4॥
ಸುಂದರಿಯಾದ ಅವಳು ನಾಚಿಕೆಯಿಂದ ಮಾರುತನನ್ನು ಹೀಯಾಳಿಸುವಂತೆ ವಸ್ತ್ರದ ತುದಿಯನ್ನು ಹಿಡಿದು ಒಮ್ಮೆಲೇ ನೆಲದ ಮೇಲೆ ಬಿದ್ದಳು.
ಗೃಧ್ರಾಂ ವಾಸಸಿ ಸಂಭ್ರಾಂತಾಂ ಮೇನಕಾಂ ಮುನಿಸತ್ತಮಃ |
ಅನಿರ್ದೇಶ್ಯವಯೋರೂಪಾಮಪಶ್ಯದ್ ವಿವೃತಾಂ ತದಾ ॥5॥
ದಿಗ್ಭ್ರಮೆಯಿಂದ ವಸ್ತ್ರವನ್ನು ಹಿಡಿಯಲು ಉದ್ಯುಕ್ತಳಾದ ಹೇಳಲು ಬರದ ವಯಸ್ಸನ್ನು ಮತ್ತು ಉತ್ತಮ ರೂಪವನ್ನು ಹೊಂದಿದ್ದ ಅವಳು ವಿವಸ್ತ್ರಳಾಗಿರುವುದನ್ನು ಆಗ ಋಷಿಶ್ರೇಷ್ಠರಾದ ವಿಶ್ವಾಮಿತ್ರರು ನೋಡಿದರು.
ತಸ್ಯಾ ರೂಪಗುಣಂ ದೃಷ್ಟ್ವಾ ಕಾಮಾರ್ತಃ ಸಮಪದ್ಯತ |
ಚಕಾರ ಭಾವಂ ಸಂಸರ್ಗೇ ತಯಾ ಕಾಮವಶಂ ಗತಃ ॥6॥
ಅವಳ ರೂಪವನ್ನೂ, ಗುಣವನ್ನೂ ನೋಡಿದ ಋಷಿಗಳು ಕಾಮಾರ್ತರಾದರು. ಕಾಮವಶರಾಗಿ ಅವರು ಅವಳ ಸಮಾಗಮದ ಅಭಿಲಾಷೆಯನ್ನು ಹೊಂದಿದರು.
ನ್ಯಮಂತ್ರಯತ್ ಚಾಪ್ಯೇನಾಂ ಸಾಪ್ಯೈಚ್ಛತ್ ತಮನಿಂದಿತಾ |
ತೌ ತತ್ರ ಸುಚಿರಂ ಕಾಲಂ ವಿಜಹ್ರಾತೇ ಮಹಾವನೇ ॥7॥
ಅವಳನ್ನು ಆಮಂತ್ರಿಸಿ ಕರೆದರು. ಅನಿಂದಿತಳಾದ ಅವಳೂ ಅವರನ್ನು ಬಯಸಿದಳು. ಅವರಿಬ್ಬರೂ ಆ ಕಾಡಿನಲ್ಲಿ ಬಹುಕಾಲದವರೆಗೆ ವಿಹರಿಸಿದರು.
ರಮಮಾಣೌ ಯಥಾಕಾಮಂ ಯಥೈಕದಿವಸಂ ತಥಾ |

ಏವಂ ವರ್ಷಸಹಸ್ರಾಣಾಮತೀತಂ ನಾಭ್ಯಚಿಂತಯತ್ ॥8॥
ತಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ವಿಹರಿಸುತ್ತಾ ಒಂದು ದಿನದಂತೆ ಬಹುಕಾಲವನ್ನು ಕಳೆದರು. ಹೀಗೆ ಸಹಸ್ರವರ್ಷಗಳು ಉರುಳಿದರೂ ವಿಶ್ವಾಮಿತ್ರರು ಗಮನಿಸಲಿಲ್ಲ.
ಕಾಮಕ್ರೋಧಾವಜಿತವಾನ್ ಮುನಿರ್ನಿತ್ಯಂ ಕ್ಷಮಾನ್ವಿತಃ |
ಚಿರಾರ್ಜಿತಸ್ಯ ತಪಸಃ ಕ್ಷಯಂ ಸಂಪ್ರಾಪ್ತವಾನೃಷಿಃ ॥9॥
ಯಾವಾಗಲೂ ಕ್ಷಮೆಯಿಂದ ಕೂಡಿದ ವಿಶ್ವಾಮಿತ್ರಋಷಿಗಳು ಕಾಮಕ್ರೋಧಗಳನ್ನು ಗೆಲ್ಲಲು ಸಾಧ್ಯವಾಗಲಿಲ್ಲ. ಅವರಿಗೆ ಬಹಳ ಕಾಲದಿಂದ ಬೆಳೆಸಿದ ತಪಸ್ಸಿನ ಕ್ಷಯವು ಉಂಟಾಯಿತು.
ತಪಸಃ ಸಂಕ್ಷಯಾದೇವ ಮುನಿರ್ಮೋಹಂ ಸಮಾವಿಶತ್ |
ಮೋಹಾಭಿಭೂತಃ ಕ್ರೋಧಾತ್ಮಾ ಯಯೌ ತಾಂ ಕೌಶಿಕೀಂ ಮುನಿಃ ॥
ತಪಸ್ಸಿನ ನಾಶದಿಂದಲೇ, ವಿಶ್ವಾಮಿತ್ರರಿಗೆ ಮೋಹವುಂಟಾಯಿತು. ಮೋಹಾಭಿಭೂತರಾದ ಅವರು ಸಿಟ್ಟಿನಿಂದ ಕೌಶಿಕೀನದಿಗೆ ಹೋದರು.
ಪಾದ್ಯೈರ್ಜಲರವಂ ಕೃತ್ವಾ ಅಂತರ್ದ್ವೀಪೇ ಕುಟೀಂ ಗತಃ |
ಮೇನಕಾ ಗಂತುಕಾಮಾ ವೈ ಶುಶ್ರಾವ ಜಲನಿಸ್ವನಮ್ ॥11॥
ಪಾದಗಳಿಂದ ತಾಡನವನ್ನು ಮಾಡಿ ಜಲದ ನಾದನವನ್ನು ಮಾಡಿ ದ್ವೀಪದ ಮಧ್ಯೆ ಇದ್ದ ಪರ್ಣಕುಟಿಗೆ ಬಂದರು. ವಿಶ್ವಾಮಿತ್ರರನ್ನು ಬಿಟ್ಟು ಹೊರಡುವ ಇಚ್ಛೆಯುಳ್ಳ ಮೇನಕೆಯು ಆ ಜಲನಿಸ್ವನವನ್ನು  ಕೇಳಿಸಿಕೊಂಡಳು.
ತಪಸಾ ದೀಪ್ತವೀರ್ಯೋಽಸಾವಕಾಶಾದೇತಿ ಯಾತಿ ಚ |
ಅದ್ಯ ಸಂಜ್ಞಾಂ ವಿಜಾನಾಮಿ ಯಯಾಽಸ್ಯ ತಪಸಃಕ್ಷಯಮ್ ॥12॥
ಉಗ್ರವಾದ ತಪಸ್ಸಿನ ಸಾಮರ್ಥ್ಯದಿಂದ ಇವರು ನಿತ್ಯವೂ ಆಕಾಶಮಾರ್ಗದಿಂದ ಬಂದು ಹೋಗುತ್ತಾರೆ. ಇವರ ತಪಸ್ಸು ಕ್ಷಯವಾಗಿದೆಯೇ ಇಲ್ಲವೇ ಎಂದು ಈ ದಿನ ಅವರ ಸಂಕೇತದಿಂದ ತಿಳಿಯುತ್ತೇನೆ ಎಂದು ಯೋಚಿಸಿದಳು.
ಹಂತ ನಿರ್ಯಾತಮಿತ್ಯುಕತ್ವ ಋತುಸ್ನಾತಾ ತು ಮೇನಕಾ |
ಕಾಮರಾಗಾಭಿಭೂತಸ್ಯ ಮುನೇಃ ಪಾರ್ಶ್ವಂ ಜಗಾಮ ಸಾ ॥13॥
ಜಲರವವನ್ನು ಕೇಳಿ ಅವರ ತಪಸ್ಸಿನ ಕ್ಷಯವು ಉಂಟಾಗಿದೆ ಎಂದು ತಿಳಿದು ಋತುಸ್ನಾತಳಾದ ಮೇನಕೆಯು ಕಾಮವಶರಾದ ಋಷಿಗಳ ಪಾರ್ಶ್ವಕ್ಕೆ ಹೋದಳು.
ಜನಯಾಮಾಸ ಸ ಮುನಿರ್ಮೇನಕಾಯಾಂ ಶಕುಂತಲಾಮ್ |
ಪ್ರಸ್ಥೇ ಹಿಮವತೋ ರಮ್ಯೇ ಮಾಲಿನೀಮಭಿತೋ ನದೀಮ್ ॥14॥
ಆಗ ವಿಶ್ವಾಮಿತ್ರರು ಹಿಮಾಲಯದ ಉನ್ನತ ಪ್ರದೇಶದಲ್ಲಿ ಮಾಲಿನೀ ನದಿಯ ಸಮೀಪದಲ್ಲಿ ಮೇನಕೆಯಲ್ಲಿ ಶಕುಂತಲೆಯನ್ನು ಉತ್ಪಾದಿಸಿದರು.
ದೇವಗರ್ಭೋಪಮಾಂ ಬಾಲಾಂ ಸರ್ವಾಭರಣ ಭೂಷಿತಾಂ |
ಶಯಾನಾಂ ಶಯನೇ ರಮ್ಯೇ ಮೇನಕಾ ವಾಕ್ಯಮಬ್ರವೀತ್ ॥15॥
ದೇವಗರ್ಭದಂತಿದ್ದು ಸರ್ವಾಭರಣಭೂಷಿತಳಾಗಿ ಒಳ್ಳೆಯ ಹಾಸಿಗೆಯಲ್ಲಿ ಮಲಗಿದ್ದ ಆ ಹೆಣ್ಣು ಶಿಶುವನ್ನು ಕುರಿತು ಮೇನಕೆಯು ಮಾತನಾಡಿದಳು.
ಮಹರ್ಷೇರುಗ್ರತಪಸಸ್ತೇಜಸ್ತ್ವಮವಿನಾಶಿನೀ |
ತಸ್ಮಾತ್ ಸ್ವರ್ಗಂ ಗಮಿಷ್ಯಾಮಿ ದೇವಕಾರ್ಯಾರ್ಥಮಾಗತಾ ॥16॥
ಮಹರ್ಷಿಗಳಾದ, ಉಗ್ರತಪಸ್ವಿಗಳಾದ ವಿಶ್ವಾಮಿತ್ರರ ತೇಜಸ್ಸಿನಿಂದ ನೀನು ಜನಿಸಿದ್ದೀಯೇ. ಆದ್ದರಿಂದ ನಿನಗೆ ವಿನಾಶವಾಗಲೀ ವಿಪತ್ತಾಗಲೀ ಬರುವುದಿಲ್ಲ. ಆದ್ದರಿಂದ ದೇವಕಾರ್ಯದ ಸಲುವಾಗಿ ಬಂದ ನಾನು ಸ್ವರ್ಗಕ್ಕೆ ಹೋಗುವೆನು.
ಕಣ್ವಃ
ಜಾತಮುತ್ಸೃಜ್ಯ ತಂ ಗರ್ಭಂ ಮೇನಕಾ ಮಾಲಿನೀಮನು |
ಶಕ್ರಸಂಸದಮಾಗಚ್ಛತ್ ಕೃತ್ವಾ ಕಾರ್ಯಂ ಶಚೀಪತೇಃ ॥17॥
ಮೇನಕೆಯು ಆಗ ತಾನೇ ಹುಟ್ಟಿದ ಆ ಮಗುವನ್ನು ಮಾಲಿನೀ ನದಿಯ ದಡದಲ್ಲಿ ಬಿಟ್ಟು ಇಂದ್ರನ ಕಾರ್ಯವನ್ನು ಎಸಗಿದವಳಾಗಿ ಇಂದ್ರನ ಸಭೆಗೆ ಹೊರಟುಹೋದಳು.
ತಂ ವನೇ ಗಹನೇ ಗರ್ಭಂ ಸಿಂಹವ್ಯಾಘ್ರನಿಷೇವಿತೇ |
ದೃಷ್ಟ್ವಾ ಶಯಾನಂ ಶಕುನಾಃ ಸಮಂತಾತ್ ಪರ್ಯವಾರಯನ್ ॥18॥
ದಟ್ಟವಾದ ಮತ್ತು ಸಿಂಹ ವ್ಯಾಘ್ರಗಳಿಂದ ತುಂಬಿದ ಕಾಡಿನಲ್ಲಿ ಮಲಗಿರುವ ಆ ಶಿಶುವನ್ನು ನೋಡಿ ಪಕ್ಷಿಗಳು ಅವಳನ್ನು ಸುತ್ತುವರಿದವು.
ನೈನಂ ಹಿಂಸ್ಯುರ್ವನೇ ಬಾಲಾಂ ಕ್ರವ್ಯಾದಾ ಮಾಂಸಗರ್ಧಿನಃ |
ಇತಿ ಕೃತ್ವಾ ಸ್ಮ ರಕ್ಷಂತಿ ಶಕುಂತಾ ಮೇನಕಾತ್ಮಜಾಮ್ ॥19॥
ಈ ಹೆಣ್ಣು ಶಿಶುವನ್ನು ಕಾಡಿನಲ್ಲಿರುವ ಮಾಂಸದ ಆಸೆಯನ್ನು ಹೊಂದಿರುವ, ಮಾಂಸಾಹಾರಿ ಪ್ರಾಣಿಗಳು ಹಿಂಸೆ ಮಾಡದಿರಲಿ ಎಂದು ನಿಶ್ಚಯಿಸಿ ಆ ಪಕ್ಷಿಗಳು ಮೇನಕೆಯ ಮಗಳನ್ನು ರಕ್ಷಿಸಿದವು.
ಉಪಸ್ಪ್ರಷ್ಟುಂ ಗತಶ್ಚಾಹಂ ತಾಮಪಶ್ಯಮನಿಂದಿತಾಮ್ |
ನಿರ್ಜನೇ ವಿಪಿನೇ ರಮ್ಯೇ ಶಕುಂತೈಃ ಪರಿವಾರಿತಾಮ್ ॥20॥

ಸ್ನಾನ ಮಾಡಲು ಅಲ್ಲಿಗೆ ಹೋದ ನಾನು, ನಿರ್ದುಷ್ಟವಾದ ಹೆಣ್ಣುಮಗುವು, ನಿರ್ಜನವಾದ, ಸುಂದರವಾದ ಅರಣ್ಯದಲ್ಲಿ ಪಕ್ಷಿಗಳಿಂದ ಪರಿವೃತವಾಗಿರುವುದನ್ನು ನೋಡಿದೆನು.
ಮಾಂ ದೃಷ್ಟ್ವೈವಾನ್ವಪದ್ಯಂತ ಪಾದಯೋಃ ಪತಿತಾ ದ್ವಿಜಾಃ |
ಅಬ್ರುವನ್ ಶಕುನಾಃ ಸರ್ವೇ ಕಲಂ ಮಧುರಭಾಷಿಣಃ ॥21॥
ನನ್ನನ್ನು ನೋಡಿದ ಕೂಡಲೇ ಆ ಪಕ್ಷಿಗಳು ನನ್ನ ಪಾದಕ್ಕೆರಗಿ ಮಧುರ ಭಾಷೆಯಿಂದ ಮಧುರವಾಗಿ ಮಾತನಾಡಿದವು.
ವಿಶ್ವಾಮಿತ್ರಸುತಾಂ ಬ್ರಹ್ಮನ್ ನ್ಯಾಸಭೂತಾಂ ಭರಸ್ವ ವೈ |
ಕಾಮಕ್ರೋಧಾವಜಿತವಾನ್ ಸಖಾ ತೇ ಕೌಶಿಕೀಂ ಗತಃ ॥22॥
ಪೂಜ್ಯರೇ, ನಮ್ಮಲ್ಲಿ  ನ್ಯಾಸವಾಗಿದ್ದ  ವಿಶ್ವಾಮಿತ್ರರ ಈ ಮಗಳನ್ನು ಪೋಷಿಸಿ. ನಿಮ್ಮ ಸ್ನೇಹಿತರಾದ ವಿಶ್ವಾಮಿತ್ರರು ಕಾಮಕ್ರೋಧಗಳನ್ನು ಜಯಿಸಲಾರದೆ ಇಲ್ಲಿಂದ ಕೌಶಿಕೀ ನದಿಗೆ ಹೋದರು.
ತಸ್ಮಾತ್ ಪೋಷಯ ತತ್ಪುತ್ರೀಂ ದಯಾವಾನಿತಿ ತೇಽಬ್ರುವನ್ |
ಸರ್ವಭೂತರುತಜ್ಞೋಽಹಂ ದಯಾವಾನ್ ಸರ್ವಜಂತುಷು ॥23॥
ಆದ್ದರಿಂದ ದಯಾವಂತರಾದ ನೀವು ಈ ಮಗುವನ್ನು ಪೋಷಿಸಬೇಕು ಎಂದು ಹೇಳಿದವು. ಎಲ್ಲಾ ಪ್ರಾಣಿಗಳಲ್ಲೂ ದಯೆಯುಳ್ಳ ನನಗೆ ಎಲ್ಲಾ ಪ್ರಾಣಿಗಳ ಭಾಷೆಯು ಅರ್ಥವಾಗುತ್ತಿತ್ತು.
ನಿರ್ಜನೇಽಪಿ ಮಹಾರಣ್ಯೇ ಶಕುಂತೈಃ ಪರಿವಾರಿತಾಮ್ |
ಆನಯಿತ್ವಾ ತತಶ್ಚೈನಾಂ ದುಹಿತೃತ್ವೇ ನ್ಯಯೋಜಯಮ್ ॥24॥
ನಿರ್ಜನವಾದ ಮಹಾರಣ್ಯದಲ್ಲಿಯೂ ಪಕ್ಷಿಗಳಿಂದ ರಕ್ಷಿತಳಾದ ಅವಳನ್ನು ಕರೆತಂದು ಅವಳನ್ನು ನನ್ನ ಮಗಳೆಂದು ಭಾವಿಸಿದೆನು.
ಶರೀರಕೃತ್ ಪ್ರಾಣದಾತಾ ಯಸ್ಯ ಚಾನ್ನಾನಿ ಭುಂಜತೇ |
ಕ್ರಮೇಣೈತೇ ತ್ರಯೋಽಪ್ಯುಕ್ತಾಃ ಪಿತರೋ ಧರ್ಮಸಾಧನೇ ॥25॥
ಶರೀರವನ್ನು ಸೃಷ್ಟಿಸಿದವನು, ಪ್ರಾಣವನ್ನು ಕೊಡುವವನು, ಅನ್ನವನ್ನು ನೀಡುವವನು, ಈ ಮೂವರೂ ಕ್ರಮವಾಗಿ ಧರ್ಮಸಾಧನೆಯ ವಿಷಯದಲ್ಲಿ ಪಿತೃಗಳೆನಿಸುತ್ತಾರೆ.
ನಿರ್ಜನೇ ಚ ವನೇ ಯಸ್ಮಾಚ್ಛಕುಂತೈಃ ಪರಿವಾರಿತಾ |
ಶಕುಂತಲೇತಿ ನಾಮಾಸ್ಯಾಃ ಕೃತಂ ಚಾಪಿ ತತೋ ಮಯಾ ॥26॥
ನಿರ್ಜನವಾದ ಅರಣ್ಯದಲ್ಲಿ ಶಕುಂತಗಳಿಂದ ರಕ್ಷಿಸಲ್ಪಟ್ಟ ಕಾರಣದಿಂದ ನಾನು ಅವಳಿಗೆ ಶಕುಂತಲಾ ಎಂದೇ ನಾಮಕರಣ ಮಾಡಿದೆ.
ಏವಂ ದುಹಿತರಂ ವಿದ್ಧಿ ಮಮ ಸೌಮ್ಯ ಶಕುಂತಲಾಮ್ |
ಶಕುಂತಲಾ ಚ ಪಿತರಂ ಮನ್ಯತೇ ಮಾಮನಿಂದಿತಾ ॥27॥
ಎಲೈ ಸೌಮ್ಯನೇ, ಶಕುಂತಲೆಯು ಹೀಗೆ ನನ್ನ ಮಗಳೆಂದು ತಿಳಿ. ನಿರ್ದುಷ್ಟಳಾದ ಶಕುಂತಲೆಯೂ ಸಹ ನನ್ನನ್ನು ತಂದೆಯೆಂದೇ ತಿಳಿದಿದ್ದಾಳೆ.
ಶಕುಂತಲಾ
ಏತದಾಚಷ್ಟ ಭಗವಾನ್ಮಮ ಜನ್ಮ ಮಹತಪಾಃ |
ಸುತಾಂ ಕಣ್ವಸ್ಯ ಮಾಮೇವಂ ವಿದ್ಧಿ ತ್ವಂ ಮನುಜಾಧಿಪ ॥28॥
ಕಣ್ವಂ ಹಿ ಪಿತರಂ ಮನ್ಯೇ ಪಿತರಂ ಸ್ವಮಜಾನತೀ |
ಇತಿ ತೇ ಕಥಿತಂ ರಾಜನ್ ಯಥಾವೃತ್ತಂ ಯಥಾಶ್ರುತಮ್ ॥29॥
ಇಲ್ಲಿಗೆ ಬಂದಿದ್ದ ಪೂಜ್ಯರಾದ, ಮಹಾ ತಪಸ್ವಿಗಳಾದ ಋಷಿಗಳಿಗೆ ಪೂಜ್ಯರಾದ ಕಣ್ವರು ಹೀಗೆ ನನ್ನ ಜನ್ಮವನ್ನು ತಿಳಿಸಿದರು. ಎಲೈ ರಾಜನೇ, ನಾನು ಈ ರೀತಿ ಕಣ್ವರ ಮಗಳೆಂದು ತಿಳಿ. ನನ್ನ ಸ್ವಂತ ತಂದೆ ಯಾರೆಂದು ತಿಳಿಯದೆ ನಾನು ಕಣ್ವರನ್ನೇ ತಂದೆಯೆಂದು ಭಾವಿಸಿದ್ದೇನೆ. ಎಲೈ ರಾಜನೇ,  ಹಿಂದೆ ನಡೆದ ಘಟನೆಯನ್ನು ನಾನು ಕೇಳಿದಂತೆ ನಿನಗೆ ತಿಳಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಾಶೀತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಆದಿಪರ್ವದಲ್ಲಿ ಎಂಭತ್ತೆಂಟನೆಯ ಅಧ್ಯಾಯ  ಮುಗಿಯಿತು
*****
ಎಂಬತ್ತೊಂಭತ್ತನೆಯ ಅಧ್ಯಾಯ
(ದುಷ್ಯಂತ ಶಕುಂತಲೆಯರ ವಿವಾಹ, ಶಕುಂತಲೆಯ ಷರತ್ತು, ಕಣ್ವರಿಂದ ವಿವಾಹದ ಅನುಮೋದನೆ.)
ದುಷ್ಯಂತಃ
ಸುವ್ಯಕ್ತಂ ರಾಜಪುತ್ರೀ ತ್ವಂ ಯಥಾ ಕಲ್ಯಾಣಿ ಭಾಷಸೇ |
ಭಾರ್ಯಾ ಮೇ ಭವ ಸುಶ್ರೋಣಿ ಬ್ರೂಹಿ ಕಿಂ ಕರವಾಣಿ ತೇ ॥1॥
ಕಲ್ಯಾಣಿಯೇ,  ನೀನು ಮಾತನಾಡಿದಂತೆ ನೀನು ನಿಶ್ಚಯವಾಗಿ ರಾಜಪುತ್ರಿಯೇ ಸರಿ. ಸುಂದರಿಯೇ, ನನ್ನ ಪತ್ನಿಯಾಗು. ನಿನಗೆ ಏನು ಮಾಡಲಿ ಹೇಳು.
ಸುವರ್ಣಮಾಲಾಂ ವಾಸಾಂಸಿ ಕುಂಡಲೇ ಪರಿಪಾದುಕೇ |
ನಾನಾಪಟ್ಟಣಜೈಃ ಶುಭ್ರೈರ್ಮಣಿರತ್ನೈಶ್ಚ ಶೋಭನೈಃ ॥2॥
ಆಹರಾಮಿ ತವಾದ್ಯಾಹಂ ನಿಷ್ಕಾದೀನ್ಯಮಿತಾನಿ ಚ |
ಸರ್ವಂ ರಾಜ್ಯಂ ತವಾದ್ಯ ತ್ವಂ ಭಾರ್ಯಾ ಮೇ ಭವ ಶೋಭನೇ ॥3॥

ಚಿನ್ನದ ಸರಗಳನ್ನೂ, ವಸ್ತ್ರಗಳನ್ನೂ, ಕರ್ಣಕುಂಡಲಗಳನ್ನೂ, ಪಾದುಕೆಗಳನ್ನೂ, ಅನೇಕ ಪಟ್ಟಣಗಳಲ್ಲಿ ದೊರೆಯುವ ಶುಭ್ರವಾದ ಮಣಿರತ್ನಗಳನ್ನೂ ಮತ್ತು ಅಮಿತ ನಿಷ್ಕಾದಿಗಳನ್ನೂ ನಿನ್ನ ಸಲುವಾಗಿ ತರುತ್ತೇನೆ. ನನ್ನ ಎಲ್ಲಾ ರಾಜ್ಯವು ಇಂದಿನಿಂದ ನಿನ್ನದೇ. ಶುಭಳಾದವಳೇ, ನನ್ನ ಭಾರ್ಯೆಯಾಗು.
ಗಾಂಧರ್ವೇಣ ಚ ಮಾಂ ಭೀರು ವಿವಾಹೇನೈಹಿ ಸುಂದರಿ |
ವಿವಾಹಾನಾಂ ಹಿ ರಂಭೋರು ಗಾಂಧರ್ವಃ ಶ್ರೇಷ್ಠ ಉಚ್ಯತೇ ॥4॥
ಸುಂದರಿಯೇ, ಗಾಂಧರ್ವ ವಿವಾಹದಿಂದ ನನ್ನನ್ನು ಸಮೀಪಿಸು. ರಂಭೋರುವೇ, ಎಲ್ಲಾ ವಿವಾಹಗಳಲ್ಲಿ ಗಾಂಧರ್ವ ವಿವಾಹವು ಶ್ರೇಷ್ಠವೆನಿಸುತ್ತದೆ.
ಶಕುಂತಲಾ
ಫಲಾಹಾರೋ ಗತೋ ರಾಜನ್ ಪಿತಾ ಮಮ ಮಹಾತಪಾಃ |
ಮುಹೂರ್ತಂ ಸಂಪ್ರತೀಕ್ಷಸ್ವ ಸ ಮಾಂ ತುಭ್ಯಂ ಪ್ರದಾಸ್ಯತಿ ॥5॥
ಎಲೈ ರಾಜನೇ, ಮಹಾತಪಸ್ವಿಯಾದ ನನ್ನ ತಂದೆಯು ಹಣ್ಣುಗಳನ್ನು ತರಲು ಹೋಗಿದ್ದಾನೆ. ಒಂದು ಮುಹೂರ್ತ ನಿರೀಕ್ಷಿಸು. ಅವನೇ ನಿನಗೆ ನನ್ನನ್ನು ಕೊಡುವನು.
ಪಿತಾ ಹಿ ಮೇ ಪ್ರಭುರ್ನಿತ್ಯಂ ದೈವತಂ ಪರಮಂ ಮಮ |
ಯಸ್ಯ ಮಾಂ ದಾಸ್ಯತಿ ಪಿತಾ ಸ ಮೇ ಭರ್ತಾ ಭವಿಷ್ಯತಿ ॥6॥
ತಂದೆಯೇ ನನ್ನ ಒಡೆಯ. ಅವನೇ ನನ್ನ ಪರಮ ದೇವತೆ. ತಂದೆಯು ನನ್ನನ್ನು ಯಾರಿಗೆ ಕೊಡುವನೋ ಅವನು ನನ್ನ ಪತಿಯಾಗುವನು.
ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ |
ಪುತ್ರಸ್ತು ಸ್ಥಾವಿರೇ ಭಾವೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥7॥
ಬಾಲ್ಯದಲ್ಲಿ ತಂದೆಯು ರಕ್ಷಿಸುತ್ತಾನೆ. ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ. ವೃದ್ಧಾಪ್ಯದಲ್ಲಿ ಪುತ್ರನು ರಕ್ಷಿಸುತ್ತಾನೆ. ಸ್ತ್ರೀಯು ಸ್ವಾತಂತ್ರ್ಯವನ್ನು ವಹಿಸಬಾರದು.
ಅವಮನ್ಯಮಾನಾ ರಾಜೇಂದ್ರ ಪಿತರಂ ಮೇ ಮನಸ್ವಿನಮ್ |
ಅಧರ್ಮೇಣ ಹಿ ಧರ್ಮಿಷ್ಠ ಕಥಂ ವರಮುಪಾಸ್ಮಹೇ ॥8॥
ಎಲೈ ಧರ್ಮಿಷ್ಠನಾದ ರಾಜನೇ, ಧೈರ್ಯಶಾಲಿಯಾದ ನನ್ನ ತಂದೆಯನ್ನು ಅವಮಾನ ಮಾಡಿ ಅಧರ್ಮದಿಂದ ನಿನ್ನನ್ನು ಹೇಗೆ ವರಿಸಲಿ?
ದುಷ್ಯಂತಃ
ಮಾ ಮೈವಂ ವದ ಸುಶ್ರೋಣಿ ತಪೋರಾಶಿಂ ದಯಾತ್ಮಕಮ್ ॥9॥
ಸುಂದರಿಯೇ, ತಪೋರಾಶಿಯೂ, ದಯಾಪೂರ್ಣನೂ ಆದ ತಂದೆಯ ವಿಷಯದಲ್ಲಿ ಹೀಗೆ ಮಾತನಾಡಬೇಡ.
ಶಕುಂತಲಾ
ಮನ್ಯುಪ್ರಹರಣಾ ವಿಪ್ರಾ ನ ವಿಪ್ರಾಃ ಶಸ್ತ್ರಪಾಣಯಃ |
ಮನ್ಯುನಾ ಘ್ನಂತಿ ತೇ ಶತ್ರೂನ್ ವಜ್ರೇಣೇಂದ್ರ ಇವಾಸುರಾನ್ ॥
ಅಗ್ನಿರ್ದಹತಿ ತೇಜೋಭಿಃ ಸೂರ್ಯೋ ದಹತಿ ರಶ್ಮಿಭಿಃ |
ರಾಜಾ ದಹತಿ ದಂಡೇನ ಬ್ರಾಹ್ಮಣೋ ಮನ್ಯುನಾ ದಹೇತ್ ॥11॥
ಬ್ರಾಹ್ಮಣರು ಕೋಪವನ್ನೇ ಆಯುಧವಾಗಿವುಳ್ಳವರು. ಅವರು ಕೈಯಲ್ಲಿ ಶಸ್ತ್ರವನ್ನು ಹಿಡಿದಿರುವುದಿಲ್ಲ. ಇಂದ್ರನು ಅಸುರರನ್ನು ವಜ್ರಾಯುಧದಿಂದ ಸಂಹರಿಸಿದಂತೆ ಅವರು ಕೋಪದಿಂದಲೇ ಶತ್ರುಗಳನ್ನು ಸಂಹರಿಸುತ್ತಾರೆ. ಅಗ್ನಿಯು ತನ್ನ ತೇಜಸ್ಸಿನಿಂದ ಸುಡುತ್ತಾನೆ, ಸೂರ್ಯನು ಕಿರಣಗಳಿಂದ ಸುಡುತ್ತಾನೆ, ರಾಜನು ಶಿಕ್ಷೆಯಿಂದ ಸುಡುತ್ತಾನೆ, ಬ್ರಾಹ್ಮಣನು ಸಿಟ್ಟಿನಿಂದಲೇ ಸುಡುತ್ತಾನೆ.
ದುಷ್ಯಂತಃ
ಜಾನಾಮಿ ಭದ್ರೇ ಮಹರ್ಷಿಂ ತಸ್ಯ ಮನ್ಯುರ್ನ ವಿದ್ಯತೇ |
ಇಚ್ಛಾಮಿ ತ್ವಾಂ ವರಾರೋಹೇ ಭಜ ಮಾಂ ತ್ವಮನಿಂದಿತೇ ॥12॥
ಭದ್ರೇ, ನಾನು ಮಹರ್ಷಿಗಳನ್ನು ತಿಳಿದಿದ್ದೇನೆ. ಅವರಿಗೆ ಕೋಪವಿಲ್ಲ. ಸುಂದರಿಯೇ, ನಾನು ನಿನ್ನನ್ನು ಬಯಸುತ್ತಿದ್ದೇನೆ. ಅನಿಂದಿತಳಾದವಳೇ, ನನ್ನಲ್ಲಿ ಅನುರಾಗವನ್ನು ತೋರಿಸು.
ತ್ವದರ್ಥಂ ಮಾಂ ಸ್ಥಿತಂ ವಿದ್ಧಿ ತ್ವದ್ಗತಂ ಹಿ ಮನೋ ಮಮ |
ಆತ್ಮನೋ ಬಂಧುರಾತ್ಮೈವ ಗತಿರಾತ್ಮೈವ ಚಾತ್ಮನಃ |
ಆತ್ಮನೋ ಮಿತ್ರಮಾತ್ಮೈವ ಶತ್ರುರಾತ್ಮೈವ ಚಾತ್ಮನಃ ॥13॥
ನಿನ್ನ ಸಲುವಾಗಿ ನಾನು ಇಲ್ಲಿ ನಿಂತಿದ್ದೇನೆ. ನನ್ನ ಮನಸ್ಸು ನಿನ್ನಲ್ಲಿ ಲಗ್ನವಾಗಿದೆ. ತನಗೆ ತಾನೇ ಬಂಧು, ತನಗೆ ತಾನೇ ಗತಿ, ತನಗೆ ತಾನೇ ಮಿತ್ರ, ಮತ್ತು ತನಗೆ ತಾನೇ ಶತ್ರು.
ಆತ್ಮನೈವಾತ್ಮನೋ ದಾನಂ ಕರ್ತುಮರ್ಹಸಿ ಧರ್ಮತಃ |
ಅಷ್ಟಾವೇವ ಸಮಾಸೇನ ವಿವಾಹಾ ಧರ್ಮತಃ ಸ್ಮೃತಾಃ ॥14॥
ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಽಽಸುರಃ |
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥15॥
ನೀನಾಗಿಯೇ ಧರ್ಮದಿಂದ ನಿನ್ನನ್ನು ದಾನವನ್ನು ಮಾಡು. ಒಟ್ಟು ಎಂಟು ವಿವಾಹಗಳು ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ.

ಬ್ರಾಹ್ಮಣ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ ಇವು ಆ ಎಂಟು ವಿವಾಹ ಪ್ರಕಾರಗಳು. ಪೈಶಾಚವು ಎಲ್ಲಕ್ಕಿಂತಲೂ ನಿಕೃಷ್ಟವಾದುದು.
ತೇಷಾಂ ಧರ್ಮ್ಯಾಂ ಯಥಾಪೂರ್ವಂ ಮನುಃ
ಸ್ವಾಯಂಭುವೋಽಬ್ರವೀತ್ |
ಪ್ರಶಸ್ತಾಂಶ್ಚತುರಃ ಪೂರ್ವಾನ್ ಬ್ರಾಹ್ಮಣಸ್ಯಾವಧಾರಯ ॥16॥
ಅವುಗಳಲ್ಲಿ ಹಿಂದಿನವು ಮುಂದಿನವುಗಳಿಗಿಂತ ಹೆಚ್ಚು ಧಾರ್ಮಿಕವಾದುದು ಎಂದು ಸ್ವಾಯಂಭುವ ಮನುವು ಹೇಳಿದ್ದಾನೆ. ಮೊದಲನೆಯ ನಾಲ್ಕು ವಿವಾಹಗಳು ಬ್ರಾಹ್ಮಣರಿಗೆ ಪ್ರಶಸ್ತವಾದುದೆಂದು ತಿಳಿ.
ಷಡಾನುಪೂರ್ವ್ಯಾತ್ ಕ್ಷತ್ರಸ್ಯ ವಿದ್ಧಿ ಧರ್ಮಾನನಿಂದಿತೇ |
ರಾಜ್ಞಾಂ ತು ರಾಕ್ಷಸೋಽಯುಕ್ತೋ ವಿಟ್ಶೂದ್ರೇಷ್ವಾಸುರಃ ಸ್ಮೃತಃ ॥17॥
ಅನಿಂದಿತೆಯೇ, ಕ್ಷತ್ರಿಯನಿಗೆ ಮೊದಲನೆಯ ಆರು ವಿವಾಹಗಳು ಧಾರ್ಮಿಕವೆಂದು ತಿಳಿ. ರಾಜರಿಗೆ ರಾಕ್ಷಸವಿವಾಹವು ಅಯುಕ್ತವಾದುದು. ವೈಶ್ಯರಿಗೆ ಮತ್ತು ಶೂದ್ರರಿಗೆ ಆಸುರ ವಿವಾಹವು ಹೇಳಲ್ಪಟ್ಟಿದೆ.
ಪಂಚಾನಾಂ ಚ ತ್ರಯೋ ಧರ್ಮ್ಯಾ ದ್ವಾವಧರ್ಮ್ಯೌ ಮತಾವಿಹ |
ಪೈಶಾಚ ಆಸುರಶ್ಚೈವ ನ ಕರ್ತವ್ಯೌ ಕಥಂಚನ ॥18॥
ಪ್ರಾಜಾಪತ್ಯಾದಿ ಐದು ವಿವಾಹಗಳಲ್ಲಿ ಮೂರು ಧಾರ್ಮಿಕವಾದವು, ಎರಡು ಅಧಾರ್ಮಿಕವಾದವು ಎಂದು ಹೇಳಲ್ಪಡುತ್ತವೆ. ಪೈಶಾಚ ಮತ್ತು ಆಸುರ ವಿವಾಹಗಳನ್ನು ಮಾಡಲೇಬಾರದು.
ಅನ್ಯೇನ ವಿಧಿನಾ ಕಾರ್ಯೋ ಧರ್ಮಶ್ಚೈವ ಸನಾತನಃ |
ಗಾಂಧರ್ವರಾಕ್ಷಸೌ ಕ್ಷತ್ರೇ ಧರ್ಮ್ಯೌ ತೌ ಮಾ ವಿಶಂಕಥಾಃ ॥19॥
ಬೇರೆ ಯಾವುದಾದರೂ ವಿಧಿಯಿಂದ ಮಾಡುವುದು ಸನಾತನವಾದ ಧರ್ಮ. ಗಾಂಧರ್ವ, ರಾಕ್ಷಸ ವಿವಾಹಗಳು ಕ್ಷತ್ರಿಯರಿಗೆ ಧಾರ್ಮಿಕವೇ ಆಗಿವೆ. ಆದ್ದರಿಂದ ಸಂಶಯಪಡಬೇಡ.
ಪೃಥಗ್ ವಾ ಯದಿ ವಾ ಮಿಶ್ರೌ ಕರ್ತವ್ಯೌ ನಾತ್ರ ಸಂಶಯಃ |
ಸಾ ತ್ವಂ ಮಮ ಸಕಾಮಸ್ಯ ಸಕಾಮಾ ಭವ ಶೋಭನೇ |
ಗಾಂಧರ್ವೇಣ ವಿವಾಹೇನ ಭಾರ್ಯಾ ಮೇ ಭವ ಭಾಮಿನಿ ॥20॥
ಕೆಲವು ವಿವಾಹಗಳನ್ನು ಬೇರೆ ಬೇರೆಯಾಗಿಯೂ, ಕೆಲವು ವಿವಾಹಗಳನ್ನು ಬೇರೆ ಬೇರೆ ಪ್ರಕಾರಗಳನ್ನು ಬೆರೆಸಿಯೂ ಮಾಡಬಹುದು. ಇದರಲ್ಲಿ ಸಂಶಯವಿಲ್ಲ. ಶೋಭನೆಯೇ, ಕಾಮವುಳ್ಳ ನನಗೆ ನೀನು ಕಾಮವುಳ್ಳವಳಾಗಿ ಗಾಂಧರ್ವವಿವಾಹಪ್ರಕಾರದಿಂದ ನನ್ನ ಭಾರ್ಯೆಯಾಗು.
ಶಕುಂತಲಾ
ಯದಿ ಧರ್ಮಪಥಸ್ತ್ವೇಷ ಯದಿ ಚಾತ್ಮಾ ಪ್ರಭುರ್ಮಮ |
ಪ್ರದಾನೇ ಪೌರವಶ್ರೇಷ್ಠ ಶೃಣು ಮೇ ಸಮಯಂ ಪ್ರಭೋ ॥21॥
ಎಲೈ ಪೌರವಶ್ರೇಷ್ಠನೇ,ಇದು ಧರ್ಮದ ಮಾರ್ಗವೇ ಆದರೆ ಮತ್ತು ನಾನೇ ದಾನ ಮಾಡಲು ಸಮರ್ಥಳಾಗುವುದಾದರೆ, ದಾನದ ವಿಷಯದಲ್ಲಿ  ನನ್ನ ಷರತ್ತನ್ನು ಹೇಳುತ್ತೇನೆ ಕೇಳು.
ಸತ್ಯಂ ಮೇ ಪ್ರತಿಜಾನೀಷ್ವ ಯತ್ ತ್ವಾಂ ಯಾಚಾಮ್ಯಹಂ ರಹಃ |
ಮಮ ಜಾಯೇತ ಯಃ ಪುತ್ರಃ ಸ ರಾಜಾ ತ್ವದನಂತರಮ್ ॥22॥
ನಾನು ಏಕಾಂತದಲ್ಲಿ ನಿನ್ನನ್ನು ಏನು ಕೇಳುತ್ತೇನೆಯೋ, ಅದನ್ನು ಸತ್ಯವಾಗಿ ಮಾಡುತ್ತೇನೆಂದು ಪ್ರತಿಜ್ಞೆ ಮಾಡು. ನನಗೆ ಯಾವ ಪುತ್ರನು ಹುಟ್ಟುವನೋ, ಅವನು ನಿನ್ನ ತರುವಾಯ ರಾಜನಾಗಬೇಕು.
ಯುವರಾಜಶ್ಚ  ಕರ್ತವ್ಯಃ ಸತ್ಯಮೇತದ್ ಬ್ರವೀಹಿ ಮೇ |
ಯದ್ಯೇತದೇವಂ ದುಷ್ಯಂತ ಅಸ್ತು ಮೇ ಸಂಗಮಸ್ತ್ವಯಾ ॥23॥
ಅವನನ್ನು ಮೊದಲೇ ಯುವರಾಜನನ್ನಾಗಿ ಮಾಡಬೇಕು. ಈ ವಿಷಯವನ್ನು ನಾನು ಸತ್ಯವಾಗಿ ನುಡಿಯುತ್ತಿದ್ದೇನೆ. ದುಷ್ಯಂತನೇ, ನೀನು ಇದಕ್ಕೆ ಒಪ್ಪುವುದಾದರೆ, ನನ್ನ ಸಂಗಮವನ್ನು ಮಾಡಬಹುದು.
ವೈಶಂಪಾಯನಃ
ತಸ್ಯಾಸ್ತು ಸರ್ವಂ ಸಂಶ್ರುತ್ಯ ಯಥೋಕ್ತಂ ಸ ವಿಶಾಂಪತಿಃ |
ದುಷ್ಯಂತಃ ಪುನರೇವಾಹ ಯದ್ಯದಿಚ್ಛಸಿ ತದ್ ವದ ॥24॥
ರಾಜನಾದ ದುಷ್ಯಂತನು ಅವಳು ಕೇಳಿದುದೆಲ್ಲವನ್ನೂ ನಡೆಸಿಕೊಡುತ್ತೇನೆಂದು ಪ್ರತಿಜ್ಞೆ ಮಾಡಿ ಪುನಃ ನಿನ್ನ ಮನಸ್ಸಿನಲ್ಲೇನಾದರೂ ಇದ್ದರೆ ಅದನ್ನು ಹೇಳು ಎಂದು ಹೇಳಿದನು.
ಶಕುಂತಲಾ
ಖ್ಯಾತೋ ಲೋಕಪ್ರವಾದೋಽಯಂ ವಿವಾಹ ಇತಿ ಶಾಸ್ತ್ರತಃ |
ವೈವಾಹಿಕೀಂ ಕ್ರಿಯಾಂ ಸಂತಃ ಪ್ರಶಂಸಂತಿ ಪ್ರಜಾಹಿತಾಮ್ ॥25॥
ಶಾಸ್ತ್ರೀಯವಾದ ವಿವಾಹವು ಶುದ್ಧವಾದುದು ಎಂದು ಲೋಕಪ್ರವಾದವಿದೆ. ಸಜ್ಜನರು ಶುದ್ಧವಾದ ವೈವಾಹಿಕ ಕ್ರಿಯೆಯು ಮುಂದೆ ಹುಟ್ಟುವ ಪ್ರಜೆಗೆ ಹಿತವನ್ನು ಮಾಡುವುದೆಂದು ಪ್ರಶಂಸಿಸುತ್ತಾರೆ.
ಲೋಕಾಪವಾದಶಾಂತ್ಯರ್ಥಂ ವಿವಾಹಂ ವಿಧಿನಾ ಕುರು |
ಸಂತ್ಯತ್ರ ಯಜ್ಞಪಾತ್ರಾಣಿ ದರ್ಭಾಃ ಸುಮನಸೋಽಕ್ಷತಾಃ ॥26॥

ರಾಜನೇ, ಲೋಕಾಪವಾದಪರಿಹಾರಕ್ಕಾಗಿ ವಿಧಿಪೂರ್ವಕವಾಗಿ ವಿವಾಹವನ್ನು ಮಾಡಿಕೋ. ಇಲ್ಲಿ ಯಜ್ಞಪಾತ್ರೆಗಳು, ದರ್ಭೆಗಳು, ಹೂವುಗಳು ಮತ್ತು ಅಕ್ಷತೆಯೂ ಇವೆ.
ಯಥಾ ಯುಕ್ತೋ ವಿವಾಹಃ ಸ್ಯಾತ್ ತಥಾ ಯುಕ್ತಾ ಪ್ರಜಾ ಭವೇತ್ |
ತಸ್ಮಾದಾಜ್ಯಂ ಹವಿರ್ಲಾಜಾಃ ಸಿಕತಾ ಬ್ರಾಹ್ಮಣಾಸ್ತಥಾ ॥27॥
ವೈವಾಹಿಕಾನಿ ಚಾನ್ಯಾನಿ ಸರ್ವಮಸ್ತೀಹ ಪಾರ್ಥಿವ |
ದುರುಕ್ತಮಪಿ ರಾಜೇಂದ್ರ ಕ್ಷಂತವ್ಯಂ ಧರ್ಮಕಾರಣಾತ್ ॥28॥
ವಿವಾಹವು ಎಷ್ಟು ಶ್ರೇಷ್ಠವಾಗಿರುತ್ತದೆಯೋ, ಮುಂದೆ ಹುಟ್ಟುವ ಪ್ರಜೆಗಳುಅಷ್ಟೇ ಶ್ರೇಷ್ಠರಾಗಿರುತ್ತಾರೆ. ಆದ್ದರಿಂದ ಎಲೈ ರಾಜನೇ,ಇಲ್ಲಿ ಆಜ್ಯ, ಹವಿಸ್ಸು, ಲಾಜ, ಮರಳು, ಬ್ರಾಹ್ಮಣರು, ಮತ್ತು ವಿವಾಹಕ್ಕೆ ಬೇಕಾದ ಉಳಿದ ಎಲ್ಲಾ ಸಾಮಗ್ರಿಗಳೂ ಇವೆ. ರಾಜೇಂದ್ರನೇ, ನನ್ನ ಮಾತು ಒರಟಾಗಿದ್ದರೂ ಧರ್ಮದ ನಿಮಿತ್ತದಿಂದ ಆಡಿದುದರಿಂದ ಕ್ಷಮಿಸು.
ವೈಶಂಪಾಯನಃ
ಏವಮಸ್ತ್ವಿತಿ ತಾಂ ರಾಜಾ ಪ್ರತ್ಯುವಾಚಾವಿಚಾರಯನ್ |
ಪುರೋಹಿತಂ ಸಮಾಹೂಯ ವಚನಂ ಯುಕ್ತಮಬ್ರವೀತ್ ॥29॥
ರಾಜನು ಏನೂ ವಿಚಾರ ಮಾಡದೇ ಅವಳು ಹೇಳಿದುದಕ್ಕೆಲ್ಲಾ ಹಾಗೆಯೇ ಆಗಲಿ ಎಂದು ಒಪ್ಪಿ, ತನ್ನ ಪುರೋಹಿತನನ್ನು ಕರೆದು, ಯೋಗ್ಯವಾದ ಈ ಮಾತುಗಳನ್ನು ಆಡಿದನು.
ದುಷ್ಯಂತಃ
ರಾಜಪುತ್ರ್ಯಾ ಯದುಕ್ತಂ ವೈ ನ ವೃಥಾ ಕರ್ತುಮುತ್ಸಹೇ |
ಕ್ರಿಯಾಹೀನೋ ಹಿ ನ ಭವೇನ್ಮಮ ಪುತ್ರೋ ಮಹಾದ್ಯುತಿಃ |
ತಥಾ ಕುರುಷ್ವ ಶಾಸ್ತ್ರೋಕ್ತಂ ವಿವಾಹಂ ಮಾ ಚಿರಂ ಕೃಥಾಃ ॥30॥
ರಾಜಪುತ್ರಿಯು ಹೇಳಿದ ಯಾವ ಮಾತನ್ನೂ ನಾನು ವ್ಯರ್ಥಮಾಡಲು ಬಯಸುವುದಿಲ್ಲ. ನನಗೆ ಹುಟ್ಟಲಿರುವ ಮಹಾತೇಜಸ್ವಿಯಾದ ಮಗನು ಕ್ರಿಯಾಹೀನನಾಗಬಾರದು. ಆದ್ದರಿಂದ ಶಾಸ್ತ್ರೋಕ್ತವಿಧಾನದಿಂದ ವಿವಾಹವನ್ನು ಜರುಗಿಸು. ತಡ ಮಾಡಬೇಡ.
ವೈಶಂಪಾಯನಃ
ಏವಮುಕ್ತೋ ನೃಪತಿನಾ ದ್ವಿಜಃ ಪರಮಯಂತ್ರಿತಃ |
ಶೋಭನಂ ರಾಜರಾಜೇತಿ ವಿಧಿನಾ ಕೃತವಾನ್ ದ್ವಿಜಃ ॥31॥
ರಾಜನಿಂದ ಹೀಗೆ ಹೇಳಲ್ಪಟ್ಟ ಪುರೋಹಿತನು, ರಾಜನೇ, ಒಳ್ಳೆಯದು ಹಾಗೆಯೇ ಆಗಲಿ ಎಂದು ಪರಮವಿನಯದಿಂದ ಹೇಳಿ ಎಲ್ಲವನ್ನೂ ವಿಧಿವತ್ತಾಗಿ ಮಾಡಿದನು.
ಶಾಸನಾದ್ ವಿಪ್ರಮುಖ್ಯಸ್ಯ ಕೃತಕೌತುಕ ಮಂಗಲಃ |
ಜಗ್ರಾಹ ವಿಧಿವತ್ ಪಾಣಿಮುವಾಸ ಚ ತಯಾ ಸಹ ॥32॥
ವಿಪ್ರನ ಆದೇಶದಂತೆ ಮಂಗಲ ಕಾರ್ಯವನ್ನು ಮಾಡಿಕೊಂಡು ರಾಜನು ಶಕುಂತಲೆಯ ಪಾಣಿಗ್ರಹಣ ಮಾಡಿ ಅವಳೊಡನೆ ವಾಸ ಮಾಡಿದನು.
ವಿಶ್ವಾಸ್ಯ ಚೈನಾಂ ಪ್ರಾತಿಷ್ಠದಬ್ರವೀಚ್ಚ ಪುನಃ ಪುನಃ ॥33॥
ಅವಳಿಗೆ ಸಮಾಧಾನ ಮಾಡಿ ಪುನಃ ಪುನಃ ಅವಳಿಗೆ ಹೀಗೆ ಹೇಳಿ ರಾಜನು ಅಲ್ಲಿಂದ ಹೊರಟನು.
ಪ್ರೇಷಯಿಷ್ಯೇ ತವಾರ್ಥಾಯ ವಾಹಿನೀಂ ಚತುರಂಗಿಣೀಮ್ |
ತ್ರೈವಿದ್ಯವೃದ್ಧೈಃ ಸಹಿತಾ ನಾಗರಾ ಮಾಮಕೈಃ ಸಹ |
ಶಿಬಿಕಾಸಹಸ್ರೈಃ ಸಹಿತಾ ವನಮಾಯಾಂತಿ ಬಾಂಧವಾಃ ॥34॥
ನಿನ್ನ ಸಲುವಾಗಿ ನಾನು ಚತುರಂಗಸೈನ್ಯವನ್ನು ಕಳುಹಿಸುತ್ತೇನೆ. ಉಳಿದ ವೃದ್ಧರಾದ ಬ್ರಾಹ್ಮಣರ ಮತ್ತು ನನ್ನ ನಾಗರಿಕರ ಜೊತೆಯಲ್ಲಿ ನನ್ನ ಬಂಧುಗಳು ಒಂದು ಸಹಸ್ರ ಪಲ್ಲಕ್ಕಿಗಳನ್ನು ತೆಗೆದುಕೊಂಡು ಕಾಡಿಗೆ ಬರುತ್ತಾರೆ.
ಮೂಕಾಶ್ಚೈವ ಕಿರಾತಾಶ್ಚ ಕುಬ್ಜಾ ವಾಮನಕೈಃ ಸಹ |
ಸಹಿತಾ ಕಂಚುಕಿವರೈರ್ವಾಹಿನೀ ಸೂತಮಾಗಧೈಃ ॥35॥
ಶಂಖದುಂದುಭಿನಿರ್ಘೋಷೈರ್ವನಂ ಚ ಸಮುಪೇಷ್ಯತಿ |
ತಥಾ ತ್ವಾಮಾನಯಿಷ್ಯಾಮಿ ನಗರಂ ಸ್ವಂ ಶುಚಿಸ್ಮಿತೇ ॥36॥
ಆ ಸೈನ್ಯದ ಜೊತೆಯಲ್ಲಿ ಮೂಕರು, ಕಿರಾತರು, ಕುಬ್ಜರು, ವಾಮನರು, ಕಂಚುಕ ಶ್ರೇಷ್ಠರು, ಸೂತಮಾಗಧರು, ಶಂಖದುಂದುಭಿ ನಿರ್ಘೋಷದೊಂದಿಗೆ ಕಾಡಿಗೆ ಬರುತ್ತಾರೆ. ಎಲೌ ಶುಚಿಸ್ಮಿತೆಯೇ ಹಾಗೆ ನಾನು ನಿನ್ನನ್ನು (ವೈಭವದಿಂದ) ನನ್ನ ನಗರಕ್ಕೆ ಕರೆಸಿಕೊಳ್ಳುತ್ತೇನೆ.
ಅನ್ಯಥಾ ತ್ವಾಂ ನ ನೇಷ್ಯಾಮಿ ಸ್ವನಿವೇಶಮಸತ್ಕೃತಾಮ್ |
ಸರ್ವಮಂಗಲಸತ್ಕಾರೈಃ ಸುಭ್ರು ಸತ್ಯಂ ಕರೋಮಿ ತೇ ॥37॥
ನಿನಗೆ ಗೌರವವಿಲ್ಲದಂತೆ ಎಂದೂ ನಿನ್ನನ್ನು ಕರೆಸಿಕೊಳ್ಳುವುದಿಲ್ಲ. ಸುಂದರಿಯೇ, ಎಲ್ಲಾ ಮಂಗಳ ಸತ್ಕಾರದ ಜೊತೆಯಲ್ಲಿ ನಿನ್ನನ್ನು ಕರೆಸಿಕೊಳ್ಳುತ್ತೇನೆ. ಈ ವಿಷಯವನ್ನು ಸತ್ಯವಾಗಿ ಹೇಳುತ್ತಿದ್ದೇನೆ.
ವೈಶಂಪಾಯನಃ
ಏವಮುಕ್ತ್ವಾ ಸ ರಾಜರ್ಷಿಃ ತಾಮನಿಂದಿತಗಾಮಿನೀಮ್ |
ಸಂಪರಿಷ್ವಜ್ಯ ಬಾಹುಭ್ಯಾಂ ಸ್ಮಿತಪೂರ್ವಮುದೈಕ್ಷತ ॥38॥

ಆ ರಾಜರ್ಷಿಯು ಅನಿಂದಿತಗಾಮಿನಿಯಾದ ಅವಳನ್ನು ಬಾಹುಗಳಿಂದ ಆಲಿಂಗಿಸಿ ಸ್ಮಿತಪೂರ್ವಕವಾಗಿ ಅವಳನ್ನು ನೋಡಿದನು.
ಪ್ರದಕ್ಷಿಣೀಕೃತಾಂ ದೇವೀಂ ಪುನಸ್ತಾಂ ಪರಿಷಸ್ವಜೇ |
ಶಂಕುತಲಾ ಹ್ಯಶ್ರುಮುಖೀ ಪಪಾತ ನೃಪಪಾದಯೋಃ ॥39॥
ತನಗೆ ಪ್ರದಕ್ಷಿಣೆ ಮಾಡಿದ ಶಕುಂತಲೆಯನ್ನು ಪುನಃ ಆಲಿಂಗಿಸಿದನು. ಶಕುಂತಲೆಯು ಕಣ್ಣುಗಳಲ್ಲಿ ನೀರು ತುಂಬಿಕೊಂಡು ರಾಜನ ಪಾದಗಳ ಮೇಲೆ ಬಿದ್ದಳು.
ತಾಂ ದೇವೀಂ ಪುನರುತ್ಥಾಪ್ಯ ಮಾ ಶುಚೇತಿ ಪುನಃ ಪುನಃ |
ಶಪೇಯಂ ಸುಕೃತೇನೈವ ಪ್ರಾಪಯಿಷ್ಯೇ ನೃಪಾತ್ಮಜೇ ॥40॥
ಇತಿ ತಸ್ಯಾಃ ಪ್ರತಿಶ್ರುತ್ಯ ಸ ನೃಪೋ ಜನಮೇಜಯ |
ಮನಸಾ ಚಿಂತಯನ್ ಪ್ರಾಯಾತ್ ಕಾಶ್ಯಪಂ ಪ್ರತಿ ಪಾರ್ಥಿವಃ ॥41॥
ಆ ದೇವಿಯನ್ನು ಪುನಃ ಎತ್ತಿ ಶೋಕ ಪಡಬೇಡ ಎಂದು ಮತ್ತೆ ಮತ್ತೆ ಹೇಳಿ, ರಾಜಕುಮಾರಿಯೇ, ನನ್ನ ಪುಣ್ಯದ ಮೇಲೆ ಆಣೆ ಮಾಡಿ ಹೇಳುತ್ತೇನೆ. ನಿನ್ನನ್ನು ಕರೆಸಿಕೊಳ್ಳುತ್ತೇನೆ ಎಂದು ವಾಗ್ದಾನ ಮಾಡಿ ರಾಜನು ಕಾಶ್ಯಪರನ್ನು ಮನಸ್ಸಿನಲ್ಲಿ ಚಿಂತಿಸುತ್ತಾಪ್ರಯಾಣ ಮಾಡಿದನು.
ಭಗವಾಂಸ್ತಪಸಾ ಯುಕ್ತಃ ಶ್ರುತ್ವಾ ಕಿಂ ನು ಕರಿಷ್ಯತಿ |
ತಂ ನ ಪ್ರಸಾದ್ಯಾಗತೋಽಹಂ ಪ್ರಸೀದೇತಿ ದ್ವಿಜೋತ್ತಮಮ್ ॥42॥
ತಪಸ್ವಿಗಳಾದ ಕಾಶ್ಯಪರು ಆಶ್ರಮಕ್ಕೆ ಬಂದ ಮೇಲೆ ಹೇಗೆ ಅಭಿಪ್ರಾಯ ಪಡುತ್ತಾರೋ ತಿಳಿಯದು. ಅನುಗ್ರಹ ಮಾಡಿ ಎಂದು ದ್ವಿಜಶ್ರೇಷ್ಠರಾದ ಅವರನ್ನು ಕೇಳದೆ ನಾನು ಹಿಂದಿರುಗುತ್ತಿದ್ದೇನೆ.
ಏವಂ ಸಂಚಿಂತಯನ್ನೇವ ಪ್ರವಿವೇಶ ಸ್ವಕಂ ಪುರಮ್ |
ತತೋ ಮುಹೂರ್ತೇ ಯಾತೇ ತು ಕಣ್ವೋಽಪ್ಯಾಶ್ರಮಮಾಗತಃ ॥43॥
ಹೀಗೆ ಯೋಚಿಸುತ್ತಲೇ ರಾಜನು ತನ್ನ ಪಟ್ಟಣವನ್ನು ತಲುಪಿದನು. ರಾಜನು ಹೊರಟ ಮೇಲೆ ಒಂದು ಮುಹೂರ್ತದ ನಂತರ ಕಣ್ವರು ಆಶ್ರಮಕ್ಕೆ ಹಿಂದಿರುಗಿದರು.
ಶಕುಂತಲಾ ಚ ಪಿತರಂ ಹ್ರಿಯಾ ನೋಪಜಗಾಮ ತಮ್ |
ಶಂಕಿತೈವ ಚ ವಿಪ್ರರ್ಷಿಮುಪಚಕ್ರಾಮ ಸಾ ಶನೈಃ ॥44॥
ನಾಚಿಕೆಯಿಂದ ಕೂಡಿದ ಶಕುಂತಲೆಯು ತಂದೆಯ ಬಳಿಗೆ ಬೇಗ ಹೋಗಲಿಲ್ಲ. ಶಂಕಿತಳಂತೆ ಮೆಲ್ಲನೆ ಅವರ ಸಮೀಪಕ್ಕೆ ಹೋದಳು.
ಸಾ ತಸ್ಯ ಭಾರಂ ಜಗ್ರಾಹ ಆಸನಂ ಚಾಪ್ಯಕಲ್ಪಯತ್ |
ಪ್ರಾಕ್ಷಾಲಯಚ್ಚ ಸಾ ಪಾದೌ ಕಣ್ವಸ್ಯ ಸುಮಹಾತ್ಮನಃ ॥45॥
ಅವಳು ಅವರು ಹೊತ್ತಿದ್ದ ಭಾರವನ್ನು ತೆಗೆದುಕೊಂಡು ಅವರಿಗೆ ಆಸನವನ್ನು ಅಣಿಮಾಡಿ ಮಹಾತ್ಮರಾದ ಕಣ್ವರ ಪಾದಗಳನ್ನು ತೊಳೆದಳು.
ನ ಚೈನಂ ಲಜ್ಜಯಾಽಶಕ್ನೋದ್ ಅಕ್ಷಿಭ್ಯಾಮಭಿವೀಕ್ಷಿತುಮ್ |
ಶಕುಂತಲಾ ಚ ಸವ್ರೀಡಾ ತಮೃಷಿಂ ನಾಭ್ಯಭಾಷತ ॥46॥
ಅವಳು ನಾಚಿಕೆಯಿಂದ ಅವರನ್ನು ಕಣ್ಣಿಗೆ ಕಣ್ಣನ್ನು ಕೊಟ್ಟು ನೋಡಲು ಸಾಧ್ಯವಾಗಲಿಲ್ಲ. ವ್ರೀಡಿತಳಾದ ಶಕುಂತಲೆಯು ಋಷಿಗಳ ಜೊತೆಯಲ್ಲಿ ಮಾತನಾಡಲಿಲ್ಲ.
ತಸ್ಮಾತ್ ಸ್ವಧರ್ಮಾತ್ ಸ್ಖಲಿತಾ ಭೀತಾ ಸಾ ಭರತರ್ಷಭ |
ಅಭವದ್ ದೋಷದರ್ಶಿತ್ವಾದ್ ಬ್ರಹ್ಮಚಾರಿಣ್ಯಧಃ ಸ್ಥಿತಾ ॥47॥
ಎಲೈ ಭರತ ಶ್ರೇಷ್ಠನೇ,ತನ್ನ ಧರ್ಮದಿಂದ ತಾನು ಚ್ಯುತಳಾಗಿದ್ದೇನೆಂಬ ಭಯದಿಂದ ದೋಷವನ್ನು ಶಂಕಿಸಿದ ಬ್ರಹ್ಮಚಾರಿಣಿಯಾದ ಅವಳು ದೂರದಲ್ಲಿಯೇ ಕೆಳಗೆ ನಿಂತಳು.
ಸ ತದಾ ವ್ರೀಳಿತಾಂ ದೃಷ್ಟ್ವಾ ಋಷಿಸ್ತಾಂ ಪ್ರತ್ಯಭಾಷತ |
ಸವ್ರೀಳೇವ ಚ ದೀರ್ಘಾಯುಃ ಪುರೇವ ಭವಿತಾ ನ ಚ |
ವೃತ್ತಂ ಕಥಯ ರಂಭೋರು ಮಾ ತ್ರಾಸಂ ಚ ಪ್ರಕಲ್ಪಯ ॥48॥
ನಾಚಿಕೊಳ್ಳುತ್ತಿರುವ ಶಕುಂತಲೆಯನ್ನು ನೋಡಿ ಋಷಿಗಳೇ ಮಾತನಾಡಿದರು. ದೀರ್ಘಾಯುಷ್ಯವಂತಳೇ, ಹಿಂದೆಂದೂ ಇಲ್ಲದ ನಾಚಿಕೆಯಿಂದ ಕೂಡಿರುವೆ. ಸುಂದರಿಯೇ, ಏನು ನಡೆಯಿತೆಂದು ಹೇಳು. ಹೆದರಬೇಡ.
ವೈಶಂಪಾಯನಃ
ತತಃ ಪ್ರಕ್ಷಾಲ್ಯ ಪಾದೌ ಸಾ ವಿಶ್ರಾಂತಂ ಪುನರಬ್ರವೀತ್ |
ವಿಧಾಯ ಕಾಮಂ ತಸ್ಯರ್ಷೇಃ ಕಂದಾನಿ ಚ ಫಲಾನಿ ಚ ॥49॥
ತತಃ ಸಂವಾಹ್ಯ ಪಾದೌ ಸಾ ವಿಶ್ರಾಂತಂ ವೇದಿಮಧ್ಯಮಾ |
ಶಕುಂತಲಾ ಪೌರವಾಣಾಂ ದುಷ್ಯಂತಂ ಶುಶ್ರುಷೀ ಪತಿಮ್ ॥50॥
ಪೌರವಾಣಾಂ ನೃಪವರಂ ದುಷ್ಯಂತಂ ಮನಸಾಽಗಮತ್ |
ತತಃ ಕೃಚ್ಛ್ರಾದತಿಶುಭಾ ಸವ್ರೀಡಾ ಶ್ರೀಮತೀ ತದಾ |
ಸಗದ್ಗದಮುವಾಚೇದಂ ಕಾಶ್ಯಪಂ ಸಾ ಶುಚಿಸ್ಮಿತಾ ॥51॥
ಅನಂತರ ಅವಳು ಪಾದಗಳನ್ನು ತೊಳೆದು ವಿಶ್ರಾಂತಿಯನ್ನು ತೆಗೆದುಕೊಂಡ ಕಣ್ವರನ್ನು ಕುರಿತು ಮಾತನಾಡಿದಳು. ಅವರಿಗೆ ಬೇಕಾದ ಉಪಚಾರಗಳನ್ನು ಮಾಡಿ, ಕಂದಫಲಗಳನ್ನು ತಂದಿಟ್ಟು, ಅವರ ಪಾದಗಳನ್ನು ಒತ್ತುತ್ತಾ, ವೇದಿಮಧ್ಯಳಾದ ಅವಳು ಪೌರವನಾದ

ದುಷ್ಯಂತನ ಅಪ್ಪಣೆಯನ್ನು ಕೇಳುವಂತೆ ತನ್ನ ಪತಿಯಾದ ದುಷ್ಯಂತನನ್ನು ಮನಸಾ ಸ್ಮರಿಸಿದಳು.
ಅನಂತರ ಅತ್ಯಂತ ಪವಿತ್ರಳೂ, ಕಾಂತಿಯುಕ್ತಳೂ ಆದ ಅವಳು ನಾಚಿಕೆಯಿಂದ ಮತ್ತು ಬಹಳ ಕಷ್ಟದಿಂದ, ನಡುಗುವ ಸ್ವರದಿಂದ ಶುಚಿಸ್ಮಿತೆಯಾಗಿ ಕಾಶ್ಯಪರನ್ನು ಕುರಿತು ಹೇಳಿದಳು.
ಶಕುಂತಲಾ
ರಾಜಾ ತಾತಾಜಗಾಮೇಹ ದುಷ್ಯಂತ ಇಲಿಲಾತ್ಮಜಃ |
ಮಯಾ ಪತಿರ್ವೃತೋ ಯೋಽಸೌ ದೈವಯೋಗಾದಿಹಾಗತಃ ॥52॥
ತಸ್ಯ ತಾತ ಪ್ರಸೀದಸ್ವ ಭರ್ತಾ ಮೇ ಸುಮಹಾಯಶಾಃ |
ಅತಃ ಸರ್ವಂ ತು ಯದ್ ವೃತ್ತಂ ದಿವ್ಯಜ್ಞಾನೇನ ಪಶ್ಯಸಿ |
ಅಭಯಂ ಕ್ಷತ್ರಿಯಕುಲೇ ಪ್ರಸಾದಂ ಕರ್ತುಮರ್ಹಸಿ ॥53॥
ತಂದೆಯೇ, ಇಲಿಲನ ಪುತ್ರನಾದ ದುಷ್ಯಂತನೆಂಬ ರಾಜನು ದೈವಯೋಗದಿಂದ ಇಲ್ಲಿಗೆ ಬಂದಿದ್ದನು. ನಾನು ಅವನನ್ನು ಪತಿಯನ್ನಾಗಿ ವರಿಸಿದೆ. ನನ್ನ ಪತಿಯು ಮಹಾಕೀರ್ತಿವಂತನಾದವನು. ಅವನ ಮೇಲೆ ನಿನ್ನ ಅನುಗ್ರಹವಿರಲಿ. ಮುಂದೆ ಏನು ನಡೆಯಿತೆಂದು ದಿವ್ಯಜ್ಞಾನದಿಂದ ನೀನೇ ತಿಳಿದುಕೋ. ನೀನು ಕ್ಷತ್ರಿಯಕುಲಕ್ಕೆ ಅಭಯವನ್ನು ಕೊಟ್ಟು ಅನುಗ್ರಹವನ್ನು ಮಾಡಬೇಕು.
ವೈಶಂಪಾಯನಃ
ಚಕ್ಷುಷಾ ಸ ತು ದಿವ್ಯೇನ ಸರ್ವಂ ವಿಜ್ಞಾಯ ಕಾಶ್ಯಪಃ |
ತತೋ ಧರ್ಮಿಷ್ಠತಾಂ ಮತ್ವಾ ಧರ್ಮೇ ಚಾಸ್ಖಲಿತಂ ಮನಃ |
ಉವಾಚ ಭಗವಾನ್ ಪ್ರೀತಃ ತದ್ ವೃತ್ತಂ ಸ ಮಹಾತಪಾಃ ॥54॥
ಕಾಶ್ಯಪರು ತಮ್ಮ ದಿವ್ಯದೃಷ್ಟಿಯಿಂದ ಎಲ್ಲವನ್ನೂ ತಿಳಿದು ಆ ವಿವಾಹವು ಧಾರ್ಮಿಕವೆಂದೇ ತಿಳಿದು ಧರ್ಮದ ವಿಷಯದಲ್ಲಿ ಎಂದೂ ತಮ್ಮ ಮನಸ್ಸು ಅನ್ಯಥಾ ಭಾವಿಸಿಲ್ಲ ಎಂದು ಗಮನಿಸಿ ಸಂತೋಷದಿಂದ ಅವಳನ್ನು ಕುರಿತು ಹೇಳಿದರು.
ತ್ವಯಾಽದ್ಯ ರಾಜಾನ್ವಯಯಾ ಮಾಮನಾದೃತ್ಯ ಯತ್ ಕೃತಮ್ |
ಪುಂಸಾ ಸಹ ಸಮಾಯೋಗೋ ನ ಸ ಧರ್ಮಾಪಘಾತಕಃ |
ನ ಭಯಂ ವಿದ್ಯತೇ ಭದ್ರೇ ಮಾ ಶುಚಃ ಸುಕೃತಂ ಕೃತಮ್ ॥55॥
ರಾಜಕುಲದಲ್ಲಿ ಜನಿಸಿದ ನಿನ್ನಿಂದ ಈ ದಿನ ನನ್ನ ಅಪ್ಪಣೆಯಿಲ್ಲದೆ ಮಾಡಿದ ಪುರುಷಸಮಾಗಮವನ್ನು ನಾನು ಧಾರ್ಮಿಕವೆಂದೇ ತಿಳಿಯುತ್ತೇನೆ. ಮಂಗಳಳೇ, ಭಯ ಪಡಬೇಡ. ಶೋಕವನ್ನೂ ಪಡಬೇಡ. ಒಳ್ಳೆಯ ಕೆಲಸವನ್ನೇ ಮಾಡಿದ್ದೀಯೆ.
ಕ್ಷತ್ರಿಯಸ್ಯ ತು ಗಾಂಧರ್ವೋ ವಿವಾಹಃ ಶ್ರೇಷ್ಠ ಉಚ್ಯತೇ |
ಸಕಾಮಾಯಾಃ ಸಕಾಮೇನ ನಿರ್ಮಂತ್ರೋ ರಹಸಿ ಸ್ಮೃತಃ |
ಕಿಂ ಪುನರ್ವಿಧಿವತ್ ಕೃತ್ವಾ ಸುಪ್ರಜಾಸ್ತ್ವಮವಾಪ್ಸ್ಯಸಿ ॥56॥
ಸಕಾಮರಾದ ಕ್ಷತ್ರಿಯರ ಜೊತೆಯಲ್ಲಿ ರಹಸ್ಯದಲ್ಲಿ ಮಂತ್ರವಿಲ್ಲದೆ ನಡೆದ ವಿವಾಹವು ಶ್ರೇಷ್ಠವೆನಿಸುತ್ತದೆ. ಹೀಗಿರುವಾಗ ವಿಧಿವತ್ತಾಗಿ ಮಾಡಿದ ವಿವಾಹದಲ್ಲಿ ಏಕೆ ಸಂಶಯ? ನಿನಗೆ ಒಳ್ಳೆಯ ಮಗನು ಜನಿಸುತ್ತಾನೆ.
ಧರ್ಮಾತ್ಮಾ ಚ ಮಹಾತ್ಮಾ ಚ ದುಷ್ಯಂತಃ ಪುರುಷೋತ್ತಮಃ | ಅಭ್ಯಾಗಚ್ಛತ್ ಪತಿರ್ಯಸ್ತ್ವಾಂ ಭಜಮಾನಾಂ ಶಕುಂತಲೇ |
ಮಹಾತ್ಮಾ ಜನಿತಾ ಲೋಕೇ ಪುತ್ರಸ್ತವ ಮಹಾಯಶಾಃ ॥57॥
ಪುರುಷೋತ್ತಮನಾದ ದುಷ್ಯಂತನು ಧರ್ಮಾತ್ಮನೂ, ಮಹಾತ್ಮನೂ ಆದವನು. ಶಕುಂತಲೆಯೇ, ಅವನು ಅನುರಕ್ತಳಾದ ನಿನ್ನ ಸಂಗವನ್ನು ಮಾಡಿದ್ದಾನೆ. ನಿನಗೆ ಮಹಾತ್ಮನೂ ಮತ್ತು ಕೀರ್ತಿವಂತನೂ ಆದ ಪುತ್ರನು ಜನಿಸುತ್ತಾನೆ.
ಸ ಚ ಸರ್ವಾಂ ಸಮುದ್ರಾಂತಾಂ ಕೃತ್ಸ್ನಾಂ ಭೋಕ್ಷ್ಯತಿ ಮೇದಿನೀಮ್ |
ಪರಂ ಜಾಭಿಪ್ರಯಾತಸ್ಯ ಚಕ್ರಂ ತಸ್ಯ ಮಹಾತ್ಮನಃ ॥58॥
ಭವಿಷ್ಯತ್ಯಪ್ರತಿಹತಂ ವಿತತಂ ಚಕ್ರವರ್ತಿನಃ |
ಪ್ರಸನ್ನ ಏವ ತಸ್ಯಾಹಂ ತ್ವತ್ಕೃತೇ ವರವರ್ಣಿನಿ ॥59॥
ಅವನು ಸಮುದ್ರಾಂತವಾದ, ಸಮಗ್ರವಾದ ಭೂಮಿಯನ್ನು ಆಳುತ್ತಾನೆ. ಶತ್ರುವಿನ ಮೇಲೆ ದಂಡೆತ್ತಿ ಹೋಗುವ ಆ ಮಹಾತ್ಮನ ಆಜ್ಞಾಚಕ್ರವು ವಿಸ್ತಾರವಾಗಿದ್ದು ಎಂದೂ ಪ್ರತಿಹತವಾಗುವುದಿಲ್ಲ. ಸುಂದರಿಯೇ, ನಿನ್ನ ಸಲುವಾಗಿ ನಾನು ಅವನಿಗೆ ಪ್ರಸನ್ನನಾಗಿಯೇ ಇದ್ದೇನೆ.
ಋತವೋ ಬಹವಸ್ತೇ ವೈ ಗತಾ ವ್ಯರ್ಥಾಃ ಶುಚಿಸ್ಮಿತೇ |
ಸಾರ್ಥಕಂ ಸಾಂಪ್ರತಂ ಹ್ಯೇತನ್ನ ಚ ಪಾಪ್ಮೋಽಸ್ತಿ ತೇಽನೇ |
ಗೃಹಾಣ ಚ ವರಂ ಮತ್ತಸ್ತ್ವತ್ಕೃತೇ ಯದಭೀಪ್ಸಿತಮ್ ॥60॥
ಶುಚಿಸ್ಮಿತೆಯೇ, ನಿನ್ನ ಅನೇಕ ಋತುಕಾಲಗಳು ವ್ಯರ್ಥವಾಗಿ ಹೋದವು. ಈ ಬಾರಿಯ ಋತುವು ವ್ಯರ್ಥವಾಗಲಿಲ್ಲ. ಶುದ್ಧಳೇ, ನಿನಗೆ ಯಾವ ಪಾಪವೂ ಇಲ್ಲ. ನನ್ನಿಂದ ಅವನ ಸಲುವಾಗಿ ಅಭೀಷ್ಟವಾದ ವರವನ್ನು ಪಡೆ.
ಶಕುಂತಲಾ
ಮಯಾ ಪತಿರ್ವೃತೋ ಯೋಽಸೌ ದುಷ್ಯಂತಃ ಪುರುಷೋತ್ತಮಃ |
ಮಮ ಚೈವ ಪತಿರ್ದೃಷ್ಟೋ ವಿಧಾತ್ರಾಽಪಿ ನ ಸಂಶಯಃ
ತಸ್ಮೈ ಸಸಚಿವಾಯ ತ್ವಂ ಪ್ರಸಾದಂ ಕರ್ತುಮರ್ಹಸಿ ॥61॥
ನಾನು ಪತಿಯಾಗಿ ವರಿಸಿದ ಪುರುಷಶ್ರೇಷ್ಠನಾದ ದುಷ್ಯಂತನು ವಿಧಿಬರಹದಿಂದಲೂ ನನ್ನ ಪತಿಯಾಗಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ. ಅವನ ಮೇಲೂ ಮತ್ತು ಅವನ ಸಚಿವರ ಮೇಲೂ ನಿಮ್ಮ ಅನುಗ್ರಹವಿರಬೇಕು.

ವೈಶಂಪಾಯನಃ
ಇತ್ಯೇವಮುಕತ್ತ್ವ ಮನಸಾ ಪ್ರಣಿಧಾಯ ಮನಸ್ವಿನೀ |
ತಸ್ಯ ಧರ್ಮಿಷ್ಠತಾಂ ವವ್ರೇ ರಾಜ್ಯೇ ಚಾಸ್ಖಲನಂ ತಥಾ ॥62॥
ಹೀಗೆ ಹೇಳಿ ಶಕುಂತಲೆಯು ಮನಸ್ಸಿನಲ್ಲಿ ದುಷ್ಯಂತನನ್ನು ಯೋಚಿಸಿ, ಅವನ ಧರ್ಮಿಷ್ಠತೆಯನ್ನೂ ಮತ್ತು ರಾಜ್ಯದ ಸ್ಥಿರತೆಯನ್ನೂ ವರವಾಗಿ ಬೇಡಿದಳು.
ಶಕುಂತಲಾಂ ಪೌರವಾಣಾಂ ದುಷ್ಯಂತಸ್ಯ ಹಿತೈಷಿಣೀಮ್ |
ಏವಮಸ್ತ್ವಿತಿ ತಾಂ ಪ್ರಾಹ ಕಣ್ವೋ ಧರ್ಮಭೃತಾಂ ವರಃ |
ಪಸ್ಪರ್ಶ ಚೈವ ಪಾಣಿಭ್ಯಾಂ ಸುತಾಂ ಶ್ರೀರಿವ ರೂಪಿಣೀಮ್ ॥63॥
ಪೌರವರ ವಂಶದಲ್ಲಿ ಜನಿಸಿದ ದುಷ್ಯಂತನಿಗೆ ಹಿತವನ್ನು ಬಯಸುವ ಶಕುಂತಲೆಗೆ ಹಾಗೆಯೇ ಆಗಲಿ ಎಂದು ಹೇಳಿ ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಕಣ್ವರು ಲಕ್ಷ್ಮಿಯಂತೆ ಸುಂದರಳಾಗಿದ್ದ ತಮ್ಮ ಮಗಳನ್ನು ತಮ್ಮ ಕೈಗಳಿಂದ ಮುಟ್ಟಿದರು.
ಕಣ್ವಃ
ಅದ್ಯಪ್ರಭೃತಿ ದೇವೀ ತ್ವಂ ದುಷ್ಯಂತಸ್ಯ ಮಹಾತ್ಮನಃ |
ಪತಿವ್ರತಾನಾಂ ಯಾ ವೃತ್ತಿಸ್ತಾಂ ವೃತ್ತಿಮನುಪಾಲಯ ॥64॥
ಮಗಳೇ, ನೀನು ಇಂದಿನಿಂದ ಮಹಾತ್ಮನಾದ ದುಷ್ಯಂತನ ರಾಣಿ. ನೀನು ಇಂದಿನಿಂದ ಪತಿವ್ರತೆಯ ಧರ್ಮಗಳನ್ನು ಅನುಸರಿಸಬೇಕು.
ವೈಶಂಪಾಯನಃ
ಇತ್ಯೇವಮುಕತ್ತ್ವ ಧರ್ಮಾತ್ಮಾ ತಾಂ ವಿಶುದ್ಧ್ಯರ್ಥಮಸ್ಪೃಶತ್ |
ಸ್ಪೃಷ್ಟಮಾತ್ರೇ ಶರೀರೇ ತು ಪರಂ ಹರ್ಷಮವಾಪ ಸಾ ॥65॥
ಹೀಗೆ ಹೇಳಿ ಧರ್ಮಾತ್ಮರಾದ ಕಣ್ವರು ಅವಳ ವಿಶುದ್ಧ್ಯರ್ಥವಾಗಿ ಮತ್ತೊಮ್ಮೆ ಅವಳನ್ನು ಸ್ಪರ್ಶಿಸಿದರು. ತಂದೆಯು ಸ್ಪರ್ಶಮಾಡಿದ ತಕ್ಷಣ ಶಕುಂತಲೆಯು ಪರಮ ಹರ್ಷವನ್ನು ಪಡೆದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನ ನವತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಎಂಬತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****
ತೊಂಭತ್ತನೆಯ ಅಧ್ಯಾಯ
(ಶಕುಂತಲೆಯ ಗರ್ಭವೃದ್ಧಿ, ಮೂರು ವರ್ಷಗಳ ನಂತರ ಪುತ್ರೋತ್ಪತ್ತಿ, ಶಿಶುವಿನ ನಾಮಕರಣ ಮತ್ತು ಬಾಲಲೀಲೆಗಳು.)
ವೈಶಂಪಾಯನಃ
ಪ್ರತಿಜ್ಞಾಯ ತು ದುಷ್ಯಂತೇ ಪ್ರತಿಯಾತೇ ಶಕುಂತಲಾಮ್ |
ಗರ್ಭಶ್ಚ ವವೃಧೇ ತಸ್ಯಾ ರಾಜ್ಞಃ ಪತ್ನ್ಯಾ ಮಹಾತ್ಮನಃ ॥1॥
ಶಕುಂತಲೆಗೆ ವಚನವನ್ನು ಕೊಟ್ಟು ದುಷ್ಯಂತನು ಪ್ರಯಾಣ ಮಾಡಿದ ಮೇಲೆ, ಮಹಾತ್ಮನಾದ ಆ ರಾಜನ ಪತ್ನಿಯಾದ ಶಕುಂತಲೆಯ ಗರ್ಭವು ವೃದ್ಧಿಯನ್ನು ಹೊಂದಿತು.
ಶಕುಂತಲಾ ಚಿಂತಯಂತೀ ರಾಜಾನಂ ಕಾರ್ಯಗೌರವಾತ್ |
ರಾಜಪ್ರೇಷಣಿಕಾ ವಿಪ್ರಾಃ ಚತುರಂಗಬಲೈಃ ಸಹ ॥2॥
ಅದ್ಯ ಶ್ವೋ ವಾ ಪರಶ್ವೋ ವಾ ಸಮಾಯಾಂತೀತಿ ನಿಶ್ಚಿತಾ |
ದಿವಸಾನ್ ಪಕ್ಷಾನೃತೂನ್ ಮಾಸಾನಯನಾನಿ ಚ ಸರ್ವಶಃ |
ಗಣ್ಯಮಾನೇಷು ವರ್ಷೇಷು ವ್ಯತೀಯುಸ್ತ್ರೀಣಿ ಭಾರತ ॥3॥
ಶಕುಂತಲೆಯು ಕಾರ್ಯಗೌರವದಿಂದ ರಾಜನು ಬರಲಿಲ್ಲವೆಂದು ಚಿಂತಿಸಿದಳು. ರಾಜನು ಕಳುಹಿಸಿದ ಬ್ರಾಹ್ಮಣರು ಮತ್ತು ಚತುರಂಗ ಸೈನ್ಯವು ಇಂದೋ, ನಾಳೆಯೋ ಅಥವಾ ಮರುದಿನವೋ ಬರುವುದೆಂದು ತಿಳಿದು ದಿವಸಗಳನ್ನು, ಪಕ್ಷಗಳನ್ನು, ಋತುಗಳನ್ನು, ಮಾಸಗಳನ್ನು, ಮತ್ತು ಅಯನಗಳನ್ನು ಎಲ್ಲವನ್ನೂ ಕಳೆದಳು. ಎಲೈ ಭಾರತನೇ, ಹೀಗೆ ವರ್ಷಗಳು ಉರುಳಿ ಮೂರು ವರ್ಷಗಳು ಸಂದವು.
ತ್ರಿಷು ವರ್ಷೇಷು ಪೂರ್ಣೇಷು ಋಷೇರ್ವಚನಗೌರವಾನ್ |
ಋಷಿಪತ್ನ್ಯಃ ಸುಬಹವೋ ಹೇತುಮದ್ವಾಕ್ಯಮಬ್ರುವನ್ ॥4॥
ಶೃಣು ಭದ್ರೇ ಲೋಕವೃತ್ತಂ ಶ್ರುತ್ವಾ ಯದ್ ರೋಚತೇ ತವ |
ತತ್ ಕುರುಷ್ವ ಹಿತಂ ದೇವಿ ನಾವಮಾನ್ಯಂ ಗುರೋರ್ವಚಃ ॥5॥
ಮೂರು ವರ್ಷಗಳು ಪೂರ್ಣವಾದಾಗ ಅನೇಕ ಋಷಿಪತ್ನಿಯರು ಋಷಿಮಾತಿನ ಮೇಲಿನ ಗೌರವದಿಂದಾಗಿ ಯುಕ್ತಿಯುಕ್ತವಾದ ಮಾತುಗಳನ್ನು ಹೇಳಿದರು. ಮಂಗಳಸ್ವರೂಪಳೇ, ನಮ್ಮ ಮಾತನ್ನು ಕೇಳು. ಲೋಕವೃತ್ತವನ್ನು ತಿಳಿದು ನಿನಗೆ ಹೇಗೆ ಇಷ್ಟವೋ ಹಾಗೆ ಮಾಡು. ಗುರುಗಳ ಮಾತು ಹಿತವಾದುದು. ಅದನ್ನು ಎಂದೂ ಮೀರಬಾರದು.
ದೇವಾನಾಂ ದೈವತಂ ವಿಷ್ಣುರ್ವಿಪ್ರಾಣಾಮಗ್ನಿದೈವತಮ್ |
ನಾರೀಣಾಂ ದೈವತಂ ಭರ್ತಾ ಲೋಕಾನಾಂ ಬ್ರಾಹ್ಮಣಂ ವಿದುಃ ॥6॥
ಸೂತಿಕಾಲೇ ಪ್ರಸೂಯೇತಿ ಭಗವಾಂಸ್ತೇ ಪಿತಾಽಬ್ರವೀತ್ |
ಕರಿಷ್ಯಾಮೀತಿ ಕರ್ತವ್ಯಂ ತಥಾ ತೇ ಸುಕೃತಂ ಭವೇತ್ ॥7॥

ದೇವತೆಗಳಿಗೆ ವಿಷ್ಣುವೇ ದೇವತೆ. ಬ್ರಾಹ್ಮಣರಿಗೆ ಅಗ್ನಿಯು ದೇವತೆ, ನಾರಿಯರಿಗೆ ಪತಿಯು ದೇವತೆ, ಜನರಿಗೆ ಬ್ರಾಹ್ಮಣರು ದೇವತೆ ಎಂದು ತಿಳಿದವರು ಹೇಳುತ್ತಾರೆ. ಸೂತಿಕಾಲವು ಪ್ರಾಪ್ತವಾದಾಗ ಪ್ರಸವವನ್ನು ಮಾಡು ಎಂದು ಪೂಜ್ಯರಾದ ನಿನ್ನ ತಂದೆಯು ಹೇಳಿದ್ದರು. ನೀನು ಹಾಗೆಯೇ ಮಾಡುತ್ತೇನೆ ಎಂದು ಹೇಳಿದ್ದೆ. ಹಾಗೆ ಮಾಡಿದರೆ ಒಳ್ಳೆಯದಾಗುತ್ತದೆ.
ವೈಶಂಪಾಯನಃ
ಪತ್ನೀನಾಂ ವಚನಂ ಶ್ರುತ್ವಾ ಸಾಧು ಸಾಧ್ವಿತ್ಯಚಿಂತಯತ್ |
ಗರ್ಭಂ ಸುಷಾವ ವಾಮೋರೂಃ ಕುಮಾರಮಮಿತೌಜಸಮ್ ॥8॥
ಋಷಿಪತ್ನಿಯರ ವಚನವನ್ನು ಕೇಳಿ ಸರಿಯಾದುದು ಎಂದು ತಿಳಿದು ಸುಂದರಿಯಾದ ಶಕುಂತಲೆಯು ಅಮಿತಪರಾಕ್ರಮಿಯಾದ ಕುಮಾರನನ್ನು ಪ್ರಸವಿಸಿದಳು.
ತ್ರಿಷು ವರ್ಷೇಷು ಪೂರ್ಣೇಷು ಪ್ರಾಜಾಯತ ಶಕುಂತಲಾ |
ರೂಪೌದಾರ್ಯಗುಣೋಪೇತಂ ದೌಷ್ಯಂತಿಂ ಜನಮೇಜಯ ॥9॥
ಎಲೈ ಜನಮೇಜಯನೇ, ಮೂರು ವರ್ಷಗಳ ಕಾಲ ಗರ್ಭವನ್ನು ಧರಿಸಿದ ನಂತರ ಶಕುಂತಲೆಯು ರೂಪ, ಔದಾರ್ಯ ಮತ್ತು ಗುಣಗಳಿಂದ ಕೂಡಿದ ದುಷ್ಯಂತನ ಮಗನನ್ನು ಹಡೆದಳು.
ತಸ್ಮಿಂಸ್ತ್ತದಾಽಂತರಿಕ್ಷಾತ್ ತು ಪುಷ್ಪವೃಷ್ಟಿಃ ಪಪಾತ ಹ |
ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ |
ಗಾಯಂತೋ ಮಧುರಂ ತತ್ರ ದೇವೈಃ ಶಕ್ರೋಽಭ್ಯುವಾಚ ಹ ॥10॥
ಆಗ ಆಕಾಶದಿಂದ ಪುಷ್ಪವೃಷ್ಟಿಯು ಉಂಟಾಯಿತು. ದೇವದುಂದುಭಿಗಳು ಮೊಳಗಿದವು. ಅಪ್ಸರೆಯರ ಗಣಗಳು ಮಧುರವಾಗಿ ಗಾನ ಮಾಡುತ್ತಾ ನರ್ತನವನ್ನು ಮಾಡಿದವು. ಆಗ ದೇವತೆಗಳಿಂದ ಕೂಡಿದ ಶಕ್ರನು ಹೀಗೆ ಮಾತನಾಡಿದನು.
ಶಕುಂತಲೇ ತವ ಸುತಶ್ಚಕ್ರವರ್ತೀ ಭವಿಷ್ಯತಿ |
ಬಲಂ ತೇಜಶ್ಚ ರೂಪಂ ಚ ನ ಸಮಂ ಭುವಿ ಕೇನಚಿತ್ |
ಆಹರ್ತಾ ವಾಜಿಮೇಧಸ್ಯ ಶತಸಂಖ್ಯಸ್ಯ ಪೌರವಃ ॥11॥
ಅನೇಕೈರಿಹಸಾಹಸ್ರೈಃ ರಾಜಸೂಯಾದಿಭಿರ್ಮಖೈಃ |
ಸ್ವಾರ್ಥಂ ಬ್ರಾಹ್ಮಣಸಾತ್ ಕೃತ್ವಾ ದಕ್ಷಿಣಾಮಮಿತಾಂ ದದತ್ ॥12॥
ಶಕುಂತಲೆ, ನಿನ್ನ ಮಗನು ಚಕ್ರವರ್ತಿಯಾಗುವನು. ಅವನ ಬಲಕ್ಕೆ, ತೇಜಸ್ಸಿಗೆ ಮತ್ತು ರೂಪಕ್ಕೆ ಸಮವಾದುದು ಭೂಮಿಯಲ್ಲಿ ಯಾವುದೂ ಇರುವುದಿಲ್ಲ. ಪೌರವನಾದ ಇವನು ನೂರು ಅಶ್ವಮೇಧಯಾಗವನ್ನು ಮಾಡುವನು. ಸಹಸ್ರಾರು ರಾಜಸೂಯಾದಿ ಯಾಗಗಳಿಂದ ತನ್ನ ಸಂಪತ್ತೆಲ್ಲವನ್ನು ಬ್ರಾಹ್ಮಣರಿಗೆ ಕೊಟ್ಟು ಅಮಿತವಾದ ದಕ್ಷಿಣೆಯನ್ನು ಕೊಡುತ್ತಾನೆ.
ವೈಶಂಪಾಯನಃ
ದೇವತಾನಾಂ ವಚಃ ಶ್ರುತ್ವಾ ಕಣ್ವಾಶ್ರಮನಿವಾಸಿನಃ |
ಸಭಾಜಯಂತ ಕಣ್ವಸ್ಯ ಸುತಾಂ ಸರ್ವೇ ಮಹರ್ಷಯಃ ॥13॥
ಶಕುಂತಲಾ ಚ ತಚ್ಛ್ರುತ್ವಾ ಪರಂ ಹರ್ಷಮವಾಪ ಸಾ |
ದ್ವಿಜಾನಾಹೂಯ ಮುನಿಭಿಃ ಸತ್ಕೃತ್ಯ ಚ ಮಹಾಯಶಾಃ ॥14॥
ದೇವತೆಗಳ ಮಾತನ್ನು ಕೇಳಿ ಕಣ್ವಾಶ್ರಮ ನಿವಾಸಿಗಳಾದ ಎಲ್ಲಾ ಮಹರ್ಷಿಗಳೂ ಕಣ್ವರ ಮಗಳಾದ ಶಕುಂತಲೆಯನ್ನು ಅಭಿನಂದಿಸಿದರು. ಆ ಮಾತುಗಳನ್ನು ಕೇಳಿ ಶಕುಂತಲೆಯು ಬಹಳ ಹರ್ಷಗೊಂಡಳು.
ಜಾತಕರ್ಮಾದಿಸಂಸ್ಕಾರಂ ಕಣ್ವಃ ಪುಣ್ಯವತಾಂ ವರಃ |
ತಯಾಸ್ಯ ಕಾರಯಾಮಾಸ ವರ್ಧಮಾನಸ್ಯ ಚಾಸಕೃತ್ |
ಯಥಾವಿಧಿ ಯಥಾನ್ಯಾಯಂ ಕ್ರಿಯಾಃ ಸರ್ವಾಸ್ತ್ವಕಾರಯತ್ ॥15॥
ಮಹಾಕೀರ್ತಿವಂತರೂ, ಪುಣ್ಯವಂತರಲ್ಲಿ ಶ್ರೇಷ್ಠರೂ ಆದ ಕಣ್ವರು ಬ್ರಾಹ್ಮಣರನ್ನು ಕರೆಸಿ ಅವರನ್ನು ಸತ್ಕರಿಸಿ ಋಷಿಗಳಿಂದ ಶಿಶುವಿಗೆ ಶಕುಂತಲೆಯ ಮೂಲಕ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದರು. ಬೆಳೆಯುತ್ತಿರುವ ಆ ಶಿಶುವಿಗೆ ಶಾಸೊತ್ರೋಕ್ತವಾಗಿ ಮತ್ತು ಕಾಲಕ್ಕೆ ಸರಿಯಾಗಿ ಅನೇಕ ಬಾರಿ ಬ್ರಾಹ್ಮಣರಿಂದ ಎಲ್ಲಾ ಸಂಸ್ಕಾರಗಳನ್ನು ಮಾಡಿಸಿದರು.
ದಂತೈಃ ಶುಭ್ರೈಃ ಶಿಖರಿಭಿಃ ಸಿಂಹಸಂಹನನೋ ಯುವಾ |
ಚಕ್ರಾಂಕಿತಕರಃ ಶ್ರೀಮಾನ್ ಸ್ವಯಂ ವಿಷ್ಣುರಿವಾಪರಃ ॥16॥
ಚತುಷ್ಕಿಷ್ಕುಶ್ಚ ಕಿಷ್ಕುಶ್ಚ ಮಹಾಮೂರ್ಧಾ ಮಹಾಬಲಃ |
ಕುಮಾರೋ ದೇವಗರ್ಭಾಭಃ ಸ ತತ್ರಾಶು ವ್ಯವರ್ಧತ ॥17॥
ಬಾಲಕನು ಬೆಳೆಯುತ್ತಾ ಯುವಕನಂತೆ ಸಿಂಹದ ಕಾಂತಿಯನ್ನು ಪಡೆದನು. ಮೊನಚಾದ, ಶುಭ್ರವಾದ ದಂತಗಳನ್ನುಳ್ಳವನಾಗಿ, ಕೈಗಳಲ್ಲಿ ಚಕ್ರದ ಚಿಹ್ನೆಯನ್ನು ಧರಿಸಿ, ಕಾಂತಿಯುಕ್ತನಾಗಿ ಇನ್ನೊಬ್ಬ ವಿಷ್ಣುವಿನಂತೆ ಶೋಭಿಸಿದನು. ಮಹಾಬಲನಾದ ಅವನ ಶಿರಸ್ಸು ನಾಲ್ಕು ಹಸ್ತ ಎತ್ತರವೂ, ಒಂದು ಹಸ್ತ ಅಗಲವೂ ಇದ್ದಿತು. ದೇವತೆಗಳ ಮಗನಂತಿದ್ದ ಆ ಕುಮಾರನು ಬಹಳ ಬೇಗ ಬೆಳೆದನು.
ಋಷೇರ್ಭಯಾತ್ ತು ದುಷ್ಯಂತಃ ಸ್ಮರನ್ನಪಿ ನಚಾಸ್ಮರತ್ |
ಗತೇ ಕಾಲೇ ತು ಮಹತಿ ನ ಸಸ್ಮಾರ ತಪೋಧನಾಮ್ ॥18॥
ಋಷಿಗಳ ಭಯದಿಂದ ದುಷ್ಯಂತನು ಶಕುಂತಲೆಯನ್ನು ಸ್ಮರಣೆ ಮಾಡಿದರೂ, ಸ್ಮರಣೆ ಮಾಡದಂತೆ ಇದ್ದನು. ಬಹಳ ಕಾಲವು ಕಳೆದಂತೆ, ತಪೋಧನಳಾದ ಶಕುಂತಲೆಯನ್ನು ಮರೆತುಬಿಟ್ಟನು.
ಷಡ್ವರ್ಷೇಷು ತತೋ ಬಾಲಃ ಕಣ್ವಾಶ್ರಮಪದಂ ಪ್ರತಿ |

ವ್ಯಾಘ್ರಾನ್ ಸಿಂಹಾನ್ ವರಾಹಾಂಶ್ಚ ವೃಕಾಂಶ್ಚ ಮಹಿಷಾಂಸ್ತಥಾ |
ಋಕ್ಷಾಂಶ್ಚಾಪಿ ದ್ವಿಜಾನನ್ಯಾನ್ ಪದ್ಭ್ಯಾಮಾಶ್ರಮಪೀಡಕಾನ್ ॥19॥
ಬಲಾದ್ ಭುಜಾಭ್ಯಾಂ ಸಂಗೃಹ್ಯ ಬಲವಾನ್ ಸನ್ನಿಯಮ್ಯ ಚ |
ಬದ್ಧ್ವಾ ವೃಕ್ಷೇಷು ದೌಷ್ಯಂತಿರಾಶ್ರಮಸ್ಯ ಸಮೀಪತಃ ॥20॥
ಆರೋಹದ್ ದಮಯಂಶ್ಚೈವ ಕ್ರೀಡನ್ ಸ್ಮ ಪರಿಧಾವತಿ |
ವನಂ ಚ ಲೋಡಯಾಮಾಸ ಸಿಂಹವ್ಯಾಘ್ರಗಣೈರ್ವೃತಮ್ ॥21॥
ಆರು ವರ್ಷಗಳು ತುಂಬಿದಾಗ, ಆ ಬಾಲಕನು ಕಣ್ವಾಶ್ರಮದ ಬಳಿ ಸಂಚರಿಸುವ ವ್ಯಾಘ್ರಗಳು, ಸಿಂಹಗಳು, ವರಾಹಗಳು, ತೋಳಗಳು, ಮಹಿಷಗಳು, ಕರಡಿಗಳು ಮುಂತಾದ ಪ್ರಾಣಿಗಳನ್ನೂ, ತಮ್ಮ ಪಾದಗಳಿಂದ ಆಶ್ರಮವನ್ನು ಪೀಡಿಸುವ ಪಕ್ಷಿಗಳನ್ನೂ, ತನ್ನ ಭುಜಗಳಲ್ಲಿ ಹಿಡಿದು ಅವುಗಳನ್ನು ನಿಯಂತ್ರಿಸಿ, ಅವುಗಳ ಮೇಲೆ ಸವಾರಿಯನ್ನು ಮಾಡಿ ಆಶ್ರಮದ ಸಮೀಪದಲ್ಲಿದ್ದ ಮರಗಳಿಗೆ ಕಟ್ಟುತ್ತಿದ್ದನು.
ಆರೋಹದ್ ದಮಯಂಶ್ಚೈವ ಕ್ರೀಡನ್ ಸ್ಮ ಪರಿಧಾವತಿ |
ವನಂ ಚ ಲೋಡಯಾಮಾಸ ಸಿಂಹವ್ಯಾಘ್ರಗಣೈರ್ವೃತಮ್ ॥22॥
ಅವುಗಳನ್ನು ನಿಯಂತ್ರಿಸಿ, ಅವುಗಳ ಮೇಲೇರಿ ಆಟವಾಡುತ್ತಾ, ವನದಲ್ಲಿ ಸಂಚರಿಸುತ್ತಾ, ಸಿಂಹವ್ಯಾಘ್ರಗಳಿಂದ ಕೂಡಿದ್ದ ಆಶ್ರಮದ ಸಮೀಪದ ವನವನ್ನು ಕಲಕಾಡಿದನು.
ತತೋ ರಾಕ್ಷಸಸಂಘಾಂಶ್ಚ ಪಿಶಾಚಾಂಶ್ಚ ರಿಪೂನ್ ರಣೇ |
ಮುಷ್ಟಿಯುದ್ಧೇನ ನಿರ್ಜಿತ್ಯ ಋಷೀನಾರಾಧಯತ್ ತದಾ ॥23॥
ಅನಂತರ ರಾಕ್ಷಸರನ್ನೂ, ಪಿಶಾಚಗಳನ್ನೂ ಮತ್ತು ಶತ್ರುಗಳನ್ನೂ ಯುದ್ಧದಲ್ಲಿ ಮುಷ್ಟಿಯುದ್ಧದಿಂದ ಗೆದ್ದು ಋಷಿಗಳನ್ನು ಸಂತೋಷಗೊಳಿಸಿದನು.
ಕಶ್ಚಿದ್ ದಿತಿಸುತಸ್ತಂ ತು ಹಂತುಕಾಮೋ ಮಹಾಬಲಃ |
ವಧ್ಯಮಾನಾಂಸ್ತು ದೈತೇಯಾನಮರ್ಷೀ ತಂ ಸಮಭ್ಯಯಾತ್ ॥24॥
ದೈತ್ಯರು ವಧೆಗೆ ಒಳಗಾಗುವುದನ್ನು ನೋಡಿ ಕೋಪಗೊಂಡ ಮಹಾಬಲಿಷ್ಠನಾದ ಒಬ್ಬ ದೈತ್ಯನು ಅವನ ಸಮೀಪಕ್ಕೆ ಬಂದನು.
ತಮಾಗತಂ ಪ್ರಹಸ್ಯೈವ ಬಾಹುಭ್ಯಾಂ ಪರಿಗೃಹ್ಯ ಚ |
ದೃಢಂ ಚಾಬಧ್ಯ ಬಾಹುಭ್ಯಾಂ ಪೀಡಯಾಮಾಸ ತಂ ತದಾ ॥25॥
ಸಮೀಪಕ್ಕೆ ಬಂದಂತಹ ದೈತ್ಯನನ್ನು ನೋಡಿ ನಕ್ಕು, ತನ್ನ ಬಾಹುಗಳಿಂದ ಅವನನ್ನು ಹಿಡಿದು ದೃಢವಾಗಿ ಬಂಧಿಸಿ ಅವನನ್ನು ಪೀಡಿಸಿದನು.
ಮರ್ದಿತೋ ನ ಶಶಾಕಾಸ್ಯ ಮೋಕ್ಷಿತುಂ ಬಲವತ್ತಯಾ |
ಪ್ರಾಕ್ರೋಶದ್ ಭೈರವಂ ತತ್ರ ದ್ವಾರೇಭ್ಯೋ ನಿಃಸೃತಂ ತ್ವಸೃಕ್ ॥26॥
ಹೀಗೆ ಮರ್ದನಕ್ಕೆ ಒಳಗಾದ ಆ ದೈತ್ಯನು ಬಲಿಷ್ಠನಾದ ದೌಷ್ಯಂತಿಯಿಂದ ಬಿಡಿಸಿಕೊಳ್ಳಲು ಸಾಧ್ಯವಾಗದೆ ಭೈರವನಾದದಿಂದ ಕಿರುಚಿದನು. ಅವನ ಎಲ್ಲಾ ದ್ವಾರಗಳಿಂದಲೂ ರಕ್ತವು ಹರಿದು ಬಂದಿತು.
ತೇನ ಶಬ್ದೇನ ವಿತ್ರಸ್ತಾ ಮೃಗಾಃ ಸಿಂಹಾದಯೋ ಗಣಾಃ |
ಸುಸ್ರುವುಶ್ಚ ಶಕೃನ್ಮೂತ್ರಮ್ ಆಶ್ರಮಸ್ಥಾಶ್ಚ ಸುಸ್ರುವುಃ ॥27॥
ಆ ಶಬ್ದಕ್ಕೆ ಹೆದರಿದ ಮೃಗಗಳು ಮತ್ತು ಸಿಂಹಾದಿಗಳು ಮಲಮೂತ್ರಗಳನ್ನು ವಿಸರ್ಜಿಸಿದವು. ಆಶ್ರಮದ ಪ್ರಾಣಿಗಳು ಸಹ ಹಾಗೆಯೇ ಮಾಡಿದವು.
ನಿರಸುರ್ಜಾನುನಾ ಭೂಮೌ ಪಪಾತ ಭುವಿ ಪೀಡಿತಃ |
ತಂ ದೃಷ್ಟ್ವಾ ವಿಸ್ಮಯಂ ಜಗ್ಮುಃ ಕುಮಾರಸ್ಯ ವಿಚೇಷ್ಟಿತಮ್ ॥28॥
ದೌಷ್ಯಂತಿಯಿಂದ ಪೀಡಿಸಲ್ಪಟ್ಟ ಅವನು ಮಂಡಿಗಳ ಮೇಲೆ ಕುಸಿದು ಭೂಮಿಯಲ್ಲಿ ಪ್ರಾಣಬಿಟ್ಟನು. ಕುಮಾರನ ಇಂತಹ ಚೇಷ್ಟೆಯನ್ನು ನೋಡಿ ಆಶ್ರಮವಾಸಿಗಳೆಲ್ಲರೂ ವಿಸ್ಮಿತರಾದರು.
ನಿತ್ಯಕಾಲಂ ವಧ್ಯಮಾನಾ ದೈತೇಯಾ ರಾಕ್ಷಸೈಃ ಸಹ |
ಕುಮಾರಸ್ಯ ಭಯಾದೇವ ನೈವ ಜಗ್ಮುಸ್ತದಾಶ್ರಮಮ್ ॥29॥
ಯಾವಾಗಲೂ ವಧೆಗೆ ಒಳಗಾಗುತ್ತಿದ್ದ ದೈತ್ಯರು ಮತ್ತು ರಾಕ್ಷಸರನ್ನು ನೋಡಿ ಉಳಿದ ದೈತ್ಯರು ಮತ್ತು ರಾಕ್ಷಸರು ಕುಮಾರನ ಭಯದಿಂದ ಆಶ್ರಮದ ಸಮೀಪಕ್ಕೆ ಬರುತ್ತಿರಲಿಲ್ಲ.
ತತೋಽಸ್ಯ ನಾಮ ಚಕ್ರುಸ್ತೇ ಕಣ್ವಾಶ್ರಮನಿವಾಸಿನಃ |
ಕಣ್ವೇನ ಸಹಿತಾಃ ಸರ್ವೇ ದೃಷ್ಟ್ವಾ ಕರ್ಮಾತಿಮಾನುಷಮ್ ॥30॥
ಅಸ್ತ್ವಯಂ ಸರ್ವದಮನಃ ಸರ್ವಂ ಹಿ ದಮಯತ್ಯಸೌ |
ಸ ಸರ್ವದಮನೋ ನಾಮ ಕುಮಾರಃ ಸಮಪದ್ಯತ |
ವಿಕ್ರಮೇಣೌಜಸಾ ಚೈವ ಬಲೇನ ಚ ಸಮನ್ವಿತಃ ॥31॥
ಆಗ ಕಣ್ವಾಶ್ರಮ ನಿವಾಸಿಗಳು ಕಣ್ವರ ಜೊತೆಯಲ್ಲಿ ಇವನ ಅತಿಮಾನುಷವಾದ ಕರ್ಮಗಳನ್ನು ನೋಡಿ, ಇವನು ಎಲ್ಲರನ್ನೂ ನಿಗ್ರಹ ಮಾಡುವುದರಿಂದ ಇವನು `ಸರ್ವದಮನ' ಎಂದು ಕರೆಯಲ್ಪಡಲಿ ಎಂದು ಹೇಳಿದರು. ಹಾಗೆ ದೌಷ್ಯಂತಿಯು ವಿಕ್ರಮದಿಂದಲೂ, ಬಲದಿಂದಲೂ ಮತ್ತು ಪ್ರತಾಪದಿಂದಲೂ ಕೂಡಿದವನಾಗಿ ಸರ್ವದಮನನಾದನು.
ಅಪ್ರೇಷಯತಿ ದುಷ್ಯಂತೇ ಮಹಿಷ್ಯಾನಯನಸ್ಯ ಚ |

ಪಾಂಡುಭಾವಪರೀತಾಂಗೀಂ ಚಿಂತಯಾಽಭಿಪರಿಪ್ಲುತಾಮ್ |
ಲಂಬಾಲಕಾಂ ಕೃಶಾಂ ದೀನಾಂ ತಥಾ ಮಲಿನವಾಸಸಮ್ ॥32॥
ಶಕುಂತಲಾಂ ಚ ಸಂಪ್ರೇಕ್ಷ್ಯ ಪ್ರದಧ್ಯೌ ಸ ಮುನಿಸ್ತದಾ |
ಶಾಸ್ತ್ರಾಣಿ ಸರ್ವವೇದಾಶ್ಚ ದ್ವಾದಶಾಬ್ದಸ್ಯ ಚಾಭವನ್ ॥33॥
ದುಷ್ಯಂತನು ಶಕುಂತಲೆಯನ್ನು ಕರೆಸಿಕೊಳ್ಳಲು ಯಾರನ್ನೂ ಕಳುಹಿಸದಿರಲು ಶಕುಂತಲೆಯು ಪಾಂಡುಭಾವವನ್ನು ಪಡೆದವಳಾಗಿ ಚಿಂತೆಯಿಂದ ಕೂಡಿದವಳಾಗಿ, ಮಲಿನ ವಸ್ತ್ರವನ್ನು ಧರಿಸಿ ದುಃಖಿಸಿದಳು. ಅಂತಹ ಶಕುಂತಲೆಯನ್ನು ನೋಡಿ ಕಣ್ವರು ಏನು ಮಾಡಬೇಕೆಂದು ಯೋಚಿಸಿದರು. ಈ ವೇಳೆಗೆ ದ್ವಾದಶ ವರ್ಷಗಳು ತುಂಬಿದ ಸರ್ವದಮನನು ಎಲ್ಲಾ ವೇದಗಳನ್ನೂ ಮತ್ತು ಶಾಸ್ತ್ರಗಳನ್ನೂ ಅಧ್ಯಯನ ಮಾಡಿದನು.
ವೈಶಂಪಾಯನಃ
ತಂ ಕುಮಾರಮೃಷಿರ್ದೃಷ್ಟ್ವಾ ಕರ್ಮ ಚಾಸ್ಯಾತಿಮಾನುಷಮ್ |
ಸಮಯೋ ಯೌವರಾಜ್ಯಾಯ ಇತ್ಯನುಧ್ಯಾಯ ಸ ದ್ವಿಜಃ |
ಶಕುಂತಲಾಂ ಸಮಾಹೂಯ ಕಣ್ವೋ ವಚನಮಬ್ರವೀತ್ ॥34॥
ಕಣ್ವರು ಆ ಕುಮಾರನನ್ನು ಅವನ ಅಮಾನುಷ ಕರ್ಮಗಳನ್ನೂ ನೋಡಿ ಯುವರಾಜ್ಯಕ್ಕೆ ಸರಿಯಾದ ಕಾಲವೆಂದು ಚಿಂತಿಸಿ ಶಕುಂತಲೆಯನ್ನು ಕರೆದು ಮಾತನಾಡಿದರು.
ಪಿತೃಭ್ರಾತೃಸುತಾನಾಂ ಚ ದಂಪತೀನಾಂ ವಿಶೇಷತಃ |
ದರ್ಶನಂ ದ್ವಾದಶಾದಬ್ದಾದಂತಃ ಕಾರ್ಯಮಿತಿ ದ್ವಿಜಃ |
ತನ್ಮಾನವೇನ ಸ್ಮೃತಿನಾ ಧ್ಯಾತ್ವಾ ಪ್ರೋಕ್ತಮಿತಿ ಪ್ರಭುಃ ॥35॥
ತಂದೆ, ಅಣ್ಣತಮ್ಮಂದಿರು, ಮಕ್ಕಳು ಮತ್ತು ದಂಪತಿಗಳು ಬೇರೆಯಾಗಿದ್ದರೆ ಹನ್ನೆರಡು ವರ್ಷಗಳ ಒಳಗೆ ಅವರ ದರ್ಶನವನ್ನು ಮಾಡಬೇಕೆಂಬ ಮನುಸ್ಮತಿಯ ಆದೇಶವನ್ನು ಚಿಂತಿಸಿ ಮಾತನಾಡಿದರು.
ಕಣ್ವಃ
ಶೃಣು ಭದ್ರೇ ಮಮ ಸುತೇ ಮಮ ವಾಕ್ಯಂ ಶುಚಿಸ್ಮಿತೇ |
ಪತಿವ್ರತಾನಾಂ ನಾರೀಣಾಂ ವಿಶಿಷ್ಟಮಿತಿ ಚೋಚ್ಯತೇ ॥36॥
ಮಂಗಳೆಯಾದ, ಶುಚಿಸ್ಮಿತೆಯಾದ ಮಗಳೇ, ನನ್ನ ಮಾತನ್ನು ಕೇಳು. ಪತಿವ್ರತೆಯಾದ ನಾರಿಯರಿಗೆ ಇದು ವಿಶಿಷ್ಟವಾದುದು ಎಂದು ಹೇಳುತ್ತಿದ್ದೇನೆ.
ಪತಿಶುಶ್ರೂಷಣಂ ಪೂರ್ವಂ ಮನೋವಾಕ್ಕಾಯಚೇಷ್ಟಿತೈಃ |
ಅನುಜ್ಞಾತಾ ಮಯಾ ಪೂಜ್ಯಂ ಪೂಜಯೈತದ್ ವ್ರತಂ ಶುಭಮ್ ॥37॥
ಮನೋವಾಕ್ಕಾಯವ್ಯಾಪಾರಗಳಿಂದ ಪತಿಯ ಶುಶ್ರೂಷೆಯನ್ನು ಮಾಡಬೇಕಾದುದು ಪತಿವ್ರತೆಯರ ಮೊದಲನೆಯ ಕಾರ್ಯ. ನನ್ನಿಂದ ಅನುಜ್ಞಾತಳಾಗಿ ಈ ಶುಭವಾದ ವ್ರತವನ್ನು ಧರಿಸಿ ಪೂಜ್ಯನಾದ ದುಷ್ಯಂತನನ್ನು ಪೂಜಿಸು. ಇದು ಶ್ರೇಷ್ಠವಾದ ವ್ರತ.
ಏತೇನೈವ ಚ ವೃತ್ತೇನ ಪುಣ್ಯಾನ್ ಲೋಕಾನವಾಪ್ಸ್ಯಸಿ |
ತಸ್ಯಾಂತೇ ಮಾನುಷೇ ಲೋಕೇ ವಿಶಿಷ್ಟಾಂ ಲಪ್ಸ್ಯಸೇ ಶ್ರಿಯಮ್ ॥38॥
ಇಂತಹ ನಡತೆಯಿಂದಲೇ ನೀನು ಪುಣ್ಯಲೋಕಗಳನ್ನು ಹೊಂದುತ್ತೀಯೆ ಅಲ್ಲದೆ ಮನುಷ್ಯಲೋಕದಲ್ಲಿಯೂ ವಿಶಿಷ್ಟವಾದ ಸಂಪತ್ತನ್ನು ಪಡೆಯುತ್ತೀಯೆ.
ತಸ್ಮಾದ್ ಭದ್ರೇ ಪ್ರಯಾತವ್ಯಂ ಸಮೀಪಂ ಪೌರವಸ್ಯ ಹ |
ಸ್ವಯಂ ನಾಯಾತಿ ಮತ್ವಾ ತೇ ಗತಃ ಕಾಲಃ ಶುಚಿಸ್ಮಿತೇ ॥39॥
ಆದ್ದರಿಂದ ಭದ್ರೆಯೇ, ಪೌರವನಾದ ದುಷ್ಯಂತನ ಸಮೀಪಕ್ಕೆ ನೀನು ಹೋಗಬೇಕು. ಶುಚಿಸ್ಮಿತೆಯೇ, ಬಹಳ ಕಾಲವು ಕಳೆಯಿತೆಂದು ತಿಳಿದು ರಾಜನು ತಾನಾಗಿಯೇ ಬರುತ್ತಿಲ್ಲ.
ಗತ್ವಾಽಽರಾಧಯ ರಾಜಾನಂ ದುಷ್ಯಂತಂ ಹಿತಕಾಮ್ಯಯಾ |
ದೌಷ್ಯಂತಿಂ ಯೌವರಾಜ್ಯಸ್ಥಂ ದೃಷ್ಟ್ವಾ ಪ್ರೀತಿಮವಾಪ್ಸ್ಯಸಿ ॥40॥
ಆದ್ದರಿಂದ ನೀನೇ ಹೋಗಿ ದುಷ್ಯಂತನ ಹಿತವನ್ನು ಬಯಸಿ ಅವನನ್ನು ಆರಾಧಿಸು. ಯೌವರಾಜಸ್ಥನಾದ ಸರ್ವದಮನನನ್ನು ನೋಡಿ ನೀನು ಸಂತೋಷವನ್ನು ಹೊಂದುವಿ.
ದೇವತಾನಾಂ ಗುರೂಣಾಂ ಚ ಕ್ಷತ್ರಿಯಾಣಾಂ ಚ ಭಾಮಿನಿ |
ಭರ್ತೃಣಾಂ ಚ ವಿಶೇಷೇಣ ಹಿತಂ ಸಂಗಮನಂ ಸತಾಮ್ ॥41॥
ಸುಂದರಿಯೇ, ದೇವತೆಗಳಿಗೂ, ಗುರುಗಳಿಗೂ, ಕ್ಷತ್ರಿಯರಿಗೂ, ಪತಿಗಳಿಗೂ, ಸಜ್ಜನರ ಸಂಗವು ಹಿತವಾದುದು.
ತಸ್ಮಾತ್ ಪುತ್ರಿ ಕುಮಾರೇಣ ಗಂತವ್ಯಂ ಮತ್ಪ್ರಿಯೇಪ್ಸಯಾ |
ಪ್ರತಿವಾಕ್ಯಂ ನ ದದ್ಯಾಸ್ತ್ವಂ ಶಪಿತಾ ಮಮ ಪಾದಯೋಃ ॥42॥
ಮಗಳೇ, ಆದ್ದರಿಂದ ನನಗೆ ಪ್ರಿಯವನ್ನುಂಟು ಮಾಡುವುದಕ್ಕೋಸ್ಕರ ಸರ್ವದಮನನ ಜೊತೆಯಲ್ಲಿ ನೀನು ಹೊರಡಬೇಕು. ನನ್ನ ಪಾದಗಳ ಮೇಲೆ ಆಣೆ ಮಾಡಿ ಹೇಳುತ್ತಿದ್ದೇನೆ. ಪ್ರತ್ಯುತ್ತರವನ್ನು ಕೊಡಬಾರದು.
ವೈಶಂಪಾಯನಃ
ಏವಮುಕತ್ವ ಸುತಾಂ ತತ್ರ ಪೌತ್ರಂ ಕಣ್ವೋಽಭ್ಯಭಾಷತ |
ಪರಿಷ್ವಜ್ಯ ಚ ಬಾಹುಭ್ಯಾಂ ಮೂರ್ಧ್ನ್ಯುಪಾಘ್ರಾಯ ಪೌರವಮ್ ॥

ಮಗಳನ್ನು ಕುರಿತು ಹೀಗೆ ಹೇಳಿ, ಮಗಳನ್ನು ಬಾಹುಗಳಿಂದ ಆಲಿಂಗಿಸಿ ಮೊಮ್ಮಗನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ಅವನಿಗೆ ಹೀಗೆ ಹೇಳಿದರು.
ಸೋಮವಂಶೋದ್ಭವೋ ರಾಜಾ ದುಷ್ಯಂತೋ ನಾಮ ವಿಶ್ರುತಃ |
ತಸ್ಯಾಗ್ರಮಹಿಷೀ ಚೈಷಾ ತವ ಮಾತಾ ಶುಚಿಸ್ಮಿತಾ ॥44॥
ಗಂತುಕಾಮಾ ಭರ್ತೃಪಾರ್ಶ್ವಂ ತ್ವಯಾ ಸಹ ಸುಮಧ್ಯಮಾ |
ಗತ್ವಾಽಭಿವಾದ್ಯ ರಾಜಾನಂ ಯೌವರಾಜ್ಯಮವಾಪ್ಸ್ಯಸಿ ॥45॥
ಶುಚಿಸ್ಮಿತೆಯಾದ ನಿನ್ನ ತಾಯಿಯು, ಸೋಮವಂಶದಲ್ಲಿ ಜನಿಸಿದ ಪ್ರಖ್ಯಾತನಾದ ದುಷ್ಯಂತರಾಜನ ಅಗ್ರಮಹಿಷಿ. ಸುಂದರಿಯಾದ ಅವಳು ನಿನ್ನ ಜೊತೆಯಲ್ಲಿ ಪತಿಯ ಸಮೀಪಕ್ಕೆ ಹೋಗಲು ಬಯಸಿದ್ದಾಳೆ. ನೀನೂ ಸಹ ಅವಳ ಜೊತೆಯಲ್ಲಿ ಹೋಗಿ, ರಾಜನಿಗೆ ನಮಸ್ಕರಿಸಿ, ಯೌವರಾಜ್ಯವನ್ನು ಹೊಂದುವಿ.
ಸ ಪಿತಾ ತವ ರಾಜೇಂದ್ರಃ ತಸ್ಯ ತ್ವಂ ವಶಗೋ ಭವ |
ಪಿತೃಪೈತಾಮಹಂ ರಾಜ್ಯಮನುತಿಷ್ಠಸ್ವ ಭಾವತಃ |
ತಸ್ಮಿನ್ ಕಾಲೇ ಸ್ವರಾಜ್ಯಸ್ಥೋ ಮಾಮನುಸ್ಮರ ಪುತ್ರಕ ॥46॥
ಮಗುವೇ, ಆ ರಾಜೇಂದ್ರನು ನಿನ್ನ ತಂದೆ. ನೀನು ಅವನಿಗೆ ವಶನಾಗಿರು. ಪಿತೃಪಿತಾಮಹರಿಂದ ಬಂದ ರಾಜ್ಯವನ್ನು ಪ್ರೀತಿಯಿಂದ ಆಳು. ನೀನು ನಿನ್ನ ರಾಜ್ಯದಲ್ಲಿರುವ ಕಾಲದಲ್ಲಿ ನನ್ನನ್ನೂ ಸ್ಮರಿಸು.
ವೈಶಂಪಾಯನಃ
ಅಭಿವಾದ್ಯ ಮುನೇ ಪಾದೌ ಪೌರವೋ ವಾಕ್ಯಮಬ್ರವೀತ್ |
ತ್ವಂ ಪಿತಾ ಮಮ ವಿಪ್ರರ್ಷೇ ತ್ವಂ ಮಾತಾ ತ್ವಂ ಗತಿಶ್ಚ ಮೇ ॥47॥
ನ ಚಾನ್ಯಂ ಪಿತರಂ ಮನ್ಯೇ ತ್ವಾಮೃತೇ ತು ಮಹಾತಪಃ |
ತವ ಶುಶ್ರೂಷಣಂ ನಿತ್ಯಮಿಹ ಲೋಕೇ ಪರತ್ರ ಚ ॥48॥
ಋಷಿಯ ಪಾದಗಳಿಗೆ ನಮಸ್ಕರಿಸಿ ಪೌರವನಾದ ಸರ್ವದಮನನು ಮಾತನಾಡಿದನು. ವಿಪ್ರರ್ಷಿಯೇ, ನೀನೇ ನನ್ನ ತಂದೆ, ನನ್ನ ತಾಯಿ ಮತ್ತು ನನಗೆ ಗತಿ. ಮಹಾತಪಸ್ವಿಯೇ, ನಿನ್ನನ್ನು ಬಿಟ್ಟು ನಾನು ಬೇರೆ ಯಾರನ್ನೂ ತಂದೆಯೆಂದು ತಿಳಿದಿಲ್ಲ. ನಿತ್ಯವೂ ನಿನ್ನ ಸೇವೆ ನನಗೆ ಈ ಲೋಕದಲ್ಲೂ, ಪರಲೋಕದಲ್ಲೂ ಸುಖವನ್ನು ಉಂಟುಮಾಡುತ್ತದೆ.
ಶಕುಂತಲಾ ಭರ್ತೃಕಾಮಾ ಸ್ವಯಂ ಯಾತು ಯಥೇಪ್ಸ್ಯತಃ |
ಅಹಂ ಶುಶ್ರೂಷಣಪರಃ ಪಾದಮೂಲೇ ವಸಾಮ್ಯಹಮ್ ॥49॥
ಪತಿಯನ್ನು ಸೇರುವ ಆಸೆಯುಳ್ಳ ಶಕುಂತಲೆಯು ತನ್ನ ಇಚ್ಛೆಯಂತೆ ತಾನೇ ನಗರಕ್ಕೆ ಹೋಗಲಿ. ನಾನು ನಿಮ್ಮ ಸೇವೆಯನ್ನು ಮಾಡಿಕೊಂಡು ನಿಮ್ಮ ಪಾದಮೂಲದಲ್ಲಿಯೇ ವಾಸಿಸುತ್ತೇನೆ.
ಕ್ರೀಡಾಂ ವ್ಯಾಲಮೃಗೈಃ ಸಾರ್ಧಂ ಕರಿಷ್ಯೇ ನ ಪುರಾ ಯಥಾ |
ತ್ವಚ್ಛಾಸನಪರೋ ನಿತ್ಯಂ ಸ್ವಾಧ್ಯಾಯಂ ಸುಕರೋಮ್ಯಹಮ್ ॥50॥
ಇನ್ನು ಮುಂದೆ ಮೊದಲಿನಂತೆ ದುಷ್ಟಗಜಗಳ ಮತ್ತು ವ್ಯಾಘ್ರಗಳ ಜೊತೆಯಲ್ಲಿ ಆಟವಾಡುವುದಿಲ್ಲ. ನೀವು ಹೇಳಿದಂತೆ ಕೇಳಿಕೊಂಡು ನಿತ್ಯವೂ ಚೆನ್ನಾಗಿ ಅಧ್ಯಯನವನ್ನು ಮಾಡುತ್ತೇನೆ.
ವೈಶಂಪಾಯನಃ
ಏವಮುಕತ್ವ ತು ಸಂಶ್ಲಿಷ್ಯ ಪಾದೌ ಕಣ್ವಸ್ಯ ತಿಷ್ಠತಿ |
ತಸ್ಯ ತದ್ವಚನಂ ಶ್ರುತ್ವಾ ಪ್ರರುರೋದ ಶಕುಂತಲಾ ॥51॥
ಮಗನು ಹೀಗೆ ಮಾತನಾಡಿ ಕಣ್ವರ ಪಾದಗಳನ್ನು ಹಿಡಿದು ನಿಂತಿರಲು, ಅವನ ಆ ಮಾತುಗಳನ್ನು ಕೇಳಿದ ಶಕುಂತಲೆಯು ಗಟ್ಟಿಯಾಗಿ ಅತ್ತಳು.
ಸ್ನೇಹಾತ್ ಪಿತುಶ್ಚ ಪುತ್ರಸ್ಯ ಹರ್ಷಶೋಕಸಮನ್ವಿತಾ |
ನಿಶಾಮ್ಯ ರೋದನಂ ಮಾತುರ್ದೌಷ್ಯಂತಿರ್ವಾಕ್ಯಮಬ್ರವೀತ್ ॥52॥
ತಂದೆಗೂ ಮತ್ತು ಮಗನಿಗೂ ಇರುವ ಸ್ನೇಹವನ್ನು ನೋಡಿ ಹರ್ಷದಿಂದಲೂ ಮತ್ತು ಶೋಕದಿಂದಲೂ ಕೂಡಿದವಳಾದಳು. ತಾಯಿಯು ಅಳುವುದನ್ನು ನೋಡಿ ಸರ್ವದಮನನು ಮಾತನಾಡಿದನು.
ಶ್ರುತ್ವಾ ಭಗವತೋ ವಾಕ್ಯಂ ಕಿಂ ರೋದಿಷಿ ಶಕುಂತಲೇ |
ಗಂತವ್ಯಂ ಕಾಲ್ಯ ಉತ್ಥಾಯ ಭರ್ತೃಪ್ರೀತಿಸ್ತವಾಸ್ತಿ ಚೇತ್ ॥53॥
ಶಕುಂತಲೆ, ಪೂಜ್ಯರ ಮಾತನ್ನು ಕೇಳಿದ ಮೇಲೆ ಏಕೆ ಅಳುತ್ತಿರುವೆ, ನಿನಗೆ ಪತಿಯ ಮೇಲೆ ಪ್ರೀತಿ ಇದ್ದರೆ ನಾಳೆ ಬೆಳಗ್ಗೆ ಎದ್ದು ಪತಿಯ ಪಟ್ಟಣಕ್ಕೆ ಹೋಗಬೇಕು.
ಶಕುಂತಲಾ
ಏಕಸ್ತು ಕುರುತೇ ಪಾಪಂ ಫಲಂ ಭುಂಕ್ತೇ ಮಹಾಜನಃ |
ಭೋಕ್ತಾರಸ್ತತ್ರ ಮುಚ್ಯಂತೇ ಕರ್ತಾ ದೋಷೇಣ ಲಿಪ್ಯತೇ ॥54॥
ಒಬ್ಬ ಮನುಷ್ಯನು ಕೆಟ್ಟ ಕೆಲಸವನ್ನು ಮಾಡುತ್ತಾನೆ. ಅದರ ಫಲವನ್ನು ಅನೇಕರು ಅನುಭವಿಸುತ್ತಾರೆ. ಫಲವನ್ನು ಅನುಭವಿಸುವವರು ದೋಷ ರಹಿತರಾಗುತ್ತಾರೆ, ಆದರೆ ಆ ಪಾಪಕಾರ್ಯ ಮಾಡಿದವನು ದೋಷಲಿಪ್ತನಾಗುತ್ತಾನೆ.
ಮಯಾ ನಿವಾರಿತೋ ನಿತ್ಯಂ ನ ಕರೋಷಿ ವಚೋ ಮಮ |
ನಸ್ಯೋತಾನ್ ಕುಂಜರಾನ್ ನಿತ್ಯಂ ಬಾಹುಭ್ಯಾಂ ಸಂಪ್ರಮಥ್ಯ ವೈ ॥

ವನಂ ಚ ಲೋಡಯನ್ ನಿತ್ಯಂ ಸಿಂಹವ್ಯಾಘ್ರನಿಷೇವಿತಮ್ |
ಏವಂವಿಧಾನಿ ಚಾನ್ಯಾನಿ ಕೃತ್ವಾ ವೈ ಪುರುನಂದನ |
ರುಷಿತೋ ಭಗವಾಂಸ್ತಾತ ತಸ್ಮಾದಾವಾಂ ವಿವಾಸಿತೌ ॥56॥
ನಾನು ಎಷ್ಟು ನಿವಾರಿಸಿದರೂ ನೀನು ನನ್ನ ಮಾತುಗಳನ್ನು ಕೇಳುವುದಿಲ್ಲ. ಆನೆಗಳಿಗೆ ಮೂಗುದಾರವನ್ನು ಹಾಕಿ ಅವುಗಳನ್ನು ನಿಯಂತ್ರಿಸಿ ಸಿಂಹವ್ಯಾಘ್ರಗಳಿರುವ ಕಾನನವನ್ನು ಯಾವಾಗಲೂ ಕಲಕಾಡುತ್ತೀಯೆ. ಪುರುನಂದನನೇ, ಇಂತಹ ಇನ್ನೂ ಅನೇಕ ಕರ್ಮಗಳನ್ನು ಮಾಡಿದುದರಿಂದ ಕೋಪಗೊಂಡ ಮಹರ್ಷಿಯು ನಮ್ಮಿಬ್ಬರನ್ನೂ ಆಶ್ರಮದಿಂದ ಹೊರಗೆ ಕಳುಹಿಸುತ್ತಿದ್ದಾನೆ.
ಅಹಂ ನ ಗಚ್ಛೇ ದುಷ್ಯಂತಂ ನಾಸ್ಮಿ ಪುತ್ರ ಹಿತೈಷಿಣೀ |
ಪಾದಮೂಲೇ ವಸಿಷ್ಯಾಮಿ ಮಹರ್ಷೇರ್ಭಾವಿತಾತ್ಮನಃ ॥57॥
ಮಗನೇ, ನಾನು ದುಷ್ಯಂತನ ನಗರಕ್ಕೆ ಹೋಗುವುದಿಲ್ಲ. ನಾನು ಅವನ ಹಿತೈಷಿಣಿಯೂ ಅಲ್ಲ. ಪರಿಶುದ್ಧವಾದ ಮನಸ್ಸುಳ್ಳ ಮಹರ್ಷಿಗಳಾದ ಕಣ್ವರ ಪಾದಮೂಲದಲ್ಲಿಯೇ ವಾಸಿಸುವೆನು.
ವೈಶಂಪಾಯನಃ
ಏವಮುಕತ್ವ ತು ರುದತೀ ಪಪಾತ ಮುನಿಪಾದಯೋಃ |
ಏವಂ ವಿಲಪತೀಂ ಕಣ್ವಶ್ಚಾನುನೀಯ ಚ ಹೇತುಭಿಃ |
ಪುನಃ ಪ್ರೋವಾಚ ಭಗವಾನಾನೃಶಂಸ್ಯಾದ್ವಿತಂ ವಚಃ ॥58॥
ಹೀಗೆ ಹೇಳಿ ಅಳುತ್ತಾ ಶಕುಂತಲೆಯು ಮುನಿಯ ಪಾದಗಳ ಮೇಲೆ ಬಿದ್ದಳು. ಹೀಗೆ ಅಳುತ್ತಿದ್ದ ಶಕುಂತಲೆಯನ್ನು ಕಣ್ವರು ಯುಕ್ತಿಯುಕ್ತವಾದ ಮಾತುಗಳಿಂದ ಸಮಾಧಾನಪಡಿಸಿ ಅವಳ ಮೇಲಿನ ದಯೆಯಿಂದ ಪುನಃ ಹಿತವಾದ ನುಡಿಗಳನ್ನು ಆಡಿದರು.
ಕಣ್ವಃ
ಶಕುಂತಲೇ ಶೃಣುಷ್ವೇದಂ ಹಿತಂ ತಥ್ಯಂ ಚ ಭಾಮಿನಿ |
ಪತಿವ್ರತಾಭಾವಗುಣಾನ್ ಹಿತ್ವಾ ಸಾಧ್ಯಂ ನ ಕಿಂಚನ ॥59॥
ಸುಂದರಿಯಾದ ಶಕುಂತಲೆಯೇ, ಇದನ್ನು ಕೇಳು. ಇದು ಹಿತವೂ ತಥ್ಯವೂ ಆದುದು. ಪತಿವ್ರತೆಯ ಧರ್ಮವನ್ನು ಬಿಟ್ಟು ಏನನ್ನೂ ಸಾಧಿಸಲು ಸಾಧ್ಯವಿಲ್ಲ.
ಪತಿವ್ರತಾನಾಂ ದೇವಾ ವೈ ತುಷ್ಟಾಃ ಸರ್ವವರಪ್ರದಾಃ |
ಪ್ರಸಾದಂ ಚ ಕರಿಷ್ಯಂತಿ ಹ್ಯಾಪದೋ ಮೋಚಯಂತಿ ಚ ॥60॥
ಪತಿವ್ರತೆಯರಿಗೆ ತುಷ್ಟರಾದ ದೇವತೆಗಳು ಎಲ್ಲಾ ವರಗಳನ್ನು ನೀಡುತ್ತಾರೆ. ಅನುಗ್ರಹವನ್ನೂ ಮಾಡುವರು ಮತ್ತು ಆಪತ್ತುಗಳಿಂದಲೂ ಬಿಡಿಸುತ್ತಾರೆ.
ಪತಿಪ್ರಸಾದಾತ್ ಪುಣ್ಯಗತಿಂ ಪ್ರಾಪ್ನುವಂತಿ ನ ಚಾಶುಭಮ್ |
ತಸ್ಮಾದ್ ಗತ್ವಾ ತು ರಾಜಾನಮಾರಾಧಯ ಶುಚಿಸ್ಮಿತೇ ॥61॥
ಪತಿಯ ಪ್ರಸಾದದಿಂದ ಪುಣ್ಯಲೋಕವೇ ಉಂಟಾಗುತ್ತದೆ. ಎಂದೂ ಅಶುಭವು ಉಂಟಾಗುವುದಿಲ್ಲ. ಆದ್ದರಿಂದ ಶುಚಿಸ್ಮಿತೆಯೇ, ನೀನು ಹೋಗಿ ರಾಜನನ್ನು ಆರಾಧಿಸು.
ವೈಶಂಪಾಯನಃ
ಶಕುಂತಲಾಂ ತಥೋಕತ್ವ ವೈ ಶಾಕುಂತಲಮಥಾಬ್ರವೀತ್ |
ದೌಹಿತ್ರೋ ಮಮ ಪೌತ್ರಸ್ತ್ವಮಿಲಿಲಸ್ಯ ಮಹಾತ್ಮನಃ ॥62॥
ಶಕುಂತಲೆಗೆ ಹೀಗೆ ಹೇಳಿ ಕಣ್ವರು ತಮ್ಮ ದೌಹಿತ್ರನೂ, ಮಹಾತ್ಮನಾದ ಇಲಿಲನ ಪೌತ್ರನೂ ಆದ ಪೌರವನನ್ನು ಕುರಿತು ಮಾತನಾಡಿದರು.
ಶೃಣುಷ್ವ ವಚನಂ ಸತ್ಯಂ ಪ್ರಬ್ರವೀಮಿ ತವಾನಘ |
ಮನಸಾ ಭರ್ತೃಕಾಮಾ ವೈ ವಾಗ್ಭಿರುಕತ್ವ ಪೃಥಗ್ವಿಧಮ್ ॥63॥
ಗಂತುಂ ನೇಚ್ಛತಿ ಕಲ್ಯಾಣೀ ತಸ್ಮಾತ್ ತಾತ ವಹಸ್ವ ವೈ |
ಶಕ್ತಸ್ತ್ವಂ ಸಹ ಗಂತುಂ ಚ ಮುನಿಭಿಃ ಸಹ ಪೌರವ ॥64॥
ಎಲೈ ನಿರ್ದೋಷನಾದವನೇ, ನಾನು ಹೇಳುವ ಸತ್ಯವಾದ ವಚನಗಳನ್ನು ಕೇಳು. ಶಕುಂತಲೆಯು ಮನಸ್ಸಿನಲ್ಲಿ ಪತಿಯ ಸಮೀಪಕ್ಕೆ ಹೋಗಲು ಬಯಸುತ್ತಾಳೆ. ಮಾತಿನಲ್ಲಿ ಮಾತ್ರ ಬೇರೆ ನುಡಿಯುತ್ತಿದ್ದಾಳೆ. ಕಲ್ಯಾಣಿಯಾದ ಅವಳು ಒಬ್ಬಳೇ ಹೋಗಲು ಇಷ್ಟಪಡುವುದಿಲ್ಲ. ಆದ್ದರಿಂದ ಮಗುವೇ, ಅವಳನ್ನು ಕರೆದುಕೊಂಡು ಹೋಗು. ಪೌರವನೇ, ಋಷಿಗಳ ಜೊತೆಯಲ್ಲಿ ನೀನು ಅವಳನ್ನು ಕರೆದುಕೊಂಡು ಹೋಗಲು ಸಮರ್ಥನಾಗಿರುವೆ.
ವೈಶಂಪಾಯನಃ
ಇತ್ಯುಕತ್ವ ಸರ್ವದಮನಂ ಕಣ್ವಃ ಶಿಷ್ಯಾನಥಾಬ್ರವೀತ್ |
ಶಕುಂತಲಾಮಿಮಾಂ ಶೀಘ್ರಂ ಸಪುತ್ರಾಮಾಶ್ರಮಾದಿತಃ ॥65॥
ಭರ್ತುಃ ಪ್ರಾಪಯತಾಗಾರಂ ಸರ್ವಲಕ್ಷಣಪೂಜಿತಮ್ |
ನಾರೀಣಾಂ ಚಿರವಾಸೋ ಹಿ ಬಾಂಧವೇಷು ನ ರೋಚತೇ |
ಕೀರ್ತಿಚಾರಿತ್ರಪುಣ್ಯಘ್ನಂ ತಸ್ಮಾನ್ನಯತ ಮಾಚಿರಮ್ ॥66॥
ಸರ್ವದಮನನನ್ನು ಕುರಿತು ಹೀಗೆ ಹೇಳಿ ಕಣ್ವರು ಶಿಷ್ಯರನ್ನು ಕುರಿತು ಹೇಳಿದರು. ಈ ಶಕುಂತಲೆಯನ್ನು ಅವಳ ಮಗನ ಜೊತೆಯಲ್ಲಿ ಈ ಆಶ್ರಮದಿಂದ ಕರೆದುಕೊಂಡು ಹೋಗಿ ಸರ್ವಲಕ್ಷಣ ಸಂಪನ್ನವಾದ ಪತಿಯ ಮನೆಗೆ ಸೇರಿಸಿ. ನಾರಿಯರಿಗೆ ಬಂಧುಗಳ ಮನೆಯಲ್ಲಿ

ಬಹುಕಾಲವಿರುವುದು ಎಂದೂ ಶೋಭಿಸುವುದಿಲ್ಲ. ಅದು ಕೀರ್ತಿಯನ್ನೂ, ಚಾರಿತ್ರ್ಯವನ್ನೂ ಮತ್ತು ಪುಣ್ಯವನ್ನೂ ನಾಶಮಾಡುತ್ತದೆ. ಆದ್ದರಿಂದ ಶೀಘ್ರವಾಗಿ ಕರೆದುಕೊಂಡು ಹೋಗಿ.
ವೈಶಂಪಾಯನಃ
ಧರ್ಮಾಭಿಪೂಜನಂ ಪುತ್ರಂ ಕಾಶ್ಯಪೇನ ನಿಶಾಮ್ಯ ತು |
ಕಾಶ್ಯಪಾತ್ ಪ್ರಾಪ್ಯ ಚಾನುಜ್ಞಾಂ ಮುಮುದೇ ಚ ಶಕುಂತಲಾ ॥67॥
ತನ್ನ ಪುತ್ರನು ಧರ್ಮವನ್ನು ಪೂಜಿಸುವನೆಂದು ಕಾಶ್ಯಪರ ಮುಖದಿಂದ ಕೇಳಿ ಸಂತೋಷಗೊಂಡ ಶಕುಂತಲೆಯು, ಕಾಶ್ಯಪರಿಂದ ಹೊರಡಲು ಅನುಮತಿಯನ್ನು ಪಡೆದಳು.
ಕಣ್ವಸ್ಯ ವಚನಂ ಶ್ರುತ್ವಾ ಪ್ರತಿಗಚ್ಛೇತಿ ಚಾಸಕೃತ್ |
ತಥೇತ್ಯುಕ್ತ್ವಾ ತು ಕಣ್ವಂ ಚ ಮಾತರಂ ಪೌರವೋಽಬ್ರವೀತ್ ॥68॥
ಬೇಗ ಹೊರಡು ಎಂಬ ಕಣ್ವರ ಮಾತನ್ನು ಅನೇಕ ಬಾರಿ ಕೇಳಿದ ಪೌರವನು ಕಣ್ವರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ ತಾಯಿಯನ್ನು ಕುರಿತು ಮಾತನಾಡಿದನು.
ಕಿಂ ಚಿರಾಯಸಿ ಭದ್ರೇ ತ್ವಂ ಗಮಿಷ್ಯಾವೋ ನೃಪಾಲಯಮ್ |
ಏವಮುಕ್ತ್ವಾ ತು ತಾಂ ದೇವೀಂ ದುಷ್ಯಂತಸ್ಯ ಮಹಾತ್ಮನಃ |
ಅಭಿವಾದ್ಯ ಮುನೇಃ ಪಾದೌ ಗಂತುಮೈಚ್ಛತ್ ಸ ಪೌರವಃ ॥69॥
ಮಂಗಳ ಸ್ವರೂಪಳೇ, ಏಕೆ ತಡಮಾಡುತ್ತಿದ್ದೀಯೆ? ನಾವಿಬ್ಬರೂ ಮಹಾತ್ಮನಾದ ದುಷ್ಯಂತರಾಜನ ಮನೆಗೆ ಹೋಗೋಣ. ಹೀಗೆ ತಾಯಿಯನ್ನು ಕುರಿತು ಹೇಳಿ ಕಣ್ವರ ಪಾದಗಳಿಗೆ ನಮಸ್ಕರಿಸಿ ಪೌರವನು ಹೊರಡಲು ಬಯಸಿದನು.
ಶಕುಂತಲಾ ಚ ಪಿತರಮಭಿವಾದ್ಯ ಕೃತಾಂಜಲಿಃ |
ಪ್ರದಕ್ಷಿಣೀಕೃತ್ಯ ತದಾ ಪಿತರಂ ವಾಕ್ಯಮಬ್ರವೀತ್ ॥70॥
ಶಕುಂತಲೆಯು ಕೈಗಳನ್ನು ಮುಗಿದು ತಂದೆಗೆ ಪ್ರದಕ್ಷಿಣೆ ಬಂದು ನಮಸ್ಕರಿಸಿ ತಂದೆಯನ್ನು ಕುರಿತು ಮಾತನಾಡಿದಳು.
ಅಜ್ಞಾನಾನ್ಮೇ ಪಿತಾ ಚೇತಿ ಯದುಕ್ತಂ ವಾಪಿ ಚಾನೃತಮ್ |
ಅಕಾರ್ಯಂ ವಾಪ್ಯನಿಷ್ಟಂ ವಾ ಕ್ಷಂತುಮರ್ಹಸಿ ಕಾಶ್ಯಪ ॥71॥
ನನ್ನ ತಂದೆಯೆಂದು ತಿಳಿದು ಅಜ್ಞಾನದಿಂದ ನಾನು ಏನಾದರೂ ಸುಳ್ಳನ್ನು ಮಾತನಾಡಿದ್ದರೆ, ಮಾಡಬಾರದ ಕೆಲಸವನ್ನು ಮಾಡಿದ್ದರೆ, ಅಥವಾ ಅನಿಷ್ಟವನ್ನು ಮಾಡಿದ್ದರೆ, ಕ್ಷಮಿಸಬೇಕು.
ಏವಮುಕ್ತೋ ನತಶಿರಾ ಮುನಿರ್ನೋವಾಚ ಕಿಂಚನ |
ಮನುಷ್ಯಭಾವಾತ್ ಕಣ್ವೋಽಪಿ ಮುನಿರಶ್ರೂಣ್ಯವರ್ತಯತ್ ॥ 72॥
ಹೀಗೆ ಹೇಳಲ್ಪಟ್ಟ ಕಾಶ್ಯಪರು ತಲೆಯನ್ನು ತಗ್ಗಿಸಿ ನಿಂತು ಏನೂ ಮಾತನಾಡಲಿಲ್ಲ. ಮನುಷ್ಯಭಾವವನ್ನು ಹೊಂದಿದ ಅವರು ಕಣ್ಣುಗಳಿಂದ ನೀರನ್ನು ಸುರಿಸಿದರು.
ಅಬ್ಭಕ್ಷಾನ್ ವಾಯುಭಕ್ಷಾಂಶ್ಚ ಶೀರ್ಣಪರ್ಣಾಶನಾನ್ ಮುನೀನ್ |
ಫಲಮೂನಾಶಿನೋ ದಾಂತಾನ್ ವಲ್ಕಲಾಜಿನವಾಸಸಃ |
ಸಮಾಹೂಯ ಮುನೀನ್ ಕಣ್ವಃ ಕಾರುಣ್ಯಾದ್ ವಾಕ್ಯಮಬ್ರವೀತ್ ॥
ಅನಂತರ, ಅಬ್ಭಕ್ಷರೂ, ವಾಯುಭಕ್ಷರೂ, ಶೀರ್ಣಪರ್ಣಾಶನರೂ, ಫಲಮೂಲಾಶನರೂ, ಇಂದ್ರಿಯನಿಗ್ರಹವುಳ್ಳವರೂ, ನಾರುಮಡಿಗಳನ್ನು ಮತ್ತು ಚರ್ಮಗಳನ್ನು ಧರಿಸಿದವರೂ ಆದ ಋಷಿಗಳನ್ನು ಕರೆದು ಕರುಣೆಯಿಂದ ಕಣ್ವರು ಹೀಗೆ ಮಾತನಾಡಿದರು.
ಮಯಾ ತು ಲಾಲಿತಾ ನಿತ್ಯಂ ಮಮ ಪುತ್ರೀ ಯಶಸ್ವಿನೀ |
ವನೇ ಜಾತಾ ವಿವೃದ್ಧಾ ಚ ನ ಚ ಜಾನಾತಿ ಕಿಂಚನ ॥74॥
ಕಾಡಿನಲ್ಲಿ ಹುಟ್ಟಿ ಬೆಳೆದ ಈ ನನ್ನ ಕೀರ್ತಿವಂತಳಾದ ಮಗಳು ನನ್ನಿಂದ ಯಾವಾಗಲೂ ಲಾಲಿಸಲ್ಪಟ್ಟಿದ್ದಾಳೆ. ಅವಳು ಏನನ್ನೂ ತಿಳಿಯದವಳು.
ಅಶ್ರಮೇಣ ಪಥಾ ಸರ್ವೈರ್ನೀಯತಾಂ ಕ್ಷತ್ರಿಯಾಲಯಮ್ |
ದ್ವಿತೀಯಯೋಜನೇ ವಿಪ್ರಾಃ ಪ್ರತಿಷ್ಠಾನಂ ಪ್ರತಿಷ್ಠಿತಮ್ ॥75॥
ಅವಳನ್ನು ಶ್ರಮವಿಲ್ಲದ ದಾರಿಯಿಂದ ರಾಜಮಂದಿರಕ್ಕೆ ಕರೆದುಕೊಂಡು ಹೋಗಬೇಕು. ಬ್ರಾಹ್ಮಣರೇ, ಇಲ್ಲಿಗೆ ಎರಡು ಯೋಜನ ದೂರದಲ್ಲಿ ಪ್ರತಿಷ್ಠಾನ ನಗರವಿದೆ.
ಪ್ರತಿಷ್ಠಾನೇ ಪುರೇ ರಾಜಾ ಶಾಕುಂತಲಪಿತಾಮಹಃ |
ಅಧ್ಯುವಾಸ ಚಿರಂ ಕಾಲಮುರ್ವಶ್ಯಾ ಸಹಿತಃ ಪುರಾ ॥76॥
ಪ್ರತಿಷ್ಠಾನ ನಗರದಲ್ಲಿ ಹಿಂದೆ ಸರ್ವದಮನನ ಪಿತಾಮಹನು, ಊರ್ವಶಿಯ ಜೊತೆಯಲ್ಲಿ ಬಹುಕಾಲ ವಾಸವಾಗಿದ್ದನು.
ಅನೂಪಜಾಂಗಲಯುತಂ ಧನಧಾನ್ಯಸಮಾಕುಲಮ್ |
ಪ್ರತಿಷ್ಠಿತಂ ಪುರವರಂ ಗಂಗಾಯಮುನಸಂಗಮೇ ॥77॥
ಪೂರುವಿನ ಅಣ್ಣನಾದ ಅನುವಿನಿಂದ ವಾಸಿಸಲ್ಪಟ್ಟ ಜಾಂಗಲದೇಶದ ಸಮೀಪದಲ್ಲಿ, ಗಂಗಾಯಮುನೆಯರ ಸಂಗಮದಲ್ಲಿ ಪ್ರತಿಷ್ಠಿತವಾದ ಪ್ರತಿಷ್ಠಾನ ಪಟ್ಟಣವು ಧನಧಾನ್ಯಗಳಿಂದ ಸಮೃದ್ಧವಾಗಿದೆ.
ತತ್ರ ಸಂಗಮಮಾಸಾದ್ಯ ಸ್ನಾತ್ವಾ ಹುತಹುತಾಶನಾಃ |
ಶಾಕಮೂಲಫಲಾಹಾರಾ ನಿವರ್ತಧ್ವಂ ತಪೋಧನಾಃ |

ಅನ್ಯಥಾ ತು ಭವೇದ್ ವಿಪ್ರಾ ಅಧ್ವನೋ ಗಮನೇ ಶ್ರಮಃ ॥78॥
ಅಲ್ಲಿ ಗಂಗಾಯಮುನೆಯ ಸಂಗಮವನ್ನು ತಲುಪಿ, ಸ್ನಾನವನ್ನು ಮಾಡಿ, ಅಗ್ನಿಕಾರ್ಯವನ್ನು ಮಾಡಿ ತಪೋಧನರಾದ ನೀವು ಶಾಕಮೂಲಫಲಗಳನ್ನು ಸೇವಿಸಿ ಹಿಂದಿರುಗಿ ಬನ್ನಿ. ಬ್ರಾಹ್ಮಣರೇ, ಬೇರೆ ಮಾರ್ಗದಿಂದ ಹೋದರೆ ಶ್ರಮವುಂಟಾಗುತ್ತದೆ.
ವೈಶಂಪಾಯನಃ
ತಥೇತ್ಯುಕ್ತ್ವಾ ಚ ತೇ ಶಿಷ್ಯಾಃ ಪ್ರಾತಿಷ್ಠನ್ನಮಿತೌಜಸಃ ।
ಶಕುಂತಲಾಂ ಪುರಸ್ಕೃತ್ಯ ದುಷ್ಷಂತನಗರಂ ಪ್ರತಿ ॥79॥
ಹಾಗೆಯೇ ಆಗಲಿ ಎಂದು ಹೇಳಿ ಕಣ್ವರ ಅಮಿತ ಸಾಮರ್ಥ್ಯವುಳ್ಳ ಆ ಶಿಷ್ಯರೆಲ್ಲರೂ ಶಕುಂತಲೆಯನ್ನು ಮುಂದೆ ಮಾಡಿಕೊಂಡು ದುಷ್ಷಂತನ ನಗರವನ್ನು ಕುರಿತು ಹೊರಟರು.
ಗೃಹೀತ್ವಾ ಚಾಮರಪ್ರಖ್ಯಂ ಪುತ್ರಂ ಕಮಲಲೋಚನಮ್ ।
ಆಜಗ್ಮುಶ್ಚ ಪುರಂ ಶುಭ್ರಂ ದುಷ್ಷಂತಾಧ್ಯುಷಿತಂ ವನಾತ್ ॥80॥
ದೇವತೆಯಂತೆ ಕಂಗೊಳಿಸುವ, ಕಮಲಲೋಚನನಾದ ಮಗನನ್ನು ಕರೆದುಕೊಂಡು ಕಾಡಿನಿಂದ ಹೊರಟು ದುಷ್ಷಂತನಿಂದ ವಾಸಿಸಲ್ಪಟ್ಟ ಶುಭ್ರವಾದ ಪಟ್ಟಣಕ್ಕೆ ಬಂದರು.
ಶಕುಂತಲಾಂ ಸಮಾದಾಯ ಮುನಯೋ ಧರ್ಮವತ್ಸಲಾಃ ।
ತೇ ವನಾನಿ ನದೀಃ ಶೈಲಾನ್ ಗಿರಿಪ್ರಸ್ರವಣಾನಿ ಚ ॥81॥
ಕಂದರಾಣಿ ನಿತಂಬಾಂಶ್ಚ ರಾಷ್ಟ್ರಾಣಿ ನಗರಾಣಿ ಚ ।
ಆಶ್ರಮಾಣಿ ಚ ಪುಣ್ಯಾನಿ ಗತ್ವಾ ಚೈವ ಗತಶ್ರಮಾಃ ।
ಶನೈರ್ಮಧ್ಯಾಹ್ನವೇಲಾಯಾಂ ಪ್ರತಿಷ್ಠಾನಂ ಸಮಾಗತಾಃ ॥82॥
ಧರ್ಮವತ್ಸಲರಾದ ಮುನಿಗಳು, ಶಕುಂತಲೆಯನ್ನು ಕರೆದುಕೊಂಡು ವನಗಳನ್ನೂ, ನದಿಗಳನ್ನೂ, ಪರ್ವತಗಳನ್ನೂ, ಬೆಟ್ಟದ ಝರಿಗಳನ್ನೂ, ಗುಹೆಗಳನ್ನೂ, ತಪ್ಪಲು ಪ್ರದೇಶಗಳನ್ನೂ, ರಾಷ್ಟ್ರಗಳನ್ನೂ, ಆ ಪುಣ್ಯವಾದ ಆಶ್ರಮಗಳನ್ನೂ ಶ್ರಮವಿಲ್ಲದೆ ದಾಟಿ ನಿಧಾನವಾಗಿ ಮಧ್ಯಾಹ್ನದ ವೇಳೆಗೆ ಪ್ರತಿಷ್ಠಾನ ನಗರವನ್ನು ತಲುಪಿದರು.
ತಾಂ ಪುರೀಂ ಪುರುಹೂತೇನ ಹ್ಯೈಲಸ್ಯಾರ್ಥೇ ವಿನಿರ್ಮಿತಾಮ್ ।
ಪರಿಘಾವಪ್ರಪುರಗೈರುಪತಲ್ಪಶತೈರಪಿ ।
ಶತಘ್ನೀಭಿಶ್ಚಕ್ರಯಂತ್ರೈಃ ಗುಪ್ತಾಮನ್ಯೈರ್ದುರಾಸದಾಮ್ ॥83॥
ಪುರೂರವನ ಸಲುವಾಗಿ ಇಂದ್ರನಿಂದ ನಿರ್ಮಿತವಾದ ಆ ಪಟ್ಟಣವನ್ನು ಅವರು ನೋಡಿದರು. ಅಲ್ಲಿ ಪರಿಖೆಗಳು (ಕಂದಕಗಳು), ಕೋಟೆಯ ಗೋಡೆಗಳು, ವಿಶ್ರಮಿಸುವ ನೂರಾರು ಸ್ಥಳಗಳು ಇದ್ದವು. ಆ ಪಟ್ಟಣವು ಶತಘ್ನಿಗಳಿಂದಲೂ, ಚಕ್ರಯಂತ್ರಗಳಿಂದಲೂ ರಕ್ಷಿತವಾಗಿ ಬೇರೆ ಯಾರೂ ಪ್ರವೇಶ ಮಾಡಲು ಸಾಧ್ಯವಾಗದಂತೆ ಇದ್ದಿತು.
ಹರ್ಮ್ಯಪ್ರಾಸಾದಸಂಬಾಧಾಂ ನಾನಾಪಣ್ಯವಿಭೂಷಿತಾಮ್ ।
ಮಂಟಪೈಃ ಸಸಭೈ ರಮ್ಯೈಃ ಪ್ರಪಾಭಿಶ್ಚ ಸಮಾವೃತಾಮ್ ॥84॥
ಆ ಪಟ್ಟಣದಲ್ಲಿ ಅನೇಕ ಎತ್ತರದ ಮನೆಗಳೂ, ವಿಶಾಲವಾದ ಮನೆಗಳೂ ಇದ್ದವು. ಅನೇಕ ವಿಕ್ರೇಯವಾದ ವಸ್ತುಗಳಿಂದ ತುಂಬಿದ್ದಿತು. ಅಲ್ಲಿ ಅನೇಕ ಮಂಟಪಗಳೂ, ಸಭೆಗಳೂ, ರಮ್ಯವಾದ ಅರವಟ್ಟಿಗೆಗಳೂ ಇದ್ದವು.
ರಾಜಮಾರ್ಗೇಣ ಮಹತಾ ಸುವಿಭಕ್ತೇನ ಶೋಭಿತಾಮ್ ।
ಕೈಲಾಸಶಿಖರಾಕಾರೈರ್ಗೋಪುರೈಃ ಸಮಲಂಕೃತಾಮ್ ॥85॥
ಚೆನ್ನಾಗಿ ವಿಭಕ್ತವಾದ ದೊಡ್ಡ ರಾಜಮಾರ್ಗಗಳಿಂದ ಆ ಪಟ್ಟಣವು ಶೋಭಿಸುತ್ತಿತ್ತು. ಕೈಲಾಸಶಿಖರದ ಆಕಾರವಿರುವ ಗೋಪುರಗಳಿಂದ ಅಲಂಕೃತವಾಗಿದ್ದಿತು.
ದ್ವಾರತೋರಣನಿರ್ವ್ಯೂಹೈರ್ಮಂಗಲ್ಯೈರುಪಶೋಭಿತಾಮ್ ।
ಉದ್ಯಾನಾಮ್ರವಣೋಪೇತಾಂ ಮಹತೀಂ ಸಾಲಮೇಖಲಾಮ್ ॥86॥
ದ್ವಾರತೋರಣಗಳಿಂದ ಸುಗಂಧಧೂಪವು ಹೊರಗೆ ಬರುತ್ತಿತ್ತು. ಮನೆಯ ಬಾಗಿಲುಗಳಲ್ಲಿ ಅನೇಕ ಮಂಗಳ ಪದಾರ್ಥಗಳನ್ನು ಇಟ್ಟು ಶೋಭೆಯನ್ನು ತರಲಾಗಿದ್ದಿತು. ಅಲ್ಲಿ ಉದ್ಯಾನಗಳು, ಆಮ್ರವನಗಳು, ದೊಡ್ಡದಾದ ಸಾಲವೃಕ್ಷಗಳ ಪಟ್ಟಿಯೂ ಇದ್ದಿತು.
ಸರ್ವತಃ ಪುಷ್ಕರಿಣ್ಯೈಶ್ಚ ಉದ್ಯಾನೈರುಪಶೋಭಿತಾಮ್ ।
ವರ್ಣಾಶ್ರಮೈಃ ಸ್ವಧರ್ಮಸ್ಥೈರ್ನಿತ್ಯೋತ್ಸವಸಮಾಹಿತೈಃ ॥87॥
ಎಲ್ಲಾ ಕಡೆಯಲ್ಲಿಯೂ, ಪುಷ್ಕರಿಣಿಯಲ್ಲಿರುವ ಕಮಲಗಳಿಂದಲೂ ಮತ್ತು ಉದ್ಯಾನವನಗಳಿಂದಲೂ ಹೆಚ್ಚು ಶೋಭಿತವಾಗಿದ್ದಿತು. ಅಲ್ಲಿ ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ಆಚರಿಸುವ, ಯಾವಾಗಲೂ ಸಂತೋಷ ಮತ್ತು ಸಮಾಧಾನದಿಂದ ಕೂಡಿದ ಜನರಿದ್ದರು.
ಧನಧಾನ್ಯಸಮೃದ್ಧೈಶ್ಚ ಸಂತುಷ್ಟೈ ರತ್ನಪೂಜಿತೈಃ ।
ಕ್ರತುಯುಕ್ತೈಶ್ಚ ವಿದ್ವದ್ಭಿರಗ್ನಿಹೋತ್ರಪರೈಃ ಸದಾ ॥88॥
ಧನಧಾನ್ಯಸಮೃದ್ಧಿಯಿಂದ ಸಂತುಷ್ಟರಾದವರು, ಯಜ್ಞನಿಪುಣರಾದ, ರತ್ನಗಳಿಂದ ಪೂಜಿತರಾದ ವಿದ್ವಾಂಸರು, ಯಾವಾಗಲೂ ಅಗ್ನಿಹೋತ್ರಪರರಾದ ಬ್ರಾಹ್ಮಣರು ಅಲ್ಲಿದ್ದರು.
ಅಕಾರ್ಯವರ್ಜಿತೈಶ್ಚೈವ ದಾನಶೀಲೈರ್ದಯಾಪರೈಃ ।
ಅಧರ್ಮಭೀರುಭಿಃ ಪೂರ್ಣಾಮಿಂದ್ರಸ್ಯೇವಾಮರಾವತೀಮ್ ॥89॥
ಅಲ್ಲಿಯ ಜನರು ಅಕಾರ್ಯಗಳನ್ನು ಸಂಪೂರ್ಣವಾಗಿ ವರ್ಜಿಸಿದ್ದರು. ದಾನಶೀಲರೂ, ದಯಾಪರರೂ, ಅಧರ್ಮಭೀರುಗಳೂ

ಆಗಿದ್ದರು. ಇಂದ್ರನ ಅಮರಾವತಿಯಂತೆ ಅಂತಹ ಜನರಿಂದ ಆ ನಗರವು ಪೂರ್ಣವಾಗಿದ್ದಿತು.
ತಸ್ಮಿನ್ ನಗರಮಧ್ಯೇ ತು ರಾಜವೇಶ್ಮ ಪ್ರತಿಷ್ಠಿತಮ್ |
ಇಂದ್ರಸದ್ಮಪ್ರತೀಕಾಶಂ ಸಂಪೂರ್ಣಂ ವಿತ್ತಸಂಚಯೈಃ ॥90॥
ಅಂತಹ ನಗರದ ಮಧ್ಯದಲ್ಲಿ ಇಂದ್ರನ ಅರಮನೆಯಂತಿರುವ ವಿತ್ತಸಂಚಯಗಳಿಂದ ಪರಿಪೂರ್ಣವಾದ ರಾಜನ ಅರಮನೆಯಿದ್ದಿತು.
ತಸ್ಯ ಮಧ್ಯೇ ಸಭಾ ದಿವ್ಯಾ ನಾನಾರತ್ನವಿಭೂಷಿತಾ |
ತಸ್ಯಾಂ ಸಭಾಯಾಂ ರಾಜರ್ಷಿಃ ಸರ್ವಾಲಂಕಾರಭೂಷಿತಃ |
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈರ್ಮಂತ್ರಿಭಿಶ್ಚಾಪಿ ಸಂವೃತಃ ॥91॥
ಅರಮನೆಯ ಮಧ್ಯದಲ್ಲಿ ನಾನಾರತ್ನವಿಭೂಷಿತವಾದ ದಿವ್ಯವಾದ ಸಭೆಯಿದ್ದಿತು. ಆ ಸಭೆಯಲ್ಲಿ ರಾಜರ್ಷಿಯಾದ ದುಷ್ಯಂತನು ಸರ್ವಾಲಂಕಾರಭೂಷಿತನಾಗಿ ಬ್ರಾಹ್ಮಣರಿಂದಲೂ, ಕ್ಷತ್ರಿಯರಿಂದಲೂ, ವೈಶ್ಯರಿಂದಲೂ ಮತ್ತು ಮಂತ್ರಿಗಳಿಂದಲೂ ಸುತ್ತುವರಿಯಲ್ಪಟ್ಟಿದ್ದನು.
ಕಾರ್ಯಾರ್ಥಿಭಿಃ ಸಮಭ್ಯೇತ್ಯ ಕೃತ್ವಾ ಕಾರ್ಯಂ ಗತೇಷು ಸಃ |
ಸಂಸ್ತೂಯಮಾನೋ ರಾಜೇಂದ್ರಃ ಸೂತಮಾಗಧವಂದಿಭಿಃ |
ಸುಖಾಸೀನೋಽಭವದ್ ರಾಜಾ ತಸ್ಮಿನ್ ಕಾಲೇ ಮಹರ್ಷಯಃ ॥92॥
ಕಾರ್ಯಾರ್ಥಿಗಳು ಬಂದು ತಮ್ಮ ಕಾರ್ಯವನ್ನು ಮುಗಿಸಿಕೊಂಡು ಹೋದಮೇಲೆ, ಸೂತಮಾಗಧವಂದಿಗಳಿಂದ ವಂದಿಸಲ್ಪಡುವ ರಾಜೇಂದ್ರನು ತನ್ನ ಸಿಂಹಾಸನದಲ್ಲಿ ಸುಖವಾಗಿ ಕುಳಿತಿದ್ದನು.
ಶಕುಂತಾನಾಂ ಸ್ವನಂ ಶ್ರುತ್ವಾ ನಿಮಿತ್ತಜ್ಞಾ ಮಹರ್ಷಯಃ |
ಶಕುಂತಲಾಮಿದಂ ಪ್ರೀತಾ ಹರ್ಷಯಂತೋಽಬ್ರುವನ್ ವಚಃ ॥94॥
ಆ ಕಾಲದಲ್ಲಿ ಮಹರ್ಷಿಗಳು ಪಕ್ಷಿಗಳ ಸ್ವರವನ್ನು ಕೇಳಿ ಶಕುನ ಶಾಸ್ತ್ರವನ್ನು ತಿಳಿದ ಅವರು ಶಕುಂತಲೆಯ ಮೇಲಿನ ಪ್ರೀತಿಯಿಂದ ಅವಳನ್ನು ಸಂತೋಷಪಡಿಸುವ ಸಲುವಾಗಿ ಈ ಮಾತುಗಳನ್ನು ಆಡಿದರು.
ಶಕುಂತಲೇ ನಿಮಿತ್ತಾನಿ ಶೋಭನಾನಿ ಭವಂತಿ ನಃ |
ಕಾರ್ಯಸಿದ್ಧಿಂ ವದಂತ್ಯದ್ಯ ಧ್ರುವಂ ರಾಜ್ಞೀ ಭವಿಷ್ಯಸಿ |
ಅಸ್ಮಿನ್ನೇವ ದಿನೇ ಪುತ್ರೋ ಯುವರಾಜೋ ಭವಿಷ್ಯತಿ ॥95॥
ಶಕುಂತಲೇ, ಶುಭಸೂಚನೆಗಳು ಕಂಡುಬರುತ್ತಿವೆ. ಈ ದಿನ ಇವು ಸ್ಪಷ್ಟವಾಗಿ ಕಾರ್ಯಸಿದ್ಧಿಯನ್ನು ಸೂಚಿಸುತ್ತಿವೆ. ನೀನು ನಿಶ್ಚಯವಾಗಿ ರಾಣಿಯಾಗುವಿ. ನಿನ್ನ ಮಗನು ಇಂದೇ ಯುವರಾಜನಾಗುವನು.
ವೈಶಂಪಾಯನಃ
ಉಕ್ತ್ವೈವಂ ರಾಜಭವನಂ ತೂರ್ಯಘೋಷನಿನಾದಿತಮ್ |
ಶಕುಂತಲಾಂ ಪುರಸ್ಕೃತ್ಯ ವಿವಿಶುಸ್ತೇ ಮಹರ್ಷಯಃ ॥96॥
ಹೀಗೆ ಹೇಳಿ ಮಹರ್ಷಿಗಳು ಶಕುಂತಲೆಯನ್ನು ಮುಂದೆ ಮಾಡಿಕೊಂಡು, ತೂರ್ಯಘೋಷದಿಂದ ಪ್ರತಿಧ್ವನಿಸುತ್ತಿದ್ದ ರಾಜಮಂದಿರವನ್ನು ಪ್ರವೇಶಿಸಿದರು.
ಪ್ರವಿಶಂತಂ ನೃಪಸುತಂ ಪ್ರಶಶಂಸುಶ್ಚ ಪ್ರೇಕ್ಷಕಾಃ |
ವರ್ಧಮಾನಪುರದ್ವಾರಂ ಪ್ರವಿಶನ್ನೇವ ಪೌರವಃ ॥97॥
ಇಂದ್ರಲೋಕಸ್ಥಮಾತ್ಮಾನಂ ಮೇನೇ ಹರ್ಷಸಮನ್ವಿತಃ |
ತತೋ ವೈ ನಾಗರಾಃ ಸರ್ವೇ ಸಮಾಹೂಯ ಪರಸ್ಪರಮ್ |
ದ್ರಷ್ಟುಕಾಮಾ ನೃಪಸುತಂ ಸಮಪದ್ಯಂತ ಭಾರತ ॥98॥
ಪ್ರೇಕ್ಷಕರು ಪ್ರವೇಶಿಸುತ್ತಿದ್ದ ರಾಜಕುಮಾರನನ್ನು ಪ್ರಶಂಸೆ ಮಾಡಿದರು. ಮಹಾದ್ವಾರವನ್ನು ಪ್ರವೇಶ ಮಾಡುತ್ತಲೇ ಪೌರವನು ತಾನು ಇಂದ್ರಲೋಕದಲ್ಲಿರುವವನಂತೆ ತಿಳಿದು ಸಂತೋಷಗೊಂಡನು. ಎಲೈ ಭಾರತನೇ, ಆಗ ನಗರವಾಸಿಗಳೆಲ್ಲರೂ ಒಬ್ಬರನ್ನೊಬ್ಬರು ಕರೆದು ರಾಜಕುಮಾರನನ್ನು ನೋಡುವ ದೃಷ್ಟಿಯಿಂದ ಒಟ್ಟಿಗೆ ಸೇರಿದರು.
ನಾಗರಾಃ
ದೇವತೇವ ಜನಸ್ಯಾಗ್ರೇ ಭ್ರಾಜತೇ ಶ್ರೀರಿವಾಪರಾ |
ಜಯಂತೇನೇವ ಪೌಲೋಮೀ ಇಂದ್ರಲೋಕಾದಿಹಾತಾ ॥99॥
ಜನರ ಎದುರಿಗೆ ಇವಳು ಇನ್ನೊಬ್ಬ ಲಕ್ಷ್ಮೀದೇವಿಯಂತೆ ಶೋಭಿಸುತ್ತಿದ್ದಾಳೆ. ಜಯಂತನ ಜೊತೆಯಲ್ಲಿ ಶಚಿಯು ಇಂದ್ರಲೋಕದಿಂದ ಇಲ್ಲಿಗೆ ಬಂದಂತೆ ಕಾಣುತ್ತಿದೆ.
ವೈಶಂಪಾಯನಃ
ಇತಿ ಬ್ರುವಂತಸ್ತೇ ಸರ್ವೇ ಮಹರ್ಷೀನಿದಮಬ್ರುವನ್ |
ಅದ್ಯ ನಃ ಸಫಲಂ ಜನ್ಮ ಕೃತಾರ್ಥಾಶ್ಚ ಕೃತಾ ವಯಮ್ ॥100॥
ಯೇ ಸ್ವನೇತ್ರೈಃ ಪ್ರಪಶ್ಯಾಮೋ ಮಹರ್ಷೀನ್ ಸೂರ್ಯವರ್ಚಸಃ |
ಅಭಿವಾದಯಾಮ ಸಹಿತಾ ಮಹರ್ಷೀನ್ ದೇವವರ್ಚಸಃ ॥101॥
ಹೀಗೆ ಮಾತನಾಡುತ್ತಾ ಅವರು ಮಹರ್ಷಿಗಳನ್ನು ಕುರಿತು ಹೀಗೆ ಹೇಳಿದರು. ಈ ದಿನ ನಮ್ಮ ಜನ್ಮವು ಸಫಲವಾಯಿತು. ನಾವು ಕೃತಾರ್ಥರಾಗಿದ್ದೇವೆ. ಏಕೆಂದರೆ ಸೂರ್ಯನ ಕಾಂತಿಯಿರುವ ಮಹರ್ಷಿಗಳನ್ನು ನಮ್ಮ ಕಣ್ಣುಗಳಿಂದ ನೋಡುತ್ತಿದ್ದೇವೆ. ನಾವೆಲ್ಲರೂ ಒಟ್ಟಿಗೆ ದೇವತೆಗಳ ಕಾಂತಿಯುಳ್ಳ ಮಹರ್ಷಿಗಳಾದ ನಿಮಗೆ ನಮಸ್ಕಾರವನ್ನು ಮಾಡುತ್ತೇವೆ.

ವೈಶಂಪಾಯನಃ
ಇತ್ಯುಕತ್ವ ಸಹಿತಾಃ ಕೇಚಿದನ್ವಗಚ್ಛಂತ ಪೌರವಮ್ |
ಹೈಮವತ್ಯಾಃ ಸುತಮಿವ ಕುಮಾರಂ ಪುಷ್ಕರೇಕ್ಷಣಮ್ ||102||
ಹೀಗೆ ಹೇಳುತ್ತಾ ಕೆಲವರು ಪಾರ್ವತಿಯ ಮಗನಾದ, ಕಮಲನಯನನಾದ ಷಣ್ಮುಖನಂತಿರುವ ಪೌರವನನ್ನು ಹಿಂಬಾಲಿಸಿದರು.
ಯೇ ಕೇಚಿದಬ್ರುವನ್ ಮೂಢಾಃ ಶಾಕುಂತಲದಿದೃಕ್ಷವಃ |
ಕೃಷ್ಣಾಜಿನೇನ ಸಂಛನ್ನಾನ್ ದ್ರಷ್ಟುಂ ನೇಚ್ಛಂತಿ ತಾಪಸಾನ್ ||103||
ಇನ್ನು ಕೆಲವರು ಮೂಢರು ಸರ್ವದಮನನನ್ನು ಮಾತ್ರ ನೋಡುವ ಆಸೆಯುಳ್ಳವರಾಗಿ ಕೃಷ್ಣಾಜಿನದಿಂದ ಆವೃತರಾದ ತಾಪಸರನ್ನು ನೋಡುವ ಇಚ್ಛೆಯಿಲ್ಲದೆ ಹೀಗೆ ಮಾತನಾಡಿದರು.
ಪಿಶಾಚಾ ಇವ ದೃಶ್ಯಂತೇ ನಾಗರಾಣಾಂ ವಿರೂಪಿಣಃ |
ವಿನಾ ಸಂಧ್ಯಾಂ ಪಿಶಾಚಾಸ್ತೇ ಪ್ರವಿಶಂತಿ ಪುರೋತ್ತಮಮ್ ||104||
ವಿರೂಪವುಳ್ಳ ಇವರು ನಗರವಾಸಿಗಳಿಗೆ ಪಿಶಾಚಿಗಳಂತೆ ತೋರುತ್ತಿದ್ದಾರೆ. ಸಂಧ್ಯಾಕಾಲಕ್ಕಿಂತ ಮುಂಚೆಯೇ ನಮ್ಮ ಶ್ರೇಷ್ಠವಾದ ಪಟ್ಟಣವನ್ನು ಈ ಪಿಶಾಚಿಗಳು ಪ್ರವೇಶಿಸುತ್ತಿದ್ದಾರೆ.
ಕ್ಷುತ್ಪಿಪಾಸಾರ್ದಿತಾನ್ ಕ್ಷಾಂತಾನ್ ವಲ್ಕಲಾಜಿನವಾಸಸಃ |
ತ್ವಗಸ್ಥಿಭೂತಾನ್ ನಿರ್ಮಾಂಸಾನ್ ಧಮನೀಸಂತತಾನಪಿ ||105||
ಪಿಂಗಲಾಕ್ಷಾನ್ ಪಿಂಗಜಟಾನ್ ದೀರ್ಘದಂತಾನ್ ನಿರೂದರಾನ್ |
ವಿಶೀರ್ಷಕಾನೂರ್ಧ್ವಹಸ್ತಾನ್ ದೃಷ್ಟ್ವಾ ಹಾಸ್ಯಂತಿ ನಾಗರಾಃ ||106||
ಇನ್ನೂ ಕೆಲವು ನಗರವಾಸಿಗಳು ಕ್ಷುತ್ಪಿಪಾಸೆಯಿಂದ ಬಳಲಿದವರೂ, ಕ್ಷಮಾಶೀಲರೂ, ವಲ್ಕಲಾಜಿನಧಾರಿಗಳೂ, ಮಾಂಸವಿಲ್ಲದೆ ಚರ್ಮ ಮತ್ತು ಮೂಳೆಗಳನ್ನು ಮಾತ್ರ ಹೊಂದಿದವರೂ, ಉಬ್ಬಿ ಎದ್ದು ತೋರುವ ನರಗಳುಳ್ಳವರೂ, ಕೆಂಪುಕಣ್ಣುಳ್ಳವರೂ, ಕೆಂಪು ಜಟೆಯುಳ್ಳವರೂ, ದೀರ್ಘದಂತರೂ, ಉದರವೇ ಇಲ್ಲದಂತೆ ಇರುವವರೂ, ತಲೆಯೇ ಕಾಣದಂತೆ ಇರುವವರೂ, ಕೈಗಳನ್ನು ಮೇಲಕ್ಕೆ ಎತ್ತಿದವರೂ ಆದ ಇಂತಹವರನ್ನು ನೋಡಿ ಹಾಸ್ಯ ಮಾಡಿದರು.
ಏವಂ ಕಥಯತಾಂ ತೇಷಾಂ ಗಿರಂ ಶ್ರುತ್ವಾ ಮಹರ್ಷಯಃ |
ಅನ್ಯೋನ್ಯಂ ತೇ ಸಮಾಹೂಯ ಇದಂ ವಚನಮಬ್ರುವನ್ ||107||
ಹೀಗೆ ಹಾಸ್ಯ ಮಾಡುವ ಅವರ ಮಾತುಗಳನ್ನು ಕೇಳಿದ ಮಹರ್ಷಿಗಳು ಅನ್ಯೋನ್ಯವಾಗಿ ಸಮಾಲೋಚಿಸಿ ಈ ಮಾತನ್ನು ಆಡಿದರು.
ಉಕ್ತಂ ಭಗವತಾ ಪೂರ್ವಂ ನ ಕೃತಂ ಸತ್ಯವಾದಿನಾ |
ನಗರಂ ನ ಪ್ರವೇಷ್ಟವ್ಯಂ ಭವದ್ಭಿರಿತಿ ಶಾಸನಮ್ ||108||
ಪೂಜ್ಯರೂ, ಸತ್ಯವಾದಿಗಳಾದ ಕಣ್ವರು ನೀವು ನಗರವನ್ನು ಪ್ರವೇಶಿಸಬಾರದು ಎಂಬ ಶಾಸನವನ್ನು ಮೊದಲೇ ನಮಗೆ ತಿಳಿಸಿದ್ದರು. ಅದನ್ನು ನಾವು ಮಾಡಲಿಲ್ಲ.
ಕಿಂಕಾರಣಂ ಪ್ರವೇಕ್ಷ್ಯಾಮೋ ನಗರಂ ದುರ್ಜನೈರ್ವೃತಮ್ |
ತ್ಯಕ್ತಸಂಗಸ್ಯ ಚ ಮುನೇರ್ನಗರೇ ಕಿಂ ಪ್ರಯೋಜನಮ್ ||109||
ದುರ್ಜನರಿಂದ ಆವೃತವಾದ ಈ ಪಟ್ಟಣವನ್ನು ಪ್ರವೇಶಿಸುವುದಕ್ಕೆ ನಮಗೇನು ಕಾರಣ? ಸರ್ವಸಂಗಪರಿತ್ಯಾಗ ಮಾಡಿದವರಿಗೆ ಈ ಪಟ್ಟಣದಲ್ಲಿ ಏನು ಪ್ರಯೋಜನವಿದೆ?
ತಸ್ಮಾದ್ ಗಮಿಷ್ಯಾಮ ವಯಂ ಗಂಗಾಯಮುನುಸಂಗಮಮ್ |
ಏವಮುಕತ್ವ ಮುನಿಗಣಾಃ ಪ್ರತಿಜಗ್ಮುರ್ಯಥಾಗತಮ್ ||110||
ಆದ್ದರಿಂದ ನಾವೆಲ್ಲರೂ ಗಂಗಾಯಮುನಸಂಗಮಕ್ಕೆ ಹಿಂದಿರುಗೋಣ. ಹೀಗೆ ಹೇಳಿ ಆ ಮುನಿಗಳೆಲ್ಲರೂ ಬಂದ ದಾರಿಯಲ್ಲಿಯೇ ಹಿಂದಿರುಗಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ನವತಿತಮೋऽಧ್ಯಾಯಃ ||
|| ಸಂಭವಪರ್ವಣಿ ಅಷ್ಟತ್ರಿಂಶೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****
ತೊಂಭತ್ತೊಂದನೆಯ ಅಧ್ಯಾಯ
(ದುಷ್ಯಂತ ಶಕುಂತಲೆಯರ ಸಂವಾದ. ಶಕುಂತಲೆಯಿಂದ ಪತ್ನಿ ಮತ್ತು ಪುತ್ರರ ಮಹತ್ವದ ವರ್ಣನೆ.)
ವೈಶಂಪಾಯನಃ
ಗತಾನ್ ಮುನಿಗಣಾನ್ ದೃಷ್ಟ್ವಾ ಪುತ್ರಂ ಸಂಗೃಹ್ಯ ಪಾಣಿನಾ |
ಮಾತಾಪಿತೃಭ್ಯಾಂ ವಿರಹಾದ್ ಯಥಾ ಶೋಚಂತಿ ದಾರಕಾಃ ||1||
ತಥಾ ಶೋಕಪರೀತಾಂಗೀ ಧೃತಿಮಾಲಂಬ್ಯ ದುಃಖಿತಾ |
ಪುತ್ರೇಣೈವ ಸಹಾಯೇನ ಸಾ ಜಗಾಮ ಶನೈಃ ಶನೈಃ ||2||
ಋಷಿಗಳ ಸಮೂಹವು ಹೊರಟುಹೋದುದನ್ನು ನೋಡಿ ಶಕುಂತಲೆಯು ಮಗನ ಕೈಯನ್ನು ಹಿಡಿದುಕೊಂಡು ತಂದೆತಾಯಿಗಳನ್ನು ಕಳೆದುಕೊಂಡ ಮಕ್ಕಳಂತೆ ಶೋಕತಪ್ತಳಾಗಿ ದುಃಖಿಯಾಗಿದ್ದರೂ ಧೈರ್ಯವನ್ನು ತೆಗೆದುಕೊಂಡು ಮಗನ ಸಹಾಯದಿಂದ ಮೆಲ್ಲಮೆಲ್ಲನೆ ನಡೆದಳು.
ಅದೃಷ್ಟಪೂರ್ವಾನ್ ಪಶ್ಯನ್ ವೈ ರಾಜಮಾರ್ಗೇಣ ಪೌರವಃ |

ಹರ್ಮ್ಯಪ್ರಾಸಾದಚೈತ್ಯಾಂಶ್ಚ ಸಭಾ ದಿವ್ಯಾ ವಿಚಿತ್ರಿತಾಃ |
ಕೌತೂಹಲಸಮಾವಿಷ್ಟೋ ದೃಷ್ಟ್ವಾ ವಿಸ್ಮಯಮಾಗತಃ ॥3॥
ರಾಜಮಾರ್ಗದಲ್ಲಿ ಹೋಗುತ್ತಿದ್ದ ಪೌರವನು ಹಿಂದೆ ಎಲ್ಲೂ ನೋಡಿರದಂತಹ ದಿವ್ಯವಾದ ಸಭೆಗಳು, ಉಪ್ಪರಿಗೆಯ ಮನೆಗಳು ಮತ್ತು ವಿಚಿತ್ರವಾದ ಗೋಪುರಗಳನ್ನು ನೋಡಿ ಕುತೂಹಲದಿಂದ ಕೂಡಿದವನಾಗಿ ವಿಸ್ಮಯಪಟ್ಟನು.
ಸರ್ವೇ ಬ್ರುವಂತಿ ತಾಂ ದೃಷ್ಟ್ವಾ ಪದ್ಮಹೀನಾಮಿವ ಶ್ರಿಯಮ್ |
ಗತೇನ ಹಂಸೀಸದೃಶೀಂ ಕೋಕಿಲೇನ ಸ್ವರೋಪಮಾಮ್ ॥4॥
ಮುಖೇನ ಚಂದ್ರಸದೃಶೀಂ ಶ್ರಿಯಾ ಪದ್ಮಾಲಯಾಸಮಾಮ್|
ಸ್ಮಿತೇನ ಕುಂದಸದೃಶೀಂ ಪದ್ಮಗರ್ಭಸಮತ್ವಚಮ್ ॥5॥
ಪದ್ಮಪತ್ರವಿಶಾಲಾಕ್ಷೀಂ ತಪ್ತಜಾಂಬೂನದಪ್ರಭಾಮ್ |
ಕರಾಂತಮಿತಮಧ್ಯಾಂ ತಾಂ ಸುಕೇಶೀಂ ಸಂಹತಸ್ತನೀಮ್ ॥6॥
ಜಘನಂ ಸುವಿಶಾಲಂ ವೈ ಊರೂ ಕರಿಕರೋಪಮೌ |
ರಕ್ತತುಂಗನಖೌ ಪಾದೌ ಧರಣ್ಯಾಂ ಸುಪ್ರತಿಷ್ಠಿತೌ ॥7॥
ಏವಂ ರೂಪಸಮಾಯುಕ್ತಾ ಸ್ವರ್ಗಲೋಕಾದಿಹಾಗತಾ |
ಇತಿ ಸ್ಮ ಸರ್ವೇಽಮನ್ಯಂತ ದುಷ್ಯಂತನಗರೇ ಜನಾಃ ॥8॥
ನಗರದ ಜನರೆಲ್ಲರೂ ಅವರನ್ನು ನೋಡಿ ಪದ್ಮಹೀನಳಾದ ಲಕ್ಷ್ಮಿಯೆಂದೂ, ನಡಿಗೆಯಲ್ಲಿ ಹಂಸ ಸಮಾನಳೆಂದೂ, ಸ್ವರದಲ್ಲಿ ಕೋಕಿಲೆಯ ಸಮಾನಳೆಂದೂ, ಮುಖದಲ್ಲಿ ಚಂದ್ರ ಸಮಾನಳೆಂದೂ, ಕಾಂತಿಯಲ್ಲಿ ಲಕ್ಷ್ಮಿ ಸಮಾನಳೆಂದೂ, ಮಂದಹಾಸದಲ್ಲಿ ಕುಂದಪುಷ್ಪ ಸಮಾನಳೆಂದೂ, ತ್ವಚೆಯಲ್ಲಿ ಪದ್ಮಗರ್ಭಕ್ಕೆ ಸಮಾನಳೆಂದೂ, ಪದ್ಮಪತ್ರದಂತೆ ವಿಶಾಲವಾದ ಕಣ್ಣುಳ್ಳವಳೆಂದೂ, ಪುಟವಿಟ್ಟ ಚಿನ್ನದ ಕಾಂತಿಯುಳ್ಳವಳೆಂದೂ, ಕೃಶವಾದ ಮಧ್ಯವುಳ್ಳವಳೆಂದೂ, ಒಳ್ಳೆಯ ಕೇಶವುಳ್ಳವಳೆಂದೂ, ಕೂಡಿದ ಸ್ತನವುಳ್ಳವಳೆಂದೂ, ವಿಶಾಲವಾದ ಜಘನವುಳ್ಳವಳೆಂದೂ, ಆನೆಯ ಸೊಂಡಿಲಿನಂತಿರುವ ತೊಡೆಗಳುಳ್ಳವಳೆಂದೂ, ಕೆಂಪಾದ ಮತ್ತು ಎತ್ತರವಾದ ನಖಗಳುಳ್ಳವಳೆಂದೂ, ಭೂಮಿಯನ್ನು ಚೆನ್ನಾಗಿ ಮೆಟ್ಟುವ ಪಾದವುಳ್ಳವಳೆಂದೂ, ಇಂತಹ ಅಸಾಧಾರಣ ಸೌಂದರ್ಯವುಳ್ಳವಳಾಗಿ ಸ್ವರ್ಗಲೋಕದಿಂದ ದುಷ್ಯಂತನ ನಗರಕ್ಕೆ ಬಂದಿರುವಳೆಂದೂ ತಿಳಿದರು.
ಪುನಃ ಪುನರವೋಚಂಸ್ತೇ ಶಾಕುಂತಲಗುಣಾನಪಿ |
ಸಿಂಹೇಕ್ಷಣಃ ಸಿಂಹದಂಷ್ಟ್ರಃ ಸಿಂಹಸ್ಕಂಧೋ ಮಹಾಭುಜಃ |
ಸಿಂಹಧೀರಃ ಸಿಂಹಬಲಃ ಸಿಂಹವಿಕ್ರಾಂತಗಾಮ್ಯಯಮ್ ॥9॥
ಸಿಂಹಾನೂಕಃ ಸಿಂಹಗತಿಃ ಸಿಂಹಸ್ಕಂಧೋ ಮಹಾಭುಜಃ |
ಪೃಥ್ವಂಸಃ ಪೃಥುವಕ್ಷಾಶ್ಚ ಛತ್ರಾಕಾರಶಿರಾ ಮಹಾನ್ ॥10॥
ಪಾಣಿಪಾದತಳೇ ರಕ್ತೋ ರಕ್ತಾಸ್ಯೋ ದುಂದುಭಿಸ್ವನಃ |
ರಾಜಲಕ್ಷಣಸಂಪನ್ನೋ ರಾಜಶ್ರೀಶ್ಚಾಸ್ಯ ದೃಶ್ಯತೇ ॥11॥
ಶಕುಂತಲೆಯ ಮಗನ ಗುಣವನ್ನು ನೋಡಿ ಮತ್ತೆ ಮತ್ತೆ ಮಾತನಾಡಿದರು. ಇವನು ಸಿಂಹದ ಕಣ್ಣುಳ್ಳವನು, ಸಿಂಹದಂತೆ ದಂಷ್ಟ್ರವುಳ್ಳವನು, ಸಿಂಹದಂತೆ ಮಹಾಭುಜವುಳ್ಳವನು, ಸಿಂಹದ ಧೈರ್ಯವನ್ನು ಹೊಂದಿದವನು, ಸಿಂಹದ ಬಲವನ್ನು ಹೊಂದಿದವನು, ಸಿಂಹದ ವಿಕ್ರಾಂತ ಗತಿಯನ್ನು ಹೊಂದಿರುವವನು, ಸಿಂಹದ ಶೀಲವನ್ನು ಹೊಂದಿರುವವನು, ವಿಸ್ತಾರವಾದ ಹೆಗಲನ್ನು ಮತ್ತು ವಕ್ಷಸ್ಥಲವನ್ನು ಉಳ್ಳವನು, ಛತ್ರಾಕಾರದ ಶಿರಸ್ಸನ್ನು ಉಳ್ಳವನು, ಪಾಣಿ ಮತ್ತು ಪಾದತಳಗಳು ಕೆಂಪಾಗಿರುವವನು, ಕೆಂಪಾದ ವದನ ಉಳ್ಳವನು, ದುಂದುಭಿಯ ಸ್ವರವುಳ್ಳವನು, ಎಲ್ಲಾ ರಾಜಲಕ್ಷಣಗಳಿಂದ ಯುಕ್ತನಾಗಿರುವವನು. ಇವನಲ್ಲಿ ರಾಜಲಕ್ಷ್ಮಿಯು ಕಾಣುತ್ತಿದ್ದಾಳೆ ಎಂದು ಮಾತನಾಡಿದರು.
ಆಕಾರೇಣ ಚ ರೂಪೇಣ ಶರೀರೇಣಾಪಿ ತೇಜಸಾ |
ದುಷ್ಯಂತೇನ ಸಮೋ ಹ್ಯೇಷ ಕಸ್ಯ ಪುತ್ರೋ ಭವಿಷ್ಯತಿ ॥12॥
ಆಕಾರದಿಂದಲೂ, ರೂಪದಿಂದಲೂ, ಶರೀರದಿಂದಲೂ, ಕಾಂತಿಯಿಂದಲೂ, ದುಷ್ಯಂತನಿಗೆ ಸಮಾನವಾಗಿರುವವನು ಯಾರ ಪುತ್ರನಿರಬಹುದು.
ಏವಂ ಬ್ರುವಂತಸ್ತೇ ಸರ್ವೇ ಪ್ರಶಶಂಸುಃ ಸಹಸ್ರಶಃ |
ಯುಕ್ತಿವಾದಾನವೋಚಂತ ಸರ್ವಾಃ ಪ್ರಾಣಭೃತಃಸ್ತ್ರಿಯಃ ॥13॥
ಬಾಂಧವಾ ಇವ ಸಸ್ನೇಹಾ ಅನುಜಗ್ಮುಃ ಶಕುಂತಲಾಮ್ |
ವೇಶ್ಮದ್ವಾರಂ ಸಮಾಸಾದ್ಯ ವಿಹ್ವಲಂತೀ ನೃಪಾತ್ಮಜಾ ॥14॥
ಹೀಗೆ ಹೇಳುತ್ತಾ ಪೌರರು ಸಹಸ್ರ ಸಂಖ್ಯೆಯಲ್ಲಿ ಅವನನ್ನು ಪ್ರಶಂಸಿಸಿದರು. ನಾಗರೀಕ ಸ್ತ್ರೀಯರೆಲ್ಲರೂ ತರ್ಕಬದ್ಧವಾದ ಮಾತುಗಳನ್ನಾಡುತ್ತಾ ಬಾಂಧವರಂತೆ ಸ್ನೇಹದಿಂದ ಶಕುಂತಲೆಯನ್ನು ಹಿಂಬಾಲಿಸಿದರು. ರಾಜದ್ವಾರವನ್ನು ಸಮೀಪಿಸಿದ ಶಕುಂತಲೆಯು ವಿಹ್ವಲಳಾದಳು.
ಚಿಂತಯಾಮಾಸ ಸಹಸಾ ಕಾರ್ಯಗೌರವಕಾರಣಾತ್ |
ಲಜ್ಜಯಾ ಚ ಪರೀತಾಂಗೀ ರಾಜನ್ ರಾಜಸಮಕ್ಷತಃ ॥15॥
ಅಘೃಣಾ ಕಿಂ ನು ವಕ್ಷ್ಯಾಮಿ ದುಷ್ಯಂತಂ ಮಮ ಕಾರಣಾತ್ |
ಏವಮುಕತ್ವ ತು ಕೃಪಣಾ ಚಿಂತಯಂತೀ ಶಕುಂತಲಾ ॥16॥
ಅಭಿಸೃತ್ಯ ಚ ರಾಜಾನಂ ವೇದಿತಾ ಸಾ ಪ್ರವೇಶಿತಾ |

ಸಹ ತೇನ ಕುಮಾರೇಣ ತರುಣಾದಿತ್ಯವರ್ಚಸಾ ॥17॥
ತಕ್ಷಣ ಕಾರ್ಯಗೌರವವನ್ನು ಗಮನಿಸಿ ಲಜ್ಜೆಯಿಂದ ಕೂಡಿದವಳಾಗಿ ರಾಜನ ಎದುರಿಗೆ ಹೋಗಿ ದಯೆಯನ್ನು ಹೊಂದದ ನಾನು ನನ್ನ ಸಲುವಾಗಿ ಏನು ಮಾತನಾಡಲಿ ಎಂದು ಚಿಂತಿಸಿದಳು.
ಶಕುಂತಲೆಯು ಹೀಗೆ ಮನಸ್ಸಿನಲ್ಲಿಯೇ ಹೇಳಿಕೊಂಡು ಕೃಪಣಳಾಗಿ ರಾಜದ್ವಾರವನ್ನು ತಲುಪಿ, ದ್ವಾರಪಾಲಕರಿಂದ ರಾಜನಿಗೆ ನಿವೇದಿಸಲ್ಪಟ್ಟು ಬಾಲಸೂರ್ಯನ ಪ್ರಭೆಯಿರುವ ಕುಮಾರನ ಜೊತೆಯಲ್ಲಿ ಒಳಗೆ ಪ್ರವೇಶವನ್ನು ಪಡೆದಳು.
ಸಿಂಹಾಸನಸ್ಥಂ ರಾಜಾನಂ ಮಹೇಂದ್ರಸದೃಶದ್ಯುತಿಮ್ ।
ಶಕುಂತಲಾ ನತಶಿರಾಃ ಪರಂ ಹರ್ಷಮವಾಪ್ಯ ಚ ॥18॥
ಇಂದ್ರನಿಗೆ ಸದೃಶವಾದ ಕಾಂತಿಯುಳ್ಳ ರಾಜನು ಸಿಂಹಾಸನದಲ್ಲಿ ಕುಳಿತಿರುವುದನ್ನು ನೋಡಿ ಶಕುಂತಲೆಯು ತಲೆಯನ್ನು ತಗ್ಗಿಸಿ ಸಂತೋಷಪಟ್ಟಳು.
ಪೂಜಯಿತ್ವಾ ಯಥಾನ್ಯಾಯಂ ಅಬ್ರುವೀತ್ ತಂ ಶಕುಂತಲಾ ।
ಅಭಿವಾದಯ ರಾಜಾನಂ ಪಿತರಂ ತೇ ದೃಢವ್ರತಮ್ ॥19॥
ಶಕುಂತಲೆಯು ರಾಜನನ್ನು ಯಥೋಚಿತವಾಗಿ ಪೂಜಿಸಿ ಮಗನನ್ನು ಕುರಿತು ದೃಢವ್ರತನಾದ ನಿನ್ನ ತಂದೆಯಾದ ರಾಜನನ್ನು ನಮಸ್ಕರಿಸು ಎಂದು ಹೇಳಿದಳು.
ಏವಮುಕತ್ವ ತು ಪುತ್ರಂ ಸಾ ಲಜ್ಜಾನತಮುಖೀ ಸ್ಥಿತಾ ।
ಸ್ತಂಭಮಾಲಿಂಗ್ಯ ರಾಜಾನಂ ಪ್ರಸೀದಸ್ವೇತಿ ಚಾಬ್ರುವೀತ್ ॥20॥
ಮಗನನ್ನು ಕುರಿತು ಹೀಗೆ ಹೇಳಿ, ಲಜ್ಜೆಯಿಂದ ಮುಖವನ್ನು ತಗ್ಗಿಸಿ ಒಂದು ಸ್ತಂಭವನ್ನು ಅವಲಂಬಿಸಿ ನಿಂತು, ರಾಜನನ್ನು ಕುರಿತು ನೀನು ಇವನಿಗೆ ಪ್ರಸನ್ನನಾಗಬೇಕೆಂದು ಕೇಳಿದಳು.
ಶಾಕುಂತಲೋಽಪಿ ರಾಜಾನಮಭಿವಾದ್ಯ ಕೃತಾಂಜಲಿಃ ।
ಹರ್ಷೇಣೋತ್ಫು ಲ್ಲನಯನೋಂ ರಾಜಾನ ಚಾನ್ವವೈಕ್ಷತ ॥21॥
ಶಕುಂತಲೆಯ ಮಗನೂ ಸಹ ಕೈಗಳನ್ನು ಮುಗಿದು ರಾಜನಿಗೆ ನಮಸ್ಕರಿಸಿ ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ ರಾಜನನ್ನು ನೋಡಿದನು.
ದುಷ್ಯಂತೋ ಧರ್ಮಬುದ್ಧ್ಯಾ ತು ಚಿಂತಯನ್ನೇವ ಸೋಽಬ್ರುವೀತ್।
ಕಿಮಾಗಮನಕಾರ್ಯಂ ತೇ ಬ್ರೂಹಿ ತ್ವಂ ವರವರ್ಣಿನಿ ।
ಕರಿಷ್ಯಾಮಿ ನ ಸಂದೇಹಃ ಸಪುತ್ರಾಯಾ ವಿಶೇಷತಃ ॥22॥
ದುಷ್ಯಂತನು ಧರ್ಮಬುದ್ಧಿಯಿಂದ ಚಿಂತಿಸುತ್ತಲೇ ಹೀಗೆ ಕೇಳಿದನು. ಸುಂದರಿಯೇ, ನಿನ್ನ ಆಗಮನದ ಉದ್ದೇಶವೇನೆಂದು ಹೇಳು. ಪುತ್ರನಿಂದ ಕೂಡಿರುವ ನಿನಗೆ ನಿಶ್ಚಯವಾಗಿ ನಾನು ನಡೆಸಿಕೊಡುತ್ತೇನೆ.
ಶಕುಂತಲಾ
ಪ್ರಸೀದಸ್ವ ಮಹಾರಾಜ ವಕ್ಷ್ಯಾಮಿ ಪುರುಷೋತ್ತಮ ।
ಏಷ ಪುತ್ರೋ ಹಿ ತೇ ರಾಜನ್ ಮಯ್ಯುತ್ಪನ್ನಃ ಪರಂತಪ ॥23॥
ತಸ್ಮಾತ್ ಪುತ್ರಸ್ತ್ವಯಾ ರಾಜನ್ ಯೌವರಾಜ್ಯೇಽಭಿಷಿಚ್ಯತಾಮ್ ।
ಯಥೋಕ್ತಮಾಶ್ರಮೇ ತಸ್ಮಿನ್ ವರ್ತಸ್ವ ಪುರುಷೋತ್ತಮ ॥24॥
ಮಹಾರಾಜನೇ, ಪುರುಷೋತ್ತಮನೇ, ಪ್ರಸನ್ನನಾಗು. ಉದ್ದೇಶವನ್ನು ಹೇಳುವೆನು. ಇವನು ನನ್ನಲ್ಲಿ ಹುಟ್ಟಿದ ನಿನ್ನ ಪುತ್ರನು. ಎಲೈ ಪರಂತಪನಾದ ರಾಜನೇ, ನಿನ್ನ ಮಗನಿಗೆ ಯೌವರಾಜ್ಯದಲ್ಲಿ ಅಭಿಷೇಕವನ್ನು ಮಾಡು. ವಿವಾಹದ ಸಮಯದಲ್ಲಿ ಆಡಿದ ಮಾತಿನಂತೆ ನಡೆದುಕೋ.
ಮಯಾ ಸಮಾಗಮೇ ಪೂರ್ವಂ ಯಥಾ ತತ್ಸಮಯೇ ತ್ವಯಾ ।
ತಥಾ ತ್ವಂ ಸಮಯೇ ತ್ವಸ್ಮಿನ್ ವರ್ತಸ್ವ ಪುರುಷೋತ್ತಮ ।
ತಂ ಸ್ಮರಸ್ವ ಮಹಾಭಾಗ ಕಣ್ವಾಶ್ರಮಪದಂ ಪ್ರತಿ ॥25॥
ವಿವಾಹದ ಸಮಯದಲ್ಲಿ ನೀನು ನನ್ನ ಸಮಾಗಮವನ್ನು ಮಾಡುವುದಕ್ಕಿಂತ ಮುಂಚೆ ಏನು ಮಾತನ್ನು ಕೊಟ್ಟಿರುವೆಯೋ ಅದರಂತೆ ನಡೆದುಕೋ. ಎಲೈ ಪುರುಷೋತ್ತಮನಾದ ಮಹಾನುಭಾವನೇ, ಕಣ್ವಾಶ್ರಮದ ಬಳಿ ನಡೆದ ಘಟನೆಗಳನ್ನು ಸ್ಮರಿಸು.
ವೈಶಂಪಾಯನಃ
ತಸ್ಯೋಪಭೋಗಸಕ್ತಸ್ಯ ಸ್ತ್ರೀಷು ಚಾನ್ಯಾಸು ಭಾರತ ।
ಶಕುಂತಲಾ ಸಪುತ್ರಾ ಚ ಮನಸ್ಯಂತರಧೀಯತ ॥26॥
ಬೇರೆ ಪತ್ನಿಯರಲ್ಲಿ ಭೋಗಾಸಕ್ತನಾಗಿದ್ದ ಅವನಿಗೆ ಎಲೈ ಭರತ ಶ್ರೇಷ್ಠನೇ, ಶಕುಂತಲೆಯೂ, ಅವಳ ಪುತ್ರನೂ ಮನಸ್ಸಿನಿಂದ ಮಾಯವಾಗಿದ್ದರು.
ಸೋಽಥ ಶ್ರುತ್ವಾ ತು ತದ್ವಾಕ್ಯಂ ತಸ್ಯಾ ರಾಜಾ ಸ್ಮರನ್ನಪಿ ।
ಅಬ್ರುವೀನ್ನ ಸ್ಮರಾಮೀತಿ ತ್ವಯಾ ಭದ್ರೇ ಸಮಾಗಮಮ್ ॥27॥
ಅವಳ ಆ ಮಾತನ್ನು ಕೇಳಿ ರಾಜನು ಎಲ್ಲವನ್ನೂ ಸ್ಮರಿಸಿಕೊಂಡರೂ, ಭದ್ರೆಯೇ, ನಿನ್ನ ಸಮಾಗಮವನ್ನು ಮಾಡಿದ ನೆನಪು ನನಗೆ ಇಲ್ಲ ಎಂದು ಹೇಳಿದನು.
ಮೈಥುನಂ ಚ ವೃಥಾ ನಾಹಂ ಗಚ್ಛೇಯಮಿತಿ ಮೇ ಮತಿಃ ।
ನಾಭಿಜಾನಾಮಿ ಕಲ್ಯಾಣಿ ತ್ವಯಾ ಸಹ ಸಮಾಗಮಮ್ ॥28॥

ನಾನು ವ್ಯರ್ಥವಾದ ಮೈಥುನವನ್ನು (ಪತ್ನಿಯಲ್ಲದವಳ ಜೊತೆ ಮೈಥುನವನ್ನು) ಎಂದೂ ಮಾಡುವುದಿಲ್ಲ ಎಂದು ನನ್ನ ಅಭಿಪ್ರಾಯ. ಕಲ್ಯಾಣಿಯೇ, ನನಗೆ ನಿನ್ನ ಸಮಾಗಮದ ನೆನಪೇ ಇಲ್ಲ.
ಧರ್ಮಾರ್ಥಕಾಮಸಂಬಂಧಂ ನ ಸ್ಮರಾಮಿ ತ್ವಯಾ ಸಹ |
ಗಚ್ಛ ವಾ ತಿಷ್ಠ ವಾ ಕಾಮಂ ಯಥೇಚ್ಛಸಿ ತಥಾ ಕುರು ॥29॥
ನಿನ್ನ ಜೊತೆಯಲ್ಲಿ ಧರ್ಮ ಅರ್ಥ ಅಥವಾ ಕಾಮದ ಯಾವ ಸಂಬಂಧವೂ ನನ್ನ ಸ್ಮರಣೆಗೆ ಬರುತ್ತಿಲ್ಲ. ನೀನು ಹೊರಟುಹೋಗು ಅಥವಾ ಇಲ್ಲೇ ಇರು. ನಿನಗೆ ಬೇಕಾದಂತೆ ಮಾಡು.
ಸೈವಮುಕ್ತಾ ವರಾರೋಹಾ ವ್ರೀಡಿತೈವ ಮನಸ್ವಿನೀ |
ವಿಸಂಜ್ಞೇವ ಚ ದುಃಖೇನ ತಸ್ಥೌ ವಿಗತಚೇತನಾ ॥30॥
ಆ ಸುಂದರಿಯು ಹೀಗೆ ಹೇಳಲ್ಪಟ್ಟವಳಾಗಿ ಅವಮಾನವಾದರೂ ಧೈರ್ಯವನ್ನು ತಂದುಕೊಂಡು ಜ್ಞಾನವನ್ನು ಕಳೆದುಕೊಂಡವಳಂತೆ ಪ್ರಜ್ಞಾಶೂನ್ಯಳಾಗಿ ನಿಂತುಕೊಂಡಳು.
ಸಂರಂಭಾಮರ್ಷತಾಮ್ರಾಕ್ಷೀ ಸ್ಫುರಮಾಣೋಷ್ಠಸಂಪುಟಾ |
ನಿರ್ದಹಂತೀವ ನೇತ್ರಾಭ್ಯಾಂ ತಿರ್ಯಗ್ ರಾಜಾನಮೈಕ್ಷತ ॥31॥
ಶೋಕ ಮತ್ತು ಕೋಪಗಳಿಂದ ಕೆಂಪಾದ ಕಣ್ಣುಳ್ಳವಳಾಗಿ ಅದುರುತ್ತಿರುವ ತುಟಿಗಳನ್ನು ಹೊಂದಿ ಸುಟ್ಟುಬಿಡುವಂತೆ ರಾಜನನ್ನು ಓರೆನೋಟದಿಂದ ನೋಡಿದಳು.
ಆಕಾರಂ ಗೂಹಮಾನಾ ಚ ಮನ್ಯುನಾ ಚ ಸಮೀರಿತಮ್ |
ತಪಸಾ ಸಂಭೃತಂ ತೇಜೋ ಧಾರಯಾಮಾಸ ವೈ ತದಾ ॥32॥
ಕೋಪದಿಂದ ಉಂಟಾದ ತನ್ನ ಆಕಾರವನ್ನು ಮರೆಮಾಚಿ ಆಗ ಅವಳು ತಪಸ್ಸಿನಿಂದ ಉಂಟಾದ ತೇಜಸ್ಸನ್ನು ತಡೆ ಹಿಡಿದಳು.
ಸಾ ಮುಹೂರ್ತಮಿವ ಧ್ಯಾತ್ವಾ ದುಃಖಾಮರ್ಷಸಮನ್ವಿತಾ |
ಭರ್ತಾರಮಪಿ ಸಂಪ್ರೇಕ್ಷ್ಯ ಯಥಾನ್ಯಾಯಂ ವಚೋಽಬ್ರವೀತ್ ॥33॥
ಒಂದು ಮುಹೂರ್ತಕಾಲ ಚಿಂತಿಸಿ, ಶೋಕಾಮರ್ಷಗಳಿಗೆ ಒಳಗಾದ ಅವಳು ಪತಿಯನ್ನು ನೋಡಿ ನ್ಯಾಯಯುಕ್ತವಾದ ಈ ಮಾತುಗಳನ್ನು ಆಡಿದಳು.
ಜಾನನ್ನಪಿ ಮಹಾರಾಜ ಕಸ್ಮಾದೇವಂ ಪ್ರಭಾಷಸೇ |
ನ ಜಾನಾಮೀತಿ ಮೇ ಸಂಗಂ ಯಥಾಽನ್ಯಃ ಪ್ರಾಕೃತಸ್ತಥಾ ॥34॥
ಮಹಾರಾಜನೇ, ಎಲ್ಲವನ್ನೂ ತಿಳಿದಿದ್ದರೂ ನಿನ್ನ ಸಂಗದ ಸ್ಮರಣೆಯೇ ಇಲ್ಲ ಎಂದು ಬೇರೆ ಸಾಮಾನ್ಯ ಮನುಷ್ಯನಂತೆ ಏಕೆ ಮಾತನಾಡುತ್ತಿದ್ದೀಯೆ.
ಯಸ್ಯ ತೇ ಹೃದಯಂ ವೇತ್ತಿ ಸತ್ಯಸ್ಯೈವಾನೃತಸ್ಯ ಚ |
ಕಲ್ಯಾಣಂ ಸಾಕ್ಷಿಣಂ ಚೈವ ಆತ್ಮಾನಮವಮನ್ಯಸೇ ॥35॥
ನಿನ್ನ ಹೃದಯವು ಸತ್ಯವು ಯಾವುದು, ಅನೃತವು ಯಾವುದು ಎಂದು ತಿಳಿದಿದೆ. ನಿನ್ನ ಪರಿಶುದ್ಧವಾದ ಸಾಕ್ಷಿಗೆ ನೀನು ಅವಮಾನವನ್ನು ಮಾಡುತ್ತಿರುವೆ.
ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ |
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥36॥
ಯಾವನು ಬೇರೆ ರೀತಿ ಇರುವ ತನ್ನನ್ನು ಬೇರೆ ರೀತಿಯಾಗಿ ತಿಳಿಯುತ್ತಾನೆಯೋ, ಅವನು ಮಾಡದಿದ್ದ ಪಾಪವಿಲ್ಲ. ಅವನು ಚೋರ ಮತ್ತು ಆತ್ಮಘಾತುಕ.
ಏಕೋಽಹಮಸ್ಮೀತಿ ಚ ಮನ್ಯಸೇ ತ್ವಂ |
ನ ಹೃಚ್ಛಯಂ ವೇತ್ಸಿ ಮುನಿಂ ಪುರಾಣಮ್ |
ಯೋ ವೇದಿತಾ ಕರ್ಮಣಃ ಪಾಪಕಸ್ಯ
ತಸ್ಯಾಂತಿಕೇ ತ್ವಂ ವೃಜಿನಂ ಕರೋಷಿ ॥37॥
ನೀನು ನಾನೊಬ್ಬನೇ ಇದ್ದೇನೆ ಎಂದು ತಿಳಿದಿದ್ದೀಯೆ. ಆದರೆ ಹೃದಯಗುಹೆಯಲ್ಲಿರುವ ನಾರಾಯಣನನ್ನು ತಿಳಿದಿಲ್ಲ. ನಿನ್ನ ಪಾಪಕರ್ಮವನ್ನು ತಿಳಿದಿರುವ ಅವನೆದುರಿಗೆ ನೀನು ಸುಳ್ಳನ್ನು ಹೇಳಿ ಪಾಪಕಾರ್ಯವನ್ನು ಮಾಡುತ್ತಿದ್ದೀಯೆ.
ಧರ್ಮ ಏವ ಹಿ ಸಾಧೂನಾಂ ಸರ್ವೇಷಾಂ ಹಿತಕಾರಣಮ್ |
ನಿತ್ಯಂ ಮಿಥ್ಯಾವಿಹೀನಾನಾಂ ನಚ ದುಃಖಾವಹೋ ಭವೇತ್ ॥38॥
ಎಲ್ಲರ ಹಿತಕ್ಕೆ ಕಾರಣವಾದುದು ಧರ್ಮವೆಂದೂ ಅನೃತದಿಂದ ದೂರವಾದ ಎಲ್ಲಾ ಸಾಧುಗಳ ಸರ್ವಕಾಲೀನ ಅಭಿಪ್ರಾಯ. ಇನ್ನೊಬ್ಬರಿಗೆ ದುಃಖವನ್ನುಂಟು ಮಾಡಬಾರದು.
ಮನ್ಯತೇ ಪಾಪಕಂ ಕೃತ್ವಾ ನ ಕಶ್ಚಿದ್ ವೇತ್ತಿ ಮಾಮಿತಿ |
ದೇವಾಶ್ಚೈನಂ ವಿದಂತ್ಯೇವ ಭೂತಾಶ್ಚೈವ ತಥಾಽಪರೇ ॥39॥
ಪಾಪ ಕೆಲಸವನ್ನು ಮಾಡಿ ಮನುಷ್ಯನು ಯಾರೂ ನನ್ನನ್ನು ನೋಡಲಿಲ್ಲ ಎಂದು ತಿಳಿಯುತ್ತಾನೆ. ಆದರೆ ದೇವತೆಗಳೂ, ಪಂಚಭೂತಗಳೂ, ಮತ್ತು ಇನ್ನೂ ಕೆಲವರೂ ಅವನ ಪಾಪಕರ್ಮವನ್ನು ತಿಳಿದಿರುತ್ತಾರೆ.
ಆದಿತ್ಯಚಂದ್ರಾವನಿಲೋಽನಲಶ್ಚ
ದ್ಯೌರ್ಭೂಮಿರಾಪೋ ಹೃದಯಂ ಮನಶ್ಚ |
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ

ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥40॥
ಸೂರ್ಯ, ಚಂದ್ರ, ವಾಯು, ಅಗ್ನಿ, ಆಕಾಶ, ಭೂಮಿ, ಜಲ, ಹೃದಯ, ಮನಸ್ಸು, ಅಹರ್ದೇವತೆ, ರಾತ್ರಿದೇವತೆ, ಸಂಧ್ಯಾ ದೇವತೆಗಳು ಮತ್ತು ಯಮ ಇವರೆಲ್ಲರೂ ಮನುಷ್ಯನ ಎಲ್ಲಾ ವೃತ್ತಗಳನ್ನು ತಿಳಿದಿರುತ್ತಾರೆ.
ಯಮೋ ವೈವಸ್ವತಸ್ತಸ್ಯ ನಿರ್ಯಾತಯತಿ ದುಷ್ಕೃತಮ್ |
ಹೃದಿ ಸ್ಥಿತಃ ಕರ್ಮಸಾಕ್ಷೀ ಕ್ಷೇತ್ರಜ್ಞೋ ಯಸ್ಯ ತುಷ್ಯತಿ ॥41॥
ವಿವಸ್ವಂತನ ಮಗನಾದ ಯಮನು ಯಾವ ಪುರುಷನು ಪಾಪಕರ್ಮವನ್ನು ಮಾಡಿ ಪಶ್ಚಾತ್ತಾಪ ಮತ್ತು ಪ್ರಾಯಶ್ಚಿತ್ತಗಳಿಂದ ಕರ್ಮಸಾಕ್ಷಿಯಾಗಿ ಕ್ಷೇತ್ರಜ್ಞನಾಗಿ ಹೃದಯದಲ್ಲಿಯೇ ಇರುವ ನಾರಾಯಣನನ್ನು ಸಂತೋಷಪಡಿಸುತ್ತಾನೆಯೋ ಅವನನ್ನು ಪಾಪದ ಫಲದಿಂದ ದೂರಮಾಡುತ್ತಾನೆ.
ನ ತುಷ್ಯತಿ ಚ ಯಸ್ಯೈವ ಪುರುಷಸ್ಯ ದುರಾತ್ಮನಃ |
ತಂ ಯಮಃ ಪಾಪಕರ್ಮಾಣಂ ನಿರ್ಯಾತಯತಿ ದುಷ್ಕೃತಮ್ ॥42॥
ಯಾವ ದುಷ್ಟನಿಗೆ ಅಂತರ್ಯಾಮಿಯಾದ ನಾರಾಯಣನು ಪ್ರಸನ್ನಗೊಳ್ಳುವುದಿಲ್ಲವೋ ಅಂತಹವನಿಗೆ ಯಮನು ಅವನ ಪಾಪಕರ್ಮಕ್ಕೆ ಅನುಗುಣವಾದ ಯಾತನೆಗಳನ್ನು ಕೊಡುತ್ತಾನೆ.
ಯೋಽವಮತ್ಯಾತ್ಮನಾಽಽತ್ಮಾನಮನ್ಯಥಾ ಪ್ರತಿಪದ್ಯತೇ |
ನ ತಸ್ಯ ದೇವಾಃ ಶ್ರೇಯಾಂಸೋ ಯಸ್ಯಾತ್ಮಾಽಪಿ ನ ಕಾರಣಮ್ ॥43॥
ಯಾವನು ತನಗೆ ತಾನೇ ಅವಮಾನ ಮಾಡಿಕೊಂಡು ಬೇರೆ ರೀತಿಯಲ್ಲಿ ತಿಳಿಯುತ್ತಾನೆಯೋ, ಪರಮಾತ್ಮನೂ ಶ್ರೇಯಸ್ಸನ್ನು ಉಂಟು ಮಾಡದಿದ್ದ ಅವನಿಗೆ ದೇವತೆಗಳೂ ಶ್ರೇಯಸ್ಸನ್ನು ಉಂಟು ಮಾಡುವುದಿಲ್ಲ.
ಸ್ವಯಂ ಪ್ರಾಪ್ತೇತಿ ಮಾಮೇವಂ ಮಾವಮಂಸ್ಥಾಃ ಪತಿವ್ರತಾಮ್ |
ಅರ್ಚಾರ್ಹಾಂ ನಾರ್ಚಯಸಿ ಮಾಂ ಸ್ವಯಂ ಭಾರ್ಯಾಮುಪಸ್ಥಿತಾಮ್ ॥
ಪತಿವ್ರತೆಯಾದ ನಾನು ನಾನಾಗಿಯೇ ಬಂದಿದ್ದೇನೆ ಎಂಬ ಕಾರಣದಿಂದ ನನಗೆ ಅವಮಾನವನ್ನು ಮಾಡಬೇಡ. ತಾನಾಗಿ ಬಂದ ಅರ್ಚನೀಯಳಾದ ಭಾರ್ಯೆಯನ್ನು ನೀನು ಗೌರವಿಸುತ್ತಿಲ್ಲ.
ಕಿಮರ್ಥಂ ಮಾಂ ಪ್ರಾಕೃತವದುಪಪ್ರೇಕ್ಷಸಿ ಸಂಸದಿ |
ನ ಖಲ್ವಿದಮಹಂ ಶೂನ್ಯಂ ಕರೋಮಿ ನ ಶೃಣೋಷಿ ಮೇ ॥45॥
ರಾಜನೇ, ಈ ಸಭೆಯಲ್ಲಿ ನನ್ನನ್ನು ಏಕೆ ಪ್ರಾಕೃತನಂತೆ ನೋಡುತ್ತಿದ್ದೀಯೆ. ನೀನು ನನ್ನ ಮಾತನ್ನು ಕೇಳದಿದ್ದರೆ ನಾನು ಈ ಪಟ್ಟಣವನ್ನು ಸುಟ್ಟುಬಿಟ್ಟೇನು.
ಯದಿ ಮೇ ಯಾಚಮಾನಾಯಾ ವಚನಂ ನ ಕರಿಷ್ಯಸಿ |
ದುಷ್ಷಂತ ಶತಧಾ ತ್ವದ್ಯ ಮೂರ್ಧಾ ತೇ ವಿಫಲಿಷ್ಯತಿ ॥46॥
ದುಷ್ಷಂತನೇ, ಬೇಡುತ್ತಿರುವ ನನ್ನ ಮಾತನ್ನು ನೀನು ನಡೆಸಿಕೊಡದಿದ್ದರೆ ಈ ದಿನ ನಿನ್ನ ತಲೆಯು ನೂರು ಹೋಳಾಗುತ್ತದೆ.
ಭಾರ್ಯಾಂ ಪತಿಃ ಸಂಪ್ರವಿಶ್ಯ ಯತ್ತಸ್ಯಾಂ ಜಾಯತೇ ತತಃ |
ಜಾಯಾಯಾ ಇತಿ ಜಾಯಾತ್ವಂ ಯಸ್ತಸ್ಯಾಂ ಜಾಯತೇ ಪುನಃ ॥47॥
ಪತಿಯು ಭಾರ್ಯೆಯನ್ನು ಪ್ರವೇಶಿಸಿ ಅವಳಲ್ಲಿ ತಾನೇ ಜನಿಸುತ್ತಾನೆ. ತಾನೇ ಜನಿಸುವ ಕಾರಣದಿಂದ ಅವಳಿಗೆ ಜಾಯಾ ಎಂದು ಹೆಸರು.
ಯದಪೋಹತ್ಯಘಂ ಪಿತ್ರೋಸ್ತದಪತ್ಯಂ ಪ್ರಜಾಯತೇ |
ತತ್ ತಾರಯತಿ ಸಂತತ್ಯಾ ಪೂರ್ವಪ್ರೇತಾನ್ ಪಿತಾಮಹಾನ್ ॥48॥
ಹುಟ್ಟಿದ ಮಗುವು ತಂದೆತಾಯಿಗಳನ್ನು ಪಾಪದಿಂದ ಬಿಡಿಸುವ ಕಾರಣದಿಂದ ಮಗುವಿಗೆ ಅಪತ್ಯ ಎಂದು ಹೆಸರು. ಅದು ಸಂತತಿಯನ್ನು ಉಂಟು ಮಾಡಿ ಹಿಂದೆ ಮೃತರಾದ ಪಿತಾಮಹರನ್ನೆಲ್ಲಾ ಉದ್ಧಾರ ಮಾಡುತ್ತದೆ.
ಪುನ್ನಾಮ್ನೋ ನರಕಾದ್ ಯಸ್ಮಾತ್ ಪಿತರಂ ತ್ರಾಯತೇ ಸುತಃ |
ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಪೂರ್ವಮೇವ ಸ್ವಯಂಭುವಾ ॥49॥
ಪುತ್ ಎಂಬ ನರಕದಿಂದ ತಂದೆಯನ್ನು ಪಾರು ಮಾಡುವ ಕಾರಣದಿಂದ ಮಗನಿಗೆ ಪುತ್ರ ಎನ್ನುತ್ತಾರೆ ಎಂದು ಬ್ರಹ್ಮದೇವರು ಮೊದಲೇ ಹೇಳಿದ್ದಾರೆ.
ಪುತ್ರೇಣ ಲೋಕಾನ್ ಜಯತಿ ಪೌತ್ರೇಣಾನಂತ್ಯಮಶ್ನುತೇ |
ಅಥ ಪೌತ್ರಸ್ಯ ಪುತ್ರೇಣ ಮೋದಂತೇ ಪ್ರಪಿತಾಮಹಾಃ ॥50॥
ಪುತ್ರನಿಂದ ಪರಲೋಕವನ್ನು ಗೆಲ್ಲುತ್ತಾನೆ. ಪೌತ್ರನಿಂದ ಆ ಲೋಕಗಳಿಗೆ ಆನಂತ್ಯವುಂಟಾಗುತ್ತದೆ. ಪೌತ್ರನ ಪುತ್ರನಿಂದ ಪ್ರಪಿತಾಮಹರು ಸಂತೋಷಪಡುತ್ತಾರೆ.
ಸಾ ಭಾರ್ಯಾ ಯಾ ಗೃಹೇ ದಕ್ಷಾ ಸಾ ಭಾರ್ಯಾ ಯಾ ಪ್ರಜಾವತೀ |
ಸಾ ಭಾರ್ಯಾ ಯಾಽತಿಥಿಪ್ರಿಯಾ ಸಾ ಭಾರ್ಯಾ ಯಾ ಪತಿಪ್ರಿಯಾ ॥
ಯಾವ ವನಿತೆಯು ಗೃಹಕಾರ್ಯದಲ್ಲಿ ದಕ್ಷಳೋ ಅವಳೇ ಭಾರ್ಯೆ. ಯಾವಳು ಪ್ರಜೆಗಳನ್ನು ಕೊಡುತ್ತಾಳೋ ಅವಳೇ ಭಾರ್ಯೆ. ಯಾವಳು ಅತಿಥಿಪ್ರಿಯಳಾಗಿರುತ್ತಾಳೆಯೋ ಅವಳೇ ಭಾರ್ಯೆ. ಯಾವಳು ಪತಿಪ್ರಿಯಳಾಗಿರುತ್ತಾಳೆಯೋ ಅವಳೇ ಭಾರ್ಯೆ.
ಅರ್ಧಂ ಭಾರ್ಯಾ ಮನುಷ್ಯಸ್ಯ ಭಾರ್ಯಾ ಶ್ರೇಷ್ಠತಮಃ ಸಖಾ |
ಭಾರ್ಯಾ ಮೂಲಂ ತ್ರಿವರ್ಗಸ್ಯ ಯಃ ಸಭಾರ್ಯಃ ಸ ಬಂಧುಮಾನ್॥
ಮನುಷ್ಯನಿಗೆ ಭಾರ್ಯೆಯು ಅರ್ಧಭಾಗವೆನಿಸುತ್ತಾಳೆ. ಭಾರ್ಯೆಯಷ್ಟು ಶ್ರೇಷ್ಠಳಾದ ಸ್ನೇಹಿತರಿಲ್ಲ. ಧರ್ಮಾರ್ಥಕಾಮಗಳನ್ನು

ಪಡೆಯಲು ಭಾರ್ಯೆಯೇ ಮೂಲ. ಯಾವನು ಭಾರ್ಯೆ ಉಳ್ಳವನೋ ಅವನೇ ಬಂಧುಗಳನ್ನು ಉಳ್ಳವನು.
ಭಾರ್ಯಾವಂತಃ ಕ್ರಿಯಾವಂತಃ ಸಭಾರ್ಯಾ ಗೃಹಮೇಧಿನಃ |
ಭಾರ್ಯಾವಂತಃ ಪ್ರಮೋದಂತೇ ಭಾರ್ಯಾವಂತಃ ಶ್ರಿಯಾ ವೃತಾಃ ॥
ಸಭಾರ್ಯಾಃ ಪ್ರವಿವಿಕ್ತೇಷು ಭವಂತ್ಯೇತೇ ಪ್ರಿಯಂವದಾಃ |
ಪಿತರೋ ಧರ್ಮಕಾರ್ಯೇಷು ಭವಂತ್ಯಾರ್ತಸ್ಯ ಮಾತರಃ ॥54॥
ಭಾರ್ಯೆಯನ್ನು ಹೊಂದಿದವರು ಕ್ರಿಯಾಶೀಲರಾಗಿರುತ್ತಾರೆ. ಭಾರ್ಯೆಯನ್ನು ಹೊಂದಿದವರು ಮನೆಗಳಲ್ಲಿ ವಾಸಮಾಡುತ್ತಾರೆ (ಗೃಹಸೌಖ್ಯವನ್ನು ಹೊಂದುತ್ತಾರೆ). ಭಾರ್ಯೆಯನ್ನುಳ್ಳವರು ಸಂತೋಷವನ್ನು ಪಡುತ್ತಾರೆ. ಭಾರ್ಯೆಯನ್ನುಳ್ಳವರು ಸಂಪತ್ತನ್ನು ಪಡೆಯುತ್ತಾರೆ. ಭಾರ್ಯೆಯನ್ನುಳ್ಳವರು ಏಕಾಂತದಲ್ಲಿ ಪ್ರಿಯವಾದ ಮಾತುಗಳನ್ನು ಆಡುತ್ತಾರೆ. ಅಂತಹವರು ಧರ್ಮಕಾರ್ಯಗಳಲ್ಲಿ ತಂದೆಯಂತೆ ಇರುತ್ತಾರೆ. ದುಃಖದ ಸಮಯದಲ್ಲಿ ತಾಯಿಯಂತೆ ಇರುತ್ತಾರೆ.
ಕಾಂತಾರೇಷ್ವಪಿ ವಿಶ್ರಾಮೋ ಜನಸ್ಯಾಧ್ವನಿಕಸ್ಯ ವೈ |
ಯಃ ಸದಾರಃ ಸ ವಿಶ್ವಾಸ್ಯಸ್ತಸ್ಮಾದ್ ದಾರಾಃ ಪರಾ ಗತಿಃ ॥55॥
ಕಾಡಿನಲ್ಲಿ ಸಂಚರಿಸುವ ವ್ಯಕ್ತಿಗೆ ಮರದ ನೆರಳು ವಿಶ್ರಾಮವಾಗುತ್ತದೆ. ಹಾಗೆಯೇ, ಭಾರ್ಯೆಯನ್ನು ಹೊಂದಿದವರನ್ನು ಜನರು ನಂಬುತ್ತಾರೆ. ಆದ್ದರಿಂದ ಭಾರ್ಯೆಯೇ ಶ್ರೇಷ್ಠವಾದ ಗತಿ.
ಸಂಸರಂತಮಭಿಪ್ರೇತಂ ವಿಷಮೇಷ್ವಭಿಪಾತಿತಮ್ |
ಭಾರ್ಯೈವಾನ್ವೇತಿ ಭರ್ತಾರಂ ಸತತಂ ಯಾ ಪತಿವ್ರತಾ ॥56॥
ಉದ್ದಿಷ್ಟವಾದ ವಿಷಯವನ್ನು ಪಡೆಯಲು ಪ್ರಯತ್ನಪಟ್ಟು ಕಷ್ಟದಲ್ಲಿ ಸಿಲುಕಿದ ಪತಿಯನ್ನು ಪತಿವ್ರತೆಯಾದ ಭಾರ್ಯೆಯೇ ಸತತವೂ ಹಿಂಬಾಲಿಸುತ್ತಾಳೆ.
ಪ್ರಥಮಂ ಸಂಸ್ಥಿತಾ ಭಾರ್ಯಾ ಪತಿಂ ಪ್ರೇತ್ಯ ಪ್ರತೀಕ್ಷತೇ |
ಪೂರ್ವಪ್ರೇತಂ ತು ಭರ್ತಾರಂ ಪಶ್ಚಾತ್ ಸಾಽಪ್ಯನುಗಚ್ಛತಿ ॥57॥
ಭಾರ್ಯೆಯು ಪತಿಗಿಂತ ಮೊದಲು ಮೃತಳಾದರೆ ಪರಲೋಕದಲ್ಲಿ ಪತಿಯ ನಿರೀಕ್ಷೆಯನ್ನು ಮಾಡುತ್ತಾಳೆ. ಪತಿಯೇ ಮೊದಲು ಮೃತನಾದರೆ ಅವಳು ಅವನ ಹಿಂದೆ ಹೋಗುತ್ತಾಳೆ.
ಏತಸ್ಮಾತ್ ಕಾರಣಾದ್ ರಾಜನ್ ಪಾಣಿಗ್ರಹಣಮಿಷ್ಯತೇ |
ಯದಾಪ್ನೋತಿ ಪತಿರ್ಭಾರ್ಯಾಮಸ್ಮಿನ್ ಲೋಕೇ ಪರತ್ರ ಚ ॥58॥
ಎಲೈ ರಾಜನೇ, ಈ ಕಾರಣಕ್ಕಾಗಿ ಪಾಣಿಗ್ರಹಣವನ್ನು ಬಯಸುತ್ತಾರೆ. ಏಕೆಂದರೆ ಪುರುಷನು ಆ ಕ್ರಿಯೆಯಿಂದ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸಹಾಯಕಳಾದ ಭಾರ್ಯೆಯನ್ನು ಪಡೆಯುತ್ತಾನೆ.
ಪೋಷಣಾರ್ಥಂ ಶರೀರಸ್ಯ ಪಾಥೇಯಂ ಸ್ವರ್ಗತಸ್ಯ ವೈ |
ಆತ್ಮಾಽಽತ್ಮನಾ ಚ ಜನಿತಃ ಪುತ್ರ ಇತ್ಯುಚ್ಯತೇ ಬುಧೈಃ ॥59॥
ಸ್ವರ್ಗಕ್ಕೆ ಹೋದವನು ತನ್ನ ಶರೀರದ ಪೋಷಣೆಗಾಗಿ ತೆಗೆದುಕೊಂಡು ಹೋಗುವ ಪಾಥೇಯವೆಂದರೆ ತನ್ನಿಂದ ತಾನೇ ಜನಿಸಿದ ಪುತ್ರನೆಂಬುವನು ಎಂದು ಜ್ಞಾನಿಗಳು ಹೇಳುತ್ತಾರೆ.
ತಸ್ಮಾದ್ ಭಾರ್ಯಾಂ ಪತಿಃ ಪಶ್ಯೇನ್ಮಾತೃವತ್ ಪುತ್ರಮಾತರಮ್ |
ಅಂತರಾತ್ಮೈವ ಸರ್ವಸ್ಯ ಪುತ್ರನಾಮ್ನೋಚ್ಯತೇ ಬುಧೈಃ ॥60॥
ಆದ್ದರಿಂದ ಪತಿಯು ತನ್ನ ಮಗನ ತಾಯಿಯನ್ನು ತನ್ನ ತಾಯಿಯಂತೆಯೇ ನೋಡಬೇಕು. ಪುತ್ರನು ತಂದೆಯ ಅಂತರಾತ್ಮನೆಂದು ಜ್ಞಾನಿಗಳು ಹೇಳುತ್ತಾರೆ.
ಗತೀ ರೂಪಂ ಚ ಚೇಷ್ಟಾ ಚ ಆವರ್ತಾ ರೋಮರಾಜಯಃ |
ಪಿತೃಣಾಂ ಯಾನಿ ದೃಶ್ಯಂತೇ ಪುತ್ರಾಣಾಂ ತಾನಿ ಸಂತಿ ವೈ |
ತೇಷಾಂ ಶೀಲಗುಣಾಚಾರಾಸ್ತತ್ಸಂಪರ್ಕಾಚ್ಛುಭಾಶುಭಾಃ ॥61॥
ನಡಿಗೆ, ರೂಪ, ದೇಹದ ಕ್ರಿಯೆಗಳು, ಸುಳಿಗಳು ಮತ್ತು ರೋಮಸಮೂಹಗಳು ಪಿತೃಗಳಲ್ಲಿ ಏನು ಕಾಣುತ್ತವೆಯೋ ಅವೇ ಪುತ್ರರಿಗೂ ಇರುತ್ತವೆ. ತಂದೆಗಳ ಗುಣವೂ, ಶೀಲವೂ, ಆಚಾರವೂ ಮತ್ತು ಅವರ ಸಂಪರ್ಕದಿಂದ ಶುಭಾಶುಭಗಳು ತಂದೆಗೆ ಉಂಟಾದಂತೆ ಮಕ್ಕಳಿಗೆ ಆಗುತ್ತವೆ.
ಭಾರ್ಯಾಯಾಂ ಜನಿತಂ ಪುತ್ರಮಾದರ್ಶೇ ಸ್ವಮಿವಾನನಮ್ |
ಜನಿತಾಽಽಹ್ಲಾದತೇ ಪ್ರೇಕ್ಷ್ಯ ಸ್ವರ್ಗಂ ಪ್ರಾಪ್ಯೇವ ಪುಣ್ಯಕೃತ್ ॥62॥
ಕನ್ನಡಿಯಲ್ಲಿ ನೋಡಿದ ಪ್ರತಿಬಿಂಬದಂತೆ ಭಾರ್ಯೆಯಲ್ಲಿ ಪಡೆದ ಮಗನನ್ನು ನೋಡಿ ಪುಣ್ಯವನ್ನು ಮಾಡಿದ ಜನರು ಸ್ವರ್ಗವನ್ನು ಪಡೆದು ಆನಂದಿಸುವಂತೆ ಎಲ್ಲರೂ ಆನಂದಿಸುತ್ತಾರೆ.
ಪತಿವ್ರತಾರೂಪಧರಾಃ ಪರಬೀಜಸ್ಯ ಸಂಗ್ರಹಾತ್ |
ಕುಲಂ ವಿನಾಶ್ಯ ಭರ್ತೄಣಾಂ ನರಕಂ ಯಾಂತಿ ದಾರುಣಮ್ ॥63॥
ಕೆಲವು ಸ್ತ್ರೀಯರು ಪತಿವ್ರತೆಯರ ಸೋಗು ಧರಿಸಿ ಪರಪುರುಷರ ಸಮಾಗಮವನ್ನು ಮಾಡಿ ಪತಿಯ ಕುಲವನ್ನು ನಾಶಮಾಡಿ ದಾರುಣವಾದ ನರಕಕ್ಕೆ ಹೋಗುತ್ತಾರೆ.
ಪರೇಣ ಜನಿತಾಃ ಪುತ್ರಾಃ ಸ್ವಭಾರ್ಯಾಯಾಂ ಯಥೇಷ್ಟತಃ |
ಮಮ ಪುತ್ರಾ ಇತಿ ಮತಾಸ್ತೇ ಪುತ್ರಾ ಅಪಿ ಶತ್ರವಃ |
ದ್ವಿಷಂತಿ ಪ್ರತಿಕುರ್ವಂತಿ ನ ತೇ ವಚನಕಾರಿಣಃ ॥64॥

ನ ದ್ವೇಷ್ಟಿ ಪಿತರಂ ಪುತ್ರೋ ಯಸ್ಮಾದಾತ್ಮಾ ಸುತೋ ಭವೇತ್ |
ದಹ್ಯಮಾನಾ ಮನೋದುಃಖೈರ್ವ್ಯಾಧಿಭಿಶ್ಚಾತುರಾ ಜನಾಃ |
ಸ್ವೇಷು ದಾರೇಷು ತುಷ್ಯಂತಿ ಘರ್ಮಾರ್ತಾಃ ಸಲಿಲೇಷ್ವಿವ ॥65॥
ಬೇರೆಯವರಿಂದ ತನ್ನ ಹೆಂಡತಿಯ ಇಚ್ಛೆಯಂತೆ ತನ್ನ ಹೆಂಡತಿಯಲ್ಲಿ ಜನಿಸಿದ ಪುತ್ರರು ತನ್ನ ಪುತ್ರರೆಂದು ತಿಳಿದರೂ ಅವರು ಶತ್ರುಗಳೇ ಆಗುತ್ತಾರೆ. ಅವರು ತಂದೆಯನ್ನು ದ್ವೇಷಿಸುತ್ತಾರೆ. ತಂದೆಗೆ ಪ್ರತೀಕಾರವನ್ನು ಮಾಡುತ್ತಾರೆ. ತಂದೆಯ ಮಾತನ್ನು ನಡೆಸಿಕೊಡುವುದಿಲ್ಲ. ಆದರೆ ನಿಜವಾದ ಪುತ್ರನಾದವನು ತಂದೆಗೇ ಪುತ್ರನಾಗಿ ಜನಿಸಿರುವ ಕಾರಣದಿಂದ ತಂದೆಯನ್ನು ದ್ವೇಷಿಸುವುದಿಲ್ಲ. ರೋಗಗಳಿಂದಲೂ ಮತ್ತು ಮಾನಸ ದುಃಖಗಳಿಂದಲೂ ಬಳಲಿದ ಜನರು ಬೇಸಿಗೆಯ ತಾಪಕ್ಕೆ ಒಳಗಾದವರು ನೀರನ್ನು ಪಡೆದವರಂತೆ ತಮ್ಮ ಪತ್ನಿಯರನ್ನು ಹೊಂದಿ ಸಂತೋಷಪಡುತ್ತಾರೆ.
ವಿಪ್ರವಾಸಕೃಶಾ ದೀನಾ ನರಾ ಮಲಿನವಾಸಸಃ |
ತೇಽಪಿ ಸ್ವದಾರಾಂಸ್ತುಷ್ಯಂತಿ ದರಿದ್ರಾ ಧನಲಾಭವತ್ ॥66॥
ಸುಸಂರಬ್ಧೋಽಪಿ ನಾರೀಣಾಂ ನ ಬ್ರೂಯಾದಪ್ರಿಯಂ ಬುಧಃ |
ರತಿಂ ಪ್ರೀತಿಂ ಚ ಧರ್ಮ್ಯಂ ಚ ತಾಸ್ವಾಯತ್ತಮವೇಕ್ಷ್ಯ ಚ ॥67॥
ದೂರಪ್ರವಾಸಕ್ಕೆ ಹೋಗಿ, ದೈನ್ಯವನ್ನೂ,ೆನ ಕೃಶತೆಯನ್ನೂ ಅನುಭವಿಸಿ ಮಲಿನ ವಸ್ತ್ರಗಳನ್ನು ಧರಿಸಿದ ಜನರು ತಮ್ಮ ಪತ್ನಿಯರೊಂದಿಗೆ ಸೇರಿ ಧನಲಾಭವಾದ ದರಿದ್ರರಂತೆ ಸಂತೋಷಪಡುತ್ತಾರೆ. ವಿವೇಕಿಯಾದವನು ತನ್ನ ರತಿ, ಪ್ರೀತಿ ಮತ್ತು ಧರ್ಮಕಾರ್ಯಗಳು ಎಲ್ಲವೂ ಪತ್ನಿಯನ್ನು ಅವಲಂಬಿಸಿವೆ ಎಂದು ತಿಳಿದು ಕೋಪ ಬಂದಾಗಲೂ ನಾರಿಯರನ್ನು ಕುರಿತು ಅಪ್ರಿಯವಾದ ಮಾತನ್ನು ಆಡಬಾರದು.
ಆತ್ಮನೋಽರ್ಧಮಿತಿ ಶ್ರೌತಂ ಸಾ ರಕ್ಷತಿ ಧನಂ ಪ್ರಜಾಃ |
ಶರೀರಂ ಲೋಕಯಾತ್ರಾಂ ವೈ ಧರ್ಮಂ ಸ್ವರ್ಗಮೃಷೀನ್ ಪಿತೃನ್ |
ಆತ್ಮನೋ ಜನ್ಮನಃ ಕ್ಷೇತ್ರಂ ಪುಣ್ಯಾ ರಾಮಾಃ ಸನಾತನಾಃ ॥68॥
ಪತ್ನಿಯನ್ನು ಪತಿಯ ಅರ್ಧವೆಂದು ವೇದವು ಹೇಳುತ್ತದೆ. ಅವಳು ಪತಿಯ ಧನವನ್ನೂ ಮತ್ತು ಪ್ರಜೆಗಳನ್ನೂ, ಪತಿಯ ಶರೀರವನ್ನೂ, ಲೋಕಯಾತ್ರೆಯನ್ನೂ, ಪಿತೃಗಳನ್ನೂ, ಋಷಿಗಳನ್ನೂ ಮತ್ತು ಸ್ವರ್ಗವನ್ನೂ ರಕ್ಷಿಸುತ್ತಾಳೆ. ಪವಿತ್ರರಾದ ಸ್ತ್ರೀಯರು ತನ್ನ ಜನ್ಮದ ಕ್ಷೇತ್ರವೆಂದು ತಿಳಿಯಬೇಕು.
ಋಷೀಣಾಮಪಿ ಕಾ ಶಕ್ತಿಃ ಸ್ರಷ್ಟುಂ ರಾಮಾಮೃತೇ ಪ್ರಜಾಃ |
ದೇವಾನಾಮಪಿ ಕಾ ಶಕ್ತಿಃ ಕರ್ತುಂ ಸಂಭವಮಾತ್ಮನಃ ॥69॥
ಋಷಿಗಳಿಗಾದರೂ ವನಿತೆಯಿಲ್ಲದೆ ಪ್ರಜೆಗಳನ್ನು ಸೃಷ್ಟಿ ಮಾಡುವುದಕ್ಕೆ ಎಲ್ಲಿಯ ಶಕ್ತಿ? ದೇವತೆಗಳಿಗೂ ಸಹ ವನಿತೆಯರಿಲ್ಲದೆ ತಮ್ಮ ಸಂತಾನವನ್ನು ಪಡೆಯುವುದಕ್ಕೆ ಶಕ್ತಿಯಿಲ್ಲ.
ಪಂಡಿತಸ್ಯಾಪಿ ಲೋಕೇಷು ಸ್ತ್ರೀಷು ದೃಷ್ಟಿಃ ಪ್ರತಿಷ್ಠಿತಾ |
ಋಷಿಭ್ಯೋ ಹ್ಯೃಷಯಃ ಕೇಚಿಚ್ಚಂಡಾಲೀಷ್ವಪಿ ಜಜ್ಞಿರೇ ॥70॥
ಪಂಡಿತನಾದರೂ ಕೂಡ ಪ್ರಪಂಚದಲ್ಲಿ ಅವನ ದೃಷ್ಟಿಯು ಸ್ತ್ರೀಯರಲ್ಲಿ ನೆಟ್ಟಿರುತ್ತದೆ. ಎಷ್ಟೋ ಋಷಿಗಳು ಚಂಡಾಲಸ್ತ್ರೀಯರಲ್ಲಿಯೂ ಋಷಿಗಳಿಂದ ಜನಿಸಿದ್ದಾರೆ.
ಪರಿರಭ್ಯ ಯದಾ ಸೂನುರ್ಧರಣೀರೇಣುಕುಂಠಿತಃ |
ಪಿತುರಾಲಿಂಗತೇಽಂಗಾನಿ ಕಿಂ ತತೋಽಭ್ಯಧಿಕಂ ಸುಖಂ ॥71॥
ಭೂಮಿಯ ಮಣ್ಣನ್ನು ದೇಹದಲ್ಲಿ ಧರಿಸಿದ ಮಗನು ಯಾವಾಗ ತಂದೆಯ ದೇಹವನ್ನು ಆಲಿಂಗಿಸುತ್ತಾನೆಯೋ ಅದಕ್ಕಿಂತ ಹೆಚ್ಚಿನ ಸುಖವು ಯಾವುದಿದೆ?
ಸ ತ್ವಂ ಸೂನುಮಭಿಪ್ರಾಪ್ತಂ ಸಾಭಿಲಾಷಂ ಮನಸ್ವಿನಮ್ |
ಪ್ರೇಕ್ಷಮಾಣಂ ಕಟಾಕ್ಷೇಣ ಕಿಮರ್ಥಮವಮನ್ಯಸೇ ॥72॥
ನೀನು ಆಸೆಯಿಂದ ಬಂದಿರುವ ಕಟಾಕ್ಷದಿಂದ ನಿನ್ನನ್ನು ನೋಡುತ್ತಿರುವ ಧೈರ್ಯಶಾಲಿಯಾದ ನಿನ್ನ ಮಗನನ್ನು ಏಕೆ ಅವಮಾನ ಮಾಡುತ್ತಿರುವೆ.
ಅಂಡಾನಿ ಬಿಭ್ರತಿ ಸ್ವಾನಿ ನ ತ್ಯಜಂತಿ ಪಿಪೀಲಿಕಾಃ |
ಕಿಂ ಪುನಸ್ತ್ವಂ ನ ಮನ್ಯೇಥಾಃ ಸರ್ವಜ್ಞಂ ಪುತ್ರಮೀದೃಶಮ್ ॥73॥
ಇರುವೆಗಳೂ ಕೂಡ ತಮ್ಮ ಮೊಟ್ಟೆಗಳನ್ನು ಎತ್ತಿಕೊಂಡು ಹೋಗುತ್ತವೆ ಎಂದೂ ಬಿಡುವುದಿಲ್ಲ. ಹೀಗಿರುವಾಗ ಇಂತಹ ಸರ್ವಜ್ಞನಾದ ಮಗನನ್ನು ನೀನು ಏಕೆ ಮಾನ್ಯ ಮಾಡುತ್ತಿಲ್ಲ.
ನ ಭರೇಥಾಃ ಕಥಂ ನು ತ್ವಂ ಮಜ್ಜಾತಂ ಸ್ವಂ ಸ್ವಯಮಾತ್ಮಜಮ್ |
ಮಮಾಂಡಾನೀತಿ ವರ್ಧಂತೇ ಕೋಕಿಲಾಂಡಾನಿ ವಾಯಸಾಃ ॥74॥
ರಾಜನೇ, ನನ್ನಲ್ಲಿ ಹುಟ್ಟಿದ ನಿನ್ನ ಮಗನಾದ ಇವನನ್ನು ನೀನು ಹೇಗೆ ಪೋಷಿಸದಿರಲು ಸಾಧ್ಯ. ತಮ್ಮ ಮೊಟ್ಟೆಗಳೆಂದು ತಿಳಿದು ಕಾಗೆಗಳು ಕೋಗಿಲೆಯ ಮೊಟ್ಟೆಯನ್ನೂ ಪೋಷಿಸುತ್ತವೆ.
ಕಿಂ ಪುನಸ್ತ್ವಂ ನ ಮನ್ಯೇಥಾಃ ಸರ್ವಜ್ಞಂ ಪುತ್ರಮೀದೃಶಮ್ |
ಮಲಯಾಚ್ಚಂದನಂ ಜಾತಮತಿಶೀತಂ ವದಂತ್ಯುತ |
ಶಿಶುಮಾಲಿಂಗಮಾನಸ್ಯ ಚಂದನಾದಧಿಕಂ ಸುಖಮ್ ॥75॥
ಹೀಗಿರುವಾಗ ಸರ್ವಜ್ಞನಾದ ನಿನ್ನ ಇಂತಹ ಮಗನನ್ನು ನೀನು ಏಕೆ ಮಾನ್ಯ ಮಾಡುತ್ತಿಲ್ಲ. ಮಲಯಪರ್ವತದಲ್ಲಿ ಉಂಟಾದ

ಚಂದನವು ಅತಿ ಶೀತವೆಂದು ಹೇಳುತ್ತಾರೆ. ಮಗನನ್ನು ಆಲಿಂಗಿಸಿದ ತಂದೆಗೆ ಚಂದನಕ್ಕಿಂತ ಶೀತವಾದ ಸುಖದ ಅನುಭವವಾಗುತ್ತದೆ.
ನ ವಾಸಸಾಂ ನ ರಾಮಾಣಾಂ ನಾಪಾಂ ಸ್ಪರ್ಶಸ್ತಥಾ ಸುಖಮ್ |
ಶಿಶುಮಾಲಿಂಗಮಾನಸ್ಯ ಸ್ಪರ್ಶಃ ಸೂನೋರ್ಯಥಾ ಸುಖಮ್ |
ಪುತ್ರಸ್ಪರ್ಶಾತ್ ಪ್ರಿಯತರಃ ಸ್ಪರ್ಶೋ ಲೋಕೇ ನ ವಿದ್ಯತೇ ॥76॥
ಮಗನನ್ನು ಆಲಿಂಗಿಸಿದ ತಂದೆಗೆ ಮಗನ ಸ್ಪರ್ಶದಿಂದ ಎಂತಹ ಸುಖ ಉಂಟಾಗುತ್ತದೆಯೋ ಅಂತಹ ಸುಖವು ವಸ್ತ್ರಗಳ ಸ್ಪರ್ಶದಿಂದ, ವನಿತೆಯರ ಸ್ಪರ್ಶದಿಂದ ಅಥವಾ ಜಲದ ಸ್ಪರ್ಶದಿಂದ ಉಂಟಾಗುವುದಿಲ್ಲ. ಲೋಕದಲ್ಲಿ ಯಾವ ಸ್ಪರ್ಶವೂ ಮಗನ ಸ್ಪರ್ಶಕ್ಕಿಂತ ಪ್ರಿಯವಾದುದಲ್ಲ.
ಸ್ಪೃಶತು ತ್ವಾ ಂ ಸಮಾಲಿಂಗ್ಯ ಪುತ್ರೋಽಯಂ ಪ್ರಿಯದರ್ಶನಃ ॥77॥
ಮನೋಹರನಾದ ನಿನ್ನ ಪುತ್ರನು ನಿನ್ನನ್ನು ಆಲಿಂಗಿಸಿ ನಿನ್ನ ಸ್ಪರ್ಶವನ್ನು ಮಾಡಲಿ.
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ಗುರುರ್ಗರೀಯಸಾಂ ಶ್ರೇಷ್ಠಃ ಪುತ್ರಃ ಸ್ಪರ್ಶವತಾಂ ವರಃ ॥78॥
ಎರಡು ಕಾಲಿನ ಪ್ರಾಣಿಗಳಲ್ಲಿ ಬ್ರಾಹ್ಮಣನು ಶ್ರೇಷ್ಠನಾದವನು. ನಾಲ್ಕು ಕಾಲಿನ ಪ್ರಾಣಿಗಳಲ್ಲಿ ಗೋವು ಶ್ರೇಷ್ಠವಾದುದು. ದೊಡ್ಡವರು ಎನಿಸಿದವರಲ್ಲಿ ಗುರುವು ಶ್ರೇಷ್ಠನಾದವನು. ಸ್ಪರ್ಶವನ್ನು ಹೊಂದಿದವರಲ್ಲಿ ಪುತ್ರನು ಶ್ರೇಷ್ಠನಾದವನು.
ತ್ರಿಷು ವರ್ಷೇಷು ಪೂರ್ಣೇಷು ಪ್ರಜಾತೋಽಯಮರಿಂದಮಃ |
ಅಹಂ ಮಹರ್ಷೇರ್ನಿಯೋಗಾತ್ ತು ತವಾಹ್ವಾನಂ ಪ್ರತೀಕ್ಷತೀ ॥79॥
ನಾನು ಮಹರ್ಷಿಗಳ ಆದೇಶದಂತೆ ನಿನ್ನ ಆಹ್ವಾನವನ್ನು ನಿರೀಕ್ಷಿಸುತ್ತಾ ಗರ್ಭಕ್ಕೆ ಮೂರು ವರ್ಷಗಳು ತುಂಬಿದ ಮೇಲೆ ಈ ಅರಿಂದಮನನ್ನು ಪ್ರಸವಿಸಿದ್ದೇನೆ.
ಕುಮಾರೋ ರಾಜಶಾರ್ದೂಲ ತವ ಶೋಕಪ್ರಣಾಶನಃ |
ಆಹರ್ತಾ ವಾಜಿಮೇಧಸ್ಯ ಶತಸಂಖ್ಯಸ್ಯ ಪೌರವಃ ॥80॥
ರಾಜಸೂಯಾದಿಯಜ್ಞಾನಾಮನ್ಯಾನಾಂ ದಕ್ಷಿಣಾವತಾಮ್ |
ಇತಿ ಗೌರಂತರಿಕ್ಷೇ ಮಾಂ ಸೂತಕೇಽಭ್ಯವದತ್ ಪುರಾ ॥81॥
ರಾಜ ಶಾರ್ದೂಲನೇ, ಈ ಕುಮಾರನು ನಿನ್ನ ಶೋಕವನ್ನು ನಾಶಮಾಡುತ್ತಾನೆ. ಪೌರವನಾದ ಇವನು ನೂರು ಅಶ್ವಮೇಧ ಯಾಗಗಳನ್ನು ಬಹಳ ದಕ್ಷಿಣೆಯುಳ್ಳ ರಾಜಸೂಯಾದಿ ಬೇರೆ ಯಾಗಗಳನ್ನೂ ಮಾಡುತ್ತಾನೆ. ಇವನು ಹುಟ್ಟಿದಾಗ ಹಿಂದೆ ಹೀಗೆ ಅಂತರಿಕ್ಷದಲ್ಲಿ ಅಶರೀರವಾಣಿಯಾಯಿತು.
ತತಃ ಸ್ವಮಂಕಮಾರೋಪ್ಯ ಸ್ನೇಹಾದ್ ಗ್ರಾಮಾಂತರಂ ಗತಾಃ |
ಮೂರ್ಧ್ನಿ ಪುತ್ರಾನುಪಾಘ್ರಾಯ ಪ್ರತಿನಂದಂತಿ ಮಾನವಾಃ ॥82॥
ಆದ್ದರಿಂದ ಸ್ನೇಹದಿಂದ ಮಗನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಗ್ರಾಮಾಂತರಕ್ಕೆ ಹೋದ ಮನುಷ್ಯರು ಹಿಂದಿರುಗಿ ಬಂದು ಮಗನನ್ನು ಎತ್ತಿಕೊಂಡು ಶಿರಸ್ಸಿನಲ್ಲಿ ಆಘ್ರಾಣಿಸಿ ಆನಂದ ಪಡುತ್ತಾರೆ.
ವೇದೇಷ್ವಪಿ ಪಠಂತೀಮಂ ಮಂತ್ರವಾದಂ ದ್ವಿಜಾತಯಃ |
ಜಾತಕರ್ಮಣಿ ಪುತ್ರಾಣಾಂ ತವಾಪಿ ವಿದಿತಂ ಧ್ರುವಮ್ |
ಅಂಗಾದಂಗಾತ್ ಸಂಭವಸಿ ಹೃದಯಾದಧಿಜಾಯಸೇ ॥83॥
ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಮ್ |
ಉಪಜಿಘ್ರಂತಿ ಪಿತರೋ ಮಂತ್ರೇಣಾನೇನ ಮೂರ್ಧನಿ ॥84॥
ಪುತ್ರನ ಜಾತಕರ್ಮದ ಸಂದರ್ಭದಲ್ಲಿ ಬ್ರಾಹ್ಮಣರು ವೇದಗಳಲ್ಲಿ ಈ ಮಂತ್ರಗಳನ್ನು ಪಠಿಸುತ್ತಾರೆ. ಇದು ನಿನಗೂ ತಿಳಿದಿರಬೇಕು. ನನ್ನ ಪ್ರತಿಯೊಂದು ಅಂಗದಿಂದಲೂ ನೀನು ಹುಟ್ಟಿದ್ದೀಯೆ. ನನ್ನ ಹೃದಯದಿಂದ ಜನಿಸಿದ್ದೀಯೆ. ನಾನೇ ನೀನಾಗಿ ಪುತ್ರನಾಮಕನಾಗಿದ್ದೀಯೆ. ನೀನು ನೂರು ವರ್ಷಕಾಲ ಬಾಳು. ಈ ಮಂತ್ರವನ್ನು ಹೇಳಿ ತಂದೆಯು ಶಿಶುವಿನ ಶಿರಸ್ಸನ್ನು ಆಘ್ರಾಣಿಸುತ್ತಾನೆ.
ಪೋಷಣಂ ತ್ವದಧೀನಂ ಮೇ ಸಂತಾನಮಪಿ ಚಾಕ್ಷಯಮ್ |
ತಸ್ಮಾತ್ ತ್ವಂ ಜೀವ ಮೇ ವತ್ಸ ಸುಸುಖೀ ಶರದಾಂ ಶತಮ್ ॥85॥
ಮಗುವೇ, ನನ್ನ ಪೋಷಣೆಯು ನಿನ್ನ ಅಧೀನವಾಗಿದೆ. ನನ್ನ ಸಂತಾನವು ಅಕ್ಷಯವಾಗುವುದು ನಿನ್ನಿಂದ. ಆದ್ದರಿಂದ ನೂರು ವರ್ಷಗಳ ಕಾಲ ಸುಖವಾಗಿ ಬಾಳು.
ಏಕೋ ಭೂತೋ ದ್ವಿಧಾ ಭೂತ ಇತಿ ವಾದಃ ಪ್ರದೃಶ್ಯತೇ |
ತ್ವದಂಗೇಭ್ಯಃ ಪ್ರಸೂತೋಽಯಂ ಪುರುಷಾತ್ ಪುರುಷೋಽಪರಃ |
ಸರಸೀವಾಮಲೇಽತ್ಮಾನಂ ದ್ವಿತೀಯಂ ಪಶ್ಯ ತೇ ಸುತಮ್ ॥86॥
ಒಬ್ಬನಾಗಿದ್ದವನು ಇಬ್ಬರಾದರು ಎಂಬ ಮಾತು ಲೋಕದಲ್ಲಿ ಕೇಳಿಬರುತ್ತದೆ. ನಿನ್ನ ಅಂಗಗಳಿಂದಲೇ ಉದ್ಭವಿಸಿದ ಇವನು ಒಬ್ಬ ಪುರುಷನಿಂದ ಅವನ ಪ್ರತಿಬಿಂಬವು ಉದ್ಭವಿಸಿದಂತೆ. ಸ್ವಚ್ಛವಾದ ನೀರಿರುವ ಸರೋವರದಲ್ಲಿ ಕಾಣುವ ಪ್ರತಿಬಿಂಬದಂತೆ, ನಿನ್ನ ಪ್ರತಿಬಿಂಬದಂತಿರುವ ಈ ಮಗನನ್ನು ನೋಡು.
ಯಥೈವಾಹವನೀಯೋಽಗ್ನಿರ್ಗಾರ್ಹಪತ್ಯಾತ್ ಪ್ರಣೀಯತೇ |
ಏವಂ ತ್ವತ್ತಃ ಪ್ರಸೂತೋಽಯಂ ತ್ವಮೇಕಃ ಸನ್ ದ್ವಿಧಾಕೃತಃ ॥87॥
ಹೇಗೆ ಯಾಗದಲ್ಲಿ ಆಹವನೀಯಾಗ್ನಿಯು ಗಾರ್ಹಪತ್ಯದ ಕಡೆಗೆ ಒಯ್ಯಲ್ಪಡುತ್ತದೆಯೋ ಹಾಗೆಯೇ ಇವನು ನಿನ್ನಿಂದ ನನ್ನ ಬಳಿಗೆ

ಬಂದು ಹೊರಗೆ ಬಂದವನು. ನೀನು ಒಬ್ಬನೇ ಇದ್ದವನು ಎರಡು ರೂಪವುಳ್ಳವನಾಗಿದ್ದೀಯೆ.
ಮೃಗಾಪಕೃಷ್ಟೇನ ಹಿ ವೈ ಮೃಗಯಾಂ ಪರಿಧಾವತಾ |
ಅಹಮಾಸಾದಿತಾ ರಾಜನ್ ಕುಮಾರೀ ಪಿತುರಾಶ್ರಮೇ ॥88॥
ರಾಜನೇ, ಮೃಗಗಳನ್ನು ಬೇಟೆಯಾಡುತ್ತಾ ಒಂದು ಮೃಗವನ್ನು ಹಿಂಬಾಲಿಸಿ ನೀನು ತಂದೆಯ ಆಶ್ರಮದಲ್ಲಿದ್ದ ಕುಮಾರಿಯಾದ ನನ್ನ ಬಳಿಗೆ ಬಂದೆ.
ಉರ್ವಶೀ ಪೂರ್ವಚಿತ್ತಿಶ್ಚ ಸಹಜನ್ಯಾ ಚ ಮೇನಕಾ |
ವಿಶ್ವಾಚೀ ಚ ಘೃತಾಚೀ ಚ ಷಡೇವಾಪ್ಸರಸಾಂ ವರಾಃ ॥89॥
ಉರ್ವಶೀ, ಪೂರ್ವಚಿತ್ತಿ, ಸಹಜನ್ಯಾ, ಮೇನಕಾ, ವಿಶ್ವಾಚಿ, ಘೃತಾಚೀ, ಈ ಆರು ಜನರು ಅಪ್ಸರೆಯರಲ್ಲಿ ಶ್ರೇಷ್ಠರು.
ತಾಸಾಂ ವೈ ಮೇನಕಾ ನಾಮ ಬ್ರಹ್ಮಯೋನಿರ್ವರಾಪ್ಸರಾಃ |
ದಿವಃ ಸಂಪ್ರಾಪ್ಯ ಜಗತೀಂ ವಿಶ್ವಾಮಿತ್ರಾದಜೀಜನತ್ ॥90॥
ಅವರಲ್ಲಿ ಬ್ರಹ್ಮದೇವರಿಂದ ಜನಿಸಿದ ಶ್ರೇಷ್ಠ ಅಪ್ಸರೆಯಾದ ಮೇನಕೆಯು ಸ್ವರ್ಗದಿಂದ ಭೂಮಿಗೆ ಬಂದು ವಿಶ್ವಾಮಿತ್ರರಿಂದ ನನ್ನನ್ನು ಪಡೆದಳು.
ಶ್ರೀಮಾನೃಷಿರ್ಧರ್ಮವರೋ ವೈಶ್ವಾನರ ಇವಾಪರಃ |
ಬ್ರಹ್ಮಯೋನಿಃ ಕುಶೋ ನಾಮ ವಿಶ್ವಾಮಿತ್ರಪಿತಾಮಹಃ ॥91॥
ಕಾಂತಿಯುಕ್ತರಾದ ಧರ್ಮಿಷ್ಠರಾದ ವಿಶ್ವಾಮಿತ್ರರು ಇನ್ನೊಬ್ಬ ಅಗ್ನಿಯಿದ್ದಂತೆ. ವಿಶ್ವಾಮಿತ್ರರ ಪಿತಾಮಹನಾದ ಕುಶನು ಬ್ರಹ್ಮದೇವರಿಂದ ಜನಿಸಿದನು.
ಕುಶಸ್ಯ ಪುತ್ರೋ ಬಲವಾನ್ ಕುಶನಾಭಸ್ತು ಧಾರ್ಮಿಕಃ |
ಗಾಧಿಸ್ತಸ್ಯ ಸುತೋ ರಾಜನ್ ವಿಶ್ವಾಮಿತ್ರಸ್ತು ಗಾಧಿಜಃ |
ಏವಂವಿಧೋ ಮಮ ಪಿತಾ ಮಾತಾ ಮೇ ಮೇನಕಾಽಪ್ಸರಾಃ ॥92॥
ಧಾರ್ಮಿಕನಾದ ಮತ್ತು ಬಲಿಷ್ಠನಾದ ಕುಶನಾಭನು ಕುಶನ ಪುತ್ರ. ಕುಶನಾಭನ ಪುತ್ರ ಗಾಧಿ ಮತ್ತು ಗಾಧಿಯ ಪುತ್ರರು ವಿಶ್ವಾಮಿತ್ರರು. ನನ್ನ ತಂದೆ ಇಂತಹ ಪರಂಪರೆಯವನು ಮತ್ತು ನನ್ನ ತಾಯಿ ಅಪ್ಸರೆಯಾದ ಮೇನಕೆ.
ಸಾ ಮಾಂ ಹಿಮವತಃ ಪೃಷ್ಠೇ ಸುಷುವೇ ಮೇನಕಾಽಪ್ಸರಾಃ |
ಪರಿತ್ಯಜ್ಯ ಚ ಮಾಂ ಯಾತಾ ಪರಾತ್ಮಜಮಿವಾಸತೀ॥93॥
ಅಪ್ಸರೆಯಾದ ಮೇನಕೆಯು ನನ್ನನ್ನು ಹಿಮಾಲಯದ ತಪ್ಪಲಲ್ಲಿ ಪ್ರಸವಿಸಿ ನಾನು ಇನ್ನೊಬ್ಬರ ಮಗಳೋ ಎನ್ನುವಂತೆ ನನ್ನನ್ನು ಪರಿತ್ಯಜಿಸಿ ಅಸತಿಯ ಮಾರ್ಗವನ್ನು ಹಿಡಿದು ಹೊರಟುಹೋದಳು.
ಪಕ್ಷಿಣಃ ಪುಣ್ಯವಂತಸ್ತೇ ಸಹಿತಾ ಧರ್ಮತತ್ಪರಾಃ |
ಪಕ್ಷೈಸ್ತೈರಭಿಗುಪ್ತಾ ಚ ತಸ್ಮಾದಸ್ಮಿ ಶಕುಂತಲಾ ॥94॥
ಧರ್ಮತತ್ಪರರಾದ ಪಕ್ಷಿಗಳು ಎಲ್ಲವೂ ಪುಣ್ಯಶಾಲಿಗಳು. ಅವು ತಮ್ಮ ರೆಕ್ಕೆಗಳಿಂದ ನನ್ನನ್ನು ರಕ್ಷಿಸಿದವು. ಆದ್ದರಿಂದ ನನಗೆ ಶಕುಂತಲಾ ಎಂದು ಹೆಸರು.
ತತೋಽಹಮೃಷಿಣಾ ದೃಷ್ಟಾ ಕಾಶ್ಯಪೇನ ಮಹಾತ್ಮನಾ |
ಜಲಾರ್ಥಮಗ್ನಿಹೋತ್ರಸ್ಯ ಗತಂ ದೃಷ್ಟ್ವಾ ತು ಪಕ್ಷಿಣಃ ॥95॥
ನ್ಯಾಸಭೂತಾಮಿವ ಮುನೇಃ ಪ್ರದದುರ್ಮಾಂ ದಯಾವತಃ |
ಸ ಮಾಂ ಮುನಿರುಪಾದಾಯ ಸ್ವಮಾಶ್ರಮಮುಪಾಗಮತ್ ॥96॥
ಅನಂತರ ಅಗ್ನಿಹೋತ್ರಕ್ಕಾಗಿ ನೀರನ್ನು ತರಲು ಬಂದಿದ್ದ ಮಹಾತ್ಮರಾದ ಕಾಶ್ಯಪ ಋಷಿಗಳು ನನ್ನನ್ನು ನೋಡಿದರು. ಅವರನ್ನು ನೋಡಿದ ಪಕ್ಷಿಗಳು ಅವರಲ್ಲಿ ನ್ಯಾಸವಿದ್ದಂತೆ ಇದ್ದ ನನ್ನನ್ನು ದಯಾಶೀಲರಾದ ಋಷಿಗಳಿಗೆ ಕೊಟ್ಟವು. ಆ ಋಷಿಗಳು ನನ್ನನ್ನು ಆಶ್ರಮಕ್ಕೆ ಕರೆದುಕೊಂಡು ಬಂದವು.
ಸಾ ವೈ ಸಂಭಾವಿತಾ ರಾಜನ್ ಅನುಕ್ರೋಶಾನ್ಮಹರ್ಷಿಣಾ |
ತೇನೈವ ಸ್ವಸುತೇವಾಹಂ ರಾಜನ್ ವೈ ವರವರ್ಣಿನೀ ॥97॥
ರಾಜನೇ, ಆ ದಯಾಶೀಲರಾದ ಮಹರ್ಷಿಗಳು ನನ್ನನ್ನು ಸಮ್ಮಾನಿಸಿದ್ದಾರೆ. ವಿಶ್ವಾಮಿತ್ರರ ಮಗಳಾದ, ಸುಂದರಿಯಾದ ನನ್ನನ್ನು ಅವರು ತಮ್ಮ ಮಗಳಂತೆಯೇ ಬೆಳೆಸಿದ್ದಾರೆ.
ವಿಶ್ವಾಮಿತ್ರಸುತಾ ಚಾಹಂ ವರ್ಧಿತಾ ಮುನಿನಾ ನೃಪ |
ಯೌವನೇ ವರ್ತಮಾನಾಂ ಚ ದೃಷ್ಟವಾನಸಿ ಮಾಂ ನೃಪ |
ಆಶ್ರಮೇ ಪರ್ಣಶಾಲಾಯಾಂ ಕುಮಾರೀಂ ವಿಜನೇ ವನೇ ॥98॥
ರಾಜನೇ, ನಾನು ಮುನಿಗಳಿಂದ ಸಾಕಲ್ಪಟ್ಟ ವಿಶ್ವಾಮಿತ್ರರ ಮಗಳು. ರಾಜನೇ, ನಾನು ಯೌವನದಲ್ಲಿ ಇನ್ನೂ ಕುಮಾರಿಯಾಗಿರುವಾಗ ಕಾಡಿನಲ್ಲಿ ಆಶ್ರಮದಲ್ಲಿದ್ದ ನಿರ್ಜನವಾದ ಪರ್ಣಶಾಲೆಯ ಬಳಿ ನೀನು ನನ್ನನ್ನು ನೋಡಿದೆ.
ಧಾತ್ರಾ ಪ್ರಚೋದಿತಃ ಶೂನ್ಯೇ ಪಿತ್ರಾ ವಿರಹಿತಾಂ ಮಿಥಃ |
ವಾಗ್ಭಿಸ್ತ್ವಂ ಸೂನೃತಾಭಿರ್ಮಾಮಪತ್ಯಾರ್ಥಮಚೂಚುದಃ ॥99॥
ವಿಧಿಯಿಂದ ಪ್ರೇರಿತನಾದ ನೀನು ಏಕಾಂತದಲ್ಲಿ ಸಾಕುತಂದೆಯು ದೂರದಲ್ಲಿರುವ ನನ್ನನ್ನು ಮಧುರವಾದ ಮಾತುಗಳಿಂದ ಸಂಭೋಧಿಸಿ ಪುತ್ರನನ್ನು ಪಡೆಯುವ ಸಲುವಾಗಿ ಒತ್ತಾಯ ಮಾಡಿದೆ.
ಅವೋಚಸ್ತತ್ವಶ್ರಮೇ ವಾಚೋ ಧರ್ಮಕಾಮಾರ್ಥಮಿಶ್ರಿತಾಃ|

ಗಾಂಧರ್ವೇಣ ವಿವಾಹೇನ ವಿಧಿನಾ ಪಾಣಿಮಗ್ರಹೀಃ ॥100॥
ಸಾಽಹಂ ಕುಲಂ ಚ ಶೀಲಂ ಚ ಸತ್ಯವಾದಿತ್ವಮಾತ್ಮನಃ |
ಸ್ವಧರ್ಮ ಚ ಪುರಸ್ಕೃತ್ಯ ತ್ವಾಮದ್ಯ ಶರಣಂ ಗತಾ ॥101॥
ನೀನು ಆಶ್ರಮದಲ್ಲಿ ಧರ್ಮ, ಅರ್ಥ ಮತ್ತು ಕಾಮಗಳಿಂದ ಮಿಶ್ರಿತವಾದ ಮಾತುಗಳನ್ನು ಆಡಿ ಗಾಂಧರ್ವ ವಿವಾಹವಿಧಿಯಿಂದ ನನ್ನ ಪಾಣಿಗ್ರಹಣವನ್ನು ಮಾಡಿದೆ. ನಾನು ನನ್ನ ಕುಲವನ್ನೂ, ಶೀಲವನ್ನೂ, ಸತ್ಯವಾದಿತ್ವವನ್ನೂ ಮತ್ತು ಸ್ವಧರ್ಮವನ್ನೂ ಮುಂದೆ ಮಾಡಿಕೊಂಡು ನಿನಗೆ ಶರಣಾಗತಳಾಗಿದ್ದೇನೆ.
ತಸ್ಮಾನ್ನಾರ್ಹಸಿ ಸಂಶ್ರುತ್ಯ ತಥೇತಿ ವಿತಥಂ ವಚಃ |
ಸ್ವಧರ್ಮಂ ಪೃಷ್ಠತಃ ಕೃತ್ವಾ ಪರಿತ್ಯಕ್ತುಮುಪಸ್ಥಿತಾಮ್ |
ಮನ್ನಾಥೋ ಲೋಕನಾಥಶ್ಚ ನಾರ್ಹಸೇ ತ್ವಮನಾಗಸೀಮ್ ॥102॥
ಆದ್ದರಿಂದ ಹಾಗೆ ಮಾತನ್ನು ಕೊಟ್ಟು ಈಗ ಅದನ್ನು ವ್ಯರ್ಥಮಾಡಿ ನಿನ್ನ ಧರ್ಮವನ್ನು ಬಿಟ್ಟು ತಾನಾಗಿಯೇ ಬಂದ ನನ್ನನ್ನು ಪರಿತ್ಯಾಗ ಮಾಡುವುದು ಸರಿಯಲ್ಲ. ನನಗೂ ಮತ್ತು ಲೋಕಕ್ಕೂ ಒಡೆಯನಾದ ನೀನು ನಿರಪರಾಧಿಯಾದ ನನ್ನನ್ನು ಪರಿತ್ಯಾಗ ಮಾಡಬಾರದು.
ಕಿಂ ನು ಕರ್ಮಾಶುಭಂ ಪೂರ್ವಂ ಕೃತವತ್ಯಸ್ಮಿ ಜಾತಿಷು |
ಯದಹಂ ಬಾಂಧವೈಸ್ತ್ಯಕ್ತಾ ಬಾಲ್ಯೇ ಸಂಪ್ರತಿ ಯತ್ ತ್ವಯಾ ॥103॥
ನಾನು ಹಿಂದಿನ ಜನ್ಮಗಳಲ್ಲಿ ಎಂತಹ ಪಾಪಕರ್ಮಗಳನ್ನು ಮಾಡಿದ್ದೇನೆ. ಏಕೆಂದರೆ ಬಾಲ್ಯದಲ್ಲಿ ಬಂಧುಗಳಿಂದ ತ್ಯಕ್ತಳಾದ ನನ್ನನ್ನು ಈಗ ನೀನೂ ತ್ಯಾಗ ಮಾಡುತ್ತಿದ್ದೀಯೆ.
ಪರಿತ್ಯಕ್ತಾ ತ್ವಯಾಽಹಂ ಚೇದ್ ಗಮಿಷ್ಯಾಮಿ ಸ್ವಮಾಶ್ರಮಮ್ |
ಇಮಂ ಬಾಲಂ ತು ಸಂತ್ಯಕ್ತುಂ ನಾರ್ಹಸ್ಯಾತ್ಮಾನಮಾತ್ಮನಾ ॥104॥
ನೀನು ನನ್ನನ್ನು ಪರಿತ್ಯಾಗ ಮಾಡಿದರೆ ನಾನು ನನ್ನ ಆಶ್ರಮಕ್ಕೆ ಹಿಂದಿರುಗುತ್ತೇನೆ. ಆದರೆ, ಈ ಬಾಲಕನನ್ನು ಮಾತ್ರ ಪರಿತ್ಯಾಗ ಮಾಡಲು ನಿನಗೆ ಸರ್ವಥಾ ಸಾಧ್ಯವಿಲ್ಲ.
ದುಷ್ಯಂತಃ
ನ ಪುತ್ರಮಭಿಜಾನಾಮಿ ತ್ವಯಿ ಜಾತಂ ಶಕುಂತಲೇ |
ಅಸತ್ಯವಚನಾ ನಾರ್ಯಃ ಕಸ್ತೇ ಶ್ರದ್ಧಾಸ್ಯತೇ ವಚಃ ॥105॥
ಶಕುಂತಲೇ, ನಿನ್ನಲ್ಲಿ ಹುಟ್ಟಿದ ಯಾವ ಮಗನ ನೆನಪೂ ನನಗಿಲ್ಲ. ಸ್ತ್ರೀಯರೆಲ್ಲರೂ ಸುಳ್ಳು ಹೇಳುವವರು. ನಿನ್ನ ಮಾತನ್ನು ನಂಬುವವರು ಯಾರು?
ಅಶ್ರದ್ಧೇಯಮಿದಂ ವಾಕ್ಯಂ ಕಥಯಂತೀ ನ ಲಜ್ಜಸೇ |
ವಿಶೇಷತೋ ಮತ್ಸಕಾಶೇ ದುಷ್ಟತಾಪಸಿ ಗಮ್ಯತಾಮ್ ॥106॥
ದುಷ್ಟತಾಪಸಿಯೇ, ನಂಬಲಾರದ ಮಾತುಗಳನ್ನು ಲಜ್ಜೆಯಿಲ್ಲದೇ ಆಡುತ್ತಿದ್ದೀಯೆ, ಅದರಲ್ಲೂ ವಿಶೇಷವಾಗಿ ನನ್ನ ಎದುರಿಗೆ ಮಾತನಾಡುತ್ತಿದ್ದೀಯೆ. ನೀನು ಹೊರಟು ಹೋಗು.
ಕ್ವ ಮಹರ್ಷಿಃ ಸದೈವೋಗ್ರಃ ಕ್ವಾಪ್ಸರಾಃ ಸಾ ಚ ಮೇನಕಾ |
ಕ್ವ ಚ ತ್ವಮೇವಂಕೃಪಣಾ ತಾಪಸೀವೇಷಧಾರಿಣೀ ॥107॥
ಯಾವಾಗಲೂ ಉಗ್ರರಾದ ಆ ವಿಶ್ವಾಮಿತ್ರ ಮಹರ್ಷಿಗಳೆಲ್ಲಿ ಅಪ್ಸರೆಯಾದ ಮೇನಕೆ ಎಲ್ಲಿ ತಾಪಸಿಯ ವೇಷವನ್ನು ಧರಿಸಿ ದೈನ್ಯದ ಮಾತುಗಳನ್ನು ಆಡುತ್ತಿರುವ ನೀನೆಲ್ಲಿ.
ಅತಿಕಾಯಶ್ಚ ಪುತ್ರಸ್ತೇ ಬಾಲೋಽತಿಬಲವಾನಯಮ್ |
ಕಥಮಲ್ಪೇನ ಕಾಲೇನ ಸಾಲಸ್ಕಂಧ ಇವೋದ್ಗತಃ ॥108॥
ನಿನ್ನ ಈ ಪುತ್ರನು ಬಹಳ ದೊಡ್ಡದಾದ ಶರೀರವನ್ನು ಹೊಂದಿದ್ದಾನೆ. ಬಾಲನಾದರೂ ಬಹಳ ಬಲಿಷ್ಠನಾಗಿದ್ದಾನೆ. ಅಲ್ಪವಾದ ಕಾಲದಲ್ಲಿ ಹೇಗೆ ಸಾಲವೃಕ್ಷದಂತೆ ಬೆಳೆಯಲು ಸಾಧ್ಯ?
ಸುನಿಕೃಷ್ಟಾ ಚ ಯೋನಿಸ್ತೇ ಪುಂಶ್ಚಲೀ ಪ್ರತಿಭಾಸಿ ಮೇ |
ಯದೃಚ್ಛಯಾ ಕಾಮರಾಗಾಜ್ಜಾತಾ ಮೇನಕಯಾ ಹ್ಯಸಿ ॥109॥
ನಿನ್ನ ಯೋನಿಯು ಬಹಳ ನೀಚವಾಗಿದೆ. ನೀನು ನನಗೆ ವೇಶ್ಯೆಯಂತೆ ಕಾಣುತ್ತಿದ್ದೀಯೆ. ನೀನು ಇದ್ದಕ್ಕಿದ್ದಂತೆಯೇ ಕಾಮತಪ್ತಳಾದ ಮೇನಕೆಯಿಂದ ಹುಟ್ಟಿದವಳು.
ಸರ್ವಮೇವ ಪರೋಕ್ಷಂ ಮೇ ಯತ್ತ್ವಂ ವದಸಿ ತಾಪಸಿ |
ಸರ್ವಾ ವಾಮಾಃ ಸ್ತ್ರಿಯೋ ಲೋಕೇ ಸರ್ವಾಃ ಕಾಮಪರಾಯಣಾಃ ॥
ತಾಪಸಿಯೇ, ನೀನು ಹೇಳುವ ಎಲ್ಲಾ ವಿಷಯಗಳೂ ನನಗೆ ಪರೋಕ್ಷವಾದವು. ನಾನು ಯಾವುದನ್ನೂ ತಿಳಿದಿಲ್ಲ. ಲೋಕದಲ್ಲಿರುವ ಸ್ತ್ರೀಯರೆಲ್ಲರೂ ಪತಿಗೆ ವಿರುದ್ಧವಾಗಿ ನಡೆದುಕೊಳ್ಳುವವರು ಮತ್ತು ಕಾಮಪರಾಯಣರು.
ಸರ್ವಾಃ ಸ್ತ್ರಿಯಃ ಪರವಶಾಃ ಸರ್ವಾಃ ಕ್ರೋಧಸಮಾಕುಲಾಃ |
ಅಸತ್ಯೋಕ್ತಾಃ ಸ್ತ್ರಿಯಃ ಸರ್ವಾ ಕೋ ಹ್ಯೇತದ್ ವಕ್ತುಮರ್ಹತಿ ॥111॥
ಎಲ್ಲಾ ಸ್ತ್ರೀಯರೂ ಇನ್ನೊಬ್ಬನಿಗೆ ವಶರಾಗಿರುತ್ತಾರೆ. ಎಲ್ಲಾ ಸ್ತ್ರೀಯರೂ ಕ್ರೋಧದಿಂದ ಕೂಡಿರುತ್ತಾರೆ. ಎಲ್ಲರೂ ಅಸತ್ಯವನ್ನು ನುಡಿಯುತ್ತಾರೆ. ನೀನು ಆಡಿದ ಮಾತುಗಳನ್ನು ಬೇರೆ ಯಾರು ಆಡಲು ಸಾಧ್ಯ?
ಮೇನಕಾ ನಿರನುಕ್ರೋಶಾ ಬಂಧಕೀ ಜನನೀ ತವ |

ಯಯಾ ಹಿಮವತಃ ಪೃಷ್ಠೇ ನಿರ್ಮಾಲ್ಯೇವ ಪ್ರವಾಸಿತಾ ॥112॥
ನಿನ್ನ ತಾಯಿಯಾದ ಮೇನಕೆಯು ನಿರ್ದಯಳಾದ ವೇಶ್ಯೆಯಂತೆ ಕಾಣುತ್ತಾಳೆ. ಅವಳು ನಿನ್ನನ್ನು ಹಿಮಾಲಯದ ತಪ್ಪಲಿನಲ್ಲಿ ಮುಡಿದ ಹೂವಿನಂತೆ ಎಸೆದಳು.
ಸ ಚಾಪಿ ನಿರನುಕ್ರೋಶಃ ಕ್ಷತ್ರಯೋನಿಃ ಪಿತಾ ತವ |
ವಿಶ್ವಾಮಿತ್ರೋಽಥ ಬ್ರಹ್ಮತ್ವೇ ಲುಬ್ಧಃ ಕಾಮಪರಾಯಣಃ ॥113॥
ಕ್ಷತ್ರಿಯಯೋನಿಯಲ್ಲಿ ಜನಿಸಿದ ನಿನ್ನ ತಂದೆಯೂ ಕೂಡ ನಿರ್ದಯನಾದವನು. ಕಾಮಪರಾಯಣನಾದ ಅವನು ಬ್ರಾಹ್ಮಣ್ಯದ ಮಹಾ ಲೋಭವನ್ನು ಹೊಂದಿದ್ದವನು.
ಮೇನಕಾಽಪ್ಸರಸಾಂ ಶ್ರೇಷ್ಠಾ ಮಹರ್ಷೀಣಾಂ ಚ ತೇ ಪಿತಾ |
ತಯೋರಪತ್ಯಂ ಕಸ್ಮಾತ್ ತ್ವಂ ಪುಂಶ್ಚಲೀವಾಭಿಧಾಸ್ಯಸಿ ॥114॥
ಅಪ್ಸರೆಯರಲ್ಲಿ ಮೇನಕೆಯು ಶ್ರೇಷ್ಠ. ಮಹರ್ಷಿಗಳಲ್ಲಿ ವಿಶ್ವಾಮಿತ್ರರು ಶ್ರೇಷ್ಠ. ಅವರ ಮಗಳಾದ ನೀನು ಏಕೆ ವೇಶ್ಯೆಯಂತೆ ಮಾತನಾಡುತ್ತಿದ್ದೀಯೆ.
ಜಾತಿಶ್ಚಾಪಿ ನಿಕೃಷ್ಟಾ ತೇ ಕುಲೀನೇತಿ ವಿಕತ್ಥಸೇ |
ಜನಯಿತ್ವಾ ತ್ವಮುತ್ಸೃಷ್ಟಾ ಕೋಕಿಲೇವ ಪರೈರ್ಭೃತಾ ॥115॥
ನಿನ್ನ ಜನನವೂ ನೀಚವಾದುದು. ನಾನು ಕುಲೀನಳು ಎಂದು ಜಂಭದ ಮಾತುಗಳನ್ನು ಆಡುತ್ತಿದ್ದೀಯೆ. ಹುಟ್ಟಿದ ತಕ್ಷಣ ನೀನು ಪರಿತ್ಯಕ್ತಳಾಗಿ ಕೋಗಿಲೆಯಂತೆ ಇನ್ನೊಬ್ಬರಿಂದ ಸಾಕಲ್ಪಟ್ಟಿದ್ದೀಯೆ.
ಅರಿಷ್ಟ ಇವ ದುರ್ಬುದ್ಧಿಃ ಕಣ್ವೋ ವರ್ಧಯಿತಾ ಪಿತಾ |
ಅಶ್ರದ್ದೇಯಮಿದಂ ವಾಕ್ಯಂ ಯತ್ತ್ವಂ ಜಲ್ಪಸಿ ತಾಪಸಿ |
ಬ್ರುವಂತೀ ರಾಜಸಾನ್ನಿಧ್ಯೇ ಗಮ್ಯತಾಂ ಯತ್ರ ವೇಚ್ಛಸಿ ॥116॥
ದುರ್ಬುದ್ಧಿಯಾದ ನಿನ್ನ ತಂದೆಯಾದ ಕಣ್ವರು ಕಾಗೆಯಂತೆ ನಿನ್ನನ್ನು ಸಾಕಿದರು. ತಾಪಸಿಯೇ, ನೀನು ಹೇಳುವ ಯಾವ ಮಾತುಗಳೂ ನಂಬಲು ಸಾಧ್ಯವಿಲ್ಲದವು. ರಾಜನ ಸನ್ನಿಧಿಯಲ್ಲಿ ಹೀಗೆ ಮಾತನಾಡುತ್ತಿರುವವಳು ಎಲ್ಲಿಗೆ ಬೇಕಾದರೂ ಹೋಗು.
ಸುವರ್ಣಮಣಿಮುಕ್ತಾನಿ ವಸಾತ್ರಣ್ಯಾಭರಣಾನಿ ಚ |
ಯದ್ಯದಿಚ್ಛಸಿ ಭೋಗಾರ್ಥಂ ಗೃಹ್ಯತಾಂ ತಾಪಸಿ ತ್ವಯಾ |
ನಾಹಂ ತ್ವಾಂ ದ್ರಷ್ಟುಮಿಚ್ಛಾಮಿ ಯಥೇಷ್ಟಂ ಗಮ್ಯತಾಮಿತಃ ॥117॥
ಸುವರ್ಣವನ್ನೂ, ಮಣಿಮುತ್ತುಗಳನ್ನೂ, ವಸಾತ್ರಭರಣಗಳನ್ನೂ, ನಿನಗೆ ಇಷ್ಟವಾದ ಬೇರೆ ಭೋಗ ಸಾಮಗ್ರಿಗಳನ್ನೂ ತೆಗೆದುಕೋ. ತಾಪಸಿಯೇ, ನಾನು ನಿನ್ನನ್ನು ನೋಡಲು ಬಯಸುವುದಿಲ್ಲ. ನಿನ್ನ ಮನಸ್ಸಿಗೆ ಬಂದಂತೆ ನೀನು ಇಲ್ಲಿಂದ ಹೊರಟು ಹೋಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕನವತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತೊಂದನೆಯ ಅಧ್ಯಾಯ ಮುಗಿಯಿತು
*****

ತೊಂಭತ್ತೆರಡನೆಯ ಅಧ್ಯಾಯ
(ಶಕುಂತಲೆಯ ವಾದ, ದುಷ್ಯಂತನ ನಿರಾಕರಣೆ, ಶಕುಂತಲೆಯ ಆಶ್ರಮಕ್ಕೆ ಹಿಂದಿರುಗುವ ಪ್ರಯತ್ನ.)
ಶಂಕುತಲಾ
ರಾಜನ್ ಸರ್ಷಪಮಾತ್ರಾಣಿ ಪರಚ್ಛಿದ್ರಾಣಿ ಪಶ್ಯಸಿ |
ಆತ್ಮನೋ ಮೇರುಮಾತ್ರಾಣಿ ಪಶ್ಯನ್ನಪಿ ನ ಪಶ್ಯಸಿ ॥1॥
ರಾಜನೇ, ಸಾಸಿವೆಯಷ್ಟು ಸಣ್ಣಗಿರುವ ಇನ್ನೊಬ್ಬರ ದೋಷಗಳು ನಿನಗೆ ಕಾಣಿಸುತ್ತಿವೆ. ಆದರೆ ಮೇರು ಪರ್ವತದಷ್ಟು ದೊಡ್ಡದಾದ ನಿನ್ನ ದೋಷವು ನಿನಗೆ ಕಾಣಿಸುತ್ತಿಲ್ಲ.
ಮೇನಕಾ ತ್ರಿದಶಾಂಶ್ಚಾನು ತ್ರಿದಶಾಶ್ಚಾನು ಮೇನಕಾಮ್ |
ಮಮ್ಯೆವೋದ್ರಿಚ್ಯತೇ ಜನ್ಮ ದುಷ್ಯಂತ ತವ ಜನ್ಮತಃ ॥2॥
ಮೇನಕೆಯು ದೇವತೆಗಳ ಹಿಂದಿದ್ದಾಳೆ. ದೇವತೆಗಳು ಮೇನಕೆಯ ಹಿಂದಿದ್ದಾರೆ. ದುಷ್ಯಂತನೇ, ನಿನ್ನ ಜನ್ಮಕ್ಕಿಂತ ನನ್ನ ಜನ್ಮವೇ ಶ್ರೇಷ್ಠವಾದುದು.
ಕ್ಷಿತೌ ಚರಸಿ ರಾಜಂಸ್ತ್ವಮಂತರಿಕ್ಷೇ ಚರಾಮ್ಯಹಮ್ |
ಆವಯೋರಂತರಂ ಪಶ್ಯ ಮೇರುಸರ್ಷಪಯೋರಿವ ॥3॥
ರಾಜನೇ, ನೀನು ಭೂಮಿಯಲ್ಲಿ ಸಂಚರಿಸುತ್ತೀಯೆ. ನಾನು ಅಂತರಿಕ್ಷದಲ್ಲಿ ಸಂಚರಿಸುತ್ತೇನೆ. ನಮ್ಮಿಬ್ಬರ ನಡುವೆ ಇರುವ ವ್ಯತ್ಯಾಸ ಮೇರು ಸರ್ಷಪಗಳ ಅಂತರದಂತೆ. ಈ ಅಂತರವನ್ನು ನೋಡು.
ಮಹೇಂದ್ರಸ್ಯ ಕುಬೇರಸ್ಯ ಯಮಸ್ಯ ವರುಣಸ್ಯ ಚ |
ಭವನಾನ್ಯನುಸಂಯಾಮಿ ಪ್ರಭಾವಂ ಪಶ್ಯ ಮೇ ನೃಪ ॥4॥
ರಾಜನೇ, ನಾನು ಮಹೇಂದ್ರನ, ಕುಬೇರನ, ಯಮನ ಮತ್ತು ವರುಣನ ಮನೆಗಳಿಗೆ ಹೋಗುತ್ತೇನೆ. ನನ್ನ ಪ್ರಭಾವವನ್ನು ನೋಡು.
ಪುರಾ ನರವರಃ ಪುತ್ರ ಊರ್ವಶ್ಯಾಂ ಜನಿತಸ್ತದಾ |
ಆಯುರ್ನಾಮ ಮಹಾತೇಜಾ ತವ ಪೂರ್ವಪಿತಾಮಹಃ ॥5॥

ಹಿಂದೆ ಮಹಾತೇಜಸ್ವಿಯಾದ ಆಯು ಎಂಬ ನಿನ್ನ ಪೂರ್ವ ಪಿತಾಮಹನು ಉರ್ವಶಿಯಲ್ಲಿ ಜನಿಸಿದ್ದಾನೆ.
ಮಹರ್ಷಯಶ್ಚ ಬಹವಃ ಕ್ಷತ್ರಿಯಾಶ್ಚ ಪರಂತಪ |
ಅಪ್ಸರಸ್ಸು ವ್ಯಜಾಯಂತ ಮಾತೃದೋಷೋ ನ ವಿದ್ಯತೇ ॥6॥
ಶತ್ರುತಾಪಕನೇ, ಅನೇಕ ಮಹರ್ಷಿಗಳು ಮತ್ತು ಕ್ಷತ್ರಿಯರು ಅಪ್ಸರೆಯರಲ್ಲಿ ಜನಿಸಿದ್ದಾರೆ. ನನಗೆ ಮಾತೃದೋಷವಿಲ್ಲ.
ಸತ್ಯಶ್ಚಾಪಿ ಪ್ರವಾದೋಽಯಂ ಸಂಪ್ರವಕ್ಷ್ಯಾಮಿ ತೇಽನಘ |
ನಿದರ್ಶನಾರ್ಥಂ ನ ದ್ವೇಷಾಚ್ಛ್ರುತ್ವಾ ತಂ ಕ್ಷಂತುಮರ್ಹಸಿ ॥7॥
ಉದಾಹರಣೆಗಾಗಿ ಲೋಕದ ಒಂದು ಸತ್ಯವಾದ ಮಾತನ್ನು ಹೇಳುತ್ತೇನೆ. ಅನಘನೇ, ದ್ವೇಷದಿಂದ ಹೇಳುತ್ತಿಲ್ಲ. ಅದನ್ನು ಕೇಳಿ ನೀನು ಕ್ಷಮಿಸಬೇಕು.
ವಿರೂಪೋ ಯಾವದಾದರ್ಶೇ ನಾತ್ಮನೋ ವೀಕ್ಷತೇ ಮುಖಮ್ |
ಮನ್ಯತೇ ತಾವದಾತ್ಮಾನಮನ್ಯೇಭ್ಯೋ ರೂಪವತ್ತರಮ್ ॥8॥
ಯದಾ ತು ಮುಖಮಾದರ್ಶೇ ವಿರೂಪಂ ಸೋಽಭಿವೀಕ್ಷತೇ |
ತದಾ ವಿರೂಪಂ ಜಾನೀಯಾದಾತ್ಮಾನಂ ನೇತರಂ ಜನಮ್ ॥9॥
ಕುರೂಪಿಯಾದವನು ಎಲ್ಲಿಯವರೆಗೆ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ತಾನು ಇತರರಿಗಿಂತ ಸುಂದರನೆಂದು ತಿಳಿಯುತ್ತಾನೆ. ಆದರೆ ಯಾವಾಗ ಕನ್ನಡಿಯಲ್ಲಿ ತನ್ನ ಕುರೂಪವಾದ ಮುಖವನ್ನು ನೋಡುತ್ತಾನೋ ಆಗ ತನ್ನನ್ನು ಕುರೂಪಿಯೆಂದು ತಿಳಿಯುತ್ತಾನೆ. ಇತರರನ್ನಲ್ಲ.
ಅತೀವ ರೂಪಸಂಪನ್ನೋ ನ ಕಿಂ ಚಿದವಮನ್ಯತೇ |
ಅತೀವ ಜಲ್ಪನ್ ದುರ್ವಾಚೋ ಭವತೀಹ ವಿಪೋದಕಃ ॥10॥
ಬಹಳ ಸುಂದರನಾದವನು ಇನ್ನೊಬ್ಬರನ್ನು ಅವಮಾನಿಸುವುದಿಲ್ಲ. ಬಹಳ ಮಾತನಾಡುವವನು ದುರ್ವಾಕ್ಯಗಳಿಂದ ಇನ್ನೊಬ್ಬರನ್ನು ನಿಂದಿಸುವವನಾಗುತ್ತಾನೆ.
ಸಾಧುಲೋಕಪ್ರವಾದೋಽಯಂ ತವ ವಕ್ಷ್ಯಾಮಿ ಚಾನಘ |
ನಿದರ್ಶನಾರ್ಥಂ ನ ದ್ವೇಷಾತ್ ತಚ್ಛ್ರುತ್ವಾ ಕ್ಷಂತುಮರ್ಹಸಿ ॥11॥
ಅನಘನೇ, ಸಜ್ಜನರ ನಡುವಿನ ಒಂದು ಮಾತನ್ನು ಉದಾಹರಣೆಗಾಗಿ ನಿನಗೆ ಹೇಳುತ್ತೇನೆ. ದ್ವೇಷದಿಂದಲ್ಲ. ಅದನ್ನು ಕೇಳಿ ನನ್ನನ್ನು ಕ್ಷಮಿಸಬೇಕು.
ಪಾಂಸುಪಾತೇನ ತುಷ್ಯಂತಿ ಕುಂಜರಾ ಮದಶಾಲಿನಃ |
ತಥಾ ಪರಿವದನ್ನನ್ಯಾನ್ ತುಷ್ಟೋ ಭವತಿ ದುರ್ಜನಃ ॥12॥
ಮದವೇರಿದ ಆನೆಗಳು ಮೈಮೇಲೆ ಮಣ್ಣನ್ನು ಸುರಿದುಕೊಂಡು ಸಂತೋಷಪಡುತ್ತವೆ. ಹಾಗೆಯೇ ದುರ್ಜನನು ಇನ್ನೊಬ್ಬರನ್ನು ನಿಂದಿಸಿ ಸಂತೋಷಪಡುತ್ತಾನೆ.
ಸತ್ಯಧರ್ಮಚ್ಯುತಾತ್ ಪುಂಸಃ ಕ್ರುದ್ಧಾದಾಶೀವಿಷಾದಿವ |
ನಾಸ್ತಿಕೋಽಪ್ಯುದ್ವಿಜತ್ಯೇವ ಜನಃ ಕಿಂ ಪುನರಾಸ್ತಿಕಃ ॥13॥
ಸತ್ಯ ಮತ್ತು ಧರ್ಮಗಳನ್ನು ಬಿಟ್ಟ ನಾಸ್ತಿಕ ಪುರುಷನನ್ನು ನೋಡಿದರೆ, ಸಿಟ್ಟುಗೊಂಡ ಸರ್ಪವನ್ನು ನೋಡಿದಂತೆ ನಾಸ್ತಿಕನೂ ಭಯಪಡುತ್ತಾನೆ. ಆಸ್ತಿಕನು ಭಯಪಡುವುದರಲ್ಲಿ ಏನು ಆಶ್ಚರ್ಯ?
ಸ್ವಯಮುತ್ಪಾದ್ಯ ಪುತ್ರಂ ವೈ ಸದೃಶಂ ಯೋಽವಮನ್ಯತೇ |
ತಸ್ಯ ದೇವಾಃ ಶ್ರಿಯಂ ಘ್ನಂತಿ ತತ್ರೈನಂ ಕಲಿರಾವಿಶೇತ್ ॥14॥
ಯಾವನು ತಾನೇ ಪಡೆದ, ತನಗೆ ಸದೃಶನಾದ ಮಗನನ್ನು ಅವಮಾನ ಮಾಡುವನೋ, ಅಂತಹವನ ಸಂಪತ್ತನ್ನು ದೇವತೆಗಳು ನಾಶಮಾಡುತ್ತಾರೆ.  ಕಲಿಯು ಅವನನ್ನು ಆವರಿಸುತ್ತಾನೆ.
ಅಭವ್ಯೇ ಹ್ಯನೃತೇಽಶುದ್ಧೇ ನಾಸ್ತಿಕೇ ಪಾಪಕರ್ಮಣಿ |
ದುರಾಚಾರೇ ಕಲಿಸ್ತಿಷ್ಠೇನ್ನ ಕಲಿರ್ಧರ್ಮಚಾರಿಷು ॥15॥
ಅಮಂಗಳನಾದವನಲ್ಲಿ, ಸುಳ್ಳನ್ನು ಹೇಳುವವನಲ್ಲಿ, ಅಶುದ್ಧನಾದವನಲ್ಲಿ, ನಾಸ್ತಿಕನಾದವನಲ್ಲಿ, ಪಾಪಕರ್ಮದಲ್ಲಿ ನಿರತನಾದವನಲ್ಲಿ ಮತ್ತು ದುರಾಚಾರನಲ್ಲಿ ಕಲಿಯು ನೆಲೆಸುತ್ತಾನೆ. ಧರ್ಮಚಾರಿಗಳಲ್ಲಿ ಕಲಿಯು ಇರುವುದಿಲ್ಲ.
ನೀಚೋ ಹಿ ಜಲ್ಪತಾಂ ಪುಂಸಾಂ ಶ್ರುತ್ವಾ ವಾಚಃ ಶುಭಾಶುಭಾಃ |
ಅಶುಭಂ ವಾಕ್ಯಮಾದತ್ತೇ ಪುರೀಷಮಿವ ಸೂಕರಃ ॥16॥
ನೀಚನಾದ ಮನುಷ್ಯನು ಮಾತನಾಡುವ ಪುರುಷರ ಶುಭ ಅಶುಭ ಮಾತುಗಳನ್ನು ಕೇಳಿ ಹಂದಿಯು ಅಮೇಧ್ಯವನ್ನು ಸ್ವೀಕರಿಸುವಂತೆ ಅಶುಭ ಮಾತುಗಳನ್ನೇ ಸ್ವೀಕರಿಸುತ್ತಾನೆ.
ಪ್ರಾಜ್ಞಸ್ತು ಜಲ್ಪತಾಂ ಪುಂಸಾಂ ಶ್ರುತ್ವಾ ವಾಚಃ ಶುಭಾಶುಭಾಃ |
ಗುಣವದ್ವಾಕ್ಯಮಾದತ್ತೇ ಹಂಸಃ ಕ್ಷೀರಮಿವಾಂಭಸಿ ॥17॥
ವಿವೇಕಿಯಾದವನು ಮಾತನಾಡುವ ಮನುಷ್ಯರ ಶುಭ ಅಶುಭ ಮಾತುಗಳನ್ನು ಕೇಳಿ ಹಂಸವು ನೀರಲ್ಲಿರುವ ಕ್ಷೀರವನ್ನು ಮಾತ್ರ ಸ್ವೀಕರಿಸುವಂತೆ ಗುಣವುಳ್ಳ ವಾಕ್ಯವನ್ನು ಮಾತ್ರ ಸ್ವೀಕರಿಸುತ್ತಾನೆ.
ಆತ್ಮನೋ ದುಷ್ಟಭಾವತ್ವಂ ಜ್ಞಾನೀ ನೀಚೋಽಪ್ರಸನ್ನಧೀಃ |
ಪರೇಷಾಮಪಿ ಜಾನಾತಿ ಸ್ವಕರ್ಮಸದೃಶಾನ್ ಗುಣಾನ್ ॥18॥
ತನ್ನ ದುಷ್ಟಭಾವವನ್ನು ತಿಳಿದ ನೀಚನು ಮನಸ್ಸಂತೋಷ ಇಲ್ಲದವನಾಗಿ ಇನ್ನೊಬ್ಬರಲ್ಲಿಯೂ ತನ್ನ ಗುಣಗಳಿಗೆ ಸದೃಶವಾದ

ಗುಣಗಳನ್ನೇ ತಿಳಿಯುತ್ತಾನೆ.
ದಹ್ಯಮಾನಾಃ ಸುತೀವ್ರೇಣ ನೀಚಾಃ ಪರಯಶೋಽಗ್ನಿನಾ |
ಅಶಕ್ತಾಸ್ತತ್ಪದಂ ಗಂತುಮತೋ ನಿಂದಾಂ ಪ್ರಕುರ್ವತೇ ॥19॥
ನೀಚರು ಇನ್ನೊಬ್ಬರ ಯಶಸ್ಸೆಂಬ ಅಗ್ನಿಯನ್ನು ಸಹಿಸಲಾರದೆ ಅದರಿಂದ ತೀವ್ರವಾಗಿ ಬೆಂದವರಾಗಿ ಅವರ ಸ್ಥಾನವನ್ನು ಪಡೆಯಲು ಸಾಧ್ಯವಾಗದೆ ಅವರ ನಿಂದೆಯನ್ನು ಮಾಡುತ್ತಾರೆ.
ಅನ್ಯಾನ್ ಪರಿವದನ್ ಸಾಧುರ್ಯಥಾ ಹಿ ಪರಿತಪ್ಯತೇ |
ತಥಾ ಪರಿವದನ್ನನ್ಯಂ ಹೃಷ್ಟೋ ಭವತಿ ದುರ್ಜನಃ ॥20॥
ಸಜ್ಜನನಾದವನು ಪರರನ್ನು ನಿಂದಿಸಿ ಪರಿತಾಪವನ್ನು ಹೊಂದುವಂತೆ ದುರ್ಜನನು ಪರರನ್ನು ನಿಂದಿಸಿ ಸಂತೋಷಪಡುತ್ತಾನೆ.
ಅಪವಾದರತಾ ಮೂರ್ಖಾ ಭವಂತೀಹ ವಿಶೇಷತಃ |
ನಾಪವಾದರತಾಃ ಸಂತೋ ಭವಂತಿ ಸ್ಮ ವಿಶೇಷತಃ ॥21॥
ಮೂರ್ಖರು ಈ ಲೋಕದಲ್ಲಿ ವಿಶೇಷವಾಗಿ ಇನ್ನೊಬ್ಬರ ಮೇಲೆ ಅಪವಾದಗಳನ್ನು ಹೊರಿಸುತ್ತಿರುತ್ತಾರೆ. ಸಜ್ಜನರು ಹಾಗೆ ಮಾಡುವುದಿಲ್ಲ.
ಅಭಿವಾದ್ಯ ಚ ವೃದ್ಧಾನ್ ಹಿ ಸಾಧುರ್ಗಚ್ಛತಿ ನಿರ್ವೃತಿಮ್ |
ಏವಂ ಸಜ್ಜನಮಾಕ್ರುಶ್ಯ ಹೃಷ್ಟೋ ಭವತಿ ದುರ್ಜನಃ ॥22॥
ದೊಡ್ಡವರಿಗೆ ನಮಸ್ಕಾರವನ್ನು ಮಾಡಿ ಸಜ್ಜನನು ಸಂತೋಷವನ್ನು ಹೊಂದುತ್ತಾನೆ. ಹಾಗೆ, ಸಜ್ಜನರ ಮೇಲೆ ಆಕ್ರೋಶವನ್ನು ಮಾಡಿ ದುರ್ಜನನು ಸಂತೋಷವನ್ನು ಹೊಂದುತ್ತಾನೆ.
ಸುಖಂ ಜೀವಂತ್ಯದೋಷಜ್ಞಾ ಮೂರ್ಖಾ ದೋಷಾನುದರ್ಶಿನಃ |
ಯೇ ತು ವಾಚ್ಯಾಃ ಪರೈಃ ಸಂತಃ ಪರಾನಾಹುಸ್ತಥಾವಿಧಾನ್ ॥23॥
ಇನ್ನೊಬ್ಬರ ದೋಷವನ್ನು ತಿಳಿಯದವರು ಸುಖದಿಂದ ಜೀವಿಸುತ್ತಾರೆ. ಮೂರ್ಖರು ಯಾವಾಗಲೂ ಇನ್ನೊಬ್ಬರಲ್ಲಿ ದೋಷವನ್ನೇ ತಿಳಿಯುತ್ತಾರೆ. ಯಾರು ಇನ್ನೊಬ್ಬರಿಂದ ಬಯ್ಯಲ್ಪಡಬೇಕೋ ಅವರು ಸಜ್ಜನರಾದ ಇನ್ನೊಬ್ಬರನ್ನು ಬಯ್ಯುತ್ತಾರೆ.
ಅತೋ ಹಾಸ್ಯತರಂ ಲೋಕೇ ಕಿಂಚಿದನ್ಯನ್ನ ವಿದ್ಯತೇ |
ಯತ್ರ ದುರ್ಜನ ಇತ್ಯಾಹ ಸಜ್ಜನಂ ದುರ್ಜನಃ ಸ್ವಯಮ್ |
ದಾರುಣಾಲ್ಲೋಕಸಂಕ್ಲೇಶಾದ್ ದುಃಖಮಾಪ್ನೋತ್ಯಸಂಶಯಮ್ ॥24॥
ಎಲ್ಲಿ ಸ್ವಯಂ ದುರ್ಜನನಾದವನು ಸಜ್ಜನನನ್ನು ದುರ್ಜನ ಎಂದು ಹೇಳುತ್ತಾನೋ ಅದಕ್ಕಿಂತ ಹಾಸ್ಯಕರವಾದುದು ಲೋಕದಲ್ಲಿ ಯಾವುದೂ ಇಲ್ಲ. ಜನರಿಗೆ ದಾರುಣವಾದ ಕ್ಲೇಶವನ್ನು ಕೊಡುವುದರಿಂದ ನಿಸ್ಸಂಶಯವಾಗಿ ದುಃಖವನ್ನು ಹೊಂದುತ್ತಾನೆ.
ಕುಲವಂಶಪ್ರತಿಷ್ಠಾಂ ಹಿ ಪಿತರಃ ಪುತ್ರಮಬ್ರುವನ್ |
ಉತ್ತಮಂ ಸರ್ವಧರ್ಮಾಣಾಂ ತಸ್ಮಾತ್ ಪುತ್ರಂ ನತು ತ್ಯಜೇತ್ ॥
ಪಿತೃಗಳು ಪುತ್ರನನ್ನು ಕುಲದ ಪ್ರತಿಷ್ಠೆ (ನೆಲೆ) ಎಂದು ಕರೆದರು. ಆದ್ದರಿಂದ ಸರ್ವಧರ್ಮಗಳಿಂದ ಉತ್ತಮನಾದ ಪುತ್ರನನ್ನು ಎಂದೂ ಪರಿತ್ಯಾಗ ಮಾಡಬಾರದು.
ಸ್ವಪತ್ನೀಪ್ರಭವಾಂಲ್ಲಬ್ಧಾನ್ ಕ್ರೀತಾನ್ ಸರ್ವವಿವರ್ಜಿತಾನ್ |
ಕೃತಾನನ್ಯಾಸು ಚೋತ್ಪನ್ನಾತ್ ಪುತ್ರಾನ್ ವೈ ಮನುರಬ್ರವೀತ್ |
ತತ್ರ ಷಡ್ ಬಂಧುದಾಯಾದಾಃ ಷಡದಾಯಾದಬಾಂಧವಾಃ ॥26॥
ಸದ್ಧರ್ಮಚಾರಿಗಳಾದ ಬಂಧುದಾಯಾದರು ಆರು ಮಕ್ಕಳು. ಬಂಧುದಾಯಾದರಲ್ಲದವರು ಆರು ಮಕ್ಕಳು. ಇದನ್ನು ವಿವರವಾಗಿ ಹೇಳುತ್ತೇನೆ ಕೇಳು. ಸ್ವಯಂ ಜಾತಃ ಎಂದರೆ ತನಗೆ ತನ್ನ ಧರ್ಮಪತ್ನಿಯಲ್ಲಿ ಹುಟ್ಟಿದ ಮಗ. ಕ್ಷೇತ್ರಿಕ ಎಂದರೆ ತನ್ನ ಧರ್ಮಪತ್ನಿಯಲ್ಲಿ ಪತಿಯ ಅನುಮತಿಯಂತೆ ಶ್ರೇಷ್ಠರಾದ ದೇವತೆಗಳಿಂದ ಅಥವಾ ಋಷಿಗಳಿಂದ ಹುಟ್ಟಿದ ಪುತ್ರ. ಪರಿಕ್ರೀತ ಎಂದರೆ ತಂದೆ, ತಾಯಿ, ಅಣ್ಣ, ತಮ್ಮಂದಿರನ್ನು ಕಳೆದುಕೊಂಡು ಅವನ ದೂರದ ಬಂಧುಗಳಿಂದ ಕ್ರಯಕ್ಕೆ ತೆಗೆದುಕೊಂಡ ಪುತ್ರ. ದತ್ತ ಎಂದರೆ ವಿಧಿಪೂರ್ವಕವಾಗಿ ತನ್ನ ಪುತ್ರನೆಂದು ಸ್ವೀಕರಿಸಿದ ಪುತ್ರ. ಕ್ರೀತ ಎಂದರೆ ಶುನಶ್ಶೇಪಾದಿಗಳಂತೆ ತಾನೇ ಕೇಳಿ, ಹಣವನ್ನು ಕೊಟ್ಟು ಕ್ರಯಮಾಡಿ ತೆಗೆದುಕೊಂಡ ಪುತ್ರ. ಸ್ವಯಂ ಉಪಯಾತ ಎಂದರೆ ಯಾವ ಬಾಲಕನು ತನ್ನ ಎಲ್ಲಾ ರಕ್ಷಕರನ್ನೂ ಕಳೆದುಕೊಂಡು ಅನಾಥನಾಗಿ ಇನ್ನೊಬ್ಬನ ಬಳಿಗೆ ಹೋಗಿ ನೀನು ಮಗನಂತೆ ನನ್ನನ್ನು ರಕ್ಷಿಸು ಎಂದು ಕೇಳಿಕೊಂಡಾಗ ಸ್ವೀಕರಿಸಿದ ಪುತ್ರ. ಇವರೆಲ್ಲರೂ ಬಂಧುದಾಯಾದ- ಪುತ್ರರೆಂದು ಕರೆಸಿಕೊಳ್ಳುತ್ತಾರೆ. ಬಂಧುದಾಯಾದರೆಂದರೆ ತಂದೆಯ ಆಸ್ತಿಯಲ್ಲಿ ಪಾಲುದಾರರು ಮತ್ತು ಬಂಧುತ್ವಯೋಗ್ಯರು ಎಂದು ಅರ್ಥ. ಪೌನರ್ಭವೇಯ ಎಂದರೆ ಪತಿಯಿದ್ದಾಗ ಪತಿಯಿಂದ ಗರ್ಭಿಣಿಯಾಗಿ ಪತಿಯನ್ನು ಕಳೆದುಕೊಂಡ ಮೇಲೆ ವಿಧವೆಯಲ್ಲಿ ಹುಟ್ಟಿದ ಮಗ. ಕಾನೀನ ಎಂದರೆ ವಿವಾಹವಾಗುವುದಕ್ಕಿಂತ ಮುಂಚೆ ಹುಟ್ಟಿದ ಪುತ್ರ. ಪತಿ ಇರುವಾಗಲೇ ವ್ಯಭಿಚಾರಿಣಿಯಾದ ಅವನ ಪತ್ನಿಯಲ್ಲಿ ಇನ್ನೊಬ್ಬನಿಂದ ಹುಟ್ಟಿದ ಪುತ್ರ ಕುಂಡ. ಇವನನ್ನು `ಸ್ವೈರಿಣೀಜಾತ' ಎಂದು ಕರೆಯುತ್ತಾರೆ. ಗರ್ಹಿತ ಎಂದರೆ ತನಗೆ ತನ್ನ ಧರ್ಮಪತ್ನಿಯಲ್ಲಿ ಹುಟ್ಟಿದವನಾದರೂ, ದುಷ್ಕರ್ಮದಿಂದ ಜಾತಿಭ್ರಷ್ಟನಾದವನು. `ಸಹೋಢಾಜಾತರೇತ' ಎಂದರೆ ಒಂದು ವಿವಾಹ ಮಂಟಪದಲ್ಲಿ ನೂರಾರು ವಿವಾಹಗಳಾಗುವಾಗ ಮಂಟಪದಾಹ ನಿಮಿತ್ತದಿಂದ ಎಲ್ಲವೂ ಅಸ್ತವ್ಯಸ್ತವಾಗಿ, ಅರ್ಧವಿವಾಹ ಕ್ರಿಯೆ ನಡೆದು, ತನ್ನ ಸಂಕಲ್ಪಿಸಿದ ಪತ್ನಿಯನ್ನು ಬಿಟ್ಟು, ಭ್ರಾಂತಿಯಿಂದ ಇನ್ನೊಬ್ಬಳನ್ನು ಮದುವೆ ಮಾಡಿಕೊಂಡು ಅವಳಲ್ಲಿ ಹುಟ್ಟಿದ ಪುತ್ರ. `ಹೀನಯೋನಿಧೃತ' ಎಂದರೆ ಬ್ರಾಹ್ಮಣನಾದವನಿಗೆ ಶೂದ್ರಾದಿ ಯೋನಿಯಲ್ಲಿ ಜನಿಸಿದ ಪುತ್ರ. ಈ ಆರು ಪುತ್ರರು ಅಬಂಧುದಾಯಾದರು ಎಂದು ಕರೆಸಿಕೊಳ್ಳುತ್ತಾರೆ ಎಂದರೆ ಇವರೆಲ್ಲರೂ ತಂದೆಯ ಆಸ್ತಿಗೆ ಪಾಲುದಾರರು ಆದರೆ ಬಂಧುತ್ವಕ್ಕೆ ಯೋಗ್ಯರಲ್ಲ ಎಂದು ಅರ್ಥ. ಮೇಲಿನ ಶ್ಲೋಕಗಳಲ್ಲಿ ಕ್ರಮವನ್ನು ಪರಿಗಣಿಸದೆ, ಎರಡು ರೀತಿಯ ಪುತ್ರರನ್ನು ಮಿಶ್ರಣ ಮಾಡಿ ನಿರೂಪಿಸಿದ್ದಾರೆ.

ಧರ್ಮಾಕೃತಿವಹಾ ನೃಣಾಂ ಮನಸಃ ಪ್ರೀತಿವರ್ಧನಾಃ |
ತ್ರಾಯಂತಿ ಜನಕಾಜ್ಜಾತಾಃ ಪುತ್ರಾ ಧರ್ಮಪ್ಲವಾಃ ಪಿತೄನ್ ॥27॥
ಧರ್ಮಾಕಾರವನ್ನು ಹೊಂದಿದ ಮನಸ್ಸಿಗೆ ಪ್ರೀತಿಯನ್ನುಂಟು ಮಾಡುವ ತಂದೆಯಿಂದ ಹುಟ್ಟಿದ ಮಕ್ಕಳು, ಧರ್ಮದ ಹಡಗುಗಳಾಗಿದ್ದು, ಪಿತೃಗಳನ್ನು ರಕ್ಷಿಸುತ್ತಾರೆ.
ತಸ್ಮಾತ್ ನೃಪತಿಶಾರ್ದೂಲ ನ ಪುತ್ರಂ ತ್ಯಕ್ತುಮರ್ಹಸಿ |
ಸ ತ್ವಂ ಪುತ್ರಂ ಚ ಸತ್ಯಂ ಚ ಪಾಲಯಸ್ವ ಮಹೀಪತೇ ॥28॥
ಆದ್ದರಿಂದ ರಾಜಶಾರ್ದೂಲನೇ ಮಗನನ್ನು ಪರಿತ್ಯಾಗ ಮಾಡಬೇಡ. ಮಹೀಪತಿಯೇ, ಪುತ್ರನನ್ನು ಮತ್ತು ಸತ್ಯವನ್ನು ಪರಿಪಾಲಿಸು.
ಉಭಯಂ ಪಾಲಯನ್ ನಿತ್ಯಂ ನಾನೃತಂ ಕರ್ತುಮರ್ಹಸಿ |
ಆತ್ಮಾನಂ ಸತ್ಯಧರ್ಮೌ ಚ ಪಾಲಯೇಥಾ ಮಹೀಪತೇ ॥29॥
ಎಲೈ ಮಹೀಪತಿಯೇ, ಯಾವಾಗಲೂ ಇವೆರಡನ್ನೂ ಪಾಲಿಸುವ ನೀನು ಸುಳ್ಳನ್ನು ಆಡಬಾರದು ಮತ್ತು ಮಾಡಬಾರದು. ನಿನ್ನನ್ನು ಮತ್ತು ಸತ್ಯ ಧರ್ಮಗಳನ್ನು ನೀನು ರಕ್ಷಿಸಬೇಕು.
ನರೇಂದ್ರಸಿಂಹ ಕಪಟಂ ನಹಿ ವಕ್ತುಮಿಹಾರ್ಹಸಿ |
ವರಂ ಕೂಪಶತಾದ್ ವಾಪೀ ವರಂ ವಾಪೀಶತಾತ್ ಕ್ರತುಃ ॥30॥
ವರಃ ಕ್ರತುಶತಾತ್ ಪುತ್ರಃ ಸತ್ಯಂ ಪುತ್ರಶತಾದ್ ವರಮ್ |
ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ |
ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥31॥
ಎಲೈ ನರೇಂದ್ರಸಿಂಹನೇ, ನೀನು ವಂಚನೆಯ ಮಾತುಗಳನ್ನು ಆಡಬಾರದು. ನೂರು ಕೂಪಗಳಿಗಿಂದ ವಾಪಿಯು ಶ್ರೇಷ್ಠವಾದುದು. ನೂರು ವಾಪಿಗಳಿಗಿಂತ ಕ್ರತುವು ಶ್ರೇಷ್ಠವಾದುದು. ನೂರು ಕ್ರತುಗಳಿಗಿಂತ ಪುತ್ರನು ಶ್ರೇಷ್ಠನಾದವನು. ನೂರು ಪುತ್ರರರಿಗಿಂತ ಸತ್ಯವು ಶ್ರೇಷ್ಠವಾದುದು. ಹಿಂದೆ ಸಹಸ್ರ ಅಶ್ವಮೇಧಗಳನ್ನು ಮತ್ತು ಸತ್ಯ ವಚನವನ್ನು ತಕ್ಕಡಿಯಲ್ಲಿ ತೂಗಿದರು. ಸಹಸ್ರ ಅಶ್ವಮೇಧಗಳಿಗಿಂತ ಸತ್ಯದ ಭಾರವೇ ಹೆಚ್ಚಾಯಿತು.
ಸರ್ವವೇದಾಧಿಗಮನಂ ಸರ್ವತೀರ್ಥಾವಗಾಹನಮ್ |
ಸತ್ಯಂ ಚ ವದತೋ ರಾಜನ್ ಸಮಂ ವಾ ಸ್ಯಾನ್ನ ವಾ ಸಮಮ್ |
ನಾಸ್ತಿ ಸತ್ಯಾತ್ ಪರೋ ಧರ್ಮೋ ನ ಸತ್ಯಾದ್ ವಿದ್ಯತೇ ಪರಮ್ ॥
ಸರ್ವವೇದಗಳನ್ನು ಅಧ್ಯಯನ ಮಾಡುವುದು, ಸರ್ವತೀರ್ಥಗಳಲ್ಲಿ ಸ್ನಾನ ಮಾಡುವುದು ಸತ್ಯವನ್ನು ಹೇಳುವುದಕ್ಕೆ ಸಮವಾಗಬಹುದು ಅಥವಾ ಆಗದೆಯೇ ಇರಬಹುದು. ರಾಜನೇ, ಸತ್ಯಕ್ಕಿಂತ ಶ್ರೇಷ್ಠವಾದ ಧರ್ಮವಿಲ್ಲ. ಸತ್ಯಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.
ನಹಿ ತೀವ್ರತರಂ ಪಾಪಮನೃತಾದಿಹ ವಿದ್ಯತೇ |
ರಾಜನ್ ಸತ್ಯಂ ಪರಂ ಬ್ರಹ್ಮ ಸತ್ಯಂ ಚ ಸಮಯಃ ಪರಃ ॥33॥
ಅನೃತಕ್ಕಿಂತ ಘೋರವಾದ ಪಾಪವಿಲ್ಲ. ರಾಜನೇ, ಪರಬ್ರಹ್ಮನೇ ಸತ್ಯ. ನಾವು ಮಾಡಿಕೊಂಡ ಸಮಯವೇ (ಷರತ್ತು) ಸತ್ಯ.
ಮಾ ತ್ಯಾಕ್ಷೀಃ ಸಮಯಂ ರಾಜನ್ ಸತ್ಯಂ ಸಂಗತಮಸ್ತು ತೇ |
ಯಃ ಪಾಪಂ ನ ವಿಜಾನಾತಿ ಕರ್ಮ ಕೃತ್ವಾ ನರಾಧಿಪ |
ನಹಿ ತಾದೃಕ್ ಪರಂ ಪಾಪಮನೃತಾದಿಹ ವಿದ್ಯತೇ ॥34॥
ರಾಜನೇ, ಅಂತಹ ಸಮಯವನ್ನು ತ್ಯಜಿಸಬೇಡ. ಸತ್ಯವು ಯಾವಾಗಲೂ ನಿನ್ನ ಜೊತೆಯಲ್ಲಿ ಇರಲಿ. ಎಲೈ ನರಾಧಿಪನೇ, ಯಾರು ಪಾಪಕರ್ಮವನ್ನು ಮಾಡಿ ಅದನ್ನು ಮರೆಯುತ್ತಾನೆಯೋ ಅದು ಅನೃತವೆನಿಸುತ್ತದೆ. ಅದಕ್ಕಿಂತ ಘೋರವಾದ ಪಾಪವು ಯಾವುದೂ ಇಲ್ಲ.
ಯಸ್ಯ ತೇ ಹೃದಯಂ ವೇದ ಸತ್ಯಸ್ಯೈವಾನೃತಸ್ಯ ಚ |
ಕಲ್ಯಾಣಂ ಸಾಕ್ಷಿಣಂ ತಸ್ಮಾತ್ ಕರ್ತುಮರ್ಹಸಿ ಧರ್ಮತಃ ॥35॥
ನಿನ್ನ ಹೃದಯವು ಸತ್ಯಕ್ಕೂ ಅನೃತಕ್ಕೂ ಸಾಕ್ಷಿಯಾಗಿದೆ. ಪರಿಶುದ್ಧವಾದ ಸಾಕ್ಷಿಯ ಆದೇಶದಂತೆ ನೀನು ಧರ್ಮವನ್ನು ಆಚರಿಸಬೇಕು.
ಯೋ ನ ಕಾಮಾನ್ನ ಚ ಕ್ರೋಧಾನ್ನ ದ್ರೋಹಾದತಿವರ್ತತೇ |
ಅಮಿತ್ರಂ ವಾಪಿ ಮಿತ್ರಂ ವಾ ಸ ವಾ ಉತ್ತಮಪೂರುಷಃ |
ಅನೃತೇ ಚೇತ್ ಪ್ರಸಂಗಸ್ತೇ ಶ್ರದ್ಧಧಾಸಿ ನ ಚೇತ್ ಸ್ವಯಮ್ ॥36॥
ಯಾವನು ಕಾಮದಿಂದಲಾಗಲೀ, ಕ್ರೋಧದಿಂದಾಗಲೀ ದ್ರೋಹದಿಂದಾಗಲೀ ಶತ್ರುವನ್ನು ಅಥವಾ ಮಿತ್ರರನ್ನು ಮೀರಿ ನಡೆಯುವುದಿಲ್ಲವೋ ಅವನೇ ಉತ್ತಮ ಪುರುಷನೆನಿಸುತ್ತಾನೆ.
ಆತ್ಮಾನಮವಗಚ್ಛಾಶು ತಾದೃಶೇನಾಸ್ತಿ ಸಂಗತಮ್ |
ಪುತ್ರತ್ವೇ ಶಂಕಮಾನಸ್ಯ ಬುದ್ಧಿರ್ಜ್ಞಾಪಕದೀಪಿಕಾ ॥37॥
ನಿನಗೆ ಅನೃತದಲ್ಲೇ ಸ್ನೇಹವಿದ್ದು ನನ್ನ ಮಾತನ್ನು ನೀನಾಗಿಯೇ ನಂಬದಿದ್ದರೆ, ಸ್ವಾಮಿಯಾದ ನಾರಾಯಣನನ್ನು ಸ್ಮರಣೆ ಮಾಡು. ಸ್ವಾಮಿಯಾದ ನಾರಾಯಣನನ್ನು ಸ್ಮರಣೆ ಮಾಡಿದವರ ಬಳಿ ಅನೃತವು ಇರುವುದಿಲ್ಲ. ಮಗನು ಹೌದೋ ಅಲ್ಲವೋ ಎಂದು ಶಂಕೆ ಪಡುತ್ತಿರುವ ನಿನಗೆ, ನಿನ್ನ ಬುದ್ಧಿಯನ್ನು ಚುರುಕುಗೊಳಿಸಲು ಜ್ಞಾಪಕವನ್ನು ಹೇಳುತ್ತೇನೆ.
ಗತಿಃ ಸ್ವರಃ ಸ್ಮೃತಿಃ ಸತ್ತ್ವಂ ಶೀಲವಿಜ್ಞಾನವಿಕ್ರಮಾಃ |
ಧೃಷ್ಣುಃ ಪ್ರಕೃತಿಭಾವೌ ಚ ಆವರ್ತಾ ರೋಮಜಾತಯಃ ॥38॥

ಸಮಾ ಯಸ್ಯ ಯತಃ ಸ್ಯುಸ್ತೇ ತಸ್ಯ ಪುತ್ರೋ ನ ಸಂಶಯಃ |
ಸಾದೃಶ್ಯೇನೋದ್ಧೃತಂ ಬಿಂಬಂ ತವ ದೇಹಾದ್ ವಿಶಾಂಪತೇ ||39||
ನಡಿಗೆ, ಸ್ವರ, ಸ್ಮೃತಿ, ಸತ್ವ (ಬಲ), ಶೀಲ, ವಿಜ್ಞಾನ, ವಿಕ್ರಮ, ಧೈರ್ಯ, ಪ್ರಕೃತಿ ಭಾವ, ಸುಳಿಗಳು ಮತ್ತು ರೋಮ ಸಮೂಹಗಳು ಯಾರಿಗೆ ಯಾವನಂತೆ ಇರುತ್ತವೆಯೋ, ಅವನನ್ನು ಅವನ ಪುತ್ರನೆಂದು ತಿಳಿಯಬೇಕು. ರಾಜನೇ, ಇವನು ನಿನ್ನ ದೇಹದಿಂದ ಹೊರಬಂದ, ನಿನ್ನದೇ ಒಂದು ಬಿಂಬವೆಂದು ತಿಳಿ.
ತ್ರಾತೇತಿ ಭಾಷಮಾಣಂ ವೈ ಮಾ ಸ್ಮ ರಾಜನ್ ವೃಥಾ ಕೃಥಾಃ |
ಋತೇಽಪಿಗರ್ದಭೀಕ್ಷೀರಾತ್ ಪಯಃ ಪಾಸ್ಯತಿ ಮೇ ಸುತಃ ||40||
ಋತೇಪಿ ತ್ವಾಂ ತು ದುಷ್ಯಂತ ಶೈಲರಾಜಾವತಂಸಿಕಾಮ್ |
ಚತುರಂತಾಮಿಮಾಮುರ್ವೀಂ ಪುತ್ರೋ ಮೇ ಪಾಲಯಿಷ್ಯತಿ ||41||
ನನ್ನನ್ನು ರಕ್ಷಿಸು ಎಂದು ಮಾತನಾಡುವ ಮಗನನ್ನು ನೀನು ದೂರ ಮಾಡಬೇಡ. ರಾಜನೇ, ಗರ್ದಭಿಯ ಕ್ಷೀರವಿಲ್ಲದಿದ್ದರೂ ನನ್ನ ಮಗನು ಹಾಲನ್ನು ಕುಡಿಯುತ್ತಾನೆ. ನಿನ್ನ ಅನುಗ್ರಹವಿಲ್ಲದಿದ್ದರೂ, ಶೈಲರಾಜಗಳಿಂದ ಕೂಡಿದ ಸಮುದ್ರಾಂತವಾದ ಭೂಮಿಯನ್ನು ನನ್ನ ಮಗನು ಆಳುತ್ತಾನೆ.
ಶಕುಂತಲೇ ತವ ಸುತಶ್ಚಕ್ರವರ್ತೀ ಭವಿಷ್ಯತಿ |
ಏವಮುಕ್ತೋ ಮಹೇಂದ್ರೇಣ ಭವಿಷ್ಯತಿ ನ ಚಾನ್ಯಥಾ ||42||
ಶಕುಂತಲೇ, ನಿನ್ನ ಮಗನು ಚಕ್ರವರ್ತಿಯಾಗುವನು ಎಂದು ಹೇಳಿದ ಮಹೇಂದ್ರನ ಮಾತು ಎಂದೂ ವ್ಯತ್ಯಾಸವಾಗುವುದಿಲ್ಲ.
ಸಾಕ್ಷಿತ್ವೇ ಬಹವೋಽಪ್ಯುಕ್ತಾ ದೇವದೂತಾದಯೋ ಮತಾಃ |
ನ ಬ್ರುವಂತಿ ಯಥಾ ಸತ್ಯಮುತಾಹೋ ತ್ವನೃತಂ ಕಿಲ |
ಅಸಾಕ್ಷಿಣೀ ಮಂದಭಾಗ್ಯಾ ಗಮಿಷ್ಯಾಮಿ ಯಥಾಗತಮ್ ||43||
ದೇವದೂತ ಮೊದಲಾದ ಅನೇಕರು ಎಲ್ಲಾ ಕರ್ಮಗಳಿಗೂ ಸಾಕ್ಷಿಗಳು ಎಂದು ಹೇಳುತ್ತಾರೆ. ಆದರೆ, ನಾನು ಹೇಳುತ್ತಿರುವುದು ಸತ್ಯವೋ ಅಥವಾ ಅನೃತವೋ ಎಂದು ಯಾರೂ ಹೇಳುತ್ತಿಲ್ಲ. ಸಾಕ್ಷಿಯಿಲ್ಲದ ಮಂದಭಾಗ್ಯಳಾದ ನಾನು ಬಂದ ದಾರಿಯಲ್ಲಿಯೇ ಹಿಂದೆ ಹೋಗುವೆನು.
ವೈಶಂಪಾಯನಃ
ಏತಾವದುಕತ್ವ ವಚನಂ ಪ್ರಾತಿಷ್ಠತ ಶಕುಂತಲಾ |
ತಸ್ಯಾಃ ಕ್ರೋಧಸಮುತ್ಥೋಽಗ್ನಿಃ ಸಧೂಮೋ ಮೂರ್ಧ್ನ್ಯದೃಶ್ಯತ ||44||
ಇಷ್ಟು ಮಾತುಗಳನ್ನು ಹೇಳಿ ಶಕುಂತಲೆಯು ಹೊರಟಳು. ಅವಳ ಶಿರಸ್ಸಿನಿಂದ ಧೂಮಸಹಿತವಾದ ಕ್ರೋಧಾಗ್ನಿಯು ಎದ್ದಿತು.
ತಂ ನಿಯಮ್ಯಾತ್ಮನೋಽಂಗೇಷು ತತಃ ಕ್ರೋಧಾಗ್ನಿಮಾತ್ಮಜಮ್ |
ಪ್ರಸ್ಥಿತೈವಾನವದ್ಯಾಂಗೀ ಸಹ ಪುತ್ರೇಣ ವೈ ವನಮ್ ||45||
ತನ್ನ ಶರೀರದಲ್ಲಿ ಹುಟ್ಟಿದ ಕ್ರೋಧಾಗ್ನಿಯನ್ನು ತನ್ನ ಶರೀರದಲ್ಲೇ ನಿಯಂತ್ರಿಸಿ ನಿರ್ದುಷ್ಟಳಾದ ಶಕುಂತಲೆಯು ಪುತ್ರನ ಜೊತೆಯಲ್ಲಿ ಪುನಃ ಕಾಡಿಗೆ ಹೊರಟೇ ಬಿಟ್ಟಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಿನವತಿತಮೋಽಧ್ಯಾಯಃ ||
|| ಸಂಭವಪರ್ವಣಿ ಚತ್ವಾರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತೆರಡನೆಯ ಅಧ್ಯಾಯ ಮುಗಿಯಿತು
*****

ತೊಂಭತ್ಮೂರನೆಯ ಅಧ್ಯಾಯ
(ಅಶರೀರವಾಣಿ. ದುಷ್ಯಂತನಿಂದ ಪತ್ನೀಪುತ್ರರ ಸ್ವೀಕಾರ, ಭರತನ ರಾಜ್ಯಾಭಿಷೇಕ ಮತ್ತು ಅವನ ಚರಿತೆ.)
ವೈಶಂಪಾಯನಃ
ಅಥಾಂತರಿಕ್ಷೇ ದುಷ್ಯಂತಂ ವಾಗುವಾಚಾಶರೀರಿಣೀ |
ಋತ್ವಿಕ್ಪುರೋಹಿತಾಚಾರ್ಯೈರ್ಮಂತ್ರಿಭಿಶ್ಚಾಭಿಸಂವೃತಮ್ ||1||
ಅನಂತರ ಋತ್ವಿಜರು, ಪುರೋಹಿತರು, ಆಚಾರ್ಯರು ಮತ್ತು ಮಂತ್ರಿಗಳಿಂದ ಕೂಡಿದ್ದ ದುಷ್ಯಂತನನ್ನು ಕುರಿತು ಅಂತರಿಕ್ಷದಲ್ಲಿ ಅಶರೀರವಾಣಿಯು ಹೇಳಿತು.
ಮಾತಾ ಭಸ್ತ್ರಾ ಪಿತುಃ ಪುತ್ರೋ ಯಸ್ಮಾಜ್ಜಾತಃ ಸ ಏವ ಸಃ |
ಭರಸ್ವ ಪುತ್ರಂ ದುಷ್ಯಂತ ಸತ್ಯಮಾಹ ಶಕುಂತಲಾ ||2||
ತಾಯಿಯು ತಿದಿ. ಪುತ್ರನು ತಂದೆಗೆ ಸೇರಿದವನು. ಯಾವನಿಂದ ಹುಟ್ಟುವನೋ, ಅಂತಹ ತಂದೆಯೇ ಪುತ್ರರೂಪವನ್ನು ತಾಳುತ್ತಾನೆ. ದುಷ್ಯಂತನೇ, ನಿನ್ನ ಮಗನನ್ನು ಸ್ವೀಕರಿಸಿ ಪೋಷಿಸು. ಶಕುಂತಲೆಯು ಸತ್ಯವನ್ನು ಹೇಳುತ್ತಿದ್ದಾಳೆ.
ಸರ್ವೇಭ್ಯೋ ಹ್ಯಂಗಮಂಗೇಭ್ಯಃ ಸಾಕ್ಷಾದುತ್ಪದ್ಯತೇ ಸುತಃ |
ಆತ್ಮಾ ಚೈಷ ಸುತೋ ನಾಮ ತಥೈವ ತವ ಪೌರವ ||3||
ತಂದೆಯ ಒಂದೊಂದು ಅಂಗದಿಂದಲೂ ತನ್ನ ಅಂಗವನ್ನು ಪಡೆದು ಪುತ್ರನು ಜನಿಸುತ್ತಾನೆ. ಆದ್ದರಿಂದ ಪುತ್ರನನ್ನು ಆತ್ಮನೇ (ತಾನೇ) ಎಂದು ಕರೆಯುತ್ತಾರೆ. ಹಾಗೆಯೇ ಎಲೈ ಪೌರವನೇ ಇವನು ನಿನ್ನ ಪುತ್ರ.
ಆಹಿತಂ ಹ್ಯಾತ್ಮನಾಽಽತ್ಮಾನಂ ಪರಿರಕ್ಷ ಸ್ವಮಾತ್ಮಜಮ್ |

ಅನನ್ಯಾಂ ಸ್ವಾಂ ಪ್ರತೀಕ್ಷಸ್ವ ಮಾವಮಂಸ್ಥಾಃ ಶಕುಂತಲಾಮ್ ॥4॥
ನೀನೇ ಆಧಾನ ಮಾಡಿದ ನಿನ್ನ ಮಗನನ್ನು ರಕ್ಷಿಸು. ಅನನ್ಯಗತಿಯಾದ ನಿನ್ನವಳೇ ಆದ ಶಕುಂತಲೆಯನ್ನು ಅಂಗೀಕರಿಸು. ಅವಳಿಗೆ ಅವಮಾನವನ್ನು ಮಾಡಬೇಡ.
ಸ್ತ್ರಿಯಃ ಪವಿತ್ರಮತುಲಮೇತದ್ದುಷ್ಯಂತ ಧರ್ಮತಃ |
ಮಾಸಿ ಮಾಸಿ ರಜೋ ಹ್ಯಾಸಾಂ ದುಷ್ಕೃತಾನ್ಯಪಕರ್ಷತಿ |
ತತಃ ಸರ್ವಾಣಿ ಭೂತಾನಿ ವ್ಯಾಜಹ್ರುಸ್ತಂ ಸಮಂತತಃ ॥5॥
ದುಷ್ಯಂತನೇ, ಸ್ತ್ರೀಯರು ಧಾರ್ಮಿಕವಾಗಿ ಪೂರ್ಣರಾಗಿ ಪವಿತ್ರರಾಗಿರುತ್ತಾರೆ. ಪ್ರತಿತಿಂಗಳೂ ಉಂಟಾಗುವ ರಜಸ್ಸು ಅವರ ಪಾಪವನ್ನು ಪರಿಹಾರ ಮಾಡುತ್ತದೆ. ಅನಂತರದಲ್ಲಿ (ಅಶರೀರವಾಣಿಯು ಮುಗಿದ ಮೇಲೆ) ಎಲ್ಲಾ ಕಡೆಗಳಿಂದಲೂ, ಎಲ್ಲಾ ದೇವತೆಗಳೂ ಹೇಳಿದರು.
ದೇವಾಃ
ಆಹಿತಃ ಸ್ವತನೋರೇಷ ಮಾವಮಂಸ್ಥಾಃ ಶಕುಂತಲಾಮ್ |
ರೇತೋಧಾಃ ಪುತ್ರಂ ನಯತಿ ನರದೇವ ಯಮಕ್ಷಯಮ್ ॥6॥
ನೀನು ನಿನ್ನ ದೇಹದಿಂದಲೇ ಶಕುಂತಲೆಯ ದೇಹದಲ್ಲಿ ಇವನನ್ನು ಆಧಾನ ಮಾಡಿದ್ದೀಯೆ. ಶಕುಂತಲೆಗೆ ಅವಮಾನ ಮಾಡಬೇಡ. ರಾಜನೇ, ಮಗನು ರೇತಸ್ಸನ್ನು ಆಧಾನ ಮಾಡಿದ ತನ್ನ ತಂದೆಗೆ ಅಕ್ಷಯ ಲೋಕಗಳನ್ನು ಸಂಪಾದಿಸಿಕೊಡುತ್ತಾನೆ.
ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ |
ಪತಿರ್ಜಾಯಾಂ ಪ್ರವಿಶತಿ ಸ ತಸ್ಯಾಂ ಜಾಯತೇ ಪುನಃ ॥7॥
ಅನ್ಯೋನ್ಯಪ್ರಕೃತಿರ್ಹ್ಯೇಷ ಮಾವಮಂಸ್ಥಾಃ ಶಕುಂತಲಾಮ್ |
ಜಾಯಾ ಜನಯತೇ ಪುತ್ರಮಾತ್ಮನೋಽಂಗಾದ್ ದ್ವಿಧಾ ಕೃತಮ್ ॥8॥
ಈ ಗರ್ಭಾಧಾನವನ್ನು ಮಾಡಿದವನು ನೀನು. ಶಕುಂತಲೆಯು ಸತ್ಯವನ್ನು ಹೇಳುತ್ತಿದ್ದಾಳೆ. ಪತಿಯು ಜಾಯೆಯನ್ನು ಪ್ರವೇಶಿಸಿ ತಾನೇ ಅವಳಲ್ಲಿ ಪುನಃ ಜನಿಸುತ್ತಾನೆ. ಇದು ಪತಿ ಪತ್ನಿಯರ ಸ್ವಭಾವ. ಶಕುಂತಲೆಯನ್ನು ಅವಮಾನಿಸಬೇಡ. ಪತ್ನಿಯಾದವಳು ತನ್ನ ಶರೀರದಿಂದ ವೀರ್ಯಾಧಾನ ಮಾಡಿದವನ ಅಂಗಗಳನ್ನೇ ಎರಡನೆಯ ರೀತಿ ಪ್ರಸವಿಸುತ್ತಾಳೆ.
ತಸ್ಮಾದ್ ಭರಸ್ವ ದುಷ್ಯಂತ ಪುತ್ರಂ ಶಾಕುಂತಲಂ ನೃಪ |
ಅಭೂತಿರೇಷಾ ನ ತ್ಯಜೇತ್ ಜೀವಂ ಜೀವಂತಮಾತ್ಮಜಮ್ ॥9॥
ಶಾಕುಂತಲಂ ಮಹಾತ್ಮಾನಂ ದುಷ್ಯಂತ ಭರ ಪೌರವ |
ಭರ್ತವ್ಯೋಽಯಂ ತ್ವಯಾ ಯಸ್ಮಾದಸ್ಮಾಕಂ ವಚನಾದಪಿ ॥10॥
ಆದ್ದರಿಂದ ದುಷ್ಯಂತರಾಜನೇ, ಶಕುಂತಲೆಯ ಮಗನನ್ನು ಭರಿಸು. ಮಗನನ್ನು ಬಿಡುವುದು ಅಮಂಗಳವಾದುದು. ತನ್ನ ಜೀವದಂತಿರುವ ಬದುಕಿರುವ ಮಗನನ್ನು ಎಂದೂ ಪರಿತ್ಯಾಗ ಮಾಡಬಾರದು. ಆದ್ದರಿಂದ ಪೌರವನಾದ ದುಷ್ಯಂತನೇ, ಮಹಾತ್ಮನಾದ ಶಾಕುಂತಲನನ್ನು (ಸರ್ವದಮನ) ಪೋಷಿಸು. ನಮ್ಮ ಮಾತಿನಿಂದಲೂ ಕೂಡ ನೀನು ಅವನನ್ನು ಪೋಷಿಸಬೇಕು.
ತಸ್ಮಾದ್ ಭವತ್ವಯಂ ನಾಮ್ನಾ ಭರತೋ ನಾಮ ತೇ ಸುತಃ |
ಭರತಾದ್ ಭಾರತೀ ಕೀರ್ತಿರ್ಯೇನೇದಂ ಭಾರತಂ ಕುಲಮ್ ॥11॥
ಆದ್ದರಿಂದ ಈ ನಿನ್ನ ಮಗನಿಗೆ ಭರತನೆಂದೇ ಹೆಸರಾಗಲಿ. ಭಾರತವಂಶದ ಕೀರ್ತಿಯು ಇವನಿಂದ ವಿಸ್ತಾರಗೊಳ್ಳುತ್ತದೆ.
ಅಪರೇ ಯೇ ಚ ಪೂರ್ವೇ ಚ ಭಾರತಾ ಇತಿ ತೇ ಸ್ಮೃತಾಃ |
ಏವಮುಕತ್ವ ತತೋ ದೇವಾ ಋಷಯಶ್ಚ ತಪೋಧನಾಃ |
ಪತಿವ್ರತೇತಿ ಸಂಹೃಷ್ಟಾಃ ಪುಷ್ಪವರ್ಷಂ ವವರ್ಷಿರೇ ॥12॥
ಇವನ ಹಿಂದಿನವರು ಮತ್ತು ಮುಂದಿನವರೆಲ್ಲರೂ ಇಂದಿನಿಂದ ಭಾರತರೆಂದು ಕರೆಸಿಕೊಳ್ಳುತ್ತಾರೆ. ಹೀಗೆ ಹೇಳಿ ದೇವತೆಗಳು ಮತ್ತು ತಪೋಧನರಾದ ಋಷಿಗಳು ಶಕುಂತಲೆಯನ್ನು ಪತಿವ್ರತೆ ಎಂದು ಕರೆದು ಅವಳ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು.
ತಚ್ಛ್ರುತ್ವಾ ಪೌರವೋ ವಾಕ್ಯಂ ವ್ಯಾಹೃತಂ ವೈ ದಿವೌಕಸಾಮ್ |
ಸಿಂಹಾಸನಾತ್ ಸಮುತ್ಥಾಯ ಪ್ರಣಮ್ಯ ಚ ದಿವೌಕಸಃ |
ಪುರೋಹಿತಮಮಾತ್ಯಾಂಶ್ಚ ಸಂಪ್ರಹೃಷ್ಟೋಽಬ್ರವೀದಿದಮ್ ॥13॥
ದೇವತೆಗಳ ಆ ಮಾತನ್ನು ಕೇಳಿ ಪೌರವನು ಸಿಂಹಾಸನದಿಂದ ಎದ್ದು ದೇವತೆಗಳಿಗೂ ಮತ್ತು ಪುರೋಹಿತರಿಗೂ ಮತ್ತು ಅಮಾತ್ಯರಿಗೂ ನಮಸ್ಕರಿಸಿ ಸಂತೋಷದಿಂದ ಹೀಗೆ ಮಾತನಾಡಿದನು.
ಶೃಣ್ವಂತ್ವೇತದ್ ಭವಂತೋಽದ್ಯ ದೇವದೂತಸ್ಯ ಭಾಷಿತಮ್ |
ಶೃಣ್ವಂತು ದೇವತಾನಾಂ ಚ ಮಹರ್ಷೀಣಾಂ ಚ ಭಾಷಿತಮ್ ॥14॥
ನೀವೆಲ್ಲರೂ ದೇವದೂತನ ಅಶರೀರವಾಣಿಯನ್ನೂ ಮತ್ತು ದೇವತೆಗಳ ಮತ್ತು ಋಷಿಗಳ ಮಾತನ್ನೂ ಕೇಳಿ ಸ್ವೀಕರಿಸಬೇಕು.
ಅಹಮಪ್ಯೇವಮೇವೈನಂ ಜಾನಾಮಿ ಸುತಮಾತ್ಮಜಮ್ |
ಯದಸ್ಯ ವಚನಾದೇವ ಗೃಹ್ಣೀಯಾಮಿಮಮಾತ್ಮಜಮ್ |
ಭವೇದ್ಧಿ ಶಂಕಾ ಲೋಕಸ್ಯ ನೈವಂ ಶುದ್ಧೋ ಭವೇದಯಮ್ ॥15॥
ನಾನೂ ಈ ವಿಷಯವನ್ನು ಹೀಗೆಯೇ ತಿಳಿದು ಸರ್ವದಮನನನ್ನು ನನ್ನ ಮಗನೆಂದೇ ತಿಳಿದಿದ್ದೇನೆ. ಆದರೆ ಕೇವಲ ಇವಳ ಮಾತಿನಿಂದ ನಾನು ಇವನನ್ನು ಮಗನೆಂದು ಸ್ವೀಕರಿಸಿದರೆ ಪ್ರಜೆಗಳಿಗೆ ಸಂಶಯವುಂಟಾಗುತ್ತದೆ. ಹಾಗೆ ಮಾಡಿದರೆ ಸರ್ವದಮನನು ಶುದ್ಧನಾಗುವುದಿಲ್ಲ.

ವೈಶಂಪಾಯನಃ
ತಂ ವಿಶೋಧ್ಯ ಮಹಾರಾಜಾ ದೈವತೈಃ ಸಮಹರ್ಷಿಭಿಃ |
ಹೃಷ್ಟಃ ಪ್ರಮುದಿತಶ್ಚಾಪಿ ಪ್ರತಿಜಗ್ರಾಹ ತಂ ಸುತಮ್ ||16||
ಮಹಾರಾಜನಾದ ದುಷ್ಮಂತನು ಸರ್ವದಮನನನ್ನು ದೇವತೆಗಳ ಮಾತಿನಿಂದಲೂ ಮತ್ತು ಮಹರ್ಷಿಗಳ ಮಾತಿನಿಂದಲೂ ಪವಿತ್ರನನ್ನಾಗಿ ಮಾಡಿ ಸಂತೋಷದಿಂದ ಆ ಪುತ್ರನನ್ನು ಸ್ವೀಕರಿಸಿದನು.
ಮೂರ್ಧ್ನಿ ಚೈನಂ ಸಮಾಘ್ರಾಯ ಸಸ್ನೇಹಂ ಪರಿಷಸ್ವಜೇ |
ಸಭಾಜ್ಯಮಾನೋ ವಿಪ್ರೈಶ್ಚ ಸ್ತೂಯಮಾನಶ್ಚ ಬಂದಿಭಿಃ ||17||
ಮುದಂ ಸ ಪರಮಾಂ ಲೇಭೇ ಪುತ್ರಸ್ಪರ್ಶನಜಾಂ ನೃಪಃ |
ತಾಂ ಚೈವ ಭಾರ್ಯಾಂ ಧರ್ಮಜ್ಞಃ ಪೂಜಯಾಮಾಸ ಧರ್ಮತಃ||18||
ಅವನನ್ನು ಪ್ರೀತಿಯಿಂದ ಆಲಿಂಗಿಸಿ ಶಿರಸ್ಸಿನಲ್ಲಿ ಆಘ್ರಾಣಿಸಿದನು. ಬ್ರಾಹ್ಮಣರಿಂದಲೂ ಮತ್ತು ವಂದಿಗಳಿಂದಲೂ ಸ್ತೋತ್ರವನ್ನು ಮಾಡಲ್ಪಟ್ಟು ಮತ್ತು ಅರ್ಚಿಸಲ್ಪಟ್ಟು, ಆ ರಾಜನು ಪುತ್ರಸ್ಪರ್ಶದ ಪರಮಸುಖವನ್ನು ಪಡೆದನು. ಧರ್ಮವನ್ನು ತಿಳಿದ ಆ ರಾಜನು ಆ ಪತ್ನಿಯನ್ನೂ ಧರ್ಮಮಾರ್ಗದಿಂದಲೇ ಪೂಜಿಸಿದನು.
ಅಬ್ರವೀಚ್ಚೈವ ತಾಂ ರಾಜಾ ಸಾಂತ್ವಪೂರ್ವಮಿದಂ ವಚಃ |
ಲೋಕಸ್ಯಾಯಂ ಪರೋಕ್ಷಸ್ತು ಸಂಬಂಧೋ ನೌ ಪುರಾಭವತ್ ||19||
ಕೃತೋ ಲೋಕಸಮಕ್ಷೋಽದ್ಯ ಸಂಬಂಧೋ ವೈ ಪುರಾ ಕೃತಃ |
ತಸ್ಮಾದೇತನ್ಮಯಾ ತ್ವದ್ಯ ತನ್ನಿಮಿತ್ತಂ ಪ್ರಭಾಷಿತಮ್ ||20||
ರಾಜನು ಅವಳನ್ನು ಕುರಿತು ಸಮಾಧಾನಕರವಾದ ಮೃದುಮಾತುಗಳಿಂದ ಹೀಗೆ ಹೇಳಿದನು. ನಮ್ಮಿಬ್ಬರಿಗೆ ಹಿಂದೆ ಉಂಟಾದ ಈ ಸಂಬಂಧವು ಯಾರಿಗೂ ತಿಳಿಯದೇ ಪರೋಕ್ಷವಾಗಿತ್ತು. ಹಿಂದೆ ಮಾಡಿದ ಆ ಸಂಬಂಧವನ್ನು ಈಗ ಎಲ್ಲಾ ಜನರ ಎದುರಿಗೆ ಪ್ರತ್ಯಕ್ಷವಾಗಿ ನವೀಕರಿಸಿದ್ದೇನೆ.
ಶಂಕೇತ ವಾಽಥ ಲೋಕೋಽಯಂ ಸ್ತ್ರೀಭಾವಾನ್ಮಯಿ ಸಂಗತಾಮ್|
ತಸ್ಮಾದೇತನ್ಮಯಾ ದೇವಿ ತಚ್ಛುದ್ಧ್ಯರ್ಥಂ ವಿಚಾರಿತಮ್ ||21||
ಆದ್ದರಿಂದ ಈ ದಿನ ನಾನು ಆ ಕಾರಣದಿಂದ ಒರಟಾಗಿ ಮಾತನಾಡಿದೆ. ಇಲ್ಲದಿದ್ದರೆ ಲೋಕದ ಜನರು ಸ್ತ್ರೀಭಾವದಿಂದ ನನಗೆ ಗಂಟುಬಿದ್ದವಳು ಎಂದು ಶಂಕಿಸಿಯಾರು. ದೇವಿಯೇ, ನಿನ್ನನ್ನು ಶುದ್ಧಿಮಾಡುವುದಕ್ಕಾಗಿ ನಾನು ಹೀಗೆ ವಿಚಾರ ಮಾಡಿದೆ.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಪೃಥಗ್ವಿಧಾಃ |
ತ್ವಾಂ ದೇವಿ ಪೂಜಯಿಷ್ಯಂತಿ ನಿರ್ವಿಶಂಕಂ ಪತಿವ್ರತಾಮ್ ||22||
ದೇವಿಯೇ, ನಿಸ್ಸಂಶಯವಾಗಿ ಪತಿವ್ರತೆಯಾದ ನಿನ್ನನ್ನು ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಮತ್ತು ಬೇರೆ ಜನರು ಪೂಜಿಸುತ್ತಾರೆ. ನಿನ್ನ ಈ ಮಗನನ್ನು ಯುವರಾಜನಾಗಿ ಸ್ವೀಕರಿಸಿದ್ದೇನೆ. ನೀನು ನನ್ನ ಅಗ್ರಮಹಿಷಿ.
ಪುತ್ರಶ್ಚಾಯಂ ವೃತೋ ರಾಜ್ಯೇ ತ್ವಮಗ್ರಮಹಿಷೀ ಮಮ |
ಯಚ್ಚ ಕೋಪಿತಯಾಽತ್ಯರ್ಥಂ ತ್ವಯೋಕ್ತೋಽಸ್ಮ್ಯಪ್ರಿಯಂ ಪ್ರಿಯೇ |
ಪ್ರಣಯಿನ್ಯಾ ವಿಶಾಲಾಕ್ಷಿ ತತ್ ಕ್ಷಂತವ್ಯಂ ಮಯಾ ಶುಭೇ ||23||
ವಿಶಾಲಾಕ್ಷಿಯಾದ ಪ್ರಿಯೆಯೇ, ನಾನು ನಿನ್ನನ್ನು ಕೋಪಗೊಳಿಸಿದಾಗ ಪ್ರೀತಿಯುಳ್ಳ ನೀನು ಆಡಿದ ಅಪ್ರಿಯವಾದ ಮಾತುಗಳನ್ನು ನಾನು ಕ್ಷಮಿಸಲೇಬೇಕು.
ಅನೃತಂ ವಾಪ್ಯನಿಷ್ಟಂ ವಾ ದುರುಕ್ತಂ ವಾಪಿ ದುಷ್ಕೃತಮ್ | ತ್ವಯಾಪ್ಯೇವಂ ವಿಶಾಲಾಕ್ಷಿ ಕ್ಷಂತವ್ಯಂ ಮಮ ದುರ್ವಚಃ |
ಕ್ಷಮ್ಯಾಃ ಪತಿಕೃತೇಃ ನಾರ್ಯಃ ಪಾತಿವ್ರತ್ಯಂ ವ್ರಜಂತಿ ತಾಃ ||24||
ಹಾಗೆಯೇ, ವಿಶಾಲಾಕ್ಷಿಯೇ ನಾನು ಹೇಳಿದ ಅನೃತವಾಗಲೀ, ಅನಿಷ್ಟ ವಚನಗಳಾಗಲೀ, ದುರ್ವಚನಗಳಾಗಲೀ ಅಥವಾ ಪಾಪವಚನಗಳಾಗಲೀ ಏನಿದ್ದರೂ ನೀನೂ ಅವನ್ನು ಕ್ಷಮಿಸಬೇಕು. ಪತಿಯ ಸಲುವಾಗಿ ಕ್ಷಮಿಸುವ ನಾರಿಯರು ಪಾತಿವ್ರತ್ಯವನ್ನು ಮೆರೆಸುತ್ತಾರೆ.
ವೈಶಂಪಾಯನಃ
ತಾಮೇವಮುಕತತ್ವ ರಾಜರ್ಷಿಸ್ತಾಮನಿಂದಿತಗಾಮಿನೀಮ್ |
ಅಂತಃಪುರಂ ಪ್ರವೇಶ್ಯೈವ ದುಷ್ಮಂತೋ ಮಹಿಷೀಂ ಪ್ರಿಯಾಮ್ ||25||
ವಾಸೋಭಿರನ್ನಪಾನೈಶ್ಚ ಪೂಜಯಿತ್ವಾ ತು ಭಾರತ |
ಸ ಮಾತರಮುಪಸ್ಥಾಯ ರಥಂತರ್ಯಾಮುವಾಚ ಹ ||26||
ಅನಿಂದಿತಗಾಮಿನಿಯಾದ ಅವಳಿಗೆ ಹೀಗೆ ಹೇಳಿ ದುಷ್ಮಂತನು ಅವಳನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗಿ, ತನ್ನ ಪ್ರಿಯಳಾದ ಮಹಿಷಿಯನ್ನು ಅನ್ನಪಾನಗಳಿಂದಲೂ, ವಸತತ್ರಲಂಕಾರಗಳಿಂದಲೂ ಸತ್ಕರಿಸಿದನು. ಅನಂತರ ತನ್ನ ತಾಯಿಯಾದ ರಥಂತರ್ಯೆಯನ್ನು ಸಮೀಪಿಸಿ ಮಾತನಾಡಿದನು.
ಮಮ ಪುತ್ರೋ ವನೇ ಜಾತಸ್ತವ ಶೋಕಪ್ರಣಾಶನಃ |
ಋಣಾದದ್ಯ ವಿಮುಕ್ತೋಽಹಮಸ್ಮಿ ಪೌತ್ರೇಣ ತೇ ಶುಭೇ ||27||
ನಿನ್ನ ಶೋಕವನ್ನು ನಾಶಮಾಡುವ ನನ್ನ ಈ ಪುತ್ರನು ಕಾಡಿನಲ್ಲಿ ಜನಿಸಿದನು. ಶುಭಳಾದವಳೇ, ನಾನು ಈ ದಿನ ನಿನ್ನ ಪೌತ್ರನ ಕಾರಣದಿಂದ ಪಿತೃಋಣದಿಂದ ಮುಕ್ತನಾಗಿದ್ದೇನೆ.
ವಿಶ್ವಾಮಿತ್ರಸುತಾ ಚೇಯಂ ಕಣ್ವೇನ ಚ ವಿವರ್ಧಿತಾ |

ಸ್ನುಷಾ ತವ ಮಹಾಭಾಗೇ ಪ್ರಸೀದಸ್ವ ಶಕುಂತಲಾಮ್ ॥28॥
ಇವಳು ವಿಶ್ವಾಮಿತ್ರರ ಮಗಳು. ಕಣ್ವರು ಬೆಳೆಸಿದ್ದಾರೆ. ಮಹಾನುಭಾವಳೇ, ಇವಳು ನಿನ್ನ ಸೊಸೆ. ಈ ಶಕುಂತಲೆಯನ್ನು ಅನುಗ್ರಹಿಸು.
ಪುತ್ರಸ್ಯ ವಚನಂ ಶ್ರುತ್ವಾ ಪೌತ್ರಂ ಸಾ ಪರಿಷಸ್ವಜೇ |
ಪಾದಯೋಃ ಪತಿತಾಂ ತತ್ರ ರಥಂತರ್ಯಾ ಶಕುಂತಲಾಮ್ ॥29॥
ಪರಿಷ್ವಜ್ಯ ಚ ಬಾಹುಭ್ಯಾಂ ಹರ್ಷಾದಶ್ರೂಣ್ಯವರ್ತಯತ್ |
ಉವಾಚ ವಚನಂ ಸತ್ಯಂ ಲಕ್ಷಯನ್ ಲಕ್ಷಣಾನಿ ಚ ॥30॥
ಮಗನ ಮಾತನ್ನು ಕೇಳಿ ರಥಂತರ್ಯೆಯು ಪೌತ್ರನನ್ನು ಆಲಿಂಗಿಸಿದಳು. ಪಾದಗಳಲ್ಲಿ ಬಿದ್ದ ಶಕುಂತಲೆಯನ್ನು ಎತ್ತಿ ಬಾಹುಗಳಿಂದ ಆಲಿಂಗಿಸಿ ಆನಂದಾಶ್ರುಗಳನ್ನು ಸುರಿಸಿದಳು. ಅವರಿಬ್ಬರ ಲಕ್ಷಣಗಳನ್ನು ಗಮನಿಸಿ ಸತ್ಯವಾದ ವಚನವನ್ನು ಹೇಳಿದಳು.
ತವ ಪುತ್ರೋ ವಿಶಾಲಾಕ್ಷಿ ಚಕ್ರವರ್ತೀ ಭವಿಷ್ಯತಿ |
ಭರ್ತಾ ತೇ ಚ ಮಹಾಭಾಗೋ ತ್ರೈಲೋಕ್ಯವಿಜಯೀ ಭವೇತ್ ॥31॥
ವಿಶಾಲಾಕ್ಷಿಯೇ, ನಿನ್ನ ಮಗನು ಚಕ್ರವರ್ತಿಯಾಗುವನು. ಮಹಾನುಭಾವಳೇ, ನಿನ್ನ ಪತಿಯು ಮೂರುಲೋಕಗಳನ್ನೂ ಗೆಲ್ಲುವನು.
ದಿವ್ಯಾನ್ ಭೋಗಾನನುಪ್ರಾಪ್ತಾ ಭವೇಸ್ತ್ವಂ ವರವರ್ಣಿನಿ |
ಏವಮುಕ್ತತ್ವ ರಥಂತರ್ಯಾ ಪರಂ ಹರ್ಷಮವಾಪ ಸಾ ॥32॥
ಸುಂದರಿಯೇ, ನೀನು ದಿವ್ಯವಾದ ಸುಖಗಳನ್ನು ಅನುಭವಿಸುವವಳಾಗು. ರಥಂತರ್ಯೆಯು ಹೀಗೆ ಹೇಳಿ ಸಂತೋಷವನ್ನು ಹೊಂದಿದಳು.
ಶಕುಂತಲಾಂ ತದಾ ರಾಜಾ ಶಾಸ್ತ್ರೋಕ್ತೇನೈವ ಕರ್ಮಣಾ |
ತತೋಽಗ್ರಮಹಿಷೀಂ ಕೃತ್ವಾ ಸರ್ವಾಭರಣಭೂಷಿತಾಮ್ ॥33॥
ಬ್ರಾಹ್ಮಣೇಭ್ಯೋ ಧನಂ ದತ್ತ್ವಾ ಸೈನಿಕಾನಾಂ ಚ ಭೂಮಿಪಃ |
ದೌಷ್ಯಂತಿಂ ಚ ತತೋ ರಾಜಾ ಪುತ್ರಂ ಶಾಕುಂತಲಂ ತದಾ |
ಭರತಂ ನಾಮತಃ ಕೃತ್ವಾ ಯೌವರಾಜ್ಯೇಽಭ್ಯಷೇಚಯತ್ ॥34॥
ಆಗ ರಾಜನು ಶಕುಂತಲೆಯನ್ನು ಸರ್ವಾಭರಣಗಳಿಂದ ಅಲಂಕರಿಸಿ ಶಾಸ್ತ್ರೋಕ್ತವಿಧಾನದಿಂದ ಪಟ್ಟಮಹಿಷಿಯನ್ನಾಗಿ ಮಾಡಿಕೊಂಡನು. ಆ ರಾಜನು ಬ್ರಾಹ್ಮಣರಿಗೂ ಮತ್ತು ಸೈನಿಕರಿಗೂ ಬಹುಧನವನ್ನು ಕೊಟ್ಟು ಶಕುಂತಲೆಯ ಮತ್ತು ತನ್ನ ಮಗನಾದ ಸರ್ವದಮನನಿಗೆ `ಭರತ' ಎಂದು ನಾಮಕರಣ ಮಾಡಿ ಯೌವರಾಜ್ಯದಲ್ಲಿ ಅಭಿಷೇಕ ಮಾಡಿದನು.
ಭರತೇ ಭಾರಮಾವೇಶ್ಯ ಕೃತಕೃತ್ಯೋಽಭವನ್ನೃಪಃ |
ತತೋ ವರ್ಷಶತಂ ಪೂರ್ಣಂ ರಾಜ್ಯಂ ಕೃತ್ವಾ ನರಾಧಿಪಃ |
ದತ್ವಾ ದಾನಾನಿ ದುಷ್ಯಂತಃ ಸ್ವರ್ಗಲೋಕಮುಪೇಯಿವಾನ್ ॥35॥
ಭರತನಿಗೆ ರಾಜ್ಯಭಾರವನ್ನು ವಹಿಸಿ ರಾಜನು ಕೃತಕೃತ್ಯನಾದನು. ಅನಂತರ ನೂರು ವರ್ಷಗಳ ಕಾಲ ರಾಜ್ಯವನ್ನು ಆಳಿ ದುಷ್ಯಂತರಾಜನು ಅನೇಕ ದಾನಗಳನ್ನು ಕೊಟ್ಟು ಸ್ವರ್ಗವನ್ನು ಸೇರಿದನು.
ವೈಶಂಪಾಯನಃ
ದುಷ್ಯಂತಾದ್ ಭರತೋ ರಾಜ್ಯಂ ಯಥಾನ್ಯಾಯಮವಾಪ ಸಃ |
ತಸ್ಯ ತತ್ಪ್ರಥಿತಂ ಚಕ್ರಂ ಪ್ರಾವರ್ತತ ಮಹಾತ್ಮನಃ ॥36॥
ಭಾಸ್ವರಂ ದಿವ್ಯಮಜಿತಂ ಲೋಕಸನ್ನಾದನಂ ಮಹತ್ |
ಸ ವಿಜಿತ್ಯ ಮಹೀಪಾಲಾಂಶ್ಚಕಾರ ವಶವರ್ತಿನಃ ॥37॥
ಭರತನು ದುಷ್ಯಂತನಿಂದ ನ್ಯಾಯಪ್ರಾಪ್ತವಾದ ರಾಜ್ಯವನ್ನು ಪಡೆದನು. ನಾರಾಯಣನ ಪ್ರಕಾಶಿಸುವ ಅಜಿತವಾದ ಲೋಕವನ್ನೆಲ್ಲಾ ಘೋಷದಿಂದ ತುಂಬುವ ಶ್ರೇಷ್ಠವಾದ ದಿವ್ಯಸುದರ್ಶನಚಕ್ರವು ಅವನ ಸೈನ್ಯದಲ್ಲಿ ಪ್ರತಿಷ್ಠಿತವಾಗಿದ್ದಿತು. ಅದರಿಂದ ಅವನು ಎಲ್ಲಾ ರಾಜರನ್ನೂ ಗೆದ್ದು ವಶಪಡಿಸಿಕೊಂಡನು.
ಸ ಚಚಾರ ಸತಾಂ ಧರ್ಮಂ ಪ್ರಾಪ್ಯ ಚಾನುತ್ತಮಂ ಯಶಃ |
ಸ ರಾಜಾ ಚಕ್ರವರ್ತ್ಯಾಸೀತ್ ಸಾರ್ವಭೌಮಃ ಪ್ರತಾಪವಾನ್ ॥38॥
ಅವನು ಸಜ್ಜನರ ಧರ್ಮವನ್ನು ಅನುಸರಿಸಿ ಶ್ರೇಷ್ಠವಾದ ಕೀರ್ತಿಯನ್ನು ಪಡೆದನು. ಅವನು ಪ್ರತಾಪಶಾಲಿಯಾದ ಚಕ್ರವರ್ತಿ ಸಾರ್ವಭೌಮನಾದನು.
ಈಜೇ ಚ ಬಹುಭಿರ್ಯಜ್ಞೈರ್ಯಥಾ ಶಕ್ರೋ ಮರುತ್ಪತಿಃ |
ಯಾಜಯಾಮಾಸ ತಂ ಕಣ್ವೋ ದಕ್ಷವದ್ ಭೂರಿದಕ್ಷಿಣಮ್ ॥39॥
ಮರುತ್ಪತಿಯಾದ ಇಂದ್ರನಂತೆ ಅನೇಕ ಯಜ್ಞಗಳಿಂದ ಭಗವಂತನನ್ನು ಆರಾಧಿಸಿದನು. ದಕ್ಷಪ್ರಜಾಪತಿಯಂತೆ ಭೂರಿದಕ್ಷಿಣೆಯನ್ನು ಕೊಡುವ ಅವನಿಗೆ ಕಣ್ವರು ಪುರೋಹಿತರಾಗಿ ಯಾಗಗಳನ್ನು ಮಾಡಿಸಿದರು.
ಶ್ರೀಮಾನ್ ಗೋವಿತತಂ ನಾಮ ವಾಜಿಮೇಧಮವಾಪ ಸಃ |
ಯಸ್ಮಿನ್ ಸಹಸ್ರಂ ಪದ್ಮಾನಾಂ ಕಣ್ವಾಯ ಭರತೋ ದದೌ ॥40॥
ಸಂಪದ್ಯುಕ್ತನಾದ ಭರತನು ಭೂಮಿಯಲ್ಲಿ ಪ್ರಸಿದ್ಧವಾದ ಅಶ್ವಮೇಧ ಎಂಬ ಯಾಗವನ್ನು ಮಾಡಿದನು. ಆ ಕಾಲದಲ್ಲಿ ಕಣ್ವರಿಗೆ ಭರತನು ಸಹಸ್ರಪದ್ಮಗಳಷ್ಟು ಸುವರ್ಣದಾನವನ್ನು ಮಾಡಿದನು.
ನೂರುಲಕ್ಷಕ್ಕೆ ಒಂದು ಕೋಟಿ. ಒಂದು ಲಕ್ಷ ಕೋಟಿಗೆ ಒಂದು ಶಂಖು. ಒಂದು ಲಕ್ಷ ಶಂಖುಗಳಿಗೆ ಒಂದು ಮಹಾಶಂಖು. ಒಂದು ಲಕ್ಷ ಮಹಾಶಂಖುಗಳಿಗೆ ಒಂದು ವೃಂದ. ಒಂದು ಲಕ್ಷ ವೃಂದಗಳಿಗೆ ಒಂದು ಮಹಾವೃಂದ. ಒಂದು ಲಕ್ಷ ಮಹಾವೃಂದಗಳಿಗೆ ಒಂದು ಪದ್ಮ.

ಹೀಗೆ ಸಹಸ್ರಪದ್ಮ ಸುವರ್ಣನಾಣ್ಯಗಳ ದಾನವನ್ನು ಕಣ್ವರಿಗೆ ಕೊಟ್ಟನು.
ಸೋऽಶ್ವಮೇಧಶತೈರೀಜೇ ಯಮುನಾಮನು ತೀರಗಃ |
ತ್ರಿಶತೈಶ್ಚ ಚ ಸರಸ್ವತ್ಯಾಂ ಗಂಗಾಯಾಮಯಜಚ್ಚತೈಃ ॥41॥
ಅವನು ಯಮುನಾ ತೀರದಲ್ಲಿ ನೂರು ಅಶ್ವಮೇಧ ಯಾಗಗಳನ್ನು ಮಾಡಿದನು. ಅವನು ಸರಸ್ವತೀ ಎನಿಸುವ ಗಂಗಾನದಿಯ ತೀರದಲ್ಲಿ ಒಟ್ಟಿಗೆ ಮುನ್ನೂರು ಅಶ್ವಗಳನ್ನು ಕಟ್ಟಿ ಅಶ್ವಮೇಧಯಾಗವನ್ನು ಮಾಡಿದನು.
ದೌಷ್ಯಂತಿರ್ಭರತೋ ವಿದ್ವಾನ್ ಯಜ್ಞೈಃ ಶಾಕುಂತಲೋ ನೃಪಃ |
ತಸ್ಮಾದ್ ಭರತವಂಶಸ್ಯ ವಿಪ್ರತಸ್ಥೇ ಮಹದ್ಯಶಃ ॥42॥
ದುಷ್ಯಂತ ಮತ್ತು ಶಕುಂತಲೆಯರ ಮಗನಾದ ಭರತನು ಜ್ಞಾನಿಯಾಗಿ ಮಾಡಿದ ಅನೇಕ ಯಜ್ಞಗಳಿಂದ ಭರತವಂಶದ ಶ್ರೇಷ್ಠವಾದ ಕೀರ್ತಿಯು  ಇನ್ನೂ ವಿಸ್ತಾರವಾಯಿತು.
ಭರತಸ್ಯ ವರಸ್ತ್ರೀಷು ಪುತ್ರಾಃ ಸಂಜಜ್ಞಿರೇ ಪೃಥಕ್ |
ನಾಭ್ಯನಂದತ್ ತದಾ ರಾಜಾ ನಾನುರೂಪಾ ಮಮೇತಿ ತಾನ್ ॥43॥
ಭರತನಿಗೆ ತನ್ನ ಮೂರು ಶ್ರೇಷ್ಠರಾದ ಪತ್ನಿಯರಲ್ಲಿ ಮೂರು ಮಕ್ಕಳು ಜನಿಸಿದರು. ಆ ಮಕ್ಕಳನ್ನು ನೋಡಿ ತನಗೆ ಸದೃಶವಾಗಿಲ್ಲ ಎಂದು ತಿಳಿದು ಭರತನು ಸಂತೋಷಪಡಲಿಲ್ಲ (ರಾಣಿಯರು ಆ ಮಕ್ಕಳನ್ನು ಕೊಂದರು ಎಂದು ಪುರಾಣಾಂತರಗಳಲ್ಲಿ ಉಲ್ಲೇಖವಿದೆ).
ತತೋ ಮಹದ್ಭಿಃ ಕ್ರತುಭಿರೀಜಾನೋ ಭರತಸ್ತದಾ |
ಲೇಭೇ ಪುತ್ರಂ ಭರದ್ವಾಜಾದ್ ಭುಮನ್ಯುಂ ನಾಮ ಭಾರತ ॥44॥
ಧರ್ಮೇ ಪ್ರಣಿಹಿತಾತ್ಮಾನಂ ಮತ್ವಾ ತಂ ಪುರುಷೋತ್ತಮಮ್ |
ತತಃ ಪುತ್ರಿಣಮಾತ್ಮಾನಂ ಮತ್ವಾ ಸ ಕುರುಪುಂಗವ |
ಭುಮನ್ಯುಂ ಭರತಃ ಪ್ರೀತೋ ಯೌವರಾಜ್ಯೇಭ್ಯಷೇಚಯತ್ ॥45॥
ಅನಂತರ ಭರತನು ದೊಡ್ಡ ಯಾಗಗಳನ್ನು ಮಾಡಿ ಭರದ್ವಾಜರ ಅನುಗ್ರಹದಿಂದ ಭುಮನ್ಯು ಎಂಬ ಮಗನನ್ನು ಪಡೆದನು. ಎಲೈ ಕುರುಪುಂಗವನೇ, ಆ ಪುರುಷಶ್ರೇಷ್ಠನಾದ ಭುಮನ್ಯುವಿಗೆ ಧರ್ಮದಲ್ಲೇ ಮನಸ್ಸಿದೆ ಎಂದು ತಿಳಿದು ತಾನು ಶ್ರೇಷ್ಠನಾದ ಪುತ್ರನನ್ನು ಪಡೆದಿದ್ದೇನೆ ಎಂದು ತಿಳಿದು ಬಹಳ ಸಂತೋಷದಿಂದ ಭುಮನ್ಯುವಿಗೆ ಯುವರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು.
ತತಸ್ತಸ್ಯ ಮಹೀಂದ್ರಸ್ಯ ವಿತಥಂ ಪುತ್ರತೋऽಭವತ್ |
ತತಃ ಸ ವಿತಥೋ ನಾಮ ಭುಮನ್ಯೋರಭವತ್ ತದಾ ॥46॥
ಅನಂತರ ಆ ರಾಜನ ಕುಲವು ಮಕ್ಕಳಿಂದ ಶೂನ್ಯವಾಯಿತು (ವಿತಥವಾಯಿತು). ಆಗ ಭುಮನ್ಯುವು ವಿತಥ ಎಂಬ ಮಗನನ್ನು ಪಡೆದನು.
ಸುಹೋತ್ರಶ್ರುತಹೋತಾರೌ ಸುಹವಿಃ ಸುಯಜುಸ್ತಥಾ |
ಪುಷ್ಕರಿಣ್ಯಾಮುಚಥ್ಯಾಯಾಂ ಭುಮನ್ಯೋರಭವನ್ ಸುತಾಃ |
ಚತ್ವಾರೋ ಭಾರತೇ ವಂಶೇ ಸುಹೋತ್ರಸ್ತಸ್ಯ ವಂಶಭಾಕ್ ॥47॥
ಭುಮನ್ಯುವಿಗೆ ತನ್ನ ಪತ್ನಿಯಾದ ಉಚಥ್ಯೆಯಲ್ಲಿ ಸುಹೋತ್ರ, ಶ್ರುತಹೋತ, ಸುಹವಿ, ಸುಯಜು ಎಂಬ ನಾಲ್ಕು ಮಕ್ಕಳು ಜನಿಸಿದರು. ಅವರಲ್ಲಿ ಸುಹೋತ್ರನು ಭರತವಂಶದ ಪ್ರವರ್ತಕನಾದನು.
ತೇಷಾಂ ಜ್ಯೇಷ್ಠಃ ಸುಹೋತ್ರಸ್ತು ರಾಜ್ಯಂ ಪ್ರಾಪ್ಯ ಮಹೀಕ್ಷಿತಾಮ್ |
ರಾಜಸೂಯಾಶ್ವಮೇಧಾದ್ಯೈರೀಜೇ ಚ ವಿವಿಧೈರ್ಮಖೈಃ ॥48॥
ಅವರಲ್ಲಿ ಜ್ಯೇಷ್ಠನಾದ ಸುಹೋತ್ರನು ಪೂರ್ವರಾಜರ ರಾಜ್ಯವನ್ನು ಪಡೆದು ರಾಜಸೂಯ, ಅಶ್ವಮೇಧ ಮೊದಲಾದ ಅನೇಕ ಯಾಗಗಳಿಂದ ಭಗವಂತನನ್ನು ಆರಾಧಿಸಿದನು.
ಸುಹೋತ್ರಃ ಪೃಥಿವೀಂ ಚೇಮಾಂ ಬುಭುಜೇ ಸಾಗಾರಾಂಬರಾಮ್ |
ಸುಹೊತ್ರೇ ತು ಮಹೀಪಾಲೇ ಮಹೀಂ ಧರ್ಮೇಣ ಶಾಸತಿ ॥49॥
ಚೈತ್ಯಯೂಪಾಂಕಿತಾ ಭೂಮಿರ್ಬಭೂವಾಥ ಸಮಂತತಃ |
ಪೂರ್ಣಾ ಹಸ್ತಿಗವಾಂ ಚೈವ ನಾನಾರತ್ನಸಮಾಕುಲಾ ॥50॥
ಸುಹೋತ್ರನು ಭೂಮಿಯನ್ನು ಆಳುತ್ತಿದ್ದಾಗ ಭೂಮಿಯು ಎಲ್ಲಾ ಕಡೆಗಳಲ್ಲಿಯೂ ದೇವಾಲಯಗಳು ಮತ್ತು ಯಾಗ ಯೂಪಗಳಿಂದ ಅಲಂಕೃತವಾಗಿದ್ದಿತು. ಭೂಮಿಯು ಗೋವುಗಳಿಂದಲೂ ಮತ್ತು ಅಶ್ವಗಳಿಂದಲೂ ಮತ್ತು ನಾನಾ ರತ್ನಗಳಿಂದಲೂ ಪೂರ್ಣವಾಗಿದ್ದಿತು.
ಸಾ ಮಮಜ್ಜೇವ ಪೃಥಿವೀ ಭೂರಿಭಾರಾವಪೀಡಿತಾ |
ಹಸ್ತ್ಯಶ್ವರಥಸಂಪೂರ್ಣಾ ಮನುಷ್ಯಕಲಿಲಾ ಭೃಶಮ್ ॥51॥
ಅಶ್ವ, ಗಜ, ರಥಗಳ ಭಾರದಿಂದಲೂ, ಮನುಷ್ಯರ ಭಾರದಿಂದಲೂ ಪೀಡಿತವಾದ ಭೂಮಿಯು ಕುಸಿದಂತೆ ಇದ್ದಿತು.
ಸಮೃದ್ಧಸಸ್ಯಸಂಪೂರ್ಣಾ ಸಹದೇವಾ ವ್ಯರೋಚತ |
ಐಕ್ಷ್ವಾಕ್ಯಾಂ ಜನಯಾಮಾಸ ಸುಹೋತ್ರಸ್ತ್ರೀನ್ ಸುತಾನ್ ನೃಪ ॥52॥
ಅಜಮೀಢಂ ಸದಾಮೀಢಂ ಪುರುಮೀಢಂ ಚ ಭಾರತ |
ಅಜಮೀಢೋ ವರಸ್ತೇಷಾಂ ತಸ್ಮಿನ್ ವಂಶಃ ಪ್ರತಿಷ್ಠಿತಃ ॥53॥
ಭೂಮಿಯು ಸಸ್ಯಸಮೃದ್ಧಿಯನ್ನು ಉಳ್ಳದ್ದಾಗಿ ಶೋಭಿಸಿತು. ಅವನು ತನ್ನ ಪತ್ನಿಯಾದ ಐಕ್ಷ್ವಾಕಿಯಲ್ಲಿ ಅಜಮೀಢ, ಸದಾಮೀಢ, ಪುರುಮೀಢ ಎಂಬ ಮೂರು ಮಕ್ಕಳನ್ನು ಪಡೆದನು. ಅವರಲ್ಲಿ ಅಜಮೀಢನು ಶ್ರೇಷ್ಠನಾದವನು ಮತ್ತು ವಂಶಧರನಾದವನು.

ಷಟ್ ಪುತ್ರಾನ್ ಸೋಽಪ್ಯಜನಯತ್ ತಿಸೃಷು ಸ್ತ್ರೀಷು ಭಾರತ |
ಋಕ್ಷಂ ಧೂಮಿನ್ಯಥೋ ನೀಲೀ ದುಷ್ಯಂತಪರಮೇಷ್ಠಿನೌ ॥54॥
ಕೇಶಿನ್ಯಜನಯಜ್ಜಹ್ನುಮುಭೌ ಚ ಜನ ರೂಷಣಮ್ |
ವಿದುಃ ಸಂವರಣಂ ಶೂರಮೃಕ್ಷಾದ್ ರಾಥಂತರೀಸುತಮ್ ॥55॥
ಅಜಮೀಢನು ತನ್ನ ಮೂವರು ಪತ್ನಿಯರಲ್ಲಿ ಆರು ಮಕ್ಕಳನ್ನು ಪಡೆದನು. ಧೂಮಿನಿಯ ಮಗ ಋಕ್ಷ, ನೀಲಿಯ ಮಗ ದುಷ್ಯಂತ ಮತ್ತು ಪರಮೇಷ್ಠಿ. ಎಲೈ ಜನಮೇಯನೇ ಜಹ್ನು, ಮತ್ತು ರೂಷಣ ಎಂಬ ಇಬ್ಬರು ಕೇಶಿನಿಯ ಮಕ್ಕಳು. ಋಕ್ಷನಿಗೆ ರಾಥಂತರಿಯಲ್ಲಿ ಶೂರನಾದ ಸಂವರಣ ಎಂಬ ಪುತ್ರನು ಜನಿಸಿದನು.
ತಥೇಮೇ ಸರ್ವಪಾಂಚಾಲಾ ದುಷ್ಯಂತಪರಮೇಷ್ಠಿನೋಃ |
ಅನ್ವಯಾಃ ಕೌಶಿಕಾಃ ಸರ್ವೇ ಜಹ್ನೋರಪಿ ಮಹಾತ್ಮನಃ ॥56॥
ಈಗಿರುವ ಎಲ್ಲಾ ಪಾಂಚಾಲರು ದುಷ್ಯಂತ ಪರಮೇಷ್ಠಿಗಳ ವಂಶಕ್ಕೆ ಸೇರಿದವರು. ಕೌಶಿಕರೆಲ್ಲರೂ ಮಹಾತ್ಮನಾದ ಜಹ್ನುವಿನ ವಂಶಕ್ಕೆ ಸೇರಿದವರು.
ಜಹ್ನುರೂಷಣಯೋರ್ಜ್ಯೇಷ್ಠಮೃಕ್ಷಮಾಹುರ್ಜನಾಧಿಪಮ್ |
ಋಕ್ಷಾತ್ ಸಂವರಣೋ ಜಜ್ಞೇ ರಾಜನ್ ವಂಶಕರಸ್ತವ ॥57॥
ಜಹ್ನುರೂಷಣರಿಗಿಂತ ಹಿರಿಯನಾದ ಋಕ್ಷನು ರಾಜನಾದನು. ಎಲೈ ರಾಜನೇ, ಋಕ್ಷನಿಂದ ನಿನ್ನ ವಂಶಕರನಾದ ಸಂವರಣನು ಜನಿಸಿದನು.
ಆರ್ಕ್ಷೇ ಸಂವರಣೇ ರಾಜ್ಯಂ ಪ್ರಶಾಸತಿ ಮಹಾತ್ಮನಿ |
ಸಂಕ್ಷಯಃ ಸುಮಹಾನಾಸೀತ್ ಪ್ರಜಾನಾಮಿತಿ ಶುಶ್ರುಮಃ ॥58॥
ಋಕ್ಷನ ಮಗನಾದ ಮಹಾತ್ಮನಾದ ಸಂವರಣನು ರಾಜ್ಯವನ್ನು ಆಳುತ್ತಿರಲು, ದೊಡ್ಡಪ್ರಮಾಣದಲ್ಲಿ ಪ್ರಜೆಗಳ ಸಂಕ್ಷಯ ಉಂಟಾಯಿತೆಂದು ಕೇಳಿದ್ದೇವೆ.
ವ್ಯಶೀರ್ಯತ ತತೋ ರಾಷ್ಟ್ರಂ ದುರ್ಭಿಕ್ಷೇಣಾರ್ದಿತಂ ತದಾ |
ಕ್ಷುನ್ಮೃತ್ಯುಭ್ಯಾಮನಾವೃಷ್ಟ್ಯಾ ವ್ಯಾಧಿಭಿಶ್ಚ ಮಹಾಬಲೈಃ ॥59॥
ಆಗ ದುರ್ಭಿಕ್ಷದಿಂದ ಪೀಡಿತವಾದ ರಾಜ್ಯವು ಒಡೆದುಹೋಯಿತು. ಜನರು ಹಸಿವೆಯಿಂದಲೂ, ಮೃತ್ಯುವಿನಿಂದಲೂ, ಅನಾವೃಷ್ಟಿಯಿಂದಲೂ, ಬಲಿಷ್ಠವಾದ ವ್ಯಾಧಿಗಳಿಂದಲೂ ಪೀಡಿತರಾದರು.
ಅಭ್ಯಯುರ್ಭರತಾಶ್ಚೈವ ಸಪತ್ನಾನಾಂ ಬಲಾನಿ ಚ |
ಚಾಲಯಂತೋ ಧೃತಿಂ ಭೀಮಾಂ ಜನಯಂತೋ
ಭೃಶಂ ಭಯಮ್ ॥60॥
ಆಗ ಭರತರು ತಮ್ಮ ದೊಡ್ಡದಾದ ಸೈನ್ಯವನ್ನು ತೆಗೆದುಕೊಂಡು ಶತ್ರುಗಳ ಧೈರ್ಯವನ್ನು ಕೆಡಿಸುತ್ತಾ ಅವರಿಗೆ ಭಯವನ್ನು ಉಂಟುಮಾಡುತ್ತಾ ಶತ್ರುಗಳ ಮೇಲೆ ದಂಡೆತ್ತಿ ಹೋದರು.
ಅಭ್ಯಯುಸ್ತಂ ಚ ಪಾಂಚಾಲಾ ವಿವೃಣ್ವಂತೋ ಬಲೈರ್ಮಹೀಮ್ |
ಅಕ್ಷೋಹಿಣೀಭಿರ್ದಶಭಿಸ್ತದಾ ತಂ ತರಸಾಽಜಯನ್ ॥61॥
ಪಾಂಚಾಲರು ಅವನಿಗೆ ಎದುರಾಗಿ ತಮ್ಮ ಸೈನ್ಯವನ್ನು ತೆಗೆದುಕೊಂಡು ಬಂದರು. ಅವರು ತಮ್ಮ ಹತ್ತು ಅಕ್ಷೋಹಿಣೀ ಸೈನ್ಯದಿಂದ ಸಂವರಣನನ್ನು ಶೀಘ್ರವಾಗಿ ಗೆದ್ದರು.
ತತಃ ಸದಾರಃ ಸಾಮಾತ್ಯಃ ಸಪುತ್ರಃ ಸಸುಹೃಜ್ಜನಃ |
ರಾಜಾ ಸಂವರಣಸ್ತಸ್ಮಾತ್ ಪಲಾಯನಪರೋಽಭವತ್ ॥62॥
ಆಗ ಸಂವರಣರಾಜನು, ಪತ್ನಿ, ಪುತ್ರರು, ಅಮಾತ್ಯರು ಹಾಗೂ ಸುಹೃಜ್ಜನರ ಜೊತೆಯಲ್ಲಿ ಆ ಸ್ಥಳದಿಂದ ಪಲಾಯನ ಮಾಡಿದನು.
ತಾಂ ಪ್ರತೀಚೀಂ ದಿಶಂ ಭೀತಾಃ ಪ್ರಯಾತಾಃ ಭರತಾಃ ಕಿಲ |
ಸಿಂಧೋರ್ನದಸ್ಯ ಮಹತೋ ಗುಹಾಯಾಂ ಪ್ರಾವಿಶಂಸ್ತದಾ ॥63॥
ಹೆದರಿದ ಎಲ್ಲಾ ಭರತರು ಪಶ್ಚಿಮ ದಿಕ್ಕಿಗೆ ಹೋಗಿ ಸಿಂಧೂನದದ ಸಮೀಪದಲ್ಲಿದ್ದ ಒಂದು ದೊಡ್ಡ ಗುಹೆಯನ್ನು ಪ್ರವೇಶಿಸಿದರು.
ಶಿವೇ ವಿಷಯಪರ್ಯಂತೇ ಪರ್ವತಸ್ಯ ಸಮೀಪತಃ |
ತತ್ರಾವಸನ್ ಪ್ರತಿಚ್ಛನ್ನಾ ಭರತಾಶ್ಚ ಭಯಾಚ್ಚಿರಮ್ ॥64॥
ದೇಶದ ಅಂಚಿನಲ್ಲಿ ಪರ್ವತದ ಸಮೀಪದಲ್ಲಿ ಇದ್ದ ಆ ಸುರಕ್ಷಿತವಾದ ಗುಹೆಯಲ್ಲಿ ವೇಷವನ್ನು ಮರೆಸಿಕೊಂಡು ಭಯಗ್ರಸ್ತರಾಗಿ ಭರತರು ಬಹುಕಾಲ ವಾಸ ಮಾಡಿದರು.
ತೇಷಾಂ ನಿವಸತಾಂ ತತ್ರ ಸಹಸ್ರಂ ಪರಿವತ್ಸರಾನ್ |
ಆಗಚ್ಛದ್ ಭಗವಾಂಸ್ತತ್ರ ವಸಿಷ್ಠೋ ಭರತಾನ್ ಪ್ರತಿ ॥65॥
ಅವರು ಅಲ್ಲಿ ಸಾವಿರ ವರ್ಷಗಳನ್ನು ಕಳೆಯುತ್ತಿರಲು ಪೂಜ್ಯರಾದ ವಸಿಷ್ಠರು ಅಲ್ಲಿಗೆ ಬಂದರು.
ತಮಾಗತಂ ಪ್ರಯತ್ನೇನ ಅಭ್ಯುತ್ಥಾಯಾಭಿವಾದ್ಯ ಚ |
ಅರ್ಘ್ಯಮಸ್ಯಾನಯನ್ ಪ್ರೀತ್ಯಾ ಆಜಮೀಢಪುರೋಗಮಾಃ ॥66॥
ಆಗತರಾಗಿ ವಸಿಷ್ಠರು ಬಂದ ಕೂಡಲೇ ಅಜಮೀಢ ಮೊದಲಾದವರು ಎದ್ದು ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳಿಂದ ಅವರನ್ನು ಪೂಜಿಸಿದರು.
ನಿವೇದ್ಯ ಸರ್ವಂ ಭರತಾಃ ಸತ್ಕೃತ್ಯೈನಮುಪಾಸತ |

ತತಃ ಸಂವರಣಃ ಶ್ರೇಷ್ಠಂ ವರಂ ವವ್ರೇ ಸ್ವಯಂ ತದಾ ॥67॥
ಭರತರು ಅವರನ್ನು ಸತ್ಕರಿಸಿ, ಅವರಿಗೆ ತಮ್ಮ ಸಂಕಟವನ್ನು ನಿವೇದಿಸಿ ಅವರಿಗೆ ಉಪಚರಿಸಿದನು. ಆಗ ಸಂವರಣರಾಜನು ತಾನೇ ಇಷ್ಟವಾದ ವರವನ್ನು ಕೇಳಿದನು.
ಪುರೋಹಿತೋ ಭವಾನ್ ನೋಽಸ್ತು ರಾಜ್ಯಾಯ ಪ್ರಯತಾಮಹೇ|
ಏವಮಸ್ತ್ವಿತಿ ತಂ ವಿಪ್ರೋ ಭಾರತಂ ಪ್ರತ್ಯುವಾಚ ಹ ॥68॥
ಪೂಜ್ಯರೇ, ತಾವು ನಮಗೆ ಪುರೋಹಿತರಾಗಬೇಕು. ನಾವು ರಾಜ್ಯವನ್ನು ಪಡೆಯಲು ಪ್ರಯತ್ನಿಸುತ್ತೇವೆ. ಹೀಗೆ ಹೇಳಿದಾಗ ವಸಿಷ್ಠರು ಹಾಗೆಯೇ ಆಗಲಿ ಎಂದು ಆ ಭಾರತನಿಗೆ ಉತ್ತರವನ್ನು ಕೊಟ್ಟರು.
ತಮಭ್ಯಷಿಂಚತ್ ಸಾಮ್ರಾಜ್ಯೇ ಸರ್ವಕ್ಷತ್ರಸ್ಯ ಪೌರವಮ್ |
ವಿಷಾಣಭೂತಂ ಸರ್ವಸ್ಯ ಪೃಥಿವ್ಯಾಮಿತಿ ನಃ ಶ್ರುತಮ್ ॥69॥
* ವಿಷಾಣಭೂತಂ= ಗೋವಿನ ಚೂಪಾದ ಕೊಂಬಿನಂತೆ ಶತ್ರುಭಯಂಕರ.
ಎಲ್ಲ ಶತ್ರುಗಳಿಗೂ ಕಂಟಕಪ್ರಾಯನಾದ ಆ ಪೌರವನಾದ ಸಂವರಣನನ್ನು ಸರ್ವಕ್ಷತ್ರಿಯಸಾಮ್ರಾಜ್ಯದಲ್ಲಿ ಎಲ್ಲ ಪೃಥಿವಿಗೂ ಅಧಿಪತಿಯಾಗಿ ಅಭಿಷೇಕಮಾಡಿದರೆಂದು ನಾವು ಕೇಳಿದ್ದೇವೆ.
ಸ ಪುತ್ರೈರ್ಭಾರತೈರ್ಜುಷ್ಟಮಧ್ಯತಿಷ್ಠತ್ ಪುರಾತನಮ್ |
ಪುನಶ್ಚಕ್ರೇ ಬಲಿಭೃತಃ ಪೃಥಿವ್ಯಾಂ ಸರ್ವಪಾರ್ಥಿವಾನ್ ॥70॥
ಅವನು ತನ್ನ ಮಕ್ಕಳಿಂದ ಒಡಗೂಡಿ ಹಿಂದಿನ ಭಾರತದ ರಾಜರು ವಾಸಿಸಿದ ಪಟ್ಟಣದಲ್ಲಿಯೇ ವಾಸಿಸಿ, ಭೂಮಿಯಲ್ಲಿದ್ದ ಎಲ್ಲ ರಾಜರನ್ನು ಗೆದ್ದು ಪುನಃ ಅವರು ಕಪ್ಪವನ್ನು ಕೊಡುವಂತೆ ಮಾಡಿದನು.
ಆಜಮೀಢೋ ಮಹಾಯಜ್ಞೈರ್ಬಹುಭಿರ್ಭೂರಿದಕ್ಷಿಣೈಃ |
ಭಾರತಃ ಪೃಥಿವೀಂ ಪ್ರಾಪ್ಯ ಪುನರೀಜೇ ಮಹಾಬಲಃ ॥71॥
ಮಹಾಬಲನಾದ ಅಜಮೀಢನು ಪುನಃ ರಾಜ್ಯವನ್ನು ಪಡೆದವನಾಗಿ ಭೂರಿದಕ್ಷಿಣೆಗಳಿಂದ ಕೂಡಿದ ಅನೇಕ ಮಹಾಯಜ್ಞಗಳಿಂದ ಭಗವಂತನನ್ನು ಆರಾಧಿಸಿದನು.
ತತಃ ಸಂವರಣಾತ್ ಸೌರೀ ತಪತೀ ಸುಷುವೇ ಕುರುಮ್ |
ರಾಜತ್ವೇ ತಂ ಪ್ರಜಾಃ ಸರ್ವಾ ಧರ್ಮಜ್ಞ ಇತಿ ವವ್ರಿರೇ ॥72॥
ಅನಂತರ ಸೂರ್ಯನ ಮಗಳಾದ ತಪತಿಯು ಸಂವರಣನಿಂದ `ಕುರು' ಎಂಬ ಮಗನನ್ನು ಪಡೆದಳು. ಅವನು ರಾಜನಾಗಿದ್ದಾಗ ಧರ್ಮಿಷ್ಠನೆಂದು ಮತ್ತು ಧರ್ಮಜ್ಞನೆಂದು ಎಲ್ಲಾ ಪ್ರಜೆಗಳೂ ಅವನನ್ನು ರಾಜನನ್ನಾಗಿ ವರಿಸಿದರು.
ಮಹಿಮ್ನಾ ತಸ್ಯ ಕುರವೋ ಲೇಭಿರೇ ಪ್ರತ್ಯಯಂ ಭೃಶಮ್ |
ತಸ್ಯ ನಾಮ್ನಾ ಚ ವಿಖ್ಯಾತಮಭೂತ್ತತ್ ಕುರುಜಾಂಗಲಮ್ |
ಕುರುಕ್ಷೇತ್ರಂ ಚ ತಪಸಾ ಪುಣ್ಯಂ ಚಕ್ರೇ ಮಹಾತಪಾಃ ॥73॥
ಕುರುವಿನ ಮಹಿಮೆಯಿಂದ ಎಲ್ಲ ಕುರುಗಳೂ ಮಹಾಕೀರ್ತಿಯನ್ನು ಹೊಂದಿದರು. `ಕುರುಜಾಂಗಲ' ಪ್ರದೇಶವು ಅವನ ಹೆಸರಿನಿಂದಲೇ ಪ್ರಖ್ಯಾತವಾಯಿತು. ಮಹಾತಪಸ್ವಿಯಾದ ಅವನು ತನ್ನ ತಪಸ್ಸಿನಿಂದ ಪವಿತ್ರವಾದ ಕುರುಕ್ಷೇತ್ರವನ್ನು ಕಟ್ಟಿದನು.
ಅಶ್ವವಂತಮಭೀಷ್ವಂತಂ ದಾಂತಂ ಚಿತ್ರರಥಂ ಮುನಿಮ್ |
ಜನಮೇಜಯಂ ಸ ವಿಖ್ಯಾತಂ ಪುತ್ರಾಂಶ್ಚಾಸ್ಯಾನುಶುಶ್ರುಮಃ |
ಪಂಚೈತಾನ್ ಮಹಿಷೀ ಪುತ್ರಾನ್ ವ್ಯಾಜಾಯತ ಮನಸ್ವಿನೀ ॥
ಕುರುವಿನ ಪತ್ನಿಯಾದ ಮನಸ್ವಿನಿಯು `ಅಶ್ವವಾನ್', `ಅಭೀಷ್ವಂತ', `ದಾಂತ', `ಚಿತ್ರರಥ' ಮತ್ತು ಋಷಿಯಾದ `ಜಯಮೇಜಯ' ಎಂಬ ಮಕ್ಕಳನ್ನು ಪಡೆದಳು.
ಅಭೀಷ್ವತಃ ಪರೀಕ್ಷಿಚ್ಚ ಶಬಲಾಶ್ವಶ್ಚ ವೀರ್ಯವಾನ್ |
ಅಧಿರಾಜೋ ವಿರಾಜಶ್ಚ ಬಲವಾಂಶ್ಚ ಮಹಾಬಲಃ ॥75॥
ಚಿತ್ರಶ್ರವಾ ಧರ್ಮಕರೋ ದಿತ್ಸ್ವಾಷ್ಟಿಶ್ಚಾಷ್ಟಮಃ ಸ್ಮೃತಃ |
ಶಬಲಾಶ್ವಾದಯಃ ಸಪ್ತ ತಥೈವಾನ್ಯೇ ಮಹಾಬಲಾಃ ॥76॥
ಅಭೀಷ್ವಂತನಿಗೆ `ಪರೀಕ್ಷಿತ' ಪರಾಕ್ರಮಶಾಲಿಯಾದ `ಶಬಲಾಶ್ವ',
`ಅಧಿರಾಜ', `ವಿರಾಜ', ಮಹಾಬಲಿಷ್ಠನಾದ `ಬಲವಾನ್', `ಚಿತ್ರಶ್ರವಾ' `ಧರ್ಮಕರ' ಮತ್ತು `ದಿತ್ಸ್ವಾಷ್ಟಿ' ಎಂಬ ಎಂಟು ಮಕ್ಕಳಾದರು. ಬೇರೆ ಪತ್ನಿಯಲ್ಲಿ ಮಹಾಬಲಿಷ್ಠರಾದ `ಶಬಲಾಶ್ವ' ಮೊದಲಾದ ಏಳು ಮಕ್ಕಳಾದರು.
ನ ತೇಷಾಮನ್ವಯಃ ಖ್ಯಾತಃ ಸರ್ವೇಷಾಂ ನಾಮತೋ ಗುಣೈಃ |
ಜನಮೇಜಯಾದಯಃ ಸಪ್ತ ತಥೈವಾನ್ಯೇ ಮಹಾರಥಾಃ ॥77॥
ಅವರೆಲ್ಲರ ವಂಶಗಳು ನಾಮದಿಂದಲೂ ಮತ್ತು ಗುಣಗಳಿಂದಲೂ ಪ್ರಖ್ಯಾತವಾಗಿಲ್ಲ. ಹಾಗೆಯೇ, ಜನಮೇಜಯ ಮೊದಲಾದ ಇನ್ನೂ ಏಳು ಮಂದಿಯೂ ಮಹಾರಥರು.
ಪರೀಕ್ಷಿತೋಽಭವನ್ ಪುತ್ರಾಃ ಸರ್ವೇ ಧರ್ಮಾರ್ಥಕೋವಿದಾಃ |
ಕಕ್ಷಸೇನೋಗ್ರಸೇನೌ ತು ಚಿತ್ರಸೇನಸ್ತಥಾ ಶಿಶುಃ |
ಇಂದ್ರಸೇನಃ ಸುಷೇಣಶ್ಚ ಭೀಮಸೇನಶ್ಚ ನಾಮತಃ ॥78॥
ಪರೀಕ್ಷಿತನಿಗೆ ಧರ್ಮಾರ್ಥಕೋವಿದರಾದ ಕಕ್ಷಸೇನ, ಉಗ್ರಸೇನ, ಚಿತ್ರಸೇನ, ಶಿಶು, ಇಂದ್ರಸೇನ, ಸುಷೇಣ ಮತ್ತು ಭೀಮಸೇನ ಎಂಬ ಮಕ್ಕಳಾದರು.

ಜನಮೇಜಯಸ್ಯ ತನಯಾಸ್ತಥಾ ಚಾಷ್ಟೌ ಮಹಾಬಲಾಃ |
ಧೃತರಾಷ್ಟ್ರಶ್ಚ ಧರ್ಮಾತ್ಮಾ ತಥೋಭೌ ಪಾಂಡುಬಾಹ್ಲಿಕೌ |
ನಿಷಧಶ್ಚ ಮಹಾತೇಜಾಸ್ತಥಾ ಜಾಂಬೂನದೋ ಬಲೀ ॥79॥
ಕುಂಡೋದರಃ ಪದಾತಿಶ್ಚ ವಸತಿಶ್ಚಾಷ್ಟಮಃ ಸ್ಮೃತಃ |
ಸರ್ವೇ ಧರ್ಮಾರ್ಥಕುಶಲಾಃ ಸರ್ವಭೂತಹಿತೇ ರತಾಃ ॥80॥
ಜನಮೇಜಯನಿಗೆ ಮಹಾಬಲಿಷ್ಠರಾದ ಎಂಟು ಮಕ್ಕಳು ಜನಿಸಿದರು. ಧರ್ಮಾತ್ಮನಾದ `ಧೃತರಾಷ್ಟ್ರ', `ಪಾಂಡು', `ಬಾಹ್ಲಿಕ', ತೇಜಸ್ವಿಯಾದ `ನಿಷಧ', ಬಲಿಷ್ಠನಾದ `ಜಾಂಬೂನದ', `ಕುಂಡೋದರ', `ಪದಾತಿ' ಮತ್ತು `ವಸತಿ' ಎಂದು ಅವರ ಹೆಸರು. ಎಲ್ಲರೂ ಸರ್ವ ಧರ್ಮಾರ್ಥಕುಶಲರೂ, ಸರ್ವಭೂತಹಿತರತರೂ ಆಗಿದ್ದರು.
(ಸಿಂಹಾವಲೋಕನ ನ್ಯಾಯದಿಂದ ಕುರುಪುತ್ರನಾದ ಜಯಮೇಜಯನ ವಂಶವನ್ನು ಇಲ್ಲಿ ಪುನಃ ಹೇಳುತ್ತಿದ್ದಾರೆ.)
ಧೃತರಾಷ್ಟ್ರೋಽಧಿ ರಾಜಾಽಭೂತ್ ತಸ್ಯ ಪುತ್ರೋಽಥ ಶುಂಡಿಕಃ |
ಹಸ್ತೀ ವಿಕತ್ಥನಃ ಕ್ರಥಃ ಕುಂಡಲಶ್ಚಾಪಿ ಪಂಚಮಃ ॥81॥
ಧೃತರಾಷ್ಟ್ರನು ರಾಜನಾದನು. ಅವನಿಗೆ `ಶುಂಡಿಕ', `ಹಸ್ತೀ', `ವಿಕತ್ಥನ', `ಕ್ರಥ' ಮತ್ತು `ಕುಂಡಲ' ಎಂಬ ಐದು ಮಕ್ಕಳು.
ಪರ್ಯಶ್ರವಸಮಿಂದ್ರಾಭಂ ಶರಭಂ ವಾಜಿನಂ ಯುಧಿ |
ಅತಿನಾರಶ್ಚ ನಹುಷಃ ತಥಾ ಶುಕಪುರಂಜಯೌ ॥82॥
ನಶಸಮೂಹಾನ್ ಅತಿಕ್ರಮ್ಯಃ ವರ್ತತೇ ಇತಿ ಅತಿನಾರಃ |
ಈ ಧೃತರಾಷ್ಟ್ರನಿಗೆ `ಅತಿನಾರ'ನೆಂದೂ ಹೆಸರು. ಅವನಿಗೆ ಇಂದ್ರನಂತಿರುವ `ಪರ್ಯಶ್ರವಸ', `ಶರಭ', `ವಾಜಿ', `ನಹುಷ' `ಶುಕ', `ಪುರಂಜಯ' ಎಂಬ ಬೇರೆ ಮಕ್ಕಳಿದ್ದರು.
ತತೋ ಧರ್ಮಭೃತಾಂ ಶ್ರೇಷ್ಠಃ ಪರ್ಯಶ್ರವಸ ಉಚ್ಯತೇ |
ಋಷಿಂ ಪುಣ್ಯಕೃತಾಂ ಶ್ರೇಷ್ಠಂ ತಮೇವ ಪರಮಂ ವಿದುಃ ॥83॥
ಪರ್ಯಶ್ರವಸನನ್ನು ಧರ್ಮಿಷ್ಠರಲ್ಲಿ ಶ್ರೇಷ್ಠನೆಂದು ಕರೆಯುತ್ತಾರೆ. ಅವನನ್ನು ಪುಣ್ಯಶೀಲರಾದ ಋಷಿಗಳಲ್ಲಿ ಶ್ರೇಷ್ಠನಾದವನೆಂದು ತಿಳಿಯುತ್ತಾರೆ.
ಭೀಮಸೇನಾನ್ಮಹೇಷ್ವಾಸಾತ್ ಪ್ರತೀಪಃ ಸಮಪದ್ಯತ |
ಪ್ರತೀಪಸ್ಯ ತ್ರಯಃ ಪುತ್ರಾ ಜಜ್ಞಿರೇ ಭರತರ್ಷಭ ॥84॥
ದೇವಾಪಿಃ ಶಂತನುಶ್ಚೈವ ಬಾಹ್ಲೀಕಶ್ಚ ಮಹಾಯಶಾಃ |
ದೇವಾಪಿಸ್ತು ಪ್ರವವ್ರಾಜ ತೇಷಾಂ ಧರ್ಮಪರಾಯಣಃ ॥85॥
ಶಂತನುಶ್ಚ ಮಹೀಂ ಲೇಭೇ ಬಾಹ್ಲೀಕಶ್ಚ ಮಹಾಬಲಃ |
ಭರತಸ್ಯಾನ್ವಯೇ ರಾಜನ್ ಸತ್ತ್ವವಂತೋ ಮಹಾರಥಾಃ |
ಬಭೂವುರ್ಬ್ರಹ್ಮಕಲ್ಪಾಶ್ಚ ಬಹವೋ ರಾಜಸತ್ತಮಾಃ ॥86॥
ಪರೀಕ್ಷಿತನ ಮಗನಾದ ಧನುರ್ಧಾರಿಯಾದ ಭೀಮಸೇನನಿಗೆ `ಪ್ರತೀಪ' ಎಂಬ ಮಗನು ಜನಿಸಿದನು. ಭರತಶ್ರೇಷ್ಠನೇ, ಪ್ರತೀಪನಿಗೆ `ದೇವಾಪಿ', `ಶಂತನು' ಮತ್ತು ಮಹಾಕೀರ್ತಿವಂತನಾದ `ಬಾಹ್ಲೀಕ' ಎಂಬ ಮೂರು ಮಕ್ಕಳು. ಅವರಲ್ಲಿ ಧರ್ಮಪರಾಯಣನಾದ ದೇವಾಪಿಯು ಅರಮನೆಯನ್ನು ಬಿಟ್ಟು ಹೊರಟು ಹೋದನು. ಶಂತನುವು ಮತ್ತು ಮಹಾಬಲಿಷ್ಠನಾದ ಬಾಹ್ಲೀಕನು ರಾಜ್ಯವನ್ನು ಪಡೆದರು. ಎಲೈ ರಾಜನೇ, ಭರತವಂಶದಲ್ಲಿ ಸತ್ಯವಂತರೂ, ಬ್ರಹ್ಮಕಲ್ಪರೂ ಆದ ಮಹಾರಥರಾದ ಅನೇಕ ರಾಜಶ್ರೇಷ್ಠರು ಉಂಟಾದರು.
ಏವಂವಿಧಾಽಶ್ಚಾಪ್ಯಪರೇ ದೇವಕಲ್ಪಾ ಮಹಾರಥಾಃ |
ಅನ್ವವಾಯೇ ಮಹಾರಾಜ ಐಲವಂಶವಿವರ್ಧನಾಃ ॥87॥
ಎಲೈ ಮಹಾರಾಜನೇ, ಇಂತಹ ದೇವಕಲ್ಪರಾದ ಬೇರೆ ಮಹಾರಥರು ಪುರೂರವನ ವಂಶವಿವರ್ಧಕರಾದವರು ಅವನ ವಂಶದಲ್ಲಿ ಬಂದರು.
ಗಂಗಾದ್ವಾರಂ ಸಮಾಸಾದ್ಯ ದೀಕ್ಷಿತೋ ಜನಮೇಜಯ |
ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ |
ಪುನರೀಜೇ ಮಹಾಯಜ್ಞೈಃ ಸಮಾಪ್ತವರದಕ್ಷಿಣೈಃ ॥88॥
ಎಲೈ ಜನಮೇಜಯನೇ, ಭರತನು ಗಂಗಾದ್ವಾರಕ್ಕೆ ಹೋಗಿ, ದೀಕ್ಷಿತನಾಗಿ ಸಹಸ್ರ ಅಶ್ವಮೇಧಯಾಗಗಳನ್ನು ನೂರು ವಾಜಪೇಯ ಯಾಗಗಳನ್ನು ಮಾಡಿದನು. ಪುನಃ ಶ್ರೇಷ್ಠವಾದ ದಕ್ಷಿಣೆಗಳನ್ನು ಕೊಟ್ಟು, ಅನೇಕ ಮಹಾಯಜ್ಞಗಳಿಂದ ಭಗವಂತನನ್ನು ಆರಾಧಿಸಿದನು.
(ಈ ಶ್ಲೋಕಗಳಿಂದ ಪ್ರಾರಂಭಿಸಿ ಪುನಃ ಸಿಂಹಾವಲೋಕನ ನ್ಯಾಯದಿಂದ ಭರತನ ಚರಿತ್ರೆಯನ್ನೇ ಹೇಳುತ್ತಿದ್ದಾರೆ.)
ಅಗ್ನಿಷ್ಟೋಮಾತಿರಾತ್ರಾಣಾಂ ಮುಖ್ಯಾನಾಂ ಸೋಽಯಜತ್ ಪುನಃ |
ವಾಜಪೇಯೇಷ್ಟಿಸತ್ರಾಣಾಂ ಸಹಸ್ರೈಶ್ಚ ಸುಸಂಭೃತೈಃ ॥89॥
ಇಷ್ಟ್ವಾ ಶಾಕುಂತಲೋ ರಾಜಾ ತರ್ಪಯಿತ್ವಾ ದ್ವಿಜಾನ್ ಧನೈಃ |
ಪುನಃ ಸಹಸ್ರಂ ಪದ್ಮಾನಾಂ ಕಣ್ವಾಯ ಭರತೋ ದದೌ ॥90॥
ಅವನು ಪುನಃ ಅಗ್ನಿಷ್ಟೋಮ ಮತ್ತು ಅತಿರಾತ್ರ ಯಾಗಗಳನ್ನು ಮಾಡಿದನು. ವಾಜಪೇಯಗಳನ್ನು, ಇಷ್ಟಿಗಳನ್ನು ಮತ್ತು ಸತ್ರ ಯಾಗಗಳನ್ನು ಒಳ್ಳೆಯ ಸಾಮಗ್ರಿಗಳಿಂದ ಸಹಸ್ರ ಸಂಖ್ಯೆಯಲ್ಲಿ ಮಾಡಿದನು. ಶಾಂಕುತಲನಾದ ಭರತನು ಹೀಗೆ ಯಾಗಗಳನ್ನು ಮಾಡಿ,

ಬ್ರಾಹ್ಮಣರನ್ನು ಧನದಿಂದ ಸಂತೋಷ ಪಡಿಸಿ ಪುನಃ ಸಹಸ್ರಪದ್ಮ ಸುವರ್ಣನಾಣ್ಯಗಳನ್ನು ಕಣ್ವರಿಗೆ ಕೊಟ್ಟನು.
ಜಾಂಬೂನದಸ್ಯ ಶುದ್ಧಸ್ಯ ಕನಕಸ್ಯ ಮಹಾಯಶಾಃ |
ಯಸ್ಯ ಯೂಪಾಃ ಶತವ್ಯಾಮಾಃ ಪರಿಣಾಹೇಽಥ ಕಾಂಚನಾಃ ॥91॥
ಸಹಸ್ರವ್ಯಾಮಮುದ್ವಿದ್ಧಾಃ ಸೇಂದ್ರೈರ್ದೇವೈಃ ಸಮುಚ್ಛ್ರಿತಾಃ |
ಸ್ವಲಂಕೃತಾ ಭ್ರಾಜಮಾನಾಃ ಸರ್ವರತ್ನೈರ್ಮನೋರಮೈಃ ॥92॥
ಅವನ ಯಾಗದ ಯೂಪಸ್ತಂಭಗಳು ನೂರು ಮಾರು ಅಳತೆಯುಳ್ಳವಾಗಿ ಜಂಬೂನದಿಯ ಸಂಬಂಧದಿಂದ
ಶುದ್ಧಕಾಂಚನಮಯವಾಗಿದ್ದವು. ಸಹಸ್ರ ಮಾರುಗಳಷ್ಟು ಎತ್ತರವಿದ್ದ ಆ ಯೂಪಗಳನ್ನು ಎಲ್ಲ ಮನೋರಮವಾದ ರತ್ನಗಳಿಂದ
ಅಲಂಕೃತವಾಗಿ ಶೋಭಿಸುವ ಇಂದ್ರಾದಿ ದೇವತೆಗಳು ಎತ್ತಿದರು.
ಹಿರಣ್ಯಂ ದ್ವಿರದಾನಶ್ವಾನ್ ಮಹಿಷೋಷ್ಟ್ರಗಜಾವಿಕಮ್ |
ದಾಸೀದಾಸಂ ಧನಂ ಧಾನ್ಯಂ ಸವತ್ಸಾಂ ಗಾಂ ಪಯಸ್ವಿನೀಮ್ |
ಭೂಮಿಂ ಯೂಪಸಹಸ್ರಾಂಕಾಂ ದದೌ ಕಣ್ವಾಯ ದಕ್ಷಿಣಾಮ್ ॥93॥
ಭರತನು ಹಿರಣ್ಯವನ್ನೂ ಗಜಗಳು, ಅಶ್ವಗಳು, ಮಹಿಷಗಳು, ಉಷ್ಟ್ರಗಳು, ಆಡುಗಳು ಮತ್ತು ಕುರಿಗಳು, ದಾಸಿಯರು, ದಾಸರು,
ಧನ-ಧಾನ್ಯಗಳು ಹಾಲನ್ನು ಕೊಡುವ ವತ್ಸ ಸಹಿತವಾದ ಗೋವುಗಳು, ಸಹಸ್ರ ಯೂಪಗಳಿಂದ ಸಹಿತವಾದ ಭೂಮಿ, ಇವೆಲ್ಲವನ್ನೂ
ಕಣ್ವರಿಗೆ ದಕ್ಷಿಣೆಯಾಗಿ ಕೊಟ್ಟನು.
ಬಹೂನಾಂ ಬ್ರಹ್ಮಕಲ್ಪಾನಾಂ ದಕ್ಷಿಣಾಮಮಿತಾಂ ದದೌ |
ಗ್ರಾಮಾನ್ ಗೃಹಾಣಿ ಕ್ಷೇತ್ರಾಣಿ ಕೋಟಿಶಃ ಶತಶಸ್ತಥಾ ॥94॥
ಬ್ರಹ್ಮಕಲ್ಪರಾದ ಅನೇಕ ಬ್ರಾಹ್ಮಣರಿಗೆ ಅಮಿತವಾದ ದಕ್ಷಿಣೆಯನ್ನೂ, ಗ್ರಾಮಗಳನ್ನೂ, ಗೃಹಗಳನ್ನೂ, ಕ್ಷೇತ್ರಗಳನ್ನೂ, ನೂರರ
ಸಂಖ್ಯೆಯಲ್ಲಿ, ಕೋಟಿಯ ಸಂಖ್ಯೆಯಲ್ಲಿ ಕೊಟ್ಟನು.
ಭರತಾದ್ ಭಾರತೀ ಕೀರ್ತಿರ್ಯೇನೇದಂ ಭಾರತಂ ಕುಲಮ್ |
ಭರತಸ್ಯಾನ್ವಯೇ ಜಾತಾ ದೇವಕಲ್ಪಾ ಮಹಾರಥಾಃ |
ಬಹವೋ ಬ್ರಹ್ಮಕಲ್ಪಾಶ್ಚ ಬಹವೋ ರಾಜಸತ್ತಮಾಃ ॥95॥
ಭರತನಿಂದ ಈ ಭಾರತ ವಂಶವು, ಅದರ ಕೀರ್ತಿಯು ಹರಡಿತು. ಭರತನ ವಂಶದಲ್ಲಿ ದೇವಕಲ್ಪರಾದ, ಬ್ರಹ್ಮಕಲ್ಪರಾದ, ಅನೇಕ
ರಾಜಶ್ರೇಷ್ಠರು ಜನಿಸಿದರು.
ತೇಷಾಮಪರಿಮೇಯಾನಿ ನಾಮಧೇಯಾನಿ ಸರ್ವಶಃ |
ತೇಷಾಂ ಕುಲೇ ಯಥಾ ಮುಖ್ಯಾನ್ ಕೀರ್ತಯಿಷ್ಯಾಮಿ ಭಾರತ |
ಮಹಾಭಾಗಾನ್ ದೇವಕಲ್ಪಾನ್ ಸತ್ಯಾರ್ಜವಪರಾಯಣಾನ್ ॥96॥
ಅವರಿಗೆ ಅನೇಕಾನೇಕ ಹೆಸರುಗಳಿವೆ. ನಾನು ಆ ಕುಲದಲ್ಲಿ ಜನಿಸಿದ ದೇವಕಲ್ಪರಾದ, ಸತ್ಯಾರ್ಜವಪರಾಯಣರಾದ
ಮಹಾನುಭಾವರಾದ ಮುಖ್ಯರಾದವರ ವಿಷಯವನ್ನಷ್ಟೇ ಹೇಳುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ತ್ರಿನವತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ಮೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ
ಅಧ್ಯಾಯ-11
ತದ್ವಂಶಜಃ ಕುರುರ್ನಾಮ ಪ್ರತೀಪೋಽಭೂತ್ ತದನ್ವಯೇ |
ಪ್ರತೀಪಸ್ಯಾಭವನ್ ಪುತ್ರಾಸ್ತ್ರಯಸ್ತ್ರೇತಾಗ್ನಿವರ್ಚಸಃ ॥5॥
ಭರತನ ವಂಶದಲ್ಲಿ ಜನಿಸಿದವ ಕುರು. ಅವನ ವಂಶದಲ್ಲಿ ಪ್ರತೀಪ ಜನಿಸಿದ. ಅವನಿಗೆ ಮೂರು ಅಗ್ನಿಗಳಂತೆ ವರ್ಚಸ್ಸುಳ್ಳ ಮೂರು
ಮಂದಿ ಮಕ್ಕಳು ಹುಟ್ಟಿದರು.
ದೇವಾಪಿರಥ ಬಾಹ್ಲೀಕೋ ಗುಣಜ್ಯೇಷ್ಠಶ್ಚ ಶಂತನುಃ |
ತ್ವಗ್ದೋಷಯುಕ್ತೋ ದೇವಾಪಿರ್ಜಗಾಮ ತಪಸೇ ವನಮ್ ॥6॥
ದೇವಾಪಿ, ಬಾಹ್ಲೀಕ ಗುಣದಲ್ಲಿ ಶ್ರೇಷ್ಠನಾದ ಶಂತನು ಇವರೇ ಆ ಮೂರು ಮಕ್ಕಳು. ಇವರಲ್ಲಿ ದೇವಾಪಿ ಚರ್ಮರೋಗ
ಯುಕ್ತನಾದ್ದರಿಂದ ತಪಸ್ಸಿಗಾಗಿ ಕಾಡಿಗೆ ಹೋದ.
ವಿಷ್ಣೋಃ ಪ್ರಸಾದಾತ್ ಸಕೃತೇ ಯುಗೇ ರಾಜಾ ಭವಿಷ್ಯತಿ |
ಪುತ್ರಿಕಾಪುತ್ರತಾಂ ಯಾತೋ ಬಾಹ್ಲೀಕೋ ರಾಜಸತ್ತಮಃ ॥7॥
ದೇವಾಪಿ ವಿಷ್ಣುವಿನ ಅನುಗ್ರಹದಿಂದ ಮುಂದೆ ಕೃತಯುಗದಲ್ಲಿ ರಾಜನಾಗಲಿದ್ದಾನೆ. ಬಾಹ್ಲೀಕ ರಾಜಶ್ರೇಷ್ಠನಾದರೂ
ಪುತ್ರಿಕಾಪುತ್ರನೆನಿಸಿದ.
ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪ್ರಿಯಃ |
ವಾಯುನಾ ಚ ಸಮಾವಿಷ್ಟೋ ಮಹಾಬಲಸಮನ್ವಿತಃ ॥8॥
ಬಾಹ್ಲೀಕ ಹಿಂದೆ ಹಿರಣ್ಯಕಶಿಪುವಿನ ಪುತ್ರನಾದ ಪ್ರಹ್ಲಾದ. ಭಗವಂತನಿಗೆ ಪ್ರಿಯ. ವಾಯುವಿನ ಆವೇಶಯುಕ್ತನಾಗಿದ್ದು

ಮಹಾಬಲದಿಂದ ಕೂಡಿದವ.
ಯೇನೈವ ಜಾಯಮಾನೇನ ತರಸಾ ಭೂರ್ವಿದಾರಿತಾ |
ಭೂಭಾರಕ್ಷಪಣೇ ವಿಷ್ಣೋರಂಗತಾಮಾಪ್ತುಮೇವ ಸಃ ॥9॥
ಪ್ರತೀಪಪುತ್ರತಾಮಾಪ್ಯ ಬಾಹ್ಲೀಕೇಷ್ವಭವತ್ ಪತಿಃ |
ರುದ್ರೇಷು ಪತ್ರತಾಪಾಖ್ಯಃ ಸೋಮದತ್ತೋಽಸ್ಯ ಚಾತ್ಮಜಃ ॥10॥
ಬಾಹ್ಲೀಕ ಹುಟ್ಟುತ್ತಿದ್ದಂತೆಯೆ ಭೂಮಿ ಬಲವಾಗಿ ಬಿರಿಯುವಂತೆ ಮಾಡಿದ್ದ. ಭೂಭಾರ ಕಳೆಯುವುದರಲ್ಲಿ ಶ್ರೀಕೃಷ್ಣನಿಗೆ ಸಹಾಯಕನೆನಿಸಿಕೊಳ್ಳುವುದಕ್ಕಾಗಿಯೆ ಅವನು ಪ್ರತೀಪನ ಮಗನಾಗಿ ಹುಟ್ಟಿ ಬಾಹ್ಲೀಕ ದೇಶದಲ್ಲಿ ರಾಜನಾದ. ರುದ್ರರಲ್ಲಿ ಒಬ್ಬನಾದ ಪತ್ರತಾಪನೆಂಬುವನು ಇವನಿಗೆ ಸೋಮದತ್ತನೆಂಬ ಮಗನಾಗಿ ಜನಿಸಿದ.
ಅಜೈಕಪಾದಹಿರ್ಬುಧ್ನಿರ್ವಿರೂಪಾಕ್ಷ ಇತಿ ತ್ರಯಃ |
ರುದ್ರಾಣಾಂ ಸೋಮದತ್ತಸ್ಯ ಬಭೂವುಃ ಪ್ರಥಿತಾಃ ಸುತಾಃ ॥11॥
ವಿಷ್ಣೋರೇವಾಂಗತಾಮಾಪ್ತುಂ ಭೂರಿರ್ಭೂರಿಶ್ರವಾಃ ಶಲಃ |
ಶಿವಾದಿ ಸರ್ವರುದ್ರಾಣಾಮಾವೇಶಾದ್ ವರತಸ್ತಥಾ ॥12॥
ಭೂರಿಶ್ರವಾ ಅತಿಬಲಸ್ತತ್ರಾಸೀತ್ ಪರಮಾಸ್ತ್ರವಿತ್ |
ತದರ್ಥಂ ಹಿ ತಪಶ್ಚೀರ್ಣಂ ಸೋಮದತ್ತೇನ ಶಂಭವೇ ॥13॥
ರುದ್ರರಲ್ಲಿ ಅಜೈಕಪಾತ್ ಅಹಿರ್ಬುಧ್ನಿ ವಿರೂಪಾಕ್ಷ ಎಂಬ ಮೂವರು ಶ್ರೀಕೃಷ್ಣನಿಗೆ ಸಹಾಯ ಮಾಡಲು ಭೂರಿ ಭೂರಿಶ್ರವ ಶಲ ಎಂದು ಮೂವರು ಪ್ರಖ್ಯಾತರಾದ ಮಕ್ಕಳಾಗಿ ಸೋಮದತ್ತನಿಂದ ಜನಿಸಿದರು. ಅವರಲ್ಲಿ ಭೂರಿಶ್ರವನು, ಶಿವ ಮುಂತಾದ ಎಲ್ಲ ರುದ್ರರ ಆವೇಶದಿಂದಲೂ ವರದಿಂದಲೂ ಅತ್ಯಂತ ಬಲಿಷ್ಠನಾಗಿದ್ದ. ಮಹಾ ಅಸ್ತ್ರಜ್ಞನಾಗಿದ್ದ. ಅದಕ್ಕಾಗಿ ಸೋಮದತ್ತ ಶಿವನ ಕುರಿತು ತಪಸ್ಸು ಮಾಡಿದ್ದ.
ದತ್ತೋ ವರಶ್ಚ ತೇನಾಸ್ಯ ತ್ವತ್ಪ್ರತೀಪಾಭಿಭೂತಿಕೃತ್ |
ಬಲವೀರ್ಯಗುಣೋಪೇತೋ ನಾಮ್ನಾ ಭೂರಿಶ್ರವಾಃ ಸುತಃ ॥14॥
ಭವಿಷ್ಯತಿ ಮಯಾವಿಷ್ಟೋ ಯಜ್ಞಶೀಲ ಇತಿ ಸ್ಮ ಹ |
ತೇನ ಭೂರಿಶ್ರವಾ ಜಾತಃ ಸೋಮದತ್ತಸುತೋ ಬಲೀ ॥15॥
`ನನ್ನಿಂದ ಆವಿಷ್ಟನಾಗಿದ್ದು ನಿನ್ನ ವಿರೋಧಿಗಳನ್ನು ಅಣಗಿಸಬಲ್ಲವ, ಬಲವೀರ್ಯ ಗುಣಗಳಿಂದ ಕೂಡಿದವ, ಯಜ್ಞಗಳನ್ನು ಮಾಡುವ ಸ್ವಭಾವದವ. ಇಂಥ ಭೂರಿಶ್ರವನೆಂಬ ಹೆಸರಿನ ಪುತ್ರ ನಿನಗೆ ಜನಿಸುವನು' ಎಂದು ಶಿವ ಸೋಮದತ್ತನಿಗೆ ವರ ನೀಡಿದ್ದ. ಅದರಿಂದ ಭೂರಿಶ್ರವ ಸೋಮದತ್ತನಿಗೆ ಮಗನಾಗಿ ಜನಿಸಿದ.
ಪೂರ್ವೋದಧೇಸ್ತೀರಗತೇಽಬ್ಜ ಸಂಭವೇ
ಗಂಗಾಯುತಃ ಪರ್ವಣಿ ಘೂರ್ಣಿತೋಽಬ್ಧಿಃ |
ಅವಾಕ್ಷಿಪತ್ ತಸ್ಯ ತನೌ ನಿಜೋದ
ಬಿಂದುಂ ಶಶಾಪೈನಮಥಾಬ್ಜಯೋನಿಃ ॥16॥
ಒಮ್ಮೆ ಒಂದು ಹುಣ್ಣಿಮೆ ದಿನ ಚತುರ್ಮುಖ ಬ್ರಹ್ಮ ಪೂರ್ವ ಸಮುದ್ರತೀರದಲ್ಲಿದ್ದಾಗ ಗಂಗಾಸಹಿತವಾದ ಉಕ್ಕೇರಿದ್ದ. ಅದರಿಂದ ಆತ ಬ್ರಹ್ಮನ ಮೈಯಲ್ಲಿ ತನ್ನ ನೀರಹನಿಯನ್ನು ಎರಚಿದ. ಆಗ ಬ್ರಹ್ಮ ಅವನನ್ನು ಶಾಂತನಾಗೆಂದು ಶಪಿಸಿದ.
ಮಹಾಭಿಷಜ್ ನಾಮ ನರೇಶ್ವರಸ್ತ್ವಂ ಭೂತ್ವಾ ಪುನಃ ಶಂತನುನಾಮಧೇಯಃ|
ಜನಿಷ್ಯಸೇ ವಿಷ್ಣುಪದೀ ತಥೈಷಾ ತತ್ರಾಪಿ ಭಾರ್ಯಾ ಭವತೋ ಭವಿಷ್ಯತಿ॥
ನೀನು ಮೊದಲಿಗೆ ಭೂಮಿಯಲ್ಲಿ ಮಹಾಭಿಷಕ್ ಎಂಬ ರಾಜನಾಗಿ ಹುಟ್ಟಿ ಪುನಃ ಶಂತನು ಎಂಬ ಹೆಸರಿನವನಾಗಿಯೂ ಜನಿಸುವಿ. ಗಂಗೆ ದೇವತಾ ಶರೀರದಲ್ಲಿ ಶಂತನು ಜನ್ಮದಲ್ಲಿ ನಿನಗೆ ಪತ್ನಿಯಾಗುವಳು.
ಶಾಂತೋ ಭವೇತ್ಯೇವ ಮಯೋದಿತಸ್ತ್ವಂ
ತನುತ್ವಮಾಪ್ತೋಽಥ ತತಶ್ಚ ಶಂತನುಃ |
ಇತೀರಿತಃ ಸೋಽಪಿ ನೃಪೋ ಬಭೂವ
ಮಹಾಭಿಷಜ್ ನಾಮ ಹರೇಃ ಪದಾಶ್ರಯಃ ॥18॥
`ಶಾಂತನಾಗೆಂದು ನಾನು ಶಪಿಸಿದ್ದರಿಂದ ನೀನು ಶರೀರದಲ್ಲಿ ಶಾಂತನಾದೆ. ಕುಗ್ಗಿದೆ. ಅದರಿಂದ ಶಾಂತತನು. ಶಂತನುವಾಗಿಯೂ ಹುಟ್ಟುವಿ' ಹೀಗೆ ಶಾಪ ಹೊಂದಿದ ವರುಣ ಮಹಾಭಿಷಕ್ ರಾಜನಾಗಿ ಅವತರಿಸಿದ, ಹರಿಪಾದವನ್ನು ಆಶ್ರಯಿಸಿದ.
ಸ ತತ್ರ ಭುಕತ್ವ ಚಿರಕಾಲಮುರ್ವೀಂ
ತನುಂ ವಿಹಾಯಾಪ ಸದೋ ವಿಧಾತುಃ |
ತತ್ರಾಪಿ ತಿಷ್ಠನ್ ಸುರವೃಂದಸನ್ನಿಧೌ
ದದರ್ಶ ಗಂಗಾಂ ಶ್ಲಥಿತಾಂಬರಾಂ ಸ್ವಕಾಮ್ ॥19॥
ಮಹಾಭಿಷಕ್ ಆ ಜನ್ಮದಲ್ಲಿ ಭೂಮಿಯನ್ನು ಬಹುಕಾಲ ಆಳಿ ಶರೀರ ತ್ಯಾಗ ಮಾಡಿ ಬ್ರಹ್ಮನ ಆಸ್ಥಾನವನ್ನು ಸೇರಿದ. ಅಲ್ಲಿರುವಾಗ ಆತನೊಮ್ಮೆ ದೇವತೆಗಳ ಗುಂಪಿನ ಬಳಿ ಇದ್ದು ತನ್ನ ಪತ್ನಿಯಾದ ಗಂಗೆಯನ್ನು ಅವಳು ಉಟ್ಟ ಬಟ್ಟೆ ಗಾಳಿಗೆ ಸರಿದಿದ್ದಾಗ ನೋಡಿದ.
ಆವಾಙ್ಮುಖೇಷು ದ್ಯುಸದಸ್ಸುರಾಗಾ-
ನ್ನಿರೀಕ್ಷಮಾಣಂ ಪುನರಾತ್ಮ ಸಂಭವಃ |
ಉವಾಚ ಭೂಮೌ ನೃಪತಿರ್ಭವಾಶು

ಶಪ್ತೋ ಯಥಾ ತ್ವಂ ಹಿ ಪುರಾ ಮಯ್ಯೈವ ॥20॥
ದೇವತೆಗಳೆಲ್ಲರೂ ನಗ್ನಸ್ತ್ರೀಯನ್ನು ನೋಡಕೂಡದೆಂದು ಮುಖವನ್ನು ತಗ್ಗಿಸಿ ಕುಳಿತಿದ್ದಾಗ ಮಹಾಭಿಷಕ್ ತನ್ನ ಪತ್ನಿ ಎಂದು ಅನುರಾಗದಿಂದ ಪುನಃ ಪುನಃ ನೋಡಿದ. ಆಗ ಬ್ರಹ್ಮ ಶಪಿಸಿದ- `ಹಿಂದೆ ನಾನು ನಿನಗೆ ಶಾಪ ಕೊಟ್ಟಂತೆಯೆ ಭೂಮಿಯಲ್ಲಿ ರಾಜನಾಗಿ ಬೇಗನೆ ಜನಿಸು'.
ಇತೀರಿತಸ್ತತ್ ಕ್ಷಣತಃ ಪ್ರತೀಪಾತ್
ಬಭೂವ ನಾಮ್ನಾ ನೃಪತಿಃ ಸ ಶಂತನುಃ |
ಅವಾಪ್ಯ ಗಂಗಾಂ ದಯಿತಾಂ ಸ್ವಕೀಯಾಂ
ತಯಾ ಮುಮೋದಾಬ್ದ ಗಣಾನ್ ಬಹೂಂಶ್ಚ ॥21॥
ಹೀಗೆ ಶಪ್ತನಾದ ಮಹಾಭಿಷಕ್ ತಕ್ಷಣವೆ ಪ್ರತೀಪನಿಂದ ಶಂತನು ನಾಮಕನಾಗಿ ಜನಿಸಿದ. ತನ್ನ ಪ್ರೀತಿಯ ಮಡದಿಯಾದ ಗಂಗೆಯನ್ನೇ ಹೊಂದಿ ಅವಳೊಡನೆ ಬಹುವರ್ಷಗಳ ಕಾಲ ಸುಖಪಟ್ಟ.

ತೊಂಭತ್ನಾಲ್ಕನೆಯ ಅಧ್ಯಾಯ
(ಭರತವಂಶದಲ್ಲಿ ಮಹಾಭಿಷಜನ ಜನನ. ಅವನಿಗೆ, ಗಂಗೆಗೆ ಬ್ರಹ್ಮಶಾಪ, ಗಂಗೆ ಮತ್ತು ಅಷ್ಟವಸುಗಳ ಸಂವಾದ.)
ವೈಶಂಪಾಯನಃ
ಇಕ್ಷ್ವಾಕೂಣಾಮನ್ಯತಮೋ ರಾಜಾऽऽಸೀತ್ ಪೃಥಿವೀಪತಿಃ |
ಮಹಾಭಿಷಗಿತಿ ಖ್ಯಾತಃ ಸತ್ಯವಾಕ್ ಸತ್ಯವಿಕ್ರಮಃ ॥1॥
ಇಕ್ಷ್ವಾಕುವಂಶದಲ್ಲಿ ಸತ್ಯಪರಾಕ್ರಮನೂ, ಸತ್ಯನುಡಿಯುಳ್ಳವನೂ ಆದ ಪ್ರಸಿದ್ಧನಾದ `ಮಹಾಭಿಷಕ್' ಎಂಬ ರಾಜನು ಬಂದನು.
ಸೋऽಶ್ವಮೇಧಸಹಸ್ರೇಣ ಶತಸಂಖ್ಯೇನ ಭಾರತ |
ತೋಷಯಾಮಾಸ ದೇವೇಂದ್ರಂ ಸ್ವರ್ಗಂ ಲೇಭೇ ಚ ಸ ಪ್ರಭುಃ ॥2॥
ಎಲೈ ಭಾರತನೇ ಅವನು ನೂರು ಸಾವಿರ ಅಶ್ವಮೇಧಯಾಗವನ್ನು ಮಾಡಿ, ದೇವೇಂದ್ರನನ್ನು ಸಂತೋಷಪಡಿಸಿ, ಸ್ವರ್ಗವನ್ನು ಪಡೆದನು.
ತತಃ ಕದಾಚಿದ್ ಬ್ರಹ್ಮಾಣಮುಪಾಸಾಂಚಕ್ರಿರೇ ಸುರಾಃ |
ತಥಾ ರಾಜರ್ಷಯಃ ಸರ್ವೇ ಸ ಚ ರಾಜಾ ಮಹಾಭಿಷಕ್ ॥3॥
ಅನಂತರ ಒಮ್ಮೆ ಬ್ರಹ್ಮದೇವರ ಬಳಿಯಲ್ಲಿ ದೇವತೆಗಳೂ, ಎಲ್ಲಾ ರಾಜರ್ಷಿಗಳೂ ಬ್ರಹ್ಮದೇವರನ್ನು ಓಲೈಸುತ್ತಿದ್ದರು. ಮಹಾಭಿಷಕ್ ರಾಜನೂ ಕೂಡ ಅಲ್ಲಿಗೆ ಬಂದಿದ್ದನು.
ಅಥ ಗಂಗಾ ಸರಿಚ್ಛ್ರೇಷ್ಠಾ ಸಮುಪಾಯಾತ್ ಪಿತಾಮಹಮ್ |
ತಸ್ಯಾ ವಾಸಃ ಸಮುದ್ಧೂತಂ ಮಾರುತೇನ ಶಶಿಪ್ರಭಮ್ ॥4॥
ಅನಂತರ ಶ್ರೇಷ್ಠನದಿಯಾದ ಗಂಗೆಯು ಬ್ರಹ್ಮದೇವರ ಸಭೆಗೆ ಬಂದಳು. ಅವಳ ಶುಭ್ರವಾದ ವಸ್ತ್ರವು ಗಾಳಿಯಿಂದ ಮೇಲಕ್ಕೆದ್ದಿತು.
ತತೋऽಭವನ್ ಸುರಗಣಾಃ ಸಹಸಾऽವಾಙ್ಮುಖಾಸ್ತದಾ |
ಮಹಾಭಿಷಕ್ ತು ರಾಜರ್ಷಿರಶಂಕೋ ದೃಷ್ಟವಾನ್ ನದೀಮ್ ॥5॥
ಆಗ ಎಲ್ಲಾ ದೇವತೆಗಳು ಒಮ್ಮೆಲೇ, ಮುಖವನ್ನು ಕೆಳಗೆ ಮಾಡಿದರು. ರಾಜರ್ಷಿಯಾದ ಮಹಾಭಿಷಕ್ ಆದರೂ ಸಂಕೋಚವಿಲ್ಲದೇ ತನ್ನ ಪತ್ನಿಯಾದ ನದಿಯನ್ನು ನೋಡಿದನು.
ಸೋऽಪಧ್ಯಾತೋ ಭಗವತಾ ಬ್ರಹ್ಮಣಾ ಸ ಮಹಾಭಿಷಕ್ |
ಉಕ್ತಶ್ಚ ಜಾತೋ ಮರ್ತ್ಯೇಷು ಪುನರ್ಲೋಕಾನವಾಪ್ಸ್ಯಸಿ ॥6॥
ಬ್ರಹ್ಮದೇವರಿಗೆ ಅಪಚಾರವನ್ನು ಮಾಡಿದ ಅವನು ಪೂಜ್ಯರಾದ ಬ್ರಹ್ಮದೇವರಿಂದ ಮನುಷ್ಯಯೋನಿಯಲ್ಲಿ ಅವತಾರವನ್ನು ಮಾಡಿ, ಪುನಃ ನಿನ್ನ ಲೋಕವನ್ನು ಹೊಂದುವಿ ಎಂದು ಶಾಪವನ್ನು ಪಡೆದನು.
ಮನುಷ್ಯೇಷು ಚಿರಂ ಸ್ಥಿತ್ವಾ ಲೋಕಾನ್ ಪ್ರಾಪ್ಸ್ಯಸಿ ಶಾಶ್ವತಾನ್ |
ಯಯಾ ಹೃತಮನಾಶ್ಚಾಸಿ ಗಂಗಯಾ ತ್ವಂ ಸುದುರ್ಮತೇ ॥7॥
ಸಾ ತು ತೇ ಮಾನುಷೇ ಲೋಕೇ ವಿಪ್ರಿಯಾಣ್ಯಾಚರಿಷ್ಯತಿ |
ಯದಾ ತೇ ಭವಿತಾ ಮನ್ಯುಸ್ತದಾ ಶಾಪಾದ್ ವಿಮೋಕ್ಷ್ಯಸೇ ॥8॥
ಮನುಷ್ಯಲೋಕದಲ್ಲಿ ಬಹುಕಾಲವಿದ್ದು ಅನಂತರ ನಿನ್ನ ಶಾಶ್ವತವಾದ ಲೋಕವನ್ನು ಪಡೆಯುತ್ತೀಯೆ. ಎಲೈ ದುರ್ಮತಿಯೇ, ಯಾವ ಗಂಗೆಯು ನಿನ್ನ ಮನಸ್ಸನ್ನು ಅಪಹರಿಸಿದಳೋ, ಅವಳೂ ಸಹ ಭೂಮಿಯಲ್ಲಿ ಹುಟ್ಟಿ, ನಿನಗೆ ಅಪ್ರಿಯವಾದ ಕೆಲಸಗಳನ್ನು ಮಾಡುವಳು. ನಿನಗೆ ಅವಳ ಮೇಲೆ ಕೋಪವು ಬಂದಾಗ, ಶಾಪದಿಂದ ಮೋಕ್ಷವನ್ನು ಪಡೆಯುವಿ (ಎಂದು ಶಾಪವನ್ನು ಕೊಟ್ಟನು)
ಸ ಚಿಂತಯಿತ್ವಾ ನೃಪತಿರ್ನೃಪಾನ್ ಸರ್ವಾಂಸ್ತಪೋಧನಾನ್ |
ಪ್ರತೀಪಂ ರೋಚಯಾಮಾಸ ಪಿತರಂ ಭೂರಿವರ್ಚಸಮ್ ॥9॥
ಹೀಗೆ ಶಾಪವನ್ನು ಪಡೆದ ಮಹಾಭಿಷಕ್ ರಾಜನು ತಪೋಧನರಾದ ಎಲ್ಲ ರಾಜರನ್ನೂ ವಿಮರ್ಶಿಸಿ, ಮಹಾವರ್ಚಸ್ವಿಯಾದ ಪ್ರತೀಪನು ತನ್ನ ತಂದೆಯಾಗಬೇಕೆಂದು ಬಯಸಿದನು.
ಸಾ ಮಹಾಭಿಷಜಂ ದೃಷ್ಟ್ವಾ ನದೀ ಧೈರ್ಯಾಚ್ಚ್ಯುತಂ ನೃಪಮ್ |

ತಮೇವ ಮನಸಾ ಧ್ಯಾಯಂತ್ಯುಪಾವೃತ್ತಾ ಸರಿದ್ವರಾ ॥10॥
ಆ ಸರಿಶ್ರೇಷ್ಠಳಾದ ಗಂಗೆಯಾದರೋ, ಬ್ರಹ್ಮದೇವರ ಸಭೆಯಲ್ಲಿ ಮಹಾಭಿಷಜನು ಮನಸ್ಸಿನ ಸ್ಥೈರ್ಯವನ್ನು ಕಳೆದುಕೊಂಡದ್ದನ್ನು ಗಮನಿಸಿ, ಅವನನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಹಿಂದಿರುಗಿದಳು.
ಸಾ ಚ ವಿಧ್ವಸ್ತಸಂಕಾಶಾನ್ ಕಶ್ಮಲಾಭಿಹತಾನ್ ಭುವಿ |
ದದರ್ಶ ಪಥಿ ಗಚ್ಛಂತೀ ವಸೂನ್ ದೇವಾನ್ ದಿವೌಕಸಃ ॥11॥
ಅವಳು ದಾರಿಯಲ್ಲಿ ನಡೆಯುತ್ತಾ ತೇಜೋಹೀನರಾದ, ಮಲಿನತೆಯಿಂದ ಕೂಡಿದ್ದ ದೇವಲೋಕದ ನಿವಾಸಿಗಳಾದ ಅಷ್ಟವಸುಗಳನ್ನು ಭೂಮಿಯಲ್ಲಿ ನೋಡಿದಳು.
ತಥಾರೂಪಾಂಶ್ಚ ತಾನ್ ದೃಷ್ಟ್ವಾ ಪಪ್ರಚ್ಛ ಸರಿತಾಂ ವರಾ |
ಕಿಮಿದಂ ನಷ್ಟರೂಪಾಃ ಸ್ಥ ಕಚ್ಚಿತ್ ಕ್ಷೇಮಂ ದಿವೌಕಸಾಮ್ |
ಕಿಮರ್ಥಂ ಮನುಜಾ ಭೂಮೌ ನಿಪತಿಷ್ಯಂತಿ ದುಃಖಿತಾಃ ॥12॥
ಅಂತಹ ಸ್ಥಿತಿಯಲ್ಲಿದ್ದ ಅವರನ್ನು ನೋಡಿ, ಗಂಗೆಯು ಪ್ರಶ್ನಿಸಿದಳು. ಇದೇನು ನಿಮ್ಮ ರೂಪವನ್ನು ಕಳೆದುಕೊಂಡಿದ್ದೀರಿ ದೇವತೆಗಳಿಗೆ ಕ್ಷೇಮವಷ್ಟೇ ನೀವು ಏಕೆ ದುಃಖಿತರಾಗಿ ದೀನರಾಗಿ ಭೂಮಿಗೆ ಬೀಳುತ್ತಿರುವಿರಿ ?
ವೈಶಂಪಾಯನಃ
ತಾಮೂಚುರ್ವಸವೋ ದೀನಾಃ ಶಪ್ತಾ ವೈ ಸ್ಮೋ ಮಹಾನದಿ |
ಅಸ್ವಯಂಕೃತಯಾ ಬುದ್ಧ್ಯಾ ವಸಿಷ್ಠೇನ ಮಹಾತ್ಮನಾ ॥13॥
ಆಗ ದೀನರಾದ ವಸುಗಳು ಮಹಾನದಿಯೇ ನಾವು ಮಹಾತ್ಮರಾದ ವಸಿಷ್ಠರಿಂದ ಅವರಿಗೆ ವಶವಾಗದ ಬುದ್ಧಿಯಿಂದ ಶಪ್ತರಾಗಿದ್ದೇವೆ. (ವಸುಗಳಿಗೆ ಶಾಪವನ್ನು ಕೊಟ್ಟವರು ವಸಿಷ್ಠರಲ್ಲಿದ್ದ ಬ್ರಹ್ಮದೇವರು. ಆದ್ದರಿಂದಲೇ ಅವರ ಬುದ್ಧಿಯು ವಸಿಷ್ಠರಿಗೆ ಅಧೀನವಾಗಿರಲಿಲ್ಲ.)
ವಯಂ ಹಿ ಸಹಸಾ ಸರ್ವೇ ಪ್ರಚ್ಛನ್ನಂ ನಾವಬುಧ್ಮಹಿ |
ಸಂಧ್ಯಾಂ ವಸಿಷ್ಠಮಾಸೀನಂ ತಮಭ್ಯನುಸೃತಾಃ ಪುರಾ ॥14॥
ನಾವೆಲ್ಲರೂ ತಮ್ಮ ರೂಪವನ್ನು ಮರೆಸಿಕೊಂಡು ಸಂಧ್ಯೆಯನ್ನು ಆಚರಿಸುತ್ತಿದ್ದ ವಸಿಷ್ಠರೆಂದು ತಿಳಿಯದೇ ಹಿಂದೆ ಒಮ್ಮೆ ಅವರ ಬಳಿಗೆ ಹೋಗಿ, ಅವಮಾನ ಮಾಡಿದೆವು.
ತೇನ ಕೋಪಾದ್ ವಯಂ ಶಪ್ತಾ ಯೋನೌ ಸಂಭವತೇತಿ ಹ |
ನ ತಚ್ಛಕ್ಯಮಕರ್ತುಂ ಚ ಯದುಕ್ತಂ ಬ್ರಹ್ಮವಾದಿನಾ ॥15॥
ಅವರು ಕೋಪದಿಂದ `ಮನುಷ್ಯಯೋನಿಯಲ್ಲಿ ಸಂಭವಿಸಿ' ಎಂದು ಶಾಪವನ್ನು ಕೊಟ್ಟರು. ಆ ಬ್ರಹ್ಮಜ್ಞಾನಿಗಳು ಆಡಿದ ಮಾತನ್ನು ಪರಿಹರಿಸಲು ಸಾಧ್ಯವಿಲ್ಲ.
ತ್ವಮಸ್ಮಾನ್ ಮಾನುಷೀ ಭೂತ್ವಾ ಸೂಷ್ವ ಪುತ್ರಾನ್ ವಸೂನ್ ಭುವಿ|
ನ ಮಾನುಷೀಣಾಂ ಜಠರಂ ಪ್ರವಿಶಾಮ ಕಥಂಚನ ॥16॥
ನೀನು ಮನುಷ್ಯಲೋಕದಲ್ಲಿ ಬಂದು ನಮ್ಮೆಲ್ಲರನ್ನು ಮಕ್ಕಳನ್ನಾಗಿ ಪಡೆ. ನಾವು ಮನುಷ್ಯಸ್ತ್ರೀಯರ ಜಠರದಲ್ಲಿ ಪ್ರವೇಶಿಸಲಾರೆವು.
ತಾನುವಾಚ ವಸೂನ್ ಗಂಗಾ ತಥಾಽಸ್ತು ಸಮಯಾದಿತಿ |
ಮರ್ತ್ಯೇಷು ಪುರುಷಶ್ರೇಷ್ಠಃ ಕೋ ವಾ ಭರ್ತಾ ಭವಿಷ್ಯತಿ ॥17॥
ಗಂಗೆಯು ವಸುಗಳನ್ನು ಕುರಿತು ಒಂದು ಷರತ್ತಿನ ಮೇಲೆ ಹಾಗೆಯೇ ಆಗಲಿ ಎಂದು ಹೇಳಿ ಮನುಷ್ಯರಲ್ಲಿ ಯಾವ ಶ್ರೇಷ್ಠಪುರುಷನು ನನ್ನ ಪತಿಯಾಗುವನು ಎಂದು ಕೇಳಿದಳು.
ವಸವಃ
ಪ್ರತೀಪಸ್ಯ ಸುತೋ ವಿದ್ವಾನ್ ಶಂತನುರ್ನಾಮ ಧಾರ್ಮಿಕಃ |
ತ್ವತ್ಕೃತೇ ಮಾನುಷೇ ಜಾತಃ ಸ ನಃ ಕರ್ತಾ ಭವಿಷ್ಯತಿ ॥18॥
ಪ್ರತೀಪನ ಪುತ್ರನಾದ ಧಾರ್ಮಿಕನೂ, ಜ್ಞಾನಿಯೂ ಆದ ಶಂತನು ನಿನ್ನ ಸಲುವಾಗಿ ಮನುಷ್ಯಲೋಕದಲ್ಲಿ ಅವತರಿಸಿದ್ದಾನೆ. ಅವನು ನಮಗೆ ತಂದೆಯಾಗುವನು.
ಗಂಗಾ
ಮಮಾಪ್ಯೇವಂ ಮನೋ ಜಾತಂ ಯಥಾ ಮಾಂ ವದಥಾನಘಾಃ |
ಪ್ರಿಯಂ ತಸ್ಯ ಕರಿಷ್ಯಾಮಿ ವಚನಂ ಚ ದಿವೌಕಸಾಮ್ ॥19॥
ಎಲೈ ಅನಘರೇ, ನೀವು ಹೇಳುತ್ತಿರುವಂತೆ ನನಗೂ ಮನಸ್ಸಾಗಿದೆ. ನಾನು ಅವನಿಗೆ ಹಿತವನ್ನು ಮಾಡಿ, ದೇವತೆಗಳ ಕಾರ್ಯವನ್ನು ಸಾಧಿಸುತ್ತೇನೆ.
ವಸವಃ
ಜಾತಾನ್ ಕುಮಾರಾನ್ ಸ್ವಾನಪ್ಸು ಪ್ರಕ್ಷೇಪ್ತುಂ ವೈ ತ್ವಮರ್ಹಸಿ |
ಯಥಾ ನ ಚಿರಕಾಲಂ ನೋ ನಿಷ್ಕೃತಿಃ ಸ್ಯಾತ್ ತ್ರಿಲೋಕಗೇ ॥20॥
ತ್ರಿಪಥಗಾಮಿನಿಯೇ ನಾವು ಹುಟ್ಟಿದ ಕೂಡಲೇ ನಿಮ್ಮ ಮಕ್ಕಳಾಗುವ ನಮ್ಮನ್ನು ಗಂಗೆಯ ನೀರಿನಲ್ಲಿ ನೀನು ಹಾಕಬೇಕು. ನಾವು ಚಿರಕಾಲ ಮನುಷ್ಯಲೋಕದಲ್ಲಿರಲು ಬಯಸುವುದಿಲ್ಲ.
ಗಂಗಾ
ಏವಮೇವ ಕರಿಷ್ಯಾಮಿ ಪುತ್ರಸ್ತಸ್ಯ ವಿಧೀಯತಾಮ್ |

ನಾಸ್ಯ ಮೋಘಂ ಭವೇತ್ ಕರ್ಮ ಪುತ್ರಹೇತೋಃ ಕೃತಂ ಮಯಾ ॥
ಹಾಗೆಯೇ ಮಾಡುವೆನು. ಆದರೆ ಅವನಿಗೆ ಒಬ್ಬ ಮಗನನ್ನು ಒದಗಿಸಿ. ಮಗನನ್ನು ಪಡೆಯುವ ಸಲುವಾಗಿ, ನನ್ನ ಸಂಬಂಧವನ್ನು ಮಾಡಿದ ಅವನ ಕ್ರಿಯೆಯು ವ್ಯರ್ಥವಾಗಬಾರದು.
ವಸವಃ
ತುರ್ಯಾಂಶಂ ವೈ ಪ್ರದಾಸ್ಯಾಮೋ ವೀರ್ಯಸ್ಯೈಕೈಕಶೋ ವಯಮ್ |
ತೇನ ವೀರ್ಯೇಣ ಪುತ್ರಸ್ತೇ ಭವಿತಾ ತಸ್ಯ ಚೇಪ್ಸಿತಃ ॥22॥
ನ ಸಂಪತ್ಸ್ಯತಿ ಮರ್ತ್ಯೇಷು ಪುನಸ್ತಸ್ಯ ಚ ಸಂತತಿಃ |
ಅಪುತ್ರಸ್ತು ನರವ್ಯಾಘ್ರೋ ಭವಿಷ್ಯತಿ ಸುತಸ್ತವ ॥23॥
ನಾವು ನಮ್ಮಲ್ಲಿ ಪ್ರತಿಯೊಬ್ಬರ ಸಾಮರ್ಥ್ಯದ ನಾಲ್ಕನೆಯ ಒಂದು ಭಾಗವನ್ನು ಅವನಿಗೆ ಕೊಡುವೆವು. ಆ ಸಾಮರ್ಥ್ಯದಿಂದ ನಿನಗೆ ಇಷ್ಟವಾದ ಮಗನು ಉಂಟಾಗಲಿ. ಭೂಲೋಕದಲ್ಲಿ ಅವನ ಸಂತತಿಯು ಮುಂದುವರೆಯುವುದಿಲ್ಲ. ನಿನ್ನ ಮಗನು ಪುತ್ರಹೀನನಾಗಿ ನರಶಾರ್ದೂಲನಾಗುವನು.
ವೈಶಂಪಾಯನಃ
ಏವಂ ಚ ಸಮಯಂ ಕೃತ್ವಾ ಗಂಗಯಾ ವಸವಶ್ಚ ತೇ |
ಜಗ್ಮುಃ ಪ್ರಹೃಷ್ಟಮನಸೋ ಯಥಾಸಂಕಲ್ಪಮಂಜಸಾ ॥24॥
ಹೀಗೆ ವಸುಗಳು ಗಂಗೆಯ ಜೊತೆಯಲ್ಲಿ ತಾವು ಸಂಕಲ್ಪಿಸಿದಂತೆ ಒಳ್ಳೆಯ ನಿಬಂಧನೆಯನ್ನು ಮಾಡಿಕೊಂಡು ಸಂತೋಷಗೊಂಡ ಮನಸ್ಸಿನಿಂದ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರ್ನವತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ದ್ವಿಚತ್ವಾಂರಿಂಶೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ನಾಲ್ಕನೆಯ ಅಧ್ಯಾಯ ಮುಗಿಯಿತು
*****
ತೊಂಭತ್ತೈದನೆಯ ಅಧ್ಯಾಯ
(ಪ್ರತೀಪ-ಗಂಗೆಯರ ಪ್ರಸಂಗ, ಶಂತನುವಿನ ಜನ್ಮ. ಅವನಿಗೆ ರಾಜ್ಯಾಭಿಷೇಕ, ಮತ್ತು ಗಂಗೆಯ ಜೊತೆಯಲ್ಲಿ ಸಂವಾದ.)
ವೈಶಂಪಾಯನಃ
ಪ್ರತೀಪಸ್ತು ತತೋ ರಾಜಾ ಸರ್ವಭೂತಹಿತೇ ರತಃ |
ನಿಷಸಾದ ಮಹಾಬಾಹುರ್ಗಂಗಾತೀರೇ ಜಿತೇಂದ್ರಿಯಃ ॥1॥
ಒಮ್ಮೆ ಜಿತೇಂದ್ರಿಯನಾದ, ಸರ್ವಭೂತಹಿತರತನಾದ, ಮಹಾಬಾಹುವಾದ ಪ್ರತೀಪರಾಜನು ಗಂಗೆಯ ದಡದಲ್ಲಿ ಕುಳಿತಿದ್ದನು.
ತಸ್ಯ ರೂಪಗುಣೋಪೇತಾ ಲೋಭನೀಯತಮಾಕೃತಿಃ |
ಉತ್ತೀರ್ಯ ಗಂಗಾ ಸಲಿಲಾದುದ್ವೇಶಂ ಸ್ತ್ರೀ ಸಮಭ್ಯಗಾತ್ ॥2॥
ಸುಂದರವಾದ ಮತ್ತು ಲೋಭನೀಯವಾದ ಆಕೃತಿಯುಳ್ಳ ಗಂಗೆಯು ಒಳ್ಳೆಯ ರೂಪದಿಂದಲೂ ಗುಣದಿಂದಲೂ ಕೂಡಿದವಳಾಗಿ, ಸ್ತ್ರೀರೂಪವನ್ನು ಧರಿಸಿ, ನೀರನ್ನು ದಾಟಿ ದಡಕ್ಕೆ ನಡೆದುಕೊಂಡು ಬಂದಳು.
ಅಧೀಯಾನಸ್ಯ ರಾಜರ್ಷೇಸ್ತಸ್ಯ ಸಾ ದೇವವರ್ಣಿನೀ |
ದಕ್ಷಿಣಂ ಸಾಲಸಂಕಾಶಮೂರುಂ ಭೇಜೇ ಶುಭಾನನಾ ॥3॥
ದೇವಸುಂದರಿಯಾದ ಶುಭಾನನೆಯಾದ ಅವಳು ಏನನ್ನೋ ಚಿಂತಿಸುತ್ತಿದ್ದ ರಾಜರ್ಷಿಯ ಸಾಲವೃಕ್ಷದ ಬುಡದಂತೆ ವಿಸ್ತಾರವಾಗಿದ್ದ ಬಲತೊಡೆಯ ಮೇಲೆ ಕುಳಿತುಕೊಂಡಳು.
ಪ್ರತೀಪಸ್ತು ಮಹೀಪಾಲಸ್ತಾಮುವಾಚ ಮನಸ್ವಿನೀಮ್ |
ವಾಕ್ಯಂ ವಾಕ್ಯವಿದಾಂ ಶ್ರೇಷ್ಠೋ ಧರ್ಮನಿಶ್ಚಯತತ್ತ್ವವಿತ್ |
ಕರವಾಣಿ ಕಿಂ ತೇ ಕಲ್ಯಾಣಿ ಯದರ್ಥಂ ತ್ವಮಿಹಾಭ್ಯಗಾಃ ॥4॥
ಮಾತನಾಡುವರಲ್ಲಿ ಶ್ರೇಷ್ಠನಾದ ಮತ್ತು ಸರಿಯಾದ ಧರ್ಮಜ್ಞಾನವನ್ನು ಹೊಂದಿದ್ದ ಆ ಪ್ರತೀಪರಾಜನು ಆ ಧೈರ್ಯಶಾಲಿನಿಯನ್ನು ಕುರಿತು ಕಲ್ಯಾಣಿ, ನಿನಗೆ ಏನು ಉಪಕಾರ ಮಾಡಲಿ ? ಏತಕ್ಕಾಗಿ ನೀನು ಇಲ್ಲಿಗೆ ಬಂದೆ ಎಂದು ಕೇಳಿದನು.
ಗಂಗಾ
ಕಾಮಯೇ ತ್ವಾಂ ನರವ್ಯಾಘ್ರ ಸ ಕೌರವ್ಯ ಭಜಸ್ವ ಮಾಮ್ |
ತ್ಯಾಗಃ ಕಾಮಯಮಾನಾನಾಂ ಸ್ತ್ರೀಣಾಂ ಸದ್ಭಿರ್ವಿಗರ್ಹಿತಃ ॥5॥
ಕುರುಕುಲದಲ್ಲಿ ಜನಿಸಿದ ಕುರುಶ್ರೇಷ್ಠನೇ, ನಾನು ನಿನ್ನ ಮೇಲಿನ ಕಾಮದಿಂದ ನಿನ್ನ ಬಳಿಗೆ ಬಂದಿದ್ದೇನೆ. ರಾಜರು ಕಾಮದಿಂದ ಬಂದ ಸ್ತ್ರೀಯರನ್ನು ತಿರಸ್ಕರಿಸುವುದನ್ನು ಸಜ್ಜನರು ನಿಂದಿಸುತ್ತಾರೆ.
ಪ್ರತೀಪಃ
ನಾಹಂ ಕಾಮಾತ್ ಸ್ತ್ರಿಯಂ ಭದ್ರೇ ಗಚ್ಛೇಯಂ ವರವರ್ಣಿನಿ |
ನ ಚಾಸವರ್ಣಾಂ ಕಲ್ಯಾಣಿ ಧರ್ಮ್ಯಂ ತದ್ ವಿದ್ಧಿ ಮೇ ವ್ರತಮ್ ॥
ಸುಂದರಿಯೇ, ಮತ್ತು ಮಂಗಳಸ್ವರೂಪಳೇ, ನಾನು ಕಾಮದಿಂದ ಯಾವ ವನಿತೆಯ ಸಂಗವನ್ನೂ ಮಾಡುವುದಿಲ್ಲ. ಕಲ್ಯಾಣಿಯೇ, ಕ್ಷತ್ರಿಯಳಲ್ಲದವಳ ಜೊತೆಯಲ್ಲಿಯೂ ಸಂಗವನ್ನು ಮಾಡುವುದಿಲ್ಲ. ಇದು ಧರ್ಮಬದ್ಧವಾದ ವ್ರತವೆಂದು ತಿಳಿ.
ಗಂಗಾ

ನಾಶ್ರೇಯಸ್ಯಸ್ಮಿ ನಾಗಮ್ಯಾ ನ ವಕ್ತವ್ಯಾ ಕಥಂಚನ |
ಮಾಂ ವೈ ಭಜಸ್ವ ನೃಪತೇ ದೇಹಿ ಕಾಮಂ ವರಸ್ತ್ರಿಯಃ ॥7॥
ರಾಜನೇ, ನಾನು ನೀಚಳಲ್ಲ, ಸಂಗಕ್ಕೆ ಅಯೋಗ್ಯಳೂ ಅಲ್ಲ, ನಿಂದನೀಯಳೂ ಅಲ್ಲ. ವರವನಿತೆಯಾಗಿ ಕಾಮವನ್ನು ಕೇಳುತ್ತಿರುವ ನನ್ನನ್ನು ಸ್ವೀಕರಿಸು.
ಪ್ರತೀಪಃ
ಸಮಯಾತೀತಮೇತದ್ ವೈ ಯನ್ಮಾಂ ಚೋದಯಸಿ ಪ್ರಿಯಮ್ |
ಅನ್ಯಥಾ ಪ್ರತಿಪನ್ನಂ ಮಾಂ ಕ್ಷಿಣುಯಾದ್ ಧರ್ಮವಿಪ್ಲವಃ ॥8॥
ಪ್ರಾಪ್ಯ ದಕ್ಷಿಣಮೂರುಂ ಮೇ ಸಮಾಶ್ಲಿಷ್ಟಾ ವರಾಂಗನೇ |
ಅಪತ್ಯಾನಾಂ ಸ್ನುಷಾಣಾಂ ಚ ಆಸನಂ ವಿದ್ಧಿ ತಚ್ಛುಭೇ ॥9॥
ನೀನು ನನಗೆ ಏನು ಒತ್ತಾಯ ಮಾಡುತ್ತಿದ್ದೀಯೊ ಅಂತಹ ನಿನಗೆ ಪ್ರಿಯವಾದ ವಿಷಯವು ಶಾಸ್ತ್ರಮರ್ಯಾದೆಯನ್ನು ಮೀರಿದೆ. ನಾನು ಬೇರೆ ರೀತಿ ಭಾವಿಸಿದರೆ, ಧರ್ಮನಾಶವುಂಟಾಗಿ, ಅದು ನನ್ನನ್ನು ನಾಶಮಾಡುತ್ತದೆ. ವರಾಂಗಿನಿಯೇ, ನೀನು ನನ್ನ ಬಲ ತೊಡೆಯನ್ನು ಏರಿ ನನ್ನನ್ನು ಆಲಂಗಿಸಿದೆ. ಶುಭಳಾದವಳೇ, ಆ ಸ್ಥಾನವು ಮಕ್ಕಳು ಮತ್ತು ಸೊಸೆಯರಿಗೆ ಸೇರಿದ್ದೆಂದು ತಿಳಿ.
ಸವ್ಯೋರುಭಾರ್ಯಾಮಿನೀಭಾಗಸ್ತ್ವಯಾ ಸಮ್ಯಗ್ ವಿವರ್ಜಿತಃ |
ತಸ್ಮಾದಹಂ ನಾಚರಾಮಿ ತ್ವಯಿ ಕಾಮಂ ತು ಕಾಮತಃ ॥10॥
ಎಡತೊಡೆಯು ಪತ್ನಿಯ ಭಾಗ. ನೀನು ಅದನ್ನು ತ್ಯಜಿಸಿದ್ದಿಯೆ. ಆದ್ದರಿಂದ ಮನಸ್ಸಿಗೆ ಬಂದಂತೆ ನಾನು ನಿನ್ನ ಜೊತೆಯಲ್ಲಿ ಕಾಮವನ್ನು ಆಚರಿಸುವುದಿಲ್ಲ.
ಸ್ನುಷಾ ಮೇ ಭವ ಕಲ್ಯಾಣಿ ಪುತ್ರಾರ್ಥಂ ತ್ವಾಂ ವೃಣೋಮ್ಯಹಮ್ |
ಸ್ನುಷಾಪಾರ್ಶ್ವಂ ಹಿ ವಾಮೋರು ತ್ವಮಾಗಮ್ಯ ಸಮಾಶ್ರಿತಾ ॥11॥
ಕಲ್ಯಾಣಿಯೇ, ನೀನು ನನ್ನ ಸೊಸೆಯಾಗು, ನನ್ನ ಮಗನ ಸಲುವಾಗಿ, ನಿನ್ನನ್ನು ಸ್ವೀಕರಿಸುತ್ತೇನೆ. ವಾಮೋರುವೇ, ನೀನು ಬಂದು ಸೊಸೆಯ ಸ್ಥಾನವನ್ನು ಆಶ್ರಯಿಸಿದೆಯಷ್ಟೆ?
ಗಂಗಾ
ಏವಮಪ್ಯಸ್ತು ಧರ್ಮಜ್ಞ ಸಂಯೋಗಃ ಸ್ಯಾತ್ ಸುತೇನ ತೇ |
ತ್ವದ್ಭಕ್ತ್ಯೈವ ಗಮಿಷ್ಯಾಮಿ ಪ್ರಖ್ಯಾತಂ ಭಾರತಂ ಕುಲಮ್ ॥12॥
ಧರ್ಮಜ್ಞನೇ, ಹಾಗೆಯೇ ಆಗಲಿ. ನಿನ್ನ ಮಗನ ಜೊತೆಯಲ್ಲಿಯೇ ಸಂಯೋಗವನ್ನು ಹೊಂದುತ್ತೇನೆ. ನಿನ್ನ ಮೇಲಿನ ಪ್ರೀತಿ-ಗೌರವಗಳಿಂದಲೇ ನಾನು ಪ್ರಖ್ಯಾತವಾದ ಭಾರತಕುಲವನ್ನು ಪ್ರವೇಶಿಸುವೆನು.
ಪೃಥಿವ್ಯಾಂ ಪಾರ್ಥಿವಾ ಯೇ ಚ ತೇಷಾಂ ಯೂಯಂ ವರಾ ಗುಣೈಃ|
ಗುಣಾ ನ ಹಿ ಮಯಾ ಶಕ್ಯಾ ವಕ್ತುಂ ವರ್ಷಶತೈರಪಿ ॥13॥
ಭೂಮಿಯಲ್ಲಿ ಎಷ್ಟು ಜನ ರಾಜರಿದ್ದಾರೋ ಅವರೆಲ್ಲರಿಗಿಂತ ಗುಣಗಳಿಂದ ಶ್ರೇಷ್ಠರಾದವರು ನೀವು. ನಿಮ್ಮ ಗುಣಗಳನ್ನು ನಾನು ನೂರುವರ್ಷಗಳಲ್ಲಿಯೂ ನುಡಿಯಲು ಸಾಧ್ಯವಿಲ್ಲ.
ಯೋಽಯಂ ಪ್ರಣೇತಾ ವಂಶಸ್ಯ ತವ ಪುತ್ರೋ ನೃಪೋತ್ತಮ |
ಸ ಹಿ ಮೇಽಭಿಜನಂ ಜಾತಿಮಾಚಾರಂ ಚಾಪಿ ತದ್ ವಿಭೋ ॥14॥
ನ ಮೀಮಾಂಸೇತ ತೇ ಪುತ್ರಃ ಸರ್ವಮೇವ ನೃಪೋತ್ತಮ |
ಏವಂ ವಸಂತೀ ರಾಜೇಂದ್ರ ವರ್ಧಯಿಷ್ಯಾಮಿ ತೇ ಪ್ರಿಯಮ್ |
ಪುತ್ರೈಃ ಪುಣ್ಯೈಃ ಸುಖೈಶ್ಚಾಪಿ ಸ್ವರ್ಗಂ ಜೇಷ್ಯತಿ ತೇ ಸುತಃ ॥15॥
ಎಲೈ ನೃಪೋತ್ತಮನೇ, ನಿನ್ನ ವಂಶಧರನಾದ ಯಾವ ಪುತ್ರನು ನನ್ನನ್ನು ವಿವಾಹವಾಗುತ್ತಾನೋ ಅವನು ನನ್ನ ಸ್ವರೂಪವನ್ನಾಗಲೀ, ನನ್ನ ಕುಲವನ್ನಾಗಲೀ, ನನ್ನ ಆಚಾರವನ್ನಾಗಲೀ ಯಾವುದನ್ನೂ ಎಂದೂ ವಿಚಾರ ಮಾಡಬಾರದು. ಎಲೈ ರಾಜೇಂದ್ರನೇ, ಹೀಗೆ ವಾಸ ಮಾಡುತ್ತಾ ನಾನು ನಿನಗೆ ಪ್ರಿಯವನ್ನು ಉಂಟುಮಾಡುವೆನು. ನಿನ್ನ ಮಗನು ಪವಿತ್ರನಾದ ಪುತ್ರನನ್ನು ಮತ್ತು ಸುಖವನ್ನು ಪಡೆದು ಸ್ವರ್ಗಲೋಕವನ್ನು ಜಯಿಸುವನು.
ವೈಶಂಪಾಯನಃ
ತಥೇತ್ಯುಕತ್ವ ತು ಸಾ ರಾಜ್ಞಾ ತತ್ರೈವಾಂತರಧೀಯತ |
ಅದೃಶ್ಯಾ ರಾಜಸಿಂಹಸ್ಯ ಪಶ್ಯತಃ ಸಾಽಭವತ್ ತದಾ ॥16॥
ಪುತ್ರಜನ್ಮ ಪ್ರತೀಕ್ಷನ್ ವೈ ಸ ರಾಜಾ ತದಧಾರಯತ್ |
ಏತಸ್ಮಿನ್ನೇವ ಕಾಲೇ ತು ಪ್ರತೀಪಃ ಕ್ಷತ್ರಿಯರ್ಷಭಃ ॥17॥
ರಾಜನು ಹಾಗೆಯೇ ಆಗಲಿ ಎಂದು ಹೇಳಿದಾಗ ಅವಳು ಅಲ್ಲಿಯೇ ಅಂತರ್ಧಾನವನ್ನು ಹೊಂದಿ, ಆ ರಾಜಶ್ರೇಷ್ಠನ ಕಣ್ಣೆದುರಿಗೆ ಅದೃಶ್ಯಳಾದಳು. ಮಗನ ಜನನವನ್ನು ನಿರೀಕ್ಷಿಸುತ್ತಾ ಪ್ರತೀಪನು ಎಲ್ಲ ವಿಷಯಗಳನ್ನು ಮನಸ್ಸಿನಲ್ಲಿಯೇ ಧರಿಸಿದನು.
ತಪಸ್ತೇಪೇ ಸುತಸ್ಯಾರ್ಥೇ ಸಭಾರ್ಯಃ ಕುರುನಂದನ |
ಪ್ರತೀಪಸ್ಯ ತು ಭಾರ್ಯಾಯಾಂ ಗರ್ಭಃ ಶ್ರೀಮಾನಜಾಯತ ॥18॥
ಈ ಕಾಲದಲ್ಲಿ ಕ್ಷತ್ರಿಯಶ್ರೇಷ್ಠನಾದ ಪ್ರತೀಪನು ಮಗನನ್ನು ಪಡೆಯುವ ಸಲುವಾಗಿ, ಪತ್ನಿಯ ಜೊತೆಯಲ್ಲಿ ತಪಸ್ಸನ್ನು ಮಾಡಿದನು. ಎಲೈ ಕುರುನಂದನನೇ, ಪ್ರತೀಪನ ಭಾರ್ಯೆಯು ಕಾಂತಿಯುಕ್ತವಾದ ಗರ್ಭವನ್ನು ಧರಿಸಿದಳು.
ಶ್ರಿಯಾ ಪರಮಯಾ ಯುಕ್ತಃ ಶುಕ್ಲಪಕ್ಷೇ ಯಥಾ ಶಶೀ |

ತತಸ್ತು ದಶಮೇ ಮಾಸಿ ಪ್ರಾಜಾಯತ ರವಿಪ್ರಭಮ್ ॥19॥
ಕುಮಾರಂ ದೇವಗರ್ಭಾಭಂ ಪ್ರತೀಪಮಹಿಷೀ ತದಾ |
ತಯೋಃ ಸಂಭವತ್ ಪುತ್ರೋ ವೃದ್ಧಯೋಃ ಸ ಮಹಾಭಿಷಕ್ ॥20॥
ಒಳ್ಳೆಯ ಕಾಂತಿಯಿಂದ ಕೂಡಿದ ಆ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯನ್ನು ಹೊಂದಿತು. ಅನಂತರ ಹತ್ತನೆಯ ತಿಂಗಳಲ್ಲಿ ಪ್ರತೀಪನ ರಾಣಿಯು ಸೂರ್ಯನ ಕಾಂತಿಯುಳ್ಳ ದೇವಕುಮಾರನಂತಿರುವ ಮಗನನ್ನು ಪಡೆದಳು. ಅವರಿಬ್ಬರೂ ವೃದ್ಧರಾದ ಮೇಲೆ ಆ ಮಗುವನ್ನು ಪಡೆದಿದ್ದರು. ಮಹಾಭಿಷಕರಾಜನೇ ಅವರಿಗೆ ಪುತ್ರನಾಗಿ ಜನಿಸಿದ್ದನು.
ಶಾಂತಸ್ಯ ಜಜ್ಞೇ ಸಂತಾನಂ ತಸ್ಮಾದಾಸೀತ್ ಸ ಶಂತನುಃ |
ತಸ್ಯ ಜಾತಸ್ಯ ಕೃತ್ಯಾನಿ ಪ್ರತೀಪೋಽಕಾರಯತ್ ಪ್ರಭುಃ |
ಜಾತಕರ್ಮಾದಿ ವಿಪ್ರೈಸ್ತು ವೇದೋಕ್ತೈಃ ಕರ್ಮಭಿಸ್ತದಾ ॥21॥
ಸಂತತಿಯ ಆಸೆಯಿಂದ ನಿವೃತ್ತನಾಗಿದ್ದ ಅವನಿಗೆ ಸಂತಾನವು ಉಂಟಾದದ್ದರಿಂದ ಮಗುವಿಗೆ `ಶಂತನು' ಎಂದು ನಾಮಕರಣ ಮಾಡಿದರು. ಹುಟ್ಟಿದ ಮಗುವಿಗೆ ಪ್ರತೀಪನು ಬ್ರಾಹ್ಮಣರಿಂದ ಜಾತಕರ್ಮ ಮೊದಲಾದ ಎಲ್ಲಾ ವೇದೋಕ್ತ ಸಂಸ್ಕಾರಗಳನ್ನೂ ಮಾಡಿಸಿದನು.
ನಾಮಕರ್ಮ ಚ ವಿಪ್ರಾಸ್ತು ಚಕ್ರುಃ ಪರಮಸಂಸ್ಕೃತಮ್ |
ಶಂತನೋರವನೀಪಾಲ ವೇದೋಕ್ತೈಃ ಕರ್ಮಭಿಸ್ತದಾ ॥22॥
ರಾಜನೇ, ಅನಂತರ ಬ್ರಾಹ್ಮಣರು ವೇದೋಕ್ತವಿಧಾನದಿಂದ ಶಂತನುವಿಗೆ ನಾಮಕರಣಾದಿ ಸಂಸ್ಕಾರಗಳನ್ನು ಮಾಡಿ, ಅವನನ್ನು ಪರಮಸಂಸ್ಕೃತನನ್ನಾಗಿ ಮಾಡಿದರು.
ತತಃ ಸಂವರ್ಧಿತೋ ರಾಜಾ ಶಂತನುರ್ಲೋಕಧಾರ್ಮಿಕಃ |
ಸ ತು ಲೇಭೇ ಪರಾಂ ನಿಷ್ಠಾಂ ಧರ್ಮೇ ಧರ್ಮಭೃತಾಂ ವರಃ |
ಧನುರ್ವೇದೇ ಚ ವೇದೇ ಚ ಗತಿಂ ಸ ಪರಮಾಂ ಗತಃ ॥23॥
ಅನಂತರ ಲೋಕಧರ್ಮವನ್ನು ತಿಳಿದ ಶಂತನುವು ಬೆಳೆಸಲ್ಪಟ್ಟನು. ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಧರ್ಮದಲ್ಲಿ ಮಹಾನಿಷ್ಠೆಯನ್ನು ಪಡೆದನು. ಧನುರ್ವೇದದಲ್ಲಿಯೂ, ವೇದದಲ್ಲಿಯೂ ಶ್ರೇಷ್ಠವಾದ ಜ್ಞಾನವನ್ನು ಪಡೆದನು.
ಯೌವನಂ ಚಾಪಿ ಸಂಪ್ರಾಪ್ತಃ ಕುಮಾರೋ ವದತಾಂ ವರಃ |
ಸಂಸ್ಮರಂಶ್ಚಾಕ್ಷಯಾನ್ ಲೋಕಾನ್ ವಿಜಿಂತಾಸ್ವಾನ್ ಸ್ವಕರ್ಮಣಾ ॥24॥
ಮಾತನಾಡುವರಲ್ಲಿ ಶ್ರೇಷ್ಠನಾದ ಶಂತನುವು ಯೌವನವನ್ನು ಹೊಂದಿದನು. ತನ್ನ ಧಾರ್ಮಿಕ ಕರ್ಮಗಳಿಂದ ವಿಜಿತವಾದ ಅಕ್ಷಯಲೋಕಗಳ ಕಲ್ಪನೆಯು ಅವನಿಗಿದ್ದಿತು.
ಬಭೂವ ಧರ್ಮಕೃದ್ ರಾಜಾ ಶಂತನುರ್ಭರತರ್ಷಭ |
ಪ್ರತೀಪಃ ಶಂತನುಂ ಪುತ್ರಂ ಯೌವನಸ್ಥಮಬೋಧಯತ್ ॥25॥
ಭರತರ್ಷಭನೇ, ಶಂತನುರಾಜನು ಬಹಳ ಧರ್ಮವನ್ನು ಆಚರಿಸಿದನು. ಶಂತನುವು ಯೌವನಸ್ಥನಾದ ಮೇಲೆ ಒಮ್ಮೆ ಪ್ರತೀಪನು ಅವನಿಗೆ ಹೀಗೆ ಉಪದೇಶಿಸಿದನು.
ಪುರಾ ಸ್ತ್ರೀ ಮಾಂ ಸಮಭ್ಯಾಗಾಚ್ಛಂತನೋ ಭೂತಯೇ ತವ |
ತ್ವಾಮಾವ್ರಜೇದ್ ಯದಿ ರಹಃ ಸಾ ಪುತ್ರ ವರವರ್ಣಿನೀ ॥26॥
ಕಾಮಯಾನಾಭಿರೂಪಾಢ್ಯಾ ದಿವ್ಯಸ್ತ್ರೀ ಪುತ್ರಕಾಮ್ಯಯಾ |
ನ ಪ್ರಷ್ಟವ್ಯಾ ತ್ವಯಾ ಸಾ ವೈ ಕ್ವಾಸಿ ಕಸ್ಯ ಸುತಾ ತ್ವಿತಿ ॥27॥
ಶಂತನು ಹಿಂದೆ ಒಮ್ಮೆ ಒಬ್ಬ ಸುಂದರ ವನಿತೆಯು ನಿನ್ನ ಶ್ರೇಯಸ್ಸಿಗಾಗಿ ನನ್ನ ಬಳಿಗೆ ಬಂದಳು. ಪುತ್ರನೇ, ಒಂದು ವೇಳೆ ನೀನು ಏಕಾಂತದಲ್ಲಿರುವಾಗ ದಿವ್ಯರೂಪವನ್ನು ಧರಿಸಿದ ಆ ಸುಂದರ ವನಿತೆಯು ಬಂದು ಪುತ್ರನ ಆಸೆಯಿಂದ ನಿನ್ನನ್ನು ಕಾಮಿಸಿದರೆ, ನೀನು ಅವಳನ್ನು ನೀನು ಯಾರು? ಮತ್ತು ಯಾರ ಮಗಳು? ಎಂದು ಕೇಳಬಾರದು.
ಯಚ್ಚ ಕುರ್ಯಾನ್ನ ತತ್ ಕಾರ್ಯಂ ಪ್ರತಿಷೇಧ್ಯಂ ತ್ವಯಾಽನಘ |
ಮನ್ನಿಯೋಗಾದ್ ಭಜಂತೀಂ ತಾಂ ಭಜೇಥಾ ಇತ್ಯುವಾಚ ತಮ್ ॥
ಎಲೈ ಅನಘನೇ, ಅವಳು ಏನು ಮಾಡಿದರೂ ನನ್ನ ಅಪ್ಪಣೆಯಂತೆ ಎಂದೂ ಬೇಡವೆಂದು ಹೇಳಬಾರದು. ನಿನ್ನಲ್ಲಿ ಅನುರಕ್ತಳಾದ ಅವಳನ್ನು ಸ್ವೀಕರಿಸು ಎಂದು ಹೇಳಿದನು.
ಏವಂ ಸಂದಿಶ್ಯ ತನಯಂ ಪ್ರತೀಪಃ ಶಂತನುಂ ತದಾ |
ಸ್ವೇ ಚ ರಾಜ್ಯೇಭಿಷಿಚ್ಯೈನಂ ವನಂ ರಾಜಾ ಜಗಾಮ ಹ ॥29॥
ಹೀಗೆ ಪ್ರತೀಪನು ತನ್ನ ಮಗನಾದ ಶಂತನುವಿಗೆ ಆದೇಶವನ್ನು ನೀಡಿ, ಅಭಿಷೇಕವನ್ನು ಮಾಡಿ, ತನ್ನ ರಾಜ್ಯದಲ್ಲಿ ಅವನನ್ನು ಸ್ಥಾಪಿಸಿ ರಾಜನನ್ನಾಗಿ ಮಾಡಿ ಕಾಡಿಗೆ ಹೊರಟು ಹೋದನು.
ಸ ರಾಜಾ ಶಂತನುರ್ಧೀಮಾನ್ ಪಾರ್ಥಿವಾನಾಂ ಧುರಂಧರಃ |
ಬಭೂವ ಸರ್ವಲೋಕಸ್ಯ ಸತ್ಯವಾಗಿತಿ ಸತ್ತಮಃ ॥30॥
ಆ ರಾಜನಾದ ಶಂತನುವು ಮೇಧಾವಿಯೂ, ಸಜ್ಜನನೂ, ಎಲ್ಲರಾಜರಿಗೆ ಮುಖಂಡನೂ ಆಗಿ ಸತ್ಯವಚನವುಳ್ಳವನೆಂದು, ಎಲ್ಲ ಜನರಿಂದಲೂ ಪ್ರಶಂಸಿಸಲ್ಪಟ್ಟನು.
ಪೀನಸ್ಕಂಧೋ ಮಹಾಬಾಹುರ್ಮತ್ತವಾರಣವಿಕ್ರಮಃ |
ಅನ್ವಿತಃ ಪರಿಪೂರ್ಣೈಶ್ಚ ಸರ್ವೈರ್ನೃಪತಿಲಕ್ಷಣೈಃ ॥31॥

ಅವನು ಉನ್ನತ ಸ್ಕಂಧವುಳ್ಳವನು, ಮಹಾಬಾಹುವು, ಮದಗಜದ ನಡಿಗೆಯುಳ್ಳವನೂ ಆಗಿ, ಎಲ್ಲ ರಾಜಚಿಹ್ನೆಗಳಿಂದ ಪರಿಪೂರ್ಣವಾಗಿ ಕೂಡಿದ್ದನು.
ಅಮಾತ್ಯಸಂಪದೋಪೇತಃ ಕ್ಷತ್ರಧರ್ಮವಿಶೇಷವಿತ್ |
ವಶೇ ಚಕ್ರೇ ಮಹೀಮೇಕೋ ವಿಜಿತ್ಯ ವಸುಧಾಧಿಪಾನ್ ॥32॥
ಕ್ಷತ್ರಿಯ ಧರ್ಮವನ್ನು ಚೆನ್ನಾಗಿ ತಿಳಿದ ಅವನು ಅಮಾತ್ಯರಬಲದಿಂದ ಕೂಡಿದವನಾಗಿ, ಒಬ್ಬನೇ ಎಲ್ಲ ರಾಜರನ್ನು ಗೆದ್ದು ಭೂಮಿಯನ್ನು ತನ್ನ ವಶಪಡಿಸಿಕೊಂಡನು.
ವೇದಾನಾಗಮಯತ್ ಕೃತ್ಸ್ನಾನ್ ರಾಜಧರ್ಮಾಂಶ್ಚ ಕೃತ್ಸ್ನಶಃ |
ಈಜೇ ಚ ಬಹುಭಿಃ ಸತ್ರೈಃ ಕ್ರತುಭಿರ್ಭೂರಿದಕ್ಷಿಣೈಃ ॥33॥
ಅವನು ಎಲ್ಲಾ ವೇದಗಳನ್ನೂ, ಮತ್ತು ರಾಜಧರ್ಮಗಳನ್ನೂ ಸಮಗ್ರವಾಗಿ ಅಧ್ಯಯನ ಮಾಡಿದನು. ಬಹಳ ದಕ್ಷಿಣೆಯನ್ನು ನೀಡಿ, ಅನೇಕ ಕ್ರತು ಮತ್ತು ಸತ್ರಗಳನ್ನು ನಡೆಸಿ ಭಗವಂತನನ್ನು ಆರಾಧಿಸಿದನು.
ತರ್ಪಯಾಮಾಸ ವಿಪ್ರಾಂಶ್ಚ ವೇದಾಧ್ಯಯನಕೋವಿದಾನ್ |
ರತ್ನೈರುಚ್ಚಾವಚೈರ್ಗೋಭಿರ್ಗ್ರಾಮೈರಶ್ವೈರ್ಧನೈರಪಿ ॥34॥
ವೇದಾಧ್ಯಯನ ಸಂಪನ್ನರಾದ ವಿಪ್ರರಿಗೆ ಶ್ರೇಷ್ಠವಾದ ರತ್ನಗಳನ್ನು, ಗೋವುಗಳನ್ನು, ಗ್ರಾಮಗಳನ್ನು, ಅಶ್ವಗಳನ್ನು ಮತ್ತು ಧನವನ್ನು ದಾನ ಮಾಡಿ ಅವರನ್ನು ಸಂತೋಷಪಡಿಸಿದನು.
ವಯೋರೂಪೇಣ ಸಂಪನ್ನಃ ಪೌರುಷೇಣ ಬಲೇನ ಚ |
ಐಶ್ವರ್ಯೇಣ ಪ್ರಭಾವೇಣ ವಿಕ್ರಮೇಣಾತುಲೇನ ಚ ॥35॥
ವರ್ತಮಾನಂ ಚ ಸತ್ಯೇನ ಸರ್ವಧರ್ಮವಿಶಾರದಮ್ |
ತಂ ಮಹೀಪಂ ಮಹೀಪಾಲಾ ರಾಜರಾಜಮಕುರ್ವತ ॥36॥
ವಯಸ್ಸಿನಿಂದಲೂ, ರೂಪದಿಂದಲೂ, ಪೌರುಷದಿಂದಲೂ, ಬಲದಿಂದಲೂ, ಐಶ್ವರ್ಯದಿಂದಲೂ, ಪ್ರಭಾವದಿಂದಲೂ, ಅಸದೃಶವಾದ ವಿಕ್ರಮದಿಂದಲೂ, ಸತ್ಯದಿಂದಲೂ ಕೂಡಿದ ಸರ್ವಧರ್ಮವಿಶಾರದನಾದ ಆ ರಾಜನನ್ನು ಉಳಿದ ರಾಜರು ರಾಜರಾಜನನ್ನಾಗಿ ಮಾಡಿದರು.
ವೀತಶೋಕಭಯಾಬಾಧಾಃ ಸುಖಸ್ವಪ್ನಪ್ರಬೋಧನಾಃ |
ಶ್ರಿಯಾ ಭರತಶಾರ್ದೂಲ ಸಮಪದ್ಯಂತ ಭೂಮಿಪಾಃ ॥37॥
ಭರತಶಾರ್ದೂಲನೇ, ಆಗ ರಾಜರು ಶೋಕ, ಭಯ ಮತ್ತು ಪೀಡೆಗಳಿಂದ ಮುಕ್ತರಾಗಿ, ಸುಖವಾಗಿ ಮಲಗಿ, ಸುಖವಾಗಿ ಏಳುವವರಾಗಿ ಸಂಪತ್ತಿನಿಂದ ಕೂಡಿದವರಾದರು.
ಶಂತನುಪ್ರಮುಖೈರ್ಗುಪ್ತಂ ರಾಷ್ಟ್ರಾಧಿಪತಿಭಿರ್ಜಗತ್ |
ನಿಯಮೈಃ ಸರ್ವವರ್ಣಾನಾಂ ಬ್ರಹ್ಮೋತ್ತರಮವರ್ಧತ ॥38॥
ಶಂತನು ಮೊದಲಾದ ರಾಷ್ಟ್ರಾಧಿಪತಿಗಳಿಂದಲೂ ಸುರಕ್ಷಿತವಾದ ಜಗತ್ತಿನಲ್ಲಿ ಎಲ್ಲ ವರ್ಣಗಳೂ ನಿಯಮದಿಂದ ಕೂಡಿದ್ದು, ಬ್ರಾಹ್ಮಣರು ಶ್ರೇಷ್ಠರಾಗಿದ್ದರು.
ಬ್ರಾಹ್ಮಣಾಭಿಮುಖಂ ಕ್ಷತ್ರಂ ಕ್ಷತ್ರಂ ಚಾಭಿಮುಖಾ ವಿಶಃ |
ಬ್ರಹ್ಮಕ್ಷತ್ರಾನುಲೋಮಾಶ್ಚ ಶೂದ್ರಾಃ ಪರ್ಯಚರನ್ ವಿಶಃ ॥39॥
ಕ್ಷತ್ರಿಯರು ಬ್ರಾಹ್ಮಣರಿಗೆ ವಶವಾಗಿದ್ದರು. ವೈಶ್ಯರು, ಕ್ಷತ್ರಿಯರಿಗೆ ವಶವಾಗಿದ್ದರು. ಬ್ರಹ್ಮ-ಕ್ಷತ್ರರ ಆದೇಶವನ್ನು ಧರಿಸಿದ ಶೂದ್ರರು ವೈಶ್ಯರನ್ನು ಪರಿಚರಿಸುತ್ತಿದ್ದರು.
ಏವಂ ಪಶುವರಾಹಾಣಾಂ ತಥೈವ ಮೃಗಪಕ್ಷಿಣಾಮ್ |
ಶಂತನಾವಥ ರಾಜ್ಯಸ್ಥೇ ನಾವರ್ತತ ವೃಥಾ ವಧಃ ॥40॥
ಹೀಗೆ ಶಂತನುವು ರಾಜನಾಗಿದ್ದಾಗ ವರಾಹ ಮೊದಲಾದ ಪಶುಗಳಿಗಾಗಲೀ, ಮೃಗ-ಪಕ್ಷಿಗಳಿಗಾಗಲೀ ವ್ಯರ್ಥವಾದ ವಧೆಯು ಉಂಟಾಗುತ್ತಿರಲಿಲ್ಲ.
ಅಸುಖಾನಾಮನಾಥಾನಾಂ ತಿರ್ಯಗ್ಯೋನಿಷು ವರ್ತತಾಮ್ |
ಸ ಏವ ರಾಜಾ ಸರ್ವೇಷಾಂ ಭೂತಾನಾಮಭವತ್ ಪಿತಾ ॥41॥
ತಿರ್ಯಗ್ ಯೋನಿಯಲ್ಲಿ ಇದ್ದು, ದುಃಖದಿಂದ ಕೂಡಿದ ಅನಾಥ ಪ್ರಾಣಿಗಳಿಗೂ ಸಹ ಅವನೇ ತಂದೆಯಾಗಿದ್ದನು.
ಸ ಹಸ್ತಿನಾಮ್ನಿ ಧರ್ಮಾತ್ಮಾ ವಿಹರನ್ ಕುರುನಂದನಃ |
ತೇಜಸಾ ಸೂರ್ಯಕಲ್ಪೋಽಸೌ ವಾಯುನಾ ಚ ಸಮೋ ಬಲೇ ॥42॥
ಅಂತಕಪ್ರತಿಮಃ ಕೋಪೇ ಕ್ಷಮಯಾ ಪೃಥಿವೀಸಮಃ |
ಬಭೂವ ರಾಜಾ ಸುಮತಿಃ ಪ್ರಜಾನಾಂ ಸತ್ಯವಿಕ್ರಮಃ ॥43॥
ಕುರುನಂದನನಾದ ಅವನು `ಹಸ್ತಿ' ಎಂಬ ಪಟ್ಟಣದಲ್ಲಿ ಧರ್ಮಾತ್ಮನಾಗಿ ವಿಹರಿಸಿದನು. ಅವನು ತೇಜಸ್ಸಿನಲ್ಲಿ ಸೂರ್ಯನಂತೆಯೂ, ಬಲದಲ್ಲಿ ವಾಯುವಿನಂತೆಯೂ, ಕೋಪದಲ್ಲಿ ಯಮನಂತೆಯೂ, ಸಹನೆಯಲ್ಲಿ ಭೂಮಿಯಂತೆಯೂ ಇದ್ದನು. ಸತ್ಯವಿಕ್ರಮನು, ಸದ್‌ಬುದ್ಧಿಯುಳ್ಳ ಅವನು ಪ್ರಜೆಗಳನ್ನು ರಂಜಿಸಿದನು.
ಸ ವನೇಷು ಚ ರಮ್ಯೇಷು ಶೈಲಪ್ರಸ್ರವಣೇಷು ಚ |
ಚಚಾರ ಮೃಗಯಾಶೀಲಃ ಶಂತನುರ್ವನಗೋಚರಃ ॥44॥
ಅವನು ಬೇಟೆಯಾಡುವ ಸ್ವಭಾವವನ್ನು ಹೊಂದಿ, ಕಾಡಿನಲ್ಲಿದ್ದು ಮನೋಹರವಾದ ಬೆಟ್ಟದ ಝರಿಗಳ ಪ್ರದೇಶದಲ್ಲಿ ಸಂಚರಿಸಿದನು.

ಸ ಮೃಗಾನ್ ಮಹಿಷಾಂಶ್ಚೈವ ವಿನಿಘ್ನನ್ ರಾಜಸತ್ತಮಃ |
ನದೀಮನ್ವಚರದ್ ರಾಜಾ ಶಂತನುಃ ಪರಯಾ ಮುದಾ |
ಗಂಗಾಂ ತ್ರಿಪಥಗಾಂ ಪುಣ್ಯಾಂ ಸಿದ್ಧಚಾರಣಸೇವಿತಾಮ್ ॥45॥
ಆ ರಾಜಶ್ರೇಷ್ಠನು ಮೃಗಗಳನ್ನು, ಮಹಿಷಗಳನ್ನು ಕೊಲ್ಲುತ್ತಾ ಸಂತೋಷದಿಂದ ಸಿದ್ಧಚಾರಣ ಸೇವಿತೆಯಾದ, ತ್ರಿಪಥಗಾಮಿನಿಯಾದ ಪವಿತ್ರವಾದ ಗಂಗೆಯ ಬಳಿ ಸಂಚರಿಸಿದನು.
ಸ ಕದಾಚಿನ್ಮಹಾರಾಜ ದದರ್ಶ ಪರಮಾಂ ಸ್ತ್ರಿಯಮ್ |
ಜಾಜ್ವಲ್ಯಮಾನಾಂ ವಪುಷಾ ಸಾಕ್ಷಾಚ್ಛ್ರಿಯಮಿವಾಪರಾಮ್ |
ಸರ್ವಾನವದ್ಯಾಂ ಯುವತಿಂ ಸರ್ವಾಭರಣಭೂಷಿತಾಮ್ ॥46॥
ಸೂಕ್ಷ್ಮಾಂಬರಧರಾಂ ಸಾಕ್ಷಾತ್ ಪದ್ಮೋದರಸಮಪ್ರಭಾಮ್ |
ಸ್ನಾತಮಾತ್ರಾಮಧೋವಕತ್ರಂ ಗಂಗಾತೀರರುಹೇ ವನೇ ॥47॥
ಪ್ರಕೀರ್ಣಕೇಶೀಂ ಪಾಣಿಭ್ಯಾಂ ಸಂಸ್ಪೃಶಂತೀಂ ಶಿರೋರುಹಾನ್ |
ರೂಪೇಣಾತೀತ್ಯ ತಿಷ್ಠಂತೀಂ ಸರ್ವರಾಜನ್ಯಯೋಷಿತಃ ॥48॥
ಎಲೈ ಮಹಾರಾಜನೇ, ಅವನು ಒಮ್ಮೆ ಅಲ್ಲಿ ಶ್ರೇಷ್ಠಳಾದ ಸ್ತ್ರೀಯನ್ನು ನೋಡಿದನು. ಅವಳು ಲಕ್ಷ್ಮೀದೇವಿಯ ಇನ್ನೊಂದು ರೂಪವೋ ಎಂಬಂತೆ ದೇಹದಿಂದ ಕಂಗೊಳಿಸುತ್ತಿದ್ದಳು. ಸರ್ವಥಾ ದೋಷರಹಿತವಾದ ಶರೀರವುಳ್ಳ ಆ ಯುವತಿಯು, ಸರ್ವಾಭರಣಭೂಷಿತಳೂ, ಸೂಕ್ಷ್ಮಾಂಬರವನ್ನು ಧರಿಸಿದವಳೂ, ಪದ್ಮದ ಒಳಭಾಗದ ಕಾಂತಿಯುಳ್ಳವಳೂ ಆಗಿದ್ದಳು. ಆಗ ತಾನೇ ಸ್ನಾನವನ್ನು ಮಾಡಿ, ಗಂಗೆಯ ದಡದಲ್ಲಿದ್ದ ವನದಲ್ಲಿ ಮುಖವನ್ನು ಕೆಳಗೆ ಮಾಡಿ ತನ್ನ ಕೈ ಬೆರಳುಗಳಿಂದ ಕೆದರಿದ ಕೂದಲುಗಳನ್ನು ನೇವರಿಸಿಕೊಂಡು ತನ್ನ ಸೌಂದರ್ಯದಿಂದ ಎಲ್ಲ ರಾಜಸ್ತ್ರೀಯರನ್ನೂ ಮೀರಿದವಳಾಗಿದ್ದಳು.
ತಾಂ ದೃಷ್ಟ್ವಾ ಹೃಷ್ಟರೋಮಾಽಭೂದ್ ದರ್ಶನಾದೇವ ಶಂತನುಃ |
ಪಿಬನ್ನಿವ ಚ ನೇತ್ರಾಭ್ಯಾಂ ನಾತೃಪ್ಯತ ನರಾಧಿಪಃ ॥49॥
ಅವಳನ್ನು ನೋಡಿದಾಗ ನೋಡಿದ ಮಾತ್ರದಿಂದಲೇ ಶಂತನುವಿಗೆ ರೋಮಾಂಚನವಾಯಿತು. ಆ ರಾಜನು ಅವಳ ಸೌಂದರ್ಯವನ್ನು ಕಣ್ಣಿನಿಂದ ಕುಡಿಯುವಂತೆ ತೋರಿ ತೃಪ್ತಿಯನ್ನು ಹೊಂದಲಿಲ್ಲ.
ಸಾ ತು ದೃಷ್ಟ್ವೈವ ರಾಜಾನಂ ವಿಚರಂತಂ ಮಹಾದ್ಯುತಿಮ್ |
ಸ್ನೇಹಾದಾಗತಸೌಹಾರ್ದಾ ನಾತೃಪ್ಯತ ವಿಲಾಸಿನೀ ॥50॥
ಪಿಬಂತೀವ ಚ ನೇತ್ರಾಭ್ಯಾಂ ನಾತೃಪ್ಯದ್ ದರ್ಶನೇನ ಚ |
ಗಂಗಾಕಾಂಕ್ಷೀ ಚ ರಾಜಾ ಸ ಪ್ರೇಕ್ಷಮಾಣೋ ವಿಲಾಸಿನೀಮ್ ॥51॥
ಆ ವಿಲಾಸಿನಿಯಾದರೂ ಅಲ್ಲಿಯೇ ಸಂಚರಿಸುತ್ತಿರುವ ಮಹಾಕಾಂತಿಯುಳ್ಳ ರಾಜನನ್ನು ನೋಡಿ ಸ್ನೇಹದಿಂದುಂಟಾದ ವಿಶ್ವಾಸವುಳ್ಳವಳಾಗಿ ಕಣ್ಣಿನಿಂದ ರಾಜನನ್ನು ಕುಡಿಯುವಂತೆ ನೋಡುತ್ತಾ ತೃಪ್ತಿಯನ್ನು ಪಡೆಯಲಿಲ್ಲ.
ಹಾವಭಾವವಿಲಾಸೈಶ್ಚ ಲೋಚನಾಂಚಲವಿಕ್ರಿಯೈಃ |
ಶ್ರೋಣೀಭಾರೇಣ ಮಧ್ಯೇನ ಸ್ತನಾಭ್ಯಾಮುರಸಾ ದೃಶಾ ॥52॥
ಹಾವ= ಆಲಂಬನವೆಂಬ ಅವಯವ ವಿಲಾಸ. ಭಾವ= ಚಂದ್ರೋದಯ ಮೊದಲಾದ ಕಾಮೋದ್ದೀಪಕ ಪ್ರಸಂಗ.
ಗಂಗೆಯನ್ನು ಬಯಸುತ್ತಿದ್ದ ಆ ರಾಜನು ಹಾವಭಾವವಿಲಾಸಗಳಿಂದಲೂ ಕಣ್ಣಿನ ನೋಟ ಮತ್ತು ವಸ್ತ್ರಗಳ ಚಲನೆಯಿಂದಲೂ ಶ್ರೋಣಿಭಾರದಿಂದಲೂ ಸ್ತನಗಳ ಭಾರದಿಂದಲೂ ವಿಲಾಸವನ್ನು ತೋರಿಸುತ್ತಿದ್ದ ಅವಳನ್ನು ನೋಡಿ ಹೃತಚಿತ್ತನಾದನು.
ವಿಲಾಸಚೇಷ್ಟಿತೈಸ್ತಸ್ಯಾ ಹೃತಚೇತಾಶ್ಚ ಯೋಷಿತಃ |
ತಾಮುವಾಚ ತತೋ ರಾಜಾ ಕಾಮಿನೀಂ ತು ಮನೋರಮಾಮ್ ॥
ದೇವತಾ ಕಿನ್ನರೀ ವಾ ತ್ವಂ ಗಂಧರ್ವೀ ವಾ ಸುಮಧ್ಯಮೇ |
ಯಕ್ಷೀ ವಾ ಮಾನುಷೀ ವಾಽಪಿ ಜಾನೀಯಾಂ ಕಾಂ ಶುಚಿಸ್ಮಿತೇ ॥54॥
ಯಾಽಸಿ ಕಾಽಸಿ ಸುರಪ್ರಖ್ಯೇ ತ್ವಂ ಮಹಿಷೀ ಮೇ ಭವಾನೇ |
ತ್ವದ್ಗತಾ ಹಿ ಮಮ ಪ್ರಾಣಾ ವಸು ಯನ್ಮೇಽಸ್ತಿ ಕಿಂಚನ ॥55॥
ಅನಂತರ ರಾಜನು ಆ ಸುಂದರಿಯಾದ ಕಾಮಿನಿಯನ್ನು ಕುರಿತು ಮಾತನಾಡಿದನು. ಶುಚಿಸ್ಮಿತೆಯೇ, ನೀನು ದೇವತೆಯೇ ಅಥವಾ ಕಿನ್ನರಿಯೇ ಅಥವಾ ಗಂಧರ್ವಳೇ ಅಥವಾ ಯಕ್ಷಿಯೇ ಅಥವಾ ಮಾನುಷಿಯೇ ? ಸುಂದರಿಯೇ, ನಿನ್ನನ್ನು ಯಾರೆಂದು ತಿಳಿಯಲಿ ದೇವತೆಯಂತೆ ಇರುವವಳೇ, ನೀನು ಯಾರು ಬೇಕಾದರೂ ಆಗಿರು, ಆದರೆ ಅನಘಳೇ, ನನ್ನ ಪಟ್ಟದರಾಣಿಯಾಗು. ನನ್ನಲ್ಲಿರುವ ಐಶ್ವರ್ಯವೆಲ್ಲಾ ನಿನ್ನ ಅಧೀನ. ನನ್ನ ಪ್ರಾಣವು ನಿನ್ನಲ್ಲಿಯೇ ಇದೆ.
ವೈಶಂಪಾಯನಃ
ಶ್ರುತ್ವಾ ತು ರಾಜ್ಞಃ ಸಾ ಬಾಲಾ ಸಸ್ಮಿತಂ ಮೃದು ವಲ್ಗು ಚ |
ಯಶಸ್ವಿನೀ ಚ ಸಾಽಗಚ್ಛಚ್ಛಂತನೋರ್ಭೂತಯೇ ತದಾ ॥56॥
ರಾಜನ ಮಾತುಗಳನ್ನು ಕೇಳಿದ ಆ ಬಾಲೆಯು ಮೃದುವಾದ, ಸುಂದರವಾದ ಮುಗುಳ್ನಗೆಯನ್ನು ನಕ್ಕು, ಯಶಸ್ವಿನಿಯಾದ ಅವಳು ಶಂತನುವಿನ ಶ್ರೇಯಸ್ಸಿಗಾಗಿ ಅವನ ಬಳಿ ನಡೆದಳು.
ಸಾ ಚ ದೃಷ್ಟ್ವಾ ನೃಪಶ್ರೇಷ್ಠಂ ಚರಂತಂ ತೀರಮಾಶ್ರಿತಮ್ |
ಸ್ಮೃತ್ವಾ ವಸೂನಾಂ ಸಮಯಮಭ್ಯಗಚ್ಛದನಿಂದಿತಾ ॥57॥

ಅನಿಂದಿತಳಾದ ಅವಳು ತನ್ನ ತೀರದಲ್ಲಿ ಸಂಚರಿಸುತ್ತಿರುವ ನೃಪಶ್ರೇಷ್ಠನನ್ನು ನೋಡಿ, ವಸುಗಳ ನಿಬಂಧನೆಯನ್ನು ನೆನೆಸಿಕೊಂಡು ಅವನ ಸಮೀಪಕ್ಕೆ ಹೋದಳು.
ಪ್ರಜಾರ್ಥಿನೀ ರಾಜಪುತ್ರಂ ಶಂತನುಂ ಪೃಥಿವೀಪತಿಮ್ |
ಪ್ರತೀಪವಚನಂ ಚೈವ ಸಂಸ್ಮೃತ್ಯಾಽಭಿಯಯೌ ನೃಪಮ್ ॥58॥
ಪ್ರಜಾರ್ಥಿನಿಯಾದ ಅವಳು ಪ್ರತೀಪನ ಮಾತುಗಳನ್ನು ಸ್ಮರಿಸಿಕೊಂಡು, ಕಾಲಪುತ್ರನು, ಪೃಥಿವೀಪತಿಯಾದ ರಾಜಪುತ್ರನಾದ ಶಂತನುವಿನ ಬಳಿಗೆ ಹೋದಳು.
ಕಾಲೋಽಯಮಿತಿ ಮತ್ವಾ ಸಾ ವಸೂನಾಂ ಶಾಪಚೋದಿತಾ |
ಪ್ರತ್ಯುವಾಚ ಮಹೀಪಾಲಂ ಹ್ಲಾದಯಂತೀ ಮನೋ ಗಿರಾ ॥59॥
ಇದು ಸರಿಯಾದ ಕಾಲವೆಂದು ತಿಳಿದ ಅವಳು ವಸುಗಳ ಶಾಪದಿಂದ ಪ್ರೇರಿತಳಾಗಿ ರಾಜನ ಮನಸ್ಸನ್ನು ತನ್ನ ಮಾತುಗಳಿಂದ ಸಂತೋಷ ಪಡಿಸುತ್ತಾ ರಾಜನನ್ನು ಕುರಿತು ಹೀಗೆ ಉತ್ತರವನ್ನು ಕೊಟ್ಟಳು.
ಭವಿಷ್ಯಾಮಿ ಮಹೀಪಾಲ ಮಹಿಷೀ ತೇ ವಶಾನುಗಾ |
ನತು ತ್ವಂ ವಾ ದ್ವಿತೀಯೋ ವಾ ಜ್ಞಾತುಮಿಚ್ಛೇತ್ ಕಥಂಚನ ॥60॥
ಯತ್ ತು ಕುರ್ಯಾಮಹಂ ರಾಜನ್ ಶುಭಂ ವಾ ಯದಿ ಶಾಶುಭಮ್ |
ನಾಹಂ ವಾರಯಿತವ್ಯಾಸ್ಮಿ ನ ವಕ್ತವ್ಯಾ ತಥಾಽಪ್ರಿಯಮ್ ॥61॥
ಎಲೈ ರಾಜನೇ, ನಾನು ನಿನ್ನ ವಶವರ್ತಿನಿಯಾದ ರಾಣಿಯಾಗುವೆನು. ನೀನಾಗಲೀ ಅಥವಾ ಇನ್ನೊಬ್ಬರಾಗಲೀ ನನ್ನನ್ನು ಯಾರು ಎಂದು ತಿಳಿಯಲು ಎಂದೂ ಬಯಸಬಾರದು. ನಾನು ಒಳ್ಳೆಯದನ್ನು ಮಾಡಲಿ, ಅಥವಾ ಕೆಟ್ಟದ್ದನ್ನು ಮಾಡಲಿ ಪ್ರತಿಷೇಧ ಮಾಡಬಾರದು. ನನ್ನನ್ನು ಕುರಿತು ಎಂದೂ ಅಪ್ರಿಯವಾದ ಮಾತುಗಳನ್ನು ಆಡಬಾರದು.
ಏವಂ ತು ವರ್ತಮಾನೇ ತು ತ್ವಯಿ ವತ್ಸ್ಯಾಮಿ ಪಾರ್ಥಿವ |
ವಾರಿತಾ ವಿಪ್ರಿಯಂ ಚೋಕ್ತಾ ತ್ಯಜೇಯಂ ತ್ವಾಂ ನರಾಧಿಪ ॥62॥
ನೀನು ಹೀಗಿದ್ದರೆ ಮಾತ್ರ ನಾನು ನಿನ್ನಲ್ಲಿ ವಾಸಿಸುವೆನು. ರಾಜನೇ,  ನನ್ನನ್ನು ಪ್ರತಿಷೇಧ ಮಾಡಿದರೆ ಅಥವಾ ನನಗೆ ಅಪ್ರಿಯವನ್ನು ಮಾತನಾಡಿದರೆ, ನಾನು ನಿನ್ನನ್ನು ಬಿಟ್ಟು ಹೋಗುತ್ತೇನೆ.
ಏಷ ಮೇ ಸಮಯೋ ರಾಜನ್ ಭಜ ಮಾಂ ತ್ವಂ ಯಥೇಪ್ಸಿತಮ್ |
ಅನುನೀತಾಽಸ್ಮಿ ತೇ ಪಿತ್ರಾ ಭರ್ತಾ ಮೇ ತ್ವಂ ಭವ ಪ್ರಭೋ ॥63॥
ರಾಜನೇ ಇದು ನನ್ನ ನಿಬಂಧನೆ. ಇದನ್ನು ಒಪ್ಪಿ, ನಿನ್ನ ಮನಸ್ಸಿಗೆ ಒಪ್ಪುವಂತೆ ನನ್ನನ್ನು ಸ್ವೀಕರಿಸು. ನಿನ್ನ ತಂದೆಯು ನನಗೆ ಈ ತರದ ಮಾತುಗಳನ್ನು ಆಡಿದ್ದಾನೆ. ಪ್ರಭುವೇ ನನ್ನ ಪತಿಯಾಗು.
ವೈಶಂಪಾಯನಃ
ತಥೇತಿ ರಾಜ್ಞಾ ಸಾ ತೂಕ್ತಾ ತತ್ರೈವ ವರವರ್ಣಿನೀ |
ಪ್ರಹರ್ಷಮತುಲಂ ಲೇಭೇ ಶ್ರುತ್ವಾ ವಾಕ್ಯಮನಿಂದಿತಾ ॥64॥
ಹಾಗೆಯೇ ಆಗಲಿ ಎಂಬ ರಾಜನ ಮಾತುಗಳನ್ನು ಕೇಳಿದ ಅನಿಂದಿತಳಾದ ಆ ಸುಂದರಿಯು ಅಲ್ಲಿಯೇ ಅಸದೃಶವಾದ ಸಂತೋಷವನ್ನು ಹೊಂದಿದಳು.
ಪ್ರತಿಜ್ಞಾಯ ತು ತತ್ ತಸ್ಯಾಸ್ತಥೇತಿ ಮನುಜಾಧಿಪಃ |
ರಥಮಾರೋಪ್ಯ ತಾಂ ದೇವೀಂ ಜಗಾಮ ಸ ತಯಾ ಸಹ ॥68॥
ಆ ರಾಜನಾದರೂ ಅವಳು ಹೇಳಿದುದಕ್ಕೆಲ್ಲಾ `ಹಾಗೆಯೇ ಆಗಲಿ' ಎಂದು ಒಪ್ಪಿ, ಅವಳನ್ನು ರಥವನ್ನು ಏರಿಸಿ, ಅವಳ ಜೊತೆಯಲ್ಲಿ ಹೊರಟನು.
ಸಾ ಚ ಶಂತನುಮಭ್ಯಾಗಾತ್ ಸಾಕ್ಷಾಲ್ಲಕ್ಷ್ಮೀರಿವಾಪರಾ |
ಆಸಾದ್ಯ ಶಂತನುಸ್ತಾಂ ಚ ಬುಭುಜೇ ಕಾಮವಾನ್ ಸುಖೀ ॥65॥
ಅವಳು ಸಾಕ್ಷಾತ್ ಲಕ್ಷ್ಮಿಯ ಇನ್ನೊಂದು ರೂಪದಂತೆ ಶಂತನುವನ್ನು ಸಮೀಪಿಸಿದಳು. ಶಂತನುವಾದರೂ ಅವಳನ್ನು ಪಡೆದು ದಿವ್ಯಕಾಮಗಳನ್ನು ಅನುಭವಿಸಿದನು.
ನ ಪ್ರಷ್ಟವ್ಯೇತಿ ಮನ್ವಾನೋ ನ ಸ ತಾಂ ಕಿಂಚಿದೂಚಿವಾನ್ |
ಸ ತಸ್ಯಾಃ ಶೀಲವೃತ್ತೇನ ರೂಪೇಣ ಪರಮೇಣ ಚ ॥66॥
ಸಮ್ಯಕ್ಚೈವೋಪಚಾರೇಣ ಸುಖಮಾರಾಧಿತೋಽಭವತ್ |
ಸ ರಾಜಾ ಪರಮಪ್ರೀತಃ ಪರಮಸ್ತ್ರೀಪ್ರಲಾಲಿತಃ ॥67॥
ಅವಳನ್ನು ಏನೂ ಕೇಳಬಾರದೆಂದು ತಿಳಿದ ಅವನು ಅವಳಿಗೂ ಏನೂ ಹೇಳಲಿಲ್ಲ. ಅವಳ ಶೀಲವೃತ್ತದಿಂದಲೂ, ಉತ್ತಮವಾದ ರೂಪದಿಂದಲೂ, ಒಳ್ಳೆಯ ಉಪಚಾರದಿಂದಲೂ ಪೂಜಿತನಾಗಿ ಒಳ್ಳೆಯ ಸುಖವನ್ನು ಕಂಡನು. ತ್ರಿಪಥಗೆಯಾದ ಆ ಗಂಗಾನದಿಯು ದಿವ್ಯರೂಪದಿಂದಲೇ ಇದ್ದಳು. ಅಂತಹ ಪರಮಸ್ತ್ರೀಯಿಂದ ಲಾಲಿತನಾದ ರಾಜನು ಬಹಳ ಸಂತೋಷವನ್ನು ಪಡೆದನು.
ದಿವ್ಯರೂಪಾ ಹಿ ಸಾ ದೇವೀ ಗಂಗಾ ತ್ರಿಪಥಗಾ ನದೀ |
ಮಾನುಷಂ ವಿಗ್ರಹಂ ಶ್ರೀಮತ್ ಕೃತ್ವಾ ವೈ ವರವರ್ಣಿನೀ ॥68॥
ಭಾಗ್ಯೋಪನತಕಾಮಸ್ಯ ಭಾರ್ಯೇವೋಪಸ್ಥಿತಾಽಭವತ್ |
ಶಂತನೋ ರಾಜಸಿಂಹಸ್ಯ ದೇವರಾಜಸಮದ್ಯುತೇಃ ॥69॥
ಆ ದಿವ್ಯರೂಪದ ಸುಂದರಿಯು ಮನುಷ್ಯದೇಹವನ್ನು ಪಡೆದು ಅದೃಷ್ಟದಿಂದ ಪೂರ್ಣವಾದ ಕಾಮವುಳ್ಳ ದೇವರಾಜ

ಸಮದ್ಯುತಿಯಾದ ರಾಜಸಿಂಹನಾದ ಶಂತನುವಿಗೆ ಭಾರ್ಯೆಯಂತೆಯೇ ಇದ್ದಳು.
ಸಂಭೋಗಸ್ನೇಹಚಾತುರ್ಯೈರ್ಹಾವಭಾವಸಮನ್ವಿತೈಃ |
ರಾಜಾನಂ ರಮಯಾಮಾಸ ಯಥಾ ರಜ್ಯೇತ ಸ ಪ್ರಭುಃ |
ಸ ರಾಜಾ ರತಿಸಕ್ತೋಽಭೂದುತ್ತಮಸ್ತ್ರೀ ಗುಣೈರ್ಹೃತಃ ॥74॥
ಸಂಭೋಗಚಾತುರ್ಯದಿಂದಲೂ, ಹಾವಭಾವಸಮನ್ವಿತವಾದ ಸ್ನೇಹಚಾತುರ್ಯದಿಂದಲೂ, ಪ್ರಭುವಾದ ರಾಜನು ಸಂತೋಷಗೊಳ್ಳುವಂತೆ ಅವಳು ಅವನನ್ನು ರಮಿಸಿದಳು. ಉತ್ತಮಸ್ತ್ರೀಯ ಗುಣಗಳಿಂದ ಅಪಹೃತನಾದ ಮನವುಳ್ಳ ರಾಜನೂ ಸಹ ರತಿಸಕ್ತನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚನತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತೈದನೆಯ ಅಧ್ಯಾಯ  ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ -ಅಧ್ಯಾಯ-11
ತತಸ್ತು ಸಾ ಶಂತನುತೋಽಷ್ಟಪುತ್ರಾನ್
ಅವಾಪ್ಯ ಸಪ್ತ ನ್ಯಹನತ್ ತಥಾಷ್ಟಮಮ್ |
ಗಂತುಂ ತತೋ ಮತಿಮಾಧಾಯ ಹಂತು-
ಮಿವೋದ್ಯೋಗಂ ಸಾ ಹಿ ಮೃಷಾ ಚಕಾರ ॥37॥
ಬಳಿಕ ಗಂಗೆ ಶಂತನುವಿನಿಂದ ಎಂಟು ಮಕ್ಕಳನ್ನು ಹಡೆದು ಏಳನ್ನು ಕೊಂದಳು. ಶಂತನುವನ್ನು ಬಿಟ್ಟು ಹೋಗುವ ನಿರ್ಧಾರ ಮಾಡಿ ಎಂಟನೇ ಮಗುವನ್ನೂ ಹಾಗೇ ಕೊಲ್ಲಲು ಯತ್ನಮಾಡುವಂತೆ ಸುಮ್ಮನೆ ತೋರಿಕೊಂಡಳು.
ಅವಸ್ಥಿತಿರ್ನಾತಿಸುಖಾಯ ಮಾನುಷೇ
ಯತಃ ಸುರಾಣಾಮತ ಏವ ಗಂತುಮ್ |
ಐಚ್ಛನ್ನ ತಸ್ಯಾ ಹಿ ಬಭೂವ ಮಾನುಷೋ
ದೇಹೋ ನರೋತ್ಥೋ ಹಿ ತದಾಸ ಶಂತನೋಃ ॥38॥
ದೇವತೆಗಳಿಗೆ ಮನುಷ್ಯರ ಬಳಿ ಇರುವುದು ಹೆಚ್ಚು ಸುಖ ನೀಡುವುದಿಲ್ಲ. ಅದರಿಂದಲೇ ಗಂಗೆ ಹೊರಟುಹೋಗಲು ಬಯಸಿದಳು. ಏಕೆಂದರೆ ಅವಳಿಗೆ ಆಗ ಮನುಷ್ಯ ಶರೀರವಿರಲಿಲ್ಲ. ದೇವತಾ ಶರೀರವೇ ಇತ್ತು. ಶಂತನುವಿಗೆ ಆಗ ದೇವತಾ ಶರೀರವಿರಲಿಲ್ಲ. ಮನುಷ್ಯನಿಂದ ಜನಿಸಿದ ಶರೀರವೇ ಇತ್ತು.
ತಾಂ ಪುತ್ರ ನಿಧನೋದ್ಯುಕ್ತಾಂ ನ್ಯವಾರಯತ ಶಂತನುಃ |
ಕಾಸಿ ತ್ವಂ ಹೇತುನಾ ಕೇನ ಹಂಸಿ ಪುತ್ರಾನ್ ನೃಶಂಸವತ್ ॥39॥
ಗಂಗೆ ಮಗನನ್ನು ಕೊಲ್ಲಲು ಉದ್ಯುಕ್ತಳಾದಾಗ ಶಂತನು ತಡೆದ. `ಯಾರು ನೀನು? ಏಕೆ ಮಕ್ಕಳನ್ನು ರಾಕ್ಷಸಿಯಂತೆ ಕೊಲ್ಲುವೆ' ಎಂದು ಕೇಳಿದ.
ರೂಪಂ ಸುರವರಸ್ತ್ರೀಣಾಂ ತವ ತೇನ ನ ಪಾಪಕಮ್ |
ಭವೇತ್ ಕರ್ಮ ತ್ವದೀಯಂ ತನ್ಮಹತ್ ಕಾರಣಮತ್ರ ಹಿ ॥40॥
`ನಿನ್ನ ಈ ರೂಪ ಉತ್ತಮ ದೇವತಾ ಸ್ತ್ರೀರೂಪ. ಅದರಿಂದ ಪಾಪಕರ್ಮ ನಿನ್ನಿಂದ ತಡೆಯಲು ಶಕ್ಯವಿಲ್ಲ. ಈ ನಿನ್ನ ರಾಕ್ಷಸೀಕೃತ್ಯದಲ್ಲಿ ಏನೋ ಮಹತ್ತಾದ ಕಾರಣವಿರಬೇಕು.
ತತ್ ಕಾರಣಂ ವದ ಶುಭೇ ಯದಿ ಮಚ್ಛ್ರೋತ್ರಮರ್ಹತಿ |
ಇತೀರಿತಾವದತ್ ಸರ್ವಂ ಪ್ರಯಯೌ ಚ ಸುರಾಪಗಾ ॥41॥
`ಮಂಗಳ ಸ್ವರೂಪಳೆ, ನನ್ನ ಕಿವಿ ಕೇಳಬಹುದಾಗಿದ್ದರೆ ಹೇಳು, ಆ ಕಾರಣವನ್ನು'. ಹೀಗೆ ಶಂತನು ಹೇಳಿದಾಗ ಗಂಗೆ ಎಲ್ಲವನ್ನೂ ಹೇಳಿ ಹೊರಟುಹೋದಳು.
ನ ಧರ್ಮೋ ದೇವತಾನಾಂ ಹಿ ಜ್ಞಾತವಾಸಶ್ಚಿರಂ ನೃಷು |
ಕಾರಣಾದೇವ ಹಿ ಸುರಾ ನೃಷು ವಾಸಂ ಪ್ರಕುರ್ವತೇ ॥42॥
ಕಾರಣಾಪಗಮೇ ಯಾಂತಿ ಧರ್ಮೋಽಪ್ಯೇಷಾಂ ತಥಾವಿಧಃ |
ಅದೃಶ್ಯತ್ವಮಸಂಸ್ಪರ್ಶೋ ಹ್ಯಸಂಭಾಷಣಮೇವ ಚ ॥43॥
ಸುರೈರಪಿ ನೃಜಾತೈಸ್ತು ಗುಹ್ಯಧರ್ಮೋ ದಿವೌಕಸಾಮ್ |
ಅತಃ ಸಾ ವರುಣಂ ದೇವಂ ಪೂರ್ವಭರ್ತಾರಮಪ್ಯಮುಮ್ ॥44॥
ನೃಜಾತಂ ಶಂತನುಂ ತ್ಯಕತ್ವ ಪ್ರಯಯೌ ವರುಣಾಲಯಮ್ |
ಸುತಮಷ್ಟಮಮಾದಾಯ ಭರ್ತುರೇವಾಪ್ಯನುಜ್ಞಯಾ |
ವಧೋದ್ಯೋಗಾನ್ನಿವೃತ್ತಾ ಸಾ ದದೌ ಪುತ್ರಂ ಬೃಹಸ್ಪತೌ ॥45॥
ಮನುಷ್ಯರಲ್ಲಿ ಬಹುಕಾಲ ಜ್ಞಾತವಾಗಿ ವಾಸಮಾಡುವುದು ದೇವತೆಗಳಿಗೆ ಧರ್ಮವಲ್ಲ. ವಿಶೇಷ ಕಾರಣವಿದ್ದಾಗಲೇ ದೇವತೆಗಳು ಮನುಷ್ಯರ ನಡುವೆ ವಾಸಮಾಡುತ್ತಾರೆ. ಆ ಕಾರಣವಿಲ್ಲದಾದಾಗ ಹೊರಟುಹೋಗುತ್ತಾರೆ. ಅವರ ಧರ್ಮವೇ ಹಾಗೆ. ಮನುಷ್ಯರಾಗಿ ಹುಟ್ಟಿದ ದೇವತೆಗಳಿಗೂ ಕಣ್ಣಿಗೆ ಕಾಣಲು ಸಿಗದಿರುವುದು. ಮುಟ್ಟಲು ಸಿಗದಿರುವುದು ಮತ್ತು ಮಾತುಕತೆಗೆ ನಿಲ್ಲದಿರುವುದು, ದೇವತೆಗಳ ರಹಸ್ಯಧರ್ಮ. ಶಂತನು ವರುಣ, ಒಬ್ಬ ದೇವ. ಗಂಗೆಗೆ ಮೊದಲು ಪತಿಯಾಗಿದ್ದವ. ಆದರೆ ಮನುಷ್ಯನಾಗಿ ಹುಟ್ಟಿದ್ದಾನೆ. ಅದರಿಂದ

ಅವನನ್ನು ತೊರೆದು ಗಂಗೆ ಪರಲೋಕಕ್ಕೆ ಹೋದಳು. ಹೋಗುವಾಗ ಎಂಟನೆ ಮಗನ ವಧೆಯ ಯತ್ನ ಕೈಬಿಟ್ಟು ಪತಿಯ ಅನುಮತಿಯಿಂದ ಅವನನ್ನು ಕರೆದುಕೊಂಡು ಹೋಗಿ ಬೃಹಸ್ಪತಿಯ ಬಳಿ ಬಿಟ್ಟಳು.
* * * *

ತೊಂಭತ್ತಾರನೆಯ ಅಧ್ಯಾಯ
(ಗಂಗೆಯಿಂದ ಸಪ್ತಶಿಶುಗಳ ಹನನ, ಅಷ್ಟಮಶಿಶುವನ್ನು ಉಳಿಸಿ, ಶಂತನುವಿಗೆ ರಹಸ್ಯವನ್ನು ತಿಳಿಸಿ, ಸ್ವರ್ಗಲೋಕ ಗಮನ.)
ವೈಶಂಪಾಯನಃ
ಅಹೋರಾತ್ರಾನೃತೂನ್ ಮಾಸಾನ್ ನ ಬುಬೋಧ ಗತಾನ್ ಬಹೂನ್ |
ರಮಮಾಣಃ ಪ್ರಿಯಾಂ ಲಬ್ಧ್ವಾ ಯಥಾಕಾಮಂ ನರಾಧಿಪಃ ॥1॥
ಆ ರಾಜನು ಪ್ರಿಯೆಯನ್ನು ಪಡೆದು, ತನ್ನ ಮನಸ್ಸಿಗೆ ತೃಪ್ತಿಯಾಗುವಂತೆ ವಿಹರಿಸುತ್ತಾ, ಕಳೆದುಹೋದ ದಿನಗಳನ್ನಾಗಲೀ, ಋತುಗಳನ್ನಾಗಲೀ, ಮಾಸಗಳನ್ನಾಗಲೀ, ಗಮನಿಸಲೇ ಇಲ್ಲ.
ಸ್ವರ್ಗಸ್ಥಾನ್ ಮಾನುಷಾಂಶ್ಚೈವ ಭೋಗಾನ್ ಭುಂಕ್ತೇ ಸ್ಮ ವೈ ನೃಪಃ |
ಆಸಾದ್ಯ ಶಂತನುಃ ಶ್ರೀಮಾನ್ ಮುಮುದೇ ಯೋಷಿತಾಂ ವರಾಮ್॥
ಶ್ರೇಷ್ಠವಾದ ವನಿತೆಯನ್ನು ಹೊಂದಿ, ಕಾಂತಿಯುಕ್ತನಾದ ಶಂತನುವು ಸ್ವರ್ಗಲೋಕದ ಭೋಗಗಳನ್ನೂ ಮನುಷ್ಯಲೋಕದ ಭೋಗಗಳನ್ನೂ ಭೋಗಿಸಿದನು.
ಋತುಕಾಲೇ ತು ಸಾ ದೇವೀ ದಿವ್ಯಂ ಗರ್ಭಮಧಾರಯತ್ |
ಅಷ್ಟಾವಜನಯತ್ ಪುತ್ರಾಂಸ್ತಸ್ಯ ಸಾ ವರವರ್ಣಿನೀ ॥3॥
ಆ ದೇವಿಯು ಋತುಕಾಲದಲ್ಲಿ ದಿವ್ಯವಾದ ಗರ್ಭವನ್ನು ಧರಿಸಿ, ಅವನಿಂದ ಎಂಟು ಮಕ್ಕಳನ್ನು ಪಡೆದಳು.
ಜಾತಂ ಜಾತಂ ಚ ಸಾ ಪುತ್ರಂ ಸಾ ಸ್ವಾಪ್ಸು ಕ್ಷಿಪತಿ ಸ್ಮ ಹ |
ಸೂತಕೇ ಕಂಠಮಾಕ್ರಮ್ಯ ತಾನ್ ನಿನಾಯ ಯಮಕ್ಷಯಮ್ ॥4॥
ಮಕ್ಕಳು ಹುಟ್ಟಿದಂತೆ, ಹುಟ್ಟಿದಂತೆ ಅವಳು ಅವುಗಳ ಕತ್ತನ್ನು ಹಿಸುಕಿ, ತನ್ನ ನೀರಿನಲ್ಲಿ ಎಸೆದು, ಯಮಲೋಕಕ್ಕೆ ಕಳುಹಿಸುತ್ತಿದ್ದಳು.
ಪ್ರೀಣಾಮಿ ತ್ವಾಮಿಹೇತ್ಯುಕತ್ವ ಸರ್ವಾನ್ ಸ್ರೋತಸ್ಯವಾಕ್ಷಿಪತ್ |
ತಸ್ಯ ತತ್ ತ್ವಪ್ರಿಯಂ ರಾಜ್ಞಃ ಶಂತನೋರ ಭವತ್ ತದಾ ॥5॥
ನಿನ್ನನ್ನು ಸಂತೋಷಪಡಿಸುತ್ತೇನೆ ಎಂದು ಹೇಳಿ, ಎಲ್ಲರನ್ನೂ ಪ್ರವಾಹದಲ್ಲಿ ಹಾಕುತ್ತಿದ್ದಳು. ಅವಳ ಆ ಕ್ರಿಯೆಯು ಶಂತನುವಿಗೆ ತುಂಬಾ ಅಪ್ರಿಯವಾಗಿದ್ದಿತು.
ನೋವಾಚ ಕಿಂಚಿದ್ ವಚನಂ ಪಿತುರ್ವಚನಯಂತ್ರಿತಃ |
ಅಮೀಮಾಂಸ್ಯಾ ಕರ್ಮಯೋನಿರಾಗಮಶ್ಚೇತಿ ಶಂತನುಃ |
ಸ್ಮರನ್ ಪಿತೃವಚಶ್ಚೈವ ನಾಪೃಚ್ಛತ್ ಪುತ್ರಕಿಲ್ಬಿಷಮ್ ॥6॥
ತಂದೆಯ ವಚನಕ್ಕೆ ಬದ್ಧನಾಗಿ ಅವನು ಇವಳ ಕರ್ಮದ ಕಾರಣವನ್ನು ಮತ್ತು ಆಗಮನವನ್ನು ವಿಚಾರವನ್ನು ಮಾಡಬಾರದೆಂದು ತಿಳಿದು, ಶಿಶುಹನನ ವಿಷಯದಲ್ಲಿ ಏನೂ ಮಾತನಾಡಲಿಲ್ಲ.
ಜಾತಾಂಜಾತಾಂಶ್ಚ ವೈ ಹಂತಿ ಸಾ ಸ್ತ್ರೀ ಸಪ್ತ ವರಾನ್ ಸುತಾನ್ |
ಶಂತನುರ್ಧರ್ಮಸಂಗಾಚ್ಚ ನಾಪೃಚ್ಛತ್ ತಾಂ ಕಥಂಚನ ॥7॥
ತಂದೆಯ ಮಾತನ್ನು ಸ್ಮರಿಸಿ, ಅವಳು ಮಕ್ಕಳಿಗೆ ಮಾಡುವ ದ್ರೋಹದ ವಿಷಯದಲ್ಲಿ ಅವಳನ್ನು ಪ್ರಶ್ನೆ ಮಾಡಲಿಲ್ಲ. ಅವಳು ಹೀಗೆ ಹುಟ್ಟಿದ ತಕ್ಷಣ ಏಳು ಮಕ್ಕಳನ್ನು ಕೊಂದಳು.
ಅಷ್ಟಮಂ ತು ಜಿಘಾಂಸಂತ್ಯಾಂ ಚುಕ್ಷುಭೇ ಶಂತನೋರ್ಧೃತಿಃ |
ಉವಾಚ ರಾಜಾ ದುಃಖಾರ್ತಃ ಪರೀಪ್ಸನ್ ಪುತ್ರಮಾತ್ಮನಃ ॥8॥
ಧರ್ಮಬದ್ಧನಾದ ಶಂತನುವು ಏನಾದರೂ ಅವಳನ್ನು ಕೇಳಲೇ ಇಲ್ಲ. ಆದರೆ ಎಂಟನೆಯ ಗರ್ಭವನ್ನು ಕೊಲ್ಲಲು ಹೊರಟಾಗ ಶಂತನುವಿನ ಧೈರ್ಯ ಕ್ಷೋಭೆಗೊಂಡಿತು. ದುಃಖಾರ್ತನಾದ ಆ ಕೌರವನಂದನನಾದ ರಾಜನು ತನ್ನ ಮಗನನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ಮಗುವನ್ನು ಕೊಲ್ಲಲು ಹೊರಟಿದ್ದ ಅವಳನ್ನು ತಡೆದು ಮಾತನಾಡಿದನು.
ಪುತ್ರಹಂತ್ರೀಂ ತದಾ ದೃಷ್ಟ್ವಾ ತಾಂ ಸ ಕೌರವನಂದನಃ |
ಅಬ್ರುವೀದ್ ಭರತಶ್ರೇಷ್ಠೋ ವಾಕ್ಯಂ ಪರಮದುಃಖಿತಃ ॥9॥
ಮಾ ವಧೀಃ ಕಾಽಸಿ ಕಸ್ಯಾಸಿ ಕಿಂ ತ್ವಂ ಹಂಸಿ ಸುತಾನಿತಿ |
ಪುತ್ರಘ್ನಿ ಸುಮಹತ್ಪಾಪಂ ಮಾ ಕಾರ್ಷೀಃ ಕರ್ಮ ನಿಂದಿತಮ್ ॥10॥
ಭರತಶ್ರೇಷ್ಠನಾದ ಅವನು ಪರಮದುಃಖಿತನಾಗಿ ಹೀಗೆ ಮಾತನಾಡಿದನು. ಕೊಲ್ಲಬೇಡ ನೀನು ಯಾರು? ಯಾರಿಗೆ ಸೇರಿದವಳು? ಏತಕ್ಕೆ ಮಕ್ಕಳನ್ನು ಕೊಲ್ಲುತ್ತಿಯೆ? ಮಕ್ಕಳನ್ನು ಕೊಲ್ಲುವವಳೇ, ಅಂತಹ ನಿಂದಿತವಾದ ಮಹಾಪಾಪಕಾರ್ಯವನ್ನು ಮಾಡಬೇಡ.
ಗಂಗಾ
ಪುತ್ರಕಾಮ ನ ತೇ ಪುತ್ರಂ ಹನ್ಮಿ ಪುತ್ರವತಾಂ ವರ |
ಜೀರ್ಣಸ್ತು ಮಮ ವಾಸೋಽಯಂ ಯಥಾ ಸ ಸಮಯಃ ಕೃತಃ ॥11॥
ಮಕ್ಕಳನ್ನು ಪಡೆದವರಲ್ಲಿ ಶ್ರೇಷ್ಠನಾದ ಎಲೈ ಪುತ್ರಕಾಮನೇ, ನಾನು ನಿನ್ನ ಮಗನನ್ನು ಕೊಲ್ಲುವುದಿಲ್ಲ. ನಾನು ಮೊದಲು ನಿಬಂಧನೆ

ಮಾಡಿದಂತೆ ನಿನ್ನ ಗೃಹದಲ್ಲಿ ನನ್ನ ವಾಸದ ಸಮಯವು ಮುಗಿದಿದೆ.
ಅಹಂ ಗಂಗಾ ಜಹ್ನುಸುತಾ ಮಹರ್ಷಿಗಣಸೇವಿತಾ |
ದೇವಕಾರ್ಯಾರ್ಥಸಿದ್ಧ್ಯರ್ಥಮುಷಿತಾಽಹಂ ತ್ವಯಾ ಸಹ ॥12॥
ನಾನು ಜಹ್ನುಸುತೆಯಾದ ಗಂಗೆ, ಮಹರ್ಷಿಗಳ ಸಮೂಹದಿಂದ ಸೇವಿತಳಾದವಳು. ದೇವಕಾರ್ಯವನ್ನು ಸಾಧಿಸುವುದಕ್ಕಾಗಿ ನಿನ್ನ ಬಳಿ ವಾಸಿಸಿದೆ.
ಅಷ್ಟೌ ಹಿ ವಸವೋ ದೇವಾ ಮಹಾಭಾಗಾ ಮಹೌಜಸಃ |
ಆಪವಸ್ಯಾಭಿಶಾಪೇನ ಮಾನುಷೇಷೂಪಪಾದಿತಾಃ ॥13॥
ಯಮುನೆಯಲ್ಲಿ ಹುಟ್ಟಿದ್ದರಿಂದ ವಸಿಷ್ಠರು `ಆಪವ' ಅದ್ಭ್ಯಃ ಸಂಭೂತ ಹಿರಣ್ಯಗರ್ಭಃ' ಎಂಬ ಮಾತಿನಿಂದ ಬ್ರಹ್ಮದೇವರೂ `ಆಪವ'. ಎಲೈ ಮಹಾನುಭಾವನೇ, ಮಹಾಸಾಮರ್ಥ್ಯವುಳ್ಳ ದೇವತೆಗಳಾದ ಅಷ್ಟವಸುಗಳು ಬ್ರಹ್ಮದೇವರ ಮತ್ತು ವಸಿಷ್ಠರ ಶಾಪದಿಂದ ಮಾನುಷಯೋನಿಯಲ್ಲಿ ಜನಿಸಿದರು.
ತೇಷಾಂ ಜನಯಿತಾ ನಾನ್ಯಸ್ತ್ವದೃತೇ ಭುವಿ ವಿದ್ಯತೇ |
ಜನಿತ್ರೀ ಮದ್ವಿಧಾ ಧಾತ್ರೀ ನೈವಾಸ್ತಿ ಮನುಜಾಧಿಪ ॥14॥
ಭೂಮಿಯಲ್ಲಿ ನಿನ್ನನ್ನು ಬಿಟ್ಟು, ಅವರಿಗೆ ತಂದೆಯಾಗುವ ಯೋಗ್ಯತೆ ಯಾರಿಗೂ ಇರಲಿಲ್ಲ. ಮನುಜಾಧಿಪನೇ, ನನ್ನಂತಹ ತಾಯಿಯೂ ಮತ್ತು ಸಾಕುವವಳೂ ಯಾರೂ ಇರಲಿಲ್ಲ.
ತಸ್ಮಾದ್ ವಿಜನನೇ ಯುಕ್ತಾ ತ್ವತ್ಸಂಯೋಗಮರೋಚಯಮ್ |
ಜನಯಿತ್ವಾ ವಸೂನಷ್ಟೌ ಜಿತಾ ಲೋಕಾಶ್ಚ ಪುಷ್ಕಲಾಃ ॥15॥
ಆದ್ದರಿಂದ ಮಕ್ಕಳನ್ನು ಪಡೆಯುವವುದರಲ್ಲಿ ನಿಯುಕ್ತಳಾಗಿ ನಿನ್ನ ಸಹವಾಸವನ್ನು ಇಷ್ಟಪಟ್ಟು ಮಾಡಿದೆ. ಎಂಟು ವಸುಗಳನ್ನು ಮಕ್ಕಳಾಗಿ ಪಡೆದು, ನೀನು ಪುಷ್ಕಲವಾದ ಲೋಕವನ್ನು ಸಂಪಾದಿಸಿದ್ದಿಯೆ.
ದೇವಾನಾಂ ಸಮಯಸ್ತ್ವೇಷ ವಸೂನಾಂ ಸಂಶ್ರುತೋ ಮಯಾ |
ಜಾತಂ ಜಾತಂ ಮೋಕ್ಷಯಿಷ್ಯೇ ನಿಯೋಗಾನ್ಮಾನುಷೇಷ್ವಿತಿ ॥16॥
ಇದು ದೇವತೆಗಳ ನಿಬಂಧನೆ. ಹುಟ್ಟಿದ ಹುಟ್ಟಿದ ಮಕ್ಕಳನ್ನು ನಾನು ಮನುಷ್ಯಯೋನಿಯಿಂದ ಬಿಡಿಸುತ್ತೇನೆ ಎಂದು ದೇವತೆಗಳಿಗೆ ವಚನ ಕೊಟ್ಟಿದ್ದೆ. ದೇವತೆಗಳ ನಿಯೋಗದಂತೆ ಹೀಗೆ ಮಾಡಿದ್ದೇನೆ.
ಶಪ್ತಾಃ ಶಾಪಾದ್ ವಿಮುಕ್ತಾಸ್ತೇ ತ್ವತ್ಕೃತೇಽಯಂ ನ ಮುಚ್ಯತೇ |
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಪುತ್ರಂ ಪಾಹಿ ಮಹಾವ್ರತಮ್ ॥17॥
ಶಪ್ತರಾದ ಏಳು ವಸುಗಳು ಶಾಪದಿಂದ ಮುಕ್ತರಾಗಿದ್ದಾರೆ. ನಿನ್ನ ಸಲುವಾಗಿ ಈ ಎಂಟನೆಯವನನ್ನು ಉಳಿಸುತ್ತೇನೆ. ನಿನಗೆ ಮಂಗಳವಾಗಲಿ. ನಾನು ಹೋಗಿ ಬರುತ್ತೇನೆ. ಮಹಾವ್ರತನಾದ ನಿನ್ನ ಮಗನನ್ನು ರಕ್ಷಿಸು.
ಅಯಂ ತವ ಸುತಸ್ತೇಷಾಂ ವೀರ್ಯೇಣ ಕುಲನಂದನಃ |
ಸಂಭೂತೋಽತಿ ಜನಾನನ್ಯಾನ್ ಭವಿಷ್ಯತಿ ನ ಸಂಶಯಃ ॥18॥
ಈ ನಿನ್ನ ಮಗನು ಅವರೆಲ್ಲರ ಸಾಮರ್ಥ್ಯದ ಒಂದು ಭಾಗವನ್ನು ತೆಗೆದುಕೊಂಡು ಜನಿಸಿದ್ದಾನೆ. ಇವನು ಬೇರೆ ಜನರನ್ನು ಮೀರಿರುತ್ತಾನೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಏಷ ಪರ್ಯಾಯವಾಸಸ್ಥೋ ದೇವಸ್ತ್ವತ್ಸದೃಶೋಽಷ್ಟಮಃ |
ಮತ್ಪ್ರಸಾದಾಚ್ಚ ಜಾನೀಹಿ ಗಂಗಾದತ್ತಮಿಮಂ ಸುತಮ್ ॥19॥
ಇವನು ನನ್ನ ಅನುಗ್ರಹದಿಂದ ದೇವಲೋಕದಲ್ಲಿ (ಬೃಹಸ್ಪತಿಯ ಜೊತೆಯಲ್ಲಿಯೂ) ಮತ್ತು ಮನುಷ್ಯಲೋಕದಲ್ಲಿ ಪರುಶುರಾಮರ ಸಮೀಪದಲ್ಲಿಯೂ ವಾಸಿಸುವವನು. ಈ ಎಂಟನೆಯ ಮಗು ನಿನಗೆ ಸದ್ರುಶನಾದ ದೇವತೆ. ಇವನನ್ನು ಗಂಗಾದತ್ತನೆಂದು ತಿಳಿ.
ತಸ್ಮಾದ್ ದೇವವ್ರತಶ್ಚೈವ ಗಂಗಾದತ್ತಶ್ಚ ವೀರ್ಯವಾನ್ |
ದ್ವಿನಾಮಾ ಶಂತನೋಃ ಪುತ್ರಃ ಶಂತನೋರಧಿಕೋ ಗುಣೈಃ |
ತೇಷಾಂ ಲೋಕಾನವಾಪ್ನೋತಿ ವಸೂನಾಂ ವಸುಧಾಧಿಪ ॥20॥
ಎಲೈ ರಾಜನೇ, ಆದ್ದರಿಂದ ಶಂತನುವಿನ ವೀರ್ಯವಂತನಾದ ಮಗನಿಗೆ `ದೇವವ್ರತ' ಮತು `ಗಂಗಾದತ್ತ' ಎಂದು ಎರಡು ಹೆಸರುಗಳು. ಅವನು ತನ್ನ ಗುಣಗಳಿಂದ ಶಂತನುವನ್ನು ಮೀರಿಸಿ ಕೊನೆಯಲ್ಲಿ ವಸುಗಳ ಲೋಕವನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಣ್ಣವತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತಾರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ -ಅಧ್ಯಾಯ-11
ಅಥಾಷ್ಟಮೋ ವಸುರಾಸೀದ್ ದ್ಯುನಾಮಾ
ವರಾಂಗಿನಾಮ್ನ್ಯಸ್ಯ ಬಭೂವ ಭಾರ್ಯಾ |
ಬಭೂವ ತಸ್ಯಾಶ್ಚ ಸಖೀ ನೃಪಸ್ಯ
ಸುವಿಂದನಾಮ್ನೋ ದಯಿತಾ ಸನಾಮ್ನೀ ॥22॥

ಅಷ್ಟಮ ವಸುವಿಗೆ ದ್ಯು ಎಂಬ ಹೆಸರೂ ಇದ್ದಿತು. ಅವನಿಗೆ ವರಾಂಗಿ ಎಂಬ ಪತ್ನಿ ಇದ್ದಳು. ಅವಳಿಗೆ ತನ್ನ ಹೆಸರಿನವಳೆ ಆದ ಗೆಳತಿ ಇದ್ದಳು. ಅವಳು ಸುವಿಂದ ಎಂಬ ಹೆಸರಿನ ರಾಜನ ಹೆಂಡತಿ.

ತಸ್ಯಾ ಜರಾಮೃತಿವಿಧ್ವಂಸಹೇತೋ-
ರ್ವಸಿಷ್ಠಧೇನುಂ ಸ್ವಮೃತಂ ಕ್ಷರಂತೀಮ್ |
ಜರಾಪಹಾಂ ನಂದಿನಿನಾಮಧೇಯಾಂ
ಬದ್ಧುಂ ಪತಿಂ ಚೋದಯಾಮಾಸ ದೇವೀ ॥23॥

ದೇವಿ ವರಾಂಗಿ ತನ್ನ ಗೆಳತಿಯಾದ ವರಾಂಗಿಗೆ ಜರೆ ಮರಣವಿಲ್ಲದಂತೆ ಮಾಡುವ ಉದ್ದೇಶದಿಂದ ಉತ್ತಮ ಅಮೃತವನ್ನು ನೀಡುವ, ಜರೆಯನ್ನು ಕಳೆವ, ನಂದಿನಿ ಎಂಬ ಹೆಸರಿನ ವಸಿಷ್ಠಧೇನುವನ್ನು ಕಟ್ಟಿ ತರಲು ಪತ್ನಿಯನ್ನು ಪ್ರೇರಿಸಿದಳು.

ತಯಾ ದ್ಯುನಾಮಾ ಸ ವಸುಃ ಪ್ರಚೋದಿತೋ
ಭ್ರಾತೃಸ್ನೇಹಾತ್ ಸಪ್ತಭಿರನ್ವಿತೋಽಪರೈಃ |
ಬಬಂಧ ತಾಂ ಗಾಮಥ ತಾನ್ ಶಶಾಪ
ವಸಿಷ್ಠ ಸಂಸ್ಥಃ ಕಮಲೋದ್ಭವಃ ಪ್ರಭುಃ ॥24॥

ವರಾಂಗಿಯಿಂದ ಪ್ರೇರಿತನಾದ ದ್ಯುಮನಾಮಕನಾದ ವಸು ಸೋದರ ಸ್ನೇಹದಿಂದ ಬಂದ ಬೇರೆ ಏಳು ಮಂದಿ ವಸುಗಳೊಂದಿಗೆ ಹೋಗಿ ಆ ನಂದಿನಿ ಹಸುವನ್ನು ಕಟ್ಟಿದ. ಆಗ ವಸಿಷ್ಠನಲ್ಲಿದ್ದ ಶಕ್ತಿಶಾಲಿಯಾದ ಬ್ರಹ್ಮ ಶಪಿಸಿದ.

ಅಧರ್ಮವೃತ್ತಾಃ ಪ್ರತಿಯಾತ ಮಾನುಷೀಂ
ಯೋನಿಂ ದ್ರುತಂ ಯತ್ಕೃತೇ ಸರ್ವ ಏವ |
ಧರ್ಮಾಚ್ಯುತಾಃ ಸ ತಥಾಷ್ಟಾಯುರಾಪ್ಯತಾ
ಮನ್ಯೇ ಪುನಃ ಕ್ಷಿಪ್ರಮತೋ ವಿಮೋಕ್ಷ್ಯಥ ॥25॥

`ಅಧರ್ಮದಲ್ಲಿ ಪ್ರವೃತ್ತರಾದ ನೀವು ಬೇಗನೆ ಮನುಷ್ಯ ಜನ್ಮ ಹೊಂದಿರಿ. ಯಾರಿಗಾಗಿ ನೀವೆಲ್ಲರೂ ಧರ್ಮಚ್ಯುತರಾದಿರೋ ಅವನು ಎಂಟೂ ಮಂದಿಗಳ ಆಯುಷ್ಯ ಹೊಂದಿರಲಿ. ಉಳಿದವರು ಬೇಗನೆ ಮುಕ್ತರಾಗಿರಿ.

ಪ್ರಚೋದಯಾಮಾಸ ಚ ಯಾ ಕುಮಾರ್ಗೇ
ಪತಿಂ ಹಿ ಸಾಂಬೇತಿ ನರೇಷು ಜಾತಾ |
ಅಭರ್ತೃಕಾ ಪುಂಸ್ತ್ವಸಮಾಶ್ರಯೇಣ
ಪತ್ಯುರ್ಮೃತೌ ಕಾರಣತ್ವಂ ವ್ರಜೇತ ॥26॥

`ಪತಿಯನ್ನು ದುರ್ಮಾರ್ಗದಲ್ಲಿ ಪ್ರೇರಿಸಿದ ವರಾಂಗಿ ಅಂಬೆ ಎಂಬ ಹೆಸರಿನಿಂದ ಮನುಷ್ಯ ಜನ್ಮ ಹೊಂದಲಿ. ಪತಿರಹಿತಳಾಗಿ ಪುರುಷತ್ವವನ್ನು ಸಂಪಾದಿಸಿ ಪತಿಯ ಮರಣಕ್ಕೂ ಕಾರಣಳಾಗಲಿ'.

ಭವತ್ವಸೌ ಬ್ರಹ್ಮಚರ್ಯೈಕನಿಷ್ಠೋ ಮಹಾನ್ ವಿರೋಧಶ್ಚ ತಯೋರ್ಭವೇತ|
ಸ ಗರ್ಭವಾಸಾಷ್ಟಕದುಃಖಮೇವ ಸಮಾಪ್ನುತಾಂ ಶರತಲ್ಪೇ ಶಯಾನಃ ॥27॥

`ದ್ಯು ಕೇವಲ ಬ್ರಹ್ಮಚರ್ಯದಲ್ಲಿರಲಿ. ಪತಿಪತ್ನಿಯರಿಬ್ಬರೊಳಗೆ ಮಹಾ ವಿರೋಧ ಉಂಟಾಗಲಿ. ಆತ ಶರಮಂಚದಲಿ ಮಲಗಿ ಎಂಟು ಗರ್ಭವಾಸಗಳ ದುಃಖ ಹೊಂದಲಿ'.

ಮೃತ್ಯಷ್ಟಕೋತ್ಥಾಮಪಿ ವೇದನಾಂ ಸಃ
ಪ್ರಾಪ್ನೋತು ಶಸ್ತ್ರೈರ್ಬಹುಧಾ ನಿಕೃತ್ತಃ |
ಇತೀರಿತಾಸ್ತೇ ಕಮಲೋದ್ಭವಂ ತಂ
ಜ್ಞಾತ್ವಾ ಸಮುತ್ಸೃಜ್ಯ ಚ ಗಾಂ ಪ್ರಣೇಮುಃ ॥28॥

`ಎಂಟು ಮರಣಗಳಿಂದಾಗಬಹುದಾದ ವೇದನೆಯನ್ನು ಆತ ಶಸ್ತ್ರಗಳಿಂದ ನಾನಾ ಬಗೆಯಲ್ಲಿ ಛಿನ್ನಭಿನ್ನನಾಗುತ್ತ ಅನುಭವಿಸಲಿ'. ಹೀಗೆ ಶಪ್ತರಾದ ವಸುಗಳು ಶಾಪಕೊಟ್ಟವನು ಬ್ರಹ್ಮನೆ ಎಂದು ತಿಳಿದು ಗೋವನ್ನು ಬಿಟ್ಟು ಕೊಟ್ಟು ತಲೆಬಾಗಿದರು.

ನ ಮಾನುಷೀಂ ಗರ್ಭಮವಾಪ್ನುಮೋ ವಯಂ
ಭವತ್ವಯಂ ಸರ್ವವಿತ್ ಕೀರ್ತಿಮಾಂಶ್ಚ |
ಮಹಾಸ್ತ್ರವೇತ್ತಾ ಭವದಂಶಯುಕ್ತ
ಸ್ತಥಾ ಬಲಂ ನೋಽಖಿಲಾನಾಮುಪೈತು ॥29॥

`ನಾನು ಮನುಷ್ಯಸ್ತ್ರೀಯ ಗರ್ಭವನ್ನು ಪ್ರವೇಶಿಸಿದಂತಾಗಲಿ. ಈ ದ್ಯುನಾಮಕ ವಸು ನಿನ್ನ ಅಂಶಯುಕ್ತನಾಗಿದ್ದು ಸರ್ವಜ್ಞನಾಗಲಿ. ಕೀರ್ತಿಶಾಲಿಯಾಗಲಿ. ಮಹಾ ಅಸ್ತ್ರಜ್ಞನೆನಿಸಿ ನಮ್ಮೆಲ್ಲರ ಬಲವನ್ನು ಹೊಂದಿರಲಿ'.

ಇತೀರಿತೇಽಸ್ತ್ವಿತ್ಯುದಿತಾಃ ಸ್ವಯಂಭುವಾ
ವಸಿಷ್ಠಸಂಸ್ಥೇನ ಸುರಾಪಗಾಂ ಯಯುಃ |
ಊಚುಸ್ತಥೈನಾಮುದರೇ ವಯಂ ತೇ
ಜಾಯೇಮಹಿ ಕ್ಷಿಪ್ರಮಸ್ಮಾನ್ ಹನ ತ್ವಮ್ ॥30॥

ಹೀಗೆ ವಸುಗಳು ಹೇಳಿದಾಗ ವಸಿಷ್ಠನಲ್ಲಿದ್ದ ಬ್ರಹ್ಮ `ತಥಾಸ್ತು' ಎಂದ. ಬಳಿಕ ವಸುಗಳು ಗಂಗೆಯ ಬಳಿಗೆ ಹೋದರು. `ನಾವು ನಿನ್ನ ಗರ್ಭದಲ್ಲಿ ಜನಿಸುವೆವು. ಆಗ ನೀನು ಬೇಗನೆ ನಮ್ಮನ್ನು ಕೊಲ್ಲಬೇಕು' ಎಂದರು.

ಇತೀರಿತಾ ಸಾ ವರಮಾಶು ವವ್ರೇ
ತೇಭ್ಯೋಪ್ಯಪಾಪತ್ವಮಥ ಪ್ರಿಯತ್ವಮ್ |

ತೇಷಾಂ ಸದ್ಯೈವಾತ್ಮನ ಏಕಮೇಷಾಂ
ದೀರ್ಘಾಯುಷಂ ತಾನ್ ಸುಷುವೇऽಥ ಶಂತನೋಃ ॥31॥
ವಸುಗಳು ಹೀಗೆ ಹೇಳಿದಾಗ ಗಂಗೆ ಬೇಗನೆ ವರ ಬೇಡಿದಳು. `ನನಗೆ ಮಕ್ಕಳನ್ನು ಕೊಂದ ಪಾಪ ಬರಬಾರದು. ಕೊಂದರೂ ನಾನು ಅವರಿಗೆ ಪ್ರಿಯಳಾಗಿರಬೇಕು. ಅವರಲ್ಲಿ ಒಬ್ಬ ಮಗ ದೀರ್ಘಾಯುಷಿಯಾಗಿ ಬದುಕಿರಬೇಕು' ಎಂದು. ಬಳಿಕ ಗಂಗೆ ಶಂತನುವಿನಿಂದ ಮಕ್ಕಳನ್ನು ಹಡೆದಳು.
ಅವಿಘ್ನತಸ್ತಾನ್ ವಿನಿಹಂತುಮೇವ
ಪುರಾ ಪ್ರತೀಪಸ್ಯ ಹಿ ದಕ್ಷಿಣೋರುಮ್ ।
ಸಮಾಶ್ರಿತಾ ಕಾಮಿನೀವತ್ ತ್ವಕಾಮಾ
ತತ್ಪುತ್ರಭಾರ್ಯಾ ಭವಿತುಂ ವಿಡಂಬಾತ್ ॥32॥
ಮಕ್ಕಳನ್ನು ಹಡೆದು ಕೊಲ್ಲುವ ಉದ್ದೇಶದಿಂದ ಮೊದಲಿಗೆ ಶಂತನುವನ್ನು ನಿರ್ವಿಘ್ನವಾಗಿ ಮದುವೆಯಾಗುವುದಕ್ಕಾಗಿ ಗಂಗೆ ಪ್ರತೀಪರಾಜನ ಬಲತೊಡೆಯ ಮೇಲೆ, ತಾನು ಅವನನ್ನು ಕಾಮಿಸದಿದ್ದರೂ ಸಾಧಾರಣ ಮಾನವಸ್ತ್ರೀಯನ್ನು ಅನುಕರಿಸುತ್ತ ಕಾಮಿಸಿದವಳಂತೆ, ಕುಳಿತಳು. ಬಲತೊಡೆಯಲ್ಲಿ ಕುಳಿತುದು ಅವನ ಮಗನ ಪತ್ನಿಯಾಗುವುದಕ್ಕಾಗಿ.
ತೇನೈವ ಚೋಕ್ತಾ ಭವ ಮೇ ಸುತಸ್ಯ
ಭಾರ್ಯಾ ಯತೋ ದಕ್ಷಿಣೋರುಸ್ಥಿತಾಸಿ ।
ಭಾಗೋ ಹಿ ದಕ್ಷೋ ದುಹಿತುಃ ಸ್ನುಷಾಯಾ
ಭಾರ್ಯಾ ಭಾಗೋ ವಾಮ ಇತಿ ಪ್ರಸಿದ್ಧಃ ॥33॥
`ಗಂಗೆ, ನೀನು ಬಲತೊಡೆಯಲ್ಲಿ ಕುಳಿತುದರಿಂದ ನನ್ನ ಮಗನಿಗೆ ಪತ್ನಿಯಾಗು' ಎಂದು ಪ್ರತೀಪನೇ ಹೇಳಿದ. ಏಕೆಂದರೆ ಬಲಭಾಗ ಮಗಳ ಇಲ್ಲವೆ ಸೊಸೆಯ ಸ್ಥಾನ. ಎಡಭಾಗ ಪತ್ನೀಸ್ಥಾನ ಎಂದು ಪ್ರಸಿದ್ಧ.
ಉವಾಚ ಸಾ ತಂ ನ ತು ಮಾಂ ಸುತಸ್ತೇ
ಕಾಸೀತಿ ಪೃಚ್ಛೇನ್ನ ತು ಮಾಂ ನಿವಾರಯೇತ್ ।
ಅಯೋಗ್ಯಕರ್ತ್ರೀಮಪಿ ಕಾರಣಂ ಚ
ಮತ್ಕರ್ಮಣೋ ನೈವ ಪೃಚ್ಛೇತ್ ಕದಾಚಿತ್ ॥34॥
`ನಿನ್ನ ಮಗ ನನ್ನನ್ನು ನೀನಾರೆಂದು ಕೇಳಕೂಡದು. ನಾನು ಅಯುಕ್ತವಾದುದನ್ನು ಏನು ಮಾಡುತ್ತಿದ್ದರೂ ಆತ ತಡೆಯಬಾರದು. ನಾನು ಹಾಗೆ ಮಾಡುವುದಕ್ಕೆ ಕಾರಣವನ್ನೂ ಎಂದೂ ಕೇಳಬಾರದು.
ಯದಾ ತ್ರಯಾಣಾಮಪಿ ಚೈಕಮೇಷ ಕರೋತಿ ಗಚ್ಛೇಯಮಹಂ ವಿಸೃಜ್ಯ ।
ತದಾ ತ್ವದೀಯಂ ಸುತಮಿತ್ಯುದೀರಿತೇ ತಥೇತಿ ರಾಜಾಪ್ಯವದತ್ ಪ್ರತೀಪಃ ॥
`ಈ ಮೂರರೊಳಗೆ ಒಂದನ್ನು ಮಾಡಿದರೂ ನಾನು ನಿನ್ನ ಮಗನನ್ನು ತೊರೆದು ಹೋಗುವೆನು'. ಗಂಗೆ ಹೀಗೆ ಹೇಳಿದಾಗ ಪ್ರತೀಪರಾಜ `ಹಾಗೇ ಆಗಲಿ' ಎಂದ.
ತಥೈವ ಪುತ್ರಾಯ ಚ ತೇನ ತದ್ವಚೋ
ವಧೂಕ್ತಮುಕ್ತಂ ವಚನಾದ್ ದ್ಯುನದ್ಯಾಃ ।
ಕನೀಯಸೇ ಸಾ ಹ್ಯವದತ್ ಸುತಸ್ತೇ
ನಾನ್ಯಃ ಪತಿಃ ಶಂತನುರೇವ ಮೇ ವೃತಃ ॥36॥
ಗಂಗೆಯ ಮಾತಿನಂತೆ ಅವಳು ಹೇಳಿದ ಮಾತನ್ನು ಹಾಗೆಯೇ ರಾಜ ತನ್ನ ಮಗನಿಗೆ ಹೇಳಿದ. ಏಕೆಂದರೆ ಅವಳು ಹೇಳಿದ್ದಳು, `ನಿನ್ನ ಮಗನಾದ ಶಂತನುವೆ ನಾನು ವರಿಸುವ ಪತಿ, ಇನ್ನಾರೂ ಅಲ್ಲ'.
*****
ತೊಂಭತ್ತೇಳನೆಯ ಅಧ್ಯಾಯ
(ವಸುಗಳಿಗೆ ವಸಿಷ್ಠರಿಂದ ಶಾಪ ಬಂದ ಪ್ರಕಾರ)
ಶಂತನುಃ
ಆಪವೋ ನಾಮ ಕೋನ್ವೇಷ ಕಿಮ್ಮೃಷೇಸ್ತಸ್ಯ ದೂಷಿತಮ್ ।
ಶಶಾಪ ಯಸ್ಮಾತ್ ಕಲ್ಯಾಣಿ ಸ ವಸೂಂಶ್ಚಾರುದರ್ಶನೇ ।
ಯಸ್ಯಾಭಿಶಾಪಾತ್ ತೇ ಸರ್ವೇ ಮಾನುಷೀಂ ಯೋನಿಮಾಗತಾಃ ॥
ಎಲೌ ಚಾರುನೇತ್ರೆಯಾದ ಕಲ್ಯಾಣಿಯೇ, `ಆಪವ' ಎಂದರೆ ಯಾರು? ಆ ಋಷಿಗಳಿಗೆ ಈ ವಸುಗಳು ಮಾಡಿದ ಅಪರಾಧವೇನು? ಯಾವ ಶಾಪದ ನಿಮಿತ್ತದಿಂದ ಅವರೆಲ್ಲರೂ ಮನುಷ್ಯಯೋನಿಯಲ್ಲಿ ಜನಿಸಿದರೋ, ಅಂತಹ ಶಾಪಕ್ಕೆ ಕಾರಣವಾದ ಅಪರಾಧವೇನು ?
ಅನೇನ ಚ ವಿಶೇಷೇಣ ಗಂಗಾದತ್ತೇನ ಕಿಂ ಕೃತಮ್ ।
ಕಸ್ಯ ಚೈವ ಕೃತೇನಾಯಂ ಮಾನುಷೇಷು ವಸಿಷ್ಯತಿ ॥2॥
ಈಶಾನಾಃ ಸರ್ವಲೋಕಾನಾಂ ವಸವಃ ಕೇನ ಹೇತುನಾ ।
ಮಾನುಷೇಷೂದಪದ್ಯಂತ ತತ್ ಸಮಾಚಕ್ಷ್ವ ಜಾಹ್ನವಿ ॥3॥
ಈ ಎಂಟನೆಯ ಮಗನಾದ ಗಂಗಾದತ್ತನು ಯಾವ ನಿಮಿತ್ತದಿಂದ ಮನುಷ್ಯ ಲೋಕದಲ್ಲಿ ವಾಸಮಾಡುತ್ತಾನೆಯೋ, ಅಂತಹ ವಿಶೇಷವಾದ ಕಾರ್ಯವು ಇವನಿಂದ ಏನು ಮಾಡಲ್ಪಟ್ಟಿತು? ಎಲೌ ಜಾಹ್ನವಿಯೇ, ಎಲ್ಲ ಲೋಕಕ್ಕೂ ಒಡೆಯರಾದ ವಸುಗಳು ಯಾವ ಕಾರಣದಿಂದ ಮನುಷ್ಯಯೋನಿಯಲ್ಲಿ ಜನಿಸಿದರೆಂದು ನನಗೆ ಹೇಳು.

ವೈಶಂಪಾಯನಃ
ಏವಮುಕ್ತ್ವಾ ವರಾರೋಹಾ ರಾಜಾನಮಿದಮಬ್ರವೀತ್ |
ಭರ್ತಾರಂ ಜಾಹ್ನವೀ ದೇವೀ ಶಂತನುಂ ಭರತರ್ಷಭ ||4||
ಭರತರ್ಷಭನೇ ಹೀಗೆ ಹೇಳಲ್ಪಟ್ಟ ಸುಂದರಿಯಾದ ಗಂಗಾದೇವಿ ತನ್ನ ಪತಿಯಾದ ಶಂತನುರಾಜನನ್ನು ಕುರಿತು ಇದನ್ನು ಮಾತನಾಡಿದಳು.
ಲೇಭೇ ಯಂ ಯಮುನಾ ಪುತ್ರಂ ವರುಣಾದ್ ರಾಜಸತ್ತಮ |
ವಸಿಷ್ಠನಾಮಾ ಸ ಮುನಿಃ ಖ್ಯಾತ ಆಪವ ಇತ್ಯುತ ||5||
ಎಲೈ ರಾಜಶ್ರೇಷ್ಠನೇ, ಯಮುನೆಯು ವರುಣನಿಂದ ಯಾವ ಮಗನನ್ನು ಪಡೆದಳೋ, ಅವನು ಲೋಕದಲ್ಲಿ `ವಸಿಷ್ಠ' ಎಂಬ ಹೆಸರಿನಿಂದಲೂ ಮತ್ತು ಆಪವ' ಎಂಬ ಹೆಸರಿನಿಂದಲೂ ಖ್ಯಾತನಾದನು.
ತಸ್ಯಾಶ್ರಮಪದಂ ಪುಣ್ಯಂ ಮೃಗಪಕ್ಷಿಗಣಾನ್ವಿತಮ್ |
ಮೇರೋಃ ಪಾರ್ಶ್ವೇ ನಗೇಂದ್ರಸ್ಯ ಸರ್ವರ್ತುಕವನಾನ್ವಿತಮ್ ||6||
ಮೃಗಪಕ್ಷಿಗಳ ಸಮೂಹದಿಂದ ಆವೃತವಾದ ಎಲ್ಲ ಋತುಗಳಿಗೂ ಒಪ್ಪುವ ವನಗಳಿಂದ ಕೂಡಿದ ಆ ಋಷಿಗಳ ಪವಿತ್ರವಾದ ಆಶ್ರಮವು ಮೇರು ಪರ್ವತದ ಪಾರ್ಶ್ವದಲ್ಲಿದೆ.
ಸ ವಾರುಣಿಸ್ತಪಸ್ತೇಪೇ ತಸ್ಮಿನ್ ಭರತಸತ್ತಮ |
ವನೇ ಪುಣ್ಯಕೃತಾಂ ಶ್ರೇಷ್ಠಃ ಸ್ವಾದುಮೂಲಫಲೋದಕೇ ||7||
ಎಲೈ ಭರತ ಶ್ರೇಷ್ಠನೇ, ವರುಣನ ಮಗನಾದ ಪುಣ್ಯವನ್ನು ಆಚರಿಸುವವರಲ್ಲಿ ಶ್ರೇಷ್ಠನಾದ ಆ ಋಷಿಯು ರುಚಿಕರವಾದ ಕಂದಮೂಲ ಮತ್ತು ಉದಕವಿರುವ ಆ ವನದಲ್ಲಿ ತಪಸ್ಸನ್ನು ಮಾಡಿದನು.
ದಕ್ಷಸ್ಯ ದುಹಿತಾ ಯಾ ತು ಸುರಭೀತ್ಯಭಿವಿಶ್ರುತಾ |
ಗಾಂ ಪ್ರಜಾತಾ ತು ಸಾ ದೇವೀ ಕಾಶ್ಯಪಾದ್ ಭರತರ್ಷಭ ||8||
ಭರತರ್ಷಭನೇ, ದಕ್ಷನ ಸುರಭಿಯೆಂದು ಖ್ಯಾತಳಾದ ಮಗಳು ಕಾಶ್ಯಪರಿಂದ ಗೋವನ್ನು ಪಡೆದಳು.
ಅನುಗ್ರಹಾರ್ಥಂ ಜಗತಃ ಸರ್ವಕಾಮದುಹಾಂ ವರಾಮ್ |
ಲೇಭೇ ತಾಂ ಗಾಂ ತು ಧರ್ಮಾತ್ಮಾ ಹೋಮಧೇನುಂ ಸ ವಾರುಣಿಃ||
ಎಲೈ ಭರತಶ್ರೇಷ್ಠನೇ, ಜಗತ್ತಿನ ಅನುಗ್ರಹಕ್ಕೋಸ್ಕರ ಎಲ್ಲ ಅಭೀಷ್ಟಗಳನ್ನು ಕೊಡುವವರಲ್ಲಿ ಶ್ರೇಷ್ಠವಾದ ಆ ಹೋಮಧೇನುವನ್ನು ಧರ್ಮಾತ್ಮರಾದ ವಸಿಷ್ಠರು ಪಡೆದರು.
ಸಾ ತಸ್ಮಿಂಸ್ತಪಸಾಽರಣ್ಯೇ ವಸಂತೀ ಮುನಿಸೇವಿತೇ |
ಚಚಾರ ರಮ್ಯೇ ಧರ್ಮ್ಯೇ ಚ ಗೌರಪೇತಭಯಾ ತದಾ ||10||
ಆ ಗೋವು ಮುನಿಗಳಿಂದ ಸೇವಿತವಾದ, ಆ ಮನೋಹರವಾದ ಧರ್ಮಕ್ಕೆ ಅನುಕೂಲವಾದ ವನದಲ್ಲಿ ನಿರ್ಭಯವಾಗಿ ತಿರುಗಾಡುತ್ತಾ, ವಾಸಮಾಡುತ್ತಿತ್ತು.
ತತಸ್ತದ್ವನಮಾಜಗ್ಮುಃ ಕದಾಚಿದ್ ಭರತರ್ಷಭ |
ಧರಾದ್ಯಾಃ ವಸವಃ ಸರ್ವೇ ದೇವಾ ದೇವರ್ಷಿಸೇವಿತಮ್ ||11||
ಎಲೈ ಭರತಶ್ರೇಷ್ಠನೇ, ಒಮ್ಮೆ `ಧರ' ಮೊದಲಾದ ಎಂಟುವಸುಗಳು ದೇವರ್ಷಿಗಳಿಂದ ಸೇವಿತವಾದ ಆ ವನಕ್ಕೆ ಬಂದರು.
ಸಭಾರ್ಯಾಸ್ತದ್ವನಂ ಸರ್ವಂ ವಿಚರಂತಸ್ತತಸ್ತತಃ |
ರೇಮಿರೇ ರಮಣೀಯೇಷು ಪರ್ವತೇಷು ವನೇಷು ಚ ||12||
ಅವರು ತಮ್ಮ ಪತ್ನಿಯರೊಡಗೂಡಿ ಅಲ್ಲಿಂದಿಲ್ಲಿಗೆ ಸಂಚರಿಸುತ್ತಾ ರಮಣೀವಾದ ಪರ್ವತಗಳಲ್ಲಿಯೂ ಮತ್ತು ವನಗಳಲ್ಲಿಯೂ ವಿಹಾರವನ್ನು ಮಾಡಿದರು.
ಏಕಸ್ಯ ಭಾರ್ಯಾ ರಾಜೇಂದ್ರ ವಸೋರ್ವಾಸವವಿಕ್ರಮ |
ತಾಂ ಚ ದೋಗ್ಧ್ರೀಂ ವನೇ ತಸ್ಮಿನ್ ಗಾಂ ದದರ್ಶ ಸುಶೋಭನಾಮ್ ||
ರಾಜೇಂದ್ರನೇ, ಇಂದ್ರತುಲ್ಯಪರಾಕ್ರಮನೇ, ಅವರಲ್ಲಿ ಒಬ್ಬ ವಸುವಿನ ಪತ್ನಿಯು ಆ ವನದಲ್ಲಿ ಇದ್ದ ಸುಂದರವಾದ ಒಳ್ಳೆಯ ಆ ಗೋವನ್ನು ನೋಡಿದಳು.
ಯಾ ಸಾ ವಸಿಷ್ಠಸ್ಯ ಮುನೇಃ ಸರ್ವಕಾಮಧುಗುತ್ತಮಾ |
ಅಥ ಸಾ ವಿಸ್ಮಿತಾ ದೇವೀ ರೂಪದ್ರವಿಣಸಂಪದಾ ||14||
ದರ್ಶಯಾಮಾಸ ಸಾ ಪತ್ಯುಃ ತಾಂ ಗಾಂ ಗೋವೃಷವಿಕ್ರಮ |
ಸ್ವಾಧೀನಾಂ ಚ ಸುದೋಗ್ಧ್ರೀಂ ಚ ಸುವಾಲಧಿಮುಖೋದರಾಮ್ ||15||
ಆ ವಸಿಷ್ಠರ ಗೋವು ಕೇಳಿದ ಎಲ್ಲಾ ಕಾಮಗಳನ್ನೂ ಕೊಡುತ್ತಿತ್ತು. ಆ ಗೋವಿನ ರೂಪಸಂಪತ್ತಿನಿಂದ ವಿಸ್ಮಯಗೊಂಡ ವಸುಪತ್ನಿಯು ಒಳ್ಳೆಯ ಬಾಲ, ಸುಳಿ, ಮುಖ ಮತ್ತು ಉದರಗಳಿಂದ ಕೂಡಿ, ಸ್ವತಂತ್ರವಾಗಿ ವನದಲ್ಲಿ ಸಂಚರಿಸುತ್ತಿದ್ದ ಆ ಗೋವನ್ನು ತನ್ನ ಪತಿಗೆ ತೋರಿಸಿದಳು.
ಉಪಪನ್ನಾಂ ಗುಣೈಃ ಸರ್ವೈಃ ಶೀಲೇನಾನುತ್ತಮೇನ ಚ |
ಏವಂಗುಣಸಮಾಯುಕ್ತಾಂ ವಸವೇ ವಸುನಂದಿನೀ ||16||
ಎಲ್ಲಾ ಒಳ್ಳೆಯ ಲಕ್ಷಣಗಳಿಂದಲೂ, ಉತ್ತಮವಾದ ಶೀಲದಿಂದಲೂ, ಎಲ್ಲಾ ಒಳ್ಳೆಯ ಗುಣಗಳಿಂದಲೂ ಕೂಡಿದ್ದ ಆ ಕಲ್ಯಾಣಿಯನ್ನು ವಸುವಿನ ಪತ್ನಿಯು ವಸುವಿಗೆ ತೋರಿಸಿದಳು.

ದರ್ಶಯಾಮಾಸ ಕಲ್ಯಾಣೀಂ ಪುರಾ ಪೌರವನಂದನ |
ದ್ಯೌಸ್ತದಾ ತಾಂ ತು ದೃಷ್ಟ್ವೈವ ಗಾಂ ಗಜೇಂದ್ರೇಂದ್ರುವಿಕ್ರಮ ॥17॥
ಉವಾಚ ರಾಜಂಸ್ತಾಂ ದೇವೀಂ ತಸ್ಯಾ ರೂಪಗುಣಾನ್ ವದನ್ |
ಏಷಾ ಗೌರುತ್ತಮಾ ದೇವಿ ವಾರುಣೇರಸಿತೇಕ್ಷಣಾ ॥18॥
ಎಲೈ ಗಜೆಂದ್ರುವಿಕ್ರಮವುಳ್ಳವನೇ, ದ್ಯುನಾಮಕ ವಸುವು ಆ ಗೋವನ್ನು ನೋಡಿದ ತಕ್ಷಣವೇ ತನ್ನ ಪತ್ನಿಗೆ ಅದರ ರೂಪಗುಣಗಳನ್ನು ಹೇಳಿದನು.
ಋಷೇಸ್ತಸ್ಯ ವರಾರೋಹೇ ಯಸ್ಯೇದಂ ವನಮುತ್ತಮಮ್ |
ಅಸ್ಯಾಃ ಕ್ಷೀರಂ ಪಿಬೇನ್ಮರ್ತ್ಯಃ ಸ್ವಾದು ಯೋ ವೈ ಸುಮಧ್ಯಮೇ |
ದಶವರ್ಷಸಹಸ್ರಾಣಿ ಸ ಜೀವೇತ್ ಸ್ಥಿರಯೌವನಃ ॥19॥
ಕಪ್ಪಾದ ಕಣ್ಣುಳ್ಳವಳೇ, ಇದು ವರುಣನ ಮಕ್ಕಳಾದ ವಸಿಷ್ಠಋಷಿಗಳ ಶ್ರೇಷ್ಠವಾದ ಗೋವು. ಸುಂದರಿ ಈ ಶ್ರೇಷ್ಠವಾದ ವನವು ಅವರಿಗೆ ಸೇರಿದುದು. ಸುಮಧ್ಯಮೇ, ಯಾವ ಮನುಷ್ಯನು ಈ ಗೋವಿನ ರುಚಿಯಾದ ಕ್ಷೀರವನ್ನು ಪಾನ ಮಾಡುವನೋ, ಅವನು ಹತ್ತುಸಾವಿರ ವರ್ಷಗಳ ಕಾಲ ನಿತ್ಯಯೌವನದಿಂದ ಕೂಡಿರುತ್ತಾನೆ.
ವೈಶಂಪಾಯನಃ
ಏತಚ್ಛ್ರುತ್ವಾ ತು ಸಾ ದೇವೀ ನೃಪೋತ್ತಮ ಸುಮಧ್ಯಮಾ |
ತಮುವಾಚಾನವದ್ಯಾಂಗೀ ಭರ್ತಾರಂ ದೀಪ್ತತೇಜಸಮ್ ॥20॥
ಎಲೈ ನೃಪೋತ್ತಮನೇ, ಇದನ್ನು ಕೇಳಿ, ಸುಮಧ್ಯಮೆಯೂ ನಿರ್ದುಷ್ಟ ಅವಯವಗಳುಳ್ಳವಳೂ ಆದ ಆ ದೇವಿಯು ಮಹಾಪರಾಕ್ರಮಶಾಲಿಯಾದ ತನ್ನ ಪತಿಯನ್ನು ಕುರಿತು ಹೇಳಿದಳು.
ಋಷಿಪತ್ನಿ
ಅಸ್ತಿ ಮೇ ಮಾನುಷೇ ಲೋಕೇ ನರದೇವಾತ್ಮಜಾ ಸಖೀ |
ನಾಮ್ನಾ ಜಿತವತೀ ನಾಮ ರೂಪಯೌವನಶಾಲಿನೀ ॥21॥
ನನಗೆ ಭೂಲೋಕದಲ್ಲಿ `ಜಿತವತಿ' ಎಂಬ ಹೆಸರಿನ ರೂಪಯೌವನ ಶಾಲಿನಿಯೂ ಆದ ರಾಜಕುಮಾರಿ ಗೆಳತಿ ಇದ್ದಾಳೆ.
ಉಶೀನರಸ್ಯ ರಾಜರ್ಷೇಃ ಸತ್ಯಸಂಧಸ್ಯ ಧೀಮತಃ |
ದುಹಿತಾ ವಿಶ್ರುತಾ ಲೋಕೇ ಮಾನುಷೇ ರೂಪಸಂಪದಾ ॥22॥
ಅವಳು ಮೇಧಾವಿಯೂ, ಸತ್ಯಸಂಧನೂ ಆದ ಉಶೀನರ ರಾಜರ್ಷಿಯ ಮಗಳು. ತನ್ನ ರೂಪಸಂಪತ್ತಿನಿಂದ ಮನುಷ್ಯಲೋಕದಲ್ಲಿ ತುಂಬಾ ಪ್ರಸಿದ್ಧಿಯಾಗಿದ್ದಾಳೆ.
ತಸ್ಯಾ ಹೇತೋರ್ಮಹಾಭಾಗ ಸವತ್ಸಾಂ ಗಾಂ ಮಮೇಪ್ಸಿತಾಮ್ |
ಆನಯಸ್ವ ಸುರಶ್ರೇಷ್ಠ ತ್ವರಿತಂ ಪುಣ್ಯವರ್ಧಿನೀಮ್ ॥23॥
ಮಹಾನುಭಾವನೇ ಮತ್ತು ದೇವೋತ್ತಮನೇ, ಅವಳ ಸಲುವಾಗಿ ನನಗೆ ಇಷ್ಟವಾದ ಪುಣ್ಯವರ್ಧಿನಿಯಾದ ಈ ಗೋವನ್ನು ಕರುವಿನ ಜೊತೆಯಲ್ಲಿ ಬೇಗ ಕರೆದುಕೊಂಡು ಬಾ.
ಯಾವದಸ್ಯಾಃ ಪಯಃ ಪೀತ್ವಾ ಸಾ ಸಖೀ ಮಮ ಮಾನದಾ |
ಮಾನುಷೇಷು ಭವತ್ವೇಕಾ ಜರಾರೋಗವಿವರ್ಜಿತಾ ॥24॥
ಆ ನನ್ನ ಮಾನದೆಯಾದ ಸಖಿಯು ಇದರ ಹಾಲನ್ನು ಕುಡಿದು ಮನುಷ್ಯಲೋಕದಲ್ಲಿ ಜರಾರೋಗ ವರ್ಜಿತಳಾಗಲಿ.
ಏತನ್ಮಮ ಮಹಾಭಾಗ ಕರ್ತುಮರ್ಹಸಿ ಕರ್ಮ ವೈ |
ಪ್ರಿಯಾತ್ ಪ್ರಿಯತರಂ ಹ್ಯಸ್ಮಾನ್ನಾಸ್ತಿ ಮೇಽನ್ಯತ್ ಕಥಂಚನ ॥25॥
ಎಲೈ ಮಹಾಭಾಗನೇ, ನನ್ನ ಸಲುವಾಗಿ ನೀನು ಈ ಕಾರ್ಯವನ್ನು ಮಾಡಬೇಕು. ನನಗೆ ಇದಕ್ಕಿಂತ ಪ್ರಿಯವಾದದ್ದು ಬೇರೆ ಯಾವುದೂ ಇಲ್ಲ.
ಏತಚ್ಛ್ರುತ್ವಾ ವಚಸ್ತಸ್ಯಾ ದೇವ್ಯಾಃ ಪ್ರಿಯಚಿಕೀರ್ಷಯಾ |
ಧರಾದ್ಯೈರ್ಭ್ರಾತೃಭಿಃ ಸಾರ್ಧಂ ದ್ಯೌಸ್ತದಾ ತಾಂ ಜಹಾರ ಗಾಮ್ ॥26॥
ಈ ಮಾತುಗಳನ್ನು ಕೇಳಿದ ದ್ಯುನಾಮಕವಸುವು ತನ್ನ ಪತ್ನಿಗೆ ಪ್ರಿಯವನ್ನುಂಟುಮಾಡಲು ಧರಾದಿಗಳಿಂದ ಸಹಿತನಾಗಿ ಆ ಗೋವನ್ನು ಅಪಹರಿಸಿದನು.
ತಯಾ ಕಮಲಪತ್ರಾಕ್ಷ್ಯಾ ನಿಯುಕ್ತೋ ದ್ಯೌಸ್ತದಾ ನೃಪ |
ಋಷೇಸ್ತಸ್ಯ ತಪಸ್ತೀವ್ರಂ ನ ಶಶಾಕ ಪರೀಕ್ಷಿತುಮ್ ॥27॥
ಹೃತಾ ಗೌಃ ಸಾ ತದಾ ತೇನ ಪ್ರಯಾತಾ ನತು ಶಕ್ತಿತಃ |
ಅಥಾಶ್ರಮಪದಂ ಪ್ರಾಪ್ತಃ ಫಲಾನ್ಯಾದಾಯ ವಾರುಣಿಃ ॥28॥
ಕಮಲನಯನೆಯಾದ ತನ್ನ ಪತ್ನಿಯ ಆದೇಶಕ್ಕೆ ಒಳಗಾದ ದ್ಯುನಾಮಕವಸುವು ಆಗ ಋಷಿಗಳ ತೀವ್ರವಾದ ತಪಸ್ಸನ್ನು ಗಣನೆಗೆ ತಂದುಕೊಳ್ಳಲು ಸಮರ್ಥನಾಗಲಿಲ್ಲ. ಅಪಹರಿಸಲ್ಪಟ್ಟ ಗೋವು ತಾನು ಸ್ವತಃ ಹೋಗದೆ, ಮುಳ್ಳಿನ ಕೋಲಿನ ಏಟುಗಳಿಂದ ಬಲಾತ್ಕರಿಸಲ್ಪಟ್ಟು ಹೋಯಿತು.
ನಾಪಶ್ಯದ್ ಗಾಂ ಸವತ್ಸಾಂ ತಾಂ ಸ ಹಿ ತಸ್ಮಿನ್ ವನೋತ್ತಮೇ |
ಸ ತಸ್ಮಿನ್ ಮೃಗಯಾಮಾಸ ವನೇ ತಾಮೃಷಿಸತ್ತಮಃ ॥29॥
ಸ್ವಲ್ಪ ಸಮಯದ ಮೇಲೆ ವಸಿಷ್ಠರು ಹಣ್ಣುಗಳನ್ನು ತೆಗೆದುಕೊಂಡು ಆಶ್ರಮಕ್ಕೆ ಬಂದರು. ಅವರಿಗೆ ಆ ವನದಲ್ಲಿ ತಮ್ಮ ಗೋವು ಮತ್ತು

ಕರು ಎರಡೂ ಕಾಣಲಿಲ್ಲ.
ನಾಭ್ಯಪಶ್ಯಂಶ್ಚ ಮೃಗಯನ್ ತಾಂ ಗಾಂ ಋಷಿರುದಾರಧೀಃ ॥30॥
ಆ ಋಷಿಶ್ರೇಷ್ಠರು ಆ ವನದಲ್ಲೆಲ್ಲಾ ಗೋವನ್ನು ಹುಡುಕಿದರು. ಎಷ್ಟು ಹುಡುಕಿದರೂ ಉದಾರಬುದ್ಧಿಯುಳ್ಳ ಆ ಋಷಿಗಳಿಗೆ ಗೋವು ಸಿಗಲಿಲ್ಲ.
ಜ್ಞಾತ್ವಾ ತಥಾऽಪನೀತಾಂ ತಾಂ ವಸುಭಿರ್ದಿವ್ಯಚಕ್ಷುಷಾ |
ಸ ತು ಕೋಪವಶಂ ಪ್ರಾಪ್ತಃ ಶಶಾಪ ಚ ವಸೂಂಸ್ತದಾ ॥31॥
ತಮ್ಮ ದಿವ್ಯದೃಷ್ಟಿಯಿಂದ ಆ ಗೋವನ್ನು ವಸುಗಳು ಅಪಹರಿಸುವುದನ್ನು ತಿಳಿದು ಕೋಪವಶರಾಗಿ, ಅವರು ವಸುಗಳಿಗೆ ಶಾಪವನ್ನು ಕೊಟ್ಟರು.
ಯಸ್ಮಾನ್ಮೇ ವಸವೋ ಜಹ್ರುರ್ಗಾಂ ವೈ ದೋಗ್ಧ್ರೀಂ ಸುವಾಲಧಿಮ್ |
ತಸ್ಮಾತ್ ಸರ್ವೇ ಜನಿಷ್ಯಂತಿ ವಸವೋ ಮಾನುಷೇಷ್ವಿತಿ |
ಏವಂ ಶಶಾಪ ಭಗವಾನ್ ವಸೂಂಸ್ತಾನ್ ಮುನಿಸತ್ತಮಃ ॥32॥
ಒಳ್ಳೆಯ ಲಕ್ಷಣಗಳಿಂದ ಕೂಡಿದ್ದ ನನ್ನ ಧೇನುವನ್ನು ವಸುಗಳು ಅಪಹರಿಸಿದ ಕಾರಣ, ಆ ಎಲ್ಲ ವಸುಗಳೂ ಮನುಷ್ಯಲೋಕದಲ್ಲಿ ಜನಿಸಲಿ ಎಂಬುದಾಗಿ. ಹೀಗೆ ಪೂಜ್ಯರಾದ ಆ ಋಷಿಶ್ರೇಷ್ಠರು ವಸುಗಳಿಗೆ ಶಾಪವನ್ನು ಕೊಟ್ಟರು.
ವಶಂ ಕ್ರೋಧಸ್ಯ ಸಂಪ್ರಾಪ್ತ ಆಪವೋ ಭರತರ್ಷಭ |
ಶಪಿತ್ವಾ ಚ ತಾನ್ ಮಹಾಭಾಗಸ್ತಪಸ್ಯೇವ ಮನೋ ದಧೇ ॥33॥
ಎಲೈ ಭರತರ್ಷಭನೇ, ಕ್ರೋಧಕ್ಕೆ ವಶರಾದ ವಸಿಷ್ಠರು ಆ ವಸುಗಳಿಗೆ ಹೀಗೆ ಶಾಪವನ್ನು ಕೊಟ್ಟು, ಮಹಾನುಭಾವರಾದ ಅವರು ಪುನಃ ತಪಸ್ಸಿಗೆ ಹೊರಟರು.
ಏವಂ ಸ ಶಪ್ತವಾನ್ ರಾಜನ್ ವಸೂನಷ್ಟೌ ತಪೋಧನಃ | ಮಹಾಪ್ರಭಾವೋ ಬ್ರಹ್ಮರ್ಷಿರ್ದೇವಾನ್ ರೋಷಸಮನ್ವಿತಃ
॥34॥
ತಪೋಧನರೂ, ಮಹಾಪ್ರಭಾವಶಾಲಿಗಳೂ, ಬ್ರಹ್ಮರ್ಷಿಗಳೂ ಆದ ವಸಿಷ್ಠರು ರೋಷಸಮನ್ವಿತರಾಗಿ ಹೀಗೆ ಎಂಟು ವಸುಗಳಿಗೂ ಶಾಪವನ್ನು ಕೊಟ್ಟರು.
ಏವಂ ಶಪ್ತಾಸ್ತತಸ್ತೇನ ಮುನಿನಾ ಯಾಮುನೇನ ವೈ |
ಅಷ್ಟೌ ಸಮಸ್ತಾ ವಸವೋ ನಿಜದೋಷೇಣ ಭಾರತ ॥35॥
ಅಥಾಶ್ರಮಪದಂ ಪ್ರಾಪ್ಯ ಪುನಸ್ತಸ್ಯ ಮಹಾತ್ಮನಃ |
ಶಪ್ತಾಃ ಸ್ಮ ಇತಿ ಜಾನಂತಃ ಪುನಸ್ತಮಭಿಚಕ್ರಮುಃ ॥36॥
ಎಲೈ ಭಾರತನೇ, ಯಮುನೆಯ ಮಕ್ಕಳಾದ ವಸಿಷ್ಠರಿಂದ ತಮ್ಮ ಅಪರಾಧದಿಂದ ಹೀಗೆ ಶಪ್ತರಾಗಿದ್ದೇವೆ ಎಂದು ತಿಳಿದು, ಪುನಃ ಅವರ ಆಶ್ರಮಕ್ಕೆ ಬಂದು, ಅವರ ಸಮೀಪಕ್ಕೆ ಹೋದರು.
ಪ್ರಸಾದಯಂತಸ್ತಮೃಷಿಂ ವಸವಃ ಪಾರ್ಥಿವರ್ಷಭ |
ನ ಲೇಭಿರೇ ಚ ತೇ ತಸ್ಮಾತ್ ಪ್ರಸಾದಮೃಷಿಸತ್ತಮಾತ್ ॥37॥
ಎಲೈ ರಾಜಶ್ರೇಷ್ಠನೇ, ಅವರು ಆ ಋಷಿಗಳನ್ನು ಅನುಗ್ರಹೋನ್ಮುಖರನ್ನಾಗಿ ಮಾಡಲು ಎಷ್ಟು ಪ್ರಯತ್ನ ಪಟ್ಟರೂ ಅವರು ಆ ಋಷಿಗಳಿಂದ ಅನುಗ್ರಹವನ್ನು ಪಡೆಯಲಿಲ್ಲ.
ಆಪವಃ ಪುರುಷವ್ಯಾಘ್ರ ಸರ್ವಧರ್ಮವಿಶಾರದಃ |
ಉವಾಚ ಚ ಸ ಧರ್ಮಾತ್ಮಾ ಮುನಿಃ ಶಪ್ತಧರಾದಿಕಾನ್ |
ಅನುಸಂವತ್ಸರಾಚ್ಛಾಪಾನ್ಮೋಕ್ಷ್ಯಧ್ವಮಿತಿ ಭಾರತ ॥38॥
ಎಲೈ ಪುರುಷವ್ಯಾಘ್ರನೇ, ಸರ್ವಧರ್ಮ ವಿಶಾರದರೂ, ಧರ್ಮಾತ್ಮರೂ, ಆದ ವಸಿಷ್ಠಋಷಿಗಳು ತಮ್ಮಿಂದ ಶಪ್ತರಾದ ಧರ ಮೊದಲಾದವರನ್ನು ಕುರಿತು `ಒಂದು ವರ್ಷಕ್ಕೆ ಒಬ್ಬರಂತೆ ನೀವು ಶಾಪದಿಂದ ಬಿಡುಗಡೆಯನ್ನು ಹೊಂದಿ' ಎಂದು ಹೇಳಿದರು.
ಅಯಂ ತು ಯತ್ಕೃತೇ ಶಪ್ತಾ ಮಯಾ ಯೂಯಂ ಸ ವತ್ಸ್ಯತಿ |
ದ್ಯೌಸ್ತು ವೈ ಮಾನುಷೇ ಲೋಕೇ ದೀರ್ಘಕಾಲಂ ಸ್ವಕರ್ಮಣಾ ॥39॥
ಯಾರ ಸಲುವಾಗಿ ನೀವೆಲ್ಲರೂ ನನ್ನ ಶಾಪಕ್ಕೆ ಒಳಾಗಾಗಿದ್ದಿರೋ, ಅಂತಹ ದ್ಯುನಾಮಕ ವಸುವು ಮಾತ್ರ ತಾನು ಮಾಡಿದ ಕರ್ಮದ ಫಲವಾಗಿ ಮನುಷ್ಯಲೋಕದಲ್ಲಿ ದೀರ್ಘಕಾಲ ಜೀವಿಸಲಿ.
ನಾನೃತಂ ತಚ್ಚಿಕೀರ್ಷಾಮಿ ಯುಷ್ಮಾನ್ ಕ್ರುದ್ಧೋ ಯದಬ್ರುವಮ್|
ಪ್ರಜಾ ಹ್ಯನೃತವಾಕ್ಯೇನ ಹಿಂಸನ್ ಮೈನಸ್ತಥಾಪ್ನುಯಾತ್ ॥40॥
ನಾನು ನಿಮ್ಮನ್ನು ಕುರಿತು ಏನನ್ನು ಹೇಳಿದ್ದೇನೋ, ಅದನ್ನು ವ್ಯತ್ಯಾಸ ಮಾಡಿ ಅನೃತವನ್ನಾಗಿ ಮಾಡುವುದಿಲ್ಲ. ಪ್ರಜೆಗಳನ್ನು ಹಿಂಸಿಸುವನಿಗೆ ಏನು ಪಾಪ ಬರುವುದೋ, ಅನ್ಯತವಾಕ್ಯವನ್ನು ಆಡುವ ನನಗೂ ಅದೇ ಪಾಪವು ಬರುತ್ತದೆ.
ನ ಪ್ರಜಾಸ್ಯತಿ ಜಾಪ್ಯೇಷ ಮಾನುಷೇಷು ಮಹಾಮನಾಃ |
ಭವಿಷ್ಯತಿ ಚ ಧರ್ಮಾತ್ಮಾ ಸರ್ವಶಾಸ್ತ್ರಾರ್ಥವಿದ್ ಬಲೀ |
ಪಿತುಶ್ಚಾಯಂ ಪ್ರಿಯಂ ಕುರ್ವನ್ ಸ್ತ್ರೀಭೋಗಾನ್ ವರ್ಜಯಿಷ್ಯತಿ ॥
ಮನುಷ್ಯಯೋನಿಯಲ್ಲಿ ಹುಟ್ಟುವ ಈ ಧೈರ್ಯಶಾಲಿಯು ಮಕ್ಕಳನ್ನು ಪಡೆಯುವುದಿಲ್ಲ. ಬಲಿಷ್ಠನೂ, ಧರ್ಮಾತ್ಮನೂ, ಸರ್ವಶಾಸ್ತ್ರವಿಶಾರದನೂ ಆಗುವನು. ಇವನು ಸ್ತ್ರೀಭೋಗವನ್ನು ವರ್ಜಿಸಿ, ತಂದೆಗೆ ಪ್ರಿಯವನ್ನು ಉಂಟುಮಾಡುತ್ತಾನೆ.
ಏವಮುಕತ್ವಾ ವಸೂನ್ ಸರ್ವಾನ್ ಜಗಾಮ ಭಗವಾನೃಷಿಃ |

ತತೋ ಮಾಮುಪಜಗ್ಮುಸ್ತೇ ಸಮಸ್ತಾ ವಸವೋ ನೃಪ ॥42॥
ಪೂಜ್ಯರಾದ ಋಷಿಗಳು ವಸುಗಳನ್ನು ಕುರಿತು ಹೀಗೆ ಹೇಳಿ ಹೊರಟು ಹೋದರು. ಎಲೈ ರಾಜನೇ, ಅನಂತರ ಈ ವಸುಗಳೆಲ್ಲರೂ ನನ್ನ ಸಮೀಪಕ್ಕೆ ಬಂದರು.
ಅಯಾಚಂತ ಚ ಮಾಂ ರಾಜನ್ ವರಂ ತೇಭ್ಯೋ ದದಾಮ್ಯಹಮ್|
ಜಾತಂ ಜಾತಂ ಕ್ಷಿಪೇತ್ಯೂಚುಃ ಸ್ವಯಂ ಗಂಗೇ ತ್ವದಂಭಸಿ ॥43॥
ಎಲೈ ರಾಜನೇ, ಅವರು ನನ್ನ ಬಳಿಗೆ ಬಂದು, ಗಂಗೆಯೇ ನಾವು ಹುಟ್ಟಿದಂತೆ, ಹುಟ್ಟಿದಂತೆ ಬೇಗ ನಿನ್ನ ನೀರಿನಲ್ಲಿ ಹಾಕಿ ಕೊಂದುಬಿಡು ಎಂದು ಯಾಚಿಸಿದರು. ನಾನು ಅವರಿಗೆ ಆ ವರವನ್ನು ನೀಡಿದೆ.
ಏವಂ ತೇಷಾಂ ವರಂ ಸಮ್ಯಕ್ ಶಪ್ತಾನಾಂ ರಾಜಸತ್ತಮ |
ಮೋಕ್ಷಾರ್ಥಂ ಮಾನುಷಾಲ್ಲೋಕಾದ್ ಯಥಾವತ್ ಕೃತವತ್ಯಹಮ್ ॥
ರಾಜಶ್ರೇಷ್ಠನೇ, ಅವರಿಗೆ ಕೊಟ್ಟ ವರಕ್ಕಗನುಗುಣವಾಗಿ ಮನುಷ್ಯಯೋನಿಯಿಂದ ಅವರನ್ನು ಬಿಡಿಸಲು ಶಪ್ತರಾದ ಅವರಿಗೆ ನಾನು ಹೀಗೆ ಸರಿಯಾದ ಉಪಕಾರವನ್ನೇ ಮಾಡಿದ್ದೇನೆ.
ಅಯಂ ಶಾಪಾದೃಷೇಸ್ತಸ್ಯ ಏಕ ಏವ ನೃಪೋತ್ತಮ |
ದ್ಯೌ ರಾಜನ್ ಮಾನುಷೇ ಲೋಕೇ ಚಿರಂ ವತ್ಸ್ಯಸಿ ಭಾರತ ॥45॥
ಎಲೈ ನೃಪಶ್ರೇಷ್ಠನೇ, ಭಾರತನೇ, ಈ ದ್ಯುನಾಮವಸು ಮಾತ್ರ ಆ ಋಷಿಯ ಶಾಪದಿಂದ ಮನುಷ್ಯಲೋಕದಲ್ಲಿ ಬಹುಕಾಲ ವಾಸಿಸುತ್ತಾನೆ.
ಅಯಂ ದೇವವ್ರತಶ್ಚೈವ ಗಂಗಾದತ್ತಶ್ಚ ಮೇ ಸುತಃ |
ದ್ವಿನಾಮಾ ಶಂತನೋಃ ಪುತ್ರಃ ಶಂತನೋರಧಿಕೋ ಗುಣೈಃ ॥46॥
ನನ್ನ ಮತ್ತು ಶಂತನುವಿನ ಮಗನಾದ ಇವನಿಗೆ ದೇವವ್ರತ ಮತ್ತು ಗಂಗಾದತ್ತ ಎಂದು ಎರಡು ಹೆಸರು. ಇವನು ತನ್ನ ಗುಣಗಳಿಂದ ಶಂತನುವನ್ನು ಮೀರಿಸುತ್ತಾನೆ.
ಅಯಂ ಕುಮಾರಃ ಪುತ್ರಸ್ತೇ ವಿವೃದ್ಧಃ ಪುನರೇಷ್ಯತಿ |
ಅಯಂ ಚ ತೇ ಗಮಿಷ್ಯಾಮಿ ಆಹ್ವಾನೋಪಗತಾ ನೃಪ ॥47॥
ಎಲೈ ರಾಜನೇ, ಈ ನಿನ್ನ ಕುಮಾರನು ಬೆಳೆದು ಹಿಂದಿರುಗಿ ಬರುವನು. ನಾನು ಈಗ ಹೋಗುವೆನು. ನೀನು ಕರೆದಾಗ ಬರುತ್ತೇನೆ.
ವೈಶಂಪಾಯನಃ
ಏತದಾಖ್ಯಾಯ ಸಾ ದೇವೀ ತತ್ರೈವಾಂತರಧೀಯತ |
ಆದಾಯ ಚ ಕುಮಾರಂ ತಂ ಜಗಾಮ ಚ ಯಥೇಪ್ಸಿತಮ್ ॥48॥
ಹೀಗೆ ಮಾತನಾಡಿ, ಆ ಗಂಗಾದೇವಿಯು ಕುಮಾರನನ್ನು ಕರೆದುಕೊಂಡು, ಅಲ್ಲಿಯೇ ಅದೃಶ್ಯಳಾಗಿ ತನಗೆ ಇಷ್ಟವಾದ ಪ್ರದೇಶಕ್ಕೆ ಹೋದಳು.
ತಸ್ಮಾದ್ ದೇವವ್ರತಶ್ಚೈವ ಗಂಗಾದತ್ತಶ್ಚ ಸೋऽಭವತ್ |
ಶಂತನುಶ್ಚಾಪಿ ಶೋಕಾರ್ತೋ ಜಗಾಮ ಸ್ವಪುರಂ ತತಃ ॥49॥
ಆದ್ದರಿಂದ ಅವನು ದೇವವ್ರತನೂ, ಗಂಗಾದತ್ತನೂ ಆದನು. ಶಂತನುವು ಶೋಕಾರ್ಥನಾಗಿ ತನ್ನ ಪಟ್ಟಣಕ್ಕೆ ಹಿಂತಿರುಗಿದನು.
ತಸ್ಯ ಕೀರ್ತಿಂ ಚ ವೃತ್ತಿಂ ಚ ಮಹತೋ ನೃಪ ಸದ್ಗುಣಾನ್ |
ಶಂತನೋಃ ಕೀರ್ತಯಿಷ್ಯಾಮಿ ಸರ್ವಾನೇವ ಗುಣಾನಹಮ್ ॥50॥
ಎಲೈ ರಾಜನೇ, ಆ ಮಹಾತ್ಮನಾದ ಶಂತನುವಿನ ಕೀರ್ತಿಯನ್ನೂ, ವೃತ್ತಿಯನ್ನೂ, ರಾಜಗುಣಗಳನ್ನೂ, ಉಳಿದ ಗುಣಗಳೆಲ್ಲವನ್ನೂ ನಾನು ನಿನಗೆ ನಿರೂಪಿಸುವೆನು.
ಮಹಾಭಾಗ್ಯಸ್ಯ ನೃಪತೇರ್ಭಾರತಸ್ಯ ಯಶಸ್ವಿನಃ |
ತಸ್ಯೇತಿಹಾಸಃ ಖ್ಯಾತೋऽಯಂ ಮಹಾಭಾರತ ಇತ್ಯುತ ॥51॥
ಭರತವಂಶದಲ್ಲಿ ಜನಿಸಿದ ಕೀರ್ತಿಶಾಲಿಯಾದ ಮಹಾಭಾಗ್ಯವಂತನಾದ ಆ ರಾಜನ ಇತಿಹಾಸವೇ ಈ ಮಹಾಭಾರತವೆಂದು ಪ್ರಖ್ಯಾತವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತನವತಿತಮೋऽಧ್ಯಾಯಃ ॥
॥ ಸಂಭವಪರ್ವಣಿ ಪಂಚಚತ್ವಾರಿಂಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತೇಳನೆಯ ಅಧ್ಯಾಯ ಮುಗಿಯಿತು
*****

ಮಹಾಭಾರತ ತಾತ್ಪರ್ಯ ನಿರ್ಣಯ- ಅಧ್ಯಾಯ-11
ದೇವವ್ರತೋऽಸಾವನುಶಾಸನಾಯ ಮಾತ್ರಾ
ದತ್ತೋ ದೇವಗುರೌ ಶತಾರ್ಧಮ್ |
ಸಂವತ್ಸರಾಣಾಮಖಿಲಾಂಶ್ಚ ವೇದಾನ್
ಸಮಭ್ಯಸತ್ ತದ್ವಶಗಾಂತರಾತ್ಮಾ ॥46॥
ಈ ಗಂಗಾಪುತ್ರ ದೇವವ್ರತನೆನಿಸಿದ. ವಿದ್ಯಾಭ್ಯಾಸಕ್ಕಾಗಿ ಮಾತೆ ಅವನನ್ನು ದೇವಗುರು ಬೃಹಸ್ಪತಿಯ ಬಳಿ ಬಿಟ್ಟಳು. ಅವನು ಐವತ್ತು ವರ್ಷಕಾಲ ಗುರುವಿಗೆ ವಿಧೇಯವಾದ ಅಂತಃಕರಣದಿಂದ ಸಕಲ ವೇದಗಳನ್ನೂ ಅಭ್ಯಾಸ ಮಾಡಿದ.

ತತಶ್ಚ ಮಾತ್ರಾ ಜಗತಾಂ ಗರೀಯಸ್ಯನಂತಪಾರೇऽಖಿಲಸದ್ಗುಣಾರ್ಣವೇ |
ರಾಮೇ ಭೃಗೂಣಾಮಧಿಪೇ ಪ್ರದತ್ತಃ ಶುಶ್ರಾವ ತತ್ವಂ ಚ ಶತಾರ್ಧವರ್ಷಮ್
ಬಳಿಕ ಜಗತ್ತುಗಳಿಗೆ ಶ್ರೇಷ್ಠನೂ ಅಪರಿಮಿತ ಸಕಲ ಸದ್ಗುಣ ಸಾಗರನೂ ಆದ ಭೃಗುಕುಲ ಸ್ವಾಮಿಯಾದ ಪರಶುರಾಮನಲ್ಲಿ ದೇವವ್ರತನನ್ನು ಗಂಗೆ ಕೊಟ್ಟಳು. ಅಲ್ಲಿ ಆತ ಐವತ್ತು ವರ್ಷ ತತ್ವಶ್ರವಣ ಮಾಡಿದ.

ಸ ಪಂಚವಿಂಶತ್ ಪುನರಬ್ದಕಾನಾ-
ಮಸ್ತ್ರಾಣಿ ಚಾಭ್ಯಸ್ಯ ಪತೇರ್ಭೃಗೂಣಾಮ್ |
ಮಾತ್ರಾ ಸಮಾನೀಯ ತಟೇ ನಿಜೇ ತು
ಸಂಸ್ಥಾಪಿತಃ ಪ್ರಾರ್ಪಯಿತುಂ ಸ್ವಪಿತ್ರೇ ॥48॥

ದೇವವ್ರತ ಪುನಃ ಇಪ್ಪತ್ತೈದು ವರ್ಷಕಾಲ ಭೃಗುಕುಲದೊಡೆಯನಾದ ರಾಮನಿಂದ ಅಸ್ತ್ರಗಳನ್ನೂ ಅಭ್ಯಾಸ ಮಾಡಿದ. ಬಳಿಕ ಮಾತೆ ಅವನನ್ನು ತನ್ನ ತೀರದಲ್ಲಿ ತಂದು ನಿಲ್ಲಿಸಿದಳು. ಇದು ಅವನನ್ನು ತನ್ನ ತಂದೆಗೆ ತಂದೊಪ್ಪಿಸುವುದಕ್ಕಾಗಿ.

ಸ ತತ್ರ ಬಧ್ವಾ ಶರಪಂಜರೇಣ
ಗಂಗಾಂ ವಿಜಹ್ರೇऽಸ್ಯ ಪಿತಾ ತದೈವ |
ವ್ರಜನ್ ಮೃಗಾರ್ಥೀ ತೃಷಿತೋ ವಿಲೋಕಯನ್
ಗಂಗಾಮತೋಯಾಮಭವತ್ ಸುವಿಸ್ಮಿತಃ ॥49॥

ಅಲ್ಲಿ ದೇವವ್ರತ ಬಾಣಗಳ ಪಂಜರದಿಂದ ಗಂಗಾ ಪ್ರವಾಹವನ್ನು ಬಂಧಿಸಿ ನೀರಾಟವಾಡಿದ. ಆಗಲೆ ಅವನ ತಂದೆ ಶಂತನು ಮೃಗ ಬೇಟೆಗಾಗಿ ಸಂಚರಿಸುತ್ತ ಬಾಯಾರಿ, ಗಂಗೆ ಬಹಳ ಬತ್ತಿದ್ದನ್ನು ಕಂಡು ಅಚ್ಚರಿಗೊಂಡ.

ಸ ಮಾರ್ಗಯಾಮಾಸ ತತೋऽಸ್ಯ ಹೇತುಜ್ಞಪ್ತ್ಯೈ
ತದಾ ಸ್ವಂ ಚ ದದರ್ಶ ಸೂನುಮ್ |
ಕ್ರೀಡಂತಮಸ್ತ್ರೇಣ ಬಭೂವ ಸೋऽಪಿ
ಕ್ಷಣಾದದೃಶ್ಯಃ ಪಿತೃದರ್ಶನಾದನು ॥50॥

ಇದಕ್ಕೆ ಕಾರಣ ತಿಳಿಯಲು ಶಂತನು ಅನ್ವೇಷಣ ಮಾಡಿದ. ಆಗ ಅಸ್ತ್ರದಿಂದ ಆಟವಾಡುತ್ತಿದ್ದ ತನ್ನ ಮಗನನ್ನು ಕಂಡ. ತಂದೆ ಕಂಡೊಡನೆ ಮಗ ಕ್ಷಣದಲ್ಲಿ ಅದೃಶ್ಯನಾದ.

ಮೀಮಾಂಸಮಾನಂ ತಮವಾಪ ಗಂಗಾ
ಸುತಂ ಸಮಾದಾಯ ಪತಿಂ ಜಗಾದ ಚ |
ಅಯಂ ಸುತಸ್ತೇ ಪರಮಾಸ್ತ್ರವೇತ್ತಾ
ಸಮರ್ಪಿತೋ ವೀರ್ಯಬಲೋಪಪನ್ನಃ ॥51॥

ವಿಚಾರ ಮಾಡುತ್ತಿರುವ ಶಂತನುವನ್ನು ಸಮೀಪಿಸಿ ಗಂಗೆ ಮಗನನ್ನು ಕರೆದು ತಂದು ಹೇಳಿದಳು. `ಇವನು ನಿನ್ನ ಮಗ, ಒಳ್ಳೆಯ ಅಸ್ತ್ರಜ್ಞ, ವೀರ್ಯ ಬಲಗಳುಳ್ಳವ. ಇವನನ್ನು ನಿನಗೆ ಒಪ್ಪಿಸುತ್ತಿದ್ದೇನೆ'.

ಅಸ್ಯಾಗ್ರಜಾಃ ಸ್ವಾಂ ಸ್ಥಿತಿಮೇವ ಯಾತಾ
ಹರೇಃ ಪದಾಂಭೋಜಸುಪಾವಿತೇ ಜಲೇ |
ತನೂರ್ಮದೀಯೇ ಪ್ರಣಿಧಾಯ ತತ್ ತ್ವಂ
ತಾನ್ ಮಾ ಶುಚೋऽನೇನ ಚ ಮೋದಮಾನಃ ॥52॥

`ಇವನ ಅಣ್ಣಂದಿರು ಶ್ರೀಹರಿಯ ಪಾದಕಮಲದಿಂದ ಚೆನ್ನಾಗಿ ಪಾವನಗೊಂಡ ನನ್ನ ನೀರಲ್ಲಿ ಶರೀರಗಳನ್ನು ಬಿಟ್ಟು ತಮ್ಮ ಮೂಲರೂಪಗಳನ್ನೆ ಹೊಂದಿದ್ದಾರೆ. ಅದರಿಂದ ನೀನು ಈತನ ಜೊತೆಗೇ ಸಂತೋಷದಿಂದಿರು. ಆ ಮಕ್ಕಳ ಬಗ್ಗೆ ಶೋಕಿಸಬೇಡ'.

ಇತಿ ಪ್ರದಾಯಾಮುಮದೃಶ್ಯತಾಮಗಾತ್
ಗಂಗಾ ತಮಾದಾಯ ಯಯೌ ಸ್ವಕಂ ಗೃಹಮ್ |
ರಾಜಾಭಿಷಿಚ್ಯಾಥ ಚ ಯೌವರಾಜ್ಯೇ
ಮುಮೋದ ತತ್ಸದ್ಗುಣತರ್ಪಿತೋ ಭೃಶಮ್ ॥53॥

ಹೀಗೆ ಮಗನನ್ನು ಕೊಟ್ಟು ಗಂಗೆ ಅದೃಶ್ಯಳಾದಳು. ರಾಜ ಅವನನ್ನು ಕರೆದುಕೊಂಡು ತನ್ನ ಅರಮನೆಗೆ ಹೋದ. ಬಳಿಕ ಅವನನ್ನು ಯೌವರಾಜ್ಯ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿ ಅವನ ಸದ್ಗುಣಗಳಿಂದ ತೃಪ್ತಿ ಹೊಂದಿ ಬಹಳ ಸಂತೋಷಪಟ್ಟ.

ಪುನಃ ಸ ಪಿತ್ರಾನುಮತೋ ಬೃಹಸ್ಪತೇರವಾಪ
ವೇದಾನ್ ಪುರುಷಾಯುಷೋऽರ್ಧತಃ |
ರಾಮಾತ್ ತಥಾಸ್ತ್ರಾಣಿ ಪುನಸ್ತ್ವವಾಪ ತಾವದ್ಭಿರಬ್ದೈಸ್ತ್ರಿಶತೈಶ್ಚ ತತ್ವಮ್ ॥

ದೇವವ್ರತ ತಂದೆಯ ಅನುಮತಿ ಪಡೆದು ಪುನಃ ಬೃಹಸ್ಪತಿಯಿಂದ ಪುರುಷಾಯುಷ್ಯದ ಅರ್ಧದಷ್ಟು ಅಂದರೆ ಐವತ್ತು ವರ್ಷಗಳ ಕಾಲ ವೇದಗಳನ್ನು ಕಲಿತ. ಹಾಗೇ ಅಷ್ಟೇ ವರ್ಷ ಕಾಲ ಪರಶುರಾಮನಿಂದ ಪುನಃ ಅಸ್ತ್ರಗಳನ್ನು ಉಪದೇಶ ಪಡೆದ. ಮತ್ತು ಮುನ್ನೂರು ವರ್ಷ ಕಾಲ ತತ್ವವನ್ನೂ ಉಪದೇಶ ಪಡೆದ.

ಸ ಸರ್ವವಿತ್ತ್ವಂ ಸಮವಾಪ್ಯ ರಾಮಾತ್
ಸಮಸ್ತವಿದ್ಯಾಧಿಪತೇರ್ಗುಣಾರ್ಣವಾತ್ |
ಪಿತುಃ ಸಮೀಪಂ ಸಮವಾಪ್ಯ ತಂ ಚ
ಶುಶ್ರೂಷಮಾಣಃ ಪ್ರಮಮೋದ ವೀರಃ ॥55॥

ವೀರನಾದ ದೇವವ್ರತ ಸಕಲ ವಿದ್ಯಾಧಿಪತಿಯಾದ ಗುಣಸಮುದ್ರನಾದ ಪರಶುರಾಮನಿಂದ ಸರ್ವಜ್ಞತ್ವವನ್ನು ಹೊಂದಿ ತಂದೆಯ ಬಳಿಗೆ ಬಂದು ಅವನನ್ನು ಸೇವಿಸುತ್ತ ಸಂತೋಷಪಟ್ಟ.
* * * *

ತೊಂಭತ್ತೆಂಟನೆಯ ಅಧ್ಯಾಯ
(ಶಂತನುವಿನ ರಾಜ್ಯಭಾರ ಕ್ರಮ, ಗಂಗೆಯಿಂದ ದೇವವ್ರತನ ಸಮರ್ಪಣೆ, ದೇವವ್ರತನಿಗೆ ಯುವರಾಜ್ಯದಲ್ಲಿ ಅಭಿಷೇಕ.)
ವೈಶಂಪಾಯನಃ
ಏವಂ ಸ ಶಂತನುರ್ಧೀಮಾನ್ ದೇವರಾಜರ್ಷಿಸತ್ಕೃತಃ |
ಧರ್ಮಾತ್ಮಾ ಸರ್ವಲೋಕೇಷು ಸತ್ಯವಾಗಿತಿ ವಿಶ್ರುತಃ ॥1॥
ಹೀಗೆ ಮೇಧಾವಿಯಾದ ದೇವಋಷಿ ಮತ್ತು ರಾಜಋಷಿಗಳಿಂದ ಸತ್ಕೃತನಾದ ಧರ್ಮಾತ್ಮನಾದ ಶಂತನುವು ಸರ್ವಲೋಕದಲ್ಲಿ ಸತ್ಯ ವಚನನೆಂದು ಪ್ರಸಿದ್ಧನಾದನು.
ಶಂತನೋಃ ಕೀರ್ತಯಿಷ್ಯಾಮಿ ಸರ್ವಾನೇವ ಗುಣಾನಹಮ್ |
ದಮೋ ದಾನಂ ಕ್ಷಮಾ ಬುದ್ಧಿಃ ಹ್ರೀರ್ಧೃತಿಸ್ತೇಜ ಉತ್ತಮಮ್ |
ನಿತ್ಯಾನ್ಯಾಸನ್ ಮಹಾಸತ್ವೇ ಶಂತನೌ ಭರತರ್ಷಭ | ॥2॥
ಶಂತನುವಿನ ಎಲ್ಲಾ ಗುಣಗಳನ್ನೂ ನಿನಗೆ ಹೇಳುತ್ತೇನೆ. ಭರತಶ್ರೇಷ್ಠನೇ, ಮಹಾಸತ್ವವುಳ್ಳ ಶಂತನುವಿನಲ್ಲಿ ದಮ, ದಾನ, ಕ್ಷಮೆ, ಬುದ್ಧಿ, ಲಜ್ಜೆ, ಧೈರ್ಯ, ಉತ್ತಮವಾದ ತೇಜಸ್ಸು ಈ ಗುಣಗಳು ನಿತ್ಯವಾಗಿದ್ದವು.
ಆಮಾತ್ಯಗುಣಸಂಪನ್ನಃ ಕ್ಷತ್ರಧರ್ಮವಿಶೇಷವಿತ್ |
ಆಸೀದ್ ಭರತವಂಶಸ್ಯ ಗೋಪ್ತಾ ಸಾಧುಜನಸ್ಯ ಚ ॥3॥
ಕಂಬುಗ್ರೀವಃ ಪೃಥುವ್ಯಂಸೋ ಮತ್ತವಾರಣವಿಕ್ರಮಃ |
ಧರ್ಮ ಏವ ಪರಃ ಕಾಮಾದರ್ಥಾಚ್ಚೇತಿ ವ್ಯವಸ್ಥಿತಃ |
ಅನ್ವಿತಃ ಪರಿಪೂರ್ಣಾರ್ಥೈಃ ಸರ್ವೈರ್ನೃಪತಿಲಕ್ಷಣೈಃ ॥4॥
ಅಮಾತ್ಯಗುಣಸಂಪನ್ನನೂ ಮತ್ತು ಕ್ಷತ್ರಿಯಧರ್ಮವನ್ನು ವಿಶೇಷವಾಗಿ ತಿಳಿದವನೂ ಆದ ಅವನು ಭರತವಂಶಕ್ಕೂ ಮತ್ತು ಸಜ್ಜನರಿಗೂ ರಕ್ಷಕನಾಗಿದ್ದನು. ಕಂಬುಗ್ರೀವನೂ, ವಿಸ್ತಾರವಾದ ಭುಜವುಳ್ಳವನೂ, ಮದಗಜದ ವಿಕ್ರಮವುಳ್ಳವನೂ ಆದ ಅವನು ಕಾಮ ಮತ್ತು ಅರ್ಥಗಳಿಗಿಂತ ಧರ್ಮವೇ ಶ್ರೇಷ್ಠವೆಂದು ತಿಳಿದವನಾಗಿದ್ದನು. ಅವನು ಪರಿಪೂರ್ಣವಾದ ಎಲ್ಲ ರಾಜಚಿನ್ಹೆಗಳಿಂದಲೂ ಕೂಡಿದವನಾಗಿದ್ದನು.
ತಸ್ಯ ಕೀರ್ತಿಮಥೋ ವೃತ್ತಮವೇಕ್ಷ್ಯ ಸತತಂ ನೃಪಾಃ |
ಯಜ್ಞದಾನತಪಃಶೀಲಾಃ ಸಮಪದ್ಯಂತ ವೈ ಪ್ರಜಾಃ ॥5॥
ಅವನ ಕೀರ್ತಿಯನ್ನೂ ಮತ್ತು ನಡತೆಯನ್ನೂ ಗಮನಿಸಿದ ಇತರ ರಾಜರು ಮತ್ತು ಪ್ರಜೆಗಳು ಯಜ್ಞ, ದಾನ, ತಪಶ್ಶೀಲರಾದರು.
ಏವಮಾಸೀನ್ಮಹಾಸತ್ವಃ ಶಂತನುರ್ಭರತರ್ಷಭ |
ನ ಚಾಸ್ಯ ಸದೃಶಃ ಕಶ್ಚಿತ್ ಕ್ಷತ್ರಿಯೋ ಧರ್ಮತೋಽಭವತ್ ॥6॥
ಎಲೈ ಭರತಶ್ರೇಷ್ಠನೇ, ಮಹಾಸತ್ವಶಾಲಿಯಾದ ಶಂತನುವು ಹೀಗಿದ್ದನು. ಧರ್ಮಾಚರಣೆಯ ದೃಷ್ಟಿಯಿಂದ ಆಗ ಅವನಿಗೆ ಸಮಾನನಾದ ಕ್ಷತ್ರಿಯನು ಇನ್ನೊಬ್ಬನಿರಲಿಲ್ಲ.
ವರ್ತಮಾನಂ ಚ ಸದ್ಧರ್ಮೇ ಸರ್ವಶಾಸ್ತ್ರವಿದಾಂವರಮ್ |
ತಂ ಮಹೀಪಾ ಮಹೇಷ್ವಾಸಂ ರಾಜರಾಜಮಕುರ್ವತ ॥7॥
ಸರ್ವಶಾಸ್ತ್ರಜ್ಞರಲ್ಲಿ ಶ್ರೇಷ್ಠನಾಗಿ, ಸದ್ಧರ್ಮನಿರತನಾಗಿದ್ದು, ಮಹಾಧನುರ್ಧಾರಿಯಾದ ಅವನನ್ನು ಉಳಿದ ರಾಜರು ರಾಜರಾಜನನ್ನಾಗಿ ಮಾಡಿದರು.
ತೇನ ಕೀರ್ತಿಮತಾ ಶಿಷ್ಟಾಃ ಶಕ್ರಪ್ರತಿಮತೇಜಸಾ |
ಯಜ್ಞದಾನತಪಃ ಶೀಲಾಃ ಸಮಪದ್ಯಂತ ಪಾರ್ಥಿವಾಃ ॥8॥
ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಕೀರ್ತಿವಂತನಾದ ಅವನ ಶಾಸನಕ್ಕೆ ಒಳಗಾದ ರಾಜರು ಯಜ್ಞ, ದಾನ, ತಪಶ್ಶೀಲರಾದರು.
ಶಂತನುಪ್ರಮುಖೈರ್ಗುಪ್ತಂ ರಾಷ್ಟ್ರಾಧಿಪತಿಭಿರ್ಜಗತ್ |
ನಿಯಮಾತ್ ಸರ್ವವರ್ಣಾನಾಂ ಬ್ರಹ್ಮೋತ್ತರಮವರ್ಧತ ॥9॥
ಶಂತನು ಮೊದಲಾದ ರಾಷ್ಟ್ರಪತಿಗಳಿಂದ ರಕ್ಷಿಸಲ್ಪಟ್ಟ ಜಗತ್ತಿನಲ್ಲಿ ಎಲ್ಲ ವರ್ಣಗಳೂ ತಮ್ಮ ತಮ್ಮ ನಿಯಮಗಳನ್ನು ಪಾಲಿಸುತ್ತಿದ್ದು ಬ್ರಾಹ್ಮಣ ವರ್ಣವು ಶ್ರೇಷ್ಠವಾಗಿದ್ದಿತು.
ಬ್ರಹ್ಮ ಪರ್ಯಚರತ್ ಕ್ಷತ್ರಂ ವಿಶಃ ಕ್ಷತ್ರಮನುವ್ರತಾಃ |
ಬ್ರಹ್ಮಕ್ಷತ್ರಾನುಲೋಮಾಶ್ಚ ಶೂದ್ರಾಃ ಪರ್ಯಚರನ್ ವಿಶಃ ॥10॥
ಕ್ಷತ್ರಿಯರು ಬ್ರಾಹ್ಮಣರನ್ನು ಪರಿಚರಿಸುತ್ತಿದ್ದರು, ವೈಶ್ಯರು ಕ್ಷತ್ರಿಯರನ್ನು ಅನುಸರಿಸುತ್ತಿದ್ದರು. ಬ್ರಾಹ್ಮಣರಿಗೆ ಮತ್ತು ಕ್ಷತ್ರಿಯರಿಗೆ ವಿಧೇಯರಾಗಿ ಶೂದ್ರರು ವೈಶ್ಯರನ್ನು ಪರಿಚರಿಸುತ್ತಿದ್ದರು.
ಸ ಹಸ್ತಿನಪುರೇ ರಮ್ಯೇ ಕುರೂಣಾಂ ಪುಟಭೇದನೇ |
ವಸನ್ ಸಾಗರಪರ್ಯಂತಾಮನ್ವಶಾಸದ್ ವಸುಂಧರಾಮ್ ॥11॥
ಅವನು ಕುರುಗಳ ಪಟ್ಟಣವಾದ ಮನೋಹರವಾದ ಹಸ್ತಿನಪುರದಲ್ಲಿ ವಾಸಮಾಡುತ್ತಾ ಸಾಗರಪರ್ಯಂತವಾದ ಭೂಮಿಯನ್ನು

ಆಳಿದನು.
ಸ ದೇವರಾಜಸದೃಶೋ ಧರ್ಮಜ್ಞಃ ಸತ್ಯವಾಗೃಜುಃ |
ದಾನಧರ್ಮತಪೋಯೋಗಾತ್ ಶ್ರಿಯಾ ಪರಮಯಾ ಯುತಃ ॥12॥
ದೇವರಾಜಸದೃಶನಾಗಿ ಧರ್ಮಜ್ಞನೂ, ಸತ್ಯವಚನನೂ, ಆರ್ಜವ ಉಳ್ಳವನೂ ಆದ ಅವನು ದಾನ, ಧರ್ಮ, ತಪಸ್ಸುಗಳ ಮಹಿಮೆಯಿಂದ ಬಹಳ ಕಾಂತಿಯುಕ್ತನಾದನು.
ಅರಾಗದ್ವೇಷಸಂಯುಕ್ತಃ ಸೋಮವತ್ ಪ್ರಿಯದರ್ಶನಃ |
ತೇಜಸಾ ಸೂರ್ಯಸಂಕಾಶೋ ವಾಯುವೇಗಸಮೋ ಬಲೇ |
ಅಂತಕಪ್ರತಿಮಃ ಕೋಪೇ ಕ್ಷಮಯಾ ಪೃಥಿವೀಸಮಃ ॥13॥
ರಾಗದ್ವೇಷಗಳಿಂದ ಮುಕ್ತನಾದ ಅವನು ನೋಡುವವರಿಗೆ ಪ್ರಿಯನಾದ ಚಂದ್ರನಂತೆಯೂ, ತೇಜಸ್ಸಿನಲ್ಲಿ ಸೂರ್ಯನಂತೆಯೂ, ವೇಗದಲ್ಲಿ ಮತ್ತು ಬಲದಲ್ಲಿ ವಾಯುವಿನಂತೆಯೂ, ಕೋಪದಲ್ಲಿ ಯಮನಂತೆಯೂ, ಸಹನೆಯಲ್ಲಿ ಭೂಮಿಯಂತೆಯೂ ಇದ್ದನು.
ವಧಃ ಪಶುವರಾಹಾಣಾಂ ತಥೈವ ಮೃಗಪಕ್ಷಿಣಾಮ್ |
ಶಂತನೌ ಪೃಥಿವೀಪಾಲೇ ನಾವರ್ತತ ವೃಥಾ ತದಾ ॥14॥
ಧರ್ಮಬ್ರಹ್ಮೋತ್ತರೇ ರಾಜ್ಯೇ ಶಂತನುರ್ವಿನಯಾಶ್ರಯಃ |
ಸಮಂ ಶಶಾಸ ಭೂತಾನಿ ಲೋಭರಾಗವಿವರ್ಜಿತಃ ॥15॥
ಶಂತನುವು ರಾಜನಾಗಿದ್ದಾಗ ಭೂಮಿಯಲ್ಲಿ ಪಶುವರಾಹಗಳ ಅಥವಾ ಮೃಗ-ಪಕ್ಷಿಗಳ ವ್ಯರ್ಥವಾದ ವಧೆಯು ಇರಲಿಲ್ಲ. ಧರ್ಮ ಮತ್ತು ಬ್ರಾಹ್ಮಣರೇ ಶ್ರೇಷ್ಠವಾಗಿದ್ದ ಅವನ ರಾಜ್ಯದಲ್ಲಿ ವಿನಯಶೀಲನಾದ ಶಂತನುವು ಲೋಭರಾಗಗಳನ್ನು ತ್ಯಜಿಸಿ ಎಲ್ಲ ಪ್ರಜೆಗಳನ್ನೂ ಸಮಾನ ದೃಷ್ಟಿಯಿಂದ ಆಳಿದನು.
ಚಕೋರನೇತ್ರಸ್ತಾಮ್ರಾಸ್ಯಃ ಸಿಂಹರ್ಷಭಗತಿರ್ಯುವಾ |
ಗುಣೈರನುಪಮೈರ್ಯುಕ್ತಃ ಸಮಸ್ತೈರಭಿಗಾಮಿಕೈಃ |
ಗಂಭೀರಃ ಸತ್ವಸಂಪನ್ನಃ ಪೂರ್ಣಚಂದ್ರನಿಭಾನನಃ॥16॥
ದೇವರ್ಷಿಪಿತೃಯಜ್ಞಾರ್ಥಂ ಬಭೂವುಃ ಪಶವೋ ನೃಣಾಮ್ |
ನ ಹ್ಯಧರ್ಮೇಣ ಕೇಷಾಂ ಚಿತ್ ಪ್ರಾಣಿನಾಮಭವದ್ ವಧಃ ॥17॥
ಅವನು ಚಕೋರನೇತ್ರನೂ, ತಾಮ್ರಾಸ್ಯನೂ, ಸಿಂಹರ್ಷಗತಿಯುಳ್ಳವನೂ, ಯುವಕನೂ, ಎದುರಿಗೆ ಬಂದವರನ್ನು ವಶಪಡಿಸಿಕೊಳ್ಳುವಂತಹ ಅಸದೃಶವಾಗಿದ್ದ ಗುಣಗಳಿಂದ ಕೂಡಿದವನೂ, ಗಂಭೀರನೂ, ಸತ್ವಶಾಲಿಯೂ ಮತ್ತು ಪೂರ್ಣಚಂದ್ರನಂತಹ ಮುಖವುಳ್ಳವನೂ ಆಗಿದ್ದನು.
ಪಶುಗಳನ್ನು ದೇವತೆಗಳಿಗಾಗಿ, ಅಥವಾ ಋಷಿಗಳಿಗಾಗಿ, ಅಥವಾ ಪಿತೃಗಳಿಗಾಗಿ, ಅಥವಾ ಯಜ್ಞಕ್ಕಾಗಿ ಉಪಯೋಗಿಸಲಾಗುತ್ತಿತ್ತು. ಅಧರ್ಮದಿಂದ ಯಾವ ಪ್ರಾಣಿಯ ವಧೆಯು ನಡೆಯುತ್ತಿರಲಿಲ್ಲ.
ಅಸುಖಾನಾಮನಾಥಾನಾಂ ತಿರ್ಯಗ್ಯೋನಿಷು ವರ್ತತಾಮ್ |
ಸ ಏವ ರಾಜಾ ಭೂತಾನಾಂ ಸರ್ವೇಷಾಮಭವತ್ ಪಿತಾ ॥18॥
ದುಃಖಿತರಾದ ಅನಾಥರಿಗೂ, ನೀಚಯೋನಿಯಲ್ಲಿರುವ ಪ್ರಾಣಿಗಳಿಗೂ ಮತ್ತು ಎಲ್ಲರಿಗೂ ಅವನೇ ತಂದೆಯಂತೆ ಇದ್ದು ರಾಜನಾಗಿದ್ದನು.
ವೀತಶೋಕಭಯಾಬಾಧಾಃ ಸುಖಸ್ವಪ್ನಪ್ರಬೋಧನಾಃ |
ಶ್ರಿತಾ ಭಾರತಭರ್ತಾರಂ ಸಮಪದ್ಯಂತ ಭೂಮಿಪಾಃ ॥19॥
ಭಾರತರಾಜನಾದ ಶಂತನುವನ್ನು ಆಶ್ರಯಿಸಿದ್ದ ರಾಜರು ಶೋಕ, ಭಯ, ಪೀಡೆಗಳಿಂದ ಮುಕ್ತರಾಗಿ ಸುಖವಾದ ನಿದ್ರೆ ಮತ್ತು ಎಚ್ಚರವುಳ್ಳವರಾದರು.
ತಸ್ಮಿನ್ ನರವರಶ್ರೇಷ್ಠೇ ರಾಜರಾಜೇಶ್ವರೇ ಸತಿ |
ನೃಣಾಂ ವಾಗಭವತ್ ಸತ್ಯಂ ದಾನಾರ್ಥಮಭವದ್ ಧನಮ್ |
ಯಜ್ಞಾರ್ಥಂ ಪಶವಶ್ಚಾಸನ್ ಸಂತಾನಾರ್ಥಂ ಚ ಮೈಥುನಮ್ ॥20॥
ಆ ನರಶ್ರೇಷ್ಠನಾದ ಶಂತನುವು ರಾಜರಾಜೇಶ್ವರನಾಗಿರುತ್ತಿರಲು ಮನುಷ್ಯರು ಸತ್ಯವಚನರಾಗಿದ್ದರು, ಧನವು ದಾನಕ್ಕೋಸ್ಕರವೇ ಇರುತ್ತಿತ್ತು, ಪಶುಗಳು ಯಜ್ಞಕ್ಕಾಗಿಯೇ ಇರುತ್ತಿದ್ದವು, ಮೈಥುನವು ಸಂತಾನಕ್ಕಾಗಿಯೇ ಇರುತ್ತಿತ್ತು.
ಸ ಸಮಾಃ ಷೋಡಶಾಷ್ಟೌ ಚ ಚತಸ್ರೋಽಷ್ಟೌ ತಥಾಽಪರಾಃ |
ರತಿಮಪ್ರಾಪ್ನುವನ್ ಕಾಂಚಿತ್ ಬಭೂವ ವನಗೋಚರಃ |
ತಪಸಾ ಕರ್ಶಿತೋಗ್ರ್ಯೇಣ ಜಪಧ್ಯಾನಪರಃ ಸದಾ ॥21॥
ಅವನು ಕಾಡಿನಲ್ಲಿದ್ದು ಎಲ್ಲ ಸುಖಗಳನ್ನೂ ಬಿಟ್ಟು ಉಗ್ರವಾದ ತಪಸ್ಸಿನಿಂದ ದೇಹವನ್ನು ದಂಡಿಸಿ ಹದಿನಾರು ವರ್ಷ, ಎಂಟು ವರ್ಷ, ನಾಲ್ಕು ವರ್ಷ ಮತ್ತು ಬೇರೆ ಬೇರೆ ರೀತಿಯಲ್ಲಿ ಜಪ ಧ್ಯಾನಪರನಾದನು.(ಮೊದಲು ಹದಿನಾರು ವರ್ಷದ ತಪಸ್ಸಿನ ಸಂಕಲ್ಪ, ಅದರಲ್ಲಿ ಫಲ ದೊರೆಯದಿದ್ದರೆ, ಪುನಃ ಎಂಟು ವರ್ಷ ಹೆಚ್ಚಿಸುವುದು, ಅದರಲ್ಲೂ ಫಲ ದೊರೆಯದಿದ್ದರೆ ಇನ್ನೂ ನಾಲ್ಕು ವರ್ಷ ಹೆಚ್ಚಿಸುವುದು, ಇತ್ಯಾದಿ ಕ್ರಮದಿಂದ ತಪಸ್ಸನ್ನು ಮಾಡಿದನು.)
ತಥಾರೂಪಸ್ತಥಾಚಾರಃ ತಥಾವೃತ್ತಸ್ತಥಾಶ್ರುತಃ |
ಗಾಂಗೇಯಸ್ತಸ್ಯ ಪುತ್ರೋಭೂದ್ ಆದಾವೇವಾಷ್ಟಮೋ ವಸುಃ ॥22॥
ತಂದೆಯ ರೂಪವನ್ನೇ, ತಂದೆಯ ಆಚಾರವನ್ನೇ, ತಂದೆಯ ನಡತೆಯನ್ನೇ ಮತ್ತು ತಂದೆಯ ವಿದ್ಯೆಯನ್ನೇ ಹೊಂದಿದ್ದ

ಅಷ್ಟಮವಸುವು, ಮೊದಲೆ ಅವನಿಗೆ ಗಂಗೆಯಲ್ಲಿ ದೇವವ್ರತನೆನಿಸಿ ಜನಿಸಿದ್ದನು.
ಸರ್ವಶಾಸ್ತ್ರೇಷು ನಿಷ್ಣಾತಃ ಪಾರ್ಥಿವೇಷ್ವಿತರೇಷು ಚ |
ಮಹಾಬಲೋ ಮಹಾವೀರ್ಯೋ ಮಹೋತ್ಸಾಹೋ ಮಹಾಯಶಾಃ ॥25॥
ಸ ಕದಾಚಿನ್ಮೃಗಾನ್ ನಿಘ್ನನ್ ಗಂಗಾಮನುಸಸಾರ ಹ |
ಭಾಗೀರಥೀಮಲ್ಪಜಲಾಂ ದದರ್ಶ ಸರಿತಾಂ ವರಾಮ್ ॥24॥
ಶಂತನುವು ರಾಜ್ಯಕ್ಕೆ ಸಂಬಂಧಿಸಿದ ಮತ್ತು ಇತರ ಸರ್ವಶಾಸ್ತ್ರಗಳಲ್ಲಿ ನಿಷ್ಣಾತನಾಗಿದ್ದು ಅಧಿಕವಾದ ಬಲ, ವೀರ್ಯ, ಉತ್ಸಾಹ ಮತ್ತು ಕೀರ್ತಿಯಿಂದ ಕೂಡಿದವನಾಗಿದ್ದು, ಒಮ್ಮೆ ಮೃಗಗಳನ್ನು ಬೇಟೆಯಾಡುತ್ತಾ, ಭಾಗೀರಥಿಯ ತೀರದಲ್ಲಿ ಸಂಚರಿಸುತ್ತಾ ಶ್ರೇಷ್ಠನದಿಯಾದ ಭಾಗೀರಥಿಯಲ್ಲಿ ಸ್ವಲ್ಪವೇ ನೀರಿರುವುದನ್ನು ನೋಡಿದನು.
ತಾಂ ದೃಷ್ಟ್ವಾ ಚಿಂತಯಾಮಾಸ ಶಂತನುರ್ಭರತರ್ಷಭಃ |
ಸ್ಯಂದತೇ ಕಿನ್ನ್ವಿಯಂ ನಾದ್ಯ ಸರಿಚ್ಛ್ರೇಷ್ಠಾ ಯಥಾ ಪುರಾ ॥25॥
ಭರತರ್ಷಭನಾದ ಶಂತನುವು ಗಂಗೆಯನ್ನು ನೋಡಿ, ಇದೇನು ಈ ದಿನ ಸರಿಚ್ಛ್ರೇಷ್ಠಳಾದ ಗಂಗೆಯು ಮೊದಲಿನಂತೆ ಹರಿಯುತ್ತಿಲ್ಲ ಎಂದು ಚಿಂತಿಸಿದನು.
ತತೋ ನಿಮಿತ್ತಮನ್ವಿಚ್ಛನ್ ದದರ್ಶ ಸುಮಹಾಮನಾಃ |
ಕುಮಾರಂ ರೂಪಸಂಪನ್ನಂ ಬೃಹಂತಂ ಪ್ರಿಯದರ್ಶನಮ್ ॥26॥
ಧೈರ್ಯಶಾಲಿಯಾದ ಅವನು, ಅದಕ್ಕೆ ಕಾರಣವನ್ನು ಹುಡುಕುತ್ತಾ ರೂಪಸಂಪನ್ನನಾದ ಎತ್ತರವಾಗಿ ಬೆಳೆದಿದ್ದ, ಪ್ರಿಯದರ್ಶನನಾದ ಒಬ್ಬ ಕುಮಾರನನ್ನು ನೋಡಿದನು.
ದಿವ್ಯಮಸ್ತ್ರಂ ವಿಕುರ್ವಾಣಂ ಯಥಾ ದೇವಂ ಪುರಂದರಮ್ |
ಕೃತ್ಸ್ನಾಂ ಗಂಗಾಂ ಸಮಾವೃತ್ಯ ಶರೈಸ್ತೀಕ್ಷ್ಣೈರವಸ್ಥಿತಮ್ ॥27॥
ಇಂದ್ರನಂತೆ ದಿವ್ಯವಾದ ಅಸ್ತ್ರಗಳನ್ನು ಪ್ರಯೋಗಿಸುತ್ತಾ, ಸಮಗ್ರವಾದ ಗಂಗೆಯನ್ನು ತೀಕ್ಷ್ಣವಾದ ಬಾಣಗಳಿಂದ ಆಚ್ಛಾದನೆ ಮಾಡಿ ನಿಂತಿದ್ದಂತಹ ಕುಮಾರನನ್ನು ನೋಡಿದನು.
ತಾಂ ಶರೈರಾವೃತಾಂ ದೃಷ್ಟ್ವಾ ನದೀಂ ಗಂಗಾಂ ಸಮಂತತಃ |
ವಿಸ್ಮಿತಃ ಪ್ರೇಕ್ಷತೇ ರಾಜಾ ಕರ್ಮ ತಸ್ಯಾತಿಮಾನುಷಮ್ ॥28॥
ಎಲ್ಲ ಕಡೆಗಳಲ್ಲಿಯೂ ಬಾಣಗಳಿಂದ ಆವೃತವಾದ ದೇವಗಂಗೆಯನ್ನು ನೋಡಿ ವಿಸ್ಮಿತನಾದ ರಾಜನು ಆ ಕುಮಾರನ ಅತಿಮಾನುಷ ಕರ್ಮಗಳನ್ನು ನೋಡಿದನು.
ಜಾತಮಾತ್ರಂ ಪುರಾ ದೃಷ್ಟಂ ತಂ ಪುತ್ರಂ ಶಂತನುಸ್ತದಾ |
ನ ಜ್ಞಾತವಾನ್ ಮಹಾಭಾಗಮಯಂ ಪುತ್ರೋ ಮಮೇತಿ ವೈ ॥29॥
ಹುಟ್ಟಿದ ತಕ್ಷಣ ಮಾತ್ರ ಅವನನ್ನು ನೋಡಿದ್ದ ಶಂತನುವು ಈ ಮಹಾ ಭಾಗ್ಯಶಾಲಿಯು ತನ್ನ ಮಗನೆಂದು ತಿಳಿಯಲಿಲ್ಲ.
ಸ ತು ತಂ ಪಿತರಂ ದೃಷ್ಟ್ವಾ ಮೋಹಯಾಮಾಸ ಮಾಯಯಾ |
ಪ್ರಮೋಹ್ಯ ಚ ತತಃ ಕ್ಷಿಪ್ರಂ ತತ್ರೈವಾಂತರಧೀಯತ ॥30॥
ಕುಮಾರನಾದರೊ, ತಂದೆಯನ್ನು ನೋಡಿ ಅವನಿಗೆ ಮೋಹವನ್ನು ಉಂಟುಮಾಡಿ ಅಲ್ಲಿಯೇ ತಕ್ಷಣ ಅಂತರ್ಧಾನವನ್ನು ಹೊಂದಿದನು.
ತದದ್ಭುತಂ ತದಾ ದೃಷ್ಟ್ವಾ ತತ್ರ ರಾಜಾ ಸ ಶಂತನುಃ |
ಶಂಕಮಾನಃ ಸುತಂ ಗಂಗಾಮಬ್ರುವೀದ್ ದರ್ಶಯೇತಿ ತಾಮ್ ॥31॥
ಆ ಅದ್ಭುತವನ್ನು ನೋಡಿದ ರಾಜ ಶಂತನುವು ಅವನು ತನ್ನ ಮಗನೆಂಬ ಸಂಶಯಕ್ಕೆ ಒಳಗಾಗಿ ಗಂಗೆಯನ್ನು ಕುರಿತು ಮಗನನ್ನು ತೋರಿಸು ಎಂದು ಹೇಳಿದನು.
ದರ್ಶಯಾಮಾಸ ತಂ ಗಂಗಾ ಬಿಭ್ರತೀ ರೂಪಮುತ್ತಮಮ್ |
ಗೃಹೀತ್ವಾ ದಕ್ಷಿಣೇ ಪಾಣೌ ತಂ ಕುಮಾರಮಲಂಕೃತಮ್ ॥32॥
ಗಂಗೆಯು ಉತ್ತಮರೂಪವನ್ನು ಧರಿಸಿ ಅಲಂಕೃತನಾದ ಕುಮಾರನನ್ನು ಬಲಗೈಯಲ್ಲಿ ಹಿಡಿದುಕೊಂಡು ರಾಜನಿಗೆ ತೋರಿಸಿದಳು.
ಅಲಂಕೃತಾಮಾಭರಣೈರರಜೋವಸ್ತ್ರವಾಸಿನೀಮ್ |
ದೃಷ್ಟಪೂರ್ವಾಂ ಸತೀಂ ಗಂಗಾಮಭ್ಯಜಾನಾತ್ ಸ ಶಂತನುಃ ॥33॥
ಶಂತನುವು ಆಭರಣಗಳಿಂದ ಅಲಂಕೃತಳಾಗಿದ್ದ, ಶುಭ್ರವಸ್ತ್ರವನ್ನು ಧರಿಸಿದ್ದ, ಹಿಂದೆ ನೋಡಿದ್ದಂತಹ ತನ್ನ ಪತ್ನಿಯಾದ ಗಂಗೆಯನ್ನು ಗುರುತಿಸಿದನು.
ಯಂ ಪುತ್ರಮಷ್ಟಮಂ ರಾಜಂಸ್ತ್ವಂ ಪುರಾ ಮಯ್ಯವಿಂದಥಾಃ |
ಸ ತೇಽಯಂ ಪುರುಷವ್ಯಾಘ್ರ ವಜ್ರಸಂಹನನೋ ಯುವಾ ॥34॥
ಗಂಗೆ ಮಾತನಾಡಿದಳು - ರಾಜನೇ, ಪುರುಷವ್ಯಾಘ್ರನೇ, ನೀನು ಯಾವ ಅಷ್ಟಮಪುತ್ರನನ್ನು ನನ್ನಲ್ಲಿ ಹಿಂದೆ ಪಡೆದೆಯೋ ಅವನೇ ವಜ್ರಶರೀರನಾದ, ಯುವಕನಾದ ಈ ನಿನ್ನ ಮಗ.
ವೇದಾನಧಿಜಗೇ ಪೂರ್ವಂ ವಸಿಷ್ಠಾಚ್ಚರಿತವ್ರತಃ |
ಅಖಿಲಾನ್ ಸೋಪನಿಷದಾನ್ ಸಾಂಗೋಪಾಂಗಾನ್ ಯಥಾವಿಧಿ ॥
ಚರಿತವ್ರತನಾದ ಇವನು ಮೊದಲು ವಸಿಷ್ಠರಿಂದ ಎಲ್ಲಾ ವೇದಗಳನ್ನೂ, ಸಾಂಗೋಪಾಂಗವಾದ ಉಪನಿಷತ್ತುಗಳನ್ನೂ ವಿಧಿವತ್ತಾಗಿ ಅಧ್ಯಯನ ಮಾಡಿದನು.

ಕೃತಾಸ್ತ್ರಃ ಪರಮೇಷ್ವಾಸೋ ದೇವರಾಜಸಮೋ ಯುಧಿ |
ಸುರಾಣಾಂ ಸಮ್ಮತೋ ನಿತ್ಯಮಸುರಾಣಾಂ ಚ ಭಾರತ ॥36॥
ಅಸ್ತ್ರವಿದ್ಯೆಯನ್ನು ಕಲಿತು ಧನುರ್ಧಾರಿಯಾಗಿ ಯುದ್ಧದಲ್ಲಿ ಇಂದ್ರನಿಗೆ ಸಮನಾಗಿದ್ದಾನೆ. ಎಲೈ ಭಾರತನೇ, ಇವನು ಸುರರಿಗೂ ಮತ್ತು ಅಸುರರಿಗೂ ಸಮ್ಮತನಾದವನು.
ಉಶನಾ ವೇದ ಯಚ್ಛಾಸ್ತ್ರಮಯಂ ತದ್ ವೇದ ಕೃತ್ಸ್ನಶಃ |
ಮಹೇಷ್ವಾಸಮಿಮಂ ರಾಜನ್ ರಾಜಧರ್ಮಾರ್ಥಕೋವಿದಮ್ |
ಮಯಾ ದತ್ತಮಿಮಂ ಪುತ್ರಂ ವೀರಂ ವೀರ ಗೃಹಂ ನಯ ॥37॥
ಶುಕ್ರಾಚಾರ್ಯರಿಗೆ ಯಾವ ಶಾಸ್ತ್ರವು ತಿಳಿದಿದೆಯೊ, ಅದನ್ನು ಇವನು ಸಮಗ್ರವಾಗಿ ತಿಳಿದಿದ್ದಾನೆ. ಧನುರ್ವಿಧ್ಯಾಪಾರಂಗತನಾದ ರಾಜಧರ್ಮದಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ಕೋವಿದನಾದ, ನನ್ನಿಂದ ಕೊಡಲ್ಪಟ್ಟ ನಿನ್ನ ಈ ಮಗನನ್ನು ಮನೆಗೆ ಕರೆದುಕೊಂಡು ಹೋಗು.
ವೈಶಂಪಾಯನಃ
ಇತ್ಯುಕ್ತ್ವಾ ಸಾ ಮಹಾಭಾಗಾ ತತ್ರೈವಾಂತರಧೀಯತ |
ಗಂಗಯಾ ಸಮನುಜ್ಞಾತಃ ಪುತ್ರಮಾದಾಯ ಶಂತನುಃ ॥38॥
ಭ್ರಾಜಮಾನಂ ಯಥಾಽದಿತ್ಯಂ ಪ್ರಯಯೌ ಸ್ವಪುರಂ ಪ್ರತಿ | ಪೌರವೇಷು ತತಃ ಪುತ್ರಂ ಯೌವರಾಜ್ಯೇಽಭ್ಯಷೇಚಯತ್
॥39॥
ಹೀಗೆ ಹೇಳಿ ಆ ಮಹಾನುಭಾವಳು ಅಲ್ಲಿಯೇ ಅದೃಶ್ಯಳಾದಳು. ಗಂಗೆಯ ಅಪ್ಪಣೆಯನ್ನು ಪಡೆದು ಸೂರ್ಯನಂತೆ ಪ್ರಕಾಶಿಸುವ ತನ್ನ ಮಗನನ್ನು ಕರೆದುಕೊಂಡು ಶಂತನುವು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಅನಂತರ ತನ್ನ ಮಗನನ್ನು ಪೌರವರಾಜ್ಯದ ಯುವರಾಜನಾಗಿ ಪಟ್ಟಾಭಿಷೇಕ ಮಾಡಿದನು.
ಪೌರವಃ ಸ್ವಪುರಂ ಗತ್ವಾ ಪುರಂದರಪುರೋಪಮಾಮ್ |
ಸರ್ವಕಾಮಸಮೃದ್ಧಾರ್ಥಂ ಮೇನೇ ಚಾತ್ಮಾನಮಾತ್ಮನಾ ॥40॥
ಪೌರವನಾದ ಶಂತನುವು ಸರ್ವಕಾಮಸಮೃದ್ಧವಾದ ಇಂದ್ರನ ಪಟ್ಟಣದಂತಿರುವ ತನ್ನ ಪಟ್ಟಣಕ್ಕೆ ಹೋಗಿ ತನ್ನನ್ನು ಕೃತಾರ್ಥನೆಂದು ತಿಳಿದನು.
ಪೌರವಾನ್ ಶಂತನೋಃ ಪುತ್ರಃ ಪಿತರಂ ಚ ಮಹಾಯಶಾಃ |
ರಾಷ್ಟ್ರಂ ಚ ರಂಜಯಾಮಾಸ ವೃತ್ತೇನ ಭರತರ್ಷಭ ॥41॥
ಎಲೈ ಭರತರ್ಷಭನೇ, ಮಹಾಕೀರ್ತಿವಂತನಾದ ಶಂತನುವಿನ ಪುತ್ರನಾದ ಭೀಷ್ಮನು ತಂದೆಯನ್ನೂ, ಎಲ್ಲಾ ಪೌರವರನ್ನೂ ಮತ್ತು ರಾಷ್ಟ್ರವನ್ನೂ ತನ್ನ ಶೀಲವೃತ್ತಗಳಿಂದ ಸಂತೋಷಪಡಿಸಿದನು.
ತಥಾವೃತ್ತಸಮಾಚಾರಸ್ತಥಾಧರ್ಮಸ್ತಥಾಶ್ರುತಃ |
ಪುತ್ರೋ ದೇವವ್ರತೋ ನಾಮ ಶಂತನೋರಧಿಕೋ ಗುಣೈಃ ॥42॥
ತಂದೆಯದೇ ನಡತೆ, ತಂದೆಯದೇ ಆಚಾರ, ತಂದೆಯದೇ ಧರ್ಮ, ತಂದೆಯದೇ ವಿದ್ಯೆಯನ್ನು ಹೊಂದಿದ್ದ ದೇವವ್ರತನು ತನ್ನ ಗುಣಗಳಿಂದ ತಂದೆಯಾದ ಶಂತನುವನ್ನು ಮೀರಿಸಿದನು.
ಸರ್ವಾಸ್ತ್ರೇಷ್ವಪ್ಯಭಿರತಃ ಪಾರ್ಥಿವೇಷ್ವಿತರೇಷು ಚ |
ಗುಣೈರ್ವಿಶಿಷ್ಟೋ ಬಹುಭಿಃ ಪುತ್ರೋ ದೇವವ್ರತೋಽಭವತ್ ॥43॥
ಶಂತನುವಿನ ಪುತ್ರನಾದ ದೇವವ್ರತನು ಸರ್ವಾಸ್ತ್ರಗಳಲ್ಲೂ ನಿರತನಾಗಿ ತನ್ನ ಅನೇಕ ಗುಣಗಳಿಂದ ರಾಜರಿಗಿಂತಲೂ ಮತ್ತು ಇತರರಿಗಿಂತಲೂ ವಿಶಿಷ್ಟನಾದವನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ನವತಿತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತೆಂಟನೆಯ ಅಧ್ಯಾಯ  ಮುಗಿಯಿತು.
*****
ತೊಂಭತ್ತೊಂಭತ್ತನೆಯ ಅಧ್ಯಾಯ
(ಶಂತನು ದಾಶಕನ್ಯಾಪ್ರಸಂಗ, ಭೀಷ್ಮರ ಪಾತ್ರ, `ಭೀಷ್ಮ' ಎಂಬ ನಾಮಕರಣ.)
ವೈಶಂಪಾಯನಃ
ಸ ತಥಾ ಸಹ ಪುತ್ರೇಣ ರಮಮಾಣೋ ಮಹೀಪತಿಃ |
ವರ್ತಯಾಮಾಸ ವರ್ಷಾಣಿ ಚತ್ವಾರ್ಯತುಲವಿಕ್ರಮಃ ॥1॥
ಆ ಅತುಲವಿಕ್ರಮನಾದ ರಾಜನು ಮಗನ ಜೊತೆಯಲ್ಲಿ ಸಂತೋಷದಿಂದ ಇರುತ್ತಾ ನಾಲ್ಕುವರ್ಷಗಳ ಕಾಲವನ್ನು ಕಳೆದನು.
ಸ ಕದಾಚಿದ್ ವನಂ ಯಾತೋ ಯಮುನಾಮಭಿತೋ ನದೀಮ್ |
ಮಹೀಪತಿರನಿರ್ದೇಶ್ಯಮಜಿಘ್ರದ್ ಗಂಧಮುತ್ತಮಮ್ ॥2॥
ಒಂದು ಸಲ ಕಾಡಿಗೆ ಹೋದ ರಾಜನು ಯಮುನೆಯ ತೀರದಲ್ಲಿ ವರ್ಣಿಸಲು ಅಸಾಧ್ಯವಾದಂತಹ ಶ್ರೇಷ್ಠವಾದ ಗಂಧವನ್ನು ಆಘ್ರಾಣಿಸಿದನು.
ತಸ್ಯ ಪ್ರಭವಮನ್ವಿಚ್ಛನ್ ವಿಚಚಾರ ವನಂ ನೃಪಃ |
ಸ ದದರ್ಶ ತದಾ ಕನ್ಯಾಂ ದಾಶಾನಾಂ ದೇವರೂಪಿಣೀಮ್ ॥3॥

ಆ ರಾಜನು ಅದರ ಮೂಲವನ್ನು ಹುಡುಕುತ್ತಾ ಕಾಡಿನಲ್ಲಿ ತಿರುಗಾಡಿದಾಗ, ದೇವತೆಗಳ ರೂಪದಂತೆ ರೂಪವಿರುವ ದಾಶಕನ್ಯೆಯನ್ನು ನೋಡಿದನು.
ತಾಮಪೃಚ್ಛತ್ ತತೋ ರಾಜಾ ಕನ್ಯಾಂ ಕಮಲಲೋಚನಾಮ್ |
ಕಸ್ಯ ತ್ವಮಸಿ ಕಾ ಚಾಸಿ ಕಿಂಚ ತೇಽತ್ರ ಚಿಕೀರ್ಷಿತಮ್ ॥4॥
ಆಗ ರಾಜನು ಕಮಲಲೋಚನೆಯಾದ ಅವಳನ್ನು ನೀನು ಯಾರು? ಯಾರ ಮಗಳು? ಮತ್ತು ನೀನು ಇಲ್ಲಿ ಏನು ಮಡುತ್ತಿದ್ದೀಯೇ? ಎಂದು ಕೇಳಿದನು.
ಸಾಽಬ್ರವೀದ್ ದಾಶಕನ್ಯಾಽಸ್ಮಿ ಧರ್ಮಾರ್ಥಂ ವಾಹಯೇ ಪ್ಲವಮ್|
ಪಿತುರ್ನಿಯೋಗಾದ್ ಭದ್ರಂ ತೇ ದಾಶರಾಜ್ಞೋ ಮಹಾತ್ಮನಃ |
ಜ್ಞಾತ್ವಾ ಚ ಪಿತರಂ ತಸ್ಯಾ ವರಯಾಮಾಸ ತಾಂ ತದಾ ॥5॥
ಅವಳು ನಾನು ದಾಶಕನ್ಯೆ, ಮಹಾತ್ಮನಾದ ದಾಶರಾಜರಾದ ನನ್ನ ತಂದೆಯ ಅಪ್ಪಣೆಯಂತೆ ನಾನು ಧರ್ಮಕ್ಕೆ ನಾವೆಯನ್ನು ನಡೆಸುತ್ತೇನೆ. ನಿನಗೆ ಮಂಗಳವಾಗಲಿ ಎಂದು ಹೇಳಿದಳು. ರಾಜನು ಅವಳ ತಂದೆಯನ್ನು ಕಂಡು, ಅವನನ್ನು ಕನ್ಯಾರ್ಥಿಯಾಗಿ ಪ್ರಾರ್ಥಿಸಿದನು.
ರೂಪಮಾಧುರ್ಯಗಂಧೈಶ್ಚ ಸಂಯುಕ್ತಾಂ ದೇವರೂಪಿಣೀಮ್ |
ಸಮೀಕ್ಷ್ಯ ರಾಜಾ ದಾಶೇಯೀಂ ಕಾಮಯಾಮಾಸ ಶಂತನುಃ |
ಪರ್ಯಪೃಚ್ಛತ್ ತತಸ್ತಸ್ಯಾ ಪಿತರಂ ಚಾತ್ಮಕಾರಣಾತ್ ॥6॥
ರೂಪಮಾಧುರ್ಯ ಮತ್ತು ಗಂಧಗಳಿಂದ ಕೂಡಿದ್ದ ದೇವರೂಪಿಣಿಯಾದ ದಾಶಕನ್ಯೆಯನ್ನು ನೋಡಿ, ರಾಜನಾದ ಶಂತನುವು ಕಾಮಿಸಿದನು ಮತ್ತು ತನಗೆ ಅವಳನ್ನು ಕೊಡಬೇಕೆಂದು ಅವನಲ್ಲಿ ಯಾಚಿಸಿದನು.
ಸಂಭ್ರಮಾತ್ ಪ್ರತ್ಯುವಾಚೇದಂ ದಾಶರಾಜೋ ಮಹೀಪತಿಮ್ |
ಯಾಚಮಾನಾಯ ವೈ ದೇಯಾ ವರಾಯ ವರವರ್ಣಿನೀ ॥7॥
ಹೃದಿ ಕಾಮಸ್ತು ಮೇ ಕಶ್ಚಿತ್ ತಂ ನಿಬೋಧ ಜನೇಶ್ವರ |
ಯದೀಮಾಂ ಧರ್ಮಪತ್ನೀಂ ತ್ವಂ ಮತ್ತಃ ಪ್ರಾರ್ಥಯಸೇ ನೃಪ ॥8॥
ಆ ಮಾತನ್ನು ಕೇಳಿದ ದಾಶರಾಜನು ಸಂಭ್ರಮದಿಂದ ರಾಜನನ್ನು ಕುರಿತು, ಸುಂದರಿಯಾದ ಇವಳನ್ನು ಯಾಚನೆ ಮಾಡುವ ಶ್ರೇಷ್ಠನಾದ ವರನಿಗೇ ಕೊಡಬೇಕು. ಆದರೆ ರಾಜನೇ, ನೀನು ಇವಳನ್ನು ಧರ್ಮಪತ್ನಿಯಾಗಿ ಬಯಸುವುದಾದರೆ ನನ್ನ ಮನಸ್ಸಿನಲ್ಲಿ ಒಂದು ಆಸೆಯಿದೆ. ಅದನ್ನು ತಿಳಿ.
ಸತ್ಯವಾಗಸಿ ಸತ್ಯೇನ ಸಮಯಂ ಕುರು ಪಾರ್ಥಿವ |
ತತೋ ದಾಸ್ಯಾಮಿ ರಾಜೇಂದ್ರ ತವ ಕನ್ಯಾಮಿಮಾಂ ನೃಪ |
ನಹಿ ಮೇ ತ್ವತ್ಸಮಃ ಕಶ್ಚಿದ್ ವರೋ ಜಾತು ಭವಿಷ್ಯತಿ ॥9॥
ನೀನು ಸತ್ಯವಚನನಾಗಿದ್ದೀಯೆ. ನನ್ನ ಮಾತನ್ನು ಸತ್ಯವನ್ನು ಮಾಡುತ್ತೇನೆಂದು ಮಾತು ಕೊಡು. ಏಲೈ ರಾಜೇಂದ್ರನೇ, ಅನಂತರ ನಾನು ನಿನಗೆ ಈ ಕನ್ಯೆಯನ್ನು ಕೊಡುವೆನು. ನನಗೆ ನಿನ್ನಂತಹ ಅಳಿಯನು ಎಂದೂ ದೊರೆಯಲಾರ.
ಶಂತನುಃ
ಶ್ರುತ್ವಾ ತವ ವರಂ ದಾಶ ವ್ಯವಸಾಯೋ ಭವಿಷ್ಯತಿ |
ದಾತವ್ಯಂ ಚೇತ್ ಪ್ರದಾಸ್ಯಾಮಿ ನ ತ್ವದೇಯಂ ಕಥಂಚನ ॥10॥
ದಾಶನೇ, ನಿನ್ನ ವರವನ್ನು ಕೇಳಿ, ಅನಂತರ ನಿರ್ಧರಿಸುವೆನು. ಕೊಡಬಹುದಾದರೆ ಕೊಡುವೆನು. ಕೊಡಬಾರದಿದ್ದುದನ್ನು ಎಂದೂ ಕೊಡುವುದಿಲ್ಲ.
ದಾಶಃ
ಯೋಽಸ್ಯಾಂ ಜಾತಸ್ತವ ಸುತಃ ಸ ರಾಜಾ ತ್ವದನಂತರಮ್ |
ತ್ವದೂರ್ಧ್ವಮಭಿಷೇಕ್ತವ್ಯೋ ನಾನ್ಯಃ ಕಶ್ಚನ ಭಾರತ ॥11॥
ಭಾರತನೇ, ನಿನ್ನಿಂದ ಇವಳಲ್ಲಿ ಜಾತನಾದ ಮಗನು ನಿನ್ನ ಅನಂತರ ರಾಜನಾಗಬೇಕು. ನಿನ್ನ ಅನಂತರ ರಾಜನಾಗುವಂತೆ ಅವನಿಗೆ ಅಭಿಷೇಕವನ್ನು ಮಾಡಬೇಕು. ಬೇರೆಯವರಿಗೆ ಅಭಿಷೇಕ ಮಾಡಬಾರದು.
ವೈಶಂಪಾಯನಃ
ನಾಕಾಮಯತ ತಂ ದಾತುಂ ವರಂ ದಾಶಾಯ ಶಂತನುಃ |
ಶರೀರಜಮಸಹ್ಯಂ ತಂ ದೀಪ್ಯಮಾನಮಧಾರಯತ್ ॥12॥
ಶಂತನುವು ದಾಶನಿಗೆ ಆ ವರವನ್ನು ಕೊಡಲು ಬಯಸಲಿಲ್ಲ. ಉರಿಯುತ್ತಿದ್ದ ತನ್ನ ಕಾಮವನ್ನು ಹಾಗೆಯೇ ಸಹಿಸಿದನು.
ಸ ಚಿಂತಯನ್ನೇವ ತದಾ ದಾಶಕನ್ಯಾಂ ಮಹೀಪತಿಃ |
ಪ್ರತ್ಯಯಾದ್ಧಸ್ತಿನಪುರಂ ಶೋಕೋಪಹತಚೇತನಃ ॥13॥
ಆ ರಾಜನು ದಾಶಕನ್ಯೆಯನ್ನು ಚಿಂತಿಸುತ್ತಲೇ ಶೋಕತಪ್ತನಾಗಿ ಹಸ್ತಿನಪುರಕ್ಕೆ ಹಿಂದಿರುಗಿದನು.
ತತಃ ಕದಾಚ್ಛೋಚಂತಂ ಶಂತನುಂ ಧ್ಯಾನಮಾಸ್ಥಿತಮ್ |
ಪುತ್ರೋ ದೇವವ್ರತೋ ಹ್ಯೇತ್ಯ ಪಿತರಂ ವಾಕ್ಯಮಬ್ರವೀತ್ ॥14॥
ಅನಂತರ ಮೌನವಾಗಿ ಶೋಕಪಡುತ್ತಿರುವ ತಂದೆಯಾದ ಶಂತನುವನ್ನು ಸಮೀಪಿಸಿ, ಮಗನಾದ ದೇವವ್ರತನು ಮಾತನಾಡಿದನು.
ಸರ್ವತ್ರ ಭವತಾಂ ಕ್ಷೇಮಂ ವಿಧೇಯಾಃ ಸರ್ವಶತ್ರವಃ |

ಅಕಸ್ಮಾದ್ ರಾಜಶಾರ್ದೂಲ ಶೋಚಂಸ್ತು ಪರಿದೃಶ್ಯಸೇ ॥15॥
ಇಲ್ಲಿ ಎಲ್ಲಾ ಕಡೆಯಲ್ಲಿಯೂ ಕ್ಷೇಮವಿದೆ, ಎಲ್ಲ ಶತ್ರುಗಳೂ ವಿಧೇಯರಾಗಿದ್ದಾರೆ. ರಾಜಶಾರ್ದೂಲನೇ, ನೀನು ಇದ್ದಕ್ಕಿದ್ದಂತೆಯೇ ಶೋಕತಪ್ತನಾಗಿ ತೋರುತ್ತಿರುವೆ?
ತತ್ ಕಿಮರ್ಥಮಿಹಾಭೀಕ್ಷ್ಣಂ ಪರಿಶೋಚಸಿ ದುಃಖಿತಃ |
ಕಸ್ಮಾನ್ನ ಭುಂಕ್ಷೇ ರಾಜಂಸ್ತ್ವಂ ನ ಕಿಂಚಿದಪಿ ಭಾಷಸೇ ॥16॥
ಆದ್ದರಿಂದ ಯಾವ ಕಾರಣಕ್ಕಾಗಿ ಯಾವಾಗಲೂ ದುಃಖದಿಂದ ಶೋಕಪಡುತ್ತಿರುವೆ. ರಾಜನೇ, ನೀನು ಊಟವನ್ನೂ ಮಾಡುತ್ತಿಲ್ಲ ಮತ್ತು ಏನನ್ನೂ ಮಾತನಾಡುತ್ತಿಲ್ಲ.
ನ ಚಾಶ್ವೇನ ಚ ನಿರ್ಯಾಸಿ ವಿವರ್ಣೋ ಹರಿಣಃ ಕೃಶಃ |
ವ್ಯಾಧಿಮಿಚ್ಛಾಮಿ ತೇ ಜ್ಞಾತುಂ ಪ್ರತಿಕುರ್ಯಾಂ ಹಿ ತತ್ರ ವೈ ॥17॥
ನೀನು ಅಶ್ವಗಳನ್ನು ಹೂಡಿದ ರಥದಲ್ಲಿ ಹೋಗುತ್ತಿಲ್ಲ. ನೀನು ವರ್ಣವನ್ನು ಕಳೆದುಕೊಂಡು ಹರಿಣನೂ, ಕೃಶನೂ ಆಗಿದ್ದೀಯೆ. ನಿನ್ನ ವ್ಯಾಧಿ ಏನೆಂದು ತಿಳಿಯಲು ಬಯಸುತ್ತೇನೆ. ಅದಕ್ಕೆ ಯೋಗ್ಯವಾದ ಚಿಕಿತ್ಸೆಯನ್ನೂ ಮಾಡುತ್ತೇನೆ.
ವೈಶಂಪಾಯನಃ
ಸ ತಂ ಕಾಮಮವಾಚ್ಯಂ ವೈ ದಾಶಕನ್ಯಾಂ ಪ್ರತೀದೃಶಮ್ |
ವಿವೃತಂ ನಾಶಕತ್ ತಸ್ಮೈ ಪಿತಾ ಪುತ್ರಾಯ ಶಂಸಿತುಮ್ ॥18॥
ತಂದೆಯಾದ ಶಂತನುವು ತನಗೆ ದಾಶಕನ್ಯೆಯಲ್ಲಿರುವ ಇಂತಹ ಅವಾಚ್ಯವಾದ ಕಾಮವನ್ನು ಮಗನಿಗೆ ಸ್ಪಷ್ಟವಾಗಿ ಹೇಳಲು ಶಕ್ತನಾಗಲಿಲ್ಲ.
ಏವಮುಕ್ತಸ್ತು ಪುತ್ರೇಣ ಶಂತನುಃ ಪ್ರತ್ಯಭಾಷತ |
ಅಸಂಶಯಂ ಮಹಾಪ್ರಾಜ್ಞ ಯಥೈವಾತ್ಥ ತಥೈವ ತತ್ ॥19॥
ಮಗನಿಂದ ಹೀಗೆ ಹೇಳಲ್ಪಟ್ಟವನಾಗಿ, ಶಂತನುವು ಮಹಾಪ್ರಾಜ್ಞನೇ, ನೀನು ನನಗೆ ಹೇಳಿದುದೆಲ್ಲವೂ ನಿಸ್ಸಂಶಯವಾಗಿ ಸರಿಯೆಂದು ಹೇಳಿದನು.
ಅಪತ್ಯಂ ನಸ್ತ್ವಮೇವೈಕಃ ಕುಲೇ ಮಹತಿ ಭಾರತ |
ಅನುವೃತ್ತ್ಯಾ ಸ್ಮರನ್ ನ ೃಣಾಂಮತಃ ಶೋಚಾಮಿ ಪುತ್ರಕ ॥20॥
ಎಲೈ ಭಾರತನೇ, ನಮ್ಮ ಮಹಾಕುಲದಲ್ಲಿ ನೀನೊಬ್ಬನೇ ನನಗೆ ಮಗ.ಮನುಷ್ಯರ ಕುಲದ ಸಾದೃಶ್ಯವನ್ನು ಗಮನಿಸಿ ನಾನು ಶೋಕಪಡುತ್ತಿದ್ದೇನೆ.
ಕಥಂಚಿತ್ ತ್ವಯಿ ಗಾಂಗೇಯ ವಿಪನ್ನೇ ನಾಸ್ತಿ ನಃ ಕುಲೇ |
ಅಸಂಶಯಂ ತ್ವಮೇವೈಕೋ ಮಮ ಪುತ್ರಶತಾದ್ ವರಃ ॥21॥
ಎಲೈ ಗಾಂಗೇಯನೇ, ನೀನು ಹೇಗಾದರೂ ನಿಧನವನ್ನು ಹೊಂದಿದರೆ, ನಮ್ಮ ಕುಲದಲ್ಲಿ ಇನ್ನೊಬ್ಬರಿಲ್ಲ. ನಿಶ್ಚಯವಾಗಿಯೂ ನನಗೆ ಹುಟ್ಟಬಹುದಾದ ನೂರು ಮಕ್ಕಳಿಗಿಂತಲೂ ನೀನು ಶ್ರೇಷ್ಠನಾದವನು.
ನ ಚಾಪ್ಯಹಂ ವೃಥಾ ಭೂಯೋ ದಾರಾನ್ ಕರ್ತುಮಿಹೋತ್ಸಹೇ |
ಸಂತಾನಸ್ಯಾವಿನಾಶಂ ತು ಕಾಮಯೇ ಭದ್ರಮಸ್ತು ತೇ ॥22॥
ನಾನು ಪುನಃ ವ್ಯರ್ಥವಾಗಿ ವಿವಾಹ ಮಾಡಿಕೊಳ್ಳಲು ಬಯಸುವುದಿಲ್ಲ. ನನ್ನ ಸಂತಾನಕ್ಕೆ ಚ್ಯುತಿಯಾಗಬಾರಂದೆಂದಷ್ಟೇ ಆಶಿಸುತ್ತೇನೆ. ನಿನಗೆ ಮಂಗಳವಾಗಲಿ.
ಅಪುತ್ರತೈಕಪುತ್ರತ್ವಂ ಸಮಮಾಹುರ್ಮನೀಷಿಣಃ |
ಚಕ್ಷುರೇಕಂ ಚ ಪುತ್ರಶ್ಚ ಅಸ್ತಿ ನಾಸ್ತಿ ಯಥಾ ತಥಾ |
ಚಕ್ಷುರ್ನಾಶೇ ತನೋರ್ನಾಶಃ ಪುತ್ರನಾಶೇ ಕುಲಕ್ಷಯಃ ॥23॥
ಅಪುತ್ರತಾ ಮತ್ತು ಏಕಪುತ್ರತಾ ಸಮಾನವಾದುದೆಂದು ನ್ಯಾಯಗಳು ಹೇಳುತ್ತಾರೆ. ಒಂದು ಕಣ್ಣು ಮತ್ತು ಏಕಪುತ್ರ ಇದ್ದಂತೆಯೂ ಸರಿ, ಇಲ್ಲದಿದ್ದಂತೆಯೂ ಸರಿ. ಕಣ್ಣು ಹೋದರೆ ದೇಹವೂ ಹೋಗುತ್ತದೆ. ಪುತ್ರನಾಶವಾದರೆ ಕುಲವೇ ನಾಶಹೊಂದುತ್ತದೆ.
ಅಗ್ನಿಹೋತ್ರಂ ತ್ರಯೋ ವೇದಾ ಯಜ್ಞಾಶ್ಚ ಸಹದಕ್ಷಿಣಾಃ |
ಸರ್ವಾಣ್ಯೇತಾನ್ಯಪತ್ಯಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥24॥
ಅಗ್ನಿಹೋತ್ರ, ಮೂರು ವೇದಗಳು, ದಕ್ಷಿಣಾಸಹಿತವಾದ ಯಜ್ಞಗಳು ಇವೆಲ್ಲವೂ ಪುತ್ರನ ಮಹತ್ವದ ಹದಿನಾರರಲ್ಲಿ ಒಂದು ಅಂಶವನ್ನು ಪಡೆಯಲಾರವು.
ಏವಮೇವ ಮನುಷ್ಯೇಷು ಸ್ಯಾಚ್ಚ ಸರ್ವಂ ಪ್ರಜಾಸ್ವಪಿ |
ಯದಪತ್ಯಂ ಮಹಾಪ್ರಾಜ್ಞ ತತ್ರ ಮೇ ನಾಸ್ತಿ ಸಂಶಯಃ |
ಅಪತ್ಯಾದನೃಣೋ ಲೋಕೇ ಪಿತ ೃಣಾಂ ನಾಸ್ತಿ ಸಂಶಯಃ ॥25॥
ಮಹಾಪ್ರಾಜ್ಞನೇ, ಮನುಷ್ಯರ ತುಲನೆಯಲ್ಲಿ ಮನುಷ್ಯರ ಪ್ರಜೆಗಳಲ್ಲಿಯೂ ಇದೇ ರೀತಿಯಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ನಿನ್ನಂತಹ ಮಗನನ್ನು ಪಡೆದು, ನಾನು ಪಿತೃಋಣದಿಂದ ಮುಕ್ತನಾಗಿದ್ದೇನೆ. ಈ ವಿಷಯದಲ್ಲಿ ಸಂಶಯವಿಲ್ಲ.
ಏಷಾ ತ್ರಯೀ ಪುರಾಣಾನಾಮುತ್ತಮಾನಾಂ ಚ ಶಾಶ್ವತೀ |
ಅಪತ್ಯಂ ಕರ್ಮ ವಿದ್ಯಾ ಚ ತ್ರೀಣಿ ಜ್ಯೋತೀಂಷಿ ಭಾರತ ॥26॥
ಈ ಮೂರು ವಸ್ತುಗಳು ಪ್ರಾಚೀನಕಾಲದಿಂದ ಎಲ್ಲರೂ ಶ್ರೇಷ್ಠವೆಂದು ಗಣನೆ ಮಾಡಲ್ಪಟ್ಟವು. ಭಾರತನೇ, ಅಪತ್ಯ, ಕರ್ಮ ಮತ್ತು ವಿದ್ಯೆ- ಈ ಮೂರು ವಂಶಜ್ಯೋತಿಗಳು.

ಯದಿದಂ ಕಾರಣಂ ತಾತ ಸರ್ವಮಾಖ್ಯಾತಮಂಜಸಾ |
ತ್ವಂ ಚ ಶೂರಃ ಸದಾಽಮರ್ಷೀ ಶಸ್ತ್ರನಿತ್ಯಶ್ಚ ಭಾರತ ॥27॥
ಮಗು, ನನ್ನ ಶೋಕಕ್ಕೆ ಕಾರಣವೆಲ್ಲವನ್ನು ಸರಿಯಾಗಿ ಹೇಳಿದ್ದೇನೆ. ನೀನು ಶೂರ, ಯಾವಾಗಲೂ ಕ್ರೋಧವುಳ್ಳವನು ಮತ್ತು ಯಾವಾಗಲೂ ಶಸ್ತ್ರಗಳ ಸಂಪರ್ಕವಿರುವವನು.
ನಾನ್ಯತ್ರ ಶಸತ್ರಾತ್ ತೇ ಪುತ್ರ ನಿಧನಂ ವಿದ್ಯತೇಽನಘ |
ಸೋಽಸ್ಮಿ ಸಂಶಯಮಾಪನ್ನಸ್ತ್ವಯಿ ಶಾಂತೇ ಕಥಂ ಭವೇತ್ |
ಏತನ್ಮೇ ಕಾರಣಂ ತಾತ ದುಃಖಮೂಲಮಶೇಷತಃ ॥28॥
ಪುತ್ರನೇ ಶಸ್ತ್ರವನ್ನು ಬಿಟ್ಟು ನೀನು ಮರಣಹೊಂದುವ ಬೇರೆ ಸಾಧ್ಯತೆಯಿಲ್ಲ. ಆದ್ದರಿಂದ ನೀನು ಒಂದು ಪಕ್ಷ ಶಾಂತನಾದರೆ, ನಮ್ಮ ಕುಲದ ಗತಿಯೇನು ಎಂಬ ಸಂಶಯದಲ್ಲಿ ತೊಳಲಾಡುತ್ತಿದ್ದೇನೆ. ಇದು ನನ್ನ ದುಃಖಕ್ಕೆ ಸಮಗ್ರವಾದ ಮೂಲ ಕಾರಣ.
ವೈಶಂಪಾಯನಃ
ಸ ತಸ್ಯ ಪಿತುರಾಜ್ಞಾಯ ಮತಂ ಸಮನುಚಿಂತ್ಯ ಚ |
ದೇವವ್ರತೋ ಮಹಾಬುದ್ಧಿಃ ಪ್ರಯಾಣಮನುಚಿಂತಯನ್ ॥29॥
ಮಹಾಮೇಧಾವಿಯಾದ ಭೀಷ್ಮನು ತಂದೆಯ ಅಭಿಪ್ರಾಯವನ್ನು ತಿಳಿದು, ಆಲೋಚಿಸಿ ಪ್ರಯಾಣ ಮಾಡಲು ನಿರ್ಧರಿಸಿದನು.
ಅಪತ್ಯಫಲಸಂಯುಕ್ತಮೇತಚ್ಛ್ರುತ್ವಾ ಪಿತುರ್ವಚಃ |
ಸೂತಂ ಭೂಯೋಽಭಿ ಸಂತಪ್ತಮಾಹ್ವಯಾಮಾಸ ವೈ ಪಿತುಃ ॥30॥
ಪುತ್ರಫಲಯುಕ್ತವಾದ ಮಾತುಗಳನ್ನು ತಂದೆಯ ಬಾಯಿಯಿಂದ ಕೇಳಿ, ತಂದೆಗಿಂತಲೂ ಹೆಚ್ಚು ದುಃಖಕ್ಕೆ ಒಳಗಾಗಿದ್ದ, ತಂದೆಯ ಸಾರಥಿಯನ್ನು ಕರೆಸಿದನು.
ಸೂತಸ್ತು ಕುರುಮುಖ್ಯಸ್ಯ ಉಪಯಾತಸ್ತದಾಜ್ಞಯಾ |
ತಮುವಾಚ ಮಹಾಪ್ರಾಜ್ಞೋ ಭೀಷ್ಮೋ ವೈ ಸಾರಥಿಂ ಪಿತುಃ ॥31॥
ಕುರುರಾಜನ ಸಾರಥಿಯು ಭೀಷ್ಮನ ಅಪ್ಪಣೆಯಂತೆ ಬರುತ್ತಿರಲು, ಮಹಾಪ್ರಾಜ್ಞನಾದ ಭೀಷ್ಮನು ತಂದೆಯ ಸಾರಥಿಯನ್ನು ಕುರಿತು ಮಾತನಾಡಿದನು.
ತ್ವಂ ಸಾರಥೇ ಪಿತುರ್ಮಹ್ಯಂ ಸಖಾಽಸಿ ರಥಧೂರ್ಗತಃ |
ಅಭಿಜಾನಾಸಿ ಯದಿ ವೈ ಯಸ್ಯಾಂ ಭಾವೋ ನೃಪಸ್ಯ ತು |
ಏತದಾಚಕ್ಷ್ವ ಮೇ ಪೃಷ್ಟಃ ಕರಿಷ್ಯೇ ನ ತದನ್ಯಥಾ ॥32॥
ಎಲೈ ಸಾರಥಿಯೇ, ರಥದ ಜವಾಬ್ದಾರಿಯನ್ನು ಹೊತ್ತ ನೀನು, ನನ್ನ ತಂದೆಗೆ ಒಳ್ಳೆಯ ಸ್ನೇಹಿತನಾಗಿದ್ದೀಯೆ. ರಾಜನಿಗೆ ಯಾವುದಾದರೂ ಕನ್ಯೆಯಲ್ಲಿ ಮನಸ್ಸಿದೆಯೆಂದು ನಿನಗೆ ತಿಳಿದಿದೆಯೇ ? ನೀನು ಇದಕ್ಕೆ ಉತ್ತರವನ್ನು ಹೇಳು. ನಾನು ಅದನ್ನು ಹಾಗೆಯೇ ನೆರವೇರಿಸುತ್ತೇನೆ.
ಸೂತಃ
ದಾಶಕನ್ಯಾಂ ಕುರುಶ್ರೇಷ್ಠ ತತ್ರ ಭಾವಃ ಪಿತುರ್ಗತಃ |
ವೃತಃ ಸ ನರದೇವೇನ ತದಾ ವಚನಮಬ್ರವೀತ್ ॥33॥
ಯೋಽಸ್ಯಾಂ ಪುಮಾನ್ ಭವೇಜ್ಜಾತಃ ಸ ರಾಜಾ ತ್ವದನಂತರಮ್ |
ನಾಕಾಮಯತ ತಂ ದಾತುಂ ಪಿತಾ ತವ ವರಂ ತದಾ ॥34॥
ಕುರುಶ್ರೇಷ್ಠನೇ, ನಿನ್ನ ತಂದೆಯ ಮನಸ್ಸು ದಾಶಕನ್ಯೆಯಲ್ಲಿ ಲಗ್ನವಾಗಿದೆ. ನಿನ್ನ ತಂದೆಯಿಂದ ಯಾಚಿಸಲ್ಪಟ್ಟ ದಾಶರಾಜನು - ``ಇವಳಲ್ಲಿ ಉತ್ಪನ್ನನಾದ ನಿನ್ನ ಮಗನು ನಿನ್ನ ಅನಂತರ ರಾಜನಾಗಬೇಕು'' ಎಂದು ಹೇಳಿದನು. ನಿನ್ನ ತಂದೆಯು ಅವನಿಗೆ ಆ ವರವನ್ನು ಕೊಡಲು ಬಯಸಲಿಲ್ಲ.
ಸದಾಽಪಿ ನಿಶ್ಚಯಸ್ತಸ್ಯ ನಚ ದದ್ಯಾಮತೋಽನ್ಯಥಾ |
ಏತತ್ ತೇ ಕಥಿತಂ ವೀರ ಕುರುಷ್ವ ಯದನಂತರಮ್ ॥35॥
ಅವನಿಗೆ ಯಾವಾಗಲೂ ಇಂತಹ ವರವನ್ನು ಕೊಡುವುದಿಲ್ಲವೆಂಬ ನಿರ್ಧಾರವಿದೆ. ದಾಶರಾಜನಿಗೆ ಇಂತಹ ವರವನ್ನು ಕೊಡದಿದ್ದರೆ, ತನ್ನ ಕನ್ಯೆಯನ್ನು ಕೊಡುವುದಿಲ್ಲ ಎಂಬ ನಿಶ್ಚಯವೂ ಇದೆ. ವೀರನೇ, ನಾನು ನಿನಗೆ ತಿಳಿಸಿದ್ದೇನೆ. ಮುಂದಿನ ಕಾರ್ಯವನ್ನು ಮಾಡು.
ವೈಶಂಪಾಯನಃ
ತತಃ ಸ ಪಿತುರಾಜ್ಞಾಯ ಮತಂ ಸಮ್ಯಗವೇಕ್ಷ್ಯ ಚ |
ಜ್ಞಾತ್ವಾ ವಿಮನಸಂ ಪುತ್ರಃ ಪ್ರಯಯೌ ಯಮುನಾಂ ಪ್ರತಿ |
ಕ್ಷತ್ರಿಯೈಃ ಸಹ ಧರ್ಮಾತ್ಮಾ ಪುರಾಣೈರ್ಬ್ರಹ್ಮಚಾರಿಭಿಃ ॥36॥
ಅನಂತರ ದೇವವ್ರತನು ತಂದೆಯ ಅಭಿಪ್ರಾಯವನ್ನು ಕೇಳಿ, ಚೆನ್ನಾಗಿ ಆಲೋಚಿಸಿ, ಅವನು ಉತ್ಸಾಹರಹಿತನಾಗಿರುವುದನ್ನು ಕಂಡು ಕ್ಷತ್ರಿಯರಿಂದಲೂ, ವೃದ್ಧರಿಂದಲೂ, ಬ್ರಹ್ಮಚಾರಿಗಳಿಂದಲೂ ಕೂಡಿಕೊಂಡು ಧರ್ಮಾತ್ಮನಾದ ಅವನು ಯಮುನೆಯ ಬಳಿಗೆ ಹೋದನು.
ಉಚ್ಚೈಃಶ್ರವಸಮಾಗಮ್ಯ ಕನ್ಯಾಂ ವವ್ರೇ ಯಶಸ್ವಿನೀಮ್ |
ತಂ ದಾಶಃ ಪ್ರತಿಜಗ್ರಾಹ ವಿಧಿವತ್ ಪ್ರತಿಪೂಜ್ಯ ಚ |
ಅಬ್ರವೀಚ್ಚೈನಮಾಗಮ್ಯ ರಾಜಸಂಸದಿ ಭಾರತ ॥37॥
ಉಚ್ಚೈಶ್ರವನೆನಿಸಿದ ದಾಶರಾಜನನ್ನು ಕಂಡು, ದೇವವ್ರತನು ತಂದೆಯ ಸಲುವಾಗಿ ಅವನ ಕನ್ಯೆಯನ್ನು ಯಾಚಿಸಿದನು. ದಾಶನು

ವಿಧಿವತ್ತಾಗಿ ಪೂಜಿಸಿ ಅವನ ಮಾತನ್ನು ಸ್ವೀಕರಿಸಿದನು.  ಭಾರತನೇ, ಅನಂತರ ರಾಜಸಭೆಗೆ ಬಂದು ಮಾತನಾಡಿದನು.
ರಾಜ್ಯಶುಲ್ಕಾ ಪ್ರದಾತವ್ಯಾ ಕನ್ಯೇಯಂ ಯಾಚತಾಂ ವರ |
ಅಪತ್ಯಂ ಯದ್ ಭವೇತ್ ತಸ್ಯಾಃ ಸ ರಾಜಾಽಸ್ತು ಪಿತುಃ ಪರಮ್  ॥
ಯಾಚಿಸುವವರಲ್ಲಿ ಶ್ರೇಷ್ಠನಾದವನೇ, ಈ ಕನ್ಯೆಯನ್ನು ನಾನು ರಾಜ್ಯಶುಲ್ಕದಿಂದ ಕೊಡಲು ಬಯಸುತ್ತೇನೆ. ಇವಳಲ್ಲಿ ಹುಟ್ಟುವ ಮಗನು ನಿನ್ನ ತಂದೆಯ ಅನಂತರ ರಾಜನಾಗಬೇಕು.
ತ್ವಮೇವಾತ್ರ ಮಹಾಬಾಹೋ ಶಂತನೋರ್ವಂಶವರ್ಧನಃ |
ಪುತ್ರಃ ಪುಣ್ಯವತಾಂ ಶ್ರೇಷ್ಠಃ ಕಿಂ ನು ವಕ್ಷ್ಯಾಮಿ ತೇ ವಚಃ          ॥39॥
ಮಹಾಬಾಹುವೇ, ಪುಣ್ಯವಂತರಲ್ಲಿ ಶ್ರೇಷ್ಠನಾದವನೇ, ನೀನೇ ಶಂತನುವಿನ ವಂಶವರ್ಧನನಾದ ಪುತ್ರ. ಇದಕ್ಕಿಂತ ಹೆಚ್ಚು ಏನು ಹೇಳಲಿ.
ಕುಮಾರಿಕಾಯಾಃ ಶುಲ್ಕಾರ್ಥಂ ಕಿಂಚಿದ್ ವಕ್ಷ್ಯಾಮಿ ಭಾರತ |
ಕೋ ಹಿ ಸಂಬಂಧಕಂ ಶ್ಲಾಘ್ಯಮೀಪ್ಸಿತಂ ಮಾನ್ಯಮೀದೃಶಮ್ |
ಅತಿಕ್ರಾಂತಂ ನ ತಪ್ಯೇತ ಸಾಕ್ಷಾದಪಿ ಶತಕ್ರತುಃ       ॥40॥
ಭಾರತನೇ,  ಕನ್ಯಾಶುಲ್ಕದ ವಿಷಯದಲ್ಲಿ ಒಂದು ಮಾತನ್ನು ಹೇಳುವೆನು -  ಯಾರು ತಾನೇ ಆಗಲಿ, ಶ್ಲಾಘ್ಯವಾದ, ಮಾನ್ಯವಾದ, ಅಭೀಷ್ಟವಾದ ಇಂತಹ ಸಂಬಂಧವನ್ನು ಕಳೆದುಕೊಂಡರೆ, ಅನಂತರ ಪಶ್ಚಾತ್ತಾಪವನ್ನು ಪಡದಿರಲು ಸಾಧ್ಯ? ಇಂದ್ರನಾದರೂ ಪಶ್ಚಾತ್ತಾಪ ಪಡಬೇಕಾಗುತ್ತದೆ.
ಅಪತ್ಯಂ ಹೀದಮಾರ್ಯಸ್ಯ ಯೋ ಯುಷ್ಮಾಕಂ ಸಮೋ ಗುಣೈಃ |
ಯಸ್ಯ ಶುಕ್ರಾತ್ ಸತ್ಯವತೀ ಪ್ರಾದುರ್ಭೂತಾ ಯಶಸ್ವಿನೀ          ॥41॥
ಇವಳು ಆರ್ಯನಾದ ಉಪರಿಚರವಸುವಿನ ಮಗಳು. ಅವನು ಗುಣಗಳಿಂದ ನಿಮಗೆ ಸಮಾನವಾಗಿದ್ದಾನೆ. ಅವನ ವೀರ್ಯದಿಂದ ಹುಟ್ಟಿದವಳು ಈ ಕೀರ್ತಿಶಾಲಿಯಾದ ಸತ್ಯವತಿ.
ಮಯಾ ತವ ಪಿತಾ ಪೂರ್ವಂ ಬಹುಶಃ ಪರಿಕೀರ್ತಿತಃ |
ಅರ್ಹತೀಯಂ ಸತ್ಯವತೀ ಪಿತರಂ ತೇ ಧ್ರುವಂ ತಥಾ          ॥42॥
ನಾನು ಅವಳ ಎದುರಿಗೆ ಹಿಂದೆ ಅನೇಕ ಬಾರಿ, ನಿನ್ನ ತಂದೆಯ ವಿಷಯವನ್ನು ಪ್ರಸ್ತಾಪಿಸಿದ್ದೇನೆ. ನಿಶ್ಚಯವಾಗಿ ಇವಳು ನಿನ್ನ ತಂದೆಯ ಪಾಣಿಗ್ರಹಣಕ್ಕೆ ಯೋಗ್ಯಳಾದವಳು.
ಅಸಿತಶ್ಚಾಪಿ ರಾಜರ್ಷಿಃ ಪ್ರತ್ಯಾಖ್ಯಾತಃ ಪುರಾ ಮಯಾ  |
ಸ ಚಾಪ್ಯಾಸೀತ್ ಸತ್ಯವತ್ಯಾ ಭೃಶಮರ್ಥೀ ಮಹಾಯಶಾಃ          ॥43॥
ಹಿಂದೆ ಮಹಾಕೀರ್ತಿವಂತನಾದ ಅಸಿತರಾಜನು, ಸತ್ಯವತಿಯಲ್ಲಿ ಬಹಳ ಆಸಕ್ತನಾಗಿದ್ದನು. ಆದರೆ ನಾನು ಅವನನ್ನು ನಿರಾಕರಿಸಿದೆ.
ಕನ್ಯಾಪಿತೃತ್ವಾದ್ ವಕ್ಷ್ಯಾಮಿ ಕಿಂಚಿತ್ ತು ಭರತರ್ಷಭ  |
ಬಲವತ್ಸಪತ್ನತಾಮತ್ರ ದೋಷಂ ಪಶ್ಯಾಮಿ ಕೇವಲಮ್ |
ಭೂಯಾಂಸಂ ತ್ವಯಿ ಪಶ್ಯಾಮಿ ತದ್ದೋಷಮಪರಾಜಿತ          ॥44॥
ಭರತರ್ಷಭನೇ, ಕನ್ಯೆಯ ತಂದೆಯಾದುದರಿಂದ ಈ ವಿಷಯವನ್ನು ಹೇಳುತ್ತಿದ್ದೇನೆ. ಈ ವಿಷಯದಲ್ಲಿ ಶತ್ರುಪ್ರಾಬಲ್ಯವನ್ನು ನಾನು ದೋಷವೆಂದು ಪರಿಗಣಿಸುತ್ತೇನೆ. ನಿನ್ನ ನಿಮಿತ್ತದಿಂದ ನಾನು ಆ ದೋಷವನ್ನು ಅಧಿಕವಾಗಿ ಪರಿಗಣಿಸುತ್ತೇನೆ.
ಯಸ್ಯ ಹಿ ತ್ವಂ ಸಪತ್ನಃ ಸ್ಯಾ ಗಂಧರ್ವಸ್ಯಾಸುರಸ್ಯ ವಾ |
ನ ಚ ಜಾತು ಸುಖಂ ವಿಂದೇತ್ ತ್ವಯಿ ಕ್ರುದ್ಧೇ ಪರಂತಪ          ॥45॥
ನೀನು ಯಾರಿಗೆ ಶತ್ರುವಾಗುವೆಯೋ, ಅವರು ಗಂಧರ್ವರೇ ಆಗಲೀ, ಅಸುರರೇ ಆಗಲಿ, ಪರಂತಪನೇ, ನೀನು ಕ್ರುದ್ಧನಾದಾಗ ಅವರು ಎಂದೂ ಸುಖದಿಂದಿರಲು ಸಾಧ್ಯವಿಲ್ಲ.
ಏತಾವಾನತ್ರ ದೋಷೋಽಸ್ತಿ ನಾನ್ಯಃ ಕಶ್ಚನ ವಿದ್ಯತೇ |
ಏತಜ್ಜಾನೀಹಿ ಭದ್ರಂ ತೇ ದಾನಾದಾನೇ ತ್ವಯಿ ಸ್ಥಿತೇ          ॥46॥
ಈ ವಿಷಯದಲ್ಲಿ ಇಷ್ಟು ಮಾತ್ರ ದೋಷವಿದೆ. ಬೇರೆ ಯಾವ ದೋಷವೂ ಇಲ್ಲ. ನೀನು ಇದನ್ನು ತಿಳಿ. ನಿನಗೆ ಮಂಗಳವಾಗಲಿ. ಕೊಡುವುದು ಅಥವಾ ಬಿಡುವುದು ನಿನ್ನನ್ನು ಅವಲಂಬಿಸಿದೆ.
ವೈಶಂಪಾಯನಃ
ಏವಮುಕ್ತೋಽಥ ಗಾಂಗೇಯಸ್ತದ್ಯುಕ್ತಂ ಪ್ರತ್ಯಭಾಷತ |
ಶೃಣ್ವತಾಂ ಭೂಮಿಪಾಲಾನಾಂ ಪಿತುರರ್ಥಾಯ ಧರ್ಮವಿತ್     ॥
ಹೀಗೆ ಹೇಳಲ್ಪಟ್ಟ ಗಾಂಗೇಯನು ಧರ್ಮವನ್ನು ತಿಳಿದವನಾಗಿ, ಎಲ್ಲ ರಾಜರುಗಳು ಕೇಳುತ್ತಿರುವಂತೆ ತಂದೆಯ ಸಲುವಾಗಿ, ಹೀಗೆ ಅದಕ್ಕೆ ಯೋಗ್ಯವಾದ ರೀತಿಯಲ್ಲಿ ಮಾತನಾಡಿದನು.
ದೇವವ್ರತಃ
ಇದಂ ವಚನಮಾದತ್ಸ್ವ ನಾಸ್ತಿ ವಕ್ತಾಽಸ್ಯ ಮತ್ಸಮಃ |
ಅನ್ಯೋ ಜಾತೋ ನ ಜನಿತಾ ನಚ ಕಶ್ಚನ ಸಂಪ್ರತಿ  ॥48॥
ಏವಮೇತತ್ ಕರಿಷ್ಯಾಮಿ ಯಥಾ ತ್ವಮಿಹ ಭಾಷಸೇ |
ಯೋಽಸ್ಯಾಂ ಜನಿಷ್ಯತೇ ಪುತ್ರಃ ಸ ನೋ ರಾಜಾ ಭವಿಷ್ಯತಿ          ॥49॥
ದಾಶನೇ, ಈ ನನ್ನ ಮಾತನ್ನು ತೆಗೆದುಕೋ. ಇಂತಹ ಮಾತನ್ನು ಆಡುವವರು ಯಾರೂ ಇಲ್ಲ. ಹಿಂದೆ ಹುಟ್ಟಲಿಲ್ಲ, ಮುಂದೆ

ಹುಟ್ಟುವುದಿಲ್ಲ.  ಈ ದಿನ ಬೇರೆ ಯಾರೂ ಇಲ್ಲ. ಈ ಹೇಗೆ ಹೇಳುತ್ತಿದ್ದೇಯೋ, ಹಾಗೆಯೇ ಮಾಡುವೆನು. ಇವಳಲ್ಲಿ ಹುಟ್ಟುವ ಮಗನು ನಮಗೆ ರಾಜನಾಗುವನು.
ವೈಶಂಪಾಯನಃ
ಇತ್ಯುಕ್ತಃ ಪುನರೇವಾಥ ತಂ ದಾಶಃ ಪ್ರತ್ಯಭಾಷತ |
ಚಿಕೀರ್ಷುರ್ದುಷ್ಕರಂ ಕರ್ಮ ರಾಜ್ಯಾರ್ಥೇ ಭರತರ್ಷಭ ॥50॥
ಹೀಗೆ ಹೇಳಲ್ಪಟ್ಟ ದಾಶನು, ಪುನಃ ದೇವವ್ರತನನ್ನು ಕುರಿತು ಮಾತನಾಡಿದನು.
ತ್ವಯ್ಯೈವಾತ್ರ ಮಹಾಬಾಹೋ ಶಂತನುರ್ನಾಮ ನಾಥವಾನ್ |
ಈಶ್ವರಃ ಕಾರಣಂ ಚ ತ್ವಂ ಪ್ರಭುರ್ದಾನಾಯ ಚಾನಘ ॥51॥
ಭರತರ್ಷಭನೇ, ರಾಜ್ಯದ ಸಲುವಾಗಿ ಇಂತಹ ದುಷ್ಕರವಾದ ಕಾರ್ಯವನ್ನು ಮಾಡಲು ಹೊರಟಿರುವ ನಿನ್ನಂತಹ ಮಗನಿಂದ ಶಂತನು ಸನಾಥನಾಗಿದ್ದಾನೆ. ಮಹಾಬಾಹುವೇ, ಅನಘನೇ, ದಾನದ ವಿಷಯದಲ್ಲಿ  ನೀನೇ ಪ್ರಭು, ಮತ್ತು ನೀನೇ ಕಾರಣ.
ಇದಂ ತು ವಚನಂ ಮಹ್ಯಂ ಕಾರ್ಯಂ ವೈ ಶೃಣು ಭಾರತ |
ಕುಮಾರಿಕಾಯಾಃ ಶುಲ್ಕೇನ ವಕ್ಷ್ಯಾಮ್ಯಹಮರಿಂದಮ ॥52॥
ಭಾರತನೇ, ಕನ್ಯಾಶುಲ್ಕದ ವಿಷಯದಲ್ಲಿ ಅರಿಂದಮನಾದ ನಿನ್ನನ್ನು ಕುರಿತು, ನಾನು ಹೇಳುವ ಈ ಮಾತನ್ನು ಮತ್ತು ಕಾರ್ಯವನ್ನು ಕೇಳು.
ಯತ್ ತ್ವಯಾ ಸತ್ಯಮರ್ಥಂ ಹಿ ಸತ್ಯಶೀಲ ಮಹಾಬಲ |
ರಾಜ್ಞಾಂ ಮಧ್ಯೇ ಪ್ರತಿಜ್ಞಾತಮನುರೂಪಂ ತವೈವ ತತ್ ॥53॥
ಮಹಾಬಲನೇ ಮತ್ತು ಸತ್ಯಶೀಲನೇ, ರಾಜರ ಮಧ್ಯದಲ್ಲಿ ಸತ್ಯವಚನವನ್ನು ನುಡಿದು, ನೀನು ಏನು ಪ್ರತಿಜ್ಞೆಯನ್ನು ಮಾಡಿದ್ದೇಯೋ, ಅದು ನಿನಗೇ ಅನುರೂಪವಾದದು.
ತತ್ ತಥೈವ ಮಹಾಬಾಹೋ ಸಂಶಯೋ ನಾತ್ರ ವಿದ್ಯತೇ |
ನಾಸ್ತಿ ತಸ್ಯಾನ್ಯಥಾಭಾವಸ್ತ್ವತ್ತೋ ರಿಪುನಿಬರ್ಹಣ ॥54॥
ಮಹಾಬಾಹುವೇ, ಅದು ಹಾಗೆಯೇ ನಡೆಯುತ್ತದೆ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ. ರಿಪುಸೂದನನೇ ನೀನು ಅದನ್ನು ಎಂದೂ ವ್ಯತ್ಯಾಸ ಮಾಡುವುದಿಲ್ಲ.
ವಿದ್ಯತೇ ಪರುಷವ್ಯಾಘ್ರ ತ್ವಯಿ ಸತ್ಯಂ ಮಹಾವ್ರತ |
ಅಪತ್ಯಂ ಯದ್ ಭವೇತ್ ತುಭ್ಯಂ ತತ್ರ ನಃ ಸಂಶಯೋ ಮಹಾನ್ ॥
ಪುರುಷವ್ಯಾಘ್ರನೇ, ನಿನ್ನಲ್ಲಿ ಸತ್ಯವಿದೆ. ಆದರೆ ನಿನಗೆ ಹುಟ್ಟುವ ಮಗನಲ್ಲಿ ನನಗೆ ದೊಡ್ಡ ಸಂಶಯವಿದೆ.
ವೈಶಂಪಾಯನಃ
ತಸ್ಯ ತನ್ಮತಮಾಜ್ಞಾಯ ಸರ್ವಶಸ್ತ್ರಭೃತಾಂ ವರಃ |
ಪ್ರತಿಜ್ಞಾಂ ಪ್ರತ್ಯಜಾನಾತ್ ಸ ಪಿತುಃ ಪ್ರಿಯಚಿಕೀರ್ಷಯಾ ॥56॥
ದಾಶನ ಆ ಅಭಿಪ್ರಾಯವನ್ನು ತಿಳಿದು, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ದೇವವ್ರತನು ತಂದೆಗೆ ಹಿತವನ್ನು ಮಾಡುವುದಕ್ಕೆ ಬಯಸಿ, ಪ್ರತಿಜ್ಞೆಯನ್ನು ಮಾಡಿದನು.
ಉಚ್ಛೈಃಶ್ರವಃ ಸಮಾದತ್ಸ್ವ ಪ್ರತಿಜ್ಞಾಂ ಜನಸಂಸದಿ |
ಋಷಯೋ ವಾಽಥ ವಾ ದೇವಾ ಭೂತಾನ್ಯಂತರ್ಹಿತಾನಿ ಚ ॥57॥
ಎಲೈ ಉಚ್ಚಶ್ರವನೇ, ಜನಸಂಪತ್ತಿನಲ್ಲಿ ನಾನು ಮಾಡುವ ಪ್ರತಿಜ್ಞೆಯನ್ನು ಸ್ವೀಕರಿಸು, ಋಷಿಗಳು ಮತ್ತು ದೇವತೆಗಳು ಮತ್ತು ಅಂತರ್ಧಾನ ಹೊಂದಿದ ಭೂತಗಳೂ ಸಹ ಸ್ವೀಕರಿಸಲಿ.
ಯಾನಿ ಯಾನೀಹ ಶೃಣ್ವಂತು ನಾಸ್ಯ ವಕ್ತಾಽಸ್ತಿ ಮತ್ಸಮಃ |
ಇದಂ ವಚನಮಾದಸ್ವ ಸತ್ಯೇನ ಮಮ ಜಲ್ಪತಃ ॥58॥
ಶೃಣ್ವತಾಂ ಭೂಮಿಪಾಲಾನಾಂ ಯದ್ ಬ್ರವೀಮಿ ಪಿತುಃ ಕೃತೇ |
ರಾಜ್ಯಂ ತಾವತ್ ಪೂರ್ವಮೇವ ಮಯಾ ತ್ಯಕ್ತಂ ಮಹಾಬಲ |
ಅಪತ್ಯಹೇತೋರಪಿ ಚ ಕರೋಮ್ಯೇಷ ವಿನಿಶ್ಚಯಮ್ ॥59॥
ಇಲ್ಲಿ ಬೇರೆ ಯಾರು ಯಾರಿದ್ದರೋ, ಅವರೆಲ್ಲರೂ ಕೇಳಲಿ. ಇಂತಹ ಮಾತನ್ನು ಆಡುವ ನನಗೆ ಸಮಾನನಾದ ಇನ್ನೊಬ್ಬನಿಲ್ಲ. ಮಾತನಾಡುವ ನನ್ನ ಈ ಸತ್ಯವಚನವನ್ನು ಸ್ವೀಕರಿಸಿ. ಭೂಪಾಲರು ಕೇಳುತ್ತಿರುವಂತೆ ತಂದೆಯ ಸಲುವಾಗಿ ಈ ಮಾತನ್ನು ಆಡುತ್ತಿದ್ದೇನೆ. ಮಹಾಬಲನಾದ ದಾಶನೇ, ರಾಜ್ಯವನ್ನು ನಾನು ಮೊದಲೇ ತ್ಯಜಿಸಿದ್ದೇನೆ. ಮಗನಿಗೆ ಸಂಬಂಧಿಸಿದಂತೆ ಈ ಪ್ರತಿಜ್ಞೆಯನ್ನು ಮಾಡುತ್ತೇನೆ.
ಅದ್ಯಪ್ರಭೃತಿ ಮೇ ದಾಶ ಬ್ರಹ್ಮಚರ್ಯಂ ಭವಿಷ್ಯತಿ |
ಅಪುತ್ರಸ್ಯಾಪಿ ಮೇ ಲೋಕಾ ಭವಿತಾರೋ ಯಥೇಪ್ಸಿತಾಃ ॥60॥
ದಾಶನೇ ``ಇಂದಿನಿಂದ ಆರಂಭಿಸಿ ನಾನು ಬ್ರಹ್ಮಚಾರಿಯಾಗಿಯೇ ಇರುವೆನು''. ನನಗೆ ಮಕ್ಕಳಿಲ್ಲದಿದ್ದರೂ ಅಭೀಷ್ಟವಾದ ಲೋಕವು ದೊರಕುತ್ತದೆ.
ನಹಿ ಜನ್ಮಪ್ರಭೃತ್ಯುಕ್ತಂ ಮಮ ಕಿಂಚಿದಿಹಾನೃತಮ್ |
ಯಾವತ್ ಪ್ರಾಣಾ ಧ್ರಿಯಂತೇ ವೈ ಮಮ ದೇಹಂ ಸಮಾಶ್ರಿತಾಃ |
ತಾವನ್ನ ಜನಯಿಷ್ಯಾಮಿ ಪಿತ್ರೇ ಕನ್ಯಾಂ ಪ್ರಯಚ್ಛ  ಮೇ ॥61॥

ನಾನು ಹುಟ್ಟಿದಾಗಿನಿಂದ ಯಾವ ಸುಳ್ಳು ಮಾತನ್ನೂ ಆಡಿಲ್ಲ. ಎಲ್ಲಿಯವರೆಗೆ ನನ್ನ ದೇಹದಲ್ಲಿ ಪ್ರಾಣವು ಇರುವುದೋ, ಅಲ್ಲಿಯವರೆಗೆ ನಾನು ಮಗನನ್ನು ಪಡೆಯುವುದಿಲ್ಲ. ತನ್ನ ತಂದೆಗೆ ಮಗಳನ್ನು ಕೊಡು.
ಪರಿತ್ಯಜಾಮ್ಯಹಂ ರಾಜ್ಯಂ ಮೈಥುನಂ ಚಾಪಿ ಸರ್ವಶಃ |
ಊರ್ಧ್ವರೇತಾ ಭವಿಷ್ಯಾಮಿ ದಾಶ ಸತ್ಯಂ ಬ್ರವೀಮಿ ತೇ ॥62॥
ದಾಶನೇ, ನಾನು ರಾಜ್ಯವನ್ನೂ ಮತ್ತು ಮೈಥುನವನ್ನೂ ಸರ್ವರೀತಿಯಲ್ಲಿಯೂ ತ್ಯಜಿಸುತ್ತೇನೆ. ಊರ್ಧ್ವರೇತಸ್ಕನಾಗಿರುತ್ತೇನೆ. ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಸಂಪ್ರಹೃಷ್ಟತನೂರುಹಃ |
ದದಾನೀತ್ಯೇವ ತಂ ದಾಶಃ ಕುಮಾರಂ ಪ್ರತ್ಯಭಾಷತ ॥63॥
ಅವನ ಆ ಮಾತುಗಳನ್ನು ಕೇಳಿದ ದಾಶನು ರೋಮಾಂಚನವುಳ್ಳವನಾಗಿ ಕುಮಾರನನ್ನು ಕುರಿತು, ನಾನು ಕನ್ಯೆಯನ್ನು ಕೊಡುತ್ತೇನೆಂದೇ ಉತ್ತರವನ್ನು ಕೊಟ್ಟನು.
ತತೋಽಂತರಿಕ್ಷೇಽಪ್ಸರಸೋ ದೇವಾಃ ಸರ್ಷಿಗಣಾಸ್ತದಾ |
ತದ್ ದೃಷ್ಟ್ವಾ ದುಷ್ಕರಂ ಕರ್ಮ ಪ್ರಶಶಂಸುಶ್ಚ ಪಾರ್ಥಿವಾಃ |
ಪ್ರತ್ಯವರ್ಷಂತ ಕುಸುಮೈರ್ಭೀಷ್ಮೋಽಯಮಿತಿ ಚಾಬ್ರುವನ್ ॥64॥
ಆಗ ಅಂತರಿಕ್ಷದಲ್ಲಿ ಅಪ್ಸರೆಯರು, ದೇವತೆಗಳು, ಋಷಿಗಣಗಳು ಅವನ ಆ ದುಷ್ಕರಕರ್ಮವನ್ನು ಪ್ರಶಂಸಿದರು. ನೆರೆದಿದ್ದ ರಾಜರೂ ಪ್ರಶಂಸಿಸಿದರು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿ ಅವನನ್ನು ``ಭೀಷ್ಮ'' ಎಂದು ಕರೆದರು.
ತತೋಽಸ್ಯ ಪಿತುರರ್ಥಾಯ ತಾಮುವಾಚ ಯಶಸ್ವಿನೀಮ್ |
ಅಧಿರೋಹ ರಥಂ ಮಾತರ್ಗಚ್ಛಾಮಃ ಸ್ವಗೃಹಂ ಪ್ರತಿ ॥65॥
ಅನಂತರ ಭೀಷ್ಮನು ತನ್ನ ತಂದೆಯ ಸಲುವಾಗಿ ಆ ಯಶಸ್ವಿನಿಯನ್ನು ಕುರಿತು, `ಅಮ್ಮಾ, ಮನೆಗೆ ಹೋಗೋಣ, ರಥವನ್ನು ಏರು' ಎಂದು ಹೇಳಿದನು.
ಏವಮುಕಕ್ತ್ವಾ ತು ಭೀಷ್ಮಸ್ತಾಂ ರಥಮಾರೋಪ್ಯ ಭಾಮಿನೀಮ್ |
ಆಗಮ್ಯ ಹಸ್ತಿನಪುರಂ ಶಂತನೋಸ್ತನ್ನ್ಯವೇದಯತ್ ॥66॥
ಭೀಷ್ಮನು ಹೀಗೆ ಹೇಳಿ ಆ ಸುಂದರಿಯನ್ನು ರಥದಲ್ಲಿ ಕೂಡಿಸಿಕೊಂಡು ಹಸ್ತಿನಪುರಕ್ಕೆ ಬಂದು, ತನ್ನ ತಂದೆಗೆ ಅವಳನ್ನು ನಿವೇದಿಸಿದನು.
ತಸ್ಯ ತದ್ ದುಷ್ಕರಂ ಕರ್ಮ ಪ್ರಶಶಂಸುರ್ನರಾಧಿಪಾಃ |
ಸಮೇತಾಶ್ಚ ಪೃಥಕ್ ಚೈನಂ ಭೀಷ್ಮೋಽಯಮಿತಿ ಚಾಽಬ್ರುವನ್ ॥67॥
ಅವನ ದುಷ್ಕರವಾದ ಕರ್ಮವನ್ನು ನೋಡಿ, ಸಮೇತರಾದ ರಾಜರು ಒಟ್ಟಾಗಿಯೂ ಮತ್ತು ಬೇರೆಬೇರೆಯಾಗಿಯೂ ಇವನು ``ಭೀಷ್ಮ'' (ಮಹಾಸಾಹಸಿಕ) ಎಂದು ಹೇಳಿದರು.
ತಚ್ಛ್ರುತ್ವಾ ದುಷ್ಕರಂ ಕರ್ಮ ಕೃತಂ ಭೀಷ್ಮೇಣ ಶಂತನುಃ |
ಬಭೂವ ದುಃಖಿತೋ ರಾಜಾ ಚಿರರಾತ್ರಾಯ ಭಾರತ |
ಸ ತೇನ ಕರ್ಮಣಾ ಸೂನೋಃ ಪ್ರೀತಸ್ತಸ್ಮೈ ವರಂ ದದೌ ॥68॥
ಭೀಷ್ಮರ ಆ ದುಷ್ಕರಕರ್ಮವನ್ನು ಕೇಳಿದ ಶಂತನುರಾಜನು ಬಹುಕಾಲ ದುಃಖಭರಿತನಾದನು. ಎಲೈ ಭಾರತನೇ, ಮಗನ ಆ ಕರ್ಮದಿಂದ ಪ್ರಸನ್ನನಾದ ಅವನು ಮಗನಿಗೆ ವರವನ್ನು ಕೊಟ್ಟನು.
ನಾಕಾಮಮರಣಂ ತಾತ ಭವಿಷ್ಯತಿ ತವೇತಿ ಹ |
ನ ತೇ ಪ್ರಭವಿತಾ ಮೃತ್ಯುಃ ಯಾವದಿಚ್ಛಸಿ ಜೀವಿತಮ್ |
ಸ್ವೇನ ಕಾಮೇನ ಮರ್ತ್ಯೋಯೇಽಸಿ ನಾಕಾಮಸ್ತ್ವಂ ಕಥಂಚನ ॥69॥
ಮಗು ನಿನಗೆ ಎಂದೂ ಆಕಾಲಮರಣವುಂಟಾಗುವುದಿಲ್ಲ. ನೀನು ಎಲ್ಲಿಯವರೆಗೆ ಬದುಕುವುದಕ್ಕೆ ಬಯಸುತ್ತೀಯೋ, ಅಲ್ಲಿಯವರೆಗೆ ಮೃತ್ಯುವು ನಿನ್ನನ್ನು ಏನೂ ಮಾಡಲಾರದು. ನಿನ್ನ ಇಚ್ಛೆ ಬಂದಾಗ ನೀನು ಮರಣವನ್ನು ಹೊಂದಬಹುದು. ಇಚ್ಛೆಯಿಲ್ಲದೇ ಎಂದೂ ಮೃತನಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ತೊಂಭತ್ತೊಂಭತ್ತನೆಯ ಅಧ್ಯಾಯ ಮುಗಿಯಿತು
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ತತಃ ಕದಾಚಿನ್ ಮೃಗಯಾಂ ಗತಃ ಸ
ದದರ್ಶ ಕನ್ಯಾಂ ಪ್ರವರಾಂ ತು ಶಂತನುಃ |
ಯಾ ಪೂರ್ವಸರ್ಗೇ ಪಿತೃಪುತ್ರಿಕಾ ಸತೀ
ಚಚಾರ ವಿಷ್ಣೋಸ್ತಪ ಉತ್ತಮಂ ಚಿರಮ್ ॥73॥
ದೇವವ್ರತನಿಗೆ ಯುವರಾಜ ಪದವಿಯಲ್ಲಿ ಪಟ್ಟಾಭಿಷೇಕವಾದ ಬಳಿಕ ಒಮ್ಮೆ ಬೇಟೆಗೆ ಹೋಗಿದ್ದ ಶಂತನು ಶ್ರೇಷ್ಠ ಕನ್ಯೆಯೊಬ್ಬಳನ್ನು ಕಂಡ. ಅವಳು ಪೂರ್ವಜನ್ಮದಲ್ಲಿ ಪಿತೃಗಳ ಪುತ್ರಿ. ವಿಷ್ಣುವನ್ನು ಕುರಿತು ಬಹುಕಾಲ ಉತ್ತಮ ತಪಸ್ಸು ಮಾಡಿದ್ದಳು.

ಯಸ್ಯೈ ವರಂ ವಿಷ್ಣುರದಾತ್ ಪುರಾಹಂ
ಸುತಸ್ತವ ಸ್ಯಾಮಿತಿ ಯಾ ವಸೋಃ ಸುತಾ |
ಜಾತಾ ಪುನರ್ದಾಶಗೃಹೇ ವಿವರ್ಧಿತಾ
ವ್ಯಾಸಾತ್ಮನಾ ವಿಷ್ಣುರಭೂಚ್ಚ ಯಸ್ಯಾಮ್ ॥74॥
ಅಚ್ಛೋದೆಗೆ ವಿಷ್ಣು `ನಾನು ನಿನ್ನ ಮಗನಾಗುವೆನು' ಎಂದು ವರನೀಡಿದ್ದ. ಅವಳೇ ವಸುಚಕ್ರವರ್ತಿಯ ಮಗಳಾಗಿ ಹುಟ್ಟಿ ಅಂಬಿಗರ ಮನೆಯಲ್ಲಿ ಬೆಳೆಸಲ್ಪಟ್ಟಿದ್ದಳು. ಅವಳಲ್ಲಿ ವಿಷ್ಣು ವ್ಯಾಸ ರೂಪದಿಂದ ಅವತರಿಸಿದ್ದ.
ತದ್ದರ್ಶನಾನ್ನೃಪತಿರ್ಜಾತಹೃಚ್ಛಯೋ
ವವ್ರೇ ಪ್ರದಾನಾಯ ಚ ದಾಶರಾಜಮ್ |
ಋತೇ ಸ ತಸ್ಯಾಸ್ತನಯಸ್ಯ ರಾಜ್ಯಂ
ನೈಚ್ಛದ್ದಾತುಂ ತಾಮಥಾಯಾದ್ ಗೃಹಂ ಸ್ವಮ್ ॥75॥
ಅವಳ ದರ್ಶನದಿಂದ ಅನುರಾಗಯುಕ್ತನಾದ ರಾಜ ಅಂಬಿಗರ ದೊರೆಯ ಬಳಿ ಅವಳನ್ನು ತನಗೆ ಕೊಡಲು ಕೇಳಿಕೊಂಡ. ಅವಳ ಮಗನಿಗೆ ರಾಜ್ಯ ಸಿಗದಿದ್ದಲ್ಲಿ ಅವಳನ್ನು ಕೊಡಲು ಆತ ಒಪ್ಪಲಿಲ್ಲ. ಆಗ ರಾಜ ತನ್ನ ಮನೆಗೆ ಬಂದ.
ತಚ್ಚಿಂತಯಾ ಗ್ಲಾನಮುಖಂ ಜನಿತ್ರಂ
ದೃಷ್ಟ್ವೈವ ದೇವವ್ರತ ಆಶ್ವಪೃಚ್ಛತ್ |
ತತ್ಕಾರಣಂ ಸಾರಥಿಮಸ್ಯ ತಸ್ಮಾತ್
ಶ್ರುತ್ವಾಖಿಲಂ ದಾಶಗೃಹಂ ಜಗಾಮ ॥76॥
ಅವಳ ಚಿಂತೆಯಲ್ಲಿ ತಂದೆಯ ಮುಖಬಾಡಿದ್ದನ್ನು ಕಂಡೊಡನೆ ಅದಕ್ಕೆ ಕಾರಣವೇನೆಂದು ಬೇಗನೆ ರಾಜನ ಸಾರಥಿಯನ್ನು ಕೇಳಿದ ದೇವವ್ರತ. ಅವನಿಂದ ಎಲ್ಲವನ್ನೂ ಕೇಳಿ ತಿಳಿದು ಅಬಿಂಗನ ಮನೆಗೆ ಹೋದ.
ಸ ತಸ್ಯ ವಿಶ್ವಾಸಕೃತೇ ಪ್ರತಿಜ್ಞಾಂ ಚಕಾರ ನಾಹಂ ಕರವಾಣಿ ರಾಜ್ಯಮ್ |
ತಥೈವ ಮೇ ಸಂತತಿತೋ ಭಯಂ ತೇ ವ್ಯೇತೂರ್ಧ್ವರೇತಾಃ ಸತತಂ ಭವಾಮಿ
ದೇವವ್ರತ ಅಂಬಿಗನಿಗೆ ವಿಶ್ವಾಸ ಉಂಟಾಗುವುದಕ್ಕಾಗಿ `ನಾನು ರಾಜ್ಯಭಾರ ಮಾಡುವುದಿಲ್ಲ, ನನ್ನ ಸಂತತಿಯಿಂದಲೂ ನಿನಗೆ ಭಯ ದೂರವಾಗಲಿ, ನಾನು ಸದಾ ಊರ್ಧ್ವರೇತನಾಗಿರುತ್ತೇನೆ' ಎಂದು ಪ್ರತಿಜ್ಞೆಗೈದ.
ಭೀಮವ್ರತತ್ವಾದ್ಧಿ ತದಾಸ್ಯ ನಾಮ
ಕೃತ್ವಾ ದೇವಾ ಭೀಷ್ಮ ಇತಿ ಹ್ಯಚೀಕ್ಲೃಪನ್ |
ಪ್ರಸೂನವೃಷ್ಟಿಂ ಸ ಚ ದಾಶದತ್ತಾಂ
ಕಾಳೀಂ ಸಮಾದಾಯ ಪಿತುಃ ಸಮರ್ಪಯತ್ ॥78॥
ದೇವವ್ರತ ಭಯಂಕರವಾದ ವ್ರತವನ್ನು ಕೈಗೊಂಡುದರಿಂದ ದೇವತೆಗಳು ಆಗ ಅವನಿಗೆ `ಭೀಷ್ಮ' ಎಂದು ಹೆಸರಿಟ್ಟು ಹೂಮಳೆಗರೆದರು. ಭೀಷ್ಮ ಅಂಬಿಗನಿತ್ತ ಕಾಳಿಯನ್ನು ಕರೆದುತಂದು ತಂದೆಗೆ ನೀಡಿದ.
ಜ್ಞಾತ್ವಾ ತು ತಾಂ ರಾಜಪುತ್ರೀಂ ಗುಣಾಢ್ಯಾಂ
ಸತ್ಯಸ್ಯ ವಿಷ್ಣೋರ್ಮಾತರಂ ನಾಮತಸ್ತತ್ |
ಲೋಕೇ ಪ್ರಸಿದ್ಧಾಂ ಸತ್ಯವತೀತ್ಯುದಾರಾಂ
ವಿವಾಹಯಾಮಾಸ ಪಿತುಃ ಸ ಭೀಷ್ಮಃ ॥79॥
ಕಾಳಿ ಒಬ್ಬಳು ರಾಜಕುಮಾರಿ, ಗುಣಾಢ್ಯಳು, ಸತ್ಯಸ್ವರೂಪರಾದ ವ್ಯಾಸರಿಗೆ ಜನ್ಮವಿತ್ತು ಸತ್ಯವತಿ ಎಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧಳಾದಳು. ಉತ್ತಮ ಸ್ತ್ರೀ ಎಂದು ತಿಳಿದೇ ಭೀಷ್ಮ ಅವಳನ್ನು ತಂದೆಗೆ ವಿವಾಹ ಮಾಡಿಸಿದ.
ಪ್ರಾಯಃ ಸತಾಂ ನ ಮನಃ ಪಾಪಮಾರ್ಗೇ
ಗಚ್ಛೇದಿತಿ ಹ್ಯಾತ್ಮಮನಶ್ಚ ಸಕ್ತಮ್ |
ಜ್ಞಾತ್ವಾಪಿ ತಾಂ ದಾಶಾಗೃಹೇ ವಿವರ್ಧಿತಾಂ
ಜಗ್ರಾಹ ಸದ್ಧರ್ಮರತಶ್ಚ ಶಂತನುಃ ॥80॥
ಸಜ್ಜನರ ಮನಸ್ಸು ಪ್ರಾಯಃ ಪಾಪಮಾರ್ಗದಲ್ಲಿ ಹೋಗುವುದಿಲ್ಲ, ತನ್ನ ಮನಸ್ಸು ಸತ್ಯವತಿಯಲ್ಲಿ ಆಸಕ್ತವಾಗಿದೆ ಎಂಬ ಕಾರಣದಿಂದಲೂ, ಸತ್ಯವತಿ ಅಂಬಿಗರ ಹೆಣ್ಣೆಂದು ಪ್ರಸಿದ್ಧಳಾದರೂ ಅಂಬಿಗರ ಮನೆಯಲ್ಲಿ ರಾಜಕುಮಾರಿಗೆ ಯೋಗ್ಯವಾದ ರೀತಿಯಿಂದಲೆ ಬೆಳೆದವಳೆಂದು ತಿಳಿದೂ, ಶುದ್ಧಧರ್ಮನಿರತನಾದ ಶಂತನು ಸತ್ಯವತಿಯನ್ನು ಸ್ವೀಕರಿಸಿದ.
ಸ್ವಚ್ಛಂದಮೃತ್ಯುತ್ವವರಂ ಪ್ರದಾಯ
ತಥಾಪ್ಯಜೇಯತ್ವಮಧೃಷ್ಯತಾಂ ಚ |
ಯುದ್ಧೇಷು ಭೀಷ್ಮಸ್ಯ ನೃಪೋತ್ತಮಃ ಸ
ರೇಮೇ ತಯೈವಾಬ್ದಗಣಾನ್ ಬಹೂಂಶ್ಚ ॥81॥
ನೃಪೋತ್ತಮನಾದ ಶಂತನು ಭೀಷ್ಮನಿಗೆ ಸ್ವಚ್ಛಂದ ಮೃತ್ಯುತ್ವ ವರವನ್ನೂ ಯುದ್ಧಗಳಲ್ಲಿ ಅಜೇಯತ್ವವನ್ನೂ ಅದೃಷ್ಯತ್ವವನ್ನೂ ನೀಡಿ ಸತ್ಯವತಿಯೊಂದಿಗೆ ಬಹುವರ್ಷಗಳ ಕಾಲ ವಿವರಿಸಿದ.
ಲೇಭೇ ಸ ಚಿತ್ರಾಂಗದಮತ್ರ ಪುತ್ರಂ ತಥಾ
ದ್ವಿತೀಯಂ ಚ ವಿಚಿತ್ರ ವೀರ್ಯಮ್ |
ತಯೋಶ್ಚ ಬಾಲ್ಯೇ ವ್ಯಧುನೋಚ್ಛರೀರಂ

ಜೀರ್ಣೇನ ದೇಹೇನ ಹಿ ಕಿಂ ಮಮೇತಿ ॥82॥
ಶಂತನು ಸತ್ಯವತಿಯಲ್ಲಿ ಚಿತ್ರಾಂಗದನೆಂಬ ಒಬ್ಬ ಮಗನನ್ನೂ ವಿಚಿತ್ರ ವೀರ್ಯನೆಂಬ ಇನ್ನೊಬ್ಬ ಮಗನನ್ನೂ ಪಡೆದ. ಅವರು ಇನ್ನೂ ಸಣ್ಣವರಾಗಿದ್ದಾಗಲೆ ತಾನು ಶರೀರ ತ್ಯಾಗ ಮಾಡಿದ. ಜೀರ್ಣವಾದ ಶರೀರದಿಂದ ನನಗೆ ಏನು ಪ್ರಯೋಜನ ಎಂದು.
ಸ್ವೇಚ್ಛಯಾ ವರುಣತ್ವಂ ಸ ಪ್ರಾಪ ನಾನಿಚ್ಛಯಾ ತನುಃ |
ತಸ್ಮಿನ್ ಕಾಲೇ ತ್ಯಜ್ಯತೇ ಹಿ ಬಲವದ್ಭಿರ್ವಧಂ ವಿನಾ ॥83॥
ಸ್ವೇಚ್ಛೆಯಿಂದಲೆ ಶಂತನು ವರುಣತ್ವವನ್ನು ಪಡೆದ. ಇಚ್ಛೆಯಿಲ್ಲದೆ ಅಲ್ಲ. ಯೋಗಬಲವುಳ್ಳವರು ಮರಣೇಚ್ಛಾಕಾಲದಲ್ಲಿ ಶತ್ರುಗಳಿಂದ ವಧೆ ಇಲ್ಲದೆಯೆ ಸ್ವೇಚ್ಛೆಯಿಂದ ಶರೀರ ತ್ಯಾಗ ಮಾಡುತ್ತಾರೆ.
ಅತಿಸಕ್ತಾಸ್ತಪೋಹೀನಾಃ ಕಥಂಚಿನ್ಮೃತಿಮಾಪ್ನುಯುಃ |
ಅನಿಚ್ಛಯಾಪಿ ಹಿ ಯಥಾ ಮೃತಶ್ಚಿತ್ರಾಂಗದಾನುಜಃ ॥84॥
ಅತಿಯಾದ ವಿಷಯಾಸಕ್ತಿ ಹೊಂದಿ ತಪೋಹೀನರಾದವರು ಇಚ್ಛೆಯಿಲ್ಲದಿದ್ದರೂ ಹೇಗೆ ಹೇಗೋ ಮರಣ ಹೊಂದುತ್ತಾರೆ. ಚಿತ್ರಾಂಗದನ ತಮ್ಮ ಹೇಗೆ ಮರಣ ಹೊಂದಿದನೋ ಹಾಗೆ.
ಅಥೌರ್ಧ್ವದೈಹಿಕಂ ಕೃತ್ವಾ ಪಿತುರ್ಭೀಷ್ಮೋಽಭ್ಯಷೇಚಯತ್ |
ರಾಜ್ಯೇ ಚಿತ್ರಾಂಗದಂ ವೀರಂ ಯೌವರಾಜ್ಯೇಽಸ್ಯ ಚಾನುಜಮ್ ॥85॥
ಬಳಿಕ ಭೀಷ್ಮ ತಂದೆಗೆ ಉತ್ತರಕ್ರಿಯೆ ಮಾಡಿ ರಾಜ್ಯದಲ್ಲಿ ವೀರನಾದ ಚಿತ್ರಾಂಗದನಿಗೆ ಪಟ್ಟಾಭಿಷೇಕ ಮಾಡಿದ. ಯುವರಾಜ ಪದವಿಯಲ್ಲಿ ಅವನ ತಮ್ಮನಿಗೆ ಪಟ್ಟಾಭಿಷೇಕ ಮಾಡಿದ.
ಚಿತ್ರಾಂಗದೇನ ನಿಹತೋ ನಾಮ ಸ್ವಂ ತ್ವಪರಿತ್ಯಜನ್ |
ಚಿತ್ರಾಂಗದೋಽಕೃತೋದ್ವಾಹೋ ಗಂಧರ್ವೇಣ ಮಹಾರಣೇ ॥86॥
ಚಿತ್ರಾಂಗದ ಮದುವೆಯಾಗುವುದಕ್ಕೆ ಮೊದಲೆ ಸತ್ತ. ತನ್ನ ಹೆಸರನ್ನು ಬಿಟ್ಟು ಕೊಡಲು ಒಪ್ಪದೆ ಮಹಾಯುದ್ಧದಲ್ಲಿ ಚಿತ್ರಾಂಗದನೆಂಬ ಗಂಧರ್ವನಿಂದ ಕೊಲ್ಲಲ್ಪಟ್ಟ.

## ನೂರನೆಯ ಅಧ್ಯಾಯ

(ಶಂತನು-ಸತ್ಯವತಿಯರ ವಿವಾಹ, ಚಿತ್ರಾಂಗದನ ಉತ್ಪತ್ತಿ ಮತ್ತು ಮರಣ. ವಿಚಿತ್ರವೀರ್ಯ ರಾಜ್ಯಾಭಿಷೇಕ.)
ವೈಶಂಪಾಯನಃ
ಚೇದಿರಾಜಸುತಾಂ ಜ್ಞಾತ್ವಾ ದಾಶರಾಜೇನ ವರ್ಧಿತಾಮ್ |
ವಿವಾಹಂ ಕಾರಯಾಮಾಸ ಶಾಸ್ತ್ರ ಮೃಷ್ಟೇನ ಕರ್ಮಣಾ ॥1॥
ಸತ್ಯವತಿಯನ್ನು ಚೇದಿರಾಜನ ಮಗಳೆಂದೂ, ದಾಶರಾಜನಿಂದ ಸಾಕಲ್ಪಟ್ಟವಳೆಂದೂ ತಿಳಿದು ಭೀಷ್ಮರು ಶಾಸ್ತ್ರಶುದ್ಧವಾದ ರೀತಿಯಲ್ಲಿ ಅವರ ವಿವಾಹವನ್ನು ನಡೆಸಿದನು.
ತದಾ ವಿವಾಹೇ ನಿರ್ವೃತ್ತೇ ಸ ರಾಜಾ ಶಂತನುಸ್ತತಃ |
ತಾಂ ಕನ್ಯಾಂ ರೂಪಸಂಪನ್ನಾಂ ಸ್ವಗೃಹೇ ಸನ್ನ್ಯವೇಶಯತ್ ॥2॥
ವಿವಾಹವು ಮುಗಿಯುತ್ತಿರಲು ರಾಜನಾದ ಶಂತನುವು ರೂಪಸಂಪನ್ನಳಾದ ಆ ಕನ್ಯೆಯನ್ನು ತನ್ನ ಮನೆಗೆ ಕರೆದುಕೊಂಡು ಬಂದು ಇರಿಸಿದನು.
ತತಃ ಶಾಂತನವೋ ಧೀಮಾನ್ ಸತ್ಯವತ್ಯಾಮಜಾಯತ |
ಪುತ್ರಶ್ಚಿತ್ರಾಂಗದೋ ನಾಮ ಬಲವೀರ್ಯಸಮನ್ವಿತಃ ॥3॥
ಅನಂತರ ಶಂತನುವಿಗೆ ಮೇಧಾವಿಯೂ, ಬಲವೀರ್ಯಸಂಪನ್ನನೂ ಆದ `ಚಿತ್ರಾಂಗದ' ಎಂಬ ಮಗನು ಸತ್ಯವತಿಯಲ್ಲಿ ಜನಿಸಿದನು.
ಅಥಾಽಪರಂ ಮಹೇಷ್ವಾಸಂ ಸತ್ಯವತ್ಯಾಂ ಪುನಃ ಸುತಮ್ |
ವಿಚಿತ್ರವೀರ್ಯಂ ಧರ್ಮಾತ್ಮಾ ಜನಯಾಮಾಸ ವೀರ್ಯವಾನ್ ॥4॥
ಅನಂತರ ವೀರ್ಯವಂತನಾದ ಶಂತನುವು ಸತ್ಯವತಿಯಲ್ಲಿ ಧರ್ಮಾತ್ಮನೂ, ಧನುರ್ವಿದ್ಯೆಯನ್ನು ಬಲ್ಲವನೂ ಆದ ವಿಚಿತ್ರವೀರ್ಯನೆಂಬ ಇನ್ನೊಬ್ಬ ಮಗನನ್ನು ಪಡೆದನು.
ಅಪ್ರಾಪ್ತವತಿ ತಸ್ಮಿಂಶ್ಚ ಯೌವನಂ ಭರತರ್ಷಭ |
ಸ ರಾಜಾ ಶಂತನುರ್ಧೀಮಾನ್ ಕಾಲಧರ್ಮಮುಪೇಯಿವಾನ್ ॥5॥
ಮಕ್ಕಳು ಇನ್ನು ಯೌವನಕ್ಕೆ ಬರುವುದಕ್ಕಿಂತ ಮುಂಚೆಯೇ ಮೇಧಾವಿಯಾದ ಶಂತನುವು ಕಾಲವಶನಾದನು.
ಸ್ವರ್ಯಾತೇ ಶಂತನೌ ಭೀಷ್ಮಶ್ಚಿತ್ರಾಂಗದಮರಿಂದಮಮ್ |
ಸ್ಥಾಪಯಾಮಾಸ ವೈ ರಾಜ್ಯೇ ಸತ್ಯವತ್ಯಾ ಮತೇ ಸ್ಥಿತಾಃ ॥6॥
ಶಂತನುವು ಸ್ವರ್ಗಸ್ಥನಾಗುತ್ತಿರಲು ಭೀಷ್ಮರು ಸತ್ಯವತಿಯ ಅಭಿಪ್ರಾಯದಂತೆ ಅರಿಂದಮನಾದ ಚಿತ್ರಾಂಗದನನ್ನು ರಾಜ್ಯದಲ್ಲಿ ಸ್ಥಾಪಿಸಿದನು.
ಸ ತು ಚಿತ್ರಾಂಗದೋ ಧೀಮಾನ್ ಸರ್ವಾಂಶ್ಚಿಕ್ಷೇಪ ಪಾರ್ಥಿವಾನ್ |
ಮಾನುಷಂ ನಹಿ ಮೇನೇ ಸ ಕಂಚಿತ್ ಸದೃಶಮಾತ್ಮನಃ ॥7॥
ಮೇಧಾವಿಯಾದ ಆ ಚಿತ್ರಾಂಗದನಾದರೂ ಎಲ್ಲಾ ರಾಜರನ್ನೂ ಸೋಲಿಸಿ, ಮನುಷ್ಯರಲ್ಲಿ ತನಗೆ ಸಮಾನರಾದವರು ಯಾರೂ ಇಲ್ಲವೆಂದು ಭಾವಿಸಿದನು.

ತಂ ಕ್ಷಿಪಂತಂ ಸುರಾಂಶ್ಚೈವ ಮನುಷ್ಯಾನುಸುರಾಂಸ್ತಥಾ |
ಗಂಧರ್ವರಾಜೋ ಬಲಾವಾಂಸ್ತುಲ್ಯನಾಮಾSಭ್ಯಯಾತ್ ತದಾ ॥
ದೇವತೆಗಳನ್ನೂ, ಮನುಷ್ಯರನ್ನೂ, ಅಸುರರನ್ನೂ ತಿರಸ್ಕರಿಸುತ್ತಿದ್ದ ಅವನನ್ನು ಕುರಿತು ಚಿತ್ರಾಂಗದನೆಂಬ ಅದೇ ಹೆಸರಿನ ಬಲಿಷ್ಠನಾದ ಗಂಧರ್ವರಾಜನು ಯುದ್ಧಕ್ಕೆ ಬಂದನು.
ಗಂಧರ್ವಃ
ತ್ವಂ ವೈ ಸದೃಶನಾಮಾSಸಿ ಯುದ್ಧಂ ದೇಹಿ ನೃಪಾತ್ಮಜ |
ನಾಮ ಚಾನ್ಯತ್ ಪ್ರಗೃಹ್ಣೀಷ್ವ ಯದಿ ಯುದ್ಧಂ ನ ದಾಸ್ಯಸಿ ॥9॥
ತ್ವಯಾSಹಂ ಯುದ್ಧಮಿಚ್ಛಾಮಿ ತ್ವತ್ಸಕಾಶಾತ್ ತು ನಾಮತಃ |
ಆಗತೋSಸ್ಮಿ ವೃಥಾಭಾಷ್ಯೋ ನ ಗಚ್ಛೇನ್ನಾಮತೋSನ್ಯಥಾ ॥10॥
ರಾಜಕುಮಾರನೇ, ನೀನು ನನ್ನ ಹೆಸರನ್ನೇ ಹೊಂದಿದ್ದೀಯೆ, ಯುದ್ಧವನ್ನು ಕೊಡು. ಇಲ್ಲದಿದ್ದರೆ ಬೇರೆ ಹೆಸರನ್ನು ಸ್ವೀಕರಿಸು. ಒಂದೇ ನಾಮದ ನಿಮಿತ್ತದಿಂದ ನಾನು ನಿನ್ನ ಜೊತೆ ಯುದ್ಧವನ್ನು ಮಾಡಲು ಬಯಸಿ ಇಲ್ಲಿಗೆ ಬಂದಿದ್ದೇನೆ. ನನ್ನ ಹೆಸರಿನವನು ವ್ಯರ್ಥವಾಗಿ ಸಂಭಾಷಣೀಯನಾಗಬಾರದು.
ವೈಶಂಪಾಯನಃ
ಇತ್ಯುಕ್ತ್ವಾತ್ವ ಗರ್ಜಮಾನೌ ತೌ ಹಿರಣ್ವತ್ಯಾಸ್ತೀರಸಂಗತೌ |
ತೇನಾಸ್ಯ ಯುದ್ಧಂ ಸುಮಹತ್ ಕುರುಕ್ಷೇತ್ರೇ ಬಭೂವ ಹ ॥11॥
ಹೀಗೆ ಮಾತನಾಡಿ ಪರಸ್ಪರವಾಗಿ ಗರ್ಜಿಸುತ್ತಾ ಕುರುಕ್ಷೇತ್ರದಲ್ಲಿ ಹಿರಣ್ವತೀ ನದಿಯ ತೀರದಲ್ಲಿ ಅವರಿಬ್ಬರೂ ದೊಡ್ಡ ಯುದ್ಧವನ್ನು ಮಾಡಿದರು.
ನದ್ಯಾಃ ಕೂಲೇ ಹಿರಣ್ವತ್ಯಾಃ ಸಮಾಸ್ತಿಸ್ರೋSಭವದ್ ರಣಮ್ |
ತಯೋರ್ಬಲವತೋಸ್ತತ್ರ ಗಂಧರ್ವಕುರುಮುಖ್ಯಯೋಃ ॥11॥
ಬಲಿಷ್ಠರಾದ ಆ ಕುರುರಾಜನಿಗೂ ಮತ್ತು ಗಂಧರ್ವನಿಗೆ ಹಿರಣ್ವತಿ ನದಿಯ ತೀರದಲ್ಲಿ ಮೂರುವರ್ಷಗಳ ಕಾಲ ಯುದ್ಧವು ನಡೆಯಿತು.
ತಸ್ಮಿನ್ ವಿಮರ್ದೇ ತುಮುಲೇ ನಾನಾಶಸ್ತ್ರಸಮಾಕುಲೇ |
ಮಾಯಾಧಿಕೋSವಧೀದ್ ವೀರಂ ಗಂಧರ್ವಃ ಕುರುಸತ್ತಮಮ್ ॥12॥
ನಾನಾ ಶಸ್ತ್ರಗಳಿಂದ ನಿಬಿಡವಾದ ಆ ತೀವ್ರ ಸಂಘರ್ಷದಲ್ಲಿ ಅಧಿಕ ಸಾಮರ್ಥ್ಯವನ್ನು ಹೊಂದಿದ್ದ ಗಂಧರ್ವನು ವೀರನಾದ ಕುರುಶ್ರೇಷ್ಠನನ್ನು ಕೊಂದನು.
ಚಿತ್ರಾಂಗದಂ ಕುರುಶ್ರೇಷ್ಠಂ ವಿಚಿತ್ರಶರಕಾರ್ಮುಕಮ್ |
ಚಿತ್ರಾಂಗದೋ ವಿನಿರ್ಜಿತ್ಯ ದಿವಮಾಚಕ್ರಮೇ ಪುನಃ ॥13॥
ವಿಚಿತ್ರಶರಕಾರ್ಮುಕಗಳನ್ನು ಹೊಂದಿದ್ದ ಕುರುಶ್ರೇಷ್ಠನಾದ ಚಿತ್ರಾಂಗದನನ್ನು ಸೋಲಿಸಿ ಮತ್ತು ಸಂಹರಿಸಿ ಗಂಧರ್ವರಾಜನಾದ ಚಿತ್ರಾಂಗದನು ಅಂತರಿಕ್ಷದಲ್ಲಿ ಹೊರಟು ಹೋದನು.
ತಸ್ಮಿಂಸ್ತು ನೃಪಶಾರ್ದೂಲೇ ನಿಹತೇ ಭೂರಿವರ್ಚಸಿ |
ಭೀಷ್ಮಃ ಶಾಂತನವೋ ಧೀಮಾನ್ ಪ್ರೇತಕಾರ್ಯಾಣ್ಯಕಾರಯತ್ ॥14॥
ಮಹಾಪರಾಕ್ರಮಿಯಾದ ನೃಪಶಾರ್ದೂಲನಾದ ಚಿತ್ರಾಂಗದನು ಮರಣಹೊಂದುತ್ತಿರಲು, ಮೇಧಾವಿಯಾದ ಭೀಷ್ಮನು ಅವನಿಗೆ ಪ್ರೇತಕಾರ್ಯಗಳನ್ನು ಮಾಡಿಸಿದನು.
ವಿಚಿತ್ರವೀರ್ಯಂ ಚ ತದಾ ಬಾಲಮಪ್ರಾಪ್ತಯೌವನಮ್ |
ಕುರುರಾಜ್ಯೇ ಮಹಾಬಾಹುರಭ್ಯಷಿಂಚದನಂತರಮ್ ॥15॥
ಬಾಲನೂ, ಅಪ್ರಾಪ್ತಯೌವನನೂ ಆದ ವಿಚಿತ್ರವೀರ್ಯನನ್ನು ಆಗ ಭೀಷ್ಮನು ಕುರುರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು.
ವಿಚಿತ್ರವೀರ್ಯಸ್ತು ತದಾ ಭೀಷ್ಮಸ್ಯ ವಚನೇ ಸ್ಥಿತಃ |
ಅನ್ವಶಾಸನ್ಮಹಾರಾಜ ಪಿತೃಪೈತಾಮಹಂ ಪದಮ್ ॥16॥
ಎಲೈ ಮಹಾರಾಜನೇ, ಆಗ ವಿಚಿತ್ರವೀರ್ಯನು ಭೀಷ್ಮನ ವಚನಗಳನ್ನು ಪಾಲಿಸುತ್ತಾ ಪಿತೃಪಿತಾಮಹರಿಂದ ಬಂದ ರಾಜ್ಯವನ್ನು ಆಳಿದನು.
ಸ ಧರ್ಮಶಾಸ್ತ್ರಕುಶಲೋ ಭೀಷ್ಮಂ ಶಾಂತನವಂ ನೃಪಮ್ |
ಪೂಜಯಾಮಾಸ ಪೂಜಾರ್ಹಂ ಸ ಚೈನಂ ಪ್ರತ್ಯಪಾಲಯತ್ ॥17॥
ಧರ್ಮಶಾಸ್ತ್ರಕುಶಲನಾದ ಅವನು ಶಂತನುವಿನ ಮಗನಾದ ಮತ್ತು ಪೂಜಾರ್ಹನಾದ ಭೀಷ್ಮನನ್ನು ಪೂಜಿಸಿದನು. ಭೀಷ್ಮನೂ ಸಹ ಅವನ ರಕ್ಷಣೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಶತತಮೋSಧ್ಯಾಯಃ ॥
॥ ಸಂಭವಪರ್ವಣಿ ಅಷ್ಟಾಚತ್ವಾರಿಂಶೋSಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ- ಅಧ್ಯಾಯ-11
ವಿಚಿತ್ರವೀರ್ಯಂ ರಾಜಾನಾಂ ಕೃತ್ವಾ ಭೀಷ್ಮೋSನ್ವಪಾಲಯತ್ |
ಅಥ ಕಾಶಿಸುತಾಸ್ತಿಸ್ರಸ್ತದರ್ಥಂ ಭೀಷ್ಮ ಆಹರತ್ |

ಅಂಬಾಮಪ್ಯಂಬಿಕಾನಾಮ್ನೀಂ ತಥೈವಾಂಬಾಲಿಕಾಂ ಪರಮ್ ॥87॥
ಪಾಣಿಗ್ರಹಣಕಾಲೇ ತು ಬ್ರಹ್ಮದತ್ತಸ್ಯ ವೀರ್ಯವಾನ್ |
ವಿಜಿತ್ಯ ತಂ ಸಾಲ್ವರಾಜಂ ಸಮೇತಾನ್ ಕ್ಷತ್ರಿಯಾನಪಿ ॥88॥
ಬಳಿಕ ಭೀಷ್ಮ ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿ ರಾಜ್ಯವನ್ನು ನೋಡಿಕೊಂಡ. ಸಾಲ್ವ ಬ್ರಹ್ಮದತ್ತನ ವಿವಾಹಕಾಲದಲ್ಲಿ ಆ ಸಾಲ್ವರಾಜನನ್ನೂ ಅಲ್ಲಿ ಸೇರಿದ ಕ್ಷತ್ರಿಯರನ್ನೂ ಗೆದ್ದು ವಿಚಿತ್ರ ವೀರ್ಯನಿಗಾಗಿ ಅಂಬಾ ಅಂಬಾಲಿಕಾ ಮತ್ತು ಅಂಬಿಕಾ ಎಂಬ ಮೂವರು ಕಾಶಿರಾಜನ ಹೆಣ್ಣುಮಕ್ಕಳನ್ನು ತಂದ, ವೀರ್ಯಶಾಲಿ ಭೀಷ್ಮ.
ಅಂಬಿಕಾಂಬಾಲಿಕೇ ತತ್ರ ಸಂವಾದಂ ಚಕ್ರತುಃ ಶುಭೇ |
ಅಂಬಾ ಸಾ ಭೀಷ್ಮಭಾರ್ಯೈವ ಪೂರ್ವದೇಹೇ ತು ನೈಚ್ಛತ ॥89॥
ಅವರಲ್ಲಿ ಪುಣ್ಯವತಿಯರಾದ ಅಂಬಿಕೆ ಮತ್ತು ಅಂಬಾಲಿಕೆಯರು ಒಪ್ಪಿದರು. ಅಂಬೆ ಪೂರ್ವಜನ್ಮದಲ್ಲಿ ಭೀಷ್ಮನ ಭಾರ್ಯೆ. ಅದರಿಂದ ಅವಳು ಮಾತ್ರ ಒಪ್ಪಲಿಲ್ಲ.
ಶಾಪಾದ್ಧಿರಣ್ಯಗರ್ಭಸ್ಯ ಸಾಲ್ವಕಾಮಾಹಮಿತ್ಯಪಿ |
ಉವಾಚ ತಾಂ ಸ ತತ್ಯಾಜ ಸಾಗಮತ್ ಸಾಲ್ವಮೇವ ಚ ॥90॥
ಬ್ರಹ್ಮನ ಶಾಪದಿಂದ ಅಂಬೆ ತಾನು ಸಾಲ್ವನನ್ನು ಬಯಸಿದವಳೆಂದು ಹೇಳಿಕೊಂಡಳು. ಭೀಷ್ಮ ಅವಳನ್ನು ಬಿಟ್ಟ. ಅವಳು ಸಾಲ್ವನ ಬಳಿಗೆ ಹೋದಳು.
ತೇನಾಪಿ ಸಂಪರಿತ್ಯಕ್ತಾ ಪರಾಮೃಷ್ಟೇತಿ ಸಾ ಪುನಃ |
ಭೀಷ್ಮಮಾಪ ಸ ನಾಗೃಹ್ಣಾತ್ ಪ್ರಯಯೌ ಸಾಪಿ ಭಾರ್ಗವಮ್ ॥91॥
ಪರಪುರುಷರಿಂದ ಸ್ಪೃಷ್ಟಳಾದಳೆಂದು ಅಂಬೆ ಸಾಲ್ವನಿಂದಲೂ ಪರಿತ್ಯಕ್ತಳಾದಳು. ಅವಳು ಪುನಃ ಭೀಷ್ಮನ ಬಳಿಗೆ ಬಂದಳು. ಅವನು ಸ್ವೀಕರಿಸಲಿಲ್ಲ. ಅವಳು ಪರಶುರಾಮನ ಬಳಿಗೆ ಹೋದಳು.
ಭ್ರಾತುರ್ವಿವಾಹಯಾಮಾಸ ಸೋಽಂಬಿಕಾಂಬಾಲಿಕೇ ತತಃ |
ಭೀಷ್ಮಾಯ ತು ಯಶೋ ದಾತುಂ ಯುಯುಧೇ ತೇನ ಭಾರ್ಗವಃ ॥
ಬಳಿಕ ಭೀಷ್ಮ ಅಂಬಿಕೆ ಅಂಬಾಲಿಕೆಯರನ್ನು ತಮ್ಮನಾದ ವಿಚಿತ್ರ ವೀರ್ಯನಿಗೆ ಮದುವೆ ಮಾಡಿಸಿದ. ಭೀಷ್ಮನಿಗೆ ಯಶಸ್ಸನ್ನು ನೀಡುವುದಕ್ಕಾಗಿ ಪರಶುರಾಮ ಅವನೊಡನೆ ಯುದ್ಧ ಮಾಡಿದ.
ಅನಂತ ಶಕ್ತಿರಪಿ ಸ ನ ಭೀಷ್ಮಂ ನಿಜಘಾನ ಹ |
ನ ಚಾಂಬಾಂ ಗ್ರಾಹಯಾಮಾಸ ಭೀಷ್ಮಕಾರುಣ್ಯಯಂತ್ರಿತಃ ॥93॥
ಅನಂತಶಕ್ತಿ ಉಳ್ಳವನಾದರೂ ಪರಶುರಾಮ ಭೀಷ್ಮನನ್ನು ಕೊಲ್ಲಲಿಲ್ಲ. ಅಂಬೆಯನ್ನು ಸ್ವೀಕರಿಸುವಂತೆಯೂ ಮಾಡಲಿಲ್ಲ. ಏಕೆಂದರೆ ಅವನು ಭೀಷ್ಮನ ಮೇಲಿನ ಕರುಣೆಯಿಂದ ಬದ್ಧನಾಗಿದ್ದ.
ಅನಂತಶಕ್ತಿಃ ಸಕಲಾಂತರಾತ್ಮಾ ಯಃ
ಸರ್ವವಿತ್ ಸರ್ವವಶೀ ಚ ಸರ್ವಜಿತ್ |
ನ ಯತ್ಸಮೋಽನ್ಯೋಽಸ್ತಿ ಕಥಂ ಚ
ಕುತ್ರಚಿತ್ ಕಥಂ ಹ್ಯಶಕ್ತಿಃ ಪರಮಸ್ಯ ತಸ್ಯ ॥94॥
ಪರಶುರಾಮ ಅಪರಿಮಿತಶಕ್ತಿ ಉಳ್ಳವ, ಸರ್ವಾಂತರ್ಯಾಮಿ, ಸರ್ವಜ್ಞ, ಸರ್ವಸ್ವಾಮಿ, ಸರ್ವಜಯಿ. ಅವನಿಗೆ ಸಮಾನನಾದವನಿನ್ನೊಬ್ಬ ಎಲ್ಲಿಯೂ ಯಾವ ರೀತಿಯಿಂದಲೂ ಸಿಗಲಾರ. ಅಂಥ ಸರ್ವೋತ್ತಮನಿಗೆ ಅಶಕ್ತಿ ಎಂದರೆ ಹೇಗೆ?
ಭೀಷ್ಮಂ ಸ್ವಭಕ್ತಂ ಯಶಸಾಭಿಪೂರಯನ್
ವಿಮೋಹಯನ್ನಾಸುರಾಂಶ್ಚೈವ ರಾಮಃ |
ಜಿತ್ವೈವ ಭೀಷ್ಮಂ ನ ಜಘಾನ ದೇವೋ
ವಾಚಂ ಚ ಸತ್ಯಾಮಕರೋತ್ ಸ ತಸ್ಯ ॥95॥
ತನ್ನ ಭಕ್ತನಾದ ಭೀಷ್ಮನನ್ನು ಯಶಸ್ಸಿನಿಂದ ತುಂಬಿಸುವುದಕ್ಕಾಗಿ ಮತ್ತು ಅಸುರರನ್ನು ಮೋಹಗೊಳಿಸುವುದಕ್ಕಾಗಿ ಭೀಷ್ಮನನ್ನು ವಸ್ತುತಃ ಗೆದ್ದೇ ಕೊಲ್ಲಲಿಲ್ಲ. ಅವನ ಪ್ರತಿಜ್ಞೆಯನ್ನೆ ಸತ್ಯವಾಗಿಸಿದ.
ವಿದ್ಧವನ್ಮುಗ್ಧವಚ್ಚೈವ ಕೇಶವೋ ವೇದನಾರ್ತವತ್ |
ದರ್ಶಯನ್ನಪಿ ಮೋಹಾಯ ನೈವ ವಿಷ್ಣುಸ್ತಥಾ ಭವೇತ್ ॥96॥
`ಕೇಶವ ಶಸ್ತ್ರದಿಂದ ಹೊಡೆಸಿಕೊಂಡವನಂತೆ ಅಜ್ಞನಂತೆ ವೇದನೆಯಿಂದ ಬಳಲಿದವನಂತೆ ಅಸುರರಿಗೆ ಮೋಹ ಉಂಟು ಮಾಡಲು ತೋರಿಸಿಕೊಂಡರೂ ವಸ್ತುತಃ ಹಾಗೆ ಆಗಿರುವುದಿಲ್ಲ'.
ಏವಮಾದಿ ಪುರಾಣೋತ್ಥ ವಾಕ್ಯಾದ್ ರಾಮಃ ಸದಾ ಜಯೀ |
ಯಶೋ ಭೀಷ್ಮಸ್ಯ ದತ್ವಾ ತು ಸೋಂಬಾಂ ಚ ಶರಣಾಗತಾಮ್ ॥97॥
ಉನ್ಮುಚ್ಯ ಭರ್ತೃದ್ವೇಷೋತ್ಥಾತ್ ಪಾಪಾತ್ ತೇನಾಶ್ವಯೋಜಯತ್ |
ಅನಂತರಂ ಶಿಖಂಡಿತ್ವಾತ್ ತದಾ ಸಾ ಶಾಂಕರಂ ತಪಃ ॥98॥
ಭೀಷ್ಮಸ್ಯ ನಿಧನಾರ್ಥಾಯ ಪುಂಸತ್ವಾರ್ಥ ಚ ಚಕಾರ ಹ |
ಭೀಷ್ಮೋ ಯಥಾ ತ್ವಾಂ ಗೃಹ್ಣೀಯಾತ್ ತಥಾ ಕುರ್ಯಾಮಿತೀರಿತಮ್ |
ರಾಮೇಣ ಸತ್ಯಂ ತಚ್ಚಕ್ರೇ ಭೀಷ್ಮೇ ದೇಹಾಂತರಂ ಗತೇ ॥99॥
ಇದೇ ಮೊದಲಾದ ಪುರಾಣ ವಾಕ್ಯಗಳಿರುವುದರಿಂದ ಪರಶುರಾಮ ಸದಾ ವಿಜಯಿಯೇ. ಭೀಷ್ಮನಿಗೆ ಯಶಸ್ಸನ್ನು ತಂದುಕೊಟ್ಟು,

ಶರಣಾಗತಳಾದ ಅಂಬೆಗೂ ಅವಳ ಪತಿದ್ರೋಹದಿಂದ ಉಂಟಾಗುವ ಪಾಪದಿಂದ ಮುಕ್ತಿ ನೀಡಿ, ಅವಳ ಶಿಖಂಡಿ ಜನ್ಮ ಕಳೆದೊಡನೆಯೆ ಪತಿಯೊಡನೆ ಸಮಾಗಮ ಮಾಡಿಸಿದ. ಅಂಬೆ ಪರಶುರಾಮನ ಬಳಿಯಿಂದ ಹಿಂತಿರುಗಿ ಬಂದು ಭೀಷ್ಮನನ್ನು ಕೊಲ್ಲಲು ಮತ್ತು ಅದಕ್ಕಾಗಿ ಪುರುಷತ್ವವನ್ನು ಹೊಂದಲು ಆ ಶಿವನನ್ನು ಕುರಿತು ತಪಸ್ಸು ಮಾಡಿದಳು. ನಿನ್ನನ್ನು ಭೀಷ್ಮ ಪರಿಗ್ರಹಿಸುವಂತೆ ಮಾಡುತ್ತೇನೆ ಎಂದು ಪರಶುರಾಮ ತಾನು ಕೊಟ್ಟ ಮಾತನ್ನು ಭೀಷ್ಮ ಮೂಲರೂಪದಲ್ಲಿ ವಸುಶರೀರ ಪಡೆದಾಗ ನಡೆಸಿಕೊಟ್ಟ.

* * * *

ನೂರ ಒಂದನೆಯ ಅಧ್ಯಾಯ

(ಭೀಷ್ಮರ ದಿಗ್ವಿಜಯ, ಕಾಶೀರಾಜನ ಕನ್ಯೆಯರ ಆಹರಣ, ಅಂಬೆಯ ಪ್ರಕರಣ.)

ವೈಶಂಪಾಯನಃ

ಹತೇ ಚಿತ್ರಾಂಗದೇ ಭೀಷ್ಮೋ ಬಾಲೇ ಭ್ರಾತರಿ ಚಾನಘೇ |
ಪಾಲಯಾಮಾಸ ತದ್ರಾಜ್ಯಂ ಸತ್ಯವತ್ಯಾ ಮತೇ ಸ್ಥಿತಃ ॥1॥

ತನ್ನ ತಮ್ಮನಾದ ಚಿತ್ರಾಂಗದನು ಬಾಲಕನಾಗಿಯೇ ಮೃತನಾದಾಗ, ಭೀಷ್ಮನು ಸತ್ಯವತಿಯ ಅಭಿಪ್ರಾಯದಂತೆ ಆ ರಾಜ್ಯವನ್ನು ಪಾಲಿಸಿದನು.

ತಥಾ ವಿಚಿತ್ರವೀರ್ಯಂ ತು ವರ್ತಮಾನಂ ಸುಖೇಽತುಲೇ |
ಸಂಪ್ರಾಪ್ತಯೌವನಂ ಪಶ್ಯನ್ ಭ್ರಾತರಂ ಧೀಮತಾಂ ವರಃ |
ಭೀಷ್ಮೋ ವಿಚಿತ್ರವೀರ್ಯಸ್ಯ ವಿವಾಹಾಯೋಪಚಕ್ರಮೇ ॥2॥

ಹಾಗೆಯೇ ವಿಚಿತ್ರವೀರ್ಯನು ಅತುಲಸುಖದಲ್ಲಿ ಬೆಳೆದು ಯೌವನವನ್ನು ಹೊಂದಿರುವುದನ್ನು ನೋಡಿ, ಧೀಮಂತರಲ್ಲಿ ಶ್ರೇಷ್ಠನಾದ ಭೀಷ್ಮನು ತಮ್ಮನಾದ ವಿಚಿತ್ರವೀರ್ಯನಿಗೆ ವಿವಾಹವನ್ನು ಮಾಡಲು ಉಪಕ್ರಮಿಸಿದನು.

ತತಃ ಕಾಶೀಪತೇರ್ಭೀಷ್ಮಃ ಕನ್ಯಾಸ್ತಿಸ್ರೋಽಪ್ಸರಃ ಸಮಾಃ |
ಶುಶ್ರಾವ ಸಹಿತಾ ರಾಜನ್ ವೃಣ್ವಂತೀರ್ವೈ ಸ್ವಯಂವರೇ ॥3॥

ಆ ಸಮಯಕ್ಕೆ ಭೀಷ್ಮನು ಕಾಶೀರಾಜನ ಮೂರು ಮಕ್ಕಳು, ಅಪ್ಸರೆಯಂತಿರುವವರು ಸ್ವಯಂವರದಲ್ಲಿ ರಥಿಗಳನ್ನು ವರಿಸುತ್ತಾರೆಂದು ತಿಳಿದನು.

ತತಃ ಸ ರಥಿನಾಂ ಶ್ರೇಷ್ಠೋ ರಥೇನೈಕೇನ ಧರ್ಮಭೃತ್ |
ಜಗಾಮಾನುಮತೇ ಮಾತುಃ ಪುರೀಂ ವಾರಾಣಸೀಂ ಪ್ರತಿ ॥4॥

ರಥಿಗಳಲ್ಲಿ ಶ್ರೇಷ್ಠನಾದ ಧರ್ಮಿಷ್ಠನಾದ ಭೀಷ್ಮನು ಒಂದು ರಥವನ್ನು ತೆಗೆದುಕೊಂಡು, ತಾಯಿಯ ಅನುಮತಿಯನ್ನು ಪಡೆದು, ವಾರಾಣಸಿಗೆ ಹೋದನು.

ತತ್ರ ರಾಜ್ಞಃ ಸಮುದಿತಾನ್ ಸರ್ವತಃ ಸಮುಪಾಗತಾನ್ |
ದದರ್ಶ ಕನ್ಯಾಸ್ತಾಶ್ಚೈವ ಭೀಷ್ಮಃ ಶಂತನುನಂದನಃ ॥5॥

ಅಲ್ಲಿ ಸ್ವಯಂವರಕ್ಕೆ ಎಲ್ಲ ಕಡೆಗಳಿಂದಲೂ ಸುಮುದ್ಯುಕ್ತರಾಗಿ ಬಂದ ರಾಜರನ್ನೂ, ಆ ಮೂರು ಕನ್ಯೆಯರನ್ನೂ, ಶಂತನುವಿನ ಮಗನಾದ ಭೀಷ್ಮನು ನೋಡಿದನು.

ತಾಸಾಂ ಕಾಮೇನ ಸಮ್ಮತ್ತಾಃ ಸಹಿತಾಃ ಕಾಶಿಕೋಸಲಾಃ |
ವಂಗಾಃ ಪುಂಡ್ರಾಃ ಕಲಿಂಗಾಶ್ಚ ತೇ ಜಗ್ಮುಸ್ತಾಂ ಪುರೀಂ ಪ್ರತಿ ॥6॥

ಆ ಕನ್ಯೆಯರ ಮೇಲಿನ ಕಾಮದಿಂದ ಮತ್ತರಾದ ಕಾಶಿ, ಕೋಸಲರಾಜರು, ವಂಗರಾಜರು, ಪುಂಡ್ರರಾಜರು ಮತ್ತು ಕಳಿಂಗರಾಜರು ಎಲ್ಲರು ಆ ಪಟ್ಟಣಕ್ಕೆ ಬಂದರು.

ಕೀರ್ತ್ಯಮಾನೇಷು ರಾಜ್ಞಾಂ ತು ನಾಮಧೇಯೇಷು ಭಾರತ |
ಏಕಾಕಿನಂ ತದಾ ಭೀಷ್ಮಂ ವೃದ್ಧಂ ಶಂತನುನಂದನಮ್ ॥7॥
ಸೋದ್ವೇಗಾ ಇವ ತಂ ದೃಷ್ಟ್ವಾ ಕನ್ಯಾಃ ಪರಮಶೋಭನಾಃ |
ಅಪಾಕ್ರಮಂತ ತಾಃ ಸರ್ವಾ ವೃದ್ಧ ಇತ್ಯೇವ ಚಿಂತಯಾ ॥8॥

ಎಲೈ ಭಾರತನೇ, ಸ್ವಯಂವರಕ್ಕೆ ಬಂದ, ರಾಜರುಗಳ ಹೆಸರನ್ನು ಘೋಷಿಸುವ ಸಮಯದಲ್ಲಿ ಶಂತನುನಂದನನಾದ ವೃದ್ಧನಾದ ಭೀಷ್ಮನು ಏಕಾಕಿಯಾಗಿ ಪ್ರವೇಶಿಸಿದನು. ಪರಮಸುಂದರಿಯರಾದ ಆ ಕನ್ಯೆಯರು ಅವನನ್ನು ನೋಡಿ, ಉದ್ವಿಗ್ನರಾಗಿ ವೃದ್ಧರೆಂಬ ಚಿಂತೆಯಿಂದ ಸ್ವಯಂವರ ಮಂಟಪದಿಂದ ಹಿಂದೆ ಸರಿದರು.

ವೃದ್ಧಃ ಪರಮಧರ್ಮಾತ್ಮಾ ವಲೀಪಲಿತದಾರುಣಃ |
ಕಿಂ ಕಾರಣಮಿಹಾಯಾತೋ ನಿರ್ಲಜ್ಜೋ ಭರತರ್ಷಭಃ ॥9॥
ಮಿಥ್ಯಾಪ್ರತಿಜ್ಞೋ ಲೋಕೇಷು ಕಿಂ ವದಿಷ್ಯತಿ ಭಾರತಮ್ |
ಬ್ರಹ್ಮಚಾರೀತಿ ಭೀಷ್ಮೋ ಹಿ ವೃಥೈವ ಪ್ರಥಿತೋ ಭುವಿ ॥10॥

ವೃದ್ಧನೂ, ಪರಮ ಧರ್ಮಿಷ್ಠನೂ ಸುಕ್ಕುಗಟ್ಟಿದ ದೇಹ ಹಣ್ಣಾದ ತಲೆ ಇವುಗಳಿಂದ ಉಗ್ರವಾಗಿ ಕಾಣುವವನೂ, ಆದ ಭರತರ್ಷಭನು ನಿರ್ಲಜ್ಜನಾಗಿ ಇಲ್ಲಿಗೆ ಯಾವ ಉದ್ದೇಶದಿಂದ ಬಂದಿದ್ದಾನೆ. ಮಿಥ್ಯಾಚಾರವುಳ್ಳವನಾಗಿ ಅವನು ತನ್ನ ತಮ್ಮನಿಗೆ ಏನನ್ನು ಹೇಳುವನು. ಭೀಷ್ಮರು ಬ್ರಹ್ಮಚಾರಿಯೆಂಬ ಪ್ರಸಿದ್ಧಿಯು ಭೂಮಿಯಲ್ಲಿ ವ್ಯರ್ಥವಾಗಿದೆ.

ಇತ್ಯೇವಂ ಪ್ರಬ್ರುವಂತಸ್ತೇ ಹಸಂತಿ ಸ್ಮ ನೃಪೋತ್ತಮಾಃ |
ಕ್ಷತ್ರಿಯಾಣಾಂ ವಚಃ ಶ್ರುತ್ವಾ ಭೀಷ್ಮಶ್ಚುಕ್ರೋಧ ಭಾರತ |

ಭೀಷ್ಮಸ್ತದಾ ಸ್ವಯಂಕನ್ಯಾ ವರಯಾಮಾಸ ತಾಃ ಪ್ರಭುಃ ॥11॥
ಆ ರಾಜರುಗಳು ಹೀಗೆ ಮಾತನಾಡುತ್ತಾ ನಗಲು ಪ್ರಾರಂಭಿಸಿದರು. ಎಲೈ ಭಾರತನೇ, ಕ್ಷತ್ರಿಯರ ಮಾತನ್ನು ಕೇಳಿ ಭೀಷ್ಮನು ಕೋಪಗೊಂಡನು. ತಮ್ಮನ ಸಲುವಾಗಿ ಭೀಷ್ಮನು ತಾನೇ ಕನ್ಯೆಯರನ್ನು ವರಿಸಿದನು.
ಉವಾಚ ಚ ಮಹೀಪಾಲಾನ್ ರಾಜನ್ ಜಲದನಿಸ್ವನಃ।
ರಥಮಾರೋಪ್ಯ ತಾಃ ಕನ್ಯಾ ಭೀಷ್ಮೋ ಭೀಮಪರಾಕ್ರಮಃ ॥12॥
ಎಲೈ ರಾಜನೇ, ಭೀಮಪರಾಕ್ರಮನಾದ ಭೀಷ್ಮನು ಆ ಕನ್ಯೆಯರನ್ನು ರಥದಲ್ಲಿ ಕೂಡಿಸಿಕೊಂಡು ಮೇಘದಂತೆ ಗಂಭೀರವಾದ ವಾಣಿಯಿಂದ ಆ ರಾಜರನ್ನು ಕುರಿತು ಮಾತನಾಡಿದನು.
ಆಹೂಯ ದಾನಂ ಕನ್ಯಾನಾಂ ಗುಣವದ್ಭ್ಯಃ ಸ್ಮೃತಂ ಬುಧೈಃ।
ಅಲಂಕೃತ್ಯ ಯಥಾಶಕ್ತಿ ಪ್ರದಾಯ ಚ ಧನಾನ್ಯುತ।
ಪ್ರಯಚ್ಛಂತ್ಯಪರೇ ಕನ್ಯಾಂ ಮಿಥುನೇನ ಗವಾಮಪಿ ॥13॥
ವರನನ್ನು ಆಹ್ವಾನ ಮಾಡಿ ಕನ್ಯೆಯನ್ನು ಗುಣವಂತರಿಗೆ ದಾನವನ್ನು ಮಾಡುವುದು ಶ್ರೇಷ್ಠವೆಂದು ಬುಧರು ಹೇಳುತ್ತಾರೆ. ಇನ್ನು ಕೆಲವರು ಕನ್ಯೆಯನ್ನು ಅಲಂಕಾರವನ್ನು ಮಾಡಿ ಯಥಾಶಕ್ತಿ ಧನವನ್ನು ಕೊಟ್ಟು ವಿವಾಹವನ್ನು ಮಾಡುತ್ತಾರೆ.
ವಿತ್ತೇನ ಕಥಿತೇನಾನ್ಯೇ ಬಲಾದನ್ಯೇಽನುಮಾನ್ಯ ಚ।
ಪ್ರಮತ್ತಾಮುಪಯಾಂತ್ಯನ್ಯೇ ಸ್ವಯಂ ಗೃಹ್ಣಂತಿ ಚಾಪರೇ ॥14॥
ಇನ್ನು ಕೆಲವರು ಗೋಮಿಥುನವನ್ನು ಕೊಟ್ಟು ಕನ್ಯೆಯನ್ನು ವಿವಾಹ ಮಾಡಿಕೊಳ್ಳುತ್ತಾರೆ. ಇನ್ನು ಕೆಲವರು ಕನ್ಯಾಪಿತೃಗಳು ಕೇಳುವ ಧನವನ್ನು ಕೊಟ್ಟು ವಿವಾಹ ಮಾಡಿಕೊಳ್ಳುತ್ತಾರೆ. ಇನ್ನು ಕೆಲವರು ಬಲಾತ್ಕಾರದಿಂದಲೂ, ಇನ್ನು ಕೆಲವರು ಕನ್ಯೆಯ ಅನುಮತಿಯಿಂದಲೂ ವಿವಾಹವಾಗುತ್ತಾರೆ. ಕೆಲವರು ಪ್ರಮತ್ತಳಾದ ಕನ್ಯೆಯನ್ನು ಸ್ವೀಕರಿಸುತ್ತಾರೆ. ಇನ್ನು ಕೆಲವರು ತಾವಾಗಿಯೇ ಕನ್ಯೆಯನ್ನು ತೆಗೆದುಕೊಂಡು ಹೋಗುತ್ತಾರೆ.
ಅಷ್ಟಮಂ ತು ಮಿಥೋವೃತ್ತಂ ವಿವಾಹಂ ಕವಿಭಿಃ ಸ್ಮೃತಮ್।
ಸ್ವಯಂವರಂ ತು ರಾಜನ್ಯಾಃ ಪ್ರಶಂಸಂತ್ಯುಪಯಾಂತಿ ಚ ॥15॥
ಎಂಟನೆಯ ವಿವಾಹ ಪದ್ಧತಿಯೆಂದರೆ ಪರಸ್ಪರ ಸಮ್ಮತಿಯಿಂದ ವಿವಾಹವೆಂದು ಜ್ಞಾನಿಗಳು ಹೇಳುತ್ತಾರೆ. ರಾಜರಿಗೆ ಸ್ವಯಂವರವೇ ಪ್ರಶಸ್ತವಾದದ್ದು. ಅದಕ್ಕಾಗಿ ಅವರು ಬಂದು ಸೇರುತ್ತಾರೆ.
ಸಂಪ್ರಮಥ್ಯ ಹೃತಾಮಾಹುರ್ಜ್ಯಾಯಸೀಂ ಧರ್ಮಚಾರಿಣಃ।
ತಾ ಇಮಾಃ ಪೃಥಿವೀಪಾಲಾ ಜಿಹೀರ್ಷಾಮಿ ಪ್ರಸಂಹ್ಯ ವಃ ॥16॥
ಬಲದಿಂದ ಹರಣ ಮಾಡಿದ ಕನ್ಯೆಯು ಅದಕ್ಕಿಂತ ಶ್ರೇಷ್ಠಳಾದವಳು ಎಂದು ಧರ್ಮಿಷ್ಠರು ಹೇಳುತ್ತಾರೆ. ಆದ್ದರಿಂದ ಎಲೈ ರಾಜರೇ, ನಿಮ್ಮನ್ನು ಧಿಕ್ಕರಿಸಿ, ನಾನು ಈ ಕನ್ಯೆಯರನ್ನು ಹರಣ ಮಾಡುತ್ತಿದ್ದೇನೆ.
ತೇ ಯತಧ್ವಂ ಯಥಾಕಾಮಂ ವಿಜಯಾಯೇತರಾಯ ವಾ।
ಸ್ಥಿತೋಽಹಂ ಪೃಥಿವೀಪಾಲಾ ಯುದ್ಧಾಯ ಕೃತನಿಶ್ಚಯಃ ॥17॥
ಆದರೆ ನೀವು ಜಯಕ್ಕಾಗಲೀ ಅಥವಾ ಪರಾಜಯಕ್ಕಾಗಲೀ, ಸಿದ್ಧರಾಗಿ. ಎಲೈ ರಾಜರೇ, ನಾನು ಯುದ್ಧ ಮಾಡುವುದೆಂದು ನಿಶ್ಚಯಿಸಿ ನಿಂತಿದ್ದೇನೆ.
ವೈಶಂಪಾಯನಃ
ಏವಮುಕತ್ವ ಮಹೀಪಾಲಾನ್ ಕಾಶಿರಾಜಂ ಚ ವೀರ್ಯವಾನ್।
ಸರ್ವಾಃ ಕನ್ಯಾಃ ಸ ಕೌರವ್ಯೋ ರಥಮಾರೋಪಯತ್ ಸ್ವಕಮ್।
ಆಮಂತ್ರ್ಯ ಪ್ರಯಯೌ ಕ್ಷಿಪ್ರಂ ಭೀಷ್ಮೋ ವೈ ಜನಮೇಜಯ ॥18॥
ಬಲಿಷ್ಠನಾದ ಭೀಷ್ಮನು ಕಾಶೀರಾಜನಿಗೂ ಮತ್ತು ಬೇರೆ ರಾಜರಿಗೂ ಹೀಗೆ ಹೇಳಿ ಕುರುವಂಶದಲ್ಲಿ ಹುಟ್ಟಿದ ಅವನು ಮೂರು ಕನ್ಯೆಯರನ್ನೂ ತನ್ನ ರಥದಲ್ಲಿ ಏರಿಸಿದನು. ಜನಮೇಜಯನೇ, ನಾನು ಹೊರಡುತ್ತೇನೆ ಎಂದು ಹೇಳಿ ಭೀಷ್ಮನು ಕ್ಷಿಪ್ರವಾಗಿ ಅಲ್ಲಿಂದ ಹೊರಟನು.
ತತಸ್ತೇ ಪಾರ್ಥಿವಾಃ ಸರ್ವೇ ಸಮುತ್ಪೇತುರಮರ್ಷಿತಾಃ।
ಸಂಸ್ಪೃಶಂತಃ ಸ್ವಕಾನ್ ಬಾಹೂನ್ ಸಂದಶ್ಯ ದಶನಚ್ಛದಾನ್ ॥19॥
ಆಗ ರಾಜರೆಲ್ಲರೂ ತಮ್ಮ ತಮ್ಮ ಬಾಹುಗಳನ್ನು ಮುಟ್ಟಿಕೊಂಡು ಹಲ್ಲುಗಳನ್ನು ಕಡಿಯುತ್ತಾ ಸಿಟ್ಟಿನಿಂದ ಎದ್ದರು.
ತೇಷಾಮಾಭರಣಾನ್ಯಾಶು ಕವಚಾನಿ ಮಹಾಂತಿ ಚ।
ಆಮುಂಚತಾಂ ಚ ವರ್ಮಾಣಿ ಸಂಭ್ರಮಃ ಸಮಪದ್ಯತ ॥20॥
ತಮ್ಮ ತಮ್ಮ ಕವಚಗಳನ್ನು ಇಟ್ಟುಕೊಂಡು ಆಭರಣಗಳನ್ನು ಹಾಕಿಕೊಳ್ಳುವ ರಾಜರಿಗೆ ಗಡಿಬಿಡಿಯುಂಟಾಯಿತು.
ತಾರಾಣಾಮಿವ ಸಂಪಾತೋ ಬಭೂವ ಜನಮೇಜಯ।
ಭೂಷಣಾನಾಂ ಚ ಹೈಮಾನಾಂ ಕವಚಾನಾಂ ಚ ಸರ್ವಶಃ ॥21॥
ಚಿನ್ನದ ಭೂಷಣಗಳನ್ನು, ಕವಚಗಳನ್ನು ಅವರು ತೊಡುವಾಗ ಜನಮೇಜಯನೇ, ನಕ್ಷತ್ರವು ಒಂದಕ್ಕೊಂದು ಸೇರಿದಂತೆ ಕಾಣುತ್ತಿತ್ತು.
ವರ್ಮಭಿರ್ಭೂಷಣೈರ್ಮುಖ್ಯೈಃ ಪ್ರಜ್ವಲದ್ಭಿಃ ಸಮಂತತಃ।
ಸಕ್ರೋಧಾಮರ್ಷಜಿಹ್ವಾಸ್ಯಾಃ ಕಷಂತೋ ದಶನಾಂಸ್ತದಾ।
ಸೂತೋಪಕ್ಲೃಪ್ತಾನ್ ಸುದೃಢಾನ್ ಸತತೋದ್ಯತಧೂರ್ವಹಾನ್ ॥22॥
ರಥಾನಾಸ್ಥಾಯ ತೇ ವೀರಾಃ ಸರ್ವೋಪಕರಣಾನ್ವಿತಾಃ।

ಪ್ರಯಾಂತಮೇಕಂ ಕೌರವ್ಯಮನುಸಸ್ರುರುದಾಯುಧಾಃ ॥23॥
ಎಲ್ಲ ಕಡೆಯಲ್ಲಿಯೂ ಹೊಳೆಯುವ ಕವಚಗಳನ್ನು, ಭೂಷಣಗಳನ್ನು ಧರಿಸಿ, ಕ್ರೋಧಾಮರ್ಷದಿಂದ ಕೂಡಿದ, ನಾಲಿಗೆಯಿಂದ ಕೂಡಿದ ಮುಖವುಳ್ಳವರಾಗಿ, ತಮ್ಮ ಹಲ್ಲುಗಳನ್ನು ಕಡಿಯುತ್ತಾ, ಸೂತರು ಸಿದ್ಧಪಡಿಸಿದ, ಸತತವಾಗಿ ಯುದ್ಧದ ಸಿದ್ಧತೆಯನ್ನು ಹೊಂದಿದ್ದ. ತಮ್ಮ ಭವ್ಯವಾದ ರಥಗಳನ್ನು ಏರಿ ಆ ವೀರರು ಸರ್ವೋಪಕರಣಗಳಿಂದ ಕೂಡಿದವರಾಗಿ ತಮ್ಮ ಆಯುಧಗಳನ್ನು ತೆಗೆದುಕೊಂಡು ಮುಂದೆ ಹೋಗುತ್ತಿದ್ದ ಭೀಷ್ಮನನ್ನು ಹಿಂಬಾಲಿಸಿದರು.
ತತಃ ಸಮಭವದ್ ಯುದ್ಧಂ ತೇಷಾಂ ತಸ್ಯ ಚ ಭಾರತ |
ಏಕಸ್ಯ ಚ ಬಹೂನಾಂ ಚ ತುಮುಲಂ ರೋಮಹರ್ಷಣಮ್ ॥24॥
ಅನಂತರ ಅವರಿಬ್ಬರಿಗೂ ಎಂದರೆ ಒಬ್ಬ ಭೀಷ್ಮನಿಗೂ ಮತ್ತು ಅನೇಕರಿಗೂ ರೋಮಾಂಚಕಾರಿಯಾದ ಯುದ್ಧವು ನಡೆಯಿತು.
ತೇ ತ್ವಿಷೂನ್ ದಶಸಾಹಸ್ರಾಂತಸ್ಮೈ ಯುಗಪದಕ್ಷಿಪನ್ |
ಅಪ್ರಾಪ್ತಾನ್ ಸೋಽಚ್ಛಿನತ್ ಸರ್ವಾಂಸ್ತದದ್ಭುತಮಿವಾಭವತ್ ॥25॥
ಅವರು ಒಟ್ಟಿಗೆ ಹತ್ತುಸಾವಿರ ಬಾಣಗಳನ್ನು ಭೀಷ್ಮರ ಮೇಲೆ ಪ್ರಯೋಗಿಸಿದರು. ಭೀಷ್ಮರು ಆ ಬಾಣಗಳು ತಮ್ಮನ್ನು ತಲುಪುವುದಕ್ಕಿಂತ ಮುಂಚೆಯೇ ಅವುಗಳನ್ನು ಕತ್ತರಿಸಿದುದು ಅದ್ಭುತವಾಗಿತ್ತು.
ತತಸ್ತೇ ಪಾರ್ಥಿವಾಃ ಸರ್ವೇ ಸರ್ವತಃ ಪರ್ಯವಾರಯನ್ |
ಮಹತಾ ಶರವರ್ಷೇಣ ವರ್ಷೇಣೇವಾಂಬುದಾ ಗಿರಿಮ್ ॥26॥
ಅನಂತರ ಆ ರಾಜರು ದೊಡ್ಡ ಬಾಣವರ್ಷದಿಂದ ವರ್ಷಧಾರೆಯಿಂದ ಮೋಡಗಳು ಗಿರಿಯನ್ನು ಸುತ್ತುವರೆಯುವಂತೆ ಭೀಷ್ಮರನ್ನು ಸುತ್ತುವರೆದರು.
ತತ್ ತು ಬಾಣಮಯಂ ವರ್ಷಂ ಸ ತೇಷಾಮಾವೃಣೋಚ್ಛರೈಃ |
ತಾಂಶ್ಚ ಸರ್ವಾನ್ ಮಹೀಪಾಲಾನ್ ಪ್ರತ್ಯವಿಧ್ಯತ್ ತ್ರಿಭಿಸ್ತ್ರಿಭಿಃ ॥27॥
ಭೀಷ್ಮರು ಅವರೆಲ್ಲರ ಬಾಣಮಯವಾದ ಮಳೆಯನ್ನು ತಮ್ಮ ಬಾಣಗಳಿಂದ ತಡೆದು, ಆ ಎಲ್ಲ ರಾಜರನ್ನು ಮೂರುಮೂರು ಬಾಣಗಳಿಂದ ವ್ಯಥೆಪಡಿಸಿದರು.
ತಸ್ಯಾತಿಲಾಘವಂ ಕರ್ಮ ಪೌರುಷಂ ಲಘುಕಾರಿಣಃ |
ರಕ್ಷಣಂ ಚಾತ್ಮನಃ ಸರ್ವೇ ಶತ್ರವೋ ಹ್ಯಭ್ಯಪೂಜಯನ್ ॥28॥
ಕ್ಷಿಪ್ರಕಾರಿಯಾದ ಅವರ ಪೌರುಷವನ್ನೂ, ಅವರ ಲಾಘವವನ್ನೂ ಮತ್ತು ಆತ್ಮರಕ್ಷಣೆಯನ್ನೂ ಎಲ್ಲ ಶತ್ರುಗಳೂ ಸನ್ಮಾನಿಸಿದರು.
ಅಕ್ಷತಃ ಕ್ಷಪಯಿತ್ವಾಽನ್ಯಾನ್ ಅಸಂಖ್ಯೇಯಪರಾಕ್ರಮಃ |
ಆನಿನಾಯ ಸ ಕಾಶ್ಯಸ್ಯ ಸುತಾಃ ಸಾಗರಗಾಸುತಃ ॥29॥
ಅಪರಿಮಿತಪರಾಕ್ರಮವುಳ್ಳ ಭೀಷ್ಮರು ತಾವು ಗಾಯಗೊಳ್ಳದೇ ಎಲ್ಲರನ್ನು ವಿನಾಶಗೊಳಿಸಿ ಕಾಶೀರಾಜನ ಮೂರು ಮಕ್ಕಳನ್ನು ಕರೆತಂದರು.
ತಾನ್ ನಿಹತ್ಯ ರಣೇ ಸರ್ವಾನ್ ಸರ್ವಶಸ್ತ್ರವಿಶಾರದಃ |
ಕನ್ಯಾಭಿಃ ಸಹಿತೋ ಯಾತೋ ಭಾರತೋ ಭಾರತಾನ್ ಪ್ರತಿ ॥30॥
ಸರ್ವಶಸ್ತ್ರವಿಶಾರದರಾದ ಅವರು ಅವರೆಲ್ಲರನ್ನೂ ಯುದ್ಧದಲ್ಲಿ ಪರಾಭವಗೊಳಿಸಿ, ಮೂರು ಕನ್ಯೆಯರನ್ನು ಕರೆದುಕೊಂಡು ತನ್ನ ತಮ್ಮಂದಿರ ಸಮೀಪಕ್ಕೆ ಹಿಂದಿರುಗಿದರು.
ತತಸ್ತಂ ಪೃಷ್ಠತೋ ರಾಜಾ ಸಾಲ್ವಾನಾಮೀಶ್ವರಃ ಪ್ರಭುಃ |
ಅಭ್ಯಾಗಮದಮೇಯಾತ್ಮಾ ಭೀಷ್ಮಂ ಶಾಂತನವಂ ರಣೇ ॥31॥
ಆಗ ಮಹಾಪರಾಕ್ರಮಶಾಲಿಯಾದ ಸಾಲ್ವಾಧಿಪತಿಯಾದ ರಾಜನು ಶಂತನುಪುತ್ರನಾದ ಭೀಷ್ಮನ ಜೊತೆಯಲ್ಲಿ ಯುದ್ಧಮಾಡಲು ಹಿಂದಿನಿಂದ ಬಂದನು.
ಕುಂಜರಂ ಜಘನೇ ನಿಘ್ನನ್ ದಂತಾಭ್ಯಾಮಪರೋ ಯಥಾ |
ವಾಸಿತಾಸಮಯೇ ಯತ್ತೋ ಯೂಥಪೋ ಬಲಿನಾಂ ವರಃ ॥32॥
ಹೆಣ್ಣಾನೆಯ ಸಲುವಾಗಿ ಬಂದ ಒಂದು ಆನೆಯನ್ನು ಹಿಂದಿನಿಂದ ತನ್ನ ದಂತಗಳಿಂದ ತಿವಿಯುವ ಸಲಗನಂತೆ ಬಲಿಷ್ಠರಲ್ಲಿ ಶ್ರೇಷ್ಠನಾದ ಸಾಲ್ವನು ಭೀಷ್ಮರನ್ನು ಹಿಂಬಾಲಿಸಿದನು.
ಸ್ತ್ರೀಕಾಮ ತಿಷ್ಠ ತಿಷ್ಠೇತಿ ಸಾಲ್ವಶ್ಚಾಹ ಸ ಪಾರ್ಥಿವಃ |
ಸಾಲ್ವೇನೈವಂ ಮಹಾಬಾಹುರಮರ್ಷೇಣಾಭಿಚೋದಿತಃ ॥33॥
ತತಃ ಸ ಪುರುಷವ್ಯಾಘ್ರೋ ಭೀಷ್ಮಃ ಪರಬಲಾರ್ದನಃ |
ಸಾಲ್ವರಾಜಂ ಸುಸಂಕ್ರುದ್ಧೋ ನ್ಯವರ್ತತ ಪರಂತಪಃ ॥34॥
ಸಾಲ್ವರಾಜನು ಸ್ತ್ರೀಕಾಮನೇ ನಿಲ್ಲು, ನಿಲ್ಲೆಂದು ಹೇಳಿದನು. ಹೀಗೆ ಮಹಾಬಾಹುವಾದ ಭೀಷ್ಮನು ಸಾಲ್ವನಿಂದ ಸಿಟ್ಟಿನಿಂದ ಪ್ರಚೋದಿತನಾಗಿ ಪರಬಲಾರ್ದನನೂ, ಪರಂತಪನೂ, ಪುರುಷವ್ಯಾಘ್ರನೂ ಆದ ಅವನು ಕೋಪದಿಂದ ಸಾಲ್ವನಿಗೆ ಅಭಿಮುಖವಾಗಿ ತಿರುಗಿ ನಿಂತನು.
ಕ್ರೋಧೇನ ಸಂಪ್ರಜ್ವಲಿತೋ ವಿಧೂಮ ಇವ ಪಾವಕಃ |
ದಹನ್ ಯಥಾ ಕೃಷ್ಣಗತಿಃ ಕಕ್ಷಂ ವಾತೇರಿತಃ ಪ್ರಭುಃ ॥35॥
ಕ್ಷತ್ರಧರ್ಮಂ ಸಮಾಸ್ಥಾಯ ಅಭೀತೋ ರಾಜಸತ್ತಮಃ |
ನಿವರ್ತಯಾಮಾಸ ರಥಂ ಭೀಷ್ಮಃ ಪ್ರಹರತಾಂ ವರಃ ॥36॥

ಕ್ರೋಧದಿಂದ ಧೂಮವಿಲ್ಲದ ಅಗ್ನಿಯಂತೆ ಉರಿಯುತ್ತಾ ಶತ್ರುವಿನ ಪಕ್ಷವನ್ನು ವಾಯುವಿನಿಂದ ಎದ್ದ ಅಗ್ನಿಯಂತೆ ಜ್ವಲಿಸುತ್ತಾ ಕ್ಷತ್ರಿಯಧರ್ಮವನ್ನು ಅವಲಂಬಿಸಿ, ನಿರ್ಭಯನಾದ ಯುದ್ಧ ಮಾಡುವವರಲ್ಲಿ ಶ್ರೇಷ್ಠನಾದ ಭೀಷ್ಮನು ತನ್ನ ರಥವನ್ನು ಹಿಂದಿರುಗಿಸಿದನು.

ನಿವೃತ್ತಂ ತೇನ ತಂ ದೃಷ್ಟ್ವಾ ಹತಶೇಷಾ ಹಿ ಪಾರ್ಥಿವಾಃ |
ಪ್ರೇಕ್ಷಕಾಃ ಸಮಪದ್ಯಂತ ಭೀಷ್ಮಸಾಲ್ವಸಮಾಗಮೇ ॥37॥
ಸಾಲ್ವನಿಂದ ಹಿಂದಿರುಗಿಸಲ್ಪಟ್ಟ ಭೀಷ್ಮನನ್ನು ನೋಡಿ ಅಳಿದುಳಿದ ರಾಜರು ಭೀಷ್ಮ-ಸಾಲ್ವರ ಸಮಾಗಮದಲ್ಲಿ ಪ್ರೇಕ್ಷಕರಾಗಿ ನಿಂತರು.
ಗೋವೃಷಾವಿವ ನರ್ದಂತೌ ಬಲಿನೌ ವಾಸಿತಾಂತರೇ |
ಅನ್ಯೋನ್ಯಮಭ್ಯವರ್ತೇತಾಂ ಬಲವಿಕ್ರಮಶಾಲಿನೌ॥38॥
ಹಸುವಿನ ಸಲುವಾಗಿ ಪರಸ್ಪರವಾಗಿ ಗರ್ಜಿಸುವ ಎರಡು ವೃಷಭಗಳಂತೆ ಬಲವಿಕ್ರಮಶಾಲಿಗಳಾದ ಅವರಿಬ್ಬರು ಪರಸ್ಪರವಾಗಿ ಅಭಿಮುಖವಾಗಿ ಮುಂದೆ ಬಂದರು.
ತತಃ ಕ್ರುದ್ಧಂ ಶಾಂತನವೋ ದೃಷ್ಟ್ವಾ ತಂ ನೃಪಮಾಗತಮ್ |
ಸಾಲ್ವೇಶ್ವರಂ ಸ ರಾಜಾನಂ ಹಯಾನ್ ಕ್ರುದ್ಧೋಽಭ್ಯಚೋದಯತ್ ॥39॥
ಭೀಷ್ಮರು, ಕ್ರುದ್ಧನಾದ ಸಾಲ್ವರಾಜನು ಬಂದಿದ್ದನ್ನು ನೋಡಿ, ತಮ್ಮ ಕುದುರೆಗಳನ್ನು ಅವನ ಕಡೆಗೆ ಪ್ರಚೋದಿಸಿದರು.
ಸಂಸ್ಪೃಶಂಶ್ಚ ಧನುಃಶ್ರೇಷ್ಠಂ ಸಜ್ಯಂ ಕೃತ್ವಾ ನರರ್ಷಭಃ |
ಸಮುಪಸ್ಥಾಯ ದುರ್ಧರ್ಷಃ ಸಶರಃ ಸಶರಾಸನಃ ॥40॥
ಅಭ್ಯದ್ರವತ್ ಸಾಲ್ವಪತಿಂ ಯುದ್ಧಾರ್ಥೀ ಕುರುಪುಂಗವಃ |
ಕವಚೀ ಬದ್ಧನಿಸ್ತ್ರಿಂಶಸ್ತಲಬಂಧಃ ಪ್ರತಾಪವಾನ್ ॥41॥
ಪುರುಷಶ್ರೇಷ್ಠರಾದ ಅವರು ಧನುಸ್ಸನ್ನು ಕೈಯಲ್ಲಿ ಹಿಡಿದು ಹೆದೆಯೇರಿಸಿ, ಬಿಲ್ಲು-ಬಾಣಗಳನ್ನು ಹಿಡಿದು ದುರ್ಧರ್ಷರಾಗಿ ಯುದ್ಧಾರ್ಥಿಗಳಾಗಿ ಕವಚವನ್ನು ಕತ್ತಿಯನ್ನು ಮತ್ತು ಹಸ್ತಸಾತ್ರಣಗಳನ್ನು ಕಟ್ಟಿಕೊಂಡು, ಪ್ರತಾಪದಿಂದ ಸಾಲ್ವನ ಕಡೆಗೆ ಧಾವಿಸಿದರು.
ತಿಷ್ಠತಿಷ್ಠೇತಿ ರಾಜಾನಂ ಸಾಲ್ವಂ ಶಾಂತನವೋಽಬ್ರವೀತ್ |
ಯುದ್ಧಾರ್ಥೀ ವೈ ತತಃ ಸಾಲ್ವಂ ಪ್ರಾವರ್ತತ ಮಹಾಬಲಃ ॥42॥
ಮಹಾಬಲಿಷ್ಠರಾದ ಭೀಷ್ಮರು ನಿಲ್ಲು, ನಿಲ್ಲೆಂದು ಸಾಲ್ವನಿಗೆ ಹೇಳಿ ಯುದ್ಧಾರ್ಥಿಗಳಾಗಿ ಸಾಲ್ವನ ಕಡೆ ಹೊರಟರು.
ತತಸ್ತು ಯುದ್ಧಮಭವತ್ ತದಾ ರಾಜನ್ ಸ್ವಯಂವರೇ |
ಭೀಷ್ಮಸ್ಯ ಚೈವ ರಾಜರ್ಷೇಃ ಸಾಲ್ವಸ್ಯ ಚ ಮಹೀಪತೇಃ ॥43॥
ರಾಜನೇ, ಸ್ವಯಂವರದ ಸಂದರ್ಭದಲ್ಲಿ ರಾಜರ್ಷಿಗಳಾದ ಭೀಷ್ಮರಿಗೂ ಮತ್ತು ಸಾಲ್ವರಾಜನಿಗೂ ಯುದ್ಧವಾಯಿತು.
ತತೋ ಭೀಷ್ಮಂ ಶಾಂತನವಂ ಶರೈರಾವಾರಯತ್ ದಿಶಃ |
ಸಾಲ್ವರಾಜೋ ನರಶ್ರೇಷ್ಠ ಬಹ್ವಶೋಭತ ಭಾರತ ॥44॥
ಅನಂತರ ಸಾಲ್ವರಾಜನು ಭೀಷ್ಮರನ್ನೂ ಮತ್ತು ಹತ್ತು ದಿಕ್ಕುಗಳನ್ನೂ ತನ್ನ ಶರಗಳಿಂದ ಮುಚ್ಚಿದನು. ನರಶ್ರೇಷ್ಠನಾದ ಭಾರತನೇ, ಅದು ಬಹುವಾಗಿ ಶೋಭಿಸಿತು.
ವಿವ್ಯಾಧ ಚ ತಥಾ ಭೀಷ್ಮಂ ವಾಮಪಾರ್ಶ್ವೇ ಸ್ತನಾಂತರೇ |
ತ್ವರಮಾಣಸ್ತ್ವರಾಕಾಲೇ ಕ್ಷತ್ರಿಯರ್ಷಭಸತ್ತಮಃ ॥45॥
ಕ್ಷತ್ರಿಯಶ್ರೇಷ್ಠನಾದ ಸಾಲ್ವನು ಕ್ಷಿಪ್ರವಾಗಿ ಕಾರ್ಯವನ್ನು ಮಾಡಿ, ಭೀಷ್ಮರಿಗೆ ಸ್ತನದ ಸಮೀಪದಲ್ಲಿ ಎಡಭಾಗದಲ್ಲಿ ಗಾಯವನ್ನು ಮಾಡಿದನು.
ದೃಷ್ಟ್ವಾ ತು ಭೀಷ್ಮಂ ವ್ರಣಿನಂ ರಾಜ್ಞಾ ಸಾಲ್ವೇನ ತೇ ನೃಪಾಃ |
ವಿಸ್ಮಿತಾಃ ಸಮಪದ್ಯಂತ ಸಾಧುಸಾಧ್ವಿತಿ ಚಾಬ್ರುವನ್ ॥46॥
ಸಾಲ್ವರಾಜನಿಂದ ಭೀಷ್ಮರು ಗಾಯಗೊಂಡಿದ್ದನ್ನು ನೋಡಿ ಉಳಿದ ರಾಜರು ವಿಸ್ಮಿತರಾಗಿ `ಸಾಧು-ಸಾಧು' ಎಂದು ಕಿರುಚಿದರು.
ಲಾಘವಂ ತಸ್ಯ ತೇ ದೃಷ್ಟ್ವಾ ಪೃಥಿವ್ಯಾಂ ಸರ್ವಪಾರ್ಥಿವಾಃ |
ಸಾಲ್ವಂ ಸಂಪೂಜಯಾಮಾಸುರ್ವಾಗ್ಭಿರ್ನೃಪತಿಪುಂಗವಮ್ ॥47॥
ಎಲ್ಲ ರಾಜರೂ ಸಾಲ್ವನ ಕೈಚಳಕವನ್ನು ನೋಡಿ, ತಮ್ಮ ಮಾತುಗಳಿಂದ ರಾಜಶ್ರೇಷ್ಠನಾದ ಸಾಲ್ವನನ್ನು ಪೂಜಿಸಿದರು.
ಕ್ಷತ್ರಿಯಾಣಾಂ ತು ತಾಃ ಶ್ರುತ್ವಾ ವಾಚಃ ಪರಪುರಂಜಯಃ |
ಕ್ರುದ್ಧಃ ಶಾಂತನವಃ ಸಾಲ್ವಂ ತಿಷ್ಠತಿಷ್ಠೇತಿ ಚಾಬ್ರವೀತ್ ॥48॥
ಪರಪುರಂಜಯರಾದ ಭೀಷ್ಮರು ಕ್ಷತ್ರಿಯರ ಆ ಮಾತುಗಳನ್ನು ಕೇಳಿ, ಕ್ರುದ್ಧರಾಗಿ ಸಾಲ್ವನನ್ನು ಕುರಿತು `ನಿಲ್ಲು-ನಿಲ್ಲು' ಎಂದು ಹೇಳಿದರು.
ಸಾರಥಿಂ ಚಾಬ್ರವೀದ್ ಭೀಷ್ಮೋ ಯಾಹಿ ಯತ್ರೈಷ ಪಾರ್ಥಿವಃ |
ಯಾವದೇನಂ ನಿಹನ್ಮ್ಯದ್ಯ ಭುಜಂಗಮಿವ ಪಕ್ಷಿರಾಟ್ ॥49॥
ಭೀಷ್ಮರು ತಮ್ಮ ಸಾರಥಿಯನ್ನು ಕುರಿತು ಆ ರಾಜನು ಇರುವಲ್ಲಿಗೆ ನನ್ನ ರಥವನ್ನು ನಡೆಸು, ಗರುಡನು ಸರ್ಪವನ್ನು ವಿನಾಶ ಮಾಡಿದಂತೆ ನಾನು ಈ ದಿನ ಅವನನ್ನು ಕೊಲ್ಲುತ್ತೇನೆ ಎಂದು ಹೇಳಿದರು.
ತದಸ್ತ್ರಂ ದಾರುಣಂ ಸಮ್ಯಗ್ ಯೋಜಯಾಮಾಸ ಪಾರ್ಥಿವಃ |
ತೇನಾಶ್ವಾಂಶ್ಚತುರೋಽಮೃದ್ನಾತ್ ಸಾಲ್ವರಾಜಸ್ಯ ಪಾರ್ಥಿವಃ ॥50॥

ಭೀಷ್ಮರು ತಮ್ಮ ಬಿಲ್ಲಿನಲ್ಲಿ ದಾರುಣವಾದ ಅಸ್ತ್ರವನ್ನು ಹೂಡಿ ಅದರಿಂದ ಸಾಲ್ವರಾಜನ ನಾಲ್ಕು ಕುದುರೆಗಳನ್ನು ಹಿಂಸಿಸಿದರು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ಭೀಷ್ಮಸ್ತಸ್ಯ ಪರಂತಪಃ |
ತತೋ ನೃಪತಿಶಾರ್ದೂಲೋ ನ್ಯಹನತ್ ತಸ್ಯ ಸಾರಥಿಮ್ ॥51॥
ಪರಂತಪರೂ, ನೃಪತಿಶಾರ್ದೂಲರೂ ಆದ ಭೀಷ್ಮರು ಸಾಲ್ವನ ಅಸ್ತ್ರಗಳನ್ನು ತಮ್ಮ ಅಸ್ತ್ರಗಳಿಂದ ತಡೆದು, ಅವನ ಸಾರಥಿಯನ್ನು ಕೊಂದರು.
ಅಸ್ತ್ರೇಣ ಚಾಸ್ಯ ಸಾಲ್ವಸ್ಯ ನ್ಯಹನತ್ ತುರಗೋತ್ತಮಾನ್ |
ಸಾಲ್ವಸ್ತು ವಿರಥೋ ರಾಜನ್ ಹತಾಶ್ವೋ ಹತಸಾರಥಿಃ |
ನಿಕ್ಷಿಪ್ಯ ಚ ಧನುಃ ಶ್ರೀಮಾನ್ ಭೂಮೌ ತಿಷ್ಠದವಾಙ್ಮುಖಃ ॥52॥
ಅಸ್ತ್ರದಿಂದ ಸಾಲ್ವನ ಶ್ರೇಷ್ಠವಾದ ಕುದುರೆಗಳನ್ನು ಕೊಂದರು. ತನ್ನ ರಥವನ್ನು, ಕುದುರೆಗಳನ್ನು ಮತ್ತು ಸಾರಥಿಯನ್ನು ಕಳೆದುಕೊಂಡ ಸಾಲ್ವನು ತನ್ನ ಧನುಸ್ಸನ್ನು ಎಸೆದು ಭೂಮಿಯ ಮೇಲೆ ಮುಖವನ್ನು ತಗ್ಗಿಸಿ ನಿಂತನು.
ಕನ್ಯಾಹೇತೋರ್ವಿಜಿತ್ಯೈನಂ ಭೀಷ್ಮಃ ಶಾಂತನವಸ್ತದಾ |
ವಿಸರ್ಜಯಾಮಾಸ ನೃಪಂ ಜೀವಂತಂ ತಂ ನರಾಧಿಪಃ ॥53॥
ಶಂತನುವಿನ ಮಕ್ಕಳಾದ ಭೀಷ್ಮರು ಕನ್ಯಾನಿಮಿತ್ತದಿಂದ ಅವನನ್ನು ಸೋಲಿಸಿ, ಅವನನ್ನು ಜೀವಸಹಿತವಾಗಿ ಕಳುಹಿಸಿದರು.
ತತೋ ವಿಜಿತ್ಯ ತಾಃ ಕನ್ಯಾಸ್ತಿಸ್ರೋ ರೂಪಗುಣಾನ್ವಿತಾಃ |
ಪ್ರಯಯೌ ಹಸ್ತಿನಪುರಂ ಭೀಷ್ಮಃ ಶಾಂತನವಸ್ತದಾ |
ಯಯೌ ಪುಣ್ಯಂ ಕುರುಕ್ಷೇತ್ರಂ ಯತ್ರ ರಾಜಾ ಸ ಕೌರವಃ ॥54॥
ಅನಂತರ ಭೀಷ್ಮರು ರೂಪಗುಣಾನ್ವಿತರಾದ ಮೂರು ಕನ್ಯೆಯರನ್ನು ಕರೆದುಕೊಂಡು ಹಸ್ತಿನಪುರಕ್ಕೆ ಬಂದರು. ಎಲ್ಲಿ ಕೌರವ ರಾಜನಾದ ವಿಚಿತ್ರವೀರ್ಯನು ಇದ್ದನೋ, ಅಂತಹ ಪವಿತ್ರವಾದ ಕುರುಕ್ಷೇತ್ರವನ್ನು ತಲುಪಿದರು.
ಸಾಲ್ವೋಽಪಿ ರಾಜಾ ಸ್ವಂ ರಾಷ್ಟ್ರಂ ಸಂಪ್ರಾಪ್ತೋ ನಚಿರಾದಿವ |
ರಾಜಾನಸ್ತತ್ರ ಯೇ ಚಾಸನ್ ಸ್ವಯಂವರದಿದೃಕ್ಷವಃ |
ತೇಽಪಿ ಸ್ವಾನ್ಯೇವ ರಾಷ್ಟ್ರಾಣಿ ಹತಶೇಷಾಃ ಪ್ರಚಕ್ರಮುಃ ॥55॥
ಸಾಲ್ವರಾಜನೂ ಸಹ ಅಲ್ಪಕಾಲದಲ್ಲಿಯೇ ತನ್ನ ರಾಷ್ಟ್ರಕ್ಕೆ ಹಿಂದಿರುಗಿದನು. ಸ್ವಯಂವರವನ್ನು ನೋಡಲು ಬಂದಿದ್ದ ಅಳಿದುಳಿದ ರಾಜರೂ ಸಹ ತಮ್ಮ ತಮ್ಮ ದೇಶಗಳಿಗೆ ಹಿಂದಿರುಗಿದರು.
ತೇ ವನಾನಿ ಚ ರಮ್ಯಾಣಿ ಶೈಲಾಂಶ್ಚ ಸರಿತಸ್ತಥಾ |
ಅತಿಕ್ರಮ್ಯ ಚ ರಾಜಾನಃ ಸ್ವಂಸ್ವಂ ರಾಜ್ಯಂ ಪ್ರಚಕ್ರಮುಃ ॥56॥
ಆ ರಾಜರು ಕಾಡುಗಳನ್ನೂ, ಪರ್ವತಗಳನ್ನೂ, ನದಿಗಳನ್ನೂ ದಾಟಿ ತಮ್ಮ ತಮ್ಮ ರಾಜ್ಯಗಳಿಗೆ ಹಿಂದಿರುಗಿದರು.
ಭೀಷ್ಮಃ ಸ್ವಯಂವರೇ ಕನ್ಯಾ ವಿಜಿತ್ಯ ಕುರುಸತ್ತಮಃ |
ವನಾನಿ ಸರಿತಶ್ಚಾಪಿ ಶೈಲಾಂಶ್ಚ ವಿವಿಧದ್ರುಮಾನ್ ॥57॥
ಅಕ್ಷತಃ ಕ್ಷಪಯಿತ್ವಾಽರೀಂಸ್ತಾನಸಂಖ್ಯೇಯವಿಕ್ರಮಃ |
ಸೋಽಚಿರೇಣೈವ ಕಾಲೇನ ಸಮತಿಕ್ರಮ್ಯ ಬುದ್ಧಿಮಾನ್ |
ಆನಯಾಮಾಸ ಕಾಶ್ಯಸ್ಯ ಸುತಾಃ ಸಾಗರಗಾಸುತಃ ॥58॥
ಕುರುಶ್ರೇಷ್ಠರಾದ ಭೀಷ್ಮರು ಸ್ವಯಂವರದಲ್ಲಿ ಕನ್ಯೆಯರನ್ನು ಗೆದ್ದು ಅಮಿತಪರಾಕ್ರಮಿಗಳಾದ ಅವರು ತಾವು ಗಾಯಗೊಳ್ಳದೆ ಶತ್ರುಗಳ ವಿನಾಶವನ್ನು ಮಾಡಿ, ಕಾಡುಗಳನ್ನು, ನದಿಗಳನ್ನು, ಪರ್ವತಗಳನ್ನು, ವಿವಿಧ ದ್ರುಮಗಳನ್ನು ಅಲ್ಪಕಾಲದಲ್ಲಿ ದಾಟಿ, ಕಾಶಿರಾಜನ ಮೂರು ಮಕ್ಕಳನ್ನು ಕರೆತಂದರು.
ತಾಃ ಸ್ನುಷಾ ಇವ ಧರ್ಮಾತ್ಮಾ ಭಗಿನೀರನುಜಾ ಇವ |
ಪಿತಾ ಯಥಾ ಚ ದುಹಿತೃಃ ಪ್ರಗೃಹ್ಯ ಪ್ರಯಯೌ ಕುರೂನ್ ॥59॥
ಅವರು ಧರ್ಮಿಷ್ಠನಾದವನು ಸೊಸೆಯನ್ನು ಕರೆತಂದಂತೆ, ಅಣ್ಣನಾದವನು ತಂಗಿಯನ್ನು ಕರೆತಂದಂತೆ, ತಂದೆಯಾದವನು ಹೆಣ್ಣುಮಕ್ಕಳನ್ನು ಕರೆದುಕೊಂಡು ಬಂದಂತೆ ಆ ಕನ್ಯೆಯರನ್ನು ಕರೆದುಕೊಂಡು ಕುರುದೇಶಕ್ಕೆ ಬಂದರು.
ಸ ತು ಧರ್ಮೇಣ ಧರ್ಮಜ್ಞೋ ಕರ್ಮ ಕೃತ್ವಾಽತಿಮಾನುಷಮ್ |
ತಾಃ ಸರ್ವಾ ಗುಣಸಂಪನ್ನಾ ಭ್ರಾತಾ ಭ್ರಾತ್ರೇ ಯವೀಯಸೇ |
ಭೀಷ್ಮೋ ವಿಚಿತ್ರವೀರ್ಯಾಯ ವಿಕ್ರಮ್ಯ ಮುದಿತೋ ದದೌ ॥60॥
ಧರ್ಮಜ್ಞರಾದ ಭೀಷ್ಮರು ಧರ್ಮದಿಂದ ಅತಿಮಾನುಷವಾದ ಕರ್ಮಗಳನ್ನು ಮಾಡಿ, ಆ ಗುಣಸಂಪನ್ನರಾದ ಮೂರು ಕನ್ಯೆಯರನ್ನು ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಸಂತೋಷದಿಂದ ಒಪ್ಪಿಸಿದರು.
ಸ ತು ಧರ್ಮೇಣ ಧರ್ಮಜ್ಞೋ ವಿಧಿದೃಷ್ಟೇನ ಕರ್ಮಣಾ |
ಭ್ರಾತುರ್ವಿಚಿತ್ರವೀರ್ಯಸ್ಯ ವಿವಾಹಮುಪಚಕ್ರಮೇ ॥61॥
ಅನಂತರ ಧರ್ಮಜ್ಞರಾದ ಅವರು ಶಾಸ್ತ್ರೋಕ್ತರೀತಿಯಿಂದ ತಮ್ಮನಾದ ವಿಚಿತ್ರವೀರ್ಯನ ವಿವಾಹವನ್ನು ಮಾಡಲು ಉಪಕ್ರಮಿಸಿದರು.
ಸತ್ಯವತ್ಯಾಃ ಸಮೀಪೇಽಥ ಕೃತ್ವಾ ನಿಶ್ಚಯಮಾತ್ಮವಾನ್ |
ವಿವಾಹಂ ಕಾರಯಿಷ್ಯಂತಂ ಭೀಷ್ಮಂ ಕಾಶೀಪತೇಃ ಸುತಾ |
ಜ್ಯೇಷ್ಠಾ ತಾಸಾಮಿದಂ ವಾಕ್ಯಮಬ್ರವೀಜ್ಜನಸಂಸದಿ ॥62॥

ಸತ್ಯವತಿಯ ಸಮೀಪದಲ್ಲಿ ಎಲ್ಲಾ ನಿಶ್ಚಯಗಳನ್ನೂ ಮಾಡಿ, ವಿವಾಹವನ್ನು ಮಾಡಲು ಹೊರಟ ಭೀಷ್ಮರನ್ನು ಕುರಿತು ಕಾಶೀರಾಜನ ಮೂರು ಮಕ್ಕಳಲ್ಲಿ ಜ್ಯೇಷ್ಠಳಾದ ಅಂಬೆಯು ಪ್ರಜೆಗಳ ಸಂಸತ್ತಿನಲ್ಲಿ ಮಾತನಾಡಿದಳು.
ಮಯಾ ಸಾಲ್ವಪತಿಃ ಪೂರ್ವಂ ಮನಸಾ ಹಿ ವೃತಃ ಪತಿಃ |
ತೇನ ಚಾಸ್ಮಿ ವೃತಾ ರಾಜಂಸ್ತಥಾಕಾಮಶ್ಚ ಮೇ ಪತಿಃ ॥63॥
ನಾನು ಮೊದಲು ಸಾಲ್ವರಾಜನನ್ನು ಪತಿಯಾಗಿ ಮನಸ್ಸಿನಲ್ಲಿ ವರಿಸಿದ್ದೆ. ರಾಜನೇ, ಅವನೂ ನನ್ನನ್ನು ವರಿಸಿದ್ದನು. ನನ್ನ ಪತಿಯಾದ ಅವನಿಗೂ ಇದೇ ಅಭಿಪ್ರಾಯವಿದೆ.
ಮಯಾ ವರಯಿತವ್ಯೋಽಸೌ ಸಾಲ್ವಸ್ತಸ್ಮಿನ್ ಸ್ವಯಂವರೇ |
ಏತದ್ ವಿಜ್ಞಾಯ ಧರ್ಮಜ್ಞ ಧರ್ಮತಸ್ತ್ವಂ ಸಮಾಚರ ॥64॥
ಆ ಸ್ವಯಂವರದಲ್ಲಿ ನಾನು ಸಾಲ್ವನನ್ನು ವರಿಸಬೇಕಾಗಿದ್ದಿತು. ಇದನ್ನು ತಿಳಿದ ಧರ್ಮಜ್ಞನಾದ ನೀನು ಧರ್ಮದಂತೆ ನಡೆದುಕೋ.
ವೈಶಂಪಾಯನಃ
ಏವಮುಕ್ತಸ್ತತೋ ಭೀಷ್ಮಃ ಕನ್ಯಯಾ ವಿಪ್ರಸಂಸದಿ |
ಚಿಂತಾಮಭ್ಯಗಮದ್ ವೀರೋ ಯುಕ್ತಂ ತಸ್ಯೈವ ಕರ್ಮಣಃ ॥65॥
ವಿಪ್ರಸಂಸತ್ತಿನಲ್ಲಿ ಕನ್ಯೆಯಿಂದ ಈ ಮಾತುಗಳನ್ನು ಕೇಳಿದ ಭೀಷ್ಮನು ವಿವಾಹಕರ್ಮದಲ್ಲಿ ನಿಯುಕ್ತಳಾದ ಅವಳ ವಿಷಯದಲ್ಲಿ ಚಿಂತಾಕ್ರಾಂತನಾದನು.
ಅನ್ಯಾಸಕ್ತಾ ತ್ವಿಯಂ ಕನ್ಯಾ ಜ್ಯೇಷ್ಠಾ ಕ್ಷತ್ರೇ ಮಯಾಽಽರ್ಜಿತಾ |
ವಾಚಾ ದತ್ತಾ ಮನೋದತ್ತಾ ಕೃತಮಂಗಲವಾಚನಾ |
ನಿರ್ದಿಷ್ಟಾ ತು ಪರಸ್ಯೈವ ಸಾ ವರ್ಜ್ಯಯ ಪರಚಿಂತನೀ ॥66॥
ಈ ಜ್ಯೇಷ್ಠಕನ್ಯೆಯು ಇನ್ನೊಬ್ಬನಲ್ಲಿ ಆಸಕ್ತಳಾಗಿದ್ದಾಳೆ. ನಾನು ಅವಳನ್ನು ಪರಾಕ್ರಮದಿಂದ ಸಂಪಾದಿಸಿದ್ದೇನೆ. ವಾಚಾದತ್ತಳಾದವಳು, ಮನೋದತ್ತಳಾದವಳು, ಮಂಗಲವಾಚನವನ್ನು ಮಾಡಿಕೊಂಡವಳು, ಇನ್ನೊಬ್ಬರಿಗೆ ಎಂದು ನಿರ್ದಿಷ್ಟಳಾದವಳು ಮತ್ತು ಇನ್ನೊಬ್ಬನನ್ನೇ ಧ್ಯಾನಿಸುತ್ತಿರುವವಳು ಇವರೆಲ್ಲರೂ ವರ್ಜನೀಯರು.
ಇತ್ಯುಕ್ತ್ವಾ ಚಾನುಮಾನ್ಯೈವ ಭ್ರಾತರಂ ಸ್ವವಶಾನುಗಮ್ |
ಸ ವಿನಿಶ್ಚಿತ್ಯ ತೈಃ ಸಾರ್ಧಂ ಬ್ರಾಹ್ಮಣೈರ್ಧರ್ಮಕೋವಿದೈಃ |
ಅನುಜಜ್ಞೇ ತತೋ ಜ್ಯೇಷ್ಠಾಮಂಬಾಂ ಕಾಶಿಪತೇಃ ಸುತಾಮ್ ॥67॥
ಹೀಗೆ ಹೇಳಿ ತನ್ನ ವಶವರ್ತಿಯಾದ ತಮ್ಮನ ಅನುಮತಿಯನ್ನು ಪಡೆದು ಧರ್ಮಕೋವಿದರಾದ ಬ್ರಾಹ್ಮಣರ ಜೊತೆಯಲ್ಲಿ ವಿಚಾರ ಮಾಡಿ ನಿಶ್ಚಯಿಸಿ, ಕಾಶೀರಾಜನ ಜ್ಯೇಷ್ಠಪುತ್ರಿಯಾದ ಅಂಬೆಗೆ ಅನುಮತಿಯನ್ನು ನೀಡಿದನು.
ಅಂಬಿಕಾಂಬಾಲಿಕೇ ಭಾರ್ಯೇ ಪ್ರಾದಾದ್ ಭ್ರಾತ್ರೇ ಯವೀಯಸೇ |
ಭೀಷ್ಮೋ ವಿಚಿತ್ರವೀರ್ಯಾಯ ವಿಧಿದೃಷ್ಟೇನ ಕರ್ಮಣಾ ॥68॥
ಅಂಬಿಕೆ ಮತ್ತು ಅಂಬಾಲಿಕೆಯರನ್ನು ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಕೊಟ್ಟು ವಿಧ್ಯುಕ್ತವಾದ ಪ್ರಕಾರದಿಂದ ಭೀಷ್ಮನು ವಿವಾಹವನ್ನು ಮಾಡಿದನು.
ತಯೋಃ ಪಾಣೀ ಗೃಹಿತ್ವಾ ಸ ರೂಪಯೌವನದರ್ಪಿತಃ |
ವಿಚಿತ್ರವೀರ್ಯೋ ಧರ್ಮಾತ್ಮಾ ನೈನಾಮೈಚ್ಛತ್ ಕಥಂಚನ |
ಅಂಬಾಮನ್ಯಸ್ಯ ಕೀರ್ತ್ಯಂತೀಂ ಅಬ್ರುವೀಚ್ಚಾರುದರ್ಶನಾಮ್ ॥69॥
ಅವರಿಬ್ಬರ ಪಾಣಿಗ್ರಹಣ ಮಾಡಿದ ರೂಪಯೌವನದರ್ಪಿತನಾದ ಧರ್ಮಾತ್ಮನಾದ ವಿಚಿತ್ರವೀರ್ಯನು ಅಂಬೆಯನ್ನು ಬಯಸಲೇ ಇಲ್ಲ. ಅಲ್ಲದೇ ಇನ್ನೊಬ್ಬರ ಹೆಸರನ್ನು ಹೇಳುತ್ತಿದ್ದ ಸುಂದರಿಯಾದ ಅಂಬೆಯ ವಿಷಯದಲ್ಲಿ ಭೀಷ್ಮರನ್ನು ಕುರಿತು ಹೇಳಿದನು.
ವಿಚಿತ್ರವೀರ್ಯಃ
ಪ್ರತ್ಯಕ್ಷಫಲ ಏವೈಷ ಕಾಮೋಽಸಾಧುರ್ನಿರರ್ಥಕಃ |
ಪರತಂತ್ರೋಪಭೋಗೇ ಮಾಮಾರ್ಯ ನಾಽಽಯೋಕ್ತುಮರ್ಹಸಿ ॥70॥
ಅಸಾಧುವಾದ, ನಿರರ್ಥಕವಾದ ಕಾಮವು ಪ್ರತ್ಯಕ್ಷವಾಗಿಯೇ ವಿಪರೀತ ಫಲವನ್ನು ಕೊಡುತ್ತದೆ. ಆದ್ದರಿಂದ ಪೂಜ್ಯರು ಪರತಂತ್ರವಾದ ಉಪಭೋಗದ ವಿಷಯದಲ್ಲಿ ನನಗೆ ಒತ್ತಾಯವನ್ನು ಮಾಡಬಾರದು.
ಭೀಷ್ಮಃ
ಪ್ರತಿಷ್ಠಿತಃ ಶಂತನೋರ್ವಂಶೇ ತಾತ ಯಸ್ಯ ತ್ವಮನ್ವಯೇ |
ಅಕಾಮವೃತ್ತೋ ಧರ್ಮಾತ್ಮಾ ಸಾಧು ಮನ್ಯೇ ವ್ರತಂ ತವ ॥71॥
ಮಗು ಯಾವ ಶಂತನುವಿನ ವಂಶದಲ್ಲಿ ನೀನು ಪ್ರತಿಷ್ಠಿತನಾಗಿದ್ದೀಯೋ ಅಂತಹ ಧರ್ಮಾತ್ಮನಾದ ಕಾಮಪುರಸ್ಸರವಾದ ನಡತೆಯಿಲ್ಲದ ನಿನ್ನ ವ್ರತವು ಸಾಧುವೆಂದೇ ಭಾವಿಸುತ್ತೇನೆ.
ಇತ್ಯುಕ್ತ್ವಾಽಂಬಾಂ ಸಮಾಲೋಕ್ಯ ವಿಧಿವದ್ ವಾಕ್ಯಮಬ್ರವೀತ್ ॥
ಹೀಗೆ ಹೇಳಿ ಅಂಬೆಯನ್ನು ನೋಡಿ, ಶಾಸ್ತ್ರರೀತಿಯಿಂದ ಮಾತನಾಡಿದನು.
ವಿಸೃಷ್ಟಾ ಹ್ಯಸಿ ಗಚ್ಛ ತ್ವಂ ಯಥಾಕಾಮಮನಿಂದಿತೇ |
ಮಾಽನಿಯೋಜ್ಯೇ ಸಮರ್ಥೋಽಹಂ ನಿಯೋಕ್ತುಂ ಭ್ರಾತರಂ ಪ್ರಿಯಮ್ ॥
ಅನ್ಯಭಾವಗತಾಂ ಚಾಪಿ ಕೋ ನಾರೀಂ ವಾಸಯೇದ್ ಗೃಹೇ |
ಅತಸ್ತ್ವಂ ನ ನಿಯೋಕ್ಷ್ಯಾಮಿ ಅನ್ಯಕಾಮಾಽಸಿ ಗಮ್ಯತಾಮ್ ॥74॥

ಅಹಮಪ್ಯೂರ್ಧ್ವರೇತಾ ವೈ ನಿವೃತ್ತೋ ದಾರಕರ್ಮಣಿ |
ನ ಸಂಬಂಧಸ್ತದಾವಾಭ್ಯಾಂ ಭವಿತಾ ವೈ ಕಥಂಚನ ॥75॥
ನಾನು ನಿನ್ನನ್ನು ವಿಸರ್ಜಿಸಿದ್ದೇನೆ. ಅನಿಂದಿತೆಯೇ, ನೀನು ಇಷ್ಟ ಬಂದ ಕಡೆಗೆ ಹೋಗು. ಮಾಡಬಾರದ ಕಾರ್ಯವನ್ನು ಮಾಡು ಎಂದು ನಾನು ನನ್ನ ಪ್ರಿಯನಾದ ತಮ್ಮನಿಗೆ ಒತ್ತಾಯ ಮಾಡುವುದಿಲ್ಲ. ಬೇರೆಯವನಲ್ಲಿ ಪ್ರೀತಿಯಿರುವ ಹೆಂಗಸನ್ನು ಯಾವನು ತನ್ನ ಮನೆಯಲ್ಲಿಟ್ಟು ಕೊಳ್ಳುತ್ತಾನೆ. ಆದ್ದರಿಂದ ನಿನಗೆ ಯಾವ ಒತ್ತಾಯವೂ ಇಲ್ಲ. ನಿನಗೆ ಬೇರೆಯವನಲ್ಲಿ ಪ್ರೀತಿಯಿದೆ. ಆದ್ದರಿಂದ ಹೊರಡಬಹುದು. ನಾನೂ ಸಹ ಊರ್ಧ್ವರೇತನಾಗಿ ವಿವಾಹಕರ್ಮದಿಂದ ನಿವೃತ್ತನಾಗಿದ್ದೇನೆ. ಆದ್ದರಿಂದ ನಮ್ಮಿಬ್ಬರಿಗೂ ಯಾವರೀತಿಯಲ್ಲಿಯೂ ಸಂಬಂಧವುಂಟಾಗುವುದಿಲ್ಲ.
ವೈಶಂಪಾಯನಃ
ಇತ್ಯುಕ್ತಾ ಸಾ ಗತಾ ತತ್ರ ಸಖೀಭಿಃ ಪರಿಪಾಲಿತಾ |
ನಿರ್ದಿಷ್ಟಾ ಹಿ ಶನೈ ರಾಜನ್ ಸಾಲ್ವರಾಜಪುರಂ ಪ್ರತಿ ॥76॥
ಎಲೈ ರಾಜನೇ, ಹೀಗೆ ಹೇಳಲ್ಪಟ್ಟ ಅಂಬೆಯು ತನ್ನ ಸ್ನೇಹಿತೆಯರಿಂದ ರಕ್ಷಿತೆಯಾಗಿ ನಿಧಾನವಾಗಿ ಸಾಲ್ವರಾಜನ ಪಟ್ಟಣಕ್ಕೆ ಹೋದಳು.
ಅಥಾಂಬಾ ಸಾಲ್ವಮಾಗಮ್ಯ ಸಾಽಬ್ರವೀನ್ಮನಸಾ ವೃತಾ |
ಪುರಾ ನಿರ್ದಿಷ್ಟಭಾವಾ ತ್ವಾಮಾಗತಾಸ್ಮಿ ವರಾನನ ॥77॥
ಅನಂತರ ಅಂಬೆಯು ಸಾಲ್ವನನ್ನು ಸಮೀಪಿಸಿ, ಮೊದಲು ನೀನು ನನ್ನನ್ನು ಮನಸ್ಸಿನಿಂದ ವರಿಸಿದ್ದೆ. ನನ್ನ ಪ್ರೀತಿಯನ್ನು ನಿನಗೂ ತಿಳಿಸಿದ್ದೆ. ಆದ್ದರಿಂದ, ಸುಂದರನೇ, ನಿನ್ನ ಸಮೀಪಕ್ಕೆ ಬಂದಿದ್ದೇನೆ.
ದೇವವ್ರತಂ ಸಮುತ್ಸೃಜ್ಯ ಸಾನುಜಂ ಪುರುಷರ್ಷಭ |
ಪ್ರತಿಗೃಹ್ಣೀಷ್ವ ಭದ್ರಂ ತೇ ವಿಧಿವನ್ಮಾಂ ಸಮುದ್ಯತಾಮ್ ॥78॥
ಪುರುಷಶ್ರೇಷ್ಠನೇ ಭೀಷ್ಮನನ್ನೂ, ಅವನ ತಮ್ಮನನ್ನೂ ಪರಿತ್ಯಾಗ ಮಾಡಿ ಬಂದಿದ್ದೇನೆ. ನಿನಗೆ ಮಂಗಳವಾಗಲಿ ಸಮುದ್ಯತಳಾದ ನನ್ನನ್ನು ವಿಧಿಪೂರ್ವಕವಾಗಿ ಸ್ವೀಕರಿಸು.
ವೈಶಂಪಾಯನಃ
ಏವಮುಕ್ತಸ್ತು ಸಾಲ್ವೋಽಪಿ ಪ್ರಹಸನ್ನಿದಮಬ್ರವೀತ್ |
ನಿರ್ಜಿತಾಸೀಹ ಭೀಷ್ಮೇಣ ಮಾಂ ವಿನಿರ್ಜಿತ್ಯ ರಾಜಸು ॥78॥
ಇದನ್ನು ಕೇಳಿದ ಸಾಲ್ವನು ನಗುತ್ತಾ ಹೀಗೆ ಹೇಳಿದನು - ರಾಜರ ಮಧ್ಯದಲ್ಲಿ ಭೀಷ್ಮನು ನನ್ನನ್ನು ಸೋಲಿಸಿ, ನಿನ್ನನ್ನು ಸಂಪಾದಿಸಿದ್ದಾನೆ.
ಅನ್ಯೇನ ನಿರ್ಜಿತಾಂ ಭದ್ರೇ ವಿಸೃಷ್ಟಾಂ ತೇನ ಚಾಲಯಾತ್ |
ನ ಗೃಹ್ಣಾಮಿ ವರಾರೋಹೇ ತತ್ರ ಚೈವ ತು ಗಮ್ಯತಾಮ್ ॥80॥
ಇನ್ನೊಬ್ಬರಿಂದ ನಿರ್ಜಿತಾಳದವಳನ್ನು, ಮತ್ತು ಅವನ ಮನೆಯಿಂದ ಹೊರಬಂದವಳನ್ನು ನಾನು ಸ್ವೀಕರಿಸುವುದಿಲ್ಲ. ಮಂಗಳಸ್ವರೂಪಳೇ, ನೀನು ಅಲ್ಲಿಗೇ ಹೋಗಬಹುದು.
ವೈಶಂಪಾಯನಃ
ಇತ್ಯುಕ್ತಾ ಸಾ ಸಮಾಗಮ್ಯ ಭೀಷ್ಮಂ ಪುನರಥಾಬ್ರವೀತ್ |
ಭೀಷ್ಮ ತ್ವಯಾಽಹಂ ಸಹಸಾ ಹೃತಾ ತಸ್ಮಿನ್ ಸ್ವಯಂವರೇ |
ಕ್ಷತ್ರಧರ್ಮಮವೇಕ್ಷಸ್ವ ಭರ್ತಾ ತ್ವಂ ಮಮ ಧರ್ಮತಃ ॥81॥
ಈ ಮಾತುಗಳನ್ನು ಕೇಳಿದ ಅಂಬೆಯು ಪುನಃ ಭೀಷ್ಮರ ಬಳಿಗೆ ಬಂದು ಹೇಳಿದಳು. ಭೀಷ್ಮ ಆ ಸ್ವಯಂವರದಲ್ಲಿ ನೀನು ನನ್ನನ್ನು ಬಲದಿಂದ ಹರಣ ಮಾಡಿದ್ದೀಯೆ. ಕ್ಷತ್ರಿಯಧರ್ಮವನ್ನು ಗಮನಿಸಿ, ನೀನು ಧರ್ಮದಿಂದ ನನಗೆ ಪತಿಯಾಗು.
ಊರ್ಧ್ವರೇತಾಽಸ್ಮ್ಯಹಮಿತಿ ಪ್ರತ್ಯುವಾಚ ಪುನಃಪುನಃ |
ಭೀಷ್ಮಃ ಸಾ ಚಾಬ್ರವೀದ್ ಭೀಷ್ಮಂ ಯಥಾಽಜೈಷೀಸ್ತಥಾ ಕುರು ॥82॥
ನಾನು ಊರ್ಧ್ವರೇತಸ್ಕನಾಗಿದ್ದೇನೆಂದು ಭೀಷ್ಮರು ಮತ್ತೆ ಮತ್ತೆ ಅವಳಿಗೆ ಹೇಳಿದರು. ಅವಳು ಭೀಷ್ಮರನ್ನು ಕುರಿತು ನೀನು ನನ್ನನ್ನು ಗೆದ್ದಿದ್ದೀಯೆ. ಅದಕ್ಕನುಗುಣವಾಗಿ ನಡೆದುಕೋ ಎಂದು ಹೇಳಿದಳು.
ಊರ್ಧ್ವರೇತಾಸ್ತ್ವಹಂ ಭದ್ರೇ ವಿವಾಹವಿಮುಖೋಽಭವಮ್ |
ತತ್ತ್ವೇನ ಸಾಲ್ವಂ ಗಚ್ಛ ತ್ವಂ ಯಃ ಪುರಾ ಮನಸಾ ವೃತಃ |
ಅನ್ಯಸಕ್ತಾಂ ಕಿಮರ್ಥಂ ತ್ವಮಾತ್ಮಾನಮವದಃ ಪುರಾ ॥83॥
ಭದ್ರೇ, ಊರ್ಧ್ವರೇತಸ್ಕನಾಗಿ ವಿವಾಹ ವಿಮುಖನಾಗಿದ್ದೇನೆ. ನಿಶ್ಚಯವಾಗಿ ಮೊದಲೇ ಮನಸ್ಸಿನಲ್ಲಿ ವರಿಸಿದ್ದ ಸಾಲ್ವನ ಬಳಿಗೇ ಹೋಗು. ನೀನು ಏಕೆ ಮೊದಲು ನನಗೆ ಇನ್ನೊಬ್ಬನಲ್ಲಿ ಪ್ರೀತಿಯಿದೆ ಎಂದು ಹೇಳಿದೆ.
ಅನ್ಯಸಕ್ತಾಂ ವಧೂಂ ಕನ್ಯಾಂ ವಾಸಯೇತ್ ಸ್ವಗೃಹೇ ನಹಿ |
ನಾಹಮುದ್ವಾಹಯಿಷ್ಯೇ ತ್ವಾ ಮಮ ಭ್ರಾತ್ರೇ ಯವೀಯಸೇ |
ವಿಚಿತ್ರವೀರ್ಯಾಯ ಶುಭೇ ಯಥೇಷ್ಟಂ ಗಮ್ಯತಾಮಿತಿ ॥84॥
ಇನ್ನೊಬ್ಬನಲ್ಲಿ ಪ್ರೀತಿಯಿರುವ ಕನ್ಯೆಯನ್ನು ಯಾರೂ ತನ್ನ ಮನೆಯಲ್ಲಿ ಇಟ್ಟುಕೊಳ್ಳುವುದಿಲ್ಲ. ಆದ್ದರಿಂದ ನನ್ನ ತಮ್ಮನಾದ ವಿಚಿತ್ರವೀರ್ಯನಿಗೆ ನಿನ್ನನ್ನು ಮದುವೆ ಮಾಡಿಕೊಡುವುದಿಲ್ಲ. ಶುಭಳೇ, ನೀನು ಮನಸ್ಸಿಗೆ ಬಂದಂತೆ ಹೋಗಬಹುದು (ಎಂದು ಹೇಳಿದರು)

ಭೂಯಃ ಸಾಲ್ವಂ ಸಮಭ್ಯೇತ್ಯ ರಾಜನ್ ಗೃಹ್ಣೀಷ್ವ ಮಾಮಿತಿ |
ನಾಹಂ ಗೃಹ್ಣಾಮ್ಯನ್ಯಜಿತಾಮಿತಿ ಸಾಲ್ವನಿರಾಕೃತಾಮ್ ॥85॥
ಊರ್ಧ್ವರೇತಾಸ್ತ್ವಹಮಿತಿ ಪ್ರತ್ಯುವಾಚ ಪುನಃಪುನಃ |
ಪುನಃ ಸಾ ಚಾಬ್ರುವೀದ್ ಭೀಷ್ಮಂ ಯಥಾSಜೈಷೀಸ್ತಥಾ ಕುರು ॥86॥
ಅಂಬೆಯು ಪುನಃ ಸಾಲ್ವನನ್ನು ಸಮೀಪಿಸಿ, `ನನ್ನನ್ನು ಸ್ವೀಕರಿಸು' ಎಂದು ಹೇಳಿದಾಗ ಇನ್ನೊಬ್ಬರಿಂದ ಜಿತಳಾದವಳನ್ನು ನಾನು ಸ್ವೀಕರಿಸುವುದಿಲ್ಲವೆಂದು ಸಾಲ್ವನಿಂದ ನಿರಾಕೃತಳಾಗಿ ಮತ್ತೆ ಭೀಷ್ಮನ ಬಳಿಗೆ ಬಂದು ಕೇಳಿಕೊಂಡಳು. ನಾನು ಊರ್ಧ್ವರೇತಸ್ಕ ಎಂದು ಮತ್ತೆ ಮತ್ತೆ ಹೇಳಲ್ಪಟ್ಟರೂ ಅವಳು ಭೀಷ್ಮನನ್ನು ಕುರಿತು - ನೀನು ನನ್ನನ್ನು ಜಯಿಸಿದ್ದಕ್ಕೆ ಅನುಗುಣವಾಗಿ ನಡೆದುಕೋ ಎಂದು ಹೇಳಿದಳು.
ಅಂಬಾ ಭೀಷ್ಮಂ ಪುನಃ ಸಾಲ್ವಂ ಭೀಷ್ಮಂ ಸಾಲ್ವಂ ಪುನಃ ಪುನಃ |
ಏವಮನ್ವಗಮದ್ ಭೀಷ್ಮಂ ಷಟ್ ಸಮಾಃ ಪುಷ್ಕರೇಕ್ಷಣಾ |
ಅಶ್ರುಭಿರ್ಭೂಮಿಮುಕ್ಷಂತೀ ತಪಂತೀ ಚ ಮನಸ್ವಿನೀ ॥87॥
ಕಮಲನೇತ್ರೆಯಾದ ಅಂಬೆಯು ಪುನಃ ಭೀಷ್ಮರ ಬಳಿಗೆ, ಪುನಃ ಸಾಲ್ವರ ಬಳಿಗೆ, ಮತ್ತೆ ಭೀಷ್ಮರ ಬಳಿಗೆ, ಮತ್ತೆ ಸಾಲ್ವರ ಬಳಿಗೆ ಹೀಗೆ ಧೈರ್ಯಶಾಲಿಯಾದ ಅವಳು ಮನಸ್ಸಿನಲ್ಲಿ ತಾಪಪಡುತ್ತಾ, ತನ್ನ ಕಣ್ಣೀರಿನಿಂದ ಭೂಮಿಯನ್ನು ಒದ್ದೆ ಮಾಡುತ್ತಾ ತಿರುಗಾಡಿದಳು.
ತತೋSನ್ಯಾ ದ್ವಾದಶ ಸಮಾ ಬಾಹುದಾಮಭಿತೋ ನದೀಮ್ |
ಪಾರ್ಶ್ವೇ ಹಿಮವತೋ ರಮ್ಯೇ ತಪೋ ಘೋರಂ ಸಮಾದದೇ ॥88॥
ಅನಂತರ ಹನ್ನೆರಡು ವರ್ಷಗಳ ಕಾಲ ಹಿಮಾಲಯ ಪರ್ವತದ ಹತ್ತಿರ `ಬಾಹುದಾ' ನದಿಯ ಸಮೀಪದಲ್ಲಿ ಘೋರವಾದ ತಪಸ್ಸನ್ನು ಆಚರಿಸಿದಳು.
ಸಂಕ್ಷಿಪ್ತಕರಣಾ ತತ್ರ ತಪ ಆಸ್ಥಾಯ ಸುವ್ರತಾ |
ಪಾದಾಂಗುಷ್ಠೇನ ಸಾSತಿಷ್ಠದಕಂಪಂತ ತತಃ ಸುರಾಃ ॥89॥
ಅವಳು ಇಂದ್ರಿಯಗಳನ್ನು ನಿಯಂತ್ರಿಸಿ ಪಾದಾಂಗುಷ್ಠದಿಂದ ಭೂಮಿಯ ಮೇಲೆ ನಿಂತು ತಪಸ್ಸನ್ನು ಮಾಡಿದಾಗ ದೇವತೆಗಳು ನಡುಗಿದರು.
ತಸ್ಯಾಸ್ತೀವ್ರಂ ತಪೋ ದೃಷ್ಟ್ವಾ ಸುರಾಣಾಂ ಕ್ಷೋಭಕಾರಣಮ್ |
ವಿಸ್ಮಿತಶ್ಚೈವ ಹೃಷ್ಟಶ್ಚ ತಸ್ಯಾನುಗ್ರಹಬುದ್ಧಿನಾ ॥90॥
ಅನಂತಸೇನೋ ಭಗವಾನ್ ಕುಮಾರಃ ಸರ್ವತಃ ಪ್ರಭುಃ |
ಮಾನಯನ್ ರಾಜಪುತ್ರೀಂ ತಾಂ ದದೌ ತಸ್ಯೈ ಶುಭಾಂ ಸ್ರಜಮ್ ॥
ದೇವತೆಗಳ ಕ್ಷೋಭೆಗೆ ಕಾರಣವಾದ ಅವಳ ತೀವ್ರವಾದ ತಪಸ್ಸನ್ನು ನೋಡಿ, ಸಂತುಷ್ಟನೂ, ವಿಸ್ಮಿತನೂ ಆದ ಶಿವನು ಆ ರಾಜಪುತ್ರಿಗೆ ಅನುಗ್ರಹ ಮಾಡುವ ದೃಷ್ಟಿಯಿಂದ ಅವಳಿಗೆ ಒಳ್ಳೆಯ ಹೂಮಾಲೆಯನ್ನು ಕೊಟ್ಟನು.
ಏಷಾ ಪುಷ್ಕರಿಣೀ ದಿವ್ಯಾ ಯಥಾವತ್ ಸಮುಪಸ್ಥಿತಾ |
ಅಂಬೇ ತ್ವಚ್ಛೋಕಶಮನೀ ಮಾಲಾ ಭುವಿ ಭವಿಷ್ಯತಿ ॥92॥
ಇದು ದಿವ್ಯವಾದ ಕಮಲಪುಷ್ಪಗಳ ಮಾಲೆಯು. ಯಥಾವತ್ತಾಗಿ ನಿನ್ನ ಕೈ ಸೇರಿದೆ. ಅಂಬೇ ಈ ಮಾಲೆಯು ಭೂಮಿಯಲ್ಲಿ ನಿನ್ನ ಶೋಕವನ್ನು ಪರಿಹರಿಸುತ್ತದೆ.
ಏತಾಂ ಚೈವ ಮಯಾ ದತ್ತಾಂ ಯೋ ಮಾಲಾಂ ಧಾರಯಿಷ್ಯತಿ |
ಸೋSಸ್ಯ ಭೀಷ್ಮಸ್ಯ ನಿಧನೇ ಕಾರಣಂ ವೈ ಭವಿಷ್ಯತಿ ॥93॥
ನಾನು ಕೊಟ್ಟ ಈ ಕಮಲಪುಷ್ಪಮಾಲೆಯನ್ನು ಯಾವನು ಧರಿಸುವನೋ ಅವನು ಭೀಷ್ಮನ ನಿಧನಕ್ಕೆ ಕಾರಣನಾಗುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋತ್ತರಶತತಮೋSಧ್ಯಾಯಃ ॥
॥ ಸಂಭವಪರ್ವಣಿ ಏಕೋನಪಂಚಾಶತ್ತಮೋSಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರು ಒಂದನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ-ಅಧ್ಯಾಯ-11
ರುದ್ರಸ್ತು ತಸ್ಯಾಸ್ತಪಸಾ ತುಷ್ಟಃ ಪ್ರಾದಾದ್ ವರಂ ತದಾ |
ಭೀಷ್ಮಸ್ಯ ಮೃತಿಹೇತುತ್ವಂ ಕಾಲಾತ್ ಪುಂದೇಹಸಂಭವಮ್ ॥100॥
ಅಂಬೆಯ ತಪಸ್ಸಿಗೆ ಸಂತುಷ್ಟನಾದ ಶಿವ ಅವಳಿಗೆ ಭೀಷ್ಮನ ಮರಣಕ್ಕೆ ಕಾರಣಳಾಗುವ ಮತ್ತು ಸ್ವಲ್ಪ ಕಾಲಾನಂತರ ಪುರುಷಶರೀರವನ್ನು ಹೊಂದುವ ವರ ನೀಡಿದ.
ಮಾಲಾಂ ಚ ಯ ಇಮಾಂ ಮಾಲಾಂ ಗೃಹ್ಣೀಯಾತ್ ಸ ಹನಿಷ್ಯತಿ |
ಭೀಷ್ಮಮಿತ್ಯೇವ ತಾಂ ಮಾಲಾಂ ಗೃಹೀತ್ವಾ ಸಾ ನೃಪಾನ್ ಯಯೌ ॥
ಶಿವ ಅಂಬೆಗೆ ಒಂದು ಮಾಲೆಯನ್ನೂ ಕೊಟ್ಟು `ಈ ಮಾಲೆಯನ್ನು ಯಾರು ಸ್ವೀಕರಿಸುವನೋ ಅವನು ಭೀಷ್ಮನನ್ನು ಕೊಲ್ಲುವನು' ಎಂದ. ಅಂಬೆ ಆ ಮಾಲೆಯನ್ನು ಹಿಡಿದುಕೊಂಡು ರಾಜರುಗಳ ಬಳಿಗೆ ಹೋದಳು.
ತಾಂ ನ ಭೀಷ್ಮಭಯಾತ್ ಕೇSಪಿ ಜಗೃಹುಸ್ತಾಂ ಹಿ ಸಾ ತತಃ |
ದ್ರುಪದಸ್ಯ ಗೃಹದ್ವಾರಿ ನ್ಯಸ್ಯ ಯೋಗಾತ್ ತನುಂ ಜಹೌ ॥102॥

ಆದರೆ ಭೀಷ್ಮನ ಭಯದಿಂದ ಆ ಮಾಲೆಯನ್ನು ಯಾರೂ ಸ್ವೀಕರಿಸಲಿಲ್ಲ. ಕೊನೆಗೆ ಅದನ್ನು ದ್ರುಪದ ಅರಮನೆಯ ದ್ವಾರದಲ್ಲಿಟ್ಟು ಯೋಗಬಲದಿಂದ ಶರೀರ ತ್ಯಾಗ ಮಾಡಿದಳು, ಅಂಬೆ.

ಏತಸ್ಮಿನ್ನೇವ ಕಾಲೇ ತು ಸುತಾರ್ಥಂ ದ್ರುಪದಸ್ತಪಃ |
ಚಕಾರ ಶಂಭವೇ ಚೈನಂ ಸೋऽಬ್ರವೀತ್ ಕನ್ಯಕಾ ತವ ॥103॥
ಭೂತ್ವಾ ಭವಿಷ್ಯತಿ ಪುಮಾನಿತಿ ಸಾಂಬಾ ತತೋऽಜನಿ |
ನಾಮ್ನಾ ಶಿಖಂಡಿನೀ ತಸ್ಯಾಃ ಪುಂವತ್ ಕರ್ಮಾಣಿ ಚಾಕರೋತ್ |104|

ಇದೇ ಸಮಯದಲ್ಲಿ ದ್ರುಪದ ಶಿವನನ್ನು ಕುರಿತು ಗಂಡುಮಗುವಿಗಾಗಿ ತಪಸ್ಸು ಮಾಡಿದ. ಶಿವ, `ನಿನಗೆ ಹೆಣ್ಣು ಮಗು ಹುಟ್ಟಿ ಗಂಡಾಗುತ್ತದೆ' ಎಂದ. ಆಗ ಅಂಬೆ ಶಿಖಂಡಿನೀ ಎಂಬ ಹೆಸರಿನಿಂದ ಮಗಳಾಗಿ ಜನಿಸಿದಳು. ಅವಳಿಗೆ ಗಂಡುಮಕ್ಕಳಂತೆ ಚೌಲ ಉಪನಯನಾದಿ ಕರ್ಮ ಮಾಡಿದ ದ್ರುಪದ.

ತಸ್ಯೈ ಪಾಂಚಾಲರಾಜಃ ಸ ದಶಾರ್ಣಾಧಿಪತೇಃ ಸುತಾಮ್ |
ಉದ್ವಾಹಯಾಮಾಸ ಸಾ ತಾಂ ಪುಂವೇಷೇಣೈವ ಗೂಹಿತಾಮ್ ॥105॥
ಅನ್ಯತ್ರ ಮಾತಾಪಿತ್ರೋಸ್ತು ನ ವಿಜ್ಞಾತಾಂ ಬುಬೋಧ ಹ |
ಧಾತ್ರ್ಯೈನ್ಯ ವೇದಯತ್ ಸಾಥ ತತ್ಪಿತ್ರೇ ಸಾ ನ್ಯವೇದಯತ್ ॥106॥

ಶಿಖಂಡಿನಿಗೆ ದ್ರುಪದ ದಶಾರ್ಣರಾಜನಾದ ಹಿರಣ್ಯವರ್ಮನ ಮಗಳನ್ನು ಮದುವೆ ಮಾಡಿಸಿದ. ಆ ರಾಜಕುಮಾರಿ `ಈಕೆ ವಸ್ತುತಃ ಪುರುಷವೇಷದಿಂದ ನಿಜರೂಪ ಮರೆ ಮಾಡಿಕೊಂಡಿರುವ ಹೆಣ್ಣು, ತಂದೆ ತಾಯಿಗಳ ಹೊರತು ಇನ್ನಾರಿಗೂ ಇವಳ ನಿಜರೂಪ ತಿಳಿದಿಲ್ಲ' ಎಂದು ತಿಳಿದಳು. ದಾದಿಗೆ ತಿಳಿಸಿದಳು. ಅವಳು ಅವಳ ತಂದೆಗೆ ತಿಳಿಸಿದಳು.

ಸ ಕ್ರುದ್ಧಃ ಪ್ರೇಷಯಾಮಾಸ ನಿಹನ್ಮಿ ತ್ವಾಂ ಸಬಾಂಧವಮ್ |
ಇತಿ ಪಾಂಚಾಲರಾಜಾಯ ನಿರ್ಜಗಾಮ ಚ ಸೇನಯಾ ॥107॥

ತಂದೆ ಹಿರಣ್ಯವರ್ಮ ಕ್ರುದ್ಧನಾಗಿ `ನಿನ್ನನ್ನು ಬಂಧುಗಳ ಸಮೇತ ಕೊಲ್ಲುವೆನು' ಎಂದು ದ್ರುಪದನಿಗೆ ಹೇಳಿಕಳಿಸಿ ಸೈನ್ಯ ಸಮೇತನಾಗಿ ಹೊರಟ.

ವಿಶ್ವಸ್ಯ ವಾಕ್ಯಂ ರುದ್ರಸ್ಯ ಪುಮಾನೇವೇತಿ ಪಾರ್ಷತಃ |
ಪ್ರೇಷಯಾಮಾಸ ಧಿಗ್ ಬುದ್ಧಿರ್ಭಿನ್ನಾ ತೇ ಬಾಲವಾಕ್ಯತಃ |
ಅಪರೀಕ್ಷಕಸ್ಯ ತೇ ರಾಷ್ಟ್ರಂ ಕಥಮಿತ್ಯೇವ ನರ್ಮಕೃತ್ ॥108॥

ಶಿವನ ಮಾತನ್ನು ನಂಬಿ ದ್ರುಪದ `ಶಿಖಂಡಿ ಪುರುಷನೆ. ಏನೂ ಅರಿಯದ ಜನರ ಮಾತಿನಿಂದ ನಿನ್ನ ಬುದ್ಧಿ ಕೆಟ್ಟಿದೆ. ನಿನಗೆ ಧಿಕ್ಕಾರ. ರಾಜನಾದ ನೀನು ಹೀಗೆ ವಿಚಾರಶೂನ್ಯನಾದರೆ ರಾಷ್ಟ್ರ ಹೇಗೆ ಉಳಿದೀತು?' ಎಂದು ಹಾಸ್ಯದ ಮಾತನ್ನು ಹೇಳಿ ಕಳಿಸಿದ.

ಅಥ ಭಾರ್ಯಾಸಮೇತಂ ತಂ ಪಿತರಂ ಚಿಂತಯಾಕುಲಮ್ |
ದೃಷ್ಟ್ವಾಶಿಖಂಡಿನೀ ದುಃಖಾನ್ಮನ್ನಿಮಿತ್ತಾನ್ನ ನಶ್ಯತು |
ಇತಿ ಮತ್ವಾ ವನಾಯೈವ ಯಯೌ ತತ್ರ ಚ ತುಂಬುರುಃ ॥109॥

ತಂದೆತಾಯಿಗಳು ಚಿಂತಾಕುಲರಾಗಿರುವುದನ್ನು ಕಂಡು ಶಿಖಂಡಿನಿ ತನ್ನಿಂದಾಗಿ ಅವರು ನಾಶವಾಗಕೂಡದೆಂದು ಬಗೆದು ದುಃಖದಿಂದ ತುಂಬುರು ಗಂಧರ್ವನಿದ್ದ ಕಾಡಿಗೆ ಹೋದಳು.

ಸ್ಥೂಣಾಕರ್ಣಾಭಿಧೇಯಸ್ತಾಮಶಪ್ಯದ್ ದೃಢಕರ್ಣತಃ |
ಸ ತಸ್ಯಾ ಅಖಿಲಂ ಶ್ರುತ್ವಾ ಕೃಪಾಂ ಚಕ್ರೇ ಮಹಾಮನಾಃ ॥110॥

ದೃಢವಾದ ಕಿವಿಗಳಿದ್ದ ಪ್ರಯುಕ್ತ ಸ್ಥೂಣಾಕರ್ಣನೆಂದೂ ಕರೆಸಿಕೊಂಡಿದ್ದ ವಿಶಾಲಹೃದಯಿಯಾದ ತುಂಬುರು ಶಿಖಂಡಿಯ ಎಲ್ಲ ವೃತ್ತಾಂತವನ್ನು ಕೇಳಿ ಕೃಪೆ ಮಾಡಿದ.

ಸ ತಸ್ಯೈ ಸ್ವಂ ವಪುಃ ಪ್ರಾದಾತ್ ತದೀಯಂ ಜಗೃಹೇ ತಥಾ |
ಅಂಶೇನ ಪುಂಸ್ವಭಾವಾರ್ಥಂ ಪೂರ್ವದೇಹೇ ಸಮಾಸ್ಥಿತಃ ॥111॥

ಶಿಖಂಡಿನಿಗೆ ತನ್ನ ಶರೀರವನ್ನು ಕೊಟ್ಟ. ಹಾಗೆಯೇ ಅವಳ ಶರೀರವನ್ನು ತಾನು ಸ್ವೀಕರಿಸಿದ. ತಾನು ಕೊಟ್ಟ ಹಿಂದಿನ ಶರೀರದಲ್ಲಿ ಪುರುಷ ಸ್ವಭಾವ ಬರುವುದಕ್ಕಾಗಿ ತಾನೂ ಒಂದು ಅಂಶದಿಂದ ಅದರಲ್ಲಿದ್ದ.

ಪುಂಸಾಂ ಸ್ತ್ರೀತ್ವಮ್ ಭವೇತ್ ಕ್ವಾಪಿ ತಥಾಯಂತೇ ಪುಮಾನ್ ಭವೇತ್ |
ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾದ್ ಬಲವತ್ಕಾರಣೈರಪಿ ॥112॥

ಪುರುಷರಿಗೆ ಸ್ತ್ರೀತ್ವವೆಂದಾದರೂ ಬಂದೀತು. ಆದರೆ ಕೊನೆಗೆ ಅವರು ಪುರುಷರೇ ಆಗುತ್ತಾರೆ. ಸ್ತ್ರೀಯರಿಗೆ ಪುರುಷತ್ವ ಬಲವತ್ತಾದ ಕಾರಣಗಳಿಂದಲೂ ಬರಲಾಗದು.

ಅತಃ ಶಿವರೇऽಪ್ಯೇಷಾ ಜಜ್ಞೇ ಯೋಷೈವ ನಾನ್ಯಥಾ |
ಪಶ್ಚಾತ್ ಪುಂದೇಹಮಪಿ ಸಾ ಪ್ರವಿವೇಶೈವ ಪುಂಯುತಮ್ ॥113॥
ನಾಸ್ಯಾ ದೇಹಃ ಪುಂಸ್ತ್ವಮಾಪ ನ ಚ ಪುಂಸಾನಧಿಷ್ಠಿತೇ |
ಪುಂದೇಹೇ ನ್ಯವಸತ್ ಸಾಥ ಗಂಧರ್ವೇಣ ತ್ವಧಿಷ್ಠಿತಮ್ |
ಗಾಂಧರ್ವಂ ದೇಹಮಾವಿಶ್ಯ ಸ್ವಕೀಯಂ ಭವನಂ ಯಯೌ ॥114॥

ಅದರಿಂದ ಶಿವವರವಿದ್ದರೂ ಶಿಖಂಡಿನಿ ಹೆಣ್ಣಾಗಿಯೆ ಹುಟ್ಟಿದಳು. ಗಂಡಾಗಿ ಅಲ್ಲ. ಅನಂತರವೂ ಪುರುಷಜೀವಯುಕ್ತವಾದ ಪುರುಷ ಶರೀರವನ್ನೇ ಪ್ರವೇಶಿಸಿದಳು ಹೊರತು ಅವಳ ಶರೀರ ಪುರುಷ ಶರೀರವಾಗಲೂ ಇಲ್ಲ. ಪುರುಷ ಜೀವನವಿಲ್ಲದ ಒಂದು ಪುರುಷಶರೀರದಲ್ಲಿ ಅವಳು ನೆಲೆಸಲೂ ಇಲ್ಲ. ಹೀಗೆ ಅವಳು ಗಂಧರ್ವಾಂಶ ಯುಕ್ತವಾದ ಗಂಧರ್ವ ಶರೀರವನ್ನು ಪ್ರವೇಶಿಸಿ ತನ್ನ

ಮನೆಗೆ ಹೋದಳು.
ತಸ್ಯಾಸ್ತದ್ದೇಹಾದೃಶ್ಯಂ ಗಂಧರ್ವಸ್ಯ ಪ್ರಸಾದತಃ |
ಪ್ರಾಪ ಗಂಧರ್ವದೇಹೋಽಪಿ ತಯಾ ಪಶ್ಚಾದಧಿಷ್ಠಿತಃ ॥115॥
ಶ್ವೋ ದೇಹಿ ಮಮ ದೇಹಿಂ ಮೇ ಸ್ವಂ ಚ ದೇಹಂ ಸಮಾವಿಶ |
ಇತ್ಯುಕತ್ವ ಸ ತು ಗಂಧರ್ವಃ ಕನ್ಯಾ ದೇಹಂ ಸಮಾಸ್ಥಿತಃ ॥116॥
ಉವಾಸೈವ ವನೇ ತಸ್ಮಿನ್ ಧನದಸ್ತತ್ರ ಚಾಗಮತ್ |
ಅಪ್ರತ್ಯುತ್ಥಾಯಿನಂ ತಂತುಲೀಯಮಾನಂ ವಿಲಜ್ಜಯಾ ॥117॥
ಶಶಾಪ ಧನದೋ ದೇವಶ್ಚಿರಮಿತ್ಥಂ ಭವೇತಿ ತಮ್ ॥118॥
ಗಂಧರ್ವನ ಅನುಗ್ರಹದಿಂದಲೆ ಗಂಧರ್ವಶರೀರ ಶಿಖಂಡಿನಿಯ ಸ್ತ್ರೀಶರೀರದ ಸಾದೃಶ್ಯವನ್ನು ಹೊಂದಿತ್ತು. ಬಳಿಕ ಅವಳು ಆ ಶರೀರವನ್ನು ಪ್ರವೇಶಿಸಿದಳು. `ನಾಳೆ ನೀನು ನನ್ನ ಶರೀರವನ್ನು ನನಗೇ ಕೊಡು, ನಿನ್ನ ಶರೀರವನ್ನು ನೀನು ಪ್ರವೇಶಿಸು' ಎಂದು ಹೇಳಿ ಆ ತುಂಬುರು ಗಂಧರ್ವ ಸ್ತ್ರೀಶರೀರವನ್ನು ಸ್ವೀಕರಿಸಿ ಆ ಕಾಡಿನಲ್ಲಿಯೆ ಇದ್ದ. ಅಲ್ಲಿಗೆ ಕುಬೇರದೇವ ಬಂದ. ತುಂಬುರು ಎದ್ದು ನಿಂತು ಇದಿರುಗೊಳ್ಳದೆ ನಾಚಿಕೆಯಿಂದ ಪೊದೆಗಳಲ್ಲಿ ಅಡಗಿ ಕುಳಿತುದನ್ನು ಕಂಡು ಶಪಿಸಿದ, `ನೀನು ಬಹುಕಾಲ ಹೀಗೆ ಇರು' ಎಂದು.
ಯದಾ ಯುದ್ಧೇ ಮೃತಿಂ ಯಾತಿ ಸಾ ಕನ್ಯಾ ಪುಂತನುಸ್ಥಿತಾ |
ತದಾ ಪುಂಸ್ತ್ವಂ ಪುನರ್ಯಾಸಿ ಚಪಲತ್ವಾದಿತೀರಿತಃ ॥119॥
`ನಿನ್ನ ಪುರುಷಶರೀರದಲ್ಲಿರುವ ಆ ಹೆಣ್ಣು ಮುಂದೆ ಯುದ್ಧದಲ್ಲಿ ಮರಣ ಹೊಂದುವಾಗ ನೀನು ಪುನಃ ನಿನ್ನ ಆ ಪುರುಷ ಶರೀರವನ್ನು ಹೊಂದುತ್ತಿ. ಇದು ನಿನ್ನ ಚಾಪಲ್ಯದ ಫಲ' ಎಂದ ಕುಬೇರ.
ತಥಾವಸತ್ ಸ ಗಂಧರ್ವಃ ಕನ್ಯಾ ಪಿತ್ರೋರಶೇಷತಃ |
ಕಥಯಾಮಾಸಾನುಭೂತಂ ತೌಭೃಶಂ ಮುದಮಾಪತುಃಃ ॥120॥
ಪರೀಕ್ಷ್ಯ ತಾಮುಪಾಯೈಶ್ಚ ಶ್ವಶುರೋ ಲಜ್ಜಿತೋ ಯಯೌ ॥121॥
ತುಂಬುರು ಹಾಗೇ ಸ್ತ್ರೀ ಶರೀರದಲ್ಲಿ ವಾಸ ಮಾಡಿದ. ಶಿಖಂಡಿನಿ ತಂದೆ ತಾಯಿಗಳಿಗೆ ತನ್ನ ಅನುಭವವನ್ನೆಲ್ಲ ಹೇಳಿಕೊಂಡಳು. ಅವರು ಬಹಳ ಸಂತೋಷಪಟ್ಟರು. ಮಾವ ಅವಳನ್ನು ನಾನಾ ಉಪಾಯಗಳಿಂದ ಪರೀಕ್ಷಿಸಿ ಸೋತು ಲಜ್ಜಿತನಾಗಿ ಹೊರಟುಹೋದ.
ಶ್ವೋಭೂತೇ ಸಾ ತು ಗಂಧರ್ವಂ ಪ್ರಾಪ್ಯ ತದ್ವಚನಾತ್ ಪುನಃ |
ಯಯೌ ತೇನೈವ ದೇಹೇನ ಪುಂಸ್ತ್ವಮೇವ ಸಮಾಶ್ರಿತಾ ॥122॥
ಸ ಶಿಖಂಡೀ ನಾಮತೋಽಭೂದಸ್ತ್ರ ಶಸ್ತ್ರ ಪ್ರತಾಪವಾನ್ ॥123॥
ಶಿಖಂಡಿನಿ ಮರುದಿನ ಪುನಃ ಗಂಧರ್ವನ ಬಳಿಗೆ ಹೋಗಿ, ಅವನು ಹೇಳಿದ ಪ್ರಕಾರ ಅದೇ ಶರೀರದಿಂದ ಪುರುಷತ್ವವನ್ನು ತಳೆದೇ ಮನೆ ಸೇರಿದಳು. ಆ ಪುರುಷನೆ ಮುಂದೆ ಅಸ್ತ್ರಶಸ್ತ್ರ ಪ್ರತಾಪ ಉಳ್ಳವನಾಗಿ ಶಿಖಂಡಿ ಎಂಬ ಹೆಸರಿನಿಂದ ಪ್ರಸಿದ್ಧನಾದ.
* * * *
ನೂರ ಎರಡನೆಯ ಅಧ್ಯಾಯ
(ಅಂಬೆಯ ಅಲೆದಾಟ, ದ್ರುಪದನ ಗೃಹದ್ವಾರದಲ್ಲಿ ಮಾಲೆಯ ನಿಕ್ಷೇಪ. ಶಿಖಂಡಿಯಿಂದ ಅದರ ಧಾರಣೆ ಮತ್ತು ಶಿಖಂಡಿಗೆ ಪುರುಷಭಾವ.)
ಅಂಬಾ
ಅನ್ಯಪೂರ್ವೇತಿ ಮಾಂ ಪಾಪೋ ನಾಭಿನಂದತಿ ಬಾಲಿಶಃ |
ಸಾಽಹಂ ಧರ್ಮಾಚ್ಚ ಕಾಮಾಚ್ಚ ವಿಹೀನಾ ಶೋಕಧಾರಿಣೀ |
ಅಪತಿಃ ಕ್ಷತ್ರಿಯಾನ್ ಸರ್ವಾನಾಕ್ರಂದಾಮಿ ಸಮಂತತಃ ॥1॥
ನಾನು ಮೊದಲು ಇನ್ನೊಬ್ಬನನ್ನು ಪ್ರೀತಿಸಿರುವೆನೆಂಬ ಕಾರಣದಿಂದ ಬಾಲಿಶನಾದ ದುಷ್ಟನಾದ ಭೀಷ್ಮನು ನನ್ನನ್ನು ಸ್ವೀಕರಿಸುತ್ತಿಲ್ಲ. ನಾನು ಪತಿಯಿಲ್ಲದೆ ಧರ್ಮದಿಂದಲೂ ಮತ್ತು ಕಾಮದಿಂದಲೂ ವಂಚಿತಳಾಗಿ ಶೋಕಪಡುತ್ತಾ ಎಲ್ಲಾ ಕಡೆಯಲ್ಲಿ ಕ್ಷತ್ರಿಯರನ್ನು ಕುರಿತು ಆಕ್ರಂದನ ಮಾಡುತ್ತಿದ್ದೇನೆ.
ಇಯಂ ವಃ ಕ್ಷತ್ರಿಯಾ ಮಾಲಾ ಯಾ ಭೀಷ್ಮಂ ನಿಹನಿಷ್ಯತಿ |
ಅಹಂ ಚ ಭಾರ್ಯಾ ತಸ್ಯ ಸ್ಯಾಂ ಯೋ ವೀರಂ ಘಾತಯಿಷ್ಯತಿ ॥2॥
ಎಲೈ ಕ್ಷತ್ರಿಯರೇ, ಈ ಮಾಲೆಯು ನಿಮಗಾಗಿದೆ. ಇದನ್ನು ಧರಿಸಿದವನು ಭೀಷ್ಮನನ್ನು ಕೊಲ್ಲುವನು. ಯಾರು ಭೀಷ್ಮನನ್ನು ಕೊಲ್ಲುವನೋ, ನಾನು ಅವನ ಪತ್ನಿಯಾಗುವೆನು.
ವೈಶಂಪಾಯನಃ
ತಸ್ಯಾಂ ಚಂಕ್ರಮ್ಯಮಾಣಾಯಾಂ ಸಮಾಃ ಪಂಚ ಗತಾಃ ಪರಾಃ |
ನಾಭವಚ್ಛರಣಂ ಕಶ್ಚಿತ್ ಕ್ಷತ್ರಿಯೋ ಭೀಷ್ಮಜಾದ್ ಭಯಾತ್ ॥3॥
ಹೀಗೆ ಅವಳು ಅಲೆದಾಡುತ್ತಾ ಐದು ಶ್ರೇಷ್ಠವಾದ ವರ್ಷಗಳು ಕಳೆದವು. ಭೀಷ್ಮರ ಮೇಲಿನ ಹೆದರಿಕೆಯಿಂದ ಯಾವ ಕ್ಷತ್ರಿಯನೂ ಅವಳಿಗೆ ಆಶ್ರಯವನ್ನು ಕೊಡಲಿಲ್ಲ.
ಅಗಚ್ಛತ್ ಸೋಮಕಂ ಸಾ ತು ಪಾಂಚಾಲೇಷು ಯಶಸ್ವಿನಮ್ |
ಸತ್ಯಸಂಧಂ ಮಹೇಷ್ವಾಸಂ ಸತ್ಯಧರ್ಮಪರಾಯಣಮ್ ॥4॥
ಅವಳು ಪಾಂಚಾಲದೇಶಕ್ಕೆ ಹೋಗಿ ಯಶಸ್ವಿನಿಯೂ, ಸತ್ಯಸಂಧನೂ, ಸತ್ಯಧರ್ಮಪರಾಯಣನೂ, ಧನುರ್ವೇದವನ್ನು ಬಲ್ಲವನೂ ಆದ ಸೋಮಕನನ್ನು ಸಮೀಪಿಸಿದಳು.

ಸಾ ಸಭಾದ್ವಾರಮಾಗತ್ಯ ಪಾಂಚಾಲ್ಯೈರಭಿರಕ್ಷಿತಮ್ |
ಪಾಂಚಾಲರಾಜಮಾಕ್ರಂದತ್ ಪ್ರಗೃಹ್ಯ ಸುಭುಜಾ ಭುಜೌ ॥5॥
ಅವಳು ಪಾಂಚಾಲರಿಂದ ರಕ್ಷಿತವಾದ ಸಭಾದ್ವಾರವನ್ನು ತಲುಪಿ, ತನ್ನ ಎರಡು ಸುಂದರವಾದ ಭುಜಗಳನ್ನು ಮೇಲೆತ್ತಿ ಪಾಂಚಾಲರಾಜನನ್ನು ಕುರಿತು, ಆಕ್ರಂದನ ಮಾಡಿ ಹೇಳಿದಳು.
ಅಂಬಾ
ಭೀಷ್ಮೇಣ ಹನ್ಯಮಾನಾಂ ಮಾಂ ಮಜ್ಜತೀಮಿವ ಚ ಹ್ರದೇ |
ಯಜ್ಞಸೇನಾಭಿಧಾವೇಹ ಪಾಣಿಮಾಲಂಬ್ಯ ಚೇಶ್ವರ ॥6॥
ಯಜ್ಞಸೇನನೇ, ಭೀಷ್ಮನಿಂದ ಘಾತಿತಳಾಗಿ ಮಡುವಿನಲ್ಲಿ ಮುಳುಗುವಂತಿರುವ ನನ್ನನ್ನು ಹಿಡಿದು ಎತ್ತಿ ರಕ್ಷಿಸಲು ಇಲ್ಲಿಗೆ ಓಡಿ ಬಾ. ನೀನು ಸಮರ್ಥನಾಗಿದ್ದೀಯೆ.
ತೇನ ಮೇ ಸರ್ವಧರ್ಮಾಶ್ಚ ರತಿಭೋಗಾಶ್ಚ ಕೇವಲಾಃ |
ಉಭೌ ಚ ಲೋಕೌ ಕೀರ್ತಿಶ್ಚ ಸಮೂಲೌ ಸಫಲೌ ಹೃತೌ ॥7॥
ಆ ಭೀಷ್ಮನು ನನ್ನ ಎಲ್ಲಾ ಧರ್ಮಗಳನ್ನೂ,ನ ರತಿಭೋಗಗಳನ್ನೂ, ಈ ಲೋಕ, ಪರಲೋಕಗಳನ್ನೂ ಮತ್ತು ಕೀರ್ತಿಯನ್ನೂ, ಅವುಗಳ ಕಾರಣ ಮತ್ತು ಫಲ ಎರಡೂ ಇಲ್ಲದಂತೆ ನಾಶಮಾಡಿದ್ದಾನೆ.
ಕ್ರೋಶಂತ್ಯೇವಂ ನ ವಿಂದಾಮಿ ರಾಜನ್ಯಂ ಶರಣಂ ಕ್ವಚಿತ್ |
ಕಿಂ ನು ನಿಃಕ್ಷತ್ರಿಯೋ ಲೋಕೋ ಯತ್ರ ನಾಥೋಽವಸೀದತಿ ॥8॥
ನಾನು ಹೀಗೆ ಕಿರುಚುತ್ತಿದ್ದರೂ ಯಾವ ರಾಜನೂ ನನಗೆ ಅಭಯವನ್ನು ಕೊಡುತ್ತಿಲ್ಲ. ಹೀಗೆ ಬೇಡುವವನು ನಾಶಹೊಂದುತ್ತಿರುವುದರಿಂದ, ಈ ಲೋಕದಲ್ಲಿ ಕ್ಷತ್ರಿಯರೇ ಇಲ್ಲವೇ?
ಸಮಾಗಮ್ಯ ತು ರಾಜಾನೋ ಮಯೋಕ್ತಾ ರಾಜಸತ್ತಮಾಃ |
ಇಕ್ಷ್ವಾಕೂಣಾಂ ಚ ಯೇ ವೃದ್ಧಾಃ ಪಾಂಚಾಲಾನಾಂ ಚ ಯೇ ವರಾಃ ॥9॥
ತ್ವತ್ಪ್ರಸಾದಾದ್ ವಿವಾಹೇಽಸ್ಮಿನ್ ಮಾಽಧರ್ಮೋ ಮಾ ಪರಾಜಯಃ|
ಪ್ರಸೀದ ಯಜ್ಞಸೇನೇಹ ಗತಿರ್ಮೇ ಭವ ಸೋಮಕ ॥10॥
ನಾನು ಇಕ್ಷ್ವಾಕುವಂಶದ ಮತ್ತು ಪಾಂಚಾಲವಂಶದ ಹಿರಿಯರಾದ ಮತ್ತು ಶ್ರೇಷ್ಠರಾದ ಅನೇಕ ರಾಜರನ್ನು ಸಮೀಪಿಸಿ, ನಿಮ್ಮ ಅನುಗ್ರಹದಿಂದ ನಾನು ಬಯಸಿದ ಈ ವಿವಾಹದ ವಿಷಯದಲ್ಲಿ ಅಧರ್ಮವಾಗಲೀ, ಪರಾಜಯವಾಗಲೀ, ಉಂಟಾಗದಿರಲಿ ಎಂದು ಕೇಳಿದೆ. ಸೋಮಕ ! ರಾಜನಾದ ಯಜ್ಞಸೇನನೇ, ಅನುಗ್ರಹವನ್ನು ಮಾಡು. ನೀನು ನನಗೆ ಗತಿಯಾಗು.
ಸೋಮಕಃ
ಜಾನಾಮಿ ತ್ವಾ ಬೋಧಯಾಮಿ ರಾಜಪುತ್ರಿ ವಿಶೇಷತಃ |
ಯಥಾಶಕ್ತಿ ಯಥೋತ್ಸಾಹಂ ಬಲಂ ಸಂಧಾರಯಾಮ್ಯಹಮ್ ॥
ರಾಜಪುತ್ರಿ, ನಾನು ನಿನ್ನ ಅಭಿಪ್ರಾಯವನ್ನು ತಿಳಿದಿದ್ದೇನೆ. ನನಗೆ ಯಥಾಶಕ್ತಿ, ಉತ್ಸಾಹಕ್ಕನುಗುಣವಾದ ಬಲವಿದೆಯೆಂದು ನಿನಗೆ ತಿಳಿಸುತ್ತಿದ್ದೇನೆ.
ಅನ್ಯಸ್ಮಾತ್ ಪಾರ್ಥಿವಾತ್ ತೇ ಯದ್ ಭಯಂ ಸ್ಯಾತ್ ಪಾರ್ಥಿವಾತ್ಮಜೇ|
ತಸ್ಯಾಪನಯನೇ ಹೇತುಂ ಸಂವಿಧಾತುಮಹಂ ಪ್ರಭುಃ ॥12॥
ರಾಜಕುಮಾರಿಯೇ, ನಿನಗೆ ಬೇರೆ ರಾಜರಿಂದ ಭಯವುಂಟಾದರೆ, ನಾನು ಅದಕ್ಕೆ ಪರಿಹಾರ ನಿಮಿತ್ತವನ್ನು ಆಚರಿಸಲು ಸಮರ್ಥ.
ನಹಿ ಶಾಂತನವಸ್ಯಾಹಂ ಮಹಾಸ್ತ್ರಸ್ಯ ಪ್ರಹಾರಿಣಃ |
ಈಶ್ವರಃ ಕ್ಷತ್ರಿಯಾಣಾಂ ಹಿ ಬಲಂ ಧರ್ಮೋಽನುವರ್ತತೇ ॥13॥
ಆದರೆ ಮಹಾಸ್ತ್ರವುಳ್ಳವನೂ ಮತ್ತು ಪ್ರಹರಣಶೀಲನೂ ಆದ ಭೀಷ್ಮನಿಂದ ನಿನ್ನನ್ನು ರಕ್ಷಿಸಲಾರೆ. ಕ್ಷತ್ರಿಯರು ತಮ್ಮ ಬಲವನ್ನು ಅನುಸರಿಸಿ ಕಾರ್ಯ ಮಾಡುತ್ತಾರೆ. ಇದು ಕ್ಷತ್ರಿಯರ ಧರ್ಮ.
ಸಾಧು ವ್ರಜ ಹಿ ಕಲ್ಯಾಣಿ ನ ಮಾಮಭಿಷಜೇದ್ ಬಲಮ್ |
ನಹಿ ಭೀಷ್ಮಾದಹಂ ಧರ್ಮಂ ಶಕ್ತೋ ದಾತುಂ ಕಥಂಚನ ॥14॥
ಕಲ್ಯಾಣಿಯೇ, ಭೀಷ್ಮರನ್ನು ಎದುರಿಸುವ ಬಲ ನನ್ನಲ್ಲಿ ಇಲ್ಲ. ಆದ್ದರಿಂದ ಸುಮ್ಮನೆ ಹೊರಟುಹೋಗು. ಭೀಷ್ಮರನ್ನು ವಿರೋಧಿಸಿ, ನಿನಗೆ ನ್ಯಾಯವನ್ನು ಕೊಡಲು ನಾನು ಸಮರ್ಥನಲ್ಲ.
ವೈಶಂಪಾಯನಃ
ಇತ್ಯುಕ್ತಾ ಸ್ರಜಮಾಸಜ್ಯ ದ್ವಾರಿ ರಾಜ್ಞೋ ಹ್ಯಪಾದ್ರವತ್ |
ವ್ಯದಸ್ತಾಂ ಸರ್ವಲೋಕೇನ ತಪಸಾ ಸಂಶಿತವ್ರತಾಮ್ ॥15॥
ತಾಮನ್ವಗಚ್ಛದ್ ದ್ರುಪದಃ ಸಾಲ್ವಂ ಜಲ್ಪನ್ ಪುನಃ ಪುನಃ |
ಸ್ರಜಂ ಗೃಹಾಣ ಕಲ್ಯಾಣಿ ನ ಮೇ ವೈರಂ ಪ್ರಸಂಜಯೇಃ ॥16॥
ಹೀಗೆ ಹೇಳಲ್ಪಟ್ಟ ಅಂಬೆಯು ರಾಜದ್ವಾರದಲ್ಲಿ ಆ ಮಾಲೆಯನ್ನು ತೂಗುಹಾಕಿ ಓಡಿಹೋದಳು. ಒಳ್ಳೆಯ ತಪಸ್ವಿನಿಯೂ, ವ್ರತಧಾರಣಿಯೂ, ಎಲ್ಲ ಲೋಕದಿಂದ ತಿರಸ್ಕರಿಸಲ್ಪಟ್ಟವಳೂ ಆದ ಅವಳನ್ನು ಸಾಲ್ವನ ಹೆಸರನ್ನು ಮತ್ತೆ ಮತ್ತೆ ಹೇಳುತ್ತಾ ದ್ರುಪದನು ಹಿಂಬಾಲಿಸಿ ಕಲ್ಯಾಣಿ, ಮಾಲೆಯನ್ನು ತೆಗೆದುಕೊಂಡು ಹೋಗು. ನನಗೆ ಭೀಷ್ಮರ ಜೊತೆಯಲ್ಲಿ ವೈರವನ್ನು ಉಂಟುಮಾಡಬೇಡ.
ಏವಮೇವ ತ್ವಯಾ ಕಾರ್ಯಮಿತಿ ಸ್ಮ ಪ್ರತಿಭಾಷಸೇ |

ನತು ತಸ್ಯಾನ್ಯಥಾಭಾವೋ ದೈವಮೇತದಮಾನುಷಮ್ ॥17॥
ನೀನು ಹೀಗೆಯೇ ಮಾಡಬೇಕೆಂದು ನನಗೆ ಹೇಳುತ್ತಿದ್ದೀಯೆ. ಏನು ನಡೆದಿದೆಯೊ, ಅದನ್ನು ವ್ಯತ್ಯಾಸ ಮಾಡಲು ಸಾಧ್ಯವಿಲ್ಲ. ಅದು ಮನುಷ್ಯರನ್ನು ಮೀರಿದ ದೈವದ ಚಿಂತನೆಯಾಗಿದೆ. (ಎಂದು ಹೇಳಿದನು)
ಅಂಬಾ
ಯಶ್ಚೈನಾಂ ಸ್ರಜಮಾದಾಯ ಸ್ವಯಂ ಕಂಠೇ ಪ್ರಮೋಕ್ಷ್ಯತೇ |
ಸ ಭೀಷ್ಮಂ ಸಮರೇ ಹಂತಾ ಮಮ ಧರ್ಮಪ್ರಣಾಶನಮ್ ॥18॥
ಯಾವನು ಈ ಮಾಲೆಯನ್ನು ತೆಗೆದುಕೊಂಡು, ತಾನೇ ಕಂಠದಲ್ಲಿ ಹಾಕಿಕೊಳ್ಳುವನೋ, ಅವನು ಯುದ್ಧದಲ್ಲಿ ನನ್ನ ಎಲ್ಲಾ ಧರ್ಮವನ್ನು ನಾಶಮಾಡಿದ ಭೀಷ್ಮನನ್ನು ಕೊಲ್ಲುವವನು ಆಗುವನು.
ವೈಶಂಪಾಯನಃ
ತಾಂ ಸ್ರಜಂ ದ್ರುಪದೋ ರಾಜಾ ಕಂಚಿತ್ ಕಾಲಂ ರರಕ್ಷ ಸಃ |
ತದಾ ವಿಸ್ರಂಭಮಾಸ್ಥಾಯ ತೂಷ್ಣೀಮೇತಾಮುಪೈಕ್ಷತ ॥19॥
ದ್ರುಪದನು ಆ ಮಾಲೆಯನ್ನು ಸ್ವಲ್ಪಕಾಲದವರೆಗೆ ರಕ್ಷಿಸಿದನು. ಅನಂತರ ಧೈರ್ಯವನ್ನು ತಂದುಕೊಂಡು, ಸುಮ್ಮನಿದ್ದು ಮಾಲೆಯನ್ನು ಉಪೇಕ್ಷೆ ಮಾಡಿದನು.
ತಾಂ ಶಿಖಂಡೀ ನ್ಯಬಧ್ನಾತ್ ತು ಮಾಲಾಂ ಪಿತುರಜಾನತೀ |
ತಾಂ ಪಿತಾ ತ್ಯತ್ಯಜಚ್ಛೀಘ್ರಂ ತ್ರಸ್ತೋ ಭೀಷ್ಮಸ್ಯ ಕಿಲ್ಬಿಷಾತ್ ॥20॥
ತಂದೆಗೆ ತಿಳಿಯದಂತೆ ದ್ರುಪದನ ಮಗಳಾದ ಶಿಖಂಡಿಯು ಆ ಮಾಲೆಯನ್ನು ಹಾಕಿಕೊಂಡಳು. ಭೀಷ್ಮನ ವಿರೋಧದ ಹೆದರಿಕೆಯಿಂದ ದ್ರುಪದನು ಅವಳನ್ನು ಶೀಘ್ರವಾಗಿ ತೊರೆದನು.
ಋಚೀಕಂ ಬ್ರಾಹ್ಮಣಂ ಭೀತಾ ಸಾ ಹ್ಯಗಚ್ಛತ್ ತಪಸ್ವಿನಮ್ |
ಗಂಗಾದ್ವಾರೇ ತಪಸ್ಯಂತಂ ತುಷ್ಟಿಹೇತೋಸ್ತಪಸ್ವಿನೀ ॥21॥
ಶೋಚನೀಯಳಾಧ ಶಿಖಂಡಿಯು ಹೆದರಿ ಗಂಗಾದ್ವಾರದಲ್ಲಿ ತಪಸ್ಸನ್ನು ಮಾಡುತ್ತಿದ್ದಂತಹ ವಿಪ್ರನಾದ ಋಚೀಕನನ್ನು ಸಂತೋಷಪಡಿಸಲು ಗಂಗಾದ್ವಾರಕ್ಕೆ ಹೋದಳು.
ಉಪಚಾರಾಭಿತುಷ್ಟಸ್ತಾಮಬ್ರುವೀದ್ ಋಷಿಸತ್ತಮಃ |
ಗಂಗಾದ್ವಾರೇ ವಿಭಜನಂ ಭವಿತಾ ನಾಚಿರಾದಿವ ॥22॥
ತತ್ರ ಗಂಧರ್ವರಾಜಂ ತು ತಂ ಪುರುಪ್ರಿಯದರ್ಶನಮ್ |
ಆರಾಧಯಿತುಮೀಹಸ್ವ ಸಮ್ಯಕ್ ಪರಿಚರೇರ್ವಿಭುಮ್ ॥23॥
ಅವಳ ಉಪಚಾರಗಳಿಂದ ಪ್ರಸನ್ನರಾದ ಋಚೀಕ ಋಷಿಶ್ರೇಷ್ಠರು ಗಂಗಾದ್ವಾರದಲ್ಲಿ ಸದ್ಯದಲ್ಲಿಯೇ ಒಂದು ವಿಭಜನವು ಉಂಟಾಗುವುದು. (ವಿಭಜನವೆಂದರೆ ಇನ್ನೊಬ್ಬರಿಗೆ ಬೇಕಾದ ತಮ್ಮ ವಸ್ತುವನ್ನು ಅವರಿಗೆ ಕೊಟ್ಟು, ತಮಗೆ ಬೇಕಾದ ಅವರ ವಸ್ತುವನ್ನು ತಾವು ತೆಗೆದುಕೊಳ್ಳುವುದು.) ಅಲ್ಲಿಗೆ ತುಂಬ ಸುಂದರನಾದ ಗಂಧರ್ವರಾಜನು ಬರುತ್ತಾನೆ. ಸಮರ್ಥನಾದ ಅವನನ್ನು ಪರಿಚರಿಸಿ ಸಂತೋಷಪಡಿಸಲು ಪ್ರಯತ್ನಪಡು ಎಂದು ಹೇಳಿದರು.
ಅಹಮಪ್ಯತ್ರ ಸಾಚಿವ್ಯಂ ಕರ್ತಾಸ್ಮಿ ತವ ಶೋಭನೇ |
ಸಾ ತದಾಚರ ಭದ್ರಂ ತೇ ಸ ತೇ ಶ್ರೇಯೋ ವಿಧಾಸ್ಯತಿ ॥23॥
ಶೋಭನಳೇ, ನಾನು ಅಲ್ಲಿಗೆ ಬಂದು ನಿನಗೆ ಸಹಾಯವನ್ನು ಮಾಡುವೆನು. ನಿನಗೆ ಮಂಗಳವಾಗಲಿ. ನೀನು ನಾನು ಹೇಳಿದಂತೆ ಮಾಡು. ಗಂಧರ್ವರಾಜನು ನಿನಗೆ ಶ್ರೇಯಸ್ಸನ್ನು ಉಂಟುಮಾಡುವನು.
ವೈಶಂಪಾಯನಃ
ತತೋ ವಿಭಜನಂ ತತ್ರ ಗಂಧರ್ವಾಣಾಮವಾಪ ಸಾ |
ತತ್ರ ದ್ವಾವವಶಿಷ್ಯೇತಾಂ ಗಂಧರ್ವಾಣಾಂ ಮಿತೌಜಸೌ ॥24॥
ಅನಂತರ ಗಂಗಾದ್ವಾರದಲ್ಲಿ ಗಂಧರ್ವರಲ್ಲಿ ಪರಸ್ಪರವಾಗಿ ವಿಭಜನೆಯು ನಡೆಯಿತು. ಕೊನೆಯಲ್ಲಿ ಅಲ್ಲಿ ಮಿತಪರಾಕ್ರಮಿಗಳಾದ ಇಬ್ಬರು ಗಂಧರ್ವರು ಉಳಿದರು. (ಅವರಲ್ಲಿ ಒಬ್ಬನು ತುಂಬುರು)
ತಯೋರೇಕಃ ಸಮೀಕ್ಷ್ಯೈನಾಂ ಸ್ತ್ರೀಬುಭೂಷುರುವಾಚ ಹ |
ಇದಂ ಗೃಹ್ಣೀಷ್ವ ಪುಲ್ಲಿಂಗಂ ವೃಣೇ ಸ್ತ್ರೀಲಿಂಗಮೇವ ತೇ ॥25॥
ಅವರಲ್ಲಿ ಒಬ್ಬನಾದ ತುಂಬುರುವು ಶಿಖಂಡಿಯನ್ನು ನೋಡಿ, ತಾನು ಹೆಣ್ಣಾಗಲು ಬಯಸಿ, ನನ್ನ ಪುಲ್ಲಿಂಗವನ್ನು ನೀನು ತೆಗೆದುಕೊಂಡು, ನಿನ್ನ ಸ್ತ್ರೀಲಿಂಗವನ್ನು ನನಗೆ ಕೊಡು ಎಂದು ಕೇಳಿದನು.
ನಿಯಮಂ ಚಕ್ರತುಸ್ತತ್ರ ಸ್ತ್ರೀತ್ವೇ ಪುಂಸ್ತ್ವೇ ಚ ತಾವುಭೌ |
ತತಃ ಪುಮಾನ್ ಸಮಭವಚ್ಛಿಖಂಡೀ ಪರವೀರಹಾ |
ಸ್ತ್ರೀ ತು ಭೂತ್ವಾಪಚಕ್ರಾಮ ಸ ಗಂಧರ್ವೋ ಮುದಾ ಯುತಃ ॥26॥
ಅವರಿಬ್ಬರೂ ವಿನಿಮಯವನ್ನು ಮಾಡಿಕೊಂಡು ಸ್ತ್ರೀತ್ವ ಮತ್ತು ಪುಂಸ್ತ್ವಗಳನ್ನು ಯಾವಾಗ ಹಿಂದಿರುಗಿಸಬೇಕೆಂಬ ವಿಷಯದಲ್ಲಿ ನಿಯಮವನ್ನು ಮಾಡಿಕೊಂಡರು. ಅನಂತರ ಪರವೀರರನ್ನು ಕೊಲ್ಲುವಂತಹ ಶಿಖಂಡಿಯು ಪುರುಷನಾದನು. ಆ ಗಂಧರ್ವನು ಸಂತೋಷದಿಂದ ಸ್ತ್ರೀರೂಪವನ್ನು ಧರಿಸಿ, ಅಲ್ಲಿಂದ ಹೊರಟುಹೋದನು.
ಲಬ್ಧ್ವಾ ತು ಮಹತೀಂ ಪ್ರೀತಿಂ ಯಾಜ್ಞಸೇನಿರ್ಮಹಾಯಶಾಃ |
ತತೋ ಬುದ್ಬುದಕಂ ಗತ್ವಾ ಪುನರಸಾತ್ರಣಿ ಸೋಽಕರೋತ್ ॥27॥

ತತ್ರ ಚಾಸತ್ರಣಿ ದಿವ್ಯಾನಿ ಕೃತ್ವಾ ಸ ಸುಮಹಾಮತಿಃ
ಸ್ವದೇಶಮಭಿಸಂಪೇದೇ ಪಾಂಚಾಲಂ ಕುರುನಂದನ | ||28||
ಯಜ್ಞಸೇನನ ಮಹಾಯಶಸ್ವಿಯಾದ ಮಗನು ಮೊದಲು ಶಿಖಂಡಿಯಾಗಿದ್ದವನು ತುಂಬಾ ಸಂತೋಷವನ್ನು ಹೊಂದಿ, ಅಲ್ಲಿಂದ `ಬುದ್ಬುದಕ' ಎಂಬ ಪಟ್ಟಣಕ್ಕೆ ಹೋಗಿ ಅಸ್ತ್ರವಿದ್ಯೆಯನ್ನು ಕಲಿತನು. ಎಲೈ ಕುರುನಂದನ, ಮಹಾಬುದ್ಧಿಯುಳ್ಳ ಅವನು ಅಲ್ಲಿ ದಿವ್ಯವಾದ ಅಸ್ತ್ರಗಳನ್ನು ಕಲಿತು, ತನ್ನ ಸ್ವದೇಶವಾದ ಪಾಂಚಾಲದೇಶಕ್ಕೆ ಹಿಂದಿರುಗಿದನು.
ಸೋಽಭಿವಾದ್ಯ ಪಿತುಃ ಪಾದೌ ಮಹೇಷ್ವಾಸಃ ಕೃತಾಂಜಲಿಃ |
ಉವಾಚ ಭವತಾ ಭೀಷ್ಮಾನ್ನ ಭೇತವ್ಯಂ ಕಥಂಚನ ||29||
ಅವನು ಧನುರ್ಧಾರಿಯಾಗಿ ತಂದೆಗೆ ಕೈಮುಗಿದು ನಮಸ್ಕರಿಸಿ, ನೀವು ಇನ್ನು ಭೀಷ್ಮರಿಗೆ ಎಂದೂ ಹೆದರಬೇಕಾಗಿಲ್ಲ ಎಂದು ಹೇಳಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವ್ಯುತ್ತರಶತತಮೋಽಧ್ಯಾಯಃ
|| ಸಂಭವಪರ್ವಣಿ ಪಂಚಾಶತ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.
*****

ನೂರ ಮೂರನೆಯ ಅಧ್ಯಾಯ
(ವಿಚಿತ್ರವೀರ್ಯನಿಗೆ ಅಂಬಿಕೆ, ಅಂಬಾಲಿಕೆಯರ ಜೊತೆಯಲ್ಲಿ ವಿವಾಹ, ವಿಚಿತ್ರವೀರ್ಯನ ಮರಣ. ಅವನ ಪತ್ನಿಯರಲ್ಲಿ ಮಕ್ಕಳನ್ನು ಪಡೆಯಲು ಭೀಷ್ಮರ ನಿರಾಕರಣೆ.)
ವೈಶಂಪಾಯನಃ
ಅಂಬಾಯಾಂ ನಿರ್ಗತಾಯಾಂ ತು ಭೀಷ್ಮಃ ಶಾಂತನವಸ್ತದಾ |
ನ್ಯಾಯೇನ ಕಾರಯಾಮಾಸ ರಾಜ್ಞೋ ವೈವಾಹಿಕೀಂ ಕ್ರಿಯಾಮ್ ||1||
ಅಂಬೆಯು ಹೊರಟುಹೋಗುತ್ತಿರಲು ಶಂತನುವಿನ ಮಗನಾದ ಭೀಷ್ಮನು ವಿಚಿತ್ರವೀರ್ಯನಿಗೆ ವಿಧಿಪೂರ್ವಕವಾಗಿ ವಿವಾಹವನ್ನು ಮಾಡಿಸಿದನು.
ಅಂಬಿಕಾಂಬಾಲಿಕೇ ಚೈವ ಪರಿಣೀಯಾಗ್ನಿಸನ್ನಿಧೌ |
ತಯೋಃ ಪಾಣೀ ಗೃಹೀತ್ವಾ ತು ಕೌರವ್ಯೋ ರೂಪದರ್ಪಿತಃ ||2||
ವಿಚಿತ್ರವೀರ್ಯೋ ಧರ್ಮಾತ್ಮಾ ಕಾಮಾತ್ಮಾ ಸಮಪದ್ಯತ |
ತೇ ಚಾಪಿ ವನಿತೇ ಶ್ಲಾಘ್ಯೇ ನೀಲಕುಂಚಿತಮೂರ್ಧಜೇ ||3||
ಕೌರವನಾದ ವಿಚಿತ್ರವೀರ್ಯನು ಧರ್ಮಾತ್ಮನಾದರೂ ಅಗ್ನಿಸನ್ನಿಧಿಯಲ್ಲಿ ಅಂಬಿಕೆ, ಅಂಬಾಲಿಕೆಯರನ್ನು ವಿವಾಹ ಮಾಡಿಕೊಂಡು, ಅವರ ಪಾಣಿಗ್ರಹಣವನ್ನು ಮಾಡಿ, ತನ್ನ ಸೌಂದರ್ಯದಿಂದ ದರ್ಪಿತನಾಗಿ ಕಾಮಾತ್ಮನಾದನು.
ರಕ್ತತುಂಗನಖೇ ಶ್ಯಾಮೇ ಪೀನಶ್ರೋಣಿಪಯೋಧರೇ |
ಆತ್ಮರೂಪಾನುರೂಪೋ ನೌ ಲಬ್ಧಃ ಪತಿರಿತಿ ಸ್ಮ ತೇ ||4||
ವಿಚಿತ್ರವೀರ್ಯಂ ಕಲ್ಯಾಣಂ ತೇ ತತೋಽಭಿರತೇ ಹ್ಯುಭೇ |
ಅನ್ಯೋನ್ಯಂ ಪ್ರೀತಿಸಕ್ತೇ ಚ ಏಕಭಾವಾವಿವ ಸ್ಥಿತೇ ||5||
ಆ ಶ್ಲಾಘನೀಯರಾದ ವನಿತೆಯರೂ ಕೂಡ ನೀಲಕೇಶವುಳ್ಳವರಾಗಿ, ಕೆಂಪಾದ ಮತ್ತು ಎತ್ತರವಾದ ನಖವುಳ್ಳವರಾಗಿ, ಶ್ಯಾಮವರ್ಣದವರಾಗಿ, ಪೀನನಿತಂಬ ಮತ್ತು ಸ್ತನಗಳನ್ನು ಹೊಂದಿದವರಾಗಿ, ತಮಗೆ ಅನುರೂಪನಾದ ಪತಿಯು ದೊರಕಿದನೆಂದು ಕಲ್ಯಾಣಕರನಾಗಿದ್ದ ವಿಚಿತ್ರವೀರ್ಯನಲ್ಲಿ ಅನುರಕ್ತರಾದರು. ಅನ್ಯೋನ್ಯವಾಗಿ ಪ್ರೀತಿಯುಳ್ಳವರಾಗಿ ಒಂದೇ ಅಭಿಪ್ರಾಯವನ್ನು ಹೊಂದಿದವರಾದರು.
ಸ ಚಾಪಿ ರೂಪಸದೃಶೋ ದೇವಸತ್ವಪರಾಕ್ರಮಃ |
ಸರ್ವಾಸಾಮೇವ ನಾರೀಣಾಂ ಚಿತ್ತಪ್ರಮಥನೋ ರಹಃ ||6||
ತಾಭ್ಯಾಂ ಸಹ ಸಮಾಸಕ್ತೋ ವಿಹೃತ್ಯ ಪೃಥಿವೀಪತಿಃ |
ವಿಚಿತ್ರವೀರ್ಯಸ್ತರುಣೋ ಯಕ್ಷ್ಮಾಣಂ ಸಮಪದ್ಯತ ||7||
ಉತ್ತಮರೂಪವುಳ್ಳ ದೇವತೆಗಳ ಸಮಾನವಾದ ಬಲಪರಾಕ್ರಮವುಳ್ಳ ಆ ವಿಚಿತ್ರವೀರ್ಯನೂ ಸಹ ಏಕಾಂತದಲ್ಲಿ ತನ್ನ ಪತ್ನಿಯರ ಮನಸ್ಸನ್ನು ಸೆಳೆಯುವವನಾಗಿದ್ದನು. ಆ ವಿಚಿತ್ರವೀರ್ಯ ರಾಜನು ತರುಣನಾಗಿದ್ದರೂ ಅವರಿಬ್ಬರಲ್ಲಿ ಅತಿಯಾದ ಆಸಕ್ತಿಯನ್ನು ಹೊಂದಿ, ಕ್ಷಯರೋಗವನ್ನು ಪಡೆದನು.
ಸುಹೃದಾಂ ಯತಮಾನಾನಾಮಾಪ್ತೈಃ ಸಹ ಚಿಕಿತ್ಸಕೈಃ |
ಜಗಾಮಾಸ್ತಮಿವಾದಿತ್ಯಃ ಕೌರವ್ಯೋ ಯಮಸಾದನಮ್ ||8||
ಸುಹೃದರು ಮತ್ತು ಆಪ್ತರಾದ ವೈದ್ಯರುಗಳ ಜೊತೆಯಲ್ಲಿ ಎಷ್ಟು ಪ್ರಯತ್ನ ಮಾಡಿದರೂ ವಿಚಿತ್ರವೀರ್ಯನು ಸೂರ್ಯನು ಅಸ್ತಂಗತನಾದಂತೆ ಮರಣವನ್ನು ಹೊಂದಿದನು.
ತಸ್ಯ ಪ್ರೇತಸ್ಯ ಕಾರ್ಯಾಣಿ ಭೀಷ್ಮಃ ಸರ್ವಾಣ್ಯಕಾರಯತ್ |
ರಾಜ್ಞೋ ವಿಚಿತ್ರವೀರ್ಯಸ್ಯ ಸತ್ಯವತ್ಯಾ ಮತೇ ಸ್ಥಿತಃ |
ಋತ್ವಿಗ್ಭಿಃ ಸಹಿತೋ ಭೀಷ್ಮಃ ಸರ್ವೈಶ್ಚ ಕುರುಜಾಂಗಲೈಃ ||9||

ಸತ್ಯವತಿಯ ಅಭಿಪ್ರಾಯದಂತೆ ನಡೆದುಕೊಂಡ ಭೀಷ್ಮನು  ಋತ್ವಿಜರಿಂದಲೂ, ಕುರುಜಾಂಗಲ ಪ್ರಜೆಗಳಿಂದಲೂ ಕೂಡಿ, ವಿಚಿತ್ರವೀರ್ಯ ರಾಜನಿಗೆ ಎಲ್ಲಾ ಪ್ರೇತಕಾರ್ಯಗಳನ್ನೂ ಮಾಡಿಸಿದನು.
ತತಃ ಸತ್ಯವತೀ ದೀನಾ ಕೃಪಣಾ ಪುತ್ರಗರ್ಧಿನೀ |
ಕೃತ್ವಾ ಪ್ರೇತಸ್ಯ ಕೃತ್ಯಾನಿ ಸ್ನುಷಾಭ್ಯಾಂ ಸಹಿತಾ ತದಾ |
ಮಾತಾ ಸತ್ಯವತೀ ಭೀಷ್ಮಮುವಾಚ ವದತಾಂ ವರಾ ॥10॥
ಮಗನಿಗೆ ಹಂಬಲಿಸುತ್ತಿದ್ದ ಸತ್ಯವತಿಯು, ಸೊಸೆಯರ ಜೊತೆಯಲ್ಲಿ ಪ್ರೇತಕಾರ್ಯಗಳನ್ನು ಮಾಡಿ, ದೈನ್ಯ ಮತ್ತು ಕೃಪಣತೆಗಳಿಂದ ಕೂಡಿದವಳಾಗಿ, ಮಾತನಾಡುವವರಲ್ಲಿ ಶ್ರೇಷ್ಠಳಾದ ಆಕೆಯು ಪುತ್ರನಾದ ಭೀಷ್ಮನನ್ನು ಕುರಿತು ಮಾತನಾಡಿದಳು.
ಧರ್ಮಂ ಚ ಪಿತೃವಂಶಂ ಚ ಮಾತೃವಂಶಂ ಚ ಶೋಭನಮ್ |
ಸತ್ಯವತ್ಯಭಿಸಂಪ್ರೇಕ್ಷ್ಯ ಭೀಷ್ಮಂ ವಚನಮಬ್ರವೀತ್ ॥11॥
ಪರಿಶುದ್ಧವಾದ ಧರ್ಮವನ್ನೂ, ಪಿತೃವಂಶ ಮತ್ತು ಮಾತೃವಂಶವನ್ನೂ ಗಮನಿಸಿ, ಸತ್ಯವತಿಯು ಭೀಷ್ಮನನ್ನು ಕುರಿತು ಮಾತನಾಡಿದಳು.
ದುಃಖಾರ್ದಿತಾ ತು ಶೋಕೇನ ಮಜ್ಜತೀವ ಚ ಸಾಗರೇ |
ಶಂತನೋರ್ಧರ್ಮನಿತ್ಯಸ್ಯ ಪೌರವಸ್ಯ ಯಶಸ್ವಿನಃ ॥12॥
ದುಃಖಾರ್ದಿತಳಾಗಿ ಪುತ್ರಶೋಕದಿಂದ ಬಳಲಿ ಸಾಗರದಲ್ಲಿ ಮುಳುಗುವವಳಂತೆ ಯಶಸ್ವಿಯಾಗಿದ್ದ, ನಿತ್ಯವೂ ಧರ್ಮಶೀಲನಾಗಿದ್ದ ಕೌರವನಾದ ಶಂತನುವಿನ ವಂಶವನ್ನು ಗಮನಿಸಿ, ಮಾತನಾಡಿದಳು.
ಸತ್ಯವತೀ
ತ್ವಯಿ ಕೀರ್ತಿಶ್ಚ  ಪಿಂಡಶ್ಚ  ಸಂತಾನಶ್ಚ  ಪ್ರತಿಷ್ಠಿತಃ |
ಭ್ರಾತಾ ವಿಚಿತ್ರವೀರ್ಯಸ್ತೇ ಭೂತಾನಾಮಂತಮೇಯಿವಾನ್ ॥13॥
ಭೀಷ್ಮನೇ, ನಿನ್ನ ತಮ್ಮನಾದ ವಿಚಿತ್ರವೀರ್ಯನು ಮರಣಹೊಂದಿದ್ದಾನೆ. ಕುಲದ ಕೀರ್ತಿ, ಸಂತಾನ ಮತ್ತು ಅನುವೃತ್ತಿಯು ನಿನ್ನನ್ನು ಅವಲಂಬಿಸಿದೆ.
ಯಥಾ ಕರ್ಮ ಶುಭಂ ಕೃತ್ವಾ ಸ್ವರ್ಗಾಯ ಗಮನಂ ಧ್ರುವಮ್ |
ಯಥಾ ಚಾಯುರ್ಧ್ರುವಂ ಸತ್ವೇ ತ್ವಯಿ ಧರ್ಮಸ್ತಥಾ ಧ್ರುವಃ ॥14॥
ಹೇಗೆ ಶುಭಕರ್ಮವನ್ನು ಮಾಡಿದವನು ಸ್ವರ್ಗಕ್ಕೆ ಹೋಗುವುದು ನಿಶ್ಚಯವೋ, ಸತ್ವವಿದ್ದವನಲ್ಲಿ ಆಯುಷ್ಯವು ಹೇಗೆ ಧ್ರುವವೋ, ಹಾಗೇ ನಿನ್ನಲ್ಲಿ  ಧರ್ಮವು ಧ್ರುವವಾಗಿದೆ.
ವೇತ್ಥ ಧರ್ಮಸ್ಯ ತತ್ವಂ ಚ ಸಾಮಾನ್ಯಸ್ಯೇತರಸ್ಯ ಚ |
ವಿವಿಧಾಶ್ಚ ಸ್ಮೃತೀರ್ವೇತ್ಥ ವೇದಾಂಗಾನಿ ಚ ಸರ್ವಶಃ ॥15॥
ನೀನು ಸಾಮಾನ್ಯವಾದ ಮತ್ತು ವಿಶೇಷವಾದ ಧರ್ಮದ ತತ್ವವನ್ನು ತಿಳಿದಿದ್ದೀಯೆ. ಅನೇಕ ಸ್ಮೃತಿಗಳನ್ನೂ, ಎಲ್ಲಾ ವೇದಾಂಗಗಳನ್ನೂ ತಿಳಿದಿದ್ದೀಯೆ.
ವ್ಯವಸಾಯಂ ಚ ಧರ್ಮೇಷು ಕುಲಾಚಾರಂ ಚ ಲಕ್ಷಯೇ |
ಪ್ರತಿಪತ್ತಿಂ ಚ ಕೃಚ್ಛ್ರೇಷು ಶುಕ್ರಾಂಗಿರಸಯೋರಿವ |
ತಸ್ಮಾತ್ ಸುಭೃಶಮ್ಮೈಶ್ವರ್ಯಂ ತ್ವಯಿ ಧರ್ಮವತಾಂ ವರ ॥16॥
ಧರ್ಮದ ನಿಶ್ಚಯವನ್ನೂ,ನ ಕುಲಾಚಾರವನ್ನೂ ತಿಳಿದಿದ್ದೀಯೆ. ಶುಕ್ರ-ಬೃಹಸ್ಪತಿಗಳಂತೆ ಆಪತ್ತಿನಲ್ಲಿ ಮಾಡಬೇಕಾದ ಕರ್ತವ್ಯವನ್ನು ತಿಳಿದಿದ್ದೀಯೆ. ಆದ್ದರಿಂದ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ನಿನ್ನಲ್ಲಿ ಒಳ್ಳೆಯ ಪ್ರಭುತ್ವ ಶಕ್ತಿಯಿದೆ.
ವಕ್ಷ್ಯಾಮಿ ತ್ವಾಂ ಯಥಾ ಪ್ರಾಜ್ಞ ತಚ್ಛ್ರುತ್ವಾ ಕರ್ತುಮರ್ಹಸಿ |
ಮಮ ಪುತ್ರಸ್ತ ವ ಭ್ರಾತಾ ಯವೀಯಾನ್ ಕುಲವಂಶಭೃತ್ |
ಬಾಲ ಏವ ಗತಃ ಸ್ವರ್ಗಮಪುತ್ರಃ ಪುರುಷರ್ಷಭ ॥17॥
ಪ್ರಾಜ್ಞನೇ, ನಾನು ಹೇಳುವಂತೆ ನೀನು ಮಾಡಬೇಕು. ಪುರುಷರ್ಷಭನೇ, ನಿನ್ನ ತಮ್ಮನಾದ ಕುಲವಂಶಧರನಾದ ನನ್ನ ಪುತ್ರನು ಚಿಕ್ಕತನದಲ್ಲಿಯೇ ಮಕ್ಕಳಿಲ್ಲದೆ ಸ್ವರ್ಗವನ್ನು ಸೇರಿದ್ದಾನೆ.
ತಸ್ಯ ತೇ ಚ ಮಹಿಷ್ಯೌ ದ್ವೇಕಾಶಿರಾಜಸುತೇ ಶುಭೇ |
ರೂಪಯೌವನಸಂಪನ್ನೇ ಪುತ್ರಕಾಮೇ ಚ ಭಾರತ ॥18॥
ಎಲೈ ಭಾರತನೇ, ಕಾಶಿರಾಜನ ಮಕ್ಕಳಾದ ಅವನ ಇಬ್ಬರು ಮಹಿಷಿಯರೂ ಸಹ ರೂಪಯೌವನಸಂಪನ್ನರಾಗಿ ಮಗನನ್ನು ಬಯಸುತ್ತಾರೆ.
ಧರ್ಮಮೇತತ್ ಪರಂ ಜ್ಞಾತ್ವಾ ಸಂತಾನಾಯ ಕುಲಸ್ಯ ಚ |
ತಯೋರುತ್ಪಾದಯಾಪತ್ಯಂ ಸಂತಾನಕುಲವರ್ಧನಮ್ ॥19॥
ಸಂತಾನ ಮತ್ತು ಕುಲದ ದೃಷ್ಟಿಯಿಂದ ಇದು ಧರ್ಮವೆಂದು ತಿಳಿದು, ಅವರಲ್ಲಿ ಸಂತಾನವನ್ನು ಮತ್ತು ಕುಲವನ್ನು ಬೆಳೆಸುವಂತಹ ಮಗನನ್ನು ಪಡೆ.
ಮನ್ನಿಯೋಗಾನ್ಮಹಾಭಾಗ ಧರ್ಮ್ಯಂ ಕರ್ತುಮಿಹಾರ್ಹಸಿ |
ರಾಜನ್ ರಾಜ್ಯೇಽಭಿಷಿಂಚಸ್ವ ಭಾರತಾನನುಶಾಧಿ ಚ |
ದಾರಾಂಶ್ಚ ಕುರು ಕೌರವ್ಯ ಮಾ ತ್ವಂ ಹಿಂಸೀಃ ಪಿತಾಮಹಾನ್ ॥20॥
ಎಲೈ ಮಹಾನುಭಾವನೇ, ನನ್ನ ಆದೇಶದಂತೆ ನೀನು ಈ ಧರ್ಮಸಂಬಂಧಿಯಾದ ಕಾರ್ಯವನ್ನು ಮಾಡಬೇಕು. ರಾಜನಾಗಿ

ರಾಜ್ಯದಲ್ಲಿ ಅಭಿಷೇಕವನ್ನು ಮಾಡಿಕೋ. ಭಾರತವಂಶವನ್ನು ಪಾಲಿಸು. ಕೌರವ್ಯನೇ, ವಿವಾಹವನ್ನು ಮಾಡಿಕೋ, ಪಿತಾಮಹರನ್ನು ದುಃಖದಲ್ಲಿ ತಳ್ಳಬೇಡ.
ವೈಶಂಪಾಯನಃ
ತಥೋಚ್ಯಮಾನೋ ಮಾತ್ರಾ ಚ ಸುಹೃದ್ಭಿಶ್ಚ ಪರಂತಪಃ।
ಪ್ರತ್ಯುವಾಚ ಸ ಧರ್ಮಾತ್ಮಾ ಧರ್ಮಮೇವ ತತಃ ಪರಮ್ ॥21॥
ತಾಯಿಯಿಂದಲೂ ಮತ್ತು ಸುಹೃದರಿಂದಲೂ ಹೇಳಲ್ಪಟ್ಟ ಪರಂತಪನೂ, ಧರ್ಮಾತ್ಮನೂ ಆದ ಭೀಷ್ಮನು ಧರ್ಮವೇ ಶ್ರೇಷ್ಠವೆಂದು ಉತ್ತರವನ್ನು ಕೊಟ್ಟನು.
ಅಸಂಶಯಂ ಪರೋ ಧರ್ಮಸ್ತ್ವಯಾ ಮಾತಃ ಪ್ರಕೀರ್ತಿತಃ।
ರಾಜ್ಯಾರ್ಥೇ ನಾಭಿಷಿಂಚೇಯಂ ನೋಪೇಯಂ ಜಾತು ಮೈಥುನಮ್ ॥22॥
ತಾಯಿ, ನೀನು ನಿಶ್ಚಯವಾಗಿ ಶ್ರೇಷ್ಠವಾದ ಧರ್ಮವನ್ನು ಹೇಳಿದ್ದೀಯೆ. ಆದರೆ ರಾಜ್ಯದ ಸಲುವಾಗಿ ಅಭಿಷೇಕವನ್ನು ಮಾಡಿಕೊಳ್ಳುವುದಿಲ್ಲ. ಪುತ್ರನ ಸಲುವಾಗಿ ಮೈಥುನವನ್ನೂ ಮಾಡುವುದಿಲ್ಲ.
ಭವತ್ಯಾ ಮತಮಾಜ್ಞಾಯ ಕೃತಮೇತದ್ ವ್ರತಂ ಮಯಾ।
ಜಾನೀಷೇ ಯತ್ ತದಾ ವೃತ್ತಂ ಶುಲ್ಕಹೇತೋಸ್ತದಂತರೇ ॥23॥
ನಿನ್ನ ವಿವಾಹದ ಸಮಯದಲ್ಲಿ ಕನ್ಯಾಶುಲ್ಕದ ವಿಷಯದಲ್ಲಿ ಏನು ನಡೆಯಿತೆಂದು ನೀನು ತಿಳಿದಿದ್ದೀಯೆ. ನಾನು ನಿನ್ನ ಅಪೇಕ್ಷೆಯಂತೆಯೇ ಈ ವ್ರತವನ್ನು ಹಿಡಿದಿದ್ದೇನಷ್ಟೆ.
ಸ ಸತ್ಯವತಿ ಸತ್ಯೇನ ಪುನರೇವ ಬ್ರವೀಮಿ ತೇ।
ಪರಿತ್ಯಜೇಯಂ ತ್ರೈಲೋಕ್ಯಂ ರಾಜ್ಯಂ ದೇವೇಷು ವಾ ಪುನಃ।
ಯದ್ವಾ ಹ್ಯಧಿಕಾಮೇತಾಭ್ಯಾಂ ನ ತು ಸತ್ಯಂ ಕಥಂಚನ ॥24॥
ಸತ್ಯವತಿ ಪುನಃ ಸತ್ಯವಾದ ಈ ಮಾತನ್ನು ಹೇಳುತ್ತಿದ್ದೇನೆ. ನಾನು ತ್ರೈಲೋಕ್ಯ ರಾಜ್ಯವನ್ನಾಗಲೀ, ಅಥವಾ ದೇವರಾಜ್ಯವನ್ನಾಗಲೀ, ಅಥವಾ ಅದಕ್ಕಿಂತ ಹೆಚ್ಚಿನ ವಸ್ತುವನ್ನಾಗಲೀ ಬಿಟ್ಟೇನು. ಆದರೆ ಸತ್ಯವನ್ನು ಎಂದೂ ಬಿಡಲಾರೆ.
ತ್ಯಜೇಚ್ಚ ಪೃಥಿವೀ ಗಂಧಮಾಪಶ್ಚ ರಸಮಾತ್ಮಜಮ್।
ಜ್ಯೋತಿಸ್ತಥಾ ತ್ಯಜೇದ್ ರೂಪಂ ವಾಯುಸ್ಸ್ಪರ್ಶಗುಣಂ ತ್ಯಜೇತ್ ॥
ಪ್ರಭಾಮುತ್ಸೃಜೇದರ್ಕೋ ಧೂಮಕೇತುಸ್ತಥೋಷ್ಣತಾಮ್।
ತ್ಯಜೇಚ್ಛಬ್ದಂ ತಥಾಽಽಕಾಶಶ್ಚಂದ್ರಃ ಶೀತಾಂಶುತಾಂ ತ್ಯಜೇತ್ ॥26॥
ವೃತ್ರಹಾ ವಿಕ್ರಮಂ ಜಹ್ಯಾದ್ ಧರ್ಮಂ ಜಹ್ಯಾಚ್ಚ ಧರ್ಮರಾಟ್।
ನ ತ್ವಹಂ ಸತ್ಯಮುತ್ಸ್ರಷ್ಟುಂ ವ್ಯವಸ್ಯೇಯಂ ಕಥಂಚನ ॥27॥
ತನ್ನಜಾತ್ವನ್ಯಥಾ ಕುರ್ಯಾಂ ಲೋಕಾನಾಮಪಿ ಸಂಕ್ಷಯೇ।
ಅಮರತ್ವಸ್ಯ ವಾ ಹೇತೋಸ್ತ್ರೈಲೋಕ್ಯಸದನಸ್ಯ ವಾ ॥28॥
ಭೂಮಿಯು ಗಂಧವನ್ನು ತ್ಯಜಿಸಬಹುದು. ಜಲವು ತನ್ನ ಸ್ವಾಭಾವಿಕ ರಸವನ್ನು ತ್ಯಜಿಸಬಹುದು. ಅಗ್ನಿಯು ತನ್ನ ರೂಪವನ್ನೂ, ವಾಯುವು ತನ್ನ ಸ್ಪರ್ಶಗುಣವನ್ನೂ ತ್ಯಜಿಸಬಹುದು. ಸೂರ್ಯನು ತನ್ನ ದಹಿಸುವ ಶಕ್ತಿಯನ್ನೂ, ಅಗ್ನಿಯು ತನ್ನ ಉಷ್ಣತೆಯನ್ನೂ ತ್ಯಜಿಸಬಹುದು. ಆಕಾಶವು ಶಬ್ದವನ್ನೂ ತ್ಯಜಿಸಬಹುದು. ಚಂದ್ರನು ಶೀತಕಿರಣಗಳನ್ನೂ ತ್ಯಜಿಸಬಹುದು. ಇಂದ್ರನು ತನ್ನ ವಿಕ್ರಮವನ್ನೂ ತ್ಯಜಿಸಬಹುದು. ಯಮನು ತನ್ನ ಧರ್ಮವನ್ನೂ ತ್ಯಜಿಸಬಹುದು. ಆದರೆ ನಾನು ಯಾವ ಕಾರಣಕ್ಕೂ ಸತ್ಯವನ್ನು ತ್ಯಜಿಸಲು ಬಯಸುವುದಿಲ್ಲ. ಮೂರುಲೋಕಗಳು ನಾಶವಾದರೂ ಅಥವಾ ದೈವತ್ವವನ್ನು ಪಡೆಯುವ ಕಾರಣದಿಂದಲೂ ಅಥವಾ ಮೂರುಲೋಕದಲ್ಲಿ ಪ್ರತಿಷ್ಠಿತನಾಗುವ ಕಾರಣದಿಂದಲಾದರೂ ಸಹ ನಾನು ಅದನ್ನು ಎಂದೂ ವ್ಯತ್ಯಾಸ ಮಾಡುವುದಿಲ್ಲ.
ವೈಶಂಪಾಯನಃ
ತಥೋಚ್ಯಮಾನಾ ಪುತ್ರೇಣ ಧಾರ್ಮಿಕೇನ ಮಹಾತ್ಮನಾ।
ಮಾತಾ ಸತ್ಯವತೀ ಭೀಷ್ಮಂ ಪುನರೇವಾಭ್ಯಭಾಷತ ॥29॥
ಮಹಾತ್ಮನೂ, ಧಾರ್ಮಿಕನೂ ಆದ ಪುತ್ರನಿಂದ ಹೀಗೆ ಹೇಳಲ್ಪಟ್ಟವಳಾಗಿ, ತಾಯಿಯಾದ ಸತ್ಯವತಿಯು ಭೀಷ್ಮನನ್ನು ಕುರಿತು ಪುನಃ ಮಾತನಾಡಿದಳು.
ಅನುಜಾನೀಹಿ ಧರ್ಮಜ್ಞ ಸತ್ಯಂ ಸತ್ಯವತಾಂ ವರಃ।
ಇಚ್ಛನ್ ಸೃಜೇಥಾಸ್ತ್ರೀನ್ ಲೋಕಾನ್ಯನ್ಯಾಂಶ್ಚ ಸ್ವೇನ ತೇಜಸಾ ॥30॥
ಧರ್ಮಜ್ಞನೇ ಮತ್ತು ಸತ್ಯವಂತರಲ್ಲಿ ಶ್ರೇಷ್ಠನೇ, ಸತ್ಯವನ್ನು ಆಚರಿಸಲು ಅನುವು ಮಾಡಿಕೊಡು. ನೀನು ಇಚ್ಛೆಪಟ್ಟರೆ ನಿನ್ನ ಪರಾಕ್ರಮದಿಂದ ಮೂರು ಲೋಕಗಳನ್ನು ಮತ್ತು ಬೇರೆ ಯುಗಗಳನ್ನು ಸೃಷ್ಟಿಸಬಲ್ಲೆ.
ಜಾನಾಮಿ ಚೈವ ತತ್ ಸರ್ವಂ ಮದರ್ಥಂ ಯದಭಾಷಥಾಃ।
ಆಪದ್ಧರ್ಮಮವೇಕ್ಷಸ್ವ ವಹ ಪೈತಾಮಹೀಂ ಧುರಮ್ ॥31॥
ನೀನು ಹೇಳಿದ ಎಲ್ಲವನ್ನೂ ಮತ್ತು ಏತಕ್ಕೆ ಹಾಗೇ ಹೇಳಿದೆ ಎಂಬುದನ್ನು ನಾನು ತಿಳಿದಿದ್ದೇನೆ. ಅಪದ್ಧರ್ಮವನ್ನು ಗಮನಿಸು. ಪಿತಾಮಹರಿಂದ ಬಂದ ಜವಾಬ್ದಾರಿಯನ್ನು ವಹಿಸಿಕೋ.
ಯಥಾ ತು ನಃ ಕುಲಂ ಚೈವ ಲೋಕಶ್ಚ ನ ಪರಾಭವೇತ್।
ಸುಹೃದಶ್ಚ ಸಕಾಮಾ ಸ್ಯುಸ್ತಥಾ ತ್ವಂ ಕರ್ತುಮರ್ಹಸಿ।
ಆತ್ಮನಶ್ಚ ಹಿತಂ ತಾತ ಪ್ರಿಯಂ ಚ ಮಮ ಭಾರತ ॥32॥

ಎಲೈ ಭಾರತನೇ,  ಹೀಗೆ ಮಾಡಿದರೆ ನನ್ನ ಕುಲವು ನಮ್ಮ ಪ್ರಜೆಗಳು ಪರಾಭವವನ್ನು ಹೊಂದುವುದಿಲ್ಲವೋ, ನಿನಗೆ ಹಿತವಾಗುತ್ತದೆಯೋ, ನನಗೆ ಪ್ರಿಯವಾಗುತ್ತದೋ, ಹಾಗೂ ಕೌರವರು ತಮ್ಮ ಆಸೆಯನ್ನು ಪೂರೈಸಿಕೊಂಡು ಸಂತೋಷಪಡುತ್ತಾರೋ, ಅಂತಹ ಕಾರ್ಯವನ್ನು ನೀನು ಮಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಯೋತ್ತರಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕಪಂಚಾಶತ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಮೂರನೆಯ ಅಧ್ಯಾಯ ಮುಗಿಯಿತು.
*****
ನೂರನಾಲ್ಕನೆಯ ಅಧ್ಯಾಯ
(ಭೀಷ್ಮರಿಂದ ಸತ್ಯವತಿಯನ್ನು ಕುರಿತು ದಿರ್ಘತಮಸರ ಚರಿತ್ರಕಥನ)
ವೈಶಂಪಾಯನಃ
ತಾಂ ತು ಲಾಲಪತೀಂ ದೃಷ್ಟ್ವಾ ಕೃಪಣಾಂ ಪುತ್ರಗೃದ್ಧಿನೀಮ್ |
ಧರ್ಮಾದಪೇತಂ ಬ್ರುವತೀಂ ಭೀಷ್ಮೋ ವಚನಮಬ್ರವೀತ್ ॥1॥
ಮಕ್ಕಳನ್ನು ಪಡೆಯುವ ಆಸೆಯಿಂದ ಕಾರ್ಪಣ್ಯದಿಂದ ಕೂಡಿದವಳಾಗಿ  ಧರ್ಮಸಮ್ಮತವಲ್ಲದ ಮಾತುಗಳನ್ನು ಬಹುವಾಗಿ ಆಡುತ್ತಿದ್ದಂತಹ ಆ ಸತ್ಯವತಿಯನ್ನು ಕುರಿತು ಭೀಷ್ಮರು ಮಾತನಾಡಿದರು.
ಕ್ಷತ್ರಧರ್ಮಮವೇಕ್ಷಸ್ವ ಮಾ ನಃ ಸರ್ವಾನ್ ವ್ಯನೀನಶಃ |
ಧಾರಣೇನ ವ್ರತಸ್ಯಾಹುಃ ಕ್ಷತ್ರಿಯಾಃ ಪರಮಾಂ ದ್ಯುತಿಮ್ ॥2॥
ತಾಯಿ, ಕ್ಷತ್ರಿಯ ಧರ್ಮವನ್ನು ಗಮನಿಸು. ನಮ್ಮೆಲ್ಲರನ್ನೂ ನಾಶಮಾಡಬೇಡ. ವ್ರತವನ್ನು ಧಾರಣೆ ಮಾಡುವುದರಿಂದ ಕ್ಷತ್ರಿಯರಿಗೆ ಶ್ರೇಷ್ಠವಾದ ತೇಜಸ್ಸು ಬರುವುದೆಂದು ಜ್ಞಾನಿಗಳು ಹೇಳುತ್ತಾರೆ.
ಶಂತನೋರಪಿ ಸಂತಾನೋ ಯಥಾ ಸ್ಯಾತ್ ಪುನರೇವ ಹಿ |
ಕ್ಷತ್ರಧರ್ಮಂ ಪ್ರವಕ್ಷ್ಯಾಮಿ ಕ್ಷತ್ರಿಯಾಣಾಂ ಪುರಾತನಮ್ ॥3॥
ಹೇಗೆ ಮಾಡಿದರೆ ಶಂತನುವಿನ ವಂಶವು ಪುನಃ ಅಭಿವೃದ್ಧಿಯನ್ನು ಹೊಂದುವುದೋ, ಅಂತಹ ಪುರಾತನವಾದ ಕ್ಷತ್ರಿಯಧರ್ಮವನ್ನು ಹೇಳುವೆನು, ಕೇಳು.
ಶ್ರುತ್ವಾ ತಂ ಪ್ರತಿಪದ್ಯೇಥಾಃ ಪ್ರಾಜ್ಞೈಃ ಸಹ ಪುರೋಹಿತೈಃ |
ಆಪದ್ಧರ್ಮೇಷು ಕುಶಲೈರ್ಲೋಕತಂತ್ರಮವೇಕ್ಷ್ಯ ಚ ॥4॥
ಅದನ್ನು ಕೇಳಿ ಲೋಕಾಚಾರವನ್ನು ಗಮನಿಸಿ, ಆಪದ್ಧರ್ಮಗಳಲ್ಲಿ ಕುಶಲರಾದ ಪ್ರಾಜ್ಞರಾದ ಪುರೋಹಿತರ ಜೊತೆಯಲ್ಲಿ ವಿಚಾರ ಮಾಡು.
ಜಾಮದಗ್ನ್ಯೇನ ರಾಮೇಣ ಪಿತುರ್ವಧಮಮೃಷ್ಯತಾ |
ಪುರಾ ಪರಶುಹಸ್ತೇನ ಹೇಹಯಾಧಿಪತಿರ್ಹತಃ ॥5॥
ಹಿಂದೆ ಜಮದಗ್ನಿಗಳ ಮಗನಾದ ಪರಶುರಾಮನು ತಮ್ಮ ತಂದೆಯ ವಧೆಯಿಂದ ಕೋಪಗೊಂಡು, ಕೈಯಲ್ಲಿ ಪರಶುವನ್ನು ಹಿಡಿದು ಹೇಹಯಾಧಿಪತಿಯಾದ ಕಾರ್ತವೀರ್ಯಾರ್ಜುನನನ್ನು ಕೊಂದನು.
ಕ್ರುದ್ಧೇನ ಚ ಮಹಾಪ್ರಾಜ್ಞೇ ಹೇಹಯಸ್ಯ ಮಹಾತ್ಮನಃ |
ಶತಾನಿ ದಶ ಬಾಹೂನಾಂ ನಿಕೃತ್ತಾನ್ಯರ್ಜುನಸ್ಯ ವೈ॥6॥
ಮಹಾಪ್ರಾಜ್ಞೆ, ಕೋಪಗೊಂಡ ಪರಶುರಾಮನು ಮಹಾತ್ಮನಾದ ಹೇಹಯಾಧಿಪತಿಯಾದ ಅರ್ಜುನನ ಸಹಸ್ರಬಾಹುಗಳನ್ನು ಕತ್ತರಿಸಿದರು.
ಪುನಶ್ಚ ಧನುರಾದಾಯ ಮಹಾಸಶತ್ರಣಿ ವಿಮುಂಚತಾ |
ನಿರ್ದಗ್ಧಂ ಕ್ಷತ್ರಮೇಕೇನ ರಾಮೇಣ ಜಯತಾ ಮಹೀಮ್ ॥7॥
ಪುನಃ ಕೈಯಲ್ಲಿ ಧನುಸ್ಸನ್ನು ತೆಗೆದುಕೊಂಡು ದಿವ್ಯಾಸ್ತ್ರಗಳನ್ನು ಪ್ರಯೋಗಮಾಡುತ್ತಾ ಪರಶುರಾಮನು ಏಕಾಕಿಯಾಗಿ ಭೂಮಿಯನ್ನು ಗೆದ್ದು ಕ್ಷತ್ರಿಯಕುಲವನ್ನು ದಹನ ಮಾಡಿದನು.
ಏವಮುಚ್ಚಾವಚೈರಸ್ತ್ರೈರ್ಭಾರ್ಗವೇಣ ಮಹಾತ್ಮನಾ |
ತ್ರಿಃ ಸಪ್ತಕೃತ್ವಃ ರೋಷೇಣ ಕೃತಾ ನಿಃಕ್ಷತ್ರಿಯಾ ಮಹೀ ॥8॥
ಹೀಗೆ ಮಹಾತ್ಮನಾದ ಭಾರ್ಗವನಾದ ಪರಶುರಾಮನು ಶ್ರೇಷ್ಠವಾದ ಮತ್ತು ಕನಿಷ್ಠವಾದ ಅಸ್ತ್ರಗಳಿಂದ ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆಯನ್ನು ಮಾಡಿ, ಭೂಮಿಯ ಮೇಲೆ ಇದ್ದ ಕ್ಷತ್ರಿಯಕುಲವನ್ನು ಸಂಹರಿಸಿದನು.
ತತಸ್ತದ್ ವರ್ಧಿತಂ ಕ್ಷತ್ರಂ ಕ್ಷತ್ರಿಯಾಭಿಃ ಸಮಂತತಃ |
ಉತ್ಪಾದಿತಾನ್ಯಪತ್ಯಾನಿ ಬ್ರಾಹ್ಮಣೈಭ್ಯ ಇತಿ ಶ್ರುತಮ್ ॥9॥
ಆಗ ಕ್ಷತ್ರಿಯಸ್ತ್ರೀಯರು ಬ್ರಾಹ್ಮಣರಿಂದ ಮಕ್ಕಳನ್ನು ಪಡೆದು, ಕ್ಷತ್ರಿಯಕುಲವನ್ನು ಪುನಃ ಅಭಿವೃದ್ಧಿಪಡಿಸಿದರು ಎಂದು ನಾನು ಕೇಳಿದ್ದೇನೆ.
ಪಾಣೌ ಗೃಹೀತಃ ಪುತ್ರೇತಿ ವೇದೇ ಚ ಕಥಿತಂ ಭೃಶಮ್ |
ಧರ್ಮಂ ಮನಸಿ ಸಂಸ್ಥಾಪ್ಯ ಬ್ರಾಹ್ಮಣಾಂಸ್ತಾಃ ಸಮಭ್ಯಯುಃ |
ಲೋಕೇಽಪ್ಯಾಚರಿತೋ ದೃಷ್ಟಃ ಕ್ಷತ್ರಿಯಾಣಾಂ ಪುನರ್ಭವಃ ॥10॥
ದಾನರೂಪವಾಗಿ ಸ್ವೀಕರಿಸಿದ ಪುತ್ರನು ಪುನ್ನಾಮ ನರಕದಿಂದ ರಕ್ಷಿಸುತ್ತಾನೆ. ಹೀಗಿರುವಾಗ ಹೊಟ್ಟೆಯಲ್ಲಿ ಹುಟ್ಟಿದ ಮಗನು

ರಕ್ಷಿಸುವುದರಲ್ಲಿ ಏನು ಸಂಶಯ ಎಂಬ ವೇದದ ಮಾತನ್ನು ಚೆನ್ನಾಗಿ ಗಮನಿಸಿ, ಧರ್ಮದಲ್ಲಿ ಮನಸ್ಸಿಟ್ಟು ಕ್ಷತ್ರಿಯಸ್ತ್ರೀಯರು ಬ್ರಾಹ್ಮಣರ ಬಳಿಗೆ ಹೋದರು. ಕ್ಷತ್ರಿಯಸ್ತ್ರೀಯರು ಪುನಃ ವಿವಾಹ ಮಾಡಿಕೊಳ್ಳುವುದು ಲೋಕದಲ್ಲಿಯೂ ನಡೆದು ಬಂದ ಆಚಾರವಾಗಿದೆ.

ಅಥೋಚಥ್ಯ ಇತಿ ಖ್ಯಾತ ಆಸೀದ್ ಧೀಮಾನ್ ಮಹಾನೃಷಿಃ |
ಭಾರ್ಯಾ ಚ ಮಮತಾ ನಾಮ ಬಭೂವಾಸ್ಯ ಮಹಾತ್ಮನಃ ॥11॥

ಅಲ್ಲದೇ, ಮಹಾತಪಸ್ವಿಗಳೂ ಮತ್ತು ಮೇಧಾವಿಗಳೂ ಆದ ಉಚಥ್ಯರೆಂಬ ಋಷಿಗಳಿದ್ದರು. ಆ ಮಹಾತ್ಮರಿಗೆ `ಮಮತಾ' ಎಂಬ ಪತ್ನಿಯಿದ್ದಳು.

ಉಚಥ್ಯಸ್ಯ ಯವೀಯಾಂಸ್ತು ಪುರೋಧಾ ಯೋ ದಿವೌಕಸಾಮ್ |
ಬೃಹಸ್ಪತಿರ್ಮಹಾತೇಜಾ ಮಮತಾಂ ಸೋಽಭ್ಯಮನ್ಯತ ॥12॥

ದೇವತೆಗಳ ಪುರೋಹಿತರಾದ ಬೃಹಸ್ಪತ್ಯಾಚಾರ್ಯರು ಉಚಥ್ಯರ ತಮ್ಮಂದಿರು. ಅವರು ಮಮತೆಯನ್ನು ಕಾಮಿಸಿದರು.

ಉವಾಚ ಮಮತಾ ತಂ ತು ದೇವರಂ ದೈವತಾತ್ ಪರಮ್ |
ಅಂತರ್ವತ್ನ್ಯಸ್ಮಿ ತೇ ಭ್ರಾತ್ರಾ ಜ್ಯೇಷ್ಠೇನ ರಮತಾ ಮಯಿ ॥13॥

ದೇವತೆಗಳಿಗಿಂತ ಶ್ರೇಷ್ಠವಾದ ತನ್ನ ಮೈದುನನನ್ನು ಕುರಿತು ಮಮತೆಯು ನಿಮ್ಮ ಅಣ್ಣನ ಜೊತೆಯಲ್ಲಿ ರಮಿಸಿ, ನಾನು ಗರ್ಭಿಣಿಯಾಗಿದ್ದೇನೆ ಎಂದು ಹೇಳಿದಳು.

ಅಯಂ ಚ ಮೇ ಮಹಾಭಾಗ ಕುಕ್ಷಾವೇವ ಬೃಹಸ್ಪತೇ |
ಔಚಥ್ಯೋ ಗರ್ಭ ಆದತ್ತೇ ಷಡಂಗಂ ವೇದಮುತ್ತಮಮ್ ॥14॥
ಅಮೋಘರೇತಾಸ್ತ್ವಂ ಚಾಪಿ ನೂನಂ ಭವಿತುಮರ್ಹಸಿ |
ತಸ್ಮಾದೇವಂ ಗತೇ ಕಾರ್ಯೇ ಯಥಾ ಯುಕ್ತಂ ತಥಾ ಕುರು ॥15॥

ಎಲೈ ಮಹಾನುಭಾವರಾದ ಬೃಹಸ್ಪತಿಗಳೇ, ಉಚಥ್ಯರ ಮಗನಾಗಿ ನನ್ನ ಗರ್ಭದಲ್ಲಿರುವ ಈ ಶಿಶುವು ಗರ್ಭದಲ್ಲಿಯೇ ಷಡಂಗ ಸಹಿತವಾದ ಉತ್ತಮವಾದ ವೇದವನ್ನು ಅಧ್ಯಯನ ಮಾಡುತ್ತಿದೆ. ನೀವಾದರೂ ಅಮೋಘವಾದ ರೇತಸ್ಸುಳ್ಳವರು ಎಂಬುದು ನಿಶ್ಚಯ. ಪರಿಸ್ಥಿತಿಯು ಹೀಗಿರುವಾಗ ಯಾವುದು ಯುಕ್ತವೆಂದು ತಿಳಿದು, ಅದರಂತೆ ನಡೆದುಕೊಳ್ಳಿ.

ವೈಶಂಪಾಯನಃ

ಏವಮುಕ್ತಸ್ತಯಾ ಸಮ್ಯಗ್ ಬೃಹತ್ತೇಜಾ ಬೃಹಸ್ಪತಿಃ |
ಕಾಮಾತ್ಮಾನಂ ಮಹಾತ್ಮಾಽಪಿ ನಾತ್ಮಾನಂ ಸೋಽಭ್ಯಧಾರಯತ್ ॥16॥

ಮಮತೆಯಿಂದ ಹೀಗೆ ಹೇಳಲ್ಪಟ್ಟ ಮಹಾತೇಜಸ್ವಿಗಳಾದ ಬೃಹಸ್ಪತಿಗಳು ಮಹಾತ್ಮರಾದರೂ ಸಹ ತಮ್ಮ ಮನಸ್ಸಿನ ಕಾಮವನ್ನು ನಿಯಂತ್ರಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ಸಂ ಬಭೂವ ತತಃ ಕಾಮೀ ತಯಾ ಸಾರ್ಧಮಕಾಮಯಾ |
ಉತ್ಸೃಜಂತಂ ತು ತತ್ತೇಜೋ ಗರ್ಭಸ್ಥೋ ಹ್ಯಭ್ಯಭಾಷತ ॥17॥

ಮಮತೆಗೆ ಇಷ್ಟವಿಲ್ಲದಿದ್ದರೂ ಕಾಮಿಯಾದ ಅವರು ಮಮತೆಯ ಸಮಾಗಮವನ್ನು ಮಾಡಿದರು. ಅವರು ರೇತಸ್ಸನ್ನು ಉತ್ಸರ್ಜನ ಮಾಡುವ ಸಮಯದಲ್ಲಿ ಗರ್ಭದಲ್ಲಿದ್ದ ಶಿಶುವು ಅವರನ್ನು ಕುರಿತು ಹೇಳಿತು -

ಕನೀಯಸ್ತಾತ ನೈವೇಹ ಸಂಭವೋ ವಿದ್ಯತೇ ದ್ವಯೋಃ |
ಅಮೋಘಶುಕ್ಲಸ್ತ್ವಂ ಚಾಪಿ ಪೂರ್ವಂ ಚಾಹಮಿಹಾಗತಃ ॥18॥

ಚಿಕ್ಕಪ್ಪ ಇಲ್ಲಿ ಇಬ್ಬರಿಗೆ ಸ್ಥಳವಿಲ್ಲ. ನಿಮ್ಮ ರೇತಸ್ಸು ಅಮೋಘವಾದುದು. ನಾನು ಮೊದಲೇ ಇಲ್ಲಿ ಬಂದಿದ್ದೇನೆ.

ಭೀಷ್ಮಃ

ಶಶಾಪ ತಂ ತತಃ ಕ್ರುದ್ಧ ಏವಮುಕ್ತೋ ಬೃಹಸ್ಪತಿಃ |
ಪುತ್ರಂ ಭ್ರಾತುರುಚಥ್ಯಸ್ಯ ಗರ್ಭಸ್ಥಂ ಭಗವಾನ್ ಋಷಿಃ ॥19॥

ಹೀಗೆ ಹೇಳಲ್ಪಟ್ಟ ಬೃಹಸ್ಪತಿಗಳು ಕೋಪಗೊಂಡು ಗರ್ಭದಲ್ಲಿದ್ದ ಉಚಿಥ್ಯರ ಪುತ್ರನಿಗೆ ಶಾಪವನ್ನು ಕೊಟ್ಟರು.

ಬೃಹಸ್ಪತಿಃ

ಯಸ್ಮಾತ್ ತ್ವಮೀದೃಶೇ ಕಾಲೇ ಸರ್ವಭೂತೇಪ್ಸಿತೇ ಸತಿ |
ಏವಮಾತ್ಥ ವಚಸ್ತಸ್ಮಾತ್ ತಮೋ ದೀರ್ಘಂ ಪ್ರವೇಕ್ಷ್ಯತಿ ॥20॥

ಎಲ್ಲ ಪ್ರಾಣಿಗಳಿಗೂ ಹಿತವಾದ ಇಂತಹ ಸಂಭೋಗಕಾಲದಲ್ಲಿ ನೀನು ನನ್ನನ್ನು ನಿಷೇಧ ಮಾಡುತ್ತಿರುವುದರಿಂದ ನೀನು ಕುರುಡನಾಗುವಿ.

ತತೋ ದೀರ್ಘತಮಾ ನಾಮ ಶಾಪಾದೃಷಿರಜಾಯತ |
ಬೃಹಸ್ಪತೇರ್ಬೃಹತ್ಕೀರ್ತೇರ್ಬೃಹಸ್ಪತಿರಿವೌಜಸಾ ॥21॥

ಅನಂತರ ಮಹಾಕೀರ್ತಿಯುಳ್ಳ ಬೃಹಸ್ಪತಿಗಳ ಶಾಪದಿಂದ ಬೃಹಸ್ಪತಿಗಳಂತೆಯೇ ಸಾಮರ್ಥ್ಯವನ್ನು ಹೊಂದಿದ್ದ `ದೀರ್ಘತಮ' ಋಷಿಗಳು ಜನಿಸಿದರು.

ಜಾತ್ಯಂಧೋ ವೇದವಿತ್ ಪ್ರಾಜ್ಞಃ ಪತ್ನೀಂ ಲೇಭೇ ಸ್ವವಿದ್ಯಯಾ |
ತರುಣೀಂ ರೂಪಸಂಪನ್ನಾಂ ದ್ವಿಷಂತೀಂ ನಾಮ ಬ್ರಾಹ್ಮಣೀಮ್ ॥22॥

ವೇದಜ್ಞರೂ ಮತ್ತು ಹುಟ್ಟುಕುರುಡರೂ ಆದ ಅವರು ರೂಪಸಂಪನ್ನಳಾದ ಯುವತಿಯಾದ `ದ್ವಿಷಂತೀ' ಎಂಬ ಬ್ರಾಹ್ಮಣ ಕನ್ಯೆಯನ್ನು ತಮ್ಮ ವಿದ್ಯೆಯ ಬಲದಿಂದ ಪತ್ನಿಯಾಗಿ ಪಡೆದರು.

ಋಷೇರುಚಥ್ಯಸ್ಯ ಮಹಾನ್ ಸಂತಾನಕುಲವೃದ್ಧಯೇ |
ಸ ಪುತ್ರಾನ್ ಜನಯಾಮಾಸ ಗೌತಮಾದೀನ್ ಮಹಾಯಶಾಃ ॥23॥
ಮಹಾತ್ಮರೂ, ಮಹಾಕೀರ್ತಿವಂತರೂ ಆದ ಅವರು ಉಚಥ್ಯರ ಕುಲದ ಅಭಿವೃದ್ಧಿಗಾಗಿ ಗೌತಮ ಮೊದಲಾದ ಮಕ್ಕಳನ್ನು ಪಡೆದರು.
ಪುತ್ರಲಾಭಾಚ್ಚ ಸಾ ಪತ್ನೀ ನ ತುತೋಷ ಪತಿಂ ತದಾ |
ಪ್ರದ್ವಿಷಂತೀಂ ಪತಿರ್ಭಾರ್ಯಾಂ ಕಿಂ ಮಾಂ ದ್ವೇಕ್ಷೀತಿ ಚಾಬ್ರವೀತ್ ॥
ಮಕ್ಕಳನ್ನು ಪಡೆದರೂ ಪತ್ನಿಯು ಸಂತೋಷಪಡಲಿಲ್ಲ. ಆಗ ದೀರ್ಘತಮರು ಪತ್ನಿಯಾದ ಪ್ರದ್ವಿಷಂತಿಯನ್ನು ಕುರಿತು, ನನ್ನನ್ನು ಏಕೆ ದ್ವೇಷಿಸುತ್ತೀಯೇ ಎಂದು ಕೇಳಿದರು.
ಪ್ರದ್ವಿಷಂತೀ
ಭಾರ್ಯಾಯಾ ಭರಣಾದ್ ಭರ್ತಾ ಪಾಲನಾಚ್ಚ ಪತಿಃ ಸ್ಮೃತಃ |
ಅಹಂ ತೇ ಭರಣಂ ಕೃತ್ವಾ ಜಾತ್ಯಂಧಂ ಸಸುತಾ ಸದಾ |
ನಿತ್ಯಕಾಲಂ ಶ್ರಮೇಣಾರ್ತಾ ನ ಭರೇಯಂ ಮಹಾತಪಃ ॥25॥
ಹೆಂಡತಿಯನ್ನು ಭರಣ ಮಾಡುವುದರಿಂದ (ಪೋಷಿಸುವುದರಿಂದ) ಪುರುಷನಿಗೆ `ಭರ್ತಾ' ಎಂದೂ ಪಾಲನೆ ಮಾಡುವುದರಿಂದ `ಪತಿ'ಯೆಂದೂ ಕರೆಯುತ್ತಾರೆ. ನಾನು ಮತ್ತು ನನ್ನ ಮಕ್ಕಳು ಯಾವಾಗಲೂ ನಿನ್ನ ಭರಣವನ್ನು ಮಾಡುತ್ತಾ, ಶ್ರಮದಿಂದ ಬಳಲಿದ್ದೇವೆ. ಮಹಾತಪಸ್ವಿಯೇ, ಇನ್ನು ಮುಂದೆ ನಿನ್ನನ್ನು ಭರಣ ಮಾಡುವುದಿಲ್ಲ.
ಭೀಷ್ಮಃ
ತಸ್ಯಾಸ್ತದ್ವಚನಂ ಶ್ರುತ್ವಾ ಋಷಿಃ ಕೋಪಸಮನ್ವಿತಃ |
ಪ್ರತ್ಯುವಾಚ ತತಃ ಪತ್ನೀಂ ಪ್ರದ್ವೇಷೀಂ ಸಸುತಾಂ ತದಾ |
ನೀಯತಾಂ ಕ್ಷತ್ರಿಯಗೃಹಂ ಧನಾರ್ಥೀ ತ್ವಂ ಭವಿಷ್ಯಸಿ ॥26॥
ಅವಳ ಆ ಮಾತನ್ನು ಕೇಳಿ, ಕೋಪಗೊಂಡ ಋಷಿಗಳು ಮಕ್ಕಳ ಜೊತೆಯಲ್ಲಿದ್ದ ದ್ವಿಷಂತಿಯನ್ನು ಕುರಿತು ಹೇಳಿದರು. ನಿನಗೆ ಧನದ ಆಸೆಯಿದೆ. ಮಕ್ಕಳೇ ಇವಳನ್ನು ರಾಜನ ಮನೆಗೆ ಕರೆದುಕೊಂಡು ಹೋಗಿ. (ಎಂದು ಹೇಳಿದರು)
ಪತ್ನೀ
ತ್ವಯಾ ದತ್ತಂ ಧನಂ ವಿಪ್ರ ನೇಚ್ಛೇಯಂ ದುಃಖಕಾರಕಮ್ |
ಯಥೇಷ್ಟಂ ಕುರು ವಿಪ್ರೇಂದ್ರ ನ ಭರೇಯಂ ಯಥಾ ಪುರಾ ॥27॥
ಬ್ರಾಹ್ಮಣನೇ, ನೀನು ಕೊಡುವ ದುಃಖಪ್ರದವಾದ ಧನವನ್ನು ನಾನು ಬಯಸುವುದಿಲ್ಲ. ವಿಪ್ರೇಂದ್ರನೇ, ನಿನಗೆ ಇಷ್ಟಬಂದಂತೆ ಮಾಡು. ಮೊದಲಿನಂತೆ ನಾನು ನಿನ್ನನ್ನು ಪೋಷಿಸುವುದಿಲ್ಲ.
ದೀರ್ಘತಮಾಃ
ಅದ್ಯಪ್ರಭೃತಿ ಮರ್ಯಾದಾ ಮಯಾ ಲೋಕೇ ಪ್ರತಿಷ್ಠಿತಾ |
ಏಕ ಏವ ಪತಿಃ ಪತ್ನ್ಯಾ ಯಾವಜ್ಜೀವಂ ಪರಾಯಣಮ್ ॥28॥
ಇಂದಿನಿಂದ ನಾನು ಲೋಕದಲ್ಲಿ ಧರ್ಮಮರ್ಯಾದೆಯನ್ನು ಪ್ರತಿಷ್ಠಾಪಿಸುತ್ತೇನೆ. ಬದುಕಿರುವವರೆಗೂ ಒಬ್ಬ ಪತ್ನಿಗೆ ಒಬ್ಬ ಪತಿಯೇ ಆಶ್ರಯನಾಗಿರುತ್ತಾನೆ.
ಮೃತೇ ಜೀವತಿ ವಾ ತಸ್ಮಿನ್ ನ ಪರಂ ಪ್ರಾಪ್ನುಯಾನ್ನರಮ್ |
ಅಭಿಗಮ್ಯ ಪರಂ ನಾರೀ ಪತಿಷ್ಯತಿ ನ ಸಂಶಯಃ ॥29॥
ಅವನು ಜೀವಿಸಿರುವಾಗ, ಅಥವಾ ಮೃತನಾದ ಮೇಲೆ ಪತ್ನಿಯು ಇನ್ನೊಬ್ಬನ ಸಹವಾಸವನ್ನು ಮಾಡಿದರೆ ಅವಳು ಪತಿತಳಾಗುವಳು ಎಂಬ ವಿಷಯದಲ್ಲಿ ಸಂಶಯವಿಲ್ಲ.
ಅಪತೀನಾಂ ತು ನಾರೀಣಾಮದ್ಯಪ್ರಭೃತಿ ಪಾತಕಮ್ |
ಯದ್ಯಸ್ತಿ ಚೇದ್ ಧನಂ ಸರ್ವಂ ವೃಥಾಭೋಗಾ ಭವಂತು ತಾಃ |
ಅಕೀರ್ತಿಃ ಪರಿವಾದಾಶ್ಚ ನಿತ್ಯಂ ತಾಸಾಂ ಭವಂತ್ವಿತಿ ॥30॥
ಪತಿಯಿಲ್ಲದ ನಾರಿಯರಿಗೆ ಇಂದಿನಿಂದ ಪಾತಕವುಂಟಾಗುತ್ತದೆ. ಅವರಿಗೆ ಒಂದು ಪಕ್ಷ ಧನವಿದ್ದರೆ ಅದೆಲ್ಲಾ ವ್ಯರ್ಥಭೋಗದಲ್ಲಿ ವ್ಯಯವನ್ನು ಹೊಂದಲಿ. ಅವರಿಗೆ ನಿತ್ಯವೂ ಅಪಕೀರ್ತಿಯೂ ಮತ್ತು ನಿಂದನೆಗಳೂ ಉಂಟಾಗಲಿ.
ಭೀಷ್ಮಃ
ತಸ್ಯ ತದ್ವಚನಂ ಶ್ರುತ್ವಾ ಬ್ರಾಹ್ಮಣೀ ಭೃಶಕೋಪಿತಾ |
ಗಂಗಾಯಾಂ ನೀಯತಾಮೇಷ ಪುತ್ರಾ ಇತ್ಯೇವಮಬ್ರವೀತ್ ॥31॥
ಅವರ ಆ ಮಾತನ್ನು ಕೇಳಿ ಬಹಳ ಸಿಟ್ಟಾದ ಪತ್ನಿಯು ಮಕ್ಕಳನ್ನು ಕುರಿತು, ಮಕ್ಕಳೇ, ಇವರನ್ನು ಗಂಗೆಗೆ ಕರೆದುಕೊಂಡು ಹೋಗಿ ಬಿಟ್ಟು ಬಿಡಿ ಎಂದು ಹೇಳಿದಳು.
ಲೋಭಮೋಹಾಭಿಭೂತಾಸ್ತೇ ಪುತ್ರಾಸ್ತಂ ಗೌತಮಾದಯಃ
ಕಾಷ್ಠೇ ಸಮ್ಮುದ್ಗೇ ಪ್ರಕ್ಷಿಪ್ಯ ಗಂಗಾಯಾಂ ಸಮವಾಸೃಜನ್ ॥32॥
ಲೋಭಕ್ಕೂ, ಮೋಹಕ್ಕೂ ಒಳಗಾದ ಆ ಗೌತಮ ಮೊದಲಾದ ಪುತ್ರರು ಕಟ್ಟಿಗೆಗಳಿಂದ ಒಂದು ತೆಪ್ಪವನ್ನು ಮಾಡಿ, ಅವರನ್ನು ಅದರಲ್ಲಿ ಕೂಡಿಸಿ ಗಂಗೆಯಲ್ಲಿ ತೇಲಿಬಿಟ್ಟರು.
ನ ಸ್ಯಾದಂಧಶ್ಚ ವೃದ್ಧಶ್ಚ ಭರ್ತವ್ಯೋಽಯಮಿತಿ ಸ್ಮ ತೇ |
ಕರ್ಮಣ್ಯಥ ತತಃ ಕ್ರೂರೇ ತೇಷಾಂ ಬುದ್ಧಿರಜಾಯತ ॥33॥

ಇನ್ನು ಮುಂದೆ ಅಂಧನು ಮತ್ತು ವೃದ್ಧನಾದ ತಂದೆಯನ್ನು ಸಾಕುವ ಹೊಣೆ, ನಮಗಿರುವುದಿಲ್ಲ ಎಂದು ತಿಳಿದ ಅವರಿಗೆ ಈ ಕ್ರೂರಕರ್ಮವನ್ನು ಮಾಡುವ ಬುದ್ಧಿಯುಂಟಾಯಿತು.
ಚಿಂತಯಿತ್ವಾ ತತಃ ಕ್ರೂರಾಃ ಪ್ರತಿಜಗ್ಮುರ್ಯಥಾ ಗೃಹಾನ್ |
ಸೋಽನುಸ್ರೋತಸ್ತದಾ ರಾಜನ್ ಪ್ಲವಮಾನೋ ಮುನಿಸ್ತದಾ ||34||
ಹೀಗೆ ಆಲೋಚಿಸಿ, ಕ್ರೂರಕರ್ಮವನ್ನು ಮಾಡಿ, ಅವರು ತಮ್ಮ ಮನೆಗಳಿಗೆ ಹಿಂದಿರುಗಿದರು. ಎಲೈ ರಾಜನೇ, ದೀರ್ಘತಮ ಋಷಿಗಳಾದರೂ ಆ ಕಟ್ಟಿಗೆಯ ತೆಪ್ಪದಿಂದ ಗಂಗೆಯ ನೀರಿನಲ್ಲಿ ತೇಲುತ್ತಾ ಅನೇಕ ದೇಶಗಳನ್ನು ದಾಟಿ, ಮುಂದೆ ಹೋದರು.
ಜಗಾಮ ಸುಬಹೂನ್ ದೇಶಾನ್ ಅಂಧಸ್ತೇನೋಡುಪೇನ ಹ |
ತಂ ತು ರಾಜಾ ಬಲಿರ್ನಾಮ ಸರ್ವಧರ್ಮವಿಶಾರದಃ ||35||
ಅಪಶ್ಯನ್ಮಜ್ಜನಗತಃ ಸ್ರೋತಸಾಽಭ್ಯಾಶಮಾಗತಮ್ |
ಜಗ್ರಾಹ ಚೈನಂ ಧರ್ಮಾತ್ಮಾ ಬಲಿಃ ಸತ್ಯಪರಾಕ್ರಮಃ ||36||
ಸರ್ವಧರ್ಮವಿಶಾರದನಾದ `ಬಲಿ' ಎಂಬ ರಾಜನು ಗಂಗೆಯಲ್ಲಿ ಸ್ನಾನಕ್ಕಾಗಿ ಬಂದು ಪ್ರವಾಹದ ರಭಸದಿಂದ ದಡದ ಸಮೀಪಕ್ಕೆ ಬಂದಿದ್ದ ಆ ತೆಪ್ಪವನ್ನು ನೋಡಿ, ಸತ್ಯಪರಾಕ್ರಮನೂ, ಧರ್ಮಾತ್ಮನೂ ಆದ ಅವನು ದೀರ್ಘತಮನನ್ನು ಹಿಡಿದುಕೊಂಡನು.
ಜ್ಞಾತ್ವಾ ಚೈನಂ ವರಂ ವವ್ರೇ ಪುತ್ರಾರ್ಥೀ ಮನುಜರ್ಷಭ |
ತಂ ಪೂಜಯಿತ್ವಾ ರಾಜರ್ಷಿರ್ವಿಶ್ರಾಂತಂ ಮುನಿಮಬ್ರುವೀತ್ ||37||
ಎಲೈ ಮನುಜಶ್ರೇಷ್ಠನೇ, ಪುತ್ರಾರ್ಥಿಯಾದ ರಾಜರ್ಷಿಯಾದ ಅವನು ಅವರನ್ನು ಪೂಜಿಸಿ, ಅವರು ವಿಶ್ರಾಂತಿಯನ್ನು ಪಡೆದ ಮೇಲೆ, ಅವರನ್ನು ಕುರಿತು ಮಾತನಾಡಿದನು.
ಸಂತಾನಾರ್ಥಂ ಮಹಾಭಾಗ ಭಾರ್ಯಾಯಾಂ ಮಮ ಮಾನದ |
ಪುತ್ರಾನ್ ಧರ್ಮಾರ್ಥಕುಶಲಾನುತ್ಪಾದಯಿತುಮರ್ಹಸಿ ||38||
ಎಲೈ ಮಾನದರೇ ಮತ್ತು ಮಹಾನುಭಾವರೇ, ನನ್ನ ಕುಲದ ಸಂತಾನದ ಸಲುವಾಗಿ ಈ ನನ್ನ ಪತ್ನಿಯಲ್ಲಿ ಧರ್ಮಾರ್ಥಕುಶಲರಾದ ಮಕ್ಕಳನ್ನು ಪಡೆಯಬೇಕು.
ಭೀಷ್ಮಃ
ಏವಮುಕ್ತಃ ಸ ತೇಜಸ್ವೀ ತಂ ತಥೇತ್ಯುಕ್ತವಾನೃಷಿಃ |
ತಸ್ಮೈ ಸ ರಾಜಾ ಸ್ವಾಂ ಭಾರ್ಯಾಂ ಸುದೇಷ್ಣಾಂ ಪ್ರಾಹಿಣೋತ್ ತದಾ ||
ಹೀಗೆ ಹೇಳಲ್ಪಟ್ಟ ತೇಜಸ್ವಿಗಳಾದ ಆ ಋಷಿಗಳು ಹಾಗೆಯೇ ಆಗಲಿ ಎಂದು ಹೇಳಿದರು. ಆಗ ರಾಜನು ತನ್ನ ಭಾರ್ಯೆಯಾದ ಸುದೇಷ್ಣೆಯನ್ನು ಅವರ ಬಳಿಗೆ ಕಳುಹಿಸಿದನು.
ಅಂಧಂ ವೃದ್ಧಂ ತು ತಂ ಮತ್ವಾ ನ ಸಾ ದೇವೀ ಜಗಾಮ ಹ |
ಸ್ವಾಂ ತು ಧಾತ್ರೇಯಿಕಾಂ ತಸ್ಮೈ ವೃದ್ಧಾಯ ಪ್ರಾಹಿಣೋತ್ ತದಾ ||
ಋಷಿಗಳು ಅಂಧರು ಮತ್ತು ವೃದ್ಧರು ಎಂದು ಚಿಂತಿಸಿದ ಆ ದೇವಿಯು ಅವರ ಬಳಿಗೆ ಹೋಗಲಿಲ್ಲ. ಬದಲಾಗಿ ತನ್ನ ದಾಸಿಯ ಮಗಳನ್ನು ಆ ವೃದ್ಧರ ಬಳಿಗೆ ಕಳುಹಿಸಿಕೊಟ್ಟಳು.
ತಸ್ಯಾಂ ಕಕ್ಷೀವದಾದೀನ್ ಸ ಶೂದ್ರಯೋನಾವೃಷಿರ್ವಶೀ |
ಜನಯಾಮಾಸ ಧರ್ಮಾತ್ಮಾ ಪುತ್ರಾನೇಕಾದಶೈವ ತು ||41||
ಪ್ರಭಾವಶಾಲಿಗಳೂ, ಧರ್ಮಾತ್ಮರೂ ಆದ ಋಷಿಗಳು ಶೂದ್ರಯೋನಿಗೆ ಸೇರಿದ ಅವಳಲ್ಲಿ ಕಕ್ಷೀವಾನ್ ಮೊದಲಾದ ಹನ್ನೊಂದು ಮಕ್ಕಳನ್ನು ಪಡೆದರು.
ಕಕ್ಷೀವದಾದಿಕಾನ್ ಪುತ್ರಾನ್ ಸಾಂಗಾನ್ ವೇದಾನಧೀಯತಃ |
ಉವಾಚ ತಮೃಷಿಂ ರಾಜಾ ಮಮೈತ ಇತಿ ವೀರ್ಯವಾನ್ ||42||
ಕಕ್ಷೀವಾನ್ ಮೊದಲಾದವರು ದೀರ್ಘತಮರ ಬಳಿ ಸಾಂಗ ವೇದಾಧ್ಯಯನವನ್ನು ಮಾಡುತ್ತಿರುವುದನ್ನು ನೋಡಿ ರಾಜನು ಋಷಿಗಳನ್ನು ಕುರಿತು ಇವರು ನನ್ನ ಮಕ್ಕಳೆಂದು ಹೇಳಿದನು.
ನೇತ್ಯುವಾಚ ಮಹರ್ಷಿಸ್ತಂ ಮಮೈತ ಇತಿ ಚಾಬ್ರುವೀತ್ |
ಶೂದ್ರಯೋನೌ ಹಿ ಮೇ ಪುತ್ರಾ ಜಾತಾಃ ಕಕ್ಷೀವದಾದಯಃ ||43||
ಮಹರ್ಷಿಗಳು ಅಲ್ಲ, ಇವರು ನನ್ನ ಮಕ್ಕಳು. ಕಕ್ಷೀವಾನ್ ಮೊದಲಾದವರು ಶೂದ್ರಯೋನಿಯಲ್ಲಿ ಹುಟ್ಟಿದ ನನ್ನ ಮಕ್ಕಳು ಎಂದು ಹೇಳಿದರು.
ಅಂಧಂ ವೃದ್ಧಂ ಚ ಮಾಂ ದೃಷ್ಟ್ವಾ ಸುದೇಷ್ಣಾ ಮಹಿಷೀ ತವ |
ಪ್ರಾಹಿಣೋದವಮಾನಾನ್ಮೇ ಶೂದ್ರಾಂ ಧಾತ್ರೇಯಿಕಾಂ ಸ್ವಯಮ್ ||
ನಾನು ಅಂಧ ಮತ್ತು ವೃದ್ಧ ಎಂದು ಚಿಂತಿಸಿ, ನಿನ್ನ ರಾಣಿಯಾದ ಸುದೇಷ್ಣೆಯು ನನ್ನ ಬಳಿಗೆ ಬರಲಿಲ್ಲ. ನನ್ನನ್ನು ಅವಮಾನ ಮಾಡಲು ಶೂದ್ರಳಾದ ಅವಳ ದಾಸಿಯ ಮಗಳನ್ನು ತಾನೇ ನನ್ನ ಬಳಿಗೆ ಕಳುಹಿಸಿದಳು.
ತತಃ ಪ್ರಸಾದಯಾಮಾಸ ಪುನಸ್ತಮೃಷಿಸತ್ತಮಮ್ |
ಬಲಿಃ ಸುದೇಷ್ಣಾಂ ಭಾರ್ಯಾಂ ಚ ತಸ್ಮೈ ತಾಂ ಪ್ರಾಹಿಣೋತ್ ಪುನಃ ||45||
ಆಗ ರಾಜನು ಋಷಿಶ್ರೇಷ್ಠರನ್ನು ಪುನಃ ಪ್ರಸನ್ನೀಕರಿಸಿಕೊಂಡು ತನ್ನ ಪತ್ನಿಯಾದ ಸುದೇಷ್ಣೆಯನ್ನು ಅವರ ಬಳಿಗೆ ಕಳುಹಿಸಿದನು.
ತಾಂ ಸ ದೀರ್ಘತಮಾಂಗೇಷು ಸ್ಪೃಷ್ಟ್ವಾ ದೇವೀಮಥಾಬ್ರುವೀತ್ |
ಭವಿಷ್ಯತಿ ಕುಮಾರಸ್ತೇ ತೇಜಸ್ವೀ ಸತ್ಯವಾಗಿತಿ ||46||

ದೀರ್ಘತಮ ಋಷಿಗಳು ಆ ರಾಣಿಯ ದೇಹವನ್ನು ಸ್ಪರ್ಶ ಮಾಡಿ, ನಿನಗೆ ತೇಜಸ್ವಿಯೂ, ಸತ್ಯವಚನನೂ ಆದ ಮಗನು ಜನಿಸುವವನು ಎಂದು ಹೇಳಿದರು.
ತತ್ರಾಂಗೋ ನಾಮ ರಾಜರ್ಷಿಃ ಸುದೇಷ್ಣಾಯಾಮಜಾಯತ |
ಏವಮನ್ಯೇ ಮಹೇಷ್ವಾಸಾ ಬ್ರಾಹ್ಮಣೈಃ ಕ್ಷತ್ರಿಯಾ ಭುವಿ |
ಜಾತಾಃ ಪರಮಧರ್ಮಜ್ಞಾ ವೀರ್ಯವಂತೋ ಮಹಾಬಲಾಃ ॥47॥
ಆಗ ಸುದೇಷ್ಣೆಯಲ್ಲಿ `ಅಂಗ' ಎಂಬ ರಾಜರ್ಷಿಯು ಜನಿಸಿದನು. ಇನ್ನೂ ಎಷ್ಟೋ ಪರಮಧರ್ಮಜ್ಞರೂ, ವೀರ್ಯವಂತರೂ, ಮಹಾಬಲರೂ, ಧನುರ್ವಿದ್ಯಾಪಾರಂಗತರೂ ಆದ ಕ್ಷತ್ರಿಯರು ಬ್ರಾಹ್ಮಣರಿಂದ ಜನಿಸಿದ್ದಾರೆ.
ತಸ್ಮಾದ್ ಭರತವಂಶಸ್ಯ ಪುನಃ ಸಂತಾನವೃದ್ಧಯೇ |
ಹೇತುಂ ವಕ್ಷ್ಯಾಮ್ಯಹಂ ಸಮ್ಯಕ್ ನಿರ್ದೋಷಂ ನಾತ್ರ ಸಂಶಯಃ ॥
ಆದ್ದರಿಂದ ಪುನಃ ಭರತವಂಶದ ಸಂತಾನಾಭಿವೃದ್ಧಿಗಾಗಿ ನಿರ್ದುಷ್ಟವಾದ ಮತ್ತು ಸರಿಯಾದ ಉಪಾಯವನ್ನು ಸೂಚಿಸುವೆನು. ಇದರಲ್ಲಿ ಸಂಶಯವಿಲ್ಲ.
ಬ್ರಾಹ್ಮಣೋ ಗುಣವಾನ್ ಕಶ್ಚಿದ್ ಧನೇನಾಪ್ಯುಪಮಂತ್ರ್ಯತಾಮ್ |
ವಿಚಿತ್ರವೀರ್ಯಭಾರ್ಯಾಯಾಂ ಯಃ ಸಮುತ್ಪಾದಯೇತ್ ಪ್ರಜಾಃ |
ಏತಚ್ಛ್ರುತ್ವಾ ತ್ವಮಪ್ಯತ್ರ ಮಾತಃ ಕುರು ಯಥೇಪ್ಸಿತಮ್ ॥49॥
ವಿಚಿತ್ರವೀರ್ಯನ ಪತ್ನಿಯರಲ್ಲಿ ಪುತ್ರರನ್ನು ಉತ್ಪಾದಿಸುವ ಸಾಮರ್ಥ್ಯವುಳ್ಳ ಒಬ್ಬ ಗುಣವಂತನಾದ ಬ್ರಾಹ್ಮಣನನ್ನು, ಧನವನ್ನು ಕೊಟ್ಟಾದರೂ ಆಹ್ವಾನ ಮಾಡು. ಇದು ಉಪಾಯ. ತಾಯಿ, ಈ ಮಾತನ್ನು ಕೇಳಿ, ಈ ವಿಷಯದಲ್ಲಿ ನಿನಗೆ ಹೇಗೆ ಇಷ್ಟವೋ ಹಾಗೇ ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ದ್ವಿಪಂಚಾಶತ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಾನಾಲ್ಕನೆಯ ಅಧ್ಯಾಯ ಮುಗಿಯಿತು
* * * *
ನೂರೈದನೆಯ ಅಧ್ಯಾಯ
(ಕುಲವೃದ್ಧಿಗಾಗಿ ಭೀಷ್ಮ ಮತ್ತು ಸತ್ಯವತಿಯರ ಸಂವಾದ.)
ವೈಶಂಪಾಯನಃ
ಭೀಷ್ಮಸ್ಯ ವಚನಂ ಶ್ರುತ್ವಾ ಧರ್ಮಹೇತ್ವರ್ಥಸಂಯುತಮ್ |
ಮಾತಾ ಸತ್ಯವತೀ ಭೀಷ್ಮಂ ಪುನರೇವಾಭ್ಯಭಾಷತ ॥1॥
ಧರ್ಮಾರ್ಥಸಂಯುತವಾದ ಯುಕ್ತಿಯುತವಾದ ಭೀಷ್ಮರ ಮಾತುಗಳನ್ನು ಕೇಳಿ ತಾಯಿಯಾದ ಸತ್ಯವತಿಯು ಭೀಷ್ಮರನ್ನು ಕುರಿತು ಪುನಃ ಮಾತನಾಡಿದಳು.
ಔಚಥ್ಯಮಧಿಕೃತ್ಯೇದಮಂಗಂ ಚ ಯದುದಾಹೃತಮ್ |
ಪೌರಾಣಶ್ರುತಿರಸ್ಯೇಷಾ ಪ್ರಾಪ್ತಕಾಲಮಿದಂ ಕುರು ॥2॥
ಔಚಥ್ಯರನ್ನು ಕುರಿತು ಮತ್ತು ಅಂಗನನ್ನು ಕುರಿತು ನೀನು ಹೇಳಿದ ಈ ಪುರಾಣ ಘಟನೆಯು ಈ ಸಂದರ್ಭಕ್ಕೆ ಬಹಳ ಉಚಿತವಾಗಿದೆ. ನೀನು ಅದರಂತೆ ಮಾಡು.
ತ್ವಂ ಹಿ ಪುತ್ರಃ ಕುಲಸ್ಯಾದ್ಯ ಜ್ಯೇಷ್ಠಃ ಶ್ರೇಷ್ಠಶ್ಚ ಭಾರತ |
ಯಥಾ ಚ ತೇ ಪಿತುರ್ವಾಕ್ಯಂ ಮಮ ಕುರ್ಯಾಸ್ತಥಾಽನಘ ॥3॥
ಅನಘನೇ ಮತ್ತು ಭಾರತನೇ ನೀನು ಈ ಕುಲದ ಹಿರಿಯನಾದ ಮತ್ತು ಶ್ರೇಷ್ಠನಾದ ಪುತ್ರ. ತಂದೆಯ ವಾಕ್ಯವನ್ನು ಹೇಗೆ ನಡೆಸುತ್ತಿದ್ದಿಯೋ ಹಾಗೇ ನನ್ನ ಮಾತನ್ನೂ ನಡೆಸು.
ಮಮ ಪುತ್ರಸ್ತವ ಭ್ರಾತಾ ಯವೀಯಾನ್ ಸ ಪ್ರಿಯಶ್ಚ ತೇ |
ಬಾಲ ಏವ ಗತಃ ಸ್ವರ್ಗಂ ಭರತೋ ಭರತರ್ಷಭ ॥4॥
ನನ್ನ ಪುತ್ರನಾದ ನಿನ್ನ ತಮ್ಮನು ನಿನಗೆ ಪ್ರಿಯನಾಗಿದ್ದವನು. ಭರತರ್ಷಭನೇ, ಭರತವಂಶದಲ್ಲಿ ಜನಿಸಿದ ಅವನು ಬಾಲ್ಯದಲ್ಲಿಯೇ ಸ್ವರ್ಗವನ್ನು ಸೇರಿದನು.
ಇಮೇ ಮಹಿಷ್ಯೌ ತಸ್ಯೇಹ ಕಾಶಿರಾಜಸುತೇ ಉಭೇ |
ರೂಪಯೌವನಸಂಪನ್ನೇ ಪುತ್ರಕಾಮೇ ಚ ಭಾರತ ॥5॥
ಅವನ ಈ ಇಬ್ಬರು ಮಹಿಷಿಯರು ಕಾಶೀರಾಜಕುಮಾರಿಯರು. ಭಾರತನೇ, ಅವರು ರೂಪಯೌವನಸಂಪನ್ನರಾಗಿಯೂ, ಪುತ್ರಾಕಾಂಕ್ಷಿಗಳಾಗಿಯೂ ಇದ್ದಾರೆ.
ಧರ್ಮಮೇತಂ ಪರಂ ಜ್ಞಾತ್ವಾ ಸಂತಾನಾಯ ಕುಲಸ್ಯ ಚ |
ಆಭ್ಯಾಂ ಮಮ ನಿಯೋಗಾತ್ ತ್ವಂ ಧರ್ಮಂ ಚರಿತುಮರ್ಹಸಿ ॥6॥
ಕುಲದ ದೃಷ್ಟಿಯಿಂದ ಮತ್ತು ಸಂತಾನದ ದೃಷ್ಟಿಯಿಂದ ಇದು ಶ್ರೇಷ್ಠವಾದ ಕರ್ಮವೆಂದು ತಿಳಿದು, ನನ್ನ ಆದೇಶದಂತೆ ಇವರಿಬ್ಬರ ಜೊತೆಯಲ್ಲಿ ನೀನು ಧರ್ಮವನ್ನು ಆಚರಿಸಬೇಕು.
ಭೀಷ್ಮಃ
ಅಸಂಶಯಂ ಪರೋ ಧರ್ಮಸ್ತ್ವಯಾ ಮಾತಃ ಪ್ರಕೀರ್ತಿತಃ |

ತ್ವಮಪ್ಯೇತಾಂ ಪ್ರತಿಜ್ಞಾಂ ತು ವೇತ್ಥ ಯಾ ಪರಮಾ ಮಯಿ ॥7॥
ತಾಯಿ ನೀನು ಹೇಳಿದುದು ಶ್ರೇಷ್ಠವಾದ ಧರ್ಮ ಎಂಬುದರಲ್ಲಿ ಸಂಶಯವಿಲ್ಲ. ಆದರೆ ನಾನು ಮಾಡಿದ ಪರಮ ಪ್ರತಿಜ್ಞೆಯನ್ನೂ ನೀನು ತಿಳಿದಿರುವಿ.
ಜಾನೀಷ್ವ ಯತ್ ತದಾ ವೃತ್ತಂ ಶುಲ್ಕಹೇತೋಸ್ತ್ವದಂತಿಕೇ |
ಯತ್ ಸತ್ಯವತಿ ಸತ್ಯಂ ವೈ ಪುನರೇವ ಬ್ರವೀಮಿ ತೇ ॥8॥
ನಿನ್ನ ವಿವಾಹದ ಸಂದರ್ಭದಲ್ಲಿ ಕನ್ಯಾಶುಲ್ಕದ ಕಾರಣಕ್ಕಾಗಿ ನಿನ್ನ ಸಮೀಪದಲ್ಲಿ ಏನು ನಡೆಯಿತು ಎಂಬುದನ್ನು ಸ್ಮರಿಸಿಕೋ. ನನ್ನ ಸತ್ಯಪ್ರತಿಜ್ಞೆಯನ್ನು ಪುನಃ ನಿನ್ನೆದುರಿಗೆ ಉಚ್ಚರಿಸುತ್ತಿದ್ದೇನೆ. ಅದನ್ನು ಕೇಳು.
ತನ್ನ ಜಾತ್ವನ್ಯಥಾ ಕುರ್ಯಾಂ ಲೋಕಾನಾಮಪಿ ಸಂಕ್ಷಯೇ |
ಪರಿತ್ಯಜೇಯಂ ತ್ರೈಲೋಕ್ಯಂ ರಾಜ್ಯಂ ದೇವೇಷು ವಾ ಪುನಃ ॥9॥
ಯದ್ವಾಽಭ್ಯಧಿಕಮೇತಾಭ್ಯಾಂ ನ ಚ ಸತ್ಯಂ ಪರಿತ್ಯಜೇ |
ತ್ಯಜೇಚ್ಚ ಪೃಥಿವೀ ಗಂಧಮಾಪಶ್ಚ ರಸಮುತ್ಸೃಜೇತ್ ॥10॥
ಜ್ಯೋತಿಶ್ಚ ಪರಮಂ ರೂಪಂ ವಾಯುಃ ಸ್ಪರ್ಶಗುಣಂ ತ್ಯಜೇತ್ |
ತ್ಯಜೇಚ್ಚ ಘೋಷಮಾಕಾಶಃ ಸೋಮಃ ಶೀತತ್ವಮುತ್ಸೃಜೇತ್ ॥11॥
ಪ್ರತಾಪಮುತ್ಸೃಜೇದರ್ಕೋ ಧೂಮಕೇತುರಥೋಷ್ಣತಾಮ್ |
ವೃತ್ರಹಾ ವಿಕ್ರಮಂ ಜಹ್ಯಾದ್ ಧರ್ಮಂ ಜಹ್ಯಾತ್ ತು ಧರ್ಮರಾಟ್ ॥
ಅಮರತ್ವಸ್ಯ ವಾ ಹೇತೋಸ್ತ್ರೈಲೋಕ್ಯಸದನಸ್ಯ ವಾ |
ಉತ್ಸೃಜೇಯಮಹಂ ಪ್ರಾಣಾನ್ ನತು ಸತ್ಯಂ ಕಥಂಚನ ॥13॥
ಲೋಕಗಳು ಕ್ಷಯವಾದರೂ ಅದನ್ನು ನಾನು ವ್ಯತ್ಯಾಸ ಮಾಡುವುದಿಲ್ಲ. ನಾನು ತ್ರೈಲೋಕ್ಯಾಧಿಪತ್ಯವನ್ನಾಗಲೀ, ದೇವರಾಜ್ಯಾಧಿಪತ್ಯವನ್ನಾಗಲೀ ಅಥವಾ ಅದಕ್ಕಿಂತ ಮಿಗಿಲಾದ ಯಾವುದನ್ನಾದರೂ ಬಿಟ್ಟೇನು. ಆದರೆ ಸತ್ಯವನ್ನು ಮಾತ್ರ ಬಿಡುವುದಿಲ್ಲ. ಭೂಮಿಯು ಗಂಧವನ್ನು ಬಿಟ್ಟೀತು. ಜಲವು ರಸವನ್ನು ಬಿಟ್ಟೀತು. ಅಗ್ನಿಯು ತನ್ನ ಶ್ರೇಷ್ಠವಾದ ರೂಪವನ್ನು, ವಾಯುವು ತನ್ನ ಸ್ಪರ್ಶಗುಣವನ್ನು ಬಿಡಬಹುದು. ಆಕಾಶವು ಶಬ್ದವನ್ನು ತ್ಯಜಿಸಬಹುದು. ಚಂದ್ರನು ಶೀತಕಿರಣಗಳನ್ನು ತ್ಯಜಿಸಬಹುದು. ಸೂರ್ಯನು ತನ್ನ ಶಾಖವನ್ನು ತೊರೆಯಬಹುದು. ಅಗ್ನಿಯು ತನ್ನ ಉಷ್ಣತೆಯನ್ನು ತೊರೆಯಬಹುದು. ಇಂದ್ರನು ತನ್ನ ವಿಕ್ರಮವನ್ನೇ ತೊರೆಯಬಹುದು. ಯಮನು ಧರ್ಮವನ್ನೇ ತೊರೆಯಬಹುದು. ದೇವತ್ವದ ಸಲುವಾಗಿಯಾಗಲೀ, ಅಥವಾ ತ್ರೈಲೋಕ್ಯವಾಸದ ಸಲುವಾಗಿಯಾಗಲೀ, ನಾನು ಪ್ರಾಣವನ್ನು ಬೇಕಾದರೂ ಬಿಟ್ಟೇನು. ಸತ್ಯವನ್ನು ಎಂದೂ ಬಿಡಲಾರೆ.
ಸತ್ಯವತೀ
ಜಾನಾಮಿ ತ್ವಯಿ ಧರ್ಮಜ್ಞ ಸತ್ಯಂ ಸತ್ಯಪರಾಕ್ರಮ |
ಇಚ್ಛೇಸ್ತ್ವಮಿಹ ಲೋಕಾಂಸ್ತ್ರೀನ್ ಸೃಜೇರನ್ಯಾನರಿಂದಮ ॥14॥
ಧರ್ಮಜ್ಞನೇ, ಸತ್ಯಪರಾಕ್ರಮನೇ, ನಿನ್ನ ಸತ್ಯವನ್ನು ನಾನು ತಿಳಿದಿದ್ದೇನೆ. ಅರಿಂದಮನೇ, ಮನಸ್ಸು ಮಾಡಿದರೆ ನಿನಗೆ ಬೇರೆ ಮೂರು ಲೋಕಗಳನ್ನೂ ಸೃಷ್ಟಿಸುವ ಸಾಮರ್ಥ್ಯವಿದೆ.
ಯಥಾ ತು ವಃ ಕುಲಂ ಚೈವ ಧರ್ಮಂ ಚ ನ ಪರಾಭವೇತ್ |
ಸುಹೃದಶ್ಚ ಪ್ರಹೃಷ್ಟಾಃಸ್ಯುಸ್ತಥಾ ತ್ವಂ ಕರ್ತುಮರ್ಹಸಿ ॥15॥
ಆದರೆ ನಿನ್ನ ಕುಲಕ್ಕೂ, ನಿನ್ನ ಧರ್ಮಕ್ಕೂ ಪರಾಭವವಾಗದಂತೆ ನಮ್ಮ ಹಿತೈಷಿಗಳೆಲ್ಲರೂ ಸಂತೋಷ ಪಡುವಂತೆ ಏನು ಮಾಡಲು ಸಾಧ್ಯವೋ ಅದನ್ನು ಮಾಡು.
ಭೀಷ್ಮಃ
ತ್ವಮೇವ ಕುಲವೃದ್ಧಾಽಸಿ ಗೌರವಂ ಚ ಪರಂ ತ್ವಯಿ |
ಸೋಪಾಯಂ ಕುಲಸಂತಾನೇ ವಕ್ತುಮರ್ಹಸಿ ನಃ ಪರಮ್ ॥16॥
ನೀನೇ ನಮ್ಮ ಕುಲದಲ್ಲಿ ವೃದ್ಧಳಾದವಳು. ನಮ್ಮ ಕುಲದ ಭಾರವು ನಿನ್ನ ಮೇಲೆಯೇ ಇದೆ. ಆದ್ದರಿಂದ ಸಂತಾನವನ್ನು ಪಡೆಯುವ ಶ್ರೇಷ್ಠವಾದ ಉಪಾಯವನ್ನು ನೀನೇ ಸೂಚಿಸಬೇಕು.
ಸ್ತ್ರಿಯೋ ಹಿ ಪರಮಂ ಗುಹ್ಯಂ ಧಾರಯಂತಿ ಕುಲೇ ಕುಲೇ |
ಪುರುಷಂ ಚಾಪಿ ಮಾಯಾಭಿರ್ಬಹ್ವೀಭಿರುಪಗೃಹ್ಣತೇ ॥17॥
ಪ್ರತಿಯೊಂದು ಕುಲದಲ್ಲಿಯೂ ಸ್ತ್ರೀಯರು ಅನೇಕ ಪರಮರಹಸ್ಯಗಳನ್ನು ಭರಿಸಿರುತ್ತಾರೆ. ಪುರುಷರ ಜೊತೆಯಲ್ಲಿಯೂ ಸಹ ಅನೇಕ ಮಾಯಗಳಿಂದ ವ್ಯವಹರಿಸುತ್ತಾರೆ.
ಸಾ ಸತ್ಯವತಿ ಸಂಪಶ್ಯ ಕರ್ಮ ಸತ್ಯಪರಾಯಣೇ |
ಯಥಾ ನ ಜಹ್ಯಾತ್ ಸತ್ಯಂ ಚ ನ ಸೀದೇಚ್ಚ ಕುಲಂ ಹಿ ನಃ ॥18॥
ಆದ್ದರಿಂದ ಸತ್ಯಪರಾಯಣಳಾದ ಸತ್ಯವತಿಯೇ, ನನ್ನ ಸತ್ಯವಚನವು ಕೆಡದಂತೆ, ನಮ್ಮ ಕುಲವೂ ಹಾಳಾಗದಂತೆ, ಏನು ಮಾಡಬೇಕೆಂದು ನೀನೇ ವಿಚಾರ ಮಾಡಿ ನೋಡು.
ವೈಶಂಪಾಯನಃ
ತತಃ ಸತ್ಯವತೀ ಭೀಷ್ಮಂ ವಾಚಾ ವೈ ಸಜ್ಜಮಾನಯಾ |
ಪ್ರವೇಪಮಾನಾ ಸವ್ರೀಡಮಿದಂ ವಚನಮಬ್ರವೀತ್ ॥19॥
ಆಗ ಸತ್ಯವತಿಯು ನಡುಗುತ್ತಾ ನಾಚಿಕೆಯಿಂದ ಉಡುಗಿ ಹೋಗುತ್ತಿರುವ ತನ್ನ ಮಾತಿನಿಂದ ಭೀಷ್ಮನನ್ನು ಕುರಿತು ಹೀಗೆ ಹೇಳಿದಳು.

ಸತ್ಯಮೇತನ್ಮಹಾಬಾಹೋ ಯದಾತ್ಥ ಪ್ರಮದಾಂ ಪ್ರತಿ |
ವಿಶ್ವಾಸಂ ತೇ ಪ್ರವಕ್ಷ್ಯಾಮಿ ಸಂತಾನಾಯ ಕುಲಸ್ಯ ಸಃ ||20||
ಎಲೈ ಮಹಾಬಾಹುವೇ, ಸ್ತ್ರೀಯರ ವಿಷಯದಲ್ಲಿ ನೀನು ಏನು ಹೇಳಿದೆಯೋ, ಅದು ಸತ್ಯವಾದುದು. ನಿನಗೆ ನಾನು ನಮ್ಮ ಕುಲಕ್ಕೆ, ಮತ್ತು ಸಂತಾನಕ್ಕೆ ಕ್ಷೇಮದೊರಕುವಂತಹ ಒಂದು ನಂಬಿಕೆಯ (ವಿಶ್ವಾರ್ಹವಾದ) ವಿಷಯವನ್ನು ಹೇಳುವೆನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಾಧಿಕಶತತಮೋಽಧ್ಯಾಯಃ ||
|| ಸಂಭವಪರ್ವಣಿ ತ್ರಿಪಂಚಾಶತ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರೈದನೆಯ ಅಧ್ಯಾಯ ಮುಗಿಯಿತು.
*****

ನೂರ ಆರನೆಯ ಅಧ್ಯಾಯ
(ಸತ್ಯವತಿಯಿಂದ ಭೀಷ್ಮರನ್ನು ಕುರಿತು ವ್ಯಾಸರ ಜನ್ಮಕಥನ. ತಾಯಿಯಿಂದ ಸ್ಮೃತರಾಗಿ ವ್ಯಾಸರ ಆಗಮನ.)
ವೈಶಂಪಾಯನಃ
ಏವಮುಕತತ್ವ ತದಾ ಭೀಷ್ಮಂ ತನ್ಮಾತಾ ಪ್ರತ್ಯಭಾಷತ |
ಸತ್ಯವತೀ
ರೋಚತೇ ಮೇ ವಚಸ್ತುಭ್ಯಂ ಮಮಾಪಿ ವಚನಂ ಶೃಣು ||1||
ವಿಶ್ವಾಸಾತ್ ತೇ ಪ್ರವಕ್ಷ್ಯಾಮಿ ಸಂತಾನಾಯ ಕುರುಷ್ವ ನಃ |
ನ ಚ ಶಕ್ಯಮನಾಖ್ಯಾತುಮಾಪದ್ನೀಯಂ ತಥಾವಿಧಾ ||2||
ಸತ್ಯವತಿಯು ಹೀಗೆ ಹೇಳಿ ಭೀಷ್ಮರನ್ನು ಕುರಿತು ಮಾತನಾಡಿದಳು.
ನಿನ್ನ ಮಾತು ನನಗೆ ಹಿಡಿಸುತ್ತದೆ. ನನ್ನ ಮಾತನ್ನು ಕೇಳು. ನಮ್ಮ ವಂಶದ ಸಂತಾನದ ಉದ್ದೇಶದಿಂದ ನಿನಗೆ ವಿಶ್ವಾಸದಿಂದ ಹೇಳುವ ಈ ಮಾತುಗಳನ್ನು ನಡೆಸಿಕೊಡು. ಈಗ ನಮಗೆ ಈ ವಿಷಯವನ್ನು ನಿನಗೆ ತಿಳಿಸದಿರಲು ಸಾಧ್ಯವಾಗದಂತಹ ವಿಪತ್ತು ಒದಗಿದೆ.
ತ್ವಮೇವ ನಃ ಕುಲೇ ಧರ್ಮಸ್ತ್ವಂ ಸತ್ಯಂ ತ್ವಂ ಪರಾ ಗತಿಃ |
ಯತ್ ತ್ವಂ ವಕ್ಷ್ಯಸಿ ತತ್ ಕಾರ್ಯಮಸ್ಮಾಭಿರಿತಿ ಮೇ ಮತಿಃ ||3||
ನಮ್ಮ ಕುಲದಲ್ಲಿ ನೀನೇ ಧರ್ಮ ಮತ್ತು ನೀನೇ ಸತ್ಯ. ನೀನೇ ನಮ್ಮ ಕುಲಕ್ಕೆ ದೊಡ್ಡ ಆಶ್ರಯ. ನೀನು ನಮಗೆ ಏನು ಹೇಳುವೆನೋ ಅದರಂತೆ ನಾವು ನಡೆದುಕೊಳ್ಳಬೇಕೆಂದು ನನ್ನ ಅಭಿಪ್ರಾಯ.
ತಸ್ಮಾನ್ನಿಶಮ್ಯ ವಾಕ್ಯಂ ಮೇ ಕುರುಷ್ವ ಯದನಂತರಮ್ |
ಶೃಣು ಭೀಷ್ಮ ವಚೋ ಮಹ್ಯಂ ಧರ್ಮಾರ್ಥಸಹಿತಂ ಹಿತಮ್ |
ನಚ ವಿಸ್ರಂಭಕಥಿತಂ ಭವಾನ್ ಸೂಚಿತುಮರ್ಹತಿ ||4||
ಆದ್ದರಿಂದ ನನ್ನ ಮಾತುಗಳನ್ನು ಕೇಳಿ ಅನಂತರ ಅವಶ್ಯವಾದುದನ್ನು ಮಾಡು. ಭೀಷ್ಮನೇ, ನನ್ನ ಮಾತು ಧರ್ಮಾರ್ಥಸಹಿತವಾಗಿಯೂ ಹಿತವಾಗಿಯೂ ಇದೆ. ಅದನ್ನು ಕೇಳು. ವಿಶ್ವಾಸದಿಂದ ಹೇಳುವ ಈ ವಿಷಯವನ್ನು ನೀನು ದೋಷವೆಂದು ಪರಿಗಣಿಸಬೇಡ.
ಯಸ್ತು ರಾಜಾ ವಸುರ್ನಾಮ ಶ್ರುತಸ್ತೇ ಭರತರ್ಷಭ |
ತಸ್ಯ ಶುಕ್ರಾದಹಂ ಮತ್ಸ್ಯಾ ಧೃತಾ ಕುಕ್ಷೌ ಪುರಾ ಕಿಲ ||5||
ಎಲೈ ಭರತ ಶ್ರೇಷ್ಠನೇ, ನಾನು ವಸು ಎಂಬ ವಿಖ್ಯಾತನಾದ ರಾಜನ ವೀರ್ಯದಿಂದ ಹುಟ್ಟಿದ ಅವನ ಮಗಳು. ನನ್ನನ್ನು ಒಂದು ಮತ್ಸ್ಯವು ಹಿಂದೆ ಗರ್ಭದಲ್ಲಿ ಧರಿಸಿತು.
ಭ್ರಾತರಂ ಮೇ ಜಲಾದ್ ಹೃತ್ವಾ ದಾಶಃ ಪರಮಧರ್ಮವಿತ್ |
ಮಾಂ ತು ಸ್ವಗೃಹಮಾನೀಯ ದುಹಿತೃತ್ವೇ ಹ್ಯಕಲ್ಪಯತ್ |
ಧರ್ಮಯುಕ್ತಃ ಸ ಧರ್ಮೇಣ ಪಿತಾ ಚಾಸೀತ್ ತತೋ ಮಮ ||6||
ಆ ಮತ್ಸ್ಯವನ್ನು ದಡಕ್ಕೆ ಎಳೆದ ಪರಮ ಧರ್ಮಜ್ಞನಾದ ದಾಶರಾಜನು ನನ್ನ ತಮ್ಮನನ್ನು ರಾಜನಿಗೆ ಕೊಟ್ಟು ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ತನ್ನ ಮಗಳೆಂದು ಭಾವಿಸಿದನು. ಧರ್ಮಯುಕ್ತನಾದ ಅವನು ಆ ಧರ್ಮದ ಕಾರಣದಿಂದ ನನಗೆ ತಂದೆಯಾದನು.
ಸಾ ಕದಾಚಿದಹಂ ತತ್ರ ಗತಾಽಸ್ಮಿ ಯಮುನಾತಟಮ್ |
ಅಥ ಧರ್ಮಭೃತಾಂ ಶ್ರೇಷ್ಠಃ ಪರಮರ್ಷಿಃ ಪರಾಶರಃ |
ಆಜಗಾಮ ತರೀಂ ತಾತ ತರಿಷ್ಯನ್ ಯಮುನಾಂ ನದೀಮ್ ||7||
ಅಂತಹ ನಾನು ಒಮ್ಮೆ ಯಮುನಾನದಿಯ ದಡಕ್ಕೆ ಹೋದೆ. ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಮಹರ್ಷಿಗಳಾದ ಪರಾಶರರು ಯಮುನಾ ನದಿಯನ್ನು ದಾಟುವ ಇಚ್ಛೆಯುಳ್ಳವರಾಗಿ ನಾನು ನಡೆಸುತ್ತಿದ್ದ ನಾವೆಯ ಬಳಿಗೆ ಬಂದರು.
ಸ ತಾರ್ಯಮಾಣೋ ಯಮುನಾಂ ಮಾಮುಪೇತ್ಯಾಬ್ರವೀನ್ಮುನಿಃ|
ಸಾಂತ್ವಪೂರ್ವಂ ಮಹಾಭಾಗಃ ಕಾಮಾತೊರ್ ಮಧುರಂ ವಚಃ |
ಉಕತತ್ವ ಜನ್ಮ ಕುಲೇ ಮಹ್ಯಂ ನಾಸಿ ದಾಶಸುತಾ ಇತಿ ||8||
ನಾನು ಯಮುನೆಯನ್ನು ದಾಟಿಸುತ್ತಿದ್ದಂತೆ ಆ ಋಷಿಗಳು ನನ್ನ ಸಮೀಪಕ್ಕೆ ಬಂದು ಸಮಾಧಾನಪೂರ್ವಕವಾಗಿ ನನ್ನನ್ನು ಮಾತನಾಡಿಸಿ ಕಾಮಾರ್ತರಾಗಿ ಮಧುರವಚನಗಳನ್ನು ಆಡಿದರು. ಉತ್ತಮ ಕುಲದಲ್ಲಿ ನನ್ನ ಜನ್ಮವನ್ನು ತಿಳಿಸಿ ನಾನು ದಾಶನ

ಮಗಳಲ್ಲವೆಂದು ಹೇಳಿದರು.
ತಮಹಂ ಶಾಪಭೀತಾ ಚ ಪಿತುರ್ಭೀತಾ ಚ ಭಾರತ |
ವರೈರಸುಲಭೈಶ್ಚಾಹಂ ಪ್ರತ್ಯಾಖ್ಯಾತುಂ ಪ್ರಚಕ್ರಮೇ ॥9॥
ಎಲೈ ಭಾರತನೇ, ನಾನು ಅವರ ಶಾಪಕ್ಕೂ ಹೆದರಿ ಮತ್ತು ತಂದೆಗೂ ಹೆದರಿ ಅವರನ್ನು ನಿರಾಕರಿಸುವ ಸಲುವಾಗಿ ದುರ್ಲಭವಾದ ವರಗಳನ್ನು ಕೇಳಲು ಪ್ರಾರಂಭಿಸಿದೆ.
ಪ್ರೇಕ್ಷ್ಯತಾಂಸ್ತು ಮಹಾಭಾಗಾನ್ ಪರೇ ಪಾರೇ ಋಷೀನ್ ಸ್ಥಿತಾನ್|
ಯಮುನಾತೀರವಿನ್ಯಸ್ತಾನ್ ಪ್ರದೀಪ್ತಾನಿವ ಪಾವಕಾನ್ ॥10॥
ಪುರಸ್ತಾದರುಣಶ್ಚೈವ ತರುಣಃ ಸಂಪ್ರಕಾಶತೇ |
ಯೇನೈಷಾ ತಾಮ್ರವಸ್ತ್ರೇವ ದ್ಯೌಃ ಕೃತಾ ಪ್ರತಿಜೃಂಭಿತಾ ॥11॥
ನಾನು ಯಮುನೆಯ ಆಚೆಯ ದಡದಲ್ಲಿರುವ ಜ್ವಲಿಸುವ ಅಗ್ನಿಯಂತೆ ಪ್ರಕಾಶಿಸುತ್ತಿರುವ ಮಹಾನುಭಾವರಾದ ಋಷಿಗಳನ್ನು ಅವರಿಗೆ ತೋರಿಸಿದೆ. ಮುಂಭಾಗದಲ್ಲಿ ಆಗ ತಾನೇ ಉದಯಿಸಿದ ಅರುಣನು ಆಕಾಶವನ್ನೆಲ್ಲಾ ಕೆಂಪುವಸ್ತ್ರಗಳನ್ನುಟ್ಟ ಸ್ತ್ರೀಯರಂತೆ ಮಾಡಿ ಬೆಳಗುತ್ತಿದ್ದಾನೆ ಎಂದೂ ತೋರಿಸಿದೆ.
ಉಕ್ತಮಾತ್ರೇ ಮಯಾ ತತ್ರ ನೀಹಾರಮಸೃಜತ್ ಪ್ರಭುಃ |
ಪರಾಶರಃ ಸತ್ಯಧೃತಿರ್ದ್ವೀಪಂ ಚ ಯಮುನಾಂಭಸಿ ॥12॥
ನಾನು ಹೀಗೆ ಹೇಳಿದ ತಕ್ಷಣವೇ ಸಮರ್ಥರಾದ ಸತ್ಯಧೃತಿಗಳಾದ ಆ ಪರಾಶರರು ಆ ಯಮುನೆಯ ನೀರಿನಲ್ಲಿ ಒಂದು ದ್ವೀಪವನ್ನು ಸೃಷ್ಟಿಸಿ ಮಂಜನ್ನೂ ಸೃಷ್ಟಿಸಿದರು.
ಅಭಿಭೂಯ ಸ ಮಾಂ ಬಾಲಾಂ ತೇಜಸಾ ವಶಮಾನಯತ್ |
ತಮಸಾ ಲೋಕಮಾವೃತ್ಯ ನೌಗತಾಮೇವ ಭಾರತ ॥13॥
ಎಲೈ ಭಾರತನೇ, ನಾನು ನಾವೆಯಲ್ಲಿರುವಾಗಲೇ ಅವರು ಲೋಕವನ್ನು ಆವರಿಸುವ ಕತ್ತಲೆಯಂತಿರುವ ಮಂಜನ್ನು ಸೃಷ್ಟಿಸಿ ತಮ್ಮ ತೇಜಸ್ಸಿನಿಂದ ಬಾಲೆಯಾದ ನನ್ನನ್ನು ವಶಪಡಿಸಿಕೊಂಡರು.
ಮತ್ಸ್ಯಗಂಧೋ ಮಹಾನಾಸೀತ್ ಪುರಾ ಮಮ ಜುಗುಪ್ಸಿತಃ |
ತಮಪಾಸ್ಯ ಶುಭಂ ಗಂಧಮಿಮಂ ಪ್ರಾದಾತ್ಸ ಮೇ ಮುನಿಃ |
ಕನ್ಯಾತ್ವಂ ಚ ದದೌ ಪ್ರೀತಃ ಪುನಃ ವಿದ್ವಾಂಸ್ತಪೋಧನಃ ॥14॥
ನನಗೆ ಮೊದಲು ಅಸಹ್ಯವಾದ ಮತ್ಸ್ಯಗಂಧವಿದ್ದಿತು. ಆ ಋಷಿಗಳು ಅದನ್ನು ಪರಿಹರಿಸಿ ಈ ಶುಭವಾದ ಗಂಧವನ್ನು ನನಗೆ ಕೊಟ್ಟರು. ತಪೋಧನರೂ ವಿದ್ವಾಂಸರೂ ಆದ ಅವರು ಪ್ರೀತರಾಗಿ ನನಗೆ ಪುನಃ ಕನ್ಯಾತ್ವವನ್ನು ಕೊಟ್ಟರು.
ತತಃ ಪಿತಾ ವಸುಶ್ಚೈವ ಪಿತರಶ್ಚ ತಪೋಧನಾಃ |
ವಸಿಷ್ಠೇನ ಸಮಾನೀತಾ ಯಾಜ್ಞವಲ್ಕ್ಯಾದಯೋ ದ್ವಿಜಾಃ |
ಕೃತ್ವಾ ವಿವಾಹಂ ಮೇ ಸರ್ವೇ ಪ್ರತಿಜಗ್ಮುರ್ಯಥಾಗತಮ್ ॥15॥
ಅದಕ್ಕಿಂತ ಮೊದಲು ನನ್ನ ತಂದೆಯಾದ ವಸುವೂ, ತಪೋಧನರಾದ ಪಿತೃಗಳೂ, ಯಾಜ್ಞವಲ್ಕ್ಯ ಮೊದಲಾದ ಬ್ರಾಹ್ಮಣರೂ, ವಸಿಷ್ಠರಿಂದ ಕರೆಯಲ್ಪಟ್ಟರು. ನನ್ನ ವಿವಾಹವನ್ನು ನೆರವೇರಿಸಿ ಅವರೆಲ್ಲರೂ ಬಂದ ದಾರಿಯಲ್ಲಿ ಹಿಂದೆ ಹೋದರು.
ತಸ್ಯ ವೀರ್ಯಮಹಂ ದೃಷ್ಟ್ವಾ ತಥಾಯುಕ್ತಂ ಮಹಾತ್ಮನಃ |
ವಿಸ್ಮಿತಾ ವ್ಯಥಿತಾ ಚೈವ ಪ್ರಾದಾಮಾತ್ಮಾನಮೇವ ಚ ॥16॥
ಆ ಮಹಾತ್ಮರ ಅಂತಹ ಸಾಮರ್ಥ್ಯವನ್ನು ನೋಡಿದ ನಾನು ವಿಸ್ಮಿತಳಾಗಿ ಮತ್ತು ವ್ಯಥೆಯಿಂದ ಕೂಡಿ ನನ್ನನ್ನು ನಾನೇ ಅವರಿಗೆ ಕೊಟ್ಟುಕೊಂಡೆ.
ತತಸ್ತದಾ ಮಹಾತ್ಮಾ ಸ ಕನ್ಯಾಯಾಂ ಮಯಿ ಭಾರತ |
ಪ್ರಹೃಷ್ಟೋಽಜನಯತ್ ಪುತ್ರಂ ದ್ವೀಪ ಏವ ಪರಾಶರಃ ॥17॥
ಭಾರತನೇ, ಆಗ ಆ ಮಹಾತ್ಮರಾದ ಪರಾಶರರು ಸಂತುಷ್ಟಗೊಂಡು ಕನ್ಯೆಯಾದ ನನ್ನಲ್ಲಿ ಆ ದ್ವೀಪದಲ್ಲಿಯೇ ಒಬ್ಬ ಪುತ್ರನನ್ನು ಪಡೆದರು.
ತತೋ ಮಾಮಾಹ ಸ ಮುನಿರ್ಗರ್ಭ ಉತ್ಸೃಜ್ಯತಾಮಯಮ್ |
ದ್ವೀಪೇಽಸ್ಯಾ ಏವ ಸರಿತಃ ಕನ್ಯೈವ ತ್ವಂ ಭವಿಷ್ಯಸಿ ॥18॥
ಆಗ ಋಷಿಗಳು ನನ್ನನ್ನು ಕುರಿತು ಈ ಯಮುನಾ ನದಿಯ ದ್ವೀಪದಲ್ಲಿಯೇ ಗರ್ಭವನ್ನು ವಿಸರ್ಜನೆ ಮಾಡು. ನೀನು ಪುನಃ ಕನ್ಯೆಯಾಗುವಿ ಎಂದು ಹೇಳಿದರು.
ಪಾರಾಶರ್ಯೋ ಮಹಾಯೋಗೀ ಸ ಬಭೂವ ಮಹಾಯಶಾಃ |
ಸದ್ಯೋತ್ಪನ್ನಃ ಸ ತು ಮಹಾನ್ ಸಹ ಪಿತ್ರಾಯತೋ ಗತಃ ॥19॥
ತಕ್ಷಣದಲ್ಲಿಯೇ ಹುಟ್ಟಿದ ಆ ಪುತ್ರನು ಪರಾಶರರ ಮಗನಾಗಿ ಮಹಾಯೋಗಿಯೂ, ಮಹಾಕೀರ್ತಿವಂತನೂ, ಮಹಾತ್ಮನೂ ಆಗಿ ತಂದೆಯ ಅಧೀನನಾಗಿ ಹೊರಟು ಹೋದನು.
ಕನ್ಯಾಪುತ್ರೋ ಮಮ ಪುರಾ ದ್ವೈಪಾಯನ ಇತಿ ಸ್ಮೃತಃ |
ಯೋ ವ್ಯಸ್ಯ ವೇದಾಂಶ್ಚತುರಃ ತಪಸಾ ಭಗವಾನೃಷಿಃ ॥20॥
ಲೋಕೇ ವ್ಯಾಸತ್ವಮಾಪೇದೇ ಕಾರ್ಷ್ಣ್ಯಾತ್ ಕೃಷ್ಣತ್ವಮಾಗತಃ |
ಸತ್ಯವಾದೀ ಶಮಪರಸ್ತಪಸಾ ದಗ್ಧಕಿಲ್ಬಿಷಃ ॥21॥

ಆತನು ನನಗೆ ಕನ್ಯಾವಸ್ಥೆಯಲ್ಲಿ ಹುಟ್ಟಿದ ದ್ವೈಪಾಯನ ಎಂಬ ಮಗ. ಪೂಜ್ಯನಾದ ಆ ಋಷಿಯು ನಾಲ್ಕು ವೇದಗಳನ್ನು ವಿಭಾಗ ಮಾಡಿದುದರಿಂದ ಲೋಕದಲ್ಲಿ ಅವನನ್ನು ವ್ಯಾಸರೆಂದೂ ಕರೆಯುತ್ತಾರೆ. ಕೃಷ್ಣವರ್ಣವುಳ್ಳವನಾದ್ದರಿಂದ ಕೃಷ್ಣ ಎಂದೂ ಕರೆಯುತ್ತಾರೆ. ಆ ಪುತ್ರನು ಸತ್ಯವಾದಿ, ಶ್ರಮವುಳ್ಳವನು ಮತ್ತು ತಪಸ್ಸಿನಿಂದ ಎಲ್ಲಾ ದೋಷಗಳನ್ನೂ ದೂರಮಾಡಿಕೊಂಡವನು.

ಸ ನಿಯುಕ್ತೋ ಮಯಾ ವ್ಯಕ್ತಂ ತ್ವಯಾ ಚಾಪ್ಯಮಿತದ್ಯುತೇ |
ಭ್ರಾತುಃ ಕ್ಷೇತ್ರೇ ತು ಕಲ್ಯಾಣಮಪತ್ಯಂ ಜನಯಿಷ್ಯತಿ ॥22॥

ಅಮಿತದ್ಯುತಿಯಾದ ಭೀಷ್ಮನೇ ನಾನು ಅವನಿಗೆ ಆದೇಶವನ್ನು ಮಾಡಿ ನೀನು ಸಹ ಪ್ರಾರ್ಥನೆಯನ್ನು ಮಾಡಿದರೆ, ತನ್ನ ತಮ್ಮನ ಕ್ಷೇತ್ರದಲ್ಲಿ ಅವನು ಕಲ್ಯಾಣಕರನಾದ ಪುತ್ರನನ್ನು ಪಡೆಯುವನು.

ಸ ಹಿ ಮಾಮುಕ್ತ್ವಾವಾಂಸ್ತತ್ರ ಸ್ಮರ ಕಾರ್ಯೇಷು ಮಾಮಿತಿ |
ಸ್ಮರಿಷ್ಯಾಮಿ ಮಹಾಬಾಹೋ ಯದಿ ಭೀಷ್ಮ ತ್ವಮಿಚ್ಛಸಿ ॥23॥

ಅವನು ನನ್ನನ್ನು ಕುರಿತು ನಿನಗೆ ಅಗತ್ಯವೊದಗಿದಾಗ ನನ್ನನ್ನು ಸ್ಮರಿಸು ಎಂದು ಹೇಳಿದ್ದಾನೆ. ಮಹಾಬಾಹುವಾದ ಭೀಷ್ಮನೇ, ನಿನಗೆ ಸಮ್ಮತವಾದರೆ ನಾನು ಅವನನ್ನು ಸ್ಮರಿಸುವೆನು.

ತವ ಹ್ಯನುಮತೇ ಭೀಷ್ಮ ನಿಯತಂ ಸ ಮಹಾತಪಾಃ |
ವಿಚಿತ್ರವೀರ್ಯಕ್ಷೇತ್ರೇ ತು ಪುತ್ರಾನುತ್ಪಾದಯಿಷ್ಯತಿ॥24॥

ಭೀಷ್ಮನೇ, ಮಹಾತಪಸ್ವಿಯಾದ ಆತನು ನಿನಗೆ ಅಭಿಪ್ರಾಯವಿದ್ದರೆ ವಿಚಿತ್ರವೀರ್ಯನ ಪತ್ನಿಯರಲ್ಲಿ ಪುತ್ರರನ್ನು ಪಡೆಯುವನು.

ವೈಶಂಪಾಯನಃ
ಇತ್ಯುಕ್ತಮಾತ್ರೇ ಭೀಷ್ಮಸ್ತು ಕೃತಾಂಜಲಿಪುಟೋಽಹ್ರುಷತ್ |
ಮಹರ್ಷೇಃ ಕೀರ್ತನಾತ್ ತಸ್ಯ ವಂದ್ಯ ಮಾತುಸ್ತದಾಽಬ್ರುವೀತ್ ॥25॥
ದೇಶಕಾಲೌ ಚ ಜಾನಾಸಿ ಕ್ರಿಯತಾಮರ್ಥಸಿದ್ಧಯೇ |
ಧರ್ಮಮರ್ಥಂ ಚ ಕಾಮಂ ಚ ತ್ರೀನೇತಾನ್ ಯೋಽನುಪಶ್ಯತಿ ॥26॥

ತಾಯಿಯು ಹೀಗೆ ಹೇಳಿದ ತಕ್ಷಣ ಭೀಷ್ಮನು ತಾಯಿಯ ಪಾದಗಳಿಗೆ ನಮಸ್ಕರಿಸಿ ಮಹರ್ಷಿಗಳಾದ ವ್ಯಾಸರನ್ನು ಹೇಳಿದ್ದರಿಂದ ಸಂತೋಷಗೊಂಡು ದೇಶಕಾಲಗಳನ್ನು ನೀನು ತಿಳಿದಿದ್ದೀಯೆ. ನಮ್ಮ ಅಭೀಷ್ಟಸಿದ್ಧಿಗಾಗಿ ಏನು ಮಾಡಬೇಕೋ ಅದನ್ನು ಮಾಡು ಎಂದು ಹೇಳಿದನು.

ಅರ್ಥಮರ್ಥಾನುಬಂಧಂ ಚ ಧರ್ಮಂ ಧರ್ಮಾನುಬಂಧನಮ್ |
ಕಾಮಂ ಕಾಮಾನುಬಂಧಂ ಚ ವಿಪರೀತಾನ್ ಪೃಥಕ್ಪೃಥಕ್ ॥27॥
ಶುಭಂ ಶುಭಾನುಬಂಧಂ ಚ ತಾಂಶ್ಚೈವ ತ್ರಿವಿಧಾನ್ ಪುನಃ |
ಯೋ ವಿಚಿಂತ್ಯ ಧಿಯಾ ಸಮ್ಯಗ್ ವ್ಯವಸ್ಯತಿ ಸ ಬುದ್ಧಿಮಾನ್ ॥28॥

ಯಾರು ಧರ್ಮ, ಅರ್ಥ ಮತ್ತು ಕಾಮ ಈ ಮೂರನ್ನು ಸರಿಯಾಗಿ ತಿಳಿಯುತ್ತಾನೋ, ಅರ್ಥವನ್ನೂ ಅರ್ಥದ ಸಾಧನವನ್ನೂ, ಹಾಗೆಯೇ ಧರ್ಮವನ್ನೂ, ಧರ್ಮದ ಸಾಧನವನ್ನೂ, ಕಾಮವನ್ನೂ, ಕಾಮದ ಸಾಧನವನ್ನೂ ಇದಕ್ಕೆ ವಿರುದ್ಧವಾದವುಗಳನ್ನೂ ವಿವಿಧವಾದ ಶುಭಗಳನ್ನೂ ಮತ್ತು ಶುಭಸಾಧನಗಳನ್ನೂ ಬುದ್ಧಿಯಿಂದ ಯೋಚಿಸಿ ಸರಿಯಾದ ನಿರ್ಧಾರಕ್ಕೆ ಬರುತ್ತಾನೋ ಅವನೇ ಬುದ್ಧಿವಂತನಾದವನು.

ಸರ್ವವಿತ್ ಸರ್ವಕರ್ತಾ ಸ ಯದ್ಯೇವಂ ತತ್ ಕರೋತಿ ಚ |
ತದಿದಂ ಧರ್ಮಯುಕ್ತಂ ಚ ಹಿತಂ ಚೈವ ಕುಲಸ್ಯ ನಃ |
ಉಕ್ತಂ ಭವತ್ಯಾ ಯಚ್ಛ್ರೇಯಃ ಪರಮಂ ರೋಚತೇ ಮಮ ॥29॥

ಸರ್ವಜ್ಞನೂ, ಸರ್ವಕರ್ತನೂ ಆದ ಅವನು ಏನು ಮಾಡುತ್ತಾನೋ, ಅದು ಧರ್ಮಯುಕ್ತವೂ ಮತ್ತು ನಮ್ಮ ಕುಲಕ್ಕೆ ಹಿತವೂ ಆಗಿರುತ್ತದೆ. ನೀನು ಯಾವ ಶ್ರೇಯಸ್ಸಿನ ಪರಮ ಮಾರ್ಗವನ್ನು ಹೇಳಿದ್ದೀಯೋ ಅದು ನನಗೆ ಸಮ್ಮತವಾಗುತ್ತದೆ.

ವೈಶಂಪಾಯನಃ
ತತಸ್ತಸ್ಮಿನ್ ಪ್ರತಿಜ್ಞಾತೇ ಭೀಷ್ಮೇಣ ಕುರುನಂದನ |
ಚಿಂತಯಾಮಾಸ ವೈ ಕಾಳೀ ಕೃಷ್ಣದ್ವೈಪಾಯನಂ ಮುನಿಮ್ ॥30॥

ಎಲೈ ಕುರುನಂದನನೇ, ಭೀಷ್ಮನು ಹಾಗೆ ಪ್ರತಿಜ್ಞೆಯನ್ನು ಮಾಡುತ್ತಿರಲು ಕಾಳಿಯು ಕೃಷ್ಣದ್ವೈಪಾಯನ ಮುನಿಯನ್ನು ಸ್ಮರಿಸಿದಳು.

ತಸ್ಯಾಃ ಸಂಚಿಂತಿತಂ ಜ್ಞಾತ್ವಾ ಸತ್ಯವತ್ಯಾ ಮಹಾತಪಾಃ |
ಸ ವೇದಾನ್ ಪ್ರಬ್ರುವನ್ ಧೀಮಾನ್ ಕೃಷ್ಣದ್ವೈಪಾಯನಃ ಪ್ರಭುಃ |
ಪ್ರಾದುರ್ಬಭೂವ ವಿದಿತಃ ಕ್ಷಣೇನ ಕುರುಸಂಸದಿ ॥31॥

ತಾಯಿಯು ಚಿಂತಿಸಿದಳೆಂದು ತಿಳಿದು ಸತ್ಯವಂತರೂ, ಮಹಾತಪಸ್ವಿಗಳೂ, ಸಮರ್ಥರೂ, ಮೇಧಾವಿಗಳೂ ಆದ ಕೃಷ್ಣದ್ವೈಪಾಯನರು ವೇದಗಳನ್ನು ಉಚ್ಚರಿಸುತ್ತಾ ಒಂದು ಕ್ಷಣದಲ್ಲಿ ಕುರುಸಂಸತ್ತಿನಲ್ಲಿ ಪ್ರಾದುರ್ಭೂತರಾದರು.

ತಸ್ಮೈ ಪೂಜಾಂ ತತೋ ದತ್ವಾ ಸುತಾಯ ವಿಧಿಪೂರ್ವಕಮ್|
ಪರಿಷ್ವಜ್ಯ ಚ ಬಾಹುಭ್ಯಾಂ ಪ್ರಸ್ರವೈರಭಿಷಿಚ್ಯ ಚ |
ಮುಮೋಚ ಬಾಷ್ಪಂ ದಾಶೇಯೀ ಪುತ್ರಂ ದೃಷ್ಟ್ವಾ ಚಿರಸ್ಯ ತಮ್ ॥

ದಾಶಸುತಳಾದ ಸತ್ಯವತಿಯು ಆ ಪುತ್ರನನ್ನು ವಿಧಿಪೂರ್ವಕವಾಗಿ ಪೂಜಿಸಿ, ಬಾಹುಗಳಿಂದ ಆಲಿಂಗಿಸಿ ಆನಂದಬಾಷ್ಪಗಳಿಂದ ತೋಯಿಸಿ ಬಹಳ ಕಾಲದ ಮೇಲೆ ಮಗನನ್ನು ನೋಡಿ ಕಣ್ಣೀರುಸುರಿಸಿದಳು.

ತಾಮದ್ಭಿರಭಿಷಿಂಚ್ಯಾರ್ತಾಂ ಮಹರ್ಷಿರಭಿವಾದ್ಯ ಚ |

ಮಾತರಂ ಪೂರ್ವಜಃ ಪುತ್ರಃ ವ್ಯಾಸೋ ವಚನಮಬ್ರವೀತ್ ॥33॥
ಮಹರ್ಷಿಗಳಾದ ವ್ಯಾಸರು ಆರ್ತಳಾದ ತಾಯಿಗೆ ನೀರನ್ನು ಪ್ರೋಕ್ಷಿಸಿ, ನಮಸ್ಕರಿಸಿ, ತಾಯಿಯನ್ನು ಕುರಿತು ಪ್ರಥಮ ಪುತ್ರರಾದ ಅವರು ಮಾತನಾಡಿದರು.
ಭವತ್ಯಾ ಯದಭಿಪ್ರೇತಂ ತದಹಂ ಕರ್ತುಮಾಗತಃ |
ಶಾಧಿ ಮಾಂ ಧರ್ಮತತ್ವಜ್ಞೇ ಕರವಾಣಿ ಪ್ರಿಯಂ ತವ ॥34॥
ನಿನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ಅದನ್ನು ನೆರವೇರಿಸಲು ನಾನು ಇಲ್ಲಿಗೆ ಬಂದಿದ್ದೇನೆ. ಧರ್ಮತತ್ವವನ್ನು ತಿಳಿದವಳೇ ನನಗೆ ಆದೇಶವನ್ನು ನೀಡು. ನಿನಗೆ ಪ್ರಿಯವನ್ನು ಮಾಡುತ್ತೇನೆ.
ತಸ್ಮೈ ಪೂಜಾಂ ತತೋಽಕಾರ್ಷೀತ್ ಪುರೋಧಾಃ ಪರಮರ್ಷಯೇ|
ಸ ಚ ತಾಂ ಪ್ರತಿಜಗ್ರಾಹ ವಿಧಿವನ್ಮಂತ್ರಪೂರ್ವಕಮ್ ॥35॥
ಅನಂತರ ಪುರೋಹಿತರು ಪರಮರ್ಷಿಗಳಾದ ವ್ಯಾಸರಿಗೆ ಪೂಜೆಯನ್ನು ಮಾಡಿದರು. ವಿಧಿಪೂರ್ವಕವಾಗಿ ಮತ್ತು ಮಂತ್ರಪೂರ್ವಕವಾಗಿ ಮಾಡಿದ ಆ ಪೂಜೆಯನ್ನು ವ್ಯಾಸರು ಸ್ವೀಕರಿಸಿದರು.
ಪೂಜಿತಂ ಮಂತ್ರಪೂರ್ವೇಣ ವಿಧಿನಾ ಪ್ರೀತಮಾನಸಮ್ |
ತಮಾಶ್ರಮಗತಂ ಮಾತಾ ಪೃಷ್ಟ್ವಾ ಕುಶಲಮವ್ಯಯಮ್ ॥36॥
ಸತ್ಯವತ್ಯಭಿವೀಕ್ಷ್ಯೈನಮುವಾಚೇದಮನಂತರಮ್ |
ಮಾತಾಪಿತ್ರೋಃ ಪ್ರಜಾಯಂತೇ ಪುತ್ರಾಃ ಸಾಧಾರಣಾಃ ಕುಲೇ ॥37॥
ಮಂತ್ರಪುರಸ್ಸರವಾದ, ವಿಧಿಯುಕ್ತವಾದ ಪೂಜೆಯಿಂದ ಪ್ರೀತನಾದ ಅವನನ್ನು ಕುರಿತು ತಾಯಿಯಾದ ಸತ್ಯವತಿಯು ಯೋಗಕ್ಷೇಮವನ್ನು ಕೇಳಿ ಅವನನ್ನು ನೋಡುತ್ತಾ ಹೀಗೆ ಮಾತನಾಡಿದಳು.
ತೇಷಾಂ ಪಿತಾ ಯಥಾ ಸ್ವಾಮೀ ತಥಾ ಮಾತಾ ಯಶಸ್ವಿನೀ |
ವಿಧಾತ್ರಾ ವಿಹಿತಃ ಸ ತ್ವಂ ಯಥಾ ಮೇ ಪ್ರಥಮಃ ಸುತಃ ॥38॥
ಸಾಧಾರಣ ಪುತ್ರರು ಪ್ರತಿಯೊಂದು ಕುಲದಲ್ಲಿಯೂ ಮಾತಾಪಿತೃಗಳಿಂದ ಜನಿಸುತ್ತಾರೆ. ಅವರಿಗೆ ತಂದೆಯು ಹೇಗೆ ಸ್ವಾಮಿಯೋ, ತಾಯಿಯೂ ಹಾಗೆಯೇ. ನೀನು ನನ್ನ ಪ್ರಥಮ ಪುತ್ರನೆಂದು ಬ್ರಹ್ಮದೇವರ ಸಂಕಲ್ಪವಿದ್ದಿತು.
ವಿಚಿತ್ರವೀರ್ಯೋ ಬ್ರಹ್ಮರ್ಷೇ ತಥಾ ಮೇಽವರಜಃ ಸುತಃ |
ಯಥೈವ ಪಿತೃತೋ ಭೀಷ್ಮಃ ತಥಾ ತ್ವಮಪಿ ಮಾತೃತಃ |
ಭ್ರಾತಾ ವಿಚಿತ್ರವೀರ್ಯಸ್ಯ ಯಥಾ ವಾ ಪುತ್ರ ಮನ್ಯಸೇ ॥39॥
ಬ್ರಹ್ಮರ್ಷಿಯೇ, ವಿಚಿತ್ರವೀರ್ಯನು ಹೇಗೆ ನನಗೆ ಕೊನೆಯ ಮಗನೋ, ಹೇಗೆ ಭೀಷ್ಮನು ತಂದೆಯಿಂದ ಜನಿಸಿ ಅಣ್ಣನಾಗಿದ್ದಾನೆಯೋ ಹಾಗೆ ನೀನು ತಾಯಿಯಿಂದ ಜನಿಸಿ ವಿಚಿತ್ರವೀರ್ಯನ ಅಣ್ಣನಾಗಿದ್ದೀಯೆ. ಪುತ್ರನೇ ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು.
ಅಯಂ ಶಾಂತನವಃ ಸತ್ಯಂ ಪಾಲಯನ್ ಸತ್ಯವಿಕ್ರಮಃ |
ಬುದ್ಧಿಂ ನ ಕುರುತೇಽಪತ್ಯೇ ತಥಾ ರಾಜ್ಯಾನುಶಾಸನೇ ॥40॥
ಶಂತನುವಿನ ಮಗನಾದ ಸತ್ಯವಿಕ್ರಮನಾದ ಈ ಭೀಷ್ಮನು ತನ್ನ ಸತ್ಯವಚನವನ್ನು ಪಾಲಿಸುತ್ತಿದ್ದು ಮಕ್ಕಳನ್ನು ಪಡೆಯುವುದಕ್ಕಾಗಲೀ, ರಾಜ್ಯವನ್ನಾಳುವುದಕ್ಕಾಗಲೀ ಬಯಸುವುದಿಲ್ಲ.
ಸ ತ್ವಂ ಹ್ಯಪೇಕ್ಷಯಾ ಭ್ರಾತುಃ ಸಂತಾನಾಯ ಕುಲಸ್ಯ ತು |
ಭೀಷ್ಮಸ್ಯ ಚಾಸ್ಯ ವಚನಾನ್ನಿಯೋಗಾಚ್ಚ ಮಮಾನಘ ॥41॥
ಅನುಕ್ರೋಶಾಚ್ಚ ಭ್ರಾತೄಣಾಂ ಸರ್ವೇಷಾಂ ರಕ್ಷಣಾಯ ಚ |
ಆನೃಶಂಸ್ಯೇನ ಯದ್ ಬ್ರೂಯಾಂ ತಚ್ಛ್ರುತ್ವಾ ಕರ್ತುಮರ್ಹಸಿ ॥42॥
ಎಲೈ ಅನಘನೇ, ನೀನು ತಮ್ಮನ ಕುಲದ ಸಂತಾನದ ದೃಷ್ಟಿಯಿಂದ ತಮ್ಮನಾದ ಭೀಷ್ಮನ ವಚನದಂತೆ ಮತ್ತು ನನ್ನ ಆದೇಶದಂತೆ, ತಮ್ಮಂದಿರ ಮೇಲಿನ ದಯೆಯಿಂದ ಮತ್ತು ಎಲ್ಲರನ್ನೂ ರಕ್ಷಣೆ ಮಾಡುವ ಸಲುವಾಗಿ ನಾನು ಯಾವ ಸೌಮ್ಯವಾದ ಮಾತುಗಳನ್ನು ಆಡುವೆನೋ ಅದನ್ನು ಕೇಳಿ ನಡೆಸಿಕೊಡಬೇಕು.
ಯವೀಯಸಸ್ತವ ಭ್ರಾತುರ್ಭಾರ್ಯೇ ಪರಮಸಂಮತೇ |
ರೂಪಯೌವನಸಂಪನ್ನೇ ಪುತ್ರಕಾಮೇ ಚ ಧರ್ಮತಃ ॥43॥
ತಯೋಃ ಪ್ರಯಚ್ಛ ಪುತ್ರಾಂಸ್ತ್ವಂ ಸಮರ್ಥೋ ಹ್ಯಸಿ ಪುತ್ರಕ |
ಅನುರೂಪಾನ್ ಕುಲಸ್ಯಾಸ್ಯ ತೇಜಃಪ್ರಶಮಸಂಯುತಾನ್ ॥44॥
ನಿನ್ನ ತಮ್ಮನ ಇಬ್ಬರು ಪತ್ನಿಯರು ಪರಮ ಸಮ್ಮತರಾದವರು, ರೂಪಯೌವನಸಂಪನ್ನರಾದವರು ಮತ್ತು ಧರ್ಮದಿಂದ ಪುತ್ರರನ್ನು ಪಡೆಯುವ ಇಚ್ಛೆಯುಳ್ಳವರೂ ಆಗಿದ್ದಾರೆ. ಪುತ್ರನೇ, ನೀನು ಸಮರ್ಥನಾಗಿದ್ದೀಯೆ. ನೀನು ಅವರಿಗೆ ಈ ನಮ್ಮ ಕುಲಕ್ಕೆ ಅನುರೂಪನಾದ ತೇಜಸ್ಸನ್ನೂ, ಶಾಂತಿಯನ್ನೂ, ಹೊಂದಿರುವ ಪುತ್ರರನ್ನು ಕರುಣಿಸು.
ವ್ಯಾಸಃ
ವೇತ್ಥ ಧರ್ಮಂ ತ್ವಮೇವೇಹ ಪರಂ ಚಾಪರಮೇವ ಚ |
ತಥಾ ತವ ಮಹಾಪ್ರಾಜ್ಞೇ ಧರ್ಮೇ ಪ್ರಣಿಹಿತಾ ಮತಿಃ ॥45॥
ತಾಯಿಯೇ, ಶ್ರೇಷ್ಠವಾದ ಮತ್ತು ಕನಿಷ್ಠವಾದ ಧರ್ಮವೆಲ್ಲವನ್ನೂ ನೀನು ತಿಳಿದಿದ್ದೀಯೆ. ಮಹಾಪ್ರಾಜ್ಞಳೇ, ನಿನ್ನ ಮನಸ್ಸು ಯಾವಾಗಲೂ ಧರ್ಮದಲ್ಲಿಯೇ ನಿವಿಷ್ಟವಾಗಿದೆ.
ನಿಯೋಗಾತ್ ತವ ಚೈವಾಹಮೇತೈರಪಿ ಚ ಕಾರಣೈಃ |

ಈಪ್ಸಿತಂ ತೇ ಕರಿಷ್ಯಾಮಿ ದೃಷ್ಟಂ ಹ್ಯೇತತ್ ಪುರಾ ಮಯಾ ॥46॥
ನಿನ್ನ ಆದೇಶದಂತೆ ಮತ್ತು ಉಳಿದ ಎಲ್ಲಾಕಾರಣಗಳಿಂದ ನಾನು ನಿನಗೆ ಅಭೀಷ್ಟವನ್ನುಂಟುಮಾಡುತ್ತೇನೆ. ಈ ವಿಷಯವನ್ನು ನಾನು ಮೊದಲೇ ತಿಳಿದಿದ್ದೆ.
ಭವತ್ಯಾ ಯದಭಿಪ್ರೇತಂ ತದಹಂ ಕರ್ತುಮಾಗತಃ |
ಭ್ರಾತುಃ ಪುತ್ರಾನ್ ಪ್ರದಾಸ್ಯಾಮಿ ಮಿತ್ರಾವರುಣಯೋಃ ಸಮಾನ್ ॥
ನಿನಗೆ ಅಭಿಪ್ರೇತವಾದುದನ್ನು ಮಾಡಲು ನಾನು ಇಲ್ಲಿಗೆ ಬಂದಿದ್ದೇನೆ. ತಮ್ಮನಿಗೆ ಮಿತ್ರಾವರುಣರಿಗೆ ಸಮರಾದ ಮಕ್ಕಳನ್ನು ಕೊಡುವೆನು.
ವ್ರತಂ ಚ ಚರಿತವ್ಯಂ ತು ನಿರ್ದಿಷ್ಟಮಿಹ ಯನ್ಮಯಾ |
ಸಂವತ್ಸರಂ ಯಥಾನ್ಯಾಯಂ ತತಃ ಶುದ್ಧೇ ಭವಿಷ್ಯತಃ ॥48॥
ಆದರೆ ನಾನು ಹೇಳಿದ ವ್ರತವನ್ನು ಒಂದು ವರ್ಷದ ಕಾಲ ಆಚರಿಸಬೇಕು. ಆಗ ಅವರಿಬ್ಬರೂ ಶುದ್ಧರಾಗುವರು.
ನಹಿ ಮಾಮವ್ರತೋಪೇತಾ ಸ್ಪೃಶತೇ ಕಾಚಿದಂಗನಾ |
ನ ಚ ಮಾಮರ್ಹತಃ ಪ್ರಾಪ್ತುಮಶುದ್ಧೇ ಕೋಸಲಾತ್ಮಜೇ |
ಏವಂ ಸತ್ಯವತೀ ಧರ್ಮಂ ಪರಮಾಜ್ಞಾತುಮರ್ಹಸಿ ॥49॥
ವ್ರತವನ್ನು ಮಾಡದ ಯಾವ ವನಿತೆಯೂ ನನ್ನನ್ನು ಸ್ಪರ್ಶ ಮಾಡಲಾರಳು. ಅಶುದ್ಧರಾದ ಆ ಇಬ್ಬರು ಕೋಸಲರಾಜಕುಮಾರಿಯರು ನನ್ನ ಸಮೀಪಕ್ಕೆ ಬರಲು ಅರ್ಹರಾಗುವುದಿಲ್ಲ. ಸತ್ಯವತೀ, ಈ ಶ್ರೇಷ್ಠವಾದ ಧರ್ಮವನ್ನು ನೀನು ತಿಳಿಯಬೇಕು.
ಸತ್ಯವತೀ
ಯಥಾ ಸದ್ಯಃ ಪ್ರಪದ್ಯೇತಾಂ ದೇವ್ಯೌ ಗರ್ಭಂ ತಥಾ ಕುರು |
ಅರಾಜಕೇಷು ರಾಷ್ಟ್ರೇಷು ಪ್ರಜಾಽನಾಥಾ ವಿನಶ್ಯತಿ ॥50॥
ಆ ಇಬ್ಬರು ದೇವಿಯರು ಹೇಗೆ ತಕ್ಷಣದಲ್ಲಿಯೇ ಗರ್ಭವನ್ನು ಧರಿಸುವರೋ ಹಾಗೆ ಮಾಡು. ರಾಷ್ಟ್ರದಲ್ಲಿ ರಾಜನೇ ಇಲ್ಲದಿದ್ದರೆ ಪ್ರಜೆಗಳು ಅನಾಥರಾಗಿ ವಿನಾಶವನ್ನು ಹೊಂದುವರು.
ಕಥಂ ಚಾರಾಜಕಂ ರಾಜ್ಯಂ ಶಕ್ಯಂ ಧಾರಯಿತುಂ ಪ್ರಭೋ |
ತಸ್ಮಾದ್ ಗರ್ಭಂ ನಿಷಿಂಚಸ್ವ ಭೀಷ್ಮಸ್ತಂ ವರ್ಧಯಿಷ್ಯತಿ ॥51॥
ಪ್ರಭುವೇ, ಅರಾಜಕವಾದ ರಾಜ್ಯವನ್ನು ಹೇಗೆ ಹಿಡಿದುಕೊಳ್ಳಲು ಸಾಧ್ಯ. ಆದ್ದರಿಂದ ಗರ್ಭಾಧಾನವನ್ನು ಮಾಡು. ಭೀಷ್ಮನು ಮಕ್ಕಳನ್ನು ಬೆಳೆಸುತ್ತಾನೆ.
ವ್ಯಾಸಃ
ಯದಿ ಪುತ್ರಃ ಪ್ರದಾತವ್ಯೋ ಮಯಾ ಕ್ಷಿಪ್ರಮಕಾಲಿಕಮ್ |
ವಿರೂಪತಾಂ ಮೇ ಸಹತಾಮೇತತ್ ಸ್ಯಾತ್ ಪರಮಮ್ ವ್ರತಮ್ ॥
ನಾನು ತಕ್ಷಣದಲ್ಲಿಯೇ ಅಕಾಲಿಕನಾದ ಮಗನನ್ನು ಕೊಡಬೇಕಾದರೆ, ಅವರಿಬ್ಬರೂ ನನ್ನ ವಿರೂಪವನ್ನು ಸಹಿಸಬೇಕು. ಇದು ದೊಡ್ಡ ವ್ರತವಾಗುತ್ತದೆ.
ಯದಿ ಮೇ ಸಹತೇ ವೇಷಂ ರೂಪಂ ಗಂಧಂ ತಥಾ ವಪುಃ |
ಅದ್ಯೈವ ಗರ್ಭಂ ಕೌಸಲ್ಯಾ ವಿಶಿಷ್ಟಂ ಪ್ರತಿಪತ್ಸ್ಯತೇ ॥53॥
ನನ್ನ ವೇಷವನ್ನೂ, ರೂಪವನ್ನೂ, ಗಂಧವನ್ನೂ, ಮತ್ತು ಶರೀರವನ್ನೂ, ಸಹಿಸುವುದಾದರೆ ಕೋಸಲರಾಜಕುಮಾರಿಯು ಈ ದಿನವೇ ವಿಶಿಷ್ಟವಾದ ಗರ್ಭವನ್ನು ಧರಿಸುವಳು.
ತಸ್ಯ ಚಾಪಿ ಶತಂ ಪುತ್ರಾ ಭವಿತಾರೋ ನ ಸಂಶಯಃ |
ಗೋಪ್ತಾರಃ ಕುರುವಂಶಸ್ಯ ಭವತ್ಯಾಃ ಶೋಕನಾಶನಾಃ ॥54॥
ಅವನಿಗೂ ಸಹ ನೂರು ಮಕ್ಕಳು ಜನಿಸುತ್ತಾರೆ. ಅವರು ಕುರುವಂಶವನ್ನು ರಕ್ಷಿಸುವವರೂ, ನಿನ್ನ ಶೋಕವನ್ನು ನಾಶಮಾಡುವವರೂ ಆಗುವರು. ಇದರಲ್ಲಿ ಸಂಶಯವಿಲ್ಲ.
ಶಯನೇ ತ್ವೇವ ಕೌಸಲ್ಯಾ ಶುಚಿವಸ್ತ್ರಾ ಸ್ವಲಂಕೃತಾ |
ಮಮಾಗಮನಮಾಕಾಂಕ್ಷೇದಿತ್ಯುಕ್ತ್ವಾಽಂತರಧೀಯತ ॥55॥
ಕೌಸಲ್ಯೆಯು (ಅಂಬಿಕೆಯು) ಶುಭ್ರವಸ್ತ್ರಗಳನ್ನುಟ್ಟು ಅಲಂಕೃತಳಾಗಿ ಹಾಸಿಗೆಯಲ್ಲಿ ಕುಳಿತು ನನ್ನ ಆಗಮನವನ್ನು ನಿರೀಕ್ಷಿಸುತ್ತಿರಬೇಕು ಎಂದು ಹೇಳಿ ವ್ಯಾಸರು ಅದೃಶ್ಯರಾದರು.
ವೈಶಂಪಾಯನಃ
ಅಭಿಗಮ್ಯ ತು ಸಾ ದೇವೀ ಸ್ನುಷಾಂ ರಹಸಿ ಸಂಗತಾ |
ಧರ್ಮಮರ್ಥಸಮಾಯುಕ್ತಮುವಾಚ ವಚನಂ ಹಿತಮ್ ॥56॥
ಅನಂತರ ಸತ್ಯವತಿಯು ಏಕಾಂತದಲ್ಲಿ ತನ್ನ ಸೊಸೆಯನ್ನು ಸಮೀಪಿಸಿ ಧರ್ಮಾರ್ಥಯುಕ್ತವಾದ ಹಿತ ವಚನವನ್ನು ಆಡಿದಳು.
ಸತ್ಯವತೀ
ಕೌಸಲ್ಯೇ ಧರ್ಮತಂತ್ರಂ ಯದ್ ಬ್ರವೀಮಿ ತ್ವಾಂ ನಿಬೋಧ ಮೇ |
ಭರತಾನಾಂ ಸಮುಚ್ಛೇದೋ ವ್ಯಕ್ತಂ ಮದ್ಭಾಗ್ಯಸಂಕ್ಷಯಾತ್ ॥57॥
ಕೌಸಲ್ಯೆಯೇ, ನಾನು ಧರ್ಮಯುಕ್ತವಾಗಿ ಆಡುವ ಮಾತುಗಳನ್ನು ನೀನು ಕೇಳು. ನನ್ನ ಭಾಗ್ಯನಾಶದಿಂದ ಭರತರ ಕುಲಕ್ಕೆ ನಾಶವು ಪ್ರಾಪ್ತವಾಗಿದೆ.

ವ್ಯಥಿತಾಂ ಮಾಂ ಚ ಸಂಪ್ರೇಕ್ಷ್ಯ ಪಿತುರ್ವಂಶಂ ಚ ಪೀಡಿತಮ್ |
ಭೀಷ್ಮೋ ಬುದ್ಧಿಮತಾಂ ಶ್ರೇಷ್ಠೋ ಕುರುತೇ ಬುದ್ಧಿಮುತ್ತಮಾಮ್ ॥
ವ್ಯಥಿತಳಾದ ನನ್ನನ್ನು ನೋಡಿ ತಂದೆಯ ವಂಶವು ಕಷ್ಟಕ್ಕೆ ಸಿಲುಕಿರುವುದನ್ನು ನೋಡಿ ಬುದ್ಧಿವಂತರಲ್ಲಿ ಶ್ರೇಷ್ಠನಾದ ಭೀಷ್ಮನು ಒಂದು ಉತ್ತಮವಾದ ಉಪಾಯವನ್ನು ಯೋಚಿಸಿದ್ದಾನೆ.
ಸಾ ಚ ಬುದ್ಧಿಸ್ತ್ವಯ್ಯಧೀನಾ ಪುತ್ರಂ ಪ್ರಾಪ್ತುಂ ಮತಿಂ ಕುರು |
ನಷ್ಟಂ ಚ ಭಾರತಂ ವಂಶಂ ಪುನರೇವ ಸಮುದ್ಧರ ॥59॥
ಆ ಉಪಾಯವು ನಿನ್ನನ್ನು ಅವಲಂಬಿಸಿದೆ. ಮಗನನ್ನು ಪಡೆಯಲು ನಿರ್ಧರಿಸು. ನಷ್ಟವಾದ ಭಾರತವಂಶವನ್ನು ಪುನಃ ಉಜ್ಜೀವನಗೊಳಿಸು.
ಪುತ್ರಂ ಜನಯ ಕಲ್ಯಾಣಿ ದೇವರಾಜಸಮದ್ಯುತಿಮ್ |
ಗರ್ಭಂ ಧಾರಯ ಕಲ್ಯಾಣಿ ದೇವರಾಜಸಮಪ್ರಭಮ್ |
ಸ ತೇ ಪುತ್ರೋ ಧುರಂ ಗುರ್ವೀಂ ಧಾರಯಿಷ್ಯತಿ ಭಾರತೀಮ್ ॥60॥
ಕಲ್ಯಾಣಿಯೇ, ದೇವರಾಜನ ಕಾಂತಿಯುಳ್ಳ ಮಗನನ್ನು ಪಡೆ. ಕಲ್ಯಾಣಿಯೇ, ದೇವರಾಜನ ಕಾಂತಿಯುಳ್ಳ ಗರ್ಭವನ್ನು ಧರಿಸು. ಆ ನಿನ್ನ ಮಗನು ಭರತವಂಶದ ದೊಡ್ಡ ಜವಾಬ್ದಾರಿಯನ್ನು ಹೊರುತ್ತಾನೆ.
ವೈಶಂಪಾಯನಃ
ಸಾ ಧರ್ಮತೋಽನುನೀಯ್ಯೆನಾಂ ಕಥಂಚಿದ್ ಧರ್ಮಚಾರಿಣೀಮ್|
ಭೋಜಯಾಮಾಸ ವಿಪ್ರಾಂಶ್ಚ ದೇವರ್ಷೀನತಿಥೀಂಸ್ತಥಾ ॥61॥
ಅವಳು ಧರ್ಮಚಾರಿಣಿಯಾದ ತನ್ನ ಸೊಸೆಯನ್ನು ಕಷ್ಟಪಟ್ಟು ಧರ್ಮದ ದೃಷ್ಟಿಯಿಂದ ಒಪ್ಪಿಸಿ ಬ್ರಾಹ್ಮಣರಿಗೂ, ದೇವರ್ಷಿಗಳಿಗೂ ಮತ್ತು ಅತಿಥಿಗಳಿಗೂ ಭೋಜನವನ್ನು ಮಾಡಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ಷಡಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಚತುಃಪಂಚಾಶತ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು,
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ವಿಚಿತ್ರವೀರ್ಯಃ ಪ್ರಮದಾದ್ವಯಂ ತತ್
ಸಂಪ್ರಾಪ್ಯ ರೇಮೇಽಬ್ದಗಣಾನ್ ಸುಸಕ್ತಃ |
ತತ್ಯಾಜ ದೇಹಂ ಚ ಸ ಯಕ್ಷ್ಮಣಾರ್ದಿತಃ
ತತೋಽಸ್ಯ ಮಾತಾಸ್ಮರದಾಶು ಕೃಷ್ಣಮ್ ॥124॥
ವಿಚಿತ್ರವೀರ್ಯ ಇಬ್ಬರು ಹೆಂಡತಿಯರನ್ನು ಪಡೆದು ಬಹುವರ್ಷಕಾಲ ಬಹಳ ಆಸಕ್ತನಾಗಿ ರಮಿಸಿದ. ಕ್ಷಯರೋಗದಿಂದ ಪೀಡಿತನಾಗಿ ದೇಹವನ್ನು ತೊರೆದ. ಆಗ ಅವನ ತಾಯಿ ಸತ್ಯವತಿ ಬೇಗನೆ ವೇದವ್ಯಾಸರನ್ನು ನೆನೆದಳು.
ಆವಿರ್ಬಭೂವಾಶು ಜಗಜ್ಜನಿತ್ರೋ ಜನಾರ್ದನೋ ಜನ್ಮಜರಾಭಯಾಪಹಃ |
ಸಮಸ್ತ ವಿಜ್ಞಾನತನುಃ ಸುಖಾರ್ಣವಃ ಸಂಪೂಜಯಾಮಾಸ ಚ ತಂ ಜನಿತ್ರೀ ॥
ಒಡನೆ ಜಗಜ್ಜನಕರಾದ, ಜನ್ಮ ಜರಾಭಯ ಪರಿಹಾರಕರಾದ, ಪೂರ್ಣ ವಿಶೇಷಜ್ಞಾನ ಶರೀರರಾದ ಆನಂದಸಾಗರರಾದ ವೇದವ್ಯಾಸರು ಪ್ರತ್ಯಕ್ಷರಾದರು. ತಾಯಿ ಆ ಮಗನನ್ನು ಚೆನ್ನಾಗಿ ಉಪಚರಿಸಿದಳು.
ತಂ ಭೀಷ್ಮಪೂರ್ವೈಃ ಪರಮಾದರಾರ್ಚಿತಂ
ಸ್ವಭಿಷ್ಟುತಂ ಚಾವದದಸ್ಯ ಮಾತಾ |
ಪುತ್ರೌ ಮೃತೌ ಮೇ ನ ತು ರಾಜ್ಯಮೈಚ್ಛದ್
ಭೀಷ್ಮೋ ಮಯಾ ನಿತರಾಮರ್ಥಿತೋಽಪಿ ॥126॥
ಭೀಷ್ಮ ಮುಂತಾದವರೂ ಪರಮಾದರದಿಂದ ವೇದವ್ಯಾಸರನ್ನು ಉಪಚರಿಸಿದರು. ಪ್ರಶಂಸಿಸಿದರು. ತಾಯಿ ಸತ್ಯವತಿ ನುಡಿದಳು `ನನ್ನ ಇಬ್ಬರು ಮಕ್ಕಳೂ ಮೃತರಾಗಿರುವರು. ನಾನು ಎಷ್ಟು ಹೇಳಿದರೂ ಭೀಷ್ಮ ರಾಜ್ಯಭಾರ ಕೈಗೊಳ್ಳಲು ಒಪ್ಪಲಿಲ್ಲ'.
ಕ್ಷೇತ್ರೇ ತತೋ ಭ್ರಾತುರಪತ್ಯಮುತ್ತಮಮುತ್ಪಾದಯಾಸ್ಮತ್ಪರಮಾದರಾರ್ಥಿತಃ |
ಇತೀರಿತಃ ಪ್ರಣತಶ್ಚಾಪ್ಯಭಿಷ್ಟುತೋ ಭೀಷ್ಮಾದಿಭಿಶ್ಚಾಹ ಜಗದ್ಗುರುರ್ವಚಃ ॥
`ನಾವು ನಿನ್ನನ್ನು ಪರಮಾದರದಿಂದ ಕೇಳಿಕೊಳ್ಳುತ್ತೇವೆ. ನೀನು ನಿನ್ನ ಸೋದರನ ಪತ್ನಿಯಲ್ಲಿ ಒಳ್ಳೆಯ ಸಂತತಿಯನ್ನು ಹುಟ್ಟಿಸು'. ಹೀಗೆ ಸತ್ಯವತಿ ಹೇಳಿದಳು. ಭೀಷ್ಮ ಮುಂತಾದವರೂ ನಮಿಸಿ ಸ್ತೋತ್ರ ಮಾಡಿದರು. ಆಗ ಜಗದ್ಗುರು ವೇದವ್ಯಾಸರು ಹೇಳಿದರು.
ಋತೇ ರಮಾಂ ಜಾತು ಮಮಾಂಗಯೋಗಯೋಗ್ಯಾಂಗನಾ
ನೈವ ಸುರಾಲಯೇಽಪಿ |
ತಥಾಪಿ ತೇ ವಾಕ್ಯಮಹಂ ಕರಿಷ್ಯೇ ಸಾಂವತ್ಸರಂ
ಸಾ ಚರತು ವ್ರತಂ ಚ ॥128॥
`ರಮೆ ಹೊರತು ನನ್ನ ಅಂಗಸಂಗಕ್ಕೆ ಯೋಗ್ಯಳಾದ ಸ್ತ್ರೀ ಸ್ವರ್ಗದಲ್ಲಿ ಏಕೆ ಸತ್ಯಲೋಕಾದಿಗಳಲ್ಲಿಯೂ ಕೂಡ ಎಂದೂ ಯಾರೂ ಇಲ್ಲ. ಭೂಲೋಕದಲ್ಲಿ ಇನ್ನೇನು? ಆದರೂ ನಾನು ನಿನ್ನ ಮಾತನ್ನು ನಡೆಸಿಕೊಡುತ್ತೇನೆ. ಅದಕ್ಕೆ ಒಂದು ವರ್ಷ ಕಾಲ ವಿಚಿತ್ರವೀರ್ಯನ

ಮಡದಿ ವೈಷ್ಣವ ವ್ರತ ಆಚರಿಸಲಿ'.
ಸಾ ಪೂತದೇಹಾಥ ಚ ವೈಷ್ಣವವ್ರತಾನ್ಮತ್ತಃ
ಸಮಾಪ್ನೋತು ಸುತಂ ವರಿಷ್ಠಮ್ |
ಇತೀರಿತೇ ರಾಷ್ಟ್ರಮುಪೈತಿ ನಾಶಮಿತಿ
ಬ್ರುವಂತೀಂ ಪುನರಾಹ ವಾಕ್ಯಮ್ ॥129॥
`ವಿಚಿತ್ರವೀರ್ಯನ ಮಡದಿ ವೈಷ್ಣವ ವ್ರತದಿಂದ ಶರೀರ ಪವಿತ್ರವಾದ ಬಳಿಕ ನನ್ನಿಂದ ಉತ್ತಮ ಪುತ್ರನನ್ನು ಪಡೆಯಲಿ'. ಹೀಗೆ ವೇದವ್ಯಾಸರು ಹೇಳಿದಾಗ, ಸತ್ಯವತಿ `ಅಷ್ಟರೊಳಗೆ ರಕ್ಷಕರಿಲ್ಲದೆ ರಾಷ್ಟ್ರನಾಶವಾಗುವುದು' ಎಂದಳು. ಆಗ ವೇದವ್ಯಾಸರು ಹೇಳಿದರು.
ಸೌಮ್ಯಸ್ವರೂಪೋಽಪ್ಯತಿಭೀಷಣಂ ಮೃಷಾ
ತಚ್ಚಕ್ಷುಷೋ ರೂಪಮಹಂ ಪ್ರದರ್ಶಯೇ |
ಸಹೇತ ಸಾ ತದ್ ಯದಿ ಪುತ್ರಕೋಽಸ್ಯಾ
ಭವೇದ್ ಗುಣಾಢ್ಯೋ ಬಲವೀರ್ಯಯುಕ್ತಃ ॥130॥
`ನಾನು ಸೌಮ್ಯಸ್ವರೂಪನಾದರೂ ಅತ್ಯಂತ ಭಯಂಕರ ರೂಪವನ್ನು ಸುಮ್ಮನೆ ಅವಳ ಕಣ್ಣಿಗೆ ತೋರುತ್ತೇನೆ. ಅದನ್ನು ಅವಳು ಸಹಿಸಿಕೊಳ್ಳುವುದಾದರೆ ಅವಳಿಗೆ ಬಲವೀರ್ಯ ಯುಕ್ತನಾದ ಗುಣಾಢ್ಯನಾದ ಪುತ್ರ ಜನಿಸುತ್ತಾನೆ'.
ಇತೀರಿತೇಽಸ್ತ್ವಿತ್ಯುದಿತಸ್ತಯಾಗಮತ್
ಕೃಷ್ಣೋಽಂಬಿಕಾಂ ಸಾ ತು ಧಿಯಾ ನ್ಯಮೀಲಯತ್ |
ಅಭೂಚ್ಚ ತಸ್ಯಾಂ ಧೃತರಾಷ್ಟ್ರನಾಮಕೋ
ಗಂಧರ್ವರಾಟ್ ಪವನಾವೇಶಯುಕ್ತಃ ॥131॥
ಹೀಗೆ ಹೇಳಿದಾಗ ಸತ್ಯವತಿ ಆಗಲಿ ಎಂದಳು. ವ್ಯಾಸರು ಅಂಬಿಕೆಯ ಬಳಿಗೆ ಬಂದರು. ಅವಳು ಭಯದಿಂದ ಕಣ್ಣುಮುಚ್ಚಿದಳು. ಅವಳಲ್ಲಿ ಗಂಧರ್ವ ರಾಜನೊಬ್ಬ ವಾಯ್ವಾವೇಶಯುಕ್ತನಾಗಿ ಧೃತರಾಷ್ಟ್ರನೆಂಬ ಹೆಸರಿಂದ ಜನಿಸಿದ.
ಸ ಮಾರುತಾವೇಷಬಲಾದ್ ಬಲಾಧಿಕೋ
ಬಭೂವ ರಾಜಾ ಧೃತರಾಷ್ಟ್ರನಾಮಾ |
ಅದಾದ್ ವರಂ ಚಾಸ್ಯ ಬಲಾಧಿಕತ್ವಂ
ಕೃಷ್ಣೋಽಂಧ ಆಸೀತ್ ಸ ತು ಮಾತೃದೋಷತಃ ॥132॥
ಆ ಧೃತರಾಷ್ಟ್ರನಾಮಕನಾದ ರಾಜ ವಾಯ್ವಾವೇಶ ಬಲದಿಂದ ಬಲದಲ್ಲಿ ಶ್ರೇಷ್ಠನಾದ. ಅವನಿಗೆ ಅಧಿಕ ಬಲವಿತ್ತರು ವ್ಯಾಸರು. ಆದರೆ ತಾಯಿಯ ದೋಷದಿಂದ ಅವನು ಹುಟ್ಟುವಾಗಲೆ ಅಂಧನಾಗಿದ್ದ.
ಜ್ಞಾತ್ವಾ ತಮಂಧಂ ಪುನರೇವ ಕೃಷ್ಣಂ
ಮಾತಾಬ್ರವೀಜ್ಜನಯಾನ್ಯಂ ಗುಣಾಢ್ಯಮ್ |
ಅಂಬಾಲಿಕಾಯಾಮಿತಿ ತತ್ ತಥಾಕರೋತ್
ಭಯಾತ್ತು ಸಾ ಪಾಂಡುರಭೂನ್ಮೃಷಾದೃಕ್ ॥133॥
ಧೃತರಾಷ್ಟ್ರ ಕುರುಡನಾಗಿ ಜನಿಸಿದುದನ್ನು ತಿಳಿದು ತಾಯಿ ಸತ್ಯವತಿ ವ್ಯಾಸರಿಗೆ ಹೇಳಿದಳು, `ಅಂಬಾಲಿಕೆಯಲ್ಲಿಯೂ ಇನ್ನೊಬ್ಬ ಗುಣಶಾಲಿಯಾದ ಮಗನನ್ನು ಹುಟ್ಟಿಸು' ಎಂದು. ವ್ಯಾಸರು ಹಾಗೇ ಮಾಡಿದರು. ಆದರೆ ಅವರು ಸುಮ್ಮನೆ ತೋರಿದ ಭಯಂಕರ ರೂಪವನ್ನು ನೋಡುತ್ತ ಅಂಬಾಲಿಕೆ ಭಯದಿಂದ ಪಾಂಡುವರ್ಣ ತಳೆದಳು.
ಪರಾವಹೋ ನಾಮ ಮರುತ್ತತೋಽಭವತ್
ವರ್ಣೇನ ಪಾಂಡುಃ ಸ ಹಿ ನಾಮತಶ್ಚ |
ಸ ಚಾಸ ವೀರ್ಯಾಧಿಕ ಏವ ವಾಯೋರಾವೇಶತಃ
ಸರ್ವ ಶಸ್ತ್ರಾಸ್ತ್ರವೇತ್ತಾ ॥134॥
ಪರಾವಹನೆಂಬ ಮರುತ್ತು ಪಾಂಡುವರ್ಣದವನಾಗಿ `ಪಾಂಡು' ಎಂಬ ಹೆಸರಿನಿಂದಲೆ ಜನಿಸಿದ. ವಾಯುವಿನ ಆವೇಶದಿಂದ ಬಲದಲ್ಲಿ ಶ್ರೇಷ್ಠವೆನಿಸಿದ. ಶಸ್ತ್ರಾಸ್ತ್ರ ನಿಪುಣನೆನಿಸಿದ.
ತಸ್ಮೈ ತಥಾ ಬಲವೀರ್ಯಾಧಿಕತ್ವವರಂ
ಪ್ರಾದಾತ್ ಕೃಸ್ಣ ಏವಾಥ ಪಾಂಡುಮ್ |
ವಿಜ್ಞಾಯ ತಂ ಪ್ರಾಹ ಪುನಶ್ಚ ಮಾತಾ
ನಿರ್ದೋಷಮನ್ಯಂ ಜನಯೋತ್ತಮಂ ಸುತಮ್ ॥135॥
ಪಾಂಡುವಿಗೂ ಬಲವೀರ್ಯಗಳಲ್ಲಿ ಶ್ರೇಷ್ಠನಾಗೆಂದು ವ್ಯಾಸರು ವರವಿತ್ತರು. ಬಳಿಕ ಪಾಂಡು ಪಾಂಡುವರ್ಣದವನಾದನೆಂದು ತಿಳಿದು ಸತ್ಯವತಿ ಪುನಃ ನಿರ್ದುಷ್ಟನಾದ ಉತ್ತಮನಾದ ಇನ್ನೊಬ್ಬ ಮಗನನ್ನು ಹುಟ್ಟಿಸೆಂದು ವ್ಯಾಸರಲ್ಲಿ ಹೇಳಿದಳು.
ಉಕ್ತ್ವೇತಿ ಕೃಷ್ಣಂ ಪುನರೇವ ಚ ಸ್ನುಷಾಮಾಹ
ತ್ವಯಾಕ್ಷ್ಣೋರ್ಹಿ ನಿಮೀಲನಂ ಪುರಾ |
ಕೃತಂ ತತಸ್ತೇ ಸುತ ಆಸ ಚಾಂಧಃ ತತಃ
ಪುನಃ ಕೃಷ್ಣಮುಪಾಸ್ವ ಭಕ್ತಿತಃ ॥136॥
ವ್ಯಾಸರಲ್ಲಿ ಹೀಗೆ ಹೇಳಿ ಸತ್ಯವತಿ ಪುನಃ ಸೊಸೆಯ ಬಳಿ ಹೇಳಿದಳು, `ನೀನು ಹಿಂದೆ ಕಣ್ಣುಮುಚ್ಚಿಕೊಂಡೆ. ಅದರಿಂದ ನಿನಗೆ ಕುರುಡನಾದ ಮಗ ಹುಟ್ಟಿದ. ಅದರಿಂದ ಪುನಃ ವ್ಯಾಸರನ್ನು ಭಕ್ತಿಯಿಂದ ಆರಾಧಿಸು' ಎಂದು.

ಇತೀರಿತಾಪ್ಯಸ್ಯ ಹಿ ಮಾಯಯಾ ಸಾ
ಭೀತಾ ಭುಜಿಷ್ಯಾಂ ಕುಮತಿರ್ನ್ಯಯೋಜಯತ್ |
ಸಾ ತಂ ಪರಾನಂದತನುಂ ಗುಣಾರ್ಣವಂ
ಸುಪ್ರಾಪ್ಯ ಭಕ್ತ್ಯಾ ಪರಯೈವ ರೇಮೇ ॥137॥
ಸತ್ಯವತಿ ಹೀಗೆ ಹೇಳಿದರೂ ವೇದವ್ಯಾಸರ ಇಚ್ಛಾಬಲದಿಂದ ಅಂಬಿಕೆ ಭೀತಳಾಗಿ ದುರ್ಬುದ್ಧಿಯಿಂದ ದಾಸಿಯನ್ನು ಕಳಿಸಿಕೊಟ್ಟಳು. ದಾಸಿ ಗುಣಸಮುದ್ರನಾದ ಉತ್ಕೃಷ್ಟ ಆನಂದ ಶರೀರಿಯಾದ ವ್ಯಾಸರನ್ನು ಹೊಂದಿ ಪರಮಭಕ್ತಿಯಿಂದ ರಮಿಸಿದಳು.
ತಸ್ಯಾಂ ಸ ದೇವೋಽಜನಿ ಧರ್ಮರಾಜೋ
ಮಾಂಡವ್ಯಶಾಪಾದ್ಯ ಉವಾಹ ಶೂದ್ರತಾಮ್ |
ವಸಿಷ್ಠಸಾಮ್ಯಂ ಸಮಭೀಪ್ಸಮಾನಂ
ಪ್ರಚ್ಯಾವಯನ್ನಿಚ್ಛಯಾ ಶಾಪಮಾಪ ॥138॥
ದಾಸಿಯಲ್ಲಿ ಯಮದೇವ ಅವತರಿಸಿದ. ಆ ಮೂಲಕ ಅವನು ಮಾಂಡವ್ಯ ಶಾಪ ಪ್ರಯುಕ್ತವಾದ ಶೂದ್ರತ್ವವನ್ನು ಹೊಂದಿದ್ದ. ವಸಿಷ್ಠ ಸಾಮ್ಯವನ್ನು ಬಯಸಿ ತಪಸ್ಸು ಮಾಡುತ್ತಿದ್ದ ಮಾಂಡವ್ಯನನ್ನು ತಪಸ್ಸಿನಿಂದ ಚ್ಯುತಿಗೊಳಿಸುವುದಕ್ಕಾಗಿ ಸ್ವೇಚ್ಛೆಯಿಂದಲೆ ಅವನು ಆ ಶಾಪವನ್ನು ಪಡೆದಿದ್ದ.
* * * *

ನೂರ ಏಳನೆಯ ಅಧ್ಯಾಯ
(ವ್ಯಾಸರಿಂದ ಧೃತರಾಷ್ಟ್ರ, ಪಾಂಡು ಮತ್ತು ವಿದುರರ ಜನನ.)
ವೈಶಂಪಾಯನಃ
ತತಃ ಸತ್ಯವತೀ ಹೃಷ್ಟಾ ಸ್ನುಷಾಂ ಸ್ನಾತಾಮೃತೌ ತದಾ |
ಸಂವೇಶಯಂತೀ ಶಯನೇ ಶನೈರ್ವಚನಮಬ್ರವೀತ್ ॥1॥
ಅನಂತರ ಸತ್ಯವತಿಯು ಸಂತೋಷಗೊಂಡು ಋತುಸ್ನಾತಳಾಗಿದ್ದ ತನ್ನ ಸೊಸೆಯನ್ನು ಹಾಸಿಗೆಯಲ್ಲಿ ಮಲಗಿಸುತ್ತಾ ಮೆಲ್ಲನೆ ಮಾತನಾಡಿದಳು.
ಕೌಸಲ್ಯೇ ದೇವರೋ ದೇವಿ ಸಮೇತ್ಯಾನುಪ್ರವೇಕ್ಷ್ಯತಿ | ಅಪ್ರಮತ್ತಾಽಭಿವೀಕ್ಷೇಥಾ ನಿಶಾಯಾಮಾಗಮಿಷ್ಯತಿ ॥2॥
ಕೌಸಲ್ಯೇ, ನಿನ್ನ ಭಾವನು ಈ ದಿನ ಬಂದು ಇಲ್ಲಿ ಪ್ರವೇಶಿಸುವನು. ಎಚ್ಚರಿಕೆಯಿಂದ ಅವನ ನಿರೀಕ್ಷಣೆಯನ್ನು ಮಾಡು. ಈ ರಾತ್ರಿ ಅವನು ಆಗಮಿಸುವನು.
ಶ್ವಶ್ರೂಸ್ತು ವಚನಂ ಶ್ರುತ್ವಾ ಶಯಾನಾ ಶಯನೇ ಶುಭೇ |
ಸಾಽಚಿಂತಯತ್ ತದಾ ಭೀಷ್ಮಮನ್ಯಾಂಶ್ಚ ಕುರುಸತ್ತಮಾನ್ ॥3॥
ಹಾಸಿಗೆಯಲ್ಲಿ ಮಲಗಿದ ಶುಭಳಾದ ಅವಳು ಅತ್ತೆಯ ಮಾತನ್ನು ಕೇಳಿ ಭೀಷ್ಮರನ್ನೂ ಮತ್ತು ಉಳಿದ ಕುರುಶ್ರೇಷ್ಠರನ್ನೂ ಚಿಂತಿಸಿದಳು.
ತತಃ ಸುಪ್ತಜನಪ್ರಾಯೇ ವ್ಯಾಸಃ ಸ ಭಗವಾನೃಷಿಃ |
ದೀಪ್ಯಮಾನೇಷು ದೀಪೇಷು ಶರಣಂ ಪ್ರವಿವೇಶ ತತ್ ॥4॥
ಅನಂತರ ಎಲ್ಲ ಜನರೂ ನಿದ್ರಾವಶರಾಗುತ್ತಿರಲು ಎಲ್ಲಾ ಕಡೆಗಳಲ್ಲಿಯೂ ದೀಪಗಳು ಬೆಳಗುತ್ತಿರಲು ಋಷಿರೂಪದಲ್ಲಿದ್ದ ಭಗವಾನ್ ವೇದವ್ಯಾಸರು ಮನೆಗೆ ಬಂದರು.
ತತೋಽಂಬಿಕಾಯಾಂ ಪ್ರಥಮಂ ನಿಯುಕ್ತಃ ಸತ್ಯವಾನ್ ಋಷಿಃ |
ಜಗಾಮ ತಸ್ಯಾಃ ಶಯನಂ ವಿಪುಲೇ ತಪಸಿ ಸ್ಥಿತಃ ॥5॥
ಆಗ ಅಂಬಿಕೆಯಲ್ಲಿ ಮೊದಲು ನಿಯುಕ್ತರಾದ ವಿಪುಲವಾದ ತಪಸ್ಸಿನಲ್ಲಿ ನಿಷ್ಠರಾದ ಸತ್ಯವಂತರಾದ ಅವರು ಅಂಬಿಕೆಯ ಶಯನಗೃಹಕ್ಕೆ ಹೋದರು.
ತಂ ಸಮೀಕ್ಷ್ಯ ತು ಕೌಸಲ್ಯಾ ದುಷ್ಪ್ರೇಕ್ಷಮತಥೋಚಿತಮ್ |
ವಿರೂಪಮಿತಿ ವಿತ್ರಸ್ತಾ ಸಂಕುಚ್ಯಾಸೀನ್ನಿಮೀಲಿತಾ ॥6॥
ಕೌಸಲ್ಯೆಯು (ಕಾಶೀರಾಜಕುಮಾರಿಯು) ಎಂದೂ ಹಾಗಿಲ್ಲದಿರುವ ಅವರನ್ನು ನೋಡಲು ಅಸಾಧ್ಯವಾದ ರೂಪದಲ್ಲಿ ನೋಡಿ ವಿರೂಪನೆಂದು ಭಾವಿಸಿ ಹೆದರಿ ಶರೀರವನ್ನು ಮುದುಡಿಕೊಂಡು ಕಣ್ಣುಗಳನ್ನು ಮುಚ್ಚಿದಳು.
ವಿರೂಪೋ ಹಿ ಜಟೀ ಚಾಪಿ ದುರ್ವರ್ಣಃ ಪುರುಷಃ ಕೃಶಃ |
ಸುಗಂಧೇತರಗಂಧಶ್ಚ ಸರ್ವಥಾ ದುಷ್ಪ್ರಧರ್ಷಣಃ ॥7॥
ಅವರು ವಿರೂಪರು, ಜಟೆಗಳನ್ನು ಧರಿಸಿದ್ದಾರೆ. ದುರ್ವರ್ಣದಿಂದ ಕೂಡಿ ಕೃಶರೂ ಮತ್ತು ಒರಟರೂ ಆಗಿದ್ದಾರೆ. ದುರ್ಗಂಧವು ಬೇರೆ ಬರುತ್ತಿದೆ. ಏನಾದರೂ ಅವರನ್ನು ಪ್ರಧರ್ಷಣ (ಅವಮಾನ) ಮಾಡಲು ಸಾಧ್ಯವಿಲ್ಲ (ಎಂದು ಯೋಚಿಸಿದಳು).
ತಸ್ಯ ಕೃಷ್ಣಸ್ಯ ಕಪಿಲಾಂ ಜಟಾಂ ದೀಪ್ತೇ ಚ ಲೋಚನೇ |
ಕದ್ರೂಣಿ ಚಾಸ್ಯ ಶ್ಮಶ್ರೂಣಿ ದೃಷ್ಟ್ವಾ ದೇವೀ ನ್ಯಮೀಲಯತ್ ॥8॥
ಆ ವೇಳೆಯಲ್ಲಿ ವ್ಯಾಸರ ಕಪಿಲ ವರ್ಣದ ಜಟೆಗಳನ್ನು ಉರಿಯುತ್ತಿರುವ ಕಣ್ಣುಗಳನ್ನು, ಕೆಂಪಾದ ಮೀಸೆಗಳನ್ನು ನೋಡಿ ಅವಳು ಕಣ್ಣುಗಳನ್ನು ಮುಚ್ಚಿಕೊಂಡಳು.
ಸಂಬಭೂವ ತಯಾ ರಾತ್ರೌ ಮಾತುಃ ಪ್ರಿಯಚಿಕೀರ್ಷಯಾ |
ಭಯಾತ್ ಕಾಶೀಸುತಾ ತಂ ತು ನಾಶಕ್ನೋದಭಿವೀಕ್ಷಿತುಮ್ ॥9॥

ತಾಯಿಗೆ ಹಿತವನ್ನು ಉಂಟು ಮಾಡಲು ವ್ಯಾಸರು ರಾತ್ರಿಯಲ್ಲಿ ಅವಳ ಸಮಾಗಮವನ್ನು ಮಾಡಿದರು. ಭಯದಿಂದ ಕೂಡಿದ್ದ ಕಾಶೀರಾಜಕುಮಾರಿಗೆ ಅವರನ್ನು ನೋಡಲು ಸಾಧ್ಯವಾಗಲಿಲ್ಲ.
ತತೋ ನಿಷ್ಕ್ರಾಂತಮಾಸಾದ್ಯ ತನ್ಮಾತಾ ಪ್ರತ್ಯಭಾಷತ |
ಅಪ್ಯತ್ರ ಗುಣವಾಂಸ್ತಾತ ರಾಜಪುತ್ರೋ ಭವಿಷ್ಯತಿ ॥10॥
ಅನಂತರ ಹೊರಗೆ ಬಂದ ಅವರನ್ನು ಕುರಿತು ತಾಯಿಯಾದ ಸತ್ಯವತಿಯು ಇವಳಲ್ಲಿ ಗುಣವಂತನಾದ ರಾಜಕುಮಾರನು ಜನಿಸುವನೇ ಎಂದು ಕೇಳಿದಳು.
ನಿಶಮ್ಯ ವಚನಂ ಮಾತುರ್ವ್ಯಾಸಃ ಪರಮಧರ್ಮವಿತ್ |
ಪ್ರೋವಾಚಾತೀಂದ್ರಿಯಜ್ಞಾನೋ ವಿಧಿನಾ ಸಂಪ್ರಚೋದಿತಃ ॥11॥
ತಾಯಿಯ ಮಾತನ್ನು ಕೇಳಿ ಪರಮಧರ್ಮಜ್ಞರೂ ಮತ್ತು ಅತೀಂದ್ರಿಯಜ್ಞಾನಿಗಳೂ ಆದ ಅವರು ವಿಧಿಯಿಂದ ಪ್ರಚೋದಿತರಾಗಿ ಮಾತನಾಡಿದರು.
ನಾಗಾಯುತಸಮಪ್ರಾಣೋ ವಿದ್ವಾನ್ ರಾಜರ್ಷಿಸತ್ತಮಃ |
ಮಹಾಭಾಗೋ ಮಹಾವೀರ್ಯೋ ಮಹಾಬುದ್ಧಿರ್ಭವಿಷ್ಯತಿ ॥12॥
ಹತ್ತು ಸಾವಿರ ಆನೆಗಳ ಬಲವುಳ್ಳವನೂ ಮಹಾನುಭಾವನೂ, ಮಹಾವೀರ್ಯನೂ, ಮಹಾಬುದ್ಧಿಯೂ, ವಿದ್ವಾಂಸನೂ ಆದ ರಾಜರ್ಷಿಶ್ರೇಷ್ಠನು ಜನಿಸುವನು.
ತಸ್ಯ ಚಾಪಿ ಶತಂ ಪುತ್ರಾ ಭವಿಷ್ಯಂತಿ ಮಹಾಬಲಾಃ |
ಕಿಂತು ಮಾತುಃ ಸ ವೈಗುಣ್ಯಾದಂಧ ಏವ ಭವಿಷ್ಯತಿ ॥13॥
ಅವನಿಗೂ ಸಹಾ ಮಹಾಬಲಿಷ್ಠರಾದ ನೂರು ಪುತ್ರರು ಜನಿಸುವರು. ಆದರೆ ತಾಯಿಯ ದೋಷದಿಂದ ಅವನು ಅಂಧನಾಗಿ ಜನಿಸುವನು (ಎಂದು ಹೇಳಿದರು).
ನಿಶಮ್ಯ ವಚನಂ ತಸ್ಯ ತನ್ಮಾತಾ ಪುನರಬ್ರವೀತ್ |
ಅಲಬ್ಧಲಾಭಃ ಪುತ್ರೋಽಯಂ ಯದ್ಯಂಧೋ ವೈ ಭವಿಷ್ಯತಿ ॥14॥
ಅವರ ಮಾತನ್ನು ಕೇಳಿ ತಾಯಿಯು ಪುನಃ ಅವರನ್ನು ಕುರಿತು ಅವನು ಅಂಧನಾದರೆ, ಈ ಪುತ್ರನನ್ನು ಪಡೆದರೂ ಪಡೆದಂತೆ ಆಗುವುದಿಲ್ಲ ಎಂದು ಹೇಳಿದಳು.
ಅಸ್ಯ ವಂಶಸ್ಯ ಗೋಪ್ತಾರಂ ಸತಾಂ ಶೋಕವಿನಾಶನಮ್ |
ತಸ್ಮಾದವರಜಂ ಪುತ್ರಂ ಜನಯಾನ್ಯಂ ನರಾಧಿಪಮ್ ॥15॥
ಈ ವಂಶವನ್ನು ರಕ್ಷಿಸುವ ಸಜ್ಜನರ ಶೋಕವನ್ನು ಪರಿಹರಿಸುವ ಅವನ ತಮ್ಮನಾದ ರಾಜಕುಮಾರನನ್ನು ಪಡೆ.
ಭ್ರಾತುರ್ಭಾರ್ಯಾಽಪರಾ ಚೇಯಂ ರೂಪಯೌವನಶಾಲಿನೀ |
ಅಸ್ಯಾಮುತ್ಪಾದಯಾಪತ್ಯಂ ಮನ್ನಿಯೋಗಾದ್ ಗುಣಾಧಿಕಮ್ ॥16॥
ದ್ವಿತೀಯಂ ಕುರುವಂಶಸ್ಯ ರಾಜಾನಂ ದಾತುಮರ್ಹಸಿ |
ಸ ತಥೇತಿ ಪ್ರತಿಜ್ಞಾಯ ನಿಶ್ಚಕ್ರಾಮ ಮಹಾತಪಾಃ ॥17॥
ನಿನ್ನ ತಮ್ಮನ ಹೆಂಡತಿಯಾದ ಅಂಬಾಲಿಕೆ ಇನ್ನೊಬ್ಬಳಿದ್ದಾಳೆ. ಅವಳೂ ರೂಪಯೌವನದಿಂದ ಕೂಡಿದವಳು. ನನ್ನ ಆದೇಶದಂತೆ ಅವಳಲ್ಲಿ ಗುಣಾಧಿಕನಾದ ಪುತ್ರನನ್ನು ಪಡೆ. ನೀನು ಕುರುವಂಶಕ್ಕೆ ಇನ್ನೊಬ್ಬ ರಾಜನನ್ನು ಕೊಡಬೇಕು (ಎಂದು ತಾಯಿಯು ಹೇಳಿದಳು).ಮಹಾತಪಸ್ವಿಗಳಾದ ಅವರು ಹಾಗೆಯೇ ಆಗಲಿ ಎಂದು ಹೇಳಿ ಹೊರಟುಹೋದರು.
ವೈಶಂಪಾಯನಃ
ಅಂಬಾಲಿಕಾಂ ಸಮಾದಾಯ ತಸ್ಯಾಂ ಸತ್ಯವತೀ ಸುತಮ್ |
ಭೂಯೋ ನಿಯೋಜಯಾಮಾಸ ಸಂತಾನಾಯ ಕುಲಸ್ಯ ವೈ ॥18॥
ಸತ್ಯವತಿಯು ಅಂಬಾಲಿಕೆಯನ್ನು ಕರೆದುಕೊಂಡು ಬಂದು ಪುನಃ ಕುಲದ ಸಂತಾನದ ಸಲುವಾಗಿ ಅವಳನ್ನು ನಿಯೋಜಿಸಿದಳು.
ವಿಷಣ್ಣಾಽಂಬಾಲಿಕಾ ಸಾಧ್ವೀ ನಿಷಣ್ಣಾ ಶಯನೋತ್ತಮೇ |
ಕೋ ನ್ವೇಷ್ಯತೀತಿ ಧ್ಯಾಯಂತೀ ನಿಯತಾ ಸಂಪ್ರತೀಕ್ಷತೇ ॥19॥
ಸಾಧ್ವಿಯಾದ ಅಂಬಾಲಿಕೆಯು ವಿಷಾದಗೊಂಡು ಶ್ರೇಷ್ಠವಾದ ಹಾಸಿಗೆಯಲ್ಲಿ ಕುಳಿತು ಯಾರು ಬರಬಹುದೆಂದು ಯೋಚಿಸುತ್ತಾ ನಿರೀಕ್ಷಿಸಿದಳು.
ತತಸ್ತೇನೈವ ವಿಧಿನಾ ಮಹರ್ಷಿಃ ಸಮಪದ್ಯತ |
ಅಂಬಾಲಿಕಾಮಥಾಭ್ಯಾಗಾದ್ ಋಷಿಂ ದೃಷ್ಟ್ವಾ ಚ ಸಾಽಪಿ ತಮ್ |
ವಿಷಣ್ಣಾ ಪಾಂಡುಸಂಕಾಶಾ ಸಮಪದ್ಯತ ಭಾರತ ॥20॥
ಆಗ ಮೊದಲು ಬಂದ ರೀತಿಯಲ್ಲಿಯೇ ಮಹರ್ಷಿಗಳಾದ ವ್ಯಾಸರು ಅಂಬಾಲಿಕೆಯನ್ನು ಸಮೀಪಿಸಿದರು. ಎಲೈ ಭಾರತನೇ ಅವಳಾದರೂ ಅವರನ್ನು ನೋಡಿ ವಿಷಣ್ಣಳಾಗಿ ಪಾಂಡುವರ್ಣವನ್ನು ಹೊಂದಿದಳು.
ತಾಂ ಬಾಲಾಂ ಪಾಂಡುಸಂಕಾಶಾಂ ವಿಷಣ್ಣಾಂ ಪ್ರೇಕ್ಷ್ಯ ಪಾರ್ಥಿವ |
ವ್ಯಾಸಃ ಸತ್ಯವತೀಪುತ್ರ ಇದಂ ವಚನಮಬ್ರವೀತ್ ॥21॥
ರಾಜನೇ, ಪಾಂಡುವರ್ಣವನ್ನು ಹೊಂದಿದ್ದ (ಬಿಳುಚಿಕೊಂಡಿದ್ದ) ವಿಷಾದದಿಂದ ಕೂಡಿದ ಆ ಬಾಲೆಯನ್ನು ನೋಡಿ ಸತ್ಯವತಿಯ ಪುತ್ರರಾದ ವ್ಯಾಸರು ಈ ಮಾತನ್ನು ಆಡಿದರು.
ಯಸ್ಮಾತ್ ಪಾಂಡುತ್ವಮಾಪನ್ನಾ ವಿರೂಪಂ ಪ್ರೇಕ್ಷ್ಯ ಮಾಮಸಿ |

ತಸ್ಮಾದೇವ ಸುತಸ್ತುಭ್ಯಂ ಪಾಂಡುಸ್ತ್ವೇವ ಭವಿಷ್ಯತಿ |
ನಾಮ ಚಾಸ್ಯ ತದೇವೇಹ ಭವಿಷ್ಯತಿ ಶುಭಾನನೇ ॥22॥
ನೀನು ವಿರೂಪನಾದ ನನ್ನನ್ನು ನೋಡಿ ಪಾಂಡುವರ್ಣವನ್ನು ಹೊಂಡಿದ ಕಾರಣ ನಿನಗೆ ಅದೇ ವರ್ಣದಿಂದ ಕೂಡಿದ ಪುತ್ರನೇ ಜನಿಸುವನು. ಶುಭಾನನೆಯೇ ಅವನಿಗೆ ಪಾಂಡು ಎಂದೇ ಹೆಸರಾಗುವುದು.
ವೈಶಂಪಾಯನಃ
ಇತ್ಯುಕ್ತ್ವಾ ತಾಂ ನಿರಾಕ್ರಾಮದ್ಭಗವಾನೃಷಿಸತ್ತಮಃ |
ತಮುವಾಚ ತತೋಮಾತಾ ಅಪ್ಯತ್ರ ಭವಿತಾ ಶುಭಃ |
ಕುಮಾರೋ ಬ್ರೂಹಿ ಮೇ ಪುತ್ರ ಋಷಿಸ್ತಾಂ ಪ್ರತ್ಯುವಾಚ ಹ ॥23॥
ಅವಳಿಗೆ ಹೀಗೆ ಹೇಳಿ ಋಷಿಶ್ರೇಷ್ಠರು ಹೊರಟರು. ತಾಯಿಯು ಅವರನ್ನು ಸಮೀಪಿಸಿ ಈಗಲಾದರೂ ಒಳ್ಳೆಯ ಪುತ್ರನಾಗುತ್ತಾನೆಯೇ ಹೇಳು ಎಂದು ಕೇಳಿದಳು. ವ್ಯಾಸರು ಅವಳಿಗೆ ಉತ್ತರವನ್ನು ಕೊಟ್ಟರು.
ಭವಿಷ್ಯತಿ ಸುವಿಕ್ರಾಂತಃ ಕುಮಾರೋ ದಿಕ್ಷು ವಿಶ್ರುತಃ |
ಪಾಂಡುತ್ವಂ ವರ್ಣತಸ್ತಸ್ಯ ಮಾತೃದೋಷಾದ್ ಭವಿಷ್ಯತಿ ॥24॥
ಅಸ್ಯ ಪುತ್ರಾ ಮಹೇಷ್ವಾಸಾ ಭವಿಷ್ಯಂತೀಹ ಪಂಚ ವೈ |
ಇತ್ಯುಕ್ತ್ವಾ ಮಾತರಂ ತತ್ರ ಸೋಽಭಿವಾದ್ಯ ಜಗಾಮ ಹ ॥25॥
ವಿಕ್ರಮಶಾಲಿಯಾದ ಎಲ್ಲಾ ದಿಕ್ಕುಗಳಲ್ಲೂ ಪ್ರಖ್ಯಾತನಾದ ಕುಮಾರನು ಜನಿಸುವನು. ಆದರೆ ಮಾತೃದೋಷದಿಂದ ಅವನು ಪಾಂಡುವಾಗುವನು. ಅವನಿಗೆ ವೀರರಾದ ಐದು ಮಕ್ಕಳು ಜನಿಸುವರು. ಹೀಗೆ ಹೇಳಿ ತಾಯಿಗೆ ನಮಸ್ಕರಿಸಿ ಅವರು ಹೊರಟುಹೋದರು.
ಮುನೌ ಯಾತೇಽಂಬಿಕಾ ಪುತ್ರಂ ಮಹಾಭಾಗಮಸೂಯತ |
ಧೃತರಾಷ್ಟ್ರಂ ಮಹಾಪ್ರಾಜ್ಞಂ ಪ್ರಜ್ಞಾಚಕ್ಷುಷಮೀಶ್ವರಮ್ ॥26॥
ವ್ಯಾಸರು ಹೊರಟುಹೋದ ಮೇಲೆ ಅಂಬಿಕೆಯು, ಮಹಾನುಭಾವನೂ, ಮಹಾಪ್ರಾಜ್ಞನೂ, ಪ್ರಜ್ಞಾಚಕ್ಷುಸ್ಸುಳ್ಳವನೂ, ಪ್ರಭುವೂ ಆದ ಧೃತರಾಷ್ಟ್ರನನ್ನು ಪಡೆದಳು.
ಅನುಜಾಽಂಬಾಲಿಕಾ ತತ್ರ ಪುತ್ರಂ ಕಾಲೇ ವ್ಯಜಾಯತ |
ಪಾಂಡುಂ ಲಕ್ಷಣಸಂಪನ್ನಂ ದೀಪ್ಯಮಾನಂ ಶ್ರಿಯಾ ವೃತಮ್ ॥27॥
ತಂಗಿಯಾದ ಅಂಬಾಲಿಕೆಯು ಯೋಗ್ಯಕಾಲದಲ್ಲಿ ಲಕ್ಷಣಸಂಪನ್ನನಾದ ಕಾಂತಿಯಿಂದ ಬೆಳಗುತ್ತಿರುವ ಪಾಂಡುವನ್ನು ಪುತ್ರನನ್ನಾಗಿ ಪಡೆದಳು.
ತಯೋರ್ಜನ್ಮಕ್ರಿಯಾಃ ಸರ್ವಾ ಯಥಾವದನುಪೂರ್ವಶಃ |
ಕಾರಯಾಮಾಸ ವೈ ಭೀಷ್ಮೋ ಬ್ರಾಹ್ಮಣೈರ್ವೇದಪಾರಗೈಃ ॥28॥
ಅವರಿಬ್ಬರಿಗೂ ಮೊದಲಿನಿಂದ ನಡೆಸಬೇಕಾದ ಜಾತಕರ್ಮಾದಿ- ಕ್ರಿಯೆಗಳನ್ನು ಭೀಷ್ಮರು ವೇದಪಾರಂಗತರಾದ ಬ್ರಾಹ್ಮಣರಿಂದ ಮಾಡಿಸಿದರು.
ಅಂಧಂ ದೃಷ್ಟ್ವಾಽಂಬಿಕಾಪುತ್ರಂ ಜಾತಂ ಸತ್ಯವತೀ ಸುತಮ್ |
ಕೌಸಲ್ಯಾರ್ಥೇ ಸಮಾಹೂಯ ಪುತ್ರಮನ್ಯಮಯಾಚತ |
ಅಂಧೋಽಯಮನ್ಯಮಿಚ್ಛಾಮಿ ಕೌಸಲ್ಯಾತನಯಂ ಶುಭಮ್ ॥29॥
ಅಂಬಿಕೆಯ ಪುತ್ರನು ಅಂಧನಾಗಿರುವುದನ್ನು ನೋಡಿ ಸತ್ಯವತಿಯು ಅಂಬಿಕೆಯ ಸಲುವಾಗಿ ಪುನಃ ವ್ಯಾಸರನ್ನು ಕರೆದು ಬೇಡಿದಳು.
ಏವಮುಕ್ತೋ ಮಹರ್ಷಿಸ್ತಾಂ ಮಾತರಂ ಪ್ರತ್ಯಭಾಷತ |
ನಿಯತಾ ಯದಿ ಕೌಸಲ್ಯಾ ಭವಿಷ್ಯತಿ ಪುನಃ ಶುಭಾ ॥30॥
ಇವನು ಕುರುಡನಾಗಿದ್ದಾನೆ. ನಾನು ಶುಭನಾದ ಇನ್ನೊಬ್ಬ ಕೌಸಲ್ಯಾಪುತ್ರನನ್ನು ಬಯಸುತ್ತೇನೆ. ಹೀಗೆ ಕೇಳಲ್ಪಟ್ಟ ವ್ಯಾಸರು ತಾಯಿಯನ್ನು ಕುರಿತು ಹೇಳಿದರು.
ಭವಿಷ್ಯತಿ ಕುಮಾರೋಽಸ್ಯಾ ಧರ್ಮಶಾಸ್ತ್ರಾರ್ಥತತ್ತ್ವವಿತ್ ॥31॥
ಕೌಸಲ್ಯೆಯು (ಅಂಬಿಕೆಯು) ಪುನಃ ಶುಭಳಾಗಿದ್ದು ಯಾವ ತಪ್ಪನ್ನೂ ಮಾಡದಿದ್ದರೆ ಅವಳಿಗೆ ಧರ್ಮಶಾಸ್ತ್ರವನ್ನು, ಅರ್ಥಶಾಸ್ತ್ರವನ್ನು ತಿಳಿದ ಕುಮಾರನು ಜನಿಸುವನು ಎಂದು ಹೇಳಿದರು.
ತಾಂ ಸಮಾಧಾಯ ವೈ ಭೂಯಃ ಸ್ನುಷಾಂ ಸತ್ಯವತೀ ತದಾ |
ಋತುಕಾಲಂ ಚ ವಿಜ್ಞಾಯ ದೇವ್ಯಾ ಸಂಚೋದಿತಾಽಂಬಿಕಾ ॥32॥
ಸತ್ಯವತಿಯು ಸೊಸೆಯನ್ನು ಪುನಃ ಸಮಾಧಾನ ಮಾಡಿ ಋತುಕಾಲವನ್ನು ತಿಳಿದು ಅವಳನ್ನು ಪುನಃ ಮಗನನ್ನು ಪಡೆಯಲು ಪ್ರಚೋದಿಸಿದಳು.
ಸಾ ತು ರೂಪಂ ಚ ಗಂಧಂ ಚ ಮಹರ್ಷೇಃ ಪ್ರವಿಚಿಂತ್ಯ ತಮ್ |
ನಾಕರೋದ್ ವಚನಂ ದೇವ್ಯಾ ಭಯಾತ್ ಸುರಸುತೋಪಮಾ ॥33॥
ದೇವಕನ್ಯೆಯಂತಿದ್ದ ಅವಳಾದರೋ ಮಹರ್ಷಿಗಳ ಆ ರೂಪವನ್ನು ಮತ್ತು ಗಂಧವನ್ನು ನೆನೆದು ಭಯಗೊಂಡು ಅತ್ತೆಯ ಮಾತನ್ನು ನಡೆಸಲಿಲ್ಲ.
ತತಃ ಸ್ವೈರ್ಭೂಷಣೈರ್ದಾಸೀಂ ಭೂಷಯಿತ್ವಾಽಪ್ಸರೋಪಮಾಮ್ |
ಪ್ರೇಷಯಾಮಾಸ ಕೃಷ್ಣಾಯ ತತಃ ಕಾಶಿಪತೇಃ ಸುತಾ ॥34॥

ಆಗ ಅಪ್ಸರೆಯಂತಿದ್ದ ತನ್ನ ದಾಸಿಯನ್ನು ತನ್ನ ಒಡವೆಗಳಿಂದ ಅಲಂಕರಿಸಿ ಅಂಬಿಕೆಯು ವ್ಯಾಸರ ಬಳಿಗೆ ಕಳುಹಿಸಿದಳು.
ದಾಸೀ ಋಷಿಮನುಪ್ರಾಪ್ತಂ ಪ್ರತ್ಯುತ್ಥಾಯಾಭಿವಾದ್ಯ ಚ |
ಸಂವಿವೇಶಾಭ್ಯನುಜ್ಞಾತಾ ಸತ್ಕೃತ್ಯೋಪಚಚಾರ ಸಾ |
ಆಹಾರ್ಯೋಪಪ್ರದಾನೇನ ಗಾತ್ರಸಂಸ್ಪರ್ಶನೇನ ಚ ॥35॥
ಕಾಮೋಪಭೋಗಸಂಯುಕ್ತೋ ಮಹರ್ಷಿರ್ವಿಸ್ಮಿತೋಽಭವತ್ |
ತಯಾ ಸಹೋಷಿತೋ ರಾತ್ರಿಂ ಮಹರ್ಷಿಃ ಪ್ರೀಯಮಾಣಯಾ ॥36॥
ಆ ದಾಸಿಯು ಋಷಿಗಳು ಬಂದ ತಕ್ಷಣ ಎದ್ದುನಿಂತು ನಮಸ್ಕಾರವನ್ನು ಮಾಡಿ ಅವರ ಅನುಮತಿಯನ್ನು ಪಡೆದು ಹಾಸಿಗೆಯಲ್ಲಿ ಮಲಗಿ ಅವರ ದೇಹವನ್ನು ಸ್ಪರ್ಶಮಾಡಿ ಒಳ್ಳೆಯ ಮಾತುಗಳನ್ನು ಆಡಿ ಅವರನ್ನು ಸತ್ಕರಿಸಿ ಉಪಚರಿಸಿದಳು. ಅವಳಿಂದ ಕಾಮಭೋಗವನ್ನು ಹೊಂದಿದ ಋಷಿಗಳು ವಿಸ್ಮಿತರಾಗಿ ಸಂತೋಷಗೊಂಡು ಅವಳ ಜೊತೆಯಲ್ಲಿ ರಾತ್ರಿಯನ್ನು ಕಳೆದರು.
ಉತ್ತಿಷ್ಠನ್ನಬ್ರವೀದೇನಾಂ ತ್ವಂ ಭುಜಿಷ್ಯಾ ಭವಿಷ್ಯಸಿ |
ಏಷ ತೇ ಸುಭಗೇ ಗರ್ಭಃ ಶ್ರೀಮಾನುದರಮಾಗತಃ ॥37॥
ಧರ್ಮಾತ್ಮಾ ವಿಶ್ರುತೋ ಲೋಕೇ ಸರ್ವಧರ್ಮವಿದಾಂ ವರಃ |
ಇತ್ಯುಕ್ತ್ವಾ ಸ ನಿರಾಕ್ರಾಮತ್ ಕೃಷ್ಣದ್ವೈಪಾಯನಃ ಪ್ರಭುಃ ॥38॥
ಹಾಸಿಗೆಯಿಂದ ಏಳುತ್ತಾ ಅವರು ಅವಳನ್ನು ಕುರಿತು ನೀನು ಇನ್ನು ಭುಜಿಷ್ಯೆಯಾಗುವಿ. (ಯಜಮಾನನಿಂದ ಪುತ್ರನನ್ನು ಪಡೆದ ದಾಸಿಯನ್ನು ಭುಜಿಷ್ಯೆಯೆಂದು ಕರೆಯುತ್ತಾರೆ) ನಿನ್ನ ಗರ್ಭದಲ್ಲಿ ಕೃಷ್ಣದ್ವೈಪಾಯನರ ಮಗನಾದ ಧರ್ಮಾತ್ಮನು ಮತ್ತು ಲೋಕದಲ್ಲಿ ಸರ್ವಧರ್ಮವನ್ನು ತಿಳಿದವನು ಎಂದು ಪ್ರಖ್ಯಾತನೂ ಆಗುವ ಕುಮಾರನಿದ್ದಾನೆ. ಹೀಗೆ ಹೇಳಿ ಕೃಷ್ಣದ್ವೈಪಾಯನರು ಹೊರಟುಹೋದರು.
ಜಜ್ಞೇ ಸ ವಿದುರೋ ನಾಮ ಕೃಷ್ಣದ್ವೈಪಾಯನಾತ್ಮಜಃ |
ಧೃತರಾಷ್ಟ್ರಸ್ಯ ಚ ಭ್ರಾತಾ ಪಾಂಡೋಶ್ಚ ಪೃಥಿವೀಪತೇಃ ॥39॥
ಕೃಷ್ಣದ್ವೈಪಾಯನರ ಮಗನಾದ ಅವನು ವಿದುರ ಎಂಬ ಹೆಸರಿನಿಂದ ಧೃತರಾಷ್ಟ್ರ ಮತ್ತು ಪಾಂಡುರಾಜನ ತಮ್ಮನಾಗಿ ಜನಿಸಿದನು.
ಧರ್ಮೋ ವಿದುರರೂಪೇಣ ಶಾಪಾತ್ ತಸ್ಯ ಮಹಾತ್ಮನಃ |
ಮಾಂಡವ್ಯಸ್ಯಾರ್ಥತತ್ತ್ವಜ್ಞಃ ಕಾಮಕ್ರೋಧವಿವರ್ಜಿತಃ ॥40॥
ಯಮಧರ್ಮನು ಮಹಾತ್ಮರಾದ ಮಾಂಡವ್ಯರ ಶಾಪದಿಂದ ಅರ್ಥತತ್ತ್ವವನ್ನು ತಿಳಿದವನಾಗಿ ಕಾಮಕ್ರೋಧವಿವರ್ಜಿತನಾಗಿ ವಿದುರ ರೂಪದಿಂದ ಅವತಾರ ಮಾಡಿದನು.
ಕ್ಷೇತ್ರೇ ವಿಚಿತ್ರವೀರ್ಯಸ್ಯ ಕೃಷ್ಣದ್ವೈಪಾಯನಾದಪಿ |
ಜಜ್ಞಿರೇ ದೇವಗರ್ಭಾಭಾಃ ಕುರುವಂಶವಿವರ್ಧನಾಃ ॥41॥
ಹೀಗೆ ವ್ಯಾಸರಿಂದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಕುರುವಂಶವರ್ಧಕರಾದ ದೇವಕುಮಾರರಂತಿದ್ದ ಮೂರು ಮಕ್ಕಳು ಜನಿಸಿದರು.
ತೇಷು ತ್ರಿಷು ಕುಮಾರೇಷು ಜಾತೇಷು ಕುರುಜಾಂಗಲಮ್ |
ಕುರವೋಽಥ ಕುರುಕ್ಷೇತ್ರಂ ಸರ್ವಂ ಕ್ಷೇಮಮವರ್ಧತ ॥42॥
ಆ ಮೂರು ಕುಮಾರರು ಜನಿಸಿದ ಮೇಲೆ ಕುರುಗಳಿಗೂ, ಕುರುಜಾಂಗಲ ಮತ್ತು ಕುರುಕ್ಷೇತ್ರಕ್ಕೂ ಎಲ್ಲ ರೀತಿಯ ಕ್ಷೇಮವೂ ಮತ್ತು ಅಭಿವೃದ್ಧಿಯೂ ಉಂಟಾಯಿತು.
ಗಂಧವತ್ಯಾಸ್ತಥೈವೋಕ್ತ್ವಾ ಧರ್ಮರೂಪಂ ಸುತಂ ಪ್ರತಿ |
ನಾಹಮಸ್ಮಿ ಪುನರ್ಯೋಕ್ತುಂ ಶಕ್ಯೋ ಮಾತಃ ಸುತಾನ್ ಪ್ರತಿ ॥43॥
ತಾಯಿಯಾದ ಯೋಜನಗಂಧಿಯನ್ನು ಕುರಿತು ಯಮನ ಅವತಾರದ ವಿಷಯವನ್ನು ತಿಳಿಸಿ, ತಾಯಿ ನೀನು ಪುನಃ ಮಕ್ಕಳನ್ನು ಪಡೆ ಎಂದು ನನಗೆ ನಿರ್ಬಂಧವನ್ನು ಮಾಡಬಾರದು ಎಂದು ಹೇಳಿದರು.
ಸ ಧರ್ಮಸ್ಯಾನೃಣೋ ಭೂತ್ವಾ ಪುನರ್ಮಾತ್ರಾ ಸಮೇತ್ಯ ಚ |
ತಸ್ಯಾಶ್ಚ ಸರ್ವಮಾಖ್ಯಾಯ ತತ್ರೈವಾಂತರಧೀಯತ ॥44॥
ಅವರು ಧರ್ಮಋಣದಿಂದ ಮುಕ್ತರಾಗಿ ಪುನಃ ತಾಯಿಯ ಸಮೀಪಕ್ಕೆ ಹೋಗಿ ಎಲ್ಲವನ್ನೂ ವಿಸ್ತಾರವಾಗಿ ತಿಳಿಸಿ ಅಲ್ಲಿಯೇ ಅದೃಶ್ಯರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಪಂಚಪಂಚಶೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ಅಯೋಗ್ಯಸಂಪ್ರಾಪ್ತಿಕೃತಪ್ರಯತ್ನ-
ದೋಷಾತ್ ಸಮಾರೋಪಿತಮೇವ ಶೂಲೇ |
ಚೋರೈರ್ಹೃತೇಽರ್ಥೇಽಪಿ ತು ಚೋರಬುದ್ಧ್ಯಾ
ಮಕ್ಷೀವಧಾದಿತ್ಯವದದ್ ಯಮಸ್ತಮ್ ॥139॥

ಯಾರೋ ಕಳ್ಳರು ಹಣವನ್ನು ಕದ್ದಿದ್ದರು. ಆದರೆ ಮುನಿಯನ್ನು ಕಳ್ಳನೆಂದು ತಿಳಿದು ರಾಜಭಟರು ಅವನನ್ನು ಶೂಲಕ್ಕೆ ಏರಿಸಿದರು. ಇದು ವಸ್ತುತಃ ಮುನಿ ಅಯೋಗ್ಯ ಪದವೀಪ್ರಾಪ್ತಿಗಾಗಿ ತಪಸ್ಸು ಮಾಡಿದ ಅಪರಾಧದ ಫಲ ಆದರೂ ನೊಣಕ್ಕೆ ಮಾಡಿದ ಹಿಂಸೆಯ ಫಲ ಎಂದ ಯಮ.
ನಾಸತ್ಯತಾ ತಸ್ಯ ಚ ತತ್ರ ಹೇತುತಃ ಶಾಪಂ ಗೃಹೀತುಂ ಸ ತಥೈವ ಚೋಕ್ತವಾನ್|
ಅವಾಪ ಶೂದ್ರತ್ವಮಥಾಸ್ಯ ನಾಮ ಚಕ್ರೇ ಕೃಷ್ಣಃ ಸರ್ವವಿತ್ತ್ವಂ ತಥಾದಾತ್ ॥
ಯಮ ಹೇಳಿದ್ದೂ ಸುಳ್ಳಾಗಿರಲಿಲ್ಲ. ಏಕೆಂದರೆ ಆ ಪಾಪವೂ ಶೂಲಾರೋಪಣಕ್ಕೆ ಒಂದು ಸಣ್ಣಕಾರಣವೇ ಆಗಿತ್ತು. ಆದರೆ ಮುಖ್ಯಕಾರಣವನ್ನು ಹೇಳದೆ ಕ್ಷುದ್ರ ಕಾರಣವನ್ನು ಮಾತ್ರ ಹೇಳಿದ್ದು ಮುನಿಗೆ ಕೋಪ ಉಂಟು ಮಾಡಿ ಶಾಪ ಹೊಂದುವುದಕ್ಕಾಗಿ. ಅದರಿಂದ ಯಮ ಹಾಗೇ ಹೇಳಿ ಶೂದ್ರತ್ವವನ್ನು ಹೊಂದಿದ. ವ್ಯಾಸರು ಅವನಿಗೆ ಸರ್ವಜ್ಞಾನವನ್ನು ಅನುಗ್ರಹಿಸಿ ಹಾಗೇ ನಾಮಕರಣವನ್ನು ಮಾಡಿದರು.
ವಿದ್ಯಾರತೇರ್ವಿದುರೋ ನಾಮ ಚಾಯಂ ಭವಿಷ್ಯತಿ ಜ್ಞಾನಬಲೋಪಪನ್ನಃ |
ಮಹಾಧನುರ್ಬಾಹುಬಲಾಧಿಕಶ್ಚ ಸುನೀತಿಮಾನಿತ್ಯವದತ್ ಸ ಕೃಷ್ಣಃ ॥
`ತತ್ವಜ್ಞಾನದಲ್ಲಿ ಆಸಕ್ತನಾದ್ದರಿಂದ `ವಿದುರ'ನೆನಿಸುವ ಈತ ಮುಂದೆ ಜ್ಞಾನಬಲಯುಕ್ತನೂ ಮಹಾಧನುರ್ಧರನೂ ಬಾಹುಬಲದಿಂದ ಶ್ರೇಷ್ಠನೂ ಒಳ್ಳೆಯ ನೀತಿಜ್ಞನೂ ಆಗುವನು' ಎಂದರು ವ್ಯಾಸರು.
ಜ್ಞಾತ್ವಾಸ್ಯ ಶೂದ್ರತ್ವಮಥಾಸ್ಯ ಮಾತಾ
ಪುನಶ್ಚ ಕೃಷ್ಣಂ ಪ್ರಣತಾ ಯಯಾಚೇ |
ಅಂಬಾಲಿಕಾಯಾಂ ಜನಯಾನ್ಯಮಿತ್ಯಥೋ
ನೈಚ್ಛತ್ಸ ಕೃಷ್ಣೋಽಭವದಪ್ಯದೃಶ್ಯಃ ॥142॥
ವಿದುರನನ್ನು ಶೂದ್ರನೆಂದು ತಿಳಿದು ಸತ್ಯವತಿ ಪುನಃ ವ್ಯಾಸರನ್ನು ನಮಿಸಿ ಅಂಬಾಲಿಕೆಯಲ್ಲಿ ಇನ್ನೊಬ್ಬ ಮಗನನ್ನು ಹುಟ್ಟಿಸೆಂದು ಬೇಡಿದಳು. ಆದರೆ ವ್ಯಾಸರು ಒಪ್ಪಲಿಲ್ಲ. ಅದೃಶ್ಯರೂ ಆದರು.
* * * *
ನೂರ ಎಂಟನೆಯ ಅಧ್ಯಾಯ
(ಯಮನಿಗೆ ಮಾಂಡವ್ಯರ ಶಾಪ ಮತ್ತು ವಿದುರನಾಗಿ ಅವತಾರ.)
ಜನಮೇಜಯಃ
ಕಿಂ ಕೃತಂ ಕರ್ಮ ಧರ್ಮೇಣ ಯೇನ ಶಾಪಮುಪೇಯಿವಾನ್ |
ಕಸ್ಯ ಶಾಪಾಚ್ಚ ಧರ್ಮಸ್ತು ಶೂದ್ರಯೋನಾವಜಾಯತ ॥1॥
ಯಮನು ಶಾಪವನ್ನು ಪಡೆಯುವಂತಹ ಯಾವ ಕಾರ್ಯವನ್ನು ಮಾಡಿದನು? ಯಾರ ಶಾಪದಿಂದ ಯಮನು ಶೂದ್ರಯೋನಿಯಲ್ಲಿ ಅವತರಿಸಿದನು?
ವೈಶಂಪಾಯನಃ
ಬಭೂವ ಬ್ರಾಹ್ಮಣಃ ಕಶ್ಚಿನ್ಮಾಂಡವ್ಯ ಇತಿ ವಿಶ್ರುತಃ |
ಏಕಾಂತಚಾರೀ ವನ್ಯಶ್ಚ ಸತ್ಯೇ ತಪಸಿ ಚ ಧ್ರುವಃ ॥2॥
ಮಾಂಡವ್ಯರೆಂಬ ಪ್ರಖ್ಯಾತರಾದ ಒಬ್ಬ ಬ್ರಾಹ್ಮಣರಿದ್ದರು. ಅವರು ವನದಲ್ಲಿ ವಾಸಿಸುತ್ತಿದ್ದು ಏಕಾಂತಚಾರಿಗಳಾಗಿ, ಸತ್ಯದಲ್ಲಿಯೂ ಮತ್ತು ತಪಸ್ಸಿನಲ್ಲಿಯೂ ನಿಷ್ಠರಾಗಿದ್ದರು.
ಸ ತೀರ್ಥಯಾತ್ರಾಂ ವಿಚರನ್ ಜಗಾಮ ಚ ಯದೃಚ್ಛಯಾ |
ಸನ್ನಿಕೃಷ್ಟಾನಿ ತೀರ್ಥಾನಿ ಗ್ರಾಮಾಣಾಂ ಯಾನಿ ಕಾನಿಚಿತ್ ॥3॥
ಅವರು ಯದೃಚ್ಛೆಯಿಂದ ತೀರ್ಥಯಾತ್ರೆ ಮಾಡುತ್ತಾ ಗ್ರಾಮಕ್ಕೆ ಹತ್ತಿರದಲ್ಲಿದ್ದ ತೀರ್ಥಗಳಿಗೆ ಹೋಗುತ್ತಿದ್ದರು.
ತದಾಶ್ರಮಪದಂ ಕೃತ್ವಾ ವಸತಿ ಸ್ಮ ಮಹಾಮುನಿಃ |
ಸ ತ್ವಾಶ್ರಮಪದದ್ವಾರಿ ವೃಕ್ಷಮೂಲೇ ಮಹಾಯಶಾಃ |
ಊರ್ಧ್ವಬಾಹುಃ ಸ್ಥಿತೋ ಯೋಗೀ ಮೌನೀ ವ್ರತಸಮನ್ವಿತಃ ॥4॥
ಆ ಸ್ಥಳವನ್ನು ತಮ್ಮ ಆಶ್ರಮವನ್ನಾಗಿ ಮಾಡಿಕೊಂಡ ಮುನಿಗಳೂ, ಮಹಾಕೀರ್ತಿವಂತರೂ ಆದ ಅವರು ಅಲ್ಲಿ ಆಶ್ರಮದ ಪ್ರವೇಶದ್ವಾರದಲ್ಲಿ ಇರುವ ಒಂದು ವೃಕ್ಷಮೂಲದಲ್ಲಿ ಊರ್ಧ್ವಬಾಹುಗಳಾಗಿ ಮೌನವನ್ನು ಮಾಡಿ ಯೋಗ ಮತ್ತು ವ್ರತಗಳನ್ನು ಆಚರಿಸುತ್ತಾ ವಾಸಿಸುತ್ತಿದ್ದರು.
ಕೇನಚಿತ್ತ್ವಥ ಕಾಲೇನ ತಥಾ ತಪಸಿ ತಿಷ್ಠತಃ |
ತಸ್ಯಾಶ್ರಮಪದಂ ಪ್ರಾಪ್ತಾ ದಸ್ಯವೋ ಲೋಪ್ತ್ರಹಾರಿಣಃ |
ಅನುಸಾರ್ಯಮಾಣಾಸ್ತೇ ಚೋರಾ ರಕ್ಷಿಭಿರ್ಭರತರ್ಷಭ ॥5॥
ಒಂದು ಸಲ ಹಾಗೆ ಅವರು ತಪಸ್ಸು ಮಾಡುತ್ತಿರಲು, ಕಳವನ್ನು ಮಾಡಿದ ದ್ರವ್ಯವನ್ನು ತೆಗೆದುಕೊಂಡು ಕಳ್ಳರು ಅವರ ಆಶ್ರಮಕ್ಕೆ ಬಂದರು. ಎಲೈ ಭರತರ್ಷಭನೇ, ಅವರನ್ನು ರಾಜಭಟರು ಹಿಂಬಾಲಿಸಿದರು.
ತಾಮೇವ ವಸತಿಂ ಜಗ್ಮುಸ್ತದ್ಗ್ರಾಮೇ ಲೋಪ್ತ್ರಹಾರಿಣಃ |
ತಸ್ಮಿನ್ ನಿವಸಥೇ ಲೋಪ್ತ್ರಂ ನಿದಧುರ್ಭಯಮೋಹಿತಾಃ ॥6॥
ಆ ಕಳ್ಳಮಾಲನ್ನು ತೆಗೆದುಕೊಂಡು ಬಂದ ಚೋರರು ಭಯಗ್ರಸ್ತರಾಗಿ ಆ ಮುನಿಗಳ ವಸತಿಯಲ್ಲಿಯೇ ಆ ಕಳುವು ಮಾಡಿದ ದ್ರವ್ಯವನ್ನು ಇಟ್ಟರು.

ಅಭಿತಸ್ತೇಽತ್ರ ಸಂಲ್ಲೀನಾನ್ ಬಲಮನ್ವಗಮಚ್ಛ ತಾನ್ |
ತತಃ ಶೀಘ್ರತರಂ ರಾಜಂಸ್ತತ್ರ ರಾಜಬಲಂ ಮಹತ್ ॥7॥
ಹಾಗೆ ಮಾಡಿ ಅವರು ಆಶ್ರಮದಲ್ಲಿ ಅಲ್ಲಲ್ಲಿ ಮರಗಳ ಹಿಂದೆ ಅವಿತುಕೊಂಡರು. ರಾಜನೇ, ಸ್ವಲ್ಪಸಮಯದಲ್ಲಿಯೇ ದೊಡ್ಡಸಂಖ್ಯೆಯಲ್ಲಿ ರಾಜಭಟರು ಅಲ್ಲಿಗೆ ಬಂದರು.
ಯಸ್ಮಿನ್ನಾವಸಥೇ ಶೇತೇ ಸ ಮುನಿಃ ಸಂಶಿತವ್ರತಃ |
ತತ್ರಾಜಗ್ಮುಸ್ತತೋಽಪಶ್ಯಂಸ್ತಂ ಮುನಿಂ ರಕ್ಷಿಣಸ್ತು ತೇ ॥8॥
ಯಾವ ನಿವಾಸದಲ್ಲಿ ವ್ರತನಿಷ್ಠರಾದ ಆ ಮುನಿಗಳು ಮಲಗಿದ್ದರೋ ಅಲ್ಲಿಗೆ ಬಂದು ರಾಜಭಟರು ಅವರನ್ನು ನೋಡಿದರು.
ತಮಪೃಚ್ಛಂಸ್ತದಾ ರಾಜಂಸ್ತಥಾವೃತ್ತಂ ತಪೋಧನಮ್ |
ಕತರೇಣ ಪಥಾ ಯಾತಾ ದಸ್ಯವೋ ಮುನಿಸತ್ತಮ |
ತೇನ ಗಚ್ಛಾಮ ವೈ ಬ್ರಹ್ಮನ್ ಪಥಾ ಶೀಘ್ರತರಂ ವಯಮ್ ॥9॥
ರಾಜಭಟರು ಹಾಗಿದ್ದ ತಪೋಧನರನ್ನು ಕುರಿತು ಮುನಿಶ್ರೇಷ್ಠರೇ, ಕಳ್ಳರು ಯಾವ ಮಾರ್ಗದಿಂದ ಇಲ್ಲಿಂದ ಹೋದರು? ಅದನ್ನು ಹೇಳಿ. ನಾವೂ ಸಹ ಶೀಘ್ರವಾಗಿ ಅವರನ್ನು ಹಿಂಬಾಲಿಸುತ್ತೇವೆ ಎಂದು ಹೇಳಿದರು.
ವಚಸ್ತದ್ ರಕ್ಷಿಣಾಂ ಶ್ರುತ್ವಾ ಬ್ರುವತಾಂ ಸ ತಪೋಧನಃ |
ನ ಕಿಂಚಿದ್ ವಚನಂ ರಾಜನ್ ಮುನಿಸ್ತಾನ್ ಪ್ರತ್ಯಭಾಷತ ॥10॥
ರಾಜಭಟರ ಆ ಮಾತುಗಳನ್ನು ಕೇಳಿ ಆ ತಪೋಧನರು ಅವರನ್ನು ಕುರಿತು ಏನೂ ಮಾತನಾಡಲಿಲ್ಲ.
ತತಸ್ತೇ ರಾಜಪುರುಷಾ ವಿಚಿನ್ವಾನಾಸ್ತದಾಶ್ರಮಮ್ |
ದದೃಶುಸ್ತತ್ರ ವೈ ಲೀನಾಂಶ್ಚೋರಾಂಸ್ತದ್ ದ್ರವ್ಯಮೇವ ಚ ॥11॥
ಆಗ ಆ ರಾಜಪುರುಷರು ಆ ಆಶ್ರಮದಲ್ಲಿ ಹುಡುಕುತ್ತಾ ಅಲ್ಲಿ ಅಡಗಿಕೊಂಡಿದ್ದ ಚೋರರನ್ನೂ ಮತ್ತು ಕದ್ದ ವಸ್ತುವನ್ನೂ ನೋಡಿದರು.
ತತಃ ಶಂಕಾ ಸಮಭವದ್ ರಕ್ಷಿಣಾಂ ತಂ ಮುನಿಂ ಪ್ರತಿ |
ಪ್ರಸಹ್ಯ ತಂ ಮುನಿಂ ರಾಜ್ಞೇ ಚೋರಾಂಶ್ಚೈವಾನ್ವವೇದಯನ್ ॥12॥
ಆಗ ಅವರಿಗೆ ಆ ಮುನಿಗಳ ಬಗ್ಗೆಯೂ ಶಂಕೆ ಉಂಟಾಯಿತು. ಅವರು ಬಲಾತ್ಕಾರದಿಂದ ಆ ಮುನಿಗಳನ್ನು ಹಿಡಿದು ಚೋರರ ಜೊತೆಯಲ್ಲಿ ರಾಜನಿಗೆ ಒಪ್ಪಿಸಿದರು.
ತಂ ರಾಜಾ ಸಹ ಚೋರೈಸ್ತೈರವದಚ್ಛಿದ್ಯತಾಮಿತಿ |
ಸ ವಧ್ಯಘಾತೈರಾಜ್ಞಪ್ತಃ ಶೂಲೇ ಪ್ರೋತೋ ಮಹಾತಪಾಃ |
ತತಸ್ತೇ ಶೂಲಮಾರೋಪ್ಯ ತಂ ಮುನಿಂ ರಕ್ಷಿಣಸ್ತದಾ ॥13॥
ಆಗ ರಾಜನು ಚೋರರ ಜೊತೆಯಲ್ಲಿ ಆ ಬ್ರಾಹ್ಮಣನನ್ನೂ ಛೇದಮಾಡಿ ವಧೆ ಮಾಡಿ ಎಂದು ಹೇಳಿದನು. ಆಗ ವಧೆಯ ಕಾರ್ಯವನ್ನು ನಿರ್ವಹಿಸುವ ರಾಜಪುರುಷರು ಆ ಮಹಾ ತಪಸ್ವಿಗಳನ್ನು ಶೂಲಕ್ಕೆ ಏರಿಸಿದರು.
ಪ್ರತಿಜಗ್ಮುರ್ಮಹೀಪಾಲಾ ಧನಾನ್ಯಾದಾಯ ಸರ್ವತಃ ॥14॥
ರಾಜಭಟರು ಮುನಿಯನ್ನು ಶೂಲಕ್ಕೆ ಏರಿಸಿ ಧನವನ್ನು ತೆಗೆದುಕೊಂಡು ಅಲ್ಲಿಂದ ಹೊರಟುಹೋದರು.
ಶೂಲಸ್ಥಃ ಸ ತು ಧರ್ಮಾತ್ಮಾ ಕಾಲೇನ ಮಹತಾ ಅಪಿ |
ನಿರಾಹಾರಸ್ತದಾ ರಾಜನ್ ಮರಣಂ ನಾಭ್ಯುಪಾಗಮತ್ |
ಧಾರಯಾಮಾಸ ವೈ ಪ್ರಾಣಾನ್ ಋಷೀಂಶ್ಚ ಸಮುಪಾನಯತ್ ॥15॥
ರಾಜನೇ, ಆ ಧರ್ಮಿಷ್ಠರಾದ ಮಹಾತ್ಮರು, ಶೂಲಕ್ಕೆ ಏರಿಸಿ ಬಹು ಸಮಯ ಕಳೆದು ನಿರಾಹಾರರಾಗಿದ್ದರೂ, ಮರಣವನ್ನು ಹೊಂದಲಿಲ್ಲ. ಪ್ರಾಣವನ್ನು ಧರಿಸಿ ಋಷಿಗಳನ್ನು ಸಮೀಪಕ್ಕೆ ಕರೆಸಿದರು.
ಶೂಲಾಗ್ರೇ ತಪ್ಯಮಾನೇನ ತದಾಽನೇನ ಮಹಾತ್ಮನಾ |
ಸಂತಾಪಂ ಪರಮಂ ಜಗ್ಮುರ್ಮುಷಯೋ ಭರತರ್ಷಭ ॥16॥
ಎಲೈ ಭರತಶ್ರೇಷ್ಠನೇ, ಶೂಲದ ಮೇಲೆ ಸಂತಾಪ ಪಡುತ್ತಿದ್ದ ಆ ಮಹಾತ್ಮರನ್ನು ನೋಡಿ ಋಷಿಗಳು ಬಹಳ ವ್ಯಥೆಪಟ್ಟರು.
ಕಾಚಿತ್ ಪತಿವ್ರತಾ ತಂ ತು ಭರ್ತೃಪಾದೇನ ಪೀಡಿತಮ್ |
ತಯೋಶ್ಚ ಶಪತೋ ರಾತ್ರಿರಭೂತ್ ತಂ ಬ್ರಾಹ್ಮಣಾಸ್ತದಾ ॥17॥
ತಾಂ ಪ್ರಸಾದ್ಯ ತತೋ ದೇವೀಂ ಶಾಪಮೋಕ್ಷಂ ಚ ತೇ ದದುಃ |
ದುಃಖಿತಾ ಋಷಯಸ್ತತ್ರ ಆಶ್ರಮಸ್ಥಾಶ್ಚ ತಂ ತದಾ ॥18॥
ಆಗ ಒಬ್ಬ ಪತಿವ್ರತೆಯು ಪತಿಯ ಪ್ರೀತಿಗಾಗಿ ಅವನನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ವೇಶ್ಯಾಗೃಹಕ್ಕೆ ಹೋಗುತ್ತಿದ್ದಳು. ತಲೆಯ ಮೇಲಿದ್ದ ಅವಳ ಪತಿಯ ಪಾದವು ಶೂಲದಿಂದ ನೇತಾಡುತ್ತಿದ್ದ ಮಾಂಡವ್ಯರಿಗೆ ತಾಕಿ ಅವರಿಗೆ ಬಹಳ ಕಷ್ಟವಾಯಿತು. ಆ ನೋವಿನಿಂದ ಬಳಲಿದ ಅವರು ನಾಳೆ ಪ್ರಾತಃಕಾಲ ಸೂರ್ಯೋದಯದ ಒಳಗೆ ನಿನ್ನ ಪತಿಯು ಮೃತನಾಗಲಿ ಎಂದು ಶಾಪವನ್ನು ಕೊಟ್ಟರು. ಆ ಪತಿವ್ರತೆಯೂ ಕೂಡ ನಾಳೆ ಸೂರ್ಯೋದಯವಾಗುವುದೇ ಬೇಡ ಎಂದು ಪ್ರತಿಶಾಪವನ್ನು ಇತ್ತಳು. ಮರುದಿವಸ ಸ್ವಲ್ಪ ಸಮಯ ಸೂರ್ಯನು ಇಲ್ಲದಿರುತ್ತಿರಲು ದುಃಖಿತರಾದ ಆ ಋಷಿಗಳು ಆಶ್ರಮದಲ್ಲಿ ಮಾಂಡವ್ಯರನ್ನೂ ಮತ್ತು ಆ ಪತಿವ್ರತೆಯನ್ನೂ ಸಮಾಧಾನಪಡಿಸಿ ಎರಡೂ ಶಾಪಗಳನ್ನೂ ಮೋಚನೆ ಮಾಡಿದರು.
ತೇ ರಾತ್ರೌ ಶಕುನಾ ಭೂತ್ವಾ ತಮಾರ್ತಿಂ ಪರಮಾಂ ಗತಮ್ |
ದರ್ಶಯಂತೋ ಯಥಾಶಕ್ತಿ ತಮಪೃಚ್ಛನ್ ದ್ವಿಜೋತ್ತಮಮ್ ॥19॥

ಅನಂತರ ಬಂದ ಋಷಿಗಳು ರಾತ್ರಿಯ ವೇಳೆಯಲ್ಲಿ ಹಕ್ಕಿಗಳ ರೂಪವನ್ನು ತಾಳಿ ತಮ್ಮ ರೂಪವನ್ನು ಸಾಧ್ಯವಾದಷ್ಟು ತೋರಿಸಿ ಬಹಳಕಷ್ಟದಲ್ಲಿದ್ದ ಮಾಂಡವ್ಯರನ್ನು ಕುರಿತು ಇಂತಹ ದುಃಖವು ಬರಲು ಏನು ಕಾರಣ ಎಂದು ಕೇಳಿದರು.
ಋಷಯಃ
ಭಗವನ್ ಕೇನ್ ದೋಷೇಣ ಗಂತಾಽಸಿ ದ್ವಿಜಸತ್ತಮ |
ಶ್ರೋತುಮಿಚ್ಛಾಮಹೇ ಬ್ರಹ್ಮನ್ ಕಿಂ ಪಾಪಂ ಕೃತವಾನಸಿ ॥20॥
ತತ್ ತೇ ದ್ವಿಜವರಶ್ರೇಷ್ಠ ಸಂಶಯಸ್ತು ಮಹಾನ್ ಹಿ ನಃ |
ಈದೃಶಸ್ಯ ನರಶ್ರೇಷ್ಠ ಉಗ್ರೇ ತಪಸಿ ವರ್ತತಃ ॥21॥
ಪೂಜ್ಯರಾದ ಬ್ರಾಹ್ಮಣಶ್ರೇಷ್ಠರೇ, ಯಾವ ದೋಷದಿಂದ ಇಂತಹ ದುಃಖವನ್ನು ಹೊಂದಿದ್ದೀರಿ ಎಂದು ಕೇಳಬಯಸುತ್ತೇವೆ. ಬ್ರಾಹ್ಮಣರೇ ನೀವು ಯಾವ ಪಾಪವನ್ನು ಮಾಡಿದಿರಿ ಇಂತಹ ಉಗ್ರ ತಪಸ್ಸಿನಲ್ಲಿ ನಿರತರಾದ ನೀವು ಪಾಪವನ್ನು ಆಚರಿಸಿದಿರಿ ಎಂಬ ವಿಷಯದಲ್ಲಿ ನಮಗೆ ಬಹಳ ಸಂಶಯವಿದೆ. ಆದ್ದರಿಂದ ದ್ವಿಜಶ್ರೇಷ್ಠರೇ, ಅದನ್ನು ನಮಗೆ ತಿಳಿಸಿ.
ವೈಶಂಪಾಯನಃ
ತದೋವಾಚ ಮಹಾಪ್ರಾಜ್ಞಸ್ತಾನೃಷೀನ್ ಸಂಶಿತವ್ರತಾನ್ |
ದೋಷತಃ ಕಂ ಗಮಿಷ್ಯಾಮಿ ನ ಹಿ ಮೇಽನ್ಯೋಽಪರಾಧ್ಯತಿ ॥22॥
ಆಗ ಆ ಮಹಾಪ್ರಾಜ್ಞರಾದ ಮಾಂಡವ್ಯರು ಆ ವ್ರತನಿಷ್ಠರಾದ ಋಷಿಗಳನ್ನು ಕುರಿತು ನಾನು ಯಾವ ದೋಷದಿಂದ ಇಂತಹ ದುಃಖವನ್ನು ಹೊಂದುವೆನು? ನನಗೆ ಬೇರೆ ಯಾರೂ ಅಪರಾಧವನ್ನು ಮಾಡುವುದಿಲ್ಲ. (ಯಮನೇ ಅಪರಾಧಿ)
ತಚ್ಛ್ರುತ್ವಾ ರಕ್ಷಿಣಸ್ತತ್ರ ತಥಾ ಬಹುತಿಥೇಽಹನಿ |
ನ್ಯವೇದಯಂಸ್ತತೋ ರಾಜ್ಞೇ ತಥಾವೃತ್ತಂ ನರಾಧಿಪ ॥23॥
ರಾತ್ರಿಯಲ್ಲಿ ನಡೆದ ಈ ಘಟನೆಯನ್ನು ನೋಡಿದ ಮತ್ತು ಕೇಳಿದ ರಕ್ಷಕರು ಅನೇಕ ದಿನಗಳ ಬಳಿಕ ರಾಜನಿಗೆ ಈ ವೃತ್ತಾಂತವನ್ನು ಹೇಳಿದರು.
ರಾಜಾ ಚ ಹಿ ತಥಾ ಶ್ರುತ್ವಾ ನಿಶ್ಚಿತ್ಯ ಸಹ ಮಂತ್ರಿಭಿಃ |
ಪ್ರಸಾದಯಾಮಾಸ ತದಾ ಶೂಲಸ್ಥಮೃಷಿಸತ್ತಮಮ್ ॥24॥
ರಾಜನು ಅದನ್ನು ಕೇಳಿ, ಮಂತ್ರಿಗಳ ಜೊತೆಯಲ್ಲಿ ಸಮಾಲೋಚನೆ ಮಾಡಿ ವಧ್ಯಸ್ಥಾನಕ್ಕೆ ಬಂದು ಶೂಲದಲ್ಲಿದ್ದ ಋಷಿಶ್ರೇಷ್ಠರನ್ನು ಪ್ರಸನ್ನೀಕರಿಸುವ ಪ್ರಯತ್ನವನ್ನು ಮಾಡಿದನು.
ರಾಜಾ
ಯನ್ಮಯಾಽಪಕೃತಂ ಮೋಹಾದಜ್ಞಾನಾದ್ ದ್ವಿಜಸತ್ತಮ |
ಪ್ರಸಾದಯೇ ತ್ವಾಂ ವಿಪ್ರೇಂದ್ರ ನ ಮೇ ತ್ವಂ ಕ್ರೋದ್ಧುಮರ್ಹಸಿ ॥25॥
ಮುನಿಶ್ರೇಷ್ಠರೇ, ನಾನು ಮೋಹದಿಂದ ಮತ್ತು ಅಜ್ಞಾನದಿಂದ ತಮಗೆ ಮಾಡಿದ ಅಪಕಾರಕ್ಕೆ ಕ್ಷಮೆ ಕೇಳುತ್ತಿದ್ದೇನೆ. ತಾವು ನನ್ನ ಮೇಲೆ ಕೋಪಗೊಳ್ಳದೇ ನನಗೆ ಅನುಗ್ರಹವನ್ನು ಮಾಡಬೇಕು.
ವೈಶಂಪಾಯನಃ
ಏವಮುಕ್ತಸ್ತದಾ ರಾಜ್ಞಾ ಪ್ರಸಾದಮಕರೋತ್ ತದಾ |
ಕೃತಪ್ರಸಾದೋ ರಾಜಾ ತಂ ತತಃ ಸಮವತಾರಯತ್ ॥26॥
ರಾಜನಿಂದ ಹೀಗೆ ಹೇಳಲ್ಪಟ್ಟ ಮಾಂಡವ್ಯರು ರಾಜನಿಗೆ ಅನುಗ್ರಹವನ್ನು ಮಾಡಿದರು. ಅನುಗ್ರಹವನ್ನು ಪಡೆದ ರಾಜನು ಅವರನ್ನು ಕೆಳಗೆ ಇಳಿಸುವಂತೆ ಆದೇಶ ಮಾಡಿದನು.
ಅವತಾರ್ಯಮಾಣಃ ಶೂಲಾಗ್ರಾತ್ ತಚ್ಛೂಲಂ ಚ ಚಕರ್ಷ ಹ |
ಅಶಕ್ನುವಂತೋ ನಿಷ್ಕ್ರಷ್ಟುಂ ಶೂಲಂ ಮೂಲೇಽಥ ಚಿಚ್ಛಿದುಃ ॥27॥
ಶೂಲದ ತುದಿಯಿಂದ ಅವರನ್ನು ಕೆಳಗೆ ಇಳಿಸುವ ಪ್ರಯತ್ನ ಮಾಡಿದಾಗ, ಕಂಠದ ಬಳಿ ನೆಟ್ಟಿದ್ದ ಶೂಲದ ಭಾಗವು ಋಷಿಗಳ ಜೊತೆಯಲ್ಲಿ ಕೆಳಗೆ ಬಂದಿತು. ಅದನ್ನು ಅವರಿಂದ ಬಿಡಿಸಲು ಸಾಧ್ಯವಾಗದೇ ರಾಜಭಟರು ಅದನ್ನು ಮೂಲದಲ್ಲಿ ಕತ್ತರಿಸಿದರು.
ಸ ತದಾಂತರ್ಗತೇನೈವ ಶೂಲೇನ ವ್ಯಚರನ್ಮುನಿಃ |
ಕಂಠಪಾರ್ಶ್ವಾಂತರಸ್ಥೇನ ಶಂಕುನಾ ಮುನಿರಾಚರನ್ |
ಪುಷ್ಪಭಾಜನಧಾರೀ ಸ್ಯಾದಿತಿ ಚಿಂತಾಪರೋಽಭವತ್ ॥28॥
ಆಗ ದೇಹದಲ್ಲಿ ಕಂಠದ ಬಳಿ ಇದ್ದ ಶೂಲದ ಭಾಗದ ಜೊತೆಗೆ ಆ ಋಷಿಗಳು ಸಂಚಾರ ಮಾಡಿದರು. ಅವರು ಶೂಲದ ಶಂಕುವು ನನ್ನ ಪುಷ್ಪಪಾತ್ರೆಗೆ ಆಧಾರವಾಗುವುದು ಎಂದು ಆಲೋಚಿಸಿದರು.
ಸ ಚಾತಿತಪಸಾ ಲೋಕಾನ್ ವಿಜಿಗ್ಯೇ ದುರ್ಲಭಾನ್ ಪರೈಃ |
ತಮಾಹುರಾಣಿಮಾಂಡವ್ಯಮಿತಿ ಧರ್ಮೇ ರತಂ ಮುನಿಮ್ ॥29॥
ಅವರು ತಮ್ಮ ಉಗ್ರವಾದ ತಪಸ್ಸಿನಿಂದ ಪರಲೋಕಗಳನ್ನು ಜಯಿಸಿದರು. ಆ ಶಂಕುವಿನ ಕಾರಣದಿಂದಾಗಿ ಅವರನ್ನು ಜನರು ಆಣಿಮಾಂಡವ್ಯರೆಂದೇ ಕರೆದರು.
ಸ ಗತ್ವಾ ಸದನಂ ವಿಪ್ರೋ ಧರ್ಮಸ್ಯ ಪರಮಾರ್ಥವಿತ್ |
ಆಸನಸ್ಥಂ ತತೋ ಧರ್ಮಂ ದೃಷ್ಟ್ವೋಪಾಲಭತಾನಘ ॥30॥
ಪರಮಾರ್ಥವನ್ನು ತಿಳಿದ ಆ ಬ್ರಾಹ್ಮಣರು ಯಮದೇವರ ಪಟ್ಟಣಕ್ಕೆ ಹೋಗಿ ಆಸನದಲ್ಲಿ ಕುಳಿತಿದ್ದ ಯಮದೇವರನ್ನು ನೋಡಿ, ನಿಂದಿಸಿದರು.

ಕಿಂ ನು ದುಷ್ಕೃತರಂ ಕರ್ಮ ಮಯಾ ಕೃತಮಜಾನತಾ |
ಯಸ್ಯೇಯಂ ಫಲನಿರ್ವೃತ್ತಿರೀದೃಶ್ಯಾಸಾದಿತಾ ಮಯಾ |
ಶೀಘ್ರಮಾಚಕ್ಷ್ವ ಮೇ ತತ್ತ್ವಂ ಪಶ್ಯ ಮೇ ತಪಸೋ ಬಲಮ್ ॥31॥
ನಾನು ನನಗೆ ಗೊತ್ತಿಲ್ಲದಂತೆ ಇಂತಹ ಫಲವು ದೊರೆಯುವಂತಹ ಯಾವ ದುಷ್ಕರ್ಮವನ್ನು ಮಾಡಿದೆ? ಯಮನೇ, ನನಗೆ ಶೀಘ್ರವಾಗಿ ಹೇಳು. ಇಲ್ಲದಿದ್ದರೆ ನನ್ನ ತಪಸ್ಸಿನ ಬಲವನ್ನು ನೋಡು ಎಂದು ಹೇಳಿದರು.
ಧರ್ಮರಾಜಃ
ಪತಂಗಕಾನಾಂ ಪುಚ್ಛೇಷು ತ್ವಯೇಷಿಕಾಃ ಪ್ರವೇಶಿತಾಃ |
ಅಹಿಂಸಕಾನಾಂ ಧರ್ಮಜ್ಞ ತೇನೈತತ್ ಪ್ರಾಪ್ತವಾನಸಿ ॥32॥
ಧರ್ಮಜ್ಞರೇ, ನೀವು ಬಾಲ್ಯದಲ್ಲಿ ಯಾರಿಗೂ ಹಿಂಸೆ ಮಾಡದಿರುವ ಪತಂಗಗಳ ಬಾಲದ ಬಳಿ ಕಡ್ಡಿಗಳನ್ನು ಚುಚ್ಚಿದ್ದೀರಿ. ಅದರಿಂದ ಇಂತಹ ಫಲವು ಪ್ರಾಪ್ತವಾಯಿತು.
ಆಣಿಮಾಂಡವ್ಯಃ
ಕಸ್ಮಿನ್ ಕಾಲೇ ಮಯಾ ತತ್ ತು ಕೃತಂ ಬ್ರೂಹಿ ಯಥಾತಥಮ್ |
ನಾನು ಯಾವ ವಯಸ್ಸಿನಲ್ಲಿ ಅಂತಹ ಕೃತ್ಯವನ್ನು ಮಾಡಿದೆ ಎಂದು ಸತ್ಯವಾಗಿ ಹೇಳು.
ವೈಶಂಪಾಯನಃ
ತೇನೋಕ್ತೋ ಧರ್ಮರಾಜಸ್ತು ಬಾಲಭಾವೇ ತ್ವಯಾ ಕೃತಮ್ ॥33॥
ಆಗ ಯಮನು ನೀನು ಬಾಲಕನಾಗಿದ್ದಾಗ ಹಾಗೆ ಮಾಡಿದೆ ಎಂದು ಹೇಳಿದನು.
ಆಣಿಮಾಂಡವ್ಯಃ
ಬಾಲೋ ಹಿ ದ್ವಾದಶಾದ್ವರ್ಷಾಜ್ಜನ್ಮನೋ ಯತ್ ಕರಿಷ್ಯತಿ |
ನ ಭವಿಷ್ಯತ್ಯಧರ್ಮೋಽಸ್ಯ ನ ಪ್ರಜ್ಞಾಸ್ಯತಿ ವೈಶಸಮ್ ॥34॥
ಬಾಲಕನು ಹನ್ನೆರಡು ವರ್ಷ ತುಂಬುವವರೆಗೂ ಏನು ಮಾಡುವನೋ ಅದರಿಂದ ಪಾಪವು ಉಂಟಾಗುವುದಿಲ್ಲ. ಏಕೆಂದರೆ ಅವನಿಗೆ ಹಿಂಸೆಯ ಜ್ಞಾನವು ಇರುವುದಿಲ್ಲ.
ಗರೀಯಾನ್ ಬ್ರಾಹ್ಮಣವಧಃ ಸರ್ವಭೂತವಧಾದಪಿ |
ಅಲ್ಪಾಪರಾಧೇ ವಿಪುಲೋ ಮಮ ದಂಡಸ್ತ್ವಯಾ ಧೃತಃ ॥35॥
ಉಳಿದ ಎಲ್ಲಾ ಪ್ರಾಣಿಗಳ ವಧೆಗಿಂತಲೂ ಬ್ರಾಹ್ಮಣ ವಧೆಯು ಗುರುತರವಾದುದು. ನಾನು ಮಾಡಿದ ಅಲ್ಪಾಪರಾಧಕ್ಕೆ ನೀನು ನನಗೆ ವಿಪುಲವಾದ ಶಿಕ್ಷೆಯನ್ನು ಕೊಟ್ಟಿದ್ದೀಯೆ.
ಶೂದ್ರಯೋನಾವತೋ ಧರ್ಮ ಮಾನುಷಃ ಸಂಭವಿಷ್ಯಸಿ |
ಮರ್ಯಾದಾಂ ಸ್ಥಾಪಯಾಮ್ಯದ್ಯ ಲೋಕೇ ಧರ್ಮಫಲೋದಯಾಮ್ ॥
ಆದ್ದರಿಂದ ಯಮನೇ, ನೀನು ಮನುಷ್ಯಲೋಕದಲ್ಲಿ ಶೂದ್ರಯೋನಿಯಲ್ಲಿ ಅವತಾರ ಮಾಡು. ನಾನು ಈ ದಿನ ಲೋಕದಲ್ಲಿ ಧರ್ಮದ ಫಲವು ಉಂಟಾಗುವ ಮರ್ಯಾದೆಯನ್ನು ಸ್ಥಾಪಿಸುತ್ತೇನೆ.
ಆಚತುರ್ದಶಮಾದ್ ವರ್ಷಾನ್ನ ಭವಿಷ್ಯತಿ ಪಾತಕಮ್ |
ಪರೇಣ ಕುರ್ವತಾಮೇವ ದೋಷ ಏವ ಭವಿಷ್ಯತಿ ॥37॥
ಹದಿನಾಲ್ಕು ವರ್ಷಗಳು ತುಂಬುವವರೆಗೂ ಮಾಡಿದ ಕಾರ್ಯದಿಂದ ಪಾಪವು ಉಂಟಾಗುವುದಿಲ್ಲ. ಅನಂತರ ಮಾಡಿದ ದುಷ್ಕೃತ್ಯಗಳಿಂದ ಪಾಪವು ಉಂಟಾಗುವುದು.
ವೈಶಂಪಾಯನಃ
ಏತೇನ ತ್ವಪರಾಧೇನ ಶಾಪಾತ್ ತಸ್ಯ ಮಹಾತ್ಮನಃ |
ಧರ್ಮೋ ವಿದುರರೂಪೇಣ ಶೂದ್ರಯೋನಾವಜಾಯತ ॥38॥
ಈ ಅಪರಾಧದಿಂದ, ಆ ಮಹಾತ್ಮರ ಶಾಪದ ನಿಮಿತ್ತದಿಂದಾಗಿ ಯಮನು ವಿದುರನಾಗಿ ಶೂದ್ರಯೋನಿಯಲ್ಲಿ ಅವತರಿಸಿದನು.
ಧರ್ಮೇ ಚಾರ್ಥೇ ಚ ಕುಶಲೋ ಲೋಭಕ್ರೋಧವಿವರ್ಜಿತಃ |
ದೀರ್ಘದರ್ಶೀ ಶಮಪರಃ ಕುರೂಣಾಂ ಚ ಹಿತೇ ರತಃ ॥39॥
ಅವನು ಧರ್ಮ ಮತ್ತು ಅರ್ಥಗಳಲ್ಲಿ ಕುಶಲನಾಗಿದ್ದು, ಲೋಭ ಮತ್ತು ಕ್ರೋಧಗಳಿಂದ ರಹಿತನಾಗಿ,ದೀರ್ಘದರ್ಶಿಯಾಗಿ, ಭಗವನ್ನಿಷ್ಠನಾಗಿ ಕುರುಗಳ ಹಿತದಲ್ಲಿ ರತನಾಗಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ಅಷ್ಟಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಂಟನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ಯೋಗ್ಯಾನಿ ಕರ್ಮಾಣಿ ತತಸ್ತು ತೇಷಾಂ
ಚಕಾರ ಭೀಷ್ಮೋ ಮುನಿಭಿರ್ಯಥಾವತ್ |
ವಿದ್ಯಾಃ ಸಮಸ್ತಾ ಅದದಾಚ್ಚ ಕೃಷ್ಣಃ

ತೇಷಾಂ ಪಾಂಡೋರಸ್ತ್ರಶಸ್ತ್ರಾಣಿ ಭೀಷ್ಮಃ ॥143॥
ಬಳಿಕ ಭೀಷ್ಮ ಆ ಮಕ್ಕಳಿಗೆ ಯೋಗ್ಯವಾದ ಜಾತಕರ್ಮಾದಿಗಳನ್ನು ಮುನಿಗಳ ಮೂಲಕ ವಿದ್ಯುಕ್ತವಾಗಿ ನೆರವೇರಿಸಿದ. ವ್ಯಾಸರು ಅವರಿಗೆ ಎಲ್ಲ ವಿದ್ಯೆಗಳನ್ನು ಉಪದೇಶಿಸಿದರು. ಭೀಷ್ಮ ಪಾಂಡುವಿಗೆ ಅಸ್ತ್ರಶಸ್ತ್ರಗಳನ್ನು ಪದೇಶಿಸಿದ.
ತೇ ಸರ್ವವಿದ್ಯಾ ಪ್ರವರಾ ಬಭೂವು
ರ್ವಿಶೇಷತೋ ವಿದುರಃ ಸರ್ವವೇತ್ತಾ ।
ಪಾಂಡುಃ ಸಮಸ್ತಾಸ್ತ್ರವಿದೇಕವೀರೋ
ಜಿಗಾಯ ಪೃಥ್ವೀಮಖಿಲಾಂ ಧನುರ್ಧರಃ ॥144॥
ಅವರು ಎಲ್ಲ ವಿದ್ಯೆಗಳಲ್ಲಿಯೂ ಪ್ರವೀಣರಾದರು. ವಿದುರ ವಿಶೇಷವಾಗಿ ಸರ್ವಜ್ಞನೆನಿಸಿದ. ಪಾಂಡು ಸರ್ವಾಸ್ತ್ರವೇತ್ತ ಧನುರ್ಧಾರಿ, ಅಪ್ರತಿಮ ವೀರನೆನಿಸಿ ಸಮಸ್ತ ಭೂಮಂಡಲವನ್ನು ಗೆದ್ದ.
* * * *
ನೂರ ಒಂಭತ್ತನೆಯ ಅಧ್ಯಾಯ
(ಧೃತರಾಷ್ಟ್ರ ಮೊದಲಾದವರ ವಿದ್ಯಾಭ್ಯಾಸ, ವಿವಾಹ ಮತ್ತು ಪಾಂಡುವಿನ ರಾಜ್ಯಾಭಿಷೇಕ.)
ವೈಶಂಪಾಯನಃ
ಧೃತರಾಷ್ಟ್ರೇ ಚ ಪಾಂಡೌ ಚ ವಿದುರೇ ಚ ಮಹಾತ್ಮನಿ ।
ತೇಷು ತ್ರಿಷು ಕುಮಾರೇಷು ಜಾತೇಷು ಕುರುಜಾಂಗಲಮ್।
ಕುರವೋಽಥ ಕುರುಕ್ಷೇತ್ರಂ ತ್ರಯಮೇತದವರ್ಧತ ॥1॥
ಧೃತರಾಷ್ಟ್ರ, ಪಾಂಡು ಮತ್ತು ಮಹಾತ್ಮನಾದ ವಿದುರ ಈ ಮೂರು ಕುಮಾರರು ಜನಿಸಿದ ಮೇಲೆ, ಕುರುಜಾಂಗಲವು, ಕುರುಕ್ಷೇತ್ರವು ಮತ್ತು ಕುರುಗಳು ಅಭಿವೃದ್ಧಿಯನ್ನು ಹೊಂದಿದವು.
ಯಥರ್ತುವರ್ಷೀ ಪರ್ಜನ್ಯೋ ಬಹುಪುಷ್ಪಫಲಾ ದ್ರುಮಾಃ ।
ವಾಹನಾನಿ ಪ್ರಹೃಷ್ಟಾನಿ ಮುದಿತಾ ಮೃಗಪಕ್ಷಿಣಃ ।
ರೂಢಸಸ್ಯಾಽಭವದ್ ಭೂಮಿಃ ಸಸ್ಯಾನಿ ಫಲವಂತಿ ಚ ॥2॥
ಪರ್ಜನ್ಯನು ಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸಿದನು. ವೃಕ್ಷಗಳು ಬಹು ಪುಷ್ಪಫಲದಿಂದ ಕೂಡಿದವು. ಅಶ್ವ, ಗಜ ಮೊದಲಾದ ವಾಹನಗಳು ಹರ್ಷಗೊಂಡವು. ಮೃಗಪಕ್ಷಿಗಳು ಸಂತೋಷಗೊಂಡವು. ಭೂಮಿಯಲ್ಲಿ ಸಸ್ಯವು ಚೆನ್ನಾಗಿ ಬೆಳೆಯಿತು. ಆ ಸಸ್ಯಗಳು ಫಲವನ್ನು ಕೊಟ್ಟವು.
ಗಂಧವಂತಿ ಚ ಮಾಲ್ಯಾನಿ ಪುಷ್ಪಾಣಿ ರಸವಂತಿ ಚ ।
ವಣಿಗ್ಭಿಶ್ಚೋಪಕೀರ್ಯಂತೇ ನಗರಾಣ್ಯಥ ಶಿಲ್ಪಿಭಿಃ ॥3॥
ಹೂ ಮಾಲೆಗಳು ಸುಗಂಧೋಪೇತವಾಗಿದ್ದವು. ಪುಷ್ಪಗಳಲ್ಲಿ ಮಧುರಸವಿದ್ದಿತು. ನಗರಗಳು ವರ್ತಕರಿಂದಲೂ ಮತ್ತು ಕುಶಲಕರ್ಮಿಗಳಿಂದಲೂ ತುಂಬಿ ಹೋಯಿತು.
ಶೂರಾಶ್ಚ ಕೃತವಿದ್ಯಾಶ್ಚ ಸಂತಶ್ಚ ಸುಖಿನೋಽಭವನ್ ।
ನಾಭವತ್ ಕೃಪಣಃ ಕಶ್ಚಿನ್ನ ಕಾಚಿದ್ ವಿಧವಾಽಭವತ್ ॥4॥
ಶೂರರೂ, ವಿದ್ಯಾ ನಿಪುಣರೂ ಮತ್ತು ಸಜ್ಜನರೂ ಸುಖದಿಂದಿದ್ದರು. ಕೃಪಣರು ಇರಲ್ಲಿಲ್ಲ. ಹೆಂಗಸರು ವಿಧವೆಯರಾಗುತ್ತಿರಲಿಲ್ಲ.
ನಾಭವನ್ ದಸ್ಯವಃ ಕೇಚಿನ್ನಾಧರ್ಮರುಚಯೋ ಜನಾಃ ।
ಪ್ರದೇಶೇಷ್ವಪಿ ರಾಷ್ಟ್ರಾಣಾಂ ಕೃತಂ ಯುಗಮವರ್ತತ ॥5॥
ಕಳ್ಳರು ಯಾರೂ ಇರಲಿಲ್ಲ. ಅಧರ್ಮಾಭಿರುಚಿಗಳಾದ ಜನರೂ ಇರಲಿಲ್ಲ. ರಾಷ್ಟ್ರಗಳಿಗೆ ಸೇರಿದ ಗ್ರಾಮಾಂತರ ಪ್ರದೇಶಗಳಲ್ಲಿಯೂ ಕೃತಯುಗದ ಧರ್ಮವೇ ನಡೆಯುತ್ತಿತ್ತು.
ತನ್ಮಹೋದಧಿಸಂಕಾಶಂ ನಗರಂ ಬಹ್ವಶೋಭತ ।
ದ್ವಾರತೋರಣನಿರ್ವ್ಯೂಹೈಶ್ಚನ್ನಮಭ್ರಂ ಘನೈರಿವ ॥6॥
ದೊಡ್ಡ ಸಮುದ್ರದಂತಿದ್ದ ಹಸ್ತಿನಪುರವು ದ್ವಾರತೋರಣಗಳಿಂದ ಬರುವ ಸುಗಂಧ ಧೂಪಗಳಿಂದ ಆಕಾಶವನ್ನು ಮೋಡದಿಂದ ಮುಚ್ಚಿದಂತೆ ಮುಚ್ಚಿ ಬಹುವಾಗಿ ಶೋಭಿಸಿತು.
ಪ್ರಾಸಾದಶತಸಂಬಾಧಂ ಮಹೇಂದ್ರಪುರಸನ್ನಿಭಮ್ ।
ನದೀಪಾದಪಷಂಡೇಷು ವಾಪೀಪಲ್ವಲಸೇತುಷು ।
ಕಾನನೇಷು ವಿಚಿತ್ರೇಷು ವಿಹರಂತಿ ಸ್ಮ ಕೌರವಾಃ ॥7॥
ನಗರವು ನೂರಾರು ಪ್ರಾಸಾದಗಳಿಂದ ನಿಬಿಡವಾಗಿ ಇಂದ್ರನ ಅಮರಾವತಿಯಂತೆ ಇದ್ದಿತು. ಕೌರವರು ನದಿಯ ತೀರಗಳಲ್ಲಿಯೂ, ವೃಕ್ಷಗಳ ಮೂಲಗಳಲ್ಲಿಯೂ, ಜಲಾಶಯಗಳ ಸಮೀಪದಲ್ಲಿಯೂ, ಪಲ್ವಲ ಮತ್ತು ಸೇತುವೆಗಳ ಸಮೀಪದಲ್ಲಿಯೂ ಮತ್ತು ವಿಚಿತ್ರವಾದ ಕಾಡುಗಳಲ್ಲಿಯೂ ವಿಹರಿಸುತ್ತಿದ್ದರು.
ಉತ್ತರೈಃ ಕುರುಭಿಃ ಸಾರ್ಧಂ ದಕ್ಷಿಣಾಃ ಕುರವಸ್ತದಾ ।
ಸ್ಪರ್ಧಮಾನಾಶ್ಚ ದೃಶ್ಯಂತೇ ದೇವರ್ಷಿಣಾಂ ಸಮಾಗಮೇ ।
ದಾನಧರ್ಮಕ್ರಿಯಾಯುಕ್ತಾ ಯಜ್ಞವ್ರತಪರಾಯಣಾಃ ॥8॥
ಅಲ್ಲಿ ದಕ್ಷಿಣಕುರುಗಳು ಮತ್ತು ಉತ್ತರಕುರುಗಳು ದಾನಧರ್ಮ ಕ್ರಿಯೆಗಳಲ್ಲಿ ಆಸಕ್ತರಾಗಿದ್ದು, ಯಜ್ಞ ಮತ್ತು ವ್ರತಗಳಲ್ಲಿ ನಿಷ್ಠರಾಗಿದ್ದು ದೇವತೆಗಳ ಮತ್ತು ಋಷಿಗಳ ಸಮಾಗಮದಲ್ಲಿ ಪರಸ್ಪರವಾಗಿ ಸ್ಪರ್ಧಿಸುವಂತೆ ತೋರುತ್ತಿದ್ದರು.

ಅನ್ಯೋನ್ಯಪ್ರೀತಿಸಂಯುಕ್ತಾ ವರ್ಧಂತೇ ಸ್ಮ ಪ್ರಜಾಸ್ತದಾ |
ಮಾನಕ್ರೋಧವಿಹೀನಾಶ್ಚ ಪ್ರಜಾ ಲೋಭವಿವರ್ಜಿತಾಃ |
ಅನ್ಯೋನ್ಯಮಭ್ಯನಂದಂತ ಬ್ರಹ್ಮೋತ್ತರಮವರ್ಧತ ॥9॥
ಪ್ರಜೆಗಳು ಪರಸ್ಪರ ಪ್ರೀತಿಯುಳ್ಳವರಾಗಿ ಅಭಿವೃದ್ಧಿಯನ್ನು ಹೊಂದಿದರು. ಪ್ರಜೆಗಳಿಗೆ ಅಹಂಕಾರವಾಗಲೀ, ಕ್ರೋಧವಾಗಲೀ ಅಥವಾ ಲೋಭವಾಗಲೀ ಇರಲಿಲ್ಲ. ಒಬ್ಬರನ್ನೊಬ್ಬರು ಅಭಿನಂದಿಸುತ್ತಿದ್ದರು. ಬ್ರಾಹ್ಮಣವರ್ಣವು ಶ್ರೇಷ್ಠವಾದ ಸ್ಥಾನವನ್ನು ಪಡೆದಿತ್ತು.
ತಸ್ಮಿನ್ ಜನಪದಶ್ರೇಷ್ಠೇ ಭೀಷ್ಮೇಣ ವಿಧಿನಾ ಕೃತಾಃ |
ಕೂಪಾರಾಮಾಃ ಸಭಾ ವಾಪ್ಯೋ ಬ್ರಾಹ್ಮಣಾವಸಥಾಸ್ತದಾ ॥10॥
ಆ ಜನಪದದಲ್ಲಿ ಭೀಷ್ಮರು ವಿಧಿವತ್ತಾಗಿ ಅನೇಕ ಕೂಪಗಳನ್ನೂ, ಆರಾಮಗಳನ್ನೂ, ಸಭೆಗಳನ್ನೂ, ಬಾವಿಗಳನ್ನು ಮತ್ತು ಬ್ರಾಹ್ಮಣ ನಿವಾಸಗಳನ್ನೂ ಮಾಡಿದ್ದರು.
ಸ್ವಾಹಾಕಾರೈಃ ಸ್ವಧಾಭಿಶ್ಚ ಸನ್ನಿವಾಸ ಕುರೂಷಿತಃ |
ಬಭೂವ ಪರಮೋಪೇತೋ ಯೂಪಚೈತ್ಯಜಯಧ್ವಜೈಃ ॥11॥
ಆ ನಗರವು ಒಳ್ಳೆಯ ನಿವಾಸವನ್ನು ಹೊಂದಿದ್ದ ಕುರುಗಳಿಂದ ವಾಸಿಸಲ್ಪಟ್ಟು ಸ್ವಾಹಾಕಾರ ಸ್ವಧಾಕಾರಗಳಿಂದಲೂ, ಯೂಪ, ಚೈತ್ಯ ಮತ್ತು ಜಯಧ್ವಜಗಳಿಂದಲೂ, ಕೂಡಿದುದಾಗಿ ಚೆನ್ನಾಗಿ ಶೋಭಿಸಿತು.
ಪ್ರಮೃಜ್ಯ ಪರರಾಷ್ಟ್ರಾಣಿ ಸ್ವರಾಷ್ಟ್ರಂ ಪರ್ಯರಕ್ಷತ |
ಭೀಷ್ಮೇಣ ವಿಹಿತಂ ರಾಷ್ಟ್ರೇ ಧರ್ಮಚಕ್ರಮವರ್ಧತ ॥12॥
ಕುರುಗಳು ಪರರಾಷ್ಟ್ರಗಳನ್ನು ಸೋಲಿಸಿ ತಮ್ಮ ರಾಷ್ಟ್ರವನ್ನು ರಕ್ಷಣೆ ಮಾಡಿದರು. ಕುರುಜಾಂಗಲದಲ್ಲಿ ಭೀಷ್ಮರಿಂದ ಪ್ರತಿಷ್ಠಿತವಾದ ಧರ್ಮಚಕ್ರವು ಅಭಿವೃದ್ಧಿಯನ್ನು ಹೊಂದಿತು.
ಕ್ರಿಯಮಾಣೇಷು ಕೃತ್ಯೇಷು ಕುಮಾರಾಣಾಂ ಯಶಸ್ವಿನಾಮ್|
ಪೌರಜಾನಪದಾಃ ಸರ್ವೇ ಬಭೂವುಃ ಪರಮೋತ್ಸವಾಃ ॥13॥
ಈ ಯಶಸ್ವಿಗಳಾದ ಮೂವರು ಕುಮಾರರಿಗೆ ಅನೇಕ ಕಾರ್ಯಗಳನ್ನು ಮಾಡುವಾಗ ಪೌರಜಾನಪದರೆಲ್ಲರೂ ಪರಮೋತ್ಸವದಿಂದ ಕೂಡಿರುತ್ತಿದ್ದರು.
ಗೃಹೇಷು ಕುರುಮುಖ್ಯಾನಾಂ ಪೌರಾಣಾಂ ಚ ಯಶಸ್ವಿನಾಮ್|
ದೀಯತಾಂ ಭುಜ್ಯತಾಂ ಚೇತಿ ವಾಚೋಽಶ್ರೂಯಂತ ಸರ್ವಶಃ ॥14॥
ಕುರುಶ್ರೇಷ್ಠರ ಮನೆಗಳಲ್ಲಿಯೂ, ಕೀರ್ತಿವಂತರಾದ ಪೌರರ ಮನೆಗಳಲ್ಲಿಯೂ ಸಹ, ಎಲ್ಲಾ ಕಡೆಗಳಲ್ಲಿಯೂ ದಾನವನ್ನು ಮಾಡಿ, ಭೋಜನವನ್ನು ಮಾಡಿಸಿ ಎಂಬ ಮಾತುಗಳು ಕೇಳಿಬರುತ್ತಿದ್ದವು.
ಧೃತರಾಷ್ಟ್ರಶ್ಚ ಪಾಂಡುಶ್ಚ ವಿದುರಶ್ಚ ಮಹಾಯಶಾಃ |
ಜನ್ಮಪ್ರಭೃತಿ ಭೀಷ್ಮೇಣ ಪುತ್ರವತ್ ಪರಿರಕ್ಷಿತಾಃ ॥15॥
ಮಹಾಕೀರ್ತಿವಂತರಾದ ಧೃತರಾಷ್ಟ್ರ, ಪಾಂಡು ಮತ್ತು ವಿದುರರು ಹುಟ್ಟಿದಾಗಿನಿಂದ ಭೀಷ್ಮರು ಅವರನ್ನು ತಮ್ಮ ಮಕ್ಕಳಂತೆ ರಕ್ಷಣೆ ಮಾಡಿದರು.
ವೈದಿಕಾಧ್ಯಯಯನೇ ಯುಕ್ತೋ ನೀತಿಶಾಸ್ತ್ರೇ ಚ ಪಾರಗಃ |
ಭೀಷ್ಮೇಣ ರಾಜನ್ ಕೌರವ್ಯೋ ಧೃತರಾಷ್ಟ್ರೋಽಭಿಷೇಚಿತಃ ॥16॥
ವೈದಿಕಾಧ್ಯಯನವನ್ನು ಮಾಡಿ ನೀತಿ ಶಾಸ್ತ್ರದಲ್ಲಿ ಪಾರಂಗತನಾದ ಧೃತರಾಷ್ಟ್ರನನ್ನು ಭೀಷ್ಮರು ರಾಜ್ಯದಲ್ಲಿ ಅಭಿಷೇಕ ಮಾಡಿದರು.
ಧನುರ್ವೇದೇಽಶ್ವಪೃಷ್ಠೇ ಚ ಗದಾಯುದ್ಧೇಽಸಿಚರ್ಮಣಿ |
ತಥೈವ ಗಜಶಿಕ್ಷಾಯಾಮಸ್ತ್ರೇಷು ವಿವಿಧೇಷು ಚ ॥17॥
ಅರ್ಥಧರ್ಮಪ್ರಧಾನಾಸು ವಿದ್ಯಾಸು ವಿವಿಧಾಸು ಚ |
ಗತಃ ಪಾರಂ ಯದಾ ಪಾಂಡುಸ್ತದಾ ಸೇನಾಪತಿಃ ಕೃತಃ ॥18॥
ಧನುರ್ವೇದದಲ್ಲಿಯೂ, ಅಶ್ವಪೃಷ್ಠದಲ್ಲಿಯೂ, ಗದಾಯುದ್ಧ- ದಲ್ಲಿಯೂ, ಖಡ್ಗವಿದ್ಯೆಯಲ್ಲಿಯೂ, ಗಜಶಿಕ್ಷೆಯಲ್ಲಿಯೂ, ವಿವಿಧ ಅಸ್ತ್ರವಿದ್ಯೆಯಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ, ಧರ್ಮಶಾಸ್ತ್ರದಲ್ಲಿಯೂ, ಇನ್ನೂ ಅನೇಕ ವಿದ್ಯೆಗಳಲ್ಲಿಯೂ ಪಾರಂಗತನಾದ ಪಾಂಡುವನ್ನು ಆಗ ಸೇನಾಪತಿಯನ್ನಾಗಿ ಮಾಡಿದರು.
ಧೃತರಾಷ್ಟ್ರಸ್ತ್ವಚಕ್ಷುಷ್ಟ್ವಾದ್ ರಾಜ್ಯಂ ನ ಪ್ರತ್ಯಪದ್ಯತ |
ಕರಣತ್ವಾಚ್ಚ ವಿದುರಃ ಪಾಂಡುಶ್ಚಾಸೀನ್ಮಹೀಪತಿಃ ॥19॥
ಧೃತರಾಷ್ಟ್ರನು ನೇತ್ರಹೀನನಾದ್ದರಿಂದ ರಾಜ್ಯವನ್ನು ಪಡೆಯಲೇ ಇಲ್ಲ. ಶೂದ್ರಯೋನಿಯಲ್ಲಿ ಹುಟ್ಟಿದ ನಿಮಿತ್ತದಿಂದ ವಿದುರನೂ ರಾಜ್ಯವನ್ನು ಪಡೆಯಲಿಲ್ಲ. ಪಾಂಡುವೇ ರಾಜನಾದನು.
ಅಮಾತ್ಯೋ ಮನುಜೇಂದ್ರಸ್ಯ ಬಾಲ ಏವ ಯಶಸ್ವಿನಃ |
ಪ್ರಣೇತಾ ಸರ್ವಧರ್ಮಾಣಾಂ ಭೀಷ್ಮೇಣ ವಿದುರಃ ಕೃತಃ ॥20॥
ಯಶಸ್ವಿಯಾದ ಮನುಜೇಂದ್ರನಾದ ಪಾಂಡುವಿಗೆ ಬಾಲ್ಯದಿಂದಲೇ ಅಮಾತ್ಯನೂ, ಸರ್ವಧರ್ಮ ಉಪದೇಶಕನೂ ಆಗುವಂತೆ ಭೀಷ್ಮರು ವಿದುರನನ್ನು ಇರಿಸಿದರು.
ಸರ್ವಶಾಸ್ತ್ರಾರ್ಥತತ್ತ್ವಜ್ಞೋ ಬುದ್ಧಿಮೇಧಾಪಟುರ್ಯುವಾ |
ಭಾವೇನಾಗಮಯುಕ್ತೇನ ಸರ್ವಂ ವೇದಯತೇ ಜಗತ್ ॥21॥
ಸರ್ವಶಾಸ್ತ್ರವನ್ನು ತಿಳಿದವನೂ, ಬುದ್ಧಿವಂತನೂ, ಮೇಧಾವಿಯೂ, ಯುವಕನೂ ಆದ ಆವನು ಶಾಸ್ತ್ರಾರ್ಥಕ್ಕೆ ಅನುಗುಣವಾಗಿ ಎಲ್ಲಾ

ಜಗತ್ತನ್ನು ತಿಳಿಯುತ್ತಿದ್ದನು.
ಪುನಷ್ಟಃ ಶಂತನೋರ್ವಂಶೋ ಭೀಷ್ಮೇಣ ಪುನರುದ್ಧೃತಃ |
ತತೋ ನಿರ್ವಚನಂ ಸತ್ಸು ತದಿದಂ ಪರಿಪಠ್ಯತೇ ॥22॥
ನಾಶ ಹೊಂದಿದ್ದ ಶಂತನುವಿನ ವಂಶವನ್ನು ಭೀಷ್ಮರು ಪುನಃ ಪ್ರತಿಷ್ಠೆ ಮಾಡಿದರು. ಆದ್ದರಿಂದ ಸಜ್ಜನರಲ್ಲಿ ಈ ಒಂದು ಮಾತಿನ ಪರಿಪಾಠವಿದೆ.
ಕೌಸಲ್ಯಾ ವೀರಸೂಃ ಸ್ತ್ರೀಣಾಂ ದೇಶಾನಾಂ ಕುರುಜಾಂಗಲಮ್ |
ಭೀಷ್ಮೋ ಧರ್ಮಭೃತಾಂ ಶ್ರೇಷ್ಠಃ ಪುರಾಣಾಂ ಗಜಸಾಹ್ವಯಮ್ ॥23॥
ಸ್ತ್ರೀಯರಲ್ಲಿ ವೀರರನ್ನು ಪಡೆದ ಕೌಸಲ್ಯೆಯು ಶ್ರೇಷ್ಠಳಾದವಳು. ದೇಶಗಳಲ್ಲಿ ಕುರುಜಾಂಗಲವು ಶ್ರೇಷ್ಠವಾದುದು. ಧರ್ಮಿಷ್ಠರಲ್ಲಿ ಭೀಷ್ಮರು ಶ್ರೇಷ್ಠರಾದವರು. ಪಟ್ಟಣಗಳಲ್ಲಿ ಹಸ್ತಿನಪುರವು ಶ್ರೇಷ್ಠವಾದುದು.
ತೇ ತ್ರಯಃ ಕಾಲಯೋಗೇನ ಕುಮಾರಾಃ ಜನಮೇಜಯ |
ಅವರ್ಧಂತ ಮಹಾತ್ಮನೋ ನಂದಯಂತಃ ಸುಹೃಜ್ಜನಾನ್ ॥24॥
ಜನಮೇಜಯನೇ, ಆ ಮೂರು ಕುಮಾರರೂ ಕಾಲಯೋಗದಿಂದ ಸುಹೃದ್‌ಬಾಂಧವರನ್ನು ಸಂತೋಷಗೊಳಿಸುತ್ತಾ ಮಹಾತ್ಮರಾಗಿ ಬೆಳೆದರು.
ಸಂಸ್ಕಾರೈಃ ಸಂಸ್ಕೃತಾಸ್ತೇ ವೈ ವೃತ್ತೇನಾಧ್ಯಯನೇನ ಚ |
ಶ್ರಮವ್ಯಾಯಾಮಕುಶಲಾಃ ಸಮಪದ್ಯಂತ ಯೌವನಮ್ |
ಧನುರ್ವೇದೇ ಚ ಮುಷ್ಟೌ ಚ ಗದಾ ಯುದ್ಧೇಽಸಿಚರ್ಮಣಿ ॥25॥
ಅವರು ಎಲ್ಲಾ ಸಂಸ್ಕಾರಗಳಿಂದಲೂ ಸಂಸ್ಕೃತರಾಗಿ, ಒಳ್ಳೆಯ ನಡತೆಯಿಂದಲೂ, ಅಧ್ಯಯನದಿಂದಲೂ ಕೂಡಿದವರಾಗಿ, ಶ್ರಮಯುಕ್ತವಾದ ವ್ಯಾಯಾಮಗಳನ್ನು ಮಾಡುವುದರಲ್ಲಿ ಕುಶಲರಾಗಿ ಯೌವನವನ್ನು ಹೊಂದಿದರು. ಧನುರ್ವೇದದಲ್ಲಿಯೂ, ಮುಷ್ಟಿಯುದ್ಧದಲ್ಲಿಯೂ ಗದಾಯುದ್ಧದಲ್ಲಿಯೂ, ಖಡ್ಗಯುದ್ಧದಲ್ಲಿಯೂ ಪಾರಂಗತರಾದರು.
ತಥೈವ ಗಜಶಿಕ್ಷಾಯಾಂ ನೀತಿಶಾಸ್ತ್ರೇಷು ಪಾರಗಾಃ |
ಇತಿಹಾಸಪುರಾಣೇಷು ನಾನಾಶಾಸ್ತ್ರೇಷು ಪಾರಗಾಃ ॥26॥
ಹಾಗೆಯೇ ಗಜಶಿಕ್ಷೆಯಲ್ಲಿಯೂ, ನೀತಿಶಾಸ್ತ್ರಗಳಲ್ಲಿಯೂ, ಇತಿಹಾಸಪುರಾಣಗಳಲ್ಲಿಯೂ, ನಾನಾಶಾಸ್ತ್ರಗಳಲ್ಲಿಯೂ ಪಾರಂಗತ-ರಾದರು.
ವೇದವೇದಾಂಗತತ್ವಜ್ಞಾಃ ಸರ್ವತ್ರ ಚ ಕೃತಶ್ರಮಾಃ |
ಅತೀವ ಬಲವಾನಾಸೀದ್ ಧೃತರಾಷ್ಟ್ರೋಽಂಬಿಕಾಸುತಃ |
ಪಾಂಡುರ್ಧನುಷಿ ವಿಕ್ರಾಂತೋ ನರೇಷ್ವಭ್ಯಧಿಕೋಽಭವತ್ ॥27॥
ಅವರು ವೇದವೇದಾಂಗತತ್ತ್ವಜ್ಞರಾಗಿ ಎಲ್ಲಾ ವಿದ್ಯೆಗಳಲ್ಲಿಯೂ ಪರಿಶ್ರಮವನ್ನು ಪಡೆದವರಾದರು. ಅವರಲ್ಲಿ ಅಂಬಿಕಾತನಯನಾದ ಧೃತರಾಷ್ಟ್ರನು ಹೆಚ್ಚು ಬಲದಿಂದ ಕೂಡಿದವನಾಗಿದ್ದನು. ಧನುರ್ವಿದ್ಯೆಯಲ್ಲಿ ಪಾರಂಗತನಾದ ಪಾಂಡುವು ಮನುಷ್ಯರಲ್ಲಿ ಅಭ್ಯಧಿಕನೆನಿಸಿದನು.
ತ್ರಿಷು ಲೋಕೇಷು ನತ್ವಾಸೀತ್ ಪ್ರಾಣೀ ವಿದುರಸಮ್ಮಿತಃ |
ಧರ್ಮನಿತ್ಯೋ ಹಿ ಧರ್ಮಸ್ಯ ಬುದ್ಧ್ಯಾ ಚೈವ ಗತಿಂ ಗತಃ ॥28॥
ವಿದುರನಿಗೆ ಸಮಾನನಾದ ಧರ್ಮನಿತ್ಯನಾದ, ಧರ್ಮದ- ಬುದ್ಧಿಯಿಂದಲೇ ಎಲ್ಲಾ ಕೆಲಸಗಳನ್ನು ಮಾಡುತ್ತಿದ್ದ ವ್ಯಕ್ತಿಯು ಮೂರು ಲೋಕಗಳಲ್ಲೂ ಇರಲಿಲ್ಲ.
ಅಥ ಶುಶ್ರಾವ ವಿಪ್ರೇಭ್ಯೋ ದೇವಕಸ್ಯ ಮಹೀಪತೇಃ |
ರೂಪಯೌವನಸಂಪನ್ನಾಂ ಸುತಾಂ ಸಾಗರಗಾಸುತಃ ॥29॥
ಸುಬಲಸ್ಯ ಚ ಕಲ್ಯಾಣೀಂ ಗಾಂಧಾರಾಧಿಪತೇಃ ಸುತಾಮ್ |
ಸುತಾಂ ಚ ಮದ್ರರಾಜಸ್ಯ ರೂಪೇಣಾಪ್ರತಿಮಾಂ ಭುವಿ ॥30॥
ಅನಂತರ ಭೀಷ್ಮನು ದೇವಕರಾಜನ ಮಗಳು ರೂಪಯೌವನ- ಸಂಪನ್ನಳಾಗಿ ವಿವಾಹಕ್ಕೆ ಯೋಗ್ಯಳಾಗಿದ್ದಾಳೆ ಎಂಬ ವಿಷಯವನ್ನು ಬ್ರಾಹ್ಮಣರಿಂದ ಕೇಳಿದನು. ಹಾಗೆಯೇ, ಗಾಂಧಾರರಾಜನಾದ ಸುಬಲನ ಮಗಳೂ, ಹಾಗೆಯೇ, ಮದ್ರರಾಜನ ಮಗಳೂ ಸಹಾ ಭೂಮಿಯಲ್ಲಿ ಅಪ್ರತಿಮರೂಪದಿಂದ ಕೂಡಿದವರೆಂದು ಬ್ರಾಹ್ಮಣರಿಂದ ತಿಳಿದರು.
ಭೀಷ್ಮಃ
ಗುಣೈಃ ಸಮುದಿತಂ ನಿತ್ಯಮಿದಂ ನಃ ಪ್ರಥಿತಂ ಕುಲಮ್ |
ಅತ್ಯನ್ಯಾನ್ ಪೃಥಿವೀಪಾಲಾನ್ ಪೃಥಿವ್ಯಾಮಪಿ ರಾಜಕಾನ್ ॥31॥
ನಮ್ಮ ಈ ಪ್ರಸಿದ್ಧವಾದ ಕುಲವು ಯಾವಾಗಲೂ ಗುಣಗಳಿಂದ ಉನ್ನತಿಯನ್ನು ಹೊಂದಿದೆ. ಇಲ್ಲಿಯ ರಾಜರುಗಳು ತಮ್ಮ ಗುಣಗಳಿಂದ ಭೂಮಿಯಲ್ಲಿರುವ ಬೇರೆ ರಾಜರನ್ನು ಮೀರಿದ್ದಾರೆ.
ರಕ್ಷಿತಂ ರಾಜಭಿಃ ಪೂರ್ವೈರ್ಧರ್ಮನಿತ್ಯೈರ್ಮಹಾತ್ಮಭಿಃ |
ನೋತ್ಸಾದಮಗಮಚ್ಚೇದಂ ಕಥಂಚಿದಿಹ ನಃ ಕುಲಮ್ ॥32॥
ಪೂರ್ವದಲ್ಲಿ ಧರ್ಮನಿತ್ಯರಾದ, ಮಹಾತ್ಮರಾದ, ರಾಜರಿಂದ ರಕ್ಷಿಸಲ್ಪಟ್ಟ ಈ ನಮ್ಮ ಕುಲವು ಯಾವ ರೀತಿಯಲ್ಲಿಯೂ ನಾಶವನ್ನು ಹೊಂದಲಿಲ್ಲ.
ಮಯಾ ಚ ಸತ್ಯವತ್ಯಾ ಚ ಕೃಷ್ಣೇನ ಚ ಮಹಾತ್ಮನಾ |

ಸಮವಸ್ಥಾಪಿತಂ ಭೂಯೋ ಯುಷ್ಮಾಸು ಕುಲತಂತುಷು ॥33॥
ವೇದವ್ಯಾಸರು, ಸತ್ಯವತೀ ಮತ್ತು ನಾನು, ಈ ಮೂವರೂ ಸೇರಿ ಈ ಕುಲವನ್ನು, ಕುಲದ ತಂತುಗಳಾದ ನಿಮ್ಮಲ್ಲಿ ಸ್ಥಾಪಿಸಿದ್ದೇವೆ.
ವರ್ಧೇತ ತದಿದಂ ಪುತ್ರ ಕುಲಂ ಸಾಗರವದ್ ಯಥಾ |
ತಥಾ ಮಯಾ ವಿಧಾತವ್ಯಂ ತ್ವಯಾ ಚೈವ ವಿಶೇಷತಃ ॥34॥
ಪುತ್ರನೇ, ಈ ನಮ್ಮ ಕುಲವು ಸಾಗರದಂತೆ ಅಭಿವೃದ್ಧಿಯನ್ನು ಹೊಂದುವಂತೆ ನಾನು ಮತ್ತು ನೀವು ವಿಶೇಷವಾದ ಪ್ರಯತ್ನವನ್ನು ಮಾಡಬೇಕು.
ಶ್ರೂಯತೇ ಯಾದವೀ ಕನ್ಯಾ ಹ್ಯನುರೂಪಾ ಕುಲಸ್ಯ ನಃ |
ಸುಬಲಸ್ಯಾತ್ಮಜಾ ಚೈವ ತಥಾ ಮದ್ರೇಶ್ವರಸ್ಯ ಚ ॥35॥
ಯಾದವಕನ್ಯೆಯಾದ ಕುಂತಿಯೂ, ಸುಬಲನ ಮಗಳಾದ ಗಾಂಧಾರಿಯೂ, ಮದ್ರೇಶ್ವರನ ಮಗಳಾದ ಮಾದ್ರಿಯೂ ಸಹ ನಮ್ಮ ಕುಲಕ್ಕೆ ಅನುರೂಪರಾದವರೆಂದು ಕೇಳಿ ಬರುತ್ತಿದೆ.
ಕುಲೀನಾ ರೂಪವತ್ಯಶ್ಚ ನಾಥವತ್ಯಶ್ಚ ಸರ್ವಶಃ |
ಉಚಿತಾಶ್ಚೈವ ಸಂಬಂಧೇ ತೇಽಸ್ಮಾಕಂ ಕ್ಷತ್ರಿಯೋತ್ತಮಾಃ ॥36॥
ಕ್ಷತ್ರಿಯೋತ್ತಮರಾದ ಆ ಕನ್ಯೆಯರೆಲ್ಲರೂ, ಸತ್ಕುಲದಲ್ಲಿ ಜನಿಸಿದವರು, ರೂಪವತಿಯರು, ನಾಥರಾದ ತಂದೆ, ಅಣ್ಣಂದಿರನ್ನು ಹೊಂದಿದವರು ಮತ್ತು ನಮ್ಮ ಸಂಬಂಧಕ್ಕೆ ಯೋಗ್ಯರಾದವರು.
ಮನ್ಯೇ ವರಯಿತವ್ಯಾಸ್ತಾ ಇತ್ಯಹಂ ಧೀಮತಾಂ ವರ |
ಸಮಾನಾರ್ಥಾಃ ಕುಲಸ್ಯಾಸ್ಯ ಯದ್ವಾ ವಿದುರ ಮನ್ಯಸೇ ॥37॥
ಮೇಧಾವಿಯಾದವರಲ್ಲಿ ಶ್ರೇಷ್ಠನೇ, ನಾನು ಕುಲಕ್ಕಾಗಿ ಅವರನ್ನು ವರಿಸಬೇಕೆಂದು ಭಾವಿಸುತ್ತೇನೆ. ಅವರು ನಮ್ಮ ಕುಲಕ್ಕೆ ಸಮಾನವಾದ ಪ್ರಯೋಜನವನ್ನು ತಂದು ಕೊಡುವರು. ಎಲೈ ವಿದುರನೇ, ಅಥವಾ ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?
ವಿದುರಃ
ಭವಾನ್ ಪಿತಾ ಭವಾನ್ಮಾತಾ ಭವಾನ್ ನಃ ಪರಮೋ ಗುರುಃ |
ತಸ್ಮಾತ್ ಸ್ವಯಂ ಕುಲಸ್ಯಾಸ್ಯ ವಿಚಾರ್ಯ ಕುರು ಯದ್ ಹಿತಮ್ ॥
ನೀವೇ ತಂದೆ. ನೀವೇ ನಮ್ಮ ತಾಯಿ. ನೀವೇ ನಮ್ಮ ಶ್ರೇಷ್ಠರಾದ ಗುರುಗಳು. ಆದ್ದರಿಂದ ನಮ್ಮ ಕುಲಕ್ಕೆಯಾವುದು ಹಿತ ಎಂದು ಸ್ವಯಂ ವಿಚಾರ ಮಾಡಿ ಅದರಂತೆ ನಡೆಯಿರಿ.
ವೈಶಂಪಾಯನಃ
ಅಥ ಶುಶ್ರಾವ ವಿಪ್ರೇಭ್ಯೋ ಗಾಂಧಾರೀಂ ಸುಬಲಾತ್ಮಜಾಮ್ |
ಆರಾಧ್ಯ ವರದಂ ದೇವಂ ಭಗನೇತ್ರಹರಂ ಹರಮ್ |
ಗಾಂಧಾರೀ ಕಿಲ ಪುತ್ರಾಣಾಂ ಶತಂ ಲೇಭೇ ವರಂ ಪುರಾ ॥39॥
ಆ ಸಮಯಕ್ಕೆ ಸರಿಯಾಗಿ ಸುಬಲನ ಮಗಳಾದ ಗಾಂಧಾರಿಯು ಈಶ್ವರನನ್ನು ಆರಾಧಿಸಿ ನೂರು ಮಕ್ಕಳನ್ನು ಪಡೆಯಬೇಕೆಂಬ ವರವನ್ನು ಪಡೆದಿದ್ದಾಳೆ ಎಂಬ ವಿಷಯವನ್ನು ಭೀಷ್ಮರು ಬ್ರಾಹ್ಮಣರಿಂದ ಕೇಳಿ ತಿಳಿದರು
ಇತಿ ಶ್ರುತ್ವಾ ಚ ತತ್ತ್ವೇನ ಭೀಷ್ಮಃ ಕುರುಪಿತಾಮಹಃ |
ತತೋ ಗಾಂಧಾರರಾಜಸ್ಯ ಪ್ರೇಷಯಾಮಾಸ ಕೌರವಃ |
ಅಚಕ್ಷುರಿತಿ ತಸ್ಯಾಸೀತ್ ಸುಬಲಸ್ಯ ವಿಚಾರಣಾ ॥40॥
ಕುರುಪಿತಾಮಹರಾದ ಭೀಷ್ಮರು ಇದನ್ನು ಯಥಾರ್ಥವಾಗಿ ತಿಳಿದು ಗಾಂಧಾರ ರಾಜನ ಬಳಿಗೆ ತಮ್ಮ ದೂತನನ್ನು ಕಳುಹಿಸಿದರು. ಸುಬಲನು ಧೃತರಾಷ್ಟ್ರನು ನೇತ್ರಹೀನನೆಂದು ವಿಚಾರ ಮಾಡುತ್ತಿದ್ದನು.
ಬಲಖ್ಯಾತಿಂ ಚ ವೃದ್ಧಿಂ ಚ ಬುದ್ಧ್ವಾ ತು ಪ್ರಸಮೀಕ್ಷ್ಯ ಚ |
ದದೌ ತಾಂ ಧೃತರಾಷ್ಟ್ರಾಯ ಗಾಂಧಾರೀಂ ಧರ್ಮಚಾರಿಣೀಮ್ ॥41॥
ಆದರೆ ಬಲದ ಪ್ರಸಿದ್ಧಿಯನ್ನೂ, ರಾಜ್ಯದ ಸಮೃದ್ಧಿಯನ್ನೂ, ಬುದ್ಧಿಯಿಂದ ವಿವೇಚಿಸಿ ಧರ್ಮಚಾರಿಣಿಯಾದ ಗಾಂಧಾರಿಯನ್ನು ಧೃತರಾಷ್ಟ್ರನಿಗೆ ಕೊಟ್ಟನು. (ಕೊಡಲು ಇಚ್ಛಿಸಿದನು)
ಗಾಂಧಾರೀ ತ್ವಥ ಶುಶ್ರಾವ ಧೃತರಾಷ್ಟ್ರಂ ತ್ವಚಕ್ಷುಷಮ್ |
ಆತ್ಮಾನಂ ದಿತ್ಸಿತಾಂ ತತ್ರ ಪಿತುರ್ಮಾತುಶ್ಚ ಕೌರವ ॥42॥
ಎಲೈ ಕೌರವನೇ ಗಾಂಧಾರಿಯು ತನ್ನನ್ನು ನೇತ್ರಹೀನನಾದ ಧೃತರಾಷ್ಟ್ರನಿಗೆ ಕೊಡುವುದಾಗಿ ತಂದೆ ಮತ್ತು ತಾಯಿಗೆ ಅಭಿಪ್ರಾಯವಿದೆ ಎಂದು ತಿಳಿದಳು.
ತತಃ ಸಾ ಪಟ್ಟಮಾನಾಯ್ಯ ಕೃತ್ವಾ ಬಹುಗುಣಂ ಶುಭಾ |
ನ ಪಶ್ಯತೀತಿ ಭರ್ತಾ ಮೇ ವೇಷ್ಟಯಾಮಾಸ ಚಕ್ಷುಷೀ |
ನಾತ್ಯಶ್ನೀಯಾಂ ಪತಿಮಹಮಿತ್ಯೇವಂ ಕೃತನಿಶ್ಚಯಾ ॥43॥
ಆಗ ಅವಳು ಒಂದು ರೇಷ್ಮೆ ವಸ್ತ್ರವನ್ನು ತರಿಸಿ ಅನೇಕ ಬಾರಿ ಅದನ್ನು ಮಡಿಸಿ, ನನ್ನ ಪತಿಯು ನೋಡುವುದಿಲ್ಲ ಎಂಬ ಕಾರಣದಿಂದ ಆ ವಸ್ತ್ರವನ್ನು ಶುಭಳಾದ ಅವಳು ತನ್ನ ಕಣ್ಣುಗಳಿಗೆ ಕಟ್ಟಿಕೊಂಡಳು. ನನ್ನ ಪತಿಯು ಭೋಗಿಸದಿದ್ದ ವಸ್ತುವನ್ನು ನಾನು ಭೋಗಿಸುವುದಿಲ್ಲ ಎಂಬ ಅವಳ ನಿಶ್ಚಯವು ದೃಢವಾಗಿತ್ತು.
ತತೋ ಗಾಂಧಾರರಾಜಸ್ಯ ಸುತಃ ಶಕುನಿರಾವ್ರಜತ್ |
ಸ್ವಸಾರಂ ಪರಯಾ ಲಕ್ಷ್ಮ್ಯಾ ಯುಕ್ತಾಮಾದಾಯ ಕೌರವ ॥44॥

ಎಲೈ ಕೌರವನೇ, ಅನಂತರ ಗಾಂಧಾರರಾಜನ ಮಗನಾದ ಶಕುನಿಯು ಬಹಳ ಸಂಪತ್ತಿನ ಜೊತೆಯಲ್ಲಿ ಕರೆದುಕೊಂಡು ಹಸ್ತಿನಪುರಕ್ಕೆ ಬಂದನು.
ತತೋ ವಿವಾಹಂ ಚಕ್ರೇಸ್ಯಾ ನಕ್ಷತ್ರೇ ಸರ್ವಸಮ್ಮತೇ |
ಸೌಬಲಃ ಸ ಮಹಾರಾಜಃ ಶಕುನಿಃ ಪ್ರಿಯದರ್ಶನಃ ॥45॥
ಅನಂತರ ಸರ್ವಸಮ್ಮತವಾದ ಶುಭನಕ್ಷತ್ರ ಮುಹೂರ್ತದಲ್ಲಿ ಸುಬಲಪುತ್ರನೂ, ಪ್ರಿಯದರ್ಶನನೂ ಆದ ಶಕುನಿಯು, ತಂಗಿಯ ವಿವಾಹವನ್ನು ಮಾಡಿದನು.
ದತ್ವಾ ಸ್ವಭಗಿನೀಂ ತತ್ರ ಯಥಾರ್ಹಂ ಚ ಪರಿಚ್ಛದಮ್ |
ಪುನರಾಗಾತ್ ಸ್ವನಗರಂ ಭೀಷ್ಮೇಣ ಪರಿಪೂಜಿತಃ ॥46॥
ತಂಗಿಯನ್ನು ವಿವಾಹ ಮಾಡಿಕೊಟ್ಟು ಯಥಾಯೋಗ್ಯವಾದ ಉಡುಗೊರೆಗಳನ್ನೂ ಕೊಟ್ಟು ಭೀಷ್ಮರಿಂದ ಪೂಜಿತನಾಗಿ ತನ್ನ ನಗರಕ್ಕೆ ಹಿಂದಿರುಗಿದನು.
ಗಾಂಧಾರ್ಯಪಿ ವರಾರೋಹಾ ಶೀಲಾಚಾರವಿಚೇಷ್ಟಿತೈಃ |
ತುಷ್ಟಿಂ ಕುರೂಣಾಂ ಸರ್ವೇಷಾಂ ಜನಯಾಮಾಸ ಭಾರತ ॥47॥
ಎಲೈ ಭಾರತನೇ, ಸುಂದರಿಯಾದ ಗಾಂಧಾರಿಯೂ ಕೂಡ ತನ್ನ ಶೀಲ, ಆಚಾರ ಮತ್ತು ಚೇಷ್ಟೆಗಳಿಂದ ಎಲ್ಲಾ ಕುರುಗಳಿಗೂ ಸಂತೋಷವನ್ನು ಉಂಟುಮಾಡಿದಳು.
ಗಾಂಧಾರೀ ಸ ಪತಿಂ ದೃಷ್ಟ್ವಾ ಪ್ರಜ್ಞಾಚಕ್ಷುಷಮೀಶ್ವರಮ್ |
ಅತಿಚಾರಾದ್ ಭೃಶಂ ಭೀತಾ ಭರ್ತುಃ ಸಾ ಸಮಚಿಂತಯತ್ |
ಸಾ ದೃಷ್ಟಿವಿನಿವೃತ್ತಾ ಹಿ ಭರ್ತುಸ್ತು ಸಮತಾಮಯಾತ್ ॥48॥
ತನ್ನ ಪತಿಯು ಪ್ರಜ್ಞಾನೇತ್ರನಾಗಿರುವವನು ಎಂದು ತಿಳಿದ ಗಾಂಧಾರಿಯು ಯಾವ ವಿಷಯದಲ್ಲಿಯೂ ಅವನನ್ನು ಅತಿಕ್ರಮಿಸುವುದಕ್ಕೆ ಹೆದರಿ ಮನಸ್ಸಿನಲ್ಲಿ ಚಿಂತಿಸಿ ತನ್ನ ದೃಷ್ಟಿಯನ್ನೂ ವಸ್ತ್ರದಿಂದ ಆಚ್ಛಾದನೆ ಮಾಡಿ ತನ್ನ ಪತಿಗೆ ಸಮಾನಳಾದಳು.
ನಹಿ ಸೂಕ್ಷ್ಮೇಽಪ್ಯತೀಚಾರೇ ಭರ್ತುಃ ಸಾ ವವೃತೇ ತದಾ |
ವೃತ್ತೇನಾರಾಧ್ಯ ತಾನ್ ಸರ್ವಾನ್ ಪತಿವ್ರತಪರಾಯಣಾ |
ವಾಚಾಽಪಿ ಪುರುಷಾನನ್ಯಾನ್ ಸ್ವಜನಾನ್ ನಾನುಕೀರ್ತಯತ್ ॥49॥
ಗಾಂಧಾರಿಯು ಅತ್ಯಂತ ಸೂಕ್ಷ್ಮವಾದ ವಿಷಯದಲ್ಲಿಯೂ ಎಂದೂ ತನ್ನ ಪತಿಯನ್ನು ಮೀರಲಿಲ್ಲ. ಪತಿವ್ರತಾ ಪರಾಯಣೆಯಾದ ಅವಳು ತನ್ನ ನಡತೆಯಿಂದ ಎಲ್ಲರನ್ನೂ ಸಂತೋಷಪಡಿಸಿದಳು. ಅವಳು ಬಾಯಿಂದಲೂ ಸಹ ಪರಪುರುಷನ ಹೆಸರನ್ನಾಗಲೀ, ಸ್ವಜನರ ಹೆಸರನ್ನಾಗಲೀ ಹೇಳುತ್ತಿರಲಿಲ್ಲ.
ತಸ್ಯಾಃ ಸಹೋದರಾಃ ಕನ್ಯಾಃ ಭೀಷ್ಮೇಣ ಪರಿಪೂಜಿತಾಃ |
ಗಾಂಧಾರರಾಜಃ ಸುಬಲೋ ಭೀಷ್ಮೇಣ ವರಿತಸ್ತದಾ ॥50॥
ಭೀಷ್ಮರು ಅವಳ ತಂಗಿಯರಾದ ಕನ್ಯೆಯರನ್ನು ಪೂಜಿಸಿ ಗಾಂಧಾರರಾಜನಾದ ಸುಬಲನನ್ನು ಕೇಳಿ ಧೃತರಾಷ್ಟ್ರನ ಸಲುವಾಗಿ ಅವರನ್ನೂ ವರಿಸಿದನು.
ಸತ್ಯವ್ರತಾಂ ಸತ್ಯಸೇನಾಂ ಸುಷೇಣಾಂ ಚ ಸುಸಂಹಿತಾಮ್ |
ತೇಜಶ್ರವಾಂ ಸ್ವಶ್ರವಾಂ ಚ ನಭೋರ್ವೀಂ ನಿಷ್ಕೃತಿಂ ತಥಾ ॥51॥
ಸಂಭವಾಂ ಚ ದಶಾರ್ಣಾಂ ಚ ಗಾಂಧಾರೀಂ ದಶ ವಿಶ್ರುತಾಃ |
ಏಕಾಹ್ನಾ ಚೋಪಯೇಮೇ ತಾ ಧೃತರಾಷ್ಟ್ರೋ ಜನೇಶ್ವರಃ ॥52॥
ತತಃ ಶಾಂತನವೋ ಭೀಷ್ಮೋ ಧನುಃಕ್ರೀತಾಸ್ತತಸ್ತತಃ |
ಆಹರದ್ ಧೃತರಾಷ್ಟ್ರಾಯ ರಾಜಪುತ್ರೀಸ್ತತಃ ಶತಮ್ ॥53॥
ಸತ್ಯವತಾ, ಸತ್ಯಸೇನಾ, ಸುಷೇಣಾ, ಸುಸಂಹಿತಾ, ತೇಜಶ್ರವಾ, ಸ್ವಶ್ರವಾ, ನಭೋರ್ವೀ, ನಿಷ್ಕೃತಿ, ಸಂಭವಾ, ದಶಾರ್ಣಾ ಹೀಗೆ ಗಾಂಧಾರಿಯೊಡನೆ ಆ ಹತ್ತು ಕನ್ಯೆಯರು ಪ್ರಸಿದ್ಧರಾದವರು. ಅವರನ್ನು ಧೃತರಾಷ್ಟ್ರರಾಜನು ಒಂದೇ ದಿವಸ ಮದುವೆಯಾದನು. ಅನಂತರ ಶಂತನುವಿನ ಮಗನಾದ ಭೀಷ್ಮನು ಧನುಸ್ಸಿನ ಬಲದಿಂದ ಗೆದ್ದು ಬೇರೆ ಬೇರೆ ನೂರು ರಾಜಪುತ್ರಿಯರನ್ನು ತಂದು ಧೃತರಾಷ್ಟ್ರನಿಗೆ ವಿವಾಹವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ನವಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಒಂಭತ್ತನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ಶೂರಸ್ಯ ಪುತ್ರೀ ಗುಣಶೀಲರೂಪ-
ಯುಕ್ತಾ ದತ್ತಾ ಸಖ್ಯುರೇವ ಸ್ವಪಿತ್ರಾ |
ನಾಮ್ನಾ ಪೃಥಾ ಕುಂತಿಭೋಜಸ್ಯ ತೇನ
ಕುಂತೀ ಭಾರ್ಯಾ ಪೂರ್ವದೇಹೇಽಪಿ ಪಾಂಡೋಃ ॥148॥
ಶೂರರಾಜನ ಮಗಳು ಪೃಥೆ, ಗುಣಶೀಲ ರೂಪಯುಕ್ತಳು. ಅವಳನ್ನು ತಂದೆಯಾದ ಶೂರ ತನ್ನ ಮಿತ್ರನಾದ ಕುಂತಿಭೋಜನಿಗೆ

ದತ್ತುಕೊಟ್ಟ. ಅದರಿಂದ ಕುಂತಿ ಎನಿಸಿದ ಪೃಥೆ ಪೂರ್ವಜನ್ಮದಲ್ಲಿಯೂ ಪಾಂಡುವಿನ ಪತ್ನಿಯಾಗಿದ್ದಳು.
ಕೂರ್ಮಶ್ಚ ನಾಮ್ನಾ ಮರುದೇವ ಕುಂತಿ-
ಭೋಜೋಽಥೈನಾಂ ವರ್ಧಯಾಮಾಸ ಸಮ್ಯಕ್ |
ತತ್ರಾಗಮಚ್ಛಂಕರಾಂಶೋಽತಿಕೋಪೋ
ದುರ್ವಾಸಾಸ್ತಂ ಪ್ರಾಹ ಮಾಂ ವಾಸಯೇತಿ ॥149॥
ಕುಂತಿಭೋಜ ಮೂಲರೂಪದಲ್ಲಿ ಕೂರ್ಮನೆಂಬ ಮರುತ. ಈ ಕುಂತಿಭೋಜ ಕುಂತಿಯನ್ನು ಚೆನ್ನಾಗಿ ಬೆಳೆಸಿದ. ಅಲ್ಲಿಗೆ ಅತಿ ಕೋಪಿಯಾದ ಶಂಕರಾಂಶನಾದ ದುರ್ವಾಸ ಮುನಿ ಬಂದ. ನನಗೆ ವಾಸಕ್ಕೆ ಏರ್ಪಾಡು ಮಾಡು ಎಂದ.
ತಮಾಹ ರಾಜಾ ಯದಿ ಕನ್ಯಕಾಯಾಃ
ಕ್ಷಮಿಷ್ಯಸೇ ಶಕ್ತಿತಃ ಕರ್ಮಕರ್ತ್ರ್ಯಾಃ |
ಸುಖಂ ವಸೇತ್ಯೋಮಿತಿ ತೇನ ಚೋಕ್ತೇ
ಶುಶ್ರೂಷಣಾಯಾದಿಶದಾಶು ಕುಂತೀಮ್ ॥150॥
ರಾಜ ಮುನಿಗೆ ಹೇಳಿದ, `ನನ್ನ ಮಗಳು ಶಕ್ತ್ಯಾನುಸಾರ ಸೇವೆ ಮಾಡುತ್ತಾಳೆ. ನ್ಯೂನಾತಿರೇಕಗಳಾದಲ್ಲಿ ನೀನು ಸಹಿಸುವುದಾದರೆ ವಾಸಮಾಡು'. `ಆಗಲಿ' ಎಂದ ಮುನಿ. ಬಳಿಕ ರಾಜ ಮುನಿಯ ಸೇವೆಗೆ ಕುಂತಿಯನ್ನು ನೇಮಿಸಿದ.
ಚಕಾರ ಕರ್ಮ ಸಾ ಪೃಥಾ ಮುನೇಃ ಸುಕೋಪನಸ್ಯ ಹಿ |
ಯಥಾ ನ ಶಕ್ಯತೇ ಪರೈಃ ಶರೀರವಾಙ್ಮನೋಽನುಗಾ ॥151॥
ಪೃಥೆ ಶೀಘ್ರಕೋಪಿಯಾದ ಮುನಿಗೆ ಶರೀರ ಮಾತು ಮನಸ್ಸುಗಳಲ್ಲಿ ಅನುವರ್ತಿನಿಯಾಗಿ ಬೇರೆಯವರಿಂದ ಮಾಡಲು ಶಕ್ಯವಾಗದಂಥ ರೀತಿಯಲ್ಲಿ ಸೇವೆ ಮಾಡಿದಳು.
ಸ ವತ್ಸರತ್ರಯೋದಶಂ ತಯಾ ಯಥಾವದರ್ಚಿತಃ |
ಉಪಾದಿಶತ್ ಪರಂ ಮನುಂ ಸಮಸ್ತದೇವವಶ್ಯದಮ್ ॥152॥
ಹದಿಮೂರು ವರ್ಷದ ತನಕ ಪೂರ್ತಿಯಾಗಿ ಕುಂತಿಯಿಂದ ಚೆನ್ನಾಗಿ ಸೇವಿಸಲ್ಪಟ್ಟ ಮುನಿ ಅವಳಿಗೆ ಎಲ್ಲ ದೇವತೆಗಳನ್ನು ವಶೀಕರಿಸುವ ಶಕ್ತಿ ನೀಡಬಲ್ಲ ಉತ್ತಮ ಮಂತ್ರವನ್ನು ಉಪದೇಶಿಸಿದ.
ಋತೌ ತು ಸಾ ಸಮಾಪ್ಲುತಾ ಪರೀಕ್ಷಣಾಯ ತನ್ಮನೋಃ |
ಸಮಾಹ್ವಯದ್ ದಿವಾಕರಂ ಸ ಚಾಜಗಾಮ ತತ್ಕ್ಷಣಾತ್ ॥153॥
ಋತುಕಾಲದಲ್ಲಿ ಕುಂತಿ ಸುಸ್ನಾತಳಾಗಿ ಆ ಮಂತ್ರದ ಪರೀಕ್ಷೆಗಾಗಿ ಸೂರ್ಯನನ್ನು ಕರೆದಳು. ಅವನು ತಕ್ಷಣವೆ ಬಂದ.
ತತೋ ನ ಸಾ ವಿಸರ್ಜಿತುಂ ಶಶಾಕ ತಂ ವಿನಾ ರತಿಮ್ |
ಸುವಾಕ್ ಪ್ರಯತ್ನತೋಽಪಿ ತಾಮಥಾಸಸಾದ ಭಾಸ್ಕರಃ ॥154॥
ಒಳ್ಳೆಯ ಮಾತು ಪ್ರಯತ್ನಗಳಿಂದ ಕುಂತಿ ಆಗ ರತಿಕ್ರೀಡೆಯಿಲ್ಲದೆ ಸೂರ್ಯನನ್ನು ಹಿಂದೆ ಕಳಿಸಲು ಶಕ್ತಳಾಗಲಿಲ್ಲ. ಸೂರ್ಯ ಅವಳನ್ನು ಕೂಡಿದ.
ಸ ತತ್ರ ಜಜ್ಞವಾನ್ ಸ್ವಯಂ ದ್ವಿತೀಯರೂಪಕೋ ವಿಭುಃ |
ಸವರ್ಮದಿವ್ಯಕುಂಡಲೋ ಜ್ವಲನ್ನಿವ ಸ್ವತೇಜಸಾ ॥155॥
ಕವಚ ದಿವ್ಯಕುಂಡಲಗಳಿಂದ ಯುಕ್ತನಾಗಿ ತನ್ನ ತೇಜಸ್ಸಿನಿಂದ ಜ್ವಲಿಸುವಂತೆ ಕಾಣುತ್ತ ಇನ್ನೊಂದು ರೂಪದಿಂದ ಸೂರ್ಯ ಸ್ವಯಂ ಕುಂತಿಯಲ್ಲಿ ಜನಿಸಿದ.
ಪುರಾ ಸ ವಾಲಿಮಾರಣಪ್ರಭೂತದೋಷಕಾರಣಾತ್ |
ಸಹಸ್ರವರ್ಮನಾಮಿನಾಸುರೇಣ ವೇಷ್ಟಿತೋಽಜನಿ ॥156॥
ಹಿಂದೆ ಸುಗ್ರೀವನಾಗಿ ವಾಲಿಯನ್ನು ಕೊಲ್ಲಿಸಿದ್ದರಿಂದ ಉಂಟಾದ ಪಾಪದಿಂದ ಈಗ ಸಹಸ್ರವರ್ಮನೆಂಬ ಹೆಸರಿನ ಅಸುರನಿಂದ ಆವಿಷ್ಟನಾಗಿ ಜನಿಸಿದ.
ಯಥಾ ಗ್ರಹೈರ್ವಿದೂಷ್ಯತೇ ಮತಿರ್ನೃಣಾಂ ತಥೈವ ಹಿ |
ಅಭೂಚ್ಚ ದೈತ್ಯದೂಷಿತಾ ಮತಿರ್ದಿವಾಕರಾತ್ಮನಃ ॥157॥
ಮನುಷ್ಯರ ಬುದ್ಧಿ ಪಿಶಾಚಾವೇಶದಿಂದ ಹೇಗೆ ಕೆಡುವುದೋ ಹಾಗೆಯೇ ಸೂರ್ಯ ಸ್ವರೂಪನಾದ ಕರ್ಣನ ಬುದ್ಧಿಯೂ ದೈತ್ಯನ ಆವೇಶದಿಂದ ಕೆಟ್ಟಿತು.
ತಥಾಪಿ ರಾಮಸೇವನಾದ್ಧರೇಶ್ಚ ಸನ್ನಿಧಾನಯಕ್ |
ಸುದರ್ಶನೀಯಕರ್ಣತಃ ಸ ಕರ್ಣನಾಮಕೋಽಭವತ್ ॥158॥
ಆದರೂ ಶ್ರೀರಾಮನಿಗೆ ಸುಗ್ರೀವಾವತಾರದಲ್ಲಿ ಸೇವೆ ಮಾಡಿದ್ದರಿಂದ ಹರಿಯ ಸನ್ನಿಧಾನ ಪಾತ್ರನಾದ. ಸುಂದರವಾದ ಕಿವಿ ಉಳ್ಳವನಾದ್ದರಿಂದ ಕರ್ಣನಾಮಕನಾದ.
ಸ ರತ್ನಪೂರ್ಣಮಂಜುಷಾಗತೋ ವಿಸರ್ಜಿತೋ ಜಲೇ |
ಜನಾಪವಾದಭೀತಿತಸ್ತಯಾ ಯಮಸ್ವಸುರ್ದ್ರುತಮ್ ॥159॥
ಕುಂತಿ ಜನಾಪವಾದ ಭೀತಿಯಿಂದ ಕರ್ಣನನ್ನು ರತ್ನಗಳಿಂದ ತುಂಬಿದ ಪೆಟ್ಟಿಗೆಯಲ್ಲಿ ಇಟ್ಟು ಬೇಗನೆ ಯಮುನೆಯ ಜಲದಲ್ಲಿ ಬಿಟ್ಟಳು.
ನದೀಪ್ರವಾಹತೋ ಗತಂ ದದರ್ಶ ಸೂತನಂದನಃ |
ತಮಗ್ರಹೀತ್ ಸರತ್ನಕಂ ಚಕಾರ ಪುತ್ರಕಂ ನಿಜಮ್ ॥160॥

ನದೀಪ್ರವಾಹದಲ್ಲಿ ತೇಲಿ ಹೋದ ಕರ್ಣನನ್ನು ಒಬ್ಬ ಸೂತಪುತ್ರ ಕಂಡ. ರತ್ನಗಳ ಸಮೇತವಾಗಿ ಅವನನ್ನು ಎತ್ತಿಕೊಂಡ. ತನ್ನ ಮಗನನ್ನಾಗಿ ಮಾಡಿಕೊಂಡ.
ಸೂತೇನಾಧಿರಥೇನ ಲಾಳಿತತನುಸ್ತದ್ಭಾರ್ಯಯಾ ರಾಧಯಾ
ಸಂವೃದ್ಧೋ ನಿಖಿಲಾಃ ಶ್ರುತೀರಧಿಜಗೌ ಶಾಸ್ತ್ರಾಣಿ ಸರ್ವಾಣಿ ಚ |
ಬಾಲ್ಯಾದೇವ ಮಹಾಬಲೋ ನಿಜಗುಣೈಃ ಸಂಭಾಸಮಾನೋಽವಸನ್-
ನಾಮ್ನಾಸೌ ವಸುಷೇಣತಾಮಗಮದಸ್ಯಾಽಸೀದ್ಧ್ಯಮಾ ತದ್ ವಸು ॥
ಕರ್ಣನನ್ನು ಸೂತನಾದ ಅಧಿರಥ ಲಾಲಿಸಿದ. ಅವನ ಹೆಂಡತಿ ರಾಧೆ ಬೆಳೆಸಿದಳು. ಎಲ್ಲ ವೇದಗಳನ್ನೂ ಎಲ್ಲ ಶಾಸ್ತ್ರಗಳನ್ನೂ ಕರ್ಣ ಅಧ್ಯಯನ ಮಾಡಿದ. ಬಾಲ್ಯದಿಂದಲೆ ಮಹಾಬಲಿಷ್ಠನಾಗಿದ್ದು ತನ್ನ ಔದಾರ್ಯಾದಿಗುಣಗಳಿಂದ ಪ್ರಕಾಶಿಸುತ್ತಾ ವಾಸಮಾಡಿದ. `ವಸು' ಅಂದರೆ ಸಂಪತ್ತು ಅವನ ಸಮೀಪದಲ್ಲಿ ಜೊತೆಗೇ ಇದ್ದಿತು. ಅದರಿಂದ ಅವನು `ವಸುಷೇಣ' ಎಂಬ ಹೆಸರನ್ನು ಪಡೆದ.
* * * *

ನೂರ ಹತ್ತನೆಯ ಅಧ್ಯಾಯ
(ಕುಂತಿಯ ಪೂರ್ವವೃತ್ತಾಂತ, ದುರ್ವಾಸರ ಮಂತ್ರೋಪದೇಶ, ಕರ್ಣನ ಉತ್ಪತ್ತಿ ಮತ್ತು ಪರಿತ್ಯಾಗ. ದಾಶರಾಜನಿಂದ ಕರ್ಣನ ಸ್ವೀಕಾರ ಮತ್ತು ಸಂಕ್ಷೇಪವಾಗಿ ಕರ್ಣನ ಚರಿತ್ರೆ.)
ವೈಶಂಪಾಯನಃ
ಶೂರೋ ನಾಮ ಯದುಶ್ರೇಷ್ಠೋ ವಸುದೇವಪಿತಾಽಭವತ್ |
ತಸ್ಯ ಕನ್ಯಾ ಪೃಥಾ ನಾಮ ರೂಪೇಣಾಸದೃಶೀ ಭುವಿ ॥1॥
ವಸುದೇವನ ತಂದೆಯು ಶೂರ ಎಂಬ ಹೆಸರಿನ ಯದುಶ್ರೇಷ್ಠನಾಗಿದ್ದನು. ಅವನ ಮಗಳಾದ ಪೃಥೆಯು ಭೂಮಿಯಲ್ಲಿ ಅಸದೃಶ ರೂಪವುಳ್ಳವಳಾಗಿದ್ದಳು.
ಪೈತೃಷ್ವಸೇಯಾಯ ತತಃ ಸೋಽನಪತ್ಯಾಯ ವೀರ್ಯವಾನ್ |
ಅಗ್ರಮಗ್ರೇ ಪ್ರತಿಜ್ಞಾಯ ಸ್ವಸ್ಯಾಪತ್ಯಂ ಚ ವೀರ್ಯವಾನ್ ॥2॥
ಅಗ್ರಜಾತಾಂ ತು ತಾಂ ಕನ್ಯಾಮಗ್ರಾನುಗ್ರಹಕಾಂಕ್ಷಯಾ |
ಅದದಾತ್ ಕುಂತಿಭೋಜಾಯ ಶೂರೋ ಗೋಪತಯೇ ಸುತಾಮ್ ॥
ವೀರ್ಯವಂತನಾದ ಶೂರನು ತನ್ನ ಮಗಳನ್ನು ಮಕ್ಕಳಿಲ್ಲದಿರುವ ತನ್ನ ತಂದೆಯ ತಂಗಿಯ ಮಗನಿಗೆ ಕೊಡುವುದಾಗಿ ಮಗಳು ಹುಟ್ಟುವುದಕ್ಕಿಂತ ಮುಂಚೆಯೇ ಪ್ರತಿಜ್ಞೆ ಮಾಡಿದ್ದನು. ಅನಂತರ ಮೊದಲು ಹುಟ್ಟಿದ ತನ್ನ ಮಗಳನ್ನು ತಾನು ಮೊದಲು ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಕ್ಕೋಸ್ಕರ ತನ್ನ ಸೋದರ ಅತ್ತೆಯ ಮಗನಾದ ಕುಂತಿಭೋಜರಾಜನಿಗೆ ಕೊಟ್ಟನು.
ಸಾ ನಿಯುಕ್ತಾ ಪಿತುರ್ಗೇಹೇ ದೇವತಾತಿಥಿಭೋಜನೇ |
ಉಗ್ರಂ ಪರ್ಯಚರತ್ ಸಾಂಗಂ ಬ್ರಾಹ್ಮಣಂ ಸಂಶಿತವ್ರತಮ್ ॥4॥
ಅವಳು ಕುಂತಿಭೋಜನ ಮನೆಯಲ್ಲಿ ದೇವತಾತಿಥಿಭೋಜನದಲ್ಲಿ ನಿಯೋಜಿಸಲ್ಪಟ್ಟು, ಕೋಪಶೀಲರೂ, ವ್ರತನಿಷ್ಠರೂ ಆದ ಬ್ರಾಹ್ಮಣರೊಬ್ಬರನ್ನು ಸಂಪೂರ್ಣವಾಗಿ ಪರಿಚರಿಸಿದಳು.
ನಿರೂಢನಿಶ್ಚಯಂ ಧರ್ಮೇ ದುರ್ವಾಸಾ ಇತಿ ಯಂ ವಿದುಃ |
ತಮುಗ್ರಂ ಸಂಶಿತಾತ್ಮಾನಂ ಸರ್ವಯತ್ನೈರತೋಷಯತ್ ॥5॥
ಧರ್ಮದಲ್ಲಿ ನೆಟ್ಟ ನಿಶ್ಚಯವುಳ್ಳ ಅವರ ಹೆಸರು ದುರ್ವಾಸ ಎಂದು. ಉಗ್ರರೂ, ಮಾನಜಯವುಳ್ಳವರೂ ಆದ ಅವರನ್ನು ಪೃಥೆಯು (ಕುಂತಿಭೋಜನು ಸಾಕುತ್ತಿರುವುದರಿಂದ ಈಗ ಕುಂತಿಯು) ಸರ್ವ ಪ್ರಯತ್ನಗಳಿಂದಲೂ ಸಂತೋಷಪಡಿಸಿದಳು.
ದುರ್ವಾಸಾ ವತ್ಸರಸ್ಯಾಂತೇ ದದೌ ಮಂತ್ರಮನುತ್ತಮಮ್ |
ಯಶಸ್ವಿನ್ಯೈ ಪೃಥಾಯೈ ಸ ಆಪದ್ಧರ್ಮಾನ್ವವೇಕ್ಷಯಾ ॥6॥
ದುರ್ವಾಸರು ಮುಂದೆ ಒದಗಲಿರುವ ಆಪದ್ಧರ್ಮವನ್ನು ಗಮನಿಸಿ ಯಶಸ್ವಿನಿಯಾದ ಕುಂತಿಗೆ ಒಂದು ವರ್ಷದ ಕೊನೆಯಲ್ಲಿ ಶ್ರೇಷ್ಠವಾದ ಮಂತ್ರವನ್ನು ಉಪದೇಶ ಮಾಡಿದರು.
ಅಭಿಸಾರಾಭಿಸಂಯುಕ್ತಮಬ್ರುವೀಚ್ಚೈವ ತಾಂ ಮುನಿಃ |
ಯಂ ಯಂ ದೇವಂ ತ್ವಮೇತೇನ ಮಂತ್ರೇಣಾವಾಹಯಿಷ್ಯಸಿ |
ತಸ್ಯ ತಸ್ಯ ಪ್ರಸಾದಾದ್ ವೈ ಪುತ್ರಸ್ತವ ಜನಿಷ್ಯತೇ ॥7॥
ದೇವತೆಗಳ ಆಗಮನರೂಪಫಲದಿಂದ ಯುಕ್ತವಾದ ಮಂತ್ರವನ್ನು ದುರ್ವಾಸರು ಅವಳಿಗೆ ಉಪದೇಶಿಸಿದರು. ನೀನು ಈ ಮಂತ್ರದಿಂದ ಯಾವ ಯಾವ ದೇವತೆಯನ್ನು ಕರೆಯುತ್ತೀಯೋ, ಅವನ ಅನುಗ್ರಹದಿಂದ ನೀನು ಮಗನನ್ನು ಪಡೆಯುವಿ ಎಂದು ಹೇಳಿದರು.
ತಥೋಕ್ತಾ ಸಾ ತು ಮುನಿನಾ ತಸ್ಯ ಕೌತೂಹಲಾತ್ ತದಾ |
ಕನ್ಯಾ ಸತೀ ದೇವಮರ್ಕಮಾಜುಹಾವ ಯಶಸ್ವಿನೀ ॥8॥
ಹಾಗೆ ಹೇಳಲ್ಪಟ್ಟ ಕುಂತಿಯು ಒಮ್ಮೆ ಕುತೂಹಲದಿಂದ ಇನ್ನೂ ಕನ್ಯಾವಸ್ಥೆಯಲ್ಲಿರುವಾಗಲೇ, ಸೂರ್ಯದೇವನನ್ನು ಆಹ್ವಾನಿಸಿದಳು.
ತತೋ ಘನಾಂತರಂ ಕೃತ್ವಾ ಸ್ವಮಾರ್ಗಂ ತಪನಸ್ತದಾ |
ಉಪತಸ್ಥೇ ಸ ತಾಂ ಕನ್ಯಾಂ ಪೃಥಾಂ ಪೃಥುಲಲೋಚನಾಮ್ ॥9॥
ಆಗ, ಮೋಡಗಳ ಮಧ್ಯದಲ್ಲಿ ದಾರಿಯನ್ನು ಮಾಡಿಕೊಂಡು ವಿಸ್ತಾರ ಲೋಚನವುಳ್ಳ ಆ ಕುಂತಿಯ ಎದುರಿಗೆ ಸೂರ್ಯನು ಬಂದು ನಿಂತನು.

ಸಾ ದದರ್ಶ ತಮಾಯಾಂತಂ ವಿಸ್ಮಯಾಲ್ಲೋಕಭಾವನಮ್ |
ವಿಸ್ಮಿತಾ ಚಾನವದ್ಯಾಂಗೀ ದೃಷ್ಟ್ವಾ ತಂ ತಪನಂ ತದಾ |
ಸಾಽಬ್ರವೀದ್ ಭಗವನ್ ಕಸ್ತ್ವಂ ಪ್ರಾದುರ್ಭೂತೋ ಮಮಾಗ್ರತಃ ||
ಅವಳು ತನ್ನ ಕಡೆಗೆ ಬರುತ್ತಿರುವ ಲೋಕಭಾವನನಾದ ಸೂರ್ಯನನ್ನು ವಿಸ್ಮಯದಿಂದ ನೋಡಿದಳು. ವಿಸ್ಮಿತಳಾದ ಆ ಅನವದ್ಯಾಂಗಿಯು ಆಗ ಸೂರ್ಯನನ್ನು ಕುರಿತು ಪೂಜ್ಯನೇ, ನನ್ನ ಎದುರಿಗೆ ಪ್ರತ್ಯಕ್ಷನಾಗಿರುವ ನೀನು ಯಾರು ಎಂದು ಕೇಳಿದಳು.
ಸೂರ್ಯಃ
ಆಹೂತೋಪಸ್ಥಿತಂ ಭದ್ರೇ ಋಷಿಮಂತ್ರೇಣ ಚೋದಿತಮ್ |
ವಿದ್ಧಿ ಮಾಂ ಪುತ್ರಲಾಭಾಯ ದೇವಮರ್ಕಂ ಶುಭಾನನೇ ||11||
ಮಂಗಳಸ್ವರೂಪಳೇ, ಋಷಿಗಳ ಮಂತ್ರದ ಪ್ರಭಾವದಿಂದ ಪ್ರೇರಿತನಾಗಿ ನಿನ್ನಿಂದ ಆಹ್ವಾನಿಸಲ್ಪಟ್ಟು ನಾನು ಇಲ್ಲಿಗೆ ಬಂದಿದ್ದೇನೆ. ಶುಭಾನನೆಯೇ ನಾನು ನಿನಗೆ ಪುತ್ರನನ್ನು ಕೊಡಲು ಬಂದ ಸೂರ್ಯದೇವನೆಂದು ತಿಳಿ.
ಕುಂತೀ
ಕಶ್ಚಿನ್ಮೇ ಬ್ರಹ್ಮವಿತ್ ಪ್ರಾದಾದ್ ವರವಿದ್ಯಾಂ ಚ ಶತ್ರುಹನ್ |
ತದ್ವಿಜಿಜ್ಞಾಸಯಾಽಽಹ್ವಾನಂ ಕೃತವತ್ಯಸ್ಮಿ ತೇ ವಿಭೋ ||12||
ಏತಸ್ಮಿನ್ನಪರಾಧೇ ತ್ವಾಂ ಶಿರಸಾಽಭಿಪ್ರಸಾದಯೇ |
ಯೋಷಿತೋ ಹಿ ಸದಾ ರಕ್ಷ್ಯಾಸ್ಸ್ವಪರಾಧೇಽಪಿ ನಿತ್ಯಶಃ ||13||
ಶತ್ರುಸಂಹಾರಕನೇ, ವಿಭುವೇ, ನನಗೆ ಒಬ್ಬ ಶ್ರೇಷ್ಠನಾದ ಬ್ರಾಹ್ಮಣನು ಮಂತ್ರೋಪದೇಶವನ್ನು ಮಾಡಿದ್ದನು. ಅದನ್ನು ಪರೀಕ್ಷಿಸುವ ದೃಷ್ಟಿಯಿಂದ ನಾನ್ನು ನಿನ್ನನ್ನು ಆಹ್ವಾನ ಮಾಡಿದೆ. ನಾನು ಮಾಡಿದ ಈ ಅಪರಾಧಕ್ಕಾಗಿ ನಿನ್ನನ್ನು ಶಿರಸಾ ವಂದಿಸಿ ಅನುಗ್ರಹಿಸು ಎಂದು ಕೇಳಿಕೊಳ್ಳುತ್ತೇನೆ. ಸ್ತ್ರೀಯರು ಅಪರಾಧವನ್ನು ಮಾಡಿದರೂ ಸಹಾ ಯಾವಾಗಲೂ ರಕ್ಷಿಸಲ್ಪಡಬೇಕಾದವರಷ್ಟೇ.
ಸೂರ್ಯಃ
ವೇದಾಹಂ ಸರ್ವಮೇವೈತದ್ ಯದ್ ದುರ್ವಾಸಾ ವರಂ ದದೌ |
ಸಂತ್ಯಜ್ಯೋಭ್ಯೇ ಮಾನಭಯೇ ಕ್ರಿಯತಾಂ ಸಂಗಮೋ ಮಯಾ ||14||
ದುರ್ವಾಸರು ನಿನಗೆ ಕೊಟ್ಟ ವರದ ಎಲ್ಲಾ ವಿಷಯವನ್ನೂ ನಾನು ತಿಳಿದಿದ್ದೇನೆ. ಲಜ್ಜೆಯನ್ನು ಮತ್ತು ಭಯವನ್ನು ಬಿಟ್ಟು ನನ್ನ ಸಂಗವನ್ನು ಮಾಡು.
ಅಮೋಘಂ ದರ್ಶನಂ ಮಹ್ಯಮಾಹೂತಶ್ಚಾಸ್ಮಿ ತೇ ಶುಭೇ |
ವೃಥಾಹ್ವಾನಾದ್ಧಿ ತೇ ಭೀರು ದೋಷೋ ಹಿ ಸ್ಯಾದಸಂಶಯಃ ||15||
ನನ್ನ ದರ್ಶನವು ಎಂದೂ ವ್ಯರ್ಥವಾಗುವುದಿಲ್ಲ. ಶುಭಳಾದವಳೇ, ಜೊತೆಗೆ ನೀನು ಆಹ್ವಾನ ಮಾಡಿದ್ದೀಯೆ. ಭೀರುವೇ, ವ್ಯರ್ಥವಾಗಿ ಆಹ್ವಾನ ಮಾಡಿದ್ದರಿಂದ ನಿನಗೆ ದೋಷವುಂಟಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ಏವಮುಕ್ತಾ ಬಹುವಿಧಂ ಸಾಂತ್ವಪೂರ್ವಂ ವಿವಸ್ವತಾ |
ಸಾ ತು ನೈಚ್ಛದ್ ವರಾರೋಹಾ ಕನ್ಯಾಽಹಮಿತಿ ಪಾರ್ಥಿವ ||16||
ಎಲೈ ರಾಜನೇ, ಹೀಗೆ ಸೂರ್ಯನಿಂದ ಬಹುವಿಧವಾಗಿ ಸಮಾಧಾನಪೂರ್ವಕವಾಗಿ ಹೇಳಲ್ಪಟ್ಟರೂ ನಾನು ಕನ್ಯೆಯೆಂದು ಹೇಳಿ ಆ ಸುಂದರಿಯು ಸೂರ್ಯನ ಸಮಾಗಮವನ್ನು ಬಯಸಲಿಲ್ಲ.
ಬಂಧುಪಕ್ಷಭಯಾದ್ ಭೀತಾ ಲಜ್ಜಯಾ ಚ ಯಶಸ್ವಿನೀ |
ತಾಮರ್ಕಃ ಪುನರೇವೇದಮಬ್ರವೀದ್ ಭರತರ್ಷಭ ||17||
ಆ ಯಶಸ್ವಿನಿಯು ಬಂಧುವರ್ಗದ ಭಯದಿಂದಲೂ, ಲಜ್ಜೆಯಿಂದಲೂ ಕೂಡಿದವಳಾಗಿ ಸುಮ್ಮನಿದ್ದಳು. ಭರತಶ್ರೇಷ್ಠನೇ, ಅವಳನ್ನು ಕುರಿತು ಸೂರ್ಯನು ಪುನಃ ಹೀಗೆ ಮಾತನಾಡಿದನು.
ಪುತ್ರಸ್ತೇ ನಿರ್ಮಿತಃ ಸುಭ್ರು ಶೃಣು ಯಾದೃಕ್ ಶುಭಾನನೇ |
ಆದಿತ್ಯೇ ಕುಂಡಲೇ ಬಿಭ್ರತ್ ಕವಚಂ ಚೈವ ಮಾಮಕಮ್ |
ಶಸ್ತ್ರಾಣಾಮಭೇದ್ಯಂ ಚ ಭವಿಷ್ಯತಿ ಶುಚಿಸ್ಮಿತೇ ||18||
ಸುಂದರ ಮುಖವುಳ್ಳವಳೇ, ನಿನಗಾಗಿ ಎಂತಹ ಪುತ್ರನು ನಿರ್ಮಿತನಾಗಿದ್ದಾನೆ ಎಂದು ಕೇಳು. ಅವನು ಸೂರ್ಯನಾದ ನನಗೆ ಲಭ್ಯವಾದ ಕುಂಡಲಗಳನ್ನು ಮತ್ತು ನನ್ನ ಕವಚವನ್ನು ಧರಿಸಿದ್ದಾನೆ. ಶುಚಿಸ್ಮಿತೆಯೇ. ಆ ಕವಚವು ಶಸ್ತ್ರಾಸ್ತ್ರಗಳಿಂದ ಅಭೇದ್ಯವಾದುದು.
ನ ನ ಕಿಂಚನ ದೇಯಂ ತು ಬ್ರಾಹ್ಮಣೇಭ್ಯೋ ಭವಿಷ್ಯತಿ |
ಚೋದ್ಯಮಾನೋ ಮಯಾ ಚಾಪಿ ನಾಕ್ಷತ್ರಂ ಚಿಂತಯಿಷ್ಯತಿ |
ದಾಸ್ಯತ್ಯೇವ ಹಿ ವಿಪ್ರೇಭ್ಯೋ ಮಾನೀ ಚೈವ ಭವಿಷ್ಯತಿ ||19||
ಅವನು ಬ್ರಾಹ್ಮಣರಿಗೆ ಕೊಡಲಾರದ ವಸ್ತುವು ಯಾವುದೂ ಇಲ್ಲ. ನಾನು ಒತ್ತಾಯ ಮಾಡಿದರೂ ಸಹ ಅವನು ಎಂದೂ ಕ್ಷತ್ರಿಯರಿಗೆ ಅನುಚಿತವಾದ ಯೋಚನೆಯನ್ನೂ ಸಹ ಮಾಡುವುದಿಲ್ಲ. ಅವನು ಬ್ರಾಹ್ಮಣರಿಗೆ ಎಲ್ಲವನ್ನೂ ಕೊಡುವವನಾಗಿ, ಆತ್ಮಾಭಿಮಾನವುಳ್ಳವನಾಗಿ ಬದುಕುವನು.
ವೈಶಂಪಾಯನಃ
ಏವಮುಕ್ತಾ ತತಃ ಕುಂತೀ ಗೋಪತಿಂ ಪ್ರತ್ಯುವಾಚ ಹ |
ಕನ್ಯಾ ಪಿತೃವಶಾ ಚಾಹಮಪತ್ಯಾರ್ಥೋ ನ ಚೈವ ಮೇ ||20||

ಸೂರ್ಯನು ಹೀಗೆ ಹೇಳಿದಾಗ ಕುಂತಿಯು ಅವನನ್ನು ಕುರಿತು ನಾನು ತಂದೆಯ ಅಧೀನದಲ್ಲಿರುವ ಕನ್ಯೆ. ನನಗೆ ಈಗ ಮಗನನ್ನು ಪಡೆಯುವ ಉದ್ದೇಶವು ಇಲ್ಲ ಎಂದು ಹೇಳಿದಳು.
ಸೂರ್ಯಃ
ಯದ್ಯೇವಂ ಮನ್ಯಸೇ ಭೀರು ಕಿಮಾಹ್ವಯಸಿ ಭಾಸ್ಕರಮ್ |
ಯದಿ ಮಾಮವಜಾನಾಸಿ ಋಷಿಃ ಸ ನ ಭವಿಷ್ಯತಿ ॥23॥
ಭೀರುವೇ, ಹಾಗಾದರೆ, ಸೂರ್ಯನನ್ನು ಏಕೆ ಆಹ್ವಾನ ಮಾಡಿದೆ? ನನಗೆ ಅವಮಾನವನ್ನು ಮಾಡಿದರೆ, ಆ ಋಷಿಗೂ ತೊಂದರೆಯಾಗುವುದು.
ಮಂತ್ರದಾನೇನ ಯಸ್ಯ ತ್ವಮವಲೇಪೇನ ದರ್ಪಿತಾ |
ಕುಲಂ ಚ ತೇಽದ್ಯ ಧಕ್ಷ್ಯಾಮಿ ಕ್ರೋಧದೀಪ್ತೇನ ಚಕ್ಷುಷಾ ॥24॥
ಯಾರ ಮಂತ್ರದ ಬಲದಿಂದ ಉಂಟಾದ ದರ್ಪದಿಂದ ನೀನು ನನಗೆ ಅವಮಾನ ಮಾಡುವಿಯೋ, ಅಂತಹ ನಿನ್ನ ಕುಲವನ್ನು ನನ್ನ ಕ್ರೋಧದೀಪ್ತವಾದ ಕಣ್ಣುಗಳಿಂದ ಇಂದು ಸುಟ್ಟುಬಿಡುವೆನು.
ಕುಂತೀ
ಪ್ರಸೀದ ಭಗವನ್‌ದೇವ ಅವಲೇಪೋ ಹಿ ನಾಸ್ತಿ ಮೇ |
ಮಯಾತ್ವಪರಿಹಾರ್ಯಃ ಸ್ಯಾತ್ ಕನ್ಯಾಭಾವಸ್ಯ ದೂಷಣಮ್ ॥25॥
ಪೂಜ್ಯನಾದ ಸೂರ್ಯದೇವನೇ, ಅನುಗ್ರಹವನ್ನು ಮಾಡು. ನನಗೆ ಗರ್ವವಿಲ್ಲ. ನಾನು ಕನ್ಯಾಭಾವವನ್ನು ಕಳೆದುಕೊಂಡರೆ, ಅಪರಿಹಾರ್ಯವಾದ ದೋಷವಾಗುತ್ತದೆ.
ಸೂರ್ಯಃ
ವ್ಯಪಯಾತು ಭಯಂ ತೇಽದ್ಯ ಕುಮಾರಂ ಪ್ರಭವಿಷ್ಯಸೇ |
ಮಯಾ ತ್ವಂ ಚಾಭ್ಯನುಜ್ಞಾತಾ ಪುನಃ ಕನ್ಯಾ ಭವಿಷ್ಯಸಿ ॥26॥
ನಿನ್ನ ಭಯವನ್ನು ಬಿಡು. ನೀನು ಮಗನನ್ನು ಪಡೆಯುವಿ.  ಮತ್ತೆ ನನ್ನ ಅನುಮತಿಯಿಂದ ಪುನಃ ಕನ್ಯೆಯೇ ಆಗುವಿ.
ವೈಶಂಪಾಯನಃ
ಏವಮುಕ್ತಾ ತತಃ ಕುಂತೀ ಸಂಪ್ರಹೃಷ್ಟತನೂರುಹಾ |
ಸಂಗತಾ ಚ ತದಾ ಸುಭ್ರೂರಾದಿತ್ಯೇನ ಮಹಾತ್ಮನಾ ॥27॥
ಹೀಗೆ ಹೇಳಲ್ಪಟ್ಟ ಸುಂದರಿಯಾದ ಕುಂತಿಯು, ರೋಮಾಂಚವುಳ್ಳವಳಾಗಿ ಮಹಾತ್ಮನಾದ ಸೂರ್ಯನಿಂದ ಸಮಾಗಮವನ್ನು ಹೊಂದಿದಳು.
ಪ್ರಕಾಶಕರ್ಮಾ ತಪನಃ ಕನ್ಯಾಗರ್ಭಂ ದಧೌ ತತಃ |
ಅಜೀಜನತ್ ತತೋ ವೀರಂ ಸರ್ವಶಸ್ತ್ರಭೃತಾಂ ವರಮ್ ॥28॥
ಲೋಕವನ್ನು ಪ್ರಕಾಶಿಸುವ ಸೂರ್ಯನು ಆ ಕನ್ಯೆಯಲ್ಲಿ ಗರ್ಭಾಧಾನವನ್ನು ಮಾಡಿ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ವೀರನಾದ ಮಗನನ್ನು ಉತ್ಪಾದಿಸಿದನು.
ಆಮುಕ್ತಕವಚಃಶ್ರೀಮಾನ್ ಕುಂಡಲಾಭ್ಯಾಂ ಸಮಾವೃತಃ |
ಸೋಽಜಾಯತ ತದಾ ವೀರಃ ಸರ್ವಲೋಕೇಷು ವಿಶ್ರುತಃ ॥29॥
ಆ ಮಗುವು ಹುಟ್ಟುವಾಗಲೇ ಕವಚಕುಂಡಲಗಳನ್ನು ಧರಿಸಿದ್ದು, ಎಲ್ಲಾ ಲೋಕಗಳಲ್ಲಿಯೂ ವೀರನೆಂಬ ಖ್ಯಾತಿಯನ್ನು ಪಡೆಯಿತು.
ಮಂಜೂಷಾಂ ರತ್ನಸಂಪೂರ್ಣಾಂ ಕರ್ಣನಾಮಾಭಿಸಂಜ್ಞಿತಾಮ್ |
ಗೂಹಮಾನಾಽಪಚಾರಂ ತಂ ಬಂಧುಪಕ್ಷಭಯಾತ್ ತದಾ ॥29॥
ಉತ್ಸಸರ್ಜ ಜಲೇ ಕುಂತೀ ತಂ ಕುಮಾರಂ ಸಲಕ್ಷಣಮ್ |
ಪ್ರಾದಾಚ್ಚ ತಸ್ಯಾಃ ಕನ್ಯಾತ್ವಂ ಪುನಃ ಸ ಪರಮದ್ಯುತಿಃ ॥30॥
ಕುಂತಿಯು ಬಂಧುಗಳ ಅಪವಾದಕ್ಕೆ ಹೆದರಿ ತನ್ನ ಅಪಚಾರವನ್ನು ಮರೆಮಾಚಲು ಒಂದು ಪೆಟ್ಟಿಗೆಯನ್ನು ತಂದು ಅದನ್ನು ರತ್ನಗಳಿಂದ ತುಂಬಿ ಪೆಟ್ಟಿಗೆಯ ಮೇಲೆ ಕರ್ಣ ಎಂದು ಬರೆದು ಆ ಪೆಟ್ಟಿಗೆಯನ್ನು ಸಲಕ್ಷಣವಾದ ಶಿಶುವಿನ ಸಹಿತವಾಗಿ ನೀರಿನಲ್ಲಿ ತೇಲಿಬಿಟ್ಟಳು. ಪರಮದ್ಯುತಿಯುಳ್ಳ ಸೂರ್ಯನು ಅವಳಿಗೆ ಪುನಃ ಕನ್ಯಾತ್ವವನ್ನು ದಯಪಾಲಿಸಿದನು.
ದತ್ವಾ ಚ ವರದಶ್ರೇಷ್ಠೋ ದಿವಮಾಚಕ್ರಮೇ ಪುನಃ |
ತಮುತ್ಸೃಷ್ಟಂ ತದಾ ಗರ್ಭಂ ರಾಧಾಭರ್ತಾ ಮಹಾಯಶಾಃ |
ಪುತ್ರತ್ವೇ ಕಲ್ಪಯಾಮಾಸ ಭಾರ್ಯಾಯಾಃ ಸೂತನಂದನಃ ॥31॥
ಅವಳಿಗೆ ಮಗನನ್ನೂ, ಕನ್ಯಾಭಾವವನ್ನೂ, ಕೊಟ್ಟು ಸೂರ್ಯನು ಆಕಾಶಮಾರ್ಗದಲ್ಲಿ ಹೊರಟುಹೋದನು. ನೀರಿನಲ್ಲಿ ತೇಲಿಬಿಟ್ಟ ಆ ಶಿಶುವನ್ನು ಕೀರ್ತಿವಂತರಾದ ರಾಧೆಯ ಪತಿಯಾದ ಸೂತನಾದ ಅಧಿರಥನು ಸ್ವೀಕರಿಸಿ ತನ್ನ ಪತ್ನಿಯ ಕೈಗೆ ಮಗನೆಂದು ಕಲ್ಪಿಸಿಕೊಟ್ಟನು.
ನಾಮಧೇಯಂ ಚ ಚಕ್ರಾತೇ ತಸ್ಯ ಬಾಲಸ್ಯ ತಾವುಭೌ |
ಸಮಾಹೃತೋಽಯಂ ವಸುನಾ ವಸುಷೇಣೇತಿ ನಾಮತಃ ॥32॥
ಸ ವರ್ಧಮಾನೋ ಬಲವಾನ್ ಸರ್ವಾಸ್ತ್ರೇಷೂದ್ಯತೋಽಭವತ್|
ಆಪೃಷ್ಠತಾಪಾಚ್ಚಾದಿತ್ಯಮುಪತಸ್ಥೇ ಕೃತಾಂಜಲಿಃ ॥34॥
ತುಂಬಾ ಧನದ ಜೊತೆಯಲ್ಲಿ ಬಂದ ಕಾರಣ ಆ ಶಿಶುವಿಗೆ ವಸುಷೇಣನೆಂದು ಅವರಿಬ್ಬರೂ ನಾಮಕರಣ ಮಾಡಿದರು. ಅವನು

ಬೆಳೆಯುತ್ತಾ ಬಲಿಷ್ಠನಾಗಿ ಬೆಳೆದು ಸರ್ವಶಸತ್ರಸ್ತ್ರಗಳ ವಿದ್ಯೆಯನ್ನು ಸಂಪಾದಿಸಿದನು. ಅವನು ಪ್ರಾತಃಕಾಲದಿಂದ ಕೈಗಳನ್ನು ಮುಗಿದು ಸೂರ್ಯನನ್ನು ಆರಾಧಿಸಲು ಪ್ರಾರಂಭಿಸಿದರೆ, ಬೆನ್ನಿನ ಮೇಲೆ ಬಿಸಿಲು ಬೀಳುವವರೆಗೂ ಅದನ್ನು ಮುಂದುವರೆಸುತ್ತಿದ್ದನು.
ಯಸ್ಮಿನ್ ಕಾಲೇ ಜಪನ್ನಾಸ್ತೇ ಸ ವೀರಃ ಸತ್ಯಸಂಗರಃ |
ನಾದೇಯಂ ಬ್ರಾಹ್ಮಣಾಯಾಸೀತ್ ತಸ್ಮಿನ್ ಕಾಲೇ ಮಹಾತ್ಮನಃ ॥35॥
ತತಃ ಕಾಲೇ ತು ಕಸ್ಮಿಂಶ್ಚಿತ್ ಸ್ವಪ್ನಾಂತೇ ಕರ್ಣಮಬ್ರುವೀತ್ |
ಆದಿತ್ಯೋ ಬ್ರಾಹ್ಮಣೋ ಭೂತ್ವಾ ಶೃಣು ವೀರ ವಚೋ ಮಮ ॥36॥
ಸತ್ಯಸಂಧನೂ, ವೀರನೂ, ಮಹಾತ್ಮನೂ ಆದ ಅವನು ಜಪವನ್ನು ಮಾಡುವ ಕಾಲದಲ್ಲಿ ಅವನು ಬ್ರಾಹ್ಮಣರಿಗೆ ಕೊಡಲಾರದಂತಹುದು ಯಾವುದೂ ಇರಲಿಲ್ಲ. ಅನಂತರ ಒಂದು ದಿವಸ ಸೂರ್ಯನು ಬ್ರಾಹ್ಮಣ ರೂಪದಲ್ಲಿ ಸ್ವಪ್ನದಲ್ಲಿ ಬಂದು, ವೀರನೇ! ನನ್ನ ಮಾತನ್ನು ಕೇಳು ಎಂದು ಕರ್ಣನಿಗೆ ಹೇಳಿದನು.
ಪ್ರಭಾತಾಯಾಂ ರಜನ್ಯಾಂ ತ್ವಾಮಾಗಮಿಷ್ಯತಿ ವಾಸವಃ |
ನ ತಸ್ಯ ಭಿಕ್ಷಾ ದಾತವ್ಯಾ ವಿಪ್ರರೂಪೋ ಭವಿಷ್ಯತಿ ॥37॥
ನಿಶ್ಚಯೋಽಸ್ಯಾಪಹರ್ತುಂ ತೇ ಕವಚಂ ಕುಂಡಲೇ ತಥಾ |
ಅತಸತ್ತ್ವಂ ಬೋಧಯಾಮ್ಯೇಷ ನಿಬೋಧ ವಚನಂ ಮಮ ॥38॥
ನಾಳೆ ಪ್ರಾತಃಕಾಲದಲ್ಲಿ ಇಂದ್ರನು ಬ್ರಾಹ್ಮಣರೂಪದಲ್ಲಿ ಆಗಮಿಸಿ ಭಿಕ್ಷೆಯನ್ನು ಬೇಡುವನು. ಅವನಿಗೆ ನೀನು ಭಿಕ್ಷೆಯನ್ನು ನೀಡಬಾರದು. ಅವನು ನಿನ್ನ ಕವಚ ಕುಂಡಲಗಳನ್ನು ಅಪಹರಿಸಬೇಕೆಂಬ ನಿರ್ಧಾರದಿಂದ ನಿನ್ನ ಬಳಿಗೆ ಬರುವನು. ಆದ್ದರಿಂದ ನಿನಗೆ ಮೊದಲೇ ತಿಳಿಸುತ್ತಿದ್ದೇನೆ. ನನ್ನ ಮಾತುಗಳನ್ನು ಮನಸ್ಸಿನಲ್ಲಿಡು.
ಕರ್ಣಃ
ಶಕ್ರೋ ಮಾಂ ವಿಪ್ರರೂಪೇಣ ಯದಿ ವೈ ಯಾಚತೇ ದ್ವಿಜ |
ಕಥಂ ಚಾಸ್ಮೈ ನ ದಾಸ್ಯಾಮಿ ಯಥಾ ಚಾಸ್ಮ್ಯವಬೋಧಿತಃ ॥39॥
ಎಲೈ ಬ್ರಾಹ್ಮಣನೇ, ಇಂದ್ರನು ಬ್ರಾಹ್ಮಣರೂಪದಿಂದ ಬಂದು ನನ್ನನ್ನು ಬೇಡಿದರೆ, ನೀನು ಎಚ್ಚರಿಸಿದರೂ ಸಹ, ನಾನು ಅವನು ಬೇಡಿದುದನ್ನು ಅವನಿಗೆ ಹೇಗೆ ಕೊಡದೇ ಇರಲಿ.
ವಿಪ್ರಾಃ ಪೂಜ್ಯಾಸ್ತು ದೇವಾನಾಂ ಪ್ರಿಯಮಸ್ತೀತಿ ಬ್ರಾಹ್ಮಣ |
ತಂ ದೇವದೇವಂ ಜಾನನ್ ವೈ ನ ಶಕ್ನೋಮ್ಯವಮಂತ್ರಣೇ ॥40॥
ಎಲೈ ಬ್ರಾಹ್ಮಣನೇ, ಬ್ರಾಹ್ಮಣರು ಪೂಜಿಸಲ್ಪಟ್ಟರೆ ಪ್ರಿಯವುಂಟಾಗುವುದು ಎಂಬ ಕಾರಣದಿಂದ ದೇವತೆಗಳಿಗೂ ಪೂಜ್ಯರಾದವರು. ಅವನನ್ನು ದೇವದೇವ ಎಂದು ತಿಳಿದ ನಾನು ಹೇಗೆ ಅವನನ್ನು ನಿರಾಕರಿಸಲಿ.
ಸೂರ್ಯಃ
ಯದ್ಯೇವಂ ಶೃಣು ಮೇ ವೀರ ವರಂ ತೇ ಸೋಽಪಿ ದಾಸ್ಯತಿ |
ಶಕ್ತಿಂ ತ್ವಮಪಿ ಯಾಚೇಥಾಃ ಸರ್ವಶತ್ರುನಿಬರ್ಹಿಣೀಮ್ ॥40॥
ವೀರನೇ, ಹಾಗಾದರೆ ನನ್ನ ಮಾತನ್ನು ಕೇಳು. ಅವನೂ ನಿನಗೆ ಒಂದು ವರವನ್ನು ಕೊಡುವನು. ಆಗ ನೀನು ಸರ್ವಶತ್ರುಸಂಹಾರಕವಾದ ಶಕ್ತ್ಯಾಯುಧವನ್ನು ಬೇಡಬೇಕು.
ವೈಶಂಪಾಯನಃ
ಏವಮುಕತ್ವ ದ್ವಿಜಃ ಸ್ವಪ್ನೇ ತತ್ರೈವಾಂತರಧೀಯತ |
ಕರ್ಣಃ ಪ್ರಬುದ್ಧಸ್ತಂ ಸ್ವಪ್ನಂ ಚಿಂತಯಾನೋಽಭವತ್ ತದಾ ॥41॥
ಬ್ರಾಹ್ಮಣನು ಸ್ವಪ್ನದಲ್ಲಿ ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಕರ್ಣನು ಎಚ್ಚರಗೊಂಡು ಆ ಸ್ವಪ್ನವನ್ನೇ ಚಿಂತಿಸುತ್ತಿದ್ದನು.
ತಮಿಂದ್ರೋ ಬ್ರಾಹ್ಮಣೋ ಭೂತ್ವಾ ಪುತ್ರಾರ್ಥಂ ಭೂತಭಾವನಃ |
ಕುಂಡಲೇ ಪ್ರಾರ್ಥಯಾಮಾಸ ಕವಚಂ ಚ ಮಹಾದ್ಯುತಿಃ ॥42॥
ಭೂತಭಾವನನಾದ ಇಂದ್ರನು ತನ್ನ ಮಗನಾದ ಅರ್ಜುನನ ಕ್ಷೇಮದ ಸಲುವಾಗಿ ಬ್ರಾಹ್ಮಣರೂಪವನ್ನು ಧರಿಸಿ, ಕರ್ಣನನ್ನು ಸಮೀಪಿಸಿ ಕವಚ ಮತ್ತು ಕುಂಡಲಗಳನ್ನು ಬೇಡಿದನು.
ಉತ್ಕೃತ್ಯಾವಿಮನಾಃ ಸ್ವಾಂಗಾತ್ ಕವಚಂ ರುಧಿರಸ್ರವಮ್ |
ಕರ್ಣಪಾಲ್ಯೌ ಚ ದ್ವೇ ಛಿತ್ವಾ ಪ್ರಾಯಚ್ಛತ್ ಸ ಕೃತಾಂಜಲಿಃ ॥43॥
ಕರ್ಣನು ಸ್ವಲ್ಪವೂ ಯೋಚನೆ ಮಾಡದೆ ತನ್ನ ಶರೀರದಿಂದ ರಕ್ತವನ್ನು ಸ್ರವಿಸುತ್ತಿರುವ ಕವಚವನ್ನು ಹರಿತವಾದ ಆಯುಧದಿಂದ ಕಿತ್ತು, ತನ್ನ ಕಿವಿಗಳನ್ನು ಕತ್ತರಿಸಿ ಕುಂಡಲಗಳನ್ನೂ ತೆಗೆದು ಆ ಬ್ರಾಹ್ಮಣನಿಗೆ ಕೊಟ್ಟು ಕೈ ಮುಗಿದನು.
ಅಹೋ ಸಾಹಸಮಿತ್ಯೇವಂ ಮನಸಾ ವಾಸವೋ ಹಸನ್ |
ದೇವದಾನವಯಕ್ಷಣಾಂ ಗಂಧರ್ವೋರಗರಕ್ಷಸಾಮ್ ॥44॥
ನ ತಂ ಪಶ್ಯಾಮಿ ಕೋ ಹ್ಯೇತತ್ ಕರ್ಮ ಕರ್ತಾ ಭವಿಷ್ಯತಿ |
ಪ್ರೀತೋಽಸ್ಮಿ ಕರ್ಮಣಾ ತೇನ ವರಂ ಬ್ರೂಹಿ ಯಮಿಚ್ಛಸಿ ॥45॥
ಎಂತಹ ಸಾಹಸದ ಕಾರ್ಯ ಎಂದು ಹೇಳಿ ಇಂದ್ರನು ಮನಸ್ಸಿನಲ್ಲಿಯೇ ನಕ್ಕನು. ದೇವ ದಾನವ ಯಕ್ಷರಲ್ಲಿ, ಗಂಧರ್ವ, ಉರಗ, ರಾಕ್ಷಸರಲ್ಲಿ ಇಂತಹ ಕೆಲಸವನ್ನು ಮಾಡುವವನನ್ನು ನಾನು ಎಂದೂ ನೋಡಿಲ್ಲ ಎಂದು ಚಿಂತಿಸಿದನು. ಕರ್ಣನನ್ನು ಕುರಿತು ನಿನ್ನ ಈ ಕರ್ಮದಿಂದ ಸಂತುಷ್ಟನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದನು.
ಕರ್ಣಃ

ಇಚ್ಛಾಮಿ ಭಗವದ್ದತ್ತಾಂ ಶಕ್ತಿಂ ಶತ್ರುನಿವರ್ಹಿಣೀಮ್ ॥46॥
ಪೂಜ್ಯರಿಂದ ಶತ್ರುಸಂಹಾರಕವಾದ ಶಕ್ತ್ಯಾಯುಧವನ್ನು ಪಡೆಯಲು ಬಯಸುತ್ತೇನೆ.
ವೈಶಂಪಾಯನಃ
ಶಕ್ತಿಂ ತಸ್ಮೈ ದದೌ ಶಕ್ರೋ ವಿಸ್ಮಿತೋ ವಾಕ್ಯಮಬ್ರವೀತ್ |
ದೇವದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಮ್ ॥47॥
ಯಸ್ಮೈ ಕ್ಷೇಪ್ಸ್ಯಸಿ ರುಷ್ಟಃ ಸನ್ ಸೋಽನಯಾ ನ ಭವಿಷ್ಯತಿ |
ಹತ್ವೈಕಂ ಸಮರೇ ಶತ್ರುಂ ತತೋ ಮಾಮಾಗಮಿಷ್ಯತಿ ॥47॥
ವಿಸ್ಮಿತನಾದ ಇಂದ್ರನು ಆಗ ಅವನಿಗೆ ಶಕ್ತಿಯನ್ನು ಕೊಟ್ಟು ಮಾತನಾಡಿದನು. ದೇವ ದಾನವ ಯಕ್ಷರಲ್ಲಿ, ಗಂಧರ್ವ, ಉರಗ, ರಾಕ್ಷಸರಲ್ಲಿ ನೀನು ಯಾರ ಮೇಲೆ ಕೋಪದಿಂದ ಇದನ್ನು ಪ್ರಯೋಗಿಸುವೆಯೋ ಅವನು ನಾಶವನ್ನು ಹೊಂದುವನು. ಈ ಆಯುಧವು ಯುದ್ಧದಲ್ಲಿ ಒಬ್ಬನನ್ನು ಸಂಹಾರ ಮಾಡಿ ಪುನಃ ನನ್ನ ಕೈಯನ್ನು ಸೇರುವುದು.
ವೈಶಂಪಾಯನಃ
ಪುರಾ ನಾಮ ತು ತಸ್ಯಾಽಽಸೀದ್ ವಸುಷೇಣ ಇತಿ ಸ್ಮೃತಮ್ |
ತತೋ ವೈಕರ್ತನಃ ಕರ್ಣಃ ಸ ತಸ್ಮಾನ್ ಕಾರಣಾದಿತಿ ॥48॥
ಮೊದಲು ಕರ್ಣನಿಗೆ ವಸುಷೇಣ ಎಂಬ ನಾಮವಿದ್ದಿತು. ಈ ಘಟನೆಯು ನಡೆದ ಮೇಲೆ ಈ ಕಾರಣದಿಂದ ಅವನಿಗೆ ವೈಕರ್ತನ (ಶರೀರವನ್ನು ಕತ್ತರಿಸಿಕೊಂಡವನು) ಎಂಬ ನಾಮವು ಬಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಹತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ- ಅಧ್ಯಾಯ-11
ಅಥ ಕುಂತೀ ದತ್ತಾ ಸಾ ಪಾಂಡೋಃ ಸೋಽಪ್ಯೇತಯಾ ಚಿರಂ ರೇಮೇ |
ಶೂರಾಚ್ಛೂದ್ರ್ಯಾಂ ಜಾತಾಂ ವಿದುರೋಽವಹದಾರುಣೀಂ ಗುಣಾಢ್ಯಾಂ ಚ ॥
ಬಳಿಕ ಕುಂತಿ ಪಾಂಡುವಿಗೆ ಕೊಡಲ್ಪಟ್ಟಳು. ಅವನು ಅವಳೊಡನೆ ಬಹುಕಾಲ ರಮಿಸಿದ. ಶೂರನಿಂದ ಶೂದ್ರಸ್ತ್ರೀಯಲ್ಲಿ ಜನಿಸಿದ ಗುಣಾಢ್ಯಳಾದ ಆರುಣಿಯನ್ನು ವಿದುರ ವಿವಾಹವಾದ.
ಅಥ ಚರ್ತಾಯನನಾಮಾ ಮದ್ರೇಶಃ ಶಕ್ರತುಲ್ಯಪುತ್ರಾರ್ಥೀ |
ಕನ್ಯಾರತ್ನಂ ಚೇಚ್ಛಂಶ್ಚಕ್ರೇ ಬ್ರಾಹ್ಮಂ ತಪೋ ವರಂ ಚಾಪ ॥163॥
ಋತಾಯನ ಎಂಬ ಹೆಸರಿನ ಮದ್ರರಾಜ ಇಂದ್ರನಂಥ ಮಗನನ್ನು ಬಯಸಿ ಜೊತೆಗೆ ಕನ್ಯಾರತ್ನವನ್ನೂ ಬಯಸಿ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದ. ವರವನ್ನು ಪಡೆದ.
ಪ್ರಹ್ಲಾದಾವರಜೋ ಯಃ ಸಹ್ಲಾದೋ ನಾಮತೋ ಹರೇರ್ಭಕ್ತಃ |
ಸೋಽಭೂದ್ ಬ್ರಹ್ಮವರಾಂತೇ ವಾಯೋರಾವೇಶಯುಕ್ ಸುತೋ ರಾಜ್ಞಃ॥
ಪ್ರಹ್ಲಾದನ ತಮ್ಮನಾದ ಸಹ್ಲಾದನೆಂಬ ವಿಷ್ಣುಭಕ್ತ ಬ್ರಹ್ಮನಿಂದ ವರ ಪಡೆದು ಮುಖ್ಯಪ್ರಾಣನ ಆವೇಶಯುಕ್ತನಾಗಿ ಋತಾಯನ ರಾಜನ ಮಗನಾಗಿ ಹುಟ್ಟಿದ.
ಸ ಮಾರುತಾವೇಶವಶಾತ್ ಪೃಥಿವ್ಯಾಂ
ಬಲಾಧಿಕೋಽಭೂದ್ ವರತಶ್ಚ ಧಾತುಃ |
ಶಲ್ಯಶ್ಚ ನಾಮ್ನಾಖಿಲಶತ್ರುಶಲ್ಯೋ-
ಬಭೂವ ಕನ್ಯಾಸ್ಯ ಚ ಮಾದ್ರಿನಾಮ್ನೀ ॥165॥
ಅವನು ವಾಯ್ವಾವೇಶದಿಂದಲೂ ಬ್ರಹ್ಮನ ವರದಿಂದಲೂ ಭೂಮಿಯಲ್ಲಿ ಬಲಿಷ್ಠನಾದ. ಎಲ್ಲ ಶತ್ರುಗಳಿಗೂ ಶಲ್ಯದಂತೆ, ಅಂದರೆ ಈಟಿಯಂತೆ ಇದ್ದು ಶಲ್ಯ ಎಂದೆ ಹೆಸರು ಪಡೆದ. ಋತಾಯನನಿಗೆ ಮುಂದೆ ಮಾದ್ರಿ ಎಂಬ ಹೆಸರಿನ ಕನ್ಯೆಯೂ ಜನಿಸಿದಳು.
ಸಾ ಪಾಂಡುಭಾರ್ಯೈವ ಚ ಪೂರ್ವಜನ್ಮನ್ಯಭೂತ್
ಪುನಶ್ಚ ಪ್ರತಿಪಾದಿತಾಸ್ಮೈ |
ಶಲ್ಯಶ್ಚ ರಾಜ್ಯಂ ಪಿತೃದತ್ತಮಂಜೋ
ಜುಗೋಪ ಧರ್ಮೇಣ ಸಮಸ್ತಶಾಸ್ತ್ರವಿತ್ ॥166॥
ಮಾದ್ರಿ ಪೂರ್ವಜನ್ಮದಲ್ಲಿ ಪಾಂಡುವಿನ ಇನ್ನೊಬ್ಬ ಹೆಂಡತಿಯೆ ಆಗಿದ್ದಳು. ಪುನಃ ಅವತಾರದಲ್ಲಿಯೂ ಅವಳನ್ನು ಶಲ್ಯ ಪಾಂಡುವಿಗೆ ಕೊಟ್ಟ. ಸಕಲ ಶಾಸ್ತ್ರ ವೇತ್ತನಾದ ಆತ ತಂದೆ ಕೊಟ್ಟ ರಾಜ್ಯವನ್ನು ಚೆನ್ನಾಗಿ ಧರ್ಮದಿಂದ ಪಾಲಿಸಿದ.
ಅಥಾಂಗನಾರತ್ನಮವಾಪ್ಯ ತದ್ ದ್ವಯಂ
ಪಾಂಡುಸ್ತು ಭೋಗಾನ್ ಬುಭುಜೇ ಯಥೇಷ್ಟತಃ |
ಅಪೀಪಲದ್ ಧರ್ಮಸಮಾಶ್ರಯೋ ಮಹೀಂ
ಜ್ಯೇಷ್ಠಾಪಚಾಯೀ ವಿದುರೋಕ್ತಮಾರ್ಗತಃ ॥167॥
ಆ ಎರಡು ಸ್ತ್ರೀರತ್ನಗಳನ್ನು ಪಡೆದು ಪಾಂಡು ಯಥೇಷ್ಟವಾಗಿ ಭೋಗಗಳನ್ನು ಅನುಭವಿಸಿದ. ಧರ್ಮಾವಲಂಬಿಯಾದ ಆತ ವಿದುರ

ಹೇಳುವ ಮಾರ್ಗದಿಂದ ಅಣ್ಣ ಧೃತರಾಷ್ಟ್ರನಿಗೆ ಸಂಪತ್ತನ್ನು ತಂದುಕೊಡುತ್ತ ರಾಜ್ಯವಾಳಿದ.
ಭೀಷ್ಮೋ ಹಿ ರಾಷ್ಟ್ರೇ ಧೃತರಾಷ್ಟ್ರಮೇವ
ಸಂಸ್ಥಾಪ್ಯ ಪಾಂಡುಂ ಯುವರಾಜಮೇವ |
ಚಕ್ರೇ ತಥಾಪ್ಯಂಧ ಇತಿ ಸ್ಮ ರಾಜ್ಯಂ
ಚಕಾರ ನಾಸಾವಕರೋಚ್ಚ ಪಾಂಡುಃ ॥168॥
ಭೀಷ್ಮ ರಾಜ್ಯದಲ್ಲಿ ಧೃತರಾಷ್ಟ್ರನನ್ನು ಮಹಾರಾಜನನ್ನಾಗಿ ಮಾಡಿದ. ಪಾಂಡುವನ್ನು ಯುವರಾಜನನ್ನಾಗಿಯೂ ಮಾಡಿದ. ಆದರೆ ಧೃತರಾಷ್ಟ್ರ ತಾನು ಅಂಧನಾದ್ದರಿಂದ ರಾಜ್ಯಭಾರವನ್ನು ಕೈಗೊಳ್ಳಲಿಲ್ಲ. ಪಾಂಡುವೆ ಕೈಗೊಂಡ.
ಭೀಷ್ಮಾಂಬಿಕೇಯೋಕ್ತಿಪರಃ ಸದೈವ
ಪಾಂಡುಃ ಶಶಾಸಾವನಿಮೇಕವೀರಃ |
ಅಥಾಂಬಿಕೇಯೋ ಬಹುಭಿಶ್ಚ ಯಜ್ಞೈ-
ರೀಜೇ ಸ ಪಾಂಡುಶ್ಚ ಮಹಾಧನೌಘೈಃ ॥169॥
ಅಪ್ರತಿಮ ವೀರನಾದರೂ ಪಾಂಡು ಸದಾ ಭೀಷ್ಮಧೃತರಾಷ್ಟ್ರರ ಮಾತಿಗೆ ವಿಧೇಯನಾಗಿದ್ದು ಭೂಮಿಯನ್ನು ಆಳಿದ. ಧೃತರಾಷ್ಟ್ರನೂ ಪಾಂಡುವೂ ಮಹಾಧನ ಸಮೂಹಯುಕ್ತವಾದ ಬಹುಯಜ್ಞಗಳನ್ನು ಆಚರಿಸಿದರು.
ನೈಷಾ ವಿರೋಧೇ ಕುರುಪಾಂಡವಾನಾಂ
ತಿಷ್ಠೇದಿತಿ ವ್ಯಾಸ ಉದೀರ್ಣಸದ್ಗುಣಃ |
ಸ್ವಮಾತರಂ ಸ್ವಾಶ್ರಮಮೇವ ನಿನ್ಯೇ
ಸ್ನುಷೇ ಚ ತಸ್ಯಾ ಯಯತುಃ ಸ್ಮ ತಾಮನು ॥170॥
ಮುಂದೆ ಕೌರವ ಪಾಂಡವರೊಳಗೆ ವಿರೋಧ ಉಂಟಾಗುವಾಗ ತನ್ನ ತಾಯಿ ಸತ್ಯವತಿ ಅಲ್ಲಿ ಇರಕೂಡದೆಂದು ಉತ್ತಮ ಸದ್ಗುಣರಾದ ವ್ಯಾಸರು ಅವಳನ್ನು ತನ್ನ ಆಶ್ರಮಕ್ಕೆ ಕರೆದೊಯ್ದರು. ಸೊಸೆಯರಾದ ಅಂಬಿಕಾ ಅಂಬಾಲಿಕೆಯರೂ ಅವಳನ್ನು ಹಿಂಬಾಲಿಸಿದರು.
ಸುತೋಕ್ತಮಾರ್ಗೇಣ ವಿಚಿಂತ್ಯ ತಂ ಹರಿಂ
ಸುತಾತ್ಮನಾ ಬ್ರಹ್ಮತಯಾ ಚ ಸಾ ಯಯೌ |
ಪರಂ ಪದಂ ವೈಷ್ಣವಮೇವ ಕೃಷ್ಣಪ್ರಸಾದತಃ
ಸ್ವರ್ಯಯತುಃ ಸ್ನುಷೇ ಚ ॥171॥
ವ್ಯಾಸರು ಉಪದೇಶಿಸಿದ ಪ್ರಕಾರದಿಂದಲೆ ಸತ್ಯವತಿ ಅವರನ್ನು ಮಗನೆಂದೂ ಪರಬ್ರಹ್ಮನೆಂದೂ ಉಪಾಸನೆ ಮಾಡಿ ಅವರ ಅನುಗ್ರಹದಿಂದ ಉತ್ತಮ ವಿಷ್ಣುಲೋಕವನ್ನೇ ಹೊಂದಿದಳು. ಸೊಸೆಯರು ಸ್ವರ್ಗಲೋಕ ಪಡೆದರು.
ಮಾತಾ ಚ ಸಾ ವಿದುರಸ್ಯಾಪ ಲೋಕಂ
ವೈರಿಂಚಮನ್ವೇವ ಗತಾಂಬಿಕಾಂ ಸತೀ |
ವ್ಯಾಸಪ್ರಸಾದಾತ್ ಸುತಸದ್ಗುಣೈಶ್ಚ ಕಾಲೇನ
ಮುಕ್ತಿಂ ಚ ಜಗಾಮ ಸನ್ಮತಿಃ ॥172॥
ವಿದುರನ ತಾಯಿಯೂ ಅಂಬಿಕೆಯನ್ನು ಹಿಂಬಾಲಿಸಿ ಬಂದು ವ್ಯಾಸರ ಅನುಗ್ರಹದಿಂದಲೂ ಮಗನ ಸದ್ಗುಣಗಳಿಂದಲೂ ಬ್ರಹ್ಮಲೋಕವನ್ನು ಪಡೆದಳು. ಮುಕ್ತಿ ಯೋಗ್ಯಳಾಗಿದ್ದು ಸದ್ಬುದ್ಧಿ ಉಳ್ಳ ಅವಳು ಕಾಲಕ್ರಮದಿಂದ ಮುಕ್ತಿಯನ್ನೂ ಹೊಂದಿದಳು.
ಅಂಬಾಲಿಕಾಪಿ ಕ್ರಮಯೋಗತೋಽಗಾತ್
ಪರಾಂ ಗತಿಂ ನೈವ ತಥಾಂಬಿಕಾ ಯಯೌ |
ಯಥಾ ಯಥಾ ವಿಷ್ಣುಪರಶ್ಚಿದಾತ್ಮಾ
ತಥಾ ತಥಾ ಹ್ಯಸ್ಯ ಗತಿಃ ಪರತ್ರ ॥173॥
ಅಂಬಾಲಿಕೆ ಕ್ರಮವಾಗಿ ಸಾಧನೆ ಮಾಡಿ ಉತ್ತಮವಾದ ವೈಕುಂಠಾದಿ ಲೋಕವನ್ನು ಹೊಂದಿದಳು. ಅಂಬಿಕೆ ಹಾಗೆ ವಿಷ್ಣುಲೋಕವನ್ನು ಹೊಂದಲಿಲ್ಲ. ಜ್ಞಾನಸ್ವರೂಪನಾದ ಜೀವಾತ್ಮ ಹೇಗೆ ಹೇಗೆ ವಿಷ್ಣುಭಕ್ತಿ ಉಳ್ಳವನಾಗುವನೊ ಹಾಗೆ ಹಾಗೇ ಅವನಿಗೆ ಪರಗತಿಯಾಗುತ್ತದೆ.
ಪಾಂಡುಸ್ತತೋ ರಾಜ್ಯಭಾರಂ ನಿಧಾಯ
ಜ್ಯೇಷ್ಠೇಽನುಜೇ ಚೈವ ವನಂ ಜಗಾಮ |
ಪತ್ನೀದ್ವಯೇನಾನುಗತೋ ಬದರ್ಯಾ-
ಮುವಾಸ ನಾರಾಯಣಪಾಲಿತಾಯಾಮ್ ॥174॥
ಬಳಿಕ ಪಾಂಡು ರಾಜ್ಯಭಾರವನ್ನು ಧೃತರಾಷ್ಟ್ರನಲ್ಲಿಯೂ ವಿದುರನಲ್ಲಿಯೂ ಇರಿಸಿ ಇಬ್ಬರು ಪತ್ನಿಯರೊಂದಿಗೆ ಕಾಡಿಗೆ ಹೋದ. ನಾರಾಯಣನಿಂದ ಪಾಲಿತವಾದ ಬದರಿಯಲ್ಲಿ ವಾಸಮಾಡಿದ.
ಗೃಹಾಶ್ರಮೇಣೈವ ವನೇ ನಿವಾಸಂ
ಕುರ್ವನ್ ಸ ಭೋಗಾನ್ ಬುಭುಜೇ ತಪಶ್ಚ |
ಚಕ್ರೇ ಮುನೀಂದ್ರೈಃ ಸಹಿತೋ ಜಗತ್ಪತಿಂ
ರಮಾಪತಿಂ ಭಕ್ತಿಯುತೋಽಭಿಪೂಜಯನ್ ॥175॥
ಗೃಹಸ್ಥಾಶ್ರಮದಿಂದಲೆ ಕಾಡಿನಲ್ಲಿ ವಾಸ ಮಾಡುತ್ತ ಸುಖವನ್ನೂ ಅನುಭವಿಸಿದ, ಮುನಿಶ್ರೇಷ್ಠದಿಂದ ಸಹಿತನಾಗಿ ಜಗದೀಶನಾದ ರಮಾಪತಿಯನ್ನು ಭಕ್ತಿಯುಕ್ತನಾಗಿ ಪೂಜಿಸುತ್ತ ತಪಸ್ಸನ್ನೂ ಆಚರಿಸಿದ.

ಸ ಕಾಮತೋ ಹರಿಣತ್ವಂ ಪ್ರಪನ್ನಂ
ದೈವಾದೃಷ್ಟ್ವಿಂ ಗ್ರಾಮ್ಯಕರ್ಮಾನುಷಕ್ತಮ್ |
ವಿದ್ಧ್ವಾ ಶಾಪಂ ಪ್ರಾಪ ತಸ್ಮಾತ್ ಸ್ತ್ರಿಯಾ ಯುಙ್
ಮರಿಷ್ಯಸೀತ್ಯೇವ ಬಭೂವ ಚಾರ್ತಃ ॥176॥
ದೈವಾತ್ ಸ್ವೇಚ್ಛೆಯಿಂದ ಜಿಂಕೆ ರೂಪ ತಾಳಿ ರತಿಕ್ರೀಡೆಯಲ್ಲಿ ನಿರತನಾಗಿದ್ದ ಒಬ್ಬ ಮುನಿಯನ್ನು ಪಾಂಡು ಬಾಣದಿಂದ ಹೊಡೆದು ಅವನಿಂದ `ಸ್ತ್ರೀಯೊಡನೆ ಕೂಡಿದರೆ ಸಾಯುವಿ' ಎಂದು ಶಾಪವನ್ನು ಹೊಂದಿದ. ದುಃಖಿತನಾದ.
ನ್ಯಸಿಷ್ಣುರುಕ್ತಃ ಪೃಥಯಾ ಸ ನೇತಿ
ಪ್ರಣಾಮಪೂರ್ವಂ ನ್ಯವಸತ್ ತಥೈವ |
ತಾಭ್ಯಾಂ ಸಮೇತಃ ಶತಶೃಂಗಪರ್ವತೇ
ನಾರಾಯಣಸ್ಯಾಶ್ರಮಮಧ್ಯಗೇ ಪುರಃ ॥177॥
ಪಾಂಡು ಸನ್ಯಾಸ ಸ್ವೀಕರಿಸಲು ಬಯಸಿದಾಗ ಕುಂತಿ ನಮಸ್ಕಾರ ಮಾಡಿ `ಬೇಡ' ಎಂದಳು. ಅದರಿಂದ ಅವನು ಗೃಹಸ್ಥಧರ್ಮದಲ್ಲಿದ್ದೇ ಇಬ್ಬರು ಪತ್ನಿಯರ ಸಮೇತನಾಗಿ ಉತ್ತರದಲ್ಲಿ ನಡುವೆ ನಾರಾಯಣಾಶ್ರಮಯುಕ್ತವಾದ ಶತಶೃಂಗ ಪರ್ವತದಲ್ಲಿ ವಾಸಮಾಡಿದ.
ತಪೋ ನಿತಾಂತಂ ಸ ಚಚಾರ ತಾಭ್ಯಾಂ
ಸಮನ್ವಿತಃ ಕೃಷ್ಣಪದಾಂಬುಜಾಶ್ರಯಃ |
ತತ್ಸಂಗಪೂತದ್ಯುಸರಿದ್ವರಾಂಭಃ
ಸದಾವಗಾಹಾತಿಪವಿತ್ರಿತಾಂಗಃ ॥178॥
ಕುಂತಿ ಮಾದ್ರಿಯರಿಂದೊಡಗೂಡಿದ ಪಾಂಡು ಹರಿಯ ಪಾದಕಮಲಗಳನ್ನು ಆಶ್ರಯಿಸಿ ಹರಿಪಾದಸಂಗದಿಂದ ಪವಿತ್ರವಾದ ದೇವನದಿಯ ಉತ್ತಮ ಜಲದಲ್ಲಿ ನಿತ್ಯಸ್ನಾನ ಮಾಡುತ್ತ ಶರೀರ ಪಾವಿತ್ರ್ಯಗಳಿಸಿ ಬಹಳ ತಪಗೈದ.
* * * *
ನೂರ ಹನ್ನೊಂದನೆಯ ಅಧ್ಯಾಯ
(ಪಾಂಡುವಿನ ವಿವಾಹ, ದಿಗ್ವಿಜಯ, ಅರಣ್ಯಗಮನ ಮತ್ತು ಕಿಂದಮಶಾಪ.)
ವೈಶಂಪಾಯನಃ
ರೂಪಶೀಲಗುಣೋಪೇತಾ ಧರ್ಮಕಾಮಾ ನರರ್ಷಭ |
ದುಹಿತಾ ಕುಂತಿಭೋಜಸ್ಯ ಕುಂತೀ ರಾಷ್ಟ್ರೇ ಪತಿಂವರಾ ॥1॥
ಸಿಂಹದಂಷ್ಟ್ರಂ ಮಹಾಬಾಹುಮೃಷಭಾಕ್ಷಂ ಮನಸ್ವಿನಮ್ |
ಪತಿಂ ವವ್ರೇ ಮಹೇಷ್ವಾಸಂ ಪಾಂಡುಂ ಕುಂತೀ ಯಶಸ್ವಿನೀ ॥2॥
ಎಲೈ ನರಶ್ರೇಷ್ಠನೇ, ಕುಂತಿಭೋಜನ ಸಾಕುಮಗಳಾದ ಕುಂತಿಯು, ರೂಪಶೀಲಗುಣಗಳಿಂದ ಕೂಡಿದವಳಾಗಿದ್ದು, ಧರ್ಮಕಾಮಳಾಗಿದ್ದು ತನ್ನ ರಾಷ್ಟ್ರದಲ್ಲಿ ಪತಿಯನ್ನು ವರಿಸುವವಳಾಗಿ ಸಿಂಹದಂಷ್ಟ್ರನೂ, ಮಹಾಬಾಹುವೂ, ವೃಷಭಾಕ್ಷನೂ, ಧೈರ್ಯಶಾಲಿಯೂ, ಧನುರ್ವೇದಜ್ಞನೂ ಆದ ಪಾಂಡುವನ್ನು ಪತಿಯನ್ನಾಗಿ ವರಿಸಿದಳು.
ಭೂಮಿಪಾಲಸಹಸ್ರಾಣಾಮಗ್ರತಃ ಸ ತಯಾ ವೃತಃ |
ಯುಯುಜೇ ಭರತಶ್ರೇಷ್ಠಃ ಪೌಲೋಮ್ಯಾ ಮಘವಾನಿವ ॥3॥
ಅವಳು ಅವನನ್ನು ಸಹಸ್ರಾರು ರಾಜರ ಎದುರಿನಲ್ಲಿ ವರಿಸಿದಳು. ಭರತಶ್ರೇಷ್ಠನಾದ ಪಾಂಡುವು, ಇಂದ್ರನು ಶಚಿಯ ಜೊತೆಯಲ್ಲಿ ಕೂಡಿದಂತೆ, ಅವಳ ಜೊತೆಯಲ್ಲಿ ಕೂಡಿದನು.
ಯಾತ್ವಾ ದೇವವ್ರತೇನಾಪಿ ಮದ್ರಾಣಾಂ ಪುಟಭೇದನಮ್ |
ವಿಶ್ರುತಾ ಸರ್ವಲೋಕೇಷು ಮಾದ್ರೀ ಮದ್ರಪತೇಃ ಸುತಾ ॥4॥
ಸರ್ವರಾಜಸು ವಿಖ್ಯಾತಾ ರೂಪೇಣಾಸದೃಶೀ ಭುವಿ |
ಪಾಂಡೋರರ್ಥೇ ಧನುಷ್ಕ್ರೀತಾ ಮದ್ರರಾಜೇಶ್ವರಾತ್ಮಜಾ ॥5॥
ಭೀಷ್ಮರು ಮದ್ರದೇಶದ ಪಟ್ಟಣಕ್ಕೆ ಹೋಗಿ ಮದ್ರರಾಜನ ಮಗಳಾದ ಅಸದೃಶ ರೂಪವತಿಯಾದ ಸರ್ವಜನರಲ್ಲೂ ಪ್ರಖ್ಯಾತಳಾದ ಮದ್ರರಾಜನ ಮಗಳಾದ ಮಾದ್ರಿಯನ್ನು ಪಾಂಡುವಿನ ಸಲುವಾಗಿ ಧನುರ್ಬಲದಿಂದ ತೆಗೆದುಕೊಂಡು ಬಂದರು.
ವಿವಾಹಂ ಕಾರಯಾಮಾಸ ಭೀಷ್ಮಃ ಪಾಂಡೋರ್ಮಹಾತ್ಮನಃ |
ಸಿಂಹೋರಸ್ಕಂ ಮಹೇಷ್ವಾಸಂ ವೃಷಭಾಕ್ಷಂ ಮನಸ್ವಿನಮ್ ॥6॥
ದೃಷ್ಟ್ವಾ ಪಾಂಡುಂ ನರವ್ಯಾಘ್ರಂ ವ್ಯಸ್ಮಯಂತ ನರಾ ಭುವಿ |
ಕೃತೋದ್ವಾಹಸ್ತದಾ ಪಾಂಡುರ್ಬಲೋತ್ಸಾಹಸಮನ್ವಿತಃ ॥7॥
ಭೀಷ್ಮರು ಮಹಾತ್ಮನಾದ ಪಾಂಡುವಿಗೆ ವಿವಾಹವನ್ನು ಮಾಡಿಸಿದರು. ಸಿಂಹದಂತೆ ವಕ್ಷಸ್ಥಳವುಳ್ಳವನೂ, ದೊಡ್ಡ ಧನುಸ್ಸನ್ನು ಧರಿಸಿದವನೂ, ವೃಷಭನಂತೆ ಕಣ್ಣುಳ್ಳವನೂ, ಧೈರ್ಯಶಾಲಿಯೂ, ನರಶ್ರೇಷ್ಠನೂ ಆದ ಪಾಂಡುವನ್ನು ನೋಡಿ ಭೂಮಿಯಲ್ಲಿ ಜನರು ವಿಸ್ಮಯಪಟ್ಟರು.
ಗೋಪ್ತಾ ಭರತವಂಶಸ್ಯ ಪಾಂಡುಃ ಸರ್ವಾಸ್ತ್ರಕೋವಿದಃ |
ಜಿಗೀಷಮಾಣೋ ವಸುಧಾಂ ಯಯೌ ಶತ್ರೂನನೇಕಶಃ ॥8॥
ಪೂರ್ವಮಾಗಸ್ಕೃತೋ ಯಾತ್ವಾ ದಶಾರ್ಣಾಃ ಸಮರೇ ಹತಾಃ |
ಪಾಂಡುನಾ ನರಸಿಂಹೇನ ಕೌರವಾಣಾಂ ಯಶೋಭೃತಾ ॥9॥

ವಿವಾಹವನ್ನು ಮಾಡಿಕೊಂಡ ಪಾಂಡುವು ಸರ್ವಶಸ್ತ್ರಶಾಸ್ತ್ರ ಕೋವಿದನಾಗಿ, ಭರತವಂಶದ ರಕ್ಷಕನಾಗಿ, ಬಲ ಮತ್ತು ಉತ್ಸಾಹದಿಂದ ಕೂಡಿದವನಾಗಿ, ಭೂಮಿಯನ್ನು ಜಯಿಸುವ ಇಚ್ಛೆಯಿಂದ ಅನೇಕ ಶತ್ರುಗಳ ಮೇಲೆ ದಂಡೆತ್ತಿ ಹೋದನು. ಕೌರವರ ಯಶಸ್ಸನ್ನು ಧರಿಸಿದ್ದ ನರಸಿಂಹನಾದ ಪಾಂಡುವು ದಶಾರ್ಣದೇಶಕ್ಕೆ ಹೋಗಿ ಹಿಂದೆ ತಮಗೆ ಅಪರಾಧವನ್ನು ಮಾಡಿದ್ದ ದಶಾರ್ಣರನ್ನು ಯುದ್ಧದಲ್ಲಿ ಸಂಹರಿಸಿದನು.

ತತಃ ಸೇನಾಮುಪಾದಾಯ ಪಾಂಡುರ್ನಾನಾಯುಧಧ್ವಜಾಮ್ |
ಸಮೃದ್ಧಹಯಪಾದಾತಾಮಪ್ರಮೇಯರಥದ್ವಿಪಾಮ್ ॥10॥
ಗತ್ವಾ ಕಾಶೀಷು ವಂಗೇಷು ಪುಂಡ್ರೇಷು ಚ ನರಾಧಿಪಾನ್ |
ಸ್ವಬಾಹುಬಲವೀರ್ಯೇಣ ಕುರೂಣಾಮಕರೋದ್ ಯಶಃ ॥11॥

ಅನಂತರ ಪಾಂಡುವು ಅನೇಕ ಆಯುಧ ಮತ್ತು ಧ್ವಜಗಳನ್ನು ಹೊಂದಿದ, ಸಮೃದ್ಧವಾದ ಆಯಾ ಪದಾರ್ಥಗಳಿಂದ ಕೂಡಿದ ಬಲಿಷ್ಠವಾದ ಆನೆ ಮತ್ತು ರಥಗಳಿಂದ ಕೂಡಿದ ತನ್ನ ಸೈನ್ಯವನ್ನು ತೆಗೆದುಕೊಂಡು ಕಾಶಿಯಲ್ಲಿ, ವಂಗದೇಶದಲ್ಲಿ ಮತ್ತು ಪುಂಡ್ರದೇಶದಲ್ಲಿ ರಾಜರನ್ನು ಸಂಹರಿಸಿ ತನ್ನ ಬಾಹುಬಲದ ಸಾಮರ್ಥ್ಯದಿಂದ ಕುರುಗಳಿಗೆ ಕೀರ್ತಿಯನ್ನು ತಂದನು.

ಆಗಸ್ಕೃತ್ ಸರ್ವವೀರಾಣಾಂ ವೈರೀ ಸರ್ವಕುರುಕ್ಷಿತಾಮ್ |
ಬಹೂನಾಮಾಗಸಾಂ ಕರ್ತಾ ವೈರೀ ಸರ್ವಮಹೀಕ್ಷಿತಾಮ್ |
ಗೋಪ್ತಾ ಮಗಧರಾಷ್ಟ್ರಸ್ಯ ದಾರ್ವೋ ರಾಜಗೃಹೇ ಹತಃ ॥12॥

ಅನಂತರ ಪಾಂಡುವು ಮಗಧದೇಶದ ರಾಜಧಾನಿಯಾದ ರಾಜಗೃಹಕ್ಕೆ ಹೋಗಿ, ಎಲ್ಲ ವೀರರಿಗೂ ಅಪಚಾರವೆಸಗಿದಂತಹ, ಎಲ್ಲ ಕುರುರಾಜರಿಗೂ ವೈರಿಯಾದಂತಹ, ಅನೇಕ ಅಪರಾಧಗಳನ್ನು ಮಾಡಿದಂತಹ ಎಲ್ಲಾ ರಾಜರಿಗೂ ಶತ್ರುವಾದಂತಹ ಮಗಧಾಧಿಪತಿಯಾದ ದಾರ್ವನನ್ನು (ದೀರ್ಘನನ್ನು) ಕೊಂದನು.

ತತಃ ಕೋಶಂ ಸಮಾದಾಯ ವಾಹನಾನಿ ಬಲಾನಿ ಚ |
ಪಾಂಡುನಾ ಮಿಥಿಲಾಂ ಯಾತ್ವಾ ಮೈಥಿಲಾಃ ಸಮರೇ ಜಿತಾಃ ॥13॥
ತಂ ಶರೌಘಂ ಮಹಾವೇಗಮಸ್ತ್ರಜ್ವಲಿತಪಾವಕಮ್ |
ಪಾಂಡುಮಾಸಾದ್ಯ ರಾಜಾನೋ ನ ಶೇಕುರತಿವರ್ತಿತುಮ್ ॥14॥
ತೇ ಸಸೇನಾಃ ಸಸೇನೇನ ವಿಧ್ವಂಸಿತಮಹಾಬಲಾಃ |
ಪಾಂಡುನಾ ಪೃಥಿವೀಪಾಲಾಃ ಕರಕರ್ಮಸು ಯೋಜಿತಾಃ ॥15॥

ಅನಂತರ ಅವನ ಕೋಶವನ್ನು, ವಾಹನಗಳನ್ನು ಮತ್ತು ಸೈನ್ಯವನ್ನು ತೆಗೆದುಕೊಂಡು ಪಾಂಡುವು ಮಿಥಿಲಾಪಟ್ಟಣಕ್ಕೆ ಹೋಗಿ ಮೈಥಿಲರನ್ನು ಯುದ್ಧದಲ್ಲಿ ಗೆದ್ದನು. ಶರಗಳ ಸಮೂಹವುಳ್ಳ, ಮಹಾವೀರರಿದ್ದ, ಅಸ್ತ್ರಜ್ವಾಲೆಗಳಿಂದ ಪಾವಕನಂತಿರುವ, ಪಾಂಡುವನ್ನು ವಿರೋಧಿಸಿದ ರಾಜರು ಯಾರೂ ಅವನನ್ನು ದಾಟಲು ಸಾಧ್ಯವಾಗಲಿಲ್ಲ. ಪಾಂಡುವು ಮಹಾಬಲಿಷ್ಠರಾದ ಆ ರಾಜರನ್ನೂ, ಅವರ ಸೈನ್ಯವನ್ನೂ ಗೆದ್ದು, ಅವರೆಲ್ಲರೂ ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿದನು.

ತೇನ ತೇ ನಿರ್ಜಿತಾಃ ಸರ್ವೇ ಪೃಥಿವ್ಯಾಂ ರಾಜಸತ್ತಮಾಃ |
ತಮೇಕಂ ಮೇನಿರೇ ಶೂರಂ ದೇವೇಷ್ವಿವ ಪುರಂದರಮ್ ॥16॥

ಅವನಿಂದ ಪರಾಭವವನ್ನು ಹೊಂದಿದ ಭೂಮಿಯ ರಾಜರೆಲ್ಲ ದೇವತೆಗಳಲ್ಲಿ ಇಂದ್ರನಂತೆ ಇವನೊಬ್ಬನೇ ಭೂಮಿಯಲ್ಲಿ ಶೂರನಾದವನು ಎಂದು ತಿಳಿದರು.

ತೇ ಕೃತಾಂಜಲಯಃ ಶೂರಮಾಸಾದ್ಯ ವಸುಧಾಧಿಪಾಃ |
ಅಜಹ್ರುರ್ಧನಧಾನ್ಯಾನಿ ರತ್ನಾನಿ ವಿವಿಧಾನಿ ಚ ॥17॥
ಮಣಿಪ್ರವಾಳಮುಕ್ತಾನಿ ಸುವರ್ಣಂ ರಜತಂ ತಥಾ |
ಗೋರತ್ನಾನ್ಯಶ್ವರತ್ನಾನಿ ರಥರತ್ನಾನಿ ಕುಂಜರಾನ್ ॥18॥
ಖರೋಷ್ಟ್ರಮಹಿಷಾನ್ ಗಾಶ್ಚ ಯಚ್ಚ ಕಿಂಚಿದಜಾವಿಕಮ್ |
ತತ್ಸರ್ವಂ ಪ್ರತಿಜಗ್ರಾಹ ರಾಜಾ ನಾಗಪುರಾಧಿಪಃ ॥19॥

ಆ ರಾಜರು ಪಾಂಡುವಿಗೆ ಕೈ ಮುಗಿದು ಧನಧಾನ್ಯಗಳನ್ನೂ, ಅನೇಕ ವಿಧವಾದ ರತ್ನಗಳನ್ನೂ, ಮುತ್ತುಹವಳ ಮಣಿಗಳನ್ನೂ, ಚಿನ್ನ ಮತ್ತು ಬೆಳ್ಳಿಯನ್ನೂ ಕಪ್ಪವಾಗಿ ತಂದರು. ಶ್ರೇಷ್ಠವಾದ ಗೋವುಗಳು, ಶ್ರೇಷ್ಠವಾದ ಅಶ್ವಗಳು, ಶ್ರೇಷ್ಠವಾದ ರಥ ಮತ್ತು ಆನೆಗಳು, ಕತ್ತೆಗಳು, ಒಂಟೆಗಳು, ಮಹಿಷಗಳು, ಗೋವುಗಳು, ಆಡುಗಳು ಮತ್ತು ಕುರಿಗಳು ಎಲ್ಲವನ್ನೂ ಹಸ್ತಿನಪುರದ ಅಧಿಪತಿಯಾದ ಪಾಂಡುವು ಸ್ವೀಕರಿಸಿದನು.

ತದಾದಾಯ ಯಯೌ ಪಾಂಡುರ್ಭೃಶಂ ಮುದಿತವಾಹನಃ |
ಹರ್ಷಯನ್ ಸರ್ವರಾಷ್ಟ್ರಾಣಿ ಸ್ವಪುರಂ ಗಜಸಾಹ್ವಯಮ್ ॥20॥

ಅವೆಲ್ಲವನ್ನೂ ತೆಗೆದುಕೊಂಡು ಸಂತೋಷಗೊಂಡ ವಾಹನವುಳ್ಳವನಾಗಿ ಪಾಂಡುವು ಎಲ್ಲ ರಾಷ್ಟ್ರಗಳಿಗೂ ಸಂತೋಷವನ್ನುಂಟು ಮಾಡುತ್ತಾ ತನ್ನ ಹಸ್ತಿನಪುರಕ್ಕೆ ಹೊರಟನು.

ಶಂತನೋ ರಾಜಸಿಂಹಸ್ಯ ಭರತಸ್ಯ ಚ ಧೀಮತಃ |
ನಷ್ಟಾ ಕೀರ್ತಿಃ ಸ್ವವಂಶಸ್ಯ ಪಾಂಡುನಾ ಪುನರುದ್ಧೃತಾ ॥21॥

ರಾಜಸಿಂಹನಾದ ಶಂತನುವಿನ ಮತ್ತು ಮೇಧಾವಿಯಾದ ಭರತನ ಕೀರ್ತಿಯು ಮೊದಲು ನಷ್ಟವಾಗಿದ್ದು ಈಗ ಅದೇ ವಂಶದ ಪಾಂಡುವಿನಿಂದ ಉದ್ಧಾರ ಮಾಡಲ್ಪಟ್ಟಿತು.

ಯೇ ಪೂರ್ವಾಪರರಾಷ್ಟ್ರಾಣಿ ಜಹ್ರುಃ ಪರಧನಾನಿ ಚ |

ತೇ ನಾಗಪುರಸಿಂಹೇನ ಪಾಂಡುನಾ ವಶಗಾಃ ಕೃತಾಃ |
ಇತ್ಯಭಾಷಂತ ರಾಷ್ಟ್ರಾಣಿ ಭೂಮಿಪಾಲಾಶ್ಚ ಸಂಗತಾಃ ॥22॥
ಯಾರು ತಮ್ಮ ಅಕ್ಕಪಕ್ಕದ ರಾಷ್ಟ್ರಗಳನ್ನೂ ಮತ್ತು ಅವರ ಸಂಪತ್ತನ್ನೂ ಕಸಿದುಕೊಂಡರೋ, ಅವರೆಲ್ಲರೂ ಹಸ್ತಿನಾಪುರಸಿಂಹನಾದ ಪಾಂಡುವಿನಿಂದ ವಶಕ್ಕೆ ತೆಗೆದುಕೊಳ್ಳಲ್ಪಟ್ಟರು ಎಂದು ಎಲ್ಲ ರಾಷ್ಟ್ರಗಳು ಮತ್ತು ರಾಜರು ಒಟ್ಟಿಗೆ ಸೇರಿ ಮಾತನಾಡುತ್ತಿದ್ದರು.
ಅಭ್ಯನಂದಂಶ್ಚ ವೈ ಪಾಂಡುಮಾಶೀರ್ವಾದೈಃ ಪೃಥಗ್ವಿಧೈಃ |
ಪ್ರಸನ್ನಮನಸಾ ಹೃಷ್ಟಾಃ ಪಾಂಡುಂ ವೈ ಕುರುಭಿಃ ಸಹ |
ಪ್ರತ್ಯುದ್ಯಯುಸ್ತಂ ಪ್ರಹೃಷ್ಟಾಶ್ಚ ಸರ್ವೇ ಭೀಷ್ಮಪುರಃಸರಾಃ ॥23॥
ಭೀಷ್ಮ ಮೊದಲಾದವರು ಅನೇಕ ವಿಧವಾದ ಆಶೀರ್ವಚನಗಳಿಂದ ಅಭಿನಂದಿಸಿದರು. ಅವರೆಲ್ಲರೂ ಪ್ರಸನ್ನಮನಸ್ಸಿನಿಂದ ಕೂಡಿದವರಾಗಿ, ಸಂತೋಷಗೊಂಡವರಾಗಿ ಪಾಂಡುವನ್ನು ಎದುರುಗೊಳ್ಳಲು ಮುಂದೆ ಬಂದರು.
ತೇ ತ್ವದೀರ್ಘಮಿವಾಯಾಂತಂ ಗತ್ವಾ ನಾಗಪುರಾಲಯಾಃ |
ಆವೃತಂ ದದೃಶುರ್ಲೋಕಾ ಹೃಷ್ಟಾ ಬಹುವಿಧೈರ್ಧನೈಃ |
ನಾನಾಯಾನಸಮಾನೀತೈ ರತ್ನೈರುಚ್ಚಾವಚೈಸ್ತಥಾ ॥24॥
ಅವರು ಮತ್ತು ಹಸ್ತಿನಾಪುರವಾಸಿಗಳು ನಗರಕ್ಕೆ ಸಮೀಪದಲ್ಲಿ ಬರುತ್ತಿದ್ದ ಪಾಂಡುವನ್ನು ನೋಡಿ ಅವನು ಬಹು ವಿಧವಾದ ಧನದಿಂದ ಕೂಡಿರುವುದನ್ನು ನೋಡಿ ಸಂತೋಷಪಟ್ಟರು.
ಅಜಾವಿಕಾಶ್ವಸಂಘಾನಾಮುಷ್ಟ್ರಗೋಮಹಿಷಸ್ಯ ಚ |
ನಾಂತಂ ದದೃಶುರಾಸಾದ್ಯ ಭೀಷ್ಮೇಣ ಸಹ ಕೌರವಾಃ ॥25॥
ಅನೇಕ ವಾಹನಗಳಲ್ಲಿ ತೆಗೆದುಕೊಂಡು ಬಂದ ಅನೇಕ ವಿಧವಾದ ರತ್ನಗಳಿಗೂ, ಅಜ, ಆವಿಕ, ಅಶ್ವ ಮೊದಲಾದವುಗಳಿಗೂ, ಗೋವು, ಮಹಿಷ ಮತ್ತು ಒಂಟೆಗಳಿಗೂ ಎಲ್ಲೆಯನ್ನೇ ಕಾಣದೆ, ಭೀಷ್ಮರ ಮತ್ತು ಉಳಿದ ಕೌರವರ ಜೊತೆಯಲ್ಲಿ ಎಲ್ಲರೂ ಸಂತೋಷಪಟ್ಟರು.
ಸೋಽಭಿವಾದ್ಯ ಪಿತುಃ ಪಾದೌ ಕೌಸಲ್ಯಾನಂದವರ್ಧನಃ |
ಯಥಾರ್ಹಂ ಮಾನಯಾಮಾಸ ಪೌರಜಾನಪದಾನಪಿ ॥26॥
ಕೌಸಲ್ಯಾನಂದವರ್ಧನನಾದ ಪಾಂಡುವು ತಂದೆಯಾದ ಭೀಷ್ಮನ ಪಾದಗಳಿಗೆ ನಮಸ್ಕರಿಸಿ ಪೌರರನ್ನು ಮತ್ತು ಜಾನಪದರನ್ನು ಯಥೋಚಿತವಾಗಿ ಸನ್ಮಾನಿಸಿದನು.
ಪ್ರಮೃದ್ಯ ಪರರಾಷ್ಟ್ರಾಣಿ ಕೃತಾರ್ಥಂ ಪುನರಾಗತಮ್ |
ಪುತ್ರಮಾಸಾದ್ಯ ಭೀಷ್ಮಸ್ತು ಹರ್ಷಾದಶ್ರೂಣ್ಯವರ್ತಯತ್ ॥27॥
ಪರರಾಷ್ಟ್ರಗಳನ್ನು ಪರಾಭವಗೊಳಿಸಿ ಕೃತಾರ್ಥನಾಗಿ ಹಿಂದೆ ಬಂದ ಪುತ್ರನನ್ನು ನೋಡಿ ಭೀಷ್ಮರು ಆನಂದಬಾಷ್ಪವನ್ನು ಸುರಿಸಿದರು.

ಸ ತೂರ್ಯಶಂಖಸ್ವನಾಂಶ್ಚ ಭೇರೀಣಾಂ ಚ ಮಹಾಸ್ವನೈಃ |
ಹರ್ಷಯನ್ ಸರ್ವಭೂತಾನಿ ವಿವೇಶ ಗಜಸಾಹ್ವಯಮ್ ॥28॥
ಪಾಂಡುವು ಶಂಖತೂರ್ಯನಿನಾದಗಳಿಂದಲೂ, ಮಹಾಸ್ವನವುಳ್ಳ ಭೇರಿಗಳ ನಿನಾದಗಳಿಂದಲೂ ಎಲ್ಲರನ್ನೂ ಸಂತೋಷಪಡಿಸುತ್ತಾ ಹಸ್ತಿನಪುರವನ್ನು ಪ್ರವೇಶಿಸಿದನು.
ಧೃತರಾಷ್ಟ್ರಾಭ್ಯನುಜ್ಞಾತಃ ಸ್ವಬಾಹುವಿಜಿತಂ ಧನಮ್ |
ಭೀಷ್ಮಾಯ ಸತ್ಯವತ್ಯೈ ಚ ಮಾತ್ರೇ ಚೋಪಜಹಾರ ತತ್ ॥29॥
ಧೃತರಾಷ್ಟ್ರನ ಅನುಮತಿಯನ್ನು ಪಡೆದು ತನ್ನ ಬಾಹುಬಲದಿಂದ ಸಂಪಾದಿಸಿದ ಧನವನ್ನು ಭೀಷ್ಮರಿಗೂ, ಸತ್ಯವತಿಗೂ, ತನ್ನ ತಾಯಿಯರಿಗೂ ಸಮರ್ಪಿಸಿದನು.
ವಿದುರಾಯ ಚ ವೈ ಪಾಂಡುಃ ಪ್ರೇಷಯಾಮಾಸ ತದ್ಧನಮ್ |
ಸುಹೃದಶ್ಚಾಪಿ ಧರ್ಮಾತ್ಮಾ ಧನೇನ ಸಮತರ್ಪಯತ್ ॥30॥
ಧರ್ಮಾತ್ಮನಾದ ಪಾಂಡುವು ವಿದುರನಿಗೂ ಧನವನ್ನು ಕಳುಹಿಸಿ ತನ್ನ ವಿಶ್ವಾಸಪಾತ್ರರೆಲ್ಲರನ್ನೂ ಧನದಿಂದ ಸಂತೋಷಪಡಿಸಿದನು.
ತತಃ ಸತ್ಯವತೀ ಭೀಷ್ಮಃ ಕೌಸಲ್ಯಾ ಚ ಯಶಸ್ವಿನೀ |
ಶುಭೈಃ ಪಾಂಡುಜಿತೈ ರತ್ನೈರ್ಭೃಶಂ ತುತುಷುರಾಹೃತೈಃ ॥31॥
ಆಗ ಸತ್ಯವತಿಯೂ, ಭೀಷ್ಮರೂ, ಕೀರ್ತಿಶಾಲಿನಿಯಾದ ಅಂಬಾಲಿಕೆಯೂ, ಪಾಂಡುವು ಯುದ್ಧದಲ್ಲಿ ಗೆದ್ದು ತೆಗೆದುಕೊಂಡು ಬಂದಂತಹ ಶುಭರತ್ನಗಳನ್ನು ನೋಡಿ ಬಹಳ ಸಂತೋಷಪಟ್ಟರು.
ನನಂದ ಮಾತಾ ಕೌಸಲ್ಯಾ ತಮಪ್ರತಿಮತೇಜಸಮ್ |
ಜಯಂತಮಿವ ಪೌಲೋಮೀ ಪರಿಷ್ವಜ್ಯ ನರರ್ಷಭಮ್ ॥32॥
ತಾಯಿಯಾದ ಅಂಬಾಲಿಕೆಯು ಮಹಾಪರಾಕ್ರಮಶಾಲಿಯಾದ ಆ ನರಶ್ರೇಷ್ಠನನ್ನು ಆಲಿಂಗಿಸಿ ಜಯಂತನನ್ನು ನೋಡಿ ಶಚಿಯು ಸಂತೋಷಪಡುವಂತೆ ಆನಂದಪರವಶಳಾದಳು.
ತಸ್ಯ ವೀರಸ್ಯ ವಿಕ್ರಾಂತೈಃ ಸಹಸ್ರಶತದಕ್ಷಿಣೈಃ |
ಅಶ್ವಮೇಧಶತೈರೀಜೇ ಧೃತರಾಷ್ಟ್ರೋ ಮಹಾಮಖೈಃ ॥33॥
ಆ ವೀರನ ಪರಾಕ್ರಮದಿಂದ ಬಂದ ಧನದಿಂದ ಧೃತರಾಷ್ಟ್ರನು ಸಹಸ್ರಶತದಕ್ಷಿಣೆಗಳನ್ನು ಕೊಟ್ಟು ಅಶ್ವಮೇಧ ಮೊದಲಾದ ಮಹಾಯಾಗಗಳನ್ನು ನೂರರ ಸಂಖ್ಯೆಯಲ್ಲಿ ಮಾಡಿದನು.
ಸಂಪ್ರಯುಕ್ತಶ್ಚ ಕುಂತ್ಯಾ ಚ ಮಾದ್ರ್ಯಾ ಚ ಸತತಂ ನೃಪಃ |

ಜಿತೇಂದ್ರಿಯಸ್ತದಾ ಪಾಂಡುರ್ಬಭೂವ ವನಗೋಚರಃ ॥34॥
ಅನಂತರ ಪಾಂಡುರಾಜನು ಯಾವಾಗಲೂ ಕುಂತಿ ಮತ್ತು ಮಾದ್ರಿಯರಿಂದ ಒಡಗೂಡಿದವನಾಗಿದ್ದು ಜಿತೇಂದ್ರಿಯನಾಗಿ ಕಾಡಿನಲ್ಲಿ ವಾಸಿಸಲು ಪ್ರಾರಂಭಿಸಿದನು.
ಹಿತ್ವಾ ಪ್ರಾಸಾದಪಂಕ್ತೀಶ್ಚ ಶುಭಾನಿ ಶಯನಾನಿ ಚ |
ಚಾಪಪಾಣಿರ್ಮೃಗಾನ್ ನಿಘ್ನನ್ ಬಭೂವ ಮೃಗಯಾಪರಃ ॥35॥
ಅವನು ಉಪ್ಪರಿಗೆ ಅರಮನೆಗಳನ್ನು, ಮೃದುವಾದ ಶುಭ್ರವಾದ ಹಾಸಿಗೆಗಳನ್ನು ಬಿಟ್ಟು, ಕೈಯಲ್ಲಿ ಬಿಲ್ಲನ್ನು ಹಿಡಿದು ಮೃಗಗಳ ಬೇಟೆಯಾಡುತ್ತಾ ಬೇಟೆಯಾಡುವುದರಲ್ಲೇ ತತ್ಪರನಾದನು.
ಸ ಚರನ್ ದಕ್ಷಿಣಂ ಪಾರ್ಶ್ವಂ ರಮ್ಯಂ ಹಿಮವತೋ ಗಿರೇಃ |
ಉವಾಸ ಗಿರಿಶೃಂಗೇಷು ಮಹಾಸಾಲವನೇಷು ಚ ॥36॥
ಅವನು ಹಿಮಾಲಯಪರ್ವತದ ಸುಂದರವಾದ ದಕ್ಷಿಣಪಾರ್ಶ್ವದಲ್ಲಿಯೂ, ಪರ್ವತಶಿಖರಗಳಲ್ಲಿಯೂ, ಸಾಲವೃಕ್ಷಗಳ ಮಹಾವನಗಳಲ್ಲಿಯೂ ವಾಸ ಮಾಡಿದನು.
ಬಭೂವ ಕುಂತ್ಯಾ ಮಾದ್ರ್ಯಾ ಚ ಪಾಂಡುಃ ಸಹ ವನೇಚರಃ |
ಗಜರಾಜಃ ಕರೇಣುಭ್ಯಾಂ ಯಥಾ ಮಧ್ಯಗತಸ್ತಥಾ ॥37॥
ಗಜರಾಜನು ಎರಡು ಹೆಣ್ಣಾನೆಗಳ ಮಧ್ಯದಲ್ಲಿ ವನದಲ್ಲಿ ಸಂಚರಿಸಿದಂತೆ ಪಾಂಡುವು ಕುಂತಿ ಮತ್ತು ಮಾದ್ರಿಯರಿಂದ ಸಹಿತನಾಗಿ ಕಾಡಿನಲ್ಲಿ ಸಂಚರಿಸಿದನು.
ಚರಂತಂ ಸಹ ಭಾರ್ಯಾಭ್ಯಾಂ ಬಾಣಖಡ್ಗಧನುರ್ಧರಮ್ |
ವಿಚಿತ್ರಕವಚಂ ವೀರಂ ಪರಮಾಸ್ತ್ರವಿದಂ ನೃಪಮ್ |
ದೇವೋಽಯಮಿತ್ಯಮನ್ಯಂತ ಚರಂತೋ ವನವಾಸಿನಃ ॥38॥
ಕಾಡಿನಲ್ಲಿ ಪತ್ನಿಯರ ಜೊತೆಯಲ್ಲಿ ಬಾಣ, ಖಡ್ಗ ಮತ್ತು ಧನುಸ್ಸುಗಳನ್ನು ಹಿಡಿದು ವಿಚಿತ್ರ ಕವಚವನ್ನು ಧರಿಸಿ ಸಂಚರಿಸುವ ಪರಮಾಸ್ತ್ರಜ್ಞನಾದ ರಾಜನನ್ನು ನೋಡಿ ವನದಲ್ಲಿ ಸಂಚರಿಸುವ ವನವಾಸಿಗಳೆಲ್ಲರೂ ಅವನೊಬ್ಬ ದೇವತೆಯೆಂದು ತಿಳಿದರು.
ತಸ್ಯ ಕಾಮಾಂಶ್ಚ ಭೋಗಾಂಶ್ಚ ನರಾ ನಿತ್ಯಮತಂದ್ರಿತಾಃ |
ಅನುಜಹ್ರುರ್ವನಾಂತೇಷು ಧೃತರಾಷ್ಟ್ರಪ್ರಚೋದಿತಾಃ ॥39॥
ಧೃತರಾಷ್ಟ್ರನ ಪ್ರೇರಣೆಯಂತೆ ಸೇವಕ ಜನರು ಪ್ರತಿನಿತ್ಯವೂ ಆಲಸ್ಯವನ್ನು ಮಾಡದೆ ಅವನಿಗೆ ಬೇಕಾದ ಕಾಮಗಳನ್ನು ಮತ್ತು ಭೋಗಗಳನ್ನು ಕಾಡಿನ ಅಂಚಿಗೆ ತೆಗೆದುಕೊಂಡು ಹೋಗಿ ಕೊಡುತ್ತಿದ್ದರು.
ತದಾಸಾದ್ಯ ಮಹಾರಣ್ಯಂ ಮೃಗವ್ಯಾಳನಿಷೇವಿತಮ್ |
ತತ್ರ ಮೈಥುನಕಾಲಸ್ಥಂ ದದರ್ಶ ಮೃಗಯೂಥಪಮ್ ॥40॥
ಒಮ್ಮೆ ಪಾಂಡುವು ಮೃಗಗಳು ಮತ್ತು ವ್ಯಾಳಗಳಿಂದ ಕೂಡಿದ್ದ ದೊಡ್ಡ ಕಾಡನ್ನು ಪ್ರವೇಶಿಸಿ ಅಲ್ಲಿ ಮೈಥುನಕ್ರಿಯೆಯಲ್ಲಿ ನಿರತನಾಗಿದ್ದ ಗಂಡು ಜಿಂಕೆಯನ್ನು ನೋಡಿದನು.
ತತಸ್ತಂ ಚ ಮೃಗೀಂ ಚೈವ ರುಗ್ಮಪುಂಖೈಃ ಸವಾಜಿಭಿಃ |
ನಿರ್ಬಿಭೇದ ಶರೈಸ್ತೂರ್ಣಂ ಪಾಂಡುಃ ಪಂಚಭಿರಾಯಸೈಃ ॥41॥
ಆಗ ಪಾಂಡುವು ಚಿನ್ನದ ಗರಿಗಳನ್ನು ಹೊಂದಿದ್ದ ಐದು ಕಬ್ಬಿಣದ ಬಾಣಗಳಿಂದ ಆ ಗಂಡು ಮತ್ತು ಹೆಣ್ಣು ಜಿಂಕೆಯನ್ನು ನಿರ್ಭೇದ ಮಾಡಿದನು.
ಸ ಚ ರಾಜನ್ ಮಹಾತೇಜಾ ಋಷಿಪುತ್ರಸ್ತಪೋಯುತಃ |
ಭಾರ್ಯಯಾ ಸಹ ತೇಜಸ್ವೀ ಮೃಗರೂಪೇಣ ಸಂಗತಃ ॥42॥
ಸ ಸಂಯುಕ್ತಸ್ತಥಾ ಮೃಗ್ಯಾ ಮಾನುಷೀಂ ವಾಚಮೀರಯನ್ |
ಕ್ಷಣೇನ ಪತಿತೋ ಭೂಮೌ ವಿಲಲಾಪಾತುರೋ ಮೃಗಃ ॥43॥
ಆ ಜಿಂಕೆಯಾದರೋ ಮಹಾತೇಜಸ್ವಿಯಾದ ಮತ್ತು ತಪಸ್ವಿಯಾದ ಋಷಿಪುತ್ರ. ಅವನು ಮೃಗರೂಪವನ್ನು ಧರಿಸಿದ ತನ್ನ ಪತ್ನಿಯ ಜೊತೆಯಲ್ಲಿ ಮೈಥುನದಲ್ಲಿ ಸಂಗತನಾಗಿದ್ದನು. ಅಂತಹ ಅವಸ್ಥೆಯಲ್ಲಿದ್ದ ಅವನು ಒಂದು ಕ್ಷಣದಲ್ಲಿ ಭೂಮಿಗೆ ಬಿದ್ದು ಸಂಕಟದಿಂದ ಮನುಷ್ಯರ ಮಾತಿನಲ್ಲಿ ಪ್ರಲಾಪವನ್ನು ಪ್ರಾರಂಭಿಸಿದನು.
ಮೃಗಃ
ಕಾಮಮನ್ಯುವಶಂ ಪ್ರಾಪ್ತಾ ಬುದ್ಧ್ಯಂತರಗತಾ ಅಪಿ |
ವರ್ಜಯಂತಿ ನೃಶಂಸಾನಿ ಪಾಪೇಷ್ವಭಿರತಾ ಜನಾಃ ॥44॥
ಕಾಮಕ್ರೋಧವಶರಾದವರು, ಪ್ರಮಾದ ಮೊದಲಾದವಕ್ಕೆ ಒಳಗಾದವರು, ಪಾಪಗಳಲ್ಲಿ ಅಭಿರತರಾದವರೂ ಸಹ ಕ್ರೂರಕರ್ಮಗಳನ್ನು ಮಾಡುವುದರಿಂದ ಹಿಂದೆ ಸರಿಯುತ್ತಾರೆ.
ನ ವಿಧಿಂ ಗ್ರಸತೇ ಪ್ರಜ್ಞಾ ಪ್ರಜ್ಞಾಂ ತು ಗ್ರಸತೇ ವಿಧಿಃ |
ವಿಧಿಪರ್ಯಾಗತಾನರ್ಥಾನ್ ಪ್ರಜ್ಞಯಾ ಪರಿಪಶ್ಯತಿ ॥45॥
ಮನುಷ್ಯನ ಎಷ್ಟೇ ಶ್ರೇಷ್ಠವಾದ ಬುದ್ಧಿಯೂ ಸಹ ವಿಧಿಯ ಬರಹವನ್ನು ಮೀರಲಾರದು. ಆದರೆ ವಿಧಿಯು ಮಾತ್ರ ಮನುಷ್ಯನ ಪ್ರಜ್ಞೆಯನ್ನು ಮೀರುತ್ತದೆ. ವಿಧಿಯ ಆದೇಶದಿಂದ ಬಂದ ಅರ್ಥಗಳನ್ನು ಮನುಷ್ಯನು ಪ್ರಜ್ಞೆಯಿಂದ ವಿಚಾರ ಮಾಡಬೇಕು.
ತಸ್ಮಾದ್ ಧರ್ಮಾತ್ಮನೋ ಮುಖ್ಯೇ ಕುಲೇ ಜಾತಸ್ಯ ಭಾರತ |
ಕಾಮಲೋಭಾಭಿಭೂತಸ್ಯ ಕಸ್ಮಾತ್ ತೇ ಚಲಿತಾ ಮತಿಃ ॥46॥

ಎಲೈ ಭಾರತನೇ, ಶ್ರೇಷ್ಠವಾದ ಕುಲದಲ್ಲಿ ಜನಿಸಿದ ಧರ್ಮಾತ್ಮನಾದ ನಿನ್ನ ಬುದ್ಧಿಯು ಕಾಮ ಲೋಭಗಳಿಗೆ ವಶವಾಗಿ ಏಕೆ ಸನ್ಮಾರ್ಗದಿಂದ ಚಲಿಸಿತು?
ಪಾಂಡುಃ
ಯಾ ವೈ ಶತ್ರುವಧೇ ವೃತ್ತಿಃ ಸಾ ಮೃಗಾಣಾಂ ವಧೇ ಧ್ರುವಾ |
ರಾಜ್ಞಾಂ ಮೃಗ ವಿಜಾನೀಹಿ ಕಿಂ ತ್ವಂ ಮೋಹಾದ್ ವಿಗರ್ಹಸೇ ॥47॥
ಎಲೈ ಮೃಗವೇ, ರಾಜರಿಗೆ ಶತ್ರುವಧೆಯ ವಿಷಯದಲ್ಲಿ ಯಾವ ನಡವಳಿಕೆಯೋ, ಮೃಗಗಳನ್ನು ಕೊಲ್ಲುವ ವಿಷಯದಲ್ಲಿಯೂ ನಿಶ್ಚಯವಾಗಿ ಅದೇ ಇರುತ್ತದೆ. ಇದು ರಾಜಧರ್ಮ. ಮೋಹದಿಂದ ಏತಕ್ಕೆ ನನ್ನನ್ನು ನಿಂದಿಸುತ್ತಿರುವೆ?
ಅಮಾಯಯಾ ಹ್ಯಚ್ಛಲೇನ ಮೃಗಾಣಾಮಿಷುಧಾರಿಭಿಃ |
ವಧ ಏವ ಭವೇದ್ ಧರ್ಮಃ ತದ್ವಿದ್ವಾನ್ ಕಿಂ ವಿಗರ್ಹಸೇ ॥48॥
ಅಮಾಯೆಯಿಂದ, ಶುದ್ಧವಾದ ಬಾಣಗಳಿಂದ ಮೃಗಗಳ ವಧೆಯು ಧರ್ಮವೇ ಆಗುತ್ತದೆ. ಅದನ್ನು ತಿಳಿದ ನೀನು ಏತಕ್ಕೆ ನನ್ನನ್ನು ನಿಂದಿಸುತ್ತಿರುವೆ.
ಅಗಸ್ತ್ಯಃ ಸತ್ರಮಾಸೀನಃ ಚಚಾರ ಮೃಗಯಾಮೃಷಿಃ |
ಆರಣ್ಯಾನ್ ಸರ್ವದೈವತ್ಯಾನ್ ಪಶೂನ್ ಪ್ರೇಕ್ಷ್ಯ ಮಹಾವನೇ ॥49॥
ಸತ್ರಯಾಗದಲ್ಲಿ ಆಸೀನರಾಗಿದ್ದ ಅಗಸ್ತ್ಯರು ಮಹಾವನದಲ್ಲಿ ಸರ್ವದೇವತಾಯೋಗ್ಯವಾದ ವನ್ಯಪಶುಗಳನ್ನು ನೋಡಿ ಬೇಟೆಯಾಡಿದರು.
ಪ್ರಮಾಣದೃಷ್ಟಂ ಧರ್ಮಸ್ಯ ಶಾಸ್ತ್ರಂ ಕಿಂ ತ್ವಂ ವಿಗರ್ಹಸೇ |
ಅಗಸ್ತ್ಯಸ್ಯಾಭಿಚಾರೇಣ ಯುಷ್ಮಾಕಂ ಹಿ ವಪಾ ಹೃತಾ ॥50॥
ಇದು ಪ್ರಮಾಣದೃಷ್ಟವಾದ ಧರ್ಮಶಾಸ್ತ್ರದ ತತ್ವ. ನೀನು ಏತಕ್ಕೆ ನಿಂದಿಸುತ್ತಿರುವೆ? ಅಗಸ್ತ್ಯರಿಗೆ ಮಾಡಿದ ಅಪಚಾರದಿಂದ ನಿಮ್ಮ ಎದೆ ಮತ್ತು ಕರುಳಿನ ಮಧ್ಯದಲ್ಲಿರುವ ವಪೆಯನ್ನು ತೆಗೆದು ಹೋಮ ಮಾಡಲಾಗುತ್ತದೆ.
ರಿಪೂನೇವ ಸಮುದ್ದಿಶ್ಯ ವಿಮುಂಚಂತಿ ಪುನಃಶರಾನ್ |
ನ ರಿಪೂಣಾಂ ಸಮಾಧಾನಂ ಪ್ರತೀಕ್ಷಂತೇ ಪುರಾತನಾಃ ॥51॥
ರಾಜರು ಶತ್ರುವನ್ನು ಉದ್ದೇಶಿಸಿ ಬಾಣಗಳನ್ನು ಪ್ರಯೋಗಿಸುತ್ತಾರೆ. ಪ್ರಾಚೀನರು, ರಿಪುಗಳು ಸಮಾಧಾನದಿಂದ ಇದ್ದಾರೆಯೇ, ಇಲ್ಲವೇ ಎಂದು ಬಾಣ ಬಿಡುವಾಗ ಗಮನಿಸುತ್ತಿರಲಿಲ್ಲ.
ರಂಧ್ರ ಏಷಾಂ ವಿಶೇಷೇಣ ವಧಕಾಲಃ ಪ್ರಶಸ್ಯತೇ |
ಪ್ರಮತ್ತಮಪ್ರಮತ್ತಂ ವಾ ನಿಕೃತ್ಯಾ ಘ್ನಂತಿ ಚೌಜಸಾ |
ಉಪಾಯೈರಿಷುಭಿಸ್ತೀಕ್ಷ್ಣೈರ್ಮೃಗ ಕಸ್ಮಾದ್ ವಿಗರ್ಹಸೇ ॥52॥
ಅವರ ದೌರ್ಬಲ್ಯದ ಕಾಲವೇ ವಧಕಾಲ ಎಂದು ವಿಶೇಷವಾಗಿ ಹೇಳಲ್ಪಡುತ್ತದೆ. ಪ್ರಮತ್ತನಾಗಿರಲಿ ಅಥವಾ ಅಪ್ರಮತ್ತನಾಗಿರಲಿ ಅಂತಹವನನ್ನು ತಮ್ಮ ಪರಾಕ್ರಮದಿಂದ, ಉಪಾಯಗಳಿಂದ, ಮೋಸದಿಂದ ಅಥವಾ ತೀಕ್ಷ್ಣವಾದ ಬಾಣಗಳಿಂದ ಕೊಲ್ಲುತ್ತಾರೆ. ಆದ್ದರಿಂದ ಎಲೈ ಮೃಗವೇ ಏಕೆ ನನ್ನನ್ನು ನಿಂದಿಸುತ್ತಿದ್ದೀಯೆ?
ಮೃಗಃ
ನಾಹಂ ಘ್ನಂತಂ ಮೃಗಾನ್ ರಾಜನ್ ವಿಗರ್ಹೇ ತ್ವಾತ್ಮಕಾರಣಾತ್ |
ಮೈಥುನಂ ಸಂಪ್ರತೀಕ್ಷ್ಯಂ ಚ ತ್ವಯಾ ಸ್ಯಾದನೃಶಂಸ್ಯವತ್ ॥53॥
ರಾಜನೇ, ನಾನು ನನ್ನ ಸಲುವಾಗಿ ಮೃಗಗಳನ್ನು ಕೊಲ್ಲುವ ನಿನ್ನನ್ನು ನಿಂದಿಸುತ್ತಿಲ್ಲ. ಆದರೆ ನೀನು ದಯೆ ಮತ್ತು ಸೌಮ್ಯಭಾವದಿಂದ ಮೈಥುನವನ್ನು ನಿರೀಕ್ಷಿಸಬೇಕಾಗಿದ್ದಿತು.
ಸರ್ವಭೂತಹಿತಃ ಕಾಲಃ ಸರ್ವಭೂತೇಪ್ಸಿತಶ್ಚ ಸಃ |
ನೃಶಂಸಂ ಕರ್ಮ ಸುಮಹತ್ ಸರ್ವಲೋಕವಿಗರ್ಹಿತಮ್ ॥54॥
ಮೈಥುನಕಾಲವು ಎಲ್ಲ ಪ್ರಾಣಿಗಳಿಗೂ ಹಿತವಾದ ಮತ್ತು ಎಲ್ಲ ಪ್ರಾಣಿಗಳೂ ಬಯಸುವ ಕಾಲ. ನೀನು ಸರ್ವಲೋಕನಿಂದಿತವಾದ ಅತ್ಯಂತ ಕ್ರೂರವಾದ ಕರ್ಮವನ್ನು ಮಾಡಿದ್ದೀಯೆ.
ಪುರುಷಾರ್ಥಫಲಂ ಕಾಂತಂ ಯತ್ ತ್ವಯಾ ವಿತಥಂ ಕೃತಮ್ |
ಪೌರವಾಣಾಂ ನೃಪರ್ಷೀಣಾಂ ತೇಷಾಮಕ್ಲಿಷ್ಟಕರ್ಮಣಾಮ್ ॥55॥
ವಂಶೇ ಜಾತಸ್ಯ ರಾಜೇಂದ್ರ ನಾನುರೂಪಮಿದಂ ತವ |
ಅಸ್ವರ್ಗ್ಯಮಯಶಸ್ಯಂ ಚ ಅಧರ್ಮಿಷ್ಠಂ ಚ ಭಾರತ ॥56॥
ಪುರುಷಾರ್ಥಫಲವಾದ ಎಲ್ಲರೂ ಬಯಸುವ ಮೈಥುನವನ್ನು ನೀನು ವ್ಯರ್ಥಗೊಳಿಸಿದ್ದೀಯೆ. ರಾಜೇಂದ್ರನೇ, ಉತ್ತಮ ಕರ್ಮವನ್ನು ಮಾಡುವ ರಾಜರ್ಷಿಗಳಾದ ಕೌರವರ ವಂಶದಲ್ಲಿ ಬಂದ ನಿನಗೆ ಇದು ಉಚಿತವಲ್ಲ. ಎಲೈ ಭಾರತನೇ, ಇದು ಸ್ವರ್ಗವನ್ನು ನಾಶಮಾಡಿ ಅಪಕೀರ್ತಿಯನ್ನು ಮತ್ತು ಅಧರ್ಮವನ್ನು ಉಂಟುಮಾಡುವಂತಹದು.
ಕೋ ಹಿ ವಿದ್ವಾನ್ ಮೃಗಂ ಹನ್ಯಾಚ್ಚರಂತಂ ಮೈಥುನಂ ವನೇ |
ಸ್ತ್ರೀಭೋಗಾನಾಂ ವಿಶೇಷಜ್ಞಃ ಶಾಸ್ತ್ರಧರ್ಮಾರ್ಥತತ್ತ್ವವಿತ್ ॥57॥
ಯಾವ ಈ ರೀತಿಯಾದ ಜ್ಞಾನವುಳ್ಳವನು, ಕಾಡಿನಲ್ಲಿ ಮೈಥುನದಲ್ಲಿರುವ ಪ್ರಾಣಿಯನ್ನು ಕೊಲ್ಲುತ್ತಾನೆ? ಅದರಲ್ಲಿಯೂ ಎಲ್ಲ ಶಾಸ್ತ್ರಧರ್ಮಗಳನ್ನು ಸರಿಯಾಗಿ ತಿಳಿದವನೂ, ಸ್ತ್ರೀಭೋಗವನ್ನು ವಿಶೇಷವಾಗಿ ತಿಳಿದ ನೀನು ಹೇಗೆ ಇಂತಹ ಕೆಲಸವನ್ನು ಮಾಡಿದೆ?
ನಾರ್ಹಸ್ಯಮರಸಂಕಾಶ ಕರ್ತುಮಾಚಾರಮೀದೃಶಮ್ |

ತ್ವಯಾ ನೃಶಂಸಂ ಕರ್ತಾರಃ ಪಾಪಾಚಾರಾಶ್ಚ ಯೇ ನರಾಃ ॥58॥
ನಿಗ್ರಾಹ್ಯಾಃ ಪಾರ್ಥಿವಶ್ರೇಷ್ಠ ತ್ರಿವರ್ಗಪರಿವರ್ಜಿತಾಃ |
ಕಿಂ ಕೃತಂ ತೇ ನರಶ್ರೇಷ್ಠ ನಿಘ್ನತೋ ಮಾಮನಾಗಸಮ್ ॥59॥
ಎಲೈ ದೇವತೆಯ ಕಾಂತಿಯುಳ್ಳವನೇ, ನೀನು ಇಂತಹ ಕಾರ್ಯವನ್ನು ಮಾಡಿರುವುದು ಸರಿಯಲ್ಲ. ಎಲೈ ರಾಜಶ್ರೇಷ್ಠನೇ ನೀನು ಇಂತಹ ಹೀನಕರ್ಮವನ್ನು ಮಾಡುವ ಪಾಪಾಕಾರ್ಯದಲ್ಲಿ ನಿರತರಾದ, ತ್ರಿವರ್ಗಪರಿವರ್ಜಿತರಾದ ಅಂದರೆ ಧರ್ಮಾರ್ಥಕಾಮ ಶೂನ್ಯರಾದ ಮನುಷ್ಯರನ್ನು ನಿಗ್ರಹ ಮಾಡಿ ಶಿಕ್ಷೆಯನ್ನು ಕೊಡುವವನು. ನರಶ್ರೇಷ್ಠನೇ, ನಿರಪರಾಧಿಯಾದ ನನ್ನನ್ನು ಕೊಂದುದರಿಂದ ನಿನಗೆ ಏನು ಪ್ರಯೋಜನ ಉಂಟಾಯಿತು?.
ಮುನಿಂ ಮೂಲಫಲಾಹಾರಂ ಮೃಗವೇಷಧರಂ ನೃಪ |
ವಸಮಾನಮರಣ್ಯೇಷು ನಿತ್ಯಂ ಶಮಪರಾಯಣಮ್ ॥60॥
ಎಲೈ ರಾಜನೇ, ಕಾಡಿನಲ್ಲಿ ವಾಸಮಾಡಿ ನಿತ್ಯವೂ ಶಮಪರಾಯಣನಾಗಿ, ಕಂದಮೂಲಫಲಾಹಾರನಾಗಿ ಮೃಗವೇಷವನ್ನು ಧರಿಸಿದ ನನ್ನ ವಧೆಯಿಂದ ನಿನಗೆ ಬಂದ ಲಾಭವೇನು ?
ತ್ವಯಾಽಹಂ ನಿಹತೋ ಯಸ್ಮಾತ್ ತಸ್ಮಾತ್ ತ್ವಾಮಪ್ಯನಾಗಸಮ್ |
ಆವಯೋರ್ನೃಶಂಸಕರ್ತಾರಮವಶಂ ಕಾಮಮೋಹಿತಮ್ |
ಜೀವಿತಾಂತಕರೋ ಭಾವೋ ಮೈಥುನೇ ಸಮುಪೇಷ್ಯತಿ ॥61॥
ನೀನು ನನ್ನನ್ನು ಕೊಂದ ಕಾರಣದಿಂದ ಮತ್ತು ನಮ್ಮಿಬ್ಬರಿಗೂ ಅತ್ಯಂತ ಕ್ರೂರ ಕರ್ಮವನ್ನು ಮಾಡಿದ ಕಾರಣದಿಂದ ನಿರಪರಾಧಿಯಾಗಿ, ಅವಶನಾಗಿ, ಕಾಮಮೋಹಿತನಾದ ನಿನಗೆ ಮೈಥುನದಲ್ಲಿ ಪ್ರವೃತ್ತನಾದಾಗ ಮರಣವು ಉಂಟಾಗುವುದು.
ಅಹಂ ಹಿ ಕಿಂದಮೋ ನಾಮ ತಪಸಾಽಪ್ರತಿಮೋ ಮುನಿಃ |
ಅಪತ್ರಪಾಭಿಭೂತತ್ವಾನ್ಮೃಗ್ಯಾಂ ಮೈಥುನಮಾಚರಮ್ ॥62॥
ನಾನು ಕಿಂದಮ ಎಂಬ ಹೆಸರಿನ ತಪಸ್ಸನ್ನು ಮಾಡುವಲ್ಲಿ ಅಸದೃಶನಾದ ಋಷಿ. ನಾಚಿಕೆಯಿಂದ ಮೃಗರೂಪವನ್ನು ಧರಿಸಿ ಮೈಥುನವನ್ನು ಆಚರಿಸುತ್ತಿದ್ದೆ.
ನಹಿ ತೇ ಬ್ರಹ್ಮಹತ್ಯೇಯಂ ಭವಿಷ್ಯತ್ಯನು ಜಾನತಃ |
ಮೃಗರೂಪಧರಂ ಹತ್ವಾ ಮಾಮೇವಂ ಕಾಮಮೋಹಿತಮ್ ॥63॥
ನಿನಗೆ ಮೊದಲು ತಿಳಿಯದೆ ಈಗ ತಿಳಿಯುತ್ತಿರುವುದರಿಂದ ಕಾಮಮೋಹಿತನಾದ, ಮೃಗರೂಪಧರನಾದ ನನ್ನ ವಧೆಯಿಂದ ಬ್ರಹ್ಮಹತ್ಯಾ ದೋಷವು ಬರುವುದಿಲ್ಲ.
ಅಸ್ಯ ತು ತ್ವಂ ಫಲಂ ಮೂಢ ಪ್ರಾಪ್ಸ್ಯಸೀದೃಶಮೇವ ಹಿ |
ಪ್ರಿಯಯಾ ಸಹ ಸಂವಾಸಂ ಪ್ರಾಪ್ಯ ಕಾಮವಿಮೋಹಿತಃ |
ತ್ವಮಪ್ಯಸ್ಯಾಮವಸ್ಥಾಯಾಂ ಪ್ರೇತಲೋಕಂ ಗಮಿಷ್ಯಸಿ ॥64॥
ಆದರೆ ಎಲೈ ಮೂಢನೇ ನಿನ್ನ ಕರ್ಮಕ್ಕೆ ಅನುಗುಣವಾದ ಇಂತಹದೇ ಫಲವನ್ನು ನೀನು ಹೊಂದುವಿ. ಕಾಮಮೋಹಿತನಾಗಿ ನಿನ್ನ ಪ್ರಿಯೆಯ ಜೊತೆಯಲ್ಲಿ ಮೈಥುನನಿರತನಾದ ನೀನು ಆ ಅವಸ್ಥೆಯಲ್ಲಿಯೇ ಮರಣವನ್ನು ಹೊಂದುವಿ.
ಅಂತಕಾಲೇ ಚ ಸಂವಾಸಂ ಯಯಾ ಗಂತಾಸಿ ಕಾಂತಯಾ |
ಪ್ರೇತರಾಜವಶಂ ಪ್ರಾಪ್ತಂ ಸರ್ವಭೂತದುರತ್ಯಯಮ್ |
ಭಕ್ತ್ಯಾ ಮತಿಮತಾಂ ಶ್ರೇಷ್ಠಾ ಸಾ ವೈ ತ್ವಾಮನುಯಾಸ್ಯತಿ ॥65॥
ಅಂತಕಾಲದಲ್ಲಿ ಯಾವ ಪತ್ನಿಯ ಜೊತೆಯಲ್ಲಿ ಮೈಥುನವನ್ನು ಆಚರಿಸುವೆಯೋ ಅಂತಹ ಪತಿವ್ರತೆಯಾದ, ಶ್ರೇಷ್ಠಳಾದ ಪತ್ನಿಯು ನಿನ್ನ ಮೇಲಿನ ಭಕ್ತಿಯಿಂದ ಯಾರೂ ಪರಿಹರಿಸಲು ಸಾಧ್ಯವಾಗದಂತಹ ಮೃತ್ಯುವಿನ ವಶವಾದ ನಿನ್ನನ್ನು ಅನುಸರಿಸಿ ಹಿಂದೆ ಬರುವಳು.
ವರ್ತಮಾನಃ ಸುಖೇ ದುಃಖಂ ಯಥಾಽಹಂ ಪ್ರಾಪಿತಸ್ತ್ವಯಾ |
ತಥಾ ಸುಖಂ ತ್ವಂ ಸಂಪ್ರಾಪ್ಯ ದುಃಖಮಭ್ಯಾಗಮಿಷ್ಯಸಿ |
ಏವಮುಕತ್ವ ಸುದುಃಖಾರ್ತೋ ಜೀವಿತಾತ್ ಸ ವ್ಯಯುಜ್ಯತ |
ಮೃಗಃ ಪಾಂಡುಶ್ಚ ಶೋಕಾರ್ತಃ ಕ್ಷಣೇನ ಸಮಪದ್ಯತ ॥66॥
ಸುಖದಲ್ಲಿ ಇದ್ದ ನನಗೆ ಹೇಗೆ ದುಃಖವನ್ನು ತಂದು ಕೊಟ್ಟೆಯೋ ಹಾಗೆ ನೀನೂ ಸಹ ಸುಖದಲ್ಲಿರುವಾಗ ದುಃಖವನ್ನು ಹೊಂದುವಿ. ಹೀಗೆ ಹೇಳಿ ಬಹಳ ದುಃಖದಿಂದ ಕೂಡಿದವರಾಗಿ ಕಿಂದಮನು ಪ್ರಾಣ ತೊರೆದನು. ಪಾಂಡುವಾದರೋ ಆ ಕ್ಷಣದಲ್ಲಿಯೇ ಶೋಕಾರ್ತನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಹನ್ನೊಂದನೆಯ ಅಧ್ಯಾಯ ಮುಗಿಯಿತು.
*****
ನೂರ ಹನ್ನೆರಡನೆಯ ಅಧ್ಯಾಯ
(ಪಾಂಡುವಿನ ಶೋಕ, ಕುಂತಿ ಮಾದ್ರಿಯರ ಜೊತೆಯಲ್ಲಿ ಸಂವಾದ, ಸಂನ್ಯಾಸವನ್ನು ಸ್ವೀಕರಿಸದೆ, ವಾನಪ್ರಸ್ಥಧರ್ಮಾಚರಣೆ, ವಿದುರನ ವಿವಾಹ ಮತ್ತು ಪುತ್ರೋತ್ಪತ್ತಿ.)
ವೈಶಂಪಾಯನಃ

ತಮತೀತಮುಪಕ್ರಮ್ಯ ರಾಜಾ ಸ್ವಮಿವ ಬಾಂಧವಮ್ |
ಸಭಾರ್ಯಃ ಶೋಕಮೋಹಾರ್ತಃ ಪರ್ಯದೇವಯದಾತುರಃ ॥1॥
ರಾಜನಾದ ಪಾಂಡುವು ಮೃತನಾದ ಋಷಿಪುತ್ರನಾದ ಕಿಂದಮನನ್ನು ತನ್ನ ಬಂಧುವಿನಂತೆ ಭಾವಿಸಿ ಪತ್ನಿಯರೊಡಗೂಡಿ ಶೋಕಮೋಹಗಳಿಂದ ಕೂಡಿದವನಾಗಿ ವಿಹ್ವಲನಾಗಿ ಗೋಳಾಡಿದನು.
ಪಾಂಡುಃ
ಸತಾಮಪಿ ಕುಲೇ ಜಾತಾಃ ಕರ್ಮಣಾ ಬಾತಿದುರ್ಗತಿಮ್ |
ಪ್ರಾಪ್ನುವಂತಿ ದುರಾತ್ಮಾನಃ ಕಾಮಲೋಭಪ್ರಮೋಹಿತಾಃ ॥2॥
ಸಜ್ಜನರ ಕುಲದಲ್ಲಿ ಹುಟ್ಟಿದರೂ ಸಹ ದುಷ್ಟರು ಕಾಮಲೋಭಗಳಿಗೆ ಒಳಗಾದವರಾಗಿ ನೀಚವಾದ ದುರ್ಗತಿಯನ್ನು ಹೊಂದುತ್ತಾರೆ.
ಕುಲೇ ಧರ್ಮಾತ್ಮನಾಂ ಜಾತಃ ಕಾಮಾತ್ಮಾ ಕಿಲ ಭಾರತಃ |
ಜೀವಿತಾಂತಮನುಪ್ರಾಪ್ತೋ ಬಾಲಭಾವೇ ಪಿತಾ ಮಮ ॥3॥
ಧರ್ಮಾತ್ಮನ ಕುಲದಲ್ಲಿ ಜನಿಸಿದ ನನ್ನ ತಂದೆಯಾದ ಭಾರತನು (ವಿಚಿತ್ರವೀರ್ಯ) ಕಾಮಾತ್ಮನಾಗಿ ಬಾಲ್ಯದಲ್ಲಿಯೇ ಮರಣವನ್ನು ಹೊಂದಿದನು.
ತಸ್ಯ ಕಾಮಾತ್ಮನಃ ಕ್ಷೇತ್ರೇ ರಾಜ್ಞಃ ಸಂಯತವಾಗ್ ಋಷಿಃ |
ಕೃಷ್ಣದ್ವೈಪಾಯನಃ ಸಾಕ್ಷಾದ್ ಭಗವಾನ್ ಮಾಮಜೀಜನತ್ ॥4॥
ಕಾಮಾತ್ಮನಾದ ಆ ರಾಜನ ಪತ್ನಿಯಲ್ಲಿ ವಾಙ್ನಿಯಮವುಳ್ಳ ಸಾಕ್ಷಾತ್ ಭಗವಂತನಾದ ವೇದವ್ಯಾಸರು ನನ್ನನ್ನು ಪಡೆದರು.
ತಸ್ಯ ಮೇ ವ್ಯಸನೇ ಬುದ್ಧಿಃ ಸಂಜಾತೇಯಮಿಹಾಧುನಾ |
ತ್ಯಕ್ತಸ್ಯ ದೇವೈರ್ವಿಷಯಾನ್ ಮೃಗಯಾಯಾಂ ದುರಾತ್ಮನಃ ॥5॥
ದೇವತೆಗಳ ಇಚ್ಛೆಯಂತೆ ವಿಷಯಗಳನ್ನು ತೊರೆದ ವೇದವ್ಯಾಸರ ಪುತ್ರನಾದ ದುರಾತ್ಮನಾದ ನನಗೆ ಈಗ ಬೇಟೆಯಾಡುವ ಚಟದಲ್ಲಿ ದುರ್ಬುದ್ಧಿಯುಂಟಾಯಿತು.
ಮೋಕ್ಷಮೇವ ವ್ಯವಸ್ಯಾಮಿ ಬಂಧೋ ಹಿ ವ್ಯಸನಂ ಮಹತ್ |
ಸದ್ವೃತ್ತಿಮನುವರ್ತಿಷ್ಯೇ ತಾಮಹಂ ಪಿತುರವ್ಯಯಾಮ್ |
ಅತೀವ ತಪಸಾऽऽತ್ಮಾನಂ ಯೋಜಯಿಷ್ಯಾಮ್ಯಸಂಶಯಮ್ ॥6॥
ಬಂಧವು ವ್ಯಸನಕ್ಕೆ ಕಾರಣ. ಆದ್ದರಿಂದ ಮೋಕ್ಷಮಾರ್ಗದಲ್ಲಿಯೇ ಪ್ರಯತ್ನಪಡುವೆನು. ತಂದೆಯಾದ ವ್ಯಾಸರ ಅಥವಾ ಸಾಕುತಂದೆಯಾದ ಭೀಷ್ಮರ ಶಾಶ್ವತವಾದ ಸದ್ವೃತ್ತಿಯನ್ನು ಅನುಸರಿಸುವೆನು. ಉಗ್ರವಾದ ತಪಸ್ಸಿನಲ್ಲಿ ನನ್ನನ್ನು ನಾನು ನಿಯೋಗಿಸಿಕೊಳ್ಳುವೆನು. ಇದರಲ್ಲಿ ಸಂಶಯವಿಲ್ಲ.
ತಸ್ಮಾದೇಕಾರ್ಹಮೇಕೋऽಹಮೇಕೈಕಸ್ಮಿನ್ ವನಸ್ಪತೌ |
ಚರನ್ ಭಿಕ್ಷಾಂ ಮುನಿರ್ಮುಂಡಶ್ಚರಿಷ್ಯಾಮಿ ಮಹೀಮಿಮಾಮ್ ॥7॥
ಆದ್ದರಿಂದ ಸಂನ್ಯಾಸಕ್ಕೆ ಅರ್ಹನಾದ ನಾನು ಒಂದೊಂದು ವೃಕ್ಷದಲ್ಲಿಯೂ ಭಿಕ್ಷೆಯನ್ನು ಬೇಡಿ ಮುಂಡನ ಮಾಡಿಕೊಂಡ ಸನ್ಯಾಸಿಯಾಗಿ ಭೂಮಿಯಲ್ಲಿ ಸಂಚರಿಸುವೆನು.
ಪಾಂಸುನಾ ಚ ಪ್ರತಿಚ್ಛನ್ನಃ ಶೂನ್ಯಾಗಾರಪ್ರತಿಶ್ರಯಃ |
ವೃಕ್ಷಮೂಲನಿಕೇತೋ ವಾ ತ್ಯಕ್ತಸರ್ವಪ್ರಿಯಾಪ್ರಿಯಃ ॥8॥
ಧೂಳಿನಿಂದ ತುಂಬಿದ ಶರೀರವುಳ್ಳವನಾಗಿ ಶೂನ್ಯಾಗಾರಗಳನ್ನಾಗಲೀ ಅಥವಾ ವೃಕ್ಷಮೂಲವನ್ನಾಗಲೀ ಆಶ್ರಯಿಸಿ ಪ್ರಿಯಾಪ್ರಿಯಗಳೆಲ್ಲವನ್ನೂ ತ್ಯಜಿಸುವೆನು.
ನ ಶೋಚನ್ನ ಸುಹೃಷ್ಯಂಶ್ಚ ತುಲ್ಯನಿಂದಾತ್ಮಸಂಸ್ತುತಿಃ |
ನಿರಾಶೀರ್ನಿರ್ನಮಸ್ಕಾರೋ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥9॥
ಹರ್ಷಶೋಕಗಳನ್ನು ತ್ಯಜಿಸಿ ನಿಂದಾಸ್ತುತಿಗಳನ್ನು ಸಮಾನವಾಗಿ ಎಣಿಸಿ ಯಾರಿಗೂ ಆಶೀರ್ವಾದವನ್ನು ಮಾಡದೆ, ಯಾರಿಂದಲೂ ನಮಸ್ಕಾರವನ್ನು ಸ್ವೀಕರಿಸದೆ, ಯಾರಿಂದಲೂ ಏನನ್ನೂ ಸ್ವೀಕಾರಮಾಡದೆ, ದ್ವಂದ್ವಾತೀತನಾಗಿ ಜೀವಿಸುವೆನು.
ನ ಜಾತ್ವಭಿಹಸನ್ ಕಿಂಚಿನ್ನಕುರ್ವನ್ ಭ್ರುಕುಟೀಂ ಕ್ವಚಿತ್ |
ಪ್ರಸನ್ನವದನೋ ನಿತ್ಯಂ ಸರ್ವಪ್ರಾಣಭೃತಾಂ ಪ್ರತಿ ॥10॥
ಯಾವ ವಿಷಯದಲ್ಲಿಯೂ, ಯಾವಾಗಲೂ ನಗದೇ, ಯಾವ ವಿಷಯದಲ್ಲಿಯೂ ಕೋಪದಿಂದ ಹುಬ್ಬನ್ನು ಗಂಟು ಹಾಕಿಕೊಳ್ಳದೇ ಪ್ರಸನ್ನವದನನಾಗಿ ಸರ್ವಪ್ರಾಣಿಗಳಿಗೂ ಹಿತಕರನಾಗಿ ಇರುವೆನು.
ಜಂಗಮಾಜಂಗಮಂ ಸರ್ವಮವಿಹಿಂಸಂಶ್ಚತುರ್ವಿಧಮ್ |
ಪ್ರಜಾವರ್ಗೇ ಸ್ವವರ್ಗಸ್ಥಃ ಸಮಃ ಸರ್ವಪ್ರಜಾಃ ಪ್ರತಿ ॥11॥
ಸ್ಥಾವರಜಂಗಮವಾದ ನಾಲ್ಕುವಿಧದ ಯಾವ ಪ್ರಾಣಿಯನ್ನೂ ಹಿಂಸೆ ಮಾಡದೆ ನನ್ನ ಗುಂಪಿನಲ್ಲಿ ನಾನಿದ್ದು ಎಲ್ಲಾ ಪ್ರಜೆಗಳಿಗೂ ಸಮಾನವಾಗಿರುವೆನು.
ಏಕಕಾಲಂ ಚರನ್ ಭಿಕ್ಷಾಂ ಕುಲಾನಿ ದ್ವೇ ಚ ಪಂಚ ಚ |
ಅಸಂಭವೇ ವಾ ಭೈಕ್ಷಸ್ಯ ಚರನ್ನನಶನಾನ್ಯಪಿ ॥12॥
ದಿವಸದಲ್ಲಿ ಒಂದು ಬಾರಿ ಏಳು ಮನೆಗಳಲ್ಲಿ ಭಿಕ್ಷೆಯನ್ನು ಬೇಡುವೆನು. ಭಿಕ್ಷೆಯು ದೊರೆಯದಿದ್ದರೆ ಉಪವಾಸವನ್ನು ಮಾಡುವೆನು.
ಅಲ್ಪಮಲ್ಪಮಥೋ ಭೋಜ್ಯಂ ಪೂರ್ವಲೋಭಾನ್ನ ಜಾತು ಚಿತ್ |
ನಿತ್ಯಂ ನಾತಿಚರನ್ ಲಾಭೇ ಅಲಾಭೇ ಸಪ್ತ ಪೂರಯನ್ ॥13॥

ದಿನದಿನಕ್ಕೆ ಆಹಾರವನ್ನು ಕಡಿಮೆ ಮಾಡಿಕೊಂಡು ಹಿಂದಿನ ದಿನದಲ್ಲಿ ಒಳ್ಳೆಯ ಆಹಾರ ದೊರೆತಿದ್ದರೆ ಅದನ್ನು ಎಂದೂ ಯೋಚಿಸದೆ, ಹೆಚ್ಚು ಭಿಕ್ಷವು ದೊರೆತರೆ ಹೆಚ್ಚು ಮನೆಗಳಿಗೆ ಹೋಗದೆ, ಭಿಕ್ಷವು ದೊರೆಯದಿದ್ದರೂ ಏಳು ಮನೆಗಳಿಗೆ ಮಾತ್ರ ಹೋಗಿ ಜೀವನವನ್ನು ಸಾಗಿಸುವೆನು.

ವಾಸ್ಯೈಕಂ ತಕ್ಷತೋ ಬಾಹುಂ ಚಂದನೇನೈಕಮುಕ್ಷತಃ |
ನಾಕಲ್ಯಾಣಂ ನ ಕಲ್ಯಾಣಂ ಧ್ಯಾಯನ್ನುಭಯಯೋರಪಿ ||14||

ನಾನು ಯತಿಯಾಗಿ ಬಲಭುಜವನ್ನು ಹರಿಪೂಜಾಸಾಧನವಾದ ಗಂಧಾದಿಗಳನ್ನು ಮಾಡುವುದಕ್ಕೂ, ಎಡಬಾಹುವನ್ನು ಪೂಜಾಭೂಮಿಯನ್ನು ಸಾರಿಸಿ ಗುಡಿಸುವುದಕ್ಕೂ ಉಪಯೋಗಿಸುವೆನು. ಅಥವಾ ವಾನಪ್ರಸ್ಥನಾಗಿ ಬಲಭುಜದ ಸ್ಥಾನದಲ್ಲಿರುವ ಕುಂತಿಯನ್ನು ಹರಿಪೂಜಾಸಾಧನವಾದ ಗಂಧಾದಿಗಳನ್ನು ಮಾಡುವುದಕ್ಕೂ, ವಾಮಬಾಹುಸ್ಥಾನದಲ್ಲಿರುವ ಮಾದ್ರಿಯನ್ನು ಪೂಜಾಸ್ಥಾನವನ್ನು ಗುಡಿಸಿಸಾರಿಸುವುದಕ್ಕೂ ವಿನಿಯೋಗಿಸುವೆನು. ಎರಡೂ ಸಂದರ್ಭಗಳಲ್ಲಿಯೂ ಮಂಗಳ ಮತ್ತು ಅಮಂಗಳಗಳನ್ನು ಯೋಚಿಸುವುದಿಲ್ಲ.

ಯಾಃ ಕಾಶ್ಚಜ್ಜೀವತಾ ಶಕ್ಯಾಃ ಕರ್ತುಂ ನಿತ್ಯಾಕ್ಷತಾಃ ಕ್ರಿಯಾಃ |
ತಾಃ ಸರ್ವಾಃ ಸಮತಿಕ್ರಮ್ಯ ನಿಮೇಷಾದಿಷ್ವವಸ್ಥಿತಃ ||15||

ಅಂಗವೈಕಲ್ಯಾದಿರಹಿತನಾಗಿ ಬದುಕಿರುವವನು ಮಾಡಲು ಸಾಧ್ಯವಾದ ಯಜ್ಞ ಮೊದಲಾದ ಎಲ್ಲಾ ಕ್ರಿಯೆಗಳನ್ನು ತ್ಯಜಿಸಿ, ತೊರೆಯಲು ಅಸಾಧ್ಯವಾದ ಶ್ವಾಸ, ನಿಮೇಷ, ಮೊದಲಾದ ಕ್ರಿಯೆಗಳಲ್ಲಿಯೇ ಇರುವೆನು.

ನ ಜಿಜೀವಿಷುವತ್ ಕಿಂಚಿನ್ನ ಮುಮೂರ್ಷುವದಾಚರನ್ |
ಜೀವಿತಂ ಮರಣಂ ಚೈವ ನಾಭಿನಂದನ್ ನಚ ದ್ವಿಷನ್ ||16||

ಬದುಕುವ ಆಸೆಯಿಂದಾಗಲೀ ಅಥವಾ ಮರಣದ ಆಸೆಯಿಂದಾಗಲೀ ಏನನ್ನೂ ಮಾಡದೆ, ಜೀವನವನ್ನು ಅಭಿನಂದಿಸದೆ, ಮರಣವನ್ನು ದ್ವೇಷಿಸದೆ ಜೀವಿಸುವೆನು.

ತಾಸು ಚಾಪ್ಯನವಸ್ಥಾಸು ತ್ಯಕ್ತಸರ್ವೇಂದ್ರಿಯಕ್ರಿಯಃ |
ಸಂಪರಿತ್ಯಕ್ತಸರ್ವಾತ್ಮಾ ಸುನಿರ್ಣಿಕ್ತಾತ್ಮಕಿಲ್ಬಿಷಃ ||17||

ಅಂತಹ ಪ್ರಸಂಗಗಳಲ್ಲಿಯೂ ಎಲ್ಲಾ ಇಂದ್ರಿಯವ್ಯಾಪಾರಗಳನ್ನೂ ತ್ಯಜಿಸಿ ನನ್ನ ಪಾಪಗಳನ್ನು ಚೆನ್ನಾಗಿ ತೊಳೆದುಕೊಂಡು, ಸರ್ವಸ್ವಾಮಿಯಾದ ಭಗವಂತನನ್ನು ಮನಸ್ಸಿನಲ್ಲಿ ಚೆನ್ನಾಗಿ ಆಲಿಂಗನಮಾಡುವೆನು.

ನಿರ್ಮುಕ್ತಃ ಸರ್ವಪಾಪೇಭ್ಯೋ ವ್ಯತೀತಃ ಸರ್ವವಾಗುರಾಃ |
ನ ವಶೇ ಕಸ್ಯಚಿತ್ ತಿಷ್ಠನ್ ಸಧರ್ಮಾ ಮಾತರಿಶ್ವನಃ ||18||

ಎಲ್ಲಾ ಪಾಪಗಳಿಂದಲೂ ನಿರ್ಮುಕ್ತನಾಗಿ, ಎಲ್ಲಾ ಬಂಧನಗಳಿಂದಲೂ ದೂರನಾಗಿ, ಯಾರಿಗೂ ವಶನಾಗದೆ, ವಾಯುವಿನ ಸಮಾನ ಧರ್ಮವನ್ನು ಹೊಂದಿದವನಾಗಿ ಇರುವೆನು.

ಏತಯಾ ಸತತಂ ವೃತ್ತ್ಯಾ ಚರನ್ನೇವಂಪ್ರಕಾರಯಾ |
ದೇಹಂ ಸಂತಾರಯಿಷ್ಯಾಮಿ ನಿರ್ಭಯಂ ಜ್ಞಾನಮಾಶ್ರಿತಃ ||19||

ಇಂತಹ ಏಕಪ್ರಕಾರವಾದ ವೃತ್ತಿಯಿಂದ ಸತತವಾಗಿ ಜೀವಿಸಿ, ಭಯವನ್ನು ದೂರ ಮಾಡುವ ಜ್ಞಾನಮಾರ್ಗವನ್ನು ಆಶ್ರಯಿಸಿ, ದೇಹವನ್ನು ದಾಟಿಸುವೆನು.

ನಾಹಂ ಶ್ವಾಚರಿತೇ ಮಾರ್ಗೇ ಸ್ವವೀರ್ಯಕ್ಷಯಶೋಚಿತೇ |
ಸ್ವಧರ್ಮಾತ್ ಸತತಾಪೇತೇ ಚರೇಯಂ ವೀರವರ್ಜಿತೇ ||20||

ನಾನು ನನ್ನ ಮಾನ ಪರಾಕ್ರಮಗಳನ್ನು ಹಾನಿಮಾಡುವಂತಹ ಸ್ವಧರ್ಮದಿಂದ ರಹಿತವಾದಂತಹ, ವೀರರಿಂದ ಆಚರಿಸಲ್ಪಡದ, ನೀಚರು ಮಾತ್ರ ಆಚರಿಸುವ ಮಾರ್ಗದಲ್ಲಿ ಎಂದೂ ನಡೆಯುವುದಿಲ್ಲ.

ಸತ್ಕೃತೋಽಸತ್ಕೃತೋ ವಾಽಪಿ ಯೋಽನ್ಯಾಂ ಕೃಪಣಚಕ್ಷುಷಾ |
ಉಪೈತಿ ವೃತ್ತಿಂ ಕಾಮಾತ್ಮಾ ಸ ಶುನಾಂ ವರ್ತತೇ ಪಥಿ ||21||

ಮಾನಿತನಾಗಲೀ ಅಥವಾ ಅವಮಾನಿತನಾಗಲೀ ಯಾವನು ಕಾಮಾತ್ಮನಾಗಿ ಕಾರ್ಪಣ್ಯದೃಷ್ಟಿಯಿಂದ ತನ್ನ ಧರ್ಮದ ವೃತ್ತಿಯನ್ನು ಬಿಟ್ಟು ಇನ್ನೊಂದು ವೃತ್ತಿಯನ್ನು ಆಶ್ರಯಿಸುವನೋ ಅವನು ಶ್ವಾನಗಳ ಮಾರ್ಗದಲ್ಲಿ ನಡೆಯುವನು.

ವೈಶಂಪಾಯನಃ

ಏವಮುಕ್ತ್ವಾ ಸುದುಃಖಾರ್ತಃ ಸ ರಾಜಾ ಭರತರ್ಷಭಃ |
ಅವೇಕ್ಷಮಾಣಃ ಕುಂತೀಂ ಚ ಮಾದ್ರೀಂ ಚ ಸಮಭಾಷತ ||22||

ಭರತಶ್ರೇಷ್ಠನಾದ ಪಾಂಡುವು ದುಃಖಾರ್ತನಾಗಿ ಹೀಗೆ ಮಾತನಾಡಿ, ಕುಂತಿಯನ್ನು ಮತ್ತು ಮಾದ್ರಿಯನ್ನು ನೋಡುತ್ತಾ ಪುನಃ ಮಾತನಾಡಿದನು.

ಕೌಸಲ್ಯಾ ವಿದುರಃ ಕ್ಷತ್ತಾ ರಾಜಾ ಚ ಸಹಬಂಧುಭಿಃ |
ಆರ್ಯಾ ಸತ್ಯವತೀ ಭೀಷ್ಮಃ ತೇ ಚ ಸರ್ವಹಿತಾ ಮಮ ||23||

ಅಂಬಾಲಿಕೆ, ವಿದುರ, ಬಂಧುಗಳಿಂದ ಕೂಡಿದ ರಾಜನಾದ ಧೃತರಾಷ್ಟ್ರ, ಪೂಜ್ಯರಾದ ಸತ್ಯವತಿ ಮತ್ತು ಭೀಷ್ಮರು, ಇವರೆಲ್ಲರೂ ನನಗೆ ಹಿತರಾದವರು.

ಬ್ರಾಹ್ಮಣಾಶ್ಚ ಮಹಾಭಾಗೇ ಲೋಕೇ ಯೇ ಸಂಶಿತವ್ರತಾಃ |
ಪೌರವೃದ್ಧಾಶ್ಚ ಯೇ ತತ್ರ ನಿವಸಂತ್ಯಸ್ಮದಾಶ್ರಯಾಃ |
ಪ್ರಸಾದ್ಯ ಸರ್ವೇ ವಕ್ತವ್ಯಾಃ ಪಾಂಡುಃ ಪ್ರವ್ರಾಜಿತೋ ವನಮ್ ||24||

ಮಹಾನುಭಾವೆಯರೇ, ಇವರಲ್ಲದೇ, ರಾಜ್ಯದಲ್ಲಿ ವ್ರತನಿಷ್ಠರಾದ ಯಾವ ಬ್ರಾಹ್ಮಣರಿದ್ದಾರೆಯೋ, ನಮ್ಮನ್ನು ಆಶ್ರಯಿಸಿದ ಯಾವ ಪೌರವೃದ್ಧರು ಇದ್ದಾರೆಯೋ, ಅವರನ್ನೆಲ್ಲಾ ಪ್ರಸನ್ನೀಕರಿಸಿಕೊಂಡು, `ಪಾಂಡುವು ಸಂನ್ಯಾಸ ಸ್ವೀಕಾರ ಮಾಡಿ ಕಾಡಿಗೆ ಹೋದನು' ಎಂದು ಹೇಳಬೇಕು.

ವೈಶಂಪಾಯನಃ

ಶ್ರುತ್ವಾ ಚ ವಚನಂ ಭರ್ತುಃ ತ್ಯಾಗಧರ್ಮಕೃತಾತ್ಮನಃ |
ತೇ ಸಮಂ ವಚನಂ ಕುಂತೀ ಮಾದ್ರೀ ಚ ಸಮಭಾಷತಾಮ್ ॥25॥

ತಮ್ಮ ಪತಿಯು ತಮ್ಮನ್ನು ಪರಿತ್ಯಾಗ ಮಾಡುವುದನ್ನು ನಿರ್ಧರಿಸಿ ಆಡಿದ ಮಾತುಗಳನ್ನು ಕೇಳಿದ ಕುಂತಿ ಮತ್ತು ಮಾದ್ರಿಯರು ಒಟ್ಟಿಗೆ ಮಾತನಾಡಿದರು.

ಅನ್ಯೇಽಪಿ ಹ್ಯಾಶ್ರಮಾಃ ಸಂತಿ ಯೇ ಶಕ್ಯಾ ಭರತರ್ಷಭ |
ಆವಾಭ್ಯಾಂ ಸಹ ಸಂಚರ್ತುಂ ಧರ್ಮಮಾಶ್ರಿತ್ಯ ಚಿಂತ್ಯತಾಮ್ ॥26॥

ಭರತಶ್ರೇಷ್ಠನೇ, ನಮ್ಮ ಜೊತೆಯಲ್ಲೇ ಇದ್ದು ಧರ್ಮವನ್ನು ಆಶ್ರಯಿಸಿ ತಪಸ್ಸನ್ನು ಮಾಡಬಹುದಾದ ಬೇರೆ ಆಶ್ರಮಗಳೂ ಇವೆ. ಅವುಗಳನ್ನು ಕುರಿತು ಯೋಚಿಸು.

ಆವಾಭ್ಯಾಂ ಧರ್ಮಪತ್ನೀಭ್ಯಾಂ ಸಹ ತಪ್ತ್ವಾ ಮಹತ್ತಪಃ |
ತ್ವಮೇವ ಭವಿತಾಽಸ್ಯಾರ್ಥಂ ಸ್ವರ್ಗೇ ಚಾಪಿ ನ ಸಂಶಯಃ ॥27॥

ಧರ್ಮಪತ್ನಿಯರಾದ ನಮ್ಮಿಬ್ಬರ ಜೊತೆಯಲ್ಲಿ ಶ್ರೇಷ್ಠವಾದ ತಪಸ್ಸನ್ನು ಮಾಡಿದರೂ ಅದರ ಫಲವಾಗಿ ನೀನು ಸ್ವರ್ಗವನ್ನು ಪಡೆಯುವೆ. ಇದರಲ್ಲಿ ಸಂಶಯವಿಲ್ಲ.

ಪ್ರಣಿಧಾಯೇಂದ್ರಿಯಗ್ರಾಮಂ ಭರ್ತೃಲೋಕಂ ನರರ್ಷಭ |
ತ್ಯಕ್ತಕಾಮಸುಖೇ ಹ್ಯಾವಾಂ ರಾಜಂಸ್ತಪ್ಸ್ಯಾವಹೇ ತಪಃ ॥28॥

ಎಲೈ ನರಶ್ರೇಷ್ಠನೇ, ನಾವಿಬ್ಬರೂ ಸಹ ಇಂದ್ರಿಯಸಮೂಹವನ್ನು ನಿಯಂತ್ರಿಸಿ, ಕಾಮಸುಖಗಳನ್ನು ತೊರೆದು ಪತಿಲೋಕವನ್ನು ದೊರಕಿಸಿಕೊಡುವ ತಪಸ್ಸನ್ನು ಆಚರಿಸುವೆವು.

ಯದಿ ವಾಽಽವಾಂ ಮಹಾಭಾಗ ತ್ಯಕ್ಷ್ಯಸ್ಯೇವ ವಿಶಾಂಪತೇ |
ಅದ್ಯೈವಾವಾಂ ಪ್ರಹಾಸ್ಯಾವೋ ಜೀವಿತಂ ಭರತರ್ಷಭ ॥29॥

ಎಲೈ ಮಹಾನುಭಾವನೇ, ಎಲೈ ರಾಜನೇ, ಎಲೈ ಭರತಶ್ರೇಷ್ಠನೇ, ಒಂದು ಪಕ್ಷ ನೀನು ನಮ್ಮಿಬ್ಬರನ್ನೂ ಪರಿತ್ಯಾಗ ಮಾಡುವುದೇ ಆದರೆ ನಾವು ಈ ದಿವಸವೇ ಪ್ರಾಣಗಳನ್ನು ತೊರೆಯುವೆವು.

ಪಾಂಡುಃ

ಯದಿ ವ್ಯವಸಿತಂ ತ್ವೇವಂ ಯುವಾಭ್ಯಾಂ ಧರ್ಮಮಿಶ್ರಿತಮ್ |
ಸದ್ವೃತ್ತಿಮನುವರ್ತಿಷ್ಯೇ ತಾಮಹಂ ಪಿತುರವ್ಯಯಾಮ್ ॥30॥

ನೀವಿಬ್ಬರೂ ಧರ್ಮಮಾರ್ಗದಲ್ಲಿ ಹೀಗೆ ನಿರ್ಧಾರ ಮಾಡುವುದಾದರೇ, ನಾನು ತಂದೆಯಾದ ವ್ಯಾಸರ ಅಥವಾ ಭೀಷ್ಮರ ಸನ್ಮಾರ್ಗವನ್ನು ಅನುಸರಿಸುವೆನು.

ತ್ಯಕ್ತಗ್ರಾಮ್ಯಸಮಾಚಾರಃ ತಪ್ಯಮಾನೋ ಮಹತ್ತಪಃ |
ವಲ್ಕಲೀ ಫಲಮೂಲಾಶೀ ಚರಿಷ್ಯಾಮಿ ಮಹಾವನೇ ॥31॥

ಗ್ರಾಮ್ಯಸುಖಗಳನ್ನು ತೊರೆದು ದೊಡ್ಡ ತಪಸ್ಸನ್ನು ಮಾಡುತ್ತ, ನಾರುಮಡಿಯನ್ನುಟ್ಟು ಫಲಮೂಲಾಶನನಾಗಿ ಮಹಾವನದಲ್ಲಿ ವಾನಪ್ರಸ್ಥನಾಗಿರುವೆನು.

ಅಗ್ನಿಂ ಜುಹ್ವದುಭೌ ಕಾಲಾವುಭೌ ಕಾಲಾವುಪಸ್ಪೃಶನ್ |
ಕೃಶಃ ಪರಿಮಿತಾಹಾರಶ್ಚೀರಚರ್ಮಜಟಾಧರಃ ॥32॥

ಎರಡು ಕಾಲಗಳಲ್ಲಿಯೂ ಸ್ನಾನವನ್ನು ಮಾಡಿ, ಎರಡು ಕಾಲಗಳಲ್ಲಿಯೂ ಅಗ್ನಿಯಲ್ಲಿ ಹೋಮವನ್ನು ಮಾಡಿ, ಅಲ್ಪಾಹಾರವನ್ನು ಸೇವಿಸಿ ಚೀರ, ಚರ್ಮ, ಜಟಾಧಾರಿಯಾಗಿ, ಕೃಶನಾಗಿ ತಪಸ್ಸನ್ನು ಮಾಡುವೆನು.

ಶೀತವಾತಾತಪಸಹಃ ಕ್ಷುತ್ಪಿಪಾಸಾಶ್ರಮಾನ್ವಿತಃ |
ತಪಸಾ ವಿಧಿಯುಕ್ತೇನ ಶರೀರಂ ಪರಿಶೋಷಯನ್ ॥33॥

ಬಿಸಿಲು, ಗಾಳಿ ಮತ್ತೆ ಚಳಿಗಳನ್ನು ತಡೆದು, ಹಸಿವುನೀರಡಿಕೆಗಳಿಂದ ಶ್ರಮವನ್ನು ಅನುಭವಿಸಿ, ವಿಧಿಯುಕ್ತವಾದ ತಪಸ್ಸನ್ನು ಮಾಡಿ ಶರೀರವನ್ನು ಶೋಷಿಸುವೆನು.

ಏಕಾಂತಶೀಲೋ ವಿಮೃಶನ್ ಪಕ್ವಾಪಕ್ವೇನ ವರ್ತಯನ್ |
ಪಿತ್ರೂನ್ ದೇವಾಂಶ್ಚ ವನ್ಯೇನ ವಾಗ್ಭಿರದ್ಭಿಶ್ಚ ತರ್ಪಯನ್ ॥34॥

ಏಕಾಂತಶೀಲನಾಗಿ ಪಕ್ವವಾದ ಫಲಗಳಿಂದಲೂ, ಅಪಕ್ವವಾದ ಗೆಡ್ಡೆಗೆಣಸುಗಳಿಂದಲೂ ಜೀವಿಸುತ್ತಾ, ಜ್ಞಾನನಿಷ್ಠನಾಗಿದ್ದು, ದೇವತೆಗಳನ್ನೂ ಮತ್ತು ಪಿತೃಗಳನ್ನೂ ವನದಲ್ಲಿ ದೊರೆಯುವ ವಸ್ತುಗಳಿಂದಲೂ, ನೀರಿನಿಂದಲೂ ಮತ್ತು ಸ್ತೋತ್ರಗಳಿಂದಲೂ ಸಂತೋಷಪಡಿಸುವೆನು.

ವಾನಪ್ರಸ್ಥಜನಸ್ಯಾಪಿ ದರ್ಶಯನ್ ಕುಲವಾಸಿನಃ |
ನಾಪ್ರಿಯಾಣಿ ಚರನ್ ಜಾತು ಕಿಂ ಪುನರ್ಗ್ರಾಮವಾಸಿನಃ ॥35॥

ಕುಲವಾಸಿಗಳಾದ ವಾನಪ್ರಸ್ಥ ಜನರಿಗೂ, ನನ್ನ ನಡತೆಯಿಂದ ಸನ್ನ ಎಂದೂ ಅಪ್ರಿಯವಾಗಿ ಮಾತನಾಡುವುದಿಲ್ಲ. ಇನ್ನು ಗ್ರಾಮವಾಸಿಗಳನ್ನು ಕುರಿತು ಅಪ್ರಿಯವಾಗಿ ಏಕೆ ಮಾತನಾಡಲಿ.

ಏವಮಾರಣ್ಯಶಾಸ್ತ್ರಾಣಾಮುಕ್ತಮಗ್ರಂ ತಪೋವಿಧಿಮ್ |
ತಪಮಾನಃ ಪ್ರತೀಕ್ಷಿಷ್ಯೇ ದೇಹಸ್ಯಾಸ್ಯ ವಿಮೋಕ್ಷಣಮ್ ॥36॥
ಹೀಗೆ ಶಾಸೊತ್ರೇಕ್ತವಾದ ಉಗ್ರವಾದ ವಾನಪ್ರಸ್ಥ ತಪಸ್ಸಿನ ಮಾರ್ಗವನ್ನು ಆಚರಿಸುತ್ತಾ ಈ ದೇಹದ ನಾಶವನ್ನು ನಿರೀಕ್ಷಿಸುವೆನು.
ವೈಶಂಪಾಯನಃ
ಏವಮುಕತ್ವ ಸ ಭಾರ್ಯೇ ತೇ ರಾಜಾ ಕೌರವವಂಶಜಃ |
ತತಶ್ಚೂಡಾಮಣಿಂ ನಿಷ್ಕಾನಂಗದೇ ಕುಂಡಲಾನಿ ಚ ॥37॥
ಮಕುಟಂ ಹಾರಸೂತ್ರಂ ಚ ಕಟಿಬಂಧಂ ತಥೈವ ಚ |
ವಾಸಾಂಸಿ ವಿಮಲಾಃ ಖಡ್ಗಾಃ ಸ್ತ್ರೀಣಾಮಾಭರಣಾನಿ ಚ ॥38॥
ವಾಹನಾನಿ ಚ ಮುಖ್ಯಾನಿ ಶಸತ್ರಣಿ ವಿವಿಧಾನಿ ಚ |
ಹೈಮಭಾಂಡಾನಿ ದಿವ್ಯಾನಿ ಪರ್ಯಂಕಾಸ್ತರಣಾನಿ ಚ ॥39॥
ಮಣಿಮುಕ್ತಾಪ್ರವಾಳಾನಿ ವಸೂನಿ ವಿವಿಧಾನಿ ಚ |
ಆಸನಾನಿ ಚ ಮುಖ್ಯಾನಿ ಬಹೂನಿ ವಿವಿಧಾನಿ ಚ |
ಪ್ರದಾಯ ಸರ್ವಂ ವಿಪ್ರೇಭ್ಯಃ ಪಾಂಡುಃ ಪುನರಭಾಷತ ॥40॥
ಆ ಕೌರವ ವಂಶದಲ್ಲಿ ಜನಿಸಿದ ಪಾಂಡುರಾಜನು ಪತ್ನಿಯರಿಗೆ ಹೀಗೆ ಹೇಳಿ ತಾನು ಧರಿಸಿದ್ದ ಚೂಡಾಮಣಿಯನ್ನು, ನಿಷ್ಕ ಮತ್ತು ಅಂಗದಗಳನ್ನು, ಕರ್ಣಕುಂಡಲಗಳನ್ನು, ಕಿರೀಟ ಮತ್ತು ಹಾರಗಳನ್ನು, ಕಟಿಬಂಧವನ್ನು, ವಿಮಲವಾದ ವಸ್ತ್ರಗಳನ್ನು, ಖಡ್ಗಗಳನ್ನು, ಸ್ತ್ರೀಯರ ಆಭರಣಗಳನ್ನು, ತನ್ನ ಶ್ರೇಷ್ಠವಾದ ವಾಹನಗಳನ್ನು, ಅನೇಕ ವಿಧವಾದ ಶಸ್ತ್ರಗಳನ್ನು, ದಿವ್ಯವಾದ ಸುವರ್ಣ ಪಾತ್ರೆಗಳನ್ನು, ಹಾಸಿಗೆ ಮತ್ತು ಹೊದ್ದಿಕೆಗಳನ್ನು, ಮುತ್ತು ರತ್ನಗಳನ್ನು, ವಿವಿಧವಾದ ಧನವನ್ನು, ಶ್ರೇಷ್ಠವಾದ ಆಸನವನ್ನು ತೊರೆದು, ಎಲ್ಲವನ್ನೂ ವಿಪ್ರರಿಗೆ ದಾನ ಮಾಡಿ ಪುನಃ ಮಾತನಾಡಿದನು.
ಗತ್ವಾ ನಾಗಪುರಂ ವಾಚ್ಯಂ ಪಾಂಡುಃ ಪ್ರವ್ರಾಜಿತೋ ವನೇ |
ಅರ್ಥಂ ಕಾಮಂ ರತಿಂ ಚೈವ ವಿವಿಧಾನಿ ಧನಾನಿ ಚ |
ಪ್ರತಸ್ಥೇ ಸರ್ವಮಸೃಜ್ಯ ಸಭಾರ್ಯೋ ಭರತರ್ಷಭಃ॥41॥
ವಿಪ್ರರೇ! ನೀವು ನಾಗಪುರಕ್ಕೆ ಹೋಗಿ `ಪಾಂಡುವು ವಾನಪ್ರಸ್ಥನಾಗಿ ಕಾಡಿಗೆ ಹೋಗಿದ್ದಾನೆ. ಅರ್ಥವನ್ನು, ಕಾಮವನ್ನು, ರತಿಯನ್ನು, ವಿವಿಧ ಧನಗಳನ್ನು, ಉಳಿದೆಲ್ಲವನ್ನೂ ತ್ಯಾಗಮಾಡಿ, ಪತ್ನಿಯರ ಜೊತೆಯಲ್ಲಿ ಭರತರ್ಷಭನು ಕಾಡಿಗೆ ಹೊರಟನು' ಎಂದು ಎಲ್ಲರಿಗೂ ತಿಳಿಸಿ.
ವೈಶಂಪಾಯನಃ
ತತಸ್ತಸ್ಯಾನುಯಾತ್ರಾಣಿ ಸರ್ವೇ ಚ ಪರಿಚಾರಕಾಃ |
ಶ್ರುತ್ವಾ ಭರತಸಿಂಹಸ್ಯ ವಿವಿಧಾಃ ಕರುಣಾ ಗಿರಃ |
ಭೀಮಮಾರ್ತಸ್ವರಂ ಕೃತ್ವಾ ಹಾಹೇತಿ ಪರಿಚುಕ್ರುಶುಃ ॥42॥
ಅನಂತರ ಅವನ ಜೊತೆಯಲ್ಲಿ ಹೋಗುವ ಪರಿಚಾರಕರೆಲ್ಲರೂ ಆ ಭರತಸಿಂಹನ ಕರುಣಾಜನಕವಾದ ಅನೇಕ ಮಾತುಗಳನ್ನು ಕೇಳಿ ಭಯಂಕರವಾದ ಆರ್ತ ಸ್ವರದಿಂದ `ಅಯ್ಯೋ' ಎಂದು ಕಿರುಚಿದರು.
ಉಷ್ಣಮಾಸ್ರಂ ಪ್ರಮುಂಚತಃ ತಮಾಲೋಕ್ಯ ಯಶಸ್ವಿನಮ್| ಯಯುರ್ನಾಗಪುರಂ ತೂರ್ಣಂ ಸರ್ವಮಾದಾಯ ತದ್ಧನಮ್ ॥43॥
ಯಶಸ್ವಿಯಾದ ರಾಜನನ್ನು ನೋಡಿ ಬಿಸಿಯಾದ ಕಣ್ಣೀರನ್ನು ಸುರಿಸುತ್ತಾ ಅವನು ಕೊಟ್ಟ ಧನವನ್ನೆಲ್ಲಾ ತೆಗೆದುಕೊಂಡು ಶೀಘ್ರವಾಗಿ ನಾಗಪುರಕ್ಕೆ ತೆರಳಿದರು.
ತೇ ಗತ್ವಾ ನಗರಂ ರಾಜ್ಞೇ ಯಥಾವೃತ್ತಂ ಮಹಾತ್ಮನೇ |
ಕಥಯಾಂಚಿಕ್ರಿರೇ ಸರ್ವಂ ಧನಂ ಚ ವಿವಿಧಂ ದದುಃ ॥44॥
ಅವರು ನಾಗಪುರವನ್ನು ತಲುಪಿ, ಮಹಾತ್ಮನಾದ ಧೃತರಾಷ್ಟ್ರನಿಗೆ ನಡೆದ ಘಟನೆಯನ್ನೆಲ್ಲಾ ವಿವರಿಸಿ, ವಿವಿಧವಾದ ಎಲ್ಲಾ ಧನವನ್ನು ಅವನಿಗೆ ಒಪ್ಪಿಸಿದರು.
ಗೃಹೀತ್ವಾ ಧೃತರಾಷ್ಟ್ರಸ್ತು ಧನಂ ಭರತಸತ್ತಮ |
ಕೃಪಾಯುಕ್ತೋ ಮಹಾರಾಜಃ ಪಾಂಡುಮೇವ ಸ್ಮ ಶೋಚತಿ ॥45॥
ಎಲೈ ಭರತಶ್ರೇಷ್ಠನೇ, ಧೃತರಾಷ್ಟ್ರನು ಆ ಧನವನ್ನು ಸ್ವೀಕರಿಸಿ ಕೃಪಾಯುಕ್ತನಾಗಿ ಪಾಂಡುವನ್ನೇ ಚಿಂತಿಸಲು ಆರಂಭಿಸಿದನು.
ರಾಜಪುತ್ರಸ್ತು ಕೌಸಲ್ಯೋ ಮುನಿರ್ಮೂಲಫಲಾಶನಃ |
ಜಗಾಮ ಸಹ ಭಾರ್ಯಾಭ್ಯಾಮಾಶು ನಾಗಸಹಂ ಗಿರಿಮ್ ॥46॥
ಕಾಶೀರಾಜಕುಮಾರಿಯ ಮಗನಾದ ಪಾಂಡುವಾದರೋ, ಮೂಲಫಲಾಶನನಾದ ಮುನಿಯಾಗಿ ಪತ್ನಿಯರ ಜೊತೆಯಲ್ಲಿ ಶೀಘ್ರವಾಗಿ ನಾಗಸಹ ಎಂಬ ಪರ್ವತವನ್ನು ಸೇರಿದನು.
ಸ ಚೈತ್ರರಥಮಾಸಾದ್ಯ ವಾರಿಷೇಣಮವಾಪ್ಯ ಚ |
ವಾರಿಷೇಣಮತಿಕ್ರಮ್ಯ ಗತ್ವಾ ಗಂಧರಜೋವಹಮ್ ॥47॥
ರಕ್ಷ್ಯಮಾಣೋ ಮಹಾಭೂತೈಃ ಸಿದ್ಧೈಶ್ಚ ಪರಮರ್ಷಿಭಿಃ |
ಉವಾಸ ಸತತಂ ರಾಜಾ ಸಮೇಷು ವಿಷಮೇಷು ಚ ॥48॥
ಅವನು ಅಲ್ಲಿಂದ ಚೈತ್ರರಥ ಪರ್ವತಕ್ಕೆ ಹೋಗಿ, ಅಲ್ಲಿಂದ ವಾರಿಷೇಣ ಪರ್ವತಕ್ಕೆ ಹೋಗಿ, ವಾರಿಷೇಣ ಪರ್ವತವನ್ನು ದಾಟಿ

ಗಂಧರಜೋವಹ ಪರ್ವತಕ್ಕೆ ಹೋಗಿ ಅಲ್ಲಿ ಸಿದ್ಧರಿಂದಲೂ, ಶ್ರೇಷ್ಠಋಷಿಗಳಿಂದಲೂ ಮತ್ತು ಮಹಾಭೂತಗಳಿಂದಲೂ ರಕ್ಷಿಸಲ್ಪಟ್ಟವನಾಗಿ, ಸಮವಿಷಮಪ್ರದೇಶಗಳಲ್ಲಿ ವಾಸಮಾಡಿದನು.
ಇಂದ್ರದ್ಯುಮ್ನಸರಃ ಪ್ರಾಪ್ಯ ಹಂಸಕೂಟಮತೀತ್ಯ ಚ |
ಶತಶೃಂಗೇ ಮಹಾಪ್ರಾಜ್ಞಃ ತಾಪಸಃ ಸಮಪದ್ಯತ ॥49॥
ಅಲ್ಲಿಂದ ಇಂದ್ರದ್ಯುಮ್ನ ಸರೋವರಕ್ಕೆ ಹೋಗಿ, ಅಲ್ಲಿಂದ ಹಂಸಕೂಟಪರ್ವತವನ್ನು ದಾಟಿ ಶತಶೃಂಗಪರ್ವತವನ್ನು ಸೇರಿ ಅಲ್ಲಿ ಮಹಾಪ್ರಾಜ್ಞನಾದ ಅವನು ತಪಸ್ವಿಯಾದನು.
ತತ್ರಾಪಿ ತಪಸಿ ಶ್ರೇಷ್ಠೇ ವರ್ತಮಾನಃ ಪರಂತಪಃ |
ಸಿದ್ಧಚಾರಣಸಂಘಾನಾಂ ಬಭೂವ ಪರಮಪ್ರಿಯಃ ॥50॥
ಅಲ್ಲಿಯೂ ಪರಂತಪನಾದ ಅವನು ಶ್ರೇಷ್ಠವಾದ ತಪಸ್ಸನ್ನು ಆಚರಿಸುತ್ತಾ ಸಿದ್ಧಚಾರಣಸಮೂಹಕ್ಕೆ ಅತ್ಯಂತ ಪ್ರಿಯನಾದನು.
ಶುಶ್ರೂಷುರನಹಂವಾದೀ ನಿಯತಾತ್ಮಾ ಜಿತೇಂದ್ರಿಯಃ |
ಸ್ವರ್ಗಂ ಗಂತುಂ ಪರಾಕ್ರಾಂತಃ ಸ್ವೇನ ವೀರ್ಯೇಣ ಭಾರತ ॥51॥
ಎಲ್ಲರ ಸೇವೆಗಳನ್ನು ಮಾಡಿಕೊಂಡು ಅಹಂಕಾರದ ಮಾತುಗಳನ್ನಾಡದೆ, ಮನಸ್ಸನ್ನೂ, ಇಂದ್ರಿಯಗಳನ್ನೂ ನಿಯಂತ್ರಿಸಿ ತನ್ನ ಸಾಮರ್ಥ್ಯದಿಂದಲೇ ಸ್ವರ್ಗವನ್ನು ಸೇರಲು ಬಯಸಿದನು.
ಕೇಷಾಂಚಿದಭವದ್ ಭ್ರಾತಾ ಕೇಷಾಂಚಿದಭವದ್ ಸಖಾ |
ಋಷಿಭಿಸ್ತ್ವಭವತ್ ಕೈಶ್ಚಿತ್ ಪುತ್ರವತ್ ಪರಿರಕ್ಷಿತಃ ॥52॥
ಅವನು ಕೆಲವರಿಗೆ ಅಣ್ಣನಂತಿದ್ದನು. ಕೆಲವರಿಗೆ ಸ್ನೇಹಿತನಾಗಿದ್ದನು. ಇನ್ನು ಕೆಲವು ಋಷಿಗಳು ಅವನನ್ನು ಪುತ್ರನಂತೆ ರಕ್ಷಿಸಿದರು.
ಸ ತು ಕಾಲೇನ ಮಹತಾ ಪ್ರಾಪ್ಯ ನಿಷ್ಕಲ್ಮಷಂ ತಪಃ |
ಬ್ರಹ್ಮರ್ಷಿಸದೃಶಃ ಪಾಂಡುರಭವದ್ ಭರತರ್ಷಭ ॥53॥
ಎಲೈ ಭರತರ್ಷಭನೇ, ಪಾಂಡುವು ಬಹುಕಾಲ ನಿರ್ದುಷ್ಟವಾದ ತಪಸ್ಸನ್ನು ಮಾಡಿ ಪಾಪಗಳಿಂದ ನಿರ್ಮುಕ್ತನಾಗಿ ಬ್ರಹ್ಮರ್ಷಿಸಮಾನನಾದನು.
ಅಮಾವಾಸ್ಯಾಂ ತು ಸಹಿತಾ ಋಷಯಃ ಸಂಶಿತವ್ರತಾಃ |
ಬ್ರಹ್ಮಾಣಂ ದ್ರಷ್ಟುಕಾಮಾಸ್ತೇ ಸಂಪ್ರತಸ್ಥುರ್ಮನೀಷಿಣಃ ॥54॥
ಒಂದು ಅಮಾವಾಸ್ಯೆಯ ದಿನದಂದು ಶ್ರೇಷ್ಠ ವ್ರತನಿಷ್ಠರಾದ ಮೇಧಾವಿಗಳಾದ ಎಲ್ಲಾ ಋಷಿಗಳೂ ಬ್ರಹ್ಮದೇವರನ್ನು ನೋಡುವ ಅಭಿಪ್ರಾಯದಿಂದ ಒಟ್ಟಿಗೆ ಹೊರಟರು.
ಸಂಪ್ರಸ್ಥಿತಾನೃಷೀನ್ ದೃಷ್ಟ್ವಾ ಪಾಂಡುರ್ವಚನಮಬ್ರವೀತ್ |
ಭವಂತಃ ಕ್ವ ಗಮಿಷ್ಯಂತಿ ಬ್ರೂತ ಮೇ ವದತಾಂ ವರಾಃ ॥55॥
ಹೊರಟಂತಹ ಋಷಿಗಳನ್ನು ನೋಡಿ ಮಾತನಾಡುವುದರಲ್ಲಿ ನಿಪುಣನಾದ ಪಾಂಡುವು ``ಎಲೈ ಮಾತನಾಡುವವರಲ್ಲಿ ಶ್ರೇಷ್ಠರಾದವರೇ, ನೀವೆಲ್ಲರೂ ಎಲ್ಲಿಗೆ ಹೊರಟಿದ್ದೀರಿ ಹೇಳಿ'' ಎಂದು ಕೇಳಿದನು.
ಋಷಯಃ
ಸಮವಾಯೋ ಮಹಾನದ್ಯ ಬ್ರಹ್ಮಲೋಕೇ ಮಹಾತ್ಮನಾಮ್ |
ದೇವಾನಾಂ ಚ ಋಷೀಣಾಂ ಚ ಪಿತೄಣಾಂ ಚ ಮಹಾತ್ಮನಾಮ್ |
ವಯಂ ತತ್ರ ಗಮಿಷ್ಯಾಮೋ ದ್ರಷ್ಟುಕಾಮಾಃ ಸ್ವಯಂಭುವಮ್ ॥
ಬ್ರಹ್ಮಲೋಕದಲ್ಲಿ ಈ ದಿನ ಋಷಿಗ, ಪಿತೃಗಳ ಮತ್ತು ಮಹಾತ್ಮರ ದೊಡ್ಡ ಸಮಾಗಮವು ಉಂಟಾಗುತ್ತದೆ. ನಾವು ಬ್ರಹ್ಮದೇವರನ್ನು ನೋಡಲು ಬಯಸಿ ಅಲ್ಲಿಗೆ ಹೊರಟಿರುವೆವು.
ವೈಶಂಪಾಯನಃ
ಪಾಂಡುಮುತ್ಥಾಯ ಸಹಸಾ ಗಂತುಕಾಮಂ ಮಹರ್ಷಯಃ |
ಸ್ವರ್ಗಮಾರ್ಗಂ ತಿತೀರ್ಷಂತಂ ಶತಶೃಂಗಾದುದಙ್ಮುಖಮ್ |
ಪ್ರಸ್ಥಿತಂ ಸಹ ಭಾರ್ಯಾಭ್ಯಾಮಬ್ರುವಂಸ್ತೇ ತಪೋಧನಾಃ ॥57॥
ತಾನೂ ತಕ್ಷಣ ಎದ್ದು ಶತಶೃಂಗಪರ್ವತದಿಂದ ಉತ್ತರಾಭಿಮುಖವಾಗಿ ಹೊರಟು ಸ್ವರ್ಗಮಾರ್ಗವನ್ನು ದಾಟಲು ಇಚ್ಛಿಸಿದ ಸಪತ್ನೀಕನಾದ ಪಾಂಡುವನ್ನು ಕುರಿತು ತಪೋಧನರು ಹೇಳಿದರು.
ಉಪರ್ಯುಪರಿ ಗಚ್ಛಂತಃ ಶೈಲರಾಜಮುದಂಮುಖಾಃ |
ಪ್ರಪಶ್ಯಾಮೋ ಗಿರಿಂ ತಸ್ಮಿನ್ ದುರ್ಗಾನ್ ದೇಶಾನ್ ಬಹೂನ್ವಯಮ್ ॥
ನಾವು ಮೇಲೆ ಮೇಲೆ ಉತ್ತರಾಭಿಮುಖವಾಗಿ ಹೋಗುತ್ತಾ ಶೈಲರಾಜನಾದ ಮೇರುವನ್ನು, ಅಲ್ಲಿರುವ ಅನೇಕ ದುರ್ಗಮವಾದ ಪ್ರದೇಶಗಳನ್ನು ನೋಡುತ್ತೇವೆ.
ಯಕ್ಷರಾಕ್ಷಸಗುಪ್ತಾನಿ ಗಂಧರ್ವಚರಿತಾನಿ ಚ |
ಆಕ್ರೀಡಿತಾನ್ಯಪ್ಸರೋಭಿಃ ಸಹ ದೇವಗಣೈಃ ಸದಾ ॥59॥
ಯಕ್ಷರಾಕ್ಷಸರಿಂದಯುಕ್ತವಾದ, ಗಂಧರ್ವರ ಸಂಚಾರವಿರುವ, ಅಪ್ಸರೆಯರ ಜೊತೆಯಲ್ಲಿ ದೇವತೆಗಳು ವಿಹಾರಮಾಡುವ ಪ್ರದೇಶಗಳನ್ನು ನೋಡುತ್ತೇವೆ.
ಸದನಾನಿ ಕುಬೇರಸ್ಯ ಹೃದ್ಯಾನಿ ಚ ಮೃದೂನಿ ಚ |
ತೇಷಾಂ ನದಂ ನಿತಂಬಾಂಶ್ಚ ಘೋರಾಂಶ್ಚ ಗಿರಿಗಹ್ವರಾನ್ ॥60॥

ಕುಬೇರನ ಮನೋಹರವಾದ ಪಟ್ಟಣಗಳನ್ನು, ಅಲ್ಲಿರುವ ನದಿಗಳನ್ನು, ಪರ್ವತದ ತಪ್ಪಲುಪ್ರದೇಶಗಳನ್ನು, ಘೋರವಾದ ಗಿರಿಗಹ್ವರಗಳನ್ನು ನೋಡುತ್ತೇವೆ.
ಸಂತಿ ನಿತ್ಯಂ ಹಿಮಾಕ್ರಾಂತಾ ನಿವೃತ್ತಮೃಗಪಕ್ಷಿಣಃ |
ಸಂತಿ ಕೇಚಿತ್ ಸದಾವರ್ಷಾ ಘೋರರೂಪಾ ದುರಾಸದಾಃ ||61||
ಅಲ್ಲಿ ಯಾವಾಗಲೂ ಹಿಮಾಕ್ರಾಂತವಾಗಿ, ಮೃಗಪಕ್ಷಿಗಳಿಂದ ಪರಿತ್ಯಕ್ತವಾದ ಪ್ರದೇಶಗಳಿವೆ. ಯಾವಾಗಲೂ ಮಳೆ ಬೀಳುತ್ತಿರುವ ಪ್ರದೇಶಗಳಿವೆ. ಘೋರರೂಪವಾಗಿದ್ದು ತಲುಪಲು ಅಸಾಧ್ಯವಾದ ಪ್ರದೇಶಗಳಿವೆ.
ಪಕ್ಷಿಣೋಽತ್ರ ನ ಗಚ್ಛಂತಿ ಕಥಮೇವಾಪರೇ ಮೃಗಾಃ |
ವಾಯುರೇವಾತ್ರ ಸಂಯಾತಿ ಸಿದ್ಧಾ ಯಕ್ಷಾಶ್ಚ ಚಾರಣಾಃ ||62||
ಅಲ್ಲಿ ಪಕ್ಷಿಗಳೂ ಹೋಗುವುದಿಲ್ಲ. ಇತರ ಮೃಗಗಳು ಹೇಗೆ ಹೋಗಲು ಸಾಧ್ಯ? ಅಲ್ಲಿ ವಾಯುವು ಮಾತ್ರ ಬೀಸುತ್ತದೆ. ಸಿದ್ಧರು, ಯಕ್ಷರು, ಚಾರಣರು ಸಂಚರಿಸುತ್ತಾರೆ.
ಗಚ್ಛಂತ್ಯೌ ಶೈಲರಾಜೇಽಸ್ಮಿನ್ ರಾಜಪುತ್ರ್ಯೌ ಕಥಂ ತ್ವಿಮೇ |
ನ ಸೀದೇತಾಮದುಃಖಾರ್ಹೇ ಮಾ ಗಮೋ ಭರತರ್ಷಭ ||63||
ಅಂತಹ ಪರ್ವತಪ್ರದೇಶಗಳಲ್ಲಿ ಹೋಗುತ್ತಾ ಈ ರಾಜಪುತ್ರಿಯರು ಹೇಗೆ ದುಃಖವನ್ನು ಸಹಿಸುತ್ತಾರೆ. ಅವರು ದುಃಖಪಡಲು ಅರ್ಹರಾದವರಲ್ಲ. ಆದ್ದರಿಂದ ಭರತಶ್ರೇಷ್ಠನೇ, ನೀನು ಬರಬೇಡ.
ಪಾಂಡುಃ
ಅಪ್ರಜಸ್ಯ ಕಿಲ ಮೇ ಸ್ವರ್ಗಮದ್ವಾರಂ ಸಂಪ್ರಚಕ್ಷತೇ |
ಸ ಹಿ ಸಂತಾಪತಪ್ತೋಽಹಮಪ್ರಜಶ್ಚ ಬ್ರವೀಮಿ ವಃ ||64||
ಮಕ್ಕಳಿಲ್ಲದ ನನಗೆ ಸ್ವರ್ಗಕ್ಕೆ ಪ್ರವೇಶವಿಲ್ಲವೆಂದು ಹೇಳುತ್ತಾರೆ. ಮಕ್ಕಳಿಲ್ಲದ ನಾನು ಆ ಸಂತಾಪದಿಂದ ತಪ್ತನಾಗಿ ನಿಮಗೆ ಹೇಳುತ್ತಿದ್ದೇನೆ.
ಸೋಽಹಮುಗ್ರೇಣ ತಪಸಾ ಸಭಾರ್ಯಸ್ತ್ಯಕ್ತಜೀವಿತಃ |
ಅನಪತ್ಯೋಽಪಿ ವಿಂದೇಯಂ ಸ್ವರ್ಗಮುಗ್ರೇಣ ಕರ್ಮಣಾ ||65||
ನನಗೆ ಮಕ್ಕಳಿಲ್ಲದಿದ್ದರೂ ಜೀವನದ ಆಸೆಯನ್ನು ತೊರೆದು ಪತ್ನಿಯರ ಜೊತೆಯಲ್ಲಿ ಉಗ್ರವಾದ ತಪಸ್ಸನ್ನು ಮಾಡಿ ಉಗ್ರವಾದ ಕರ್ಮವನ್ನು ಆಚರಿಸಿದುದರಿಂದ ನನಗೂ ಸ್ವರ್ಗವು ದೊರೆಯಬೇಕು.
ತಾಪಸಾಃ
ಅಪ್ರಜಶ್ಚ ಮಹಾಭಾಗ ನ ಸ್ವರ್ಗಂ ಗಂತುಮರ್ಹಸಿ |
ಅಸ್ತಿ ವೈ ತವ ಧರ್ಮಾತ್ಮನ್ ವಿದುರ್ದೇವೋಪಮಂ ಶುಭಮ್ ||66||
ಅಪತ್ಯಮನಘಂ ತ್ವಿಷ್ಟಂ ಪಶ್ಯಾಮೋ ದಿವ್ಯಚಕ್ಷುಷಾ |
ದೈವಾದಿಷ್ಟಂ ಮನುಷ್ಯೇಂದ್ರ ಕಾರಣೇನೋಪಪಾದಯ ||67||
ಎಲೈ ಮಹಾನುಭಾವನೇ, ಮಕ್ಕಳನ್ನು ಪಡೆಯದೇ ನೀನು ಸ್ವರ್ಗಕ್ಕೆ ಹೋಗುವಂತಿಲ್ಲ. ಧರ್ಮಾತ್ಮನೇ, ನಿನಗೆ ದೇವತಾಸದೃಶವಾದ, ಪ್ರಿಯವಾದ, ನಿರ್ದುಷ್ಟವಾದ ಮಕ್ಕಳಿದ್ದಾರೆ. ಅವರನ್ನು ನಾವು ದಿವ್ಯದೃಷ್ಟಿಯಿಂದ ನೋಡುತ್ತಿದ್ದೇವೆ. ಎಲೈ ರಾಜನೇ, ದೇವತಾನುಗ್ರಹದಿಂದ ನಿನಗೆ ಇಷ್ಟವಾದ ಪುತ್ರಫಲವನ್ನು ಪಡೆಯುವವನಾಗು.
ಅರಿಷ್ಟಂ ಕ್ಷೇಮಮವ್ಯಗ್ರೋ ವಿಂದೇಥಾಃ ಪರಮಾಂ ಗತಿಮ್ |
ತಸ್ಮಾದಿಷ್ಟಫಲೇ ತಾತ ಕುರು ಯತ್ನಂ ಯಥಾಗಮಮ್ |
ಅಪತ್ಯಂ ಗುಣಸಂಪನ್ನಂ ಲಬ್ಧ್ವಾ ಪ್ರೀತಿಮವಾಪ್ಸ್ಯಸಿ ||68||
ರಾಜನೇ, ನೀನು ನಿಶ್ಚಯವಾಗಿ ಯಾವ ಕ್ಲೇಶವೂ ಇಲ್ಲದ ಕ್ಷೇಮಪೂರ್ಣವಾದ ಸದ್ಗತಿಯನ್ನು ಹೊಂದುತ್ತೀಯೆ. ಆದ್ದರಿಂದ ಇಷ್ಟವಾದ ಫಲವನ್ನು ಪಡೆಯಲು ಶಾಸ್ತ್ರದಲ್ಲಿ ಹೇಳಿದ ಪ್ರಯತ್ನವನ್ನು ಮಾಡು. ಗುಣವಂತರಾದ ಮಕ್ಕಳನ್ನು ಪಡೆದು ನೀನು ಸಂತೋಷಪಡುವಿ.
ವೈಶಂಪಾಯನಃ
ತಚ್ಛ್ರುತ್ವಾ ತಾಪಸವಚಃ ಕೌರವ್ಯಃ ಸಮಚಿಂತಯತ್ |
ಮೃಗಶಾಪಾದಪಹತಾಮಾತ್ಮನೋ ಹೀಂದ್ರಿಯಕ್ರಿಯಾಮ್ ||69||
ಆ ತಾಪಸರ ಮಾತನ್ನು ಕೇಳಿದ ಕೌರವರಾಜನಾದ ಪಾಂಡುವು ಜಿಂಕೆಯ ರೂಪದಲ್ಲಿದ್ದ ಕಿಂದಮರ ಶಾಪದಿಂದ ತಾನು ಇಂದ್ರಿಯ ಕ್ರಿಯೆಯಿಂದ ನಿವೃತ್ತನಾಗಿರುವುದನ್ನು ಗಮನಿಸಿ ಆಲೋಚಿಸಿದನು.
ಅಥ ಪಾರಶವೀಂ ಕನ್ಯಾಂ ದೇವಕಸ್ಯ ಮಹೀಪತೇಃ |
ರೂಪಯೌವನಸಂಪನ್ನಾಂ ಸ ಶುಶ್ರಾವಾಪಗಾಸುತಃ ||70||
ಆಗ ಭೀಷ್ಮರು ದೇವಕಮಹಾರಾಜನಿಗೆ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ ಕನ್ಯೆಯು ರೂಪಯೌವನಸಂಪನ್ನಳಾಗಿದ್ದಾಳೆ ಎಂಬ ವಾರ್ತೆಯನ್ನು ಕೇಳಿದರು.
ತತಸ್ತು ವರಯಿತ್ವಾ ತಾಮಾನಾಯ್ಯ ಭರತರ್ಷಭಃ |
ವಿವಾಹಂ ಕಾರಯಾಮಾಸ ವಿದುರಸ್ಯ ಮಹಾಮತೇಃ ||71||
ಅನಂತರ ಭರತಶ್ರೇಷ್ಠರಾದ ಭೀಷ್ಮರು ಅಲ್ಲಿಗೆ ಹೋಗಿ ಅವಳನ್ನು ವರಿಸಿ, ಹಸ್ತಿನಪುರಕ್ಕೆ ಕರೆದುಕೊಂಡು ಬಂದು ಮಹಾಮತಿಯಾದ ವಿದುರನಿಗೆ ವಿವಾಹವನ್ನು ಮಾಡಿಸಿದರು.

ತಸ್ಯಾಂ ಚೋತ್ಪಾದಯಾಮಾಸ ವಿದುರಃ ಕುರುನಂದನಃ |
ಪುತ್ರಾನ್ ವಿನಯಸಂಪನ್ನಾನಾತ್ಮನಃ ಸದೃಶಾನ್ ಗುಣೈಃ ॥72॥
ಕುರುನಂದನನಾದ ವಿದುರನು ಅವಳಲ್ಲಿ ವಿನಯಸಂಪನ್ನರಾದ ಗುಣಗಳಲ್ಲಿ ತನಗೆ ಸದೃಶರಾದ ಪುತ್ರರನ್ನು ಪಡೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಾದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಹನ್ನೆರಡನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ- ಅಧ್ಯಾಯ-12
ತದಾ ಮುನೀಂದ್ರಸಂಯುತಃ ಸದೋ ವಿಧಾತುರುತ್ತಮಮ್ |
ಸ ಪಾಂಡುರಾಪ್ತುಮೈಚ್ಛತ ನ್ಯವಾರಯಂಶ್ಚ ತೇ ತದಾ ॥15॥
ಆ ಕಾಲದಲ್ಲಿ ಪಾಂಡು ಮುನಿಶ್ರೇಷ್ಠರ ಸಮೂಹದ ನಡುವೆ ಬ್ರಹ್ಮಲೋಕಗಮನದ ಬಯಕೆಯನ್ನು ವ್ಯಕ್ತಮಾಡಿದ. ಆಗ ಮುನಿಗಳು ತಡೆದರು.
ಯದರ್ಥಮೇವ ಜಾಯತೇ ಪುಮಾನ್ ಹಿ ತಸ್ಯ ಸೋಽಕೃತೇಃ |
ಶುಭಾಂ ಗತಿಂ ನ ತು ವ್ರಜೇದ್ ಧ್ರುವಂ ತತೋ ನ್ಯವಾರಯನ್ ॥16॥
ಜೀವಾತ್ಮನಾದ ಯಾವ ಉದ್ದೇಶ ಸಾಧನೆಗಾಗಿ ಹುಟ್ಟುತ್ತಾನೋ ಅದನ್ನು ಸಾಧಿಸದಿದ್ದರೆ ಆತ ನಿಶ್ಚಯವಾಗಿ ಸದ್ಗತಿಯನ್ನು ಹೊಂದುವುದಿಲ್ಲ. ಅದರಿಂದ ಮುನಿಗಳು ತಡೆದರು.
ಪ್ರಧಾನದೇವತಾಜನೇ ನಿಯೋಕ್ತುಮಾತ್ಮನಃ ಪ್ರಿಯಾಮ್ |
ಬಭೂವ ಪಾಂಡುರೇಷ ತದ್ ವಿನಾ ನ ತಸ್ಯ ಸದ್ಗತಿಃ ॥17॥
ಪಾಂಡು ಉತ್ತಮ ದೇವತೆಗಳ ಜನನದಲ್ಲಿ ತನ್ನ ಪ್ರಿಯೆಯನ್ನು ನಿಯೋಗ ಮಾಡಲೆಂದೇ ಜನಿಸಿದ್ದ. ಅದನ್ನು ಮಾಡದ ಹೊರತು ಅವನಿಗೆ ಸದ್ಗತಿ ಇಲ್ಲ.
ಅತೋಽನ್ಯಥಾ ಸುತಾನೃತೇ ವ್ರಜಂತಿ ಸದ್ಗತಿಂ ನರಾಃ |
ಯಥೈವ ಧರ್ಮಭೂಷಣೋ ಜಗಾಮ ಸಂಧ್ಯಕಾಸುತಃ ॥18॥
ಮಕ್ಕಳನ್ನು ಪಡೆಯದಿದ್ದರೂ ಬೇರೆ ರೀತಿಯಿಂದ ಮಾನವರು ಸದ್ಗತಿ ಪಡೆಯಬಲ್ಲರು. ಸಂಧ್ಯಾವಳಿಯ ಪುತ್ರ ಧರ್ಮಾಂಗದ ಹೇಗೋ ಹಾಗೆ.
ತದಾ ಕಲಿಶ್ಚ ರಾಕ್ಷಸಾ ಬಭೂವುರಿಂದ್ರ ಜಿನ್ಮುಖಾಃ |
ವಿಚಿತ್ರವೀರ್ಯನಂದನಪ್ರಿಯೋದರೇ ಹಿ ಗರ್ಭಗಾಃ ॥19॥
ಆಗ ಕಲಿಯೂ ಇಂದ್ರಜಿತ್ ಮುಂತಾದ ರಾಕ್ಷಸರೂ ಧೃತರಾಷ್ಟ್ರನ ಪತ್ನಿಯ ಗರ್ಭದಲ್ಲಿ ಜನಿಸಿದರು.
ತದಸ್ಯ ಸೋಽನುಜೋಽಶೃಣೋನ್ಮುನೀಂದ್ರದೂಷಿತಂ ಚ ತತ್ |
ವಿಚಾರ್ಯ ಚ ಪ್ರಿಯಾಮಿದಂ ಜಗಾದ ವಾಸುದೇವಧೀಃ ॥20॥
ಆಗ ಮುನಿಗಳು ಹೇಳಿದ ಗಾಂಧಾರಿ ಗರ್ಭವತಿಯಾದ ವಿಷಯವನ್ನೂ ತನಗೆ ಅವರು ಉಪದೇಶಿಸಿದ ಕರ್ತವ್ಯವನ್ನೂ ಹರಿಭಕ್ತನಾದ ಪಾಂಡು ಕೇಳಿ ವಿಚಾರ ಮಾಡಿ ಪ್ರಿಯೆಯಾದ ಕುಂತಿಗೆ ಹೇಳಿದ.
ಯ ಏವ ಮದ್ಗುಣಾಧಿಕಸ್ತತಃ ಸುತಂ ಸಮಾಪ್ನುಹಿ |
ಸುತಂ ವಿನಾ ನ ನೋ ಗತಿಂ ಶುಭಾಂ ವದಂತಿ ಸಾಧವಃ ॥21॥
`ನನಗಿಂತ ಗುಣದಲ್ಲಿ ಶ್ರೇಷ್ಠನಾದವನಿಂದ ಮಗನನ್ನು ಪಡೆ. ಮಗನಿಲ್ಲದೆ ನಮಗೆ ಸದ್ಗತಿ ಇಲ್ಲವೆಂದು ಸಾಧುಗಳು ಹೇಳುತ್ತಾರೆ'|
ತದಸ್ಯ ಕೃಚ್ಛ್ರತೋ ವಚಃ ಪೃಥಾಗೃಹೀಜ್ಜಗಾದ ಚ |
ಮಮಾಸ್ತಿ ದೇವವಶ್ಯದೋ ಮನೂತ್ತಮಃ ಸುತಾಪ್ತಿದಃ ॥22॥
ಕುಂತಿ ಪಾಂಡುವಿನ ಈ ಮಾತನ್ನು ಕಷ್ಟದಿಂದ ಒಪ್ಪಿದರು. ಮತ್ತು `ನನಗೆ ದೇವತೆಗಳನ್ನು ವಶೀಕರಿಸುವ ಮತ್ತು ಪುತ್ರ ಪ್ರಾಪ್ತಿ ನೀಡುವ ಉತ್ತಮ ಮಂತ್ರೋಪದೇಶವಿದೆ' ಎಂದಳು.
ನ ತೇ ಸುರಾನೃತೇ ಸಮಃ ಸುರೇಷು ಕೇಚಿದೇವ ಚ |
ಅತಸ್ತವಾಧಿಕಂ ಸುರಂ ಕಮಾಹ್ವಯೇ ತ್ವದಾಜ್ಞಯಾ ॥23॥
`ನಿನಗೆ ದೇವತೆಗಳು ಹೊರತು ಬೇರೆ ಯಾರೂ ಸಮರಿಲ್ಲ. ದೇವತೆಗಳಲ್ಲಿಯೂ ಕೆಲವರೆ ನಿನಗೆ ಸಮರು. ಅದರಿಂದ ನಾನು ನಿನ್ನಾಜ್ಞೆಯಿಂದ ನಿನಗಿಂತ ಉತ್ತಮನಾದ ಯಾರನ್ನು ಕರೆಯಲಿ?
ವರಂ ಸಮಾಶ್ರಿತಾ ಪತಿಂ ವ್ರಜೇತ ಯಾ ತತೋಽಧಮಮ್ |
ನ ಕಾಚಿದಸ್ತಿ ನಿಷ್ಕೃತಿರ್ನ ಭರ್ತೃಲೋಕಮೃಚ್ಛತಿ ॥24॥
`ಉತ್ತಮನಾದ ಪತಿಯನ್ನು ಹೊಂದಿದವಳು ಯಾರು ಅವನಿಗಿಂತ ಕಡಿಮೆಯವನನ್ನು ಸೇರುವಳೋ ಅವಳಿಗೆ ಪ್ರಾಯಶ್ಚಿತ್ತವೂ ಇಲ್ಲ. ಅವಳು ಪತಿಲೋಕವನ್ನು ಸೇರುವುದಿಲ್ಲ.
ಕೃತೇ ಪುರಾ ಸುರಾಸ್ತಥಾ ಸುರಾಂಗನಾಶ್ಚ ಕೇವಲಮ್ |
ನಿಮಿತ್ತತೋಽಪಿ ತಾಃ ಕ್ವಚಿನ್ನ ತಾನ್ ವಿಹಾಯ ಮೇಮಿರೇ ॥25॥
ಕೃತಯುಗದಲ್ಲಿ ಮೊದಲಿಗೆ ದೇವತಾ ಪುರುಷರು ಯಾವುದೇ ಕಾರಣದಿಂದ ಎಂದೂ ತಮ್ಮ ನಿಯತ ಸ್ತ್ರೀಯರನ್ನು ಬಿಟ್ಟು

ಅನಿಯತರಾದ ಅನ್ಯಸ್ತ್ರೀಯರನ್ನು ರಮಿಸಿದುದಿಲ್ಲ. ಹಾಗೇ ದೇವತೆಗಳ ನಿಯತ ಸ್ತ್ರೀಯರೂ ಎಂದೂ ಯಾವ ಕಾರಣದಿಂದಲೂ ತಮ್ಮ ನಿಯತ ಪತಿಗಳನ್ನು ಬಿಟ್ಟು ಅನ್ಯ ಪುರುಷರನ್ನು ರಮಿಸಲಿಲ್ಲ.
ಮನೋವಚಃ ಶರೀರತೋ ಯತೋ ಹಿ ತಾಃ ಪತಿವ್ರತಾಃ |
ಅನಾದಿಕಾಲತೋಽಭವಂಸ್ತತಃ ಸಭರ್ತೃಕಾಃ ಸದಾ ॥26॥
ಆ ದೇವತಾಸ್ತ್ರೀಯರು ಅನಾದಿಕಾಲದಿಂದ ಮನೋ ವಾಕ್ ಕಾರ್ಯಗಳಲ್ಲಿ ಪತಿವ್ರತೆಯಾಗಿದ್ದರು. ಅದರಿಂದ ಅವರು ಸದಾ ಪತಿಯುಕ್ತರಾಗಿಯೆ ಇದ್ದರು.
ಸ್ವಭರ್ತೃಭಿರ್ವಿಮುಕ್ತಿಗಾಃ ಸಹೈವ ತಾ ಭವಂತಿ ಹಿ |
ಕೃತಾಂತಮಾಪ್ಯ ಚಾಪ್ಸರಃಸ್ತ್ರಿಯೋ ಬಭೂವರೂರ್ಜಿತಾಃ ॥27॥
ಅದರಿಂದ ದೇವತಾಸ್ತ್ರೀಯರು ಪತಿಗಳೊಂದಿಗೇ ಮುಕ್ತಿಹೊಂದುತ್ತಾರೆ. ಕೃತಯುಗ ಸಮಾಪ್ತಿ ಹೊಂದಿದಾಗ ಶ್ರೇಷ್ಠರಾದ ಅಪ್ಸರ ಸ್ತ್ರೀಯರು ಜನಿಸಿದರು.
ಅನಾವೃತಾಶ್ಚ ತಾಸ್ತಥಾ ಯಥೇಷ್ಟಭರ್ತೃಕಾಃ ಸದಾ |
ಅತಸ್ತು ತಾ ನ ಭರ್ತೃಭಿರ್ವಿಮುಕ್ತಿಮಾಪುರುತ್ತಮಾಮ್ ॥28॥
ಅಪ್ಸರೆಯರು ಯಾರಿಂದಲೂ ಪತ್ನಿಯರಾಗಿ ವರಿಸಲ್ಪಡುವರು. ಸದಾ ತಮ್ಮಿಚ್ಛೆಯಂತೆ ಯಾರನ್ನಾದರೂ ಪತ್ನಿಗಳನ್ನಾಗಿ ಸ್ವೀಕರಿಸುವವರು. ಅದರಿಂದ ಅವರು ನಿಯತ ಪತಿಗಳೊಂದಿಗೆ ಮುಕ್ತಿಯನ್ನು ಹೊಂದುವುದಿಲ್ಲ.
ಸುರಸ್ತ್ರಿಯೋಽತಿಕಾರಣೈರ್ಯದಾನ್ಯಥಾ ಸ್ಥಿತಾಸ್ತದಾ |
ದುರನ್ವಯಾ ಸುದುಸ್ಸಹಾ ವಿಪತ್ ತತೋ ಭವಿಷ್ಯತಿ ॥29॥
ನಿಯತ ಪತಿಗಳುಳ್ಳ ದೇವತಾಸ್ತ್ರೀಯರು ಯಾವುದೇ ಪ್ರಬಲ ಕಾರಣಗಳಿಂದ ಪರಪುರುಷ ಸಂಗದಲ್ಲಿದ್ದರೂ ಅದರ ಫಲವಾಗಿ ದುಃಖದಾಯಕ ಅಸಹನೀಯ ವಿಪತ್ತು ಬರುತ್ತದೆ.
ಅಯುಕ್ತಮುಕ್ತಮಾಂಸ್ತತೋ ಭವಾಂಸ್ತಥಾಪಿ ತೇ ವಚಃ |
ಅಲಂಘ್ಯಮೇವ ಮೇ ತತೋ ವದಸ್ವ ಪುತ್ರದಂ ಸುರಮ್ ॥30॥
ಅದರಿಂದ ನೀನು ಅಯುಕ್ತವಾದ ಮಾತನ್ನಾಡಿರುವೆ. ಆದರೂ ನಿನ್ನ ಮಾತು ನನಗೆ ಅನುಲ್ಲಂಘನೀಯ. ಅದರಿಂದ ನನಗೆ ಪುತ್ರನನ್ನು ನೀಡಬೇಕಾದ ದೇವತೆ ಯಾರು ಹೇಳು'.
* * * *

ನೂರಹದಿಮೂರನೆಯ ಅಧ್ಯಾಯ
(ಗಾಂಧಾರಿಯ ಗರ್ಭಧಾರಣೆ, ಪಾಂಡುವಿಗೆ ಪುತ್ರಚಿಂತೆ, ಕುಂತಿಯಿಂದ ಪಾಂಡುವನ್ನು ಕುರಿತು ವ್ಯುಷಿತಾಶ್ವಚರಿತ ನಿರೂಪಣೆ.)
ವೈಶಂಪಾಯನಃ
ತತಃ ಪುತ್ರಶತಂ ಜಜ್ಞೇ ಗಾಂಧಾರ್ಯಾಂ ಜನಮೇಜಯ |
ಧೃತರಾಷ್ಟ್ರಸ್ಯ ವೈಶ್ಯಾಯಾಮೇಕಶ್ಚೈವ ಶತಾತ್ ಪರಃ ॥1॥
ಎಲೈ ಜನಮೇಜಯನೇ, ಅನಂತರ ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ನೂರು ಪುತ್ರರೂ, ವೈಶ್ಯಪತ್ನಿಯಲ್ಲಿ ಒಬ್ಬ ಪುತ್ರನೂ ಜನಿಸಿದರು.
ಕಥಂಚಿತ್ ಸದೃಶೀಂ ಭಾರ್ಯಾಂ ಗಾಂಧಾರೀಃ ಧರ್ಮಚಾರಿಣೀಮ್|
ವರ್ತಮಾನಂ ಪ್ರಿಯೇಷ್ವೇವ ಧೃತರಾಷ್ಟ್ರೋಽನ್ವವರ್ತತ ॥2॥
ಧೃತರಾಷ್ಟ್ರನು ತನಗೆ ಹೇಗೋ ಸದೃಶಳಾದ, ಯಾವಾಗಲೂ ಪ್ರಿಯವನ್ನೇ ಉಂಟು ಮಾಡುವ ಧರ್ಮಚಾರಿಣಿಯಾದ ಗಾಂಧಾರಿಯನ್ನು ಅನುಸರಿಸಿದನು.
ಪಾಂಡೋಃ ಕುಂತ್ಯಾಂ ಚ ಮಾದ್ರ್ಯಾಂ ಚ ಪಂಚ ಪುತ್ರಾ ಮಹಾರಥಾಃ |
ಸಮಪದ್ಯಂತ ದೇವೇಭ್ಯಃ ಸಂತಾನಾಯ ಕುಲಸ್ಯ ಚ ॥3॥
ಪಾಂಡುವಿಗೆ ಕುಂತಿಯಲ್ಲಿ ಮತ್ತು ಮಾದ್ರಿಯಲ್ಲಿ ಸೇರಿ ಕುಲದ ಸಂತಾನಾಭಿವೃದ್ಧಿಗೋಸ್ಕರವಾಗಿ ದೇವತೆಗಳಿಂದ ಐದು ಪುತ್ರರು ಜನಿಸಿದರು.
ಜನಮೇಜಯಃ
ಕಥಂ ಪುತ್ರಶತಂ ಜಜ್ಞೇ ಗಾಂಧಾರ್ಯಾ ದ್ವಿಜಸತ್ತಮ |
ಕಿಯತಾ ವಾಪಿ ಕಾಲೇನ ತೇಷಾಮಾಯುಶ್ಚ ಕಿಂ ಪರಮ್ ॥4॥
ಬ್ರಾಹ್ಮಣಶ್ರೇಷ್ಠರೇ, ಗಾಂಧಾರಿಗೆ ಹೇಗೆ ನೂರು ಪುತ್ರರು ಜನಿಸಿದರು? ಅದಕ್ಕೆ ಎಷ್ಟು ಕಾಲವು ಹಿಡಿಯಿತು, ಆ ಪುತ್ರರ ಆಯುಸ್ಸಿನ ಪ್ರಮಾಣವೇನು?
ಕಥಂ ಚ ಶಪ್ತಸ್ಯ ತತಃ ಪಾಂಡೋಸ್ತೇನ ಮಹಾತ್ಮನಾ |
ಸಮುತ್ಪನ್ನಾ ದೈವತೇಭ್ಯಃ ಪಂಚ ಪುತ್ರಾ ಮಹಾಯಶಾಃ ॥5॥
ಮಹಾತ್ಮರಾದ ಕಿಂದಮರ ಶಾಪಕ್ಕೆ ಒಳಗಾಗಿದ್ದ ಪಾಂಡುವಿಗೆ ಮಹಾಕೀರ್ತಿವಂತರಾದ ಐದು ಪುತ್ರರು ದೇವತೆಗಳಿಂದ ಹೇಗೆ ಜನಿಸಿದರುಃ
ಏತತ್ ಸರ್ವಂ ಯಥಾವೃತ್ತಂ ವಿಸ್ತರೇಣ ತಪೋಧನ |
ಕಥಯ ತ್ವಂ ನ ಮೇ ತೃಪ್ತಿಃ ಕಥ್ಯಮಾನೇಷು ಬಂಧುಷು ॥6॥
ಎಲೈ ತಪೋಧನರೇ, ಈ ಎಲ್ಲ ವಿಷಯಗಳನ್ನು ನನಗೆ ವಿಸ್ತಾರವಾಗಿ ಹೇಳಿ. ನನ್ನ ಬಂಧುಗಳ ಕಥೆಯನ್ನು ಎಷ್ಟು ಕೇಳಿದರೂ ನನಗೆ

ತೃಪ್ತಿಯಿಲ್ಲ.
ಕಥಂ ಚಾಪಿ ಸ ವೈಶ್ಯಾಯಾಮೇಕಶ್ಚೈವ ಶತಾತ್ ಪರಃ |
ಕಥಂ ಚ ಸದೃಶೀಂ ಭಾರ್ಯಾಂ ಗಾಂಧಾರೀಂ ಧರ್ಮಚಾರಿಣೀಮ್|
ವರ್ತಮಾನಾಂ ಪ್ರಿಯೇಷ್ವೇವ ಧೃತರಾಷ್ಟ್ರೋಽನ್ವವರ್ತತ ||7||
ಧೃತರಾಷ್ಟ್ರನಿಗೆ ವೈಶ್ಯ ಸ್ತ್ರೀಯಲ್ಲಿ ನೂರೊಂದನೆಯ ಮಗ ಹೇಗೆ ಜನಿಸಿದನು? ತನಗೆ ಸದೃಶಳಾದ ತನ್ನ ಪ್ರಿಯದಲ್ಲಿಯೇ ಆಸಕ್ತಳಾದ ಧರ್ಮಚಾರಿಣಿಯಾದ ಗಾಂಧಾರಿಯನ್ನು ಧೃತರಾಷ್ಟ್ರನು ಹೇಗೆ ಅನುಸರಿಸಿದನು?
ವೈಶಂಪಾಯನಃ
ತೃಷಿತಂ ಬುಭುಕ್ಷಿತಂ ಶ್ರಾಂತಂ ದ್ವೈಪಾಯನಮುಪಸ್ಥಿತಮ್ |
ತೋಷಯಾಮಾಸ ಗಾಂಧಾರೀ ಸ ತು ತಸ್ಯೈ ವರಂ ದದೌ ||8||
ಒಮ್ಮೆ ಹಸಿವು ಬಾಯಾರಿಕೆಗಳಿಂದ ಬಳಲಿ ಮನೆಗೆ ಬಂದ ಶ್ರಾಂತರಾದ ವ್ಯಾಸರನ್ನು ಗಾಂಧಾರಿಯು ಉಪಚರಿಸಿ ಸಂತೋಷಪಡಿಸಿದಳು. ಅವರು ಅವಳಿಗೆ ಒಂದು ವರವನ್ನು ಕೊಟ್ಟರು.
ಸಾ ವವ್ರೇ ಸತತಂ ಭರ್ತುಃ ಪುತ್ರಾಣಾಂ ಶತಮಾತ್ಮನಃ |
ತತಃ ಕಾಲೇನ ಸಾ ಗರ್ಭಮಗೃಹ್ಣಾದ್ ಜ್ಞಾನಚಕ್ಷುಷಃ ||9||
ಅವಳು ಸತತವಾದ ಪತಿಯ ಪ್ರೀತಿಯನ್ನು ಮತ್ತು ತನ್ನ ಪತಿಯಿಂದ ನೂರು ಮಕ್ಕಳನ್ನು ಪಡೆಯುವುದನ್ನು ವರವನ್ನಾಗಿ ಬೇಡಿದಳು. ಅನಂತರ ಕಾಲಕ್ರಮದಲ್ಲಿ ಪ್ರಜ್ಞಾಚಕ್ಷುವಾದ ಧೃತರಾಷ್ಟ್ರನಿಂದ ಅವಳು ಗರ್ಭವನ್ನು ಧರಿಸಿದಳು.
ಗಾಂಧಾರ್ಯಾಮಾಹಿತೇ ಗರ್ಭೇ ಪಾಂಡುರಂಬಾಲಿಕಾಸುತಃ |
ಅಗಚ್ಛತ್ ಪರಮಂ ದುಃಖಮಪತ್ಯಾರ್ಥಮರಿಂದಮ ||10||
ಎಲೈ ಅರಿಂದಮನೇ, ಗಾಂಧಾರಿಯು ಗರ್ಭಿಣಿಯಾಗುತ್ತಿರಲು ಅಂಬಾಲಿಕೆಯ ಪುತ್ರನಾದ ಪಾಂಡುವು ತನ್ನ ಪುತ್ರರ ಸಲುವಾಗಿ ಬಹಳ ದುಃಖಪಟ್ಟನು.
ಗರ್ಭಿಣ್ಯಾಮಥ ಗಾಂಧಾರ್ಯಾಂ ಪಾಂಡುಃ ಪರಮದುಃಖಿತಃ |
ಮೃಗಾಭಿಶಾಪಾದಾತ್ಮಾನಂ ಶೋಚನ್ನುಪಹತಕ್ರಿಯಃ ||11||
ಸ ಗತ್ವಾ ತಪಸಾ ಸಿದ್ಧಿಂ ವಿಶ್ವಾಮಿತ್ರೋ ಯಥಾ ಭುವಿ |
ದೇಹನ್ಯಾಸೇ ಕೃತಮನಾ ಇದಂ ವಚನಮಬ್ರವೀತ್ ||12||
ಗಾಂಧಾರಿಯು ಗರ್ಭಿಣಿಯಾಗುತ್ತಿರಲು ಪಾಂಡುವು ಪರಮ ದುಃಖಿತನಾಗಿ ಮೃಗರೂಪದಲ್ಲಿದ್ದ ಕಿಂದಮರ ಶಾಪದಿಂದ ಮೈಥುನ ಕ್ರಿಯೆಯಿಂದ ನಿವೃತ್ತನಾಗಿ ಭೂಮಿಯಲ್ಲಿ ವಿಶ್ವಾಮಿತ್ರರಂತೆ ತಪಸ್ಸನ್ನು ಮಾಡಿ ತಪಸ್ಸಿನ ಸಿದ್ಧಿಯನ್ನು ಪಡೆದು ದೇಹತ್ಯಾಗ ಮಾಡುವುದಕ್ಕೆ ನಿಶ್ಚಯಿಸಿ ಈ ಮಾತುಗಳನ್ನು ಆಡಿದನು.
ಪಾಂಡುಃ
ಚತುರ್ಭಿಋಣವಾನಿತ್ಥಂ ಜಾಯತೇ ಮನುಜೋ ಭುವಿ |
ಪಿತೃದೇವಮನುಷ್ಯಾಣಾಮೃಷೀಣಾಮಥ ಭಾರತ ||13||
ಎಲೈ ಭಾರತನೇ, ಮನುಷ್ಯನು ಭೂಮಿಯಲ್ಲಿ ಪಿತೃಋಣ, ದೇವಋಣ, ಮನುಷ್ಯಋಣ ಮತ್ತು ಋಷಿಋಣ ಎಂಬ ನಾಲ್ಕು ಋಣಗಳನ್ನು ತೆಗೆದುಕೊಂಡು ಜನಿಸುತ್ತಾನೆ.
ಏತೇಭ್ಯಸ್ತು ಯಥಾಕಾಲಂ ಯೋ ನ ಮುಚ್ಯೇತ ಧರ್ಮವಿತ್ |
ನ ತಸ್ಯ ಲೋಕಾಃ ಸಂತೀತಿ ತಥಾ ಲೋಕವಿದೋ ವಿದುಃ ||14||
ಕಾಲಕ್ರಮದಲ್ಲಿ ಧರ್ಮಜ್ಞನಾದ ಯಾವನು ಈ ನಾಲ್ಕು ಋಣಗಳಿಂದ ನಿರ್ಮುಕ್ತನಾಗುವುದಿಲ್ಲವೋ ಅವನಿಗೆ ಪರಲೋಕ-ವಿಲ್ಲವೆಂದು ಲೋಕಗಳನ್ನು ತಿಳಿದವರು ಹೇಳುತ್ತಾರೆ.
ಯಜ್ಞೇನ ದೇವಾನ್ ಪ್ರೀಣಾತಿ ಸ್ವಾಧ್ಯಾಯೈಸ್ತಪಸಾ ಋಷೀನ್ |
ಪುತ್ರೈಃ ಶ್ರಾದ್ಧೈರಪಿ ಪಿತೄನಾನೃಶಂಸ್ಯೇನ ಮಾನುಷಾನ್ ||15||
ಯಜ್ಞದಿಂದ ದೇವತೆಗಳನ್ನು ಸಂತೋಷಪಡಿಸಿ ದೇವಋಣವನ್ನು ತೀರಿಸಬೇಕು. ಸ್ವಾಧ್ಯಾಯ ಮತ್ತು ತಪಸ್ಸುಗಳನ್ನು ಮಾಡಿ ಋಷಿಋಣದಿಂದ ಮುಕ್ತನಾಗಬೇಕು. ಮಧುರವಾದ ಮಾತುಗಳನ್ನಾಡುವುದರಿಂದ ಮನುಷ್ಯಋಣದಿಂದ ಮುಕ್ತನಾಗುತ್ತಾನೆ. ಪುತ್ರರನ್ನು ಪಡೆಯುವುದರಿಂದ ಮತ್ತು ಶ್ರಾದ್ಧವನ್ನು ಮಾಡುವುದರಿಂದ ಪಿತೃಋಣದಿಂದ ಮುಕ್ತನಾಗುತ್ತಾನೆ.
ಋಷಿದೇವಮನುಷ್ಯಾಣಾಮತಿಮುಕ್ತೋಽಸ್ಮಿ ಸರ್ವದಾ |
ನ ಪಿತೄಣಾಂ ಚ ಮುಕ್ತೋಽಸ್ಮಿ ತಚ್ಚ ತೇಭ್ಯೋ ವಿಶಿಷ್ಯತೇ ||16||
ನಾನು ಋಷಿಋಣದಿಂದ, ದೇವಋಣದಿಂದ ಮತ್ತು ಮನುಷ್ಯಋಣದಿಂದ ಯಾವಾಗಲೂ ಮುಕ್ತನಾಗಿದ್ದೇನೆ. ಆದರೆ ಪಿತೃಋಣದಿಂದ ಮುಕ್ತನಾಗಿಲ್ಲ. ಪಿತೃಋಣವು ಉಳಿದ ಮೂರು ಋಣಗಳಿಗಿಂತ ದೊಡ್ಡದಾದುದು.
ದೇಹನಾಶೇ ಧ್ರುವೋ ನಾಶಃ ಪಿತೄಣಾಮಥ ನಿಶ್ಚಯಃ |
ಇತರೇಷಾಂ ತ್ರಯಾಣಾಂ ತು ನಾಶೇ ಹ್ಯಾತ್ಮಾ ವಿನಶ್ಯತಿ ||17||
ಪಿತೃಣಾಮೃಣನಾಶಾದ್ಧಿ ಸಪ್ರಜೋ ನಾಶಮೃಚ್ಛತಿ |
ಇಹ ತಸ್ಮಾತ್ ಪ್ರಜಾಲಾಭೇ ಪ್ರಯತಂತೇ ದ್ವಿಜೋತ್ತಮಾಃ ||18||
ರಾಜನಾದವನು ಯಜ್ಞವನ್ನು ತಪಸ್ಸನ್ನು ಮತ್ತು ಮಧುರ ವಚನವನ್ನು ಆಡದಿದ್ದರೇ ತಾನೇ ನಾಶವನ್ನು ಹೊಂದುತ್ತಾನೆ. ಆದರೆ ದೇವತೆಗಳಿಗೆ, ಋಷಿಗಳಿಗೆ ಮತ್ತು ಮನುಷ್ಯರಿಗೆ ಹಾನಿಯಾಗುವುದಿಲ್ಲ. ಏಕೆಂದರೆ, ಬೇರೆಯವರು ಯಜ್ಞದಿಂದ ದೇವತೆಗಳನ್ನು,

ತಪಸ್ಸಿನಿಂದ ಋಷಿಗಳನ್ನು, ಮಧುರ ವಚನಗಳಿಂದ ಮನುಷ್ಯರನ್ನು ಸಂತೋಷಪಡಿಸಿ ತಾವು ಋಣಮುಕ್ತರಾಗುತ್ತಾರೆ. ತನ್ನ ದೇಹವು ನಾಶವನ್ನು ಹೊಂದಿದರೆ ದೇಹನಾಶಕ್ಕಿಂತ ಮುಂಚೆ ಪುತ್ರನನ್ನು ಪಡೆದಿದ್ದರೆ, ಶ್ರಾದ್ಧಾದಿಗಳನ್ನು ಮಾಡುವ ಪುತ್ರನಿರುವುದರಿಂದ ಪಿತೃಗಳಿಗೆ ಹಾನಿಯಾಗುವುದಿಲ್ಲ. ಆದರೆ, ಪುತ್ರನನ್ನು ಪಡೆಯದಿದ್ದರೆ ಪಿತೃಗಳಿಗೆ ಪಿಂಡದಾನವನ್ನು ಮಾಡುವವರು ಯಾರೂ ಇಲ್ಲವಾದ್ದರಿಂದ ಪಿತೃಗಳ ನಾಶವೂ, ಆ ಕಾರಣದಿಂದ ತನ್ನ ನಾಶವೂ, ಮತ್ತೆ ಮುಂದೆ ಉಂಟಾಗುವ ಪ್ರಜೆಗಳ ನಾಶವೂ ಆಗುತ್ತದೆ. ಆದ್ದರಿಂದ ಬ್ರಾಹ್ಮಣ ಶ್ರೇಷ್ಠರಾದವರೂ ಭೂಮಿಯಲ್ಲಿ ಪುತ್ರರನ್ನು ಪಡೆಯಲು ಪ್ರಯತ್ನಮಾಡುತ್ತಾರೆ.

ಯಥೈವಾಹಂ ಪಿತುಃ ಕ್ಷೇತ್ರೇ ಸೃಷ್ಟಸ್ತೇನ ಮಹಾತ್ಮನಾ |
ತಥೈವಾಸ್ಮಿನ್ ಮಮ ಕ್ಷೇತ್ರೇ ಕಥಂ ಸೃಜ್ಯೇತ ವೈ ಪ್ರಜಾಃ ॥19॥

ಹೇಗೆ ನಾನು ತಂದೆಯ ಕ್ಷೇತ್ರದಲ್ಲಿ ಮಹಾತ್ಮರಾದ ವ್ಯಾಸರಿಂದ ಜನಿಸಿದೆನೋ ಹಾಗೆ ನನ್ನ ಕ್ಷೇತ್ರದಲ್ಲಿ ಹೇಗೆ ಪುತ್ರರು ಉಂಟಾಗುವರೋ ಎಂದು ಯೋಚಿಸುತ್ತಿದ್ದೇನೆ.

ವೈಶಂಪಾಯನಃ

ಸ ಸಮಾನೀಯ ಕುಂತೀಂ ಚ ಮಾದ್ರೀಂ ಚ ಭರತರ್ಷಭಃ |
ಆಚಷ್ಟ ಪುತ್ರಲಾಭಸ್ಯ ವ್ಯುಷ್ಟಿಂ ಸರ್ವಕ್ರಿಯಾಧಿಕಾಮ್ ॥20॥

ಭರತರ್ಷಭನಾದ ಪಾಂಡುವು ಕುಂತಿ ಮತ್ತು ಮಾದ್ರಿಯರನ್ನು ಕರೆದು ಸರ್ವಕ್ರಿಯಾಧಿಕವಾದ ಒಂದು ಉಪಾಯವನ್ನು ಹೇಳಿದನು.

ಉತ್ತಮಾದವರಾಃ ಪುಂಸಃ ಕಾಂಕ್ಷಂತೇ ಪುತ್ರಮಾಪದಿ |
ಅಪತ್ಯಂ ಧರ್ಮಫಲದಂ ಶ್ರೇಷ್ಠಾದಿಚ್ಛಂತಿ ಸಾಧವಃ ॥21॥

ಸಜ್ಜನರಾದವರು, ಆಪತ್ತು ಬಂದಾಗ ಉತ್ತಮರಿಂದ ಪುತ್ರರನ್ನು ಬಯಸುತ್ತಾರೆ. ಉತ್ತಮರಿಂದ ಪಡೆದ ಪುತ್ರನು ಎಲ್ಲಾ ಧರ್ಮಫಲವನ್ನು ಕೊಡುತ್ತಾನೆಂದು ಸಜ್ಜನರ ಅಭಿಪ್ರಾಯ.

ಅನುನೀಯ ತು ತೇ ಸಮ್ಯಙ್ ಮಹಾಬ್ರಾಹ್ಮಣಸಂಸದಿ |
ಬ್ರಾಹ್ಮಣಂ ಗುಣವಂತಂ ವೈ ಚಿಂತಯಾಮಾಸ ಧರ್ಮವಿತ್ ॥22॥

ಬ್ರಾಹ್ಮಣರ ದೊಡ್ಡಪರಿಷತ್ತಿನಲ್ಲಿ ಕುಂತಿ ಮತ್ತು ಮಾದ್ರಿಯರನ್ನು ಈ ವಿಷಯದಲ್ಲಿ ಚೆನ್ನಾಗಿ ಒಪ್ಪಿಸಿ ಗುಣವಂತನೂ, ಧರ್ಮಜ್ಞನೂ ಆದ ಬ್ರಾಹ್ಮಣನು ಯಾರು ದೊರೆಯಬಹುದು ಎಂದು ಅವನು ಚಿಂತಿಸಿದನು.

ಸೋಽಬ್ರವೀದ್ ವಿಜನೇ ಕುಂತೀಂ ಧರ್ಮಪತ್ನೀಂ ಯಶಸ್ವಿನೀಮ್ |
ಅಪತ್ಯಸ್ಯ ಸುಸಂಯೋಗಮಾಪದಿ ಪ್ರಸಮೀಕ್ಷ್ಯ ಚ ॥23॥

ಅವನು ಆಪತ್ತಿನಲ್ಲಿ ಪುತ್ರನನ್ನು ಪಡೆಯುವ ಉಪಾಯವನ್ನು ಚೆನ್ನಾಗಿ ಆಲೋಚಿಸಿ ಏಕಾಂತದಲ್ಲಿ ತನ್ನ ಧರ್ಮಪತ್ನಿಯಾದ ಕೀರ್ತಿವಂತಳಾದ ಕುಂತಿಯನ್ನು ಕುರಿತು ಮಾತನಾಡಿದನು.

ಪಾಂಡುಃ

ನಾನಪತ್ಯಸ್ಯ ಮೇ ಲೋಕೇ ಪ್ರತಿಷ್ಠಾ ಧರ್ಮಸಮ್ಮಿತಾ |
ಇತಿ ಕುಂತಿ ವಿದುರ್ಧರ್ಮಂ ಶಾಶ್ವತಂ ಧರ್ಮಚಾರಿಣಃ ॥24॥

ಕುಂತಿಯೇ, ಮಕ್ಕಳಿಲ್ಲದ ನನಗೆ ಪರಲೋಕದಲ್ಲಿ ಧರ್ಮಸಮ್ಮತವಾದ ಸ್ಥಿತಿ ಉಂಟಾಗುವುದಿಲ್ಲವೆಂದು ಶಾಶ್ವತವಾದ ಧರ್ಮವನ್ನು ತಿಳಿದ ಧರ್ಮಜ್ಞರು ಹೇಳುತ್ತಾರೆ.

ಮಕ್ಕಳಿಲ್ಲದವರಿಗೆ ಸದ್ಗತಿಯಾಗುವುದಿಲ್ಲವೆಂಬ ನಿಯಮವೇನೂ ಇಲ್ಲ. ಆದರೆ ಭೂಭಾರಹರಣ ರೂಪವಾದ ದೇವಕಾರ್ಯದಲ್ಲಿ ಸಹಾಯಕರಾಗುವ ದೇವತೆಗಳನ್ನು ಪಡೆಯುವುದಕ್ಕೋಸ್ಕರವೇ ಪಾಂಡುವು ಹುಟ್ಟಿರುವುದರಿಂದ ಅಂತಹ ಪುತ್ರರನ್ನು ಪಡೆಯದೆ ಅವನಿಗೆ ಸದ್ಗತಿಯಾಗುವುದಿಲ್ಲವೆಂದು ಋಷಿಗಳ ಅಭಿಪ್ರಾಯ.

ಇಷ್ಟಂ ದತ್ತಂ ತಪಸ್ತಪ್ತಂ ನಿಯಮಾಶ್ಚ ಸ್ವನುಷ್ಠಿತಾಃ |
ಸರ್ವಮೇವಾನಪತ್ಯಸ್ಯ ಮೋಘಂ ಭವತಿ ನಿಶ್ಚಯಮ್ ॥25॥

ನಾನು ಯಾಗಗಳನ್ನು ಮಾಡಿದೆ, ದಾನಗಳನ್ನು ಕೊಟ್ಟೆ, ತಪಸ್ಸನ್ನು ಮಾಡಿದೆ, ನಿಯಮಗಳನ್ನು ಚೆನ್ನಾಗಿ ಅನುಷ್ಠಾನ ಮಾಡಿದೆ. ಇವೆಲ್ಲವೂ ಸಹಾ ಅನಪತ್ಯನಾದ ಕಾರಣದಿಂದ ನನ್ನ ವಿಷಯದಲ್ಲಿ ವ್ಯರ್ಥವಾಗುತ್ತವೆ. ಇದು ನಿಶ್ಚಯ.

ಸೋಽಹಮೇವಂ ವ್ಯವಸಿತಃ ಪ್ರೇಕ್ಷ್ಯಾತ್ಮಾನಂ ನ ಸಂಕ್ಷಮೇ |
ಅನಪತ್ಯೋ ಹಿ ಮರಣಂ ಕಾಮಯೇ ನೋತ ಜೀವಿತಮ್ ॥26॥

ಈ ನಿರ್ಧಾರಕ್ಕೆ ಬಂದ ನಾನು, ನಾನು ಮಾಡಿದ ಅಪರಾಧಕ್ಕಾಗಿ ನನ್ನನ್ನೇ ಕ್ಷಮಿಸಿಕೊಳ್ಳುವುದಿಲ್ಲ. ಅನಪತ್ಯನಾದ ನಾನು ಮರಣವನ್ನು ಬಯಸುತ್ತೇನೆ. ಬದುಕಿರಲು ಇಷ್ಟವಿಲ್ಲ.

ಮೃಗಾಭಿಶಾಪಾಜ್ಜಾನಾಸಿ ವೃಜಿನೇ ಮಮ ಕೇವಲಮ್ |
ನೃಶಂಸಂ ಕರ್ಮಣಾ ಕೃತ್ಸ್ನಂ ಯಥಾ ಹ್ಯುಪಗತಂ ತಥಾ ॥27॥

ನನಗೆ ಮೃಗರೂಪದಲ್ಲಿದ್ದ ಕಿಂದಮರ ಶಾಪದಿಂದ ಉಂಟಾಗಿರುವ ದೋಷವನ್ನು ನೀವೇ ತಿಳಿದಿದ್ದೀರಿ. ಈ ಕ್ರೂರಕರ್ಮವು ಹೇಗೆ ಉಂಟಾಯಿತು, ಅದರ ಫಲವೇನು ಎಂಬುದು ನಿಮಗೆ ತಿಳಿದ ವಿಷಯ.

ಷಡೇವ ಬಂಧುದಾಯಾದಾಃ ಪುತ್ರಾಃ ಸದ್ಧರ್ಮಚಾರಿಣಃ |
ಷಡೇವಾಬಂಧುದಾಯಾದಾಃ ನಿರ್ದಿಷ್ಟಾಸ್ತಾನ್ ಶೃಣು ಪ್ರಿಯೇ ॥

ಸ್ವಯಂಜಾತಃ ಕ್ಷೇತ್ರಿಕಶ್ಚ ಪರಿಕ್ರೀತಶ್ಚ ಯಃ ಸುತಃ |
ಪೌನರ್ಭವೇಯಃ ಕಾನೀನೋ ಸ್ವೈರಿಣ್ಯಾ ಯಶ್ಚ ಜಾಯತೇ ॥29॥

ದತ್ತಃ ಕ್ರೀತೋ ಗರ್ಹಿತಶ್ಚ ಉಪಯಚ್ಛೇತ್ ಸ್ವಯಂ ಚ ಯಃ |

ಸಹೋಢಾಜಾತರೇತಾಶ್ಚ ಹೀನಯೋನಿಧೃತಶ್ಚ ಯಃ ॥30॥
ಪ್ರಿಯೆಯೇ, ಸದ್ಧರ್ಮಚಾರಿಗಳಾದ ಬಂಧುದಾಯಾದರು ಆರು ಮಕ್ಕಳು. ಬಂಧುದಾಯಾದರಲ್ಲದವರು ಆರು ಮಕ್ಕಳು. ಇದನ್ನು ವಿವರವಾಗಿ ಹೇಳುತ್ತೇನೆ ಕೇಳು. ಸ್ವಯಂ ಜಾತಃ ಎಂದರೆ ತನಗೆ ತನ್ನ ಧರ್ಮಪತ್ನಿಯಲ್ಲಿ ಹುಟ್ಟಿದ ಮಗ. ಕ್ಷೇತ್ರಿಕ ಎಂದರೆ ತನ್ನ ಧರ್ಮಪತ್ನಿಯಲ್ಲಿ ಪತಿಯ ಅನುಮತಿಯಂತೆ ಶ್ರೇಷ್ಠರಾದ ದೇವತೆಗಳಿಂದ ಅಥವಾ ಋಷಿಗಳಿಂದ ಹುಟ್ಟಿದ ಪುತ್ರ. ಪರಿಕ್ರೀತ ಎಂದರೆ ತಂದೆ, ತಾಯಿ, ಅಣ್ಣ, ತಮ್ಮಂದಿರನ್ನು ಕಳೆದುಕೊಂಡು ಅವನ ದೂರದ ಬಂಧುಗಳಿಂದ ಕ್ರಯಕ್ಕೆ ತೆಗೆದುಕೊಂಡ ಪುತ್ರ. ದತ್ತ ಎಂದರೆ ವಿಧಿಪೂರ್ವಕವಾಗಿ ತನ್ನ ಪುತ್ರನೆಂದು ಸ್ವೀಕರಿಸಿದ ಪುತ್ರ. ಕ್ರೀತ ಎಂದರೆ ಶುನಶ್ಶೇಪಾದಿಗಳಂತೆ ತಾನೇ ಕೇಳಿ, ಹಣವನ್ನು ಕೊಟ್ಟು ಕ್ರಯಮಾಡಿ ತೆಗೆದುಕೊಂಡ ಪುತ್ರ. ಸ್ವಯಂ ಉಪಯಾತ ಎಂದರೆ ಯಾವ ಬಾಲಕನು ತನ್ನ ಎಲ್ಲಾ ರಕ್ಷಕರನ್ನೂ ಕಳೆದುಕೊಂಡು ಅನಾಥನಾಗಿ ಇನ್ನೊಬ್ಬನ ಬಳಿಗೆ ಹೋಗಿ ನೀನು ಮಗನಂತೆ ನನ್ನನ್ನು ರಕ್ಷಿಸು ಎಂದು ಕೇಳಿಕೊಂಡಾಗ ಸ್ವೀಕರಿಸಿದ ಪುತ್ರ. ಇವರೆಲ್ಲರೂ ಬಂಧುದಾಯಾದ- ಪುತ್ರರೆಂದು ಕರೆಸಿಕೊಳ್ಳುತ್ತಾರೆ. ಬಂಧುದಾಯಾದರೆಂದರೆ ತಂದೆಯ ಆಸ್ತಿಯಲ್ಲಿ ಪಾಲುದಾರರು ಮತ್ತು ಬಂಧುತ್ವಯೋಗ್ಯರು ಎಂದು ಅರ್ಥ. ಪೌನರ್ಭವೇಯ ಎಂದರೆ ಪತಿಯಿದ್ದಾಗ ಪತಿಯಿಂದ ಗರ್ಭಿಣಿಯಾಗಿ ಪತಿಯನ್ನು ಕಳೆದುಕೊಂಡ ಮೇಲೆ ವಿಧವೆಯಲ್ಲಿ ಹುಟ್ಟಿದ ಮಗ. ಕಾನೀನ ಎಂದರೆ ವಿವಾಹವಾಗುವುದಕ್ಕಿಂತ ಮುಂಚೆ ಹುಟ್ಟಿದ ಪುತ್ರ. ಪತಿ ಇರುವಾಗಲೇ ವ್ಯಭಿಚಾರಿಣಿಯಾದ ಅವನ ಪತ್ನಿಯಲ್ಲಿ ಇನ್ನೊಬ್ಬನಿಂದ ಹುಟ್ಟಿದ ಪುತ್ರ ಕುಂಡ. ಇವನನ್ನು `ಸ್ವೈರಿಣೀಜಾತ' ಎಂದು ಕರೆಯುತ್ತಾರೆ. ಗರ್ಹಿತ ಎಂದರೆ ತನಗೆ ತನ್ನ ಧರ್ಮಪತ್ನಿಯಲ್ಲಿ ಹುಟ್ಟಿದವನಾದರೂ, ದುಷ್ಕರ್ಮದಿಂದ ಜಾತಿಭ್ರಷ್ಟನಾದವನು. `ಸಹೋಢಾಜಾತರೇತ' ಎಂದರೆ ಒಂದು ವಿವಾಹ ಮಂಟಪದಲ್ಲಿ ನೂರಾರು ವಿವಾಹಗಳಾಗುವಾಗ ಮಂಟಪದಾಹ ನಿಮಿತ್ತದಿಂದ ಎಲ್ಲವೂ ಅಸ್ತವ್ಯಸ್ತವಾಗಿ, ಅರ್ಧವಿವಾಹ ಕ್ರಿಯೆ ನಡೆದು, ತನ್ನ ಸಂಕಲ್ಪಿಸಿದ ಪತ್ನಿಯನ್ನು ಬಿಟ್ಟು, ಭ್ರಾಂತಿಯಿಂದ ಇನ್ನೊಬ್ಬಳನ್ನು ಮದುವೆ ಮಾಡಿಕೊಂಡು ಅವಳಲ್ಲಿ ಹುಟ್ಟಿದ ಪುತ್ರ. `ಹೀನಯೋನಿಧೃತ' ಎಂದರೆ ಬ್ರಾಹ್ಮಣನಾದವನಿಗೆ ಶೂದ್ರಾದಿ ಯೋನಿಯಲ್ಲಿ ಜನಿಸಿದ ಪುತ್ರ. ಈ ಆರು ಪುತ್ರರು ಅಬಂಧುದಾಯಾದರು ಎಂದು ಕರೆಸಿಕೊಳ್ಳುತ್ತಾರೆ ಎಂದರೆ ಇವರೆಲ್ಲರೂ ತಂದೆಯ ಆಸ್ತಿಗೆ ಪಾಲುದಾರರು ಆದರೆ ಬಂಧುತ್ವಕ್ಕೆ ಯೋಗ್ಯರಲ್ಲ ಎಂದು ಅರ್ಥ. ಮೇಲಿನ ಶ್ಲೋಕಗಳಲ್ಲಿ ಕ್ರಮವನ್ನು ಪರಿಗಣಿಸದೆ, ಎರಡು ರೀತಿಯ ಪುತ್ರರನ್ನು ಮಿಶ್ರಣ ಮಾಡಿ ನಿರೂಪಿಸಿದ್ದಾರೆ.
ಪೂರ್ವಪೂರ್ವಮಸಂಭಾವಂ ಮತ್ವಾ ಲಿಪ್ಸೇತ ವೈ ಸುತಮ್ |
ಉತ್ತಮಾದವರಂ ಜನ್ಮ ಕಾಂಕ್ಷಂತೇ ಧರ್ಮಚಾರಿಣಃ ॥31॥
ಈ ಆರು ಬಂಧುದಾಯಾದಿಗಳಲ್ಲಿ, ಪೂರ್ವಪೂರ್ವಸುತನು ದೊರೆಯದಿದ್ದರೆ, ಉತ್ತರೋತ್ತರಸುತನನ್ನು ಪಡೆಯಲು ಪ್ರಯತ್ನಿಸಬೇಕು. ಧರ್ಮಚಾರಿಗಳು ತನಗೆ ತನ್ನ ಧರ್ಮಪತ್ನಿಯಲ್ಲಿ ಪುತ್ರರಿಲ್ಲದಿದ್ದಾಗ, ಉತ್ತಮರಿಂದ ಪಡೆಯುವ ಕ್ಷೇತ್ರಿಕಪುತ್ರರನ್ನು ಬಯಸುತ್ತಾರೆ.
ಫಲಂ ಮಹದಪತ್ಯಸ್ಯ ತಸ್ಯ ಭೂತಿರನುಗ್ರಹಃ |
ಆಪದ್ಯಪತ್ಯಜನನಂ ಮನುಃ ಸ್ವಾಯಂಭುವೋಽಬ್ರವೀತ್ ॥32॥
ಮಕ್ಕಳನ್ನು ಪಡೆಯುವುದರ ಫಲ ಮಹತ್ತರವಾದುದು. ಅದರಿಂದ ಸರ್ವಸಂಪತ್ತು ಮತ್ತು ಮಹತ್ತರ ಅನುಗ್ರಹವು ಉಂಟಾಗುತ್ತದೆ. ಆಪತ್ತಿನಲ್ಲಿ ಹೀಗೆ ಮಕ್ಕಳನ್ನು ಪಡೆಯಬೇಕೆಂದು ಸ್ವಾಯಂಭುವ ಮನುವು ಹೇಳಿದ್ದಾನೆ.
ತಸ್ಮಾತ್ ತ್ವಾಂ ಪ್ರಹಿಣೋಮ್ಯದ್ಯ ಪ್ರಹೀಣಃ ಪ್ರಜಯಾ ಸ್ವಯಮ್ |
ಕ್ಷತ್ರಿಯಾಚ್ಛ್ರೇಯಸೋ ವಾಽಪಿ ಸೂಷ್ವಾಪತ್ಯಂ ಯಶಸ್ವಿನಿ ॥33॥
ಮಕ್ಕಳನ್ನು ಸ್ವಯಂ ಪಡೆಯಲು ಅಸಮರ್ಥನಾದ ನಾನು ನಿನ್ನನ್ನು ಆ ಕಾರಣದಿಂದ ಇನ್ನೊಬ್ಬರ ಬಳಿಗೆ ಕಳುಹಿಸುತ್ತಿದ್ದೇನೆ. ಯಶಸ್ವಿನಿಯೇ, ಬೇರೆ ಕ್ಷತ್ರಿಯರಿಂದಾಗಲೀ ಅಥವಾ ಅವರಿಗಿಂತ ದೊಡ್ಡವರಿಂದಾಗಲೀ ಮಕ್ಕಳನ್ನು ಪಡೆ. (ದೇವತೆಗಳು ತನ್ನಲ್ಲಿ ಪುತ್ರರಾಗಿ ಜನಿಸುವುದನ್ನು ತಿಳಿಯದೆ ಪಾಂಡು ಹೀಗೆ ಮಾತನಾಡುತ್ತಿದ್ದಾನೆ.)
ಯಾ ಹಿ ತೇ ಭಗಿನೀ ಸಾಧ್ವೀ ಶ್ರುತಸೇನಾ ಯಶಸ್ವಿನೀ |
ಉವಾಹ ಯಾಂ ತು ಕೈಕೇಯಃ ಶಾರದಂಡಾಯನಿರ್ಮಹಾನ್ ॥34॥
ನಿನ್ನ ತಂಗಿಯಾದ ಯಶಸ್ವಿನಿಯಾದ ಶ್ರುತಸೇನೆಯು ಶರದಂಡನ ಮಗನಾದ ಕೇಕಯ ರಾಜನನ್ನು ವಿವಾಹವಾದಳು.
ಸಾ ವೀರಪತ್ನೀಂ ಸ್ವಜನೈರ್ನಿಯುಕ್ತಾಽಪತ್ಯಕರ್ಮಣಿ |
ಪುಷ್ಪೇಣ ಪ್ರಯತಾ ಸ್ನಾತಾ ನಿಶಿ ಕುಂತಿ ಚತುಷ್ಪಥೇ ॥35॥
ಎಲೈ ಕುಂತಿಯೇ, ಆ ವೀರಪತ್ನಿಯು ಮಕ್ಕಳನ್ನು ಪಡೆಯಲೆಂದು ಸ್ವಜನರಿಂದ ನಿಯುಕ್ತಳಾಗಿ ಋತುಸ್ನಾತಳಾಗಿ ಚತುಷ್ಪಥ ಮಾರ್ಗದಲ್ಲಿ ರಾತ್ರಿಯ ವೇಳೆ ನಿರೀಕ್ಷಿಸಿದಳು.
ಅಪತ್ಯಾರ್ಥೇ ಪ್ರಜಾಲಾಭೇ ಅನ್ವಗಚ್ಛಚ್ಛುಭವ್ರತಾ |
ವರಯಿತ್ವಾ ದ್ವಿಜಂ ದೇವೀ ಹುತೇ ಪುಂಸವನೇ ಪುರಾ ॥36॥
ತನ್ನ ಮಗನನ್ನು ಪಡೆಯಲು ಒಬ್ಬ ಶ್ರೇಷ್ಠನಾದ ಬ್ರಾಹ್ಮಣನನ್ನು ಪ್ರಸನ್ನೀಕರಿಸಿಕೊಂಡು ಶುಭವ್ರತಳಾದ ಆ ದೇವಿಯು ಪುಂಸವನ ಹೋಮವನ್ನು ಮಾಡುತ್ತಿದ್ದ ಆ ಬ್ರಾಹ್ಮಣನನ್ನು ಹಿಂಬಾಲಿಸಿದಳು.
ಕರ್ಮಣ್ಯವಸಿತೇ ತಸ್ಮಿನ್ ಸಾ ತೇನೈವ ಸಹಾವಸತ್ |
ಸಾ ತ್ರೀನ್ ವೀರಾನಜನಯದ್ ದುರ್ಜಯಾದೀನ್ ಮಹಾರಥಾನ್ ॥37॥
ಆ ಬ್ರಾಹ್ಮಣನ ಪುಂಸವನ ಕರ್ಮವು ಮುಗಿಯುತ್ತಿರಲು ಅವಳು ಅವನ ಜೊತೆಯಲ್ಲೇ ವಾಸ ಮಾಡಿ ದುರ್ಜಯ ಮೊದಲಾದ ವೀರರೂ ಮತ್ತು ಮಹಾರಥರೂ ಆದ ಮೂರು ಮಕ್ಕಳನ್ನು ಪಡೆದಳು.
ತಥಾ ತ್ವಮಪಿ ಕಲ್ಯಾಣಿ ಬ್ರಾಹ್ಮಣಂ ತಪಸಾಽಧಿಕಮ್ |
ಮನ್ನಿಯೋಗಾತ್ ಕುರು ಕ್ಷಿಪ್ರಮಪತ್ಯೋತ್ಪಾದನಂ ಮಹತ್ ॥38॥

ಆದ್ದರಿಂದ ಎಲೌ ಕಲ್ಯಾಣಿಯೇ, ನೀನು ಸಹ ನನ್ನ ಆದೇಶದಂತೆ ತಪಸ್ಸಿನಿಂದ ಶ್ರೇಷ್ಠನಾಗಿರುವ ಒಬ್ಬ ಬ್ರಾಹ್ಮಣನನ್ನು ಒಪ್ಪಿಸಿ ಪುತ್ರರನ್ನು ಪಡೆಯುವ ಪ್ರಯತ್ನ ಮಾಡು.
ವೈಶಂಪಾಯನಃ
ಏವಮುಕ್ತಾ ಮಹಾರಾಜ ಕುಂತೀ ತಂ ಪ್ರತ್ಯಭಾಷತ |
ಕುರೂಣಾಮೃಷಭಂ ವೀರಂ ತದಾ ಭೂಮಿಪತಿಂ ಪತಿಮ್ ॥39॥
ಎಲೈ ಮಹಾರಾಜನೇ, ಹೀಗೆ ಹೇಳಲ್ಪಟ್ಟ ಕುಂತಿಯು ಕುರುಶ್ರೇಷ್ಠನಾದ, ವೀರನಾದ, ರಾಜನಾದ ತನ್ನ ಪತಿಯನ್ನು ಕುರಿತು ಮಾತನಾಡಿದಳು.
ಕುಂತೀ
ನ ಮಾಮರ್ಹಸಿ ಧರ್ಮಜ್ಞ ವಕ್ತುಮೇವಂ ಕಥಂಚನ |
ಧರ್ಮಪತ್ನೀಮಭಿರತಾಂ ರಾಜನ್ ರಾಜೀವಲೋಚನ ॥40॥
ಧರ್ಮಜ್ಞನೇ, ನನ್ನನ್ನು ಕುರಿತು ನೀನು ಎಂದೂ ಹೀಗೆ ಮಾತನಾಡಬಾರದು. ಎಲೈ ರಾಜೀವಲೋಚನನಾದ ರಾಜನೇ, ನಾನು ನಿನ್ನಲ್ಲೇ ಹೆಚ್ಚು ಆಸಕ್ತಳಾಗಿರುವ ನಿನ್ನ ಧರ್ಮಪತ್ನಿಯಷ್ಟೇ?
ತ್ವಮೇವ ಹಿ ಮಹಾಬಾಹೋ ಮಯ್ಯಪತ್ಯಾನಿ ಭಾರತ |
ವೀರ ವೀರ್ಯೋಪಪನ್ನಾನಿ ಸಂಪಾದಯಿತುಮರ್ಹಸಿ ॥41॥
ಎಲೈ ಭಾರತನೇ, ಎಲೈ ಮಹಾಬಾಹುವೇ, ಎಲೈ ವೀರನೇ, ನೀನೇ ನನ್ನಲ್ಲಿ ಪರಾಕ್ರಮಶಾಲಿಗಳಾದ ಮಕ್ಕಳನ್ನು ಪಡೆಯಲು ಸಮರ್ಥನಾಗಿದ್ದೀಯೆ.
ಸ್ವರ್ಗಂ ಮನುಜಶಾರ್ದೂಲ ಗಚ್ಛಾವೋ ವಾ ತವೇಪ್ಸಿತಮ್ |
ಅಪತ್ಯಾಯ ಚ ಮಾಂ ಗಚ್ಛ ತ್ವಮೇವ ಕುರುಪುಂಗವ ॥42॥
ಎಲೈ ಮನುಜಶಾರ್ದೂಲನೇ, ಎಲೈ ಕುರುಪುಂಗವನೇ, ಮಕ್ಕಳನ್ನು ಪಡೆಯುವ ಸಲುವಾಗಿ ನೀನು ನನ್ನ ಸಮಾಗಮವನ್ನು ಮಾಡು. ನಾವಿಬ್ಬರೂ ಜೊತೆಯಲ್ಲಿ ನಿನಗೆ ಇಷ್ಟವಾದ ಸ್ವರ್ಗಕ್ಕೆ ಹೋಗೋಣ.
ನಹ್ಯಾವಾಂ ಮನಸಾಽಪ್ಯನ್ಯಂ ಗಚ್ಛಾವ ಪುರುಷರ್ಷಭ |
ತ್ವತ್ತಃ ಪ್ರತಿವಿಶಿಷ್ಟಃ ಸನ್ ಕೋ ಯೋನ್ಯೋ ಭುವಿ ಮಾನವಃ ॥43॥
ಎಲೈ ಪುರುಷರ್ಷಭನೇ,  ನಾನಾಗಲೀ ಅಥವಾ ಮಾದ್ರಿಯಾಗಲೀ, ಮನಸ್ಸಿನಲ್ಲಿಯೂ ಸಹ ಪರಪುರುಷನ ಸಂಗದ ಯೋಚನೆಯನ್ನು ಮಾಡುವುದಿಲ್ಲ. ಭೂಮಿಯಲ್ಲಿ ನಿನಗಿಂತ ಶ್ರೇಷ್ಠರಾದ ಮಾನವರು ಯಾರಿದ್ದಾರೆ.
ಇಮಾಂ ಧರ್ಮಯಂ ಧರ್ಮ್ಯಕಥಾಂ ಮಮ ಚೈವ ನಿಬೋಧಯ |
ಪೌರಾಣಿಕೀಂ ವಿಶಲಾಕ್ಷ  ಕೀರ್ತಯಿಷ್ಯಾಮಿ ಭಾರತ ॥44॥
ಎಲೈ ವಿಶಾಲಾಕ್ಷನಾದ ಭಾರತನೇ, ನಾನು ನಿನಗೆ ಒಂದು ಧರ್ಮಯುಕ್ತವಾದ ಧಾರ್ಮಿಕರ ಪೌರಾಣಿಕವಾದ ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳು.
ವ್ಯುಷಿತಾಶ್ವ ಇತಿ ಖ್ಯಾತೋ ಬಭೂವ ಕಿಲ ಭಾರತ |
ಪುರಾ ಪರಮಧರ್ಮಜ್ಞಃ ಪೂರೋರ್ವಂಶವಿವರ್ಧನಃ ॥45॥
ಭಾರತನೇ, ಹಿಂದೆ ಪರಮ ಧರ್ಮಜ್ಞನಾದ ಪುರುವಂಶಧಾರಕನಾದ ವ್ಯುಷಿತಾಶ್ವ ಎಂಬ ಪ್ರಖ್ಯಾತನಾದ ರಾಜನಿದ್ದನು.
ತಸ್ಮಿಂಶ್ಚ ಯಜಮಾನೇ ವೈ ಧರ್ಮಾತ್ಮನಿ ಮಹಾತ್ಮನಿ |
ಆಗಚ್ಛಂಸ್ತ್ರಿದಶಾಃ ಸರ್ವೇ ಸೇಂದ್ರಾಃ ಸರ್ವಮಹರ್ಷಿಭಿಃ ॥46॥
ಆ ಧರ್ಮಾತ್ಮನೂ, ಮಹಾತ್ಮನೂ ಆದ ವ್ಯುಷಿತಾಶ್ವನು ಯಾಗಗಳನ್ನು ಮಾಡುತ್ತಿರಲು, ಇಂದ್ರ ಮೊದಲಾದ ಎಲ್ಲಾ ದೇವತೆಗಳೂ, ಎಲ್ಲಾ ಮಹರ್ಷಿಗಳು ಆ ಯಾಗಕ್ಕೆ ಬಂದರು.
ಅಮಾದ್ಯದಿಂದ್ರಃ ಸೋಮೇನ ತುತುಷುರ್ಗುರವೋ ಧನ್ಯೈಃ |
ವ್ಯುಷಿತಾಶ್ವಸ್ಯ ರಾಜರ್ಷೇಸ್ತದಾ ಯಜ್ಞೇ ಮಹಾತ್ಮನಃ ॥47॥
ಮಹಾತ್ಮನಾದ ರಾಜರ್ಷಿಯಾದ ವ್ಯುಷಿತಾಶ್ವನ ಯಜ್ಞದಲ್ಲಿ ಇಂದ್ರನು ಸೋಮರಸಪಾನದಿಂದ ಸಂತೋಷಗೊಂಡನು. ಬ್ರಾಹ್ಮಣರು ಮತ್ತು ಪುರೋಹಿತ ವರ್ಗದವರು ದಕ್ಷಿಣೆಗಳಿಂದ ಸಂತೋಷಪಟ್ಟರು.
ವ್ಯುಷಿತಾಶ್ವೋ ಮನುಷ್ಯೇಂದ್ರಃ ಶುಶುಭೇ ಯಜ್ಞಸಂಪದಾ |
ಸರ್ವಭೂತೇಷು ರಾಜೇಂದ್ರ ಶರತ್ಕಾಲ ಇವಾಂಶುಮಾನ್ ॥48॥
ಎಲೈ ರಾಜೇಂದ್ರನೇ, ಆ ಯಜ್ಞಸಂಪತ್ತಿನಿಂದ ರಾಜನಾದ ವ್ಯುಷಿತಾಶ್ವನು ಶರತ್ಕಾಲದ ಸೂರ್ಯನಂತೆ ಎಲ್ಲರಿಗಿಂತಲೂ ಶ್ರೇಷ್ಠನಾಗಿ ಬೆಳಗಿದನು.
ಸ ವಿಜಿತ್ಯ ಗೃಹೀತ್ವಾ ತು ನೃಪತೀನ್ ರಾಜಸತ್ತಮಃ |
ಪ್ರಾಚ್ಯಾನುದೀಚ್ಯಾನ್ ಮತ್ಸ್ಯಾಂಶ್ಚ ದಕ್ಷಿಣಾ ಅಭ್ಯಕಲ್ಪಯತ್ ॥49॥
ರಾಜಶ್ರೇಷ್ಠನಾದ ಅವನು ಪೂರ್ವ ದಿಕ್ಕಿನ ರಾಜರನ್ನು, ಉತ್ತರ ದಿಕ್ಕಿನ ರಾಜರನ್ನು, ಮತ್ಸ್ಯರಾಜರನ್ನು ಜಯಿಸಿ ಅವರು ಕಪ್ಪವನ್ನು ಕೊಡುವಂತೆ ಮಾಡಿದನು.
ಅಶ್ವಮೇಧಶತೈರಿಷ್ಟ್ವಾ ವ್ಯುಷಿತಾಶ್ವಃ ಪ್ರತಾಪವಾನ್ |
ಬಭೂವ ನೃಪಶಾರ್ದೂಲ ನಾಗಾಯುತಬಲಃ ಕಿಲ ॥50॥
ಎಲೈ ನೃಪಶಾರ್ದೂಲನೇ, ಪ್ರತಾಪಶಾಲಿಯಾದ ವ್ಯುಷಿತಾಶ್ವನು ನೂರು ಅಶ್ವಮೇಧಯಾಗಗಳನ್ನು ಮಾಡಿ ಹತ್ತುಸಾವಿರ ಆನೆಗಳ

ಬಲವುಳ್ಳವನಾದನು ಎಂದು ಪ್ರಸಿದ್ಧವಾಗಿದೆ.
ಗಾಥಾಮಪ್ಯತ್ರ ಗಾಯಂತಿ ಯೇ ಪುರಾಣವಿದೋ ಜನಾಃ |
ಅಪ್ರಮೇಯಮಪರ್ಯಂತಂ ವ್ಯುಷಿತಾಶ್ವೋ ಧನಂ ದದೌ ||51||
ಪುರಾಣವನ್ನು ತಿಳಿದ ಜನರು ಈ ವಿಷಯದಲ್ಲಿ ಒಂದು ಗಾದೆಯನ್ನು ಹಾಡುತ್ತಾರೆ. ವ್ಯುಷಿತಾಶ್ವನು ದಾನಮಾಡಿದ ಧನಕ್ಕೆ ಎಲ್ಲೆಯೇ ಇಲ್ಲ. ಅದು ತಿಳಿಯಲು ಅಸಾಧ್ಯವಾದುದು.
ವ್ಯುಷಿತಾಶ್ವಃ ಸಮುದ್ರಾಂತಾಂ ವಿಜಿತ್ಯೇಮಾಂ ವಸುಂಧರಾಮ್ |
ಅಪಾಲಯತ್ ಸರ್ವವರ್ಣಾನ್ ಪಿತಾ ಪುತ್ರಾನಿವೌರಸಾನ್ ||52||
ವ್ಯುಷಿತಾಶ್ವನು ಸಮುದ್ರಪರ್ಯಂತವಾದ ಭೂಮಿಯನ್ನು ಗೆದ್ದು, ಎಲ್ಲಾ ವರ್ಣಗಳನ್ನೂ ತಂದೆಯು ಔರಸ ಪುತ್ರರನ್ನು ರಕ್ಷಿಸುವಂತೆ ರಕ್ಷಿಸಿದನು.
ಯಜಮಾನೋ ಮಹಾಯಜ್ಞೈರ್ಬ್ರಾಹ್ಮಣೇಭ್ಯೋ ಮಹದ್ಧನಮ್ |
ಅನಂತಾಮಖಿಲಾಂ ತತ್ರ ಪೃಥಿವೀಮದದಾತ್ ತತಃ |
ಸುಷಾವ ಚ ಬಹೂನ್ ಸೋಮಾನ್ ಸೋಮಸಂಸ್ಥಾಂ ತಥೈವ ಚ ||
ಮಹಾಯಜ್ಞಗಳನ್ನು ಆಚರಿಸಿ ಬ್ರಾಹ್ಮಣರಿಗೆ ವಿಪುಲವಾದ ಧನವನ್ನು ಕೊಟ್ಟು ಅನಂತರ ಅನಂತವಾದ ಸಮಗ್ರವಾದ ಭೂಮಿಯನ್ನೂ ದಾನಮಾಡಿದನು. ಅನೇಕ ಸೋಮಯಾಗಗಳನ್ನು, ಸೋಮಯಾಗದ ಪ್ರಭೇದವಾದ ಬೇರೆ ಯಾಗಗಳನ್ನೂ ಮಾಡಿದನು.
ಆಸೀತ್ ಕಾಕ್ಷೀವತೀ ತಸ್ಯ ಭಾರ್ಯಾ ಪರಮಸಮ್ಮತಾ |
ಭದ್ರಾ ನಾಮ ಮನುಷ್ಯೇಂದ್ರ ರೂಪೇಣಾಸದೃಶೀ ಭುವಿ |
ಕಾಮಯಾಮಾಸತುಶ್ಚೈವ ಪರಸ್ಪರಮಿತಿ ಶ್ರುತಮ್ ||54||
ಅವನಿಗೆ ಪರಮ ಸಮ್ಮತಳಾದ ಕಕ್ಷೀವಂತನ ಮಗಳಾದ ಭದ್ರಾ ಎಂಬ ಪತ್ನಿಯಿದ್ದಳು. ಎಲೈ ಮನುಷ್ಯೇಂದ್ರನೇ, ಅವಳು ಭೂಮಿಯಲ್ಲಿ ಅಸದೃಶ ರೂಪವತಿಯಾಗಿದ್ದಳು. ಅವರಿಬ್ಬರೂ ಪರಸ್ಪರವಾಗಿ ಪ್ರೀತಿಸಿದ್ದರು ಎಂದು ಕೇಳಿದ್ದೇವೆ.
ಸ ತಸ್ಯಾಂ ಕಾಮಸಂಯುಕ್ತೋ ಯಕ್ಷ್ಮಾಣಂ ಸಮಪದ್ಯತ |
ಅಚಿರೇಣೈವ ಕಾಲೇನ ಜಗಾಮಾಸ್ತಮಿವಾಂಶುಮಾನ್ ||55||
ಅವಳಲ್ಲಿ ವಿಶೇಷವಾಗಿ ಕಾಮರತನಾದ ವ್ಯುಷಿತಾಶ್ವನು ಕ್ಷಯರೋಗವನ್ನು ಹೊಂದಿ ಅಲ್ಪಕಾಲದಲ್ಲಿಯೇ ಸೂರ್ಯನಂತೆ ಮುಳುಗಿ ಸ್ವರ್ಗಸ್ಥನಾದನು.
ತಸ್ಮಿನ್ ಮೃತೇ ಮನುಷ್ಯೇಂದ್ರ ಭಾರ್ಯಾ ಕಾಕ್ಷೀವತೀ ತದಾ |
ಅಪುತ್ರಾ ಪುರುಷವ್ಯಾಘ್ರ ವಿಲಲಾಪೇತಿ ನಃ ಶ್ರುತಮ್ |
ಭದ್ರಾ ಪರಮದುಃಖಾರ್ತಾ ತನ್ನಿಬೋಧ ಕುರೂತ್ತಮ ||56||
ಎಲೈ ಮನುಷ್ಯೇಂದ್ರನೇ, ಅವನು ಮೃತನಾಗುತ್ತಿರಲು ಕಕ್ಷೀವಂತನ ಮಗಳಾದ ಅವನ ಪತ್ನಿಯು ಬಹಳವಾಗಿ ವಿಲಾಪಮಾಡಿದಳೆಂದು ಕೇಳಿದ್ದೇವೆ. ಎಲೈ ಕುರುಶ್ರೇಷ್ಠನೇ, ಆ ಭದ್ರೆಯು ಪರಮ ದುಃಖಾರ್ತಳಾಗಿ ವಿಲಾಪ ಮಾಡಿದ ರೀತಿಯನ್ನು ಹೇಳುತ್ತೇನೆ, ಕೇಳು.
ಭದ್ರಾ
ನಾರೀ ಪರಧರ್ಮಜ್ಞಾ ಸರ್ವಾ ಪುತ್ರವಿನಾಕೃತಾ |
ಪತ್ಯಾ ವಿನಾ ಜೀವತಿ ಯಾ ನ ಸ ಜೀವತ್ಯಸಂಶಯಮ್ ||57||
ಯಾವ ನಾರಿಯು ಧರ್ಮಜ್ಞಳಾಗಿ ಪುತ್ರನಿಲ್ಲದೆ ಪತಿಯನ್ನೂ ಕಳೆದುಕೊಂಡು ಜೀವಿಸುವಳೋ, ಅವಳು ನಿಶ್ಚಯವಾಗಿ ಜೀವಿಸಿರುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.
ಪತ್ಯಾ ವಿನಾ ಮೃತಂ ಶ್ರೇಯೋ ನಾರ್ಯಾಃ ಕ್ಷತಿಯಪುಂಗವ |
ತದ್ಗತಿಂ ಗಂತುಮಿಚ್ಛಾಮಿ ಪ್ರಸೀದಸ್ವ ನಯಸ್ವ ಮಾಮ್ ||58||
ಎಲೈ ಕ್ಷತ್ರಿಯಪುಂಗವನೇ, ಪತಿಯನ್ನು ಕಳೆದುಕೊಂಡರೆ ನಾರಿಗೆ ಮರಣವೇ ಶ್ರೇಯಸ್ಕರವಾದುದು. ರಾಜನೇ, ನೀನು ಹೋದ ಮಾರ್ಗದಲ್ಲಿ ನಾನೂ ಬರಲು ಇಚ್ಛಿಸುತ್ತೇನೆ. ಅನುಗ್ರಹಿಸಿ ನನ್ನನ್ನೂ ಕರೆದುಕೊಂಡು ಹೋಗು.
ತ್ವಯಾ ಹೀನಾ ಕ್ಷಣಮಪಿ ನಾಹಂ ಜೀವಿತುಮುತ್ಸಹೇ |
ಪ್ರಸಾದಂ ಕುರು ಮೇ ರಾಜನ್ನಿತಃ ಕ್ಷಿಪ್ರಂ ನಯಸ್ವ ಮಾಮ್ ||59||
ರಾಜನೇ, ನೀನಿಲ್ಲದೆ ನಾನು ಒಂದು ಕ್ಷಣವೂ ಬದುಕಿರಲಾರೆ. ನನ್ನನ್ನು ಅನುಗ್ರಹಿಸು. ತಕ್ಷಣ ಇಲ್ಲಿಂದ ನನ್ನನ್ನು ಕರೆದುಕೊಂಡು ಹೋಗು.
ಪೃಷ್ಠತೋಽನುಗಮಿಷ್ಯಾಮಿ ಸಮೇಷು ವಿಷಮೇಷು ಚ |
ತ್ವಾಮಹಂ ನರಶಾರ್ದೂಲ ಗಚ್ಛಂತಮನುವರ್ತಿನೀ ||60||
ಎಲೈ ನರಶಾರ್ದೂಲನೇ, ಸಮ ವಿಷಮ ಮಾರ್ಗಗಳಲ್ಲಿ ನಡೆಯುವ ನಿನ್ನನ್ನು ಅನುಸರಿಸಿ ನಾನು ನಿನ್ನ ಹಿಂದೆಯೇ ಬರುವೆನು.
ಛಾಯೇವಾನುಗತಾ ರಾಜಂಸ್ತವಾಹಂ ವಶವರ್ತಿನೀ |
ಭವಿಷ್ಯಾಮಿ ನರವ್ಯಾಘ್ರ ನಿತ್ಯಂ ಪ್ರಿಯಹಿತೈಷಿಣೀ ||61||
ರಾಜನೇ, ನಾನು ನಿನ್ನ ವಶವರ್ತಿನಿಯಾಗಿ ಛಾಯೆಯಂತೆ ನಿನ್ನ ಹಿಂದೆ ಬರುತ್ತೇನೆ. ನರಶ್ರೇಷ್ಠನೇ, ಯಾವಾಗಲೂ ನಿನ್ನ ಪ್ರಿಯವನ್ನು ಮತ್ತು ಹಿತವನ್ನು ಬಯಸುವವಳಾಗಿರುವೆನು.
ಅದ್ಯಪ್ರಭೃತಿ ಮೇ ರಾಜನ್ ಕಷ್ಟಾ ಹೃದಯಶೋಷಣಾಃ |

ಆಧಯೋ ಹಿ ಭವಿಷ್ಯಂತಿ ತ್ವದೃತೇ ಪುಷ್ಕರೇಕ್ಷಣ ॥62॥
ಎಲೈ ರಾಜನೇ, ಎಲೈ ಪುಷ್ಕರೇಕ್ಷಣನೇ, ಇಂದಿನಿಂದ ಆರಂಭಿಸಿ ನೀನಿಲ್ಲದೆ ನನಗೆ ನನ್ನ ಹೃದಯವನ್ನು ಹಿಂಡುವ ಸಹಿಸಲು ಅಸಾಧ್ಯವಾದ ಮನೋರೋಗಗಳು ಉಂಟಾಗುವುವು.
ಅಭಾಗ್ಯಯಾ ಮಯಾ ನೂನಂ ವಿಮುಕ್ತಾಃ ಸಹಚಾರಿಣಃ|
ಸಂಯೋಗಾದ್ ವಿಪ್ರಯುಕ್ತಾಶ್ಚ ಪೂರ್ವದೇಹೇ ನ ಸಂಶಯಃ ॥63॥
ದುರ್ಭಾಗ್ಯೆಯಾದ ನಾನು ಹಿಂದಿನ ದೇಹದಲ್ಲಿ ಜೊತೆಯಲ್ಲಿರುವ ಪತಿಪತ್ನಿಯರನ್ನು ಬೇರೆ ಮಾಡಿದ್ದೇನೆ. ಪತಿಪತ್ನಿಯರ ಸಂಯೋಗವನ್ನು ಬಿಡಿಸಿ ಅವರನ್ನು ದೂರ ಮಾಡಿದ್ದೇನೆ. ಈ ವಿಷಯದಲ್ಲಿ ಸಂಶಯವಿಲ್ಲ.
ತದಿದಂ ಕರ್ಮಭಿಃ ಪಾಪೈಃ ಪೂರ್ವದೇಹೇಷು ಸಂಚಿತೈಃ|
ದುಃಖಂ ಮಾಮನುಸಂಪ್ರಾಪ್ತಂ ರಾಜಂಸ್ತ್ವದ್ವಿಪ್ರಯೋಗಜಮ್ ॥64॥
ಎಲೈ ರಾಜನೇ, ನಾನುಪೂರ್ವದೇಹದಲ್ಲಿ ಮಾಡಿದ ಪಾಪದ ಸಂಚಯದಿಂದ ನಿನ್ನ ವಿಯೋಗದಿಂದ ಉಂಟಾದ ದುಃಖವು ನನಗೆ ಪ್ರಾಪ್ತವಾಗಿದೆ.
ಏಷಾಹಮದ್ಯ ರಾಜೇಂದ್ರ ಕುಶಾನಾಸ್ತೀರ್ಯ ಶಾಯಿನೀ|
ಭವಿಷ್ಯಾಮಿ ನರವ್ಯಾಘ್ರ ಭವದ್ದರ್ಶನಕಾಂಕ್ಷಿಣೀ ॥65॥
ಎಲೈ ರಾಜೇಂದ್ರನೇ, ನಾನು ಈ ದಿನ ಭೂಮಿಯ ಮೇಲೆ ದರ್ಭೆಗಳನ್ನು ಹರಡಿ ಅದರ ಮೇಲೆ ಮಲಗಿಕೊಂಡು ನಿನ್ನ ದರ್ಶನವನ್ನು ಬಯಸಿ ನಿರೀಕ್ಷಿಸುವವಳಾಗುತ್ತೇನೆ.
ದರ್ಶಯಸ್ವ ಮನುಷ್ಯೇಂದ್ರ ಸಾಧು ಮಾಂ ಪುಷ್ಕರೇಕ್ಷಣ|
ವಿಕ್ರೋಶಂತೀಂ ಸತೀಂ ಭಾರ್ಯಾಂ ದುಃಖಾರ್ತಾಂ ಚ ನರೇಶ್ವರ॥66॥
ಎಲೈ ಪುಷ್ಕರೇಕ್ಷಣನೇ, ಮನುಷ್ಯೇಂದ್ರನೇ, ನನಗೆ ಇನ್ನೊಮ್ಮೆ ದರ್ಶನವನ್ನು ಕೊಡು. ಎಲೈ ರಾಜನೇ ದುಃಖಾರ್ತಳಾಗಿ ವಿಲಾಪ ಮಾಡುತ್ತಿರುವ ನಿನ್ನ ಧರ್ಮಪತ್ನಿಯನ್ನು ಸಮಾಧಾನ ಪಡಿಸು.
ವೈಶಂಪಾಯನಃ
ಏವಂ ಬಹುವಿಧಾಸ್ತಸ್ಯಾ ವಿಲಪಂತ್ಯಾಃ ಪುನಃ ಪುನಃ|
ತಸ್ಮಿನ್ ಶವಶರೀರೇ ವಾಕ್ ತಾಂ ಕಿಲಾಂತರ್ಹಿತಾಽಬ್ರವೀತ್ ॥67॥
ಹೀಗೆ ಬಹುವಿಧವಾಗಿ ಮತ್ತೆ ಮತ್ತೆ ವಿಲಾಪ ಮಾಡುತ್ತಿದ್ದ ಸಮಯದಲ್ಲಿ ಅವಳನ್ನು ಕುರಿತು ಶವ ಶರೀರದಲ್ಲಿ ಅದೃಶ್ಯವಾದ ಒಂದು ವಾಣಿ ಉಂಟಾಯಿತು.
ಉತ್ತಿಷ್ಠ ಭದ್ರೇ ಗಚ್ಛ ತ್ವಂ ದದಾನಿ ಹಿ ವರಂ ತವ|
ಜನಯಿಷ್ಯಾಮ್ಯಪತ್ಯಾನಿ ತ್ವಯ್ಯೇವಾಹಂ ವರಾನನೇ ॥68॥
ಎಲೈ ಮಂಗಳಸ್ವರೂಪಳೇ, ನೀನು ಎದ್ದು ಹಿಂದಿರುಗು. ನಿನಗೆ ನಾನು ವರವನ್ನು ಕೊಡುತ್ತಿದ್ದೇನೆ. ಸುಂದರಿಯೇ, ನಾನು ನಿನ್ನಲ್ಲಿಯೇ ಮಕ್ಕಳನ್ನು ಪಡೆಯುವೆನು.
ಆತ್ಮೀಯೇ ತು ವರಾರೋಹೇ ಶಯನೇ ಮಾಂ ಚತುರ್ದಶೀಮ್|
ಅಷ್ಟಮೀಂ ವಾಪ್ಯೃತುಸ್ನಾತಾ ಸಂಭವೇಥಾಃ ಶುಚಿಸ್ಮಿತೇ ॥69॥
ಎಲೈ ಸುಂದರಿಯೇ, ಶುಚಿಸ್ಮಿತೆಯೇ, ನಿನ್ನ ಹಾಸಿಗೆಯಲ್ಲಿಯೇ ಇದ್ದು ನೀನು ಋತುಸ್ನಾತಳಾಗಿ ಚತುರ್ದಶಿಯಂದು ಅಥವಾ ಅಷ್ಟಮಿಯಂದು ನನ್ನ ಸಮಾಗಮವನ್ನು ಹೊಂದುತ್ತೀಯೆ.
ಕುಂತೀ
ಏವಮುಕ್ತಾಽಥ ಸಾ ದೇವೀ ತಚ್ಚಕಾರ ಯಶಸ್ವಿನೀ|
ತಥಾ ಕಮಲಪತ್ರಾಕ್ಷೀ ಯಥೋಕ್ತಂ ಪುತ್ರಗರ್ಧಿನೀ ॥70॥
ಹೀಗೆ ಹೇಳಲ್ಪಟ್ಟ ಪುತ್ರಾಕಾಂಕ್ಷಿಣಿಯಾದ, ಯಶಸ್ವಿನಿಯಾದ, ಕಮಲನಯನೆಯಾದ ಆ ದೇವಿಯು ಹಾಗೆಯೇ ಮಾಡಿದಳು.
ಸಾ ತೇನ ಸುಷುವೇ ದೇವೀ ಶವೇನ ಮನುಜಾಧಿಪ|
ತ್ರೀನ್ ಸಾಲ್ವಾಂಶ್ಚತುರೋ ಮದ್ರಾನ್ ಪುತ್ರಾನ್ ಭರತಸತ್ತಮ ॥71॥
ಎಲೈ ಭರತಸತ್ತಮನೇ, ಎಲೈ ರಾಜನೇ, ಆ ದೇವಿಯು ಆ ಶವದಿಂದಲೇ ಮೂವರು ಸಾಲ್ವರಾಜರನ್ನೂ,ನ ನಾಲ್ಕು ಮದ್ರರಾಜರನ್ನೂ ಪ್ರಸವಿಸಿದಳು.
ತಥಾ ತ್ವಮಪಿ ಮಯ್ಯೇವ ಮನಸಾಽಪಿ ನರರ್ಷಭ|
ಶಕ್ತೋ ಜನಯಿತುಂ ರಾಜನ್ನಪತ್ಯಂ ತಪಸೋ ಬಲಾತ್ ॥72॥
ಎಲೈ ರಾಜನೇ, ನರಶ್ರೇಷ್ಠನೇ, ಹಾಗೆ ನೀನೂ ಕೂಡ ನಿನ್ನ ತಪಸ್ಸಿನ ಬಲದಿಂದ ನನ್ನಲ್ಲಿಯೇ ಮನಸ್ಸಿನಿಂದಲೂ ಕೂಡ ಮಕ್ಕಳನ್ನು ಪಡೆಯಲು ಸಮರ್ಥನಾದವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಯೋದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಹದಿಮೂರನೆಯ ಅಧ್ಯಾಯ ಮುಗಿಯಿತು.
*****

## ನೂರ ಹದಿನಾಲ್ಕನೆಯ ಅಧ್ಯಾಯ

(ಪಾಂಡುವಿನ ಉತ್ತರ, ಉದ್ದಾಲಕರ ಕಥೆ, ಕುಂತಿಯಿಂದ ದುರ್ವಾಸರಿಂದ ಮಂತ್ರಪ್ರಾಪ್ತಿಯ ಕಥನ.)

ವೈಶಂಪಾಯನಃ
ಏವಮುಕ್ತಸ್ತಯಾ ರಾಜಾ ತಾಂ ದೇವೀಂ ವಾಕ್ಯಮಬ್ರವೀತ್ |
ಧರ್ಮವಿದ್ ಧರ್ಮಸಂಯುಕ್ತಮಿದಂ ವಚನಮುತ್ತಮಮ್ ॥1॥
ಆ ಧರ್ಮಜ್ಞನಾದ ರಾಜನು ಹೀಗೆ ಹೇಳಲ್ಪಟ್ಟವನಾಗಿ ಕುಂತಿಯನ್ನು ಕುರಿತು ಧರ್ಮಯುಕ್ತವಾದ ಮತ್ತು ಹೇಳಲು ಶ್ರೇಷ್ಠವಾದ ಈ ಉತ್ತಮ ವಚನಗಳನ್ನು ಆಡಿದನು.
ಏವಮೇತದ್ ವರಾರೋಹೇ ವ್ಯುಷಿತಾಶ್ವಶ್ಚಕಾರ ಹ |
ತ್ವಯಾ ಯಥೋಕ್ತಂ ಕಲ್ಯಾಣಿ ಸ ಹ್ಯಾಸೀದಮರೋಪಮಃ ॥2॥
ಸುಂದರಿಯೇ, ಕಲ್ಯಾಣಿಯೇ, ವ್ಯುಷಿತಾಶ್ವನು ನೀನು ಹೇಳಿದಂತೆಯೇ ಮಾಡಿದನು. ಅವನು ದೇವತೆಗಳಿಗೆ ಸದೃಶನಾಗಿದ್ದನು.
ಅಥ ತ್ವಿಮಂ ಪ್ರವಕ್ಷ್ಯಾಮಿ ಧರ್ಮಂ ಚೈವ ನಿಬೋಧ ಮೇ |
ಪುರಾಣಮೃಷಿಭಿರ್ದೃಷ್ಟಂ ಸರ್ವಧರ್ಮಭೃತಾಂ ವರೈಃ ॥3॥
ಈಗ ನಾನು ನಿನಗೆ ಸರ್ವಧರ್ಮಿಷ್ಠರಲ್ಲಿ ಶ್ರೇಷ್ಠರಾದ ಋಷಿಗಳಿಂದ ದೃಷ್ಟವಾದ ಪುರಾತನಧರ್ಮವನ್ನು ಹೇಳುವೆನು. ಅದನ್ನು ಕೇಳು.
ಅನಾವೃತಾಃ ಕಿಲ ಪುರಾ ಸ್ತ್ರಿಯೋ ಹ್ಯಾಸನ್ ವರಾಂಗನೇ |
ಕಾಮಚಾರಪ್ರಚಾರಿಣ್ಯಃ ಸ್ವತಂತ್ರಾಶ್ಚಾರುಹಾಸಿನಿ ॥4॥
ಎಲೌ ಸುಂದರಿಯೇ, ಹಿಂದೆ ಸ್ತ್ರೀಯರು ಅನಾವೃತರಾಗಿದ್ದರು. (ಅವರಿಗೆ ಪರಪುರುಷ ಸಂಪರ್ಕಕ್ಕೆ ನಿಷೇಧವಿರಲಿಲ್ಲ)
ಚಾರುಹಾಸಿನಿಯೇ, ಅವರು ಸ್ವತಂತ್ರರಾಗಿದ್ದು ತಮ್ಮ ಮನಸ್ಸಿಗೆ ಬಂದಂತೆ ಸಂಚರಿಸುತ್ತಿದ್ದರು.
ತಾಸಾಂ ವ್ಯುಚ್ಚರಮಾಣಾನಾಂ ಕೌಮಾರಾತ್ ಸುಭಗೇ ಪತೀನ್ |
ನಾಸೀದಧರ್ಮಸ್ತು ತದಾ ಸ ಹಿ ಧರ್ಮಃ ಸನಾತನಃ ॥5॥
ಎಲೌ ಸುಂದರಿಯೇ, ಮದುವೆಯಾದಾಗಿನಿಂದಲೂ ಪತಿಗಳನ್ನು ಮೀರಿ ನಡೆಯುವ ಅವರಿಗೆ ಅಧರ್ಮವು ಉಂಟಾಗುತ್ತಿರಲಿಲ್ಲ ಏಕೆಂದರೆ ಆಗ ಅದೇ ಸನಾತನ ಧರ್ಮವಾಗಿತ್ತು.
ತಂ ಚೈವ ಧರ್ಮಂ ಧರ್ಮಜ್ಞೇ ತಿರ್ಯಗ್ಯೋನಿಗತಾಃ ಪ್ರಜಾಃ |
ಪಾಲಯಂತಿ ವರಾರೋಹೇ ಯಥಾವದಸಿತೇಕ್ಷಣೇ ॥6॥
ಸುಂದರಿಯೇ, ಕಮಲನೇತ್ರೆಯೇ, ಧರ್ಮವನ್ನು ತಿಳಿದವಳೇ, ಆ ಧರ್ಮವನ್ನು ತಿರ್ಯಗ್ಯೋನಿಯಲ್ಲಿರುವ ಪ್ರಾಣಿಗಳು ಯಥಾವತ್ತಾಗಿ ಈಗಲೂ ಆಚರಿಸುತ್ತವೆ.
ಉತ್ತರೇಷ್ವಪಿ ರಂಭೋರು ಕುರುಷ್ವದ್ಯಾಪಿ ವರ್ತತೇ |
ಸ್ತ್ರೀಣಾಮನುಗ್ರಹೋ ಧರ್ಮಃ ಸ ಏವ ಹಿ ಸನಾತನಃ ॥7॥
ಬಾಳೆಯ ಗಿಡದಂತೆ ಸುಂದರವಾದ ತೊಡೆಯುಳ್ಳವಳೇ ಉತ್ತರಕುರುದೇಶದಲ್ಲಿ ಈಗಲೂ ಈ ಧರ್ಮವು ಆಚರಣೆಯಲ್ಲಿದೆ.
ಸ್ತ್ರೀಯರನ್ನು ನಿರ್ಬಂಧ ಪಡಿಸದಿರುವುದೇ ಧರ್ಮ. ಅದು ಸನಾತನವಾದುದು.
ನಾಗ್ನಿಸ್ತೃಪ್ಯತಿ ಕಾಷ್ಠಾನಾಂ ನಾಪಗಾನಾಂ ಮಹೋದಧಿಃ |
ನಾಂತಕಃ ಸರ್ವಭೂತಾನಾಂ ನ ಪುಂಸಾಂ ವಾಮಲೋಚನಾ ॥8॥
ಅಗ್ನಿಯು ಕಾಷ್ಠಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ. ಸಮುದ್ರವು ನದಿಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ. ಯಮನು ಎಲ್ಲ ಪ್ರಾಣಿಗಳ ಮರಣದಿಂದಲೂ ತೃಪ್ತಿಯನ್ನು ಹೊಂದುವುದಿಲ್ಲ. ಸ್ತ್ರೀಯು ಎಷ್ಟು ಪುರುಷರಿಂದಲಾದರೂ ತೃಪ್ತಿಯನ್ನು ಹೊಂದುವುದಿಲ್ಲ.
ಏವಂ ತೃಷ್ಣಾ ತು ನಾರೀಣಾಂ ಪುರುಷಂಪುರುಷಂ ಪ್ರತಿ |
ಅಗಮ್ಯಾಗಮನಂ ಸ್ತ್ರೀಣಾಂ ನ ನಿಮಿತ್ತಂ ಕೃತಂ ಶುಭೇ ॥9॥
ಹೀಗೆ ನಾರಿಯರಿಗೆ ಪ್ರತಿಯೊಬ್ಬ ಪುರುಷನನ್ನು ಕುರಿತು ಆಸೆಯಿರುತ್ತದೆ. ಎಲೌ ಶುಭಸ್ವರೂಪಳೇ, ಅಗಮ್ಯಾಗಮನವು ಸ್ತ್ರೀಯರಿಗೆ ದೋಷಕ್ಕೆ ಕಾರಣ ಎಂದು ಎಣಿಸಲ್ಪಡುತ್ತಿರಲಿಲ್ಲ.
ಪುತ್ರಂ ವಾ ಕಿಲ ಪೌತ್ರಂ ವಾ ಕಾಂಸಾಂಚಿದ್ ಭ್ರಾತರಂ ತಥಾ |
ರಹಸೀಹ ನರಂ ದೃಷ್ಟ್ವಾ ಯೋನಿರುತ್ಕ್ಲಿದ್ಯತೇ ಸ್ತ್ರಿಯಾಃ ॥10॥
ಪುತ್ರನನ್ನಾಗಲೀ, ಪೌತ್ರನನ್ನಾಗಲೀ, ಅಣ್ಣ ತಮ್ಮಂದಿರನ್ನಾಗಲೀ ಅಥವಾ ಇನ್ನೊಬ್ಬ ಪುರುಷನನ್ನಾಗಲೀ ಏಕಾಂತದಲ್ಲಿ ನೋಡಿದ ಕೆಲವು ಸ್ತ್ರೀಯರಿಗೆ ಕಾಮೋದ್ರೇಕವಾಗುತ್ತದೆ.
ಏತತ್ ಸ್ವಾಭಾವಿಕಂ ಸ್ತ್ರೀಣಾಮನಿಮಿತ್ತಂ ತು ತದ್ ಭವೇತ್ |
ಅಸ್ಮಿಂಸ್ತು ನಚಿರಾಲ್ಲೋಕೇ ಮರ್ಯಾದೇಯಂ ಯಶಸ್ವಿನಿ |
ಸ್ಥಾಪಿತಾ ಯೇನ ಯಸ್ಮಾಚ್ಚ ತನ್ಮೇ ವಿಸ್ತರಶಃ ಶೃಣು ॥11॥
ಇದು ಸ್ತ್ರೀಯರಿಗೆ ಸ್ವಾಭಾವಿಕವಾದುದು. ದೋಷಕ್ಕೆ ನಿಮಿತ್ತವಲ್ಲ. ಎಲೌ ಯಶಸ್ವಿನಿಯೇ, ಇಂತಹ ಈ ಲೋಕದಲ್ಲಿ ತಮ್ಮ ಪತಿಗಳನ್ನು ಮೀರಬಾರದು ಎಂಬ ಮರ್ಯಾದೆಯನ್ನು ಯಾರು ಯಾವಾಗ ಸ್ಥಾಪಿಸಿದರು ಎಂದು ವಿಸ್ತಾರವಾಗಿ ಹೇಳುತ್ತೇನೆ, ಕೇಳು.
ಬಭೂವೋದ್ದಾಲಕೋ ನಾಮ ಮಹರ್ಷಿರಿತಿ ನಃ ಶ್ರುತಮ್ |
ಶ್ವೇತಕೇತುರಿತಿ ಖ್ಯಾತಃ ಪುತ್ರಸ್ತಸ್ಯಾಭವನ್ಮುನಿಃ ॥12॥
ಹಿಂದೆ ಉದ್ದಾಲಕರೆಂಬ ಮಹರ್ಷಿಗಳು ಇದ್ದರು ಎಂದು ಕೇಳಿದ್ದೇವೆ. ಅವರಿಗೆ `ಶ್ವೇತಕೇತು' ಎಂಬ ಪುತ್ರನು ಜನಿಸಿದನು.
ಮರ್ಯಾದಾ ಸ್ಥಾಪಿತಾ ಯೇನ ಮಾನುಷೇಷು ವಿಶೇಷತಃ |
ಕೋಪಾತ್ ಕಮಲಪತ್ರಾಕ್ಷಿ ಯದರ್ಥಂ ತನ್ನಿಬೋಧ ಮೇ ॥13॥

ಎಲೌ ಕಮಲ ನಯನೆಯೇ ಶ್ವೇತಕೇತುವು ಕೋಪದಿಂದ ಮನುಷ್ಯರಲ್ಲಿ ವಿಶೇಷವಾಗಿ ಈ ಮರ್ಯಾದೆಯನ್ನು ಸ್ಥಾಪಿಸಿದನು. ಅದಕ್ಕೆ ಕಾರಣವನ್ನು ಹೇಳುತ್ತೇನೆ, ಕೇಳು.
ಶ್ವೇತಕೇತೋಃ ಪಿತಾ ದೇವಿ ತಪ ಉಗ್ರಂ ಸಮಾಸ್ಥಿತಃ |
ಗ್ರೀಷ್ಮೇ ಪಂಚತಪಾ ಭೂತ್ವಾ ವರ್ಷಾಸ್ವಾಸಾರಗೋಽಭವತ್ |
ಶಿಶಿರೇ ಸಲಿಲಸ್ಥಾಯೀ ಸಹ ಪತ್ನ್ಯಾ ಮಹಾತಪಾಃ ॥14॥
ಶ್ವೇತಕೇತುವಿನ ತಂದೆಯಾದ ಉದ್ದಾಲಕರು ಉಗ್ರವಾದ ತಪಸ್ಸಿನಲ್ಲಿ ನಿರತರಾಗಿದ್ದರು. ಮಹಾತಪಸ್ವಿಗಳಾದ ಅವರು ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು, ಮಳೆಗಾಲದಲ್ಲಿ ಮಳೆಯಲ್ಲಿ ನಿಂತು, ಚಳಿಗಾಲದಲ್ಲಿ ಕಂಠದ ವರೆಗಿನ ನೀರಿನಲ್ಲಿ ನಿಂತು ಪತ್ನಿಯ ಜೊತೆಯಲ್ಲಿ ತಪಸ್ಸು ಮಾಡುತ್ತಿದ್ದರು.
ಉದ್ದಾಲಕಂ ತಪಸ್ಯಂತಂ ನಿಯಮೇನ ಸಮಾಹಿತಮ್ |
ತಸ್ಯ ಪುತ್ರಃ ಶ್ವೇತಕೇತುಃ ಪರಿಚರ್ಯಾಂ ಚಚಾರ ಹ ॥15॥
ಹೀಗೆ ನಿಯಮವನ್ನು ಅನುಸರಿಸಿ ಸಮಾಧಾನದಿಂದ ತಪಸ್ಸನ್ನು ಮಾಡುತ್ತಿದ್ದ ಉದ್ದಾಲಕರಿಗೆ ಮಗನಾದ ಶ್ವೇತಕೇತುವು ಪರಿಚರ್ಯೆಯನ್ನು ಮಾಡುತ್ತಿದ್ದನು.
ಅಭ್ಯಗಚ್ಛದ್ ದ್ವಿಜಃ ಕಶ್ಚಿದ್ ವಲೀಪಲಿತಸಂತತಃ |
ತಂ ದೃಷ್ಟ್ವೈವ ಮುನಿಃ ಶ್ರೇಷ್ಠಃ ಪೂಜಯಾಮಾಸ ಶಾಸ್ತ್ರತಃ ॥16॥
ಹೀಗಿರುವಾಗ ಒಮ್ಮೆ ಅವರ ಆಶ್ರಮಕ್ಕೆ ಸುಕ್ಕುಗಟ್ಟಿದ ದೇಹವುಳ್ಳ, ನರೆತ ಕೂದಲುಗಳುಳ್ಳ ಒಬ್ಬ ಬ್ರಾಹ್ಮಣನು ಬಂದನು. ಅವನನ್ನು ನೋಡಿದ ತಕ್ಷಣ ಶ್ರೇಷ್ಠರಾದ ಉದ್ದಾಲಕರು ಶಾಸ್ತ್ರೋಕ್ತ ವಿಧಾನದಿಂದ ಅವನಿಗೆ ಪೂಜೆಯನ್ನು ಮಾಡಿದರು.
ಸ್ವಾಗತೇನ ಚ ಪಾದ್ಯೇನ ಮೃದುವಾಕ್ಯೈಶ್ಚ ಭಾರತ |
ಶಾಕಮೂಲಫಲಾದ್ಯೈಶ್ಚ ವನ್ಯೈರನ್ಯೈರಪೂಜಯತ್ ॥17॥
ಸ್ವಾಗತವನ್ನು ಕೋರಿ, ಪಾದಗಳನ್ನು ತೊಳೆದು, ಮೃದುವಾಕ್ಯಗಳನ್ನು ಆಡಿ, ವನದಲ್ಲಿ ದೊರೆಯುವ ಶಾಕಮೂಲಫಲಗಳಿಂದಲೂ, ಬೇರೆ ವಸ್ತುಗಳಿಂದಲೂ ಅವನನ್ನು ಪೂಜಿಸಿದರು.
ಕ್ಷುತ್ಪಿಪಾಸಾಶ್ರಮೈರಾರ್ತಃ ಪೂಜಿತಸ್ತು ಮಹರ್ಷಿಣಾ |
ವಿಶ್ರಾಂತೋ ಮುನಿಮಾಸಾದ್ಯ ಪರ್ಯಪೃಚ್ಛದ್ ದ್ವಿಜಸ್ತದಾ ॥18॥
ಹಸಿವು ಬಾಯಾರಿಕೆಗಳಿಂದ ಬಳಲಿದ ಆ ಬ್ರಾಹ್ಮಣನು ಮಹರ್ಷಿಗಳಿಂದ ಹೀಗೆ ಪೂಜಿಸಲ್ಪಟ್ಟು ವಿಶ್ರಾಂತಿಯನ್ನು ಪಡೆದ ಮೇಲೆ ಉದ್ದಾಲಕರನ್ನು ಸಮೀಪಿಸಿ ಪ್ರಶ್ನೆ ಮಾಡಿದನು.
ಉದ್ದಾಲಕ ಮಹರ್ಷೇ ತ್ವಂ ಸತ್ಯಂ ಮೇ ಬ್ರೂಹಿ ಮಾಽನೃತಮ್ |
ಋಷಿಪುತ್ರಃ ಕುಮಾರೋಽಯಂ ದರ್ಶನೀಯೋ ವಿಶೇಷತಃ |
ತವ ಪುತ್ರಮಿಮಂ ಮನ್ಯೇ ಕೃತಕೃತ್ಯೋಽಸಿ ತದ್ ವದ ॥19॥
ಉದ್ದಾಲಕ ಮಹರ್ಷಿಗಳೇ, ಸತ್ಯವನ್ನು ಹೇಳಿ, ಸುಳ್ಳನ್ನು ಹೇಳಬೇಡಿ. ವಿಶೇಷವಾಗಿ ಸುಂದರನಾಗಿರುವ ಈ ಋಷಿಕುಮಾರನು ನಿಮ್ಮ ಮಗನೆಂದು ಭಾವಿಸುತ್ತೇನೆ. ಇಂತಹ ಮಗನನ್ನು ಪಡೆದು ನೀವು ಕೃತಕೃತ್ಯರಾಗಿದ್ದೀರಿ. ಅದನ್ನು ಹೇಳಿ.
ಉದ್ದಾಲಕಃ
ಮಮ ಪತ್ನೀ ಮಹಾಪ್ರಾಜ್ಞ ಕುಶಿಕಸ್ಯ ಸುತಾ ಮತಾ |
ಛಾಯೇವಾನಪಗಾ ಪತ್ನೀ ಮಮ ನಿತ್ಯಮನುವ್ರತಾ ॥20॥
ಮಹಾಪ್ರಾಜ್ಞರೇ, ನನ್ನ ಪತ್ನಿಯು ಕುಶಿಕರ ಪುತ್ರಿ. ಛಾಯೆಯಂತೆ ನನ್ನನ್ನು ಎಂದೂ ಬಿಡದೆ ನನಗೆ ಅನುವ್ರತಳಾಗಿದ್ದಾಳೆ.
ಅರುಂಧತೀವ ಪತ್ನೀನಾಂ ತಪಸಾ ಕರ್ಶಿತಸ್ತನೀ |
ಅಸ್ಯಾಂ ಜಾತಃ ಶ್ವೇತಕೇತುರ್ಮಮ ಪುತ್ರೋ ಮಹಾತಪಾಃ ॥21॥
ಸಪ್ತರ್ಷಿಗಳ ಪತ್ನಿಯರ ಮಧ್ಯದಲ್ಲಿಯ ಅರುಂಧತಿಯಂತೆ ತಪಸ್ಸಿನಿಂದ ತನ್ನ ಸ್ತನಗಳನ್ನು ಬತ್ತಿಸಿದ್ದಾಳೆ. ಮಹಾತಪಸ್ವಿಯಾದ ಶ್ವೇತಕೇತು ನನಗೆ ಇವಳಲ್ಲಿ ಹುಟ್ಟಿದ ಪುತ್ರ.
ವೇದವೇದಾಂಗವಿದ್ ವಿಪ್ರ ಮಚ್ಛಾಸನಪರಾಯಣಃ |
ಲೋಕಜ್ಞಃ ಸರ್ವಲೋಕೇಷು ವಿಶ್ರುತಃ ಸತ್ಯವಾಗ್ ಘೃಣೀ ॥22॥
ಬ್ರಾಹ್ಮಣನೇ, ಇವನು ವೇದವೇದಾಂಗಹಳನ್ನು ತಿಳಿದವನು. ನನ್ನ ಆದೇಶದಂತೆ ವರ್ತಿಸುವವನು. ಲೋಕನೀತಿಯನ್ನು ಬಲ್ಲವನು. ಸತ್ಯವಚನನೆಂದೂ, ದಯಾಳುವೆಂದೂ ಎಲ್ಲಾ ಲೋಕಗಳಲ್ಲಿಯೂ ಪ್ರಖ್ಯಾತನಾದವನು.
ದ್ವಿಜಃ
ಅಪೂರ್ವೀ ಭಾರ್ಯಯಾ ಚಾರ್ಥೀ ವೃದ್ಧೋಽಹಂ ಮಂದಚಾಕ್ಷುಷಃ |
ಪಿತ್ರ್ಯಾದೃಣಾದನಿರ್ಮುಕ್ತಃ ಪೂರ್ವಮೇವ ಕೃತಃ ಸ್ತ್ರಿಯಃ ॥23॥
ನಾನು ಮೊದಲಿನಿಂದಲೂ ಭಾರ್ಯೆಯನ್ನು ಅಪೇಕ್ಷಿಸಿದರೂ ಭಾರ್ಯಾಸಹಿತನಾಗಲಿಲ್ಲ. ಈಗ ನಾನು ವೃದ್ಧನೂ, ಮಂದದೃಷ್ಟಿಯುಳ್ಳವನೂ ಆಗಿದ್ದೇನೆ. ಮೊದಲೇ ವಿವಾಹ ಮಾಡಿಕೊಳ್ಳದಿದ್ದ ಕಾರಣದಿಂದಾಗಿ ಪಿತೃಋಣದಿಂದ ನಿರ್ಮುಕ್ತನಾಗಿಲ್ಲ.
ಪ್ರಜಾರಣೀ ತು ಪತ್ನೀ ತೇ ಕುಲಶೀಲಸಮಾಧಿನೀ |
ಸದೃಶೀ ಮಮ ಗೋತ್ರೇಣ ವಹಾಮ್ಯೇನಾಂ ಕ್ಷಮಸ್ವ ವೈ ॥24॥
ಕುಲಶೀಲಸಮಾಧಿಗಳನ್ನು ಹೊಂದಿದ ನಿನ್ನ ಪತ್ನಿಯು, ಪುತ್ರನೆಂಬ ಅಗ್ನಿಯನ್ನು ಉತ್ಪಾದಿಸುವ ಅರಣಿಯಂತಿದ್ದಾಳೆ. ಅವಳು ನನ್ನ ಗೋತ್ರಕ್ಕೆ ಹೊಂದುತ್ತಾಳೆ. ನಾನು ಅವಳನ್ನು ಕರೆದುಕೊಂಡು ಹೋಗುತ್ತೇನೆ. ನನ್ನನ್ನು ಕ್ಷಮಿಸು.

ಪಾಂಡುಃ
ಇತ್ಯುಕತ್ವ ಮೃಗಶಾಬಾಕ್ಷೀಂ ಚೀರಕೃಷ್ಣಾಜಿನಾಂಬರಾಮ್ |
ಯಷ್ಟ್ಯಾಧಾರಃ ಸ್ರಸ್ತಗಾತ್ರೋ ಮಂದಚಕ್ಷುರಬುದ್ಧಿಮಾನ್ ॥25॥
ಸ್ವವ್ಯಾಪಾರಾಕ್ಷಮೋ ಶ್ರೇಷ್ಠಾಮಚಿತ್ತಾಮಾತ್ಮನಿ ದ್ವಿಜಃ |
ಶ್ವೇತಕೇತೋಃ ಕಿಲ ಪುರಾ ಸಮಕ್ಷಂ ಮಾತರಂ ಪಿತುಃ ॥26॥
ಜಗ್ರಾಹ ಬ್ರಾಹ್ಮಣಃ ಪಾಣೌ ಗಚ್ಛಾವ ಇತಿ ಚಾಬ್ರವೀತ್ |
ಋಷಿಪುತ್ರಸ್ತತಃ ಕೋಪಂ ಚಕಾರಾಮರ್ಷಿತಸ್ತದಾ ॥27॥
ಹೀಗೆ ಹೇಳಿ ಕೋಲನ್ನು ಊರಿಕೊಂಡು ನಡುಗುತ್ತಿದ್ದ, ಮಂದದೃಷ್ಟಿಯುಳ್ಳ, ತನ್ನ ಕೆಲಸವನ್ನು ತಾನು ಮಾಡಿಕೊಳ್ಳಲು ಸಾಧ್ಯವಾಗದ, ಬುದ್ಧಿಹೀನನಾದ ಆ ಬ್ರಾಹ್ಮಣನು ಚೀರಕೃಷ್ಣಾಜಿನವನ್ನು ಧರಿಸಿದ್ದ, ಮೃಗಶಾಬಾಕ್ಷಿಯಾದ, ತನ್ನಲ್ಲಿ ಮನಸ್ಸಿಲ್ಲದಿರುವ ಶ್ವೇತಕೇತುವಿನ ತಾಯಿಯನ್ನು ಅವನ ತಂದೆಯ ಎದುರಿನಲ್ಲಿಯೇ ಕೈಯನ್ನು ಹಿಡಿದು `ಬಾ, ನಾವಿಬ್ಬರೂ ಹೋಗೋಣ' ಎಂದು ಹೇಳಿದನು. ಆಗ ಋಷಿಕುಮಾರನಾದ ಶ್ವೇತಕೇತುವು ಬಹಳ ಕೋಪಗೊಂಡನು.
ಸ ಮಾತರಂ ತಥಾ ದೃಷ್ಟ್ವಾ ನೀಯಮಾನಾಂ ಬಲಾದಿವ |
ತಪಸಾ ದೀಪ್ತವೀರ್ಯೋ ಹಿ ಶ್ವೇತಕೇತುರ್ನ ಚಕ್ಷಮೇ ॥28॥
ತನ್ನ ತಾಯಿಯನ್ನು ಬಲಾತ್ಕಾರದಿಂದ ಹಾಗೆ ಎಳೆಯುತ್ತಿರುವ ಬ್ರಾಹ್ಮಣನನ್ನು ನೋಡಿ ತಪಸ್ಸಿನಿಂದ ಮಹಾಸಾಮರ್ಥ್ಯವನ್ನು ಸಂಪಾದಿಸಿದ್ದ ಶ್ವೇತಕೇತುವು ಸಹಿಸಲಿಲ್ಲ.
ಸಂಗೃಹ್ಯ ಮಾತರಂ ಹಸ್ತೇ ಶ್ವೇತಕೇತುರಭಾಷತ |
ದುರ್ಬ್ರಾಹ್ಮಣ ವಿಮುಂಚ ತ್ವಂ ಮಾತರಂ ಮೇ ಪತಿವ್ರತಾಮ್ ॥29॥
ಶ್ವೇತಕೇತುವು ತನ್ನ ತಾಯಿಯ ಕೈಯನ್ನು ಹಿಡಿದು `ಕೆಟ್ಟ ಬ್ರಾಹ್ಮಣನೇ, ಪತಿವ್ರತೆಯಾದ ನನ್ನ ತಾಯಿಯನ್ನು ಬಿಟ್ಟು ಬಿಡು' ಎಂದು ಹೇಳಿದನು.
ಅಯಂ ಪಿತಾ ಮೇ ಬ್ರಹ್ಮರ್ಷಿಃ ಕ್ಷಮಾವಾನ್ ಬ್ರಹ್ಮವಿತ್ತಮಃ |
ಶಾಪಾನುಗ್ರಹಯೋಃ ಶಕ್ತಃ ತೂಷ್ಣೀಂಭೂತೋ ಮಹಾವ್ರತಃ ॥30॥
ಈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ, ಮಹಾವ್ರತವನ್ನು ಧರಿಸಿರುವ ಬ್ರಹ್ಮರ್ಷಿಯಾದ ನನ್ನ ತಂದೆಯು ಶಾಪಾನುಗ್ರಹ ಶಕ್ತಿಯುಳ್ಳವನು. ಕ್ಷಮಾಗುಣವನ್ನು ಅವಲಂಬಿಸಿ ಅವನು ಸುಮ್ಮನಿದ್ದಾನೆ.
ತಸ್ಯ ಪತ್ನೀ ಶಮೋಪೇತಾ ಮಮ ಮಾತಾ ವಿಶೇಷತಃ |
ಪತಿವ್ರತಾಂ ತಪೋಯುಕ್ತಾಂ ಸಾಧ್ವಾಚಾರೈರಲಂಕೃತಾಮ್ |
ಪ್ರಾಣದಾನೇನ ತೇ ಬ್ರಹ್ಮನ್ ಮಾತೃಭೂತಾಂ ವಿಮುಂಚ ಮೇ ॥31॥
ಈ ಶಾಂತಿಯುತಳಾದ ನನ್ನ ತಾಯಿಯು ಅವನ ಶ್ರೇಷ್ಠಳಾದ ಪತ್ನಿ. ಅವಳು ಪತಿವ್ರತೆಯೂ ತಪೋಯುಕ್ತಳೂ ಒಳ್ಳೆಯ ಆಚಾರಗಳಿಂದ ಅಲಂಕೃತಳೂ ಆಗಿದ್ದಾಳೆ. ಬ್ರಾಹ್ಮಣನೇ, ನಿನಗೆ ಶಾಪವನ್ನು ಕೊಡದೆ ನಿನಗೆ ಪ್ರಾಣದಾನವನ್ನು ಮಾಡಿದ್ದಾಳೆ. ಅಂತಹ ನನ್ನ ತಾಯಿಯನ್ನು ಬಿಟ್ಟುಬಿಡು.
ವೈಶಂಪಾಯನಃ
ಏವಮುಕತ್ವ ತು ಯಾಚಂತಂ ವಿಮುಂಚೇತಿ ಮುಹುರ್ಮುಹುಃ |
ಪ್ರತ್ಯವೋಚದ್ ದ್ವಿಜೋ ರಾಜನ್ ಅಪ್ರಗಲ್ಭಮಿದಂ ವಚಃ ॥32॥
ಎಲೈ ರಾಜನೇ, ಹೀಗೆ ಬಿಟ್ಟುಬಿಡು ಎಂದು ಮತ್ತೆ ಮತ್ತೆ ಬೇಡುತ್ತಿರುವ ಶ್ವೇತಕೇತುವನ್ನು ಕುರಿತು ಆ ಬ್ರಾಹ್ಮಣನು ಅವಿವೇಕದ ಈ ಮಾತುಗಳನ್ನು ಆಡಿದನು.
ಅಪತ್ಯಾರ್ಥೀ ಶ್ವೇತಕೇತೋ ವೃದ್ಧೋಽಹಂ ಮಂದಚಾಕ್ಷುಷಃ |
ಪಿತಾ ತೇ ಋಣನಿರ್ಮುಕ್ತಃ ತ್ವಯಾ ಪುತ್ರೇಣ ಕಾಶ್ಯಪಃ ॥33॥
ಶ್ವೇತಕೇತುವೇ, ವೃದ್ಧನೂ, ಮಂದದೃಷ್ಟಿಯುಳ್ಳವನೂ ಆದ ನಾನು ಪುತ್ರಾರ್ಥಿಯಾಗಿದ್ದೇನೆ. ನಿನ್ನ ತಂದೆಯಾದ ಕಾಶ್ಯಪನು ನಿನ್ನಂತಹ ಮಗನನ್ನು ಪಡೆದು ಪಿತೃಋಣದಿಂದ ಮುಕ್ತನಾಗಿದ್ದಾನೆ.
ಋಣಾದಹಮನಿರ್ಮುಕ್ತೋ ವೃದ್ಧೋಽಹಂ ವಿಗತಸ್ಪೃಹಃ |
ಮಮ ಕೋ ದಾಸ್ಯತಿ ಸುತಾಂ ಕನ್ಯಾಂ ಸಂಪ್ರಾಪ್ತಯೌವನಾಮ್ ॥34॥
ಆದರೆ ವೃದ್ಧನಾದ, ಎಲ್ಲಾ ಆಸೆಗಳನ್ನು ತೊರೆದ ನಾನು ಪಿತೃಋಣದಿಂದ ನಿರ್ಮುಕ್ತನಾಗಿಲ್ಲ. ನನಗೆ ಯಾರು ಯುವತಿಯಾದ ಕನ್ಯೆಯನ್ನು ಕೊಡುವವರು?
ಪ್ರಜಾರಣೀಮಿಮಾಂ ಪತ್ನೀಂ ವಿಮುಂಚ ತ್ವಂ ಮಹಾತಪಾಃ |
ಏಕಯಾ ಪ್ರಜಯಾ ಪ್ರೀತೋ ಮಾತರಂ ತೇ ದದಾಮ್ಯಹಮ್ ॥35॥
ಮಹಾತಪಸ್ವಿಯಾದ ನೀನು, ಪ್ರಜೆಯೆಂಬ ಅಗ್ನಿಯನ್ನು ಉತ್ಪಾದಿಸುವ ಅರಣಿಯಂತಿರುವ ನಿನ್ನ ತಾಯಿಯನ್ನು ಬಿಡು. ನಾನು ಒಬ್ಬ ಮಗನನ್ನು ಪಡೆದು ಸಂತೋಷದಿಂದ ನಿನಗೆ ನಿನ್ನ ತಾಯಿಯನ್ನು ಹಿಂದಿರುಗಿಸುತ್ತೇನೆ.
ಏವಮುಕ್ತಃ ಶ್ವೇತಕೇತುರ್ಲಜ್ಜಯಾ ಕ್ರೋಧಮೇಯಿವಾನ್ |
ತಂ ಕ್ರುದ್ಧಂ ವೈ ಪಿತಾ ಜ್ಞಾತ್ವಾ ಶ್ವೇತಕೇತುಮುವಾಚ ಹ ॥36॥
ಹೀಗೆ ಹೇಳಲ್ಪಟ್ಟ ಶ್ವೇತಕೇತುವು ಲಜ್ಜೆಯಿಂದ ಕ್ರೋಧಗೊಂಡನು. ಅವನು ಕ್ರೋಧಗೊಂಡಿರುವುದನ್ನು ನೋಡಿ ತಂದೆಯಾದ ಉದ್ದಾಲಕರು ಶ್ವೇತಕೇತುವನ್ನು ಕುರಿತು ಮಾತನಾಡಿದರು.

ಮಾ ತಾತ ಕೋಪಂ ಕಾರ್ಷೀಸ್ತ್ವಮೇಷ ಧರ್ಮಃ ಸನಾತನಃ |
ಅನಾವೃತಾ ಹಿ ವರ್ಣಾನಾಂ ಸರ್ವೇಷಾಮಂಗನಾ ಭುವಿ ॥37॥
ಮಗು, ಕೋಪವನ್ನು ಮಾಡಬೇಡ. ಇದು ಸನಾತನವಾದ ಧರ್ಮ. ಆಯಾ ವರ್ಣದ ಸ್ತ್ರೀಯರು ಆಯಾ ವರ್ಣಗಳಲ್ಲಿ ಅನಾವೃತರಾದವರು.
ಯಥಾ ಗಾವಃ ಸ್ಥಿತಾಸ್ತಾತ ಸ್ವೇಸ್ವೇ ವರ್ಣೇ ತಥಾ ಪ್ರಜಾಃ |
ತಥೈವ ವೈ ಕುಟುಂಬೇಷು ನ ಪ್ರಾಪದ್ಯಂತ ಕರ್ಹಿಚಿತ್ ॥38॥
ಋತುಕಾಲೇ ತು ಸಂಪ್ರಾಪ್ತೇ ಭರ್ತಾರಂ ನ ಜಹುಸ್ತದಾ |
ಏವಮುಕ್ತೋ ಮಹಾಬಾಹುಃ ಶ್ವೇತಕೇತುರ್ನ ಚಕ್ಷಮೇ ॥39॥
ಮಗು, ಯಥಾ ಗೋವುಗಳು ತಮ್ಮ ತಮ್ಮ ವರ್ಣಗಳಲ್ಲಿಯೇ ನಿರತವಾಗಿರುತ್ತವೆಯೋ, (ಗೋವು ನಿಯಮವಿಲ್ಲದೆ ಯಾವುದೇ ವೃಷಭದಲ್ಲಿ ನಿರತವಾಗಿರುತ್ತದೆ, ಆದರೆ ಎಂದೂ ಮಹಿಷದ ಸಹವಾಸ ಮಾಡುವುದಿಲ್ಲ) ಹಾಗೆಯೇ ಸ್ತ್ರೀಯರು ತಮ್ಮ ತಮ್ಮ ವರ್ಣಗಳಲ್ಲಿ ಎಂದೂ ನಿಯಮಬದ್ಧರಾಗಲಿಲ್ಲ. ಋತುಕಾಲದಲ್ಲಿ ಮಾತ್ರ ಎಂದೂ ತಮ್ಮ ಪತಿಗಳನ್ನು ಬಿಡುತ್ತಿರಲಿಲ್ಲ.
ಚಕಾರೈವ ಚ ಮರ್ಯಾದಾಮಿಮಾಂ ಸ್ತ್ರೀಪುಂಸಯೋರ್ಭುವಿ |
ಮಾನುಷೇಷ್ವಸಿತಾಪಾಂಗೇ ನ ತ್ವೇವಾನ್ಯೇಷು ಜಂತುಷು ॥40॥
ಹೀಗೆ ಹೇಳಲ್ಪಟ್ಟ ಶ್ವೇತಕೇತುವು ಆ ಮಾತನ್ನು ಸಹಿಸಲಿಲ್ಲ. ಎಲೌ ಕಪ್ಪಾದ ಕಣ್ಣುಳ್ಳವಳೇ, ಭೂಮಿಯಲ್ಲಿ ಮನುಷ್ಯರಲ್ಲಿ ಸ್ತ್ರೀಪುರುಷಸಂಯೋಗ ವಿಷಯದಲ್ಲಿ ಈ ಮರ್ಯಾದೆಯನ್ನು ಮಾಡಿದನು, ಬೇರೆ ಪ್ರಾಣಿಗಳಲ್ಲಿ ಈ ಮರ್ಯಾದೆ ಇಲ್ಲ.
ತದಾಪ್ರಭೃತಿ ಮರ್ಯಾದಾ ಸ್ಥಾಪಿತೇಯಮಿತಿ ಶ್ರುತಿಃ |
ವ್ಯುಚ್ಚರಂತ್ಯಾಃ ಪತಿಂ ನಾರ್ಯಾ ಅದ್ಯಪ್ರಭೃತಿ ಪಾತಕಮ್ |
ಭ್ರೂಣಹತ್ಯಾಸಮಂ ಪಾಪಂ ಭವಿಷ್ಯತ್ಯಸುಖಾವಹಮ್ ॥41॥
ಅಂದಿನಿಂದ ಆರಂಭಿಸಿ ಭೂಲೋಕದಲ್ಲಿ ಈ ಮರ್ಯಾದೆ ಇದೆ ಎಂದು ಕೇಳಿದ್ದೇವೆ. ``ಈ ದಿನದಿಂದ ಆರಂಭಿಸಿ ತನ್ನ ಪತಿಯನ್ನು ಮೀರಿ ಪರಪುರುಷನನ್ನು ಹೊಂದುವ ಸ್ತ್ರೀಯರಿಗೆ ಭ್ರೂಣಹತ್ಯಾ ಸಮಾನವಾದ ದುಃಖಪ್ರದವಾದ ಪಾತಕವು ಉಂಟಾಗುವುದು''.
ಪಾಂಡುಃ
ಅದ್ಯಾಪ್ಯನುವಿಧೀಯಂತೇ ಕಾಮದ್ವೇಷವಿವರ್ಜಿತಾಃ |
ಉತ್ತರೇಷು ಮಹಾಭಾಗೇ ಕುರುಷ್ವೇವಂ ಯಶಸ್ವಿನಿ |
ಪುರಾಣದೃಷ್ಟೋ ಧರ್ಮೋಽಯಂ ಪೂಜ್ಯತೇ ಚ ಮಹರ್ಷಿಭಿಃ ॥42॥
ಎಲೌ ಮಹಾನುಭಾವಳೇ, ಯಶಸ್ವಿನಿಯೇ, ಉತ್ತರಕುರುದೇಶದಲ್ಲಿ ಕಾಮದ್ವೇಷವಿವರ್ಜಿತರಾದ ಸ್ತ್ರೀಯರು ಈಗಲೂ ಈ ಪದ್ಧತಿಯನ್ನು ಅನುಸರಿಸುತ್ತಾರೆ. ಪುರಾಣದೃಷ್ಟವಾದ ಈ ಧರ್ಮವು ಮಹರ್ಷಿಗಳಿಂದಲೂ ಪೂಜ್ಯವಾಗಿದೆ.
ಭಾರ್ಯಾಂ ತಥಾ ವ್ಯುಚ್ಚರತಃ ಕೌಮಾರೀಂ ಬ್ರಹ್ಮಚಾರಿಣೀಮ್ |
ಪತಿವ್ರತಾಮೇತದೇವ ಭವಿತಾ ಪಾತಕಂ ಭುವಿ ॥43॥
ಯುವತಿಯಾದ, ತನಗೆ ಅನುವ್ರತೆಯಾದ ಪತಿವ್ರತೆಯಾದ, ಪತ್ನಿಯನ್ನು ಮೀರಿ ನಡೆಯುವ ಪುರುಷನಿಗೂ ಇದೇ ಬ್ರೂಣಹತ್ಯಾ ಪಾತಕವುಂಟಾಗುತ್ತದೆ.
ಪತ್ಯಾ ನಿಯುಕ್ತಾ ಯಾ ಚೈವ ಪತ್ನ್ಯಾಪತ್ಯಾರ್ಥಮೇವ ಚ |
ನ ಕರಿಷ್ಯತಿ ತಸ್ಯಾಶ್ಚ ಭವಿಷ್ಯತ್ಯೇತದೇವ ಹಿ |
ಇತಿ ತೇನ ಪುರಾ ಭೀರು ಮರ್ಯಾದಾ ಸ್ಥಾಪಿತಾಽಬಲೇ ॥44॥
ಪತಿಯಿಂದ ಪುತ್ರಾರ್ಥಳಾಗಿ ನಿಯುಕ್ತಳಾದ ಪತ್ನಿಯು ಹಾಗೆ ಮಾಡದಿದ್ದರೆ ಅವಳಿಗೂ ಇದೇ ಪಾಪವು ಬರುವುದು. ಭೀರುವಾದ ಅಬಲೆಯೇ, ಹೀಗೆ ಶ್ವೇತಕೇತುವು ಹಿಂದೆ ಮರ್ಯಾದೆಯನ್ನು ಸ್ಥಾಪಿಸಿದನು.
ಉದ್ದಾಲಕಸ್ಯ ಪುತ್ರೇಣ ಧರ್ಮ್ಯೇ ವೈ ಶ್ವೇತಕೇತುನಾ |
ತೇನ ಭೂಯಸ್ತತೋ ದೃಷ್ಟಂ ಯಸ್ಮಿನ್ನರ್ಥೇ ನಿಬೋಧ ತತ್ ॥45॥
ಉದ್ದಾಲಕರ ಮಗನಾದ ಶ್ವೇತಕೇತುವಿನಿಂದ ಪುನಃ ಯಾವ ವಿಷಯದಲ್ಲಿ ಈ ಮರ್ಯಾದೆಯನ್ನು ಮಾಡಿದನೋ, ಅದನ್ನು ತಿಳಿದುಕೋ.
ನಿಯುಕ್ತಾ ಪತಿನಾ ಭಾರ್ಯಾ ಯದ್ಯಪತ್ಯಸ್ಯ ಕಾರಣಾತ್ |
ನ ಕುರ್ಯಾತ್ ತತ್ತಥಾ ಭೀರು ಸೈನಃ ಸುಮಹದಾಪ್ನುಯಾತ್ ॥46॥
ಭಾರ್ಯೆಯಾದವಳು, ಪುತ್ರನ ಸಲುವಾಗಿ ಪತಿಯಿಂದ ನಿಯುಕ್ತಳಾಗಿ ಹಾಗೆ ಮಾಡದಿದ್ದರೆ ಎಲೌ ಭೀರುವೇ, ಅವಳಿಗೂ ಸಹ ಮಹಾಪಾತಕವುಂಟಾಗುವುದು.
ಸೌದಾಸೇನ ಚ ರಂಭೋರು ನಿಯುಕ್ತಾಽಪತ್ಯಕರ್ಮಣಿ |
ಮದಯಂತೀ ಜಗಾಮರ್ಷಿಂ ವಸಿಷ್ಠಮಿತಿ ನಃ ಶ್ರುತಮ್ ॥47॥
ಎಲೌ ರಂಭೋರುವೇ, ಪತಿಯಾದ ಸೌದಾಸನಿಂದ ಮಗನನ್ನು ಪಡೆಯಲು ನಿಯುಕ್ತಳಾದ ಅವನ ಪತ್ನಿಯಾದ ಮದಯಂತಿಯು ವಸಿಷ್ಠ ಮಹರ್ಷಿಗಳ ಸಮಾಗಮವನ್ನು ಮಾಡಿದಳೆಂದು ನಾವು ಕೇಳಿದ್ದೇವೆ.
ತಸ್ಮಾಲ್ಲೇಭೇಽಥ ಸಾ ಪುತ್ರಮಶ್ಮಕಂ ನಾಮ ಭಾಮಿನಿ |
ಭಾರ್ಯಾ ಕಲ್ಮಾಷಪಾದಸ್ಯ ಭರ್ತುಃ ಪ್ರಿಯಹಿತೈಷಿಣೀ ॥48॥
ಎಲೌ ಭಾಮಿನಿಯೇ, ಕಲ್ಮಷಪಾದನ ಪತ್ನಿಯೂ ಪತಿಯ ಪ್ರಿಯ ಮತ್ತು ಹಿತದಲ್ಲಿ ಆಸಕ್ತಳಾದವಳೂ ಆದ ಮದಯಂತಿಯು

ವಸಿಷ್ಠರಿಂದ ಅಶ್ಮಕನೆಂಬ ಪುತ್ರನನ್ನು ಪಡೆದಳು.
ಅಸ್ಮಾಕಮಪಿ ವೈ ಜನ್ಮ ವಿದಿತಂ ಕಮಲೇಕ್ಷಣೇ |
ಕೃಷ್ಣದ್ವೈಪಾಯನಾದ್ ಭೀರು ಕುರೂಣಾಂ ವಂಶವೃದ್ಧಯೇ ॥49॥
ಕಮಲ ನಯನೆಯೇ, ಭೀರುವಾದವಳೇ, ಕುರುವಂಶದ ಅಭಿವೃದ್ಧಿಗಾಗಿ ನಾವೆಲ್ಲರೂ ವೇದವ್ಯಾಸರಿಂದ ಜನಿಸಿದ ವಿಷಯವು ನಿನಗೆ ತಿಳಿದೇ ಇದೆ.
ತಸ್ಮಾದೇತಾನಿ ಸರ್ವಾಣಿ ಕಾರಣಾನಿ ನಿರೀಕ್ಷ್ಯತು |
ಸಂಪ್ರಧಾರ್ಯ ಮಯೋಕ್ತಂ ಯತ್ ತತ್ ತ್ವಂ ವೈ ಕರ್ತುಮರ್ಹಸಿ ॥
ಆದ್ದರಿಂದ ಇವೆಲ್ಲಾ ಕಾರಣಗಳನ್ನು ಗಮನಿಸಿ, ನಾನು ಹೇಳುವುದನ್ನು ನೀನು ಆಚರಿಸಬೇಕು.
ಋತಾವೃತೌ ರಾಜಪುತ್ರಿ ಸ್ತ್ರಿಯಾ ಭರ್ತಾ ಶುಭೇಕ್ಷಣೇ |
ನಾತಿವರ್ತ್ಯ ಇತಿ ತ್ವೇವಂ ಧರ್ಮಂ ಧರ್ಮವಿದೋ ವಿದುಃ ॥51॥
ಶುಭೇಕ್ಷಣೆಯಾದ ರಾಜಕುಮಾರಿಯೇ, ಪ್ರತಿಯೊಂದು ಋತುಕಾಲದಲ್ಲಿಯೂ, ಪತ್ನಿಯು ಪತಿಯನ್ನು ಮೀರಿ ಹೋಗಬಾರದು ಎಂಬ ಧರ್ಮವನ್ನು ಎಲ್ಲಾ ಧರ್ಮಜ್ಞರು ತಿಳಿದಿದ್ದಾರೆ.
ಶೇಷೇಷ್ವನ್ಯೇಷು ಕಾಲೇಷು ಸ್ವಾತಂತ್ರ್ಯಂ ಸ್ತ್ರೀ ಕಿಲಾರ್ಹತಿ |
ಧರ್ಮಂ ಚೈವ ಜನಾಃ ಸಂತಃ ಪುರಾಣಂ ಪರಿಚಕ್ಷತೇ ॥52॥
ಉಳಿದ ಕಾಲಗಳಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವಿದೆ. ಇದು ಧರ್ಮವೆಂದು ಸಜ್ಜನರು ಮತ್ತು ಪುರಾಣಗಳು ಹೇಳುತ್ತವೆ.
ಭರ್ತಾ ಸ್ತ್ರಿಯಂ ರಾಜಪುತ್ರಿ ಶುಭಂ ವಾ ಯದಿ ವಾಽಶುಭಮ್ |
ಕಾರ್ಯಂ ನಿಯುಜ್ಯಾತ್ ಸುಶ್ರೋಣಿ ಕರ್ತವ್ಯಂ ತದಕಾಲಿಕಮ್ ॥53॥
ಎಲೌ ರಾಜಪುತ್ರಿಯೇ, ಸುಶ್ರೋಣಿಯೇ, ಪತಿಯು ಪತ್ನಿಯನ್ನು ಕುರಿತು ಯಾವ ಶುಭವಾದ ಅಥವಾ ಅಶುಭವಾದ ಕಾರ್ಯವನ್ನು ವಿಧಿಸುತ್ತಾನೋ, ಅದನ್ನು ಪತ್ನಿಯಾದವಳು ವಿಚಾರ ಮಾಡದೆ ನಡೆಸಿಕೊಡಲೇಬೇಕು.
ವಿಶೇಷತಃ ಪುತ್ರಗೃಧ್ನುರ್ಹತಃ ಪ್ರಜನನಾತ್ ಸ್ವಯಮ್ |
ಯಥಾಽಹಮನವದ್ಯಾಂಗಿ ಪುತ್ರದರ್ಶನಲಾಲಸಃ ॥54॥
ಅದರಲ್ಲೂ ವಿಶೇಷವಾಗಿ ಮೈಥುನಕ್ರಿಯೆಯಿಂದ ನಿವೃತ್ತನಾಗಿ ಮಗನನ್ನು ಬಯಸಿ, ಮಗನನ್ನು ನೋಡುವ ಲಾಲಸೆಯಿಂದ ಹೇಳುವ ನನ್ನ ಮಾತನ್ನು ಅನವದ್ಯಾಂಗಿಯೇ, ನೀನು ನಡೆಸಿಕೊಡಲೇಬೇಕು.
ಅಯಂ ರಕ್ತಾಂಗುಲಿತಳಃ ಪದ್ಮಪತ್ರನಿಭಃ ಶುಭಃ |
ಪ್ರಸಾದನಾರ್ಥಂ ಸುಶ್ರೋಣಿ ಶಿರಸ್ಯಭ್ಯುದ್ಯತೋಽಂಜಲಿಃ ॥55॥
ಸುಶ್ರೋಣಿಯೇ, ಇದೋ ಈ ಕೆಂಪಾದ ತಳವುಳ್ಳ ಬೆರಳುಗಳನ್ನು ಹೊಂದಿದ ಪದ್ಮಪತ್ರದಂತಿರುವ ನನ್ನ ಎರಡು ಕೈಗಳನ್ನು ತಲೆಯ ಮೇಲೆ ಜೋಡಿಸಿ ನಿನ್ನ ಅನುಗ್ರಹವನ್ನು ಪ್ರಾರ್ಥಿಸುತ್ತಿದ್ದೇನೆ.
ಮನ್ನಿಯೋಗಾತ್ ಸುಕೇಶಾಂತೇ ಮತ್ತಃ ಶ್ರೇಯಸ್ಕರೈರ್ದ್ವಿಜೈಃ |
ಅಪತ್ಯಾನಿ ವಿಶಿಷ್ಟಾನಿ ಕೃಶ್ಚಿದುತ್ಪಾದಯಾಬಲೇ |
ತ್ವತ್ಕೃತೇಽಹಂ ಪೃಥುಶ್ರೋಣಿ ಗಚ್ಛೇಯಂ ಪುತ್ರಿಣಾಂ ಗತಿಮ್ ॥56॥
ಸುಂದರವಾದ ಬೈತಲೆಯುಳ್ಳವಳೇ, ನನ್ನ ನಿಯೋಗದಂತೆ ನನಗಿಂತ ಶ್ರೇಷ್ಠರಾದ ಯಾರಾದರೂ ಬ್ರಾಹ್ಮಣರಿಂದ ವಿಶಿಷ್ಟವಾದ ಮಕ್ಕಳನ್ನು ಪಡೆ. ಅಬಲೆಯೇ, ನಿತಂಬಿನಿಯೇ, ನಿನ್ನ ನಿಮಿತ್ತದಿಂದಾಗಿ ನಾನು ಮಕ್ಕಳನ್ನು ಪಡೆದವರು ಹೊಂದುವ ಲೋಕವನ್ನು ಪಡೆಯುತ್ತೇನೆ.
ವೈಶಂಪಾಯನಃ
ಏವಮುಕ್ತಾ ತತಃ ಕುಂತೀ ಪಾಂಡುಂ ಪರಪುರಂಜಯಮ್ |
ಪ್ರತ್ಯುವಾಚ ವರಾರೋಹಾ ಭರ್ತುಃ ಪ್ರಿಯಚಿಕೀರ್ಷಯಾ ॥57॥
ಹೀಗೆ ಹೇಳಲ್ಪಟ್ಟ ಸುಂದರಿಯಾದ ಕುಂತಿಯು, ಪರಪುರಂಜಯನಾದ ತನ್ನ ಪತಿಗೆ ಪ್ರಿಯವನ್ನು ಮಾಡಲು ಬಯಸಿ ಮಾತನಾಡಿದಳು.
ಕುಂತೀ
ಅಧರ್ಮಃ ಸುಮಹಾನೇಷ ಸ್ತ್ರೀಣಾಂ ಭರತಸತ್ತಮ |
ಯತ್ ಪ್ರಸಾದಯತೇ ಭರ್ತಾ ಪ್ರಸಾದ್ಯಃ ಕ್ಷತ್ರಿಯರ್ಷಭ ॥58॥
ಎಲೈ ಭರತಶ್ರೇಷ್ಠನೇ, ಕ್ಷತ್ರಿಯಶ್ರೇಷ್ಠನೇ, ಪತ್ನಿಯಿಂದ ಪ್ರಸನ್ನೀಕರಿಸಿಕೊಳ್ಳಲು ಪ್ರಯತ್ನಪಡಬೇಕಾದ ಪತಿಯು ತಾನೇ ಕೈಗಳನ್ನು ಮುಗಿದು ಪತ್ನಿಯ ಪ್ರಸಾದವನ್ನು ಬೇಡಿದರೆ ಇದು ಸ್ತ್ರೀಯರಿಗೆ ದೊಡ್ಡ ಅಧರ್ಮವೇ ಸರಿ.
ಶೃಣು ಚೇದಂ ಮಹಾಬಾಹೋ ಮಮ ಪ್ರೀತಿಕರಂ ವಚಃ |
ಪಿತೃವೇಶ್ಮನ್ಯಹಂ ಬಾಲಾ ನಿಯುಕ್ತಾಽತಿಥಿಭೋಜನೇ ॥59॥
ಉಗ್ರಂ ಪರ್ಯಚರಂ ಪೂರ್ವಂ ಬ್ರಾಹ್ಮಣಂ ಸಂಶಿತವ್ರತಮ್ |
ನಿಗೂಢನಿಶ್ಚಯಂ ಧರ್ಮೇ ಯಂ ತಂ ದುರ್ವಾಸಸಂ ವಿದುಃ ॥60॥
ಮಹಾಬಾಹುವೇ, ನಿನಗೆ ಸಂತೋಷವನ್ನು ಉಂಟು ಮಾಡುವ ಈ ಮಾತುಗಳನ್ನು ಕೇಳು. ನಾನು ಬಾಲ್ಯದಲ್ಲಿ, ತಂದೆಯ ಮನೆಯಲ್ಲಿ ಅತಿಥಿಗಳ ಭೋಜನದ ನಿರ್ವಹಣೆಯನ್ನು ಮಾಡುತ್ತಾ ಶ್ರೇಷ್ಠವ್ರತಧಾರಿಗಳಾದ, ಕೋಪವಶರಾದ ಒಬ್ಬ ಬ್ರಾಹ್ಮಣರನ್ನು ಪರಿಚರಿಸಿದೆ. ಧರ್ಮದ ವಿಷಯದಲ್ಲಿ ರಹಸ್ಯವಾದ ನಿಶ್ಚಯವುಳ್ಳ ಅವರನ್ನು ಜನರು ದುರ್ವಾಸರು ಎಂದು ಕರೆಯುತ್ತಾರೆ.
ತಮುಗ್ರಂ ಸಂಶಿತಾತ್ಮಾನಂ ಸರ್ವಯತ್ನೈರತೋಷಯಮ್ |

ಸ ಮೇ ಹ್ಯಾಚಾರಸಂಯುಕ್ತಮಾಚಷ್ಟ ಭಗವಾನ್ ಋಷಿಃ |
ಮಂತ್ರಗ್ರಾಮಂ ಚ ಮೇ ಪ್ರಾದಾದಬ್ರುವೀಚ್ಚೈವ ಮಾಮಿದಮ್ ॥61॥
ಕೋಪನಶೀಲರಾದ ಶ್ರೇಷ್ಠವಾದ ಮನಸ್ಸುಳ್ಳ ಅವರನ್ನು ನಾನು ಪ್ರಯತ್ನಪಟ್ಟು ಸಂತೋಷಪಡಿಸಿದೆನು. ಆ ಪೂಜ್ಯರಾದ ಋಷಿಗಳು ನಿಯಮಯುಕ್ತವಾದ ಮಂತ್ರ ಸಮೂಹವನ್ನು ನನಗೆ ಉಪದೇಶ ಮಾಡಿ ನನ್ನನ್ನು ಕುರಿತು ಹೀಗೆ ಹೇಳಿದರು.
ಯಂಯಂ ದೇವಂ ತ್ವಮೇತೇನ ಮಂತ್ರೇಣಾವಾಹಯಿಷ್ಯಸಿ |
ಅಕಾಮೋ ವಾ ಸಕಾಮೋ ವಾ ಸ ಭವಿಷ್ಯತಿ ತೇ ವಶಮ್ |
ಇತ್ಯುಕ್ತಾಽಹಂ ತದಾ ತೇನ ಪಿತೃವೇಶ್ಮನಿ ಭಾರತ ॥62॥
ನೀನು ಈ ಮಂತ್ರದಿಂದ ಯಾವ ಯಾವ ದೇವತೆಯನ್ನು ಆಹ್ವಾನ ಮಾಡುವೆಯೋ, ಆ ದೇವತೆಯು ಅವನಿಗೆ ಇಚ್ಛೆ ಇರಲಿ ಇಲ್ಲದಿರಲಿ ಬಂದು ನಿನ್ನ ವಶನಾಗುವನು. ಎಲೈ ಭಾರತನೇ, ತಂದೆಯ ಮನೆಯಲ್ಲಿದ್ದಾಗ ಆ ಋಷಿಗಳು ನನಗೆ ಹೀಗೆ ಹೇಳಿದ್ದರು.
ಬ್ರಾಹ್ಮಣಸ್ಯ ವಚಸ್ತಥ್ಯಂ ತಸ್ಯ ಕಾಲೋಽಯಮಾಗತಃ |
ಅನುಜ್ಞಾತಾ ತ್ವಯಾ ದೇವಮಾಹ್ವಯೇಯಂ ಪರಂತಪ ॥63॥
ಎಲೈ ಪರಂತಪನೇ, ಆ ಬ್ರಾಹ್ಮಣರ ಮಾತು ಸತ್ಯವಾದುದು. ಅದರ ಪ್ರಯೋಜನವನ್ನು ಪಡೆಯುವ ಕಾಲ ಈಗ ಬಂದಿದೆ. ನಿನ್ನ ಅನುಮತಿಯನ್ನು ಪಡೆದು ನಾನು ದೇವತೆಯನ್ನು ಆಹ್ವಾನ ಮಾಡುತ್ತೇನೆ.
ಯಾಂ ಮೇ ವಿದ್ಯಾಂ ಮಹಾರಾಜ ಅದದಾತ್ ಸ ಮಹಾಯಶಾಃ |
ಪರಾವರಜ್ಞೋ ಮೇಧಾವೀ ಕೃಪಯಾಽಭಿಪರಿಪ್ಲುತಃ ॥64॥
ತಯಾಽಽಹೂತಃ ಸುರಃ ಪುತ್ರಂ ಪ್ರದಾಸ್ಯತಿ ಸುರೋಪಮಮ್ |
ಅನಪತ್ಯಕೃತಂ ಯಸ್ತೇ ಶೋಕಂ ಹಿ ವ್ಯಪನೇಷ್ಯತಿ ॥65॥
ಮಹಾರಾಜನೇ, ಮಹಾ ಕೀರ್ತಿವಂತನೂ, ಪರಾವರ ತತ್ವಜ್ಞಾನಿಯೂ, ಮೇಧಾವಿಯೂ ಆದ ಆ ಋಷಿಯು ನನ್ನ ಮೇಲಿನ ದಯೆಯಿಂದ ಆರ್ದ್ರರಾಗಿ ನನಗೆ ಯಾವ ವಿದ್ಯೆಯನ್ನು ಕೊಟ್ಟರೋ ಆ ವಿದ್ಯೆಯಿಂದ ದೇವತೆಯನ್ನು ಆಹ್ವಾನಿಸುತ್ತೇನೆ. ಆಹ್ವಾನಿಸಲ್ಪಟ್ಟ ದೇವತೆಯು ದೇವತಾಸದೃಶನಾದ ಪುತ್ರನನ್ನು ಕೊಡುವನು. ಅದರಿಂದ ಪುತ್ರನಿಲ್ಲದ ಪ್ರಯುಕ್ತ ನಿನಗೆ ಉಂಟಾಗಿರುವ ಶೋಕವನ್ನು ನಿವಾರಿಸುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರ್ದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಹದಿನಾಲ್ಕನೆಯ
ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ- ಅಧ್ಯಾಯ-12
ಇತೀರಿತೋಽಬ್ರುವೀನ್ನೃಪೋ ನ ಧರ್ಮತೋ ವಿನಾ ಭುವಃ |
ನೃಪೋಽಭಿರಕ್ಷಿತಾ ಭವೇತ್ ತದಾಹ್ವಯಾಶು ತಂ ವಿಭುಮ್ ॥31॥
ಕುಂತಿ ಹೀಗೆ ಹೇಳಿದಾಗ ಪಾಂಡು ನುಡಿದ. `ಧರ್ಮವಿಲ್ಲದೆ ರಾಜ ಭೂಮಿಗೆ ರಕ್ಷಕನಾಗಲಾರ. ಅದರಿಂದ ಬೇಗನೆ ಪ್ರಭುವಾದ ಯಮಧರ್ಮರಾಜನನ್ನು ಕರೆ'.
ಸ ಧರ್ಮಜಃ ಸುಧಾರ್ಮಿಕೋ ಭವೇದ್ಧಿ ಸೂನುರುತ್ತಮಃ |
ಇತೀರಿತೇ ತಯಾ ಯಮಃ ಸಮಾಹುತೋಽಗಮದ್ ದ್ರುತಮ್ ॥
`ಯಮಧರ್ಮರಾಜನಿಂದ ಹುಟ್ಟುವ ಮಗ ಒಳ್ಳೆಯ ಧಾರ್ಮಿಕನಾಗುತ್ತಾನೆ' ಹೀಗೆ ಪಾಂಡು ಹೇಳಿದಾಗ ಕುಂತಿ ಯಮನನ್ನು ಮಂತ್ರಪೂರ್ವಕವಾಗಿ ಕರೆದಳು. ಅವನು ಬೇಗನೆ ಬಂದ.
ತತಶ್ಚ ಸದ್ಯ ಏವ ಸಾ ಸುಷಾವ ಪುತ್ರಮುತ್ತಮಮ್ |
ಯುಧಿಷ್ಠಿರಂ ಯಮೋ ಹಿ ಸ ಪ್ರಪೇದ ಆತ್ಮಪುತ್ರತಾಮ್ ॥33॥
ಆಗ ತತ್‌ಕ್ಷಣವೆ ಕುಂತಿ ಯುಧಿಷ್ಠಿರನೆಂಬ ಉತ್ತಮ ಪುತ್ರನನ್ನು ಹಡೆದಳು. ಯಮ ಹೀಗೆ ತನಗೆ ತಾನೇ ಪುತ್ರನಾಗಿ ಜನಿಸಿದ.
ಯಮೇ ಸುತೇ ತು ಕುಂತಿತಃ ಪ್ರಜಾತ ಏವ ಸೌಬಲೀ |
ಅದಹ್ಯತೇರ್ಷ್ಯಯಾ ಚಿರಂ ಬಭಂಜ ಗರ್ಭಮೇವ ಚ ॥34॥
ಕುಂತಿಯಲ್ಲಿ ಯಮ ಮಗನಾಗಿ ಹುಟ್ಟಿದಾಗಲೆ ಗಾಂಧಾರಿ ಅಸೂಯೆಯಿಂದ ಉರಿದಳು. ಕೂಡಲೆ ತನ್ನ ಗರ್ಭವನ್ನು ಹಿಚುಕಿಕೊಂಡಳು.
ಸ್ವಗರ್ಭಪಾತನೇ ಕೃತೇ ತಯಾಜಗಾಮ ಕೇಶವಃ |
ಪರಾಶರಾತ್ಮಜೋ ನ್ಯಧಾದ್ ಘಟೇಷು ತಾನ್ ವಿಭಾಗಶಃ ॥35॥
ಗಾಂಧಾರಿ ಗರ್ಭಪಾತ ಮಾಡಿಕೊಂಡಾಗ ವೇದವ್ಯಾಸರು ಬಂದರು. ಗರ್ಭದ ತುಣುಕುಗಳನ್ನು ಬೇರೆ ಬೇರೆಯಾಗಿ ಗಡಿಗೆಗಳಲ್ಲಿ ಇರಿಸಿದರು.
ಶತಾತ್ಮನಾ ವಿಭೇದಿತಾಃ ಶತಂ ಸುಯೋಧನಾದಯಃ |
ಬಭೂವುರನ್ವಹಂ ತತಃ ಶತೋತ್ತರಾ ಚ ದುಃಶಳಾ ॥36॥
ನೂರಾಗಿ ಭಾಗಗೊಂಡು ಸುಯೋಧನ ಮುಂತಾದವರು ನೂರು ಮಂದಿ ದಿನಕ್ಕೊಬ್ಬರಂತೆ ಹುಟ್ಟಿದರು. ನೂರಕ್ಕಿಂತ ಮೇಲಿನವಳು

ದುಃಶಲೆ.
ಸ ದೇವಕಾರ್ಯಸಿದ್ಧಯೇ ರರಕ್ಷ ಗರ್ಭಮೀಶ್ವರಃ |
ಪರಾಶರಾತ್ಮಜಃ ಪ್ರಭುರ್ವಿಚಿತ್ರವೀರ್ಯಜೋದ್ಭವಮ್ ॥37॥
ಸರ್ವಶಕ್ತ ಪ್ರಭು ವೇದವ್ಯಾಸರು ದೇವಕಾರ್ಯಸಿದ್ಧಿಗಾಗಿ ಧೃತರಾಷ್ಟ್ರನಿಂದ ಜನಿಸಿದ ಗರ್ಭವನ್ನು ರಕ್ಷಿಸಿದರು.
ಕಲಿಃ ಸುಯೋಧನೋऽಜನಿ ಪ್ರಭೂತ ಬಾಹುವೀರ್ಯಯುಕ್ |
ಪ್ರಧಾನವಾಯುಸನ್ನಿಧೇರ್ಬಲಾಧಿಕತ್ವಮಸ್ಯತತ್ ॥38॥
ಕಲಿ ಸುಯೋಧನನಾಗಿ ಮಹಾ ಬಾಹು ಬಲಯುಕ್ತನಾಗಿ ಜನಿಸಿದ. ಪ್ರಧಾನ ವಾಯುವಿನ ಸನ್ನಿಧಾನದಿಂದ ಅವನಲ್ಲಿ ಅಧಿಕ ಬಲಬಂದಿತ್ತು.
ಪುರಾ ಹಿ ಮೇರುಮೂರ್ಧನಿ ತ್ರಿವಿಷ್ಟಪೌಕಸಾಂ ವಚಃ |
ವಸುಂಧರಾತಳೋದ್ಭವೋನ್ಮುಖಂ ಶ್ರುತಂ ದಿತೇಃ ಸುತೈಃ ॥39॥
ಹಿಂದೆ ಮೇರುಪರ್ವತದ ಶಿಖರದಲ್ಲಿ ದೇವತೆಗಳು ಭೂತಲದಲ್ಲಿ ಅವತರಿಸುವ ಬಗ್ಗೆ ಮಾತನಾಡಿಕೊಂಡುದ್ದನ್ನು ದೈತ್ಯರು ಕೇಳಿದ್ದರು.
ತತಸ್ತು ತೇ ತ್ರಿಲೋಚನಂ ತಪೋ ಬಲಾದತೋಷಯನ್ |
ವೃತಶ್ಚ ದೇವಕಂಟಕೋ ಹ್ಯವಧ್ಯ ಏವ ಸರ್ವತಃ ॥40॥
ಬಳಿಕ ಅವರು ತಪೋಬಲದಿಂದ ಶಿವನನ್ನು ಸಂತೋಷಗೊಳಿಸಿದರು. ದೇವತೆಗಳ ಕಂಟಕ ಪ್ರಾಯನಾದ ಕಲಿ ಸರ್ವರಿಂದಲೂ ಅವಧ್ಯನಾಗಬೇಕೆಂದು ವರ ಪಡೆದರು.
ವರಾದುಮಾಪತೇಸ್ತತಃ ಕಲಿಃ ಸ ದೇವಕಂಟಕಃ |
ಬಭೂವ ವಜ್ರಕಾಯಯುಕ್ ಸುಯೋಧನೋ ಮಹಾಬಲಃ ॥41॥
ಶಿವ ವರದಿಂದ ದೇವಕಂಟಕನಾದ ಆ ಕಲಿ ವಜ್ರಕಾಯ ಉಳ್ಳ ಮಹಾಬಲಿಷ್ಠನಾಗಿ ದುರ್ಯೋಧನನಾಗಿ ಜನಿಸಿದ.
ಅವಧ್ಯ ಏವ ಸರ್ವತಃ ಸುಯೋಧನೇ ಸಮುತ್ಥಿತೇ |
ಘೃತಾಭಿಪೂರ್ಣಕುಂಭತಃ ಸ ಇಂದ್ರಜಿತ್ ಸಮುತ್ಥಿತಃ ॥42॥
ತುಪ್ಪದಿಂದ ತುಂಬಿದ ಗಡಿಗೆಯಿಂದ ಸರ್ವರಿಗೂ ಅವಧ್ಯನಾದ ಸುಯೋಧನ ಹುಟ್ಟಿಬರಲು ಅದೇ ರೀತಿಯಲ್ಲಿ ತುಪ್ಪದಿಂದ ತುಂಬಿದ ಇನ್ನೊಂದು ಗಡಿಗೆಯಿಂದ ಇಂದ್ರಜಿತ್ ಹುಟ್ಟಿದ.
ಸ ದುಃಖಶಾಸನೋऽಭವತ್ ತತೋऽತಿಕಾಯಸಂಭವಃ |
ಸ ವೈ ವಿಕರ್ಣ ಉಚ್ಯತೇ ತತಃ ಖರೋऽಭವದ್ ಬಲೀ ॥43॥
ಇಂದ್ರಜಿತ್ ದುಃಶಾಸನನಾಗಿ ಹುಟ್ಟಿದ. ಬಳಿಕ ಅತಿಕಾಯನ ಉತ್ಪತ್ತಿ. ಅವನು ವಿಕರ್ಣನೆನಿಸುತ್ತಾನೆ. ಬಳಿಕ ಬಲಿಷ್ಠನಾದ ಖರ ಹುಟ್ಟಿದ.
ಸ ಚಿತ್ರಸೇನನಾಮಕಃ ತಥಾಪರೇ ಚ ರಾಕ್ಷಸಾಃ |
ಬಭೂವುರುಗ್ರಪೌರುಷಾ ವಿಚಿತ್ರ ವೀರ್ಯಜಾತ್ಮಜಾಃ ॥44॥
ಖರ ಚಿತ್ರಸೇನ ನಾಮಕನಾದ. ಹಾಗೇ ಬೇರೆ ರಾಕ್ಷಸರೂ ಭಯಂಕರ ಪೌರುಷ ಉಳ್ಳ ಧೃತರಾಷ್ಟ್ರ ಪುತ್ರರಾಗಿ ಜನಿಸಿದರು.
ಸಮಸ್ತದೋಷರೂಪಿಣಃ ಶರೀರಿಣೋ ಹಿ ತೇऽಭವನ್ |
ಮೃಷೇತಿ ನಾಮತೋ ಹಿ ಯಾ ಬಭೂವ ದುಃಶಳಾಸುರೀ ॥45॥
ಕುಹೂಪ್ರವೇಶಸಂಯುತಾ ಯಯಾರ್ಜುನೇರ್ವಧಾಯ ಹಿ |
ತಪಃ ಕೃತಂ ತ್ರಿಶೂಲಿನೇ ತತೋ ಹಿ ಸಾತ್ರ ಜಜ್ಞುಷೀ ॥46॥
ಹೀಗೆ ಗಡಿಗೆಯಲ್ಲಿ ಶರೀರಧಾರಿಗಳಾಗಿ ಜನಿಸಿದವರೆಲ್ಲ ಸಕಲ ದೋಷ ರೂಪರಾದ ರಾಕ್ಷಸರು. ಮೃಷಾ ಎಂಬ ಹೆಸರಿನ ಅಸುರ ಸ್ತ್ರೀ ಕುಹೂದೇವಿಯ ಆವೇಶದಿಂದ ಯುಕ್ತಳಾಗಿ ದುಃಶಲೆಯಾಗಿ ಹುಟ್ಟಿದಳು. ಅಭಿಮನ್ಯುವಿನ ವಧೆಗಾಗಿ ಶಿವನನ್ನು ಒಲಿಸಲು ಅವಳು ತಪಸ್ಸು ಮಾಡಿದ್ದಳು. ಅದರಿಂದ ಅವಳು ಇಲ್ಲಿ ಜನಿಸಿದಳು.
ತಯೋದಿತೋ ಹಿ ಸೈಂಧವೋ ಬಭೂವ ಕಾರಣಂ ವಧೇ |
ಸ ಕಾಲಕೇಯದಾನವಸ್ತದರ್ಥಮಾಸ ಭೂತಳೇ ॥47॥
ದುಃಶಲೆ ಹೇಳಿದ್ದರಿಂದ ಸೈಂಧವ ಅಭಿಮನ್ಯುವಿನ ವಧೆ ಮಾಡಿಸಿದ. ಸೈಂಧವ ಒಬ್ಬ ಕಾಲಿಕೇಯ ದಾನವ. ಅವನು ಅಭಿಮನ್ಯು ವಧೆಗಾಗಿಯೆ ಭೂಮಿಯಲ್ಲಿ ಹುಟ್ಟಿದ.
ತಥಾ ಸ ನಿರ್ಋಥಾಭಿಧೋऽನುಜಃ ಸ ನಿರ್ಋತೇರಭೂತ್ |
ಸ ನಾಸಿಕಾಮರುದ್ಯುತೋ ಯಯುತ್ಸುನಾಮಕಃ ಕೃತೀ ॥48॥
ನಿರ್ಋತಿಯ ತಮ್ಮ ನಿರ್ಋತ ಎಂಬುವನು. ಜ್ಞಾನಿ, ನಾಸಿಕ್ಯಪ್ರಾಣ ಯುಕ್ತನಾಗಿ ಯುಯುತ್ಸು ನಾಮಕನಾಗಿ ಜನಿಸಿದ.
ಸ ಚಾಂಬಿಕೇಯವೀರ್ಯಜಃ ಸುಯೋಧನಾದನಂತರಃ |
ಬಭೂವ ವೈಶ್ಯಕನ್ಯಕೋದರೋದ್ಭವೋ ಹರಿಪ್ರಿಯಃ ॥49॥
ಯುಯುತ್ಸು ವೈಶ್ಯಕನ್ಯೆಯಲ್ಲಿ ಧೃತರಾಷ್ಟ್ರನ ವೀರ್ಯದಿಂದ ಜನಿಸಿದವ. ದುರ್ಯೋಧನನ ತಮ್ಮ. ಹರಿಪ್ರಿಯನಾಗಿದ್ದ.
ಯುಧಿಷ್ಠಿರೇ ಜಾತ ಉವಾಚ ಪಾಂಡು-
ರ್ಬಾಹ್ವೋರ್ಬಲಾಜ್ಞಾನಬಲಾಚ್ಚ ಧರ್ಮಃ |
ರಕ್ಷ್ಯೋऽನ್ಯಥಾ ನಾಶಮುಪೈತಿ ತಸ್ಮಾತ್
ಬಲದ್ವಯಾಢ್ಯಂ ಪ್ರಸುವಾಶು ಪುತ್ರಮ್ ॥50॥

ಯುಧಿಷ್ಠಿರ ಹುಟ್ಟಿದಾಗ ಪಾಂಡು ಕುಂತಿಗೆ ಹೇಳಿದ, `ಧರ್ಮವನ್ನು ಬಾಹುಬಲದಿಂದಲೂ ಜ್ಞಾನಬಲದಿಂದಲೂ ರಕ್ಷಿಸಬೇಕು. ಇಲ್ಲದಿದ್ದರೆ ಅದು ನಾಶಹೊಂದುತ್ತದೆ. ಅದರಿಂದ ಎರಡೂ ಬಲದಿಂದ ಆಢ್ಯನಾದ ಮಗನಿಗೆ ಜನ್ಮನೀಡು'.

ಯಜ್ಞಾಧಿಕೋ ಹ್ಯಶ್ವಮೇಧೋ ಮನುಷ್ಯ
ದೃಶ್ಯೇಷು ತೇಜಸ್ಸ್ವಧಿಕೋ ಹಿ ಭಾಸ್ಕರಃ |
ವರ್ಣೇಷು ವಿಪ್ರಃ ಸಕಲೈರ್ಗುಣೈರ್ವರೋ
ದೇವೇಷು ವಾಯುಃ ಪುರುಷೋತ್ತಮಾದೃತೇ ॥51॥

`ಯಜ್ಞಗಳಲ್ಲಿ ಶ್ರೇಷ್ಠ ಅಶ್ವಮೇಧ. ಮನುಷ್ಯರು ಕಾಣಬಲ್ಲ ತೇಜಸ್ಸುಗಳಲ್ಲಿ ಶ್ರೇಷ್ಠ ಸೂರ್ಯ. ನಾಲ್ಕು ವರ್ಣಗಳಲ್ಲಿ ಶ್ರೇಷ್ಠ ಬ್ರಾಹ್ಮಣ. ದೇವತೆಗಳಲ್ಲಿ ಎಲ್ಲ ಗುಣಗಳಲ್ಲಿಯೂ ಶ್ರೇಷ್ಠ. ಪುರುಷೋತ್ತಮನಾದ ಶ್ರೀಹರಿಯನ್ನು ಬಿಟ್ಟರೆ, ವಾಯುವೆ'.

ವಿಶೇಷತೋಽಪ್ಯೇಷ ಪಿತೈವ ಮೇ ಪ್ರಭು
ರ್ವ್ಯಾಸಾತ್ಮನಾ ವಿಷ್ಣುರನಂತ ಪುರುಷಃ |
ಅತಶ್ಚ ತೇ ಶ್ವಶುರೋ ನೈವ ಯೋಗ್ಯೋ
ದಾತುಂ ಪುತ್ರಂ ವಾಯುಮುಪೈಹಿ ತತ್ ಪ್ರಭುಮ್ ॥52॥

`ಅನಂತಶಕ್ತಿ ಉಳ್ಳ ಪ್ರಭುವಾದ ವಿಷ್ಣು ವ್ಯಾಸರೂಪದಿಂದ ನನಗೆ ವಿಶೇಷವಾಗಿ ತಂದೆ. ಅದರಿಂದ ನಿನಗೆ ಮಾವ. ನಿನಗೆ ಪುತ್ರನನ್ನು ನೀಡಲು ತಕ್ಕವನಲ್ಲ. ಅದರಿಂದ ಪ್ರಭುವಾದ ವಾಯುವನ್ನೇ ಆಶ್ರಯಿಸು.

ಇತೀರಿತೇ ಪೃಥಯಾಹೂತವಾಯು
ಸಂಸ್ಪರ್ಶಮಾತ್ರಾದಭವದ್ ಬಲದ್ವಯೇ |
ಸಮೋ ಜಗತ್ಯಸ್ತಿ ನ ಯಸ್ಯ ಕಶ್ಚಿತ್
ಭಕ್ತೌ ಚ ವಿಷ್ಣೋರ್ಭಗವದ್ವಶಃ ಸುತಃ ॥53॥

ಪಾಂಡು ಹೀಗೆ ಹೇಳಲು ಕುಂತಿ ವಾಯುವನ್ನು ಮಂತ್ರಪೂರ್ವಕವಾಗಿ ಕರೆದಳು. ಅವನ ಸ್ಪರ್ಶಮಾತ್ರದಿಂದ ಬಾಹುಬಲ ಜ್ಞಾನಬಲಗಳೆಂಬ ಎರಡು ಬಲಗಳಲ್ಲಿಯೂ ವಿಷ್ಣುಭಕ್ತರಲ್ಲಿಯೂ ಯಾರಿಗೆ ಸಮನಾದವನು ಜಗತ್ತಿನಲ್ಲಿ ಯಾರೂ ಇಲ್ಲವೊ ಯಾರು ಭಗವಂತನಿಗೆ ಮಾತ್ರ ಅಧೀನನೋ ಅಂಥ ಒಬ್ಬ ಮಗ ಹುಟ್ಟಿದ.

ಸ ವಾಯುರೇವಾಭವದತ್ರ ಭೀಮ
ನಾಮಾ ಭೃತಾ ಮಾಃ ಸಕಲಾ ಹಿ ಯಸ್ಮಿನ್ |
ಸ ವಿಷ್ಣುನೇಶೇನ ಯುತಃ ಸದೈವ
ನಾಮ್ನಾ ಸೇನೋ ಭೀಮಸೇನಸ್ತತೋಽಸೌ ॥54॥

ಆ ವಾಯುವೆ ಭೂಮಿಯಲ್ಲಿ ಹುಟ್ಟಿ ಭೀಮನೆಂದು ಹೆಸರು ಪಡೆದ. ಏಕೆಂದರೆ ಅವನಲ್ಲಿ ಎಲ್ಲ ವಿದ್ಯೆಗಳೂ ಪೂರ್ಣವಾಗಿ ಇವೆ. ಒಡೆಯನಾದ ವಿಷ್ಣುವಿನಿಂದ ಸದಾ ಯುಕ್ತನಾಗಿಯೇ ಇರುವುದರಿಂದ ಸೇನ ಎಂದೂ ಅವನಿಗೆ ಹೆಸರು. ಅದರಿಂದ ಭೀಮಸೇನನೆನಿಸಿದ.

ತಜ್ಜನ್ಮಮಾತ್ರೇಣ ಧರಾ ವಿದಾರಿತಾ
ಶಾರ್ದೂಲಭೀತಾಜ್ಜನನೀಕರಾದ್ ಯದಾ |
ಪಪಾತ ಸಂಚೂರ್ಣಿತ ಏವ ಪರ್ವತ
ಸ್ತೇನಾಖಿಲೋಽಸೌ ಶತಶೃಂಗನಾಮಾ ॥55॥

ಭೀಮಸೇನ ಹುಟ್ಟಿದ ಮಾತ್ರಕ್ಕೆ ಭೂಮಿ ಬಿರಿಯಿತು. ಹುಲಿಯನ್ನು ಕಂಡು ನಡುಗಿದ ಕುಂತಿಯ ಕೈಯಿಂದ ಭೀಮ ಬಿದ್ದಾಗ ಶತಶೃಂಗ ಎಂಬ ಹೆಸರಿನ ಆ ಪರ್ವತವಿಡೀ ಪುಡಿಯಾಯಿತು.

ತಸ್ಮಿನ್ ಪ್ರಜಾತೇ ರುಧಿರಂ ಪ್ರಸುಸ್ರುವು
ರ್ಮಹಾಸುರಾ ವಾಹನಸೈನ್ಯಸಂಯುತಾಃ |
ನೃಪಾಶ್ಚ ತತ್ಪಕ್ಷಭವಾಃ ಸಮಸ್ತಾ
ಸ್ತದಾ ಭೀತಾ ಆಸುರಾ ರಾಕ್ಷಸಾಶ್ಚ ॥56॥

ಭೀಮಸೇನ ಹುಟ್ಟಿದಾಗ ಮೂಲರೂಪದಲ್ಲಿರುವ ಮಹಾಅಸುರರೂ ಅವರ ಪಕ್ಷದಲ್ಲಿ ಜನಿಸಿದ ವಾಹನ ಸೈನ್ಯಯುಕ್ತರಾದ ಅಸುರ ಸ್ವಭಾವದ ರಾಜರೂ ರಾಕ್ಷಸರೂ ಎಲ್ಲರೂ ಭೀತರಾದರು, ರಕ್ತ ಸುರಿಸಿದರು.

* * * *

## ನೂರ ಹದಿನೈದನೆಯ ಅಧ್ಯಾಯ

(ಪಾಂಡುವಿನ ಹರ್ಷ, ಯಮ ವಾಯುಗಳಿಂದ ಕುಂತಿಯಲ್ಲಿ ಯುಧಿಷ್ಠಿರ ಭೀಮಸೇನರ ಉತ್ಪತ್ತಿ. ಅಶರೀರವಾಣಿ.)

ಕುಂತೀ

ಅಪತ್ಯಕಾಮ ಏವಂ ಸ್ಯಾನ್ಮಮಾಪತ್ಯಂ ಭವೇದಿತಿ |
ವಿಪ್ರಂ ವಾ ಗುಣಸಂಪನ್ನಂ ಸರ್ವಭೂತಹಿತೇ ರತಮ್ |
ಅನುಜಾನೀಹಿ ಭದ್ರಂ ತೇ ದೈವತಂ ಹಿ ಪತಿಃ ಸ್ತ್ರಿಯಾಃ ॥1॥

ಅಪತ್ಯಕಾಮನಾದ ರಾಜನೇ, ನಾನು ಈ ರೀತಿ ಪುತ್ರರನ್ನು ಪಡೆಯುತ್ತೇನೆ. ನಿನಗೆ ಮಂಗಳವಾಗಲಿ. ದೇವತೆಯನ್ನಾಗಲೀ ಅಥವಾ ಸರ್ವಭೂತಹಿತದಲ್ಲಿರತನಾದ ಗುಣಸಂಪನ್ನನಾದ ಬ್ರಾಹ್ಮಣನನ್ನಾಗಲೀ ಹೊಂದಲು ಅನುಜ್ಞೆಯನ್ನು ಕೊಡು. ಪತಿಯೇ ಸ್ತ್ರೀಯರಿಗೆ ದೇವತೆ.

ಯಂ ತ್ವಂ ವಕ್ಷ್ಯಸಿ ಧರ್ಮಜ್ಞ ದೇವಂ ಬ್ರಾಹ್ಮಣಮೇವ ವಾ |
ಯಥೋದ್ದಿಷ್ಟಂ ತ್ವಯಾ ವೀರ ತತ್ ಕರ್ತಾಸ್ಮಿ ಮಹಾಭುಜ |
ದೇವಾತ್ ಪುತ್ರಫಲಂ ಸದ್ಯೋ ವಿಪ್ರಾತ್ ಕಾಲಾಂತರೇ ಭವೇತ್ ॥2॥
ಎಲೈ ಧರ್ಮಜ್ಞನೇ, ನೀನು ಯಾವ ದೇವನನ್ನು ಅಥವಾ ಬ್ರಾಹ್ಮಣನನ್ನು ಸೂಚಿಸುವೆಯೋ ನಾನು ಅದರಂತೆಯೇ ನಡೆದುಕೊಳ್ಳುವೆನು. ಮಹಾಭುಜನಾದ ವೀರನೇ ದೇವತೆಯಿಂದ ತಕ್ಷಣದಲ್ಲಿಯೇ ಪುತ್ರಫಲವು ದೊರೆಯುವುದು. ಬ್ರಾಹ್ಮಣನಿಂದಾದರೆ ಕಾಲಾಂತರದಲ್ಲಿ ವಿಳಂಬವಾಗಿ ದೊರೆಯುವುದು.
ಆವಾಹಯಾಮಿ ಕಂ ದೇವಂ ಕದಾ ವಾ ಭರತರ್ಷಭ |
ತತ್ ತ್ವದಾಜ್ಞಾಂ ಪ್ರತೀಕ್ಷಂತೀಂ ವಿದ್ಧ್ಯಸ್ಮಿನ್ ಕರ್ಮಣೀಪ್ಸಿತೇ ॥3॥
ಭರತರ್ಷಭನೇ, ನಿನಗೆ ಇಷ್ಟವಾದ ಈ ಕಾರ್ಯದಲ್ಲಿ ನಿನಗೆ ಇಷ್ಟವಾದ ಯಾವ ದೇವನನ್ನು ಆಹ್ವಾನಿಸಲಿ ಎಂಬ ವಿಷಯದಲ್ಲಿ ನಿನ್ನ ಆಜ್ಞೆಯನ್ನು ನಿರೀಕ್ಷಿಸುತ್ತಿರುವವಳನ್ನಾಗಿ ನನ್ನನ್ನು ತಿಳಿ.
ಪಾಂಡುಃ
ಧನ್ಯೋಽಸ್ಮ್ಯನುಗೃಹಿತೋಽಸ್ಮಿ ತ್ವಂ ನೋ ಧಾತ್ರೀ ಕುಲಸ್ಯ ಹಿ |
ನಮೋ ಮಹರ್ಷಯೇ ತಸ್ಮೈ ಯೇನ ದತ್ತೋ ವರಸ್ತವ ॥4॥
ನಾನು ಧನ್ಯನಾಗಿದ್ದೇನೆ. ಅನುಗೃಹೀತನೂ ಆಗಿದ್ದೇನೆ. ನೀನೇ ನಮ್ಮ ಕುಲದ ಸಾಕುತಾಯಿ. ನಿನಗೆ ವರವನ್ನು ನೀಡಿದ ಆ ಮಹರ್ಷಿಗಳಿಗೆ ನಮಸ್ಕಾರ.
ನ ಚಾಧರ್ಮೇಣ ಧರ್ಮಜ್ಞೇ ಶಕ್ಯಾಃ ಪಾಲಯಿತುಂ ಪ್ರಜಾಃ |
ತಸ್ಮಾತ್ ತ್ವಂ ಪುತ್ರಲಾಭಾಯ ಸಂತಾನಾಯ ಮಮೈವ ಚ |
ಪ್ರವರಂ ಸರ್ವದೇವಾನಾಂ ಧರ್ಮಮಾವಾಹಯಾಬಲೇ ॥5॥
ಧರ್ಮಜ್ಞೆಯೇ, ಅಧರ್ಮದಿಂದ ಪ್ರಜೆಗಳನ್ನು ರಕ್ಷಿಸುವುದು ಸಾಧ್ಯವಿಲ್ಲ. ಅಬಲೆಯೇ, ಆದ್ದರಿಂದ ನೀನು ನಮ್ಮ ಕುಲದ ಸಂತಾನವಾದ ಪುತ್ರನನ್ನು ಪಡೆಯಲು ಸರ್ವದೇವತೆಗಳಲ್ಲಿ ಶ್ರೇಷ್ಠನಾದ ಯಮಧರ್ಮನನ್ನು ಆಹ್ವಾನಿಸು.
ವೈಶಂಪಾಯನಃ
ಪಾಂಡುನಾ ಸಮನುಜ್ಞಾತಾ ಭಾರತೇನ ಯಶಸ್ವಿನಾ |
ಮತಿಂ ಚಕ್ರೇ ಮಹಾರಾಜ ಧರ್ಮಸ್ಯಾವಾಹನೇ ತದಾ ॥6॥
ಮಹಾರಾಜನೇ, ಕೀರ್ತಿವಂತನಾದ ಭರತಶ್ರೇಷ್ಠನಾದ ಪಾಂಡುವಿನಿಂದ ಹೀಗೆ ಆದೇಶವನ್ನು ಸ್ವೀಕರಿಸಿದ ಕುಂತಿಯು ಧರ್ಮನನ್ನು ಆಹ್ವಾನ ಮಾಡಲು ನಿರ್ಧರಿಸಿದಳು.
ಪಾಂಡುಃ
ಅದ್ಯೈವ ತ್ವಂ ವರಾರೋಹೇ ಪ್ರಯತಸ್ವ ಯಥಾವಿಧಿ |
ಧರ್ಮಮಾವಾಹಯ ಶುಭೇ ಸ ಹಿ ದೇವೇಷು ಧರ್ಮಭಾಕ್ ॥7॥
ಸುಂದರಿಯೇ, ಈ ದಿನವೇ ನೀನು ವಿಧಿವತ್ತಾಗಿ ಪ್ರಯತ್ನವನ್ನು ಮಾಡು. ಶುಭಳಾದವಳೇ ಧರ್ಮನನ್ನು ಆಹ್ವಾನಿಸು. ದೇವತೆಗಳಲ್ಲಿ ಅವನು ಧರ್ಮಯುಕ್ತನಾದವನು.
ಅಧರ್ಮೇಣ ನ ಧರ್ಮೋ ವೈ ಸಂಯುಜ್ಯೇತ ಕದಾಚನ |
ಲೋಕಶ್ಚಾಪಿ ವರಾರೋಹೇ ಧರ್ಮೋಽಯಮಿತಿ ಮನ್ಯತೇ ॥8॥
ಧರ್ಮನು ಎಂದೂ ಅಧರ್ಮದಿಂದ ಸಂಯುಕ್ತನಾಗುವುದಿಲ್ಲ. ಸುಂದರಿಯೇ, ಅವನು ಮಾಡಿದ ಎಲ್ಲಾ ಕಾರ್ಯಗಳನ್ನೂ ಲೋಕವು ಧರ್ಮವೆಂದೇ ಸ್ವೀಕರಿಸುತ್ತದೆ.
ಧಾರ್ಮಿಕಶ್ಚ ಕುರೂಣಾಂ ಸ ಭವಿಷ್ಯತಿ ನ ಸಂಶಯಃ |
ದತ್ತಸ್ಯ ತಸ್ಯ ಧರ್ಮೇಣ ನಾಧರ್ಮೇ ರಮತೇ ಮನಃ॥9॥
ಕುರುವಂಶದಲ್ಲಿ ಒಬ್ಬ ಧಾರ್ಮಿಕನು ಜನಿಸುತ್ತಾನೆ. ಯಮಧರ್ಮನು ಕೊಟ್ಟ ಆ ಪುತ್ರನಿಗೆ ಎಂದೂ ಅಧರ್ಮದಲ್ಲಿ ಮನಸ್ಸು ರಮಿಸುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.
ಧರ್ಮಾದಿಕಂ ಹಿ ಧರ್ಮಜ್ಞೇ ಧರ್ಮಾಂತಂ ಧರ್ಮಮಧ್ಯಮಮ್ |
ಅಪತ್ಯಮಿಷ್ಟಂ ಲೋಕೇಷು ಯಶಃಕೀರ್ತಿವಿವರ್ಧನಮ್ ॥10॥
ಧರ್ಮಜ್ಞೆಯೇ, ಪ್ರಾರಂಭದಲ್ಲಿಯೂ, ಮಧ್ಯದಲ್ಲಿಯೂ ಮತ್ತು ಕೊನೆಯಲ್ಲಿಯೂ ಧರ್ಮವನ್ನು ಆಚರಿಸುವ ಪುತ್ರನು ಲೋಕದಲ್ಲಿ ಬಯಸಲ್ಪಡುತ್ತಾನೆ. ಅವನಿಂದ ಯಶಸ್ಸೂ, ಕೀರ್ತಿಯೂ ಅಭಿವೃದ್ಧಿಯನ್ನು ಹೊಂದುತ್ತವೆ.
ತತೋ ಧರ್ಮಂ ಪುರಸ್ಕೃತ್ಯ ನಿಯತಾ ತ್ವಂ ಶುಚಿಸ್ಮಿತೇ |
ಆಕಾರಾಚಾರಸಂಪನ್ನಾ ಭಜಸ್ವಾರಾಧಯ ಸ್ವಯಮ್ ॥11॥
ಶುಚಿಸ್ಮಿತೆಯೇ, ಆದ್ದರಿಂದ ಧರ್ಮನನ್ನು ಉದ್ದೇಶಿಸಿ ನಿಯಮವನ್ನು ಧರಿಸಿ ಒಳ್ಳೆಯ ಆಕಾರ ಮತ್ತು ಆಚಾರಗಳಿಂದ ಕೂಡಿದವಳಾಗಿ ನೀನೇ ಅವನನ್ನು ಆರಾಧಿಸು.
ವೈಶಂಪಾಯನಃ
ಸಾ ತಥೋಕ್ತಾ ತಥೇತ್ಯುಕ್ತ್ವಾ ತೇನ ಭರ್ತ್ರಾ ವರಾಂಗನಾ |
ಅಭಿವಾದ್ಯಾಭ್ಯನುಜ್ಞಾತಾ ಪ್ರದಕ್ಷಿಣಮಥಾಕರೋತ್ ॥12॥
ಪತಿಯಿಂದ ಹಾಗೆ ಹೇಳಲ್ಪಟ್ಟ ವರಾಂಗನೆಯಾದ ಕುಂತಿಯು ಹಾಗೆಯೇ ಆಗಲಿ ಎಂದು ಹೇಳಿ ಪತಿಯ ಅನುಜ್ಞೆಯನ್ನು ಪಡೆದು

ಅವನಿಗೆ ನಮಸ್ಕರಿಸಿ ಪ್ರದಕ್ಷಿಣೆಯನ್ನು ಮಾಡಿದಳು.
ಸಂವತ್ಸರೋಷಿತೇ ಗರ್ಭೇ ಗಾಂಧಾರ್ಯಾಂ ಜನಮೇಜಯ |
ಆಜುಹಾವ ತತೋ ಧರ್ಮಂ ಕುಂತೀ ಪುತ್ರಾರ್ಥಮಚ್ಯುತಮ್ ॥13॥
ಜನಮೇಜಯನೇ, ಗಾಂಧಾರಿಯು ಧರಿಸಿದ್ದ ಗರ್ಭಕ್ಕೆ ಒಂದು ವರ್ಷವು ತುಂಬುತ್ತಿರುವಾಗ ಕುಂತಿಯು ಧರ್ಮಾದಿ ಗುಣಗಳಿಂದ ಚ್ಯುತನಾಗದಂತಹ ಧರ್ಮನನ್ನು ಪುತ್ರನ ಸಲುವಾಗಿ ಆಹ್ವಾನ ಮಾಡಿದಳು.
ಸಾ ಬಲಿಂ ತ್ವರಿತಾ ದೇವೀ ಧರ್ಮಾಯೋಪಜಹಾರ ಹ |
ಜಾನಂತೀ ಧರ್ಮಮಗ್ರ್ಯಂ ವೈ ಮಂತ್ರೈರ್ವಶಮುಪಾನಯತ್ ॥14॥
ಅವಳು ಶೀಘ್ರವಾಗಿ ಧರ್ಮನಿಗೆ ಪೂಜೆಯನ್ನು ಸಲ್ಲಿಸಿದಳು. ಶ್ರೇಷ್ಠವಾದ ಧರ್ಮವನ್ನು ತಿಳಿದ ಅವಳು ಮಂತ್ರಗಳಿಂದ ಯಮನನ್ನು ವಶಪಡಿಸಿಕೊಂಡಳು.
ಆಹೂತೋ ನಿಯಮಾತ್ ಕುಂತ್ಯಾ ಸರ್ವಭೂತೈರ್ನಮಸ್ಕೃತಃ |
ದದೃಶೇ ಭಗವಾನ್ ಧರ್ಮಃ ಸಂತಾನಾರ್ಥಾಯ ಪಾಂಡವೇ ॥15॥
ನಿಯಮನಿಷ್ಠಳಾದ ಕುಂತಿಯಿಂದ ಆಹ್ವಾನಿಸಲ್ಪಟ್ಟಾಗ ಸರ್ವಪ್ರಾಣಿಗಳಿಂದಲೂ ನಮಸ್ಕೃತನಾದ ಭಗವಾನ್ ಧರ್ಮನು ಪಾಂಡುವಿಗೆ ಸಂತಾನವನ್ನು ಕೊಡುವುದಕ್ಕೋಸ್ಕರ ಪ್ರತ್ಯಕ್ಷನಾದನು.
ತಸ್ಮಿನ್ ಬಹುಮೃಗೇಽರಣ್ಯೇ ಶತಶೃಂಗೇ ನಗೋತ್ತಮೇ |
ಪಾಂಡೋರರ್ಥೇ ಮಹಾಭಾಗ ಕುಂತೀ ಧರ್ಮಮುಪಾಗಮತ್ ॥16॥
ಎಲೈ ಮಹಾಭಾಗನೇ, ಬಹು ಮೃಗಗಳಿದ್ದ ಅರಣ್ಯದಿಂದ ಕೂಡಿದ ಆ ಶತಶೃಂಗಪರ್ವತಶ್ರೇಷ್ಠದಲ್ಲಿ ಪಾಂಡುವಿನ ಸಲುವಾಗಿ ಕುಂತಿಯು ಧರ್ಮನನ್ನು ಸಮೀಪಿಸಿದಳು.
ಋತುಕಾಲೇ ಶುಚಿಃ ಸ್ನಾತಾ ಶುಕ್ಲವಸನಾ ತತ್ರ ಮನಸ್ವಿನೀ |
ಶಯ್ಯಾಂ ಜಗಾಮ ಸುಶ್ರೋಣೀ ಸಹ ಧರ್ಮೇಣ ಸುವ್ರತಾ ॥17॥
ಋತುಕಾಲದಲ್ಲಿ ಸ್ನಾನ ಮಾಡಿ ಶುಚಿಯೂ, ಮನಸ್ವಿನಿಯೂ, ಸುಂದರಿಯೂ ಆದ ಅವಳು ಶುಕ್ಲವಸ್ತ್ರಗಳನ್ನು ಧರಿಸಿ ಧರ್ಮನ ಜೊತೆಯಲ್ಲಿ ಶಯನವನ್ನು ಸೇರಿದಳು.
ಧರ್ಮೇಣ ಸಹ ಸಂಗಮ್ಯ ಯೋಗಮೂರ್ತಿಧರೇಣ ಸಾ |
ಲೇಭೇ ಪುತ್ರಂ ಮಹಾಭಾಗಂ ಸರ್ವಪ್ರಾಣಭೃತಾಂ ಹಿತಮ್ ॥18॥
ಅವಳು ಯೋಗಶರೀರವನ್ನು ಧರಿಸಿದ್ದ ಯಮಧರ್ಮನ ಜೊತೆಯಲ್ಲಿ ಸಂಗಮವನ್ನು ಹೊಂದಿ ಮಹಾಭಾಗ್ಯಶಾಲಿಯೂ, ಎಲ್ಲಾ ಪ್ರಾಣಿಗಳಿಗೂ ಹಿತನೂ ಆದ ಪುತ್ರನನ್ನು ಪಡೆದಳು.
ಐಂದ್ರೇ ಚಂದ್ರಮಸಾ ಯುಕ್ತೇ ಮುಹೂರ್ತೇಽಭಿಜಿತೇಽಷ್ಟಮೇ |
ದಿವಾಮಧ್ಯಂಗತೇ ಸೂರ್ಯೇ ತಿಥೌ ಪುಣ್ಯೇಽಭಿಪೂಜಿತೇ |
ಸಮೃದ್ಧಯಶಸಂ ಕುಂತೀ ಸುಷಾವ ಸಮಯೇ ಸುತಮ್ ॥19॥
ಚಂದ್ರನು ಜ್ಯೇಷ್ಠಾ ನಕ್ಷತ್ರದಲ್ಲಿರುವಾಗ ಅಷ್ಟಮಿಯ ದಿವಸ, ಸೂರ್ಯನು ಆಕಾಶದ ಮಧ್ಯದಲ್ಲಿದ್ದ ಅಭಿಜಿನ್ ಮುಹೂರ್ತದಲ್ಲಿ ಶ್ರೇಷ್ಠವಾದ ಪುಣ್ಯತಿಥಿಯಲ್ಲಿ ಕುಂತಿಯು ಅಪಾರ ಕೀರ್ತಿಯುಳ್ಳ ಮಗನನ್ನು ಪ್ರಸವಿಸಿದಳು.
ಜಾತಮಾತ್ರೇ ತತಸ್ತಸ್ಮಿನ್ ವಾಗುವಾಚಾಶರೀರಿಣೀ |
ಏಷ ಧರ್ಮಭೃತಾಂ ಶ್ರೇಷ್ಠೋ ಭವಿತೇತಿ ವಿನಾದಿನೀ ॥20॥
ಆ ಶಿಶುವು ಜನಿಸಿದ ತಕ್ಷಣ `ಇವನು ಧರ್ಮಿಷ್ಠರಲ್ಲಿ ಶ್ರೇಷ್ಠನಾಗುವನು' ಎಂಬ ಆಕಾಶವಾಣಿ ಎಲ್ಲಾ ಕಡೆಯೂ ಪ್ರತಿಧ್ವನಿಸುವಂತೆ ಉಂಟಾಯಿತು.
ಯುಧಿಷ್ಠಿರ ಇತಿ ಖ್ಯಾತಃ ಪಾಂಡೋಃ ಪ್ರಥಮಜಃ ಸುತಃ |
ಅಭವತ್ ಪ್ರಥಿತೋ ರಾಜನ್ ತ್ರಿಷು ಲೋಕೇಷು ವೀರ್ಯವಾನ್ |
ಯಶಸಾ ತೇಜಸಾ ಚೈವ ವೃತ್ತೇನ ಚ ಸಮನ್ವಿತಃ ॥21॥
ರಾಜನೇ, ಪಾಂಡುವಿನ ಮೊದಲನೆಯ ಸುತನು ಯುಧಿಷ್ಠಿರನೆಂದು ಪ್ರಖ್ಯಾತನಾದನು. ಅವನು ಮೂರು ಲೋಕಗಳಲ್ಲಿಯೂ ವೀರ್ಯಶಾಲಿಯೂ, ಯಶಸ್ಸಿನಿಂದಲೂ, ಪರಾಕ್ರಮದಿಂದಲೂ ಮತ್ತು ಒಳ್ಳೆಯ ನಡತೆಯಿಂದಲೂ ಕೂಡಿದವನೂ ಆಗಿ ಪ್ರಸಿದ್ಧನಾದನು.
ಸಂವತ್ಸರೇ ದ್ವಿತೀಯೇ ತು ಗಾಂಧಾರ್ಯಾ ಉದರಂ ಮಹತ್ |
ನಚ ಪ್ರಾಜಾಯತ ತದಾ ತತಸ್ತಾಂ ದುಃಖಮಾವಿಶತ್ ॥22॥
ಗಾಂಧಾರಿಯ ಗರ್ಭಕ್ಕೆ ಎರಡು ವರ್ಷ ತುಂಬಿದರೂ ಅವಳಿಗೆ ಪ್ರಸವವಾಗಲಿಲ್ಲ. ಆಗ ಅವಳನ್ನು ದುಃಖವು ತುಂಬಿಕೊಂಡಿತು.
ಶ್ರುತ್ವಾ ಕುಂತೀಸುತಂ ಜಾತಂ ಬಾಲಾರ್ಕಸಮತೇಜಸಮ್ |
ಉದರಸ್ಯಾತ್ಮನಃಸ್ಥೈರ್ಯಮುಪಾಲಭ್ಯ ಚ ಸೌಬಲೀ ॥23॥
ಕೌರವ್ಯಸ್ಯಾಪರಿಜ್ಞಾತಂ ಯತ್ನೇನ ಮಹತಾ ಸ್ವಯಮ್ |
ಉದರಂ ಘಾತಯಾಮಾಸ ಗಾಂಧಾರೀ ದುಃಖಮೂರ್ಚ್ಛಿತಾ ॥24॥
ಅವಳು ಎಳೆಯ ಸೂರ್ಯನ ಕಾಂತಿಯಿಂದ ಕುಂತಿಯ ಸುತನು ಜನಿಸಿರುವುದನ್ನು ಕೇಳಿ, ತನ್ನ ಉದರದ ಸ್ಥಿರತ್ವವನ್ನು ನಿಂದಿಸಿ ಧೃತರಾಷ್ಟ್ರನಿಗೆ ತಿಳಿಯದಂತೆ ಪರಮ ದುಃಖದಿಂದ ಕೂಡಿದವಳಾದ ಕಾರಣ, ತನ್ನ ಉದರನವನ್ನು ತಾನೇ ಕುಟ್ಟಿಕೊಂಡಳು.
ತತೋ ಜಜ್ಞೇ ಮಾಂಸಪೇಶೀ ಸಾಷ್ಠೀಲಾ ಜನಮೇಜಯ |

ದ್ವಿವರ್ಷಸಂಭೃತಾಂ ಕುಕ್ಷೌ ತಾಮುತ್ಸ್ರಷ್ಟುಂ ಮನೋ ದಧೇ ॥25॥
ಜನಮೇಜಯನೇ, ಆಗ ಜರಾಯುವಿನಿಂದ ಸಹಿತವಾದ ಒಂದು ಮಾಂಸದ ಮುದ್ದೆಯು ಹೊರಗೆ ಬಂದಿತು. ಎರಡು ವರ್ಷಗಳ ಕಾಲ ತನ್ನ ಉದರದಲ್ಲಿ ಧರಿಸಿದ್ದ ಮಾಂಸದ ಮುದ್ದೆಯನ್ನು ಅವಳು ಪರಿತ್ಯಾಗ ಮಾಡಲು ನಿರ್ಧರಿಸಿದಳು.
ತತೋ ದ್ವೈಪಾಯನೋ ರಾಜನ್ ಆಜಗಾಮ ಯದೃಚ್ಛಯಾ |
ತಾಂ ಚ ಮಾಂಸಮಯೀಂ ಪೇಶೀಂ ದದರ್ಶ ವದತಾಂ ವರಃ ॥26॥
ರಾಜನೇ, ಆಗ ಅಲ್ಲಿಗೆ ಇದ್ದಕ್ಕಿದ್ದಂತೆಯೇ ವ್ಯಾಸರು ಬಂದರು. ಮಾತನಾಡುವವರಲ್ಲಿ ಶ್ರೇಷ್ಠರಾದ ಅವರು ಆ ಮಾಂಸದ ಮುದ್ದೆಯನ್ನು ನೋಡಿದರು.
ತತೋಽಬ್ರವೀತ್ ಸೌಬಲೇಯೀಂ ಕಿಮಿದಂ ತೇ ಚಿಕೀರ್ಷಿತಮ್ |
ಸಾ ಚಾತ್ಮನೋ ಮತಂ ಸರ್ವಂ ಶಶಂಸ ಪರಮರ್ಷಯೇ ॥27॥
ಆಗ ಗಾಂಧಾರಿಯನ್ನು ಕುರಿತು `ಇದೇನು ಮಾಡಲು ಹೊರಟಿರುವೆ' ಎಂದು ಕೇಳಿದರು. ಅವಳು ಮಹರ್ಷಿಗಳಿಗೆ ತನ್ನ ಮನಸ್ಸಿನ ಅಭಿಪ್ರಾಯವನ್ನೆಲ್ಲಾ ತಿಳಿಸಿದಳು.
ಜ್ಯೇಷ್ಠಂ ಕುಂತೀಸುತಂ ಜಾತಂ ಶ್ರುತ್ವಾ ರವಿಸಮಪ್ರಭಮ್ |
ದುಃಖೇನ ಪರಮೇಣೇದಮುದರಂ ಘಾತಿತಂ ಮಯಾ ॥28॥
ಕುಂತಿಯ ಪ್ರಥಮಪುತ್ರನು ಸೂರ್ಯನ ಕಾಂತಿಯಿಂದ ಕೂಡಿ ಜನಿಸಿದ ವಾರ್ತೆಯನ್ನು ಕೇಳಿ ನಾನು ಪರಮದುಃಖದಿಂದ ನನ್ನ ಉದರವನ್ನು ಕುಟ್ಟಿಕೊಂಡೆ.
ಶತಂ ಚ ಕಿಲ ಪುತ್ರಾಣಾಂ ದತ್ತವಾನಸಿ ಮೇ ಪ್ರಭೋ |
ಇಯಂ ಮಾಂಸಮಯೀ ಪೇಶೀ ಜಾತಾ ಪುತ್ರಶತಾಯ ತೇ ॥29॥
ಪ್ರಭುವೇ, ನೀನು ನನಗೆ ವರವಾಗಿ ನೂರು ಪುತ್ರರನ್ನು ಕೊಟ್ಟಿರುವೆಯಷ್ಟೆ. ಇದೋ ನೀನು ಕೊಟ್ಟ ಶತಪುತ್ರರ ಸ್ಥಾನದಲ್ಲಿ ಈ ಮಾಂಸದ ಮುದ್ದೆಯು ಜನಿಸಿದೆ.
ವ್ಯಾಸಃ
ಏತಾವದೇತದ್ ಗಾಂಧಾರಿ ನೈತಜ್ಜಾತ್ವನ್ಯಥಾ ಭವೇತ್ |
ವಿತಥಂ ನೋಕ್ತಪೂರ್ವಂ ಮೇ ಸ್ವೈರೇಷ್ವಪಿ ಕದಾಚನ ॥30॥
ಗಾಂಧಾರಿ, ಅದು ಹೀಗೆಯೇ ಸರಿ. ಎಂದೂ ವ್ಯತ್ಯಾಸವಾಗುವುದಿಲ್ಲ. ನಾನು ವಿನೋದಕ್ಕಾಗಿಯೂ, ಹಿಂದೆ ಎಂದೂ ಅನೃತವನ್ನು ನುಡಿದವನಲ್ಲ.
ಘೃತಪೂರ್ಣಂ ಕುಂಡಶತಂ ಕ್ಷಿಪ್ರಮಾನೀಯತಾಮಿತಿ |
ಶೀತಾಭಿರದ್ಭಿರಾಷ್ಠೀಲಾಮಿಮಾಂ ಚ ಪರಿಷಿಂಚ ಚ ॥31॥
ಘೃತದಿಂದ ತುಂಬಿದ ನೂರು ಕುಂಡಗಳನ್ನು ಬೇಗ ತರಿಸು. ಈ ಮಾಂಸದ ಮುದ್ದೆಯಿರುವ ಗರ್ಭಚೀಲವನ್ನು ತಣ್ಣೀರಿನಿಂದ ಚಿಮುಕಿಸು (ಎಂದು ಹೇಳಿದರು).
ವೈಶಂಪಾಯನಃ
ಸಂಸಿಚ್ಯಮಾನಾ ಸಾಷ್ಠೀಲಾ ಹ್ಯಭವಚ್ಛತಧಾ ತಥಾ |
ಅಂಗುಷ್ಠಪರ್ವಮಾತ್ರಾಣಾಂ ಗರ್ಭಾಣಾಂ ಪೃಥಗೇವ ತು ॥32॥
ಏಕಾಧಿಕಶತಂ ಪೂರ್ಣಂ ಯಥಾಯೋಗಂ ವಿಶಾಂಪತೇ |
ತತಃ ಕುಂಡಶತಂ ತತ್ರ ಹ್ಯಾನಾಯ್ಯ ತು ಮಹಾನ್ ಋಷಿಃ ॥33॥
ಮಾಂಸಪೇಶಿಯಿಂದ ಕೂಡಿದ ಜರಾಯುವನ್ನು ನೀರಿನಿಂದ ಚಿಮುಕಿಸಿದಾಗ ಮಾಂಸದ ಮುದ್ದೆಯು ಹೋಳು ಹೋಳಾಗಿ ಒಡೆಯಿತು. ಹೆಬ್ಬೆಟ್ಟಿನ ತುದಿಯಷ್ಟೇ ಪ್ರಮಾಣದ ಗರ್ಭಗಳು ಬೇರೆ ಬೇರೆಯಾದವು. ರಾಜನೇ, ಒಟ್ಟು ನೂರೊಂದು ಭಾಗಗಳು ಉಂಟಾದವು.
ಮಾಂಸಪೇಶ್ಯಾಸ್ತದಾ ರಾಜನ್ ಕ್ರಮಶಃ ಕಾಲಪರ್ಯಯಾತ್ |
ತತಸ್ತಾನ್ ತೇಷು ಕುಂಡೇಷು ಗರ್ಭಾನ್ ಸರ್ವಾನ್ ಸಮಾದಧತ್ ॥
ಆಗ ಆ ಮಹರ್ಷಿಗಳು ನೂರು ಘೃತಕುಂಡಗಳನ್ನು ತರಿಸಿ ಆ ಮಾಂಸದ ಮುದ್ದೆಯಿಂದ ಕ್ರಮಿಕವಾಗಿ ಒಂದೊಂದೇ ಭಾಗವನ್ನು (ಗರ್ಭವನ್ನು) ತೆಗೆದು ಆ ಕುಂಡಗಳಲ್ಲಿ ಇಟ್ಟರು.
ಸ್ವನುಗುಪ್ತೇಷು ದೇಶೇಷು ರಕ್ಷಾಂ ಚೈಷಾಂ ವ್ಯಧಾಪಯತ್ |
ಶಶಂಸ ಚೈವ ಕೃಷ್ಣೋ ವೈ ಗರ್ಭಾಣಾಂ ರಕ್ಷಣೇ ತಥಾ ॥35॥
ವೇದವ್ಯಾಸರು ಆ ಕುಂಡಗಳನ್ನು ಸುರಕ್ಷಿತವಾದ ಸ್ಥಳದಲ್ಲಿಟ್ಟು ಗರ್ಭಗಳನ್ನು ರಕ್ಷಿಸುವಂತೆ ಆದೇಶ ನೀಡಿದರು.
ಉವಾಚ ಚೈನಾಂ ಭಗವಾನ್ ಕಾಲೇನೈತಾವತಾ ಪುನಃ |
ಸ್ಫುಟಮಾನೇಷು ಕುಂಡೇಷು ಜಾತಾನ್ ಜಾನೀಹಿ ಶೋಭನೇ |
ಉದ್ಘಾಟನೀಯಾನ್ಯೇತಾನಿ ಕುಂಡಾನೀತಿ ಚ ಸೌಬಲೀಮ್ ॥36॥
ಪೂಜ್ಯರಾದ ವ್ಯಾಸರು ಗಾಂಧಾರಿಯನ್ನು ಕುರಿತು ಶೋಭನಳಾದವಳೇ, ಇಷ್ಟು ಕಾಲವಾದ ಮೇಲೆ ಈ ಕುಂಡಗಳು ಬಿರಿಯುತ್ತವೆ. ಆಗ ನಿನ್ನ ಮಕ್ಕಳು ಜನಿಸಿದ್ದಾರೆಂದು ತಿಳಿದು ಈ ಕುಂಡಗಳನ್ನು ತೆಗೆದು ಶಿಶುಗಳನ್ನು ಹೊರಗೆ ತೆಗೆಯಬೇಕು.
ಇತ್ಯುಕತ್ವ ಭಗವಾನ್ ವ್ಯಾಸಃ ತಥಾ ಪ್ರತಿವಿಧಾಯ ಚ |
ಜಗಾಮ ತಪಸೇ ಶ್ರೀಮಾನ್ ಹಿಮವಂತಂ ಶಿಲೋಚ್ಚಯಮ್ ॥37॥
ಪೂಜ್ಯರಾದ ವ್ಯಾಸರು ಹೀಗೆ ಹೇಳಿ ಎಲ್ಲಾ ಆದೇಶಗಳನ್ನೂ ನೀಡಿ ತಪಸ್ಸಿಗಾಗಿ ಹಿಮಾಲಯ ಪರ್ವತಕ್ಕೆ ಹೋದರು.

ಅಹ್ನೋತ್ತರಾಃ ಕುಮಾರಾಸ್ತೇ ಕುಂಡೇಭ್ಯಸ್ತು ಸಮುತ್ಥಿತಾಃ |
ತೇನೈವೈಷಾಂ ಕ್ರಮೇಣಾಸೀಜ್ಜ್ಯೈಷ್ಠ್ಯಾನುಜ್ಯೇಷ್ಠತಾ ತದಾ |
ಜನ್ಮತಶ್ಚ ಪ್ರಮಾಣೇನ ಜ್ಯೇಷ್ಠಃ ಕುಂತೀಸುತೋಽಭವತ್ ॥38॥
ಕಾಲಕ್ರಮದಲ್ಲಿ ಆ ಕುಂಡಗಳಿಂದ ಒಂದು ದಿನಕ್ಕೆ ಒಬ್ಬೊಬ್ಬರಂತೆ ನೂರು ಮಕ್ಕಳು ಹೊರಬಂದರು. ಅವರು ಹೊರಬಂದ ಕ್ರಮದಲ್ಲಿಯೇ ಅವರಿಗೆ ಜ್ಯೇಷ್ಠತೆ ಮತ್ತು ಅನಂತರದ ಜ್ಯೇಷ್ಠತೆ ಉಂಟಾಯಿತು. ಜನ್ಮದಿಂದಲೂ, ಶರೀರ ಪ್ರಮಾಣದಿಂದಲೂ, ಕುಂತಿಯ ಸುತನಾದ ಯುಧಿಷ್ಠಿರನೇ ಎಲ್ಲರಿಗಿಂತಲೂ ಜ್ಯೇಷ್ಠನಾದವನಾಗಿದ್ದನು.
ಧಾರ್ಮಿಕಂ ಚ ಸುತಂ ದೃಷ್ಟ್ವಾ ಪಾಂಡುಃ ಕುಂತೀಮಥಾಬ್ರವೀತ್ |
ಪ್ರಾಹುಃ ಕ್ಷತ್ರಂ ಬಲಜ್ಯೇಷ್ಠಂ ಬಲಜ್ಯೇಷ್ಠಂ ಸುತಂ ವೃಣು ॥39॥
ಪಾಂಡುವು ಧಾರ್ಮಿಕನಾದ ಸುತನನ್ನು ನೋಡಿ ಕುಂತಿಯನ್ನು ಕುರಿತು, ಕ್ಷತ್ರಿಯನು ಬಲಾಧಿಕನಾಗಿರಬೇಕೆಂದು ಹೇಳುತ್ತಾರೆ. ಆದ್ದರಿಂದ ಬಲಾಧಿಕನಾದ ದೇವನನ್ನು ಆಹ್ವಾನಿಸು ಎಂದು ಹೇಳಿದನು.
ತತಃ ಕುಂತೀಮಭಿಕ್ರಮ್ಯ ಶಶಂಸಾತೀವ ಭಾರತ |
ವಾಯುಮಾವಾಹಯಸ್ವೇತಿ ಸ ದೇವೋ ಬಲವತ್ತರಃ ॥40॥
ಭಾರತನೇ, ಅನಂತರ ಕುಂತಿಯ ಎದುರಿನಲ್ಲಿ ಕುಳಿತು ವಾಯುದೇವರನ್ನು ಬಹಳವಾಗಿ ಪ್ರಶಂಸನೆ ಮಾಡಿ ವಾಯುವು ಬಲಿಷ್ಠತಮನಾದ್ದರಿಂದ ಅವನನ್ನು ಆಹ್ವಾನಿಸು ಎಂದು ಹೇಳಿದನು.
ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ |
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ॥41॥
ಎಲ್ಲಾ ಕ್ರತುಗಳಲ್ಲಿ ಅಶ್ವಮೇಧವು ಶ್ರೇಷ್ಠವಾದುದು. ಎಲ್ಲಾ ಜ್ಯೋತಿಸ್ಸುಗಳಲ್ಲಿ ಸೂರ್ಯನು ಶ್ರೇಷ್ಠನಾದವನು. ಎಲ್ಲಾ ದ್ವಿಪದ ಪ್ರಾಣಿಗಳಲ್ಲಿ ಬ್ರಾಹ್ಮಣನು ಶ್ರೇಷ್ಠನಾದವನು. ಎಲ್ಲಾ ದೇವತೆಗಳಲ್ಲಿ ವಾಯುದೇವರು ಶ್ರೇಷ್ಠರಾದವರು.
ಮಾರುತಂ ಮರುತಾಂ ಶ್ರೇಷ್ಠಂ ಸರ್ವಪ್ರಾಣಿಭಿರೀಡಿತಮ್ |
ಆವಾಹಯ ತ್ವಂ ನಿಯಮಾತ್ ಪುತ್ರಾರ್ಥಂ ವರವರ್ಣಿನಿ ॥42॥
ಸುಂದರಿಯೇ, ನೀನು ಮರುತ್ತುಗಳಲ್ಲಿ ಶ್ರೇಷ್ಠನಾದಂತಹ ಸರ್ವಪ್ರಾಣಿಗಳಿಂದಲೂ ಸ್ತುತ್ಯನಾದಂತಹ ಮಾರುತನನ್ನು ನಿಯಮವನ್ನು ಧರಿಸಿ ಪುತ್ರನನ್ನು ಪಡೆಯುವ ಸಲುವಾಗಿ ಆಹ್ವಾನಿಸು.
ಸ ನೋ ಯಂ ದಾಸ್ಯತಿ ಸುತಂ ಸ ಪ್ರಾಣಬಲವಾನ್ ನೃಷು |
ಭವಿಷ್ಯತಿ ವರಾರೋಹೇ ಬಲಜ್ಯೇಷ್ಠಾ ಹಿ ಭೂಮಿಪಾಃ ॥43॥
ಸುಂದರಿಯೇ, ಅವನು ಯಾವ ಪುತ್ರನನ್ನು ಕೊಡುವನೋ ಅವನು ಮನುಷ್ಯರಲ್ಲಿ ಪ್ರಾಣಬಲಾಧಿಕನಾಗುವನು. ಕ್ಷತ್ರಿಯರು ಬಲಾಧಿಕ್ಯವನ್ನು ಹೊಂದಿರಬೇಕಷ್ಟೇ?
ವೈಶಂಪಾಯನಃ
ತಥೋಕ್ತವತಿ ಸಾ ಕಾಲೇ ವಾಯುಮೇವಾಜುಹಾವ ಹ |
ದ್ವಿತೀಯೇನೋಪಹಾರೇಣ ತೇನೋಕ್ತವಿಧಿನಾ ಪುನಃ ॥44॥
ಪಾಂಡುವು ಹೀಗೆ ಹೇಳುತ್ತಿರಲು ಕುಂತಿಯು ಯೋಗ್ಯವಾದ ಕಾಲದಲ್ಲಿ ವಿಧಿಯುಕ್ತವಾಗಿ ಎರಡನೆಯ ಪೂಜೆಯನ್ನು ಮಾಡಿ ವಾಯುವನ್ನು ಆಹ್ವಾನಿಸಿದಳು.
ತೈರೇವ ನಿಯಮೈಃ ಸ್ಥಿತ್ವಾ ಮಂತ್ರಗ್ರಾಮಮುದೈರಯತ್ |
ಆಜಗಾಮ ತತೋ ವಾಯುಃ ಕಿಂ ಕರೋಮೀತಿ ಚಾಬ್ರವೀತ್ ॥45॥
ಅದೇ ನಿಯಮಗಳಿಂದ ಕೂಡಿದವಳಾಗಿ ಮಂತ್ರಸಮೂಹವನ್ನು ಉಚ್ಚರಿಸಿದಳು. ವಾಯುದೇವರು ಪ್ರತ್ಯಕ್ಷರಾಗಿ ಬಂದು `ಏನು ಮಾಡಲಿ' ಎಂದು ಕೇಳಿದರು.
ಲಜ್ಜಾನತಾ ತತಃ ಕುಂತೀ ಪುತ್ರಮೈಚ್ಛತ್ ಮಹಾಬಲಮ್ |
ತಥಾಸ್ತ್ವಿತಿ ಚ ತಾಂ ವಾಯುಃ ಸಮಾಲಿಂಗ್ಯ ದಿವಂ ಗತಃ ॥46॥
ಲಜ್ಜೆಯಿಂದ ಕೂಡಿದ ಕುಂತಿಯು ಆಗ ಮಹಾಬಲರಾದ ವಾಯುದೇವರನ್ನು ಕುರಿತು ಪುತ್ರನನ್ನು ಬೇಡಿದಳು. ವಾಯುದೇವರು `ಹಾಗೆಯೇ ಆಗಲಿ' ಎಂದು ಹೇಳಿ ಅವಳನ್ನು ಆಲಿಂಗಿಸಿ ಸ್ವರ್ಗಕ್ಕೆ ಹೊರಟುಹೋದರು.
ತಸ್ಮಾಜ್ಜಾತೋ ಮಹಾವೀರ್ಯೋ ಭೀಮೋ ಭೀಮಪರಾಕ್ರಮಃ |
ತಮಪ್ಯತಿಬಲಂ ಜಾತಂ ವಾಗುವಾಚಾಶರೀರಿಣೀ |
ಸರ್ವೇಷಾಂ ಬಲಿನಾಂ ಶ್ರೇಷ್ಠೋ ಜಾತೋಽಯಮಿತಿ ಭಾರತ ॥47॥
ಅವರಿಂದ ಮಹಾ ಸಾಮರ್ಥ್ಯವುಳ್ಳವನೂ, ಭಯಂಕರ ಪರಾಕ್ರಮವುಳ್ಳವನೂ ಆದ ಭೀಮನು ಜನಿಸಿದನು. ಭಾರತನೇ, ಅತಿಬಲಿಷ್ಠನಾದ ಭೀಮನು ಜನಿಸಿದಾಗಲೂ, `ಇವನು ಬಲಿಷ್ಠರಲ್ಲೆಲ್ಲಾ ಶ್ರೇಷ್ಠನಾದವನಾಗಿ ಜನಿಸಿದ್ದಾನೆ' ಎಂದು ಅಶರೀರವಾಣಿಯಾಯಿತು.
ಜಾತಮಾತ್ರೇ ಕುಮಾರೇ ತು ಸರ್ವಲೋಕಸ್ಯ ಪಾರ್ಥಿವಾಃ |
ಮೂತ್ರಂ ಪ್ರಸುಸ್ರುವುಃ ಸರ್ವೇ ವ್ಯಥಾಂ ಚಾಪಿ ಪ್ರಪೇದಿರೇ |
ವಾಹನಾನಿ ವ್ಯಶೀರ್ಯಂತ ವ್ಯಮುಂಚನ್ನಶ್ರುಬಿಂದವಃ ॥48॥
ಭೀಮನು ಜನಿಸಿದ ಕ್ಷಣದಲ್ಲಿ ಲೋಕದ ಎಲ್ಲಾ ರಾಜರೂ ಮೂತ್ರವನ್ನು ಉತ್ಸರ್ಜನೆ ಮಾಡಿದರು. ಎಲ್ಲರೂ ವ್ಯಥೆಗೆ ಒಳಗಾದರು. ರಥ ಮೊದಲಾದ ವಾಹನಗಳು ಬಿರಿದವು. ಅಶ್ವ, ಗಜ ಮೊದಲಾದವುಗಳು ಕಣ್ಣೀರನ್ನು ಸುರಿಸಿದವು.

ಯಥಾಽನಿಲಃ ಸಮುದ್ಧೂತಃ ಸಮರ್ಥಃ ಕಂಪತೇ ಭುವಃ |
ತಥಾ ಹ್ಯುಪಚಿತಾಂಗೋ ವೈ ಭೀಮೋ ಭೀಮಪರಾಕ್ರಮಃ ॥49॥
ಹೇಗೆ ಅಭಿವೃದ್ಧಿಗೊಂಡ ವಾಯುವು ಭೂಮಿಯನ್ನು ನಡುಗಿಸುತ್ತದೆಯೋ ಹಾಗೆ ಪುಷ್ಟವಾದ ಅಂಗಗಳಿಂದ ಕೂಡಿದ ಭಯಂಕರ ಪರಾಕ್ರಮವುಳ್ಳ ಭೀಮನು ಭೂಮಿಯನ್ನು ನಡುಗಿಸಿದನು.
ಇದಂ ಚಾದ್ಭುತಮತ್ರಾಸೀಜ್ಜಾತಮಾತ್ರೇ ವೃಕೋದರೇ |
ಕುಂತೀ ತು ಸಹ ಪುತ್ರೇಣ ಯಾತಾ ಸುರುಚಿರಂ ಸರಃ ॥50॥
ಭೀಮನು ಜನಿಸಿದಾಗ ಅಲ್ಲಿ ಇನ್ನೊಂದು ಅದ್ಭುತವೂ ನಡೆಯಿತು. ಕುಂತಿಯು ಮಗನನ್ನು ಎತ್ತಿಕೊಂಡು ಒಂದು ಸುಂದರವಾದ ಸರೋವರಕ್ಕೆ ಹೊರಟಿದ್ದಳು.
ಸ್ನಾತ್ವಾ ಚ ಸುತಮಾದಾಯ ದಶಮೇಽಹನಿ ಯಾದವೀ |
ದೈವತಾನ್ಯರ್ಚಯಿಷ್ಯಂತೀ ನಿರ್ಜಗಾಮಾಶ್ರಮಾತ್ ಪೃಥಾ ॥51॥
ಹತ್ತನೆಯ ದಿವಸ ಕುಂತಿಯು ಮಗನನ್ನು ಎತ್ತಿಕೊಂಡು ಹೋಗಿ ಸರೋವರದಲ್ಲಿ ಸ್ನಾನವನ್ನು ಮಾಡಿ ದೇವತೆಗಳನ್ನು ಪೂಜಿಸುವ ಸಲುವಾಗಿ ಆಶ್ರಮದಿಂದ ಹೊರಗೆ ಬಂದಳು.
ಶೈಲಾಭ್ಯಾಶೇನ ಗಚ್ಛಾಂತ್ಯಾಸ್ತದಾ ಭರತಸತ್ತಮ |
ನಿಶ್ಚಕ್ರಾಮ ಮಹಾವ್ಯಾಘ್ರೋ ಜಿಘಾಂಸುರ್ಗಿರಿಗಹ್ವರಾತ್ ॥52॥
ಎಲೈ ಭರತಶ್ರೇಷ್ಠನೇ, ಪರ್ವತದ ಸಮೀಪದಲ್ಲಿ ಅವಳು ನಡೆಯುತ್ತಿದ್ದಾಗ ಪರ್ವತದ ಗುಹೆಯಿಂದ ಒಂದು ದೊಡ್ಡ ಹುಲಿಯು ಅವಳನ್ನು ಕೊಲ್ಲುವ ಸಲುವಾಗಿ ಹೊರಗೆ ಬಂದಿತು.
ತಮಾಪತಂತಂ ಶಾರ್ದೂಲಂ ವಿಕೃಷ್ಯ ಧನುರುತ್ತಮಮ್ |
ನಿರ್ಬಿಭೇದೇ ಶರೈಃ ಪಾಂಡುಃ ತ್ರಿಭಿಸ್ತ್ರಿದಶವಿಕ್ರಮಃ ॥53॥
ಮೇಲೆ ಎರಗುತ್ತಿದ್ದ ಆ ಹುಲಿಯನ್ನು ನೋಡಿ ದೇವತೆಗಳ ಪರಾಕ್ರಮವುಳ್ಳ ಪಾಂಡುವು ಕೈಯಲ್ಲಿ ಧನುಸ್ಸನ್ನು ತೆಗೆದುಕೊಂಡು ಮೂರು ಬಾಣಗಳಿಂದ ಆ ಹುಲಿಯನ್ನು ಹೊಡೆದನು.
ನಾದೇನ ಮಹತಾ ತಾಂ ತು ಪೂರಯಂತಂ ಗಿರೇರ್ಗುಹಾಮ್ |
ದೃಷ್ಟ್ವಾ ಶೈಲಮುಪಾರೋಢುಮೈಚ್ಛತ್ ಕುಂತೀ ಭಯಾತ್ ತದಾ ॥54॥
ಆಗ ಆ ಹುಲಿಯು ತನ್ನ ಮಹಾನಾದದಿಂದ ಪರ್ವತದ ಗುಹೆಯ ಪ್ರದೇಶವನ್ನೆಲ್ಲಾ ತುಂಬಿತು. ಅದನ್ನು ನೋಡಿದ ಕುಂತಿಯು ಭಯದಿಂದ ಪರ್ವತದ ಮೇಲೆ ಏರಿ ಹೋಗಲು ಬಯಸಿದಳು.
ತ್ರಾಸೇನಾಸ್ಯಾಃ ಸುತಸ್ತ್ವಂಕಾತ್ ಪಪಾತ ಭರತರ್ಷಭ |
ಪರ್ವತಸ್ಯೋಪರಿಸ್ಥಾಯಾ ಅಧಸ್ತಾದಪತಚ್ಛಿಶುಃ ॥55॥
ಭರತಶ್ರೇಷ್ಠನೇ, ಪರ್ವತವನ್ನು ಏರಿದ ಅವಳ ತೊಡೆಯ ಮೇಲಿದ್ದ ಶಿಶುವು ಅವಳ ಭಯದಿಂದಾಗಿ ಕೆಳಗೆ ಬಿದ್ದಿತು.
ಸ ಶಿಲಾಶ್ಚೂರ್ಣಯಾಮಾಸ ವಜ್ರಿಚೋದಿತವಜ್ರವತ್ |
ಪುತ್ರಸ್ನೇಹಾತ್ ತತಃ ಪಾಂಡುರಭ್ಯಧಾವದ್ ಗಿರೇಸ್ತಟಮ್ ॥56॥
ಕೆಳಗೆ ಬಿದ್ದ ಶಿಶುವು ಇಂದ್ರನ ವಜ್ರಾಯುಧದ ಪ್ರಯೋಗ ಮಾಡಿದಂತೆ ಆ ಪರ್ವತವನ್ನು ಪುಡಿಮಾಡಿ ಸೀಳಿತು. ಪುತ್ರಸ್ನೇಹದಿಂದ ಪಾಂಡುವು ಶಿಶುವು ಬಿದ್ದ ಸ್ಥಳಕ್ಕೆ ಓಡಿಬಂದನು.
ಪತತಾ ತೇನ ಶತಧಾ ಶಿಲಾ ಗಾತ್ರೈರ್ವಿಚೂರ್ಣಿತಾ |
ಶಿಲಾಂ ಚ ಚೂರ್ಣಿತಾಂ ದೃಷ್ಟ್ವಾ ಪರಂ ವಿಸ್ಮಯಮಾಗಮತ್ ॥57॥
ಕೆಳಗೆ ಬಿದ್ದ ಆ ಮಗುವಿನಿಂದ ಪರ್ವತದ ಆ ಬಂಡೆಯು ನೂರು ಭಾಗವಾಗಿ ಸೀಳಲ್ಪಟ್ಟಿತು. ಹಾಗೆ ಸೀಳಿದ ಶಿಲೆಯನ್ನು ನೋಡಿ ಪಾಂಡುವು ವಿಸ್ಮಿತನಾದನು.
ಸ ತು ಜನ್ಮನಿ ಭೀಮಸ್ಯ ವಿನದಂತಂ ವಿನಾದಿತಮ್ |
ದದರ್ಶ ಗಿರಿಶೃಂಗಸ್ಥಂ ವ್ಯಾಘ್ರಂ ವ್ಯಾಘ್ರಪರಾಕ್ರಮಃ ॥58॥
ಭೀಮನ ಜನನವಾದಾಗ ವ್ಯಾಘ್ರ ಪರಾಕ್ರಮವುಳ್ಳ ಪಾಂಡುವು ಗಿರಿಯ ಶೃಂಗದಲ್ಲಿ ನಿಂತು ಗರ್ಜಿಸುತ್ತಿದ್ದ ಒಂದು ಹುಲಿಯನ್ನು ನೋಡಿದನು.
ದಾರಸಂರಕ್ಷಣಾರ್ಥಾಯ ರಕ್ಷಮಾಣಸ್ತಥಾಽಽತ್ಮಜಮ್ |
ಸದಾ ಬಾಣಧನುಷ್ಪಾಣಿರಭವತ್ ಕುರುನಂದನಃ ॥59॥
ಆಗಿನಿಂದ ಆರಂಭಿಸಿ ಕುರುನಂದನನಾದ ಪಾಂಡುವು ಪತ್ನಿ ಮತ್ತು ಪುತ್ರರನ್ನು ರಕ್ಷಣೆ ಮಾಡುವುದಕ್ಕಾಗಿ ಕೈಯಲ್ಲಿ ಯಾವಾಗಲೂ ಧನುಸ್ಸು ಮತ್ತು ಬಾಣಗಳನ್ನು ಹಿಡಿದು ಸಂಚರಿಸುತ್ತಿದ್ದನು.
ಮೇ ಚಂದ್ರಮಸಾ ಯುಕ್ತೇ ಸಿಂಹೇ ಚಾಭ್ಯುದಿತೇ ಗುರೌ |
ದಿವಾಮಧ್ಯಗತೇ ಸೂರ್ಯೇ ತಿಥೌ ಪುಣ್ಯೇ ತ್ರಯೋದಶೇ |
ಮೈತ್ರೇ ಮುಹೂರ್ತೇ ಸಾ ಕುಂತೀ ಸುಷುವೇ ಭೀಮಮಚ್ಯುತಮ್ ॥
ಚಂದ್ರನು ಮಖಾ ನಕ್ಷತ್ರದಲ್ಲಿ ಕೂಡಿರುವಾಗ ಗುರುವು ಸಿಂಹರಾಶಿಯಲ್ಲಿದ್ದಾಗ ಸೂರ್ಯನು ಆಕಾಶಮಧ್ಯದಲ್ಲಿದ್ದಾಗ ತ್ರಯೋದಶಿಯ ತಿಥಿಯಂದು ಸ್ನೇಹಕಾರಕವಾದ ಮುಹೂರ್ತದಲ್ಲಿ ಕುಂತಿಯು ಭಕ್ತಿಯಿಂದಲೂ, ಬಲದಿಂದಲೂ ಎಂದೂ ಚ್ಯುತನಾಗದ ಭೀಮನನ್ನು ಪ್ರಸವಿಸಿದಳು.
ಯಸ್ಮಿನ್ನಹನಿ ಭೀಮಸ್ತು ಜಜ್ಞೇ ಭೀಮಪರಾಕ್ರಮಃ |

ತಾಮೇವ ರಾತ್ರಿಂ ಪೂರ್ವಂ ತು ಜಜ್ಞೇ ದುರ್ಯೋಧನೋ ನೃಪಃ |
ದುರ್ಯೋಧನೇ ಜಾತಮಾತ್ರೇ ದಿಕ್ಷು ಸರ್ವಾಸು ಭಾರತ ॥61॥
ಯಾವ ದಿವಸ ಹಗಲಿನಲ್ಲಿ ಭೀಮಪರಾಕ್ರಮನಾದ ಭೀಮನು ಜನಿಸಿದನೋ ಆ ದಿನದ ಹಿಂದಿನ ರಾತ್ರಿಯಲ್ಲಿ ದುರ್ಯೋಧನನು ಜನಿಸಿದನು.
ಕ್ರವ್ಯಾದಾಃ ಪ್ರಾಣದನ್ ಘೋರಾಃ ಶಿವಾಶ್ಚಾಶಿವನಿಸ್ವನಾಃ |
ವವರ್ಷ ರುಧಿರಂ ದೇವೋ ಭಯಮಾವೇದಯನ್ ಮಹತ್ ॥62॥
ಎಲೈ ಭಾರತನೇ, ದುರ್ಯೋಧನನು ಹುಟ್ಟಿದ ತಕ್ಷಣ ಎಲ್ಲಾ ದಿಕ್ಕುಗಳಲ್ಲಿಯೂ ಮಾಂಸಾಹಾರಿಪ್ರಾಣಿಗಳು ಘೋರವಾಗಿ ಗರ್ಜಿಸಿದವು. ನರಿಗಳು ಅಮಂಗಳಸ್ವರದಿಂದ ಕೂಗಿದವು. ರಕ್ತದ ಮಳೆಯು ಬಿದ್ದು ಪ್ರಪಂಚದಲ್ಲಿ ದೊಡ್ಡ ಭಯವು ಸೂಚಿತವಾಯಿತು.
ಏತಸ್ಮಿನ್ನಂತರೇ ರಾಜಾ ಧೃತರಾಷ್ಟ್ರೋಽಂಬಿಕಾಸುತಃ |
ಸಮಾಹೂಯ ಬಹೂನ್ ವಿಪ್ರಾನ್ ವಿದುರಂ ಚೇದಮಬ್ರವೀತ್ ॥
ಈ ಮಧ್ಯದಲ್ಲಿ ಅಂಬಿಕೆಯ ಮಗನಾದ ಧೃತರಾಷ್ಟ್ರರಾಜನು ಅನೇಕಬ್ರಾಹ್ಮಣರನ್ನು ಮತ್ತು ವಿದುರನನ್ನು ಕರೆದು ಹೀಗೆ ಮಾತನಾಡಿದನು.
ಶ್ರುತಂ ಮಯಾ ಯಥಾ ಜಾತೋ ಜ್ಯೇಷ್ಠಃ ಪಾಂಡೋಃ ಸುತಃ ಕಿಲ |
ಸ ತು ದುರ್ಯೋಧನಾದ್ ಜ್ಯೇಷ್ಠಃ ತಸ್ಮಿನ್ ರಾಜ್ಯಂ ನ ಸಂಶಯಃ ॥
ನಾನು ಪಾಂಡುವಿನ ಸುತನಾದ ಯುಧಿಷ್ಠಿರನು ಹೇಗೆ ಜನಿಸಿದನೆಂದು ಕೇಳಿದ್ದೇನೆ. ಅವನು ದುರ್ಯೋಧನನಿಗಿಂತಲೂ ಜ್ಯೇಷ್ಠನಾದವನು. ನಿಸ್ಸಂಶಯವಾಗಿ ಅವನಿಗೇ ರಾಜ್ಯವು ದೊರೆಯುತ್ತದೆ.
ಅಯಂ ತ್ವನಂತರಂ ತಸ್ಮಾದಧಿರಾಜೋ ಭವಿಷ್ಯತಿ |
ಏತಂ ವಿಬ್ರೂತ ಮೇ ಪ್ರಶ್ನಂ ಯದ್ವಾಽಸ್ಮಿನ್ ದೃಶ್ಯತೇ ಫಲಮ್ ॥65॥
ಅವನ ಅನಂತರ ಜನಿಸಿದ ದುರ್ಯೋಧನನು ಯುವರಾಜನಾಗುವನು. ನನ್ನ ಈ ಪ್ರಶ್ನೆಗೆ ಉತ್ತರವನ್ನು ನೀಡಿ ಅಥವಾ ಇದರಿಂದ ಯಾವ ಫಲವು ಸೂಚಿತವಾಗುತ್ತದೆ ಎಂದು ತಿಳಿಸಿ.
ಅಸ್ಮಿನ್ ಜಾತೇ ನಿಮಿತ್ತಾನಿ ಸಂಶಯಂತ್ಯಶಿವಂ ಮಹತ್ |
ಅತೋ ಬ್ರವೀಮಿ ವಿದುರ ಬ್ರೂತ ಮಾಂ ಭಯಮಾವಿಶತ್ ॥66॥
ವಿದುರನೇ, ಇವನು ಹುಟ್ಟಿದಾಗ ಎಲ್ಲಾ ಅಪಶಕುನಗಳು ಕಂಡುಬರುತ್ತಿವೆ. ನನಗೆ ತುಂಬಾ ಭಯವಾಗಿದೆ. ಆದ್ದರಿಂದ ಕೇಳುತ್ತಿದ್ದೇನೆ.
ವೈಶಂಪಾಯನಃ
ವಾಕ್ಯಸ್ಯೈತಸ್ಯ ನಿಧನೇ ದಿಕ್ಷು ಸರ್ವಾಸು ಭಾರತ |
ಕ್ರವ್ಯಾದಾಃ ಪ್ರಾಣದನ್ ಘೋರಾಃ ಶಿವಾಶ್ಚಾಶಿವಶಂಸಿನಃ ॥67॥
ಧೃತರಾಷ್ಟ್ರನ ಈ ಮಾತು ಮುಗಿಯುತ್ತಿದ್ದಂತೆಯೇ ಮಾಂಸಾಹಾರಿ ಪ್ರಾಣಿಗಳೆಲ್ಲವೂ ಘೋರವಾಗಿ ಗರ್ಜಿಸಿದವು. ನರಿಗಳು ಅಮಂಗಳಸ್ವರದಿಂದ ಕೂಗಿದವು.
ಲಕ್ಷಯಿತ್ವಾ ನಿಮಿತ್ತಾನಿ ತಾನಿ ಸರ್ವಾಣಿ ಭಾರತ |
ತೇಽಬ್ರುವನ್ ಬ್ರಾಹ್ಮಣಾ ರಾಜನ್ ವಿದುರಶ್ಚ ಮಹಾಮತಿಃ ॥68॥
ಭಾರತನೇ, ಈ ಎಲ್ಲಾ ಅಪಶಕುನಗಳನ್ನು ಗಮನಿಸಿ ಬ್ರಾಹ್ಮಣರು ಮತ್ತು ಮಹಾಮತಿಯಾದ ವಿದುರನು ರಾಜನನ್ನು ಕುರಿತು ಹೇಳಿದರು.
ಅಯಂ ಕುಲಾಂತಕೃಜ್ಜಾತೋ ಯಸ್ಮಾಚ್ಚ ಕುಲಪಾಂಸನಃ |
ತಸ್ಯ ತ್ಯಾಗೇನ ಶಾಂತಿಃ ಸ್ಯಾತ್ ಪುಷ್ಟಿಸ್ತ್ವಪನಯೇ ಭವೇತ್ ॥69॥
ಇವನು ಕುಲಪಾಂಸನನಾದವನು. ಇವನು ಕುಲಕ್ಷಯವನ್ನು ಮಾಡುತ್ತಾನೆ. ಇವನನ್ನು ಪರಿತ್ಯಾಗ ಮಾಡುವುದರಿಂದ ಶಾಂತಿಯೂ, ಕುಲದ ಪುಷ್ಟಿಯೂ ಉಂಟಾಗುತ್ತದೆ.
ಶತಮೇಕೋನಮಪ್ಯಸ್ತು ಪುತ್ರಾಣಾಂ ತೇ ಮಹೀಪತೇ |
ಏಕೇನ ಕುರು ನಃ ಕ್ಷೇಮಂ ಲೋಕಸ್ಯ ಚ ಕುಲಸ್ಯ ಚ ॥70॥
ರಾಜನೇ, ನೂರು ಮಕ್ಕಳಲ್ಲಿ ಒಬ್ಬನು ಕಡಿಮೆಯಾದರೂ ಚಿಂತೆಯಿಲ್ಲ. ಆ ಒಬ್ಬನನ್ನು ಪರಿತ್ಯಾಗ ಮಾಡಿ ನಮ್ಮ ಕುಲಕ್ಕೂ ಮತ್ತು ಲೋಕಕ್ಕೂ ಕ್ಷೇಮವನ್ನು ಉಂಟು ಮಾಡು.
ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ |
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥71॥
ಒಂದು ಕುಲದ ಹಿತದ ಸಲುವಾಗಿ ಒಬ್ಬನನ್ನು ಬಿಡಬೇಕು. ಒಂದು ಗ್ರಾಮದ ಹಿತದ ಸಲುವಾಗಿ ಒಂದು ಕುಲವನ್ನು ಬಿಡಬೇಕು. ಒಂದು ದೇಶದ ಹಿತದ ಸಲುವಾಗಿ ಒಂದು ಗ್ರಾಮವನ್ನು ಬಿಡಬೇಕು. ತನ್ನ ಹಿತದ ಸಲುವಾಗಿ ಭೂಮಿಯನ್ನೇ ಬಿಡಬೇಕು.
ವೈಶಂಪಾಯನಃ
ಸ ತಥಾ ವಿದುರೇಣೋಕ್ತಃ ತೈಶ್ಚ ವಿಪ್ರೈರ್ಜನಾಧಿಪಃ |
ನ ಚಕಾರ ತದಾ ರಾಜಾ ಪುತ್ರಸ್ನೇಹಸಮನ್ವಿತಃ ॥72॥
ಆ ರಾಜನು ವಿದುರನಿಂದಲೂ ಮತ್ತು ಉಳಿದ ಬ್ರಾಹ್ಮಣರಿಂದಲೂ ಹಾಗೆ ಹೇಳಲ್ಪಟ್ಟರೂ ಸಹ, ಪುತ್ರಸ್ನೇಹವಶನಾಗಿ ಅವರ ಮಾತಿನಂತೆ ಮಾಡಲಿಲ್ಲ.
ತತಃ ಪುತ್ರಶತಂ ಸರ್ವಂ ಧೃತರಾಷ್ಟ್ರಸ್ಯ ಭಾರತ |

ಅಹ್ನಾಂ ಶತೇನ ಸಂಜಜ್ಞೇ ಕನ್ಯಾ ಚೈಕಾ ಶತಾತ್ ಪರಾ ॥73॥
ಭಾರತನೇ, ಅನಂತರ ನೂರು ದಿವಸಗಳಲ್ಲಿ ಒಂದೊಂದು ದಿನಕ್ಕೆ ಒಬ್ಬೊಬ್ಬರಂತೆ ನೂರು ಪುತ್ರರು ಜನಿಸಿದರು. ನೂರೊಂದನೆಯವಳಾದ ಒಬ್ಬ ಕನ್ಯೆಯೂ ಜನಿಸಿದಳು.
ಗಾಂಧಾರ್ಯಾಂ ಕ್ಲಿಶ್ಯಮಾನಾಯಾಂ ವರ್ಧಮಾನೇ ತಥೋದರೇ |
ವೈಶ್ಯಾ ಸಾ ತ್ವಂಬಿಕಾಪುತ್ರಂ ಕನ್ಯಾ ಪರಿಚಚಾರ ಹ ॥74॥
ಗಾಂಧಾರಿಯು ಗರ್ಭವನ್ನು ಧರಿಸಿ ಉದರದ ವೃದ್ಧಿಯಿಂದ ಕ್ಲೇಶಪಡುತ್ತಿರುವಾಗ ವೈಶ್ಯಕನ್ಯೆಯು ಧೃತರಾಷ್ಟ್ರನನ್ನು ಪರಿಚರಿಸುತ್ತಿದ್ದಳು.
ತಯಾ ಸಮಭವದ್ ರಾಜಾ ಧೃತರಾಷ್ಟ್ರೋ ಯದೃಚ್ಛಯಾ |
ತಸ್ಯಾಮಜನಯತ್ ಪುತ್ರಂ ಯುಯುತ್ಸುಂ ನಾಮ ಭಾರತ ॥75॥
ದೈವೇಚ್ಛೆಯಿಂದ ಧೃತರಾಷ್ಟ್ರನು ಅವಳ ಸಮಾಗಮವನ್ನು ಮಾಡಿದನು. ಭಾರತನೇ ಅವಳಲ್ಲಿ ಅವನಿಗೆ ಯುಯುತ್ಸು ಎಂಬ ಪುತ್ರನು ಜನಿಸಿದನು.
ಇತ್ಥಮೇಕಶತಂ ಜಜ್ಞೇ ಪುತ್ರಾಣಾಂ ಭರತರ್ಷಭ |
ಮಹಾರಥಾನಾಂ ವೀರಾಣಾಂ ಕನ್ಯಾ ಚೈಕಾಽಥ ದುಃಶಲಾ |
ಧೃತರಾಷ್ಟ್ರಸ್ಯ ರಾಜೇಂದ್ರ ಯಥಾ ತೇ ಕಥಿತಂ ಮಯಾ ॥76॥
ಭರತರ್ಷಭನೇ, ಹೀಗೆ ಧೃತರಾಷ್ಟ್ರನಿಗೆ ಮಹಾರಥರೂ, ವೀರರೂ ಆದ ನೂರು ಪುತ್ರರೂ ದುಃಶಲೆ ಎಂಬ ಒಬ್ಬ ಮಗಳೂ ನಾನು ನಿನಗೆ ಹೇಳಿದ ರೀತಿಯಲ್ಲಿ ಜನಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.
*****

ನೂರ ಹದಿನಾರನೆಯ ಅಧ್ಯಾಯ
(ಗಾಂಧಾರಿಯಲ್ಲಿ ದುಶ್ಶಲೆಯ ಜನನ.)
ಜನಮೇಜಯಃ
ಧೃತರಾಷ್ಟ್ರಸ್ಯ ಪುತ್ರಾಣಾಮಾದಿತಃ ಕಥಿತಂ ತ್ವಯಾ |
ಋಷೇರ್ಮತಾತ್ ಪುತ್ರಶತಂ ನ ತು ಕನ್ಯಾಽತ್ರ ಕೀರ್ತಿತಾ ॥1॥
ಮಹರ್ಷಿಗಳಾದ ವ್ಯಾಸರ ಅಭಿಪ್ರಾಯದಂತೆ ಧೃತರಾಷ್ಟ್ರನಿಗೆ ನೂರು ಪುತ್ರರು ಜನಿಸಿದುದನ್ನು ಮೊದಲಿನಿಂದಲೂ ನೀವು ಹೇಳಿದ್ದೀರಿ. ಆದರೆ ಕನ್ಯೆಯ ವಿಷಯವನ್ನು ಹೇಳಲೇ ಇಲ್ಲ.
ವೈಶ್ಯಾಪುತ್ರೋ ಯುಯುತ್ಸುಶ್ಚ ಏತದೇಕಶತಂ ದ್ವಿಜ |
ಜನ್ಮಾಪಿ ಧಾರ್ತರಾಷ್ಟ್ರಸ್ಯ ಉಕ್ತಮೇತನ್ಮಹರ್ಷಿಣಾ |
ಕಥಂ ಹಿ ಸಂಭವಸ್ತಸ್ಮಾದ್ ದುಃಶಲಾಯಾ ಬ್ರವೀಹಿ ಮೇ ॥2॥
ಬ್ರಾಹ್ಮಣರೇ, ವೈಶ್ಯಾಪುತ್ರನಾದ ಯುಯುತ್ಸುವು ನೂರ ಒಂದನೆಯ ಪುತ್ರ. ಮಹರ್ಷಿಗಳಾದ ವ್ಯಾಸರು ಧೃತರಾಷ್ಟ್ರನಿಂದ ಯುಯುತ್ಸುವಿನ ಉತ್ಪತ್ತಿಯನ್ನು ಹೇಳಿದ್ದರು. ಆದರೆ, ದುಃಶಲೆಯ ಉತ್ಪತ್ತಿ ಹೇಗೆ? ಅದನ್ನು ನನಗೆ ಹೇಳಿ.
ವೈಶಂಪಾಯನಃ
ಸಾಧ್ವಯಂ ಪ್ರಶ್ನ ಉದ್ದಿಷ್ಟಃ ಪಾಂಡವೇಯ ಬ್ರವೀಮಿ ತೇ |
ತಾಂ ಮಾಂಸಪೇಶೀಂ ತು ತದಾ ಸ್ವಯಮೇವ ಮಹಾಮುನಿಃ |
ಶೀತಾಭಿರದ್ಭಿಃ ಸಿಂಚನ್ ವೈ ಭಾಗಂ ಭಾಗಮಧಾರಯತ್ ॥3॥
ಪಾಂಡುಕುಲಪ್ರಸೂತನೇ, ನೀನು ಒಳ್ಳೆಯ ಪ್ರಶ್ನೆಯನ್ನೇ ಕೇಳಿದೆ. ನಾನು ಉತ್ತರವನ್ನು ಹೇಳುತ್ತೇನೆ. ಮಹಾಮುನಿಗಳಾದ ವ್ಯಾಸರು ಆ ಮಾಂಸದ ಮುದ್ದೆಯನ್ನು ತಾವೇ ಶೀತಲವಾದ ನೀರಿನಿಂದ ಚಿಮುಕಿಸಿ, ಬಿರಿದು ಉಂಟಾದ ಭಾಗಗಳನ್ನು ಬೇರೆ ಬೇರೆ ತೆಗೆದರು.
ಯೋ ಯಥಾ ಕಲ್ಪತೇ ಭಾಗಸ್ತಂ ತು ಧಾತ್ರೀ ಸ್ಮ ವೈ ಪೃಥಕ್ |
ಘೃತಪೂರ್ಣೇಷು ಕುಂಡೇಷು ಏಕೈಕಂ ಪ್ರಾಕ್ಷಿಪತ್ ತದಾ ॥4॥
ಅವರ ಕೈಗೆ ಆ ಭಾಗಗಳು ಬಂದಂತೆ ಬಂದಂತೆ ಧಾತ್ರಿಯು ಬೇರೆ ಬೇರೆ ಘೃತಪೂರ್ಣವಾದ ಕುಂಭಗಳಲ್ಲಿ ಒಂದೊಂದು ಭಾಗವನ್ನು ಹಾಕಿದಳು.
ಏತಸ್ಮಿನ್ನಂತರೇ ಸಾಧ್ವೀ ಗಾಂಧಾರೀ ಸುಮಹಾಯಶಾಃ |
ಬ್ರಹ್ಮರ್ಷಿಂ ನಾಬ್ರವೀತ್ ಕಿಂಚಿದ್ ಗೌರವಾಚ್ಚ ಯಶಸ್ವಿನೀ ॥5॥
ಮಹಾ ಯಶಸ್ವಿನಿಯೂ, ಪತಿವ್ರತೆಯೂ ಆದ ಗಾಂಧಾರಿಯು ಬ್ರಹ್ಮರ್ಷಿಗಳಾದ ವ್ಯಾಸರ ಮೇಲಿನ ಗೌರವದಿಂದ ಈ ಮಧ್ಯೆ ಏನೂ ಮಾತನಾಡಲಿಲ್ಲ.
ಮನಸಾಽಚಿಂತಯದ್ ದೇವೀ ಏತತ್ ಪುತ್ರಶತಂ ಮಮ |
ಭವಿಷ್ಯತಿ ನ ಸಂದೇಹೋ ನ ಚರ್ಷಿರ್ಭಾಷತೇಽನ್ಯಥಾ ॥6॥
ಆ ದೇವಿಯು ಮನಸ್ಸಿನಲ್ಲಿ ಹೀಗೆ ಚಿಂತಿಸಿದಳು. ನನಗೆ ಪುತ್ರ ಶತರು ಜನಿಸುವರು. ಇದರಲ್ಲಿ ಸಂದೇಹವಿಲ್ಲ. ಋಷಿಗಳ ಮಾತು

ಸುಳ್ಳಾಗುವುದಿಲ್ಲ.
ಮಮ ವೈ ಪರಮಾ ತುಷ್ಟಿರ್ದುಹಿತಾ ಮೇ ಭವೇದ್ ಯದಿ |
ಏಕಾ ಶತಾಧಿಕಾ ಬಾಲಾ ಶತಸ್ಯಾಪಿ ಕನೀಯಸೀ |
ತತೋ ದೌಹಿತ್ರಜಾನ್ ಲೋಕಾನವಾಪ್ತಃ ಸ್ಯಾತ್ ಪತಿರ್ಮಮ ||7||
ಆದರೆ ನನಗೆ ಒಬ್ಬ ಮಗಳು ಜನಿಸಿದರೆ, ನನಗೆ ತುಂಬಾ ಸಂತೋಷವಾಗುವುದು. ಅವಳು ನನಗೆ ನೂರೊಂದನೆಯವಳಾಗಿ ಈ ನೂರೂ ಪುತ್ರರ ತಂಗಿಯಾಗಿರಬೇಕು. ಅವಳ ಮುಖಾಂತರ ನನ್ನ ಪತಿಯು ದೌಹಿತ್ರರಿಂದ ಹೊಂದುವ ಲೋಕಗಳನ್ನು ಹೊಂದುವವನಾಗಬೇಕು.
ಅಹಂ ಚ ಕೃತಕೃತ್ಯಾ ಸ್ಯಾಂ ದುಹಿತ್ರಾ ಸಹ ಸಂಗತಾ |
ಅಧಿಕಂ ಕಿಲ ನಾರೀಣಾಂ ಪ್ರೀತಿರ್ಜಾಮಾತೃಭಿರ್ಭವೇತ್ |
ಅಪತ್ಯಂ ಯುವತಿಂ ಚಾಪಿ ದೃಷ್ಟ್ವಾ ಪ್ರೀತಿಮವಾಪ್ನುಯಾಮ್ ||8||
ನಾನೂ ಸಹ ಮಗಳ ಸಹವಾಸದಿಂದ ಕೃತಕೃತ್ಯಳಾಗುತ್ತೇನೆ. ಸ್ತ್ರೀಯರಿಗೆ ಅಳಿಯನಲ್ಲಿ ಹೆಚ್ಚು ಪ್ರೀತಿಯಷ್ಟೇ. ವಯಸ್ಸಿಗೆ ಬಂದ ಮಗಳನ್ನು ನೋಡಿ ನಾನೂ ಸಂತೋಷಪಡುತ್ತೇನೆ.
ಯದಿ ಸತ್ಯಂ ತಪೋ ವಾ ಮೇ ಗುರವಸ್ತೋಷಿತಾ ಯದಿ |
ಸುಕೃತಂ ಚೇಹ ಲೋಕೇಽಸ್ತಿ ತಥಾಽಸ್ತು ದುಹಿತಾ ಮಮ ||9||
ನಾನು ತಪಸ್ಸು ಮಾಡಿದುದು ಸತ್ಯವಾಗಿದ್ದರೆ, ಗುರುಗಳು ನನ್ನ ಮೇಲೆ ಪ್ರಸನ್ನರಾಗಿದ್ದರೆ, ಈ ಲೋಕದಲ್ಲಿ ನನಗೇನಾದರೂ ಪುಣ್ಯವಿದ್ದರೆ, ಅದರಿಂದ ನನಗೆ ಒಬ್ಬ ಮಗಳು ಜನಿಸಲಿ.
ಏತಸ್ಮಿನ್ನೇವ ಕಾಲೇ ತು ಕೃಷ್ಣದ್ವೈಪಾಯನಃ ಸ್ವಯಮ್ |
ವ್ಯಭಜತ್ ಸಹಸಾ ವಿಪ್ರಸ್ತಾಂ ಪೇಶೀಂ ಗರ್ಭಸಂಭವಾಮ್ ||10||
ಈ ಕಾಲದಲ್ಲಿ ಸರಿಯಾಗಿ ವ್ಯಾಸರು ಅವಳ ಗರ್ಭದಿಂದ ಉಂಟಾದ ಮಾಂಸದ ಮುದ್ದೆಯನ್ನು ತಾವೇ ವಿಭಾಗ ಮಾಡುತ್ತಿದ್ದರು.
ಗಣ್ಯಮಾನೇಷು ಕುಂಡೇಷು ಶತೇ ಪೂರ್ಣೇ ಮಹಾತ್ಮನಾ |
ಅಭವಚ್ಚಾಪರಂ ಖಂಡಂ ವಾಮಹಸ್ತೇ ತದಾ ಕಿಲ ||11||
ಆ ಮಹಾತ್ಮರು ಘೃತಕುಂಭಗಳನ್ನು ಎಣಿಸುತ್ತಿರಲು ಅವು ನೂರು ಸಂಖ್ಯೆಯನ್ನು ಹೊಂದಿದಾಗ ವ್ಯಾಸರ ಎಡಗೈಯಲ್ಲಿ ಇನ್ನೂ ಒಂದು ಭಾಗವು ಉಳಿದಿತ್ತಷ್ಟೇ.
ಪೂರ್ಣಂ ಪುತ್ರಶತಂ ಹ್ಯೇವ ನ ಮಿಥ್ಯಾ ವಾಗುದೀರಿತಾ |
ದೈವಯೋಗಾತ್ ತ್ವಯಂ ಭಾಗ ಏಕೋ ದೃಷ್ಟಃ ಶತಾನ್ ಪರಃ |
ಏಷಾ ತೇ ಸುಭಗೇ ಕನ್ಯಾ ಭವಿಷ್ಯತಿ ಯಥೇಪ್ಸಿತಾ ||12||
ಗಾಂಧಾರಿ ನಿನಗೆ ನೂರು ಪುತ್ರರು ಜನಿಸಿದರು. ನನ್ನ ಮಾತು ಅನೃತವಾಗಿಲ್ಲ. ದೈವಯೋಗದಿಂದ ನೂರಕ್ಕಿಂತ ಹೆಚ್ಚಾದ ಒಂದು ಭಾಗವು ನನ್ನ ಕೈಯಲ್ಲಿ ಉಳಿದಿದೆ. ಸುಂದರಿಯೇ, ನಿನ್ನ ಅಭೀಷ್ಟದಂತೆ ಇವಳು ನಿನ್ನ ಮಗಳಾಗುತ್ತಾಳೆ.
ತತೋಽನ್ಯದ್ ಘೃತಕುಂಡಂ ತು ಆನಾಯ್ಯಾಶು ಮಹಾಯಶಾಃ |
ಪ್ರಾಕ್ಷಿಪತ್ ತಂ ತದಾ ರಾಜನ್ ಕನ್ಯಾಭಾಗಂ ಪರಂತಪ ||13||
ಎಲೈ ಪರಂತಪನಾದ ರಾಜನೇ, ಆಗ ಆ ಮಹಾಕೀರ್ತಿವಂತರಾದ ಋಷಿಗಳು ಇನ್ನೊಂದು ಘೃತಕುಂಭವನ್ನು ತರಿಸಿ ಅದರಲ್ಲಿ ಆ ಕನ್ಯಾಭಾಗವನ್ನು ಹಾಕಿದರು.
ಸಂಭೂತಾ ಚೈವ ಕಾಲೇನ ಸರ್ವೇಷಾಂ ಚ ಯವೀಯಸೀ |
ಏತತ್ತೇ ಕಥಿತಂ ವೀರ ದುಃಶಲಾಜನ್ಮ ಚೈವ ತು |
ಬ್ರೂಹಿ ರಾಜೇಂದ್ರ ಕಿಂ ಭೂಯಃ ಕಥಯೇ ಪಾಂಡುನಂದನ ||14||
ಕಾಲಕ್ರಮದಲ್ಲಿ ಎಲ್ಲರಿಗಿಂತ ಚಿಕ್ಕವಳಾದ ಕನ್ಯೆಯು ಜನಿಸಿದಳು. ವೀರನೇ, ದುಃಶಲೆಯ ಜನ್ಮದ ಈ ಪ್ರಕಾರವನ್ನು ನಿನಗೆ ತಿಳಿಸಿದ್ದೇನೆ. ಪಾಂಡುನಂದನನಾದ ರಾಜೇಂದ್ರನೇ, ನಿನಗೆ ಬೇರೆ ಯಾವ ವಿಷಯವನ್ನು ಹೇಳಲಿ ಎಂದು ಹೇಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷೋಡಶಾಧಿಕಶತತಮೋಽಧ್ಯಾಯಃ ||
|| ಸಂಭವಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.

ನೂರ ಹದಿನೇಳನೆಯ ಅಧ್ಯಾಯ
(ದುರ್ಯೋಧನಾದಿ ನೂರು ಪುತ್ರರ ನಾಮ ಕಥನ, ಜಯದ್ರಥ ದುಶ್ಯಲೆಯರ ವಿವಾಹ.)
ಜನಮೇಜಯಃ
ಜ್ಯೇಷ್ಠಾನುಜ್ಯೇಷ್ಠತಾಂ ಚೈವ ನಾಮಧೇಯಾನಿ ಚ ಪ್ರಭೋ |
ಧೃತರಾಷ್ಟ್ರಸ್ಯ ಪುತ್ರಾಣಾಮಾನುಪೂರ್ವ್ಯೇಣ ಕೀರ್ತಯ ||1||
ಪೂಜ್ಯರಾದ ಪ್ರಭುಗಳೇ, ಧೃತರಾಷ್ಟ್ರನ ಪುತ್ರರ ಜ್ಯೇಷ್ಠಾನುಜ್ಯೇಷ್ಠತೆಯನ್ನು ಮತ್ತು ಅವರ ನಾಮಗಳನ್ನು ತಿಳಿಸಿ.
ವೈಶಂಪಾಯನಃ
ದುರ್ಯೋಧನೋ ಯುಯುತ್ಸುಶ್ಚ ರಾಜನ್ ದುಃಶಾಸನಸ್ತಥಾ |

ದುರ್ಧರ್ಷೋ ದುರ್ಮುಖಶ್ಚೈವ ಜಲಸಂಧಿಃ ಸಹಃ ಸಮಃ ॥2॥
ವಿಂದಾನುವಿಂದೌ ದುಷ್ಪ್ರಾಪಃ ಸುಬಾಹುರ್ದುಷ್ಪ್ರಧರ್ಷಣಃ ।
ದುರ್ಮದಶ್ಚಿತ್ರಯೋಧಶ್ಚ ದುಷ್ಕರ್ಣಃ ಕರ್ಣ ಏವ ಚ ॥3॥
ವಿವಿಂಶತಿರ್ವಿಕರ್ಣಶ್ಚ ಜಯಸಂಧಃ ಸುಲೋಚನಃ ।
ಚಿತ್ರೋ ವಿಚಿತ್ರಶ್ಚಿತ್ರಾಕ್ಷಃ ಚಾರುಚಿತ್ರಃ ಶರಾಸನಃ ॥4॥
ದುರ್ಮರ್ಷಣೋ ದುಷ್ಪ್ರಧರ್ಷೋ ವಿವಿತ್ಸುರ್ವಿಕಲಃ ಶಮಃ ।
ಊರ್ಣನಾಭಃ ಸುನಾಭಶ್ಚ ತಥಾ ನಂದೋಪನಂದಕೌ ॥5॥
ಸೇನಾಪತಿಃ ಸುಷೇಣಶ್ಚ ಕುಂಡೋದರಮಹೋದರೌ ।
ಚಿತ್ರಧ್ವಜಶ್ಚಿತ್ರರಥಃ ಚಿತ್ರಬಾಹುರಮಿತ್ರಜಿತ್ ॥6॥
ಚಿತ್ರಬಾಣಶ್ಚಿತ್ರವರ್ಮಾ ಸುವರ್ಮಾ ದುರ್ವಿಲೋಚನಃ ।
ಚಿತ್ರಸೇನಶ್ಚ ವಿಕ್ರಾಂತಃ ಸುಚಿತ್ರಶ್ಚಿತ್ರವರ್ಮಧೃಕ್ ॥7॥
ಅಪರಾಜಿತಃ ಪಂಡಿತಕೋ ವಿಶಾಲಾಕ್ಷೋ ದುರಾಸದಃ ।
ಅಜಿತಶ್ಚ ಜನಂತಶ್ಚ ಜಯತ್ಸೇನೋಽಥ ದುರ್ಜಯಃ ॥8॥
ದೃಢಹಸ್ತಃ ಸುಹಸ್ತಶ್ಚ ವಾತವೇಗಸುವರ್ಚಸೌ ।
ಆದಿತ್ಯಕೇತುರ್ಬಹ್ವಾಶೀ ನಾಗದಂತೋಗ್ರಶಾಯಿನೌ ॥9॥
ಕವಚೀ ನಿಷಂಗೀ ಪಾಶೀ ಚ ದಂಡಧಾರ ಅನುಗ್ರಹಃ ।
ಉಗ್ರೋ ಭೀಮರಥೋ ಭೀಮೋ ಭೀಮಬಾಹುರಲೋಲುಪಃ ॥10॥
ಭೀಮಕರ್ಮಾ ಸುಬಾಹುಶ್ಚ ಭೀಮವಿಕ್ರಾಂತ ಏವ ಚ ।
ಅಭಯೋ ರೂಕ್ಷಕರ್ಮಾ ಚ ತಥಾ ದೃಢರಥಶ್ಚ ಯಃ ॥11॥
ಅನಾಧೃಷ್ಯಃ ಕುಂಡಭೇದೀ ಧೀರಾರಿರ್ದೀರ್ಘಲೋಚನಃ ।
ದೀರ್ಘಧ್ವಜೋ ದೀರ್ಘಜಂಘ ಅದೀರ್ಘೋ ದೀರ್ಘ ಏವ ಚ ॥12॥
ದೀರ್ಘಬಾಹುರ್ಮಹಾಬಾಹುರ್ವ್ಯೂಢೋರುಃ ಕನಕಧ್ವಜಃ ।
ಮಹಾಕುಂಡಶ್ಚ ಕುಂಡಶ್ಚ ವಿಕುಂಡಶ್ಚಿತ್ರಜಸ್ತಥಾ ॥13॥
ಅಸನಿಶ್ಚಿತ್ರಕಶ್ಚೈವ ದುಃಶಲಾ ಚೈವ ಭಾರತ ।
ಏತದೇಕಶತಂ ರಾಜನ್ ಕನ್ಯಾ ಚೈಕಾ ಪ್ರಕೀರ್ತಿತಾ ॥14॥
ರಾಜನೇ, ದುರ್ಯೋಧನ, ಯುಯುತ್ಸು, ದುಃಶಾಸನ, ದುರ್ಧರ್ಷ, ದುರ್ಮುಖ, ಜಲಸಂಧಿ, ಸಹ ಸಮ, ವಿಂದ, ಅನುವಿಂದ, ದುಷ್ಪ್ರಾಪ, ಸುಬಾಹು, ದುಷ್ಪ್ರಧರ್ಷಣ, ದುರ್ಮದ, ಚಿತ್ರಯೋಧ, ದುಷ್ಕರ್ಣ, ಕರ್ಣ, ವಿವಿಂಶತಿ, ವಿಕರ್ಣ, ಜಯಸಂಧ, ಸುಲೋಚನ, ಚಿತ್ರ, ವಿಚಿತ್ರ, ಚಿತ್ರಾಕ್ಷ, ಚಾರುಮಿತ್ರ, ಶರಾಸನ, ದುರ್ಮರ್ಷಣ, ದುಷ್ಪ್ರಧರ್ಷ, ವಿವಿತ್ಸು, ವಿಕಲ, ಶಮ, ಊರ್ಣನಾಭ, ಸುನಾಭ, ನಂದ, ಉಪನಂದ, ಸೇನಾಪತಿ, ಸುಷೇಣ, ಕುಂಡೋದರ, ಮಹೋದರ, ಚಿತ್ರಧ್ವಜ, ಚಿತ್ರರಥ, ಚಿತ್ರಬಾಹು, ಅಮಿತ್ರಜಿತ್, ಚಿತ್ರಬಾಣ, ಚಿತ್ರವರ್ಮ, ಸುವರ್ಮ, ದುರ್ವಿಲೋಚನ, ಚಿತ್ರಸೇನ, ವಿಕ್ರಾಂತ, ಸುಚಿತ್ರ, ಚಿತ್ರವರ್ಮಧೃಕ್, ಅಪರಾಜಿತ, ಪಂಡಿತಕ, ವಿಶಾಲಾಕ್ಷ, ದುರಾಸದ, ಅಜಿತ, ಜಯಂತ, ಜಯತ್ಸೇನ, ದುರ್ಜಯ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚ, ಆದಿತ್ಯಕೇತು, ಬಹ್ವಾಶೀ, ನಾಗದಂತ, ಉಗ್ರಶಾಯಿ, ಕವಚೀ,ನಿಷಂಗೀ, ಪಾಶೀ, ದಂಡಧಾರ, ಅನುಗ್ರಹ, ಉಗ್ರ, ಭೀಮರಥ, ಭೀಮ, ಭೀಮಬಾಹು, ಅಲೋಲುಪ, ಭೀಮಕರ್ಮ, ಸುಬಾಹು, ಭೀಮವಿಕ್ರಾಂತ, ಅಭಯ, ಸೂಕ್ಷಕರ್ಮ, ದೃಢರಥ, ಅನಾಧೃಷ್ಯ, ಕುಂಡಭೇಧಿ, ಧೀರಾರಿ, ದೀರ್ಘಲೋಚನ, ದೀರ್ಘಧ್ವಜ, ದೀರ್ಘಜಂಘ, ಅದೀರ್ಘ, ದೀರ್ಘ, ದೀರ್ಘಬಾಹು, ಮಹಾಬಾಹು, ವ್ಯೂಢೋರ, ಕನಕಧ್ವಜ, ಮಹಾಕುಂಡ, ಕುಂಡ, ವಿಕುಂಡ, ಚಿತ್ರಜ, ಅಸನ, ಚಿತ್ರಕ. ಇವರು ನೂರು ಪುತ್ರರು ಮತ್ತು ದುಃಶಲೆ. ಭಾರತನೇ, ನಾನು ನಿನಗೆ ಈ ನೂರು ಪುತ್ರರ ಮತ್ತು ಕನ್ಯೆಯ ಹೆಸರನ್ನು ಹೇಳಿದ್ದೇನೆ.
ನಾಮಧೇಯಾನುಪೂರ್ವ್ಯೇಣ ವಿದ್ಧಿ ಜನ್ಮಕ್ರಮಂ ನೃಪ ।
ಸರ್ವೇಽಪ್ಯತಿರಥಾಃ ಶೂರಾಃ ಸರ್ವೇ ಯುದ್ಧವಿಶಾರದಾಃ ॥15॥
ರಾಜನೇ, ನಾನು ಅವರ ನಾಮಧೇಯವನ್ನು ಹೇಳಿದ ಕ್ರಮದಲ್ಲಿಯೇ ಅವರ ಜನ್ಮವೆಂದು ತಿಳಿ. ಎಲ್ಲರೂ ಅತಿರಥರು ಮತ್ತು ಶೂರರು ಮತ್ತು ಯುದ್ಧವಿಶಾರದರು.
ಸರ್ವೇ ವೇದವಿದಶ್ಚೈವ ರಾಜಶಾಸ್ತ್ರೇಷು ಚಾಭವನ್ ।
ಸರ್ವೇ ಸಂಸಕ್ತವಿದ್ಯಾಸ್ತು ಮುಖ್ಯಾಭಿಜನಶೋಭಿತಾಃ ॥16॥
ಎಲ್ಲರೂ ವೇದವಿದ್ಯೆಯನ್ನು ಮತ್ತು ರಾಜಶಾಸ್ತ್ರವನ್ನು ತಿಳಿದವರು. ಎಲ್ಲರೂ ಮುಖ್ಯಕುಲದಲ್ಲಿ ಜನ್ಮದಿಂದ ಶೋಭಿತರಾಗಿ ವಿದ್ಯೆಯ ಸಂಸರ್ಗವನ್ನು ಹೊಂದಿದವರು.
ಸರ್ವೇಷಾಮನುರೂಪಂ ಚ ಕೃತದಾರಾಃ ಕೃತಶ್ರಮಾಃ ।
ಧೃತರಾಷ್ಟ್ರೇಣ ಸಮಯೇ ಸಮೀಕ್ಷ್ಯ ವಿಧಿವತ್ ತದಾ ॥17॥
ಎಲ್ಲರೂ ಅಸ್ತ್ರಶಸ್ತ್ರಗಳಲ್ಲಿ ಪರಿಶ್ರಮವುಳ್ಳವರು. ಧೃತರಾಷ್ಟ್ರನು ಎಲ್ಲರಿಗೂ ಅನುರೂಪರಾದ ಕನ್ಯೆಯರನ್ನು ನೋಡಿ ಸೂಕ್ತಕಾಲದಲ್ಲಿ ವಿಧಿವತ್ತಾಗಿ ವಿವಾಹವನ್ನು ಮಾಡಿದನು.
ದುಃಶಲಾಂ ಸಮಯೇ ರಾಜಾ ಸಿಂಧುರಾಜಾಯ ಭಾರತ ।
ಜಯದ್ರಥಾಯ ಪ್ರದದೌ ಸೌಬಲಾನುಮತಾತ್ ತದಾ ॥18॥

ಯೋಗ್ಯಕಾಲದಲ್ಲಿ ಶಕುನಿಯ ಅನುಮತಿಯನ್ನು ಪಡೆದು ದುಃಶಲೆಯನ್ನು ಸಿಂಧುರಾಜನಾದ ಜಯದ್ರಥನಿಗೆ ವಿವಾಹ ಮಾಡಿಕೊಟ್ಟನು.
ಇತಿ ಪುತ್ರಶತಂ ರಾಜನ್ ಯುಯುತ್ಸುಶ್ಚ ಶತಾಧಿಕಃ |
ಕನ್ಯಕಾ ದುಃಶಲಾ ಚೈವ ಯಥಾವತ್ ಕೀರ್ತಿತಂ ಮಯಾ ॥19॥
ರಾಜನೇ, ಹೀಗೆ ಗಾಂಧಾರಿಯ ನೂರು ಪುತ್ರರು, ನೂರೊಂದನೆಯ ಪುತ್ರನಾದ ಯುಯುತ್ಸು ಮತ್ತು ಗಾಂಧಾರಿಯ ಒಬ್ಬ ಮಗಳಾದ ದುಃಶಲೆ, ಎಲ್ಲರನ್ನೂ ನಿನಗೆ ಸರಿಯಾಗಿ ತಿಳಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತದಶಾಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು
*****

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-12
ವಿವರ್ಧಮಾನೋ ಲೋಕದೃಷ್ಟ್ಯೈವ ಕೃಷ್ಣೇ
ಪಾಂಡುಃ ಪುನಃ ಪ್ರಾಹ ಪೃಥಾಮಿದಂ ವಚಃ |
ಧರ್ಮಿಷ್ಠೋ ನೌಸೂನುರಗ್ರೇ ಬಭೂವ
ಬಲದ್ವಯಜ್ಯೇಷ್ಠ ಉತಾಪರಶ್ಚ ॥94॥
ಲೋಕದೃಷ್ಟಿಯಿಂದ ಕೃಷ್ಣ ಬೆಳೆಯುತ್ತಿದ್ದಂತೆ ಅತ್ತ ಪಾಂಡು ಪುನಃ ಕುಂತಿಗೆ ಹೇಳಿದ- `ನಮಗೆ ಮೊದಲಿಗೆ ಧರ್ಮಿಷ್ಠನಾದ ಪುತ್ರ ಜನಿಸಿದ. ಬಳಿಕ ಜ್ಞಾನಬಲ ಬಾಹುಬಲ ಎರಡರಲ್ಲಿಯೂ ಉತ್ತಮನಾದ ಇನ್ನೊಬ್ಬ ಪುತ್ರನೂ ಜನಿಸಿದ.
ಯದ್ಯೇಕ ಏವಾತಿಬಲೋಪಪನ್ನೋ
ಭವೇತ್ ತದಾ ತೇನ ಪರಾವಮರ್ದೇ |
ಪ್ರವರ್ತ್ಯಮಾನೇ ಸ್ವಪುರಂ ಹರೇಯು
ಶ್ಚೌರ್ಯಾತ್ ಪರೇ ತದ್ ದ್ವಯಮತ್ರ ಯೋಗ್ಯಮ್ ॥95॥
`ಆದರೂ ಒಬ್ಬನೆ ಮಗ ಇದ್ದರೆ ಅವನು ಅತಿ ಬಲಿಷ್ಠನಾದರೂ ಅವನು ಶತ್ರುಗಳೊಡನೆ ಯುದ್ಧ ಮಾಡುತ್ತಿರುವಾಗ ಬೇರೆ ಶತ್ರುಗಳು ನಮ್ಮ ಪಟ್ಟಣವನ್ನು ಕಳ್ಳತನದಿಂದ ನುಗ್ಗಿ ಸೂರೆ ಮಾಡಬಹುದು. ಅದರಿಂದ ಬಲಿಷ್ಠರಾದ ಇಬ್ಬರು ಮಕ್ಕಳಾಗಬೇಕು.
ಶಸ್ತ್ರಾಸ್ತ್ರವಿದ್ ವೀರ್ಯವಾನ್ ನೌ ಸುತೋಽನ್ಯೋ
ಭವೇದ್ ದೇವಂ ತಾದೃಶಮಾಹ್ವಯಾತಃ |
ಶೇಷಸ್ತ್ವಭ್ರಾತೃಸುತೋಽಭಿಜಾತ
ಸ್ತಸ್ಮಾನ್ನಾಸೌ ಸುತದಾನಾಯ ಯೋಗ್ಯಃ ॥96॥
`ಶಸ್ತ್ರಾಸ್ತ್ರಗಳನ್ನು ಬಲ್ಲ ಪರಾಕ್ರಮಿಯಾದ ಇನ್ನೊಬ್ಬ ಮಗ ನಮಗೆ ಜನಿಸಲಿ. ಅದಕ್ಕೆ ಅಂಥ ಒಬ್ಬ ದೇವನನ್ನು ಆಹ್ವಾನಿಸು. ಶೇಷ ನಿನ್ನ ಅಣ್ಣನ ಮಗನಾಗಿ ಹುಟ್ಟಿದ್ದಾನೆ. ಅದರಿಂದ ಅವನು ನಮಗೆ ಪುತ್ರದಾನ ಮಾಡಲು ಅರ್ಹನಾಗುವುದಿಲ್ಲ.
ನ ವೈ ಸುಪರ್ಣಃ ಸುತದೋ ನರೇಷು ಪ್ರಜಾಪತೇ ವಾಽಸ್ಯ ಯತಸ್ತಥಾಜ್ಞಾ|
ಕೃತಾ ಪುರಾ ಹರಿಣಾ ಶಂಕರಸ್ತು ಕ್ರೋಧಾತ್ಮಕಃ ಪಾಲನೇ ನೈವ ಯೋಗ್ಯಃ ॥
`ಗರುಡನು ಪುತ್ರದಾನ ಮಾಡುತ್ತ ಮನುಷ್ಯರಲ್ಲಿ ಹುಟ್ಟುವುದಿಲ್ಲ. ಏಕೆಂದರೆ ಹರಿ ಅವನಿಗೆ ಹಿಂದೆ ಹಾಗೇ ಆಜ್ಞೆ ಮಾಡಿದ್ದಾನೆ. ಶಿವ ಕ್ರೋಧಾಭಿಮಾನಿ. ರಾಜ್ಯಪಾಲನೆಯಲ್ಲಿ ಯೋಗ್ಯನೇ ಅಲ್ಲ.
ಅತೋ ಮಹೇಂದ್ರೋ ಬಲವಾನನಂತರ-
ಸ್ತೇಷಾಂ ಸಮಾಹ್ವಾನಮಿಹಾರ್ಹತಿ ಸ್ವರಾಟ್ |
ಇತೀರಿತಾ ಸಾಹ್ವಯದಾಶು ವಾಸವಂ
ತತಃ ಪ್ರಜಜ್ಞೇ ಸ್ವಯಮೇವ ಶಕ್ರಃ ॥98॥
`ಅದರಿಂದ ಅವರಿಗೆ ಅನಂತರದ ಬಲಿಷ್ಠನಾದ ದೇವ ಮಹೇಂದ್ರ. ಅವನೆ ಪುತ್ರದಾನ ವಿಷಯದಲ್ಲಿ ಆಹ್ವಾನಕ್ಕೆ ಯೋಗ್ಯನಾಗಿರುತ್ತಾನೆ'. ಪಾಂಡು ಹೀಗೆ ಹೇಳಿದಾಗ ಕುಂತಿ ಬೇಗನೆ ದೇವೇಂದ್ರನನ್ನು ಮಂತ್ರಪೂರ್ವಕ ಆಹ್ವಾನಿಸಿದಳು. ಆಗ ಇಂದ್ರ ತಾನೇ ಜನಿಸಿದ.
ಸ ಚಾರ್ಜುನೋ ನಾಮ ನರಾಂಶಯುಕ್ತೋ
ವಿಷ್ಣ್ವಾವೇಶೀ ಬಲವಾನಸ್ತ್ರವೇತ್ತಾ |
ರೂಪ್ಯನ್ಯಃ ಸ್ಯಾತ್ ಸೂನುರಿತ್ಯುಚ್ಯಮಾನಾ
ಭರ್ತ್ರಾ ಕುಂತೀ ನೇತಿ ತಂ ಪ್ರಾಹ ಧರ್ಮಾತ್ ॥99॥
ಅವನು ಅರ್ಜುನನೆನಿಸಿದ. ನರಾಂಶಯುಕ್ತನಾಗಿದ್ದು ವಿಷ್ಣುವಿನ ಆವೇಶ ಉಳ್ಳವ, ಬಲಿಷ್ಠ. ಶಸ್ತ್ರಾಸ್ತ್ರಗಳನ್ನು ಬಲ್ಲವ `ಸುಂದರನಾದ ಇನ್ನೊಬ್ಬ ಮಗನೂ ಬೇಕೆಂದು ಪಾಂಡು ಹೇಳಿದಾಗ ಧರ್ಮದೃಷ್ಟಿಯಿಂದ ಬೇಡವೆಂದಳು ಕುಂತಿ.
* * * *

ನೂರ ಹದಿನೆಂಟನೆಯ ಅಧ್ಯಾಯ
(ಕುಂತಿಯಲ್ಲಿ ಇಂದ್ರನಿಂದ ಅರ್ಜುನನ ಉತ್ಪತ್ತಿ ಮತ್ತು ಅಶರೀರವಾಣಿ.)
ವೈಶಂಪಾಯನಃ
ಜಾತೇ ಬಲವತಾಂ ಶ್ರೇಷ್ಠೇ ಪಾಂಡುಶ್ಚಿಂತಾಪರೋಽಭವತ್ |
ಕಥಮನ್ಯೋ ಮಮ ಸುತೋ ಲೋಕೇ ಶ್ರೇಷ್ಠೋ ಭವೇದಿತಿ ॥1॥
ಬಲಾಢ್ಯರಲ್ಲಿ ಶ್ರೇಷ್ಠರಾದ ವಾಯುದೇವರು ಮಗನಾಗಿ ಅವತರಿಸುತ್ತಿರಲು ಪಾಂಡುವು ತನಗೆ ಇನ್ನೊಬ್ಬ ಶ್ರೇಷ್ಠನಾದ ಪುತ್ರನು ಹೇಗೆ ದೊರೆಯುವನು ಎಂದು ಚಿಂತಾಕ್ರಾಂತನಾದನು.
ದೈವಂ ಪುರುಷಕಾರಶ್ಚ ಯತ್ರ ಲೋಕಃ ಪ್ರತಿಷ್ಠಿತಃ |
ಯತ್ರ ದೇವಾತ್ತು ತಪಸಾ ಲಪ್ಸ್ಯೇ ಪುತ್ರಂ ಮಹಾಬಲಮ್ ॥2॥
ಯಾವ ಪುತ್ರನು ದೈವಬಲದಿಂದಲೂ, ಪುರುಷಪ್ರಯತ್ನದಿಂದಲೂ ಕೂಡಿದವನಾಗಿದ್ದು ಲೋಕಕ್ಕೆ ಆಶ್ರಯನಾಗುವನೋ ಅಂತಹ ಮಹಾಬಲನಾದ ಪುತ್ರನನ್ನು ಯಾವ ದೇವತೆಯನ್ನು ಕುರಿತು ತಪಸ್ಸುಮಾಡಿ ಪಡೆಯಲ್ಲಿ (ಎಂದು ಚಿಂತಿಸಿದನು).
ಇಂದ್ರೋ ಹಿ ರಾಜಾ ದೇವಾನಾಂ ಪ್ರಧಾನ ಇತಿ ಮೇ ಶ್ರುತಃ |
ಅಪ್ರಮೇಯಬಲೋತ್ಸಾಹೋ ವೀರ್ಯವಾನುತ್ತಮದ್ಯುತಿಃ ॥3॥
ದೇವತೆಗಳ ರಾಜನಾದ ಇಂದ್ರನು ಅಪ್ರಮೇಯವಾದ ಬಲ ಮತ್ತು ಉತ್ಸಾಹಗಳನ್ನು ಉಳ್ಳವನೂ, ಪರಾಕ್ರಮಶಾಲಿಯೂ ಮತ್ತು ಅಮಿತದ್ಯುತಿಯೂ ಆಗಿ ದೇವತೆಗಳಿಗೆ ಪ್ರಧಾನನಾದವನು ಎಂದು ನಾನು ಕೇಳಿದ್ದೇನೆ.
ತಂ ತೋಷಯಿತ್ವಾ ತಪಸಾ ಪುತ್ರಂ ಲಪ್ಸ್ಯೇ ಮಹಾಬಲಮ್ |
ಯಂ ದಾಸ್ಯತಿ ಸ ನಃ ಪುತ್ರಂ ಸಪ್ರಧಾನೋ ಭವಿಷ್ಯತಿ ॥4॥
ನನ್ನ ತಪಸ್ಸಿನಿಂದ ಅವನನ್ನು ಸಂತೋಷಪಡಿಸಿ ಮಹಾಬಲವುಳ್ಳ ಪುತ್ರನನ್ನು ಪಡೆಯುವೆನು. ಅವನು ಯಾವ ಪುತ್ರನನ್ನು ನನಗೆ ಕೊಡುತ್ತಾನೋ, ಅವನು ಪ್ರಧಾನನಾಗುವನು.
ಅಮಾನುಷಾನ್ ಮಾನುಷಾಂಶ್ಚ ಸ ಸಂಗ್ರಾಮೇ ಹನಿಷ್ಯತಿ |
ತಪಸಾ ಕರ್ಮಣಾ ಚೈವ ತಸ್ಮಾತ್ ತಪ್ಸ್ಯೇ ಮಹತ್ ತಪಃ ॥5॥
ಅವನು ಮನುಷ್ಯರನ್ನೂ, ಮನುಷ್ಯರಲ್ಲದವರನ್ನೂ ಯುದ್ಧದಲ್ಲಿ ತನ್ನ ತಪಸ್ಸಿನ ಶಕ್ತಿಯಿಂದಲೂ ಮತ್ತು ಕ್ರಿಯಾಶಕ್ತಿಯಿಂದಲೂ ಸಂಹರಿಸುವನು. ಆದ್ದರಿಂದ ದೊಡ್ಡ ತಪಸ್ಸನ್ನು ಆಚರಿಸುವೆನು.
ತತಃ ಪಾಂಡುಸ್ತು ರಾಜರ್ಷಿಃ ಮಂತ್ರಯಿತ್ವಾ ಮಹರ್ಷಿಭಿಃ |
ಆದಿಶ್ಯ ಕುಂತ್ಯಾಃ ಕೌರವ್ಯ ವ್ರತಂ ಸಾಂವತ್ಸರಂ ಶುಭಮ್ ॥6॥
ಆತ್ಮನಶ್ಚ ಮಹಾವೀರ್ಯ ಏಕಪಾದಸ್ಥಿತೋಽಭವತ್ |
ಉಗ್ರಂ ತಪಃ ಸ ಆತಸ್ಥೇ ಪರಮೇಣ ಸಮಾಧಿನಾ ॥7॥
ಅನಂತರ ರಾಜಋಷಿಯಾದ ಪಾಂಡುವು ಮಹರ್ಷಿಗಳ ಜೊತೆಯಲ್ಲಿ ಸಮಾಲೋಚನೆಯನ್ನು ಮಾಡಿ, ಒಂದು ಸಂವತ್ಸರದವರೆಗೆ ಧರಿಸಬೇಕಾದ ಶುಭವಾದ ವ್ರತವನ್ನು ಕುಂತಿಗೆ ಆದೇಶ ಮಾಡಿ ತನಗೂ ಅಂತಹ ವ್ರತವನ್ನು ಚಿಂತನೆ ಮಾಡಿ, ಒಂದೇ ಪಾದದ ಮೇಲೆ ನಿಂತನು. ಮಹಾಪರಾಕ್ರಮಿಯಾದ ಕೌರವ್ಯನೇ, ಅವನು ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಟ್ಟು ಉಗ್ರವಾದ ತಪಸ್ಸನ್ನು ಆಚರಿಸಲು ಪ್ರಾರಂಭಿಸಿದನು.
ಆರಿರಾಧಯಿಷುರ್ದೇವಂ ತ್ರಿದಶಾನಾಂ ತಮೀಶ್ವರಮ್ |
ಸೂರ್ಯೇಣ ಸಹ ಧರ್ಮಾತ್ಮಾ ಪರ್ಯವರ್ತತ ಭಾರತ ॥8॥
ಎಲೈ ಭಾರತನೇ, ದೇವತೆಗಳ ರಾಜನಾದ ಇಂದ್ರನನ್ನು ಒಲಿಸುವ ಸಲುವಾಗಿ ಧರ್ಮಾತ್ಮನಾದ ಅವನು ಸೂರ್ಯನ ಜೊತೆಯಲ್ಲಿ ತಿರುಗಿದನು. (ಸೂರ್ಯನು ಪೂರ್ವದಲ್ಲಿದ್ದಾಗ ಪೂರ್ವಾಭಿಮುಖವಾಗಿ ನಿಂತು, ಪಶ್ಚಿಮಕ್ಕೆ ತಿರುಗಿದಾಗ ಪಶ್ಚಿಮಾಭಿಮುಖವಾಗಿ ನಿಂತು ತಪಸ್ಸು ಮಾಡಿದನು.)
ತಂ ತು ಕಾಲೇನ ಮಹತಾ ವಾಸವಃ ಪ್ರತ್ಯಭಾಷತ |
ಪುತ್ರಂ ತವ ಪ್ರದಾಸ್ಯಾಮಿ ತ್ರಿಷು ಲೋಕೇಷು ವಿಶ್ರುತಮ್ ॥9॥
ಬಹಳ ಕಾಲವಾದ ಮೇಲೆ ಇಂದ್ರನು ಅವನನ್ನು ಕುರಿತು, ನಿನಗೆ ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗುವ ಪುತ್ರನನ್ನು ಕೊಡುವೆನು ಎಂದು ಹೇಳಿದನು.
ಮಿತ್ರೇಭ್ಯೋ ಬ್ರಾಹ್ಮಣೇಭ್ಯಶ್ಚ ಸುಹೃದ್ಭ್ಯಶ್ಚಾರ್ಥಸಾಧಕಮ್ |
ಸುತಂ ತೇಽಗ್ರ್ಯಂ ಪ್ರದಾಸ್ಯಾಮಿ ಸರ್ವಾಮಿತ್ರವಿನಾಶನಮ್ ॥10॥
ಮಿತ್ರರಿಗೂ, ಬ್ರಾಹ್ಮಣರಿಗೂ ಮತ್ತು ಎಲ್ಲಾ ಸುಹೃದಯರಿಗೂ ಇಷ್ಟಪ್ರದನಾದಂತಹ, ಸರ್ವಶತ್ರುಸಂಹಾರಕನಾದಂತಹ ಶ್ರೇಷ್ಠನಾದ ಸುತನನ್ನು ನಿನಗೆ ಕೊಡುವೆನು.
ವೈಶಂಪಾಯನಃ
ಇತ್ಯುಕ್ತಸ್ತು ಮಹೇಂದ್ರೇಣ ಕೌರವಃ ಕುರುವರ್ಧನಃ |
ಕುಂತೀಂ ರಾಜಸುತಾಂ ಪಾಂಡುರಪತ್ಯಾರ್ಥೇಽಭ್ಯಚೋದಯತ್ |
ಧರ್ಮಂ ಬಲಂ ಚ ನಿಶ್ಚಿತ್ಯ ಯಥಾ ಸ್ಯಾದಿತಿ ಭಾರತ ॥11॥
ಮಹೇಂದ್ರನಿಂದ ಹೀಗೆ ಹೇಳಲ್ಪಟ್ಟ ಕುರುವಂಶ ಪ್ರವರ್ಧಕನಾದ ಪಾಂಡುವು ರಾಜಕುಮಾರಿಯಾದ ಕುಂತಿಯನ್ನು ಕುರಿತು ಮಗನನ್ನು ಪಡೆಯುವ ಸಲುವಾಗಿ ಪ್ರೇರೇಪಿಸಿದನು. ಎಲೈ ಭಾರತನೇ, ಇಂದ್ರನ ಧರ್ಮವನ್ನು ಮತ್ತು ಬಲವನ್ನು ಗಮನಿಸಿ ಅಂತಹ

ಪುತ್ರನೇ ಜನಿಸುತ್ತಾನೆ ಎಂಬ ಕಾರಣದಿಂದ ಕುಂತಿಯನ್ನು ಪ್ರಚೋದಿಸಿದನು.
ಪಾಂಡುಃ
ನೀತಿಮಂತಂ ಮಹಾತ್ಮಾನಮಾದಿತ್ಯಸಮತೇಜಸಮ್ |
ದುರಾಧರ್ಷಂ ರಣೇ ಶೂರಂ ದೇವರಾಜಮಿವಾನಘಮ್ ॥12॥
ಪುತ್ರಂ ಜನಯ ಸುಶ್ರೋಣಿ ಧಾಮ ಕ್ಷತ್ರಿಯತೇಜಸಾಮ್ |
ಲಬ್ಧಃ ಪ್ರಸಾದೋ ದೇವೇಂದ್ರಾತ್ ತಮಾಹ್ವಯ ಶುಚಿಸ್ಮಿತೇ ॥13॥
ಎಲೌ ಸುಂದರಿಯೇ, ನೀತಿವುಳ್ಳವನೂ, ಮಹಾತ್ಮನಾದವನೂ, ಸೂರ್ಯನಂತೆ ತೇಜಸ್ಸುಳ್ಳವನೂ, ಶತ್ರುಗಳಿಗೆ ಸೋಲದವನೂ, ಯುದ್ಧದಲ್ಲಿ ಶೂರನಾದವನೂ, ಶುದ್ಧನಾದವನೂ, ಇಂದ್ರನಂತೆ ಇರುವವನೂ, ಕ್ಷತ್ರಿಯ ತೇಜಸ್ಸಿಗೆ ಆಶ್ರಯನಾದವನೂ ಆದ ಪುತ್ರನನ್ನು ಪಡೆ. ಶುಚಿಸ್ಮಿತೆಯೇ, ದೇವೇಂದ್ರನ ಅನುಗ್ರಹವನ್ನು ಪಡೆದದ್ದಾಯಿತು, ಅವನನ್ನು ಆಹ್ವಾನಿಸು.
ವೈಶಂಪಾಯನಃ
ಜಾತೇಷು ಧೃತರಾಷ್ಟ್ರಸ್ಯ ಪುತ್ರೇಷು ಚ ಮಹಾತ್ಮಸು |
ಕುಂತೀ ಪುನರಪತ್ಯಾಯ ದೇವರಾಜಮುಪಾಹ್ವಯತ್ ॥14॥
ಧೃತರಾಷ್ಟ್ರನಿಗೆ ಮಹಾಪ್ರಯತ್ನಶಾಲಿಗಳಾದ ನೂರು ಪುತ್ರರು ಜನಿಸಿದ ಮೇಲೆ ಕುಂತಿಯು ಸಂತಾನವನ್ನು ಪಡೆಯುವ ಸಲುವಾಗಿ ದೇವರಾಜನಾದ ಇಂದ್ರನನ್ನು ಆಹ್ವಾನಿಸಿದಳು.
ತತಃ ಪರ್ಯಚರತ್ ತೇನ ಬಲಿನಾ ಭಗವಾನಪಿ |
ಅಥಾಜಗಾಮ ದೇವೇಂದ್ರೋ ಜನಯಾಮಾಸ ಚಾರ್ಜುನಮ್ ॥15॥
ಆಗ ಬಲಿಷ್ಠನಾದ ಪಾಂಡುವು ಇಂದ್ರನ ಆರಾಧನೆಯನ್ನು ಮಾಡಿದನು. ದೇವೇಂದ್ರನು ಬಂದು ಅರ್ಜುನನನ್ನು ಉತ್ಪಾದಿಸಿದನು.
ಉತ್ತರಾಭ್ಯಾಂ ತು ಪೂರ್ವಾಭ್ಯಾಂ ಫಲ್ಗುನೀಭ್ಯಾಂ ತತೋ ದಿವಾ |
ಜಾತಸ್ತು ಫಾಲ್ಗುನೇ ಮಾಸಿ ತೇನಾಸೌ ಫಲ್ಗುನಃ ಸ್ಮೃತಃ ॥16॥
ಫಾಲ್ಗುಣ ಮಾಸದ ಪೂರ್ಣಿಮೆಯಂದು ಮಧ್ಯಾಹ್ನದವರೆಗೂ ಪೂರ್ವಫಲ್ಗುಣಿ ಇರುವಂತಹ ಮಧ್ಯಾಹ್ನದ ನಂತರ ಉತ್ತರಫಲ್ಗುಣಿ ಇರುವಂತಹ ನಕ್ಷತ್ರದ್ವಯಾತ್ಮಕವಾದ ದಿವಸದಲ್ಲಿ ಮಧ್ಯಾಹ್ನಕಾಲದಲ್ಲಿ ಅರ್ಜುನನು ಜನಿಸಿದನು. ಫಾಲ್ಗುಣ ಮಾಸದಲ್ಲಿ ಜನಿಸಿದುದರಿಂದ ಅವನಿಗೆ `ಫಲ್ಗುಣ' ಎಂದು ಹೆಸರು.
ಜಾತಮಾತ್ರೇ ಕುಮಾರೇ ತು ಸರ್ವಭೂತಪ್ರಹರ್ಷಿಣೀ |
ಸೂತಕೇ ವರ್ತಮಾನಾನಾಂ ವಾಗುವಾಚಾಶರೀರಿಣೀ ॥17॥
ಕುಮಾರನು ಜನಿಸಿದ ತಕ್ಷಣ ಸೂತಕಗೃಹದ ಸಮೀಪದಲ್ಲಿರುವವರಿಗೆಲ್ಲಾ ಬಹಳ ಸಂತೋಷವಾಗುವಂತೆ ಮೇಘಗಂಭೀರವಾದ ಘೋಷದಿಂದ ಆಕಾಶವು ಪ್ರತಿಧ್ವನಿಸುವಂತೆ ಅಶರೀರವಾಣಿಯಾಯಿತು.
ಮೇಘಗಂಭೀರನಿರ್ಘೋಷಾ ನಭೋ ನಾದಯತೀ ತದಾ |
ಕಾರ್ತವೀರ್ಯಸಮಃ ಪುತ್ರೋ ದೇವತುಲ್ಯಪರಾಕ್ರಮಃ |
ಏಷ ಶಕ್ರ ಇವಾಜಯ್ಯಃ ಪ್ರಥಯಿಷ್ಯತಿ ತೇ ಯಶಃ ॥18॥
ಕಾರ್ತವೀರ್ಯನಿಗೆ ಸಮನಾದ, ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳ ಇಂದ್ರನಂತೆ ಅಜಯ್ಯನಾದ ಈ ಪುತ್ರನು ನಿನ್ನ ಕೀರ್ತಿಯನ್ನು ವಿಸ್ತಾರಗೊಳಿಸುತ್ತಾನೆ.
ಅದಿತ್ಯಾ ವಿಷ್ಣುನಾ ಪ್ರೀತಿರ್ಯಥಾ ಸಮಭಿವರ್ಧಿತಾ |
ತಥಾ ವಿಷ್ಣುಸಮಃ ಪ್ರೀತಿಂ ವರ್ಧಯಿಷ್ಯತಿ ತೇಽರ್ಜುನಃ ॥19॥
ವಿಷ್ಣುವು ಅದಿತಿಯ ಮಗನಾಗಿ ಬೆಳೆಯುತ್ತಾ ಹೇಗೆ ಅದಿತಿಯ ಸಂತೋಷವನ್ನು ಹೆಚ್ಚಿಸಿದನೋ ಹಾಗೆ ವಿಷ್ಣು ಸಮನಾದ ಈ ಅರ್ಜುನನು ನಿನ್ನ ಸಂತೋಷವನ್ನು ಹೆಚ್ಚಿಸುತ್ತಾನೆ.
ಏಷ ಮದ್ರಾನ್ ವಶೇ ಕೃತ್ವಾ ಕೋಸಲಾನ್ ಸಹ ಕೇಕಯೈಃ |
ಚೇದಿಕಾಶಿಕರೂಶಾಂಶ್ಚ ಕುರೂಣಾಂ ಲಕ್ಷ್ಮ ಧಾಸ್ಯತಿ |
ಏತಸ್ಯ ಭುಜವೀರ್ಯೇಣ ತ್ರಾಸಿತಾಃ ಸರ್ವಶತ್ರವಃ ॥20॥
ನಿವಾತಕವಚಾಃ ಸರ್ವೇ ಪ್ರಹಾಸ್ಯಂತೇ ಚ ಜೀವಿತಮ್ |
ಹಿರಣ್ಯಪುರಮಾರುಜ್ಯ ನಿಹನಿಷ್ಯತಿ ಸಂಯುಗೇ ॥21॥
ಇವನು ಮದ್ರರನ್ನು, ಕೋಸಲರನ್ನು, ಕೇಕೆಯರನ್ನು, ಚೇದಿ, ಕಾಶಿ ಮತ್ತು ಕರೂಶಕರನ್ನೂ ತನ್ನ ವಶದಲ್ಲಿಟ್ಟುಕೊಂಡು ಅವರು ಕುರುಗಳ ಚಿಹ್ನೆಯನ್ನು ಧರಿಸುವಂತೆ ಮಾಡುತ್ತಾನೆ. ಇವನ ಭುಜವೀರ್ಯಕ್ಕೆ ಹೆದರಿದ ನಿವಾತಕವಚರೇ ಮೊದಲಾದ ಎಲ್ಲ ಶತ್ರುಗಳೂ ಪ್ರಾಣಗಳನ್ನು ತೊರೆಯುವರು.
ಪುಲೋಮಜಾಯಾಸ್ತನಯಾನ್ ಕಾಲಕೇಯಾಂಶ್ಚ ಸರ್ವಶಃ |
ಜಿತ್ವೋತ್ತರಾಂ ದಿಶಂ ದೇವೋ ವಿಜಿತ್ಯ ಯುಧಿ ಪಾರ್ಥಿವಾನ್ |
ಧನರತ್ನೌಘಮಮಿತಮಾನಯಿಷ್ಯತಿ ಪಾಂಡವಃ ॥22॥
ಹಿರಣ್ಯಪುರವನ್ನು ಧ್ವಂಸಮಾಡಿ ಯುದ್ಧದಲ್ಲಿ ಪೌಲೋಮಿಯ ಮಕ್ಕಳಾದ ಕಾಲಕೇಯರನ್ನೆಲ್ಲಾ ಸಂಹಾರ ಮಾಡುವನು. ಪಾಂಡುಪುತ್ರನಾದ ಇವನು ಉತ್ತರ ದಿಗ್ವಿಜಯವನ್ನು ಮಾಡಿ ಯುದ್ಧದಲ್ಲಿ ರಾಜರುಗಳನ್ನು ಗೆದ್ದು ಅಮಿತವಾದ ಧನ, ರತ್ನಗಳ ರಾಶಿಯನ್ನು ತರುವನು.
ಏತಸ್ಯ ಭುಜವೀರ್ಯೇಣ ಖಾಂಡವೇ ಹವ್ಯವಾಹನಃ |

ಮೇದಸಾ ಸರ್ವಭೂತಾನಾಂ ತುಷ್ಟಿಂ ಯಾಸ್ಯತಿ ವೈ ಪರಾಮ್ ॥23॥
ಇವನ ಭುಜವೀರ್ಯದಿಂದ ಖಾಂಡವ ವನದಲ್ಲಿ ಅಗ್ನಿಯು ಎಲ್ಲಾ ಪ್ರಾಣಿಗಳ ಮೇದಸ್ಸನ್ನು ಸೇವಿಸಿ ಬಹಳ ತೃಪ್ತಿಯುಳ್ಳವನಾಗುವನು.
ಗ್ರಾಮಣೀಂಶ್ಚ ಮಹೀಪಾಲಾನ್ ಏಷ ಜಿತ್ವಾ ಮಹಾಬಲಃ |
ಭ್ರಾತೃಭಿಃ ಸಹಿತೋ ವೀರಃ ತ್ರೀನ್ ಮೇಧಾನಾಹರಿಷ್ಯತಿ ॥24॥
ಮಹಾಬಲನಾದ ಇವನು ರಾಜರನ್ನು, ಸಾಮಂತರಾಜರುಗಳನ್ನು ಗೆದ್ದು ಅಣ್ಣತಮ್ಮಂದಿರ ಜೊತೆಯಲ್ಲಿ ಸೇರಿ ಮೂರು ಅಶ್ವಮೇಧಯಾಗಗಳನ್ನು ಮಾಡುವನು.
ಜಾಮದಗ್ನ್ಯಸಮಃ ಕುಂತಿ ಶಿವೇರೌಶೀನರಾತ್ ಪರಃ |
ಏವಂ ವೀರ್ಯವತಾಂ ಶ್ರೇಷ್ಠೋ ಮಹಾಭಾಗೋ ಭವಿಷ್ಯತಿ ॥25॥
ಕುಂತಿ, ಇವನು ಪರುಶುರಾಮನಿಗೆ ಸಮನಾದವನು. ಉಶೀನರನ ಮಗನಾದ ಶಿಬಿಗಿಂತಲೂ ಶ್ರೇಷ್ಠನಾದವನು. ಇವನು ಪರಾಕ್ರಮಗಳಲ್ಲಿ ಅಗ್ರಗಣ್ಯನೂ ಮತ್ತು ಮಹಾನುಭಾವನೂ ಆಗುವನು.
ಏಷ ಚಾಸತ್ರಣಿ ದಿವ್ಯಾನಿ ನಿಖಿಲಾನ್ಯಾಹರಿಷ್ಯತಿ |
ವಿಪ್ರನಷ್ಟಾಂ ಶ್ರಿಯಂ ಚಾಯಮಾಹರ್ತಾ ಪುರುಷರ್ಷಭಃ ॥26॥
ಇವನು ಎಲ್ಲಾ ದಿವ್ಯಾಸ್ತ್ರಗಳನ್ನೂ ಸಂಪಾದಿಸಿ ನಷ್ಟವಾದ ಕುರುವಂಶದ ಕೀರ್ತಿಯನ್ನು ಪುನಃ ಸ್ಥಾಪಿಸುವನು.
ಏತದತ್ಯದ್ಭುತಂ ರಾಜನ್ ಕುಂತ್ಯಾಃ ಪಾರ್ಥಸ್ಯ ಸೂತಕೇ |
ಉಕ್ತವಾನ್ ವಾಯುರಾಕಾಶೇ ಕುಂತೀ ಶುಶ್ರಾವ ಭಾರತ ॥27॥
ರಾಜನೇ, ಕುಂತಿಯು ಅರ್ಜುನನ್ನು ಪ್ರಸವಿಸಿದಾಗ ಈ ಅದ್ಭುತವು ನಡೆಯಿತು. ಭಾರತನೇ, ವಾಯುವು ಆಕಾಶದಲ್ಲಿ ಆಡಿದ ಈ ಮಾತುಗಳನ್ನು ಕುಂತಿಯೂ ಕೇಳಿದಳು.
ವಾಚಮುಚ್ಚರಿತಾಮುಚ್ಚೈಸ್ತಾಂ ನಿಶಮ್ಯ ಯಶಸ್ವಿನೀಮ್ |
ಬಭೂವ ಪರಮೋ ಹರ್ಷಃ ಶತಶೃಂಗನಿವಾಸಿನಾಮ್ ॥28॥
ಅಂತರಿಕ್ಷದಿಂದ ಗಟ್ಟಿಯಾಗಿ ಕೇಳಿಬಂದ ಈ ಕೀರ್ತಿಸಂಪಾದಕವಾದ ಮಾತುಗಳನ್ನು ಕೇಳಿ ಶತಶೃಂಗ ನಿವಾಸಿಗಳೆಲ್ಲರಿಗೂ ಪರಮ ಹರ್ಷವುಂಟಾಯಿತು.
ತತೋ ದೇವರಥಾನಾಂ ಚ ಸೇಂದ್ರಾಣಾಂ ಚ ದಿವೌಕಸಾಮ್ |
ಆಕಾಶೇ ದುಂದುಭೀನಾಂ ಚ ಬಭೂವಾತುಲನಿಸ್ವನಃ |
ಉದತಿಷ್ಠನ್ ಮಹಾಘೋಷಃ ಪುಷ್ಪವೃಷ್ಟಿಭಿರಾವೃತಃ ॥29॥
ಅನಂತರ ಆಕಾಶದಲ್ಲಿ ಇಂದ್ರ ಮೊದಲಾದ ದೇವತೆಗಳ ದೇವರಥಗಳ ಮತ್ತು ದುಂದುಭಿಗಳ ತೀವ್ರವಾದ ನಿಸ್ವನವು ಉಂಟಾಯಿತು. ಉಂಟಾದ ಮಹಾಘೋಷದ ಜೊತೆಯಲ್ಲಿ ದೇವತೆಗಳ ಪುಷ್ಪವೃಷ್ಟಿಯೂ ಉಂಟಾಯಿತು.
ಸಮವೇತ್ಯ ಚ ದೇವಾನಾಂ ಗಣಃ ಪಾರ್ಥಮಪೂಜಯತ್ |
ಕಾದ್ರವೇಯಾ ವೈನತೇಯಾ ಗಂಧರ್ವಾಪ್ಸರಸಸ್ತಥಾ |
ಪ್ರಜಾನಾಂ ಪತಯಃ ಸರ್ವೇ ಸಪ್ತ ಚೈವ ಮಹರ್ಷಯಃ ॥30॥
ಭರದ್ವಾಜಃ ಕಾಶ್ಯಪೋ ಗೌತಮಶ್ಚ
ವಿಶ್ವಾಮಿತ್ರೋ ಜಮದಗ್ನಿರ್ವಸಿಷ್ಠಃ |
ಯಶ್ಚೋದಿತೋ ಭಾಸ್ಕರೇಽಭೂತ್ ಪ್ರನಷ್ಟೇ
ಸೋಽಪ್ಯತ್ರಾತ್ರಿರ್ಭಗವಾನಾಜಗಾಮ ॥31॥
ಇದನ್ನೆಲ್ಲಾ ಗಮನಿಸಿದ ದೇವತೆಗಳ ಸಮೂಹವು ಅರ್ಜುನನನ್ನು ಪೂಜಿಸಿತು. ಕದ್ರುವಿನ ಮಕ್ಕಳು, ವಿನತೆಯ ಮಕ್ಕಳು, ಗಂಧರ್ವರು, ಅಪ್ಸರೆಯರು, ಪ್ರಜಾಪತಿಗಳು, ಭರದ್ವಾಜ, ಕಾಶ್ಯಪ, ಗೌತಮ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ ಮತ್ತು ಸೂರ್ಯನು ನಷ್ಟನಾದಾಗ ತಾವೇ ಉದಿಸಿ ಸೂರ್ಯನ ಕಾರ್ಯವನ್ನು ಮಾಡಿದ ಪೂಜ್ಯರಾದ ಅತ್ರಿ ಋಷಿಗಳು ಎಲ್ಲರೂ ಅಲ್ಲಿಗೆ ಬಂದರು.
ಮರೀಚಿರಂಗೀರಾಶ್ಚೈವ ಪುಲಸ್ತ್ಯಃ ಪುಲಹಃ ಕ್ರತುಃ |
ದಕ್ಷಪ್ರಜಾಪತಿಶ್ಚೈವ ಅಥರ್ವಾಽಪ್ಸರಸಸ್ತಥಾ ॥32॥
ದಿವ್ಯಮಾಲ್ಯಾಂಬರಧರಾಃ ಸರ್ವಾಲಂಕಾರಭೂಷಿತಾಃ |
ತೇ ಚ ಪ್ರಕಾಶಾ ಮರ್ತ್ಯೇಷು ಸರ್ವೋಪಸ್ಕಾರಸಂಭೃತಾಃ |
ಉಪಗಾಯಂತಿ ಬೀಭತ್ಸುಮುಪನೃತ್ಯಂತಿ ಚೈವ ಹಿ ॥33॥
ಮರೀಚಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷಪ್ರಜಾಪತಿ, ಅಥರ್ವ ಮತ್ತು ಅಪ್ಸರೆಯರು ದಿವ್ಯಮಾಲ್ಯಾಂಬರಗಳನ್ನು ಧರಿಸಿ, ಸರ್ವಾಲಂಕಾರಗಳಿಂದ ಭೂಷಿತರಾಗಿ, ಮನುಷ್ಯರೆದುರಿಗೆ ಪ್ರತ್ಯಕ್ಷರಾಗಿ, ಎಲ್ಲಾ ವಾದ್ಯಗಳ ಸಹಿತವಾಗಿ ಅರ್ಜುನನನ್ನು ಉದ್ದೇಶಿಸಿ ಗಾನವನ್ನು ಮಾಡಿದರು. ನರ್ತನವನ್ನೂ ಮಾಡಿದರು.
ತತೋ ಗಂಧರ್ವತೂರ್ಯೇಷು ನಿನದತ್ಸು ವಿಹಾಯಸಿ |
ಬಹುಭಿಃ ಸಹ ಗಂಧರ್ವೈರಗಾಯತ ಚ ತುಂಬುರುಃ ॥34॥
ಆಗ ಆಕಾಶದಲ್ಲಿ ಗಂಧರ್ವವಾದ್ಯಗಳು ಮೊಳಗುತ್ತಿರಲು, ಅನೇಕ ಗಂಧರ್ವರ ಜೊತೆಯಲ್ಲಿ ತುಂಬುರುವು ಗಾನ ಮಾಡಿದನು.
ಭೀಷ್ಮಸೇನೋಗ್ರಸೇನೌ ಚ ಪೂರ್ಣಾಯುರನಘಸ್ತದಾ |
ಹೋಮಶ್ಚ ಧೃತರಾಷ್ಟ್ರಶ್ಚ ಸೂರ್ಯವರ್ಚಾಸ್ತಥಾಽಷ್ಟಮಃ |

ಯುಗಪಸ್ತುರ್ಣಪಃ ಕಾರ್ಷ್ಣಿರ್ ನಂದೀ ಚಿತ್ರರಥಸ್ತಥಾ ॥35॥
ತ್ರಯೋದಶಃ ಶಾಲಿಶಿರಾಃ ಪರ್ಜನ್ಯಶ್ಚ ಚತುರ್ದಶಃ |
ಕವಿಃ ಪಂಚದಶಶ್ಚಾತ್ರ ಕಿಂತುನಾರಸ್ತು ಷೋಡಶಃ |
ಇತ್ಯೇತೇ ದೇವಗಂಧರ್ವಾ ಉಪಗಾಯನ್ ಧನಂಜಯಮ್ ॥36॥
ಭೀಷ್ಮಸೇನ, ಉಗ್ರಸೇನ, ಪೂರ್ಣಾಯು, ಅನಘ, ಹೋಮ, ಧೃತರಾಷ್ಟ್ರ, ಸೂರ್ಯವರ್ಚ, ಯುಗಪ, ತುರ್ಣಪ, ಕಾರ್ಷ್ಣಿ, ನಂದೀ, ಚಿತ್ರರಥ, ಶಾಲಿಶಿರ, ಪರ್ಜನ್ಯ, ಕಿಂತುನಾರ, ಹೀಗೆ ಹದಿನಾರು ದೇವಗಂಧರ್ವರು ಧನಂಜಯನನ್ನು ಉದ್ದೇಶಿಸಿ ಗಾನ ಮಾಡಿದರು.
ಸದ್ವಾನ್ ಬೃಹದ್ವಾನ್ ಬೃಹಕಃ ಕರಾಳಶ್ಚ ಮಹಾಯಶಾಃ |
ಬ್ರಹ್ಮಚಾರೀ ರತಿಗುಣಃ ಸುವರ್ಣಶ್ಚೇತಿ ಸಪ್ತಮಃ ॥37॥
ವಿಶ್ವಾವಸುರ್ಭುಮನ್ಯುಶ್ಚ ಸುಚಂದ್ರೋ ದಶಮಃ ಸ್ಮೃತಃ |
ಇತ್ಯೇತೇ ದೇವಗಂಧರ್ವಾ ಉಪಗಾಯನ್ ಧನಂಜಯಮ್ ॥38॥
ಸದ್ವಾನ್, ಬೃಹದ್ವಾನ್, ಬೃಹಕ, ಕರಾಳ, ಬ್ರಹ್ಮಚಾರೀ, ರತಿಗುಣ, ಸುವರ್ಣ, ವಿಶ್ವಾವಸು, ಭುಮನ್ಯು ಮತ್ತು ಹತ್ತನೆಯ ಸುಚಂದ್ರ ಈ ಹತ್ತು ದೇವಗಂಧರ್ವರು ಧನಂಜಯನ ಸಮೀಪದಲ್ಲಿ ಗಾನ ಮಾಡಿದರು.
ಹಾಹಾ ಹೂಹೂಶ್ಚ ಗಂಧರ್ವೌ ಹಂಸಶ್ಚ ಭರತರ್ಷಭ |
ಇತ್ಯೇತೇ ದೇವಗಂಧರ್ವಾ ಉಪಗಾಯನ್ ಧನಂಜಯಮ್ ॥39॥
ಎಲೈ ಭರತಶ್ರೇಷ್ಠನೇ, ಹಾಹಾ, ಹೂಹೂ, ಹಂಸ, ಈ ಮೂವರು ದೇವಗಂಧರ್ವರು ಧನಂಜಯನ ಸಮೀಪದಲ್ಲಿ ಗಾನ ಮಾಡಿದರು.
ತಥೈವಾಪ್ಸರಸೋ ಹೃಷ್ಟಾಃ ಸರ್ವಾಲಂಕಾರಭೂಷಿತಾಃ |
ನನೃತುಶ್ಚ ವರಾರೋಹಾ ಜಗುರಾಯತಲೋಚನಾಃ ॥40॥
ಹಾಗೆಯೇ, ಸರ್ವಾಲಂಕಾರಭೂಷಿತರೂ, ಸುಂದರಿಯರೂ, ಕಮಲನಯನೆಯರೂ ಆದ ಅಪ್ಸರೆಯರೂ, ಸಂತೋಷದಿಂದ ನರ್ತನವನ್ನು ಮಾಡಿ ಗಾನ ಮಾಡಿದರು.
ಅನೂಚಾನಾಽನವದ್ಯಾಂಗೀ ಕ್ರಿಯಾಮುಖ್ಯಾ ಗುಣಾವರಾ |
ಅಂತಕೇಶೀ ತಥಾ ಸಾಚೀ ದೀರ್ಘಕೇಶೀ ತ್ವಲಂಬುಸಾ |
ಮರೀಚಿಃ ಶುಚಿಕಾ ಚೈವ ವಿದ್ಯುದ್ವರ್ಣಾ ತಿಲೋತ್ತಮಾ ॥41॥
ಅದ್ರಿಕಾ ಲಕ್ಷಣಾ ಕ್ಷೇಮಾ ದೇವೀ ರಂಭಾ ಮನೋರಮಾ |
ಉರ್ವಶೀ ಚೈವ ರಾಜೇಂದ್ರ ನನೃತುರ್ಗೀತನಿಸ್ವನೈಃ ॥42॥
ಅನೂಚಾನಾ, ಅನವದ್ಯಾಂಗಿ, ಕ್ರಿಯಾಮುಖ್ಯಾ, ಗುಣಾವರಾ, ಅಂತಕೇಶೀ, ಸಾಚೀ, ದೀರ್ಘಕೇಶೀ, ಅಲಂಬುಸಾ, ಮರೀಚಿ, ಶುಚಿಕಾ, ವಿದ್ಯುದ್ವರ್ಣಾ, ತಿಲೋತ್ತಮಾ, ಅದ್ರಿಕಾ, ಲಕ್ಷಣಾ, ಕ್ಷೇಮಾ, ದೇವೀ, ರಂಭಾ, ಮನೋರಮಾ, ಉರ್ವಶೀ ಈ ಎಲ್ಲಾ ಅಪ್ಸರೆಯರು ಗೀತನಿಸ್ವನಗಳ ಜೊತೆಯಲ್ಲಿ ನರ್ತನವನ್ನು ಮಾಡಿದರು.
ಅಸಿತಾ ಚ ಸುಬಾಹುಶ್ಚ ಸುಪ್ರಿಯಾ ಸುವಪುಸ್ತಥಾ |
ಪುಂಡರೀಕಾ ಸುಗಂಧಾ ಚ ಸುರಥಾ ಚ ಪ್ರಮಾಥಿನೀ |
ಕಾಮ್ಯಾ ಶಾರದ್ವತೀ ಚೈವ ನನೃತುಸ್ತತ್ರ ಸಂಘಶಃ ॥43॥
ರಾಜೇಂದ್ರನೇ, ಅಸಿತಾ, ಸುಬಾಹು, ಸುಪ್ರಿಯಾ, ಸುವಪು, ಪುಂಡರೀಕಾ, ಸುಗಂಧಾ, ಸುರಥಾ, ಪ್ರಮಾಥಿನೀ, ಕಾಮ್ಯ, ಶಾರದ್ವತೀ ಈ ಅಪ್ಸರೆಯರು ಗುಂಪುಗಳಲ್ಲಿ ನರ್ತನ ಮಾಡಿದರು.
ಮೇನಕಾ ಸಹಜನ್ಯಾ ಚ ಪರ್ಣಿಕಾ ಪುಂಜಿಕಸ್ಥಲಾ |
ಘೃತಾಚೀ ಚೈವ ವಿಶ್ವಾಚೀ ಪೂರ್ವಚಿತ್ತಿಃ ಕೃತುಸ್ತಥಾ ॥44॥
ಉನ್ಮ್ಲೋಚೇತ್ಯಭಿವಿಖ್ಯಾತಾ ಪ್ರಂಲೋಚೇತಿ ಚ ತಾದೃಶೀ |
ಉರ್ವಶ್ಯೇಕಾದಶೀತ್ಯೇತಾ ಜಗುರಾಯತಲೋಚನಾಃ ॥45॥
ಮೇನಕಾ, ಸಹಜನ್ಯಾ, ಪರ್ಣಿಕಾ, ಪುಂಜಿಕಸ್ಥಲಾ, ಘೃತಾಚೀ, ವಿಶ್ವಾಚೀ, ಪೂರ್ವಚಿತ್ತಿ, ಕೃತು, ಉನ್ಮ್ಲೋಚಾ, ಪ್ರಂಲೋಚಾ, ಉರ್ವಶೀ ಈ ಹನ್ನೊಂದು ಜನ ಪ್ರಖ್ಯಾತರಾದ ವಿಶಾಲಾಕ್ಷಿಯನೆಯರಾದ ಅಪ್ಸರೆಯರು ಗಾನವನ್ನು ಮಾಡಿದರು.
ಧಾತಾಽರ್ಯಮಾ ಚ ಮಿತ್ರಶ್ಚ ವರುಣೋಽಂಶೋ ಭಗಸ್ತಥಾ |
ಇಂದ್ರೋ ವಿವಸ್ವಾನ್ ಪೂಷಾ ಚ ಪರ್ಜನ್ಯೋ ದಶಮಃ ಸ್ಮೃತಃ |
ತತಸ್ತ್ವಷ್ಟಾ ತತೋ ವಿಷ್ಣುರಜಘನ್ಯೋ ಜಘನ್ಯಜಃ ॥46॥
ಇತ್ಯೇತೇ ದ್ವಾದಶಾದಿತ್ಯಾ ಜ್ವಲಂತಃ ಸೂರ್ಯವರ್ಚಸಃ |
ಮಹಿಮಾನಂ ಪಾಂಡವಸ್ಯ ಕುರ್ವಂತಸ್ತಸ್ಥುರಂಬರೇ ॥47॥
ಧಾತಾ, ಅರ್ಯಮ, ಮಿತ್ರ, ವರುಣ, ಅಂಶ, ಭಗ, ಇಂದ್ರ, ವಿವಸ್ವಾನ್, ಪೂಷಾ, ಪರ್ಜನ್ಯ, ತ್ವಷ್ಟಾ ಮತ್ತು ಕೊನೆಯವನಾದರೂ ಗುಣಗಳಿಂದ ಶ್ರೇಷ್ಠನಾದ ವಿಷ್ಣು, ಈ ದ್ವಾದಶಾದಿತ್ಯರು ಸೂರ್ಯವರ್ಚಸ್ಸಿನಿಂದ ಬೆಳಗುತ್ತಾ, ಪಾಂಡವನಾದ ಅರ್ಜುನನ ಮಹಿಮೆಯನ್ನು ತೋರಿಸುತ್ತಾ, ಆಕಾಶದಲ್ಲಿ ನಿಂತರು.
ಮೃಗವ್ಯಾಧಶ್ಚ ಶರ್ವಶ್ಚ ನಿರೃತಿಶ್ಚ ಮಹಾಯಶಾಃ |
ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚ ಪರಂತಪಃ ॥48॥
ಭವನೋಽಥೇಶ್ವರಶ್ಚೈವ ಕಪಾಲೀ ಚ ವಿಶಾಂಪತೇ |
ಸ್ಥಾಣುರ್ಭವಶ್ಚ ಭಗವಾನ್ ರುದ್ರಾಸ್ತತ್ರಾವತಸ್ಥಿರೇ ॥49॥

ಮೃಗವ್ಯಾಧ, ಶರ್ವ, ನಿರೃತಿ, ಅಜೈಕಪಾತ್, ಅಹಿರ್ಬುಧ್ನ್ಯ, ಶತ್ರುತಾಪಕನಾದ ಪಿನಾಕಿ, ಭವನ, ಈಶ್ವರ, ಕಪಾಲೀ, ಸ್ಥಾಣು ಮತ್ತು ಪೂಜ್ಯನಾದ ಭವ, ಈ ಏಕಾದಶ ರುದ್ರರು ಅಲ್ಲಿ ಬಂದು ನಿಂತರು.
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಲೋಽನಿಲಃ |
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವಶ್ಚಾವತಸ್ಥಿರೇ ॥50॥
ಧರ, ಧ್ರುವ, ಸೋಮ, ಆಪ, ಅನಲ, ಅನಿಲ, ಪ್ರತ್ಯೂಷ ಮತ್ತು ಪ್ರಭಾಸ ಈ ಎಂಟು ವಸುಗಳು ಅಲ್ಲಿ ಬಂದು ನಿಂತರು.
ಯಥೈವ ವಸವಸ್ತ್ವಷ್ಟೌ ಮರುತಶ್ಚ ಮಹಾಬಲಾಃ |
ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವಿತಿ ॥51॥
ತೌ ಚಾಶ್ವಿನೌ ತಥಾ ಸಾಧ್ಯಾಸ್ತಸ್ಯ ಜನ್ಮನಿ ಸಂಸ್ಥಿತಾಃ |
ಕ್ರತುರ್ದಕ್ಷೋ ವಸುಃ ಸತ್ಯಃ ಕಾಲಃ ಕಾಮೋ ಮುನಿಸ್ತಥಾ ॥52॥
ಹೀಗೆ, ವಸುಗಳು ಎಂಟು ಮಂದಿಯೂ, ಹೀಗೆ ಮಹಾಬಲರಾದ ಮರುತ್ತುಗಳು, ನಲವತ್ತೊಂಭತ್ತು ದೇವತೆಗಳ ಸಮೂಹವೂ, ಹಾಗೆ ಅಶ್ವಿನಿಗಳೂ ಎಂದರೆ ನಾಸತ್ಯ ಮತ್ತು ದಸ್ರ ಎಂಬ ಇಬ್ಬರು ದೇವತೆಗಳ ಗಣ. ಆಗ ಅರ್ಜುನನ ಜನ್ಮಸ್ಥಳಕ್ಕೆ ಅಶ್ವಿನೀ ದೇವತೆಗಳು ಮತ್ತು ಸಾಧ್ಯರೂ ಬಂದು ನಿಂತರು.
ಪುರೂರವಾದ್ರ್ರವಶ್ಚೈವ ರೋಚಮಾನಸ್ತು ತೇ ದಶ |
ವಿಶ್ವೇ ದೇವಾ ಇತಿ ಖ್ಯಾತಾಃ ತಸ್ಯಾಸನ್ ಜನ್ಮನಿ ಸ್ಥಿತಾಃ ॥53॥
ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಮುನಿ, ಪುರೂರವ, ಆರ್ದ್ರವ ಮತ್ತು ರೋಚಮಾನ ಈ ಹತ್ತು ವಿಶ್ವೇದೇವತೆಗಳು ಅರ್ಜುನನ ಜನ್ಮ ಸಮಯದಲ್ಲಿ ಸನ್ನಿಹಿತರಾದರು.
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಗರುಡಶ್ಚ ಮಹಾಯಶಾಃ |
ಅರುಣಶ್ಚಾರುಣಿಶ್ಚೈವ ವೈನತೇಯಾ ಉಪಾಸತೇ |
ಆಯಯುಸ್ತಪಸಾ ಯುಕ್ತಾ ಮಹಾವೇಗಾ ಮಹಾಬಲಾಃ ॥54॥
ಮಹಾಬಲವುಳ್ಳವರೂ, ಮಹಾವೇಗವುಳ್ಳವರೂ, ಮಹಾತಪಸ್ಸುಳ್ಳವರೂ ಆದ ತಾರ್ಕ್ಷ್ಯ, ಅರಿಷ್ಟನೇಮಿ, ಕೀರ್ತಿವಂತನಾದ ಗರುಡ, ಅರುಣ, ಆರುಣಿ ಮೊದಲಾದ ವಿನತೆಯ ಕುಲಕ್ಕೆ ಸೇರಿದವರೆಲ್ಲಾ ಅಲ್ಲಿ ಬಂದು ನೆರೆದರು.
ಮಹಾನ್ ಪಿತಾಮಹಸ್ತ್ವೇನಂ ವಸ್ತ್ರೇಣ ರಜಸಾ ತದಾ |
ಪ್ರತಿಜಗ್ರಾಹ ನಪ್ತಾರಂ ರಾಜರ್ಷಿಪರಿವಾರಿತಃ ॥55॥
ಮಹಾನುಭಾವನೂ, ಪಿತಾಮಹನೂ ಆದ ಶಂತನುವು, ರಕ್ತವಸ್ತ್ರಗಳನ್ನುಟ್ಟು ರಾಜರ್ಷಿಗಳ ಜೊತೆಯಲ್ಲಿ ಬಂದು ತನ್ನ ಮೊಮ್ಮಗನಾದ ಅರ್ಜುನನನ್ನು ಸ್ವೀಕರಿಸಿದನು.
ಸಗರೋಂಬರೀಷೇಣ ನಹುಷೇಣ ಯಯಾತಿನಾ |
ಧೀಮತಾ ಧುಂಧುಮಾರೇಣ ರಾಜ್ಞೋಪರಿಚರೇಣ ಹ |
ಮುಚುಕುಂದೇನ ಮಾಂಧಾತ್ರಾ ಶಿಬಿನಾಽರಿಷ್ಟನೇಮಿನಾ ॥56॥
ಭರತೇನ ದಿಲೀಪೇನ ಸರ್ವೈಶ್ಚ ಜನಮೇಜಯ |
ಪೂರುಃ ಸಾರ್ಧಂ ನೃಪತಿಭಿರ್ಜಗ್ರಾಹ ಕುರುಪುಂಗವಮ್ ॥57॥
ಎಲೈ ಜನಮೇಜಯನೇ, ಪೂರುವು, ಸಗರ, ಅಂಬರೀಷ, ನಹುಷ, ಯಯಾತಿ, ಮೇಧಾವಿಯಾದ ಧುಂಧುಮಾರ, ಉಪರಿಚರವಸು, ಮುಚುಕುಂದ, ಮಾಂಧಾತಾ, ಶಿಬಿ, ಅರಿಷ್ಟನೇಮಿ, ಭರತ, ದಿಲೀಪ ಮೊದಲಾದ ರಾಜರ ಜೊತೆಯಲ್ಲಿ ಬಂದು ಕುರುಪುಂಗವನನ್ನು ಸ್ವೀಕರಿಸಿದನು.
ಅನ್ಯೇ ಚ ಬಹವಸ್ತತ್ರ ಸಮಾಸನ್ ರಾಜಸತ್ತಮಾಃ |
ಏತೇ ಚಾನ್ಯೇ ಚ ಬಹವೋ ನರಲೋಕಾಧಿಪಾಸ್ತಥಾ |
ದೇವಲೋಕಾದಿಹಾಗಮ್ಯ ಪ್ರೈಕ್ಷಂತ ಭರತರ್ಷಭಮ್ ॥58॥
ಅಲ್ಲಿ ಇನ್ನೂ ಅನೇಕ ರಾಜಶ್ರೇಷ್ಠರು ಬಂದರು. ಇವರೂ ಮತ್ತು ಅನೇಕ ನರಲೋಕದಲ್ಲಿ ಚಕ್ರವರ್ತಿಗಳಾಗಿ ದೇವಲೋಕಕ್ಕೆ ಹೋಗಿದ್ದ ರಾಜರು ಸಹ ದೇವಲೋಕದಿಂದ ಬಂದು ಭರತರ್ಷಭನಾದ ಅರ್ಜುನನನ್ನು ನೋಡಿದರು.
ವಿದ್ಯೋತಮಾನಂ ವಪುಷಾ ಭಾಸಯಂತಂ ದಿಶೋ ದಶ |
ಲಕ್ಷಣೈರ್ವ್ಯಂಜಕೈಃ ಸರ್ವೈರ್ಯುಕ್ತಂ ಮಾಹಾತ್ಮ್ಯಸೂಚಕೈಃ ॥59॥
ತನ್ನ ಶರೀರದಿಂದ ಹೊಳೆಯುತ್ತಿದ್ದಂತಹ ಹತ್ತು ದಿಕ್ಕುಗಳನ್ನೂ ಬೆಳಗುತ್ತಿದ್ದಂತಹ, ಮಾಹಾತ್ಮ್ಯಸೂಚಕವಾದ ಎಲ್ಲಾ ಲಕ್ಷಣಗಳಿಂದಲೂ ಯುಕ್ತವಾದ ಅರ್ಜುನನನ್ನು ನೋಡಿದರು.
ಏತಂ ದೃಷ್ಟ್ವಾ ಮಹಾವೀರ್ಯಂ ವಿಸ್ಮಿತಾ ಋಷಿಸತ್ತಮಾಃ |
ಅಧಿಕಾಂ ಸ್ಮ ತದಾ ವೃತ್ತಿಮವರ್ತನ್ ಪಾಂಡವಾನ್ ಪ್ರತಿ ॥60॥
ಈ ಮಹಾವೀರ್ಯನನ್ನು ನೋಡಿ ವಿಸ್ಮಿತರಾದ ಋಷಿಶ್ರೇಷ್ಠರು ಆಗ ಪಾಂಡವರ ವಿಷಯದಲ್ಲಿ ಬಹಳ ಗೌರವದಿಂದ ನಡೆದುಕೊಳ್ಳಲು ಪ್ರಾರಂಭಿಸಿದರು.
ಪಾಂಡುಃ ಪ್ರೀತೇನ ಮನಸಾ ದೇವತಾದೀನಪೂಜಯತ್ |
ಪಾಂಡುನಾ ಪೂಜಿತಾ ದೇವಾಃ ಪ್ರತ್ಯೂಚುರ್ನೃಪಸತ್ತಮಮ್ ॥61॥
ಪಾಂಡುವು ಸಂತೋಷಗೊಂಡ ಮನಸ್ಸಿನಿಂದ ದೇವತೆಗಳು ಮೊದಲಾದವರನ್ನು ಪೂಜಿಸಿದನು. ಪಾಂಡುವಿನಿಂದ ಪೂಜಿತರಾದ ದೇವತೆಗಳು ರಾಜಶ್ರೇಷ್ಠನಾದ ಪಾಂಡುವನ್ನು ಕುರಿತು ಹೇಳಿದರು.

ಪ್ರಾದುರ್ಭೂತೋಹ್ಯ ಯಂ ಧರ್ಮೋ ದೇವತಾನಾಂ ಪ್ರಸಾದಜಃ |
ಮಾತರಿಶ್ವಾ ಹ್ಯಯಂ ಭೀಮೋ ಬಲವಾನರಿಮರ್ದನಃ ॥62॥
ಸಾಕ್ಷಾದಿಂದ್ರಃ ಸ್ವಯಂ ಜಾತಃ ಪ್ರಸಾದಾಚ್ಚ ಶತಕ್ರತೋಃ |
ಫಲ್ಗುನೋ ಜಯತಾಂ ಶ್ರೇಷ್ಠಃ ಪೂರುವಂಶವಿವರ್ಧನಃ ॥63॥
ಪಿತೃತ್ವಾದ್ ದೇವತಾನಾಂ ಹಿ ನಾಸ್ತಿ ಪುಣ್ಯತರಸ್ತ್ವಯಾ |
ಧನ್ಯಸ್ತ್ವಮಚಿರಾದೇವ ಸ್ವರ್ಗಂ ಪ್ರಾಪ್ಯಸಿ ಪುಣ್ಯಭಾಕ್ ॥64॥
ದೇವತೆಗಳ ಅನುಗ್ರಹದಿಂದ ಯಮಧರ್ಮನು ಯುಧಿಷ್ಠಿರನಾಗಿ ಜನಿಸಿದ್ದಾನೆ. ಬಲಿಷ್ಠನೂ ಮತ್ತು ಶತ್ರುಸಂಹಾರಕನೂ ಆದ ಈ ಭೀಮನು ವಾಯುದೇವನೇ. ಇಂದ್ರನ ಅನುಗ್ರಹದಿಂದ ಇಂದ್ರನು ತಾನೇ ಫಲ್ಗುನನಾಗಿ ಜನಿಸಿದ್ದಾನೆ. ಈ ಫಲ್ಗುನನು ಜಯಶೀಲರಲ್ಲಿ ಶ್ರೇಷ್ಠನಾದವನು ಮತ್ತು ಪುರುವಂಶ ವಿವರ್ಧನನಾದವನು. ದೇವತೆಗಳಿಗೂ ಪಿತೃವಾದ ನಿನಗೆ ಸಮಾನವಾದ ಪುಣ್ಯಶಾಲಿಗಳು ಬೇರೆ ಯಾರೂ ಇಲ್ಲ. ನೀನು ಧನ್ಯನಾದವನು. ಪುಣ್ಯಭಾಗಿಯಾಗಿ ಬಹಳ ಬೇಗ ಸ್ವರ್ಗವನ್ನು ಸೇರುವಿ.
ವೈಶಂಪಾಯನಃ
ಇತ್ಯುಕ್ತ್ವಾ ದೇವತಾಃ ಸರ್ವಾ ವಿಪ್ರಜಗ್ಮುರ್ಯಥಾಗತಮ್ |
ಪಾಂಡುಶ್ಚ ಪುನರೇವಾರ್ಯಾಂ ಪುತ್ರಲೋಭಾನ್ಮಹಾಯಶಾಃ |
ಪ್ರಾದಿಶದ್ ದರ್ಶನೀಯಾರ್ಥೀ ಕುಂತೀ ತ್ವೇನಮಥಾಬ್ರವೀತ್ ॥65॥
ಹೀಗೆ ಹೇಳಿ ಎಲ್ಲಾ ದೇವತೆಗಳೂ ತಾವು ಬಂದ ದಾರಿಯಲ್ಲಿ ಹಿಂದಿರುಗಿದರು. ಕೀರ್ತಿವಂತನಾದ ಪಾಂಡುವು ಪುತ್ರಲೋಭದಿಂದ ಸುಂದರನಾದ ಇನ್ನೊಬ್ಬ ಪುತ್ರನನ್ನು ನೋಡುವ ಆಸೆಯಿಂದ ಕುಂತಿಯನ್ನು ಮಗನನ್ನು ಪಡೆಯುವಂತೆ ಪುನಃ ಪ್ರಚೋದಿಸಿದನು. ಆಗ ಕುಂತಿಯು ಅವನನ್ನು ಕುರಿತು ಹೇಳಿದಳು.
ನ ವೈ ಚತುರ್ಥಪ್ರಸವಂ ವಿದುರಾಪತ್ಸು ಭಾರತ |
ಅತಃ ಪರಮನಾಚಾರಂ ಪಂಚಮೇ ಬಂಧಕೀ ಭವೇತ್ ॥66॥
ಸ ವೈ ವಿದ್ವಾನ್ ಧರ್ಮಮಿಮಂ ಸಂಚೋದಯಸಿ ಮಾಮತಃ |
ಅಪತ್ಯಲಾಭಾತ್ ತ್ವಂ ರಾಜನ್ ಪ್ರಮತ್ತ ಇವ ಭಾಷಸೇ ॥67॥
ಭಾರತನೇ, ಆಪತ್ತಿನಲ್ಲಿಯೂ ನಾಲ್ಕನೆಯ ಪುತ್ರನನ್ನು ಪಡೆಯುವುದನ್ನು ಯಾರೂ ವಿಧಾನ ಮಾಡಿಲ್ಲ. ನಾಲ್ಕನೆಯ ಪುತ್ರನನ್ನು ಪಡೆದರೆ, ನಾನು ಅನಾಚಾರ ಮಾಡಿದಂತಾಗುತ್ತದೆ. ಐದನೆಯ ಪುತ್ರನನ್ನು ಪಡೆದರೆ ನಾನು ಬಂಧಕಿ (ವೇಶ್ಯೆ) ಆಗುತ್ತೇನೆ. ಈ ಧರ್ಮವನ್ನು ತಿಳಿದ ನೀನು ಏಕೆ ನನ್ನನ್ನು ಪುನಃ ಪ್ರಚೋದಿಸುತ್ತಿದ್ದೀಯೆ? ರಾಜನೇ, ಮಕ್ಕಳನ್ನು ಪಡೆಯುವ ಆಸೆಯಿಂದ ನೀನು ಹುಚ್ಚನಂತೆ ಮಾತನಾಡುತ್ತಿರುವೆ.
ಪಾಂಡುಃ
ಏವಮೇತದ್ಧರ್ಮಶಾಸ್ತ್ರಂ ಯಥಾ ವದಸಿ ತತ್ ತಥಾ ॥68॥
ಕುಂತಿ, ನೀನು ಹೇಳಿದುದೇ ಸರಿ. ನೀನು ಹೇಳಿದಂತೆಯೇ ಧರ್ಮಶಾಸ್ತ್ರವಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಾದಶಾಧಿಕಶತತಮೋऽಧ್ಯಾಯಃ ॥
॥ ಸಂಭವಪರ್ವಣಿ ಷಟ್‌ಷಷ್ಟಿತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಹದಿನೆಂಟನೆಯ ಅಧ್ಯಾಯ ಮುಗಿಯಿತು.

ಮಹಾಭಾರತ ತಾತ್ಪರ್ಯ ನಿರ್ಣಯ -ಅಧ್ಯಾಯ-12
ಯಸ್ಮಿನ್ನಬ್ದೇ ಭಾದ್ರಪದೇ ಸ ಮಾಸೇ
ಸಿಂಹಸ್ಥಯೋರ್ಗುರುರುರವ್ಯೋಃ ಪರೇಶಃ |
ಉದೈತ್ ತತಃ ಫಾಲ್ಗುನೇ ಫಲ್ಗುನೋऽಭೂತ್
ಗತೇ ತತೋ ಮಾದ್ರವತೀ ಬಭಾಷೇ ॥120॥
ಯಾವ ವರ್ಷದ ಭಾದ್ರಪದ ಮಾಸದಲ್ಲಿ ಗುರು ಸೂರ್ಯರು ಸಿಂಹರಾಶಿಯಲ್ಲಿದ್ದಾಗ ಶ್ರೀಕೃಷ್ಣ ಅವತರಿಸಿದನೋ ಅದೇ ವರ್ಷ ಫಾಲ್ಗುನ ಮಾಸದಲ್ಲಿ ಅರ್ಜುನ ಹುಟ್ಟಿದ. ಆ ವರ್ಷ ಕಳೆದಾಗ ಪಾಂಡುವಿಗೆ ಮಾದ್ರಿ ನುಡಿದಳು.
ಜಾತಾಃ ಸುತಾಸ್ತೇ ಪ್ರವರಾಃ ಪೃಥಯಾ-
ಮೇಕಾನಪತ್ಯಾಹಮತಃ ಪ್ರಸಾದಾತ್ |
ತವೈವ ಭೂಯಾಸಮಹಂ ಸುತೇತಾ
ವಿಧತ್ಸ್ವಕುಂತೀಂ ಮಮ ಮಂತ್ರದಾತ್ರೀಮ್ ॥121॥
`ಕುಂತಿಯಲ್ಲಿ ನಿನಗೆ ಒಳ್ಳೆಯ ಮಕ್ಕಳು ಹುಟ್ಟಿದ್ದಾರೆ. ನಾನು ಮಾತ್ರ ಮಕ್ಕಳಿಲ್ಲದವಳಾದೆ. ನಿನ್ನ ಅನುಗ್ರಹದಿಂದ ನಾನೂ ಪುತ್ರವತಿಯೆನಿಸಬೇಕು. ಕುಂತಿ ನನಗೆ ಮಂತ್ರ ಉಪದೇಶಿಸುವಂತೆ ಮಾಡು'.
ಇತೀರಿತಃ ಪ್ರಾಹ ಪೃಥಾಂ ಸ ಮಾದ್ರ್ಯೈ
ದಿಶಸ್ವ ಮಂತ್ರಂ ಸುತದಂ ವರಿಷ್ಠಮ್ |
ಇತ್ಯೂಚಿವಾಸಂ ಪತಿಮಾಹ ಯಾದವೀ
ದದ್ಯಾಂ ತ್ವದರ್ಥೇ ತು ಸಕೃತ್ಫಲಾಯ ॥122॥

ಹೀಗೆ ಮಾದ್ರಿ ಹೇಳಿದಾಗ ಪಾಂಡು ಕುಂತಿಗೆ ಹೇಳಿದ, `ಮಾದ್ರಿಗೆ ಪುತ್ರದಾಯಕ ಮಂತ್ರವನ್ನು ಉಪದೇಶಿಸು'. ಹೀಗೆ ಪತಿ ಹೇಳಿದಾಗ ಕುಂತಿ ಹೇಳಿದಳು, `ನಿನಗಾಗಿ ಅವಳಿಗೆ ಈ ಮಂತ್ರವನ್ನು ಉಪದೇಶಿಸುತ್ತೇನೆ. ಆದರೆ ಒಂದೇ ಬಾರಿ ಅದು ಫಲ ನೀಡುವುದು'.

ಉವಾಚ ಮಾದ್ರ್ಯೈ ಸುತದಂ ಮನುಂ ಚ
ಪುನಃ ಫಲಂ ತೇ ನ ಭವಿಷ್ಯತೀತಿ |
ಮಂತ್ರಂ ಸಮಾದಾಯ ಚ ಮದ್ರಪುತ್ರೀ
ವ್ಯಚಿಂತಯತ್ ಸ್ಯಾಂ ನು ಕಥಂ ದ್ವಿಪುತ್ರಾ ॥123॥

ಕುಂತಿ ಪುತ್ರದಾಯಕ ಮಂತ್ರವನ್ನು ಮಾದ್ರಿಗೆ ಉಪದೇಶಿಸಿದಳು. `ಎರಡನೆ ಬಾರಿ ನಿನಗೆ ಇದರಿಂದ ಫಲ ಸಿಗಲಾರದು' ಎಂದಳು. ಮಂತ್ರ ಉಪದೇಶ ಪಡೆದು ಮಾದ್ರಿ ಆಲೋಚಿಸಿದಳು. `ಇಬ್ಬರು ಮಕ್ಕಳನ್ನು ನಾನು ಹೇಗೆ ಪಡೆಯಲಿ?' ಎಂದು.

ಸದಾವಿಯೋಗೌ ದಿವಿಜೇಷು ದಸ್ರೌ
ನ ಚೈತಯೋರ್ನಾಮಭೇದಃ ಕ್ವಚಿದ್ಧಿ |
ಏಕಾ ಭಾರ್ಯಾ ಸೈತಯೋರಪ್ಯುಷಾ ಹಿ
ತದಾಯಾತಃ ಸಕೃದಾವರ್ತನಾದ್ ದ್ವೌ ॥124॥

ದೇವತೆಗಳಲ್ಲಿ ಅಶ್ವಿನೀ ದೇವತೆಗಳು ಸದಾ ಜೊತೆಗೇ ಇರುವವರು. ಅವರಿಬ್ಬರಿಗೆ ಹೆಸರಿನಲ್ಲಿಯೂ ಎಲ್ಲಿಯೂ ಭೇದವಿಲ್ಲ. ಹೆಂಡತಿಯೂ ಒಬ್ಬಳೇ, ಉಷೆ. ಅದರಿಂದ ಒಮ್ಮೆ ಮಂತ್ರ ಉಚ್ಚರಿಸಿದರೆ ಇಬ್ಬರೂ ಬರುತ್ತಾರೆ.

ಇತೀಕ್ಷಂತ್ಯಾಕಾರಿತಾವಶ್ವಿನೌ ತೌ
ಶೀಘ್ರಂ ಪ್ರಾಪ್ತೌ ಪುತ್ರಕೌ ತತ್ಪ್ರಸೂತೌ |
ತಾವೇವ ದೇವೌ ನಕುಲಃ ಪೂರ್ವಜಾತಃ
ಸಹದೇವೋಽಭೂತ್ ಪಶ್ಚಿಮಸ್ತೌ ಯಮೌ ಚ ॥125॥

ಹೀಗೆ ಆಲೋಚಿಸುತ್ತ ಮಾದ್ರಿ ಅಶ್ವಿನೀ ದೇವತೆಗಳನ್ನು ಆಹ್ವಾನಿಸಿದಳು. ಅವರು ಬೇಗನೆ ಬಂದರು. ಇಬ್ಬರು ಮಕ್ಕಳಾಗಿ ಅವರೇ ಅವರಿಂದ ಹುಟ್ಟಿದರು. ನಕುಲ ಅಣ್ಣನಾದ, ಸಹದೇವ ತಮ್ಮನಾದ, ಇಬ್ಬರೂ ಅವಳ ಮಕ್ಕಳು.

ಪುನರ್ಮನೋಃ ಫಲವತ್ತ್ವಾಯ ಮಾದ್ರೀ
ಸಂಪ್ರಾರ್ಥಯಾಮಾಸ ಪತಿಂ ತದುಕ್ತಾ |
ಪೃಥಾವಾದೀತ್ ಕುಟಿಲೈಷಾ ಮದಾಜ್ಞಾ-
ಮೃತೇ ದೇವಾನಾಹ್ವಯಾಮಾಸ ದಸ್ರೌ ॥126॥

`ಮಂತ್ರವು ಇನ್ನೊಮ್ಮೆ ನನಗೆ ಫಲಪ್ರದವಾಗಲಿ' ಎಂದು ಮಾದ್ರಿ ಪತಿಯನ್ನು ಬೇಡಿದಳು. ಅವನು ಹಾಗೇ ಕುಂತಿಗೆ ಹೇಳಿದಾಗ ಕುಂತಿ ಹೇಳಿದಳು, `ಈ ಮಾದ್ರಿ ಮೋಸಗಾರಳು. ನನ್ನ ಅನುಮತಿ ಇಲ್ಲದೆ ಇಬ್ಬರು ಅಶ್ವಿನೀ ದೇವತೆಗಳನ್ನು ಆಹ್ವಾನಿಸಿದಳು.

ಅತೋ ವಿರೋಧಂ ಚ ಮುದಾತ್ಮಜಾನಾಂ
ಕುರ್ಯಾದೇಷೇತ್ಯೇವ ಭೀತಾಂ ನ ಮಾಂ ತ್ವಮ್ |
ನಿಯೋಕ್ತುಮರ್ಹ ಪುನರೇವ ರಾಜ-
ನ್ನಿತೀರಿತೋಽಸೌ ವಿರರಾಮ ಕ್ಷಿತೀಶಃ ॥127॥

`ಅದರಿಂದ ನನ್ನ ಮಕ್ಕಳಿಗೆ ಇವಳು ವಿರೋಧ ಮಾಡಬಹುದು ಎಂದು ನನಗೆ ಭಯವಾಗುತ್ತದೆ. ರಾಜನೇ, ನನಗೆ ಪುನಃ ಆಜ್ಞೆ ಮಾಡಬೇಡ' ಹೀಗೆ ಕುಂತಿ ಹೇಳಿದಾಗ ಪಾಂಡು ಸುಮ್ಮನಾದ.

ವಿಶೇಷನಾಮ್ನೈವ ಸಮಾಹುತಾಃ ಸುತಾನ್
ದದ್ಯುಃ ಸುರಾ ಇತ್ಯವಿಶೇಷಿತಂ ಯಯೋಃ |
ವಿಶೇಷನಾಮಾಪಿ ಸಮಾಹ್ವಯತ್ ತೌ
ಮಂತ್ರಾವೃತ್ತಿರ್ನಾಮಭೇದೇಽಸ್ಯ ಚೋಕ್ತಾ ॥128॥

ವಿಶೇಷನಾಮದಿಂದ ಕರೆದರೆ ಮಾತ್ರ ದೇವತೆಗಳು ಮಕ್ಕಳನ್ನು ನೀಡುವರು. ಅಶ್ವಿನೀ ದೇವತೆಗಳಿಗೆ ವಿಶೇಷನಾಮವೂ ಉಭಯ ಸಾಧಾರಣವೆ. ಅದರಿಂದ ಮಾದ್ರಿ ಅವರನ್ನೇ ಆಹ್ವಾನಿಸಿದಳು. ವಿಶೇಷನಾಮ ಬೇರೆ ಇರುವಾಗ ಮಂತ್ರವನ್ನು ವಿಶೇಷ ನಾಮಯುಕ್ತವಾಗಿ ಪುನಃ ಉಚ್ಚರಿಸಬೇಕಾಗುತ್ತದೆ.

ಯುಧಿಷ್ಠಿರಾದ್ಯೇಷು ಚತುರ್ಷು ವಾಯುಃ
ಸಮಾವಿಷ್ಟಃ ಫಲ್ಗುನೇಥೋ ವಿಶೇಷಾತ್ |
ಯುಧಿಷ್ಠಿರೇ ಸೌಮ್ಯರೂಪೇಣ ವಿಷ್ಟೋ
ವೀರೇಣ ರೂಪೇಣ ಧನಂಜಯೇಽಸೌ ॥129॥

ಯುಧಿಷ್ಠಿರ ಮುಂತಾದವರಲ್ಲಿ ನಾಲ್ವರಲ್ಲಿಯೂ ವಾಯು ಆವೇಶಗೊಂಡ. ಅದರಲ್ಲಿಯೂ ಅರ್ಜುನನಲ್ಲಿ ವಿಶೇಷ ಆವೇಶ. ಯುಧಿಷ್ಠಿರನಲ್ಲಿ ಸೌಮ್ಯರೂಪದಿಂದ ಮತ್ತು ಅರ್ಜುನನಲ್ಲಿ ವೀರರೂಪದಿಂದ ಆವೇಶ.

ಶೃಂಗಾರರೂಪಂ ಕೇವಲಂ ದರ್ಶಯಾನೋ
ವಿವೇಶ ವಾಯುರ್ಯಮಜೌ ಪ್ರಧಾನಃ |
ಶೃಂಗಾರ ಕೈವಲ್ಯಮಭೀಪ್ಸಮಾನಃ
ಪಾಂಡುರ್ಹಿ ಪುತ್ರಂ ಚಕಮೇ ಚತುರ್ಥಮ್ ॥130॥

ಕೇವಲ ಸುಂದರ ರೂಪವನ್ನು ಪ್ರಕಟಪಡಿಸುತ್ತ ವಾಯು ನಕುಲ ಸಹದೇವರಲ್ಲಿ ಆವೇಶಗೊಂಡ. ಪಾಂಡು ಕೇವಲ

ಸುಂದರರೂಪವನ್ನೆ ಬಯಸಿ ನಾಲ್ಕನೆ ಮಗನನ್ನು ಬಯಸಿದ್ದ.
ಶೃಂಗಾರರೂಪೋ ನಕುಲೇ ವಿಶೇಷಾತ್
ಸುನೀತಿರೂಪಃ ಸಹದೇವಂ ವಿವೇಶ |
ಗುಣೈಃ ಸಮಸ್ತೈಃ ಸ್ವಯಮೇವ ವಾಯು
ರ್ಬಭೂವ ಭೀಮೋ ಜಗದಂತರಾತ್ಮಾ ॥131॥
ಅದರಿಂದ ನಕುಲ ಸಹದೇವರಲ್ಲಿಯೂ ವಿಶೇಷವಾಗಿ ನಕುಲನಲ್ಲಿಯೇ ವಾಯು ಸುಂದರ ರೂಪದಾಯಕನಾಗಿ ಆವೇಶಗೊಂಡ. ಒಳ್ಳೆಯ ನೀತಿದಾಯಕನಾಗಿ ಸಹದೇವನನ್ನು ಪ್ರವೇಶಿಸಿದ. ಜಗದಂತರಾತ್ಮನಾದ ವಾಯು ಈ ಎಲ್ಲ ಗುಣಗಳಿಂದ ಕೂಡಿ ಭೀಮನಾಗಿ ತಾನೇ ಜನಿಸಿದ.
ಸುಪಲ್ಲವಾಕಾರತನುರ್ಹಿ ಕೋಮಳಃ
ಪ್ರಾಯೋ ಜನೈಃ ಪ್ರೋಚ್ಯತೇ ರೂಪಶಾಲೀ |
ತತಃ ಸುಜಾತಂ ವರ ವಜ್ರಕಾಯೌ
ಭೀಮಾರ್ಜುನಾವಪ್ಯೃತೇ ಪಾಂಡುರೈಚ್ಛತ್ ॥132॥
ಪ್ರಾಯಃ ಎಳೆಚಿಗುರಿನಂಥ ಕೋಮಲ ಶರೀರದವನನ್ನೇ ಜನರು ರೂಪಶಾಲಿ ಎನ್ನುತ್ತಾರೆ. ಅದರಿಂದ ಉತ್ತಮ ವಜ್ರಕಾಯದವರಾದ ಭೀಮಾರ್ಜುನರು ಮಾತ್ರವಲ್ಲದೆ ಬೇರೆ ಕೋಮಲ ಶರೀರದ ಮಕ್ಕಳೂ ಹುಟ್ಟಬೇಕೆಂದು ಪಾಂಡು ಬಯಸಿದ.
ಅಪ್ರಾಕೃತಾನಾಂ ತು ಮನೋಹರಂ ಯದ್
ರೂಪಂ ದ್ವಾತ್ರಿಂಶಲ್ಲಕ್ಷಣೋಪೇತಮಗ್ರ್ಯಮ್ |
ತನ್ ಮಾರುತೋ ನಕುಲೇ ಕೋಮಳಾಭ
ಏವಂ ವಾಯುಃ ಪಂಚರೂಪೋಽತ್ರ ಚಾಸೀತ್ ॥133॥
ಸೂಕ್ಷ್ಮದೃಷ್ಟಿಯವರಿಗೆ ಮಾತ್ರ ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಉತ್ತಮ ಶರೀರವೆ ಸುಂದರವಾಗಿ ಕಾಣುವುದು. ಅಜ್ಞಾನಿಗಳಿಗೆ ಅಲ್ಲ. ಅದರಿಂದ ವಾಯು ನಕುಲನಲ್ಲಿ ಕೋಮಲ ಕಾಂತಿಪ್ರದನಾಗಿ ನಿಂತ. ಹೀಗೆ ವಾಯು ಕೃಷ್ಣಾವತಾರ ಕಾಲದಲ್ಲಿ ಐದು ರೂಪದವನಾಗಿ ಅವತರಿಸಿದ.
ಅತೀತೇಂದ್ರಾ ಏವ ತೇ ವಿಷ್ಣು ಷಷ್ಠಾಃ
ಪೂರ್ವೇಂದ್ರೋಽಸೌ ಯಜ್ಞನಾಮಾ ರಮೇಶಃ |
ಸ ವೈ ಕೃಷ್ಣೋ ವಾಯುರಥ ದ್ವಿತೀಯಃ
ಸ ಭೀಮಸೇನೋ ಧರ್ಮ ಆಸೀತ್ ತೃತೀಯಃ ॥134॥
ಪಂಚ ಪಾಂಡವರೂ ವಿಷ್ಣುವೂ ಸೇರಿ ಆರು ಮಂದಿಯೂ ಇಂದ್ರರೇ ಆಗಿದ್ದರು. ಮೊದಲಿನ ಇಂದ್ರನೆ ಯಜ್ಞನಾಮಕನಾದ ವಿಷ್ಣು. ಅವನೆ ಕೃಷ್ಣನಾದ. ಬಳಿಕ ಎರಡನೆ ಇಂದ್ರನೆ ವಾಯು. ಅವನೆ ಭೀಮಸೇನನಾದ. ಯಮಧರ್ಮ ಮೂರನೆ ಇಂದ್ರನಾಗಿದ್ದ.
ಯುಧಿಷ್ಠಿರೋಽಸಾವಥ ನಾಸತ್ಯದಸ್ರೌ
ಕ್ರಮಾತ್ ತಾವೇತೌ ಮಾದ್ರವತೀಸುತೌ ಚ |
ಪುರಂದರಃ ಷಷ್ಠ ಉತಾತ್ರ ಸಪ್ತಮಃ
ಸ ಏವೈಕಃ ಫಲ್ಗುನೋ ಹ್ಯೇತ ಇಂದ್ರಾಃ ॥135॥
ಆ ಯಮಧರ್ಮನೆ ಯುಧಿಷ್ಠಿರನಾಗಿ ಜನಿಸಿದ. ಬಳಿಕ ನಾಸತ್ಯ ಮತ್ತು ದಸ್ರರು ಇಂದ್ರರಾದರು. ಆದರೆ ಕ್ರಮವಾಗಿ ಮಾದ್ರಿಯ ಮಕ್ಕಳಾಗಿ ಜನಿಸಿದರು. ಪುರಂದರನೊಬ್ಬನೆ ಆರನೆ ಇಂದ್ರನಾದ ಮತ್ತು ಏಳನೆಯ ಇಂದ್ರನೂ ಆದ. ಅವನೆ ಅರ್ಜುನನಾಗಿ ಜನಿಸಿದ. ಹೀಗೆ ಇವರೆಲ್ಲರೂ ಇಂದ್ರರೆ.
ಕ್ರಮಾತ್ ಸಂಸ್ಕಾರಾನ್ ಕ್ಷತ್ರಿಯಾಣಾಮವಾಪ್ಯ
ತೇಽವರ್ಧಂತ ಸ್ವತವಸೋ ಮಹಿತ್ವನಾ |
ಸರ್ವೇ ಸರ್ವಜ್ಞಾಃ ಸರ್ವಧರ್ಮೋಪಪನ್ನಾಃ
ಸರ್ವೇ ಭಕ್ತಾಃ ಕೇಶವೇಽತ್ಯಂತಯುಕ್ತಾಃ ॥136॥
ಪಾಂಡವರು ಕ್ರಮವಾಗಿ ಕ್ಷತಿಯೋಚಿತ ಸಂಸ್ಕಾರಗಳನ್ನು ಹೊಂದಿ ಸ್ವರೂಪ ಸಾಮರ್ಥ್ಯದಿಂದ ಪ್ರವರ್ಧಮಾನರಾದರು. ಅವರು ಎಲ್ಲರೂ ಸರ್ವಜ್ಞರು. ಸಕಲ ಧರ್ಮಾಚಾರಯುಕ್ತರು, ಭಕ್ತರು, ಕೇಶವನಲ್ಲಿ ಅತ್ಯಂತ ಪ್ರೀತಿಯುಕ್ತರು.
* * * *

ನೂರ ಹತ್ತೊಂಭತ್ತನೆಯ ಅಧ್ಯಾಯ
(ಅಶ್ವಿನೀದೇವತೆಗಳಿಂದ ಮಾದ್ರಿಯಲ್ಲಿ ನಕುಲ ಸಹದೇವರ ಜನನ, ಪಾಂಡವರ ನಾಮಕರಣ, ಉಪನಯನ ಸಂಸ್ಕಾರ, ಮತ್ತು ಶರ್ಯಾತಿಯ ಪುತ್ರನಾದ ಶುಕನಿಂದ ಶಸತ್ರಭ್ಯಾಸ.)
ವೈಶಂಪಾಯನಃ
ಕುಂತೀಪುತ್ರೇಷು ಜಾತೇಷು ಧೃತರಾಷ್ಟ್ರಾತ್ಮಜೇಷು ಚ |
ಮದ್ರರಾಜಸುತಾ ಪಾಂಡುಮಿದಂ ವಚನಮಬ್ರವೀತ್ ॥1॥
ಕುಂತಿಯ ಪುತ್ರರೂ ಮತ್ತು ಧೃತರಾಷ್ಟ್ರನ ಪುತರೂ ಜನಿಸುತ್ತಿರಲು ಮದ್ರರಾಜಕುಮಾರಿಯು ಪಾಂಡುವನ್ನು ಕುರಿತು ಈ ಮಾತುಗಳನ್ನು ಆಡಿದಳು.

ನ ಮೇಽಸ್ತಿ ತ್ವಯಿ ಸಂತಾನೋ ವಿಗುಣೋಽಪಿ ನರಾಧಿಪ |
ಮಮ ಜಾತೋ ವನಸ್ಥಾಯಾ ಹ್ಯವರತ್ವಾತ್ ಕಥಂಚನ ॥2॥
ರಾಜನೇ, ಕಾಡಿನಲ್ಲಿರುವ ನನಗೆ ನಿನ್ನಿಂದ ಗುಣರಹಿತವಾದ ಸಂತಾನವೂ ಇಲ್ಲ. ದುರ್ವಾಸರ ವರ ನನಗೆ ಇಲ್ಲದಿರುವುದರಿಂದ ಯಾವರೀತಿಯಲ್ಲೂ ನಾನು ಪುತ್ರನನ್ನು ಪಡೆಯಲ್ಲಿಲ್ಲ.
ಗಾಂಧಾರ್ಯಾಶ್ಚಾಪಿ ಪುತ್ರಾಣಾಂ ಶತಂ ಜಜ್ಞೇ ಮಹಾತ್ಮನಾಮ್ |
ತತ್ರಾಪಿ ನೈವ ಬಲವದ್ ದುಃಖಂ ಮಮ ವಿಶಾಂಪತೇ ॥3॥
ಗಾಂಧಾರಿಗೂ ಸಹ, ಮಹಾ ಪ್ರಯತ್ನಶೀಲರಾದ ನೂರು ಮಕ್ಕಳು ಜನಿಸಿದರು. ರಾಜನೇ, ಆ ವಿಷಯದಲ್ಲೂ ನನಗೆ ಅಧಿಕವಾದ ದುಃಖವಿಲ್ಲ.
ಇದಂ ತು ಮೇ ಮಹದ್ದುಃಖಂ ತುಲ್ಯತಾಯಾಮಪುತ್ರತಾ |
ದಿಷ್ಟ್ಯಾ ತ್ವಿದಾನೀಂ ಭರ್ತುರ್ಮೇ ಕುಂತ್ಯಾಮಪ್ಯಸ್ತಿ ಸಂತತಿಃ ॥4॥
ನಾನು ಮತ್ತು ಕುಂತಿಯು ಸಮಾನರಾಗಿದ್ದರೂ, ನನಗೆ ಪುತ್ರರಿಲ್ಲದಿರುವುದು ದೊಡ್ಡ ದುಃಖಕ್ಕೆ ಕಾರಣವಾಗಿದೆ. ಭಗವದನುಗ್ರಹದಿಂದ ಈ ದಿನ ನನ್ನ ಪತಿಯಾದ ನಿನಗೆ ಕುಂತಿಯಲ್ಲೂ ಸಂತಾನವಿದೆ.
ಯದಿ ತ್ವಪತ್ಯಸಂತಾನಂ ಕುಂತೀ ರಾಜಸುತಾ ಮಯಿ |
ಕುರ್ಯಾದನುಗ್ರಹೋ ಮೇ ಸ್ಯಾತ್ ತವ ಚೈವ ಹಿತಂ ಭವೇತ್ ॥5॥
ರಾಜಕುಮಾರಿಯಾದ ಕುಂತಿಯು ನನಗೆ ಅನುಗ್ರಹವನ್ನು ಮಾಡಿದರೆ, ನನಗೂ ಪುತ್ರ ಸಂತಾನವಾಗುತ್ತದೆ. ನಿನಗೂ ಹಿತವಾಗುತ್ತದೆ.
ನ ಸಹೇಯಂ ಸಪತ್ನೀತ್ವಾತ್ ಕುಂತೀಂ ವಕ್ತುಂ ಸುತಾನ್ ಪ್ರತಿ |
ಯದಿ ತು ತ್ವಂ ಪ್ರಸನ್ನೋ ಮೇ ಸ್ವಯಮೇನಾಂ ಪ್ರಚೋದಯ ॥6॥
ಸವತಿಯಾದ ಕಾರಣದಿಂದ ನಾನೇ ಪುತ್ರರನ್ನು ಪಡೆಯುವ ವಿಷಯದಲ್ಲಿ ಕುಂತಿಗೆ ಏನೂ ಹೇಳಲಾರೆ. ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿದ್ದರೆ, ನೀನೇ ಕುಂತಿಯನ್ನು ಪ್ರಚೋದಿಸು.
ಪಾಂಡುಃ
ಮಮಾಪ್ಯೇಷ ಸದಾ ಮಾದ್ರಿ ಹೃದ್ಯರ್ಥಃ ಪರಿವರ್ತತೇ |
ನ ತು ತ್ವಾಂ ಪ್ರಸಹೇ ವಕ್ತುಮಿಷ್ಟಾನಿಷ್ಟಾಭಿಕಾಂಕ್ಷಯಾ ॥7॥
ಮಾದ್ರಿ, ಈ ವಿಷಯವು ನನ್ನ ಮನಸ್ಸಿನಲ್ಲಿ ಯಾವಾಗಲೂ ಸಂಚರಿಸುತ್ತಿದೆ. ಆದರೆ ಇದರಲ್ಲಿ ಇಷ್ಟ ಮತ್ತು ಅನಿಷ್ಟ ಎರಡರ ಯೋಗವೂ ಇರುವುದರಿಂದ ನಾನು ನಿನಗೆ ಹೇಳಲು ಆಗಲಿಲ್ಲ.
ತವ ತ್ವನುಮತೋ ರಾಜ್ಞಿ ಪ್ರಯತಿಷ್ಯೇ ಯಥಾಸುಖಮ್ |
ಆಶಂಸೇ ನಚಿರಾತ್ ಕುಂತೀ ವಚೋ ಮೇ ಪ್ರತಿಪತ್ಸ್ಯತೇ ॥8॥
ರಾಣಿಯೇ, ನಿನ್ನ ಅನುಮತಿಯಂತೆ ನಾನು ಯಥಾಶಕ್ತಿ ಪ್ರಯತ್ನಮಾಡಿ ಕುಂತಿಗೆ ತಿಳಿಸುತ್ತೇನೆ. ಕುಂತಿಯು ನನ್ನ ಮಾತನ್ನು ನಡೆಸಿಕೊಡುತ್ತಾಳೆ.
ವೈಶಂಪಾಯನಃ
ತತಃ ಕುಂತೀಂ ಪುನಃ ಪಾಂಡುರೇಕಾಂತ ಇದಮಬ್ರವೀತ್ |
ಅನುಗೃಹ್ಣೀಷ್ವ ಕಲ್ಯಾಣಿ ಮದ್ರರಾಜಸುತಾಮಪಿ ॥9॥
ಅನಂತರ ಪಾಂಡುವು ಏಕಾಂತದಲ್ಲಿ ಕುಂತಿಯನ್ನು ಕುರಿತು, ಕಲ್ಯಾಣಿಯೇ, ಮಾದ್ರಿಗೂ ಅನುಗ್ರಹವನ್ನು ಮಾಡು ಎಂದು ಹೇಳಿದನು.
ಕುಲಸ್ಯ ಮಮ ಸಂತಾನಂ ಲೋಕಸ್ಯ ಚ ಕುರು ಪ್ರಿಯಮ್ |
ಮಮ ವಾ ಪಿಂಡಲಾಭಾಯ ಪೂರ್ವೇಷಾಂ ಚ ಮಹಾತ್ಮನಾಮ್ |
ಮತ್ಪ್ರಿಯಾರ್ಥಂ ಚ ಕಲ್ಯಾಣಿ ಕುರು ಕಲ್ಯಾಣಮುತ್ತಮಮ್ ॥10॥
ನನಗೂ ಮತ್ತು ನನ್ನ ಪೂರ್ವಜರಿಗೂ ಪಿಂಡಲಾಭವಾಗುವುದಕ್ಕೋಸ್ಕರ ಕುಲಕ್ಕೂ ಮತ್ತು ನನಗೂ ಪ್ರಿಯವಾದ ಸಂತಾನವನ್ನುಂಟು ಮಾಡು. ಲೋಕಕ್ಕೂ ಪ್ರಿಯವಾದ ಸಂತಾನವನ್ನುಂಟು ಮಾಡು. ಕಲ್ಯಾಣಿಯೇ, ನನ್ನ ಪ್ರೀತಿಯ ಸಲುವಾಗಿಯಾದರೂ ಈ ಶ್ರೇಷ್ಠವಾದ ಕಲ್ಯಾಣ ಕಾರ್ಯವನ್ನು ಮಾಡು.
ಕುಲಸ್ಯ ಪಿಂಡವೃದ್ಧಿಶ್ಚ ಕುಲಸ್ಯ ಕುಲಸಂತತಿಃ |
ಮಮ ಚೇಷ್ಟಸ್ಯ ನಿರ್ವೃತ್ತಿಃ ತವ ಚಾಪಿ ಪರಂ ಯಶಃ |
ಯಶಸೋಽರ್ಥಾಯ ಚೈವ ತ್ವಂ ಕುರು ಕರ್ಮ ಸುದುಷ್ಕರಮ್ ॥11॥
ಇದರಿಂದ ಕುಲದ ಸಂತತಿಯು ಉಂಟಾಗುತ್ತದೆ. ಕುಲಕ್ಕೆ ಪಿಂಡವೃದ್ಧಿ ಉಂಟಾಗುತ್ತದೆ. ನನ್ನ ಇಷ್ಟಪ್ರಾಪ್ತಿಯಾಗಿ ನನಗೆ ಬಹಳ ಸಂತೋಷವಾಗುತ್ತದೆ. ನಿನಗೂ ಅಪಾರವಾದ ಕೀರ್ತಿ ಬರುತ್ತದೆ. ಕೀರ್ತಿಗೋಸ್ಕರವಾದರೂ ಇಂತಹ ದುಷ್ಕರವಾದ ಕಾರ್ಯವನ್ನು ಮಾಡು.
ಪ್ರಾಪ್ಯ ದೇವಾದಪತ್ಯಂ ಚ ಯಜ್ಞೈರಿಷ್ಟ್ವಾ ಸಹಸ್ರಶಃ |
ತಥಾ ಮಂತ್ರವಿದೋ ವಿಪ್ರಾನ್ ತಪಸ್ತಪ್ತ್ವಾ ಸುದುಷ್ಕರಮ್ |
ಗುರೂನಭ್ಯುಪಗಚ್ಛಂತಿ ಯಶಸೋಽರ್ಥಾಯ ಭಾಮಿನಿ ॥12॥
ಭಾಮಿನಿಯೇ, (ಸಜ್ಜನರು) ದೇವತಾನುಗ್ರಹದಿಂದ ಮಗನನ್ನು ಪಡೆದು ಸಹಸ್ರಾರು ಯಜ್ಞಗಳಿಂದ ಭಗವಂತನನ್ನು ಪೂಜಿಸಿ ಹಾಗೆಯೇ ಮಂತ್ರವಿದರಾದ ಬ್ರಾಹ್ಮಣರನ್ನು ಪೂಜಿಸಿ ಸುದುಷ್ಕರವಾದ ತಪಸ್ಸನ್ನು ಮಾಡಿ ಕೀರ್ತಿಗೋಸ್ಕರವಾಗಿ ಗುರುಗಳಿಗೆ ಶರಣಾಗತರಾಗುತ್ತಾರೆ.

ತಥಾ ಬ್ರಹ್ಮರ್ಷಯಃ ಪೂರ್ವೇ ಬ್ರಾಹ್ಮಣಾಶ್ಚ ತಪೋಧನಾಃ |
ಚಕ್ರುರುಚ್ಚಾವಚಂ ಕರ್ಮ ಯಶಸೋಽರ್ಥಾಯ ದುಷ್ಕರಮ್ ॥13॥
ಹಾಗೆಯೇ, ಹಿಂದಿನ ಬ್ರಹ್ಮರ್ಷಿಗಳು ತಪೋಧನರಾದ ಬ್ರಾಹ್ಮಣರೂ ಸಹ, ಕೀರ್ತಿಗೋಸ್ಕರವಾಗಿ ದುಷ್ಕರವಾದ ಶ್ರೇಷ್ಠ ಅಥವಾ ಕನಿಷ್ಠ ಕರ್ಮಗಳನ್ನು ಮಾಡಿದರು.
ತಥಾ ರಾಜರ್ಷಯೋ ವೀರಾ ಮನುವೈನ್ಯಾದಯಃ ಪೃಥಕ್|
ಯಶೋರ್ಥಂ ಧರ್ಮಯುಕ್ತಾನಿ ಚಕ್ರುಃ ಕರ್ಮಾಣಿ ಶೋಭನೇ |
ಯಶಸಾ ತ್ವಂ ಪ್ಲವೇನೈವ ತಾರಯೈನಾಮನಿಂದಿತೇ ॥14॥
ಶೋಭನಳೇ, ಹಾಗೆಯೇ, ವೀರರಾದ ರಾಜರ್ಷಿಗಳು, ಮನುವೈನ್ಯಾದಿಗಳು ಸಹ ಕೀರ್ತಿಗೋಸ್ಕರವಾಗಿ ಧರ್ಮಯುಕ್ತವಾದ ಕಾರ್ಯಗಳನ್ನು ಮಾಡಿದರು. ಆದ್ದರಿಂದ ಅನಿಂದಿತಳೇ, ಕೀರ್ತಿ ಎಂಬ ಹಡಗಿನಿಂದ ನೀನು ಮಾದ್ರಿಯನ್ನು ದಾಟಿಸು.
ಅಪತ್ಯಸಂವಿಭಾಗೇನ ಪರಾಂ ಕೀರ್ತಿಮವಾಪ್ಸ್ಯಸಿ |
ಧರ್ಮಂ ವೈ ಧರ್ಮಶಾಸೊತ್ರೀಕ್ತಂ ಯಥಾ ವದಸಿ ತತ್ ತಥಾ |
ತಸ್ಮಾದನುಗ್ರಹಂ ಮಾದ್ರ್ಯಾಃ ಕುರುಷ್ವ ವರವರ್ಣಿನಿ ॥15॥
ಪುತ್ರರನ್ನು ಹಂಚಿಕೊಳ್ಳುವುದರಿಂದ ನಿನಗೆ ಅಪಾರವಾದ ಕೀರ್ತಿಯುಂಟಾಗುವುದು. ಧರ್ಮಶಾಸೊತ್ರೀಕ್ತವಾದ ಧರ್ಮಸಂಬಂಧಿಯಾದ ಕಾರ್ಯಗಳನ್ನು ನೀನು ಹೇಗೆ ಹೇಳುತ್ತೀಯೋ ಅವೆಲ್ಲವೂ ಹಾಗೆಯೇ ಸರಿ. ಆದ್ದರಿಂದ ಸುಂದರಿಯೇ, ಮಾದ್ರಿಗೆ ಅನುಗ್ರಹವನ್ನು ಮಾಡು.
ಭರ್ತುಸ್ತು ವಚನಂ ಶ್ರುತ್ವಾ ಕುಂತೀ ಭರ್ತೃಹಿತೈಷಿಣೀ |
ಮಂತ್ರಗ್ರಾಮಂ ದದೌ ತಸ್ಯೈ ಯಥಾವಿಧಿ ಶುಚಿಸ್ಮಿತಾ ॥16॥
ಏವಮುಕತತ್ವಽಬ್ರವೀತ್ ಸ್ನೇಹಾತ್ ಸಕೃಚ್ಚಿಂತ್ಯಯ ದೈವತಮ್ |
ತತ್ರ ತೇ ಭವಿತಾಽಪತ್ಯಮನುರೂಪಮಸಂಶಯಮ್ ॥17॥
ಪತಿಯ ಮಾತುಗಳನ್ನು ಕೇಳಿದ, ಪತಿಯ ಹಿತೈಷಿಣಿಯಾದ ಕುಂತಿಯು ನಗುನಗುತ್ತಲೇ ಮಾದ್ರಿಗೆ ಮಂತ್ರಸಮೂಹವನ್ನು ವಿಧಿಪೂರ್ವಕವಾಗಿ ಕೊಟ್ಟಳು. ಹೀಗೆ ಮಂತ್ರವನ್ನು ಹೇಳಿ, ಸ್ನೇಹದಿಂದ ಮಾದ್ರಿಯನ್ನು ಕುರಿತು ದೇವತೆಯನ್ನು ಒಂದು ಸಲ ಮಾತ್ರ ಚಿಂತನೆಯನ್ನು ಮಾಡು. ನಿನಗೆ ಅನುರೂಪನಾದ ಪುತ್ರನು ಜನಿಸುವನು. ಇದರಲ್ಲಿ ಸಂಶಯವಿಲ್ಲ ಎಂದು ಹೇಳಿದಳು.
ವೈಶಂಪಾಯನಃ
ಕುಂತ್ಯಾ ಮಂತ್ರೇ ಕೃತೇ ತಸ್ಮಿನ್ ವಿಧಿದೃಷ್ಟೇನ ಕರ್ಮಣಾ |
ತತೋ ರಾಜಸುತಾ ಸ್ನಾತಾ ಶಯನೇ ಸಂವಿವೇಶ ಹ ॥18॥
ಕುಂತಿಯು ವಿಧ್ಯುಕ್ತ ಕ್ರಮದಲ್ಲಿ ಆ ಮಂತ್ರವನ್ನು ಕೊಡುತ್ತಿರಲು ರಾಜಕುಮಾರಿ ಮಾದ್ರಿಯು ಸ್ನಾನ ಮಾಡಿ ಶಯನದಲ್ಲಿ ಮಲಗಿಕೊಂಡಳು.
ತತೋ ಮಾದ್ರೀ ವಿಚಾರ್ಯೈಕಾ ಜಗಾಮ ಮನಸಾಽಶ್ವಿನೌ |
ತಥಾ ಚ ಮಾದ್ರ್ಯಪತ್ಯಾರ್ಥೇ ಪ್ರಾಯುಂಕ್ತ ಬಲಿಮುತ್ತಮಮ್ ॥19॥
ಆಗ ಮಾದ್ರಿಯು ವಿಚಾರ ಮಾಡಿ ಮನಸ್ಸಿನಲ್ಲಿ ಅಶ್ವಿನೀ ದೇವತೆಗಳನ್ನು ಸ್ಮರಣೆ ಮಾಡಿ, ಮಕ್ಕಳನ್ನು ಪಡೆಯುವ ಉದ್ದೇಶದಿಂದ ಅವರ ಪ್ರೀತಿಗೋಸ್ಕರವಾಗಿ ಶ್ರೇಷ್ಠವಾದ ಪೂಜೆಯನ್ನು ಮಾಡಿದಳು.
ತಾವಾಗಮ್ಯ ಸುತೌ ತಸ್ಯಾಂ ಜನಯಾಮಾಸತುರ್ಯಮೌ |
ಜಾತೌ ಚ ತಾವಪಿ ಯಮೌ ವಾಗುವಾಚಾದ್ಭುತೋಪಮೌ ॥20॥
ಅಶ್ವಿನೀ ದೇವತೆಗಳಿಬ್ಬರೂ ಬಂದು ಅವಳಲ್ಲಿ ಎರಡು ಅವಳಿ ಗಂಡು ಮಕ್ಕಳನ್ನು ಉತ್ಪಾದಿಸಿದರು. ಅದ್ಭುತವಾದ ಆ ಎರಡು ಶಿಶುಗಳು ಜನಿಸಿದಾಗಲೂ ಅಶರೀರವಾಣಿಯಾಯಿತು.
ಧರ್ಮತೋ ಭಕ್ತಿತಶ್ಚೈವ ಶೀಲೇನ ವಿನಯೈಸ್ತಥಾ |
ರೂಪಸತ್ತ್ವಗುಣಶ್ರೇಷ್ಠಾವೇತಾವಿತಿ ನರಾಧಿಪ ॥21॥
ಭಾಸತಸ್ತೇಜಸಾಽತ್ಯರ್ಥಂ ರೂಪದ್ರವಿಣಸಂಪದಾ |
ಕುಂತೀಮಥ ಪುನಃ ಪಾಂಡುರ್ಮಾದ್ರ್ಯರ್ಥೇ ಸಮಚೋದಯತ್ ॥22|
ರಾಜನೇ, ಧರ್ಮದಿಂದ, ಭಕ್ತಿಯಿಂದ, ಶೀಲ ವಿನಯಗಳಿಂದ, ರೂಪ ಸತ್ತ್ವಗುಣಗಳಿಂದ, ಕಾಂತಿಯಿಂದ, ತೇಜಸ್ಸಿನಿಂದ ಮತ್ತು ಅತಿಶಯವಾದ ರೂಪದ್ರವಿಣಸಂಪತ್ತಿನಿಂದ ಇವರಿಬ್ಬರೂ ಶ್ರೇಷ್ಠರಾದವರು ಎಂದು ಅಶರೀರವಾಣಿಯಾಯಿತು. ಪಾಂಡುವು ಮಾದ್ರಿಗೆ ಮಂತ್ರವನ್ನು ಪುನಃಕೊಡುವಂತೆ ಕುಂತಿಯನ್ನು ಒತ್ತಾಯ ಮಾಡಿದನು.
ತಮುವಾಚ ಪತಿಂ ರಾಜನ್ ರಹಸ್ಯುಕ್ತಾ ಸತೀ ತದಾ |
ಯುಕ್ತಾ ಸಕೃದ್ ದ್ವಂದ್ವಮೇಷಾ ಲೇಭೇ ತೇನಾಸ್ಮಿ ವಂಚಿತಾ ॥23॥
ಕುಂತಿಯು ಏಕಾಂತದಲ್ಲಿ ರಾಜನಿಂದ ಹೀಗೆ ಹೇಳಲ್ಪಟ್ಟು, ಅವನನ್ನು ಕುರಿತು ನಾನು ಒಂದು ಸಲ ಕೊಟ್ಟ ಮಂತ್ರದಿಂದ ಇವಳು ಎರಡು ಮಕ್ಕಳನ್ನು ಪಡೆದು ನನಗೆ ವಂಚನೆಯನ್ನು ಮಾಡಿದ್ದಾಳೆ.
ಬಿಭೇಮ್ಯಸ್ಯಾಃ ಪರಿಭವಾನ್ನಾರೀಣಾಂ ಮತಿರೀದೃಶೀ |
ನಾಜ್ಞಾಸಿಷಮಹಂ ಮೂಢಾ ದ್ವಂದ್ವಾಹ್ವಾನೇ ದ್ವಯಂ ಫಲಮ್ |
ತಸ್ಮಾನ್ನಾಹಂ ನಿಯೋಕ್ತವ್ಯಾ ತ್ವಯೈಷೋಽಸ್ತು ವರೋ ಮಮ ॥24॥
ಇವಳಿಂದ ನನಗೆ ಪರಿಭವ ಉಂಟಾಗಬಹುದೆಂದು ನಾನು ಹೆದರಿದ್ದೇನೆ. ಮೂಢಳಾದ ನನಗೆ ದೇವತಾದ್ವಂದ್ವವನ್ನು ಆಹ್ವಾನ

ಮಾಡಿದರೆ ಎರಡು ಮಕ್ಕಳಾಗುತ್ತಾರೆ ಎಂದು ತಿಳಿಯಲಿಲ್ಲ. ಆದ್ದರಿಂದ ನನ್ನನ್ನು ಇನ್ನೊಂದು ಸಲ ಮಂತ್ರವನ್ನು ಕೊಡುವಂತೆ ಒತ್ತಾಯ ಮಾಡಬಾರದು. ಇದು ನಾನು ನಿನ್ನಲ್ಲಿ ಕೇಳುತ್ತಿರುವ ವರ.
ವೈಶಂಪಾಯನಃ
ಏವಂ ಪಾಂಡುಸುತಾಃ ಪಂಚ ದೇವದತ್ತಾ ಮಹಾಬಲಾಃ |
ಸಂಭೂತಾಃ ಕೀರ್ತಿಮಂತಸ್ತೇ ಕುರುವಂಶವಿವರ್ಧನಾಃ ||25||
ಹೀಗೆ ಮಹಾಬಲರಾದ ಪಾಂಡುವಿನ ಐದು ಮಕ್ಕಳು, ದೇವತೆಗಳಿಂದ ದತ್ತರಾಗಿ ಜನಿಸಿ ಕೀರ್ತಿವಂತರೂ, ಕುರುವಂಶವಿವರ್ಧನರೂ ಆದರು.
ದೇವೌಜಸಃ ಸತ್ತ್ವವಂತಃ ಸರ್ವಶಾಸ್ತ್ರವಿಶಾರದಾಃ |
ದಿವ್ಯಸಂಹನನಾಃ ಸರ್ವೇ ಸರ್ವೇ ಭಾಸ್ವರಮೂರ್ತಯಃ ||26||
ಎಲ್ಲರೂ ದೇವಪರಾಕ್ರಮರು, ಸತ್ವವುಳ್ಳವರು, ಸರ್ವಶಾಸ್ತ್ರ ವಿಶಾರದರು, ದಿವ್ಯ ಶರೀರವುಳ್ಳವರು ಮತ್ತು ಶರೀರ ಕಾಂತಿಯುಳ್ಳವರು.
ಸರ್ವಲಕ್ಷಣಸಂಪನ್ನಾಃ ಸೋಮವತ್ ಪ್ರಿಯದರ್ಶನಾಃ |
ಸಿಂಹದರ್ಪಾ ಮಹೇಷ್ವಾಸಾಃ ಸಿಂಹವಿಕ್ರಾಂತಗಾಮಿನಃ ||27||
ಸಿಂಹಗ್ರೀವಾ ಮನುಷ್ಯೇಂದ್ರಾ ವವೃಧುರ್ಭೀಮದರ್ಶನಾಃ |
ವಿವರ್ಧಮಾನಸ್ತೇ ತತ್ರ ಪುಣ್ಯೇ ಹೈಮವತೇ ಗಿರೌ ||28||
ಎಲ್ಲಾ ಲಕ್ಷಣಗಳಿಂದ ಯುಕ್ತರಾದವರು, ಚಂದ್ರನಂತೆ ಪ್ರಿಯದರ್ಶನರಾದವರು, ಸಿಂಹದಂತೆ ದರ್ಪವುಳ್ಳವರು, ಮಹಾಧನುಸ್ಸನ್ನು ಧರಿಸಿದವರು, ಸಿಂಹದ ವಿಕ್ರಮದ ನಡಿಗೆಯುಳ್ಳವರು, ಸಿಂಹದಂತೆ ಮತ್ತರು, ಮನುಷ್ಯೇಂದ್ರರು ಮತ್ತು ಉಗ್ರವಾದ ಆಕೃತಿಯುಳ್ಳವರೂ ಆಗಿ ಎಲ್ಲರೂ ಬೆಳೆದರು.
ವಿಸ್ಮಯಂ ಜನಯಾಮಾಸುರ್ಮಹರ್ಷೀಣಾಂ ಸಮೇಯುಷಾಮ್ ||
ಪವಿತ್ರವಾದ ಹಿಮಾಲಯ ಪರ್ವತದಲ್ಲಿ ಬೆಳೆಯುತ್ತಿದ್ದ ಅವರು ಅಲ್ಲಿಗೆ ಬಂದ ಮಹರ್ಷಿಗಳಿಗೆ ಆಶ್ಚರ್ಯವನ್ನುಂಟು ಮಾಡಿದರು.
ನಾಮಾನಿ ಚಕ್ರಿರೇ ತೇಷಾಂ ಶತಶೃಂಗನಿವಾಸಿನಃ |
ಋಷಯಃ ಕರ್ಮತಶ್ಚೈವ ರೂಪತಃ ಸ್ನೇಹತಸ್ತಥಾ |
ಯುಧಿಷ್ಠಿರ ಇತಿ ಜ್ಯೇಷ್ಠಂ ದ್ವಿತೀಯಂ ಭೀಮ ಇತ್ಯಪಿ ||30||
ತೃತೀಯಮರ್ಜುನ ಇತಿ ಕುಂತೀಪುತ್ರಾನಕಲ್ಪಯನ್ |
ಪೂರ್ವಜಂ ನಕುಲಂ ಚೇತಿ ಸಹದೇವಂ ತತಃ ಪರಮ್ ||31||
ಊಚುರ್ಮಾದ್ರೀಸುತಾವೇವಂ ಮಹಾಭಾಗಾಸ್ತಪಸ್ವಿನಃ |
ಏಕವರ್ಷಾಂತರಸ್ತ್ವೇತೇ ಪರಸ್ಪರಮರಿಂದಮಾಃ ||32||
ಶತಶೃಂಗ ನಿವಾಸಿಗಳಾದ ಋಷಿಗಳು, ಅವರ ಕರ್ಮವನ್ನೂ ಮತ್ತು ರೂಪವನ್ನೂ ನೋಡಿ ಪ್ರೀತಿಯಿಂದ ಅವರಿಗೆ ನಾಮಕರಣವನ್ನು ಮಾಡಿದರು. ಮೊದಲನೆಯವನನ್ನು ಯುಧಿಷ್ಠಿರ ಎಂದೂ, ಎರಡನೆಯವನನ್ನು ಭೀಮನೆಂದೂ, ಮೂರನೆಯವನನ್ನು ಅರ್ಜುನ ಎಂದೂ ಕುಂತಿಪುತ್ರರನ್ನು ಕರೆದರು. ಮಹಾಭಾಗ್ಯವಂತರಾದ ಆ ತಪಸ್ವಿಗಳು ಮಾದ್ರಿಯ ಮಕ್ಕಳಲ್ಲಿ ಮೊದಲು ಹುಟ್ಟಿದವನನ್ನು ನಕುಲನೆಂದೂ ಅನಂತರ ಹುಟ್ಟಿದವನನ್ನು ಸಹದೇವನೆಂದೂ ಕರೆದರು. ಈ ಎಲ್ಲಾ ಶತ್ರುತಾಪಕರಾದ ಐದು ಮಕ್ಕಳು ಒಂದೊಂದು ವರ್ಷ ವ್ಯತ್ಯಾಸದ ವಯಸ್ಸುಳ್ಳವರು.
ಅನ್ವವರ್ಧಂತ ಪಾರ್ಥಾಶ್ಚ ಯವೌ ಪುತ್ರೌ ತಥೈವ ಚ |
ತೇ ಚ ಪಂಚ ಶತಂ ಚೈವ ಕುರುವಂಶವಿವರ್ಧನಾಃ |
ಸರ್ವೇ ವವೃಧಿರೇ ರಾಜನ್ ಕಾಲೇನಾಪ್ಸ್ವಿವ ನೀರಜಾಃ ||33||
ಎಲೈ ರಾಜನೇ, ಕುರುವಂಶ ವಿವರ್ಧನರಾದ, ಕುಂತಿಯ ಮಕ್ಕಳು, ಮಾದ್ರಿಯ ಮಕ್ಕಳು ಸೇರಿ ಐದು ಜನರೂ, ಧೃತರಾಷ್ಟ್ರನ ನೂರು ಮಕ್ಕಳೂ ಸಹ ನೀರಿನಲ್ಲಿ ಕಮಲಗಳು ಅರಳಿದಂತೆ ಎಲ್ಲರೂ ಬೆಳೆದರು.
ಜಾತಮಾತ್ರಾನುಪಾದಾಯ ಶತಶೃಂಗನಿವಾಸಿನಃ |
ಪಾಂಡೋಃ ಪುತ್ರಾನಮನ್ಯಂತ ತಾಪಸಾಃ ಸ್ವಾನಿವಾತ್ಮಜಾನ್ |
ತತಸ್ತು ವೃಷ್ಣಯಃ ಸರ್ವೇ ವಸುದೇವಪುರೋಗಮಾಃ ||34||
ಶತಶೃಂಗ ನಿವಾಸಿಗಳಾದ ತಾಪಸರು ಹುಟ್ಟಿದ ತಕ್ಷಣ ಪಾಂಡುವಿನ ಮಕ್ಕಳನ್ನು ಎತ್ತಿಕೊಂಡು ತಮ್ಮ ಮಕ್ಕಳೆಂದೇ ತಿಳಿದರು. ಅನಂತರ ವಸುದೇವಮೊದಲಾದ ಎಲ್ಲಾ ವೃಷ್ಣಿಗಳೂ ಹಾಗೆಯೇ ತಿಳಿದರು.
ಪಾಂಡುಃ ಶಾಪಭಯಾದ್ ಭೀತಃ ಶತಶೃಂಗಮುಪೇಯಿವಾನ್ |
ತತ್ರೈವ ಮುನಿಭಿಃ ಸಾರ್ಧಂ ತಾಪಸೋಽಭೂತ್ ತಪಸ್ವಿಭಿಃ ||35||
ಪಾಂಡುವು ಕಿಂದಮರ ಶಾಪದಿಂದ ಭೀತನಾಗಿ ಪುನಃ ಶತಶೃಂಗ ಪರ್ವತವನ್ನು ಸೇರಿದನು. ಅಲ್ಲಿ ತಪಸ್ವಿಗಳಾದ ಮುನಿಗಳ ಜೊತೆ ಸೇರಿ ತಾನೂ ತಾಪಸನಾದನು.
ಶಾಕಮೂಲಫಲಾಹಾರಃ ತಪಸ್ವೀ ನಿಯತೇಂದ್ರಿಯಃ |
ಧ್ಯಾನಯೋಗಪರೋ ರಾಜಾ ಬಭೂವೇತಿ ಚ ವಾದಕಾಃ |
ಪುಬ್ರುವಂತಿ ಸ್ಮ ಬಹವಃ ತಚ್ಛ್ರುತ್ವಾ ಶೋಕಕರ್ಶಿತಾಃ ||36||
ಶಾಕಮೂಲಫಲಾಹಾರನಾಗಿ, ಇಂದ್ರಿಯಜಯವನ್ನು ಹೊಂದಿ ತಪಸ್ವಿಯಾಗಿ ರಾಜನು ಧ್ಯಾನಯೋಗಪರನಾದನು ಎಂದು ನೋಡಿದವರು ಹೇಳುತ್ತಾರೆ. ಅದನ್ನು ಕೇಳಿ ಬಹಳ ಜನರು ಶೋಕತಪ್ತರಾದರು.

ಪಾಂಡೋಃ ಪ್ರೀತಿಸಮಾಯುಕ್ತಾಃ ಕದಾ ಶ್ರೋಷ್ಯಾಮ ಸತ್ಕಥಾಃ |
ಇತ್ಯೇವಂ ಕಥಯಂತಸ್ತೇ ವೃಷ್ಣಯಃ ಸಹ ಬಾಂಧವೈಃ |
ಪಾಂಡೋಃ ಪುತ್ರಾಗಮಂ ಶ್ರುತ್ವಾ ಸರ್ವೇ ಹರ್ಷಸಮನ್ವಿತಾಃ ॥37॥
ಪಾಂಡುವಿನಲ್ಲಿ ಪ್ರೀತಿಯಿದ್ದ, ವೃಷ್ಣಿಗಳು ಮತ್ತು ಬಂಧುಗಳು, ನಾವು ಪಾಂಡುವಿನ ಕಡೆಯಿಂದ ಯಾವಾಗ ಒಳ್ಳೆಯ ವಾರ್ತೆಯನ್ನು ಕೇಳುತ್ತೇವೆ ಎಂದು ಮಾತನಾಡುತ್ತಿದ್ದವರು, ಪಾಂಡುವಿನ ಪುತ್ರಪ್ರಾಪ್ತಿಯನ್ನು ಕೇಳಿ ಎಲ್ಲರೂ ಹರ್ಷಯುಕ್ತರಾದರು.
ಸಭಾಜಯಂತಸ್ತೇಽನ್ಯೋನ್ಯಂ ವಸುದೇವಂ ವಚೋಽಬ್ರುವನ್ |
ನ ಭವೇರನ್ ಕ್ರಿಯಾಹೀನಾಃ ಪಾಂಡೋಃ ಪುತ್ರಾ ಮಹಾಬಲಾಃ |
ಪಾಂಡೋಃ ಪ್ರಿಯಹಿತಾನ್ವೇಷೀ ಪ್ರೇಷಯ ತ್ವಂ ಪುರೋಹಿತಮ್ ॥38॥
ಅವರೆಲ್ಲರೂ ಪರಸ್ಪರವಾಗಿ ಅಭಿನಂದಿಸಿ, ವಸುದೇವನನ್ನು ಕುರಿತು `ಪಾಂಡುವಿನ ಮಹಾಬಲರಾದ ಪುತ್ರರು ಸಂಸ್ಕಾರಹೀನರಾಗಬಾರದು. ಆದ್ದರಿಂದ ಪಾಂಡುವಿನ ಪ್ರಿಯದಲ್ಲೂ, ಹಿತದಲ್ಲೂ ಆಸಕ್ತನಾದ ನೀನು, ಪಾಂಡವರಿಗೆ ಸಂಸ್ಕಾರಗಳನ್ನು ಮಾಡಲು ಪುರೋಹಿತರನ್ನು ಕಳುಹಿಸು' ಎಂದು ಹೇಳಿದರು.
ವೈಶಂಪಾಯನಃ
ವಸುದೇವಸ್ತಥೇತ್ಯುಕ್ತ್ವಾ ವಿಸಸರ್ಜ ಪುರೋಹಿತಮ್ |
ಯುಕ್ತಾನಿ ಚ ಕುಮಾರಾಣಾಂ ಪಾರಿಬರ್ಹಾಣ್ಯನೇಕಶಃ ॥39॥
ವಸುದೇವನು `ಹಾಗೆಯೇ ಆಗಲಿ' ಎಂದು ಹೇಳಿ ಕುಮಾರರಿಗೆ ಉಚಿತವಾದ ಉಡುಗೊರೆಗಳನ್ನು ಕೊಟ್ಟು ಪುರೋಹಿತರನ್ನು ಕಳುಹಿಸಿಕೊಟ್ಟನು.
ಕುಂತೀಂ ಮಾದ್ರೀಂ ಚ ಸಂದಿಶ್ಯ ದಾಸೀದಾಸಪರಿಚ್ಛದಮ್ |
ಗಾವೋ ರೌಪ್ಯಂ ಹಿರಣ್ಯಂ ಚ ಪ್ರೇಷಯಾಮಾಸ ಭಾರತ ॥40॥
ಭಾರತನೇ, ಕುಂತಿ ಮತ್ತು ಮಾದ್ರಿಯರನ್ನು ನಿರ್ದೇಶಿಸಿ ಅವರಿಗೆ ತಲುಪಿಸಬೇಕೆಂದು ದಾಸದಾಸಿಯರನ್ನೂ, ಗೃಹವಸ್ತುಗಳನ್ನೂ, ಗೋವುಗಳನ್ನೂ, ರಜತ ಮತ್ತು ಸುವರ್ಣವನ್ನೂ ಕಳುಹಿಸಿದನು.
ತಾನಿ ಸರ್ವಾಣಿ ಸಂಗೃಹ್ಯ ಪ್ರಯಯೌ ಸ ಪುರೋಹಿತಃ |
ತಮಾಗತಂ ದ್ವಿಜಶ್ರೇಷ್ಠಂ ಕಾಶ್ಯಪಂ ವೈ ಪುರೋಹಿತಮ್ ॥41॥
ಪೂಜಯಾಮಾಸ ವಿಧಿವತ್ ಪಾಂಡುಃ ಪುರಪರಂಜಯಃ |
ಪೃಥಾ ಮಾದ್ರೀ ಚ ಸಂಹೃಷ್ಟೇ ವಸುದೇವಂ ಪ್ರಶಂಸತಾಮ್ ॥42॥
ಪುರೋಹಿತರು ಆ ಎಲ್ಲಾ ವಸ್ತುಗಳನ್ನೂ ತೆಗೆದುಕೊಂಡು ಹೊರಟರು. ಆ ಪುರೋಹಿತರು ಶತಶೃಂಗಪರ್ವತಕ್ಕೆ ಬಂದುದನ್ನು ನೋಡಿ, ಪರಪುರಂಜಯನಾದ ಪಾಂಡುವು ಕಾಶ್ಯಪಗೋತ್ರಕ್ಕೆ ಸೇರಿದ ಆ ಬ್ರಾಹ್ಮಣರನ್ನು ವಿಧಿವತ್ತಾಗಿ ಪೂಜಿಸಿದನು. ಕುಂತಿ ಮತ್ತು ಮಾದ್ರಿಯರು ಸಂತೋಷಪಟ್ಟು ವಸುದೇವನನ್ನು ಹೊಗಳಿದರು.
ತತಃ ಪಾಂಡುಃ ಕ್ರಿಯಾಃ ಸರ್ವಾಃ ಪಾಂಡವಾನ್ ಸಮಕಾರಯತ್ |
ಗರ್ಭಾಧಾನಾದಿಕೃತ್ಯಾನಿ ಚೌಲೋಪನಯನಾನಿ ಚ ॥43॥
ಕಾಶ್ಯಪಃ ಕೃತವಾನ್ ಸರ್ವಮುಪಾಕರ್ಮ ಚ ಭಾರತ |
ಚೌಲೋಪನಾಯನಾದೂರ್ಧ್ವಮೃಷಭಾಕ್ಷಾ ಯಶಸ್ವಿನಃ ॥44॥
ಅನಂತರ ಪಾಂಡುವು ತನ್ನ ಮಕ್ಕಳಿಗೆ ಗರ್ಭಾಧಾನಾದಿ ಸಂಸ್ಕಾರಗಳನ್ನು, ಚೌಲೋಪನಯನಗಳನ್ನು ಮಾಡಿಸಿದನು. ಭಾರತನೇ! ಆ ಕಾಶ್ಯಪ ಪುರೋಹಿತರು ಪುತ್ರರಿಗೆ ಉಪಾಕರ್ಮವನ್ನೂ ಮಾಡಿಸಿದರು.
ವೈದಿಕಾಧ್ಯಯನೇ ಸರ್ವೇ ಸಮಪದ್ಯಂತ ಪಾರಗಾಃ ॥45॥
ಚೌಲೋಪನಯನದ ನಂತರ ಯಶಸ್ವಿಗಳೂ, ಗಂಭೀರ ದೃಷ್ಟಿಯುಳ್ಳವರಾದ ಪಾಂಡವರೆಲ್ಲರೂ ವೇದವೇದಾಂಗಗಳ ಅಧ್ಯಯನದಲ್ಲಿ ತೊಡಗಿ ಪಾರಂಗತರಾದರು.
ಶರ್ಯಾತೇಃ ಪ್ರಥಿತಃ ಪುತ್ರಃ ಶುಕೋ ನಾಮ ಪರಂತಪಃ |
ಯೇನ ಸಾಗರಪರ್ಯಂತಾ ಧನುಷಾ ನಿರ್ಜಿತಾ ಮಹೀ |
ಅಶ್ವಮೇಧಶತೈರಿಷ್ಟ್ವಾ ಸ ಮಹಾತ್ಮಾ ಮಹಾಮಖೈಃ ॥46॥
ಆರಾಧ್ಯ ದೇವತಾಃ ಸರ್ವಾಃ ಪಿತೄನಪಿ ಮಹಾಮತಿಃ |
ಶತಶೃಂಗೇ ತಪಸ್ತೇಪೇ ಶಾಕಮೂಲಫಲಾಶನಃ ॥47॥
ಶರ್ಯಾತಿಯ ಪ್ರಖ್ಯಾತಪುತ್ರನಾದ, ಪರಂತಪನಾದ, ಶುಕನೆಂಬ ರಾಜರ್ಷಿ ಇದ್ದನು. ಅವನು ಸಾಗರಪರ್ಯಂತವಾದ ಭೂಮಿಯನ್ನು ತನ್ನ ಧನುಸ್ಸಿನ ಬಲದಿಂದ ಗೆದ್ದು, ನೂರು ಅಶ್ವಮೇಧಗಳನ್ನು ಮಾಡಿ, ಇನ್ನೂ ಅನೇಕ ಯಾಗಗಳನ್ನು ಮಾಡಿ ಎಲ್ಲಾ ದೇವತೆಗಳನ್ನೂ ಮತ್ತು ಪಿತೃಗಳನ್ನೂ ಆರಾಧಿಸಿ, ಮಹಾತ್ಮನೂ, ಮೇಧಾವಿಯೂ ಆದ ಅವನು ಶತಶೃಂಗಪರ್ವತದಲ್ಲಿ ಶಾಕಮೂಲಫಲಾಶನನಾಗಿ ತಪಸ್ಸನ್ನು ಮಾಡುತ್ತಿದ್ದನು.
ತೇನೋಪಕರಣಶ್ರೇಷ್ಠೈಃ ಶಿಕ್ಷಯಾ ಚೋಪಬೃಂಹಿತಾಃ |
ತತ್ಪ್ರಸಾದಾದ್ ಧನುರ್ವೇದೇ ಸಮಪದ್ಯಂತ ಪಾರಗಾಃ ॥48॥
ಅವನು ಪಾಂಡವರಿಗೆ ಶಸ್ತ್ರವಿದ್ಯೆಗಳನ್ನು ಕಲಿಸಿದನು. ಅವನ ಅನುಗ್ರಹದಿಂದ ಪಾಂಡವರು ಧನುರ್ವೇದದಲ್ಲಿ ಪಾರಂಗತರಾದರು.
ಗದಾಯಾಂ ಪಾರಗೋ ಭೀಮಃ ತೋಮರೇಷು ಯುಧಿಷ್ಠಿರಃ |
ಅಸಿಚರ್ಮಣಿ ನಿಷ್ಣಾತೌ ಯಮೌ ಸತ್ಯವತಾಂ ವರೌ ॥49॥

ಭೀಮನು ಗದಾಯುದ್ಧದಲ್ಲಿ ಪಾರಂಗತನಾದನು. ಯುಧಿಷ್ಠಿರನು ತೋಮರವಿದ್ಯೆಯಲ್ಲಿ ಪಾರಂಗತನಾದನು. ಸತ್ಯವಂತರಲ್ಲಿ ಶ್ರೇಷ್ಠರಾದ ನಕುಲಸಹದೇವರು ಖಡ್ಗವಿದ್ಯೆಯಲ್ಲಿ ನಿಷ್ಣಾತರಾದರು.
ಧನುರ್ವೇದೇ ಗತಃ ಪಾರಂ ಸವ್ಯಸಾಚೀ ಪರಂತಪಃ |
ಶುಕೇನ ಸಮನುಜ್ಞಾತೋ ಮತ್ಸಮೋಽಯಮಿತಿ ಪ್ರಭೋ ॥50॥
ಸವ್ಯಸಾಚಿಯಾದ ಪರಂತಪನಾದ ಅರ್ಜುನನು ಧನುರ್ವೇದದಲ್ಲಿ ಪಾರಂಗತನಾದನು. ರಾಜನೇ, `ನೀನು ನನಗೆ ಸಮಾನನಾದವನು' ಎಂದು ಹೇಳಿ ಶುಕನು ಅರ್ಜುನನಿಗೆ ಅನುಮತಿಯನ್ನು ನೀಡಿದನು.
ಅನುಜ್ಞಾಯ ತತೋ ರಾಜಾ ಶಕ್ತಿಂ ಖಡ್ಗಂ ತಥಾ ಶರಾನ್ |
ಧನುಶ್ಚ ದದತಾಂ ಶ್ರೇಷ್ಠಃ ತಾಲಮಾತ್ರಂ ಮಹಾಪ್ರಭಮ್ ॥51॥
ವಿಪಾಠಕ್ಷುರನಾರಾಚಾನ್ ಗೃಧ್ರಪತ್ರೈರಲಂಕೃತಾನ್ |
ದದೌ ಪಾರ್ಥಾಯ ಸಂಹೃಷ್ಟೋ ಮಹೋರಗಸಮಪ್ರಭಾನ್ ॥52॥
ರಾಜನಾದ ಶುಕನು ಅರ್ಜುನನಿಗೆ ವಿದ್ಯೆಯು ಪೂರ್ಣವಾಗಿದೆ ಎಂದು ಅನುಮತಿಯನ್ನು ನೀಡಿ, ಶಕ್ತಿಯನ್ನೂ, ಖಡ್ಗವನ್ನೂ, ಒಂದು ತಾಲ ಎತ್ತರವಿರುವ ಮಹಾಧನುಸ್ಸನ್ನೂ, ಬಾಣಗಳನ್ನೂ, ವಿಪಾ ಠಕ್ಷುವಾರಾಚರಗಳನ್ನೂ, ಹದ್ದಿನ ಗರಿಗಳಿಂದ ಅಲಂಕೃತವಾದ ಮಹಾಸರ್ಪಗಳಂತಿರುವ ನಾರಾಚಗಳನ್ನೂ, ಸಂತೋಷದಿಂದ ಅರ್ಜುನನಿಗೆ ಕೊಟ್ಟನು.
ಅವಾಪ್ಯ ಸರ್ವಶಸತ್ರಣಿ ಮುದಿತೋ ವಾಸವಾತ್ಮಜಃ |
ಮೇನೇ ಸರ್ವಾನ್ ಮಹೀಪಾಲಾನಪರ್ಯಾಪ್ತಾನ್ ಸ್ವತೇಜಸಃ ॥53॥
ಇಂದ್ರನ ಮಗನಾದ ಅರ್ಜುನನು, ಎಲ್ಲಾ ಶಸ್ತ್ರಗಳನ್ನೂ ಸ್ವೀಕರಿಸಿ ಸಂತೋಷಗೊಂಡು, ತನ್ನ ಪರಾಕ್ರಮಕ್ಕೆ ರಾಜರುಗಳಲ್ಲಿ ಯಾರೂ ತನಗೆ ಸರಿಸಾಟಿ ಇಲ್ಲವೆಂದು ಭಾವಿಸಿದನು.
ಏಕವರ್ಷಾಂತರಾಸ್ತ್ವೇತೇ ಪರಸ್ಪರಮರಿಂದಮಾಃ |
ಅನ್ವವರ್ಧಂತ ಪಾರ್ಥಾಶ್ಚ ಮಾದ್ರೀಪುತ್ರೌ ತಥೈವ ಚ ॥54॥
ಅರಿಂದಮರಾದ ಕುಂತಿಯ ಮೂವರು ಮಕ್ಕಳು ಮತ್ತು ಮಾದ್ರಿಯ ಇಬ್ಬರು ಮಕ್ಕಳು ಪರಸ್ಪರವಾಗಿ ಒಂದು ವರ್ಷದ ಅಂತರವುಳ್ಳವರಾಗಿ ಬೆಳೆದರು.
ತೇ ಚ ಪಂಚ ಶತಂ ಚೈವ ಕುರುವಂಶವಿವರ್ಧನಾಃ |
ಸರ್ವೇ ವವೃಧುರಲ್ಪೇನ ಕಾಲೇನಾಪ್ಸ್ವಿವ ಪಂಕಜಾಃ ॥55॥
ಆ ಐದು ಜನರೂ ಮತ್ತು ಕುರುವಂಶವಿವರ್ಧನರಾದ ಧೃತರಾಷ್ಟ್ರನ ನೂರು ಪುತ್ರರೂ ನೀರಿನಲ್ಲಿ ಕಮಲಗಳು ಅರಳಿದಂತೆ ಅಲ್ಪಕಾಲದಲ್ಲಿಯೇ ಬೆಳೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಹತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತನೆಯ ಅಧ್ಯಾಯ
(ಯುಧಿಷ್ಠಿರ ಮೊದಲಾದವರ ಆಯುರ್ಭಾವ ಕಥನ.)
ಜನಮೇಜಯಃ
ಕಸ್ಮಿನ್ ವಯಸಿ ಪಂಪ್ರಾಪ್ತಾಃ ಪಾಂಡವಾ ಗಜಸಾಹ್ವಯಮ್ |
ಸಮಪದ್ಯಂತ ದೇವೇಭ್ಯಸ್ತೇಷಾಮಾಯುಶ್ಚ ಕಿಂ ಪರಮ್ ॥1॥
ವೈಶಂಪಾಯನರೇ, ದೇವತೆಗಳಿಂದ ಜನಿಸಿದ ಪಾಂಡವರು ಯಾವ ವಯಸ್ಸಿನಲ್ಲಿ ಹಸ್ತಿನಪುರಕ್ಕೆ ಬಂದರು. ಅವರ ಪೂರ್ಣವಾದ ಆಯುಸ್ಸಿನ ಪ್ರಮಾಣವೇನು?
ವೈಶಂಪಾಯನಃ
ಪಾಂಡವಾನಾಂ ತಥಾಽಽಯುಷ್ಯಂ ಶೃಣು ಕೌರವನಂದನ |
ಜಗಾಮ ಹಸ್ತಿನಪುರಂ ಷೋಡಶಾಬ್ದೋ ಯುಧಿಷ್ಠಿರಃ ॥2॥
ಕೌರವನಂದನನೇ, ಪಾಂಡವರ ಆಯುರ್ದಾಯವನ್ನು ಕೇಳು. ಪಾಂಡವರು ಹಸ್ತಿನಪುರಕ್ಕೆ ಬಂದಾಗ ಯುಧಿಷ್ಠಿರನಿಗೆ ಹದಿನಾರು ವರ್ಷಗಳು.
ಪಂಚದಶಾಬ್ದೋ ಭೀಮಸ್ತು ಬೀಭತ್ಸುರ್ವೈ ಚತುರ್ದಶಃ |
ತ್ರಯೋದಶಾಬ್ದೌ ಚ ಯವೌ ಜಗ್ಮತುರ್ಗಜಸಾಹ್ವಯಮ್ ॥3॥
ಭೀಮನಿಗೆ ಹದಿನೈದು ವರ್ಷ, ಅರ್ಜುನನಿಗೆ ಹದಿನಾಲ್ಕು ವರ್ಷ, ನಕುಲಸಹದೇವರಿಗೆ ಹದಿಮೂರು ವರ್ಷಗಳಾಗಿದ್ದಾಗ ಅವರು ಹಸ್ತಿನಪುರಕ್ಕೆ ಬಂದರು.
ತತ್ರ ತ್ರಯೋದಶಾಬ್ದಾನಿ ಧಾರ್ತರಾಷ್ಟ್ರೈಃ ಸಹೋಷಿತಾಃ |
ಷಟ್ ಚ ಮಾಸಾನ್ ಜತುಗೃಹಾನ್ಮುಕ್ತಾ ಜಾತೋ ಘಟೋತ್ಕಚಃ ॥4॥
ಅಲ್ಲಿ ಅವರು ದುರ್ಯೋಧನ ಮೊದಲಾದವರ ಜೊತೆಯಲ್ಲಿ ಹದಿಮೂರು ವರ್ಷ ವಾಸಿಸಿದರು. ಅನಂತರ ಆರು ತಿಂಗಳ ಕಾಲವನ್ನು ಅರಗಿನ ಮನೆಯಲ್ಲಿ ಕಳೆದರು. ಅರಗಿನ ಮನೆಯನ್ನು ಬಿಟ್ಟು ಹೊರಟ ಮೇಲೆ ಹುಟ್ಟಿದವನು ಘಟೋತ್ಕಚ.
ಷಣ್ಮಾಸಾನೇಕಚಕ್ರಾಯಾಂ ವರ್ಷಂ ಪಾಂಚಾಲಕೇ ಪುರೇ |

ಧಾರ್ತರಾಷ್ಟ್ರೈಃ ಸಹೋಷಿತ್ವಾ ಪಂಚ ವರ್ಷಾಣಿ ಭಾರತ ॥5॥
ಏಕಚಕ್ರನಗರದಲ್ಲಿ ಆರು ತಿಂಗಳ ಕಾಲ ವಾಸಿಸಿ, ಪಾಂಚಾಲ ರಾಜನ ಪಟ್ಟಣದಲ್ಲಿ ಒಂದು ವರ್ಷ ವಾಸಿಸಿದರು. ಭಾರತನೇ, ಪುನಃ ಹಸ್ತಿನಪುರಕ್ಕೆ ಬಂದು ದುರ್ಯೋಧನಾದಿಗಳ ಜೊತೆಯಲ್ಲಿ ಐದು ವರ್ಷ ವಾಸಿಸಿದರು.
ಇಂದ್ರಪ್ರಸ್ಥೇ ವಸಂತಸ್ತೇ ತ್ರೀಣಿ ವರ್ಷಾಣಿ ವಿಂಶತಿಮ್ |
ದ್ವಾದಶಬ್ದಾತ್ ತಥೈಕಂ ಚ ಬಭ್ರಮುರ್ದ್ಯೂತಕರ್ಶಿತಾಃ ॥6॥
ಅವರು ಇಂದ್ರಪ್ರಸ್ಥ ನಗರದಲ್ಲಿ ಇಪ್ಪತ್ಮೂರು ವರ್ಷಗಳ ಕಾಲ ವಾಸಿಸಿದರು. ಅನಂತರ ದ್ಯೂತದಲ್ಲಿ ಸೋತು ಹನ್ನೆರಡು ವರ್ಷ ವನವಾಸವನ್ನೂ, ಒಂದು ವರ್ಷ ಅಜ್ಞಾತವಾಸವನ್ನೂ ಮಾಡಿದರು.
ಭುಕತ್ವ ಷಟ್‌ತ್ರಿಂಶತಂ ರಾಜ್ಯಂ ಸಾಗರಾಂತಾಂ ವಸುಂಧರಾಮ್ |
ಮಾಸ್ಯೈಃ ಷಡ್‌ಭಿರ್ಮಹಾತ್ಮಾನಃ ಸರ್ವೇ ಕೃಷ್ಣಪರಾಯಣಾಃ |
ರಾಜ್ಯೇ ಪರೀಕ್ಷಿತಂ ಸ್ಥಾಪ್ಯ ಇಷ್ಟಾಂ ಗತಿಮವಾಪ್ನುವನ್ ॥7॥
ಅನಂತರ ಸಾಗರಾಂತವಾದ ಭೂಮಿಯನ್ನು ಮೂವತ್ತಾರು ವರ್ಷಗಳ ಕಾಲ ಆಳಿದರು. ಕೃಷ್ಣಪರಾಯಣರಾದ ಅವರು ಪರೀಕ್ಷಿತನನ್ನು ರಾಜ್ಯದಲ್ಲಿ ಸ್ಥಾಪಿಸಿ ಆರು ತಿಂಗಳ ಅವಧಿಯೊಳಗೆ ತಮಗೆ ಇಷ್ಟವಾದ ಗತಿಯನ್ನು ಹೊಂದಿದರು.
ಏವಂ ಯುಧಿಷ್ಠಿರಸ್ಯಾಪಿ ಆಯುರಷ್ಟೋತ್ತರಂ ಶತಮ್ |
ಅರ್ಜುನಾತ್ ಕೇಶವೋ ಜ್ಯೇಷ್ಠಃ ತ್ರಿಭಿರ್ಮಾಸೈರ್ಮಹಾಭುಜಃ |
ಕೃಷ್ಣಾತ್ ಸಂಕರ್ಷಣೋ ಜ್ಯೇಷ್ಠಃ ತ್ರಿಭಿರ್ಮಾಸೈರ್ಮಹಾಬಲಃ ॥8॥
ಹೀಗೆ ಯುಧಿಷ್ಠಿರನ ಒಟ್ಟು ಆಯುಸ್ಸು ನೂರೆಂಟು ವರ್ಷಗಳು. ಅರ್ಜುನನಿಗಿಂತ ಮಹಾಭುಜನಾದ ಕೇಶವನು ಮೂರು ತಿಂಗಳು ದೊಡ್ಡವನು. ಕೃಷ್ಣನಿಗಿಂತ ಮಹಾಬಲನಾದ ಸಂಕರ್ಷಣನು (ಬಲರಾಮನು) ಮೂರು ತಿಂಗಳು ದೊಡ್ಡವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ವಿಂಶತ್ಯಧಿಕಶತತಮೋऽಧ್ಯಾಯಃ ॥
॥ ಸಂಭವಪರ್ವಣಿ ಅಷ್ಟಷಷ್ಟಿತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ- ಅಧ್ಯಾಯ-14
ವರ್ಧತ್ಸು ಪಾಂಡುತನಯೇಷು ಚತುರ್ದಶಂ ತು
ಜನ್ಮರ್ಕ್ಷಮಾಸ ತನಯಸ್ಯ ಸಹಸ್ರದೃಷ್ಟೇಃ |
ಪ್ರತ್ಯಾಬ್ದಿಕಂ ಮುನಿಗಣಾನ್ ಪರಿವೇಷಯಂತೀ
ಕುಂತೀ ತದಾಸ ಬಹುಕಾರ್ಯಪರಾ ನಯಜ್ಞಾ ॥44॥
ಇತ್ತ ಪಾಂಡವರು ಬೆಳೆಯುತ್ತಿದ್ದಾಗ ಅರ್ಜುನನಿಗೆ ಹದಿನಾಲ್ಕನೆ ವಾರ್ಷಿಕ ಜನ್ಮನಕ್ಷತ್ರದ ದಿನ ಬಂದಿತ್ತು. ಆಗ ನೀತಿಜ್ಞಳಾದ ಕುಂತಿ ಮುನಿ ಸಮೂಹಗಳಿಗೆ ಅನ್ನ ಬಡಿಸುತ್ತ ಬಹಳ ಕಾರ್ಯತತ್ಪರಳಾಗಿದ್ದಳು.
ತತ್ಕಾಲ ಏವ ನೃಪತಿಃ ಸಹ ಮಾದ್ರವತ್ಯಾ
ಪುಂಸ್ಕೋಕಿಲಾಕುಲಿತಫುಲ್ಲವನಂ ದದರ್ಶ |
ತಸ್ಮಿನ್ ವಸಂತಪವನಸ್ಪರ್ಶೇಧಿತಃ ಸ
ಕಂದರ್ಪಮಾರ್ಗಣವಶಂ ಸಹಸಾ ಜಗಾಮ ॥45॥
ಅದೇ ಕಾಲದಲ್ಲಿ ಪಾಂಡುರಾಜ ಮಾದ್ರಿಯೊಂದಿಗೆ ಕೋಗಿಲೆಗಳಿಂದ ತುಂಬಿದ, ವಿಕಸಿತವಾದ ವನವನ್ನು ಕಂಡ. ಅಲ್ಲಿ ವಸಂತ ಮಾರುತಸ್ಪರ್ಶದಿಂದ ಉದ್ರಿಕ್ತನಾದ ಪಾಂಡು ಅಕಸ್ಮಾತ್ ಮನ್ಮಥ ಬಾಣಕ್ಕೆ ವಶನಾದ.
ಜಗ್ರಾಹ ತಾಮಥ ತಯಾ ರಮಮಾಣ ಏವ
ಯಾತೋ ಯಮಸ್ಯ ಸದನಂ ಹರಿಪಾದಸಂಗೀ |
ಪೂರ್ವಂ ಶಚೀರಮಣಮಿಚ್ಛತ ಏಷ ವಿಘ್ನಂ
ಶಕ್ರಸ್ಯ ತದ್ದರ್ಶನೋಪಗತೋ ಹಿ ಚಕ್ರೇ ॥46॥
ಪಾಂಡು ರತಿಕ್ರೀಡೆಗಾಗಿ ಮಾದ್ರಿಯನ್ನು ಹಿಡಿದುಕೊಂಡ. ಅವಳೊಡನೆ ರಮಿಸುತ್ತಿದ್ದಂತೆ ಹರಿಪಾದಸಕ್ತನಾದ ಆತ ಯಮಸದನವನ್ನು ಸೇರಿದ. ಹಿಂದೆ ಇಂದ್ರ ಶಚಿಯೊಡನೆ ರಮಿಸಲು ಬಯಸಿದ್ದಾಗ ಈತ ಅವನ ದರ್ಶನಕ್ಕಾಗಿ ಹೋಗಿ ವಿಘ್ನ ಮಾಡಿದ್ದ.
ತೇನೈವ ಮಾನುಷಮವಾಪ್ಯ ರತಿಸ್ಥ ಏವ
ಪಂಚತ್ವಮಾಪ ರತಿವಿಘ್ನಮಪುತ್ರತಾಂ ಚ |
ಸ್ವಾತ್ಕೋತ್ತಮೇಷ್ವಥ ಸುರೇಷು ವಿಶೇಷತಶ್ಚ
ಸ್ವಲ್ಪೋऽಪಿ ದೋಷ ಉರುತಾಮಭಿಯಾತಿ ಯಸ್ಮಾತ್ ॥47॥
ಅದರಿಂದಲೇ ಮನುಷ್ಯ ಜನ್ಮ ಹೊಂದಿ ರತಿಕ್ರೀಡೆಯಲ್ಲಿದ್ದಾಗ ಮರಣಹೊಂದಿದ. ಅದರಿಂದಲೇ ಅವನಿಗೆ ರತಿಕ್ರೀಡೆಗೆ ವಿಘ್ನಬಂದಿತ್ತು ಮಕ್ಕಳೂ ಆಗಲಿಲ್ಲ. ಏಕೆಂದರೆ ತನಗಿಂತ ಉತ್ತಮರಾದವರಲ್ಲಿ ಮಾಡುವ ಅಲ್ಪಾಪರಾಧವೂ ಮಹತ್ತಾಗುತ್ತದೆ. ವಿಶೇಷವಾಗಿ ಸ್ವೋತ್ತಮ ದೇವತೆಗಳಲ್ಲಿ ಮಾಡುವ ಅಪರಾಧ ಇನ್ನೂ ಮಹತ್ತಾಗುತ್ತದೆ.
ಮಾದ್ರೀ ಪತಿಂ ಮೃತಮವೇಕ್ಷ್ಯರುರಾವ ದೂರಾತ್

ತಚ್ಛುಶ್ರುವುಶ್ಚ ಪೃಥಯಾ ಸಹ ಪಾಂಡುಪುತ್ರಾಃ |
ತೇಷ್ವಾಗತೇಷು ವಚನಾದಪಿ ಮಾದ್ರವತ್ಯಾಃ
ಪುತ್ರಾನ್ನಿವಾರ್ಯ ತು ಪೃಥಾ ಸ್ವಯಮತ್ರ ಚಾಗಾತ್ ॥48॥
ಪತಿ ಮೃತನಾದುದನ್ನು ಕಂಡು ಮಾದ್ರಿ ಕೂಗಿಕೊಂಡಳು. ಕುಂತಿಯೊಂದಿಗೆ ಪಾಂಡವರೂ ದೂರದಿಂದಲೆ ಅದನ್ನು ಕೇಳಿದರು. ಬರಲು ಹೊರಟರು. ಆದರೆ ಕುಂತಿ ಮಾದ್ರಿಯ ಮಾತನ್ನು ಕೇಳಿ ಅವರನ್ನು ತಡೆದು ತಾನೊಬ್ಬಳೆ ಮಾದ್ರಿಯ ಬಳಿಗೆ ಬಂದಳು.
ಪತ್ಯುಃ ಕಳೇಬರಮವೇಕ್ಷ್ಯ ನಿಶಮ್ಯ ಮಾದ್ರ್ಯಾಃ
ಕುಂತೀ ಭೃಶಂ ವ್ಯಥಿತಹೃತ್ಕಮಳೈವ ಮಾದ್ರೀಮ್ |
ಧಿಕ್ಕೃತ್ಯ ಚಾನುಮರಣಾಯ ಮತಿಂ ಚಕಾರ
ತಸ್ಯಾಃ ಸ್ವನೋ ರುದಿತಜಃ ಶ್ರುತ ಆಶು ಪಾರ್ಥೈಃ ॥49॥
ಕುಂತಿ ಪತಿಯ ಮೃತಶರೀರವನ್ನು ಕಂಡು, ಮರಣ ಹೇಗಾಯಿತೆನ್ನುವುದನ್ನು ಮಾದ್ರಿಯಿಂದ ಕೇಳಿ, ಬಹಳ ವ್ಯಥೆ ತುಂಬಿದ ಹೃದಯ ಕಮಲ ಉಳ್ಳವಳಾಗಿ ಮಾದ್ರಿಯನ್ನು ಬೈದು ಪತಿಸಹಗಮನಕ್ಕೆ ಸಂಕಲ್ಪ ಮಾಡಿದಳು. ಕೂಡಲೆ ಅವಳು ಅಳುವ ಶಬ್ದ ಪಾಂಡವರಿಗೆ ಕೇಳಿಸಿತು.
ತೇಷ್ವಾಗತೇಷ್ವಧಿಕ ಆಸ ವಿರಾವ ಏತಂ
ಸರ್ವೇಪಿ ಶುಶ್ರುವು ಋಷಿಪ್ರವರಾ ಅಥಾತ್ರ |
ಆಜಗ್ಮುರುತ್ತಮಕೃಪಾ ಋಷಿಲೋಕಮಧ್ಯೇ
ಪತ್ನೀನೃಪಾನುಗಮನಾಯ ಚ ಪಸ್ಪೃಧಾತೇ ॥50॥
ಅವರು ಬಂದಾಗ ಅಳುವ ಧ್ವನಿ ಇನ್ನೂ ಹೆಚ್ಚಿತು. ಅಲ್ಲಿದ್ದ ಶ್ರೇಷ್ಠ ಋಷಿಗಳೆಲ್ಲರೂ ಅದನ್ನು ಕೇಳಿದರು, ಋಷಿ ಜನರುಗಳ ನಡುವೆ ಹೆಚ್ಚು ಕೃಪಾಶಾಲಿಗಳಾದ ಅವರು ಬಂದರು. ರಾಜನೊಡನೆ ಸಹಗಮನಕ್ಕೆ ಇಬ್ಬರು ಪತ್ನಿಯರೂ ಸ್ಪರ್ಧಿಸಿದರು.
ತೇ ಸನ್ನಿವಾರ್ಯ ತು ಪೃಥಾಮಥ ಮಾದ್ರವತ್ಯಾ
ಭರ್ತುಃ ಸಹಾನುಗಮನಂ ಬಹುಚಾರ್ಥಯಂತ್ಯಾಃ |
ಸಂವಾದಮೇವ ನಿಜದೋಷಮವೇಕ್ಷ್ಯ ತಸ್ಯಾ-
ಶ್ಚಕ್ರುಃ ಸದಾವಗತ ಭಾಗವತೋಚ್ಚಧರ್ಮಾಃ ॥51॥
ಸದಾ ಉತ್ತಮ ಭಾಗವತ ಧರ್ಮಜ್ಞರಾದ ಆ ಋಷಿಗಳು ಕುಂತಿಯನ್ನು ತಡೆದು ಪತಿಯೊಡನೆ ಸಹಗಮನಕ್ಕಾಗಿ ಬಹಳವಾಗಿ ಬೇಡುತ್ತಿದ್ದ ಮಾದ್ರಿಗೇ ಅವಳ ತಪ್ಪನ್ನು ಗಮನಿಸಿ ಸಮ್ಮತಿಸಿದರು.
ಭರ್ತುರ್ಗುಣೈರನಧಿಕೌ ತನಯಾರ್ಥಮೇವ
ಮಾದ್ರ್ಯಾಕೃತೌ ಸುರವರಾವಧಿಕೌ ಸ್ವತೋಽಪಿ |
ತೇನೈವ ಭರ್ತೃಮೃತಿಹೇತುರಭೂತ್ ಸಮಸ್ತ
ಲೋಕೈಶ್ಚ ನಾತಿಮಹಿತಾ ಸುಗುಣಾಪಿ ಮಾದ್ರೀ ॥52॥
ಮಾದ್ರಿ ಅಶ್ವಿನೀ ದೇವತೆಗಳನ್ನು ಸಂತತಿಗಾಗಿ ಆಹ್ವಾನಿಸಿದ್ದಳು. ಅವಳಿಗೆ ಅವರು ತನಗಿಂತ ಹೆಚ್ಚಿನವರಾದರೂ ತನ್ನ ಪತಿಯ ಗುಣಗಳಿಗಿಂತ ಹೆಚ್ಚಿನ ಗುಣದವರಲ್ಲ. ಅದರಿಂದಲೆ ಅವಳು ಪತಿಯ ಮರಣಕ್ಕೆ ಕಾರಣಳಾದಳು. ಸುಗುಣವತಿಯಾಗಿದ್ದೂ ಜನರಿಂದ ಹೆಚ್ಚಿನ ಪ್ರಶಂಸೆ ಪಡೆಯಲಾರದೆ ಹೋದಳು.
ಪಾಂಡೋಃ ಸುತಾ ಮುನಿಗಣೈಃ ಪಿತೃಮೇಧಮತ್ರ
ಚಕ್ರುರ್ಯಥಾವದಥ ತೇನ ಸಹೈವ ಮಾದ್ರೀ |
ಹುತ್ವಾತ್ಮದೇಹಮುರುಪಾಪಮದಃ ಕೃತಂ ಚ
ಸಮ್ಮಾರ್ಜ್ಯ ಲೋಕಮಗಮನ್ನಿಜಭರ್ತುರೇವ ॥53॥
ಪಾಂಡವರು ಬದರಿಕಾಶ್ರಮದಲ್ಲಿ ಮುನಿ ಸಮೂಹಗಳ ಸಹಾಯದಿಂದ ಪಿತೃಯಜ್ಞವನ್ನು ವಿದ್ಯುಕ್ತವಾಗಿ ಮಾಡಿದರು. ಬಳಿಕ ಮಾದ್ರಿ ಪತಿಯ ಶರೀರದೊಂದಿಗೆ ತನ್ನ ಶರೀರವನ್ನು ಚಿತಾಗ್ನಿಯಲ್ಲಿ ಹೋಮಿಸಿಕೊಂಡು ಈ ಜನ್ಮದಲ್ಲಿ ಮಾಡಿದ ಮಹಾಪಾಪವನ್ನು ಪರಿಹರಿಸಿಕೊಂಡು ತನ್ನ ಪತಿಲೋಕವನ್ನೇ ಸೇರಿದಳು.
ಪಾಂಡುಶ್ಚ ಪುತ್ರಕಗುಣೈಃ ಸ್ವಗುಣೈಶ್ಚ ಸಾಕ್ಷಾತ್
ಕೃಷ್ಣಾತ್ಮಜಃ ಸತತಮಸ್ಯ ಪದೈಕಭಕ್ತಃ |
ಲೋಕಾನವಾಪ ವಿಮಲಾನ್ ಮಹಿತಾನ್ ಮಹದ್ಭಿಃ
ಕಿಂ ಚಿತ್ರಮತ್ರ ಹರಿಪಾದವಿನಮ್ರಚಿತ್ತೇ ॥54॥
ಪಾಂಡು ಸಾಕ್ಷಾತ್ ವ್ಯಾಸರ ಔರಸಪುತ್ರ. ಸದಾ ಅವರ ಪಾದಗಳಲ್ಲಿಯೆ ಭಕ್ತಿ ಇಟ್ಟುಕೊಂಡವ. ಅವನು ಮಕ್ಕಳ ಸದ್ಗುಣಗಳಿಂದಲೂ ತನ್ನ ಸದ್ಗುಣಗಳಿಂದಲೂ ಮಹಾತ್ಮರು ಆದರಿಸುವ ಪವಿತ್ರ ಲೋಕಗಳನ್ನೆ ಸಂಪಾದಿಸಿದ. ಹರಿಪಾದಗಳಲ್ಲಿ ಭಕ್ತಿಪೂರ್ಣ. ಹೃದಯಶಾಲಿಯಾದ ಪಾಂಡುರಾಜನಿಗೆ ಉತ್ತಮಲೋಕ ಪ್ರಾಪ್ತಿಯಾದರೆ ಏನಾಶ್ಚರ್ಯ?
* * * *
ನೂರ ಇಪ್ಪತ್ತೊಂದನೆಯ ಅಧ್ಯಾಯ
(ಪಾಂಡುವಿನ ಮರಣ, ಮಾದ್ರಿಯ ಸಹಗಮನ, ಉತ್ತರಕ್ರಿಯೆ.)
ವೈಶಂಪಾಯನಃ
ದರ್ಶನೀಯಾಂಸ್ತತಃ ಪುತ್ರಾನ್ ಪಾಂಡುಃ ಪಂಚ ಮಹಾವನೇ |

ತಾನ್ ಪಶ್ಯನ್ ಪರ್ವತೇ ರಮ್ಯೇ ಸ್ವಬಾಹುಬಲಪಾಲಿತಾನ್ ॥1॥
ಪಾಂಡುವು ಮಹಾರಣ್ಯದಲ್ಲಿ ವಾಸಮಾಡುತ್ತಾ ತನ್ನ ಬಾಹುಬಲದಿಂದ ರಕ್ಷಿತರಾದ ಐದು ಪುತ್ರರನ್ನು ನೋಡುತ್ತಾ ರಮ್ಯವಾದ ಪರ್ವತದಲ್ಲಿ ಸ್ವಲ್ಪಕಾಲವನ್ನು ಕಳೆದನು.
ಸುಪುಷ್ಪಿತವನೇ ಕಾಲೇ ಪ್ರವೃತ್ತೇ ಮಧುಮಾಧವೇ |
ಪೂರ್ಣೇ ಚತುರ್ದಶೇ ವರ್ಷೇ ಫಲ್ಗುನಸ್ಯ ಚ ಧೀಮತಃ ॥2॥
ಮೇಧಾವಿಯಾದ ಅರ್ಜುನನಿಗೆ ಹದಿನಾಲ್ಕು ವರ್ಷಗಳು ತುಂಬಿದಾಗ ವಸಂತಕಾಲವು ಪ್ರಾಪ್ತವಾಗಿ ಆ ವನದ ವೃಕ್ಷಗಳೆಲ್ಲವೂ ಪುಷ್ಪಗಳಿಂದ ಕೂಡಿದ್ದವು.
ತದಾ ಉತ್ತರಫಲ್ಗುನ್ಯಾಂ ಪ್ರವೃತ್ತೇ ಸ್ವಸ್ತಿವಾಚನೇ |
ರಕ್ಷಣೇ ವಿಸ್ಮಿತಾ ಕುಂತೀ ವ್ಯಗ್ರಾ ಬ್ರಾಹ್ಮಣಭೋಜನೇ |
ಪುರೋಹಿತೇನ ಸಹಿತಾ ಬ್ರಾಹ್ಮಣಾನ್ ಪರ್ಯವೇಷಯತ್ ॥3॥
ಆಗ ಉತ್ತರಫಲ್ಗುಣಿ ನಕ್ಷತ್ರದ ದಿವಸ ಅರ್ಜುನನ ಜನ್ಮದಿನದ ಪ್ರಯುಕ್ತವಾಗಿ ಸ್ವಸ್ತಿವಾಚನವು ನಡೆದಿರಲು ಮಕ್ಕಳ ರಕ್ಷಣೆಯನ್ನು ಒಂದು ಕ್ಷಣ ಮರೆತಿದ್ದ ಕುಂತಿಯು ಬ್ರಾಹ್ಮಣ ಭೋಜನದಲ್ಲಿ ನಿರತಳಾಗಿ ಬ್ರಾಹ್ಮಣರಿಗೆ ಭೋಜನವನ್ನು ಬಡಿಸುತ್ತಿದ್ದಳು.
ತಸ್ಮಿನ್ ಕಾಲೇ ಸಮಾಹೂಯ ಮಾದ್ರೀಂ ಮದನಮೋಹಿತಃ |
ಭೂತಸಮ್ಮೋಹನೇ ಕಾಲೇ ಸಭಾರ್ಯೋ ವ್ಯಚರದ್ ವನೇ ॥4॥
ಎಲ್ಲಾ ಪ್ರಾಣಿಗಳಿಗೂ ಸಂಮೋಹವನ್ನುಂಟು ಮಾಡುವ ವಸಂತ ಕಾಲದಲ್ಲಿ ಕಾಮಮೋಹಿತನಾದ ಪಾಂಡುವು ಮಾದ್ರಿಯನ್ನು ಕರೆದು ಅವಳ ಜೊತೆಯಲ್ಲಿ ಕಾಡಿನಲ್ಲಿ ತಿರುಗಾಡಿದನು.
ಪಲಾಶೈಸ್ತಿಲಕೈಶ್ಚೂತೈಶ್ಚಂಪಕೈಃ ಪಾರಿಭದ್ರಕೈಃ |
ಕರ್ಣಿಕಾರೈರಶೋಕೈಶ್ಚ ಮಲ್ಲಿಕೈರತಿಮುಕ್ತಕೈಃ |
ವಕುಲೈಸ್ತಿಂದುಕೈಃ ಸಾಲೈಃ ಪನಸೈರ್ವನಕಿಂಶುಕೈಃ ॥5॥
ಅನ್ಯೈಶ್ಚ ಬಹುಭಿರ್ವೃಕ್ಷೈರ್ಲತಾಪುಷ್ಪಫಲೈರ್ಯುತಮ್ |
ಜಲಸ್ಥಾನೈಶ್ಚ ಬಹುಭಿಃ ಪದ್ಮಿನೀಭಿಶ್ಚ ಶೋಭಿತಮ್ ॥6॥
ಪಾಂಡೋರ್ವನಂ ತು ಸಂಪ್ರೇಕ್ಷ್ಯ ಪ್ರಜಜ್ಞೇ ಹೃದಿಮನ್ಮಥಃ |
ಮತ್ತಭ್ರಮರಸಂಗೀತಂ ಕೋಕಿಲಸ್ವನಮಿಶ್ರಿತಮ್ ॥7॥
ಪಲಾಶಗಳಿಂದಲೂ, ತಿಲಕ, ಚೂತ, ಚಂಪಕ, ಪಾರಿಭದ್ರಕ ವೃಕ್ಷಗಳಿಂದಲೂ, ಕರ್ಣಿಕಾರ, ಅಶೋಕ, ಮಲ್ಲಿಕ, ಅತಿಮುಕ್ತಕ, ಬಕುಲ, ತಿಂದುಕ, ಸಾರ, ಪನಸ, ವನಕಿಂಶುಕಗಳಿಂದಲೂ ಮತ್ತು ಇನ್ನೂ ಅನೇಕ ಲತಾ ಪುಷ್ಪ ಫಲಗಳಿಂದ ಕೂಡಿದ ವೃಕ್ಷಗಳಿಂದಲೂ, ಕಮಲದಿಂದ ಶೋಭಿತವಾದ ಜಲಸ್ಥಾನಗಳಿಂದಲೂ ಮನೋಹರವಾಗಿದ್ದ ಆ ಕಾನನವನ್ನು ನೋಡಿ ಪಾಂಡುವಿನ ಮನಸ್ಸಿನಲ್ಲಿ ಕಾಮವು ಉಂಟಾಯಿತು.
ಗಾಯಮಾನೈಸ್ತುಗಂಧರ್ವೈಃ ಪುರಾ ನಾಗಪುರೇ ಯಥಾ |
ಪ್ರಹೃಷ್ಟಮನಸಂ ತತ್ರ ವಿಹರಂತಂ ಯಥಾಽಮರಮ್ |
ತಂ ಮಾದ್ರ್ಯನುಜಗಾಮೈಕಾ ವಸನೇ ಬಿಭ್ರತೀ ಶುಭೇ ॥8॥
ಮದಿಸಿದ ಭ್ರಮರಗಳ ಝೇಂಕಾರದಿಂದ ಮತ್ತು ಕೋಕಿಲ ಸ್ವರಗಳಿಂದ ಕೂಡಿದ ಆ ಕಾನನವು ಹಸ್ತಿನಪುರದಲ್ಲಿ ಗಂಧರ್ವರು ಗಾನ ಮಾಡಿದಂತೆ ತೋರಿ, ದೇವತೆಯಂತೆ ಸಂತೋಷದಿಂದ ವಿಹರಿಸುತ್ತಿದ್ದ ಆ ರಾಜನನ್ನು ಶುಭ್ರವಾದ ತೆಳುವಸ್ತ್ರಗಳನ್ನು ಧರಿಸಿದ್ದ, ಒಳ್ಳೆಯ ವಯಸ್ಸಿನಲ್ಲಿದ್ದ ಮಾದ್ರಿಯೊಬ್ಬಳೇ ಹಿಂಬಾಲಿಸಿದಳು.
ಸಮೀಕ್ಷಮಾಣಸ್ಯ ತು ತಾಂ ವಯಃಸ್ಥಾಂ ತನುವಾಸಸಮ್ |
ತಸ್ಯ ಕಾಮಃ ಪ್ರವವೃಧೇ ಗಹನೇಽಗ್ನಿರಿವೋತ್ಥಿತಃ ॥9॥
ತೆಳುವಾದ ವಸ್ತ್ರವನ್ನು ಧರಿಸಿದ್ದ, ಒಳ್ಳೆಯ ವಯಸ್ಸಿನಲ್ಲಿದ್ದ ಅನುರೂಪಳಾದ ಆ ಪದ್ಮನೇತ್ರೆಯನ್ನು ಏಕಾಂತದಲ್ಲಿ ನೋಡುತ್ತಿದ್ದಂತೆ ರಾಜನಿಗೆ ಕಾಡಿನಲ್ಲಿ ಅಗ್ನಿಯು ಅಭಿವೃದ್ಧಿಯಾದಂತೆ ಕಾಮವು ಅಭಿವೃದ್ಧಿಯನ್ನು ಹೊಂದಿತು.
ರಹಸ್ಯಾತ್ಮಸಮಾಂ ದೃಷ್ಟ್ವಾ ರಾಜಾ ರಾಜೀವಲೋಚನಾಮ್ |
ನ ಶಶಾಕ ನಿಯಂತುಂ ತಂ ಕಾಮಂ ಕಾಮಬಲಾತ್ಕೃತಃ ॥10॥
ಕಾಮವಶನಾದ ರಾಜನು ವಸಂತಋತುವಿನಲ್ಲಿ ಏಕಾಂತದಲ್ಲಿ ತನಗೆ ಅನುರೂಪಳಾದ ಆ ಕಮಲನಯನೆಯನ್ನು ನೋಡಿ, ಉಂಟಾದ ಕಾಮವನ್ನು ನಿಯಂತ್ರಿಸಲು ಸಮರ್ಥನಾಗಲಿಲ್ಲ.
ಜಿಷ್ಣೋಶ್ಚತುರ್ದಶೇ ವರ್ಷೇ ಋತೌ ಮಾದ್ರೀಮಲಂಕೃತಾಮ್ |
ಆಜುಹಾವ ತತಃ ಪಾಂಡುಃ ಪರೀತಾತ್ಮಾ ಯಶಸ್ವಿನೀಮ್ |
ತತ ಏನಾಂ ಬಲಾದ್ ರಾಜಾ ಜಗ್ರಾಹ ಚ ರಹೋಗತಃ ॥11॥
ಅರ್ಜುನನಿಗೆ ಹದಿನಾಲ್ಕು ವರ್ಷ ತುಂಬಿರಲು ವಸಂತ ಋತುವಿನಲ್ಲಿ ಕಾಲವಶನಾಗಲಿದ್ದ ಪಾಂಡುವು ಕೀರ್ತಿಶಾಲಿನಿಯಾದ ಮತ್ತು ಅಲಂಕೃತಳಾದ, ಮಾದ್ರಿಯನ್ನು ಸಮೀಪಕ್ಕೆ ಏಕಾಂತದಲ್ಲಿ ಸೆಳೆದುಕೊಂಡನು.
ವಾರ್ಯಮಾಣಸ್ತಯಾ ದೇವ್ಯಾ ವಿಸ್ಫುರಂತ್ಯಾ ಯಥಾಬಲಮ್ |
ಸ ತು ಕಾಮಪರೀತಾತ್ಮಾ ತಂ ಶಾಪಂ ನಾನ್ವಬುಧ್ಯತ ॥12॥
ಅನಂತರ ರಾಜನು, ಏಕಾಂತದಲ್ಲಿ ಅವಳು ಹೆದರಿ ತನ್ನ ಶಕ್ತಿಯಿಂದ ಬಿಡಿಸಿಕೊಳ್ಳಲು ಪ್ರಯತ್ನಪಡುತ್ತಿದ್ದರೂ, ಕಿಂದಮರ ಶಾಪವನ್ನು ಅರಿಯದೆ ಮನ್ಮಥಾಕ್ರಾಂತನಾಗಿ ಅವಳನ್ನು ಹಿಡಿದುಕೊಂಡನು.

ಮಾದ್ರೀಂ ಮೈಥುನಧರ್ಮೇಣ ಗಚ್ಛಮಾನೋ ಬಲಾದಿವ |
ಜೀವಿತಾಂತಾಯ ಕೌರವ್ಯೋ ಮನ್ಮಥಸ್ಯ ವಶಂ ಗತಃ ॥13॥
ಕಾಮವಶನಾಗಿ ಮಾದ್ರಿಯ ಜೊತೆಯಲ್ಲಿ ಮೈಥುನಕ್ರಿಯೆಗೆ ಉದ್ಯುಕ್ತನಾದ ರಾಜನು ಆ ಸಮಯದಲ್ಲಿ ಕಾಮಕ್ಕೆ ವಶನಾದನು.
ಶಾಪಜಂ ಭಯಮುತ್ಸೃಜ್ಯ ಜಗಾಮೈವ ಬಲಾತ್ ಪ್ರಿಯಾಮ್ |
ತಸ್ಯ ಕಾಮಾತ್ಮನೋ ಬುದ್ಧಿಃ ಸಾಕ್ಷಾತ್ ಕಾಲೇನ ಮೋಹಿತಾ |
ಸಂಪ್ರಮಥ್ಯೇಂದ್ರಿಯಗ್ರಾಮಂ ಪ್ರನಷ್ಟಾ ಸಹ ಚೇತಸಾ ॥14॥
ಮರಣವನ್ನು ಹೊಂದುವುದಕ್ಕಾಗಿಯೋ ಎಂಬುವಂತೆ ಮನ್ಮಥನ ವಶನಾದ ಕುರುರಾಜನಾದ ಪಾಂಡುವು ಶಾಪದ ಭಯವನ್ನು ತ್ಯಜಿಸಿ, ತನ್ನ ಬಲದಿಂದ ಮಾದ್ರಿಯ ಸಂಗಮವನ್ನು ಮಾಡಿದನು. ಕಾಲದಿಂದ ಮೋಹಿತವಾದ, ಕಾಮಾತ್ಮನಾದ ಅವನ ಬುದ್ಧಿಯು ಇಂದ್ರಿಯ ಸಮೂಹವನ್ನು ಕಲಕಿ, ಸ್ಮರಣಶಕ್ತಿಯ ಜೊತೆಯಲ್ಲಿ ನಷ್ಟವಾಗಿದ್ದಿತು.
ಸ ತಯಾ ಸಹ ಸಂಗಮ್ಯ ಭಾರ್ಯಯಾ ಕುರುಸತ್ತಮಃ |
ಪಾಂಡುಃ ಪರಮಧರ್ಮಾತ್ಮಾ ಯುಯುಜೇ ಕಾಲಧರ್ಮಣಾ |
ಕ್ಷಣೇನಾಭ್ಯಪತದ್ ರಾಜಾ ರಾಜಧಾನೀಂ ಯಮಸ್ಯ ವೈ ॥15॥
ಕುರುಶ್ರೇಷ್ಠನೂ, ಪರಮಧರ್ಮಾತ್ಮನೂ, ಆದ ಪಾಂಡುವು ತನ್ನ ಪತ್ನಿಯ ಜೊತೆಯಲ್ಲಿ ಸಮಾಗಮವನ್ನು ಹೊಂದಿ ವಿಧಿವಶನಾದನು. ರಾಜನು, ಒಂದು ಕ್ಷಣದಲ್ಲಿ ಯಮನ ರಾಜಧಾನಿಯನ್ನು ತಲುಪಿದನು.
ತತೋ ಮಾದ್ರೀ ಸಮಾಲಿಂಗ್ಯ ರಾಜಾನಂ ಗತಚೇತಸಮ್ |
ಆಕ್ರೋಶಪರಮಾಯತ್ತಾ ಚಕ್ರವಾಕೀ ಯಥಾ ಪತಿಮ್ ॥16॥
ಆಗ ಮಾದ್ರಿಯು ಗತಪ್ರಾಣನಾದ ರಾಜನನ್ನು ಆಲಿಂಗಿಸಿ ಪತಿಯನ್ನು ಕಳೆದುಕೊಂಡ ಚಕ್ರವಾಕ ಪಕ್ಷಿಯಂತೆ ಆಕ್ರೋಶವನ್ನು ಮಾಡಲು ಪ್ರಾರಂಭಿಸಿದಳು.
ತಂ ಶ್ರುತ್ವಾ ಕರುಣಂ ಶಬ್ದಂ ಸಹಸೋತ್ಪತಿತಂ ತದಾ |
ಸಹಪುತ್ರಾ ತತಃ ಕುಂತೀ ಮಾದ್ರೀಪುತ್ರೌ ಚ ಪಾಂಡವೌ |
ಆಜಗ್ಮುಃ ಸಹಿತಾಸ್ತತ್ರ ಯತ್ರ ರಾಜಾ ತಥಾಗತಃ ॥17॥
ಆ ಕರುಣಾಜನಕಶಬ್ದವು ಇದ್ದಕ್ಕಿದ್ದಂತೆಯೇ ಹೊರಹೊಮ್ಮಿದುದನ್ನು ಕೇಳಿ ಕುಂತಿಯು ತನ್ನ ಮಕ್ಕಳ ಜೊತೆಯಲ್ಲಿ ಮತ್ತು ಮಾದ್ರಿಯ ಪುತ್ರರ ಜೊತೆಯಲ್ಲಿ ರಾಜನು ಆ ಪರಿಸ್ಥಿತಿಯಲ್ಲಿ ಬಿದ್ದಿದ್ದ ಸ್ಥಳಕ್ಕೆ ಧಾವಿಸಿ ಬಂದಳು.
ತತೋ ಮಾದ್ರ್ಯಬ್ರವೀದ್ ರಾಜನ್ ಆರ್ತಾ ಕುಂತೀಮಿದಂ ವಚಃ |
ಏಕೈವ ತ್ವಮಿಹಾಗಚ್ಛ ತಿಷ್ಠಂತಾಂ ತತ್ರ ದಾರಕಾಃ ॥18॥
ಆಗ ಮಾದ್ರಿಯು ಆರ್ತಳಾಗಿ ಕುಂತಿಯನ್ನು ಕುರಿತು `ನೀನೊಬ್ಬಳೇ ಇಲ್ಲಿ ಬಾ, ಮಕ್ಕಳು ಅಲ್ಲಿಯೇ ಇರಲಿ' ಎಂದು ಹೇಳಿದಳು.
ಏತಚ್ಛ್ರುತ್ವಾ ವಚಸ್ತಸ್ಯಾಃ ತತ್ರೈವಾವಾರ್ಯ ದಾರಕಾನ್ |
ಹತಾಽಹಮಿತಿ ವಿಕ್ರುಶ್ಯ ಸಹಸೋಪಜಗಾಮ ತಾಮ್ ॥19॥
ದೃಷ್ಟ್ವಾ ಮಾದ್ರೀಂ ಚ ಪಾಂಡುಂ ಚ ಶಯಾನೌ ಧರಣೀತಳೇ
ಕುಂತೀ ಶೋಕಪರೀತಾಂಗೀ ವಿಲಲಾಪ ಸುದುಃಖಿತಾ ॥20॥
ಅವಳ ಈ ಮಾತನ್ನು ಕೇಳಿದ ಕುಂತಿಯು ಮಕ್ಕಳನ್ನು ದೂರದಲ್ಲಿಯೇ ನಿಲ್ಲಿಸಿ, `ಅಯ್ಯೋ ನಾನು ಸತ್ತೆ' ಎಂದು ಕಿರುಚುತ್ತಾ ಮಾದ್ರಿ ಇದ್ದ ಸ್ಥಳಕ್ಕೆ ಶೀಘ್ರವಾಗಿ ಬಂದಳು. ಮಾದ್ರಿ ಮತ್ತು ಪಾಂಡುರಾಜನು ಭೂಮಿಯ ಮೇಲೆ ಮಲಗಿರುವುದನ್ನು ನೋಡಿ ಶೋಕತಪ್ತಳಾಗಿ ಬಹಳ ದುಃಖದಿಂದ ಕುಂತಿಯು ವಿಲಾಪವನ್ನು ಮಾಡಿದಳು.
ಕುಂತೀ
ರಕ್ಷಮಾಣೋ ಮಯಾ ನಿತ್ಯಂ ಧೀರಃ ಸತತಮಾತ್ಮವಾನ್ |
ಕಥಂ ತ್ವಾಮಭ್ಯತಿಕ್ರಾಂತಃ ಶಾಪಂ ಜಾನನ್ ವನೌಕಸಃ ॥21॥
ಋಷಿಯ ಶಾಪವನ್ನು ತಿಳಿದಿದ್ದ ಯಾವಾಗಲೂ ಧೈರ್ಯಶಾಲಿಯಾಗಿದ್ದ ರಾಜನು, ಯಾವಾಗಲೂ ನನ್ನಿಂದ ರಕ್ಷಿಸಲ್ಪಡುತ್ತಿದ್ದವನು ಹೇಗೆ ನಿನ್ನನ್ನು ಮೀರಿದನು?
ನನು ನಾಮ ತ್ವಯಾ ಮಾದ್ರಿ ರಕ್ಷಿತವ್ಯೋ ನರಾಧಿಪಃ |
ಸಾ ಕಥಂ ಲೋಭಿತವತೀ ವಿಜನೇ ತ್ವಂ ನರಾಧಿಪಮ್ ॥22॥
ಮಾದ್ರಿ ನೀನು ರಾಜನನ್ನು ರಕ್ಷಿಸಬೇಕಾದವಳಷ್ಟೇ ! ಅಂತಹ ನೀನು ಏಕಾಂತದಲ್ಲಿ ಏಕೆ ರಾಜನನ್ನು ಮೋಹಗೊಳಿಸಿದೆ?
ಮಾದ್ರೀ
ವಿಧಿನಾ ಚೋದಿತಸ್ಯಾಸ್ಯ ಮಾಂ ದೃಷ್ಟ್ವಾ ವಿಜನೇ ವನೇ |
ಅಚಿಂತಯಿತ್ವಾ ತಚ್ಛಾಪಂ ಪ್ರಹರ್ಷಃ ಸಮಜಾಯತ ॥23॥
ವಿಧಿಚೋದಿತನಾದ ಪಾಂಡುವಿಗೆ ನಿರ್ಜನವಾದ ಕಾಡಿನಲ್ಲಿ ನನ್ನನ್ನು ನೋಡಿ ಆ ಶಾಪವನ್ನು ಮರೆತು ಬಹಳ ಹರ್ಷ ಉಂಟಾಯಿತು.
ಕುಂತೀ
ಧನ್ಯಾ ತ್ವಮಸಿ ಬಾಹ್ಲೀಕೇ ಮತ್ ಸಭಾಗ್ಯತರಾ ಭುವಿ |
ದೃಷ್ಟವತ್ಯಸಿ ಯದ್ ವಕ್ತ್ರಂ ಪ್ರಹೃಷ್ಟಸ್ಯ ಮಹೀಪತೇಃ ॥24॥
ಬಾಹ್ಲೀಕ ರಾಜಕುಮಾರಿಯೇ, ನೀನು ಧನ್ಯಳಾದವಳು ಮತ್ತು ಭೂಮಿಯಲ್ಲಿ ನನಗಿಂತ ಭಾಗ್ಯವತಿಯಾದವಳು. ಏಕೆಂದರೆ, ನೀನು ಕೊನೆಯಲ್ಲಿ ರಾಜನ ಸಂತೋಷ ತುಂಬಿದ ಮುಖವನ್ನು ನೋಡಿದ್ದೀಯೆ. (ಮದ್ರ ದೇಶಕ್ಕೆ ಬಾಹ್ಲೀಕ ದೇಶವೆಂದೂ ಹೆಸರು).

ಮಾದ್ರೀ
ವಿಲೋಭ್ಯಮಾನೇನ ಮಯಾ ವಾರ್ಯಮಾಣೇನ ಚಾಸಕೃತ್ |
ಆತ್ಮಾ ನ ಧಾರಿತಸ್ತೇನ ಸತ್ಯಂ ದಿಷ್ಟಂ ಚಿಕೀರ್ಷುಣಾ ॥25॥
ನಾನು ಅವನನ್ನು ಪ್ರಲೋಭನೆಗೊಳಿಸಲಿಲ್ಲ. ಬದಲಾಗಿ ಅವನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಿ ಅನೇಕ ಸಲ ಪ್ರತಿಷೇಧವನ್ನೇ ಮಾಡಿದೆ. ಆದರೂ, ವಿಧಿಬರಹವನ್ನು ಸತ್ಯವನ್ನು ಮಾಡಲು ಹೊರಟ ಅವನು ತನ್ನ ಮನಸ್ಸನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ.
ವೈಶಂಪಾಯನಃ
ತಸ್ಯಾಸ್ತದ್ವಚನಂ ಶ್ರುತ್ವಾ ಕುಂತೀ ಶೋಕಾಗ್ನಿತಾಪಿತಾ |
ಪಪಾತ ಸಹಸಾ ಭೂಮೌ ಛಿನ್ನಮೂಲ ಇವ ದ್ರುಮಃ |
ನಿಶ್ಚೇಷ್ಟಾ ಪತಿತಾ ಭೂಮೌ ಮೋಹೇನ ನ ಚಚಾಲ ಸಾ ॥26॥
ಅವಳ ಆ ಮಾತನ್ನು ಕೇಳಿ, ಕುಂತಿಯು ಶೋಕಾಗ್ನಿತಪ್ತಳಾಗಿ ಮೂಲವನ್ನು ಕತ್ತರಿಸಿದ ವೃಕ್ಷದಂತೆ ರಾಜನ ಪಾದಗಳ ಮೇಲೆ ಭೂಮಿಯಲ್ಲಿ ಇದ್ದಕ್ಕಿದ್ದಂತೆಯೇ ಬಿದ್ದಳು. ಭೂಮಿಯಲ್ಲಿ ಬಿದ್ದು ಮೂರ್ಛೆಯಿಂದ ನಿಶ್ಚೇಷ್ಟಳಾದ ಅವಳು ಅಲುಗಾಡಲಿಲ್ಲ.
ತಸ್ಮಿನ್ ಕ್ಷಣೇ ಕೃತಸ್ನಾನಮಮಲಾಂಬರ ಸಂವೃತಮ್ |
ಅಲಂಕಾರಕೃತಂ ಪಾಂಡುಂ ಶಯಾನಂ ಶಯನೇ ಶುಭೇ ॥27॥
ಕುಂತೀಮುತ್ಥಾಪ್ಯ ಮಾದ್ರೀ ಚ ಮೋಹೇನಾವಿಷ್ಟಚೇತನಾಮ್ |
ಏಹ್ಯೇಹೀತಿ ತಾಂ ಕುಂತೀಂ ದರ್ಶಯಾಮಾಸ ಕೌರವಮ್ ॥28॥
ಆಗ ಮೋಹಗೊಂಡ ಚೇತಸ್ಸುಳ್ಳ ಕುಂತಿಯನ್ನು ಮಾದ್ರಿಯ ಎಬ್ಬಿಸಿ `ಬಾ ಬಾ' ಎಂದು ಕರೆದು ಅವಳಿಗೆ ಆಗಷ್ಟೇ ಸ್ನಾನವನ್ನು ಮಾಡಿ ಶುಭ್ರವಸ್ತ್ರಗಳನ್ನು ಧರಿಸಿ ಅಲಂಕೃತನಾಗಿ ಶಯನದಲ್ಲಿ ಮಲಗಿರುವ ಪಾಂಡುವನ್ನು ತೋರಿಸಿದಳು.
ಪಾದಯೋಃ ಪತಿತಾ ಕುಂತೀ ಪುನರುತ್ಥಾಯ ಭೂಮಿಪಮ್ |
ರಕ್ತಚಂದನದಿಗ್ಧಾಂಗಂ ಮಹಾರಜನವಾಸಸಮ್ |
ಸಸ್ಮಿತೇನ ತು ವಕ್ತ್ರೇಣ ಗದಂತಮಿವ ಭಾರತ ॥29॥
ಪರಿರಭ್ಯ ತದಾ ಮೋಹಾದ್ ವಿಲಲಾಪಾಕುಲೇಂದ್ರಿಯಾ |
ಮಾದ್ರೀ ಚಾಪಿ ಸಮಾಲಿಂಗ್ಯ ರಾಜಾನಂ ವಿಲಲಾಪ ಸಾ ॥30॥
ಪುನಃ ಅವನ ಪಾದಗಳ ಮೇಲೆ ಬಿದ್ದ ಕುಂತಿಯು ಎದ್ದು ಮಹಾರಾಜನ ವಸ್ತ್ರಗಳನ್ನು ಉಟ್ಟಿದ್ದ, ರಕ್ತಚಂದನಗಳಿಂದ ಲೇಪಿತನಾಗಿದ್ದ, ಮುಗುಳ್ನಗೆಯಿಂದ ಏನನ್ನೋ ಮಾತನಾಡುತ್ತಿರುವಂತೆ ತೋರುವ, ರಾಜನನ್ನು ಆಲಿಂಗಿಸಿ, ಆಕುಲೇಂದ್ರಿಯಳಾಗಿ ವಿಲಾಪವನ್ನು ಮಾಡಿದಳು. ಮಾದ್ರಿಯೂ ಸಹ, ರಾಜನನ್ನು ಆಲಿಂಗಿಸಿ ವಿಲಾಪವನ್ನು ಮಾಡಿದಳು.
ತಥಾ ಶಾಪಹತಂ ಪಾಂಡುಮೃಷಯಃ ಸಹ ಚಾರಣೈಃ |
ಅಭ್ಯೇತ್ಯ ಸಹಿತಾಃ ಸರ್ವೇ ಶೋಕಾಶ್ರೂಣಿ ಪ್ರವರ್ತಯನ್ ॥31॥
ಹಾಗೆ ಶಾಪದಿಂದ ಮೃತನಾದ ಪಾಂಡುವಿನ ಸಮೀಪಕ್ಕೆ ಋಷಿಗಳು ಮತ್ತು ಅರಣ್ಯವಾಸಿಗಳು ಜೊತೆಯಲ್ಲಿ ಬಂದು ಎಲ್ಲರೂ ಶೋಕಾಶ್ರುಗಳನ್ನು ಸುರಿಸಿದರು.
ಅಸ್ತಂಗತಮಿವಾದಿತ್ಯಂ ಸುಶುಷ್ಕಮಿವ ಸಾಗರಮ್ |
ದೃಷ್ಟ್ವಾ ಪಾಂಡುಂ ನರವ್ಯಾಘ್ರಂ ಶೋಚಂತಿ ಸ್ಮ ಮಹರ್ಷಯಃ ॥32॥
ಅಸ್ತಂಗತನಾದ ಆದಿತ್ಯನಂತೆ ಒಣಗಿಹೋದ ಸಮುದ್ರದಂತೆ ಇದ್ದ, ನರವ್ಯಾಘ್ರನಾದ ಪಾಂಡುವನ್ನು ನೋಡಿ ಮಹರ್ಷಿಗಳು ಶೋಕಪಟ್ಟರು.
ಸಮಾನಶೋಕಾ ಋಷಯಃ ಪಾಂಡವಾಶ್ಚ ಬಭೂವಿರೇ |
ತೇ ಸಮಾಶ್ವಾಸಿತೇ ವಿಪ್ರೈರ್ವಿಲೇಪತುರನಿಂದಿತೇ ॥33॥
ಋಷಿಗಳು ಮತ್ತು ಪಾಂಡುಪುತ್ರರು, ಸಮಾನವಾದ ಶೋಕವುಳ್ಳವರಾದರು. ಬ್ರಾಹ್ಮಣರಿಂದ ಸಮಾಧಾನ ಮಾಡಲ್ಪಟ್ಟ ಅನಿಂದಿತರಾದ ಕುಂತಿಮಾದ್ರಿಯರು ವಿಲಾಪವನ್ನು ಮಾಡಿದರು.
ಕುಂತೀ
ಹಾ ರಾಜನ್ ಕಸ್ಯ ನೋ ಹಿತ್ವಾ ಗಚ್ಛಸಿ ತ್ರಿದಶಾಲಯಮ್ |
ಹಾ ರಾಜನ್ ಮಮ ಮಂದಾಯಾಃ ಕಥಂ ಮಾದ್ರೀಂ ಸಮೇತ್ಯ ವೈ ॥
ಹಾ ರಾಜನೇ, ನಮ್ಮನ್ನು ಯಾವ ಕಾರಣಕ್ಕಾಗಿ ಬಿಟ್ಟು ಸ್ವರ್ಗಲೋಕಕ್ಕೆ ಹೋಗುತ್ತಿದ್ದೀಯೆ. ಹಾ ರಾಜನೇ, ದುರದೃಷ್ಟಶಾಲಿನಿಯಾದ ನನ್ನ ಭಾಗ್ಯದ ನಾಶದಿಂದ ಹೇಗೆ ನೀನು ಮಾದ್ರಿಯನ್ನು ಸೇರಿ ನಿಧನವನ್ನು ಹೊಂದಿದೆ?
ನಿಧನಂ ಪ್ರಾಪ್ತವಾನ್ ರಾಜನ್ ಮದ್ಭಾಗ್ಯಪರಿಸಂಕ್ಷಯಾತ್ |
ಯುಧಿಷ್ಠಿರಂ ಭೀಮಸೇನಮರ್ಜುನಂ ಚ ಯಮಾವುಭೌ |
ಕಸ್ಯ ಹಿತ್ವಾ ಪ್ರಿಯಾನ್ ಪುತ್ರಾನ್ ಪ್ರಯಾತೋಽಸಿ ವಿಶಾಂಪತೇ ॥35॥
ನಿನಗೆ ಪ್ರಿಯರಾದ ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ ಸಹದೇವರು, ಈ ಮಕ್ಕಳನ್ನು, ಎಲೈ ರಾಜನೇ, ಯಾರ ವಶಕ್ಕೆ ಕೊಟ್ಟು ಸ್ವರ್ಗಕ್ಕೆ ಹೋಗುತ್ತಿದ್ದೀಯೆ?
ನೂನಂ ತ್ವಾಂ ತ್ರಿದಶಾ ದೇವಾಃ ಪ್ರತಿನಂದಂತಿ ಭಾರತ |
ಯಥಾ ಹಿ ತಪ ಉಗ್ರಂ ತೇ ಚರಿತಂ ವಿಪ್ರಸಂಸದಿ |

ಆವಾಭ್ಯಾಂ ಸಹಿತೋ ರಾಜನ್ ಗಮಿಷ್ಯಾಮಿ ದಿವಂ ಶುಭಾಮ್ ॥
ಎಲೈ ಭಾರತನೇ, ಬ್ರಾಹ್ಮಣರ ಜೊತೆಯಲ್ಲಿ ನೀನು ಮಾಡಿದ ಉಗ್ರವಾದ ತಪಸ್ಸಿನ ನಿಮಿತ್ತದಿಂದಾಗಿ ಸ್ವರ್ಗಲೋಕದಲ್ಲಿ ದೇವತೆಗಳು ನಿನ್ನನ್ನು ಅಭಿನಂದಿಸುತ್ತಾರೆ. ನಮ್ಮಿಬ್ಬರ ಜೊತೆಯಲ್ಲಿ ಸ್ವರ್ಗಕ್ಕೆ ಹೋಗುವೆನೆಂದು ಹೇಳುತ್ತಿದ್ದೆಯಷ್ಟೆ.
ಆಜಮೀಢಾಜಮೀಢಾನಾಂ ಕರ್ಮಣಾಚರಿತಾಂ ಗತಿಮ್ |
ನನು ನಾಮ ಸಹಾವಾಭ್ಯಾಂ ಗಚ್ಛೇಯಮಿತಿ ಚತ್ವಯಾ ॥37॥
ರಾಜನೇ, ಆಜಮೀಢ ವಂಶದಲ್ಲಿ ಜನಿಸಿದ ನೀನು ಆಜಮೀಢ ವಂಶಕ್ಕೆ ಅನುಗುಣವಾದ ಕರ್ಮವನ್ನು ಮಾಡಿ ನಮ್ಮಿಬ್ಬರ ಜೊತೆಯಲ್ಲಿ ಶುಭವಾದ ಸ್ವರ್ಗಕ್ಕೆ ಹೋಗಬೇಕಾಗಿತ್ತಷ್ಟೆ.
ಪ್ರತಿಜ್ಞಾತಂ ಕುರುಶ್ರೇಷ್ಠ ಯದಾಽಸ್ಮಿ ವನಮಾಗತಾ |
ಆವಾಭ್ಯಾಂ ತ್ವೇವ ಸಹಿತೋ ಗಮಿಷ್ಯಸಿ ವಿಶಾಂಪತೇ |
ಮುಹೂರ್ತಂ ಕ್ಷಮ್ಯತಾಂ ರಾಜನ್ ಆರೋಕ್ಷ್ಯಾವಶ್ಚಿತಾಂ ತವ ॥38॥
ಕುರುಶ್ರೇಷ್ಠನೇ, ನಾವು ವನಕ್ಕೆ ಬಂದಾಗ ನಿಮ್ಮಿಬ್ಬರ ಜೊತೆಯಲ್ಲೇ ನಾನು ಸ್ವರ್ಗಕ್ಕೆ ಹೋಗುವೆನು ಎಂದು ಪ್ರತಿಜ್ಞೆಯನ್ನು ಮಾಡಿದ್ದೆಯಷ್ಟೆ. ರಾಜನೇ, ಈಗಲೂ ನಮ್ಮಿಬ್ಬರ ಜೊತೆಯಲ್ಲೇ ಸ್ವರ್ಗಕ್ಕೆ ಹೋಗುವವನಾಗುವಿ. ಒಂದು ಕ್ಷಣ ತಾಳು. ರಾಜನೇ, ನಾವಿಬ್ಬರೂ ನಿನ್ನ ಚಿತೆಯನ್ನು ಏರುತ್ತೇವೆ.
ವೈಶಂಪಾಯನಃ
ವಿಲಪಿತ್ವಾ ಭೃಶಂ ತ್ವೇವಂ ನಿಃಸಂಜ್ಞೇ ಪತಿತೇ ಭುವಿ |
ಯಥಾ ಮೃಗೇ ಹತೇ ಮೃಗ್ಯೌ ಲುಬ್ಧೈರ್ವನಗತೈಸ್ತದಾ ॥39॥
ಹೀಗೆ ಬಹುವಾಗಿ ವಿಲಾಪವನ್ನು ಮಾಡಿ ಅವರಿಬ್ಬರೂ, ಬೇಡರು ಗಂಡು ಜಿಂಕೆಯನ್ನು ಕೊಂದಾಗ ಹೆಣ್ಣು ಜಿಂಕೆಗಳು ಭೂಮಿಯ ಮೇಲೆ ಬೀಳುವಂತೆ ನಿಃಸಂಜ್ಞರಾಗಿ ಭೂಮಿಯ ಮೇಲೆ ಬಿದ್ದರು.
ಯುಧಿಷ್ಠಿರಮುಖಾಃ ಸರ್ವೇ ಪಾಂಡವಾ ವೇದಪಾರಗಾಃ |
ತೇಽಪ್ಯಾಗತ್ಯ ಪಿತುರ್ಮೂಲೇ ನಿಃಸಂಜ್ಞಾಃ ಪತಿತಾ ಭುವಿ ॥40॥
ಯುಧಿಷ್ಠರ ಮೊದಲಾದ ವೇದಪಾರಂಗತರಾದ ಎಲ್ಲಾ ಪಾಂಡವರೂ ಬಂದು ತಂದೆಯ ಪಾದಮೂಲದಲ್ಲಿ ಸಂಜ್ಞೆಯನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದರು.
ಪಾಂಡೋಃ ಪಾದೌ ಪರಿಷ್ವಜ್ಯ ವಿಲಪಂತಿ ಸ್ಮ ಪಾಂಡವಾಃ |
ಹಾ ವಿನಷ್ಟಾಃ ಸ್ಮ ತಾತೇತಿ ಹಾ ಅನಾಥಾ ಭವಾಮಹೇ ॥41॥
ಪಾಂಡವರು ಪಾಂಡುವಿನ ಪಾದಗಳನ್ನು ಆಲಿಂಗಿಸಿ `ಹಾ ತಂದೆಯೇ ನಾವೆಲ್ಲರೂ ವಿನಾಶವನ್ನು ಹೊಂದಿದೆವು. ನಾವು ಅನಾಥರಾದೆವು' ಎಂದು ಗೋಳಾಡಿದರು.
ಕ್ಷಣೇನೈವ ಮಹಾರಾಜ ಅಹೋ ಲೋಕಸ್ಯ ಚಿತ್ರತಾ |
ತ್ವದ್ವಿಹೀನಾ ಮಹಾಪ್ರಾಜ್ಞ ಕಥಂ ಜೀವಾಮ ಬಾಲಕಾಃ ॥42॥
ಮಹಾರಾಜನೇ, ಲೋಕವು ಎಷ್ಟು ವಿಚಿತ್ರವಾದುದು. ಒಂದೇ ಕ್ಷಣದಲ್ಲಿ ನಿನ್ನನ್ನು ಕಳೆದುಕೊಂಡೆವು. ಮಹಾಪ್ರಾಜ್ಞನೇ, ನೀನಿಲ್ಲದೆ ಬಾಲಕರಾದ ನಾವು ಹೇಗೆ ಬದುಕುತ್ತೇವೆ?
ಲೋಕನಾಥಸ್ಯ ಪುತ್ರಾಶ್ಚ ನ ಸನಾಥಾ ಭವಾಮಹೇ |
ನಾಸ್ಮದ್ವಿಧಾ ರಾಜಪುತ್ರಾ ಅಧನ್ಯಾಃ ಸಂತಿ ಭಾರತ ॥43॥
ಭಾರತನೇ, ಲೋಕನಾಥನ ಪುತ್ರರಾಗಿ ನಾವು ಇಂದು ಅನಾಥರಾಗಿದ್ದೇವೆ. ನಮ್ಮಷ್ಟು ಅಧನ್ಯರಾದ ರಾಜಪುತ್ರರು ಯಾರೂ ಇಲ್ಲ.
ತ್ವದ್ವಿನಾಶಾಚ್ಚ ರಾಜೇಂದ್ರ ರಾಜ್ಯಪ್ರಸ್ಖಲನಾತ್ ತಥಾ |
ಬಾಂಧವಾನಾಮಜಾತತ್ವಾತ್ ಕರ್ತವ್ಯಂ ನ ಪ್ರಸೀದತಾಮ್ ॥44॥
ರಾಜೇಂದ್ರನೇ, ನೀನು ನಾಶ ಹೊಂದಿರುವುದರಿಂದ, ನಾವು ರಾಜ್ಯಚ್ಯುತರಾಗಿರುವುದರಿಂದ ಬಂಧುಗಳು ಅಪ್ರಿಯರಾಗಿರುವುದರಿಂದ, ದುಃಖದಲ್ಲಿ ಮುಳುಗುತ್ತಿರುವ ನಮಗೆ ಮಾಡಬೇಕಾದ ಕರ್ತವ್ಯವು ಯಾವುದೂ ಇಲ್ಲ.
ಹಿತ್ವಾ ರಾಜ್ಯಂ ಚ ಭೋಗಾಂಶ್ಚ ಶತಶೃಂಗೇ ನಿವಾಸಿನಾ |
ತ್ವಯಾ ಲಬ್ಧಾಃ ಸ್ಮ ರಾಜೇಂದ್ರ ಮಹತಾ ತಪಸಾ ವಯಮ್ ॥45॥
ರಾಜೇಂದ್ರನೇ, ರಾಜ್ಯವನ್ನೂ, ಭೋಗವನ್ನೂ ತೊರೆದು ಶತಶೃಂಗ ಪರ್ವತದಲ್ಲಿ ವಾಸಮಾಡಿದ ನೀನು ಬಹಳ ತಪಸ್ಸನ್ನು ಮಾಡಿ ನಮ್ಮನ್ನು ಮಕ್ಕಳಾಗಿ ಪಡೆದೆ.
ಹಿತ್ವಾ ಮಾನಂ ವನಂ ಗತ್ವಾ ಸ್ವಯಮಾಹೃತ್ಯ ಭಕ್ಷಣಮ್ |
ಶಾಕಮೂಲಫಲೈರ್ವನ್ಯೈರ್ಭರಣಂ ವೈ ತ್ವಯಾ ಕೃತಮ್ ॥46॥
ಮಾನವನ್ನು ತೊರೆದು ಕಾಡಿಗೆ ಹೋಗಿ ಸ್ವಯಂ ಆಹಾರ ಪದಾರ್ಥಗಳನ್ನು ಸಂಗ್ರಹಿಸಿ, ಕಾಡಿನಲ್ಲಿ ದೊರೆಯುವ ಶಾಕಮೂಲಫಲಗಳಿಂದ ನಮ್ಮನ್ನು ಪಾಲನೆ ಮಾಡಿದೆ.
ಪುತ್ರಾನುತ್ಪಾದ್ಯ ಪಿತರೋ ಯಮಿಚ್ಛಂತಿ ಮಹಾತ್ಮನಃ |
ತ್ರಿವರ್ಗಫಲಮಿಚ್ಛಂತಃ ತಸ್ಯ ಕಾಲೋಽಯಮಾಗತಃ ॥47॥
ಪುತ್ರನನ್ನು ಪಡೆದ ಮಹಾತ್ಮರು ಪುತ್ರನಿಂದ ಯಾವ ಫಲವನ್ನು ಬಯಸುತ್ತಾರೋ, ಆ ತ್ರಿವರ್ಗಫಲವನ್ನು ಅನುಭವಿಸುವ ಕಾಲ ಈಗ ಒದಗಿದ್ದಿತು.
ಇತ್ಯೇವಮುಕತತ್ವ ಪಿತರಂ ಭೀಮೋಪಿ ವಿಲಲಾಪ ಹ |

ಪುನಷ್ಟಂ ಭಾರತಂ ವಂಶಂ ಪಾಂಡುನಾ ಪುನರುದ್ಧೃತಮ್ ॥48॥
ಪುನಷ್ಟವಾದ ಭಾರತ ವಂಶವು ಪಾಂಡುವಿನಿಂದ ಪುನಃ ಉದ್ಧಾರವನ್ನು ಹೊಂದಿತು ಎಂದು ಹೇಳಿ ಭೀಮನೂ ತಂದೆಯನ್ನು ಕುರಿತು ವಿಲಾಪ ಮಾಡಿದನು.
ತಸ್ಮಿಂಸ್ತಪೋವನಗತೇ ನಷ್ಟಂ ರಾಜ್ಯಂ ಸರಾಷ್ಟ್ರಕಮ್ |
ಪುನರ್ನಿಸ್ತಾರಿತಂ ಕ್ಷತ್ರಂ ಪಾಂಡುಪುತ್ರೈಶ್ಚ ಪಂಚಭಿಃ ॥49॥
ಏತಚ್ಛ್ರುತ್ವಾSನುಮೋದಿತ್ವಾ ಗಂತುಮರ್ಹಸಿ ಕೌರವ |
ಇತ್ಯೇವಮುಕತ್ತ್ವ ಪಿತರಂ ವಿಲಲಾಪ ಧನಂಜಯಃ ॥50॥
ಪಾಂಡುವು ತಪೋವನಕ್ಕೆ ಹೋದಾಗ ನಷ್ಟವಾದ ರಾಜ್ಯವನ್ನು ಪಾಂಡುವಿನ ಐವರು ಪುತ್ರರು ಪುನಃ ಸಂಪಾದಿಸಿದರು ಎಂಬ ವಾರ್ತೆಯನ್ನು ಕೇಳಿ ಅನುಮೋದಿಸಿ ನೀನು ಪ್ರಯಾಣ ಮಾಡಬೇಕಾಗಿದ್ದಿತಷ್ಟೆ ಎಂದು ಹೇಳಿ ತಂದೆಯನ್ನು ಕುರಿತು ಅರ್ಜುನನು ವಿಲಾಪ ಮಾಡಿದನು.
ದುಸ್ಸಂಚಯಂ ತಪಃ ಕೃತ್ವಾ ಲಬ್ಧ್ವಾ ನೋ ಭರತರ್ಷಭ |
ಪುತ್ರಲಾಭಸ್ಯ ಮಹತಃ ಶುಶ್ರೂಷಾದಿಫಲಂ ತ್ವಯಾ ॥51॥
ನ ಚಾವಾಪ್ತಂ ತ್ವಯಾ ತಾತ ತ್ವತ್ಪಿತ್ರಾ ತು ಯಥಾ ಪುರಾ |
ದುಸ್ಸಂಚರಂ ಕಿಂಚಿದೇವ ಪುರಾ ದಶರಥೋ ಯಥಾ |
ಏವಮುಕತ್ತ್ವ ಯವೌ ಚಾಪಿ ವಿಲೇಪತುರಥಾತುರೌ ॥52॥
ಭರತಶ್ರೇಷ್ಠನೇ, ದುಃಸಾಧ್ಯವಾದ ತಪಸ್ಸನ್ನು ಮಾಡಿ ಶ್ರೇಷ್ಠವಾದ ಮಕ್ಕಳನ್ನು ಪಡೆದ ನೀನು, ಹಿಂದೆ ನಿನ್ನ ತಂದೆಯು ಹೇಗೆ ಪುತ್ರರಿಂದ ಸೇವಾದಿ ಫಲವನ್ನು ಅನುಭವಿಸಲಿಲ್ಲವೋ ಹಾಗೆಯೇ, ತಂದೆಯೇ ನೀನೂ ಅನುಭವಿಸಲಿಲ್ಲ. ಹಿಂದೆ ದಶರಥನು ಸ್ವಲ್ಪ ಸುಖವನ್ನು ಪಡೆದಂತೆ ನೀನೂ ಸಹ, ನಮ್ಮಂತಹ ಮಕ್ಕಳನ್ನು ಪಡೆದು ಅಲ್ಪ ಸುಖವನ್ನು ಪಡೆದೆ ಎಂದು ಹೇಳುತ್ತಾ ಶೋಕಾತುರರಾದ ನಕುಲಸಹದೇವರೂ ವಿಲಾಪವನ್ನು ಮಾಡಿದರು.
ಕುಂತೀ
ಅಹಂ ಜ್ಯೇಷ್ಠಾ ಧರ್ಮಪತ್ನೀ ಜ್ಯೇಷ್ಠಂ ಧರ್ಮಫಲಂ ಮಮ |
ಅವಶ್ಯಂಭಾವಿನೋ ಭಾವಾನ್ ಮಾಮಾ ಮಾದ್ರಿ ನಿವರ್ತಯ ॥53॥
ನಾನು ಜ್ಯೇಷ್ಠಳಾದ ಧರ್ಮಪತ್ನಿ. ಶ್ರೇಷ್ಠವಾದ ಧರ್ಮದ ಫಲವು ನನಗೆ ಇರುತ್ತದೆ. ಮಾದ್ರಿ ಅವಶ್ಯಕವಾಗಿ ನಡೆಯಲೇಬೇಕಾದ ಕಾರ್ಯಗಳನ್ನು ತಡೆಯುವ ಯೋಚನೆಯನ್ನು ಮಾಡಬೇಡ.
ಅನ್ವೇಷ್ಯಾಮೀಹ ಭರ್ತಾರಮಹಂ ಪ್ರೇತವಶಂ ಗತಮ್ |
ಉತ್ತಿಷ್ಠೈನಂ ವಿಸೃಜ್ಯ ತ್ವಮಿಮಾನ್ ರಕ್ಷಸ್ವ ದಾರಕಾನ್ |
ಅವಾಪ್ಯ ಪುತ್ರಾಂಲ್ಲಬ್ಧಾತ್ಮಾ ವೀರಪತ್ನೀತ್ವಮರ್ಥಯೇ ॥54॥
ನಾನು ಮೃತ್ಯುವಶನಾದ ಪತಿಯನ್ನು ಇಲ್ಲಿ ಹಿಂಬಾಲಿಸುವೆನು. ನೀನು ಪತಿಯನ್ನು ಬಿಟ್ಟು ಎದ್ದು ಈ ಮಕ್ಕಳ ರಕ್ಷಣೆಯನ್ನು ಮಾಡು. ಪುತ್ರರನ್ನು ಪಡೆದು ಶರೀರವನ್ನು ಸಾರ್ಥಕಪಡಿಸಿಕೊಂಡ ನಾನು ವೀರಪತ್ನಿಯಾಗಲು ಬಯಸುತ್ತೇನೆ.
ಮದ್ರರಾಜಸುತಾ ಕುಂತೀಮಿದಂ ವಚನಮಬ್ರವೀತ್ |
ಅಹಮೇವಾನುಯಾಸ್ಯಾಮಿ ಭರ್ತಾರಮಪಲಾಯಿನಮ್ |
ನ ಹಿ ತೃಪ್ತಾSಸ್ಮಿ ಕಾಮಾನಾಂ ತ್ವಂ ಜ್ಯೇಷ್ಠಾ ಹ್ಯನುಮನ್ಯತಾಮ್ ॥55॥
ಮದ್ರರಾಜ ಸುತೆಯಾದ ಮಾದ್ರಿಯು ಕುಂತಿಯನ್ನು ಕುರಿತು ಹೇಳಿದಳು. ಯುದ್ಧದಲ್ಲಿ ಎಂದೂ ಹಿಮ್ಮೆಟ್ಟದ ಪತಿಯನ್ನು ನಾನೇ ಹಿಂಬಾಲಿಸುವೆನು. ನನಗೆ ಅವನಿಂದ ಕಾಮತೃಪ್ತಿಯು ಉಂಟಾಗಿಲ್ಲ. ಹಿರಿಯಳಾದ ನೀನು ನನಗೆ ಅನುಮತಿಯನ್ನು ಕೊಡು.
ಮಾಂ ಚಾಭಿಗಮ್ಯ ಕ್ಷೀಣೋSಯಂ ಕಾಮಾದ್ ಭರತಸತ್ತಮಃ |
ಸಮುಚ್ಛಿಂದ್ಯಾಮಸ್ಯ ಕಾಮಂ ಕಥಂ ನು ಯಮಸಾದನೇ ॥56॥
ಈ ಭರತಶ್ರೇಷ್ಠನು ಕಾಮದಿಂದ ನನ್ನನ್ನು ಸೇರಿ ನಾಶವನ್ನು ಹೊಂದಿದನು. ನಾನು ಯಮಪಟ್ಟಣದಲ್ಲಿ ಅವನ ಕಾಮತೃಷೆಯನ್ನು ಹೇಗೆ ಹೋಗಲಾಡಿಸಲಿ?
ಮಮ ಹೇತೋರ್ಗತೋ ರಾಜಾ ದಿವಂ ಭರತಸತ್ತಮಃ |
ನ ಚೈವ ತಾದೃಶೀ ಬುದ್ಧಿರ್ಬಾಂಧವಾಶ್ಚ ನ ತಾದೃಶಾಃ ॥57॥
ಭರತಸತ್ತಮನಾದ ರಾಜನು, ನನ್ನ ಕಾರಣದಿಂದಾಗಿ ಸ್ವರ್ಗವನ್ನು ಸೇರಿದನು. ನನಗಾಗಲೀ, ನನ್ನ ಬಂಧುಗಳಿಗಾಗಲೀ ನಿನಗೆ ಇರುವಂತಹ ಒಳ್ಳೆಯ ಬುದ್ಧಿ ಇಲ್ಲ.
ನ ಚೋತ್ಸಹೇ ಧಾರಯಿತುಂ ಪ್ರಾಣಾನ್ ಭರ್ತ್ರಾ ವಿನಾಕೃತಾ |
ತಸ್ಮಾತ್ ತಮನುಯಾಸ್ಯಾಮಿ ಯಾಂತಂ ವೈವಸ್ವತಕ್ಷಯಮ್ ॥58॥
ಪತಿಯನ್ನು ಕಳೆದುಕೊಂಡು ನಾನು ಪ್ರಾಣವನ್ನು ಧರಿಸಿರಲಾರೆ. ಆದ್ದರಿಂದ ಯಮಪಟ್ಟಣಕ್ಕೆ ಹೋಗುವ ಪತಿಯನ್ನು ಹಿಂಬಾಲಿಸುವೆನು.
ವರ್ತೇಯಂ ನ ಸಮಾಂ ವೃತ್ತಿಂ ಜಾತ್ವಹಂ ಚ ಸುತೇಷು ತೇ |
ತಥಾ ಹಿ ವರ್ತಮಾನಾಂ ಮಾಮಧರ್ಮಃ ಸಂಸ್ಪೃಶೇನ್ಮಹಾನ್ ॥59॥
ನಾನು ಒಂದು ಪಕ್ಷ ಬದುಕಿದರೆ, ನಿನ್ನ ಮಕ್ಕಳನ್ನು ಎಂದೂ ಸಮವಾದ ಬುದ್ಧಿಯಿಂದ ನೋಡುವುದಿಲ್ಲ. ಹಾಗಿರುವ ನನಗೆ ದೊಡ್ಡ ಅಧರ್ಮವು ಉಂಟಾಗುತ್ತದೆ.

ತಸ್ಮಾನ್ಮೇ ಸುತಯೋರ್ದೇವಿ ವರ್ತಿತವ್ಯಂ ಸ್ವಪುತ್ರವತ್ |
ಅನ್ವೇಷ್ಯಾಮಿ ಚ ಭರ್ತಾರಂ ವ್ರಜಂತಂ ಯಮಸಾದನಮ್ ॥60॥
ಆದ್ದರಿಂದ ಕುಂತಿದೇವಿಯೇ, ನನ್ನ ಮಕ್ಕಳನ್ನು ನಿನ್ನ ಮಕ್ಕಳಂತೆ ನೋಡಿಕೋ. ನಾನು ಯಮಲೋಕಕ್ಕೆ ಹೋಗುವ ರಾಜನನ್ನು ಹಿಂಬಾಲಿಸುವೆನು.
ಮಾಂ ಹಿ ಕಾಮಯಮಾನೋಽಯಂ ರಾಜಾ ಪ್ರೇತವಶಂ ಗತಃ |
ರಾಜ್ಞಃ ಶರೀರೇಣ ಸಹ ಮಮಾಪೀದಂ ಕಳೇಬರಮ್ ॥61॥
ದಗ್ಧವ್ಯಂ ಸುಪ್ರತಿಚ್ಛನ್ನಮೇತದಾರ್ಯೇ ಪ್ರಿಯಂ ಕುರು |
ದಾರಕೇಷ್ವಪ್ರಮತ್ತಾ ತ್ವಂ ಭವೇಥಾಶ್ಚ ಹಿತಾ ಮಮ |
ಅತೋಽನ್ಯನ್ನ ಪ್ರಪಶ್ಯಾಮಿ ಸಂದೇಷ್ಟವ್ಯಂ ಹಿ ಕಿಂಚನ ॥62॥
ನನ್ನ ಮೇಲಿನ ಕಾಮದಿಂದ ರಾಜನು ಪ್ರೇತವಶನಾದನು. ಆದ್ದರಿಂದ ರಾಜನ ಶರೀರದ ಜೊತೆಯಲ್ಲಿ ನನ್ನ ಶರೀರವನ್ನೂ ಚೆನ್ನಾಗಿ ಮುಚ್ಚಿ ದಹನಮಾಡಬೇಕು. ಪೂಜ್ಯೆಯೇ, ನನಗೆ ಈ ಪ್ರಿಯವನ್ನು ಮಾಡು. ಮಕ್ಕಳ ವಿಷಯದಲ್ಲಿ ಯಾವಾಗಲೂ ಜಾಗರೂಕಳಾಗಿದ್ದು, ನನ್ನ ಹಿತಚಿಂತನೆಯನ್ನು ಮಾಡು. ಇದನ್ನು ಬಿಟ್ಟು ನಿನಗೆ ಸಂದೇಶ ಕೊಡಬೇಕಾದ ಯಾವ ವಿಷಯವೂ ನನಗೆ ತೋರುವುದಿಲ್ಲ.
ವೈಶಂಪಾಯನಃ
ಋಷಯಸ್ತಾನ್ ಸಮಾಶ್ವಾಸ್ಯ ಪಾಂಡವಾನ್ ಸತ್ಯವಿಕ್ರಮಾನ್ |
ಊಚುಃ ಕುಂತೀಂ ಚ ಮಾದ್ರೀಂ ಚ ಸಮಾಶ್ವಾಸ್ಯ ತಪಸ್ವಿನಃ ॥63॥
ತಪಸ್ವಿಗಳಾದ ಋಷಿಗಳು ಸತ್ಯವಿಕ್ರಮರಾದ ಪಾಂಡವರನ್ನು ಸಮಾಧಾನಗೊಳಿಸಿ, ಕುಂತಿ ಮತ್ತು ಮಾದ್ರಿಯರನ್ನೂ ಸಮಾಧಾನಗೊಳಿಸಿ ಮಾತನಾಡಿದರು.
ಸುಭಗೇ ಬಾಲಪುತ್ರೇ ತು ನ ಮರ್ತವ್ಯಂ ಕಥಂಚನ |
ಪಾಂಡವಾಂಶ್ಚಾಪಿ ನೇಷ್ಯಾಮಃ ಕುರುರಾಷ್ಟ್ರಂ ಪರಂತಪಾನ್ ॥64॥
ಸುಂದರಿಯರೇ ಮತ್ತು ಚಿಕ್ಕಮಕ್ಕಳನ್ನು ಹೊಂದಿದವರೇ, ನೀವು ಯಾವ ರೀತಿಯಲ್ಲೂ ಮರಣವನ್ನು ಹೊಂದಬಾರದು. ನಾವು ಶತ್ರುತಾಪನರಾದ ಪಾಂಡವರನ್ನು ಕುರುರಾಷ್ಟ್ರಕ್ಕೆ ಕರೆದೊಯ್ಯುತ್ತೇವೆ.
ಅಧರ್ಮೇಷ್ವರ್ಥಜಾತೇಷು ಧೃತರಾಷ್ಟ್ರಶ್ಚ ಲೋಭವಾನ್ |
ಸ ಕದಾಚಿನ್ನ ವರ್ತೇತ ಪಾಂಡವೇಷು ಯಥಾವಿಧಿ ॥65॥
ಧೃತರಾಷ್ಟ್ರನಿಗೆ ಅಧರ್ಮದಲ್ಲಿಯೂ ಮತ್ತು ಸಂಪತ್ತಿನಲ್ಲಿಯೂ ಲೋಭವಿದೆ. ಅವನು ಎಂದೂ ಪಾಂಡವರ ವಿಷಯದಲ್ಲಿ ನಡೆದುಕೊಳ್ಳಬೇಕಾದ ರೀತಿಯಲ್ಲಿ ನಡೆದುಕೊಳ್ಳಲಾರ.
ಕುಂತ್ಯಾಶ್ಚ ವೃಷ್ಣಯೋ ನಾಥಾಃ ಕುಂತಿಭೋಜಸ್ತಥೈವ ಚ |
ಮಾದ್ರ್ಯಾಶ್ಚ ಬಲಿನಾಂ ಶ್ರೇಷ್ಠಃ ಶಲ್ಯೋ ಭ್ರಾತಾ ಮಹಾರಥಃ ॥66॥
ಕುಂತಿಗೆ ವೃಷ್ಣಿಗಳು ಮತ್ತು ಕುಂತಿಭೋಜನು ನಾಥರಾಗಿದ್ದಾರೆ. ಮಾದ್ರಿಗೆ ಬಲಿಷ್ಠನೂ, ಗುಣವಂತನೂ, ಮಹಾರಥನೂ, ಅಣ್ಣನೂ ಆದ ಶಲ್ಯನು ನಾಥನಾಗಿದ್ದಾನೆ.
ಭರ್ತ್ರಾನುಮರಣಂ ಸಾರ್ಧಂ ಫಲವಾನ್ ನಾತ್ರ ಸಂಶಯಃ |
ಯುವಾಭ್ಯಾಂ ದುಷ್ಕರಂ ಚೈತದ್ ವದಂತಿ ದ್ವಿಜಪುಂಗವಾಃ ॥67॥
ಪತಿಯ ಜೊತೆಯಲ್ಲಿ ಸಹಗಮನ ಮಾಡುವುದು ಬಹಳ ಫಲದಾಯಕವಾದುದು ಎಂಬ ವಿಷಯದಲ್ಲಿ ಸಂಶಯವಿಲ್ಲ. ಆದರೆ, ನೀವಿಬ್ಬರೂ ಸಹಗಮನ ಮಾಡಬಾರದೆಂದು ಬ್ರಾಹ್ಮಣಶ್ರೇಷ್ಠರು ಹೇಳುತ್ತಿದ್ದಾರೆ.
ಮೃತೇ ಭರ್ತರಿ ಯಾ ಸಾಧ್ವೀ ಬ್ರಹ್ಮಚರ್ಯವ್ರತೇ ಸ್ಥಿತಾ |
ಯಮೈಶ್ಚ ನಿಯಮೈಃ ಶ್ರಾಂತಾ ಮನೋವಾಕ್ಕಾಯಜೈಃ ಶುಭೈಃ ॥68॥
ಭರ್ತಾರಂ ಚಿಂತಯಂತೀ ಸಾ ಭರ್ತಾರಂ ನಿಸ್ತರೇಚ್ಛುಭಾ |
ತಾರಿತಶ್ಚಾಪಿ ಭರ್ತಾ ಸ್ಯಾದಾತ್ಮಾ ಪುತ್ರಸ್ತಥೈವ ಚ |
ತಸ್ಮಾಜ್ಜೀವಿತಮೇವೈತದ್ ಯುವಯೋರ್ವಿದ್ಮ ಶೋಭನಮ್ ॥69॥
ಪತಿಯು ಮೃತನಾದ ಮೇಲೆ ಯಾವ ಪತಿವ್ರತೆಯು ಬ್ರಹ್ಮಚರ್ಯವ್ರತದಲ್ಲಿದ್ದು ಮನೋವಾಕ್ಕಾಯಸಂಬಂಧಿಯಾದ ಶುಭವಾದ ಯಮನಿಯಮಗಳಿಂದ ಶರೀರವನ್ನು ದಂಡಿಸಿ ಪತಿಯನ್ನು ಚಿಂತಿಸುತ್ತಾಳೋ, ಅಂತಹ ಶುಭಳಾದವಳು ಪತಿಯನ್ನು ಎಲ್ಲಾ ಸಂಕಟಗಳಿಂದಲೂ ದಾಟಿಸುತ್ತಾಳೆ. ಪತಿಯು ಸಂಕಟದಿಂದ ಪಾರಾದರೆ, ತಾನೂ ಮತ್ತು ತನ್ನ ಮಕ್ಕಳೂ ಸಂಕಟದಿಂದ ಪಾರಾಗುತ್ತಾರೆ. ಆದ್ದರಿಂದ ನೀವಿಬ್ಬರೂ ಜೀವಿಸಿರುವುದೇ ಶ್ರೇಷ್ಠವೆಂದು ನಮಗೆ ತೋರುತ್ತದೆ.
ಕುಂತೀ
ಯಥಾ ಪಾಂಡೋಶ್ಚ ನಿರ್ದೇಶಃ ತಥಾ ವಿಪ್ರಗಣಸ್ಯ ಚ |
ಆಜ್ಞಾ ಶಿರಸಿ ನಿಕ್ಷಿಪ್ತಾ ಕರಿಷ್ಯಾಮಿ ಚ ತತ್ ತಥಾ ॥70॥
ಪಾಂಡುವಿನ ಆದೇಶವು ಹೇಗೋ ಹಾಗೆ ವಿಪ್ರಸಮೂಹದ ಆದೇಶವನ್ನು ತಲೆಯ ಮೇಲೆ ಧರಿಸಿ ಅದರಂತೆ ನಡೆದುಕೊಳ್ಳುವೆನು.
ಯಥಾऽऽಹುರ್ಭಗವಂತೋ ಹಿ ತನ್ಮನ್ಯೇ ಶೋಭನಂ ವರಮ್ |
ಭರ್ತುಶ್ಚ ಮಮ ಪುತ್ರಾಣಾಂ ಮಮ ಚೈವ ನ ಸಂಶಯಃ ॥71॥
ಪೂಜ್ಯರಾದ ತಾವು ಏನನ್ನು ಹೇಳುತ್ತೀರೋ ಅದೇ ಆದೇಶವು ನನಗೂ ಮತ್ತು ಪುತ್ರರಿಗೂ ಶುಭಫಲಪ್ರದವೆಂದು ತಿಳಿಯುತ್ತೇನೆ. ಇದರಲ್ಲಿ ಸಂಶಯವಿಲ್ಲ.

ಮಾದ್ರೀ
ಕುಂತೀ ಸಮರ್ಥಾ ಪುತ್ರಾಣಾಂ ಯೋಗಕ್ಷೇಮಸ್ಯ ಧಾರಣೇ |
ಅಸ್ಯಾ ಹಿ ನ ಸಮಾ ಬುದ್ಧ್ಯಾ ದೇವ್ಯಪಿ ಸ್ಯಾದರುಂಧತೀ ॥72॥
ಕುಂತಿಯು ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳಲು ಸಮರ್ಥಳಾಗಿದ್ದಾಳೆ. ಅರುಂಧತಿದೇವಿಯೂ ಸಹ ಇವಳಿಗೆ ಸಮಾನವಾದ ಬುದ್ಧಿಯನ್ನು ಹೊಂದಿದವಳಲ್ಲ.
ಕುಂತ್ಯಾಶ್ಚ ವೃಷ್ಣಯೋ ನಾಥಾಃ ಕುಂತಿಭೋಜಸ್ತಥೈವ ಚ |
ನಾಹಂ ತ್ವಮಿವ ಪುತ್ರಾಣಾಂ ಸಮರ್ಥಾ ಧಾರಣೇ ತಥಾ ॥73॥
ಕುಂತಿಗೆ ವೃಷ್ಣಿಗಳು ಮತ್ತು ಕುಂತಿಭೋಜನು ನಾಥರಾಗಿದ್ದಾರೆ. ನಾನು ನಿನ್ನಂತೆ ಮಕ್ಕಳನ್ನು ನೋಡಿಕೊಳ್ಳನು ಸಮರ್ಥಳಲ್ಲ.
ಸಾಽಹಂ ಭರ್ತಾರಮನ್ವೇಷ್ಯೇ ಅತೃಪ್ತಾ ನನ್ವಹಂ ತಥಾ |
ಭರ್ತೃಲೋಕಸ್ಯ ತು ಜ್ಯೇಷ್ಠಾ ದೇವೀ ಮಾಮನುಮನ್ಯತಾಮ್ ॥74॥
ಅಂತಹ ನಾನು ಪತಿಯನ್ನು ಹಿಂಬಾಲಿಸುವೆನು. ನಾನು ಅತೃಪ್ತಳಾಗಿದ್ದೇನಷ್ಟೆ. ಪತಿಲೋಕಕ್ಕೆ ಹೋಗುವುದಕ್ಕೆ ಜ್ಯೇಷ್ಠಳಾದ ಕುಂತಿದೇವಿಯು ನನಗೆ ಅನುಮತಿಯನ್ನು ನೀಡಬೇಕು.
ಧರ್ಮಜ್ಞಸ್ಯ ಕೃತಜ್ಞಸ್ಯ ಸತ್ಯಸಂಧಸ್ಯ ಧೀಮತಃ |
ಪಾದೌ ಪರಿಚರಿಷ್ಯಾಮಿ ತದಾರ್ಯೇ ಹ್ಯನುಮನ್ಯತಾಮ್ ॥75॥
ಧರ್ಮಜ್ಞನೂ, ಕೃತಜ್ಞನೂ, ಸತ್ಯಸಂಧನೂ, ಧೀಮಂತನೂ ಆದ ಪತಿಯ ಪಾದವನ್ನು ಪರಲೋಕದಲ್ಲಿ ಪರಿಚರಿಸುವೆನು. ಆದ್ದರಿಂದ ಆರ್ಯೆಯು ಅನುಮತಿಯನ್ನು ನೀಡಬೇಕು.
ವೈಶಂಪಾಯನಃ
ಏವಮುಕತ್ವ ಮಹಾರಾಜ ಮದ್ರರಾಜಸುತಾ ಶುಭಾ |
ದದೌ ಕುಂತ್ಯೈ ಯಮೌ ಮಾದ್ರೀ ಶಿರಸಾಽಭಿಪ್ರಣಮ್ಯ ಚ ॥76॥
ಮಹಾರಾಜನೇ, ಶುಭಳಾದ ಮಾದ್ರಿಯು ಹೀಗೆ ಮಾತನಾಡಿ ನಕುಲಸಹದೇವರನ್ನು ಕುಂತಿಯ ಕೈಯಲ್ಲಿಟ್ಟು, ಕುಂತಿಗೆ ಶಿರಸಾಪ್ರಣಾಮವನ್ನು ಮಾಡಿದಳು.
ಅಭಿವಾದ್ಯ ಋಷೀನ್ ಸರ್ವಾನ್ ಪರಿಷ್ವಜ್ಯ ಚ ಪಾಂಡವಾನ್ |
ಮೂಧ್ನ್ಯುಪಾಘ್ರಾಯ ಬಹುಶಃ ಪಾರ್ಥಾನಾತ್ಮಸುತೌ ತಥಾ |
ಹಸ್ತೇ ಯುಧಿಷ್ಠಿರಂ ಗೃಹ್ಯ ಮಾದ್ರೀ ವಾಕ್ಯಮಭಾಷತ ॥77॥
ಎಲ್ಲಾ ಋಷಿಗಳಿಗೂ ನಮಸ್ಕರಿಸಿ ಎಲ್ಲಾ ಪಾಂಡವರನ್ನೂ ಆಲಿಂಗಿಸಿ ಕುಂತಿಯ ಮಕ್ಕಳನ್ನು ತನ್ನ ಮಕ್ಕಳಂತೆಯೇ ಶಿರಸ್ಸಿನಲ್ಲಿ ಆಘ್ರಾಣಿಸಿ ಯುಧಿಷ್ಠಿರ ಕೈಯನ್ನು ಹಿಡಿದುಕೊಂಡು ಮಾದ್ರಿಯು ಮಾತನಾಡಿದಳು.
ಕುಂತೀ ಮಾತಾ ಅಹಂ ಧಾತ್ರೀ ಯುವಾಽಽಭ್ಯಾಂ ಚ ಪಿತಾ ಮೃತಃ|
ಯುಧಿಷ್ಠಿರಃ ಪಿತಾ ಜ್ಯೇಷ್ಠಃ ಚತುರ್ಣಾಂ ಧರ್ಮತಃ ಸದಾ ॥78॥
ಕುಂತಿಯು ತಾಯಿ. ನಾನು ಸಾಕಿದ ದಾದಿ ಮಾತ್ರ. ನಮ್ಮಿಬ್ಬರ ದೋಷದಿಂದಾಗಿ ರಾಜನು ಮೃತನಾದನು. ಇನ್ನು ಮುಂದೆ ಯುಧಿಷ್ಠಿರನು ನಾಲ್ಕು ಜನ ತಮ್ಮಂದಿರಿಗಿಂತ ಜ್ಯೇಷ್ಠನಾಗಿ ಪಿತೃಸ್ಥಾನದಲ್ಲಿ ಇರುತ್ತಾನೆ. (ಬೇರೆ ಕಾರ್ಯದಲ್ಲಿ ಮಗ್ನಳಾದುದು ಕುಂತಿಯ ದೋಷ. ಸಂಗವನ್ನು ಪ್ರತಿಷೇಧ ಮಾಡಲು ಸಾಧ್ಯವಾಗದಿದ್ದುದು ಮಾದ್ರಿಯ ದೋಷ. ಹೀಗೆ ಇಬ್ಬರ ದೋಷಗಳಿಂದ ರಾಜನು ಮೃತನಾಗಿದ್ದಾನೆ.)
ವೃದ್ಧಾನುಶಾಸನೇ ಸಕ್ತಾಃ ಸತ್ಯಧರ್ಮಪರಾಯಣಾಃ |
ತಾದೃಶಾ ನ ವಿನಶ್ಯಂತಿ ನೈವ ಯಾಂತಿ ಪರಾಭವಮ್ |
ತಸ್ಮಾತ್ ಸರ್ವೇ ಕುರುಧ್ವಂ ವೈ ಗುರುವೃತ್ತಿಮತಂದ್ರಿತಾಃ ॥79॥
ಹಿರಿಯರ ಮಾತನ್ನು ಕೇಳಿಕೊಂಡು ಸತ್ಯಧರ್ಮ ಪರಾಯಣರಾಗಿರುವರು ಎಂದೂ ಪರಾಭವವನ್ನಾಗಲೀ ವಿನಾಶವನ್ನಾಗಲೀ ಹೊಂದುವುದಿಲ್ಲ. ಆದ್ದರಿಂದ ಎಲ್ಲರೂ ಧರ್ಮರಾಜನಲ್ಲಿ ಎಚ್ಚರಿಕೆಯಿಂದ ಗುರುವೃತ್ತಿಯನ್ನು ಮಾಡಿ.
ವೈಶಂಪಾಯನಃ
ಋಷೀಣಾಂ ಚ ಪೃಥಾಯಾಶ್ಚ ನಮಸ್ಕೃತ್ಯ ಪುನಃ ಪುನಃ |
ಆವಾಸಕೃಪಣಾ ಮಾದ್ರೀ ಪ್ರತ್ಯುವಾಚ ಪೃಥಾಂ ತಥಾ ॥80॥
ರಾಜನ ಸಹವಾಸದಿಂದ ಕೃಪಣಳಾದ ಮಾದ್ರಿಯು ಋಷಿಗಳಿಗೂ ಮತ್ತು ಕುಂತಿಗೂ ಪುನಃ ಪುನಃ ನಮಸ್ಕಾರಗಳನ್ನು ಮಾಡಿ ಕುಂತಿಯನ್ನು ಕುರಿತು ಹೇಳಿದಳು.
ಧನ್ಯಾ ತ್ವಮಸಿ ವಾರ್ಷ್ಣೇಯಿ ನಾಸ್ತಿ ಸ್ತ್ರೀ ಸದೃಶೀ ತ್ವಯಾ |
ವೀರ್ಯಂ ತೇಜಶ್ಚ ಯೋಗಂ ಚ ಮಾಹಾತ್ಮ್ಯಂ ಚ ಯಶಸ್ವಿನಾಮ್॥
ಕುಂತಿ ದ್ರಕ್ಷ್ಯಸಿ ಪುತ್ರಾಣಾಂ ಪಂಚಾನಾಮಮಿತೌಜಸಾಮ್ |
ಋಷೀಣಾಂ ಸನ್ನಿಧಾವೇಷಾ ಮಯಾ ವಾಗಭ್ಯುದೀರಿತಾ ॥82॥
ವೃಷ್ಣಿಕುಲದಲ್ಲಿ ಜನಿಸಿದವಳೇ, ನೀನು ಧನ್ಯಳಾದವಳು. ನಿನಗೆ ಸಮಾನಳಾದ ಇನ್ನೊಬ್ಬ ಸ್ತ್ರೀ ಇಲ್ಲ. ನೀನು ಯಶಸ್ವಿಗಳೂ, ಅಮಿತಪರಾಕ್ರಮಿಗಳೂ ಆದ ಐದೂ ಮಕ್ಕಳ ಶೌರ್ಯವನ್ನು, ಕಾಂತಿಯನ್ನು, ಯೋಗವನ್ನು ಮತ್ತು ಮಹಾತ್ಮೆಯನ್ನೂ ನೋಡುವಿ. ಋಷಿಗಳ ಸನ್ನಿಧಿಯಲ್ಲಿ ನಾನು ಈ ಮಾತನ್ನು ಹೇಳುತ್ತಿದ್ದೇನೆ.
ದಿದೃಕ್ಷಮಾಣಾಯಾಃ ಸ್ವರ್ಗಂ ಮಮೈಷಾ ನ ವೃಥಾ ಭವೇತ್ ॥83॥

ಋಷಿಗಳ ಸನ್ನಿಧಿಯಲ್ಲಿ ಸ್ವರ್ಗವನ್ನು ನೋಡಲು ಬಯಸಿ ಹೋಗುತ್ತಿರುವ ಈ ನನ್ನ ಮಾತುಗಳು ಎಂದೂ ಸುಳ್ಳಾಗುವುದಿಲ್ಲ.
ಆಚಾರ್ಯಾ ಚಾಭಿವಾದ್ಯಾ ಚ ಮಮ ಪೂಜ್ಯಾ ಚ ಸರ್ವದಾ |
ಜ್ಯೇಷ್ಠಾ ವರಿಷ್ಠಾ ತ್ವಂ ದೇವಿ ಭೂಷಿತಾ ಸದ್ಗುಣೈಃ ಶುಭೈಃ |
ಅಭ್ಯನುಜ್ಞಾತುಮಿಚ್ಛಾಮಿ ತ್ವಯಾ ಯಾದವನಂದಿನಿ ॥84॥
ನೀನು ನನಗೆ ಆಚಾರ್ಯಳು, ನನ್ನ ನಮಸ್ಕಾರಕ್ಕೆ ಪಾತ್ರಳಾದವಳು, ನನಗೆ ಯಾವಾಗಲೂ ಪೂಜ್ಯಳಾದವಳು, ವಯಸ್ಸಿನಿಂದ ಹಿರಿಯಳಾದವಳು, ಗುಣಗಳಿಂದ ಶ್ರೇಷ್ಠಳಾದವಳು. ಎಲ್ಲಾ ಸದ್ಗುಣಗಳಿಂದಲೂ ಭೂಷಿತಳಾದವಳು. ಯಾದವ ನಂದಿನಿಯೇ, ನಿನ್ನ ಅನುಮತಿಯನ್ನು ಪಡೆದು ನಾನು ಹೊರಡಲು ಬಯಸುತ್ತೇನೆ.
ಧರ್ಮಂ ಸ್ವರ್ಗಂ ಚ ಕೀರ್ತಿಂ ಚ ತ್ವತ್ಕೃತೇಽಹಮವಾಪ್ನುಯಾಮ್ |
ಯಥಾ ತಥಾ ವಿಧತ್ಸ್ವೇಹ ಮಾ ಚ ಕಾರ್ಷೀರ್ವಿಚಾರಣಾಮ್ ॥85॥
ನಿನ್ನ ಅನುಗ್ರಹದಿಂದಾಗಿ ನಾನು ಧರ್ಮವನ್ನೂ, ಸ್ವರ್ಗವನ್ನೂ ಮತ್ತು ಕೀರ್ತಿಯನ್ನೂ ಪಡೆಯುವೆನು. ನಾನು ಅವುಗಳನ್ನು ಪಡೆಯುವಂತೆ ನೀನು ಮಾಡು. ಇದನ್ನು ಪುನಃ ವಿಚಾರ ಮಾಡಬೇಡ.
ವೈಶಂಪಾಯನಃ
ಬಾಷ್ಪಸಂದಿಗ್ಧಯಾ ವಾಚಾ ಕುಂತ್ಯುವಾಚ ಯಶಸ್ವಿನೀ |
ಅನುಜ್ಞಾತಾಸಿ ಕಲ್ಯಾಣಿ ತ್ರಿದಿವೇ ಸಂಗಮೋಽಸ್ತು ತೇ ॥86॥
ಬಾಷ್ಪಗದ್ಗದವಾದ ಮಾತುಗಳಿಂದ ಯಶಸ್ವಿನಿಯಾದ ಕುಂತಿಯು ಹೇಳಿದಳು. `ಕಲ್ಯಾಣಿಯೇ, ನಾನು ಅನುಮತಿಯನ್ನು ಕೊಟ್ಟಿದ್ದೇನೆ. ಸ್ವರ್ಗದಲ್ಲಿ ನಿನಗೆ ಪತಿಯ ಸಂಗಮವಾಗಲಿ.'
ಭರ್ತ್ರಾ ಸಹ ವಿಶಾಲಾಕ್ಷಿ ಕ್ಷಿಪ್ರಮದ್ಯೈವ ಭಾಮಿನಿ |
ಸಂಗತಾ ಸ್ವರ್ಗಲೋಕೇ ತ್ವಂ ರಮೇಥಾಃ ಶಾಶ್ವತೀಃ ಸಮಾಃ ॥87॥
ಭಾಮಿನಿಯೇ, ವಿಶಾಲಾಕ್ಷಿಯೇ, ಈ ದಿನವೇ ಸ್ವರ್ಗದಲ್ಲಿ ಪತಿಯ ಸಂಯೋಗವನ್ನು ಪಡೆದು ಬಹುಕಾಲ ಸುಖವನ್ನು ಅನುಭವಿಸುವವಳಾಗು.
ವೈಶಂಪಾಯನಃ
ತತಃ ಪುರೋಹಿತಃ ಸ್ನಾತ್ವಾ ಪ್ರೇತಕರ್ಮಣಿ ಪಾರಗಃ |
ಹಿರಣ್ಯಶಕಲಾನ್ಯಾಜ್ಯಂ ತಿಲಾನ್ ದಧಿ ಚ ತಂಡುಲಾನ್ ॥88॥
ಉದಕುಂಭಂ ಸಪರಶುಂ ಸಮಾನೀಯ ತಪಸ್ವಿಭಿಃ |
ಅಶ್ವಮೇಧಾಗ್ನಿಮಾಹೃತ್ಯ ಯಥಾನ್ಯಾಯಂ ಸಮಂತತಃ ॥89॥
ಕಾಶ್ಯಪಃ ಕಾರಯಾಮಾಸ ಪಾಂಡೋಃ ಪುತ್ರೋ ಯುಧಿಷ್ಠಿರಃ |
ತೇನಾಗ್ನಿನಾಽದಹತ್ ಪಾಂಡುಂ ಕೃತ್ವಾ ಚಾಪಿ ಕ್ರಿಯಾಂ ತದಾ ॥90॥
ಆಗ ಪ್ರೇತಕರ್ಮದಲ್ಲಿ ಪಾರಂಗತನಾದ ಪುರೋಹಿತನು ಹಿರಣ್ಯಕಲವನ್ನೂ, ಆಜ್ಯವನ್ನೂ, ತಿಲ ದಧಿ ತಂಡುಲಗಳನ್ನೂ, ಉದಕುಂಭವನ್ನೂ, ಪರಶುವನ್ನೂ ತಪಸ್ವಿಗಳಿಂದ ತರಿಸಿ, ಅಶ್ವಮೇಧಾಗ್ನಿಯನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ತರಿಸಿದನು. ಕಾಶ್ಯಪಗೋತ್ರದ ಆ ಪುರೋಹಿತನು ಎಲ್ಲವನ್ನೂ ಸಿದ್ಧಮಾಡುತ್ತಿರಲು ಪಾಂಡುವಿನ ಪುತ್ರನಾದ ಯುಧಿಷ್ಠಿರನು ಉಳಿದ ಕ್ರಿಯೆಗಳನ್ನು ಮಾಡಿ ಪಾಂಡುವಿನ ಶರೀರವನ್ನು ಅಶ್ವಮೇಧಾಗ್ನಿಯಿಂದ ದಹಿಸಿದನು.
ರುದನ್ಶೋಕಾಭಿಸಂತಪ್ತಃ ಪಪಾತ ಭುವಿ ಪಾಂಡವಃ |
ಋಷೀನ್ ಪುತ್ರಾನ್ ಪೃಥಾಂ ಚೈವ ವಿಸೃಜ್ಯ ಚ ನೃಪಾತ್ಮಜಾನ್ ॥91॥
ನಮಸ್ಕೃತ್ಯ ಚಿತಾಗ್ನಿಸ್ಥಂ ಧರ್ಮಪತ್ನೀ ನರಾಧಿಪಮ್ |
ಮದ್ರರಾಜಾತ್ಮಜಾ ತೂರ್ಣಮನ್ವಾರೋಹದ್ ಯಶಸ್ವಿನೀ ॥92॥
ಧರ್ಮರಾಜನು ಶೋಕತಪ್ತನಾಗಿ ಅಳುತ್ತಾ ಭೂಮಿಯ ಮೇಲೆ ಬಿದ್ದನು. ಮಾದ್ರಿಯು ಋಷಿಗಳನ್ನೂ, ಮಕ್ಕಳನ್ನೂ, ಕುಂತಿಯನ್ನೂ ಬಿಟ್ಟು ಚಿತಾಗ್ನಿಯಲ್ಲಿದ್ದ ರಾಜನಿಗೆ ನಮಸ್ಕಾರವನ್ನು ಮಾಡಿ ಧರ್ಮಪತ್ನಿಯೂ, ಯಶಸ್ವಿನಿಯೂ ಆದ ಅವಳು ಬೇಗ ಚಿತೆಯನ್ನು ಏರಿದಳು.
ಅಹತಾಂಬರಸಂವೀತೋ ಭ್ರಾತೃಭಿಃ ಸಹಿತೋಽನಘಃ |
ಉದಕಂ ಕೃತವಾಂಸ್ತತ್ರ ಪುರೋಹಿತಮತೇ ಸ್ಥಿತಃ ॥93॥
ಅಹತವಾದ ವಸ್ತ್ರವನ್ನುಟ್ಟ ನಿರ್ದೋಷನಾದ ಯುಧಿಷ್ಠಿರನು ಪುರೋಹಿತರು ಹೇಳಿದಂತೆ ತಮ್ಮಂದಿರಿಂದ ಸಹಿತನಾಗಿ ತಂದೆಗೆ ಉದಕ ಕ್ರಿಯೆಯನ್ನು ಮಾಡಿದನು.
ಯುಕ್ತಾನಿ ತಸ್ಯ ಕೃತ್ಯಾನಿ ಶತಶೃಂಗನಿವಾಸಿನಃ |
ತಾಪಸಾ ವಿಧಿವಚ್ಚಕ್ರುಶ್ಚಾರಣಾ ಋಷಿಭಿಃ ಸಹ ॥94॥
ಶತಶೃಂಗ ನಿವಾಸಿಗಳಾದ ತಾಪಸರು ಮತ್ತು ಅರಣ್ಯವಾಸಿಗಳು, ಋಷಿಗಳ ಜೊತೆಯಲ್ಲಿ ಸೇರಿ ಮಾಡಬೇಕಾದ ಯೋಗ್ಯವಾದ ವಿಧಿಗಳನ್ನು ವಿಧಿವತ್ತಾಗಿ ನೆರವೇರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕೋನಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು
* * * *

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-14
ಪಾಂಡೋಃ ಸುತಾಶ್ಚ ಪೃಥಯಾ ಸಹಿತಾ ಮುನೀಂದ್ರೈ
ರ್ನಾರಾಯಣಾಶ್ರಮತ ಆಶು ಪುರಂ ಸ್ವಕೀಯಮ್ |
ಜಗ್ಮುಸ್ತಥೈವ ಧೃತರಾಷ್ಟ್ರಪುರೋ ಮುನೀಂದ್ರಾ
ವೃತ್ತಂ ಸಮಸ್ತಮವದನ್ನನುಜಂ ಮೃತಂ ಚ ॥55॥
ಪಾಂಡವರು ಕುಂತೀಸಹಿತರಾಗಿ ಮುನಿಶ್ರೇಷ್ಠರಿಂದಲೂ ಕೂಡಿ ಬದರಿಕಾಶ್ರಮದಿಂದ ಬೇಗನೆ ತಮ್ಮ ಹಸ್ತಿನಾವತಿ ನಗರಕ್ಕೆ ಹೋದರು. ಮುನಿಶ್ರೇಷ್ಠರು ಧೃತರಾಷ್ಟ್ರನ ಮುಂದೆ ನಡೆದುದನೆಲ್ಲ ಯಥಾವತ್ತಾಗಿ ಹೇಳಿದರು. ತಮ್ಮನಾದ ಪಾಂಡುವಿನ ಮರಣ ವಾರ್ತೆಯನ್ನು ತಿಳಿಸಿದರು.
ತೂಷ್ಣೀಂ ಸ್ಥಿತೇ ತು ನೃಪತೌ ತನುಜೇ ಚ ನದ್ಯಾಃ
ಕ್ಷತ್ತರ್ಯುತಾಪ್ತ ಉರುಮೋದಮತೀವ ಪಾಪಾಃ |
ಊಚುಃ ಸುಯೋಧನಮುಖಾಃ ಸಹ ಸೌಬಲೇನ
ಪಾಂಡೋರ್ಮೃತಿಃ ಕಿಲ ಪುರಾ ತನಯಾಃ ಕ್ವ ತಸ್ಯ ॥56॥
ಧೃತರಾಷ್ಟ್ರನೂ ಭೀಷ್ಮನೂ ಸುಮ್ಮನಿರಲು, ವಿದುರನು ಬಹಳ ಸಂತೋಷಪಡುತ್ತಿರಲು ಅತ್ಯಂತ ಪಾಪಿಗಳಾದ ಸುಯೋಧನಾದಿಗಳು ಹೇಳಿದರು, `ಪಾಂಡುವಿನ ಮರಣ ಹಿಂದೆಯೆ ಆಗಿಹೋಗಿತ್ತು! ಅವನಿಗೆಲ್ಲಿಯ ಮಕ್ಕಳು?' ಎಂದು.
ನ ಕ್ಷೇತ್ರಜಾ ಅಪಿ ಮೃತೇ ಪಿತರಿ ಸ್ವಕೀಯೈಃ
ಸಮ್ಯಙ್ನಿಯೋಗಮನವಾಪ್ಯ ಭವಾಯ ಯೋಗ್ಯಾಃ |
ತೇಷಾಮಿತೀರಿತ ವಚೋಽನು ಜಗಾದ ವಾಯು-
ರಾಭಾಷ್ಯ ಕೌರವಗಣಾನ್ ಗಗನಸ್ಥ ಏವ ॥57॥
`ತಂದೆ ಸತ್ತಮೇಲೆ ತಾಯಿ ತಮ್ಮ ಬಂಧುಗಳಿಂದ ಸರಿಯಾಗಿ ನಿಯೋಗ ಪಡೆಯದೆ ಇದ್ದಾಗ ಹುಟ್ಟುವ ಮಕ್ಕಳು ಕ್ಷೇತ್ರಜ ಪುತ್ರರೂ ಆಗುವುದಿಲ್ಲ' ಎಂದರು ದುರ್ಯೋಧನಾದಿಗಳು. ಅವರು ಈ ಮಾತನ್ನು ಹೇಳಿದೊಡನೆ ವಾಯುದೇವ ಆಕಾಶದಲ್ಲಿ ನಿಂತು ಕೌರವ ಸಮೂಹಗಳನ್ನು ಕರೆದು ಹೇಳಿದ.
ಏತೇ ಹಿ ಧರ್ಮಮರುದಿಂದ್ರಭಿಷಗ್ವರೇಭ್ಯೋ
ಜಾತಾಃ ಪ್ರಜೀವತಿ ಪಿತರ್ಯುರುಧಾಮಸಾರಾಃ |
ಶಕ್ಯಾಶ್ಚ ನೈವ ಭವತಾಂ ಕ್ವಚಿದಗ್ರಹಾಯ
ನಾರಾಯಣೇನ ಸತತಂ ಪರಿರಕ್ಷಿತಾ ಯತ್ ॥58॥
`ಪಾಂಡವರು ತಂದೆ ಚೆನ್ನಾಗಿ ಬದುಕಿದ್ದಾಗಲೇ ಯಮ ವಾಯು ಇಂದ್ರ ಅಶ್ವಿನೀ ದೇವತೆಗಳಿಗೆ ಹುಟ್ಟಿದವರು, ಮಹಾಧರ್ಮಿಷ್ಠರು, ಉತ್ತಮರು, ಯಾವ ದೃಷ್ಟಿಯಿಂದಲೂ ಇವರು ನಿಮಗೆ ಪರಿತ್ಯಾಗ ಮಾಡಲು ಶಕ್ಯರಲ್ಲ. ಏಕೆಂದರೆ ವೇದವ್ಯಾಸರಿಂದ ಸದಾ ರಕ್ಷಿತರಾಗಿದ್ದಾರೆ'.
ವಾಯೋರದೃಶ್ಯವಚನಂ ಪರಿಶಂಕಮಾನೇ-
ಷ್ವಾವಿಬಭೂವ ಭಗವಾನ್ ಸ್ವಯಮಬ್ಜನಾಭಃ |
ವ್ಯಾಸಸ್ವರೂಪ ಉರುಸರ್ವಗುಣೈಕದೇಹ
ಆದಾಯ ತಾನಗಮದಾಶು ಚ ಪಾಂಡುಗೇಹಮ್ ॥59॥
ವಾಯುದೇವನ ಅದೃಶ್ಯವಾಣಿಯನ್ನೂ ಕೌರವರು ನಂಬದಿದ್ದಾಗ ಭಗವಾನ್ ವ್ಯಾಸರೂಪಿ ಪದ್ಮನಾಭ ಸ್ವತಃ ಮೈದೋರಿದ. ಪೂರ್ಣ ಸರ್ವಗುಣರೂಪ ಶರೀರದವನಾದ ಹರಿ ಪಾಂಡವರನ್ನು ಬೇಗನೆ ಪಾಂಡುವಿನ ಅರಮನೆಗೇ ಒಯ್ದ.
ತತ್ಸ್ವೀಕೃತೇಷು ಸಕಲಾ ಅಪಿ ಭೀಷ್ಮಮುಖ್ಯಾ
ವೈಚಿತ್ರವೀರ್ಯಸಹಿತಾಃ ಪರಿಪೂಜ್ಯ ಸರ್ವಾನ್ |
ಕುಂತ್ಯಾ ಸಹೈವ ಜಗೃಹುಃ ಸುಭೃಶಂ ತದಾರ್ತಾ
ವೈಚಿತ್ರವೀರ್ಯತನಯಾಃ ಸಹ ಸೌಬಲೇನ ॥60॥
ವ್ಯಾಸರು ಪಾಂಡವರನ್ನು ಸ್ವೀಕರಿಸಿದಾಗ ಧೃತರಾಷ್ಟ್ರ ಸಮೇತರಾಗಿ ಭೀಷ್ಮಾದಿಗಳೆಲ್ಲರೂ ಎಲ್ಲ ಪಾಂಡವರನ್ನು ಕುಂತಿಯೊಂದಿಗೆ ಅದರ ಪೂರ್ವಕವಾಗಿ ಸ್ವೀಕರಿಸಿದರು. ಆಗ ಕೌರವರೂ ಶಕುನಿಯೂ ಬಹಳ ಸಂಕಟಪಟ್ಟರು.
* * * *

ನೂರ ಇಪ್ಪತ್ತೆರಡನೆಯ ಅಧ್ಯಾಯ
(ಯುಧಿಷ್ಠಿರಾದಿಗಳನ್ನು ಕರೆದುಕೊಂಡು ಹಸ್ತಿನಪುರಕ್ಕೆ ಬಂದು ಭೀಷ್ಮಾದಿಗಳಿಗೆ ಪಾಂಡವರನ್ನು ಸಮರ್ಪಿಸಿ ಋಷಿಗಳ ಪ್ರತಿನಿವೃತ್ತಿ.)
ವೈಶಂಪಾಯನಃ
ಪಾಂಡೋರವಭೃಥಂ ಕೃತ್ವಾ ದೇವಕಲ್ಪಾ ಮಹರ್ಷಯಃ |
ತತೋ ಮಂತ್ರಮಕುರ್ವಂತ ತೇ ಸಮೇತ್ಯ ತಪಸ್ವಿನಃ ॥1॥
ಪಾಂಡುವಿಗೆ ಉತ್ತರಕ್ರಿಯೆಗಳನ್ನು ಮಾಡಿದ ನಂತರ ಮಾಡಬೇಕಾದ ಮಂಗಳಸ್ನಾನವನ್ನು ಮಾಡಿದ ಮೇಲೆ ದೇವಸದೃಶರಾದ ತಪಸ್ವಿಗಳಾದ ಮಹರ್ಷಿಗಳು ಎಲ್ಲರೂ ಸೇರಿ ಮಂತ್ರಾಲೋಚನೆಯನ್ನು ಮಾಡಿದರು.

ಪಾಂಡು ಮತ್ತು ಮಾದ್ರಿಯರ ದೇಹವಿಲ್ಲದೆ ಕೇವಲ ಪಾಂಡವರನ್ನು ಹಸ್ತಿನಪುರಕ್ಕೆ ಕರೆದುಕೊಂಡು ಹೋದರೆ ದುರ್ಯೋಧನಾದಿಗಳೂ ಅಪಹಾಸ ಮಾಡುವುದರಿಂದ ಪಾಂಡು ಮತ್ತು ಮಾದ್ರಿಯರ ಶರೀರದ ಪ್ರತಿನಿಧಿಗಳಾದ ಅಸ್ಥಿಗಳನ್ನೂ ತೆಗೆದುಕೊಂಡು ಹೋಗಬೇಕು ಎಂಬುದು ಒಂದು ಮಂತ್ರಾಲೋಚನೆ. ಶತಶೃಂಗ ಪರ್ವತದಲ್ಲಿ ಅವರಿಬ್ಬರಿಗೂ ಉತ್ತರ ಕ್ರಿಯೆಗಳು ನಡೆದಿದ್ದರೂ ರಾಜೋಚಿತವಾದ ಉತ್ತರಕ್ರಿಯೆಗಳು ನಡೆದಿಲ್ಲ. ಅವರ ಶರೀರಗಳಿಲ್ಲದೇ ಹಾಗೆಯೇ ಹಸ್ತಿನಪುರಕ್ಕೆ ಹೋದರೆ ರಾಜೋಚಿತವಾದ ಉತ್ತರಕ್ರಿಯೆಗಳನ್ನು ಮಾಡುವುದರಲ್ಲಿ ಉದಾಸೀನವನ್ನು ಮಾಡಬಹುದು. ಆದ್ದರಿಂದ ಅವರ ಶರೀರದ ಭಾಗವಾದ ಅಸ್ಥಿಯನ್ನು ತೆಗೆದುಕೊಂಡು ಹೋಗಬೇಕು ಎಂಬುದು ಎರಡನೆಯ ಮಂತ್ರಾಲೋಚನೆ.
ಹಿತ್ವಾ ರಾಜ್ಯಂ ಚ ಭೋಗಾಂಶ್ಚ ಸ ಮಹಾತ್ಮಾ ಮಹಾಯಶಾಃ |
ಅಸ್ಮಿನ್ ಸ್ಥಾನೇ ತಪಸ್ತಪ್ತುಂ ತಾಪಸಾನ್ ಶರಣಂ ಗತಃ ॥2॥
ಮಹಾತ್ಮನೂ, ಮಹಾಕೀರ್ತಿವಂತನೂ ಆದ ಆ ಪಾಂಡುವು ರಾಜ್ಯವನ್ನೂ, ಭೋಗವನ್ನೂ ತೊರೆದು ಈ ಸ್ಥಾನಕ್ಕೆ ಬಂದು ತಪಸ್ಸನ್ನು ಮಾಡಲು ತಪಸ್ವಿಗಳನ್ನು ಆಶ್ರಯಿಸಿದನು.
ಸಂಜಾತಮಾತ್ರಾನ್ ಪುತ್ರಾಂಶ್ಚ ದಾರಾಂಶ್ಚ ಭವತಾಮಿಹ |
ಪ್ರದಾಯೋಪನಿಧಿಂ ರಾಜಾ ಪಾಂಡುಃ ಸ್ವರ್ಗಮಿತೋ ಗತಃ ॥3॥
ಪುತ್ರರನ್ನು ಪಡೆದ ತಕ್ಷಣವೇ ಪುತ್ರರನ್ನೂ ಮತ್ತು ಪತ್ನಿಯರನ್ನೂ ನಿಮ್ಮಲ್ಲಿ ನ್ಯಾಸವಾಗಿಟ್ಟು ಪಾಂಡುರಾಜನು ಇಲ್ಲಿಂದ ಸ್ವರ್ಗಕ್ಕೆ ಪ್ರಯಾಣ ಮಾಡಿದ್ದಾನೆ.
ತಸ್ಮಾತ್ ಕೃತ್ಯಂ ಪರೀಕ್ಷಧ್ವಮಿತಿ ಹೋವಾಚ ಧರ್ಮವಿತ್ |
ಶುಕಃ ಪರಮಧರ್ಮಜ್ಞೋ ಮಹರ್ಷಿಃ ಸಂಶಿತವ್ರತಃ ॥4॥
ಆದ್ದರಿಂದ ಮುಂದೆ ಮಾಡಬೇಕಾದ ಕರ್ತವ್ಯವನ್ನು ವಿಚಾರ ಮಾಡಿ ಎಂದು ಸಂಶಿತವ್ರತನೂ, ಪರಮಧರ್ಮಜ್ಞನೂ ಆದ ರಾಜರ್ಷಿಯಾದ ಶುಕನು (ಶರ್ಯಾತಿಯ ಪುತ್ರನು) ಹೇಳಿದನು.
ತೇ ಪರಸ್ಪರಮಾಮಂತ್ರ್ಯ ಸರ್ವಭೂತಹಿತೇ ರತಾಃ |
ಧರ್ಮಂ ಚೈವ ಪುರಸ್ಕೃತ್ಯ ಜ್ಯೇಷ್ಠಂ ಮತಿಮಕುರ್ವತ ॥5॥
ಸರ್ವಭೂತಹಿತದಲ್ಲಿರತರಾದ ಆ ಮುನಿಗಳು ಧರ್ಮವನ್ನೇ ಪ್ರಧಾನವಾಗಿರಿಸಿಕೊಂಡು ಪರಸ್ಪರಮಂತ್ರಾಲೋಚನೆಯನ್ನು ಮಾಡಿ ಶ್ರೇಷ್ಠವಾದ ನಿರ್ಧಾರವನ್ನು ಮಾಡಿದರು.
ಕುರುಕ್ಷೇತ್ರಮಿತಃ ಕುಂತೀಂ ತಾಂ ಸಪುತ್ರಾಂ ನಯಾಮಹೇ |
ಇತ್ಯುಕ್ತ್ವಾ ತೇ ಮಹಾತ್ಮಾನೋ ಗಮನೇ ಚಕ್ರಿರೇ ಮನಃ ॥6॥
ಇಲ್ಲಿಂದ ಕುಂತಿಯನ್ನು ಮತ್ತು ಮಕ್ಕಳನ್ನು ಕರೆದುಕೊಂಡು `ಕುರುಕ್ಷೇತ್ರಕ್ಕೆ ಹೋಗೋಣ' ಎಂದು ಹೇಳಿ ಆ ಮಹಾತ್ಮರು ಹೊರಡಲು ನಿರ್ಧರಿಸಿದರು.
ತಸ್ಮಿನ್ನೇವ ಕ್ಷಣೇ ಸರ್ವೇ ಪರಿವಾರ್ಯ ಪ್ರತಸ್ಥಿರೇ |
ಪಾಂಡೋಃ ಪುತ್ರಾನ್ ಪುರಸ್ಕೃತ್ಯ ನಗರಂ ನಾಗಸಾಹ್ವಯಮ್ ॥7॥
ಆ ಕ್ಷಣದಲ್ಲಿಯೇ ಎಲ್ಲರೂ ಒಟ್ಟಿಗೆ ಸೇರಿ ಪಾಂಡುಪುತ್ರರನ್ನು ಮುಂದೆ ಮಾಡಿಕೊಂಡು ಹಸ್ತಿನಪುರಕ್ಕೆ ಹೊರಟರು.
ಉದಾರಮನಸಃ ಸಿದ್ಧಾ ಗಮನೇ ಚಕ್ರಿರೇ ಮನಃ |
ಭೀಷ್ಮಾಯ ಪಾಂಡವಾನ್ ದಾತುಂ ಧೃತರಾಷ್ಟ್ರಾಯ ಚೈವ ಹಿ ॥8॥
ಉದಾರಮನಸ್ಸುಳ್ಳ ಸಿದ್ಧಪುರುಷರಾದ ಆ ಮುನಿಗಳು ಭೀಷ್ಮನಿಗೂ ಮತ್ತು ಧೃತರಾಷ್ಟ್ರನಿಗೂ ಪಾಂಡವರನ್ನು ಒಪ್ಪಿಸಲು ನಿರ್ಧರಿಸಿ ಹೊರಟರು.
ತಸ್ಮಿನ್ನೇವ ಕ್ಷಣೇ ಸರ್ವೇ ತಾನಾದಾಯ ಪ್ರತಸ್ಥಿರೇ |
ಪಾಂಡೋರ್ದಾರಾಂಶ್ಚ ಪುತ್ರಾಂಶ್ಚ ಶರೀರೇ ಚೈವ ತಾಪಸಾಃ ॥9॥
ಆ ಕ್ಷಣದಲ್ಲಿಯೇ ಎಲ್ಲಾ ತಾಪಸರು ಪಾಂಡವರನ್ನೂ, ಕುಂತಿಯನ್ನೂ, ಪಾಂಡು ಮತ್ತು ಮಾದ್ರಿಯರ ಅಸ್ಥಿಗಳನ್ನೂ ತೆಗೆದುಕೊಂಡು ಹೊರಟರು.
ಸುಖಿನೀ ಸಾ ಪುರಾ ಭೂತ್ವಾ ಸತತಂ ಪುತ್ರವತ್ಸಲಾ |
ಪ್ರಪನ್ನಾ ದೀರ್ಘಮಧ್ವಾನಂ ಸಂಕ್ಷಿಪ್ತಂ ತಮಮನ್ಯತ ॥10॥
ಹಿಂದೆ ಹಸ್ತಿನಪುರದಲ್ಲಿ ಸುಖವಾಗಿ ಬದುಕಿದ್ದ ಪುತ್ರವತ್ಸಲಳಾದ ಕುಂತಿಯು ದೀರ್ಘವಾದ ಮಾರ್ಗದಲ್ಲಿ ಹೋಗುತ್ತಾ ಅದನ್ನು ಸಂಕ್ಷಿಪ್ತವೆಂದೇ ಭಾವಿಸಿದಳು.
ಸಾ ನದೀರ್ಘೇಣ ಕಾಲೇನ ಸಂಪ್ರಾಪ್ತಾ ಕುರುಜಾಂಗಲಮ್ |
ವರ್ಧಮಾನಪುರದ್ವಾರಮಾಸಸಾದ ಯಶಸ್ವಿನೀ ॥11॥
ಯಶಸ್ವಿನಿಯಾದ ಆ ಕುಂತಿಯು ಅಲ್ಪಕಾಲದಲ್ಲಿಯೇ ಕುರುಜಾಂಗಲವನ್ನು ತಲುಪಿ ನಗರದ ದೊಡ್ಡ ಹೆಬ್ಬಾಗಿಲನ್ನು ಸಮೀಪಿಸಿದಳು.
ತಚ್ಚಾರಣಸಹಸ್ರೇಣ ಮುನೀನಾಂ ಸಂಘಮಾಗತಮ್ |
ಶ್ರುತ್ವಾ ನಾಗಪುರೇಂದ್ರಾಣಾಂ ವಿಸ್ಮಯಃ ಸಮಜಾಯತ ॥12॥
ಸಹಸ್ರಾರು ಚಾರಣರ ಜೊತೆಯಲ್ಲಿ ಸಹಸ್ರಾರು ಋಷಿಗಳು ಬಂದ ವಾರ್ತೆಯನ್ನು ಕೇಳಿ ನಾಗಪುರವಾಸಿಗಳಿಗೆ ವಿಸ್ಮಯವುಂಟಾಯಿತು.
ಮುಹೂರ್ತೋದಿತ ಆದಿತ್ಯೇ ಸರ್ವೇ ಭೀಷ್ಮಪುರೋಗಮಾಃ |
ಸದಾರಾಸ್ತಾಪಸಾನ್ ದ್ರಷ್ಟುಂ ನಿರ್ಯಯುಃ ಪುರವಾಸಿನಃ ॥13॥
ಸೂರ್ಯನು ಉದಯಿಸಿ ಒಂದು ಮುಹೂರ್ತವಾಗುತ್ತಿರಲು ಭೀಷ್ಮ ಮೊದಲಾದವರೆಲ್ಲರೂ, ಪತ್ನಿಯ ಸಹಿತರಾದ ನಗರವಾಸಿಗಳೂ

ತಾಪಸರನ್ನು ನೋಡಲು ಹೊರಗೆ ಬಂದರು.
ಸ್ತ್ರೀಸಂಘಾಃ ಕ್ಷತ್ರಸಂಘಾಶ್ಚ ಯಾನಸಂಘಾನ್ ಸಮಾಶ್ರಿತಾಃ |
ಬ್ರಾಹ್ಮಣೈಃ ಸಹ ನಿರ್ಜಗ್ಮುರ್ಬ್ರಾಹ್ಮಣಾಶ್ಚ ಸಯೋಷಿತಃ ॥14॥
ಸ್ತ್ರೀಯರ ಸಮೂಹವೂ, ಕ್ಷತ್ರಿಯರ ಸಮೂಹವೂ, ಅನೇಕ ಯಾನಗಳನ್ನು ಏರಿ ಬ್ರಾಹ್ಮಣರ ಜೊತೆಯಲ್ಲಿ ಹೊರಗೆ ಬಂದರು. ಬ್ರಾಹ್ಮಣರೂ ಸಹ ತಮ್ಮ ಪತ್ನಿಯರ ಜೊತೆಯಲ್ಲಿ ಹೊರಗೆ ಬಂದರು.
ತಥಾ ವಿಟ್ಛೂದ್ರಸಂಘಾನಾಂ ಮಹಾನ್ ವ್ಯತಿಕರೋಽಭವತ್ |
ನ ಕಶ್ಚಿದಕರೋದೀರ್ಷ್ಯಾಮಭವನ್ ಧರ್ಮಬುದ್ಧಯಃ ॥15॥
ಹಾಗೆಯೇ ವೈಶ್ಯರ ಸಮೂಹವೂ, ಶೂದ್ರರ ಸಮೂಹವೂ ಹೊರಗೆ ಬಂದು ದೊಡ್ಡ ಜಾತ್ರೆಯಾದಂತೆ ಆಯಿತು. ಅವರಲ್ಲಿ ಯಾರೂ ಅಸೂಯೆ ಪಡಲಿಲ್ಲ. ಎಲ್ಲರೂ ಧರ್ಮಬುದ್ಧಿಯುಳ್ಳವರಾಗಿದ್ದರು.
ತಥಾ ಭೀಷ್ಮಃ ಶಾಂತನವಃ ಸೋಮದತ್ತೋಽಥ ಬಾಹ್ಲಿಕಃ |
ಪ್ರಜ್ಞಾಚಕ್ಷುಶ್ಚ ರಾಜರ್ಷಿಃ ಕ್ಷತ್ತಾ ಚ ವಿದುರಃ ಸ್ವಯಮ್ ॥16॥
ಸಾ ಚ ಸತ್ಯವತೀ ದೇವೀ ಕೌಸಲ್ಯಾ ಚ ಯಶಸ್ವಿನೀ |
ರಾಜದಾರೈಃ ಪರಿವೃತಾ ಗಾಂಧಾರೀ ಚಾಪಿ ನಿರ್ಯಯೌ ॥17॥
ಶಂತನುವಿನ ಮಗನಾದ ಭೀಷ್ಮರು, ಸೋಮದತ್ತ ಬಾಹ್ಲಿಕರು, ಪ್ರಜ್ಞಾಚಕ್ಷುವಾದ ಧೃತರಾಷ್ಟ್ರ, ವಿದುರ, ಸತ್ಯವತಿ, ಕೀರ್ತಿವಂತಳಾದ ಅಂಬಿಕೆ, ಮತ್ತು ಬೇರೆ ರಾಜಪತ್ನಿಯರಿಂದ ಕೂಡಿದ ಗಾಂಧಾರಿ ಎಲ್ಲರೂ ಹೊರಗೆ ಬಂದರು.
ಧೃತರಾಷ್ಟ್ರಸ್ಯ ದಾಯಾದಾ ದುರ್ಯೋಧನಪುರೋಗಮಾಃ |
ಭೂಷಿತಾ ಭೂಷಣೈಶ್ಚಿತ್ರೈಃ ಶತಸಂಖ್ಯಾ ವಿನಿರ್ಯಯುಃ ॥18॥
ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನ ಮೊದಲಾದವರು ವಿಚಿತ್ರವಾದ ಭೂಷಣಗಳಿಂದ ಅಲಂಕೃತರಾಗಿ ಶತಸಂಖ್ಯೆಯಲ್ಲಿ ಹೊರಗೆ ಬಂದರು.
ತಾನ್ ಮಹರ್ಷಿಗಣಾನ್ ಸರ್ವಾನ್ ಶಿರೋಭಿರಭಿವಾದ್ಯ ಚ |
ಸ್ವಾಗತಂ ವಚನಂ ಚೋಕ್ತ್ವಾ ಪಾಂಡೋರ್ಭವನಮಾವಿಶನ್ ॥19॥
ಅವರೆಲ್ಲರೂ ಆ ಮಹರ್ಷಿಗಳ ಸಮೂಹಕ್ಕೆ ಶಿರಸಾ ನಮಸ್ಕಾರವನ್ನು ಮಾಡಿ ಸ್ವಾಗತವನ್ನು ಕೋರಿ ಪಾಂಡುವು ಮೊದಲು ವಾಸಮಾಡಿದ ಭವನವನ್ನು ಪ್ರವೇಶಿಸಿದರು.
ಉಪೋಪವಿವಿಶುಃ ಸರ್ವೇ ಕೌರವಸ್ಯ ಪುರೋಹಿತಾಃ |
ತಥೈವ ಶಿರಸಾ ಭೂಮಾವಭಿವಾದ್ಯ ಪ್ರಸಾದ್ಯ ಚ ॥20॥
ಧೃತರಾಷ್ಟ್ರನ ಪುರೋಹಿತರೆಲ್ಲರೂ ಋಷಿಗಣಕ್ಕೆ ಶಿರಸಾ ನಮಸ್ಕಾರವನ್ನು ಮಾಡಿ ಅವರ ಅನುಗ್ರಹವನ್ನು ಪ್ರಾರ್ಥಿಸಿ ಸಮೀಪದಲ್ಲಿ ಭೂಮಿಯ ಮೇಲೆ ಕುಳಿತರು.
ಉಪೋಪವಿವಿಶುಃ ಸರ್ವೇ ಪೌರಜಾನಪದಾ ಅಪಿ |
ತಮಕೂಜಮಿವಾಜ್ಞಾಯ ಜನೌಘಂ ಸರ್ವಶಸ್ತದಾ ॥21॥
ಭೀಷ್ಮೋ ರಾಜ್ಯಂ ಚ ರಾಷ್ಟ್ರಂ ಚ ಮಹರ್ಷಿಭ್ಯೋ ನ್ಯವೇದಯತ್ |
ತೇಷಾಂ ವೃದ್ಧತಮಃ ಕಶ್ಚಿತ್ ಪ್ರತ್ಯುತ್ಥಾಯ ಜಟಾಜಿನೀ |
ಮಹರ್ಷಿಮತಮಾಜ್ಞಾಯ ಮಹರ್ಷಿರಿದಮಬ್ರವೀತ್ ॥22॥
ಪೌರಜಾನಪದರೆಲ್ಲರೂ ಸಹ ಸಮೀಪದಲ್ಲಿ ಕುಳಿತರು. ಆ ಜನಸಾಗರವೆಲ್ಲವೂ ನಿಶ್ಯಬ್ದದಿಂದ ಕುಳಿತಿರುವುದನ್ನು ಗಮನಿಸಿದ ಭೀಷ್ಮರು ಎದ್ದು ನಿಂತು ರಾಜ್ಯವನ್ನು ಮತ್ತು ರಾಷ್ಟ್ರವನ್ನು ಮಹರ್ಷಿಗಳಿಗೆ ನಿವೇದಿಸಿದರು. ಆ ಋಷಿಗಳ ಮಧ್ಯದಲ್ಲಿ ಜಟಾಜಿನಗಳನ್ನು ಧರಿಸಿದ್ದ ಅತ್ಯಂತ ವಯಸ್ಸಾಗಿದ್ದ ಮಹರ್ಷಿಗಳೊಬ್ಬರು ಎದ್ದು ನಿಂತು ಉಳಿದ ಮಹರ್ಷಿಗಳ ಅಭಿಪ್ರಾಯದಂತೆ ಈ ಮಾತುಗಳನ್ನು ಆಡಿದರು.
ಮಹರ್ಷಿಃ
ಯಃ ಸ ಕೌರವ್ಯದಾಯಾದಃ ಪಾಂಡುರ್ನಾಮ ನರಾಧಿಪಃ |
ಹಿತ್ವಾ ರಾಷ್ಟ್ರಂ ಧನಂ ಸರ್ವಂ ಶತಶೃಂಗಮಿತೋ ಗತಃ ॥23॥
ಕೌರವ ವಂಶಧರನಾದ ಪಾಂಡುರಾಜನು ತನ್ನ ರಾಷ್ಟ್ರವನ್ನೂ ಮತ್ತು ಸರ್ವಧನವನ್ನೂ ಪರಿತ್ಯಾಗ ಮಾಡಿ ಇಲ್ಲಿಂದ ಶತಶೃಂಗಪರ್ವತಕ್ಕೆ ಬಂದನು.
ಕಾಮಭೋಗಾನ್ ಪರಿತ್ಯಜ್ಯ ತಪಸ್ವೀ ಸಂಬಭೂವ ಹ |
ಸ ಯಥೋಕ್ತಂ ತಪಸ್ತೇಪೇ ಪತ್ರಮೂಲಫಲಾಶನಃ ॥24॥
ಕಾಮಭೋಗಗಳನ್ನು ತೊರೆದು ತಪಸ್ವಿಯಾಗಿ ಅವನು ಎಲೆಗಳನ್ನು, ಗೆಡ್ಡೆಗೆಣಸುಗಳನ್ನು ಹಣ್ಣುಗಳನ್ನು ಆಹಾರವಾಗಿ ಸೇವಿಸಿ ಶಾಸ್ತ್ರೋಕ್ತ ವಿಧಾನದಿಂದ ತಪಸ್ಸನ್ನು ಮಾಡಿದನು.
ಪತ್ನೀಭ್ಯಾಂ ಸಹ ಧರ್ಮಾತ್ಮಾ ಕಂಚಿತ್ ಕಾಲಮತಂದ್ರಿತಃ |
ತೇನ ವೃತ್ತಸಮಾಚಾರೈಃ ತಪಸಾ ಚ ತಪಸ್ವಿನಃ |
ತೋಷಿತಾಸ್ತಾಪಸಾಸ್ತತ್ರ ಶತಶೃಂಗನಿವಾಸಿನಃ ॥25॥
ಆ ಧರ್ಮಾತ್ಮನು ತನ್ನ ಪತ್ನಿಯರ ಜೊತೆಯಲ್ಲಿ ಸ್ವಲ್ಪಕಾಲ ಜಾಗರೂಕನಾಗಿ ತಪಸ್ಸು ಮಾಡಿದನು. ಅವನು ತನ್ನ ನಡತೆಯಿಂದ ಶ್ರೇಷ್ಠವಾದ ಆಚಾರಗಳಿಂದ ಮತ್ತು ತಪಸ್ಸಿನಿಂದ ಶತಶೃಂಗನಿವಾಸಿಗಳಾದ ಎಲ್ಲಾ ತಪಸ್ವಿಗಳನ್ನೂ ಸಂತೋಷಪಡಿಸಿದನು.

ಸ್ವರ್ಗಲೋಕಂ ಗಂತುಕಾಮಂ ತಪಸಾ ವಿನಿವಾರ್ಯ ತಮ್ |
ಉದ್ಯಂತಂ ಸಹ ಪತ್ನೀಭ್ಯಾಂ ವಿಪ್ರಾ ವಚನಮಬ್ರುವನ್ ॥26॥
ತಪಸ್ಸನ್ನು ಮಾಡಿ ಪತ್ನಿಯರ ಜೊತೆಯಲ್ಲಿ ಸ್ವರ್ಗಲೋಕಕ್ಕೆ ಹೋಗಲು ಉದ್ಯುಕ್ತನಾದ ಅವನನ್ನು ಕುರಿತು ಬ್ರಾಹ್ಮಣರೆಲ್ಲರೂ ಹೇಳಿದರು.
ಅನಪತ್ಯಸ್ಯ ರಾಜೇಂದ್ರ ಪುಣ್ಯಲೋಕಾ ನ ಸಂತಿ ತೇ ತಸ್ಮಾದ್ಧರ್ಮಂ ಚ ವಾಯುಂ ಚ ಮಹೇಂದ್ರಂ ಚ ತಥಾಽಶ್ವಿನೌ |
ಆರಾಧಯಸ್ವ ರಾಜೇಂದ್ರ ಪತ್ನೀಭ್ಯಾಂ ಸಹ ದೇವತಾಃ ॥27॥
ರಾಜೇಂದ್ರನೇ, ನೀನು ಮಕ್ಕಳನ್ನು ಪಡೆಯದಿದ್ದರೆ, ನಿನಗೆ ಸದ್ಗತಿಯಾಗುವುದಿಲ್ಲ. ಆದ್ದರಿಂದ ನಿನ್ನ ಪತ್ನಿಯರ ಜೊತೆಯಲ್ಲಿ ಯಮ, ವಾಯು, ಇಂದ್ರ ಮತ್ತು ಅಶ್ವಿನೀದೇವತೆಗಳನ್ನು ಆರಾಧಿಸು.
ತೃಪ್ತಾಃ ಪುತ್ರಾನ್ ಪ್ರಯಚ್ಛಂತಿ ಋಣಮುಕ್ತೋ ಭವಿಷ್ಯಸಿ |
ತಪಸಾ ದಿವ್ಯಚಕ್ಷುಷ್ಟ್ವಾತ್ ಪಶ್ಯಾಮಸ್ತೇ ತಥಾ ಸುತಾನ್ ॥28॥
ಪ್ರಸನ್ನರಾದ ದೇವತೆಗಳು ನಿನಗೆ ಪುತ್ರರನ್ನು ಕರುಣಿಸುತ್ತಾರೆ. ಆಗ ನೀನು ಋಣಮುಕ್ತನಾಗುವಿ. ನಮ್ಮ ತಪಸ್ಸಿನಿಂದ ಉಂಟಾದ ದಿವ್ಯದೃಷ್ಟಿಯಿಂದ ನಿನ್ನ ಅಂತಹ ಪುತ್ರರನ್ನು ನಾವು ನೋಡುತ್ತಿದ್ದೇವೆ.
ಅಸ್ಮಾಕಂ ವಚನಂ ಶ್ರುತ್ವಾ ದೇವಾನಾರಾಧಯತ್ ತದಾ |
ಬ್ರಹ್ಮಚರ್ಯವ್ರತಸ್ಥಸ್ಯ ತಸ್ಯ ದಿವ್ಯೇನ ಹೇತುನಾ |
ತಸ್ಮಾದ್ ಧರ್ಮಾದಯಂ ಪುತ್ರಃ ಕುಂತ್ಯಾಂ ಜಾತೋ ಯುಧಿಷ್ಠಿರಃ ॥
ನಮ್ಮ ಮಾತುಗಳನ್ನು ಕೇಳಿ ಬ್ರಹ್ಮಚರ್ಯವ್ರತಸ್ಥನಾದ ಪಾಂಡುವು ದೇವತೆಗಳನ್ನು ಆರಾಧಿಸಿದನು. ಅವನಿಗೆ ದಿವ್ಯವಾದ ನಿಮಿತ್ತದಿಂದ ಯಮನಿಂದ ಕುಂತಿಯಲ್ಲಿ ಈ ಯುಧಿಷ್ಠಿರನೆಂಬ ಪುತ್ರನು ಜನಿಸಿದನು.
ತಥೇಮಂ ಬಲಿನಾಂ ಶ್ರೇಷ್ಠಂ ತಸ್ಯ ರಾಜ್ಞೋ ಮಹಾತ್ಮನಃ |
ಮಾತರಿಶ್ವಾ ದದೌ ಪುತ್ರಂ ಭೀಮಂ ಸತ್ತ್ವವತಾಂ ವರಮ್ |
ಪುರುಹೂತಾದಯಂ ಜಜ್ಞೇ ಕುಂತ್ಯಾಮೇವ ಧನಂಜಯಃ ॥30॥
ಹಾಗೆಯೇ, ವಾಯುದೇವನು ಮಹಾತ್ಮನಾದ ರಾಜನಿಗೆ ಶ್ರೇಷ್ಠವಾದ ಬಲವುಳ್ಳ ಮತ್ತು ಪ್ರಾಣಾಧಿಕನಾದ ಭೀಮನೆಂಬ ಈ ಪುತ್ರನನ್ನು ಕೊಟ್ಟನು. ಇಂದ್ರನಿಂದ ಕುಂತಿಯಲ್ಲಿ ಧನಂಜಯನು ಜನಿಸಿದನು.
ಅಸ್ಮಿನ್ ಜಾತೇ ಮಹೇಷ್ವಾಸೇ ದೇವೈರಿಂದ್ರಸ್ತಥಾಽಬ್ರವೀತ್ |
ಮತ್ಪ್ರಸಾದಾದಯಂ ಜಾತಃ ಕುಂತಿ ಸತ್ಯಪರಾಕ್ರಮಃ ॥31॥
ಮಹಾಧನುರ್ವಿದ್ಯೆಯನ್ನು ಬಲ್ಲ ಅರ್ಜುನನು ಜನಿಸುತ್ತಿರಲು ದೇವತೆಗಳ ಜೊತೆಯಲ್ಲಿದ್ದ ಇಂದ್ರನು ಹೀಗೆ ಹೇಳಿದನು. ಕುಂತಿ, ನನ್ನ ಅನುಗ್ರಹದಿಂದ ಸತ್ಯಪರಾಕ್ರಮನಾದ ಈ ಪುತ್ರನು ಜನಿಸಿದ್ದಾನೆ.
ಅಜೇಯೋ ಯುಧಿ ಜೇತಾಽರೀನ್ ದೇವತಾದೀನ್ ಸ ಸಂಶಯಃ |
ಯಸ್ಯ ಕೀರ್ತಿರ್ಮಹೇಷ್ವಾಸಾನ್ ಸರ್ವಾನ್ ನೋಽಭಿಭವಿಷ್ಯತಿ ॥32॥
ಅವನು ಯುದ್ಧದಲ್ಲಿ ಯಾರಿಗೂ ಸೋಲುವುದಿಲ್ಲ. ಅವನು ಶತ್ರುಗಳನ್ನೂ ಮತ್ತು ದೇವತೆಗಳನ್ನೂ ನಿಃಸ್ಸಂಶಯವಾಗಿ ಗೆಲ್ಲುವನು. ಅವನ ಕೀರ್ತಿಯು ಎಲ್ಲಾ ಧನುರ್ಧಾರಿಗಳ ಕೀರ್ತಿಯನ್ನೂ ಪರಾಭವ- ಗೊಳಿಸುವುದು.
ಯುಧಿಷ್ಠಿರೋ ರಾಜಸೂಯಂ ಭ್ರಾತೃವೀರ್ಯಾದವಾಪ್ಸ್ಯತಿ |
ಏಷ ಜೇತಾ ಮನುಷ್ಯಾಂಶ್ಚ ಸರ್ವಾನ್ ಗಂಧರ್ವರಾಕ್ಷಸಾನ್ ॥33॥
ತಮ್ಮನಾದ ಇವನ ಸಾಮರ್ಥ್ಯದಿಂದ ಯುಧಿಷ್ಠಿರನು ರಾಜಸೂಯಯಾಗವನ್ನು ಮಾಡುವನು. ಇವನು ಎಲ್ಲಾ ಮನುಷ್ಯರನ್ನೂ ಮತ್ತು ಗಂಧರ್ವರಾಕ್ಷಸರನ್ನೂ ಜಯಿಸುವನು.
ಏಷ ದುರ್ಯೋಧನಂ ಕೀರ್ತ್ಯಾ ಭಾರತಾಂಶ್ಚ ವಿಜೇಷ್ಯತಿ |
ವೀರಸ್ಯೈತಸ್ಯ ವಿಕ್ರಾಂತ್ಯೈರ್ಧರ್ಮಪುತ್ರೋ ಯುಧಿಷ್ಠಿರಃ ॥34॥
ಯಕ್ಷ್ಯತೇ ರಾಜಸೂಯಾದ್ಯೈರ್ಧರ್ಮ ಏವ ಪರಃ ಸದಾ |
ಇಂದ್ರಸ್ಯ ವಚನಂ ಶ್ರುತ್ವಾ ಪಾಂಡುಃ ಪ್ರೀತಿಮವಾಪ ಸಃ ॥35॥
ಇವನು ತನ್ನ ಕೀರ್ತಿಯಿಂದ ದುರ್ಯೋಧನನನ್ನೂ ಮತ್ತು ಉಳಿದ ಭರತವಂಶದ ರಾಜರುಗಳನ್ನೂ ಗೆಲ್ಲುವನು. ಈ ವೀರನ ಪರಾಕ್ರಮದ ನಿಮಿತ್ತದಿಂದ ಧರ್ಮಪುತ್ರನಾದ ಯುಧಿಷ್ಠಿರನು ಧರ್ಮದಲ್ಲಿಯೇ ತತ್ಪರನಾಗಿದ್ದು ರಾಜಸೂಯಾದಿ ಅನೇಕ ಯಾಗಗಳನ್ನು ಮಾಡುವನು. ಇಂದ್ರನ ಈ ಮಾತುಗಳನ್ನು ಕೇಳಿ, ಪಾಂಡುವು ಸಂತೋಷಗೊಂಡನು.
ದ್ವಂದ್ವೌ ಮಾದ್ರೀ ಮಹೇಷ್ವಾಸಾವಸೂತ ಕುರುಸತ್ತಮೌ |
ಅಶ್ವಿಭ್ಯಾಂ ಮನುಜವ್ಯಾಘ್ರಾವಿಮೌ ತಾವಪಿ ತಿಷ್ಠತಃ ॥36॥
ಮಾದ್ರಿಯು ಅಶ್ವಿನೀದೇವತೆಗಳ ಅನುಗ್ರಹದಿಂದ ಧನುರ್ಧಾರಿಗಳೂ, ಕುರುಶ್ರೇಷ್ಠರೂ ಆದ ಅವಳಿಮಕ್ಕಳನ್ನು ಪಡೆದಳು. ಆ ಇಬ್ಬರು ಮನುಷ್ಯಶ್ರೇಷ್ಠರೂ ಸಹ ಇಲ್ಲಿ ನಿಮ್ಮ ಎದುರಿಗೆ ಇದ್ದಾರೆ.
ನಕುಲಃ ಸಹದೇವಶ್ಚ ತಾವಪ್ಯಮಿತತೇಜಸೌ |
ಪಾಂಡವೌ ನರಶಾರ್ದೂಲಾವಿಮಾವಪ್ಯಪರಾಜಿತೌ ॥37॥
ನಕುಲಸಹದೇವರಾದ ಅವರಿಬ್ಬರೂ ಸಹ, ಅಮಿತ ಪರಾಕ್ರಮಿಗಳು, ಯುದ್ಧದಲ್ಲಿ ಪರಾಜಯವನ್ನು ಹೊಂದದವರು ಮತ್ತು ಪಾಂಡುವಿನ ಮಕ್ಕಳಾದ ನರಶಾರ್ದೂಲರು.
ಚರತಾ ಧರ್ಮನಿತ್ಯೇನ ವನವಾಸಂ ಯಶಸ್ವಿನಾ |

ಏಷ ಪೈತಾಮಹೋ ವಂಶಃ ಪಾಂಡುನಾ ಪುನರುದ್ಧೃತಃ ॥38॥
ಕೀರ್ತಿವಂತನಾದ ಪಾಂಡುವು ವನದಲ್ಲಿ ವಾಸವನ್ನು ಮಾಡಿ ನಿತ್ಯವೂ ಧರ್ಮಾನುಷ್ಠಾನ ಮಾಡಿ ಪಿತೃಪಿತಾಮಹರ ವಂಶವನ್ನು ಪುನಃ ಉದ್ಧಾರ ಮಾಡಿದನು.
ಪುತ್ರಾಣಾಂ ಜನ್ಮ ವೃದ್ಧಿಂ ಚ ವೈದಿಕಾಧ್ಯಯನಾನಿ ಚ ।
ಪಶ್ಯತಃ ಸತತಂ ಪಾಂಡೋಃ ಶಶ್ವತ್ ಪ್ರೀತಿರವರ್ಧತ ॥39॥
ಮಕ್ಕಳ ಜನನವನ್ನೂ, ಅಭಿವೃದ್ಧಿಯನ್ನೂ, ವೇದಾಧ್ಯಯನಾದಿಗಳನ್ನೂ ಯಾವಾಗಲೂ ನೋಡುತ್ತಾ ಪಾಂಡುವು ಬಹಳ ಸಂತೋಷಪಟ್ಟನು.
ವರ್ತಮಾನಃ ಸತಾಂ ಮಾರ್ಗೇ ಪುತ್ರಲಾಭಮವಾಪ್ಯ ಚ ।
ಪಿತೃಲೋಕಂ ಗತಃ ಪಾಂಡುರಿತಃ ಸಪ್ತದಶೇಽಹನಿ ॥40॥
ಸಜ್ಜನರ ಮಾರ್ಗದಲ್ಲಿ ನಡೆಯುತ್ತಿದ್ದ ಅವನು ಪುತ್ರಲಾಭವನ್ನು ಪಡೆದು ಇವತ್ತಿಗೆ ಹದಿನೇಳು ದಿವಸಗಳ ಹಿಂದೆ ಪಿತೃಲೋಕವನ್ನು ಸೇರಿದನು.
ತಂ ಚಿತಾಗತಮಾಸಾದ್ಯ ವೈಶ್ವಾನರಮುಖೇ ಹುತಮ್ ।
ಪ್ರವಿಷ್ಟಾ ಪಾವಕಂ ಮಾದ್ರೀ ಹಿತ್ವಾ ಜೀವಿತಮಾತ್ಮನಃ ॥41॥
ಸಾ ಗತಾ ಸಹ ತೇನೈವ ಪತಿಲೋಕಮನುವ್ರತಾ ।
ತಸ್ಯಾಸ್ತಸ್ಯ ಚ ಯತ್ ಕಾರ್ಯಂ ಕ್ರಿಯತಾಂ ತದನಂತರಮ್ ॥42॥
ಚಿತೆಯಲ್ಲಿಟ್ಟು ಅಗ್ನಿಮುಖದಲ್ಲಿ ಹೋಮ ಮಾಡಿದ ಅವನ ಶರೀರದ ಜೊತೆಯಲ್ಲಿ ಮಾದ್ರಿಯೂ ಸಹ ತನ್ನ ಜೀವನವನ್ನು ತೊರೆದು ಅನುವ್ರತಳಾದ ಅವಳು ಪತಿಲೋಕವನ್ನು ಸೇರಿದಳು. ಪಾಂಡುವಿಗೂ ಮತ್ತು ಮಾದ್ರಿಗೂ ಮುಂದೆ ಮಾಡಬೇಕಾದ ಕಾರ್ಯಗಳನ್ನು ಮಾಡಿ.
ಪೃಥಾಂ ಚ ಶರಣಂ ಪ್ರಾಪ್ತಾಂ ಪಾಂಡವಾಂಶ್ಚ ಯಶಸ್ವಿನಃ ।
ಯಥಾವದನುಗೃಹ್ಣಂತಾಂ ಧರ್ಮೋ ಹ್ಯೇಷ ಸನಾತನಃ ॥43॥
ಶರಣಾಗತಳಾದ ಕುಂತಿಯನ್ನೂ ಮತ್ತು ಕೀರ್ತಿವಂತರಾದ ಪಾಂಡವರನ್ನೂ ನಿರ್ಮಲವಾದ ಹೃದಯದಿಂದ ಅನುಗ್ರಹಿಸಿ. ಇದು ಸನಾತನವಾದ ಧರ್ಮ.
ಇಮೇ ತಯೋಃ ಶರೀರೇ ದ್ವೇ ಸುತಾಶ್ಚೇಮೇ ತಯೋರ್ವರಾಃ ।
ಕ್ರಿಯಾಭಿರನುಗೃಹ್ಣಂತಾಂ ಸಹ ಮಾತ್ರಾ ಪರಂತಪಾಃ ॥44॥
ಇವೆರಡು ಅವರಿಬ್ಬರ ಅಸ್ಥಿರೂಪವಾದ ಶರೀರಗಳು. ಈ ಐದು ಜನರೂ ಅವನ ಶ್ರೇಷ್ಠವಾದ ಮಕ್ಕಳು. ಪರಂತಪರಾದ ಕೌರವರೇ, ಉಚಿತವಾದ ಕ್ರಿಯೆಗಳನ್ನು ಮಾಡಿ ತಾಯಿಯಾದ ಕುಂತಿಯನ್ನು ಮತ್ತು ಪಾಂಡವರನ್ನು ಅನುಗ್ರಹಿಸಿ.
ಪ್ರೇತಕರ್ಮಣಿ ನಿರ್ವೃತ್ತೇ ಪಿತೃಮೇಧೇ ಚ ಪಾಂಡವಾಃ ।
ಲಭಂತಾಂ ಸರ್ವದಾಯಾದ್ಯಂ ಪಾಂಡೋಃ ಕುರುಕುಲೋದ್ವಹಾಃ ॥45॥
ಪ್ರೇತಕಾರ್ಯಗಳನ್ನು ಮುಗಿಸಿ ಪಿತೃಮೇಧವನ್ನು ಮಾಡಿದ ಮೇಲೆ, ಕುರುಕುಲೋದ್ವಹರಾದ ಪಾಂಡವರು ಪಾಂಡುವಿನ ಎಲ್ಲಾ ಆಸ್ತಿಯನ್ನೂ ಪಡೆಯಲಿ.
ವೈಶಂಪಾಯನಃ
ಏವಮುಕತ್ವ ಕುರೂನ್ ಸರ್ವಾನ್ ಕೌರವಾಣಾಂ ಚ ಪಶ್ಯತಾಮ್ ।
ಕ್ಷಣೇನಾಂತರ್ಹಿತಾಃ ಸರ್ವೇ ಚಾರಣಾ ಗುಹ್ಯಕೈಃ ಸಹ ॥46॥
ಹೀಗೆ ಎಲ್ಲಾ ಕುರುಗಳನ್ನೂ ಉದ್ದೇಶಿಸಿ ಮಾತನಾಡಿ ಕೌರವರು ನೋಡುತ್ತಿರುವಂತೆಯೇ ಒಂದು ಕ್ಷಣದಲ್ಲಿ ಬಂದಿದ್ದ ಎಲ್ಲಾ ಚಾರಣರೂ ಮತ್ತು ಗುಹ್ಯಕರೂ ಅಂತರ್ಧಾನವನ್ನು ಹೊಂದಿದರು.
ಋಷಿಸಿದ್ಧಗಣಾನ್ ದೃಷ್ಟ್ವಾ ವಿಸ್ಮಯಂ ತೇ ಪರಂ ಯಯುಃ ।
ಗಂಧರ್ವನಗರಾಕಾರಾಂಸ್ತತ್ರೈವಾಂತರ್ಹಿತಾಂಸ್ತದಾ ।
ಕೌರವಾಃ ಸಹಸೋತ್ಪತ್ಯ ಸಾಧುಸಾಧ್ವಿತಿ ವಿಸ್ಮಿತಾಃ ॥47॥
ಕೌರವರು ಬಂದಿದ್ದ ಋಷಿಸಿದ್ಧಸಮೂಹವು ಗಂಧರ್ವನಗರದಂತೆ ಒಂದೇ ಕ್ಷಣದಲ್ಲಿ ಅಂತರ್ಧಾನವನ್ನು ಹೊಂದಿದುದನ್ನು ನೋಡಿ ವಿಸ್ಮಯಚಕಿತರಾಗಿ ಎದ್ದು ನಿಂತು ಎಲ್ಲರೂ `ಸಾಧು ಸಾಧು' ಎಂದು ಉಚ್ಚಸ್ವರದಲ್ಲಿ ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ಮೂರನೆಯ ಅಧ್ಯಾಯ
(ಪಾಂಡು ಮತ್ತು ಮಾದ್ರಿಯರಿಗೆ ರಾಜೋಚಿತ ಉತ್ತರಕ್ರಿಯಾವಿಧಿ.)
ವೈಶಂಪಾಯನಃ
ಆನೀಯ ಸುಹೃದಃ ಸರ್ವಾನ್ ಕ್ಷತ್ತಾರಮಿದಮಬ್ರವೀತ್ ।
ಧೃತರಾಷ್ಟ್ರನು ಎಲ್ಲಾ ಬಂಧುಗಳನ್ನೂ ಕರೆದು ವಿದುರನನ್ನು ಕುರಿತು ಹೀಗೆ ಮಾತನಾಡಿದನು.
ಧೃತರಾಷ್ಟ್ರಃ

ಶ್ರಾದ್ಧಂ ದಾಸ್ಯಾಮಿ ಪಾಂಡೋಸ್ತು ಸ್ವಪ್ನೇ ದರ್ಶಿತವಾನ್ ಹಿ ಮಾಮ್ |
ಅಸ್ಥೀನಿ ತೀರೇ ಗಂಗಾಯಾ ಗಾಂಗೇನಾಪ್ಯುದಕೇನ ಚ |
ಪ್ಲಾವಯಿತ್ವಾ ಮಹಾನದ್ಯಾಂ ಜಾಹ್ನವ್ಯಾಂ ವೈ ಮಹಾಮತೇ ॥2॥
ತ್ರಿಲೋಕಪಾವನೀಂ ಪುಣ್ಯಾಂ ಗತ್ವಾ ತ್ವಂ ಸ್ವರ್ಗಗಾಮಿನೀಮ್ |
ಪಾಂಡೋರ್ವಿದುರ ಸರ್ವಾಣಿ ಪ್ರೇತಕಾರ್ಯಾಣಿ ಕಾರಯ ॥3॥
ನಾನು ಪಾಂಡುವಿಗೆ ಶ್ರಾದ್ಧವನ್ನು ಮಾಡುತ್ತೇನೆ. ಪಾಂಡುವು ನನ್ನ ಸ್ವಪ್ನದಲ್ಲಿ ಬಂದು ಶ್ರಾದ್ಧವನ್ನು ಮಾಡಬೇಕೆಂದು ತಿಳಿಸಿದ್ದಾನೆ. ಮಹಾಮತಿಯಾದ ವಿದುರನೇ ಅಸ್ಥಿಗಳನ್ನು ಗಂಗಾತೀರಕ್ಕೆ ತೆಗೆದುಕೊಂಡು ಹೋಗಿ ಮಹಾನದಿಯಾದ ಗಂಗೆಯ ಜಲದಿಂದ ತೊಳೆಯಬೇಕು. ವಿದುರನೇ ತ್ರಿಲೋಕಪಾವನೆಯಾದ, ಸ್ವರ್ಗಗಾಮಿನಿಯಾದ, ಪುಣ್ಯಪ್ರದವಾದ ಗಂಗಾನದಿಯ ಸಮೀಪಕ್ಕೆ ಹೋಗಿ ಎಲ್ಲಾ ಪ್ರೇತಕಾರ್ಯಗಳನ್ನೂ ಮಾಡಿಸು.
ರಾಜವದ್ ರಾಜಸಿಂಹಸ್ಯ ಮಾದ್ರ್ಯಾಶ್ಚೈವ ವಿಶೇಷತಃ |
ಪಶೂನ್ ವಾಸಾಂಸಿ ರತ್ನಾನಿ ಧನಾನಿ ವಿವಿಧಾನಿ ಚ ॥4॥
ಪಾಂಡೋಃ ಪ್ರಯಚ್ಛ ಮಾದ್ರ್ಯಾಶ್ಚ ಯೇಭ್ಯೋ ಯಾವಚ್ಚ ವಾಂಛಿತಮ್|
ಯಥಾ ಚ ಕುಂತೀ ಸತ್ಕಾರಂ ಕುರ್ಯಾನ್ಮಾದ್ರ್ಯಾಸ್ತಥಾ ಕುರು ॥5॥
ರಾಜಸಿಂಹನಾದ ಪಾಂಡುವಿಗೂ ಮತ್ತು ಮಾದ್ರಿಗೂ ವಿಶೇಷವಾಗಿ ರಾಜೋಚಿತವಾದ ಸಂಸ್ಕಾರಗಳನ್ನು ಮಾಡಿಸು. ಪಾಂಡು ಮತ್ತು ಮಾದ್ರಿಯರ ಸದ್ಗತಿಯನ್ನು ಉದ್ದೇಶಿಸಿ, ಯಾರು ಎಷ್ಟು ಬಯಸುತ್ತಾರೋ ಅಷ್ಟು ಗೋವುಗಳನ್ನೂ, ವಸ್ತ್ರಗಳನ್ನೂ, ಅನೇಕ ರೀತಿಯ ಧನವನ್ನೂ ಕೊಡು.
ಯಥಾ ನ ವಾಯುರ್ನಾದಿತ್ಯಃ ಪಶ್ಯೇತ್ ಕುಂತೀಂ ಸುಸಂವೃತಾಮ್ |
ನ ಶೋಚ್ಯಃ ಪಾಂಡುರಸ್ಮಾಕಂ ಪ್ರಶಸ್ಯಃ ಸ ನರಾಧಿಪಃ |
ಯಸ್ಯ ಪಂಚ ಸುತಾ ವೀರಾ ಜಾತಾಃ ಸುರಸುತೋಪಮಾಃ ॥6॥
ವಾಯುವಾಗಲೀ, ಸೂರ್ಯನಾಗಲೀ ತನ್ನನ್ನು ನೋಡದಂತೆ ಸುಸಂವೃತಳಾದ ಕುಂತಿಯು ಮಾದ್ರಿಗೆ ಸತ್ಕಾರ ಮಾಡುವಂತೆ ಎಲ್ಲವನ್ನೂ ಮಾಡು. ನಾವು ಪಾಂಡುವನ್ನು ಕುರಿತು ಶೋಕಪಡಬೇಕಾಗಿಲ್ಲ. ದೇವಕುಮಾರರಂತಿರುವ ಐದು ಮಕ್ಕಳನ್ನು ಪಡೆದ ಅವನು ಪ್ರಶಂಸನೀಯನಾದ ರಾಜ.
ವೈಶಂಪಾಯನಃ
ವಿದುರಃ ಸ ತಥೇತ್ಯುಕ್ತ್ವಾ ಭೀಷ್ಮೇಣ ಸಹ ಭಾರತ |
ಪಾಂಡೋರಸ್ಥೀನಿ ಸಂಸ್ಕಾರ್ಯ ದೇಶೇ ಪರಮಸಮ್ಮತೇ |
ಬ್ರಾಹ್ಮಣೈಃ ಸಹಿತಾಃ ಪೌರಾ ಗಂಗಾಂ ಜಗ್ಮುಃ ಸಹಸ್ರಶಃ ॥7॥
ಎಲೈ ಭಾರತನೇ, ವಿದುರನು `ಹಾಗೆಯೇ ಆಗಲಿ` ಎಂದು ಹೇಳಿ ಭೀಷ್ಮರ ಜೊತೆಯಲ್ಲಿ ಪಾಂಡುವಿನ ಅಸ್ಥಿಯನ್ನು ತೆಗೆದುಕೊಂಡು ಎಲ್ಲರಿಗೂ ಪರಮಸಮ್ಮತವಾದ ದೇಶದಲ್ಲಿ ಬ್ರಾಹ್ಮಣರಿಂದಲೂ, ಸಹಸ್ರ ಸಂಖ್ಯೆಯಲ್ಲಿ ಬಂದ ಪೌರರಿಂದಲೂ ಒಡಗೂಡಿ ಗಂಗಾನದಿಯ ಸಮೀಪಕ್ಕೆ ಬಂದನು.
ತತಸ್ತು ನಗರಾತ್ ತೂರ್ಣಮಾಜ್ಯಹೇಮಪುರಸ್ಕೃತಾಃ |
ನಿರ್ಹೃತಾಃ ಪಾವಕಾ ದೀಪ್ತಾಃ ಪಾಂಡೋ ರಾಜನ್ ಪುರೋಹಿತೈಃ |
ಅಥೈತಮಾರ್ತವೈರ್ಗಂಧೈರ್ಮಾಲ್ಯೈಶ್ಚ ವಿವಿಧೈರ್ವರೈಃ ॥8॥
ಅನಂತರ, ಎಲೈ ರಾಜನೇ, ಪುರೋಹಿತರು ಪಾಂಡುವಿನ ಸಲುವಾಗಿ ಆಜ್ಯಹೇಮಪುರಸ್ಕೃತವಾದ ಅಗ್ನಿಯನ್ನು ಪ್ರಜ್ವಲಿಸಿದರು.
ಶಿಬಿಕಾಸ್ಥಮಲಂಚಕ್ರುರ್ವಸ್ತ್ರೈರಾಚ್ಛಾದ್ಯ ಸರ್ವಶಃ |
ತಂ ತಥಾ ಶೋಭಿತಂ ಮಾಲ್ಯೈರ್ವಿವಿಧೈಶ್ಚ ಮಹಾಧನೈಃ ॥9॥
ಅನಂತರ ಪಾಂಡುವಿನ ಅಸ್ಥಿಯ ಜೊತೆಯಲ್ಲಿದ್ದ ಅವನ ಸುವರ್ಣ ಪ್ರತಿಮೆಯನ್ನು ಶಿಬಿಕೆಯಲ್ಲಿಟ್ಟು ಅನೇಕ ವಸ್ತ್ರಗಳಿಂದ ಅಲಂಕರಿಸಿ ಶ್ರೇಷ್ಠವಾದ ಆಯಾ ಋತುವಿನಲ್ಲಿ ದೊರಕುವ ಸುಂಗಧಯುಕ್ತಮಾಲೆಗಳಿಂದಲೂ ಅಲಂಕರಿಸಿದರು.
ಅಮಾತ್ಯಾ ಜ್ಞಾತಯಶ್ಚೈವ ಸುಹೃದಶ್ಚೋಪತಸ್ಥಿರೇ |
ನೃಸಿಂಹಂ ನರಯುಕ್ತೇನ ಪರಮಾಲಂಕೃತೇನ ತಮ್ ॥10॥
ವಿವಿಧವಾದ ಮಾಲೆಗಳಿಂದ ಮತ್ತು ಮುತ್ತುರತ್ನಗಳಿಂದ ಶೋಭಿತವಾದ ಪಾಂಡುವಿನ (ಪ್ರತಿಮೆಯ) ಸುತ್ತಲೂ ಅಮಾತ್ಯರು, ಬಂಧುಗಳು ಮತ್ತು ಸುಹೃದರು ನೆರೆದರು.
ಅವಹನ್ ಯಾನಮುಖ್ಯೇನ ಸಹ ಮಾದ್ರ್ಯಾ ಸುಸಂಭೃತಮ್ |
ಪಾಂಡರೇಣಾತಪತ್ರೇಣ ಚಾಮರವ್ಯಜನೇನ ಚ ॥11॥
ಆ ನರಸಿಂಹನನ್ನು ಮಾದ್ರಿಯ ಜೊತೆಯಲ್ಲಿ (ಮಾದ್ರಿಯ ಸುವರ್ಣ ಪ್ರತಿಮೆಯ ಜೊತೆಯಲ್ಲಿ) ಅಲಂಕೃತವಾದ, ಶ್ರೇಷ್ಠವಾದ ನರವಾಹನದಲ್ಲಿ ಕರೆದುಕೊಂಡು ಹೋದರು.
ಸರ್ವವಾದಿತ್ರನಾದೈಶ್ಚ ಸಮಲಂಚಕ್ರಿರೇ ತತಃ ॥12॥
ಶ್ವೇತಚ್ಛತ್ರಗಳಿಂದಲೂ, ಚಾಮರವ್ಯಜನಗಳಿಂದಲೂ, ಎಲ್ಲಾ ವಾದಿತ್ರನಾದಗಳಿಂದಲೂ, ಶೋಭೆ ಉಂಟಾಗುವಂತೆ ಮಾಡಿದರು.
ತತಃ ಸರ್ವಾಣಿ ರತ್ನಾನಿ ಬಹೂನಿ ಶತಶೋ ನರಾಃ |
ಪ್ರದದುಃ ಕಾಂಕ್ಷಮಾಣೇಭ್ಯಃ ಪಾಂಡೋಸ್ತತ್ರೌರ್ಧ್ವದೈಹಿಕೇ ॥13॥
ಪಾಂಡುವಿನ ಔರ್ಧ್ವದೈಹಿಕ ಕ್ರಿಯೆಯ ಸಂದರ್ಭದಲ್ಲಿ ಪೌರಜಾನಪದರು ಬಯಸಿದವರಿಗೆ ನೂರರ ಸಂಖ್ಯೆಯಲ್ಲಿ ರತ್ನಗಳನ್ನು ಮತ್ತು

ಧನವನ್ನೂ ಕೊಟ್ಟರು.
ಅಚ್ಛಿದ್ರಾಣಿ ಚ ಶುಭ್ರಾಣಿ ಪಾಂಡರಾಣಿ ಬಹೂನಿ ಚ |
ಆಜಹ್ರುಃ ಕೌರವಸ್ಯಾರ್ಥೇ ವಾಸಾಂಸಿ ರುಚಿರಾಣಿ ಚ ॥14॥
ಪಾಂಡುವನ್ನು ಅಲಂಕಾರ ಮಾಡುವ ಸಲುವಾಗಿ ಹರಿಯದ ಶುಭ್ರವಾದ ಮನೋಹರವಾದ ಅನೇಕ ಶ್ವೇತವಸ್ತ್ರಗಳನ್ನು ಪೌರರು ತಂದರು.
ಯಾಜಕೈಃ ಶುಕ್ಲವಾಸೋಭಿರ್ಹೂಯಮಾನಾ ಹುತಾಶನಾಃ |
ಅಗಚ್ಛನ್ನಗ್ರತಸ್ತಸ್ಯ ದೀಪ್ಯಮಾನಾಃ ಸ್ವಲಂಕೃತಾಃ ॥15॥
ಶುಕ್ಲವಸ್ತ್ರವನ್ನು ಧರಿಸಿದ ಯಾಜಕರು ಕೈಯಲ್ಲಿ ಹಿಡಿದಿರುವ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿರುವಂತೆ ರಾಜನ ಮುಂಭಾಗದಲ್ಲಿ ಅಲಂಕೃತವಾದ ಜ್ವಲಿಸುವ ಅಗ್ನಿಗಳು ಸಾಗಿದವು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಸಹಸ್ರಶಃ |
ರುದಂತಃ ಶೋಕಸಂತಪ್ತಾ ಅನುಜಗ್ಮುರ್ನರಾಧಿಪಮ್ |
ಅಯಮಸ್ಮಾನಪಾಹಾಯ ದುಃಖಂ ಚಾಧಾಯ ಶಾಶ್ವತಮ್ ॥16॥
ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು, ಶೋಕತಪ್ತರಾಗಿ ಅಳುತ್ತಾ, ರಾಜನನ್ನು ಸಹಸ್ರಸಂಖ್ಯೆಯಲ್ಲಿ ಹಿಂಬಾಲಿಸಿದರು.
ಕೃತ್ವಾಽನಾಥಾನ್ ಪರೋ ನಾಥಾನ್ ಕ್ವ ಯಾಸ್ಯತಿ ನರಾಧಿಪಃ ॥17॥
ಈ ರಾಜನು ನಮ್ಮನ್ನು ತೊರೆದು ಶಾಶ್ವತವಾದ ದುಃಖವನ್ನು ಕೊಟ್ಟು ಅನಾಥರಾದ ನಮ್ಮನ್ನು ಯಾಚಕರನ್ನಾಗಿ ಮಾಡಿ ಎಲ್ಲಿಗೆ ಹೋಗುತ್ತಿದ್ದಾನೆ.
ಕ್ರೋಶಂತಃ ಪಾಂಡವಾಃ ಸರ್ವೇ ಭೀಷ್ಮೋ ವಿದುರ ಏವ ಚ |
ಬಾಹ್ಲೀಕಃ ಸೋಮದತ್ತಶ್ಚ ತಥಾ ಭೂರಿಶ್ರವಾ ನೃಪಾಃ |
ಅನ್ಯೋನ್ಯಂ ವೈ ಸಮಾಶ್ಲಿಷ್ಯ ಅನುಜಗ್ಮುಃ ಸಹಸ್ರಶಃ ॥18॥
ಎಲ್ಲಾ ಪಾಂಡವರು, ಭೀಷ್ಮ, ವಿದುರ, ಬಾಹ್ಲೀಕ, ಸೋಮದತ್ತ, ಭೂರಿಶ್ರವ ಮತ್ತು ಉಳಿದ ರಾಜರುಗಳು ದುಃಖದಿಂದ ಕಿರುಚುತ್ತಾ ಪರಸ್ಪರವಾಗಿ ಆಲಿಂಗಿಸಿಕೊಂಡು ಸಹಸ್ರ ಸಂಖ್ಯೆಯಲ್ಲಿ ರಾಜನ ಹಿಂದೆ ಹೊರಟರು.
ರಮಣೀಯೇ ವನೋದ್ದೇಶೇ ಗಂಗಾತೀರೇ ಸಮೇ ಶುಭೇ |
ವಾಸಯಾಮಾಸುರಥ ತಾಂ ಶಿಬಿಕಾಂ ಸತ್ಯವಾದಿನಃ ॥19॥
ಸತ್ಯವಾದಿಗಳಾದ ಅವರು ಕಾಡಿನ ಒಂದು ಸುಂದರವಾದ ಸ್ಥಳದಲ್ಲಿ ಗಂಗಾತೀರದ ಒಂದು ಸಮತಟ್ಟಾದ ಪುಣ್ಯಪ್ರದೇಶದಲ್ಲಿ ರಾಜನನ್ನು ಹೊತ್ತ ಶಿಬಿಕೆಯನ್ನು ಇಳಿಸಿದರು.
ಸಭಾರ್ಯಸ್ಯ ನೃಸಿಂಹಸ್ಯ ಪಾಂಡೋರಕ್ಲಿಷ್ಟಕರ್ಮಣಃ |
ತತಸ್ತಸ್ಯ ಶರೀರಂ ತತ್ ಸರ್ವಗಂಧನಿಷೇವಿತಮ್ ॥20॥
ಶುಚಿಕಾಲೇಯಕಾದಿಗ್ಧಂ ಮುಖ್ಯಸ್ನಾನಾಧಿವಾಸಿತಮ್ |
ಕ್ಷೀರೇಣ ಮಧುನಾಽಽಜ್ಯೇನ ಪಾಂಡವಾಃ ಶೋಕಕರ್ಶಿತಾಃ ॥21॥
ಪರ್ಯಷಿಂಚನ್ ಜಲೇನಾಶು ಶಾತಕುಂಭಮಯೈರ್ಘಟೈಃ |
ಅಸ್ಥೀನಿ ಯಾಜಕಾಃ ಸರ್ವೇ ಗಂಗಾಯಾಮೌರ್ಧ್ವದೈಹಿಕೇ |
ಚಂದನೇನಾಪಿ ಮುಖ್ಯೇನ ಶುಕ್ಲೇನ ಸಮಲೇಪಯನ್ ॥22॥
ನರಸಿಂಹನಾದ ಪಾಂಡು ಮತ್ತು ಮಾದ್ರಿಯ ಶಿಬಿಕೆಯನ್ನು ಅಲ್ಲಿ ಇಳಿಸಿ, ಅಕ್ಲಿಷ್ಟಕಾರಿಯಾದ ಪಾಂಡುವಿನ ಶರೀರವನ್ನು ಮತ್ತು ಅಸ್ಥಿಗಳನ್ನು ಎಲ್ಲಾ ಗಂಧಗಳಿಂದಲೂ, ಶುಭ್ರವಾದ ಕಾಲೇಯಕ(ರಸ)ದಿಂದಲೂ ಲೇಪಿಸಿ, ಮುಖ್ಯಸ್ನಾನವನ್ನು ಮಾಡಿಸಿ ಶೋಕಕರ್ಶಿತರಾದ ಪಾಂಡವರು, ಸುವರ್ಣಘಟಗಳಲ್ಲಿ ತುಂಬಿದ ಕ್ಷೀರದಿಂದಲೂ, ಮಧುವಿನಿಂದಲೂ, ಆಜ್ಯದಿಂದಲೂ ಮತ್ತು ಗಂಗಾಜಲದಿಂದಲೂ ಅಭಿಷೇಕವನ್ನು ಮಾಡಿದರು. ಪುರೋಹಿತರು ಆ ಉತ್ತರಕ್ರಿಯೆ ಸಂದರ್ಭದಲ್ಲಿ ಪಾಂಡುವಿನ ಅಸ್ಥಿಗಳನ್ನು ಶುಭ್ರವಾದ ಚಂದನದಿಂದ ಲೇಪಿಸಿದರು.
ಕಾಲಾಗರುವಿಮಿಶ್ರೇಣ ತಥಾ ತುಂಗರಸೇನ ಈ |
ಆಚ್ಛನ್ನಃ ಸಹ ವಾಸೋಭಿರ್ಜೀವನ್ನಿವ ನರರ್ಷಭಃ ॥23॥
ಆಗ ಕಾಲಾಗರು ಮಿಶ್ರಿತವಾದ ತುಂಗರಸದಿಂದ ಲೇಪಿಸಲ್ಪಟ್ಟ ಪಾಂಡುವು ವಸ್ತ್ರಗಳಿಂದ ಅಲಂಕರಿಸಲ್ಪಟ್ಟನು. (ತುಂಗರಸವೆಂದರೆ, ಅನೇಕ ಪರಿಮಳದ್ರವ್ಯಗಳಿಂದ ಮಿಶ್ರಿತವಾದ ತೈಲ ವಿಶೇಷ).
ಅಥೈನಂ ದೇಶಜೈಃ ಶುಭ್ರೈರ್ವಾಸೋಭಿಃ ಸಮಯೋಜಯನ್ |
ಶುಶುಭೇ ಪುರುಷವ್ಯಾಘ್ರೋ ಮಹಾರ್ಹಶಯನೋಚಿತಃ ॥24॥
ಅನಂತರ ಪಾಂಡುವನ್ನು ದೇಶಗಳಿಂದ ತರಿಸಿದ ಶುಭ್ರವಸ್ತ್ರಗಳನ್ನು ಉಡಿಸಿ ಅಲಂಕರಿಸಿದರು. ಅನರ್ಘ್ಯವಾದ ಶಯನಾದಿಗಳಿಗೆ ಯೋಗ್ಯವಾದ ಪುರುಷವ್ಯಾಘ್ರನಾದ ಪಾಂಡುವು ಆ ಅಲಂಕಾರದಲ್ಲಿ ಶೋಭಿಸಿದನು.
ಹಯಮೇಧಾಗ್ನಿನಾ ಸರ್ವೇ ಯಾಜಕಾಃ ಸಪುರೋಹಿತಾಃ |
ವೇದೋಕ್ತೇನ ವಿಧಾನೇನ ಕ್ರಿಯಾಂ ಚಕ್ರುಃ ಸಮಂತ್ರಕಮ್ |
ಯಾಜಕೈರಭ್ಯನುಜ್ಞಾತಾಃ ಪ್ರೇತಕರ್ಮಣಿ ನಿಷ್ಠಿತೈಃ ॥25॥
ಎಲ್ಲಾ ಯಾಜಕರೂ ಮತ್ತು ಪುರೋಹಿತರೂ ಸೇರಿ ವೇದೋಕ್ತವಿಧಾನದಿಂದ ಅಶ್ವಮೇಧಾಗ್ನಿಯಿಂದ ಮಂತ್ರಪುರಸ್ಸರವಾಗಿ ಎಲ್ಲಾ ಕ್ರಿಯೆಗಳನ್ನೂ ಮಾಡಿದರು.

ಘೃತಾವಸಿಕ್ತಂ ರಾಜಾನಂ ಸಹ ಮಾದ್ರ್ಯಾ ಸ್ವಲಂಕೃತಮ್ |
ತುಂಗಪದ್ಮಕಮಿಶ್ರೇಣ ಚಂದನೇನ ಸುಗಂಧಿನಾ ॥26॥
ಸರಲಂ ದೇವದಾರುಂ ಚ ಗುಗ್ಗುಲಂ ಲಾಕ್ಷಯಾ ಸಹ |
ರಕ್ತಚಂದನಕಾಷ್ಠೈಶ್ಚ ಹರಿವೇರೈರುಶೀರಜೈಃ ॥27॥
ಅನ್ಯೈಶ್ಚ ವಿವಿಧೈರ್ಗಂಧೈ ರಾಜಾನಂ ಸಮದಾಹಯನ್ |
ಘೃತಪೂರ್ಣೈಸ್ತಥಾ ಕುಂಭೈರ್ವಿಧಿನಾ ಸಮದಾಹಯನ್ ॥28॥
ಪ್ರೇತಕರ್ಮದಲ್ಲಿ ನಿಷ್ಣಾತರಾದ ಪುರೋಹಿತರಿಂದ ಅನುಜ್ಞೆಯನ್ನು ಪಡೆದ ಪಾಂಡವರು ಆಜ್ಯದಿಂದ ಲೇಪಿತನಾಗಿ ಅಲಂಕೃತನಾಗಿದ್ದ ಪಾಂಡುವನ್ನು (ಪಾಂಡು ಪ್ರತಿಮೆಯನ್ನು) ಮಾದ್ರಿಯ (ಪ್ರತಿಮೆಯ) ಜೊತೆಯಲ್ಲಿ ತುಂಗರಸಗಳಿಂದಲೂ, ಪದ್ಮರಸದಿಂದಲೂ ಮಿಶ್ರಿತವಾದ, ಸುಗಂಧವುಳ್ಳ ಚಂದನ, ಸರಲ, ದೇವದಾರು, ಗುಗ್ಗುಳ, ಲಾಕ್ಷ, ಹರಿವೇರ, ಉಶೀರಜ ಮತ್ತು ಇನ್ನೂ ಅನೇಕ ಸುಗಂಧಯುಕ್ತವಾದ ಕಾಷ್ಠಗಳಿಂದ ದಹನ ಮಾಡಿದರು. ಘೃತಪೂರ್ಣವಾದ ಕುಂಭಗಳಿಂದ ಆಜ್ಯವನ್ನು ಸುರಿದು ವಿಧಿಪೂರ್ವಕವಾಗಿ ದಹನ ಮಾಡಿದರು.
ತತಸ್ತಯೋಃ ಶರೀರೇ ತು ದೃಷ್ಟ್ವಾ ಮೋಹವಶಂ ಗತಾಃ |
ಹಾಹಾ ಪುತ್ರೇತಿ ಕೌಸಲ್ಯಾ ಪತಿತಾ ಸಹಸಾ ಭುವಿ ॥29॥
ಚಿತೆಯ ಮೇಲಿದ್ದ ಅವರ ಶರೀರವನ್ನು ನೋಡಿ ಮೋಹವಶಳಾದ ಅಂಬಾಲಿಕೆಯು 'ಅಯ್ಯೋ ಪುತ್ರನೇ' ಎಂದು ಹೇಳುತ್ತಾ ಭೂಮಿಯ ಮೇಲೆ ಕುಸಿದಳು.
ತಾಂ ಪ್ರೇಕ್ಷ್ಯ ಪತಿತಾಮಾರ್ತಾಂ ಪೌರಜಾನಪದಾ ಜನಾಃ |
ರುರುದುಃ ಸಸ್ವರಂ ಸರ್ವೇ ರಾಜಭಕ್ತ್ಯಾ ಕೃಪಾನ್ವಿತಾಃ ॥30॥
ಹಾಗೆ ಬಿದ್ದ ಆರ್ತಳಾದ ಅಂಬಾಲಿಕೆಯನ್ನು ನೋಡಿ ಪೌರಜಾನಪದರು ರಾಜಭಕ್ತಿಯಿಂದ ಅವಳಲ್ಲಿ ಕೃಪೆಯುಳ್ಳವರಾಗಿ ಎಲ್ಲರೂ ಸ್ವರಸಹಿತವಾಗಿ ಅತ್ತರು.
ಶ್ವಾದೀನಿ ಚಾರ್ತನಾದೇನ ಸರ್ವಾಣಿ ಚ ವಿಚುಕ್ರುಶುಃ |
ಮಾನುಷ್ಯೈಃ ಸಹ ಭೂತಾನಿ ತಿರ್ಯಗ್ಯೋನಿಗತಾನ್ಯಪಿ ॥31॥
ಮನುಷ್ಯರ ಜೊತೆಯಲ್ಲಿ ನೀಚಯೋನಿಗತವಾದ ನಾಯಿ ಮೊದಲಾದ ಪ್ರಾಣಿಗಳೆಲ್ಲವೂ ಆರ್ತನಾದದಿಂದ ಕಿರುಚಿದವು.
ತಥಾ ಭೀಷ್ಮಃ ಶಾಂತನವೋ ವಿದುರಶ್ಚ ಮಹಾಮತಿಃ |
ಜ್ಞಾತಯಃ ಕೌರವಾಶ್ಚೈವ ಪ್ರಾಣದನ್ ಭೃಶದುಃಖಿತಾಃ ॥32॥
ಹಾಗೆಯೇ ಶಂತನುವಿನ ಮಗನಾದ ಭೀಷ್ಮನೂ, ಮಹಾಮತಿಯಾದ ವಿದುರನೂ, ಬಂಧುಗಳಾದ ಕೌರವರೂ, ಬಹಳ ದುಃಖದಿಂದ ಸಶಬ್ದವಾಗಿ ರೋದನ ಮಾಡಿದರು.
ಚುಕ್ರುಶುಃ ಪಾಂಡವಾಃ ಸರ್ವೇ ಧೃತರಾಷ್ಟ್ರಶ್ಚ ಭಾರತ |
ರಮಣೀಯೇ ತತೋ ದೇಶೇ ಗಂಗಾತೀರೇ ಸಮೇ ಶುಭೇ ॥33॥
ಎಲೈ ಭಾರತನೇ, ಗಂಗಾತೀರದ ರಮಣೀಯವಾದ ಸಮತಲವಾದ ಆ ದೇಶದಲ್ಲಿ ಧೃತರಾಷ್ಟ್ರನೂ ಮತ್ತು ಎಲ್ಲಾ ಪಾಂಡರೂ ದುಃಖದಿಂದ ಸಶಬ್ದವಾಗಿ ಅತ್ತರು.
ಪ್ರಕ್ಷಿಪ್ಯ ಕುಂಡಕೇ ತಾನಿ ಭೂಮೌ ಸನ್ನಿಹಿತಂ ಕೃಶಮ್ |
ಶೋಚಂತ ಜ್ಞಾತಯಃ ಸರ್ವೇ ದೃಷ್ಟ್ವಾಽಸ್ಥೀನಿ ಪುನಃಪುನಃ ॥34॥
ಯಾಜಕರು ಮತ್ತು ಪುರೋಹಿತರು ಅಶ್ವಮೇಧಾಗ್ನಿಯಿಂದ ದಹನವನ್ನು ಮಾಡಿದರು. ಅನಂತರ, ದಗ್ಧಶೇಷವಾದ ಅಸ್ಥಿಯನ್ನೂ ಮತ್ತು ಭಸ್ಮವನ್ನೂ ಭೂಮಿಯಲ್ಲಿ ಬಂಗಾರದ ಕುಂಡಕಗಳಲ್ಲಿಟ್ಟು ಅದನ್ನು ಮತ್ತೆ ಮತ್ತೆ ನೋಡುತ್ತಾ ಬಂಧುಗಳೆಲ್ಲರೂ ಶೋಕಪಟ್ಟರು.
ತಥಾ ಭೀಷ್ಮೋಽಥ ವಿದುರೋ ರಾಜಾ ಚ ಸಹ ಬಾಂಧವೈಃ |
ಉದಕಂ ಚಕ್ರಿರೇ ಪಾಂಡೋಃ ಸರ್ವಾಶ್ಚ ಕುರುಯೋಷಿತಃ ॥35॥
ಅನಂತರ ಭೀಷ್ಮನೂ, ವಿದುರನೂ, ಧೃತರಾಷ್ಟ್ರನೂ, ಬಂಧುಗಳ ಜೊತೆಯಲ್ಲಿ ಪಾಂಡುವಿಗೆ ಉದಕಕ್ರಿಯೆಯನ್ನು ಮಾಡಿದರು. ಎಲ್ಲಾ ಕೌರವ ಸ್ತ್ರೀಯರೂ ಉದಕಕ್ರಿಯೆಯನ್ನು ಮಾಡಿದರು.
ಕೃತೋದಕಾಂಸ್ತಾನಾದಾಯ ಪಾಂಡವಾನ್ ಶೋಕಕರ್ಶಿತಾನ್ |
ಸರ್ವಾಃ ಪ್ರಕೃತಯೋ ರಾಜನ್ ಶೋಚಂತ್ಯಃ ಪರ್ಯವಾರಯನ್ ॥36॥
ಎಲೈ ರಾಜನೇ, ಉದಕಕ್ರಿಯೆಯನ್ನು ಮಾಡಿ ಶೋಕಕರ್ಶಿತರಾದ ಪಾಂಡವರನ್ನು ಕೈಯಲ್ಲಿ ಹಿಡಿದುಕೊಂಡು ಪ್ರಜೆಗಳೆಲ್ಲರೂ ಶೋಕದಿಂದ ಅವರನ್ನು ಸುತ್ತುವರಿದರು.
ಯಥಾ ಚ ಪಾಂಡವಾ ಭೂಮೌ ಶೇರತೇ ಸಹ ಬಾಂಧವಾಃ |
ತಥೈವ ನಾಗರಾ ರಾಜನ್ ಶಿಶ್ಯಿರೇ ಬ್ರಾಹ್ಮಣಾದಯಃ ॥37॥
ಎಲೈ ರಾಜನೇ, ಪಾಂಡವರು ಹೇಗೆ ಭೂಮಿಯ ಮೇಲೆ ಮಲಗಿಕೊಂಡರೋ ಹಾಗೆ ಬಂಧುಗಳು, ನಗರವಾಸಿಗಳು, ಬ್ರಾಹ್ಮಣರು ಎಲ್ಲರೂ ಭೂಶಯನ ಮಾಡಿದರು.
ತದನಾನಂದಮಸ್ವಸ್ಥಮಾಕುಮಾರಮಹೃಷ್ಟವತ್ |
ಬಭೂವ ಪಾಂಡವೈಃ ಸಾರ್ಧಂ ನಗರಂ ದ್ವಾದಶ ಕ್ಷಪಾಃ ॥38॥
ಆ ಹಸ್ತಿನಪುರವು ಹನ್ನೆರಡು ದಿನಗಳವರೆಗೆ ಮಕ್ಕಳಿಂದ ಆರಂಭಿಸಿ ಪಾಂಡವರ ಜೊತೆಯಲ್ಲಿ ಶೋಕ ಪಡುತ್ತಾ ಅಸ್ವಸ್ಥವಾಯಿತು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ನಾಲ್ಕನೆಯ ಅಧ್ಯಾಯ
(ಪಾಂಡುವಿಗೆ ಶ್ರಾದ್ಧದಾನ, ವ್ಯಾಸರ ಮಾತಿನಂತೆ, ಸತ್ಯವತಿ, ಅಂಬಿಕೆ ಅಂಬಾಲಿಕೆಯರ ತಪೋವನಗಮನ.)
ವೈಶಂಪಾಯನಃ
ತತಃ ಕ್ಷತ್ತಾ ಚ ಭೀಷ್ಮಶ್ಚ ವ್ಯಾಸೋ ರಾಜಾ ಚ ಪಾಂಡುಭಿಃ |
ದದುಃ ಶ್ರಾದ್ಧಂ ತಥಾ ಪಾಂಡೋಃ ಸ್ವಧಾಮೃತಸಮಂ ತದಾ |
ಪುರೋಹಿತಸಹಾಯಾಸ್ತೇ ಯಥಾನ್ಯಾಯಮಕುರ್ವತ ॥1॥
ಅನಂತರ, ವಿದುರನು, ಭೀಷ್ಮರು, ವ್ಯಾಸರು ಸಹ ಪಾಂಡವರ ಜೊತೆಯಲ್ಲಿ ಪಾಂಡುವಿಗೆ ಅಮೃತಸಮವಾದ ಸ್ವಧಾಮಯವಾದ ಶ್ರಾದ್ಧವನ್ನು ಕೊಟ್ಟರು. ಅವರು ಪುರೋಹಿತರ ಸಹಾಯದಿಂದ ಎಲ್ಲವನ್ನೂ ನ್ಯಾಯಯುಕ್ತವಾಗಿ ಮಾಡಿದರು.
ಕುರೂಂಶ್ಚ ದ್ವಿಜಮುಖ್ಯಾಂಶ್ಚ ಭೋಜಯಿತ್ವಾ ಸಹಸ್ರಶಃ |
ರತ್ನೌಘಾನ್ ವಿಪ್ರಮುಖ್ಯೇಭ್ಯೋ ದತ್ತ್ವಾ ಗ್ರಾಮವರಾನಪಿ ॥2॥
ಕೃತಶೌಚಾಂಸ್ತತಸ್ತಾಂಸ್ತು ಪಾಂಡವಾನ್ ಭರತರ್ಷಭ |
ಆದಾಯ ವಿವಿಶುಃ ಪೌರಾಃ ಪುರಂ ವಾರಾಣಸಾಹ್ವಯಮ್ ॥3॥
ಎಲೈ ಭರತರ್ಷಭನೇ, ಸಹಸ್ರಸಂಖ್ಯೆಯಲ್ಲಿ ಬ್ರಾಹ್ಮಣರಿಗೂ ಮತ್ತು ಕುರುಗಳಿಗೂ ಭೋಜನವನ್ನು ಮಾಡಿಸಿ, ಬ್ರಾಹ್ಮಣಶ್ರೇಷ್ಠರಿಗೆ ರತ್ನರಾಶಿಗಳನ್ನೂ, ಶ್ರೇಷ್ಠವಾದ ಗ್ರಾಮಗಳನ್ನೂ ಕೊಟ್ಟು ಉತ್ತರಕ್ರಿಯೆಯನ್ನು ಮಾಡಿ ಶುದ್ಧರಾದ ಪಾಂಡವರನ್ನು ಕರೆದುಕೊಂಡು ಎಲ್ಲಾ ಪೌರರೂ ಹಸ್ತಿನಪುರವನ್ನು ಪ್ರವೇಶಿಸಿದರು.
ಸತತಂ ಸ್ಮಾನ್ವತಪ್ಯಂತ ತಮೇವ ಭರತರ್ಷಭಮ್ |
ಪೌರಜಾನಪದಾಃ ಸರ್ವೇ ಮೃತಂ ಸ್ವಮಿವ ಬಾಂಧವಮ್ ॥4॥
ಪೌರಜಾನಪದರೆಲ್ಲರೂ ತಮ್ಮ ಬಂಧುವೇ ಮೃತನಾದಂತೆ ಭರತಶ್ರೇಷ್ಠನಾದ ಪಾಂಡುವನ್ನು ಯಾವಾಗಲೂ ಸ್ಮರಿಸಿ ಅನುತಾಪ ಪಟ್ಟರು.
ಶ್ರಾದ್ಧಾವಸಾನೇಷು ತದಾ ದೃಷ್ಟ್ವಾ ತಂ ದುಃಖಿತಂ ಜನಮ್ |
ಸಮ್ಮೂಢಾಂ ದುಃಖಶೋಕಾರ್ತಾಂ ವ್ಯಾಸೋ ಮಾತರಮಬ್ರವೀತ್॥
ಶ್ರಾದ್ಧವು ಮುಗಿದ ಮೇಲೆ ದುಃಖಿತರಾದ ಪೌರಜಾನಪದರನ್ನು ನೋಡಿ ದುಃಖಶೋಕಾರ್ತಳಾಗಿ ಸಮ್ಮೋಹಕ್ಕೆ ಒಳಗಾದ ತಾಯಿಯನ್ನು ಕುರಿತು ವ್ಯಾಸರು ಮಾತನಾಡಿದರು.
ಅಪಕ್ರಾಂತಸುಖಾಃ ಕಾಲಾಃ ಪ್ರತ್ಯುಪಸ್ಥಿತದಾರುಣಾಃ |
ಶಶ್ವತ್ ಪಾಪೀಯದಿವಸಾಃ ಪೃಥಿವೀ ಗತಯೌವನಾ |
ಬಹುಮಾಯಾಸಮಾಕೀರ್ಣಾ ನಾನಾದೇಶಾಃ ಸಮಾಕುಲಾಃ ॥6॥
ಸುಖದ ಕಾಲವು ಕಳೆಯಿತು. ಮುಂದೆ ಬರುವ ಕಾಲವು ದಾರುಣವಾಗಿದೆ. ಮುಂದಿನ ದಿವಸಗಳು ಅತಿಶಯವಾದ ಪಾಪದಿಂದ ಕೂಡಿರುತ್ತವೆ. ಭೂಮಿಯ ಯೌವನವು ಕಳೆದು ಹೋಗಿದೆ. ಜನರು ಅನೇಕ ವಂಚನೆಗಳಿಂದ ವ್ಯವಹರಿಸುತ್ತಾರೆ. ಅನೇಕ ದೇಶಗಳು ಉಪದ್ರವಕ್ಕೆ ಒಳಗಾಗಿವೆ.
ಲುಪ್ತಧರ್ಮಕ್ರಿಯಾಚಾರೋ ಘೋರಃ ಕಾಲೋ ಭವಿಷ್ಯತಿ |
ಗಚ್ಛ ತ್ವಂ ತ್ಯಾಗಮಾಸ್ಥಾಯ ಯುಕ್ತಾ ವಸ ತಪೋವನೇ ॥7॥
ಮಾ ದ್ರಕ್ಷ್ಯಸಿ ಕುಲಸ್ಯಾಸ್ಯ ಘೋರಂ ಸಂಕ್ಷಯಮಾತ್ಮನಃ |
ತಥೇತಿ ಸಮನುಜ್ಞಾಯ ಸಾ ಪ್ರವಿಶ್ಯಾಬ್ರವೀತ್ ಸ್ನುಷಾಮ್ ॥8॥
ಧರ್ಮಕ್ರಿಯೆ ಮತ್ತು ಆಚಾರಗಳಿಂದ ಶೂನ್ಯವಾದ ಘೋರವಾದ ಕಾಲವು ಬರಲಿದೆ. ನೀನು ಎಲ್ಲವನ್ನೂ ತ್ಯಾಗ ಮಾಡಿ ಯೋಗಯುಕ್ತಳಾಗಿ ತಪೋವನದಲ್ಲಿ ವಾಸಿಸು. ನಿನ್ನ ಕುಲಕ್ಕೆ ಒದಗಲಿರುವ ಘೋರ ವಿನಾಶವನ್ನು ನೀನು ನೋಡಬಾರದು. ಹಾಗೆಯೇ ಆಗಲಿ ಎಂದು ಹೇಳಿ ಒಳಗೆ ಪ್ರವೇಶಿಸಿ ಸತ್ಯವತಿಯು ಸೊಸೆಯನ್ನು ಕುರಿತು ಮಾತನಾಡಿದಳು.
ಸತ್ಯವತೀ
ಅಂಬಿಕೇ ತವ ಪುತ್ರಸ್ಯ ದುರ್ನಯಾತ್ ಕಿಲ ಭಾರತಾಃ |
ಸಾನುಬಂಧಾ ವಿನಂಕ್ಷ್ಯಂತಿ ಪೌತ್ರಾಶ್ಚೈವೇತಿ ನಃ ಶ್ರುತಮ್ ॥9॥
ಅಂಬಿಕೆ ನಿನ್ನ ಮಗನ ದುರ್ನೀತಿಯಿಂದಾಗಿ ಎಲ್ಲಾ ಭಾರತರೂ ಮೊಮ್ಮಕ್ಕಳು ಮತ್ತು ಬಂಧುಗಳ ಜೊತೆಯಲ್ಲಿ ವಿನಾಶವನ್ನು ಹೊಂದುವರು ಎಂದು ಕೇಳಿದ್ದೇನೆ.
ತತ್ ಕೌಸಲ್ಯಾಮಿಮಾಮಾರ್ತಾಂ ಪುತ್ರಶೋಕಾಭಿಪೀಡಿತಾಮ್ |
ವನಮಾದಾಯ ಗಚ್ಛಾಮೋ ಭದ್ರಂ ತೇ ಯದಿ ಮನ್ಯಸೇ ॥10॥
ನಿನಗೆ ಮಂಗಳವಾಗಲಿ. ನಿನ್ನ ಅಭಿಪ್ರಾಯವಿದ್ದರೆ, ಈ ಪುತ್ರಶೋಕಪೀಡಿತಳಾದ ಕೋಸಲದೇಶದಲ್ಲಿ ಜನಿಸಿದ ಅಂಬಾಲಿಕೆಯನ್ನು ಕರೆದುಕೊಂಡು ನಾವು ವನಕ್ಕೆ ಹೋಗುತ್ತೇವೆ.
ವೈಶಂಪಾಯನಃ

ತಥೇತ್ಯುಕ್ತ್ವಾ ತ್ವಂಬಿಕಯಾ ಭೀಷ್ಮಮಾಮಂತ್ರ್ಯ ಸುವ್ರತಾ |
ವನಂ ಯಯೌ ಸತ್ಯವತೀ ಸ್ನುಷಾಭ್ಯಾಂ ಸಹ ಭಾರತ ॥11॥
ಅಂಬಿಕೆಯು ಹಾಗೆಯೇ ಆಗಲಿ ಎಂದು ಹೇಳಿದ ಮೇಲೆ ಸುವ್ರತಳಾದ ಸತ್ಯವತಿಯು ಭೀಷ್ಮರ ಅನುಮತಿಯನ್ನು ಪಡೆದು ತನ್ನ ಇಬ್ಬರು ಸೊಸೆಯರ ಜೊತೆಯಲ್ಲಿ ವನಕ್ಕೆ ತೆರಳಿದಳು.
ತಾಃ ಸುಘೋರಂ ತಪಃ ಕೃತ್ವಾ ದೈವಾದ್ ಭರತಸತ್ತಮ |
ದೇಹಂ ತ್ಯಕ್ತ್ವಾ ಮಹಾರಾಜ ಗತಿಮಿಷ್ಟಾಂ ಯಯುಸ್ತದಾ ॥12॥
ಎಲೈ ಭರತಶ್ರೇಷ್ಠನಾದ ಮಹಾರಾಜನೇ, ಆ ಮೂವರೂ ವನಕ್ಕೆ ಹೋಗಿ ಘೋರವಾದ ತಪಸ್ಸನ್ನು ಆಚರಿಸಿ ದೈವಯೋಗದಿಂದ ದೇಹತ್ಯಾಗವನ್ನು ಮಾಡಿ ತಮಗೆ ಇಷ್ಟವಾದ ಗತಿಯನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರ್ವಿಂಶತ್ಯಧಿಕಶತತಮೋऽಧ್ಯಾಯಃ ॥
॥ ಸಂಭವಪರ್ವಣಿ ದ್ವಿಸಪ್ತತಿತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-14
ವೈಚಿತ್ರವೀರ್ಯತನಯಾಃ ಕೃಪತೋ ಮಹಾಸತ್ರ-
ಣ್ಯಾಪುಶ್ಚ ಪಾಂಡುತನಯೈಃ ಸಹ ಸರ್ವರಾಜ್ಞಾಮ್ |
ಪುತ್ರಾಶ್ಚ ತತ್ರ ವಿವಿಧಾ ಅಪಿ ಬಾಲಚೇಷ್ಟಾಃ
ಕುರ್ವತ್ಸು ವಾಯುತನಯೇನ ಜಿತಾಃ ಸಮಸ್ತಾಃ ॥61॥
ಕೌರವರೂ ಪಾಂಡವರೊಂದಿಗೆ ಬೇರೆ ಎಲ್ಲ ರಾಜಕುಮಾರರೂ ಕೃಪಾಚಾರ್ಯರಿಂದ ಮಹಾ ಅಸ್ತ್ರಗಳನ್ನು ಉಪದೇಶ ಪಡೆದರು. ಆ ಕಾಲದಲ್ಲಿ ಅವರು ನಾನ ಬಗೆಯ ಬಾಲಚೇಷ್ಟೆ ಮಾಡುತ್ತಿದ್ದಾಗ ಭೀಮನಿಂದ ಎಲ್ಲರೂ ಪರಾಜಿತರಾಗುತ್ತಿದ್ದರು.
ಪಕ್ವೋರುಭೋಜ್ಯಫಲಸನ್ನಯನಾಯ ವೃಕ್ಷೇ-
ಷ್ವಾರೂಢರಾಜತನಯಾನಭಿವೀಕ್ಷ್ಯ ಭೀಮಃ |
ಪಾದಪ್ರಹಾರಮುರುವೃಕ್ಷತಳೇ ಪ್ರದಾಯ
ಸಾಕಂ ಫಲೈರ್ವಿನಿಪತತ್ಸು ಫಲಾನ್ಯಭುಂಕ್ತ ॥62॥
ಮಾಗಿದ ದೊಡ್ಡ ಭೋಜ್ಯ ಫಲಗಳನ್ನು ತರಲು ರಾಜಕುಮಾರರು ಮರಗಳನ್ನು ಏರಿದಾಗ ಭೀಮಸೇನ ಕಂಡು ಆ ಹೆಮ್ಮರದ ಬುಡಕ್ಕೆ ಕಾಲಿಂದ ಒದ್ದು ಹಣ್ಣುಗಳ ಜೊತೆಗೆ ಅವರೆಲ್ಲರೂ ಬೀಳುತ್ತಿದ್ದರೆ ತಾನು ಆ ಹಣ್ಣುಗಳನ್ನು ತಿನ್ನುತ್ತಿದ್ದ.
ಯುದ್ಧೇ ನಿಯುದ್ಧ ಉತ ಧಾವನ ಉತ್ಪ್ಲವೇ ಚ
ಪಾರಿಪ್ಲ ವೇ ಚ ಸಹಿತಾನ್ ನಿಖಿಲಾನ್ ಕುಮಾರಾನ್ |
ಏಕೋ ಜಿಗಾಯ ತರಸಾ ಪರಮಾರ್ಯಕರ್ಮಾ
ವಿಷ್ಣೋಃ ಸುಪೂರ್ಣಸದನುಗ್ರಹತಃ ಸುನಿತ್ಯಾತ್ ॥63॥
ಯುದ್ಧದಲ್ಲಾಗಲಿ ನಿಯುದ್ಧದಲ್ಲಾಗಲಿ ಓಟದಲ್ಲಾಗಲಿ ಹಾರಾಟದಲ್ಲಾಗಲಿ ನೀರಾಟದಲ್ಲಾಗಲಿ ಎಲ್ಲ ರಾಜಕುಮಾರರೂ ಒಂದಾಗಿ ಸೇರಿದರೂ ಅವರನ್ನು ಪರಮ ಉತ್ತಮ ಕರ್ಮಕಾರಿಯಾದ ಭೀಮನೊಬ್ಬನೆ ಹರಿಯ ನಿರಂತರಪೂರ್ಣ ಪರಮಾನುಗ್ರಹದಿಂದ ಬೇಗನೆ ಗೆಲ್ಲುತ್ತಿದ್ದ.
ಸರ್ವಾನ್ ಪ್ರಗೃಹ್ಯ ವಿನಿಮಜ್ಜತಿ ವಾರಿಮಧ್ಯೇ
ಶ್ರಾಂತಾನ್ ವಿಸೃಜ್ಯ ಹಸತಿ ಸ್ಮ ಸ ವಿಷ್ಣುಪದ್ಯಾಮ್ |
ಸರ್ವಾನುದೂಹ್ಯ ಚ ಕದಾಚಿದುರುಪ್ರವಾಹಾಂ
ಗಂಗಾಂ ಸುತಾರಯತಿ ಸಾರಸುಪೂರ್ಣಪೌಂಸ್ಯಃ ॥64॥
ಭೀಮ ಎಲ್ಲರನ್ನೂ ಹಿಡಿದುಕೊಂಡು ಗಂಗೆಯಲ್ಲಿ ನೀರಿನ ನಡುವೆ ಮುಳುಗುತ್ತಿದ್ದ. ಅವರು ಆಯಾಸಗೊಂಡಾಗ ನಡುವೆ ಬಿಟ್ಟು ನಗುತ್ತಿದ್ದ. ಉತ್ತಮ ಪರಿಪೂರ್ಣ ಪೌರುಷ ಉಳ್ಳ ಆತ ಕೆಲವೊಮ್ಮೆ ಎಲ್ಲರನ್ನೂ ಹೊತ್ತು ಮಹಾಪ್ರವಾಹ ಪೂರ್ಣವಾದ ಗಂಗಾನದಿಯನ್ನು ದಾಟಿಸುತ್ತಿದ್ದ.
ದ್ವೇಷಂ ಹ್ಯೃತೇನ ಹಿ ಹರೌ ತಮಸಿ ಪ್ರವೇಶಃ
ಪ್ರಾಣೇ ಚ ತೇನ ಜಗತೀಮನು ತೌ ಪ್ರಪನ್ನೌ |
ತತ್ಕಾರಣಾನ್ಯಕುರುತಾಂ ಪರವೌ ಕರಾಂಸಿ
ದೇವದ್ವಿಷಾಂ ಸತತವಿಸ್ತೃತಸಾಧುಪೌಂಸ್ಯೌ ॥65॥
ಹರಿಯಲ್ಲಿಯೂ ವಾಯುವಿನಲ್ಲಿಯೂ ದ್ವೇಷ ಮಾಡದ ಹೊರತು ಅಸುರರಿಗೆ ತಮಸ್ಸಿನಲ್ಲಿ ಪ್ರವೇಶವಿಲ್ಲ. ಅದರಿಂದ ನಿರಂತರ ಮಹತ್ತಾದ ಸ್ವಾಭಾವಿಕ ಪೌರುಷ ಉಳ್ಳ ಉತ್ತಮರಾದ ಕೃಷ್ಣ ಭೀಮರ ಜೊತೆಯಾಗಿ ಭೂಮಿಗೆ ಬಂದು ಅಸುರರಿಗೆ ತಮ್ಮ ದ್ವೇಷ ಮೂಡುವಂತೆ ಕರ್ಮಗಳನ್ನು ಮಾಡುತ್ತಿದ್ದರು.
ದೃಷ್ಟ್ವಾಮಿತಾನ್ಯಥ ಕರಾಂಸಿ ಮರುತ್ಸುತೇನ
ನಿತ್ಯಂ ಕೃತಾನಿ ತನಯಾ ನಿಖಿಲಾಶ್ಚ ರಾಜ್ಞಾಮ್ |
ತಸ್ಯಾಮಿತಂ ಬಲಮುದೀಕ್ಷ್ಯ ಸದೋರುವೃದ್ಧ
ದ್ವೇಷಾ ಬಭೂವುರಥ ಮಂತ್ರಮಮಂತ್ರಯಂಶ್ಚ ॥66॥

ನಿತ್ಯವೂ ಭೀಮ ಮಾಡುತ್ತಿದ್ದ ಅನುಪಮವಾದ ಕರ್ಮಗಳನ್ನು ಕಂಡು, ಅವನ ಆ ಪರಿಮಿತ ಶಕ್ತಿಯನ್ನು ತಿಳಿದು, ರಾಜಕುಮಾರರು ಎಲ್ಲರೂ ನಿರಂತರ ಬಲು ದೀರ್ಘ ದ್ವೇಷ ಮಾಡಿದರು. ರಹಸ್ಯವಾಗಿ ಸೇರಿ ಮಾತನಾಡಿಕೊಂಡರು.

ಯೇ ಯೇ ಹಿ ತತ್ರ ನರದೇವಸುತಾಃ ಸುರಾಂಶಾಃ
ಪ್ರೀತಿಂ ಪರಾಂ ಪವನಜೇ ನಿಖಿಲಾ ಅಕುರ್ವನ್ |
ತಾಂಸ್ತ್ವಾನ್ ವಿಹಯಾ ದಿತಿಜಾ ನರದೇವವಂಶ
ಜಾತಾ ವಿಚಾರ್ಯ ವಧನಿಶ್ಚಯಮಸ್ಯ ಚಕ್ರುಃ ॥67॥

ಯಾರು ಯಾರು ದೇವಾಂಶರಾದ ರಾಜಕುಮಾರರು ಭೀಮನಲ್ಲಿ ಬಹಳ ಪ್ರೀತಿ ಮಾಡಿದರೋ ಅವರೆಲ್ಲರನ್ನೂ ದೂರವಿಟ್ಟು ರಾಜವಂಶ ಜಾತರಾದ ದೈತ್ಯರು ವಿಚಾರ ಮಾಡಿ ಭೀಮನನ್ನು ಕೊಲ್ಲುವ ನಿರ್ಣಯವನ್ನು ಕೈಗೊಂಡರು.

ಅಸ್ಮಿನ್ ಹತೇ ವಿನಿಹತಾ ಅಖಿಲಾಶ್ಚ ಪಾರ್ಥಾಃ
ಶಕ್ಯೋ ಬಲಾಶ್ಚ ನ ನಿಹಂತುಮಯಂ ಬಲಾಢ್ಯಃ |
ಛದ್ಮಪ್ರಯೋಗತ ಇಮಂ ವಿನಿಹತ್ಯ ವೀರ್ಯಾತ್
ಪಾರ್ಥಂ ನಿಹತ್ಯ ನಿಗಳೇ ಚ ವಿದಧ್ಮಹೇಽನ್ಯಾನ್ ॥68॥

`ಭೀಮನೊಬ್ಬ ಹತನಾದರೆ ಎಲ್ಲ ಪಾರ್ಥರೂ ಹತರಾದಂತೆಯೆ. ಆದರೆ ಭೀಮ ಬಸ್ಲಾಢ್ಯ. ಬಲದಿಂದ ಕೊಲ್ಲಲು ಶಕ್ಯನಲ್ಲ. ಅದರಿಂದ ಅವನನ್ನು ವಂಚನ ಪ್ರಯೋಗದಿಂದಲೂ ಅರ್ಜುನನನ್ನು ಬಲಪ್ರಯೋಗದಿಂದಲೂ ಕೊಂದು ಇತರರನ್ನು ಬಂಧನದಲ್ಲಿಡೋಣ'.

ಏವಂ ಕೃತೇ ನಿಹತಕಂಟಕಮಸ್ಯ ರಾಜ್ಯಂ
ದುರ್ಯೋಧನಸ್ಯ ಹಿ ಭವೇನ್ನ ತತೋಽನ್ಯಥಾ ಸ್ಯಾತ್ |
ಅಸ್ಮಿನ್ ಹತೇ ನಿಪತಿತೇ ಚ ಸುರೇಂದ್ರಸೂನೌ
ಶೇಷಾ ಭವೇಯುರಪಿ ಸೌಬಲಿಪುತ್ರದಾಸಾಃ ॥69॥

`ಹೀಗೆ ಮಾಡಿದಾಗಲೆ ದುರ್ಯೋಧನನಿಗೆ ರಾಜ್ಯ ನಿಷ್ಕಂಟಕವಾದೀತು. ಬೇರೆ ರೀತಿಯಿಂದ ಆಗದು. ಭೀಮ ಹತನಾಗಬೇಕು, ಅರ್ಜುನನು ಬೀಳಬೇಕು. ಆಗ ಉಳಿದವರು ಕೌರವರ ದಾಸರಾಗುವರು'.

ಏವಂ ವಿಚಾರ್ಯ ವಿಷಮುಲ್ಬಣಮಂತಕಾಭಂ
ಕ್ಷೀರೋದಧೇರ್ಮಥನಜಂ ತಪಸಾ ಗಿರೀಶಾತ್ |
ಶುಕ್ರೇಣ ಲಬ್ಧಮಮುತಃ ಸುಬಲಾತ್ಮಜೇನ
ಪ್ರಾಪ್ತಂ ಪ್ರತೋಷ್ಯ ಮರುತಸ್ತನಯಾಯ ಚಾದುಃ ॥70॥

ಹೀಗೆ ವಿಚಾರ ಮಾಡಿ ಮೃತ್ಯುವಿನಂತೆ ಘೋರವಾದ ವಿಷವನ್ನು ಭೀಮನಿಗೆ ಉಣಿಸಿದರು. ಆ ವಿಷ ಕ್ಷೀರಸಮುದ್ರದ ಮಥನದಿಂದ ಉದ್ಭವಿಸಿದುದು. ಶುಕ್ರಾಚಾರ್ಯರು ತಪಸ್ಸಿನ ಮೂಲಕ ಶಿವನಿಂದ ಪಡೆದುದು. ಶುಕ್ರಾಚಾರ್ಯರನ್ನು ಒಲಿಸಿ ಅವರಿಂದ ಶಕುನಿ ಪಡೆದುದು.

ಸಮ್ಮಂತ್ರ್ಯ ರಾಜತನಯೈರ್ಧೃತರಾಷ್ಟ್ರಜೈಸ್ತದ್
ದತ್ತಂ ಸ ಸೂದಮುಖತೋಽಖಿಲ ಭಕ್ಷ್ಯಭೋಜ್ಯೇ |
ಜ್ಞಾತ್ವಾ ಯುಯುತ್ಸುಗದಿತಂ ಬಲವಾನ್ ಸ ಭೀಮೋ
ವಿಷ್ಣೋರನುಗ್ರಹಬಲಾಜ್ಜರಯಾಂಚಕಾರ ॥71॥

ರಾಜಕುಮಾರೊಡನೆ ಕೌರವರು ಮಂತ್ರಾಲೋಚನೆ ಮಾಡಿ ಅಡುಗೆಯವನ ಮೂಲಕ ಎಲ್ಲ ಭಕ್ಷ್ಯಭೋಜ್ಯಗಳಲ್ಲಿರುವ ವಿಷವಿಕ್ಕಿದರು. ಅದನ್ನು ಯುಯುತ್ಸು ಹೇಳಿದ್ದರಿಂದ ಮೊದಲೇ ತಿಳಿದಿದ್ದರೂ ಬಲಿಷ್ಠನಾದ ಭೀಮ ಉಂಡು ವಿಷ್ಣುವಿನ ಅನುಗ್ರಹದಿಂದ ಜೀರ್ಣಿಸಿಕೊಂಡ.

ಜೀರ್ಣೇ ವಿಷೇ ಕುಮತಯಃ ಪರಮಾಭಿತಪ್ತಾಃ
ಪ್ರಾಸಾದಮಾಶು ವಿದಧುರ್ಹರಿಪಾದತೋಯೇ |
ಜ್ಞಾತ್ವಾ ಯುಯುತ್ಸುಮುಖತಃ ಸ್ವಯಮತ್ರ ಚಾಂತೇ
ಸುಷ್ವಾಪ ಮಾರುತಿರಮಾ ಧೃತರಾಷ್ಟ್ರಪುತ್ರೈಃ ॥72॥

ಭೀಮ ಉಂಡ ವಿಷ ಜೀರ್ಣವಾದಾಗ ದುರ್ಬುದ್ಧಿಗಳಾದ ಕೌರವರು ಬಹಳ ಸಂತಾಪಪಟ್ಟು ಬೇಗನೆ ಗಂಗಾಪ್ರವಾಹದಲ್ಲಿ ಒಂದು ಮಾಳಿಗೆ ಮನೆಯನ್ನು ಕಟ್ಟಿಸಿದರು. ಅದರ ಉದ್ದೇಶವನ್ನೂ ಯುಯುತ್ಸುವಿನ ಮುಖದಿಂದ ಭೀಮ ಮೊದಲೇ ತಿಳಿದರೂ ಆ ಮಾಳಿಗೆ ಮನೆಯಲ್ಲಿ ಕೌರವರೊಂದಿಗೆ ಸಮೀಪದಲ್ಲಿ ತಾನೆ ಮಲಗಿದ.

ದೋಷಾನ್ ಪ್ರಕಾಶಯಿತುಮೇವ ವಿಚಿತ್ರ ವೀರ್ಯ
ಪುತ್ರಾತ್ಮಜೇಷು ನೃವರಂ ಪ್ರತಿಸುಪ್ತವೀಕ್ಷ್ಯ |
ಬಧ್ವಾಭಿಮಂತ್ರಣದೃಢೈರಯಸಾ ಕೃತೈಸ್ತಂ
ಪಾಶೈರ್ವಿಚಿಕ್ಷಿಪುರುದೇ ಹರಿಪಾದಜಾಯಾಃ ॥73॥

ಕೌರವರ ದುರ್ಬುದ್ಧಿಯನ್ನು ಲೋಕಕ್ಕೆ ತೋರಿಸುವುದಕ್ಕಾಗಿಯೆ ಹಾಗೆ ಮಲಗಿದ್ದ ಜೀವೋತ್ತಮನಾದ ಭೀಮ. ಅದನ್ನು ಕಂಡು ಕೌರವರು ಮಂತ್ರಶಕ್ತಿಯಿಂದ ದೃಢವಾಗಿಸಿದ್ದ ಕಬ್ಬಿಣದ ಸರಪಣಿಗಳಿಂದ ಅವನನ್ನು ಕಟ್ಟಿ ಗಂಗಾಜಲದಲ್ಲಿ ಎಸೆದರು.

ತತ್ಕೋಟಿಯೋಜನಗಭೀರಮುದಂ ವಿಗಾಹ್ಯ
ಭೀಮೋ ವಿಜಂಭೃಣತ ಏವ ವಿವೃಶ್ಚ್ಯ ಪಾಶಾನ್ |
ಉತ್ತೀರ್ಯ ಸಜ್ಜನಗಣಸ್ಯ ವಿಧಾಯ ಹರ್ಷಂ

ತಸ್ಮಾವನಂತಗುಣವಿಷ್ಣುಸದಾತಿಹಾರ್ದಃ ॥74॥
ಅನಂತಗುಣಭರಿತನಾದ ವಿಷ್ಣುವಿನಲ್ಲಿ ಸದಾ ಮಹಾಭಕ್ತಿ ಉಳ್ಳ ಭೀಮ ಕೋಟಿಯೋಜನ ಆಳದ ಆ ಜಲವನ್ನು ಹೊಕ್ಕು ಆಕಳಿಕೆಯಿಂದ ಸರಪಣಿಗಳನ್ನು ಕಡಿದುಕೊಂಡು ಮೇಲೆ ಬಂದು ಸಜ್ಜನ ಸಮುದಾಯಕ್ಕೆ ಹರ್ಷ ಉಂಟುಮಾಡುತ್ತ ನಿಂತ!
* * * *

ನೂರ ಇಪ್ಪತ್ತೈದನೆಯ ಅಧ್ಯಾಯ
(ಕುಮಾರರ ವಿಹಾರ, ಭೀಮನ ಪ್ರಾಬಲ್ಯ, ದುರ್ಯೋಧನನ ಈರ್ಷ್ಯೆ, ಭೀಮನನ್ನು ಕೊಲ್ಲಲು ಪ್ರಯತ್ನ.)
ವೈಶಂಪಾಯನಃ
ಅವಾಪ್ತವಂತೋ ವೇದೋಕ್ತಾನ್ ಸಂಸ್ಕಾರಾನ್ ಪಾಂಡವಾಸ್ತದಾ |
ಅವರ್ಧಂತ ಮಹಾಭೋಗಾನ್ ಭುಂಜಾನಾಃ ಪಿತೃವೇಶ್ಮನಿ ॥1॥
ವೇದೋಕ್ತ ಸಂಸ್ಕಾರಗಳನ್ನು ಪಡೆದ ಪಾಂಡವರು ತಂದೆಯ ಮನೆಯಲ್ಲಿ ದಿವ್ಯವಾದ ಭೋಗಗಳನ್ನು ಭೋಗಿಸುತ್ತಾ ಬೆಳೆದರು.
ತೇ ಧಾರ್ತರಾಷ್ಟ್ರೈಃ ಸಹಿತಾಃ ಕ್ರೀಡಂತಿ ಪಿತೃವೇಶ್ಮನಿ |
ಬಾಲಕ್ರೀಡಾಸು ಸರ್ವಾಸು ವಿಶಿಷ್ಟಾಃ ಪಾಂಡವಾ ಭವನ್ ॥2॥
ಅವರು ತಂದೆಯ ಮನೆಯಲ್ಲಿ ದುರ್ಯೋಧನಾದಿಗಳ ಜೊತೆಯಲ್ಲಿ ಆಡುತ್ತಿದ್ದರು. ಎಲ್ಲಾ ಬಾಲಕ್ರೀಡೆಗಳಲ್ಲಿಯೂ ಪಾಂಡವರೇ ಶ್ರೇಷ್ಠರಾಗಿದ್ದರು.
ಜವೇ ಲಕ್ಷ್ಯಾಭಿಹರಣೇ ಭೇದ್ಯೇ ಪಾಂಸುವಿಕರ್ಷಣೇ |
ಧಾರ್ತರಾಷ್ಟ್ರಾನ್ ಭೀಮಸೇನಃ ಸರ್ವಾಂಸ್ತು ಪರಿಮರ್ದತಿ ॥3॥
ಭೀಮಸೇನನು ವೇಗದಲ್ಲಿ, ಲಕ್ಷ್ಯವನ್ನು ತರುವುದರಲ್ಲಿ, ವಸ್ತುಗಳನ್ನು ಒಡೆಯುವುದರಲ್ಲಿ ಮತ್ತು ಧೂಲೆರಚುವುದರಲ್ಲಿ ದುರ್ಯೋಧನಾದಿ- ಗಳೆಲ್ಲರನ್ನೂ ಪರಾಭವಗೊಳಿಸುತ್ತಿದ್ದನು.
ಹರ್ಷಾದ್ವೈತಾನ್ ಕ್ರೀಡಮಾನಾನ್ ಗೃಹ್ಯ ಕಾಕಲೀಯನೇ |
ಶಿರಸ್ಸು ಚ ನಿಗೃಹ್ಯೈತಾನ್ ಯೋಧಯಾಮಾಸ ಪಾಂಡವಃ ॥4॥
ಸಂತೋಷದಿಂದ ಆಡುತ್ತಿರುವ ದುರ್ಯೋಧನಾದಿಗಳನ್ನು ಪಾಂಡುವಿನ ಮಗನಾದ ಭೀಮನು ಶಿಖೆಯಲ್ಲಿ ಹಿಡಿದುಕೊಂಡು ಬೀಳಿಸಿ ಅನಂತರ ಬಿದ್ದ ಮೇಲೆ ಶಿರಸ್ಸನ್ನು ಹಿಡಿದು ಯುದ್ಧಮಾಡುತ್ತಿದ್ದನು.
ಶತಮೇಕೋತ್ತರಂ ತೇಷಾಂ ಕುಮಾರಾಣಾಂ ಮಹೌಜಸಾಮ್ |
ಏಕ ಏವ ವಿಮೃದ್ನಾತಿ ನಾತಿಕೃಚ್ಛ್ರಾದ್ ವೃಕೋದರಃ ॥5॥
ಮಹಾಸಾಮರ್ಥ್ಯವುಳ್ಳ ಧೃತರಾಷ್ಟ್ರನ ನೂರೊಂದು ಮಕ್ಕಳನ್ನು (ಯುಯುತ್ಸವೂ ಸೇರಿ) ವೃಕೋದರನೊಬ್ಬನೇ ಅತಿಪ್ರಯಾಸವಿಲ್ಲದೆ ಮರ್ದಿಸುತ್ತಿದ್ದನು.
ಜಲೇಷು ಚ ನಿಗೃಹ್ಯೈನಾನ್ ವಿನಿಹತ್ಯ ಬಲಾದ್ ಬಲೀ |
ಚಕರ್ಷ ಕ್ರೋಶತೋ ಭೂಮೌ ಘೃಷ್ಟಜಾನುಶಿರೋರುಹಾನ್ ॥6॥
ಬಲಿಷ್ಠನಾದ ಭೀಮನು ಅವರನ್ನು ನೀರಿನಲ್ಲಿ ಬಲಾತ್ಕಾರದಿಂದ ಹಿಡಿದುಕೊಂಡು ಅವರಿಗೆ ಹೊಡೆದು ಮಂಡಿ ಮತ್ತು ತಲೆಯ ಕೂದಲುಗಳನ್ನು ಮುದುರಿಕೊಂಡು ಕಿರುಚುತ್ತಿದ್ದ ಅವರನ್ನು ಭೂಮಿಯ ಮೇಲೆ ಎಳೆಯುತ್ತಿದ್ದನು.
ದಶ ಬಾಲಾನ್ ಜಲೇ ಕ್ರೀಡನ್ ಭುಜಾಭ್ಯಾಂ ಪರಿಗೃಹ್ಯ ಸಃ |
ಆಸ್ತೇ ಸ್ಮ ಸಲಿಲೇ ಮಗ್ನಃ ಪ್ರಮೃದ್ನಂಶ್ಚ ವಿಮುಂಚತಿ ॥7॥
ಅವನು ನೀರಿನಲ್ಲಿ ಆಟವಾಡುತ್ತಾ ತನ್ನ ಭುಜದಿಂದ ಹತ್ತು ಮಕ್ಕಳನ್ನು ಹಿಡಿದು ತಾನೂ ಅವರೊಂದಿಗೆ ನೀರಿನಲ್ಲಿ ಮುಳುಗಿ ಅವರಿಗೆ ತುಂಬಾ ಸಂಕಟವಾದಾಗ ಬಿಡುತ್ತಿದ್ದನು.
ಫಲಾನಿ ವೃಕ್ಷಮಾರುಹ್ಯ ಪ್ರಚಿನ್ವಂತಿ ಚ ತೇ ಯದಾ |
ತದಾ ಪಾದಪ್ರಹಾರೇಣ ಭೀಮಃ ಕಂಪಯತೇ ದ್ರುಮಮ್ ॥8॥
ಅವರು ಮರಗಳನ್ನು ಹತ್ತಿ ಹಣ್ಣುಗಳನ್ನು ತೆಗೆದುಕೊಳ್ಳುವಾಗ ಭೀಮನು ತನ್ನ ಪಾದದಿಂದ ಒದ್ದು ಆ ಮರವನ್ನು ಅಲುಗಾಡಿಸುತ್ತಿದ್ದನು.
ಪ್ರಹಾರಾಭಿಹತಾಚ್ಚಾಪಿ ದ್ರುಮಾದ್ ವ್ಯಾಘೂರ್ಣಿತಾತ್ ತತಃ |
ಸಫಲಾಃ ಪ್ರಪತಂತಿ ಸ್ಮ ದ್ರುಮಾತ್ ಸ್ರಸ್ತಾಃ ಕುಮಾರಕಾಃ ॥9॥
ಪಾದಪ್ರಹಾರದಿಂದ ಆ ಮರವು ತುಂಬಾ ಅಲುಗಾಡಿದಾಗ ಹಣ್ಣುಗಳ ಜೊತೆಯಲ್ಲಿ ಆ ಕುಮಾರರೂ ಮರಗಳಿಂದ ಕಳಚಿ ಬೀಳುತ್ತಿದ್ದರು.
ನ ತೇ ನಿಯುದ್ಧೇ ನ ಜವೇ ಯೋಗ್ಯಾಸು ನ ಕದಾಚನ |
ಕುಮಾರಾ ಉತ್ತರಂ ಚಕ್ರುಃ ಸ್ಪರ್ಧಮಾನಾ ವೃಕೋದರಮ್ ॥10॥
ಭೀಮಸೇನ ಜೊತೆಯಲ್ಲಿ ಸ್ಪರ್ಧೆಯ ಭಾವವನ್ನು ಹೊಂದಿದ್ದ ಆ ಕುಮಾರರು ಕುಸ್ತಿಯಲ್ಲಾಗಲೀ, ವೇಗದಲ್ಲಾಗಲೀ ಅಥವಾ ಯೋಗ್ಯವಾಗ ಯಾವುದೇ ಕ್ರೀಡೆಯಲ್ಲಾಗಲೀ, ಭೀಮಸೇನನಿಗೆ ಪತ್ಯುತ್ತರವನ್ನು ಮಾತ್ರ ಕೊಡುತ್ತಿದ್ದರು. ಪ್ರತಿಕ್ರಿಯೆಯನ್ನು ಮಾಡಲು ಎಂದೂ ಸಾಧ್ಯವಾಗಲಿಲ್ಲ.
ಏಕಃ ಸ ಧಾರ್ತರಾಷ್ಟ್ರಾಣಾಂ ಸ್ಪರ್ಧಮಾನೋ ವೃಕೋದರಃ |
ಅಪ್ರಿಯೇಽತಿಷ್ಠದತ್ಯರ್ಥಂ ಬಾಲ್ಯಾನ್ನ ದ್ರೋಹಚೇತಸಾ ॥11॥

ಧೃತರಾಷ್ಟ್ರನ ಕುಮಾರರ ಜೊತೆಯಲ್ಲಿ ತಾನೊಬ್ಬನೇ ಸ್ಪರ್ಧೆಯನ್ನು ಮಾಡುತ್ತಾ ಭೀಮಸೇನನು ಅವರಿಗೆ ಬಾಲಭಾವದಿಂದ ಬಹಳ ಅಪ್ರಿಯವನ್ನು ಮಾಡುತ್ತಿದ್ದನು. ದ್ರೋಹ ಮಾಡುವ ಬುದ್ಧಿಯಿಂದ ಮಾಡುತ್ತಿರಲಿಲ್ಲ.
ತತೋ ಬಲಮಭಿಖ್ಯಾತಂ ಧಾರ್ತರಾಷ್ಟ್ರಃ ಪ್ರತಾಪವಾನ್ |
ಭೀಮಸೇನಸ್ಯ ತಜ್ಜ್ಞಾತ್ವಾ ದುಷ್ಟಭಾವಮದರ್ಶಯತ್ ॥12॥
ಆಗ ಪ್ರತಾಪಶಾಲಿಯಾದ ದುರ್ಯೋಧನನು ಭೀಮಸೇನನ ಪ್ರಖ್ಯಾತವಾದ ಬಲವನ್ನು ತಿಳಿದು ದುಷ್ಟ ಆಲೋಚನೆಗಳನ್ನು ಮಾಡಿದನು.
ತಸ್ಯ ಧರ್ಮಾದಪೇತಸ್ಯ ಪಾಪಾನಿ ಪರಿಪಶ್ಯತಃ |
ಮೋಹಾದೈಶ್ವರ್ಯಭಾವಾಚ್ಚ ಪಾಪಾ ಮತಿರಜಾಯತ ॥13॥
ಧರ್ಮದಿಂದ ದೂರನಾದ ಪಾಪಗಳಿಗೆ ಹೆದರದ ಅವನಿಗೆ ಮೋಹದಿಂದಲೂ ಐಶ್ವರ್ಯದ ಬಲದಿಂದಲೂ ದುರ್ಬುದ್ಧಿ-ಯುಂಟಾಯಿತು.
ಅಯಂ ಬಲವತಾಂ ಶ್ರೇಷ್ಠಃ ಕುಂತೀಪುತ್ರೋ ವೃಕೋದರಃ |
ಮಧ್ಯಮಃ ಪಾಂಡುಪುತ್ರಾಣಾಂ ನಿಕೃತ್ಯಾ ವಿನಿಹನ್ಯತಾಮ್ ॥14॥
ಪಾಂಡುಕುಮಾರರಲ್ಲಿ ಮಧ್ಯಮನಾದ, ಬಲಿಷ್ಠರಾದವರಲ್ಲಿ ಶ್ರೇಷ್ಠನಾದ, ಕುಂತಿಯ ಸುತನಾದ ಈ ವೃಕೋದರನನ್ನು ಮೋಸದಿಂದ ಕೊಲ್ಲಬೇಕು.
ಅಥ ತಸ್ಮಾದವರಜಂ ಜ್ಯೇಷ್ಠಂ ಚೈವ ಯುಧಿಷ್ಠಿರಮ್ |
ಪ್ರಸಹ್ಯ ಬಂಧನೇ ಬದ್ಧ್ವಾ ಪ್ರಶಾಸಿಷ್ಯೇ ವಸುಂಧರಾಮ್ ॥15॥
ಅನಂತರ, ಅವನ ತಮ್ಮನಾದ ಅರ್ಜುನನನ್ನು ಮತ್ತು ಅಣ್ಣನಾದ ಯುಧಿಷ್ಠಿರನನ್ನು ನನ್ನ ಶಕ್ತಿಯಿಂದ ಬಂಧನದಲ್ಲಿಟ್ಟು ನಾನೇ ಭೂಮಿಯನ್ನು ಆಳುವೆನು.
ಏವಂ ಸ ನಿಶ್ಚಯಂ ಪಾಪಂ ಕೃತ್ವಾ ದುರ್ಯೋಧನಸ್ತದಾ |
ನಿತ್ಯಮೇವಾಂತರಂ ಪ್ರೇಕ್ಷನ್ ಭೀಮಸ್ಯಾಸೀನ್ಮಹಾತ್ಮನಃ ॥16॥
ದುರ್ಯೋಧನನು ಹೀಗೆ ಪಾಪನಿಶ್ಚಯವನ್ನು ಮಾಡಿ ಮಹಾತ್ಮನಾದ ಭೀಮಸೇನನಲ್ಲಿ ತನ್ನ ಸೇಡನ್ನು ತೀರಿಸಿಕೊಳ್ಳಲು ಅವಕಾಶವನ್ನು ಕಾಯುತ್ತಾ ಕುಳಿತನು.
ತತೋ ಜಲವಿಹಾರಾರ್ಥಂ ಕಾರಯಾಮಾಸ ಭಾರತ |
ಚೇಲಕಂ ಬಲವೇಶ್ಮಾನಿ ವಿಚಿತ್ರಾಣಿ ಮಹಾಂತಿ ಚ ॥17॥
ಪ್ರಮಾಣಕೋಟ್ಯಾಂ ತದ್ದೇಶಂ ಸ್ಥಲಂ ಕಿಂಚಿದುಪೇತ್ಯ ಚ |
ಕ್ರೀಡಾವಸಾನೇ ಸರ್ವೇ ಚ ಶುಚಿವಸಾಃತ್ರಃ ಸ್ವಲಂಕೃತಾಃ |
ಸರ್ವಕಾಮಸಮೃದ್ಧಂ ತದನ್ನಂ ಬುಭುಜಿರೇ ಶನೈಃ ॥18॥
ಭಾರತನೇ, ಅನಂತರ ದುರ್ಯೋಧನನು ಜಲವಿಹಾರವನ್ನು ಮಾಡುವ ಸಲುವಾಗಿ ಗಂಗಾತೀರದಲ್ಲಿ ಪ್ರಮಾಣಕೋಟಿ ಮಡುವಿನ ಸಮೀಪದಲ್ಲಿ ಸ್ವಲ್ಪ ಉನ್ನತವಾದ ಸ್ಥಳವನ್ನು ಆರಿಸಿ ಅಲ್ಲಿ ಕಂಬಳಿಗಳಿಂದಲೂ ಮತ್ತು ವಸ್ತ್ರಗಳಿಂದಲೂ ವಿಚಿತ್ರವಾದ ದೊಡ್ಡ ಗುಡಾರಗಳನ್ನು ಮಾಡಿಸಿದನು. ಜಲವಿಹಾರದ ನಂತರ ಕುಮಾರರೆಲ್ಲರೂ ಅಲ್ಲಿಗೆ ಬಂದು ಶುಭ್ರವಾದ ವಸ್ತ್ರವನ್ನುಟ್ಟು ಚೆನ್ನಾಗಿ ಅಲಂಕೃತರಾಗಿ ಸರ್ವಸಮೃದ್ಧವಾದ ಭಕ್ಷ್ಯಭೋಜ್ಯಗಳನ್ನು ನಿಧಾನವಾಗಿ ತಿನ್ನುತ್ತಿದ್ದರು.
ದಿವಸಾಂತೇ ಪರಿಶ್ರಾಂತಾ ವಿಹೃತ್ಯ ಚ ಕುರೂದ್ವಹಾಃ |
ವಿಹಾರಾವಸಥೇಷ್ವೇವ ವೀರಾ ವಾಸಮರೋಚಯನ್ ॥19॥
ದಿವಸದ ಕೊನೆಯವರೆಗೂ ಜಲವಿಹಾರವನ್ನು ಮಾಡಿ ದಣಿದ ವೀರರಾದ ಆ ಕುರೂದ್ವಹರು ಆ ವಿಹಾರನಿವಾಸಗಳ್ಲಯೇ ವಾಸವನ್ನು ಮಾಡಲು ಬಯಸಿದರು.
ಸ್ವಿನ್ನಸ್ತು ಬಲವಾನ್ ಭೀಮೋ ವ್ಯಾಯಾಮಾಭ್ಯಧಿಕಸ್ತದಾ |
ವಾಹಯಿತ್ವಾ ಕುಮಾರಾಂಸ್ತಾನ್ ಜಲಕ್ರೀಡಾಗತಾನ್ ವಿಭುಃ |
ಪ್ರಮಾಣಕೋಟ್ಯಾಂ ವಾಸಾರ್ಥಂ ಸುಷ್ವಾಪಾರುಹ್ಯ ತತ್ಸ್ಥಲಮ್ ॥20॥
ಬಲಿಷ್ಠನಾದ ಭೀಮನು ಹೆಚ್ಚಿನ ವ್ಯಾಯಾಮದಿಂದ ಬೆವರುತ್ತಾ ಜಲಕ್ರೀಡಾರತರಾದ ಎಲ್ಲಾ ಬಾಲಕರನ್ನೂ ದಡಕ್ಕೆ ತಂದು ಹಾಕಿ ಪ್ರಮಾಣಕೋಟಿಯ ಬಳಿ ವಾಸಕ್ಕಾಗಿ ಕಲ್ಪಿಸಿದ್ದ ಉನ್ನತವಾದ ಸ್ಥಳವನ್ನು ಏರಿ ನಿದ್ರೆಮಾಡಿದನು.
ಶೀತಂ ವಾಸಂ ಸಮಾಸಾದ್ಯ ಶ್ರಾಂತೋ ಮದವಿಮೋಹಿತಃ |
ನಿಶ್ಚೇಷ್ಟಃ ಪಾಂಡವೋ ರಾಜನ್ ಸುಷ್ವಾಪ ಮೃತಕಲ್ಪವತ್ ॥21॥
ಎಲೈ ರಾಜನೇ, ಶಾಂತನೂ, ಮದವಿಮೋಹಿತನೂ ಆದ ಭೀಮನು ತಂಪಾದ ಮನೆಯನ್ನು ಸೇರಿ ಅಲುಗಾಡದೆ ಮೃತನಂತೆ ಮಲಗಿ ನಿದ್ದೆ ಮಾಡಿದನು.
ತತೋ ಬದ್ಧ್ವಾ ಲತಾಪಾಶೈರ್ಭೀಮಂ ದುರ್ಯೋಧನಃ ಶನೈಃ |
ಪ್ರಮಾಣಕೋಟ್ಯಾಂ ತಂ ಸುಪ್ತಂ ಗಂಗಾಯಾಂ ಬಲಿನಾಂ ವರಮ್ |
ಭೀಮಸೇನಂ ತದಾ ರಾಜನ್ ಬದ್ಧ್ವಾ ಪ್ರಾಕ್ಷೇಪಯಜ್ಜಲೇ ॥22॥
ಆಗ ದುರ್ಯೋಧನನು ಮೆಲ್ಲನೆ ಉಕ್ಕಿನಪಾಶಗಳಿಂದ ಭೀಮನನ್ನು ಬಿಗಿದು ಬಲಿಷ್ಠರಲ್ಲಿ ಶ್ರೇಷ್ಠನಾದ ನಿದ್ರಿಸುತ್ತಿದ್ದ ಅವನನ್ನು ಗಂಗೆಯ ಪ್ರಮಾಣಕೋಟಿ ಎಂಬ ಮಡುವಿನಲ್ಲಿ ಹಾಕಿದನು.
ತತಃ ಪ್ರಬುದ್ಧಃ ಕೌಂತೇಯಃ ಸರ್ವಾನ್ ಸಂಛಿದ್ಯ ಬಂಧನಾನ್ |

ಉದತಿಷ್ಠಜ್ಜಲಾದ್ ಭೂಯೋ ಭೀಮಃ ಪ್ರಹರತಾಂ ವರಃ ॥23॥
ಎಚ್ಚರಗೊಂಡ ಭೀಮಸೇನನು ತನ್ನ ಬಂಧನಗಳನ್ನೆಲ್ಲಾ ಕಿತ್ತು ಪುನಃ ಮಡುವಿನಿಂದ ಮೇಲೆದ್ದು ಬಂದನು.
ಸಮಾಸಾದ್ಯ ತತಃ ಕಾಂಶ್ಚಿನ್ಮಮರ್ದ ಚ ಶಿರಾಂಸಿ ಚ |
ಶಿರೋಭಿಃ ಶಿರಸಾ ವೀರಃ ಕೃತವಾನ್ ಯುದ್ಧಮದ್ಭುತಮ್ ॥24॥
ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಭೀಮನು ದಡಕ್ಕೆ ಬಂದು ಕೆಲವರನ್ನು ಮರ್ದಿಸಿ ತನ್ನ ತಲೆಯಿಂದ ಅವರ ತಲೆಗೆ ಹೊಡೆದು ಅದ್ಭುತವಾದ ಯುದ್ಧವನ್ನು ಮಾಡಿದನು.
ಸ ವಿಮುಕ್ತೋ ಮಹಾತೇಜಾ ನಾಜ್ಞಾಸೀತ್ ತೇನ ತತ್ಕೃತಮ್ |
ಪುನರ್ನಿದ್ರಾವಶಂ ನೀತಸ್ತತ್ರೈವ ಪ್ರಾಸ್ವಪದ್ ಬಲೀ ॥25॥
ಗಂಗೆಯ ಮಡುವಿನಿಂದ ವಿಮುಕ್ತನಾದ ಮಹಾತೇಜಸ್ವಿಯೂ, ಬಲಿಷ್ಠನೂ ಆದ ಅವನು ಯಾರು ತನ್ನನ್ನು ಮಡುವಿನಲ್ಲಿ ಹಾಕಿದರು ಎಂದು ತಿಳಿಯದೇ (ತಿಳಿಯದವನಂತೆ) ಪುನಃ ನಿದ್ರಾವಶನಾಗಿ ಅಲ್ಲಿಯೇ ಮಲಗಿದನು.
ಅಥ ರಾತ್ರ್ಯಾಂ ವ್ಯತೀತಾಯಾಮುತ್ತಸ್ಥುಃ ಕುರುಪಾಂಡವಾಃ |
ದುರ್ಯೋಧನಸ್ತು ಕೌಂತೇಯಂ ದೃಷ್ಟ್ವಾ ನಿರ್ವೇದಮಭ್ಯಗಾತ್ ॥26॥
ರಾತ್ರಿಯು ಕಳೆಯುತ್ತಿರಲು ಕುರುಪಾಂಡವರೆಲ್ಲರೂ ಎದ್ದು ಬಂದರು. ದುರ್ಯೋಧನನು ಭೀಮನು ಇನ್ನೂ ಬದುಕಿರುವುದನ್ನು ನೋಡಿ ನಿರ್ವೇದಗೊಂಡನು.
ಸುಪ್ತಂ ಚಾಪಿ ಪುನಃ ಸರ್ಪೈಃ ತೀಕ್ಷ್ಣದಂಷ್ಟ್ರೈರ್ಮಹಾವಿಷೈಃ |
ಕುಪಿತೈರ್ದಂಶಯಾಮಾಸ ಸರ್ವೇಷ್ವೇವಾಂಗಸಂಧಿಷು |
ದಂಷ್ಟ್ರಾಶ್ಚ ದಂಷ್ಟ್ರಿಣಾಂ ತೇಷಾಂ ಮರ್ಮಸ್ವಪಿ ನಿಪಾತಿತಾಃ ॥27॥
ಪುನಃ ಅವನು ಇನ್ನೊಮ್ಮೆ ತೀಕ್ಷ್ಣವಾದ ಹಲ್ಲುಗಳುಳ್ಳ ಮಹಾವಿಷವುಳ್ಳ ಕೋಪಗೊಂಡ ಸರ್ಪಗಳಿಂದ ಮಲಗಿರುವ ಭೀಮಸೇನನನ್ನು ಎಲ್ಲಾ ಮರ್ಮಸ್ಥಳಗಳಲ್ಲಿಯೂ ಕಚ್ಚಿಸಿದನು.
ತ್ವಚಂ ನ ಚಾಸ್ಯ ಬಿಭಿದುಃ ಸಾರತ್ವಾತ್ ಪೃಥುವಕ್ಷಸಃ |
ಪ್ರಬುದ್ಧೋ ಭೀಮಸೇನಸ್ತಾನ್ ಸರ್ವಾನ್ ಸರ್ಪಾನಪೋಥಯತ್ ॥
ವಜ್ರಶರೀರನೂ, ವಿಸ್ತಾರವಕ್ಷಸ್ಥಳವುಳ್ಳವನೂ ಆದ ಆ ಭೀಮನ ಸರ್ವಮರ್ಮಗಳಲ್ಲಿ ತಮ್ಮ ಕೋರೆಹಲ್ಲುಗಳನ್ನು ಊರಿದ ಆ ಸರ್ಪಗಳು ಅವನ ಚರ್ಮವನ್ನೂ ಭೇದಿಸಲು ಸಾಧ್ಯವಾಗಲಿಲ್ಲ.
ಸಾರಥಿಂ ಚಾಸ್ಯ ದಯಿತಮಪಹಸ್ತೇನ ಜಘ್ನಿವಾನ್ |
ತಥಾಽನ್ಯದಿವಸೇ ರಾಜನ್ ಹಂತುಕಾಮೋಽತ್ಯಮರ್ಷಣಃ ॥29॥
ಎಚ್ಚರಗೊಂಡ ಭೀಮಸೇನನು ಕಣ್ಣುಮುಚ್ಚಿಕೊಂಡೇ ಆ ಸರ್ಪಗಳನ್ನೆಲ್ಲಾ ಕೊಂಡು ಆ ಸರ್ಪಗಳನ್ನು ತಂದಿದ್ದ ದುರ್ಯೋಧನನ ಪ್ರಿಯಸಾರಥಿಯನ್ನೂ ಸಹ ಎಡಗೈಯಿಂದಲೇ ಸಂಹರಿಸಿದನು.
ಸೌಬಲೇನ ಸಹಾಮಂತ್ರ್ಯ ಸೌಬಲಸ್ಯ ಮತೇ ಸ್ಥಿತಃ |
ಭೋಜನೇ ಭೀಮಸೇನಸ್ಯ ತತಃ ಪ್ರಾಕ್ಷೇಪಯದ್ ವಿಷಮ್ ॥30॥
ರಾಜನೇ, ಇನ್ನೊಂದು ದಿವಸ ಅತಿಕೋಪಿಷ್ಟನಾದ ದುರ್ಯೋಧನನು ಭೀಮಸೇನನನ್ನು ಕೊಲ್ಲಲು ಬಯಸಿ ಶಕುನಿಯ ಜೊತೆಯಲ್ಲಿ ಮಂತ್ರಾಲೋಚನೆಯನ್ನು ನಡೆಸಿ ಶಕುನಿಯ ಅಭಿಪ್ರಾಯದಂತೆ ಭೀಮಸೇನನ ಭೋಜನದಲ್ಲಿ ವಿಷವನ್ನು ಬೆರೆಸಿದನು.
ವೈಶ್ಯಾಪುತ್ರಸ್ತದಾಚಷ್ಟ ಪಾರ್ಥಾನಾಂ ಹಿತಕಾಮ್ಯಯಾ |
ಕಾಲಕೂಟಂ ವಿಷಂ ತೀಕ್ಷ್ಣಂ ಸಂಭೂತಂ ರೋಮಹರ್ಷಣಮ್ ॥31॥
ಧೃತರಾಷ್ಟ್ರನ ವೈಶ್ಯಾಪುತ್ರನಾದ ಯುಯುತ್ಸುವು ಪಾಂಡವರ ಮೇಲಿನ ಹಿತದೃಷ್ಟಿಯಿಂದ ರೋಮಾಂಚಕಾರಿಯಾದ ತೀಕ್ಷ್ಣವಾದ ಕಾಲಕೂಟವಿಷವು ಭೋಜನದಲ್ಲಿ ಬೆರೆತಿದೆ ಎಂದು ತಿಳಿಸಿದನು.
ತಚ್ಚಾಪಿ ಭುಂಕ್ತತ್ವಽಜರಯದವಿಕಾರೋ ವೃಕೋದರಃ |
ವಿಕಾರಂ ನಾಭ್ಯಜನಯತ್ ಸುತೀಕ್ಷ್ಣಮಪಿ ತದ್ ವಿಷಮ್ ॥32॥
ಭೀಮಸಂಹನನೋ ಭೀಮಸ್ತಸ್ಮಾದಜರಯಚ್ಚ ತತ್ |
ತತೋಽನ್ಯದಿವಸೇ ರಾಜನ್ ಹಂತುಕಾಮೋ ವೃಕೋದರಮ್ ॥33॥
ವೃಕೋದರನು ಅದನ್ನೂ ತಿಂದು ಅರಗಿಸಿಕೊಂಡು ನಿರ್ವಿಕಾರನಾಗಿದ್ದನು. ಅತ್ಯಂತ ತೀಕ್ಷ್ಣವಾದ ಕಾಲಕೂಟವಿಷವೂ ಸಹ ಅವನಲ್ಲಿ ವಿಕಾರವನ್ನು ಉಂಟುಮಾಡಲಿಲ್ಲ. ಭೀಮನು ಭೀಮಕಾಯನಾದ ಕಾರಣದಿಂದ ಆ ವಿಷವನ್ನು ಅರಗಿಸಿಕೊಂಡನು.
ಸೌಬಲೇನ ಸಹಾಯೇನ ಧಾರ್ತರಾಷ್ಟ್ರೋಽಭ್ಯಚಿಂತಯತ್ |
ಚಿಂತಯನ್ ನಾಲಭನ್ನಿದ್ರಾಂ ದಿವಾರಾತ್ರಮತಂದ್ರಿತಃ ॥34॥
ರಾಜನೇ, ಇನ್ನೊಂದು ದಿವಸ ವೃಕೋದರನನ್ನು ಕೊಲ್ಲಬೇಕೆಂದು ನಿಶ್ಚಯಿಸಿ ದುರ್ಯೋಧನನು ಶಕುನಿಯ ಜೊತೆಯಲ್ಲಿ ಚಿಂತಿಸಿದನು. ಹಾಗೆ ಎಚ್ಚರಿಕೆಯಿಂದ ಚಿಂತಿಸುತ್ತಿದ್ದ ಅವನಿಗೆ ಹಗಲಾಗಲೀ ರಾತ್ರಿಯಾಗಲೀ ನಿದ್ರೆಯು ಬರುತ್ತಿರಲಿಲ್ಲ.
ಏವಂ ದುರ್ಯೋಧನಃ ಕರ್ಣಃ ಶಕುನಿಶ್ಚಾಪಿ ಸೌಬಲಃ |
ಅನೇಕೈರಪ್ಯುಪಾಯೈಸ್ತಾನ್ ಜಿಘಾಂಸಂತಿ ಸ್ಮ ಪಾಂಡವಾನ್ ॥35॥
ಹೀಗೆ ದುರ್ಯೋಧನ, ಕರ್ಣ ಮತ್ತು ಶಕುನಿ ಈ ಮೂವರೂ, ಅನೇಕ ಉಪಾಯಗಳಿಂದ ಆ ಪಾಂಡವರನ್ನು ಕೊಲ್ಲಲು ಬಯಸಿದರು.
ನ ಜಜ್ಞಿರೇ ತು ತದ್ವೃತ್ತಂ ಪಾಂಡವಾ ಮಂದಚೇತಸಃ |
ವೈಶ್ಯಾಪುತ್ರಸ್ತದಾಚಷ್ಟ ಪಾರ್ಥಾನಾಂ ಹಿತಕಾಮ್ಯಯಾ ॥36॥

ಮಂದಮತಿಗಳಾದ ಪಾಂಡವರಿಗೆ ಈ ವೃತ್ತಾಂತವು ತಿಳಿಯುತ್ತಿರಲಿಲ್ಲ. ಆದರೆ, ಪಾಂಡವರಿಗೆ ಹಿತವನ್ನು ಬಯಸಿ ವೈಶ್ಯಾಪುತ್ರನಾದ ಯುಯುತ್ಸುವು ಎಲ್ಲವನ್ನೂ ತಿಳಿಸುತ್ತಿದ್ದನು.
ಪಾಂಡವಾ ಹ್ಯಪಿ ತತ್ಸರ್ವಂ ಪ್ರತ್ಯಜಾನನ್ನರಿಂದಮಾಃ |
ಉದ್ಭಾವನಮಕುರ್ವಂತೋ ವಿದುರಸ್ಯ ಮತೇ ಸ್ಥಿತಾಃ ॥37॥
ಅರಿಂದಮರಾದ ಪಾಂಡವರು ಎಲ್ಲವನ್ನೂ ಗಮನಿಸಿದರೂ, ವಿದುರನ ಅಭಿಪ್ರಾಯದಂತೆ ಏನನ್ನೂ ಸೂಚಿಸದೆ, ಸುಮ್ಮನಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-14
ತಂ ವೀಕ್ಷ್ಯ ದುಷ್ಟಮನಸೋಽತಿವಿಷಣ್ಣಚಿತ್ತಾಃ
ಸಮ್ಮಂತ್ರ್ಯ ಭೂಯ ಉರುನಾಗಗಣಾನಥಾಷ್ಟೌ |
ಶುಕ್ರೋಕ್ತಮಂತ್ರಬಲತಃ ಪುರ ಆಹ್ವಯಿತ್ವಾ
ಪಶ್ಚಾತ್ ಸುಪಂಜರಗತಾನ್ ಪ್ರದದುಃ ಸ್ವಸೂತೇ ॥75॥
ಅವನನ್ನು ನೋಡಿ ದುರ್ಬುದ್ಧಿಗಳಾದ ಕೌರವರು ಅತ್ಯಂತ ವಿಷಣ್ಣಚಿತ್ತರಾಗಿ, ಮತ್ತೂ ಮಂತ್ರಾಲೋಚನ ಮಾಡಿ, ಎಂಟು ಮಹಾನಾಗಸಮೂಹಗಳನ್ನು ಶುಕ್ರಾಚಾರ್ಯರು ಉಪದೇಶಿಸಿದ ಮಂತ್ರಬಲದಿಂದ ಎದುರಿಗೆ ಆಹ್ವಾನಿಸಿ, ಒಳ್ಳೆಯ ಪಂಜರದಲ್ಲಿ ಹಿಡಿದಿಟ್ಟು, ತಮ್ಮ ಸಾರಥಿಯ ವಶದಲ್ಲಿ ಕೊಟ್ಟರು.
ದುರ್ಯೋಧನೇನ ಪೃಥುಮಂತ್ರ ಬಲೋಪಹೂತಾನ್
ತತ್ಸಾರಥಿಃ ಫಣಿಗಣಾನ್ ಪದನಾತ್ಮಜಸ್ಯ |
ಸುಪ್ತಸ್ಯ ವಿಸ್ತೃತ ಉರಸ್ಯಮುಚದ್ ವಿಶೀರ್ಣ
ದಂತಾ ಬಭೂವುರಮುಮಾಶು ವಿದಶ್ಯ ನಾಗಾಃ ॥76॥
ದುರ್ಯೋಧನ ಮಹಾಮಂತ್ರಬಲದಿಂದ ತಂದಿರಿಸಿದ್ದ ಈ ಹಾವುಗಳ ಸಮೂಹಗಳನ್ನು ಅವನ ಸಾರಥಿ ಮಲಗಿದ್ದ ಭೀಮನ ವಿಶಾಲವಾದ ಎದೆಯ ಮೇಲೆ ಬಿಟ್ಟ. ಆ ಹಾವುಗಳು ಭೀಮನನ್ನು ಕಡಿದು ತಕ್ಷಣ ಹಲ್ಲುಗಳನ್ನು ಕಳೆದುಕೊಂಡವು.
ಕ್ಷಿಪತ್ವ ಸುದೂರ ಸುದೂರಮುರುನಾಗವರಾನಥಾಷ್ಟೌ
ತದ್ವಂಶಜಾನ್ ಸ ವಿನಿಹತ್ಯ ಪಿಪೀಲಿಕಾವತ್ |
ಜ್ಘ್ನೇ ಚ ಸೂತ್ರಮಪಹಸ್ತತ ಏವ ಭೀಮಃ
ಸುಷ್ವಾಪ ಪೂರ್ವವದನುತ್ಥಿತ ಏವ ತಲ್ಪಾತ್ ॥77॥
ಭೀಮ ಎಂಟು ಮಹಾನಾಗ ಸಮೂಹಗಳನ್ನು ಬಲುದೂರಕ್ಕೆ ಎಸೆದು ಅವುಗಳ ವಂಶದಲ್ಲಿ ಹುಟ್ಟಿದ ಕೆಟ್ಟ ಹಾವುಗಳನ್ನು ಇರುವೆಗಳಂತೆ ಕೊಂದು ಸಾರಥಿಯನ್ನೂ ಮುಂಗೈಯಿಂದಲೆ ಕೊಂದ. ಹಾಸಿಗೆಯಿಂದ ಏಳದೆಯೆ ಹಿಂದಿನಂತೆಯೆ ಮಲಗಿದ.
ತತ್ ತಸ್ಯ ನೈಜಬಲಮಪ್ರತಿಮಯಂ ನಿರೀಕ್ಷ್ಯ
ಸರ್ವೇ ಕ್ಷಿತೀಶತನಯಾ ಅಧಿಕಂ ವಿಷೇದುಃ |
ನಿಶ್ವಾಸತೋ ದರ್ಶನಾದಪಿ ಭಸ್ಮ ಯೇಷಾಂ
ಭೂಯಾಸುರೇವ ಭುವನಾನಿ ಚ ತೇ ಮೃಷಾಸನ್ ॥78॥
ಭೀಮನ ಅಪ್ರತಿಮವಾದ ಸ್ವಾಭಾವಿಕವಾದ ಬಲವನ್ನು ಕಂಡು ಎಲ್ಲ ರಾಜಕುಮಾರರೂ ಬಹಳ ವಿಷಾದ ಹೊಂದಿದ್ದರು. ಯಾವ ಹಾವುಗಳ ವಿಶ್ವಾಸದಿಂದಲೂ ದರ್ಶನದಿಂದಲೂ ಲೋಕಗಳು ಭಸ್ಮವಾಗುವುವೋ ಅವು ವ್ಯರ್ಥವಾದುವು.
ದದ್ಭಿರ್ವಿದಶ್ಯ ನ ವಿಕಾರಮಮುಷ್ಯ ಕರ್ತುಂ
ಶೇಕುರ್ಭುಜಂಗಮವರಾ ಅಪಿ ಸುಪ್ರಯತ್ನಾಃ |
ಕಸ್ಯಾಪಿ ನೇದೃಶಬಲಂ ಶ್ರುತಪೂರ್ವಮಾಸೀತ್
ದೃಷ್ಟಂ ಕಿಮು ಸ್ಮ ತನಯೇಽಪಿ ಹಿರಣ್ಯಕಸ್ಯ ॥79॥
ಮಹಾಸರ್ಪಗಳು ಹಲ್ಲುಗಳಿಂದ ಕಡಿದು ಬಹಳ ಪ್ರಯತ್ನ ಮಾಡಿಯೂ ಭೀಮನಿಗೆ ನೋವು ಉಂಟು ಮಾಡಲು ಶಕ್ತವಾಗಲಿಲ್ಲ. ಇನ್ನು ಯಾರಿಗೂ ಇಂಥ ಬಲ ಹಿಂದೆ ಕೇಳಿಲ್ಲ. ಕಂಡಿಲ್ಲವೆಂದು ಇನ್ನೇನು ಹೇಳಬೇಕು? ಪ್ರಹ್ಲಾದನಲ್ಲಿಯೂ ಇಂಥ ಬಲವಿತ್ತೆಂದು ಕೇಳಿಲ್ಲ.
ಸ್ವಾತ್ಮಾವನಾರ್ಥಮಧಿಕಾಂ ಸ್ತುತಿಮೇವ ಕೃತ್ವಾ
ವಿಷ್ಣೋಃ ಸ ದೈತ್ಯತನಯೋ ಹರಿಣಾವಿತೋಽಭೂತ್ |
ನ ತ್ವೌರಸಂ ಬಲಮಮುಷ್ಯ ಸ ಕೃಷ್ಯತೇ ಹಿ
ಭೃತ್ಯೈರ್ಬಲಾತ್ ಸ್ವಪಿತುರೌರಸಮಸ್ಯ ವೀರ್ಯಮ್ ॥80॥
ಪ್ರಹ್ಲಾದ ತನ್ನ ರಕ್ಷಣೆಗಾಗಿ ವಿಷ್ಣುವನ್ನು ಬಹಳ ಸ್ತುತಿ ಮಾಡಿಯೆ ವಿಷ್ಣುವಿನಿಂದ ರಕ್ಷಿತನಾಗಿದ್ದ. ಅವನದು ಸ್ವಾಭಾವಿಕ ಬಲವಲ್ಲ. ಏಕೆಂದರೆ ತನ್ನ ತಂದೆಯ ಭಟರು ಅವನನ್ನು ಬಲಾತ್ಕಾರವಾಗಿ ಸೆಳೆಯುತ್ತಿದ್ದರು. ಭೀಮನ ಬಲ ಸ್ವಾಭಾವಿಕ.
* * * *
ನೂರ ಇಪ್ಪತ್ತಾರನೆಯ ಅಧ್ಯಾಯ

(ದುರ್ಯೋಧನನಿಂದ ಪುನಃ ಭೀಮನಿಗೆ ವಿಷದಾನ, ಭೀಮನ ನಾಗಲೋಕ ಪ್ರಾಪ್ತಿ ಮತ್ತು ಅಲ್ಲಿ ಸನ್ಮಾನ.)
ವೈಶಂಪಾಯನಃ
ತತಸ್ತೇ ಮಂತ್ರಯಾಮಾಸುರ್ದುರ್ಯೋಧನಪುರೋಗಮಾಃ |
ಪ್ರಾಣವಾನ್ ವಿಕ್ರಮೀ ಚಾಪಿ ಶೌರ್ಯೇ ಮಹತಿ ಚ ಸ್ಥಿತಃ ||1||
ಸ್ಪರ್ಧತೇ ಚಾಪಿ ಸತತಮಸ್ಮಾನೇಕೋ ವೃಕೋದರಃ |
ತಂ ತು ಸುಪ್ತಂ ಪುರೋದ್ಯಾನೇ ಜಲೇ ಶೂರಂ ಕ್ಷಿಪಾಮಹೇ ||2||
ಅನಂತರ ಆ ದುರ್ಯೋಧನ ಮೊದಲಾದವರೆಲ್ಲರೂ ಸೇರಿ ಮಂತ್ರಾಲೋಚನೆಯನ್ನು ಮಾಡಿದರು. ವೃಕೋದರನು ಪ್ರಾಣಶಕ್ತಿ-ಯುಳ್ಳವನು, ವಿಕ್ರಮವುಳ್ಳವನು ಮತ್ತು ಮಹಾಶೌರ್ಯಸಂಪನ್ನನು. ಯಾವಾಗಲೂ ನಮ್ಮೆಲ್ಲರ ಜೊತೆಯಲ್ಲಿ ಅವನೊಬ್ಬನೇ ಎದುರಾಗಿ ಸ್ಪರ್ಧಿಸುತ್ತಾನೆ. ಪುರೋದ್ಯಾನದಲ್ಲಿ ನಿದ್ದೆಮಾಡುವ ಆ ಶೂರನನ್ನು ನೀರಿನಲ್ಲಿ ಹಾಕೋಣ.
ತತೋ ಜಲವಿಹಾರಾರ್ಥಂ ಕಾರಯಾಮಾಸ ಭಾರತ |
ಚೇಲಕಂಬಲವೇಶ್ಮಾನಿ ಚಿತ್ರಾಣಿ ಚ ಶುಭಾನಿ ಚ ||3||
ಭಾರತನೇ, ಅನಂತರ ಜಲವಿಹಾರದ ಸಲುವಾಗಿ ಚೇಲ ಮತ್ತು ಕಂಬಳಿಗಳಿಂದ ಸುಂದರವಾದ ಮತ್ತು ಮನೋಹರವಾದ ಅನೇಕ ಗುಡಾರಗಳನ್ನು ಮಾಡಿಸಿದನು.
ತತ್ರ ಸಂಸ್ಕಾರಯಾಮಾಸುರ್ನಾನಾಗಾರಾಣ್ಯನೇಕಶಃ |
ಉದಕಕ್ರೀಡನಾರ್ಥಾನಿ ಕಾರಯಾಮಾಸ ಭಾರತ ||4||
ಅನಂತರ ಉದಕ ಕ್ರೀಡೆಗಾಗಿ ನಿರ್ಮಿಸಿದ ಆ ವಸ್ತ್ರಗೃಹಗಳಿಗೆ ಅನೇಕ ಅಲಂಕಾರಗಳನ್ನು ಮಾಡಿಸಿದನು.
ತತೋ ದುರ್ಯೋಧನಸ್ತತ್ರಾಹ ಪಾಂಡವಾಂಸ್ತು ಸುದುರ್ಮತಿಃ |
ಗಂಗಾಮಿಮಾಂ ನಯಾಮೋಽದ್ಯ ಉದ್ಯಾನವನಶೋಭಿತಾಮ್ ||5||
ಸಹಿತಾ ಭ್ರಾತರಃ ಸರ್ವೇ ಜಲಕ್ರೀಡಾಮವಾಪ್ನುಮಃ |
ಏವಮಸ್ತ್ವಿತಿ ತಂ ಚಾಪಿ ಪ್ರತ್ಯುವಾಚ ಯುಧಿಷ್ಠಿರಃ ||6||
ಅನಂತರ ಮಹಾದುರ್ಬುದ್ಧಿಯುಳ್ಳ ದುರ್ಯೋಧನನು ಪಾಂಡವರನ್ನು ಕುರಿತು `ನಾವೆಲ್ಲಾ ಅಣ್ಣತಮ್ಮಂದಿರೂ ಉದ್ಯಾನವನ ಶೋಭಿತವಾದ ಗಂಗೆಗೆ ಹೋಗಿ ಅಲ್ಲಿ ಜಲಕ್ರೀಡೆಯನ್ನು ಆಡೋಣ' ಎಂದು ಹೇಳಿದನು. `ಹಾಗೆಯೇ ಆಗಲಿ' ಎಂದು ಯುಧಿಷ್ಠಿರನು ಅವನಿಗೆ ಉತ್ತರವನ್ನು ಕೊಟ್ಟನು.
ತೇ ರಥೈರ್ನಗರಾಕಾರೈರ್ದೇಶಜೈಶ್ಚ ಹಯೋತ್ತಮೈಃ |
ನಿರ್ಯಯುರ್ನಗರಾದ್ ವೀರಾಃ ಕುರವಃ ಪಾಂಡವೈಃ ಸಹ ||7||
ಅನಂತರ ಆ ಕೌರವರು ಮತ್ತು ಪಾಂಡವರು ವಿದೇಶದ ಕುದುರೆಗಳನ್ನು ಹೂಡಿದ ದೊಡ್ಡ ದೊಡ್ಡ ರಥಗಳಲ್ಲಿ ನಗರದಿಂದ ಹೊರಗೆ ಹೊರಟರು.
ಉದ್ಯಾನವನಮಾಸಾದ್ಯ ಸಂಪ್ರಸೃಜ್ಯ ಚ ವಾಹನಮ್ |
ಪ್ರಾವಿಶಂಸ್ತು ಮಹಾವೀರ್ಯಾಃ ಸಿಂಹಾ ಇವ ಗಿರೇರ್ಗುಹಾಃ ||8||
ಮಹಾವೀರ್ಯರಾದ ಅವರು ಉದ್ಯಾನವನವನ್ನು ತಲುಪಿ ವಾಹನಗಳನ್ನು ಬಿಚ್ಚಿ ಸಿಂಹಗಳು ಗಿರಿಯ ಗುಹೆಗಳನ್ನು ಪ್ರವೇಶಿಸುವಂತೆ ಉದ್ಯಾನವನವನ್ನು ಪ್ರವೇಶಿಸಿದರು.
ಉದ್ಯಾನಂ ಸ್ಮಾಥ ಪಶ್ಯಂತಿ ಭ್ರಾತರಃ ಸರ್ವ ಏವ ತೇ |
ಉಪಸ್ಥಾನಗೃಹೈಃ ಶುಭ್ರೈರ್ವಲಭೀಭಿಶ್ಚ ಶೋಭಿತಮ್ ||9||
ಎಲ್ಲಾ ಅಣ್ಣತಮ್ಮಂದಿರೂ ಶುಭ್ರವಾದ ವಿಶ್ರಾಂತಿಗೃಹಗಳಿಂದಲೂ ವಲಭಿಗಳಿಂದಲೂ ಶೋಭಿಸುವ ಉದ್ಯಾನವನ್ನು ನೋಡಿದರು.
ಗವಾಕ್ಷಕೈಸ್ತಥಾ ಜಾಲೈರ್ಜಲಸಂಸಾರಕೈಸ್ತಥಾ |
ಸೂಪಾಕೃತಂ ಸುಧಾಕಾರೈಃ ಚಿತ್ರಕಾರೈಶ್ಚ ಶಿಲ್ಪಿಭಿಃ ||10||
ಆ ಗೃಹಗಳಿಗೆ ಗವಾಕ್ಷಗಳು ಮತ್ತು ನೀರನ್ನು ನೂಕುವ ಸಾಧನಗಳು, ಮತ್ತು ಜಾಲಗಳು ಇದ್ದವು. ಬಣ್ಣವನ್ನು ಹಚ್ಚುವವರಿಂದ ಚೆನ್ನಾಗಿ ಅಲಂಕಾರ ಮಾಡಲ್ಪಟ್ಟಿದ್ದು. ಚಿತ್ರಕಾರರಾದ ಶಿಲ್ಪಿಗಳು ಅಲ್ಲಿ ಅನೇಕ ಚಿತ್ರಗಳನ್ನು ನಿರ್ಮಿಸಿದ್ದರು.
ದೀರ್ಘಿಕಾಭಿಶ್ಚ ಪುಣ್ಯಾಭಿಃ ತಥಾ ಕಾರಂಡಕೈರಪಿ |
ಜಲಂ ತು ಶುಶುಭೇ ಚ್ಛನ್ನಂ ಫುಲ್ಲೈರ್ಜಲರುಹೈಸ್ತಥಾ ||11||
ಅಲ್ಲಿ ಪವಿತ್ರವಾದ ಬಾವಿಗಳು ಮತ್ತು ಕಾರಂಡಕಗಳು ಇದ್ದವು. ಅದರಲ್ಲಿನ ನೀರು ಅರಳಿದ ಜಲಪುಷ್ಪಗಳಿಂದ ಮತ್ತು ಜಲಸಸ್ಯಗಳಿಂದ ಆವೃತವಾಗಿ ಶೋಭಿಸುತ್ತಿತ್ತು.
ಉಪಕೀರ್ಣಾ ವಸುಮತೀ ತಥಾ ಪುಷ್ಪೈರ್ಯಥರ್ತುಕೈಃ |
ಉಪವಿಷ್ಟಾಸ್ತಥಾ ಸರ್ವೇ ಪಾಂಡವಾಃ ಕುರವಸ್ತಥಾ ||12||
ಉದ್ಯಾನ ಭೂಮಿಯು ಆಯಾ ಋತುಗಳಿಗೆ ಯೋಗ್ಯವಾದ ಪುಷ್ಪಗಳಿಂದ ಎಲ್ಲಾ ಕಡೆಯಲ್ಲಿಯೂ ತುಂಬಿದ್ದಿತು. ಪಾಂಡವರು ಮತ್ತು ಕೌರವರೆಲ್ಲರೂ ಆ ಉದ್ಯಾನದಲ್ಲಿ ಕುಳಿತುಕೊಂಡರು.
ಉಪಪನ್ನಾನ್ ಬಹೂನ್ ಕಾಮಾಂಸ್ತಥಾ ಭುಕತ್ವಾ ತತಸ್ತತಃ |
ಅಥೋದ್ಯಾನವನೇ ತಸ್ಮಿನ್ ತಥಾ ಕ್ರೀಡಾಗತಾಶ್ಚ ತೇ ||13||
ಯೋಗ್ಯವಾದ ಮತ್ತು ಇಷ್ಟವಾದ ಅನೇಕ ವಸ್ತುಗಳನ್ನು ಭುಂಜಿಸಿ ಆ ಉದ್ಯಾನವನದಲ್ಲಿ ಕ್ರೀಡೆಗಾಗಿ ಹೊರಟರು.
ಪರಸ್ಪರಸ್ಯ ವಕ್ತ್ರೇಷು ದದುರ್ಭಕ್ಷ್ಯಾಂಸ್ತತಸ್ತತಃ |

ತತೋ ದುರ್ಯೋಧನಃ ಪಾಪಃ ತದ್ ಭಕ್ಷ್ಯೇ ಕಾಲಕೂಟಕಮ್ ॥14॥
ವಿಷಂ ಪ್ರಕ್ಷೇಪಯಾಮಾಸ ಭೀಮಸೇನಜಿಘಾಂಸಯಾ ।
ಸ್ವಯಮುತ್ಥಾಯ ಚೈವಾಥ ಹೃದಯೇನ ಕ್ಷುರೋಪಮಃ ॥15॥
ಪರಸ್ಪರವಾಗಿ ಒಬ್ಬರ ಬಾಯಿಯಲ್ಲಿ ಇನ್ನೊಬ್ಬರು ಭಕ್ಷ್ಯಗಳನ್ನಿಟ್ಟು ತಿನ್ನಿಸಿದರು. ಆಗ ಪಾಪಿಯಾದ ದುರ್ಯೋಧನನು ಭಕ್ಷ್ಯದಲ್ಲಿ ಕಾಲಕೂಟವಿಷವನ್ನು ಬೆರೆಸಿ ಭೀಮನನ್ನು ಕೊಲ್ಲುವ ಅಭಿಪ್ರಾಯದಿಂದ ಭೀಮನ ಬಾಯಿಯಲ್ಲಿ ಹಾಕಿದನು.
ಸತ್ಕೃತ್ಯ ಭ್ರಾತೃವತ್ ತತ್ರ ವಾಚಾ ಚಾಮೃತಕಲ್ಪಯಾ ।
ಪ್ರಾಕ್ಷಿಪದ್ ವೈ ಸ್ವಯಂ ಭಕ್ಷ್ಯಂ ವಕ್ತ್ರೇ ಭೀಮಸ್ಯ ಪಾಪಕೃತ್ ॥16॥
ಹರಿತವಾದ ಕತ್ತಿಯಂತಿರುವ ಹೃದಯವನ್ನು ಹೊಂದಿದ್ದ ಅವನು ತಾನೇ ಸ್ವತಃ ಎದ್ದು ಅಣ್ಣನಂತೆ ಸತ್ಕಾರವನ್ನು ಮಾಡಿ ಮಧುರವಾದ ಮಾತುಗಳನ್ನಾಡಿ ಭೀಮನ ಬಾಯಿಯಲ್ಲಿ ಪಾಪನಿಶ್ಚಯವುಳ್ಳ ಅವನು ಸ್ವಯಂ ಭಕ್ಷ್ಯಗಳನ್ನು ಹಾಕಿದನು.
ಪ್ರಭಕ್ಷಿತಂ ಚ ಭೀಮೇನ ಹ್ಯಸ್ಯ ದೋಷಮಜಾನತಾ ।
ತತೋ ದುರ್ಯೋಧನಸ್ತತ್ರ ಹೃದಯೇನ ಹಸನ್ನಿವ ॥17॥
ಕೃತಕೃತ್ಯಮಿವಾತ್ಮಾನಂ ಮನ್ಯತೇ ಪುರುಷಾಧಮಃ ।
ತತಸ್ತೇ ಸಹಿತಾಃ ಸರ್ವೇ ಜಲಕ್ರೀಡಾಮಕುರ್ವತ ॥18॥
ದುರ್ಯೋಧನನ ದೋಷವನ್ನು ತಿಳಿಯದಿದ್ದ ಭೀಮನು ಅದನ್ನು ತಿಂದನು. ಆಗ ಪುರುಷಾಧಮನಾದ ದುರ್ಯೋಧನನು ಮನಸ್ಸಿನಲ್ಲಿಯೇ ನಗುತ್ತಾ ತಾನು ಕೃತಕೃತ್ಯನೆಂದು ಭಾವಿಸಿದನು. ಅನಂತರ ಎಲ್ಲರೂ ಸೇರಿ ಜಲಕ್ರೀಡೆ ಆಡಿದರು.
ದಿವಾಸಾಂತೇ ಪರಿಶ್ರಾಂತಾ ವಿಹೃತ್ಯ ಕುರುನಂದನಾಃ ।
ವಿಹಾರಾಯತನೇಷ್ವೇವ ವೀರಾ ವಾಸಮರೋಚಯನ್ ॥19॥
ದಿನದ ಕೊನೆಯ ವೇಳೆಗೆ ಜಲಕ್ರೀಡೆಯಾಡಿ ದಣಿದ ಕುರುನಂದನರು ವಿಹಾರಗೃಹಗಳಲ್ಲಿಯೇ ವಾಸಮಾಡಲು ಬಯಸಿದರು.
ಭೀಮಸ್ತು ಬಲವಾನ್ ಭುಕತತ್ವ ವ್ಯಾಯಾಮಾಭ್ಯಧಿಕೋ ಜಲೇ ।
ವಾಹಯಿತ್ವಾ ಕುಮಾರಾಂಸ್ತಾನ್ ಜಲಕ್ರೀಡಾಂ ಮಹಾಬಲಃ ॥20॥
ಪ್ರಮಾಣಕೋಟ್ಯಾಂ ವಾಸಾರ್ಥೀ ಪುನಶ್ಚಾರುಹ್ಯ ತತ್ಸ್ಥಲಮ್ ।
ಸ ಹಿ ತತ್ಸ್ಥಲಮಾರುಹ್ಯ ಶ್ರಾಂತಶ್ಚಾಪ್ಸು ವಿಶೇಷತಃ ।
ಶ್ರಮೇಣ ಚ ಪರೀತಾಂಗಃ ಸುಷ್ವಾಪ ಮೃತಕಲ್ಪವತ್ ॥21॥
ಬಲಿಷ್ಠನಾದ ಭೀಮನು ಭಕ್ಷ್ಯಗಳನ್ನು ತಿಂದು ಜಲವಿಹಾರ ಮಾಡುತ್ತಾ ಹೆಚ್ಚು ವ್ಯಾಯಾಮವನ್ನು ಮಾಡಿ ಎಲ್ಲಾ ಕುಮಾರರನ್ನೂ ದಡಕ್ಕೆ ಕರೆದುಕೊಂಡು ಬಂದು ಪ್ರಮಾಣಕೋಟಿಯ ಬಳಿ ವಾಸಮಾಡಲು ಬಯಸಿ ಪುನಃ ಆ ಉನ್ನತ ಸ್ಥಳವನ್ನು ಹತ್ತಿದನು. ಅವನು ಆ ಎತ್ತರದ ಸ್ಥಳವನ್ನು ಏರಿ ನೀರಿನಲ್ಲಿ ವಿಶೇಷವಾಗಿ ದಣಿದ ಕಾರಣದಿಂದ ಶ್ರಮವುಳ್ಳವನಾಗಿ ಶವದಂತೆ ಮಲಗಿ ನಿದ್ರೆಮಾಡಿದನು.
ತತೋ ಬದ್ಧ್ವಾ ದೃಢಂ ಪಾಶೈರ್ಭೀಮಂ ದುರ್ಯೋಧನಃ ಸ್ವಯಮ್।
ಶೂಲಾನ್ಯಪ್ಸು ನಿಖಾಯಾಶು ಸ್ಥಲಾಜ್ಜಲಮಪಾತಯತ್ ॥22॥
ಸಶೇಷತ್ವಾನ್ನ ಸಂಪ್ರಾಪ್ತೋ ಜಲೇ ಶೂಲಾನಿ ಪಾಂಡವಃ ।
ಪಪಾತ ಯತ್ರ ತತ್ರಾಸ್ಯ ಶೂಲಂ ನಾಸೀದ್ ಯದೃಚ್ಛಯಾ ॥23॥
ಆಗ ದುರ್ಯೋಧನನು ಭೀಮನನ್ನು ಉಕ್ಕಿನ ಪಾಶಗಳಿಂದ ಸ್ವಯಂ ಬಿಗಿದು ಹರಿತವಾದ ಗೂಟಗಳನ್ನು ನೆಟ್ಟಿರುವ ನೀರಿನಲ್ಲಿ ಭೂಮಿಯಿಂದ ಉರುಳಿಸಿದನು. ಆ ಗೂಟಗಳ ಮೇಲೆ ನೀರಿನ ಪ್ರಮಾಣವು ಅಧಿಕವಾಗಿದ್ದುದರಿಂದ ಭೀಮನು ಆ ಶೂಲಗಳನ್ನು ತಲುಪಲಿಲ್ಲ. ಅಲ್ಲದೇ, ಭೀಮನು ಎಲ್ಲಿ ಬಿದ್ದನೋ ಆ ಸ್ಥಳದಲ್ಲಿ ಜಲದಲ್ಲಿ ಯಾವ ಶೂಲವೂ ಇರಲಿಲ್ಲ.
ಸ ನಿಸ್ಸಂಜ್ಞೋ ಜಲಸ್ಯಾಂತರವಾಗ್ ವೈ ಪಾಂಡವೋಽವಿಶತ್ ।
ಆಕ್ರಮ್ಯ ನಾಗಭವನೇ ತಥಾ ನಾಗಕುಮಾರಕಾನ್ ॥24॥
ತತಃ ಸಮೇತ್ಯ ಬಹುಭಿಃ ತಥಾ ನಾಗೈರ್ಮಹಾವಿಷೈಃ ।
ದಶ್ಯತೇ ಪಾಂಡವಸ್ತತ್ರ ವಿಷದಿಗ್ಧೋ ಮಹಾವಿಷೈಃ ॥25॥
ಭೀಮನು ಮೈಮೇಲೆ ಎಚ್ಚರವಿಲ್ಲದೆ ತಲೆಕೆಳಗಾಗಿ ನೀರನ್ನು ಪ್ರವೇಶಿಸಿ ನಾಗಭವನವನ್ನು ತಲುಪಿ ಅಲ್ಲಿ ನಾಗಕುಮಾರಕರ ಮೇಲೆ ಬಿದ್ದನು. ಆಗ ಮಹಾವಿಷವುಳ್ಳ ಅನೇಕ ನಾಗಗಳು ಒಟ್ಟಿಗೆ ಭೀಮನನ್ನು ಕಚ್ಚಿ ಅವನ ಶರೀರವು ಮಹಾವಿಷದಿಂದ ಕೂಡಿರುವಂತೆ ಮಾಡಿದವು.
ತತೋಽಸ್ಯ ದಶ್ಯಮಾನಸ್ಯ ತದ್ ವಿಷಂ ಕಾಲಕೂಟಕಮ್ ।
ಹತಂ ಸರ್ಪವಿಷೇಣಾಶು ಸ್ಥಾವರಂ ಜಂಗಮೇನ ತು ॥26॥
ನಾಗಗಳು ಹಾಗೆ ಕಚ್ಚುತ್ತಿರಲು ಹೊಸದಾಗಿ ಬಂದ ನಾಗವಿಷದಿಂದ ದೇಹದಲ್ಲಿ ಮೊದಲೇ ಇದ್ದ ಕಾಲಕೂಟವಿಷವು ನಾಶವನ್ನು ಹೊಂದಿತು.
ತತಃ ಪ್ರಬುದ್ಧಃ ಕೌಂತೇಯಃ ಸ ಸಂಛಿದ್ಯ ಚ ಬಂಧನಮ್ ।
ಪೋಥಯಾಮಾಸ ತಾನ್ ಸರ್ಪಾನ್ ಕಾಂಶ್ಚಿತ್ ಪ್ರಾಣೈರ್ವ್ಯಯೋಜಯತ್ ।
ತೇ ಹನ್ಯಮಾನಾಃ ಪಾರ್ಥೇನ ಸರ್ಪಾ ವಾಸುಕಿಮಭ್ಯಯುಃ ॥27॥
ಆಗ ಎಚ್ಚರಗೊಂಡ ಕೌಂತೇಯನಾದ ಭೀಮನು ತನ್ನ ಬಂಧನಗಳನ್ನು ಕಡಿದು ಹಾಕಿ ಆ ಸರ್ಪಗಳನ್ನು ಗುದ್ದಿ ಕೆಲವು ಸರ್ಪಗಳನ್ನು ಕೊಂದನು. ಭೀಮನ ಪ್ರಹಾರಕ್ಕೆ ಸಿಲುಕಿದ ನಾಗಗಳು ವಾಸುಕಿಯ ಬಳಿಗೆ ಹೋದವು.
ಊಚುಶ್ಚ ಸರ್ಪರಾಜಾನಂ ವಾಸುಕಿಂ ವಾಸವೋಪಮಮ್ ।

ಅಹನ್ನರೋ ವೈ ನಾಗೇಂದ್ರ ಹ್ಯಪ್ಸು ಬದ್ಧ್ವಾ ಪ್ರವೇಶಿತಃ ॥28॥
ಇಂದ್ರನಂತಿದ್ದ ಸರ್ಪರಾಜನಾದ ವಾಸುಕಿಯನ್ನು ಕುರಿತು ಆ ನಾಗಗಳು `ಎಲೈ ನಾಗೇಂದ್ರನೇ ನೀರಿನಲ್ಲಿ ಕೈಕಾಲುಗಳನ್ನು ಕಟ್ಟಿ ಪ್ರವೇಶಿಸಲ್ಪಟ್ಟ ಒಬ್ಬ ಮನುಷ್ಯನು ನಮ್ಮನ್ನು ಹಿಂಸಿಸುತ್ತಿದ್ದಾನೆ.'
ತಥಾ ಚ ನೋ ಮತಿರ್ವೀರ ವಿಷಪೀತೋ ಭವಿಷ್ಯತಿ |
ನಿಶ್ಚೇಷ್ಟೋಽಸ್ಮಾನನುಪ್ರಾಪ್ತಃ ಸ ಚ ದಷ್ಟೋಽನ್ವಬುಧ್ಯತ ॥29॥
ವಿನಿವಿಷ್ಟೋಽಂತರಪ್ರಾಪ್ತಃ ತಮಪಾಸ್ಯಾಪ್ಯನೇಕಶಃ |
ಸಸಂಜ್ಞಶ್ಚ ಸುಸಂವೃತ್ತಃ ಚ್ಛಿತ್ತತ್ವ ಬಂಧನಮಾಶು ಸಃ |
ಪೋಥಯನ್ನೋ ಮಹಾಬಾಹುಸ್ತಂ ವೈ ತ್ವಂ ಜ್ಞಾತುಮರ್ಹಸಿ ॥30॥
ವೀರನೇ, ನಾವು ಕಚ್ಚಿದರೆ ಅವನು ವಿಷಪೂರ್ಣನಾಗುವನು ಎಂದು ನಮ್ಮ ಅಭಿಪ್ರಾಯವಿದ್ದಿತು. ಆದರೆ, ನಿಶ್ಚೇಷ್ಟನಾಗಿ ನಮ್ಮನ್ನು ತಲುಪಿದವನು, ನಾವು ಕಚ್ಚಿದ ಮೇಲೆ ಎಚ್ಚರಗೊಂಡಿದ್ದಾನೆ. ನೀರಿನ ಒಳಗೆ ಬಂದವನು, ಬಂಧನಗಳನ್ನು ಕಡಿದು ಹಾಕಿ ಸಂಜ್ಞೆಯನ್ನು ಮರಳಿ ಪಡೆದು ಅನೇಕ ನಾಗಗಳನ್ನು ದೂರ ತಳ್ಳಿ ನಮಗೆ ಗುದ್ದುತ್ತಿದ್ದಾನೆ. ಆ ಮಹಾಬಾಹುವು ಯಾರೆಂದು ನೀನು ತಿಳಿಯಬೇಕು.
ವೈಶಂಪಾಯನಃ
ತತೋ ವಾಸುಕಿರಭ್ಯೇತ್ಯ ನಾಗೈರನುಗತಸ್ತದಾ |
ಪಶ್ಯತಿ ಸ್ಮ ಮಹಾನಾಗೋ ಭೀಮಂ ಭೀಮಪರಾಕ್ರಮಮ್ ॥31॥
ಆಗ ಮಹಾನಾಗನಾದ ವಾಸುಕಿಯು ಉಳಿದ ನಾಗಗಳಿಂದ ಹಿಂಬಾಲಿಸಲ್ಪಟ್ಟು ಭೀಮನಿದ್ದ ಸ್ಥಳಕ್ಕೆ ಬಂದು ಭೀಮಪರಾಕ್ರಮನಾದ ಭೀಮನನ್ನು ನೋಡಿದನು.
ಆರ್ಯಕೌತುಕದೃಷ್ಟಃ ಸ ಪ್ರಯಾತಸತ್ತ್ವರ್ಯಕೇಣ ತು |
ತತೋ ದೃಷ್ಟಶ್ಚ ತೇನಾಪಿ ಪರಿಷ್ವಕ್ತಶ್ಚ ಪಾಂಡವಃ |
ಸುಪ್ರೀತಶ್ಚಾಭವತ್ ತಸ್ಯ ವಾಸುಕಿಃ ಸುಮಹಾಯಶಾಃ ॥32॥
ಆರ್ಯಕನಾಗನ ಜೊತೆಯಲ್ಲಿ ಬಂದ ವಾಸುಕಿಯು ಆರ್ಯಕನು ಕುತೂಹಲದಿಂದ ನೋಡುತ್ತಿರುವಂತೆಯೇ ಭೀಮನಿಂದಲೂ ನೋಡಲ್ಪಟ್ಟವನಾಗಿ ಭೀಮನನ್ನು ಆಲಿಂಗಿಸಿದನು. ಮಹಾಕೀರ್ತಿವಂತನಾದ ವಾಸುಕಿಯು ಅವನನ್ನು ನೋಡಿ ಸುಪ್ರೀತನಾದನು.
ಅಬ್ರುವೀತ್ ತಂ ಚ ನಾಗೇಂದ್ರಃ ಕಿಮಸ್ಯ ಕ್ರಿಯತಾಮಿತಿ |
ಪ್ರಿಯಂ ಧನೌಘಂ ರತ್ನಾನಿ ಯಾವದಸ್ಯ ಪ್ರದೀಯತಾಮ್ ॥33॥
ಆಗ ನಾಗೇಂದ್ರನಾದ ವಾಸುಕಿಯು ಆರ್ಯಕನನ್ನು ಕುರಿತು `ಇವನಿಗೆ ಏನು ಮಾಡೋಣ? ಅವನು ಅಪೇಕ್ಷಿಸಿದಷ್ಟು ಅವನಿಗೆ ಪ್ರಿಯವಾದ ಧನವನ್ನೂ ಮತ್ತು ರತ್ನಸಮೂಹವನ್ನೂ ಕೊಡಿ' ಎಂದು ಹೇಳಿದನು.
ಏವಮುಕ್ತಸ್ತದಾ ನಾಗೋ ವಾಸುಕಿಂ ಪ್ರತ್ಯಭಾಷತ |
ಯದಿ ನಾಗೇಂದ್ರ ಪ್ರೀತೋಽಸಿ ಕಿಮಸ್ಯ ಧನಸಂಚಯೈಃ |
ರಸಂ ಪಿಬೇತ್ ಕುಮಾರೋಽಯಂ ತ್ವಯಿ ಪ್ರೀತೇ ಮಹಾಬಲಃ ॥34॥
ವಾಸುಕಿಯು ಹೀಗೆ ಹೇಳಿದಾಗ ಆರ್ಯಕನು ಅವನನ್ನು ಕುರಿತು ಹೀಗೆ ಹೇಳಿದನು. `ನಾಗೇಂದ್ರನಾದ ವಾಸುಕಿಯೇ ನೀನು ಪ್ರಸನ್ನನಾದರೆ, ಇವನಿಗೆ ಧನರಾಶಿಯಿಂದ ಏನು ಆಗಬೇಕಾಗಿದೆ. ನೀನು ಪ್ರಸನ್ನನಾದರೆ, ಈ ಮಹಾಬಲನಾದ ಕುಮಾರನು ರಸವನ್ನು ಪಾನ ಮಾಡಲಿ'.
ಬಲಂ ನಾಗಸಹಸ್ರಸ್ಯ ಕುಂಡೇ ಚಾಸ್ಮಿನ್ ಪ್ರತಿಷ್ಠಿತಮ್ |
ಯಾವತ್ ಪಿಬತಿ ಬಾಲೋಽಯಂ ತಾವದಸ್ಮೈ ಪ್ರದೀಯತಾಮ್ ॥
ಇಲ್ಲಿ ಒಂದೊಂದು ಕುಂಡದಲ್ಲಿರುವ ರಸವೂ ಒಂದು ಸಾವಿರ ಆನೆಗಳ ಬಲವನ್ನು ಕೊಡುವಂತಹದು. ಈ ಬಾಲಕನು ಎಷ್ಟು ಕುಡಿಯುತ್ತಾನೋ ಅಷ್ಟು ರಸವನ್ನು ಅವನಿಗೆ ಕೊಡಿ.
ವೈಶಂಪಾಯನಃ
ಏವಮಸ್ತ್ವಿತಿ ತಂ ನಾಗಂ ವಾಸುಕಿಃ ಪ್ರತ್ಯಭಾಷತ |
ತತೋ ಭೀಮಸ್ತದಾ ನಾಗೈಃ ಕೃತಸ್ವಸ್ತ್ಯಯನಃ ಶುಚಿಃ ॥36॥
ಪ್ರಾಙ್ಮುಖಶ್ಚೋಪವಿಷ್ಟಶ್ಚ ರಸಂ ಪಿಬತ ಪಾಂಡವಃ |
ಏಕೋಚ್ಛ್ವಾಸಾತ್ ತದಾ ಕುಂಡಂ ಪಿಬತಿ ಸ್ಮ ಮಹಾಬಲಃ ॥37॥
ಹೀಗೆ ಹೇಳಿದ ಆರ್ಯಕನನ್ನು ಕುರಿತು ವಾಸುಕಿಯು `ಹಾಗೆಯೇ ಆಗಲಿ' ಎಂದು ಹೇಳಿದನು. ಆಗ ಭೀಮನು ನಾಗಗಳಿಂದ ಸ್ವಸ್ತಿವಾಚನವನ್ನು ಮಾಡಲ್ಪಟ್ಟವನಾಗಿ ಶುಚಿಯಾಗಿ ಪೂರ್ವಾಭಿಮುಖವಾಗಿ ಕುಳಿತು ರಸವನ್ನು ಪಾನಮಾಡಿದನು. ಮಹಾಬಲನಾದ ಪಾಂಡವನು ಒಂದೇ ಉಸಿರಿಗೆ ಒಂದು ಕುಂಡದಲ್ಲಿದ್ದ ರಸವನ್ನೆಲ್ಲಾ ಕುಡಿಯುತ್ತಿದ್ದನು.
ಏವಮಷ್ಟೌ ತು ಕುಂಡಾನಿ ಸೋಽಪಿಬತ್ ಪಾಂಡುನಂದನಃ |
ದಿವ್ಯೇ ತತಸ್ತು ಶಯನೇ ನಾಗದತ್ತೇ ಮಹಾಭುಜಃ |
ಶೇತೇ ಸ್ಮ ಚ ತದಾ ಭೀಮೋ ದಿವಸಾನ್ಯಷ್ಟ ಚೈವ ತು ॥38॥
ಪಾಂಡುನಂದನನಾದ ಭೀಮನು ಹೀಗೆ ಎಂಟು ಕುಂಡಗಳಲ್ಲಿದ್ದ ರಸವನ್ನು ಕುಡಿದನು. ಅನಂತರ ಮಹಾಭುಜನಾದ ಅವನು ನಾಗಗಳೂ ಕೊಟ್ಟ ದಿವ್ಯವಾದ ಹಾಸಿಗೆಯಲ್ಲಿ ಎಂಟು ದಿನಗಳ ಕಾಲ ಮಲಗಿ ನಿದ್ರಿಸಿದನು.
ದುರ್ಯೋಧನೋಽಪಿ ಪಾಪಾತ್ಮಾ ಭೀಮಮಾಶೀವಿಷಹ್ರದೇ |

ಪ್ರಕ್ಷಿಪ್ಯ ಕೃತಕೃತ್ಯಂ ಸ್ವಮಾತ್ಮಾನಂ ಮನ್ಯತೇ ತದಾ ॥39॥
ಇತ್ತ ಕಡೆ ಪಾಪಾತ್ಮನಾದ ದುರ್ಯೋಧನನು ಭೀಮನನ್ನು ಸರ್ಪಹ್ರದದಲ್ಲಿ ಕೆಡವಿ ತನ್ನನ್ನು ಕೃತಕೃತ್ಯನೆಂದು ಭಾವಿಸಿದನು.
ಪ್ರಭಾತಾಯಾಂ ರಜನ್ಯಾಂ ಚ ಪ್ರವಿವೇಶ ಪುರಂ ತತಃ |
ಬ್ರುವಾಣೋ ಭೀಮಸೇನಸ್ತು ಯಾತೋ ಹ್ಯಗ್ರತ ಏವ ನಃ ॥40॥
ರಾತ್ರಿಯು ಕಳೆದು ಬೆಳಗಾಗುತ್ತಿರಲು ದುರ್ಯೋಧನನು ಪಟ್ಟಣವನ್ನು ಪ್ರವೇಶಿಸಿ `ಭೀಮಸೇನನು ನಮಗಿಂತ ಮೊದಲೇ ಹೊರಟು ಬಂದಿದ್ದಾನೆ' ಎಂದು ಹೇಳುತ್ತಿದ್ದನು.
ಯುಧಿಷ್ಠಿರಸ್ತು ಧರ್ಮಾತ್ಮಾ ಚಿಂತಯನ್ ಪಾಪಮಾತ್ಮನಿ |
ಸ್ವೇನಾಽನುಮಾನೇನ ಪರಂ ತದಾಽಸ್ಯಾನುಪಪಶ್ಯತಿ ॥41॥
ಧರ್ಮಾತ್ಮನಾದ ಯುಧಿಷ್ಠರನು ತಾನು ಯಾರಿಗೂ ಅಪರಾಧವನ್ನು ಮಾಡದಿರುವುದರಿಂದ ಇನ್ನೊಬ್ಬರ ಬಗ್ಗೆಯೂ ಹಾಗೆಯೇ ಚಿಂತಿಸಿ ಭೀಮನೂ ಯಾರಿಗೂ ಅಪರಾಧವನ್ನು ಮಾಡಿಲ್ಲದ ಕಾರಣ ಅವನಿಗೆ ಯಾರೂ ಅಪರಾಧವನ್ನು ಮಾಡುವುದಿಲ್ಲವೆಂದು ತಿಳಿದು ಸುಮ್ಮನಿದ್ದನು.
ಉಪಗಮ್ಯ ತತಃ ಪಾರ್ಥಾ ಮಾತರಂ ಮಾತೃವತ್ಸಲಾಃ |
ಅಭಿವಾದ್ಯಾಬ್ರುವಂಸ್ತೇ ವೈ ಅಂಬ ಭೀಮ ಇಹಾಗತಃ ॥42॥
ಪಾಂಡುವಿನ ಮಾತೃವತ್ಸಲರಾದ ಉಳಿದ ಮಕ್ಕಳು ತಾಯಿಯನ್ನು ಸಮೀಪಿಸಿ ನಮಸ್ಕರಿಸಿ `ಅಮ್ಮಾ ಭೀಮನು ಇಲ್ಲಿ ಬಂದನೇ?' ಎಂದು ಕೇಳಿದರು.
ನೇತಿ ಸ್ಮಾಹ ತದಾ ಕುಂತೀ ತತಸ್ತೇ ವ್ಯಥಿತಾ ಭವನ್ |
ದೂರಂ ಗತ್ವಾ ಪುರೋದ್ಯಾನಂ ವಿಚಿನ್ವಂತಿ ಸ್ಮ ಪಾಂಡವಾಃ |
ಭೀಮಭೀಮೇತಿ ತೇ ವಾಚಂ ನಿತ್ಯಮುಚ್ಚೈರುದೀರಯನ್ ॥43॥
ಆಗ ಕುಂತಿಯು `ಇಲ್ಲ' ಎಂದು ಹೇಳಿದಳು. ಆಗ ಉಳಿದ ಪಾಂಡವರು ವ್ಯಥಿತರಾಗಿ ದೂರದಲ್ಲಿದ್ದ ಪುರೋದ್ಯಾನಕ್ಕೆ ಹೋಗಿ ಭೀಮನನ್ನು ಹುಡುಕಲು ಪ್ರಾರಂಭಿಸಿ `ಭೀಮ, ಭೀಮ' ಎಂದು ಉಚ್ಚಸ್ವರದಲ್ಲಿ ಕರೆಯುತ್ತಿದ್ದರು.
ವಿಚಿನ್ವಂತೋಽಥ ತೇ ಸರ್ವೇ ನ ಸ್ಮ ಪಶ್ಯಂತಿ ಭ್ರಾತರಮ್ |
ಆಗತಾಃ ಸ್ವಗೃಹಂ ಭೂಯ ಇದಮೂಚುಃ ಪೃಥಾ ತದಾ ॥44॥
ಎಷ್ಟು ಹುಡುಕಿದರೂ ತಮ್ಮ ಸಹೋದರನಾದ ಭೀಮನು ಕಾಣದಿರಲು ಪುನಃ ತಮ್ಮ ಮನೆಗೆ ಹಿಂದಿರುಗಿ ತಾಯಿಯಾದ ಕುಂತಿಯನ್ನು ಕುರಿತು ಹೀಗೆ ಹೇಳಿದರು.
ನ ದೃಶ್ಯತೇ ಮಹಾಬಾಹುರಂಬ ಭೀಮೋ ವನೇ ಗತಃ |
ವಿಚಿತಾನಿ ಚ ಸರ್ವಾಣಿ ಉದ್ಯಾನಾನಿ ನದೀಸ್ತಥಾ ॥45॥
ಅಮ್ಮಾ, ವನಕ್ಕೆ ಹೋದ ಮಹಾಬಾಹುವಾದ ಭೀಮನು ಎಲ್ಲೂ ಕಾಣುವುದಿಲ್ಲ. ನಾವು ಉದ್ಯಾನವನವನ್ನೂ ಮತ್ತು ನದಿಯನ್ನೂ, ಎಲ್ಲಾ ಕಡೆಗಳಲ್ಲೂ ಹುಡುಕಿದೆವು.
ತತೋ ವಿದುರಮಾನಾಯ್ಯ ಕುಂತೀ ಸಾ ಸ್ವಂ ನಿವೇಶನಮ್ |
ಉವಾಚ ಕ್ಷತ್ತಾ ಬಲವಾನ್ ಭೀಮಸೇನೋ ನ ದೃಶ್ಯತೇ ॥46॥
ಆಗ ಕುಂತಿಯು ವಿದುರನನ್ನು ತನ್ನ ಮನೆಗೆ ಕರೆಸಿ ಅವನನ್ನು ಕುರಿತು ಹೇಳಿದಳು, ಬಲಿಷ್ಠನಾದ ಭೀಮನು ಕಾಣುತ್ತಿಲ್ಲ.
ಉದ್ಯಾನಾನ್ನಿರ್ಗತಾಃ ಸರ್ವೇ ಭ್ರಾತರೋ ಭ್ರಾತೃಭಿಃ ಸಹ |
ತತ್ರ ಹ್ಯೇಕೋ ಮಹಾಬಾಹುರ್ಭೀಮೋ ನಾಭ್ಯೇತಿ ಮಾಮಿಹ ॥47॥
ಉದ್ಯಾನಕ್ಕೆ ಹೋಗಿದ್ದ ಅಣ್ಣತಮ್ಮಂದಿರು ಸಹೋದರರ ಜೊತೆಯಲ್ಲಿ ಹಿಂದಿರುಗಿದ್ದಾರೆ. ಮಹಾಬಾಹುವಾದ ಭೀಮನು ಒಬ್ಬ ಮಾತ್ರ ನನ್ನ ಬಳಿಗೆ ಬಂದಿಲ್ಲ.
ನಚ ಮೇ ಪ್ರೀಯತೇ ಚಕ್ಷುಃ ಸದಾ ದುರ್ಯೋಧನಸ್ಯ ಹ |
ತತಃ ಪ್ರಸುಪ್ತಂ ಮನ್ಯೇಽಹಂ ಪಾಪೇನ ನಿಹತಂ ಸುತಮ್ ॥48॥
ನನ್ನ ಮನಸ್ಸಿಗೂ ಕಣ್ಣಿಗೂ ದುರ್ಯೋಧನನನ್ನು ಚಿಂತಿಸಿ ಸಮಾಧಾನವಿಲ್ಲ. ಮಲಗಿದ್ದ ನನ್ನ ಮಗನನ್ನು ಪಾಪಿಷ್ಠನಾದ ದುರ್ಯೋಧನನು ಕೊಂದಿದ್ದಾನೆ ಎಂದು ನನ್ನ ಭಾವನೆ.
ವಿದುರಃ
ಮಾ ಮೈವಂ ವದ ಕಲ್ಯಾಣಿ ಶೇಷಸಂರಕ್ಷಣಂ ಕುರು |
ಪ್ರತ್ಯಾದಿಷ್ಟೋ ಹಿ ಪಾಪಾತ್ಮಾ ಶೇಷೇಷು ಪ್ರಹರೇತ ಹ ॥49॥
ಕಲ್ಯಾಣಿಯೇ, ಹೀಗೆ ಮಾತನಾಡಬೇಡ. ಉಳಿದವರನ್ನು ರಕ್ಷಣೆ ಮಾಡು. ನಾವು ಮಾತನಾಡಿದ ಈ ವಿಷಯವು ದುರ್ಯೋಧನನಿಗೆ ತಿಳಿದರೆ, ಆ ಪಾಪಾತ್ಮನು ಉಳಿದವರ ಮೇಲೂ ಪ್ರಹಾರ ಮಾಡಬಹುದು.
ದೀರ್ಘಾಯುಷಸ್ತವ ಸುತಾನ್ ತಥಾ ಹ್ಯೃಷಿರಭಾಷತ |
ಆಗಮಿಷ್ಯತಿ ತೇ ಪುತ್ರಃ ಪ್ರೀತಿಂ ತೇ ಜನಯಿಷ್ಯತಿ ॥50॥
ನಿನ್ನ ಮಕ್ಕಳು ದೀರ್ಘಾಯುಷ್ಯವುಳ್ಳವರೆಂದು ವೇದವ್ಯಾಸರು ಹೇಳಿದ್ದಾರೆ. ನಿನ್ನ ಪುತ್ರನು ಬಂದು ನಿನಗೆ ಸಂತೋಷವನ್ನುಂಟು ಮಾಡುವನು.
ವೈಶಂಪಾಯನಃ
ಏವಮುಕ್ತಾ ತದಾ ಕುಂತೀ ನಿಃಶ್ವಸಂತೀ ಮುಹುರ್ಮುಹುಃ |

ಶಯ್ಯಾಪರಾ ಮಹಾಭಾಗಾ ಪುತ್ರೈಃ ಪರಿವೃತಾ ತದಾ ॥51॥
ಹೀಗೆ ಹೇಳಲ್ಪಟ್ಟ ಮಹಾನುಭಾವಳಾದ ಕುಂತಿಯು ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತಾ ಹಾಸಿಗೆಯನ್ನು ಹಿಡಿದು ಉಳಿದ ಮಕ್ಕಳಿಂದ ಸುತ್ತುವರೆಯಲ್ಪಟ್ಟಳು.
ತತೋಽಷ್ಟಮೇಽಥ ದಿವಸೇ ಪ್ರತ್ಯಬುದ್ಧ್ಯತ ಪಾಂಡವಃ |
ತಸ್ಮಿಂಸ್ತದಾ ವಿಷೇ ಜೀರ್ಣೇ ಹ್ಯಪ್ರಮೇಯಬಲೋ ಬಲೀ ॥52॥
ಆ ಸರ್ಪವಿಷವೆಲ್ಲವೂ ಜೀರ್ಣವಾಗುತ್ತಿರಲು ಅಪ್ರಮೇಯ ಬಲವುಳ್ಳ ಬಲಿಷ್ಠನಾದ ಭೀಮನು ಎಂಟನೆಯ ದಿವಸ ಎಚ್ಚರಗೊಂಡನು.
ಔಷಧೀಭಿರ್ವನಸ್ಥೀಭಿಃ ಸುರಭೀಭಿರ್ವಿಭೂಷಿತಃ |
ಭುಕ್ತತ್ವ ತು ಪರಮಾನ್ನಂ ಚ ನಾಗೈರ್ದತ್ತಂ ಮಹಾಭುಜಃ ॥53॥
ಮಹಾಭುಜನಾದ ಅವನು ವನದಲ್ಲಿ ದೊರೆಯುವ ಸುಗಂಧವುಳ್ಳ ಔಷಧಿಗಳಿಂದ ಅಲಂಕೃತನಾಗಿ ನಾಗಗಳು ಕೊಟ್ಟ ಪರಮಾನ್ನವನ್ನು ಭುಂಜಿಸಿ ಮೇಲೆ ಬಂದನು.
ಉತ್ಕ್ಷಿಪ್ಯ ಚ ತದಾ ನಾಗೈರ್ಜಲಾಜ್ಜಲರುಹೇಕ್ಷಣಃ |
ತಸ್ಮಿನ್ನೇವ ವನೋದ್ದೇಶೇ ಸ್ಥಾಪಿತಃ ಪಾಂಡುನಂದನಃ ॥54॥
ಆಗ ನಾಗಗಳು ಕಮಲನಯನನಾದ ಅವನನ್ನು ನೀರಿನ ಆಳದಿಂದ ಮೇಲಕ್ಕೆತ್ತಿ ಮೊದಲು ಇದ್ದ ಅದೇ ವನಪ್ರದೇಶದಲ್ಲಿಯೇ ಆ ಪಾಂಡುನಂದನನನ್ನು ಸ್ಥಾಪಿಸಿದವು.
ಅಂತರ್ದಧುಶ್ಚ ತೇ ನಾಗಾಃ ಪಾಂಡವಸ್ಯೈವ ಪಶ್ಯತಃ |
ತತ ಉತ್ಥಾಯ ಭೀಮಸ್ತು ಆಜಗಾಮ ಸ್ವಯಂ ಗೃಹೇ ॥55॥
ಭೀಮನು ನೋಡುತ್ತಿರುವಂತೆಯೇ ಆ ನಾಗಗಳು ಅಂತರ್ಧಾನವನ್ನು ಹೊಂದಿದವು. ಅನಂತರ ಭೀಮನು ಎದ್ದು ಅಲ್ಲಿಂದ ತಾನೇ ಮನೆಗೆ ಬಂದನು.
ಅಭಿವಾದ್ಯ ಪರಿಷ್ವಕ್ತಃ ಸಂಪ್ರಾಘ್ರಾತಶ್ಚ ಮೂರ್ಧನಿ |
ಪ್ರಣಮ್ಯ ಧರ್ಮಪುತ್ರಾಯ ಸಸ್ವಜೇ ಫಲ್ಗುನಂ ತದಾ ॥56॥
ಕುಂತಿಗೆ ನಮಸ್ಕಾರವನ್ನು ಮಾಡಿ ಅವಳಿಂದ ಶಿರಸ್ಸಿನಲ್ಲಿ ಆಘ್ರಾಣಿಸಿ ಆಲಿಂಗಿಸಲ್ಪಟ್ಟು ಧರ್ಮರಾಜನಿಗೂ ನಮಸ್ಕಾರವನ್ನು ಮಾಡಿ ಅರ್ಜುನನನ್ನು ಆಲಿಂಗಿಸಿದನು.
ಅಭಿವಾದಿತಶ್ಚ ತೈರ್ವೀರೈಃ ಸಸ್ವಜೇ ಚ ಯಮಾವಪಿ |
ತಚ್ಚ ಸರ್ವಂ ಯಥಾವೃತ್ತಮಾಖ್ಯಾತಿ ಸ್ಮ ವೃಕೋದರ. ॥57॥
ತನಗೆ ನಮಸ್ಕಾರ ಮಾಡಿದ ವೀರರಾದ ನಕುಲಸಹದೇವರನ್ನು ಆಲಿಂಗಿಸಿ ನಡೆದ ವೃತ್ತಾಂತವನ್ನೆಲ್ಲಾ ವೃಕೋದರನು ಯಥಾವತ್ತಾಗಿ ತಿಳಿಸಿದನು.
ಯದಾ ತ್ವವಗಮಂಸ್ತೇ ವೈ ಪಾಂಡವಾಸ್ತಸ್ಯ ಕರ್ಮ ತತ್ |
ತತ್ರೈನಂ ಬಹುಲಂ ಚಕ್ರುಃ ಪ್ರಯತಂತಃ ಸ್ವರಕ್ಷಣೇ ॥58॥
ಉಳಿದ ಪಾಂಡವರು ಅವನ ಆ ಕರ್ಮವನ್ನು ತಿಳಿದ ಮೇಲೆ ತಮ್ಮ ರಕ್ಷಣೆಗೆ ವಿಶೇಷ ಪ್ರಯತ್ನವನ್ನು ಪಡುತ್ತಾ ಭೀಮನನ್ನು ಬಹುಪರಾಕ್ರಮಶಾಲಿಯೆಂದು ತಿಳಿದರು.
ಧರ್ಮಾತ್ಮಾ ವಿದುರಸ್ತೇಷಾಂ ಪ್ರದದೌ ಮತಿಮಾನ್ ಮತಿಮ್ |
ದುರ್ಯೋಧನೋಽಪಿ ತಂ ದೃಷ್ಟ್ವಾ ಪಾಂಡವಂ ಪುನರಾಗತಮ್ |
ನಿಶ್ವಸಂಶ್ಚಿಂತಯಂಶ್ಚೈವಮಹನ್ಯಹನಿ ತಪ್ಯತೇ ॥59॥
ಧರ್ಮಾತ್ಮನಾದ ವಿದುರನು ಅವರಿಗೆ ಯೋಗ್ಯವಾದ ಬುದ್ಧಿಯನ್ನು ಉಪದೇಶ ಮಾಡಿದನು. ದುರ್ಯೋಧನನಾದರೋ ಭೀಮನು ಪುನಃ ಹಿಂದಿರುಗಿದುದನ್ನು ನೋಡಿ ನಿಟ್ಟುಸಿರು ಬಿಡುತ್ತಾ ಹಗಲೂ ರಾತ್ರಿ ಚಿಂತಿಸಿ ತಾಪವನ್ನು ಹೊಂದಿದನು.
ಏವಂ ದುರ್ಯೋಧನಃ ಪಾಪಃ ಶಕುನಿಶ್ಚಾಪಿ ಸೌಬಲಃ |
ಅನೇಕೈರಪ್ಯುಪಾಯೈಸ್ತಾನ್ ಜಿಘಾಂಸಂತಿ ಸ್ಮ ಪಾಂಡವಾನ್ ॥60॥
ಹೀಗೆ ಪಾಪಿಯಾದ ದುರ್ಯೋಧನನು ಮತ್ತು ಶಕುನಿಯು ಅನೇಕ ಉಪಾಯಗಳಿಂದ ಪಾಂಡವರನ್ನು ಕೊಲ್ಲಲು ಪ್ರಯತ್ನಿಸಿದರು.
ಪಾಂಡವಾಶ್ಚಾಪಿ ತತ್ ಸರ್ವಂ ಪ್ರತ್ಯಜಾನನ್ನರಿಂದಮ |
ಉದ್ಭಾವನಮಕುರ್ವಂತೋ ವಿದುರಸ್ಯ ಮತೇ ಸ್ಥಿತಾಃ |
ಅಧಿಜಗ್ಮುಶ್ಚ ಕುರವೋ ಧನುರ್ವೇದಂ ಕೃಪಾತ್ ತು ತೇ ॥61॥
ಅರಿಂದಮನೇ, ಪಾಂಡವರಿಗೆ ಎಲ್ಲವೂ ತಿಳಿದಿದ್ದರೂ ಅದರ ಉದ್ಭಾವನೆಯನ್ನು ಮಾಡದೆ ವಿದುರನ ಅಭಿಪ್ರಾಯದಂತೆ ನಡೆದುಕೊಂಡು ಕೃಪಾಚಾರ್ಯರಿಂದ ಧನುರ್ವೇದವನ್ನು ಸಂಪಾದಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಡ್ವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ಯದೈವ ಗಂಗಾ ಸುಷುವೇಽಷ್ಟಮಂ ಸುತಂ
ತದೈವ ಯಾತೋ ಮೃಗಯಾಂ ಸ ಶಂತನುಃ |

ಶರದ್ವತೋ ಜಾತಮಪಶ್ಯದುತ್ತಮಂ
ವನೇ ವಿಸೃಷ್ಟಂ ಮಿಥುನಂ ತ್ವಯೋನಿಜಮ್ ॥56॥
ಗಂಗೆ ಎಂಟನೆ ಮಗುವನ್ನು ಪ್ರಸವಿಸಿದಾಗಲೆ, ಶಂತನು ಬೇಟೆಗೆ ಹೋಗಿದ್ದಾಗ ಶರದ್ವಾನ್ ಋಷಿಗಳಿಂದ ಹುಟ್ಟಿದ ಅಯೋನಿಜರಾದ ಉತ್ತಮ ಹೆಣ್ಣು ಗಂಡು ಅವಳಿ ಮಕ್ಕಳು ಕಾಡಿನಲ್ಲಿ ಪರಿತ್ಯಕ್ತರಾಗಿದ್ದುದನ್ನು ಕಂಡ.
ಶರದ್ವಾಂಸ್ತು ತಪಃ ಕುರ್ವನ್ ದದರ್ಶ ಸಹಸೋರ್ವಶೀಮ್ |
ಚಸ್ಕಂದ ರೇತಸ್ತಸ್ಯಾಥ ಶರಸ್ತಂಬೇ ತತೋಽಭವತ್ ॥57॥
ವಿಷ್ಕಂಭೋನಾಮ ರುದ್ರಾಣಾಂ ಭೂಭಾರಹರಣೇಽಂಗತಾಮ್ |
ಹರೇಃ ಪ್ರಾಪ್ತುಂ ತಥಾ ತಾರಾ ಭಾರ್ಯಾ ಯಾ ಹಿ ಬೃಹಸ್ಪತೇಃ ॥58॥
ಶರದ್ವಾನ್ ತಪಸ್ಸು ಮಾಡುತ್ತಿದ್ದಾಗ ಅಕಸ್ಮಾತ್ ಊರ್ವಶಿಯನ್ನು ಕಂಡ. ಆಗ ಅವನ ರೇತಸ್ಸು ಲಾಳದ ಕಡ್ಡಿಯ ಪೊದರಿನಲ್ಲಿ ಬಿದ್ದಿತು. ಅದರಿಂದ ರುದ್ರರಲ್ಲಿ ವಿಷ್ಕಂಭನೆಂಬುವನು ಹರಿಗೆ ಭೂಭಾರಹರಣದಲ್ಲಿ ಸಹಾಯಕನಾಗಬೇಕೆಂದು ಜನಿಸಿದ. ಹಾಗೇ ಬೃಹಸ್ಪತಿಯ ಪತ್ನಿ ತಾರೆಯೂ ಜನಿಸಿದಳು.
ತಾವುಭೌ ಶಂತನುರ್ದೃಷ್ಟ್ವಾ ಕೃಪಾವಿಷ್ಟಃ ಸ್ವಕಂ ಗೃಹಮ್ |
ನಿನಾಯ ನಾಮ ಚಕ್ರೇಽಥ ಕೃಪಾಯಾ ವಿಷಯೌ ಯತಃ ॥59॥
ಕೃಪಃ ಕೃಪೀತಿ ಸ ಕೃಪಸ್ತಪೋ ವಿಷ್ಣೋಶ್ಚಕಾರ ಹ |
ತಸ್ಯ ಪ್ರೀತಸ್ತದಾ ವಿಷ್ಣುಃ ಸರ್ವಲೋಕೇಶ್ವರೇಶ್ವರಃ ॥60॥
ಪ್ರಾದಾದೇಷ್ಯತ್ಸಪ್ತರ್ಷಿತ್ವಮಾಯುಃ ಕಲ್ಪಾಂತಮೇವ ಚ |
ಸ ಶಂತನುಗೃಹೇ ತಿಷ್ಠನ್ ದೇವವ್ರತಸಖಾಭವತ್ ॥61॥
ಅವರಿಬ್ಬರನ್ನೂ ಕಂಡು ಶಂತನು ದಯೆದುಂಬಿ ತನ್ನ ಅರಮನೆಗೆ ಒಯ್ದ. ಕೃಪೆಗೆ ಪಾತ್ರರಾದ್ದರಿಂದ ಅವರಿಗೆ ಕೃಪ ಕೃಪೀ ಎಂದೇ ನಾಮಕರಣ ಮಾಡಿದ. ಕೃಪ ವಿಷ್ಣುವನ್ನು ಕುರಿತು ತಪಸ್ಸು ಮಾಡಿದ. ಆಗ ಎಲ್ಲ ಜಗದೊಡೆಯರಿಗೂ ಒಡೆಯನಾದ ವಿಷ್ಣು ಸಂತುಷ್ಟನಾಗಿ ಅವನನ್ನು ಮುಂದಿನ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬನನ್ನಾಗಿ ಮಾಡಿದ. ಮನುಕಲ್ಪಾಂತ್ಯದವರೆಗಿನ ಆಯುಷ್ಯನನ್ನೂ ಅವನಿಗೆ ಕೊಟ್ಟ. ಈ ಕೃಪ ಶಂತನುವಿನ ಅರಮನೆಯಲ್ಲಿದ್ದು ದೇವವ್ರತನಿಗೆ ಮಿತ್ರನಾದ.
ಪುತ್ರವಚ್ಛಂತನೋಶ್ಚಾಸೀತ್ ಸ ಚ ಪುತ್ರವದೇವ ತತ್ |
ಮಿಥುನಂ ಪಾಲಯಾಮಾಸ ಕೃಪೋಽಪ್ಯಸ್ತ್ರಾಣ್ಯವಾಪ ಚ ॥62॥
ಸರ್ವವೇದಾನಧಿಜಗೌ ಸರ್ವಶಾಸ್ತ್ರಾಣಿ ಕೌಶಿಕಾತ್ |
ತತ್ತ್ವಜ್ಞಾನಂ ತಥಾ ವ್ಯಾಸಾದಾಪ್ಯ ಸರ್ವಜ್ಞತಾಂ ಗತಃ ॥63॥
ಕೃಪ ಶಂತನುವಿಗೆ ಮಗನಂತಿದ್ದ. ಶಂತನು ಆ ಹೆಣ್ಣು ಗಂಡು ಮಕ್ಕಳಿಬ್ಬರನ್ನೂ ಮಕ್ಕಳಂತೆ ರಕ್ಷಿಸಿದ. ಕೃಪ ಮುಂದೆ ಅಸ್ತ್ರಗಳನ್ನು ಕಲಿತ. ಎಲ್ಲ ವೇದಗಳನ್ನೂ ಅಭ್ಯಾಸ ಮಾಡಿದ. ಎಲ್ಲ ಶಾಸ್ತ್ರಗಳನ್ನೂ ವಿಶ್ವಾಮಿತ್ರರಿಂದ ಕಲಿತ. ತತ್ವಜ್ಞಾನವನ್ನು ವ್ಯಾಸರಿಂದ ಪಡೆದು ಸರ್ವಜ್ಞತ್ವವನ್ನು ಹೊಂದಿದ.
* * * *
ನೂರ ಇಪ್ಪತ್ತೇಳನೆಯ ಅಧ್ಯಾಯ
(ಗೌತಮರಿಂದ ಶರಸ್ತಂಬದಲ್ಲಿ ಕೃಪ ಮತ್ತು ಕೃಪಿಯರ ಜನನ. ಶಂತನುವಿನಿಂದ ಆ ಶಿಶುಗಳ ಸ್ವೀಕಾರ.)
ಜನಮೇಜಯಃ
ಕೃಪಸ್ಯಾಪಿ ಮಮ ಬ್ರಹ್ಮನ್ ಸಂಭವಂ ವಕ್ತುಮರ್ಹಸಿ |
ಶರಸ್ತಂಬಾತ್ ಕಥಂ ಜಾತಃ ಕಥಂ ಚಾಸ್ತ್ರಾಣ್ಯವಾಪ್ತವಾನ್ ॥1॥
ಪೂಜ್ಯರೇ, ಕೃಪಾಚಾರ್ಯರ ಜನ್ಮವನ್ನು ನನಗೆ ತಿಳಿಸಿ. ಅವರು ಶರಸ್ತಂಬದಿಂದ (ನೊದೆಹುಲ್ಲಿನ ಗೆಡ್ಡೆಯಿಂದ) ಹೇಗೆ ಜನಿಸಿದರು ಮತ್ತು ಹೇಗೆ ಅಸ್ತ್ರಗಳನ್ನು ಸಂಪಾದಿಸಿದರು?
ವೈಶಂಪಾಯನಃ
ಮಹರ್ಷೇರ್ಗೌತಮಸ್ಯಾಸೀತ್ ಶರದ್ವಾನ್ನಾಮ ನಾಮತಃ |
ಪುತ್ರಃ ಕಿಲ ಮಹಾರಾಜ ಜಾತಃ ಸಹ ಶರೈರ್ವಿಭೋ ॥2॥
ಮಹಾರಾಜನೇ, ಮಹರ್ಷಿಗಳಾದ ಗೌತಮರಿಗೆ ಶರದ್ವಾನ್ ಎಂಬ ಪುತ್ರನಿದ್ದನು. ಪ್ರಭುವೇ ಅವನು ಶರಗಳ ಜೊತೆಯಲ್ಲಿ ಜನಿಸಿದ ಕಾರಣ ಅವನಿಗೆ ಶರದ್ವಾನ್ ಎಂದು ಹೆಸರು.
ನ ತಸ್ಯ ವೇದಾಧ್ಯಯನೇ ತಥಾ ಬುದ್ಧಿರಜಾಯತ |
ಯಥಾಽಸ್ಯ ಬುದ್ಧಿರಭವದ್ ಧನುರ್ವೇದೇ ಪರಂತಪ ॥3॥
ಪರಂತಪನೇ, ಅವನಿಗೆ ಧನುರ್ವಿದ್ಯೆಯನ್ನು ಕಲಿಯುವುದರಲ್ಲಿ ಇದ್ದ ಆಸಕ್ತಿಯು ವೇದಾಧ್ಯಯನವನ್ನು ಮಾಡುವುದರಲ್ಲಿ ಇರಲಿಲ್ಲ.
ಅಧಿಜಗ್ಮುರ್ಯಥಾ ವೇದಾನ್ ತಪಸಾ ಬ್ರಹ್ಮವಾದಿನಃ |
ತಥಾ ಸ ತಪಸೋಪೇತಃ ಸರ್ವಾಣ್ಯಸ್ತ್ರಾಣ್ಯವಾಪ ಹ ॥4॥
ಬ್ರಹ್ಮವಾದಿಗಳು ಹೇಗೆ ತಪಸ್ಸು ಮಾಡಿ ವೇದಗಳನ್ನು ಕಲಿಯುತ್ತಾರೋ, ಹಾಗೆ ಆ ಪುತ್ರನು ತಪಸ್ಸನ್ನು ಮಾಡಿ ಎಲ್ಲಾ ಅಸ್ತ್ರಗಳನ್ನು ಸಂಪಾದಿಸಿದನು.
ಧನುರ್ವೇದಪರತ್ವಾಚ್ಚ ತಪಸಾ ವಿಪುಲೇನ ಚ |
ಭೃಶಂ ಸಂತಾಪಯಾಮಾಸ ದೇವರಾಜಂ ಸ ಗೌತಮಃ ॥5॥

ಯಾವಾಗಲೂ ಧನುರ್ವಿದ್ಯಾಪರನಾಗಿದ್ದು ವಿಪುಲವಾದ ತಪಸ್ಸಿನಿಂದ ಕೂಡಿದ ಆ ಗೌತಮಕುಲೋತ್ಪನ್ನನನ್ನು ನೋಡಿ ದೇವರಾಜನಾದ ಇಂದ್ರನು ಬಹಳ ಸಂತಾಪವನ್ನು ಹೊಂದಿದನು.
ತತೋ ಜಾಲವತೀಂ ನಾಮ ದೇವಕನ್ಯಾಂ ಸುರೇಶ್ವರಃ |
ಪ್ರಾಹಿಣೋತ್ ತಪಸೋ ವಿಘ್ನಂ ಕುರು ತಸ್ಯೇತಿ ಕೌರವ ॥6॥
ಆ ಸುರೇಶ್ವರನು ತನ್ನ ಲಾವಣ್ಯಜಾಲದಿಂದ ಎಲ್ಲರನ್ನೂ ವಶೀಕರಿಸಿಕೊಳ್ಳುವ ಅಪ್ಸರೆಯಾದ ಉರ್ವಶಿಯನ್ನು ಅವನ ತಪಸ್ಸಿಗೆ ವಿಘ್ನವನ್ನು ಮಾಡು ಎಂದು ಹೇಳಿ ಅವನ ಬಳಿಗೆ ಕಳುಹಿಸಿದನು.
ಸಾಽಭಿಗಮ್ಯಾಶ್ರಮಂ ತಸ್ಯ ರಮಣೀಯಂ ಶರದ್ವತಃ |
ಧನುರ್ಬಾಣಧರಂ ದೃಷ್ಟ್ವಾ ಲೋಭಯಾಮಾಸ ಗೌತಮಮ್ ॥7॥
ಉರ್ವಶಿಯು ರಮಣೀಯವಾದ ಶರದ್ವಂತನ ಆಶ್ರಮದ ಬಳಿಗೆ ಬಂದು ಧನುರ್ಬಾಣಗಳನ್ನು ಧರಿಸಿದ ಅವನನ್ನು ನೋಡಿ ಆ ಗೌತಮ ಕುಲೋತ್ಪನ್ನನನ್ನು ಮೋಹಿಸಿದಳು.
ತಾಮೇಕಾಂತಚರಾಂ ದೃಷ್ಟ್ವಾ ಗೌತಮೋಽಪ್ಸರಸಂ ವನೇ |
ಲೋಕೇಽಪ್ರತಿಮಸಂಸ್ಥಾನಾಮುತ್ಫುಲ್ಲನಯನೋಽಭವತ್ ॥8॥
ಶರದ್ವಂತನು ಲೋಕದಲ್ಲಿ ಕಾಣದ ಸೌಂದರ್ಯರಾಶಿಯಾದ ಅವಳು ಕಾಡಿನಲ್ಲಿ ಒಬ್ಬಳೇ ಸಂಚರಿಸುವುದನ್ನು ನೋಡಿ ಅರಳಿದ ಕಣ್ಣುಳ್ಳವನಾದನು.
ಧನುಶ್ಚ ಹಿ ಶರಾಸ್ತಸ್ಯ ಕರಾಭ್ಯಾಂ ಪ್ರಾಪತನ್ ಭುವಿ |
ವೇಪಥುಶ್ಚಾಸ್ಯ ಸಹಸಾ ಶರೀರೇ ಸಮಜಾಯತ ॥9॥
ಅವನ ಕೈಯಿಂದ ಧನುಸ್ಸು ಮತ್ತು ಬಾಣಗಳು ಬಿದ್ದವು. ಅವನ ಶರೀರದಲ್ಲಿ ನಡುಕವುಂಟಾಯಿತು.
ಸ ತು ಜ್ಞಾನಗರೀಯಸ್ತ್ವಾತ್ ತಪಸಶ್ಚ ಸಮನ್ವಯಾತ್ |
ಅವತಸ್ಥೇ ಮಹಾಪ್ರಾಜ್ಞೋ ಧೈರ್ಯೇಣ ಪರಮೇಣ ಹ ॥10॥
ಆದರೆ ಆ ಮಹಾಪ್ರಾಜ್ಞನಾದ ಅವನು ಶ್ರೇಷ್ಠವಾದ ಜ್ಞಾನವನ್ನು ಹೊಂದಿದ್ದುದರಿಂದ ಮತ್ತು ತಪಸ್ಸಿನಿಂದ ಕೂಡಿದ್ದುದರಿಂದ, ಶ್ರೇಷ್ಠವಾದ ಧೈರ್ಯವನ್ನು ಅವಲಂಬಿಸಿ ಹಾಗೆಯೇ ನಿಂತನು.
ಶಸ್ತಸ್ಯ ಸಹಸಾ ರಾಜನ್ ವಿಕಾರಃ ಸಮಜಾಯತ |
ತೇನ ಸುಸ್ರಾವ ರೇತೋಽಸ್ಯ ಸ ಚ ತನ್ನಾವಬುಧ್ಯತ ॥11॥
ರಾಜನೇ, ಗುಣವಂತನಾದ ಅವನಿಗೆ ತಕ್ಷಣ ಮನಸ್ಸಿನಲ್ಲಿ ವಿಕಾರವುಂಟಾಯಿತು. ಅದರಿಂದ ಅವನಿಗೆ ವೀರ್ಯಸ್ಖಲನವಾಯಿತು. ಅದು ಅವನಿಗೆ ತಿಳಿಯಲಿಲ್ಲ.
ತಂ ವಿಹಾಯಾಶ್ರಮಂ ಚಾಪಿ ತಾಂ ಚೈವಾಪ್ಸರಸಂ ಮುನಿಃ |
ಜಗಾಮ ರೇತಸ್ತತ್ ತಸ್ಯ ಶರಸ್ತಂಬೇ ಪಪಾತ ಹ ॥12॥
ಆ ಋಷಿಯು ಆ ಅಪ್ಸರೆಯನ್ನೂ ಮತ್ತು ಆಶ್ರಮವನ್ನೂ ಬಿಟ್ಟು ಹೊರಟು ಹೋದನು. ಸ್ಖಲನವನ್ನು ಹೊಂದಿದ ಅವನ ರೇತಸ್ಸು ಶರಸ್ತಂಬದಲ್ಲಿ ಬಿದ್ದಿತು.
ಶರಸ್ತಂಬೇ ಚ ಪತಿತಂ ದ್ವಿಧಾ ತದಭವನ್ನೃಪ |
ತಸ್ಯಾಥ ಮಿಥುನಂ ಜಜ್ಞೇ ಗೌತಮಸ್ಯ ಶರದ್ವತಃ ॥13॥
ರಾಜನೇ, ಶರಸ್ತಂಭದಲ್ಲಿ ಬಿದ್ದ ಅವನ ವೀರ್ಯವು ಎರಡು ಭಾಗವಾಯಿತು. ಅದರಿಂದ ಗೌತಮ ಕುಲೋತ್ಪನ್ನನಾದ ಶರದ್ವಂತನಿಗೆ ಅವಳಿ ಮಕ್ಕಳು ಜನಿಸಿದವು.
ಮಹರ್ಷೇರ್ಗೌತಮಸ್ಯಾಸ್ಯ ಆಶ್ರಮಸ್ಯ ಸಮೀಪತಃ |
ಮೃಗಯಾಂ ಚರತೋ ರಾಜ್ಞಃ ಶಂತನೋಸ್ತು ಯದೃಚ್ಛಯಾ |
ಕಶ್ಚಿತ್ಸೇನಾಚರೋಽರಣ್ಯೇ ಮಿಥುನಂ ತದಪಶ್ಯತ ॥14॥
ಆ ಗೌತಮ ಮಹರ್ಷಿಗಳ ಆಶ್ರಮದ ಸಮೀಪದಲ್ಲಿ ಶಂತನುರಾಜನು ಬೇಟೆಯಾಡುತ್ತಿರುವಾಗ ಅವನ ಸೈನಿಕನೊಬ್ಬನು ಅರಣ್ಯದಲ್ಲಿ ಅಕಸ್ಮಾತ್ತಾಗಿ ಈ ಅವಳಿ ಮಕ್ಕಳನ್ನು ನೋಡಿದನು.
ಧನುಶ್ಚ ಸಶರಂ ದೃಷ್ಟ್ವಾ ತಥಾ ಕೃಷ್ಣಾಜಿನಾನಿ ಚ |
ವ್ಯವಸ್ಯ ಬ್ರಾಹ್ಮಣಾಪತ್ಯಂ ಧನುರ್ವೇದಾಂತಗಸ್ಯ ಚ |
ಸ ರಾಜ್ಞೋ ದರ್ಶಯಾಮಾಸ ಮಿಥುನಂ ಸಶರಂ ತದಾ ॥15॥
ಶಿಶುಗಳ ಸಮೀಪದಲ್ಲಿ ಬಿಲ್ಲು, ಬಾಣ ಮತ್ತು ಕೃಷ್ಣಾಜಿನಗಳು ಇರುವುದನ್ನು ನೋಡಿ, ಈ ಮಕ್ಕಳು ಧನುರ್ವೇದಪಾರಂಗತನಾದ ಬ್ರಾಹ್ಮಣನ ಮಕ್ಕಳೆಂದು ನಿರ್ಧರಿಸಿ ರಾಜನಿಗೆ ಆ ಮಕ್ಕಳನ್ನೂ ಮತ್ತು ಬಿಲ್ಲುಬಾಣಗಳನ್ನೂ ತೋರಿಸಿದನು.
ಸ ತದಾದಾಯ ಮಿಥುನಂ ರಾಜಾ ಚ ಕೃಪಯಾನ್ವಿತಃ |
ಆಜಗಾಮ ಗೃಹಾನೇವ ಮಮ ಪುತ್ರಾವಿತಿ ಬ್ರುವನ್ ॥16॥
ಕೃಪೆಯಿಂದ ಕೂಡಿದ ಶಂತನುವು ಆ ಅವಳಿ ಮಕ್ಕಳನ್ನು ತೆಗೆದುಕೊಂಡು `ಇವು ನನ್ನ ಮಕ್ಕಳು' ಎಂದು ಹೇಳುತ್ತಾ ಮನೆಗೆ ಹಿಂದಿರುಗಿದನು.
ಪ್ರೀತಿಯುಕ್ತೋ ನರಶ್ರೇಷ್ಠೋ ಮಿಥುನಂ ಗೌತಮಸ್ಯ ತತ್ |
ತತಃ ಸಂವರ್ಧಯಾಮಾಸ ಸಂಸ್ಕಾರೈಶ್ಚಾಪ್ಯಯೋಜಯತ್ ॥17॥
ಶಂತನುವು ಸಂತೋಷದಿಂದ ಗೌತಮರ ಆ ಅವಳಿ ಮಕ್ಕಳನ್ನು ಬೆಳೆಸಿ ಅವರಿಗೆ ಎಲ್ಲಾ ಸಂಸ್ಕಾರಗಳನ್ನೂ ಮಾಡಿಸಿದನು.

ಕೃಪಯಾ ಯನ್ಮಯಾ ಬಾಲಾವಿಮೌ ಸಂವರ್ಧಿತಾವಿತಿ |
ತಸ್ಮಾತ್ತಯೋರ್ನಾಮ ಚಕ್ರೇ ತದೇವ ಸ ಮಹೀಪತಿಃ॥18॥
ಶಂತನುವು ಕೃಪೆಯಿಂದ ಆ ಮಕ್ಕಳನ್ನು ಬೆಳೆಸಿದ ಕಾರಣ ಅವನು ಆ ಮಕ್ಕಳಿಗೆ ಅದೇ ಹೆಸರನ್ನು ಇಟ್ಟನು.
ತಸ್ಮಾತ್ ಕೃಪ ಇತಿ ಖ್ಯಾತಃ ಕೃಪೀ ಕನ್ಯಾ ಚ ಸಾಽಭವತ್ |
ಪಿತಾಽಪಿ ಗೌತಮಸ್ತತ್ರ ತಪಸಾ ತಾವವಿಂದತ ॥19॥
ಆದ್ದರಿಂದ ಆ ಗಂಡು ಮಗುವು ಕೃಪ ಎಂಬ ಹೆಸರಿನಿಂದ ಪ್ರಖ್ಯಾತವಾಯಿತು. ಹೆಣ್ಣುಮಗುವು ಕೃಪೀ ಎಂಬ ಹೆಸರಿನಿಂದ ಬೆಳೆದಳು.
ತಂದೆಯಾದ ಶರದ್ವಂತರು ತಮ್ಮ ತಪಸ್ಸಿನ ಬಲದಿಂದ ಈ ವಿಷಯವನ್ನು ತಿಳಿದರು.
ಆಗಮ್ಯ ಚಾಸ್ಮೈ ಗೋತ್ರಾದಿ ಸರ್ವಮಾಖ್ಯಾತವಾಂಸ್ತದಾ |
ಗೌತಮೋಽಪಿ ಚ ತದಾ ರಾಜನ್ ಧನುರ್ವೇದಪರೋಽಭವತ್ ॥20॥
ಗೌತಮಗೋತ್ರದಲ್ಲಿ ಜನಿಸಿದ ಶರದ್ವಂತರು ಶಂತನುವಿನ ಬಳಿಗೆ ಬಂದು ತಮ್ಮ ಗೋತ್ರ ಮೊದಲಾದ ಎಲ್ಲಾ ವಿಷಯಗಳನ್ನು ಅವನಿಗೆ ತಿಳಿಸಿ ಪುನಃ ಧನುರ್ವಿದ್ಯೆಯಲ್ಲೇ ನಿರತರಾದರು.
ಚತುರ್ವಿಧಂ ಧನುರ್ವೇದಮಸ್ತ್ರಾಣಿ ವಿವಿಧಾನಿ ಚ |
ನಿಖಿಲೇನಾಸ್ಯ ತತ್ ಸರ್ವಂ ಗುಹ್ಯಮಾಖ್ಯಾತವಾನ್ ಪಿತಾ |
ಸೋಽಚಿರೇಣೈವ ಕಾಲೇನ ಪರಮಾಚಾರ್ಯತಾಂ ಗತಃ ॥21॥
ರಾಜನೇ, ಅವರು ತಮ್ಮ ಪುತ್ರನಿಗೆ ಚತುರ್ವಿಧವಾದ ಧನುರ್ವೇದವನ್ನೂ ವಿವಿಧವಾದ ಅಸ್ತ್ರಗಳನ್ನೂ ಮತ್ತು ರಹಸ್ಯವಾದ ಅನೇಕ ವಿಷಯಗಳನ್ನೂ ಸಮಗ್ರವಾಗಿ ಕಲಿಸಿದರು. ಕೃಪನು ಅಲ್ಪಕಾಲದಲ್ಲಿಯೇ ಪರಮಾಚಾರ್ಯನಾದನು.
ಕೃಪಮಾಹೂಯ ಗಾಂಗೇಯಃ ತವ ಶಿಷ್ಯಾ ಇತಿ ಬ್ರುವನ್|
ಪೌತ್ರಾನ್ ಪರಿಸಮಾದಾಯ ಕೃಪಮಾರಾಧಯತ್ ತದಾ ॥22॥
ಭೀಷ್ಮರು ಕೃಪಾಚಾರ್ಯರನ್ನು ಕರೆದು ಅವರನ್ನು ಆರಾಧಿಸಿ ತನ್ನ ಮೊಮ್ಮಕ್ಕಳನ್ನು ಅವರಿಗೆ ಒಪ್ಪಿಸಿ `ಇವರು ನಿಮ್ಮ ಶಿಷ್ಯರು' ಎಂದು ಹೇಳಿದರು.
ತತೋಧಿಜಗ್ಮುಃ ಸರ್ವೇ ತೇ ಧನುರ್ವೇದಂ ಮಹಾರಥಾಃ |
ಧೃತರಾಷ್ಟ್ರಾತ್ಮಜಾಶ್ಚೈವ ಪಾಂಡವಾಶ್ಚ ಮಹಾಬಲಾಃ ॥23॥
ವೃಷ್ಣಯಶ್ಚ ನೃಪಾಶ್ಚಾನ್ಯೇ ನಾನಾದೇಶಸಮಾಗತಾಃ |
ಕೃಪಮಾಚಾರ್ಯಮಾಸಾದ್ಯ ಪರಮಾಸ್ತ್ರಜ್ಞತಾಂ ಗತಾಃ ॥24॥
ಅನಂತರ ಮಹಾಬಲರೂ, ಮಹಾರಥರೂ ಆದ ಎಲ್ಲಾ ಪಾಂಡವರೂ ಮತ್ತು ಧೃತರಾಷ್ಟ್ರನ ಮಕ್ಕಳೂ ಅವರಿಂದ ಧನುರ್ವೇದವನ್ನು ಕಲಿತರು.
ವೃಷ್ಣಿಗಳು ಮತ್ತು ಬೇರೆ ರಾಜರುಗಳು ನಾನಾ ದೇಶಗಳಿಂದ ಬಂದು ಕೃಪಾಚಾರ್ಯರ ಬಳಿ ಅಭ್ಯಾಸ ಮಾಡಿ ಶ್ರೇಷ್ಠರಾದ ಅಸ್ತ್ರಜ್ಞರಾದರು.
ವೈಶಂಪಾಯನಃ
ವಿಶೇಷಾರ್ಥೀ ತತೋ ಭೀಷ್ಮಃ ಪೌತ್ರಾಣಾಂ ಹಿತಕಾಮ್ಯಯಾ |
ಇಷ್ವಸ್ತ್ರಜ್ಞಾನ್ ಪರ್ಯಪೃಚ್ಛದಾಚಾರ್ಯಾನ್ ವೀರ್ಯಸಂಗತಾನ್ ॥25॥
ನಾಲ್ಪಧೀರ್ನಾಮಹಾಭಾಗಃ ತಥಾಽನಾನಾಸ್ತ್ರಕೋವಿದಃ |
ನಾದೇವಸತ್ತ್ವೋ ವಿನಯೇತ್ ಕುರೂನಸ್ತ್ರೇ ಮಹಾಬಲಾನ್ ॥26॥
ತಮ್ಮ ಮೊಮ್ಮಕ್ಕಳಿಗೆ ವಿಶೇಷವಾದ ನಿಪುಣತೆಯು ಬರಬೇಕೆಂಬ ಕಾರಣದಿಂದ ಅವರ ಹಿತವನ್ನು ಬಯಸಿ ಅಲ್ಪಬುದ್ಧಿಯುಳ್ಳವನೂ, ಮಹಾನುಭಾವನಲ್ಲದಿದ್ದವನೂ, ನಾನಾಸ್ತ್ರಗಳಲ್ಲಿ ಕೋವಿದನಾಗದವನೂ, ದೇವಸತ್ವವನ್ನು ಹೊಂದದವನೂ, ಮಹಾಬಲರಾದ ಕುರುಗಳಿಗೆ ಅಸ್ತ್ರವಿದ್ಯೆಯನ್ನು ಕಲಿಸಲು ಸಾಧ್ಯವಿಲ್ಲ ಎಂದು ತಿಳಿದು ಪರಾಕ್ರಮಿಗಳಾದ ಧನುರ್ವೇದಪಾರಂಗತರಾದ ಆಚಾರ್ಯರನ್ನು ಹುಡುಕಲು ಪ್ರಾರಂಭಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-11
ಯದಾಹಿ ಜಾತಃ ಸ ಕೃಪಸ್ತದೈವ
ಬೃಹಸ್ಪತೇ ಸೂನುರಗಾಚ್ಚ ಗಂಗಾಮ್ |
ಸ್ನಾತುಂ ಘೃತಾಚೀಂ ಸ ದದರ್ಶ ತತ್ರ
ಶ್ಲಥದ್ದುಕೂಲಾಂ ಸುರವರ್ಯ ಕಾಮಿನೀಮ್ ॥64॥
ಕೃಪ ಹುಟ್ಟಿದ ಸಮಯದಲ್ಲಿಯೆ ಬೃಹಸ್ಪತಿಯ ಪುತ್ರ ಭರದ್ವಾಜ ಒಮ್ಮೆ ಸ್ನಾನಕ್ಕಾಗಿ ಗಂಗೆಗೆ ಹೋಗಿದ್ದ. ಅಲ್ಲಿ ದೇವೋತ್ತಮರಿಂದ ಉಪಭೋಗ್ಯಳಾದ ಘೃತಾಚಿಯನ್ನು, ಅವಳು ಉಟ್ಟ ಸೀರೆ ಜಾರಿದ್ದಾಗ ನೋಡಿದ.
ತದ್ದರ್ಶನಾತ್ ಸ್ಕನ್ನಮಥೇಂದ್ರಿಯಂ ಸ
ದ್ರೋಣೇ ದಧಾರಾಶು ತತೋಽಭವತ್ ಸ್ವಯಮ್ |

ಅಂಭೋಜಜಾವೇಶಯುತೋ ಬೃಹಸ್ಪತಿಃ
ಕರ್ತುಂ ಹರೇಃ ಕರ್ಮ ಭುವೋ ಭರೋದ್ಧೃತೌ ॥65॥
ಘೃತಾಚಿಯ ದರ್ಶನದಿಂದ ಬಿದ್ದ ವೀರ್ಯವನ್ನು ಭರದ್ವಾಜ ದ್ರೋಣದಲ್ಲಿಟ್ಟ. ಒಡನೆ ಅದರಿಂದ ಸ್ವತಃ ಬೃಹಸ್ಪತಿಯೆ ಬ್ರಹ್ಮಾವೇಶಯುಕ್ತನಾಗಿ ಭೂಭಾರಹರಣದಲ್ಲಿ ಕೃಷ್ಣನಿಗೆ ಸೇವೆ ಮಾಡುವುದಕ್ಕಾಗಿ ಹುಟ್ಟಿದ.
ದ್ರೋಣೇತಿ ನಾಮಾಸ್ಯ ಚಕಾರ ತಾತೋ
ಮುನಿರ್ಭರದ್ವಾಜ ಉತಾಸ್ಯ ವೇದಾನ್ ।
ಅಧ್ಯಾಪಯಾಮಾಸ ಸ ಶಾಸ್ತ್ರಸಂಘಾನ್
ಸರ್ವಜ್ಞತಾಮಾಪ ಚ ಸೋಽಚಿರೇಣ ॥66॥
ತಂದೆಯಾದ ಭರದ್ವಾಜ ಮುನಿ ಮಗನಿಗೆ ದ್ರೋಣನೆಂದೇ ನಾಮಕರಣ ಮಾಡಿದ. ಅವನಿಗೆ ವೇದಗಳನ್ನೂ ಶಾಸ್ತ್ರ ಸಮೂಹಗಳನ್ನೂ ಕಲಿಸಿದ. ಹೀಗೆ ದ್ರೋಣ ಬೇಗನೆ ಸರ್ವಜ್ಞತ್ವವನ್ನು ಪಡೆದ.
ಕಾಲೇ ಚ ತಸ್ಮಿನ್ ಪೃಷತೋಽನಪತ್ಯೋ
ವನೇ ತು ಪಾಂಚಾಲ ಪತಿಶ್ಚಚಾರ ।
ತಪೋ ಮಹತ್ ತಸ್ಯ ತಥಾ ವರಾಪ್ಸರಾ-
ವಲೋಕನಾತ್ ಸ್ಕಂದಿತಮಾಶು ರೇತಃ ॥67॥
ಅದೇ ಸಮಯದಲ್ಲಿ ಪಾಂಚಾಲದೇಶದ ದೊರೆ ಪೃಷತ ಮಕ್ಕಳಿಲ್ಲದವನಾದ್ದರಿಂದ ಅರಣ್ಯದಲ್ಲಿ ದೊಡ್ಡ ತಪಸ್ಸು ಮಾಡಿದ. ಅವನಿಗೆ ಓರ್ವ ಉತ್ತಮ ಅಪ್ಸರೆಯ ದರ್ಶನದಿಂದ ತಕ್ಷಣ ವೀರ್ಯ ಕೆಳಗೆ ಬಿದ್ದಿತು.
ಸ ತದ್ ವಿಲಜ್ಜ್ಯಾವಶತಃ ಪದೇನ
ಸಮಾಕ್ರಮತ್ ತಸ್ಯ ಬಭೂವ ಸೂನುಃ ।
ಹಹೂ ತು ನಾಮ್ನಾ ಸ ವಿರಿಂಚಗಾಯಕೋ
ನಾಮ್ನಾವಹೋ ಯೋ ಮರುತಾಂ ತದಂಶಯುಕ್ ॥68॥
ಪೃಷತ ನಾಚಿಕೆಯಿಂದ ವೀರ್ಯವನ್ನು ಕಾಲಿಂದ ಮುಚ್ಚಿದ. ಆ ವೀರ್ಯದಿಂದ ಅವನಿಗೆ ಒಬ್ಬ ಮಗ ಜನಿಸಿದ. ಅವನು ವಿಶೇಷವಾಗಿ ಬ್ರಹ್ಮನ ಗಾಯಕ. ಹೆಸರು ಹಹೂ ಎಂದು. ಮರುತ್ತುಗಳಲ್ಲಿ ಒಬ್ಬನಾದ ಆವಹನ ಅಂಶಯುಕ್ತನಾಗಿದ್ದ.
ಸ ದ್ರೋಣತಾತಾತ್ ಸಮವಾಪ ವೇದಾನ್
ಅಸ್ತ್ರಾಣಿ ವಿದ್ಯಾಶ್ಚ ತಥಾ ಸಮಸ್ತಾಃ ।
ದ್ರೋಣೇನ ಯುಕ್ತಃ ಸ ತದಾ ಗುರೋಃ ಸುತಂ
ಸಹೈವ ನೌ ರಾಜ್ಯಮಿತಿ ಹ್ಯವಾದೀತ್ ॥69॥
ದ್ರುಪದ ದ್ರೋಣನ ಜೊತೆ ಸೇರಿ ದ್ರೋಣನ ತಂದೆಯಾದ ಭಾರದ್ವಾಜನಿಂದ ವೇದಗಳನ್ನೂ ಅಸ್ತ್ರಗಳನ್ನೂ ಎಲ್ಲ ವಿದ್ಯೆಗಳನ್ನೂ ಪಡೆದ. ಆಗ ಅವನು ಗುರುಪುತ್ರನಾದ ದ್ರೋಣನಿಗೆ `ನಾವಿಬ್ಬರೂ ಜೊತೆಯಾಗಿಯೇ ರಾಜ ಸುಖ ಅನುಭವಿಸೋಣ' ಎಂದ.
ಪದೇ ದ್ರುತತ್ವಾದ್ ದ್ರುಪದಾಭಿಧೇಯಃ
ಸ ರಾಜ್ಯಮಾಪಾಥ ನಿಜಾಂ ಕೃಪೀಂ ಸಃ ।
ದ್ರೋಣೋಽಪಿ ಭಾರ್ಯಾಂ ಸಮವಾಪ್ಯ ಸರ್ವ-
ಪ್ರತಿಗ್ರಹೋಜ್ಝಶ್ಚ ಪುರೇಽವಸತ್ ಸುಖೀ ॥70॥
ಕಾಲಿಂದ ಮುಚ್ಚಿದ ಪ್ರಯುಕ್ತ ಅವನಿಗೆ ದ್ರುಪದ ಎಂದೇ ಹೆಸರಾಯಿತು. ಮುಂದೆ ಆತ ರಾಜ್ಯವನ್ನು ಹೊಂದಿದ. ಇತ್ತ ದ್ರೋಣ ತನ್ನವಳೇ ಆದ ಕೃಪಿಯನ್ನು ಮದುವೆಯಾಗಿ ಎಲ್ಲ ಪ್ರತಿಗ್ರಹವನ್ನೂ ಪರಿತ್ಯಜಿಸಿ ಪಟ್ಟಣದಲ್ಲಿ ಸುಖಿಯಾಗಿ ವಾಸಮಾಡಿದ.
* * * *

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-15
ಯದಾ ಭರದ್ವಾಜಸುತಸ್ತ್ವಸಂಚಯೀ
ಪ್ರತಿಗೃಹೋಜ್ಝೋ ನಿಜಧರ್ಮವರ್ತೀ ।
ದ್ರೌಣಿಸ್ತದಾ ಧಾರ್ತರಾಷ್ಟ್ರೈಃ ಸಮೇತ್ಯ ಕ್ರೀಡನ್
ಪಯಃ ಪಾತುಮುಪೈತಿ ಸದ್ಮ ॥7॥
ದ್ರೋಣ ಸ್ವಧರ್ಮದಲ್ಲಿದ್ದವ ಸಂಪತ್ತನ್ನು ಕೂಡಿಡುತ್ತಿರಲಿಲ್ಲ. ಇನ್ನೊಬ್ಬರಿಂದ ಸ್ವೀಕರಿಸುತ್ತಲೂ ಇರಲಿಲ್ಲ. ಆಗ ಅವನ ಮಗ ಅಶ್ವತ್ಥಾಮ ಕೌರವರೊಡಗೂಡಿ ಆಟವಾಡುತ್ತಿದ್ದು ಹಾಲು ಕುಡಿಯಲು ಮನೆಗೆ ಬರುತ್ತಿದ್ದ.
ತಸ್ಮೈಮಾತಾ ಪಿಷ್ಟಮಾಲೋಡ್ಯ ಪಾತುಂ
ದದಾತಿ ಪೀತ್ವೈತಿ ತದೈಷ ನಿತ್ಯಮ್ ।
ಪೀತಕ್ಷೀರಾನ್ ಧಾರ್ತರಾಷ್ಟ್ರಾನ್ ಸಮೇತ್ಯ
ಮಯಾ ಪೀತಂ ಕ್ಷೀರಮಿತ್ಯಾಹ ನಿತ್ಯಮ್ ॥8॥
ತಾಯಿ ನಿತ್ಯ ಹಿಟ್ಟು ಕಲಿಸಿ ಅಶ್ವತ್ಥಾಮನಿಗೆ ಕುಡಿಯಲು ಕೊಡುತ್ತಿದ್ದಳು. ಅವನು ಕುಡಿದು ಹೋಗುತ್ತಿದ್ದ. ನಿತ್ಯ ಹಾಲನ್ನೆ ಕುಡಿಯುತ್ತಿದ್ದ ಕೌರವರ ಬಳಿಗೆ ಬಂದು ನಾನು ಹಾಲು ಕುಡಿದೆನೆನ್ನುತ್ತಿದ್ದ.
ನೃತ್ಯಂತಮೇನಂ ಪಾಯಯಾಮಾಸುರೇತೇ

ಪಯಃ ಕದಾಚಿದ್ ರಸಮಸ್ಯ ಸೋಽವೈತ್ |
ಪುನಃ ಕದಾಚಿತ್ ಸ ತು ಮಾತೃದತ್ತೇ
ಪಿಷ್ಟೇ ನೇದಂ ಕ್ಷೀರಮಿತ್ಯಾರುರಾವ ॥9॥
ಕುಣಿಯುತ್ತಿದ್ದ ಅಶ್ವತ್ಥಾಮನಿಗೆ ಕೌರವರು ಒಮ್ಮೆ ಹಾಲು ಕುಡಿಸಿದರು. ಅವನು ಅದರ ರುಚಿ ಕಂಡ. ಬಳಿಕ ತಾಯಿ ಹಿಟ್ಟು ಕಲಿಸಿದ ನೀರನ್ನು ಕೊಟ್ಟಾಗ ಇದು ಹಾಲಲ್ಲವೆನ್ನುತ್ತ ಅಳತೊಡಗಿದ.
ದೃಷ್ಟ್ವಾರುವಂತಂ ಸುತಮಾತ್ಮಜನ್ಯ
ಸ್ನೇಹಾನ್ನಿಯತ್ಯೈವ ಜನಾರ್ದನಸ್ಯ |
ಸಂಪ್ರೇರಿತಃ ಕೃಪಯಾ ಚಾರ್ತರೂಪೋ
ದ್ರೋಣೋ ಯಯಾವಾರ್ಜಯಿತುಂ ತದಾ ಗಾಮ್ ॥10॥
ಮಗ ಅಳುವುದನ್ನು ಕಂಡು ದ್ರೋಣ ಹರೀಚ್ಛೆಯಿಂದ ಉಂಟಾದ ಪುತ್ರ ಸ್ನೇಹದಿಂದ ಮತ್ತು ಕರುಣೆಯಿಂದ ಪ್ರೇರಿತನಾಗಿ ದುಃಖಿತನಾಗಿ ಗೋವನ್ನು ಸಂಪಾದಿಸಲು ಹೊರಟ.
ಪ್ರತಿಗ್ರಹಾತ್ ಸನ್ನಿವೃತ್ತಃ ಸ ರಾಮಂ
ಯಯೌ ನ ವಿಷ್ಣೋರ್ಹಿ ಭವೇತ್ ಪ್ರತಿಗ್ರಹಃ |
ದೋಷಾಯ ಯಸ್ಮಾತ್ ಸ ಪಿತಾಖಿಲಸ್ಯ
ಸ್ವಾಮೀ ಗುರುಃ ಪರಮಂ ದೈವತಂ ಚ ॥11॥
ಇನ್ನೊಬ್ಬರಿಂದ ಏನೂ ಸ್ವೀಕರಿಸುವುದನ್ನೇ ಬಿಟ್ಟಿದ್ದರೂ ದ್ರೋಣ ಪರಶುರಾಮನ ಬಳಿಗೆ ಹೋದ. ಹರಿಯಿಂದ ಸ್ವೀಕರಿಸುವುದು ದೋಷಕರವಲ್ಲ ತಾನೆ! ಏಕೆಂದರೆ ಅವನು ಎಲ್ಲರಿಗೂ ತಂದೆ, ಸ್ವಾಮಿ, ಗುರು ಮತ್ತು ಪರದೇವತೆ!
ದೃಷ್ಟ್ವಾ ಚೈನಂ ಜಾಮದಗ್ನ್ಯೋಽಪ್ಯಚಿಂತಯತ್
ದ್ರೋಣಂ ಕರ್ತುಂ ಕ್ಷಿತಿಭಾರಾಪನೋದೇ |
ಹೇತುಂ ಸುರಾಣಾಂ ನರಯೋನಿಜಾನಾಂ
ಹಂತಾ ಚಾಯಂ ಸ್ಯಾತ್ ಸಹ ಪುತ್ರೇಣ ಚೇತಿ ॥12॥
ಪರಶುರಾಮ ದ್ರೋಣನನ್ನು ಕಂಡು ಈತ ಮಗನೊಂದಿಗೆ ಮಾನವಯೋನಿಯಲ್ಲಿ ಅವತರಿಸಿದ ದೇವತೆಗಳಿಗೆ ಹಂತಕನಾಗಬಲ್ಲ ಎಂದು ಅವನನ್ನು ಭೂಭಾರಹರಣ ಕಾರ್ಯದಲ್ಲಿ ನಿಮಿತ್ತವಾಗಿ ಮಾಡಲು ಆಲೋಚಿಸಿದ.
ತೇಷಾಂ ವೃದ್ಧಿಃ ಸ್ಯಾತ್ ಪಾಂಡವಾರ್ಥೇ ಹತಾನಾಂ
ಮೋಕ್ಷೇಽಪಿ ಸೌಖ್ಯಸ್ಯ ನ ಸಂತತಿಶ್ಚ |
ಯೋಗ್ಯಾ ಸುರಾಣಾಂ ಕಲಿಜಾ ಸುಪಾಪಾಃ
ಪ್ರಾಯೋ ಯಸ್ಮಾತ್ ಕಲಿಜಾಃ ಸಂಭವಂತಿ ॥13॥
ಪಾಂಡವರಿಗಾಗಿ ಹೋರಾಡಿ ಮಡಿದರೆ ಆ ದೇವತೆಗಳಿಗೆ ಮೋಕ್ಷದಲ್ಲಿ ಆನಂದ ವೃದ್ಧಿಯಾಗುವುದು. ಮತ್ತು ಕಲಿಯುಗದಲ್ಲಿ ಹುಟ್ಟುವ ಸಂತತಿ ಅವರಿಗೆ ಯೋಗ್ಯವೂ ಆಗುವುದಿಲ್ಲ. ಏಕೆಂದರೆ ಕಲಿಯುಗದಲ್ಲಿ ಹುಟ್ಟುವವರು ಪ್ರಾಯಃ ಮಹಾ ಪಾಪಿಗಳಾಗಿರುತ್ತಾರೆ.
ನ ದೇವಾನಾಮಾಶತಂ ಪೂರುಷಾ ಹಿ
ಸಂತಾನಜಾಃ ಪ್ರಾಯಶಃ ಪಾಪಯೋಗ್ಯಾಃ |
ನಾಕಾರಣಾತ್ ಸಂತತೇರಪ್ಯಭಾವೋ
ಯೋಗ್ಯಃ ಸುರಾಣಾಂ ಸದಮೋಘರೇತಸಾಮ್ ॥14॥
ದೇವತೆಗಳ ಸಂತತಿಯಲ್ಲಿ ಹುಟ್ಟುವವರು ನೂರು ತಲೆಗಳವರೆಗೆ ಪ್ರಾಯಃ ಪಾಪಯೋಗ್ಯರಿರುವುದಿಲ್ಲ. ನಿರ್ದುಷ್ಟ ಅಮೋಘ ರೇತಸ್ಸುಳ್ಳ ದೇವತೆಗಳಿಗೆ ಶಾಪಾದಿ ಪ್ರಬಲಕಾರಣವಿಲ್ಲದೆ ಸಂತತಿ ನಿಲ್ಲುವುದೂ ಕೂಡುವುದಿಲ್ಲ.
ಅವ್ಯುಚ್ಛಿನ್ನೇ ಸಕಲಾನಾಂ ಸುರಾಣಾಂ
ತಂತೌ ಕಲಿರ್ನೋ ಭವಿತಾ ಕಥಂಚಿತ್ |
ತಸ್ಮಾದುತ್ಪಾದ್ಯಾಃ ಸರ್ವ ಏತೇ ಸುರಾಂಶಾ
ಏತೇನ ಸಾಕಂ ತನಯೇನ ವೀರಾಃ ॥15॥
ಎಲ್ಲ ದೇವತೆಗಳ ಸಂತತಿಯೂ ಅವಿಚ್ಛಿನ್ನವಾಗಿ ಮುಂದುವರಿದರೆ ಕಲಿಯುಗ ಸರ್ವಥಾ ಉಂಟಾಗದು. ಅದರಿಂದ ದೇವಾಂಶರಾದ ಈ ವೀರರೆಲ್ಲರೂ ದ್ರೋಣ ಅಶ್ವತ್ಥಾಮರಿಂದ ನಾಶಹೊಂದಬೇಕು.
ಏವಂ ವಿಚಿಂತ್ಯಾಪ್ರತಿಮಃ ಸ ಭಾರ್ಗವೋ
ಬಭಾಷ ಈಷತ್ ಸ್ಮಿತಶೋಚಿಷಾ ಗಿರಾ |
ಅನಂತಶಕ್ತಿಃ ಸಕಲೇಶ್ವರೋಽಪಿ ತ್ಯಕ್ತಂ
ಸರ್ವಂ ನಾದ್ಯ ವಿತ್ತಂ ಮಮಾಸ್ತಿ ॥16॥
ಹೀಗೆ ಆಲೋಚಿಸಿ ಅನುಪಮನಾದ ಪರಶುರಾಮ ಅನಂತಶಕ್ತಿ ಉಳ್ಳವ ಸರ್ವೇಶ್ವರನಾಗಿದ್ದರೂ ಮಂದಹಾಸದ ಕಾಂತಿ ಬೀರುತ್ತ ಹೇಳಿದ, `ನಾನು ಎಲ್ಲವನ್ನೂ ಕೊಟ್ಟು ಬಿಟ್ಟಿದ್ದೇನೆ. ಈಗ ನನ್ನಲ್ಲಿ ಏನೂ ಸಂಪತ್ತು ಇಲ್ಲ.
ಆತ್ಮಾ ವಿದ್ಯಾ ಶಸ್ತ್ರಮೇತಾವದಸ್ತಿ
ತೇಷಾಂ ಮಧ್ಯೇ ರುಚಿತಂ ತ್ವಂ ಗೃಹಾಣ |
ಉಕ್ತಃ ಸ ಇತ್ಥಂಪ್ರವಿಚಿಂತ್ಯ ವಿಪ್ರೋ

ಜಗಾದ ಕಸ್ತ್ವದ್‌ಗ್ರಹಣೇ ಸಮರ್ಥಃ ॥17॥
`ಈಗ ನಾನು, ನನ್ನ ಬ್ರಹ್ಮವಿದ್ಯೆ, ಆಯುಧ- ಇಷ್ಟು ಮಾತ್ರ ಇವೆ. ಅವುಗಳಲ್ಲಿ ನಿನಗೆ ಇಷ್ಟವಾದುದನ್ನು ನೀನು ಪಡೆಯಬಹುದು'. ಪರಶುರಾಮ ಹೀಗೆ ಹೇಳಿದಾಗ ದ್ರೋಣ ಆಲೋಚಿಸಿ ಹೇಳಿದ, `ನಿನ್ನನ್ನು ಪಡೆದು ಆಳುವ ಸಮರ್ಥರು ಯಾರು?'
ಸರ್ವೇಶಿತಾ ಸರ್ವಪರಃ ಸ್ವತಂತ್ರ-
ಸ್ತ್ವಮೇವ ಕೋಽನ್ಯಃ ಸದೃಶಸ್ತವೇಶ |
ಸಾಮ್ಯಂ ತವೇಚ್ಛನ್ ಪ್ರತಿಯಾತ್ಯಧೋ ಹಿ
ಯಸ್ಮಾನ್ನ ಚೋತ್ಥಾತುಮಲಂ ಕದಾಚಿತ್ ॥18॥
ಸರ್ವೇಶ್ವರ ಸ್ವತಂತ್ರ ಸರ್ವೋತ್ತಮ ನೀನೆ. ಪ್ರಭು, ನಿನಗೆ ಸದೃಶನಿನ್ನೊಬ್ಬ ಯಾರು? ನಿನ್ನ ಸಾಮ್ಯವನ್ನು ಬಯಸುವವ ಅಧೋಗತಿ ಹೊಂದುತ್ತಾನೆ. ಅಲ್ಲಿಂದ ಎಂದೂ ಮೇಲೆ ಬರಲು ಶಕ್ತನಾಗುವುದಿಲ್ಲ. ಇನ್ನು ನಿನ್ನನ್ನು ಆಳಲು ಬಯಸಿದರೆ ಹೇಗೆ?
ಸರ್ವೋತ್ತಮಸ್ಯೇಶ ತವೋಚ್ಚ ಶಸ್ತ್ರೈಃ
ಕಾರ್ಯಂ ಕಿಮಸ್ಮಾಕಮನುದ್ಬಲಾನಾಮ್ |
ವಿದ್ಯೈವ ದೇಯಾ ಭವತಾ ತತೋಽಜ
ಸರ್ವಪ್ರಕಾಶಿನ್ಯಮಲಾ ಸುಸೂಕ್ಷ್ಮಾ ॥19॥
ಜನನ ರಹಿತನಾದ ಪ್ರಭುವೆ, ಸರ್ವೋತ್ತಮನಾದ ನಿನ್ನ ಉನ್ನತವಾದ ಆಯುಧಗಳಿಂದ ದುರ್ಬಲರಾದ ನಮಗೆ ಏನು ಪ್ರಯೋಜನ? ಆದ್ದರಿಂದ ನಿರ್ಮಲವಾದ ಅತ್ಯಂತ ಸೂಕ್ಷ್ಮವಾದ ಸರ್ವಪ್ರಕಾಶಕವಾದ ವಿದ್ಯೆಯನ್ನೆ ನನಗೆ ನೀಡು.
ಇತೀರಿತಸ್ತತ್ವವಿದ್ಯಾದಿಕಾಃ ಸ
ವಿದ್ಯಾಃ ಸರ್ವಾಃ ಪ್ರದದೌ ಸಾಸ್ತ್ರಶಸತ್ರಃ |
ಅಬ್ದದ್ವಿಷಟ್ಕೇನ ಸಮಾಪ್ಯ ತಾಃ ಸ
ಯಯೌ ಸಖಾಯಾಂ ದ್ರುಪದಂ ಮಹಾತ್ಮಾ ॥20॥
ದ್ರೋಣ ಹೀಗೆ ಹೇಳಿದಾಗ ಪರಶುರಾಮ ಅವನಿಗೆ ತತ್ವವಿದ್ಯೆ ಮುಂತಾದ ಸಕಲ ವಿದ್ಯೆಗಳನ್ನೂ ಜೊತೆಗೆ ಅಸ್ತ್ರಶಸ್ತ್ರ ವಿದ್ಯೆಗಳನ್ನೂ ನೀಡಿದ.
* * * *
ನೂರ ಇಪ್ಪತ್ತೆಂಟನೆಯ ಅಧ್ಯಾಯ
(ದ್ರೋಣರ ಉತ್ಪತ್ತಿ, ಪರಶುರಾಮರಿಂದ ಅಸ್ತ್ರಪ್ರಾಪ್ತಿ. ಅಶ್ವತ್ಥಾಮರ ಜನನ.)
ವೈಶಂಪಾಯನಃ
ಮಹರ್ಷಿಸ್ತು ಭರದ್ವಾಜೋ ಹವಿರ್ಧಾನೇಽಭವತ್ ಪುರಾ |
ಗಂಗಾದ್ವಾರಂ ಪ್ರತಿ ಮಹಾನ್ ಬಭೂವರ್ಷಿರ್ಮಹಾತಪಾಃ ॥1॥
ಮಹರ್ಷಿಗಳಾದ ಭರದ್ವಾಜರು ಗಂಗಾದ್ವಾರದ ಸಮೀಪದಲ್ಲಿ ಹವಿರ್ಧಾನ ಎಂಬ ಆಶ್ರಮದಲ್ಲಿ ಹಿಂದೆ ಉಗ್ರವಾದ ತಪಸ್ಸನ್ನು ಆಚರಿಸಿಕೊಂಡಿದ್ದರು.
ಭರದ್ವಾಜೋ ಮಹಾಪ್ರಾಜ್ಞಃ ಸತತಂ ಸಂಶಿತವ್ರತಃ |
ಸೋಽಭಿಷೇಕ್ತುಂ ತತೋ ಗಂಗಾಂ ಪೂರ್ವಮೇವಾಗತಾಂ ನದೀಮ್ |
ದದರ್ಶಾಪ್ಸರಸಂ ಸಾಕ್ಷಾದ್ ಘೃತಾಚೀಮಾಪ್ಲುತಾಮೃಷಿಃ ॥2॥
ಮಹಾಪ್ರಾಜ್ಞರೂ, ಯಾವಾಗಲೂ ವ್ರತನಿಷ್ಠರೂ ಆದ ಆ ಭರದ್ವಾಜರು ಸ್ನಾನ ಮಾಡುವ ಸಲುವಾಗಿ ಗಂಗೆಯ ಬಳಿಗೆ ಹೋಗಿ ತಮಗಿಂತಲೂ ಮೊದಲು ನದಿಗೆ ಬಂದು ಆಗ ತಾನೇ ಸ್ನಾನವನ್ನು ಮಾಡಿದ್ದ ಅಪ್ಸರೆಯಾದ ಘೃತಾಚಿಯನ್ನು ನೋಡಿದರು.
ರೂಪಯೌವನಸಂಪನ್ನಾಂ ಮದದೃಪ್ತಾಂ ಮದಾಲಸಾಮ್ |
ತಸ್ಯಾ ವಾಯುರ್ನದೀತೀರೇ ವಸನಂ ವ್ಯಹರತ್ ತದಾ |
ಅಪಕೃಷ್ಟಾಂಬರಾಂ ದೃಷ್ಟ್ವಾ ತಾಮೃಷಿಶ್ಚಕಮೇ ತದಾ ॥3॥
ರೂಪಯೌವನಸಂಪನ್ನಳಾದ, ಮದಾಲಸಳಾದ ಮತ್ತು ಮದದ ದರ್ಪದಿಂದ ಕೂಡಿದ್ದ ಅವಳ ವಸ್ತ್ರವನ್ನು, ನದಿತೀರದಲ್ಲಿದ್ದ ವಾಯುವು ಹಾರಿಸಿತು. ಶರೀರದ ಮೇಲೆ ವಸ್ತ್ರವಿಲ್ಲದ ಅವಳನ್ನು ನೋಡಿ ಋಷಿಗಳು ಅವಳನ್ನು ಕಾಮಿಸಿದರು.
ತತ್ರ ಸಂರಕ್ತಮನಸೋ ಭರದ್ವಾಜಸ್ಯ ಧೀಮತಃ |
ಹೃಷ್ಟಸ್ಯ ರೇತಃ ಚಸ್ಕಂದ ತದೃಷಿರ್ದ್ರೋಣ ಆದಧತ್ ॥4॥
ಅವಳಲ್ಲಿ ಲಗ್ನವಾದ ಮನಸ್ಸುಳ್ಳವರಾಗಿ ಸಂತೋಷಗೊಂಡ ಮೇಧಾವಿಗಳಾದ ಭರದ್ವಾಜರಿಗೆ ವೀರ್ಯಸ್ಖಲನವಾಯಿತು. ಅವರು ಅದನ್ನು ಒಂದು ದ್ರೋಣ ಪರಿಮಾಣವುಳ್ಳ ತಮ್ಮ ಕಲಶದಲ್ಲಿ (ಕಮಂಡಲುವಿನಲ್ಲಿ) ಹಿಡಿದರು.
ತತಃ ಸಮಭವದ್ ದ್ರೋಣಃ ಕುಮಾರಸ್ತಸ್ಯ ಧೀಮತಃ |
ಅಧ್ಯಗೀಷ್ಟ ಸ ವೇದಾಂಶ್ಚ ವೇದಾಂಗಾನಿ ಚ ಸರ್ವಶಃ ॥5॥
ಆ ಕಲಶದಿಂದ ಮೇಧಾವಿಗಳಾದ ಅವರಿಗೆ ಪುತ್ರರಾಗಿ ದ್ರೋಣರು ಉದಯಿಸಿದರು. ಅವರು ಎಲ್ಲಾ ವೇದಗಳನ್ನೂ ಮತ್ತು ವೇದಾಂಗಗಳನ್ನೂ ಅಧ್ಯಯನ ಮಾಡಿದರು.
ಅಗ್ನೇರಸ್ತ್ರಮುಪಾದಾಯ ಯದ್ ಋಷಿರ್ವೇದ ಕಾಶ್ಯಪಃ |
ಅಧ್ಯಗಚ್ಛದ್ ಭರದ್ವಾಜಸ್ತದಸ್ತ್ರಂ ದೇವಕಾರ್ಯತಃ ॥6॥
ಕಾಶ್ಯಪಋಷಿಗಳು ಯಾವ ಶ್ರೇಷ್ಠವಾದ ಅಗ್ನ್ಯಸ್ತ್ರವನ್ನು ತಿಳಿದಿದ್ದರೋ, ದ್ರೋಣರ ತಂದೆಯಾದ ಭರದ್ವಾಜರು ದೇವಕಾರ್ಯದ

ಸಲುವಾಗಿ ಆ ಅಸ್ತ್ರವನ್ನು ಸಂಪಾದಿಸಿದರು.
ಅಗ್ನಿವೇಶ್ಯಂ ಮಹಾಭಾಗಂ ಭಾರದ್ವಾಜಃ ಪ್ರತಾಪವಾನ್ |
ಪ್ರತ್ಯಪಾದಯದಾಗ್ನೇಯಮಸ್ತ್ರಮಸ್ತ್ರವಿದಾಂ ವರಃ |
ಕನಿಷ್ಠಜಾತಂ ಸ ಮುನಿರ್ಭ್ರಾತಾ ಭ್ರಾತರಮಂತಿಕೇ ॥7॥
ಅಸ್ತ್ರವೇತ್ತರಲ್ಲಿ ಶ್ರೇಷ್ಠರೂ, ಪ್ರತಾಪಶಾಲಿಗಳೂ ಆದ ಭರದ್ವಾಜರು ತಮ್ಮ ತಮ್ಮನ ಮಗನಾದ ಮಹಾನುಭಾವರಾದ ಅಗ್ನಿವೇಶ್ಯ ಋಷಿಗಳಿಗೆ ಆ ಆಗ್ನೇಯಾಸ್ತ್ರವನ್ನು ಉಪದೇಶ ಮಾಡಿದರು.
ಅಗ್ನಿವೇಶ್ಯಸ್ತಥಾ ದ್ರೋಣಂ ತದಾ ಭರತಸತ್ತಮ |
ಭಾರದ್ವಾಜೇ ಸ ಚಾಗ್ನೇಯಂ ಮಹಾಸ್ತ್ರಂ ಪ್ರತ್ಯವೇದಯತ್ ॥8॥
ಎಲೈ ಭರತಶ್ರೇಷ್ಠನೇ. ಅಗ್ನಿವೇಶ್ಯರು ತನ್ನ ತಮ್ಮಂದಿರಾದ ಭರದ್ವಾಜರ ಪುತ್ರರಾದ ದ್ರೋಣರಿಗೆ ಆ ಶ್ರೇಷ್ಠವಾದ ಆಗ್ನೇಯಾಸ್ತ್ರವನ್ನು ಉಪದೇಶಿಸಿದರು.
ಸ ವೈ ಯುಕ್ತೋ ಗುರೋರ್ಭಾವೇ ಯದೀಚ್ಛೇತ್ ಕೃಪಣಃ ಸುಖಮ್ |
ಭೀಷ್ಮೋಽಪ್ಯಲಪದೇವಂ ಸ ಭಾರದ್ವಾಜಪರೀಪ್ಸಯಾ |
ಇತಿ ಸಂಚಿಂತ್ಯ ಗಾಂಗೇಯಃ ತದಾ ಭರತಸತ್ತಮಃ ॥9॥
ಸ್ವತಃ ಕಷ್ಟದಲ್ಲಿರುವ ಅವರು ಸುಖವನ್ನು ಬಯಸಿದರೆ, ನಮ್ಮ ಪೌತ್ರರಿಗೆ ಆಚಾರ್ಯರಾಗಲು ಅರ್ಹರಾಗಿದ್ದಾರೆ ಎಂದು ಅವರನ್ನು ಸಂಪಾದಿಸುವ ದೃಷ್ಟಿಯಿಂದ ಭರತಶ್ರೇಷ್ಠರಾದ ಭೀಷ್ಮರು ತಮ್ಮ ಮನಸ್ಸಿನಲ್ಲಿ ಹೀಗೆ ಹೇಳಿಕೊಂಡರು.
ದ್ರೋಣಾಯ ವೇದವಿದುಷೇ ಭಾರದ್ವಾಜಾಯ ಧೀಮತೇ |
ಪಾಂಡವಾನ್ ಕೌರವಾಂಶ್ಚೈವ ದದೌ ಶಿಷ್ಯಾನ್ ನರರ್ಷಭ ॥10॥
ಎಲೈ ರಾಜನೇ, ಭರತಶ್ರೇಷ್ಠರಾದ ಭೀಷ್ಮರು ಹೀಗೆ ಯೋಚಿಸಿ, ಆಗ ವೇದಜ್ಞರೂ, ಮೇಧಾವಿಗಳೂ, ಭರದ್ವಾಜ ಪುತ್ರರೂ ಆದ ದ್ರೋಣರಿಗೆ ಪಾಂಡವರನ್ನು ಮತ್ತು ಕೌರವರನ್ನು ಶಿಷ್ಯರನ್ನಾಗಿ ಒಪ್ಪಿಸಿದರು.
ಶಾಸ್ತ್ರತಃ ಪೂಜಿತಶ್ಚೈವ ಸಮ್ಯಕ್ ತೇನ ಮಹಾತ್ಮನಾ |
ಸ ಭೀಷ್ಮೇಣ ಮಹಾಭಾಗಃ ತುಷ್ಟೋಽಸ್ತ್ರವಿದುಷಾಂ ವರಃ |
ಪ್ರತಿಜಗ್ರಾಹ ತಾನ್ ಸರ್ವಾನ್ ಶಿಷ್ಯತ್ವೇನ ಮಹಾಯಶಾಃ ॥11॥
ಎಲೈ ರಾಜನೇ, ಶಾಸೊತ್ರೋಕ್ತವಾಗಿ, ಮಹಾತ್ಮರಾದ ಭೀಷ್ಮರಿಂದ ಚೆನ್ನಾಗಿ ಪೂಜಿಸಲ್ಪಟ್ಟ ಮಹಾನುಭಾವರಾದ, ಅಸ್ತ್ರವೇತ್ತರಲ್ಲಿ ಶ್ರೇಷ್ಠರಾದ, ಮಹಾಕೀರ್ತಿವಂತರಾದ ದ್ರೋಣರು ಸಂತೋಷಗೊಂಡು ಅವರೆಲ್ಲರನ್ನೂ ಶಿಷ್ಯರನ್ನಾಗಿ ಸ್ವೀಕರಿಸಿದರು.
ಶಿಕ್ಷಯಾಮಾಸ ಚ ದ್ರೋಣೋ ಧನುರ್ವೇದಮಶೇಷತಃ |
ತೇಽಚಿರೇಣೈವ ಕಾಲೇನ ಸರ್ವಶಸ್ತ್ರವಿಶಾರದಾಃ |
ಬಭೂವುಃ ಕೌರವಾ ರಾಜನ್ ಪಾಂಡವಾಶ್ಚಾಮಿತೌಜಸಃ ॥12॥
ದ್ರೋಣರು ಅವರೆಲ್ಲರಿಗೂ ಸಮಗ್ರವಾದ ಧನುರ್ವೇದವನ್ನು ಕಲಿಸಿದರು. ಎಲೈ ರಾಜನೇ, ಕೌರವರು ಮತ್ತು ಅಮಿತ ಪರಾಕ್ರಮಿಗಳಾದ ಪಾಂಡವರು ಅಲ್ಪಕಾಲದಲ್ಲಿಯೇ ಸರ್ವಶಸ್ತ್ರ ವಿಶಾರದರಾದರು.
ಜನಮೇಜಯಃ
ಕಥಂ ಸಮಭವದ್ ದ್ರೋಣಃ ಕಥಂ ಚಾಸಅತ್ರಣ್ಯವಾಪ್ತವಾನ್ |
ವಾಽಸ್ತಿ ಕುತ್ರ ನನು ಬ್ರಹ್ಮನ್ ಕಸ್ಯ ಪುತ್ರಃ ಪ್ರತಾಪವಾನ್ ॥13॥
ಕಥಂ ಚಾಸ್ಯ ಸುತೋ ಜಾತಃ ಮಹಾಶಸಅತ್ರಸ್ತ್ರವಿಕ್ರಮಃ |
ಏತದಿಚ್ಛಾಮ್ಯಹಂ ಬ್ರಹ್ಮನ್ ನಿಖಿಲೇನಾನುವೇದಿತುಮ್ ॥14॥
ಬ್ರಾಹ್ಮಣರೇ, ದ್ರೋಣರು ಹೇಗೆ ಜನಿಸಿದರು? ಹೇಗೆ ಅಸ್ತ್ರಗಳನ್ನು ಸಂಪಾದಿಸಿದರು? ಎಲ್ಲಿ ವಾಸ ಮಾಡಿದರು? ಮಹಾಶಸಅತ್ರಸ್ತ್ರ ಪರಾಕ್ರಮಿಗಳಾದ ಅವರ ಪ್ರತಾಪಶಾಲಿಗಳಾದ ಪುತ್ರರು ಹೇಗೆ ಜನಿಸಿದರು? ನಾನು ಇದನ್ನೆಲ್ಲಾ ಸರಿಯಾಗಿ ತಿಳಿಯಲು ಬಯಸುತ್ತೇನೆ.
ವೈಶಂಪಾಯನಃ
ಭರದ್ವಾಜಸಖಾ ಚಾಸೀತ್ ಪೃಷತೋ ನಾಮ ಪಾರ್ಥಿವಃ |
ತಸ್ಯಾಪಿ ದ್ರುಪದೋ ನಾಮ ತದಾ ಸಮಭವತ್ ಸುತಃ ॥15॥
ಭರದ್ವಾಜರಿಗೆ ಪೃಷತ ಎಂಬ ಪಾಂಚಾಲರಾಜನು ಸ್ನೇಹಿತನಾಗಿದ್ದನು. ಅವನಿಗೆ ದ್ರುಪದನೆಂಬ ಪುತ್ರನು ಜನಿಸಿದನು.
ಸ ನಿತ್ಯಮಾಶ್ರಮಂ ಗತ್ವಾ ದ್ರೋಣೇನ ಸಹ ಪಾರ್ಷತಃ |
ಚಿಕ್ರೀಡಾಧ್ಯಯನಂ ಚೈವಂ ಚಕಾರ ಕ್ಷತ್ರಿಯರ್ಷಭಃ ॥16॥
ಕ್ಷತ್ರಿಯಶ್ರೇಷ್ಠನಾದ ಪೃಷತನ ಮಗನಾದ ಪಾರ್ಷತನು (ದ್ರುಪದನು) ನಿತ್ಯವೂ ಭರದ್ವಾಜರ ಆಶ್ರಮಕ್ಕೆ ಬಂದು ದ್ರೋಣರ ಜೊತೆಯಲ್ಲಿ ಆಟವನ್ನು ಆಡಿ ಅಧ್ಯಯನವನ್ನೂ ಮಾಡುತ್ತಿದ್ದನು.
ಕ್ಷತ್ರೇ ವ್ಯತೀತೇ ಪೃಷತೇ ಸ ರಾಜಾ ದ್ರುಪದೋಽಭವತ್ |
ಪಾಂಚಾಲೇಷು ಮಹಾಬಾಹುರುತ್ತರೇಷು ನರೇಶ್ವರಃ |
ಭರದ್ವಾಜೋಽಪಿ ಭಗವಾನ್ ಆರುರೋಹ ದಿವಂ ತದಾ ॥17॥
ಪೃಷತನು ಕಾಲವಶನಾಗುತ್ತಿರಲು, ಮಹಾಬಾಹುವಾದ ದ್ರುಪದನು ಉತ್ತರ ಪಾಂಚಾಲದಲ್ಲಿ ರಾಜನಾದನು. ಪೂಜ್ಯರಾದ ಭರದ್ವಾಜರು ಸಹ ಸ್ವರ್ಗವನ್ನು ಸೇರಿದರು.
ತತಃ ಪಿತೃನಿಯುಕ್ತಾತ್ಮಾ ಪುತ್ರಲೋಭಾದ್ ಯಶಸ್ವಿನೀಮ್ |

ಶಾರದ್ವತೀಂ ತದಾ ದ್ರೋಣಃ ಕೃಪೀಂ ಭಾರ್ಯಾಮವಿಂದತ |
ಅಗ್ನಿಹೋತ್ರೇ ಚ ಧರ್ಮೇ ಚ ಯಮೇ ಚ ಸತತಂ ರತಾಮ್ ॥18॥
ತಂದೆಯ ಆದೇಶವನ್ನು ಹೊಂದಿದ್ದ ದ್ರೋಣರು ಪುತ್ರನನ್ನು ಪಡೆಯುವ ಆಸೆಯಿಂದ ಅಗ್ನಿಹೋತ್ರದಲ್ಲಿಯೂ, ಧರ್ಮದಲ್ಲಿಯೂ, ಯಮನಿಯಮಗಳಲ್ಲಿಯೂ ಯಾವಾಗಲೂ ಆಸಕ್ತಳಾದ ಶರದ್ವಂತನ ಮಗಳಾದ ಕೀರ್ತಿಶಾಲಿನಿಯಾದ ಕೃಪಿಯನ್ನು ಪತ್ನಿಯಾಗಿ ಪಡೆದರು.
ಅಲಭದ್ ಗೌತಮೀ ಪುತ್ರಮಶ್ವತ್ಥಾಮಾನಮಚ್ಯುತಮ್ |
ಸ ಜಾತಮಾತ್ರೋ ವ್ಯನದದ್ ಯಥೈವೋಚ್ಚೈಃಶ್ರವಾ ಹಯಃ ॥19॥
ಗೌತಮಕುಲದಲ್ಲಿ ಜನಿಸಿದ ಕೃಪಿಯು ಪರಾಕ್ರಮಚ್ಯುತಿಯನ್ನು ಹೊಂದದ ಅಶ್ವತ್ಥಾಮನೆಂಬ ಪುತ್ರನನ್ನು ಪಡೆದಳು. ಅವನು ಹುಟ್ಟಿದ ತಕ್ಷಣ ಉಚ್ಚೈಃಶ್ರವ ಹಯದಂತೆ ಕೆನೆದನು.
ತಚ್ಛ್ರುತ್ವಾಽಂತರ್ಹಿತಂ ಭೂತಮಂತರಿಕ್ಷಸ್ಥಮಬ್ರವೀತ್ |
ಅಶ್ವಸ್ಯೇವಾಸ್ಯ ಯತ್ ಥಾಮ ನದತಃ ಪ್ರದಿಶೋ ಗತಮ್ ॥20॥
ಅಶ್ವತ್ಥಾಮೈವ ಬಾಲೋಽಯಂ ತಸ್ಮಾನ್ನಾಮ್ನಾ ಭವಿಷ್ಯತಿ |
ಸುತೇನ ತೇನ ಸುಪ್ರೀತೋ ಭಾರದ್ವಾಜಸ್ತತೋಽಭವತ್ ॥21॥
ಅದನ್ನು ಕೇಳಿದ ಅದೃಶ್ಯರಾದ ಒಂದು ಭೂತವು (ದೇವತೆಯು) ಇವನ ನಾದವು ಅಶ್ವದ ಕೆನೆತದಂತೆ ದಿಕ್ಕುದಿಕ್ಕುಗಳಿಗೆ ಹೋದದ್ದರಿಂದ ಈ ಬಾಲಕನಿಗೆ ಅಶ್ವತ್ಥಾಮನೆಂದೇ ಹೆಸರಾಗುವುದು ಎಂದು ಹೇಳಿತು. ಆ ಮಗನನ್ನು ಪಡೆದು ದ್ರೋಣರು ಸಂತೋಷಗೊಂಡರು.
ತತ್ರೈವ ಚ ವಸನ್ ಧೀಮಾನ್ ಧನುರ್ವೇದಪರೋಽಭವತ್ |
ಸ ಶುಶ್ರಾವ ಮಹಾತ್ಮಾನಂ ಜಾಮದಗ್ನ್ಯಂ ಪರಂತಪಮ್ |
ಬ್ರಾಹ್ಮಣೇಭ್ಯಸ್ತದಾ ರಾಜನ್ ದಿತ್ಸಂತಂ ವಸು ಸರ್ವಶಃ ॥22॥
ಮೇಧಾವಿಗಳಾದ ದ್ರೋಣರು ಅಲ್ಲಿಯೇ ವಾಸ ಮಾಡುತ್ತಾ ಧನುರ್ವೇದಪರರಾದರು. ಎಲೈ ರಾಜನೇ ಅವರು ಮಹಾತ್ಮರೂ, ಜಮದಗ್ನಿಪುತ್ರರೂ, ಪರಂತಪರೂ ಆದ ಪರಶುರಾಮರು ಬ್ರಾಹ್ಮಣರಿಗೆ ತಮ್ಮ ಎಲ್ಲಾ ಧನವನ್ನೂ ಕೊಡುವರೆಂಬ ವಾರ್ತೆಯನ್ನು ಕೇಳಿದರು.
ಸ ರಾಮಸ್ಯ ಧನುರ್ವೇದೇ ದಿವ್ಯೇಷು ವಿವಿಧೇಷು ಚ |
ಶ್ರುತ್ವಾಽಸ್ತ್ರೇಷು ಮತಿಂ ಚಕ್ರೇ ನೀತಿಶಾಸ್ತ್ರೇಷು ಕೌಶಲಮ್ ॥23॥
ಅವರು ಧನುರ್ವೇದದಲ್ಲಿಯೂ, ವಿವಿಧವಾದ ದಿವ್ಯಾಸ್ತ್ರಗಳಲ್ಲಿಯೂ, ನೀತಿಶಾಸ್ತ್ರಗಳಲ್ಲಿಯೂ ಪರಶುರಾಮರ ನಿಪುಣತೆಯನ್ನು ಕೇಳಿ ಅವರ ಬಳಿಗೆ ಹೋಗಲು ನಿರ್ಧರಿಸಿದರು.
ತತಃ ಸಮಾನೈರ್ವ್ರತಿಭಿಸ್ತಪೋಯುಕ್ತೈರ್ಮಹಾತಪಾಃ |
ವೃತಃ ಪ್ರಾಯಾನ್ಮಹಾಬಾಹುರ್ಮಹೇಂದ್ರಂ ವಸುಧಾಧರಮ್ ॥24॥
ಅನಂತರ ಅವರು ಸಮಾನ ವ್ರತವನ್ನು ಧರಿಸಿದ ತಪೋನಿಷ್ಠರಾದ ಅನೇಕ ಋಷಿಗಳ ಜೊತೆಯಲ್ಲಿ ಹೋಗಿ ಮಹೇಂದ್ರ ಪರ್ವತದಲ್ಲಿದ್ದ ಪರಶುರಾಮರನ್ನು ಸೇರಿದರು.
ತತೋ ಮಹೇಂದ್ರಮಾಸಾದ್ಯ ಭಾರದ್ವಾಜೋ ಮಹಾತಪಾಃ |
ಕ್ಷತ್ರಘ್ನಂ ತಮಮಿತ್ರಘ್ನಮಪಶ್ಯದ್ ಭೃಗುನಂದನಮ್ ॥25॥
ಮಹಾತಪಸ್ವಿಗಳಾದ, ಭರದ್ವಾಜರ ಪುತ್ರರಾದ ದ್ರೋಣರು ಮಹೇಂದ್ರ ಪರ್ವತವನ್ನು ತಲುಪಿ, ಕ್ಷತ್ರಿಯ ಕುಲವನ್ನೂ, ಶತ್ರುಗಳನ್ನೂ ಸಂಹಾರ ಮಾಡಿದ ಭೃಗುನಂದನರಾದ ಪರಶುರಾಮರನ್ನು ನೋಡಿದರು.
ಸ ರಾಮಾಯಾತ್ಮನೋ ನಾಮ ಜನ್ಮ ಚಾಂಗಿರಸೇ ಕುಲೇ |
ನಿವೇದ್ಯಾಂಗಿರಸೋ ಭೂಮೌ ಪಾದಾವಸ್ಯಾಭ್ಯವಾದಯತ್ ॥26॥
ತಮಬ್ರವೀನ್ಮಹಾತೇಜಾ ಕ್ಷತ್ರಹಾ ವಿಪ್ರಸತ್ತಮಃ |
ಸ್ವಾಗತಂ ಕುಶಲಂ ತೇಽಸ್ತು ಕಿಮಿಚ್ಛಸಿ ಮಹಾದ್ಯುತೇ ॥27॥
ಅವರು ತಮ್ಮ ನಾಮವನ್ನೂ ಆಂಗೀರಸಕುಲದಲ್ಲಿ ತಮ್ಮ ಜನ್ಮವನ್ನೂ ಅವರಿಗೆ ನಿವೇದಿಸಿ ಭೂಮಿಯ ಮೇಲೆ ಪರಶುರಾಮರ ಪಾದಗಳಿಗೆ ನಮಸ್ಕರಿಸಿದರು. ಮಹಾತೇಜಸ್ವಿಯೂ, ಕ್ಷತ್ರಕುಲಾಂತಕರೂ, ವಿಪ್ರಶ್ರೇಷ್ಠರೂ ಆದ ಪರಶುರಾಮರು ದ್ರೋಣರನ್ನು ಕುರಿತು ಮಹಾದ್ಯುತಿಯೇ, ನಿನಗೆ ಸ್ವಾಗತ. ನಾವು ಕುಶಲದಿಂದಿದ್ದೇವೆ. ನೀನು ಏನು ಬಯಸುತ್ತೀಯೆ ಎಂದು ಕೇಳಿದರು.
ವೈಶಂಪಾಯನಃ
ಏವಮುಕ್ತಃ ಸ ರಾಮೇಣ ಭಾರದ್ವಾಜೋಽಬ್ರವೀತ್ ದ್ವಿಜಃ |
ಆಗತಂ ವಿತ್ತಕಾಮಂ ಮಾಂ ವಿದ್ಧಿ ದ್ರೋಣಂ ದ್ವಿಜರ್ಷಭ ॥28॥
ಪರಶುರಾಮರಿಂದ ಹೀಗೆ ಹೇಳಲ್ಪಟ್ಟ ಭಾರದ್ವಾಜರು ಅವರನ್ನು ಕುರಿತು ಬ್ರಾಹ್ಮಣಶ್ರೇಷ್ಠರೇ, ನನ್ನನ್ನು ಧನಕಾಮನಾಗಿ ಬಂದ ದ್ರೋಣರೆಂದು ತಿಳಿಯಿರಿ ಎಂದು ಹೇಳಿದರು.
ರಾಮಃ
ಹಿರಣ್ಯಂ ಪಶವೋ ರೌಪ್ಯಂ ಯದ್ವಾಽನ್ಯದ್ವಸು ಕಿಂಚನ |
ಬ್ರಾಹ್ಮಣೇಭ್ಯೋ ಮಯಾ ದತ್ತಂ ಸರ್ವಮೇವ ತಪೋಧನ ॥29॥
ತಪೋಧನರೇ, ಹಿರಣ್ಯ, ಪಶುಗಳು, ರಜತ ಅಥವಾ ಬೇರೆ ಏನೇನು ಧನವಿದ್ದಿತೋ ಅವೆಲ್ಲವನ್ನೂ ನಾನು ಬ್ರಾಹ್ಮಣರಿಗೆ ಕೊಟ್ಟುಬಿಟ್ಟಿದ್ದೇನೆ.

ತಥೈವೇಯಂ ಧರಾ ದೇವೀ ಸಾಗರಾಂತಾ ಸಪತ್ತನಾ |
ಕಾಶ್ಯಪಾಯ ಮಯಾ ದತ್ತಾ ಕೃತ್ಸ್ನಾ ನಗರಮಾಲಿನೀ ॥30॥
ಹಾಗೆಯೇ. ಅನೇಕ ಪಟ್ಟಣಗಳಿಂದ ಕೂಡಿರುವ ಸಾಗರ ಪರ್ಯಂತವಾದ ಈ ಸಮಗ್ರ ಭೂಮಿಯನ್ನು ಕಾಶ್ಯಪರಿಗೆ ದಾನ ಮಾಡಿದ್ದೇನೆ.
ಶರೀರಮಾತ್ರಮೇವಾದ್ಯ ಮಮೇದಮವಶೇಷಿತಮ್ |
ಅಸತ್ರಣಿ ಚ ಮಹಾರ್ಹಾಣಿ ಶಸತ್ರಣಿ ವಿವಿಧಾನಿ ಚ ॥31॥
ಈಗ ನನ್ನ ಬಳಿ ನನ್ನ ಶರೀರ ಅನರ್ಘ್ಯವಾದ ಅಸ್ತ್ರಗಳು ಮತ್ತು ವಿವಿಧವಾದ ಶಸ್ತ್ರಗಳು ಮಾತ್ರ ಉಳಿದಿವೆ.
ಅಸತ್ರಣಿ ವಾ ಶರೀರಂ ವಾ ಬ್ರಹ್ಮನ್ ಶಾಸ್ತ್ರಾಣಿ ವಾ ಪುನಃ |
ವೃಣೀಷ್ವ ಕಿಂ ಪ್ರಯಚ್ಛಾಮಿ ತುಭ್ಯಂ ದ್ರೋಣ ವದಸ್ವ ಮಾಮ್ ॥32॥
ಬ್ರಾಹ್ಮಣನಾದ ದ್ರೋಣನೇ ನನ್ನ ಅಸ್ತ್ರಗಳು, ಶರೀರ ಮತ್ತು ಶಾಸ್ತ್ರಗಳಲ್ಲಿ ನಿನಗೆ ಏನನ್ನು ಕೊಡಲಿ ಎಂದು ಹೇಳು.
ದ್ರೋಣಃ
ಅಸತ್ರಣಿ ಮೇ ಸಮಗ್ರಾಣಿ ಸಸಂಹಾರಾಣಿ ಭಾರ್ಗವ |
ಸಪ್ರಯೋಗರಹಸ್ಯಾನಿ ದಾತುಮರ್ಹಸ್ಯಶೇಷತಃ |
ಏತದ್ ವಸು ವಸೂನಾಂ ಹಿ ಸರ್ವೇಷಾಂ ವಿಪ್ರಸತ್ತಮ ॥33॥
ಭಾರ್ಗವರೇ, ನನಗೆ ಶ್ರೇಷ್ಠವಾದ ಅಸ್ತ್ರಗಳನ್ನು, ಅವುಗಳಪ್ರಯೋಗ ಮತ್ತು ಸಂಹಾರ ರಹಸ್ಯಗಳ ಜೊತೆಯಲ್ಲಿ ತಾವು ಸಮಗ್ರವಾಗಿ ಉಪದೇಶಿಸಬೇಕು. ಬ್ರಾಹ್ಮಣ ಶ್ರೇಷ್ಠರೇ, ಇದು ಎಲ್ಲಾ ಧನಗಳಿಗಿಂತ ಶ್ರೇಷ್ಠವಾದ ಧನ.
ವೈಶಂಪಾಯನಃ
ತಥೇತ್ಯುಕತ್ವ ತತಸ್ತಸ್ಮೈ ಪ್ರಾದಾದಸತ್ರಣಿ ಭಾರ್ಗವಃ |
ಸರಹಸ್ಯವ್ರತಂ ಚೈವ ಧನುರ್ವೇದಮಶೇಷತಃ ॥34॥
ಭಾರ್ಗವ ಪರಶುರಾಮರು ಹಾಗೆಯೇ ಆಗಲಿ ಎಂದು ಹೇಳಿ ಅವರಿಗೆ ರಹಸ್ಯ ಮತ್ತು ವ್ರತನಿಯಮಗಳಿಂದ ಸಹಿತವಾದ ಸಮಗ್ರವಾದ ಧನುರ್ವೇದವನ್ನು ಉಪದೇಶಿಸಿದರು.
ಪ್ರತಿಗೃಹ್ಯ ತು ತತ್ ಸರ್ವಂ ಕೃತಾಸೊತ್ರೀ ದ್ವಿಜಸತ್ತಮಃ |
ಪ್ರಿಯಂ ಸಖಾಯಂ ಸುಪ್ರೀತೋ ಜಗಾಮ ದ್ರುಪದಂ ಪ್ರತಿ ॥35॥
ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಅವೆಲ್ಲವನ್ನೂ ಸ್ವೀಕರಿಸಿ, ಅಸ್ತ್ರವಿದ್ಯಾಪಾರಂಗತರಾಗಿ ಸಂತೋಷಗೊಂಡು ಪ್ರಿಯಸ್ನೇಹಿತನಾದ ದ್ರುಪದನನ್ನು ನೋಡಲು ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-15
ದಾನೇಽರ್ಧರಾಜ್ಯಸ್ಯ ಹಿ ತತ್ಪ್ರತಿಜ್ಞಾಂ
ಸಂಸ್ಮೃತ್ಯ ಪೂರ್ವಾಮುಪಯಾಂತಂ ಸಖಾಯಮ್ |
ಸಖಾ ತವಾಸ್ಮೀತಿ ತದೋದಿತೋಽಪಿ
ಜಗಾದ ವಾಕ್ಯಂ ದ್ರುಪದೋಽತಿದರ್ಪಾತ್ ॥21॥
ಅರ್ಧರಾಜ್ಯ ಕೊಡುವೆನೆಂದು ದ್ರುಪದ ಹಿಂದೆ ಮಾಡಿದ್ದ ಪ್ರತಿಜ್ಞೆಯನ್ನು ನೆನೆದು ಮಿತ್ರ ದ್ರೋಣ ಅವನ ಬಳಿಗೆ ಬಂದ. `ನಾ ನಿನ್ನ ಮಿತ್ರ' ಎಂದ. ಆದರೆ ದ್ರುಪದ ಬಲು ದರ್ಪದಿಂದ ಈ ಮಾತನ್ನು ಹೇಳಿದ.
ನ ನಿರ್ಧನೋ ರಾಜಸಖೋ ಭವೇತ
ಯಥೇಷ್ಟತೋ ವಿಪ್ರ ಗಚ್ಛೇತಿ ದೈವಾತ್ |
ಇತೀರಿತೇಽಸ್ಯಾಶು ಬಭೂವ ಕೋಪೋ
ಜಿತೇಂದ್ರಿಯಸ್ಯಾಪಿ ಮುನೇರ್ಹರೀಚ್ಛಯಾ ॥22॥
`ದರಿದ್ರನು ಎಂದೂ ರಾಜನಿಗೆ ಮಿತ್ರನೆನಿಸಲಾರ. ಬ್ರಾಹ್ಮಣ, ನೀನು ನಿನ್ನ ಇಷ್ಟಾನುಸಾರ ಹೊರಟುಹೋಗಬಹುದು' ಎಂದು. ದ್ರುಪದ ದೈವಾತ್ ಹೀಗೆ ಹೇಳಿದಾಗ ಹರೀಚ್ಛೇಯಿಂದ ಜಿತೇಂದ್ರಿಯನಾದ ದ್ರೋಣನಿಗೂ ಕೋಪ ಬಂದಿತು.
ಪ್ರತಿಗ್ರಹಾತ್ ಸನ್ನಿವೃತ್ತೇನ ಸೋಽಯಂ
ಮಯಾ ಪ್ರಾಪ್ತೋ ಮತ್ಪಿತುಃ ಶಿಷ್ಯಕತ್ವಾತ್ |
ಪಿತುಃ ಶಿಷ್ಯೋ ಹ್ಯಾತ್ಮ ಶಿಷ್ಯೋ ಭವೇತ
ಶಿಷ್ಯಸ್ಯಾರ್ಥಃ ಸ್ವೀಯ ಏವೇತಿ ಮತ್ವಾ ॥23॥
ಈ ದ್ರುಪದ ನನ್ನ ತಂದೆಯ ಶಿಷ್ಯ. ತಂದೆಯ ಶಿಷ್ಯ ನನಗೂ ಶಿಷ್ಯನೆ ಆಗುತ್ತಾನೆ. ಶಿಷ್ಯನ ಸೊತ್ತು ನನ್ನದೆ ಆಗಿರುತ್ತದೆ ಎಂದು ತಿಳಿದು ಪ್ರತಿಗ್ರಹವನ್ನು ತೊರೆದ ನಾನು ಇವನ ಬಳಿಗೆ ಬಂದೆ.
ಸೋಽಯಂ ಪಾಪೋ ಮಾಮವಜ್ಞಾಯ ಮೂಢೋ

ದುಷ್ಟಂ ವಚೋಽಶ್ರಾವಯದಸ್ಯ ದರ್ಪಮ್ |
ಹನಿಷ್ಯ ಇತ್ಯೇವ ಮತಿಂ ವಿಧಾಯ
ಯಯೌ ಕುರೂನ್ ಶಿಷ್ಯತಾಂ ನೇತುಮೇತಾನ್ ॥24॥
ಮೂಢನೂ ಪಾಪಿಯೂ ಆದ ಇವನು ನನ್ನನ್ನು ಅವಮಾನಿಸಿ ಕೆಟ್ಟ ಮಾತನ್ನಾಡಿದ್ದಾನೆ. ಇವನ ದರ್ಪವನ್ನು ಮುರಿಯುವೆನು ಎಂದು ನಿರ್ಧಾರ ಮಾಡಿ ದ್ರೋಣ ಕೌರವರ ಬಳಿಗೆ ಅವರನ್ನು ಶಿಷ್ಯರನ್ನಾಗಿ ಮಾಡಿಕೊಳ್ಳಲು ಹೊರಟ.
* * * *

ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ
(ದ್ರುಪದನಿಂದ ದ್ರೋಣರಿಗೆ ಅವಮಾನ, ದ್ರೋಣರ ಹಸ್ತಿನಪುರಗಮನ.)
ವೈಶಂಪಾಯನಃ
ತತೋ ದ್ರುಪದಮಾಗಮ್ಯ ಭಾರದ್ವಾಜಃ ಪ್ರತಾಪವಾನ್ |
ಅಬ್ರುವೀತ್ ಪುರುಷವ್ಯಾಘ್ರಂ ಸಖಾಯಂ ವಿದ್ಧಿ ಮಾಮಿತಿ ॥1॥
ಅನಂತರ ಪ್ರತಾಪಶಾಲಿಯಾದ ದ್ರೋಣರು ದ್ರುಪದನ ಪಟ್ಟಣಕ್ಕೆ ಬಂದು ಪುರುಷವ್ಯಾಘ್ರನಾದ ಅವನನ್ನು ಕುರಿತು ನನ್ನನ್ನು ನಿನ್ನ ಸ್ನೇಹಿತನೆಂದು ತಿಳಿ ಎಂದು ಹೇಳಿದರು.
ಇತ್ಯೇವಮುಕ್ತಃ ಸಖ್ಯಾ ಸ ಪ್ರೀತಿಪೂರ್ವಂ ಜನೇಶ್ವರಃ |
ಭಾರದ್ವಾಜೇನ ಪಾಂಚಾಲೋ ರೋಷಾತ್ ಸಂರಕ್ತಲೋಚನಃ |
ನಾಮೃಷ್ಯತ ವಚಃ ಸಖ್ಯುಃ ಪ್ರೀತಿಪೂರ್ವಮುದಾಹೃತಮ್ ॥2॥
ಹೀಗೆ ಸ್ನೇಹಿತರಾದ ದ್ರೋಣರಿಂದ ಪ್ರೀತಿಪೂರ್ವಕವಾಗಿ ಹೇಳಲ್ಪಟ್ಟ ಪಾಂಚಾಲರಾಜನು ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ಸ್ನೇಹಿತನ ಪ್ರೀತಿಪೂರ್ವಕವಾದ ವಚನವನ್ನು ಸಹಿಸಲಿಲ್ಲ.
ಸ ಚೈಶ್ವರ್ಯಮದೇನಾಂಧ ಇತಿ ರಾಜಾಽಬ್ರುವೀದ್ ವಚಃ |
ಅಕೃತೇಯಂ ತವ ಪ್ರಜ್ಞಾ ಬ್ರಹ್ಮನ್ ನಾತಿಸಮಂಜಸೀ |
ಯನ್ಮಾಂ ಬ್ರವೀಷಿ ಪ್ರಸಭಂ ಸಖಾ ತೇಽಹಮಿತಿ ದ್ವಿಜ ॥3॥
ಐಶ್ವರ್ಯಮದದಿಂದ ಅಂಧನಾದ ದ್ರುಪದರಾಜನು ಹೀಗೆ ಮಾತನಾಡಿದನು. ಬ್ರಾಹ್ಮಣನೇ ನಿನ್ನ ಬುದ್ಧಿಯು ಸಮಂಜಸವಾಗಿಲ್ಲ, ಪರಿಷ್ಕಾರವನ್ನು ಪಡೆದಿಲ್ಲ. ಏಕೆಂದರೆ, ನೀನು ನನ್ನನ್ನು ನಿನ್ನ ಸ್ನೇಹಿತನೆಂದು ಹೇಳುತ್ತಿದ್ದೀಯೆ.
ನ ಹಿ ರಾಜ್ಞಾಮುದೀರ್ಣಾನಾಮೇವಂಭೂತೈರ್ನರೈಃ ಕ್ವಚಿತ್ |
ಸಖ್ಯಂ ಭವತಿ ಮಂದಾತ್ಮನ್ ಹ್ರಿಯಾ ಹೀನೈರ್ಧನಚ್ಯುತೈಃ ॥4॥
ಎಲೈ ಮಂದಾತ್ಮನೇ, ಸಂಪತ್ತಿನಿಂದ ಪೂರ್ಣರಾದ ರಾಜರುಗಳಿಗೆ ಧನದಿಂದ ದರಿದ್ರರಾದ, ಲಜ್ಜೆಯನ್ನು ಬಿಟ್ಟ ಮನುಷ್ಯರ ಜೊತೆಯಲ್ಲಿ ಎಂದೂ ಸಖ್ಯವುಂಟಾಗುವುದಿಲ್ಲ.
ಸೌಹೃದಾನ್ಯಪಿ ಜೀರ್ಯಂತೇ ಕಾಲೇನ ಪರಿಜೀರ್ಯತಾ |
ಸೌಹೃದಂ ಮೇ ತ್ವಯಾ ಹ್ಯಾಸೀತ್ ಪೂರ್ವಂ ಸಾಮರ್ಥ್ಯಬಂಧನಮ್ ॥
ಕಾಲವು ಕಳೆದಂತೆ ಸ್ನೇಹಗಳು ನಶಿಸಿ ಹೋಗುತ್ತವೆ. ಹಿಂದೆ ನಿನ್ನ ಸಾಮರ್ಥ್ಯದ ನಿಮಿತ್ತದಿಂದಾಗಿ ನಿನ್ನಲ್ಲಿ ನನಗೆ ಸ್ನೇಹವಿದ್ದಿತು.
ನ ಸಖ್ಯಮಜರಂ ಲೋಕೇ ದೃಶ್ಯತೇ ಜಾತು ಕರ್ಹಿಚಿತ್ |
ಕಾಮಶ್ಚೈನಂ ನಾಶಯತಿ ಕ್ರೋಧಶ್ಚೈನಂ ಪ್ರಮರ್ದತಿ ॥6॥
ಪ್ರಪಂಚದಲ್ಲಿ ಸ್ನೇಹವು ಎಂದೂ ಅಜರಾಮರವಲ್ಲ. ಕಾಮವು ಅದನ್ನು ನಾಶಗೊಳಿಸುತ್ತದೆ, ಕ್ರೋಧವು ಅದನ್ನು ಮರ್ದಿಸುತ್ತದೆ.
ನ ವೈ ಜೀರ್ಣಮುಪಾತಿಷ್ಠ ಸಖ್ಯಂ ನವಮುಪಾಕುರು |
ಆದತ್ಸ್ವೈನಂ ದ್ವಿಜಶ್ರೇಷ್ಠ ಸೌಹೃದಂ ಹ್ಯರ್ಥಬಂಧನಮ್ ॥7॥
ಬ್ರಾಹ್ಮಣಶ್ರೇಷ್ಠನೇ, ಹಳೆಯ ಸ್ನೇಹವನ್ನು ಬಿಡು, ಹೊಸ ಸ್ನೇಹವನ್ನು ಪ್ರಾರಂಭಿಸು. ಪ್ರಯೋಜನ ನಿಮಿತ್ತವಾದ ಸ್ನೇಹವನ್ನು ಸ್ವೀಕರಿಸು.
ನ ದರಿದ್ರೋ ವಸುಮತೋ ನಾವಿದ್ವಾನ್ ವಿದುಷಃ ಸಖಾ |
ನ ಶೂರಸ್ಯ ಸಖಾ ಕ್ಲೀಬಃ ಸಖಿಪೂರ್ವಂ ಕಿಮಿಷ್ಯತೇ ॥8॥
ದರಿದ್ರನು ಧನಿಕನಿಗೆ, ಅಜ್ಞಾನಿಯು ಜ್ಞಾನಿಗೆ, ಹೇಡಿಯು ಶೂರನಿಗೆ ಎಂದೂ ಸ್ನೇಹಿತನಾಗುವುದಿಲ್ಲ. ಹಳೆಯ ಸ್ನೇಹವನ್ನು ಯಾವ ಉದ್ದೇಶದಿಂದ ಬಯಸುತ್ತಿದ್ದೀಯೆ.
ಯಯೋರೇವ ಸಮಂ ವಿತ್ತಂ ಯಯೋಃ ಪ್ರಜ್ಞಾ ಯಯೋಶ್ಶ್ರುತಮ್ |
ತಯೋಃ ಸಂಬಂಧಕಂ ತುಲ್ಯಂ ನತು ಪುಷ್ಟವಿಪುಷ್ಟಯೋಃ ॥9॥
ಯಾರಿಬ್ಬರಿಗೆ ವಿತ್ತವೂ, ಪ್ರಜ್ಞೆಯೂ, ಶ್ರುತವೂ ಸಮಾನವಾಗಿರುತ್ತವೆಯೊ, ಅವರಿಗೆ ಸ್ನೇಹಸಂಬಂಧವುಂಟಾಗುವುದು. ಪುಷ್ಟನಾದವನಿಗೂ ಮತ್ತು ಕೃಶನಾದವನಿಗೂ ಸ್ನೇಹವು ಉಂಟಾಗುವುದಿಲ್ಲ.
ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ |
ನಾರಾಜ್ಞಃ ಸಂಗತಂ ರಾಜ್ಞಃ ಸಖಿಪೂರ್ವಂ ಕಿಮಿಷ್ಯತೇ ॥10॥
ಅಶ್ರೋತ್ರಿಯನಾದವನು ಶ್ರೋತ್ರಿಯನಿಗೂ, ರಥವಿಲ್ಲದವನು ರಥಿಕನಿಗೂ ಸ್ನೇಹಿತನಾಗುವುದಿಲ್ಲ. ರಾಜನಲ್ಲದವನಿಗೆ ರಾಜನಿಂದ ಯಾವ ಸಂಬಂಧವೂ ಇರುವುದಿಲ್ಲ. ಹಳೆಯ ಸ್ನೇಹವನ್ನು ಏಕೆ ಬಯಸುತ್ತಿದ್ದೀಯೆ?

ತ್ವದ್ವಿಧೈರ್ಮದ್ವಿಧಾನಾಂ ಹಿ ಪ್ರಕ್ಷೀಣಾರ್ಥೈರ್ನ ಜಾತುಚಿತ್ |
ಸಖ್ಯಂ ಭವತಿ ಮಂದಾತ್ಮನ್ ಸಖಿಪೂರ್ವಂ ಕಿಮಿಷ್ಯತೇ ॥11॥
ಎಲೈ ಮಂದಾತ್ಮನೇ, ನಿನ್ನಂತಹ ದರಿದ್ರನ ಜೊತೆಯಲ್ಲಿ ನನ್ನಂತಹವರಿಗೆ ಎಂದೂ ಸ್ನೇಹವಿರುವುದಿಲ್ಲ. ಕಳೆದುಹೋದ ಸ್ನೇಹವನ್ನು ಏಕೆ ಬಯಸುತ್ತಿದ್ದೀಯೆ ?
ವೈಶಂಪಾಯನಃ
ದ್ರುಪದೇನೈವಮುಕ್ತಸ್ತು ಭಾರದ್ವಾಜಃ ಪ್ರತಾಪವಾನ್ |
ಮೂಹೂರ್ತಂ ಚಿಂತಯಾಮಾಸ ಮನ್ಯುನಾಽಭಿಪರಿಪ್ಲುತಃ ॥12॥
ದ್ರುಪದನಿಂದ ಹೀಗೆ ಹೇಳಲ್ಪಟ್ಟ ಪ್ರತಾಪಶಾಲಿಯಾದ ದ್ರೋಣರು ಕ್ರೋಧವಶರಾಗಿ ಒಂದು ಮಹೂರ್ತದ ಕಾಲ ಆಲೋಚನೆಯನ್ನು ಮಾಡಿದರು.
ಸ ವಿನಿಶ್ಚಿತ್ಯ ಮನಸಾ ಪಾಂಚಾಲಂ ಪ್ರತಿ ಬುದ್ಧಿಮಾನ್ |
ಶಿಷ್ಯೈಃ ಪರಿವೃತಃ ಶ್ರೀಮಾನ್ ಪುತ್ರೇಣಾನುಗತಸ್ತದಾ ॥13॥
ಜಗಾಮ ಕುರುಮುಖ್ಯಾನಾಂ ನಗರಂ ನಾಗಸಾಹ್ವಯಮ್ |
ಸ್ಯಾಲಸ್ಯೈವ ಗೃಹಂ ದ್ರೋಣಃ ಸದಾರಃ ಪರ್ಯುಪಸ್ಥಿತಃ ॥14॥
ಮೇಧಾವಿಗಳಾದ ಅವರು ಪಾಂಚಾಲರಾಜನಾದ ದ್ರುಪದನಿಗೆ ಏನು ಮಾಡಬೇಕೆಂದು (ಮನಸ್ಸಿನಲ್ಲಿಯೇ) ನಿಶ್ಚಯಿಸಿ ಶಿಷ್ಯರ ಮತ್ತು ಪುತ್ರನ ಜೊತೆಯಲ್ಲಿ ಕೂಡಿದವರಾಗಿ ಅವರು ಕುರುಶ್ರೇಷ್ಠರ ನಗರವಾದ ಹಸ್ತಿನಪುರಕ್ಕೆ ಹೊರಟರು.
ಅಶ್ವತ್ಥಾಮ್ನಾ ಚ ಪುತ್ರೇಣ ಮಹಾಬಲವತಾ ಸಹ |
ಅವಸತ್ ತತ್ರ ರಾಜೇಂದ್ರ ಗೌತಮಸ್ಯ ನಿವೇಶನೇ ॥15॥
ಎಲೈ ರಾಜೇಂದ್ರನೇ, ದ್ರೋಣರು ಪತ್ನಿ ಮತ್ತು ಮಹಾಬಲನಾದ ಪುತ್ರನಾದ ಅಶ್ವತ್ಥಾಮರ ಜೊತೆಯಲ್ಲಿ ತಮ್ಮ ಭಾವಮೈದುನರಾದ ಕೃಪಾಚಾರ್ಯರ ಮನೆಯಲ್ಲಿ ವಾಸಿಸಿದರು.
ಸ ಕೃಪಸ್ಯಾಂತರೇ ಪಾರ್ಥಾನ್ ಭಾರದ್ವಾಜಃ ಪ್ರತಾಪವಾನ್ |
ಅಸ೫ತ್ರಣಿ ಶಿಕ್ಷಯಾಮಾಸ ಬುಬೋಧ ಚ ಸ ತಂ ಕೃಪಃ |
ಆವಾಸೇ ತತ್ರ ಗೂಢಾತ್ಮಾ ಕಂಚಿತ್ಕಾಲಮುವಾಸ ಹ ॥16॥
ಭಾರದ್ವಾಜರಾದ, ಪ್ರತಾಪಶಾಲಿಗಳಾದ ದ್ರೋಣರು ಕೃಪಾಚಾರ್ಯರು ಇಲ್ಲದಿರುವಾಗ ಪಾಂಡವರಿಗೆ ಅಸ್ತ್ರಗಳನ್ನು ಕಲಿಸುತ್ತಿದ್ದರು. ಈ ವಿಷಯವು ಕೃಪಾಚಾರ್ಯರಿಗೆ ತಿಳಿಯಿತು. ದ್ರೋಣರು ಯಾರಿಗೂ ತಿಳಿಯದಂತೆ ತಮ್ಮ ಸ್ವರೂಪವನ್ನು ಮರೆಮಾಡಿಕೊಂಡು ಸ್ವಲ್ಪ ಕಾಲದವರೆಗೆ ಕೃಪಾಚಾರ್ಯರ ಮನೆಯಲ್ಲಿ ವಾಸ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-15
ಪ್ರತಿಗ್ರಹಾದ್ ವಿನಿವೃತ್ತಸ್ಯ ಚಾರ್ಥಃ
ಸ್ಯಾಚ್ಛಿಷ್ಯೇಭ್ಯಃ ಕೌರವೇಭ್ಯೋ ಮಮಾತ್ರ |
ಏವಂ ಮನ್ವಾನಃ ಕ್ರೀಡತಃ ಪಾಂಡವೇಯಾನ್
ಸಧಾರ್ತರಾಷ್ಟ್ರಾನ್ ಪುರಬಾಹ್ಯತೋಽಖ್ಯತ್ ॥25॥
ಪ್ರೈಗ್ರಹವನ್ನು ತೊರೆದ ನನಗೆ ಕೌರವರು ಶಿಷ್ಯರಾದರೆ ಅವರಿಂದ ಅಭೀಷ್ಟ ಸಿದ್ಧಿಯಾದೀತು ಎಂದು ಬಗೆದು ದ್ರೋಣ ನಗರದ ಹೊರಪ್ರದೇಶದಲ್ಲಿ ಆಟವಾಡುತ್ತಿದ್ದ ಪಾಂಡವರನ್ನೂ ಕೌರವರನ್ನೂ ಕಂಡ.
ವಿಕ್ರೀಡತೋ ಧರ್ಮಸೂನೋಸ್ತದೈವ
ಸಹಾಂಗುಲೀಯೇನ ಚ ಕಂದುಕೋಽಪತತ್ |
ಕೂಪೇ ನ ಶೇಕುಃ ಸಹಿತಾಃ ಕುಮಾರಾ
ಉದ್ಧರ್ತುಮೇನಂ ಪವಾನಾತ್ಮಜೋಽವದತ್ ॥26॥
ಆಗಲೆ ಆಟವಾಡುತ್ತಿದ್ದ ಧರ್ಮರಾಜನ ಉಂಗುರವೂ ಚೆಂಡೂ ಬಾವಿಯಲ್ಲಿ ಬಿದ್ದಿತ್ತು. ಕುಮಾರರೆಲ್ಲ ಸೇರಿದರೂ ಅವುಗಳನ್ನು ಎತ್ತಲು ಶಕ್ತರಾಗಿರಲಿಲ್ಲ. ಆಗ ಭೀಮ ಹೇಳಿದ.
ನಿಷ್ಪತ್ಯ ಚೋದ್ಪ್ಲುತ್ಯ ಸಮುತ್ಪತಿಷ್ಯೇ
ಕೂಪಾದಮುಷ್ಮಾದ್ ಭೃಶನೀಚಾದಪಿ ಸ್ಮ |
ಸಕಂದುಕಾಂ ಮುದ್ರಿಕಾಂ ಪಶ್ಯತಾದ್ಯ
ಸರ್ವೇ ಕುಮಾರಾ ಇತಿ ವೀರ್ಯಸಂಶ್ರಯಾತ್ ॥27॥
`ಕುಮಾರರೆ, ನಾನು ನನ್ನ ಶಕ್ತಿಯನ್ನು ಉಪಯೋಗಿಸಿ ಬಾವಿಯಲ್ಲಿ ಮುಳುಗಿ ಬಹು ಆಳವಾದ ಈ ಬಾವಿಯಿಂದಲೂ ಚೆಂಡನ್ನು ಮತ್ತು ಉಂಗುರವನ್ನು ಎತ್ತಿಕೊಂಡು ಮೇಲೆ ಬರುತ್ತೇನೆ, ಎಲ್ಲರೂ ನೋಡಿರಿ'.

ತದಾ ಕುಮಾರಾನವದತ್ ಸ ವಿಪ್ರೋ

ಧಿಗಸ್ತ್ರಬಾಹ್ಯಾಂ ಭವತಾಂ ಪ್ರವೃತ್ತಿಮ್ |

ಜಾತಾಃ ಕುಲೇ ಭರತಾನಾಂ ನ ವಿತ್ಥ

ದಿವ್ಯಾನಿ ಚಾಸಕತ್ರಣಿ ಸುರಾರ್ಚಿತಾನಿ ॥28॥

ಆಗ ಕುಮಾರರಿಗೆ ದ್ರೋಣ ನುಡಿದ `ಅಸ್ತ್ರವನ್ನು ಬಿಟ್ಟು ಪ್ರಯತ್ನಿಸುವ ನಿಮ್ಮ ಪ್ರವೃತ್ತಿಗೆ ಧಿಕ್ಕಾರ. ನೀವು ಭರತನ ವಂಶದಲ್ಲಿ ಹುಟ್ಟಿದ್ದೂ ದೇವತೆಗಳು ಪೂಜಿಸುವ ದಿವ್ಯ ಅಸ್ತ್ರಶಸ್ತ್ರಗಳನ್ನು ತಿಳಿದಿಲ್ಲ!'

ಇತೀರಿತಾ ಅಸ್ತ್ರವಿದಂ ಕುಮಾರಾ ವಿಜ್ಞಾಯ

ವಿಪ್ರಂ ಸುರಪೂಜ್ಯಪೌತ್ರಮ್ |

ಸಂಪ್ರಾರ್ಥಯಾಮಾಸುರಥೋದ್ಧೃತಿಂ ಪ್ರತಿ

ಪ್ರಧಾನಮುದ್ರಾಯುತಕಂದುಕಸ್ಯ ॥29॥

ದ್ರೋಣ ಹೀಗೆ ಹೇಳಿದಾಗ ಕುಮಾರರು ಅವನನ್ನು ಅಸ್ತ್ರವೇತ್ತನಿರಬಹುದೆಂದು ತಿಳಿದು ಉತ್ತಮವಾದ ಉಂಗುರವನ್ನೂ ಚೆಂಡನ್ನೂ ಎತ್ತಿಕೊಡಲು ಅವನನ್ನೇ ಕೇಳಿಕೊಂಡರು.

ಸಚಾಶ್ವಿಷೀಕಾಭಿರಥೋತ್ತರೋತ್ತರಂ

ಸಂಪ್ರಾಸ್ಯ ದಿವ್ಯಾಸ್ತ್ರಬಲೇನ ಕಂದುಕಮ್ |

ಉದ್ಧೃತ್ಯ ಮುದ್ರೋದ್ಧರಣಾರ್ಥಿನಃ ಪುನ

ರ್ಜಗಾದ ಭುಕ್ತಿರ್ಮಮ ಕಲ್ಪ್ಯತಾಮಿತಿ ॥30॥

ದ್ರೋಣ ಬೇಗನೆ ದಿವ್ಯಾಸ್ತ್ರ ಬಲದಿಂದ ಹುಲ್ಲುಕಡ್ಡಿಗಳನ್ನು ಮೇಲಿಂದ ಮೇಲೆ ಎಸೆದು ಅವುಗಳ ಮೂಲಕ ಚೆಂಡನ್ನೆತ್ತಿದ. ಕುಮಾರರು ಪುನಃ ಉಂಗುರವನ್ನೂ ಎತ್ತಲು ಬೇಡಿದಾಗ ದ್ರೋಣ `ನನಗೆ ಜೀವನೋಪಾಯದ ವ್ಯವಸ್ಥೆ ಮಾಡಿಕೊಡಿರಿ' ಎಂದ.

ಯಥೇಷ್ಟ ವಿತ್ತಾಶನಪಾನಮಸ್ಯ

ಧರ್ಮಾತ್ಮಜಃ ಪ್ರತಿಜಜ್ಞೇ ಸುಶೀಘ್ರಮ್ |

ತಥೈವ ತೇನೋದ್ಧೃತಮಂಗುಲೀಯಂ

ತ್ರಿವರ್ಗಮುಖ್ಯಾತ್ಮಜವಾಕ್ಯತೋಽನು ॥31॥

ಧರ್ಮರಾಜ ಬೇಗನೆ, ದ್ರೋಣನಿಗೆ ಯಥೇಚ್ಛ ಧನಸಂಪತ್ತನ್ನೂ ಅನ್ನಪಾನಗಳನ್ನೂ ವ್ಯವಸ್ಥೆ ಮಾಡಿಕೊಡುವೆನೆಂದು ಆಶ್ವಾಸನೆ ನೀಡಿದ. ಧರ್ಮರಾಜನು ಹೀಗೆ ಆಶ್ವಾಸನೆ ನೀಡಿದೊಡನೆ ದ್ರೋಣ ಉಂಗುರವನ್ನೂ ಹಾಗೇ ಎತ್ತಿಕೊಟ್ಟ.

ಪಪ್ರಚ್ಛುರೇನಂ ಸಹಿತಾಃ ಕುಮಾರಾಃ

ಕೋಽಸೀತಿ ಸೋಽಪ್ಯಾಹ ಪಿತಾಮಹೋ ವಃ |

ವಕ್ತೇತಿ ತೇ ದುದ್ರುವುರಾಶು ಭೀಷ್ಮಂ

ದ್ರೋಣೋಽಯಮಿತ್ಯೇವ ಸ ತಾಂಸ್ತದೋಚೇ ॥32॥

ಆಗ ಕುಮಾರರೆಲ್ಲರೂ ಸೇರಿ ದ್ರೋಣನನ್ನು ನೀವಾರೆಂದು ಕೇಳಿದರು. ದ್ರೋಣ ಹೇಳಿದ, `ನಿಮ್ಮ ತಾತ ಹೇಳುತ್ತಾನೆ, ಕೇಳಿ. `ಕುಮಾರರು ಬೇಗನೆ ತಾತನಾದ ಭೀಷ್ಮನ ಬಳಿಗೆ ಓಡಿದರು. ಆಗ ಭೀಷ್ಮ ಅವರಿಗೆ `ಈತ ದ್ರೋಣ' ಎಂದ.

ನ ರಾಜಗೇಹಂ ಸ ಕದಾಚಿದೇತಿ

ತೇನಾದೃಷ್ಟಃ ಸ ಕುಮಾರೈಃ ಪುರಾತಃ |

ಭೀಷ್ಮೋ ವಿದ್ಯಾಸ್ತೇನ ಸಹೈವ ಚಿಂತಯ-

ನ್ನಸ್ತ್ರಪ್ರಾಪ್ತಿಂ ತಸ್ಯ ಶುಶ್ರಾವ ರಾಮಾತ್ ॥33॥

ದ್ರೋಣ ಎಂದೂ ಅರಮನೆಗೆ ಹೋಗುತ್ತಿರಲಿಲ್ಲ. ಅದರಿಂದ ಕುಮಾರರು ಹಿಂದೆ ಎಂದೂ ಅವನನ್ನು ಕಂಡಿರಲಿಲ್ಲ. ಆದರೆ ಭೀಷ್ಮ ದ್ರೋಣನೊಡನೆ ಶಾಸ್ತ್ರಾರ್ಥ ವಿಚಾರ ಮಾಡುತ್ತಿದ್ದವ. ದ್ರೋಣನಿಲ್ಲದಿದ್ದಾಗ ಅವನು ಪರಶುರಾಮನಿಂದ ಅಸ್ತ್ರವಿದ್ಯೆ ಪಡೆಯುತ್ತಿದ್ದುದನ್ನು ಚಾರರ ಮೂಲಕ ಕೇಳಿ ತಿಳಿದಿದ್ದ.

ಶ್ರುತ್ವಾವೃದ್ಧಂ ಕೃಷ್ಣವರ್ಣಂ ದ್ವಿಜಂ ತಂ

ಮಹಾಸ್ತ್ರವಿದ್ಯಾಮಪಿ ತಾಂ ಮಹಾಮತಿಃ |

ದ್ರೋಣಂ ಜ್ಞಾತ್ವಾ ತಸ್ಯ ಶಿಷ್ಯತ್ವ ಏತಾನ್

ದದೌ ಕುಮಾರಾಂಸ್ತತ್ರ ಗತ್ವಾ ಸ್ವಯಂ ಚ ॥34॥

ಮಹಾಜ್ಞಾನಿಯಾದ ಭೀಷ್ಮ ಆ ಬ್ರಾಹ್ಮಣ ಕಪ್ಪು ಬಣ್ಣದವ ವೃದ್ಧನೆಂದು ಕೇಳಿ, ಅವನ ಆ ಮಹಾ ಅಸ್ತ್ರವಿದ್ಯೆಯನ್ನೂ ಕೇಳಿ, ಆತ ದ್ರೋಣನೆ ಎಂದು ತಿಳಿದು, ತಾನೆ ಅಲ್ಲಿಗೆ ಹೋಗಿ ಕುಮಾರರನ್ನು ಅವನಲ್ಲಿ ವಿದ್ಯಾಭ್ಯಾಸಕ್ಕೆ ಒಪ್ಪಿಸಿಕೊಟ್ಟ.

## ನೂರಮೂವತ್ತನೆಯ ಅಧ್ಯಾಯ

(ದ್ರೋಣ ಮತ್ತು ರಾಜಕುಮಾರರ ಸಮಾಗಮ, ದ್ರೋಣರ ಕೌಶಲ, ಭೀಷ್ಮರ ಆದೇಶದಂತೆ ಎಲ್ಲಾ ಕುಮಾರರಿಗೆ ದ್ರೋಣರಲ್ಲಿ ಶಿಷ್ಯವೃತ್ತಿ.)

ವೈಶಂಪಾಯನಃ

ದ್ರೋಣಃ ಸಮುದಿತಾನ್ ದೃಷ್ಟ್ವಾ ಕುರೂನ್ ವೃತ್ತಿಪರೀಪ್ಸಯಾ |

ಆಜಗಾಮ ಮಹಾತೇಜಾ ವಿಪ್ರೋ ನಾಗಪುರಂ ಪ್ರತಿ ॥1॥
ಮಹಾತೇಜಸ್ವಿಗಳಾದ ದ್ರೋಣರು ಕುರುದೇಶವು ಸಮೃದ್ಧವಾಗಿರುವುದನ್ನು ಗಮನಿಸಿ ಜೀವನವೃತ್ತಿಯನ್ನು ಪಡೆಯುವ ಉದ್ದೇಶದಿಂದ ನಾಗಪುರಕ್ಕೆ (ಹಸ್ತಿನಪುರಕ್ಕೆ) ಬಂದರು.
ಸ ತಥೋಕ್ತಸ್ತಥಾ ತೇನ ಸದಾರಃ ಪ್ರಾದ್ರವತ್ ಕುರೂನ್ |
ತಾಂ ಪ್ರತಿಜ್ಞಾಂ ಪ್ರತಿಜ್ಞಾಯ ಯಾಂ ಕರ್ತಾ ನಚಿರಾದಿವ ॥2॥
ದ್ರುಪದನಿಂದ ಹಾಗೆ ಹೇಳಲ್ಪಟ್ಟ ದ್ರೋಣರು ಇನ್ನೊಬ್ಬರು ಮಾಡಲು ಸಾಧ್ಯವಲ್ಲದ ಪ್ರತಿಜ್ಞೆಯನ್ನು ಮನಸ್ಸಿನಲ್ಲಿಯೇ ಮಾಡಿ ಪತ್ನೀಸಹಿತರಾಗಿ ಶೀಘ್ರವಾಗಿ ಕುರುದೇಶಕ್ಕೆ ಬಂದರು.
ಭಾರದ್ವಾಜೋಽವಸತ್ ತತ್ರ ಹ್ಯುಂಛೇನ ದ್ವಿಜಸತ್ತಮಃ |
ತತೋಽಸ್ಯ ತನುಜಃ ಪಾರ್ಥಾನ್ ಕೃತಾಸ್ತ್ರನಂತರಂ ಪ್ರಭೋ ॥3॥
ಶಸ್ತ್ರಾಣಿ ಶಿಕ್ಷಯಾಮಾಸ ನಾಬುಧ್ಯತ ಚ ತಂ ಜನಾಃ |
ಏವಂ ಸ ತತ್ರ ಗೂಢಾತ್ಮಾ ಕಂಚಿತ್ಕಾಲಮುವಾಸ ಹ ॥4॥
ದ್ವಿಜಶ್ರೇಷ್ಠರಾದ ದ್ರೋಣರು ಅಲ್ಲಿ ಉಂಛವೃತ್ತಿಯಿಂದ ವಾಸಿಸಿದರು. ದ್ರೋಣರು ಅಸ್ತ್ರಗಳನ್ನು ಉಪದೇಶಿಸಿದ ನಂತರ, ಅವರ ಮಕ್ಕಳಾದ ಅಶ್ವತ್ಥಾಮಾಚಾರ್ಯರು ಪಾಂಡವರಿಗೆ ವಿರಾಮವಿದ್ದಾಗ ಶಸ್ತ್ರಗಳನ್ನು ಕಲಿಸುತ್ತಿದ್ದರು. ಇದು ಬೇರೆ ಯಾರಿಗೂ ತಿಳಿಯಲಿಲ್ಲ. ಹೀಗೆ ದ್ರೋಣರು ಗೂಢವಾಗಿ ಅಲ್ಲಿ ಸ್ವಲ್ಪಕಾಲ ವಾಸಮಾಡಿದರು.
ತತಃ ಕುಮಾರಾ ನಿಷ್ಕ್ರಮ್ಯ ಸಹಿತಾ ನಾಗಸಾಹ್ವಯಾತ್ |
ಕ್ರೀಡಂತೋ ವೀಡಯಾ ವೀರಾಃ ತತ್ರ ಪರ್ಯಚರನ್ಮುದಾ ॥5॥
ಅನಂತರ ಒಮ್ಮೆ ಕುಮಾರರು ಹಸ್ತಿನಪುರದಿಂದ ಹೊರಗೆ ಬಂದು ಚೆಂಡಿನಿಂದ ಆಟವಾಡುತ್ತಾ ವೀರರಾದ ಅವರು ಸಂತೋಷದಿಂದ ತಿರುಗಾಡಿದರು.
ತೇಷಾಂ ಸಂಕ್ರೀಡಮಾನಾನಾಮುದಪಾನೇಽಂಗುಲೀಯಕಮ್ |
ಪಪಾತ ಧರ್ಮರಾಜಸ್ಯ ವೀಡಾ ತತ್ರೈವ ಚಾಪತತ್ ॥6॥
ಅವರು ಹಾಗೆ ಆಡುತ್ತಿರುವಾಗ ಧರ್ಮರಾಜನ ಉಂಗುರ ಮತ್ತು ಚೆಂಡು ಅಲ್ಲಿಯೇ ಒಂದು ಬಾವಿಯಲ್ಲಿ ಬಿದ್ದಿತು.
ತತ್ತ್ವಂಬುನಾ ಪ್ರತಿಚ್ಛನ್ನಂ ತಾರಾರೂಪಮಿವಾಂಬರೇ |
ದೃಷ್ಟ್ವಾ ತೇ ವೈ ಕುಮಾರಾಶ್ಚ ತಂ ಯತ್ನಾತ್ ಪರ್ಯವಾರಯನ್ ॥7॥
ಅಲ್ಪ ನೀರಿನಲ್ಲಿ ಮುಳುಗಿದ ಆ ಉಂಗುರವು ಆಕಾಶದಲ್ಲಿ ನಕ್ಷತ್ರದಂತೆ ಹೊಳೆಯುತ್ತಿತ್ತು. ಅದನ್ನು ನೋಡಿದ ಕುಮಾರರು ಎಲ್ಲರೂ ಪ್ರಯತ್ನಪಟ್ಟು ಬಾವಿಯನ್ನು ಸುತ್ತುವರಿದರು.
ತೇ ಪರಸ್ಪರಮೈಕ್ಷಂತ ಕುಮಾರಾಃ ಸಹಿತಾಸ್ತದಾ |
ತಸ್ಯ ಯೋಗಮವಿಂದಂತೋ ಭೃಶಂ ಮೂಕಾ ಇವಾಽಭವನ್ ॥8॥
ಎಲ್ಲ ಕುಮಾರರೂ ಒಟ್ಟಿಗೆ ಸೇರಿ ಒಬ್ಬರ ಮುಖವನ್ನು ಒಬ್ಬರು ನೋಡಿದರು. ಚೆಂಡು ಮತ್ತು ಉಂಗುರವನ್ನು ಮೇಲೆ ತೆಗೆಯುವ ಉಪಾಯವನ್ನು ಕಾಣದೆ ಎಲ್ಲರೂ ಮೂಕರಂತೆ ಆದರು.
ನ ಕಿಂಚಿತ್ ಪ್ರತ್ಯಪದ್ಯಂತ ಕರ್ಮ ವೀಡೋಪಲಬ್ಧಯೇ |
ತತಸ್ತೇ ಯತ್ನತಃ ಸರ್ವೇ ವೀಡಾಮುದ್ಧರ್ತುಮುದ್ಯತಾಃ ॥9॥
ಚೆಂಡನ್ನು ಮೇಲಕ್ಕೆತ್ತಲು ಏನು ಮಾಡಬೇಕೆಂದು ಅವರಿಗೆ ತಿಳಿಯಲಿಲ್ಲ. ಅನಂತರ ಎಲ್ಲರೂ ಚೆಂಡನ್ನು ತೆಗೆಯಲು ಏನೇನೋ ಪ್ರಯತ್ನಗಳನ್ನು ಮಾಡಿದರು.
ವಿಫಲೀಭೂತಯತ್ನಾಸ್ತೇ ವ್ರೀಡಯಾಽವನತಾನನಾಃ |
ತೇಽಪಶ್ಯನ್ ಬ್ರಾಹ್ಮಣಂ ಶ್ಯಾಮಮಾಸನ್ನಪಲಿತಂ ಕೃಶಮ್ ॥10॥
ತಮ್ಮ ಪ್ರಯತ್ನಗಳೆಲ್ಲವೂ ವಿಫಲವಾಗುತ್ತಿರಲು ನಾಚಿಕೆಯಿಂದ ತಲೆತಗ್ಗಿಸಿದ ಅವರು ಕಪ್ಪಾದ, ಕೃಶರಾದ, ವೃದ್ಧಾಪ್ಯದ ಸಮೀಪದಲ್ಲಿರುವ ಒಬ್ಬ ಬ್ರಾಹ್ಮಣರನ್ನು ನೋಡಿದರು.
ಕೃತ್ಯವಂತಃ ಸಮೀಪಸ್ಥಮಗ್ನಿಹೋತ್ರಪುರಸ್ಕೃತಮ್ |
ತೇ ತಂ ವಿಪ್ರಂ ಮಹಾತ್ಮಾನಮುಪಾಗಮ್ಯ ಕುಮಾರಕಾಃ |
ಭಗ್ನೋತ್ಸಾಹಕ್ರಿಯಾಮಾನಾಃ ಬ್ರಾಹ್ಮಣಂ ಪರ್ಯವಾರಯನ್ ॥11॥
ಕಾರ್ಯಸಾಧನೆ ಮಾಡಬೇಕಾಗಿದ್ದ ಅವರು ಅಗ್ನಿಹೋತ್ರ ಪುರಸ್ಸರವಾಗಿ ಸಮೀಪದಲ್ಲಿದ್ದ ಆ ಮಹಾತ್ಮರಾದ ಬ್ರಾಹ್ಮಣರನ್ನು ಸಮೀಪಿಸಿ ತಮ್ಮ ಉತ್ಸಾಹ, ಪ್ರಯತ್ನ ಮತ್ತು ಮಾನವನ್ನು ಕಳೆದುಕೊಂಡು ಅವರನ್ನು ಸುತ್ತುವರಿದರು.
ಸ ತಾನ್ ಕೃತ್ಯವತೋ ದೃಷ್ಟ್ವಾ ಕುಮಾರಾಂಸ್ತು ವಿಚೇತಸಃ |
ಬ್ರಾಹ್ಮಣಃ ಪ್ರಹಸನ್ ಮಂದಂ ಕೌಶಲೇನಾಭ್ಯಭಾಷತ ॥12॥
ಆ ಬ್ರಾಹ್ಮಣರು ಕಾರ್ಯಾರ್ಥಿಗಳಾಗಿ ವಿಮನಸ್ಕರಾದ ಆ ಕುಮಾರರನ್ನು ನೋಡಿ ಮಂದಹಾಸದಿಂದ ನಗುತ್ತಾ ತಮ್ಮ ಕೌಶಲ ನಿಮಿತ್ತದಿಂದ ಮಾತನಾಡಿದರು.
ಧಿಗ್ ವೀರ್ಯಂ ಧಿಗ್ಬಲಂ ಕ್ಷಾತ್ರಂ ಧಿಗ್ ಧೈರ್ಯಂ ವಃ ಕೃತಾಸ್ತ್ರತಾಮ್ |
ಭರತಸ್ಯಾನ್ವಯೇ ಜಾತಾ ಯೇ ವೀಡಾಂ ನಾಧಿಗಚ್ಛತ ॥13॥
ನಿಮ್ಮ ವೀರ್ಯಕ್ಕೂ, ನಿಮ್ಮ ಕ್ಷತ್ರಿಯಬಲಕ್ಕೂ, ನಿಮ್ಮ ಧೈರ್ಯಕ್ಕೂ, ನಿಮ್ಮ ಅಸ್ತ್ರವಿದ್ಯೆಗೂ ಧಿಕ್ಕಾರ. ಭರತನ ಕುಲದಲ್ಲಿ ಜನಿಸಿದ ನೀವು ಒಂದು ಚೆಂಡನ್ನು ಮೇಲೆ ತೆಗೆಯಲು ಸಮರ್ಥರಾಗಲಿಲ್ಲ.

ವೀಡಾಂ ಚ ಮುದ್ರಿಕಾಂ ಚೈವ ಅಹಮೇತದಪಿ ದ್ವಯಮ್ |
ಉದ್ಧರಿಷ್ಯೇ ತ್ವಿಷೀಕಾಭಿರ್ಭೋಜನಂ ಮೇ ಪ್ರದೀಯತಾಮ್ ॥14॥
ನಾನು ಈ ಚೆಂಡು ಮತ್ತು ಮುದ್ರೆ ಎರಡನ್ನೂ ಸಣ್ಣ ಕಡ್ಡಿಗಳ ಮೂಲಕ ಮೇಲೆ ತೆಗೆಯುವೆನು. ನನಗೆ ಭೋಜನವನ್ನು ಕಲ್ಪಿಸಿ.
ತತೋಽಬ್ರವೀದ್ ಭರದ್ವಾಜಂ ಕುಂತೀಪುತ್ರೋ ಯುಧಿಷ್ಠಿರಃ |
ಗೌತಮೀಂ ಚ ಮಹಾಭಾಗಾಂ ಭಿಕ್ಷಾಮಶ್ನೀತ ಶಾಶ್ವತೀಮ್ ॥15॥
ಆಗ ಕುಂತೀಪುತ್ರನಾದ ಯುಧಿಷ್ಠಿರನು ದ್ರೋಣರನ್ನೂ ಮತ್ತು ಮಹಾನುಭಾವಳಾದ ಕೃಪಿಯನ್ನೂ ಕುರಿತು ನಿಮಗೆ ಶಾಶ್ವತವಾದ ಜೀವಿಕೆಯ ವ್ಯವಸ್ಥೆಯನ್ನು ಮಾಡುವೆನು ಎಂದು ಹೇಳಿದನು.
ತತೋಽಬ್ರವೀದ್ ಭರದ್ವಾಜಃ ಪ್ರಹಸ್ಯ ಭರತಾನಿದಮ್ |
ಏಷಾ ಮುಷ್ಟಿರಿಷೀಕಾಣಾಂ ಮಯಾಽಸ್ತ್ರೇಣಾಭಿಮಂತ್ರಿತಾ |
ಅಸ್ಯ ವೀರ್ಯಂ ಸಮೀಕ್ಷಧ್ವಂ ಯದನ್ಯೇಷು ನ ವಿದ್ಯತೇ ॥16॥
ಆಗ ದ್ರೋಣರು ನಗುತ್ತಾ ಆ ಭರತಕುಮಾರರನ್ನು ಕುರಿತು ಹೀಗೆ ಹೇಳಿದರು. ಇದು ಸಣ್ಣ ಕಡ್ಡಿಗಳ ಒಂದು ಮುಷ್ಟಿ, ನಾನು ಅಸ್ತ್ರದಿಂದ ಅಭಿಮಂತ್ರಿಸಿದ್ದೇನೆ, ಬೇರೆಲ್ಲೂ ಕಾಣಸಿಗದಿರುವ ಈ ಅಸ್ತ್ರದ ಸಾಮರ್ಥ್ಯವನ್ನು ನೋಡಿ.
ವೇತ್ಸ್ಯಾಮೀಷಿಕಯಾ ವೀಡಾಂ ತಾಮಿಷೀಕಾಮಿಷೀಕಯಾ |
ತಾಮಪೀಷೀಕಯಾ ಚೈವ ಅನ್ಯಾಮಪ್ಯನ್ಯಯಾ ಪುನಃ |
ತಥಾಽನ್ಯೋನ್ಯಸಮಾಯೋಗಃ ವೀಡಾಯಾ ಗ್ರಹಣೇ ಮತಃ ॥17॥
ನಾನು ಚೆಂಡನ್ನು ಒಂದು ಕಡ್ಡಿಯಿಂದ ಚುಚ್ಚುತ್ತೇನೆ, ಆ ಕಡ್ಡಿಯನ್ನು ಇನ್ನೊಂದು ಕಡ್ಡಿಯಿಂದ ಚುಚ್ಚುತ್ತೇನೆ, ಇನ್ನೊಂದು ಕಡ್ಡಿಯನ್ನು ಮತ್ತೊಂದು ಕಡ್ಡಿಯಿಂದ ಚುಚ್ಚುತ್ತೇನೆ. ಹೀಗೆ ಅನೇಕ ಕಡ್ಡಿಗಳ ಸಂಯೋಗದಿಂದ ಚೆಂಡನ್ನು ತೆಗೆಯಬೇಕು.
ವೈಶಂಪಾಯನಃ
ತತೋ ಯಥೋಕ್ತಂ ತತ್ ಸರ್ವಂ ಕೃತವಾಂಸ್ತತ್ರ ಬ್ರಾಹ್ಮಣಃ |
ತದಪಶ್ಯನ್ ಕುಮಾರಾಸ್ತೇ ವಿಸ್ಮಯೋತ್ಫುಲ್ಲಲೋಚನಾಃ ॥18॥
ಅನಂತರ ಆ ಬ್ರಾಹ್ಮಣರು ತಾವು ಹೇಳಿದಂತೆಯೇ ಎಲ್ಲವನ್ನೂ ಮಾಡಿದರು. ಆ ಕುಮಾರರು ಆಶ್ಚರ್ಯದಿಂದ, ಅರಳಿದ ಕಣ್ಣುಗಳಿಂದ ಅದನ್ನು ನೋಡಿದರು.
ಅವಾಪ್ಯ ಚೋದ್ಧೃತಾಂ ವೀಡಾಂ ವೀಡಾವೇಧಿನಮಬ್ರುವನ್ |
ಮುದ್ರಿಕಾಮಪಿ ವಿಪ್ರೇಂದ್ರ ಕ್ಷಿಪ್ರಮೇತಾಂ ಸಮುದ್ಧರ ॥19॥
ಮೇಲೆ ತೆಗೆದ ಚೆಂಡನ್ನು ಪಡೆದು, ಚೆಂಡನ್ನು ಚುಚ್ಚಿ ತೆಗೆದ ಆ ಬ್ರಾಹ್ಮಣರನ್ನು ಕುರಿತು ವಿಪ್ರೇಂದ್ರನೇ, ಬೇಗ ಮುದ್ರಿಕೆಯನ್ನು ಮೇಲೆ ತೆಗಿ ಎಂದು ಹೇಳಿದರು.
ತತಃ ಸಶರಮಾದಾಯ ಧನುಶ್ಚಾಪಿ ಮಹಾಬಲಃ |
ಶರೇಣ ವಿದ್ಧ್ವಾ ಮುದ್ರಾಂ ತಾಮೂರ್ಧ್ವಮಾವಾಹಯಚ್ಚರೈಃ ॥20॥
ಆಗ ಆ ಮಹಾಬಲರಾದ ಬ್ರಾಹ್ಮಣರು ಧನುಸ್ಸು ಮತ್ತು ಬಾಣವನ್ನು ತೆಗೆದುಕೊಂಡು ಬಾಣಪ್ರಯೋಗ ಮಾಡಿ, ಆ ಮುದ್ರಿಕೆಗೆ ಹೊಡೆದು ಅದು ಮೇಲೆ ಬರುವಂತೆ ಮಾಡಿದರು.
ಸಶರಸ್ತದುಪಾದಾಯ ಕೂಪಾದಂಗುಲಿವೇಷ್ಟಕಮ್ |
ಪ್ರದದೌ ತಂ ಕುಮಾರಾಣಾಂ ವಿಸ್ಮಿತಾನಾಮವಿಸ್ಮಿತಃ ॥21॥
ಶರಸಹಿತವಾದ ಆ ಉಂಗುರವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ತಮಗೆ ಏನೂ ವಿಸ್ಮಯವಿಲ್ಲದೆ, ವಿಸ್ಮಿತರಾದ ಆ ಕುಮಾರರಿಗೆ ಕೊಟ್ಟರು.
ಮುದ್ರಿಕಾಂ ತೂದ್ಧೃತಾಂ ದೃಷ್ಟ್ವಾ ಪ್ರಾಬ್ರುವಂಸ್ತೇ ಕುಮಾರಕಾಃ |
ಅಭಿವಾದಯಾಮಹೇ ಬ್ರಹ್ಮನ್ ನೈತದನ್ಯೇಷು ವಿದ್ಯತೇ |
ಕೋಽಸಿ ಕಂ ತ್ವಾಂ ವಿಜಾನೀಮೋ ಬ್ರೂಹಿ ಕಿಂ ಕರವಾಮಹೇ ॥22॥
ಮುದ್ರಿಕೆಯನ್ನು ಮೇಲೆ ಎತ್ತಿದುದನ್ನು ನೋಡಿ ಆ ಕುಮಾರರು ಬ್ರಾಹ್ಮಣರೇ, ನಿಮಗೆ ನಮಸ್ಕರಿಸುತ್ತೇವೆ, ಈ ಕೌಶಲವು ಬೇರೆ ಎಲ್ಲಿಯೂ ಇಲ್ಲ, ನೀವು ಯಾರು? ನಾವು ನಿಮ್ಮನ್ನು ಯಾರೆಂದು ತಿಳಿಯಬೇಕು? ನಾವು ನಿಮಗೆ ಏನು ಮಾಡಬಹುದು? ಎಂದು ತಿಳಿಸಿ ಎಂದು ಹೇಳಿದರು.
ವೈಶಂಪಾಯನಃ
ಏವಮುಕ್ತಸ್ತಥಾ ವಿಪ್ರಃ ಪ್ರತ್ಯುವಾಚ ಕುಮಾರಕಾನ್ |
ಆಚಕ್ಷಧ್ವಂ ಹಿ ಭೀಷ್ಮಾಯ ರೂಪೇಣ ಚ ಗುಣೈರಪಿ ॥23॥
ಸ ಮಾಂ ಬುದ್ಧಿಮತಾಂ ಶ್ರೇಷ್ಠಃ ಶ್ರುತ್ವಾ ಜ್ಞಾಸ್ಯತಿ ಕೌರವಃ |
ತಥೇತ್ಯುಕ್ತ್ವಾ ತು ತೇ ಗತ್ವಾ ಭೀಷ್ಮಮೂಚುಃ ಪಿತಾಮಹಮ್ ॥24॥
ಆ ಕುಮಾರರಿಂದ ಹೀಗೆ ಹೇಳಲ್ಪಟ್ಟ ಬ್ರಾಹ್ಮಣರು ಅವರನ್ನು ಕುರಿತು ನೀವು ಭೀಷ್ಮರ ಬಳಿಗೆ ಹೋಗಿ ನನ್ನ ರೂಪವನ್ನೂ ಮತ್ತು ಗುಣವನ್ನೂ ಅವರಿಗೆ ತಿಳಿಸಿ. ಮೇಧಾವಿಗಳಲ್ಲಿ ಶ್ರೇಷ್ಠರಾದ ಕುರುಕುಲೋತ್ಪನ್ನರಾದ ಅವರು ಎಲ್ಲವನ್ನೂ ತಿಳಿಯುವವರು ಎಂದು ಹೇಳಿದರು.
ಬ್ರಾಹ್ಮಣಸ್ಯ ವಚಃ ಕೃತ್ಸ್ನಂ ತಚ್ಚ ಕರ್ಮ ವಿಶೇಷತಃ |
ಶ್ರುತ್ವಾ ಭೀಷ್ಮಃ ಕುಮಾರಾಣಾಂ ದ್ರೋಣ ಇತ್ಯೇವ ಜಜ್ಞಿವಾನ್ ॥25॥

ಹಾಗೆಯೇ ಆಗಲಿ ಎಂದು ಹೇಳಿ ಆ ಕುಮಾರರು ಪಿತಾಮಹರಾದ ಭೀಷ್ಮರ ಬಳಿಗೆ ಹೋಗಿ ಆ ಬ್ರಾಹ್ಮಣರ ಎಲ್ಲಾ ಮಾತುಗಳನ್ನು ಮತ್ತು ವಿಶೇಷವಾಗಿ ಅವರು ಮಾಡಿದ ಕರ್ಮದ ಕೌಶಲವನ್ನು ತಿಳಿಸಿದರು. ಕುಮಾರರಿಂದ ಎಲ್ಲವನ್ನೂ ಕೇಳಿದ ಭೀಷ್ಮರು ಅವರು ದ್ರೋಣರೆಂದು ತಿಳಿದರು.
ಯುಕ್ತರೂಪಃ ಸ ಹಿ ಗುರುರಿತ್ಯೇವಮಭಿಚಿಂತ್ಯ ಚ |
ತತ ಆನಾಯ್ಯ ದ್ರೋಣಂ ತು ಭೀಷ್ಮಃ ಶಾಂತನವಸ್ತದಾ ॥26॥
ಅರ್ಹಣೀಯೇನ ಕಾಮ್ಯೈಶ್ಚ ಯಥಾನ್ಯಾಯಮಪೂಜಯತ್ |
ತತಸ್ತಂ ಪರಿಪಪ್ರಚ್ಛ ಭೀಷ್ಮಃ ಶಸ್ತ್ರಭೃತಾಂ ವರಃ |
ಹೇತುಮಾಗಮನೇ ಸರ್ವಂ ತಂ ದ್ರೋಣಃ ಪ್ರತ್ಯಭಾಷತ ॥27॥
ದ್ರೋಣರು ಕುಮಾರರಿಗೆ ಧನುರ್ವಿದ್ಯೆಯಲ್ಲಿ ಆಚಾರ್ಯರಾಗಲು ಅರ್ಹರಾದವರು ಎಂದು ಯೋಚಿಸಿ ಶಂತನುವಿನ ಮಗನಾದ ಭೀಷ್ಮರು ದ್ರೋಣರನ್ನು ಕರೆಸಿ ಪೂಜ್ಯ ಮತ್ತು ಅಪೇಕ್ಷಣೀಯವಾದ ವಸ್ತುಗಳಿಂದ ಅವರನ್ನು ವಿಧಿವತ್ತಾಗಿ ಪೂಜಿಸಿದರು. ಅನಂತರ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಭೀಷ್ಮರು ಅವರ ಆಗಮನಕ್ಕೆ ಕಾರಣವನ್ನು ಕೇಳಿದರು. ಆಗ ದ್ರೋಣರು ಪ್ರತ್ಯುತ್ತರವಾಗಿ ಎಲ್ಲವನ್ನೂ ಹೇಳಿದರು.
ದ್ರೋಣಃ
ಮಹರ್ಷೇರಗ್ನಿವೇಶ್ಯಸ್ಯ ಸಕಾಶಮಹಮಪ್ಯುತ |
ಅಸ್ತ್ರಾರ್ಥಮಗಮಂ ಪೂರ್ವಂ ಧನುರ್ವೇದಜಿಘೃಕ್ಷಯಾ ॥28॥
ನಾನೂ ಸಹ ಹಿಂದೆ ಧನುರ್ವೇದವನ್ನು ಕಲಿಯಲು ಉದ್ದೇಶಿಸಿ ಅಸ್ತ್ರಗಳ ಸಂಪಾದನೆಯನ್ನು ಮಾಡಲು ಮಹರ್ಷಿಗಳಾದ ಅಗ್ನಿವೇಶ್ಯರ ಬಳಿಗೆ ಹೋಗಿದ್ದೆನು.
ಬ್ರಹ್ಮಚಾರೀ ವಿನೀತಾತ್ಮಾ ಜಟಿಲೋ ಬಹುಲಾಃ ಸಮಾಃ |
ಅವಸಂ ತತ್ರ ಸುಚಿರಮಗ್ನಿವೇಶ್ಯಸ್ಯ ಸನ್ನಿಧೌ ॥29॥
ನಾನು ಬ್ರಹ್ಮಚಾರಿಯಾಗಿ, ವಿನಯಶೀಲನಾಗಿ ಜಟಿಲ ವೇಶವನ್ನು ಧರಿಸಿ ಅಗ್ನಿವೇಶ್ಯರ ಸನ್ನಿಧಿಯಲ್ಲಿ ಅನೇಕ ವರ್ಷಗಳವರೆಗೆ ವಾಸಮಾಡಿದೆ.
ಪಾಂಚಾಲರಾಜಪುತ್ರಶ್ಚ ಯಜ್ಞಸೇನೋ ಮಹಾಬಲಃ |
ಬಾಲ್ಯಾತ್ ಪ್ರಭೃತಿ ಕೌರವ್ಯ ಸಹಾಧ್ಯಯನಮೇವ ಚ |
ಮಯಾ ಸಹಾಕರೋದ್ ವಿದ್ಯಾಂ ಗುರೌ ತಸ್ಮಿನ್ ಸಮಾಹಿತಃ ॥30॥
ಪಾಂಚಾಲರಾಜಕುಮಾರನೂ, ಮಹಾಬಲನೂ ಆದ ಯಜ್ಞಸೇನನು ಬಾಲ್ಯದಿಂದಲೂ ನನ್ನ ಜೊತೆಯಲ್ಲಿ ಅಧ್ಯಯನವನ್ನು ಮಾಡಿದನು. ಕುರುಕುಲೋತ್ಪನ್ನರಾದ ಭೀಷ್ಮರೇ ಅವನು ಗುರುಕುಲದಲ್ಲಿ ನನ್ನ ಜೊತೆಯಲ್ಲಿ ವಾಸಿಸಿ ಸಮಾಹಿತನಾಗಿದ್ದು ವಿದ್ಯೆಯನ್ನು ಕಲಿತನು.
ಸ ಮೇ ತತ್ರ ಸಖಾ ಚಾಸೀತ್ ಪ್ರಿಯವಾಗುಪಕಾರಕಃ |
ತೇನಾಹಂ ಸಹ ಸಂಗಮ್ಯ ರತವಾನ್ ಸುಚಿರಂ ಬತ ॥31॥
ಅಗ್ನಿವೇಶ್ಯರ ಸನ್ನಿಧಿಯಲ್ಲಿ ಅವನು ನನಗೆ ಸ್ನೇಹಿತನೂ, ಹಿತವಾಗಿ ಮಾತನಾಡುವವನೂ ಮತ್ತು ಉಪಕಾರಕನೂ ಆಗಿದ್ದನು. ನಾನು ಅವನ ಜೊತೆಯಲ್ಲಿ ಬಹುಕಾಲ ಸುಖವಾಗಿದ್ದೆನು.
ಸ ಮಾಂ ಸಂಪ್ರಸ್ಥಿತಃ ಪೂರ್ವಂ ಪ್ರಿಯಕಾರೀ ಪ್ರಿಯಂವದಃ |
ಅಬ್ರವೀದಿತಿ ಮಾಂ ಭೀಷ್ಮ ವಚನಂ ಪ್ರೀತಿವರ್ಧನಮ್ ॥32॥
ಭೀಷ್ಮರೇ, ಅವನು ಅಗ್ನಿವೇಶ್ಯರ ಸನ್ನಿಧಿಯಿಂದ ನನಗಿಂತ ಮೊದಲೇ ಹೊರಟನು. ಪ್ರಿಯಕಾರಿಯೂ, ಪ್ರಿಯಂವದನೂ ಆದ ಅವನು ಹೊರಡುವ ಸಂದರ್ಭದಲ್ಲಿ ಹೀಗೆ ಸಂತೋಷದಾಯಕವಾದ ಮಾತುಗಳನ್ನು ಆಡಿದನು.
ಅಹಂ ಪ್ರಿಯತಮಃ ಪುತ್ರಃ ಪಿತುರೇಕೋ ಮಹಾತ್ಮನಃ |
ಅಭಿಷೇಕ್ಷ್ಯತಿ ಮಾಂ ರಾಜ್ಯೇ ಸ ಪಾಂಚಾಲೋ ಯದಾ ತದಾ |
ಭವಿಷ್ಯತಿ ಚ ತೇ ಭೋಜ್ಯಂ ಸಖ್ಯುಃ ಸಖಿಧನಂ ಯಥಾ ॥33॥
ನಾನು ಮಹಾತ್ಮನಾದ ನನ್ನ ತಂದೆಗೆ ಬಹಳ ಪ್ರಿಯನಾದ ಒಬ್ಬನೇ ಪುತ್ರ. ನನಗೆ ಅವನು ಪಾಂಚಾಲ ರಾಜ್ಯದಲ್ಲಿ ಅಭಿಷೇಕ ಮಾಡಿದಾಗ ಸ್ನೇಹಿತನಿಗೆ ಸ್ನೇಹಿತನ ಧನವು ಭೋಗ್ಯವಾಗುವಂತೆ ನಿನಗೆ ಪಾಂಚಾಲ ರಾಜ್ಯವು ಭೋಗ್ಯವಾಗುವುದು
ತದ್ ಭೋಜ್ಯಂ ಭವಿತಾ ರಾಜ್ಯಂ ಸಖೇ ಸತ್ಯೇನ ತೇ ಶಪೇ |
ಮಮ ಭೋಗಾಶ್ಚ ವಿತ್ತಂ ಚ ತ್ವದಧೀನಾಃ ಸುಖಾನಿ ಚ ॥34॥
ಸ್ನೇಹಿತನೇ, ಪಾಂಚಾಲರಾಜ್ಯವು ನಿಶ್ಚಯವಾಗಿ ನಿನಗೆ ಭೋಗ್ಯವಾಗುತ್ತದೆ. ನಾನು ಪ್ರಮಾಣ ಮಾಡಿ ಹೇಳುತ್ತಿದ್ದೇನೆ. ನನ್ನ ಭೋಗವೂ, ನನ್ನ ಧನವೂ, ನನ್ನ ಸುಖಗಳೂ ಎಲ್ಲವೂ ನಿನ್ನ ಅಧೀನವಾಗಿರುತ್ತವೆ.
ಮಮ ರಾಜ್ಯಂ ಮಹಾಭಾಗ ತ್ವಯಾ ಭೋಕ್ತವ್ಯಮಿಚ್ಛತಾ |
ಏವಮುಕ್ತಶ್ಚ ಪ್ರಚಕ್ರಾಮ ಕೃತಾಸ್ತ್ರಃ ಪೂಜಿತೋ ಮಯಾ ॥35॥
ಮಹಾನುಭಾವನೇ, ನನ್ನ ರಾಜ್ಯವನ್ನು ನಿನ್ನ ಇಚ್ಛೆಯಂತೆ ನೀನು ಭೋಗಿಸಬೇಕು. ಹೀಗೆ ಹೇಳಿ ಅಸ್ತ್ರವಿದ್ಯೆಯನ್ನು ಸಂಪಾದಿಸಿದ್ದ ಅವನು ನನ್ನಿಂದ ಸತ್ಕೃತನಾಗಿ ಪಾಂಚಾಲ ದೇಶಕ್ಕೆ ಹೊರಟನು.
ಉಕ್ತವಾಕ್ಯಮಹಂ ಜ್ಞಾತ್ವಾ ಪ್ರಹೃಷ್ಟೇನಾಂತರಾತ್ಮನಾ |
ಸೋಽಹಂ ಪಿತೃನಿಯುಕ್ತತ್ವಾತ್ ಪುತ್ರಲೋಭಾದ್ ಯಶಸ್ವಿನೀಮ್ ॥36॥

ಶಾರದ್ವತೀಂ ಮಹಾಪ್ರಾಜ್ಞ ಉಪಯೇಮೇ ಸಮಾಹಿತಃ |
ಅಗ್ನಿಹೋತ್ರೇ ಚ ಧರ್ಮೇ ಚ ಯಮೇ ಚ ಸತತಂ ರತಾಮ್ ॥37॥
ಅವನ ಮಾತುಗಳನ್ನು ಕೇಳಿ ನಾನು ಮನಸ್ಸಿನಲ್ಲಿ ಬಹಳ ಸಂತೋಷಪಟ್ಟೆನು. ಅನಂತರ ತಂದೆಯ ಅಪ್ಪಣೆಯಂತೆ ಮತ್ತು ಸತ್ಪುತ್ರನನ್ನು ಪಡೆಯುವ ಆಸೆಯಿಂದ ಅಗ್ನಿಹೋತ್ರದಲ್ಲಿಯೂ, ಧರ್ಮದಲ್ಲಿಯೂ, ನಿಯಮಗಳಲ್ಲಿಯೂ ಯಾವಾಗಲೂ ರತಳಾದ, ಕೀರ್ತಿಶಾಲಿನಿಯಾದ ಶರದ್ವಂತರ ಮಗಳಾದ ಕೃಪಿಯನ್ನು ವಿವಾಹ ಮಾಡಿಕೊಂಡೆನು.
ಲೇಭೇ ಚ ಗೌತಮೀ ಪುತ್ರಮಶ್ವತ್ಥಾಮಾನಮಾತ್ಮಜಮ್ |
ಭೀಮವಿಕ್ರಮಕರ್ಮಾಣಮಾದಿತ್ಯಸಮತೇಜಸಮ್ |
ಆತ್ಮಜೇನಾಭವಂ ಪ್ರೀತೋ ಭರದ್ವಾಜೋ ಯಥಾ ಮಯಾ ॥38॥
ಮಹಾಪ್ರಾಜ್ಞರೇ, ಗೌತಮಿಯು (ಕೃಪಿಯು) ಭೀಮಪರಾಕ್ರಮವುಳ್ಳ, ಉಗ್ರಕರ್ಮವುಳ್ಳ, ಆದಿತ್ಯನ ಕಾಂತಿಯುಳ್ಳ ಅಶ್ವತ್ಥಾಮನನ್ನು ಮಗನನ್ನಾಗಿ ಪಡೆದಳು. ಭರದ್ವಾಜರು ನನ್ನನ್ನು ಪಡೆದು ಸಂತೋಷಪಟ್ಟಂತೆ ನಾನು ಅಶ್ವತ್ಥಾಮರನನ್ನು ಮಗನಾಗಿ ಪಡೆದು ಸಂತೋಷಪಟ್ಟೆನು.
ಗೋಕ್ಷೀರಂ ಪಿಬತೋ ದೃಷ್ಟ್ವಾ ಧನಿನಾಂ ಸ್ಮ ಕುಮಾರಕಾನ್ |
ಅಶ್ವತ್ಥಾಮಾಽರುದತ್ ತಾತ ದಿಶೋ ಮೇ ದಶ ಮೋಹಯನ್ ॥39॥
ಪ್ರೀತಿಪಾತ್ರರೇ, ಶ್ರೀಮಂತರ ಕುಮಾರರು ಗೋಕ್ಷೀರವನ್ನು ಕುಡಿಯುವುದನ್ನು ನೋಡಿ ಅಶ್ವತ್ಥಾಮನು ಹಠಹಿಡಿದು ಅತ್ತನು. ಆಗ ನಾನು ದಿಗ್ಭ್ರಮೆಗೆ ಸಿಲುಕಿದೆ.
ಅಥ ಪಿಷ್ಟೋದಕೇನೈವ ಲೋಭಯಂ ವೈ ಕುಮಾರಕಮ್ |
ಪೀತ್ವಾ ಪಿಷ್ಟೋದಕಂ ತಚ್ಚ ಮಾತೃದತ್ತಂ ಪ್ರಿಯೇಣ ಚ |
ನೃತ್ಯತಿ ಪ್ರಹಸನ್ ಸ ಸ್ಮ ಪೀತಕ್ಷೀರೋಽಹಮಿತ್ಯುತ ॥40॥
ಆಗ ಕುಮಾರನಿಗೆ ನೀರಿನಲ್ಲಿ ಹಿಟ್ಟನ್ನು ಕದರಿಕೊಟ್ಟು ಪ್ರಲೋಭನೆಗೊಳಿಸಿದೆ. ತಾಯಿಯು ಕೊಟ್ಟ ಪ್ರಿಯವಾದ ಹಿಟ್ಟು ಕದರಿದ ನೀರನ್ನು ಕುಡಿದ ಅವನು ನಾನು ಹಾಲನ್ನು ಕುಡಿದೆ ಎಂದು ನಗುತ್ತಾ ಕುಣಿಯುತ್ತಿದ್ದನು.
ನನರ್ತೋತ್ಥಾಯ ಕೌರವ್ಯ ಹೃಷ್ಟೋ ಬಾಲ್ಯಾದ್ ವಿಮೋಹಿತಃ |
ತಂ ದೃಷ್ಟ್ವಾ ನೃತ್ಯಮಾನಂ ತು ಬಾಲೈಃ ಪರಿವೃತಂ ಸುತಮ್ |
ಹಾಸ್ಯತಾಮುಪಸಂಪ್ರಾಪ್ತಂ ಕಶ್ಮಲಂ ತತ್ರ ಮೇಽಭವತ್ ॥41॥
ಬಾಲ್ಯದ ನಿಮಿತ್ತದಿಂದ ವಿಮೋಹಿತನಾಗಿ ಸಂತೋಷದಿಂದ ಎದ್ದು ಕುಣಿಯುತ್ತಿದ್ದನು. ಕುರುಕುಲೋತ್ಪನ್ನರಾದ ಭೀಷ್ಮರೇ, ಕುಣಿಯುತ್ತಿದ್ದ ಅವನನ್ನು ನೋಡಿ ಸುತ್ತುವರಿದ ಬಾಲಕರೆಲ್ಲ (ನಿನಗೆ ಎಲ್ಲಿಯ ಗೋಕ್ಷೀರ ಎಂದು ಹೇಳಿ) ಅವನನ್ನು ಹಾಸ್ಯ ಮಾಡಲು ನನಗೆ ಬಹಳ ಸಂಕಟವಾಯಿತು.
ದ್ರೋಣಂ ಧಿಗಸ್ತ್ವಧನಿನಂ ಯೋ ಧನಂ ನಾಧಿಗಚ್ಛತಿ |
ಕ್ಷೀರಾರಸಜ್ಞಃ ಕ್ಷೀರಮಿತಿ ಪೀತ್ವಾ ಪಿಷ್ಟಂ ಪ್ರನೃತ್ಯತಿ |
ಇತಿ ಸಂಭಾಷತಾಂ ವಾಚಂ ಶ್ರುತ್ವಾ ಮೇ ಬುದ್ಧಿರಚ್ಯವತ್ ॥42॥
ಧನವನ್ನು ಸಂಪಾದಿಸದೆ ದರಿದ್ರರಾದ ದ್ರೋಣರಿಗೆ ಧಿಕ್ಕಾರವಿರಲಿ. ಹಾಲಿನ ರುಚಿಯನ್ನು ತಿಳಿಯದ ಅಶ್ವತ್ಥಾಮನು ಹಿಟ್ಟಿನ ನೀರನ್ನು ಕುಡಿದು ಹಾಲು ಎಂದು ಕುಣಿಯುತ್ತಿದ್ದಾನೆ ಎಂದು ಮಾತನಾಡುವವರ ಮಾತುಗಳನ್ನು ಕೇಳಿ ನನಗೆ ಬುದ್ಧಿಭ್ರಂಶವಾಯಿತು.
ಆತ್ಮಾನಂ ಚಾತ್ಮನಾ ಗರ್ಹನ್ ಮನಸೇದಂ ವ್ಯಚಿಂತಯಮ್ |
ನ ಸ್ನಾತಕೋಽವಸೀದೇತ ವರ್ತಮಾನಃ ಸ್ವಕರ್ಮಣಿ ॥43॥
ನನ್ನನ್ನು ನಾನೇ ನಿಂದಿಸಿಕೊಳ್ಳುತ್ತಾ ಮನಸ್ಸಿನಲ್ಲಿ ವೇದಜ್ಞನಾಗಿ ಸ್ವಕರ್ಮದಲ್ಲಿ ನಿರತನಾದವನು ಎಂದೂ ಸಂಕಟಕ್ಕೆ ಗುರಿಯಾಗಬಾರದು ಎಂದು ಯೋಚಿಸಿದೆನು.
ಇತಿ ಸಂಚಿಂತ್ಯ ಮನಸಾ ತಂ ದೇಶಂ ಬಹುಶೋಭಿತಮ್ |
ವಿಶುದ್ಧಮಿಚ್ಛನ್ ಗಾಂಗೇಯ ಧರ್ಮೋಪೇತಂ ಪ್ರತಿಗ್ರಹಮ್ |
ಅನ್ತಾದನ್ಯತ್ ಪರಿಕ್ರಮ್ಯ ನಾಧ್ಯಗಚ್ಛಂ ಪ್ರತಿಗ್ರಹಮ್ ॥44॥
ಗಾಂಗೇಯನೇ, ಹೀಗೆ ಮನಸ್ಸಿನಲ್ಲಿ ಯೋಚಿಸಿ ಧರ್ಮಯುಕ್ತವಾದ, ವಿಶುದ್ಧವಾದ ಅನ್ನಭಿನ್ನವಾದ ಪ್ರತಿಗ್ರಹವನ್ನು ಬಯಸಿ ಸಮೃದ್ಧವಾದ ದೇಶಗಳಿಗೆ ವೃತ್ತಿಯ ನಿಮಿತ್ತವಾಗಿ ಹೋಗುತ್ತಾ ಯಾವ ಪ್ರತಿಗ್ರಹವನ್ನೂ ಪಡೆಯಲಿಲ್ಲ.
ಆಗಚ್ಛತೀತಿ ಜಾನಂಸ್ತಾನಹಂ ದೇಶಾನ್ ಬಹೂನಪಿ |
ಅವಿಲೋಪೇನ ಧರ್ಮಸ್ಯ ಸ ತ್ವಹಂ ಧರ್ಮಸಂಸ್ಥಿತಃ |
ಅಯಾಚಿತ್ವಾ ಪರಿಕ್ರಾಮನ್ ನಾಧ್ಯಗಚ್ಛಂ ಧನಂ ಕ್ವಚಿತ್ ॥45॥
ಧರ್ಮಸಂಸ್ಥಿತನಾದ ನಾನು ಧರ್ಮದ ಲೋಪವಾಗದಂತೆ ನನಗೆ ಪ್ರತಿಗ್ರಹವು ದೊರೆಯಬಹುದು ಎಂಬ ಆಸೆಯಿಂದ ಅನೇಕ ದೇಶಗಳಿಗೆ ಹೋಗಿ ಯಾಚನೆಯನ್ನು ಮಾಡದೆ ತಿರುಗಾಡಿದರೂ ನನಗೆ ಧನವು ದೊರೆಯಲಿಲ್ಲ.
ಅಪಿ ನಾಹಂ ಸುರೈರ್ವಿಪ್ರೈರ್ವರ್ಜಿತಾಂ ಗರ್ಹಿತಾಂ ಭೃಶಮ್ |
ಪರೋಪಸೇವಾಂ ಪಾಪಿಷ್ಠಾಮಾಚರೇಯಂ ಧನಾಶಯಾ ॥46॥
ನಾನಾದರೋ ಧನದ ಆಶೆಯಿಂದ ದೇವತೆಗಳಿಂದಲೂ ಮತ್ತು ಬ್ರಾಹ್ಮಣರಿಂದಲೂ ವರ್ಜಿತವಾದ ಅತ್ಯಂತ ನಿಂದ್ಯವೂ ಮತ್ತು ಪಾಪಿಷ್ಠವೂ ಆದ ಪರಸೇವೆಯನ್ನು ಮಾಡಲಾರೆ.
ಇತಿ ಮತ್ವಾ ಪ್ರಿಯಂ ಪೂರ್ವಂ ವಕ್ತಾರಂ ಸೂನೃತಾಂ ಗಿರಮ್ |

ಪೂರ್ವಸಂಗತಸಂಸಿದ್ಧಂ ಸದಾರಃ ಸೋಮಕಂ ಗತಃ ॥47॥
ಹೀಗೆ ಯೋಚಿಸಿ, ಹಿಂದೆ ನನಗೆ ಪ್ರಿಯನಾಗಿದ್ದವನೂ, ಒಳ್ಳೆಯ ಮಾತುಗಳನ್ನು ಆಡುವವನೂ, ನನ್ನ ಸ್ನೇಹಿತನಾಗಿ ಸಂಗತನಾದವನೂ ಆದ ಸೋಮಕರಾಜನ ಬಳಿಗೆ ಪತ್ನೀಸಹಿತನಾಗಿ ಹೋದೆನು.
ಅಭಿಷಿಕ್ತಂ ಚ ಶ್ರುತ್ವೈನಂ ಕೃತಾರ್ಥೋಽಸ್ಮೀತಿ ಚಿಂತಯನ್ |
ಪ್ರಿಯಂ ಸಖಾಯಂ ಸುಪ್ರೀತೋ ರಾಜ್ಯಸ್ಥಂ ಸಮುಪಾಗಮಮ್ ॥48॥
ಅವನು ಅಭಿಷಿಕ್ತನಾಗಿದ್ದಾನೆ ಎಂಬ ವಾರ್ತೆಯನ್ನು ಕೇಳಿ ನಾನು ಕೃತಾರ್ಥ ಎಂದು ಯೋಚಿಸುತ್ತಾ ರಾಜ್ಯಸ್ಥನಾದ ನನ್ನ ಪ್ರಿಯಸ್ನೇಹಿತನ ಬಳಿಗೆ ಸಂತೋಷದಿಂದ ಹೋದೆನು.
ಸಂಸ್ಮರನ್ ಸಂಗತಂ ಚೈವ ವಚನಂ ಚೈವ ತಸ್ಯ ತತ್ |
ತತೋ ದ್ರುಪದಮಾಗಮ್ಯ ಸಖಿಪೂರ್ವಮಹಂ ಪ್ರಭೋ ॥49॥
ಅಬ್ರುವಂ ಪುರುಷವ್ಯಾಘ್ರ ಸಖಾಯಂ ವಿದ್ಧಿ ಮಾಮಿತಿ |
ಉಪಸ್ಥಿತಂ ತು ದ್ರುಪದಃ ಸಖಿಪೂರ್ವಂ ಸಮಾಗತಮ್ ॥50॥
ಭೀಷ್ಮರೇ, ಪೂರ್ವಸಂಬಂಧವನ್ನೂ, ಅವನು ಆಡಿದ ಆ ಮಾತುಗಳನ್ನೂ ಸ್ಮರಿಸಿಕೊಂಡು ಹಿಂದೆ ಸ್ನೇಹಿತನಾಗಿದ್ದ ನಾನು ದ್ರುಪದನನ್ನು ಸಮೀಪಿಸಿ, ಪುರುಷವ್ಯಾಘ್ರನೇ ನನ್ನನ್ನು ನಿನ್ನ ಸ್ನೇಹಿತ ಎಂದು ತಿಳಿ ಎಂದು ಹೇಳಿದೆನು.
ಸ ಮಾಂ ನಿರಾಕಾರಮಿವ ಪ್ರಹಸನ್ನಿದಮಬ್ರವೀತ್ |
ಅಕೃತೇಯಂ ತವ ಪ್ರಜ್ಞಾ ಬ್ರಹ್ಮನ್ ನಾತಿಸಮಂಜಸೀ |
ಯದಾತ್ಥ ಮಾಂ ತ್ವಂ ಪ್ರಸಭಂ ಸಖಾ ತೇಽಹಮಿತಿ ದ್ವಿಜ ॥51॥
ಪೂರ್ವ ಸ್ನೇಹಿತನಾದ ಆ ದ್ರುಪದನು ಬಳಿಗೆ ಬಂದಿದ್ದ ನನ್ನನ್ನು ನೋಡಿ ನಗುತ್ತಾ ನನ್ನನ್ನು ಅಪ್ರಯೋಜಕನೆಂದು ತಿಳಿದು ಹೀಗೆ ಹೇಳಿದನು. ಬ್ರಾಹ್ಮಣನೇ, ನಿನ್ನ ಬುದ್ಧಿಯು ಸರಿಯಾಗಿಲ್ಲ. ಅದು ಸಂಸ್ಕಾರ ಶೂನ್ಯವಾಗಿದೆ. ಆದ್ದರಿಂದ ನೀನು ನನ್ನ ಬಳಿಗೆ ಶೀಘ್ರವಾಗಿ ಬಂದು ನಾನು ನಿನ್ನ ಸ್ನೇಹಿತ ಎಂದು ಹೇಳುತ್ತಿದ್ದೀಯೆ.
ನಹಿ ರಾಜ್ಞಾಮುದೀರ್ಣಾನಾಮೇವಂಭೂತೈರ್ನರೈಃ ಕ್ವಚಿತ್ |
ಸಖ್ಯಂ ಭವತಿ ಮಂದಾತ್ಮನ್ ಶ್ರಿಯಾ ಹೀನೈರ್ಧನಚ್ಯುತೈಃ ॥52॥
ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ |
ನಾರಾಜಾ ಪಾರ್ಥಿವಸ್ಯಾಪಿ ಸಖಿಪೂರ್ವಂ ಕಿಮಿಷ್ಯತೇ ॥53॥
ಮಂದಾತ್ಮನೇ, ಸಂಪತ್ತಿನಿಂದ ಸಮೃದ್ಧರಾದ ರಾಜರಿಗೆ ಧನದಿಂದಲೂ, ಸಂಪತ್ತಿನಿಂದಲೂ ಚ್ಯುತರಾದ ಮನುಷ್ಯರ ಜೊತೆಯಲ್ಲಿ ಎಂದೂ ಸ್ನೇಹವು ಉಂಟಾಗುವುದಿಲ್ಲ. ಅಶ್ರೋತ್ರಿಯನಾದವನು ಶ್ರೋತ್ರಿಯನಿಗೂ, ರಥವಿಲ್ಲದವನು ರಥಿಕನಿಗೂ ಸ್ನೇಹಿತನಾಗುವುದಿಲ್ಲ. ರಾಜನಲ್ಲದವನು ರಾಜನಿಗೆ ಎಂದೂ ಸ್ನೇಹಿತನಾಗುವುದಿಲ್ಲ. ಕಳೆದುಹೋದ ಸ್ನೇಹವನ್ನು ಏತಕ್ಕೆ ಬಯಸುತ್ತಿದ್ದೀಯೆ?
ದ್ರುಪದೇನೈವಮುಕ್ತೋಽಹಂ ಮನ್ಯುನಾಽಭಿಪರಿಪ್ಲುತಃ |
ಅಭ್ಯಾಗಚ್ಛಂ ಕುರೂನ್ ಭೀಷ್ಮ ಶಿಷ್ಯೈರರ್ಥೀ ಗುಣಾನ್ವಿತೈಃ ॥54॥
ಭೀಷ್ಮರೇ, ದ್ರುಪದನಿಂದ ಹೀಗೆ ಹೇಳಲ್ಪಟ್ಟ ನಾನು ಕೋಪದಿಂದ ಕೂಡಿದವನಾಗಿ ಗುಣಾನ್ವಿತರಾದ ಶಿಷ್ಯರಿಂದ ನನ್ನ ಕಾರ್ಯವನ್ನು ಸಾಧಿಸುವ ದೃಷ್ಟಿಯಿಂದ ಶಿಷ್ಯರನ್ನು ಹುಡುಕುತ್ತಾ ಕುರುದೇಶಕ್ಕೆ ಬಂದೆನು.
ವೈಶಂಪಾಯನಃ
ಪ್ರತಿಜಗ್ರಾಹ ತಂ ಭೀಷ್ಮೋ ಕುರುಪಾಂಡುಸುತೈಃ ಸಹ |
ಪೌತ್ರಾನಾದಾಯ ತಾನ್ ಸರ್ವಾನ್ ವಸೂನಿ ವಿವಿಧಾನಿ ಚ |
ಶಿಷ್ಯಾ ಇತಿ ದದೌ ರಾಜನ್ ದ್ರೋಣಾಯ ವಿಧಿಪೂರ್ವಕಮ್ ॥55॥
ಭೀಷ್ಮರು ಕುರುಪಾಂಡುಕುಮಾರರ ಜೊತೆಯಲ್ಲಿ ಅವರನ್ನು ಸ್ವೀಕರಿಸಿದರು. ವಿಧವಿಧವಾದ ದ್ರವ್ಯವನ್ನು ದ್ರೋಣರಿಗೆ ಕೊಟ್ಟು ತನ್ನ ಮೊಮ್ಮಕ್ಕಳನ್ನು ಕರೆದುಕೊಂಡು ಬಂದು, ಇವರು ನಿಮ್ಮ ಶಿಷ್ಯರು ಎಂದು ಹೇಳಿ ದ್ರೋಣರಿಗೆ ವಿಧಿಪೂರ್ವಕವಾಗಿ ಒಪ್ಪಿಸಿದರು.
ಸ ಚ ಶಿಷ್ಯಾನ್ ಮಹೇಷ್ವಾಸಃ ಪ್ರತಿಜಗ್ರಾಹ ಕೌರವಾನ್ |
ಪ್ರತಿಗೃಹ್ಯ ಚ ತಾನ್ ಸರ್ವಾನ್ ದ್ರೋಣೋ ವಚನಮಬ್ರವೀತ್ |
ರಹಸ್ಯೇತಾನ್ ಪ್ರತೀತಾತ್ಮಾ ಕೃತೋಪಸದನಾಂಸ್ತಥಾ ॥56॥
ಮಹಾಧನುರ್ಧಾರಿಗಳಾದ ದ್ರೋಣರು ಕೌರವರೆಲ್ಲರನ್ನೂ ಶಿಷ್ಯರನ್ನಾಗಿ ಸ್ವೀಕರಿಸಿ ರಹಸ್ಯದಲ್ಲಿ ಸಮೀಪದಲ್ಲಿ ಕುಳಿತಿದ್ದ ಅವರನ್ನು ಕುರಿತು ತಮ್ಮ ಸ್ಪಷ್ಟವಾದ ಮನಸ್ಸಿನಿಂದ ಮಾತನಾಡಿದರು.
ಕಾರ್ಯಂ ಮೇ ಕಾಂಕ್ಷಿತಂ ಕಿಂಚಿದ್ ಹೃದಿ ಸಂಪರಿವರ್ತತೇ |
ಕೃತಾಸ್ತ್ರೈಸ್ತತ್ ಪ್ರದೇಯಂ ಮೇ ತದ್ ದ್ರುತಂ ವದತಾನಘಾಃ ॥57॥
ನನಗೆ ಒಂದು ಅಪೇಕ್ಷಿತವಾದ ಕಾರ್ಯವಾಗಬೇಕೆಂದು ನನ್ನ ಮನಸ್ಸಿನಲ್ಲಿದೆ. ನೀವು ಅಸ್ತ್ರಸಂಪಾದನೆಯನ್ನು ಮಾಡಿದ ಮೇಲೆ ಅದನ್ನು ನನಗೆ ಮಾಡಿಕೊಡಬೇಕು. ಅನಘರೇ ಯಾರು ಮಾಡಿಕೊಡುವಿರಿ ಎಂದು ಬೇಗ ಹೇಳಿ ಎಂದು ಹೇಳಿದರು.
ವೈಶಂಪಾಯನಃ
ತಚ್ಛ್ರುತ್ವಾ ಕೌರವೇಯಾಸ್ತೇ ತೂಷ್ಣೀಮಾಸನ್ ವಿಶಾಂಪತೇ |
ಅರ್ಜುನಸ್ತು ತತಃ ಸರ್ವಂ ಪ್ರತಿಜಜ್ಞೇ ಪರಂತಪ ॥58॥
ಪರಂತಪನಾದ ರಾಜನೇ, ಆ ಮಾತನ್ನು ಕೇಳಿದ ದುರ್ಯೋಧನ ಮೊದಲಾದವರು ಸುಮ್ಮನಿದ್ದರು. ಅರ್ಜುನನು, ನಾನು ಎಲ್ಲವನ್ನೂ

ಮಾಡಿಕೊಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿದನು.
ತತೋಽರ್ಜುನಂ ಮೂರ್ಧ್ನಿತದಾ ಸಮಾಘ್ರಾಯ ಪುನಃ ಪುನಃ |
ಪ್ರೀತಿಪೂರ್ವಂ ಪರಿಷ್ವಜ್ಯ ಪ್ರರುರೋದ ಮುದಾ ತದಾ ॥59॥
ಆಗ ದ್ರೋಣರು ಅರ್ಜುನನನ್ನು ಪ್ರೀತಿಪೂರ್ವಕವಾಗಿ ಆಲಿಂಗಿಸಿ ಅವನ ಶಿರಸ್ಸನ್ನು ಮತ್ತೆ ಮತ್ತೆ ಆಘ್ರಾಣಿಸಿ ಸಂತೋಷದಿಂದ ಅತ್ತರು.
ಅಶ್ವತ್ಥಾಮಾನಮಾಹೂಯ ದ್ರೋಣೋ ವಚನಮಬ್ರವೀತ್ |
ಸಖಾಯಂ ವಿದ್ಧಿ ತೇ ಪಾರ್ಥಂ ಮಯಾ ದತ್ತಂ ಪ್ರಗೃಹ್ಯತಾಮ್ ॥60॥
ದ್ರೋಣರು ಅಶ್ವತ್ಥಾಮರನ್ನು ಕರೆದು ಅರ್ಜುನನನ್ನು ನಿನ್ನ ಸ್ನೇಹಿತನೆಂದು ತಿಳಿ ನಾನು ನಿನಗೆ ಅವನನ್ನು ಕೊಡುತ್ತಿದ್ದೇನೆ, ಸ್ವೀಕರಿಸು ಎಂದು ಹೇಳಿದರು.
ಸಾಧು ಸಾಧ್ವಿತಿ ತಂ ಪಾರ್ಥಃ ಪರಿಷ್ವಜ್ಯೇದಮಬ್ರವೀತ್ |
ಅದ್ಯಪ್ರಭೃತಿ ವಿಪ್ರೇಂದ್ರ ಪರವಾನಸ್ಮಿ ಧರ್ಮತಃ ॥61॥
ಶಿಷ್ಯೋಽಹಂ ತ್ವತ್ಪ್ರಸಾದೇನ ಜೀವಾಮಿ ದ್ವಿಜಸತ್ತಮ |
ಇತ್ಯುಕತ್ವ ತು ತದಾ ಪಾರ್ಥಃ ಪಾದೌ ಜಗ್ರಾಹ ಪಾಂಡವಃ ॥62॥
ಒಳ್ಳೆಯದು ಒಳ್ಳೆಯದು ಎಂದು ಹೇಳಿ ಅರ್ಜನನು ಅಶ್ವತ್ಥಾಮರನ್ನು ಆಲಿಂಗಿಸಿ, ವಿಪ್ರೇಂದ್ರರೇ, ನಾನು ಈ ದಿನದಿಂದ ಧಾರ್ಮಿಕವಾಗಿ ನಿಮ್ಮ ಅಧೀನನಾಗಿದ್ದೇನೆ. ದ್ವಿಜಶ್ರೇಷ್ಠರೇ, ನಿಮ್ಮ ಶಿಷ್ಯನಾಗಿ ನಿಮ್ಮ ಅನುಗ್ರಹದಿಂದ ಬದುಕಿದ್ದೇನೆ ಎಂದು ಹೇಳಿ ಪಾಂಡುಪುತ್ರನಾದ ಅರ್ಜುನನು ಅವರ ಪಾದಗಳನ್ನು ಹಿಡಿದುಕೊಂಡನು.
ತತೋ ದ್ರೋಣಃ ಪಾಂಡುಪುತ್ರಾನಸಶತ್ರಣಿ ವಿವಿಧಾನಿ ಚ |
ಗ್ರಾಹಯಾಮಾಸ ದಿವ್ಯಾನಿ ಮಾನುಷಾಣಿ ಚ ವೀರ್ಯವಾನ್ ॥63॥
ಅನಂತರ ಪರಾಕ್ರಮಶಾಲಿಗಳಾದ ದ್ರೋಣರು ಪಾಂಡುಪುತ್ರರಿಗೆ ಅನೇಕ ದಿವ್ಯಾಸ್ತ್ರಗಳನ್ನೂ ಮತ್ತು ಮಾನುಷಾಸ್ತ್ರಗಳನ್ನೂ ಕಲಿಸಿದರು.
ರಾಜಪುತ್ರಾಸ್ತಥೈವಾನ್ಯೇ ಸಮೇತ್ಯ ಭರತರ್ಷಭಾಃ |
ಅಭಿಜಗ್ಮುಸ್ತತೋ ದ್ರೋಣಮಸಶತ್ರರ್ಥಂ ದ್ವಿಜಸತ್ತಮಮ್ ॥64॥
ಹಾಗೆಯೇ, ಬೇರೆ ರಾಜಕುಮಾರರೂ, ಭರತವಂಶದ ಬೇರೆ ರಾಜರೂ ಸಹ ದ್ವಿಜಶ್ರೇಷ್ಠರಾದ ದ್ರೋಣರ ಬಳಿಗೆ ಅಸ್ತ್ರಗಳನ್ನು ಕಲಿಯುವ ಸಲುವಾಗಿ ಬಂದರು.
ವೃಷ್ಣಯಶ್ಚಾಂಧಕಾಶ್ಚೈವ ನಾನಾದೇಶ್ಯಾಶ್ಚ ಪಾರ್ಥಿವಾಃ |
ಸೂತಪುತ್ರಶ್ಚ ರಾಧೇಯೋ ಗುರುಂ ದ್ರೋಣಮಿಯಾತ್ ತದಾ ॥65॥
ಆಗ ವೃಷ್ಣಿಗಳು, ಅಂಧಕರು, ಅನೇಕ ದೇಶದ ರಾಜರುಗಳು, ಸೂತಪುತ್ರನಾದ ಕರ್ಣ, ಎಲ್ಲರೂ ದ್ರೋಣರ ಬಳಿಗೆ ಬಂದರು.
ಸ್ಪರ್ಧಮಾನಸ್ತು ಪಾರ್ಥೇನ ಸೂತಪುತ್ರೋಽತ್ಯಮರ್ಷಣಃ |
ದುರ್ಯೋಧನಮುಪಾಶ್ರಿತ್ಯ ಪಾಂಡವಾನವಮನ್ಯತ ॥66॥
ಸೂತಪುತ್ರನಾದ ಕರ್ಣನು ಯಾವಾಗಲೂ ಸಿಟ್ಟಿನಿಂದ ಕೂಡಿದವನಾಗಿ ಅರ್ಜುನನ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತಾ ದುರ್ಯೋಧನನನ್ನು ಆಶ್ರಯಿಸಿ ಪಾಂಡವರಿಗೆ ಅವಮಾನವನ್ನು ಮಾಡುತ್ತಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಮೂವತ್ತನೆಯ ಅಧ್ಯಾಯ ಮುಗಿಯಿತು.
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-15
ತತಃ ಕದಾಚಿದ್ ಧೃತರಾಷ್ಟ್ರಪುತ್ರೈಃ
ಪಾಂಡೋಃ ಸುತಾ ಮೃಗಯಾಂ ಸಂಪ್ರಯಾತಾಃ |
ಅಗ್ರೇ ಗಚ್ಛನ್ ಸಾರಮೇಯೋ ರುರಾವ
ಧರ್ಮಾತ್ಮಜಸ್ಯಾತ್ರ ವನೇ ಮೃಗಾರ್ಥೀ ॥60॥
ಒಂದು ದಿನ ಕೌರವರೊಂದಿಗೆ ಪಾಂಡವರು ಬೇಟೆಗೆ ಹೊರಟರು. ಕಾಡಿನಲ್ಲಿ ಮುಂದೆ ಹೋಗುತ್ತಿದ್ದ ಧರ್ಮರಾಜನ ಬೇಟೆನಾಯಿ ಮೃಗಾರ್ಥಿಯಾಗಿ ಬೊಗಳಿತು.
ಶ್ರುತ್ವಾರಾವಂ ಸಾರಮೇಯಸ್ಯ ದೂರಾ
ಚ್ಛರೈರ್ಮುಖಂ ಶಬ್ದವೇಧೀ ಪುಪೂರೇ |
ಸ ಏಕಲವ್ಯೋ ವ್ರಣಮಸ್ಯ ನಾಕರೋತ್
ಶ್ವಾ ಪೂರಿತಾಸ್ಯ ಪಾಂಡವಾನಭ್ಯಯಾತ್ ಸಃ ॥61॥
ದೂರದಿಂದ ನಾಯಿ ಬೊಗಳುವ ಶಬ್ದ ಕೇಳಿ ಶಬ್ದವೇಧಿಯಾದ ಏಕಲವ್ಯ ಬಾಣಗಳಿಂದ ನಾಯಿಯ ಬಾಯಿಯನ್ನು ತುಂಬಿಸಿದ. ಗಾಯ ಉಂಟುಮಾಡಲಿಲ್ಲ. ಬಾಯಿ ತುಂಬ ಬಾಣವಿಟ್ಟುಕೊಂಡು ನಾಯಿ ಪಾಂಡವರ ಬಳಿಗೆ ಬಂದಿತು.
ದೃಷ್ಟ್ವಾ ಚಿತ್ರಂ ಕುರವಃ ಪಾಂಡವಾಶ್ಚ
ದ್ರುಷ್ಟುಂ ಕರ್ತಾರಂ ಮಾರ್ಗಯಾಮಾಸುರತ್ರ |
ದ್ರೋಣಾಕೃತಿಂ ಮಾರ್ತಿಕೀಂ ಪೂಜಯಂತಂ

ದದೃಶುಶ್ಚೈನಂ ಧನುರೇವಾಭ್ಯಸಂತಮ್ ॥62॥
ಕೌರವರೂ ಪಾಂಡವರೂ ಈ ವಿಚಿತ್ರವನ್ನು ಕಂಡು ಅದರ ಕರ್ತನನ್ನು ಕಾಣಲು ಕಾಡಿನಲ್ಲಿ ಅನ್ವೇಷಣೆ ಮಾಡಿದರು. ಮಣ್ಣಿನ ದ್ರೋಣಮೂರ್ತಿಯನ್ನು ಪೂಜಿಸುತ್ತ ಬಿಲ್ಲನ್ನು ಅಭ್ಯಾಸಮಾಡುತ್ತಿದ್ದ ಏಕಲವ್ಯನನ್ನು ಕಂಡರು.
ಪೈಶಾಚಮೇವೈಷ ಪಿಶಾಚಕೇಭ್ಯಃ
ಪೂರ್ವಂ ವಿವೇದಾಸ್ತ್ರವೃಂದಂ ನಿಷಾದಃ ।
ದಿವ್ಯಾನ್ಯಸಶತ್ರಣ್ಯಾಪ್ತು ಮೇತಾಂ ಚ ಶಿಕ್ಷಾಂ
ದ್ರೋಣಂ ಸದಾ ಪೂಜಯತಿ ಸ್ಮ ಭಕ್ತ್ಯಾ ॥63॥
ಬೇಡನಾದ ಈ ಏಕಲವ್ಯ ಹಿಂದೆ ಪಿಶಾಚಿಗಳಿಂದಲೆ ಪೈಶಾಚಾಸ್ತ್ರಗಳ ಸಮೂಹವನ್ನು ಚೆನ್ನಾಗಿ ತಿಳಿದಿದ. ಈಗ ದಿವ್ಯ ಅಸ್ತ್ರಗಳನ್ನೂ ತಿಳಿಯಬೇಕೆಂದು ಈ ಶಿಕ್ಷಣಕ್ಕಾಗಿ ದ್ರೋಣನನ್ನು ಸದಾ ಭಕ್ತಿಯಿಂದ ಪೂಜಿಸುತ್ತಿದ್ದ.
ದೃಷ್ಟ್ವಾ ವಿಶೇಷಂ ತಮಮುಷ್ಯ ಪಾರ್ಥೋ
ದ್ರೋಣಾಯೋಚೇ ತ್ವದ್ವಚೋ ಮೇ ಮೃಷಾಸೀತ್ ।
ಇತ್ಯುಕ್ತ ಏನಂ ತ್ವಭಿಗಮ್ಯ ದಕ್ಷಿಣಾಂ
ವಿಪ್ರೋ ಯಯಾಚೇ ದಕ್ಷಿಣಾಂಗುಷ್ಠಮೇವ ॥64॥
ಏಕಲವ್ಯನ ಈ ವಿಶೇಷ ವಿದ್ಯೆಯನ್ನು ನೋಡಿ ಅರ್ಜುನ ದ್ರೋಣನಿಗೆ ಹೇಳಿದ. `ನನಗೆ ನೀವು ಕೊಟ್ಟ ಮಾತು ಸುಳ್ಳಾಯಿತು'. ಹೀಗೆ ಹೇಳಿದಾಗ ದ್ರೋಣ ಏಕಲವ್ಯನ ಬಳಿಗೆ ಬಂದು ಬಲಗೈ ಹೆಬ್ಬೆಟ್ಟನ್ನು ಗುರುದಕ್ಷಿಣೆಯಾಗಿ ಕೇಳಿದ.
ತಸ್ಯ ಪ್ರಸಾದೋಪಚಿತೋರುಶಿಕ್ಷೋ
ನಿಷಾದೋಽದಾದ್ ದಕ್ಷಿಣಾಂಗುಷ್ಠಮಸ್ಮೈ ।
ತತಃ ಪರಂ ನಾಸ್ಯ ಬಭೂವ
ಶಿಕ್ಷಾ ಸನ್ಮುಷ್ಟಿಹೀನಸ್ಯ ಸಮಾರ್ಜುನೇನ ॥65॥
ದ್ರೋಣನ ಅನುಗ್ರಹದಿಂದ ಹೆಚ್ಚಿನ ಉತ್ತಮ ಶಿಕ್ಷಣ ಹೊಂದಿದ್ದ ಏಕಲವ್ಯ ಅವನಿಗೆ ಬಲಗೈ ಹೆಬ್ಬೆರಳನ್ನು ದಕ್ಷಿಣೆಯಾಗಿ ಕೊಟ್ಟ. ಇದಾದ ಬಳಿಕ ಸರಿಯಾದ ಮುಷ್ಟಿಬಲವಿಲ್ಲದ ಏಕಲವ್ಯನಿಗೆ ಅರ್ಜುನನಿಗೆ ಸಾಟಿಯಾದ ಧನುರ್ವಿದ್ಯೆ ಇಲ್ಲದಾಯಿತು.
ಪುನಃ ಕೃಪಾಲೂ ರೈವತಪರ್ವತೇ ತಂ
ದ್ರೋಣಃ ಪ್ರಾದಾದಸ್ತ್ರವರಾಣಿ ತಸ್ಮೈ ।
ಏಕಾಂತ ಏಕಾಸ್ಯ ಭಕ್ತ್ಯಾಸುತುಷ್ಟೋ
ಧನ್ವಿಶ್ರೇಷ್ಠಂ ಕೃತವಾನರ್ಜುನಂ ಚ ॥66॥
ಕೃಪಾಳುವಾದ ದ್ರೋಣನೇ ಪುನಃ ಏಕಲವ್ಯನ ಭಕ್ತಿಗೆ ಮೆಚ್ಚಿ ರೈವತ ಪರ್ವದಲ್ಲಿ ಏಕಾಂತದಲ್ಲಿ ಅವನಿಗೆ ಉತ್ತಮ ಅಸ್ತ್ರಗಳನ್ನು ಉಪದೇಶಿಸಿದ. ಅವನನ್ನು ಶ್ರೇಷ್ಠ ಬಿಲ್ಲುಗಾರನನ್ನಾಗಿ ಮಾಡಿದ. ಅರ್ಜುನನನ್ನು ಅವನಿಗಿಂತಲೂ ಶ್ರೇಷ್ಠ ಧನುರ್ಧರನನ್ನಾಗಿ ಮಾಡಿದ.

## ನೂರಮೂವತ್ತೊಂದನೆಯ ಅಧ್ಯಾಯ
(ಏಕಲವ್ಯಕಥಾ, ಅವನ ಗುರುಭಕ್ತಿ ಮತ್ತು ಗುರುದಕ್ಷಿಣಾದಾನ)
ವೈಶಂಪಾಯನಃ
ಅರ್ಜುನಸ್ತು ಪರಂ ಯತ್ನಮಾತಸ್ಥೇ ಗುರುಪೂಜನೇ ।
ಅಸ್ತ್ರೇ ಚ ಪರಮೇ ಯೋಗೇ ಪ್ರಿಯೋ ದ್ರೋಣಸ್ಯ ಚಾಭವತ್ ॥1॥
ಅರ್ಜುನನು ಗುರುಪೂಜೆಯನ್ನು ಮಾಡುವುದರಲ್ಲಿ ಬಹಳ ಪ್ರಯತ್ನಶೀಲನಾದನು. ಅಸ್ತ್ರಗಳಲ್ಲಿಯೂ, ಉಳಿದ ಶ್ರೇಷ್ಠ ಯೋಗಗಳಲ್ಲಿಯೂ ದ್ರೋಣರಿಗೆ ಅತ್ಯಂತ ಪ್ರಿಯನಾದನು.
ದ್ರೋಣೇನ ಚ ಸಮಾಹೂಯ ರಹಸ್ಯುಕ್ತೋಽನ್ನಸಾಧಕಃ ।
ಅಂಧಕಾರೇಽರ್ಜುನಾಯಾನ್ನಂ ನ ದೇಯಂ ತೇ ಕದಾಚನ ॥2॥
ದ್ರೋಣರು ಅರ್ಜುನನಿಗೆ ಊಟವನ್ನು ಬಡಿಸುವವನನ್ನು ಏಕಾಂತದಲ್ಲಿ ಕರೆದು ನೀನು ಅರ್ಜುನನಿಗೆ ಕತ್ತಲಿನಲ್ಲಿ ಎಂದೂ ಬಡಿಸಬಾರದು ಎಂದು ಹೇಳಿದರು.
ತತಃ ಕದಾಚಿತ್ ಭುಂಜಾನೇ ಪ್ರವವೌ ವಾಯುರರ್ಜುನೇ ।
ತೇನ ದೀಪಸ್ತು ಸಹಸಾ ನಿರ್ವಾಪಿತ ಇತಿ ಶ್ರುತಿಃ ॥3॥
ಅನಂತರ ಒಮ್ಮೆ ರಾತ್ರಿ ಅರ್ಜುನನು ಊಟ ಮಾಡುತ್ತಿದ್ದಾಗ ಬಲವಾದ ಗಾಳಿಯು ಬೀಸಿ ಉರಿಯುತ್ತಿದ್ದ ದೀಪವು ಆರಿಹೋಯಿತು ಎಂದು ಕೇಳಿದ್ದೇವೆ.
ಭುಕ್ತವಾನೇವ ಕೌಂತೇಯೋ ನಚಾಸ್ಮಾತ್ ಸ ನ್ಯವರ್ತತ ।
ಹಸ್ತತೇಜಸ್ವಿನೋ ನಿತ್ಯಮಭ್ಯಾಸಕೃತಕಾರಣಾತ್ ॥4॥
ನಿತ್ಯವೂ ಧನುರ್ವಿದ್ಯೆಯನ್ನು ಅಭ್ಯಾಸ ಮಾಡುವ ಕಾರಣದಿಂದ ಹಸ್ತದಲ್ಲಿ ಪ್ರಕಾಶವುಳ್ಳ ಅರ್ಜುನನು ಭೋಜನವನ್ನು ಮುಂದುವರಿಸಿದನು, ನಿಲ್ಲಿಸಲಿಲ್ಲ.
ಕತ್ತಲಿನಲ್ಲಿ ಅವನ ಹಸ್ತದ ಪ್ರಕಾಶವು ಇನ್ನೊಬ್ಬರಿಗೆ ಕಾಣುತ್ತದೆ. ಬೆಳಕಿನಲ್ಲಾದರೆ ಕಾಣುವುದಿಲ್ಲ. ಆದ್ದರಿಂದ ಅರ್ಜುನನ

ಹಸ್ತಪ್ರಕಾಶವು ಇನ್ನೊಬ್ಬರಿಗೆ ತಿಳಿಯಬಾರದೆಂಬ ಉದ್ದೇಶದಿಂದ ದ್ರೋಣರು ಬಡಿಸುವವನಿಗೆ ಕತ್ತಲೆಯಲ್ಲಿ ಬಡಿಸಬಾರದು ಎಂದು ಹೇಳಿದ್ದರು.
ತದಭ್ಯಾಸಕೃತಂ ಮತ್ವಾ ರಾತ್ರಾವಭ್ಯಸ್ತ ಪಾಂಡವಃ |
ಯೋಗಂ ಚಕ್ರೇ ಮಹಾಬಾಹುರ್ಧನುಷಾ ಪಾಂಡುನಂದನಃ ॥5॥
ಹಸ್ತದ ಪ್ರಕಾಶವು ತನ್ನ ಅಭ್ಯಾಸದಿಂದ ಉಂಟಾಗಿದೆ ಎಂದು ತಿಳಿದ ಪಾಂಡುನಂದನನಾದ, ಮಹಾಬಾಹುವಾದ ಅರ್ಜುನನು ರಾತ್ರಿಯಲ್ಲೂ ಧನುಸ್ಸಿನಿಂದ ಅಭ್ಯಾಸಮಾಡಲು ಪ್ರಾರಂಭಿಸಿದನು.
ತಸ್ಯ ಜ್ಯಾತಳನಿರ್ಘೋಷಂ ದ್ರೋಣಃ ಶುಶ್ರಾವ ತಂ ನಿಶಿ |
ಉಪೇತ್ಯಾರ್ಜುನಮುತ್ಥಾಪ್ಯ ಪರಿಷ್ವಜ್ಯೇದಮಬ್ರವೀತ್ ॥6॥
ದ್ರೋಣರು ರಾತ್ರಿಯ ವೇಳೆಯಲ್ಲಿ ಅರ್ಜುನನ ಹೆದೆಯ ಝೇಂಕಾರವನ್ನು ಕೇಳಿ ಅರ್ಜುನನ ಸಮೀಪಕ್ಕೆ ಬಂದು ಅವನನ್ನು ಎಬ್ಬಿಸಿ, ಆಲಿಂಗಿಸಿ ಈ ಮಾತುಗಳನ್ನು ಹೇಳಿದರು.
ಪ್ರಯತಿಷ್ಯೇ ತಥಾ ಕರ್ತುಂ ಯಥಾ ನಾನ್ಯೋ ಧನುರ್ಧರಃ |
ತ್ವತ್ಸಮೋ ಭವಿತಾ ಲೋಕೇ ಸತ್ಯಮೇತದ್ ಬ್ರವೀಮಿ ತೇ ॥7॥
ನಿನ್ನಂತಹ ಧನುರ್ಧರನು ಲೋಕದಲ್ಲಿ ಇನ್ನೊಬ್ಬನು ಇರಲಾರದಂತೆ ನಾನು ಪ್ರಯತ್ನಿಸುವೆನು. ಈ ಮಾತನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ವೈಶಂಪಾಯನಃ
ತತೋ ದ್ರೋಣೋಽರ್ಜುನಂ ಭೂಯೋ ಹಯೇಷು ಚ ಗಜೇಷು ಚ |
ರಥೇಷು ಭೂಮಾವಪಿ ಚ ರಣಶಿಕ್ಷಾಮಶಿಕ್ಷಯತ್ ॥8॥
ಅನಂತರದಲ್ಲಿ ದ್ರೋಣರು ಪುನಃ ಅಶ್ವಗಳಲ್ಲಿ, ಗಜಗಳಲ್ಲಿ, ರಥಗಳಲ್ಲಿ ಮತ್ತು ಭೂಮಿಯಲ್ಲಿ ಯುದ್ಧ ಮಾಡುವ ಕೌಶಲವನ್ನು ಅರ್ಜುನನಿಗೆ ಶಿಕ್ಷಿಸಿದರು.
ಗದಾಯುದ್ಧೇಽಸಿಚರ್ಯಾಯಾಂ ತೋಮರಪ್ರಾಸಶಕ್ತಿಷು |
ದ್ರೋಣಃ ಸಂಕೀರ್ಣಯುದ್ಧೇಷು ಶಿಕ್ಷಯಾಮಾಸ ಕೌರವಮ್ ॥9॥
ದ್ರೋಣರು ಗದಾಯುದ್ಧದಲ್ಲಿಯೂ, ಖಡ್ಗಯುದ್ಧದಲ್ಲಿಯೂ, ತೋಮರ, ಪ್ರಾಸ, ಶಕ್ತಿಗಳ ಯುದ್ಧದಲ್ಲಿಯೂ ಮತ್ತು ಸಂಕೀರ್ಣ ಯುದ್ಧಗಳಲ್ಲಿಯೂ ಅರ್ಜುನನಿಗೆ ಶಿಕ್ಷಣವನ್ನು ಕೊಟ್ಟರು.
ತಸ್ಯ ತತ್ ಕೌಶಲಂ ದೃಷ್ಟ್ವಾ ಧನುರ್ವೇದಜಿಘೃಕ್ಷವಃ |
ರಾಜಾನೋ ರಾಜಪುತ್ರಾಶ್ಚ ತತ್ರಾಜಗ್ಮುಃ ಸಹಸ್ರಶಃ ॥10॥
ಅರ್ಜುನನ ಕೌಶಲವನ್ನು ನೋಡಿ ಧನುರ್ವೇದವನ್ನು ಕಲಿಯುವ ಆಸೆಯುಳ್ಳ ರಾಜರು ಮತ್ತು ರಾಜಪುತ್ರರು ಸಹಸ್ರಸಂಖ್ಯೆಯಲ್ಲಿ ಅಲ್ಲಿಗೆ ಬಂದರು.
ತಾನ್ ಸರ್ವಾನ್ ಶಿಕ್ಷಯಾಮಾಸ ದ್ರೋಣಃ ಶಸ್ತ್ರಭೃತಾಂ ವರಃ |
ತತೋ ನಿಷಾದರಾಜಸ್ಯ ಹಿರಣ್ಯಧನುಷಃ ಸುತಃ ॥11॥
ಏಕಲವ್ಯೋ ಮಹಾವೀರ್ಯೋ ದ್ರೋಣಮಭ್ಯಾಜಗಾಮ ಹ |
ನ ಸ ತಂ ಪ್ರತಿಜಗ್ರಾಹ ನೈಷಾದಿರಿತಿ ಚಿಂತಯನ್ |
ಶಿಷ್ಯಂ ಧನುಷಿ ಧರ್ಮಜ್ಞಃ ತೇಷಾಮೇವಾನ್ವವೇಕ್ಷಯಾ ॥12॥
ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಅವರೆಲ್ಲರಿಗೂ ಶಿಕ್ಷಣವನ್ನು ನೀಡಿದರು. ಆಗ ನಿಷಾದರಾಜ್ಯದ ರಾಜನಾದ ಹಿರಣ್ಯಧನುವಿನ ಮಗನಾದ ಏಕಲವ್ಯನು ದ್ರೋಣರ ಸಮೀಪಕ್ಕೆ ಬಂದನು. ಧರ್ಮಜ್ಞರಾದ ದ್ರೋಣರು ಅವನು ಬೇಡರವನು ಎಂದು ಚಿಂತಿಸಿ ಧನುರ್ವಿದ್ಯೆಯಲ್ಲಿ ಅವನನ್ನು ಶಿಷ್ಯನೆಂದು ಸ್ವೀಕರಿಸಲಿಲ್ಲ. ಅವನನ್ನು ಪಾಂಡವರ ಮೇಲಿನ ಹಿತದೃಷ್ಟಿಯಿಂದಲೂ ಶಿಷ್ಯನೆಂದು ಸ್ವೀಕರಿಸಲಿಲ್ಲ.
ದ್ರೋಣಃ
ಶಿಷ್ಯೋಽಸಿ ಮಮ ನೈಷಾದೇ ಪ್ರಯೋಗೇ ಬಲವತ್ತರಃ |
ನಿವರ್ತಸ್ವ ಗೃಹಾನೇವ ಅನುಜ್ಞಾತೋಽಸಿ ನಿತ್ಯಶಃ ॥13॥
ನಿಷಾದಪುತ್ರನೇ, ನೀನು ನನ್ನ ಶಿಷ್ಯನಾಗಿದ್ದೀಯೆ, ಬಾಣಪ್ರಯೋಗದಲ್ಲಿಯೂ ನೀನು ಬಲಿಷ್ಠನಾಗಿದ್ದೀಯೆ, ಮನೆಗೆ ಹಿಂತಿರುಗು. ನಾನು ನಿನಗೆ ಯಾವಾಗಲೂ ಅನುಮತಿ ನೀಡಿದ್ದೇನೆ ಎಂದು ಹೇಳಿದರು.
ವೈಶಂಪಾಯನಃ
ಸ ತು ದ್ರೋಣಸ್ಯ ಶಿರಸಾ ಪಾದೌ ಗೃಹ್ಯ ಪರಂತಪಃ |
ಅರಣ್ಯಮನುಸಂಪ್ರಾಪ್ಯ ಕೃತ್ವಾ ದ್ರೋಣಂ ಮಹೀಮಯಮ್ ॥14॥
ತಸ್ಮಿನ್ನಾಚಾರ್ಯವೃತ್ತಿಂ ಚ ಪರಮಾಮಾಸ್ಥಿತಸ್ತದಾ |
ಇಷ್ವಸ್ತ್ರೇ ಯೋಗಮಾತಸ್ಥೇ ಪರಂ ನಿಯಮಮಾಸ್ಥಿತಃ ॥15॥
ಪರಂತಪನಾದ ಏಕಲವ್ಯನು ದ್ರೋಣರ ಪಾದಗಳಿಗೆ ಶಿರಸಾ ನಮಸ್ಕರಿಸಿ ಅರಣ್ಯಕ್ಕೆ ಹಿಂದಿರುಗಿ ದ್ರೋಣರ ಒಂದು ಮಣ್ಣಿನ ಪ್ರತಿಮೆಯನ್ನು ಮಾಡಿ ಅದರಲ್ಲಿ ಶ್ರೇಷ್ಠವಾದ ಗುರುವೃತ್ತಿಯನ್ನು ಮಾಡಿದನು.
ಸ ತೇನ ತಪಸಾ ಯುಕ್ತೋ ಯೋಗೇನ ಪರಮೇಣ ಚ |
ವಿಮೋಕ್ಷಾದಾನಸಂಧಾನೇ ಲಘುತ್ವಂ ಪರಮಾಪ ಸಃ ॥16॥

ಲಾಘವಂ ಚಾಸ್ತ್ರಯೋಗಂ ಚ ನಚಿರಾತ್ ಪ್ರತ್ಯಪದ್ಯತ |
ಅಥ ದ್ರೋಣಾಭ್ಯನುಜ್ಞಾತಾಃ ಕದಾಚಿತ್ ಕುರುಪಾಂಡವಾಃ |
ತಥೈವ ನಿರ್ಯಯುಃ ಸರ್ವೇ ಮೃಗಯಾಮರಿಮರ್ದನಾಃ ॥17॥
ಅಸ್ತ್ರಗಳಲ್ಲಿ ಮತ್ತು ಬಾಣಪ್ರಯೋಗದಲ್ಲಿ ಸತತವಾಗಿ ಪ್ರಯತ್ನವನ್ನು ಮಾಡುತ್ತಾ, ಆ ಶ್ರೇಷ್ಠವಾದ ಅಭ್ಯಾಸದಿಂದ ಮತ್ತು ತಪಸ್ಸಿನಿಂದ ಕೂಡಿದವನಾಗಿ ಬಾಣವನ್ನು ಬತ್ತಳಿಕೆಯಿಂದ ತೆಗೆದು ಬಿಲ್ಲಿನಲ್ಲಿ ಹೂಡಿ ವಿಮೋಕ್ಷ ಮಾಡುವ ವಿಷಯದಲ್ಲಿ ಬಹಳ ವೇಗವನ್ನು ಸಂಪಾದಿಸಿದನು. ಅಲ್ಪ ಕಾಲದಲ್ಲಿಯೇ ಲಾಘವವನ್ನೂ ಮತ್ತು ಅಸ್ತ್ರಗಳ ಸಿದ್ಧಿಯನ್ನೂ ಪಡೆದನು. ಒಮ್ಮೆ ದ್ರೋಣರ ಅಪ್ಪಣೆಯನ್ನು ಪಡೆದ ಅರಿಮರ್ದನರಾದ ಕುರುಪಾಂಡವರು ಬೇಟೆಯಾಡಲು ಹೊರಟರು.
ತತ್ರೋಪಕರಣಂ ಗೃಹ್ಯ ನರಃ ಕಶ್ಚಿದ್ ಯದೃಚ್ಛಯಾ |
ರಾಜನ್ನನುಜಗಾಮೈಕಃ ಶ್ವಾನಮಾದಾಯ ಪಾಂಡವಾನ್ ॥18॥
ಆಗ ಬೇಟೆಯ ಸಲಕರಣೆಗಳನ್ನು ಮತ್ತು ನಾಯಿಯನ್ನೂ ತೆಗೆದುಕೊಂಡು ಒಬ್ಬ ಅನುಚರನು ಪಾಂಡವರನ್ನು ಹಿಂಬಾಲಿಸಿದನು.
ತೇಷಾಂ ವಿಚರತಾಂ ತತ್ರ ತತ್ತತ್ಕರ್ಮ ಚಿಕೀರ್ಷತಾಮ್ |
ಶ್ವಾ ಚರನ್ ಸ ವನೇ ಮೂಢೋ ನೈಷಾದಿಂ ಪ್ರತಿ ಜಗ್ಮಿವಾನ್ ॥19॥
ಅವರು ಅಲ್ಲಲ್ಲಿ ಸಂಚರಿಸುತ್ತಾ ಬೇಟೆಯಾಡುತ್ತಿರಲು ನಾಯಿಯು ಅಲ್ಲಿ ತಿರುಗಾಡುತ್ತಾ ನಿಷಾದಪುತ್ರನಾದ ಏಕಲವ್ಯನ ಬಳಿ ಹೋಯಿತು.
ಸ ಕೃಷ್ಣಂ ಮಲದಿಗ್ಧಾಂಗಂ ಕೃಷ್ಣಾಜಿನಧರಂ ಕೃಶಮ್ |
ನೈಷಾದಿಂ ಶ್ವಾ ಸಮುದ್ವೀಕ್ಷ್ಯ ಭಷಂಸ್ತಸ್ಥೌ ತದಂತಿಕೇ ॥20॥
ಕಪ್ಪಾಗಿದ್ದು, ಕೃಶನಾಗಿ, ದೇಹದಲ್ಲಿ ಕೊಳೆಯಿದ್ದು ಕೃಷ್ಣಾಜಿನವನ್ನು ಧರಿಸಿದ ಆ ಏಕಲವ್ಯನನ್ನು ನೋಡಿ ನಾಯಿಯು ಅವನ ಸಮೀಪದಲ್ಲಿ ಬೊಗಳುತ್ತಾ ನಿಂತುಕೊಂಡಿತು.
ತಸ್ಯೈಕಲವ್ಯೋ ಭಷತಃ ಶುನಃ ಸಪ್ತ ಶರಾನ್ ಮುಖೇ |
ಲಾಘವಾದರ್ಪಯಾಮಾಸ ಶಬ್ದವೇಧ್ಯಮದರ್ಶಯನ್ |
ಸ ತು ಶ್ವಾ ಶರಪೂರ್ಣಾಸ್ಯಃ ಪಾಂಡವಾನಾಜಗಾಮ ಹ ॥21॥
ಏಕಲವ್ಯನು ತನ್ನ ಶಬ್ದವೇಧಿವಿದ್ಯೆಯನ್ನು ತೋರಿಸುವವನಾಗಿ ಬೊಗಳುತ್ತಿದ್ದ ಆ ನಾಯಿಯ ಬಾಯಿಯಲ್ಲಿ ಏಳು ಬಾಣಗಳನ್ನು ಸೇರಿಸಿದನು. ಆ ನಾಯಿಯು ಬಾಯಿಯಲ್ಲಿ ಬಾಣಗಳನ್ನು ತುಂಬಿಕೊಂಡು ಪಾಂಡವರ ಸಮೀಪಕ್ಕೆ ಬಂದಿತು.
ತಂ ದೃಷ್ಟ್ವಾ ಕೌರವಾ ರಾಜನ್ ವಿಸ್ಮಯಂ ಪರಮಂ ಗತಾ ಃ |
ಲಾಘವಂ ಶಬ್ದವೇಧಿತ್ವಂ ದೃಷ್ಟ್ವಾ ತಂ ಚಿಂತಯಂಸ್ತದಾ ॥22॥
ರಾಜನೇ, ಅದನ್ನು ನೋಡಿ ಬಹಳ ವಿಸ್ಮಯಗೊಂಡ ಪಾಂಡವರು ಬಾಣಪ್ರಯೋಗವನ್ನು ಮಾಡಿದವನ ಲಾಘವವನ್ನು ಮತ್ತು ಶಬ್ದವೇಧಿತ್ವವನ್ನು ಕುರಿತು ಚಿಂತಿಸಿದರು.
ಪ್ರೇಕ್ಷ್ಯ ತಂ ವ್ರೀಳಿತಾಶ್ಚಾಸನ್ ಪ್ರಶಶಂಸುಶ್ಚ ಶಿಕ್ಷಿತಮ್ |
ತಂ ತತೋಽನ್ವೇಷಮಾಣಾಸ್ತೇ ವನೇ ವನಚರೇಶ್ವರಮ್ ॥23॥
ದದೃಶುಃ ಪಾಂಡವಾ ರಾಜನ್ನಸ್ಯಂತಮನಿಶಂ ಶರಾನ್ |
ನ ಚೈನಮಭ್ಯಜಾನಂಸ್ತೇ ತದಾ ವಿಕೃತದರ್ಶನಮ್ |
ಅಥೈನಂ ಪರಿಪಪ್ರಚ್ಛುಃ ಕೋ ಭವಾನ್ ಕಸ್ಯ ಚೇತಿ ಹ ॥24॥
ಅದನ್ನು ನೋಡಿ ಅವರು ನಾಚಿಕೆಗೊಂಡು ಅವನ ವಿದ್ಯೆಯನ್ನು ಹೊಗಳಿದರು. ಅವನನ್ನು ಹುಡುಕುತ್ತಾ ಹೊರಟ ಪಾಂಡವರು ಕಾಡಿನಲ್ಲಿ ಒಂದೇ ಸಮನೆ ಬಾಣಗಳನ್ನು ಬಿಡುತ್ತಿದ್ದಂತಹ ಅವನ ಬಳಿಗೆ ಬಂದರು. ವಿಕೃತದರ್ಶನನಾದ ಅವನನ್ನು ಅವರು ಗುರುತಿಸಲು ಸಾಧ್ಯವಾಗಲಿಲ್ಲ. ಆಗ ಅವರು ಅವನನ್ನು ನೀನು ಯಾರು? ಮತ್ತು ಯಾರ ಮಗ? ಎಂದು ಕೇಳಿದರು.
ಏಕಲವ್ಯಃ
ನಿಷಾದಾಧಿಪತೇರ್ವೀರಾ ಹಿರಣ್ಯಧನುಷಃ ಸುತಮ್ |
ದ್ರೋಣಶಿಷ್ಯಂ ಚ ಮಾಂ ವಿತ್ತ ಧನುರ್ವೇದಕೃತಶ್ರಮಮ್ ॥25॥
ವೀರರೇ, ನಾನು ನಿಷಾದಾಧಿಪತಿಯಾದ ಹಿರಣ್ಯಧನುವಿನ ಪುತ್ರ. ನನ್ನನ್ನು ದ್ರೋಣರ ಶಿಷ್ಯನೆಂದು, ಧನುರ್ವೇದದಲ್ಲಿ ಪರಿಶ್ರಮವುಳ್ಳವನೆಂದು ತಿಳಿಯಿರಿ.
ವೈಶಂಪಾಯನಃ
ತೇ ತಮಾಜ್ಞಾಯ ತತ್ತ್ವೇನ ಪುನರಾಗಮ್ಯ ಪಾಂಡವಾಃ |
ಯಥಾವೃತ್ತಂ ವನೇ ರಾಜನ್ ದ್ರೋಣಾಯಾಚಖ್ಯುರದ್ಭುತಮ್ ॥26॥
ರಾಜನೇ, ಆ ಪಾಂಡವರು ಅವನ ನಿಜಸ್ವರೂಪನ್ನು ತಿಳಿದು ಊರಿಗೆ ಮರಳಿ ಬಂದು ಕಾಡಿನಲ್ಲಿ ನಡೆದ ಅದ್ಭುತವನ್ನು ದ್ರೋಣರಿಗೆ ಹೇಳಿದರು.
ಕೌಂತೇಯಸ್ತ್ವರ್ಜುನೋ ರಾಜನ್ನೇಕಲವ್ಯಮನುಸ್ಮರನ್ |
ರಹೋ ದ್ರೋಣಂ ಸಮಾಗಮ್ಯ ಪ್ರಣಯಾದಿದಮಬ್ರವೀತ್ ॥27॥
ರಾಜನೇ, ಕುಂತಿಯ ಸುತನಾದ ಅರ್ಜುನನು ಏಕಲವ್ಯನನ್ನೇ ಸ್ಮರಿಸುತ್ತಾ ಏಕಾಂತದಲ್ಲಿ ದ್ರೋಣರನ್ನು ಸಂಧಿಸಿ ಪ್ರೀತಿಯಿಂದ ಈ ಮಾತನ್ನು ಆಡಿದನು.
ನನ್ವಹಂ ಪರಿರಭ್ಯೈಕಃ ಪ್ರೀತಿಪೂರ್ವಮಿದಂ ವಚಃ |

ಭವತೋಕ್ತೋ ನ ಮೇ ಶಿಷ್ಯಃ ತ್ವದ್ವಿಶಿಷ್ಟೋ ಭವಿಷ್ಯತಿ ॥28॥
ಅಥ ಕಸ್ಮಾನ್ಮದ್ವಿಶಿಷ್ಟೋ ಲೋಕಾದಪಿ ಚ ವೀರ್ಯವಾನ್ |
ಅಸ್ತ್ಯನ್ಯೋ ಭವತಃ ಶಿಷ್ಯೋ ನಿಷಾದಾಧಿಪತೇಃ ಸುತಃ ॥29॥
ಪೂಜ್ಯರೇ, ನೀವು ನನ್ನನ್ನು ಆಲಿಂಗಿಸಿ ಪ್ರೀತಿಪೂರ್ವಕವಾಗಿ ನಿನಗಿಂತ ಶ್ರೇಷ್ಠನಾದ ನನ್ನ ಶಿಷ್ಯನು ಇರುವುದಿಲ್ಲ ಎಂದು ಹೇಳಿದ್ದಿರಿ. ಹೀಗಿರುವಾಗ ನನಗಿಂತಲೂ ಮತ್ತು ಉಳಿದವರಿಗಿಂತಲೂ ಶ್ರೇಷ್ಠನಾದ, ಪರಾಕ್ರಮಶಾಲಿಯಾದ ನಿಷಾದಾಧಿಪತಿಯ ಪುತ್ರನಾದ ಏಕಲವ್ಯನು ಹೇಗೆ ನಿಮ್ಮ ಶಿಷ್ಯನಾಗಿದ್ದಾನೆ?
ವೈಶಂಪಾಯನಃ
ಮುಹೂರ್ತಮಿವ ತಂ ದ್ರೋಣಶ್ಚಿಂತಯಿತ್ವಾ ವಿನಿಶ್ಚಯಮ್ |
ಸವ್ಯಸಾಚಿನಮಾದಾಯ ನೈಷಾದಿಂ ಪ್ರತಿ ಜಗ್ಮಿವಾನ್ ॥30॥
ದ್ರೋಣರು ಒಂದು ಮಹೂರ್ತಕಾಲ ಚಿಂತಿಸಿ ಏನು ಮಾಡಬೇಕೆಂದು ನಿಶ್ಚಯಿಸಿ ಅರ್ಜುನನನ್ನು ಕರೆದುಕೊಂಡು ಏಕಲವ್ಯನ ಬಳಿಗೆ ಹೋದರು.
ದದರ್ಶ ಮಲದಿಗ್ಧಾಂಗಂ ಜಟಿಲಂ ಚೀರವಾಸಸಮ್ |
ಏಕಲವ್ಯಂ ಧನುಷ್ಪಾಣಿಮಸ್ಯಂತಮನಿಶಂ ಶರಾನ್ ॥31॥
ಕೊಳೆಯಿಂದ ಕೂಡಿದ ಶರೀರವುಳ್ಳವನಾಗಿ, ಜಟಿಲನಾಗಿ, ಚೀರವಸ್ತ್ರವನ್ನುಟ್ಟು ಕೈಯಲ್ಲಿ ಧನುಸ್ಸನ್ನು ಹಿಡಿದು ಸತತವಾಗಿ ಬಾಣಗಳನ್ನು ಪ್ರಯೋಗಿಸುವ ಏಕಲವ್ಯನನ್ನು ನೋಡಿದರು.
ಏಕಲವ್ಯಸ್ತು ತಂ ದೃಷ್ಟ್ವಾ ದ್ರೋಣಮಾಯಾಂತಮಂತಿಕಾತ್ |
ಅಭಿಗಮ್ಯೋಪಸಂಗೃಹ್ಯ ಜಗಾಮ ಶಿರಸಾ ಮಹೀಮ್ ॥32॥
ಏಕಲವ್ಯನಾದರೋ, ಸಮೀಪಕ್ಕೆ ಬಂದ ದ್ರೋಣರನ್ನು ನೋಡಿ ಬೇಗ ಎದುರಿಗೆ ಬಂದು, ಭೂಮಿಯ ಮೇಲೆ ಬಿದ್ದು ಶಿರಸಾ ನಮಸ್ಕಾರವನ್ನು ಮಾಡಿದನು.
ಪೂಜಯಿತ್ವಾ ತತೋ ದ್ರೋಣಂ ವಿಧಿವತ್ ಸ ನಿಷಾದಜಃ |
ನಿವೇದ್ಯ ಶಿಷ್ಯಮಾತ್ಮಾನಂ ತಸ್ಥೌ ಪ್ರಾಂಜಲಿರಗ್ರತಃ ॥33॥
ಏಕಲವ್ಯನು ದ್ರೋಣರಿಗೆ ವಿಧಿವತ್ತಾಗಿ ಪೂಜೆಯನ್ನು ಸಲ್ಲಿಸಿ ತನ್ನನ್ನು ಶಿಷ್ಯನೆಂದು ನಿವೇದಿಸಿಕೊಂಡು ಕೈಗಳನ್ನು ಮುಗಿದು ಎದುರಿನಲ್ಲಿ ನಿಂತನು.
ತತೋ ದ್ರೋಣೋಽಬ್ರವೀದ್ ರಾಜನ್ ಏಕಲವ್ಯಮಿದಂ ವಚಃ |
ಯದಿ ಶಿಷ್ಯೋಽಸಿ ಮೇ ತಾತ ವೇತನಂ ದೀಯತಾಮಿತಿ ॥34॥
ರಾಜನೇ, ಆಗ ದ್ರೋಣರು ಏಕಲವ್ಯನನ್ನು ಕುರಿತು ನೀನು ನನ್ನ ಶಿಷ್ಯನಾದರೆ ಗುರುದಕ್ಷಿಣೆಯನ್ನು ಕೊಡಬೇಕು ಎಂದು ಹೇಳಿದರು.
ಏಕಲವ್ಯಸ್ತು ತಚ್ಛ್ರುತ್ವಾ ಪ್ರೀಯಮಾಣೋಽಬ್ರವೀದಿದಮ್ |
ಕಿಂ ಪ್ರಯಚ್ಛಾಮಿ ಭಗವಾನಾಜ್ಞಾಪಯತು ಮಾಂ ಗುರುಃ |
ನ ಹಿ ಕಿಂಚಿದದೇಯಂ ಮೇ ಗುರವೇ ಬ್ರಹ್ಮವಿತ್ತಮ ॥35॥
ಏಕಲವ್ಯನು ಅದನ್ನು ಕೇಳಿ ಬಹಳ ಸಂತೋಷಗೊಂಡು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರೇ, ನಾನು ಏನು ಕೊಡಬೇಕೆಂದು ಪೂಜ್ಯಗುರುಗಳಾದ ತಾವೇ ತಿಳಿಸಬೇಕು? ತಮಗೆ ಕೊಡಲಾರದುದು ನನ್ನ ಬಳಿ ಏನೂ ಇಲ್ಲ ಎಂದು ಹೇಳಿದನು.
ತಮಬ್ರವೀತ್ ತ್ವಯಾಽಂಗುಷ್ಠೋ ದಕ್ಷಿಣೋ ದೀಯತಾಮಿತಿ |
ಏಕಲವ್ಯಸ್ತು ತಚ್ಛ್ರುತ್ವಾ ವಚೋ ದ್ರೋಣಸ್ಯ ದಾರುಣಮ್ ॥36॥
ಪ್ರತಿಜ್ಞಾಮಾತ್ಮನೋ ರಕ್ಷನ್ ಸತ್ಯೇ ಚ ನಿರತಃ ಸದಾ |
ತಥೈವ ಹೃಷ್ಟವದನಃ ತಥೈವಾದೀನಮಾನಸಃ ॥37॥
ಆಗ ದ್ರೋಣರು ನಿನ್ನ ಬಲಗೈನ ಅಂಗುಷ್ಠವನ್ನು ಕೊಡು ಎಂದು ಹೇಳಿದರು. ಏಕಲವ್ಯನು ದ್ರೋಣರ ದಾರುಣವಾದ ಆ ವಚನವನ್ನು ಕೇಳಿ ತನ್ನ ಪ್ರತಿಜ್ಞೆಯನ್ನು ರಕ್ಷಿಸಿಕೊಂಡು ಸತ್ಯದಲ್ಲೇ ಇರಲು ಬಯಸಿ ಮನಸ್ಸಿನಲ್ಲಿ ದೈನ್ಯವನ್ನು ತಂದುಕೊಳ್ಳದೆ ಸಂತೋಷದಿಂದ ಕೂಡಿದ ಮುಖವುಳ್ಳವನಾಗಿದ್ದನು.
ಸತ್ಯಸಂಧಂ ತಂ ನೈಷಾದಿಂ ದೃಷ್ಟ್ವಾ ದ್ರೋಣೋಽಬ್ರವೀದಿದಮ್ |
ಏವಂ ಕರ್ತವ್ಯಮಿತಿ ವೈ ಏಕಲವ್ಯಮಭಾಷತ |
ಛಿತ್ತ್ವಾಽವಿಚಾರ್ಯ ತಂ ಪ್ರಾದಾದ್ ದ್ರೋಣಾಯಾಂಗುಷ್ಠಮಾತ್ಮನಃ ॥
ಸತ್ಯಸಂಧನಾದ, ನಿಷಾದಪುತ್ರನಾದ ಏಕಲವ್ಯನನ್ನು ನೋಡಿ ದ್ರೋಣರು ಹಾಗೆಯೇ ಮಾಡಬೇಕು ಎಂದು ಹೇಳಿದರು. ಏಕಲವ್ಯನು ಏನೂ ವಿಚಾರ ಮಾಡದೆ ತನ್ನ ದಕ್ಷಿಣಾಂಗುಷ್ಠವನ್ನು ಕತ್ತರಿಸಿ ದ್ರೋಣರಿಗೆ ಅರ್ಪಿಸಿದನು.
ಅತಃ ಪರಂ ತು ನೈಷಾದಿರಂಗುಲೀಭಿರಕರ್ಷತ |
ನ ತಥಾ ಸ ತು ಶೀಘ್ರೋಽಭೂದ್ ಯಥಾ ಪೂರ್ವಂ ನರಾಧಿಪ ॥
ಅಲ್ಲಿಂದ ಮುಂದಕ್ಕೆ ಏಕಲವ್ಯನು ತನ್ನ ಉಳಿದ ಬೆರಳುಗಳಿಂದಲೇ ಹೆದೆಯನ್ನು ಎಳೆಯುತ್ತಿದ್ದನು. ಆದರೆ ರಾಜನೇ, ಮೊದಲಿನ ಕ್ಷಿಪ್ರತೆಯು ಇರಲಿಲ್ಲ.
ತತೋಽರ್ಜುನಃ ಪ್ರೀತಮನಾ ಬಭೂವ ವಿಗತಜ್ವರಃ |
ದ್ರೋಣಶ್ಚ ಸತ್ಯವಾಗಾಸೀನ್ನಾಧಿಕೋಽನ್ಯೋಽರ್ಜುನಾದಭೂತ್ ॥40॥
ಅನಂತರ ಅರ್ಜುನನು ಸಂತೋಷಗೊಂಡು ತನ್ನ ಮನೋಜ್ವರದಿಂದ ಮುಕ್ತನಾದನು. ದ್ರೋಣರೂ ಸತ್ಯವಚನರಾದರು.

ಅರ್ಜುನನಿಗಿಂತ ಶ್ರೇಷ್ಠರಾದ ದ್ರೋಣರ ಶಿಷ್ಯರು ಯಾರೂ ಇರಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕೋನಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ
ಆದಿಪರ್ವ - ಭಾಗ-3
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-15
ದ್ರೋಣೋಽಥ ತಾನವದದ್ ಯೋ ಮದಿಷ್ಟಂ
ಕರ್ತುಂ ಪ್ರತಿಜ್ಞಾಂ ಪ್ರಥಮಂ ಕರೋತಿ |
ತಂ ಧನ್ವಿನಾಂ ಪ್ರವರಂ ಸಾಧಯಿಷ್ಯ
ಇತ್ಯುರ್ಜನಸ್ತಾಮಕರೋತ್ ಪ್ರತಿಜ್ಞಾಮ್ ॥35॥
ದ್ರೋಣ ಕುಮಾರರಿಗೆ ಹೇಳಿದ, `ಯಾರು ಮೊದಲಿಗೆ ನನ್ನ ಇಷ್ಟವನ್ನು ಸಾಧಿಸಿ ಕೊಡಲು ಪ್ರತಿಜ್ಞೆ ಮಾಡುವನೋ ಅವನನ್ನು ನಾನು ಧನುರ್ಧಾರಿಗಳಲ್ಲಿ ಮೊದಲಿಗನನ್ನಾಗಿ ಮಾಡುವೆನು' ಎಂದು. ಆಗ ಅರ್ಜುನ ಆ ಪ್ರತಿಜ್ಞೆಯನ್ನು ಮಾಡಿದ.
ಉನ್ಮಾದನಾದೀನಿ ಸ ವೇದ ಕೃಷ್ಣಾದಸ್ತ್ರಾಣ್ಯ-
ನಾಪತ್ಸು ನ ತಾನಿ ಮುಂಚೇತ್ |
ಇತ್ಯಾಜ್ಞಯಾ ಕೇಶವಸ್ಯಾಪರಾಣಿ
ಪ್ರಯೋಗಯೋಗ್ಯಾನಿ ಸದೇಚ್ಛತಿ ಸ್ಮ ॥36॥
ಅರ್ಜುನ ಉನ್ಮಾದನಾದಿ ಅಸ್ತ್ರಗಳನ್ನು ಶ್ರೀಕೃಷ್ಣನಿಂದಲೆ ತಿಳಿದಿದ್ದ. ಆದರೆ ಅವುಗಳನ್ನು ಆಪತ್ತಿನಲ್ಲಿ ಹೊರತು ಬೇರೆ ಕಾಲದಲ್ಲಿ ಪ್ರಯೋಗಿಸುವಂತಿಲ್ಲ. ಅದರಿಂದ ಕೃಷ್ಣನ ಅನುಮತಿಯಿಂದಲೆ ಸದಾ ಪ್ರಯೋಗಕ್ಕೆ ಯೋಗ್ಯವಾದ ಅಸ್ತ್ರಗಳನ್ನು ದ್ರೋಣನಿಂದ ಕಲಿಯಲು ಬಯಸಿದ.
ಭೀಷ್ಮಾದಿಭಿರ್ಭವಿತಾ ಸಂಗರೋ ನ-
ಸ್ತದಾ ನಾಹಂ ಗುರುಭಿರ್ನಿತ್ಯಯೋದ್ಧಾ |
ಭವೇಯಮೇಕಃ ಫಲ್ಗುನೋಽಸ್ತ್ರಜ್ಞ ಏಷಾಂ
ನಿವಾರಕಶ್ಚೇನ್ಮಮ ಧರ್ಮಲಾಭಃ ॥37॥
ಭೀಮ ಪ್ರತಿಜ್ಞೆಯನ್ನು ಮಾಡಲಿಲ್ಲ. ಏಕೆಂದರೆ, `ಭೀಷ್ಮಾದಿಗಳೊಡನೆ ನಮಗೆ ಯುದ್ಧವಾಗಲಿದೆ. ಆಗ ನಾನು ಆ ಹಿರಿಯರೊಡನೆ ಎಂದೂ ಯುದ್ಧಮಾಡಲಾರೆನು. ಆಗ ಅಸ್ತ್ರಜ್ಞನಾದ ಒಬ್ಬ ಅರ್ಜುನ ಅವರನ್ನು ಇದಿರಿಸುವವನಾಗಿದ್ದರೆ ನನಗೆ ಪುಣ್ಯ ಲಾಭವಾಗುವುದು'.
ನ ಬುದ್ಧಿಪೂರ್ವಂ ವರ ಇಂದಿರಾಪತೇ-
ರನ್ಯತ್ರ ಮೇ ಗ್ರಾಹ್ಯ ಇತಶ್ಚ ಜಿಷ್ಣುಃ |
ಕರೋತು ಗುರ್ವರ್ಥಮಿತಿ ಸ್ಮ ಚಿಂತಯನ್
ಭೀಮಃ ಪ್ರತಿಜ್ಞಾಂ ನ ಚಕಾರ ತತ್ರ ॥38॥
ಶ್ರೀಹರಿಯಿಂದ ಹೊರತು ಬೇರೆಯವರಿಂದ ವರವೂ ನನಗೆ ಬುದ್ಧಿಪೂರ್ವಕ ಸ್ವೀಕಾರಾರ್ಹವಲ್ಲ. ಅದರಿಂದಲೂ ಅರ್ಜುನನೇ ಗುರುವಿಗಾಗಿ ಪ್ರತಿಜ್ಞೆ ಮಾಡಲಿ ಎಂದು ಬಗೆದು ಭೀಮ ಆಗ ಪ್ರತಿಜ್ಞೆ ಮಾಡಲಿಲ್ಲ.
ತತಃಪ್ರೇರಿತೇನಾರ್ಜುನೇನ ಪ್ರತಿಜ್ಞಾ ಕೃತಾ ಯದಾ ವಿಪ್ರವರಸ್ತತಃ ಪರಮ್ |
ಸ್ನೇಹಂ ನಿತಾಂತಂ ಸುರರಾಜ ಸೂನೌ ಕೃತ್ವಾ ಮಹಾಸ್ತ್ರಾಣಿ ದದೌ ಸ ತಸ್ಯ ॥
ಭೀಮನಿಂದ ಪ್ರೇರಿತನಾಗಿ ಅರ್ಜುನ ಪ್ರತಿಜ್ಞೆ ಮಾಡಿದಾಗ ಬ್ರಾಹ್ಮಣೋತ್ತಮನಾದ ದ್ರೋಣ ಅರ್ಜುನನಲ್ಲಿ ಹೆಚ್ಚು ಪ್ರೀತಿ ಮಾಡಿ ಅವನಿಗೆ ಮಹಾ ಅಸ್ತ್ರಗಳನ್ನು ಉಪದೇಶಿಸಿದ.
ಸ ಪಕ್ಷಪಾತಂ ಚ ಚಕಾರ ತಸ್ಮಿನ್
ಕರೋತಿ ಚಾಸ್ಯೋರುತರಾಂ ಪ್ರಶಂಸಾಮ್ |
ರಹಸ್ಯವಿದ್ಯಾಶ್ಚ ದದಾತಿ ತಸ್ಯ
ನಾನ್ಯಸ್ಯ ಕಸ್ಯಾಪಿ ತಥಾ ಕಥಂಚಿತ್ ॥40॥
ಅಂದಿನಿಂದ ದ್ರೋಣ ಅರ್ಜುನನ ಪಕ್ಷಪಾತಿಯಾದ. ಅವನ ಪ್ರಶಂಸೆಯನ್ನೇ ಹೆಚ್ಚಾಗಿ ಮಾಡಿದ. ಗೋಪ್ಯವಾದ ಮಂತ್ರಗಳನ್ನು ಅವನಿಗೇ ಉಪದೇಶಿಸಿದ. ಹಾಗೆ ಬೇರೆ ಯಾರಿಗೂ ಯಾವ ರೀತಿಯಲ್ಲಿಯೂ ಮಾಡಲಿಲ್ಲ.
ಭೀಮಃ ಸಮಸ್ತಂ ಪ್ರತಿಭಾ ಬಲೇನ
ಜಾನನ್ ಸ್ನೇಹಂ ತ್ವದ್ವಿತೀಯಂ ಕನಿಷ್ಠೇ |
ದ್ರೋಣಸ್ಯ ಕೃತ್ವಾ ಸಕಲಾಸ್ತ್ರವೇದಿನಂ
ಕರ್ತುಂ ಪಾರ್ಥಂ ನಾರ್ಜುನವಚ್ಚಕಾರ ॥41॥
ಎಲ್ಲ ಅಸ್ತ್ರವನ್ನೂ ಪ್ರತಿಭಾ ಬಲದಿಂದಲೆ ತಿಳಿದಿದ್ದರಿಂದಲೂ ಭೀಮ ತಮ್ಮನಾದ ಅರ್ಜುನನಲ್ಲಿ ದ್ರೋಣನಿಗೆ ಅನುಪಮ ಪ್ರೀತಿ

ಉಂಟುಮಾಡಿ ಅವನನ್ನು ಸರ್ವಾಸ್ತ್ರಕೋವಿದನನ್ನಾಗಿ ಮಾಡುವ ಉದ್ದೇಶದಿಂದ ಅರ್ಜುನನಂತೆ ತಾನು ಪ್ರತಿಜ್ಞೆ ಮಾಡಲಿಲ್ಲ.
ನೈವಾತಿಯತ್ನೇನ ದದರ್ಶ ಲಕ್ಷ್ಯಂ
ಶುಶ್ರೂಷಾಯಾಂ ಪಾರ್ಥಮಗ್ರೇ ಕರೋತಿ |
ಸ್ವಬಾಹುವೀರ್ಯಾದ್ಭಗವತ್ಪ್ರಸಾದಾ-
ನ್ನಿಹನ್ಮಿ ಶತ್ರೂನ್ ಕಿಮನೇನ ಚೇತಿ ॥42॥
ಭೀಮ ಬಹುಪ್ರಯತ್ನದಿಂದ ಲಕ್ಷ್ಯವನ್ನು ನೋಡುತ್ತಲೂ ಇರಲಿಲ್ಲ. ಗುರುಶುಶ್ರೂಷೆಯಲ್ಲಿಯೂ ಅರ್ಜುನನನ್ನು ಮುಂದೆ ಮಾಡುತ್ತಿದ್ದ. `ನಾನು ನನ್ನ ಬಾಹುಬಲದಿಂದಲೂ ಗುರ್ವನುಗ್ರಹದಿಂದಲೂ ಶತ್ರುಗಳನ್ನು ಕೊಲ್ಲುವೆ. ಪ್ರತಿಜ್ಞೆ ಮಾಡಿ ಅಸ್ತ್ರೋಪದೇಶ ಪಡೆಯುವರಿಂದೇನು?' ಎಂದು.
ತದಾ ಸಮೀಯುಃ ಸಕಲಾಃ ಕ್ಷಿತೀಶ
ಪುತ್ರಾ ದ್ರೋಣಾತ್ ಸಕಲಾಸ್ತ್ರಣ್ಯವಾಪ್ತುಮ್ |
ದದೌ ಸ ತೇಷಾಂ ಪರಮಾಸ್ತ್ರಣಿ ವಿಪ್ರೋ
ರಾಮಾದವಾಪ್ತಾನ್ಯಗತಾನಿ ಚಾನ್ಯೈಃ ॥43॥
ಆಗ ಎಲ್ಲ ರಾಜಕುಮಾರರೂ ದ್ರೋಣನಿಂದ ಸಕಲ ಅಸ್ತ್ರಗಳನ್ನೂ ಕಲಿಯಲು ಬಂದರು. ದ್ರೋಣ ಪರಶುರಾಮರಿಂದ ತಾನು ತಿಳಿದಿದ್ದ, ಅನ್ಯರು ತಿಳಿಯದಿದ್ದ ಉತ್ತಮ ಅಸ್ತ್ರಗಳನ್ನು ಅವರಿಗೆ ಕಲಿಸಿದ.
ಅಸ್ತ್ರಣಿ ಚಿತ್ರಾಣಿ ಮಹಾಂತಿ ದಿವ್ಯಾ
ನ್ಯಸ್ಯೈರ್ನೃಪೈರ್ಮನಸಾಪ್ಯಸ್ಮೃತಾನಿ |
ಅವಾಪ್ಯ ಸರ್ವೇ ತನಯಾ ನೃಪಾಣಾಂ
ಶಕ್ತಾ ಬಭೂವುರ್ನ ಯಥೈವ ಪೂರ್ವೇ ॥44॥
ಬೇರೆ ರಾಜರುಗಳಿಂದ ಮನಸ್ಸಿನಲ್ಲಿಯೂ ಚಿಂತಿಸಲಾಗದಿದ್ದ ವಿಚಿತ್ರ ಮಹಾ ದಿವ್ಯಾಸ್ತ್ರಗಳನ್ನು ಪಡೆದು ಎಲ್ಲ ರಾಜಕುಮಾರರು ಹಿಂದಿನ ರಾಜರುಗಳಂತೆಯೆ ಆಗದೆ ಅವರಿಗಿಂತಲೂ ಹೆಚ್ಚು ಸಮರ್ಥರಾದರು.
ನೈತಾದೃಶಾಃ ಪೂರ್ವಮಾಸನ್ನರೇಂದ್ರಾ
ಅಸ್ತ್ರೇ ಬಲೇ ಸರ್ವ ವಿದ್ಯಾಸು ಚೈವ |
ದೌಷ್ಯಂತಿ ಮಾಂಧಾತೃಮರುತ್ತ ಪೂರ್ವಾ-
ಶ್ಚೈತತ್ಸಮಾ ನಾಸುರುದಾರವೀರ್ಯಾಃ ॥45॥
ಹಿಂದೆ ಎಂದೂ ಅಸ್ತ್ರದಲ್ಲಿ ಬಲದಲ್ಲಿ ಸಕಲ ವಿದ್ಯೆಗಳಲ್ಲಿ ಇಂಥ ರಾಜರೆ ಇರಲಿಲ್ಲ. ಮಹಾಬಲಶಾಲಿಗಳೆನಿಸಿದ್ದ ಭರತ ಮಾಂಧಾತೃ ಮರುತ್ತ ಮುಂತಾದವರೂ ಈ ರಾಜಕುಮಾರರಿಗೆ ಸಮಾನರಾಗಿರಲಿಲ್ಲ.
*****

## ನೂರ ಮೂವತ್ತೆರಡನೆಯ ಅಧ್ಯಾಯ

(ದ್ರೋಣರಿಂದ ಅರ್ಜುನನ ಪರೀಕ್ಷೆ. ಅರ್ಜುನನ ಅತಿಶಯ. ಅರ್ಜುನನಿಂದ ಲಕ್ಷ್ಯವೇಧ. ಬ್ರಹ್ಮಶಿರಸ್ ಅಸ್ತ್ರದ ಪ್ರಾಪ್ತಿ.)
ವೈಶಂಪಾಯನಃ
ದ್ರೋಣಸ್ಯ ತು ತದಾ ಶಿಷ್ಯೌ ಗದಾಯುದ್ಧೇ ವಿಶೇಷತಃ |
ದುರ್ಯೋಧನಶ್ಚ ಭೀಮಶ್ಚ ಸದಾ ಸನ್ನದ್ಧಮಾನಸೌ ॥1॥
ದ್ರೋಣರಿಗೆ ಗದಾಯುದ್ಧದಲ್ಲಿ ವಿಶೇಷವಾಗಿ ಮನಸ್ಸಿನಲ್ಲಿ ಸನ್ನದ್ಧರಾದ ದುರ್ಯೋಧನ ಮತ್ತು ಭೀಮ ಇಬ್ಬರು ಶಿಷ್ಯರು.
ಅಶ್ವತ್ಥಾಮಾ ಮಹಾಸ್ತ್ರೇಷು ಸರ್ವೇಷ್ವಭ್ಯಧಿಕೋಽಭವತ್ |
ಯುಧಿಷ್ಠಿರೋ ರಥಶ್ರೇಷ್ಠಃ ಸರ್ವೇಷು ಚ ಧನಂಜಯಃ |
ತಥಾಽತಿ ಪುರುಷಾನನ್ಯಾನ್ ಯಮಜಾವಸಿಚರ್ಮಣಿ ॥2॥
ಮಹಾಸ್ತ್ರಗಳಲ್ಲಿ ಅಶ್ವತ್ಥಾಮರು ಸರ್ವಶ್ರೇಷ್ಠರಾದರು. ರಥಯುದ್ಧದಲ್ಲಿ ಯುಧಿಷ್ಠಿರನು ಶ್ರೇಷ್ಠನಾದನು. ಎಲ್ಲ ವಿದ್ಯೆಗಳಲ್ಲಿಯೂ ಅರ್ಜುನನು ಶ್ರೇಷ್ಠನಾದನು. ಖಡ್ಗಯುದ್ಧದಲ್ಲಿ ನಕುಲ, ಸಹದೇವರು ಉಳಿದವರನ್ನು ಮೀರಿಸಿದರು.
ಪ್ರಥಿತಃ ಸಾಗರಾಂತಾಯಾಂ ರಥಯೂಥಪಯೂಥಪಃ |
ಯುದ್ಧಯೋಗಬಲೋತ್ಸಾಹೈಃ ಸರ್ವಾಸ್ತ್ರೇಷು ಚ ನಿಷ್ಠಿತಃ |
ಅಸ್ತ್ರೇ ಗುರ್ವನುರಾಗೇ ಚ ವಿಶಿಷ್ಟೋಽಭವದರ್ಜುನಃ ॥3॥
ಅರ್ಜುನನು ಸಾಗರಾಂತವಾದ ಭೂಮಿಯಲ್ಲಿ ರಥಯೂಥಪ- ಯೂಥಪನೆಂದು ಪ್ರಖ್ಯಾತನಾದನು. ಯುದ್ಧಯೋಗ, ಬಲ, ಉತ್ಸಾಹಗಳಿಂದ ಯಾವಾಗಲೂ ಅಸ್ತ್ರವಿದ್ಯೆಯಲ್ಲಿ ನಿರತನಾಗಿ ಗುರುಗಳ ಅನುಗ್ರಹವನ್ನು ಸಂಪಾದಿಸಿ, ಅರ್ಜುನನು ವಿಶಿಷ್ಟನಾದನು.

ತುಲ್ಯೇಷ್ವಸ್ತ್ರೋಪದೇಶೇಷು ಸೌಷ್ಠವೇಷು ಚ ವೀರ್ಯವಾನ್ |
ಏಕಃ ಸರ್ವಕುಮಾರಾಣಾಂ ಸ ಬಭೂವಾರ್ಜುನೋಽಧಿಕಃ ॥4॥
ದ್ರೋಣರು ಎಲ್ಲಾ ಕುಮಾರರಿಗೂ ಒಂದೇ ರೀತಿಯ ಅಸ್ತ್ರೋಪದೇಶ ಮತ್ತು ಕೌಶಲವನ್ನು ಹೇಳಿಕೊಟ್ಟರೂ, ಅರ್ಜುನನೊಬ್ಬನು ಮಾತ್ರ ಎಲ್ಲಾ ಕುಮಾರರನ್ನೂ ಮೀರಿಸಿದನು.
ಪ್ರಾಣಾಧಿಕಂ ಭೀಮಸೇನಂ ಕೃತವಿದ್ಯಂ ಧನಂಜಯಮ್ |

ಧಾರ್ತರಾಷ್ಟ್ರಾ ದುರಾತ್ಮಾನೋ ನಾಮೃಷ್ಯಂತ ಪರಂತಪ ॥5॥
ಪರಂತಪನೇ, ಅಧಿಕಪ್ರಾಣಬಲವುಳ್ಳ ಭೀಮಸೇನನನ್ನು ಮತ್ತು ವಿದ್ಯಾವಿಶಾರದನಾದ ಅರ್ಜುನನ್ನು ನೋಡಿ, ದುಷ್ಟರಾದ ಧೃತರಾಷ್ಟ್ರಪುತ್ರರು ಸಹಿಸಲಿಲ್ಲ.
ತಾಂಸ್ತು ಸರ್ವಾನ್ ಸಮಾನೀಯ ಸರ್ವವಿದ್ಯಾಸು ನಿಷ್ಠಿತಾನ್ |
ದ್ರೋಣಃ ಪ್ರಹರಣಜ್ಞಾನೇ ಜಿಜ್ಞಾಸುಃ ಪುರುಷರ್ಷಭಾನ್ ॥6॥
ಕೃತ್ರಿಮಂ ಭಾಸಮಾರೋಪ್ಯ ವೃಕ್ಷಾಗ್ರೇ ಶಿಲ್ಪಿಭಿಃ ಕೃತಮ್ |
ಅವಿಜ್ಞಾತಂ ಕುಮಾರಾಣಾಂ ಲಕ್ಷ್ಯಭೂತಮುಪಾದಿಶತ್ ॥7॥
ದ್ರೋಣರು ವಿವಿಧ ವಿದ್ಯೆಗಳಲ್ಲಿ ಶಿಕ್ಷಣವನ್ನು ಪಡೆದ ಆ ಕುಮಾರರ ಕೌಶಲವನ್ನು ತಿಳಿಯುವ ದೃಷ್ಟಿಯಿಂದ ಅವರೆಲ್ಲರನ್ನೂ ಕರೆದು ಒಂದು ವೃಕ್ಷದ ಮೇಲೆ ಕುಮಾರರಿಗೆ ತಿಳಿಯದಂತೆ ಶಿಲ್ಪಿಗಳು ಮಾಡಿದ ಒಂದು ಕೃತ್ರಿಮವಾದ ಪಕ್ಷಿಯನ್ನಿಟ್ಟು ಇದು ನಿಮಗೆ ಲಕ್ಷ್ಯವಾದುದು ಎಂದು ಕುಮಾರರಿಗೆ ಆದೇಶವನ್ನು ನೀಡಿದರು.
ದ್ರೋಣಃ
ಶೀಘ್ರಂ ಭವಂತಃ ಸರ್ವೇ ವೈ ಧನೂಂಷ್ಯಾದಾಯ ಸತ್ವರಾಃ |
ಭಾಸಮೇತಂ ಸಮುದ್ದಿಶ್ಯ ತಿಷ್ಠಂತು ಸಹಿತೇಷವಃ ॥8॥
ಮದ್ವಾಕ್ಯಸಮಕಾಲಂ ಚ ಶಿರೋऽಸ್ಯ ವಿನಿಕೃತ್ಯತಾಮ್ |
ಏಕೈಕಶೋ ನಿಯೋಕ್ಷ್ಯಾಮಿ ತಥಾ ಕುರುತ ಪುತ್ರಕಾಃ ॥9॥
ನೀವೆಲ್ಲರೂ ಬೇಗ ಧನುಸ್ಸುಗಳನ್ನು ತೆಗೆದುಕೊಂಡು ಬಂದು ಬಾಣಗಳನ್ನು ಹಿಡಿದುಕೊಂಡು ಈ ಪಕ್ಷಿಯ ಮೇಲೆ ಗುರಿಯಿಟ್ಟು ನಿಲ್ಲಬೇಕು. ನಾನು ಹೇಳಿದ ತಕ್ಷಣ ಬಾಣಪ್ರಯೋಗ ಮಾಡಿ ಅದರ ಶಿರಸ್ಸನ್ನು ಕತ್ತರಿಸಬೇಕು. ಪುತ್ರರೇ, ನಿಮ್ಮನ್ನು ಒಬ್ಬೊಬ್ಬರಾಗಿ ಕರೆಯುವೆನು. ಹಾಗೆ ಮಾಡಿ.
ವೈಶಂಪಾಯನಃ
ತತೋ ಯುಧಿಷ್ಠಿರಂ ಪೂರ್ವಮುವಾಚಾಂಗಿರಸಾಂ ವರಃ |
ಸಂಧತ್ಸ್ವ ಬಾಣಂ ದುರ್ಧರ್ಷ ಮದ್ವಾಕ್ಯಾಂತೇ ವಿಮುಚ್ಯತಾಮ್ ॥10॥
ಅನಂತರ ಆಂಗಿರಸಪ್ರವರರಾದ ದ್ರೋಣರು ಮೊದಲು ಯುಧಿಷ್ಠಿರನನ್ನು ಕರೆದು ದುರ್ಧರ್ಷನೇ ಬಾಣವನ್ನು ಹೂಡಿ ನಿಲ್ಲು. ನಾನು ಹೇಳಿದ ತಕ್ಷಣ ಬಾಣ ಪ್ರಯೋಗವನ್ನು ಮಾಡು ಎಂದು ಹೇಳಿದರು.
ತತೋ ಯುಧಿಷ್ಠಿರಃ ಪೂರ್ವಂ ಧನುರ್ಗೃಹ್ಯ ಮಹಾಸ್ವನಮ್ |
ತಸ್ಥೌ ಭಾಸಂ ಸಮುದ್ದಿಶ್ಯ ಗುರುವಾಕ್ಯಪ್ರಚೋದಿತಃ ॥11॥
ಆಗ ಮೊದಲು ಯುಧಿಷ್ಠಿರನು ಗುರುವಾಕ್ಯಪ್ರಚೋದಿತನಾಗಿ ಮಹಾ ಝೇಂಕಾರವಿರುವ ಧನುಸ್ಸನ್ನು ಹಿಡಿದುಕೊಂಡು ಪಕ್ಷಿಯ ಮೇಲೆ ಗುರಿಯಿಟ್ಟು ನಿಂತನು.
ತತೋ ವಿತತಧನ್ವಾನಂ ದ್ರೋಣಸ್ತಂ ಕುರುನಂದನಮ್ |
ಸ ಮುಹೂರ್ತಾದುವಾಚೇದಂ ವಚನಂ ಭರತರ್ಷಭ ॥12॥
ಭರತರ್ಷಭನೇ, ಧನುಸ್ಸನ್ನು ಬಗ್ಗಿಸಿ, ನಿಂತ ಕುರುನಂದನನನ್ನು ಕುರಿತು, ಒಂದು ಮುಹೂರ್ತವಾದ ಬಳಿಕ ದ್ರೋಣರು ಹೀಗೆ ಹೇಳಿದರು.
ಪಶ್ಯಸ್ಯೇತಂ ದ್ರುಮಾಗ್ರಸ್ಥಂ ಭಾಸಂ ಸುರವರಾತ್ಮಜ |
ಪಶ್ಯಾಮೀತ್ಯೇವ ಚಾಚಾರ್ಯಂ ಪ್ರತ್ಯುವಾಚ ಯುಧಿಷ್ಠಿರಃ ॥13॥
ಸುರವರಾತ್ಮಜನೇ, ವೃಕ್ಷದ ಮೇಲಿರುವ ಪಕ್ಷಿಯು ಕಾಣುತ್ತಿದೆಯೇ? ಯುಧಿಷ್ಠಿರನು ಕಾಣುತ್ತಿದೆಯೆಂದು ಆಚಾರ್ಯರಿಗೆ ಪ್ರತ್ಯುತ್ತರವನ್ನು ಕೊಟ್ಟನು.
ಸ ಮುಹೂರ್ತಾದಿವ ಪುನಃ ದ್ರೋಣಸ್ತಂ ಪ್ರತ್ಯಭಾಷತ |
ಪಾರ್ಥ ವೃಕ್ಷಮಿಮಂ ಮಾಂ ಚ ಭ್ರಾತ ೄ ನ್ ವಾऽಪಿ ಪ್ರಪಶ್ಯಸಿ ॥
ದ್ರೋಣರು ಪುನಃ ಮುಹೂರ್ತವಾದ ಮೇಲೆ ಅವನನ್ನು ಕುರಿತು ಪಾರ್ಥನೇ ಈ ವೃಕ್ಷವನ್ನು ನನ್ನನ್ನು, ಮತ್ತು ತಮ್ಮಂದಿರನ್ನು ಕಾಣುತ್ತಿದ್ದೀಯಾ ಎಂದು ಕೇಳಿದರು.
ತಮುವಾಚ ಚ ಕೌಂತೇಯಃ ಪಶ್ಯಾಮ್ಯೇನಂ ವನಸ್ಪತಿಮ್ |
ಭವಂತಂ ಚ ತಥಾ ಭ್ರಾತೄ ನ್ ಭಾಸಂ ಚೇತಿ ಪುನಃಪುನಃ ॥15॥
ಕೌಂತೇಯನಾದ ಯುಧಿಷ್ಠಿರನು ಈ ವನಸ್ಪತಿಯನ್ನೂ, ತಮ್ಮನ್ನೂ, ತಮ್ಮಂದಿರನ್ನೂ ನೋಡುತ್ತಿದ್ದೇನೆಂದು ಪುನಃ ಪುನಃ ಆಚಾರ್ಯರನ್ನು ಕುರಿತು ಹೇಳಿದನು.
ತಮುವಾಚಾಪಸರ್ಪೇತಿ ದ್ರೋಣೋऽಪ್ರೀತಮನಾ ಇವ |
ನೈತಚ್ಛಕ್ಯಂ ತ್ವಯಾ ವೇದ್ಧುಂ ಲಕ್ಷ್ಯಮಿತ್ಯೇವ ಕುತ್ಸಯನ್ ॥16॥
ದ್ರೋಣರು ಬೇಸರಗೊಂಡ ಮನಸ್ಸಿನಿಂದ ನೀನು ದೂರ ಸರಿ. ನೀನು ಈ ಲಕ್ಷ್ಯವನ್ನು ಭೇದಿಸಲಾರೆ ಎಂದು ಕುತ್ಸನಪೂರ್ವಕವಾಗಿ ನುಡಿದರು.
ತತೋ ದುರ್ಯೋಧನಾದೀಂಸ್ತಾನ್ ಧಾರ್ತರಾಷ್ಟ್ರಾನ್ ಮಹಾಬಲಾನ್ |
ತೇನೈವ ಕ್ರಮಯೋಗೇನ ಜಿಜ್ಞಾಸುಃ ಪರ್ಯಪೃಚ್ಛತ ॥17॥
ಅನಂತರ ಧೃತರಾಷ್ಟ್ರನ ಮಕ್ಕಳಾದ ಮಹಾಬಲರಾದ ದುರ್ಯೋಧನಾದಿಗಳನ್ನು ಅವರ ಕೌಶಲವನ್ನು ತಿಳಿಯುವ ಉದ್ದೇಶದಿಂದ

ಅದೇ ಕ್ರಮದಲ್ಲಿ ಪ್ರಶ್ನೆ ಮಾಡಿದರು.
ಅನ್ಯಾಂಶ್ಚ ಶಿಷ್ಯಾನ್ ಭೀಮಾದೀನ್ ರಾಜ್ಞಶ್ಚೈವಾನ್ಯದೇಶಜಾನ್ |
ತಥೈವ ಸರ್ವೇ ಸರ್ವಂ ತತ್ ಪಶ್ಯಾಮ ಇತಿ ಕುತ್ಸಿತಾಃ ॥18॥
ಹಾಗೇ ಎಲ್ಲ ಶಿಷ್ಯರನ್ನೂ, ಭೀಮಾದಿಗಳನ್ನೂ ಅನ್ಯದೇಶದ ರಾಜರುಗಳನ್ನೂ ಪ್ರಶ್ನೆಮಾಡಿದರು. ಎಲ್ಲವನ್ನು ನೋಡುತ್ತಿದ್ದೇವೆ ಎಂದು ಹೇಳಿದ ಅವರೆಲ್ಲರೂ ದ್ರೋಣರಿಂದ ನಿಂದನೆಗೆ ಒಳಗಾದರು.
ತತೋ ಧನಂಜಯಂ ದ್ರೋಣಃ ಸ್ಮಯಮಾನೋಽಭ್ಯಭಾಷತ |
ತ್ವಯೇದಾನೀಂ ಪ್ರಹರ್ತವ್ಯಂ ಲಕ್ಷ್ಯಮೇತನ್ನಿಪಾತ್ಯತಾಮ್ ॥19॥
ಅನಂತರ ದ್ರೋಣರು ನಗುತ್ತಾ ಅರ್ಜುನನನ್ನು ಕರೆದು, ನೀನು ಬಾಣ ಪ್ರಯೋಗವನ್ನು ಮಾಡಿ, ಈಗ ಲಕ್ಷ್ಯವನ್ನು ಉರುಳಿಸಬೇಕು ಎಂದು ಹೇಳಿದರು.
ಮದ್ವಾಕ್ಯಸಮಕಾಲಂ ತೇ ಮೋಕ್ತವ್ಯಶ್ಚ ಭವೇಚ್ಛರಃ |
ವಿಕೃಷ್ಯ ಕಾರ್ಮುಕಂ ತ್ವತ್ರ ತಿಷ್ಠ ತಾವನ್ಮುಹೂರ್ತಕಮ್ ॥20॥
ನಾನು ಬಾಣಪ್ರಯೋಗ ಮಾಡು ಎಂದು ಹೇಳಿದ ತಕ್ಷಣ. ನೀನು ಬಾಣ ಪ್ರಯೋಗ ಮಾಡಬೇಕಾಗುತ್ತದೆ. ಬಿಲ್ಲನ್ನು ಎಳೆದು, ಬಾಣವನ್ನು ಹೂಡಿ, ಮೊದಲು ಒಂದು ಮುಹೂರ್ತ ಇಲ್ಲಿ ನಿಲ್ಲು.
ಏವಮುಕ್ತಸ್ತ್ವ ಸವ್ಯಸಾಚೀ ಮಂಡಲೀಕೃತಕಾರ್ಮುಕಃ |
ತಸ್ಥೌ ಭಾಸಂ ಸಮುದ್ದಿಶ್ಯ ಗುರುವಾಕ್ಯಸಮಾಹಿತಃ ॥21॥
ಹೀಗೆ ಅರ್ಜುನನು ಗುರುವಾಕ್ಯವನ್ನು ಕೇಳಿ ಸಮಾಧಾನದಿಂದ ಬಿಲ್ಲನ್ನು ಎಳೆದು ಮಂಡಲಾಕಾರವನ್ನಾಗಿ ಮಾಡಿ, ಬಾಣವನ್ನು ಹೂಡಿ, ಪಕ್ಷಿಗೆ ಗುರಿಯಿಟ್ಟು ನಿಂತನು.
ಮುಹೂರ್ತಾದೇವ ತಂ ದ್ರೋಣಃ ತಥೈವ ಸಮಭಾಷತ |
ಪಶ್ಯಸ್ಯೇತಂ ಸ್ಥಿತಂ ಭಾಸಂ ದ್ರುಮಂ ಮಾಮಪಿ ಚೇತ್ಯುತ ॥22॥
ಪಶ್ಯಾಮ್ಯೇಕಂ ಭಾಸಮೇವಾಹಮಿತಿ ತಂ ಪ್ರತ್ಯಭಾಷತ |
ನತು ವೃಕ್ಷಂ ಭವಂತಂ ವಾ ಪಶ್ಯಾಮೀತಿ ಚ ಭಾರತ ॥23॥
ಒಂದು ಮುಹೂರ್ತ ಕಳೆದ ಮೇಲೆ ದ್ರೋಣರು ಮೊದಲಿನಂತೆ ಈ ವೃಕ್ಷವನ್ನೂ, ಪಕ್ಷಿಯನ್ನೂ, ಮತ್ತು ನನ್ನನ್ನೂ ನೋಡುತ್ತಿದ್ದೀಯಾ ಎಂದು ಕೇಳಿದರು. ಭಾರತನೇ ಅರ್ಜುನನು ಪಕ್ಷಿಯೊಂದು ಮಾತ್ರ ಕಾಣುತ್ತಿದೆ. ನೀವಾಗಲೀ, ವೃಕ್ಷವಾಗಲೀ ಕಾಣುವುದಿಲ್ಲ ಎಂದು ಹೇಳಿದನು.
ತತಃ ಪ್ರೀತಮನಾ ದ್ರೋಣೋ ಮುಹೂರ್ತಾದಿವ ತಂ ಪುನಃ |
ಪ್ರತ್ಯಭಾಷತ ದುರ್ಧರ್ಷಂ ಪಾಂಡವಾನಾಂ ರಥರ್ಷಭಮ್ |
ಭಾಸಂ ಪಶ್ಯಸಿ ಯದ್ಯೇನಂ ತಥಾ ಬ್ರೂಹಿ ಪುನರ್ವಚಃ ॥24॥
ಅದರಿಂದ ಸಂತೋಷಗೊಂಡ ದ್ರೋಣರು ಒಂದು ಮುಹೂರ್ತಬಿಟ್ಟು ಪಾಂಡವರಲ್ಲಿ ರಥಶ್ರೇಷ್ಠನಾದ ದುರ್ಧರ್ಷನಾದ ಅರ್ಜುನನ್ನು ಕುರಿತು ನೀನು ಹೇಗೆ ಪಕ್ಷಿಯನ್ನು ನೊಡುತ್ತಿದ್ದೇಯೋ, ಅದರಂತೆ ಹೇಳು ಎಂದು ಪುನಃ ಮಾತನಾಡಿದರು.
ಶಿರಃ ಪಶ್ಯಾಮಿ ಭಾಸಸ್ಯ ನ ಗಾತ್ರಮಿತಿ ಸೋಽಬ್ರವೀತ್ |
ಅರ್ಜುನೇನೈವಮುಕ್ತಸ್ತು ದ್ರೋಣೋ ಹೃಷ್ಟತನೂರುಹಃ |
ಮುಂಚಸ್ವೇತ್ಯಬ್ರವೀತ್ ಪಾರ್ಥಂ ಸ ಮುಮೋಚಾವಿಚಾರಯನ್ ॥25॥
ಪಕ್ಷಿಯ ಶಿರಸ್ಸು ಮಾತ್ರ ಕಾಣುತ್ತಿದೆ. ಪಕ್ಷಿಯ ಶರೀರ ಕಾಣುತ್ತಿಲ್ಲ ಎಂದು ಅರ್ಜುನನು ಹೇಳಲು ದ್ರೋಣರು ರೋಮಾಂಚನಗೊಂಡು ಬಾಣಪ್ರಯೋಗವನ್ನು ಮಾಡು ಎಂದು ಹೇಳಿದರು. ಅರ್ಜುನನು ಏನೂ ವಿಚಾರ ಮಾಡದೇ ಬಾಣಪ್ರಯೋಗವನ್ನು ಮಾಡಿದನು.
ತತಸ್ತಸ್ಯ ನಗಸ್ಥಸ್ಯ ಕ್ಷುರೇಣ ನಿಶಿತೇನ ಸಃ |
ಶಿರ ಉತ್ಕೃತ್ಯ ತರಸಾ ಪಾತಯಾಮಾಸ ಪಾಂಡವಃ ॥26॥
ಆಗ ಪಾಂಡುಪುತ್ರನಾದ ಅರ್ಜುನನು ಹರಿತವಾದ ಶರದಿಂದ ವೃಕ್ಷದ ಮೇಲಿದ್ದ ಪಕ್ಷಿಯ ಶಿರಸ್ಸನ್ನು ಕತ್ತರಿಸಿ, ಶೀಘ್ರವಾಗಿ ಕೆಳಗೆ ಉರುಳಿಸಿದನು.
ತಸ್ಮಿನ್ ಕರ್ಮಣಿ ಸಂಸಿದ್ಧೇ ಪರಿಷ್ವಜ್ಯ ಚ ಪಾಂಡವಮ್ |
ಮೇನೇ ಚ ದ್ರುಪದಂ ಸಂಖೇ ಸಾನುಬಂಧಂ ಪರಾಜಿತಮ್ ॥27॥
ಆ ಕರ್ಮದಲ್ಲಿ ಅರ್ಜುನನು ಸಂಸಿದ್ಧಿಯನ್ನು ಪಡೆಯುತ್ತಿರಲು, ದ್ರೋಣರು ಅವನನ್ನು ಆಲಿಂಗಿಸಿ, ಯುದ್ಧದಲ್ಲಿ ದ್ರುಪದನೂ ಅವನ ಅನುಚರರೂ ಪರಾಜಿತರಾದರೆಂದು ಭಾವಿಸಿದರು.
ಕಸ್ಯಚಿತ್ತ್ವಥ ಕಾಲಸ್ಯ ಸಶಿಷ್ಯೋಽಂಗಿರಸಾಂ ವರಃ |
ಜಗಾಮ ಗಂಗಾಮಭಿತೋ ಮಜ್ಜಿತುಂ ಭರತರ್ಷಭ ॥28॥
ಭರತರ್ಷಭನೇ, ಸ್ವಲ್ಪ ಸಮಯದ ನಂತರ ದ್ರೋಣರು ಶಿಷ್ಯರ ಜೊತೆಯಲ್ಲಿ ಸ್ನಾನಕ್ಕಾಗಿ ಗಂಗೆಗೆ ಹೋದರು.
ಅವಗಾಢಮಥೋ ದ್ರೋಣಂ ಸಲಿಲೇ ಸಲಿಲೇಚರಃ |
ಗ್ರಾಹೋ ಜಗ್ರಾಹ ಬಲವಾನ್ ಜಂಘಾಂತೇ ಕಾಲಚೋದಿತಃ ॥29॥
ನೀರಿನಲ್ಲಿ ಮುಳುಗಿದ ದ್ರೋಣರನ್ನು ಜಲಚಾರಿಯಾದ ಒಂದು ಬಲಿಷ್ಠವಾದ ಮೊಸಳೆಯು ಕಾಲಚೋದಿತವಾಗಿ ಅವರ ತೊಡೆಯ ಬಳಿ ಹಿಡಿಯಿತು.
ಸ ಸಮರ್ಥೋಽಪಿ ಮೋಕ್ಷಾಯ ಶಿಷ್ಯಾನ್ ಸರ್ವಾನಚೋದಯತ್|

ಗ್ರಾಹಂ ಹತ್ವಾ ಮೋಕ್ಷಯಧ್ವಂ ಮಾಮಿತಿ ತ್ವರಯನ್ನಿವ ॥30॥
ದ್ರೋಣರು ತಾವೇ ಬಿಡಿಸಿಕೊಳ್ಳಲು ಸಮರ್ಥರಾಗಿದ್ದರೂ, ಎಲ್ಲ ಶಿಷ್ಯರನ್ನೂ ಉದ್ದೇಶಿಸಿ, ಬೇಗ ಮೊಸಳೆಯನ್ನು ಕೊಂದು ನನ್ನನ್ನು ಬಿಡಿಸಿ ಎಂದು ಹೇಳಿದರು.
ತದ್ವಾಕ್ಯಸಮಕಾಲಂ ತು ಭೀಭತ್ಸುರ್ನಿಶಿತೈಃ ಶರೈಃ |
ಅವಾಗ್ರೈರ್ದಶಭಿರ್ಬಾಣೈಃ ಮಗ್ನಮಂಭಸ್ಯತಾಡಯತ್ ॥31॥
ಗುರುಗಳ ವಾಕ್ಯವನ್ನು ಕೇಳುತ್ತಿದ್ದಂತೆಯೇ ಅರ್ಜುನನು ಹರಿತವಾದ ಹತ್ತು ಬಾಣಗಳನ್ನು ತೆಗೆದುಕೊಂಡು, ಅಧೋಮುಖವಾಗಿ ಪ್ರಯೋಗಿಸಿ ನೀರಿನಲ್ಲಿ ಮುಳುಗಿದ್ದ ಮೊಸಳೆಗೆ ಹೊಡೆದನು.
ಇತರೇ ತು ವಿಸಮ್ಮೂಢಾಃ ತತ್ರ ತತ್ರ ಪ್ರಪೇದಿರೇ |
ತಂ ಚ ದೃಷ್ಟ್ವಾ ಕ್ರಿಯೋಪೇತಂ ದ್ರೋಣೋಽಮನ್ಯತ ಪಾಂಡವಮ್ |
ವಿಶಿಷ್ಟಂ ಸರ್ವಶಿಷ್ಯೇಭ್ಯಃ ಪ್ರೀತಿಮಾಂಶ್ಚಾಭವತ್ ತದಾ ॥32॥
ಉಳಿದವರು ದಿಗ್ಭ್ರಾಂತರಾಗಿ ಅಲ್ಲಲ್ಲಿ ತಿರುಗಾಡಿದರು. ಅರ್ಜುನನ ಕೌಶಲವನ್ನು ನೋಡಿದ ದ್ರೋಣರು ಅರ್ಜುನನು ಕ್ರಿಯಾಸಿದ್ಧಿಯನ್ನು ಪಡೆದವನೆಂದೂ, ಅವನು ತಮ್ಮ ಎಲ್ಲಾ ಶಿಷ್ಯರಿಗಿಂತಲೂ ಶ್ರೇಷ್ಠನಾದವನೆಂದೂ ತಿಳಿದು ಸಂತೋಷಗೊಂಡರು.

ಸ ಪಾರ್ಥಬಾಣೈರ್ಬಹುಧಾ ಖಂಡಶಃ ಪರಿಕಲ್ಪಿತಃ |
ಗ್ರಾಹಃ ಪಂಚತ್ವಮಾಪೇದೇ ಜಂಘಾಂ ತ್ಯಕ್ತ್ವಾ ಮಹಾತ್ಮನಃ ॥33॥
ಅರ್ಜುನನಿಂದ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟ ಆ ಮೊಸಳೆಯು ಚೂರು ಚೂರಾಗಿ ಕತ್ತರಿಸಲ್ಪಟ್ಟು ದ್ರೋಣರ ತೊಡೆಯನ್ನು ಬಿಟ್ಟು ಮರಣವನ್ನು ಹೊಂದಿತು.
ಗೃಹಾಣೇದಂ ಮಹಾಬಾಹೋ ವಿಶಿಷ್ಟಮತಿದುರ್ಧರಮ್ |
ಅಸ್ತ್ರಂ ಬ್ರಹ್ಮಶಿರೋ ವೀರ ಸಪ್ರಯೋಗನಿವರ್ತನಮ್ ॥34॥
ಆಗ ದ್ರೋಣರು ಸಂತೋಷಗೊಂಡು ಅರ್ಜುನನ್ನು ಕುರಿತು, ಮಹಾಬಾಹುವೇ, ಶ್ರೇಷ್ಠವಾದ ಮತ್ತು ಇನ್ನೊಬ್ಬರು ಭರಿಸಲು ಅಸಾಧ್ಯವಾದ ಈ ಅಸ್ತ್ರವನ್ನು ತೆಗೆದುಕೋ. ವೀರನೇ ಇದಕ್ಕೆ `ಬ್ರಹ್ಮಶಿರಸ್ಸು' ಎಂದು ಹೆಸರು. ಇದನ್ನು ಪ್ರಯೋಗ ಮಾಡುವ ರೀತಿಯನ್ನೂ, ನಿವರ್ತನೆ ಮಾಡುವ ರೀತಿಯನ್ನೂ ಉಪದೇಶಿಸುತ್ತೇನೆ.
ನಚ ತೇ ಮಾನುಷೇಷ್ವೇತತ್ ಪ್ರಯೋಕ್ತವ್ಯಂ ಕಥಂಚನ |
ಜಗದ್ಧಿ ನಿರ್ದಹೇದೇತದಲ್ಪತೇಜಸಿ ಪಾತಿತಮ್ ॥35॥
ಈ ಅಸ್ತ್ರವನ್ನು ಮನುಷ್ಯರ ಮೇಲೆ ಎಂದೂ ಪ್ರಯೋಗ ಮಾಡಬಾರದು. ಈ ಅಸ್ತ್ರವನ್ನು ಅಲ್ಪವೀರ್ಯರಾದ ಮನುಷ್ಯರ ಮೇಲೆ ಪ್ರಯೋಗ ಮಾಡಿದರೆ ಅಸ್ತ್ರವು ಜಗತ್ತನ್ನೇ ಸುಡುತ್ತದೆ.
ಅಸಾಮಾನ್ಯಮಿದಂ ತಾತ ಲೋಕೇಷ್ವಸ್ತ್ರಂ ನಿಗದ್ಯತೇ |
ತದ್ ಧಾರಯೇಥಾಃ ಪ್ರಯತಃ ಶೃಣು ಚೇದಂ ವಚೋ ಮಮ ॥36॥
ಪ್ರೀತಿಪಾತ್ರನೇ, ಲೋಕದಲ್ಲಿ ಇದನ್ನು ಅಸಾಧಾರಣವಾದ ಅಸ್ತ್ರವೆಂದು ಕರೆಯುತ್ತಾರೆ. ನಿಯಮಬದ್ಧನಾಗಿ ಇದನ್ನು ಧರಿಸು ಮತ್ತು ನನ್ನ ಈ ಮಾತನ್ನು ಕೇಳು.
ಬಾಧತೇಽಮಾನುಷಃ ಕಶ್ಚಿದ್ ಯದಾ ತ್ವಂ ವೀರ ಕಶ್ಚನ |
ತದ್ವಧಾಯ ಪ್ರಯುಂಜೀಥಾಸ್ತದಸ್ತ್ರಮಿದಮಾಹವೇ ॥37॥
ಎಲೈ ವೀರನೇ, ನಿನ್ನನ್ನು ಯಾವನಾದರೂ ಅಮಾನುಷನು
ಬಾಧಿಸಿದರೆ ಆಗ ಅವನ ವಧೆಗಾಗಿ ಈ ಅಸ್ತ್ರವನ್ನು ಯುದ್ಧದಲ್ಲಿ ಪ್ರಯೋಗಿಸು.
ತತ್ತಥೇತಿ ಪ್ರತಿಶ್ರುತ್ಯ ಭೀಭತ್ಸುಃ ಪ್ರಕೃತಾಂಜಲಿಃ |
ಜಗ್ರಾಹ ಪರಮಾಸ್ತ್ರಂ ತದ್ ಆಹ ಚೈನಂ ಪುನರ್ಗುರುಃ |
ಭವಿತಾ ತ್ವತ್ಸಮೋ ನಾನ್ಯಃ ಪುಮಾಂಲ್ಲೋಕೇ ಧನುರ್ಧರಃ ॥38॥
ಹಾಗೆಯೇ ಆಗಲಿ ಎಂದು ಹೇಳಿ ಅರ್ಜುನನು ಗುರುಗಳಿಗೆ ಕೈಮುಗಿದು ಶ್ರೇಷ್ಠವಾದ ಆ ಅಸ್ತ್ರವನ್ನು ಸ್ವೀಕರಿಸಿದನು. ಆಗ ಗುರುಗಳಾದ ದ್ರೋಣರು ನಿನ್ನ ಸಮಾನರಾದ ಧನುರ್ಧಾರಿಗಳಾದ ಪುರುಷರು ಲೋಕದಲ್ಲಿ ಯಾರೂ ಉಂಟಾಗುವುದಿಲ್ಲ ಎಂದು ಮತ್ತೊಮ್ಮೆ ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಅಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ಯದಾ ತೇ ಸರ್ವಶಸ್ತ್ರಾಸ್ತ್ರವೇದಿನೋ ರಾಜಪುತ್ರಕಾಃ |
ಬಭೂವೂ ರಂಗಮಧ್ಯೇ ತಾನ್ ಭಾರದ್ವಾಜೋ ವ್ಯದರ್ಶಯತ್ ॥30॥
ರಾಜಕುಮಾರರು ಸಕಲಶಾಸ್ತ್ರಪಾರಂಗತರಾದಾಗ ಅವರ ಪಾಂಡಿತ್ಯ ಪರೀಕ್ಷೆಗೆ ದ್ರೋಣರು ಅವರನ್ನು ರಂಗಸ್ಥಳದ ನಡುವೆ

ಪ್ರದರ್ಶಿಸಿದರು.
ರಕ್ತಚಂದನ ಸತ್ಪುಷ್ಪ ವಸ್ತ್ರ ಶಸ್ತ್ರ ಗುಡೋದನೈಃ |
ಸಂಪೂಜ್ಯ ಭಾರ್ಗವಂ ರಾಮಮನುಜಜ್ಞೇ ಕುಮಾರಕಾನ್ ॥31॥
ದ್ರೋಣರು ಪ್ರಾರಂಭದಲ್ಲಿ ಕೆಂಪು ಗಂಧ ಒಳ್ಳೆಯ ಹೂಗಳು ವಸ್ತ್ರಗಳು ಆಯುಧಗಳು ಮತ್ತು ಬೆಲ್ಲದ ಭಕ್ಷ್ಯಗಳಿಂದ ಗುರು ಪರಶುರಾಮರನ್ನು ಪೂಜಿಸಿ ಕುಮಾರರಿಗೆ ತಮ್ಮ ವಿದ್ಯಾ ಕೌಶಲ ಪ್ರದರ್ಶನಮಾಡಲು ಆಜ್ಞಾಪಿಸಿದರು.
ತೇ ಭೀಷ್ಮದ್ರೋಣವಿದುರಗಾಂಧಾರೀಧೃತರಾಷ್ಟ್ರಕಾನ್ |
ಸರಾಜಮಂಡಲಾನ್ ನತ್ವಾ ಕುಂತೀಂ ಚಾದರ್ಶಯತ್ ಶ್ರಮಮ್ ॥32॥
ರಾಜಕುಮಾರರು ಭೀಷ್ಮದ್ರೋಣ ವಿದುರ ಗಾಂಧಾರಿ ಧೃತರಾಷ್ಟ್ರರನ್ನೂ ಕುಂತಿಯನ್ನೂ ರಾಜರುಗಳ ಸಮೂಹಗಳನ್ನೂ ನಮಿಸಿ ತಾವು ಕಲಿತ ವಿದ್ಯೆಗಳನ್ನು ಪ್ರದರ್ಶಿಸಿದರು.
ಭೀಮ ದುರ್ಯೋಧನೌ ತತ್ರ ಶಿಕ್ಷಾ ಸಂದರ್ಶನಚ್ಛಲಾತ್ |
ಸಮಾದಾಯ ಗದೇ ಗುರ್ವೀ ಸಂರಂಭಾದಭ್ಯುದೀಯತುಃ ॥42॥
ಆಗ ತಮ್ಮ ವಿದ್ಯಾಭ್ಯಾಸ ಕೌಶಲ ಪ್ರದರ್ಶನದ ನೆಪದಿಂದ ಭೀಮ ದುರ್ಯೋರ್ಧನರು ಭಾರವಾದ ಗದೆಯನ್ನೆತ್ತಿಕೊಂಡು ಕೋಪದಿಂದ ಪರಸ್ಪರ ಎದುರಿಗೆ ಬಂದರು.
ದೇವಾಸುರಮನುಷ್ಯಾದಿ ಜಗದೇತಚ್ಚರಾಚರಮ್ |
ಸರ್ವಂ ತದಾ ದ್ವಿಧಾಭೂತಂ ಭೀಮದುರ್ಯೋಧನಾಶ್ರಯಾತ್ ॥43॥
ಆಗ ಭೀಮ-ದುರ್ಯೋಧನ ಪಕ್ಷಗಳನ್ನು ಹಿಡಿದು ದೇವದಾನವ ಮಾನವ ಮುಂತಾದ ಈ ಚರಾಚರ ಪ್ರಪಂಚವೆಲ್ಲವೂ ಎರಡು ತಂಡವಾಯಿತು.
ದೇವಾ ದೇವಾನುಕೂಲಾಶ್ಚ ಭೀಮಮೇವ ಸಮಾಶ್ರಿತಾಃ |
ಅಸುರಾ ಆಸುರಾಶ್ಚೈವ ದುರ್ಯೋಧನ ಸಮಾಶ್ರಯಾಃ ॥44॥
ದೇವತೆಗಳೂ ದೇವತೆಗಳಿಗೆ ಅನುಕೂಲರಾದವರೂ ಭೀಮನ ಪಕ್ಷವನ್ನೇ ಹಿಡಿದರು. ಅಸುರರೂ ಅವರ ಕಡೆಯವರೂ ದುರ್ಯೋಧನನ ಪಕ್ಷ ಹಿಡಿದರು.
ದ್ವಿಧಾಭೂತಾ ಮನುಷ್ಯಾಶ್ಚ ದೇವಾಸುರ ವಿಭೇದತಃ |
ಜಯ ಭೀಮ ಮಹಾಬಾಹೋ ಜಯ ದುರ್ಯೋಧನೇತಿ ಚ ॥45॥
ಮನುಷ್ಯರೂ ಕೂಡ ತಮ್ಮ ತಮ್ಮ ದೇವ ದಾನವ ಸ್ವಭಾವಾನುಸಾರವಾಗಿ ಭೀಮ ದುರ್ಯೋಧನರ ಪಕ್ಷ ಹಿಡಿದು ಎರಡು ತಂಡಗಳಾದರು. ಮಹಾಬಾಹು ಭೀಮ! ನಿನಗೆ ಜಯವಾಗಲಿ! ಮಹಾಬಾಹು ದುರ್ಯೋಧನ! ನಿನಗೆ ಜಯವಾಗಲಿ! ಎಂದರು.
ಹುಂಕಾರಾಂಶ್ಚೈವ ಘಟ್ಕಾರಾಂಶ್ಚಕ್ರುರ್ದೇವಾಸುರಾ ಅಪಿ
ದೃಷ್ಟ್ವಾ ಜಗತ್ ಸುಸಂರಬ್ಧಂ ದ್ರೋಣೋಽಥ ದ್ವಿಜಸತ್ತಮಃ ॥46॥
ನೇದಂ ಜಗದ್ ವಿನಶ್ಯೇತ ಭೀಮದುರ್ಯೋಧನಾಶ್ರಯಾತ್ |
ಇತಿ ಪುತ್ರೇಣ ತೌ ವೀರೌ ನ್ಯವಾರಯದರಿಂದಮೌ ॥47॥
ಸ್ವಕೀಯಾಯಾಂ ಸ್ವಕೀಯಾಯಾಂ ಯೋಗ್ಯತಾಯಾಂ ನ ತು ಕ್ವಚಿತ್ |
ಯುವಯೋಃ ಸಮ ಇತ್ಯುಕ್ತತ್ವ ದ್ರೌಣಿರೇತೌ ನ್ಯವಾರಯತ್ ॥48॥
ದೇವತೆಗಳೂ ಅಸುರರೂ ಪರಸ್ಪರ ಕೋಪದ ಸಿಂಹನಾದ ಮಾಡಿದರು. ಭುಜ ತಟ್ಟಿಕೊಂಡರು. ಹೀಗೆ ಜಗತ್ತೇ ಉದ್ವೇಗಗೊಂಡುದನ್ನು ನೋಡಿ ಬ್ರಾಹ್ಮಣೋತ್ತಮರಾದ ದ್ರೋಣರು `ಈ ಜಗತ್ತು ಭೀಮ ದುರ್ಯೋಧನರ ಪಕ್ಷ ಹಿಡಿದು ಪರಸ್ಪರ ಹೋರಾಡಿ ನಾಶವಾಗದಿರಲಿ' ಎಂದು ಮಗನಾದ ಅಶ್ವತ್ಥಾಮನ ಮೂಲಕ, ಶತ್ರು ಸಂಹಾರಕರಾದ ಇಬ್ಬರು ವೀರರನ್ನು ತಡೆದು ನಿಲ್ಲಿಸಿದರು. ನಿಮ್ಮ ನಿಮ್ಮ ಯೋಗ್ಯತೆಯಲ್ಲಿ ನಿಮಗೆ ಸಮಾನರು ಎಲ್ಲೂ ಇಲ್ಲ ಎಂದು ಹೇಳುತ್ತ ಅಶ್ವತ್ಥಾಮ ಇಬ್ಬರನ್ನೂ ತಡೆದ.
ದ್ರೋಣಾಜ್ಞಯಾ ವಾರಿತೌ ತೌ ಯಯತುಃ ಸ್ವಂ ಸ್ವಮಾಲಯಮ್ ॥49॥
ಸುರಾಸುರಾನ್ ಸುಸಂರಬ್ಧಾನ್ ಕಾಲೇನ ದ್ರಕ್ಷ್ಯಥೇತಿ ಚ |
ಬ್ರಹ್ಮಾ ನಿವಾರ್ಯ ಸಸುರೋ ಯಯೌ ಸೇಶಃ ಸ್ವಮಾಲಯಮ್ ॥50॥
ದ್ರೋಣರ ಆಜ್ಞೆಯಿಂದ ತಡೆದು ನಿಂತ ಭೀಮ-ದುರ್ಯೋಧನರು ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು. `ಸ್ವಲ್ಪ ಕಾಲಾನಂತರ ಇವರ ಪರಸ್ಪರ ಯುದ್ಧವನ್ನೂ ಜಯಾಪಜಯಗಳನ್ನೂ ನೋಡುವಿರಿ' ಎನ್ನುತ್ತ ಬ್ರಹ್ಮದೇವ ಮೇಲೆ ಆಕಾಶದಲ್ಲಿ ನೆರೆದಿದ್ದ ದೇವಾಸುರರನ್ನು ತಡೆದು ರುದ್ರನಿಂದೊಡಗೂಡಿ ದೇವತೆಗಳಿಂದ ಸಹಿತನಾಗಿ ತನ್ನ ಲೋಕಕ್ಕೆ ಹಿಂತಿರುಗಿದ.
* * * *

ನೂರಮೂವತ್ತೂರನೆಯ ಅಧ್ಯಾಯ
(ಕುಮಾರರಿಂದ ಅಸ್ತ್ರಕೌಶಲ ಪ್ರದರ್ಶನ, ಯುಧಿಷ್ಠಿರ ಪರೀಕ್ಷೆ, ಭೀಮ ದುರ್ಯೋಧನರ ರಂಗ ಪ್ರವೇಶ)
ವೈಶಂಪಾಯನಃ
ಕೃತಾಸ್ತ್ರಾನ್ ಧಾರ್ತರಾಷ್ಟ್ರಾಂಶ್ಚ ಪಾಂಡುಪುತ್ರಾಂಶ್ಚ ಭಾರತ |
ದೃಷ್ಟ್ವಾ ದ್ರೋಣೋಽಬ್ರವೀದ್ ವಾಕ್ಯಂ ಧೃತರಾಷ್ಟ್ರಂ ಜನೇಶ್ವರಮ್ ॥1॥
ಕೃಪಸ್ಯ ಸೋಮದತ್ತಸ್ಯ ಬಾಹ್ಲೀಕಸ್ಯ ಚ ಧೀಮತಃ |
ಗಾಂಗೇಯಸ್ಯ ಚ ಸಾನ್ನಿಧ್ಯೇ ವ್ಯಾಸಸ್ಯ ವಿದುರಸ್ಯ ಚ ॥2॥

ಎಲೈ ಭಾರತನೇ, ದ್ರೋಣರು ರಾಜನಾದ ಧೃತರಾಷ್ಟ್ರನನ್ನು ಕುರಿತು ಪಾಂಡವರು ಮತ್ತು ಕೌರವರು ಅಸ್ತ್ರವಿದ್ಯೆಯನ್ನು ಸಂಪಾದಿಸಿದ್ದಾರೆ ಎಂದು ಕೃಪ, ಸೋಮದತ್ತ, ಮೇಧಾವಿಯಾದ ಬಾಹ್ಲೀಕ, ಭೀಷ್ಮ, ವ್ಯಾಸರು ಮತ್ತು ವಿದುರ ಇವರ ಸನ್ನಿಧಿಯಲ್ಲಿ ತಿಳಿಸಿದರು.

ರಾಜನ್ ಸಮಾಪ್ತವಿದ್ಯಾಸ್ತೇ ಕುಮಾರಾಃ ಕುರುಸತ್ತಮ |
ತೇ ದರ್ಶಯೇಯುಃ ಸ್ವಾಂ ಶಿಕ್ಷಾಂ ರಾಜನ್ನನುಮತೇ ತವ ॥3॥

ಕುರುಶ್ರೇಷ್ಠನಾದ ರಾಜನೇ, ಕುಮಾರರು ಸಂಪೂರ್ಣವಾಗಿ ವಿದ್ಯೆಯನ್ನು ಪಡೆದಿದ್ದಾರೆ. ನಿನ್ನ ಅಭಿಪ್ರಾಯದಂತೆ ಅವರು ತಮ್ಮ ಕೌಶಲವನ್ನು ತೋರಿಸುತ್ತಾರೆ.

ತತೋಽಬ್ರವೀನ್ಮಹಾರಾಜಃ ಪ್ರಹೃಷ್ಟೇನಾಂತರಾತ್ಮನಾ |
ಭಾರದ್ವಾಜ ಮಹತ್ಕರ್ಮ ಕೃತಂ ದ್ವಿಜವರ ತ್ವಯಾ ॥4॥

ಆಗ ಮಹಾರಾಜನಾದ ಧೃತರಾಷ್ಟ್ರನು ಮನಸ್ಸಿನಲ್ಲಿ ಸಂತೋಷಗೊಂಡು ದ್ರೋಣರನ್ನು ಕುರಿತು ದ್ವಿಜಶ್ರೇಷ್ಠರಾದ ದ್ರೋಣರೇ, ನೀವು ಮಹತ್ಕಾರ್ಯವನ್ನು ಸಾಧಿಸಿದ್ದೀರಿ ಎಂದು ಹೇಳಿದನು.

ಯದಾಽನುಮನ್ಯಸೇ ಕಾಲಂ ಯಸ್ಮಿನ್ ದೇಶೇ ಯಥಾಯಥಾ |
ತಥಾ ತಥಾ ವಿಧಾನಾಯ ಸ್ವಯಮಾಜ್ಞಾಪಯಸ್ವ ಮಾಮ್ ॥5॥

ಯಾವಾಗ ಕಾಲವು ಸೂಕ್ತವಾಗಿದೆಯೋ, ಆ ಕಾಲದಲ್ಲಿ ಯಾವ ಪ್ರದೇಶದಲ್ಲಿ ಹೇಗೆ ಸಿದ್ಧಗೊಳಿಸಬೇಕೆಂದು ನೀವು ಸ್ವತಃ ನನಗೆ ಆದೇಶವನ್ನು ನೀಡಬೇಕು.

ಸ್ಪೃಹಯಾಮ್ಯದ್ಯ ನಿರ್ವೇಶಂ ಪುರುಷಾಣಾಂ ಸಚಕ್ಷುಷಾಮ್ |
ಅಸ್ತ್ರಹೇತೋಃ ಸಮಾಯುಕ್ತಾನ್ ಯೇ ಮೇ ದ್ರಕ್ಷ್ಯಂತಿ ಪುತ್ರಕಾನ್ ॥6॥

ನನ್ನ ಮಕ್ಕಳು ಪ್ರಯೋಗಿಸುವ ಅಸ್ತ್ರಗಳನ್ನು ನೋಡುವ ಸಾರ್ಥಕವಾದ ಕಣ್ಣುಳ್ಳ ಜನರ ದೊಡ್ಡ ಸಮೂಹವನ್ನು (ಜಾತ್ರೆಯನ್ನು) ನಾನು ಈ ದಿನ ಬಯಸುತ್ತೇನೆ.

ಸತ್ಕಾರ್ಯಃ ಕ್ಷತ್ತ ಆಚಾರ್ಯೋ ಬ್ರವೀತಿ ಕುರು ತತ್ ತಥಾ |
ನ ಹೀದೃಶಂ ಪ್ರಿಯಂ ಮೇಽದ್ಯ ಭವಿತಾ ಧರ್ಮವತ್ಸಲ ॥7॥

ಧರ್ಮವತ್ಸಲನಾದ ವಿದುರನೇ, ಸತ್ಕಾರಕ್ಕೆ ಅರ್ಹರಾದ ಆಚಾರ್ಯರು ಅವರು ಹೇಳಿದಂತೆ ಮಾಡು. ನನಗೆ ಇಂತಹ ಪ್ರಿಯವಾದ ಕಾರ್ಯವು ಈ ದಿನ ಬೇರೆ ಇನ್ನೊಂದಿಲ್ಲ.

ವೈಶಂಪಾಯನಃ
ತತೋ ರಾಜಾನಮಾಮಂತ್ರ್ಯ ವಿದುರಾನುಗತೋ ಬಹಿಃ |
ಭಾರದ್ವಾಜೋ ಮಹಾಪ್ರಾಜ್ಞೋ ಜ್ಞಾಪಯಾಮಾಸ ಮೇದಿನೀಮ್ ॥8॥

ಅನಂತರ ರಾಜನ ಅನುಮತಿಯನ್ನು ಪಡೆದು, ವಿದುರನ ಜೊತೆಯಲ್ಲಿ ನಗರದ ಹೊರಗೆ ಬಂದು ಮಹಾಪ್ರಾಜ್ಞರಾದ ದ್ರೋಣರು ಭೂಮಿಯನ್ನು ತೋರಿಸಿದರು.

ಸಮಾಮವೃಕ್ಷಂ ನಿರ್ಗುಲ್ಮಾಮುದಕ್ಪ್ರವಣಸಂಸ್ಥಿತಾಮ್ |
ತಸ್ಯಾ ಭೂಮೌ ಬಲಿಂ ಚಕ್ರೇ ತಿಥಿನಕ್ಷತ್ರಪೂಜಿತೇ ॥9॥

ಸಮತಟ್ಟಾದ, ವೃಕ್ಷಗಳೂ, ಪೊದೆಗಳೂ ಇಲ್ಲದ ಉತ್ತರ ದಿಕ್ಕಿನಲ್ಲಿ ನಿಮ್ನವಾಗಿರುವ ಭೂಮಿಯನ್ನು ಆರಿಸಿ ಶ್ರೇಷ್ಠವಾದ ತಿಥಿ, ನಕ್ಷತ್ರಗಳಲ್ಲಿ ಅಲ್ಲಿ ಪೂಜೆಯನ್ನು ಮಾಡಿದರು.

ಅವಘುಷ್ಟಂ ಪುರೇ ಚಾಪಿ ತದರ್ಥಂ ಭರತರ್ಷಭ |
ರಂಗಭೂಮಿಂ ಸುವಿಹಿತಾಂ ಶಾಸ್ತ್ರದೃಷ್ಟ್ಯಾಮಕಾರಯತ್ ॥10॥

ಭರತರ್ಷಭನೇ, ನಗರದಲ್ಲೆಲ್ಲಾ ಘೋಷಣೆಯನ್ನು ಮಾಡಿಸಿ ಶಾಸ್ತ್ರೋಕ್ತ ಪ್ರಕಾರದಿಂದ ರಂಗಭೂಮಿಯನ್ನು ಚೆನ್ನಾಗಿ ನಿರ್ಮಿಸಿದರು.

ಪ್ರೇಕ್ಷಾಗಾರಂ ಸುವಿಹಿತಂ ಚಕ್ರುಸ್ತತ್ರ ಚ ಶಿಲ್ಪಿನಃ |
ರಾಜ್ಞಾಂ ಸರ್ವಾಯುಧೋಪೇತಂ ಸ್ತ್ರೀಣಾಂ ಚೈವ ನರರ್ಷಭ ॥11॥

ಎಲೈ ನರಶ್ರೇಷ್ಠನೇ, ಶಿಲ್ಪಿಗಳು ಪ್ರೇಕ್ಷಾಗಾರಗಳನ್ನು ಚೆನ್ನಾಗಿ ನಿರ್ಮಿಸಿದರು. ರಾಜರಿಗೆ ಸರ್ವಾಯುಧೋಪೇತವಾದ ಪ್ರೇಕ್ಷಾಗಾರವನ್ನು, ಸ್ತ್ರೀಯರಿಗೆ ಬೇರೆ ಪ್ರೇಕ್ಷಾಗಾರವನ್ನೂ ನಿರ್ಮಿಸಿದರು.

ಮಂಚಾನ್ ಸ್ಮ ಕಾರಯಾಮಾಸುರ್ಯತ್ರ ಜಾನಪದಾ ಜನಾಃ |
ಸಚಿವಾಶ್ಚ ಪುನರ್ಮಂಚಾನ್ ಕಾರಯಾಮಾಸುರುಚ್ಛ್ರಿತಾನ್ ॥12॥

ಜಾನಪದ ಜನರು ಕುಳಿತುಕೊಳ್ಳುವಂತಹ ಸುಖಾಸನಗಳನ್ನು ಮಾಡಿಸಿದರು. ಪುನಃ ಸಚಿವರು ಕುಳಿತುಕೊಳ್ಳುವ ಎತ್ತರವಾದ ಸುಖಾಸನಗಳನ್ನು ಮಾಡಿಸಿದರು.

ತಸ್ಮಿಂಸ್ತದಾಽಹನಿ ಪ್ರಾಪ್ತೇ ರಾಜಾ ಸಸಚಿವಸ್ತದಾ |
ಸಾಂತಃಪುರಃ ಸಹಾಮಾತ್ಯೋ ವ್ಯಾಸಸ್ಯಾನುಮತೇ ತದಾ ॥13॥
ಭೀಷ್ಮಂ ಪ್ರಮುಖತಃ ಕೃತ್ವಾ ಕೃಪಂ ಚಾಚಾರ್ಯಸತ್ತಮಮ್ |
ಬಾಹ್ಲೀಕಂ ಸೋಮದತ್ತಂ ಚ ಭೂರಿಶ್ರವಸಮೇವ ಚ ॥14॥
ಕುರೂನನ್ಯಾಂಶ್ಚ ಸಚಿವಾನಾದಾಯ ನಗರಾದ್ ಬಹಿಃ |
ರಂಗಭೂಮಿಂ ಸಮಾಸಾದ್ಯ ಬ್ರಾಹ್ಮಣೈಃ ಸಹಿತೋ ನೃಪಃ ॥15॥

ಮುಕ್ತಾಜಾಲಪರಿಕ್ಷಿಪ್ತಂ ವೈಢೂರ್ಯಮಣಿಭೂಷಿತಮ್ |
ಶಾತಕುಂಭಮಯಂ ದಿವ್ಯಂ ಪ್ರೇಕ್ಷಾಗಾರಮುಪಾರುಹತ್ ॥16॥
ಆ ಕ್ಲುಪ್ತವಾದ ದಿವಸವು ಬಂದಾಗ ಧೃತರಾಷ್ಟ್ರನು, ಸಚಿವರು, ಅಂತಃಪುರಜನರು ಮತ್ತು ಅಮಾತ್ಯರ ಜೊತೆಯಲ್ಲಿ ಹೊರಟು, ವ್ಯಾಸರ ಅಭಿಪ್ರಾಯದಂತೆ ಭೀಷ್ಮರನ್ನು ಮುಂದೆ ಮಾಡಿಕೊಂಡು ಆಚಾರ್ಯಶ್ರೇಷ್ಠರಾದ ಕೃಪರನ್ನೂ, ಬಾಹ್ಲೀಕ, ಸೋಮದತ್ತ ಮತ್ತು ಭೂರಿಶ್ರವರನ್ನೂ, ಹಾಗೆಯೇ ಬೇರೆ ಕುರುಗಳನ್ನೂ ಮತ್ತು ಸಚಿವರನ್ನೂ ಕರೆದುಕೊಂಡು ಬ್ರಾಹ್ಮಣರ ಜೊತೆಯಲ್ಲಿ ನಗರದಿಂದ ಹೊರಗೆ ಬಂದು ರಂಗಭೂಮಿಯನ್ನು ಸಮೀಪಿಸಿ ಮುತ್ತಿನ ಗೊಂಚಲುಗಳಿಂದಲೂ, ವೈಢೂರ್ಯಮಣಿಗಳಿಂದಲೂ ಅಲಂಕೃತವಾಗಿದ್ದ, ಸುವರ್ಣಮಯವಾದ ದಿವ್ಯ ಪ್ರೇಕ್ಷಾಗಾರವನ್ನು ಹತ್ತಿ ಕುಳಿತನು.
ಗಾಂಧಾರೀ ಚ ಮಹಾಭಾಗಾ ಕುಂತೀ ಚ ಜಯತಾಂ ವರ |
ಸ್ತ್ರಿಯಶ್ಚ ಸರ್ವಾ ಯಾ ರಾಜ್ಞಸ್ತಾಸಾಂ ಚ ಪರಿಚಾರಕಾಃ ॥17॥
ಹರ್ಷಾದಾರುರುಹುಃ ಕಾಂತಂ ಮೇರುಂ ದೇವಸ್ತ್ರಿಯೋ ಯಥಾ |
ಬ್ರಾಹ್ಮಣಕ್ಷತ್ರವಿಟ್‌ಶೂದ್ರಂ ಸರ್ವಂ ತತ್ರ ಸಮಾಗತಮ್ ॥18॥
ಎಲೈ ಜಯಶೀಲರಲ್ಲಿ ಶ್ರೇಷ್ಠನೇ, ಗಾಂಧಾರಿಯೂ, ಮಹಾನುಭಾವಳಾದ ಕುಂತಿಯೂ, ರಾಜನ ಬೇರೆ ಸ್ತ್ರೀಯರು ಮತ್ತು ಅವರ ಪರಿಚಾರಕರೆಲ್ಲರೂ ಸಂತೋಷದಿಂದ ದೇವಸ್ತ್ರೀಯರು ಮೇರುಪರ್ವತವನ್ನು ಏರಿದಂತೆ ಮನೋಹರವಾದ ತಮ್ಮ ತಮ್ಮ ಆಸನಗಳನ್ನು ಏರಿ ಕುಳಿತರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಲ್ಲರೂ ಅಲ್ಲಿ ಬಂದು ನೆರೆದರು.
ಪ್ರವಾದಕೈಶ್ಚ ವಾದಿತ್ರೈರ್ಜನ್ಯೈಃ ಕೋಲಾಹಲೈರಪಿ |
ಮಹಾರ್ಣವ ಇವ ಕ್ಷುಬ್ಧಃ ಸಮಾಜಃ ಸೋಽಭವತ್ ತದಾ ॥19॥
ಆ ದೊಡ್ಡ ಸಮಾಜವು ಗಟ್ಟಿಯಾಗಿ ಮಾತನಾಡುವ ಜನಗಳಿಂದಲೂ, ವಾದ್ಯಗಳಿಂದಲೂ, ಕೋಲಾಹಲಗಳಿಂದಲೂ ತುಂಬಿ ದೊಡ್ಡ ಸಮುದ್ರದಂತೆ ಕ್ಷುಬ್ಧವಾಯಿತು.
ತತಃ ಶುಕ್ಲಾಂಬರಧರಃ ಶುಕ್ಲಯಜ್ಞೋಪವೀತವಾನ್ |
ಶುಕ್ಲಕೇಶಃ ಸಿತಶ್ಮಶ್ರುಃ ಶುಕ್ಲಮಾಲ್ಯಾನುಲೇಪನಃ ॥20॥
ರಂಗಮಧ್ಯಂ ತದಾ ದ್ರೋಣಃ ಸಪುತ್ರಃ ಸಂವಿವೇಶ ಹ |
ನಭೋ ಜಲಧರೈರ್ಹೀನಂ ಸಾಂಗಾರಕ ಇವಾಂಶುಮಾನ್ ॥21॥
ಅನಂತರ ಶುಕ್ಲಾಂಬರವನ್ನು ಧರಿಸಿ, ಶುಕ್ಲ ಯಜ್ಞೋಪವೀತವನ್ನು ಧರಿಸಿದ, ಶುಕ್ಲಕೇಶರೂ, ಶುಕ್ಲಶ್ಮಶ್ರುಗಳೂ, ಶುಕ್ಲಮಾಲೆಗಳನ್ನು ಧರಿಸಿದವರೂ ಆದ ದ್ರೋಣರು ಪುತ್ರರಾದ ಅಶ್ವತ್ಥಾಮರ ಜೊತೆಯಲ್ಲಿ ಮೇಘರಹಿತವಾದ ಗಗನದಲ್ಲಿ ಸೂರ್ಯನು ಅಂಗಾರಕನ ಜೊತೆಯಲ್ಲಿ ಬಂದಂತೆ ರಂಗಭೂಮಿಯ ಮಧ್ಯಭಾಗವನ್ನು ಪ್ರವೇಶಿಸಿದರು.
ವ್ಯಾಸಸ್ಯಾನುಮತೇ ಚಕ್ರೇ ಬಲಿಂ ಬಲವತಾಂ ವರಃ |
ಬ್ರಾಹ್ಮಣಾಂಶ್ಚಾಪಿ ಶಾಸ್ತ್ರಜ್ಞಾನ್ ವಾಚಯಾಮಾಸ ಮಂಗಲ್ಯಃ ॥22॥
ವ್ಯಾಸರ ಅಭಿಪ್ರಾಯದಂತೆ ಬಲಿಷ್ಠರಲ್ಲಿ ಶ್ರೇಷ್ಠರಾದ ಅವರು ಶಾಸ್ತ್ರಜ್ಞರಾದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿ ಅಲ್ಲಿ ಪೂಜೆಯನ್ನು ಮಾಡಿದರು.
ಸುವರ್ಣಮಣಿರತ್ನಾನಿ ವಸತ್ರಣಿ ವಿವಿಧಾನಿ ಚ |
ಪ್ರದದೌ ದಕ್ಷಿಣಾಂ ರಾಜಾ ದ್ರೋಣಾಯ ಚ ಕೃಪಾಯ ಚ ॥23॥
ಧೃತರಾಷ್ಟ್ರನು ದ್ರೋಣರಿಗೂ ಮತ್ತು ಕೃಪರಿಗೂ, ಸುವರ್ಣ ಮಣಿರತ್ನಗಳನ್ನೂ, ಅನೇಕ ವಿಧವಾದ ವಸ್ತ್ರಗಳನ್ನೂ, ವಿಪುಲವಾದ ದಕ್ಷಿಣೆಯನ್ನೂ ಕೊಟ್ಟನು.
ಅಥ ಪುಣ್ಯಾಹಘೋಷಸ್ಯ ಮಹತಃ ಸಮನಂತರಮ್ |
ವಿವಿಶುರ್ವಿವಿಧಂ ಗೃಹ್ಯ ಶಸತ್ರೋಪಕರಣಂ ನೃಪಾಃ ॥24॥
ಆಗ ದೊಡ್ಡ ಪುಣ್ಯಾಹಘೋಷವು ಮುಗಿಯುತ್ತಿರಲು ರಾಜರುಗಳು ತಮ್ಮ ವಿವಿಧಶಸ್ತ್ರಗಳನ್ನೂ ಮತ್ತು ಉಪಕರಣಗಳನ್ನೂ ಹಿಡಿದುಕೊಂಡು ರಂಗಭೂಮಿಯನ್ನು ಪ್ರವೇಶಿಸಿದರು.
ತತೋ ಬದ್ಧಾಂಗುಲಿತ್ರಾಣಾ ಬದ್ಧಕಕ್ಷ್ಯಾ ಮಹಾಬಲಾಃ |
ಬದ್ಧತೂಣಾಃ ಸಧನುಷೋ ವಿವಿಶುರ್ಭರತರ್ಷಭಾಃ ॥25॥
ಅನಂತರ ಬೆರಳುಗಳ ರಕ್ಷಣೆಯನ್ನು ಹಾಕಿಕೊಂಡು, ಸೊಂಟದ ಪಟ್ಟಿಯನ್ನು ಕಟ್ಟಿಕೊಂಡು, ಬೆನ್ನಿಗೆ ಬತ್ತಳಿಕೆಯನ್ನು ಕಟ್ಟಿಕೊಂಡು, ಕೈಯಲ್ಲಿ ಧನುಸ್ಸನ್ನು ಹಿಡಿದು ಮಹಾಬಲರಾದ ಭರತಶ್ರೇಷ್ಠರು ರಂಗಭೂಮಿಯನ್ನು ಪ್ರವೇಶಿಸಿದರು.
ಅನುಜ್ಯೇಷ್ಠಂ ಚ ತೇ ತತ್ರ ಯುಧಿಷ್ಠಿರಪುರೋಗಮಾಃ |
ರಂಗಮಧ್ಯೇ ಸ್ಥಿತಂ ದ್ರೋಣಮಭಿವಾದ್ಯ ನರರ್ಷಭಾಃ ॥26॥
ಯುಧಿಷ್ಠಿರಮೊದಲಾದ ನರರ್ಷಭರು ಜ್ಯೇಷ್ಠಾನುಜ್ಯೇಷ್ಠ ಕ್ರಮದಲ್ಲಿ ಅಲ್ಲಿ ರಂಗಮಧ್ಯದಲ್ಲಿದ್ದ ದ್ರೋಣರಿಗೆ ನಮಸ್ಕರಿಸಿ, ವಿಧಿವತ್ತಾಗಿ ದ್ರೋಣರಿಗೂ ಮತ್ತು ಕೃಪರಿಗೂ ಪೂಜೆಯನ್ನು ಸಲ್ಲಿಸಿದರು.
ಪೂಜಾಂ ಚಕ್ರುರ್ಯಥಾನ್ಯಾಯಂ ದ್ರೋಣಸ್ಯ ಚ ಕೃಪಸ್ಯ ಚ |
ಆಶೀರ್ಭಿಶ್ಚ ಪ್ರಯುಕ್ತಾಭಿಃ ಸರ್ವೇ ಸಂಹೃಷ್ಟಮಾನಸಾಃ ॥27॥
ಅಭಿವಾದ್ಯ ಪುನಃ ಶಸತ್ರನ್ ಬಲಿಪುಷ್ಪೈಃ ಸಮನ್ವಿತಾನ್ |
ರಕ್ತಚಂದನಸಮ್ಮಿಶ್ರೈಃ ಸ್ವಯಮರ್ಚಂತ ಕೌರವಾಃ ॥28॥
ಅವರು ನೀಡಿದ ಆಶೀರ್ವಾದದಿಂದ ಮನಸ್ಸಿನಲ್ಲಿ ಸಂತೋಷಗೊಂಡ ಎಲ್ಲಾ ಕೌರವರೂ ಪುನಃ ಪೂಜಾಪುಷ್ಪಗಳಿಂದ ಸಹಿತವಾಗಿದ್ದ

ಶಸ್ತ್ರಗಳಿಗೆ ನಮಸ್ಕರಿಸಿ ರಕ್ತಚಂದನಮಿಶ್ರವಾದ ಪುಷ್ಪಗಳಿಂದ ಸ್ವತಃ ಪೂಜೆಯನ್ನು ಮಾಡಿದರು.
ಸರ್ವೇ ರಕ್ತಾಂಬರಧರಾಃ ಸರ್ವೇ ವಸ್ತ್ರವಿಭೂಷಣಾಃ |
ರಕ್ತಚಂದನದಿಗ್ಧಾಶ್ಚ ರಕ್ತಮಾಲ್ಯಾನುರಾಗಿಣಃ ॥29॥
ಎಲ್ಲರೂ ರಕ್ತವಸ್ತ್ರವನ್ನುಟ್ಟು, ವಿಭೂಷಣಗಳಿಂದ ಅಲಂಕೃತರಾಗಿ, ರಕ್ತಚಂದನಗಳನ್ನು ಲೇಪಿಸಿಕೊಂಡು, ರಕ್ತಪುಷ್ಪಗಳ ಮಾಲೆಯನ್ನು ಧರಿಸಿದ್ದರು.
ಸರ್ವೇ ರಕ್ತಪತಾಕಾಶ್ಚ ಸರ್ವೇ ರಕ್ತಾಂತಲೋಚನಾಃ |
ದ್ರೋಣೇನ ಸಮನುಜ್ಞಾತಾ ಗೃಹ್ಯ ಶಸ್ತ್ರಂ ಪರಂತಪಾಃ |
ಧನೂಂಷಿ ಪೂರ್ವಂ ಸಂಗೃಹ್ಯ ತಪ್ತಕಾಂಚನಭೂಷಿತಾಃ ॥30॥
ರಕ್ತಪತಾಕೆಯುಳ್ಳವರೂ, ರಕ್ತಾಂತನಯನವುಳ್ಳವರೂ, ಪರಂತಪರಾದ ಅವರೆಲ್ಲರೂ ದ್ರೋಣರ ಅನುಮತಿಯನ್ನು ಪಡೆದು ಕೈಯಲ್ಲಿ ಶಸ್ತ್ರಗಳನ್ನೂ, ಧನುಸ್ಸನ್ನೂ ಹಿಡಿದುಕೊಂಡು ತಪ್ತಸುವರ್ಣಭೂಷಿತರಾಗಿ ಪ್ರವೇಶಿಸಿದರು.
ಸಜ್ಯಾನಿ ವಿವಿಧಾಕಾರೈಃ ಶರೈಃ ಸಂಧಾಯ ಕೌರವಾಃ |
ಜ್ಯಾಘೋಷಂ ತಳಘೋಷಂ ಚ ಕೃತ್ವಾ ಭೂತಾನ್ಯಪೂಜಯನ್ ॥31॥
ಅವರು ತಮ್ಮ ಬಿಲ್ಲಿಗೆ ಹೆದೆಯೇರಿಸಿ, ವಿವಿಧಾಕಾರದ ಬಾಣಗಳನ್ನು ಹೂಡಿ ಜ್ಯಾಘೋಷ ಮತ್ತು ತಳಘೋಷವನ್ನು ಮಾಡಿ ಎಲ್ಲಾ ಭೂತಗಳನ್ನೂ ಪೂಜಿಸಿದರು.
ಚಕ್ರುರಸ್ತ್ರಂ ಮಹಾವೀರ್ಯಾಃ ಕುಮಾರಾಃ ಪರಮಾದ್ಭುತಮ್ |
ಕೇಷಾಂಚಿತ್ ತರುಮೂಲೇಷು ಶರಾ ನಿಪತಿತಾ ನೃಪ |
ಕೇಷಾಂಚಿತ್ ಪುಷ್ಪಮಕುಟೇ ನಿಪತಂತಿ ಸ್ಮ ಸಾಯಕಾಃ ॥32॥
ರಾಜನೇ, ಮಹಾಪರಾಕ್ರಮಿಗಳಾದ ಕುಮಾರರು ಪರಮಾದ್ಭುತವಾದ ಅಸ್ತ್ರಪ್ರಯೋಗವನ್ನು ಮಾಡಿದರು. ಕೆಲವರು ಪ್ರಯೋಗ ಮಾಡಿದ ಬಾಣಗಳು ವೃಕ್ಷಗಳ ಮೂಲದಲ್ಲಿ ಬಿದ್ದವು. ಇನ್ನೂ ಕೆಲವರು ಪ್ರಯೋಗಿಸಿದ ಬಾಣಗಳು ವೃಕ್ಷಗಳ ಪುಷ್ಪಗಳಿಂದ ಕೂಡಿದ ಉನ್ನತ ಭಾಗದಲ್ಲಿ ಬೀಳುತ್ತಿದ್ದವು.
ಕೇಚಿಲ್ಲಕ್ಷಿತಲಕ್ಷ್ಯಾಣಿ ಬಾಣೈರಾಹಿತಲಕ್ಷಣೈಃ |
ವಿವಿಧುರ್ಲಾಘವೋತ್ಸೃಷ್ಟೈರ್ಗುರೂಣಿ ಚ ಲಘೂನಿ ಚ ॥33॥
ಇನ್ನೂ ಕೆಲವರು ಸಣ್ಣ ಮತ್ತು ದೊಡ್ಡ ಪ್ರಮಾಣದ ಲಕ್ಷ್ಯಗಳನ್ನು ಅವುಗಳಿಗೆ ಗುರಿಯಿಟ್ಟು ಲಾಘವದಿಂದ ಪ್ರಯೋಗಿಸಿದ ಬಾಣಗಳಿಂದ ಅವುಗಳನ್ನು ಹೊಡೆಯುತ್ತಿದ್ದರು.
ಕೇಚಿಚ್ಛರಾಕ್ಷೇಪಭಯಾಚ್ಛಿರಾಂಸ್ಯವನನಾಮಿರೇ |
ಮನುಜಾ ಹೃಷ್ಟಮನಸೋ ವೀಕ್ಷಾಂಚಕ್ರುಃ ಸವಿಸ್ಮಯಾಃ ॥34॥
ಕೆಲವರು ತಮ್ಮ ಮೇಲೆ ಬಾಣವು ಬೀಳಬಹುದು ಎಂಬ ಭಯದಿಂದ ತಲೆಗಳನ್ನು ತಗ್ಗಿಸಿ ಕುಳಿತಿದ್ದರು. ಎಲ್ಲಾ ಮನುಜರೂ ಸಂತೋಷ ಮತ್ತು ವಿಸ್ಮಯಗಳಿಂದ ಅಸ್ತ್ರಕೌಶಲವನ್ನು ವೀಕ್ಷಿಸಿದರು.
ತೇ ಸ್ಮ ಲಕ್ಷ್ಯಾಣಿ ಬಿಭಿದುರ್ಬಾಣೈರ್ನಾಮಾಕ್ಷರಂಕಿತೈಃ |
ವಿವಿಧೈರ್ಲಾಘವೋತ್ಸೃಷ್ಟೈರುಹ್ಯಂತೋ ವಾಜಿಭಿರ್ದ್ರುತಮ್ ॥35॥
ರಾಜಕುಮಾರರಾದರೋ, ತಮ್ಮ ಹೆಸರನ್ನು ಕೆತ್ತಿದ ಆಕಾಶದಲ್ಲಿ ಗರಿಗಳ ಸಹಾಯದಿಂದ ಬೇಗ ಹೋಗುವ ಲಾಘವದಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ಲಕ್ಷ್ಯಗಳನ್ನು ಭೇದಿಸಿದರು.
ತತ್ಕುಮಾರಬಲಂ ತತ್ರ ಗೃಹೀತಶರಕಾರ್ಮುಕಮ್ |
ಗಂಧರ್ವನಗರಾಕಾರಂ ಪ್ರೇಕ್ಷಂತೋ ವಿಸ್ಮಿತಾ ಭವನ್ ॥36॥
ಇಚ್ಛಾಮಾತ್ರದಿಂದ ನಿರ್ಮಿಸಿದ ಕಾರಣ, ಗಂಧರ್ವನಗರದಂತೆ ತೋರುತ್ತಿದ್ದ ಬಿಲ್ಲುಬಾಣಗಳನ್ನು ಹಿಡಿದ ರಾಜಕುಮಾರರ ಸಮೂಹವನ್ನು ನೋಡಿ ಎಲ್ಲರೂ ವಿಸ್ಮಿತರಾದರು.
ಸಹಸಾ ಚುಕ್ರುಶುಸ್ತತ್ರ ಶತಶೋಽಥ ಸಹಸ್ರಶಃ |
ವಿಸ್ಮಯೋತ್ಫುಲ್ಲನಯನಾಃ ಚಾಬ್ರುವನ್ ಸಾಧುಸಾಧ್ವಿತಿ ॥37॥
ಅಲ್ಲಿ ಪ್ರೇಕ್ಷಕರು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಇದ್ದಕ್ಕಿದ್ದಂತೆಯೇ ಹರ್ಷೋದ್ಗಾರವನ್ನು ಮಾಡುತ್ತಿದ್ದರು. ವಿಸ್ಮಯದಿಂದ ಅರಳಿದ ಕಣ್ಣುಳ್ಳವರಾಗಿ `ಸಾಧು, ಸಾಧು' ಎಂದು ಉಚ್ಚರಿಸುತ್ತಿದ್ದರು.
ಕೃತ್ವಾ ಧನುಷಿ ತೇ ಮಾರ್ಗಾನ್ ರಥಚರ್ಯಾಸು ಚಾಸಕೃತ್ |
ಗಜಪೃಷ್ಠೇಽಶ್ವಪೃಷ್ಠೇ ಚ ನಿಯುದ್ಧೇ ಚ ಮಹಾಬಲಾಃ ॥38॥
ಗೃಹೀತಖಡ್ಗಚರ್ಮಾಣಸ್ತತೋ ಭೂಯಃ ಪ್ರಹಾರಿಣಃ |
ಶಸ್ತ್ರಮಾರ್ಗಾನ್ ಯಥೋದ್ದಿಷ್ಟಾಂಶ್ಚೇರುಃ ಸರ್ವಾಸು ಭೂಮಿಷು ॥39॥
ಮಹಾಬಲರಾದ ಅವರು ಧನುರ್ಯುದ್ಧದ ಮಾರ್ಗಗಳನ್ನೂ, ರಥಯುದ್ಧದ ಮಾರ್ಗಗಳನ್ನೂ ಅನೇಕ ಬಾರಿ ಪ್ರದರ್ಶಿಸಿ, ಗಜಪೃಷ್ಠದಲ್ಲಿ, ಅಶ್ವಪೃಷ್ಠದಲ್ಲಿ ಮತ್ತು ನಿಯುದ್ಧಗಳಲ್ಲಿ (ಕುಸ್ತಿಯಲ್ಲಿ) ತಮ್ಮ ಕೌಶಲವನ್ನು ತೋರಿಸಿ, ಖಡ್ಗಚರ್ಮಗಳನ್ನು ಹಿಡಿದು ಪ್ರಹಾರವನ್ನು ಮಾಡುತ್ತಾ ಆ ಎಲ್ಲಾ ಪ್ರದೇಶದಲ್ಲಿ ಶಾಸ್ತ್ರೋಕ್ತವಾದ ವಿವಿಧ ಶಸ್ತ್ರಮಾರ್ಗಗಳಲ್ಲಿ ಸಂಚರಿಸಿದರು.
ಲಾಘವಂ ಸೌಷ್ಠವಂ ಶೌರ್ಯಂ ಸ್ಥಿರತ್ವಂ ದೃಢಮುಷ್ಟಿತಾಮ್ |
ದದೃಶುಸ್ತತ್ರ ಸರ್ವೇಷಾಂ ಪ್ರಯೋಗಾನ್ ಖಡ್ಗಚರ್ಮಣಾಮ್ ॥40॥
ಅಲ್ಲಿ ಪ್ರೇಕ್ಷಕರು ಎಲ್ಲಾ ಕುಮಾರರ ಕ್ಷಿಪ್ರತೆಯನ್ನೂ ಸಮೀಚೀನತೆಯನ್ನೂ, ಶೌರ್ಯವನ್ನೂ, ಸ್ಥೈರ್ಯವನ್ನೂ,

ದೃಢಮುಷ್ಟಿತ್ವವನ್ನೂ, ಅವರ ಖಡ್ಗಚರ್ಮ ಪ್ರಯೋಗಗಳಲ್ಲಿ ನೋಡಿದರು.
ಅಥ ತೌ ನಿತ್ಯಸಂಕ್ರುದ್ಧೌ ಸುಯೋಧನವೃಕೋದರೌ |
ಅವತೀರ್ಣೌ ಗದಾಹಸ್ತೌ ಸದ್ವಿಶೃಂಗಾವಿವಾಚಲೌ ॥41॥
ಅನಂತರ, ನಿತ್ಯವೂ ಪರಸ್ಪರ ಕ್ರೋಧವುಳ್ಳ ಭೀಮ ದುರ್ಯೋಧನರು ಎರಡು ಶೃಂಗಗಳುಳ್ಳ ಎರಡು ಪರ್ವತಗಳಂತೆ ಕೈಯಲ್ಲಿ ಗದೆಯನ್ನು ಹಿಡಿದು ರಂಗಭೂಮಿಯನ್ನು ಪ್ರವೇಶಿಸಿದರು.
ಕ್ರೂರಪ್ರೇಕ್ಷೌ ಮಹಾಬಾಹೂ ಪೌರುಷೇ ಪರ್ಯವಸ್ಥಿತೌ |
ಬೃಹಂತೌ ವಾಶಿತಾಹೇತೋಃ ಸಮದಾವಿವ ಕುಂಜರೌ ॥42॥
ಕ್ರೂರದೃಷ್ಟಿಯುಳ್ಳ ಮಹಾಬಾಹುಗಳಾದ ಮಹಾಪೌರುಷ ನಿಷ್ಠರಾದ ಬೃಹತ್ತಾದ ಶರೀರವುಳ್ಳ ಅವರಿಬ್ಬರೂ ಹೆಣ್ಣಾನೆಯ ಸಲುವಾಗಿ ಹೋರಾಡುವ ಎರಡು ಮದಿಸಿದ ಆನೆಗಳಂತೆ ತೋರಿದರು.
ತೌ ಪ್ರದಕ್ಷಿಣಸವ್ಯಾನಿ ಮಂಡಲಾನಿ ಮಹಾಬಲೌ |
ಚೇರತುರ್ನಿರ್ಮಲಗದೌ ಸಮದೌ ವೃಷಭಾವಿವ ॥43॥
ಅವರಿಬ್ಬರೂ ನಿರ್ಮಲವಾದ ಗದೆಯನ್ನು ಹಿಡಿದು ಮದಯುಕ್ತವಾದ ಎರಡು ವೃಷಭಗಳಂತೆ ಮಹಾಬಲದಿಂದ ಕೂಡಿದವರಾಗಿ ದಕ್ಷಿಣ ಮತ್ತು ಸವ್ಯ ಮಂಡಲಗಳಲ್ಲಿ ಸಂಚರಿಸಿದರು.
ಧೃತರಾಷ್ಟ್ರಾಯ ವಿದುರೋ ಗಾಂಧಾರ್ಯೈ ಚ ಮಹಾಮತಿಃ |
ನ್ಯವೇದಯತ ತತ್ ಸರ್ವಂ ಕುಮಾರಾಣಾಂ ಚ ಚೇಷ್ಟಿತಮ್ ॥44॥
ಮಹಾಮತಿಯಾದ ವಿದುರನು ಧೃತರಾಷ್ಟ್ರನಿಗೂ ಮತ್ತು ಗಾಂಧಾರಿಗೂ ಕುಮಾರರ ಎಲ್ಲಾ ಚೇಷ್ಟೆಗಳನ್ನು ತಿಳಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಯತ್ರಿಂಶದಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಮೂವತ್ತೂರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ಕರ್ಣಂ ಹಸ್ತೇ ಪ್ರಗೃಹ್ಯೈವ ಧಾರ್ತರಾಷ್ಟ್ರೋ ಗೃಹಂ ಯಯೌ |
ಪಾರ್ಥಂ ಹಸ್ತೇ ಪ್ರಗೃಹ್ಯೈವ ಭೀಮಃ ಪ್ರಾಯಾತ್ ಸ್ವಮಾಲಯಮ್ ॥
ಕರ್ಣನ ಕೈಹಿಡಿದು ದುರ್ಯೋಧನ ಮನೆಗೆ ಹೋದ ಅರ್ಜುನನ ಕೈಹಿಡಿದು ಭೀಮ ತನ್ನ ಮನೆಗೆ ಹೋದ.
ಪಾರ್ಥೇನ ಕರ್ಣೋ ಹಂತವ್ಯ ಇತ್ಯಾಸೀದ್ ಭೀಮನಿಶ್ಚಯಃ |
ವೈಪರಿತ್ಯೇನ ತಸ್ಯಾಸೀದ್ ದುರ್ಯೋಧನವಿನಿಶ್ಚಯಃ ॥52॥
ತವರ್ಥಂ ನೀತಿಮತುಲಾಂ ಚಕ್ರತುಸ್ತಾವುಭಾವಪಿ ॥53॥
ಅರ್ಜುನನಿಂದ ಕರ್ಣ ಹತನಾಗಬೇಕೆಂಬುದು ಭೀಮನ ನಿಶ್ಚಯ. ಇದಕ್ಕೆ ವಿಪರೀತವಾಗಿ ಕರ್ಣನಿಂದ ಅರ್ಜುನ ಹತನಾಗಬೇಕೆಂದು ದುರ್ಯೋಧನ ತೀರ್ಮಾನಿಸಿದ್ದ.
ತಥೋತ್ಕರ್ಷೇ ಫಲ್ಗುನಸ್ಯ ಯಶಸೋ ವಿಜಯಸ್ಯ ಚ |
ಉದ್ಯೋಗ ಆಸೀದ್ ಭೀಮಸ್ಯ ಧಾರ್ತರಾಷ್ಟ್ರಸ್ಯ ಚಾನ್ಯಥಾ ॥54॥
ಅರ್ಜುನನಿಗೆ ಯಶಸ್ಸು ಮತ್ತು ವಿಜಯ ದಿನೇದಿನೆ ಹೆಚ್ಚುವಂತೆ ಭೀಮನ ಯತ್ನ ನಡೆದಿತ್ತು. ಕರ್ಣನಿಗೆ ಯಶಸ್ಸು ವಿಜಯ ಹೆಚ್ಚುವಂತೆ ದುರ್ಯೋಧನನ ಪ್ರಯತ್ನ ಸಾಗಿತ್ತು.
ಭೀಮಾರ್ಥಂ ಕೇಶವೋಽನ್ಯೇ ಚ ದೇವಾಃ ಫಲ್ಗುನಪಕ್ಷಿಣಃ |
ಆಸನ್ ಯಥೈವ ರಾಮಾದ್ಯಾಃ ಸಂಗ್ರಹೇಣ ಹನೂಮತಃ
ಸುರಾಃ ಸುಗ್ರೀವಪಕ್ಷಸ್ಥಾಃ ಪೂರ್ವಮಾಸಂಸ್ತಥೈವ ಹಿ ॥55॥
ತದರ್ಥಮೇವ ಭೀಮಸ್ಯ ಹ್ಯನುಜತ್ವಂ ಸುರೇಶ್ವರಃ
ಆಪ ಪೂರ್ವಾನುತಾಪೇನ ತೇನ ಭೀಮಸ್ತಥಾಕರೋತ್ ॥56॥
ದುರ್ಯೋಧನಾರ್ಥಂ ಕರ್ಣಸ್ಯ ಪಕ್ಷಿಣೋ ದೈತ್ಯದಾನವಾಃ |
ಆಸುಃ ಸರ್ವೇ ಗ್ಲಹಾವೇತಾವಾಸತುಃ ಕರ್ಣಫಲ್ಗುನೌ ॥57॥
ಹೇಗೆ ಹಿಂದೆ ಹನುಮಂತ ಪರಿಗ್ರಹಿಸಿದನೆಂದು ರಾಮಾದಿ ದೇವತೆಗಳು ಸುಗ್ರೀವನ ಪಕ್ಷ ವಹಿಸಿದರೋ ಹಾಗೇ ಭೀಮನ ಸಂತೋಷಕ್ಕಾಗಿ ಕೃಷ್ಣನೂ ಬೇರೆ ದೇವತೆಗಳೂ ಅರ್ಜುನಪಕ್ಷವನ್ನು ವಹಿಸಿದರು. ಅದಕ್ಕಾಗಿಯೆ ಹಿಂದೆ ತಾನು ಮಾಡಿದ ಅಪರಾಧಕ್ಕೆ ಪಶ್ಚಾತ್ತಾಪಪಟ್ಟು ಇಂದ್ರ ಭೀಮನ ತಮ್ಮನಾಗಿ ಅವತರಿಸಿದ್ದ. ಅದರಿಂದ ಭೀಮ ಅವನಿಗೆ ಅಭಯವನ್ನಿತ್ತ. ದುರ್ಯೋಧನನ ಸಂತೋಷಕ್ಕಾಗಿ ದೈತ್ಯದಾನವರೆಲ್ಲರೂ ಕರ್ಣನ ಪಕ್ಷ ವಹಿಸಿದರು. ಹೀಗೆ ಯುದ್ಧವೆಂಬ ಜೂಜಿನಲ್ಲಿ ಕರ್ಣಾರ್ಜುನರು ಪಣವಾದರು.
* * * *

ನೂರಮೂವತ್ನಾಲ್ಕನೆಯ ಅಧ್ಯಾಯ
(ಭೀಮದುರ್ಯೋಧನರ ಸಲುವಾಗಿ ಪ್ರೇಕ್ಷಕದ್ವೈಧೀಭಾವ, ಅಶ್ವತ್ಥಾಮರಿಂದ ಸಮಾಧಾನ, ಅರ್ಜುನನ ರಂಗಪ್ರವೇಶ ಮತ್ತು ಕೌಶಲ ಪ್ರದರ್ಶನ)
ವೈಶಂಪಾಯನಃ
ಕುರುರಾಜೇ ತು ರಂಗಸ್ಥೇ ಭೀಮೇ ಚ ಬಲಿನಾಂ ವರೇ |
ಪಕ್ಷಪಾತಕೃತಸ್ನೇಹಃ ಸ ದ್ವಿಧೇವಾಭವಜ್ಜನಃ ॥1॥
ಕುರುರಾಜನಾದ ದುರ್ಯೋಧನನೂ, ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನೂ ರಂಗಭೂಮಿಯನ್ನು ಪ್ರವೇಶಿಸುತ್ತಿರಲು ಪ್ರೇಕ್ಷಕರು ತಮ್ಮ ತಮ್ಮ ಪ್ರಿಯನಾಯಕರಲ್ಲಿ ಸ್ನೇಹದಿಂದ ಉಂಟಾದ ಪಕ್ಷಪಾತದಿಂದ ಎರಡು ಭಾಗವಾದರು.
ಜಯ ಹೇ ಕುರುರಾಜೇತಿ ಜಯ ಹೇ ಭೀಮ ಇತ್ಯುತ |
ಪುರುಷಾಣಾಂ ಸುವಿಪುಳಾಃ ಪ್ರಣಾದಾಃ ಸಹಸೋತ್ಥಿತಾಃ ॥2॥
``ಕುರುರಾಜನನಾದ ದುರ್ಯೋಧನನಿಗೆ ಜಯವಾಗಲಿ'' ``ಭೀಮಸೇನನಿಗೆ ಜಯವಾಗಲಿ'' ಎಂಬ ಪ್ರೇಕ್ಷಕಜನರ ವಿಪುಲವಾದ ಅಬ್ಬರಗಳು ಇದ್ದಕ್ಕಿದ್ದಂತೆಯೇ ಕೇಳಿ ಬಂದವು.
ತತಃ ಕ್ಷುಬ್ಧಾರ್ಣವಸಮಂ ರಂಗಮಾಲೋಕ್ಯ ಬುದ್ಧಿಮಾನ್ |
ಭಾರದ್ವಾಜಃ ಪ್ರಿಯಂ ಪುತ್ರಮಶ್ವತ್ಥಾಮಾನಮಬ್ರವೀತ್ ॥3॥
ಆಗ ಕ್ಷುಬ್ಧಸಮುದ್ರದಂತೆ ಇದ್ದ ರಂಗಭೂಮಿಯನ್ನು ನೋಡಿ ಮೇಧಾವಿಗಳಾದ ದ್ರೋಣರು ಪ್ರಿಯಪುತ್ರನಾದ ಅಶ್ವತ್ಥಾಮರನ್ನು ಕುರಿತು ಹೀಗೆ ಹೇಳಿದರು.
ವಾರಯೈತೌ ಮಹಾವೀರ್ಯೌ ಕೃತಯೋಗಾವುಭಾವಪಿ |
ಮಾ ಭೂದ್ ರಂಗಪ್ರಕೋಪೋಽಯಂ ಭೀಮದುರ್ಯೋಧನೋದ್ಭವಃ ॥
ಮಹಾಪರಾಕ್ರಮಿಗಳೂ ಮತ್ತು ಬಹಳ ಪರಿಶ್ರಮವುಳ್ಳವರೂ ಆದ ಇವರಿಬ್ಬರನ್ನು ನಿವಾರಿಸು. ಭೀಮದುರ್ಯೋಧನರ ನಿಮಿತ್ತದಿಂದ ರಂಗಪ್ರಕೋಪವು ಉಂಟಾಗದಿರಲಿ.
ವೈಶಂಪಾಯನಃ
ತತ ಉತ್ಥಾಯ ವೇಗೇನ ಅಶ್ವತ್ಥಾಮಾ ನ್ಯವಾರಯತ್ |
ಗುರೋರಾಜ್ಞಾ ಭೀಮ ಇತಿ ಗಾಂಧಾರೇ ಗುರುಶಾಸನಮ್ |
ಅಲಂ ಯೋಗಕೃತಂ ವೇಗಮಲಂ ಸಾಹಸಮಿತ್ಯುತ ॥5॥
ಆಗ ಗುರುಪುತ್ರರಾದ ಅಶ್ವತ್ಥಾಮರು ತಕ್ಷಣ ಎದ್ದು ``ಭೀಮಸೇನನೇ, ಇದು ಗುರುಗಳ ಆಜ್ಞೆ. ದುರ್ಯೋಧನನೇ ಇದು ಗುರುಗಳ ಆಜ್ಞೆ. ಅಭ್ಯಾಸಜನ್ಯವಾದ ಈ ರಭಸವನ್ನೂ, ಈ ಸಾಹಸವನ್ನೂ ನಿಲ್ಲಿಸಿ'' ಎಂದು ಹೇಳಿ ಅವರಿಬ್ಬರನ್ನೂ ತಡೆದರು.
ತತಸ್ತಾವುದ್ಯತಗದೌ ಗುರುಪುತ್ರೇಣ ವಾರಿತೌ |
ಯುಗಾಂತಾನಿಲಸಂಕ್ಷುಬ್ಧೌ ಮಹಾವೇಗಾವಿವಾರ್ಣವೌ ॥6॥
ಆಗ ಪ್ರಳಯಕಾಲದ ವಾಯುವಿನಂತೆ ಕ್ರುದ್ಧರಾದ, ಮಹಾವೇಗವುಳ್ಳ ಎರಡು ಸಮುದ್ರದಂತಿದ್ದ, ಎತ್ತಿದ ಗದೆಯನ್ನು ಹಿಡಿದಿದ್ದ ಅವರಿಬ್ಬರೂ ಗುರುಪುತ್ರರಿಂದ ನಿವಾರಿಸಲ್ಪಟ್ಟರು.
ತತೋ ರಂಗಾಂಕಣಗತೋ ದ್ರೋಣೋ ವಚನಮಬ್ರವೀತ್ |
ನಿವಾರ್ಯ ವಾದಿತ್ರಗಣಂ ಮಹಾಮೇಘನಿಭಸ್ವನಮ್ ॥7॥
ಅನಂತರ ದ್ರೋಣರು ರಂಗವನ್ನು ಪ್ರವೇಶಿಸಿ ಮಹಾಮೇಘಸ್ವನದಂತಿದ್ದ ವಾದ್ಯಗಳನ್ನು ನಿಲ್ಲಿಸಿ ಹೀಗೆ ಮಾತನಾಡಿದರು.
ಯೋ ಮೇ ಪುತ್ರಾತ್ ಪ್ರಿಯತರಃ ಸರ್ವಾಸ್ತ್ರವಿದುಷಾಂ ವರಃ |
ಐಂದ್ರಿರಿಂದ್ರಾನುಜಸಮಃ ಸ ಪಾರ್ಥೋ ದೃಶ್ಯತಾಮಿತಿ ॥8॥
ನನಗೆ ಮಗನಿಗಿಂತಲೂ ಪ್ರಿಯನಾದ ಎಲ್ಲಾ ಅಸ್ತ್ರವೇತ್ತರಿಗಿಂತಲೂ ಶ್ರೇಷ್ಠನಾದ ಇಂದ್ರನ ಪುತ್ರನಾದ, ಇಂದ್ರನ ತಮ್ಮನಾದ ಉಪೇಂದ್ರನಂತಿರುವ ಅರ್ಜುನನು ಬರುತ್ತಿದ್ದಾನೆ, ಎಲ್ಲರೂ ನೋಡಿ.
ಆಚಾರ್ಯವಚನಾತ್ ಸೋಽಥ ಕೃತಸ್ವಸ್ತ್ಯಯನೋ ಯುವಾ |
ಬದ್ಧಗೋಧಾಂಗುಲಿತ್ರಾಣಃ ಪೂರ್ಣತೂಣಃ ಸಕಾರ್ಮುಕಃ ॥9॥
ಕಾಂಚನಂ ಕವಚಂ ಬಿಭ್ರತ್ ಪ್ರತ್ಯದೃಶ್ಯತ ಫಲ್ಗುನಃ |
ಏಕಃ ಸೇಂದ್ರಾಯುಧತಡಿತ್ ಸಸಂಧ್ಯ ಇವ ತೋಯದಃ ॥10॥
ತತಃ ಸರ್ವಸ್ಯ ರಂಗಸ್ಯ ಸಮುತ್ಪಿಂಜಲಕೋಽಭವತ್ |
ವಾದಿತ್ರಾಣ್ಯಪ್ಯವಾದ್ಯಂತ ಸಶಂಖಾನಿ ಸಮಂತತಃ ॥11॥
ಆಗ ಗುರುಗಳ ವಚನದಂತೆ ಬ್ರಾಹ್ಮಣರ ಆಶೀರ್ವಾದವನ್ನು ಪಡೆದು ಬೆರಳುಗಳಿಗೆ ರಕ್ಷಣೆಯನ್ನು ಹಾಕಿಕೊಂಡು ಬಾಣಗಳು ತುಂಬಿದ ಬತ್ತಳಿಕೆಯನ್ನು ಧರಿಸಿ ಕೈಯಲ್ಲಿ ಧನುಸ್ಸನ್ನು ಹಿಡಿದು ಸುವರ್ಣಮಯವಾದ ಕವಚವನ್ನು ತೊಟ್ಟು ಯುವಕನಾದ ಅರ್ಜುನನು ಸಂಧ್ಯಾಕಾಲದಲ್ಲಿ ಕಾಮನಬಿಲ್ಲು ಮತ್ತು ಮಿಂಚಿನಿಂದ ಕೂಡಿರುವ ಮೋಡದಂತೆ ಕಾಣಿಸಿಕೊಂಡನು. ಆಗ ಪ್ರೇಕ್ಷಕವೃಂದದಲ್ಲಿ ಕೋಲಾಹಲವುಂಟಾಯಿತು. ವಾದ್ಯಗಳು ಮೊಳಗಿದವು. ಎಲ್ಲಾಕಡೆಯಲ್ಲಿಯೂ ಶಂಖಧ್ವನಿಯು ಕೇಳಿಬಂದಿತು.
ಪ್ರೇಕ್ಷಕಃ
ಏಷ ಕುಂತೀಸುತಃ ಶ್ರೀಮಾನೇಷ ಪಾಂಡವಮಧ್ಯಮಃ |
ಏಷ ಪುತ್ರೋ ಮಹೇಂದ್ರಸ್ಯ ಕುರೂಣಾಮೇಷ ರಕ್ಷಿತಾ ॥12॥

ಏಷೋಽಸ್ತ್ರವಿದುಷಾಂ ಶ್ರೇಷ್ಠ ಏಷ ಧರ್ಮಭೃತಾಂ ವರಃ|
ಏಷ ಶೀಲವತಾಂ ಚಾಪಿ ಶೀಲರತ್ನಾಕರೋಽರ್ಜುನಃ ॥13॥
ಇವನು ಕುಂತಿಯ ಮಕ್ಕಳಲ್ಲಿ ಮಧ್ಯದವನಾಗಿ ತೇಜಸ್ವಿಯಾದವನು. ಇವನು ಮಹೇಂದ್ರನ ಪುತ್ರ. ಇವನು ಕುರುಗಳ ರಕ್ಷಣೆಯನ್ನು ಮಾಡುವವನು. ಇವನು ಅಸ್ತ್ರಜ್ಞರಲ್ಲಿ ಶ್ರೇಷ್ಠನಾದವನು. ಇವನು ಧರ್ಮವನ್ನು ಆಚರಿಸುವವರಲ್ಲಿ ಶ್ರೇಷ್ಠನಾದವನು. ಇವನು ಒಳ್ಳೆಯ ಶೀಲವನ್ನು ಹೊಂದಿರುವವರಿಗೆ ಮುಕುಟಮಣಿಯಂತಿರುವವನು.
ವೈಶಂಪಾಯನಃ
ಇತ್ಯೇವಮತುಲಾ ವಾಚಃ ಶೃಣ್ವಂತ್ಯಾಃ ಪ್ರೇಕ್ಷಕೇರಿತಾಃ|
ಕುಂತ್ಯಾಃ ಪ್ರಸ್ರವಸಮ್ಮಿಶ್ರೈರಾಸ್ರೈಃ ಕ್ಲಿನ್ನಮುರೋಽಭವತ್ ॥14॥
ಈ ರೀತಿಯಾಗಿ ಪ್ರೇಕ್ಷಕರು ನುಡಿದ ಅಸದೃಶ ಮಾತುಗಳನ್ನು ಕೇಳಿದ ಕುಂತಿಗೆ ಕಣ್ಣೀರಿನಿಂದಲೂ ಮತ್ತು ಆ ಕ್ಷಣದಲ್ಲಿ ಉತ್ಪನ್ನವಾದ ಸ್ತನ್ಯದಿಂದಲೂ ಎದೆಯು ಒದ್ದೆಯಾಯಿತು.
ತೇನ ಶಬ್ದೇನ ಮಹತಾ ಪೂರ್ಣಶ್ರುತಿರಥಾಬ್ರವೀತ್|
ಧೃತರಾಷ್ಟ್ರೋ ನರಶ್ರೇಷ್ಠೋ ವಿದುರಂ ಹೃಷ್ಟಮಾನಸಃ ॥15॥
ಕಿವಿಗಳನ್ನು ತುಂಬಿಕೊಂಡಂತಿದ್ದ ಆ ದೊಡ್ಡ ಶಬ್ದವನ್ನು ಕೇಳಿ, ನರಶ್ರೇಷ್ಠನಾದ ಧೃತರಾಷ್ಟ್ರನು ಸಂತೋಷದಿಂದ ವಿದುರನಿಗೆ ಹೇಳಿದನು.
ಕ್ಷತ್ತಃ ಕ್ಷುಬ್ಧಾರ್ಣವಸಮಃ ಕಿಮೇಷ ಸುಮಹಾಸ್ವನಃ|
ಸಹಸೈವೋತ್ಥಿತೋ ರಂಗೇ ಭಿಂದನ್ನಿವ ನಭಸ್ತಲಮ್ ॥16॥
ವಿದುರನೇ, ಕ್ಷುಬ್ಧಸಮುದ್ರದಂತಿರುವ ಈ ದೊಡ್ಡ ಶಬ್ದವು ರಂಗಭೂಮಿಯಲ್ಲಿ ಇದ್ದಕ್ಕಿದ್ದಂತೆಯೇ ಉತ್ಪನ್ನವಾಗಿ ಆಕಾಶವನ್ನು ಭೇದಿಸುವಂತೆ ತೋರುತ್ತಿದೆ. ಇದೇನು?
ವಿದುರಃ
ಏಷ ಪಾರ್ಥೋ ಮಹಾಬಾಹುಃ ಕೌಂತೇಯಃ ಪಾಂಡುನಂದನಃ|
ಅವತೀರ್ಣಃ ಸಕವಚಸ್ತತ್ರೈಷ ಜನನಿಸ್ವನಃ ॥17॥
ಪಾಂಡುಪುತ್ರನಾದ, ಕುಂತಿಯ ಮಗನಾದ, ಮಹಾಬಾಹುವಾದ ಅರ್ಜುನನು ಕವಚವನ್ನು ಧರಿಸಿ, ರಂಗಭೂಮಿಯನ್ನು ಪ್ರವೇಶಿಸುತ್ತಿದ್ದಾನೆ. ಅದರಿಂದ ಈ ಜನಗಳ ಶಬ್ದವು ಉಂಟಾಗಿದೆ.
ಧೃತರಾಷ್ಟ್ರಃ
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ರಕ್ಷಿತೋಽಸ್ಮಿ ಮಹಾಮತೇ|
ಪೃಥಾರಣಿಸಮುದ್ಭೂತೈಸ್ತ್ರಿಭಿಃ ಪಾಂಡವವಹ್ನಿಭಿಃ ॥18॥
ಮಹಾಮತಿಯಾದ ವಿದುರನೇ ಕುಂತಿ ಎಂಬ ಅರಣಿಯಿಂದ ಉಂಟಾದ ಪಾಂಡು ಪುತ್ರರಾದ ಈ ಮೂರು ಅಗ್ನಿಗಳಿಂದ ನಾನು ಧನ್ಯನಾಗಿದ್ದೇನೆ, ಅನುಗೃಹೀತನಾಗಿದ್ದೇನೆ ಮತ್ತು ರಕ್ಷಿಸಲ್ಪಟ್ಟಿದ್ದೇನೆ.
ವೈಶಂಪಾಯನಃ
ತಸ್ಮಿನ್ ಪ್ರಮುದಿತೇ ರಂಗೇ ಕಥಂಚಿತ್ ಪರ್ಯವಸ್ಥಿತೇ|
ದರ್ಶಯಾಮಾಸ ಬೀಭತ್ಸುರಾಚಾರ್ಯಾದಸ್ತ್ರಲಾಘವಮ್ ॥19॥
ಆ ಸಂತೋಷಗೊಂಡ ರಂಗಸ್ಥಳವು ಹೇಗೋ ಸ್ವಲ್ಪ ಸಮಾಧಾನಕ್ಕೆ ಬರುತ್ತಿರಲು ಅರ್ಜುನನು ತಾನು ಆಚಾರ್ಯರಿಂದ ಕಲಿತ ಅಸ್ತ್ರಲಾಘವವನ್ನು ಪ್ರದರ್ಶಿಸಿದನು.
ಆಗ್ನೇಯೇನಾಸೃಜದ್ ವಹ್ನಿಂ ವಾರುಣೇನಾಸೃಜತ್ ಪಯಃ|
ವಾಯವ್ಯಾದಸೃಜದ್ ವಾಯುಂ ಪರ್ಜನ್ಯಾದಸೃಜದ್ ಘನಾನ್ ॥20॥
ಭೌಮೇನ ಪ್ರಾಸೃಜದ್ ಭೂಮಿಂ ಪಾರ್ವತೇನಾಸೃಜದ್ ಗಿರಿಮ್|
ಅಂತರ್ಧಾನೇನ ಚಾಸ್ತ್ರೇಣ ಪುನರಂತರ್ಹಿತೋಽಭವತ್ ॥21॥
ಆಗ್ನೇಯಾಸ್ತ್ರದಿಂದ ವಹ್ನಿಯನ್ನು ಸೃಷ್ಟಿಸಿದನು. ವರುಣಾಸ್ತ್ರದಿಂದ ಜಲವನ್ನು ಸೃಷ್ಟಿಸಿದನು. ವಾಯವ್ಯಾಸ್ತ್ರದಿಂದ ವಾಯುವನ್ನು ಸೃಷ್ಟಿಸಿದನು. ಪರ್ಜನ್ಯಾಸ್ತ್ರದಿಂದ ಮೋಡಗಳನ್ನು ಸೃಷ್ಟಿಸಿದನು. ಪೃಥಿವ್ಯಸ್ತ್ರದಿಂದ ಭೂಮಿಯನ್ನೂ, ಪರ್ವತಾಸ್ತ್ರದಿಂದ ಬೆಟ್ಟವನ್ನೂ ಸೃಷ್ಟಿಸಿದನು. ಪುನಃ ಅಂತರ್ಧಾನಾಸ್ತ್ರವನ್ನು ಪ್ರಯೋಗಮಾಡಿ ಅಂತರ್ಧಾನವನ್ನು ಹೊಂದಿದನು.
ಕ್ಷಣಾತ್ ಪ್ರಾಂಶುಃ ಕ್ಷಣಾದ್ ಹ್ರಸ್ವಃ ಕ್ಷಣಾಚ್ಚ ರಥಧೂರ್ಗತಃ|
ಕ್ಷಣೇನ ರಥಮಧ್ಯಸ್ಥಃ ಕ್ಷಣೇನಾವತರನ್ಮಹೀಮ್ ॥22॥
ಒಂದು ಕ್ಷಣದಲ್ಲಿ ಎತ್ತರನಾಗಿ, ಇನ್ನೊಂದು ಕ್ಷಣದಲ್ಲಿ ಚಿಕ್ಕವನಾಗಿ, ಇನ್ನೊಂದು ಕ್ಷಣದಲ್ಲಿ ರಥದ ಮುಂಭಾಗದಲ್ಲಿದ್ದವನಾಗಿ, ಇನ್ನೊಂದು ಕ್ಷಣದಲ್ಲಿ ರಥದ ಮಧ್ಯದಲ್ಲಿದ್ದವನಾಗಿ, ಮುಂದಿನ ಕ್ಷಣದಲ್ಲಿ ಭೂಮಿಯ ಮೇಲೆ ಇಳಿದು ತನ್ನ ಕೌಶಲವನ್ನು ತೋರಿಸಿದನು.
ಸುಕುಮಾರಶ್ಚ ಶೂರಶ್ಚ ಗುರುಶ್ಚಾಪಿ ಗುರುಪ್ರಿಯಃ|
ಸೌಷ್ಠವೇನ ಹಿ ಸಂಯುಕ್ತಃ ಸೋಽವಿಧ್ಯದ್ ವಿವಿಧೈಃ ಶರೈಃ ॥23॥
ಸುಕುಮಾರನೂ, ಶೂರನೂ, ಗುರುಪ್ರಿಯನೂ, ಶ್ರೇಷ್ಠನೂ ಆದ ಅವನು, ಸೌಷ್ಠವದಿಂದ ಕೂಡಿದವನಾಗಿ ಅನೇಕ ಬಾಣಗಳನ್ನು ಪ್ರಯೋಗಿಸಿ ಲಕ್ಷ್ಯಗಳನ್ನು ಭೇದಿಸಿದನು.
ಭ್ರಮತಶ್ಚ ವರಾಹಸ್ಯ ಸಿಂಹಸ್ಯ ಪ್ರಮುಖೇ ಸ್ಥಿತಃ|

ಪಂಚ ಬಾಣಾನ್ ನಸಂಯುಕ್ತಾನ್ ಸ ಮುಮೋಚೈಕಬಾಣವತ್ ॥24॥
ಓಡುತ್ತಿರುವ ವರಾಹ ಮತ್ತು ಸಿಂಹದ ಎದುರಿಗೆ ನಿಂತು ಅಸಂಯುಕ್ತವಾದ ಐದು ಬಾಣಗಳನ್ನು ಒಂದೇ ಬಾಣದಂತೆ ಬಿಟ್ಟನು.
ಗವ್ಯೇ ವಿಷಾಣಕೋಶೇ ಚ ಬಾಲರಜ್ಜ್ವವಲಂಬಿತೇ |
ನಿಚಖಾನ ಮಹಾವೀರಃ ಸಾಯಕಾನೇಕವಿಂಶತಿಮ್॥25॥
ಒಂದು ಸಣ್ಣ ಹಗ್ಗದಿಂದ ತೂಗು ಹಾಕಿದ ಗೋವಿನ ಕೊಂಬಿನೊಳಗೆ, ಮಹಾವೀರನಾದ ಅವನು ಇಪ್ಪತ್ತೊಂದು ಬಾಣಗಳನ್ನು ತೂರಿಸಿದನು.
ಇತ್ಯೇವಮಾದಿ ಸುಮಹತ್ ಖಡ್ಗೇ ಧನುಷಿ ಚಾಭವತ್ |
ಗದಾಯಾಂ ಚಾಸ್ತ್ರಕುಶಲೋ ದರ್ಶಕಾನಾಂ ಪ್ರದರ್ಶಯನ್ ॥26॥
ಇವೇ ಮೊದಲಾದ ಆಶ್ಚರ್ಯಗಳನ್ನು ಖಡ್ಗದಲ್ಲಿಯೂ, ಧನುಸ್ಸಿನಲ್ಲಿಯೂ, ಗದೆಯಲ್ಲಿಯೂ ಅಸ್ತ್ರಕುಶಲನಾದ ಅವನು ದರ್ಶಕರಿಗೆ ತೋರಿಸಿದನು.
ಚಕ್ರತೋಮರಪ್ರಾಸಾನಾಂ ಭಿಂಡಿಪಾಲಪರಶ್ವಧಾನ್ |
ಅನ್ಯೇಷಾಂ ಚಾಪಿ ಶಿಕ್ಷಾಣಾಂ ದರ್ಶಯಾಮಾಸ ಲಾಘವಮ್ ॥27॥
ಚಕ್ರ, ತೋಮರ, ಪ್ರಾಸಗಳ, ಭಿಂಡಿಪಾಲ ಮತ್ತು ಪರಶ್ವಧಗಳ, ಹಾಗೆಯೇ ಇನ್ನೂ ಅನೇಕ ಶಸ್ತ್ರಗಳ ಶಿಕ್ಷಾಲಾಘವವನ್ನೂ ಪ್ರದರ್ಶಿಸಿದನು.
ತತಃ ಸಮಾಪ್ತಭೂಯಿಷ್ಠೇ ತಸ್ಮಿನ್ ಕರ್ಮಣಿ ಭಾರತ |
ಮಂದೀಭೂತೇ ಸಮಾಜೇ ಚ ವಾದಿತ್ರಾಣಾಂ ಚ ನಿಸ್ವನೇ ॥28॥
ದ್ವಾರದೇಶಾತ್ ಸಮುದ್ಭೂತೋ ಮಾಹಾತ್ಮ್ಯಬಲಸೂಚಕಃ |
ವಜ್ರನಿಷ್ಪೇಷಸದೃಶಃ ಶುಶ್ರುವೇ ಭೂರಿನಿಸ್ವನಃ ॥29॥
ಎಲೈ ಭಾರತನೇ, ಅರ್ಜುನನ ಪ್ರದರ್ಶನವು ಮುಗಿಯುತ್ತಾ ಬಂದಿರಲು ಆ ದೊಡ್ಡ ಸಮಾಜದಲ್ಲಿ ವಾದ್ಯಗಳ ಸ್ವನವು ಕ್ಷೀಣವಾಗುತ್ತಿರಲು ದ್ವಾರದೇಶದಲ್ಲಿ ಮಾಹಾತ್ಮ್ಯ ಮತ್ತು ಬಲವನ್ನು ಸೂಚಿಸುವ ವಜ್ರದಂತೆ ಕಠೋರವಾದ ಮಹಾಸ್ವನವು ಕೇಳಿಬಂದಿತು.
ಶೀರ್ಯಂತೇ ಕಿಂ ನು ಗಿರಯಃ ಕಿಂಸ್ವಿದ್ ಭೂಮಿರ್ವಿದೀರ್ಯತೇ |
ಕಿಂಸ್ವಿದಾಪೂರ್ಯತೇ ವ್ಯೋಮ ಜಲಭಾರಸ್ವನೈರ್ಘನೈಃ ॥30॥
ರಾಜನೇ, ಆ ಸ್ವನವನ್ನು ಕೇಳಿದ ತಕ್ಷಣ ಪ್ರೇಕ್ಷಕರಿಗೆ ಏನು ಪರ್ವತಗಳು ಸಿಡಿಯುತ್ತಿವೆಯೋ, ಭೂಮಿಯು ಬಿರಿಯುತ್ತಿದೆಯೋ, ಅಥವಾ ಜಲಪೂರ್ಣವಾದ ಮೋಡಗಳಿಂದ ಆಕಾಶವೆಲ್ಲವೂ ತುಂಬುತ್ತಿದೆಯೋ ಎಂಬ ಬುದ್ಧಿಯು ಉಂಟಾಯಿತು.
ರಂಗಸ್ಯೈವಂ ಮತಿರಭೂತ್ ಕ್ಷಣೇನ ವಸುಧಾಧಿಪ |
ದ್ವಾರಂ ಚಾಭಿಮುಖಾಃ ಸರ್ವೇ ಬಭೂವುಃ ಪ್ರೇಕ್ಷಕಾಸ್ತದಾ ॥31॥
ಪಂಚಭಿರ್ಭ್ರಾತೃಭಿಃ ಪಾರ್ಥೈರ್ದ್ರೋಣಃ ಪರಿವೃತೋ ಬಭೌ |
ಪಂಚತಾರೇಣ ಸಂಯುಕ್ತಃ ಸಾವಿತ್ರೇಣೇವ ಚಂದ್ರಮಾಃ ॥32॥
ಎಲ್ಲಾ ಪ್ರೇಕ್ಷಕರೂ ದ್ವಾರದೇಶದ ಕಡೆಗೆ ಮುಖ ಮಾಡಿ ನೋಡಿದರು. ಪಂಚಪಾಂಡವರಿಂದ ಪರಿವೃತರಾದ ದ್ರೋಣರು, ಸೂರ್ಯನಿಂದ ತೇಜಸ್ಸನ್ನು ಪಡೆದು ಪಂಚನಕ್ಷತ್ರಗಳಿಂದ ಕೂಡಿದ ಎರಡನೆಯ ಚಂದ್ರನಂತೆ ತೋರಿದರು.
ಅಶ್ವತ್ಥಾಮ್ನಾ ಚ ಸಹಿತಂ ಭ್ರಾತೄಣಾಂ ಶತಮೂರ್ಜಿತಮ್ |
ದುರ್ಯೋಧನಮಮಿತ್ರಘ್ನಮುತ್ಥಿತಂ ಪರ್ಯವಾರಯತ್ ॥33॥
ಇನ್ನೊಂದೆಡೆ ಅಶ್ವತ್ಥಾಮರಿಂದ ಸಹಿತವಾದ ದುರ್ಯೋಧನ ಮೊದಲಾದ ಬಲಿಷ್ಠರಾದ ನೂರು ಅಣ್ಣತಮ್ಮಂದಿರ ಸಮೂಹವು ಮೇಲೆದ್ದು ಸುತ್ತುವರಿಯಿತು.
ಸ ತೈಸ್ತದಾ ಭ್ರಾತೃಭಿರುದ್ಯತಾಯುಧೈ
ರ್ವೃತೋ ಗದಾಪಾಣಿರವಸ್ಥಿತಃ ಸ್ಥಿರಃ |
ಬಭೌ ತದಾ ದಾನವಸಂಕ್ಷಯೇ ಪುರಾ
ಪುರಂದರೋ ದೇವಗಣೈರಿವಾವೃತಃ ॥34॥
ಆಗ ಅಶ್ವತ್ಥಾಮರು, ಕೈಗಳಲ್ಲಿ ಆಯುಧವನ್ನು ಹಿಡಿದ ಸಹೋದರರಿಂದ ಸುತ್ತುವರಿಯಲ್ಪಟ್ಟು ಕೈಯಲ್ಲಿ ಗದೆಯನ್ನು ಹಿಡಿದು ಸ್ಥಿರವಾಗಿ ನಿಂತು ಹಿಂದೆ ದೇವಾಸುರ ಯುದ್ಧದಲ್ಲಿ ದೇವಗಣಗಳಿಂದ ಆವೃತನಾದ ಇಂದ್ರನಂತೆ ಶೋಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುಃತ್ರಿಂಶದಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ತದೈವ ಕರ್ಣ ಆಗತ್ಯ ರಾಮೋಪಾತ್ತಾಸ್ತ್ರಸಂಪದಮ್ |

ದರ್ಶಯನ್ನಧಿಕಃ ಪಾರ್ಥಾದಭೂದ್ ರಾಜನ್ಯಸಂಸದಿ ॥35॥
ಅದೇ ಸಮಯದಲ್ಲಿ ಕರ್ಣನು ಬಂದು ಪರಶುರಾಮರಿಂದ ಕಲಿತಿದ್ದ ಅಸ್ತ್ರಸಂಪತ್ತನ್ನು ರಾಜರುಗಳ ಸಮ್ಮುಖದಲ್ಲಿ ಪ್ರದರ್ಶಿಸಿ ಅರ್ಜುನನಿಗಿಂತ ಮೇಲೆನೆನಿಸಿದ.
ಕುಂತೀ ನಿಜಂ ಸುತಂ ಜ್ಞಾತ್ವಾ ಲಜ್ಜಯಾ ನಾವದಚ್ಚ ತಮ್ |
ಪಾರ್ಥೋऽಸಹಂಸ್ತಂ ಯುದ್ಧಾಯೈವಾಹ್ವಯಾಮಾಸ ಸಂಸದಿ ॥36॥
ಕುಂತಿ ಕರ್ಣನನ್ನು ತನ್ನ ಮಗನೆಂದು ತಿಳಿದರೂ ಲಜ್ಜೆಯಿಂದ ಮಗನೆಂದು ಕರೆದು ಮಾತಾಡಲಿಲ್ಲ. ಅರ್ಜುನ ಕರ್ಣನ ಪಾಂಡಿತ್ಯವನ್ನು ಸಹಿಸದೆ ಸಭೆಯಲ್ಲಿ ಅವನನ್ನು ಯುದ್ಧಕ್ಕೆ ಆಹ್ವಾನಿಸಿದ.
ರಣಾಯಾಕ್ಷತ್ರಿಯಾಹ್ವಾನಂ ಜಾನನ್ ಧರ್ಮಪ್ರತೀಪಕಮ್ |
ಭೀಮೋ ನಿವಾರ್ಯ ಬೀಭತ್ಸುಂ ಕರ್ಣಾಯಾದಾತ್ ಪ್ರತೋದಕಮ್ ॥
ಕ್ಷತ್ರಿಯನಲ್ಲದವನನ್ನು ಯುದ್ಧಕ್ಕೆ ಕರೆಯುವುದು ಧರ್ಮ ವಿರುದ್ಧವಾಗುವುದು ಎಂದು ತಿಳಿದ ಭೀಮ ಅರ್ಜುನನನ್ನು ತಡೆದು ನಿಲ್ಲಿಸಿ ಕರ್ಣನ ಕೈಗೆ ಚಾಬುಕನ್ನು ನೀಡಿದ.
ಅಕ್ಷತ್ರ ಸಂಸ್ಕಾರ ಯುತೋ ಜಾತೋऽಪಿ ಕ್ಷತ್ರಿಯೇ ಕುಲೇ |
ನ ಕ್ಷತ್ರಿಯೋ ಹಿ ಭವತಿ ಯಥಾ ವ್ರಾತ್ಯೋ ದ್ವಿಜೋತ್ತಮಃ ॥38॥
`ಬ್ರಾಹ್ಮಣನಾಗಿ ಹುಟ್ಟಿಯೂ ಉಪನಯನಾದಿ ಸಂಸ್ಕಾರವಿಲ್ಲದಿದ್ದರೆ ಬ್ರಾಹ್ಮಣನೆನಿಸುವುದಿಲ್ಲ ಹೇಗೋ ಹಾಗೇ ಕ್ಷತ್ರಿಯಕುಲದಲ್ಲಿ ಹುಟ್ಟಿದವನೂ ಕ್ಷತ್ರಿಯ ಸಂಸ್ಕಾರ ಉಳ್ಳವನಾಗದಿದ್ದರೆ ಕ್ಷತ್ರಿಯನೆನಿಸುವುದಿಲ್ಲ' ಎಂದ.
ನಿರುತ್ತರೇ ಕೃತೇ ಕರ್ಣೇ ಭೀಮೇನೈವ ಸುಯೋಧನಃ |
ಅಭ್ಯಷೇಚಯದಂಗೇಷು ರಾಜಾನಂ ಪಿತ್ರನುಜ್ಞಯಾ ॥39॥
ಧೃತರಾಷ್ಟ್ರಃ ಪಕ್ಷಪಾತಾತ್ ಪುತ್ರಸ್ಯಾನುವಶೋऽಭವತ್ ॥40॥
ಭೀಮ ಹೀಗೆ ಕರ್ಣನನ್ನು ನಿರುತ್ತರಗೊಳಿಸಿದಾಗ ಸುಯೋಧನ ತಂದೆಯಿಂದ ಅನುಜ್ಞೆ ಪಡೆದು ಕರ್ಣನನ್ನು ಅಂಗರಾಜ್ಯದಲ್ಲಿ ರಾಜನನ್ನಾಗಿ ಅಭಿಷೇಕ ಮಾಡಿದ. ಧೃತರಾಷ್ಟ್ರ ಮಗನಲ್ಲಿ ಪಕ್ಷಪಾತದಿಂದ ಅವನಿಗೆ ವಶನಾಗಿದ್ದ.
* * * *

ನೂರಮೂವತ್ತೈದನೆಯ ಅಧ್ಯಾಯ
(ಕರ್ಣನ ರಂಗಪ್ರವೇಶ, ಅರ್ಜುನನನ್ನು ಮೀರಿಸಿ ಕೌಶಲ ಪ್ರದರ್ಶನ, ಕರ್ಣಾರ್ಜುನರ ವಿರೋಧ, ದುರ್ಯೋಧನನಿಂದ ಅಂಗರಾಜ್ಯದಲ್ಲಿ ಕರ್ಣನ ಅಭಿಷೇಕ)
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ತಸ್ಮಿನ್ ಜನಸಮಾಗಮೇ |
ದತ್ತೇऽವಕಾಶೇ ಪುರುಷೈಃವಿಸ್ಮಯೋತ್ಫುಲ್ಲಲೋಚನೈಃ |
ವಿವೇಶ ರಂಗಂ ವಿಸ್ತೀರ್ಣಂ ಕರ್ಣಃ ಪರಪುರಂಜಯಃ ॥1॥
ಇದೇ ಸಮಯದಲ್ಲಿ ಆ ಜನರ ಸಮೂಹದಲ್ಲಿ ಸ್ವಲ್ಪ ಅವಕಾಶವು ದೊರೆಯುತ್ತಿರಲು, ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳ ಜನರಿಂದ ನೋಡಲ್ಪಟ್ಟವನಾಗಿ, ಪರಪುರಂಜಯನಾದ ಕರ್ಣನು ವಿಸ್ತೀರ್ಣವಾದ ರಂಗಸ್ಥಳವನ್ನು ಪ್ರವೇಶಿಸಿದನು.
ಸಹಜಂ ಕವಚಂ ಬಿಭ್ರತ್ ಕುಂಡಲೋದ್ಯೋತಿತಾನನಃ |
ಸಧನುರ್ಬದ್ಧನಿಸಿತ್ರಂಶಃ ಸಾಕ್ಷಾದಿವ ದಿವಾಕರಃ
ಸ ಕಾನೀನಃ ಪೃಥುಯಶಾಃ ಪೃಥಾಯಾಃ ಪೃಥುಲೋಚನಃ ॥2॥
ಅವನು ಸಹಜವಾದ ಕವಚವನ್ನು ಧರಿಸಿ ಕರ್ಣಕುಂಡಲಗಳಿಂದ ಶೋಭಿಸುವ ಮುಖವುಳ್ಳವನಾಗಿ, ಕೈಯಲ್ಲಿ ಧನುಸ್ಸನ್ನು ಹಿಡಿದು ಸೊಂಟದಲ್ಲಿ ಕತ್ತಿಯನ್ನು ಕಟ್ಟಿ ಸಾಕ್ಷಾತ್‌ಸೂರ್ಯನಂತೆ ತೋರುತ್ತಿದ್ದನು. ದೀರ್ಘಲೋಚನನೂ, ವಿಸ್ತಾರವಾದ ಕೀರ್ತಿಯುಳ್ಳವನೂ ಆದ ಅವನು ಕುಂತಿಗೆ ಕನ್ಯಾವಸ್ಥೆಯಲ್ಲಿ ಹುಟ್ಟಿದ ಪುತ್ರ.
ತೀಕ್ಷ್ಣಾಂಶೋರ್ಭಾಸ್ಕರಸ್ಯಾಂಶಃ ಕರ್ಣೋऽರಿಗಣನಾಶನಃ |
ಸಿಂಹರ್ಷಭಗಜೇಂದ್ರಾಣಾಂ ತುಲ್ಯವೀರ್ಯಪರಾಕ್ರಮಃ ॥3॥
ಕರ್ಣನು ತಿಗ್ಮಾಂಶುವಾದ ಸೂರ್ಯನ ಅಂಶ. ಶತ್ರುಸಮೂಹವನ್ನು ನಾಶಮಾಡುವವನು. ಸಿಂಹ, ವೃಷಭ ಮತ್ತು ಗಜೇಂದ್ರಗಳಿಗೆ ಸಮಾನವಾದ ವೀರ್ಯ ಮತ್ತು ಪರಾಕ್ರಮಗಳನ್ನು ಹೊಂದಿದವನು.
ದೀಪ್ತಿಕಾಂತಿದ್ಯುತಿಗುಣೈಃ ಸೂರ್ಯೇಂದುಜ್ವಲನೋಪಮಃ |
ಪ್ರಾಂಶುಃ ಕನಕತಾಲಾಭಃ ಸಿಂಹಸಂಹನನೋ ಯುವಾ ॥4॥
ಅವನ ದೀಪ್ತಿ, ಕಾಂತಿ ಮತ್ತು ದ್ಯುತಿ ಗುಣಗಳಲ್ಲಿ ಕ್ರಮವಾಗಿ ಸೂರ್ಯ, ಚಂದ್ರ ಮತ್ತು ಅಗ್ನಿಯನ್ನು ಹೋಲುತ್ತಿದ್ದನು. ಎತ್ತರವಾದ ಆಕೃತಿಯನ್ನು ಹೊಂದಿ ಕನಕತಾಲದ ಬಣ್ಣವನ್ನು ಹೊಂದಿ ಸಿಂಹದಂತೆ ಶರೀರವುಳ್ಳವನಾಗಿ ಯುವಕನಾಗಿದ್ದನು.
ಪ್ರಸಂಖ್ಯೇಯಗುಣಃ ಶ್ರೀಮಾನ್ ಭಾಸ್ಕರಸ್ಯಾತ್ಮಸಂಭವಃ |
ಸ ಸಮೀಕ್ಷ್ಯ ಮಹಾಬಾಹುಃ ಸರ್ವತೋ ರಂಗಮಂಡಪಮ್ ॥5॥
ಪ್ರಣಾಮಂ ದ್ರೋಣಕೃಪಯೋರ್ನಾಮಪೂರ್ವಮಥಾಕರೋತ್ |
ಸ ಸಮಾಜೇ ಜನಃ ಸರ್ವೋ ನಿಶ್ಚಲಃ ಸ್ಥಿರಲೋಚನಃ ॥6॥
ಸೂರ್ಯನ ಸ್ವಂತ ಪುತ್ರನಾದ ಅವನು ಕಾಂತಿಯುಕ್ತನೂ, ಎಣಿಸಬೇಕಾದ ಅನೇಕ ಗುಣಗಳುಳ್ಳವನೂ ಆಗಿದ್ದನು. ಆ ಮಹಾಬಾಹುವು

ರಂಗಮಂಟಪವನ್ನು ಎಲ್ಲಾ ಕಡೆಯಲ್ಲಿಯೂ ನೋಡಿ ತನ್ನ ನಾಮವನ್ನು ಉಚ್ಚರಿಸಿ ದ್ರೋಣ ಮತ್ತು ಕೃಪರಿಗೆ ನಮಸ್ಕಾರವನ್ನು ಮಾಡಿದನು.
ಕೋಽಯಮಿತ್ಯಾಗತಕ್ಷೋಭಃ ಕೌತೂಹಲಪರೋಽಭವತ್ |
ಸೋಽಬ್ರವೀನ್ಮೇಘಧೀರೇಣ ಸ್ವರೇಣ ವದತಾಂ ವರಃ ॥7॥
ಆ ಸಮೂಹದಲ್ಲಿದ್ದ ಜನರೆಲ್ಲರೂ ಅಲುಗಾಡದೇ ಕುಳಿತು ನೆಟ್ಟದೃಷ್ಟಿಯಿಂದ ಅವನನ್ನು ನೋಡುತ್ತಾ ಇವನು ಯಾರು ಎಂದು ತಿಳಿಯದೇ ಕ್ಷೋಭೆಗೆ ಒಳಗಾಗಿ ಕುತೂಹಲಯುಕ್ತರಾದರು.
ಭ್ರಾತಾ ಭ್ರಾತರಮಜ್ಞಾತಂ ಸಾವಿತ್ರಃ ಪಾಕಶಾಸನಿಮ್ |
ಪಾರ್ಥ ಯತ್ ತೇ ಕೃತಂ ಕರ್ಮ ವಿಶೇಷವದಹಂ ತತಃ |
ಕರಿಷ್ಯೇ ಪಶ್ಯತಾಂ ನೃಣಾಂ ಮಾ ಭೂದಾತ್ಮನಿ ವಿಸ್ಮಯಃ ॥8॥
ಮಾತನಾಡುವವರಲ್ಲಿ ಶ್ರೇಷ್ಠನಾದ, ಸೂರ್ಯನ ಮಗನಾದ ಅವನು ಇಂದ್ರನ ಮಗನಾದ ಅರ್ಜುನನನ್ನು ತನ್ನ ತಮ್ಮನೆಂದು ತಿಳಿಯದೇ, ಮೇಘಗಂಭೀರ ಸ್ವರದಿಂದ ಮಾತನಾಡಿದನು. ಅರ್ಜುನನೇ, ನೀನು ಏನು ಮಾಡಿದ್ದೀಯೋ ಅದಕ್ಕಿಂತ ಹೆಚ್ಚಿನ ಕೌಶಲವನ್ನು ಈ ಎಲ್ಲಾ ಜನರು ನೋಡುತ್ತಿರುವಂತೆ ನಾನು ಮಾಡಿ ತೋರಿಸುವೆನು. ನಾನೇ ಶ್ರೇಷ್ಠನೆಂದು ಗರ್ವಪಡಬೇಡ.
ವೈಶಂಪಾಯನಃ
ಅಸಮಾಪ್ತೇ ತತಸ್ತಸ್ಯ ವಚನೇ ವದತಾಂ ವರ |
ಯಂತ್ರಕ್ಷಿಪ್ತ ಇವ ಕ್ಷಿಪ್ರಮುತ್ಥಿತಃ ಸರ್ವತೋ ಜನಃ ॥9॥
ಎಲೈ ಮಾತನಾಡುವವರಲ್ಲಿ ಶ್ರೇಷ್ಠನಾದ ಜನಮೇಜಯನೇ, ಕರ್ಣನ ಮಾತುಗಳು ಮುಗಿಯುವುದಕ್ಕಿಂತ ಮುಂಚೆಯೇ ಎಲ್ಲಾ ಜನರು ಯಂತ್ರದಿಂದ ಚಿಮ್ಮಿದವರಂತೆ ಬೇಗ ಎದ್ದು ನಿಂತರು.
ಪ್ರೀತಿಶ್ಚ ಪುರುಷವ್ಯಾಘ್ರ ದುರ್ಯೋಧನಮುಪಾಸ್ಪೃಶತ್ |
ಹ್ರೀಶ್ಚ ಕ್ರೋಧಶ್ಚ ಬೀಭತ್ಸುಂ ಕ್ಷಣೇನ ತ್ವಾವಿವೇಶ ಹ ॥10॥
ಪುರುಷವ್ಯಾಘ್ರನೇ, ದುರ್ಯೋಧನನಿಗೆ ಬಹಳ ಸಂತೋಷವುಂಟಾಯಿತು. ಆದರೆ ಅರ್ಜುನನನ್ನು ನಾಚಿಕೆ ಮತ್ತು ಕ್ರೋಧಗಳು ಒಂದೇ ಕ್ಷಣದಲ್ಲಿ ಆವರಿಸಿದವು.
ತತೋ ದ್ರೋಣಾಭ್ಯನುಜ್ಞಾತಃ ಕರ್ಣಃ ಪ್ರಿಯತರಸ್ತದಾ |
ಯತ್ ಕೃತಂ ಕರ್ಮ ಪಾರ್ಥೇನ ನ್ಯಕ್ಚಕಾರ ಮಹಾಬಲಃ ॥11॥
ಅನಂತರ ದ್ರೋಣರ ಅನುಜ್ಞೆಯನ್ನು ಪಡೆದು ದುರ್ಯೋಧನನಿಗೆ ಪ್ರಿಯತರನಾದ ಮಹಾಬಲನಾದ ಕರ್ಣನು ಅರ್ಜುನ ಮಾಡಿದುದೆಲ್ಲವನ್ನೂ ಅವನಿಗಿಂತ ಅತಿಶಯವಾಗಿ ಮಾಡಿ ತೋರಿಸಿ ಅರ್ಜುನನ ಕೌಶಲವನ್ನು ತಿರಸ್ಕರಿಸಿದನು.
ಅಥ ದುರ್ಯೋಧನಸ್ತತ್ರ ಭ್ರಾತೃಭಿಃ ಸಹ ಭಾರತ |
ಕರ್ಣಂ ಪರಿಷ್ವಜ್ಯ ಮುದಾ ತದಾ ವಚನಮಬ್ರವೀತ್ ॥12॥
ಅನಂತರ, ಭಾರತನೇ, ದುರ್ಯೋಧನನು ತನ್ನ ತಮ್ಮಂದಿರ ಜೊತೆಯಲ್ಲಿ ಬಂದು ಕರ್ಣನನ್ನು ಆಲಿಂಗಿಸಿ ಸಂತೋಷದಿಂದ ಹೀಗೆ ಮಾತನಾಡಿದನು.
ಸ್ವಾಗತಂ ತೇ ಮಹಾಬಾಹೋ ದಿಷ್ಟ್ಯಾ ಪ್ರಾಪ್ತೋಽಸಿ ಮಾನದ |
ಅಹಂ ಚ ಕುರುರಾಷ್ಟ್ರಂ ಚ ಯಥೇಷ್ಟಮುಪಭುಜ್ಯತಾಮ್ ॥13॥
ಮಹಾಬಾಹುವೇ, ನಿನಗೆ ಸ್ವಾಗತ. ಮಾನದನೇ, ಅದೃಷ್ಟದಿಂದ ನೀನು ಇಲ್ಲಿಗೆ ಪ್ರಾಪ್ತನಾಗಿದ್ದೀಯೆ. ನಾನು ಮತ್ತು ಕುರುರಾಷ್ಟ್ರವೆಲ್ಲವನ್ನೂ ನಿನ್ನ ಮನಸ್ಸಿಗೆ ಬಂದಂತೆ ಭೋಗಿಸು.
ಕರ್ಣಃ
ಕೃತಂ ಸರ್ವೇಣ ಮೇ ರಾಜನ್ ಸಖಿತ್ವಂ ಭವತಾ ವೃಣೇ |
ದ್ವಂದ್ವಯುದ್ಧಂ ಚ ಪಾರ್ಥೇನ ಕರ್ತುಮಿಚ್ಛಾಮಿ ಭಾರತ ॥14॥
ರಾಜನೇ, ನನಗೆ ಯಾವುದೂ ಬೇಡ. ನಿನ್ನ ಸ್ನೇಹವೊಂದನ್ನು ಬೇಡುತ್ತೇನೆ. ಭಾರತನೇ, ಅರ್ಜುನನ ಜೊತೆಯಲ್ಲಿ ದ್ವಂದ್ವಯುದ್ಧವನ್ನು ಮಾಡಲು ಬಯಸುತ್ತೇನೆ.
ವೈಶಂಪಾಯನಃ
ತತಃ ಕ್ಷಿಪ್ತಮಿವಾತ್ಮಾನಂ ಮತ್ವಾ ಪಾರ್ಥೋಽಭ್ಯಭಾಷತ |
ಕರ್ಣಂ ಭ್ರಾತೃಸಮೂಹಸ್ಯ ಮಧ್ಯೇಽಚಲಮಿವ ಸ್ಥಿತಮ್ ॥15॥
ಆಗ ತಾನು ನಿಂದೆಗೆ ಒಳಗಾದೆನೆಂದು ತಿಳಿದು ಭ್ರಾತೃಸಮೂಹದ ಮಧ್ಯದಲ್ಲಿ ಅಲುಗಾಡದೇ ನಿಂತ ಕರ್ಣನನ್ನು ಕುರಿತು ಅರ್ಜುನನು ಮಾಡನಾಡಿದನು.
ಅನಾಹೂತೋಪಸೃಷ್ಟಾನಾಮನಾಹೂತೋಪಜಲ್ಪಿತಾಮ್ |
ಯೇ ಲೋಕಾಸ್ತಾನ್ ಹತಃ ಕರ್ಣ ಮಯಾ ತ್ವಂ ಪ್ರತಿಪತ್ಸ್ಯಸೇ ॥16॥
ಕರ್ಣನೇ, ಆಹ್ವಾನವಿಲ್ಲದೇ ಬಂದವರಿಗೆ, ಆಹ್ವಾನವಿಲ್ಲದೇ ಮಾತನಾಡುವವರಿಗೆ, ಯಾವ ಲೋಕಗಳಿವೆಯೋ, ನನ್ನಿಂದ ಹತನಾಗಿ ನೀನು ಈ ದಿನ ಆ ಲೋಕಗಳನ್ನು ಹೊಂದುವಿ.
ಕರ್ಣಃ
ರಂಗೋಽಯಂ ಸರ್ವಸಾಮಾನ್ಯಃ ಕಿಮತ್ರ ತವ ಫಲ್ಗುನ |
ವೀರ್ಯಶ್ರೇಷ್ಠಾಶ್ಚ ರಾಜನ್ಯಾ ಬಲಂ ಧರ್ಮೋಽನುವರ್ತತೇ ॥17॥

ಫಲ್ಗುನ, ರಂಗಭೂಮಿಯು ಎಲ್ಲರಿಗೂ ಸೇರಿದುದು. ಇಲ್ಲಿ ನಿನ್ನ ವಿಶೇಷವೇನು? ರಾಜರು ಯಾವಾಗಲೂ ವೀರ್ಯಶ್ರೇಷ್ಠರಾದವರು. ಬಲವನ್ನು ಧರ್ಮವು ಹಿಂಬಾಲಿಸುತ್ತದೆ.
ಕಿಂ ಕ್ಷೇಪೈಃ ದುರ್ಬಲಾಯಾಸ್ಯೈಃ ಶರೈಃ ಕಥಯ ಭಾರತ |
ಗುರೋಃ ಸಮಕ್ಷಂ ಯಾವತ್ ತೇ ಹರಾಮ್ಯದ್ಯ ಶಿರಃ ಶರೈಃ ॥18॥
ದುರ್ಬಲರನ್ನು ಆಯಾಸಗೊಳಿಸುವ ನಿಂದೆಯ ಮಾತುಗಳಿಂದ ಏನು ಪ್ರಯೋಜನ? ಭಾರತನೇ, ಬಾಣಗಳಿಂದ ಮಾತನಾಡು. ಗುರುಗಳ ಎದುರಿನಲ್ಲಿ ಈ ದಿನ ನನ್ನ ಬಾಣಗಳಿಂದ ನಿನ್ನ ಶಿರಸ್ಸನ್ನು ಕತ್ತರಿಸುತ್ತೇನೆ.
ವೈಶಂಪಾಯನಃ
ತತೋ ದ್ರೋಣಾಭ್ಯನುಜ್ಞಾತಃ ಪಾರ್ಥಃ ಪರಪುಂಜಯಃ |
ಭ್ರಾತೃಭಿಸ್ತ್ವರಯಾಽಽಶ್ಲಿಷ್ಟೋ ರಣಾಯೋಪಜಗಾಮ ತಮ್ ॥19॥
ಅನಂತರ ದ್ರೋಣರ ಅನುಮತಿಯನ್ನು ಪಡೆದು ಸಹೋದರರಿಂದ ಶೀಘ್ರವಾಗಿ ಆಲಿಂಗಿಸಲ್ಪಟ್ಟು ಪರಪುರಂಜಯನಾದ ಅರ್ಜುನನು ಯುದ್ಧಕ್ಕಾಗಿ ಕರ್ಣನನ್ನು ಸಮೀಪಿಸಿದನು.
ತತೋ ದುರ್ಯೋಧನೇನಾಪಿ ಸಭ್ರಾತ್ರಾ ಸಮರೋದ್ಯತಃ |
ಪರಿಷ್ವಕ್ತಃ ಸ್ಥಿತಃ ಕರ್ಣಃ ಪ್ರಗೃಹ್ಯ ಸಶರಂ ಧನುಃ ॥20॥
ಆಗ ದುರ್ಯೋಧನ ಮತ್ತು ಅವನ ತಮ್ಮಂದಿರಿಂದ ಆಲಿಂಗನವನ್ನು ಪಡೆದ ಕರ್ಣನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಸಮರೋದ್ಯತನಾಗಿ ನಿಂತನು.
ತತಃ ಸವಿದ್ಯುತ್ಸ್ತನಿತೈಃ ಸೇಂದ್ರಾಯುಧಪುರೋಜಲೈಃ |
ಆವೃತಂ ಗಗನಂ ಮೇಘೈರ್ಬಲಾಕಾಪಂಕ್ತಿ ಭಾಸಿಭಿಃ ॥21॥
ಆಗ ಆಕಾಶವು ಗುಡುಗು, ಮಿಂಚು, ಕಾಮನಬಿಲ್ಲು ಮತ್ತು ತುಂತುರು ಹನಿಗಳಿಂದ ಕೂಡಿದ ಮೋಡಗಳಿಂದಲೂ, ಬಲಾಕಾಪಕ್ಷಿಗಳ ಸಾಲನ್ನು ಬೆಳಗುವ ಮೋಡಗಳಿಂದಲೂ ಆಚ್ಛಾದಿತವಾಯಿತು.
ತತಃ ಸ್ನೇಹಾದ್ಧರಿಹಯಂ ದೃಷ್ಟ್ವಾ ರಂಗಾವಲೋಕನಮ್ |
ಭಾಸ್ಕರೋಽಪ್ಯನಯನ್ನಾಶಂ ಸಮೀಪೋಪಗತಾನ್ ಘನಾನ್ ॥22॥
ಆಗ ತನ್ನ ಮಗನ ಮೇಲಿನ ಸ್ನೇಹದಿಂದ ರಂಗಭೂಮಿಯನ್ನು ನೋಡುತ್ತಿದ್ದ ಇಂದ್ರನನ್ನು ನೋಡಿ, ಸೂರ್ಯನು ತನ್ನ ಸಮೀಪದಲ್ಲಿದ್ದ ಮೋಡಗಳನ್ನು ನಾಶಪಡಿಸಿದನು.
ಮೇಘಚ್ಛಾಯೋಪಗೂಢಶ್ಚ ತತೋಽದೃಶ್ಯತ ಪಾಂಡವಃ |
ಸೂರ್ಯಾತಪಪರಿಷ್ವಕ್ತಃ ಕರ್ಣೋಽಪಿ ಸಮದೃಶ್ಯತ ॥23॥
ಆಗ ಮೇಘಚ್ಛಾಯೆಯಿಂದ ಆವೃತನಾದ ಅರ್ಜುನನನ್ನೂ ಸೂರ್ಯನ ಬಿಸಿಲಿನಲ್ಲಿ ನಿಂತಿರುವ ಕರ್ಣನನ್ನೂ ಎಲ್ಲರೂ ನೋಡಿದರು.
ಧಾರ್ತರಾಷ್ಟ್ರಾ ಯತಃ ಕರ್ಣಸ್ತಸ್ಮಿನ್ ದೇಶೇ ವ್ಯವಸ್ಥಿತಾಃ |
ಭಾರದ್ವಾಜಃ ಕೃಪೋ ಭೀಷ್ಮೋ ಯತಃ ಪಾರ್ಥಸ್ತತೋಽಭವನ್ ॥24॥
ದುರ್ಯೋಧನ ಮೊದಲಾದವರೆಲ್ಲರೂ ಕರ್ಣನ ಸಮೀಪದಲ್ಲಿ ನಿಂತರು. ದ್ರೋಣ, ಕೃಪ ಮತ್ತು ಭೀಷ್ಮರು ಇದ್ದ ಕಡೆ ಅರ್ಜುನನು ನಿಂತನು.
ದ್ವಿಧಾ ರಂಗಃ ಸಮಭವತ್ ಸ್ತ್ರೀಣಾಂ ದ್ವೈಧಮಜಾಯತ |
ಕುಂತಿಭೋಜಸುತಾ ಮೋಹಂ ವಿಜ್ಞಾತಾರ್ಥಾ ಜಗಾಮ ಹ ॥25॥
ಕೆಲವರು ಅರ್ಜುನನ ಪಕ್ಷವನ್ನೂ, ಕೆಲವರು ಕರ್ಣನ ಪಕ್ಷವನ್ನೂ ಹಿಡಿದು ರಂಗಭೂಮಿಯು ಎರಡು ಭಾಗವಾಯಿತು. ಸ್ತ್ರೀಯರಿಗೂ ಸಹ ಅಂತಹ ದ್ವೈಧೀಭಾವವು ಉಂಟಾಯಿತು. ಆದರೆ ಸತ್ಯವನ್ನು ತಿಳಿದ ಕುಂತಿಯು ಮಾತ್ರ ಮೂರ್ಛೆ ಹೋದಳು.
ತಾಂ ತಥಾ ಮೋಹಮಾಪನ್ನಾಂ ವಿದುರಃ ಸರ್ವಧರ್ಮವಿತ್ |
ಕುಂತೀಮಾಶ್ವಾಸಯಾಮಾಸ ಪ್ರೋಕ್ಷ್ಯ ಚಂದನವಾರಿಭಿಃ ॥26॥
ಹಾಗೆ ಮೂರ್ಛೆಗೆ ಒಳಗಾದ ಕುಂತಿಯನ್ನು ಸರ್ವಧರ್ಮವನ್ನೂ ತಿಳಿದ ವಿದುರನು ಚಂದನಜಲದಿಂದ ಪ್ರೋಕ್ಷಿಸಿ ಸಮಾಧಾನ ಮಾಡಿದನು.
ತತಃ ಪ್ರತ್ಯಾಗತಪ್ರಾಣಾ ತಾವುಭಾವಪಿ ದಂಶಿತೌ |
ಪುತ್ರೌ ದೃಷ್ಟ್ವಾ ಸುಸಂತಪ್ತಾ ನಾನ್ವಪದ್ಯತ ಕಿಂಚನ ॥27॥
ಪುನಃ ಸಂಜ್ಞೆಯನ್ನು ಪಡೆದ ಕುಂತಿಯು ತನ್ನ ಇಬ್ಬರು ಮಕ್ಕಳು ಯುದ್ಧಕ್ಕೆ ಸಿದ್ಧರಾಗಿರುವುದನ್ನು ನೋಡಿ ಬಹಳ ತಾಪಗೊಂಡು ಕರ್ತವ್ಯಮೂಢಳಾದಳು.
ತಾವುದ್ಯತ ಮಹಾಚಾಪೌ ಕೃಪಃ ಶಾರದ್ವತೋಽಬ್ರವೀತ್ |
ದ್ವಂದ್ವಯುದ್ಧಸಮಾಚಾರೇ ಕುಶಲಃ ಸರ್ವಧರ್ಮವಿತ್ ॥28॥
ಆಗ ದ್ವಂದ್ವಯುದ್ಧದ ನಡವಳಿಕೆಯಲ್ಲಿ ಕುಶಲರಾದ ಸರ್ವಧರ್ಮಜ್ಞರಾದ, ಶರದ್ವಂತರ ಪುತ್ರರಾದ ಕೃಪರು, ಧನುಸ್ಸನ್ನು ಎತ್ತಿ ಹಿಡಿದಿದ್ದ ಅವರಿಬ್ಬರನ್ನೂ ಕುರಿತು ಹೇಳಿದರು.
ಅಯಂ ಪೃಥಾಯಾಸ್ತನಯಃ ಕನೀಯಾನ್ ಪಾಂಡುನಂದನಃ |
ಕೌರವೋ ಭವತಾ ಸಾರ್ಧಂ ದ್ವಂದ್ವಯುದ್ಧಂ ಕರಿಷ್ಯತಿ ॥29॥
ಕರ್ಣನೇ, ಇವನು ಪಾಂಡು ಮತ್ತು ಕುಂತಿಯರ ಮಧ್ಯದ ಪುತ್ರ. ಕುರುವಂಶಕ್ಕೆ ಸೇರಿದವನು. ನಿನ್ನ ಜೊತೆಯಲ್ಲಿ ದ್ವಂದ್ವಯುದ್ಧವನ್ನು ಮಾಡುವನು.

ತ್ವಮಪ್ಯೇವಂ ಮಹಾಬಾಹೋ ಮಾತರಂ ಪಿತರಂ ಕುಲಮ್ |
ಕಥಯಸ್ವ ನರೇಂದ್ರಾಣಾಂ ಕಿಂ ಚ ತ್ವಂ ಭೂಷಯೇಃ ಕುಲಮ್ ॥30॥
ಮಹಾಬಾಹುವೇ, ನೀನೂ ಸಹ ಅದರಂತೆ ನಿನ್ನ ತಾಯಿಯನ್ನೂ ತಂದೆಯನ್ನೂ ಮತ್ತು ಕುಲವನ್ನೂ ತಿಳಿಸು. ನೀನು ಯಾವ ರಾಜಕುಲವನ್ನು ಅಲಂಕರಿಸಿದ್ದೀಯೆ?
ತತೋ ವಿದಿತ್ವಾ ಪಾರ್ಥಶ್ಚ ಪ್ರತಿಯೋತ್ಸ್ಯತಿ ವಾ ನವಾ |
ವೃಥಾಕುಲಾಸಮಾಚಾರೈರ್ನ ಯುಧ್ಯಂತೇ ನೃಪಾತ್ಮಜಾಃ ॥31॥
ಅದನ್ನು ತಿಳಿದ ಪಾರ್ಥನು ಯುದ್ಧ ಮಾಡುವವನು ಅಥವಾ ಮಾಡುವುದಿಲ್ಲ. ವ್ಯರ್ಥವಾದ ಕುಲ ಮತ್ತು ಆಚಾರಗಳನ್ನು ಹೊಂದಿರುವವರ ಜೊತೆಯಲ್ಲಿ ರಾಜಕುಮಾರರು ಯುದ್ಧ ಮಾಡುವುದಿಲ್ಲ.
ವೈಶಂಪಾಯನಃ
ಏವಮುಕ್ತಸ್ಯ ಕರ್ಣಸ್ಯ ವ್ರೀಡಾವನತಮಾನನಮ್ |
ಬಭೌ ವರ್ಷಾಂಬುದಕ್ಲಿನ್ನಂ ಪದ್ಮಮಾಗಲಿತಂ ಯಥಾ ॥32॥
ಈ ಮಾತುಗಳನ್ನು ಕೇಳಿದ ಕರ್ಣನ ಮುಖವು ನಾಚಿಕೆಯಿಂದ ಬಾಡಿತು. ಮಳೆಗಾಲದಲ್ಲಿ ಮಳೆಯಿಂದ ತೊಯ್ದಕಮಲದಲಂತೆ ಅವನ ಮುಖವು ಬಾಡಿತು.
ದುರ್ಯೋಧನಃ
ಆಚಾರ್ಯ ತ್ರಿವಿಧಾ ಯೋನೀ ರಾಜ್ಞಾಂ ಧರ್ಮವಿನಿಶ್ಚಯೇ |
ಸತ್ಕುಲೀನಶ್ಚ ಶೂರಶ್ಚ ಯಶ್ಚ ಸೇನಾಂ ವಿಕರ್ಷತಿ ॥33॥
ಆಚಾರ್ಯರೇ ಧರ್ಮನಿಶ್ಚಯವನ್ನು ಮಾಡುವ ವಿಷಯದಲ್ಲಿ ರಾಜರಿಗೆ ಮೂರು ಯೋನಿಗಳನ್ನು ಗಮನಿಸುತ್ತಾರೆ. ಸತ್ಕುಲ ಪ್ರಸೂತನಾದವನು, ಶೂರನಾದವನು ಮತ್ತು ಸೇನಾಪತಿಯಾದವನು. (ಈ ಮೂವರು ಶ್ಲಾಘ್ಯರಾಗುತ್ತಾರೆ).
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥34॥
ಬ್ರಹ್ಮಾಂಡದೊಳಗೆ ಜಲದಿಂದ ಅಗ್ನಿಯು ಉತ್ಪತ್ತಿಯಾಗುತ್ತದೆ. ಬ್ರಾಹ್ಮಣರಿಂದ ಕ್ಷತ್ರಿಯರು ಉತ್ಪನ್ನರಾಗುತ್ತಾರೆ. ಕಲ್ಲಿನಿಂದ ಲೋಹವುಂಟಾಗುತ್ತದೆ. ಈ ಮೂರು ಪದಾರ್ಥಗಳ ಎಲ್ಲ ಕಡೆಯೂ ಇರುವ ಸಾಮರ್ಥ್ಯವು ತಮ್ಮ ಯೋನಿಗಳಲ್ಲಿ ನಾಶ ಹೊಂದುತ್ತದೆ. (ಅಗ್ನಿಯ ಸಾಮರ್ಥ್ಯವು ಜಲದಲ್ಲಿ ನಾಶ ಹೊಂದುತ್ತದೆ. ಕ್ಷತ್ರಿಯರ ಸಾಮರ್ಥ್ಯವು ಬ್ರಾಹ್ಮಣರಲ್ಲಿ ನಾಶ ಹೊಂದುತ್ತದೆ. ಲೋಹದ ಸಾಮರ್ಥ್ಯವು ಕಲ್ಲಿನಲ್ಲಿ ನಾಶ ಹೊಂದುತ್ತದೆ.)
ಯದ್ಯಯಂ ಫಲ್ಗುನೋ ಯುದ್ಧೇ ನಾರಾಜ್ಞಾ ಯೋದ್ಧುಮಿಚ್ಛತಿ |
ತಸ್ಮಾದೇಷೋಂಗವಿಷಯೇ ಮಯಾ ರಾಜ್ಯೇಽಭಿಷಿಚ್ಯತೇ ॥35॥
ಒಂದು ಪಕ್ಷ ಅರ್ಜುನನು ರಾಜನಲ್ಲದವನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸದಿದ್ದರೆ, ಈ ಕರ್ಣನನ್ನು ಅಂಗರಾಜ್ಯದಲ್ಲಿ ನಾನು ಅಭಿಷೇಕ ಮಾಡುತ್ತೇನೆ.
ವೈಶಂಪಾಯನಃ
ತತೋ ರಾಜಾನಮಾಮಂತ್ರ್ಯ ಗಾಂಗೇಯಂ ಚ ಪಿತಾಮಹಮ್ |
ಅಭಿಷೇಕಸ್ಯ ಸಂಭಾರಾನ್ ಸಮಾನೀಯ ದ್ವಿಜಾತಿಭಿಃ ॥36॥
ಗೋಸಹಸ್ರಾಯುತಂ ದತ್ತ್ವಾ ಯುಕ್ತಾನಾಂ ಪುಣ್ಯಕರ್ಮಣಾಮ್ |
ಅರ್ಹೋಽಯಮಂಗರಾಜ್ಯಸ್ಯ ಇತಿ ವಾಚ್ಯ ದ್ವಿಜಾತಿಭಿಃ ॥37॥
ತತಸ್ತಸ್ಮಿನ್ ಕ್ಷಣೇ ಕರ್ಣಃ ಸಲಾಜಕುಸುಮೈರ್ಘಟೈಃ |
ಕಾಂಚನೈಃ ಕಾಂಚನೇ ಪೀಠೇ ಮಂತ್ರವಿದ್ಭಿರ್ದ್ವಿಜಾತಿಭಿಃ ॥38॥
ಅಭಿಷಿಕ್ತೋಽಂಗರಾಜ್ಯೇ ಸ್ಮ ಶ್ರಿಯಾ ಯುಕ್ತೋ ಮಹಾಬಲಃ |
ಸ ಮೌಲಿಹಾರಕೇಯೂರೈಃ ಸಹಸ್ತಾಭರಣಾಂಗದೈಃ ॥39॥
ಆಗ ರಾಜನಾದ ಧೃತರಾಷ್ಟ್ರನ ಮತ್ತು ಪಿತಾಮಹರಾದ ಭೀಷ್ಮರ ಅನುಮತಿಯನ್ನು ಪಡೆದು ಬ್ರಾಹ್ಮಣರಿಂದ ಅಭಿಷೇಕದ ಸಾಮಗ್ರಿಗಳನ್ನು ತರಿಸಿ, ತಪಸ್ವಿಗಳಾದ ಬ್ರಾಹ್ಮಣರಿಗೆ ಅಯುತಸಹಸ್ರಗೋದಾನವನ್ನು ಮಾಡಿ ಬ್ರಾಹ್ಮಣರಿಂದ ``ಇವನು ಅಂಗರಾಜ್ಯಕ್ಕೆ ಅಧಿಪತಿಯಾಗಲು ಯೋಗ್ಯನಾದವನು'' ಎಂದು ಹೇಳಿಸಿ ಸುವರ್ಣಮಯವಾದ ಪೀಠದಲ್ಲಿ ಕರ್ಣನನ್ನು ಕೂಡಿಸಿ, ಮಂತ್ರವೇತ್ತರಾದ ಬ್ರಾಹ್ಮಣರಿಂದ ಲಾಜಕುಸುಮಪೂರ್ವಕವಾಗಿ ಜಲಪೂರ್ಣವಾದ, ಸುವರ್ಣಮಯವಾದ ಘಟಗಳಿಂದ ಅಭಿಷೇಕ ಮಾಡಿದನು.
ರಾಜಲಿಂಗೈಸ್ತಥಾಽನ್ಯೈಶ್ಚ ಭೂಷಿತೋ ಭೂಷಣೈಃ ಶುಭೈಃ |
ಸಚ್ಛತ್ರವಾಲವ್ಯಜನೈಃ ಜಯಶಬ್ದೋತ್ತರೇಣ ಚ ॥40॥
ಸಭಾಜ್ಯಮಾನೋ ವಿಪ್ರೈಶ್ಚ ಪ್ರದತ್ತ್ವ ಹ್ಯಮಿತಂ ವಸು |
ಉವಾಚ ವಚನಂ ರಾಜಾ ರಾಜ್ಞಾಂ ಮಧ್ಯೇ ವೃಷಸ್ತದಾ ॥41॥
ಅಭಿಷಿಕ್ತನಾದ ಮಹಾಬಲನಾದ ಕರ್ಣನು ಕಿರೀಟ ಹಾರ ಕೇಯೂರಗಳಿಂದಲೂ, ಹಸ್ತಾಭರಣಗಳಿಂದಲೂ, ಉಳಿದ ರಾಜಚಿಹ್ನೆಯ ಶುಭಭೂಷಣಗಳಿಂದಲೂ ಭೂಷಿತನಾಗಿ, ಶ್ವೇತಛತ್ರ ಬಾಲವ್ಯಜನ ಮತ್ತು ಜಯಶಬ್ದಗಳಿಂದ ಪೂಜಿಸಲ್ಪಟ್ಟವನಾಗಿ ಬ್ರಾಹ್ಮಣರಿಗೆ ಅಮಿತವಾದ ಧನವನ್ನು ಕೊಟ್ಟು ರಾಜರ ಮಧ್ಯದಲ್ಲಿ ಕರ್ಣನು ಮಾತನಾಡಿದನು.
ಅಸ್ಯ ರಾಜ್ಯಪ್ರದಾನಸ್ಯ ಸದೃಶಂ ಕಿಂ ದದಾಮಿ ತೇ |

ತದ್ ಬ್ರೂಹಿ ರಾಜಶಾರ್ದೂಲ ಕರ್ತವ್ಯಂ ಹಿ ತವಾನಘ ॥42॥
ಅನಘನಾದ ರಾಜಶಾರ್ದೂಲನಾದ ದುರ್ಯೋಧನನೇ, ಈ ರಾಜ್ಯಪ್ರದಾನಕ್ಕೆ ಉಚಿತವಾದ ಏನನ್ನು ನಿನಗೆ ಕೊಡಲಿ? ನಾನು ಏನು ಮಾಡಬೇಕೆಂದು ತಿಳಿಸು.
ದುರ್ಯೋಧನಃ
ಅತ್ಯಂತಂ ಸಖ್ಯಮಿಚ್ಛಾಮಿ ತ್ವಯಾ ಸಹ ಮಹಾಬಲ |
ಮಹಾಬಲನೇ, ನಿನ್ನ ಜೊತೆಯಲ್ಲಿ ಅತ್ಯಂತ ಸ್ನೇಹವನ್ನು ಬಯಸುತ್ತೇನೆ.
ವೈಶಂಪಾಯನಃ
ಏವಮುಕ್ತಸ್ತತಃ ಕರ್ಣಃ ತಥೇತಿ ಪ್ರತ್ಯಭಾಷತ |
ಅಂಗರಾಜ್ಯಸ್ಯ ಯುಕ್ತಾನಿ ದತ್ವಾ ರಾಜಪರಿಚ್ಛದಾನ್ |
ಹರ್ಷಾಚ್ಚೈನಂ ಪರಿಷ್ವಜ್ಯ ಪರಾಂ ಮುದಮವಾಪ ಹ ॥44॥
ಈ ಮಾತನ್ನು ಕೇಳಿದ ಕರ್ಣನು ``ಹಾಗೆಯೇ ಆಗಲಿ'' ಎಂದು ಉತ್ತರವನ್ನು ಕೊಟ್ಟನು. ದುರ್ಯೋಧನನು ಅವನಿಗೆ ಅಂಗರಾಜ್ಯಕ್ಕೆ ಯೋಗ್ಯವಾದ ಉಳಿದ ರಾಜ ಸಲಕರಣೆಗಳನ್ನು ಕೊಟ್ಟು ಸಂತೋಷದಿಂದ ಆಲಿಂಗಿಸಿ ಬಹಳ ಸಂತೋಷವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಮೂವತ್ತೈದನೆಯ ಅಧ್ಯಾಯ ಮುಗಿಯಿತು.

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ಅಭಿಷಿಕ್ತೇ ತದಾ ಕರ್ಣೇ ಪ್ರಾಯಾದಧಿರಥಃ ಪಿತಾ |
ಸರ್ವರಾಜಸದೋಮಧ್ಯೇ ವವಂದೇ ತಂ ವೃಷಾ ತದಾ |
ತುತುಷುಃ ಕರ್ಮಣಾ ತಸ್ಯ ಸಂತಃ ಸರ್ವೇ ಸಮಾಗತಾಃ ॥41॥
ಕರ್ಣ ಪಟ್ಟಾಭಿಷಿಕ್ತನಾದಾಗ ಅವನ ತಂದೆ ಅಧಿರಥ ಬಂದ. ಎಲ್ಲ ರಾಜರ ಸಭೆಯ ನಡುವೆ ಅವನನ್ನು ಕರ್ಣ ವಂದಿಸಿದ. ಅವನ ಈ ನಡತೆಯಿಂದ ನೆರೆದಿದ್ದ ಎಲ್ಲ ಸಜ್ಜನರೂ ಸಂತುಷ್ಟರಾದರು.
ನೂರ ಮೂವತ್ತಾರನೆಯ ಅಧ್ಯಾಯ
(ಕರ್ಣನ ತಂದೆಯಾದ ಅಧಿರಥನ ರಂಗಪ್ರವೇಶ, ಅವನಿಗೆ ಕರ್ಣನ ನಮಸ್ಕಾರ, ಭೀಮಸೇನನ ಮೂದಲಿಕೆಯ ಮಾತುಗಳು, ರಂಗದಿಂದ ಎಲ್ಲರ ನಿರ್ಗಮನ.)
ವೈಶಂಪಾಯನಃ
ತತಃ ಸ್ರಸ್ತೋತ್ತರಪಟಃ ಸಪ್ರಸ್ವೇದಃ ಸವೇಪಥುಃ |
ವಿವೇಶಾಧಿರಥೋ ರಾಜನ್ ಸಯಷ್ಟಿಃ ಪ್ರಸ್ಖಲನ್ನಿವ ॥1॥
ರಾಜನೇ ಅನಂತರ ತನ್ನ ಉತ್ತರೀಯವು ಜಾರುತ್ತಿರಲು ಬಹಳ ಬೆವರಿನಿಂದಲೂ ಮತ್ತು ನಡುಕದಿಂದಲೂ ಕೂಡಿದವನಾಗಿ ಅಧಿರಥನು ಕೋಲನ್ನು ಹಿಡಿದು ಎಡವುವವನಂತೆ ರಂಗಸ್ಥಲವನ್ನು ಪ್ರವೇಶಿಸಿದನು.
ತಮಾಲೋಕ್ಯ ಧನುಸ್ತ್ಯಕ್ತ್ವಾ ಪಿತೃಗೌರವಯಂತ್ರಿತಃ |
ಕರ್ಣೋಽಭಿಷೇಕಾರ್ದ್ರಶಿರಾಃ ಶಿರಸಾ ತಮವಂದತ ॥2॥
ಅವನನ್ನು ನೋಡಿದ ಕರ್ಣನು ತಂದೆಯ ಮೇಲಿನ ಗೌರವದಿಂದಾಗಿ ಧನುಸ್ಸನ್ನು ತ್ಯಜಿಸಿ ಅಭಿಷೇಕದಿಂದ ಇನ್ನೂ ಒದ್ದೆಯಾಗಿದ್ದ ತಲೆಯಿಂದ ಅವನಿಗೆ ಪ್ರಣಾಮವನ್ನು ಮಾಡಿದನು.
ತತಃ ಪಾದಾವವಚ್ಛಾದ್ಯ ಪಟಾಂತೇನ ಸಸಂಭ್ರಮಮ್ |
ಪುತ್ರೇತಿ ಪರಿಪೂರ್ಣಾರ್ಥಮಬ್ರವೀದ್ ರಥಸಾರಥಿಮ್ ॥3॥
ಆಗ ಗಾಬರಿಯಿಂದ ತನ್ನ ಪಾದಗಳನ್ನು ವಸ್ತ್ರದಿಂದ ಆಚ್ಛಾದಿಸಿ ಅದಿರಥನು ರಥಸಾರಥಿಯಾದ ಕರ್ಣನನ್ನು ``ಪುತ್ರಾ'' ಎಂದು ಅರ್ಥಪೂರ್ಣವಾದ ಮಾತಿನಿಂದ ಕರೆದನು.
ಪರಿಷ್ವಜ್ಯ ಚ ತಸ್ಯಾಂಗಂ ಮೂರ್ಧಾನಮಮರದ್ಯುತೇಃ |
ಅಂಗರಾಜ್ಯಾಭಿಷೇಕಾರ್ದ್ರಮಶ್ರುಭಿಃ ಪರ್ಯಷಿಂಚತ ॥4॥
ಅಧಿರಥನು ಕರ್ಣನನ್ನು ಆಲಿಂಗಿಸಿ ದೇವತಾಕಾಂತಿಯನ್ನು ಹೊಂದಿದ್ದ, ಅಂಗರಾಜ್ಯಾಭಿಷೇಕದಿಂದ ಆರ್ದ್ರವಾದ ಅವನ ತಲೆಯ ಮೇಲೆ ತನ್ನ ಆನಂದಬಾಷ್ಪಗಳಿಂದ ಅಭಿಷೇಕ ಮಾಡಿದನು.
ತಂ ದೃಷ್ಟ್ವಾ ಸೂತಪುತ್ರೋಽಯಮಿತಿ ನಿಶ್ಚಿತ್ಯ ಪಾಂಡವಃ |
ಭೀಮಸೇನಸ್ತದಾ ವಾಕ್ಯಂ ಪ್ರಹಸನ್ನಿದಮಬ್ರವೀತ್ ॥5॥
ಅದನ್ನು ನೋಡಿ ಪಾಂಡುಪುತ್ರನಾದ ಭೀಮಸೇನನು ಇವನು ಸೂತಪುತ್ರನೆಂದು ನಿಶ್ಚಯಿಸಿ ನಗುತ್ತಾ ಮಾತನಾಡಿದನು.
ಭೀಮಃ
ನ ತ್ವಮರ್ಹಸಿ ಪಾರ್ಥೇನ ಸೂತಪುತ್ರ ರಣೇ ವಧಮ್ |
ಕುಲಸ್ಯ ಸದೃಶಂ ಕರ್ಮ ಪ್ರತೋದೋಽಯಂ ಪ್ರಗೃಹ್ಯತಾಮ್ ॥6॥
ಸೂತಪುತ್ರನೇ, ನೀನು ಅರ್ಜುನನ ಜೊತೆಯಲ್ಲಿ ಯುದ್ಧಮಾಡಿ ವಧೆಯನ್ನು ಹೊಂದಲು ಅರ್ಹನಲ್ಲ. ನಿನ್ನ ಕುಲಾಚಾರಕ್ಕೆ ಸದೃಶವಾದ ಈ ಚಾವಟಿಯನ್ನು ತೆಗೆದುಕೋ.

ಅಂಗರಾಜ್ಯಂ ಚ ನಾರ್ಹಸ್ತ್ವಮುಪಭೋಕ್ತುಂ ನರಾಧಮ |
ಶ್ವಾ ಹುತಾಶಸಮೀಪಸ್ಥಂ ಪುರೋಡಾಶಮಿವಾಧ್ವರೇ ॥7॥
ನರಾಧಮನೇ, ನಾಯಿಯು ಯಜ್ಞದಲ್ಲಿ ಅಗ್ನಿಯ ಸಮೀಪವಿರುವ ಪುರೋಡಾಶವನ್ನು ಮುಟ್ಟಲು ಹೇಗೆ ಅನರ್ಹವೋ ಹಾಗೆ ನೀನು ಅಂಗರಾಜ್ಯವನ್ನು ಭೋಗಿಸಲು ಅನರ್ಹನಾಗಿರುತ್ತೀಯೆ.
ವೈಶಂಪಾಯನಃ
ಏವಮುಕ್ತಸ್ತತಃ ಕರ್ಣಃ ಕಿಂಚಿತ್ ಪ್ರಸ್ಫುರಿತಾಧರಃ |
ಗಗನಸ್ಥಂ ವಿನಿಶ್ವಸ್ಯ ದಿವಾಕರಮುದೈಕ್ಷತ ॥8॥
ಈ ಮಾತುಗಳನ್ನು ಕೇಳಿದ ಕರ್ಣನು ತನ್ನ ತುಟಿಗಳು ಸ್ವಲ್ಪ ಅದುರುತ್ತಿರಲು ನಿಟ್ಟುಸಿರನ್ನು ಬಿಟ್ಟು ಆಕಾಶದಲ್ಲಿದ್ದ ಸೂರ್ಯನನ್ನು ನೋಡಿದನು.
ತತೋ ದುರ್ಯೋಧನಃ ಕೋಪಾದುತ್ಪಪಾತ ಮಹಾಬಲಃ |
ಭ್ರಾತೃಪದ್ಮವನಾತ್ ತಸ್ಮಾನ್ಮದೋತ್ಕಟ ಇವ ದ್ವಿಪಃ ॥9॥
ಆಗ ಮಹಾಬಲನಾದ ದುರ್ಯೋಧನನು ಭ್ರಾತೃಗಳೆಂಬ ಪದ್ಮವನದಿಂದ ಮದೋತ್ಕಟವಾದ ಆನೆಯು ಎದ್ದು ಬಂದಂತೆ ತನ್ನ ಆಸನದಿಂದ ಸಿಡಿದು ನಿಂತನು.
ಸೋಽಬ್ರವೀದ್ ಭೀಮಕರ್ಮಾಣಂ ಭೀಮಸೇನಮಿದಂ ವಚಃ |
ಭೀಮಸೇನ ನ ಯುಕ್ತಂ ತೇ ವಚನಂ ವಕ್ತುಮೀದೃಶಮ್ ॥10॥
ಅವನು ಉಗ್ರಕರ್ಮನಾದ ಭೀಮಸೇನನನ್ನು ಕುರಿತು, ಭೀಮಸೇನ ನೀನು ಹೀಗೆ ಮಾತನಾಡುವುದು ಸರಿಯಲ್ಲ ಎಂದು ಹೇಳಿದನು.
ಕ್ಷತ್ರಿಯಾಣಾಂ ಬಲಂ ಜ್ಯೇಷ್ಠಂ ಯೋದ್ಧವ್ಯಂ ಕ್ಷತ್ರಬಂಧುನಾ |
ಶೂರಾಣಾಂ ಚ ನದೀನಾಂ ಚ ಪ್ರಭವೋ ದುರ್ವಿಭಾವನಃ ॥11॥
ಕ್ಷತ್ರಿಯರು ಕ್ಷತ್ರಿಯರ ಜೊತೆಯಲ್ಲಿ ಯುದ್ಧ ಮಾಡಬೇಕು. ಅವರಿಗೆ ಬಲವೇ ಜ್ಯೇಷ್ಠ ಮತ್ತು ಶ್ರೇಷ್ಠವಾದುದು. ಶೂರರ ಮತ್ತು ನದಿಗಳ ಉದ್ಭವವನ್ನು ತಿಳಿಯುವ ಪ್ರಯತ್ನವನ್ನು ಮಾಡಬಾರದು.
ಸಲಿಲಾದುತ್ಥಿತೋ ವಹ್ನಿರ್ಯೇನ ದಗ್ಧಂ ಚರಾಚರಮ್ |
ದಧೀಚಸ್ಯಾಸ್ಥಿಭಿರ್ವಜ್ರಂ ಕೃತಂ ದಾನವಸೂದನಮ್ ॥12॥
ಚರಾಚರಜಗತ್ತನ್ನು ದಹಿಸುವ ವಹ್ನಿಯು ನೀರಿನಿಂದ ಉತ್ಪನ್ನವಾಗುತ್ತದೆ. ಎಲ್ಲಾ ದಾನವರನ್ನೂ ಸಂಹರಿಸುವ ವಜ್ರಾಯುಧವು ದಧೀಚಿ ಋಷಿಗಳ ಅಸ್ಥಿಗಳಿಂದ ನಿರ್ಮಿಸಲ್ಪಟ್ಟಿದೆ.
ಆಗ್ನೇಯಃ ಕೃತ್ತಿಕಾಪುತ್ರೋ ರೌದ್ರೋ ಗಾಂಗೇಯ ಇತ್ಯಪಿ |
ಶ್ರೂಯತೇ ಭಗವಾನ್ ದೇವಃ ಸ ವೈ ಗುಹ್ಯಮಯೋ ಗುಹಃ ॥13॥
ಪೂಜ್ಯನಾದ ಷಣ್ಮುಖನನ್ನು ಅಗ್ನಿಯ ಮಗನೆಂದೂ, ಕೃತ್ತಿಕೆಯ ಮಗನೆಂದೂ, ರುದ್ರನ ಮಗನೆಂದೂ, ಗಂಗೆಯ ಮಗನೆಂದೂ ನಾವು ಕೇಳಿದ್ದೇವೆ. ಆ ಷಣ್ಮುಖದೇವನು ನಿಶ್ಚಿತವಾಗಿ ರಹಸ್ಯಮಯನಾದವನು.
ಕ್ಷತ್ರಿಯಾಸು ಚ ಯೇ ಜಾತಾ ಬ್ರಾಹ್ಮಣಾಸ್ತವ ವಿಶ್ರುತಾಃ |
ವಿಶ್ವಾಮಿತ್ರಪ್ರಭೃತಯಃ ಪ್ರಾಪ್ತಾ ಬ್ರಹ್ಮತ್ವಮವ್ಯಯಮ್ ॥14॥
ಎಷ್ಟೋ ಜನರು ಕ್ಷತ್ರಿಯಸ್ತ್ರೀಯರಲ್ಲಿ ಜನಿಸಿ ಪ್ರಖ್ಯಾತರಾದ ಬ್ರಾಹ್ಮಣರಾಗಿದ್ದಾರೆ. ವಿಶ್ವಾಮಿತ್ರನೇ ಮೊದಲಾದವರು ಶಾಶ್ವತವಾದ ಬ್ರಾಹ್ಮಣತ್ವವನ್ನು ಪಡೆದಿದ್ದಾರೆ.
ಆಚಾರ್ಯಃ ಕಲಶಾಜ್ಜಾತೋ ಶರಸ್ತಂಬಾದ್ ಗುರುಃ ಕೃಪಃ |
ಭವತಾಂ ಚ ಯಥಾ ಜನ್ಮ ತದಪ್ಯಾಗಮಿತಂ ನರೈಃ ॥15॥
ದ್ರೋಣರು ಕಲಶದಿಂದ ಜನಿಸಿದವರು. ಗುರುಗಳಾದ ಕೃಪರು ಶರಸ್ತಂಬದಿಂದ ಜನಿಸಿದವರು. ನೀವು ಹೇಗೆ ಜನಿಸಿದ್ದೀರಿ ಎಂದು ಎಲ್ಲ ಜನರಿಗೂ ತಿಳಿದ ವಿಷಯ.
ಸಕುಂಡಲಂ ಸಕವಚಂ ದಿವ್ಯಲಕ್ಷಣಲಕ್ಷಿತಮ್ |
ಕಥಮಾದ್ಯಿಸಂಕಾಶಂ ಸೂತೋಽಮುಂ ಜನಯಿಷ್ಯತಿ ॥16॥
ಕವಚಕುಂಡಲಗಳನ್ನು ಧರಿಸಿ ದಿವ್ಯಲಕ್ಷಣಗಳಿಂದ ಭೂಷಿತನಾಗಿ ಸೂರ್ಯನಂತೆ ಬೆಳಗುತ್ತಿರುವ ಇವನನ್ನು ಹೇಗೆ ಒಬ್ಬ ಸೂತನು ಉತ್ಪಾದಿಸುವನು.
ಏವಂ ಕ್ಷತ್ರಗುಣೈರ್ಯುಕ್ತಂ ಶೂರಂ ಸಮಿತಿಶೋಭನಮ್ |
ಕಥಮಾದಿತ್ಯಸಂಕಾಶಂ ಮೃಗೀ ವ್ಯಾಘ್ರಂ ಪ್ರಸೂಯತೇ ॥17॥
ಹೀಗೆ ಕ್ಷತ್ರಿಯ ಗುಣಗಳಿಂದ ಯುಕ್ತನಾಗಿ ಶೂರನೂ, ಯುದ್ಧಶೋಭನನೂ, ಆದಿತ್ಯಸದೃಶನೂ ಆದ ಇವನು ಸೂತನಿಂದ ಹೇಗೆ ಜನಿಸಿತ್ತಾನೆ. ಹೆಣ್ಣುಜಿಂಕೆಯು ಎಂದಾದರೂ ವ್ಯಾಘ್ರದ ಮರಿಯನ್ನು ಪ್ರಸವಿಸುತ್ತದೆಯೆ?
ಪೃಥಿವೀರಾಜ್ಯಮರ್ಹೋಯಂ ನಾಂಗರಾಜ್ಯಂ ನರೇಶ್ವರಃ |
ಸ್ವಬಾಹುಬಲವೀರ್ಯೇಣ ಮಯಾ ಚಾಜ್ಞಾನುವರ್ತಿನಾ ॥18॥
ಈ ರಾಜನು ತನ್ನ ಬಾಹುಬಲ ಮತ್ತು ಪರಾಕ್ರಮಗಳಿಂದ ಮತ್ತು ನನ್ನಂತಹ ವಶವರ್ತಿಯಾದ ಮಿತ್ರನನ್ನು ಕೂಡಿಕೊಂಡು ಸಮಗ್ರವಾದ ಭೂಮಿಯನ್ನೇ ಆಳಲು ಅರ್ಹನಾಗುತ್ತಾನೆ, ಕೇವಲ ಅಂಗರಾಜ್ಯವನ್ನಲ್ಲ.
ಯಸ್ಯ ವಾ ಮನುಜಸ್ಯೇದಂ ನ ಕ್ಷಾಂತಂ ಮದ್ವಿಚೇಷ್ಟಿತಮ್ |
ರಥಮಾರುಹ್ಯ ಪದ್ಭ್ಯಾಂ ವಾ ವಿನಾಮಯತು ಕಾರ್ಮುಕಮ್ ॥19॥

ನನ್ನ ಈ ಮಾತುಗಳನ್ನು ಮತ್ತು ಕ್ರಿಯೆಗಳನ್ನು ಯಾವನು ಸಹಿಸುವುದಿಲ್ಲವೋ ಅಂತಹವನು ರಥವನ್ನು ಹತ್ತಿಯಾದರೂ ಅಥವಾ ಪಾದಗಳ ಮೇಲೆ ನಿಂತಾದರೂ ಧನುಸ್ಸನ್ನು ಬಗ್ಗಿಸಿ ನನ್ನ ಜೊತೆಯಲ್ಲಿ ಯುದ್ಧಕ್ಕೆ ಬರಲಿ.
ವೈಶಂಪಾಯನಃ
ತತಃ ಸರ್ವಸ್ಯ ರಂಗಸ್ಯ ಹಾಹಾಕಾರೋ ಮಹಾನಭೂತ್ |
ಸಾಧುವಾದಾನುಸಂಬದ್ಧಃ ಸೂರ್ಯಶ್ಚಾಸ್ತಮುಪಾಗಮತ್ ॥20॥
ಆಗ ರಂಗಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ದೊಡ್ಡ ಹಾಹಾಕಾರಂಟಾಯಿತು. ಸಾಧುವಾದಗಳು ಕೇಳಿ ಬಂದವು. ಸೂರ್ಯನು ಅಸ್ತಂಗತನಾದನು.
ತತೋ ದುರ್ಯೋಧನಃ ಕರ್ಣಮಾಲಂಬ್ಯಾಗ್ರಕರೇ ನೃಪಃ |
ದೀಪಿಕಾಭಿಃ ಕೃತಾಲೋಕಃ ತಸ್ಮಾದ್ ರಂಗಾದ್ ವಿನಿರ್ಯಯೌ ॥21॥
ಆಗ ದುರ್ಯೋಧನರಾಜನು ಕರ್ಣನನ್ನು ಹಸ್ತಾಗ್ರದಲ್ಲಿ ಹಿಡಿದು ದೀಪಗಳಿಂದ ದಾರಿಯು ತೋರಿಸಲ್ಪಡುತ್ತಿರಲು ರಂಗದಿಂದ ಹೊರಗೆ ಹೊರಟನು.
ಪಾಂಡವಾಶ್ಚ ಸಹದ್ರೋಣಾಃ ಸಕೃಪಾ ಭರತರ್ಷಭಾಃ |
ಭೀಷ್ಮೇಣ ಸಹಿತಾಃ ಸರ್ವೇ ಯಯುಃ ಸ್ವಂಸ್ವಂ ನಿವೇಶನಮ್ ॥22॥
ಭರತಶ್ರೇಷ್ಠರಾದ ಪಾಂಡವರೆಲ್ಲರೂ, ದ್ರೋಣ, ಕೃಪ ಮತ್ತು ಭೀಷ್ಮರ ಜೊತೆಯಲ್ಲಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.
ಅರ್ಜುನೇತಿ ಜನಃ ಕಶ್ಚಿತ್ ಕಶ್ಚಿತ್ ಕರ್ಣೇತಿ ಭಾರತ |
ಕಶ್ಚಿದ್ದುರ್ಯೋಧನೇತ್ಯೇವಂ ಬ್ರುವಂತಃ ಪ್ರಸ್ಥಿತಾಸ್ತತಃ ॥23॥
ಉಳಿದ ಜನರಲ್ಲಿ ಕೆಲವರು ``ಅರ್ಜುನ ಅರ್ಜುನ'' ಎಂದು ಮಾತನಾಡುತ್ತಲೂ, ಕೆಲವರು ``ಕರ್ಣ'' ಎಂದು ಮಾತನಾಡುತ್ತಲೂ, ಕೆಲವರು ``ದುರ್ಯೋಧನ'' ಎಂದು ಮಾತನಾಡುತ್ತಲೂ ರಂಗಭೂಮಿಯಿಂದ ಹೊರಟರು.
ಕುಂತ್ಯಾಶ್ಚ ಪ್ರತ್ಯಭಿಜ್ಞಾಯ ದಿವ್ಯಲಕ್ಷಣಸೂಚಿತಮ್ |
ಪುತ್ರಮಂಗೇಶ್ವರಂ ಸ್ನೇಹಾಚ್ಛನ್ನಾ ಪ್ರೀತಿರವರ್ಧತ ॥24॥
ಕುಂತಿಗಾದರೋ ದಿವ್ಯಲಕ್ಷಣಭೂಷಿತನಾದ ಅಂಗರಾಜನಾದ ತನ್ನ ಮಗನನ್ನು ಗುರುತಿಸಿ ಅವನ ಮೇಲಿನ ಸ್ನೇಹದಿಂದ ಪ್ರೀತಿಯು ಪ್ರಚ್ಛನ್ನವಾಗಿ ಅಭಿವೃದ್ಧಿಯನ್ನು ಹೊಂದಿತು.
ದುರ್ಯೋಧನಸ್ಯಾಪಿ ತಥಾ ಕರ್ಣಮಾಸಾದ್ಯ ಪಾರ್ಥಿವ |
ಭಯಮರ್ಜುನಸಂಜಾತಂ ಕ್ಷಿಪ್ರಮಂತರಧೀಯತ ॥25॥
ರಾಜನೇ ದುರ್ಯೋಧನನು ಕರ್ಣನನ್ನು ಪಡೆದ ಮೇಲೆ ಅವನಿಗೆ ಇದ್ದ ಅರ್ಜುನನ ಭಯವು ಕ್ಷಿಪ್ರವಾಗಿ ಮಾಯವಾಯಿತು.
ಸ ಚಾಪಿ ಧೀರಃ ಕೃತಶಾಸ್ತ್ರವಿಶ್ರಮಃ
ಪರೇಣ ಸಾಮ್ನಾಽಭ್ಯವದತ್ ಸುಯೋಧನಮ್ |
ಯುಧಿಷ್ಠಿರಸ್ಯಾಪ್ಯಭವತ್ ಸದಾ ಮತಿ-
ರ್ನ ಕರ್ಣತುಲ್ಯೋಽಸ್ತಿ ಧನುರ್ಧರಃ ಕ್ಷಿತೌ ॥26॥
ಆ ಧೀರನೂ, ಶಸ್ತ್ರಗಳಲ್ಲಿ ಪರಿಶ್ರಮವನ್ನು ಹೊಂದಿದವನೂ ಆದ ಕರ್ಣನು ಬಹಳ ಸಮಾಧಾನದಿಂದ ದುರ್ಯೋಧನನ ಜೊತೆಯಲ್ಲಿ ಮಾತನಾಡಿದನು. ಈ ಕಡೆ ಯುಧಿಷ್ಠಿರನಿಗೂ ಸಹ ಭೂಮಿಯಲ್ಲಿ ಕರ್ಣನಿಗೆ ಸಮಾನನಾದ ಧನುರ್ಧರನು ಇನ್ನೊಬ್ಬನಿಲ್ಲ ಎಂಬ ಬುದ್ಧಿಯು ಉಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಟ್‌ತ್ರಿಂಶ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಚತುರಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಮೂವತ್ತಾರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ಅಥ ಪೃಷ್ಟೋ ದಕ್ಷಿಣಾರ್ಥಂ ದ್ರೋಣ ಆಹ ಕುಮಾರಕಾನ್ |
ಬಧ್ವಾ ಪಾಂಚಾಲರಾಜಾನಂ ದತ್ತೇತ್ಯೂಚುಸ್ತಥೇತಿ ತೇ ॥58॥
ಬಳಿಕ ಗುರುದಕ್ಷಿಣೆ ಏನೆಂದು ಹೇಳಲು ಕುಮಾರರು ಕೇಳಿಕೊಂಡಾಗ ದ್ರೋಣರು ಗುರುದಕ್ಷಿಣೆಗಾಗಿ ಪಾಂಚಾಲರಾಜನನ್ನು ಸೆರೆಹಿಡಿದು ತಂದುಕೊಂಡಿರಿ ಎಂದರು. ಕುಮಾರರು ಹಾಗೇ ಆಗಲಿ ಎಂದರು.
ತೇ ಧಾರ್ತರಾಷ್ಟ್ರಾಃ ಕರ್ಣೇನ ಸಹಿತಾಃ ಪಾಂಡವಾ ಅಪಿ |
ಯಯುರ್ದ್ರೋಣೇನ ಸಹಿತಾಃ ಪಾಂಚಾಲನಗರಂ ಪ್ರತಿ ॥59॥
ಕರ್ಣ ಸಹಿತರಾದ ಕೌರವರೂ ಪಾಂಡವರೂ ದ್ರೋಣರೊಂದಿಗೆ ಪಾಂಚಾಲನಗರಕ್ಕೆ ಹೋದರು.
ಅಥಾಹ ಭೀಮಃ ಸಾಮರ್ಥ್ಯವಿವೇಕಾಭೀಪ್ಸಯಾ ಗುರುಮ್ ॥60॥
ಗರ್ವ ಏಷ ಕುಮಾರಾಣಾಮನಿವಾರ್ಯೋದ್ವಿಜೋತ್ತಮ |
ಗಚ್ಛಂತ್ವೇತೇಽಗ್ರತೋ ನ್ಯೇಷಾಂ ವಶಗೋ ದ್ರುಪದೋ ಭವೇತ್ ॥61॥
ನಿವೃತ್ತೇಷ್ವಕೃತಾರ್ಥೇಷು ವಯಂ ಬಧ್ವಾ ರಿಪುಂ ತವ
ಆನಯಾಮೋ ನ ಸಂದೇಹ ಇತಿ ತಸ್ಥೌ ಸಸೋದರಃ ॥62॥

ಪಾಂಡವ ಕೌರವರೊಳಗೆ ಯಾರು ಸಮರ್ಥರು ಯಾರು ಅಸಮರ್ಥರೆಂಬುದು ಬೆಳಕಿಗೆ ಬರಲೆಂಬ ಬಯಕೆಯಿಂದ ಭೀಮಸೇನ ಗುರುದ್ರೋಣರಿಗೆ ಹೇಳಿದ- `ಬ್ರಾಹ್ಮಣೋತ್ತಮ, ಈ ಕುಮಾರರ ದುರಹಂಕಾರ ತಡೆಯಲು ಅಸಾಧ್ಯವಾಗಿದೆ. ಇವರೇ ಮುಂದೆ ಹೋಗಲಿ. ದ್ರುಪದ ಇವರಿಗೆ ವಶನಾಗುವುದಿಲ್ಲ. ತಮ್ಮ ಕಾರ್ಯದಲ್ಲಿ ಅಯಶ್ವಸಿಗಳಾಗಿ ಇವರು ಹಿಂತಿರುಗಿ ಬಂದಾಗ ನಾವು ನಿಮ್ಮ ಶತ್ರುವನ್ನು ಕಟ್ಟಿ ತರುವೆವು. ಇದರಲ್ಲಿ ಸಂಶಯವಿಲ್ಲ'. ಹೀಗೆ ಹೇಳಿ ಸೋದರರೊಡನೆ ನಗರದ ಹೊರಗೇ ಉಳಿದ, ಭೀಮ.

ಸದ್ರೋಣಕೇಷು ಪಾರ್ಥೇಷು ಸ್ಥಿತೇಷ್ವನ್ಯೇ ಸಸೂತಜಾಃ |
ಯಯುರಾತ್ತಪ್ರಹರಣಾಃ ಪಾಂಚಾಲಾಂತಃಪುರಂ ದ್ರುತಮ್ ॥63॥

ದ್ರೋಣರೊಡನೆ ಪಾಂಡವರು ಹಿಂದೆ ಉಳಿದಿದ್ದಾಗ ಕೌರವರು ಕರ್ಣನೊಂದಿಗೆ ಆಯುಧ ಎತ್ತಿಕೊಂಡು ಪಾಂಚಾಲರಾಜನ ಪಟ್ಟಣದೊಳಗೆ ಬೇಗನೆ ನುಗ್ಗಿದರು.

ಕುಮಾರಾನ್ ಗ್ರಹಣೇಪ್ಸೂಂಸ್ತಾನುಪಯಾತಾನುದೀಕ್ಷ್ಯ ಸಃ |
ಅಕ್ಷೌಹಿಣೀತ್ರಿತಯಯುಕ್ ನಿಃಸೃತೋ ದ್ರುಪದೋ ಗೃಹಾತ್ ॥64॥

ಕುಮಾರರು ತನ್ನನ್ನು ಸೆರೆಹಿಡಿಯಲು ಬಯಸಿ ಬರುತ್ತಿದ್ದಾರೆ ಎಂಬುದು ತಿಳಿದು ದ್ರುಪದ ಮೂರು ಅಕ್ಷೋಹಿಣೀ ಸೈನ್ಯ ಸಮೇತನಾಗಿ ಅರಮನೆಯಿಂದ ಹೊರಗೆ ಹೊರಟ.

ತೇ ಶರೈರಭಿವರ್ಷಂತಃ ಪರಿವಾರ್ಯ ಕುಮಾರಕಾನ್ |
ಅರ್ದಯಾಮಾಸುರುದ್ವೃತ್ತಾನ್ ಸ್ತ್ರಿಯೋ ಬಾಲಾಶ್ಚ ಸರ್ವಶಃ ॥65॥

ಪಾಂಚಾಲರು ಕುಮಾರರನ್ನು ಸುತ್ತುವರಿದು ಬಾಣಗಳ ಮಳೆಗರೆಯುತ್ತ ಪೀಡಿಸಿದರು. ಉದ್ವತರಾದ ಕುಮಾರರನ್ನು ಎಲ್ಲ ಹೆಂಗಸರೂ ಮಕ್ಕಳೂ ಕೂಡ ಪೀಡಿಸಿದರು.

ಹರ್ಮ್ಯಸಂಸ್ಥಾಃ ಸ್ತ್ರಿಯೋ ಬಾಲಾ ಗ್ರಾವಭಿರ್ಮುಸಲೈರಪಿ |
ಅತ್ಯರ್ಥಮರ್ದಯಾಮಾಸುಃ ಕುಮಾರಾನ್ ಸುಸುಖೈಧಿತಾನ್ ॥66॥

ಉಪ್ಪರಿಗೆಗಳಲ್ಲಿ ನಿಂತ ಹೆಂಗಸರು ಮಕ್ಕಳು ಸುಖವಾಗಿ ಬೆಳೆದಿದ್ದ ಕುಮಾರರನ್ನು ಕಲ್ಲು ಒನಕೆಗಳಿಂದ ಬಹಳವಾಗಿ ಪೀಡಿಸಿದರು.

ದ್ರುಪದಸ್ಯ ವರೋ ಹ್ಯಸ್ತಿ ಸೂರ್ಯದತ್ತಸ್ತಪೋಬಲಾತ್ |
ಆ ಯೋಜನಾತ್ ಪುರಮುಪ ನ ತ್ವಾಂ ಜೇಷ್ಯತಿ ಕಶ್ಚನ ॥67॥

ದ್ರುಪದನಿಗೆ ತಪೋಬಲದಿಂದ ಸೂರ್ಯನಿತ್ತಿದ್ದ ವರವಿತ್ತು `ನಗರದ ಸಮೀಪದಲ್ಲಿ ಒಂದು ಯೋಜನೆದೊಳಗೆ ಯಾರೂ ನಿನ್ನನ್ನು ಗೆಲ್ಲಲಾರರು' ಎಂದು.

ಇತಿ ತೇನ ವರೇಣೈವ ಸುಖಸಂವರ್ಧಿತಾಶ್ಚ ತೇ |
ಭಗ್ನಾ ಕುಮಾರಾ ಆವೃತ್ಯ ದುದ್ರುವುರ್ಯತ್ರ ಪಾಂಡವಾಃ ॥68॥

ಆ ವರ ಬಲದಿಂದಲೆ ಸುಖವಾಗಿ ಬೆಳೆಸಲ್ಪಟ್ಟ ಕುಮಾರರು ಪರಾಜಿತರಾಗಿ ಹಿಂತಿರುಗಿ ಪಾಂಡವರಿದ್ದಲ್ಲಿಗೆ ಧಾವಿಸಿದರು.

ಸ್ತ್ರೀಬಾಲವೃದ್ಧಸಹಿತೈಃ ಪಾಂಚಾಲ್ಯೈರಪ್ಯನುದ್ರುತಾಃ |
ಭೀಮಾರ್ಜುನೇತಿ ವಾಶಂತೋ ಯಯುರ್ಯತ್ರ ಸ್ಮ ಪಾಂಡವಾಃ ॥69॥

ಹೆಂಗಸರು ಮಕ್ಕಳು ಮದುಕರಿದೊಡಗೂಡಿ ಪಾಂಚಾಲರು ಬೆನ್ನಟ್ಟಿ ಬರುತ್ತಿದ್ದಂತೆ ಭೀಮ! ಅರ್ಜುನ! ಕಾಪಾಡಿ ಎಂದು ಕೂಗುತ್ತ ಪಾಂಡವರಿದ್ದಲ್ಲಿಗೆ ಓಡಿದರು. ಕುಮಾರರು.

ತಾನ್ ಪ್ರಭಗ್ನಾನ್ ಸಮಾಲೋಕ್ಯ ಭೀಮಃ ಪ್ರಹರತಾಂ ವರಃ |
ಆರುರೋಹ ರಥಂ ವೀರಃ ಪುರ ಆತ್ತ ಶರಾಸನಃ ॥70॥

ಕುಮಾರರು ಬಹಳ ಪರಾಜಿತರಾದುದನ್ನು ಕಂಡು ಯೋಧರಲ್ಲಿ ಶ್ರೇಷ್ಠನಾದ ವೀರ ಭೀಮಸೇನ ಬಿಲ್ಲು ಬಾಣ ಹಿಡಿದು ಮುಂಭಾಗದಲ್ಲಿ ರಥವೇರಿದ.

ತಮನ್ವಯಾದಿಂದ್ರಸೂನುರ್ಯಮೌ ತಸ್ಯೈವ ಚಕ್ರಯೋಃ |
ಯುಧಿಷ್ಠಿರಸ್ತು ದ್ರೋಣೇನ ಸಹ ತಸ್ಥೌ ನಿರೀಕ್ಷಕಃ ॥71॥

ಅವನ ಹಿಂದೆ ಅರ್ಜುನ ರಥವೇರಿ ಹೊರಟ. ಅರ್ಜುನನ ರಥದ ಬಳಿ ಚಕ್ರ ರಕ್ಷಕರಾಗಿ ನಕುಲ ಸಹದೇವರು ಹೊರಟರು. ಯುಧಿಷ್ಠಿರ ದ್ರೋಣನೊಂದಿಗೆ ಯುದ್ಧ ನಿರೀಕ್ಷಕನಾಗಿ ನಿಂತ.

ಆಯಾಂತಮಗ್ರತೋ ದೃಷ್ಟ್ವಾ ಭೀಮಮಾತ್ತಶರಾಸನಮ್ |
ದುದ್ರುವುಃ ಸರ್ವಪಾಂಚಾಲಾ ವಿವಿಶುಃ ಪುರಮೇವ ಚ ॥72॥

ಮುಂಚೂಣಿಯಲ್ಲಿ ಬಿಲ್ಲು ಬಾಣ ಹಿಡಿದು ಭೀಮಸೇನ ಬರುತ್ತಿದ್ದುದನ್ನು ಕಂಡು ಎಲ್ಲ ಪಾಂಚಾಲರೂ ಭಯದಿಂದ ಓಡಿದರು. ತಮ್ಮ ಪಟ್ಟಣವನ್ನು ಹೊಕ್ಕರು.

ದ್ರುಪದಸ್ತ್ವಭ್ಯಯಾದ್ ಭೀಮಂ ಸಪುತ್ರಃ ಸಹ ಸೇನಯಾ |
ಚಕ್ರರಕ್ಷೌ ಚ ತಸ್ಯಾಸ್ತಾಂ ಯುಧಾಮನ್ಯೂತ್ತಮೌಜಸೌ ॥73॥

ದ್ರುಪದ ಮಕ್ಕಳೊಡನೆ ಸೈನ್ಯ ಸಮೇತನಾಗಿ ಭೀಮನನ್ನು ಇದಿರಿಸಿದ. ಅವನಿಗೆ ಯುಧಾಮನ್ಯು ಉತ್ತಮೌಜರು ಚಕ್ರರಕ್ಷಕರಾಗಿದ್ದರು.

ಧಾತ್ರರ್ಯಮಾವೇಶಯುತೌ ವಿಶ್ವಾವಸು ಪರಾವಸೂ |
ಸುತೌ ತಸ್ಯ ಮಹಾವೀರ್ಯೌ ಸತ್ಯಜಿತ್ ಪೃಷ್ಠತೋಽಭವತ್ ॥74॥

ಆ ಇಬ್ಬರು ದ್ರುಪದ ಪುತ್ರರು ಧಾತೃ ಅರ್ಯಮರೆಂಬ ಆದಿತ್ಯರ ಆವೇಶಯುಕ್ತರಾದ ವಿಶ್ವಾವಸು ಪರಾವಸುಗಳೆಂಬ ಗಂಧರ್ವರು ಮಹಾವೀರ್ಯಶಾಲಿಗಳು. ರಥದ ಹಿಂದೆ ರಕ್ಷಕನಾಗಿ ಸತ್ಯಜಿತ್ ಇದ್ದ.

ಸ ಮಿತ್ರಾಂಶಯುತೋ ವೀರಶ್ಚಿತ್ರಸೇನೋ ಮಹಾರಥಃ |

ಅಗ್ರತಸ್ತು ಶಿಖಂಡ್ಯಾಗಾದ್ ರಥೋದಾರಃ ಶರಾನ್ ಕ್ಷಿಪನ್ ॥75॥
ಸತ್ಯಜಿತ್ ಮಿತ್ರನೆಂಬ ಆದಿತ್ಯನ ಅಂಶದಿಂದ ಯುಕ್ತನಾದ ಚಿತ್ರಸೇನ ಗಂಧರ್ವ, ವೀರ, ಮಹಾರಥ, ಮುಂಭಾಗದಲ್ಲಿ ಶ್ರೇಷ್ಠವಾದ ರಥದಲ್ಲಿ ಬಾಣಗಳನ್ನು ಎಸೆಯುತ್ತ ಶಿಖಂಡಿ ಬಂದ.
ಜನಮೇಜಯಸ್ತಮನ್ವೇವ ಪೂರ್ವಂ ಚಿತ್ರರಥೋ ಹಿ ಯಃ।
ತ್ವಷ್ಟುರಾವೇಶಸಂಯುಕ್ತಃ ಸ ಶರಾನಭ್ಯವರ್ಷತ ॥76॥
ಶಿಖಂಡಿಯ ಹಿಂದಿನಿಂದ ಜನಮೇಜಯ ಬಾಣಗಳ ಮಳೆಗರೆದ. ಅವನು ಹಿಂದೆ ಚಿತ್ರರಥನೆಂಬ ಗಂಧರ್ವ. ತ್ವಷ್ಟೃ ಎಂಬ ಆದಿತ್ಯನ ಆವೇಶದಿಂದ ಕೂಡಿದ್ದ.
ತಾವುಭೌ ವಿರಥೌ ಕೃತ್ವಾ ವಿಚಾಪೌ ಚ ವಿವರ್ಮಕೌ।
ಭೀಮೋ ಜಘಾನ ತಾಂ ಸೇನಾಂ ಸವಾಜಿರಥಕುಂಜರಾಮ್ ॥77॥
ಭೀಮಸೇನ ಶಿಖಂಡಿ ಜನಮೇಜಯರ ರಥಗಳನ್ನು ಮುರಿದ, ಬಿಲ್ಲುಗಳನ್ನು ಕಡಿದ. ಕವಚಗಳನ್ನು ಭೇದಿಸಿದ. ಅಶ್ವರಥ ಗಜಗಳಿಂದ ಕೂಡಿದ ಆ ಸೈನ್ಯವನ್ನು ಸಂಹರಿಸಿದ.
ಅಥೈನಂ ಶರವರ್ಷೇಣ ಯುಧಾಮನ್ಯೂತ್ತಮೌಜಸೌ।
ಅಭೀಯತುಸ್ತೌ ವಿರಥೌ ಚಕ್ರೇ ಭೀಮೋ ನಿರಾಯುಧೌ ॥78॥
ಬಳಿಕ ಯುಧಾಮನ್ಯು ಉತ್ತಮೌಜರು ಭೀಮನನ್ನು ಬಾಣಗಳ ಮಳೆಯಿಂದ ಇದಿರಿಸಿದರು. ಅವರನ್ನು ಭೀಮ ರಥರಹಿತರನ್ನಾಗಿ ನಿರಾಯುಧರನ್ನಾಗಿ ಮಾಡಿದ.
ಹಸ್ತಪ್ರಾಪ್ತಂ ಚ ಪಾಂಚಾಲಂ ನಾಗ್ರಹೀತ್ ಸ ವೃಕೋದರಃ।
ಗುರ್ವರ್ಥ ಮರ್ಜುನಸ್ಯೋರ್ವೀಂ ಪ್ರತಿಜ್ಞಾಂ ಕರ್ತುಮಪ್ಯೃತಾಮ್
ಮಾನಭಂಗಾಯ ಕರ್ಣಸ್ಯ ಪಾರ್ಥಮೇವ ನ್ಯಯೋಜಯತ್ ॥79॥
ಕೈಗೆ ಸಿಗುವಂತಿದ್ದ ದ್ರುಪದನನ್ನು ಭೀಮ ಸೆರೆ ಹಿಡಿಯಲಿಲ್ಲ. ಗುರುದ್ರೋಣರಿಗಾಗಿ ಅರ್ಜುನ ಗೈದಿದ್ದ ಮಹಾ ಪ್ರತಿಜ್ಞೆಯನ್ನು ಸತ್ಯಗೊಳಿಸುವುದಕ್ಕಾಗಿ ಮತ್ತು ಕರ್ಣನ ಮಾನ ಕಳೆಯುವುದಕ್ಕಾಗಿ ಅರ್ಜುನನನ್ನು ಆ ಕಾರ್ಯಕ್ಕಾಗಿ ಬಿಟ್ಟ.
ಸ ಶರಾನ್ ಕ್ಷಿಪತಸ್ತಸ್ಯ ಪಾಂಚಾಲಸ್ಯಾರ್ಜುನೋ ದ್ರುತಮ್।
ಪುಪ್ಲುವೇ ಸ್ಯಂದನೇ ಚಾಪಂ ಛಿತ್ವಾಂ ತಂ ಚಾಗ್ರಹೀತ್ ಕ್ಷಣಾತ್ ॥80॥
ಅರ್ಜುನ ತನ್ನ ಮೇಲೆ ಬಾಣಗಳನ್ನು ಎಸೆಯುತ್ತಿದ್ದ ದ್ರುಪದನ ರಥದೊಳಗೆ ಹಾರಿದ. ಅವನ ಬಿಲ್ಲನ್ನು ಮುರಿದು ಕ್ಷಣದಲ್ಲಿ ಸೆರೆಹಿಡಿದ.
ಸಿಂಹೋ ಮೃಗಮಿವಾದಾಯ ಸ್ವರಥಂ ಚಾಭಿಪೇದಿವಾನ್।
ಅಥ ಪ್ರಕುಪಿತಂ ಸೈನ್ಯಂ ಫಲ್ಗುನಂ ಪರ್ಯವಾರಯತ್ ॥81॥
ಸಿಂಹ ಜಿಂಕೆಯನ್ನು ಹಿಡಿದು ತರುವಂತೆ ಅರ್ಜುನ ದ್ರುಪದನನ್ನು ಹಿಡಿದು ತಂದು ತನ್ನ ರಥಕ್ಕೆ ಹಾರಿದ. ಆಗ ಬಹುಕೋಪಗೊಂಡ ಸೈನ್ಯ ಅರ್ಜುನನನ್ನು ಸುತ್ತುವರಿಯಿತು.
ಜಘಾನ ಭೀಮಸ್ತರಸಾ ತತ್ಸೈನ್ಯಂ ಶರವೃಷ್ಟಿಭಿಃ।
ಅಥ ಸತ್ಯಜಿದಭ್ಯಾಗಾತ್ ಪಾರ್ಥಂ ಮುಂಚನ್ ಶರಾನ್‌ಬಹೂನ್ ॥
ಭೀಮ ಆ ಸೈನ್ಯವನ್ನು ಬಾಣವೃಷ್ಟಿಗಳಿಂದ ಬೇಗನೆ ಸಂಹರಿಸತೊಡಗಿದ. ಆಗ ಸತ್ಯಜಿತ್ ಬಹಳ ಬಾಣಗಳನ್ನು ಎಸೆಯುತ್ತ ಅರ್ಜುನನ ಮುಂದೆ ಬಂದ.
ತಮರ್ಜುನಃ ಕ್ಷಣೇನೈವ ಚಕ್ರೇ ವಿರಥ ಕಾರ್ಮುಕಮ್।
ಘ್ನಂತಂ ಭೀಮಂ ಪುನಃ ಸೈನ್ಯಮರ್ಜುನಃ ಪ್ರಾಹ ಮಾ ಭವಾನ್ ॥83॥
ಸೇನಾಮರ್ಹತಿ ರಾಜ್ಞೋಽಸ್ಯ ವೀರ ಹಂತುಮಶೇಷತಃ।
ಸಂಬಂಧಯೋಗ್ಯಸ್ತಾತಸ್ಯ ಸಖಾಯಂ ನಃ ಸುಧಾರ್ಮಿಕಃ ॥84॥
ನೇಷ್ಯಾಮ ಏನಮೇವಾತೋ ಗುರೋರ್ವಚನಗೌರವಾತ್।
ಸ್ನೇಹಪಾಶಂ ತತಶ್ಚಕ್ರೇ ಬೀಭತ್ಸೌದ್ರುಪದೋಽಧಿಕಮ್ ॥85॥
ಅರ್ಜುನ ಕ್ಷಣದಲ್ಲಿ ಅವನನ್ನು ರಥರಹಿತ ಚಾಪರಹಿತನನ್ನಾಗಿ ಮಾಡಿದ. ಭೀಮ ಮತ್ತೂ ಸೈನ್ಯವನ್ನು ಸಂಹರಿಸುತ್ತಿದ್ದುದನ್ನು ಕಂಡು ಅರ್ಜುನ ನುಡಿದ. `ವೀರನೆ, ಈ ರಾಜನ ಸೈನ್ಯವನ್ನು ಪೂರ್ತಿ ಸಂಹರಿಸಬೇಡ. ಈತ ಬಹಳ ಧಾರ್ಮಿಕ. ನಮ್ಮ ತಂದೆಯ ಸ್ನೇಹಿತ. ನಮಗೆ ವಿವಾಹ ಸಂಬಂಧಕ್ಕೆ ಯೋಗ್ಯ. ಅದರಿಂದ ನಾವು ಗುರುಗಳ ಮಾತಿನಲ್ಲಿ ಗೌರವಭಾದಿಂದ ದ್ರುಪದನನ್ನು ಮಾತ್ರ ಹಿಡಿದು ಒಯ್ಯೋಣ'. ಅದರಿಂದ ದ್ರುಪದ ಅರ್ಜುನನಲ್ಲಿ ಅಧಿಕವಾಗಿ ಸ್ನೇಹಪಾಶವಿಟ್ಟುಕೊಂಡ.
ತತಃ ಸೇನಾಂ ವಿಹಾಯ್ಯೆವ ಭೀಮೋ ಬೀಭತ್ಸುಮನ್ವಗಾತ್।
ಮುಕ್ತಾ ಕಥಂಚಿದ್ ಭೀಮಾಸ್ಯಾತ್ ಸಾ ಸೇನಾ ದುದ್ರುವೇ ಭಯಾತ್ ॥
ಬಳಿಕ ಸೈನ್ಯವನ್ನು ಬಿಟ್ಟು ಭೀಮ ಅರ್ಜುನನನ್ನು ಹಿಂಬಾಲಿಸಿದ. ಹೀಗೆ ಭೀಮನ ಬಾಯಿಂದ ಹೇಗೋ ತಪ್ಪಿಸಿಕೊಂಡ ಸೈನ್ಯ ಭಯದಿಂದ ಪಲಾಯನ ಮಾಡಿತು.
ದ್ರುಪದಂ ಸ್ಥಾಪಯಾಮಾಸಾಥಾರ್ಜುನೋ ದ್ರೋಣಸನ್ನಿಧೌ।
ಪಪ್ರಚ್ಛೈನಂ ತದಾ ದ್ರೋಣಃ ಸಖ್ಯಮಸ್ತ್ವಿತ ನೇತಿ ವಾ ॥87॥
ಅರ್ಜುನ ದ್ರೋಣರ ಬಳಿ ದ್ರುಪದನನ್ನು ತಂದು ನಿಲ್ಲಿಸಿದ. ದ್ರೋಣರು ಆಗ ದ್ರುಪದನನ್ನು ಕೇಳಿದರು. `ಈಗ ಹೇಳು, ನಮ್ಮೊಳಗೆ ಸಖ್ಯವಿದೆಯೆ, ಇಲ್ಲವೆ?'

ಅಸ್ತೀದಾನೀಮಿತಿ ಪ್ರಾಹ ದ್ರುಪದೋಽಂಗಿರಸಾಂ ವರಮ್ |
ಅಥಾಹ ದ್ರುಪದಂ ದ್ರೋಣಃ ಸಖ್ಯಮಿಚ್ಛೇಽಕ್ಷಯಂ ತವ ॥88॥
`ಈಗ ಇದೆ' ಎಂದ ದ್ರುಪದ. ದ್ರೋಣರು ಹೇಳಿದರು, `ನಿನ್ನ ಶಾಶ್ವತವಾದ ಸಖ್ಯವನ್ನೇ ನಾನು ಬಯಸುವೆನು'.
ನ ಹ್ಯರಾಜ್ಞೋ ಭವೇತ್ಸಖ್ಯಂ ತವೇತೀದಂ ಕೃತಂ ಮಯಾ |
ನ ವಿಪ್ರಧರ್ಮೋ ಯದ್ಯುದ್ಧಮತಸ್ತ್ವಂ ನ ಮಯಾ ಧೃತಃ ॥89॥
`ರಾಜನಲ್ಲದವನೊಡನೆ ನಿನಗೆ ಸಖ್ಯವಿರುವುದಿಲ್ಲವೆಂದು ನಾನು ಈ ಕಾರ್ಯಮಾಡಿದೆ. ಯುದ್ಧ ಬ್ರಾಹ್ಮಣನಿಗೆ ಧರ್ಮವಲ್ಲ. ಅದರಿಂದ ನಾನು ಸ್ವತಃ ನಿನ್ನನ್ನು ವಶಪಡಿಸಿಕೊಳ್ಳಲಿಲ್ಲ.
ಶಿಷ್ಯೈರೇತತ್ ಕಾರಿತಂ ಮೇ ತವ ಸಖ್ಯಮಭೀಪ್ಸತಾ |
ಅತಃ ಸಖ್ಯಾರ್ಥಮೇವಾದ್ಯ ತ್ವದ್ರಾಜ್ಯಾರ್ಧೋ ಹೃತೋ ಮಯಾ ॥90॥
`ಶಿಷ್ಯರಿಂದ ಈ ಕೆಲಸವನ್ನು ನನಗಾಗಿ ಮಾಡಿಸಿಕೊಂಡೆ. ಏಕೆಂದರೆ ನಾನು ನಿನ್ನ ಸಖ್ಯವನ್ನು ಬಯಸಿದ್ದೇನೆ. ಅದರಿಂದ ಸಖ್ಯಕ್ಕಾಗಿಯೆ ಇದೀಗ ನಿನ್ನ ರಾಜ್ಯದ ಒಂದು ಭಾಗವನ್ನು ನಾನು ಅಪಹರಿಸಿದ್ದೇನೆ.
ಗಂಗಾಯಾ ದಕ್ಷಿಣೇ ಕೂಲೇ ತ್ವಂ ರಾಜ್ಯೈವೋತ್ತರೇ ತ್ವಹಮ್ |
ನ ಹ್ಯರಾಜತ್ವ ಏಕಸ್ಯ ಸಖ್ಯಂ ಸ್ಯಾದಾವಯೋಃ ಸಖೇ ॥91॥
ಮಿತ್ರ, ಗಂಗೆಯ ದಕ್ಷಿಣ ತೀರದಲ್ಲಿ ನೀನೆ ರಾಜ. ಉತ್ತರ ತೀರದಲ್ಲಿ ನಾನು. ನಮ್ಮಿಬ್ಬರೊಳಗೆ ಒಬ್ಬನು ರಾಜನಲ್ಲದಿದ್ದರೆ ಸಖ್ಯ ಚಿರಕಾಲ ಉಳಿಯಲಾರದು ತಾನೆ?
ಇತ್ಯುಕೊತ್ವೇನ್ಮುಚ್ಯ ತಂ ದ್ರೋಣೋ ರಾಜ್ಯಾರ್ಧಂ ಗೃಹ್ಯ ಚಾಮುತಃ |
ಯಯೌ ಶಿಷ್ಯೈರ್ನಾಗಪುರಂ ನ್ಯವಸತ್ ಸುಖಮತ್ರ ಚ ॥92॥
ದ್ರೋಣರು ಹೀಗೆ ಹೇಳಿ ದ್ರುಪದನನ್ನು ಬಂಧಮುಕ್ತನನ್ನಾಗಿ ಮಾಡಿ ಅವನ ರಾಜ್ಯದ ಒಂದು ಭಾಗವನ್ನು ಸ್ವೀಕರಿಸಿ ಶಿಷ್ಯರೊಡನೆ ಹಸ್ತಿನಾಪುರಕ್ಕೆ ಹೋದರು. ಅಲ್ಲಿ ಸುಖವಾಗಿ ವಾಸಮಾಡಿದರು.
ಬ್ರಾಹ್ಮಣ್ಯ ತ್ಯಾಗಭೀರುಃ ಸನ್ ನಾಗ್ರಹೀದ್ ಧನುರಪ್ಯಸೌ |
ಧಾರ್ತರಾಷ್ಟ್ರೈಸ್ತು ಭೀಮಸ್ಯ ಭಯಾತ್ ಪಾದೌ ಪ್ರಣಮ್ಯ ಚ ॥93॥
ಶರಣಾರ್ಥಂ ಯಾಚಿತತ್ವಾತ್ ಸಪುತ್ರೋ ಯುಯುಧೇ ಪರೈಃ |
ಏವಂ ಹರೀಚ್ಛಯೈವಾಸೌ ಕ್ಷಾತ್ರಂ ಧರ್ಮಮುಪೇಯಿವಾನ್ ॥94॥
ಬ್ರಾಹ್ಮಣ್ಯವನ್ನು ಬಿಟ್ಟಂತಾದೀತೆಂದು ಭಯಪಟ್ಟು ದ್ರೋಣರು ಎಂದೂ ಸ್ವತಃ ಬಿಲ್ಲನ್ನೆತ್ತಿಕೊಳ್ಳಲಿಲ್ಲ. ಕೌರವರು ಭೀಮನ ಭಯದಿಂದ ಕಾಲಿಗೆ ಬಿದ್ದು ರಕ್ಷಣೆಗಾಗಿ ಬೇಡಿದ್ದರಿಂದ ದ್ರೋಣರು ಅಶ್ವತ್ಥಾಮನಿಂದ ಕೂಡಿಕೊಂಡು ಪಾಂಡವರೊಡನೆ ಯುದ್ಧಮಾಡಿದರು. ಹೀಗೆ ಹರೀಚ್ಛೆಯಿಂದಲೆ ಅವರು ಕ್ಷಾತ್ರಧರ್ಮವನ್ನು ಕೈಗೊಂಡರು.
* * * *

ನೂರ ಮೂವತ್ತೇಳನೆಯ ಅಧ್ಯಾಯ
(ದ್ರೋಣರಿಗೆ ಗುರುದಕ್ಷಿಣದಾನ ಪ್ರಸಂಗ, ದುರ್ಯೋಧನಾದಿಗಳ ಪರಾಜಯ, ಭೀಮಾರ್ಜುನರ ಜಯ, ದ್ರೋಣದ್ರುಪದ ಸಂವಾದ, ದ್ರೋಣರಿಂದ ದ್ರುಪದನ ಅರ್ಧರಾಜ್ಯ ಸ್ವೀಕಾರ.)
ವೈಶಂಪಾಯನಃ
ಪಾಂಡವಾನ್ ಧಾರ್ತರಾಷ್ಟ್ರಾಂಶ್ಚ ಕೃತಾಸ್ತ್ರಾನ್ ಪ್ರಸಮೀಕ್ಷ್ಯ ತು |
ಗುರ್ವರ್ಥಂ ದಕ್ಷಿಣಾಂ ಕಾಲೇ ಪ್ರಾಪ್ತೇಽಮನ್ಯತ ವೈ ಗುರುಃ ॥1॥
ಪಾಂಡವರು ಮತ್ತು ಕೌರವರು ಅಸ್ತ್ರವಿದ್ಯೆಯಲ್ಲಿ ಪರಿಣತರಾದುದನ್ನು ಗಮನಿಸಿ ಗುರುಗಳಾದ ದ್ರೋಣರು ಗುರುದಕ್ಷಿಣೆಯನ್ನು ಸ್ವೀಕರಿಸುವುದಕ್ಕೆ ಇದು ಯೋಗ್ಯವಾದ ಕಾಲವೆಂದು ತಿಳಿದರು.
ಕೃತಾಸ್ತ್ರಾಂಶ್ಚ ತತಃ ಶಿಷ್ಯಾನ್ ಚೋದಯಾಮಾಸ ವೈ ಗುರುಃ |
ಅಸ್ತ್ರಶಿಕ್ಷಾಮನುಜ್ಞಾತಾನ್ ಗಂಗಾದ್ವಾರಮುಪಾಗತಾನ್ ॥2॥
ಅಸ್ತ್ರವಿದ್ಯೆಯಲ್ಲಿ ಪಾರಂಗತರಾಗಿ ದ್ರೋಣರ ಮನ್ನಣೆಯನ್ನು ಪಡೆದು ಗಂಗಾದ್ವಾರಕ್ಕೆ ಬಂದ ಎಲ್ಲಾ ಶಿಷ್ಯರನ್ನೂ ಕುರಿತು ಗುರುಗಳಾದ ದ್ರೋಣರು ಒತ್ತಾಯ ಮಾಡಿದರು.
ಭಾರದ್ವಾಜಸ್ತತಸ್ತಾಂಸ್ತು ಸರ್ವಾನೇವಾಭ್ಯಭಾಷತ |
ಇಚ್ಛಾಮಿ ದತ್ತಾಂ ಸಹಿತೈರ್ಮಹ್ಯಂ ಪರಮದಕ್ಷಿಣಾಮ್ ॥3॥
ದ್ರೋಣರು ಅವರೆಲ್ಲರನ್ನೂ ಕುರಿತು ನೀವೆಲ್ಲರೂ ಸೇರಿ, ನನಗೆ ಶ್ರೇಷ್ಠವಾದ ಗುರುದಕ್ಷಿಣೆಯನ್ನು ಸಲ್ಲಿಸಬೇಕೆಂದು ನಾನು ಬಯಸುತ್ತೇನೆ ಎಂದು ಹೇಳಿದರು.
ಏವಮುಕ್ತಾಸ್ತತಸ್ತೇ ವೈ ಶಿಷ್ಯಾ ದ್ರೋಣಮುಪಾಗಮನ್ |
ಭಗವಾನ್ ಕಿಂ ಪ್ರಯಚ್ಛಾಮ ಆಜ್ಞಾಪಯತು ನೋ ಗುರುಃ ॥4॥
ಹೀಗೆ ಹೇಳಿದಾಗ ಆ ಶಿಷ್ಯರು ದ್ರೋಣರ ಸಮೀಪಕ್ಕೆ ಬಂದು ಪೂಜ್ಯರೇ, ನಾವು ಏನನ್ನು ಕೊಡಬೇಕು? ಪೂಜ್ಯರಾದ ಗುರುಗಳಾದ ತಾವು ಅಪ್ಪಣೆಯನ್ನು ಕೊಡಬೇಕು ಎಂದು ಹೇಳಿದರು.
ತತಃ ಶಿಷ್ಯಾನ್ ಸಮಾಹೂಯ ಆಚಾರ್ಯಃ ಸಮಚೋದಯತ್ |
ದ್ರೋಣಃ ಸರ್ವಾನಶೇಷೇಣ ದಕ್ಷಿಣಾರ್ಥಂ ಮಹೀಪತೇ ॥5॥

ರಾಜನೇ, ಆಗ ದ್ರೋಣರು ಎಲ್ಲಾ ಶಿಷ್ಯರನ್ನೂ ಕರೆದು ಗುರುದಕ್ಷಿಣೆಗಾಗಿ ಒತ್ತಾಯ ಮಾಡಿದರು.
ಪಂಚಾಲರಾಜಂ ದ್ರುಪದಂ ಗೃಹೀತ್ವಾ ರಣಮೂರ್ಧನಿ |
ಪರ್ಯಾನಯತ ಭದ್ರಂ ವಃ ಸಾ ಸ್ಯಾತ್ ಪರಮದಕ್ಷಿಣಾ ||6||
ಪಾಂಚಾಲರಾಜನಾದ ದ್ರುಪದನನ್ನು ಯುದ್ಧದಲ್ಲಿ ಸೆರೆಹಿಡಿದು ನನ್ನ ಬಳಿಗೆ ಕರೆದುಕೊಂಡು ಬನ್ನಿ. ನಿಮಗೆ ಮಂಗಳವಾಗಲಿ. ಇದೇ ನಾನು ಬಯಸುವ ಶ್ರೇಷ್ಠವಾದ ಗುರುದಕ್ಷಿಣೆ.
ವೈಶಂಪಾಯನಃ
ತಥೇತ್ಯುಕ್ತ್ವಾ ತು ತೇ ಸರ್ವೇ ರಥೈಸ್ತೂರ್ಣಂ ಪ್ರಹಾರಿಣಃ |
ಆಚಾರ್ಯಧನದಾನಾರ್ಥಂ ದ್ರೋಣೇನ ಸಹಿತಾ ಯಯುಃ ||7||
ಹಾಗೆಯೇ ಆಗಲಿ ಎಂದು ಹೇಳಿ ಪ್ರಹರಣಶೀಲರಾದ ಅವರೆಲ್ಲರೂ ರಥಗಳನ್ನು ತೆಗೆದುಕೊಂಡು ಗುರು ದಕ್ಷಿಣೆಯನ್ನು ಕೊಡುವ ಸಲುವಾಗಿ ದ್ರೋಣರನ್ನೂ ಕರೆದುಕೊಂಡು ಶೀಘ್ರವಾಗಿ ಹೊರಟರು.
ತತೋಽಭಿಜಗ್ಮುಃ ಪಾಂಚಾಲಂ ಕ್ರೋಶಂತಃ ಕೌರವರ್ಷಭಾಃ |
ತತೋ ರಥಪದಾತ್ಯೌಘೈಃ ಕುಂಜರೈಃ ಸಾದಿಭಿಃ ಸಹ ||8||
ಅನಂತರ ಆ ಕೌರವಶ್ರೇಷ್ಠರೆಲ್ಲರೂ ರಥ, ಗಜ, ಹಯ, ಪದಾತಿಗಳ ಸಮೂಹದೊಡನೆ, ಗಟ್ಟಿಯಾಗಿ ಕಿರುಚುತ್ತಾ ಪಾಂಚಾಲದೇಶಕ್ಕೆ ಹೊರಟರು.
ದುರ್ಯೋಧನಶ್ಚ ಕರ್ಣಶ್ಚ ಯುಯುತ್ಸುಶ್ಚ ಮಹಾಬಲಃ |
ದುಃಶಾಸನೋ ವಿಕರ್ಣಶ್ಚ ಜಲಸಂಧಃ ಸುಲೋಚನಃ ||9||
ಏತೇ ಚಾನ್ಯೇ ಚ ಬಹವಃ ಕುಮಾರಾ ಬಹುವಿಕ್ರಮಾಃ |
ಅಹಂಪೂರ್ವಮಹಂಪೂರ್ವಮಿತ್ಯೇವಂ ಕ್ಷತ್ರಿಯರ್ಷಭಾಃ ||10||
ದುರ್ಯೋಧನ, ಕರ್ಣ, ಮಹಾಬಲನಾದ ಯುಯುತ್ಸು, ದುಃಶಾಸನ, ವಿಕರ್ಣ, ಜಲಸಂಧ, ಸುಲೋಚನ ಇವರೂ, ಇನ್ನೂ ಅನೇಕ ವಿಕ್ರಮಶಾಲಿಗಳಾದ ರಾಜಕುಮಾರರೂ, ಕ್ಷತ್ರಿಯಶ್ರೇಷ್ಠರೂ `ನಾನು ಮುಂದೆ, ನಾನು ಮುಂದೆ' ಎಂಬ ಭಾವನೆಯಿಂದ ಹೊರಟರು.
ತತೋ ವರರಥಾರೂಢಾಃ ಕುಮಾರಾಃ ಸಾದಿಭಿಃ ಸಹ |
ಪ್ರವಿಶ್ಯ ನಗರಂ ಸರ್ವೇ ರಾಜಮಾರ್ಗಮುಪಾಯಯುಃ ||11||
ಅನಂತರ ಶ್ರೇಷ್ಠವಾದ ರಥಗಳನ್ನು ಏರಿದ ಕುಮಾರರೆಲ್ಲರೂ ಅಶ್ವದಳದ ಜೊತೆಯಲ್ಲಿ ಪಾಂಚಾಲನಗರವನ್ನು ಪ್ರವೇಶಿಸಿ ರಾಜಮಾರ್ಗವನ್ನು ಸೇರಿದರು.
ತಸ್ಮಿನ್ ಕಾಲೇ ತು ಪಾಂಚಾಲಃ ಶ್ರುತ್ವಾ ದೃಷ್ಟ್ವಾ ಮಹದ್ಬಲಮ್ |
ಭ್ರಾತೃಭಿಃ ಸಹಿತೋ ರಾಜನ್ ತ್ವರಯಾ ನಿರ್ಯಯೌ ಗೃಹಾತ್ ||12||
ಎಲೈ ರಾಜನೇ, ಆ ಸಮಯದಲ್ಲಿ ಪಾಂಚಾಲರಾಜನಾದ ದ್ರುಪದನು ಈ ದೊಡ್ಡ ಸೈನ್ಯವನ್ನು ಕೇಳಿ ಮತ್ತು ನೋಡಿ ತನ್ನ ತಮ್ಮಂದಿರಿಂದ ಒಡಗೂಡಿ ಶೀಘ್ರವಾಗಿ ಅರಮನೆಯಿಂದ ಹೊರಗೆ ಬಂದನು.
ತತಸ್ತು ಕೃತಸನ್ನಾಹಾ ಯಜ್ಞಸೇನಸಹೋದರಾಃ |
ಶರವರ್ಷಾಣಿ ಮುಂಚತಃ ಪ್ರಣೇದುಃ ಸರ್ವತೋದಿಶಮ್ ||13||
ಆಗ ದ್ರುಪದರಾಜನಾದ ಯಜ್ಞಸೇನನ ಸಹೋದರರು ಯುದ್ಧಸನ್ನದ್ಧರಾಗಿ ಬಾಣಗಳ ಮಳೆಯನ್ನು ಕರೆಯುತ್ತಾ ಎಲ್ಲಾ ಕಡೆಯಲ್ಲಿಯೂ ಸಿಂಹನಾದವನ್ನು ಮಾಡಿದರು.
ತತೋ ರಥೇನ ಶುಭ್ರೇಣ ಸಮಾಸಾದ್ಯ ತು ಕೌರವಾನ್ |
ಯಜ್ಞಸೇನಃ ಶರಾನ್ ಘೋರಾನ್ ವವರ್ಷ ಯುಧಿ ದುರ್ಜಯಃ ||14||
ಆಗ ಯುದ್ಧದಲ್ಲಿ ದುರ್ಜಯನಾದ ಯಜ್ಞಸೇನನು ಶುಭ್ರವಾದ ರಥವನ್ನು ಏರಿ ಕೌರವರನ್ನು ಸಮೀಪಿಸಿ ಅವರ ಮೇಲೆ ಉಗ್ರವಾದ ಬಾಣದ ಮಳೆಯನ್ನು ಕರೆದನು.
ಪೂರ್ವಮೇವ ತು ಸಮ್ಮಂತ್ರ್ಯ ಪಾರ್ಥೋ ದ್ರೋಣಮಥಾಽಬ್ರವೀತ್ |
ದರ್ಪೋತ್ಸೇಕಃ ಕುಮಾರಾಣಾಮಾಚಾರ್ಯ ದ್ವಿಜಸತ್ತಮ ||15||
ಏಷಾಂ ಪರಾಕ್ರಮಸ್ಯಾಂತೇ ವಯಂ ಕುರ್ಯಾಮ ಸಾಹಸಮ್ |
ಏತೈರಶಕ್ಯಃ ಪಾಂಚಾಲೋ ಗ್ರಹೀತುಂ ರಣಮೂರ್ಧನಿ ||16||
ಅರ್ಜುನನು ಮೊದಲೇ ದ್ರೋಣರನ್ನು ಸಂಧಿಸಿ ಹೀಗೆ ಹೇಳಿದ್ದನು. ಆಚಾರ್ಯರಾದ ಬ್ರಾಹ್ಮಣ ಶ್ರೇಷ್ಠರೇ, ಈ ಕುಮಾರರೆಲ್ಲರೂ ದರ್ಪದಿಂದ ಉಬ್ಬಿದ್ದಾರೆ. ಇವರು ಯುದ್ಧದಲ್ಲಿ ಪಾಂಚಾಲರಾಜನನ್ನು ಹಿಡಿಯಲು ಸಮರ್ಥರಲ್ಲ. ಇವರ ವಿಕ್ರಮವು ಮುಗಿದ ಮೇಲೆ ನಾವು ಕಾರ್ಯವನ್ನು ಸಾಧಿಸುತ್ತೇವೆ.
ಏವಮುಕ್ತ್ವಾ ತು ಕೌಂತೇಯೋ ಭ್ರಾತೃಭಿಃ ಸಹಿತೋಽನಘಃ |
ಅರ್ಧಕ್ರೋಶೇ ತು ನಗರಾದತಿಷ್ಠದ್ ಬಹಿರೇವ ಸಃ ||17||
ಹೀಗೆ ಹೇಳಿ ಕುಂತಿಯ ಪುತ್ರನಾದ ಅರ್ಜುನನು ಅಣ್ಣತಮ್ಮಂದಿರಿಂದ ಸಹಿತನಾದ ನಗರದ ಹೊರಗೆ ಅರ್ಧಕ್ರೋಶ ದೂರದಲ್ಲಿಯೇ ನಿಂತನು.
ದ್ರುಪದಃ ಕೌರವಾನ್ ದೃಷ್ಟ್ವಾ ಪ್ರಧಾವತ ಸಮಂತತಃ |
ಶರಜಾಲೇನ ಮಹತಾ ಮೋಹಯನ್ ಕೌರವೀಂ ಚಮೂಮ್ ||18||
ದ್ರುಪದನು ಕೌರವರನ್ನು ನೋಡಿ ಅವರ ಸೈನ್ಯವನ್ನು ಶರಜಾಲದಿಂದ ಮರುಳುಗೊಳಿಸುತ್ತಾ ಎಲ್ಲಾ ಕಡೆ ಓಡಾಡಿದನು.

ತಮುದ್ಯಂತಂ ರಥೇನೈಕಮಾಶುಕಾರಿಣಮಾಹವೇ |
ಅನೇಕಮಿತಿ ಸಂತ್ರಾಸಾನ್ಮೇನಿರೇ ಸರ್ವಕೌರವಾಃ ॥19॥
ಯುದ್ಧದಲ್ಲಿ ಶೀಘ್ರತೆಯನ್ನು ಹೊಂದಿದ ಒಂದು ರಥದಲ್ಲಿ ಸಂಚರಿಸುವ ಅವನನ್ನು ಭಯಗ್ರಸ್ತರಾದ ಕೌರವರು ಅನೇಕರೆಂದು ಭಾವಿಸಿದರು.
ದ್ರುಪದಸ್ಯ ಶರಾ ಘೋರಾ ವಿಚೇರುಃ ಸರ್ವತೋದಿಶಮ್ |
ತತಃ ಶಂಖಾಶ್ಚ ಭೇರ್ಯಶ್ಚ ಮೃದಂಗಾಶ್ಚ ಸಹಸ್ರಶಃ ॥20॥
ಪ್ರಾವಾದ್ಯಂತ ಮಹಾರಾಜ ಪಾಂಚಾಲಾನಾಂ ನಿವೇಶನೇ |
ಸಿಂಹನಾದಶ್ಚ ಸಂಜಜ್ಞೇ ಪಾಂಚಾಲಾನಾಂ ಮಹಾತ್ಮನಾಮ್ ॥21॥
ದ್ರುಪದನ ಘೋರವಾದ ಬಾಣಗಳು ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸಿದವು. ಮಹಾರಾಜನೇ, ಆಗ ಪಾಂಚಾಲರಾಜನ ಮನೆಯಲ್ಲಿ ಶಂಖಭೇರಿಗಳು, ಮೃದಂಗ ಮೊದಲಾದ ವಾದ್ಯಗಳು ಸಹಸ್ರಸಂಖ್ಯೆಯಲ್ಲಿ ಮೊಳಗಿದವು. ಮಹಾತ್ಮರಾದ ಪಾಂಚಾಲರು ಸಿಂಹನಾದವನ್ನೂ ಮಾಡಿದರು.
ಧನುರ್ಜ್ಯಾತಳಶಬ್ದಶ್ಚ ಸಂಸ್ಪೃಶದ್ ಗಗನಂ ಮಹತ್ |
ದುಃಶಾಸನೋ ವಿಕರ್ಣಶ್ಚ ಸುಬಾಹುರ್ದೀರ್ಘಲೋಚನಃ |
ದುರ್ಯೋಧನಶ್ಚ ಸಂಕ್ರುದ್ಧಃ ಶರವರ್ಷೈರವಾಕಿರನ್ ॥22॥
ಪಾಂಚಾಲರ ಧನುಸ್ಸಿನ ಹೆದೆಯ ಝೇಂಕಾರವು, ಹಸ್ತತಾಳದ ಆಸ್ಫೋಟನದ ಶಬ್ದಗಳು ಮುಗಿಲನ್ನು ಮುಟ್ಟಿದವು. ಆಗ ದುಃಶಾಸನ, ವಿಕರ್ಣ, ಸುಬಾಹು, ದೀರ್ಘಲೋಚನ, ದುರ್ಯೋಧನ ಇವರು ಕ್ರುದ್ಧರಾಗಿ ಪಾಂಚಾಲ ರಾಜನ ಮೇಲೆ ಬಾಣದ ಮಳೆಯನ್ನು ಸುರಿಸಿದರು.
ಸೋಽತಿವಿದ್ಧೋ ಮಹೇಷ್ವಾಸೈಃ ಪಾರ್ಷತೋ ಯುಧಿ ದುರ್ಜಯಃ |
ವ್ಯಧಮತ್ ತಾನ್ಯನೀಕಾನಿ ತತ್ಕ್ಷಣಾದೇವ ಭಾರತ ॥23॥
ಭಾರತನೇ, ಯುದ್ಧದಲ್ಲಿ ದುರ್ಜಯನಾದ ದ್ರುಪದನು ಮಹಾ- ಧನುರ್ಧಾರಿಗಳಾದ ಕೌರವರಿಂದ ಹೀಗೆ ಅತಿಯಾಗಿ ಪೀಡಿಸಲ್ಪಟ್ಟರೂ ಆ ಕ್ಷಣದಲ್ಲಿಯೇ ಅವರ ಸೈನ್ಯವನ್ನು ಚದುರಿಸಿದನು.
ದುರ್ಯೋಧನಂ ವಿಕರ್ಣಂ ಚ ಕರ್ಣಂ ಚಾಪಿ ಮಹಾಬಲಮ್ |
ನಾನಾನೃಪಸುತಾನ್ ವೀರಾನ್ ಸೈನ್ಯಾನಿ ವಿವಿಧಾನಿ ಚ |
ಅಲಾತಚಕ್ರವತ್ ಸರ್ವಾಂಶ್ಚರನ್ ಬಾಣೈರತರ್ಪಯತ್ ॥24॥
ಅಲಾತ ಚಕ್ರದಂತೆ ತಿರುಗುತ್ತಾ ದ್ರುಪದನು ದುರ್ಯೋಧನನನ್ನೂ, ವಿಕರ್ಣನನ್ನೂ, ಮಹಾಬಲನಾದ ಕರ್ಣನನ್ನೂ, ಅನೇಕ ರಾಜಕುಮಾರರನ್ನೂ. ವೀರರನ್ನೂ, ಅನೇಕ ಸೈನ್ಯಗಳನ್ನೂ ಬಾಣಗಳಿಂದ ಹೊಡೆದನು.
ಅಭಿದ್ರುವತ ಕೌರವ್ಯಾನ್ ವರ್ಷಮಾಣಾ ಘನಾ ಇವ |
ದುಃಶಾಸನಂ ಚ ದಶಭಿರ್ವಿಕರ್ಣಂ ವಿಂಶಕೈಃ ಶರೈಃ ॥25॥
ದ್ರುಪದನು ಕೌರವರನ್ನು ಸಮೀಪಿಸಿ ಮಳೆಯನ್ನು ಸುರಿಸುವ ಮೋಡಗಳಂತೆ ದುಃಶಾಸನನನ್ನು ಹತ್ತು ಬಾಣಗಳಿಂದಲೂ, ವಿಕರ್ಣನನ್ನು ಇಪ್ಪತ್ತು ಬಾಣಗಳಿಂದಲೂ ಪೀಡಿಸಿದನು.
ಶಕುನಿಂ ವಿಂಶಕೈಸ್ತೀಕ್ಷ್ಣೈರ್ದಶಭಿರ್ಮರ್ಮಭೇದಿಭಿಃ |
ಕರ್ಣದುರ್ಯೋಧನೌ ಚೋಭೌ ಶರೈಃ ಸರ್ವಾಂಗಸಂಧಿಷು ॥26॥
ಶಕುನಿಯನ್ನು ಇಪ್ಪತ್ತು ತೀಕ್ಷ್ಣವಾದ ಬಾಣಗಳಿಂದಲೂ, ಕರ್ಣ ದುರ್ಯೋಧನರನ್ನು ಎಲ್ಲಾ ಅಂಗಸಂಧಿಗಳಲ್ಲಿ ಮರ್ಮಭೇದಿಗಳಾದ ಹತ್ತು ಬಾಣಗಳಿಂದಲೂ ಪೀಡಿಸಿದನು.
ಅಷ್ಟಾವಿಂಶತಿಭಿಃ ಸರ್ವೈಃ ಪೃಥಕ್ಪೃಥಗರಿಂದಮಃ |
ಸುಬಾಹುಂ ಪಂಚಭಿರ್ವಿದ್ಧ್ವಾ ತಥಾಽನ್ಯಾನ್ ವಿವಿಧೈಃ ಶರೈಃ |
ವಿವ್ಯಾಧ ಸಹಸಾ ಭೂಯೋ ನನಾದ ಬಲವತ್ತರಮ್ ॥27॥
ಉಳಿದ ರಾಜಕುಮಾರರುಗಳನ್ನು ಅರಿಂದಮನಾದ ದ್ರುಪದನು ಪ್ರತಿಯೊಬ್ಬರನ್ನೂ ಇಪ್ಪತ್ತೆಂಟು ಬಾಣಗಳಿಂದ ಪೀಡಿಸಿ, ಸುಬಾಹುವನ್ನು ಐದು ಬಾಣಗಳಿಂದ ಹೊಡೆದು ಉಳಿದವರನ್ನು ಅನೇಕ ಬಾಣಗಳಿಂದ ಪೀಡಿಸಿ ಇದ್ದಕ್ಕಿದ್ದಂತೆಯೇ ಬಲವತ್ತರವಾದ ಸಿಂಹನಾದವನ್ನು ಮಾಡಿದನು.
ವಿನದ್ಯ ಕೋಪಾತ್ ಪಾಂಚಾಲಃ ಸರ್ವಶಸ್ತ್ರಭೃತಾಂ ವರಃ |
ಧನೂಂಷಿ ರಥಯಂತ್ರಂ ಚ ಹಯಾನ್ ಛತ್ರಧ್ವಜಾನಪಿ |
ಚಕರ್ತ ಸರ್ವಪಾಂಚಾಲಾಃ ಪ್ರಣೇದುಃ ಸಿಂಹಸರ್ಪವತ್ ॥28॥
ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪಾಂಚಾಲರಾಜನಾದ ದ್ರುಪದನು ಕೋಪದಿಂದ ಗರ್ಜಿಸಿ ಕೌರವರ ಧನುಸ್ಸುಗಳನ್ನೂ, ರಥಯಂತ್ರವನ್ನೂ, ಅಶ್ವಛತ್ರಧ್ವಜಗಳನ್ನೂ ಕತ್ತರಿಸಿದನು. ಎಲ್ಲಾ ಪಾಂಚಾಲರೂ ಸಿಂಹಗಳಂತೆ ಮತ್ತು ಸರ್ಪಗಳಂತೆ ಗರ್ಜಿಸಿದರು.
ತತಸ್ತು ನಾಗರಾಃ ಸರ್ವೇ ಮುಸಲೈರ್ಯಷ್ಟಿಭಿಸ್ತದಾ |
ಅಭ್ಯದ್ರುವಂತ ಕೌರವ್ಯಾನ್ ವರ್ಷಮಾಣಾ ಘನಾ ಇವ |
ಸಬಾಲವೃದ್ಧಾಃ ಕಾಂಪಿಲ್ಯಾಃ ಕೌರವಾನಭ್ಯಯುಸ್ತದಾ ॥29॥
ಅನಂತರ ನಗರವಾಸಿಗಳೆಲ್ಲರೂ ಒನಕೆ ಮತ್ತು ದೊಣ್ಣೆಗಳನ್ನು ತೆಗೆದುಕೊಂಡು ಕೌರವರಿಗೆ ಎದುರಾಗಿ ಬಂದು ಮಳೆಯನ್ನು ಸುರಿಸುವ ಮೋಡಗಳಂತೆ ಅವರ ಮೇಲೆ ಪ್ರಹಾರ ಮಾಡಿದರು. ಆಗ, ಕಾಂಪಿಲ್ಯನಗರದ ಬಾಲಕರು ಮತ್ತು ವೃದ್ಧರೂ ಸಹ ಕೌರವರಿಗೆ

ಯುದ್ಧದಲ್ಲಿ ಎದುರಾದರು. (ದ್ರುಪದರಾಜನ ಪುರಕ್ಕೆ ಕಂಪಿಲವೆಂದೂ, ಕಾಂಪಿಲ್ಯವೆಂದೂ ಹೆಸರು).
ದೃಷ್ಟ್ವಾ ತು ತುಮುಲಂ ಯುದ್ಧಂ ಪೌರೈರ್ಮಗ್ನಾಶ್ಚ ಭಾರತಾಃ |
ದ್ರುವಂತಿ ಸ್ಮ ನ ತಿಷ್ಠಂತಿ ಕ್ರೋಶಂತಃ ಪಾಂಡವಾನ್ ಪ್ರತಿ ॥30॥
ಆ ಘೋರವಾದ ಯುದ್ಧವನ್ನು ನೋಡಿ ಪೌರರ ಪ್ರಹಾರಗಳಲ್ಲಿ ಮುಳುಗಿದ ಕೌರವರು ಅಲ್ಲಿ ನಿಲ್ಲದೇ, ಪಾಂಡವರ ಕಡೆಗೆ ಕಿರುಚುತ್ತಾ ಓಡಿದರು.
ಪಾಂಚಾಲಶರಭಿನ್ನಾಂಗೋ ಭಯಮಾಸಾದ್ಯ ವೈ ನೃಪ |
ಕರ್ಣೋ ರಥಾದವಪ್ಲುತ್ಯ ಪಲಾಯನಪರೋಽಭವತ್ ॥31॥
ಕರ್ಣನು ದ್ರುಪದನ ಬಾಣಗಳಿಂದ ಗಾಯಗೊಂಡು ಭಯವನ್ನು ಹೊಂದಿ ರಥದಿಂದ ಧುಮುಕಿ ಪಲಾಯನಪರನಾದನು.
ಪಾಂಡವಾಸ್ತು ಸ್ವನಂ ಶ್ರುತ್ವಾ ಆರ್ತಾನಾಂ ರೋಮಹರ್ಷಣಮ್ |
ಅಭಿವಾದ್ಯ ತತೋ ದ್ರೋಣಂ ರಥಾನಾರುರುಹುಸ್ತದಾ ॥32॥
ಪಾಂಡವರು ತಮ್ಮವರಾದ ಕೌರವರ ರೋಮಾಂಚಕಾರಿಯಾದ ಆರ್ತನಾದವನ್ನು ಕೇಳಿ, ದ್ರೋಣರಿಗೆ ನಮಸ್ಕರಿಸಿ ತಮ್ಮ ರಥಗಳನ್ನು ಏರಿದರು.
ಯುಧಿಷ್ಠಿರಂ ನಿವಾರ್ಯಾಶು ಮಾ ಯುದ್ಧಮಿತಿ ಪಾಂಡವ |
ಮಾದ್ರೇಯೌ ಚಕ್ರರಕ್ಷೌ ತು ಫಲ್ಗುನಶ್ಚ ತದಾಽಕರೋತ್ |
ಸೇನಾಗ್ರತೋ ಭೀಮಸೇನಸ್ತದಾಽಭೂದ್ ಗದಯಾ ಸಹ ॥33॥
ಎಲೈ ಜನಮೇಜಯನೇ, ಯುಧಿಷ್ಠಿರನಿಗೆ ನೀನು ಯುದ್ಧ ಮಾಡುವುದು ಬೇಡ ಎಂದು ಹೇಳಿ ಅವನನ್ನು ನಿವಾರಿಸಿ ಅರ್ಜುನನು ನಕುಲಸಹದೇವರನ್ನು ತನ್ನ ಚಕ್ರರಕ್ಷಕರನ್ನಾಗಿ ಮಾಡಿಕೊಂಡನು. ಭೀಮಸೇನನು ಕೈಯಲ್ಲಿ ಗದೆಯನ್ನು ಹಿಡಿದು ಅರ್ಜುನನ ಮುಂದೆ ಹೊರಟನು.
ತದಾ ಶಂಖಧ್ವನಿಂ ಕೃತ್ವಾ ಭ್ರಾತೃಭಿಃ ಸಹಿತೋಽನಘಃ |
ಅಯಾಜ್ಜವೇನ ಕೌಂತೆಯೋ ರಥಘೋಷೇಣ ನಾದಯನ್ ॥34॥
ಆಗ, ಅಣ್ಣತಮ್ಮಂದಿರಿಂದ ಸಹಿತನಾದ ಅನಘನಾದ ಅರ್ಜುನನು ಶಂಖಧ್ವನಿಯನ್ನು ಮಾಡಿ ರಥಘೋಷವು ಎಲ್ಲೆಡೆಯಲ್ಲಿಯೂ ಕೇಳಿ ಬರುವಂತೆ ವೇಗದಿಂದ ಹೊರಟನು.
ಪಾಂಚಾಲಾನಾಂ ತತಃ ಸೇನಾಮುದ್ಧೂತಾರ್ಣವನಿಃಸ್ವನಾಮ್ |
ಭೀಮಸೇನೋ ಮಹಾಬಾಹುರ್ದಂಡಪಾಣಿರಿವಾಂತಕಃ ॥35॥
ಪ್ರವಿವೇಶ ಮಹಾಸೇನಾಂ ಮಕರಃ ಸಾಗರಂ ಯಥಾ |
ಸ್ವಯಮಭ್ಯದ್ರವದ್ ಭೀಮೋ ನಾಗಾನೀಕಂ ಗದಾಧರಃ ॥36॥
ಮಹಾಬಾಹುವಾದ ಭೀಮಸೇನನು ದಂಡಪಾಣಿಯಾದ ಯಮನಂತೆ ಪಾಂಚಾಲರ ಸಮುದ್ರದ ಘೋಷದಂತೆ ಮೊರೆಯುತ್ತಿದ್ದ ಆ ದೊಡ್ಡ ಸೈನ್ಯವನ್ನು ಮೊಸಳೆಯು ಸಾಗರವನ್ನು ಪ್ರವೇಶಿಸುವಂತೆ ಪ್ರವೇಶಿಸಿದನು. ಭೀಮನು ಕೈಯಲ್ಲಿ ಗದೆಯನ್ನು ಹಿಡಿದು ಗಜಾನೀಕಗಳ ಕಡೆ ತಾನೇ ಓಡಿದನು.
ಸುಯುದ್ಧಕುಶಲಃ ಪಾರ್ಥೋ ಬಾಹುವೀರ್ಯೇಣ ಚಾತುಲಃ |
ವ್ಯಹನತ್ ಕುಂಜರಾನೀಕಂ ಗದಯಾ ಕಾಲರೂಪಧೃಕ್ ॥37॥
ಯುದ್ಧದಲ್ಲಿ ಕುಶಲನೂ, ಬಾಹುವೀರ್ಯದಲ್ಲಿ ಅಸದೃಶನೂ ಆದ ಕುಂತಿಯ ಮಗನಾದ ಭೀಮನು ಮೃತ್ಯುವಿನ ರೂಪವನ್ನು ಧರಿಸಿದವನಂತೆ ಆನೆಗಳ ಹಿಂಡನ್ನು ಗದೆಯಿಂದ ಸಂಹಾರ ಮಾಡಿದನು.
ತೇ ಗಜಾ ಗಿರಿಸಂಕಾಶಾಃ ಗಿರಂತೋ ರುಧಿರಂ ಬಹು |
ಭೀಮಸೇನಸ್ಯ ಗದಯಾ ಭಿನ್ನಮಸ್ತಕಪಿಂಡಕಾಃ ॥38॥
ಪತಂತಿ ದ್ವಿರದಾ ಭೂಮೌ ವಜ್ರಘಾತಾದಿವಾಚಲಾಃ |
ಗಜಾನಶ್ವಾನ್ ರಥಾಂಶ್ಚೈವ ಪಾತಯಾಮಾಸ ಪಾಂಡವಃ ॥39॥
ಪರ್ವತದಂತಿರುವ ಆ ಆನೆಗಳಾದರೋ, ಭೀಮಸೇನನ ಗದಾಪ್ರಹಾರಕ್ಕೆ ಒಳಗಾಗಿ ತಲೆಗಳನ್ನೂ ಮತ್ತು ಶರೀರಗಳನ್ನೂ ಒಡೆದುಕೊಂಡು ಬಹಳವಾಗಿ ರಕ್ತವನ್ನು ಸುರಿಸುತ್ತಾ, ವಜ್ರಾಯುಧದ ಪ್ರಹಾರದಿಂದ ಪರ್ವತಗಳು ಬಿದ್ದಂತೆ ಭೂಮಿಯಲ್ಲಿ ಕುಸಿದವು. ಭೀಮಸೇನನು ಹೀಗೆ ಗಜಗಳನ್ನೂ ಅಶ್ವಗಳನ್ನೂ ಮತ್ತು ರಥಗಳನ್ನೂ ಧ್ವಂಸ ಮಾಡಿದನು.
ಪದಾತೀನ್ ನಾಗರಾಂಶ್ಚೈವ ನಾವಧೀದರ್ಜುನಾಗ್ರಜಃ |
ಗೋಪಾಲ ಇವ ದಂಡೇನ ಯಥಾ ಪಶುಗಣಾನ್ ವನೇ |
ಚಾಲಯನ್ ರಥಾನಾಗಾಶ್ವಾನ್ ಸಂಚಚಾಲ ವೃಕೋದರಃ ॥40॥
ದನಕಾಯುವವನು ಕೋಲಿನಿಂದ ಕಾಡಿನಲ್ಲಿ ಪಶುಗಳನ್ನು ನಡೆಸುವಂತೆ, ರಥಗಳನ್ನೂ, ಗಜಗಳನ್ನೂ ಮತ್ತು ಅಶ್ವಗಳನ್ನೂ ನಾಶಮಾಡಿದ ಅರ್ಜುನನ ಅಣ್ಣನಾದ ವೃಕೋದರನು ಪದಾತಿಗಳನ್ನಾಗಲೀ, ನಗರವಾಸಿಗಳನ್ನಾಗಲೀ ಕೊಲ್ಲಲಿಲ್ಲ. ಅವನು ಅಶ್ವಗಜರಥಗಳನ್ನು ಓಡಾಡಿಸುತ್ತಾ ಸಂಚರಿಸಿದನು.
ಭಾರದ್ವಾಜಪ್ರಿಯಂ ಕರ್ತುಮುದ್ಯತಃ ಫಲ್ಗುನಸ್ತದಾ |
ಪಾರ್ಷತಂ ಶರಜಾಲೇನ ಕ್ಷಿಪ್ರಂ ಪ್ರಚ್ಛಾದ್ಯ ಪಾಂಡವಃ ॥41॥
ಹಯೌಘಾಂಶ್ಚ ಗಜೌಘಾಂಶ್ಚ ರಥೌಘಾಂಶ್ಚ ಸಮಂತತಃ |
ಪಾತಯನ್ ಸಮರೇ ರಾಜನ್ ಯುಗಾಂತಾಗ್ನಿರಿವ ಜ್ವಲನ್ ॥42॥

ಅರ್ಜುನನು ಆಗ ದ್ರೋಣರಿಗೆ ಪ್ರಿಯವನ್ನು ಮಾಡಲು ಉದ್ಯುಕ್ತನಾಗಿ ದ್ರುಪದನನ್ನು ಶರಜಾಲದಿಂದ ಆಚ್ಛಾದಿಸಿ ಹಯಸಮೂಹಗಳನ್ನೂ, ಗಜಸಮೂಹಗಳನ್ನೂ, ರಥಸಮೂಹಗಳನ್ನೂ ಎಲ್ಲಾ ಕಡೆಯಲ್ಲಿಯೂ ನೆಲಕ್ಕೆ ಉರುಳಿಸುತ್ತಾ ಯುದ್ಧದಲ್ಲಿ ಯುಗಾಂತಕಾಲದ ಅಗ್ನಿಯಂತೆ ಜ್ವಲಿಸಿದನು.
ತತಸ್ತೇ  ಹನ್ಯಮಾನಾ ವೈ ಪಾಂಚಾಲಾಃ ಸೃಂಜಯಾಸ್ತಥಾ |
ಶರೈರ್ನಾನಾವಿಧೈಸ್ತೂರ್ಣಂ ಪಾರ್ಥಂ ಪ್ರಚ್ಛಾದ್ಯ ಸರ್ವಶಃ |
ಸಿಂಹನಾದವರವಾನ್ ಕೃತ್ವಾ ಸಮಯುಧ್ಯಂತ ಪಾಂಡವಮ್    ||43||
ಹೀಗೆ ಪಾರ್ಥನ ಪ್ರಹಾರಕ್ಕೆ ಒಳಗಾದ ಪಾಂಚಾಲರು ಮತ್ತು ಸೃಂಜಯರು ಅನೇಕ ವಿಧವಾದ ಬಾಣಗಳಿಂದ ಅರ್ಜುನನ್ನೂ ಎಲ್ಲಾ ಕಡೆಯಿಂದಲೂ ಆಚ್ಛಾದಿಸಿ ಸಿಂಹಗರ್ಜನೆಯನ್ನು ಮಾಡುತ್ತಾ ಅರ್ಜುನನೊಡನೆ ಯುದ್ಧವನ್ನು ಮಾಡಿದರು.
ತದ್ಯುದ್ಧಮಭವದ್ ಘೋರಂ ಸುಮಹಾದ್ಭುತದರ್ಶನಮ್ |
ಸಿಂಹನಾದಸ್ವನಂ ಶ್ರುತ್ವಾ ನಾಮೃಷ್ಯತ ಧನಂಜಯಃ    ||44||
ಆ ಯುದ್ಧವು ಘೋರವಾಗಿದ್ದಿತು. ನೋಡಲು ಅತ್ಯಂತ ಅದ್ಭುತವಾಗಿಯೂ ಇದ್ದಿತು. ಪಾಂಚಾಲರ ಸಿಂಹನಾದವನ್ನು ಕೇಳಿದ ಅರ್ಜುನನು ಅದನ್ನು ಸಹಿಸಲಿಲ್ಲ.
ತತಃ ಕಿರೀಟೀ ಸಹಸಾ ಪಾಂಚಾಲಂ ಸಮಭಿದ್ರವತ್ |
ಛಾದಯಿನ್ನಿಷುಜಾಲೇನ ಮಹತಾ ಮೋಹಯನ್ನಿವ    ||45||
ಆಗ ಕಿರೀಟಿಯು ಇದ್ದಕ್ಕಿದ್ದಂತೆಯೇ ಪಾಂಚಾಲರಾಜನನ್ನು ಸಮೀಪಿಸಿ ಶರಜಾಲದಿಂದ ಅವನನ್ನು ಮುಚ್ಚಿ ಅವನನ್ನು ಮರುಳು ಮಾಡಿದನು.
ಶೀಘ್ರಮಭ್ಯಸ್ಯತೋ ಬಾಣಾನ್ ಸಂದಧಾನಸ್ಯ ಚಾನಿಶಮ್ |
ನಾಂತರಂ ದದೃಶೇ ಕಿಂಚಿತ್ ಕೌಂತೇಯಸ್ಯ ತರಸ್ವಿನಃ    ||46||
ವೇಗಶಾಲಿಯಾದ ಅರ್ಜುನನು ಬತ್ತಳಿಕೆಯಿಂದ ಬಾಣವನ್ನು ತೆಗೆಯುವುದಕ್ಕೂ, ಬಿಲ್ಲಿನಲ್ಲಿ ಹೂಡುವುದಕ್ಕೂ ಮತ್ತು ಬಿಲ್ಲಿನಿಂದ ಮೋಚನೆ ಮಾಡುವುದಕ್ಕೂ ಮಧ್ಯೆ ಅವಕಾಶವೇ ಕಾಣುತ್ತಿರಲಿಲ್ಲ
ನ ದಿಶೋ ನಾಂತರಿಕ್ಷಂ ಚ ತದಾ ನೈವ ಚ ಮೇದಿನೀ |
ಅದೃಶ್ಯತ ಮಹಾರಾಜ ತತ್ರ ಕಿಂಚನ ಸಂಯುಗೇ    ||47||
ಮಹಾರಾಜನೇ, ಅರ್ಜುನನು ಬಾಣಪ್ರಯೋಗ ಮಾಡುವಾಗ ಯುದ್ಧದಲ್ಲಿ ಭೂಮಿಯಾಗಲೀ, ಅಂತರಿಕ್ಷವಾಗಲೀ ಕಾಣುತ್ತಿರಲಿಲ್ಲ.
ಬಾಣಾಂಧಕಾರೇ ಬಲಿನಾ ಕೃತೇ ಗಾಂಡೀವಧನ್ವನಾ |
ಪಾಂಚಾಲಾನಾಂ ಕುರೂಣಾಂ ಚ ಸಾಧುಸಾಧ್ವಿತಿ ನಿಸ್ವನಃ    ||48||
ಗಾಂಡೀವಧನುಸ್ಸನ್ನು ಹೊಂದಿದ ಬಲಿಷ್ಠನಾದ ಅರ್ಜುನನು ಬಾಣಗಳಿಂದ ಅಂಧಕಾರವನ್ನು ಸೃಷ್ಟಿಸಲು ಪಾಂಚಾಲರು ಮತ್ತು ಕುರುಗಳು ``ಸಾಧು, ಸಾಧು'' ಎಂದು ಗಟ್ಟಿಯಾಗಿ ಕಿರುಚಿದರು.
ತತ್ರ ತೂರ್ಯನಿನಾದಶ್ಚ ಶಂಖಾನಾಂ ಚ ಮಹಾಸ್ವನಃ |
ಸಿಂಹನಾದಶ್ಚ ಸಂಜಜ್ಞೇ ಸಾಟ್ಟಹಾಸೇನ ಮಿಶ್ರಿತಃ  ||49||
ಅಲ್ಲಿ ಅಟ್ಟಹಾಸದಿಂದ ಮಿಶ್ರಿತವಾದ ವಾದ್ಯಗಳ ನಾದವೂ ಶಂಖದ ಸ್ವನವೂ ಮತ್ತು ಸಿಂಹನಾದವೂ ಉಂಟಾಯಿತು.
ತತಃ ಪಾಂಚಾಲರಾಜಸ್ತು ತಥಾ ಸತ್ಯಜಿತಾ ಸಹ |
ತ್ವರಮಾಣೋಽಭಿದುದ್ರಾವ ಮಹೇಂದ್ರಂ ಶಂಬರೋ ಯಥಾ    ||50||
ಆಗ ಪಾಂಚಾಲರಾಜನಾದ ದ್ರುಪದನು ತನ್ನ ತಮ್ಮನಾದ ಸತ್ಯಜಿತನೊಡನೆ ಶಂಬರನು ಮಹೇಂದ್ರನ ಕಡೆಗೆ ಧಾವಿಸಿದಂತೆ ಅರ್ಜುನನು ಇದ್ದ ಕಡೆಗೆ ಶೀಘ್ರವಾಗಿ ಧಾವಿಸಿ ಬಂದನು.
ಮಹತಾ ಶರಜಾಲೇನ ಪಾರ್ಥಃ ಪಾಂಚಾಲಮಾವೃಣೋತ್ |
ತತೋ ಹಲಹಲಾಶಬ್ದ ಆಸೀತ್ ಪಾಂಚಾಲಕೇ ಬಲೇ    ||51||
ಅರ್ಜುನನು ದೊಡ್ಡ ಶರಜಾಲದಿಂದ ದ್ರುಪದನನ್ನು ಮುಚ್ಚಿದನು. ಆಗ ಪಾಂಚಾಲ ಸೈನ್ಯದಲ್ಲಿ ಕಳವಳದಿಂದ ಉಂಟಾದ ಹಲಹಲಾ ಶಬ್ದವು ಕೇಳಿ ಬಂದಿತು.
ಜಿಘೃಕ್ಷತಿ ಮಹಾಸಿಂಹೇ ಗಜಾನಾಮಿವ ಯೂಥಪಮ್ |
ದೃಷ್ಟ್ವಾ ಪಾರ್ಥಂ ತದಾಯಾಂತಂ ಸತ್ಯಜಿತ್ ಸತ್ಯವಿಕ್ರಮಃ |
ಪಾಂಚಾಲಂ ವೈ ಪರಿಪ್ರೇಪ್ಸುರ್ಧನಂಜಯಮಭಿದ್ರವತ್    ||52||
ಮಹಾಸಿಂಹವು ಗಜರಾಜನನ್ನು ಹಿಡಿದಂತೆ ಅರ್ಜುನನು ಪಾಂಚಾಲರಾಜನನ್ನು ಹಿಡಿಯಲು ಬರುತ್ತಿರಲು ಸತ್ಯವಿಕ್ರಮನಾದ ಸತ್ಯಜಿತನು ಅದನ್ನು ನೋಡಿ, ತನ್ನ ಅಣ್ಣನನ್ನು ರಕ್ಷಿಸಲು ಬಯಸಿ, ಅರ್ಜುನನಿಗೆ ಎದುರಾಗಿ ಬಂದನು.
ತತಸ್ತ್ವರ್ಜುನಪಾಂಚಾಲೌ ಯುದ್ಧಾಯ ಸಮುಪಾಗತೌ  |
ವ್ಯಕ್ಷೋಭಯೇತಾಂ ತೌ ಸೈನ್ಯಮಿಂದ್ರವೈರೋಚನಾವಿವ    ||53||
ಆಗ ಅರ್ಜುನ ಮತ್ತು ಸತ್ಯಜಿತರು ಇಬ್ಬರೂ ಯುದ್ಧಕ್ಕೆ ಸನ್ನದ್ಧರಾದ ಇಂದ್ರವೈರೋಚನರಂತೆ ಪರಸ್ಪರರ ಸೈನ್ಯವನ್ನು ಅಲ್ಲೋಲಕಲ್ಲೋಲ ಮಾಡಿದರು.
ತತಃ ಸತ್ಯಜಿತಂ ಪಾರ್ಥೋ ದಶಭಿರ್ಮರ್ಮಭೇದಿಭಿಃ |
ವಿವ್ಯಾಧ ಬಲವದ್ ರಾಜನ್ ತದದ್ಭುತಮಿವಾಭವತ್    ||54||
ರಾಜನೇ, ಅನಂತರ ಅರ್ಜುನನು ಸತ್ಯಜಿತನನ್ನು ಮರ್ಮಭೇದಿಗಳಾದ ಹತ್ತುಬಾಣಗಳಿಂದ ಬಲವಾಗಿ ಹೊಡೆದನು. ಆ ದೃಶ್ಯವು

ಅದ್ಭುತವಾಗಿದ್ದಿತು.
ತತಃ ಶರಶತೈಃ ಪಾರ್ಥಂ ಪಾಂಚಾಲಃ ಶೀಘ್ರಮಾರ್ದಯತ್ |
ಪಾರ್ಥಸ್ತು ಶರವರ್ಷೇಣ ಚ್ಛಾದ್ಯಮಾನೋ ಮಹಾರಥಃ |
ವೇಗಂ ಚಕ್ರೇ ಮಹಾವೇಗೋ ಧನುರ್ಜ್ಯಾಮವಮೃಜ್ಯ ಚ ॥55॥
ಆಗ ಪಾಂಚಾಲರಾಜನು ಅರ್ಜುನನನ್ನು ನೂರುಬಾಣಗಳಿಂದ ಶೀಘ್ರವಾಗಿ ಪೀಡಿಸಿದನು. ಮಹಾರಥನಾದ ಅರ್ಜುನನು ಆ ಶರವರ್ಷದಿಂದ ಮುಚ್ಚಲ್ಪಟ್ಟವನಾಗಿ ಧನುಸ್ಸಿನ ಹೆದೆಯನ್ನು ಸವರಿ ಮಹಾವೇಗವನ್ನು ಉಂಟು ಮಾಡಿದನು.
ತತಃ ಸತ್ಯಜಿತಶ್ಚಾಪಂ ಛಿತ್ವಾ ರಾಜಾನಮಭ್ಯಯಾತ್ |
ಅಥಾನ್ಯದ್ಧನುರಾದಾಯ ಸತ್ಯಜಿದ್ ವೇಗವತ್ತರಮ್ ॥56॥
ಸಾಶ್ವಂ ಸಸೂತಂ ಸರಥಂ ಪಾರ್ಥಂ ವಿವ್ಯಾಧ ಸತ್ವರಮ್ |
ಸ ತಂ ನ ಮಮೃಷೇ ಪಾರ್ಥಃ ಪಾಂಚಾಲೇನಾರ್ದಿತೋ ಮೃಧೇ ॥57॥
ಅನಂತರ, ಸತ್ಯಜಿತನ ಧನುಸ್ಸನ್ನು ಕತ್ತರಿಸಿ ದ್ರುಪದನ ಕಡೆಗೆ ಹೊರಟನು. ಆಗ ಸತ್ಯಜಿತನು ಇನ್ನೊಂದು ವೇಗವುಳ್ಳ ಧನುಸ್ಸನ್ನು ತೆಗೆದುಕೊಂಡು ಅರ್ಜುನನ ರಥದ ಅಶ್ವಗಳನ್ನು ಮತ್ತು ಸೂತನನ್ನು ಮತ್ತು ರಥಸಹಿತವಾದ ಅರ್ಜುನನನ್ನು ಶೀಘ್ರವಾಗಿ ಬಾಣಗಳಿಂದ ಪೀಡಿಸಿದನು.
ತತಸ್ತಸ್ಯ ವಿನಾಶಾರ್ಥಂ ಸತ್ವರಂ ವ್ಯಸೃಜಚ್ಛರಾನ್ |
ಹಯಾನ್ ಧ್ವಜಂ ಧನುರ್ಮುಷ್ಟಿಮುಭೌ ತೌ ಪಾರ್ಷ್ಣಿಸಾರಥೀ ॥58॥
ಯುದ್ಧದಲ್ಲಿ ಸತ್ಯಜಿತನಿಂದ ಪ್ರಹಾರಕ್ಕೆ ಒಳಗಾದ ಅರ್ಜುನನು ಅದನ್ನು ಸಹಿಸಲಿಲ್ಲ. ಅವನ ವಿನಾಶಕ್ಕೋಸ್ಕರ ಕ್ಷಿಪ್ರವಾದ ಶರಗಳನ್ನು ಪ್ರಯೋಗ ಮಾಡಿ ಅವನ ರಥದ ಕುದುರೆಗಳನ್ನೂ, ಧ್ವಜವನ್ನೂ, ಪಾರ್ಷ್ಣಿ ಸಾರಥಿಗಳನ್ನೂ ಸಂಹರಿಸಿ ಧನುಸ್ಸನ್ನು ಕತ್ತರಿಸಿದನು.
ಸ ತಥಾ ಭಿದ್ಯಮಾನೇಷು ಕಾರ್ಮುಕೇಷು ಪುನಃಪುನಃ |
ಹಯೇಷು ವಿನಿಕೃತ್ತೇಷು ವಿಮುಖೋಽಭವದಾಹವೇ ॥59॥
ಸತ್ಯಜಿತನು ತನ್ನ ಧನುಸ್ಸುಗಳು ಮತ್ತು ಕುದುರೆಗಳು ಮತ್ತೆ ಮತ್ತೆ ಕತ್ತರಿಸಲ್ಪಡುತ್ತಿರಲು ಯುದ್ಧದಲ್ಲಿ ವಿಮುಖನಾದನು.
ಸ ಸತ್ಯಜಿತಮಾಲೋಕ್ಯ ತಥಾ ವಿಮುಖಮಾಹವೇ |
ವೇಗೇನ ಮಹತಾ ರಾಜನ್ನಭ್ಯಧಾವತ ಪಾರ್ಷತಮ್ ॥60॥
ಸತ್ಯಜಿತನು ಯುದ್ಧದಲ್ಲಿ ವಿಮುಖನಾದುದನ್ನು ನೋಡಿ ಅರ್ಜುನನು ಮಹಾವೇಗದಿಂದ ದ್ರುಪದನ ಕಡೆಗೆ ಧಾವಿಸಿದನು.
ತದಾ ಚಕ್ರೇ ಮಹದ್ಯುದ್ಧಮರ್ಜುನೋ ಜಯತಾಂ ವರಃ |
ತಸ್ಯ ಪಾರ್ಥೋರ್ ಧ್ವಜಂ ಚಿತ್ರಂ ಧನುಶ್ಚೋರ್ವ್ಯಾಮಪಾತಯತ್ ॥61॥
ಜಯಶೀಲರಲ್ಲಿ ಶ್ರೇಷ್ಠನಾದ ಅರ್ಜುನನು ದ್ರುಪದನ ಜೊತೆಯಲ್ಲಿ ದೊಡ್ಡ ಯುದ್ಧವನ್ನು ಮಾಡಿ ಅವನ ವಿಚಿತ್ರವಾದ ಧ್ವಜವನ್ನು ಮತ್ತು ಧನುಸ್ಸನ್ನು ನೆಲಕ್ಕೆ ಉರುಳಿಸಿದನು.
ಪಂಚಭಿಸ್ತಸ್ಯ ವಿವ್ಯಾಥ ಹಯಾನ್ ಸೂತಂ ಚ ಸಾಯಕೈಃ |
ತತ ಉತ್ಸೃಜ್ಯ ತಚ್ಚಾಪಮಾದದಾನಃ ಶರಾವರಮ್ ॥62॥
ಖಡ್ಗಮುದ್ಯಮ್ಯ ಕೌಂತೇಯಃ ಸಿಂಹನಾದಮಥಾಕರೋತ್ |
ಪಾಂಚಾಲರಥಮಾಸ್ಥಾಯ ಅವಿತ್ರಸ್ತೋ ಧನಂಜಯಃ ॥63॥
ಅವನ ರಥದ ಅಶ್ವಗಳನ್ನೂ ಮತ್ತು ಸೂತನನ್ನೂ ಐದೈದು ಬಾಣಗಳಿಂದ ಪೀಡಿಸಿ ಅರ್ಜುನನು ಧನುಸ್ಸನ್ನು ಬಿಟ್ಟು ಖಡ್ಗಚರ್ಮಗಳನ್ನು ಹಿಡಿದು ಸಿಂಹನಾದವನ್ನು ಮಾಡಿದನು.
ಪಾಂಚಾಲಸ್ಯ ರಥಸ್ಯೈಷಾಮಾಪ್ಲುತ್ಯ ಸಹಸಾ ಬಲೀ |
ವಿಕ್ಷೋಭ್ಯಾಂಭೋನಿಧಿಂ ತಾರ್ಕ್ಷ್ಯಸ್ತಂ ನಾಗಮಿವ ಸೋಽಗ್ರಹೀತ್ ॥64॥
ಅರ್ಜುನನು ಯಾವ ಹೆದರಿಕೆಯೂ ಇಲ್ಲದೇ, ಪಾಂಚಾಲ ರಾಜನ ರಥದ ಈಷಾದಂಡದ ಮೇಲೆ ಹಾರಿ ಸಮುದ್ರವನ್ನು ಅಲ್ಲೋಲಕಲ್ಲೋಲ ಮಾಡಿ ಗರುಡನು ಸರ್ಪವನ್ನು ಹಿಡಿಯುವಂತೆ ದ್ರುಪದರಾಜನನ್ನು ಹಿಡಿದನು.
ತತಸ್ತು ಸರ್ವಪಾಂಚಾಲಾ ವಿದ್ರವಂತಿ ದಿಶೋ ದಶ |
ದರ್ಶಯನ್ ಸರ್ವಸೈನ್ಯಾನಾಂ ಬಾಹ್ವೋರ್ಬಲಮಥಾತ್ಮನಃ ॥65॥
ಸಿಂಹನಾದಸ್ವನಂ ಕೃತ್ವಾ ನಿರ್ಜಗಾಮ ಧನಂಜಯಃ |
ಆಯಾಂತಮರ್ಜುನಂ ದೃಷ್ಟ್ವಾ ಕುಮಾರಾಃ ಸಹಿತಾಸ್ತದಾ |
ಮಮೃದುಸ್ತಸ್ಯ ನಗರಂ ದ್ರುಪದಸ್ಯ ಮಹಾತ್ಮನಃ ॥66॥
ಆಗ ಎಲ್ಲಾ ಪಾಂಚಾಲರೂ ದಿಕ್ಕುದಿಕ್ಕುಗಳಿಗೆ ಓಡಿದರು. ಅರ್ಜುನನು ಎಲ್ಲಾ ಸೈನ್ಯಗಳಿಗೂ ತನ್ನ ಬಾಹುಬಲವನ್ನು ತೋರಿಸಿ ಸಿಂಹನಾದವನ್ನು ಮಾಡಿ ದ್ರುಪದನನ್ನು ಎತ್ತಿಕೊಂಡು ತನ್ನ ರಥಕ್ಕೆ ಹಿಂದಿರುಗಿದನು. ಹಿಂದಿರುಗುತ್ತಿರುವ ಅರ್ಜುನನನ್ನು ನೋಡಿ ಎಲ್ಲಾ ಕುಮಾರರೂ ಒಟ್ಟಿಗೆ ಸೇರಿ ಮಹಾತ್ಮನಾದ ದ್ರುಪದನಗರವನ್ನು ಭಗ್ನಗೊಳಿಸಿದರು.
ಅರ್ಜುನಃ
ಸಂಬಂಧೀ ಕುರುವೀರಾಣಾಂ ದ್ರುಪದೋ ರಾಜಸತ್ತಮಃ |
ಮಾ ವಧೀಸ್ತದ್ಬಲಂ ಭೀಮ ಗುರುದಾನಂ ಪ್ರದೀಯತಾಮ್ ॥67॥
ರಾಜಶ್ರೇಷ್ಠನಾದ ದ್ರುಪದನು ಕುರುವೀರರಿಗೆ ಸಂಬಂಧಿಯಾದವನು (ಮತ್ತು ಪಾಂಡುವಿಗೆ ಅತಿ ಪ್ರಿಯನಾದವನು). ಭೀಮಸೇನನೇ,

ಅವನ ಸೈನ್ಯವನ್ನು ಕೊಲ್ಲಬೇಡ. ನಾವು ಗುರುದಕ್ಷಿಣೆ ಮಾತ್ರ ಕೊಡೋಣ.
ವೈಶಂಪಾಯನಃ
ಭೀಮಸೇನಸ್ತದಾ ರಾಜನ್ನರ್ಜುನೇನ ನಿವಾರಿತಃ |
ಅತೃಪ್ತೋ ಯುದ್ಧಧರ್ಮೇಷು ನ್ಯವರ್ತತ ಮಹಾರಥಃ ॥68॥
ಮಹಾರಥನಾದ ಭೀಮಸೇನನು ಅರ್ಜುನನ ಮಾತುಗಳನ್ನು ಕೇಳಿ, ಯುದ್ಧದಲ್ಲಿ ತೃಪ್ತಿಯನ್ನು ಪಡೆಯದಿದ್ದರೂ ಅರ್ಜುನನ ಮಾತಿನಂತೆ ಹಿಂದೆ ಸರಿದನು.
ತೇ ಯಜ್ಞಸೇನಂ ದ್ರುಪದಂ ಗೃಹೀತ್ವಾ ರಣಮೂರ್ಧನಿ |
ಉಪಜಹ್ರುಃ ಸಹಾಮಾತ್ಯಂ ದ್ರೋಣಾಯ ಭರತರ್ಷಭಾಃ ॥69॥
ಆ ಭರತಶ್ರೇಷ್ಠರು ಘೋರವಾದ ಯುದ್ಧದಲ್ಲಿ ಪಾಂಚಾಲರಾಜನಾದ ಯಜ್ಞಸೇನನನ್ನು ಅವನ ಮಂತ್ರಿಗಳ ಜೊತೆಯಲ್ಲಿ ಬಂಧಿಸಿ ದ್ರೋಣರ ಸಮೀಪಕ್ಕೆ ಕರೆ ತಂದರು.
ಭಗ್ನದರ್ಪಂ ಹೃತಧನಂ ತಥಾ ವಶಮುಪಾಗತಮ್ |
ಸ ವೈರಂ ಮನಸಾ ಧ್ಯಾತ್ವಾ ದ್ರೋಣೋ ದ್ರುಪದಮಬ್ರವೀತ್ ॥70॥
ತನ್ನ ದರ್ಪವನ್ನೂ ಮತ್ತು ಧನವನ್ನೂ ಕಳೆದುಕೊಂಡು ತನಗೆ ವಶವಾದ ದ್ರುಪದನನ್ನು ಕುರಿತು ಹಿಂದಿನ ವೈರವನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತಾ ದ್ರೋಣರು ಮಾತನಾಡಿದರು.
ಪ್ರಮೃಜ್ಯ ತರಸಾ ರಾಷ್ಟ್ರಂ ಪುರಂ ತೇ ಮೃದಿತಂ ಮಯಾ |
ಪ್ರಾಪ್ಯ ಜೀವನ್ ರಿಪುವಶಂ ಸಖಿಪೂರ್ವಂ ಕಿಮಿಷ್ಯತೇ ॥71॥
ನನ್ನ ಬಲದಿಂದ ನಿನ್ನ ರಾಷ್ಟ್ರವನ್ನು ಮತ್ತು ನಗರವನ್ನು ಭಗ್ನಗೊಳಿಸಿದ್ದೇನೆ. ಶತ್ರುವಶನಾಗಿ ಬದುಕಿರುವ ನೀನು ಪೂರ್ವಸ್ನೇಹವನ್ನೂ ಬಯಸುತ್ತೀಯಾ?
ವೈಶಂಪಾಯನಃ
ಏವಮುಕ್ತ್ವಾ ಪ್ರಹಸ್ಯೈನಂ ನಿಶ್ಚಿತ್ಯ ಪುನರಬ್ರವೀತ್ |
ಮಾ ಭೈಃ ಪ್ರಾಣಭಯಾದ್ ರಾಜನ್ ಕ್ಷಮಿಣೋ ಬ್ರಾಹ್ಮಣಾ ವಯಮ್ ॥
ಹೀಗೆ ಮಾತನಾಡಿ ಅವನನ್ನು ಹಾಸ್ಯ ಮಾಡಿ ಏನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ ದ್ರೋಣರು ಪುನಃ ಮಾತನಾಡಿದರು. ರಾಜನೇ ಪ್ರಾಣಭಯದಿಂದ ಹೆದರಬೇಡ. ನಾವು ಕ್ಷಮಾಶೀಲರಾದ ಬ್ರಾಹ್ಮಣರು.
ಆಶ್ರಮೇ ಕ್ರೀಡಿತಂ ಯತ್ ತು ತ್ವಯಾ ಬಾಲ್ಯೇ ಮಯಾ ಸಹ |
ತೇನ ಸಂವರ್ಧಿತೋ ಹರ್ಷಸ್ತ್ವಯಾ ಮೇ ಕ್ಷತ್ರಿಯರ್ಷಭ ॥73॥
ಕ್ಷತ್ರಿಯಶ್ರೇಷ್ಠನೇ, ಬಾಲ್ಯದಲ್ಲಿ ನೀನು ಆಶ್ರಮದಲ್ಲಿ ನನ್ನ ಜೊತೆಯಲ್ಲಿ ಆಟವಾಡಿ ಬಹಳ ಹೆಚ್ಚಿನ ಸಂತೋಷವನ್ನುಂಟು ಮಾಡಿದೆ.
ಪ್ರಾರ್ಥಯೇಽಹಂ ತ್ವಯಾ ಸಖ್ಯಂ ಪುನರೇವ ನರೇಶ್ವರ |
ವರಂ ದದಾಮಿ ತೇ ರಾಜನ್ ರಾಜ್ಯಸ್ಯಾರ್ಧಮವಾಪ್ನುಹಿ ॥74॥
ರಾಜನೇ, ನಾನು ಪುನಃ ನಿನ್ನ ಜೊತೆಯಲ್ಲಿ ಸಖ್ಯವನ್ನೇ ಬಯಸುತ್ತೇನೆ. ರಾಜನೇ, ನಿನಗೆ ವರವನ್ನು ಕೊಡುತ್ತೇನೆ. ನೀನು ಅರ್ಧರಾಜ್ಯವನ್ನು ತೆಗೆದುಕೋ.
ಅರಾಜಾ ಕಿಲ ನೋ ರಾಜ್ಞಃ ಸಖಾ ಭವಿತುಮರ್ಹತಿ |
ಅತಃ ಪ್ರಯತಿತಂ ರಾಜ್ಯೇ ಯಜ್ಞಸೇನ ಮಯಾ ತವ ॥75॥
ರಾಜನಲ್ಲದವನು ರಾಜನಿಗೆ ಸ್ನೇಹಿತನಾಗಲು ಯೋಗ್ಯನಲ್ಲವಷ್ಟೆ, ಯಜ್ಞಸೇನನೇ, ಅದಕ್ಕಾಗಿ ನಾನು ನಿನ್ನ ರಾಜ್ಯವನ್ನು ಸಂಪಾದಿಸಲು ಪ್ರಯತ್ನವನ್ನು ಮಾಡಿದೆ.
ರಾಜಾಽಸಿ ದಕ್ಷಿಣೇ ಕೂಲೇ ಭಾಗೀರಥ್ಯಾಽಹಮುತ್ತರೇ |
ಸಖಾಯಂ ಮಾಂ ವಿಜಾನೀಹಿ ಪಾಂಚಾಲ ಯದಿ ಮನ್ಯಸೇ ॥76॥
ನೀನು ಗಂಗೆಯ ದಕ್ಷಿಣ ದಡದಲ್ಲಿ ರಾಜನಾಗಿರುತ್ತೀಯೆ. ನಾನು ಗಂಗೆಯ ಉತ್ತರದಲ್ಲಿ ರಾಜನಾಗಿರುವೆನು. ದ್ರುಪದನೇ ನಿನಗೆ ಸಮ್ಮತವಾದರೆ, ನನ್ನನ್ನು ಸ್ನೇಹಿತನೆಂದು ಪರಿಗ್ರಹಿಸು.
ದ್ರುಪದಃ
ಅನಾಶ್ಚರ್ಯಮಿದಂ ಬ್ರಹ್ಮನ್ ವಿಕ್ರಾಂತೇಷು ಮಹಾತ್ಮಸು |
ಪ್ರೀಯೇ ತ್ವಯಾಹಂ ತ್ವತ್ತಶ್ಚ ಪ್ರೀತಿಮಿಚ್ಛಾಮಿ ಶಾಶ್ವತೀಮ್ ॥77॥
ಬ್ರಾಹ್ಮಣರೇ, ವಿಕ್ರಮಶಾಲಿಗಳಾದ ತಮ್ಮಂತಹ ಮಹಾತ್ಮರಲ್ಲಿ ಇದು ಆಶ್ಚರ್ಯವಲ್ಲ. ನಾನು ನಿಮ್ಮಲ್ಲಿ ಸಂತೋಷಗೊಂಡಿದ್ದೇನೆ. ನಿಮ್ಮ ಶಾಶ್ವತವಾದ ಪ್ರೀತಿಯನ್ನು ಬಯಸುತ್ತೇನೆ.
ವೈಶಂಪಾಯನಃ
ಏವಮುಕ್ತಸ್ತು ತಂ ದ್ರೋಣೋ ಮೋಕ್ಷಯಾಮಾಸ ಭಾರತ |
ಸತ್ಕೃತ್ಯ ಚೈನಂ ಪ್ರೀತಾತ್ಮಾ ರಾಜ್ಯಾರ್ಧಂ ಪ್ರತ್ಯಪಾದಯತ್ ॥78॥
ಭಾರತನೇ, ದ್ರುಪದನು ಹೀಗೆ ಹೇಳಿದಾಗ ದ್ರೋಣರು ಸಂತೋಷದಿಂದ ಅವನನ್ನು ಸತ್ಕರಿಸಿ ಅರ್ಧರಾಜ್ಯವನ್ನು ಕೊಟ್ಟು ಅವನನ್ನು ಬಿಡುಗಡೆಗೊಳಿಸಿದರು.
ಆಸಂದಿಮಥ ಗಂಗಾಯಾಸ್ತೀರೇ ಜನಪದಾಯುತಮ್ |
ಸೋಽಧ್ಯಾವಸದ್ ದೀನಮನಾಃ ಕಾಂಪಿಲ್ಯಂ ಚ ಪುರೋತ್ತಮಮ್ ॥

ದ್ರುಪದನು ದೈನ್ಯದಿಂದ ಕೂಡಿದ ಮನಸ್ಸುಳ್ಳವನಾಗಿ ಗಂಗೆಯ ದಕ್ಷಿಣತೀರದಲ್ಲಿ ಆಸಂದಿನಗರದವರೆಗೂ ಇರುವ ರಾಜ್ಯವನ್ನು ಶ್ರೇಷ್ಠನಗರವಾದ ಕಾಂಪಿಲ್ಯವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದನು.
ದಕ್ಷಿಣಾಶ್ಚೈವ ಪಾಂಚಾಲಾನ್ ಯಾವಚ್ಚರ್ಮಣ್ವತೀಂ ನದೀಮ್ |
ಅಹಿಚ್ಛತ್ರಂ ಚ ವಿಷಯಂ ಭಾರದ್ವಾಜೋಽಭ್ಯಪದ್ಯತ ॥80॥
ಗಂಗಾನದಿಯ ದಕ್ಷಿಣದಲ್ಲಿ ಚರ್ಮಣ್ವತೀ ನದಿಯವರೆಗೆ ಇರುವ ಪ್ರದೇಶವನ್ನೂ ಅಹಿಚ್ಛತ್ರ ನಗರವನ್ನೂ ದ್ರೋಣರು ಪಡೆದರು.
ಏವಂ ರಾಜ್ಯಮಹಿಚ್ಛತ್ರಂ ಪುರಾ ಬಹುಧನಾನ್ವಿತಮ್ |
ಯುಧಾ ನಿರ್ಜಿತ್ಯ ಪಾರ್ಥೇನ ದ್ರೋಣಾಯ ಪ್ರತಿಪಾದಿತಮ್ ॥81॥
ಹೀಗೆ ಹಿಂದೆ ಧನಧಾನ್ಯದಿಂದ ಸಮೃದ್ಧವಾದ ಅಹಿಚ್ಛತ್ರ ರಾಜ್ಯವು ಯುದ್ಧದಲ್ಲಿ ಗೆದ್ದು ಅರ್ಜುನನಿಂದ ದ್ರೋಣರಿಗೆ ಕೊಡಲ್ಪಟ್ಟಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತತ್ರಿಂಶ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಪಂಚಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಮೂವತ್ತೇಳನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ದ್ರುಪದಸ್ತು ದಿವಾರಾತ್ರಂ ತಪ್ಯಮಾನಃ ಪರಾಭವಾತ್ |
ಭೀಮಾರ್ಜುನಬಲಂ ದೃಷ್ಟ್ವಾ ಚೈಚ್ಛತ್ ಪಾಂಡವಸಂಶ್ರಯಮ್ ॥95॥
ಸಂಬಂಧೀತ್ಯರ್ಜುನವಚಶ್ಚಿಕೀರ್ಪುಃ ಸತ್ಯಮೇವ ಚ |
ಮಾರ್ದವಂ ಚಾರ್ಜುನೇ ದೃಷ್ಟ್ವಾ ಸುತಾಮೈಚ್ಛತ್ ತದರ್ಥತಃ ॥96॥
ದ್ರುಪದ ತನಗೆ ದ್ರೋಣರಿಂದ ಉಂಟಾದ ಪರಾಭವದಿಂದ ಹಗಲು ರಾತ್ರಿ ಬೇಯುತ್ತಿದ್ದ. ಭೀಮಾರ್ಜುನರ ಬಲವನ್ನು ಕಣ್ಣಾರೆ ಕಂಡು ಪಾಂಡವರ ಆಶ್ರಯ ಪಡೆಯಲೂ ಬಯಸಿದ್ದ. ತಾನು ಸಂಬಂಧಕ್ಕೆ ಯೋಗ್ಯನೆಂದು ಅರ್ಜುನನಾಡಿದ ಮಾತನ್ನು ನಿಜಗೊಳಿಸಲೂ ಬಯಸಿದ್ದ. ಅದರಿಂದ ಅರ್ಜುನನ ಮೃದುಸ್ವಭಾವವನ್ನು ಮೆಚ್ಚಿ ಅವನಿಗಾಗಿ ಒಬ್ಬ ಮಗಳನ್ನು ಪಡೆಯಲು ಬಯಸಿದ.
ಪುತ್ರಂ ಚ ದ್ರೋಣ ಹಂತಾರಮಿಚ್ಛನ್ ವಿಪ್ರವರೌ ಯಯೌ |
ಯಾಜೋಪಯಾಜಾವಾನೀಯಾಥಾರ್ಬುದೇನ ಗವಾಂ ನೃಪಃ ॥97॥
ಚಕಾರೇಷ್ಟಿಂ ಚ ತದ್ಭಾರ್ಯಾ ದ್ವಿಜಾಭ್ಯಾಮತ್ರ ಚಾಹುತಾ |
ದ್ರುಪದಾತ್ ಸುತ ಲಬ್ಧ್ಯರ್ಥಂ ಸಾಹಂಕಾರಾದ್ ವ್ಯಲಂಬಯತ್ ॥98॥
ದ್ರೋಣನನ್ನು ಕೊಲ್ಲಬಲ್ಲ ಒಬ್ಬ ಮಗನನ್ನೂ ಬಯಸಿ ದ್ರುಪದ ಯಾಜ ಉಪಯಾಜರೆಂಬ ಬ್ರಾಹ್ಮಣಶ್ರೇಷ್ಠರನ್ನು ಆಶ್ರಯಿಸಿದ. ಹತ್ತು ಕೋಟಿ ಗೋದಾನ ಮಾಡಿ ಅವರನ್ನು ಕರೆಸಿಕೊಂಡು ಇಷ್ಟಿಯನ್ನು ಮಾಡಿದ. ರಾಣಿಗೆ ದ್ರುಪದನಿಂದ ಪುತ್ರಲಾಭವಾಗಲಿ ಎಂದು ಅವರು ಯಜ್ಞಶಾಲೆಗೆ ರಾಣಿಯನ್ನು ಕರೆಸಿದರು. ಅವಳು ಅಹಂಕಾರದಿಂದ ವಿಲಂಬ ಮಾಡಿದಳು.
ಕಿಮೇತಯೇತ್ಯವಜ್ಞಾಯ ತಾವುಭೌ ವಿಪ್ರಸತ್ತಮೌ |
ಅಜುಹ್ವತಾಂ ತತ್ಪುತ್ರಾರ್ಥಂ ಪತ್ನ್ಯಾಪ್ರಾಶ್ಯಂ ಹವಿಸ್ತದಾ ॥99॥
`ಈ ರಾಣಿಯಿಂದೇನು?' ಎಂದು ತಿರಸ್ಕಾರ ಮಾಡಿ ಆ ಇಬ್ಬರು ಬ್ರಾಹ್ಮಣೋತ್ತರು ದ್ರುಪದನ ಪುತ್ರೋತ್ಪತ್ತಿಗೆ ಪತ್ನಿ ಸೇವಿಸಬೇಕಾಗಿದ್ದ ಹವಿಸ್ಸನ್ನು ಅಗ್ನಿಯಲ್ಲಿ ಹೋಮಿಸಿದರು.
ಹುತೇ ಹವಿಷಿ ಮಂತ್ರಾಭ್ಯಾಂ ವೈಷ್ಣವಾಭ್ಯಾಂ ತದೈವ ಹಿ |
ದೀಪ್ತಾಂಗಾರ ನಿಭೋ ವಹ್ನಿಃ ಕುಂಡಮಧ್ಯಾತ್ ಸಮುತ್ಥಿತಃ ॥100॥
ಕಿರೀಟೀ ಕುಂಡಲೀ ದೀಪ್ತೋ ಹೇಮಾವಲೀ ವರಾಸಿಮಾನ್ |
ರಥೇನಾದಿತ್ಯವರ್ಣೇನ ನದನ್ ದ್ರುಪದಮಾದ್ರುವತ್ ॥101॥
ವೈಷ್ಣವ ಮಂತ್ರಗಳಿಂದ ಹವಿಸ್ಸನ್ನು ಹೋಮಿಸಿದಾಗ ತಕ್ಷಣ ಕುಂಡದ ಮಧ್ಯದಿಂದ ಉರಿವ ಕೆಂಡದಂಥ ಮೈಬಣ್ಣದ, ಕಿರೀಟ ಕುಂಡಲಗಳನ್ನೂ, ಚಿನ್ನದ ಹಾರಗಳನ್ನೂ ಧರಿಸಿ ಶ್ರೇಷ್ಠವಾದ ಖಡ್ಗವನ್ನು ಹಿಡಿದ ಅಗ್ನಿದೇವ ಎದ್ದು ಬಂದ. ಸೂರ್ಯನಂತೆ ಬೆಳಗುವ ರಥದೊಂದಿಗೆ ಸಿಂಹನಾದ ಮಾಡುತ್ತ ದ್ರುಪದನ ಬಳಿಗೆ ಬಂದ.
ಧೃಷ್ಟತ್ವಾದ್ ದ್ಯೋತನತ್ವಾಚ್ಚ ಧೃಷ್ಟದ್ಯುಮ್ನ ಇತೀರಿತಃ |
ಮುನಿಭಿರ್ದ್ರುಪದೇನಾಪಿ ಸರ್ವವೇದಾರ್ಥ ತತ್ವವಿತ್ ॥102॥
ದಿಟ್ಟತನವಿದ್ದುದರಿಂದಲೂ ಕಾಂತಿಯುಕ್ತನಾದ್ದರಿಂದಲೂ ಧೃಷ್ಟದ್ಯುಮ್ನ ಎಂದು ಮುನಿಗಳಿಂದಲೂ ದ್ರುಪದನಿಂದಲೂ ಕರೆಸಿಕೊಂಡನು ಹಾಗೂ ಸರ್ವವೇದಾರ್ಥವೇತ್ತನಾಗಿದ್ದನು.
ಅನ್ವೇನಂ ಭಾರತೀ ಸಾಕ್ಷಾದ್ವೇದಿಮಧ್ಯಾತ್ ಸಮುತ್ಥಿತಾ |
ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾತ್ ಶ್ರುತಃ ॥103॥
ತದ್ಭಾರ್ಯಾ ಭಾರತೀ ನಾಮ ವೇದರೂಪಾ ಸರಸ್ವತೀ |
ಶಂರೂಪಮಾಶ್ರಿತಾ ವಾಯುಂ ಶ್ರೀರಿತ್ಯೇವ ಚ ಕೀರ್ತಿತಾ ॥104॥
ಧೃಷ್ಟದ್ಯುಮ್ನನ ಅನಂತರ ಸಾಕ್ಷಾತ್ ಭಾರತೀದೇವಿ ದ್ರೌಪದಿಯಾಗಿ ಯಜ್ಞವೇದಿಕೆಯ ಮಧ್ಯದಿಂದ ಎದ್ದು ಬಂದಳು. ಎಲ್ಲರನ್ನೂ ರಕ್ಷಿಸುವುದರಿಂದ `ಭರತ'ನೆಂದು ಪ್ರಸಿದ್ಧನಾದವ ಪ್ರಾಣ. ಭರತನ ಪತ್ನಿಯಾದ್ದರಿಂದ ಇವಳು `ಭಾರತಿ'. ಅವಳೆ

ವೇದಾಭಿಮಾನಿನಿಯಾದ್ದರಿಂದ `ಸರಸ್ವತಿ'. ಸುಖರೂಪನಾದ ವಾಯುವನ್ನು ಆಶ್ರಯಿಸಿದಳಾದ್ದರಿಂದ `ಶ್ರೀ' ಎಂದೂ ಅವಳೇ ಕರೆಸಿಕೊಂಡಿದ್ದಾಳೆ.
ಆವೇಶಯುಕ್ತಾ ಶಚ್ಯಾಶ್ಚ ಶ್ಯಾಮಲಾಯಾಸ್ತಥೋಷಸಃ |
ತಾಶ್ಚೇಂದ್ರ ಧರ್ಮನಾಸತ್ಯ ಸಂಶ್ರಯಾತ್ ಶ್ರಿಯ ಈರಿತಾಃ ॥105॥
ದ್ರೌಪದಿ, ಶಚಿ, ಶ್ಯಾಮಲೆ, ಉಷೆಯರ ಆವೇಶದಿಂದ ಕೂಡಿದ್ದಳು. ಆ ಶಚಿ, ಶ್ಯಾಮಲೆ, ಉಷೆಯರೂ ಕೂಡ ಇಂದ್ರ, ಧರ್ಮ, ಅಶ್ವಿನೀದೇವತೆಗಳನ್ನು ಆಶ್ರಯಿಸಿದ್ದರಿಂದ ಶ್ರೀ ಎನಿಸಿದ್ದಾರೆ.
ಸಾ ಕೃಷ್ಣಾ ನಾಮತಶ್ಚಾಸೀದುತ್ಕೃಷ್ಟತ್ವಾದ್ಧಿ ಯೋಷಿತಾಮ್ |
ಕೃಷ್ಣಾ ಸಾ ವರ್ಣತಶ್ಚಾಸೀದುಷ್ಕೃಷ್ಟಾನಂದಿನೀ ಚ ಸಾ ॥106॥
ಸ್ತ್ರೀಯರಲ್ಲೆಲ್ಲ ಉತ್ಕೃಷ್ಟಳಾದ್ದರಿಂದ ದ್ರೌಪದಿ `ಕೃಷ್ಣೆ' ಎನಿಸಿದಳು. ವರ್ಣದಿಂದಲೂ ಕೃಷ್ಣೆ. ಉತ್ಕೃಷ್ಟವಾದ ಆನಂದ ಉಳ್ಳವಳಾದ್ದರಿಂದಲೂ ಕೃಷ್ಣೆ.
ಉತ್ಪತ್ತಿತಶ್ಚ ಸರ್ವಜ್ಞಾ ಸರ್ವಾಭರಣಭೂಷಿತಾ |
ಸಂಪ್ರಾಪ್ತ ಯೌವನೈವಾಸೀದಜರಾ ಲೋಕಸುಂದರೀ ॥107॥
ದ್ರೌಪದಿ ಹುಟ್ಟಿನಿಂದಲೇ ಸರ್ವಜ್ಞಳೂ ಸರ್ವಾಭರಣ ಭೂಷಿತಳೂ ಯೌವನ ಭರಿತಳೂ ಜರೆ ಇಲ್ಲದವಳೂ ಲೋಕಸುಂದರಿಯೂ ಆಗಿದ್ದಳು.
ಉಮಾಂಶಯುಕ್ತಾ ನಿತರಾಂ ಸರ್ವಲಕ್ಷಣ ಸಂಯುತಾ ॥108॥
ಪೂರ್ವಂ ಹ್ಯುಮಾ ಚ ದೇವ್ಯಸ್ತಾಃ ಕದಾಚಿದ್‍ಭರ್ತೃಭಿರ್ಯುತಾಃ |
ವಿಲಾಸಂ ದರ್ಶಯಾಮಾಸುರ್ಬ್ರಹ್ಮಣಃ ಪಶ್ಯತೋಽಧಿಕಮ್ ॥109॥
ಶಶಾಪ ತಾಸ್ತದಾ ಬ್ರಹ್ಮಾ ಮಾನುಷೀಂ ಯೋನಿಮಾಪ್ಸ್ಯಥ |
ತತ್ರಾನ್ಯಗಾಶ್ಚ ಭವೇತೇತ್ಯೇವಂ ಶಪ್ತಾಃ ಸುರಾಂಗನಾಃ ॥110॥
ವಿಚಾರ್ಯ ಭಾರತೀಮೇತ್ಯ ಸರ್ವಮಸ್ಯೈ ನಿವೇದ್ಯ ಚ |
ಸಹಸ್ರವತ್ಸರಂ ಚೈನಾಂ ಶುಶ್ರೂಷಿತ್ವಾ ಬಭಾಷಿರೇ ॥111॥
ದ್ರೌಪದಿ ಪಾರ್ವತಿಯ ಅಂಶದಿಂದಲೂ ಯುಕ್ತಳಾಗಿದ್ದಳು. ಬಲು ಚೆನ್ನಾಗಿ ಸಕಲ ಲಕ್ಷಣಗಳಿಂದ ಯುಕ್ತಳೂ ಆಗಿದ್ದಳು. ಹಿಂದೆ ಪಾರ್ವತಿಯೂ ಶಚೀ ಮುಂತಾದ ದೇವಿಯರೂ ಒಮ್ಮೆ ಬ್ರಹ್ಮನು ನೋಡುತ್ತಿದ್ದಂತೆಯೆ ತಮ್ಮ ಪತಿಗಳೊಡನೆ ಬಹಳ ವಿಲಾಸವನ್ನು ಪ್ರದರ್ಶಿಸಿದರು. ಬ್ರಹ್ಮ ಅವರನ್ನು `ಮನುಷ್ಯ ಜನ್ಮ ಹೊಂದಿರಿ. ಮನುಷ್ಯ ಜನ್ಮದಲ್ಲಿ ಪರಪುರುಷ ಸ್ಪರ್ಶಿಗಳಾಗಿರಿ' ಎಂದು ಶಪಿಸಿದ. ಹೀಗೆ ಶಪ್ತರಾದ ದೇವಾಂಗನೆಯರು ವಿಚಾರ ಮಾಡಿ ಭಾರತೀದೇವಿಯ ಬಳಿಗೆ ಬಂದು ಎಲ್ಲವನ್ನೂ ಹೇಳಿಕೊಂಡು ಸಾವಿರವರ್ಷಕಾಲ ಸೇವೆ ಮಾಡಿ ಹೇಳಿದರು.
ದೇವಿ ನೋ ಮಾನುಷಂ ಪ್ರಾಪ್ಯಮನ್ಯಗಾತ್ವಂ ಚ ಸರ್ವಥಾ |
ತತ್ರಾಪಿ ಮಾರುತಾದನ್ಯಂ ನ ಸ್ಪೃಶೇಮ ಕಥಂಚನ ॥112॥
ದೇವಿ, ನಮಗೆ ಮನುಷ್ಯ ಜನ್ಮ ಬರಲಿದೆ. ಪರಪುರುಷಸ್ಪರ್ಶವೂ ಸರ್ವಥಾ ಉಂಟಾಗಲಿದೆ. ಆಗಲೂ ವಾಯುವಿಗಿಂತ ಬೇರೆಯವರನ್ನು ಯಾವ ರೀತಿಯಿಂದಲೂ ಸ್ಪರ್ಶಿಸಲಾರೆವು.
ಬ್ರಹ್ಮಣೈವ ಚ ಶಪ್ತಾಃ ಸ್ಮಃ ಪೂರ್ವಂ ಚಾನ್ಯತ್ರ ಲೀಲಯಾ |
ಏಕದೇಹತ್ವಮಾಪ್ಯೈನಂ ಯದಾ ವಂಚಯಿತುಂ ಗತಾಃ ॥113॥
ಹಿಂದೆ ಇನ್ನೊಂದು ಸಂದರ್ಭದಲ್ಲಿ ನಾವು ವಿನೋದದಿಂದ ಒಂದೇ ದೇಹದಲ್ಲಿ ಜೊತೆಗಿದ್ದು ಬ್ರಹ್ಮನನ್ನು ವಂಚಿಸಲು ಹೋದಾಗ ಅವನಿಂದ ಶಪ್ತರಾದೆವು.
ಏಕದೇಹಾ ಮಾನುಷತ್ವಮಾಪ್ಸ್ಯಥ ತ್ರಿಶ ಉದ್ಧತಾಃ |
ತ್ರಿಶೋ ಮದ್ವಂಚನಾಯೇತಾ ಇತಿ ತೇನೋದಿತಾ ವಯಮ್ ॥114॥
`ಉದ್ಧತರಾಗಿ ನೀವು ಮೂರು ಬಾರಿ ನನ್ನನ್ನು ವಂಚಿಸಲು ಬಂದಿರಿ. ಅದರಿಂದ ಮೂರು ಬಾರಿ ಒಂದೇ ದೇಹದಲ್ಲಿ ಮನುಷ್ಯ ಜನ್ಮ ಪಡೆಯಿರಿ' ಹೀಗೆ ಬ್ರಹ್ಮ ನಮಗೆ ಶಾಪ ನೀಡಿದ್ದಾನೆ.
ಅತಸ್ತ್ವಯೈಕ ದೇಹತ್ವಮಿಚ್ಛಾಮೋ ದೇವಿ ಜನ್ಮಸು |
ಚತುರ್ಷ್ವಪಿ ಯತೋಽಸ್ಮಾಕಂ ಶಾಪದ್ವಯ ನಿಮಿತ್ತತಃ ॥115॥
ಚತುರ್ಜನ್ಮ ಭವೇದ್ಭೂವೌ ತ್ವಾಂ ನಾನ್ಯೋ ಮಾರುತಾದ್ ವ್ರಜೇತ್ |
ನಿಯಮೋಽಯಂ ಹರೇರ್ಯಸ್ಮಾದನಾದಿರ್ನಿತ್ಯ ಏವ ಚ ॥116॥
ನಮಗೆ ಬ್ರಹ್ಮನ ಎರಡು ಶಾಪಗಳಿರುವುದರಿಂದ ನಾಲ್ಕು ಜನ್ಮಗಳು ಭೂಮಿಯಲ್ಲಿ ಸಂಭವಿಸುವ ಪ್ರಯುಕ್ತ ನಾಲ್ಕು ಜನ್ಮಗಳಲ್ಲಿಯೂ ನಿನ್ನ ಜೊತೆಗೇ ಒಂದು ದೇಹದಲ್ಲಿ ಜನಿಸಲು ನಾವು ಬಯಸುವೆವು. ಏಕೆಂದರೆ ನಿನ್ನನ್ನು ವಾಯುವಿಗಿಂತ ಬೇರೆ ಯಾರೂ ಹೊಂದಲಾರ. ಇದು ಹರಿ ಮಾಡಿರುವ ಅನಾದಿನಿತ್ಯವಾದ ನಿಯಮ.
ಅತಸ್ತ್ವಯೈಕದೇಹಾ ನೋ ನಾನ್ಯ ಆಪ್ನೋತಿ ಮಾರುತಾತ್ |
ಇತೀರಿತೇ ತಥೇತ್ಯುಕತ್ತ್ವ ಪಾರ್ವತ್ಯಾದಿ ಯುತೈವ ಸಾ
ವಿಪ್ರಕನ್ಯಾಽಭವತ್ ತತ್ರ ಚತಸ್ರಃ ಪಾರ್ವತೀಯುತಾಃ ॥117॥
ಏಕದೇಹಸ್ಥಿತಾಶ್ಚಕ್ರುರ್ಗಿರೀಶಾಯ ತಪೋ ಮಹತ್ |
ತದ್ದೇಹಸ್ಥಾ ಭಾರತೀ ತು ರುದ್ರದೇಹಸ್ಥಿತಂ ಹರಿಮ್ |

ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಧೃತವ್ರತಾ ॥118॥
`ಅದರಿಂದ ನಿನ್ನ ಜೊತೆಗೆ ನಾವು ಏಕದೇಹಿಗಳಾದರೆ ವಾಯು ಹೊರತು ಇನ್ನಾರೂ ನಮ್ಮನ್ನು ಹೊಂದಲಾರ' - ಹೀಗೆ ದೇವಿಯು ಹೇಳಿದಾಗ `ಹಾಗೇ ಆಗಲಿ' ಎಂದು ಹೇಳಿ ಭಾರತೀದೇವಿ ಪಾರ್ವತಿ ಮುಂತಾದವರಿಂದ ಯುಕ್ತಳಾಗಿಯೆ ಒಬ್ಬ ಬ್ರಾಹ್ಮಣನ ಮಗಳಾಗಿ ಜನಿಸಿದಳು. ಆ ಜನ್ಮದಲ್ಲಿ ಪಾರ್ವತಿ ಮುಂತಾದ ನಾಲ್ವರು ದೇವಿಯರು ಏಕದೇಹಿಗಳಾಗಿ ಶಿವನನ್ನು ಒಲಿಸಲು ದೊಡ್ಡ ತಪಸ್ಸನ್ನು ಮಾಡಿದರು. ಕರ್ಮೈಕ್ಯಕ್ಕಾಗಿ ಆ ದೇಹದಲ್ಲಿದ್ದ ಭಾರತಿಯೂ ವ್ರತನಿಷ್ಠಳಾಗಿ ಶಿವನ ಶರೀರದಲ್ಲಿದ್ದ ಹರಿಯನ್ನು ಒಲಿಸಿಕೊಂಡಳು.
ತಸ್ಯೈ ಸ ರುದ್ರದೇಹಸ್ಥೋ ಹರಿಃ ಪ್ರಾದಾದ್ ವರಂ ಪ್ರಭುಃ |
ಅನಂತತೋಷಣಂ ವಿಷ್ಣೋಃ ಸ್ವಭರ್ತ್ರಾ ಸಹ ಜನ್ಮಸು ॥119॥
ಸರ್ವೇಷ್ವಪೀತಿ ಚಾನ್ಯಾಸಾಂ ದದೌ ಶಂಕರ ಏವ ಚ |
ವರಂ ಸ್ವ ಭರ್ತೃ ಸಂಯೋಗಂ ಮಾನುಷೇಷ್ವಪಿ ಜನ್ಮಸು ॥120॥
ಭಾರತಿಗೆ ರುದ್ರದೇಹಸ್ಥನಾದ ಹರಿ ವರವನ್ನಿತ್ತು- `ಎಲ್ಲ ಜನ್ಮಗಳಲ್ಲಿಯೂ ನೀನು ನಿನ್ನ ಪತಿಯೊಂದಿಗೆ ನನ್ನನ್ನು ಬಹಳ ತೃಪ್ತಿಪಡಿಸುವಿ' ಎಂದು. ಬೇರೆ ದೇವಿಯರಿಗೆ ಶಿವನೆ ಮನುಷ್ಯ ಜನ್ಮಗಳ ಪೈಕಿ ಒಂದರಲ್ಲಿ ತಮ್ಮ ಪತಿಗಳ ಸಮಾಗಮದ ವರವನ್ನಿತ್ತ.
ತತಸ್ತದೈವ ದೇಹಂ ತಾ ವಿಸೃಜ್ಯ ನಲನಂದಿನೀ |
ಬಭೂವುರಿಂದ್ರಸೇನೇತಿ ದೇಹೈಕ್ಯೇನ ಸುಸಂಗತಾಃ ॥121॥
ಬಳಿಕ ಬೇಗನೆ ಆ ದೇವಿಯರು ವಿಪ್ರಕನ್ಯಾಶರೀರವನ್ನು ತೊರೆದು ಏಕದೇಹಿಗಳಾಗಿಯೆ ನಲಮಹಾರಾಜನ ಕುಮಾರಿಯಾಗಿ ಜನಿಸಿದರು. ಬಳಿಕ ಆ ಶರೀರವನ್ನೂ ತೊರೆದು ಏಕದೇಹರಾಗಿ ಇಂದ್ರಸೇನೆ ಎಂಬ ಹೆಸರಿನವರಾಗಿಯೂ ಜನಿಸಿದರು.
ತದಾಽಽಸೀನ್ಮುದ್ಗಲೋ ನಾಮ ಮುನಿಸ್ತಪಸಿ ಸಂಸ್ಥಿತಃ |
ಚಕಮೇ ಪುತ್ರಿಕಾಂ ಬ್ರಹ್ಮೇತ್ಯಶೃಣೋತ್ ಸ ಕಥಾಂತರೇ ॥122॥
ಆದ ಮುದ್ಗಲನೆಂಬ ಮುನಿ ತಪಸ್ಸು ಮಾಡುತ್ತಿದ್ದ. ಅವನು ಬ್ರಹ್ಮನು ತನ್ನ ಮಗಳನ್ನು ಮೋಹಿಸಿದನೆಂದು ಒಂದು ಕಥೆಯಲ್ಲಿ ಕೇಳಿದ.
ಅಪಾಹಸತ್ ಸೋಽಬ್ಜಯೋನಿಂ ಶಶಾಪೈನಂ ಚತುರ್ಮುಖಃ |
ಭಾರತ್ಯಾದ್ಯಾಃ ಪಂಚ ದೇವೀರ್ಗಚ್ಛ ಮಾನಿನ್ನಭೂತಯೇ ॥123॥
ಮುದ್ಗಲ ಬ್ರಹ್ಮನನ್ನು ಅಪಹಾಸ ಗೈದ. ಅದರಿಂದ ಬ್ರಹ್ಮ ಅವನಿಗೆ `ಅಹಂಕಾರಿಯೆ, ನೀನು ಭಾರತೀ ಮುಂತಾದ ಐದು ಮಂದಿ ದೇವಿಯರ ಸಂಗ ಮಾಡು. ಅದು ನರಕಾದಿ ಅನರ್ಥ.
ಇತೀರಿತಸ್ತಂ ತಪಸಾ ತೋಷಯಾಮಾಸ ಮುದ್ಗಲಃ |
ಶಾಪಾನುಗ್ರಹಮಸ್ಯಾಥ ಚಕ್ರೇ ಕಂಸಮುದ್ಭವಃ ॥124॥
ಹೀಗೆ ಶಾಪ ಪಡೆದ ಮುದ್ಗಲ ತಪಸ್ಸಿನಿಂದ ಬ್ರಹ್ಮನನ್ನು ಒಲಿಸಿಕೊಂಡ. ಅದರಿಂದ ಬ್ರಹ್ಮ ಅವನಿಗೆ ಶಾಪಕ್ಕೆ ಪ್ರತಿಯಾಗಿ ಅನುಗ್ರಹ ಮಾಡಿದ.
ನ ತ್ವಂ ಯಾಸ್ಯಸಿ ತಾ ದೇವೀರ್ಮಾರುತಸ್ತ್ವಚ್ಛರೀರಗಃ |
ಯಾಸ್ಯತಿ ತ್ವಂ ತದಾ ಮೂರ್ಛಾಂ ಗತೋ ನೈವ ವಿಬುಧ್ಯಸೇ ॥125॥
`ನೀನು ಆ ದೇವಿಯರ ಸಂಗ ಮಾಡುವುದಿಲ್ಲ. ನಿನ್ನ ಶರೀರದಲ್ಲಿದ್ದು ವಾಯು ಇಂದ್ರಸೇನೆಯ ಸಂಗ ಮಾಡುತ್ತಾನೆ. ನೀನು ಆಗ ಮೂರ್ಛೆ ಹೊಂದಿರುತ್ತಿ. ನೀನೇನೂ ತಿಳಿಯುವುದಿಲ್ಲ.
ನ ಚ ಪಾಪಂ ತತಸ್ತೇ ಸ್ಯಾದಿತ್ಯುಕ್ತೇ ಚೈನಮಾವಿಶತ್ |
ಮಾರುತೋಽಥೇಂದ್ರಸೇನಾಂ ಚ ಗೃಹೀತ್ವಾಥಾಭವದ್ ಗೃಹೀ ॥126॥
ಅದರಿಂದ ನಿನಗೆ ಪಾಪ ಬರಲಾರದು ಎಂದು ಬ್ರಹ್ಮ ಮುದ್ಗಲನಿಗೆ ಅನುಗ್ರಹಿಸಿದಾಗ ವಾಯು ಮುದ್ಗಲನನ್ನು ಪ್ರವೇಶಿಸಿದ. ಬಳಿಕ ಇಂದ್ರಸೇನೆಯನ್ನು ಮದುವೆಯಾಗಿ ಗೃಹಸ್ಥನಾದ.
ರೇಮೇ ಚ ಸ ತಯಾ ಸಾರ್ಧಂ ದೀರ್ಘಕಾಲಂ ಜಗತ್ಪ್ರಭುಃ |
ತತೋ ಮುದ್ಗಲಮುದ್ಬೋಧ್ಯ ಯಯೌ ಚ ಸ್ವಂ ನಿಕೇತನಮ್ ॥127॥
ಜಗದೊಡೆಯನಾದ ವಾಯು ದೀರ್ಘಕಾಲ ಇಂದ್ರಸೇನೆಯೊಡನೆ ವಿಹರಿಸಿ ಮುದ್ಗಲನನ್ನು ಎಚ್ಚರಿಸಿ ತನ್ನ ಲೋಕಕ್ಕೆ ತೆರಳಿದ.
ತತೋ ದೇಶಾಂತರಂ ಗತ್ವಾ ತಪಶ್ಚಕ್ರೇ ಸ ಮುದ್ಗಲಃ |
ಸೇಂದ್ರಸೇನಾ ವಿಯುಕ್ತಾಥ ಭರ್ತ್ರಾ ಚಕ್ರೇ ಮಹತ್ತಪಃ ॥128॥
ಬಳಿಕ ಮುದ್ಗಲ ದೇಶಾಂತರಕ್ಕೆ ಹೋಗಿ ತಪಸ್ಸು ಮಾಡಿದ. ಇಂದ್ರಸೇನೆ ಪತಿಯಿಂದ ವಿಯುಕ್ತಳಾಗಿ ಮಹಾತಪಸ್ಸನ್ನಾಚರಿಸಿದಳು.
ತದ್ದೇಹಗಾ ಭಾರತೀ ತು ಕೇಶವಂ ಶಂಕರೇ ಸ್ಥಿತಮ್ |
ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಹಿ ಪೂರ್ವವತ್ ॥129॥
ಇಂದ್ರಸೇನೆಯ ಶರೀರದಲ್ಲಿದ್ದ ಭಾರತಿ ಶಿವನಲ್ಲಿ ಅಂತರ್ಗತನಾದ ಹರಿಯನ್ನು ತಪಸ್ಸಿನಿಂದ ಒಲಿಸಿಕೊಂಡಳು. ಇದು ಹಿಂದಿನಂತೆಯೆ ಕರ್ಮೈಕ್ಯಕ್ಕಾಗಿ.
ಉಮಾದ್ಯಾ ರೌದ್ರಮೇವಾತ್ರ ತಪಶ್ಚಕ್ರುರ್ಯಥಾ ಪುರಾ |
ಪ್ರತ್ಯಕ್ಷೇ ಚ ಶಿವೇ ಜಾತೇ ತದ್ದೇಹಸ್ಥೇ ಚ ಕೇಶವೇ ॥130॥
ಪೃಥಕ್ ಪೃಥಕ್ ಸ್ವಭರ್ತ್ರಾಪ್ತ್ಯೈ ತಾಃ ಪಂಚಾಪ್ಯೇಕದೇಹಗಾಃ |
ಪ್ರಾರ್ಥಯಾಮಾಸುರಭವತ್ ಪಂಚ ಕೃತ್ವೋ ವಚೋ ಹಿ ತತ್ ॥131॥
ಪಾರ್ವತಿ ಮುಂತಾದ ದೇವಿಯರು ಹಿಂದಿನಂತೆಯೆ ಶಿವನನ್ನು ಕುರಿತು ತಪಸ್ಸು ಮಾಡಿದರು. ವಟು ರೂಪದಿಂದ ಶಿವನೂ

ಅವನೊಳಗಿನ ಹರಿಯೂ ಪ್ರತ್ಯಕ್ಷನಾದಾಗ ಒಂದೇ ಶರೀರದಲ್ಲಿದ್ದ ಐದು ದೇವಿಯರೂ ತಮ್ಮ ಪತಿಗಳನ್ನು ಹೊಂದುವುದಕ್ಕೆ ಬೇರೆ ಬೇರೆಯಾಗಿ ವರವನ್ನು ಬೇಡಿದರು. ಅದರಿಂದ ವರವನ್ನು ಬೇಡುವ ಮಾತು ಐದು ಬಾರಿ ಕೇಳಿಸಿತು.

ಶಿವದೇಹಸ್ಥಿತೋ ವಿಷ್ಣುರ್ಭಾರತ್ಯೈತು ದದೌ ಪತಿಮ್ |
ಅನ್ಯಾಸಾಂ ಶಿವ ಏವಾಥ ಪ್ರದದೌ ಚತುರಃ ಪತೀನ್ ॥132॥

ಶಿವದೇಹಾಂತರ್ಗತನಾದ ವಿಷ್ಣು ಭಾರತಿಗೆ ಪತಿಪ್ರಾಪ್ತಿ ವರ ನೀಡಿದ. ಬೇರೆ ದೇವಿಯರಿಗೆ ಶಿವನೆ ನಾಲ್ಕು ಪತಿಗಳನ್ನು ವರವಾಗಿ ಇತ್ತ.

ದೇವ್ಯಶ್ಚತಸ್ರಸ್ತು ತದಾ ದತ್ತಮಾತ್ರೇ ವರೇಽಮುನಾ |
ದೇವಾನಾಮವತಾರಾರ್ಥಂ ಪಂಚದೇವ್ಯಃ ಸ್ಮ ಇತ್ಯಥ ॥133॥
ನಾಜಾನನ್ನೇಕದೇಹತ್ವಾಚ್ಚಿದ್ಯೋಗಾತ್ ಕ್ಷೀರ ನೀರವತ್ |
ತಾಃ ಶ್ರುತ್ವಾ ಸ್ವಪತಿಂ ದೇವಿ ನ ಚಿರಾತ್ ಪ್ರಾಪ್ಸ್ಯಸೀತಿ ಚ ॥134॥
ವಿಷ್ಣೂಕ್ತಂ ಶಂಕರೋಕ್ತಂ ಚ ಚತ್ವಾರಃ ಪತಯಃ ಪೃಥಕ್ |
ಭವಿಷ್ಯತೀತ್ಯಥೈಕಸ್ಯಾಂ ಮೇನಿರೇ ಪಂಚ ಭರ್ತೃತಾಮ್ ॥135॥

ಶಿವನೂ ವಿಷ್ಣುವೂ ವರವನ್ನು ಕೊಟ್ಟಾಗ ದೇವಿಯರು ತಾವು ದೇವತೆಗಳ ಅವತಾರಕ್ಕಾಗಿ ಹುಟ್ಟಿದ ಬೇರೆ ಬೇರೆ ಐದುಮಂದಿ ದೇವಿಯರೆಂಬುದನ್ನು ಮರೆತಿದ್ದರು. ಏಕೆಂದರೆ ಒಂದೇ ದೇಹದಲ್ಲಿ ಹಾಲು ನೀರುಗಳಂತೆ ಆ ಚೇತನರು ಒಂದಾಗಿ ಬೆರೆತಿದ್ದರು. `ದೇವಿ, ನೀನು ನಿನ್ನ ಪತಿಯನ್ನು ಬೇಗನೆ ಪಡೆಯುವಿ' ಎಂದು ಒಮ್ಮೆ ವಿಷ್ಣು ಹೇಳಿದ್ದನ್ನೂ ನಾಲ್ಕುಬಾರಿ ಶಿವ ಹೇಳಿದ್ದನ್ನೂ ಕೇಳಿ ನಾಲ್ಕು ಮಂದಿ ಪತಿಗಳು ಬೇರೆ ಸಿಗುವರು ಬೇರೆ ಬೇರೆಯಾಗಿ ಒಬ್ಬಳಿಗೇ ಐದುಮಂದಿ ಪತಿಗಳೆಂದು ತಪ್ಪಾಗಿ ತಿಳಿದರು.

ರುರುದುಶ್ಚೈಕದೇಹಸ್ಥಾ ಏಕೈವಾಹಮಿತಿ ಸ್ಥಿತಾಃ |
ಅಥಾಪ್ಯಗಾನ್ಮಹೇಂದ್ರೋಽತ್ರ ಸೋಽಬ್ರವೀತ್ ತಾಂ ವರಸ್ತ್ರಿಯಮ್ ॥
ಕಿಮರ್ಥಂ ರೋದಿಷೀತ್ಯೇವ ಸಾಬ್ರವೀದ್ ವಟುರೂಪಿಣಮ್ |
ಶಂಕರಂ ದರ್ಶಯಿತ್ವೈವ ಪಂಚಭರ್ತೃತ್ವಮೇಷ ಮೇ ॥137॥
ವರಾರ್ಥಮರ್ಥಿತಃ ಪ್ರಾದಾದಿತಿ ತಂ ಶಿವ ಇತ್ಯಥ |
ಅಜಾನನ್ ಶಕ್ರ ಆಹೋಚ್ಚೈಃ ಕಿಮೇತದ್ ಭುವನತ್ರಯೇ |
ಮತ್ಪಾಲಿತೇ ಯೋಷಿತಂ ತ್ವಂ ವೃಥಾ ಶಪಸಿ ದುರ್ಮತೇ ॥138॥

ಒಂದು ದೇಹದಲ್ಲಿರುವ ದೇವಿಯರು `ನಾನೊಬ್ಬಳೆ' ಎಂದು ತಿಳಿದು ಅತ್ತರು. ಆಗ ದೇವೇಂದ್ರ ಅಲ್ಲಿಗೆ ಬಂದ. `ಏಕೆ ಅಳುವೆ?' ಎಂದು ಆ ಉತ್ತಮ ಸ್ತ್ರೀಯನ್ನು ಕೇಳಿದ. ಅವಳು ವಟುರೂಪಿ ಶಿವನನ್ನು ತೋರಿಸಿ ಹೇಳಿದಳು. `ಪತಿಪ್ರಾಪ್ತಿಗಾಗಿ ನಾನು ಬೇಡಿದಾಗ ಇವನು ನನಗೆ ಐದು ಮಂದಿ ಪತಿಗಳಾಗುವರೆಂದು ವರ ನೀಡಿದ'. ಆ ವಟುವನ್ನು ಶಿವನೆಂದರಿಯದೆ ಇಂದ್ರ ಗಟ್ಟಿಯಾಗಿ ನುಡಿದ, `ದುರ್ಬುದ್ಧಿಯವನೆ, ಇದೇನು, ನಾನು ಈ ಮೂಲೋರ್ಕವನ್ನು ಆಳುತ್ತಿರುವಾಗ ಒಂದು ಹೆಣ್ಣನ್ನು ವಿನಾಕಾರಣ ಶಪಿಸುತ್ತಿರುವೆ?'

ಇತೀರಿತೇ ಶಿವಃ ಪ್ರಾಹ ಪತ ಮಾನುಷಮಾಪ್ನುಹಿ ॥139॥

ಹೀಗೆ ಹೇಳಿದಾಗ ಶಿವನೆಂದ, `ನೀನು ಸ್ವರ್ಗದಿಂದ ಚ್ಯುತನಾಗು, ಮನುಷ್ಯನಾಗಿ ಹುಟ್ಟು'.

ಅಸ್ಯಾಶ್ಚ ಭರ್ತಾ ಭವಸಿ ತ್ವಾಮೇವೈಷಾ ಪರಿಷ್ಯತಿ ॥140॥
ಪಶ್ಯಾತ್ರ ಮದವಜ್ಞಾನಾತ್ ಪತಿಸಾಂಸ್ತತ್ವದೃಶಾನ್ ಸುರಾನ್ |
ಗಿರೇರಧಸ್ತಾದಸ್ಯೈವೇತ್ಯುಕ್ತೋಽಸೌ ಪಾಕಶಾಸನಃ |
ಉದ್ಬಬರ್ಹ ಗಿರಿಂ ತಂ ತು ದದರ್ಶಾತ್ರ ಚ ತಾನ್ ಸುರಾನ್ ॥141॥

ಇವಳಿಗೆ ನೀನು ಪತಿಯಾಗುವೆ. ನಿನ್ನನ್ನೆ ಇವಳು ವರಿಸುವಳು. ನನ್ನನ್ನು ಅಪಮಾನಿಸಿದ ಕಾರಣ ಸ್ವರ್ಗದಿಂದ ಪತಿತರಾಗಿರುವ ನಿನ್ನಂಥ ದೇವತೆಗಳನ್ನು ಇಲ್ಲಿ ಇದೇ ಪರ್ವತದ ಕೆಳಗೆ ನೋಡು' ಹೀಗೆ ಶಿವ ಹೇಳಿದಾಗ ಇಂದ್ರ ಆ ಬೆಟ್ಟವನ್ನೆತ್ತಿದ. ಅಲ್ಲಿ ಆ ದೇವತೆಗಳನ್ನು ಕಂಡ.

ಪೂರ್ವೇಂದ್ರಾನ್ ಮಾರುತವೃಷನಾಸತ್ಯಾಂಶ್ಚತುರಃ ಸ್ಥಿತಾನ್ |
ಮಾನುಷೇಷ್ವವತಾರಾಯ ಮಂತ್ರಂ ರಹಸಿ ಕುರ್ವತಃ ॥142॥

ಹಿಂದಿನ ಮನ್ವಂತರಗಳಲ್ಲಿ ಇಂದ್ರಪದವಿಯನ್ನಾಳಿದ್ದ ವಾಯು ಯಮ ಮತ್ತು ಇಬ್ಬರು ಅಶ್ವಿನೀದೇವತೆಗಳು ಎಂದು ನಾಲ್ವರು ಮನುಷ್ಯರಲ್ಲಿ ಅವತರಿಸಲು ರಹಸ್ಯವಾಗಿ ಮಂತ್ರಾಲೋಚನೆ ಮಾಡುತ್ತ ಅಲ್ಲಿ ಕುಳಿತಿದ್ದರು.

ತತೋ ವರೇಣ್ಯಂ ವರದಂ ವಿಷ್ಣುಂ ಪ್ರಾಪ್ಯ ಸ ವಾಸವಃ |
ತತ್ಪ್ರಸಾದಾನ್ನರಾಂಶೇನ ಯುಕ್ತೋ ಭೂಮಾವಜಾಯತ ॥143॥

ಬಳಿಕ ದೇವೇಂದ್ರ ವರದಾಯಕನಾದ ಸರ್ವೋತ್ತಮನಾದ ಹರಿಯನ್ನು ತಪಸ್ಸಿನಿಂದ ಒಲಿಸಿಕೊಂಡು ಅವನ ಅನುಗ್ರಹದಿಂದ ನರಾಂಶಯುಕ್ತನಾಗಿ ಭೂಮಿಯಲ್ಲಿ ಹುಟ್ಟಿದ.

ಮದವಜ್ಞಾನಿಮಿತ್ತೇನ ಪತಿತಾಂ ಇತಿ ತಾನ್ ಸುರಾನ್ |
ಮಾರುತಾದೀನ್ ಮೃಷಾವಾದೀರಿತಿ ಬ್ರಹ್ಮಾ ಶಿವಂ ತದಾ ॥144॥
ಶಶಾಪ ಮಾನುಷೇಷು ತ್ವಂ ಜಾತಃ ಪರಾಭವಮ್ |
ಶಕ್ರಾನ್ನರತನೋರ್ಯಾಸಿ ಯಸ್ಮೈತ್ವಂ ತು ಮೃಷಾವದಃ ॥145॥

`ತನ್ನನ್ನು ಅಪಮಾನಿಸಿದ ಪ್ರಯುಕ್ತ ಆ ವಾಯು ಮುಂತಾದ ದೇವತೆಗಳು ಸ್ವರ್ಗದಿಂದ ಚ್ಯುತರಾಗಿದ್ದಾರೆ' ಎಂದು ಸುಳ್ಳು ಹೇಳಿದಿ ಎಂದು ಕೋಪದಿಂದ ಬ್ರಹ್ಮ ಶಿವನನ್ನು ಶಪಿಸಿದ, `ನೀನು ಕೂಡಲೆ ಮನುಷ್ಯನಾಗಿ ಹುಟ್ಟಿ, ಮನುಷ್ಯನಾಗಿ ಹುಟ್ಟುವ ಇಂದ್ರನಿಂದ ಪರಾಭವ ಹೊಂದುವಿ, ನೀನು ಅವನ ಮುಂದೆ ಸುಳ್ಳಾಡಿರುವಿ'.

ಮಚ್ಛಪ್ತಾನಾಂ ಚ ದೇವೀನಾಮವಿಚಾರ್ಯ ಮಯಾ ಯತಃ |
ಪತಿಯೋಗವರಂ ಪ್ರಾದಾ ನಾವಾಪ್ಸ್ಯಸಿ ತತಃ ಪ್ರಿಯಾಮ್ ॥146॥
ಮಾನುಷೇಷು ತತಃ ಪಶ್ಚಾದ್ ಭಾರತೀದೇಹನಿರ್ಗತಾಮ್ |
ಸ್ವಲೋಕೇ ಪ್ರಾಪ್ಸ್ಯಸಿ ಸ್ವಾರ್ಥೇ ವರೋಽಯಂತೇ ಮೃಷಾ ಭವೇತ್ ॥
ನನ್ನಿಂದ ಶಪ್ತರಾದ ದೇವಿಯರಿಗೆ ನೀನು ನನ್ನೊಡನೆ ವಿಚಾರಿಸದೆ ಪತಿಪ್ರಾಪ್ತಿವರ ನೀಡಿರುವಿ. ಅದರಿಂದ ನೀನು ಮನುಷ್ಯ ಜನ್ಮದಲ್ಲಿ ನಿನ್ನ ಸತಿಯನ್ನು ಹೊಂದಲಾರೆ. ಅವಳು ಭಾರತೀದೇಹದಿಂದ ನಿರ್ಗಮಿಸಿದ ಬಳಿಕ ನಿನ್ನ ಲೋಕದಲ್ಲಿ ಅವಳನ್ನು ಹೊಂದುವಿ. ನೀನು ದೇವಿಯರಿಗೆ ಕೊಟ್ಟ ವರ ನಿನ್ನ ವಿಷಯದಲ್ಲಿ ವಿಫಲವಾಗುವುದು.
ಏಸಾ ಸಾ ದ್ರೌಪದೀ ನಾಮ ಪಂಚದೇವಿತನುರ್ಭವೇತ್ |
ಮೃಷಾ ವಾಗ್ ಯೇಷು ತೇ ಪ್ರೋಕ್ತಾ ಮಾರುತಾದ್ಯಾಸ್ತು ತೇಽಖಿಲಾಃ ॥
ತಾಸಾಂ ಪತಿತ್ವಮಾಪ್ಸ್ಯಂತಿ ಭಾರತ್ಯೈವ ತು ಪಾರ್ವತೀ |
ಸಂಯುಕ್ತಾ ವ್ಯವಹಾರೇಷು ಪ್ರವರ್ತೇತ ನ ಚಾನ್ಯಥಾ ॥149॥
`ಐದು ಮಂದಿ ದೇವಿಯರ ಅವತಾರ ಭೂತಳಾದ ಈ ಇಂದ್ರಸೇನೆ ದ್ರೌಪದಿ ಎನಿಸಿ ಜನಿಸುವಳು. ನೀನು ಯಾರ ವಿಷಯದಲ್ಲಿ ಸುಳ್ಳಾಡಿದೆಯೋ ಆ ದೇವತೆಗಳು ವಾಯು ಮುಂತಾದವರೆಲ್ಲರೂ ಆ ದೇವಿಯರ ಪತಿಗಳಾಗುವರು. ಪಾರ್ವತಿ ಭಾರತಿಯೊಡನೆ ಕೂಡಿಕೊಂಡು ಬೇರೆ ಎಲ್ಲ ವ್ಯವಹಾರಗಳಲ್ಲಿ ಮಾತ್ರವೇ ಪ್ರವೃತ್ತಿ ಮಾಡುವಳು. ತನ್ನ ಪಾತಿವ್ರತ್ಯಕ್ಕೆ ಭಂಗ ತರುವ ವ್ಯವಹಾರಗಳಲ್ಲಿ ಅಲ್ಲ.
ಏತೇ ಹಿ ಮಾರುತಾದ್ಯಾಸ್ತೇ ದೇವಕಾರ್ಯಾರ್ಥ ಗೌರವಾತ್ |
ಜಾತಾ ಇತಿ ಶ್ರುತಿಸ್ತತ್ರ ನಾವಜ್ಞಾ ತೇಽತ್ರಕಾರಣಮ್ ॥150॥
`ಈ ವಾಯು ಮುಂತಾದ ದೇವತೆಗಳು ದೇವಕಾರ್ಯರೂಪವಾದ ಫಲದಲ್ಲಿ ಗೌರವ ಬುದ್ಧಿಯಿಂದ ಮಾನವರಾಗಿ ಹುಟ್ಟಿದರೆಂದು ಶ್ರುತಿ ಇದೆ. ಅವರು ಹುಟ್ಟುವುದಕ್ಕೆ ನಿನ್ನನ್ನು ಅಪಮಾನಿಸಿದುದು ಕಾರಣವಲ್ಲ.
ದೀರ್ಘಕಾಲಂ ಮನುಷ್ಯೇಷು ತತಸ್ತ್ವಂ ಸ್ಥಿತಿಮಾಪ್ಸ್ಯಸಿ |
ಇತ್ಯುಕ್ತಾ ್ಯವ ಪ್ರಯಯೌ ಬ್ರಹ್ಮಾ ಸೋಽಶ್ವತ್ಥಾಮಾ ಶಿವೋಽಭವತ್ ॥
ಪಂಚಾದೇವೀತನುಸ್ತ್ವೇಷಾ ದ್ರೌಪದೀ ನಾಮ ಚಾಭವತ್ ॥151॥
`ಅದರಿಂದ ದೀರ್ಘಕಾಲ ನೀನು ಮನುಷ್ಯನಾಗಿ ಇರುತ್ತಿ'. ಹೀಗೆ ಹೇಳಿ ಬ್ರಹ್ಮ ಹೊರಟುಹೋದ. ಬಳಿಕ ಶಿವ ಅಶ್ವತ್ಥಾಮನಾಗಿ ಜನಿಸಿದ. ಪಂಚದೇವಿಯರ ಅವತಾರಭೂತಳಾದ ಇಂದ್ರಸೇನೆ ದ್ರೌಪದಿಯಾಗಿ ಜನಿಸಿದಳು.
ವೇದೇಷು ಸಪುರಾಣೇಷು ಭಾರತೇ ಚಾವಗಮ್ಯತೇ |
ಉಕ್ತೋಽರ್ಥಃ ಸರ್ವ ಏವಾಯಂ ತಥಾ ಪೂರ್ವೋದಿತಾಶ್ಚ ಯೇ ॥
ನಾವು ಹೇಳಿದ ಈ ಪ್ರಮೇಯವೆಲ್ಲವೂ ವೇದಗಳಲ್ಲಿ ಪುರಾಣಗಳಲ್ಲಿ ಮತ್ತು ಮಹಾಭಾರತದಲ್ಲಿ ತಿಳಿದು ಬರುತ್ತದೆ. ಹಿಂದೆ ಹೇಳಿದ ಪ್ರಮೇಯಗಳೂ ಹಾಗೆಯೇ.
ಮುಮುದುಃ ಸರ್ವಪಾಂಚಾಲಾ ಜಾತಯೋಃ ಸುತಯೋಸ್ತಯೋಃ ॥
ಮಾನುಷಾನ್ನೋಪಭೋಗೇನ ಸಂಸರ್ಗಾನ್ಮಾನುಷೇಷು ಚ |
ಮನುಷ್ಯಪುತ್ರತಾಯಾಶ್ಚ ಭಾವೋ ಮಾನುಷ ಏತಯೋಃ |
ಅಭೂನ್ನಾತಿತರಾಮಾಸೀತ್ ತದಯೋನಿತ್ವಹೇತುತಃ ॥155॥
ದ್ರುಪದನಿಗೆ ಆ ಇಬ್ಬರು ಮಕ್ಕಳು ಹುಟ್ಟಿದಾಗ ಪಾಂಚಾಲದೇಶದ ಎಲ್ಲ ಜನರೂ ಸಂತಸಪಟ್ಟರು. ಆ ಮಕ್ಕಳು ಮನುಷ್ಯರ ಮಕ್ಕಳಾದುದರಿಂದ, ಮನುಷ್ಯರ ಅನ್ನ ಉಂಡುದರಿಂದ ಮತ್ತು ಮನುಷ್ಯರ ಸಹವಾಸ ಮಾಡಿದ್ದರಿಂದ ಅವರಲ್ಲಿ ಸ್ವಲ್ಪಮಟ್ಟಿಗೆ ಮನುಷ್ಯ ಸ್ವಭಾವ ಕಂಡು ಬಂದಿತು. ಹೆಚ್ಚಾಗಿ ಅಲ್ಲ. ಏಕೆಂದರೆ ಅವರು ಮನುಷ್ಯ ಯೋನಿಯಲ್ಲಿ ಹುಟ್ಟಿರಲಿಲ್ಲ.
ಯಾಜೋಪಯಾಜೌ ತಾವೇವ ದಯಿತಾ ದ್ರುಪದಸ್ಯ ಚ |
ಮಾತೃಸ್ನೇಹಾರ್ಥಮನಯೋರ್ಯಯಾಚೇ ದದತುಶ್ಚ ತೌ ॥156॥
ದ್ರುಪದರಾಜನ ಪತ್ನಿ ಆ ಮಕ್ಕಳಿಗೆ ತನ್ನಲ್ಲಿ ಮಾತೆ ಎಂಬ ಪ್ರೀತಿ ಉಂಟಾಗುವುದಕ್ಕಾಗಿ ಯಾಜ ಉಪಯಾಜರನ್ನೇ ಬೇಡಿದಳು. ಅವರು ಆ ಅಭೀಷ್ಟವನ್ನು ನೀಡಿದರು.
ಜಾತಮಾತ್ರ ನಿಹಂತಾರಂ ಭಾರದ್ವಾಜೋ ನಿಶಮ್ಯ ತಮ್ |
ಯಶೋಽರ್ಥಮಸ್ತ್ರಾಣಿ ದದಾವಗ್ರಹೀತ್ ಸೋಽಪಿ ಲೋಭತಃ
ರಾಮಾಸ್ತ್ರಾಣಾಂ ದುರ್ಲಭತ್ವಾತ್ ತ್ರಿದಶೇಷ್ವಪಿ ವೀರ್ಯವಾನ್ ॥157॥
ದ್ರೋಣರು ತನ್ನನ್ನು ಕೊಲ್ಲುವುದಕ್ಕಾಗಿಯೇ ಜನಿಸಿದವ ಧೃಷ್ಟದ್ಯುಮ್ನ ಎಂದು ಕೇಳಿಯೂ ಕೀರ್ತಿಯ ಸಲುವಾಗಿ ಅವನಿಗೆ ಅಸ್ತ್ರಗಳನ್ನು ಉಪದೇಶಿಸಿದರು. ಅವನು ಸ್ವತಃ ವೀರ್ಯಶಾಲಿಯಾಗಿದ್ದರೂ ಲೋಭದಿಂದ ಆ ಅಸ್ತ್ರಗಳನ್ನು ಸ್ವೀಕರಿಸಿದ. ಏಕೆಂದರೆ ಪರಶುರಾಮರ ಆ ಅಸ್ತ್ರಗಳು ದೇವತೆಗಳಲ್ಲಿಯೂ ದುರ್ಲಭ.
* * * *

ನೂರ ಮೂವತ್ತೆಂಟನೆಯ ಅಧ್ಯಾಯ
(ದ್ರುಪದನಿಂದ ಯಾಜಾನುಯಾಜರ ವರಣ, ಧೃಷ್ಟದ್ಯುಮ್ನ ಮತ್ತು ದ್ರೌಪದಿಯರ ಉತ್ಪತ್ತಿ)
ವೈಶಂಪಾಯನಃ

ದ್ರೋಣೇನ ವೈರಂ ದ್ರುಪದೋ ನ ಸುಷ್ವಾಪ ಸ್ಮರಂಸ್ತದಾ ।
ಕ್ಷಾತ್ರೇಣ ಚ ಬಲೇನಾಸ್ಯ ನಾಶಶಂಸೇ ಪರಾಜಯಮ್ ॥1॥
ದ್ರುಪದನು ದ್ರೋಣರ ವೈರವನ್ನು ಸ್ಮರಿಸುತ್ತಾ ನಿದ್ರೆಯನ್ನು ಬಿಟ್ಟನು. ಕ್ಷತ್ರಿಯ ಬಲದಿಂದ ಅವರನ್ನು ಜಯಿಸುವುದು ಸಾಧ್ಯವಿಲ್ಲವೆಂದು ತಿಳಿದನು.
ಹೀನಂ ವಿದಿತ್ವಾ ಚಾತ್ಮಾನಂ ಬ್ರಾಹ್ಮಣೇನ ಬಲೇನ ಚ ।
ದ್ರುಪದಸ್ತ್ವಮರ್ಷಣಾದ್ ರಾಜಾ ಕರ್ಮಸಿದ್ಧ್ಯೈ ದ್ವಿಜೋತ್ತಮಾನ್ ।
ಅನ್ವಿಚ್ಛನ್ ಪರಿಚಕ್ರಾಮ ಬ್ರಾಹ್ಮಣಾವಸಥಾನ್ ಬಹೂನ್ ॥2॥
ತಾನು ಬ್ರಾಹ್ಮಣರಾದ ದ್ರೋಣರಿಗಿಂತ ಸಾಮರ್ಥ್ಯದಲ್ಲಿ ಹೀನನೆಂದು ತಿಳಿದ ದ್ರುಪದನು ಕೋಪದಿಂದ ಕೂಡಿದವನಾಗಿ ತನ್ನ ಉದ್ದೇಶದ ಸಿದ್ಧಿಗಾಗಿ ಬ್ರಾಹ್ಮಣಶ್ರೇಷ್ಠರನ್ನು ಹುಡುಕುತ್ತಾ ಅನೇಕ ಬ್ರಾಹ್ಮಣರ ಅಗ್ರಹಾರಗಳಲ್ಲಿ ಸಂಚರಿಸಿದನು.
ನಾಸ್ತಿ ಶ್ರೇಷ್ಠಂ ಮಮಾಪತ್ಯಂ ಧಿಗ್ಬಂಧೂನಿತಿ ಚ ಬ್ರುವನ್ ।
ನಿಶ್ವಾಸಪರಮೋ ಹ್ಯಾಸೀದ್ ದ್ರೋಣಪ್ರತಿಚಿಕೀರ್ಷಯಾ ॥3॥
ನನಗೆ ಒಳ್ಳೆಯ ಪುತ್ರನಿಲ್ಲ. ನನ್ನ ಬಂಧುಗಳಿಗೆ ಧಿಕ್ಕಾರವಿರಲಿ ಎಂದು ಯೋಚಿಸಿ ದ್ರೋಣರಿಗೆ ಪ್ರತೀಕಾರವನ್ನು ಮಾಡಲು ಬಯಸಿ ನಿಟ್ಟುಸಿರನ್ನು ಬಿಡುತ್ತಿದ್ದನು.
ನ ಸಂತಿ ಮಮ ಮಿತ್ರಾಣಿ ಲೋಕೇಽಸ್ಮಿನ್ ನಾಸ್ತಿ ವೀರ್ಯವಾನ್ ।
ನ ಸಂತಿ ಬಲಿನಃ ಪುಂಸಃ ಸಂಗ್ರಾಮೇ ವಿಜಿಗೀಷವಃ ।
ಇತಿ ಚಿಂತಾಕುಲೋ ರಾಜಾ ನಿಶ್ವಾಸಪರಮೋಽಭವತ್ ॥4॥
ನನಗೆ ಒಳ್ಳೆಯ ಸ್ನೇಹಿತರಿಲ್ಲ. ಲೋಕದಲ್ಲಿ ಯಾರೂ ಪರಾಕ್ರಮಿಗಳೂ ಇಲ್ಲ. ಬಲಿಷ್ಠರಾದ ಪುರುಷರನ್ನು ಯುದ್ಧದಲ್ಲಿ ಸೋಲಿಸುವ ಆಸೆಯೂ ಯಾರಿಗೂ ಇಲ್ಲ ಎಂದು ಚಿಂತಾಕುಲನಾದ ರಾಜನು ಯಾವಾಗಲೂ ನಿಟ್ಟುಸಿರನ್ನು ಬಿಡುತ್ತಿದ್ದನು.
ಅಸುಖಶ್ಚ ವಿನಿದ್ರಶ್ಚ ದ್ರೋಣಾಪ್ರಿಯಚಿಕೀರ್ಷಯಾ ।
ಪುತ್ರಜನ್ಮ ಪರೀಪ್ಸನ್ ವೈ ಪೃಥಿವೀಮನ್ವಯಾದಿಮಾಮ್ ॥5॥
ನಿದ್ರೆಯನ್ನು ಕಳೆದುಕೊಂಡು ದುಃಖದಿಂದ ಕೂಡಿದವನಾಗಿ ದ್ರೋಣರಿಗೆ ಅಪಕಾರವನ್ನು ಮಾಡುವ ಪುತ್ರನ ಉತ್ಪತ್ತಿಯನ್ನು ಬಯಸಿ ಈ ಭೂಮಿಯಲ್ಲೆಲ್ಲಾ ಸಂಚರಿಸಿದನು.
ಪೃಥ್ವೀಮನ್ವಚರತ್ ಸರ್ವಾಂ ದ್ರೋಣಹಂತೃಪರೀಪ್ಸಯಾ ।
ಪ್ರಭಾವಶಿಕ್ಷಾವಿನಯಾದ್ ದ್ರೋಣಸ್ಯಾಸ್ಯ ಬಲೇನ ಚ ।
ಕರ್ತುಂ ಪ್ರಯತಮಾನೋಽಪಿ ನ ಶಶಾಕ ಪರಾಜಯಮ್ ॥6॥
ದ್ರೋಣರನ್ನು ಸಂಹರಿಸುವವನನ್ನು ಪಡೆಯುವ ಇಚ್ಛೆಯಿಂದ ಎಲ್ಲಾ ಭೂಮಿಯನ್ನೂ ತಿರುಗಿದನು. ದ್ರೋಣರ ಬಲ, ಪ್ರಭಾವ, ಅಭ್ಯಾಸ ಮತ್ತು ವಿನಯಗಳ ನಿಮಿತ್ತದಿಂದ ಅವರನ್ನು ಪರಾಭವಗೊಳಿಸಲು ಪ್ರಯತ್ನಪಟ್ಟರೂ ಅವನಿಗೆ ಅದು ಸಾಧ್ಯವಾಗಲಿಲ್ಲ.
ಅಭಿತಃ ಸೋಽಥ ಕಲ್ಮಾಷೀಂ ಗಂಗಾತೀರೇ ಪರಿಭ್ರಮನ್ ।
ಬ್ರಾಹ್ಮಣಾವಸಥಂ ಪುಣ್ಯಮಾಸಸಾದ ಮಹೀಪತಿಃ ।
ತತ್ರ ನಾಸ್ನಾತಕಃ ಕಶ್ಚಿನ್ನಚಾಸೀದವ್ರತೀ ದ್ವಿಜಃ ॥7॥
ಎಲ್ಲಾ ಸ್ಥಳಗಳಲ್ಲಿಯೂ ಸಂಚಾರ ಮಾಡುತ್ತಾ ಆ ರಾಜನು ಗಂಗಾತೀರದಲ್ಲಿ ಋಷಿಗಳ ಆಹಾರವಾದ ಫಲಗಳನ್ನು ಕೊಡುವ ಕಲ್ಮಾಷ ವೃಕ್ಷಗಳಿರುವ ಒಂದು ಪವಿತ್ರವಾದ ಬ್ರಾಹ್ಮಣರ ಅಗ್ರಹಾರವನ್ನು ತಲುಪಿದನು. ಆ ಬ್ರಾಹ್ಮಣರ ಅಗ್ರಹಾರದಲ್ಲಿ ವೇದಾಧ್ಯಯನವನ್ನು ಮಾಡದವನಾಗಲೀ, ವ್ರತನಿಷ್ಠನಾಗದವನಾಗಲೀ ಒಬ್ಬ ಬ್ರಾಹ್ಮಣನೂ ಇರಲಿಲ್ಲ.
ತದ್ರೈವ ತೌ ಮಹಾಭಾಗೌ ಸೋಽಪಶ್ಯತ್ ಸಂಶಿತವ್ರತೌ ।
ಯಾಜೋಪಯಾಜೌ ಬ್ರಹ್ಮರ್ಷೀ ಶಾಮ್ಯಂತೌ ಪೃಷತಾತ್ಮಜಃ ॥8॥
ಆಗ ಪೃಷತಪುತ್ರನಾದ ದ್ರುಪದನು ಆ ಅಗ್ರಹಾರದಲ್ಲಿ ಮಹಾನುಭಾವರಾದ ಶ್ರೇಷ್ಠರಾದ ವ್ರತಧಾರಿಗಳಾದ ಶಾಂತರಾದ ಬ್ರಹ್ಮರ್ಷಿಗಳಾದ ಯಾಜೋಪಯಾಜರನ್ನು ನೋಡಿದನು.
ಸಂಹಿತಾಧ್ಯಯನೇ ಯುಕ್ತೌ ಗೋತ್ರತಶ್ಚಾಪಿ ಕಾಶ್ಯಪೌ ।
ಅರಣ್ಯೇ ಯುಕ್ತರೂಪೌ ತೌ ಬ್ರಾಹ್ಮಣಾವೃಷಿಸತ್ತಮೌ॥9॥
ವೇದಾಧ್ಯಯನವನ್ನು ಮಾಡುತ್ತಿದ್ದ ಅವರಿಬ್ಬರೂ ಕಾಶ್ಯಪ ಗೋತ್ರದವರು. ಅರಣ್ಯಕ್ಕೆ ಉಚಿತವಾದ ಆಕಾರವನ್ನು ಹೊಂದಿದ ಶ್ರೇಷ್ಠಋಷಿಗಳಾದ ಬ್ರಾಹ್ಮಣರು.
ಸ ಉಪಾಮಂತ್ರಯಾಮಾಸ ಸರ್ವಕಾಮೈರತಂದ್ರಿತಃ ।
ಬುದ್ಧ್ವಾ ತಯೋರ್ಬಲಂ ಬುದ್ಧಿಂ ಕನೀಯಾಂಸಮುಪಹ್ವರೇ ॥10॥
ಪ್ರಪೇದೇ ಚ್ಛಂದಯನ್ ಕಾಮೈರುಪಯಾಜಂ ಧೃತವ್ರತಮ್ ।
ಗುರುಶುಶ್ರೂಷಣೇ ಯುಕ್ತಃ ಪ್ರಿಯಕೃತ್ ಸರ್ವಕಾಮದಃ ॥11॥
ಅವನು ಅವರ ಮಂತ್ರಬಲವನ್ನೂ ಮತ್ತು ಜ್ಞಾನವನ್ನೂ ತಿಳಿದು ಏಕಾಂತದಲ್ಲಿ ತಮ್ಮನಾದ ಉಪಯಾಜರನ್ನು ಸಂಧಿಸಿ ಆಲಸ್ಯ ಮಾಡದೇ ಅವರು ಅಪೇಕ್ಷಿಸಿದ ಎಲ್ಲವನ್ನೂ ಕೊಡುವ ಆಶ್ವಾಸನೆಯನ್ನು ನೀಡಿ ಅವರನ್ನು ಆಹ್ವಾನಿಸಿದನು. ಧೃತವ್ರತರಾದ ಉಪಯಾಜರನ್ನು ಅನೇಕ ವಸ್ತುಗಳಿಂದ ಸಂತೋಷಪಡಿಸಿ ಸಮೀಪಿಸಿದನು.
ಪಾದ್ಯೇನಾಸನದಾನೇನ ತಥಾರ್ಽಘ್ಯೇಣ ಫಲೈಶ್ಚ ತಮ್ ।
ಹರ್ಷಯಿತ್ವಾ ಯಥಾನ್ಯಾಯಮುಪಯಾಜೋಽಬ್ರವೀತ್ ತತಃ ॥12॥

ಗುರುಶುಶ್ರೂಷೆಯಲ್ಲಿ ರತರಾದ ಪ್ರಿಯಕಾರ್ಯಗಳಾದ ಕೇಳಿದ ಎಲ್ಲವನ್ನೂ ಕೊಡುವ ಸಾಮರ್ಥ್ಯವುಳ್ಳ ಉಪಯಾಜರು, ಆಸನ, ಪಾದ್ಯ, ಅರ್ಘ್ಯ ಮತ್ತು ಫಲಗಳಿಂದ ಅವನನ್ನು ಸಂತೋಷಪಡಿಸಿ ಯೋಗ್ಯವಾದ ರೀತಿಯಲ್ಲಿ ಮಾತನಾಡಿದರು.
ಕೇನ ಕಾರ್ಯವಿಶೇಷೇಣ ತ್ವಮಸ್ಮಾನಭಿಕಾಂಕ್ಷಸೇ |
ಕುತಶ್ಚಾಯಂ ಸಮುದ್ಯೋಗಸ್ತದ್ ಬ್ರವೀತು ಭವಾನಿತಿ ॥13॥
ರಾಜನ್ನೇ, ನೀನು ಯಾವ ಉದ್ದೇಶದಿಂದ ನನ್ನನ್ನು ಬಯಸುತ್ತಿದ್ದೀಯೆ? ಯಾವ ಕಾರಣಕ್ಕೋಸ್ಕರ ಈ ಪ್ರಯತ್ನವನ್ನು ಮಾಡುತ್ತಿದ್ದೀಯೆ ಎಂಬುದನ್ನು ನನಗೆ ಹೇಳು.
ವೈಶಂಪಾಯನಃ
ಸ ಬುದ್ಧ್ವಾ ಪ್ರೀತಿಸಂಯುಕ್ತಮೃಷೀನಾಮುತ್ತಮಂ ತದಾ |
ಉವಾಚ ಚ್ಛಂದಯನ್ ಕಾಮ್ಯೈರ್ದ್ರುಪದಃ ಸ ತಪಸ್ವಿನಮ್ ॥14॥
ದ್ರುಪದನು ಆ ಋಷಿಶ್ರೇಷ್ಠರು ತನ್ನಲ್ಲಿ ಪ್ರೀತಿಯಿಂದ ಇರುವುದನ್ನು ಗಮನಿಸಿ ಆ ತಪಸ್ವಿಗಳನ್ನು ಅವರಿಗೆ ಅಪೇಕ್ಷಿತವಾದ ವಸ್ತುಗಳಿಂದ ಸಂತೋಷಪಡಿಸುತ್ತಾ ಮಾತನಾಡಿದನು.
ಯೇನ ಮೇ ಕರ್ಮಣಾ ಬ್ರಹ್ಮನ್ ಪುತ್ರಃ ಸ್ಯಾದ್ ದ್ರೋಣಮೃತ್ಯವೇ|
ಅರ್ಜುನಸ್ಯ ತಥಾ ಭಾರ್ಯಾ ಭವೇದ್ ಯಾ ವರವರ್ಣಿನೀ |
ಉಪಯಾಜ ಚರಸ್ವೈವತ್ ಪ್ರದಾಸ್ಯಾಮ್ಯರ್ಬುದಂ ಗವಾಮ್ ॥15॥
ಉಪಯಾಜರೇ, ಯಾವ ಕರ್ಮವನ್ನು ಮಾಡಿದರೆ ನನಗೆ ದ್ರೋಣರನ್ನು ಕೊಲ್ಲುವ ಪುತ್ರನು ಜನಿಸುವನೋ ಮತ್ತು ಅರ್ಜುನನ ಪತ್ನಿಯಾಗುವ ಸುಂದರಿಯಾದ ಪುತ್ರಿಯ ಜನಿಸುವಳೋ, ಅಂತಹ ಕರ್ಮವನ್ನು ಮಾಡಿ. ನಾನು ನಿಮಗೆ ಹತ್ತು ಕೋಟಿ ಗೋವುಗಳನ್ನು ಕೊಡುವೆನು.
ವೈಶಂಪಾಯನಃ
ಏವಮುಕ್ತಸ್ತು ತೇನರ್ಷಿಃ ಪ್ರತ್ಯುವಾಚ ಪುನಶ್ಚ ತಮ್ |
ನಾಹಂ ಫಲಾರ್ಥೀ ದ್ರುಪದ ಯೋಽರ್ಥೀ ಸ್ಯಾತ್ ತತ್ರ ಗಮ್ಯತಾಮ್ ॥
ರಾಜನು ಹೀಗೆ ಹೇಳಿದಾಗ ಆ ಋಷಿಗಳು ಪುನಃ ಅವನನ್ನು ಕುರಿತು ದ್ರುಪದನೇ, ನನಗೆ ಯಾವ ಫಲದ ಅಪೇಕ್ಷೆಯೂ ಇಲ್ಲ. ಯಾರಿಗೆ ಫಲದ ಅಪೇಕ್ಷೆ ಇದೆಯೋ ಅಂತಹವರ ಬಳಿಗೆ ನೀನು ಹೋಗು ಎಂದುಹೇಳಿದರು.
ವೈಶಂಪಾಯನಃ
ಪ್ರತ್ಯಾಖ್ಯಾತಸ್ತು ತೇನೈವಂ ಸ ವೈ ಸಜ್ಜನಸನ್ನಿಧೌ |
ಆರಾಧಯಿಷ್ಯನ್ ದ್ರುಪದಃ ಸ ತಂ ಪರ್ಯಚರತ್ ಪುನಃ ॥17॥
ಸಜ್ಜನರ ಸನ್ನಿಧಿಯಲ್ಲಿ ಹೀಗೆ ಅವರಿಂದ ನಿರಾಕೃತನಾದರೂ ಅವರನ್ನು ಸಂತೋಷಪಡಿಸುವ ದೃಷ್ಟಿಯಿಂದ ದ್ರುಪದನು ಅವರನ್ನು ಪುನಃ ಪರಿಚರಿಸಿದನು.
ತತಃ ಸಂವತ್ಸರಸ್ಯಾಂತೇ ದ್ರುಪದಂ ದ್ವಿಜಸತ್ತಮಃ |
ಉಪಯಾಜೋಽಬ್ರವೀದ್ ವಾಕ್ಯಂ ಕಾಲೇ ಮಧುರಯಾ ಗಿರಾ ॥18॥
ಆಗ ಒಂದು ವರ್ಷವು ಕಳೆದ ಮೇಲೆ ಋಷಿಶ್ರೇಷ್ಠರಾದ ಉಪಯಾಜರು ಯೋಗ್ಯವಾದ ಕಾಲದಲ್ಲಿ ದ್ರುಪದನನ್ನು ಕುರಿತು ಮಧುರವಾದ ಮಾತುಗಳಿಂದ ಹೀಗೆ ಹೇಳಿದರು.
ಜ್ಯೇಷ್ಠೋ ಭ್ರಾತಾ ಮಮಾಗೃಹ್ಣಾದ್ ವಿಚಿನ್ವನ್ ವನನಿರ್ಝರೇ |
ಅಪರಿಜ್ಞಾತಶೌಚಾಯಾಂ ಭೂಮೌ ನಿಪತಿತಂ ಫಲಮ್ ॥19॥
ಕಾಡಿನಲ್ಲಿ ಒಂದು ತೊರೆಯ ಬಳಿಯಲ್ಲಿ ಹುಡುಕುತ್ತಾ ನನ್ನ ಅಣ್ಣನು ಶುದ್ಧಿಯು ತಿಳಿಯದಿದ್ದ ಭೂಮಿಯಲ್ಲಿ ಬಿದ್ದ ಒಂದು ಫಲವನ್ನು ತೆಗೆದುಕೊಂಡನು.
ತದಪಶ್ಯಮಹಂ ಭ್ರಾತುರಸಾಂಪ್ರತಮನುವ್ರಜನ್ |
ವಿಮರ್ಶಂ ಸಂಕ ರಾದಾನೇ ನಾಯಂ ಕುರ್ಯಾತ್ ಕಥಂಚನ ॥20॥
ನಾನು ಅಣ್ಣನ ಹಿಂದೆಯೇ ಹೋಗುತ್ತಾ ಅವನು ಮಾಡಿದ ಅನುಚಿತ ಕರ್ಮವನ್ನು ನೋಡಿ, ಇವನು ಅಶುದ್ಧವಾದ ಪದಾರ್ಥಗಳನ್ನು ಸ್ವೀಕರಿಸುವುದಕ್ಕೂ ಸಹ ಎಂದೂ ವಿಮರ್ಶೆ ಮಾಡುವುದಿಲ್ಲ ಎಂದು ತಿಳಿದೆನು.
ಯೋ ನಾಪಶ್ಯತ್ ಫಲಂ ದೃಷ್ಟ್ವಾ ದೋಷಾಂಸ್ತಸ್ಯಾನುಬಂಧಿಕಾನ್ |
ವಿವಿನಕ್ತಿ ನ ಶೌಚಾರ್ಥೀ ಸೋಽನ್ಯತ್ರಾಪಿ ಕಥಂ ಭವೇತ್ ॥21॥
ಯಾರು ಭೂಮಿಯಲ್ಲಿ ಬಿದ್ದಿದ್ದ ಫಲವನ್ನು ನೋಡಿ ಅದರಲ್ಲಿ ಇರಬಹುದಾದ ದೋಷಗಳನ್ನು ಶುದ್ಧಿಯ ದೃಷ್ಟಿಯಿಂದ ವಿಚಾರ ಮಾಡುವುದಿಲ್ಲವೋ ಅವನು ಬೇರೆ ವಿಷಯಗಳಲ್ಲಿಯೂ ಹೀಗೆಯೇ ನಡೆದುಕೊಳ್ಳುತ್ತಾನೆ (ಎಂದು ಯೋಚಿಸಿದೆ).
ಸಂಹಿತಾಧ್ಯಯನಸ್ಯಾಂತೇ ಪಂಚಯಜ್ಞಾನ್ ನಿರೂಪ್ಯ ಚ |
ಭೈಕ್ಷಮುಂಛೇನ ಸಹಿತಂ ಭುಂಜಾನಸ್ತು ತದಾ ತತಃ |
ಕೀರ್ತಯತ್ಯೇವ ರಾಜರ್ಷೇ ಭೋಜನಸ್ಯ ರಸಂ ಪುನಃ ॥22॥
ರಾಜರ್ಷಿಯೇ, ಸಂಹಿತಾಧ್ಯಯನವನ್ನು ಮಾಡುವ ಕಾಲದಲ್ಲಿ ಪಂಚಯಜ್ಞಗಳನ್ನು ಮಾಡಿ ಮುಂಛವೃತ್ತಿಯಿಂದ ಭಿಕ್ಷಾನ್ನವನ್ನು ಸಂಪಾದಿಸಿ ಭೋಜನವನ್ನು ಮಾಡುವಾಗ ಅವನು ಮತ್ತೆ ಮತ್ತೆ ಆ ಭೋಜನದ ರುಚಿಯ ಬಗ್ಗೆ ಮಾತನಾಡುತ್ತಾನೆ.
ಸಂಹಿತಾಧ್ಯಯನಂ ಕುರ್ವನ್ ವನೇ ಗುರುಕುಲೇ ವಸನ್ |
ಭೈಕ್ಷಮುಚ್ಛಿಷ್ಟಮನ್ಯೇಷಾಂ ಭುಂಕ್ತೇ ಸ್ಮ ಸತತಂ ತದಾ |

ಕೀರ್ತಯನ್ ಗುಣಮನ್ನಾನಾಮಘೃಣೀ ಯೋ ಮುಹುರ್ಮುಹುಃ ॥
ಕಾಡಿನಲ್ಲಿ ಗುರುಕುಲದಲ್ಲಿ ವಾಸಮಾಡಿ ಸಂಹಿತಾಧ್ಯಯನವನ್ನು ಮಾಡುತ್ತಾ ಯಾವಾಗಲೂ ಇನ್ನೊಬ್ಬರು ತಿಂದ ಮೇಲೆ ಉಳಿದ ಭೈಕ್ಷಾನ್ನವನ್ನು ಮತ್ತೆ ಮತ್ತೆ ಆ ಅನ್ನವನ್ನು ಕೊಂಡಾಡುತ್ತಾ ಜುಗುಪ್ಸೆಯಿಲ್ಲದೆ ಭುಂಜಿಸುತ್ತಾನೆ.
ತಮಹಂ ಫಲಾರ್ಥಿನಂ ಮನ್ಯೇ ಭ್ರಾತರಂ ತರ್ಕಚಕ್ಷುಷಾ ।
ತಂ ವೈ ಗಚ್ಛಸ್ವ ನೃಪತೇ ಸ ತ್ವಾಂ ಸಂಯಾಜಯಿಷ್ಯತಿ ॥24॥
ನನ್ನ ತರ್ಕಬುದ್ಧಿಯಿಂದ ನಮ್ಮ ಅಣ್ಣನು ಫಲಾಪೇಕ್ಷಿಯೆಂದು ಊಹಿಸುತ್ತೇನೆ. ರಾಜನೇ, ನೀನು ಅವನ ಬಳಿಗೆ ಹೋಗು. ಅವನು ನಿನಗೆ ಒಂದು ಯಾಗವನ್ನು ಮಾಡಿಸುವನು.
ವೈಶಂಪಾಯನ ಃ
ಅಜುಗುಪ್ಸಮಾನೋ ನೃಪತಿಃ ಫಲಾನಾಂ ಕಲುಷಾಂ ಗತಿಮ್ ।
ಉಪಯಾಜವಚಃ ಶ್ರುತ್ವಾ ದ್ರುಪದಃ ಸರ್ವಧರ್ಮವಿತ್ ।
ಭೃಶಂ ಸಂಪೂಜ್ಯ ಪೂಜಾರ್ಹಮೃಷಿಂ ಯಾಜಮುವಾಚ ಚ ॥25॥
ರಾಜನು ಕಾರ್ಯಗಳ ಕುಟಿಲಗತಿಯನ್ನು ನೋಡಿ ಬೇಸರಗೊಳ್ಳಲಿಲ್ಲ. ಸರ್ವಧರ್ಮವನ್ನೂ ತಿಳಿದ ದ್ರುಪದರಾಜನು ಉಪಯಾಜರ ಮಾತುಗಳನ್ನು ಕೇಳಿ ಅವರನ್ನು ಚೆನ್ನಾಗಿ ಪೂಜಿಸಿ ಯಾಜರ ಸಮೀಪಕ್ಕೆ ಬಂದನು.
ಗೋಽಯುತಾನಿ ದದಾಮ್ಯಷ್ಟೌ ಯಾಜ ಯಾಜಯ ಮಾಂ ವಿಭೋ।
ದ್ರೋಣವೈರಾಂತರೇ ತಪ್ತಂ ವಿಷಣ್ಣಂ ಶರಣಾಗತಮ್ ॥26॥
ಯಾಜರೇ, ದ್ರೋಣರ ವಿರೋಧದಿಂದ ತಪ್ತನಾದ ಮತ್ತು ವಿಷಾದದಿಂದ ನಿಮಗೆ ಶರಣಾಗತನಾದ ನನಗೆ ಒಂದು ಯಾಗವನ್ನು ಮಾಡಿಸಿ. ನಾನು ನಿಮಗೆ ಹತ್ತು ಸಹಸ್ರ ಗೋವುಗಳನ್ನು ಕೊಡುತ್ತೇನೆ.
ಬ್ರಹ್ಮಬಂಧುಪ್ರಣಿಹಿತಂ ನ ಕ್ಷತ್ರಂ ಕ್ಷಾತ್ರಿಯೋ ಜಯೇತ್ ।
ತಸ್ಮಾದ್ ದ್ರೋಣಭಯಾರ್ತಂ ಮಾಂ ಭವಾಂಸ್ತ್ರಾತುಮಿಹಾರ್ಹತಿ ॥
ಕ್ಷತ್ರಿಯನಾದವನು ಬ್ರಾಹ್ಮಣರ ಬಲವುಳ್ಳ ಕ್ಷತ್ರಿಯನನ್ನು ಎಂದೂ ಜಯಿಸಲಾರ. ಆದ್ದರಿಂದ ದ್ರೋಣರ ಭಯದಿಂದ ಆರ್ತನಾದ ನನ್ನನ್ನು ತಾವು ರಕ್ಷಿಸಬೇಕು.
ಭಾರದ್ವಾಜಾಗ್ನಿನಾ ದಗ್ಧಂ ಸಂಹ್ಲಾದಯಿತುಮರ್ಹಸಿ ।
ಸ ಹಿ ಬ್ರಹ್ಮವಿದಾಂ ಶ್ರೇಷ್ಠಃ ಶಸ್ತ್ರಾಸ್ತ್ರೇಷ್ವಸಮೋ ಭುವಿ ॥28॥
ದ್ರೋಣರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರು. ಭೂಮಿಯಲ್ಲಿ ಶಸ್ತ್ರಾಸ್ತ್ರಗಳನ್ನು ತಿಳಿದವರಲ್ಲಿ ಅಸದೃಶರಾದವರು. ದ್ರೋಣರೆಂಬ ಅಗ್ನಿಯಿಂದ ಬೆಂದ ನನ್ನನ್ನು ತಾವು ಉಜ್ಜೀವನಗೊಳಿಸಬೇಕು.
ತತೋ ದ್ರೋಣಸ್ತಥಾಽಜೈಷೀತ್ ಸ ಹಿ ವಿಗ್ರಹಕಾರಣಾತ್ ।
ಕ್ಷತ್ರಿಯೋ ನಾಸ್ತಿ ತುಲ್ಯೋಽಸ್ಯ ಪೃಥಿವ್ಯಾಂ ಕಶ್ಚಿದರ್ಹಣಃ ॥29॥
ಅವರ ಜ್ಞಾನ ಮತ್ತು ಅಸ್ತ್ರವಿದ್ಯೆ ಬಲದಿಂದ ಅವರು ನನಗೆ ವಿರೋಧವನ್ನು ಮಾಡಿ ಜಯಿಸಿದರು. ಅವರಿಗೆ ಸಮಾನನಾದ ಕ್ಷತ್ರಿಯನು ಭೂಮಿಯಲ್ಲಿ ಯಾವನೂ ಇಲ್ಲ.
ಭಾರತಾಚಾರ್ಯಮುಖ್ಯಸ್ಯ ಭಾರದ್ವಾಜಸ್ಯ ಧೀಮತಃ ।
ದ್ರೋಣಸ್ಯ ಶರಜಾಲಾನಿ ರಿಪುದೇಹಹರಾಣಿ ಚ ॥30॥
ಭಾರತಕುಮಾರರಿಗೆ ಆಚಾರ್ಯರಾದ, ಶ್ರೇಷ್ಠರಾದ, ಮೇಧಾವಿಗಳಾದ, ಭರದ್ವಾಜರ ಪುತ್ರರಾದ ದ್ರೋಣರು ಪ್ರಯೋಗಿಸಿದ ಬಾಣಗಳ ಸಮೂಹವು ಶತ್ರುದೇಹವನ್ನು ನಾಶಮಾಡುತ್ತವೆ.
ಷಡರತ್ನಿ ಧನುಶ್ಚಾಸ್ಯ ಖಡ್ಗಮಪ್ರತಿಮಂ ಮಹತ್ ।
ಸ ಹಿ ಬ್ರಾಹ್ಮಣವೇಗೇನ ಕ್ಷಾತ್ರಂ ವೇಗಮಸಂಶಯಮ್ ॥31॥
ಪ್ರತಿಹತ್ಯ ಚರತ್ಯೇವ ಭಾರದ್ವಾಜೋ ಮಹಾಮನಾಃ ।
ಕಾರ್ತವೀರ್ಯಸಮೋ ಹ್ಯೇಷ ಖಟ್ವಾಂಗಪ್ರತಿಮೋಽಪಿ ವಾ ॥32॥
ಅವನ ಧನುಸ್ಸು ಆರು ಮೊಳ ಎತ್ತರವಿದೆ. ಅವರ ದೊಡ್ಡ ಖಡ್ಗವು ಅಸದೃಶವಾದದು. ಭರದ್ವಾಜರಪುತ್ರರೂ, ಧೈರ್ಯಶಾಲಿಗಳೂ ಆದ ಅವರು ತಮ್ಮ ಬ್ರಾಹ್ಮಣವೇಗದಿಂದ ಕ್ಷತ್ರಿಯವೇಗವನ್ನು ಅಳಿಸಿ ಹಾಕಿ ಸಂಚರಿಸುತ್ತಾರೆ. ಅವರು ಕಾರ್ತವೀರ್ಯಾರ್ಜುನನಿಗೂ, ಖಟ್ವಾಂಗ ರಾಜನಿಗೂ ಸದೃಶವಾದ ಪರಾಕ್ರಮವುಳ್ಳವರು.
ಕ್ಷತ್ರೋಚ್ಛೇದಪರಾಯತ್ತಂ ಜಾಮದಗ್ನ್ಯಮಿವೋದ್ಯತಮ್ ।
ಸಹಿತಂ ಕ್ಷತ್ರವೇಗೇನ ಬ್ರಾಹ್ಮವೇಗೇನ ಸಾಂಪ್ರತಮ್ ॥33॥
ಅವರು ಕ್ಷತ್ರಿಯಕುಲವನ್ನು ನಾಶಮಾಡುವುದರಲ್ಲಿ ತತ್ಪರರಾದ ಪರಶುರಾಮರಂತೆ ಈಗ ಕ್ಷತ್ರಿಯವೇಗವನ್ನೂ ಬ್ರಾಹ್ಮಣವೇಗವನ್ನೂ ಹೊಂದಿದವರಾಗಿ ಉದ್ಯುಕ್ತರಾಗಿದ್ದಾರೆ.
ನೇಷವಸ್ತಂ ಪರಾಕುರ್ಯುರ್ನಚ ಪ್ರಾಸಾ ನ ಚಾಸಯಃ ।
ಬ್ರಾಹ್ಮಂ ತಸ್ಯ ಹರೇತ್ ತೇಜೋ ಮಂತ್ರಾಹುತಿಹುತಂ ಯಥಾ ॥34॥
ಬಾಣಗಳಾಗಲೀ, ಪ್ರಾಸಗಳಾಗಲೀ ಅಥವಾ ಖಡ್ಗಗಳಾಗಲೀ ಎಂದೂ ಅವರನ್ನು ಸೋಲಿಸಲಾರವು. ಮಂತ್ರಾಹುತಿಗಳಿಂದ ಮಾಡಿದ ಹೋಮದಂತೆ ಬ್ರಹ್ಮತೇಜಸ್ಸು ಮಾತ್ರ ಅವರನ್ನು ಸೋಲಿಸಬಹುದು (ಅವರ ಬ್ರಹ್ಮತೇಜಸ್ಸೇ ಅವೆಲ್ಲವನ್ನೂ ಸೋಲಿಸುತ್ತದೆ).
ತಸ್ಯ ಹ್ಯಸ್ತ್ರಬಲಂ ಘೋರಮಪ್ರಸಹ್ಯಂ ಪರೈರ್ಭುವಿ ।
ಶತ್ರೂನ್ ಸಮೇತ್ಯ ಜಯತಿ ಕ್ಷತ್ರಂ ಬ್ರಹ್ಮಪುರಸ್ಕೃತಮ್ ॥35॥

ಅವರ ಅಸ್ತ್ರಬಲವು ಭೂಮಿಯಲ್ಲಿ ಸಹಿಸಲು ಅಸಾಧ್ಯವಾದುದೂ ಮತ್ತು ಘೋರವಾದುದೂ ಆಗಿದೆ. ಅವರು ಬ್ರಾಹ್ಮಣಪುರಸ್ಸರರಾದ ಕ್ಷತ್ರಿಯರನ್ನೂ ಎದುರಿಸಿ ಜಯಿಸುತ್ತಾರೆ.
ಬ್ರಹ್ಮಕ್ಷತ್ರೇ ಚ ಸಹಿತೇ ಬ್ರಹ್ಮತೇಜೋ ವಿಶಿಷ್ಯತೇ |
ಸೋಽಹಂ ಕ್ಷತ್ರಬಲಾದ್ ದೀನೋ ಬ್ರಹ್ಮತೇಜಃ ಪ್ರಪೇದಿವಾನ್ ॥36॥
ಬ್ರಹ್ಮತೇಜಸ್ಸು ಮತ್ತು ಕ್ಷತ್ರಿಯ ತೇಜಸ್ಸು ಒಟ್ಟಿಗೆ ಸೇರಿದರೆ ಬ್ರಹ್ಮತೇಜಸ್ಸೇ ಶ್ರೇಷ್ಠವಾಗುತ್ತದೆ. ನನ್ನ ಕ್ಷತ್ರಿಯ ಬಲದಿಂದ ದೀನಬಲನಾದ ನಾನು ತಮ್ಮನ್ನು ಹೊಂದಿ ಬ್ರಹ್ಮತೇಜಸ್ಸನು ಹೊಂದುತ್ತಿದ್ದೇನೆ.
ದ್ರೋಣಾದ್ ವಿಶಿಷ್ಟಮಾಸಾದ್ಯ ಭವಂತಂ ವೇದವಿತ್ತಮಮ್ |
ದ್ರೋಣಾಂತಕಮಹಂ ಪುತ್ರಂ ಲಭೇಯಂ ಯುಧಿ ದುರ್ಜಯಮ್ ॥
ದ್ರೋಣರಿಗಿಂತಲೂ ವೇದಜ್ಞರಾದ ಮತ್ತು ಶ್ರೇಷ್ಠರಾದ ತಮ್ಮನ್ನು ಹೊಂದಿ ಯುದ್ಧದಲ್ಲಿ ದುರ್ಜಯನಾದಂತಹ, ದ್ರೋಣರನ್ನು ಸಂಹಾರ ಮಾಡುವಂತಹ ಪುತ್ರನನ್ನು ಪಡೆಯುತ್ತೇನೆ.
ದ್ರೋಣಮೃತ್ಯುರ್ಯಥಾ ಮೇಽದ್ಯ ಪುತ್ರೋ ಜಾಯೇತ ವೀರ್ಯವಾನ್ |
ತತ್ಕರ್ಮ ಕುರು ಮೇ ಯಾಜ ನಿರ್ವಪಾಮ್ಯರ್ಬುದಂ ಗವಾಮ್ ॥38॥
ಯಾಜರೇ ಯಾವ ಕರ್ಮವನ್ನು ಮಾಡಿದರೆ ನನಗೆ ದ್ರೋಣರಿಗೆ ಮೃತ್ಯುವಾಗುವ ಪರಾಕ್ರಮಶಾಲಿಯಾದ ಪುತ್ರನು ಜನಿಸುವನೋ ಅಂತಹ ಕರ್ಮವನ್ನು ಮಾಡಿ. ನಾನು ನಿಮಗೆ ಹತ್ತು ಕೋಟಿ ಗೋವುಗಳನ್ನು ಕೊಡುತ್ತೇನೆ.
ವೈಶಂಪಾಯನಃ
ತಥೇತ್ಯುಕ್ತತ್ವ ತು ತಂ ಯಾಜೋ ಯಾಜ್ಯಾರ್ಥಂ ವಾಕ್ಯಮಬ್ರವೀತ್ |
ಗುರ್ವರ್ಥ ಇತಿ ಚಾಕಾಮಮುಪಯಾಜಮಚೋದಯತ್ ॥39॥
``ಹಾಗೆಯೇ ಆಗಲಿ'' ಎಂದು ಹೇಳಿ ಯಾಜರು ಯಾಗ ಮಾಡಲಿರುವ ದ್ರುಪದನ ಪ್ರಯೋಜನವನ್ನು ಉದ್ದೇಶಿಸಿ ``ಅಣ್ಣನಾದ ನನ್ನ ಮಾತನ್ನು ಕೇಳಬೇಕು'' ಎಂದು ಇಷ್ಟವಿಲ್ಲದಿದ್ದ ಉಪಯಾಜರನ್ನು ಒತ್ತಾಯ ಮಾಡಿದರು.
ಯಾಜಃ
ಮಾ ಭೈಸ್ತ್ವಂ ಸಂಪ್ರದಾತಾಸ್ಮಿ ಕರ್ಮಣಾ ಭವತಃ ಸುತಮ್ |
ಕ್ಷಿಪ್ರಮುತ್ತಿಷ್ಠ ಚಾವ್ಯಗ್ರಃ ಸಂಭಾರಾಂಶ್ಚೋಪಕಲ್ಪಯ ॥40॥
ರಾಜನೇ, ಹೆದರಬೇಡ. ನಾನು ಕರ್ಮವನ್ನು ಮಾಡಿಸಿ ನೀನು ಅಪೇಕ್ಷಿಸುವ ಮಗನನ್ನು ನಿನಗೆ ಕೊಡುವೆನು. ಬೇಗ ಎದ್ದು ಸಾವಧಾನ ಮನಸ್ಸಿನಿಂದ ಯಜ್ಞಸಾಮಗ್ರಿಗಳೆಲ್ಲವನ್ನೂ ಅಣಿಗೊಳಿಸು.
ವೈಶಂಪಾಯನಃ
ಏವಮುಕ್ತತ್ವ ಪ್ರತಿಜ್ಞಾಯ ಕರ್ಮ ಚಾಸ್ಯಾದದೇ ಮುನಿಃ |
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ಯಥಾವಿಧಿ ಯಥಾಕ್ರಮಮ್ ॥41॥
ದ್ವಿಪದರಲ್ಲಿ ಶ್ರೇಷ್ಠರಾದ ಬ್ರಾಹ್ಮಣರಾದ ಯಾಜರು ಹೀಗೆ ಪ್ರತಿಜ್ಞಾಪೂರ್ವಕವಾಗಿ ದ್ರುಪದನಿಗೆ ಆಶ್ವಾಸನೆಯನ್ನು ಕೊಟ್ಟು ವಿಧಿವತ್ತಾಗಿ ಮತ್ತು ಕ್ರಮಪುರಸ್ಸರವಾಗಿ ಯಾಗವನ್ನು ಮಾಡಲು ಉಪಕ್ರಮಿಸಿದರು.
ಯಾಜೋ ದ್ರೋಣವಿನಾಶಾಯ ಯಾಜಯಾಮಾಸ ತಂ ನೃಪಮ್ |
ಗುರ್ವರ್ಥಂ ಯೋಜಯನ್ ಕರ್ಮ ಯಾಜಸ್ಯಾಪಿ ಸಮೀಪಗಃ ॥42॥
ಯಾಜರು ದ್ರುಪದನಿಗೆ ದ್ರೋಣರ ವಿನಾಶವನ್ನು ಮಾಡುವ ಸಲುವಾಗಿ ಯಾಗವನ್ನು ಮಾಡಿಸಿದರು. ಅಣ್ಣನ ಪ್ರೀತಿಗಾಗಿ ಉಪಯಾಜರೂ ಸಹ ಅಣ್ಣನ ಸಮೀಪದಲ್ಲಿದ್ದು ಸಹಕಾರವನ್ನು ನೀಡಿದರು.
ತತಸ್ತಸ್ಯ ನರೇಂದ್ರಸ್ಯ ಉಪಯಾಜೋ ಮಹಾಮನಾಃ |
ಆಚಖ್ಯೌ ಕರ್ಮ ವೈತಾನಂ ತದಾ ಪುತ್ರಫಲಾಯ ವೈ ॥43॥
ಆಗ ಮಹರ್ಷಿಗಳಾದ ಉಪಯಾಜರು, ರಾಜನಿಗೆ ಪುತ್ರಫಲವನ್ನು ಪಡೆಯಲು ಮಾಡಬೇಕಾದ ಯಜ್ಞಸಂಬಂಧಿ ಕಾರ್ಯಗಳನ್ನೆಲ್ಲಾ ವಿವರಿಸಿದರು.
ಉಪಯಾಜಃ
ಇಹ ಪುತ್ರೋಮಹಾವೀರ್ಯೋ ಮಹಾತೇಜಾ ಮಹಾಬಲಃ |
ಇಷ್ಯತೇ ಯದ್ವಿಧೋ ರಾಜನ್ ಭವಿತಾ ತೇ ತಥಾವಿಧಃ ॥44॥
ರಾಜನೇ, ಇಂತಹ ಯಾಗವನ್ನು ಮಾಡಿದರೆ ಎಂತಹ ಮಹಾಪರಾಕ್ರಮಿಯೂ, ಮಹಾತೇಜಸ್ವಿಯೂ, ಮಹಾಬಲವುಳ್ಳವನೂ ಆದ ಪುತ್ರನನ್ನು ಬಯಸತ್ತೀಯೋ ಅಂತಹ ಮಗನೇ ಜನಿಸುತ್ತಾನೆ.
ವೈಶಂಪಾಯನಃ
ಭಾರದ್ವಾಜಸ್ಯ ಹಂತಾರಂ ಸೋಽಭಿಸಂಧಾಯ ಭೂಮಿಪಃ |
ಆಜಹ್ರೇಽಯಂ ತಥಾ ಯಜ್ಞಂ ದ್ರುಪದಃ ಕರ್ಮಸಿದ್ಧಯೇ ॥45॥
ರಾಜನು ದ್ರೋಣರನ್ನು ಸಂಹರಿಸುವ ಪುತ್ರನನ್ನು ಸಂಕಲ್ಪಿಸಿ ಆ ಪ್ರಯೋಜನದ ಸಿದ್ಧಿಗಾಗಿ ಅಂತಹ ಯಜ್ಞವನ್ನೇ ಮಾಡಿದನು.
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ಜುಹಾವ ಚ ಯಥಾವಿಧಿ |
ಕೋಕಿಲಾನಾಮತಾಂ ತಸ್ಯ ಚಕ್ರೇ ವೈ ಪುತ್ರಗೃದ್ಧಿನಃ ॥46॥
ದ್ವಿಪದರಲ್ಲಿ ಶ್ರೇಷ್ಠರಾದ ಬ್ರಾಹ್ಮಣರಾದ ಯಾಜರು ಮಗನನ್ನು ಬಯಸುವ ರಾಜನ ಸಲುವಾಗಿ ವಿಧಿವತ್ತಾಗಿ ಯಾಗವನ್ನು ಮಾಡಿ ಆ ಯಾಗವನ್ನು `ಕೋಕಿಲ' ಎಂಬ ಹೆಸರಿನಿಂದ ಕರೆದರು.

ಕೋಗಿಲೆಗಳು ಮೊಟ್ಟೆ ಇಡುತ್ತವೆ. ಆದರೆ ಅವುಗಳನ್ನು ಸಾಕುವುದಿಲ್ಲ. ಕಾಗೆಗಳು ಸಾಕುತ್ತವೆ. ಇಲ್ಲಿಯೂ ಸಹ ಅಗ್ನಿಯಿಂದಲೂ ವೇದಿ ಮಧ್ಯದಿಂದಲೂ ಬಂದ ಮಕ್ಕಳನ್ನು ಅಗ್ನಿಯಾಗಲೀ, ವೇದಿಯಾಗಲೀ ಸಾಕದೇ ದ್ರುಪದನ ಪತ್ನಿಯು ಸಾಕುತ್ತಾಳೆ ಎಂಬ ಭವಿಷ್ಯಜ್ಞಾನದಿಂದ ಯಾಗಕ್ಕೆ ಯಾಜರು ಕೋಕಿಲ ಎಂಬ ಹೆಸರನ್ನು ಇಟ್ಟರು.

ಸೌತ್ರಾಮಣಿಂ ತಾಂ ತು ಪತ್ನೀಂ ತತಃ ಕಾಲೇಽಭ್ಯಧಾತ್ ತದಾ |
ಯಾಜಸ್ತು ಸವನಸ್ಯಾಂತೇ ದೇವೀಮಾಹ್ವಾಪಯತ್ ತದಾ ॥47॥

ಮಣಿಗಳ ಹಾರವನ್ನು ಧರಿಸಿದ್ದ ದ್ರುಪದನ ಪತ್ನಿಯನ್ನು ಹೋಮಾವಸಾನದಲ್ಲಿ ಯಾಜರು ಕರೆದರು.

ಸೌತ್ರಾಮಣಿ ಎಂದರೆ ಮಣಿಗಳ ಮಾಲೆಯನ್ನು ಧರಿಸಿದವಳು ಎಂದೂ ಒಂದು ಅರ್ಥ. ಸೂತ್ರಾಮಣಿ ಯಾಗಕ್ಕೆ ಸಂಬಂಧಿಸಿದುದು ಎಂದೂ ಒಂದು ಅರ್ಥ. ಸೂತ್ರಾಮಣಿ ಯಾಗದಲ್ಲಿ ಮದ್ಯಪಾನವು ಉಕ್ತವಾಗಿದೆ. ದ್ರುಪದನ ಪತ್ನಿಯು ಮದ್ಯಪಾನವನ್ನು ಮಾಡಿ ಮತ್ತಳಾಗಿದ್ದಾಳೆ ಎಂಬ ಸೂಚನೆಯೂ ಇಲ್ಲಿದೆ. ಆದ್ದರಿಂದಲೇ ಅವಳು ಋಷಿಗಳನ್ನು ಕುರಿತು ವಿನಯದಿಂದ ಮಾತನಾಡುವುದಿಲ್ಲ.

ಪ್ರೇಹಿ ಮಾಂ ರಾಜ್ಞಿ ಪೃಷತಿ ಮಿಥುನಂ ತ್ವಾಮುಪಸ್ಥಿತಮ್ |
ಕುಮಾರಶ್ಚ ಕುಮಾರೀ ಚ ಪಿತೃವಂಶವಿವೃದ್ಧಯೇ ॥48॥

ಪೃಷತನ ರಾಣಿಯೇ, ಬೇಗ ನನ್ನ ಬಳಿಗೆ ಬಾ. ಪಿತೃವಂಶ ವಿವರ್ಧನರಾದ ಒಬ್ಬ ಕುಮಾರ ಮತ್ತು ಒಬ್ಬ ಕುಮಾರಿಯು ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ.

ಪೃಷತೀ

ನಾಲಿಪ್ತಂ ವೈ ಮಮ ಮುಖಂ ಪುಣ್ಯಾನ್ ಗಂಧಾನ್ ಬಿಭರ್ಮಿ ಚ |
ನ ಪತ್ನೀ ತೇಽಸ್ತಿ ಸೂತ್ಯರ್ಥಂ ತಿಷ್ಠ ಯಾಜ ಮಮ ಪ್ರಿಯೇ ॥49॥

ನಾನು ನನ್ನ ಮುಖಕ್ಕೆ ಇನ್ನೂ ದ್ರವ್ಯಗಳನ್ನು ಲೇಪಿಸಿಕೊಂಡಿಲ್ಲ. ಸುಗಂಧದ್ರವ್ಯಗಳನ್ನು ಧರಿಸಿಲ್ಲ. ಮಕ್ಕಳನ್ನು ಪಡೆಯುವುದಕ್ಕೋಸ್ಕರ ನನ್ನ ಬಳಿಗೆ ಬಾ ಎಂದು ಕರೆಯುವುದಕ್ಕೆ ನಾನು ನಿನ್ನ ಪತ್ನಿಯಲ್ಲ. ಯಾಜನೇ ಸ್ವಲ್ಪ ಸಮಯ ತಡೆದು ನನಗೆ ಪ್ರಿಯವನ್ನುಂಟು ಮಾಡು.

ಯಾಜಃ

ಯಾಜೇನಾಶ್ರಪಿತಂ ಹವ್ಯಮುಪಯಾಜೇನ ಮಂತ್ರಿತಮ್ |
ಕಥಂ ಕಾಮಂ ನ ಸಂದಧ್ಯಾತ್ ಪೃಷತಿ ಪ್ರೇಹಿ ತಿಷ್ಠ ವಾ ॥50॥

ಯಾಜರು ಸಿದ್ಧಪಡಿಸಿ ಉಪಯಾಜರು ಅಭಿಮಂತ್ರಿಸಿದ ಹವ್ಯ ಪದಾರ್ಥವು ಹೇಗೆ ಅಪೇಕ್ಷಿತ ಫಲವನ್ನು ಕೊಡದೇ ಇದ್ದೀತು? ದ್ರುಪದ ಪತ್ನಿಯೇ ನೀನು ಬೇಕಾದರೆ ಬಾ ಇಲ್ಲದಿದ್ದರೆ, ಬಿಡು.

ವೈಶಂಪಾಯನಃ

ಏವಮುಕ್ತೇ ತು ಯಾಜೇನ ಹುತೇ ಹವಿಷಿ ಸಂಸ್ಕೃತೇ |
ಉತ್ತಸ್ಥೌ ಪಾವಕಾತ್ ತಸ್ಮಾತ್ ಕುಮಾರೋ ದೇವಸಮ್ಮಿತಃ ॥51॥

ಯಾಜರು ಹೀಗೆ ಮಾತನಾಡಿದಾಗ ಸಂಸ್ಕೃತವಾದ ಹವಿಸ್ಸನ್ನು ಅಗ್ನಿಯೊಳಗೆ ಹಾಕಲು ಅಗ್ನಿಕುಂಡದಿಂದ ದೇವಕಾಂತಿಯುಳ್ಳ ಕುಮಾರನು ಹೊರಬಂದನು.

ಜ್ವಾಲಾರೂಪೀ ಘೋರವರ್ಣಃ ಕಿರೀಟೀ ವರ್ಮ ಧಾರಯನ್ |
ವೀರಃ ಸಖಡ್ಗಃ ಸಶರೋ ಧನುಷ್ಮಾನ್ ವಿನದನ್ ಮುಹುಃ ॥52॥

ಜ್ವಾಲಾರೂಪಿಯಾದ ಅವನು ಘೋರವರ್ಣವನ್ನು ಹೊಂದಿ ಕಿರೀಟವನ್ನೂ, ಕವಚವನ್ನೂ ಧರಿಸಿ, ಖಡ್ಗವನ್ನೂ ಮತ್ತು ಬಿಲ್ಲು ಬಾಣಗಳನ್ನೂ ಹಿಡಿದು ಮತ್ತೆ ಮತ್ತೆ ಗರ್ಜಿಸುತ್ತಾ ಧೀರನಾದ ಅವನು ಹೊರಬಂದನು.

ಸೋಽಧ್ಯಾರೋಹದ್ ರಥವರಂ ತೇನ ಚ ಪ್ರಯಯೌ ತದಾ |
ಜಾತಮಾತ್ರೇ ಕುಮಾರೇ ಚ ವಾಕ್ ಕಿಲಾಂತರ್ಹಿತಾಽಬ್ರವೀತ್ ॥53॥

ಅವನು ಆಗಲೇ ಒಂದು ರಥವನ್ನು ಏರಿ ಹೊರಟು ಹೋದನು. ಅವನು ಜನಿಸುತ್ತಿರಲು ಒಂದು ಅಶರೀರವಾಣಿಯಾಯಿತು.

ಏಷ ಶಿಷ್ಯಶ್ಚ ಮೃತ್ಯುಶ್ಚ ಭಾರದ್ವಾಜಸ್ಯ ಧೀಮತಃ |
ಭಯಾಪಹೋ ರಾಜಪುತ್ರಃ ಪಾಂಚಾಲಾನಾಂ ಯಶಸ್ಕರಃ ॥54॥

ಇವನು ಮೇಧಾವಿಗಳಾದ ದ್ರೋಣರಿಗೆ ಶಿಷ್ಯನೂ ಹೌದು, ಮೃತ್ಯುವೂ ಹೌದು. ಪಾಂಚಾಲರಿಗೆ ಯಶಸ್ಸನ್ನು ತರುವ ಈ ರಾಜಕುಮಾರನು ಅವರ ಭಯವನ್ನು ನಿವಾರಿಸುತ್ತಾನೆ.

ರಾಜ್ಞಃ ಶೋಕಾಪಹೋ ಜಾತ ಏಷ ದ್ರೋಣವಧಾಯ ಹಿ |
ಇತ್ಯವೋಚನ್ಮಹದ್ಭೂತಮದೃಶ್ಯಂ ಖೇಚರಂ ತದಾ ॥55॥

ಇವನು ದ್ರುಪದನ ಶೋಕವನ್ನು ಪರಿಹರಿಸಿ, ದ್ರೋಣರ ವಧೆಯನ್ನು ಮಾಡಲು ಜನಿಸಿದ್ದಾನೆ. ಹೀಗೆ ಆಕಾಶಚಾರಿಯಾದ ಒಂದು ಮಹಾಭೂತವು ಅದೃಶ್ಯವಾಗಿ ಹೇಳಿತು.

ದ್ವಿತೀಯಾಯಾಂ ಚ ಹೋತ್ರಾಯಾಂ ಹುತೇ ಹವಿಷಿ ಮಂತ್ರತಃ |
ಕುಮಾರೀ ಚಾಪಿ ಪಾಂಚಾಲೀ ವೇದಿಮಧ್ಯಾತ್ ಸಮುತ್ಥಿತಾ ॥56॥

ಎರಡನೆಯ ಆಹುತಿಯನ್ನು ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮ ಮಾಡಿದಾಗ ವೇದಿಮಧ್ಯದಿಂದ ಕುಮಾರಿ ಪಾಂಚಾಲಿಯು ಎದ್ದು ಬಂದಳು.

ಪ್ರತ್ಯಾಖ್ಯಾತೇ ಪೃಷತ್ಯಾ ಚ ಯಾಜಕೇ ಭರತರ್ಷಭ |
ಪುನಃ ಕುಮಾರೀ ಪಾಂಚಾಲೀ ಸುಭಗಾ ವೇದಿಮಧ್ಯಗಾ ॥57॥

ಅಂತರ್ವೇದ್ಯಾಂ ಸಮುದ್ಭೂತಾ ಕನ್ಯಾ ಸಾ ಸುಮನೋಹರಾ |
ಶ್ಯಾಮಾ ಪದ್ಮಪಲಾಶಾಕ್ಷೀ ನೀಲಕುಂಚಿತಮೂರ್ಧಜಾ ॥58॥
ಭರತಶ್ರೇಷ್ಠನೇ, ದ್ರುಪದಪತ್ನಿಯು ಯಾಜರನ್ನು ಪುನಃ ನಿರಾಕರಿಸಿದ ಮೇಲೆ ಸುಂದರಿಯೂ, ಸೂಕ್ಷ್ಮಕಟಿಯೂ, ಮನೋಹರಳೂ, ಶ್ಯಾಮವರ್ಣದವಳೂ, ಪದ್ಮನೇತ್ರೆಯೂ, ಕಪ್ಪಾದ ಗುಂಗುರುಕೂದಲು ಉಳ್ಳವಳೂ ಆದ ಕನ್ಯೆಯು ವೇದಿಯ ಮಧ್ಯದಿಂದ ಎದ್ದು ಬಂದಳು.
ಮಾನುಷೀ ವಿಗ್ರಹಂ ಕೃತ್ವಾ ಸಾಕ್ಷಾದಮರವರ್ಣಿನೀ |
ನೀಲೋತ್ಪಲಸಮೋ ಗಂಧೋ ಯಸ್ಯಾಃ ಕ್ರೋಶಾತ್ ಪ್ರವಾಯತಿ ॥59॥
ದೇವಲೋಕದ ಸುಂದರಿಯು ಮನುಷ್ಯರೂಪವನ್ನು ಧರಿಸಿ ಬಂದಂತೆ ಅವಳು ಬಂದಳು. ಅವಳ ದೇಹದ ನೀಲೋತ್ಪಲಪುಷ್ಪಗಂಧವು ಒಂದು ಕ್ರೋಶ ದೂರದವರೆಗೂ ಬರುತ್ತಿತ್ತು.
ಯಾ ಬಿಭರ್ತಿ ಪರಂ ರೂಪಂ ಯಸ್ಯಾ ನಾಸ್ತ್ಯುಪಮಾ ಭುವಿ |
ದೇವದಾನವಯಕ್ಷಾಣಾಮೀಪ್ಸಿತಾ ದೇವವರ್ಣಿನೀ ॥60॥
ಅವಳಿಗೆ ಅತ್ಯಂತವಾದ ಸುಂದರ ರೂಪವಿದ್ದಿತು. ದೇವಸುಂದರಿಯಾದ ಅವಳಿಗೆ ಭೂಲೋಕದಲ್ಲಿ ಸಮಾನರಾದ ರೂಪವತಿಯರು ಯಾರೂ ಇರಲಿಲ್ಲ. ಅವಳು ದೇವತೆಗಳಿಗೂ, ದಾನವರಿಗೂ ಮತ್ತು ಯಕ್ಷರಿಗೂ ಸಹ ಅಪೇಕ್ಷಿತಳಾಗಿದ್ದಳು.
ತಾಂ ಸುಜಾತಾಂ ಗುರುಶ್ರೋಣೀಂ ವಾಗುವಾಚಾಶರೀರಿಣೀ |
ಸರ್ವಯೋಷಿದ್ವರಾ ಕೃಷ್ಣಾ ಕ್ಷಯಂ ಕ್ಷತ್ರಂ ನಿನೀಷತಿ ॥61॥
ಅವಳು ಜನಿಸಿದಾಗ ಆ ಸುಂದರಿಯಾದ, ನಿತಂಬಿನಿಯನ್ನು ಕುರಿತು ಅಶರೀರವಾಣಿಯಾಯಿತು. ಇವಳು ಎಲ್ಲಾ ಸ್ತ್ರೀಯರಿಗಿಂತ ಶ್ರೇಷ್ಠಳಾದವಳು. ಕೃಷ್ಣೆಯಾದ ಇವಳು ಕ್ಷತ್ರಿಯಕುಲವನ್ನು ನಾಶಮಾಡುತ್ತಾಳೆ.
ಸುರಕಾರ್ಯಮಿಯಂ ಕಾಲೇ ಕರಿಷ್ಯತಿ ಸುಮಧ್ಯಮಾ |
ತಚ್ಛ್ರುತ್ವಾ ಸರ್ವಪಾಂಚಾಲಾಃ ಪ್ರಣೇದುಃ ಸಿಂಹಸಂಘವತ್ ॥62॥
ನ ಚೈನಾನ್ ಹರ್ಷಸಂಪೂರ್ಣಾನಿಯಂ ಸೇಹೇ ವಸುಂಧರಾ |
ತಥಾ ತು ಮಿಥುನಂ ಜಜ್ಞೇ ದ್ರುಪದಸ್ಯ ಮಹಾತ್ಮನಃ ॥63॥
ಈ ಸುಮಧ್ಯಮಳಾದ ಕನ್ಯೆಯು ಯೋಗ್ಯವಾದ ಕಾಲದಲ್ಲಿ ದೇವತಾಕಾರ್ಯವನ್ನು ಮಾಡುವಳು. ಈ ಶುಭ ಸಮಾಚಾರವನ್ನು ಕೇಳಿದ ಎಲ್ಲಾ ಪಾಂಚಾಲರೂ ಸಿಂಹಗರ್ಜನೆಯನ್ನು ಮಾಡಿದರು. ಭೂಮಿಗೆ ಅವರ ಸಂತೋಷದ ಭಾರವನ್ನು ಹೊರಲು ಸಾಧ್ಯವಾಗಲಿಲ್ಲ.
ಕುಮಾರಶ್ಚ ಕುಮಾರೀ ಚ ಮನೋಜ್ಞೌ ಚ ನರರ್ಷಭ |
ಶ್ರಿಯಾ ಪರಮಯಾ ಯುಕ್ತೌ ಕ್ಷಾತ್ರೇಣ ವಪುಷಾ ತಥಾ ॥64॥
ರಾಜನೇ ಹೀಗೆ ಮಹಾತ್ಮನಾದ ದ್ರುಪದನಿಗೆ ಅವಳಿ ಮಕ್ಕಳಾದ, ಮನೋಹರರಾದ, ಪರಮಕಾಂತಿಯಿಂದ ಕೂಡಿದ ಕ್ಷಾತ್ರತೇಜಸ್ಸಿನಿಂದ ಕೂಡಿದ ಒಬ್ಬ ಕುಮಾರ ಮತ್ತು ಒಬ್ಬ ಕುಮಾರಿಯು ಜನಿಸಿದರು.
ತೌ ದೃಷ್ಟ್ವಾ ಪೃಷತೀ ಯಾಜಂ ಪ್ರಪೇದೇ ಸಾ ಸುತಾರ್ಥಿನೀ |
ನ ಮಾಂ ವಿನಾऽನ್ಯಾಂ ಜನನೀಂ ಜಾನೀಯೇತಾಮಿಮಾವಿತಿ ॥65॥
ಆ ಮಕ್ಕಳನ್ನು ನೋಡಿದ ದ್ರುಪದಪತ್ನಿಯು ಆ ಮಕ್ಕಳ ಮೇಲಿನ ಆಸೆಯಿಂದ ಯಾಜರನ್ನು ಸಮೀಪಿಸಿ, ಪೂಜ್ಯರೇ, ನನ್ನನ್ನು ಬಿಟ್ಟು ಬೇರೆಯವರನ್ನು ಈ ಮಕ್ಕಳು ತಾಯಿ ಎಂದು ಕರೆಯಬಾರದು. ಅಂತಹ ವರವನ್ನು ಕೊಡಿ ಎಂದು ಕೇಳಿದಳು.
ತಥೇತ್ಯುವಾಚ ತಾಂ ಯಾಜೋ ರಾಜ್ಞಃ ಪ್ರಿಯಚಿಕೀರ್ಷಯಾ |
ತಯೋಸ್ತು ನಾಮಾನೀ ಚಕ್ರುರ್ದ್ವಿಜಾಃ ಸಂಪೂರ್ಣಮಾನಸಾಃ ॥66॥
ಯಾಜರು ದ್ರುಪದರಾಜನಿಗೆ ಸಂತೋಷವನ್ನು ಉಂಟು ಮಾಡುವ ಸಲುವಾಗಿ ಹಾಗೆಯೇ ಆಗಲಿ ಎಂದು ಹೇಳಿದರು. ಬ್ರಾಹ್ಮಣರು ಹರ್ಷಪೂರ್ಣವಾದ ಮನಸ್ಸಿನಿಂದ ಆ ಮಕ್ಕಳಿಗೆ ನಾಮಕರಣವನ್ನು ಮಾಡಿದರು.
ಧೃಷ್ಟತ್ವಾದತಿಧೃಷ್ಣುತ್ವಾತ್ ಧರ್ಮಾತ್ ದ್ಯುತ್ಸಂಭವಾದಪಿ |
ಧೃಷ್ಟದ್ಯುಮ್ನಃ ಕುಮಾರೋऽಯಂ ದ್ರುಪದಸ್ಯ ಭವತ್ವಿತಿ ॥67॥
ಸ್ವಯಂ ಧೈರ್ಯಶಾಲಿಯಾದುದರಿಂದಲೂ, ಶತ್ರುನಾಶಕ- ನಾದುದರಿಂದಲೂ ಯಜ್ಞವನ್ನು ಮಾಡಿದ ಪುಣ್ಯದಿಂದ ಕಾಂತಿಯುತನಾದುದರಿಂದಲೂ ದ್ರುಪದನ ಈ ಕುಮಾರನು ಧೃಷ್ಟದ್ಯುಮ್ನ ಎಂದು ಕರೆಯಲ್ಪಡಲಿ.
ಕೃಷ್ಣೇತ್ಯೇವಾಭವತ್ ಕೃಷ್ಣಾ ರಾಜನ್ನೇಷಾ ಚ ಪಾರ್ಷತೀ |
ತಥಾ ತನ್ಮಿಥುನಂ ಜಜ್ಞೇ ದ್ರುಪದಸ್ಯ ಮಹಾಮಖೇ ॥68॥
ವೈದಿಕಾಧ್ಯಯನೇ ಪಾರಂ ಧೃಷ್ಟದ್ಯುಮ್ನೋ ಗತಸ್ತತಃ |
ಧೃಷ್ಟದ್ಯುಮ್ನಂ ತು ಪಾಂಚಾಲ್ಯಮಾನೀಯ ದ್ರುಪದಾತ್ಮಜಮ್ |
ಉಪಾಕರೋದಸ್ತ್ರಹೇತೋರ್ಭಾರದ್ವಾಜಃ ಪ್ರತಾಪವಾನ್ ॥69॥
ರಾಜನೇ, ಕೃಷ್ಣವರ್ಣದವಳಾದ ಈ ದ್ರುಪದನ ಮಗಳು ಕೃಷ್ಣಾ ಎಂದೇ ಕರೆಯಲ್ಪಡಲಿ.
ಹೀಗೆ ದೊಡ್ಡ ಯಾಗದಲ್ಲಿ ದ್ರುಪದನಿಗೆ ಅವಳಿ ಮಕ್ಕಳು ಜನಿಸಿದವು. ಅನಂತರ ಧೃಷ್ಟದ್ಯುಮ್ನನು ವೇದವೈದಿಕಾಧ್ಯಯನದಲ್ಲಿ ಪಾರಂಗತನಾದನು. ಭಾರದ್ವಾಜರ ಪುತ್ರರಾದ, ಪ್ರತಾಪಶಾಲಿಗಳಾದ ದ್ರೋಣರು ದ್ರುಪದನ ಪುತ್ರನಾದ ಧೃಷ್ಟದ್ಯುಮ್ನನನ್ನು ಕರೆಸಿ ಅವನಿಗೂ ಅಸ್ತ್ರವಿದ್ಯೆಯನ್ನು ಕಲಿಸಿದರು.
ಅಮೋಕ್ಷಣೀಯಂ ದೈವಂ ಹಿ ಏವಂ ಮತ್ವಾ ಮಹಾಮತಿಃ |
ಯಥಾವತ್ ಕೃತವಾನ್ ದ್ರೋಣ ಆತ್ಮಕೀರ್ತ್ಯರ್ಥಕಾರಣಾತ್ |

ಸರ್ವಾಸಾಣಿ ಸ ತು ಕ್ಷಿಪ್ರಮಾಪ್ತವಾನ್ ಪರಯಾ ಮುದಾ ॥70॥
ವಿಧಿಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ ಎಂದು ತಿಳಿದ ಮೇಧಾವಿಗಳಾದ ದ್ರೋಣರು ತಮ್ಮ ಕೀರ್ತಿಯನ್ನು ರಕ್ಷಿಸಿಕೊಳ್ಳುವ ಕಾರಣದಿಂದಲೂ ಧೃಷ್ಟದ್ಯುಮ್ನನಿಗೆ ಕ್ರಮಪ್ರಕಾರವಾಗಿ ಎಲ್ಲಾ ಅಸ್ತ್ರವಿದ್ಯೆಯನ್ನೂ ಕಲಿಸಿದರು. ಧೃಷ್ಟದ್ಯುಮ್ನನಾದರೋ ಬಹಳ ಸಂತೋಷದಿಂದ ಶೀಘ್ರವಾಗಿ ಎಲ್ಲಾ ಅಸ್ತ್ರಗಳನ್ನೂ ಸಂಪಾದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ಅಷ್ಟತ್ರಿಂಶ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಷಡಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-11
ಕಾಲೇ ಚ ತಸ್ಮಿನ್ ಪೃಷತೋಽನಪತ್ಯೋ
ವನೇ ತು ಪಾಂಚಾಲ ಪತಿಶ್ಚಚಾರ |
ತಪೋ ಮಹತ್ ತಸ್ಯ ತಥಾ ವರಾಪ್ಸರಾ-
ವಲೋಕನಾತ್ ಸ್ಕಂದಿತಮಾಶು ರೇತಃ ॥67॥
ಅದೇ ಸಮಯದಲ್ಲಿ ಪಾಂಚಾಲದೇಶದ ದೊರೆ ಪೃಷತ ಮಕ್ಕಳಿಲ್ಲದವನಾದ್ದರಿಂದ ಅರಣ್ಯದಲ್ಲಿ ದೊಡ್ಡ ತಪಸ್ಸು ಮಾಡಿದ. ಅವನಿಗೆ ಓರ್ವ ಉತ್ತಮ ಅಪ್ಸರೆಯ ದರ್ಶನದಿಂದ ತಕ್ಷಣ ವೀರ್ಯ ಕೆಳಗೆ ಬಿದ್ದಿತು.
ಸ ತದ್ ವಿಲಜ್ಜಾವಶತಃ ಪದೇನ
ಸಮಾಕ್ರಮತ್ ತಸ್ಯ ಬಭೂವ ಸೂನುಃ |
ಹಹೂ ತು ನಾಮ್ನಾ ಸ ವಿರಿಂಚಗಾಯಕೋ
ನಾಮ್ನಾವಹೋ ಯೋ ಮರುತಾಂ ತದಂಶಯುಕ್ ॥68॥
ಪೃಷತ ನಾಚಿಕೆಯಿಂದ ವೀರ್ಯವನ್ನು ಕಾಲಿಂದ ಮುಚ್ಚಿದ. ಆ ವೀರ್ಯದಿಂದ ಅವನಿಗೆ ಒಬ್ಬ ಮಗ ಜನಿಸಿದ. ಅವನು ವಿಶೇಷವಾಗಿ ಬ್ರಹ್ಮನ ಗಾಯಕ. ಹೆಸರು ಹಹೂ ಎಂದು. ಮರುತ್ತುಗಳಲ್ಲಿ ಒಬ್ಬನಾದ ಆವಹನ ಅಂಶಯುಕ್ತನಾಗಿದ್ದ.
* * * *
ನೂರ ಮೂವತ್ತೊಂಭತ್ತನೆಯ ಅಧ್ಯಾಯ
(ತಪಸ್ಸು ಮಾಡುತ್ತಿದ್ದ ಪಾಂಚಾಲರಾಜನಾದ ಪೃಷತನಿಗೆ ಮೇನಕೆಯ ದರ್ಶನದಿಂದ ದ್ರುಪದನ ಉತ್ಪತ್ತಿ.)
ಜನಮೇಜಯಃ
ದ್ರುಪದಸ್ಯಾಪಿ ಬ್ರಹ್ಮರ್ಷೇ ಶ್ರೋತುಮಿಚ್ಛಾಮಿ ಸಂಭವಮ್ |
ಕಥಂ ಚಾಪಿ ಸಮುತ್ಪನ್ನಃ ಕಥಮಸ್ತ್ರಾಣ್ಯವಾಪ್ತವಾನ್ ॥1॥
ಬ್ರಹ್ಮರ್ಷಿಗಳಾದ ವೈಶಂಪಾಯನರೇ, ನಾನು ದ್ರುಪದನ ಜನ್ಮವನ್ನು ಕೇಳಬಯಸುತ್ತೇನೆ. ಅವನು ಹೇಗೆ ಜನಿಸಿದನು ಮತ್ತು ಹೇಗೆ ಅಸ್ತ್ರಗಳನ್ನು ಪಡೆದನು.
ಏತದಿಚ್ಛಾಮಿ ಭಗವನ್ ತ್ವತ್ತಃ ಶ್ರೋತುಂ ದ್ವಿಜೋತ್ತಮ |
ಕೌತೂಹಲಂ ಜನ್ಮಸು ಮೇ ಕಥ್ಯಮಾನೇಷ್ವತೀವ ಹಿ ॥2॥
ಪೂಜ್ಯರಾದ ಬ್ರಾಹ್ಮಣಶ್ರೇಷ್ಠರೇ, ನಿಮ್ಮಿಂದ ಈ ವಿಷಯವನ್ನು ಕೇಳಲು ಬಯಸುತ್ತೇನೆ. ನೀವು ಇಂತಹ ವಿಚಿತ್ರವಾದ ಜನನಗಳನ್ನು ಹೇಳುತ್ತಿರುವಾಗ ನನಗೆ ಕುತೂಹಲವುಂಟಾಗಿದೆ.
ವೈಶಂಪಾಯನಃ
ರಾಜಾ ಬಭೂವ ಪಾಂಚಾಲಃ ಪುತ್ರಾರ್ಥೀ ಪುತ್ರಕಾರಣಾತ್ |
ವನಂ ಗತೋ ಮಹಾರಾಜ ತಪಸ್ತೇಪೇ ಸುದಾರುಣಮ್ ॥3॥
ಪಾಂಚಾಲದೇಶದಲ್ಲಿ ಪೃಷತನೆಂಬ ರಾಜನಿದ್ದನು. ಎಲೈ ರಾಜನೇ, ಮಗನನ್ನು ಬಯಸಿದ ಅವನು ಮಗನನ್ನು ಪಡೆಯುವ ಕಾರಣಕ್ಕಾಗಿ ಕಾಡಿಗೆ ಹೋಗಿ ಉಗ್ರವಾದ ತಪಸ್ಸನ್ನು ಮಾಡಿದನು.
ಆರಾಧಯನ್ ಪ್ರಯತ್ನೇನ ತಸ್ಯಾಪತ್ಯಸ್ಯ ಕಾರಣಾತ್ |
ತಸ್ಯ ಸಂತಪ್ಯಮಾನಸ್ಯ ವನೇ ಮೃಗಗಣಾಯುತೇ |
ಕಾಲಸ್ತು ಸುಮಹಾನ್ ರಾಜನ್ ವ್ಯತ್ಯಯಾತ್ ಸುತಕಾರಣಾತ್ ॥4॥
ಮಗನನ್ನು ಪಡೆಯುವ ಉದ್ದೇಶದಿಂದ ಮೃಗಸಮೂಹದಿಂದ ಕೂಡಿದ ಕಾಡಿನಲ್ಲಿ ತಪಸ್ಸನ್ನು ಮಾಡುತ್ತಾ ದೇವತೆಗಳನ್ನು ಸಂತೋಷಪಡಿಸುತ್ತಿದ್ದ ಅವನಿಗೆ ಬಹಳ ಕಾಲವು ಕಳೆದುಹೋಯಿತು.
ಸ ತು ರಾಜನ್ ಮಹಾತೇಜಾಃ ತಪಸ್ತೀವ್ರಂ ಸಮಾದದೇ |
ಕಂಚಿತ್ಕಾಲಂ ವಾಯುಭಕ್ಷೋ ನಿರಾಹಾರಸ್ತಥೈವ ಚ ॥5॥
ರಾಜನೇ, ಮಹಾತೇಜಸ್ವಿಯಾದ ಅವನು ತೀವ್ರವಾದ ತಪಸ್ಸನ್ನು ಪ್ರಾರಂಭಿಸಿ ಸ್ವಲ್ಪಕಾಲ ವಾಯುಭಕ್ಷನಾಗಿಯೂ, ಅನಂತರ ನಿರಾಹಾರನಾಗಿಯೂ ಉಗ್ರವಾದ ತಪಸ್ಸನ್ನು ಮಾಡಿದನು.
ತಸ್ಯೈವಂ ಸುಮಹಾಬಾಹೋರ್ವರ್ತಮಾನಸ್ಯ ಭಾರತ |
ದಶವರ್ಷಸಹಸ್ರಾಂತೇ ತದ್ವನೇ ಸಮಭೂನ್ನೃಪ |

ವಸಂತಃ ಸುಖದಃ ಕಾಲಃ ಸ ತು ಕಾಮಪ್ರದೀಪನಃ ॥6॥
ಭಾರತನೇ, ಹೀಗೆ ಮಹಾ ತಪಸ್ಸಿನಲ್ಲಿ ಅವನು ನಿರತನಾಗಿರುತ್ತಿರಲು ಆ ಕಾಡಿನಲ್ಲಿ ಹತ್ತು ಸಾವಿರ ವರ್ಷಗಳು ಕಳೆದ ಮೇಲೆ ಒಮ್ಮೆ ಕಾಮೋದ್ದೀಪಕವಾದ ಸುಖಕರವಾದ ವಸಂತಕಾಲವು ಬಂದಿತು.
ಫುಲ್ಲಾಶೋಕವನೇ ಚೈವ ಪ್ರಾಣಿನಾಂ ಸುಮನೋರಮೇ |
ನದ್ಯಾಸ್ತೀರಮಥೋ ಗತ್ವಾ ಗಂಗಾಯಾಃ ಪದ್ಮಲೋಚನಃ |
ನಿಯಮಸ್ವಶ್ಚ ರಾಜಾऽऽಸೀತ್ ತಥಾ ಭರತಸತ್ತಮ ॥7॥
ಎಲೈ ಭರತಶ್ರೇಷ್ಠನೇ, ಅರಳಿದ ಅಶೋಕವನದಲ್ಲಿ ಮನೋಹರವಾದ ಗಂಗೆಯ ತೀರದಲ್ಲಿ ಕಮಲನಯನನಾದ ಆ ರಾಜನು ಹೋಗಿ ನಿಯಮಗಳನ್ನು ಸ್ವೀಕರಿಸಿ ತಪಸ್ಸನ್ನು ಮಾಡಿದನು.
ತತೋ ನಾತಿಚಿರಾತ್ ಕಾಲಾದ್ ವನಂ ತನ್ಮನುಜೇಶ್ವರ |
ಸಂಪ್ರಾಪ್ತಾ ಹ್ಯಪ್ಸರಾ ರಾಜನ್ ಮೇನಕೇತ್ಯಭಿವಿಶ್ರುತಾ ॥8॥
ಮನುಜೇಶ್ವರನೇ, ಅನಂತರ ಅಲ್ಪಕಾಲದಲ್ಲಿ ಅಲ್ಲಿಗೆ ಮೇನಕೆ ಎಂದು ಪ್ರಖ್ಯಾತಳಾದ ಅಪ್ಸರೆಯು ಬಂದಳು.
ನದ್ಯಾಸ್ತೀರೇ ಚರಂತೀ ವೈ ಕ್ರೀಡಂತೀ ಚ ಪುನಃ ಪುನಃ |
ತಸ್ಯಾಂ ಚ ವಿಲಪಂತ್ಯಾಂ ವೈ ರಾಜ್ಞೋ ದರ್ಶನಮಾಗತಾ |
ದದರ್ಶ ಸಾ ತು ರಾಜನಂ ತಥಾ ಸ್ಥಾನಗತಂ ನೃಪಃ ॥9॥
ಅವಳು ನದಿಯ ತೀರದಲ್ಲಿ ತಿರುಗಾಡುತ್ತಾ ಮತ್ತೆ ಮತ್ತೆ ಆಟವಾಡುತ್ತಿರುವಾಗ ಅವಳು ರಾಜನ ದೃಷ್ಟಿಗೆ ಬಿದ್ದಳು. ಅವಳೂ ಸಹ ಆ ಸ್ಥಾನದಲ್ಲಿ ತಪಸ್ಸು ಮಾಡುತ್ತಿರುವ ರಾಜನನ್ನು ನೋಡಿದಳು.
ದೃಷ್ಟ್ವಾ ಚಾಪ್ಸರಸಂ ತಾಂ ತು ಶುಕ್ರಂ ರಾಜ್ಞೋಽಪತದ್ ಭುವಿ |
ತಚ್ಚ ರಾಜಾ ತು ರಾಜೇಂದ್ರ ಲಜ್ಜಯಾ ನೃಪತಿಃ ಸ್ವಯಮ್ ॥10॥
ಪದ್ಭ್ಯಾಮಾಕ್ರಮದಾಯುಷ್ಮಂಸ್ತಸ್ಮಾತ್ ತು ದ್ರುಪದೋಽಭವತ್ |
ತತಸ್ತು ತಸ್ಯ ತಪಸಾ ರಾಜರ್ಷೇರ್ಭಾವಿತಾತ್ಮನಃ ॥11॥
ಅವಳನ್ನು ನೋಡಿದ ರಾಜನಿಗೆ ವೀರ್ಯಸ್ಖಲನವಾಗಿ ಅದು ಭೂಮಿಯ ಮೇಲೆ ಬಿದ್ದಿತು. ರಾಜೇಂದ್ರನೇ, ಆ ರಾಜನು ನಾಚಿಕೆಯಿಂದ ಅದನ್ನು ಕಾಲುಗಳಿಂದ ತುಳಿದನು. ಆಯುಷ್ಮಂತನೇ, ಅದರಿಂದ ದ್ರುಪದನು ಜನಿಸಿದನು.
ಪುತ್ರಃ ಸಮಭವದ್ ರಾಜ್ಞಃ ಪಾದಾತ್ ತಸ್ಯಾಂತರೇಣ ತು |
ತೇ ತಸ್ಯ ಋಷಯಃ ಸರ್ವೇ ಸಮಾಗಮ್ಯ ತಪೋಧನಾಃ ॥12॥
ತಪಸ್ಸಿನಿಂದ ಮನಶುದ್ಧಿಯನ್ನು ಪಡೆದಿದ್ದ ಮನಸ್ಸಿನಿಂದ ಯುಕ್ತನಾದ ರಾಜನು ಕಾಲಿನಿಂದ ತನ್ನ ವೀರ್ಯವನ್ನು ತುಳಿಯುತ್ತಿರಲು ಬೆರಳುಗಳ ಸಂದಿಯಿಂದ ಕುಮಾರನು ಜನಿಸಿದನು.
ನಾಮ ಚಕ್ರುರ್ಹಿ ವಿದ್ವಾಂಸೋ ದ್ರುಪದೋಽಸಿತ್ವತಿ ಭೂಮಿಪ |
ಎಲೈ ರಾಜನೇ, ಅಲ್ಲಿಗೆ ತಪೋಧನರಾದ ಎಲ್ಲಾ ಋಷಿಗಳೂ ಬಂದು ಜ್ಞಾನಿಗಳಾದ ಅವರು ಅವನು ಕಾಲಿನಿಂದ ಹುಟ್ಟಿಬಂದ ಕಾರಣದಿಂದ ಅವನನ್ನು ದ್ರುಪದ ಎಂದು ಕರೆದರು.
ಸ ತಸ್ಯೈವಾಶ್ರಮೇ ರಾಜನ್ ಭರದ್ವಾಜಸ್ಯ ಭಾರತ |
ವವೃಧೇ ಚ ಸುಖಂ ತತ್ರ ಕಾಮ್ಯೈಃ ಸರ್ವೈರ್ನೃಪೋತ್ತಮ ॥14॥
ರಾಜಶ್ರೇಷ್ಠನೇ, ದ್ರುಪದನು ಅಲ್ಲಿಯೇ ಭರದ್ವಾಜರ ಆಶ್ರಮದಲ್ಲಿ ಎಲ್ಲಾ ಸುಖಗಳಿಂದಲೂ ಎಲ್ಲಾ ಕಾಮ್ಯ ಪದಾರ್ಥಗಳಿಂದಲೂ ಬೆಳೆದನು.
ಪಾಂಚಾಲೋಽಪಿ ಹಿ ರಾಜೇಂದ್ರ ಸ್ವರಾಜ್ಯಂ ಗತವಾನ್ ಪ್ರಭುಃ |
ಭರದ್ವಾಜಾಯ ಶಿಷ್ಯಾರ್ಥಂ ಸುತಂ ದತ್ವಾ ಮಹಾತ್ಮನೇ |
ಸ ಕುಮಾರಸ್ತತೋ ರಾಜನ್ ದ್ರೋಣೇನ ಸಹಿತೋ ವನೇ ॥15॥
ಪೃಷತನು ಮಹಾತ್ಮರಾದ ಭರದ್ವಾಜರ ವಶಕ್ಕೆ ತನ್ನ ಪುತ್ರನನ್ನು ಶಿಷ್ಯನನ್ನಾಗಿ ಕೊಟ್ಟು ತಾನಾದರೋ ತನ್ನ ಸ್ವದೇಶವಾದ ಪಾಂಚಾಲದೇಶಕ್ಕೆ ಹಿಂತಿರುಗಿದನು.
ವೇದಾಂಶ್ಚಾಧಿಜಗೇ ಸಾಂಗಾನ್ ಧನುರ್ವೇದಂ ಚ ಭಾರತ |
ಪರಯಾ ಚ ಮುದಾ ಯುಕ್ತೋ ವಿಚಚಾರ ವನೇ ಸುಖಮ್ ॥16॥
ರಾಜನೇ, ಭಾರತಶ್ರೇಷ್ಠನೇ, ಆ ಕುಮಾರನಾದರೋ ಅಲ್ಲಿಯೇ ಕಾಡಿನಲ್ಲಿ ದ್ರೋಣರ ಜೊತೆಯಲ್ಲಿ ಸಾಂಗವೇದಾಧ್ಯಯನವನ್ನು ಮಾಡಿದನು. ಧನುರ್ವೇದವನ್ನೂ ಕಲಿತನು. ಆ ಕಾಡಿನಲ್ಲಿ ಬಹಳ ಸಂತೋಷದಿಂದ ಯುಕ್ತನಾಗಿ ತಿರುಗಾಡಿದನು.
ತಸ್ಯೈವಂ ವರ್ತಮಾನಸ್ಯ ವನೇ ವನಚರೈಃ ಸಹ |
ಕಾಲಾನ್ನಾತಿಚಿರಾದ್ ರಾಜನ್ ಪಿತಾ ಸ್ವರ್ಗಮುಪೇಯಿವಾನ್ ॥17॥
ರಾಜನೇ, ಅವನು ಹೀಗೆ ಕಾಡಿನಲ್ಲಿ ವನಚರರ ಜೊತೆಯಲ್ಲಿ ತಿರುಗುತ್ತಿರುವಾಗ ಅಲ್ಪಕಾಲದಲ್ಲಿಯೇ ಅವನ ತಂದೆಯು ಮೃತನಾದನು.
ಸ ಸಮಾಗಮ್ಯ ಪಾಂಚಾಲ್ಯೈಃ ಪಾಂಚಾಲೇಷ್ವಭಿಷೇಚಿತಃ |
ಪ್ರಾಪ್ತಶ್ಚ ರಾಜ್ಯಂ ರಾಜೇಂದ್ರ ಸುಹೃದಾಂ ಪ್ರೀತಿವರ್ಧನಃ ॥18॥
ಪ್ರಜಾ ರರಕ್ಷ ಧರ್ಮೇಣ ಯಥಾ ಚೇಂದ್ರಸ್ತ್ರಿವಿಷ್ಟಪೇ |
ಏತನ್ಮಯಾ ತೇ ರಾಜೇಂದ್ರ ಯಥಾವತ್ ಪರಿಕೀರ್ತಿತಮ್ |
ದ್ರುಪದಸ್ಯ ಜನ್ಮ ರಾಜರ್ಷೇರ್ಧೃಷ್ಟದ್ಯುಮ್ನಸ್ಯ ಚೈವ ಹಿ ॥19॥

ರಾಜೇಂದ್ರನೇ, ಅವನು ಪಾಂಚಾಲದೇಶಕ್ಕೆ ಹಿಂದಿರುಗಿ ಪ್ರಜೆಗಳಿಂದ ಮತ್ತು ಮಂತ್ರಿಗಳಿಂದ ಅಭಿಷೇಕ ಮಾಡಲ್ಪಟ್ಟು ರಾಜ್ಯವನ್ನು ಪಡೆದು ಎಲ್ಲಾ ಪ್ರಜೆಗಳಿಗೂ ಸಂತೋಷವನ್ನುಂಟು ಮಾಡುತ್ತಾ ಇಂದ್ರನು ಸ್ವರ್ಗವನ್ನು ಆಳಿದಂತೆ ಧರ್ಮದಿಂದ ಪ್ರಜೆಗಳನ್ನು ಪಾಲಿಸಿದನು. ರಾಜೇಂದ್ರನೇ, ನಾನು ನಿನಗೆ ರಾಜರ್ಷಿಯಾದ ದ್ರುಪದನ ಮತ್ತು ಧೃಷ್ಟದ್ಯುಮ್ನನ ಜನನವನ್ನು ಯಥಾವತ್ತಾಗಿ ತಿಳಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಚತ್ವಾರಿಂಶ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಮೂವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-18
ಭೀಮಾರ್ಜುನಾಭ್ಯಾಂ ಬದ್ಧಂ ತಂ ಶ್ರುತ್ವಾ ಪಾಂಚಾಲಭೂಪತಿಮ್ |
ಪ್ರಾಹಿಣೋತ್ ಕೃತವರ್ಮಾಣಂ ಪಾಂಡವಾನಾಂ ಜನಾರ್ದನಃ ॥158॥
ಪಾಂಡವೇಷ್ವತುಲಾಂ ಪ್ರೀತಿಂ ಲೋಕೇ ಖ್ಯಾಪಯಿತುಂ ಪ್ರಭುಃ ॥159॥
ದ್ರುಪದರಾಜ ಭೀಮಾರ್ಜುನರಿಂದ ಬಂಧಿತನಾದುದನ್ನು ಕೇಳಿ ಪ್ರಭು ಶ್ರೀಕೃಷ್ಣ ಪಾಂಡವರ ಬಳಿಗೆ ಕೃತವರ್ಮನನ್ನು ಕಳಿಸಿಕೊಟ್ಟ. ಇದು ತನಗೆ ಪಾಂಡವರಲ್ಲಿ ಅನುಪಮವಾದ ಪ್ರೀತಿ ಇದೆ ಎಂಬುದನ್ನು ಲೋಕದಲ್ಲಿ ಖ್ಯಾತವಾಗುವಂತೆ ಮಾಡುವುದಕ್ಕಾಗಿ.
ಸಮ್ಮಾನ್ಯ ಪಾಂಡವಾನ್ ಸೋಽಪಿ ಶೂರಾನುಜ ಸುತಾಸುತಃ |
ತೈರ್ಮಾನಿತಃ ಕೃಷ್ಣಭಕ್ತ್ಯಾ ಭ್ರಾತೃತ್ವಾಚ್ಚ ಹರಿಂ ಯಯೌ ॥160॥
ಕೃತವರ್ಮ ಪಾಂಡವರನ್ನು ಸನ್ಮಾನಿಸಿದ. ಅವನು ಶೂರಸೇನ ರಾಜನ ತಮ್ಮನ ಮಗಳ ಮಗ. ಪಾಂಡವರಿಗೆ ಸೋದರ. ಈ ಕಾರಣದಿಂದಲೂ ಕೃಷ್ಣನ ಮೇಲಿನ ಭಕ್ತಿಭಾವದಿಂದಲೂ ಪಾಂಡವರು ಅವನನ್ನು ಸತ್ಕರಿಸಿದರು. ಬಳಿಕ ಅವನು ಕೃಷ್ಣನ ಬಳಿಗೆ ಹಿಂತಿರುಗಿದ.
ತತಃ ಪ್ರಭೃತಿ ಸಂತ್ಯಜ್ಯ ದೇವಪಕ್ಷಾ ಜರಾಸುತಮ್ |
ಪಾಂಡವಾನಾಶ್ರಿತಾ ಭೂಪಾ ಜ್ಞಾತ್ವಾಭೈಮಾರ್ಜುನಂ ಬಲಮ್ |
ವಿಶೇಷತಶ್ಚ ಕೃಷ್ಣಸ್ಯ ವಿಜ್ಞಾಯ ಸ್ನೇಹಮೇಷು ಹಿ ॥161॥
ಪರಾಜಿತಾಶ್ಚ ಬಹುಶಃ ಕೃಷ್ಣೇನಾಚಿಂತ್ಯ ಕರ್ಮಣಾ ॥162॥
ಪ್ರತಾಪಾದೇವ ತೇ ಪೂರ್ವಂ ಜರಾಸಂಧವಶಂ ಗತಾಃ ॥163॥
ನ ಸ್ನೇಹಾತ್ ತದ್ ಬಲಂ ಜ್ಞಾತ್ವಾ ಪಾರ್ಥಾನಾಂ ಕೇಶವಸ್ಯ ಚ |
ಜನ್ಮಾಂತರಾಭ್ಯಾಸವಶಾತ್ ಸ್ನಿಗ್ಧಾಃ ಕೃಷ್ಣೇ ಚ ಪಾಂಡುಷು
ಜರಾಸಂಧ ಭಯಂ ತ್ಯಕತ್ವ ತಾನೇವ ಚ ಸಮಾಶ್ರಿತಾಃ ॥164॥
ಅಂದಿನಿಂದ ದೇವತೆಗಳ ಪಕ್ಷದವರಾದ ರಾಜರುಗಳು ಭೀಮಾರ್ಜುನರ ಬಲವನ್ನು ಕಂಡು ಮತ್ತು ವಿಶೇಷವಾಗಿ ಪಾಂಡವರಲ್ಲಿ ಕೃಷ್ಣನಿಗೆ ಪ್ರೀತಿ ಇರುವುದನ್ನು ಕಂಡು ಜರಾಸಂಧನನ್ನು ತೊರೆದು ಪಾಂಡವರನ್ನು ಆಶ್ರಯಿಸಿದರು. ಅವರೆಲ್ಲರೂ ಹಿಂದೆ ಅನೇಕ ಬಾರಿ ಅಚಿಂತ್ಯಕಾರ್ಯಗಳನ್ನು ಮಾಡುವ ಕೃಷ್ಣನಿಂದ ಪರಾಜಿತರಾಗಿದ್ದರು. ಆದರೂ ಜರಾಸಂಧನ ಪ್ರತಾಪಕ್ಕೆ ಹೆದರಿಯೇ ಅವನ ವಶದಲ್ಲಿದ್ದರು, ಪ್ರೀತಿಯಿಂದಲ್ಲ. ಜನ್ಮಾಂತರ ಸಂಸ್ಕಾರದಿಂದ ಕೃಷ್ಣನಲ್ಲಿಯೂ ಪಾಂಡವರಲ್ಲಿಯೂ ಪ್ರೀತಿಯುಕ್ತರಾಗಿಯೇ ಇದ್ದ ಅವರು ಈಗ ಪಾಂಡವರ ಮತ್ತು ಕೃಷ್ಣನ ಬಲವನ್ನು ಅರಿತ ಮೇಲೆ ಜರಾಸಂಧನ ಭಯವನ್ನು ತೊರೆದು ಅವರನ್ನೇ ಆಶ್ರಯಿಸಿದರು.
ಅಪಿ ತಂ ಬಹುಶಃ ಕೃಷ್ಣವಿಜಿತಂ ನೈವ ತತ್ಯಜುಃ |
ಆಸುರಾಃ ಪೂರ್ವಸಂಸ್ಕಾರಾತ್ ಸಂಸ್ಕಾರೋ ಬಲವಾನ್ ಯತಃ ॥165॥
ಜರಾಸಂಧ ಅನೇಕ ಬಾರಿ ಕೃಷ್ಣನಿಂದ ಪರಾಜಿತನಾಗಿದ್ದರೂ ಅಸುರರು ಪೂರ್ವಜನ್ಮ ಸಂಸ್ಕಾರದಿಂದಲೆ ಅವನನ್ನು ಬಿಡಲಿಲ್ಲ. ಏಕೆಂದರೆ ಸಂಸ್ಕಾರ ಬಲವತ್ತಾಗಿರುತ್ತದೆ.
ದೇವಾ ಹಿ ಕಾರಣಾದನ್ಯಾನಾಶ್ರಯಂತೋಽಪಿ ನಾಂತರಮ್ |
ಸ್ನೇಹಂ ತ್ಯಜಂತಿ ದೇವೇಷು ತಥಾನ್ಯೇಷ್ವಪಿ ಚ ಸ್ಫುಟಮ್ ॥166॥
ದೇವತೆಗಳು ಕಾರಣಾಂತರದಿಂದ ಅಸುರರನ್ನು ಆಶ್ರಯಿಸಿದರೂ ದೇವತೆಗಳಲ್ಲಿ ಅಂತರಂಗದ ಸ್ನೇಹವನ್ನು ಬಿಡಲಾರರು. ಹಾಗೇ ಅಸುರರೂ ಅಸುರರ ಮೇಲಿನ ಸ್ನೇಹವನ್ನು ಬಿಡಲಾರರು.
ಧೃತರಾಷ್ಟ್ರೋ ಬಲಂ ಜ್ಞಾತ್ವಾ ಬಹುಶೋ ಭೀಮಪಾರ್ಥಯೋಃ |
ದೈವತ್ವಾಚ್ಚ ಸ್ವಭಾವೇನ ಜ್ಯೇಷ್ಠತ್ವಾದ್ ಧರ್ಮಜಸ್ಯ ಚ |
ಸುಪ್ರೀತ ಏವ ತಂ ಚಕ್ರೇ ಯೌವರಾಜ್ಯೇಽಭಿಷೇಕಿಣಮ್ ॥167॥
ಧೃತರಾಷ್ಟ್ರ ಭೀಮಾರ್ಜುನರ ಬಲವನ್ನು ಅನೇಕ ಪ್ರಸಂಗಗಳಲ್ಲಿ ಅರಿತುಕೊಂಡು, ಸ್ವತಃ ದೇವತೆಯಾದ್ದರಿಂದ ಸ್ವಭಾವದಿಂದಲೂ, ಧರ್ಮರಾಜ ಮಕ್ಕಳಲ್ಲಿ ಹಿರಿಯನಾದ್ದರಿಂದಲೂ ಪ್ರೀತಿಪೂರ್ವಕವಾಗಿಯೇ ಅವನನ್ನು ಯುವರಾಜ ಪದವಿಯಲ್ಲಿ ಅಭಿಷೇಕ ಮಾಡಿದ.
ಭೀಮಾರ್ಜುನಾವಥೋ ಜಿತ್ವಾ ಸರ್ವದಿಕ್ಷು ಚ ಭೂಪತೀನ್ |

ಚಕ್ರತುಃ ಕರದಾನ್ ಸರ್ವಾನ್ ಧೃತರಾಷ್ಟ್ರಸ್ಯ ದುರ್ಜಯೌ ॥168॥
ಬಳಿಕ ಯಾರಿಗೂ ಸೋಲದಿದ್ದ ಭೀಮಾರ್ಜುನರು ಎಲ್ಲ ದಿಕ್ಕುಗಳಲ್ಲಿ ರಾಜರನ್ನು ಗೆದ್ದು ಅವರು ಧೃತರಾಷ್ಟ್ರನಿಗೆ ಕಪ್ಪ ಕೊಡುವಂತೆ ಮಾಡಿದರು.
ತಯೋಃ ಪ್ರೀತೋಽಭವತ್ ಸೋಽಪಿ ಪೌರಜಾನಪದಾಸ್ತಥಾ |
ಭೀಷ್ಮದ್ರೋಣ ಮುಖಾಃ ಸರ್ವೇಪ್ಯತಿಮಾನುಷ ಕರ್ಮಣಾ ॥169॥
ಭೀಮಾರ್ಜುನರ ಅತಿಮಾನುಷ ಕರ್ಮದಿಂದ ಧೃತರಾಷ್ಟ್ರ ಸಂತುಷ್ಟನಾದ. ಎಲ್ಲ ನಾಗರಿಕರೂ ದೇಶವಾಸಿಗಳೂ ಭೀಷ್ಮ ದ್ರೋಣಾದಿಗಳೂ ಸಂತುಷ್ಟರಾದರು.
* * * *
ನೂರ ನಲವತ್ತನೆಯ ಅಧ್ಯಾಯ
(ಯುಧಿಷ್ಠಿರನಿಗೆ ಯೌವರಾಜ್ಯಾಭಿಷೇಕ, ಬಲರಾಮನಲ್ಲಿ ಭೀಮಸೇನನ ಗದಾಭ್ಯಾಸ, ದ್ರೋಣರಿಂದ ಅರ್ಜುನನಿಗೆ ಬ್ರಹ್ಮಶಿರ ಅಸ್ತ್ರಪ್ರಾಪ್ತಿ. ಭೀಮಾರ್ಜುನ ವಿಜಯ, ದುರ್ಯೋಧನನ ಅಸೂಯೆ, ಧೃತರಾಷ್ಟ್ರನ ಬುದ್ಧಿಭೇದ)
ವೈಶಂಪಾಯನಃ
ಧೃತರಾಷ್ಟ್ರಸ್ತು ರಾಜೇಂದ್ರ ಯದಾ ಪೌರವನಂದನಃ |
ಯುಧಿಷ್ಠಿರಮಜಾನಾದ್ ವೈ ಸಮರ್ಥಂ ರಾಜ್ಯರಕ್ಷಣೇ ॥1॥
ಯೌವರಾಜ್ಯಾಭಿಷೇಕಾರ್ಥಮಮಂತ್ರಯತ ಮಂತ್ರಿಭಿಃ |
ತೇ ತು ಬುದ್ಧ್ವಾಽನ್ವತಪ್ಯಂತ ಧೃತರಾಷ್ಟ್ರಾತ್ಮಜಾಸ್ತದಾ ॥2॥
ರಾಜೇಂದ್ರನೇ, ಧೃತರಾಷ್ಟ್ರನು ಪೌರವನಂದನನಾದ ಯುಧಿಷ್ಠಿರನು ರಾಜ್ಯ ರಕ್ಷಣೆಯಲ್ಲಿ ಸಮರ್ಥನಾಗಿದ್ದಾನೆಂದು ತಿಳಿದ ಕೂಡಲೇ, ಅವನಿಗೆ ಯೌವರಾಜ್ಯದಲ್ಲಿ ಅಭಿಷೇಕ ಮಾಡಲು ಮಂತ್ರಿಗಳ ಜೊತೆಯಲ್ಲಿ ಸಮಾಲೋಚನೆಯನ್ನು ಮಾಡಿದನು. ಆಗ ಅದನ್ನು ತಿಳಿದ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳು ಅನುತಾಪಪಟ್ಟರು.
ತತಃ ಸಂವತ್ಸರಸ್ಯಾಂತೇ ಪಾಂಡುಪುತ್ರೋ ಮಹಾಯಶಾಃ |
ಸ್ಥಾಪಿತೋ ಧೃತರಾಷ್ಟ್ರೇಣ ಯೌವರಾಜ್ಯೇ ಯುಧಿಷ್ಠಿರಃ ॥3॥
ಅನಂತರ ಒಂದು ವರ್ಷವು ಕಳೆದ ಮೇಲೆ ಧೃತರಾಷ್ಟ್ರನು ಪಾಂಡು ಪುತ್ರನಾದ ಮಹಾಕೀರ್ತಿವಂತನಾದ ಯುಧಿಷ್ಠಿರನಿಗೆ ಯೌವರಾಜ್ಯದಲ್ಲಿ ಅಭಿಷೇಕ ಮಾಡಿ ಸ್ಥಾಪಿಸಿದನು.
ಅದೀರ್ಘೇಣ ಚ ಕಾಲೇನ ಕುಂತೀಪುತ್ರೋ ಯುಧಿಷ್ಠಿರಃ |
ಪಿತ್ರ್ಯಾಮಂತರ್ದಧೇ ಕೀರ್ತಿಂ ಶೀಲವೃತ್ತಸಮಾಧಿಭಿಃ ॥4॥
ಕುಂತೀಪುತ್ರನಾದ ಯುಧಿಷ್ಠಿರನು ಅಲ್ಪಕಾಲದಲ್ಲಿಯೇ ತನ್ನ ಶೀಲ, ವೃತ್ತ ಮತ್ತು ಶಾಂತಸ್ವಭಾವಗಳಿಂದ ತಂದೆಯ ಕೀರ್ತಿಯನ್ನು ಮೀರಿಸಿದನು.
ಅಸಿಯುದ್ಧೇ ರಣೋದ್ಯಾನೇ ಬಾಹುಯುದ್ಧೇ ಚ ಪಾಂಡವಃ |
ಸಂಕರ್ಷಣಾತ್ಶಿಕ್ಷಿತವಾನ್ ಶಶ್ವಚ್ಛಿಕ್ಷಾಂ ವೃಕೋದರಃ |
ತೇ ತಂ ಬುದ್ಧ್ವಾಽನ್ವತಪ್ಯಂತ ಧೃತರಾಷ್ಟ್ರಾತ್ಮಜಾಸ್ತದಾ ॥5॥
ಪಾಂಡುಪುತ್ರನಾದ ವೃಕೋದರನು ಬಲರಾಮನ ಬಳಿಯಲ್ಲಿ ಖಡ್ಗಯುದ್ಧದಲ್ಲಿ, ಯುದ್ಧದಲ್ಲಿ ಮುನ್ನುಗ್ಗುವುದನ್ನೂ, ಬಾಹುಯುದ್ಧವನ್ನೂ ಸತತವಾಗಿ ಅಭ್ಯಾಸ ಮಾಡಿದನು. ಅದನ್ನು ತಿಳಿದ ದುರ್ಯೋಧನಾದಿಗಳು ಅನುತಾಪವನ್ನು ಪಟ್ಟರು.
ಸಮಾಪ್ತವಿದ್ಯಃ ಸೋಽಭ್ಯಸ್ಯ ದ್ಯುಮತ್ಸೇನಸಮೋ ಬಲೇ |
ತತಃ ಸಂವತ್ಸರಸ್ಯಾಂತೇ ಪಾಂಡುಪುತ್ರೋ ಮಹಾಯಶಾಃ |
ಗದಾಬಲಾಭ್ಯಾಂ ಸಂಪನ್ನೋ ಭ್ರಾತೄಣಾಮಚರದ್ ವಶೇ ॥6॥
ವಿದ್ಯಾಭ್ಯಾಸವನ್ನು ಮುಗಿಸಿ ಬಲದಲ್ಲಿ ದ್ಯುಮತ್ಸೇನನಿಗೆ ಸಮನಾದ ಮಹಾಕೀರ್ತಿವಂತನಾದ ಪಾಂಡುಪುತ್ರನಾದ ವೃಕೋದರನು ಒಂದು ವರ್ಷದ ನಂತರ ಗದಾವಿದ್ಯೆಯಿಂದಲೂ, ಬಲದಿಂದಲೂ ಸಂಪನ್ನನಾಗಿ ಹಿಂದಿರುಗಿ ಅಣ್ಣಂದಿರ ವಶದಲ್ಲಿದ್ದನು.
ಪ್ರಗಾಢದೃಢಮುಷ್ಟಿತ್ವೇ ಲಾಘವೇ ಚಾತಿವೇಧನೇ |
ಲಕ್ಷವೇಧ್ಯೇ ಚ ಮೋಕ್ಷೇ ಚ ತೋಮರಗ್ರಹಣೇಽಪಿ ಚ ॥7॥
ಅಸಿಶಕ್ತಿಗದಾಯುದ್ಧೇ ಬಭೂವಾಪ್ರತಿಮೋಽರ್ಜುನಃ |
ಕ್ಷುರನಾರಾಚಭಲ್ಲಾನಾಂ ವಿಪಾಠಾನಾಂ ಸುತೇಜಸಾಮ್ ॥8॥
ಅರ್ಜುನನು ಧನುಸ್ಸನ್ನು ಗಾಢವಾಗಿ ಮತ್ತು ದೃಢವಾಗಿ ಹಿಡಿಯುವುದರಲ್ಲಿಯೂ, ವೇಗದಲ್ಲಿಯೂ, ಲಕ್ಷ್ಯವನ್ನು ಭೇದಿಸುವುದರಲ್ಲಿಯೂ, ಲಕ್ಷ್ಯವನ್ನು ತಿಳಿಯುವುದರಲ್ಲಿಯೂ, ಬಾಣವನ್ನು ಪ್ರಯೋಗಮಾಡುವುದರಲ್ಲಿಯೂ, ತೋಮರವನ್ನು ಹಿಡಿಯುವುದರಲ್ಲಿಯೂ, ಖಡ್ಗ, ಶಕ್ತಿ ಮತ್ತು ಗದಾಯುದ್ಧಗಳಲ್ಲಿಯೂ ಅಪ್ರತಿಮನಾದನು.
ಋಜುವಕ್ರವಿಶಾಲಾನಾಂ ಪ್ರಯೋಕ್ತಾ ಪಾಂಡವೋಽಭವತ್ |
ಲಾಘವಾತ್ ಸೌಷ್ಠವಾಚ್ಚೈವ ನಾನ್ಯಃ ಕಶ್ಚಿತ್ತು ವಿದ್ಯತೇ ॥9॥
ಬೀಭತ್ಸುಸದೃಶೋ ಲೋಕ ಇತಿ ದ್ರೋಣೋಽಭ್ಯಭಾಷತ |
ಗಜಯುದ್ಧೇಽಶ್ವಯುದ್ಧೇ ಚ ರಥಯುದ್ಧೇ ಚ ಪಾಂಡವಃ ॥10॥
ಕ್ಷುರ (ಅಂದರೆ ಸಣ್ಣ ಚಾಕುಗಳು), ಭಲ್ಲಗಳು ತೀಕ್ಷ್ಣವಾದ, ನೇರವಾದ, ವಕ್ರವಾದ ಬಾಣಗಳು ಮತ್ತು ವಿಶಾಲವಾದ ವಿಪಾಠಗಳು, ಇವುಗಳನ್ನೆಲ್ಲಾ ಪ್ರಯೋಗಿಸುವುದನ್ನು ಅರ್ಜುನನು ಕಲಿತನು. ಲಾಘವದಲ್ಲಿಯೂ ಮತ್ತು ಸೌಷ್ಠವದಲ್ಲಿಯೂ ಅರ್ಜುನನಿಗೆ

ಸಮಾನನಾದವನು ಲೋಕದಲ್ಲಿ ಯಾರೂ ಇಲ್ಲ ಎಂದು ದ್ರೋಣರು ಹೇಳಿದರು.
ಪಾರಗೋ ಭುಜಯುದ್ಧೇ ಚ ಬಭೂವೈಷ ಧನಂಜಯಃ ॥11॥
ಪಾಂಡು ಪುತ್ರನಾದ ಧನಂಜಯನು ಅಶ್ವಯುದ್ಧದಲ್ಲಿಯೂ, ಗಜಯುದ್ಧದಲ್ಲಿಯೂ, ರಥಯುದ್ಧದಲ್ಲಿಯೂ ಮತ್ತು ಭುಜಯುದ್ಧದಲ್ಲಿಯೂ ಪಾರಂಗತನಾದನು.
ಸ್ವಭಾವಾದಗಮಚ್ಚಬ್ದೋ ಮಹೀಂ ಸಾಗರಮೇಖಲಾಮ್ |
ನಾಸ್ತ್ಯರ್ಜುನಸಮಃ ಕಶ್ಚಿದಿತ್ಯೇವಂ ಮೇನಿರೇ ಜನಾಃ ॥12॥
ಅವನ ಕೀರ್ತಿಯು ಸ್ವಾಭಾವಿಕವಾಗಿ ಸಾಗರ ಪರ್ಯಂತವಾದ ಭೂಮಿಯಲ್ಲಿ ಹರಡಿತು. ಜನರು ಅರ್ಜುನನಿಗೆ ಸಮಾನರಾದವರು ಯಾರೂ ಇಲ್ಲ ಎಂದು ತಿಳಿದರು.
ಅಥಾಬ್ರುವೀತ್ ತದಾ ದ್ರೋಣಃ ಫಲ್ಗುನಂ ಜನಸಂಸದಿ |
ಅಗಸ್ತ್ಯಸ್ಯ ಧನುರ್ವೇದೇ ಶಿಷ್ಯೋ ಮಮ ಗುರುಃ ಸದಾ |
ಅಗ್ನಿವೇಶ್ಯ ಇತಿ ಖ್ಯಾತಸ್ತಸ್ಯ ಶಿಷ್ಯೋಽಸ್ಮಿ ಭಾರತ ॥13॥
ಆಗ ದ್ರೋಣರು ಜನರ ಸಭೆಯಲ್ಲಿ ಅರ್ಜುನನನ್ನು ಉದ್ದೇಶಿಸಿ ಹೀಗೆ ಮಾತನಾಡಿದರು. ಎಲೈ ಭರತಕುಲೋತ್ತಮನೇ, ನನ್ನ ಗುರುಗಳಾದ ಪ್ರಖ್ಯಾತರಾದ ಅಗ್ನಿವೇಶ್ಯರು ಧನುರ್ವೇದದಲ್ಲಿ ಅಗಸ್ತ್ಯರ ಶಿಷ್ಯರು. ನಾನು ಅಗ್ನಿವೇಶ್ಯರ ಶಿಷ್ಯ.
ತೀರ್ಥಾತ್ ತೀರ್ಥಗತಂ ಪಾರ್ಥ ಮಯಾ ಸಂಕ್ರಮಿತಂ ತ್ವಯಿ |
ತಪಸೇದಂ ಮಯಾ ಪ್ರಾಪ್ತಮಮೋಘಮಶನಿಪ್ರಭಮ್ |
ಅಸ್ತ್ರಂ ಬ್ರಹ್ಮಶಿರೋ ನಾಮ ಯದ್ ದಹೇತ್ ಪೃಥಿವೀಮಪಿ ॥14॥
ಗುರುಗಳಿಂದ ಗುರುಗಳಿಗೆ ಬಂದ ವಿದ್ಯೆಯನ್ನು ನಾನು ನಿನಗೆ ಕೊಡುತ್ತಿದ್ದೇನೆ. ನಾನು ಬ್ರಹ್ಮಶಿರ ಎಂಬ ಸಿಡಿಲಿನಂತಿರುವ ಈ ಅಮೋಘವಾದ ಅಸ್ತ್ರವನ್ನು ತಪಸ್ಸು ಮಾಡಿ ಪಡೆದಿದ್ದೇನೆ. ಈ ಅಸ್ತ್ರವು ಭೂಮಿಯನ್ನೇ ಸುಡಬಹುದು.
ದದತಾ ಚಾಸ್ಮಿ ಸಂದಿಷ್ಟೋ ನ ಮನುಷ್ಯೇಷ್ವಿದಂ ತ್ವಯಾ |
ಭಾರದ್ವಾಜ ಪ್ರಮೋಕ್ತವ್ಯಮಸ್ತ್ರಂ ಸಂಯುಗಮೂರ್ಧನಿ ॥15॥
ಅಸ್ತ್ರವನ್ನು ಕೊಡುವಾಗ ಗುರುಗಳು ಭಾರದ್ವಾಜನೇ, ಈ ಅಸ್ತ್ರವನ್ನು ಮನುಷ್ಯರ ಮೇಲೆ ಪ್ರಯೋಗಿಸಬಾರದು. ಘೋರವಾದ ಯುದ್ಧದಲ್ಲಿ ಮಾತ್ರ ಪ್ರಯೋಗಿಸಬೇಕು ಎಂದು ಸಂದೇಶವನ್ನು ನೀಡಿದರು.
ಯದ್ಯದಂತರ್ಹಿತಂ ಭೂತಂ ಕಿಂಚಿದ್ ಯುದ್ಧೇ ತ್ವಯಾ ಸಹ |
ಮಹಾತೇಜಸ್ತದೇತೇನ ಹನ್ಯಾಃ ಶಸ್ತ್ರೇಣ ಸಂಯುಗೇ |
ಅವಾಪ್ಯಂ ಚ ತ್ವಯಾ ವೀರ ದಿವ್ಯಂ ನಾನ್ಯಸ್ತದರ್ಹತಿ ॥16॥
ಯುದ್ಧದಲ್ಲಿ ಮಹಾತೇಜಸ್ವಿಯಾದ ಭೂತವು ಅಂತರ್ಧಾನವನ್ನು ಹೊಂದಿ ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ಆಗ ಮಾತ್ರ ಈ ಅಸ್ತ್ರವನ್ನು ಪ್ರಯೋಗಿಸಬೇಕು. ಈ ಅಸ್ತ್ರವನ್ನು ನೀನು ಅವಶ್ಯವಾಗಿ ಪಡೆಯಬೇಕು. ಎಲೈ ವೀರನೇ, ನಿನ್ನನ್ನು ಬಿಟ್ಟು ಬೇರೆ ಯಾರೂ ಸಹ ಈ ದಿವ್ಯವಾದ ಅಸ್ತ್ರವನ್ನು ಪಡೆಯಲು ಅರ್ಹರಲ್ಲ.
ಯುದ್ಧೇ ಹಿ ಪ್ರತಿಯೋದ್ಧವ್ಯೋ ಯುಧ್ಯಮಾನೇನ ಸಂಯುಗೇ |
ಸಮಯಶ್ಚ ರಕ್ಷ್ಯೋ ಬಲವಾನ್ ಈದೃಶೋ ಹಿ ವಿಶಾಂಪತೇ ॥17॥
ರಾಜನೇ, ಯುದ್ಧದಲ್ಲಿ ನಿನ್ನ ಜೊತೆಯಲ್ಲಿ ಯುದ್ಧ ಮಾಡುತ್ತಿರುವವನ ಮೇಲೆ ಮಾತ್ರ ನೀನು ಈ ಅಸ್ತ್ರವನ್ನು ಪ್ರಯೋಗಿಸಬೇಕು. ಇಂತಹ ಪ್ರಬಲವಾದ ನಿಯಮವನ್ನು ನೀನು ಯಾವಾಗಲೂ ಪಾಲಿಸಬೇಕು.
ಆಚಾರ್ಯದಕ್ಷಿಣಾಂ ದೇಹಿ ಜ್ಞಾತಿಗ್ರಾಮಸ್ಯ ಪಶ್ಯತಃ |
ದದಾಮೀತಿ ಪ್ರತಿಜ್ಞಾತೇ ಫಲ್ಗುನೇನಾಬ್ರವೀದ್ ಗುರುಃ |
ಯುದ್ಧೇ ಹಿ ಪ್ರತಿಯೋದ್ಧವ್ಯೋ ಯುಧ್ಯಮಾನೋಽಪ್ಯಹಂ ರಣೇ ॥
ನಿನ್ನ ಬಂಧುಗಳೆಲ್ಲರೂ ನೋಡುತ್ತಿರುವಂತೆ ನೀನು ಗುರುದಕ್ಷಿಣೆಯನ್ನು ಕೊಡು (ಎಂದು ಹೇಳಿದರು). ಅರ್ಜುನನು ``ಕೊಡುತ್ತೇನೆ'' ಎಂದು ಪ್ರತಿಜ್ಞೆ ಮಾಡಿದ ಮೇಲೆ ಗುರುಗಳಾದ ದ್ರೋಣರು ಅವನನ್ನು ಕುರಿತು ``ಯುದ್ಧದಲ್ಲಿ ನಿನಗೆ ಎದುರಾಗಿ ನಾನೇ ಯುದ್ಧ ಮಾಡಿದರೂ ಸಹ ನೀನು ನನ್ನ ಜೊತೆಯಲ್ಲಿ ಯುದ್ಧಮಾಡಬೇಕು''ಎಂದು ಹೇಳಿದರು.
ತತ್ ತಥೇತಿ ಪ್ರತಿಜ್ಞಾಯ ದ್ರೋಣಾಯ ಕುರುಪುಂಗವಃ |
ಉಪಸಂಗೃಹ್ಯ ಚರಣೌ ಯುಧಿಷ್ಠಿರವಶೋಽಭವತ್ |
ಉದ್ಧವಾತ್ ಸಕಲಾಂ ನೀತಿಂ ಭೋಜಾದ್ ಬುದ್ಧಿಮತಾಂ ವರಾತ್॥
ಗದಾಯುದ್ಧೇಽಸಿಯುದ್ಧೇ ಚ ರಥಯುದ್ಧೇ ಚ ಭಾರತ |
ದಿವ್ಯಮಾನುಷಸಂಭೂತಾನ್ ಅವಾಪಾಸ್ತ್ರವಿದಾಂ ವರಃ ॥20॥
ಕುರುಶ್ರೇಷ್ಠನಾದ ಅರ್ಜುನನು ``ಹಾಗೆಯೇ ಮಾಡುತ್ತೇನೆ'' ಎಂದು ದ್ರೋಣರಿಗೆ ಪ್ರತಿಜ್ಞೆಯನ್ನು ಮಾಡಿ ಅವರ ಪಾದಗಳನ್ನು ಹಿಡಿದು ನಮಸ್ಕರಿಸಿ ಯುಧಿಷ್ಠಿರನ ವಶವಾದನು. ಅಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಅರ್ಜುನನು ಭೋಜವಂಶದಲ್ಲಿ ಜನಿಸಿದ ಮೇಧಾವಿಗಳಲ್ಲಿ ಶ್ರೇಷ್ಠನಾದ ಉದ್ಧವನಿಂದ ಸಮಗ್ರವಾದ ನೀತಿಶಾಸ್ತ್ರವನ್ನೂ, ಗದಾಯುದ್ಧದಲ್ಲಿ, ಖಡ್ಗಯುದ್ಧದಲ್ಲಿ ಮತ್ತು ರಥಯುದ್ಧದಲ್ಲಿ ಉಪಯೋಗಿಸುವ, ದೇವಲೋಕದ ಮತ್ತು ಮನುಷ್ಯಲೋಕದ ಎಲ್ಲಾ ಅಸ್ತ್ರಗಳನ್ನೂ ಸಂಗ್ರಹಿಸಿದನು.
ಸರ್ವಾಂಸ್ತಥಾಽಖಿಲಾನಸತತ್ರನ್ ಶಸತತ್ರಣಿ ಚ ತಥಾ ಗುರೋಃ |
ಸರ್ವಾಂ ತಾಮಖಿಲಾಂ ನೀತಿಂ ಪಾತಾಲಾಧಿಪತೇಸ್ತಥಾ ॥21॥
ಹಾಗೆಯೇ ಅರ್ಜುನನು ಗುರುಗಳಾದ ದ್ರೋಣರಿಂದಲೂ

ಪಾತಾಲಾಧಿಪತಿಯಾದ ಶೇಷನ ಅವತಾರವಾದ ಬಲರಾಮರಿಂದಲೂ ಎಲ್ಲಾ ಅಸ್ತ್ರಶಸ್ತ್ರಗಳನ್ನೂ ಮತ್ತು ಸಮಗ್ರವಾದ ನೀತಿಯನ್ನೂ ಸಂಗ್ರಹಿಸಿದನು.
ಅಸ್ತ್ರೇ ಶಸ್ತ್ರೇ ಚ ಶಾಸ್ತ್ರೇ ಚ ರಥನಾಗಾಶ್ವಕರ್ಮಣಿ |
ಅವಾಪ್ಯ ಸಹದೇವೋऽಪಿ ಭ್ರಾತೄಣಾಮಚರದ್ ವಶೇ ॥22॥
ಸಹದೇವನೂ ಸಹ ದ್ರೋಣರಿಂದ ಅಸ್ತ್ರಗಳನ್ನೂ, ಶಸ್ತ್ರಗಳನ್ನೂ, ಶಾಸ್ತ್ರಗಳನ್ನೂ, ರಥ, ಗಜ, ಅಶ್ವ ಯುದ್ಧಗಳ ಪ್ರಬೇಧಗಳನ್ನೂ ಸಂಪಾದಿಸಿ ಸಹೋದರರ ವಶದಲ್ಲಿದ್ದನು.
ದ್ರೋಣೇನೈವಂ ವಿನೀತಶ್ಚ ಭ್ರಾತೄಣಾಂ ನಕುಲಃ ಪ್ರಿಯಃ |
ಚಿತ್ರಯೋಧೀ ಸಮಾಜ್ಞಾತೋ ಬಭೂವಾಸ್ತ್ರವಿಶಾರದಃ ॥23॥
ಹಾಗೆಯೇ ದ್ರೋಣರಿಂದ ಶಿಕ್ಷಿತನಾದ ವಿನಯಶೀಲನಾದ ಭ್ರಾತೃಪ್ರಿಯನಾದ ನಕುಲನೂ ಚಿತ್ರಯೋಧಿ ಎಂದು ಪ್ರಸಿದ್ಧನಾಗಿ ಅಸ್ತ್ರವಿಶಾರದನಾದನು.
ತ್ರಿವರ್ಷಕೃತಯತ್ನೈಸ್ತು ಗಾಂಧಾರಾಣಾಮುಪಪ್ಲವೇ |
ಅರ್ಜುನಪ್ರಮುಖ್ಯೈಃ ಪಾರ್ಥೈಃ ಸೌವೀರಾಃ ಸಮರೇ ಹತಾಃ ॥24॥
ಮೂರುವರ್ಷ ಪ್ರಯತ್ನವನ್ನು ಮಾಡಿ ಅರ್ಜುನ ಮೊದಲಾದ ಪಾಂಡವರು ಗಾಂಧಾರದೇಶದ ಉಪಪ್ಲವ ನಗರದಲ್ಲಿ ಸೌವೀರ ರಾಜರನ್ನು ಯುದ್ಧದಲ್ಲಿ ಸಂಹರಿಸಿದರು.
ನ ಶಶಾಕ ವಶೇ ಕರ್ತುಂ ಯಂ ಪಾಂಡುರಪಿ ವೀರ್ಯವಾನ್ |
ಸೋऽರ್ಜುನೇನ ವಶಂ ನೀತೋ ಸ ರಾಜಾ ಯವನಾಧಿಪಃ ॥25॥
ಯಾವ ಸೌವೀರಾಧಿಪತಿಯಾದ ಯವನನನ್ನು ಪರಾಕ್ರಮಶಾಲಿಯಾದ ಪಾಂಡುವು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲವೋ ಅಂತಹ ಯವನ ರಾಜನನ್ನು ಅರ್ಜುನನು ವಶಪಡಿಸಿಕೊಂಡನು.
ಅತೀವ ಬಲಸಮ್ಮತ್ತಸ್ತ್ವತಿಮಾನೀ ಕುರೂನ್ ಪ್ರತಿ |
ಕುಂತಲೋ ನಾಮ ಸೌವೀರೋ ದಾಂತಃ ಪಾರ್ಥೇನ ಧೀಮತಾ ॥26॥
ತನ್ನ ಬಲದಿಂದ ಮತ್ತನಾದ, ಕುರುಗಳನ್ನು ನೋಡಿ ಬಹಳ ಗರ್ವವನ್ನು ಪಡುತ್ತಿದ್ದ ಸೌವೀರ ದೇಶದ ರಾಜನಾದ ಕುಂತಲನು ಮೇಧಾವಿಯಾದ ಅರ್ಜುನನಿಂದ ಸೋಲಿಸಲ್ಪಟ್ಟನು.
ದಂತವಕ್ರೇತಿ ವಿಖ್ಯಾತಂ ಪುರಂ ಪಾರ್ಥಸ್ಯ ತೇಜಸಾ |
ಸುಮಿತ್ರಂ ನಾಮ ಸೌವೀರಮರ್ಜುನೋऽದಮಯನ್ಮೃಧೇ ॥27॥
ದಂತವಕ್ರ ಎಂಬ ಪ್ರಖ್ಯಾತವಾದ ಪಟ್ಟಣದಲ್ಲಿದ್ದ ಸುಮಿತ್ರನೆಂಬ ಸೌವೀರರಾಜನನ್ನು ಅರ್ಜುನನು ತನ್ನ ಪರಾಕ್ರಮದಿಂದ ಯುದ್ಧದಲ್ಲಿ ಸೋಲಿಸಿದನು.
ಭೀಮಸೇನಸಹಾಯಶ್ಚ ಸರಥೋ ಮರುಧನ್ವಸು |
ಪ್ರತೀಚ್ಯಾಂ ಸಮರೇ ರಾಜನ್ ಜಿಗಾಯ ಭರತರ್ಷಭಃ ॥28॥
ಆ ಭರತಶ್ರೇಷ್ಠನಾದ ಅರ್ಜುನನು ಭೀಮಸೇನನ ಜೊತೆಯಲ್ಲಿ ರಥವನ್ನು ತೆಗೆದುಕೊಂಡು ಪಶ್ಚಿಮ ದಿಕ್ಕಿಗೆ ಹೋಗಿ ಮರುಭೂಮಿಯಲ್ಲಿದ್ದ ರಾಜರುಗಳನ್ನು ಗೆದ್ದನು.
ಅರ್ಜುನಃ ಸಮರೇ ಪ್ರಾಚ್ಯಾನ್ ಸರ್ವಾನೇಕರಥೋऽಜಯತ್ |
ತಥೈವೈಕರಥೋ ಭೂತ್ವಾ ದಾಕ್ಷಿಣಾತ್ಯಾನ್ ನರಾಧಿಪಾನ್ |
ಧನೌಘಂ ಪ್ರಾಪಯಾಮಾಸ ಕುರುರಾಷ್ಟ್ರಂ ಧನಂಜಯಃ ॥29॥
ಅರ್ಜುನನು ಏಕರಥದಿಂದ ಹೊರಟು ಪೂರ್ವದಿಕ್ಕಿನ ಎಲ್ಲಾ ರಾಜರುಗಳನ್ನೂ ಹಾಗೆಯೇ ದಕ್ಷಿಣ ದಿಕ್ಕಿನ ಎಲ್ಲಾ ರಾಜರುಗಳನ್ನೂ ಗೆದ್ದು ನಿಜವಾಗಿ ಧನಂಜಯನಾಗಿ ಧನದ ರಾಶಿಯನ್ನು ಕುರುರಾಷ್ಟ್ರಕ್ಕೆ ತಲುಪಿಸಿದನು.
ಅತಃ ಪಂಚದಶೇ ವರ್ಷೇ ಸರ್ವಮೇತಚ್ಚಕಾರ ಸಃ |
ತಂ ದೃಷ್ಟ್ವಾ ಧಾರ್ತರಾಷ್ಟ್ರಾಣಾಂ ತತೋ ಭಯಮಜಾಯತ |
ಸ ಸರ್ವಾನ್ ಧೃತರಾಷ್ಟ್ರಸ್ಯ ಪುತ್ರಾನ್ ವಿಪ್ರಚಕಾರ ಹ ॥30॥
ಕಾಡಿನಿಂದ ಹಸ್ತಿನಪುರಕ್ಕೆ ಬಂದ ಹದಿನೈದನೆಯ ವರ್ಷದಲ್ಲಿ ಅರ್ಜುನನು ಎಲ್ಲವನ್ನೂ ಸಾಧಿಸಿದನು. ಇದನ್ನು ನೋಡಿ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳಿಗೆ ಭಯವುಂಟಾಯಿತು.
ಭೀಮಸೇನೋ ಮಹಾಬಾಹುರ್ಬಲಾದ್ ಬಲವತಾಂ ವರಃ |
ಅದುಷ್ಟಭಾವಂ ತಂ ದೋಷೈರ್ಜಗೃಹುರ್ದುಷ್ಟಬುದ್ಧಯಃ ॥31॥
ಮಹಾಬಾಹುವಾದ ಬಲಿಷ್ಠರಲ್ಲಿ ಶ್ರೇಷ್ಠರಾದ ಭೀಮಸೇನನು ತನ್ನ ಬಲದಿಂದ ಧೃತರಾಷ್ಟ್ರನ ಎಲ್ಲಾ ಮಕ್ಕಳನ್ನೂ ಪೀಡಿಸುತ್ತಿದ್ದನು. ದುಷ್ಟಭಾವವಿಲ್ಲದೇ ವಿನೋದಕ್ಕಾಗಿ ಹಾಗೆ ಮಾಡುತ್ತಿದ್ದ ಭೀಮನನ್ನು ನೋಡಿ ದುಷ್ಟಬುದ್ಧಿಯುಳ್ಳ ದುರ್ಯೋಧನಾದಿಗಳು ಅವನಲ್ಲಿ ದೋಷವನ್ನೇ ಗ್ರಹಿಸಿದರು.
ಧಾರ್ತರಾಷ್ಟ್ರಾಸ್ತಥಾ ಸರ್ವೇ ಭಯಾದ್ ಭೀಮಸ್ಯ ಕರ್ಮಣಃ |
ತಾನ್ ದೃಷ್ಟ್ವಾ ಕರ್ಮಭಿಃ ಪಾರ್ಥಾನ್ ಸರ್ವಾನಹತಲಕ್ಷಣಾನ್ ॥
ಬಲಾದ್ ಬಾಹುಬಲಾತ್ತೇಭ್ಯೋ ಬಿಭಿಯುರ್ದುಷ್ಟಬುದ್ಧಯಃ |
ತತೋ ಬಲಮಭಿಖ್ಯಾತಂ ವಿಜ್ಞಾಯ ದೃಢಧನ್ವಿನಾಮ್ |
ದೂಷಿತಃ ಸಹಸಾ ಭಾವೋ ಧೃತರಾಷ್ಟ್ರಸ್ಯ ಪಾಂಡುಷು ॥33॥

ದುಷ್ಟಬುದ್ಧಿಯುಳ್ಳ ಧೃತರಾಷ್ಟ್ರನ ಪುತ್ರರೆಲ್ಲರೂ ಭೀಮನ ಕರ್ಮಗಳನ್ನು ನೋಡಿ ಹೆದರಿ ನಿರ್ದುಷ್ಟವಾದ ಲಕ್ಷಣಗಳನ್ನು ಹೊಂದಿದ್ದ ಎಲ್ಲಾ ಪಾಂಡವರ ಕರ್ಮಗಳನ್ನು ನೋಡಿ ಅವರ ಅಸ್ತ್ರಬಲದ ನಿಮಿತ್ತದಿಂದಲೂ, ಬಾಹುಬಲದ ನಿಮಿತ್ತದಿಂದಲೂ ಅವರಿಗೆ ಹೆದರಿದರು. ದೃಢಧನ್ವಿಗಳಾದ ಪಾಂಡವರ ಪ್ರಖ್ಯಾತವಾದ ಬಲವನ್ನು ತಿಳಿದ ಧೃತರಾಷ್ಟ್ರನಿಗೆ ಪಾಂಡವರ ವಿಷಯದಲ್ಲಿ ಮನಸ್ಸು ಕೆಟ್ಟು ಹೋಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಅಷ್ಟಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರನಲವತ್ತನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಸಂಪೂರ್ಣದುರ್ಮತಿರಥೋ ಧೃತರಾಷ್ಟ್ರಸೂನು-
ಸ್ತಾತಪ್ಯಮಾನಹೃದಯೋ ನಿಖಿಲಾನ್ಯಹಾನಿ |
ದೃಷ್ಟ್ವಾ ಶ್ರಿಯಂ ಪರಮಿಕಾಂ ವಿಜಯಂ ಚ ಪಾರ್ಥೇ-
ಷ್ವಾಹೇದಮೇತ್ಯ ಪಿತರಂ ಸಹ ಸೌಬಲೇನ ॥5॥
ಹೀಗೆ ದುಶ್ಶಾಸ್ತ್ರದಲ್ಲಿ ಸರ್ವಜ್ಞನೆನಿಸಿದ ದುರ್ಯೋಧನ ಪಾಂಡವರಲ್ಲಿ ಪರಮೈಶ್ವರ್ಯವನ್ನೂ ವಿಜಯವನ್ನೂ ಕಂಡು ದಿನವಿಡೀ ಎದೆಯೊಳಗೆ ಬೇಯುತ್ತ ಶಕುನಿಯೊಂದಿಗೆ ಧೃತರಾಷ್ಟ್ರನ ಬಳಿಗೆ ಬಂದು ನುಡಿದ.
ಜ್ಯೇಷ್ಠಸ್ಯ ತೇಽಪಿ ಹಿ ವಯಂ ಹೃದಯಪ್ರಜಾತಾ
ನಾರ್ಹತ್ವಮೇವ ಗಮಿತಾ ಭವತೈವ ರಾಜ್ಯೇ |
ಭ್ರಾತುಃ ಕನೀಯಸ ಉತಾಪಿ ಹಿ ದಾರಜಾತಾ
ಅನ್ಯೈಶ್ಚ ರಾಜ್ಯಪದವೀಂ ಭವತೈವ ನೀತಾಃ ॥6॥
ಹಿರಿಯನಾದ ನಿನಗೆ ಔರಸಪುತ್ರರು ನಾವು. ಆದರೆ ನೀನೆ ನಮ್ಮನ್ನು ರಾಜ್ಯಾರ್ಹರನ್ನಾಗಿ ಮಾಡದೆ ಹೋದೆ. ಕಿರಿಯ ಸೋದರನಿಗೆ ಅದರಲ್ಲಿಯೂ ಅವನ ಹೆಂಡತಿಯಲ್ಲಿ ಬೇರೆಯವರಿಗೆ ಹುಟ್ಟಿದವರು ಪಾಂಡವರು ಅವರಿಗೆ ರಾಜ್ಯಪದವಿಯನ್ನು ನೀನೆ ಕೊಟ್ಟೆ.
ರಾಜ್ಯಂ ಮಹಚ್ಚ ಸಮವಾಪ್ಸ್ಯತಿ ಧರ್ಮಸೂನು-
ಸ್ತ್ವತ್ತೋಽಥ ವಾನುಜಬಲಾತ್ ಪ್ರಸಭಂ ವಯಂ ತು |
ದಾಸಾ ಭವೇಮ ನಿಜತಂತುಭಿರೇವ ಸಾಕಂ
ಕುಂತೀಸುತಸ್ಯ ಪರತೋಽಪಿ ತದನ್ವಯಸ್ಯ ॥7॥
ಮುಂದೆ ಧರ್ಮರಾಜನೆ ನಿನ್ನಿಂದಾಗಲಿ ತಮ್ಮಂದಿರ ಬಲದಿಂದಾಗಲಿ ಈ ದೊಡ್ಡ ರಾಜ್ಯವನ್ನು ಬಲಾತ್ಕಾರವಾಗಿ ಹೊಂದುವನು. ಆಗ ನಾವು ಅವನಿಗೆ ದಾಸರಾಗಬೇಕಾಗುತ್ತದೆ. ನಮ್ಮ ಸಂತತಿಯವರೂ ಮುಂದೆ ಅವನ ಸಂತತಿಯವರಿಗೆ ದಾಸರೇ ಆಗಬೇಕಾಗುತ್ತದೆ.
ನಾತ್ಮಾರ್ಥಮಸ್ತಿ ಮಮ ದುಃಖಮಥಾತಿಶುದ್ಧ-
ಲೋಕಪ್ರಸಿದ್ಧಯಶಸಸ್ತವ ಕೀರ್ತಿನಾಶಃ |
ಅಸ್ಮನ್ನಿಮಿತ್ತ ಇತಿ ದುಃಖಮತೋ ಹಿ ಸರ್ವೇಽ-
ಪೀಚ್ಛಾಮ ಮರ್ತುಮಥ ನಃ ಕುರು ಚಾಪ್ಯನುಜ್ಞಾಂ ॥8॥
ನನಗಾಗಿ ನಾನೇನೂ ದುಃಖಿಸುವುದಿಲ್ಲ. ಅತಿನಿರ್ಮಲವಾದ ಲೋಕಪ್ರಸಿದ್ಧವಾದ ಯಶಸ್ಸುಳ್ಳ ನಿನ್ನ ಈ ಕೀರ್ತಿ ನಮ್ಮ ನಿಮಿತ್ತವಾಗಿ ಹಾಳಾಗುವುದೆಂದು ದುಃಖ. ಅದರಿಂದ ನಾವೆಲ್ಲರೂ ಸಾಯಲು ಹೊರಟಿರುವೆವು. ಅದಕ್ಕೆ ನಮಗೆ ಅನುಜ್ಞೆ ನೀಡು.
ಏವಂ ಸ್ವ ಪುತ್ರವಚನಂ ಸ ನಿಶಮ್ಯ ರಾಜಾ
ಪ್ರೋವಾಚ ನಾನುಗುಣಮೇತದಹೋ ಮನಸ್ತೇ |
ಕೋ ನಾಮ ಪಾಂಡುತನಯೇಷು ಗುಣೋತ್ತಮೇಷು
ಪ್ರೀತಿಂ ನ ಯಾತಿ ನಿಜವೀರ್ಯ ಭವೋಚ್ಚಯೇಷು ॥9॥
ತನ್ನ ಮಗನ ಈ ಮಾತನ್ನು ಕೇಳಿ ರಾಜಾ ಧೃತರಾಷ್ಟ್ರ ನುಡಿದ- `ಪಾಂಡವರ ಬಗ್ಗೆ ನೀನು ಈ ರೀತಿ ಮನಸ್ಸಿನಲ್ಲಿ ಆಲೋಚಿಸುವುದು ಸರಿಯಲ್ಲ. ಉತ್ತಮ ಗುಣದವರಾಗಿದ್ದು ಸ್ವಂತ ಪರಾಕ್ರಮದಿಂದ ಉನ್ನತಿ ಹೊಂದುತ್ತಿರುವ ಪಾಂಡವರಲ್ಲಿ ಯಾರು ತಾನೆ ಪ್ರೀತಿ ಹೊಂದದಿರಲಾರರು?
ತೇ ಹಿ ಸ್ವಬಾಹುಬಲತೋಽಖಿಲಭೂಪಭೂತಿಂ
ಮಯ್ಯಾಕೃಷಂತಿ ನ ಚ ವಃ ಪ್ರತಿಷೇಧಕಾಸ್ತೇ |
ತಸ್ಮಾಚ್ಛಮಂ ವ್ರಜ ಶುಭಾಯ ಕುಲಸ್ಯ ತಾತ
ಕ್ಷೇಮಾಯ ನೋ ಭವತಿ ವೋ ಬಲವದ್ವಿರೋಧಃ ॥10॥
ಪಾಂಡವರು ತಮ್ಮ ಬಾಹುಬಲದಿಂದ ಎಲ್ಲ ರಾಜರುಗಳ ಸಂಪತ್ತನ್ನೂ ನನ್ನ ಬಳಿಗೆ ಸೆಳೆದು ತಂದುಕೊಡುವರು. ನಿಮಗೂ ಅವರು ವಿರೋಧಿಗಳಲ್ಲ. ಅದರಿಂದ ಮಗು, ನೀನು ಅವರ ಬಗ್ಗೆ ಶಾಂತಚಿತ್ತನಾಗಿರು. ಅದರಿಂದ ಒಳ್ಳೆಯದಾಗುತ್ತದೆ. ಮತ್ತು ಬಲಿಷ್ಠರಾದ ಅವರೊಡನೆ ನೀವು ವಿರೋಧ ಕಟ್ಟಿಕೊಂಡರೆ ಕುಲಕ್ಕೆ ಕ್ಷೇಮವಾಗದು.
ಏವಂ ಬ್ರುವತ್ಯಪಿ ನೃಪೇ ಪುನರಾಹ ಪಾಪ
ಆಶ್ರಿತ್ಯ ಸೌಬಲಮತಂ ಯದಿ ನೈವ ಪಾರ್ಥಾನ್ |
ಅನ್ಯತ್ರ ಯಾಪಯಸಿ ನಾಗಪುರಾತ್ ಪರೇತಾನ್

ದೃಷ್ಟ್ವಾ ಖಿಲಾನಪಿ ಹಿ ನೋ ಮುದಮೇಹಿ ಪಾರ್ಥೈಃ ॥11॥
ಧೃತರಾಷ್ಟ್ರ ಹೀಗೆ ಬುದ್ಧಿವಾದ ಹೇಳಿದರೂ ಪಾಪಿ ದುರ್ಯೋಧನ ಶಕುನಿಯ ಅಭಿಪ್ರಾಯವನ್ನು ಅನುಸರಿಸಿ ನುಡಿದ- `ನೀನು ಪಾಂಡವರನ್ನು ಹಸ್ತಿನಾವತಿಯಿಂದ ಬೇರೆ ಕಡೆಗೆ ಕಳಿಸದಿದ್ದರೆ ನಾವೆಲ್ಲ ಸಾಯುವೆವು. ಪಾಂಡವರೊಂದಿಗೆ ನೀನೂ ಅದನ್ನು ನೋಡಿ ಸಂತೋಷಪಡು'.
ಏವಂ ನಿಶಮ್ಯ ಗದಿತಂ ಸುತಹಾರ್ದಪಾಶೈ-
ರಾಕೃಷ್ಯತಾಶು ಸ ನೃಪೋಽರಿಧರೇಚ್ಛಯೈವ |
ಪ್ರೋವಾಚ ಪುತ್ರಮಪಿ ತೇ ಬಲಿನೋ ಹಿ ಪಾರ್ಥಾಃ
ಶಕ್ಯಾಃ ಪುರಾತ್ ತನಯ ಯಾಪಯಿತುಂ ಕಥಂಚಿತ್ ॥12॥
ಈ ಮಾತನ್ನು ಕೇಳಿ ಧೃತರಾಷ್ಟ್ರ ಹರೀಚ್ಛೆಯಿಂದಲೆ ಪುತ್ರಮೋಹದ ಪಾಶಕ್ಕೆ ಸಿಲುಕಿದ. `ಮಗು, ಪಾಂಡವರು ಬಲಿಷ್ಠರು. ಅವರನ್ನು ಹಸ್ತಿನಾವತಿಯಿಂದ ಹೊರಗೆ ಹಾಕುವುದು ಯಾವ ರೀತಿಯಿಂದಲೂ ಸಾಧ್ಯವಾಗಲಾರದು' ಎಂದ.
ಇತ್ಯುಕ್ತ ಆಹ ಪಿತರಂ ಶಕುನಿಂ ನಿರೀಕ್ಷ್ಯ
ಸೃಷ್ಟೋ ಮಯಾ ವಿಧಿರಿಹಾದ್ಯ ಶೃಣುಷ್ವ ತಂ ಚ |
ಆಸಂಸ್ತ್ರಯೋದಶ ಸಮಾ ನಗರಂ ಪ್ರವಿಷ್ಟೇ-
ಷ್ವೇತೇಷು ತಾವದಯಮೇವ ವಿಧಿರ್ಮಯೇಷ್ಟಃ ॥13॥
ಈ ಮಾತನ್ನು ಕೇಳಿ ದುರ್ಯೋಧನ ಶಕುನಿಯ ಕಡೆಗೆ ನೋಡಿ ತಂದೆಗೆ ಹೇಳಿದ `ಪಾಂಡವರನ್ನು ನಗರದಿಂದ ಹೊರಗೆ ಕಳಿಸಲು ನಾನೊಂದು ಉಪಾಯ ಮಾಡಿದ್ದೇನೆ. ಅವರು ನಗರವನ್ನು ಪ್ರವೇಶಿಸಿ ಹದಿಮೂರು ವರ್ಷಗಳಾದುವು. ಅಂದಿನಿಂದಲೂ ನಾನು ಈ ಉಪಾಯವನ್ನು ಯೋಚಿಸಿದ್ದೇನೆ.
ದ್ರೌಣೇರ್ಹಿ ನಾಸ್ತಿ ಸದೃಶೋ ಬಲವಾನ್ ಪ್ರತಾಪೀ
ಸೋಽಯಂ ಮಯಾ ಬಹುವಿಧೈಃ ಪರಮೈರುಪಾಯೈಃ |
ನೀತೋ ವಶಂ ವಶಗತೋಽಸ್ಯ ಚ ಮಾತುಲೇನ
ಸಾಕಂ ಪಿತಾ ತಮನು ಚೈಷ ನದೀಪ್ರಸೂತಃ ॥14॥
ಅಶ್ವತ್ಥಾಮನಿಗೆ ಸಮಾನನಾದ ಬಲಿಷ್ಠ. ಪ್ರತಾಪಿ ಇನ್ನಾರೂ ಇಲ್ಲ. ಅಂಥವನನ್ನೂ ನಾನು ನಾನಾ ಬಗೆಯ ಶ್ರೇಷ್ಠ ಉಪಾಯಗಳಿಂದ ನನ್ನ ವಶಮಾಡಿಕೊಂಡಿದ್ದೇನೆ. ಇವನ ತಂದೆ ದ್ರೋಣನನ್ನೂ ಸೋದರಮಾವ ಕೃಪನನ್ನೂ ನನ್ನ ವಶಕ್ಕೆ ತೆಗೆದುಕೊಂಡಿದ್ದೇನೆ. ಇನ್ನು ಭೀಷ್ಮರಂತೂ ದ್ರೋಣರ ಕಡೆಗೇ ಇರುವರು.
ಏವಂ ಹಿ ಸೈನಿಕಗಣಾ ಅಪಿ ದಾನಮಾನೈಃ
ಪ್ರಾಯೋ ವಶಂ ಮಮ ಗತಾ ಅಪಿ ಚೈಷ ಕರ್ಣಃ |
ಅಸ್ತ್ರೇ ಬಲೇಽಪ್ಯಧಿಕ ಏವ ಸುರೇಂದ್ರಸೂನೋ-
ರ್ಜೇಷ್ಯೇ ಚ ಮಂತ್ರಬಲತಸ್ತ್ವಹಮೇವ ಭೀಮಮ್ ॥15॥
ಹೀಗೆಯೇ ಸೈನಿಕರ ಸಮೂಹಗಳನ್ನೂ ದಾನಮಾನಗಳಿಂದ ಹೆಚ್ಚಿನ ಮಟ್ಟಿಗೆ ನನ್ನ ವಶಕ್ಕೇ ತೆಗೆದುಕೊಂಡಿದ್ದೇನೆ. ಮತ್ತು ಈ ಕರ್ಣ ಅಸ್ತ್ರದಲ್ಲಿಯೂ ಬಲದಲ್ಲಿಯೂ ಅರ್ಜುನನನ್ನು ಮೀರಿಸುವವ, ನನ್ನ ವಶದಲ್ಲಿಯೇ ಇದ್ದಾನೆ. ಭೀಮನನ್ನು ಮಂತ್ರಬಲದಿಂದ ನಾನೇ ಗೆಲ್ಲಬಲ್ಲೆ.
ತ್ರಿಂಶಚ್ಛತಂ ಪರಮಕಾಃ ಸುರದುರ್ಲಭಾಶ್ಚ
ದುರ್ವಾಸಸೋ ಹಿ ಮನವೋಽದ್ಯ ಮಯಾ ಗೃಹೀತಾಃ |
ಅನ್ಯತ್ರ ತೇ ಪ್ರವಿಹಿತಾ ನ ಹಿ ವೀರ್ಯವಂತಃ
ಸ್ಯುರ್ಭೀಮ ಇತ್ಯಹಮಮೂನ್ನ ನಿಯೋಜಯಾಮಿ ॥16॥
ಏಕೆಂದರೆ ದೇವತೆಗಳಿಗೂ ದುರ್ಲಭವಾದ ನೂರಮೂವತ್ತು ಮಹಾಮಂತ್ರಗಳನ್ನು ದೂರ್ವಾಸರಿಂದ ಇಂದು ನಾನು ಹೊಂದಿದ್ದೇನೆ. ಬೇರೆಯವರ ಮೇಲೆ ಪ್ರಯೋಗಿಸಿದರೆ ಮುಂದೆ ಅವು ಭೀಮನ ಮೇಲೆ ಪರಿಣಾಮಕಾರಿಯಾಗಲಾರವೆಂದು ಅವುಗಳನ್ನು ನಾನು ಇಂದು ಪ್ರಯೋಗಿಸುತ್ತಿಲ್ಲ.
ತೇ ವೀರ್ಯದಾ ವಿಜಯದಾ ಅಪಿ ವಹ್ನಿವಾರಿ-
ಸ್ತಂಭಾದಿದಾಃ ಸಕಲದೇವನಿಕಾಯರೋಧಾಃ |
ವೃಷ್ಟ್ಯಾದ್ಯಭೀಪ್ಸಿತಸಮಸ್ತಕರಾ ಅಮೂಭಿ-
ರ್ಜೇಷ್ಯಾಮಿ ಭೀಮಮಮುಮೇಕಮಯಾತಯಾಮೈಃ ॥17॥
ಆ ಮಂತ್ರಗಳು ವೀರ್ಯದಾಯಕ, ಹಾಗೂ ವಿಜಯದಾಯಕಗಳು. ವಹ್ನಿಸ್ತಂಭ ಜಲಸ್ತಂಭ ಮೃತಸಂಜೀವನಾದಿದಾಯಕಗಳು. ಎಲ್ಲ ದೇವ ಸಮೂಹಗಳನ್ನೂ ಇದಿರಿಸಬಲ್ಲವು. ಮಳೆ ಮುಂತಾದ ಸಕಲಾಭೀಷ್ಟ ನೀಡಬಲ್ಲವು. ನಾನು ಪ್ರತಿದಿನ ಜಪಿಸುತ್ತಿರುವುದರಿಂದ ಅವುಗಳ ಸಾಮರ್ಥ್ಯ ಕುಂದಿರುವುದಿಲ್ಲ. ಅದರಿಂದ ಈ ಮಂತ್ರಗಳಿಂದ ಭೀಮನೊಬ್ಬನನ್ನು ನಾನೇ ಪರಾಭವಗೊಳಿಸುವೆನು.
* * * *
ನೂರ ನಲವತ್ತೊಂದನೆಯ ಅಧ್ಯಾಯ
(ಯುಧಿಷ್ಠಿರನ ಅಭಿಷೇಕವನ್ನು ನೋಡಿ ದುರ್ಯೋಧನನ ಅಸೂಯೆ, ಧೃತರಾಷ್ಟ್ರನ ಜೊತೆಯಲ್ಲಿ ಸಂವಾದ, ಧೃತರಾಷ್ಟ್ರನ ಚಂಚಲಮನಸ್ಥಿತಿಃ)
ವೈಶಂಪಾಯನಃ

ಪ್ರಾಣಾಧಿಕಂ ಭೀಮಸೇನಂ ಕೃತವಿದ್ಯಂ ಧನಂಜಯಮ್ |
ದುರ್ಯೋಧನೋ ಲಕ್ಷಯಿತ್ವಾ ಪರ್ಯತಪ್ಯತ ದುರ್ಮತಿಃ ॥1॥
ದುರ್ಮತಿಯಾದ ದುರ್ಯೋಧನನು ಪ್ರಾಣಾಧಿಕನಾದ ಭೀಮಸೇನನನ್ನೂ, ಸರ್ವವಿದ್ಯಾಪಾರಂಗತನಾದ ಅರ್ಜುನನನ್ನೂ ಗಮನಿಸಿ ತಾಪಪಟ್ಟನು.
ದುರ್ಯೋಧನಶ್ಚ ಕರ್ಣಶ್ಚ ಶಕುನಿಶ್ಚಾಪಿ ಸೌಬಲಃ |
ಅನೇಕೈರಭ್ಯುಪಾಯೈಸ್ತೈರ್ಜಿಘಾಂಸಂತಿ ಸ್ಮ ಪಾಂಡವಾನ್ ॥2॥
ದುರ್ಯೋಧನನೂ, ಕರ್ಣನೂ ಸುಬಲಪುತ್ರನಾದ ಶಕುನಿಯೂ ಅನೇಕ ಉಪಾಯಗಳಿಂದ ಪಾಂಡವರನ್ನು ಕೊಲ್ಲಲು ಬಯಸಿದರು.
ಪಾಂಡವಾಶ್ಚಾಪಿ ತತ್ಸರ್ವಂ ಪ್ರತಿಚಕ್ರುರ್ಯಥಾಬಲಮ್ |
ಉದ್ಭಾವನಮಕುರ್ವಾಣಾ ವಿದುರಸ್ಯ ಮತೇ ಸ್ಥಿತಾಃ ॥3॥
ಪಾಂಡವರು ವಿದುರನ ಅಭಿಪ್ರಾಯದಂತೆ ನಡೆದುಕೊಂಡು ಬಾಯಲ್ಲಿ ಏನೂ ಮಾತನಾಡದೇ ಅವರ ಎಲ್ಲಾ ಉಪಾಯಗಳಿಗೂ ಯಥಾಶಕ್ತಿ ಪ್ರತೀಕಾರವನ್ನು ಮಾಡಿದರು.
ಗುಣೈಃ ಸಮುದಿತಾನ್ ದೃಷ್ಟ್ವಾ ಪೌರಾಃ ಪಾಂಡುಸುತಾಂಸ್ತದಾ |
ಕಥಯಂತಿ ಸ್ಮ ತೇ ಭೂಯೋ ದೇಶೇದೇಶೇ ಸಭಾಸು ಚ ॥4॥
ಪಾಂಡುಪುತ್ರರು ಗುಣಗಳಿಂದ ಸಮೃದ್ಧರಾಗಿರುವುದನ್ನು ನೋಡಿ ಪೌರರು ದೇಶದೇಶಗಳಲ್ಲಿಯೂ, ಸಭೆಗಳಲ್ಲಿಯೂ ಮತ್ತೆ ಮತ್ತೆ ಹೀಗೆ ಮಾತನಾಡಿದರು.
ಪ್ರಜ್ಞಾಚಕ್ಷುರಚಕ್ಷುಷ್ಮಾನ್ ಧೃತರಾಷ್ಟ್ರೋ ಜನಾಧಿಪಃ |
ಅಶಕ್ತೋ ರಾಜ್ಯಕರಣೇ ಸ ಕಥಂ ಧಾರಯಿಷ್ಯತಿ ॥5॥
ಪ್ರಜ್ಞಾಚಕ್ಷುವಾದ ಧೃತರಾಷ್ಟ್ರರಾಜನು ನೇತ್ರಹೀನನಾದುದರಿಂದ ರಾಜ್ಯವನ್ನು ಆಳಲು ಅಶಕ್ತನಾದ ಕಾರಣದಿಂದ ಹೇಗೆ ರಾಜ್ಯವನ್ನು ಧರಿಸಿ ಆಳುತ್ತಾನೆ?
ರಾಜ್ಯಂ ನ ಪ್ರಾಪ್ತವಾನ್ ಪೂರ್ವಂ ಸ ಕಥಂ ನೃಪತಿರ್ಭವೇತ್ ॥6॥
ಮೊದಲೇ ರಾಜ್ಯವನ್ನು ಪಡೆಯದಿದ್ದ ಅವನು ಈಗ ಹೇಗೆ ರಾಜನಾಗುತ್ತಾನೆ?
ತಥಾ ಭೀಷ್ಮಃ ಶಾಂತನವಃ ಸತ್ಯಸಂಧೋ ಮಹಾವ್ರತಃ |
ಪ್ರತ್ಯಾಖ್ಯಾಯ ಪುರಾ ರಾಜ್ಯಂ ನ ಸ ಜಾತು ಗ್ರಹೀಷ್ಯತಿ ॥7॥
ಹಾಗೆಯೇ ಶಂತನುವಿನ ಮಗನಾದ ಸತ್ಯಸಂಧನೂ, ಮಹಾವ್ರತಧಾರಿಯೂ ಆದ ಭೀಷ್ಮನು ಮೊದಲೇ ರಾಜ್ಯವನ್ನು ನಿರಾಕರಣೆ ಮಾಡಿರುವುದರಿಂದ ಎಂದೂ ಪುನಃ ರಾಜ್ಯವನ್ನು ಸ್ವೀಕಾರ ಮಾಡುವುದಿಲ್ಲ.
ತೇ ವಯಂ ಪಾಂಡವಜ್ಯೇಷ್ಠಂ ತರುಣಂ ವೃದ್ಧದರ್ಶನಮ್ |
ಅಭಿಷಿಂಚಾಮ ಸಾಧ್ವದ್ಯ ಸತ್ಯಕಾರುಣ್ಯವೇದಿನಮ್ ॥8॥
ಆದ್ದರಿಂದ ನಾವು ಪಾಂಡುವಿನ ಮಕ್ಕಳಲ್ಲಿ ಜ್ಯೇಷ್ಠನಾದ, ವಯಸ್ಸಿನಿಂದ ಯುವಕನೂ, ಜ್ಞಾನದಿಂದ ವೃದ್ಧನೂ, ಸತ್ಯವಂತನೂ, ಕರುಣಾಶೀಲನೂ, ಧರ್ಮಜ್ಞನೂ ಆದ ಯುಧಿಷ್ಠಿರನನ್ನು ಇಂದೇ ಚೆನ್ನಾಗಿ ರಾಜ್ಯದಲ್ಲಿ ಅಭಿಷೇಕ ಮಾಡೋಣ.
ಪಿತಾಮಹಂ ಶಾಂತನವಂ ಧೃತರಾಷ್ಟ್ರಂ ಚ ಧರ್ಮವಿತ್ |
ಸಪುತ್ರಂ ವಿವಿಧೈರ್ಭೋಗೈರ್ನಿಯತಂ ವಾಸಯಿಷ್ಯತಿ ॥9॥
ಧರ್ಮರಾಜನು ಪಿತಾಮಹರಾದ ಭೀಷ್ಮರನ್ನೂ, ದೊಡ್ಡಪ್ಪನಾದ ಧೃತರಾಷ್ಟ್ರನನ್ನೂ, ಅವನ ಮಕ್ಕಳನ್ನೂ ವಿವಿಧ ಭೋಗಗಳಿಂದ ಸಂತೋಷಪಡಿಸಿ ತನ್ನ ಜೊತೆಯಲ್ಲಿ ಇರಿಸಿಕೊಳ್ಳುತ್ತಾನೆ.
ತೇಷಾಂ ದುರ್ಯೋಧನಃ ಶ್ರುತ್ವಾ ತಾನಿ ವಾಕ್ಯಾನಿ ಸರ್ವಶಃ |
ಯುಧಿಷ್ಠಿರಾನುರಕ್ತಾನಾಂ ಪರ್ಯತಪ್ಯತ ದುರ್ಮತಿಃ |
ಸ ತಪ್ಯಮಾನೋ ದುಷ್ಟಾತ್ಮಾ ತೇಷಾಂ ವಾಚೋ ನ ಚಕ್ಷಮೇ ॥10॥
ಯುಧಿಷ್ಠಿರನಲ್ಲಿ ಅನುರಾಗವನ್ನು ಹೊಂದಿದ ಪೌರರ ಈ ಮಾತುಗಳನ್ನು ಎಲ್ಲ ಕಡೆಗಳಲ್ಲಿಯೂ ಕೇಳಿ ದುರ್ಮತಿಯಾದ ದುರ್ಯೋಧನನು ಪರಿತಾಪಪಟ್ಟನು.
ಈರ್ಷ್ಯಯಾ ಮುಹ್ಯಮಾನಸ್ತು ಧೃತರಾಷ್ಟ್ರಮುಪಾದ್ರವತ್ |
ತತೋ ವಿರಹಿತಂ ದೃಷ್ಟ್ವಾ ಪಿತರಂ ಪರಿಪೂಜ್ಯ ಸಃ
ಪಾಂಡೋರ್ವೃತ್ತಂ ಪೂರ್ವಮುಕ್ತ್ವಾ ಪಶ್ಚಾದಿದಮಥಾಬ್ರವೀತ್ ॥11
ಪರಿತಪ್ತನಾದ, ದುಷ್ಟಾತ್ಮನಾದ ಅವನು ಪೌರರ ಮಾತನ್ನು ಕೇಳಿ ಸಹಿಸದೆ ಅಸೂಯೆಯಂದ ಮೋಹಕ್ಕೆ ಒಳಗಾದವನಾಗಿ ಧೃತರಾಷ್ಟ್ರನ ಬಳಿಗೆ ಓಡಿದನು. ಅನಂತರ ತಂದೆಯು ಏಕಾಂತದಲ್ಲಿರುವುದನ್ನು ಗಮನಿಸಿ, ಅವನನ್ನು ಯಥಾಯೋಗ್ಯವಾಗಿ ಪೂಜಿಸಿ ಮೊದಲು ಪಾಂಡುವಿನ ಗುಣಶೀಲಗಳನ್ನು ಹೇಳಿ ಅನಂತರ ಹೀಗೆ ಮಾತನಾಡಿದನು.
ದುರ್ಯೋಧನಃ
ಶ್ರುತಾ ಮೇ ಜಲ್ಪತಾಂ ತಾತ ಪೌರಾಣಾಂ ಚಾಶಿವಾ ಗಿರಃ |
ತ್ವಾಮನಾದೃತ್ಯ ಭೀಷ್ಮಂ ಚ ಪತಿಮಿಚ್ಛಂತಿ ಪಾಂಡವಮ್ ॥12॥
ತಂದೆಯೇ, ನಾನು ಅಲ್ಲಲ್ಲಿ ಮಾತನಾಡುವ ಪೌರರ ಅಮಂಗಳವಾದ ಮಾತುಗಳನ್ನು ಕೇಳಿದೆ. ನಿನ್ನನ್ನೂ ಮತ್ತು ಭೀಷ್ಮರನ್ನೂ ತಿರಸ್ಕರಿಸಿ ಅವರು ಧರ್ಮರಾಜನನ್ನು ರಾಜನನ್ನಾಗಿ ಬಯಸುತ್ತಿದ್ದಾರೆ.
ಸಮಮೇತಚ್ಚ ಭೀಷ್ಮಸ್ಯ ನ ಸ ರಾಜ್ಯಂ ಚಿಕೀರ್ಷತಿ |

ಅಸ್ಮಾಕಂ ತು ಪರಾಂ ಪೀಡಾಂ ಚಿಕೀರ್ಷಂತಿ ಪುರೇ ಜನಾಃ ॥13॥
ಈ ವಿಷಯವು ಭೀಷ್ಮರಿಗೂ ಸಮ್ಮತವಾಗಿದೆ. ಅವರಂತೂ ರಾಜ್ಯವನ್ನು ಆಳುವುದಿಲ್ಲ. ನಮಗೆ ಮಾತ್ರ ಪುರಜನರು ತುಂಬಾ ಪೀಡೆಯನ್ನು ಕೊಡಲು ಬಯಸುತ್ತಾರೆ.
ಪಿತೃತಃ ಪ್ರಾಪ್ತವಾನ್ ರಾಜ್ಯಂ ಪಾಂಡುರಾತ್ಮಗುಣೈಃ ಪುರಾ |
ತ್ವಮಂಧಗುಣಸಂಯೋಗಾತ್ ಪ್ರಾಪ್ತಂ ರಾಜ್ಯಂ ನ ಲಬ್ಧವಾನ್ ॥14॥
ತನ್ನ ಶ್ರೇಷ್ಠವಾದ ಗುಣಗಳಿಂದ ಪಾಂಡುವು ಹಿಂದೆ ತನ್ನ ತಂದೆಯಿಂದ ಬಂದ ರಾಜ್ಯವನ್ನು ಪಡೆದನು. ನೀನು ಅಂಧನಾದ ಕಾರಣದಿಂದ ಸಹಜವಾಗಿ ಬರುತ್ತಿದ್ದ ರಾಜ್ಯವು ನಿನ್ನ ಕೈಸೇರಲಿಲ್ಲ.
ಸ ಏಷ ಪಾಂಡೋರ್ದಾಯಾದ್ಯಂ ಯದಿ ಪ್ರಾಪ್ನೋತಿ ಪಾಂಡವಃ |
ತಸ್ಯ ಪುತ್ರೋ ಧ್ರುವಂ ಪ್ರಾಪ್ತಸ್ತಸ್ಯ ತಸ್ಯಾಪಿ ಚಾಪರಃ ॥15॥
ಪಾಂಡುಪುತ್ರನಾದ ಯುಧಿಷ್ಠಿರನು ಪಾಂಡುವಿನ ಅಧಿಕಾರವನ್ನೂ ಮತ್ತು ಸಂಪತ್ತನ್ನೂ ಪಡೆದರೆ, ಅವನಿಂದ ಯುಧಿಷ್ಠಿರನಪುತ್ರನೂ, ಅವನಿಂದ ಅವನ ಪುತ್ರನೂ ಪಡೆಯುತ್ತಾರೆ.
ತೇ ವಯಂ ರಾಜವಂಶೇನ ಹೀನಾಃ ಸಹ ಸುತೈರಪಿ |
ಅವಿಜ್ಞಾತಾ ಭವಿಷ್ಯಾಮೋ ಲೋಕಸ್ಯ ಜಗತೀಪತೇ ॥16॥
ಜಗತ್ಪತಿಯೇ, ನಾವು ಮತ್ತು ನಮ್ಮ ಮಕ್ಕಳು ರಾಜವಂಶದಿಂದ ಭ್ರಷ್ಟರಾಗಿ ಲೋಕದಲ್ಲಿ ಹೆಸರಿಲ್ಲದಂತೆ ಆಗುವೆವು.
ಸತತಂ ನಿರಯಂ ಪ್ರಾಪ್ತಾಃ ಪರಪಿಂಡೋಪಜೀವಿನಃ |
ನ ಭವಾಮ ಯಥಾ ರಾಜನ್ ತಥಾ ಶೀಘ್ರಂ ವಿಧೀಯತಾಮ್ ॥17॥
ರಾಜನೇ, ಇನ್ನೊಬ್ಬರ ಅನ್ನವನ್ನು ತಿಂದುಕೊಂಡು ಸತತವಾಗಿ ನಾವು ದುಃಖವನ್ನು ಅನುಭವಿಸದಂತೆ ಶೀಘ್ರವಾಗಿ ಏನಾದರೂ ಉಪಾಯವನ್ನು ಮಾಡು.
ಅಥ ತ್ವಮಪಿ ರಾಜೇಂದ್ರ ರಾಜವಂಶೋ ಭವಿಷ್ಯಸಿ |
ಯದಿ ಹಿ ತ್ವಂ ಪುರಾ ರಾಜ್ಯೇ ಭವಾನಾಸ್ಥಾಪಿತೋ ನೃಪಃ |
ಧ್ರುವಂ ಲಪ್ಸ್ಯಾಮಹೇ ರಾಜ್ಯಂ ವಯಮಪ್ಯವಶೇನ ತೇ ॥18॥
ರಾಜೇಂದ್ರನೇ, ನೀನೂ ಸಹ ರಾಜವಂಶಕ್ಕೆ ಸೇರಿದವನು. ನೀನು ಹಿಂದೆ ರಾಜ್ಯದಲ್ಲಿ ಪ್ರತಿಷ್ಠಿತನಾಗಿದ್ದರೆ, ನಾವೂ ಸಹ ನಿಸ್ಸಂಶಯವಾಗಿ ರಾಜ್ಯವನ್ನು ಪಡೆಯುತ್ತಿದ್ದೆವು.
ಸ ತಥಾ ಕುರು ಕೌರವ್ಯ ರಕ್ಷ್ಯಾ ವಂಶ್ಯಾ ಯಥಾ ವಯಮ್ ॥19॥
ಕುರುರಾಜನೇ, ನಾವೂ ಮತ್ತು ನಮ್ಮ ವಂಶದವರೂ ಹಾಳಾಗದಂತೆ ರಕ್ಷಣೆಯನ್ನು ಮಾಡಿ ನಾವೂ ಸಹ ರಾಜ್ಯವನ್ನು ಹೊಂದುವಂತೆ ನಿನ್ನ ಅನುಯಾಯಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಏನಾದರೂ ಉಪಾಯವನ್ನು ಮಾಡು.
ವೈಶಂಪಾಯನಃ
ಧೃತರಾಷ್ಟ್ರಸ್ತು ಪುತ್ರಸ್ಯ ಶ್ರುತ್ವಾ ವಚನಮೀದೃಶಮ್ |
ಮುಹೂರ್ತಮಿವ ಸಂಚಿಂತ್ಯ ದುರ್ಯೋಧನಮಥಾಬ್ರವೀತ್ ॥20॥
ಧೃತರಾಷ್ಟ್ರನು ಮಗನ ಈ ಮಾತುಗಳನ್ನು ಕೇಳಿ ಒಂದು ಮಹೂರ್ತಕಾಲ ಚಿಂತಿಸಿ ದುರ್ಯೋಧನನನ್ನು ಕುರಿತು ಮಾತನಾಡಿದನು.
ಧರ್ಮವೃತ್ತಃ ಸದಾ ಪಾಂಡುಃ ಸುವೃತ್ತೋ ಮಯಿ ಗೌರವಾತ್ |
ಸರ್ವೇಷು ಜ್ಞಾತಿಷು ತಥಾ ಮದೀಯೇಷು ವಿಶೇಷತಃ ॥21॥
ಧರ್ಮಶೀಲನಾದ ಪಾಂಡುವು ನನ್ನಲ್ಲಿ ಯಾವಾಗಲೂ ಗೌರವದಿಂದ ಚೆನ್ನಾಗಿ ನಡೆದುಕೊಂಡನು. ನನ್ನ ಬಂಧುಗಳ ವಿಷಯದಲ್ಲಿಯೂ ಸಹ ವಿಶೇಷವಾಗಿ ಚೆನ್ನಾಗಿ ನಡೆದುಕೊಂಡನು.
ನಾತ್ರ ಕಿಂಚನ ಜಾನಾತಿ ಭೋಜನಾನಿ ಚಿಕೀರ್ಷತಿ |
ನಿವೇದಯತಿ ತತ್ಸರ್ವಂ ಮಯಿ ಧರ್ಮಭೃತಾಂ ವರಃ ॥22॥
ಅವನಿಗೆ ಬೇರೇನೂ (ಕಪಟವಾದುದು) ತಿಳಿಯದು. ನನ್ನನ್ನು ಬಿಟ್ಟು ಎಂದೂ ಅವನು ಭೋಜನವನ್ನು ಮಾಡುತ್ತಿರಲಿಲ್ಲ. ಧರ್ಮವನ್ನು ಆಚರಿಸುವವರಲ್ಲಿ ಶ್ರೇಷ್ಠನಾದ ಅವನು ತನ್ನ ಎಲ್ಲಾ ಸಂಪತ್ತನ್ನು ನನಗೆ ನಿವೇದಿಸುತ್ತಿದ್ದನು.
ತಸ್ಯ ಪುತ್ರೋ ಯಥಾ ಪಾಂಡುಸ್ತಥಾ ಧರ್ಮಪರಃ ಸದಾ |
ಗುಣವಾಂಲ್ಲೋಕವಿಖ್ಯಾತೋ ನಗರೇ ಚ ಪ್ರತಿಷ್ಠಿತಃ॥23॥
ಅವನ ಪುತ್ರನಾದ ಯುಧಿಷ್ಠಿರನು ತಂದೆಯಂತೆಯೇ ಯಾವಾಗಲೂ ಧರ್ಮಪರನಾಗಿದ್ದಾನೆ. ಗುಣವಂತನೆಂದು ಲೋಕವಿಖ್ಯಾತನಾಗಿದ್ದಾನೆ. ಹಸ್ತಿನಪುರದಲ್ಲಿ ಪ್ರತಿಷ್ಠಿತನಾಗಿದ್ದಾನೆ.
ಸ ತಥಾ ವರ್ತಮಾನೋಽಸೌ ಧರ್ಮಸೂನುರ್ಯಥಾಽನುಜಃ |
ರಾಜ್ಯಮೇಷ ಹಿ ಸಂಪ್ರಾಪ್ತಃ ಸಸಹಾಯೋ ವಿಶೇಷತಃ ॥24॥
ಆ ರೀತಿಯಲ್ಲಿ ನನ್ನ ತಮ್ಮನಾದ ಪಾಂಡುವಿನಂತೆ ಇರುವ ಯುಧಿಷ್ಠಿರನು ತನ್ನ ಸಹೋದರರ ಸಹಾಯದಿಂದ ಕೂಡಿದವನಾಗಿ ವಿಶೇಷವಾಗಿ ರಾಜ್ಯವನ್ನು ಪಡೆದಿದ್ದಾನೆ.
ತೇ ತಥಾ ಸತ್ಕೃತಾಸ್ತಾತ ವಿಷಯೇ ಪಾಂಡುನಾ ನರಾಃ |
ಕಥಂ ಯುಧಿಷ್ಠಿರಸ್ಯಾರ್ಥೇ ನ ನೋ ಹಸ್ಯುಃ ಸಬಾಂಧವಾನ್ ॥25॥
ಪುತ್ರನೇ, (ನಾವೇನಾದರೂ ಅನ್ಯಾಯವನ್ನು ಮಾಡಿದರೆ) ಪಾಂಡುವಿನಿಂದ ಸತ್ಕೃತರಾದ ಪೌರರು ಯುಧಿಷ್ಠಿರನ ಸಲುವಾಗಿ ನಮ್ಮನ್ನೂ ಮತ್ತು ನಮ್ಮ ಬಂಧುಗಳನ್ನೂ ಹೇಗೆ ಹಾಸ್ಯಮಾಡದೇ ಇದ್ದಾರು?

ನೈತೇ ವಿಷಯಮಿಚ್ಛೇಯುರ್ಧರ್ಮತ್ಯಾಗೇ ವಿಶೇಷತಃ |
ತೇ ವಯಂ ಕೌರವೇಯಾಣಾಮೇತೇಷಾಂ ಚ ಮಹಾತ್ಮನಾಮ್ |
ಕಥಂ ನ ವಾಚ್ಯತಾಂ ತಾತ ಗಚ್ಛೇಮ ಜಗತಸ್ತಥಾ ॥26॥
ನಾವು ಧರ್ಮತ್ಯಾಗವನ್ನು ಮಾಡಿದರೆ ಈ ಪೌರರು ಹಸ್ತಿನಪುರದಲ್ಲಿ ಇರಲು ಬಯಸುವುದಿಲ್ಲ. ಪುತ್ರನೇ, ಆಗ ನಾವು ಎಲ್ಲಾ ಕೌರವರಿಂದಲೂ, ಈ ಮಹಾತ್ಮರಾದ ಪೌರರಿಂದಲೂ ಮತ್ತು ಲೋಕದಲ್ಲಿ ಎಲ್ಲರಿಂದಲೂ ನಿಂದನೀಯರಾಗದೆ ಹೇಗಿರುತ್ತೇವೆ?
ದುರ್ಯೋಧನಃ
ಮಧ್ಯಸ್ಥಃ ಸತತಂ ಭೀಷ್ಮೋ ದ್ರೋಣಪುತ್ರೋ ಮಯಿ ಧ್ರುವಃ |
ಯತಃ ಪುತ್ರಸ್ತತೋ ದ್ರೋಣೋ ಭವಿತಾ ನಾತ್ರ ಸಂಶಯಃ ॥27॥
ಭೀಷ್ಮರು ಯಾವಾಗಲೂ ತಟಸ್ಥರು. ಅಶ್ವತ್ಥಾಮರು ನಿಶ್ಚಯವಾಗಿ ನನ್ನ ಪಕ್ಷದಲ್ಲೇ ಇರುತ್ತಾರೆ. ಎಲ್ಲಿ ಅಶ್ವತ್ಥಾಮರು ಇರುತ್ತಾರೋ ಅಲ್ಲಿಯೇ ದ್ರೋಣರೂ ಇರುತ್ತಾರೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಕೃಪಃ ಶಾರದ್ವತಶ್ಚೈವ ಯತ ಏತತ್ ತ್ರಯಂ ತತಃ |
ಭಾಗಿನೇಯಂ ತತೋ ದ್ರೌಣಿಂ ನ ತ್ಯಕ್ಷ್ಯತಿ ಕಥಂಚನ ॥28॥
ಶರದ್ವಂತರ ಪುತ್ರರಾದ ಕೃಪಾಚಾರ್ಯರು - ಭೀಷ್ಮ, ದ್ರೋಣ ಮತ್ತು ಅಶ್ವತ್ಥಾಮರು ಎಲ್ಲಿ ಇರುತ್ತಾರೋ ಅಲ್ಲಿಯೇ ಇರುತ್ತಾರೆ. ಅವರು ತಮ್ಮ ತಂಗಿಯ ಮಗನಾದ ಅಶ್ವತ್ಥಾಮರನ್ನು ಎಂದೂ ಬಿಡುವುದಿಲ್ಲ.
ಕ್ಷತ್ತಾ ತು ಬಂಧುರಸ್ಮಾಕಂ ಪ್ರಚ್ಛನ್ನಸ್ತು ತತಃ ಪರೈಃ |
ನ ಚೈಕಃ ಸ ಸಮರ್ಥೋಽಸ್ಮಾನ್ ಪಾಂಡವಾರ್ಥೇ ವಿಬಾಧಿತುಮ್ ॥
ವಿದುರನು ಮೇಲುನೋಟಕ್ಕೆ ನಮಗೆ ಬಂಧುವಾಗಿದ್ದಾನೆ. ಆದರೆ ಪ್ರಚ್ಛನ್ನನಾಗಿ ಪಾಂಡವರ ಪಕ್ಷದಲ್ಲಿ ಇರುತ್ತಾನೆ. ಅವನು ಪಾಂಡವರ ಸಲುವಾಗಿ ಒಂಟಿಯಾಗಿ ನಮ್ಮನ್ನು ಬಾಧಿಸಲು ಸಾಧ್ಯವಿಲ್ಲ.
ಸುವಿಸ್ರಬ್ಧಾನ್ ಪಾಂಡುಸುತಾನ್ ಸಹ ಮಾತ್ರಾ ವಿವಾಸಯ |
ವಾರಣಾವತಮದ್ಯೈವ ನಾತ್ರ ದೋಷೋ ಭವಿಷ್ಯತಿ ॥30॥
ನಿನ್ನನ್ನು ಚೆನ್ನಾಗಿ ನಂಬಿರುವ ಪಾಂಡುಪುತ್ರರನ್ನು ಅವರ ತಾಯಿಯ ಜೊತೆಯಲ್ಲಿ ಈ ದಿನವೇ ವಾರಣಾವತಕ್ಕೆ ಕಳುಹಿಸು. ಇದರಲ್ಲಿ ಯಾವ ದೋಷವೂ ಇರುವುದಿಲ್ಲ.
ವಿನಿದ್ರಾಕರಣಂ ಘೋರಂ ಹೃದಿ ಶಲ್ಯಮಿವಾರ್ಪಿತಮ್ |
ಶೋಕಪಾವಕಮುದ್ಭೂತಂ ಕರ್ಮಣಾ ತೇನ ನಾಶಯ ॥31॥
ನಿದ್ರೆಯನ್ನು ಕೆಡಿಸಿ ಹೃದಯದಲ್ಲಿ ಘೋರವಾದ ಶಲ್ಯದಂತೆ ಚುಚ್ಚಿ ಜ್ವಲಿಸುತ್ತಿರುವ ಈ ಶೋಕಾಗ್ನಿಯನ್ನು ನಿನ್ನ ಕ್ರಿಯೆಯಿಂದ ನಾಶಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ಏಕೋನನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರನಲವತ್ತೊಂದನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಓಂ ಏವಂ ಶುಭೋಚ್ಚಗುಣವತ್ಸು ಜನಾರ್ದನೇನ
ಯುಕ್ತೇಷು ಪಾಂಡುಷು ಚರತ್ಸ್ವಧಿಕಂ ಶುಭಾನಿ |
ನಾಸ್ತಿಕ್ಯನೀತಿಮಖಿಲಾಂ ಗುರುದೇವತಾದಿ-
ಸತ್ಸ್ವಂಜಸೈವ ಜಗೃಹುರ್ಧೃತರಾಷ್ಟ್ರಪುತ್ರಾಃ ॥1॥
ಮಂಗಳಮಯ ಮಹಾಗುಣಶಾಲಿಗಳಾದ ಪಾಂಡವರು ಕೃಷ್ಣನೊಂದಿಗೆ ಹೀಗೆ ಬಹಳ ಒಳ್ಳೆಯ ಕೆಲಸಗಳನ್ನು ನಡೆಸುತ್ತಿದ್ದಾಗ ಕೌರವರು ಗುರುದೇವತಾದಿ ಸಜ್ಜನರ ವಿಷಯದಲ್ಲಿ ಸಾಟಿಯಿಲ್ಲದ ನಾಸ್ತಿಕ್ಯ ನೀತಿಯನ್ನು ಅಧಿಕವಾಗಿ ಕೈಗೊಂಡರು.
ನಾಮ್ನಾ ಕಣಿಂಕ ಇತಿ ಚಾಸುರಕೋ ದ್ವಿಜೋಽಭೂತ್
ಶಿಷ್ಯಃ ಸುರೇತರುಗುರೋಃ ಶಕುನೇರ್ಗುರುಃ ಸಃ |
ನೀತಿಂ ಸ ಕುತ್ಸಿತತಮಾಂ ಧೃತರಾಷ್ಟ್ರಪುತ್ರೇ-
ಷ್ವಾಧಾದ್ ರಹೋವಚನತಃ ಶಕುನೇ ಸಮಸ್ತಾಂ ॥2॥
ಕಣಿಂಕನೆಂಬ ಹೆಸರಿನ ಅಸುರ ಸ್ವಭಾವದ ಬ್ರಾಹ್ಮಣ ದೈತ್ಯಗುರು ಶುಕ್ರಾಚಾರ್ಯರ ಶಿಷ್ಯ. ಶಕುನಿಗೆ ಈತ ಗುರುವಾಗಿದ್ದ. ಶಕುನಿಯ ಮಾತಿನಿಂದ ಅವನು ರಹಸ್ಯದಲ್ಲಿ ಕೌರವರಿಗೆ ಬಹಳ ಕೆಟ್ಟದಾದ ಎಲ್ಲ ನೀತಿಯನ್ನೂ ಉಪದೇಶಿಸಿದ.
ಛದ್ಮೈವ ಯತ್ರ ಪರಮಂ ನ ಸುರಾಶ್ಚ ಪೂಜ್ಯಾಃ
ಸ್ವಾರ್ಥೇನ ವಂಚನಕೃತೇ ಜಗತೋಽಖಿಲಂ ಚ |
ಧರ್ಮಾದಿಕಾರ್ಯಮಪಿ ಯಸ್ಯ ಮಹೋಷಧಿಃ ಸ್ಯಾತ್
ಶ್ರೇಷ್ಠಃ ಸ ಏವ ನಿಖಿಲಾಸುರದೈತ್ಯಸಂಘಾತ್ ॥3॥
ಆ ನೀತಿಯಲ್ಲಿ ವಂಚನೆಗೇ ಅಗ್ರಸ್ಥಾನ. ದೇವತೆಗಳನ್ನೂ ಪೂಜಿಸಕೂಡದು. ಎಲ್ಲ ಧರ್ಮಾದಿಕಾರ್ಯವನ್ನು ಸ್ವಾರ್ಥದಿಂದ

ಲೋಕವನ್ನು ವಂಚಿಸುವುದಕ್ಕಾಗಿಯೆ ನಡೆಸಬೇಕು. ಹೀಗೆ ಮಹಾಕಪಟಿಯಾಗಿ ಎಲ್ಲ ಅಸುರ ದೈತ್ಯ ಸಮೂಹವನ್ನು ಮೀರಿಸುತ್ತಿರಬೇಕು ಇಂಥವನೇ ಶ್ರೇಷ್ಠ.

ಇತ್ಯಾದಿಕುತ್ಸಿತತಮಾಂ ಜಗೃಹುಃ ಸ್ಮ ವಿದ್ಯಾ-
ಮಜ್ಞಾತ ಏವ ಧೃತರಾಷ್ಟ್ರಮುಖ್ಯೈಃ ಸಮಸ್ತೈಃ |
ತೇಷಾಂ ಸ್ವಭಾವಬಲತೋ ರುಚಿತಾ ಚ ಸೈವ
ವಿಸ್ತಾರಿತಾ ಚ ನಿಜಬುದ್ಧಿಬಲಾದತೋಽಪಿ ॥4॥

ಇದೇ ಮುಂತಾದ ಬಲು ಕೆಟ್ಟದಾದ ಆ ವಿದ್ಯೆಯನ್ನು ಕೌರವರು ಧೃತರಾಷ್ಟ್ರಾದಿಗಳಿಗೆ ಯಾರಿಗೂ ತಿಳಿಯದಂಥ ರಹಸ್ಯ ಸ್ಥಳದಲ್ಲಿ ಕಣಿಂಕನಿಂದ ಉಪದೇಶ ಪಡೆದರು. ಅದು ಅವರ ಸ್ವಭಾವ ಬಲದಿಂದಾಗಿ ಅವರಿಗೆ ಬಹಳ ಹಿಡಿಸಿತು. ತಮ್ಮ ಬುದ್ಧಿ ಬಲದಿಂದ ಅವರು ಆ ವಿದ್ಯೆಯನ್ನು ಇನ್ನೂ ಹೆಚ್ಚು ಬೆಳೆಸಿಕೊಂಡರು.

* * * *

ನೂರ ನಲವತ್ತೆರಡನೆಯ ಅಧ್ಯಾಯ
(ಕಣಿಕ ನೀತಿ)

ವೈಶಂಪಾಯನಃ
ದುರ್ಯೋಧನೋಽಥ ಶಕುನಿಃ ಕರ್ಣೋ ದುಶ್ಶಾಸನಸ್ತಥಾ |
ಕಣಿಂಕ ಮುಪಸಂಕ್ರಮ್ಯ ಮಂತ್ರಿಣಂ ಸೌಬಲಸ್ಯ ಚ |
ಪಪ್ರಚ್ಛ ಭರತಶ್ರೇಷ್ಠ ಪಾಂಡವಾನ್ ಪ್ರತಿ ನೈಕಧಾ ॥1॥

ಭರತಶ್ರೇಷ್ಠನೇ, ದುರ್ಯೋಧನ, ಶಕುನಿ, ಕರ್ಣ ಮತ್ತು ದುಶ್ಶಾಸನರು, ಶಕುನಿಯ ಮಂತ್ರಿಯಾದ ಕಣಿಂಕನನ್ನು ಕರೆಸಿ ಪಾಂಡವರ ವಿಷಯದಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿದರು.

ದುರ್ಯೋಧನಃ
ಪ್ರವೃದ್ಧಾಃ ಪಾಂಡವಾ ಹ್ಯೇತೇ ನಿತ್ಯಂ ತೇಭ್ಯಸ್ತ್ರಸಾಮ್ಯಹಮ್ |
ತತ್ರ ಮೇಽಪಿ ಸಪಕ್ಷಸ್ಯ ಯದ್ ಭವೇತ್ ಕ್ಷೇಮಕಾರಕಮ್ |
ಭಾರದ್ವಾಜ ತ್ವಮಾಚಕ್ಷ್ವ ಕರಿಷ್ಯಾಮಃ ಕಥಂ ವಯಮ್ ॥2॥

ಈ ಪಾಂಡವರು ದಿನದಿನಕ್ಕೆ ಬಲದಿಂದ ಬೆಳೆಯುತ್ತಿದ್ದಾರೆ. ನಾನು ಅವರಿಗೆ ನಿತ್ಯವೂ ಹೆದರಿಕೊಂಡಿದ್ದೇನೆ.
ಭರದ್ವಾಜಕುಲೋತ್ಪನ್ನನಾದ ಕಣಿಂಕನೇ ನನಗೂ ಮತ್ತು ನನ್ನ ಪಕ್ಷಕ್ಕೂ ಕ್ಷೇಮಕಾರಕವಾದುದು ಯಾವುದು ಮತ್ತು ಅದನ್ನು ನಾನು ಹೇಗೆ ಮಾಡಬೇಕು ಎಂಬುದನ್ನು ತಿಳಿಸು.

ವೈಶಂಪಾಯನಃ
ಸಂಪ್ರಪನ್ನಾಯ ತಸ್ಮೈ ಸ ಪರಿಮೃಶ್ಯಾರ್ಥಚಿಂತಯಾ |
ಉವಾಚ ವಚನಂ ತೀಕ್ಷ್ಣಂ ರಾಜಶಾಸ್ತ್ರನಿದರ್ಶನಮ್ ॥3॥

ಆಗ ಕಣಿಂಕನು ಶರಣಾಗತನಾದ ಅವನನ್ನು ಕುರಿತು ರಾಜಶಾಸ್ತ್ರನಿದರ್ಶನ ಪೂರ್ವಕವಾಗಿ ಅರ್ಥಪ್ರಾಪ್ತಿ ದೃಷ್ಟಿಯನ್ನು ಚಿಂತಿಸಿ ತೀಕ್ಷ್ಣವಾದ ಮಾತುಗಳನ್ನು ಹೇಳಿದನು.

ಕಣಿಂಕಃ
ನಿತ್ಯಮುದ್ಯತದಂಡಃ ಸ್ಯಾನ್ನಿತ್ಯಂ ವಿವೃತಪೌರುಷಃ |
ಅಚ್ಛಿದ್ರಃ ಛಿದ್ರದರ್ಶೀ ಸ್ಯಾತ್ ಪರೇಷಾಂ ವಿವರಾನುಗಃ ॥4॥

ನಿತ್ಯವೂ ದಂಡೋದ್ಯುಕ್ತನಾಗಿರಬೇಕು. ನಿತ್ಯವೂ ತನ್ನ ಪರಾಕ್ರಮವನ್ನು ತೋರಿಸಬೇಕು. ತನ್ನ ದೋಷವನ್ನು ಆಚ್ಛಾದಿಸಿಕೊಂಡು ಶತ್ರುಗಳ ದೋಷವನ್ನು ಹುಡುಕುತ್ತಿರಬೇಕು.

ನಿತ್ಯಮುದ್ಯತದಂಡಾದ್ಧಿ ಭೃಶಮುದ್ವಿಜತೇ ಜನಃ |
ತಸ್ಮಾತ್ ಸರ್ವಾಣಿ ಭೂತಾನಿ ದಂಡೇನೈವಾನುಪಾಲಯೇತ್ ॥5॥

ದಂಡೋದ್ಯತನಾದ ಪುರುಷನಿಗೆ ಲೋಕವೆಲ್ಲವೂ ಬಹಳ ಹೆದರುತ್ತದೆ. ಆದ್ದರಿಂದ ಎಲ್ಲರನ್ನೂ ದಂಡೋಪಾಯದಿಂದಲೇ ಪಾಲಿಸಬೇಕು.

ನಾಸ್ಯ ಚ್ಛಿದ್ರಂ ಪರಃ ಪಶ್ಯೇತ್ ಚ್ಛಿದ್ರೇಣ ಪರಮನ್ವಿಯಾತ್ |
ಗೂಹೇತ್ ಕೂರ್ಮ ಇವಾಂಗಾನಿ ರಕ್ಷೇದ್ ವಿವೃತಮಾತ್ಮನಃ ॥6॥

ತನ್ನ ಛಿದ್ರವನ್ನು ಶತ್ರುವು ನೋಡಬಾರದು. ಶತ್ರುಗಳ ಛಿದ್ರವನ್ನು ಗಮನಿಸಿ ಅವರ ಮೇಲೆ ಎರಗಬೇಕು. ಕೂರ್ಮವು ತನ್ನ ಅವಯವಗಳನ್ನು ಮರೆಮಾಡಿಕೊಂಡಂತೆ ತನ್ನ ದೋಷಗಳನ್ನು ಮರೆಮಾಡಿಕೊಳ್ಳಬೇಕು.

ನ ಶತ್ರುರಕ್ಷಪತಿತೋ ನ ಮೋಕ್ತವ್ಯಃ ಕಥಂಚನ |
ಕಂಟಕೋ ಹಿ ದುರುಚ್ಛಿನ್ನ ಆಸ್ರಾವಂ ಜನಯೇಚ್ಚಿರಮ್ ॥7॥

ದೃಷ್ಟಿಗೆ ಬಿದ್ದ ಶತ್ರುಗಳನ್ನು ಎಂದೂ ಬಿಡಬಾರದು. ಮುಳ್ಳನ್ನು ತೆಗೆಯದಿದ್ದರೆ ಅದು ಬಹುಕಾಲ ರಕ್ತವನ್ನು ಸುರಿಸುತ್ತದೆ.

ವಧಮೇವ ಪ್ರಶಂಸಂತಿ ಶತ್ರೂಣಾಮಪಕಾರಿಣಾಮ್ |
ನಿರುದ್ವಿಗ್ನೋ ಹಿ ಭವತಿ ಹತ್ವಾ ಚ ರಿಪುಮೋಜಸಾ ॥8॥

ಅಪಕಾರವನ್ನು ಮಾಡುವ ಶತ್ರುಗಳಿಗೆ ವಧೆಯೇ ಶ್ರೇಷ್ಠವೆಂದು ರಾಜನೀತಿಯನ್ನು ತಿಳಿದವರು ಹೇಳುತ್ತಾರೆ. ಶತ್ರುವನ್ನು ತನ್ನ ಪರಾಕ್ರಮದಿಂದ ಕೊಂದವನು ಉದ್ವೇಗರಹಿತನಾಗುತ್ತಾನೆ.
ಹನ್ಯಾದಮಿತ್ರಂ ದಂಡೇನ ಹನ್ಯಾತ್ ಪೂರ್ವಾಪಕಾರಿಣಮ್ |
ಹನ್ಯಾತ್ ತ್ರೀನ್ ಪಂಚ ಸಪ್ತೇತಿ ಪರಪಕ್ಷಸ್ಯ ಸರ್ವಶಃ ॥9॥
ಶತ್ರುಗಳನ್ನು ದಂಡದಿಂದ ಕೊಲ್ಲಬೇಕು. ಹಿಂದೆ ಅಪಕಾರವನ್ನು ಮಾಡಿದವರನ್ನೂ ಸಹ ದಂಡದಿಂದಲೇ ಕೊಲ್ಲಬೇಕು. ಹಾಗೆ ಕೊಲ್ಲುವಾಗ ಪರಪಕ್ಷದ ಎಲ್ಲರನ್ನೂ ಒಟ್ಟಿಗೆ ಕೊಲ್ಲದೆ ಮೂರು ಜನ, ಐದು ಜನ, ಏಳು ಜನ ಎಂದು ವಿಭಾಗಿಸಿ ಎಲ್ಲರನ್ನೂ ಕ್ರಮವಾಗಿ ಸಂಹಾರ ಮಾಡಬೇಕು. (ರಾಜನೀತಿಯ ದೃಷ್ಟಿಯಿಂದ ಶತ್ರುಗಳ ಪ್ರಭುಶಕ್ತಿ, ಉತ್ಸಾಹಶಕ್ತಿ ಮತ್ತು ಮಂತ್ರಶಕ್ತಿಯನ್ನು ನಾಶಮಾಡಬೇಕು. ಸಾಮ, ದಾನ, ಭೇದ, ದಂಡ, ಯುದ್ಧಸಿದ್ಧತೆ ಎಂಬ ಐದನ್ನೂ ನಾಶಮಾಡಬೇಕು. ಸ್ವಾಮಿ, ಅಮಾತ್ಯ, ಜನಪದ, ದಂಡ, ದುರ್ಗ, ಕೋಶ, ಮತ್ತು ಅಮಿತ್ರ ಎಂಬ ಈ ಏಳನ್ನೂ ನಾಶ ಮಾಡಬೇಕು.)
ಮೂಲಮೇವಾದಿತಶ್ಛಿಂದ್ಯಾತ್ ಪರಪಕ್ಷಸ್ಯ ನಿತ್ಯಶಃ |
ತತೋಽನ್ಯಾನಂತರಾನ್ ಪಕ್ಷಾನ್ ಛಿಂದ್ಯಾತ್ ಸರ್ವಾನಶೇಷತಃ ॥10॥
ಪರಪಕ್ಷದ ಮೂಲವನ್ನೇ ಮೊದಲು ಛೇದಿಸಬೇಕು. ಅನಂತರ ಆ ಪ್ರಧಾನರಾದವರಿಗೆ ಸಹಾಯಭೂತರಾದ ಮತ್ತು ಸಮೀಪರಾದ ಎಲ್ಲರನ್ನೂ ನಿಶ್ಶೇಷವಾಗಿ ಛೇದಿಸಬೇಕು.
ಛಿನ್ನಮೂಲೇ ಹ್ಯಧಿಷ್ಠಾನೇ ಸರ್ವೇ ತಜ್ಜೀವಿನೋ ಹತಾಃ |
ಕಥಂ ನು ಶಾಖಾ ಜೀವೇಯುಶ್ಛಿನ್ನಮೂಲೇ ವನಸ್ಪತೌ ॥11॥
ಆಧಾರವಾದ ವಸ್ತುವು ಮೂಲದಲ್ಲಿಯೇ ಛೇದಿಸಲ್ಪಟ್ಟರೆ, ಅದನ್ನು ಉಪಜೀವಿಸಿಕೊಂಡಿರುವರೆಲ್ಲರೂ ಹತರಾಗುತ್ತಾರೆ. ವೃಕ್ಷದ ಮೂಲವನ್ನು ಕತ್ತರಿಸದ ಮೇಲೆ ಕೊಂಬೆಗಳು ಹೇಗೆ ಉಳಿಯಲು ಸಾಧ್ಯ?
ಸುವಿಕ್ರಾಂತಂ ಸುವಿಸ್ತೀರ್ಣಂ ಸುಯುದ್ಧಮಪಲಾಯಿನಮ್ |
ಆಪದಾಮಥ ಕಾಲೇಷು ಕಾರ್ಯಾ ನಾತ್ರ ವಿಚಾರಣಾ ॥12॥
ಪರಾಕ್ರಮಶಾಲಿಯಾದ, ಬಹಳ ಜನರಲ್ಲಿ ಮನ್ನಣೆಯನ್ನು ಪಡೆದ, ಯುದ್ಧಕೌಶಲವುಳ್ಳ, ಯುದ್ಧದಿಂದ ಎಂದೂ ಹಿಮ್ಮೆಟ್ಟದಿರುವ ಅಪಕಾರಿಯನ್ನು ಅವನ ಆಪತ್ತಿನ ಕಾಲವನ್ನು ನೋಡಿ ತಕ್ಷಣ ಕೊಲ್ಲಬೇಕು. ಇದರಲ್ಲಿ ಬೇರೆ ಏನನ್ನೂ ವಿಚಾರ ಮಾಡಬಾರದು.
ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ |
ವೃಕವಚ್ಚಾವಲುಂಪೇತ ಶರವಚ್ಚ ವಿನಿಷ್ಪತೇತ್ ॥13॥
ಬಕಪಕ್ಷಿಯಂತೆ ವಿಷಯಗಳನ್ನು ನಿಧಾನವಾಗಿ ಆಲೋಚಿಸಬೇಕು. ಸಿಂಹದಂತೆ ತಕ್ಷಣದಲ್ಲಿ ಎರಗಬೇಕು. ತೋಳಗಳಂತೆ ಅಪಕಾರಿಯನ್ನು ಹರಿದು ಹಾಕಬೇಕು. ಬಾಣದಂತೆ ಯಾವಾಗಲೂ ಉದ್ದಿಷ್ಟವಾದ ಗುರಿಯನ್ನು ತಲುಪಬೇಕು.
ನಿಶಿತ್ರಂಶಂ ಹೃದಯಂ ಕೃತ್ವಾ ವಾಚಮಿಕ್ಷುರಸೋಪಮಾಮ್ |
ಗೃಹ್ಣೀಯಾದ್ ದ್ವಿಷತಃ ಪಾದೌ ಹಾರ್ಯಮುನ್ನಾಯ ತಚ್ಛಿರಃ ॥14॥
ಹೃದಯವನ್ನು ಕತ್ತಿಯಂತೆ ಕ್ರೂರವಾಗಿ ಮಾಡಿಕೊಂಡು, ಬಾಯಿಯಲ್ಲಿ ಕಬ್ಬಿನ ರಸದಂತೆ ಸಿಹಿಯಾದ ಮಾತುಗಳನ್ನು ಆಡಬೇಕು. ಸಮಯ ಬಂದಾಗ ಶತ್ರುಗಳ ಪಾದವನ್ನೂ ಹಿಡಿಯಬೇಕು. ಅನಂತರ, ಅವನ ತಲೆಯನ್ನು ಎತ್ತಿ ಕತ್ತರಿಸಬೇಕು.
ಕಥಂ ನು ಪರಿಯಾಸ್ಯಾಮೋ ನ ಜ್ಞಾಯಾಮಹೇ ವಯಮ್ |
ದಾತೃತ್ವೇನ ಗೃಹೀಷ್ಯಾಮೋ ಭೇದತೋ ದಂಡತೋಽಪಿವಾ ॥15॥
ನಾವು ಹೇಗೆ ಈ ಉಪಾಯ ಮಾರ್ಗದ ಅಂತವನ್ನು ತಲುಪುವುದಿಲ್ಲವೋ ತಿಳಿಯುವುದಿಲ್ಲ ಎಂಬ ಭಾವನೆ ಇದ್ದಾಗ ದಾನದಿಂದಲಾಗಲೀ, ಭೇದದಿಂದಾಗಲೀ, ದಂಡದಿಂದಾಗಲೀ ವ್ಯವಹರಿಸಬೇಕು.
ಅಂಧಃ ಸ್ಯಾದಂಧವೇಲಾಯಾಂ ಬಾಧಿರ್ಯಮಪಿ ಸಂಶ್ರಯೇತ್ |
ಕುಣಾತ್ ತೃಣಮಯಂ ಚಾಶು ಶಯೀತ ಮೃತಶಾಯಿಕಾಮ್ ॥16॥
ಅಂಧನಾಗಬೇಕಾಗಿ ಬಂದಾಗ ಅಂಧನಾಗಬೇಕು, ಕಿವುಡನಾಗಬೇಕಾದಾಗ, ಕಿವುಡನ್ನು ಆಶ್ರಯಿಸಬೇಕು. ಹುಳಕಡ್ಡಿ ಎಂಬ ಹುಳುವು ಕಾಷ್ಠಮಯವಾದ ಗೂಡನ್ನು ಮಾಡಿ ಒಳಗೆ ಸೇರಿಕೊಳ್ಳುವಂತೆ ಸಮಯದಲ್ಲಿ ಬೇಗ ಸತ್ತವರಂತೆ ಮಲಗಬೇಕು.
ಏಕಾಗ್ರಾಚ್ಚಾಪಿ ವಸತೋ ನಿತ್ಯಂ ವಿವರದರ್ಶಕಃ |
ರಾಜನ್ ಕ್ಷತ್ರಸಪತ್ನಾತ್ ತು ನಿತ್ಯೋದ್ವಿಗ್ನಃ ಸಮಾಚರೇತ್ ॥17॥
ಶತ್ರುವು ಎಷ್ಟು ಏಕಾಗ್ರತೆಯಿಂದ ವಾಸ ಮಾಡಿದರೂ, ಯಾವಾಗಲೂ ಅವನ ಛಿದ್ರವನ್ನು ಗಮನಿಸುತ್ತಿರಬೇಕು. ರಾಜನೇ, ಕ್ಷತ್ರಿಯನಾದ ಶತ್ರುವಿಗೆ ಯಾವಾಗಲೂ ಹೆದರಿ, ಉಚಿತವಾದ ಪ್ರತಿಕ್ರಿಯೆಯನ್ನು ಮಾಡಬೇಕು.
ಅಗ್ನ್ಯಾಧಾನೇನ ಯಜ್ಞೇನ ಕಾಷಾಯೇಣ ಜಟಾಜಿನೈಃ |
ಲೋಕಾನ್ ಪ್ರಸ್ತಾಯಿತ್ವೈವಂ ತತೋ ಲುಂಪೇದ್ ಯಥಾ ವೃಕಃ ॥18॥
ಅಗ್ನ್ಯಾಧಾನವನ್ನು ಮಾಡಿ, ಯಜ್ಞವನ್ನು ಮಾಡಿ, ಕಾಷಾಯ ವಸ್ತ್ರಗಳನ್ನು ಧರಿಸಿ ಅಥವಾ ಜಟಾಜಿನಗಳನ್ನು ಧರಿಸಿ ಜನರನ್ನು ನಂಬಿಸಬೇಕು. ಅನಂತರ ತೋಳಗಳಂತೆ ಅವರನ್ನು ಸೂರೆ ಮಾಡಬೇಕು.
ಅಂಕುಶಂ ಶೌಚಮಿತ್ಯಾಹುರರ್ಥಾನಾಮುಪಧಾರಣೇ |
ಆನಾಮ್ಯ ಫಲಿನೀಂ ಶಾಖಾಂ ಪಕ್ವಂ ಪಕ್ವಂ ಪ್ರಶಾತಯೇತ್ ॥19॥
ಅರ್ಥವನ್ನು ಗಳಿಸಿ ಉಳಿಸಿಕೊಳ್ಳುವುದರಲ್ಲಿ ಕಪಟದಿಂದ ಮಾಡಿದ ಧರ್ಮಾಚರಣೆಯನ್ನು ಅಂಕುಶವೆಂದು ಕರೆಯುತ್ತಾರೆ. ಫಲಗಳಿಂದ ತುಂಬಿದ ಶಾಖೆಯನ್ನು ಬಗ್ಗಿಸಿ ಪಕ್ವವಾದ ಫಲಗಳನ್ನು ಒಂದೊಂದಾಗಿ ಉರುಳಿಸಬೇಕು.
ವಹೇದಮಿತ್ರಂ ಸ್ಕಂಧೇನ ಯಾವತ್ ಕಾಲಸ್ಯ ಪರ್ಯಯಃ |

ತತಃ ಸಾರಮುಪಾದಾಯ ಭಿಂದ್ಯಾದ್ ಘಟಮಿವಾಶ್ಮನಿ ॥20॥
ಕಾಲವು ಅನುಕೂಲವಾಗುವವರೆಗೆ ಶತ್ರುವನ್ನು ಹೆಗಲ ಮೇಲೆ ಹೊರಬೇಕು. ಅನಂತರ ಕಾಲವು ಅನುಕೂಲವಾದಾಗ ಅವನ ಸರ್ವಸ್ವವನ್ನೂ ತಿಳಿದುಕೊಂಡು, ಕಲ್ಲಿನ ಮೇಲೆ ಮಡಕೆಯನ್ನು ಒಡೆದಂತೆ ಅವನನ್ನು ನಾಶಮಾಡಬೇಕು.
ಅಮಿತ್ರಸ್ತು ನ ಮೋಕ್ತವ್ಯಃ ಕೃಪಣಂ ಬಹ್ವಪಿ ಬ್ರುವನ್ |
ದುಃಖಮಸ್ಮಿನ್ ನ ಕರ್ತವ್ಯಂ ವಿಧ್ಯಾದೇವಾಪಕಾರಿಣಮ್ ॥21॥
ಶತ್ರುವಾದವನು ಎಷ್ಟೇ ದೈನ್ಯದ ಮಾತುಗಳನ್ನಾಡಿದರೂ ಅವನನ್ನು ಬಿಡಬಾರದು. ಅವನಲ್ಲಿ ಎಂದೂ ಕೃಪೆಯನ್ನು ತೋರಿಸಬಾರದು. ಅಪಕಾರ ಮಾಡಿದವನನ್ನು ಸಂಹಾರವನ್ನೇ ಮಾಡಬೇಕು.
ಹನ್ಯಾದಮಿತ್ರಂ ಸಾಂತ್ವೇನ ಸಾಮಭೇದನದಂಡನೈಃ |
ತಥಾ ಭೇದೇನ ದಂಡೇನ ಭೇದೈರ್ದಂಡೈರಥಾಪಿ ವಾ ॥22॥
ಶತ್ರುಗಳನ್ನು ಸಾಮದಿಂದ ಕೊಲ್ಲಬೇಕು ಅಥವಾ ಸಾಮಭೇದ ದಂಡಗಳಿಂದ ಕೊಲ್ಲಬೇಕು ಅಥವಾ ಕೇವಲ ಭೇದದಿಂದ ಅಥವಾ ದಂಡದಿಂದ ಕೊಲ್ಲಬೇಕು ಅಥವಾ ಭೇದಗಳಿಂದಲೂ ಮತ್ತು ದಂಡಗಳಿಂದಲೂ ಕೊಲ್ಲಬೇಕು.
ದುರ್ಯೋಧನಃ
ಕಥಂ ಸಾಂತ್ವೇನ ದಾನೇನ ಭೇದೈರ್ದಂಡೈರಥಾಪಿ ಚ |
ಅಮಿತ್ರಃ ಶಕ್ಯತೇ ಹಂತುಂ ತನ್ಮೇ ಬ್ರೂಹಿ ಯಥಾತಥಮ್ ॥23॥
ಸಾಮದಿಂದ ಅಥವಾ ದಾನದಿಂದ ಅಥವಾ ಭೇದದಿಂದ ಅಥವಾ ದಂಡದಿಂದ ಶತ್ರುವನ್ನು ಕೊಲ್ಲುವುದು ಹೇಗೆ. ಅದನ್ನು ನನಗೆ ಯಥಾರ್ಥವಾಗಿ ತಿಳಿಸು.
ಕಣಿಂಕಃ
ಶೃಣು ರಾಜನ್ ಯಥಾ ವೃತ್ತಂ ವನೇ ವಸತಿ ಜಂಬುಕಃ |
ಸಖಾಯಸ್ತಸ್ಯ ವ್ಯಾಘ್ರಶ್ಚ ವೃಕೋ ನಕುಲಮೂಷಿಕೌ ॥24॥
ರಾಜನೇ ಹಿಂದೆ ನಡೆದ ಒಂದು ವೃತ್ತಾಂತವನ್ನು ಹೇಳುತ್ತೇನೆ. ಅದನ್ನು ಕೇಳು. ಒಂದು ಕಾಡಿನಲ್ಲಿ ಒಂದು ನರಿಯು ವಾಸಿಸುತ್ತಿತ್ತು. ಅದಕ್ಕೆ ಒಂದು ವ್ಯಾಘ್ರವೂ, ಒಂದು ತೋಳವೂ, ಒಂದು ಮುಂಗುಸಿಯೂ (ನಕುಲ), ಒಂದು ಇಲಿಯೂ ಸ್ನೇಹಿತರಾಗಿದ್ದರು.
ತೇ ಪಶ್ಯಂತಿ ವನೇ ತಸ್ಮಿನ್ ಬಲಿನಂ ಮೃಗಯೂಥಪಮ್ |
ಅಶಕ್ತಾ ಗ್ರಹಣೇ ತಸ್ಯ ತತೋ ಮಂತ್ರಮಕುರ್ವತ ॥25॥
ಅವರೆಲ್ಲರೂ ಆ ಕಾಡಿನಲ್ಲಿ ಬಲಿಷ್ಠವಾದ ಒಂದು ನಾಯಕಜಿಂಕೆಯನ್ನು ನೋಡಿದರು. ಅದನ್ನು ಹಿಡಿಯುವುದರಲ್ಲಿ ಅಶಕ್ತರಾದ ಅವರು ಆಗ ಒಂದು ಮಂತ್ರಾಲೋಚನೆಯನ್ನು ನಡೆಸಿದರು.
ಜಂಬುಕಃ
ಅಸಕೃದ್ ಯತಿತೋ ಹ್ಯೇಷ ಹಂತುಂ ವ್ಯಾಘ್ರ ತ್ವಯಾಽನಘ |
ಅಸೌ ವೈ ಜವಸಂಪನ್ನೋ ಬುದ್ಧಿಶಾಲೀ ನ ಶಕ್ಯತೇ ॥26॥
ಎಲೈ ನಿರ್ದುಷ್ಟನಾದ ವ್ಯಾಘ್ರನೇ, ನಾನು ಈ ಜಿಂಕೆಯನ್ನು ಕೊಲ್ಲಲು ಅನೇಕ ಬಾರಿ ಪ್ರಯತ್ನ ಮಾಡಿದೆ. ಆದರೆ ವೇಗದಿಂದ ಕೂಡಿದ ಬುದ್ಧಿಶಾಲಿಯಾದ ಈ ಜಿಂಕೆಯನ್ನು ಕೊಲ್ಲಲು ಸಾಧ್ಯವಿಲ್ಲ.
ಮೂಷಿಕೋಽಸ್ಯ ಶಯಾನಸ್ಯ ಚರಣೌ ಭಕ್ಷಯತ್ವಯಮ್ |
ಅಥೈನಂ ಭಕ್ಷಿತೇ ಪಾದೇ ಮೃಗಂ ವ್ಯಾಘ್ರೋ ಹನೇತ್ ತದಾ |
ತತಸ್ತಂ ಭಕ್ಷಯಿಷ್ಯಾಮಃ ಸರ್ವೇ ಮುದಿತಮಾನಸಾಃ ॥27॥
ಜಿಂಕೆಯು ಮಲಗಿರುವಾಗ ಈ ಇಲಿಯು ಅದರ ಪಾದಗಳನ್ನು ಕಚ್ಚಿ ತಿನ್ನಲಿ. ಜಿಂಕೆಯ ಪಾದಗಳು ಗಾಯಗೊಂಡರೆ, ವ್ಯಾಘ್ರವು ಅದನ್ನು ಸಂಹರಿಸುತ್ತದೆ. ಆಗ ನಾವೆಲ್ಲರೂ ಸಂತೋಷದಿಂದ ಆ ಜಿಂಕೆಯನ್ನು ತಿನ್ನೋಣ.
ಕಣಿಂಕಃ
ಜಂಬುಕಸ್ಯ ತು ತೇ ವಾಕ್ಯಂ ತಥಾ ಚಕ್ರುಃ ಸಮಾಹಿತಾಃ |
ಮೂಷಿಕಾಭಕ್ಷಿತೈಃ ಪಾದೈರ್ಮೃಗಂ ವ್ಯಾಘ್ರೋಽಹನತ್ ತದಾ ॥28॥
ಅವೆಲ್ಲಾ ಪ್ರಾಣಿಗಳು ಜಂಬುಕನ (ನರಿ) ಮಾತಿನಂತೇ ನಡೆದುಕೊಂಡವು. ಜಿಂಕೆಯ ಪಾದಗಳನ್ನು ಮೂಷಿಕವು ಭಕ್ಷಿಸುತ್ತಿರಲು, ಹುಲಿಯು ಅದನ್ನು ಕೊಂದಿತು.
ಜಂಬುಕಃ
ಸ್ನಾತ್ವಾಽಗಚ್ಛತ ಭದ್ರಂ ವೋ ರಕ್ಷಾಮಿ ಮೃಗಯೂಥಪಮ್ |
ನಿಮಗೆಲ್ಲರಿಗೂ ಒಳ್ಳೆಯದಾಗಲಿ. ನೀವೆಲ್ಲರೂ ಸ್ನಾನ ಮಾಡಿ ಬನ್ನಿ. ಅಲ್ಲಿಯವರೆಗೆ ನಾನು ಜಿಂಕೆಯನ್ನು ರಕ್ಷಿಸಿಕೊಂಡಿರುತ್ತೇನೆ.
ಕಣಿಂಕಃ
ಸೃಗಾಲವಚನಾಚ್ಚಾಪಿ ಗತಾಃ ಸರ್ವೇ ನದೀಂ ತತಃ ॥29॥
ಸಂಚಿಂತಯಂತೋ ಮನಸಾ ಮಾಂಸತೃಪ್ತಿಂ ಪುನಃಪುನಃ |
ಅಥಾಗಚ್ಛತ್ ಪೂರ್ವಮೇವ ಸ್ನಾತ್ವಾ ವ್ಯಾಘ್ರೋ ಮಹಾಬಲಃ |
ಜಂಬುಕಶ್ಚಾಭವತ್ ತತ್ರ ತದಾ ಚಿಂತಾಪರೋ ಭೃಶಮ್ ॥30॥
ನರಿಯ ಮಾತುಗಳನ್ನು ಕೇಳಿ ಎಲ್ಲಾ ಪ್ರಾಣಿಗಳು ಮನಸ್ಸಿನಲ್ಲಿ ಮಾಂಸತೃಪ್ತಿಯನ್ನು ಪುನಃ ಪುನಃ ಚಿಂತಿಸುತ್ತಾ ನದಿಗೆ ಹೋದವು. ಅನಂತರ ಮಹಾಬಲವುಳ್ಳ ವ್ಯಾಘ್ರವು ಮೊದಲು ಸ್ನಾನ ಮಾಡಿ ಬಂದಿತು. ಅದನ್ನು ನೋಡಿ, ನರಿಗೆ ತುಂಬಾ ಚಿಂತೆಯಾಯಿತು.

ವ್ಯಾಘ್ರಃ
ಕಿಂ ಶೋಚಸಿ ಮಹಾಪ್ರಾಜ್ಞ ತ್ವಂ ನೋ ಬುದ್ಧಿಮತಾಂ ವರಃ |
ಪಿಶಿತಸ್ಯಾಶಿತಾರೋಽದ್ಯ ವಿಹರಿಷ್ಯಾಮಹೇ ಸುಖಮ್ ॥31॥
ಮಹಾಪ್ರಾಜ್ಞನೇ, ನೀನು ನಮ್ಮೆಲ್ಲರಿಗಿಂತಲೂ ಬುದ್ಧಿವಂತನಾದವನು. ಏನನ್ನು ಯೋಚಿಸುತ್ತಿದ್ದೀಯೆ. ಮಾಂಸವನ್ನು ತಿಂದು ನಾವೆಲ್ಲರೂ ಸಂತೋಷದಿಂದ ವಿಹಾರವನ್ನು ಮಾಡೋಣ.
ಜಂಬುಕಃ
ಅವಮತ್ಯ ಮಹಾಪ್ರಾಜ್ಞ ಮೂಷಿಕಸ್ತ್ವಂ ವಚೋಽಬ್ರವೀತ್ |
ಧಿಗ್ಬಲಂ ಮೃಗರಾಜಸ್ಯ ಮಯಾಽದ್ಯಾಯಂ ಮೃಗೋ ಹತಃ ॥32॥
ಮಹಾಪ್ರಾಜ್ಞನೇ, ನಿನ್ನನ್ನು ಅವಮಾನ ಮಾಡಿ ಮೂಷಿಕವು ಹೀಗೆ ಹೇಳಿತು. ಮೃಗರಾಜನಾದ ವ್ಯಾಘ್ರನ ಬಲಕ್ಕೆ ಧಿಕ್ಕಾರವಿರಲಿ. ಈ ಜಿಂಕೆಯು ಈ ದಿನ ನನ್ನಿಂದ ಹತವಾಗಿದೆ.
ಮದ್ಬಾಹುಬಲಮಾಶ್ರಿತ್ಯ ತೃಪ್ತಿರ್ಯಸ್ಯ ಭವಿಷ್ಯತಿ |
ತಸ್ಯೈವಂ ಗದತಸ್ತ್ವದ್ಯ ತತೋ ಭಕ್ಷ್ಯಂ ನ ರೋಚಯೇ ॥33॥
ಏಕೆಂದರೆ, ನನ್ನ ಬಾಹುಬಲದಿಂದ ಈ ದಿನ ವ್ಯಾಘ್ರನಿಗೆ ತೃಪ್ತಿ ಉಂಟಾಗುತ್ತದೆ. ಹೀಗೆ ಮೂಷಿಕವು ಹೇಳಿದ್ದರಿಂದ ನನಗೆ ಮಾಂಸ ಭಕ್ಷಣದಲ್ಲಿ ಉತ್ಸಾಹವಿಲ್ಲ.
ವ್ಯಾಘ್ರಃ
ಯದ್ಯೇವಮಬ್ರವೀತ್ ಸೋಽಸ್ಮಾನ್ ಕಾಲೇ ಚಾಸ್ಮ್ಯವಬೋಧಿತಃ |
ಸ್ವಬಾಹುಬಲಮಾಶ್ರಿತ್ಯ ಹನಿಷ್ಯಾಮಿ ವನೇಚರಾನ್ |
ಖಾದಿಷ್ಯಾಮಿ ಚ ಮಾಂಸಾನೀತ್ಯುಕ್ತ್ವಾ ಸ ಪ್ರಾದ್ರವದ್ ವನಮ್॥34॥
ಒಂದು ಪಕ್ಷ ಮೂಷಿಕವು ಹೀಗೆ ಹೇಳಿದ್ದರೆ, ನನ್ನನ್ನು ಸರಿಯಾದ ಕಾಲದಲಿ ಎಚ್ಚರಿಸಿದ್ದೀಯೆ. ನನ್ನ ಬಾಹುಬಲವನ್ನೇ ಆಶ್ರಯಿಸಿ, ವನಚರ ಪ್ರಾಣಿಗಳನ್ನು ಕೊಂದು ಅವುಗಳ ಮಾಂಸವನ್ನು ತಿನ್ನುವೆನು ಎಂದು ಹೇಳಿ ಹುಲಿಯು ಓಡಿ ಹೋಯಿತು.
ಕಣಿಂಕಃ
ಏತಸ್ಮಿನ್ನೇವ ಕಾಲೇ ತು ಮೂಷಿಕೋಽಪ್ಯಾಜಗಾಮ ಹ |
ಈ ಸಮಯಕ್ಕೆ ಸರಿಯಾಗಿ ಮೂಷಿಕವೂ ಅಲ್ಲಿಗೆ ಬಂದಿತು.
ಜಂಬುಕಃ
ಶೃಣು ಮೂಷಿಕ ಭದ್ರಂ ತೇ ಅಬ್ರವೀನ್ನಕುಲೋ ಯಥಾ ॥35॥
ಮೃಗಮಾಂಸಂ ನ ಖಾದೇಯಂ ಪರಮಸ್ಮದ್ವಿಧಸ್ಯ ತತ್ |
ಮೂಷಿಕಂ ಭಕ್ಷಯಿಷ್ಯಾಮಿ ತದ್ ಭವಾನನುಮನ್ಯತಾಮ್ ॥36॥
ಎಲೈ ಮೂಷಿಕವೇ, ನಿನಗೆ ಒಳ್ಳೆಯದಾಗಲಿ. ಮುಂಗುಸಿಯು ಏನು ಹೇಳಿತೆಂದು ನಿನಗೆ ತಿಳಿಸುತ್ತೇನೆ. ಜಿಂಕೆಯ ಮಾಂಸವನ್ನು ನಾನು ತಿನ್ನುವುದಿಲ್ಲ. ಏಕೆಂದರೆ, ಅದು ಸಸ್ಯಾಹಾರಿಯ ಮಾಂಸ. ನಾನು ಮೂಷಿಕವನ್ನೇ ಭಕ್ಷಿಸುವೆನು. ಅದಕ್ಕೆ ನೀನು ಅನುಮತಿಯನ್ನು ಕೊಡು.
ಕಣಿಂಕಃ
ತಚ್ಛ್ರುತ್ವಾ ಮೂಷಿಕೋ ವಾಕ್ಯಂ ಸಂತ್ರಸ್ತಃ ಪ್ರಾದ್ರವದ್ ಭಯಾತ್ |
ತತಃ ಸ್ನಾತ್ವಾ ಚ ತಂ ದೇಶಮಾಜಗಾಮ ವೃಕೋ ನೃಪ ॥37॥
ರಾಜನೇ, ಅದನ್ನು ಕೇಳಿ ಮೂಷಿಕವು ಭಯದಿಂದ ನಡುಗುತ್ತಾ, ಓಡಿಹೋಯಿತು. ಅನಂತರ ಅಲ್ಲಿಗೆ ಸ್ನಾನವನ್ನು ಮಾಡಿದ ವೃಕವು (ತೋಳವು) ಬಂದಿತು.
ಜಂಬುಕಃ
ಮೃಗರಾಜೋ ಹಿ ಸಂಕ್ರುದ್ಧೋ ನ ನಃ ಸಾಧು ಭವಿಷ್ಯತಿ |
ಸಕಲತ್ರಃ ಸಮಾಯಾತಿ ಕುರುಷ್ವ ಯದನಂತರಮ್ ॥38॥
ಮೃಗರಾಜನಾದ ವ್ಯಾಘ್ರನು ಕೋಪಗೊಂಡಿದ್ದಾನೆ. ಅದರಿಂದ ನಮಗೆ ಕ್ಷೇಮವಾಗುವುದಿಲ್ಲ. ವ್ಯಾಘ್ರನು ತನ್ನ ಪತ್ನಿಯೊಡನೆ ಬರುತ್ತಿದ್ದಾನೆ. ಏನು ಮಾಡಬೇಕೆಂದು ನೀನೇ ಯೋಚಿಸು.
ಕಣಿಂಕಃ
ಏವಂ ಸಂಚೋದಿತಸ್ತೇನ ಜಂಬುಕೇನ ತದಾ ವೃಕಃ |
ವ್ಯಾಘ್ರೋದ್ವಿಗ್ನಮನಾ ಭೂತ್ವಾ ಪ್ರಯಾತಃ ಪಿಶಿತಾಶನಃ ॥39॥
ಹೀಗೆ ಆ ನರಿಯಿಂದ ಪ್ರೇರಿಸಲ್ಪಟ್ಟ ಮಾಂಸಾಹಾರಿಯಾದ ಆ ವೃಕವು ಹುಲಿಗೆ ಮನಸ್ಸಿನಲ್ಲಿ ಹೆದರಿ ಓಡಿ ಹೋಯಿತು.
ಏತಸ್ಮಿನ್ನೇವ ಕಾಲೇ ತು ನಕುಲೋಽಪ್ಯಾಜಗಾಮ ಹ |
ತಮುವಾಚ ಮಹಾರಾಜ ನಕುಲಂ ಜಂಬುಕೋ ವನೇ ॥40॥
ಆ ಕಾಲಕ್ಕೆ ಸರಿಯಾಗಿ ಮುಂಗುಸಿಯು ಅಲ್ಲಿಗೆ ಬಂದಿತು. ಮಹಾರಾಜನೇ, ಆ ನರಿಯು ಕಾಡಿನಲ್ಲಿ ಮುಂಗುಸಿಯನ್ನು ಕುರಿತು ಹೀಗೆ ಹೇಳಿತು.
ಜಂಬುಕಃ
ಸ್ವಬಾಹುಬಲಮಾಶ್ರಿತ್ಯ ನಿರ್ಜಿತಾಸ್ತೇ ಮಯಾ ಗತಾಃ |

ಮಮ ದತ್ವಾ ನಿಯುದ್ಧಂ ಸ್ವಂ ಭುಂಕ್ಷ್ವ ಮಾಂಸಂ ಯಥೇಪ್ಸಿತಮ್ ॥41॥
ನನ್ನ ಬಾಹುಬಲದಿಂದ ಅವರೆಲ್ಲರನ್ನೂ ಸೋಲಿಸಿದ್ದೇನೆ. ಅವರು ಹೊರಟು ಹೋದರು. ನೀನೂ ನನ್ನ ಜೊತೆಯಲ್ಲಿ ಯುದ್ಧವನ್ನು (ಕುಸ್ತಿಯನ್ನು) ಮಾಡಿ ಅನಂತರ, ನಿನಗೆ ಇಷ್ಟ ಬಂದಂತೆ ಮಾಂಸವನ್ನು ತಿನ್ನು.
ನಕುಲಃ
ಮೃಗರಾಜೋ ವೃಕಶ್ಚೈವ ಬುದ್ಧಿಮಾಂಶ್ಚೈವ ಮೂಷಿಕಃ।
ನಿರ್ಜಿತಾಶ್ಚ ತ್ವಯಾ ವೀರ ತಸ್ಮಾದ್ ವೀರತರೋ ಭವಾನ್।
ನಾಹಮಪ್ಯುತ್ಸಹೇ ಯೋದ್ಧುಮಿತ್ಯುಕತ್ವ ಗಾಂ ವಿವೇಶ ಹ ॥42॥
ಎಲೈ ವೀರನೇ, ನೀನು ಮೃಗರಾಜನಾದ ವ್ಯಾಘ್ರವನ್ನೂ, ವೃಕವನ್ನೂ ಮತ್ತು ಬುದ್ಧಿಶಾಲಿಯಾದ ಮೂಷಿಕವನ್ನೂ ಸೋಲಿಸಿದ್ದೀಯೆ. ಆದ್ದರಿಂದ ನೀನು ಎಲ್ಲರಿಗಿಂತ ಪರಾಕ್ರಮಶಾಲಿ. ನಾನು ನಿನ್ನ ಜೊತೆಯಲ್ಲಿ ಯುದ್ಧಮಾಡಲು ಬಯಸುವುದಿಲ್ಲ ಎಂದು ಹೇಳಿ ಭೂಮಿಯಲ್ಲಿದ್ದ ಬಿಲದೊಳಗೆ ಹೋಯಿತು.
ಕಣಿಂಕಃ
ಏವಂ ತೇಷ್ವಪಯಾತೇಷು ಜಂಬುಕೋ ಹೃಷ್ಟಮಾನಸಃ।
ಖಾದತಿ ಸ್ಮ ತದಾ ಮಾಂಸಮಿತ್ಯೇವಂ ಮಂತ್ರನಿಶ್ಚಯಾತ್ ॥43॥
ಹೀಗೆ ಉಳಿದ ಪ್ರಾಣಿಗಳೆಲ್ಲವೂ ಹೋದ ಮೇಲೆ ನರಿಯು ಸಂತುಷ್ಟವಾದ ಮನಸ್ಸಿನಿಂದ ಈ ಮಂತ್ರಾಲೋಚನೆಯಿಂದ ಮಾಂಸವನ್ನು ತಿಂದಿತು.
ಏವಂ ತೇ ಕಥಿತಂ ರಾಜನ್ ಶೃಣು ಚಾಪ್ಯಪರಂ ನೃಪ।
ಪುತ್ರಃ ಸಖಾ ವಾ ಭ್ರಾತಾ ವಾ ಪಿತಾ ವಾ ಯದಿ ವಾ ಗುರುಃ ॥44॥
ಅರ್ಥೇ ಪರ್ಯವತಿಷ್ಠೇರನ್ ಕರ್ತವ್ಯಾ ಭೂತಿವರ್ಧನಾಃ।
ಶಪಥೇನಾಪ್ಯರಿಂ ಹನ್ಯಾನ್ನ ದೋಷ ಇತಿ ಭಾರ್ಗವಃ ॥45॥
ರಾಜನೇ, ಈ ಕಥೆಯನ್ನು ನಿನಗೆ ಹೇಳಿದ್ದೇನೆ. ಇನ್ನೂ ಒಂದು ವಿಷಯವನ್ನು ಕೇಳು. ಪುತ್ರನಾಗಲೀ, ಸ್ನೇಹಿತನಾಗಲೀ, ಸಹೋದರನಾಗಲೀ, ತಂದೆಯಾಗಲೀ ಅಥವಾ ಗುರುವಾಗಲೀ, ನಮ್ಮ ಕಾರ್ಯಕ್ಕೆ ಸಹಕಾರಿಗಳಾಗಿ ನಮ್ಮ ಐಶ್ವರ್ಯವನ್ನು ಹೆಚ್ಚಿಸುವಂತೆ ನೋಡಿಕೊಳ್ಳಬೇಕು. ಶಪಥದಿಂದಲಾದರೂ ಶತ್ರುವನ್ನು ಕೊಲ್ಲುವುದರಲ್ಲಿ ದೋಷವಿಲ್ಲ ಎಂದು ಶುಕ್ರಾಚಾರ್ಯರು ಹೇಳಿದ್ದಾರೆ.
ವಿಷೇಣ ಮಾಯಯಾ ವಾಽಪಿ ನೋಪೇಕ್ಷೇತ ಕಥಂಚನ।
ಉಭೌ ಯದಿ ಶಪೇಯಾತಾಂ ಶ್ರದ್ದಧಾನಸ್ತು ವಧ್ಯತೇ ॥46॥
ವಿಷದಿಂದಲಾಗಲೀ ಅಥವಾ ವಂಚನೆಯಿಂದಾಗಲೀ ಶತ್ರುವನ್ನು ಕೊಲ್ಲಬೇಕು. ಎಂದೂ ಉಪೇಕ್ಷೆ ಮಾಡಬಾರದು. ಇಬ್ಬರೂ ಶಪಥವನ್ನು ಮಾಡಿದರೆ, ಅವರಲ್ಲಿ ಯಾರು ಶ್ರದ್ಧಾಳುವೇ ಅವನು ವಧ್ಯನಾಗುತ್ತಾನೆ.
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ।
ಉತ್ಪಥಂ ಪ್ರತಿಪನ್ನಸ್ಯ ದಂಡೋ ಭವತಿ ಶಾಸನಮ್ ॥47॥
ಗುರುವಾದರೂ ಸಹ ಅಹಂಕಾರದಿಂದ ಕೂಡಿ ಕಾರ್ಯಾಕಾರ್ಯವನ್ನು ತಿಳಿಯದೆ ದುಮಾರ್ಗಗಾಮಿಯಾದರೆ, ಅವನಿಗೂ ದಂಡರೂಪ ಶಾಸನವನ್ನು ವಿಧಿಸಬೇಕಾಗುತ್ತದೆ.
ಕ್ರುದ್ಧೋಽಪ್ಯಕ್ರುದ್ಧರೂಪಃ ಸ್ಯಾಚ್ಚುಕ್ಲಃ ಪೂರ್ವಾಭಿಭಾಷಿತಾ।
ನ ಚೈನಂ ಕ್ರೋಧಸಂದೀಪ್ತಂ ವಿದ್ಯಾತ್ ಕಶ್ಚಿತ್ ಕಥಂಚನ ॥48॥
ಕೋಪವಿದ್ದರೂ ಕೋಪವಿಲ್ಲದೇ ಶಾಂತನಾಗಿ ತೋರಿಸಿಕೊಳ್ಳಬೇಕು. ಮೊದಲೇ ಮಾತನಾಡಿಸಬೇಕು. ತಾನು ಕ್ರೋಧದಿಂದ ಉರಿಯುತ್ತಿರುವುದನ್ನು ಯಾರೂ ತಿಳಿಯಬಾರದು.
ಪ್ರಹರಿಷ್ಯನ್ ಪ್ರಿಯಂ ಬ್ರೂಯಾತ್ ಪ್ರಹರನ್ನಪಿ ಭಾರತ।
ಪ್ರಹೃತ್ಯ ಚ ಪ್ರಿಯಂ ಬ್ರೂಯಾಚ್ಛೋಚನ್ನಿವ ರುದನ್ನಿವ ॥49॥
ಅಪಕಾರಿಯನ್ನು ಹೊಡೆಯಲು ಉದ್ದೇಶಿಸಿದರೂ ಹಿತವಾದುದನ್ನೇ ಮಾತನಾಡಬೇಕು. ಭಾರತನೇ ಹೊಡೆಯುವಾಗಲೂ ಹಿತವನ್ನೇ ಮಾತನಾಡಬೇಕು. ಹೊಡೆದ ಮೇಲೆಯೂ ಸಹ ಶೋಕವನ್ನೂ ಮತ್ತು ರೋದನವನ್ನೂ ನಟಿಸಿ ಪ್ರಿಯವನ್ನೇ ಮಾತನಾಡಬೇಕು.
ವಿಶ್ವಾಸಯೇಚ್ಚೈವ ಪರಂ ಸಾಮದಾನಾರ್ಯವೃತ್ತಿಭಿಃ।
ಅಥ ತಂ ಪ್ರಹರೇತ್ ಕಾಲೇ ಯದಾ ವಿಚಲಿತಃ ಪಥಿ ॥50॥
ಶತ್ರುವನ್ನು ಸಾಮ ದಾನ ಮತ್ತು ಉದಾರವೃತ್ತಿಗಳಿಂದ ನಂಬಿಕೆಯುಳ್ಳವನನ್ನಾಗಿ ಮಾಡಬೇಕು. ಯಾವಾಗ ಅವನು ಮಾರ್ಗದಲ್ಲಿ ನಡೆಯುವುದಕ್ಕೆ ಅಸಮರ್ಥನಾಗುತ್ತಾನೋ ಆಗ ಯೋಗ್ಯವಾದ ಕಾಲದಲ್ಲಿ ಅವನನ್ನು ಸಂಹರಿಸಬೇಕು.
ಅಪಿ ಘೋರಾಪರಾಧಸ್ಯ ಧರ್ಮಮಾಶ್ರಿತ್ಯ ತಿಷ್ಠತಃ।
ಸ ಹಿ ಪ್ರಚ್ಛಾದ್ಯತೇ ದೋಷಃ ಶೈಲೋ ಮೇಘೈರಿವಾಸಿತೈಃ ॥51॥
ತಾನು ಘೋರವಾದ ಅಪರಾಧವನ್ನು ಮಾಡಿದರೂ, ಧರ್ಮವನ್ನು ಆಶ್ರಯಿಸಿಕೊಂಡು ಇದ್ದರೆ (ಇರುವಂತೆ ತೋರಿಸಿಕೊಂಡರೆ) ಆ ಧರ್ಮವು ಮೋಡಗಳು ಪರ್ವತವನ್ನು ಮುಚ್ಚಿದಂತೆ ಅವನ ಅಪರಾಧವನ್ನು ಮುಚ್ಚುತ್ತದೆ.
ಯಸ್ಯ ಸ್ಯಾತ್ತು ವಧಃ ಪ್ರಾಪ್ತಃ ತಸ್ಯಾಗಾರಾವದಾಹನೇ।
ಅಧನಾನ್ ಭಿಕ್ಷುಕಾಂಶ್ಚೋರಾನ್ ವಿಷಕರ್ಮಸು ಯೋಜಯೇತ್ ॥52॥
ಯಾವ ಅಪಕಾರಿಯನ್ನು ಅಥವಾ ಶತ್ರುವನ್ನು ವಧೆ ಮಾಡಬೇಕಾಗಿದೆಯೋ, ಅಂತಹವನ ಮನೆಗೆ ಬೆಂಕಿಯನ್ನು ಹಚ್ಚಲು ಅಥವಾ

ಅವನಿಗೆ ವಿಷವನ್ನು ಉಣಿಸಲು ನಿರ್ಧನರಾದ ಭಿಕ್ಷುಕರನ್ನೂ, ಕಳ್ಳರನ್ನೂ ನಿಯೋಜಿಸಬೇಕು.
ಪ್ರತ್ಯುತ್ಥಾನಾಸನಾದ್ಯೇನ ಸಂಪ್ರದಾನೇನ ಕೇನಚಿತ್ |
ಪ್ರತಿಪ್ರಚ್ಛನ್ನಘಾತೀ ಸ್ಯಾತ್ ತೀಕ್ಷ್ಣದಂಷ್ಟ್ರ ಇವೋರಗಃ ॥53॥
ಎದ್ದು ನಿಲ್ಲುವುದು, ಆಸನವನ್ನು ನೀಡುವುದು ಅಥವಾ ದಾನವನ್ನು ಮಾಡುವುದು ಇಂತಹವುಗಳಿಂದ ವಂಚನೆಯನ್ನು ಮಾಡಿ ತೀಕ್ಷ್ಣದಂಷ್ಟ್ರವುಳ್ಳ ಸರ್ಪದಂತೆ ಪ್ರಚ್ಛನ್ನವಾಗಿ ಕೊಲ್ಲಬೇಕು.
ಅಶಂಕಿತೇಭ್ಯಃ ಶಂಕೇತ ಶಂಕಿತೇಭ್ಯಶ್ಚ ಸರ್ವದಾ |
ಅಶಂಕ್ಯಾದ್ ಭಯಮುತ್ಪನ್ನಮಪಿ ಮೂಲಾನ್ನಿಕೃತಂತಿ ॥54॥
ಯಾರ ವಿಷಯದಲ್ಲಿ ಸಂಶಯವಿಲ್ಲವೋ ಅವರಿಗೂ ಹೆದರಬೇಕು. ಯಾರ ವಿಷಯದಲ್ಲಿ ಸಂಶಯವಿದೆಯೋ ಅವರಿಗೆ ಯಾವಾಗಲೂ ಹೆದರಬೇಕು. ನಾವು ಶಂಕಿಸದಿರುವವರಿಂದ ಭಯ ಉತ್ಪನ್ನವಾದರೂ ಅದು ನಮ್ಮನ್ನು ಮೂಲಸಹಿತವಾಗಿ ನಾಶವನ್ನು ಮಾಡುತ್ತದೆ.
ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ |
ವಿಶ್ವಾಸಾದ್ ಭಯಮಾಪ್ನೋತಿ ತಸ್ಮಾತ್ ಸರ್ವಂ ನ ವಿಶ್ವಸೇತ್ ॥55॥
ಯಾರಲ್ಲಿ ವಿಶ್ವಾಸವಿಲ್ಲವೋ ಅವರಲ್ಲಿ ಎಂದೂ ವಿಶ್ವಾಸವನ್ನು ಮಾಡಬಾರದು. ಯಾರಲ್ಲಿ ವಿಶ್ವಾಸವಿದೆಯೋ ಅವರಲ್ಲೂ ಅತಿಯಾಗಿ ವಿಶ್ವಾಸ ಮಾಡಬಾರದು. ವಿಶ್ವಾಸದಿಂದ ಭಯವುಂಟಾಗುತ್ತದೆ. ಆದ್ದರಿಂದ ಯಾರನ್ನೂ ನಂಬಬಾರದು.
ಚಾರಾಃ ಸುವಿಹಿತಾಃ ಕಾರ್ಯಾ ಆತ್ಮನಶ್ಚ ಚರಸ್ಯ ಚ |
ಪಾಷಂಡಾನ್ ಬ್ರಾಹ್ಮಣಾದೀಂಶ್ಚ ಪರರಾಷ್ಟ್ರೇಷು ಯೋಜಯೇತ್ ॥56॥
ತನ್ನವರ ಮೇಲೆಯೂ ಗೂಢಚಾರರನ್ನು ಚೆನ್ನಾಗಿ ನಿಯೋಜಿಸಬೇಕು. ಗೂಢಚಾರರ ಮೇಲೆಯೂ ಗೂಢಚಾರರನ್ನು ಇಡಬೇಕು. ಅನ್ಯ ರಾಷ್ಟ್ರಗಳಲ್ಲಿ ಪಾಷಂಡರನ್ನು ಮತ್ತು ಬ್ರಾಹ್ಮಣರನ್ನು ಗೂಢಚಾರರಾಗಿ ನೇಮಿಸಬೇಕು.
ಉದ್ಯಾನೇಷು ವಿಹಾರೇಷು ದೇವತಾಯತನೇಷು ಚ |
ಪಾನಾಗಾರೇಷು ವೇಶೇಷು ಚತ್ವರೇಷು ಸಭಾಸು ಚ ॥57॥
ಬ್ರಾಹ್ಮಣಾಯತನೇ ದ್ಯೂತೇ ಪರ್ವತೇಷು ವನೇಷು ಚ |
ಸಮವಾಯೇಷು ಸರ್ವೇಷು ಸರಿತ್ಸು ಚ ವಿಚಾರಯೇತ್ ॥58॥
ಗೂಢಚಾರರು ಉದ್ಯಾನಗಳಲ್ಲಿಯೂ, ವಿಹಾರ ಸ್ಥಾನಗಳಲ್ಲಿಯೂ, ದೇವಾಲಯಗಳಲ್ಲಿಯೂ, ಪಾನಾಗಾರಗಳಲ್ಲಿಯೂ, ವೇಶ್ಯಾಗೃಹ-ಗಳಲ್ಲಿಯೂ, ನಾಲ್ಕು ಬೀದಿಗಳು ಸೇರುವ ಸ್ಥಳದಲ್ಲಿಯೂ, ಸಭೆಗಳಲ್ಲಿಯೂ, ಬ್ರಾಹ್ಮಣ ನಿವಾಸಗಳಲ್ಲಿಯೂ, ದ್ಯೂತಸ್ಥಳಗಳಲ್ಲಿಯೂ, ಪರ್ವತ ಮತ್ತು ಕಾಡುಗಳಲ್ಲಿಯೂ, ಜನಸಂದಣಿ ಇರುವ ಕಡೆಯಲ್ಲಿಯೂ, ನದಿಗಳ ಸಮೀಪದಲ್ಲಿಯೂ, ಸಂಚರಿಸುವಂತೆ ಮಾಡಬೇಕು.
ವಾಚಾ ಭೃಶಂ ವಿನೀತಃ ಸ್ಯಾದ್ ಹೃದಯೇಷು ತಥಾ ಕ್ಷುರಃ |
ಮೃದುಪೂರ್ವಾಭಿಭಾಷೀ ಸ್ಯಾತ್ ಸೃಷ್ಟೋ ರೌದ್ರಾಯ ಕರ್ಮಣೇ ॥59॥
ಉಗ್ರವಾದ ಕರ್ಮಕ್ಕಾಗಿ ಸೃಷ್ಟನಾದ ಕ್ಷತ್ರಿಯನು ಹೃದಯದಲ್ಲಿ ಕ್ರೂರನಾಗಿದ್ದು, ಮಾತಿನಲ್ಲಿ ಬಹಳ ವಿನಯವನ್ನು ತೋರಿಸಬೇಕು. ಮಾತನಾಡುವಾಗ ಮೃದುವಾಗಿ ತಾನೇ ಮೊದಲು ಮಾತಾಡಿಸಬೇಕು.
ಅಂಜಲಿಃ ಶಪಥಃ ಸಾಂತ್ವಂ ಶಿರಸಾ ಪಾದವಂದನಮ್ |
ಆಶಾಕರಣಮಿತ್ಯೇತತ್ ಕರ್ತವ್ಯಂ ಭೂತಿಮಿಚ್ಛತಾ ॥60॥
ತನ್ನ ಐಶ್ವರ್ಯವನ್ನು ಬಯಸುವವನು ಕೈಗಳನ್ನು ಮುಗಿಯುವುದು, ಶಪಥವನ್ನು ಮಾಡಿ ಆಶ್ವಾಸನೆ ಕೊಡುವುದು, ಸಮಾಧಾನದ ಮಾತುಗಳನ್ನು ಆಡುವುದು, ಶಿರಸಾ ನಮಸ್ಕಾರವನ್ನು ಮಾಡುವುದು ಮೊದಲಾದ ಇನ್ನೊಬ್ಬನಲ್ಲಿ ಆಸೆಯನ್ನು ಮೂಡಿಸುವ ಕಾರ್ಯಗಳನ್ನು ಮಾಡಬೇಕು.
ಸುಪುಷ್ಪಿತಃ ಸ್ಯಾದಫಲೋ ದುರಾರೋಹಃ ಫಲಾನ್ವಿತಃ |
ಆಮಃ ಸ್ಯಾತ್ ಪಕ್ವಸಂಕಾಶೋ ನ ಚ ಜೀರ್ಯೇತ ಕಸ್ಯ ಚಿತ್ ॥61॥
ಒಳ್ಳೆಯ ಪುಷ್ಪವನ್ನು ಹೊಂದಿದ ಮರವು ಫಲರಹಿತವಾಗಿದ್ದರೆ, ಫಲದಿಂದ ತುಂಬಿದ ಮರವು ಹತ್ತಲು ಅಸಾಧ್ಯವಾಗಿದ್ದರೆ, ಹಣ್ಣಾಗಿ ತೋರುತ್ತಿರುವುದು ಕಾಯಿಯಾಗಿದ್ದರೆ, ಅದು ಎಂದೂ ನಾಶವನ್ನು ಹೊಂದುವುದಿಲ್ಲ.
ತ್ರಿವರ್ಗೇ ತ್ರಿವಿಧಾ ಪೀಡಾ ಅನುಬಂಧಾಸ್ತಥೈವ ಚ |
ಅನುಬಂಧಾಂಸ್ತು ಸೇವೇತ ಪೀಡಾಸ್ತು ಪರಿವರ್ಜಯೇತ್ ॥62॥
ಧರ್ಮ, ಅರ್ಥ, ಕಾಮಗಳಲ್ಲಿ ಮೂರು ವಿಧವಾದ ಪೀಡೆಯೂ, ಮೂರು ವಿಧವಾದ ಸಹಕಾರಿಸುಖಗಳೂ ಇವೆ. ಸುಖಗಳನ್ನು ಸೇವಿಸಬೇಕು, ಪೀಡೆಗಳನ್ನು ವರ್ಜಿಸಬೇಕು.
ಧರ್ಮೋಽತಿಚರಿತಃ ಪೀಡಾಂ ಸಹ ದ್ವಾಭ್ಯಾಂ ಪ್ರಯಚ್ಛತಿ |
ಅರ್ಥಶ್ಚಾಪ್ಯರ್ಥಲುಬ್ಧಸ್ಯ ಕಾಮಶ್ಚಾತಿಪ್ರಸಂಗಿನಃ ॥63॥
ಧರ್ಮವನ್ನು ಅತಿಯಾಗಿ ಆಚರಿಸಿದರೆ, ಅವನಿಗೆ ಅರ್ಥ ಕಾಮಗಳು ನಷ್ಟವಾಗಿ ಧರ್ಮವೇ ಹಿಂಸೆಯನ್ನು ಕೊಡುತ್ತದೆ. ಅರ್ಥ ಲೋಭವಿರುವವನಿಗೆ, ಅರ್ಥವೂ ಪೀಡೆಯನ್ನು ಕೊಡುತ್ತದೆ. ಅತಿಯಾದ ಆಸೆಯಿರುವವನಿಗೆ ಕಾಮವೂ ಪೀಡೆಯನ್ನು ಕೊಡುತ್ತದೆ.
ಅಗರ್ವಿತಾತ್ಮಾ ಯುಕ್ತಶ್ಚ ಸಾಂತ್ವಯುಕ್ತೋ ನ ಚೇರ್ಷ್ಯಿತಃ |
ಅವೇಕ್ಷಿತಾರ್ಥಂ ಶುದ್ಧಾತ್ಮಾ ಮಂತ್ರಯೇತ ದ್ವಿಜೈಃ ಸಹ ॥64॥
ಗರ್ವವನ್ನು ಹೊಂದದೆ, ಈರ್ಷ್ಯೆಯನ್ನು ಹೊಂದದೆ, ಸಮಾಧಾನದ ಮಾತುಗಳಿಂದ ಯುಕ್ತನಾಗಿ ಮಾಡಬೇಕಾದ ಕೆಲಸವನ್ನು ಶುದ್ಧವಾದ ಮನಸ್ಸಿನಿಂದ ಬ್ರಾಹ್ಮಣರ ಜೊತೆಯಲ್ಲಿ ವಿಚಾರ ಮಾಡಬೇಕು.

ಮೃದುನಾ ಕೇನಚಿದ್ ರಾಜನ್ ಕರ್ಮಣಾ ದಾರುಣೇನ ವಾ |
ಉದ್ಧರೇದ್ ದೀನಮಾತ್ಮಾನಂ ಸಮರ್ಥೋ ಧರ್ಮಮಾಚರೇತ್ ॥
ರಾಜನೇ ಕೆಲವರ ಜೊತೆಯಲ್ಲಿ ಮೃದುವಾಗಿ ವರ್ತಿಸಿ, ಕೆಲವರ ಜೊತೆಯಲ್ಲಿ ಉಗ್ರವಾಗಿ ವರ್ತಿಸಿ, ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು. ಸಮರ್ಥನಾದವನು ಮಾತ್ರ ಧರ್ಮಾಚರಣೆಯನ್ನು ಮಾಡಬೇಕು.
ನ ಸಂಶಯಮನಾರುಹ್ಯ ನರೋ ಭದ್ರಾಣಿ ಪಶ್ಯತಿ |
ಸಂಶಯಂ ತು ಸಮಾರುಹ್ಯ ಗದೀ ಜೀವತಿ ಪಶ್ಯತಿ ॥66॥
ಸಂಶಯವನ್ನು ಪಡದ ಮನುಷ್ಯನು ಸುಖವನ್ನು ಕಾಣುವುದಿಲ್ಲ. ರೋಗಿ ಮೊದಲಾದವರು ಸಂಶಯವನ್ನು ಹೊಂದಿ ಸುಖವನ್ನು ಕಾಣುತ್ತಾರೆ.
ನದೀ ಪ್ರವಾಹವು ಇದ್ದಾಗ ಅಥವಾ ಶತ್ರುಸೇನೆಯು ಬಂದಾಗ ಈ ನದಿಯನ್ನು ನನಗೆ ದಾಟಲು ಸಾಧ್ಯವೋ ಇಲ್ಲವೋ, ಈ ಶತ್ರುಸೈನ್ಯವನ್ನು ನಿರ್ವಹಿಸಲು ನನಗೆ ಸಾಧ್ಯವೋ ಇಲ್ಲವೋ ಎಂಬ ಸಂಶಯವನ್ನು ಹೊಂದದೆ, ಔದ್ಧತ್ಯದಿಂದ ಮುಂದುವರೆಯುವವನು ವಿನಾಶವನ್ನು ಹೊಂದುತ್ತಾನೆ.
ವ್ಯಾಧಿಗ್ರಸ್ತನಾದವನು ತನ್ನ ವ್ಯಾಧಿಯು ಹೋಗುವುದೋ ಇಲ್ಲವೋ ಎಂದು ಯೋಚಿಸಿ ಸಂಶಯವನ್ನು ಹೊಂದಿ ಸೂಕ್ತವಾದ ಔಷಧಿಯನ್ನು ತೆಗೆದುಕೊಂಡು ಸುಖವನ್ನು ಕಾಣುತ್ತಾನೆ. ಆದ್ದರಿಂದ ಎಲ್ಲಾ ಕಾರ್ಯಗಳಲ್ಲಿಯೂ ವಿಚಾರ ಮಾಡಬೇಕು ಎಂದು ತಾತ್ಪರ್ಯ.
ಯಸ್ಯ ಬುದ್ಧಿಃ ಪರಿಭವೇತ್ ತಮತೀತೇನ ಸಾಂತ್ವಯೇತ್ |
ಅನಾಗತೇನ ದುರ್ಬುದ್ಧಿಂ ಪ್ರತ್ಯುತ್ಪನ್ನೇನ ಪಂಡಿತಮ್ ॥67॥
ಯಾವ ಅಜ್ಞನಿಗೆ ಮನಸ್ಸು ಮುಂದೆ ಮಾಡಬೇಕಾದ ಕಾರ್ಯದಿಂದ ಫಲವು ದೊರೆಯುವುದೋ ಇಲ್ಲವೋ ಎಂಬ ಸಂಶಯದಿಂದ ಹಿಂದಿರುಗುತ್ತದೆಯೋ, ಅವನಿಗೆ ಮೊದಲು ಮಾಡಿದ ಕರ್ಮವು ಫಲವನ್ನು ಕೊಟ್ಟಂತೆ ಇದೂ ಫಲವನ್ನು ಕೊಡುತ್ತದೆ ಎಂದು ಹೇಳಿ ಕಾರ್ಯದಲ್ಲಿ ಹುರಿದುಂಬಿಸಬೇಕು. ಹಿಂದಿನ ಕಾರ್ಯದಂತೆ, ಈ ಕಾರ್ಯದಲ್ಲಿ ಫಲವೇ ದೊರೆಯುವುದಿಲ್ಲ ಎಂಬ ದುರ್ಬುದ್ಧಿಯಿಂದ ನಿವೃತ್ತನಾದವನಿಗೆ ಹಿಂದಿನ ಕಾರ್ಯದಲ್ಲಿ ನಿನ್ನ ದೋಷವಿದ್ದುದರಿಂದ ಫಲವು ದೊರೆಯಲಿಲ್ಲ. ಈ ಕಾರ್ಯವು ನಿಶ್ಚಯವಾಗಿ ಫಲವನ್ನು ಕೊಡುತ್ತದೆ ಎಂದು ಹೇಳಿ ಪ್ರೇರಿಸಬೇಕು. ಪಂಡಿತನಾದವನನ್ನು ತಾತ್ಕಾಲಿಕಫಲದಿಂದ ಸಮಾಧಾನ ಮಾಡಬೇಕು.
ವೈರಿಣಾ ಸಂಧಿಮಾಸ್ಥಾಯ ಶಯೀತ ಕೃತಕೃತ್ಯವತ್ |
ಸ ವೃಕ್ಷಾಗ್ರೇ ಯಥಾ ಸುಪ್ತಃ ಪತತ್ಯೇವ ನ ಬುಧ್ಯತೇ ॥68॥
ಯಾವನು ಶತ್ರುಗಳ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಂಡು ತಾನು ಕೃತಕೃತ್ಯನೆಂದು ತಿಳಿದು ಮಲಗಿ ನಿದ್ರಿಸುತ್ತಾನೋ ಅವನು ಮರದ ಮೇಲೆ ಮಲಗಿದವನಂತೆ ತನಗೆ ಅರಿವಿಲ್ಲದೆಯೇ ಬೀಳುತ್ತಾನೆ.
ಮಂತ್ರಸಂವರಣೇ ಯತ್ನಃ ಸದಾ ಕಾರ್ಯೋಽನಸೂಯತಾ |
ಆಕಾರಶ್ಚಾತ್ಮನೋ ರಕ್ಷ್ಯಃ ಚಾರಃ ಪ್ರಾಪ್ಯಶ್ಚ ಸರ್ವದಾ ॥69॥
ಮಂತ್ರವನ್ನು ರಹಸ್ಯವಾಗಿಡಲು ಯಾವಾಗಲೂ ಪ್ರಯತ್ನವನ್ನು ಪಡಬೇಕು. ಅಸೂಯೆಯನ್ನು ವರ್ಜಿಸಿ ತನ್ನ ನಿಜವಾದ ಆಕಾರವು ಯಾರಿಗೂ ತಿಳಿಯದಂತೆ ತನ್ನನ್ನು ರಕ್ಷಿಸಿಕೊಳ್ಳಬೇಕು. ಗೂಢಚಾರರು ಯಾವಾಗ ಬೇಕಾದರೂ ಸಂಪರ್ಕಿಸಲು ಸಾಧ್ಯವಾಗುವಂತೆ ಇರಬೇಕು.
ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮ ದುಷ್ಕರಮ್ |
ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಪರಮಾಂ ಶ್ರಿಯಮ್ ॥70॥
ಪರರ ಮರ್ಮಗಳನ್ನು ಭೇದಿಸದೆ, ದುಷ್ಕರವಾದ ಕರ್ಮವನ್ನು ಮಾಡದೆ, ಕೊಲ್ಲದೆ, ಮೀನು ಹಿಡಿಯುವವನು ಹೇಗೆ ಸುಖವನ್ನು ಹೊಂದುವುದಿಲ್ಲವೋ ಹಾಗೆಯೇ ರಾಜನು ಶ್ರೇಷ್ಠವಾದ ಸಂಪತ್ತನ್ನು ಪಡೆಯುವುದಿಲ್ಲ.
ಕರ್ಶಿತಂ ವ್ಯಾಧಿತಂ ಶ್ರಾಂತಮಪನೀತಮನಾಯಕಮ್ |
ಪರಿವಿಶ್ವಸ್ತಮಲ್ಪಂ ಚ ಪ್ರಹರ್ತವ್ಯಂ ರಿಪೋರ್ಬಲಮ್ ॥71॥
ಶತ್ರುಸೇನೆಯು ದುಃಖದಿಂದ ಬಳಲಿದ್ದರೂ, ವ್ಯಾಧಿಗ್ರಸ್ತವಾದರೂ, ಶ್ರಮದಿಂದ ಕೂಡಿದ್ದರೂ, ನಾಯಕರಹಿತನಾಗಿದ್ದರೂ, ಹಿಂದೆ ಸರಿಯುತ್ತಿದ್ದರೂ, ಇನ್ನು ಪ್ರಹಾರ ಮಾಡುವುದಿಲ್ಲ ಎಂಬ ವಿಶ್ವಾಸದಿಂದ ಕೂಡಿದ್ದರೂ, ಅಥವಾ ಅಲ್ಪವಾಗಿದ್ದರೂ ಸಹ ಅದನ್ನು ಸಂಹರಿಸಲೇಬೇಕು.
ನಾನರ್ಥಕೇಽರ್ಥಬಂಧೋಽಸ್ತಿ ಕೃತಾರ್ಥೇ ನಾಸ್ತಿ ಸಂಗತಮ್ |
ತಸ್ಮಾತ್ ಸರ್ವಾಣಿ ಕಾರ್ಯಾಣಿ ಸಾವಶೇಷಾಣಿ ಕಾರಯೇತ್ ॥72॥
ಪ್ರಯೋಜನದ ಉದ್ದೇಶವಿಲ್ಲದವನ ಜೊತೆಯಲ್ಲಿ ಅರ್ಥಮೂಲವಾದ ಸಂಬಂಧವು ಉಂಟಾಗುವುದಿಲ್ಲ. ಇನ್ನೊಬ್ಬನ ಕೆಲಸವನ್ನು ಪೂರ್ಣವಾಗಿ ಮಾಡಿಕೊಟ್ಟ ಮೇಲೆ ಅವನಿಂದಲೂ ಸಂಬಂಧ ಉಂಟಾಗುವುದಿಲ್ಲ. ಆದ್ದರಿಂದ ಯಾವ ಕಾರ್ಯವನ್ನೂ ಪೂರ್ಣವಾಗಿ ಮಾಡಬಾರದು, ಸ್ವಲ್ಪ ಸ್ವಲ್ಪ ಉಳಿಸಬೇಕು.
ಸಂಗ್ರಹೇ ನಿಗ್ರಹೇ ಚೈವ ಯತ್ನಃ ಕಾರ್ಯೋಽನಸೂಯತಾ |
ವಿಗ್ರಹಃ ಕಾಲಯುಕ್ತಶ್ಚ ಕರ್ತವ್ಯೋ ಭೂತಿಮಿಚ್ಛತಾ ॥73॥
ತನ್ನ ಸಂಪತ್ತನ್ನು ಬಯಸುವವನು ತನಗೆ ಬೇಕಾದವರನ್ನು ಸಂಗ್ರಹ ಮಾಡುವುದರಲ್ಲಿಯೂ, ಬೇಡದವರನ್ನು ನಿಗ್ರಹ ಮಾಡುವುದರಲ್ಲಿಯೂ ಎಚ್ಚರಿಕೆಯಿಂದ ಪ್ರವೃತ್ತನಾಗಬೇಕು. ಯೋಗ್ಯವಾದ ಕಾಲದಲ್ಲಿ ಮಾತ್ರ ವಿರೋಧವನ್ನಾಗಲೀ ಯುದ್ಧವನ್ನಾಗಲೀ ಮಾಡಬೇಕು.
ನಾಸ್ಯ ಕೃತ್ಯಾನಿ ಪಶ್ಯೇಯುರ್ಮಿತ್ರಾಣಿ ರಿಪವಸ್ತಥಾ |

ಆರಬ್ಧಾನ್ಯೇವ ಪಶ್ಯೇಯುಃ ಸುಪರ್ಯವಸಿತಾನಿ ಚ ॥74॥
ತಾನು ಪ್ರಾರಂಭಿಸಿ ಮುಗಿಸದಿದ್ದ ಕಾರ್ಯಗಳನ್ನು, ಮಿತ್ರರಾಗಲೀ ಅಥವಾ ಶತ್ರುಗಳಾಗಲೀ ನೋಡುವಂತೆ ಇರಬಾರದು. ಅವರು ತಾನು ಆರಂಭಿಸಿ ಚೆನ್ನಾಗಿ ಮುಗಿಸಿದ ಕಾರ್ಯಗಳನ್ನು ಮಾತ್ರ ನೋಡುವಂತೆ ವ್ಯವಸ್ಥೆ ಮಾಡಬೇಕು.
ಭೀತವತ್ ಸಂವಿಧಾತವ್ಯಂ ಯಾವದ್ ಭಯಮನಾಗತಮ್ |
ಆಗತಂ ತು ಭಯಂ ದೃಷ್ಟ್ವಾ ಪ್ರಹರ್ತವ್ಯಮಭೀತವತ್ ॥75॥
ಭಯವು ಉಂಟಾಗುವವರೆಗೆ ಭಯಗೊಂಡವನಂತೆ ಕಾರ್ಯವನ್ನು ಮಾಡಬೇಕು. ಭಯವು ಉಂಟಾದಾಗ, ಉಂಟಾದ ಭಯವನ್ನು ನೋಡಿ ಭೀತಿಯಿಲ್ಲದೆ ಪ್ರಹಾರ ಮಾಡಬೇಕು.
ದೈವೇನೋಪಹತಂ ಶತ್ರುಂ ಪ್ರಗೃಹ್ಣಾತಿ ಚ ಯೋ ನೃಪಃ |
ಸ ಮೃತ್ಯುಮುಪಗೃಹ್ಣಾತಿ ಗರ್ಭಮಶ್ವತರೀ ಯಥಾ ॥76॥
ಯಾವ ರಾಜನು ದೈವಹತನಾದ ಶತ್ರುವನ್ನು ಸಂಗ್ರಹಿಸಿ ಸ್ವೀಕರಿಸುತ್ತಾನೋ, ಅವನು ಅಶ್ವತರಿಯು ಗರ್ಭವನ್ನು ಸ್ವೀಕರಿಸಿದಂತೆ ಮೃತ್ಯುವನ್ನೇ ಸ್ವೀಕರಿಸುತ್ತಾನೆ. (ಅಶ್ವತರಿಯು ಗರ್ಭವನ್ನು ಧರಿಸುವುದಿಲ್ಲ. ಒಂದು ಪಕ್ಷ ಧರಿಸಿದರೆ, ಅದು ಮರಣವನ್ನೇ ಹೊಂದುತ್ತದೆ.)
ಅನಾಗತಂ ಚ ಬುದ್ಧ್ಯೇತ ಯಚ್ಚ ಕಾರ್ಯಮುಪಸ್ಥಿತಮ್ |
ನ ತು ಬುದ್ಧಿಕ್ಷಯಾತ್ ಕಿಂಚಿದತಿಕ್ರಾಂತಮವೇಕ್ಷ್ಯತೇ ॥77॥
ಪ್ರಕೃತದಲ್ಲಿ ಮಾಡಬೇಕಾದ ಕಾರ್ಯವನ್ನು ಕುರಿತು ಯೋಚಿಸಬೇಕು. ಮುಂದೆ ಮಾಡಬೇಕಾದ ಕಾರ್ಯವನ್ನು ಕುರಿತು ಯೋಚಿಸಬೇಕು. ಅದನ್ನು ಬಿಟ್ಟು ಬುದ್ಧಿಕ್ಷಯವನ್ನು ಹೊಂದಿ ಹಿಂದೆ ನಡೆದ ಕಾರ್ಯಗಳನ್ನು ಕುರಿತು ಯೋಚಿಸುತ್ತಾ ಇರಬಾರದು.
ಉತ್ಸಾಹಶ್ಚಾಪಿ ಯತ್ನೇನ ಕರ್ತವ್ಯೋ ಭೂತಿಮಿಚ್ಛತಾ |
ವಿಭಜ್ಯ ದೇಶಕಾಲೌ ತು ಸೇವ್ಯಾ ಧರ್ಮಾದಯಸ್ತ್ರಯಃ ॥78॥
ನಿಃಶ್ರೇಯಸಾಯ ತೇ ಜ್ಞೇಯಾ ಇಹ ಚಾಮುತ್ರ ಚ ಸ್ಥಿತಾಃ |
ಬಲವತ್ ಕುರುತೇ ರೂಪಂ ಬಾಲ್ಯಾಚ್ಛತ್ರುರುಪೇಕ್ಷಿತಃ ॥79॥
ಸಂಪತ್ತನ್ನು ಬಯಸುವವನು ಪ್ರಯತ್ನದ ಜೊತೆಯಲ್ಲಿ ಉತ್ಸಾಹವನ್ನೂ ಹೊಂದಿರಬೇಕು. ದೇಶಕಾಲಗಳ ವಿಭಾಗವನ್ನು ಮಾಡಿಕೊಂಡು ಧರ್ಮಾರ್ಥಕಾಮಗಳನ್ನು ಸೇವಿಸಬೇಕು. ಧರ್ಮಾರ್ಥಕಾಮಗಳು ಈ ಲೋಕದಲ್ಲೂ ಮತ್ತು ಪರಲೋಕದಲ್ಲಿಯೂ, ಸುಖಪ್ರದವಾದಂತಹವು.
ಗಹನೇಽಗ್ನಿರಿವೋತ್ಸೃಷ್ಟಃ ಕ್ಷಿಪ್ರಂ ಸಂಜಾಯತೇ ಮಹಾನ್ |
ಅಗ್ನಿಸ್ತೋಕಮಿವಾತ್ಮಾನಂ ಸಂಧುಕ್ಷಯತಿ ಪಂಡಿತಃ |
ಸ ವರ್ಧಮಾನೋ ಗ್ರಸತೇ ಮಹಾಂತಮಪಿ ಸಂಚಯಮ್ ॥80॥
ಶತ್ರುವನ್ನು ಬಾಲಕನೆಂದು ಉಪೇಕ್ಷೆಯನ್ನು ಮಾಡಿದರೆ, ಕಾಡಿನಲ್ಲಿ ಬಿದ್ದ ಅಗ್ನಿಯ ಕಣವು ಬೇಗ ದೊಡ್ಡದಾಗಿ ಬೆಳೆಯುವಂತೆ ಶತ್ರುವು ಬಲಿಷ್ಠನಾಗಿ ಬೆಳೆಯುತ್ತಾನೆ. ಪಂಡಿತನಾದವನು ಬೇಗ ವ್ಯಾಪಿಸುವ ಅಗ್ನಿಯ ಕಣವನ್ನು ನಾಶ ಮಾಡಿದಂತೆ ಶತ್ರುಕಣವನ್ನು ನಾಶ ಮಾಡುತ್ತಾನೆ. ಇಲ್ಲದಿದ್ದರೆ, ಅಗ್ನಿಯಂತೆ ದೊಡ್ಡದಾಗಿ ಬೆಳೆದು ದೊಡ್ಡ ರಾಶಿಯನ್ನೂ ಸಹ ದಹಿಸುತ್ತಾನೆ.
ಆದಾವೇವ ದದಾನೀತಿ ಪ್ರಿಯಂ ಬ್ರೂಯಾನ್ನಿರರ್ಥಕಮ್ |
ಆಶಾಂ ಕಾಲವತೀಂ ಕುರ್ಯಾತ್ ಕಾಲಂ ವಿಘ್ನೇನ ಯೋಜಯೇತ್ |
ವಿಘ್ನಂ ನಿಮಿತ್ತತೋ ಬ್ರೂಯಾನ್ನಿಮಿತ್ತಾನಿ ಚ ಹೇತುತಃ ॥81॥
ಮೊದಲು ನಿನಗೆ ಕೊಡುತ್ತೇನೆ ಎಂದು ಪ್ರಿಯವಾದ ಸುಳ್ಳು ಮಾತನ್ನು ಹೇಳಿ, ಆಸೆಯನ್ನು ಉಂಟು ಮಾಡಬೇಕು. ಉಂಟಾದ ಆಸೆಗೆ ಒಂದು ಕಾಲದ ಅವಧಿಯನ್ನು ಸೂಚಿಸಬೇಕು. ಆ ಕಾಲ ಬಂದಾಗಲೂ ಕೊಡದೆ ಅದಕ್ಕೆ ವಿಘ್ನಗಳನ್ನು ಕಾರಣವಾಗಿ ಹೇಳಬೇಕು. ಆ ವಿಘ್ನಗಳಿಗೆ ಏನಾದರೂ ನಿಮಿತ್ತಗಳನ್ನು ಹುಡುಕಿ ಹೇಳಬೇಕು. ಆ ನಿಮಿತ್ತಗಳಿಗೆ ಏನಾದರೂ ತರ್ಕಗಳನ್ನು ಹೇಳಬೇಕು. (ಒಟ್ಟಿನಲ್ಲಿ ಪ್ರತಿಜ್ಞೆ ಮಾಡಿದ ವಸ್ತುವನ್ನು ಎಂದೂ ಕೊಡಬಾರದು. ತನ್ನಲ್ಲಿ ಮಾತ್ರ ದೋಷವಿಲ್ಲವೆಂದು ತೋರಿಸಿಕೊಳ್ಳಬೇಕು.)
ಕ್ಷುರೋ ಭೂತ್ವಾ ದಹನ್ನೇವ ನಿಶಿತಃ ಕಾಲಚಾರತಃ |
ಪ್ರಚ್ಛನ್ನೋ ಮೂಲವಾಪೀ ಸ್ಯಾದ್ ದ್ವಿಷತಾಂ ಚಾವಕರ್ತನಃ ॥82॥
ಕತ್ತಿಯಂತೆ ಹರಿತವಾಗಿದ್ದು ಶತ್ರುವನ್ನು ಸುಡುತ್ತಾ ಸೂಕ್ತಕಾಲವು ಬಂದಾಗ ಪ್ರಚ್ಛನ್ನನಾಗಿ (ಮರೆಯಾಗಿದ್ದು) ಮೂಲವನ್ನೇ ಕತ್ತರಿಸಬೇಕು. ಹೀಗೆ ಶತ್ರುಗಳನ್ನು ಕತ್ತರಿಸಬೇಕು.
ಪಾಂಡವಾಂಶ್ಚ ತಥಾ ರಾಜನ್ ಅನ್ಯಾಂಶ್ಚಾಪಿ ಗುರೂನ್ ಪ್ರತಿ |
ವರ್ತಮಾನೋ ನ ಮಜ್ಜೇಸ್ತ್ವಂ ತಥಾ ಕೃತ್ಯಂ ಸಮಾಚರ ॥83॥
ರಾಜನೇ, ನೀನು ಪಾಂಡವರ ವಿಷಯದಲ್ಲಿಯೂ ಮತ್ತು ಅನ್ಯಗುರುಹಿರಿಯರ ವಿಷಯದಲ್ಲಿಯೂ ಹೇಗೆ ನಡೆದುಕೊಂಡರೆ, ಮುಳುಗುವುದಿಲ್ಲವೋ ಹಾಗೆ ನಡೆದುಕೊಳ್ಳಬೇಕು.
ನ ಹಿ ಕುರ್ಯಾತ್ ಸಮುತ್ಸನ್ನಾನ್ ವಿನಷ್ಟಾ ಇತಿ ನಿಶ್ಚಯಮ್ |
ತಸ್ಮಾತ್ ತ್ವಂ ಪಾಂಡುಪುತ್ರೇಭ್ಯೋ ರಕ್ಷಾತ್ಮಾನಂ ನರಾಧಿಪ ॥84॥
ವಿನಷ್ಟರಾದವರನ್ನು ವಿನಷ್ಟರು ಎಂದು ತಿಳಿದುಕೊಂಡು ಸುಮ್ಮನಿರಬಾರದು. ರಾಜನೇ ಆದ್ದರಿಂದ ಪಾಂಡವರಿಂದ ನಿನ್ನನ್ನು ನೀನು ರಕ್ಷಣೆ ಮಾಡಿಕೋ.
ಭ್ರಾತೃವ್ಯಾ ಬಲವಂತಸ್ತೇ ಪಾಂಡುಪುತ್ರಾ ನರಾಧಿಪ |
ಬ್ರವೀಮಿ ತಸ್ಮಾದ್ ವಿಸ್ಪಷ್ಟಂ ಯತ್ ಕರ್ತವ್ಯಮರಿಂದಮ ॥85॥

ಎಲೈ ರಾಜನೇ, ನಿನ್ನ ಅಣ್ಣತಮ್ಮಂದಿರೂ, ಶತ್ರುಗಳೂ ಆದ ಪಾಂಡವರು ಬಲಿಷ್ಠರಾಗಿದ್ದಾರೆ. ಅರಿಂದಮನೇ ಆ ಕಾರಣದಿಂದ ನೀನು ಏನು ಮಾಡಬೇಕೆಂದು ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ.
ವೈಶಂಪಾಯನಃ
ಏವಮುಕತ್ವ ಸಂಪ್ರತಸ್ಥೇ ಕಣಿಂಕಃ ಸ್ವಗೃಹಂ ತತಃ ॥86॥
ಹೀಗೆ ಹೇಳಿ ಕಣಿಂಕನು ತನ್ನ ಮನೆಗೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಯಚಶ್ಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಸಂಭವಪರ್ವಣಿ ನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರನಲವತ್ತೆರಡನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಸೌಹಾರ್ದಮೇಷು ಯದಿ ವಾಽತಿತರಾಂ ಕರೋಷಿ
ತತ್ರಾಪಿ ನೈವ ಹಿ ಮಯಾ ಕ್ರಿಯತೇ ವಿರೋಧಃ |
ವತ್ಸ್ಯಂತು ವಾರಣವತೇ ಭವತು ಸ್ಮ ರಾಷ್ಟ್ರಂ
ತೇಷಾಂ ತದೇವ ಮಮ ನಾಗಪುರಂ ತ್ವದರ್ಥೇ ॥18॥
ಪಾಂಡವರಲ್ಲಿ ನೀನು ಬಹಳ ಸೌಹಾರ್ದವಿರಿಸಿಕೊಳ್ಳುವಿಯಾದರೆ ಅದಕ್ಕೂ ನಾನು ಸರ್ವಥಾ ವಿರೋಧ ಮಾಡುವುದಿಲ್ಲ. ನಿನ್ನ ಸಂತೋಷಕ್ಕಾಗಿ ಅವರು ವಾರಣವತದಲ್ಲಿ ವಾಸ ಮಾಡಲಿ. ಅದು ಅವರದೇ ರಾಜ್ಯವಾಗಲಿ. ಹಸ್ತಿನಾಪುರ ಮಾತ್ರವೆ ನನ್ನದಾಗಿರಲಿ.
ಏವಂ ಸ್ವಪುತ್ರ ಪರಿಪಾಲನತೋ ಯಶಸ್ತೇ
ಭೂಯಾದ್ ವಿನಶ್ಯತಿ ಪರಪ್ರಸವಾತಿಪುಷ್ಟೌ |
ಜಾತೇ ಬಲೇ ತವ ವಿರೋಧಕೃತಶ್ಚ ತೇ ಸ್ಯುಃ
ಸ್ವಾರ್ಥಂ ಹಿ ತಾವದನುಯಾಂತ್ಯಪಿ ಕೇವಲಂ ತ್ವಾಂ ॥19॥
ಹೀಗೆ ಮಾಡಿದರೆ ನಿನ್ನ ಮಕ್ಕಳನ್ನು ಕಾಪಾಡಿದ ಯಶಸ್ಸು ನಿನ್ನದಾಗುತ್ತದೆ. ಇಲ್ಲದಿದ್ದರೆ ಬೇರೆಯವರ ಮಕ್ಕಳನ್ನು ಅತಿಯಾಗಿ ಬೆಳೆಸಿದ್ದರಿಂದ ನಿನ್ನ ಕೀರ್ತಿ ನಶಿಸುತ್ತದೆ. ಈಗ ಅವರು ಕೇವಲ ಸ್ವಪ್ರಯೋಜನಕ್ಕಾಗಿ ನಿನ್ನನ್ನು ಒಲೈಸುತ್ತಿದ್ದಾರೆ. ಮುಂದೆ ಬಲಶಾಲಿಗಳಾಗಿ ನಿನಗೇ ವಿರೋಧ ಮಾಡುತ್ತಾರೆ.
ಕ್ಷತ್ತೈಕ ಏವ ಸತತಂ ಪರಿಪೋಷಕೋಽಲಂ
ತೇಷಾಂ ಮಮ ದ್ವಿಡಥ ಮಂತ್ರಬಲಾದಮುಷ್ಯ |
ಪೌರಾಶ್ಚ ಜಾನಪದಕಾಃ ಸತತಂ ದ್ವಿಷಂತಿ
ಮಾಂ ತೇಷ್ವತೀವ ದೃಢಸೌಹೃದಚೇತಸಶ್ಚ ॥20॥
ವಿದುರನೊಬ್ಬ ಪಾಂಡವರಿಗೆ ಸದಾ ಪೋಷಣೆ ನೀಡುತ್ತ ನನಗೆ ವಿರೋಧಿಯಾಗಿದ್ದಾನೆ. ಅವನ ಪಿಸುಮಾತಿನ ಅಪಪ್ರಚಾರದ ಬಲದಿಂದಲೆ ನಾಗರಿಕರೂ ಹಳ್ಳಿಗರೂ ಸದಾ ನನ್ನನ್ನು ದ್ವೇಷಿಸುತ್ತಾರೆ. ಪಾಂಡುವರಲ್ಲಿ ಸದಾ ಅತ್ಯಂತ ದೃಢ ಸೌಹಾರ್ದಯುಕ್ತ ಅಂತಃಕರಣದವರಾಗಿದ್ದಾರೆ.
ತೇ ತೇಷು ದೂರಗಮಿತೇಷು ನಿರಾಶ್ರಯತ್ವಾತ್
ಮಾಮೇವ ದುರ್ಬಲತಯಾ ಪರಿತಃ ಶ್ರಯಂತೇ |
ಭೀಷ್ಮಾದಯಶ್ಚ ನ ಹಿ ತನ್ನಿಕಟೇ ವಿರೋಧಂ
ಕುರ್ಯುರ್ವಿನಶ್ಯತಿ ಗತೇಷು ಹಿ ಸೌಹೃದಂ ತತ್ ॥21॥
ಪಾಂಡವರನ್ನು ದೂರಕಳಿಸಿದರೆ ಜನರು ಅವರ ಆಸರೆ ಇಲ್ಲದೆ ದುರ್ಬಲರಾಗುವುದರಿಂದ ನನ್ನನ್ನೇ ಆಶ್ರಯಿಸುತ್ತಾರೆ. ಭೀಷ್ಮಾದಿಗಳೂ, ಪಾಂಡವರು ನಮ್ಮ ಬಳಿಯಲ್ಲಿದ್ದರೆ, ಅವರಲ್ಲಿ ವಿರೋಧ ಮಾಡಲಾರರು. ದೂರಹೋದರೆ ಅವರಲ್ಲಿ ಸೌಹಾರ್ದ ಕಡಿಮೆಯಾಗುವುದು.
ಭೇದಃ ಕುಲಸ್ಯ ಭವಿತಾ ಕುಲನಾಶಹೇತು-
ರಸ್ಮಾಭಿರೇಷು ಸಹಿತೇಷು ಪುರೇ ವಸತ್ಸು |
ತಸ್ಮಾದುಪಾಯಬಲತಃ ಪ್ರತಿಯಾತನೀಯಾ-
ಸ್ತೇ ವಾರಣಾವತಮಿತೋ ವಿಹಿತೋಽಪ್ಯುಪಾಯಃ ॥22॥
ಪಾಂಡವರು ನಮ್ಮೊಡನೆ ಹಸ್ತಿನಾವತಿಯಲ್ಲಿಯೆ ವಾಸವಾಗಿದ್ದರೆ ಮನೆತನದಲ್ಲಿ ಒಡಕು ಹುಟ್ಟುವುದು ನಿಶ್ಚಿತ. ಆ ಒಡಕು ಕುಲನಾಶಕ್ಕೆ ಕಾರಣವಾಗುವುದು. ಅದರಿಂದ ಉಪಾಯ ಬಲದಿಂದ ಅವರನ್ನು ಹಸ್ತಿನಾವತಿಯಿಂದ ದೂರ ವಾರಣಾವತಕ್ಕೆ ಕಳಿಸುವುದೇ ಯೋಗ್ಯ. ಅದಕ್ಕೆ ಒಂದು ಉಪಾಯ ಮಾಡಿದ್ದೇನೆ.
ವಿಷ್ಣೂರ್ಜಯಂತ ಇತಿ ಶಂಭುಸಹಾಯ ಆಸ್ತೇ
ದೇವೋತ್ಸವಶ್ಚ ಸುಮಹಾನ್ ಭವಿತಾತ್ರ ಸುಷ್ಠು |
ಭಕ್ತಾಶ್ಚತೇ ಹಿ ನಿತರಾಮರಿಶಂಖಪಾಣೌ

ತ್ವಚ್ಚೋದಿತಾಃ ಸಮುಪಯಾಂತಿ ತಮುತ್ಸವಂ ದ್ರಾಕ್ ॥23॥
ವಾರಣಾವತದಲ್ಲಿ ಶಿವನೊಂದಿಗೆ ವಿಷ್ಣು ಜಯಂತ ಎಂಬ ಲಿಂಗರೂಪದಿಂದ ನೆಲೆಸಿದ್ದಾನೆ. ಅಲ್ಲಿ ದೇವರಿಗೆ ಬಹಳ ದೊಡ್ಡ ಉತ್ಸವ ಚೆನ್ನಾಗಿ ನಡೆಯುತ್ತದೆ. ಪಾಂಡವರು ವಿಷ್ಣುವಿನಲ್ಲಿ ಬಹಳ ಭಕ್ತಿಯುಳ್ಳವರು. ಅದರಿಂದ ನೀನು ಹೇಳಿದರೆ ಅವರು ಆ ಉತ್ಸವಕ್ಕೆ ಬೇಗನೆ ಹೊರಡುವರು.
ಅಜ್ಞಾಪ್ಯ ಮತ್ಪುರುಷತಾಂ ಪುರುಷೈರ್ಮದೀಯೈ-
ರ್ಮಧ್ಯಸ್ಥವದ್ ಬಹುಗುಣಾ ಉದಿತಾಶ್ಚ ತತ್ರ ।
ತೇಷಾಂ ಪುರೋಽತ್ರ ಗಮನಾಭಿರುಚಿಶ್ಚ ಜಾತಾ
ದ್ರಷ್ಟುಂ ಪುರಂ ಬಹುಗುಣಂ ನನು ಪಾಂಡವಾನಾಂ ॥24॥
ನನ್ನ ಕಡೆಯ ಜನರು ಅವರು ನನ್ನವರೆಂಬುದನ್ನೇ ತೋರಿಕೊಳ್ಳದೆ ಮಧ್ಯಸ್ಥರಂತಿದ್ದು ಪಾಂಡವರ ಮುಂದೆ ವಾರಣಾವತ ಕ್ಷೇತ್ರವನ್ನು ಬಹುವಾಗಿ ಹೊಗಳಿದ್ದಾರೆ. ಅದರಿಂದ ಪಾಂಡವರಿಗೆ ಬಹುಗುಣವುಳ್ಳ ಈ ಪಟ್ಟಣವನ್ನು ನೋಡಲು ಹೋಗುವ ಉತ್ಸುಕತೆಯೂ ಉಂಟಾಗಿದೆ.
ಇತ್ಯುಕ್ತವತ್ಯಥ ಸುತೇ ಸ ತಥೇತ್ಯುವಾಚ
ಪ್ರಾಪ್ತೇಷು ಪಾಂಡುತನಯೇಷು ತಥೈವ ಚೋಚೇ ।
ಜ್ಞಾತ್ವೈವ ತೇಽಪಿ ನೃಪತೇರ್ಹೃದಯಂ ಸಮಸ್ತಂ
ಜಗ್ಮುಃ ಪಿತೇತಿ ಪೃಥಯಾ ಸಹ ನೀತಿಹೇತೋಃ ॥25॥
ದುರ್ಯೋಧನ ಹೀಗೆ ಹೇಳಿದಾಗ `ಹಾಗೇ ಆಗಲಿ' ಎಂದು ಧೃತರಾಷ್ಟ್ರ. ಪಾಂಡವರು ಬಂದಾಗ ಅವರ ಮುಂದೆಯೂ ಹಾಗೇ ಹೇಳಿದ. ಅವರು ಅವನ ಅಭಿಪ್ರಾಯವನ್ನೆಲ್ಲ ತಿಳಿದು, ಅವನು ತಮಗೆ ತಂದೆ ಎಂಬ ಭಾವನೆಯಿಂದ ನೀತಿಯ ಪಾಲನೆಗಾಗಿ ಕುಂತಿಯೊಂದಿಗೆ ವಾರಣಾವತಕ್ಕೆ ನಡೆದರು.
ಭೀಮಸ್ತದಾ ಹ ಭವಿತಾತ್ರ ಹಿ ಭೈಕ್ಷಚಾರ
ಇತ್ಯೇವ ಸಮ್ಯಗನುವಿದ್ಯ ನಿಜಂ ನ ಕರ್ಮ ।
ತ್ಯಾಜ್ಯಂ ತ್ವಿತಿ ಪ್ರತಿಜಗಾದ ನಿಜಾಗ್ರಜಾಯ
ಯಾಮೋ ವಯಂ ನ ಹಿ ಗೃಹಾತ್ ಸ ಹಿ ನಃ ಸ್ವಧರ್ಮಃ ॥26॥
ಆಗ ಭೀಮ ಹೇಳಿದ- `ನಾವು ಅಲ್ಲಿಗೆ ಹೋದರೆ ಭಿಕ್ಷೆ ಬೇಡಬೇಕಾದೀತು. ಅದರಿಂದ ನಾವು ನಮ್ಮ ಊರನ್ನು ಬಿಟ್ಟು, ಬೇರೆ ಕಡೆಗೆ ಹೋಗಕೂಡದು. ಅದು ನಮಗೆ ಸ್ವಧರ್ಮ'. ಸ್ವಧರ್ಮವನ್ನು ಬಿಡಬಾರದು ಎಂದು ಚೆನ್ನಾಗಿ ತಿಳಿದೇ ಭೀಮ ತನ್ನ ಅಣ್ಣನ ಮುಂದೆ ಹೀಗೆ ಹೇಳಿದ.
ನಿಷ್ಕಾಸಯಂತಿ ಯದಿ ನೋ ನಿಜಧರ್ಮಸಂಸ್ಥಾನ್
ಯೋತ್ಸ್ಯಾಮಹೇಽತ್ರ ನ ಹಿ ದಸ್ಯುವಧೋಽಪ್ಯಧರ್ಮಃ ।
ಇತ್ಯೂಚಿವಾಂಸಮಮುಮಾಹ ಚ ಧರ್ಮಸೂನುಃ
ಕೀರ್ತಿರ್ವಿನಶ್ಯತಿ ಹಿ ನೋ ಗುರುಭಿರ್ವಿರೋಧೇ ॥27॥
`ಸ್ವಧರ್ಮದಲ್ಲಿರುವ ನಮ್ಮನ್ನು ಅವರು ಹೊರಗೆ ಕಳಿಸುವುದಾದರೆ ನಾವು ಇಲ್ಲಿಯೆ ಯುದ್ಧ ಮಾಡೋಣ. ದುಷ್ಟರನ್ನು ವಧಿಸುವುದೂ ಅಧರ್ಮವಲ್ಲ ತಾನೆ?' - ಹೀಗೆ ಭೀಮ ನುಡಿದಾಗ ಧರ್ಮರಾಜನೆಂದ- `ಗುರು ಹಿರಿಯರೊಡನೆ ವಿರೋಧ ಮಾಡಿದರೆ ನಮ್ಮ ಕೀರ್ತಿ ನಶಿಸುವುದು'.
ಇತ್ಯುಕ್ತವಾಕ್ಯಮಮುಮಗ್ರಜಮನ್ವಗಾತ್ಸ
ಭೀಮಃ ಪ್ರದರ್ಶ್ಯ ನಿಜಧರ್ಮಮಥಾನುವೃತ್ತ್ಯೈ ।
ದೋಷೋ ಭವೇದುಭಯತೋ ಯತ ಏವ ತೇನ
ವಾಚ್ಯಃ ಸ್ವಧರ್ಮ ಉತ ನ ಸ್ಥಿತಿರತ್ರ ಕಾರ್ಯಾ ॥28॥
ಹೀಗೆ ಅಣ್ಣ ನುಡಿದಾಗ ಭೀಮಸೇನ ಅಣ್ಣನ ಆಜ್ಞೆ ಎಂದು ಒಪ್ಪಿ ಅವನನ್ನು ಹಿಂಬಾಲಿಸಿದ. ಅದಕ್ಕೆ ಮೊದಲು ಸ್ವಧರ್ಮವನ್ನು ಹೇಳಿದ. ಏಕೆಂದರೆ ಸ್ವಧರ್ಮವನ್ನು ತಿಳಿದೂ ಹೇಳದಿರುವುದು ಅಧರ್ಮವಾಗುತ್ತದೆ. ಅಣ್ಣನ ಆಜ್ಞೆಯನ್ನು ಮೀರುವುದೂ ಅಧರ್ಮವಾಗುತ್ತದೆ. ಅದರಿಂದ ತಾನು ತಿಳಿದ ಸ್ವಧರ್ಮವನ್ನು ಹೇಳಬೇಕು, ಅಣ್ಣನ ಆಜ್ಞೆಗೆ ವಿರೋಧವಾಗಿ ಹಸ್ತಿನಾವತಿಯಲ್ಲಿ ಇರಲೂಕೂಡದು.
ಕೀರ್ತ್ಯರ್ಥಮೇವ ನಿಜಧರ್ಮಪರಿಪ್ರಹಾಣೇ
ಪ್ರಾಪ್ತೇಽಗ್ರಜಸ್ಯ ವಚನಾತ್ ಪ್ರವಿಹಾತುಮೇವ ।
ಭೀಮಸ್ಯ ದೋಷಮುಭಯಂ ಪ್ರತಿಹಂತುಮೀಶೋ
ಜ್ಯೇಷ್ಠಂ ಚಕಾರ ಹರಿರತ್ರ ಸುತಂ ವೃಷಸ್ಯ ॥29॥
ದೊಡ್ಡಪ್ಪನ ಆಜ್ಞೆಯನ್ನು ನಡೆಸಿದ ಕೀರ್ತಿಗಾಗಿ ಸ್ವಧರ್ಮವನ್ನು ಬಿಡಬೇಕಾಗಿ ಬಂದಾಗ ಅಣ್ಣನ ಮಾತಿನಿಂದಾಗಿ ಬಿಡಬೇಕು. ಹೀಗೆ ಎರಡೂ ಅಧರ್ಮವನ್ನು ಭೀಮ ಪರಿಹರಿಸಿಕೊಳ್ಳಬೇಕೆಂದೇ ಶ್ರೀಹರಿ ಧರ್ಮರಾಜನನ್ನು ಭೀಮನಿಗೆ ಅಣ್ಣನಾಗಿ ಹುಟ್ಟಿಸಿದ.
ಹಂತವ್ಯತಾಮುಪಗತೇಷು ಸುಯೋಧನಾದಿ-
ಷ್ವನ್ಯೋಪಧಾನ್ನ ಹಿ ಭವೇನ್ನಿಜಧರ್ಮ ಏವ ।
ಪೂರ್ವಂ ವಧೇ ನ ಹಿ ಸಮಸ್ತಶ ಏವ ದೋಷಾ-
ಸ್ತೇಷಾಂ ಪ್ರಯಾಂತಿ ವಿವೃತಿಂ ಚ ತದರ್ಥತೋಽಪಿ ॥30॥

ದುರ್ಯೋಧನಾದಿಗಳು ವಧಾರ್ಹರೆನಿಸಿರುವಾಗ ಅವರನ್ನು ವಧಿಸುವುದು ಬಿಟ್ಟು ಬೇರೇನೂ ಸ್ವಧರ್ಮವಾಗುವುದೇ ಇಲ್ಲ. ಆದರೆ ಮೊದಲಿಗೇ ಕೊಂದರೆ ಅವರ ಎಲ್ಲ ದುರ್ಗುಣಗಳು ಬೆಳಕಿಗೆ ಬರುವುದಿಲ್ಲ. ಅದಕ್ಕಾಗಿಯೂ ಶ್ರೀಹರಿ ಧರ್ಮರಾಜನನ್ನು ಅಣ್ಣನನ್ನಾಗಿ ಹುಟ್ಟಿಸಿದ.

ಕ್ಷತ್ತಾಥ ಚಾಹ ಸುವಚೋಽಂತ್ಯಜಭಾಷಯೈವ
ಧರ್ಮಾತ್ಮಜಂ ವಿಷಹುತಾಶಭಯಾತ್ ಪ್ರತೀತಾಃ |
ಆಧ್ವಂ ತ್ವಿತಿ ಸ್ಮ ಸ ತಥೇತಿ ವಚೋಽಪ್ಯುದೀರ್ಯ
ಪ್ರಾಯಾಚ್ಚ ವಾರಣವತಂ ಪೃಥಯಾನುಜೈಶ್ಚ ॥31॥

ವಿದುರ ಪಾಂಡವರಿಗೆ ಅಂತ್ಯಜ ಭಾಷೆಯಿಂದ `ವಿಷ ಅಗ್ನಿಗಳ ಬಾಧೆಯ ಬಗ್ಗೆ ಎಚ್ಚರದಿಂದಿರಿ' ಎಂದು ಹಿತನುಡಿ ನುಡಿದ. ಧರ್ಮರಾಜ `ಹಾಗೇ ಆಗಲಿ' ಎಂದು ಹೇಳಿ ಕುಂತಿಯ ಮತ್ತು ತಮ್ಮಂದಿರ ಜೊತೆಗೆ ವಾರಣಾವತಕ್ಕೆ ಹೊರಟುಹೋದ.

* * * *

7. ಜತುಗೃಹದಾಹಪರ್ವ

ನೂರ ನಲವತ್ತೂರನೆಯ ಅಧ್ಯಾಯ

(ಕಣಿಂಕನ ನೀತಿಯ ಪ್ರಭಾವದಿಂದ ಪಾಂಡವರನ್ನು ವಾರಣಾವತಕ್ಕೆ ಕಳುಹಿಸುವಂತೆ ದುರ್ಯೋಧನನ ಆಗ್ರಹ, ಧೃತರಾಷ್ಟ್ರನ ಲೋಕಾಪವಾದ ಭೀತಿ, ಕೊನೆಗೆ ಪಾಂಡವರಿಗೆ ವಾರಣಾವತಕ್ಕೆ ಹೋಗಲು ಆದೇಶ)

ವೈಶಂಪಾಯನಃ
ಕಣಿಂಕಸ್ಯ ಮತಂ ಜ್ಞಾತ್ವಾ ಕಾತ್ಸ್ನ್ಯೇನ ಭರತರ್ಷಭ |
ದುರ್ಯೋಧನಶ್ಚ ಕರ್ಣಶ್ಚ ಶಕುನಿಃ ಸೌಬಲಸ್ತಥಾ ॥1॥
ದುಃಶಾಸನಚತುರ್ಥಾಸ್ತೇ ಮಂತ್ರಯಾಮಾಸುರೇಕತಃ |
ತತೋ ದುರ್ಯೋಧನೋ ರಾಜನ್ ಧೃತರಾಷ್ಟ್ರಮಭಾಷತ |
ಪಾಂಡವೇಭ್ಯೋ ಭಯಂ ನಾಸ್ತಿ ವಿಧತ್ಸ್ವ ಯದನಂತರಮ್ ॥2॥

ಭರತರ್ಷಭನೇ, ಕಣಿಂಕನ ಅಭಿಪ್ರಾಯವನ್ನು ಸಮಗ್ರವಾಗಿ ತಿಳಿದು ದುರ್ಯೋಧನ, ಕರ್ಣ, ಸೌಬಲನಾದ ಶಕುನಿ ಮತ್ತು ದುಶ್ಶಾಸನ, ಈ ನಾಲ್ಕು ಜನರೂ ಒಂದು ಕಡೆ ಸೇರಿ ಮಂತ್ರಾಲೋಚನೆಯನ್ನು ಮಾಡಿದರು.
ರಾಜನೇ, ಅನಂತರ ದುರ್ಯೋಧನನು ಧೃತರಾಷ್ಟ್ರನನ್ನು ಕುರಿತು, ``ಪಾಂಡವರಿಗೆ ಭಯಪಡಬೇಕಾಗಿಲ್ಲ. ಈಗ ಮಾಡಬೇಕಾದ ಕಾರ್ಯವನ್ನು ಮಾಡು. ಅವರನ್ನು ವಾರಣಾವತಕ್ಕೆ ಕಳುಹಿಸು'' ಎಂದು ಹೇಳಿದನು.

ವೈಶಂಪಾಯನಃ
ಧೃತರಾಷ್ಟ್ರಸ್ತು ಪುತ್ರಸ್ಯ ಶ್ರುತ್ವಾವಾಕ್ಯಮುವಾಚಹ |
ಯಥಾ ನ ವಾಚ್ಯತಾಂ ಪುತ್ರ ಗಚ್ಛೇಯ ಕುರು ತತ್‌ಕಥಾ ॥3॥

ಧೃತರಾಷ್ಟ್ರನಾದರೋ ದುರ್ಯೋಧನನ ಮಾತನ್ನು ಕೇಳಿ ಎಲೈ ಪುತ್ರನೇ ನಮ್ಮ ಮೇಲೆ ಅಪವಾದ ಬರದಂತೆ ಏನಾದರೂ ಮಾಡು ಎಂದು ಹೇಳಿದನು.

ಧರ್ಮನಿತ್ಯಃ ಸದಾ ಪಾಂಡುಸ್ತಥಾ ಧರ್ಮಪರಾಯಣಃ |
ಸರ್ವೇಷು ಜ್ಞಾತಿಷು ತಥಾ ಮಮಾಸೀತ್ ಪ್ರಿಯಕೃದ್ ಹಿತಃ ॥4॥

ಪಾಂಡುವು ಯಾವಾಗಲೂ ಧರ್ಮವನ್ನೇ ಆಶ್ರಯಿಸಿ ಧರ್ಮಾನುಷ್ಠಾನ ಪರನಾಗಿದ್ದನು. ನನಗೂ ಮತ್ತು ಎಲ್ಲಾ ಬಂಧುಗಳೂ ಹಿತನಾಗಿದ್ದು ಪ್ರಿಯವನ್ನೇ ಮಾಡುತ್ತಿದ್ದನು.

ನಾಸ್ಯ ಕಿಂಚಿನ್ನಜಾನಾಮಿ ಭೋಜನಾದಿ ಚಿಕೀರ್ಷಿತಮ್ |
ನಿವೇದಯತಿ ನಿತ್ಯಂ ಹಿ ಮಮ ರಾಜ್ಯಂ ಧೃತವ್ರತಃ ॥5॥

ಅವನ ಸಮಗ್ರವಾದ ವಿಷಯವು ನನಗೆ ತಿಳಿದಿದೆ. ನನ್ನನ್ನು ಬಿಟ್ಟು ಅವನು ಭೋಜನಾದಿಗಳನ್ನು ಮಾಡಲೂ ಬಯಸುತ್ತಿರಲಿಲ್ಲ. ಅನೇಕ ವ್ರತಗಳನ್ನು ಧರಿಸಿದ ಅವನು ರಾಜ್ಯವನ್ನು ನಿತ್ಯವೂ ನನಗೆ ನಿವೇದಿಸುತ್ತಿದ್ದನು.

ತಸ್ಯ ಪುತ್ರೋ ಯಥಾ ಪಾಂಡುಃ ತಥಾ ಧರ್ಮಪರಾಯಣಃ |
ಗುಣವಾನ್ ಲೋಕವಿಖ್ಯಾತಃ ಪೌರಾಣಾಂ ಚ ಸುಸಮ್ಮತಃ ॥6॥

ಅವನ ಪುತ್ರನಾದ ಯುಧಿಷ್ಠಿರನೂ ಪಾಂಡುವಿನಂತೆ ಧರ್ಮಪರಾಯಣನಾಗಿದ್ದಾನೆ. ಅವನು ಗುಣವಂತ, ಲೋಕದಲ್ಲಿ ಬಹಳ ಪ್ರಖ್ಯಾತನಾದವನು ಮತ್ತು ಎಲ್ಲಾ ಪೌರರಿಗೂ ಬಹಳ ಸಮ್ಮತನಾದವನು.

ಸ ಕಥಂ ಶಕ್ಯತೇಽಸ್ಮಾಭಿರಪಾಕರ್ತುಂ ಬಲಾದಿಕಃ |
ಪಿತೃಪರ್ಯಾಗತಾದ್ ರಾಜ್ಯಾತ್ ಸಸಹಾಯೋ ವಿಶೇಷತಃ ॥7॥

ಅಂತಹ, ವಿಶೇಷವಾಗಿ ತನ್ನ ತಮ್ಮಂದಿರ ಸಹಾಯವನ್ನು ಹೊಂದಿರುವ ಅವನನ್ನು ನಾವು ಅವನು ತನ್ನ ತಂದೆಯಿಂದ ಪಡೆದ ಈ ರಾಜ್ಯದಿಂದ ಹೇಗೆ ಬಲಾತ್ಕಾರ ಮಾಡಿ ಕಳುಹಿಸಲು ಸಾಧ್ಯ.

ಭೃತಾ ಹಿ ಪಾಂಡುನಾಽಮಾತ್ಯಾ ಬಲಂ ಚ ಸತತಂ ಭೃತಮ್ |
ಭೃತಾಃ ಪುತ್ರಾಶ್ಚ ಪೌತ್ರಾಶ್ಚ ತೇಷಾಮಪಿ ವಿಶೇಷತಃ ॥8॥

ಪಾಂಡುವು ಅಮಾತ್ಯರನ್ನೂ, ಸೈನ್ಯವನ್ನೂ ಅವರ ಮಕ್ಕಳು ಮತ್ತು ಮೊಮ್ಮಕ್ಕಳನ್ನೂ ವಿಶೇಷವಾಗಿ ಪೋಷಿಸಿದ್ದಾನೆ.

ತೇನೈವ ಸತ್ಕೃತಾಸಕ್ತೃತಾಃ ಪಾಂಡುನಾ ಪೌರವಾ ಜನಾಃ |
ಕಥಂ ಯುಧಿಷ್ಠಿರಸ್ಯಾರ್ಥೇ ನ ನೋ ಹನ್ಯುಃ ಸಬಾಂಧವಾನ್ ॥9॥

ಅಂತಹ ಪಾಂಡುವಿನಿಂದ ಹೀಗೆ ಸತ್ಕೃತರಾದ ಪುರವಾಸಿಗಳಾದ ಜನರು ನಾವು ಯುಧಿಷ್ಠಿರನಿಗೆ ಅಪರಾಧವನ್ನು ಮಾಡಿದರೆ, ನಮ್ಮನ್ನೂ ಮತ್ತು ನಮ್ಮ ಬಂಧುಗಳನ್ನೂ ಹೇಗೆ ಕೊಲ್ಲದೇ ಇದ್ದಾರು.
ದುರ್ಯೋಧನಃ
ಏವಮೇವ ತ್ವಯಾ ತಾತ ಭಾವಿತಂ ದೋಷಮಾತ್ಮನಿ |
ದೃಷ್ಟ್ವಾ ಪ್ರಕೃತಯೋ ನಿತ್ಯಮರ್ಥದಾನೈಶ್ಚ ಪೂಜಿತಾಃ ॥10॥
ತಂದೆ ನೀನು ಯಾವಾಗಲೂ ನಿನ್ನಲ್ಲೇ ದೋಷವನ್ನು ಎಣಿಸುತ್ತೀಯೆ. ನಾನು ಪ್ರಜೆಗಳನ್ನು ಸಂದರ್ಶಿಸಿ ಯಾವಾಗಲೂ ಅವರಿಗೆ ಧನವನ್ನೂ ಮತ್ತು ಬೇರೆಯ ದಾನವನ್ನೂ ಕೊಟ್ಟು ಸತ್ಕರಿಸಿದ್ದೇನೆ.
ಧ್ರುವಮಸ್ಮತ್ಸಹಾಯಾಸ್ತೇ ಭವಿಷ್ಯಂತಿ ನ ಸಂಶಯಃ |
ಅರ್ಥವರ್ಗಃ ಸಹಾಮಾತ್ಯೋ ಮತ್ಸಂಸ್ಥೋಽದ್ಯ ಮಹೀಪತೇ ॥11॥
ರಾಜನೇ ನಿಶ್ಚಯವಾಗಿ ಅವರು ನಮ್ಮ ಸಹಾಯಕ್ಕೇ ಬರುತ್ತಾರೆ. ಇದರಲ್ಲಿ ಸಂಶಯವಿಲ್ಲ. ಅರ್ಥವರ್ಗವೂ (ಕೋಶವು) ಮತ್ತು ಅಮಾತ್ಯರೂ, ಈ ದಿನವೂ ನನ್ನ ವಶದಲ್ಲಿಯೇ ಇದ್ದಾರೆ.
ಸ ಭವಾನ್ ಪಾಂಡವಾನಾಶು ವಿವಾಸಯಿತುಮರ್ಹಸಿ |
ಮೃದುನೈವಾಭ್ಯುಪಾಯೇನ ನಗರಂ ವಾರಣಾವತಮ್ ॥12॥
ಆದ್ದರಿಂದ ನೀನು ಮೃದುವಾದ ಮಾತುಗಳಿಂದಲೇ ಪಾಂಡವರನ್ನು ಇಲ್ಲಿಂದ ವಾರಣಾವತನಗರಕ್ಕೆ ಕಳುಹಿಸಬೇಕು.
ಯದಾ ಪ್ರತಿಷ್ಠಿತಂ ರಾಜ್ಯಂ ಮಯಿ ರಾಜನ್ ಭವಿಷ್ಯತಿ |
ತದಾ ಕುಂತೀ ಸಹಾಪತ್ಯಾ ಪುನರೇಷ್ಯತಿ ಪಾರ್ಥಿವ ॥13॥
ರಾಜನೇ, ರಾಜ್ಯವು ನನ್ನಲ್ಲಿ ಸ್ಥಿರವಾದ ಮೇಲೆ ಕುಂತಿಯೂ ಮತ್ತು ಅವಳ ಮಕ್ಕಳೂ ಪುನಃ ಇಲ್ಲಿಗೆ ಬರುತ್ತಾರೆ.
ಧೃತರಾಷ್ಟ್ರಃ
ದುರ್ಯೋಧನ ಮಮಾಪ್ಯೇತತ್ ಸತತಂ ಹೃದಿ ವರ್ತತೇ |
ಅಭಿಪ್ರಾಯಸ್ಯ ಪಾಪತ್ವಾನ್ನ ತೇ ವಿವೃತವಾನಹಮ್ ॥14॥
ದುರ್ಯೋಧನ, ಈ ಅಭಿಪ್ರಾಯವು ನನ್ನ ಮನಸ್ಸಿನಲ್ಲಿ ಯಾವಾಗಲೂ ಇದೆ. ಆದರೆ ಅಭಿಪ್ರಾಯವು ದುಷ್ಟವಾದುದರಿಂದ ನಾನು ಅದನ್ನು ನಿನಗೂ ಬಿಚ್ಚಿ ತಿಳಿಸಿಲ್ಲ.
ನಹಿ ಭೀಷ್ಮೋ ನ ವಿದುರೋ ನ ದ್ರೋಣೋ ನಚ ಗೌತಮಃ |
ವಿವಾಸ್ಯಮಾನಾನ್ ಕೌಂತೆಯಾನನುಮಂಸ್ಯಂತಿ ಕಥಂಚನ ॥15॥
ಪಾಂಡವರನ್ನು ಇಲ್ಲಿಂದ ಹೊರಗೆ ಕಳುಹಿಸಿದರೆ, ಭೀಷ್ಮರಾಗಲೀ, ವಿದುರನಾಗಲೀ, ದ್ರೋಣರಾಗಲೀ, ಅಥವಾ ಕೃಪಾಚಾರ್ಯರಾಗಲೀ ಯಾವ ಪ್ರಕಾರದಿಂದಲೂ ಸಮ್ಮತಿಸುವುದಿಲ್ಲ.
ಸಮಾ ಹಿ ಕೌರವೇಯಾಣಾಮೇತೇ ಪುರುಷಸತ್ತಮಾಃ |
ನೈತೇ ವಿಷಮಮಿಚ್ಛೇಯುರ್ಧರ್ಮನಿತ್ಯಾ ಯಶಸ್ವಿನಃ ॥16॥
ಈ ಪುರುಷಶ್ರೇಷ್ಠರು ಎಲ್ಲಾ ಕೌರವರಿಗೂ (ಕೌರವರಿಗೂ ಮತ್ತು ಪಾಂಡವರಿಗೂ) ಸಮಾನರಾದವರು. ಯಶಸ್ವಿಗಳೂ, ಧರ್ಮನಿತ್ಯರೂ ಆದ ಇವರು ಕೌರವೇಯರ ಮಧ್ಯದಲ್ಲಿ ವೈಷಮ್ಯ ಉಂಟಾಗುವುದನ್ನು ಬಯಸುವುದಿಲ್ಲ.
ತೇ ವಯಂ ಕೌರವೇಯಣಾಮೇತೇಷಾಂ ಚ ಮಹಾತ್ಮನಾಮ್ |
ಕಥಂ ನು ವಾಚ್ಯತಾಂ ತಾತ ಗಚ್ಛಾಮ ಜಗತಸ್ತಥಾ ॥17॥
ಪುತ್ರನೇ ನಾವು ಎಲ್ಲಾ ಕೌರವರಿಂದಲೂ ಮತ್ತು ಈ ಎಲ್ಲಾ ಮಹಾತ್ಮರಿಂದಲೂ ಮತ್ತು ಜಗತ್ತಿನಿಂದಲೂ ನಿಂದ್ಯರಾಗುತ್ತೇವೆ.
ದುರ್ಯೋಧನಃ
ಮಧ್ಯಸ್ಥಃ ಸತತಂ ಭೀಷ್ಮೋ ದ್ರೋಣಪುತ್ರೋ ಮಯಿ ಸ್ಥಿತಃ |
ಯತಃ ಪುತ್ರಸ್ತತೋ ದ್ರೋಣೋ ಭವಿತಾ ನಾತ್ರ ಸಂಶಯಃ ॥18॥
ಭೀಷ್ಮರು ಯಾವಾಗಲೂ ತಟಸ್ಥರಾದವರು. ಅಶ್ವತ್ಥಾಮರು ನನ್ನ ಪಕ್ಷದಲ್ಲಿಯೇ ಇದ್ದಾರೆ. ಅವರು ಎಲ್ಲಿ ಇರುತ್ತಾರೋ ದ್ರೋಣರೂ ಅಲ್ಲಿಯೇ ಇರುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ.
ಕೃಪಃ ಶಾರದ್ವತಶ್ಚೈವ ಯತ ಏತೌ ತತೋ ಭವೇತ್ |
ಭಾಗಿನೇಯಂ ತಥಾ ದ್ರೋಣಂ ನ ತ್ಯಕ್ಷ್ಯತಿ ಕಥಂಚನ ॥19॥
ದ್ರೋಣ ಮತ್ತು ಅಶ್ವತ್ಥಾಮರು ಎಲ್ಲಿ ಇರುತ್ತಾರೋ ಆ ಪಕ್ಷವನ್ನು ಶಾರದ್ವತರಾದ ಕೃಪಾಚಾರ್ಯರು ತಮ್ಮ ಭಾವನಾದ ದ್ರೋಣರನ್ನೂ, ತಂಗಿಯ ಮಗನಾದ ಅಶ್ವತ್ಥಾಮರನ್ನೂ ಎಂದೂ ಬಿಡುವುದಿಲ್ಲ.
ಕ್ಷತ್ತಾಽಽರ್ತಬಂಧುರಸ್ಮಾಕಂ ಪ್ರಚ್ಛನ್ನಸ್ತು ಯತಃ ಪರೇ |
ನ ಚೈಕಃ ಸ ಸಮರ್ಥೋಽಸ್ಮಾನ್ ಪಾಂಡವಾರ್ಥೇ ವಿಬಾಧಿತುಮ್ ॥
ವಿದುರನು ನಮ್ಮ ವಿಷಯದಲ್ಲಿ ಹೃದಯದಲ್ಲಿ ಕ್ಲೇಶವನ್ನು ಅನುಭವಿಸುವ ಬಂಧು. ಪಾಂಡವರ ವಿಷಯದಲ್ಲಿ ಹೊರಗೆ ತೋರಿಸಿಕೊಳ್ಳದೇ ಬಹಳ ಸ್ನೇಹವನ್ನು ಹೊಂದಿರುವ ಬಂಧುವಾಗಿದ್ದಾನೆ. ಅವನೊಬ್ಬನೇ ಪಾಂಡವರ ಸಲುವಾಗಿ ನಮ್ಮನ್ನು ಪೀಡಿಸಲು ಶಕ್ತನಾಗುವುದಿಲ್ಲ.
ಸುವಿಸ್ರಬ್ಧಾನ್ ಪಾಂಡುಪುತ್ರಾನ್ ಸಹ ಮಾತ್ರಾ ಪ್ರವಾಸಯ |
ವಾರಣಾವತಮದ್ಯೈವ ನಾತ್ರ ದೋಷೋ ಭವಿಷ್ಯತಿ ॥21॥
ನಿನ್ನಲ್ಲಿ ಒಳ್ಳೆಯ ನಂಬಿಕೆ ಇಟ್ಟಿರುವ ಪಾಂಡುಪುತ್ರರನ್ನು, ಅವರ ತಾಯಿಯ ಜೊತೆಯಲ್ಲಿ ಈ ದಿನವೇ ವಾರಣಾವತಕ್ಕೆ ಕಳುಹಿಸು.

ಇದರಲ್ಲಿ ದೋಷವಿಲ್ಲ.
ವಿನಿದ್ರಾಕರಣಂ ಘೋರಂ ಹೃದಿ ಶಲ್ಯಮಿವಾರ್ಪಿತಮ್ |
ಶೋಕಪಾವಕಮುದ್ಭೂತಂ ಕರ್ಮಣಾಽನೇನ ನಾಶಯ ॥22॥
ನನ್ನ ನಿದ್ರೆಯನ್ನು ಕೆಡಿಸಿ ಹೃದಯದಲ್ಲಿ ಘೋರವಾದ ಶಲ್ಯದಂತೆ ನೆಟ್ಟಿರುವ ಈ ಉದ್ಭುದ್ಧವಾದ ಶೋಕಾಗ್ನಿಯನ್ನು ನಿನ್ನ ಕರ್ಮದಿಂದ ನಾಶ ಮಾಡು.
ವೈಶಂಪಾಯನಃ
ತತಸ್ತು ದುರ್ಯೋಧನವಚಃ ಕುತ್ಸಯಿತ್ವಾ ಜನೇಶ್ವರಃ |
ಹೃದಯೇನ ತು ಸಂಶ್ರಿತ್ಯ ಚಿಂತಯಾಮಾಸ ನೈಕಧಾ ॥23॥
ಆಗ ರಾಜನಾದ ಧೃತರಾಷ್ಟ್ರನು ದುರ್ಯೋಧನನ ಮಾತುಗಳನ್ನು ಹೊರಗೆ ನಿಂದಾಪೂರ್ವಕವಾಗಿ ನಿರಾಕರಿಸಿ, ಮನಸ್ಸಿನಲ್ಲಿ ಮಾತ್ರ ಅದನ್ನು ಆಶ್ರಯಿಸಿ ಅನೇಕ ರೀತಿಯಾಗಿ ಚಿಂತಿಸಿದನು.
ತತೋ ದುರ್ಯೋಧನೋ ರಾಜನ್ ಸರ್ವಾಸ್ತು ಪ್ರಕೃತೀಃ ಶನೈಃ |
ಅರ್ಥಮಾನಪ್ರದಾನೇನ ಸಂಜಗ್ರಾಹ ಸಹಾನುಜಃ ॥24॥
ರಾಜನೇ ದುರ್ಯೋಧನನೂ ಮತ್ತು ಅವನ ತಮ್ಮಂದಿರೂ ಸೇರಿ ಎಲ್ಲಾ ಪ್ರಜೆಗಳನ್ನೂ ನಿಧಾನವಾಗಿ ಅರ್ಥ ಮತ್ತು ಮಾನಗಳನ್ನು ಕೊಡುವುದರಿಂದ ತಮ್ಮ ಪಕ್ಷಕ್ಕೆ ಸೇರಿಸಿಕೊಂಡರು.
ಧಾರ್ತರಾಷ್ಟ್ರಪ್ರಯುಕ್ತಾಸ್ತೇ ಕೇಚಿತ್ ಕುಶಲಮಂತ್ರಿಣಃ |
ಕಥಯಾಂಚಕ್ರಿರೇ ರಮ್ಯಂ ನಗರಂ ವಾರಣಾವತಮ್ ॥25॥
ದುರ್ಯೋಧನನಿಂದ ನಿಯೋಜಿಸಲ್ಪಟ್ಟ ಕುಶಲರಾದ ಕೆಲವು ಮಂತ್ರಿಗಳು ವಾರಣಾವತನಗರವು ತುಂಬಾ ರಮ್ಯವಾಗಿದೆ ಎಂಬ ವಾರ್ತೆಯನ್ನು ಹಬ್ಬಿಸಿದರು.
ಅಯಂ ಸಮಾಜಃ ಸುಮಹಾನ್ ರಮಣೀಯತರೋ ಭುವಿ |
ಉಪಸ್ಥಿತಃ ಪಶುಪತೇರ್ನಗರೇ ವಾರಣಾವತೇ ॥26॥
ಪಶುಪತಿಯ ನಗರವಾದ ವಾರಣಾವತದಲ್ಲಿ ನಡೆಯಲಿರುವ ಈ ದೊಡ್ಡ ಜಾತ್ರೆಯು ಭೂಮಿಯಲ್ಲಿಯೇ ಅತ್ಯಂತ ಮನೋಹರವಾದುದು. ಅದು ಸದ್ಯದಲ್ಲಿಯೇ ಜರುಗುತ್ತದೆ.
ಸರ್ವರತ್ನಸಮಾಕೀರ್ಣೇ ಪುಣ್ಯೇ ದೇಶೇ ಮನೋರಮೇ |
ಇತ್ಯೇವಂ ಧಾರ್ತರಾಷ್ಟ್ರಸ್ಯ ವಚನಾಚ್ಚಕ್ರಿರೇ ಕಥಾಃ ॥27॥
ಸರ್ವರತ್ನಗಳಿಂದ ತುಂಬಿದ ಮನೋಹರವಾದ ಪುಣ್ಯದೇಶದಲ್ಲಿ ಈ ಜಾತ್ರೆಯು ನಡೆಯುತ್ತದೆ ಎಂದು ಮಂತ್ರಿಗಳು ದುರ್ಯೋಧನನ ಆದೇಶದಂತೆ ಮಾತನಾಡುತ್ತಿದ್ದರು.
ಕಥ್ಯಮಾನೇ ತದಾ ರಮ್ಯೇ ನಗರೇ ವಾರಣಾವತೇ |
ಗಮನೇ ಪಾಂಡುಪುತ್ರಾಣಾಂ ಜಜ್ಞೇ ತತ್ರ ಮತಿರ್ನೃಪ ॥28॥
ರಾಜನೇ, ವಾರಣಾವತವು ಸುಂದರವಾದ ನಗರ ಎಂಬ ವಾರ್ತೆಯನ್ನು ಕೇಳಿದ ಪಾಂಡುಪುತ್ರರಿಗೆ ಅಲ್ಲಿಗೆ ಹೋಗುವ ಮನಸ್ಸು ಉಂಟಾಯಿತು.
ಯದಾ ತ್ವಶಂಕಿತಾನ್ ರಾಜನ್ ಕೃತಕೌತೂಹಲಾನಿವ |
ಉವಾಚೈನಾನಿತಿ ತದಾ ಪಾಂಡವಾನಂಬಿಕಾಸುತಃ ॥29॥
ರಾಜನೇ, ಪಾಂಡವರು ಯಾವ ಶಂಕೆಯೂ ಇಲ್ಲದೇ ವಾರಣಾವತಕ್ಕೆ ಹೋಗುವ ಕುತೂಹಲವುಳ್ಳವರಾಗಿರುವುದನ್ನು ಗಮನಿಸಿ ಅಂಬಿಕಾಸುತನಾದ ಧೃತರಾಷ್ಟ್ರನು ಪಾಂಡವರನ್ನು ಕುರಿತು ಹೀಗೆ ಹೇಳಿದನು.
ಧೃತರಾಷ್ಟ್ರಃ
ಅಧೀತಾನಿ ಚ ಶಾಸ್ತ್ರಾಣಿ ಯುಷ್ಮಾಭಿರಿಹ ಕೃತ್ಸ್ನಶಃ |
ಅಸ್ತ್ರಾಣಿ ಚ ತಥಾ ದ್ರೋಣಾದ್ ಗೌತಮಾಚ್ಚ ಶರದ್ವತಾತ್ ॥
ಪಾಂಡವರೇ, ನೀವು ಇಲ್ಲಿ ಸಮಗ್ರವಾಗಿ ಶಾಸ್ತ್ರಾಧ್ಯಯನವನ್ನು ಮಾಡಿದ್ದೀರಿ. ದ್ರೋಣಾಚಾರ್ಯರಿಂದಲೂ ಶಾರದ್ವತರಾದ ಕೃಪಾಚಾರ್ಯರಿಂದಲೂ ಅಸ್ತ್ರವಿದ್ಯೆಯನ್ನು ಸಂಪಾದಿಸಿದ್ದೀರಿ.
ಸೋಽಹಮೇವಂ ಗತೇ ತಾತಾಶ್ಚಿಂತಯಾಮಿ ಸಮಂತತಃ |
ರಕ್ಷಣೇ ವ್ಯವಹಾರೇ ಚ ರಾಜ್ಯಸ್ಯ ಸತತಂ ಹಿತೇ ॥31॥
ಮಕ್ಕಳೇ ಪರಿಸ್ಥಿತಿಯು ಹೀಗಿರುವಾಗ ರಾಜ್ಯದ ರಕ್ಷಣೆ, ವ್ಯವಹಾರ ಮತ್ತು ಹಿತದ ದೃಷ್ಟಿಯಿಂದ ನಾನು ಎಲ್ಲಾ ರೀತಿಯಿಂದಲೂ ಯೋಚಿಸುತ್ತಿದ್ದೇನೆ.
ಇಮೇ ಹಿ ಪುರುಷಾಸ್ತಾತ ಕಥಯಂತಿ ಪುನಃ ಪುನಃ |
ರಮಣೀಯತರಂ ಲೋಕೇ ನಗರಂ ವಾರಣಾವತಮ್ ॥32॥
ಪ್ರಿಯ ಯುಧಿಷ್ಠಿರನೇ, ಈ ಜನರೆಲ್ಲರೂ ವಾರಣಾವತನಗರವು ಲೋಕದಲ್ಲಿ ಅತ್ಯಂತ ಮನೋಹರವಾದುದೆಂದು ಮತ್ತೆ ಮತ್ತೆ ಹೇಳುತ್ತಿದ್ದಾರೆ.
ತೇ ತಾತಾ ಯದಿ ಮನ್ಯಧ್ವಮುತ್ಸವಂ ವಾರಣಾವತೇ |
ಸಗಣಾಃ ಸಾನುಯಾತ್ರಾಶ್ಚ ವಿಹರಧ್ವಂ ಯಥಾಽಮರಾಃ ॥33॥
ಪುತ್ರರೇ, ಅಲ್ಲಿ ನಡೆಯಲಿರುವ ಉತ್ಸವವು ನಿಮ್ಮ ಮನಸ್ಸಿಗೆ ಬಂದರೆ, ನಿಮ್ಮ ಗುಂಪಿನವರು ಮತ್ತು ಅನುಚರರನ್ನೆಲ್ಲಾ

ಕರೆದುಕೊಂಡು ಅಲ್ಲಿಗೆ ಹೋಗಿ ದೇವತೆಗಳಂತೆ ವಿಹಾರ ಮಾಡಿ.
ಬ್ರಾಹ್ಮಣೇಭ್ಯಶ್ಚ ರತ್ನಾನಿ ನಟೇಭ್ಯಶ್ಚ ವಿಶೇಷತಃ |
ಸಂಪ್ರದಧ್ವಂ ಯಥಾಕಾಮಂ ದೇವಾ ಇವ ಸುವರ್ಚಸಃ ॥34॥
ದೇವತೆಗಳಂತೆ ಕಾಂತಿಯುಕ್ತರಾಗಿ ಬ್ರಾಹ್ಮಣರಿಗೂ ಮತ್ತು ನಟರಿಗೂ ನಿಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ವಿಶೇಷವಾಗಿ ದಾನವನ್ನು ಮಾಡಿ.
ಕಂಚಿತ್ಕಾಲಂ ವಿಹೃತ್ಯೈವಮವಾಪ್ಯ ಚ ಪರಾಂ ಮುದಮ್ |
ಇಹೈವ ಹಸ್ತಿನಪುರೇ ಸುಖೇನ ಪುನರೇಷ್ಯಥ ॥35॥
ವಾರಣಾವತದಲ್ಲಿ ಹೀಗೆ ಸ್ವಲ್ಪ ಸಮಯ ವಿಹರಿಸಿ ತುಂಬಾ ಸಂತೋಷಪಟ್ಟು ಪುನಃ ಹಸ್ತಿನಪುರಕ್ಕೆ ಸುಖವಾಗಿ ಬನ್ನಿ.
ನಿವಸಧ್ವಂ ಚ ತತ್ರೈವ ಪುರೇಕ್ಷಣಪರಾಯಣಾಃ |
ವೈಲಕ್ಷಣ್ಯಂ ಹಿ ವಸ್ತತ್ರ ಭವಿಷ್ಯತಿ ಪರಂತಪಾಃ |
ನಗರಂ ಪುನರ್ರೇವೇದಮುಪಯಾಸ್ಯಥ ಪಾಂಡವಾಃ ॥36॥
ಅಥವಾ ನಗರವನ್ನು ನೋಡುವ ದೃಷ್ಟಿಯಿಂದ ಅಲ್ಲಿಯೇ ವಾಸ ಮಾಡಿ. ಪರಂತಪರೇ ಆ ನಗರವು ನಿಮಗೆ ಇಲ್ಲಿಗಿಂತ ಭಿನ್ನವಾಗಿ ಮತ್ತು ಹೊಸದಾಗಿ ಇರುತ್ತದೆ. ಪಾಂಡವರೇ, ಅನಂತರ ನೀವು ಪುನಃ ಹಸ್ತಿನಪುರಕ್ಕೆ ಬನ್ನಿ.
ವೈಶಂಪಾಯನಃ
ಧೃತರಾಷ್ಟ್ರಸ್ಯ ತಂ ಕಾಮಮಬುಧ್ಯತ ಯುಧಿಷ್ಠಿರಃ |
ಆತ್ಮನಶ್ಚಾಸಹಾಯತ್ವಂ ತಥೇತಿ ಪ್ರತ್ಯುವಾಚ ಹ ॥37॥
ಯುಧಿಷ್ಠಿರನು ಧೃತರಾಷ್ಟ್ರನ ಮನಸ್ಸಿನ ಅಭಿಪ್ರಾಯವನ್ನೂ ತನ್ನ ಅಸಹಾಯಕತೆಯನ್ನೂ ತಿಳಿದು ``ಹಾಗೆಯೇ ಆಗಲಿ'' ಎಂದು ಹೇಳಿದನು.
ತತೋ ಭೀಷ್ಮಂ ಮಹಾಪ್ರಾಜ್ಞಂ ವಿದುರಂ ಚ ಮಹಾಮತಿಮ್ |
ದ್ರೋಣಂ ಚ ಬಾಹ್ಲಿಕಂ ಚೈವ ಸೋಮದತ್ತಂ ಚ ಕೌರವಮ್ ॥38॥
ಕೃಪಮಾಚಾರ್ಯಪುತ್ರಂ ಚ ಗಾಂಧಾರೀಂ ಚ ಯಶಸ್ವಿನೀಮ್ |
ಯುಧಿಷ್ಠಿರಃ ಶನೈರ್ದೀನಮುವಾಚೇದಂ ವಚಸ್ತಥಾ ॥39॥
ಅನಂತರ, ಯುಧಿಷ್ಠಿರನು ಮಹಾಪ್ರಾಜ್ಞರಾದ ಭೀಷ್ಮರನ್ನೂ, ಮೇಧಾವಿಯಾದ ವಿದುರನನ್ನೂ, ದ್ರೋಣರನ್ನೂ, ಬಾಹ್ಲೀಕರನ್ನೂ, ಕೌರವನಾದ ಸೋಮದತ್ತನನ್ನೂ, ಕೃಪರನ್ನೂ, ಅಶ್ವತ್ಥಾಮರನ್ನೂ, ಯಶಸ್ವಿನಿಯಾದ ಗಾಂಧಾರಿಯನ್ನೂ ಸಮೀಪಿಸಿ ದೀನನಾಗಿ ಈ ಮಾತುಗಳನ್ನು ಆಡಿದನು.
ರಮಣೀಯೇ ಜನಾಕೀರ್ಣೇ ನಗರೇ ವಾರಣಾವತೇ |
ಸಗಣಾಸ್ತಾತ ಯಾಸ್ಯಾಮೋ ಧೃತರಾಷ್ಟ್ರಸ್ಯ ಶಾಸನಾತ್ ॥40॥
ಪೂಜ್ಯರೇ ಧೃತರಾಷ್ಟ್ರನ ಅಪ್ಪಣೆಯಂತೆ ನಾವು ಜನರಿಂದ ತುಂಬಿದ ರಮಣೀಯವಾದ ವಾರಣಾವತನಗರಕ್ಕೆ ಪರಿವಾರ ಸಹಿತರಾಗಿ ಹೋಗುವೆವು.
ಪ್ರಸನ್ನವದನಾಃ ಸರ್ವೇ ಪುಣ್ಯಾ ವಾಚೋ ವಿಮುಂಚತ |
ಆಶೀರ್ಭಿರ್ವರ್ಧಿತಾನಸ್ಮಾನ್ ನ ಪಾಪಾನ್ ವೈ ಪ್ರವಕ್ಷ್ಯಥ ॥41॥
ಎಲ್ಲರೂ ಪ್ರಸನ್ನರಾಗಿ ನಮಗೆ ಶುಭ ಹಾರೈಕೆಗಳನ್ನು ಹೇಳಿ. ನಿಮ್ಮ ಆಶೀರ್ವಾದದಿಂದ ನಾವು ಅಭಿವೃದ್ಧಿಯನ್ನು ಪಡೆಯುತ್ತೇವೆ. ಯಾವ ಕೆಟ್ಟ ಮಾತನ್ನೂ ಆಡಬೇಡಿ.
ವೈಶಂಪಾಯನಃ
ಏವಮುಕ್ತಾಸ್ತು ತೇ ಸರ್ವೇ ಪಾಂಡುಪುತ್ರೇಣ ಕೌರವಾಃ |
ಪ್ರಸನ್ನವದನಾ ಭೂತ್ವಾ ತೇಽಭ್ಯವರ್ಧಂತ ಪಾಂಡವಾನ್ ॥42॥
ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ಕೌರವರೆಲ್ಲರೂ ಪ್ರಸನ್ನವದನರಾಗಿ ಪಾಂಡವರಿಗೆ ಶುಭಹಾರೈಕೆಗಳನ್ನು ಹೇಳಿ, ಅವರನ್ನು ಅಭಿವೃದ್ಧಿಯನ್ನು ಹೊಂದುವಂತೆ ಮಾಡಿದರು.
ಸ್ವಸ್ತ್ಯಸ್ತು ವಃ ಪಥಿ ಸದಾ ಭೂತೇಭ್ಯಶ್ಚೈವ ಸರ್ವಶಃ |
ಮಾ ವೋಽಚಂಸ್ತ್ವಶುಭಂ ಕಿಂಚಿತ್ ಸರ್ವತಃ ಪಾಂಡುನಂದನಾನ್ ॥43॥
ಮಾರ್ಗದಲ್ಲಿ ನಿಮಗೆ ಕ್ಷೇಮವಾಗಲಿ. ಯಾವ ಭೂತಗಳಿಂದಲೂ ನಿಮಗೆ ಉಪದ್ರವವಾಗುವುದು ಬೇಡ. ಪಾಂಡುನಂದನರಾದ ನಿಮ್ಮನ್ನು ಕುರಿತು ಯಾರೂ ಅಶುಭವಚನಗಳನ್ನು ಆಡದಿರಲಿ.
ತೇ ತಥಾ ವರ್ಧಿತಾ ವೃದ್ಧೈ ರಾಜ್ಯಲಾಭಾಯ ಪಾಂಡವಾಃ |
ಕೃತ್ವಾ ಸರ್ವಾಣಿ ಕಾರ್ಯಾಣಿ ಪ್ರಯಯುರ್ವಾರಣಾವತಮ್ ॥44॥
ವೃದ್ಧರಿಂದ ಹೀಗೆ ರಾಜ್ಯಲಾಭದ ಆಶೀರ್ವಚನಗಳಿಂದ ಅಭಿವೃದ್ಧರಾದ ಪಾಂಡವರು ಹೊರಡಲು ಮಾಡಬೇಕಾದ ಎಲ್ಲಾ ಕಾರ್ಯಗಳನ್ನು ಮಾಡಿ ವಾರಣಾವತಕ್ಕೆ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರನಲವತ್ಮೂರನೆಯ ಅಧ್ಯಾಯ ಮುಗಿಯಿತು.

మహాభారతతాత్పర్యనిర్ణయ - ಅಧ್ಯಾಯ-19
ತಾನ್ ಹಂತುಮೇದ ಚ ತದಾ ಧೃತರಾಷ್ಟ್ರಸೂನು-
ರ್ಲಾಕ್ಷಾಗೃಹಂ ಸಪದಿ ಕಾಂಚನರತ್ನಗೂಢಂ |
ಕೃತ್ವಾಭ್ಯಯಾತಯದಮುತ್ರ ಹಿ ವಿಷ್ಣುಪದ್ಯಾ
ಸ್ವಾಮಾತ್ಯಮೇವ ಚ ಪುರೋಚನನಾಮಧೇಯಂ ॥32॥
ಪಾಂಡವರನ್ನು ಕೊಲ್ಲುವ ಉದ್ದೇಶದಿಂದಲೆ ದುರ್ಯೋಧನ ಪುರೋಚನನ ಮೂಲಕ ಚಿನ್ನ ರತ್ನಗಳಿಂದ ಆವೃತವಾದ ಅರಗಿನ ಮನೆಯನ್ನು ಬೇಗನೆ ಸಿದ್ಧಪಡಿಸಿ ಗಂಗಾನದೀ ಮಾರ್ಗದಿಂದ ಪಾಂಡವರನ್ನು ವಾರಣಾವತದ ಕಡೆಗೆ ಕಳಿಸಿದ. ಜೊತೆಗೆ ಪುರೋಚನನೆಂಬ ತನ್ನ ಮಂತ್ರಿಯನ್ನೂ ಕಳಿಸಿದ.
ಪೂರ್ವಂ ಪ್ರಹಸ್ತ ಇತಿ ಯಸ್ತ್ವಭವತ್ ಸುಪಾಪಃ
ಸೋಽಭ್ಯೇತ್ಯ ಪಾಂಡುತನಯಾನಭವಚ್ಚ ಮಂತ್ರೀ |
ದುರ್ಯೋಧನಂ ಪ್ರತಿವಿಹಾಯ ಭವತ್ಸಕಾಶ-
ಮಾಯಾತ ಇತ್ಯವದದೇಷು ಸ ಕೂಟವಾಕ್ಯಂ ॥33॥
ಆ ಪುರೋಚನ ಹಿಂದೆ ಪ್ರಹಸ್ತನೆಂಬ ಮಹಾಪಾಪಿ. ಅವನು ಪಾಂಡವರ ಒಳಗೆ ಬಂದು `ದುರ್ಯೋಧನನನ್ನು ಬಿಟ್ಟು ನಿಮ್ಮಲ್ಲಿಗೆ ಬಂದಿದ್ದೇನೆ' ಎಂದು ಕಪಟದ ಮಾತನ್ನಾಡಿದ ಅವರಿಗೆ ಮಂತ್ರಿಯಾದ.
ದಿವ್ಯಂ ಗೃಹಂ ಚ ಭವತಾಂ ಹಿ ಮಯೋಪನೀತಂ
ಪ್ರೀತ್ಯೈವ ಪಾಪಮನುಯಾತುಮಹಂ ನ ಶಕ್ತಃ |
ಯುಷ್ಮಾಸು ಧರ್ಮಧೃತಿಮತ್ಸು ಸದಾ ನಿವತ್ಸ್ಯ
ಇತ್ಯೂಚಿವಾಂಸಮಮುಮಾಹುರಹೋ ಸುಭದ್ರಂ ॥34॥
`ದಿವ್ಯವಾದ ಒಂದು ಮನೆಯನ್ನು ನಾನು ನಿಮಗಾಗಿ ಪ್ರೀತಿಯಿಂದ ಕಟ್ಟಿಸಿದ್ದೇನೆ. ಪಾಪಿ ದುರ್ಯೋಧನನ ಬೆನ್ನ ಹಿಂದೆ ತಿರುಗುವುದು ನನ್ನಿಂದಾಗದು. ಧರ್ಮದಲ್ಲಿ ಸ್ಥಿರತೆಯುಳ್ಳ ನಿಮ್ಮಲ್ಲಿಯೆ ನಾನು ಸದಾ ಇರುವೆನು' ಎಂದು ಪುರೋಚನ ನುಡಿದಾಗ ಪಾಂಡವರು `ನೀನು ನಮ್ಮಲ್ಲಿಗೆ ಬಂದುದು ಬಹಳ ಆಶ್ಚರ್ಯ! ಬಹಳ ಒಳ್ಳೆಯದಾಯಿತು ಎಂದರು.
ದೃಷ್ಟ್ವೈವ ಜಾತುಷಗೃಹಂ ವಸಯಾ ಸಮೇತಂ
ತದ್ಗಂಧತೋ ವೃಷಸುತಃ ಪವಮಾನಜಾತಂ |
ತಂ ಜಾತಿಪಾಪಮವದತ್ ಸುಮುಖೈಷ ಪಾಪೋ
ಹಂತುಂ ನ ಇಚ್ಛತಿ ಸದಾ ಭವ ಚ ಪ್ರತೀತಃ ॥35॥
ಮೀನಿನ ಕೊಬ್ಬು ಮತ್ತು ಅರಗುಗಳಿಂದ ಮಾಡಿದ ಆ ಮನೆಯನ್ನು ಅದರ ವಾಸನೆಯಿಂದಲೆ ತಿಳಿದ ಧರ್ಮರಾಜ ಭೀಮನಿಗೆ ಹೇಳಿದ `ಪುರೋಚನ ಮಹಾಪಾಪಿ. ಮಂಗಲಮುಖನಾದ ಭೀಮಸೇನನೆ! ಈ ಪಾಪಿ ನಮ್ಮನ್ನು ಕೊಲ್ಲಲು ಬಯಸಿದ್ದಾನೆ. ಸದಾ ಜಾಗರೂಕನಾಗಿರು'.
* * * *

ನೂರ ನಲವತ್ನಾಲ್ಕನೆಯ ಅಧ್ಯಾಯ
(ದುರ್ಯೋಧನನ ಹರ್ಷ, ವಾರಣಾವತದಲ್ಲಿ ಅರಗಿನ ಮನೆಯನ್ನು ಕಟ್ಟಲು ಪುರೋಚನನಿಗೆ ಆದೇಶ)
ವೈಶಂಪಾಯನಃ
ಧೃತರಾಷ್ಟ್ರಪ್ರಯುಕ್ತೇಷು ಪಾಂಡವೇಷು ಮಹಾತ್ಮಸು |
ದುರ್ಯೋಧನಃ ಪರಂ ಹರ್ಷಮಾಜಗಾಮ ದುರಾತ್ಮವಾನ್ ॥1॥
ಧೃತರಾಷ್ಟ್ರನು ಮಹಾತ್ಮರಾದ ಪಾಂಡವರನ್ನು ವಾರಣಾವತಕ್ಕೆ ಕಳುಹಿಸುತ್ತಿರಲು ದುರಾತ್ಮನಾದ ದುರ್ಯೋಧನನು ಬಹಳ ಸಂತೋಷಪಟ್ಟನು.
ತತಃ ಸುಬಲಪುತ್ರಶ್ಚ ಕರ್ಣೋ ದುರ್ಯೋಧನಸ್ತಥಾ |
ದಹನೇ ಸಹಪುತ್ರಾಯಾಃ ಕುಂತ್ಯಾ ಮತಿಮಕುರ್ವತ ॥2॥
ಅನಂತರ ಶಕುನಿಯೂ, ಕರ್ಣನೂ, ದುರ್ಯೋಧನನೂ ಸೇರಿ ಕುಂತಿಯನ್ನು, ಅವಳ ಮಕ್ಕಳ ಜೊತೆಯಲ್ಲಿ ವಾರಣಾವತದಲ್ಲಿ ಸುಟ್ಟುಬಿಡಲು ತೀರ್ಮಾನಿಸಿದರು.
ಮಂತ್ರಯಿತ್ವಾ ಚ ತೈಃ ಸಾರ್ಧಂ ದುರಾತ್ಮಾ ಧೃತರಾಷ್ಟ್ರಜಃ |
ಸ ಪುರೋಚನಮೇಕಾಂತಮಾನೀಯ ಭರತರ್ಷಭ |
ಗೃಹೀತ್ವಾ ದಕ್ಷಿಣೇ ಪಾಣೌ ಸಚಿವಂ ವಾಕ್ಯಮಬ್ರವೀತ್ ॥3॥
ಭರತರ್ಷಭನೇ ದುರಾತ್ಮನಾದ ದುರ್ಯೋಧನನು, ಅವರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ನಡೆಸಿ ತನ್ನ ಮಂತ್ರಿಯಾದ ಪುರೋಚನನನ್ನು ಏಕಾಂತದಲ್ಲಿ ಕರೆದು ಅವನ ಬಲಗೈಯನ್ನು ತನ್ನ ಕೈಯಿಂದ ಹಿಡಿದು ಮಾತನಾಡಿದನು.
ದುರ್ಯೋಧನಃ
ಮಮೇಯಂ ವಸುಸಂಪೂರ್ಣಾ ಪುರೋಚನ ವಸುಂಧರಾ |

ಯಥೈವ ಭವಿತಾ ತಾತ ತಥಾ ತ್ವಂ ದ್ರಷ್ಟುಮರ್ಹಸಿ ॥4॥
ಪುರೋಚನನೇ, ಈ ಧನಸಂಪೂರ್ಣವಾದ ಭೂಮಿಯು ನನಗೇ ದೊರೆಯುವಂತೆ ನೀನು ಆಲೋಚನೆ ಮಾಡಬೇಕು.
ನ ಹಿ ಮೇ ಕಶ್ಚಿದನ್ಯೋಽಸ್ತಿ ವೈಶ್ವಾಸಿಕತರಸ್ತ್ವಯಾ |
ಸಹಾಯೋ ಮೇಽಸಿ ಸಂಧ್ಯಾಯಾಂ ಮಂತ್ರಯೇಯಂ ಯಥಾ ತ್ವಯಾ ॥
ನಿನಗಿಂತ ವಿಶ್ವಾಸಪಾತ್ರರಾದವರು ನನಗೆ ಬೇರೆ ಯಾರೂ ಇಲ್ಲ. ನೀನೇ ನನಗೆ ಸಹಾಯನಾದವನು. ಅದರಿಂದ ಈ ಶುಭವಾದ ಸಂಧ್ಯಾಕಾಲದಲ್ಲಿ ನಿನ್ನ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡುತ್ತಿದ್ದೇನೆ.
ತ್ವಂ ರಕ್ಷ ತಾತ ಮಂತ್ರಂ ಚ ಸಪತ್ನಾಂಶ್ಚ ಮಮೋದ್ಧರ |
ನಿಪುಣೇನಾಭ್ಯುಪಾಯೇನ ತವ ವಕ್ಷ್ಯಾಮಿ ತಚ್ಛೃಣು ॥6॥
ಪ್ರೀತಿಪಾತ್ರನೇ, ಈ ಮಂತ್ರಾಲೋಚನೆಯನ್ನು ಗುಪ್ತವಾಗಿಟ್ಟು ನನ್ನ ಶತ್ರುಗಳನ್ನು ನಿಪುಣವಾದ ಉಪಾಯದಿಂದ ನಿರ್ಮೂಲಗೊಳಿಸು. ಅದಕ್ಕೆ ನಾನು ಉಪಾಯವನ್ನು ಹೇಳುತ್ತೇನೆ ಕೇಳು.
ಪಾಂಡವಾ ಧೃತರಾಷ್ಟ್ರೇಣ ಪ್ರೇಷಿತಾ ವಾರಣಾವತಮ್ |
ಉತ್ಸವೇ ವಿಹರಿಷ್ಯಂತಿ ಧೃತರಾಷ್ಟ್ರಸ್ಯ ಶಾಸನಾತ್ ॥7॥
ಪಾಂಡವರು ಧೃತರಾಷ್ಟ್ರನಿಂದ ವಾರಣಾವತಕ್ಕೆ ಕಳುಹಿಸಲ್ಪಟ್ಟಿದ್ದಾರೆ. ಧೃತರಾಷ್ಟ್ರನ ಆದೇಶದಂತೆ ಅಲ್ಲಿ ಅವರು ಉತ್ಸವದಲ್ಲಿ ವಿಹರಿಸುತ್ತಾರೆ.
ಸ ತ್ವಂ ರಾಸಭಯುಕ್ತೇನ ಸ್ಯಂದನೇನಾಶುಗಾಮಿನಾ |
ವಾರಣಾವತಮದ್ಯೈವ ಯಥಾ ಯಾಸಿ ತಥಾ ಕುರು ॥8॥
ನೀನು ಶೀಘ್ರವಾಗಿ ಹೋಗುವ ರಾಸಭಯುಕ್ತವಾದ ರಥವನ್ನು ತೆಗೆದುಕೊಂಡು ಈ ದಿನವೇ ವಾರಣಾವತವನ್ನು ತಲುಪುವಂತೆ ವ್ಯವಸ್ಥೆ ಮಾಡಿಕೋ.
ತತ್ರ ಗತ್ವಾ ಚತುಃಶಾಲಂ ಗೃಹಂ ಪರಮಸಂವೃತಮ್ |
ಆಯುಧಾಗಾರಮಾಶ್ರಿತ್ಯ ಕಾರಯೇಥಾ ಮಹಾಧನಮ್ ॥9॥
ಅಲ್ಲಿಗೆ ಹೋಗಿ ಆಯುಧಾಗಾರದ ಸಮೀಪದಲ್ಲಿ ಪರಮ ಸಮ್ಮತವಾದಂತಹ, ನಾಲ್ಕು ಶಾಲೆಗಳಿರುವ ಬೆಲೆ ಬಾಳುವ ಒಂದು ಮನೆಯನ್ನು ಕಟ್ಟಿಸು.
ಶಣಸರ್ಜರಸಾದೀನಿ ಯಾನಿ ದ್ರವ್ಯಾಣಿ ಕಾನಿ ಚಿತ್ |
ಆಗ್ನೇಯಾನ್ಯತ್ರ ಕುಡ್ಯೇಷು ತಾನಿ ದ್ರವ್ಯಾಣಿ ದಾಪಯ ॥10॥
ಬಲ್ವಜೇನ ಚ ಸಮ್ಮಿಶ್ರಂ ಮಧೂಚ್ಛಿಷ್ಟೇನ ಚೈವ ಹಿ |
ಸರ್ಪಿಷಾ ಚ ಸತೈಲೇನ ಲಾಕ್ಷಯಾ ಚಾಪ್ಯನಲ್ಪಯಾ |
ಮೃತ್ತಿಕಾಂ ಮಿಶ್ರಯಿತ್ವಾ ಚ ಲೇಪಂ ಕುಡ್ಯೇಷು ದಾಪಯ ॥11॥
ಆ ಮನೆಯ ಗೋಡೆಗಳಲ್ಲಿ ಬೇಗ ಹೊತ್ತಿಕೊಳ್ಳುವ ಸೆಣಬು, ಸರ್ಜರಸ, ಮೊದಲಾದ ಆಗ್ನೇಯವಾದ ದ್ರವ್ಯಗಳನ್ನು ಸೇರಿಸು. ಬಲ್ವಜಗಳಿಂದಲೂ (ಹಂಚಿಕಡ್ಡಿಯಂತಹ ತೃಣಗಳಿಂದಲೂ), ಜೇನುಮೇಣದಿಂದಲೂ ಮತ್ತು ಬಹಳವಾದ ತುಪ್ಪ, ಎಣ್ಣೆ ಮತ್ತು ಅರಗಿನಿಂದಲೂ ಮಣ್ಣನ್ನು ಕಲೆಸಿ ಗೋಡೆಗಳಿಗೆ ಲೇಪಿಸು.''
ಶಾಣವಂಶಕಟಂ ದಾರು ವಸಾತ್ರಣಿ ವಿವಿಧಾನಿ ಚ |
ವೇಶ್ಮನಸ್ತಸ್ಯ ಸರ್ವತ್ರ ನಿಕ್ಷಿಪೇಥಾಃ ಸಮಂತತಃ |
ಸಂಭಾದ್ಯ ತೂಲಮಿಶ್ರೈಶ್ಚ ಕ್ಷಿಪ್ರಂ ಪ್ರಜ್ವಲಿತಾನಿ ಚ ॥12॥
ಶಾಣದಿಂದ ಮತ್ತು ಬಿದಿರಿನಿಂದ ಮಾಡಿದ ಚಾಪೆಗಳು, ಕಟ್ಟಿಗೆಗಳು ವಿವಿಧವಾದ ವಸ್ತ್ರಗಳು, ಆ ಮನೆಯ ಎಲ್ಲಾ ಕಡೆಯಲ್ಲಿಯೂ ಹರಡಿರಲಿ. ಹತ್ತಿಯನ್ನು ಬೆರೆಸಿದ ಬೇಗ ಬೆಂಕಿಯನ್ನು ಹಿಡಿಯುವ ಪದಾರ್ಥಗಳಿಂದ ಎಲ್ಲವನ್ನೂ ಮುಚ್ಚಿರು.
ಯಥಾ ಚ ತನ್ನ ಶಂಕೇರನ್ ಪರೀಕ್ಷಂತೋಽಪಿ ಪಾಂಡವಾಃ |
ಆಗ್ನೇಯಮಿತಿ ತತ್ ಕಾರ್ಯಮಪಿ ಚಾನ್ಯೇಽಪಿ ಮಾನವಾಃ ॥13॥
ಪಾಂಡವರಾಗಲೀ ಅಥವಾ ಬೇರೆ ಜನರಾಗಲೀ, ಪರೀಕ್ಷೆ ಮಾಡಿದರೂ, ಇದು ಆಗ್ನೇಯದ್ರವ್ಯ ಎಂಬ ಶಂಕೆಯು ಬರದಂತೆ ನೀನು ಆ ಕೆಲಸವನ್ನು ಮಾಡಬೇಕು.
ವೇಶ್ಮನ್ಯೇವಂ ಕೃತೇ ತತ್ರ ಕೃತ್ವಾ ತಾನ್ ಪರಮಾರ್ಚಿತಾನ್ |
ವಾಸಯೇಥಾಃ ಪಾಂಡವೇಯಾನ್ ಕುಂತೀಂ ಚ ಸಸುಹೃಜ್ಜನಾಮ್ ॥
ಹೀಗೆ ಮನೆಯನ್ನು ಕಟ್ಟಿ ಅಲ್ಲಿ ಪಾಂಡವರನ್ನೂ, ಕುಂತಿಯನ್ನೂ, ಅವರ ಬಂಧುಗಳನ್ನೂ ವಾಸಿಸುವಂತೆ ಮಾಡಿ ಅವರನ್ನು ಚೆನ್ನಾಗಿ ನೋಡಿಕೊಳ್ಳಬೇಕು.
ತತ್ರಾಸನಾನಿ ಮುಖ್ಯಾನಿ ಯಾನಾನಿ ಶಯನಾನಿ ಚ |
ವಿಧಾತವ್ಯಾನಿ ಪಾಂಡೂನಾಂ ಯಥಾ ತುಷ್ಯೇಚ್ಚ ಮೇ ಪಿತಾ ॥15॥
ಆ ಮನೆಯಲ್ಲಿ ಶ್ರೇಷ್ಠವಾದ ಆಸನಗಳನ್ನೂ, ವಾಹನಗಳನ್ನೂ, ಶಯನಗಳನ್ನೂ ಪಾಂಡವರಿಗೆ ಕಲ್ಪಿಸಿ ನನ್ನ ತಂದೆಯಾದ ಧೃತರಾಷ್ಟ್ರನಿಗೆ ಸಂತೋಷವಾಗುವಂತೆ ಮಾಡಬೇಕು.
ತತೋ ರಮೇರನ್ ವಿಶ್ವಸ್ತಾ ನಗರೇ ವಾರಣಾವತೇ |
ತಥಾ ಸರ್ವಂ ವಿಧಾತವ್ಯಂ ಯಾವತ್ ಕಾಲಸ್ಯ ಪರ್ಯಯಃ ॥16॥
ಕಾಲಚಕ್ರವು ತಿರುಗುವವರೆಗೆ ವಾರಣಾವತನಗರದಲ್ಲಿ ಅವರು ಎಲ್ಲರನ್ನೂ ನಂಬಿ ವಿಹರಿಸುವಂತೆ ಎಲ್ಲವನ್ನೂ ಮಾಡಬೇಕು.

ಜ್ಞಾತ್ವಾ ಪರಮವಿಶ್ವಸ್ತಾನ್ ನಿತರಾಮಕುತೋಭಯಾನ್ |
ಅಗ್ನಿಸ್ತತ್ರ ತ್ವಯಾ ದೇಯೋ ದ್ವಾರತಸ್ತಸ್ಯ ವೇಶ್ಮನಃ ||17||
ಅವರು ಪರಮ ವಿಶ್ವಾಸದಿಂದ ಕೂಡಿದವರಾಗಿ ಯಾರನ್ನೂ ಶಂಕಿಸುವುದಿಲ್ಲವೆಂದು ತಿಳಿದಾಗ ನೀನು ಆ ಗೃಹದ ದ್ವಾರದೇಶದಲ್ಲಿ ಬೆಂಕಿಯನ್ನು ಕೊಡಬೇಕು.
ದಗ್ಧಾನೇವಂ ಸ್ವಕೇ ಗೇಹೇ ದಗ್ಧಾ ಇತಿ ತತೋ ಜನಾಃ |
ಜ್ಞಾತಯೋ ನ ವದಿಷ್ಯಂತಿ ಪಾಂಡವಾರ್ಥಾಯ ಕರ್ಹಿಚಿತ್ ||18||
ತಮ್ಮ ಮನೆಯಲ್ಲಿಯೇ ಸುಟ್ಟು ಹೋದ ಅವರನ್ನು ಪಾಂಡವರ ಮೇಲೆ ಪ್ರೀತಿಯುಳ್ಳ ಜನರು ನಾವು ಪಾಂಡವರನ್ನು ಸುಡಿಸಿದೆವು ಎಂದು ಎಂದೂ ಹೇಳುವುದಿಲ್ಲ.
ವೈಶಂಪಾಯನಃ
ಸ ತಥೇತಿ ಪ್ರತಿಜ್ಞಾಯ ಕೌರವಾಯ ಪುರೋಚನಃ |
ಪ್ರಾಯಾದ್ ರಾಸಭಯುಕ್ತೇನ ನಗರಂ ವಾರಣಾವತಮ್ ||19||
ಪುರೋಚನನು ``ಹಾಗೆಯೇ ಆಗಲಿ'' ಎಂದು ಪ್ರತಿಜ್ಞೆ ಮಾಡಿ ರಾಸಭಯುಕ್ತ ರಥದಿಂದ ವಾರಣಾವತಕ್ಕೆ ಹೋದನು.
ಸ ಗತ್ವಾ ತ್ವರಿತಂ ರಾಜನ್ ದುರ್ಯೋಧನಮತೇ ಸ್ಥಿತಃ |
ಯಥೋಕ್ತಂ ರಾಜಪುತ್ರೇಣ ತಥಾ ಚಕ್ರೇ ಪುರೋಚನಃ ||20||
ರಾಜನೇ, ದುರ್ಯೋಧನನ ಅಭಿಪ್ರಾಯದಂತೆ ಅವನು ವಾರಣಾವತಕ್ಕೆ ಹೋಗಿ ರಾಜಕುಮಾರನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು.
ಯಥಾಽಽಜ್ಞಪ್ತಂ ನೃಪತಿನಾ ಕೌರವೇಣ ಯಶಸ್ವಿನಾ |
ದಾಹಾರ್ಥಂ ಪಾಂಡವೇಯಾನಾಂ ಗೃಹಂ ರೌದ್ರಮಕಾರಯತ್ ||21||
ಕೀರ್ತಿವಂತನಾದ ಕೌರವರಾಜನಿಂದ ಆದಿಷ್ಟನಾದ ರೀತಿಯಲ್ಲಿಯೇ ಪಾಂಡುಪುತ್ರರನ್ನು ಸುಡಲು ಒಂದು ಭಯಂಕರಗೃಹವನ್ನು ನಿರ್ಮಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುಶ್ಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ||
|| ಇತಿ ಜತುಗೃಹದಾಹಪರ್ವಣಿ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****

## ನೂರನಲವತ್ತೈದನೆಯ ಅಧ್ಯಾಯ

(ವಾರಣಾವತಕ್ಕೆ ಯುಧಿಷ್ಠಿರಾದಿಗಳ ಪ್ರಯಾಣ, ಪೌರರ ಅನುಗಮನ ಮತ್ತು ಪ್ರತಿನಿವೃತ್ತಿ, ಮ್ಲೇಚ್ಛಭಾಷೆಯಿಂದ ವಿದುರನ ಉಪದೇಶ)
ವೈಶಂಪಾಯನಃ
ಪಾಂಡವಾಸ್ತು ರಥಾನ್ ಯುಕತ್ವ ಸದಶ್ವೈರನಿಲೋಪಮೈಃ |
ಪ್ರಯಾಸ್ಯಂತಸ್ತು ಭೀಷ್ಮಸ್ಯ ಪಾದೌ ಜಗೃಹುರಾರ್ತವತ್ ||1||
ಪಾಂಡವರು ವಾಯುವೇಗವುಳ್ಳ ಅಶ್ವಗಳನ್ನು ರಥಕ್ಕೆ ಹೂಡಿ ಹೊರಡುವವರಾಗಿ ಭೀಷ್ಮರ ಸಮೀಪಕ್ಕೆ ಹೋಗಿ ಆರ್ತರಂತೆ ಅವರ ಪಾದಗಳಿಗೆ ನಮಸ್ಕರಿಸಿದರು.
ರಾಜ್ಞಶ್ಚ ಧೃತರಾಷ್ಟ್ರಸ್ಯ ದ್ರೋಣಸ್ಯ ಚ ಮಹಾತ್ಮನಃ |
ಅನ್ಯೇಷಾಂ ಚೈವ ವೃದ್ಧಾನಾಂ ವಿದುರಸ್ಯ ಕೃಪಸ್ಯ ಚ ||2||
ಧೃತರಾಷ್ಟ್ರರಾಜನ, ಮಹಾತ್ಮರಾದ ದ್ರೋಣರ, ಉಳಿದ ವೃದ್ಧರ, ಕೃಪಾಚಾರ್ಯರ ಮತ್ತು ವಿದುರರ ಪಾದಗಳಿಗೂ ನಮಸ್ಕರಿಸಿದರು.
ಏವಂ ಸರ್ವಾನ್ ಕುರೂನ್ ವೃದ್ಧಾನಭಿವಾದ್ಯ ಧೃತವ್ರತಾಃ |
ಸಮಾಲಿಂಗ್ಯ ಸಮಾಂಶ್ಚಾಪಿ ಬಾಲೈಶ್ಚಾಪ್ಯಭಿವಾದಿತಾಃ ||3||
ಹೀಗೆ ಧೃತವ್ರತರಾದ ಪಾಂಡವರು ಎಲ್ಲಾ ಕುರುಗಳಿಗೂ ಮತ್ತು ವೃದ್ಧರಿಗೂ ನಮಸ್ಕರಿಸಿ, ಸಮಾನರಾದವರನ್ನು ಆಲಿಂಗಿಸಿ, ತಮಗಿಂತ ಚಿಕ್ಕವರಿಂದ ನಮಸ್ಕರಿಸಲ್ಪಟ್ಟರು.
ಸರ್ವಾನನ್ಯಾಂಸ್ತಥಾಽಽಪೃಚ್ಛ್ಯ ಯಥಾರ್ಹಮಮಿತೌಜಸಃ |
ಶೋಚಂತಃ ಕೃಪಣಾಃ ಸರ್ವೇ ಕುರೂನ್ ಕೃತ್ವಾ ಪ್ರದಕ್ಷಿಣಮ್ |
ಪ್ರಕೃತೀರಪಿ ಸರ್ವಾಶ್ಚ ಪ್ರಯಯುರ್ವಾರಣಾವತಮ್ ||4||
ಅಮಿತಪರಾಕ್ರಮಿಗಳಾದ ಅವರು ಯಥೋಚಿತವಾಗಿ ಉಳಿದವರಿಗೆ ವಿದಾಯವನ್ನು ಹೇಳಿ, ಶೋಕ ಪಡುತ್ತಾ ಕೃಪಣರಾಗಿ ಕುರುದೇಶಕ್ಕೆ ಪ್ರದಕ್ಷಿಣೆಯನ್ನು ಮಾಡಿ, ಎಲ್ಲಾ ಪ್ರಜೆಗಳಿಗೂ ಪ್ರದಕ್ಷಿಣೆಯನ್ನು ಮಾಡಿ ವಾರಣಾವತಕ್ಕೆ ಹೊರಟರು.
ವಿದುರಶ್ಚ ಮಹಾಪ್ರಾಜ್ಞಸ್ತಥಾಽನ್ಯೇ ಕುರುಪುಂಗವಾಃ |
ಪೌರಾಶ್ಚ ಪುರುಷವ್ಯಾಘ್ರಾನನ್ವಯುಃ ಶೋಕಕರ್ಶಿತಾಃ |
ಶೋಚಮಾನಾಃ ಪಾಂಡುಪುತ್ರಾನತೀವ ಭರತರ್ಷಭ ||5||
ಎಲೈ ಭರತರ್ಷಭನೇ, ಮಹಾಪ್ರಾಜ್ಞನಾದ ವಿದುರನೂ, ಉಳಿದ ಕುರುಶ್ರೇಷ್ಠರೂ, ಶೋಕತಪ್ತರಾದ ಪೌರರೂ ಸಹ, ಪಾಂಡು ಪುತ್ರರನ್ನು ಕುರಿತು ದುಃಖವನ್ನು ಪಡುತ್ತಾ ಪುರುಷವ್ಯಾಘ್ರರಾದ ಅವರನ್ನು ಹಿಂಬಾಲಿಸಿದರು.

ತತಃ ಕೇಚಿಚ್ಚಾವದನ್ ಸ್ಮ ಬ್ರಾಹ್ಮಣಾ ನಿರ್ಭಯಾಸ್ತದಾ |
ಧೃತರಾಷ್ಟ್ರೋ ಮಹೀಪಾಲೋ ನ ಚ ಧರ್ಮಂ ಪ್ರಪಶ್ಯತಿ ||6||
ಆಗ ನಿರ್ಭಯರಾದ ಕೆಲವು ಬ್ರಾಹ್ಮಣರು ರಾಜನಾದ ಧೃತರಾಷ್ಟ್ರನಿಗೆ ಧರ್ಮವು ಕಾಣಿಸುತ್ತಿಲ್ಲ ಎಂದು ಹೇಳಿದರು.
ನ ಹಿ ಪಾಪಮಪಾಪಾತ್ಮಾ ರೋಚಯಿಷ್ಯತಿ ಪಾಂಡವಃ |
ಭೀಮೋ ವಾ ಬಲಿನಾಂ ಶ್ರೇಷ್ಠಃ ಕೌಂತೇಯೋ ವಾ ಧನಂಜಯಃ ||7||
ಪಾಪವನ್ನು ಎಂದೂ ಚಿಂತಿಸದಿದ್ದ ಧರ್ಮರಾಜನಾಗಲೀ, ಬಲವಂತರಲ್ಲಿ ಶ್ರೇಷ್ಠನಾದ ಭೀಮನಾಗಲೀ ಅಥವಾ ಕುಂತೀಪುತ್ರನಾದ ಧನಂಜಯನಾಗಲೀ ಪಾಪವನ್ನು ಯೋಚಿಸುವುದಿಲ್ಲ.
ಕುತ ಏವ ಮಹಾಪ್ರಾಜ್ಞೌ ಮಾದ್ರೀಪುತ್ರೌ ಕರಿಷ್ಯತಃ |
ಯದ್ ರಾಜ್ಯಂ ಪಿತೃತಃ ಪ್ರಾಪ್ತಂ ಧೃತರಾಷ್ಟ್ರಃ ಪ್ರಬಾಧತೇ ||8||
ಮಹಾಪ್ರಾಜ್ಞರಾದ ಮಾದ್ರೀಪುತ್ರರಾದ ನಕುಲಸಹದೇವರು ಹೇಗೆ ಕೆಟ್ಟದ್ದನ್ನು ಯೋಚನೆ ಮಾಡುತ್ತಾರೆ? ಪಾಂಡವರಿಗೆ ತಂದೆಯಿಂದ ನ್ಯಾಯವಾಗಿ ಬಂದ ರಾಜ್ಯವನ್ನು ಧೃತರಾಷ್ಟ್ರನು ಬಾಧಿಸುತ್ತಿದ್ದಾನೆ.
ಅಧರ್ಮವಿಪುಲಂ ಕಿಂತು ಭೀಷ್ಮೋಽಯಮನುವರ್ತತೇ |
ವಿವಾಸ್ಯಮಾನಾನಸ್ಥಾನೇ ಸ ಕೌಂತೇಯಾನ್ ನರರ್ಷಭಾನ್ ||9||
ಇದರಲ್ಲಿ ಬಹಳ ಅಧರ್ಮವಿದೆ. ಆದರೆ, ಪುರುಷಶ್ರೇಷ್ಠರಾದ ಕೌಂತೇಯರನ್ನು ಅನುಚಿತವಾಗಿ ನಗರದಿಂದ ಹೊರಗೆ ಕಳುಹಿಸುವುದನ್ನು, ಈ ಭೀಷ್ಮನೂ ಅನುಮೋದಿಸುತ್ತಿದ್ದಾನೆ.
ಪಿತೇವ ಹಿ ಸಮೋಽಸ್ಮಾಕಮಭೂಚ್ಛಾಂತನವಃ ಪುರಾ |
ವಿಚಿತ್ರವೀರ್ಯೋ ರಾಜರ್ಷಿಃ ಪಾಂಡುಶ್ಚ ಕುರುನಂದನಃ ||10||
ಹಿಂದೆ ಶಂತನುವಿನ ಮಗನಾದ ಭೀಷ್ಮನು ನಮಗೆಲ್ಲರಿಗೂ ತಂದೆಯಂತೆ ಸಮವಾಗಿದ್ದನು. ರಾಜರ್ಷಿಯಾದ ವಿಚಿತ್ರವೀರ್ಯನೂ ಕುರುನಂದನನಾದ ಪಾಂಡುವೂ ಹಾಗೆಯೇ ಇದ್ದರು.
ಸ ತಸ್ಮಿನ್ ಪುರುಷವ್ಯಾಘ್ರೇಽದೃಷ್ಟಭಾವಂ ಗತೇ ಸತಿ |
ರಾಜಪುತ್ರಾನಿಮಾನ್ ಬಾಲಾನ್ ಧೃತರಾಷ್ಟ್ರೋ ನ ಮೃಷ್ಯತಿ ||11||
ಆದರೆ ಪುರುಷವ್ಯಾಘ್ರನಾದ ಆ ಪಾಂಡುವು ಸ್ವರ್ಗಸ್ಥನಾದ ಮೇಲೆ ಧೃತರಾಷ್ಟ್ರನು ಈ ಬಾಲಕರಾದ ರಾಜಕುಮಾರರನ್ನು ನೋಡಿ ಸಹಿಸುತ್ತಿಲ್ಲ.
ತೇ ವಯಂ ಸರ್ವಮೇವೇದಂ ತ್ಯಕ್ತ್ವಾ ಹ್ಯಾಶು ಪುರೋತ್ತಮಮ್ |
ದಾರಾನಾದಾಯ ಗಚ್ಛಾಮೋ ಯತ್ರ ಯಾತಿ ಯುಧಿಷ್ಠಿರಃ ||12||
ನಾವೆಲ್ಲರೂ ಈ ಶ್ರೇಷ್ಠವಾದ ಪಟ್ಟಣವನ್ನೂ ನಮ್ಮ ಎಲ್ಲಾ ಆಸ್ತಿಯನ್ನೂ ಬಿಟ್ಟು ಪತ್ನಿಯರನ್ನು ಕರೆದುಕೊಂಡು ಯುಧಿಷ್ಠಿರನು ಎಲ್ಲಿಗೆ ಹೋಗುತ್ತಾನೋ ಅಲ್ಲಿಗೇ ಹೋಗೋಣ.
ವೈಶಂಪಾಯನಃ
ತಾಂಸ್ತಥಾವಾದಿನಃ ಪೌರಾನ್ ದುಃಖಿತಾನ್ ಶೋಕಕರ್ಶಿತಾನ್ |
ಉವಾಚ ಪರಮಪ್ರೀತೋ ಧರ್ಮರಾಜೋ ಯುಧಿಷ್ಠಿರಃ ||13||
ಧರ್ಮರಾಜನಾದ ಯುಧಿಷ್ಠಿರನು ಪೌರರು ದುಃಖಶೋಕಗಳಿಂದ ಕರ್ಶಿತರಾಗಿ ಹಾಗೆ ಮಾತನಾಡುವುದನ್ನು ಕೇಳಿ ಪರಮಸಂತೋಷದಿಂದ ಅವರನ್ನು ಕುರಿತು ಮಾತನಾಡಿದನು.
ಪಿತಾ ಮಾನ್ಯೋ ಗುರುಃ ಶ್ರೇಷ್ಠೋ ಯದಾಹ ಪೃಥಿವೀಪತಿಃ |
ಅಶಂಕಮಾನೈಸ್ತತ್ಕಾರ್ಯಮಸ್ಮಾಭಿರಿತಿ ನೋ ವ್ರತಮ್ ||14||
ನಮ್ಮ ತಂದೆಯೂ, ಗುರುವೂ, ಶ್ರೇಷ್ಠನಾದ ರಾಜನೂ ಆದ ಧೃತರಾಷ್ಟ್ರನ ಆದೇಶವನ್ನು ನಾವು ಶಂಕೆಯಿಲ್ಲದೇ ಅನುಷ್ಠಾನ ಮಾಡಬೇಕು. ಇದು ನಮ್ಮ ವ್ರತ.
ಭವಂತಃ ಸುಹೃದೋಽಸ್ಮಾಕಮಸ್ಮಾನ್ ಕೃತ್ವಾ ಪ್ರದಕ್ಷಿಣಮ್ |
ಆಶೀರ್ಭಿರಭಿನಂದ್ಯಾಸ್ಮಾನ್ ನಿವರ್ತಧ್ವಂ ಯಥಾಗೃಹಮ್ ||15||
ನೀವೆಲ್ಲರೂ ನಮ್ಮಲ್ಲಿ ಸೌಹಾರ್ದವುಳ್ಳವರು. ನೀವು ನಮ್ಮನ್ನು ಪ್ರದಕ್ಷಿಣೆ ಮಾಡಿ ಆಶೀರ್ವಾದಗಳಿಂದ ನಮಗೆ ಶುಭವನ್ನು ಕೋರಿ ನಿಮ್ಮ ಮನೆಗಳಿಗೆ ಹಿಂದಿರುಗಿ.
ಯದಾ ತು ಕಾರ್ಯಮಸ್ಮಾಕಂ ಭವದ್ಭಿರುಪಪದ್ಯತೇ |
ತದಾ ಕರಿಷ್ಯಥ ಮಮ ಪ್ರಿಯಾಣಿ ಚ ಹಿತಾನಿ ಚ ||16||
ನಮಗೆ ನಿಮ್ಮಿಂದ ಏನಾದರೂ ಕಾರ್ಯವಾಗಬೇಕಾದಾಗ ಅಂತಹ ಹಿತವಾದ ಮತ್ತು ಪ್ರಿಯವಾದ ಕಾರ್ಯಗಳನ್ನು ಮಾಡಿಕೊಡಿ.
ವೈಶಂಪಾಯನಃ
ತೇ ತಥೇತಿ ಪ್ರತಿಜ್ಞಾಯ ಕೃತ್ವಾ ವೈ ತಾನ್ ಪ್ರದಕ್ಷಿಣಮ್ |
ಅಶೀರ್ಭಿಶ್ಚಾಭಿನಂದ್ಯೈತಾನ್ ಜಗ್ಮುರ್ನಗರಮೇವ ಹ ||17||
ಪೌರರು ``ಹಾಗೆಯೇ ಆಗಲಿ'' ಎಂದು ಪ್ರತಿಜ್ಞೆಯನ್ನು ಮಾಡಿ ಪಾಂಡವರಿಗೆ ಪ್ರದಕ್ಷಿಣೆಯನ್ನು ಮಾಡಿ, ಆಶೀರ್ವಾದಗಳಿಂದ ಅವರನ್ನು ಅಭಿನಂದಿಸಿ ಹಸ್ತಿನಪುರಕ್ಕೆ ತೆರಳಿದರು.
ಪೌರೇಷು ತು ನಿವೃತ್ತೇಷು ವಿದುರಃ ಸರ್ವಧರ್ಮವಿತ್ |
ಅನುಗಚ್ಛನ್ ಸ ಕೌಂತೇಯಂ ಬೋಧಯಂಶ್ಚೇದಮಬ್ರವೀತ್ ||18||

ಪೌರರು ನಿವೃತ್ತರಾದ ಮೇಲೆ, ಸರ್ವಧರ್ಮಗಳನ್ನೂ ತಿಳಿದ ವಿದುರನು ಪಾಂಡವರ ಹಿಂದೆ ಹೋಗುತ್ತಾ ಕೌಂತೇಯನನ್ನು ಎಚ್ಚರಿಸುವವನಾಗಿ ಈ ಮಾತನ್ನು ಆಡಿದನು.
ವಿದುರಃ
ಪ್ರಾಜ್ಞಃ ಪ್ರಾಜ್ಞಪ್ರಲಾಪಜ್ಞಃ ಸಮ್ಯಗ್ದರ್ಮಾರ್ಥದರ್ಶಿವಾನ್ |
ವಿಜ್ಞಾಯೇದಂ ತಥಾ ಕುರ್ಯಾದ್ ಆಪದಂ ನಿಸ್ತರೇದ್ ಯಯಾ ||
ಸ್ವಯಂ ಕುಶಲನೂ, ಸಂಕೇತವಚನಗಳಿಂದ ಮಾಡಿದ ಸೂಚನೆಯನ್ನು ತಿಳಿದುಕೊಳ್ಳುವವನೂ, ಧರ್ಮಾರ್ಥಗಳ ಸರಿಯಾದ ಜ್ಞಾನ ಇರುವವನೂ, ನನ್ನ ಈ ಮಾತುಗಳ ಅರ್ಥವನ್ನು ತಿಳಿದು ಆಪತ್ತಿನಿಂದ ಚೆನ್ನಾಗಿ ಪಾರಾಗಬೇಕು. (ಇದು ಧರ್ಮರಾಜನನ್ನು ಕುರಿತು ಆಡಿದ ವಚನ.)
ಅಲೋಹಂ ನಿಶಿತಂ ಶಸ್ತ್ರಂ ಶರೀರಪರಿಕೃಂತನಮ್ |
ಯೇ ವಿದಂತಿ ನ ತಾನ್ ಘ್ನಂತಿ ಪ್ರತಿಘಾತವಿದಸ್ತಥಾ ||20||
ಲೋಹಮಯವಲ್ಲದ, ಶರೀರವನ್ನು ಕತ್ತರಿಸುವ ಹರಿತವಾದ ಶಸ್ತ್ರವನ್ನು ಯಾರು ತಿಳಿಯುತ್ತಾರೋ, ಅವರನ್ನು ಪ್ರತಿಘಾತವನ್ನು ಮಾಡಲು ಬಯಸುವ ಶತ್ರುಗಳು ಕೊಲ್ಲಲು ಸಾಧ್ಯವಿಲ್ಲ. (ಇದು ವಿಷದಿಂದ ಜಾಗರೂಕರಾಗಿರಬೇಕು ಎಂದು ಸೂಚನೆ.)
ಕಕ್ಷಘ್ನಂ ಶಿಶಿರಘ್ನಂ ಚ ಮಹಾಕುಕ್ಷಿಬಲೌಜಸಮ್ |
ನ ಸಹೇತೇತಿ ಚಾತ್ಮಾನಂ ಯೋ ರಕ್ಷತಿ ಸ ಜೀವತಿ ||21||
ವನವನ್ನು ಸುಡುವ, ಹಿಮವನ್ನು ನಾಶ ಮಾಡುವ, ಕುಕ್ಷಿಯಲ್ಲಿದ್ದು, ಬಲ ಮತ್ತು ತಡೆಯುವ ಸಾಮರ್ಥ್ಯವನ್ನು ಕೊಡುವ (ಅಗ್ನಿಯನ್ನು) ಈ ಮನುಷ್ಯ ಶರೀರವು ಸಹಿಸಲಾರದು ಎಂದು ತಿಳಿದು ಯಾರು ತನ್ನನ್ನು ರಕ್ಷಿಸಿಕೊಳ್ಳುತ್ತಾನೋ ಅವನು ಬದುಕುತ್ತಾನೆ. (ಇದು ಅಗ್ನಿಯಿಂದ ಎಲ್ಲರನ್ನೂ ರಕ್ಷಿಸಬೇಕೆಂದು ಭೀಮನಿಗೆ ಸೂಚನೆ)
ನಾಚಕ್ಷುರ್ವೇತ್ತಿ ಪಂಥಾನಂ ನಾಚಕ್ಷುರ್ವೇತ್ತಿ ವೈ ದಿಶಃ |
ನಾಧೃತಿರ್ಭೂತಿಮಾಪ್ನೋತಿ ಬುದ್ಧ್ಯಸ್ವೈನಂ ಪ್ರಬೋಧಿತಃ ||22||
ಅಂಧನಾದವನು ದಾರಿಯನ್ನು ತಿಳಿಯುವುದಿಲ್ಲ. ಅಂಧನಾದವನು ದಿಕ್ಕುಗಳನ್ನೂ ತಿಳಿಯುವುದಿಲ್ಲ. ಧೈರ್ಯವಿಲ್ಲದವನು ಎಂದೂ ಐಶ್ವರ್ಯವನ್ನು ಹೊಂದುವುದಿಲ್ಲ. ನನ್ನ ಈ ಎಚ್ಚರಿಕೆಯ ಮಾತುಗಳನ್ನು ತಿಳಿದುಕೋ. (ಇದು ಮಾರ್ಗವನ್ನೂ, ದಿಕ್ಕುಗಳನ್ನೂ ತಿಳಿದುಕೊಂಡು ಹಸ್ತಿನಪುರದ ಮಾರ್ಗವನ್ನು ಹಿಡಿಯದೇ ಬೇರೆ ಮಾರ್ಗದಲ್ಲಿ ಹೋಗಬೇಕು ಎಂದು ಭೀಮನಿಗೆ ಸೂಚನೆ.)
ನಾನಾಪ್ತೈರ್ದತ್ತಮಾದತ್ತೇ ಧೀರಃ ಶಸ್ತ್ರಮಲೋಹಜಮ್ |
ಶ್ವಾವಿಟ್ಚ್ಛರಣಮಾಸಾದ್ಯ ಪ್ರಮುಚ್ಯೇತ ಹುತಾಶನಾತ್ ||23||
ಧೀರನಾದವನು ಅನಾಪ್ತರು ಕೊಟ್ಟ ಲೋಹಮಯವಲ್ಲದ ಶಸ್ತ್ರವನ್ನು ಸ್ವೀಕರಿಸುವುದಿಲ್ಲ. ಮುಳ್ಳುಹಂದಿಯ ವಾಸವನ್ನು ತಲುಪಿದವನು ಅಗ್ನಿಯಿಂದ ಬಿಡುಗಡೆ ಹೊಂದುತ್ತಾನೆ. (ಅನಾಪ್ತರು ಕೊಟ್ಟ ವಿಷಮಿಶ್ರಿತವಾದ ಆಹಾರವನ್ನು ಸ್ವೀಕರಿಸಬಾರದು. ಅಗ್ನಿಭಯ ಉಂಟಾದಾಗ ಬಿಲದ ಮೂಲಕ ನಿರ್ಗಮಿಸಬೇಕು ಎಂದು ಭೀಮನಿಗೆ ಸೂಚನೆ.)
ಪರಂ ಮಾರ್ಗಾನ್ ವಿಜಾನಾತಿ ನಕ್ಷತ್ರೈರ್ವಿಂದತೇ ದಿಶಃ |
ಆತ್ಮನಾ ಚಾತ್ಮನಃ ಪಂಚ ಪೀಡಯನ್ ನ ಸ ಪೀಡ್ಯತೇ ||24||
ನಕ್ಷತ್ರಗಳ ಬೆಳಕಿನಿಂದ ಮಾರ್ಗವನ್ನು ತಿಳಿಯುತ್ತಾನೆ, ಅಭೀಷ್ಟವಾದ ದಿಕ್ಕುಗಳನ್ನೂ ಹೊಂದುತ್ತಾನೆ. ತಾನಾಗಿಯೇ ತನ್ನ ಸಂಬಂಧಿಯಾದ ಐವರನ್ನು ಪೀಡಿಸುವವನು ಪೀಡೆಗೆ ಒಳಗಾಗುವುದಿಲ್ಲ. (ರಾತ್ರಿವೇಳೆಯಲ್ಲಿ ನಕ್ಷತ್ರಗಳನ್ನು ಗಮನಿಸಿ, ಮಾರ್ಗಗಳನ್ನೂ ಮತ್ತು ದಿಕ್ಕುಗಳನ್ನೂ ತಿಳಿಯಬೇಕು. ತಮ್ಮ ಪ್ರತಿನಿಧಿಗಳಂತಿರುವ ಪುರೋಚನನ ಸಹೋದರಿಯ ಐದು ಮಕ್ಕಳನ್ನು ಪೀಡಿಸುವವನು ತಾನು ಪೀಡೆಗೆ ಒಳಗಾಗುವುದಿಲ್ಲ. ಅಥವಾ ತನ್ನ ಸಂಬಂಧಿಯಾದ ಐದು ಜ್ಞಾನೇಂದ್ರಿಯಗಳನ್ನೂ ಮತ್ತು ಐದು ಕರ್ಮೇಂದ್ರಿಯಗಳನ್ನೂ ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡವನು ಪೀಡೆಗೆ ಒಳಗಾಗುವುದಿಲ್ಲ ಎಂದು ಭೀಮನಿಗೆ ಸೂಚನೆ.)
ವೈಶಂಪಾಯನಃ
ಅನುಶಿಷ್ಟ್ವಾ ಚ ಗತ್ವಾ ಚ ಕೃತ್ವಾ ಚೈತಾನ್ ಪ್ರದಕ್ಷಿಣಮ್ |
ಅಭಿವಾದ್ಯ ಪುನಃ ಕುಂತೀಂ ರುದನ್ ಪಾಂಡುಮಚಿಂತಯತ್ |
ಪಾಂಡವಾನಾಭ್ಯನುಜ್ಞಾಯ ವಿದುರಃ ಪ್ರತ್ಯಯಾದ್ ಗೃಹಾನ್ ||25||
ವಿದುರನು ಪಾಂಡವರಿಗೆ ಹೀಗೆ ಉಪದೇಶ ಮಾಡಿ ಅವರಿಗೆ ಪ್ರದಕ್ಷಿಣೆಯನ್ನು ಮಾಡಿ ಕುಂತಿಗೆ ನಮಸ್ಕಾರವನ್ನು ಮಾಡಿ, ಪಾಂಡುವನ್ನು ಚಿಂತಿಸಿ ಅಳುತ್ತಾ ಪಾಂಡವರ ಅನುಮತಿಯನ್ನು ಪಡೆದು ತನ್ನ ಮನೆಗೆ ಹಿಂದಿರುಗಿದನು.
ನಿವೃತ್ತೇ ವಿದುರೇ ಚಾಪಿ ಭೀಷ್ಮೇ ಪೌರಜನೇ ತಥಾ |
ಅಜಾತಶತ್ರುಮಾಮಂತ್ರ್ಯ ಕುಂತೀ ವಚನಮಬ್ರವೀತ್ ||26||
ವಿದುರನೂ, ಭೀಷ್ಮರೂ ಮತ್ತು ಪೌರಜನರು ಹಿಂದಿರುಗುತ್ತಿರಲು ಕುಂತಿಯು ಯುಧಿಷ್ಠಿರನನ್ನು ಕರೆದು ಮಾತನಾಡಿದಳು.
ಕ್ಷತ್ತಾ ಯದಬ್ರವೀದ್ ವಾಕ್ಯಂ ಜನಮಧ್ಯೇಽಬ್ರುವನ್ನಿವ |
ತ್ವಯಾ ಚ ತತ್ತಥೇತ್ಯುಕ್ತಂ ಜಾನೀಮೋ ನ ಚ ತದ್ ವಯಮ್ ||27||
ಯದಿ ತಚ್ಛಕ್ಯಮಸ್ಮಾಭಿಃ ಶ್ರೋತುಂ ನ ಚ ನ ದೋಷವತ್ |
ಶ್ರೋತುಮಿಚ್ಛಾಮಿ ತತ್ ಸರ್ವಂ ಸಂವಾದಂ ತವ ತಸ್ಯ ಚ ||28||
ಧರ್ಮರಾಜನೇ, ಜನಗಳ ಮಧ್ಯದಲ್ಲಿ ವಿದುರನು ಮಾತನಾಡಿದರೂ ಮಾತನಾಡದವನಂತೆ ನಿನಗೆ ಏನನ್ನೋ ಹೇಳಿದನು. ನೀನು ``ಹಾಗೆಯೇ ಆಗಲಿ'' ಎಂದು ಹೇಳಿದೆ. ನಾವು ಅದನ್ನು ತಿಳಿಯಬಹುದಾದರೆ ತಿಳಿಯುವುದರಿಂದ ದೋಷವಿಲ್ಲದಿದ್ದರೆ ನಿನ್ನ ಮತ್ತು

ವಿದುರನ ಸಂವಾದವನ್ನು ಕೇಳಲು ಇಷ್ಟಪಡುತ್ತೇನೆ.
ಯುಧಿಷ್ಠಿರಃ
ವಿಷಾದಗ್ನೇಶ್ಚ ಬೋದ್ಧವ್ಯಮಿತಿ ಮಾಂ ವಿದುರೋಽಬವೀತ್ |
ಪಂಥಾಶ್ಚ ವಿದಿತಃ ಕಶ್ಚಿತ್ ಸ್ಯಾತ್ ಶುದ್ಧ ಇತಿ ಚಾಬ್ರುವೀತ್ ॥29॥
ವಿಷದಿಂದಲೂ, ಅಗ್ನಿಯಿಂದಲೂ ಜಾಗರೂಕರಾಗಿರಬೇಕು. ಶುದ್ಧವಾದ ಮಾರ್ಗಗಳನ್ನು ತಿಳಿದುಕೊಂಡಿರಬೇಕು ಎಂದು ವಿದುರನು ನನಗೆ ಹೇಳಿದನು.
ಜಿತೇಂದ್ರಿಯಶ್ಚ ವಸುಧಾಂ ಪ್ರಾಪ್ಸ್ಯತೀತಿ ವಚೋಽಬ್ರುವೀತ್ |
ವಿಜ್ಞಾತಮಿತಿ ತತ್ ಸರ್ವಂ ಪ್ರತ್ಯುಕ್ತೋ ವಿದುರೋ ಮಯಾ ॥30॥
ಜಿತೇಂದ್ರಿಯನಾದವನು ಭೂಮಿಯನ್ನು ಪಡೆಯುವನು ಎಂದೂ ಹೇಳಿದನು. ``ಅರ್ಥವಾಯಿತು'' ಎಂದು ನಾನು ಅವನಿಗೆ ಉತ್ತರವನ್ನು ಕೊಟ್ಟೆ.
ವೈಶಂಪಾಯನಃ
ಅಷ್ಟಮೇಽಹನಿ ರೋಹಿಣ್ಯಾಂ ಪ್ರಯಾತಾಃ ಫಲ್ಗುನಸ್ಯ ತೇ |
ವಾರಣಾವತಮಾಸಾದ್ಯ ದದೃಶುರ್ನಾಗರಂ ಜನಮ್ ॥31॥
ಫಾಲ್ಗುನ ಮಾಸದ ಎಂಟನೆಯ ದಿವಸ ರೋಹಿಣಿ ನಕ್ಷತ್ರದಲ್ಲಿ ಆ ಪಾಂಡವರು ಹೊರಟು ವಾರಣಾವತವನ್ನು ತಲುಪಿ ಅಲ್ಲಿಯ ಪುರಜನರನ್ನು ನೋಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರನಲವತ್ತೈದನೆಯ ಅಧ್ಯಾಯ ಮುಗಿಯಿತು.
*****

ನೂರ ನಲವತ್ತಾರನೆಯ ಅಧ್ಯಾಯ
(ವಾರಣಾವತನಿವಾಸಿಗಳಿಂದ ಪಾಂಡವರ ಸತ್ಕಾರ ಮತ್ತು ಸ್ವೀಕಾರ, ಹತ್ತು ದಿನಗಳು ಕಳೆದ ಮೇಲೆ ಜತುಗೃಹಪ್ರವೇಶ, ಭೀಮ ಯುಧಿಷ್ಠಿರರಿಗೆ ಗೃಹದ ಸತ್ಯತೆಯ ಜ್ಞಾನ, ಧರ್ಮರಾಜನ ಉಪದೇಶ)
ವೈಶಂಪಾಯನಃ
ತತಃ ಸರ್ವಾಃ ಪ್ರಕೃತಯೋ ನಗರಾದ್ ವಾರಣವತಾತ್ |
ಸರ್ವಮಂಗಲಸಂಯುಕ್ತಾ ಯಥಾಶಾಸ್ತ್ರಮಲಂಕೃತಾಃ ॥1॥
ಶ್ರುತ್ವಾಽಽಗತಾನ್ ಪಾಂಡವೇಯಾನ್ ನಾನಾಯಾನೈಃ ಸಹಸ್ರಶಃ |
ಅಭಿಜಗ್ಮುರ್ನರಶ್ರೇಷ್ಠಾಃ ಪ್ರೀತ್ಯಾ ಪರಮಯಾ ಯುತಾಃ ॥2॥
ಆಗ ವಾರಣಾವತನಗರವಾಸಿಗಳಾದ ಎಲ್ಲಾ ಪ್ರಜೆಗಳೂ, ಪಾಂಡವರು ಬರುತ್ತಿದ್ದಾರೆಂಬ ವಾರ್ತೆಯನ್ನು ಕೇಳಿ ಶಾಸೊತ್ರೀಕ್ತ ರೀತಿಯಲ್ಲಿ ಅಲಂಕಾರವನ್ನು ಮಾಡಿಕೊಂಡು ಎಲ್ಲಾ ಮಂಗಳ ಪದಾರ್ಥಗಳನ್ನು ತೆಗೆದುಕೊಂಡು ಅನೇಕ ಯಾನಗಳಲ್ಲಿ ಸಹಸ್ರ ಸಂಖ್ಯೆಯಲ್ಲಿ ಪರಮ ಸಂತೋಷದಿಂದ ಪಾಂಡವರಿಗೆ ಅಭಿಮುಖವಾಗಿ ಬಂದರು.
ತೇ ಸಮಾಸಾದ್ಯ ಕೌಂತೇಯಾನ್ ವಾರಣಾವತನಾಗರಾಃ |
ಕೃತ್ವಾ ಜಯಾಶಿಷಃ ಸರ್ವೇ ಪರಿವವ್ರುರ್ಯುಧಿಷ್ಠಿರಮ್ ॥3॥
ವಾರಣಾವತನಗರವಾಸಿಗಳು ಪಾಂಡವರನ್ನು ಸಮೀಪಿಸಿ ಅವರಿಗೆ ಜಯಾಶೀರ್ವಾದಗಳನ್ನು ಮಾಡಿ ಯುಧಿಷ್ಠಿರನನ್ನು ಸುತ್ತುವರಿದರು.
ತೈರ್ವೃತಃ ಪುರುಷವ್ಯಾಘ್ರೋ ಧರ್ಮರಾಜೋ ಯುಧಿಷ್ಠಿರಃ |
ವಿಬಭೌ ದೇವಸಂಕಾಶೋ ವಜ್ರಪಾಣಿರಿವಾಮರೈಃ ॥4॥
ಪೌರರಿಂದ ಸುತ್ತುವರಿಯಲ್ಪಟ್ಟ ಪುರುಷವ್ಯಾಘ್ರನಾದ ಧರ್ಮರಾಜನಾದ ಯುಧಿಷ್ಠಿರನು ದೇವತೆಗಳಿಂದ ಸುತ್ತುವರಿಯಲ್ಪಟ್ಟ ಮಹೇಂದ್ರನಂತೆ ದೇವಕಾಂತಿಯಿಂದ ಬೆಳಗಿದನು.
ಸತ್ಕೃತಾಸ್ತತ್ರ ಪೌರೈಶ್ಚ ಪೌರಾನ್ ಸತ್ಕೃತ್ಯ ಚಾನಘಾಃ |
ಅಲಂಕೃತಜನಾಕೀರ್ಣಂ ವಿವಿಶುರ್ವಾರಣಾವತಮ್ ॥5॥
ನಿರ್ದುಷ್ಟರಾದ ಪಾಂಡವರು ಪೌರರಿಂದ ಸತ್ಕೃತರಾಗಿ ಪೌರರನ್ನೂ ಸತ್ಕರಿಸಿ, ಅಲಂಕೃತಜನರಿಂದ ತುಂಬಿದ ವಾರಣಾವತನಗರವನ್ನು ಪ್ರವೇಶಿಸಿದರು.
ತೇ ಪ್ರವಿಶ್ಯ ಪುರೀಂ ವೀರಾಸ್ತೂರ್ಣಂ ಯಯುರಥೋ ಗೃಹಾನ್|
ಬ್ರಾಹ್ಮಣಾನಾಂ ಮಹೀಪಾಲ ರತಾನಾಂ ಸ್ವೇಷು ಕರ್ಮಸು ॥6॥
ಎಲೈ ಮಹೀಪಾಲನೇ, ಆ ವೀರರು ಪಟ್ಟಣವನ್ನು ಪ್ರವೇಶಿಸಿ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾದ ಬ್ರಾಹ್ಮಣರ ಮನೆಗಳಿಗೆ ಶೀಘ್ರವಾಗಿ ಹೋದರು.
ನಗರಾಧಿಕೃತಾನಾಂ ಚ ಗೃಹಾಣಿ ರಥಿನಾಂ ತದಾ |
ಉಪತಸ್ಥುರ್ನರಶ್ರೇಷ್ಠಾ ವೈಶ್ಯಶೂದ್ರಗೃಹಾಣ್ಯಪಿ ॥7॥

ಹಾಗೆಯೇ, ನಗರಾಧಿಕಾರಿಗಳಾದ ರಥಿಗಳ ಮನೆಗಳಿಗೂ, ವೈಶ್ಯಶೂದ್ರರ ಮನೆಗಳಿಗೂ ನರಶ್ರೇಷ್ಠರಾದ ಅವರು ಪ್ರವೇಶಿಸಿದರು.
ಅರ್ಚಿತಾಶ್ಚ ನರೈಃ ಪೌರೈಃ ಪಾಂಡವಾ ಭರತರ್ಷಭ |
ಜಗ್ಮುರಾವಸಥಂ ಪಶ್ಚಾತ್ ಪುರೋಚನಪುರಸ್ಕೃತಾಃ ||8||
ಭರತರ್ಷಭನೇ, ಪೌರರಿಂದ ಪೂಜಿತರಾದ ಪಾಂಡವರು, ಅನಂತರ ಪುರೋಚನನನ್ನು ಮುಂದೆ ಮಾಡಿಕೊಂಡು ತಮ್ಮ ವಾಸಸ್ಥಾನಕ್ಕೆ (ತಾತ್ಕಾಲಿಕ ಬಿಡಾರಕ್ಕೆ) ಹೋದರು.
ತೇಭ್ಯೋ ಭಕ್ಷ್ಯಾನ್ನಪಾನಾನಿ ಶಯನಾನಿ ಶುಭಾನಿ ಚ |
ಆಸನಾನಿ ಚ ಮುಖ್ಯಾನಿ ಪ್ರದದೌ ಸ ಪುರೋಚನಃ ||9||
ಆ ಪುರೋಚನನು ಅವರಿಗೆ ಭಕ್ಷ್ಯಾನ್ನಪಾನಗಳನ್ನೂ, ಶುಭವಾದ ಆಸನಗಳನ್ನೂ, ಶ್ರೇಷ್ಠವಾದ ಶಯನಗಳನ್ನೂ ಕೊಟ್ಟನು.
ತತ್ರ ತೇ ಸತ್ಕೃತಾಸ್ತೇನ ಸುಮಹಾರ್ಹಪರಿಚ್ಛದಾಃ |
ಉಪಾಸ್ಯಮಾನಾಃ ಪುರುಷೈರೂಷುಃ ಪುರನಿವಾಸಿಭಿಃ ||10||
ಅಲ್ಲಿ ಅವರು ಪುರೋಚನನಿಂದ ಸತ್ಕೃತರಾಗಿ ಅನರ್ಘ್ಯವಾದ ಗೃಹೋಪಕರಣಗಳನ್ನು ಹೊಂದಿ ಪುರವಾಸಿಗಳಾದ ಪುರುಷರಿಂದ ಉಪಾಸ್ಯರಾಗಿ ವಾಸವನ್ನು ಮಾಡಿದರು.
ದಶರಾತ್ರೋಷಿತಾನಾಂ ತು ತತ್ರ ತೇಷಾಂ ಪುರೋಚನಃ |
ನಿವೇಶಯಾಮಾಸ ಗೃಹಂ ಶಿವಾಖ್ಯಮಶಿವಂ ತದಾ ||11||
ಅವರು ಹತ್ತು ರಾತ್ರಿಗಳ ಕಾಲ ಆ ಮನೆಯಲ್ಲಿ ಕಳೆದ ಮೇಲೆ ಪುರೋಚನನು ದುರ್ಯೋಧನನ ಆದೇಶದಂತೆ ನಿರ್ಮಿಸಿದ್ದ ಶಿವ ಎಂಬ ಹೆಸರಿನ ಅಶಿವ(ಅಮಂಗಳ)ವಾದ ಮನೆಗೆ ಅವರನ್ನು ಕರೆದುಕೊಂಡು ಹೋದನು.
ತತಸ್ತೇ ಪುರುಷವ್ಯಾಘ್ರಾ ದದೃಶುಃ ಸಪರಿಚ್ಛದಾಃ |
ಪುರೋಚನಸ್ಯ ವಚನಾತ್ ಕೈಲಾಸಮಿವ ಗುಹ್ಯಕಾಃ ||12||
ಆ ಪುರುಷವ್ಯಾಘ್ರರು ಗುಹ್ಯಕರು ಕೈಲಾಸವನ್ನು ನೋಡಿದಂತೆ ಆ ಮನೆಯನ್ನೂ ಮತ್ತು ಅದರ ಸಲಕರಣೆಗಳನ್ನೂ ಪುರೋಚನನ ವಚನದಂತೆ ನೋಡಿದರು.
ತತ್ರಾಗಾರಮಭಿಪ್ರೇಕ್ಷ್ಯ ಸರ್ವಧರ್ಮವಿಶಾರದಃ |
ಉವಾಚಾಗ್ನೇಯಮಿತ್ಯೇವಂ ಭೀಮಸೇನಂ ಯುಧಿಷ್ಠಿರಃ |
ಜಿಘ್ರನ್ ಸಮ್ಯಗ್ವಸಾಗಂಧಂ ಸರ್ಪಿರ್ಲಾಕ್ಷವಿಮಿಶ್ರಿತಮ್ ||13||
ಸರ್ವಧರ್ಮವಿಶಾರದನಾದ ಯುಧಿಷ್ಠಿರನು ಆ ಮನೆಯನ್ನು ಗಮನಿಸಿ ಕೊಬ್ಬಿನ ವಾಸನೆಯನ್ನೂ, ತುಪ್ಪ ಮತ್ತು ಅರಗಿನ ವಾಸನೆಯ ಮಿಶ್ರಣವನ್ನು ಗಮನಿಸಿ ಭೀಮಸೇನನನ್ನು ಕುರಿತು ಈ ಮನೆಯು ಆಗ್ನೇಯವೆಂದು ಹೇಳಿದನು. (ಆಗ್ನೇಯವೆಂದರೆ ಸುಲಭವಾಗಿ ಅಗ್ನಿಗೆ ಬಲಿಯಾಗುವ ಮನೆ.)
ಯುಧಿಷ್ಠಿರಃ
ಕೃತಂ ಹಿ ವ್ಯಕ್ತಮಾಗ್ನೇಯಮಿದಂ ವೇಶ್ಮ ಪರಂತಪ |
ಮೃದೇಷಾ ವ್ಯಕ್ತಮಾಗ್ನೇಯೈರ್ದ್ರವ್ಯೈರ್ಮಿಶ್ರಸ್ಯ ವೇಶ್ಮನಃ ||14||
ಪರಂತಪನೇ, ಸ್ಪಷ್ಟವಾಗಿ ಈ ಮನೆಯು ಆಗ್ನೇಯ ವಸ್ತುಗಳಿಂದ ಮಾಡಲ್ಪಟ್ಟಿದೆ. ಈ ಮನೆಯ ಮಣ್ಣೂ ಸಹ ಆಗ್ನೇಯ ದ್ರವ್ಯಗಳಿಂದ ಮಿಶ್ರಿತವಾಗಿದೆ ಎಂದು ಸ್ಪಷ್ಟವಾಗಿದೆ.
ಶಣಸರ್ಜರಸೋಪೇತಾ ಹ್ಯಾಲಿಪ್ತಾ ಗೃಹಭಿತ್ತಿಷು |
ಮುಂಜಬಲ್ವಜವಂಶಾದಿ ನೂನಂ ಸರ್ವಂ ಘೃತೋಕ್ಷಿತಮ್ ||15||
ಈ ಮನೆಯ ಗೋಡೆಗಳು, ಶಣ ಮತ್ತು ಸರ್ಜರಸದಿಂದ ಚೆನ್ನಾಗಿ ಲೇಪಿಸಲ್ಪಟ್ಟಿವೆ. ಈ ಮನೆಯಲ್ಲಿರುವ ಮುಂಜ (ದರ್ಭವಿಶೇಷ), ಬಲ್ವಜ (ಹೆಂಚಿಕಡ್ಡಿಯಂತಹ ಕಡ್ಡಿ), ಮತ್ತು ಬಿದಿರುಗಳು (ಆಸನಗಳಿಗೆ ಉಪಯೋಗಿಸಿದವು) ಎಲ್ಲವೂ ಘೃತದಲ್ಲಿ ಅದ್ದಲ್ಪಟ್ಟಿವೆ.
ಸಭಾ ಸರ್ಜಲಸಂಯುಕ್ತಮಾನೀತಂ ಗೃಹಕರ್ಮಣಿ |
ಶಣಬಲ್ವಜಕಾರ್ಪಾಸವಂಶದಾರುಕಟಾನ್ಯಪಿ ||16||
ಆಗ್ನೇಯಾನ್ಯತ್ರ ಕ್ಷಿಪ್ತಾನಿ ಪರಿತೋ ವೇಶ್ಮನಸ್ತಥಾ |
ಶಿಲ್ಪಿಭಿಃ ಸ್ವಹಿತೈರಾಪ್ತೈರ್ವಿನೀತೈರ್ವೇಶ್ಮ ಕರ್ಮಣಿ ||17||
ಗೃಹವನ್ನು ನಿರ್ಮಾಣ ಮಾಡುವುದಕ್ಕೆ ಸಭಾಸರ್ಜಲ ದ್ರವ್ಯಸಂಯುಕ್ತವಾದ ವಸ್ತುಗಳು ಇಲ್ಲಿಗೆ ತರಲ್ಪಟ್ಟಿವೆ. ಇಲ್ಲಿರುವ ಶಣ, ಬಲ್ವಜ, ಕಾರ್ಪಾಸ, ಬಿದಿರಿನ ಮತ್ತು ಮರದ ಚಾಪೆಗಳೆಲ್ಲವೂ ಆಗ್ನೇಯವಾಗಿವೆ. ಈ ಮನೆಯಲ್ಲಿ ದುರ್ಯೋಧನನ ವಶವರ್ತಿಗಳಾದ, ಗೃಹನಿರ್ಮಾಣದಲ್ಲಿ ಕುಶಲರಾದ, ದುರ್ಯೋಧನನಿಗೆ ಹಿತರಾದ ಶಿಲ್ಪಿಗಳು ಇವುಗಳನ್ನು ಮನೆಯ ಎಲ್ಲಾ ಕಡೆಯಲ್ಲಿಯೂ ಹರಡಿದ್ದಾರೆ.
ವಿಶ್ವಸ್ತಾನಿಹ ನಃ ಪಾಪೋ ದಗ್ಧುಕಾಮಃ ಪುರೋಚನಃ |
ತಥಾ ಹಿ ವರ್ತತೇ ಮಂದಃ ಸುಯೋಧನಮತೇ ಸ್ಥಿತಃ ||18||
ದುರ್ಯೋಧನನ ಅಭಿಪ್ರಾಯದಂತೆ ನಡೆದುಕೊಳ್ಳುವ ಪಾಪಿಯಾದ ಪುರೋಚನನು ನಮಗೆ ಇಲ್ಲಿ ನಂಬಿಕೆಯನ್ನು ಹುಟ್ಟಿಸಿ ನಮ್ಮನ್ನು ಸುಟ್ಟು ಬಿಡುವ ಅಭಿಪ್ರಾಯನ್ನು ಹೊಂದಿದವನಾಗಿದ್ದಾನೆ.
ಇಮಾಂ ತು ವೈ ಮಹಾಬುದ್ಧಿರ್ವಿದುರೋ ದೃಷ್ಟವಾನ್ ಕಿಲ |
ಆಪದಂ ತೇನ ಮಾಂ ಪಾರ್ಥ ಸರ್ವಂ ಬೋಧಿತವಾಂಸ್ತದಾ ||19||
ಮಹಾಬುದ್ಧಿಯಾದ ವಿದುರನು ಈ ಆಪತ್ತನ್ನು ಮೊದಲೇ ತಿಳಿದಿದ್ದನು. ಪಾರ್ಥನೇ, ಆದ್ದರಿಂದಲೇ ನನ್ನನ್ನು ಎಲ್ಲಾ

ವಿಷಯಗಳಲ್ಲಿಯೂ ಎಚ್ಚರಿಸಿದ್ದಾನೆ.
ತೇ ವಯಂ ಬೋಧಿತಾಸ್ತೇನ ಬುದ್ಧಿಮಂತೋಽಶಿವಂ ಗೃಹಮ್ |
ಆಚಾರ್ಯೈಃ ಸುಕೃತಂ ಗೂಢೈರ್ದುರ್ಯೋಧನವಶಾನುಗೈಃ ॥20॥
ವಿದುರನಿಂದ ಬೋಧಿತರಾದ ಬುದ್ಧಿವಂತರಾದ ನಾವು ದುರ್ಯೋಧನನ ವಶವರ್ತಿಗಳಾದ ಶಿಲ್ಪಿಗಳಿಂದ ಚೆನ್ನಾಗಿ (ವಂಚನೆಗಾಗಿ) ನಿರ್ಮಿಸಲ್ಪಟ್ಟ ಈ ಅಶಿವ ಗೃಹವನ್ನು ನಾವು ಸೇರಿದ್ದೇವೆ.
ಭೀಮಸೇನಃ
ಯದಿದಂ ಗೃಹಮಾಗ್ನೇಯಂ ವಿದಿತಂ ಮನ್ಯತೇ ಭವಾನ್ |
ತತ್ರೈವ ಸಾಧು ಗಚ್ಛಾಮೋ ಯತ್ರ ಪೂರ್ವೋಷಿತಾ ವಯಮ್ ॥21॥
ಈ ಮನೆಯು ಆಗ್ನೇಯ ವಸ್ತುಗಳಿಂದ ನಿರ್ಮಿಸಲ್ಪಟ್ಟಿದೆ ಎಂದು ನೀನು ತಿಳಿದಿರುವ ಕಾರಣದಿಂದ ನಾವು ಮೊದಲು ವಾಸ ಮಾಡಿದ ಸ್ಥಳಕ್ಕೇ ಪುನಃ ಹೋಗೋಣ.
ಯುಧಿಷ್ಠಿರಃ
ಇಹ ಯತ್ತೈರ್ನಿರಾಕಾರೈರ್ವಸ್ತವ್ಯಮಿತಿ ರೋಚತೇ |
ತುಷ್ಟೈರಿವ ವಿಚಿನ್ವದ್ಭಿರ್ಗತಿಮನ್ಯಾಂ ಧ್ರುವಾಮಿತಃ ॥22॥
ಇಲ್ಲಿ ನಮ್ಮ ಅಸಮಾಧಾನವನ್ನು ತೋರಿಸಿಕೊಳ್ಳದೇ ಎಚ್ಚರಿಕೆಯಿಂದ ವಾಸ ಮಾಡಬೇಕೆಂದು ನನಗೆ ತೋರುತ್ತದೆ. ಇಲ್ಲಿ ಸಂತುಷ್ಟರಾದವರಂತೆ ಇದ್ದು ನಾವು ಇಲ್ಲಿಂದ ತಪ್ಪಿಸಿಕೊಳ್ಳಲು ಬೇರೆ ಒಂದು ಮಾರ್ಗವನ್ನು ಹುಡುಕಬೇಕು.
ಆಕಾರಂ ಯದಿ ಜಾನೀಯಾದಸ್ಮಾಕಂ ಸ ಪುರೋಚನಃ |
ತಥಾ ಚ ವರ್ತತೇ ಭೂತ್ವಾ ಪ್ರಸಹ್ಯಾಪಿ ದಹೇತ್ ಪುನಃ ॥23॥
ಆ ಪುರೋಚನನು ಒಂದು ಪಕ್ಷ ನಮ್ಮ ಅಸಮಾಧಾನವನ್ನು ತಿಳಿದರೆ, ಶೀಘ್ರಕಾರಿಯಾದ ಅವನು ಬಲಾತ್ಕಾರದಿಂದ ನಮ್ಮನ್ನು ಇಲ್ಲಿ ಸುಟ್ಟುಬಿಡಬಹುದು.
ನೈವಂ ಬಿಭೇತ್ಯುಪಕ್ರೋಶಾದಧರ್ಮಾಚ್ಚ ಪುರೋಚನಃ |
ತಥಾ ಚ ವರ್ತತೇ ಮಂದೋ ದುರ್ಯೋಧನಮತೇ ಸ್ಥಿತಃ ॥24॥
ಈ ಪುರೋಚನನು ಜನರ ನಿಂದೆಗಾಗಲೀ, ಅಧರ್ಮಕ್ಕಾಗಲೀ, ಹೆದರುವವನಲ್ಲ. ದುರ್ಯೋಧನನ ಅಭಿಪ್ರಾಯದಂತೆ ನಡೆದುಕೊಳ್ಳುತ್ತಾ ಈ ಮಂದನು ಹಾಗೆಯೇ ಇದ್ದಾನೆ.
ಅಪಿ ಚಾಸ್ಮಾಸು ದಗ್ಧೇಷು ಭೀಷ್ಮಃ ಕುರುಪಿತಾಮಹಃ |
ನ ಕುಪ್ಯೇತ ಕಿಮರ್ಥಂ ವಾ ಕೌರವಾನ್ ಕೋಪಯೇತ ಸಃ ॥25॥
ನಾವು ಇಲ್ಲಿ ಸುಟ್ಟು ಹೋದರೆ, ಕುರುಪಿತಾಮಹರಾದ ಭೀಷ್ಮರು ಸಿಟ್ಟು ಮಾಡದೇ ಇರಬಹುದು. ಏಕೆಂದರೆ, ಕೌರವರ ಮೇಲೆ ಸಿಟ್ಟು ಮಾಡುವುದರಿಂದ ಆಗ ಅವರಿಗೆ ಏನು ಪ್ರಯೋಜನವಿದೆ?
ತಥಾ ಹಿ ಸಹದಗ್ಧೇಷು ವಿದುರಃ ಸಪಿತಾಮಹಃ |
ಧರ್ಮೋ ನೇಹೇತಿ ಕುಪ್ಯೇತ ತಥಾಽನ್ಯೇ ಕುರುಪುಂಗವಾಃ ॥26॥
ಹಾಗೆ ನಾವೆಲ್ಲರೂ ಒಟ್ಟಿಗೆ ಸುಟ್ಟು ಹೋದರೆ, ವಿದುರನೂ, ಪಿತಾಮಹನಾದ ಭೀಷ್ಮನೂ ಹಾಗೆಯೇ ಉಳಿದ ಕುರುಶ್ರೇಷ್ಠರೂ ಇದು ಧರ್ಮವಲ್ಲ ಎಂದು ಕೋಪಗೊಳ್ಳಬಹುದು.
ಉಪಪನ್ನಂ ತು ದಗ್ಧೇಷು ಕುಲವಂಶಾನುಕೀರ್ತಿತಾಃ |
ಕುಪ್ಯೇರನ್ ಯದಿ ಧರ್ಮಜ್ಞಾಸ್ತಥಾಽನ್ಯೇ ಕುರುಪುಂಗವಾಃ ॥27॥
ನಾವು ದಗ್ಧರಾದರೆ, ಕುರುವಂಶದಲ್ಲಿ ಪ್ರಸಿದ್ಧರಾದ ಧರ್ಮಜ್ಞರಾದ ಉಳಿದ ಕುರುಶ್ರೇಷ್ಠರು ಕೋಪಗೊಂಡರೆ, ಅದು ಯುಕ್ತವೇ ಆಗುತ್ತದೆ.
ವಯಂ ತು ಯದಿ ದಾಹಾದ್ ವೈ ಬಿಭ್ಯಂತಃ ಪ್ರಾದ್ರವೇಮಹಿ |
ಸ್ಪಶೈರ್ನೋ ಘಾತಯೇತ್ ಸರ್ವಾನ್ ರಾಜ್ಯಲುಬ್ಧಃ ಸುಯೋಧನಃ ॥
ನಾವು ಒಂದು ಪಕ್ಷ ದಾಹಕ್ಕೆ ಹೆದರಿ ಇಲ್ಲಿಂದ ಓಡಿ ಹೋದರೆ, ರಾಜ್ಯಲುಬ್ಧನಾದ ಸುಯೋಧನನು ನಮ್ಮೆಲ್ಲರನ್ನೂ ಗೂಢಚಾರರಿಂದ ಕೊಲ್ಲಿಸಬಹುದು.
ಅಪದಸ್ಥಾನ್ ಪದೇ ತಿಷ್ಠನ್ನಪಕ್ಷಾನ್ ಪಕ್ಷಸಂಶ್ರಿತಃ |
ಹೀನಕೋಶಾನ್ ಮಹಾಕೋಶಃ ಪ್ರಯೋಗೈರ್ಘಾತಯೇದ್ ಧ್ರುವಮ್॥
ಅಧಿಕಾರಸ್ಥಾನವನ್ನು ಆಕ್ರಮಿಸಿದವನೂ, ತನ್ನ ಪಕ್ಷವನ್ನು ಹೊಂದಿರುವವನೂ, ಆಢ್ಯವಾದ ಕೋಶವನ್ನು ಹೊಂದಿರುವವನೂ ಆದ ಅವನು ಅಧಿಕಾರ ರಹಿತರಾದ, ಯಾರ ಬೆಂಬಲವೂ ಇಲ್ಲದ, ಕೋಶಚ್ಯುತರಾದ ನಮ್ಮನ್ನು ಉಪಾಯಗಳಿಂದ ನಿಶ್ಚಿತವಾಗಿ ಕೊಲ್ಲಿಸುವನು.
ತದಸ್ಮಾಭಿರಿಮಂ ಪಾಪಂ ತಂ ಚ ಪಾಪಂ ಸುಯೋಧನಮ್ |
ವಂಚಯದ್ಭಿರ್ನಿವಸ್ತವ್ಯಂ ಛನ್ನಂ ವಾಸಂ ಕ್ವಚಿತ್ಕ್ವಚಿತ್ ॥30॥
ಆದ್ದರಿಂದ ನಾವು ಪಾಪಿಯಾದ ಈ ಪುರೋಚನನನ್ನೂ, ಪಾಪಿಯಾದ ಆ ಸುಯೋಧನನನ್ನೂ ವಂಚಿಸುತ್ತಾ ಸ್ವಲ್ಪ ಸಮಯದವರೆಗೆ ನಮ್ಮ ಅಭಿಪ್ರಾಯವನ್ನು ತೋರಗೊಡದೆ, ಇಲ್ಲಿ ವಾಸವನ್ನು ಮಾಡಬೇಕು.
ತೇ ವಯಂ ಮೃಗಯಾಶೀಲಾಶ್ಚರಾಮ ವಸುಧಾಮಿಮಾಮ್ |
ತಥಾಽನ್ಯೇ ವಿದಿತಾ ಮಾರ್ಗಾ ಭವಿಷ್ಯಂತಿ ಪಲಾಯತಾಮ್ ॥31॥

ಅಂತಹ ನಾವು ಬೇಟೆಯಾಡುವ ಸ್ವಭಾವವನ್ನು ಹೊಂದಿದವರಾಗಿ ಈ ಪ್ರದೇಶದಲ್ಲೆಲ್ಲಾ ತಿರುಗಾಡೋಣ. ಆಗ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ನಮಗೆ ಬೇರೆ ಮಾರ್ಗಗಳು ತಿಳಿಯುವುವು.
ಭೌಮಂ ಚ ಬಿಲಮದ್ಯೈವ ಕಾರಯಾಮಃ ಸುಸಂವೃತಮ್ |
ಗೂಢೋಚ್ಛ್ವಾಸಂ ನ ನಸ್ತತ್ರ ಹುತಾಶಃ ಸಂಪ್ರಧಕ್ಷ್ಯತಿ ॥32॥
ಈ ದಿನವೇ ಭೂಮಿಯಲ್ಲಿ ಚೆನ್ನಾಗಿ ಛನ್ನವಾದ (ಮುಚ್ಚಲ್ಪಟ್ಟ) ಒಂದು ಸುರಂಗವನ್ನು ಮಾಡಿಸೋಣ. ನಮ್ಮ ಉಸಿರಾಟವು ತಿಳಿಯದಂತೆ, ಅಲ್ಲಿ ಅಡಗಿದ ನಮ್ಮನ್ನು ಅಗ್ನಿಯು ಸುಡುವುದಿಲ್ಲ.
ದ್ರುವತೋಽತ್ರ ಯಥಾ ಚಾಸ್ಮಾನ್ ನ ಬುಧ್ಯೇತ ಪುರೋಚನಃ |
ಪೌರೋ ವಾಽಪಿ ಜನಃ ಕಶ್ಚಿತ್ ತಥಾ ಕಾರ್ಯಮತಂದ್ರಿತೈಃ ॥33॥
ನಾವು ಇಲ್ಲಿಂದ ಓಡಿ ಹೋಗುವಾಗ ಪುರೋಚನನಿಗಾಗಲೀ, ಪೌರರಿಗಾಗಲೀ ಅಥವಾ ಬೇರೆ ಜನರಿಗಾಗಲೀ, ಆ ವಿಷಯವು ತಿಳಿಯದಂತೆ ನಾವು ಎಚ್ಚರಿಕೆಯನ್ನು ವಹಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಟ್ಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರನಲವತ್ತಾರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಕ್ಷತ್ತಾಥ ನೀತಿಬಲತೋಽಖಿಲಲೋಕವೃತ್ತಂ
ಜಾನನ್ ಸ್ವಚಾರಮುಖತಃ ಖನಕಾಯ ಚೋಚೇ |
ಉಕ್ತೈರೇವ ಧರ್ಮತನಯಾಯ ಮದೀಯವಾಕ್ಯಂ
ಪೂರ್ವೋಕ್ತಮಾಶು ಕುರು ತತ್ತ್ವ ಬಿಲಂ ಸುದೂರಂ ॥36॥
ವಿದುರ ತನ್ನ ನೀತಿಯ ಬಲದಿಂದಲೂ ಗೂಢಚಾರರ ಮುಖದಿಂದಲೂ ಎಲ್ಲರ ಕಾರಸ್ಥಾನವನ್ನು ಅರಿವವನು. ನೆಲ ಅಗೆವ ಕೆಲಸದವನೊಬ್ಬನನ್ನು ಕರೆದು `ಧರ್ಮರಾಜನಿಗೆ ನಾನು ಹಿಂದೆ ಹೇಳಿದ್ದ ಮಾತನ್ನು ಪುನರುಚ್ಚರಿಸಿಯೇ ಬೇಗನೆ ಬಲುದೂರದವರೆಗಿನ ಸುರಂಗಮಾರ್ಗವನ್ನು ವಾರಣಾವತದಲ್ಲಿ ಸಿದ್ಧಪಡಿಸು' ಎಂದ.
ಚಕ್ರೇ ಸ ಚೈವಮಥ ವರ್ತ್ಮವೃತ್ತಿಚ್ಛಲೇನ
ದ್ವಾರಂ ಚ ತಸ್ಯ ಸ ಪಿಧಾಯ ಯಯೌ ಗೃಹಂ ಸ್ವಂ |
ಭೀಮಃ ಪುರೋಚನ ಉಭಾವಪಿ ತೌ ವಧಾಯ
ಛಿದ್ರಾರ್ಥಿನೌ ಮಿಥ ಉತೋಷತುರಬ್ದಕಾರ್ಧಂ ॥37॥
ಬಳಿಕ ನೆಲ ಅಗೆಯುವವನು ಸುತ್ತಲೂ ಪ್ರಾಕಾರ ನಿರ್ಮಾಣ ಮಾಡುವ ನೆಪದಿಂದ ವಿದುರ ಹೇಳಿದಂತೆಯೆ ಒಂದು ಸುರಂಗಮಾರ್ಗ ನಿರ್ಮಾಣ ಮಾಡಿದ. ಬಳಿಕ ಅದರ ದ್ವಾರವನ್ನು ಮುಚ್ಚಿ ತನ್ನ ಮನೆಗೆ ಹೊರಟುಹೋದ. ಭೀಮ ಪುರೋಚನರಿಬ್ಬರೂ ಅರಗಿನ ಮನೆಯಲ್ಲಿದ್ದು ಪರಸ್ಪರ ಕೊಲ್ಲುವ ಅವಕಾಶಕ್ಕೆ ಕಾಯುತ್ತ ಅರ್ಧವರ್ಷದಷ್ಟು ಕಾಲ ಕಳೆದರು.
*****

ನೂರನಲವತ್ತೇಳನೆಯ ಅಧ್ಯಾಯ
(ವಿದುರನ ಆಪ್ತನಾದ ಖನಕನಿಂದ ಸುರಂಗ ನಿರ್ಮಾಣ)
ವೈಶಂಪಾಯನಃ
ವಿದುರಸ್ಯ ಸುಹೃತ್ ಕಶ್ಚಿತ್ ಖನಕಃ ಕುಶಲಃ ಕ್ವಚಿತ್ |
ವಿವಿಕ್ತೇ ಪಾಂಡವಾನ್ ರಾಜನ್ನಿದಂ ವಚನಮಬ್ರವೀತ್ ॥1॥
ರಾಜನೇ ವಿದುರನಿಗೆ ಆಪ್ತನಾದ, ಕುಶಲನಾದ ಖನಕನೊಬ್ಬನು (ಮಣ್ಣನ್ನು ತೋಡುವವನು) ಏಕಾಂತದಲ್ಲಿ ಪಾಂಡವರನ್ನು ಸಂಧಿಸಿ ಹೀಗೆ ಮಾತನಾಡಿದನು.
ಪ್ರಹಿತೋ ವಿದುರೇಣಾಸ್ಮಿ ಖನಕಃ ಕುಶಲೋ ಭೃಶಮ್ |
ಪಾಂಡವಾನಾಂ ಪ್ರಿಯಂ ಕಾರ್ಯಮಿತಿ ಕಿಂ ಕರವಾಣಿ ವಃ ॥2॥
ನಾನು ಕುಶಲನಾದ ಖನಕ. ಪಾಂಡವರಿಗೆ ಪ್ರಿಯವನ್ನು ಮಾಡಬೇಕೆಂದು ವಿದುರನು ನನ್ನನ್ನು ಕಳುಹಿಸಿದ್ದಾನೆ. ನಿಮಗೆ ಏನು ಮಾಡಲಿ.
ಪ್ರಚ್ಛನ್ನಂ ವಿದುರೇಣೋಕ್ತಃ ಶ್ರೇಯಸ್ಕಾಮೋಽಸ್ಮಿ ಪಾಂಡವಾನ್ |
ಪ್ರತಿಪಾದಯ ವಿಶ್ವಾಸಾದಿತಿ ಕಿಂ ಕರವಾಣಿ ವಃ ॥3॥
ವಿದುರನು ಯಾರಿಗೂ ತಿಳಿಯದಂತೆ ನನ್ನ ಬಳಿ, ನನ್ನ ಮೇಲಿನ ವಿಶ್ವಾಸದಿಂದ ನಾನು ಪಾಂಡವರ ಶ್ರೇಯಸ್ಸನ್ನು ಬಯಸುತ್ತೇನೆ. ಅವರಿಗೆ ಹಿತವನ್ನು ಮಾಡು ಎಂದು ಹೇಳಿಕಳುಹಿಸಿದ್ದಾನೆ. ನಾನು ನಿಮಗೆ ಏನು ಮಾಡಲಿ.
ಕಿಂಚ ತ್ವಂ ವಿದುರೇಣೋಕ್ತೋ ಮ್ಲೇಚ್ಛವಾಚಾಽಸಿ ಪಾಂಡವ |
ತ್ವಯಾ ಚ ತತ್ ತಥೇತ್ಯುಕ್ತಮೇತದಾಶ್ವಾಸಕಾರಣಮ್ ॥4॥
ಧರ್ಮರಾಜನೇ, ಹೊರಡುವ ಸಮಯದಲ್ಲಿ ನಿನಗೆ ವಿದುರನು ಮ್ಲೇಚ್ಛಭಾಷೆಯಲ್ಲಿ ಏನನ್ನೋ ಹೇಳಿದನು. ನೀನೂ ಸಹ ಹಾಗೆಯೇ

ಆಗಲಿ ಎಂದು ಹೇಳಿದೆ. ನನ್ನ ಮೇಲೆ ನಂಬಿಕೆ ಬರುವುದಕ್ಕೆ ಈ ವಿಷಯವನ್ನು ಹೇಳುತ್ತಿದ್ದೇನೆ.
ವೈಶಂಪಾಯನಃ
ಉವಾಚ ತಂ ಸತ್ಯಧೃತಿಃ ಕುಂತೀಪುತ್ರೋ ಯುಧಿಷ್ಠಿರಃ |
ಅಭಿಜಾನಾಮಿ ಸೌಮ್ಯ ತ್ವಾಂ ಸುಹೃದಂ ವಿದುರಸ್ಯ ವೈ ॥5॥
ಪ್ರಥಮಾಪ್ತಂ ಪ್ರಿಯಂ ಭಕ್ತಂ ಸದಾ ಪ್ರಿಯಹಿತೈಷಿಣಮ್ |
ನ ವಿದ್ಯತೇ ಕವೇಃ ಕಿಂಚಿದವಿಜ್ಞಾತಂ ಪ್ರಯೋಜನಮ್ ॥6॥
ಸತ್ಯಧೃತಿಯಾದ ಕುಂತೀಪುತ್ರನಾದ ಯುಧಿಷ್ಠಿರನು ಅವನನ್ನು ಕುರಿತು ಹೇಳಿದನು. ``ಸೌಮ್ಯನೇ, ನೀನು ವಿದುರನ ಮಿತ್ರನೆಂದು ನಾನು ತಿಳಿದಿದ್ದೇನೆ. ನೀನು ವಿದುರನಿಗೆ ಅತ್ಯಂತ ಆಪ್ತನೂ, ಪ್ರಿಯನೂ, ಭಕ್ತನೂ, ಅವನ ಪ್ರಿಯವನ್ನೂ ಮತ್ತು ಹಿತವನ್ನೂ ಬಯಸುವವನೂ ಆಗಿದ್ದೀಯೆ. ಜ್ಞಾನಿಯಾದ ಅವನಿಗೆ ತಿಳಿಯದ ಯಾವ ವಿಷಯವೂ ಇಲ್ಲ.''
ಯಥಾ ಕವಿಸ್ತಥಾ ನಸ್ತ್ವಂ ನಿರ್ವಿಶೇಷಾ ವಯಂ ತ್ವಯಿ |
ಭವಿತಾಸ್ಮೋ ಯಥಾ ತಸ್ಯ ಪಾಲಯಾಸ್ಮಾನ್ ಯಥಾ ಕವಿಃ ॥7॥
ನಮಗೆ ಜ್ಞಾನಿಯಾದ ವಿದುರನು ಹೇಗೋ, ನೀನೂ ಹಾಗೆಯೇ. ನಾವು ಅವನಿಗೆ ನಡೆದುಕೊಂಡಂತೆಯೇ ನಿನಗೂ ನಡೆದುಕೊಳ್ಳುತ್ತೇವೆ. ಅವನು ರಕ್ಷಿಸಿದಂತೆ ನೀನೂ ನಮ್ಮನ್ನು ರಕ್ಷಿಸು.
ಇದಂ ಶರಣಮಾಗ್ನೇಯಂ ಮದರ್ಥಮಿತಿ ಮೇ ಮತಿಃ |
ಪುರೋಚನೇನ ವಿಹಿತಂ ಧಾರ್ತರಾಷ್ಟ್ರಸ್ಯ ಶಾಸನಾತ್ ॥8॥
ದುರ್ಯೋಧನನ ಆದೇಶದಂತೆ ಪುರೋಚನನು ನಮ್ಮ ಸಲುವಾಗಿ ಈ ಜತುಗೃಹವನ್ನು ನಿರ್ಮಿಸಿದ್ದಾನೆ ಎಂದು ನನ್ನ ಅಭಿಪ್ರಾಯ.
ಸ ಪಾಪಃ ಕೋಶವಾಂಶ್ಚೈವ ಸಸಹಾಯಶ್ಚ ದುರ್ಮತಿಃ |
ಅಸ್ಮಾನಪಿ ಚ ದುಷ್ಟಾತ್ಮಾ ನಿತ್ಯಕಾಲಂ ಪ್ರಬಾಧತೇ ॥9॥
ಕೋಶವುಳ್ಳವನೂ, ಪಕ್ಷದ ಬಲವುಳ್ಳವನೂ, ಪಾಪಿಯೂ ಆದ, ಆ ದುರ್ಮತಿಯಾದ ದುರ್ಯೋಧನನು ದುಷ್ಟಮನಸ್ಸಿನಿಂದ ನಮ್ಮನ್ನು ಯಾವಾಗಲೂ ಪೀಡಿಸುತ್ತಾನೆ.
ಸ ಭವಾನ್ ಮೋಕ್ಷಯತ್ವಸ್ಮಾನುತ್ವನ್ನಾದ್ ವೈ ಹುತಾಶನಾತ್ |
ಅಸ್ಮಾಸ್ವಿಹ ಚ ದಗ್ಧೇಷು ಸಕಾಮಃ ಸ್ಯಾತ್ ಸುಯೋಧನಃ ॥10॥
ಆದ್ದರಿಂದ ನೀನು ಇಲ್ಲಿರುವ ಅಗ್ನಿಭಯದಿಂದ ನಮ್ಮನ್ನು ವಿಮೋಚನೆಗೊಳಿಸು. ಇಲ್ಲದಿದ್ದರೆ, ನಮ್ಮನ್ನು ಇಲ್ಲಿ ಸುಟ್ಟು ದುರ್ಯೋಧನನು ಕೃತಕೃತ್ಯನಾದಾನು.
ಸಮೃದ್ಧಮಾಯುಧಾಗಾರಮಿದಂ ತಸ್ಯ ದುರಾತ್ಮನಃ |
ಪ್ರವಾತಂ ನಿಷ್ಪ್ರತೀಕಾರಮಾಶ್ರಿತ್ಯೇಹ ಕೃತಂ ಮಹತ್ ॥11॥
ಇದು ಆ ದುಷ್ಟನ ಸಮೃದ್ಧವಾದ ಶಸತ್ರಗಾರ. ಇಲ್ಲಿ ಗಾಳಿಯು ಬಲವಾಗಿ ಬೀಸುತ್ತದೆ. ಇಲ್ಲಿ ಅಗ್ನಿ ಉಂಟಾದರೆ, ಅದನ್ನು ನಿವಾರಿಸಲು ಸಾಧ್ಯವಿಲ್ಲ. ಆದ್ದರಿಂದ ಆಯುಧಾಗಾರಕ್ಕೆ ಹೊಂದಿಕೊಂಡಂತೆ ಜತುಗೃಹವು ನಿರ್ಮಿಸಲ್ಪಟ್ಟಿದೆ.
ಇದಂ ತದಶುಭಂ ನೂನಂ ತಸ್ಯ ಕರ್ಮ ಚಿಕೀರ್ಷಿತಮ್ |
ಪ್ರಾಗೇವ ವಿದುರೋ ವೇದ ತೇನಾಸ್ಮಾನ್ ಪೂರ್ವಮುಕ್ತವಾನ್ ॥12॥
ದುರ್ಯೋಧನನು ಮಾಡಲು ಬಯಸಿದ ಈ ಅಶುಭ ಕರ್ಮವನ್ನು ವಿದುರನು ಮೊದಲೇ ತಿಳಿದಿದ್ದನು. ಆದ್ದರಿಂದ ನಮಗೆ ಮೊದಲೇ ಸೂಚನೆಯನ್ನು ನೀಡಿದ್ದಾನೆ.
ಸೇಯಮಾಪದನುಪ್ರಾಪ್ರಾ ಕ್ಷತ್ತಾ ಯಾಂ ದೃಷ್ಟವಾನ್ ಪುರಾ |
ಪುರೋಚನಸ್ಯಾವಿದಿತಮಸ್ಮಾಂಸ್ತ್ವಂ ವಿಪ್ರಮೋಚಯ ॥13॥
ವಿದುರನು ಮೊದಲೇ ನಿರೀಕ್ಷಿಸಿದ ಆಪತ್ತು ಈಗ ನಮಗೆ ಪ್ರಾಪ್ತವಾಗಿದೆ. ಪುರೋಚನನಿಗೆ ತಿಳಿಯದಂತೆ ನೀನು ಇದರಿಂದ ನಮ್ಮನ್ನು ಪಾರು ಮಾಡು.
ವೈಶಂಪಾಯನಃ
ಸ ತಥೇತಿ ಪ್ರತಿಶ್ರುತ್ಯ ಖನಕೋ ಯತ್ನಮಾಸ್ಥಿತಃ |
ಪರಿಖಾಮುತ್ಕಿರನ್ ನಾಮ ಚಕಾರ ಸುಮಹಾಬಿಲಮ್ ॥14॥
ಖನಕನು ``ಹಾಗೆಯೇ ಆಗಲಿ'' ಎಂದು ವಚನವನ್ನು ನೀಡಿ ಪ್ರಯತ್ನವನ್ನು ವಹಿಸಿ ಪರಿಖಾ ಎಂಬ ದೊಡ್ಡ ಬಿಲವನ್ನು ಮಾಡಿದನು.
ಚಕ್ರೇ ಸ ವೇಶ್ಮನಸ್ತಸ್ಯ ಮಧ್ಯೇ ನಾತಿಮಹನ್ಮುಖಮ್ |
ಕವಾಟಯುಕ್ತಮಜ್ಞಾತಂ ಸಮಂ ಭೂಮ್ಯಾಶ್ಚ ಭಾರತ ॥15॥
ಎಲೈ ಭಾರತನೇ ಆ ಮನೆಯ ಮಧ್ಯದಲ್ಲಿ ಕಿರಿದಾದ ಮುಖವಿರುವಂತೆ ಇನ್ನೊಬ್ಬರಿಗೆ ತಿಳಿಯದಂತೆ ನೆಲದ ಮಟ್ಟಕ್ಕೆ ಸಮವಾದ ಮಟ್ಟದಲ್ಲಿ ಅದಕ್ಕೆ ಒಂದು ಬಾಗಿಲನ್ನೂ ಇಟ್ಟನು.
ಪುರೋಚನಭಯಾಚ್ಚೈವ ವ್ಯದಧಾತ್ ಸಂವೃತಂ ಮುಖಮ್ |
ಸ ಚ ತಸ್ಮಿನ್ ಗೃಹದ್ವಾರಿ ವಸತ್ಯಶುಭಧೀಃ ಸದಾ ॥15॥
ಪುರೋಚನನ ಭಯದಿಂದ ಅವನು ಆ ಬಿಲದ ದ್ವಾರದಲ್ಲಿದ್ದ ಕವಾಟವನ್ನು ಚೆನ್ನಾಗಿ ಮುಚ್ಚಿದನು. ದುಷ್ಟನಾದ ಪುರೋಚನನಾದರೋ ಆ ಮನೆಯ ಬಾಗಿಲಿನಲ್ಲಿ ಯಾವಾಗಲೂ ಕಾಯುತ್ತಿದ್ದನು.
ತತಸ್ತೇ ಸಾಯುಧಾಃ ಸರ್ವೇ ವಸಂತಿ ಸ್ಮ ಕ್ಷಪಾಂ ನೃಪ |
ದಿವಾ ಚರಂತಿ ಮೃಗಯಾಂ ಪಾಂಡವೇಯಾ ವನಾದ್ ವನಮ್ ॥16॥

ರಾಜನೇ ಅನಂತರ ಪಾಂಡವರೆಲ್ಲರೂ ರಾತ್ರಿಯಲ್ಲಿ ಆಯುಧಗಳನ್ನು ಹಿಡಿದು ಎಚ್ಚರವಾಗಿರುತ್ತಿದ್ದರು. ಹಗಲಿನಲ್ಲಿ ಕಾಡಿನಿಂದ ಕಾಡಿಗೆ ಹೋಗಿ ಬೇಟೆಯಾಡುತ್ತಿದ್ದರು.
ವಿಶ್ವಸ್ತವದವಿಶ್ವಸ್ತಾ ವಂಚಯಂತಃ ಪುರೋಚನಮ್ |
ಅತುಷ್ಟಾಸ್ತುಷ್ಟವದ್ ರಾಜನ್ನೂಷುಃ ಪರಮದುಃಖಿತಾಃ ॥17॥
ರಾಜನೇ, ವಿಶ್ವಾಸ ಇಲ್ಲದ ಪಾಂಡವರು ವಿಶ್ವಾಸ ಉಳ್ಳವರಂತೆ, ಅಸಂತುಷ್ಟರಾದ ಅವರು ಸಂತುಷ್ಟರಂತೆ ತೋರಿಸುತ್ತಾ ಪುರೋಚನನನ್ನು ವಂಚಿಸುತ್ತಾ ಪರಮದುಃಖದಿಂದ ಕಾಲವನ್ನು ಕಳೆದರು.
ನ ಚೈನಾನನ್ವಬುಧ್ಯಂತ ನರಾ ನಗರವಾಸಿನಃ |
ಅನ್ಯತ್ರ ವಿದುರಾಮಾತ್ಯಾತ್ ತಸ್ಮಾತ್ ಖನಕಸತ್ತಮಾತ್ ॥18॥
ಪಾಂಡವರ ಚಲನವಲನಗಳನ್ನು ವಿದುರನನ್ನೂ, ಅವನ ಅಮಾತ್ಯನಾದ ಖನಕನನ್ನೂ ಬಿಟ್ಟು ನಗರವಾಸಿಗಳಾದ ಯಾರೂ ತಿಳಿಯಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ತಸ್ಯಾಗ್ರಜಾ ಚ ಸಹಿತಾ ಸುತಪಂಚಕೇನ
ತತ್ರಾಗಮತ್ ತದನು ಮಾರುತಿರೇಷ ಕಾಲಃ |
ಇತ್ಥಂ ವಿಚಿಂತ್ಯ ಸ ನಿಶಾಮ್ಯ ಚ ತಾನ್ ಪ್ರಸುಪ್ತಾನ್
ಭ್ರಾತೄಂಶ್ಚ ಮಾತರಮಥಾಶು ಬಿಲೇ ನ್ಯಧಾತ್ಪ್ರಾಕ್ ॥38॥
ಬಳಿಕ ಒಮ್ಮೆ ಪುರೋಚನನ ಅಕ್ಕ ತನ್ನ ಐದು ಮಕ್ಕಳ ಸಹಿತವಾಗಿ ಅಲ್ಲಿಗೆ ಬಂದಳು. ಇದೇ ತಕ್ಕ ಸಮಯವೆಂದು ಭೀಮ ನಿಶ್ಚಯಿಸಿ ಅವರು ಮಲಗಿ ನಿದ್ದೆ ಹೋದುದನ್ನು ಕಂಡು ಮೊದಲಿಗೆ ಸೋದರರನ್ನೂ ತಾಯಿಯನ್ನೂ ಸುರಂಗಮಾರ್ಗದಲ್ಲಿ ಇರಿಸಿದ.
ತಂ ಭಾಗಿನೇಯಸಹಿತಂ ಭಗಿನೀಂ ಚ ತಸ್ಯ
ಪಾಪಾನ್ ದದಾಹ ಸಗೃಹಾಂ ಪವಮಾನಸೂನುಃ |
ಸಾಪ್ಯಾಗತಾ ಹಿ ಗರಳೇನ ನಿಹಂತುಮೇತಾನ್
ಭೀಮಸ್ಯ ಪೂರ್ವಭುಜಿತೋ ನ ಶಶಾಕ ಚೈತತ್ ॥39॥
ಬಳಿಕ ಆ ಪುರೋಚನನನ್ನೂ ಪಾಪಾತ್ಮಳಾದ ಅವನ ಅಕ್ಕನನ್ನೂ ಅವಳ ಮಕ್ಕಳನ್ನೂ ಎಲ್ಲರನ್ನೂ ಮನೆ ಸಹಿತವಾಗಿ ಭೀಮ ಸುಟ್ಟುಬಿಟ್ಟ. ಅವಳು ಬಂದಿದ್ದುದು ಪಾಂಡವರನ್ನು ವಿಷವಿಕ್ಕಿ ಕೊಲ್ಲುವುದಕ್ಕಾಗಿ. ಭೀಮ ಮೊದಲು ಉಣ್ಣುತ್ತಿದ್ದುದರಿಂದ ಇದು ಶಕ್ಯವಾಗಲಿಲ್ಲ.
ತಪ್ತಂ ತಯಾ ಸಸುತಯಾ ಚ ತಪೋ ನಿಶಾಂತಂ
ಸ್ಯಾಂ ಸೂನುಭಿಃ ಸಹ ಬಲಾದದಿತಿಸ್ತಥಾಬ್ದಾತ್ |
ತಸ್ಯಾ ಅದಾಚ್ಚ ಗಿರಿಶೋ ಯದಿ ಪುತ್ರಕೈಸ್ತ್ವಂ
ಯುಕ್ತಾ ನ ಯಾಸಿ ಮೃತಿಮೇಷ ವರಸ್ತವೇತಿ ॥40॥
ಆ ಬೇಡಿಕೆ ತಾನು ತಪೋಬಲದಿಂದ ಅದಿತಿಯಾಗಬೇಕು ಮಕ್ಕಳು ದೇವತೆಗಳಾಗಬೇಕು ಎಂದು ಮಕ್ಕಳೊಂದಿಗೆ ಬಹಳ ತಪಸ್ಸು ಮಾಡಿದ್ದಳು. ಒಂದು ವರ್ಷ ಕಳೆದಾಗ ಶಿವನೊಲಿದು ಅವಳಿಗೆ ವರವಿತ್ತ. `ನೀನು ನಿನ್ನ ಮಕ್ಕಳೊಂದಿಗೆ ಸಾಯದಿದ್ದರೆ ನಿನಗೆ ನಿನ್ನ ಅಭೀಷ್ಟ ಸಿದ್ಧಿಸುವುದು' ಎಂದು.
ಜಾನನ್ನಿದಂ ಸಕಲಮೇವ ಸ ಭೀಮಸೇನೋ
ಹತ್ವಾ ಸುತೈಃ ಸಹ ಕುಬುದ್ಧಿಮಿಮಾಂ ಹಿ ತಂ ಚ |
ಭ್ರಾತೄಂಶ್ಚ ಮಾತರಮುದೂಹ್ಯ ಯಯೌ ಬಿಲಾತ್ಸ
ನಿರ್ಗತ್ಯ ಭೀತಿವಶತೋಽಬಲತಾಂ ಪ್ರಯಾತಾನ್ ॥41॥
ಇದೆಲ್ಲವನ್ನೂ ತಿಳಿದಿದ್ದ ಭೀಮ ದುಷ್ಟಬುದ್ಧಿಯವಳಾದ ಬೇಡತಿಯನ್ನು ಮಕ್ಕಳೊಂದಿಗೆ ಪುರೋಚನನ ಸಮೇತ ಕೊಂದು ಸೋದರರನ್ನೂ ತಾಯಿಯನ್ನೂ ಅವರು ಬಲಗುಂದಿದುದರಿಂದ, ಹೊತ್ತುಕೊಂಡೇ ಸುರಂಗ ಮಾರ್ಗದಿಂದ ಹೊರಗೆ ನಡೆದ.
ಜ್ಞಾತ್ವಾ ಪುರೋಚನ ವಧಂ ಯದಿ ಭೀಷ್ಮ ಮುಖ್ಯೈ-
ರ್ವೈಚಿತ್ರ ವೀರ್ಯತನಯಾ ಅಭಿಯೋಧಯೇಯುಃ |
ಕಿಂ ನೋ ಭವೇದಿತಿ ಭಯಂ ಸುಮಹದ್ವಿವೇಶ
ಭೀಮಂ ತ್ವೃತೇ ಚ ತನಯಾನ್ ಸಕಲಾನ್ ಪೃಥಾಯಾಃ ॥42॥
ಪುರೋಚನ ವಧೆಯನ್ನು ತಿಳಿದು ಕೌರವರು ಭೀಷ್ಮಾದಿಗಳೊಂದಿಗೆ ಬಂದು ಯುದ್ಧಮಾಡಿದರೆ ನಮ ಗತಿಯೇನಾದೀತು ಎನ್ನುವ ಮಹತ್ತಾದ ಭೀತಿ ಭೀಮನನ್ನು ಹೊರತು ಇನ್ನೆಲ್ಲ ಪಾಂಡವರನ್ನು ಹೊಕ್ಕಿತ್ತು.
ಭೀಮೋಽಭಯೋಽಪಿ ಗುರುಭಿಃ ಸ್ವಮುಖೇನ ಯುದ್ಧ-

ಮಪ್ರೀಯಮಾಣ ಉತ ಧರ್ಮಜವಾಕ್ಯಹೇತೋಃ |
ಊಹ್ಯೈವ ತಾನಪಿ ಯಯೌ ದ್ಯುನದೀಂ ಚ ತೀರ್ತ್ವಾ
ಕ್ಷತ್ತೃತ್ರಿಸೃಷ್ಟಮಧಿರುಹ್ಯ ಜಲಪ್ರಯಾಣಂ ॥43॥
ಭೀಮ ಭಯರಹಿತನೇ ಆಗಿದ್ದರೂ ಗುರುಹಿಯರೊಡನೆ ನೇರವಾಗಿ ಯುದ್ಧ ಮಾಡುವುದನ್ನು ಅವನು ಇಷ್ಟಪಡುವುದಿಲ್ಲ. ಆದರಿಂದ ಧರ್ಮರಾಜನ ಮಾತಿನಂತೆ ಭೀಮ ಅವರನ್ನು ಹೊತ್ತುಕೊಂಡೇ ಹೊರಟ ವಿಧುರ ಕಳಿಸಿದ್ದ ನೌಕೆಯನ್ನೇರಿ ಪ್ರಯಾಣ ಮಾಡಿದ.
ವಿಶ್ವಾಸಿತಾ ವಿದುರಪೂರ್ವವಚೋಭಿರೇವ
ದಾಶೋದಿತಾಭಿರಧಿರುಹ್ಯ ಚ ಭೀಮಪೃಷ್ಠಂ |
ಸರ್ವೇ ಯಯುರ್ವನಮಥಾಭ್ಯುದಿತೇ ಚ ಸೂರ್ಯೇ
ದೃಷ್ಟ್ವೈವ ಸಪ್ತ ಮೃತಕಾನ್ ರುರುದುಶ್ಚ ಪೌರಾಃ ॥44॥
ಅಂಬಿಗರ ಮುಖದಿಂದ ವಿದುರ ಹಿಂದೆ ಹೇಳಿದ್ದ ಮಾತನ್ನು ಕೇಳಿ ತಿಳಿದು ವಿಶ್ವಾಸಗೊಂಡು ಎಲ್ಲರನ್ನೂ ನೌಕೆಯನ್ನೇರಿ ನದಿ ದಾಟಿ ಬಳಿಕ ಭೀಮನ ಬೆನ್ನ ಮೇಲೇರಿ ಕಾಡಿಗೆ ಹೋದರು. ಸೂರ್ಯ ಉದಿಸಿದಾಗ ಏಳುಮಂದಿಯೂ ಸತ್ತಿದ್ದುದನ್ನು ಕಂಡು ಪಟ್ಟಣಿಗರು ಕಣ್ಣೀರಿಟ್ಟರು.
ಹಾ ಪಾಂಡವಾನದಹದೇಷ ಹಿ ಧಾರ್ತರಾಷ್ಟ್ರೋ
ಧರ್ಮಸ್ಥಿತಾನ್ ಕುಮತಿರೇವ ಪುರೋಚನೇನ |
ಸೋಽಪ್ಯೇಷ ದಗ್ಧ ಇಹ ದೈವವಶತಾತ್ ಸುಪಾಪಃ
ಕೋ ನಾಮ ಸತ್ಸು ವಿಷಮಃ ಪ್ರಭವೇತ್ಸುಖಾಯ ॥45॥
ಅಯ್ಯೋ! ಈ ದುಷ್ಟಬುದ್ಧಿಯ ದುರ್ಯೋಧನ ಧರ್ಮನಿಷ್ಠರಾದ ಪಾಂಡವರನ್ನು ಪುರೋಚನ ಮೂಲಕ ಸುಟ್ಟುಬಿಟ್ಟ! ಮಹಾಪಾಪಿಯಾದ ಪುರೋಚನನೂ ದೈವವಶದಿಂದ ಇಲ್ಲಿ ಸುಟ್ಟುಹೋಗಿದ್ದಾನೆ. ಸಜ್ಜನರಲ್ಲಿ ದ್ರೋಹ ಬಗೆವವನು ಯಾರು ತಾನೆ ಸುಖ ಹೊಂದಿಯಾನು? ಎಂದರು ಪಟ್ಟಣಿಗರು.
ಪೌರೇಭ್ಯ ಏವ ನಿಖಿಲಂ ತ್ವಥ ಭೀಷ್ಮಮುಖ್ಯಾ
ವೈಚಿತ್ರವೀರ್ಯಸಹಿತಾಸ್ತು ನಿಶಮ್ಯ ಹೇತಿ |
ಊಚುಃ ಸುದುಃಖಿತಧಿಯೋಽಥ ಸುಯೋಧನಾದ್ಯಾಃ
ಕ್ಷತ್ತಾ ಮೃಷೈವ ರುರುದುರ್ಯುಯುಜುಶ್ಚ ಕರ್ಮ ॥46॥
ಪಟ್ಟಣಿಗರಿಂದಲೆ ಎಲ್ಲ ವಾರ್ತೆಯನ್ನೂ ಕೇಳಿ ತಿಳಿದು ಭೀಷ್ಮಾದಿಗಳೂ ಧೃತರಾಷ್ಟ್ರನೂ `ಅಯ್ಯೋ!' ಎಂದರು. ಬಹಳ ಖಿನ್ನಮನಸ್ಕರಾದರು. ದುರ್ಯೋಧನಾದಿಗಳೂ, ವಿದುರನೂ ಕೂಡ, ಅತ್ತಂತೆ ನಟಿಸಿದರು. ಉತ್ತರಕ್ರಿಯೆಗಳನ್ನು ಮಾಡಿದರು.
ಭೀಮೋಽಪ್ಯುದೂಹ್ಯ ವನಮಾಪ ಹಿಡಿಂಬಕಸ್ಯ
ಭ್ರಾತೄನ್ ಪೃಥಾಂ ಚ ತೃಷಿತೈರಭಿಯಾಚಿತಶ್ಚ |
ಪಾನೀಯಮುತ್ತರಪಟೇಽಂಬುಜಪತ್ರನದ್ಧಂ
ದೂರಾದುದೂಹ್ಯ ದದೃಶೇ ಸ್ವಪತೋಽಥಂತಾಂಶ್ಚ ॥47॥
ಭೀಮಸೇನ ಸೋದರರನ್ನೂ ಕುಂತಿಯನ್ನೂ ಹೊತ್ತು ಹಿಡಿಂಬವನಕ್ಕೆ ಬಂದ. ಅವರು ಬಾಯಾರಿ ನೀರನ್ನು ಬೇಡಿದಾಗ ಭೀಮ ತಾವರೆ ಎಲೆಗಳಲ್ಲಿ ನೀರು ತುಂಬಿಸಿಕೊಂಡು ಉತ್ತರೀಯದಲ್ಲಿ ಹೊತ್ತು ತಂದ. ಮಲಗಿ ನಿದ್ರಿಸುತ್ತಿದ್ದ ತನ್ನ ಸೋದರರನ್ನು ಸ್ವಲ್ಪ ದೂರದಲ್ಲಿ ನಿಂತು ನೋಡಿದ.
* * * *

ನೂರನಲವತ್ತೆಂಟನೆಯ ಅಧ್ಯಾಯ
(ಜತುಗೃಹಕ್ಕೆ ಅಗ್ನಿಸ್ಪರ್ಶಮಾಡಿ ಪಾಂಡವರ ಪಲಾಯನ)
ವೈಶಂಪಾಯನಃ
ತಾಂಸ್ತು ದೃಷ್ಟ್ವಾ ಸುಮನಸಃ ಪರಿಸಂವತ್ಸರೋಷಿತಾನ್ |
ವಿಶ್ವಸ್ತಾನಿತಿ ಸಂಪ್ರೇಕ್ಷ್ಯ ಹರ್ಷಂ ಚಕ್ರೇ ಪುರೋಚನಃ ॥1॥
ಪಾಂಡವರು ಸಂತೋಷದಿಂದ ಹೆಚ್ಚುಕಡಿಮೆ ಒಂದು ವರ್ಷವನ್ನು ಕಳೆದಿದ್ದನ್ನು ನೋಡಿ ತನ್ನಲ್ಲಿ ವಿಶ್ವಾಸವುಳ್ಳವರಾಗಿದ್ದಾರೆ ಎಂದು ತಿಳಿದು ಪುರೋಚನನು ಹರ್ಷಪಟ್ಟನು.
ಪುರೋಚನೇ ತಥಾ ಹೃಷ್ಟೇ ಕೌಂತೇಯೋಽಥ ಯುಧಿಷ್ಠಿರಃ |
ಭೀಮಸೇನಾರ್ಜುನೌ ತೌ ಚ ಯವೌ ಪ್ರೋವಾಚ ಧರ್ಮವಿತ್ ॥2॥
ಪುರೋಚನನು ಹಾಗೆ ಸಂತೋಷದಿಂದಿರಲು ಕುಂತೀಪುತ್ರನಾದ ಧರ್ಮಜ್ಞನಾದ ಯುಧಿಷ್ಠಿರನು ಭೀಮಸೇನಾರ್ಜುನರನ್ನೂ, ನಕುಲಸಹದೇವರನ್ನೂ ಕುರಿತು ಹೀಗೆ ಮಾತನಾಡಿದನು -
ಅಸ್ಮಾನಯಂ ಸುವಿಶ್ವಸ್ತಾನ್ ವೇತ್ತಿ ಪಾಪಃ ಪುರೋಚನಃ |
ವಂಚಕೋಽಯಂ ನೃಶಂಸಾತ್ಮಾ ಕಾಲಂ ಮನ್ಯೇ ಪಲಾಯನೇ ॥3॥
ಈ ಪಾಪಿಯಾದ ಪುರೋಚನನು ನಾವು ಅವನನ್ನು ನಂಬಿದ್ದೇವೆ ಎಂದ ತಿಳಿದಿದ್ದಾನೆ ಇವನು ವಂಚಕನೂ, ಕ್ರೂರಹೃದಯನೂ ಆಗಿದ್ದಾನೆ. ನಾವು ಇಲ್ಲಿಂದ ಪಲಾಯನ ಮಾಡುವುದಕ್ಕೆ ಇದು ಯೋಗ್ಯವಾದ ಕಾಲವೆಂದು ಭಾವಿಸುತ್ತೇನೆ.
ಜಾತುಷಾಗಾರಮಾದೀಪ್ಯ ದಗ್ಧ್ವಾ ಚೈವ ಪುರೋಚನಮ್ |

ಷಟ್ ಪ್ರಾಣಿನೋ ನಿಧಾಯೇಹ ದ್ರವಾಮೋಽನುಪಲಕ್ಷಿತಾಃ ॥4॥
ಈ ಜತುಗೃಹವನ್ನು ಅಗ್ನಿಗೆ ಅರ್ಪಿಸಿ ಪುರೋಚನನನ್ನು ಸುಟ್ಟು ಇಲ್ಲಿ ಆರು ಪ್ರಾಣಿಗಳನ್ನು ಇಟ್ಟು ಯಾರಿಗೂ ತಿಳಿಯದಂತೆ ನಾವು ಓಡಿಹೋಗೋಣ. (ಪುರೋಚನನ ತಂಗಿ ಮತ್ತು ಅವಳ ಐದು ಮಕ್ಕಳು ಸೇರಿ ಆರು ಪ್ರಾಣಿಗಳು)
ವೈಶಂಪಾಯನಃ
ಅಥ ದಾನಾಪದೇಶೇನ ಕುಂತೀ ಬ್ರಾಹ್ಮಣಭೋಜನಮ್ |
ಚಕ್ರೇ ನಿಶಿ ಮಹಾರಾಜ ಆಜಗ್ಮುಸ್ತತ್ರ ಯೋಷಿತಃ ॥5॥
ಅನಂತರ ದಾನಮಾಡುವ ನೆಪದಿಂದ ಕುಂತಿಯು ರಾತ್ರಿಯಲ್ಲಿ ಬ್ರಾಹ್ಮಣಭೋಜನವನ್ನು ಮಾಡಿಸಿದಳು. ಮಹಾರಾಜನೇ, ರಾತ್ರಿಯಲ್ಲಿ ಅಲ್ಲಿಗೆ ಅನೇಕ ಸ್ತ್ರೀಯರು ಬಂದರು.
ತಾ ವಿಹೃತ್ಯ ಯಥಾಕಾಮಂ ಭುಕ್ತ್ವಾ ಪೀತ್ವಾ ಚ ಭಾರತ |
ಜಗ್ಮುರ್ನಿಶಿ ಗೃಹಾನೇವ ಸಮನುಜ್ಞಾಪ್ಯ ಮಾಧವೀಮ್ ॥6॥
ಭಾರತನೇ ಆ ಸ್ತ್ರೀಯರು ತಮ್ಮ ಮನಸ್ಸಿಗೆ ಬಂದಂತೆ ತಿಂದು ಕುಡಿದು ವಿಹಾರವನ್ನು ಮಾಡಿ ಕುಂತಿಯ ಅನುಮತಿಯನ್ನು ಪಡೆದು ತಮ್ಮ ಮನೆಗಳಿಗೆ ಹಿಂದಿರುಗಿದರು.
ಪುರೋಚನಪ್ರಣಿಹಿತಾ ಪೃಥಾಂ ಸ್ಮ ಖಲು ಸೇವತೇ |
ನಿಷಾದೀ ದುಷ್ಟಹೃದಯಾ ನಿತ್ಯಮಂತರಚಾರಿಣೀ ॥7॥
ಪುರೋಚನನಿಂದ ನಿಯೋಜಿಸಲ್ಪಟ್ಟ ಅವನ ತಂಗಿಯಾದ ಒಬ್ಬ ನಿಷಾದಳು ದುಷ್ಟಮನಸ್ಸುಳ್ಳವಳಾಗಿ ಸೂಕ್ತ ಅವಕಾಶಕ್ಕಾಗಿ ಕಾಯುತ್ತಾ ಆಗಾಗ ಬಂದು ಕುಂತಿಯ ಸೇವೆಯನ್ನು ಮಾಡುತ್ತಿದ್ದಳು.
ನಿಷಾದೀ ಪಂಚಪುತ್ರಾ ತು ತಸ್ಮಿನ್ ಭೋಜ್ಯೇ ಯದೃಚ್ಛಯಾ |
ಪುರಾಭ್ಯಾಸಕೃತಸ್ನೇಹಾ ಸಖೀ ಕುಂತ್ಯಾಃ ಸಮಂ ಸುತೈಃ ॥8॥
ಆನೀಯ ಮಧುಮೂಲಾನಿ ಫಲಾನಿ ವಿವಿಧಾನಿ ಚ |
ಅನ್ನಾರ್ಥಿನೀ ಸಮಭ್ಯಾಗಾತ್ ಸಪುತ್ರಾ ಕಾಲಚೋದಿತಾ ॥9॥
ಆ ಭೋಜನದ ಸಮಯದಲ್ಲಿ ಆ ನಿಷಾದಿಯು ತನ್ನ ಐದು ಪುತ್ರರೊಡನೆ ಹಿಂದಿನ ಅಭ್ಯಾಸದಿಂದ ಕುಂತಿಯ ಸ್ನೇಹಿತಳೂ, ಸಖಿಯೂ ಆಗಿ ಅಕಸ್ಮತ್ತಾಗಿ ಅಲ್ಲಿಗೆ ಬಂದಳು. ಅವಳು ಮಧುವನ್ನೂ(ಮದ್ಯವನ್ನೂ), ಗೆಡ್ಡೆಗೆಣಸುಗಳನ್ನೂ, ಅನೇಕ ಫಲಗಳನ್ನೂ ತಂದು ಭೋಜನವನ್ನು ಬಯಸಿ ಕಾಲಚೋದಿತಳಾಗಿ ಮಕ್ಕಳನ್ನು ಕರೆದುಕೊಂಡು ಅಲ್ಲಿಗೆ ಬಂದಳು.
ಸಪಾಪಾ ಪಂಚಪುತ್ರಾ ಚ ಸಾ ಪೃಥಾಯಾಃ ಸಖೀ ಮತಾ |
ಸಾ ಪೀತ್ವಾ ಮದಿರಾಂ ತತ್ರ ಸಪುತ್ರಾ ಮದವಿಹ್ವಲಾ ॥10॥
ಸಾ ಹಿ ಸರ್ವೈಃ ಸುತೈ ರಾಜಂಸ್ತಸ್ಮಿನ್ನೇವ ನಿವೇಶನೇ |
ಸುಷ್ವಾಪ ವಿಗತಜ್ಞಾನಾ ಮೃತಕಲ್ಪಾ ನರಾಧಿಪ ॥11॥
ಐದು ಮಕ್ಕಳನ್ನು ಹೊಂದಿದ್ದ ಪಾಪಿಷ್ಠಳಾದ ಅವಳನ್ನು ಎಲ್ಲರೂ ಕುಂತಿಯ ಸಖಿ ಎಂದು ತಿಳಿದಿದ್ದರು. ಅವಳು ಮಕ್ಕಳ ಜೊತೆಯಲ್ಲಿ ಮದ್ಯಪಾನವನ್ನು ಮಾಡಿ ಮದವಿಹ್ವಲಳಾಗಿ ಮಕ್ಕಳ ಜೊತೆಯಲ್ಲಿಯೇ ಅದೇ ಜತುಗೃಹದಲ್ಲಿ ಜ್ಞಾನಹೀನಳಾಗಿ ಮೃತಳಂತೆ ಮಲಗಿ ನಿದ್ರೆ ಮಾಡಿದಳು.
ಅಥ ಪ್ರವಾತೇ ತುಮುಲೇ ನಿಶಿ ಸುಪ್ತೇ ಜನೇ ವಿಭೋ |
ತನೂನಪಾದ್ಭಯಾದ್ ಭೀಮಃ ಶೇತೇ ಯತ್ರ ಪುರೋಚನಃ ॥12॥
ಮಹಾರಾಜನೇ, ಆಗ ರಾತ್ರಿಯಲ್ಲಿ ಎಲ್ಲ ಜನರೂ ನಿದ್ರೆ ಮಾಡುತ್ತಿರಲು, ಗಾಳಿಯು ಬಲವಾಗಿ ಬೀಸುತ್ತಿರಲು, ಅಗ್ನಿಯ ಭಯದಿಂದ ಭೀಮನು ಪುರೋಚನನ ಜೊತೆಯಲ್ಲೇ ಮಲಗಿದ್ದನು.
ಪೂರ್ವಮೇವ ಬಿಲಂ ಶೋಧ್ಯ ಭೀಮಸೇನೋ ಮಹಾಮತಿಃ |
ಪಾಂಡವೈಃ ಸಹಿತಾಂ ಕುಂತೀಂ ಪ್ರಾವೇಶಯತ ತದ್ಬಿಲಮ್ ॥13॥
ಮೇಧಾವಿಯಾದ ಭೀಮಸೇನನು ಮೊದಲೇ ಸುರಂಗವನ್ನು ಶೋಧಿಸಿ ಉಳಿದ ಪಾಂಡವರನ್ನೂ ಮತ್ತು ಕುಂತಿಯನ್ನೂ ಆ ಬಿಲದೊಳಗೆ ಪ್ರವೇಶಿಸಿದನು.
ದತ್ತ್ವಾಽಗ್ನಿಂ ಸಹಸಾ ಭೀಮೋ ನಿರ್ಜಗಾಮ ಬಿಲೇನ ಸಃ |
ತತಃ ಪ್ರವಾತಃ ಸುಮಹಾನ್ಶಬ್ದಶ್ಚೈವ ವಿಭಾವಸೋಃ |
ಪ್ರಾದುರಾಸೀತ್ ತತಃ ಸರ್ವೋ ಬುಬುಧೇ ಸ ಜನವ್ರಜಃ ॥14॥
ಭೀಮನು ಜತುಗೃಹಕ್ಕೆ ತಕ್ಷಣ ಬೆಂಕಿಯನ್ನು ಕೊಟ್ಟು ಬಿಲವನ್ನು ಸೇರಿ ಅಲ್ಲಿಂದ ಹೊರಗೆ ಹೊರಟನು. ಆಗ ಗಾಳಿಯು ಬಲವಾಗಿ ಬೀಸಿ ಅಗ್ನಿಯು ಉರಿಯುವ ದೊಡ್ಡ ಶಬ್ದ ಉಂಟಾಯಿತು. ಜನಸ್ತೋಮವೆಲ್ಲವೂ ಅದನ್ನು ಕೇಳಿ ಎಚ್ಚರಗೊಂಡರು.
ಪೌರಾಃ
ದುರ್ಯೋಧನಪ್ರಯುಕ್ತೇನ ಪಾಪೇನಾಕೃತಬುದ್ಧಿನಾ |
ಗೃಹಮಾತ್ಮವಿನಾಶಾಯ ಕಾರಿತಂ ದಾಹಿತಂ ಚ ತತ್ ॥15॥
ದುರ್ಯೋಧನನು ನಿಯೋಜಿಸಿದ ಪಾಪಿಯೂ, ಬುದ್ಧಿಶೂನ್ಯನೂ ಆದ ಪುರೋಚನನು ತನ್ನ ವಿನಾಶಕ್ಕಾಗಿಯೇ ಗೃಹವನ್ನು ನಿರ್ಮಾಣ ಮಾಡಿಸಿ ತಾನೇ ದಗ್ಧನಾಗಿದ್ದಾನೆ.
ಅಹೋ ಧಿಗ್ ಧೃತರಾಷ್ಟ್ರಸ್ಯ ಬುದ್ಧಿರ್ನಾತಿಸಮಂಜಸೀ |
ಯಃ ಶುಚೀನ್ ಪಾಂಡವಾನ್ ಬಾಲಾನ್ ದಾಹಯಾಮಾಸ ನಿರ್ಘೃಣಃ ॥

ಅಯ್ಯೋ, ಧಿಕ್ಕಾರವಿರಲಿ, ಶುದ್ಧರಾದ ಬಾಲಕರಾದ ಪಾಂಡವರನ್ನು ನಿರ್ದಯನಾಗಿ ಧೃತರಾಷ್ಟ್ರನು ಸುಡಿಸಿದ್ದಾನೆ. ಧೃತರಾಷ್ಟ್ರನ ಬುದ್ಧಿಯು ಸರಿಯಾಗಿಲ್ಲ.
ದಿಷ್ಟ್ಯಾ ತ್ವಿದಾನೀಂ ಪಾಪಾತ್ಮಾ ದಗ್ಧ್ವಾ ದಗ್ಧಃ ಪುರೋಚನಃ |
ಅನಾಗಸಃ ಸುವಿಶ್ವಸ್ತಾನ್ ಯೋ ದದಾಹ ನರೋತ್ತಮಾನ್ ॥17॥
ನಿರಪರಾಧಿಗಳಾದ, ತನ್ನ ಜೊತೆಯಲ್ಲಿ ನಂಬಿಕೆಯಿಂದ ವಾಸಮಾಡಿದ, ನರೋತ್ತಮರಾದ ಪಾಂಡವರನ್ನು ದಹಿಸಿದ ಪಾಪಾತ್ಮನಾದ ಪುರೋಚನನು ದೈವಬಲದಿಂದ ತಾನೂ ದಗ್ಧನಾಗಿದ್ದಾನೆ.
ವೈಶಂಪಾಯನಃ
ಏವಂ ತೇ ವಿಲಪಂತಿ ಸ್ಮ ವಾರಣಾವತಗಾ ಜನಾಃ |
ಪರಿವಾರ್ಯ ಗೃಹಂ ಸರ್ವೇ ರಾತ್ರೌ ತಸ್ಥುಃ ಸಮಂತತಃ ॥18॥
ಹೀಗೆ ವಾರಣಾವತದ ಜನರು ರಾತ್ರಿಯಲ್ಲಿ ಆ ಮನೆಯ ಸುತ್ತಲೂ ನೆರೆದು ಮಾತನಾಡಿದರು.
ಪಾಂಡವಾಶ್ಚಾಪಿ ತೇ ಸರ್ವೇ ಸಹ ಮಾತ್ರಾ ಪರಂತಪಾಃ |
ಬಿಲೇನ ತೇನ ಮಹತಾ ಜಗ್ಮುರ್ವನಮಲಕ್ಷಿತಾಃ ॥19॥
ಪರಂತಪರಾದ ಪಾಂಡವರಾದರೂ ಸಹ ತಾಯಿಯ ಜೊತೆಯಲ್ಲಿ ದೊಡ್ಡ ಬಿಲದ ಮಾರ್ಗದಿಂದ ಹೊರಗೆ ಬಂದು ಯಾರಿಗೂ ತಿಳಿಯದಂತೆ ವನವನ್ನು ಪ್ರವೇಶಿದರು.
ತೇ ತು ನಿದ್ರೋಪರೋಧೇನ ಸಾಧ್ವಸೇನ ಚ ಪಾಂಡವಾಃ |
ನ ಶೇಕುಸ್ತ್ವರಿತಾ ಗಂತುಂ ಸಹ ಕುಂತ್ಯಾ ನರಾಧಿಪ ॥20॥
ಎಲೈ ರಾಜನೇ, ಪಾಂಡವರು ನಿದ್ರೆಯಿಲ್ಲದುದರಿಂದಲೂ, ಭಯಗ್ರಸ್ತ- ರಾದುದರಿಂದಲೂ, ಕುಂತಿಯ ಜೊತೆಯಲ್ಲಿ ವೇಗವಾಗಿ ನಡೆಯಲು ಸಾಧ್ಯವಾಗಲಿಲ್ಲ.
ಭೀಮಸೇನಸ್ತು ರಾಜೇಂದ್ರ ಭೀಮವೇಗಪರಾಕ್ರಮಃ |
ಜಗಾಮ ಸರ್ವಾನಾದಾಯ ಭ್ರಾತೄನ್ ಮಾತರಮೇವ ಚ ॥21॥
ರಾಜೇಂದ್ರನೇ, ಭೀಮವೇಗವನ್ನೂ, ಭೀಮಪರಾಕ್ರಮವನ್ನು ಹೊಂದಿದ್ದ ಭೀಮಸೇನನು ಎಲ್ಲಾ ಅಣ್ಣತಮ್ಮಂದಿರನ್ನೂ ಮತ್ತು ತಾಯಿಯನ್ನೂ ಎತ್ತಿಕೊಂಡು ಹೊರಟನು.
ಸ್ಕಂಧಮಾರೋಪ್ಯ ಜನನೀಂ ಯಮಾವಂಕೇನ ವೀರ್ಯವಾನ್ |
ಪಾರ್ಥೌ ಗೃಹೀತ್ವಾ ಪಾಣಿಭ್ಯಾಂ ಭ್ರಾತರೌ ಸುಮಹಾಬಲಃ ॥22॥
ತರಸಾ ಪಾದಪಾನ್ ಭಂಜನ್ ಮಹೀಂ ಪದ್ಭ್ಯಾಂ ವಿದಾರಯನ್ |
ಸ ಜಗಾಮಾಶು ತೇಜಸ್ವೀ ವಾತರಂಹಾ ವೃಕೋದರಃ॥23॥
ತಾಯಿಯನ್ನು್ನ ಹೆಗಲಿನ ಮೇಲೆ ಕೂಡಿಸಿಕೊಂಡು ನಕುಲಸಹದೇವರನ್ನು ತನ್ನ ತೊಡೆಯನ್ನು ಆಶ್ರಯಿಸುವಂತೆ ಮಾಡಿ ಧರ್ಮರಾಜ ಮತ್ತು ಅರ್ಜುನರನ್ನು ಕೈಯಲ್ಲಿ ಹಿಡಿದುಕೊಂಡು ಮಹಾಬಲನೂ, ವೀರ್ಯಶಾಲಿಯೂ ಆದ ಭೀಮಸೇನನು ತನ್ನ ವೇಗದಿಂದ ವೃಕ್ಷಗಳನ್ನು ಮುರಿಯುತ್ತಾ ತನ್ನ ಪಾದಕ್ಷೇಪದಿಂದ ಭೂಮಿಯನ್ನು ಸೀಳುತ್ತಾ ವಾಯುವೇಗದಿಂದ ಶೀಘ್ರವಾಗಿ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ನೂರನಲವತ್ತೊಂಭತ್ತನೆಯ ಅಧ್ಯಾಯ
(ವಿದುರನು ಕಳುಹಿಸಿದ ನಾವಿಕನಿಂದ ಪಾಂಡವರ ಗಂಗಾತರಣ ಮತ್ತು ವನಪ್ರವೇಶ)
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ಯಥಾಸಂಪ್ರತ್ಯಯಂ ಕವಿಃ |
ವಿದುರಃ ಪ್ರೇಷಯಾಮಾಸ ತದ್ವನಂ ಪುರುಷಂ ಶುಚಿಮ್ ॥1॥
ಈ ಕಾಲದಲ್ಲಿಯೇ ತನ್ನ ನಂಬಿಕೆಗೆ ಅನುಗುಣವಾಗಿ ಕವಿಯಾದ ವಿದುರನು ಆ ವನಕ್ಕೆ ಶುದ್ಧನಾದ ಒಬ್ಬ ಪುರುಷನನ್ನು ಕಳುಹಿಸಿದನು.
ಸ ಗತ್ವಾ ತು ಯಥೋದ್ದೇಶಂ ವನೇ ಪ್ರೈಕ್ಷತ ಪಾಂಡವಾನ್ |
ಸಹ ಮಾತ್ರಾ ನರವ್ಯಾಘ್ರಾನನಯಜ್ಜಾಹ್ನವೀಂ ತತಃ ॥2॥
ಅವನು ಕಾಡಿನ ಆ ಭಾಗಕ್ಕೆ ಹೋಗಿ ಪಾಂಡವರನ್ನು ನೋಡಿ ಆ ನರಶ್ರೇಷ್ಠರನ್ನು ತಾಯಿಯ ಜೊತೆಯಲ್ಲಿ ಗಂಗಾನದಿಯ ಕಡೆಗೆ ಕರೆದುಕೊಂಡು ಬಂದನು.
ವಿದಿತಂ ತನ್ಮಹಾಬುದ್ಧೇರ್ವಿದುರಸ್ಯ ಮಹಾತ್ಮನಃ |
ತತ್ರಸ್ಥಸ್ಯಾಪಿ ಚಾರೇಣ ಪಾಪಾನಾಂ ವೈ ಚಿಕೀರ್ಷಿತಮ್ |
ತತೋ ಧರ್ಮವಿದಾ ತೇನ ಪ್ರಹಿತಃ ಪುರುಷಃ ಶಿವಃ ॥3॥
ಹಸ್ತಿನಪುರದಲ್ಲಿದ್ದರೂ ಗೂಢಚಾರರ ಮೂಲಕ ಈ ಪಾಪಿಗಳ ನಿಶ್ಚಯವನ್ನು ಮಹಾಬುದ್ಧಿಯುಳ್ಳ ಮಹಾತ್ಮನಾದ ವಿದುರನು

ತಿಳಿದಿದ್ದನು. ಆದ್ದರಿಂದ ಧರ್ಮಜ್ಞನಾದ ಅವನು ಇಲ್ಲಿಗೆ ಒಬ್ಬ ಶುಭಕರನಾದ ಪುರುಷನನ್ನು ಕಳುಹಿಸಿದನು.
ಸರ್ವವಾತಸಹಾಂ ನಾವಂ ಯುಕ್ತಾಂ ಚಿತ್ರಪತಾಕಿನೀಮ್ |
ಶಿವೇ ಭಾಗೀರಥೀತೀರೇ ವಿಶ್ವಾಸ್ಯೈರನುಗೈರ್ವೃತಾಮ್ |
ಪಾಂಡವಾನ್ ದರ್ಶಯಾಮಾಸ ವಚನಂ ಚೇದಮಬ್ರುವೀತ್ ॥4॥
ಆ ಪುರುಷನು ಪಾಂಡವರನ್ನು ಗಂಗೆಯ ದಡಕ್ಕೆ ಕರೆದುಕೊಂಡು ಹೋಗಿ ಎಲ್ಲಾ ಗಾಳಿಗಳನ್ನು ಸಹಿಸುವ ಚಿತ್ರಪತಾಕೆಯುಳ್ಳ ವಿಶ್ವಾಸಪಾತ್ರರಾದ ಅನುಚರರಿಂದ ಕೂಡಿದ ನಾವೆಯನ್ನು ಮಂಗಳವಾದ ಗಂಗಾತೀರದಲ್ಲಿ ಅವರಿಗೆ ತೋರಿಸಿ ಈ ಮಾತನ್ನಾಡಿದನು.
ಕಕ್ಷಘ್ನಂ ಶಿಶಿರಘ್ನಂ ಚ ಮಹಾಕುಕ್ಷಿ ಬಲೌಜಸಮ್ |
ಬೋದ್ಧವ್ಯಮಿತಿ ಯತ್ ಪ್ರಾಹ ವಿದುರಸ್ತದಿದಂ ತಥಾ |
ತೇನ ಮಾಂ ಪ್ರೇಷಿತಂ ವಿದ್ಧಿ ವಿಶ್ವಾಸಜನನಾಯ ವೈ ॥5॥
ವಿದುರನು, ನೀನು ಹೊರಡುವಾಗ ಕಕ್ಷಘ್ನವಾದ, ಶಿಶಿರಘ್ನವಾದ, ಮಹಾಕುಕ್ಷಿಬಲಓಜಸ್ಸನ್ನುಳ್ಳ ವಸ್ತುಗಳನ್ನು ತಿಳಿಯಬೇಕೆಂದು ಏನು ಹೇಳಿದ್ದನೋ ಇದೇ ಆ ಪ್ರಸಂಗ. ಅವನು ನಿನಗೆ ವಿಶ್ವಾಸವುಂಟಾಗುವುದಕ್ಕೆ ಈ ಮಾತುಗಳನ್ನು ಹೇಳಿ ನನ್ನನ್ನು ಕಳುಹಿಸಿದ್ದಾನೆಂದು ತಿಳಿಯಿರಿ.
ಭೂಯಶ್ಚ ಸ್ಮಾಹ ವಃ ಕ್ಷತ್ತಾ ವಿದುರಃ ಸರ್ವಧರ್ಮವಿತ್ |
ಅಧಿಕ್ಷಿಪನ್ ಧಾರ್ತರಾಷ್ಟ್ರಂ ಸಭ್ರಾತೃಕಮುದಾರಧೀಃ |
ಕರ್ಣಂ ಚ ದುರ್ಮತಿಂ ಕ್ರೂರಂ ಶಕುನಿಂ ಚಾಪಿ ಸೌಬಲಮ್ ॥6॥
ಸರ್ವಧರ್ಮವನ್ನೂ ತಿಳಿದ ವಿದುರನು ದುರ್ಯೋಧನನನ್ನೂ, ಅವನ ತಮ್ಮಂದಿರನ್ನೂ, ದುರ್ಮತಿಯಾದ ಕರ್ಣನನ್ನೂ , ಸೌಬಲನಾದ ಶಕುನಿಯನ್ನೂ ನಿಂದಿಸುತ್ತಾ ನಿನ್ನನ್ನು ಕುರಿತು ಹೀಗೆ ಹೇಳಿದನು.
ದುರ್ಯೋಧನಃ ಕುಲಸ್ಯಾಸ್ಯ ಕೀರ್ತಿಧರ್ಮಪ್ರಣಾಶಕಃ |
ಗಾಂಧಾರರಾಜಸಹಿತಃ ಪಿತರಂ ಪಾತಯಿಷ್ಯತಿ ॥7॥
ದುರ್ಯೋಧನನು ಈ ಕುಲದ ಕೀರ್ತಿಯನ್ನೂ ಮತ್ತು ಧರ್ಮವನ್ನೂ ನಾಶಮಾಡುತ್ತಾನೆ. ಅವನು ಶಕುನಿಯಿಂದ ಸಹಿತನಾಗಿ ತಂದೆಯಾದ ಧೃತರಾಷ್ಟ್ರನನ್ನು ಅಧೋಗತಿಗೆ ತರುತ್ತಾನೆ.
ರಾಜಾ ಚಾಪ್ಯಪರಿಜ್ಞಾನಸ್ನೇಹಬದ್ಧೋ ದುರಾತ್ಮವಾನ್ |
ಧೃತರಾಷ್ಟ್ರಃ ಪರೀತಾತ್ಮಾ ಧರ್ಮಂ ತ್ಯಜತಿ ಶಾಶ್ವತಮ್ ॥8॥
ಧೃತರಾಷ್ಟ್ರನೂ ಸಹ ಪರಿಜ್ಞಾನವಿಲ್ಲದ ಸ್ನೇಹದಿಂದ ಬದ್ಧನಾಗಿ ದುಷ್ಟವಾದ ಮನಸ್ಸನ್ನು ಹೊಂದಿ ಕಾಲಚೋದಿತನಾಗಿ ಶಾಶ್ವತವಾದ ಧರ್ಮವನ್ನು ತ್ಯಜಿಸುತ್ತಿದ್ದಾನೆ.
ವೈಶಂಪಾಯನಃ
ಪಾಂಡವಾಶ್ಚಾಪಿ ಗತ್ವಾಽಥ ಗಂಗಾಯಾಸ್ತೀರಮುತ್ತರಮ್ |
ನಿಷಾದಾಧಿಪತಿಂ ವೀರಂ ದಾಶಂ ಪರಮಧಾರ್ಮಿಕಮ್ ॥9॥
ದೀಪಿಕಾಭಿಃ ಕೃತಾಲೋಕಂ ಮಾರ್ಗಮಾಣಂ ಚ ಪಾಂಡವಾನ್ |
ದದೃಶುಃ ಪಾಂಡವೇಯಾಸ್ತೇ ನಾವಿಕಂ ತ್ವರಯಾಽನ್ವಿತಮ್ ॥10॥
ಪಾಂಡವರಾದರೋ ಗಂಗೆಯ ತೀರಕ್ಕೆ ಹೋಗಿ, ಪರಮಧಾರ್ಮಿಕನಾದ ನಿಷಾದಾಧಿಪತಿಯಾದ ದಾಶವೀರನನ್ನು ನೋಡಿದರು. ಪಾಂಡವರು ದೀಪಗಳನ್ನು ಹಿಡಿದುಕೊಂಡು ತಮ್ಮನ್ನೇ ಹುಡುಕುತ್ತಿದ್ದ ತ್ವರೆಯಲ್ಲಿದ್ದ ಆ ನಾವಿಕನನ್ನು ನೋಡಿದರು.
ನಿಷಾದಸ್ತತ್ರ ಕೌಂತೇಯಾನಭಿಜ್ಞಾನಂ ನ್ಯವೇದಯತ್ |
ವಿದುರಸ್ಯ ಮಹಾಬುದ್ಧೇರ್ಮ್ಲೇಚ್ಛಭಾಷಾದಿ ಯತ್ ತದಾ ॥11॥
ಆ ನಿಷಾದನು ಪಾಂಡವರನ್ನು ಕುರಿತು ತನ್ನಲ್ಲಿ ವಿಶ್ವಾಸಕ್ಕೆ ಕಾರಣವಾಗಿ ವಿದುರನ ಮ್ಲೇಚ್ಛಭಾಷೆಯ ಮಾತುಗಳನ್ನು ಹೇಳಿದನು.
ನಾವಿಕಃ
ವಿದುರೇಣಾಪಿ ಸಂದಿಷ್ಟೋ ದತ್ವಾ ಬಹು ಧನಂ ಮಹತ್ |
ಗಂಗಾತೀರೇ ನಿವಿಷ್ಟಸ್ತ್ವಂ ಪಾಂಡವಾನ್ ತಾರಯೇಸಿತ್ವತಿ ॥12॥
ವಿದುರನೂ ಸಹ ನನಗೆ ಬಹಳ ಧನವನ್ನು ಕೊಟ್ಟು ನೀನು ಗಂಗಾತೀರದಲ್ಲಿ ಇದ್ದು ಪಾಂಡವರನ್ನು ದಾಟಿಸಬೇಕು ಎಂಬ ಸಂದೇಶವನ್ನು ನೀಡಿದ್ದಾನೆ.
ಸೋಽಹಂ ಚತುರ್ದಶೀಮದ್ಯ ಗಂಗಾಯಾ ನವಿದೂರತಃ |
ಚಾರೈರನ್ವೇಷಯಾಮ್ಯಸ್ಮಿನ್ ವನೇ ಮೃಗಗಣಾನ್ವಿತೇ ॥13॥
ಅಂತಹ ನಾನು ಈ ಚತುರ್ದಶಿಯ ದಿವಸ ಮೃಗಗಣಗಳಿಂದ ಕೂಡಿದ ಈ ಕಾಡಿನಲ್ಲಿ ಗಂಗೆಯ ಸಮೀಪದಲ್ಲಿ ಚಾರರ ಸಹಾಯದಿಂದ ನಿಮ್ಮನ್ನು ಹುಡುಕುತ್ತಿದ್ದೇನೆ.
ಪ್ರಭವಂತೋಽತ್ರ ಭದ್ರಂ ವೋ ನಾವಮಾರುಹ್ಯ ಗಮ್ಯತಾಮ್ |
ಯುಕ್ತಾರಿತ್ರಪತಾಕಾಂ ವೈ ನಿಶ್ಛಿದ್ರಾಂ ಮಂದಿರೋಪಮಾಮ್ ॥14॥
ಪ್ರಭುಗಳಾದ ನಿಮಗೆ ಮಂಗಳವಾಗಲಿ. ನಿಶ್ಛಿದ್ರವಾದ ಮಂದಿರದಂತಿರುವ ಅರಿತ್ರಪತಾಕೆಗಳಿಂದ ಕೂಡಿದ ಈ ನಾವೆಯನ್ನು ಏರಿ ನೀವು ಪ್ರಯಾಣ ಮಾಡಿ.
ಇಯಂ ವಾರಿಪಥೇ ಯುಕ್ತಾ ನೌರಸ್ತು ಸುಖಗಾಮಿನೀ |
ಮೋಚಯಿಷ್ಯತಿ ವಃ ಸರ್ವಾನ್ ಮೃತ್ಯುಪಾಶಾತ್ ಸಮಾತೃಕಾನ್ ॥

ವಾರಿಪಥದಲ್ಲಿ ಸಂಚರಿಸುವ ಈ ನಾವೆಯು ಸುಖಗಾಮಿನಿಯಾಗಿ ನಿಮ್ಮನ್ನೂ ಮತ್ತು ನಿಮ್ಮ ತಾಯಿಯನ್ನೂ, ಎಲ್ಲರನ್ನೂ ಮೃತ್ಯುಪಾಶದಿಂದ ಬಿಡಿಸುವುದು.
ತತಸ್ತಾನ್ ವ್ಯಥಿತಾನ್ ಸರ್ವಾನ್ ಸಹ ಮಾತ್ರಾ ಪರಂತಪಾನ್ |
ನಾವಮಾರೋಪ್ಯ ಗಂಗಾಯಾಂ ಪ್ರಯಾತಾನ್ ಪುನರಬ್ರವೀತ್ ॥
ಅನಂತರ ವ್ಯಥೆಯಿಂದ ಕೂಡಿದ ಪರಂತಪರಾದ ಅವರು ತಾಯಿಯ ಜೊತೆಯಲ್ಲಿ ನಾವೆಯನ್ನು ಏರಿ ಹೊರಡುವುದನ್ನು ಕಂಡು ನಾವಿಕನು ಪುನಃ ಹೇಳಿದನು.
ವಿದುರೋ ಮೂರ್ಧ್ನ್ಯುಪಾಘ್ರಾಯ ಪರಿಷ್ವಜ್ಯ ವಚೋ ಮುಹುಃ |
ಅರಿಷ್ಟಂ ಗಚ್ಛತಾವ್ಯಗ್ರಾಃ ಪಂಥಾನಮಿತಿ ಚಾಬ್ರವೀತ್ ॥17॥
ವಿದುರನು ನೀವು ಹೊರಡುವ ಸಮಯದಲ್ಲಿ ನಿಮ್ಮನ್ನು ಆಲಿಂಗಿಸಿ ಮತ್ತೆ ಮತ್ತೆ ನಿಮ್ಮ ದಾರಿಯು ದೋಷಶೂನ್ಯವಾಗಿದ್ದು, ಅವ್ಯಗ್ರರಾಗಿ ಪ್ರಯಾಣ ಮಾಡಿ ಎಂದು ಹೇಳಿದನಷ್ಟೆ. (ತನ್ನಲ್ಲಿ ವಿಶ್ವಾಸವುಂಟಾಗುವುದಕ್ಕಾಗಿ ಪುನಃ ನಾವಿಕನು ಹಿಂದಿನ ಈ ಘಟನೆಯನ್ನು ಜ್ಞಾಪಿಸುತ್ತಾನೆ)
ಇತ್ಯುಕ್ತಾ ಸಹ ಮಾತ್ರಾ ತೇ ತಸ್ಮಾನ್ಮುಕ್ತಾ ಮಹಾಭಯಾತ್ |
ಗಂಗಾಮುತ್ತೀರ್ಯ ಕೌಂತೇಯಾ ವನಂ ಜಗ್ಮುರ್ಯಥಾಸುಖಮ್ ॥
ಹೀಗೆ ಹೇಳಲ್ಪಟ್ಟ ಆ ಕುಂತೀಪುತ್ರರು ತಾಯಿಯ ಜೊತೆಯಲ್ಲಿ ಗಂಗೆಯನ್ನು ದಾಟಿ ಮಹಾಭಯದಿಂದ ಮುಕ್ತರಾಗಿ ಸುಖವಾಗಿ ವನವನ್ನು ಸೇರಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರನಲವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ನೂರ ಐವತ್ತನೆಯ ಅಧ್ಯಾಯ
(ಪ್ರಾತಃಕಾಲದಲ್ಲಿ ಧೃತರಾಷ್ಟ್ರನಿಗೆ ಪಾಂಡವರ ಮರಣದ ವಾರ್ತೆಯ ಹರಣ. ಬಂಧುಗಳಿಂದ ಪಾಂಡವರಿಗೆ ಉದಕ ಕ್ರಿಯ, ಭೀಷ್ಮರ ರೋದನ, ವಿದುರನಿಂದ ಸಾಂತ್ವನ.)
ವೈಶಂಪಾಯನಃ
ಅಥ ರಾತ್ರ್ಯಾಂ ವ್ಯತೀತಾಯಾಂ ಸಶೋಕೋ ನಾಗರೋ ಜನಃ |
ತತ್ರಾಜಗಾಮ ತ್ವರಿತೋ ದಿದೃಕ್ಷುಃ ಪಾಂಡುನಂದನಾನ್ ॥1॥
ಅನಂತರ ರಾತ್ರಿಯು ಕಳೆಯುತ್ತಿರಲು ಶೋಕದಿಂದ ಕೂಡಿದ ನಗರವಾಸಿಗಳು ಪಾಂಡವರನ್ನು ನೋಡಲು ಬೇಗ ಅಲ್ಲಿಗೆ ಬಂದರು.
ನಿರ್ವಾಪಯಂತೋ ಜ್ವಲನಂ ತೇ ಜನಾ ದದೃಶುಸ್ತದಾ |
ಜಾತುಷಂ ತದ್ಗೃಹಂ ದಗ್ಧಮಮಾತ್ಯಂ ಚ ಪುರೋಚನಮ್ ॥2॥
ಆ ಜನರು ಬೆಂಕಿಯನ್ನು ಆರಿಸುತ್ತಾ ಜತುಗೃಹವೂ ಮತ್ತು ಅಮಾತ್ಯನಾದ ಪುರೋಹಿತನೂ ದಗ್ಧನಾಗಿರುವುದನ್ನು ನೋಡಿದರು.
ನೂನಂ ದುರ್ಯೋಧನೇನೇದಂ ವಿಹಿತಂ ಪಾಪಕರ್ಮಣಾ |
ಪಾಂಡವಾನಾಂ ವಿನಾಶಾಯ ಇತ್ಯೇವಂ ಚುಕ್ರುಶುರ್ಜನಾಃ ॥3॥
ನಿಶ್ಚಿತವಾಗಿ ಪಾಪಿಯಾದ ದುರ್ಯೋಧನನು ಪಾಂಡವರನ್ನು ಕೊಲ್ಲುವ ಸಲುವಾಗಿ ಹೀಗೆ ಮಾಡಿದ್ದಾನೆ ಎಂದು ಜನರು ಗೋಳಾಡಿದರು.
ವಿದಿತಂ ಧೃತರಾಷ್ಟ್ರಸ್ಯ ಧಾರ್ತರಾಷ್ಟ್ರೋ ನ ಸಂಶಯಃ |
ದಗ್ಧವಾನ್ ಪಾಂಡವಾನ್ ಬಾಲಾನ್ ನ ಹ್ಯೇತತ್ ಪ್ರತಿಷಿದ್ಧವಾನ್ ॥
ಧೃತರಾಷ್ಟ್ರನು ತಿಳಿದಿರುವಂತೆಯೇ ದುರ್ಯೋಧನನು ಬಾಲಕರಾದ ಪಾಂಡವರನ್ನು ದಹಿಸಿದ್ದಾನೆ. ಧೃತರಾಷ್ಟ್ರನು ಇದನ್ನು ಪ್ರತಿಷೇಧಿಸಲಿಲ್ಲ.
ನೂನಂ ಶಾಂತನವೋ ಭೀಷ್ಮೋ ನ ಧರ್ಮಮನುವರ್ತತೇ |
ದ್ರೋಣಶ್ಚ ವಿದುರಶ್ಚೈವ ಕೃಪಶ್ಚಾನ್ಯೇ ಚ ಕೌರವಾಃ ॥5॥
ಶಂತನುವಿನ ಪುತ್ರನಾದ ಭೀಷ್ಮನೂ ಸಹ ಧರ್ಮವನ್ನು ಅನುಸರಿಸುತ್ತಿಲ್ಲ. ದ್ರೋಣರು, ಕೃಪರು, ವಿದುರ ಮೊದಲಾದ ಕೌರವರೂ ಧರ್ಮವನ್ನು ಅನುಸರಿಸುತ್ತಿಲ್ಲ.
ತೇ ವಯಂ ಧೃತರಾಷ್ಟ್ರಾಯ ಪ್ರೇಷಯಾಮೋ ದುರಾತ್ಮನೇ |
ಸಂವೃತ್ತಸ್ತೇ ಪರಃ ಕಾಮಃ ಪಾಂಡವಾನ್ ದಗ್ಧವಾನಸಿ ॥6॥
ನಾವು ದುಷ್ಟನಾದ ಧೃತರಾಷ್ಟ್ರನಿಗೆ ನಿನ್ನ ಆಸೆಯು ಪೂರ್ಣವಾಗಿದೆ, ಪಾಂಡವರನ್ನು ಸುಟ್ಟಿದ್ದೀಯೆ ಎಂದು ವಾರ್ತೆಯನ್ನು ಕಳುಹಿಸೋಣ.
ತತೋ ವ್ಯಪೋಹಮಾನಾಸ್ತೇ ಪಾಂಡವಾರ್ಥೇ ಹುತಾಶನಮ್ |
ನಿಷಾದೀಂ ದದೃಶುರ್ದಗ್ಧಾಂ ಪಂಚಪುತ್ರಾಮನಾಗಸೀಮ್ ॥7॥

ಅನಂತರ ಪಾಂಡವರನ್ನು ಹುಡುಕುವ ಸಲುವಾಗಿ ಅಗ್ನಿಯನ್ನು  ಪಕ್ಕಕ್ಕೆ ಸರಿಸುತ್ತಾ ಅವರು ದಗ್ಧರಾದ, ನಿರಪರಾಧಿಯಾದ ನಿಷಾದಿಯನ್ನೂ  ಮತ್ತು ಅವಳ ಐದು ಮಕ್ಕಳನ್ನೂ ನೋಡಿದರು.
ಖನಕೇನ ತು ತೇನೈವ ವೇಶ್ಮ ಶೋಧಯತಾ ಬಿಲಮ್ |
ಪಾಂಸುಭಿಃ ಪ್ರತ್ಯಪಿಹಿತಂ ಪುರುಷೈಸ್ತೈರಲಕ್ಷಿತಮ್ ॥8॥
ಖನಕನು ಆ ಮನೆಯನ್ನು ಶೋಧಿಸುವಾಗ ಸುರಂಗವನ್ನು ಮಣ್ಣಿನಿಂದ ಮುಚ್ಚಿದ್ದರಿಂದ ಯಾರಿಗೂ ಅದು ತಿಳಿಯಲಿಲ್ಲ.
ತತಸ್ತೇ ಪ್ರೇಷಯಾಮಾಸುರ್ಧೃತರಾಷ್ಟ್ರಸ್ಯ ನಾಗರಾಃ |
ಪಾಂಡವಾನಗ್ನಿನಾ ದಗ್ಧಾನಮಾತ್ಯಂ ಚ ಪುರೋಚನಮ್     ॥9॥
ಆಗ ನಗರವಾಸಿಗಳು ಧೃತರಾಷ್ಟ್ರನಿಗೆ ಪಾಂಡವರೂ ಮತ್ತು ಅಮಾತ್ಯನಾದ ಪುರೋಹಿತನೂ ಅಗ್ನಿಯಿಂದ ದಗ್ಧರಾದರೆಂಬ ವಾರ್ತೆಯನ್ನು ಕಳುಹಿಸಿದರು.
ಶ್ರುತ್ವಾ ತು ಧೃತರಾಷ್ಟ್ರಸ್ತಂ ರಾಜಾ ಸುಮಹದಪ್ರಿಯಮ್ |
ವಿನಾಶಂ ಪಾಂಡವೇಯಾನಾಂ ವಿಲಲಾಪ ಸುದುಃಖಿತಃ      ॥10॥
ರಾಜನಾದ ಧೃತರಾಷ್ಟ್ರನು ಅತ್ಯಂತ ಅಪ್ರಿಯವಾದ ಪಾಂಡವರ ವಿನಾಶದ ವಾರ್ತೆಯನ್ನು ಕೇಳಿ ಬಹಳ ದುಃಖದಿಂದ ವಿಲಾಪಮಾಡಿದನು.
ಧೃತರಾಷ್ಟ್ರಃ
ಅದ್ಯ ಪಾಂಡುರ್ಮೃತೋ ರಾಜಾ ಭ್ರಾತಾ ಮಮ ಸುದುರ್ಲಭಃ |
ತೇಷು ವೀರೇಷು ದಗ್ಧೇಷು ಮಾತ್ರಾ ಸಹ ವಿಶೇಷತಃ ॥11॥
ವೀರರಾದ ಪಾಂಡವರು ತಾಯಿಯ ಜೊತೆಯಲ್ಲಿ ದಗ್ಧರಾಗುತ್ತಿರಲು, ಈ ದಿನ ಸುದುರ್ಲಭನಾದ ನನ್ನ ತಮ್ಮನಾದ ಪಾಂಡುವು ವಿಶೇಷವಾಗಿ ಮೃತನಾಗಿದ್ದಾನೆ.
ಗಚ್ಛಂತು ಪುರುಷಾಃ ಶೀಘ್ರಂ ನಗರಂ ವಾರಣಾವತಮ್ |
ಸಂಸ್ಕಾರಯಂತು ತಾನ್ ವೀರಾನ್ ಕುಂತೀಂ ರಾಜಸುತಾಂ ತು ತಾಮ್ ॥
ನನ್ನ ಅನುಚರರಾದ ನೀವು ಶೀಘ್ರವಾಗಿ ವಾರಣಾವತನಗರಕ್ಕೆ  ಹೋಗಿ ವೀರರಾದ ಪಾಂಡವರಿಗೂ ಮತ್ತು ರಾಜಸುತೆಯಾದ ಕುಂತಿಗೂ ಸಂಸ್ಕಾರಗಳನ್ನು ಮಾಡಿ.
ಯೇ ಚ ತತ್ರ ಮೃತಾಸ್ತೇಷಾಂ ಸುಹೃದೋಽರ್ಚಂತು ತಾನಪಿ |
ಕಾರಯಂತು ಚ ಕುಲ್ಯಾನಿ ಶುಭ್ರಾಣಿ ಚ ಮಹಾಂತಿ ಚ      ॥13॥
ಅಲ್ಲಿ ಬೇರೆ ಯಾರಾದರೂ ಮೃತರಾಗಿದ್ದರೆ ಅವರಿಗೂ ಪ್ರೀತಿಪಾತ್ರರಾದವರು ವಿಶೇಷರೀತಿಯಿಂದ ಸಂಸ್ಕಾರವನ್ನು ಮಾಡಲಿ.
ಮಮ ದಗ್ಧಾ ಮಹಾತ್ಮಾನಃ ಕುಲವಂಶವಿವರ್ಧನಾಃ |
ಏವಂ ಗತೇ ಮಯಾ ಶಕ್ಯಂ ಯದ್ಯತ್ ಕಾರಯಿತುಂ ವರಮ್ |
ಪಾಂಡವಾನಾಂ ಚ ಕುಂತ್ಯಾಶ್ಚ ತತ್ಸರ್ವಂ ಕ್ರಿಯತಾಮಿತಿ     ॥14॥
ನನ್ನ ಕುಲವಿವರ್ಧನರಾದ ಮಹಾನುಭಾವರಾದ ಪಾಂಡವರು  ದಗ್ಧರಾದರು. ಈ ಪರಿಸ್ಥಿತಿಯಲ್ಲಿ ನಾನು ಪಾಂಡವರ ಮತ್ತು ಕುಂತಿಯ ಸಲುವಾಗಿ ಏನೇನು ಮಾಡಬೇಕಾಗಿದೆಯೋ ಅವೆಲ್ಲವನ್ನೂ  ಮಾಡಿ.
ವೈಶಂಪಾಯನಃ
ಸಮೇತಾಸ್ತು ತತಃ ಸರ್ವೇ ಭೀಷ್ಮೇಣ ಸಹ ಕೌರವಾಃ |
ಧೃತರಾಷ್ಟ್ರಃ ಸಪುತ್ರಶ್ಚ ಗಂಗಾಮಭಿಮುಖಾ ಯಯುಃ      ॥15॥
ಆಗ ಕೌರವರೆಲ್ಲರೂ ಭೀಷ್ಮರ ಜೊತೆಯಲ್ಲಿ ಕೂಡಿಕೊಂಡು ಧೃತರಾಷ್ಟ್ರನನ್ನೂ ಅವನ ಪುತ್ರರನ್ನೂ ಕರೆದುಕೊಂಡು ಗಂಗೆಗೆ ಅಭಿಮುಖವಾಗಿ ಹೊರಟರು.
ಏಕವಸ್ತ್ರಾ ನಿರಾನಂದಾ ನಿರಾಭರಣವೇಷ್ಟನಾಃ |
ಉದಕಂ ಕರ್ತುಕಾಮಾ ವೈ ಪಾಂಡವಾನಾಂ ಮಹಾತ್ಮನಾಮ್  ॥16॥
ಮಹಾತ್ಮರಾದ ಪಾಂಡವರಿಗೆ ಉದಕಕ್ರಿಯೆಯನ್ನು ಮಾಡಲು ಬಯಸಿ ಅವರು ಏಕವಸ್ತ್ರವನ್ನು ಉಟ್ಟು ಆಭರಣಗಳನ್ನೂ, ಕವಚಗಳನ್ನೂ ತೆಗೆದು ನಿರಾನಂದರಾಗಿ ಹೊರಟರು.
ಏವಂ ಗತ್ವಾ ತತಶ್ಚಕ್ರೇ ಜ್ಞಾತಿಭಿಃ ಪರಿವಾರಿತಃ |
ಉದಕಂ ಪಾಂಡುಪುತ್ರೇಭ್ಯೋ ಧೃತರಾಷ್ಟ್ರೋಽಂಬಿಕಾಸುತಃ  ॥17॥
ಅಂಬಿಕಾಸುತನಾದ ಧೃತರಾಷ್ಟ್ರನು ಹೀಗೆ ಜ್ಞಾತಿಗಳಿಂದ ಪರಿವೃತನಾಗಿ ಗಂಗೆಯನ್ನು ತಲುಪಿ ಪಾಂಡುಪುತ್ರರಿಗೆ ಉದಕಕ್ರಿಯೆಯನ್ನು ಮಾಡಿದನು.
ಚುಕ್ರುಶುಃ ಕುರವಃ ಸರ್ವೇ ಭೃಶಂ ಶೋಕಸಮನ್ವಿತಾಃ |
ವಿದುರಸ್ತ್ವಲ್ಪಶಃ ಶೋಕಂ ಚಕ್ರೇ ವೇದ ಹಿ ತತ್ ಪರಮ್     ॥18॥
ಬಹಳ ಶೋಕದಿಂದ ಕೂಡಿದವರಾಗಿ ಕುರುಗಳೆಲ್ಲರೂ ಗಟ್ಟಿಯಾಗಿ ಗೋಳಾಡಿದರು. ನಿಜಾಂಶವನ್ನು ತಿಳಿದ ವಿದುರನು ಅಲ್ಪಶೋಕವನ್ನು ಮಾಡಿದನು.
ತತಃ ಪ್ರವ್ಯಥಿತೋ ಭೀಷ್ಮಃ ಪಾಂಡುರಾಜಸುತಾನ್ ಮೃತಾನ್ |
ಸಹ ಮಾತ್ರೇತಿ ತಚ್ಛ್ರುತ್ವಾ ವಿಲಲಾಪ ರುರೋದ ಚ       ॥19॥
ಅನಂತರ ತುಂಬಾ ವ್ಯಥೆಯಿಂದ ಕೂಡಿದ ಭೀಷ್ಮರು ಪಾಂಡುರಾಜನ ಮಕ್ಕಳು ತಾಯಿಯ ಜೊತೆಯಲ್ಲಿ ಮೃತರಾದರೆಂಬ

ವಾರ್ತೆಯನ್ನು ಕೇಳಿ ವಿಲಾಪನ್ನು ಮಾಡಿ ಗಟ್ಟಿಯಾಗಿ ಅತ್ತರು.
ಭೀಷ್ಮಃ
ಹಾ ಯುಧಿಷ್ಠಿರ ಹಾ ಭೀಮ ಹಾ ಧನಂಜಯ ಹಾ ಯಮೌ |
ಹಾ ಪೃಥೇ ಸಹ ಪುತ್ರೈಸ್ತ್ವಮೇಕರಾತ್ರೇಣ ಸ್ವರ್ಗತಾ |
ಮಾತ್ರಾ ಸಹ ಕುಮಾರಾಸ್ತೇ ಸರ್ವೇ ತತ್ರೈವ ಸಂಸ್ಥಿತಾಃ ॥20॥
ಅಯ್ಯೋ ಯುಧಿಷ್ಠಿರ, ಭೀಮ, ಧನಂಜಯ, ನಕುಲ ಸಹದೇವರೇ, ಅಯ್ಯೋ ಕುಂತಿಯೇ, ನೀನು ಮಕ್ಕಳ ಜೊತೆಯಲ್ಲಿ ಒಂದೇ ರಾತ್ರಿಯಲ್ಲಿ ಸ್ವರ್ಗವನ್ನು ತಲುಪಿದೆ. ತಾಯಿಯ ಜೊತೆಯಲ್ಲಿ ಎಲ್ಲಾ ಕುಮಾರರೂ ಅಲ್ಲೇ ಇದ್ದರಷ್ಟೇ.
ನ ಹಿ ತೌ ನೋತ್ಸಹೇಯಾತಾಂ ಭೀಮಸೇನಧನಂಜಯೌ |
ತರಸಾಽವಹಿತಾತ್ಮಾನೌ ನಿರ್ಭೇತ್ತುಮಪಿ ಮಂದಿರಮ್ ॥21॥
ಪರಾಸುತ್ವಂ ನ ಪಶ್ಯಾಮಿ ಪೃಥಾಯಾಃ ಸಹ ಪಾಂಡವೈಃ |
ಸರ್ವಥಾ ವಿಕೃತಂ ತತ್ ತು ಯದಿ ತೇ ನಿಧನಂ ಗತಾಃ | ॥22॥
ಅತಿಬಲವಂತರೂ, ಯಾವಾಗಲೂ ಎಚ್ಚರಿಕೆಯಿಂದ ಇರುವವರೂ ಆದ ಭೀಮಾರ್ಜುನರು ಆ ಮಂದಿರವನ್ನು ಒಡೆಯಲು ಪ್ರಯತ್ನ ಮಾಡಲಿಲ್ಲ ಎಂಬುದು ವಿಷಾದದ ಸಂಗತಿ. ಪಾಂಡವರಿಗೂ ಮತ್ತು ಕುಂತಿಗೂ ನಾನು ಮರಣವನ್ನು ಸಂಭಾವಿಸುವುದಿಲ್ಲ. ಒಂದು ಪಕ್ಷ ಅವರು ಮೃತರಾಗಿದ್ದರೆ ಅದು ಅತ್ಯಂತ ವಿರುದ್ಧವೇ ಸರಿ.
ಧರ್ಮರಾಜಃ ಸ ನಿರ್ದಿಷ್ಟೋ ನನು ವಿಪ್ರೈರ್ಯುಧಿಷ್ಠಿರಃ |
ಪೃಥಿವ್ಯಾಂ ಚ ರಥಿಶ್ರೇಷ್ಠೋ ಭವಿತಾ ಸ ಧನಂಜಯಃ ॥23॥
ಸತ್ಯವ್ರತೋ ಧರ್ಮದತ್ತಃ ಸತ್ಯವಾಕ್ ಶುಭಲಕ್ಷಣಃ |
ಕಥಂ ಕಾಲವಶಂ ಪ್ರಾಪ್ತಃ ಪಾಂಡವೇಯೋ ಯುಧಿಷ್ಠಿರಃ ॥24॥
ಧರ್ಮರಾಜನು ಪೃಥಿವೀಪತಿಯಾಗುತ್ತಾನೆಂದು, ಧನಂಜಯನು ರಥಿಶ್ರೇಷ್ಠನಾಗುವನೆಂದು ವಿಪ್ರರು ನುಡಿದ್ದಿದರಷ್ಟೆ. ಸತ್ಯವ್ರತನೂ, ಯಮನಿಂದ ಕೊಡಲ್ಪಟ್ಟವನೂ, ಸತ್ಯವಚನನೂ ಶುಭಲಕ್ಷಣೋಪೇತನೂ ಆದ ಪಾಂಡುಪುತ್ರನಾದ ಯುಧಿಷ್ಠಿರನು ಹೇಗೆ ಮೃತ್ಯುವಶನಾದನು?
ಆತ್ಮಾನಮುಪಮಾಂ ಕೃತ್ವಾ ಪರೇಷಾಂ ವರ್ತತೇ ತು ಯಃ |
ಸಹ ಮಾತ್ರಾ ತು ಕೌರವ್ಯಃ ಕಥಂ ಕಾಲವಶಂ ಗತಃ ॥25॥
ತನ್ನನ್ನು ದೃಷ್ಟಾಂತವನ್ನಾಗಿ ಮಾಡಿಕೊಂಡು ಇನ್ನೊಬ್ಬರ ವಿಷಯದಲ್ಲಿ ನಡೆದುಕೊಳ್ಳುವ ಧರ್ಮರಾಜನು ತಾಯಿಯ ಜೊತೆಯಲ್ಲಿ ಹೇಗೆ ಮೃತನಾದನು?
ಪಾಲಿತಶ್ಚ ಚಿರಂ ಕಾಲಂ ಫಲಕಾಲೇ ಯಥಾ ಧ್ರುಮಃ |
ಭಗ್ನಃ ಸ್ಯಾದ್ ವಾಯುವೇಗೇನ ತಥಾ ರಾಜಾ ಯುಧಿಷ್ಠಿರಃ ॥26॥
ಬಹಳ ಕಾಲದಿಂದ ಬೆಳೆಸಿದ ವೃಕ್ಷವು ಫಲಕಾಲದಲ್ಲಿ ವಾಯುವೇಗದಿಂದ ಭಗ್ನವಾಗುವಂತೆ ಈ ದಿನ ಯುಧಿಷ್ಠಿರನು ಮೃತನಾಗಿದ್ದಾನೆ.
ಯೌವರಾಜ್ಯೇಽಭಿಷಿಕ್ತೇನ ಪಿತುರ್ಯೇನಾಹೃತಂ ಯಶಃ |
ಆತ್ಮನಶ್ಚ ಪಿತುಶ್ಚೈವ ಸತ್ಯಧರ್ಮಸ್ಯ ವೃತ್ತಿಭಿಃ ॥27॥
ಬ್ರಹ್ಮಣ್ಯಸ್ತು ಪುರಪ್ರೇಕ್ಷೀ ಹೃದಿ ಶೋಕಂ ನಿಧಾಯ ಮೇ |
ಕಾಲೇನ ಸ ಹಿ ಸಂಭಗ್ನೋ ಧಿಕ್ ಕೃತಾಂತಮನರ್ಥದಮ್ ॥28॥
ಯುವರಾಜ್ಯದಲ್ಲಿ ಅಭಿಷಕ್ತನಾದಾಗಲೇ ಯಾರು ತನ್ನ ಸತ್ಯಧರ್ಮದ ನಡತೆಯಿಂದ ತಂದೆಯ ಕೀರ್ತಿಯನ್ನು ಅಪಹರಿಸಿದನೋ, ಬ್ರಹ್ಮಣ್ಯನಾದ, ಇನ್ನೊಬ್ಬರ ಬಗ್ಗೆ ಯಾವಾಗಲೂ ಚಿಂತಿಸುವ ಅಂತಹ ಯುಧಿಷ್ಠಿರನು ನನ್ನ ಹೃದಯದಲ್ಲಿ ಶೋಕವನ್ನು ತುಂಬಿ ಮೃತ್ಯುವಿನಿಂದ ಭಗ್ನನಾಗಿದ್ದಾನೆ. ಅಯ್ಯೋ, ಕಷ್ಟ. ವಿಧಿಯು ಅನರ್ಥದಾಯಕವಾಗಿದೆ.
ಯಚ್ಚ ಸಾ ವನವಾಸೇನ ದುಃಖಿತಾ ಕ್ಲೇಶಭಾಗಿನೀ |
ಪುತ್ರಗೃಧ್ನುತಯಾ ಕುಂತೀ ನ ಭರ್ತಾರಂ ಮೃತಾ ತ್ವನು ॥29॥
ಅಲ್ಪಕಾಲಂ ಕುಲೇ ಜಾತಾ ಭರ್ತುಃ ಪ್ರೀತಿಮವಾಪ ಯಾ |
ದಗ್ಧಾಽದ್ಯ ಸಹ ಪುತ್ರೈಃ ಸಾ ಅಸಂಪೂರ್ಣಮನೋರಥಾ ॥30॥
ಯಾವ ಕುಂತಿಯು ವನವಾಸದಿಂದ ದುಃಖಿತಳಾಗಿ, ಕ್ಲೇಶಗಳನ್ನು ಅನುಭವಿಸಿ ಮಕ್ಕಳ ಮೇಲಿನ ಆಸೆಯಿಂದ ಪತಿಯ ಜೊತೆಯಲ್ಲಿ ಸಹಗಮನವನ್ನು ಮಾಡದೇ ಶ್ರೇಷ್ಠಕುಲದಲ್ಲಿ ಜಾತಳಾದ ಅವಳು ಸ್ವಲ್ಪಕಾಲ ಪತಿಯ ಪ್ರೀತಿಯನ್ನು ಸಂಪಾದಿಸಿದಳೋ, ಅಂತಹ ಕುಂತಿಯು ಇಂದು ತನ್ನ ಮನೋರಥವು ಈಡೇರದೇ ಪುತ್ರರ ಜೊತೆಯಲ್ಲಿ ದಗ್ಧಳಾಗಿದ್ದಾಳೆ.
ಏತಚ್ಚ ಚಿಂತಯಾನಸ್ಯ ವ್ಯಥಿತಂ ಬಹುಧಾ ಮನಃ |
ಅವಸ್ಫೂರ್ಜ್ಯ ಚ ಮೇ ದೇಹಂ ಹೃದಯಾಗ್ನಿರುದೀರ್ಯತೇ ॥31॥
ಇದನ್ನು ಚಿಂತಿಸುವ ನನ್ನ ಮನಸ್ಸಿಗೆ ಬಹಳ ದುಃಖವಾಗಿದೆ. ನನ್ನ ಹೃದಯದಲ್ಲಿ ಇರುವ ಶೋಕಾಗ್ನಿಯು ದೇಹವನ್ನು ಭೇದಿಸಿಕೊಂಡು ಉರಿಯುತ್ತಿದೆ.
ಪೀನಸ್ಕಂಧಶ್ಚಾರುಬಾಹುರ್ಮೇರುಕುಂಜಸಮೋ ಯುವಾ |
ಮೃತೋ ಭೀಮ ಇತಿ ಶ್ರುತ್ವಾ ಮನೋ ನ ಶ್ರದ್ದಧಾತಿ ಮೇ ॥32॥
ಪೀನಸ್ಕಂಧನೂ, ಮಹಾಬಾಹುವೂ, ಮೇರುಪರ್ವತದ ಸದೃಶನೂ, ಯುವಕನೂ ಆಗಿದ್ದ ಭೀಮನು ಮೃತನಾದನೆಂಬ ವಾರ್ತೆಯನ್ನು ಕೇಳಿ ನನ್ನ ಮನಸ್ಸು ನಂಬುತ್ತಿಲ್ಲ.

ಅನಿಂದ್ಯಾನಿ ಚ ಯೋ ಗಚ್ಛನ್ ಕ್ಷಿಪ್ರಹಸ್ತೋ ದೃಢಾಯುಧಃ |
ಪ್ರಪತ್ತಿಮಾಂಲ್ಲಬ್ಧಲಕ್ಷ್ಯೋ ರಥಯಾನವಿಶಾರದಃ |
ದೂರಪಾತೀ ತ್ವಸಂಭ್ರಾಂತೋ ಮಹಾವೀರ್ಯೋ ಮಹಾಸ್ತ್ರವಿತ್ ||
ಆ ಅರ್ಜುನನಾದರೋ ಅನಿಂದ್ಯ ಕರ್ಮಗಳನ್ನು ಮಾಡುವವನು, ಕ್ಷಿಪ್ರಹಸ್ತವುಳ್ಳವನು, ದೃಢಾಯುಧನಾದವನು, ಒಳ್ಳೆಯ ತಿಳುವಳಿಕೆಯುಳ್ಳವನು, ಯಾವಾಗಲೂ ಲಕ್ಷ್ಯವನ್ನು ಮುಟ್ಟುವವನು, ರಥಯಾನದಲ್ಲಿ ವಿಶಾರದನು, ಬಹುದೂರದವರೆಗೆ ಬಾಣವನ್ನು ಬಿಡುವವನು, ಮೋಹವಿಲ್ಲದವನು, ಮಹಾಪರಾಕ್ರಮಿಯು ಮತ್ತು ಮಹಾಸ್ತ್ರವಿತ್ತನು.
ಅದೀನಾತ್ಮಾ ನರವ್ಯಾಘ್ರಃ ಶ್ರೇಷ್ಠಃ ಸರ್ವಧನುಷ್ಮತಾಮ್ |
ಯೇನ ಪ್ರಾಚ್ಯಾಃ ಸಸೌವೀರಾ ದಾಕ್ಷಿಣಾತ್ಯಾಶ್ಚ ನಿರ್ಜಿತಾಃ ||34||
ಖ್ಯಾಪಿತಂ ಯೇನ ಶೂರೇಣ ತ್ರಿಷು ಲೋಕೇಷು ಪೌರುಷಮ್ |
ಯಸ್ಮಿಂಜಾತೇ ವಿಶೋಕಾಽಭೂತ್ ಕುಂತೀ ಪಾಂಡುಶ್ಚ ವೀರ್ಯವಾನ್ ||
ಪುರಂದರಸಮೋ ಜಿಷ್ಣುಃ ಕಥಂ ಕಾಲವಶಂ ಗತಃ |
ಕಥಂ ತಾವೃಷಭಸ್ಕಂಧೌ ಸಿಂಹವಿಕ್ರಾಂತಗಾಮಿನೌ |
ಮೃತ್ಯುಧರ್ಮಮನುಪ್ರಾಪ್ತೌ ಯಮಾವರಿನಿಬರ್ಹಣೌ ||36||
ಎಂದೂ ಮನಸ್ಸಿನ ದೈನ್ಯವನ್ನು ಹೊಂದದವನು, ಎಲ್ಲಾ ಧನುರ್ಧಾರಿಗಳಲ್ಲಿ ಶ್ರೇಷ್ಠನಾದವನು, ನರವ್ಯಾಘ್ರನಾದವನು, ಯಾವನಿಂದ ಪೂರ್ವದಿಕ್ಕಿನ ಸೌವೀರರಾಜರು, ದಕ್ಷಿಣ ದಿಕ್ಕಿನ ರಾಜರುಗಳು ಗೆಲ್ಲಲ್ಪಟ್ಟರೋ, ಯಾವ ಶೂರನ ಪೌರುಷವು ಮೂರುಲೋಕಗಳಲ್ಲಿಯೂ ಮೆರೆಯಿತೋ, ಯಾವನು ಜನಿಸಿದಾಗ ಕುಂತಿಯು ಮತ್ತು ವೀರಶಾಲಿಯಾದ ಪಾಂಡುವು ಶೋಕರಹಿತರಾದರೋ ಅಂತಹ ಇಂದ್ರನಿಗೆ ಸಮನಾದ ಅರ್ಜುನನು ಹೇಗೆ ಕಾಲವಶನಾದನು? ಋಷಭಸ್ಕಂಧರಾದ, ಸಿಂಹವಿಕ್ರಾಂತಗಾಮಿಗಳಾದ ಶತ್ರುಸೂದನರಾದ ನಕುಲಸಹದೇವರಾದರೂ ಹೇಗೆ ಮೃತ್ಯುವನ್ನು ಹೊಂದಿದರು?
ವೈಶಂಪಾಯನಃ
ತಸ್ಯ ವಿಕ್ರಂದಿತಂ ಶ್ರುತ್ವಾ ಉದಕಂ ಚ ಪ್ರಸಿಂಚತಃ |
ದೇಶಕಾಲವಿದಾಸಾದ್ಯ ವಿದುರಃ ಪ್ರತ್ಯಭಾಷತ ||37||
ಉದಕಕ್ರಿಯೆಯನ್ನು ಮಾಡುವ ಭೀಷ್ಮರ ಆಕ್ರಂದನವನ್ನು ಕೇಳಿ ದೇಶಕಾಲಗಳನ್ನು ತಿಳಿದ ವಿದುರನು ಅವರನ್ನು ಸಮೀಪಿಸಿ ಮಾತನಾಡಿದನು.
ಮಾ ಶೋಚೀಸ್ತ್ವಂ ನರವ್ಯಾಘ್ರ ಜಹಿ ಶೋಕಂ ಮಹಾವ್ರತ |
ನ ತೇಷಾಂ ವಿದ್ಯತೇ ಪಾಪಂ ಪ್ರಾಪ್ತಕಾಲಂ ಕೃತಂ ಮಯಾ |
ಯಚ್ಚ ತೇಭ್ಯಸ್ತ್ವಮುದಕಂ ವಿಪ್ರಷಿಂಚಸಿ ಭಾರತ ||38||
ಸೋಽಬ್ರುವೀತ್ ಕಿಂಚಿದುತ್ಸಾರ್ಯ ಕೌರವಣಾಮಶೃಣ್ವತಾಮ್ |
ಕ್ಷತ್ತಾರಮುಪಸಂಗೃಹ್ಯ ಬಾಷ್ಪೋತ್ಪೀಡಕಲಸ್ವರಃ ||39||
ಎಲೈ ಭಾರತನೇ, ಯಾವ ಪಾಂಡವರಿಗೆ ನೀನು ಉದಕಕ್ರಿಯೆಯನ್ನು ಮಾಡುತ್ತಿರುವೆಯೋ ಅಂತಹ ಪಾಂಡವರ ವಿಷಯದಲ್ಲಿ ಶೋಕವನ್ನು ಪಡಬೇಡ. ಎಲೈ ಮಹಾವ್ರತನಾದ ನರಶ್ರೇಷ್ಠನೇ, ಶೋಕವನ್ನು ತ್ಯಜಿಸು. ಆ ಪಾಂಡವರಿಗೆ ಎಂದೂ ಅಶುಭವುಂಟಾಗುವುದಿಲ್ಲ. ನಾನು ಅವರಿಗೆ ಯೋಗ್ಯವಾದ ಸಮಯದಲ್ಲಿ ಮಾಡಬೇಕಾದ ಕಾರ್ಯವನ್ನು ಮಾಡಿದ್ದೇನೆ.
ಆಗ ಭೀಷ್ಮರು ಸ್ವಲ್ಪ ಪಕ್ಕಕ್ಕೆ ಸರಿದು ವಿದುರನನ್ನು ಸಮೀಪಿಸಿ ಬಾಷ್ಪ ಗದ್ಗದವಾದ ಸ್ವರದಿಂದ ಕೌರವರಿಗೆ ಕೇಳಿಸದಂತೆ ಮಾತನಾಡಿದರು.
ಭೀಷ್ಮಃ
ಕಥಂ ತೇ ತಾತ ಜೀವಂತಿ ಪಾಂಡೋಃ ಪುತ್ರಾ ಮಹಾರಥಾಃ |
ಕಥಮಸ್ಮತ್ಕೃತೇ ಪಕ್ಷಃ ಪಾಂಡೋರ್ನ ವಿನಿಪಾತಿತಃ ||40||
ಪ್ರಿಯನೇ, ಪಾಂಡುಪುತ್ರರಾದ ಮಹಾರಥರು ಹೇಗೆ ಜೀವಿಸಿದ್ದಾರೆ? ನಮ್ಮ ಸಲುವಾಗಿ ಹೇಗೆ ಪಾಂಡುವಿನ ಪಕ್ಷವು ವಿನಾಶವನ್ನು ಹೊಂದಿಲ್ಲ?
ಕಥಂ ತ್ವತ್ಪ್ರಮುಖಾಃ ಸರ್ವೇ ಪ್ರಮುಕ್ತಾ ಮಹತೋ ಭಯಾತ್ |
ಜನನೀ ಗರುಡೇನೇವ ಕುಮಾರಾಸ್ತೇ ಸಮುದ್ಧೃತಾಃ ||41||
ಹೇಗೆ ನಿನ್ನ ವಶವರ್ತಿಗಳಾದ ಅವರು ಮಹಾಭಯದಿಂದ ಬಿಡುಗಡೆಯನ್ನು ಹೊಂದಿದರು? ಗರುಡನು ತಾಯಿಯನ್ನು ರಕ್ಷಿಸಿದಂತೆ ಹೇಗೆ ಆ ಕುಮಾರರು ರಕ್ಷಿಸಲ್ಪಟ್ಟರು?
ವೈಶಂಪಾಯನಃ
ಏವಮುಕ್ತಸ್ತು ಕೌರವ್ಯ ಕೌರವಾಣಾಮಶೃಣ್ವತಾಮ್ |
ಆಚಚಕ್ಷೇ ಸ ಧರ್ಮಾತ್ಮಾ ಭೀಷ್ಮಾಯಾದ್ಭುತಕರ್ಮಣೇ ||42||
ಎಲೈ ಕೌರವ್ಯನೇ, ಭೀಷ್ಮರು ಹೀಗೆ ಹೇಳಿದಾಗ ಧರ್ಮಾತ್ಮನಾದ ವಿದುರನು ಅದ್ಭುತಕರ್ಮವುಳ್ಳ ಭೀಷ್ಮರನ್ನು ಕುರಿತು ಕೌರವರಿಗೆ ಕೇಳಿಸದಂತೆ ಹೀಗೆ ಮಾತನಾಡಿದನು.
ಧೃತರಾಷ್ಟ್ರಸ್ಯ ಶಕುನೇ ರಾಜ್ಞೋ ದುರ್ಯೋಧನಸ್ಯ ಚ |
ವಿನಾಶೇ ಪಾಂಡುಪುತ್ರಾಣಾಂ ಕೃತೋ ಮತಿವಿನಿಶ್ಚಯಃ ||43||
ಧೃತರಾಷ್ಟ್ರನಿಗೂ, ಶಕುನಿಗೂ, ರಾಜನಾದ ದುರ್ಯೋಧನನಿಗೂ ಪಾಂಡವರನ್ನು ವಿನಾಶಮಾಡಬೇಕೆಂಬ ದೃಢನಿಶ್ಚಯವಿದ್ದಿತು.

ತಚ್ಚಾಹಮಪಿ ಚ ಜ್ಞಾತ್ವಾ ತಸ್ಯ ಪಾಪಸ್ಯ ನಿಶ್ಚಯಮ್ |
ತಜ್ಜಿಘಾಂಸುರಹಂ ಚಾಪಿ ತೇಷಾಮನುಮತೇ ಸ್ಥಿತಃ ||44||
ಅವರ ಆ ಪಾಪನಿಶ್ಚಯವನ್ನು ನಾನೂ ತಿಳಿದು ಅದಕ್ಕೆ ಪ್ರತೀಕಾರವನ್ನು ಮಾಡಲು ಬಯಸಿ ನಾನೂ ಅವರು ಸಮ್ಮತಿಸುವಂತೆ ನಡೆದುಕೊಂಡೆನು.
ತತೋ ಜತುಗೃಹಂ ಗತ್ವಾ ದಹನೇಽಸ್ಮಿನ್ ನಿಯೋಜಿತೇ |
ಪೃಥಾಯಾಶ್ಚ ಸಪುತ್ರಾಯಾ ಧಾರ್ತರಾಷ್ಟ್ರಸ್ಯ ಶಾಸನಾತ್ ||45||
ತತಃ ಖನಕಮಾಹೂಯ ಸುರಂಗಂ ವೈ ಬಿಲಂ ತದಾ |
ಸಗುಹಾಂ ಕಾರಯಿತ್ವಾ ತೇ ಕುಂತ್ಯಾ ಪಾಂಡುಸುತಾಸ್ತದಾ |
ನಿಷ್ಕ್ರಾಮಿತಾ ಮಯಾ ಪೂರ್ವಂ ಮಾ ಸ್ಮ ಶೋಕೇ ಮನಃ ಕೃಥಾಃ ||46||
ಅನಂತರ ದುರ್ಯೋಧನನ ಆದೇಶದಂತೆ ಕುಂತಿಯನ್ನು ಮತ್ತು ಪಾಂಡವರನ್ನೂ ಜತುಗೃಹಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವರ ದಹನವು ನಿಯೋಜಿಸಲ್ಪಡುತ್ತಿರಲು, ನಾನು ನನಗೆ ಆಪ್ತನಾದ ಖನಕನನ್ನು ಕರೆದು ಅಲ್ಲಿ ಕುಂತಿ ಮತ್ತು ಪಾಂಡುಸುತರ ಸಲುವಾಗಿ ಒಂದು ಗುಹೆಯಿಂದ ಕೂಡಿದ ಸುರಂಗ ಬಿಲವನ್ನು ಮಾಡಿಸಿ ಅವರನ್ನು ಅಲ್ಲಿಂದ ಮೊದಲೇ ದಾಟಿಸಿದ್ದೇನೆ. ಮನಸ್ಸಿನಲ್ಲಿ ಶೋಕವನ್ನು ಮಾಡಬೇಡ.
ತತಸ್ತು ನಾವಮಾರೋಪ್ಯ ಸಹಪುತ್ರಾಂ ಪೃಥಾಮಹಮ್ | ದತತತ್ವಾಭಯಂ ಸಪುತ್ರಾಯೈ ಕುಂತ್ಯೈ ಗೃಹಮದಾಹಯಮ್ |
ತಸ್ಮಾತ್ ತೇ ಮಾ ಸ್ಮ ಭೂದ್ ದುಃಖಂ ಮುಕ್ತಾಃ ಪಾಪಾತ್ ತು ಪಾಂಡವಾಃ ||47||
ಅನಂತರ ಕುಂತಿಗೂ ಮತ್ತು ಅವಳ ಮಕ್ಕಳಿಗೂ ಅಭಯವನ್ನು ಕೊಟ್ಟು, ನಾವೆಯನ್ನು ಏರಿಸಿ, ಜತುಗೃಹವನ್ನು ನಾನೇ ಸುಡಿಸಿದ್ದೇನೆ. ಆದ್ದರಿಂದ ನೀನು ದುಃಖಪಡುವುದು ಬೇಡ. ಪಾಂಡವರು ಅನಿಷ್ಟದಿಂದ ಪಾರಾಗಿದ್ದಾರೆ.
ನಿರ್ಗತಾಃ ಪಾಂಡವಾ ರಾಜನ್ ಮಾತ್ರಾ ಸಹ ಪರಂತಪಾಃ |
ಅಗ್ನಿದಾಹಾನ್ಮಹಾಘೋರಾನ್ಮಯಾ ತಸ್ಮಾದುಪಾಯತಃ ||48||
ರಾಜನ್, ಪರಂತಪರಾದ ಪಾಂಡವರನ್ನು ತಾಯಿಯ ಜೊತೆಯಲ್ಲಿ ಆ ಮಹಾಘೋರವಾದ ಅಗ್ನಿದಾಹದಿಂದ ನಾನು ಉಪಾಯವನ್ನು ಆಶ್ರಯಿಸಿ ದಾಟಿಸಿದ್ದೇನೆ.
ಮಾ ಶೋಕಂ ಕಾರ್ಷೀ ರಾಜಂಸ್ತ್ವಂ ಜೀವಂತ್ಯೇವ ಚ ಪಾಂಡವಾಃ |
ಪ್ರಚ್ಛನ್ನಾ ವಿಚರಿಷ್ಯಂತಿ ಯಾವತ್ಕಾಲಸ್ಯ ಪರ್ಯಯಃ ||49||
ರಾಜನ್, ಶೋಕವನ್ನು ಮಾಡಬೇಡ, ಪಾಂಡವರು ಬದುಕಿಯೇ ಇದ್ದಾರೆ. ಯೋಗ್ಯವಾದ ಕಾಲವು ಬರುವವರೆಗೂ ಅವರು ಪ್ರಚ್ಛನ್ನರಾಗಿ ಸಂಚರಿಸುವರು.
ತಸ್ಮಿನ್ ಯುಧಿಷ್ಠಿರಂ ಕಾಲೇ ದ್ರಕ್ಷ್ಯಂತಿ ಭುವಿ ಭೂಮಿಪಾಃ |
ವಿಮಲಂ ಕೃಷ್ಣಪಕ್ಷಾಂತೇ ಜಗಚ್ಚಂದ್ರಮಿವೋದಿತಮ್ ||50||
ಯೋಗ್ಯವಾದ ಸಮಯವು ಬಂದಾಗ, ಕೃಷ್ಣಪಕ್ಷವು ಕಳೆದ ಮೇಲೆ ಜನರು ಚಂದ್ರನನ್ನು ನೋಡುವಂತೆ ಭೂಮಿಯಲ್ಲಿ ಎಲ್ಲಾ ಜನರೂ ಯುಧಿಷ್ಠಿರನನ್ನು ನೋಡುವರು.
ನ ತಸ್ಯ ನಾಶಂ ಪಶ್ಯಾಮಿ ಯಸ್ಯ ಭ್ರಾತಾ ಧನಂಜಯಃ |
ಭೀಮಸೇನಶ್ಚ ದುರ್ಧರ್ಷೌ ಮಾದ್ರೀಪುತ್ರೌ ಚ ಭ್ರಾತರೌ ||51||
ಯಾರಿಗೆ ದುರ್ಧರ್ಷರಾದ ಭೀಮಸೇನಾರ್ಜುನರು ಮತ್ತು ನಕುಲಸಹದೇವರು ತಮ್ಮಂದಿರೋ ಅವರಿಗೆ ನಾನು ಎಂದೂ ನಾಶವನ್ನು ಕಾಣಲಾರೆ.
ವೈಶಂಪಾಯನಃ
ತತಃ ಸಂಹೃಷ್ಟಸರ್ವಾಂಗೋ ಭೀಷ್ಮೋ ವಿದುರಮಬ್ರವೀತ್ |
ದಿಷ್ಟ್ಯಾ ದಿಷ್ಟ್ಯೇತಿ ಸಂಹೃಷ್ಟಃ ಪೂಜಯಾನೋ ಮಹಾಮತಿಮ್ ||52||
ಆಗ ಸರ್ವಾವಯವಗಳಲ್ಲಿ ಸಂತೋಷದಿಂದ ತುಂಬಿದವರಾಗಿ ಭೀಷ್ಮರು ಮಹಾಮತಿಯಾದ ವಿದುರನನ್ನು ಪೂಜಿಸುತ್ತಾ ದೇವರ ದಯೆ ದೇವರ ದಯೆಯೆಂದು ಸಂತೋಷದಿಂದ ಹೇಳಿದರು.
ಭೀಷ್ಮಃ
ಯುಕ್ತಂ ಚೈವಾನುರೂಪಂ ಚ ಕೃತಂ ತಾತ ಶುಭಂ ತ್ವಯಾ |
ವಯಂ ವಿಮೋಕ್ಷಿತಾ ದುಃಖಾತ್ ಪಾಂಡುಪಕ್ಷೋ ನ ನಾಶಿತಃ |
ತ್ವಂ ಗತಿಸ್ತ್ವಂ ಪಿತಾ ಮಾತಾ ಭ್ರಾತಾ ಮೇ ತ್ವಂ ಗುರುರ್ಹಿತಃ ||53||
ಪ್ರೀತಿಪಾತ್ರನೇ, ನೀನು ಅವಶ್ಯಕವೂ, ಯೋಗ್ಯವೂ ಆದ ಶುಭಕಾರ್ಯವನ್ನು ಮಾಡಿ ನಮ್ಮನ್ನು ದುಃಖದಿಂದ ದಾಟಿಸಿದ್ದೀಯೆ. ಪಾಂಡುವಿನ ಪಕ್ಷವು ವಿನಾಶವನ್ನು ಹೊಂದಿಲ್ಲ. ನೀನೇ ನನಗೆ ಗತಿ. ನೀನೇ ನನಗೆ ತಂದೆ, ತಾಯಿ, ಸಹೋದರ, ಗುರು, ಪ್ರಿಯ ಎಲ್ಲವೂ ಸಹ.
ವೈಶಂಪಾಯನಃ
ಏವಮುಕತತ್ವ ನಮಸ್ಕೃತ್ವಾ ದೇವವದ್ ಹೃದಯಂ ಗತಃ |
ಪ್ರವಿವೇಶ ಪ್ರಹೃಷ್ಟಃ ಸ ಪುರಂ ಜನಪದಾಕುಲಮ್ |
ಕುರುಭಿಃ ಸಹಿತೋ ರಾಜನ್ ನಾಗರೈಶ್ಚ ಪಿತಾಮಹಃ ||54||
ಎಲೈ ರಾಜನೇ, ಹೀಗೆ ಮಾತನಾಡಿ, ದೇವರಿಗೆ ನಮಸ್ಕಾರ ಮಾಡುವಂತೆ ವಿದುರನಿಗೆ ನಮಸ್ಕಾರವನ್ನು ಮಾಡಿ, ಮನಸ್ಸಿನಲ್ಲಿ

ಸಂತೋಷಪಟ್ಟು, ಕುರುಗಳ ಮತ್ತು ನಗರವಾಸಿಗಳ ಜೊತೆಯಲ್ಲಿ ಪಿತಾಮಹರಾದ ಭೀಷ್ಮರು ಜನನಿಬಿಡವಾದ ಹಸ್ತಿನಪುರವನ್ನು ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಐವತ್ತನೆಯ ಅಧ್ಯಾಯ ಮುಗಿಯಿತು.
*****
ನೂರಐವತ್ತೊಂದನೆಯ ಅಧ್ಯಾಯ
(ದಾಹವನ್ನು ತಿಳಿದು ದುರ್ಯೋಧನಾದಿಗಳ ಹರ್ಷ, ಭೀಷ್ಮ ವಿದುರರಿಗೆ ಸತ್ಯವನ್ನು ತಿಳಿದು ಹರ್ಷ, ಕಾಡಿನಲ್ಲಿ ಭೀಮಸೇನನ ಧಾವನ)
ವೈಶಂಪಾಯನಃ
ಅಥಾಂಬಿಕೇಯಃ ಸಾಮಾತ್ಯಃ ಸಕರ್ಣಶ್ಚ ಸಸೌಬಲಃ |
ಸಾತ್ಮಜಃ ಪಾರ್ಥನಾಶಸ್ಯ ಸ್ಮರಂಸ್ತಥ್ಯಂ ಜಹರ್ಷ ಚ ॥1॥
ಆಗ ಅಂಬಿಕೆಯ ಪುತ್ರನಾದ ಧೃತರಾಷ್ಟ್ರನು ಅಮಾತ್ಯರಿಂದ, ಕರ್ಣನಿಂದ, ಶಕುನಿಯಿಂದ ಮತ್ತು ತನ್ನ ಪುತ್ರರಿಂದ ಸಹಿತನಾಗಿ ಪಾಂಡವರ ನಾಶವನ್ನು ಸತ್ಯವೆಂದು ತಿಳಿದು (ಮನಸ್ಸಿನಲ್ಲಿ) ಸಂತೋಷಪಟ್ಟನು.
ಭೀಷ್ಮಸ್ತು ರಾಜನ್ ದುರ್ಧರ್ಷೋ ವಿದುರಶ್ಚ ಮಹಾಮತಿಃ |
ಜಹೃಷಾತೇ ಸ್ಮರಂತೌ ತೌ ಜಾತುಷಾಗ್ನೇರ್ವಿಮೋಚನಮ್ ॥2॥
ದುರ್ಧರ್ಷರಾದ ಭೀಷ್ಮರೂ, ಮಹಾಮತಿಯಾದ ವಿದುರನೂ ಸಹ ಪಾಂಡವರು ಜತುಗೃಹದಿಂದ ಬಿಡುಗಡೆಯನ್ನು ಹೊಂದಿದುದನ್ನು ತಿಳಿದು ಸಂತೋಷಪಟ್ಟರು.
ಸತ್ಯಶೀಲಗುಣಾಚಾರೈ ರಾಗೈರ್ಜನಪದೋದ್ಭವೈಃ |
ದ್ರೋಣಾದಯಶ್ಚ ಧರ್ಮೈಶ್ಚ ತೇಷಾಂ ತನ್ಮೋಚಿತಂ ವಿದುಃ ॥3॥
ಪಾಂಡವರ ಸತ್ಯಶೀಲಗುಣಾಚಾರಗಳ ನಿಮಿತ್ತದಿಂದಲೂ, ಪೌರಜಾನಪದರ ಅನುರಾಗದ ನಿಮಿತ್ತದಿಂದಲೂ, ಪಾಂಡವರು ಅನುಷ್ಠಾನ ಮಾಡುವ ಧರ್ಮದ ನಿಮಿತ್ತದಿಂದಲೂ, ದ್ರೋಣಾದಿಗಳು ಅವರನ್ನು ಜತುಗೃಹದಿಂದ ಮುಕ್ತರಾಗಿದ್ದಾರೆ ಎಂದೇ ತಿಳಿದರು.
ಶೌರ್ಯಲಾವಣ್ಯಮಾಹಾತ್ಮ್ಯರೂಪೈಃ ಪ್ರಾಣಬಲೈರಪಿ |
ಸ್ವಸ್ಥಾನ್ ಪಾರ್ಥಾನಮನ್ಯಂತ ಪೌರಜಾನಪದಾಸ್ತದಾ ॥4॥
ಪೌರಜಾನಪದರು ಪಾಂಡವರ ಶೌರ್ಯವನ್ನೂ, ಲಾವಣ್ಯವನ್ನೂ, ಮಹಾತ್ಮೆಯನ್ನೂ, ರೂಪವನ್ನೂ, ಪ್ರಾಣಬಲವನ್ನೂ ಗಮನಿಸಿ ಪಾಂಡವರು ಕ್ಷೇಮದಿಂದ ಇದ್ದಾರೆಂದೇ ಭಾವಿಸಿದರು.
ಅನ್ಯೇ ಜನಾಃ ಪ್ರಾಕೃತಾಶ್ಚ ಸ್ತ್ರಿಯಶ್ಚ ಬಹುಧಾ ತಥಾ |
ಶಂಕಮಾನಾ ವದಂತಿ ಸ್ಮ ದಗ್ಧಾ ಜೀವಂತಿ ವಾ ನವಾ ॥5॥
ಉಳಿದ ಪ್ರಾಕೃತರಾದ ಜನರು ಮತ್ತು ಸ್ತ್ರೀಯರು ಅನೇಕ ಸಂಶಯಗಳಿಗೆ ಒಳಗಾಗಿ ಪಾಂಡವರು ಬದುಕಿದ್ದಾರೆಯೋ ಅಥವಾ ಇಲ್ಲವೋ ಎಂದು ಶಂಕಿಸಿದರು.
ಪಾಂಡವಾಶ್ಚ ವಿನಿರ್ಗಮ್ಯ ನಗರಾದ್ವಾರಣಾವತಾತ್ |
ನದೀಂ ಗಂಗಾಮನುಪ್ರಾಪ್ತಾ ಸಹ ಮಾತ್ರಾ ಪರಂತಪಾಃ ॥6॥
ಪರಂತಪರಾದ ಪಾಂಡವರಾದರೋ ವಾರಣಾವತನಗರದಿಂದ ಹೊರಬಂದು ತಾಯಿಯ ಜೊತೆಯಲ್ಲಿ ಗಂಗಾನದಿಗೆ ಬಂದರು.
ದಾಶೇನಾದ್ಭುತವೇಗೇನ ನದೀಸ್ರೋತೋಬಲೇನ ಚ |
ವಾಯುನಾ ಚಾನುಕೂಲೇನ ಶೀಘ್ರಂ ಪ್ರಾಪ್ತಾಸ್ತತಸ್ತು ತೇ |
ಗುಲ್ಮಂ ನಳವನಂ ನಾಮ ನಾನಾದ್ರುಮವನಾನಿ ಚ ॥7॥
ಅವರು ಒಳ್ಳೆಯ ವೇಗವುಳ್ಳ ದಾಶನ ಸಾಮರ್ಥ್ಯದಿಂದಲೂ, ನದಿಯ ಪ್ರವಾಹದ ಬಲದಿಂದಲೂ, ಅನುಕೂಲವಾದ ವಾಯುವಿನಿಂದಲೂ ಉಪಕೃತರಾಗಿ ನಳವನವೆಂಬ ಅನೇಕ ವೃಕ್ಷಗಳಿರುವ ಕಾಡನ್ನು ದಾಟಿದರು.
ಅಸಕೃಚ್ಚಾಪಿ ಸಂತೀರ್ಯ ಪರಂಪಾರಂ ಭುಜಪ್ಲವಾಃ |
ಅವತೀರ್ಣಾಸ್ತತೋ ನಾವಮುತ್ಸೃಜ್ಯ ಭರತರ್ಷಭಾಃ |
ಜವೇನ ಪ್ರಯಯೂ ರಾಜನ್ ದಕ್ಷಿಣಾಂ ದಿಶಮಾಸ್ಥಿತಾಃ ॥8॥
ವಿಜ್ಞಾಯ ನಿಶಿ ಪಂಥಾನಂ ನಕ್ಷತ್ರೈರ್ದಕ್ಷಿಣಾಮುಖಾಃ |
ಯತಮಾನಾ ವನಂ ರಾಜನ್ ಗಹನಂ ಪ್ರತಿಪೇದಿರೇ ॥9॥
ಎಲೈ ರಾಜನೇ, ಭುಜಗಳೆಂಬ ನಾವೆಗಳಿಂದ ಅನೇಕ ಬಾರಿ ಅಪಾಯವೆಂಬ ಜಲವನ್ನು ದಾಟಿದ್ದ ಆ ಭರತರ್ಷಭರು ಗಂಗೆಯನ್ನು ದಾಟಿ ಆಚೆಯ ದಡವನ್ನು ತಲುಪಿ ನಾವೆಯನ್ನು ಬಿಟ್ಟು ಕೆಳಗೆ ಇಳಿದರು. ಅವರು ನಕ್ಷತ್ರದ ಬೆಳಕಿನಿಂದ ಮಾರ್ಗವನ್ನು ತಿಳಿದು ದಕ್ಷಿಣಾಭಿಮುಖವಾಗಿ ವೇಗದಿಂದ ಹೊರಟವರಾಗಿ ತಮ್ಮ ಪ್ರಯತ್ನದಿಂದ ಒಂದು ದಟ್ಟವಾದ ಕಾಡನ್ನು ಸೇರಿದರು.
ತತಃ ಶ್ರಾಂತಾಃ ಪಿಪಾಸಾರ್ತಾ ನಿದ್ರಾಂಧಾಃ ಪಾಂಡುನಂದನಾಃ |
ಪುನರೂಚುರ್ಮಹಾವೀರ್ಯಂ ಭೀಮಸೇನಮಿದಂ ವಚಃ ॥10॥

ಇತಃ ಕಷ್ಟತರಂ ಕಿನ್ನು ಯದ್ ವಯಂ ಗಹನೇ ವನೇ |
ದಿಶಶ್ಚ ನ ಪ್ರಜಾನೀಮೋ ಗಂತುಂ ಚೈವ ನರರ್ಷಭಾಃ ॥11॥
ಆಗ ಬಾಯಾರಿಕೆಯಿಂದ ದಣಿದ ನಿದ್ರಾಂಧರಾದ ಉಳಿದ ಪಾಂಡವರು ಮಹಾಪರಾಕ್ರಮಿಯಾದ ಭೀಮಸೇನನನ್ನು ಕುರಿತು ಪುನಃ ಮಾತನಾಡಿದರು. ಎಲೈ ನರರ್ಷಭನೇ, ಈ ದಟ್ಟವಾದ ಕಾಡಿನಲ್ಲಿ ದಿಕ್ಕುಗಳನ್ನು ತಿಳಿಯದೆ ನಡೆಯಲು ಶಕ್ತಿಯೂ ಇಲ್ಲದಿರುವ ನಮಗೆ ಇದಕ್ಕಿಂತ ಕಷ್ಟಕರವಾದದ್ದು ಇನ್ನೇನಿದೆ?
ತಂ ಚ ಪಾಪಂ ನ ಜಾನೀಮೋ ಯದ್ವಾದಗ್ಧಃ ಪುರೋಚನಃ |
ಕಥಂ ನು ವಿಪ್ರಮುಚ್ಯೇಮ ಭಯಾದಸ್ಮಾದಲಕ್ಷಿತಾಃ ॥12॥
ಆ ಪಾಪಿಯಾದ ಪುರೋಚನನು ದಗ್ಧನಾಗಿದ್ದಾನೋ ಇಲ್ಲವೋ ಎಂಬುದೂ ನಮಗೆ ತಿಳಿದಿಲ್ಲ. ಯಾರಿಗೂ ತಿಳಿಯದಂತೆ ನಾವು ಈ ಭಯದಿಂದ ಹೇಗೆ ಪಾರಾಗುತ್ತೇವೆ.
ಪುನರಸ್ಮಾನುಪಾದಾಯ ತಥೈವ ವ್ರಜ ಭಾರತ |
ತ್ವಂ ಹಿ ನೋ ಬಲವಾನೇಕೋ ಯಥಾ ಸತತಗಸ್ತಥಾ ॥13॥
ಭಾರತನಾದ ಭೀಮಸೇನನೇ, ನಮ್ಮನ್ನು ಪುನಃ ಮೊದಲಿನಂತೆಯೇ ಎತ್ತಿಕೊಂಡು ಹೊರಡು. ನಮ್ಮೆಲ್ಲರಲ್ಲಿ ನೀನೊಬ್ಬನೇ ವಾಯುದೇವರಂತೆ ಬಲಿಷ್ಠನಾದವನು.
ಇತ್ಯುಕ್ತೋ ಧರ್ಮರಾಜೇನ ಭೀಮಸೇನೋ ಮಹಾಬಲಃ |
ಆದಾಯ ಕುಂತೀಂ ಭ್ರಾತೄಂಶ್ಚ ಜಗಾಮ ಸುಮಹಾಬಲಃ ॥14॥
ಹೀಗೆ ಧರ್ಮರಾಜನ ಮಾತುಗಳನ್ನು ಕೇಳಿದ ಶ್ರೇಷ್ಠವಾದ ಮಹಾಬಲವುಳ್ಳ ಭೀಮಸೇನನು ಕುಂತಿಯನ್ನೂ ಅಣ್ಣತಮ್ಮಂದಿರನ್ನೂ ಎತ್ತಿಕೊಂಡು ಪುನಃ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ಏಕಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹವಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಐವತ್ತೊಂದನೆಯ ಅಧ್ಯಾಯ ಮುಗಿಯಿತು.
*****
ನೂರಐವತ್ತೆರಡನೆಯ ಅಧ್ಯಾಯ
(ತೃಷಾರ್ತರಾದ ತಾಯಿಯನ್ನೂ ಸಹೋದರರನ್ನೂ ಒಂದೆಡೆ ಕೂಡಿಸಿ ಜಲವನ್ನು ತರಲು ಭೀಮನ ಗಮನ, ಭೀಮನು ಜಲವನ್ನು ತರುವ ವೇಳೆಗೆ ಅವರ ನಿದ್ರೆ ಮತ್ತು ಭೀಮನ ವಿಲಾಪ )
ವೈಶಂಪಾಯನಃ
ತೇನ ವಿಕ್ರಮತಾ ತೂರ್ಣಮೂರುವೇಗಸಮೀರಿತಃ |
ಪ್ರವವಾವನಿಲೋ ರಾಜನ್ ಶುಚಿಃ ಶುಕ್ರಾಗಮೇ ಯಥಾ ॥1॥
ವೇಗವಾಗಿ ನಡೆಯುವ ಭೀಮನ ತೊಡೆಗಳ ವೇಗದಿಂದ ಉಂಟಾದ ಅನಿಲವು ಶುಚಿಶುಕ್ರಾಗಮದಲ್ಲಿ ಉಂಟಾಗುವ ಗಾಳಿಯಂತೆ ಪ್ರಬಲವಾಗಿ ಬೀಸುತ್ತಿತ್ತು.
ಸ ಮೃದ್ನನ್ ಪುಷ್ಪಿತಾಂಶ್ಚೈವ ಫಲಿನಶ್ಚ ವನಸ್ಪತೀನ್ |
ಆರುಜನ್ ದಾರುಗುಲ್ಮಾಂಶ್ಚ ಪಥಸ್ತಸ್ಯ ಸಮೀಪಗಾನ್ ॥2॥
ತಥಾ ವೃಕ್ಷಾನ್ ಭಂಜಮಾನೋ ಜಗಾಮಾಮಿತವಿಕ್ರಮಃ |
ತಸ್ಯ ವೇಗೇನ ಪಂಚಾನಾಂ ಮೂರ್ಚ್ಛೇವ ಸಮಜಾಯತ ॥3॥
ಭೀಮನು ಪುಷ್ಪಭರಿತವಾದ ಮತ್ತು ಫಲಭರಿತವಾದ ವೃಕ್ಷಗಳನ್ನು ಮುರಿಯುತ್ತಾ, ಅವನ ಮಾರ್ಗದ ಸಮೀಪದಲ್ಲಿರುವ ಗಿಡಗಳು ಮತ್ತು ಪೊದೆಗಳನ್ನು ಕಿತ್ತುಹಾಕುತ್ತಾ ದೊಡ್ಡಮರಗಳನ್ನು ಮುರಿಯುತ್ತಾ, ಅಮಿತವಿಕ್ರಮನಾಗಿ ಮುಂದೆ ಸಾಗಿದನು. ಅವನ ವೇಗದಿಂದ ಐದು ಜನರಿಗೂ ಮೂರ್ಛೆ ಉಂಟಾದಂತೆ ಆಯಿತು.
ಅಸಕೃಚ್ಚಾಪಿ ಸಂತೀರ್ಯ ದೂರಪಾರಂ ಭುಜಪ್ಲವೈಃ |
ಪಥಾ ಪ್ರಚ್ಛನ್ನಮಾಸಾದ್ಯ ಧಾರ್ತರಾಷ್ಟ್ರಭಯಾತ್ ತದಾ ॥4॥
ದೂರದಲ್ಲಿ ದಡವಿರುವ ಮಧ್ಯೆ ಮಧ್ಯೆ ಜಲವಿರುವ ಅನೇಕ ಪ್ರದೇಶಗಳನ್ನು ಭೀಮಸೇನನ ಭುಜಗಳೆಂಬ ನಾವೆಗಳಿಂದ ಅನೇಕ ಬಾರಿ ದಾಟಿ ದುರ್ಯೋಧನನ ಭಯದಿಂದ ಪ್ರಚ್ಛನ್ನರಾಗಿ ಅವರು ಮಾರ್ಗದಲ್ಲಿ ಸಾಗಿದರು.
ಕೃಚ್ಛ್ರೇಣ ಮಾತರಂ ಹ್ಯೇಕಾಂ ಸುಕುಮಾರೀಂ ಯಶಸ್ವಿನೀಮ್ |
ಅವಹತ್ ತತ್ರ ಪೃಷ್ಠೇನ ರೋಧಸ್ಸು ವಿಷಮೇಷು ಚ ॥5॥
ಸುಕುಮಾರಿಯೂ, ಯಶಸ್ವಿನಿಯೂ ಆದ, ಕಷ್ಟದಿಂದ ಬಳಲಿದ ತನ್ನ ತಾಯಿಯೊಬ್ಬಳನ್ನು ನದಿಯ ತೀರದಲ್ಲಿ ಮತ್ತು ವಿಷಮ ಪ್ರದೇಶದಲ್ಲಿ ಭೀಮಸೇನನು ಬೆನ್ನಿನ ಮೇಲೆ ಕೂಡಿಸಿಕೊಂಡು ಹೋದನು.
ಆಗಮ್ಯ ಚ ವನೋದ್ದೇಶಮಲ್ಪಮೂಲಫಲೋದಕಮ್ |
ಕ್ರೂರಪಕ್ಷಿಮೃಗಂ ಘೋರಂ ಸಾಯಂ ಸಮುಪಚಕ್ರಮುಃ ॥6॥
ಅವರು ಹೀಗೆ ನಡೆದು ಸಾಯಂಕಾಲದ ವೇಳೆಗೆ ಅಲ್ಪಮೂಲಫಲಗಳೂ, ಉದಕವೂ ಇರುವ, ಕ್ರೂರವಾದ ಮೃಗಪಕ್ಷಿಗಳಿಂದ ಸೇವಿತವಾದ ಘೋರವಾದ ಒಂದು ಅರಣ್ಯಪ್ರದೇಶಕ್ಕೆ ಬಂದರು.

ಘೋರಾ ಸಮಭವತ್ ಸಂಧ್ಯಾ ದಾರುಣಾ ಮೃಗಪಕ್ಷಿಣಃ |
ಅಪ್ರಕಾಶಾ ದಿಶಃ ಸರ್ವಾಃ ವಾತೈರಾಸನ್ನನಾರ್ತವೈಃ ॥7॥
ಘೋರವಾದ ಸಂಧ್ಯಾಕಾಲವಾಯಿತು, ಧಾರುಣವಾದ ಮೃಗಪಕ್ಷಿಗಳು ಸಂಚರಿಸತೊಡಗಿದವು. ದಿಕ್ಕುಗಳೆಲ್ಲವೂ ಕತ್ತಲೆಯಿಂದ ಕವಿದವು. ಅಕಾಲಿಕವಾದ ವಾಯುವು ಬಲವಾಗಿ ಬೀಸಿತು.
ತೇ ಶ್ರಮೇಣ ಚ ಕೌಂತೇಯಾಸ್ತೃಷಯಾ ಚ ಪ್ರಪೀಡಿತಾಃ |
ನಾಶಕ್ನುವಂಸ್ತತೋ ಗಂತುಂ ನಿದ್ರಯಾ ಚ ಪ್ರವೃದ್ಧಯಾ ॥8॥
ಪಾಂಡವರೆಲ್ಲರೂ ಶ್ರಮದಿಂದ ಕಲುಷಿತರಾಗಿ, ತೃಷೆಯಿಂದ ಬಳಲಿದವರಾಗಿ ನಿದ್ರೆಯಾವರಿಸುತ್ತಿರಲು ಮುಂದೆ ಹೋಗಲು ಸಾಧ್ಯವಾಗದೆ ಅಲ್ಲಿಯೇ ಉಳಿದರು.
ಶೀರ್ಣಪರ್ಣಫಲೈರ್ವೃಕ್ಷೈರ್ಬಹುಗುಲ್ಮಕ್ಷಪದ್ರುಮೈಃ |
ಭಗ್ನಾಯತನಭೂಯಿಷ್ಠೇ ಶ್ವದಂಷ್ಟ್ರಿಬಹುಲೇ ಸದಾ ॥9॥
ನ್ಯವಿಶಂತ ಹಿ ತೇ ತತ್ರ ನಿರಾಸ್ವಾದೇ ಮಹಾವನೇ |
ರಾತ್ರ್ಯಾಮೇವ ಗತಾಸ್ತತ್ರ ಚತುರ್ವಿಂಶತಿಯೋಜನಮ್ ॥10॥
ಉದುರಿದ ಎಲೆಗಳು ಮತ್ತು ಹಣ್ಣುಗಳಿಂದ ಕೂಡಿದ ವೃಕ್ಷಗಳಿಂದ ಕೂಡಿದಂತಹ, ಅನೇಕ ಪೊದೆಗಳು ಮತ್ತು ಅಂಧಕಾರವೂ ಇರುವ ವೃಕ್ಷಗಳಿಂದ ಕೂಡಿದಂತಹ ಯಾವೊಂದು ಆಶ್ರಯವೂ ಇಲ್ಲದಿರುವ, ಕ್ರೂರಮೃಗಗಳಿಂದ ಸೇವಿತವಾದಂತಹ, ಯಾವ ಸಂತೋಷವೂ ಇಲ್ಲದ ಮಹಾಕಾಡಿನ ಪ್ರದೇಶದಲ್ಲಿ ಅವರೆಲ್ಲರೂ ಕುಳಿತರು. ಒಂದೇ ರಾತ್ರಿಯಲ್ಲಿ ಅವರು ಇಪ್ಪತ್ತನಾಲ್ಕು ಯೋಜನ ದೂರವನ್ನು ಕ್ರಮಿಸಿದ್ದರು.
ಅಥ ತೃಷ್ಣಾಪರಿಮ್ಲಾನಾ ಕುಂತೀ ವಚನಮಬ್ರವೀತ್ |
ಮಾತಾ ಸತೀ ಪಾಂಡವಾನಾಂ ಪಂಚಾನಾಂ ಮಧ್ಯತಃ ಸ್ಥಿತಾ |
ತೃಷಯಾ ಪರಿತಪ್ತಾಽಸ್ಮಿ ಅನಾಥೇವ ಮಹಾವನೇ ॥11॥
ಆಗ ಬಾಯಾರಿಕೆಯಿಂದ ಬಳಲಿದ ಪಾಂಡವರ ತಾಯಿಯಾದ ಸಾಧ್ವಿಯಾದ ಕುಂತಿಯು ಐದು ಮಕ್ಕಳ ಮಧ್ಯೆ ಕುಳಿತವಳಾಗಿ ದೊಡ್ಡ ಕಾಡಿನಲ್ಲಿ ಅನಾಥಳಂತೆ ನನಗೆ ತುಂಬಾ ಬಾಯಾರಿಕೆಯಾಗಿದೆ ಎಂದು ಹೇಳಿದಳು.
ವೈಶಂಪಾಯನಃ
ತಚ್ಛ್ರುತ್ವಾ ಭೀಮಸೇನಸ್ತು ಮಾತೃವಾಕ್ಯಮುದೀರಿತಮ್ |
ಕಾರುಣ್ಯೇನ ಮನಶ್ಚಕ್ರೇ ಗಮನಾಯಾಥ ಸ ತ್ವರನ್ ॥12॥
ತಾಯಿಯ ವಾಕ್ಯವನ್ನು ಕೇಳಿದ ಭೀಮಸೇನನು ಕರುಣೆಯಿಂದ ಬೇಗ ಅಲ್ಲಿಂದ ಹೊರಟು ನೀರನ್ನು ತರಲು ನಿರ್ಧರಿಸಿದನು.
ತತೋ ಭೀಮೋ ವನಂ ಘೋರಂ ಪ್ರವಿಶ್ಯ ವಿಜನಂ ಮಹತ್ |
ನ್ಯಗ್ರೋಧಂ ವಿಪುಲಚ್ಛಾಯಂ ರಮಣೀಯಮುಪಾದ್ರವತ್ ॥13॥
ಆಗ ಭೀಮನು ಘೋರವಾದ ಕಾಡನ್ನು ಪ್ರವೇಶಿಸಿ ಆ ನಿರ್ಜನವಾದ ಕಾಡಿನಲ್ಲಿ ಬಹಳ ಛಾಯೆಯಿರುವ ರಮಣೀಯವಾದ ಒಂದು ಆಲದಮರದ ಸಮೀಪಕ್ಕೆ ಹೋದನು.
ತತ್ರ ನಿಕ್ಷಿಪ್ಯ ತಾನ್ ಸರ್ವಾನುವಾಚ ಭರತರ್ಷಭಃ |
ಪಾನೀಯಂ ಮೃಗಯೇ ಯಾವತ್ ತಾವದ್ ವಿಶ್ರಮ್ಯತಾಮಿಹ ॥14॥
ಭರತರ್ಷಭನಾದ ಭೀಮಸೇನನು ಅಲ್ಲಿಗೆ ಅವರೆಲ್ಲರನ್ನೂ ಎತ್ತಿಕೊಂಡು ಹೋಗಿ ಇಟ್ಟು, ನೀರನ್ನು ಹುಡುಕುತ್ತೇನೆ, ಅಲ್ಲಿಯವರೆಗೆ ಇಲ್ಲಿ ಸ್ವಲ್ಪ ವಿಶ್ರಾಂತಿಯನ್ನು ಪಡೆಯಿರಿ ಎಂದು ಹೇಳಿದನು.
ಏತೇ ರುವಂತಿ ಮಧುರಂ ಸಾರಸಾ ಜಲಚಾರಿಣಃ |
ಧ್ರುವಮತ್ರ ಜಲಸ್ಥಾನಮರ್ಹತೀತಿ ಮತಿರ್ಮಮ ॥15॥
ಜಲಚಾರಿಗಳಾದ ಈ ಸಾರಸಪಕ್ಷಿಗಳು ಮಧುರವಾಗಿ ಕಿರುಚುತ್ತಿವೆ. ನಿಶ್ಚಿತವಾಗಿ ಹತ್ತಿರದಲ್ಲಿಯೇ ಒಂದು ಜಲಸ್ಥಾನವಿದೆಯೆಂದು ನನ್ನ ಅಭಿಪ್ರಾಯ (ಎಂದು ಹೇಳಿದನು)
ಅನುಜ್ಞಾತಃ ಸ ಗಚ್ಛೇತಿ ಭ್ರಾತ್ರಾ ಜ್ಯೇಷ್ಠೇನ ಭಾರತ |
ಜಗಾಮ ತತ್ರ ಯತ್ರ ಸ್ಮ ರುವಂತಿ ಜಲಚಾರಿಣಃ |
ಅಪಶ್ಯತ್ ಪದ್ಮಿನೀಖಂಡಮಂಡಿತಂ ಸ ಸರೋವರಮ್ ॥16॥
ಅಣ್ಣನಾದ ಯುಧಿಷ್ಠಿರನಿಂದ ಹೊರಡಲು ಅನುಮತಿಯನ್ನು ಪಡೆದ ಭೀಮಸೇನನು ಅ ಜಲಪಕ್ಷಿಗಳು ಶಬ್ದಮಾಡುತ್ತಿರುವ ಕಡೆಗೆ ಹೋಗಿ ಪದ್ಮಸಸ್ಯಗಳಿಂದ ಭೂಷಿತವಾದ ಒಂದು ಸರೋವರವನ್ನು ನೋಡಿದನು.
ಸ ತತ್ರ ಪೀತ್ವಾ ಪಾನೀಯಂ ಸ್ನಾತ್ವಾ ಚ ಭರತರ್ಷಭಃ |
ಉತ್ತರೀಯೇಣ ಪಾನೀಯಮಾಜಹಾರ ಪರಂತಪಃ ॥17॥
ಪರಂಪತನಾದ, ಭರತರ್ಷಭನಾದ ಭೀಮಸೇನನು ಅಲ್ಲಿ ಸ್ನಾನಮಾಡಿ ನೀರನ್ನು ಕುಡಿದು ತನ್ನ ಉತ್ತರೀಯದಿಂದ ನೀರನ್ನು ತೆಗೆದುಕೊಂಡು ಬಂದನು.
ಪಂಕಜಾನಾಮನೇಕೈಶ್ಚ ಪತ್ರೈರ್ಬದ್ಧ್ವಾ ಜಲಾಶಯಾತ್ |
ಗವ್ಯೂತಿಮಾತ್ರಾದಾದಾಯ ತ್ವರಿತೋ ಮಾತರಂ ಪ್ರತಿ ॥18॥
ತನ್ನ ಉತ್ತರೀಯದಲ್ಲಿ ಅನೇಕ ಕಮಲದ ಎಲೆಗಳನ್ನು ಹರಡಿ ಅದರಲ್ಲಿ ನೀರು ತುಂಬಿಕೊಂಡು ಒಂದು ಒಂದು ಹಸುಕೂಗು ಕೇಳುವಷ್ಟು ದೂರದಲ್ಲಿರುವ ಆ ಸರೋವರದಿಂದ ಹೊರಟು ಬೇಗ ತಾಯಿಯ ಕಡೆಗೆ ಬಂದನು.

ಸ ಸುಪ್ತಾಂ ಮಾತರಂ ಪ್ರೇಕ್ಷ್ಯ ಭ್ರಾತೄಂಶ್ಚ ವಸುಧಾತಳೇ |
ಭೃಶಂ ದುಃಖಪರೀತಾತ್ಮಾ ವಿಲಲಾಪ ವೃಕೋದರಃ ॥19॥
ಆ ವೃಕೋದರನು ತಾಯಿಯೂ ಮತ್ತು ಅಣ್ಣತಮ್ಮಂದಿರೂ ನೆಲದ ಮೇಲೆ ಮಲಗಿ ನಿದ್ರೆ ಮಾಡುತ್ತಿರುವದನ್ನು ನೋಡಿ ಬಹಳ ದುಃಖಭರಿತನಾಗಿ ವಿಲಾಪವನ್ನು ಮಾಡಿದನು.
ಭೀಮಸೇನಃ
ಶಯನೇಷು ಪರಾರ್ಧ್ಯೇಷು ಪ್ರಸುಪ್ತಾ ವಾರಣಾವತೇ |
ನಾಧಿಜಗ್ಮುಸ್ತದಾ ನಿದ್ರಾಂ ತೇಽದ್ಯ ಸುಪ್ತಾ ಮಹೀತಳೇ ॥20॥
ವಾರಣಾವತದಲ್ಲಿ ಅನರ್ಘ್ಯವಾದ ಹಾಸಿಗೆಗಳಲ್ಲಿ ಮಲಗಿ ನಿದ್ರೆಯನ್ನು ಪಡೆಯದ ನನ್ನ ತಾಯಿಯು ಮತ್ತು ತಮ್ಮಂದಿರೂ ಈ ದಿನ ನೆಲದ ಮೇಲೆ ಮಲಗಿ ನಿದ್ರಿಸುತ್ತಿದ್ದಾರೆ.
ಸ್ವಸಾರಂ ವಸುದೇವಸ್ಯ ಶತ್ರುಸಂಘವಿಮರ್ದಿನಃ |
ಭೋಜರಾಜಸುತಾಂ ಕುಂತೀಂ ಸರ್ವಲಕ್ಷಣಪೂಜಿತಾಮ್ ॥21॥
ಸ್ನುಷಾಂ ವಿಚಿತ್ರವೀರ್ಯಸ್ಯ ಪಾಂಡೋರ್ಭಾರ್ಯಾಂ ಮಹಾತ್ಮನಃ |
ಪ್ರಾಸಾದಶಯನಾಂ ನಿತ್ಯಂ ಪುಂಡರೀಕಾಂತರಪ್ರಭಾಮ್ ॥22॥
ಸುಕುಮಾರತರಾಂ ಸ್ತ್ರೀಣಾಂ ಮಹಾರ್ಹಶಯನೋಚಿತಾಮ್ |
ಶಯಾನಾಮದ್ಯ ಪಶ್ಯಾಮಿ ಪೃಥಿವ್ಯಾಂ ಹಂತ ಭೋ ವಿಧೇ ॥23॥
ಶತ್ರುಸಮೂಹವನ್ನು ನಾಶಮಾಡುವ ವಸುದೇವನ ತಂಗಿಯಾದ, ಭೋಜರಾಜನ ಸರ್ವಲಕ್ಷಣಸಂಪನ್ನಳಾದ ಮಗಳಾದ, ವಿಚಿತ್ರವೀರ್ಯನ ಸೊಸೆಯಾದ, ಮಹಾತ್ಮನಾದ ಪಾಂಡುವಿನ ಪತ್ನಿಯಾದ, ಯಾವಾಗಲೂ ಉಪ್ಪರಿಗೆಯಲ್ಲಿ ಮಲಗುವಂತಹವಳಾದ, ಕಮಲಗರ್ಭದ ಕಾಂತಿಯನ್ನು ಹೊಂದಿದ, ಸ್ತ್ರೀಯರಲ್ಲೆಲ್ಲಾ ಸುಕುಮಾರಿಯಾದಂತಹ, ಅನರ್ಘ್ಯವಾದ ಶಯನಕ್ಕೆ ಅರ್ಹಳಾದಂತಹ ಕುಂತಿಯು ಈ ದಿನ ಭೂಮಿಯ ಮೇಲೆ ಮಲಗಿರುವುದನ್ನು ನೋಡುತ್ತಿದ್ದೇನೆ. ಅಯ್ಯೋ ವಿಧಿಯೇ!
ಧರ್ಮಾದಿಂದ್ರಾಚ್ಚ ವಾಯೋಶ್ಚ ಸುಷುವೇ ಯಾ ಸುತಾನಿಮಾನ್ |
ಸೇಯಂ ಭೂಮೌ ಪರಿಶ್ರಾಂತಾ ಶೇತೇ ಪ್ರಾಕೃತವದ್ ಯಥಾ ॥24॥
ಯಾವ ಕುಂತಿಯು ಯಮಧರ್ಮನಿಂದಲೂ, ವಾಯುವಿನಿಂದಲೂ, ಇಂದ್ರನಿಂದಲೂ ಈ ಮಕ್ಕಳನ್ನು ಪಡೆದಳೋ ಅಂತಹ ಕುಂತಿಯು ಈ ದಿನ ದಣಿದು ಸಾಮಾನ್ಯ ಜನರಂತೆ ಭೂಮಿಯಲ್ಲಿ ಮಲಗಿದ್ದಾಳೆ.
ಅಯಂ ನೀಲಾಂಬುದಪ್ರಖ್ಯೋ ನರೇಷ್ವಪ್ರತಿಮೋ ಭುವಿ |
ಶೇತೇ ಪ್ರಾಕೃತವದ್ ಭೂಮೌ ತತೋ ದುಃಖತರಂ ನು ಕಿಮ್ ॥25॥
ನೀಲಾಂಬುದಶ್ಯಾಮನಾದಂತಹ ಮನುಷ್ಯರಲ್ಲೇ ಅಸದೃಶನಾದಂತಹ ಈ ಅರ್ಜುನನು ಸಾಮಾನ್ಯ ಜನರಂತೆ ಭೂಮಿಯಲ್ಲಿ ಮಲಗಿದ್ದಾನೆ. ಇದಕ್ಕಿಂತ ಹೆಚ್ಚಿನ ದುಃಖವು ಯಾವುದಿದೆ?
ಇಮೌ ನೀಲೋತ್ಪಲಶ್ಯಾಮೌ ನರೇಷ್ವಪ್ರತಿಮೌ ಭುವಿ |
ಅಶ್ವಿನಾವಿವ ದೇವಾನಾಮಾಶ್ವಿನೌ ರೂಪಸಂಪದಾ |
ತೌ ತು ಪ್ರಾಕೃತವಚ್ಚೋಭೌ ಪ್ರಸುಪ್ತೌ ಧರಣೀತಳೇ ॥26॥
ನೀಲೋತ್ತಮಶ್ಯಾಮರಾದ, ಮನುಷ್ಯರಲ್ಲೇ ಅಸದೃಶರಾದ ರೂಪ- ಸಂಪತ್ತಿನಲ್ಲಿ ದೇವತೆಗಳ ಮಧ್ಯೆ ಅಶ್ವಿನೀದೇವತೆಗಳಂತೆ ಇರುವ, ಅಶ್ವಿನೀದೇವತೆಗಳ ಮಕ್ಕಳೇ ಆದ ಈ ನಕುಲಸಹದೇವರು ಸಾಮಾನ್ಯ ಜನರಂತೆ ಭೂಮಿಯಲ್ಲಿ ಮಲಗಿದ್ದಾರೆ.
ಜ್ಞಾತಯೋ ಯಸ್ಯ ನೈವ ಸ್ಯುರ್ವಿಷಮಾಃ ಕುಲಪಾಂಸನಾಃ |
ಸ ಜೀವೇತ್ ಸುಖಿತೋ ಲೋಕೇ ಗ್ರಾಮದ್ರುಮ ಇವೈಕಲಃ ॥27॥
ಯಾವನಿಗೆ ಕುಲಭೇದಕರೂ, ವಕ್ರರೂ ಆದ ಜ್ಞಾತಿಗಳು ಇರುವುದಿಲ್ಲವೋ ಅವನು ಗ್ರಾಮದಲ್ಲಿರುವ ಏಕೈಕ ವೃಕ್ಷದಂತೆ ಸುಖದಿಂದ ಜೀವಿಸುತ್ತಾನೆ.
ಏಕೋ ವೃಕ್ಷೋ ಹಿ ಯೋ ಗ್ರಾಮೇ ಭವೇತ್ ಪರ್ಣಫಲಾನ್ವಿತಃ |
ಚೈತ್ಯೋ ಭವತಿ ನಿಜ್ಞಾತಿರರ್ಚನೀಯಃ ಸುಪೂಜಿತಃ ॥28॥
ಗ್ರಾಮದಲ್ಲಿ ಫಲಪುಷ್ಪಭರಿತವಾದ ಒಂದೇ ಒಂದು ಮರವಿದ್ದರೆ ಅದು ದೇವಸ್ಥಾನವಾಗುತ್ತದೆ. ಯಾರೂ ಜ್ಞಾತಿಗಳಿರದೆ ಅರ್ಚನೀಯವಾದ ಆ ವೃಕ್ಷವು ಅರ್ಚಿಸಲ್ಪಡುತ್ತದೆ.
ಯೇಷಾಂ ಚ ಬಹವಃ ಶೂರಾ ಜ್ಞಾತಯೋ ಧರ್ಮವತ್ಸಲಾಃ |
ತೇ ಜೀವಂತಿ ಚಿರಂ ಕಾಲಂ ಭವಂತಿ ಚ ನಿರಾಮಯಾಃ ॥29॥
ಯಾರಿಗೆ ಶೂರರೂ ಮತ್ತು ಧರ್ಮಶೂರರೂ ಆದ ಅನೇಕ ಜ್ಞಾತಿಗಳು ಇರುತ್ತಾರೋ ಅಂತಹವರು ಬಹುಕಾಲ ಯಾವ ದುಃಖವೂ ಇಲ್ಲದೆ ಜೀವಿಸುತ್ತಾರೆ.
ಬಲವಂತಃ ಸಮೃದ್ಧಾರ್ಥಾ ಪಿತೃಬಾಂಧವನಂದನಾಃ |
ಜೀವಂತ್ಯನ್ಯೋನ್ಯಮಾಶ್ರಿತ್ಯ ದ್ರುಮಾಃ ಕಾನನಜಾ ಇವ ॥30॥
ಬಲವಂತರೂ, ಅರ್ಥಸಂವೃದ್ಧಿವುಳ್ಳವರೂ ಪಿತೃಬಾಂಧವರಿಗೆ ಸಂತೋಷವುಂಟುಮಾಡುವವರೂ ಆದ ಜನರು ಕಾಡಿನಲ್ಲಿರುವ ಮರಗಳಂತೆ ಒಬ್ಬರೊನ್ನೊಬ್ಬರು ಆಶ್ರಯಿಸಿ ಸುಖದಿಂದ ಜೀವಿಸುತ್ತಾರೆ.
ವಯಂ ಚ ಧೃತರಾಷ್ಟ್ರೇಣ ಸಪುತ್ರೇಣ ದುರಾತ್ಮನಾ |

ವಿವಾಸಿತಾಶ್ಚ ದಗ್ಧಾಶ್ಚ ಕ್ಷತ್ತುರ್ಬುದ್ಧಿಪರಾಕ್ರಮಾತ್ ।
ತಸ್ಮಾನ್ಮುಕ್ತಾ ವಯಂ ದಾಹಾದಿಮಂ ವೃಕ್ಷಮುಪಾಶ್ರಿತಾಃ ॥31॥
ನಾವಾದರೋ ದುರಾತ್ಮನಾದ ಪುತ್ರಸಹಿತನಾದ ಧೃತರಾಷ್ಟ್ರನಿಂದ ನಗರದಿಂದ ಹೊರದೂಡಲ್ಪಟ್ಟು ದಗ್ಧರಾಗಿ ವಿದುರನ ಬುದ್ಧಿಬಲದಿಂದ ಆ ದಾಹದಿಂದ ಮುಕ್ತರಾಗಿ ಈ ವೃಕ್ಷವನ್ನು ಆಶ್ರಯಿಸಿದ್ದೇವೆ.
ಕಾಂ ದಿಶಂ ಪ್ರತಿಪತ್ಸ್ಯಾಮಃ ಪ್ರಾಪ್ತಾಃ ಕ್ಲೇಶಮನುತ್ತಮಮ್ ।
ನಾತಿದೂರೇಣ ನಗರಂ ವನಾದಸ್ಮಾದ್ಧಿ ಲಕ್ಷಯೇ ॥32॥
ಇಂತಹ ದೊಡ್ಡಕ್ಲೇಶವನ್ನು ಹೊಂದಿದ ನಾವು ಯಾವ ದಿಕ್ಕಿಗೆ ಹೋಗೋಣ? ಈ ವನದ ಸಮೀಪದಲ್ಲಿಯೇ ಒಂದು ನಗರವಿರುವಂತೆ ತೋರುತ್ತದೆ.
ಜಾಗರ್ತವ್ಯೇ ಸ್ವಪಂತೀಮೇ ಹಂತ ಜಾಗರ್ಮ್ಯಹಂ ಸ್ವಯಮ್ ।
ಪಾಸ್ಯಂತೀಮೇ ಜಲಂ ಪಶ್ಚಾತ್ ಪ್ರತಿಬುದ್ಧಾ ಜಿತಕ್ಲಮಾಃ ।
ಇತಿ ಭೀಮೋ ವಿನಿಶ್ಚಿತ್ಯ ಜಜಾಗಾರ ಸ್ವಯಂ ತದಾ ॥33॥
ಇವರೆಲ್ಲರೂ ಎಚ್ಚರವಾಗಿರಬೇಕಾದ ಸಮಯದಲ್ಲಿ ನಿದ್ರೆ ಮಾಡುತ್ತಿದ್ದಾರೆ. ಇರಲಿ, ನಾನಾದರೋ ಎಚ್ಚರವಾಗಿರುತ್ತೇನೆ. ಇವರು ನಿದ್ರೆಯಿಂದ ಎದ್ದ ಮೇಲೆ ಆಯಾಸವನ್ನು ಕಳೆದುಕೊಂಡು ನೀರನ್ನು ಕುಡಿಯುತ್ತಾರೆ. ಭೀಮಸೇನನು ಹೀಗೆ ನಿಶ್ಚಯಿಸಿ ಆಗ ತಾನು ಎಚ್ಚರದಿಂದಲೇ ಇದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಿಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಜತುಗೃಹದಾಹಪರ್ವಣಿ ದಶಮೋಽಧ್ಯಾಯಃ ॥
॥ಜತುಗೃಹದಾಹಪರ್ವ ಸಮಾಪ್ತಮ್॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಐವತ್ತೆರಡನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಜತುಗೃಹದಾಹಪರ್ವವು ಮುಗಿಯಿತು.
*****
8. ಹಿಡಿಂಬವಧಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ರಕ್ಷಾರ್ಥಮೇವ ಪರಿಜಾಗ್ರತಿ ಭೀಮಸೇನೇ
ರಕ್ಷಃ ಸ್ವಸಾರಮಭಿಯಾಪಯತೇ ಹಿಡಿಂಬಿಂ ।
ಸಾ ರೂಪಮೇತ್ಯ ಶುಭಮೇವ ದದರ್ಶ ಭೀಮಂ
ಸಾಕ್ಷಾತ್ ಸಮಸ್ತಶುಭಲಕ್ಷಣಸಾರಭೂತಂ ॥48॥
ಪಾಂಡವರ ರಕ್ಷಣೆಗಾಗಿ ಭೀಮನೆಚ್ಚೆತ್ತು ಕುಳಿತಿದ್ದಾಗ ಹಿಡಿಂಬ ರಾಕ್ಷಸ ತಂಗಿ ಹಿಡಿಂಬೆಯನ್ನು ಕಳಿಸಿದ. ಅವಳು ಸುಂದರ ರೂಪತಳೆದು ಸಾಕ್ಷಾತ್ ಸಮಸ್ತ ಶುಭಲಕ್ಷಣಸಾರಭೂತನಾದ ಭೀಮನನ್ನು ಕಂಡಳು.
ಸಾ ರಾಕ್ಷಸೀತನುಮವಾಪ ಸುರೇಂದ್ರಲೋಕ
ಶ್ರೀರೇವ ಶಕ್ರದಯಿತಾ ತ್ವಪರೈವ ಶಚ್ಯಾಃ ।
ಶಾಪಾತ್ ಸ್ಪೃಧಾ ಪತಿಮವಾಪ್ಯ ಚ ಮಾರುತಂ ಸಾ
ಪ್ರಾಪ್ತುಂ ನಿಜಾಂ ತನುಮಯಾಚತ ಭೀಮಸೇನಮ್ ॥49॥
ಹಿಡಿಂಬಿ ಹಿಂದೆ ದೇವಲೋಕದ ಸಂಪತ್ತಿಗೆ ಅಭಿಮಾನಿನಿಯಾದ ಶ್ರೀ ಎಂಬ ಅಪ್ಸರೆ. ಅವಳು ಇಂದ್ರನ ಪತ್ನಿಯಾಗಿ ಶಚಿಯೊಡನೆ ಸ್ಪರ್ಧಿಸಿದುದರಿಂದ ಅವಳ ಶಾಪದಿಂದ ರಾಕ್ಷಸ ಜನ್ಮ ಪಡೆದಳು. ಈಗ ಭೀಮನನ್ನು ಪತಿಯನ್ನಾಗಿ ಪಡೆದು ತನ್ನ ನಿಜರೂಪ ಹೊಂದುವ ಉದ್ದೇಶದಿಂದ ಅವನಲ್ಲಿ ಪ್ರಣಯಭಿಕ್ಷೆ ಬೇಡಿದಳು.
ತಾಂ ಭೀಮ ಆಹ ಕಮನೀಯತನುಂ ನ ಪೂರ್ವಂ
ಜ್ಯೇಷ್ಠಾದುಷ್ಯೆಮಿ ವನಿತಾಂ ನ ಹಿ ಧರ್ಮ ಏಷಃ ।
ಸಾ ಚಾಹ ಕಾಮವಶಗಾ ಪುನರೇತದೇವ
ಸ್ವಾವೇಶಯುಗ್ಧಿ ಮರುದಗ್ರ್ಯ ಪರಿಗ್ರಹಸ್ಯ ॥50॥
ಸುಂದರ ಶರೀರದವಳಾದ ಹಿಡಿಂಬಿಯನ್ನು ಕುರಿತು ಭೀಮನೆಂದ, `ಹಿರಿಯನಾದ ಅಣ್ಣನಿಗಿಂತ ಮೊದಲು ನಾನು ಯಾವ ಹೆಣ್ಣನ್ನೂ ಮದುವೆಯಾಗಲಾರೆ. ಅದು ಧರ್ಮವಲ್ಲ' ಎಂದು. ಆದರೂ ಹಿಡಿಂಬ ಕಾಮಪರವಶಳಾಗಿ ತಿರುಗಿ ಹೇಳಿದ್ದನ್ನೇ ಹೇಳತೊಡಗಿದಳು. ಏಕೆಂದರೆ ಅವಳು ಭಾರತೀದೇವಿಯ ಆವೇಶಯುಕ್ತಳಾಗಿದ್ದಳು.
ಸಾ ಭಾರತೀ ವರಮಿಮಂ ಪ್ರದದಾವಮುಷ್ಯೈ
ಸ್ವಾವೇಶಮಾತ್ಮ ದಯಿತಸ್ಯ ಚ ಸಂಗಮೇನ ।
ಶಾಪಾದ್ ವಿಮುಕ್ತಿಮತಿತೀವ್ರತಪಃ ಪ್ರಸನ್ನಾ
ತೇನಾಹ ಸಾ ನಿಜತನುಂ ಪವಮಾನಸೂನೋಃ ॥51॥
ಹಿಂದೆ ಅವಳ ಅತ್ಯಂತ ತೀವ್ರ ತಪಸ್ಸಿಗೆ ಒಲಿದ ಭಾರತೀದೇವಿ `ನಿನ್ನಲ್ಲಿ ನನ್ನ ಆವೇಶ ಬರುತ್ತದೆ. ಆಗ ನನ್ನ ಪತಿಯ ಅಂಗಸಂಗದಿಂದ ಶಾಪ ವಿಮುಕ್ತಿಯಾಗುತ್ತದೆ' ಎಂದು ವರವಿತ್ತಳು. ಅದರಿಂದ ತನ್ನ ನಿಜರೂಪ ಪಡೆಯುವುದಕ್ಕಾಗಿ ಅವಳು ಪುನಃ ಭೀಮನನ್ನು ಬೇಡಿದಳು.

ಜ್ಞಾನಂ ಚ ನಿಜಮಭಿದರ್ಶಯಿತುಂ ಪುನಶ್ಚ
ಪ್ರಾಹೇಶ್ವರೋಽಖಿಲಜಗದ್ಗುರುರಿಂದಿರೇಶಃ |
ವ್ಯಾಸಸ್ವರೂಪ ಇಹ ಚೇತ್ಯ ಪರಶ್ವ ಏವ
ಮಾಂ ತೇ ಪ್ರದಾಸ್ಯತಿ ಸದಾ ಪ್ರಕರೋಷಿ ಮೇಽರ್ಥ್ಯಂ ॥52॥
ಹಿಡಿಂಬಿ ತನ್ನ ಸ್ವಾಭಾವಿಕ ದಿವ್ಯಜ್ಞಾನವನ್ನು ತೋರುವುದಕ್ಕಾಗಿ ಪುನಃ ಹೇಳಿದಳು. `ಸಕಲಲೋಕ ಗುರುಸರ್ವೇಶ್ವರನಾದ ವ್ಯಾಸರೂಪಿ ಶ್ರೀಹರಿ ಇಲ್ಲಿಗೆ ನಾಳಯೇ ಬಂದು ನನ್ನನ್ನು ನಿನಗೆ ನೀಡುವನು. ಆಗ ನೀನೆ ನನ್ನ ಅಭೀಷ್ಟವನ್ನು ನಡೆಸಿಕೊಡುವಿ' ಎಂದು.
* * * *

ನೂರ ಐವತ್ತೊಂರನೆಯ ಅಧ್ಯಾಯ
(ಪಾಂಡವರು ಮಲಗಿದ್ದ ಕಡೆಗೆ ಹಿಡಿಂಬೆಯ ಪ್ರವೇಶ, ಭೀಮ ಹಿಡಿಂಬೆಯರ ಸಂವಾದ)
ವೈಶಂಪಾಯನಃ
ತತ್ರ ತೇಷು ಶಯಾನೇಷು ಹಿಡಿಂಬೋ ನಾಮ ರಾಕ್ಷಸಃ |
ಅವಿದೂರೇ ವನಾತ್ ತಸ್ಮಾತ್ ಸಾಲವೃಕ್ಷಮುಪಾಶ್ರಿತಃ ॥1॥
ಕ್ರೂರೋ ಮಾನುಷಮಾಂಸಾದೋ ಮಹಾವೀರ್ಯೋ ಮಹಾಬಲಃ |
ಪಿಶಿತೇಪ್ಸುಃ ಕ್ಷುಧಾರ್ತಃ ಸನ್ ಜಿಘ್ರನ್ ಗಂಧಂ ಯದೃಚ್ಛಯಾ ॥2॥
ಊರ್ಧ್ವಾಂಗುಲಿಃ ಸಕಂಡೂಯೋ ಧುನ್ವನ್ ರೂಕ್ಷಾನ್ ಶಿರೋರುಹಾನ್ |
ಜೃಂಭಮಾಣೋ ಮಹಾವಕ್ತ್ರಃ ಪುನಃಪುನರವೇಕ್ಷ್ಯ ಚ ॥3॥
ಆಘ್ರಾಯ ಮಾನುಷಂ ಗಂಧಂ ಭಗಿನೀಮಿದಮಬ್ರವೀತ್ |
ಉಪಪನ್ನಂ ಚಿರಸ್ಯಾದ್ಯ ಭಕ್ಷ್ಯೋಮಮ ಮನಃಪ್ರಿಯಃ ॥4॥
ಪಾಂಡವರು ಅಲ್ಲಿ ಮಲಗಿರಲು ಸ್ವಲ್ಪ ದೂರದಲ್ಲಿ ಸಾಲವೃಕ್ಷದ ಕೆಳಗೆ ವಾಸಿಸುತ್ತಿದ್ದ ಕ್ರೂರನೂ, ಮನುಷ್ಯಮಾಂಸ ಭಕ್ಷಕನೂ ಮಹಾಪರಾಕ್ರಮಿಯೂ, ಮಹಾಬಲವುಳ್ಳವನೂ ಆದ ಹಿಡಿಂಬ ರಾಕ್ಷಸನು ಹಸಿವೆಯಿಂದ ಆರ್ತನಾಗಿ ಮಾಂಸವನ್ನು ಬಯಸಿ ಅಕಸ್ಮಾತ್ತಾಗಿ ಮಾನುಷಗಂಧವನ್ನು ಆಘ್ರಾಣಿಸಿ ಬೆರಳುಗಳನ್ನು ಮೇಲೆ ಮಾಡಿ ತಲೆಯನ್ನು ಕೆರೆದುಕೊಳ್ಳುತ್ತಾ ತನ್ನ ಒರಟಾದ ಕೂದಲುಗಳನ್ನು ಕೊಡವಿಕೊಳ್ಳುತ್ತಾ ತನ್ನ ದೊಡ್ಡಬಾಯಿಯಿಂದ ಆಕಳಿಸುತ್ತಾ ಮತ್ತೆ ಮತ್ತೆ ನೋಡಿ ಮನುಷ್ಯಗಂಧವನ್ನು ಆಘ್ರಾಣಿಸಿ ತಂಗಿಯನ್ನು ಕುರಿತು ಹೀಗೆ ಹೇಳಿದನು.
ಸ್ನೇಹಾತ್ ಸ್ರಾವಂ ವಿಸೃಜತಿ ಜಿಹ್ವಾ ಪರ್ಯೇತಿ ವೈ ಮುಖಮ್ |
ಅಷ್ಟೌ ದಂಷ್ಟ್ರಾಃ ಸಿತಾಸ್ತೀಕ್ಷ್ಣಾಶ್ಚಿರಸ್ಯ ಬತ ದುಸ್ಸಹಾಃ |
ದೇಹೇಷು ಮಜ್ಜಯಿಷ್ಯಂತಿ ಸ್ನಿಗ್ಧೇಷು ಪಿಶಿತೇಷು ಚ ॥5॥
ಬಹುಕಾಲದ ಮೇಲೆ ನಮಗೆ ಪ್ರಿಯವಾದ ಭಕ್ಷ್ಯವು ದೊರಕಿದೆ. ಮನುಷ್ಯಮಾಂಸದ ಆಸೆಯಿಂದ ನಾಲಿಗೆಯು ಜೊಲ್ಲುಸುರಿಸಿ ನನ್ನ ಮುಖದ ಮೇಲೆಲ್ಲಾ ಓಡಾಡುತ್ತಿದೆ. ನಾನು ನನ್ನ ಎಂಟು ಹರಿತವಾದ ಮತ್ತು ದುಸ್ಸಹವಾದ ಕೋರೆಹಲ್ಲುಗಳನ್ನು ಗಟ್ಟಿಯಾದ ಮಾಂಸವಿರುವ ದೇಹಗಳಲ್ಲಿ ಮುಳುಗಿಸುತ್ತೇನೆ.
ಆಕ್ರಮ್ಯ ಮಾನುಷಂ ಕಂಠಮಾಚ್ಛಿದ್ಯ ಧಮನೀಮಪಿ |
ಉಷ್ಣಂ ನವಂ ಪ್ರಪಾಸ್ಯಾಮಿ ಫೇನಿಲಂ ರುಧಿರಂ ಬಹು |
ಗಚ್ಛ ಜಾನೀಹಿ ಕೇ ತ್ವೇತೇ ಶೇರತೇ ವನಮಾಶ್ರಿತಾಃ ॥6॥
ಮನುಷ್ಯನ ಕಂಠವನ್ನು ಹಿಡಿದು ರಕ್ತನಾಳವನ್ನು ಕಿತ್ತು ಬಿಸಿಯಾದ ನೊರೆಯಿಂದ ಕೂಡಿದ ಹೊಸ ರಕ್ತವನ್ನು ಕುಡಿಯುವೆನು. ನೀನು ಹೋಗಿ ನಮ್ಮ ಕಾಡಿನಲ್ಲಿ ಮಲಗಿರುವವರು ಯಾರು ಎಂದು ತಿಳಿ?
ಮಾನುಷೋ ಬಲವಾನ್ ಗಂಧೋ ಘ್ರಾಣಂ ತರ್ಪಯತೀವ ಮೇ |
ಹತ್ವಾ ತಾನ್ ಮಾನುಷಾನೇತಾನಾನಯಾಶು ಮಮಾಂತಿಕಮ್ ॥7॥
ಪ್ರಬಲವಾದ ಮಾನುಷಗಂಧವು ನನ್ನ ಮೂಗಿಗೆಬಡಿದು ಸಂತೋಷವನ್ನು ಕೊಡುತ್ತಿದೆ. ಆ ಮನುಷ್ಯರನ್ನು ಕೊಂದು ನನ್ನ ಬಳಿಗೆ ಬೇಗ ತೆಗೆದುಕೊಂಡು ಬಾ.
ಅಸ್ಮದ್ವಿಷಯಸುಪ್ತೇಭ್ಯೋ ನೈತೇಭ್ಯೋ ಭಯಮಸ್ತಿ ತೇ |
ತೇಷಾಂ ಮಾಂಸಾನಿ ಸಂಸ್ಕೃತ್ಯ ಮಾನುಷಾಣಿ ಯಥೇಷ್ಟತಃ ॥8॥
ಸಹಿತೌ ಭಕ್ಷಯಿಷ್ಯಾವಃ ಕುರು ಕ್ಷಿಪ್ರಂ ವಚೋ ಮಮ |
ತತಸ್ತುಷ್ಟೌ ಪ್ರನೃತ್ಯಾವಃ ಪ್ರಗೀತೌ ತಳತಾಳಕೌ ॥9॥
ನಮ್ಮ ರಾಜ್ಯದಲ್ಲಿ ಮಲಗಿರುವ ಅವರಿಂದ ನಿನಗೆ ಯಾವ ಭಯವೂ ಇಲ.್ಲ ಅ ಮನುಷ್ಯರ ಮಾಂಸವನ್ನು ನಮಗೆ ಬೇಕಾದಂತೆ ಬೇಯಿಸಿ ಇಬ್ಬರೂ ಜೊತೆಯಲ್ಲಿ ತಿನ್ನೋಣ. ಬೇಗ ನನ್ನ ಮಾತನ್ನು ನಡೆಸು. ಅನಂತರ ಸಂತೋಷದಿಂದ ಹಾಡುತ್ತಾ ಚಪ್ಪಾಳೆಯನ್ನು ತಟ್ಟುತ್ತಾ ನಾವಿಬ್ಬರೂ ಕುಣಿಯೋಣ.
ವೈಶಂಪಾಯನಃ
ಏವಮುಕ್ತಾ ಹಿಡಿಂಬೇನ ಹಿಡಿಂಬೀ ರಾಕ್ಷಸೀ ತದಾ |
ಆಪ್ಲುತ್ಯಾಪ್ಲುತ್ಯ ಚ ತರೂನಾಗಚ್ಛತ್ ಪಾಂಡವಾನ್ ಪ್ರತಿ ॥10॥

ಹಿಡಿಂಬನಿಂದ  ಹೀಗೆ ಹೇಳಲ್ಪಟ್ಟ ರಾಕ್ಷಸಿಯಾದ ಹಿಡಿಂಬೆಯು ಆಗ ಮರಗಳನ್ನು  ಹಾರುತ್ತಾ ಹಾರುತ್ತಾ ಪಾಂಡವರ ಬಳಿಗೆ ಬಂದಳು.
ಭ್ರಾತುರ್ವಚನಮಾಜ್ಞಾಯ  ತ್ವರಮಾಣೇವ ರಾಕ್ಷಸೀ |
ಜಗಾಮ ತತ್ರ ಯತ್ರ ಸ್ಮ ಶೇರತೇ ಪಾಂಡವಾ ವನೇ   ॥11॥
ಅಣ್ಣನ ಮಾತುಗಳನ್ನು ತಿಳಿದು ವೇಗವಾಗಿ ಬಂದ ಆ ರಾಕ್ಷಸಿಯು ಕಾಡಿನಲ್ಲಿ ಪಾಂಡವರು ಮಲಗಿರುವ ಸ್ಥಳಕ್ಕೆ ಬಂದಳು.
ದದರ್ಶ ತತ್ರ ಸಾ ಗತ್ವಾ  ಪಾಂಡವಾನ್ ಪೃಥಯಾ ಸಹ |
ಶಯಾನಾನ್ ಭೀಮಸೇನಂ ಚ ಜಾಗ್ರತಂ ಚಾಪರಾಜಿತಮ್        ॥12॥
ಅವಳು ಕುಂತಿಯ ಜೊತೆಯಲ್ಲಿ ಮಲಗಿರುವ ಪಾಂಡವರನ್ನೂ, ಎಚ್ಚರದಿಂದಿದ್ದು ಅಪರಾಜಿತನಾದ ಭೀಮಸೇನನನ್ನು ಅಲ್ಲಿ ನೋಡಿದಳು.
ಉಪಾಸ್ಯಮಾನಾನ್ ಭೀಮೇನ ರೂಪಯೌವನಶಾಲಿನಾ |
ಸುಕುಮಾರಾಂಶ್ಚ ಪಾರ್ಥಾನ್ ಸಾ ವ್ಯಾಯಾಮೇನ ಚ ಕರ್ಶಿತಾನ್ ॥
ರೂಪಯೌವನಶಾಲಿಯಾದ ಭೀಮನಿಂದ ರಕ್ಷಿಸಲ್ಪಡುತ್ತಿರುವ ಆಯಾಸದಿಂದ ಬಳಲಿದ ಸುಕುಮಾರರಾದ ಪಾಂಡವರನ್ನು ನೋಡಿದಳು.
ದುಃಖೇನ ಸಂಪ್ರಯುಕ್ತಾಂಶ್ಚ ಸಹಜ್ಯೇಷ್ಠಾನ್ ಪ್ರಮಾದಿನಃ |
ರೌದ್ರೀ ಸತೀ ರಾಜಪುತ್ರಂ ದರ್ಶನೀಯಪ್ರದರ್ಶನಮ್               ॥14॥
ದುಃಖದಿಂದ ಕೂಡಿದವರಾಗಿ ಪ್ರಮಾದದಿಂದ ತಾಯಿಯ ಜೊತೆಯಲ್ಲಿ ಮಲಗಿರುವ ಪಾಂಡವರನ್ನೂ, ಸುಂದರ ರೂಪವನ್ನು ಹೊಂದಿ ಅವರನ್ನು ನೋಡಿಕೊಳ್ಳುತ್ತಿರುವ ರಾಜಪುತ್ರನಾದ ಭೀಮಸೇನನನ್ನೂ ಆ ಉಗ್ರವಾದ ರಾಕ್ಷಸಿಯು ನೋಡಿದಳು.
ದೃಷ್ಟ್ವೈವ ಭೀಮಸೇನಂ ಸಾ ಸಾಲಸ್ಕಂಧಮಿವೋದ್ಯತಮ್ |
ರಾಕ್ಷಸೀ ಕಾಮಯಾಮಾಸ ರೂಪೇಣಾಪ್ರತಿಮಂ ಭುವಿ              ॥15॥
ಸಾಲಸ್ಕಂಧದಂತೆ ಉನ್ನತವಾಗಿದ್ದ, ರೂಪದಲ್ಲಿ ಭೂಮಿಯಲ್ಲಿ ಅಸದೃಶನಾಗಿದ್ದ ಭೀಮಸೇನನನ್ನು ನೋಡಿದ ತಕ್ಷಣ ರಾಕ್ಷಸಿಗೆ ಅವನಲ್ಲಿ ಕಾಮವುಂಟಾಯಿತು.
ಅಂತರ್ಗತೇನ ಮನಸಾ ಚಿಂತಯಾಮಾಸ ರಾಕ್ಷಸೀ |
ಅಯಂ ಶ್ಯಾಮೋ ಮಹಾಬಾಹುಃ ಸಿಂಹಸ್ಕಂಧೋ ಮಹಾದ್ಯುತಿಃ |
ಕಂಬುಗ್ರೀವಃ ಪುಷ್ಕರಾಕ್ಷೋ ಭರ್ತಾ ಯುಕ್ತೋ ಭವೇನ್ಮಮ        ॥16॥
ಆ ರಾಕ್ಷಸಿಯು ಶ್ಯಾಮವರ್ಣೋಪೇತನೂ, ಮಹಾಬಾಹುವೂ, ಸಿಂಹಸ್ಕಂಧನೂ, ಮಹಾದ್ಯುತಿಯೂ, ಶಂಖದಂತಿರುವ ಕಂಠವುಳ್ಳವನೂ, ಕಮಲನಯನನೂ ಆದ ಇವನು ನನ್ನ ಪತಿಯಾಗಲು ಯೋಗ್ಯನಾಗಿದ್ದಾನೆ ಎಂದು ತನ್ನ ಮನಸ್ಸಿನಲ್ಲಿಯೇ ಚಿಂತಿಸಿದಳು.
ನಾಹಂ ಭ್ರಾತುರ್ವಚೋ ಜಾತು ಕುರ್ಯಾಂ ಕ್ರೂರಮಸಾಂಪ್ರತಮ್|
ಪತಿಹೇತುರ್ಹಿ ಬಲವಾನ್ ನ ತಥಾ ಭ್ರಾತೃಸಂಗಮಃ               ॥17॥
ನಾನು ಅಣ್ಣನ ಕ್ರೂರವಾದ ಮತ್ತು ಅಯೋಗ್ಯವಾದ ಮಾತಿನಂತೆ ನಡೆದುಕೊಳ್ಳುವುದಿಲ್ಲ. ಅಣ್ಣನ ಸೌಮನಸ್ಯಕ್ಕಿಂತ ಪತಿಯ ಪ್ರಾಪ್ತಿಯು ಪ್ರಬಲವಾದ ಕಾರಣವಾಗಿದೆ.
ಮುಹೂರ್ತಮಪಿ ಚಾದ್ಯಾಹಂ ಪ್ರಾಪ್ನುಯಾಂ ತೃಪ್ತಿಮುತ್ತಮಾಮ್ |
ಭರ್ತ್ರಾ ತ್ವಹಮನೇನೈವ ಮೋದಿಷ್ಯೇ ಬಹುಳಾಃ ಸಮಾಃ            ॥18॥
ಈ ದಿನವೇ ನಾನು ಇವನಿಂದ ಒಂದು ಮಹೂರ್ತವಾದರೂ ಒಳ್ಳೆಯ ತೃಪ್ತಿಯನ್ನು ಪಡೆದು ಆನಂತರ ಪತಿಯಾದ ಅವನ ಜೊತೆಯಲ್ಲಿ ಅನೇಕ ವರ್ಷಗಳ ಕಾಲ ಸಂತೋಷದಿಂದ ಇರುತ್ತೇನೆ.
ಹಿಡಿಂಬೀ ತು ಮಹಾರೌದ್ರಾ ತದಾ ಭರತಸತ್ತಮಮ್ |
ಉತ್ಸೃಜ್ಯ ರಾಕ್ಷಸಂ ರೂಪಂ ಮಾನುಷಂ  ರೂಪಮಾಸ್ಥಿತಾ        ॥19॥
ಭರತಶ್ರೇಷ್ಠನೇ ಆಗ ಮಹಾಭಯಂಕರಳಾದ ಹಿಡಿಂಬೆಯು ರಾಕ್ಷಸರೂಪವನ್ನು ತ್ಯಜಿಸಿ ಮನುಷ್ಯರೂಪವನ್ನು ಧರಿಸಿದಳು.
ಸಾ ಕಾಮರೂಪಿಣೀ ರೂಪಂ ಕೃತ್ವಾ ಮದನಮೋಹಿತಾ |
ಉಪತಸ್ಥೇ ಮಹಾತ್ಮಾನಂ ಭೀಮಸೇನಮನಿಂದಿತಾ ॥20॥
ಕಾಮಮೋಹಿತಳಾದ, ಕಾಮರೂಪಿಣಿಯಾದ, ಅನಿಂದಿತಳಾದ ಅವಳು ಸುಂದರವಾದ ರೂಪವನ್ನು ಧರಿಸಿ ಮಹಾತ್ಮನಾದ ಭೀಮಸೇನನನ್ನು ಸಮೀಪಿಸಿದಳು.
ಇಂಗಿತಾಕಾರಕುಶಲಾ ಸೋಪಾಸರ್ಪಚ್ಛನೈಃ ಶನೈಃ |
ವಿನಮ್ಯಮಾನೇವ ಲತಾ ಸರ್ವಾಭರಣಭೂಷಿತಾ   ॥21॥
ಇಂಗಿತವನ್ನು ತಿಳಿದುಕೊಳ್ಳುವುದರಲ್ಲಿ ಕುಶಲಳಾದ ಅವಳು ಸರ್ವಾಭರಣಭೂಷಿತಳಾಗಿ ಬಳುಕುವ ಬಳ್ಳಿಯಂತೆ ಮೆಲ್ಲಮೆಲ್ಲನೆ ನಡೆದುಬಂದಳು.
ಶನೈಶ್ಶನೈಃ ಸ ತಾಂ ಭೀಮಃ ಸಮೀಪಮುಪಸರ್ಪತೀಮ್ |
ವೀಕ್ಷಮಾಣಸ್ತಥಾಽಪಶ್ಯತ್ ತನ್ವೀಂ ಪೀನಪಯೋಧರಾಮ್ |
ಚಂದ್ರಾನನಾಂ ಪದ್ಮನೇತ್ರಾಂ ನೀಲಕುಂಚಿತಮೂರ್ಧಜಾಮ್   ॥22॥
ಮೆಲ್ಲಮೆಲ್ಲನೆ ತನ್ನ ಬಳಿಗೆ ಬರುತ್ತಿರುವ ಅವಳನ್ನು ಗಮನಿಸುತ್ತಾ ಭೀಮನು, ಕೃಶಳಾಗಿ ಪೀನಪಯೋಧರಗಳನ್ನೂ,

ಚಂದ್ರಮುಖವನ್ನೂ, ಕಮಲನಯನಗಳನ್ನೂ, ಕಪ್ಪಾದ ಗುಂಗುರು ಕೂದಲುಗಳನ್ನೂ ಹೊಂದಿದ್ದ ಅವಳನ್ನು ನೋಡಿದನು.
ಕೃಷ್ಣಾಂ ಸುಪಾಂಡರೈರ್ವಸ್ತ್ರೈಃ ಬಿಂಬೋಷ್ಠೀಂ ಚಾರುದರ್ಶನಾಮ್ |
ದೃಷ್ಟ್ವಾ ತಾಂ ರೂಪಸಂಪನ್ನಾಂ ಭೀಮೋ ವಿಸ್ಮಯಮಾಗತಃ ॥23॥
ಕೃಷ್ಣವರ್ಣದವಳಾದ ಶ್ವೇತವಸ್ತ್ರವನ್ನು ಧರಿಸಿದ್ದ ತೊಂಡೆಯ ಹಣ್ಣಿನಂತೆ ತುಟಿಯುಳ್ಳ, ನೋಡಲು ಮನೋಹರವಾದ ಆ ರೂಪಸಂಪನ್ನೆಯನ್ನು ನೋಡಿ ಭೀಮನಿಗೆ ವಿಸ್ಮಯವಾಯಿತು.
ಉಪಚಾರಗುಣೈರ್ಯುಕ್ತಾ ಲಲಿತೈರ್ಭಾವಸಂಸ್ಥಿತೈಃ |
ಸಮೀಪಮುಪಸಂಪ್ರಾಪ್ಯ ಭೀಮಂ ಸಾಽಥ ವರಾನನಾ |
ವಚೋ ವಚನವೇಲಾಯಾಮಿದಂ ಪ್ರೋವಾಚ ಪಾಂಡವಮ್ ॥24॥
ಆ ಸುಂದರಿಯು ಲಲಿತವಾದ ಮತ್ತು ಪ್ರೀತಿಯುತವಾದ ಉಪಚಾರಗುಣಗಳಿಂದ ಕೂಡಿದವಳಾಗಿ ಭೀಮನ ಹತ್ತಿರ ಬಂದು ಆ ಪಾಂಡವನನ್ನು ಕುರಿತು ಮಾತನಾಡುವ ಸಮಯದಲ್ಲಿ ಹೀಗೆ ಹೇಳಿದಳು.
ಲಜ್ಜಯಾ ನಮ್ಯಮಾನೇವ ಸರ್ವಾಭರಣಭೂಷಿತಾ |
ಸ್ಮಿತಪೂರ್ವಮಿದಂ ವಾಕ್ಯಂ ಭೀಮಸೇನಮಥಾಬ್ರವೀತ್ |
ಕುತಸ್ತ್ವಮಸಿ ಸಂಪ್ರಾಪ್ತಃ ಕಶ್ಚಾಸಿ ಪುರುಷರ್ಷಭ ॥25॥
ಸರ್ವಾಭರಣಭೂಷಿತಳಾದ ಅವಳು ನಾಚಿಕೆಯಿಂದ ಬಳುಕುತ್ತಾ ಮಂದಹಾಸಪೂರ್ವಕವಾಗಿ ಭೀಮಸೇನನನ್ನು ಕುರಿತು ಪುರುಷಶ್ರೇಷ್ಠನೇ, ನೀನು ಯಾರು ಮತ್ತು ಎಲ್ಲಿಂದ ಬಂದಿದ್ದೀಯೆ ಎಂದು ಕೇಳಿದಳು.
ಕ ಇಮೇ ಶೇರತೇ ಚೇಹ ಪುರುಷಾ ದೇವರೂಪಿಣಃ |
ಕೇಯಂ ಚ ಬೃಹತೀ ಶ್ಯಾಮಾ ಸುಕುಮಾರೀ ತವಾನಘ |
ಶೇತೇ ವನಮಿದಂ ಪ್ರಾಪ್ಯ ವಿಶ್ವಸ್ತಾ ಸ್ವಗೃಹೇ ಯಥಾ ॥26॥
ದೇವರೂಪಿಗಳಂತಿದ್ದು, ಇಲ್ಲಿ ಮಲಗಿರುವ ಈ ಪುರುಷರು ಯಾರು? ಅನಘನೇ, ಈ ಕಾಡಿಗೆ ಬಂದು ತನ್ನ ಮನೆಯಲ್ಲಿ ಮಲಗಿದಂತೆ ವಿಶ್ವಾಸದಿಂದ ಮಲಗಿರುವ ಈ ಹಿರಿಯಳಾದ ಶ್ಯಾಮವರ್ಣದ ಸುಕುಮಾರಿ ಯಾರು?
ನೇದಂ ಜಾನೀಥ ಗಹನಂ ವನಂ ರಾಕ್ಷಸಸೇವಿತಮ್ |
ವಸತಿ ಹ್ಯತ್ರ ಪಾಪಾತ್ಮಾ ಹಿಡಿಂಬೋ ನಾಮ ರಾಕ್ಷಸಃ ॥27॥
ಈ ಕಾಡು ರಾಕ್ಷಸಸೇವಿತವಾದುದೆಂದು ನೀವು ತಿಳಿದಿಲ್ಲ. ಇಲ್ಲಿ ಪಾಪಾತ್ಮನಾದ ಹಿಡಿಂಬನೆಂಬ ರಾಕ್ಷಸನು ವಾಸಿಸುತ್ತಾನೆ.
ತೇನಾಹಂ ಪ್ರೇಷಿತಾ ಭ್ರಾತ್ರಾ ದುಷ್ಟಭಾವೇನ ರಕ್ಷಸಾ |
ಬಿಭಕ್ಷಯಿಷತಾ ಮಾಂಸಂ ಯುಷ್ಮಾಕ ಮಮರೋಪಮ ॥28॥
ದೇವೋಪಮನೇ, ದುಷ್ಟಭಾವವುಳ್ಳ ನನ್ನ ಅಣ್ಣನಾದ ಆ ರಾಕ್ಷಸನು ನಿಮ್ಮ ಮಾಂಸವನ್ನು ತಿನ್ನುವ ಇಚ್ಛೆಯಿಂದ ನನ್ನನ್ನು ಕಳುಹಿಸಿದ್ದಾನೆ.
ಸಾಽಹಂ ತ್ವಾಮಿಹ ಸಂಪ್ರೇಕ್ಷ್ಯ ದೇವಗರ್ಭಸಮಪ್ರಭಮ್ |
ನಾನ್ಯಂ ಭರ್ತಾರಮಿಚ್ಛಾಮಿ ಸತ್ಯಮೇತದ್ ಬ್ರವೀಮಿ ತೇ |
ಏತದ್ ವಿಜ್ಞಾಯ ಧರ್ಮಜ್ಞ ಯುಕ್ತಂ ಮಯಿ ಸಮಾಚರ ॥29॥
ಅಂತಹ ನಾನು ಇಲ್ಲಿಗೆ ಬಂದು ದೇವಕುಮಾರನ ಕಾಂತಿಯಿರುವ ನಿನ್ನನ್ನು ನೋಡಿದ ಮೇಲೆ ಬೇರೆ ಯಾರನ್ನೂ ಪತಿಯನ್ನಾಗಿ ಬಯಸುವುದಿಲ್ಲ. ಇದು ಸತ್ಯವಾದ ಮಾತು. ಧರ್ಮಜ್ಞನಾದ ನೀನು ಇದನ್ನು ತಿಳಿದು ನನ್ನಲ್ಲಿ ಯೋಗ್ಯವಾಗಿ ನಡೆದುಕೋ.
ಕಾಮೋಪಹತಚಿತ್ತಾಂ ಹಿ ಭಜಮಾನಾಂ ಭಜಸ್ವ ಮಾಮ್ |
ತ್ರಾಸ್ಯೇಽಹಂ ತ್ವಾಂ ಮಹಾರಾಜ ರಾಕ್ಷಸಾತ್ ಪುರುಷಾದಕಾತ್ ॥30॥
ಕಾಮೋಪಹತಳಾಗಿ ನಿನ್ನನ್ನು ಓಲೈಸುತ್ತಿರುವ ನನ್ನನ್ನು ಸ್ವೀಕರಿಸು. ಮಹಾರಾಜನೇ, ನರಮಾಂಸಭಕ್ಷಕನಾದ ರಾಕ್ಷಸನಿಂದ ನಾನು ನಿನ್ನನ್ನು ರಕ್ಷಿಸುವೆನು.
ವತ್ಸ್ಯಾವೋ ಗಿರಿದುರ್ಗೇಷು ಭರ್ತಾ ಭವ ಮಮಾನಘ |
ಇಚ್ಛಾಮಿ ವೀರ ಭದ್ರಂ ತೇ ಮಮ ಪ್ರಾಣಾನ್ ವಿಹಾಸಿಷುಃ ॥31॥
ತ್ವಯಾ ಹ್ಯಹಂ ಪರಿತ್ಯಕ್ತಾ ನ ಜೀವೇಯಮರಿಂದಮ |
ಅಂತರಿಕ್ಷಚರೀ ಚಾಸ್ಮಿ ಕಾಮರೂಪಧರಾಽಪಿ ಚ |
ಅತುಲಾಮಾಪ್ನುಹಿ ಪ್ರೀತಿಂ ತತ್ರ ತತ್ರ ಮಯಾ ಸಹ ॥32॥
ವೀರನೇ, ನಿನಗೆ ಮಂಗಳವಾಗಲಿ. ಅನಘನೇ, ನನ್ನ ಪತಿಯಾಗು. ನಾವಿಬ್ಬರೂ ಗಿರಿದುರ್ಗಗಳಲ್ಲಿ ವಾಸಿಸೋಣ. ನನ್ನ ಪ್ರಾಣಗಳನ್ನು ಬಿಡಲು ಹೊರಟಿರುವ ನಾನು ನಿನ್ನನ್ನೇ ಪತಿಯಾಗಿ ಬಯಸುತ್ತೇನೆ. ಅರಿಂದಮನೇ, ನೀನು ನನ್ನನ್ನು ಪರಿತ್ಯಜಿಸಿದರೆ ನಾನು ಖಂಡಿತವಾಗಿಯೂ ಬದುಕಿರುವುದಿಲ್ಲ. ನಾನು ಅಂತರಿಕ್ಷದಲ್ಲಿ ಹೋಗುವ ಮತ್ತು ಕಾಮರೂಪವನ್ನು ಧರಿಸುವ ಶಕ್ತಿಯನ್ನು ಹೊಂದಿದ್ದೇನೆ. ನನ್ನನ್ನು ಸ್ವೀಕರಿಸಿ ನನ್ನ ಜೊತೆಯಲ್ಲಿ ಅಸದೃಶವಾದ ಸಂತೋಷವನ್ನು ಹೊಂದು.
ಭೀಮಸೇನಃ
ಏಷ ಜ್ಯೇಷ್ಠೋ ಮಮ ಭ್ರಾತಾ ಮಾನ್ಯಃ ಪರಮಕೋ ಗುರುಃ |
ಅನಿವಿಷ್ಟಶ್ಚ ತನ್ನಾಹಂ ಪರಿವೇತ್ತಾ ಕಥಂಚನ ॥33॥
ಇವನು ನನ್ನ ಅಣ್ಣ, ನನಗೆ ಪೂಜ್ಯನಾದವನು. ನನಗೆ ಶ್ರೇಷ್ಠನಾದ ಗುರು. ಅವನಿಗೆ ಇನ್ನೂ ವಿವಾಹವಾಗಿಲ್ಲ. ನಾನು ಅವನಿಗಿಂತ ಮುಂಚೆ ಪತ್ನಿಯನ್ನು ಸ್ವೀಕರಿಸುವುದಿಲ್ಲ.

ಮಾತರಂ ಭ್ರಾತರಂ ಜ್ಯೇಷ್ಠಂ ಕನಿಷ್ಠಾನಪರಾಜಿತಾನ್ |
ಪರಿತ್ಯಜೇದ್ಧಿ ಕೋ ನ್ವದ್ಯ ಭಯಾದಪಿ ಚ ರಾಕ್ಷಸಿ ॥34॥
ರಾಕ್ಷಸಿಯೇ, ತಾಯಿಯನ್ನೂ ಅಣ್ಣನನ್ನೂ ಅಪರಾಜಿತರಾದ ತಮ್ಮಂದಿರನ್ನೂ ಭಯದಿಂದಲಾದರೂ ಸಹ ಈ ದಿನ ಯಾವನು ಪರಿತ್ಯಾಗ ಮಾಡುತ್ತಾನೆ ?
ಕೋ ಹಿ ಸುಪ್ತಾನಿಮಾನ್ ಭ್ರಾತೄನ್ ದತ್ತ್ವಾ ರಾಕ್ಷಸಭೋಜನಮ್|
ಮಾತರಂ ಚ ನರೋ ಗಚ್ಛೇತ್ ಕಾಮಾರ್ತ ಇವ ಮದ್ವಿಧಃ ॥35॥
ಮಲಗಿದ ಈ ಅಣ್ಣತಮ್ಮಂದಿರನ್ನೂ ಮತ್ತು ತಾಯಿಯನ್ನೂ ರಾಕ್ಷಸನಿಗೆ ಆಹಾರವಾಗಿ ಕೊಟ್ಟು ಯಾವ ನನ್ನಂತಹ ಮನುಷ್ಯನು ಕಾಮಾರ್ತನಾಗುತ್ತಾನೆ?
ಹಿಡಿಂಬೀ
ಏಕಂ ತ್ವಾಂ ಮೋಕ್ಷಯಿಷ್ಯಾಮಿ ಸಹ ಮಾತ್ರಾ ಪರಂತಪ |
ಸೋದರಾನುತ್ಸೃಜ್ಯೈನಾಂಸ್ತ್ವ ಮಾರೋಹ ಜಘನಂ ಮಮ ॥36॥
ನಿನ್ನನ್ನೂ ಮತ್ತು ನಿನ್ನ ತಾಯಿಯನ್ನೂ ಬಿಟ್ಟುಬಿಡುತ್ತೇನೆ. ಉಳಿದ ನಿನ್ನ ಸಹೋದರರನ್ನು ನೀನು ಬಿಟ್ಟು ನನ್ನ ಸೊಂಟದ ಮೇಲೆ ಕುಳಿತುಕೋ.
ಭೀಮಸೇನಃ
ನಾಹಂ ಜೀವಿತುಮಾಶಂಸೇ ಭ್ರಾತೄನುತ್ಸೃಜ್ಯ ರಾಕ್ಷಸಿ |
ಯಥಾಶ್ರದ್ಧಂ ವ್ರಜೈಕಾ ಹಿ ವಿಪ್ರಿಯಂ ಮೇ ಪ್ರಭಾಷಸೇ ॥37॥
ರಾಕ್ಷಸಿಯೇ, ಸಹೋದರರನ್ನು ಪರಿತ್ಯಾಗ ಮಾಡಿ ನಾನು ಬದುಕಲು ಬಯಸುವುದಿಲ್ಲ. ನನಗೆ ಅಪ್ರಿಯವಾಗಿ ಮಾತನಾಡುತ್ತಿರುವೆ. ನೀನೊಬ್ಬಳೇ ನಿನ್ನ ಮನಸ್ಸಿಗೆ ಬಂದಂತೆ ಹೊರಟು ಹೋಗು.
ರಾಕ್ಷಸೀ
ನ ತೇಽಪ್ರಿಯಂ ಚಿಕೀರ್ಷಾಮಿ ಸರ್ವಾನೇತಾನ್ ಪ್ರಬೋಧಯ |
ಮೋಕ್ಷಯಿಷ್ಯಾಮಿ ವಃ ಕಾಮಂ ರಾಕ್ಷಸಾತ್ ಪುರುಷಾದಕಾತ್ ॥38॥
ನಿನಗೆ ಯಾವ ಅಪ್ರಿಯವನ್ನೂ ಮಾಡಲು ಬಯಸುವುದಿಲ್ಲ. ಇವರೆಲ್ಲರನ್ನೂ ಎಬ್ಬಿಸು. ನಿಮ್ಮೆಲ್ಲರನ್ನೂ ಮನುಷ್ಯಭಕ್ಷಕನಾದ ರಾಕ್ಷಸನಿಂದ ಬಿಡುಗಡೆ ಗೊಳಿಸುತ್ತೇನೆ.
ಭೀಮಸೇನಃ
ನ ಭಯಾತ್ ಬೋಧಯಿಷ್ಯಾಮಿ ಭ್ರಾತುಸ್ತವ ದುರಾತ್ಮನಃ |
ಸುಖಸುಪ್ತಾನಿಮಾನ್ ಭ್ರಾತೄನ್ ಮಾತರಂ ಚೈವ ರಾಕ್ಷಸಿ ॥39॥
ರಾಕ್ಷಸಿಯೇ, ದುರಾತ್ಮನಾದ ನಿನ್ನ ಅಣ್ಣನ ಹೆದರಿಕೆಯಿಂದ ಸುಖವಾಗಿ ಮಲಗಿರುವ ಈ ಸಹೋದರರನ್ನಾಗಲೀ ಅಥವಾ ತಾಯಿಯನ್ನಾಗಲೀ ಎಬ್ಬಿಸುವುದಿಲ್ಲ.
ನ ಹಿ ಮೇ ರಾಕ್ಷಸಾ ಭೀರು ಸೋಢುಂ ಶಕ್ತಾಃ ಪರಾಕ್ರಮಮ್ |
ನ ಮನುಷ್ಯಾ ನ ಗಂಧರ್ವಾ ನ ಯಕ್ಷಾಶ್ಚಾರುಲೋಚನೇ ॥40॥
ಭೀರುವೇ ರಾಕ್ಷಸರು ನನ್ನ ಪರಾಕ್ರಮವನ್ನು ಸಹಿಸಲು ಸಮರ್ಥರಲ್ಲ. ಚಾರುನೇತ್ರೆಯೇ, ಮನುಷ್ಯರಾಗಲೀ, ಗಂಧರ್ವರಾಗಲೀ ಅಥವಾ ಯಕ್ಷರಾಗಲೀ ಸಹ ಸಮರ್ಥರಲ್ಲ.
ಗಚ್ಛ ವಾ ತಿಷ್ಠ ವಾ ಭದ್ರೇ ಯದ್ವಾಽಪೀಚ್ಛಸಿ ತತ್ ಕುರು |
ತಂ ವಾ ಪ್ರೇಷಯ ತನ್ವಂಗಿ ರಾಕ್ಷಸಂ ಪುರುಷಾದಕಮ್ ॥41॥
ಮಂಗಳಸ್ವರೂಪಳೇ, ನೀನು ಹೋಗು ಅಥವಾ ಇಲ್ಲಿಯೇ ಇರು, ನಿನಗೆ ಹೇಗೆ ಇಷ್ಟವೋ ಅದರಂತೆ ಮಾಡು. ಅಥವಾ ಕೃಶಾಂಗಿಯೇ ನರಭಕ್ಷಕನಾದ ಆ ರಾಕ್ಷಸನನ್ನು ಬೇಕಾದರೂ ಕಳುಹಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಹಿಡಿಂಬವಧಪರ್ವಣೀ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಐವತ್ತಮೂರನೆಯ ಅಧ್ಯಾಯ ಮುಗಿಯಿತು.

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಕಾಲೇ ತದೈವ ಕುಪಿತಃ ಪ್ರಯಯೌ ಹಿಡಿಂಬೋ
ಭೀಮಂ ನಿಹಂತುಮಪಿ ತಾಂ ಚ ನಿಜಸ್ವಸಾರಂ |
ಭಕ್ಷಾರ್ಥಮೇವ ಹಿ ಪುರಾ ಸ ತು ತಾಂ ನ್ಯಯುಂಕ್ತ
ನೇತುಂ ಚ ತಾನಥ ಸಮಾಸದದಾಶು ಭೀಮಂ ॥53॥
ಅದೇ ಸಮಯದಲ್ಲಿ ಕುಪಿತನಾದ ಹಿಡಿಂಬ ಭೀಮನನ್ನೂ, ಜೊತೆಗೆ ತಂಗಿಯಾದ ಹಿಡಿಂಬಿಯನ್ನೂ ಕೊಲ್ಲಲು ಹೊರಟ. ಏಕೆಂದರೆ ಅವನು ಪಾಂಡವರನ್ನು ತಿನ್ನಲು ತರಲೆಂದೇ ಅವಳನ್ನು ಕಳಿಸಿದ್ದ.
ಸಾ ಭೀಮಮೇವ ಶರಣಂ ಪ್ರಜಗಾಮ ತಾಂ ಚ
ಭ್ರಾತೄಂಶ್ಚ ಮಾತರಮಥಾವಿತುಮಭ್ಯಯಾತ್ತಂ |

ಭೀಮಃ ಸುದೂರಮಪಕೃಷ್ಯ ಸಹೋದರಾಣಾಂ
ನಿದ್ರಾಪ್ರಭಂಗಭಯತೋ ಯುಯುಧೇಽಮುನಾ ಚ ॥54॥
ಹಿಡಿಂಬಿ ಭೀಮನನ್ನೇ ಮೊರೆಹೊಕ್ಕಳು. ಭೀಮ ಅವಳನ್ನೂ ಸೋದರರನ್ನೂ ತಾಯಿಯನ್ನೂ ಕಾಪಾಡುವುದಕ್ಕಾಗಿ ಹಿಡಿಂಬನ ಮೇಲೇರಿಹೋದ. ಸೋದರರಿಗೆ ನಿದ್ರಾಭಂಗವಾದೀತೆಂದು ಭಯದಿಂದ ಅವನನ್ನು ಬಲುದೂರಕ್ಕೆ ಸೆಳೆದೊಯ್ದು ಅವನೊಡನೆ ಹೋರಾಟಕ್ಕೆ ಇಳಿದ.
* * * *

ನೂರ ಐವತ್ತನಾಲ್ಕನೆಯ ಅಧ್ಯಾಯ
(ಹಿಡಂಬಿಯು ವಿಳಂಬ ಮಾಡುತ್ತಿರಲು ಅಲ್ಲಿಗೆ ಹಿಡಿಂಬನ ಆಗಮನ)
ವೈಶಂಪಾಯನ
ತಾಂ ವಿದಿತ್ವಾ ಚಿರಗತಾಂ ಹಿಡಿಂಬೋ ರಾಕ್ಷಸೇಶ್ವರಃ।
ಅವತೀರ್ಯ ದ್ರುಮಾತ್ ತಸ್ಮಾದಾಜಗಾಮಾಥ ಪಾಂಡವಾನ್ ॥1॥
ಹಿಡಿಂಬೆಯು ಹೊರಟು ಬಹಳ ಸಮಯವಾದುದನ್ನು ಗಮನಿಸಿ ರಾಕ್ಷಸೇಶ್ವರನಾದ ಹಿಡಿಂಬನು ಆ ಸಾಲವೃಕ್ಷದಿಂದ ಇಳಿದು ಪಾಂಡವರಿದ್ದ ಕಡೆಗೆ ಬಂದನು.
ಲೋಹಿತಾಕ್ಷೋ ಮಹಾಬಾಹುರೂರ್ಧ್ವಕೇಶೋ ಮಹಾಬಲಃ।
ಮೇಘಸಂಘಾತವರ್ಷ್ಮಾ ಚ ತೀಕ್ಷ್ಣದಂಷ್ಟ್ರೋಜ್ಜ್ವಲಾನನಃ ॥2॥
ತಳಂ ತಳೇನ ಸಂಹತ್ಯ ಬಾಹೂ ವಿಕ್ಷಿಪ್ಯ ಚಾಸಕೃತ್।
ಉದ್ವೃತ್ತನೇತ್ರಃ ಸಂಕ್ರುದ್ಧೋ ದಂತಾನ್ ದಂತೇಷು ನಿಷ್ಕೃಷನ್ ॥3॥
ಕೋಽದ್ಯ ಮೇ ಭೋಕ್ತುಕಾಮಸ್ಯ ವಿಘ್ನಂ ಚರತಿ ದುರ್ಮತಿಃ।
ನ ಬಿಭೇತಿ ಹಿಡಿಂಬೀ ಚ ಪ್ರೇಷಿತಾ ಕಿಮನಾಗತಾ ॥4॥
ಕೆಂಪಾದ ಕಣ್ಣುಳ್ಳವನೂ, ಮಹಾಬಾಹುವೂ, ಊರ್ಧ್ವಕೇಶನೂ, ಮಹಾಬಲನೂ, ಮೇಘಸಮೂಹದ ಬಣ್ಣವುಳ್ಳವನೂ, ಹರಿತವಾದ ಕೋರೆದಾಡೆಯುಳ್ಳವನೂ, ಉಜ್ವಲವಾದ ಮುಖವುಳ್ಳವನೂ ಆದ ಅವನು ಕೈಯಿಂದ ಕೈಯನ್ನು ಹೊಸಕುತ್ತಾ ಮತ್ತೆ ಮತ್ತೆ ಬಾಹುಗಳನ್ನು ಎತ್ತಿ, ಕೋಪದಿಂದ ಅರಳಿದ ಕಣ್ಣುಳ್ಳವನಾಗಿ ಹಲ್ಲುಗಳಿಂದ ಕಡಿಯುತ್ತಾ, ಹಸಿದು ಆಹಾರವನ್ನು ಬಯಸುತ್ತಿರುವ ನನಗೆ ಈ ದಿನ ವಿಘ್ನವನ್ನು ಉಂಟುಮಾಡುತ್ತಿರುವ ಈ ದುಷ್ಟನು ಯಾರು? ನಾನು ಕಳುಹಿಸಿದ ಹಿಡಂಬಿಗೂ ಸಹ ಹೆದರಿಕೆ ಇಲ್ಲ. ಅವಳು ಏಕೆ ಬರಲಿಲ್ಲ? (ಎಂದು ಕಿರುಚಿದನು)
ತಮಾಪತಂತಂ ದೃಷ್ಟ್ವೈವ ತಥಾರೂಪಂ ಭಯಂಕರಮ್।
ಹಿಡಿಂಬ್ಯುವಾಚ ವಿತ್ರಸ್ತಾ ಭೀಮಸೇನಮಿದಂ ವಚಃ ॥5॥
ಅಂತಹ ರೂಪವನ್ನು ಧರಿಸಿ ಭಯಂಕರನಾಗಿ ಎರಗುತ್ತಿರುವ ಅವನನ್ನು ನೋಡಿ ಹೆದರಿದ ಹಿಡಿಂಬೆಯು ಭೀಮಸೇನನನ್ನು ಕುರಿತು ಹೀಗೆ ಹೇಳಿದಳು.
ಆಪತತ್ಯೇವ ದುಷ್ಟಾತ್ಮಾ ಸಂಕ್ರುದ್ಧಃ ಪುರುಷಾದಕಃ।
ತ್ವಂ ಚಾಪಿ ಭ್ರಾತೃಭಿಃ ಸಾರ್ಧಂ ಯದ್ ಬ್ರವೀಮಿ ತಥಾ ಕುರು ॥6॥
ನರಭಕ್ಷಕನೂ, ದುಷ್ಟಾತ್ಮನೂ ಆದ ನನ್ನ ಅಣ್ಣನು ಕೋಪದಿಂದ ಮೇಲೆರಗುತ್ತಿದ್ದಾನೆ. ನೀನೂ ಮತ್ತು ನಿನ್ನ ಸಹೋದರರೂ ನಾನು ಹೇಳಿದಂತೆ ಮಾಡಿ.
ಅಹಂ ಕಾಮಗಮಾ ಚೈವ ರಕ್ಷೋಬಲಸಮನ್ವಿತಾ।
ಆರುಹೇಮಾಂ ಮಮ ಶ್ರೋಣಿಂ ನೇಷ್ಯಾಮಿ ತ್ವಾಂ ವಿಹಾಯಸಾ ॥7॥
ನಾನು ರಾಕ್ಷಸಬಲದಿಂದ ಯುಕ್ತಳಾಗಿ ಇಷ್ಟಬಂದ ಕಡೆಗೆ (ಇಷ್ಟಬಂದ ದಾರಿಯಲ್ಲಿ) ಹೋಗುವ ಸಾಮರ್ಥ್ಯವನ್ನು ಪಡೆದಿದ್ದೇನೆ. ನನ್ನ ಸೊಂಟದ ಮೇಲೆ ಕುಳಿತುಕೋ, ನಿನ್ನನ್ನು ಆಕಾಶಮಾರ್ಗದಲ್ಲಿ ಕರೆದುಕೊಂಡು ಹೋಗುವೆನು.
ಪ್ರಬೋಧಯೈನಾನ್ ಸೋದರ್ಯಾನ್ ಮಾತರಂ ಚ ನರರ್ಷಭ।
ಸರ್ವಾನೇವ ಗಮಿಷ್ಯಾಮಿ ಗೃಹೀತ್ವಾ ವ್ಯೋಮಸಕ್ತವತ್ ॥8॥
ನರಶ್ರೇಷ್ಠನೇ, ಈ ನಿನ್ನ ತಾಯಿಯನ್ನೂ ಮತ್ತು ಸೋದರರನ್ನೂ ಸಹ ಎಬ್ಬಿಸು. ನಾನು ಎಲ್ಲರನ್ನೂ ಎತ್ತಿಕೊಂಡು ಆಕಾಶಲಗ್ನಳಾದವಳಂತೆ ಆಕಾಶಮಾರ್ಗದಲ್ಲಿ ಕರೆದುಕೊಂಡು ಹೋಗುವೆನು.
ಭೀಮಸೇನಃ
ಮಾ ಭೈಸ್ತ್ವಂ ವಿಪುಲಶ್ರೋಣಿ ನೈವ ಕಿಂಚನ್ಮಯಿ ಸ್ಥಿತೇ।
ಅಹಮೇನಂ ಹನಿಷ್ಯಾಮಿ ಪಶ್ಯಂತ್ಯಾಸ್ತೇ ಸುಮಧ್ಯಮೇ ॥9॥
ವಿಪುಲಶ್ರೋಣಿಯೇ ಹೆದರಬೇಡ, ನನ್ನ ಎದುರಲ್ಲಿ ನಿನ್ನ ಅಣ್ಣನು ಏನೂ ಅಲ್ಲ. ಸುಮಧ್ಯಮೆಯೇ, ನಿನ್ನ ಕಣ್ಣೆದುರಿಗೇ ನಾನು ಅವನನ್ನು ಕೊಲ್ಲುವೆನು.
ನಾಯಂ ಪ್ರತಿಬಲೋ ಭೀರು ರಾಕ್ಷಸಾಪಶದೋ ಮಮ।
ಸೋಢುಂ ಯುಧಿ ಪರಿಸ್ಪಂದಮಶಕ್ತಾಃ ಸರ್ವರಾಕ್ಷಸಾಃ ॥10॥
ಭೀರುವೇ, ಈ ರಾಕ್ಷಸಾಧಮನು ನನಗೆ ಸರಿಸಾಟಿಯಲ್ಲ. ಎಲ್ಲ ರಾಕ್ಷಸರೂ ಸೇರಿದರೂ ಯುದ್ಧದಲ್ಲಿ ನನ್ನ ಒಂದು ಚಲನೆಯನ್ನು

ಸಹಿಸಲು ಸಮರ್ಥರಲ್ಲ.
ಪಶ್ಯ ಬಾಹೂ ಸುವೃತ್ತೌ ಮೇ ಹಸ್ತಿಹಸ್ತೋಪಮೌ ಶುಭೌ |
ಊರೂ ಪರಿಘಸಂಕಾಶೌ ಸಂಹತಂ ಚಾಪ್ಯುರೋ ಮಮ ||11||
ಆನೆಯ ಸೊಂಡಿಲಿನಂತಿರುವ ಅತ್ಯಂತ ಪುಷ್ಟವಾದ, ಶುಭವಾದ ನನ್ನ ಬಾಹುಗಳನ್ನು ನೋಡು. ನನ್ನ ತೊಡೆಗಳು ಕಬ್ಬಿಣದ ತೊಲೆಗಳಂತಿವೆ. ನನ್ನ ಎದೆಯು ಸಂಹತವಾಗಿದೆ. (ಗಟ್ಟಿಯಾಗಿದೆ)
ವಿಕ್ರಮಂ ಮೇ ಮಹೇಂದ್ರಸ್ಯ ಯಥಾ ದ್ರಕ್ಷ್ಯಸಿ ಶೋಭನೇ |
ಮಾಽವಸಂಸ್ಥಾಃ ಪೃಥುಶ್ರೋಣಿ ಮತ್ವಾ ಮಾಮಿಹ ಮಾನುಷಮ್ ||12||
ಶೋಭನಳೇ, ನನ್ನ ವಿಕ್ರಮವು ಇಂದ್ರನ ವಿಕ್ರಮಕ್ಕೆ ಹೋಲುವುದನ್ನು ನೀನು ನೋಡುವಿ. ಪೃಥುಶ್ರೋಣಿಯೇ, ನನ್ನನ್ನು ಮನುಷ್ಯನೆಂದು ತಿಳಿದು ಅವಮಾನಿಸಬೇಡ.
ಹಿಡಿಂಬೀ
ನಾವಮನ್ಯೇ ನರವ್ಯಾಘ್ರ ತ್ವಾಮಹಂ ದೇವರೂಪಿಣಮ್ |
ದೃಷ್ಟಾಪ್ರದಾನಾಸ್ತು ಮಯಾ ಮಾನುಷೇಷ್ವಿಹ ರಾಕ್ಷಸಾಃ ||13||
ನರಶ್ರೇಷ್ಠನೇ, ದೇವರೂಪಿಯಾದ ನಿನ್ನನ್ನು ನಾನು ಅವಮಾನಿಸುವುದಿಲ್ಲ. ಆದರೆ ರಾಕ್ಷಸರು ಮನುಷ್ಯರಿಗೆ ತಮ್ಮ ಕನ್ಯೆಯನ್ನು ಕೊಡುವ ಪದ್ಧತಿ ಇಲ್ಲದಿರುವುದರಿಂದ ಹಿಡಿಂಬನು ನಿನಗೆ ನನ್ನನ್ನು ಕೊಡುವುದಿಲ್ಲ ಎಂದು ಹೆದರಿದ್ದೇನೆ.
ವೈಶಂಪಾಯನಃ
ತಥಾ ಸಂಜಲ್ಪತಸ್ತಸ್ಯ ಭೀಮಸೇನಸ್ಯ ಭಾರತ |
ವಾಚಃ ಶ್ರುತ್ವಾ ಚ ತಾಃ ಕ್ರುದ್ಧೋ ರಾಕ್ಷಸಃ ಪುರುಷಾದಕಃ |
ಪುಂಸ್ಕಾಮಾಂ ಶಂಕಮಾನಶ್ಚ ಚುಕೋಪ ಸ ನಿಶಾಚರಃ ||14||
ಭಾರತನೇ, ಹೀಗೆ ಮಾತನಾಡುತ್ತಿದ್ದ ಭೀಮಸೇನನ ಮಾತುಗಳನ್ನು ಕೇಳಿ ನರಭಕ್ಷಕನಾದ ರಾಕ್ಷಸನು ಕೋಪಗೊಂಡು ತನ್ನ ತಂಗಿಯು ಮನುಷ್ಯನನ್ನು ಕಾಮಿಸುತ್ತಿರುವಳೆಂದು ಶಂಕಿಸಿ ಆ ನಿಶಾಚರನು ಇನ್ನೂ ಕೋಪಗೊಂಡನು.
ಸಂಕ್ರುದ್ಧೋ ರಾಕ್ಷಸಸ್ತಸ್ಯಾ ಭಗಿನ್ಯಾಃ ಕುರುಸತ್ತಮ |
ಸ ದದರ್ಶಾಗ್ರತಸ್ತಸ್ಯ ಭಗಿನೀಂ ಪುರುಷಾದಕಃ ||15||
ಕುರುಶ್ರೇಷ್ಠನೇ ತನ್ನ ತಂಗಿಯ ಮೇಲೆ ಸಂಕ್ರುದ್ಧನಾಗಿ ಬಂದ ಆ ನರಭಕ್ಷಕನಾದ ರಾಕ್ಷಸನು ಎದುರಿಗೆ ತನ್ನ ತಂಗಿಯನ್ನು ನೋಡಿದನು.
ವಿಸ್ಫಾರ್ಯ ವಿಪುಲೇ ನೇತ್ರೇ ತತಸ್ತಾಮಿದಮಬ್ರವೀತ್ |
ಕಸ್ಮಾನ್ಮೇ ಭೋಕ್ತುಕಾಮಸ್ಯ ವಿಘ್ನಂ ಚರಸಿ ದುರ್ಮತೇ |
ನ ಬಿಭೇಷಿ ಹಿಡಿಂಬೇ ಕಿಂ ಕಾಮಾದ್ ವೈ ವಿಪ್ರಮೋಹಿತಾ ||16||
ತನ್ನ ದೊಡ್ಡ ಕಣ್ಣುಗಳನ್ನು ಇನ್ನೂ ಅರಳಿಸಿ ಹಿಡಿಂಬೆಯನ್ನು ಕುರಿತು ದುರ್ಮತಿಯೇ, ಭೋಜನವನ್ನು ಬಯಸಿದ ನನಗೆ ಏಕೆ ವಿಘ್ನವನ್ನು ಉಂಟು ಮಾಡುತ್ತಿರುವೆ? ಹಿಡಿಂಬೆಯೇ, ನಿನಗೆ ಹೆದರಿಕೆ ಇಲ್ಲ ಅಥವಾ ಕಾಮಮೋಹಿತಳಾಗಿದ್ದೀಯಾ?
ಧಿಕ್ ತ್ವಾಂ ಪುರುಷಕಾಮಾಂ ವೈ ಮಮ ವಿಪ್ರಿಯಕಾರಿಣೀಮ್ |
ಕುಲಸ್ಯ ರಾಕ್ಷಸೇಂದ್ರಾಣಾಂ ಸರ್ವೇಷಾಮಯಶಸ್ಕರೀಮ್ ||17||
ನನಗೆ ಅಪ್ರಿಯವನ್ನು ಉಂಟುಮಾಡಿ ಮನುಷ್ಯನನ್ನು ಕಾಮಿಸುವ ನಿನಗೆ ಧಿಕ್ಕಾರವಿರಲಿ. ನೀನು ರಾಕ್ಷಸೇಂದ್ರರ ಕುಲಕ್ಕೆ ಅಪಕೀರ್ತಿಯನ್ನು ತಂದವಳು.
ಯಾನಿಮಾನಾಶ್ರಿತಾಽಕಾರ್ಷೀರ್ವಿಪ್ರಿಯಂ ಸುಮಹನ್ಮಮ |
ಏಷ ತಾನಾಶು ಸರ್ವಾಂಸ್ತು ಹನಿಷ್ಯಾಮಿ ತ್ವಯಾ ಸಹ ||18||
ಯಾವ ಇವರನ್ನು ಆಶ್ರಯಿಸಿ ನನಗೆ ನೀನು ದೊಡ್ಡ ಅಪ್ರಿಯವನ್ನು ಉಂಟು ಮಾಡಿದ್ದೀಯೋ, ಆ ಇವರೆಲ್ಲರನ್ನೂ ತಕ್ಷಣದಲ್ಲಿಯೇ ನಿನ್ನ ಜೊತೆಯಲ್ಲಿಯೇ ಕೊಲ್ಲುವೆನು.
ವೈಶಂಪಾಯನ:
ಏವಮುಕತ್ವ ಹಿಡಿಂಬೀಂ ಸ ಹಿಡಿಂಬೋ ಲೋಹಿತೇಕ್ಷಣಃ |
ವಧಾಯಾಭಿಪಪಾತೈನಾನ್ ದಂತಾನ್ ದಂತೇಷು ನಿಷ್ಕಷನ್ ||19||
ಹಿಡಂಬಿಗೆ ಹೀಗೆ ಹೇಳಿ ರಕ್ತನೇತ್ರನಾದ ಹಿಡಿಂಬನು ಹಲ್ಲುಗಳಿಂದ ಹಲ್ಲುಗಳನ್ನು ಕಡಿಯುತ್ತಾ ಕೊಲ್ಲುವ ಉದ್ದೇಶದಿಂದ ಪಾಂಡವರ ಮೇಲೆ ಎರಗಿದನು.
ಗರ್ಜಂತಮೇವಂ ವಿಜನೇ ಭೀಮಸೇನೋಽಭಿವೀಕ್ಷ್ಯ ತಮ್ |
ರಕ್ಷನ್ ಪ್ರಬೋಧಂ ಭ್ರಾತೄಣಾಂ ಮಾತುಶ್ಚ ಪರವೀರಹಾ ||20||
ಕಾಡಿನಲ್ಲಿ ಹೀಗೆ ಗರ್ಜಿಸುತ್ತಿರುವ ಅವನನ್ನು ನೋಡಿ ಪರವೀರನಾಶಕನಾದ ಭೀಮಸೇನನು ತಾಯಿಯು ಮತ್ತು ಸಹೋದರರು ಎಚ್ಚರವಾಗದಂತೆ ನೋಡಿಕೊಂಡನು.
ಆಪತಂತಂ ಚ ಸಂಪ್ರೇಕ್ಷ್ಯ ಭೀಮಃ ಪ್ರಹರತಾಂ ವರಃ |
ಭರ್ತ್ಸಯಾಮಾಸ ತೇಜಸ್ವೀ ತಿಷ್ಠ ತಿಷ್ಠೇತಿ ಚಾಬ್ರವೀತ್ ||21||
ಪ್ರಹಾರಮಾಡುವವರಲ್ಲಿ ಶ್ರೇಷ್ಠನಾದ, ತೇಜಸ್ವಿಯಾದ ಭೀಮಸೇನನು ಮೇಲೆರಗುತ್ತಿರುವ ಅವನನ್ನು ನೋಡಿ, ಮೂದಲಿಸಿ ನಿಲ್ಲು ನಿಲ್ಲು ಎಂದು ಹೇಳಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುಃಪಂಚಾಶದಧಿಕಶತತಮೋಽಧ್ಯಾಯಃ ||

॥ ಇತಿ ಹಿಡಿಂಬವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಐವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
*****
ನೂರ ಐವತ್ತೈದನೆಯ ಅಧ್ಯಾಯ
(ಭೀಮ ಹಿಡಿಂಬರ ವಿವಾದ, ಅವರ ಯುದ್ಧದ ಪ್ರಾರಂಭ, ಪಾಂಡವರ ಎಚ್ಚರಿಕೆ)
ವೈಶಂಪಾಯನಃ
ಭೀಮಸೇನಸ್ತು ತಂ ದೃಷ್ಟ್ವಾ ರಾಕ್ಷಸಂ ಪ್ರಹಸನ್ನಿವ |
ಭಗಿನೀಂ ಪ್ರತಿ ಸಂಕ್ರುದ್ಧಮಿದಂ ವಚನಮಬ್ರವೀತ್ ॥1॥
ಭೀಮಸೇನನಾದರೋ ಆ ರಾಕ್ಷಸನನ್ನು ನೋಡಿ ಹಾಸ್ಯವನ್ನು ಮಾಡುತ್ತಾ ತಂಗಿಯ ಮೇಲೆ (ಸಂ)ಕ್ರುದ್ಧನಾದ ಅವನನ್ನು ಕುರಿತು ಹೀಗೆ ಮಾತನಾಡಿದನು.
ಕಿಂ ತೇ ಪ್ರಿಯಂ ಹಿಡಿಂಬೈತೈಃ ಸುಖಸುಪ್ತೈಃ ಪ್ರಬೋಧಿತೈಃ |
ಮಾಮಾಸಾದಯ ದುರ್ಬುದ್ಧೇ ತರಸಾ ತ್ವಂ ನರಾಶನ ॥2॥
ಹಿಡಿಂಬನೇ ಸುಖವಾಗಿ ಮಲಗಿರುವ ಇವರನ್ನು ಎಬ್ಬಿಸುವುದರಿಂದ ನಿನಗೇನು ಲಾಭ? ದುರ್ಬುದ್ಧಿಯಾದ ನರಭಕ್ಷಕನೇ, ಬೇಗ ನನ್ನನ್ನು ಸಮೀಪಿಸು.
ಮಯ್ಯೇವ ಪ್ರಹರೈಹಿ ತ್ವಂ ನ ಸ್ತ್ರಿಯಂ ಹಂತುಮರ್ಹಸಿ |
ವಿಶೇಷತೋ ನಾಪಕೃತೇ ಪರೇಣಾಪಕೃತೇ ಸತಿ ॥3॥
ಬಂದು ನನಗೇ ಪ್ರಹಾರವನ್ನು ಮಾಡು. ಸ್ವತಃ ಅಪಕಾರ ಮಾಡದೇ ಕಾಮದಿಂದ ಅಪಕೃತಳಾದ ಸ್ತ್ರೀಯನ್ನು ಕೊಲ್ಲುವುದು ಯೋಗ್ಯವಲ್ಲ.
ನ ಹೀಯಂ ಸ್ವವಶಾ ಬಾಲಾ ಮಾಂ ತು ಕಾಮಯತೇಽದ್ಯ ವೈ |
ಚೋದಿತೈಷಾ ಹ್ಯನಂಗೇನ ಶರೀರಾಂತರಚಾರಿಣಾ ॥4॥
ಈ ಬಾಲೆಯು ತನ್ನ ಅಧೀನದಲ್ಲಿ ತಾನು ಇಲ್ಲ. ಶರೀರದ ಒಳಗಿರುವ ಮನ್ಮಥನಿಂದ ಪ್ರೇರಿತಳಾಗಿ ಈ ದಿನ ನನ್ನನ್ನು ಕಾಮಿಸುತ್ತಿದ್ದಾಳೆ.
ಭಗಿನೀ ತವ ದುರ್ಬುದ್ಧೇ ರಾಕ್ಷಾಸಾನಾಂ ಯಶೋಹರ |
ತ್ವನ್ನಿಯೋಗೇನ ಚಾಯಾತಾ ರೂಪಂ ಮಮ ನಿರೀಕ್ಷ್ಯ ಚ |
ಕಾಮಯತ್ಯೇವಮವಶಾ ನೈಷಾ ದೂಷಯತೇ ಕುಲಮ್ ॥5॥
ರಾಕ್ಷಸರಿಗೆ ಅಪಕೀರ್ತಿಯನ್ನು ತರುವ ಎಲೈ ದುರ್ಬುದ್ಧಿಯೇ, ನಿನ್ನ ತಂಗಿಯು ನಿನ್ನ ಆದೇಶದಂತೆ ನನ್ನ ಬಳಿಗೆ ಬಂದು ನನ್ನ ರೂಪವನ್ನು ನೋಡಿ ನನ್ನನ್ನು ಕಾಮಿಸುತ್ತಿದ್ದಾಳೆ. ನಿನ್ನ ಕುಲವನ್ನು ದೂಷಿಸುತ್ತಿಲ್ಲ.
ಅನಂಗೇನ ಕೃತೇ ದೋಷೇ ನೇಮಾಂ ತ್ವಾಮಿಹ ರಾಕ್ಷಸ |
ಮಯಿ ತಿಷ್ಠತಿ ದುಷ್ಟಾತ್ಮಾನ್ ಭಗಿನೀಂ ಹಂತುಮರ್ಹಸಿ ॥6॥
ರಾಕ್ಷಸನೇ, ದುಷ್ಟಾತ್ಮನೇ, ಮನ್ಮಥನಿಂದ ದೋಷ ಉಂಟಾಗಿರುವಾಗ ನನ್ನ ಎದುರಿಗೆ ನೀನು ಇವಳನ್ನು ಕೊಲ್ಲಲು ಸಾಧ್ಯವಿಲ್ಲ.
ಸಮಾಗಚ್ಛ ಮಯಾ ಸಾರ್ಧಮೇಕೇನೈಕೋ ನರಾಶನ |
ಅಹಮೇವ ತು ನೇಷ್ಯಾಮಿ ತ್ವಾಮದ್ಯ ಯಮಸಾದನಮ್ | ॥7॥
ನರಭಕ್ಷಕನೇ, ನನ್ನನ್ನು ಸಮೀಪಿಸಿ ಒಬ್ಬನ ಎದುರಿಗೆ ಒಬ್ಬನಾಗಿ ಯುದ್ಧ ಮಾಡು. ನಾನೇ ನಿನ್ನನ್ನು ಈ ದಿನ ಯಮಪಟ್ಟಣಕ್ಕೆ ಕಳುಹಿಸುವೆನು.
ಅದ್ಯ ತೇ ತಳನಿಷ್ಪಿಷ್ಟಂ ಶಿರೋ ರಾಕ್ಷಸ ದೀರ್ಯತೇ |
ಕುಂಜರಸ್ಯೇವ ನಿಷ್ಪಿಷ್ಟಂ ಸಿಂಹೇನೈವ ಬಲೀಯಸಾ | ॥8॥
ರಾಕ್ಷಸನೇ, ಈ ದಿನ ನನ್ನ ಹಸ್ತದ ತಳಪ್ರಹಾರಕ್ಕೆ ಸಿಲುಕಿದ ನಿನ್ನ ಶಿರಸ್ಸು ಬಲಿಷ್ಠವಾದ ಸಿಂಹದ ಹೊಡೆತಕ್ಕೆ ಸಿಕ್ಕಿ ಸೀಳಿಹೋದ ಆನೆಯ ತಲೆಯಂತೆ ಸೀಳಿ ಹೋಗುತ್ತದೆ.
ಅದ್ಯ ಗಾತ್ರಾಣಿ ಗೃಧ್ರಾಶ್ಚ ಬಲಾ ಗೋಮಾಯವಸ್ತಥಾ |
ಕರ್ಷಂತು ಭುವಿ ಸಂಹೃಷ್ಟಾ ನಿಹತಸ್ಯ ಮಯಾ ಮೃಧೇ ॥9॥
ಈ ದಿನ ಯುದ್ಧದಲ್ಲಿ ನನ್ನಿಂದ ಕೊಲ್ಲಲ್ಪಡುವ ನಿನ್ನ ಶರೀರವನ್ನು ಹದ್ದುಗಳು, ಬಲಪಕ್ಷಿಗಳು, ನರಿಗಳು, ಭೂಮಿಯ ಮೇಲೆ ಸಂತೋಷದಿಂದ ಎಳೆದಾಡಲಿ.
ಕ್ಷಣೇನಾದ್ಯ ಕರಿಷ್ಯಾಮಿ ವನಂ ನಿಹತಕಂಟಕಮ್ |
ಪುರಸ್ತಾದ್ ದೂಷಿತಂ ನಿತ್ಯಂ ತ್ವಯಾ ಭಕ್ಷಯತಾ ನರಾನ್ ॥10॥
ಹಿಂದೆ ನೀನು ನರಭಕ್ಷಕನಾಗಿ ದೂಷಿಸಿದ ಈ ಕಾಡನ್ನು ಈ ದಿನ ಒಂದು ಕ್ಷಣದಲ್ಲಿ ನಿರ್ಬಾಧವನ್ನಾಗಿ ಮಾಡುವೆನು.
ಅದ್ಯ ತ್ವಾಂ ಭಗಿನೀ ಪಾಪಂ ಕೃಷ್ಯಮಾಣಂ ಮಯಾ ಭುವಿ | ದ್ರಕ್ಷ್ಯತ್ಯದ್ರಿಪ್ರತೀಕಾಶಂ ಸಿಂಹೇನೇವ ಮಹಾದ್ವಿಪಮ್ ॥11॥
ಈ ದಿನ ಸಿಂಹವು ಆನೆಯನ್ನು ಎಳೆದಾಡಿದಂತೆ ಬೆಟ್ಟದಂತಿರುವ ನಿನ್ನನ್ನು ನಾನು ಭೂಮಿಯ ಮೇಲೆ ಎಳೆದಾಡುವುದನ್ನು ನಿನ್ನ ತಂಗಿಯು ನೋಡುವಳು.
ನಿರಾಬಾಧಂ ತ್ವಯಿ ಹತೇ ಮಯಾ ರಾಕ್ಷಸಪಾಂಸನ |
ವನಮೇತಚ್ಚರಿಷ್ಯಂತಿ ಪುರುಷಾ ವನಚಾರಿಣಃ ॥12॥

ರಾಕ್ಷಸಾಧಮನೇ, ನೀನು ನನ್ನಿಂದ ಕೊಲ್ಲಲ್ಪಟ್ಟ ಮೇಲೆ ವನಚಾರಿಗಳಾದ ಪುರುಷರು ಈ ಕಾಡಿನಲ್ಲಿ ನಿರ್ಬಾಧವಾಗಿ ಸಂಚರಿಸುವರು.
ರಾಕ್ಷಸಃ
ಗರ್ಜಿತೇನ ಭೃಶಂ ಕಿಂ ತೇ ಕತ್ಥನೇನ ಚ ಮಾನವ |
ಕೃತ್ವಾ ತು ಕರ್ಮಣಾ ಸರ್ವಂ ಕತ್ಥೇಥಾ ಮಾ ಚಿರಂ ಕೃಥಾಃ ॥13॥
ಮನುಷ್ಯನೇ, ಗಟ್ಟಿಯಾಗಿ ಗರ್ಜಿಸುವುದರಿಂದ ಅಥವಾ ಅಹಂಕಾರದ ಮಾತುಗಳಿಂದ ಏನು ಪ್ರಯೋಜನ? ಕ್ರಿಯೆಯಿಂದ ಎಲ್ಲವನ್ನೂ ಸಾಧಿಸಿ ಅನಂತರ ಜಂಭವನ್ನು ಕೊಚ್ಚಿಕೋ. ತಡಮಾಡಬೇಡ.
ಬಲಿನಂ ಮನ್ಯಸೇ ಯಸ್ಮಾದಾತ್ಮಾನಂ ಸಪರಾಕ್ರಮಮ್ |
ಜ್ಞಾಸ್ಯಸ್ಯದ್ಯ ಸಮಾಗಮ್ಯ ಮಯಾಽಽತ್ಮಾನಂ ಬಲಾಧಿಕಮ್ ॥14॥
ನೀನು ನಿನ್ನನ್ನು ನನಗಿಂತ ಬಲಿಷ್ಠ ಮತ್ತು ಪರಾಕ್ರಮಶಾಲಿಯೆಂದು ತಿಳಿದಿರುವೆ. ಈ ದಿನ ನನ್ನ ಜೊತೆಯಲ್ಲಿ ಸೆಣೆಸಿ ನನ್ನನ್ನು ನಿನಗಿಂತ ಬಲಾಧಿಕನೆಂದು ತಿಳಿಯುವಿ.
ನೇಮಾಂಸ್ತಾವದ್ಧನಿಷ್ಯಾಮಿ ಸ್ವಪಂತ್ವೇತೇ ಯಥಾಸುಖಮ್ |
ಏಷ ತ್ವಾಮೇವ ದುರ್ಬುದ್ಧೇ ಹನಿಷ್ಯೇಽಪ್ರಿಯವಾದಿನಮ್ ॥15॥
ಮೊದಲು ಇವರುಗಳನ್ನು ಕೊಲ್ಲುವುದಿಲ್ಲ. ಇವರು ಸುಖವಾಗಿ ಮಲಗಿರಲಿ. ದುರ್ಬುದ್ಧಿಯೇ ಅಪ್ರಿಯವನ್ನು ಮಾತನಾಡುವ ನಿನ್ನನ್ನೇ ಮೊದಲು ಕೊಲ್ಲುವೆನು.
ಪೀತ್ವಾ ತವಾಸೃಗ್ಗಾತ್ರೇಭ್ಯಸ್ತತಃ ಪಶ್ಚಾದಿಮಾನಪಿ |
ಹನಿಷ್ಯಾಮಿ ತತಃ ಕ್ಷುದ್ರಾಮಿಮಾಂ ವಿಪ್ರಿಯಕಾರಿಣೀಮ್ ॥16॥
ನಿನ್ನ ಶರೀರದಿಂದ ಸೂಸುವ ರಕ್ತವನ್ನು ಕುಡಿದು ಅನಂತರ ಇವರನ್ನೂ ಮತ್ತು ನನಗೆ ಅಪ್ರಿಯವನ್ನುಂಟು ಮಾಡುವ ಕ್ಷುದ್ರಳಾದ ಇವಳನ್ನೂ ಕೊಲ್ಲುವೆನು.
ವೈಶಂಪಾಯನ ಃ
ಏವಮುಕತ್ವ ಮಹಾಬಾಹುಃ ಸನ್ನದ್ಧಃ ಪುರುಷಾದಕ ಃ |
ಅಭ್ಯಧಾವತ್ ಸುಸಂಕ್ರುದ್ಧೋ ಭೀಮಸೇನಮರಿಂದಮಮ್ ॥17॥
ಹೀಗೆ ಮಾತನಾಡಿ ಆ ಮಹಾಬಾಹುವಾದ ನರಭಕ್ಷಕನು ಸನ್ನದ್ಧನಾಗಿ ಬಹಳ ಕೋಪದಿಂದ ಅರಿಂದಮನಾದ ಭೀಮಸೇನನ ಕಡೆಗೆ ಧಾವಿಸಿ ಬಂದನು.
ತಸ್ಯಾಭಿಪತತಸ್ತೂರ್ಣಂ ಭೀಮೋ ಭೀಮಪರಾಕ್ರಮಃ |
ವೇಗೇನ ಪ್ರಸೃತಂ ಬಾಹುಂ ನಿಜಗ್ರಾಹ ಹಸನ್ನಿವ ॥18॥
ಭೀಮಪರಾಕ್ರಮನಾದ ಭೀಮನು ಮೇಲೆ ಎರಗುತ್ತಿರುವ ಅವನನ್ನು ನೋಡಿ ನಗುತ್ತಾ, ಚಾಚಿದ ಅವನ ಬಾಹುವನ್ನು ಶೀಘ್ರವಾಗಿ ಹಿಡಿದನು.
ನಿಗೃಹ್ಯ ತಂ ಬಲಾದ್ ಭೀಮೋ ವಿಸ್ಫುರಂತಂ ಚಕರ್ಷ ಹ |
ತಸ್ಮಾದ್ ದೇಶಾದ್ ಧನೂಂಷ್ಯಷ್ಟೌ ಸಿಂಹಃ ಕ್ಷುದ್ರಮೃಗಂ ಯಥಾ ॥19॥
ಬಾಹುವನ್ನು ಹಿಡಿದು ಅವನನ್ನು ನಿಗ್ರಹಿಸಿದ ಭೀಮನು, ಬಿಡಿಸಿಕೊಳ್ಳಲು ಒದ್ದಾಡುತ್ತಿದ್ದ ಅವನನ್ನು ಸಿಂಹವು ಕ್ಷುದ್ರಮೃಗವನ್ನು ಎಳೆದಂತೆ ಆ ಸ್ಥಳದಿಂದ ಎಂಟು ಧನುಸ್ಸಿನಷ್ಟು ದೂರ ಎಳೆದುಕೊಂಡು ಹೋದನು.
ತದಾ ಸ ರಾಕ್ಷಸಃ ಕ್ರುದ್ಧಃ ಪಾಂಡವೇನ ಬಲಾದ್ ಹೃತಃ |
ಭೀಮಸೇನಂ ಸಮಾಲಿಂಗ್ಯ ವ್ಯನದದ್ ಭೈರವಂ ಸ್ವನಮ್ ॥20॥
ಪಾಂಡುಪುತ್ರನಾದ ಭೀಮಸೇನನಿಂದ ಬಲಾತ್ಕಾರದಿಂದ ಎಳೆಯಲ್ಪಟ್ಟ ಆ ರಾಕ್ಷಸನು ಕ್ರುದ್ಧನಾಗಿ ಆಗ ಭೀಮಸೇನನನ್ನು ಆಲಿಂಗಿಸಿ ಭೈರವನಾದವನ್ನು ಮಾಡಿದನು.
ಪುನರ್ಭೀಮೋ ಬಲಾದೇವ ವಿಚಕರ್ಷ ಮಹಾಬಲಃ |
ಮಾ ಶಬ್ದಃ ಸುಖಸುಪ್ತಾನಾಂ ಭ್ರಾತೄಣಾಂ ಮೇ ಭವೇದಿತಿ ॥21॥
ಮಹಾಬಲನಾದ ಭೀಮನು ಸುಖಸುಪ್ತರಾದ ಸಹೋದರರಿಗೆ ಗಲಾಟೆಯಿಂದ ಎಚ್ಚರವಾಗದಿರಲಿ ಎಂದು ಆ ರಾಕ್ಷಸನನ್ನು ತನ್ನ ಬಲದಿಂದ ಪುನಃ ಎಳೆದನು.
ಅನ್ಯೋನ್ಯಂ ವೈ ಸಮಾಲಿಂಗ್ಯ ವಿಚಕರ್ಷತುರೋಜಸಾ |
ರಾಕ್ಷಸೋ ಭೀಮಸೇನಶ್ಚ ವಿಕ್ರಮಂ ಚಕ್ರತುಃ ಪರಮ್ ॥22॥
ರಾಕ್ಷಸಭೀಮಸೇನರಿಬ್ಬರೂ ಪರಸ್ಪರವಾಗಿ ಆಲಿಂಗಿಸಿ ತಮ್ಮ ಸಾಮರ್ಥ್ಯದಿಂದ ಪರಸ್ಪರವಾಗಿ ಎಳೆದಾಡಿ ತಮ್ಮ ವಿಕ್ರಮವನ್ನು ತೋರಿಸಿದರು.
ಬಭಂಜತುರ್ಮಹಾವೃಕ್ಷಾನ್ ಲತಾಶ್ಚ ವಿಚಕರ್ಷತುಃ |
ಪ್ರಮತ್ತಾವಿವ ಸಂಕ್ರುದ್ಧೌ ಮಾತಂಗೌ ಷಷ್ಟಿಹಾಯನೌ ॥23॥
ಸಿಟ್ಟಾದ ಮದಿಸಿದ ಅರವತ್ತು ವರ್ಷ ವಯಸ್ಸಿನ ಆನೆಗಳಂತೆ ಅವರು ಮಹಾವೃಕ್ಷಗಳನ್ನು ಮುರಿದು ಲತೆಗಳನ್ನು ಎಳೆದಾಡಿದರು.
ಪಾದಪಾನುದ್ವಹಂತೌ ತಾವೂರುವೇಗೇನ ವೇಗಿತೌ |
ಸ್ಫೋಟಯಂತೌ ಲತಾಜಾಲಾನ್ಯೂರುಭ್ಯಾಂ ಪ್ರಾಪ್ಯ ಸರ್ವಶಃ ॥24॥
ವಿತ್ರಾಸಯಂತೌ ಶಬ್ದೇನ ಸರ್ವತೋ ಮೃಗಪಕ್ಷಿಣಃ |
ಬಲೇನ ಬಲಿನೌ ಮತ್ತಾವನ್ಯೋನ್ಯವಧಕಾಂಕ್ಷಿಣೌ ॥25॥

ತೊಡೆಗಳ ವೇಗದಿಂದ ವೃಕ್ಷಗಳನ್ನು ವೇಗದಿಂದ ಉರುಳಿಸುತ್ತಾ ಲತೆಯ ಪೊದೆಗಳನ್ನು ಸಮೀಪಿಸಿ ಎಲ್ಲೆಡೆಯಲ್ಲಿಯೂ ತೊಡೆಗಳಿಂದ ಕಿತ್ತುಹಾಕುತ್ತಾ (ಯುದ್ಧ ಮಾಡಿದರು) ತಮ್ಮ ಶಬ್ದಗಳಿಂದ ಕಾಡಿನಲ್ಲಿರುವ ಎಲ್ಲಾ ಮೃಗ ಪಕ್ಷಿಗಳನ್ನು ಬೆದರಿಸುತ್ತಾ ಬಲಿಷ್ಠರೂ ಮತ್ತು ಮತ್ತರೂ ಆದ ಅವರು ಪರಸ್ಪರರ ವಧೆಯನ್ನು ಬಯಸಿ ಯುದ್ಧ ಮಾಡಿದರು.

ಭೀಮರಾಕ್ಷಸಯೋರ್ಯುದ್ಧಂ ತದಾಽವರ್ತತ ದಾರುಣಮ್ ।
ಊರುಬಾಹುಪರಿಕ್ಲೇಶಾತ್ ಕರ್ಷತೋರಿತರೇತರಮ್ ।
ಉತ್ಕರ್ಷಣಂ ವಿಕರ್ಷಣಮಪಕರ್ಷಣಮೇವ ಚ ॥26॥

ತೊಡೆ ಮತ್ತು ತೋಳುಗಳನ್ನು ಹಿಡಿದು ಪರಸ್ಪರವಾಗಿ ಎಳೆದಾಡುತ್ತಾ ಉತ್ಕರ್ಷಣ, ವಿಕರ್ಷಣ ಮತ್ತು ಅಪಕರ್ಷಣ ಮೊದಲಾದ ಕೌಶಲಗಳನ್ನು ತೋರಿಸುತ್ತಾ ಜರುಗಿದ ಭೀಮರಾಕ್ಷಸರ ಯುದ್ಧವು ಆಗ ದಾರುಣವಾಗಿದ್ದಿತು.

ತತಃ ಶಬ್ದೇನ ಮಹತಾ ಗರ್ಜಂತೌ ತೌ ಪರಸ್ಪರಮ್ ।
ಪಾಷಾಣಸಂಘಟ್ಟನಿಭೈಃ ಪ್ರಹಾರೈರಭಿಜಘ್ನತುಃ ।
ಅನ್ಯೋನ್ಯಂ ತೌ ಸಮಾಲಿಂಗ್ಯ ವಿಕರ್ಷಂತೌ ಪರಸ್ಪರಮ್ ॥27॥

ಅವರು ಪರಸ್ಪರವಾಗಿ ಆಲಿಂಗಿಸಿ ಎಳೆದಾಡುತ್ತಾ ಮಹಾಶಬ್ದದಿಂದ ಗರ್ಜಿಸುತ್ತಾ ಕಲ್ಲಿಗೆ ಕಲ್ಲುಗಳು ಸಂಘಟ್ಟಿಸಿದಂತಹ ಶಬ್ದವುಳ್ಳ ಪ್ರಹಾರದಿಂದ ಪರಸ್ಪರವಾಗಿ ಹೊಡೆದಾಡಿದರು.

ತಯೋಃ ಶಬ್ದೇನ ಮಹತಾ ವಿಬುದ್ಧಾಸ್ತೇ ನರರ್ಷಭಾಃ ।
ಸಹ ಮಾತ್ರಾಽಥ ದದೃಶುರ್ಹಿಡಿಂಬೀಮಗ್ರತಃ ಸ್ಥಿತಾಮ್ ॥28॥

ಆ ದೊಡ್ಡ ಶಬ್ದದಿಂದ ಎಚ್ಚರಗೊಂಡ ನರಶ್ರೇಷ್ಠರಾದ ಪಾಂಡವರು ಮತ್ತು ಕುಂತಿಯು ಎದುರಿನಲ್ಲಿ ಹಿಡಂಬಿಯು ನಿಂತಿರುವುದನ್ನು ನೋಡಿದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಹಿಡಿಂಬವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಐವತ್ತೈದನೆಯ
ಅಧ್ಯಾಯ ಮುಗಿಯಿತು.

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19

ತೌ ಮುಷ್ಟಿಭಿಸ್ತರುಭಿರಶ್ಮಭಿರದ್ರಿಭಿಶ್ಚ
ಯುಧ್ವಾ ನಿತಾಂತರವತಃ ಪ್ರತಿಬೋಧಿತಾಂಸ್ತಾನ್ ।
ಸಂಚಕ್ರತುಸ್ತದನು ಸೋದರಸಂಭ್ರಮಂ ತಂ
ದೃಷ್ಟ್ವೈವ ಮಾರುತಿರಹನ್ನುರಸಿ ಸ್ಮ ರಕ್ಷಃ ॥55॥

ಭೀಮ ಹಿಡಿಂಬರಿಬ್ಬರೂ ಮುಷ್ಟಿಗಳಿಂದ ಮರಗಳಿಂದ ಕಲ್ಲುಗಳಿಂದ ಬೆಟ್ಟಗಳಿಂದ ಯುದ್ಧಮಾಡಿ ಆ ದೊಡ್ಡ ಶಬ್ದದಿಂದ ಪಾಂಡವರು ಎಚ್ಚೆತ್ತುಕೊಳ್ಳುವಂತೆ ಮಾಡಿದರು. ಬಳಿಕ ಸೋದರರ ಭಯವನ್ನು ಕಂಡು ಒಡನೆ ಭೀಮ ರಾಕ್ಷಸನ ಎದೆಗೆ ಗುದ್ದಿದ.

ತದ್ಭೀಮಬಾಹುಬಲತಾಡಿತಮೀಶವಾಕ್ಯಾತ್
ಸರ್ವೈರಜೇಯಮಪಿ ಭೂಮಿತಳೇ ಪಪಾತ ।
ವಕ್ತ್ರಸ್ರವದ್ಬಹುಲಶೋಣಿತಮಾಪ ಮೃತ್ಯುಂ
ಪ್ರಾಯಾತ್ತಮೋಽಂಧಮಪಿ ನಿತ್ಯಮಥ ಕ್ರಮೇಣ ॥56॥

ಹಿಡಿಂಬ ಶಿವನ ವರಬಲದಿಂದ ಸರ್ವರಿಗೂ ಅಜೇಯನಾಗಿದ್ದರೂ ಭೀಮನ ತೋಳಿನ ಬಲದಿಂದ ಹೊಡೆತ ತಿಂದು ನೆಲದಲ್ಲಿ ಒರಗಿದ. ಬಾಯಿಂದ ಬಹಳ ರಕ್ತಕಾರಿ ಸತ್ತ. ಕ್ರಮೇಣ ನರಕಾದ್ಯನರ್ಥಗಳನ್ನು ಅನುಭವಿಸಿ ಕೊನೆಯಲ್ಲಿ ನಿತ್ಯವಾದ ಅಂಧಂತಮಸ್ಸನ್ನು ಹೊಂದಿದ.

* * * *

ನೂರ ಐವತ್ತಾರನೆಯ ಅಧ್ಯಾಯ

(ಕುಂತಿ ಹಿಡಿಂಬಾ ಸಂವಾದ, ಹಿಡಿಂಬ ಭೀಮ ಯುದ್ಧ, ಅರ್ಜುನನನ್ನು ನಿರಾಕರಿಸಿ ಭೀಮಸೇನನಿಂದ ಹಿಡಿಂಬನ ವಧೆ)

ವೈಶಂಪಾಯನಃ
ಪ್ರಬುದ್ಧಾಸ್ತೇ ಹಿಡಿಂಬಾಯಾ ರೂಪಮಾಲೋಕ್ಯ ಶೋಭನಮ್ ।
ವಿಸ್ಮಿತಾಃ ಪುರುಷವ್ಯಾಘ್ರಾ ಬಭೂವುಃ ಪೃಥಯಾ ಸಹ ॥1।

ತಾಯಿಯ ಜೊತೆಯಲ್ಲಿ ನಿದ್ರೆಯಿಂದ ಎಚ್ಚರಗೊಂಡ ಆ ಪುರುಷವ್ಯಾಘ್ರರು ಹಿಡಿಂಬೆಯ ಸುಂದರವಾದ ರೂಪವನ್ನು ನೋಡಿ ವಿಸ್ಮಿತರಾದರು.

ತತಃ ಕುಂತೀ ಸಮೀಕ್ಷ್ಯೈನಾಂ ವಿಸ್ಮಿತಾ ರೂಪಸಂಪದಾ ।
ಉವಾಚ ಮಧುರಂ ವಾಕ್ಯಂ ಸಾಂತ್ವಪೂರ್ವಮಿದಂ ಶನೈಃ ॥2॥

ಆಗ ಬಹಳವಾದ ರೂಪಸಂಪತ್ತಿನಿಂದ ಯುಕ್ತಳಾದ ಹಿಡಿಂಬೆಯನ್ನು ನೋಡಿ ವಿಸ್ಮಿತಳಾದ ಕುಂತಿಯು ಸಮಾಧಾನಪೂರ್ವಕವಾಗಿ

ಮೆಲ್ಲನೆ ಈ ಮಧುರವಾದ ಮಾತುಗಳನ್ನು ಆಡಿದಳು.
ಕಸ್ಯ ತ್ವಂ ಸುರಗರ್ಭಾಭೇ ಕಾ ಚಾಸಿ ವರವರ್ಣಿನಿ |
ಕೇನ ಕಾರ್ಯೇಣ ಸುಭಗೇ ಕುತಶ್ಚಾಗಮನಂ ತವ ॥3॥
ದೇವಕನ್ಯೆಯ ಕಾಂತಿಯನ್ನು ಹೊಂದಿರುವವಳೇ, ನೀನು ಯಾರ ಮಗಳು? ಸುಂದರಿಯೇ, ನೀನು ಯಾರು? ರೂಪವತಿಯೇ, ಯಾವ ಉದ್ದೇಶದಿಂದ (ಎಲ್ಲಿಂದ) ಇಲ್ಲಿಗೆ ಬಂದಿದ್ದೀಯೆ?
ಯದಿ ವಾಽಸಿ ವನಸ್ಯಾಸ್ಯ ದೇವತಾ ಯದಿ ವಾಽಪ್ಸರಾಃ |
ಆಚಕ್ಷ್ವಭದ್ರೇ ತತ್ ಸರ್ವಂ ಕಿಮರ್ಥಂ ಚೇಹ ತಿಷ್ಠತಿ ॥4॥
ಅಥವಾ ನೀನು ಈ ವನದ ದೇವತೆಯೆ? ಅಥವಾ ಅಪ್ಸರೆಯೆ? ಮಂಗಳಸ್ವರೂಪಳೇ, ನೀನು ಇಲ್ಲಿಗೆ ಏಕೆ ಬಂದಿದ್ದೀಯೆ ಎಂಬುದನ್ನು ಮತ್ತು ಎಲ್ಲಾ ವಿಷಯಗಳನ್ನೂ ನನಗೆ ಹೇಳು.
ಹಿಡಿಂಬೀ
ಯದೇತತ್ ಪಶ್ಯಸಿ ವನಂ ನೀಲಮೇಘನಿಭಂ ಮಹತ್ |
ನಿವಾಸೋ ರಾಕ್ಷಸಸ್ಯೈತದ್ ಹಿಡಿಂಬಸ್ಯ ಮಮೈವ ಚ ॥5॥
ನೀನು ನೋಡುತ್ತಿರುವ ಕಪ್ಪು ಮೋಡದ ಕಾಂತಿಯನ್ನು ಹೊಂದಿರುವ ಈ ಕಾಡು ಹಿಡಿಂಬರಾಕ್ಷಸನ ಮತ್ತು ನನ್ನ ನಿವಾಸಸ್ಥಾನ.
ತಸ್ಯ ಮಾಂ ರಾಕ್ಷಸೇಂದ್ರಸ್ಯ ಭಗಿನೀಂ ವಿದ್ಧಿ ಭಾಮಿನಿ |
ಭ್ರಾತ್ರಾ ಸಂಪ್ರೇಷಿತಾಮಾರ್ಯೇ ತ್ವಾಂ ಸಪುತ್ರಾಂ ಜಿಘಾಂಸತಾ ॥6॥
ಭಾಮಿನಿಯೇ, ನನ್ನನ್ನು ಆ ರಾಕ್ಷಸೇಂದ್ರನ ತಂಗಿ ಎಂದು ತಿಳಿ. ಪೂಜ್ಯೆಯೇ, ನಿನ್ನನ್ನೂ ಮತ್ತು ನಿನ್ನ ಮಕ್ಕಳನ್ನೂ ಕೊಲ್ಲುವ ಸಲುವಾಗಿ ಅಣ್ಣನು ನನ್ನನ್ನು ಇಲ್ಲಿಗೆ ಕಳುಹಿಸಿದನು.
ಕ್ರೂರಬುದ್ಧೇರಹಂ ತಸ್ಯ ವಚನಾದಾಗತಾ ತ್ವಿಹ |
ಅದ್ರಾಕ್ಷಂ ಹೇಮವರ್ಣಾಭಂ ತವ ಪುತ್ರಂ ವೃಕೋದರಮ್ ॥7॥
ಕ್ರೂರಬುದ್ಧಿಯುಳ್ಳ ಅವನ ಮಾತಿನಂತೆ ನಾನು ಇಲ್ಲಿಗೆ ಬಂದು ಸುವರ್ಣಕಾಂತಿಯನ್ನು ಹೊಂದಿರುವ ನಿನ್ನ ಪುತ್ರನಾದ ವೃಕೋದರನನ್ನು ನೋಡಿದೆ.
ತತೋಽಹಂ ಸರ್ವಭೂತಾನಾಂ ಭಾವೇ ವಿಚರತಾ ಶುಭೇ |
ಚೋದಿತಾ ತವ ಪುತ್ರಾರ್ಥಂ ಮನ್ಮಥೇನ ವಶಾನುಗಾ ॥8॥
ಶೋಭನಸ್ವರೂಪಳೇ ಆಗ ನಾನು ಎಲ್ಲರ ಮನಸ್ಸಿನಲ್ಲಿ ಸಂಚರಿಸುವ ಮನ್ಮಥನಿಗೆ ವಶಳಾಗಿ ನಿನ್ನ ಪುತ್ರನ ಸಲುವಾಗಿ ಅವನಿಂದ ಪ್ರೇರಿಸಲ್ಪಟ್ಟೆ.
ತತೋ ವೃತೋ ಮಯಾ ಭರ್ತಾ ತವ ಪುತ್ರಸ್ತ್ವನಿಂದಿತೇ |
ಅಪನೇತುಂ ವ್ಯವಸಿತೋ ನ ಚೈವ ಕಥಿತೋ ಮಯಾ ॥9॥
ಅನಿಂದಿತಳೇ, ಅನಂತರ ನಾನು ನಿನ್ನ ಪುತ್ರನನ್ನು ಪತಿಯಾಗಿ ವರಿಸಿದೆ. ಅವನು ನನ್ನನ್ನು ಪರಿತ್ಯಾಗ ಮಾಡಲು ನಿರ್ಧರಿಸಿದನು. ಅನಂತರ ನಾನು ಏನೂ ಮಾತನಾಡಲಿಲ್ಲ.
ಚಿರಾಯಮಾಣಾಂ ಮಾಂ ಜ್ಞಾತ್ವಾ ತತೋಽಯಂ ಪುರುಷಾದಕಃ |
ಸ್ವಯಮೇವಾಗತೋ ಹಂತುಮಿಮಾನ್ ಸರ್ವಾಂಸ್ತವಾತ್ಮಜಾನ್ ॥10॥
ಆಗ ಈ ನರಭಕ್ಷಕನಾದ ಹಿಡಿಂಬನು ನಾನು ತಡಮಾಡುತ್ತಿರುವುದನ್ನು ಗಮನಿಸಿ ಈ ನಿನ್ನ ಎಲ್ಲಾ ಮಕ್ಕಳನ್ನೂ ಕೊಲ್ಲಲು ತಾನೇ ಬಂದನು.
ಸ ತೇನ ತವ ಪುತ್ರೇಣ ಮಮ ಕಾಂತೇನ ಧೀಮತಾ |
ಬಲಾದಿತೋ ವಿನಿಷ್ಪಿಷ್ಯ ವ್ಯಪಕೃಷ್ಟೋ ಮಹಾತ್ಮನಾ ॥11॥
ಅವನನ್ನು ನನ್ನ ಕಾಂತನೂ, ಮೇಧಾವಿಯೂ, ಮಹಾತ್ಮನೂ ಆದ ನಿನ್ನ ಪುತ್ರನು ತನ್ನ ಶಕ್ತಿಯಿಂದ ಮರ್ದಿಸಿ ಇಲ್ಲಿಂದ ಎಳೆದುಕೊಂಡು ಹೋದನು.
ವಿಕರ್ಷಂತೌ ಮಹಾವೇಗೌ ಗರ್ಜಂತೌ ಚ ಪರಸ್ಪರಮ್ |
ಪಶ್ಯ ತ್ವಂ ಯುಧಿ ವಿಕ್ರಾಂತೌ ತಾವೇತೌ ನರರಾಕ್ಷಸೌ ॥12॥
ಅದೇ ಈ ಇಬ್ಬರು ಮನುಷ್ಯ ಮತ್ತು ರಾಕ್ಷಸರು ಮಹಾವೇಗವುಳ್ಳವರಾಗಿ ಪರಸ್ಪರವಾಗಿ ಎಳೆದಾಡುತ್ತಾ, ಪರಸ್ಪರವಾಗಿ ಗರ್ಜಿಸುತ್ತಾ, ಯುದ್ಧದಲ್ಲಿ ವಿಕ್ರಮವನ್ನು ತೋರಿಸುತ್ತಿರುವುದನ್ನು ನೀನು ನೋಡು.
ವೈಶಂಪಾಯನಃ
ತತಸ್ತಸ್ಯಾ ವಚಃ ಶ್ರುತ್ವಾ ಉತ್ಪಪಾತ ಯುಧಿಷ್ಠಿರಃ |
ಅರ್ಜುನೋ ನಕುಲಶ್ಚೈವ ಸಹದೇವಶ್ಚ ವೀರ್ಯವಾನ್ ॥13॥
ಆಗ ಅವಳ ಮಾತುಗಳನ್ನು ಕೇಳಿ ವೀರ್ಯವಂತರಾದ ಯುಧಿಷ್ಠಿರ, ಅರ್ಜುನ ಮತ್ತು ನಕುಲ ಸಹದೇವರು ಭೂಮಿಯಿಂದ ಹಾರಿದರು.
ತೇ ತೌ ದದೃಶುರಾಸಕ್ತೌ ವಿಕರ್ಷಂತೌ ಪರಸ್ಪರಮ್ |
ಕಾಂಕ್ಷಮಾಣೌ ಜಯಂ ಚೈವ ಮತ್ತಾವಿವ ಮಹಾಗಜೌ ॥14॥
ಅವರು ಪರಸ್ಪರವಾಗಿ ಎಳೆದಾಡುತ್ತಿರುವ ಪರಸ್ಪರವಾಗಿ ಜಯಾಕಾಂಕ್ಷಿಗಳಾದ ಮದಿಸಿದ ಎರಡು ಮಹಾಗಜಗಳಂತೆ ಪರಸ್ಪರ ಸಂಸಕ್ತರಾದ ಆ ಇಬ್ಬರನ್ನು ನೋಡಿದರು.

ತಾವನ್ಯೋನ್ಯಂ ಸಮಾಶ್ಲಿಷ್ಯ ನಿಷ್ಪತಂತೌ ಪರಸ್ಪರಮ್ |
ದಾವಾಗ್ನಿಧೂಮಸಂಕಾಶಂ ಚಕ್ರತುಃ ಪಾರ್ಥಿವಂ ರಜಃ ॥15॥
ಅವರಿಬ್ಬರೂ ಪರಸ್ಪರವಾಗಿ ಆಲಿಂಗಿಸಿ ಪರಸ್ಪರವಾಗಿ ಎಳೆದಾಡಿ ಭೂಮಿಯ ಧೂಳನ್ನು ಎಬ್ಬಿಸಿ ದಾವಾಗ್ನಿಯ ಧೂಮದಂತೆ ಕಾಣುವಂತೆ ಮಾಡಿದರು.
ವಸುಧಾರೇಣುಸಂವೀತೌ ವಸುಧಾಧರಸನ್ನಿಭೌ |
ಬಿಭ್ರಾಜೇತೇ ಯಥಾ ಶ್ಯೆಲೌ ನೀಹಾರೇಣಾಭಿಸಂವೃತೌ ॥16॥
ಭೂಮಿಯ ರೇಣುಗಳಿಂದ ಸಂಲಿಪ್ತರಾದ ಅವರು ಮಂಜಿನಿಂದ ಮುಚ್ಚಲ್ಪಟ್ಟ ಎರಡು ಪರ್ವತಗಳಂತೆ ಶೋಭಿಸಿದರು.
ತೇ ಪಶ್ಯಂತೋ ಮಹದ್ಯುದ್ಧಂ ಸರ್ವೇ ವ್ಯಥಿತಚೇತಸಃ |
ರಾಕ್ಷಸೇನ ಬಲಾದ್ ಭೀಮಂ ಕ್ಲಿಶ್ಯಮಾನಂ ನಿರೀಕ್ಷ್ಯ ತು ॥17॥
ಚಿರಪ್ರಯುದ್ಧೌ ದೃಷ್ಟ್ವಾ ಚ ಅನ್ಯೋನ್ಯವಧಕಾಂಕ್ಷಯಾ |
ಉವಾಚೇದಂ ವಚಃ ಪಾರ್ಥಃ ಪ್ರಹಸನ್ನಿವ ಭಾರತ ॥18॥
ಅವರೆಲ್ಲರೂ ಈ ಮಹಾಯುದ್ಧವನ್ನು ನೋಡುತ್ತಾ ಮನಸ್ಸಿನಲ್ಲಿ ವ್ಯಥೆಪಟ್ಟರು. ಎಲೈ ಭಾರತನೇ ಅರ್ಜುನನು ಭೀಮನು ರಾಕ್ಷಸನಿಂದ, ಅವನ ಶಕ್ತಿಯಿಂದ ಪೀಡಿಸಲ್ಪಡುತ್ತಿರುವುದನ್ನು ನೋಡಿ ಅನ್ಯೋನ್ಯವಧಾಕಾಂಕ್ಷಿಗಳಾಗಿ ಅವರು ಬಹಳ ಸಮಯದಿಂದ ಯುದ್ಧ ಮಾಡುತ್ತಿರುವುದನ್ನೂ ನೋಡಿ ನಗುತ್ತಾ ಅಣ್ಣನನ್ನು ಕುರಿತು ಮಾತನಾಡಿದನು.
ಅರ್ಜುನಃ
ಭೀಮ ಮಾ ಭೈರ್ಮಹಾಬಾಹೋ ನ ತ್ವಾಂ ಬುಧ್ಯಾಮಹೇ ವಯಮ್|
ಸಮೇತಂ ಭೀಮರೂಪೇಣ ಪ್ರಸುಪ್ತಾಃ ಶ್ರಮಕರ್ಶಿತಾಃ ॥19॥
ಮಹಾಬಾಹುವಾದ ಭೀಮನೇ, ಹೆದರಬೇಡ. ಶ್ರಮದಿಂದ ದಣಿದು ಮಲಗಿದ ನಮಗೆ ನಿನ್ನನ್ನು ಈ ಭಯಂಕರನಾದ ರಾಕ್ಷಸನು ಎದುರಿಸಿರುವ ವಿಷಯವು ತಿಳಿಯಲಿಲ್ಲ.
ಸಾಹಾಯ್ಯೇಽಸ್ಮಿ ಸ್ಥಿತಃ ಪಾರ್ಶ್ವೇ ಯೋಧಯಿಷ್ಯಾಮಿ ರಾಕ್ಷಸಮ್ |
ಯಮೌ ಚ ರಾಜಾ ಕೌಂತೇಯೋ ಗೋಪಯಿಷ್ಯತಿ ಮಾತರಮ್ ॥20॥
ನಾನು ನಿನಗೆ ಸಹಾಯಕನಾಗಿ ನಿನ್ನ ಪಕ್ಕದಲ್ಲಿ ನಿಂತು ರಾಕ್ಷಸನ ಜೊತೆಯಲ್ಲಿ ಯುದ್ಧ ಮಾಡುವೆನು. ಧರ್ಮರಾಜನು ಮತ್ತು ನಕುಲ ಸಹದೇವರು ತಾಯಿಯನ್ನು ರಕ್ಷಣೆ ಮಾಡುವರು.
ಭೀಮಃ
ಉದಾಸೀನೋ ನಿರೀಕ್ಷಸ್ವ ನ ಕಾರ್ಯಂ ಸಂಭ್ರಮಸ್ತ್ವಯಾ |
ನ ಜಾತ್ವಯಂ ಪುನರ್ಜೀವೇನ್ಮದ್ಭುಜಾಂತರಮಾಗತಃ ॥21॥
ತಟಸ್ಥನಾಗಿ ನಿರೀಕ್ಷಿಸು. ಗಡಿಬಿಡಿ ಮಾಡಬೇಡ. ನನ್ನ ಭುಜಮಧ್ಯದಲ್ಲಿ ಸಿಲುಕಿದ ಇವನು ಪುನಃ ಜೀವಂತನಾಗಿ ಉಳಿಯುವುದಿಲ್ಲ.
ಅಯಮಸ್ಮಾಂಸ್ತು ನೋ ಹನ್ಯಾಜ್ಜಾತು ವೈ ಪಾರ್ಥ ರಾಕ್ಷಸಃ |
ಜೀವಂತಂ ನ ಪ್ರಮೋಕ್ಷ್ಯಾಮಿ ಮಾ ಭೈಷೀರ್ಭರತರ್ಷಭ ॥22॥
ಅರ್ಜುನನೇ, ಈ ರಾಕ್ಷಸನು ನಮ್ಮನ್ನು ಎಂದೂ ಕೊಲ್ಲಲಾರ. ಭರತರ್ಷಭನೇ ಇವನನ್ನು ಜೀವಸಹಿತವಾಗಿ ಬಿಡುವುದಿಲ್ಲ. ನೀನು ಹೆದರಬೇಡ.
ಅರ್ಜುನಃ
ಪೂರ್ವರಾತ್ರೇ ಪ್ರಬುದ್ಧೋಽಸಿ ಭೀಮರೂಪೇಣ ರಕ್ಷಸಾ |
ಕ್ಷಪಾ ವ್ಯುಷ್ಟಾ ನ ಚೇದಾನೀಂ ಸಮಾಪ್ನೋಷಿ ಮಹಾರಣಮ್ ॥23॥
ನೀನು ಪೂರ್ವರಾತ್ರಿಯಲ್ಲಿಯೇ ಈ ಭಯಂಕರನಾದ ರಾಕ್ಷಸನ ನಿಮಿತ್ತದಿಂದ ಎಚ್ಚರಗೊಂಡಿದ್ದೀಯೆ. ಈಗ ರಾತ್ರಿಯು ಕಳೆಯುತ್ತಾ ಬಂದಿದೆ. ಇನ್ನು ರಾಕ್ಷಸ ಜೊತೆಯಲ್ಲಿ ದೊಡ್ಡ ಯುದ್ಧವು ದೊರೆಯುವುದಿಲ್ಲ.
ಕಿಮನೇನ ಚಿರಂ ಭೀಮ ಜೀವತಾ ದುಷ್ಟಚಾರಿಣಾ |
ನಾಂತರೇಣ ಚಿರಂ ಸ್ಥಾತುಮಿಹ ಶಕ್ಯಂ ಪರಂತಪ ॥24॥
ಭೀಮನೇ ಈ ದುಷ್ಟಚಾರಿಯಾದ ರಾಕ್ಷಸನನ್ನು ಇನ್ನು ಹೆಚ್ಚು ಹೊತ್ತು ಜೀವಂತನಾಗಿ ಉಳಿಸಿ ಏನು ಪ್ರಯೋಜನ? ಪರಂತಪನೇ, ನಾವು ಇಲ್ಲಿ ಬಹಳ ಹೊತ್ತು ಇರಲು ಸಾಧ್ಯವಿಲ್ಲ.
ಪುರಾ ಸಂರಜ್ಯತೇ ಪ್ರಾಚೀ ಪುರಾ ಸಂಧ್ಯಾ ಪ್ರವರ್ತತೇ |
ರೌದ್ರೇ ಮುಹೂರ್ತೇ ರಕ್ಷಾಂಸಿ ಭವಂತಿ ಬಲವಂತಿ ಚ ॥25॥
ಇನ್ನೇನು ಪೂರ್ವದಿಕ್ಕು ಕೆಂಪಾಗುತ್ತದೆ. ಸಂಧ್ಯಾಕಾಲವು ಪ್ರವೃತ್ತವಾಗುತ್ತದೆ. ರೌದ್ರಮುಹೂರ್ತದಲ್ಲಿ ರಾಕ್ಷಸರಿಗೆ ಬಲವು ಹೆಚ್ಚುತ್ತದೆ.
ತ್ವರಸ್ವ ಭೀಮ ಮಾ ಲೀಲಾ ಜಹಿ ರಕ್ಷೋ ವಿಭೀಷಣಮ್ |
ಪುರಾ ಮಾಯಾಂ ವಿಕುರುತೇ ಭುಜಯೋಃ ಸಾರಮರ್ಪಯ ॥26॥
ಭೀಮ ತ್ವರೆ ಮಾಡು. ಆಟವಾಡಬೇಡ. ಭಯಂಕರನಾದ ಈ ರಾಕ್ಷಸನನ್ನು ಸಂಹಾರ ಮಾಡು. ನಿನ್ನನ್ನು ಭುಜಬಲದಿಂದ ಗೆಲ್ಲಲಾರದೆ ಅವನು ಇನ್ನು ಮಾಯಾಯುದ್ಧವನ್ನು ಮಾಡುತ್ತಾನೆ. ನಿನ್ನ ಭುಜಗಳ ಶಕ್ತಿಯನ್ನು ಅವನಿಗೆ ಅರ್ಪಿಸು.
ಮಾಹಾತ್ಮ್ಯಮಾತ್ಮನೋ ವೇತ್ಥ ನರಾಣಾಂ ಹಿತಕಾಮ್ಯಯಾ |
ರಕ್ಷೋ ಜಹಿ ಯಥಾ ಶಕ್ರಃ ಪುರಾ ವೃತ್ರಂ ಮಹಾಹವೇ ॥27॥
ನಿನ್ನ ಬಲವನ್ನು ನೀನೇ ತಿಳಿದಿದ್ದೀಯೆ. ಮನುಷ್ಯರ ಮೇಲಿನ ಹಿತದೃಷ್ಟಿಯಿಂದ ಹಿಂದೆ ದೊಡ್ಡ ಯುದ್ಧದಲ್ಲಿ ಇಂದ್ರನು

ವೃತ್ರಾಸುರನನ್ನು ಕೊಂದಂತೆ ಈಗ ನೀನು ರಾಕ್ಷಸನನ್ನು ಸಂಹಾರ ಮಾಡು.
ಅಥವಾ ಮನ್ಯಸೇ ಭಾರಂ ತ್ವಮಿಮಂ ರಾಕ್ಷಸಂ ಯುಧಿ।
ಆತಿಷ್ಠೇ ತವ ಸಾಹಾಯ್ಯಂ ಶೀಘ್ರಮೇವ ತು ಹನ್ಯತಾಮ್ ॥28॥
ಅಥವಾ ಯುದ್ಧದಲ್ಲಿ ಈ ರಾಕ್ಷಸನು ನಿನಗೆ ಭಾರವೆನಿಸಿದರೆ, ನಾನು ನಿನ್ನ ಸಹಾಯಕ್ಕೆ ಬರುತ್ತೇನೆ. ಬೇಗ ಇವನು ಕೊಲ್ಲಲ್ಪಡಲಿ.
ಅಥವಾ ಹ್ಯಹಮೇವೈನಂ ಹನಿಷ್ಯಾಮಿ ವೃಕೋದರ।
ಕೃತಕರ್ಮಾ ಪರಿಶ್ರಾಂತಃ ಸಾಧು ತಾವದುಪಾರಮ ॥29॥
ವೃಕೋದರನೇ, ಅಥವಾ ನಾನೇ ಇವನನ್ನು ಕೊಲ್ಲುವೆನು. ನಿನ್ನ ಕರ್ತವ್ಯವನ್ನು ಮಾಡಿ ದಣಿದಿರುವ ನೀನು ನಿವೃತ್ತನಾಗು. ಇದು ಒಳ್ಳೆಯದು.
ವೈಶಂಪಾಯನಃ
ಅರ್ಜುನೇನೈವಮುಕ್ತಸ್ತು ಭೀಮೋ ಭೀಮಸ್ಯ ರಕ್ಷಸಃ।
ಉಕ್ಷಿ_ಪ್ಯ ಭ್ರಾಮಯದ್ ದೇಹಂ ತೂರ್ಣಂ ಶತಗುಣಾಧಿಕಮ್ ॥30॥
ಅರ್ಜುನನು ಹೀಗೆ ಹೇಳಿದಾಗ ಭೀಮನು ಆ ಭಯಂಕರನಾದ ರಾಕ್ಷಸನನ್ನು ಮೇಲಕ್ಕೆಸೆದು ನೂರು ಸಲ ಅದನ್ನು ತಿರುಗಿಸಿದನು.
ಇತಿ ಚೋವಾಚ ಸಂಕ್ರುದ್ಧೋ ಭ್ರಾಮಯನ್ ರಾಕ್ಷಸಂ ತು ಸಃ।
ಭೀಮಸೇನೋ ಮಹಾಬಾಹುರಭಿಗರ್ಜನ್ ಮುಹುರ್ಮುಹುಃ ॥31॥
ರಾಕ್ಷಸನನ್ನು ಗಿರಿಗಿಟ್ಟಲೆಯಂತೆ ತಿರುಗಿಸುತ್ತಾ ಮಹಾಬಾಹುವಾದ ಭೀಮಸೇನನು ಮತ್ತೆ ಮತ್ತೆ ಗರ್ಜಿಸುತ್ತಾ ಹೀಗೆ ಮಾತನಾಡಿದನು.
ಭೀಮಸೇನಃ
ವೃಥಾಮಾಂಸೋ ವೃಥಾಪುಷ್ಟೋ ವೃಥಾವೃದ್ಧೋ ವೃಥಾಮತಿಃ।
ವೃಥಾಮರಣಮರ್ಹಸ್ತ್ವಂ ವೃಥೈವ ವಿನಶಿಷ್ಯಸಿ ॥32॥
ನೀನು ವೃಥಾಮಾಂಸನೂ, ವೃಥಾಪುಷ್ಟನೂ, ವೃಥಾವೃದ್ಧನೂ, ವೃಥಾಮತಿಯೂ ಆಗಿದ್ದೀಯೇ. ನೀನು ವೃಥಾಮರಣಕ್ಕೆ ಅರ್ಹನಾಗಿದ್ದೀಯೆ. ವ್ಯರ್ಥವಾಗಿಯೇ ವಿನಾಶವನ್ನು ಹೊಂದುವಿ.
ಕ್ಷೇಮಮೇತತ್ ಕರಿಷ್ಯಾಮಿ ವನಂ ನಿಹತಕಂಟಕಮ್।
ನ ಪುನರ್ಮಾನುಷಾನ್ ಹತ್ವಾ ಭಕ್ಷಯಿಷ್ಯಸಿ ರಾಕ್ಷಸ ॥33॥
ರಾಕ್ಷಸನೇ, ನಾನು ಈ ಕಾಡನ್ನು ನಿಹತಕಂಟಕವನ್ನಾಗಿ ಮಾಡಿ ಕ್ಷೇಮವನ್ನು ಉಂಟು ಮಾಡುವೆನು. ನೀನು ಇನ್ನು ಎಂದೂ ಮನುಷ್ಯರನ್ನು ಕೊಂದು ತಿನ್ನುವುದಿಲ್ಲ.
ವೈಶಂಪಾಯನಃ
ಇತ್ಯುಕ್ತ್ವಾ ಭೀಮಸೇನಸ್ತಂ ನಿಷ್ಪಿಷ್ಯ ಧರಣೀತಳೇ।
ಬಾಹುಭ್ಯಾಮವಪೀಡ್ಯಾಶು ಪಶುಮಾರಮಮಾರಯತ್ ॥34॥
ಹೀಗೆ ಹೇಳಿ ಭೀಮಸೇನನು ಅವನನ್ನು ಭೂಮಿಯ ಮೇಲೆ ಬಡಿದು ಬಾಹುಗಳಿಂದ ಮರ್ದಿಸಿ ಪಶುವು ಪಶುವನ್ನು ಕೊಲ್ಲುವಂತೆ ಕೊಂದನು.
ಸ ಮಾರ್ಯಮಾಣೋ ಭೀಮೇನ ನನಾದ ವಿಪುಲಂ ಸ್ವನಮ್।
ಪೂರಯಂಸ್ತದ್ವನಂ ಸರ್ವಂ ಜಲಾರ್ದ್ರ ಇವ ದುಂದುಭಿಃ ॥35॥
ಭೀಮನಿಂದ ಮರಣಕ್ಕೆ ಒಳಗಾಗುವ ಸಮಯದಲ್ಲಿ ಅವನು ನೀರಿನಿಂದ ಒದ್ದೆಯಾದ ದುಂದುಭಿ ನಾದದಂತಿರುವ ತನ್ನ ನಾದದಿಂದ ಆ ವಿಪುಲವಾದ ಕಾಡನ್ನು ತುಂಬುತ್ತಾ ನಾದ ಮಾಡಿದನು.
ಭುಜಾಭ್ಯಾಂ ಯೋಕ್ತ್ರಯಿತ್ವಾ ತು ಬಲವಾನ್ ಪಾಂಡುನಂದನಃ।
ಸಮುದ್ಭ್ರಾಮ್ಯ ಶಿರಶ್ಚಾಸ್ಯ ಸುಗ್ರೀವಂ ತದುದಾವಹತ್ ॥36॥
ಮಧ್ಯೇ ಭಿತ್ವಾ ಶಿರಶ್ಚಾಸ್ಯ ಸಗ್ರೀವಂ ತದುಪಾಕ್ಷಿಪತ್।
ತಸ್ಯ ನಿಷ್ಕರ್ಣನಯನಂ ನಿರ್ಜಿಹ್ವಂ ರುಧಿರೋಕ್ಷಿತಮ್।
ಪ್ರವಿದ್ಧಂ ಭೀಮಸೇನೇನ ಶಿರೋ ವಿದಶನಂ ಬಭೌ ॥37॥
ಬಲಿಷ್ಠನಾದ ಪಾಂಡುನಂದನನಾದ ಭೀಮನು ತನ್ನ ಭುಜಗಳಿಂದ ಅವನಿಗೆ ಪಟ್ಟು ಹಾಕಿ ಅವನನ್ನು ತಿರುಗಿಸಿ ಅವನ ತಲೆಯನ್ನು ಮೇಲಕ್ಕೆತ್ತಿ ದೇಹದಿಂದ ಬೇರ್ಪಡಿಸಿದನು. ಅನಂತರ ಕುತ್ತಿಗೆಯಿಂದ ಕೂಡಿದ್ದ ಆ ಶಿರಸ್ಸನ್ನು ಮಧ್ಯೆ ಒಡೆದು ಮೇಲಕ್ಕೆ ಎಸೆದನು. ಕಿವಿ, ಕಣ್ಣು, ನಾಲಿಗೆಗಳಿಲ್ಲದೆ ರಕ್ತಸಿಕ್ತವಾಗಿ ಭೀಮನ ಹೊಡೆತಕ್ಕೆ ಸಿಲುಕಿದ್ದ ಆ ಶಿರಸ್ಸು, ಹಲ್ಲುಗಳೂ ಇಲ್ಲದೇ ಪ್ರಕಾಶಿಸುತ್ತಿತ್ತು.
ಪ್ರಸಾರಿತಭುಜೋದ್ವೃಷ್ಟೋ ಭಿನ್ನಮಾಂಸತ್ವಗಂತರಃ।
ಕಬಂಧಭೂತಸ್ತತ್ರಾಸೀದದ್ರಿರ್ವಜ್ರಹತೋ ಯಥಾ ॥38॥
ಭುಜಗಳನ್ನು ಚಾಚಿದ, ಹರಿದ ಮಾಂಸ, ಚರ್ಮ ಮತ್ತು ಒಳಗಿನ ಅವಯವಗಳುಳ್ಳ ಆ ರಾಕ್ಷಸ ಮುಂಡವು ವಜ್ರದ ಏಟಿಗೆ ಸಿಲುಕಿದ ಪರ್ವತದಂತೆ ಅಲ್ಲಿ ಬಿದ್ದಿತು.
ಹಿಡಿಂಬಂ ನಿಹತಂ ದೃಷ್ಟ್ವಾ ಪ್ರಹೃಷ್ಟಾಸ್ತತ್ರ ಪಾಂಡವಾಃ।
ಹಿಡಿಂಬೀ ಚೈವ ಸಂಪ್ರೇಕ್ಷ್ಯ ನಿಹತಂ ರಾಕ್ಷಸಂ ರಣೇ ॥39॥
ಹಿಡಿಂಬನು ನಿಹತನಾದುದನ್ನು ನೋಡಿ ಪಾಂಡವರು ಸಂತುಷ್ಟರಾದರು. ಹಿಡಿಂಬಿಯೂ ಸಹ ರಾಕ್ಷಸನು ಯುದ್ಧದಲ್ಲಿ ಮಡಿದುದನ್ನು ನೋಡಿ ಸಂತೋಷಪಟ್ಟಳು.
ಅದೃಷ್ಟಾಶ್ಚೈವ ಯೇ ಖಸ್ಥಾಃ ಸಮೇತಾ ಭೂತಚಾರಕಾಃ।

ಪೂಜಯಂತಿ ಸ್ಮ ಸಂಹೃಷ್ಟಾಃ ಸಾಧುಸಾಧ್ವಿತಿ ಪಾಂಡವಮ್ ॥40॥
ಆಕಾಶದಲ್ಲಿ ಇದ್ದು ಅಂತರ್ಧಾನವನ್ನು ಹೊಂದಿದ ಭೂತಗಳು ಮತ್ತು ಚಾರಣರು ``ಸಾಧು, ಸಾಧು'' ಎಂದು ಹೇಳಿ ಪಾಂಡುಪುತ್ರನಾದ ಭೀಮಸೇನನನ್ನು ಪ್ರಶಂಸಿಸಿದರು.
ಭ್ರಾತರಶ್ಚಾಪಿ ಸಂಹೃಷ್ಟಾ ಯುಧಿಷ್ಠಿರಪುರೋಗಮಾಃ।
ಅಪೂಜಯನ್ ನರವ್ಯಾಘ್ರಂ ಭೀಮಸೇನಮರಿಂದಮಮ್ ॥41॥
ಯುಧಿಷ್ಠಿರನೇ ಮೊದಲಾದ ಅಣ್ಣತಮ್ಮಂದಿರೂ ಸಹ ಸಂತೋಷದಿಂದ ಅರಿಂದಮನಾದ, ನರವ್ಯಾಘ್ರನಾದ ಭೀಮಸೇನನನ್ನು ಪೂಜಿಸಿದರು.
ಅಥ ಪೂಜ್ಯ ಮಹಾತ್ಮಾನಂ ಭೀಮಂ ಭೀಮಪರಾಕ್ರಮಮ್।
ಪುನರೇವಾರ್ಜುನೋ ವಾಕ್ಯಮುವಾಚೇದಂ ವೃಕೋದರಮ್ ॥42॥
ಆಗ ಭಯಂಕರ ಪರಾಕ್ರಮವುಳ್ಳ ಮಹಾತ್ಮನಾದ ಭೀಮನನ್ನು ಪೂಜಿಸಿ ಅರ್ಜುನನು ಅವನನ್ನು ಕುರಿತು ಹೀಗೆ ಮಾತನಾಡಿದನು.
ಅದೂರೇ ನಗರಂ ಮನ್ಯೇ ವನಾದಸ್ಮಾದಹಂ ಪ್ರಭೋ।
ಶೀಘ್ರಂ ಗಚ್ಛಾಮ ಭದ್ರಂ ತೇ ನ ನೋ ವಿದ್ಯಾತ್ ಸುಯೋಧನಃ ॥43॥
ಪ್ರಭುವೇ, ಈ ಕಾಡಿಗೆ ಸಮೀಪದಲ್ಲಿಯೇ ನಗರವಿದೆ ಎಂದು ಭಾವಿಸುತ್ತೇನೆ. ನಿನಗೆ ಮಂಗಳವಾಗಲಿ, ನಾವು ಬೇಗ ಇಲ್ಲಿಂದ ಹೋಗೋಣ. ಸುಯೋಧನನು ನಮ್ಮನ್ನು ತಿಳಿಯುವುದು ಬೇಡ.
ವೈಶಂಪಾಯನಃ
ತತಃ ಸರ್ವೇ ತಥೇತ್ಯುಕ್ತ್ವಾ ಮಾತ್ರಾ ಸಹ ಮಹಾರಥಾಃ।
ಪ್ರಯಯುಃ ಪುರುಷವ್ಯಾಘ್ರಾ ಹಿಡಿಂಬೀ ಚೈವ ರಾಕ್ಷಸೀ ॥44॥
ಆಗ ಆ ಎಲ್ಲಾ ಮಹಾರಥರಾದ ಪುರುಷವ್ಯಾಘ್ರರು ``ಹಾಗೆಯೇ ಆಗಲಿ'' ಎಂದು ಹೇಳಿ ತಾಯಿಯನ್ನು ಕರೆದುಕೊಂಡು ಹೊರಟರು. ರಾಕ್ಷಸಿಯಾದ ಹಿಡಿಂಬಿಯೂ ಅವರನ್ನು ಹಿಂಬಾಲಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಟ್‌ಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಹಿಡಿಂಬವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಐವತ್ತಾರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಹತ್ವೈವ ಶರ್ವವರರಕ್ಷಿತರಾಕ್ಷಸಂ ತಂ
ಸರ್ವೈರವಧ್ಯಮಪಿ ಸೋದರಮಾತೃಯುಕ್ತಃ।
ಭೀಮೋ ಯಯೌ ತದನು ಸಾ ಪ್ರಯಯೌ ಹಿಡಿಂಬೀ
ಕುಂತೀಂ ಯುಧಿಷ್ಠಿರಮಥಾಸ್ಯ ಕೃತೇ ಯಯಾಚೇ ॥57॥
ಶಿವವರದಿಂದ ರಕ್ಷಿತನಾಗಿದ್ದು ಸರ್ವರಿಗೂ ಅವಧ್ಯನೆನಿಸಿದ್ದ ಆ ರಾಕ್ಷಸನನ್ನು ಕೊಂದು ಸೋದರರಿಂದಲೂ ತಾಯಿಯಿಂದಲೂ ಕೂಡಿ ಭೀಮ ಮುಂದೆ ನಡೆದ. ಹಿಡಿಂಬಿ ಅವನ ಹಿಂದೆಯೇ ನಡೆದಳು. ಭೀಮನಿಗಾಗಿ ಕುಂತಿಯನ್ನೂ ಧರ್ಮರಾಜನನ್ನೂ ಬೇಡಿದಳು.
ತಾಭ್ಯಾಮನೂಕ್ತಮಪಿ ಯನ್ನ ಕರೋತಿ ಭೀಮಃ
ಪ್ರಾದುರ್ಬಭೂವ ನಿಖಿಲೋರುಗುಣಾಭಿಪೂರ್ಣಃ।
ವ್ಯಾಸಾತ್ಮಕೋ ಹರಿರನಂತಸುಖಾಂಬುರಾಶಿ-
ರ್ವಿದ್ಯಾಮರೀಚಿವಿತತಃ ಸಕಲೋತ್ತಮೋಽಲಂ ॥58॥
ಕುಂತಿ ಯುಧಿಷ್ಠಿರರು ಮತ್ತೂ ಮತ್ತೂ ಹೇಳಿದರೂ ಭೀಮ ಕೇಳದಿದ್ದಾಗ ಸಕಲ ಮಹಾಗುಣಪೂರ್ಣ ಅನಂತಸುಖಸಾಗರ ಜ್ಞಾನಪ್ರಕಾಶವ್ಯಾಪ್ತ ಸರ್ವೋತ್ತಮನಾದ ವ್ಯಾಸರೂಪಿ ಶ್ರೀಹರಿ ಚೆನ್ನಾಗಿ ಮೈದೋರಿದ.
ದೃಷ್ಟ್ವೈವ ತಂ ಪರಮಮೋದಿನ ಆಶು ಪಾರ್ಥಾ
ಮಾತ್ರಾ ಸಹೈವ ಪರಿಪೂಜ್ಯ ಗುರುಂ ವಿರಿಂಚೇಃ।
ಉಲ್ಲಾಳಿತಾಶ್ಚ ಹರಿಣಾ ಪರಮಾತಿಹಾರ್ದ-
ಪ್ರೋತ್ಫುಲ್ಲಪದ್ಮ ನಯನೇನ ತದೋಪವಿಷ್ಟಾಃ ॥59॥
ಬ್ರಹ್ಮನಿಗೂ ಗುರುವಾದ ಆ ವ್ಯಾಸರನ್ನು ಕಂಡೊಡನೆಯೆ ಪರಮಾನಂದಗೊಂಡು ಪಾರ್ಥರೂ ಕುಂತಿಯೂ ಅವರನ್ನು ಬೇಗನೆ ಚೆನ್ನಾಗಿ ಸತ್ಕರಿಸಿದರು. ಅತ್ಯಂತ ಪರಮಪ್ರೀತಿಯಿಂದ ಅರಳಿದ ತಾವರೆ ಕಣ್ಣಿನ ಆ ಹರಿಯಿಂದ ಚೆನ್ನಾಗಿ ಲಾಲಿತರಾಗಿ ಕುಳಿತರು.
ತಾನ್ ಭಕ್ತಿನಮ್ರಶಿರಸಃ ಸಮುದೀಕ್ಷ್ಯಕೃಷ್ಣೋ
ಭೀಮಂ ಜಗಾದ ನತ ಆಶು ಹಿಡಿಂಬಯಾ ಚ।
ಏತಾಂ ಗೃಹಾಣ ಯುವತೀಂ ಸುರಸದ್ಮಶೋಭಾಂ
ಜಾತೇ ಸುತೇ ಸಹಸುತಾ ಪ್ರತಿಯಾತು ಚೈಷಾ ॥60॥
ಪಾಂಡವರು ಭಕ್ತಿಯಿಂದ ತಲೆಬಾಗಿದರು. ಹಿಡಿಂಬೆಯೂ ನಮಿಸಿದಳು. ವ್ಯಾಸರು ಅದನ್ನು ಕಂಡು ಭೀಮನಿಗೆ ದೇವಲೋಕ ಶ್ರೀರೂಪಳಾದ ಈಕೆಯನ್ನು ಭಾರ್ಯೆಯಾಗಿ ಸ್ವೀಕರಿಸು, ಒಬ್ಬ ಮಗ ಹುಟ್ಟಿದೊಡನೆ ಮಗನೊಂದಿಗೆ ಅವಳು ಹೊರಟುಹೋಗಲಿ, ಎಂದರು.

ಏವಂ ಬ್ರುವತ್ಯಗಣಿತೋರುಗುಣೇ ರಮೇಶ
ಓಮಿತ್ಯುದೀರ್ಯ ಕೃತವಾಂಶ್ಚ ತಥೈವ ಭೀಮಃ |
ಸ್ಕಂಧೇನ ಚೋಹ್ಯ ವಿಬುಧಾಚರಿತಪ್ರದೇಶಾನ್
ಭೀಮಂ ಪ್ರಯಾತ್ಯುದಯ ಏವ ರಮೇರ್ಹಿಡಿಂಬೀ ॥61॥
ಅಗಣಿತ ಮಹಾಗುಣಶಾಲಿಯಾದ ಇಂದಿರೇಶ ಹೀಗೆ ನುಡಿದಾಗ ಭೀಮ `ಆಗಲಿ' ಎನ್ನುತ್ತ ಹಾಗೇ ಮಾಡಿದ. ಅಂದಿನಿಂದ ಹಿಡಿಂಬೆ ಪ್ರತಿದಿನ ಸೂರ್ಯೋದಯವಾದೊಡನೆ ಭೀಮನನ್ನು ಹೆಗಲಮೇಲೆ ಹೊತ್ತು ದೇವತೆಗಳ ಸಂಚಾರಕ್ಕೆ ಯೋಗ್ಯವಾದ ಪ್ರದೇಶಗಳಿಗೆ ವಿಹಾರಕ್ಕಾಗಿ ಹೋಗುತ್ತಿದ್ದಳು.
* * * *
ನೂರಐವತ್ತೇಳನೆಯ ಅಧ್ಯಾಯ
(ಹಿಡಿಂಬೆಯಿಂದ ತನ್ನ ದಿವ್ಯಜ್ಞಾನದ ಆವಿಷ್ಕಾರ, ಭೀಮನು ಅವಳನ್ನು ಸ್ವೀಕರಿಸಲು ಕುಂತಿಯ ಸಮ್ಮತಿ ಮತ್ತು ಧರ್ಮರಾಜನ ಸಮಯಬಂಧ)
ವೈಶಂಪಾಯನಃ
ಸಾ ತಾನೇವಾಪತತ್ ತೂರ್ಣಂ ಭಗಿನೀ ರಾಕ್ಷಸಸ್ಯ ಹ |
ಅಬ್ರುವಾಣಾ ಹಿಡಿಂಬೀ ತು ರಾಕ್ಷಸೀ ಪಾಂಡವಾನ್ ಪ್ರತಿ ॥1॥
ರಾಕ್ಷಸನ ತಂಗಿಯಾದ ಹಿಡಿಂಬಿಯು ಮಾತನಾಡದೆ ಶೀಘ್ರವಾಗಿ ಪಾಂಡವರನ್ನು ಹಿಂಬಾಲಿಸಿದಳು.
ಅಭಿವಾದ್ಯ ಚ ತಾನ್ ಕುಂತೀಂ ಧರ್ಮರಾಜಂ ಚ ಪಾಂಡವಮ್ |
ಅಭಿಪೂಜ್ಯ ಚ ತಾನ್ ಸರ್ವಾನ್ ಭೀಮಸೇನಮಭಾಷತ ॥2॥
ಅವಳು ಪಾಂಡವರೆಲ್ಲರಿಗೂ ಕುಂತಿಗೂ ಮತ್ತು ಧರ್ಮರಾಜನಿಗೂ ನಮಸ್ಕಾರವನ್ನು ಮಾಡಿ ಅವರೆಲ್ಲರನ್ನೂ ಸತ್ಕರಿಸಿ ಭೀಮಸೇನನನ್ನು ಕುರಿತು ಮಾತನಾಡಿದಳು.
ಅಹಂ ತೇ ದರ್ಶನಾದೇವ ಮನ್ಮಥಸ್ಯ ವಶಂ ಗತಾ |
ಕ್ರೂರಂ ಭ್ರಾತೃವಚೋ ಹಿತ್ವಾ ಸಾ ತ್ವಾಮೇವಾನಿರುಂಧತೀ ॥3॥
ನಾನು ನಿನ್ನ ದರ್ಶನಮಾತ್ರದಿಂದ ಕಾಮವಶಳಾಗಿ ಕ್ರೂರನಾದ ಅಣ್ಣನ ಮಾತುಗಳನ್ನು ನಡೆಸದೆ ನಿನಗೆ ಯಾವ ವಿರೋಧವನ್ನೂ ಮಾಡದೆ ನಿನ್ನನ್ನು ಹಿಂಬಾಲಿಸಿದ್ದೇನೆ.
ರಾಕ್ಷಸೇ ರೌದ್ರಸಂಕಾಶೇ ತವಾಪಶ್ಯಂ ವಿಚೇಷ್ಟಿತಮ್ |
ಅಹಂ ಶುಶ್ರೂಷುರಿಚ್ಛೇಯಂ ತವ ಗಾತ್ರಂ ನಿಷೇವಿತುಮ್ ॥4॥
ಭಯಂಕರನಾದ ರಾಕ್ಷಸನಲ್ಲಿ ನೀನು ಬಲಪ್ರದರ್ಶನ ಮಾಡಿದುದನ್ನು ನೋಡಿದೆನು. ನಾನು ಪತ್ನಿಯಾಗಿ ನಿನ್ನ ಸೇವೆಯನ್ನು ಮಾಡಿ ನಿನ್ನ ಶರೀರ ಸುಖವನ್ನು ಸವಿಯಲು ಬಯಸುತ್ತೇನೆ.
ಭೀಮಸೇನಃ
ಸ್ಮರಂತಿ ವೈರಂ ರಕ್ಷಾಂಸಿ ಮಾಯಾಮಾಸ್ಥಾಯ ಮೋಹಿನೀಮ್ |
ಹಿಡಿಂಬಿ ವ್ರಜ ಪಂಥಾನಂ ಮಾ ತ್ವಂ ಭ್ರಾತೃನಿಷೇವಿತಮ್ ॥5॥
ಹಿಡಿಂಬಿ, ರಾಕ್ಷಸರು ಪೂರ್ವವೈರವನ್ನು ನೆನೆದು ಮೋಹಕವಾದ ಮಾಯಾರೂಪವನ್ನು ಧರಿಸಿ (ವಂಚಿಸುತ್ತಾರೆ). ನಿನ್ನ ದಾರಿ ಹಿಡಿದು ನೀನು ಹೋಗು. ನಿನ್ನ ಅಣ್ಣನ ದಾರಿಯನ್ನು ಹಿಡಿಯಬೇಡ.
ಯುಧಿಷ್ಠಿರಃ
ಕ್ರುದ್ಧೋऽಪಿ ಪುರುಷವ್ಯಾಘ್ರ ಭೀಮ ಮಾ ಚ ಸ್ತ್ರಿಯಂ ವಧೀಃ |
ಶರೀರಗುಪ್ತ್ಯಭ್ಯಧಿಕಂ ಧರ್ಮಂ ಗೋಪಾಯ ಪಾಂಡವ ॥6॥
ಪುರುಷವ್ಯಾಘ್ರನಾದ ಭೀಮನೇ, ಕೋಪಗೊಂಡರೂ ಸ್ತ್ರೀವಧೆಯನ್ನು ಮಾಡಬೇಡ. ಶರೀರರಕ್ಷಣೆಯು ದೊಡ್ಡ ಧರ್ಮ. ಪಾಂಡವನೇ, ಅದನ್ನು ಪಾಲಿಸು.
ವಧಾಭಿಪ್ರಾಯಮವಧೀಸ್ತ್ವಂ ಮಹಾಬಲರಾಕ್ಷಸಮ್ |
ರಕ್ಷಸಸ್ತಸ್ಯ ಭಗಿನೀ ಕಿಂ ನಃ ಕ್ರುದ್ಧಾ ಕರಿಷ್ಯತಿ ॥7॥
ಕೊಲ್ಲುವ ಅಭಿಪ್ರಾಯದಿಂದ ಬಂದಿದ್ದ ಮಹಾಬಲನಾದ ರಾಕ್ಷಸನನ್ನು ನೀನು ಕೊಂದೆ. ಈ ರಾಕ್ಷಸನ ತಂಗಿಯ ಕ್ರುದ್ಧಳಾದರೂ ನಮಗೇನು ಮಾಡಬಲ್ಲಳು.
ವೈಶಂಪಾಯನಃ
ಹಿಡಿಂಬೀ ತು ತತಃ ಕುಂತೀಮಭಿವಾದ್ಯ ಕೃತಾಂಜಲಿಃ |
ಯುಧಿಷ್ಠಿರಂ ತು ಕೌಂತೇಯಮಿದಂ ವಚನಮಬ್ರವೀತ್ ॥8॥
ಆಗ ಹಿಡಿಂಬಿಯು ಕುಂತಿಗೆ ನಮಸ್ಕರಿಸಿ ಕೈಗಳನ್ನು ಮುಗಿದು ಕುಂತೀಪುತ್ರನಾದ ಯುಧಿಷ್ಠಿರನ್ನು ಉದ್ದೇಶಿಸಿ ಮಾತನಾಡಿದಳು.
ಆರ್ಯೇ ಜಾನಾಸಿ ಯದ್ ದುಃಖಮಿಹ ಸ್ತ್ರೀಣಾಮನಂಗಜಮ್ |
ತದಿದಂ ಮಾಮನುಪ್ರಾಪ್ತಂ ಭೀಮಸೇನಕೃತಂ ಶುಭೇ ॥9॥
ಪೂಜ್ಯೆಯೇ, ಸ್ತ್ರೀಯರಿಗೆ ಕಾಮೋದ್ರೇಕದಿಂದ ಉಂಟಾಗುವ ದುಃಖವು ಏನೆಂದು ನೀನು ಬಲ್ಲೆ. ಶುಭಳಾದವಳೇ, ನನಗೆ ಈಗ ಭೀಮಸೇನನ ಸಲುವಾಗಿ ಆ ಸಂಕಟವು ಪ್ರಾಪ್ತವಾಗಿದೆ.
ಸಾऽಹಂ ತತ್ ಪರಮಂ ದುಃಖಂ ಸಹೇ ಕಾಲಪ್ರತೀಕ್ಷಯಾ |

ಸೋಽಯಮಭ್ಯಾಗತಃ ಕಾಲೋ ಭವಿತಾ ಮೇ ಸುಖಾವಹಃ ॥10॥
ನಾನು ಕಾಲವನ್ನು ನಿರೀಕ್ಷಿಸುತ್ತಾ ಇಷ್ಟು ದಿನ ಆ ಪರಮದುಃಖವನ್ನು ಸಹಿಸಿದೆ. ಈಗ ನನಗೆ ಸುಖವನ್ನು ಉಂಟು ಮಾಡುವ ಕಾಲವು ಒದಗಿದೆ.
ಮಯಾ ಹ್ಯುತ್ಸೃಜ್ಯ ಸುಹೃದೋ ಜ್ಞಾತೀನ್ ಸ್ವಂ ಧರ್ಮಮೇವ ಚ |
ವೃತೋಽಯಂ ಪುರುಷವ್ಯಾಘ್ರಸ್ತವ ಪುತ್ರಃ ಪತಿಃ ಶುಭಃ ॥11॥
ನಾನು ಸುಹೃದರನ್ನು, ಬಂಧುಗಳನ್ನು ಮತ್ತು ನನ್ನ ಧರ್ಮವನ್ನೂ ತೊರೆದು ಪುರುಷವ್ಯಾಘ್ರನಾದ ಈ ನಿನ್ನ ಶುಭಪುತ್ರನನ್ನು ಪತಿಯೆಂದು ವರಿಸಿದೆ.
ವರೇಣಾನೇನ ತು ವಿನಾ ನಾಹಂ ಜೀವಿತುಮುತ್ಸಹೇ |
ತದರ್ಹಸಿ ಕೃಪಾಂ ಕರ್ತುಂ ಮಯಿ ತ್ವಂ ವರವರ್ಣಿನಿ ॥12॥
ಈ ಪತಿಯನ್ನು ಬಿಟ್ಟು ನಾನು ಖಂಡಿತವಾಗಿ ಜೀವಿಸಿರಲಾರೆ. ಸುಂದರಿಯೇ ನೀನು ನನ್ನಲ್ಲಿ ಕೃಪೆಯನ್ನು ಮಾಡಬೇಕು.
ತ್ವಂ ಮಾಂ ಮೂಢೇತಿ ವಾ ಮತ್ವಾ ಭಕ್ತಾಂ ವಾಽನುಗತೇತಿ ವಾ |
ಭರ್ತ್ರಾಽನೇನ ಮಹಾಭಾಗೇ ಯೋಜಯಸ್ವ ಸುತೇನ ತೇ ॥13॥
ನೀನು ನನ್ನನ್ನು ಮೂಢಳೆಂದಾಗಲೀ ನಿಮ್ಮ ಭಕ್ತಳೆಂದಾಗಲೀ, ಅಥವಾ ನಿಮ್ಮನ್ನು ಹಿಂಬಾಲಿಸಿದವಳೆಂದಾಗಲೀ ತಿಳಿದುಕೋ. ಆದರೆ ಮಹಾನುಭಾವಳೇ, ನಿನ್ನ ಪುತ್ರನ ಜೊತೆಯಲ್ಲಿ ಮಾತ್ರ ನನಗೆ ಸಂಬಂಧವನ್ನು ಘಟನೆ ಮಾಡಬೇಕು.
ತಮುಪಾದಾಯ ಗಚ್ಛೇಯಂ ಯಥೇಷ್ಟಂ ದೇವರೂಪಿಣಮ್ |
ಪುನಶ್ಚೈವಾನಯಿಷ್ಯಾಮಿ ವಿಶ್ವಾಸಂ ಕುರು ಮೇ ಶುಭೇ ॥14॥
ನಾನು ದೇವರೂಪಿಯಾದ ಅವನನ್ನು ಕರೆದುಕೊಂಡು ಬೇಕಾದ ಕಡೆಗೆ ಹೋಗುತ್ತೇನೆ ಮತ್ತು ಪುನಃ ಅವನನ್ನು ತಂದು ನಿಮಗೆ ಒಪ್ಪಿಸುವೆನು. ಶುಭಳಾದವಳೇ, ನನ್ನ ಮಾತನ್ನು ನಂಬು.
ಅಹಂ ಹಿ ಸಮಯೇ ಲಿಪ್ಸೇ ಪ್ರಾಗ್ ಭ್ರಾತುರಪವರ್ಜನಾತ್ |
ತತಃ ಸೋಽಭ್ಯಪತದ್ ರಾತ್ರೌ ಭೀಮಸೇನಜಿಘಾಂಸಯಾ ॥15॥
ನಾನು ನನ್ನ ಅಣ್ಣನು ಬರುವುದಕ್ಕಿಂತ ಮುಂಚೆಯೇ ಇವನನ್ನು ಹೊಂದಲು ಬಯಸಿದೆ. ಆದರೆ, ಭೀಮಸೇನನನ್ನು ಕೊಲ್ಲುವ ಇಚ್ಛೆಯಿಂದ ರಾತ್ರಿಯೇ ನನ್ನ ಅಣ್ಣನು ಎರಗಿದನು.
ಯಥಾಯಥಾ ವಿಕ್ರಮತೇ ಯಥಾಽರಿಮಧಿತಿಷ್ಠತಿ |
ತಥಾತಥಾ ಸಮಾಧಾಯ ಪಾಂಡವಂ ಕಾಮಮೋಹಿತಾ ॥16॥
ಭೀಮಸೇನನು ಶತ್ರುವನ್ನು ಹೇಗೆ ಹೇಗೆ ಮೆಟ್ಟಿ ಅವನ ತಲೆಯ ಮೇಲೆ ನಿಂತನೋ, ಹಾಗೆ ಹಾಗೆ ನಾನು ಕಾಮಮೋಹಿತಳಾಗಿ ಮನಸ್ಸಿಗೆ ಸಮಾಧಾನವನ್ನು ಮಾಡಿಕೊಂಡೆ.
ನ ಯಾತುಧಾನ್ಯಹಂ ತ್ವಾರ್ಯೇ ನ ಚಾಸ್ಮಿ ರಜನೀಚರೀ |
ಈಶಾ ರಕ್ಷಸ್ಸುತಾ ಯಾಸ್ಮಿ ರಾಜ್ಞಿ ಸಾಲಕಟಂಕಟೀ ॥17॥
ಆರ್ಯಳೇ, ನಾನು ಶಾಶ್ವತನರಕದಲ್ಲಿ ಬೀಳುವಂತಹ ಅಯೋಗ್ಯಳಲ್ಲ. ನಾನು ಹಿಂದೆ ಎಂದೂ ರಾಕ್ಷಸಯೋನಿಯಲ್ಲಿ ಜನಿಸಿಲ್ಲ. ರಾಣಿಯೇ, ದೇವರ ಇಚ್ಛೆಯಂತೆ ನಾನು ಹಿಡಿಂಬನ ತಾಯಿಯ ಉದರದಲ್ಲಿ ಹುಟ್ಟಿ ರಾಕ್ಷಸಿಯಾಗಿದ್ದೇನೆ. (ಸಾಲಕಟಂಕಟ ಎಂದರೆ ನಡೆಯುವಾಗ ಸಾಲವೃಕ್ಷಗಳಿಗೆ ಡಿಕ್ಕಿ ಹೊಡೆದು ಕಟಕಟ ಶಬ್ದವನ್ನುಂಟು ಮಾಡುವವರು ಸಾಲಕಟಂಕಟರು. ಅವರ ತಂಗಿ ಅಥವಾ ಮಗಳು ಸಾಲಕಟಂಕಟಿ.)
ಪುತ್ರೇಣ ತವ ಸಂಯುಕ್ತಾ ಯುವತಿರ್ದೇವವರ್ಣಿನೀ |
ಸರ್ವಾನ್ ವೋಽಹಮುಪಸ್ಥಾಸ್ಯೇ ಪುರಸ್ಕೃತ್ಯ ವೃಕೋದರಮ್ ॥18॥
ದೇವಲೋಕದ ಕನ್ಯೆಯಾದ, ಯುವತಿಯಾದ ನಾನು, ನಿನ್ನ ಪುತ್ರನಿಂದ ಸಂಯುಕ್ತಳಾಗಿ ಭೀಮಸೇನನನ್ನು ಮುಂದೆ ಮಾಡಿಕೊಂಡು ನಿಮ್ಮೆಲ್ಲರ ಸೇವೆಯನ್ನು ಮಾಡುತ್ತೇನೆ.
ಅಪ್ರಮತ್ತಾ ಪ್ರಮತ್ತೇಷು ಶುಶ್ರೂಷುರನಹಂವದಾ |
ವೃಜಿನಂ ತಾರಯಿಷ್ಯಾಮಿ ದಾಸೀವಚ್ಚ ನರರ್ಷಭಾಃ ॥19॥
ನರರ್ಷಭರೇ, ನೀವು ಪ್ರಮತ್ತರಾದರೂ ನಾನು ಎಚ್ಚರಿಕೆಯಿಂದ ಇದ್ದು ಅಹಂಕಾರದ ಮಾತುಗಳನ್ನಾಡದೆ ನಿಮ್ಮ ಸೇವೆಯನ್ನು ಮಾಡಿಕೊಂಡು, ನಿಮ್ಮನ್ನು ದಾಸಿಯಂತೆ ಕಷ್ಟದಿಂದ ದಾಟಿಸುತ್ತೇನೆ.
ಪೃಷ್ಠೇನ ವೋ ವಹಿಷ್ಯಾಮಿ ವಿಮಾನಂ ಸುಕೃತಾನಿವ |
ಯೂಯಂ ಪ್ರಸಾದಂ ಕುರುತ ಭೀಮಸೇನೋ ಭಜೇತ ಮಾಮ್ ॥
ಪುಣ್ಯವಂತರನ್ನು ವಿಮಾನವು ಹೊತ್ತುಕೊಂಡು ಹೋದಂತೆ ನಾನು ನಿಮ್ಮೆಲ್ಲರನ್ನೂ ನನ್ನ ಬೆನ್ನಿನ ಮೇಲೆ ಕೂರಿಸಿಕೊಂಡು ಕರೆದುಕೊಂಡು ಹೋಗುವೆನು. ನೀವೆಲ್ಲರೂ ಭೀಮಸೇನನು ನನ್ನನ್ನು ಸ್ವೀಕರಿಸುವಂತೆ ಅನುಗ್ರಹವನ್ನು ಮಾಡಿ.
ಏವಂ ಬ್ರುವಂತೀಹ ತಥಾ ಪ್ರತ್ಯಾಖ್ಯಾತಾ ಕ್ರಿಯಾಂ ಪ್ರತಿ |
ಭೂಮ್ಯಾಂ ದುಷ್ಕೃತಿನೋ ಲೋಕಾನ್ ಗಮಿಷ್ಯೇಽಹಂ ನ ಸಂಶಯಃ ॥
ನಾನು ಹೀಗೆ ಮಾತನಾಡಿದರೂ ನನಗೆ ಉದ್ದಿಷ್ಟವಾದ ಕ್ರಿಯೆಯನ್ನು ನೀನು ನಿರಾಕರಿಸದರೆ, ನಾನು ಭೂಮಿಯಲ್ಲಿ ದುಷ್ಕರ್ಮಗಳನ್ನು ಮಾಡಿದವರು ಹೊಂದುವ ಲೋಕಗಳನ್ನು ಹೊಂದುವೆನು ಎಂಬ ವಿಷಯದಲ್ಲಿ ಸಂಶಯವಿಲ್ಲ. (ವಿವಾಹ ಪ್ರಸ್ತಾಪ ಪ್ರಸಂಗವಾದುದರಿಂದ `ಆತ್ಮಹತ್ಯೆ' ಎಂಬ ಅಪಶಕುನದ ಶಬ್ದವನ್ನು ಆಡದೆ, ಹಿಡಿಂಬಿಯು ಧ್ವನಿಯಿಂದ ಸೂಚಿಸುತ್ತಾಳೆ)
ಅಹಂ ಹಿ ಮನಸಾ ಧ್ಯಾತ್ವಾ ಸರ್ವಂ ವೇತ್ಸ್ಯಾಮಿ ಸರ್ವದಾ |

ಆಪನ್ನಿಸ್ತರಣೇ ಪ್ರಾಣಾನ್ ಧಾರಯೇದ್ ಯೇನ ಕೇನಚಿತ್ ॥22॥
ನಾನು ಮನಸ್ಸಿನಿಂದಲೇ ಯೋಚಿಸಿ ಯಾವಾಗಲೂ ಎಲ್ಲವನ್ನೂ ತಿಳಿಯುತ್ತೇನೆ. ಆಪತ್ತನ್ನು ದಾಟಿ ಯಾವ ಉಪಾಯದಿಂದ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕು ಎಂದೂ ನನಗೆ ತಿಳಿದಿದೆ.
ಸರ್ವಮಾಪತ್ಸು ಕರ್ತವ್ಯಂ ತದ್ ಧರ್ಮಮನುಪಶ್ಯತಾ |
ಆಪತ್ಸು ಯೋ ಧಾರಯತಿ ಸ ವೈ ಧರ್ಮವಿದುತ್ತಮಃ ॥23॥
ಧರ್ಮದಲ್ಲಿ ದೃಷ್ಟಿಯಿದ್ದವನು ಆಪತ್ತಿನಲ್ಲಿ ಎಲ್ಲವನ್ನೂ ಮಾಡಬೇಕಾಗುತ್ತದೆ. ಇನ್ನೊಬ್ಬರಿಗೆ ಆಪತ್ತು ಒದಗಿದಾಗ ಯಾವನು ಅವರ ಪ್ರಾಣಗಳನ್ನು ಉಳಿಸುತ್ತಾನೋ ಅವನು ಧರ್ಮಜ್ಞರಲ್ಲಿ ಶ್ರೇಷ್ಠನಾದವನು.
ವ್ಯಸನಂ ಹ್ಯೇವ ಧರ್ಮಸ್ಯ ಧರ್ಮಿಣಾಮಾಪದುಚ್ಯತೇ |
ಪುಣ್ಯಾತ್ ಪ್ರಾಣಾನ್ ಧಾರಯತಿ ಪುಣ್ಯಂ ವೈ ಪ್ರಾಣಧಾರಣಮ್ ॥
ಧರ್ಮಿಷ್ಠರಾದವರಿಗೆ ಧರ್ಮಕ್ಕೆ ಉಂಟಾದ ವ್ಯಸನವೇ ಆಪತ್ತು ಎನಿಸುತ್ತದೆ. ಪ್ರಾಣಧಾರಣೆಯು ಪುಣ್ಯವಾದುದು. ಆದ್ದರಿಂದ ಧರ್ಮಾತ್ಮರು ಆಪತ್ತಿನಲ್ಲಿರುವವರಿಗೆ ಸಹಾಯವನ್ನು ಮಾಡಿ ಅವರ ಪ್ರಾಣಗಳನ್ನು ಉಳಿಸುತ್ತಾರೆ. (ನನ್ನನ್ನು ಪತ್ನಿಯಾಗಿ ಸ್ವೀಕರಿಸಿ ನನ್ನ ಸಂಕಟವನ್ನು ಪರಿಹರಿಸುವ ಯೋಗ್ಯತೆ ಮತ್ತು ಸಾಮರ್ಥ್ಯ ನಿಮಗಿದೆ. ನೀವು ಧರ್ಮಿಷ್ಠರು. ಹೀಗೆ ಮಾಡದಿದ್ದರೆ ನಿಮ್ಮ ಧರ್ಮಕ್ಕೆ ಆಪತ್ತು ಬರುತ್ತದೆ. ಆದ್ದರಿಂದ ನನ್ನನ್ನು ಸ್ವೀಕರಿಸಿ ನಿಮ್ಮ ಧರ್ಮವನ್ನು ರಕ್ಷಿಸಿಕೊಳ್ಳಿ.)
ಯೇನಯೇನ ಚರೇದ್ ಧರ್ಮಂ ತಸ್ಮಿನ್ ಗರ್ಹಾ ನ ವಿದ್ಯತೇ |
ಮಹತೋಽತ್ರ ಸ್ತ್ರಿಯಂ ಕಾಮಾದ್ ಬಾಧಿತಾಂ ತ್ರಾಹಿ ಮಾಮಪಿ ॥
ಯಾವ ಯಾವ ರೀತಿಯಿಂದ ಧರ್ಮದ ಆಚರಣೆ ಉಂಟಾಗಿ ಧರ್ಮವು ಉಳಿಯುತ್ತದೆಯೋ ಅದು ಯಾವುದೂ ನಿಂದ್ಯವಲ್ಲ. ಅತಿಯಾದ ಕಾಮದಿಂದ ಪೀಡಿಸಲ್ಪಟ್ಟ ಸ್ತ್ರೀಯಾದ ನನ್ನನ್ನೂ ಸಹ ರಕ್ಷಿಸಿ.
ಧರ್ಮಾರ್ಥಕಾಮಮೋಕ್ಷೇಷು ದಯಾಂ ಕುರ್ವಂತಿ ಸಾಧವಃ |
ತಂ ತು ಧರ್ಮಮಿತಿ ಪ್ರಾಹುರ್ಮುನಯೋ ಧರ್ಮವತ್ಸಲಾಃ ॥26॥
ಸಜ್ಜನರು ತಮಗೆ ಧರ್ಮಾರ್ಥಕಾಮಮೋಕ್ಷಗಳು ಸಿದ್ಧವಾಗಿದ್ದರೂ ಅಧಮಜನರಲ್ಲಿ ದಯೆಯನ್ನು ಮಾಡುತ್ತಾರೆ. ಧರ್ಮತ್ಸಲರಾದ ಋಷಿಗಳು ದಯೆಯನ್ನು ಶ್ರೇಷ್ಠವಾದ ಧರ್ಮವೆಂದು ಹೇಳುತ್ತಾರೆ.
ದಿವ್ಯಜ್ಞಾನೇನ ಪಶ್ಯಾಮಿ ಅತೀತಾನಾಗತಾನಹಮ್ |
ತಸ್ಮಾದ್ ವಕ್ಷ್ಯಾಮಿ ವಃ ಶ್ರೇಯ ಆಸನ್ನಂ ಸರ ಉತ್ತಮಮ್ ॥27॥
ನಾನು ನನ್ನ ದಿವ್ಯಜ್ಞಾನದಿಂದ ಭೂತ ಮತ್ತು ಭವಿಷ್ಯತ್ತಿನ ಘಟನೆಗಳನ್ನು ನೋಡುತ್ತೇನೆ. ಆದ್ದರಿಂದ ನಿಮ್ಮ ಶ್ರೇಯಸ್ಸಿಗಾಗಿ ಹೇಳುತ್ತಿದ್ದೇನೆ. ಹತ್ತಿರದಲ್ಲಿಯೇ ದಿವ್ಯವಾದ ಸರೋವರವಿದೆ.
ಅತ್ರ ಶ್ರಾಂತಾಃ ಪುನಃ ಸ್ನಾತ್ವಾ ವಿಶ್ರಾಮ್ಯ ಚ ವನಸ್ಪತೌ |
ಶ್ವಃ ಪ್ರಭಾತೇ ಮಹದ್ಭೂತಂ ಪ್ರಾದುರ್ಭೂತಂ ಜನಾರ್ದನಮ್ |
ವ್ಯಾಸಂ ಕಮಲಪತ್ರಾಕ್ಷಂ ದೃಷ್ಟ್ವಾ ಶೋಕಂ ವಿಹಾಸ್ಯಥ ॥28॥
ದಣಿದ ನೀವು ಇಲ್ಲಿ ಸ್ನಾನ ಮಾಡಿ ಈ ವನಸ್ಪತಿಯ ಕೆಳಗೆ ವಿಶ್ರಾಂತಿಯನ್ನು ತೆಗೆದುಕೊಳ್ಳಿ. ನಾಳೆಯ ಬೆಳಿಗ್ಗೆ ಶ್ರೇಷ್ಠವ್ಯಕ್ತಿತ್ವದವರಾದ ಜನಾರ್ದನರಾದ, ಕಮಲನಯನರಾದ ವ್ಯಾಸರನ್ನು ಸಂದರ್ಶನ ಮಾಡಿ ನಿಮ್ಮ ಶೋಕವನ್ನು ಕಳೆದುಕೊಳ್ಳುವಿರಿ.
ಧಾರ್ತರಾಷ್ಟ್ರಾದ್ ವಿವಾಸಶ್ಚ ದಹನಂ ವಾರಣಾವತೇ |
ತ್ರಾಣಂ ಚ ವಿದುರಾತ್ ತುಭ್ಯಂ ವಿದಿತಂ ಜ್ಞಾನಚಕ್ಷುಷಾ |
ಆವಾಸೇ ಶಾಲಿಹೋತ್ರಸ್ಯ ಸ ಚ ವಾಸಂ ವಿಧಾಸ್ಯತಿ ॥29॥
ವರ್ಷವಾತಾತಪಸಹ ಅಯಂ ಪುಣ್ಯೋ ವನಸ್ಪತಿಃ |
ಪೀತಮಾತ್ರೇ ತು ಪಾನೀಯೇ ಕ್ಷುತ್ಪಿಪಾಸೇ ವಿನಶ್ಯತಃ ॥30॥
ದುರ್ಯೋಧನನಿಂದ ನಿಮ್ಮ ನಿಷ್ಕಾಸನ, ವಾರಣಾವತದಲ್ಲಿ ಅರಗಿನಮನೆಯಲ್ಲಿ ದಹನ, ವಿದುರನಿಂದ ನಿಮ್ಮ ರಕ್ಷಣೆ, ಎಲ್ಲವನ್ನೂ ನಾನು ಜ್ಞಾನಚಕ್ಷುಸ್ಸಿನಿಂದ ತಿಳಿದಿದ್ದೇನೆ. ವೇದವ್ಯಾಸರು ನಿಮ್ಮನ್ನು ಶಾಲಿಹೋತ್ರರ ಆಶ್ರಮದಲ್ಲಿ ವಾಸ ಮಾಡುವಂತೆ ಹೇಳುತ್ತಾರೆ. ಈ ಪವಿತ್ರವಾದ ವನಸ್ಪತಿಯು ಮಳೆ, ಬಿಸಿಲು, ಗಾಳಿಗಳಿಂದ ರಕ್ಷಣೆಯನ್ನು ಕೊಡುತ್ತದೆ. ಈ ಸರೋವರದ ನೀರನ್ನು ಕುಡಿದ ತಕ್ಷಣ ಹಸಿವು ಬಾಯಾರಿಕೆಗಳು ಮಾಯವಾಗುತ್ತವೆ.
ತಪಸಾ ಶಾಲಿಹೋತ್ರೇಣ ಸರೋ ವೃಕ್ಷಶ್ಚ ನಿರ್ಮಿತಃ |
ಕಾದಂಬಾಃ ಸಾರಸಾ ಹಂಸಾಃ ಕುರರ್ಯಃ ಕುರರೈಃ ಸಹ |
ರುವಂತಿ ಮಧುರಂ ಗೀತಂ ಗಾಂಧರ್ವಸ್ವನಮಿಶ್ರಿತಮ್ ॥31॥
ಶಾಲಿಹೋತ್ರರು ತಮ್ಮ ತಪಸ್ಸಿನಿಂದ ಈ ಸರೋವರವನ್ನೂ ಮತ್ತು ವೃಕ್ಷವನ್ನೂ ನಿರ್ಮಿಸಿದ್ದಾರೆ. ಇಲ್ಲಿ ಕಾದಂಬಗಳು, ಸಾರಸಗಳು, ಹಂಸಗಳೂ, ಕುರರ ಕುರರಿಗಳು, ಮಧುರವಾಗಿ ಗಾನ ಮಾಡುತ್ತಿವೆ. ಇದರ ಜೊತೆಯಲ್ಲಿ ಗಂಧರ್ವಗಾನವೂ ಮಿಶ್ರಿತವಾಗಿದೆ.
ವೈಶಂಪಾಯನಃ
ತಸ್ಯಾಸ್ತದ್ವಚನಂ ಶ್ರುತ್ವಾ ಕುಂತೀ ವಚನಮಬ್ರವೀತ್ |
ಯುಧಿಷ್ಠಿರಂ ಮಹಾಪ್ರಾಜ್ಞಂ ಸರ್ವಶಾಸ್ತ್ರವಿಶಾರದಮ್ ॥32॥
ಅವಳ ಆ ಮಾತುಗಳನ್ನು ಕೇಳಿ ಕುಂತಿಯು ಸರ್ವಶಾಸ್ತ್ರವಿಶಾರದನಾದ, ಮಹಾಪ್ರಾಜ್ಞನಾದ ಯುಧಿಷ್ಠಿರನನ್ನು ಕುರಿತು ಮಾತನಾಡಿದಳು.
ತ್ವಂ ಹಿ ಧರ್ಮಭೃತಾಂ ಶ್ರೇಷ್ಠಃ ಮಯೋಕ್ತಂ ಶೃಣು ಭಾರತ |

ರಾಕ್ಷಸ್ಯೇಷಾ ಹಿ ವಾಕ್ಯೇನ ಧರ್ಮಂ ವದತಿ ಸಾಧು ವೈ ॥33॥
ಭಾರತನೇ, ಧರ್ಮಾಚರಣೆ ಮಾಡುವವರಲ್ಲಿ ನೀನೇ ಶ್ರೇಷ್ಠನಾದವನು. ನನ್ನ ಮಾತನ್ನು ಕೇಳು. ಈ ರಾಕ್ಷಸಿಯು ತನ್ನ ಮಾತುಗಳಿಂದ ಸರಿಯಾದ ಧರ್ಮವನ್ನೇ ನುಡಿಯುತ್ತಿದ್ದಾಳೆ.
ಭಾವೇನ ದುಷ್ಟಾ ಭೀಮಂ ಸಾ ಕಿಂ ಕರಿಷ್ಯತಿ ರಾಕ್ಷಸೀ |
ಭಜತಾಂ ಪಾಂಡವಂ ವೀರಮಪತ್ಯಾರ್ಥಂ ಯದೀಚ್ಛಸಿ ॥34॥
ಅವಳ ಮನಸ್ಸಿನಲ್ಲಿ ದುಷ್ಟಭಾವನೆ ಇದ್ದರೆ, ಅವಳು ಭೀಮಸೇನನಿಗೆ ಏನು ಮಾಡಬಲ್ಲಳು? ಆದ್ದರಿಂದ ನಿನ್ನ ಸಮ್ಮತಿಯಿದ್ದರೆ ಅವಳು ಪುತ್ರನನ್ನು ಪಡೆಯುವ ಸಲುವಾಗಿ ಭೀಮಸೇನನನ್ನು ಹೊಂದಲಿ.
ಯುಧಿಷ್ಠಿರಃ
ಏವಮೇತದ್ ಯಥಾऽऽತ್ಥ ತ್ವಂ ಹಿಡಿಂಬೇ ನಾತ್ರ ಸಂಶಯಃ |
ಸ್ಥಾತವ್ಯಂ ತು ತ್ವಯಾ ಧರ್ಮೇ ಯಥಾ ಬ್ರೂಯಾಃ ಸುಮಧ್ಯಮೇ ॥
ಹಿಡಿಂಬಿಯೇ, ನೀನು ಹೇಳಿದಂತೆ ಎಲ್ಲವೂ ಸರಿ. ಇದರಲ್ಲಿ ಸಂಶಯವಿಲ್ಲ. ಸುಮಧ್ಯಮಳೇ, ನೀನು ಈಗ ಹೇಗೆ ಮಾತನಾಡುತ್ತಿರುವೆಯೋ ಹಾಗೆಯೇ ಮುಂದೆಯೂ ಧರ್ಮದಲ್ಲಿಯೇ ನಿಲ್ಲಬೇಕು.
ನಿತ್ಯಂ ಕೃತಾಹ್ನಿಕಾ ಸ್ನಾತಾ ಕೃತಶೌಚಾ ಸುರೂಪಿಣೀ |
ಸ್ನಾತಂ ಕೃತಾಹ್ನಿಕಂ ಭದ್ರೇ ಕೃತಕೌತುಕಮಂಗಲಮ್ |
ಭೀಮಸೇನಂ ಭಜೇಥಾಸ್ತ್ವಮುದಿತೇ ವೈ ದಿವಾಕರೇ ॥36॥
ಭದ್ರೆಯೇ, ನೀನು ನಿತ್ಯವೂ ಪ್ರಾತಃಕಾಲದಲ್ಲಿ ಶುಚಿಯಾಗಿ ಸ್ನಾನವನ್ನು ಮಾಡಿ, ಆಹ್ನಿಕವನ್ನು ಮುಗಿಸಿ ಅಲಂಕೃತಳಾಗಿ. ಸ್ನಾನವನ್ನು ಮಾಡಿ ಆಹ್ನಿಕವನ್ನು ಮುಗಿಸಿ ಮಂಗಳ ಕಾರ್ಯಗಳನ್ನು ಮುಗಿಸಿದ ಭೀಮಸೇನನನ್ನು ಸೂರ್ಯೋದಯವಾದ ನಂತರ ಸೇವಿಸು.
ಅಹಸ್ಸು ವಿಚರಾನೇನ ಯಥಾಕಾಮಂ ಮನೋಜವಾ |
ಆನೇತವ್ಯಸ್ತ್ವಯಾ ಭದ್ರೇ ಭೀಮಸೇನಃ ಸದಾ ನಿಶಿ |
ಪ್ರಾಕ್ ಸಂಧ್ಯಾತೋ ವಿಮೋಕ್ತವ್ಯೋ ರಕ್ಷಿತವ್ಯಶ್ಚ ನಿತ್ಯಶಃ ॥37॥
ಮನೋಜವಳಾದ ನೀನು ಹಗಲಿನಲ್ಲಿ ನಿನ್ನ ಇಚ್ಛೆಯಂತೆ ಇವನ ಜೊತೆಯಲ್ಲಿ ಸಂಚರಿಸು. ರಾತ್ರಿಯ ಹೊತ್ತಿಗೆ ಭೀಮಸೇನನನ್ನು ನೀನು ಪುನಃ ತಂದು ಒಪ್ಪಿಸಬೇಕು. ನಿತ್ಯವೂ ಸೂರ್ಯಾಸ್ತಮಯಕ್ಕಿಂತ ಮುಂಚೆಯೇ ನೀನು ಭೀಮಸೇನನನ್ನು ಬಿಡಬೇಕು ಮತ್ತು ನಿನ್ನ ಜೊತೆಯಲ್ಲಿರುವಾಗ ಅವನನ್ನು ರಕ್ಷಿಸಬೇಕು.
ಏವಂ ರಮಸ್ವ ಭೀಮೇನ ಯಾವದ್ ಗರ್ಭಸ್ಯ ವೇದನಮ್ |
ಏಷ ತೇ ಸಮಯೋ ಭದ್ರೇ ಶುಶ್ರೂಷ್ಯಶ್ಚಾಪ್ರಮತ್ತಯಾ |
ನಿತ್ಯಾನುಕೂಲಯಾ ಭೂತ್ವಾ ಕರ್ತವ್ಯಂ ಶೋಭನಂ ತ್ವಯಾ ॥38॥
ಭದ್ರೆ, ಹೀಗೆ ಗರ್ಭಧಾರಣೆಯಾಗಿದೆ ಎಂದು ತಿಳಿಯುವವವರೆಗೂ ಭೀಮನ ಜೊತೆಯಲ್ಲಿ ರಮಿಸು. ಇದು ನಿನಗೆ ನನ್ನ ನಿಬಂಧನೆ. ನಿತ್ಯವೂ ಎಚ್ಚರಿಕೆಯಿಂದಿದ್ದು ಅವನಿಗೆ ಅನುಕೂಲಳಾಗಿ ಒಳ್ಳೆಯ ಕಾರ್ಯಗಳನ್ನೇ ಮಾಡಿಕೊಂಡು ಅವನ ಶುಶ್ರೂಷೆಯನ್ನು ಮಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಪಂಚಾಶದಧಿಕಶತತಮೋऽಧ್ಯಾಯಃ ॥
॥ ಇತಿ ಹಿಡಿಂಬವಧಪರ್ವಣಿ ಪಂಚಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಐವತ್ತೇಳನೆಯ ಅಧ್ಯಾಯ ಮುಗಿಯಿತು.
*****
ನೂರ ಐವತ್ತೆಂಟನೆಯ ಅಧ್ಯಾಯ
(ಪಾಂಡವರಿಂದ ಶಾಲಿಹೋತ್ರಸರೋವರಪ್ರಾಪ್ತಿ, ಭೀಮಹಿಡಿಂಬಿಯರ ವಿಹಾರ, ವ್ಯಾಸರ ಆಗಮನ ಮತ್ತು ಆಶ್ವಾಸನ)
ವೈಶಂಪಾಯನಃ
ಯುಧಿಷ್ಠಿರೇಣೈವಮುಕ್ತಾ ಕುಂತ್ಯಾ ಚಾಂಕೇऽಧಿರೋಪಿತಾ |
ಭೀಮಾರ್ಜುನಾಂತರಗತಾ ಯಮಾಭ್ಯಾಂ ಚ ಪುರಸ್ಕೃತಾ ॥1॥
ತಿರ್ಯಗ್ ಯುಧಿಷ್ಠಿರಂ ಯಾತಿ ಹಿಡಿಂಬಾ ಭೀಮಗಾಮಿನೀ |
ಶಾಲಿಹೋತ್ರಸರೋ ರಮ್ಯಮಾಸೇದುಸ್ತೇ ಜಲಾರ್ಥಿನಃ ॥2॥
ಯುಧಿಷ್ಠಿರನ ಈ ಮಾತುಗಳನ್ನು ಕೇಳಿ ಕುಂತಿಯು ಹಿಡಿಂಬಿಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡಳು. ಅನಂತರ ಹಿಡಿಂಬಿಯು ಧರ್ಮರಾಜನ ಹಿಂದೆ, ನಕುಲ ಸಹದೇವರ ಮುಂದೆ, ಭೀಮಾರ್ಜುನರ ಮಧ್ಯದಲ್ಲಿ ವೇಗವಾಗಿ ನಡೆದಳು. ಜಲಾರ್ಥಿಗಳಾದ ಅವರೆಲ್ಲರೂ ಮನೋಹರವಾದ ಶಾಲಿಹೋತ್ರ ಸರೋವರವನ್ನು ತಲುಪಿದರು.
ತತ್ ತಥೇತಿ ಪ್ರತಿಜ್ಞಾಯ ಹಿಡಿಂಬಾ ರಾಕ್ಷಸೀ ತದಾ |
ವನಸ್ಪತಿತಳಂ ಗತ್ವಾ ಪರಿಮೃಜ್ಯ ಯಥಾ ಗೃಹಾನ್ ॥3॥
ಪಾಂಡವಾನಾಂ ಚ ವಾಸಂ ಸಾ ಕೃತ್ವಾ ಪರ್ಣಮಯಂ ತಥಾ |
ಆತ್ಮನಶ್ಚ ತಥಾ ಕುಂತ್ಯಾ ಏಕೋದ್ದೇಶೇ ಚಕಾರ ಸಾ ॥4॥
``ನಿಮ್ಮ ಸೇವೆಯನ್ನು ಮಾಡುತ್ತೇನೆ'' ಎಂದು ಪ್ರತಿಜ್ಞೆ ಮಾಡಿದ ಹಿಡಿಂಬಿಯು ಬೇಗ ವೃಕ್ಷಮೂಲಕ್ಕೆ ಹೋಗಿ ಮನೆಯನ್ನು ಗುಡಿಸಿ, ಸಾರಿಸಿ ಶುದ್ಧ ಮಾಡುವಂತೆ ಭೂಮಿಯನ್ನು ಶುದ್ಧಮಾಡಿ ಪಾಂಡವರಿಗೆ ವಾಸಕ್ಕೆ ಒಂದು ಪರ್ಣಶಾಲೆಯನ್ನು ಮಾಡಿ, ತನಗೂ ಮತ್ತು

ಕುಂತಿಗೂ ಇನ್ನೊಂದು ಶಾಲೆಯನ್ನು ಅಲ್ಲಿಯೇ ಸ್ವಲ್ಪ ಉನ್ನತಪ್ರದೇಶದಲ್ಲಿ ಮಾಡಿದಳು.
ಸಹಿತಂ ಪಾಂಡವಾನಾಂ ಸಾ ಕೃತ್ವಾ ಶಯನಪಂಚಕಮ್ |
ಆತ್ಮನಶ್ಚ ತಥಾ ಕುಂತ್ಯಾ ಏಕೋದ್ದೇಶೇ ಕೃತಂ ದ್ವಿಧಾ ॥5॥
ಪಾಂಡವರಿಗೆ ಒಟ್ಟಿಗೆ ಐದು ಶಯನಗಳನ್ನು ಸಿದ್ಧಮಾಡಿ ತನಗೂ ಮತ್ತು ಕುಂತಿಗೂ ಆ ಉನ್ನತ ಪ್ರದೇಶದಲ್ಲಿ ಎರಡು ಶಯನಗಳನ್ನು ಸಿದ್ಧಪಡಿಸಿದಳು.
ಪಾಂಡವಾಸ್ತು ತತಃ ಸ್ನಾತ್ವಾ ಶುದ್ಧಾಃ ಸಂಧ್ಯಾಮುಪಾಸ್ಯ ಚ |
ತೃಷಿತಾಃ ಕ್ಷುತ್ಪಿಪಾಸಾರ್ತಾ ಜಲಮಾತ್ರೇಣ ವರ್ತಯನ್ ॥6॥
ಪಾಂಡವರು ಆಗ ಸ್ನಾನವನ್ನು ಮಾಡಿ ಶುದ್ಧರಾಗಿ ಸಂಧ್ಯೋಪಾಸನೆಯನ್ನು ಮಾಡಿ ಹಸಿವುಬಾಯಾರಿಕೆಗಳಿಂದ ಕೂಡಿದ್ದರೂ, ಕೇವಲ ಜಲವನ್ನು ಸೇವಿಸಿದರು.
ಶಾಲಿಹೋತ್ರಸ್ತತೋ ಜ್ಞಾತ್ವಾ ಕ್ಷುಧಾರ್ತಾನ್ ಪಾಂಡವಾಂಸ್ತದಾ |
ಮನಸಾ ಚಿಂತಯಾಮಾಸ ಪಾನೀಯಂ ಭೋಜನಂ ಮಹತ್ |
ತತಸ್ತೇ ಪಾಂಡವಾಃ ಸರ್ವೇ ವಿಶ್ರಾಂತಾಃ ಪೃಥಯಾ ಸಹ ॥7॥
ಶಾಲಿಹೋತ್ರರು ಪಾಂಡವರು ಹಸಿವಿನಿಂದ ಬಳಲಿರುವುದನ್ನು ತಿಳಿದು. ಮನಸ್ಸಿನಲ್ಲಿಯೇ ಚಿಂತಿಸಿ ಪಾನೀಯವನ್ನೂ ಮತ್ತು ಒಳ್ಳೆಯ ಭೋಜನವನ್ನೂ ಅವರಿಗೆ ತಂದುಕೊಟ್ಟರು. ಅನಂತರ ಪಾಂಡವರೆಲ್ಲರೂ ಕುಂತಿಯ ಜೊತೆಯಲ್ಲಿ ವಿಶ್ರಾಂತರಾದರು.
ಯಥಾ ಜತುಗೃಹೇ ವೃತ್ತಂ ರಾಕ್ಷಸೇನ ಕೃತಂ ಚ ಯತ್ |
ಕೃತ್ವಾ ಕಥಾ ಬಹುವಿಧಾಃ ಕಥಾಂತೇ ಪಾಂಡುನಂದನಮ್ |
ಕುಂತೀ ರಾಜಸುತಾ ವಾಕ್ಯಂ ಭೀಮಸೇನಮಥಾಬ್ರವೀತ್ ॥8॥
ಜತುಗೃಹದಲ್ಲಿ ನಡೆದ ಘಟನೆಗಳನ್ನೂ, ಹಿಡಿಂಬನ ಯುದ್ಧದ ವೈಖರಿಯನ್ನೂ ಬಹುವಿಧವಾಗಿ ಮಾತನಾಡಿ ರಾಜಸುತೆಯಾದ ಕುಂತಿಯು ಪಾಂಡುನಂದನನಾದ ಭೀಮನನ್ನು ಕುರಿತು ಹೀಗೆ ಹೇಳಿದಳು.
ಯಥಾ ಪಾಂಡುಸ್ತಥಾ ಮಾನ್ಯಸ್ತವ ಜ್ಯೇಷ್ಠೋ ಯುಧಿಷ್ಠಿರಃ |
ಅಹಂ ಧರ್ಮವಿಧಾನೇನ ಮಾನ್ಯಾ ಗುರುತರೀ ತವ ॥9॥
ಪಾಂಡುವು ಹೇಗೆ ಮಾನ್ಯನೋ ಹಾಗೆ ಅಣ್ಣನಾದ ಯುಧಿಷ್ಠಿರನು ನಿನಗೆ ಮಾನ್ಯನಾಗಿದ್ದಾನೆ. ನಾನೂ ಸಹ ನಿಮಗೆ ಧರ್ಮದ ಆದೇಶವನ್ನು ನೀಡುವುದರಿಂದ ಶ್ರೇಷ್ಠಳಾದ ಗುರುವೂ ಮತ್ತು ಮಾನ್ಯಳೂ ಆಗಿದ್ದೇನೆ.
ತಸ್ಮಾತ್ ಪಾಂಡುಹಿತಾರ್ಥಂ ಮೇ ಯುವರಾಜ ಹಿತಂ ಕುರು |
ನಿಕೃತಾ ಧಾರ್ತರಾಷ್ಟ್ರೇಣ ಪಾಪೇನಾಕೃತಬುದ್ಧಿನಾ ॥10॥
ಆದ್ದರಿಂದ ಯುವರಾಜನಾದ ಭೀಮನೇ ಪಾಂಡುವಿಗೆ ಹಿತವನ್ನುಂಟು ಮಾಡುವ ಸಲುವಾಗಿ ನನಗೆ ಹಿತವನ್ನು ಮಾಡು. ಪಾಪಿಯೂ ದುರ್ಬುದ್ಧಿಯೂ ಆದ ದುರ್ಯೋಧನನು ನಮಗೆ ಅನೇಕ ವಂಚನೆಗಳನ್ನು ಮಾಡಿದ್ದಾನೆ.
ದುಷ್ಕೃತಸ್ಯ ಪ್ರತೀಕಾರಂ ನ ಪಶ್ಯಾಮಿ ವೃಕೋದರ |
ತಸ್ಮಾತ್ ಕತಿಪಯಾಹೇನ ಯೋಗಕ್ಷೇಮಂ ಭವಿಷ್ಯತಿ ॥11॥
ವೃಕೋದರನೇ, ಅವನು ಮಾಡಿದ ವಂಚನೆಗಳಿಗೆ ಪ್ರತೀಕಾರವನ್ನು ಮಾಡುವ ರೀತಿಯು ನನಗೆ ಕಾಣುತ್ತಿಲ್ಲ. ಕೆಲವು ದಿವಸಗಳಲ್ಲಿಯೇ ನಮಗೆ ಯೋಗಕ್ಷೇಮ ಉಂಟಾಗುವುದೆಂದು ನನಗೆ ತೋರುತ್ತಿದೆ.
ಕ್ಷೇಮಂ ದುರ್ಗಮಿಮಂ ವಾಸಂ ವಸಿಷ್ಯಾಮೋ ಯಥಾಸುಖಮ್ |
ಇದಮದ್ಯ ಮಹದ್ದುಃಖಂ ಧರ್ಮಕೃಚ್ಛ್ರಂ ವೃಕೋದರ ॥12॥
ಈ ದುರ್ಗದಲ್ಲಿ (ಆಶ್ರಮದಲ್ಲಿ) ನಾವು ಸುಖವಾಗಿ ಸ್ವಲ್ಪಕಾಲ ವಾಸಮಾಡೋಣ. ಆದರೆ, ವೃಕೋದರನೇ ಈ ದಿನ ಧರ್ಮಸಂಕಟದಿಂದ ದೊಡ್ಡ ದುಃಖವು ಪ್ರಾಪ್ತವಾಗಿದೆ.
ದೃಷ್ಟ್ವೈವ ತ್ವಾಂ ಮಹಾಪಾಜ್ಞ ಅನಂಗಾಭಿಪ್ರಚೋದಿತಾ |
ಯುಧಿಷ್ಠಿರಂ ಚ ಮಾಂ ಚೈವ ವರಯಾಮಾಸ ಧರ್ಮತಃ ॥13॥
ಮಹಾಪ್ರಾಜ್ಞನೇ, ನಿನ್ನನ್ನು ನೋಡಿದ ಮಾತ್ರದಿಂದಲೇ ಕಾಮಮೋಹಿತಳಾದ ಈ ಹಿಡಿಂಬಿಯು ಯುಧಿಷ್ಠಿರನನ್ನೂ ಮತ್ತು ನನ್ನನ್ನೂ ಧರ್ಮದಿಂದಲೇ ಬೇಡುತ್ತಿದ್ದಾಳೆ.
ಧರ್ಮಾರ್ಥಂ ದೇಹಿ ಪುತ್ರಂ ತ್ವಂ ಸನಃ ಶ್ರೇಯಃ ಕರಿಷ್ಯತಿ |
ಪ್ರತಿವಾಕ್ಯಂ ತು ನೇಚ್ಛಾಮಿ ಆವಾಭ್ಯಾಂ ವಚನಂ ಕುರು ॥14॥
ನೀನು ಧರ್ಮಾರ್ಥವಾಗಿ ಅವಳಿಗೆ ಒಬ್ಬ ಪುತ್ರನನ್ನು ಕೊಡು. ಆ ಪುತ್ರನಿಂದ ನಮಗೆ ಶ್ರೇಯಸ್ಸು ಉಂಟಾಗುವುದು. ನನ್ನ ಮಾತಿಗೆ ಪ್ರತಿಯಾಗಿ ಮಾತನಾಡಬೇಡ. ನಮ್ಮಿಬ್ಬರ ಮಾತನ್ನು ನಡೆಸಿಕೊಡುತ್ತೇನೆ ಎಂದು ಮಾತನ್ನು ಕೊಡು.
ವೈಶಂಪಾಯನಃ
ತಥೇತಿ ತತ್ ಪ್ರತಿಜ್ಞಾಯ ಭೀಮಸೇನೋಽಬ್ರವೀದಿದಮ್ |
ಶಾಸನಂ ತೇ ಕರಿಷ್ಯಾಮಿ ವೇದಶಾಸನಮಿತ್ಯಪಿ ॥15॥
ಭೀಮಸೇನನು ``ಹಾಗೆಯೇ ಆಗಲಿ'' ಎಂದು ಪ್ರತಿಜ್ಞೆ ಮಾಡಿ, ನಿನ್ನ ಆದೇಶವನ್ನು ವೇದದ ಆದೇಶವೆಂದೇ ನೆರವೇರಿಸುವೆನು ಎಂದು ಹೇಳಿ ಈ ಮಾತುಗಳನ್ನು ಆಡಿದನು.
ಸಮಕ್ಷಂ ಭ್ರಾತೃಮಧ್ಯೇ ತು ಭೀಮಸೇನೋಽಬ್ರವೀದಿದಮ್ |
ಶೃಣು ರಾಕ್ಷಸಿ ಸತ್ಯೇನ ಸಮಯಂ ತೇ ವದಾಮ್ಯಹಮ್ ॥16॥

ತಾಯಿಯ ಎದುರಿನಲ್ಲಿ ಸಹೋದರರ ಮಧ್ಯದಲ್ಲಿ ಭೀಮಸೇನನು ಹೀಗೆ ಮಾತನಾಡಿದನು. ರಾಕ್ಷಸಿ ನನ್ನ ಮಾತನ್ನು ಕೇಳು. ನಾನು ಪ್ರಮಾಣಪೂರ್ವಕವಾಗಿ ನಿನಗೆ ಸಮಯವನ್ನು (ಷರತ್ತನ್ನು) ವಿಧಿಸುತ್ತೇನೆ.
ಯಾವತ್ಕಾಲೇನ ಭವತಿ ಅಪತ್ಯೋತ್ಪಾದನಂ ಶುಭೇ |
ತಾವತ್ಕಾಲಂ ಚರಿಷ್ಯಾಮಿ ತ್ವಯಾ ಸಹ ಸುಮಧ್ಯಮೇ ॥17॥
ಶುಭಳಾದವಳೇ ಮತ್ತು ಸುಮಧ್ಯಮಳೇ, ನಿನಗೆ ಪುತ್ರನು ಜನಿಸುವವರೆಗೆ ನಿನ್ನ ಜೊತೆಯಲ್ಲಿ ಸಂಚರಿಸುವೆನು.
ವಿಶೇಷತೋ ಮತ್ಸಕಾಶೇ ಮಾ ಪ್ರಕಾಶಯ ನೀಚತಾಮ್ |
ಉತ್ತಮಸ್ತ್ರೀಗುಣೋಪೇತಾ ಭಜೇಥಾ ವರವರ್ಣಿನಿ ॥18॥
ನನ್ನ ಎದುರಿನಲ್ಲಿ ನೀನು ಎಂದೂ ನೀಚತನವನ್ನು ತೋರಿಸಬಾರದು. ಸುಂದರಿಯೇ, ಉತ್ತಮ ಸ್ತ್ರೀಯರ ಗುಣಗಳಿಂದ ಕೂಡಿದವಳಾಗಿ ನನ್ನ ಜೊತೆಯಲ್ಲಿರು.
ಸಾ ತಥೇತಿ ಪ್ರತಿಜ್ಞಾಯ ಹಿಡಿಂಬೀ ರಾಕ್ಷಸೀ ತದಾ |
ಗತ್ವಾಽಹನಿ ನಿವೇಶೇಷು ಭೋಜ್ಯಂ ರಾಜಾರ್ಹಮಾನಯತ್ ॥19॥
ರಾಕ್ಷಸಿಯಾದ ಹಿಡಿಂಬಿಯು ``ಹಾಗೆಯೇ ಆಗಲಿ'' ಎಂದು ಪ್ರತಿಜ್ಞೆಯನ್ನು ಮಾಡಿ ಹಗಲಿನಲ್ಲಿ ಅಲ್ಲಲ್ಲಿ ಸಂಚಾರ ಮಾಡಿ ರಾಜಯೋಗ್ಯವಾದ ಭೋಜನವನ್ನು ತರುತ್ತಿದ್ದಳು.
ಸಾ ಕದಾಚಿದ್ ವಿಹಾರಾರ್ಥಂ ಹಿಡಿಂಬೀ ಕಾಮಚಾರಿಣೀ |
ಭೀಮಸೇನಮುಪಾದಾಯ ಊರ್ಧ್ವಮಾಚಕ್ರಮೇ ತತಃ ॥20॥
ಒಮ್ಮೆ ಕಾಮಚಾರಿಣಿಯಾದ ಹಿಡಿಂಬಿಯ ಭೀಮಸೇನನನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿದಳು.
ವನೇಷು ಚ ಸಶೈಲೇಷು ದೇವತಾಯತನೇಷು ಚ |
ಮೃಗಪಕ್ಷಿವಿಘುಷ್ಟೇಷು ರಮಣೀಯೇಷು ಸರ್ವತಃ ॥21॥
ಕೃತ್ವಾ ಸಾ ಪರಮಂ ರೂಪಂ ಸರ್ವಾಭರಣಭೂಷಿತಾ |
ಸಂಜಲ್ಪಂತೀ ಸುಮಧುರಂ ರಮಯಾಮಾಸ ಪಾಂಡವಮ್ ॥22॥
ಅವಳು ಮೃಗಪಕ್ಷಿಗಳ ಸ್ವನದಿಂದ ಕೂಡಿದ ಸುಂದರ ವನಗಳಲ್ಲಿಯೂ, ಪರ್ವತಗಳಲ್ಲಿಯೂ, ದೇವತಾವಿಹಾರಸ್ಥಾನಗಳಲ್ಲಿಯೂ, ಭೀಮನನ್ನು ಕರೆದುಕೊಂಡು ಹೋಗಿ, ಪರಮಸೌಂದರ್ಯವನ್ನು ಹೊಂದಿ ಸರ್ವಾಭರಣ- ಭೂಷಿತಳಾಗಿ ಮಧುರವಾಗಿ ಮಾತನಾಡುತ್ತಾ ಭೀಮಸೇನನನ್ನು ರಮಿಸಿದಳು.
ತಥೈವ ವನದುರ್ಗೇಷು ಪರ್ವತದ್ರುಮಸಾನುಷು |
ಸರಸ್ಸು ರಮಣೀಯೇಷು ಪದ್ಮೋತ್ಪಲವನೇಷು ಚ ॥23॥
ನದೀದ್ವೀಪಪ್ರದೇಶೇಷು ಮಣಿಹೇಮಯುತೇಷು ಚ |
ಪತ್ತನೇಷು ಚ ರಮ್ಯೇಷು ಮಹಾಸಾಲವನೇಷು ಚ ॥24॥
ದೇವಾರಣ್ಯೇಷು ಪುಣ್ಯೇಷು ತಾಪಸಾಯತನೇಷು ಚ |
ಗುಹ್ಯಕಾನಾಂ ನಿವಾಸೇಷು ಕುಲಪರ್ವತಸಾನುಷು ॥25॥
ಸರ್ವರ್ತುಫಲವೃಕ್ಷೇಷು ಮಾನಸೇಷು ವನೇಷು ಚ |
ಬಿಭ್ರುತೀ ಪರಮಂ ರೂಪಂ ರಮಯಾಮಾಸ ಪಾಂಡವಮ್ ॥26॥
ಹಾಗೆಯೇ, ವನದುರ್ಗಗಳಲ್ಲಿಯೂ, ಪರ್ವತದ ತಪ್ಪಲುಗಳಲ್ಲಿಯೂ, ರಮಣೀಯವಾದ ಪದ್ಮೋತ್ಪಲವನವಿರುವ ಸರೋವರಗಳಲ್ಲಿಯೂ, ನದಿಯ ದ್ವೀಪಗಳಲ್ಲಿಯೂ, ಮಣಿಹೇಮಯುಕ್ತವಾದ ಪಟ್ಟಣಗಳಲ್ಲಿಯೂ, ಮನೋಹರವಾದ ಸಾಲವನಗಳಲ್ಲಿಯೂ, ಪವಿತ್ರವಾದ ದೇವಾರಣ್ಯಗಳಲ್ಲಿಯೂ, ಋಷಿಗಳ ಆಶ್ರಮಗಳಲ್ಲಿಯೂ, ಗುಹ್ಯಕರ ವಾಸಸ್ಥಾನಗಳಲ್ಲಿಯೂ, ಕುಲಾಚಲಗಳ ತಪ್ಪಲುಗಳಲ್ಲಿಯೂ, ಎಲ್ಲಾ ಋತುಗಳಲ್ಲಿಯೂ ಫಲಪುಷ್ಪಗಳನ್ನು ಕೊಡುವ ಮಾನಸಸರೋವರದ ವನಗಳಲ್ಲಿಯೂ, ಸುಂದರವಾದ ರೂಪವನ್ನು ಧರಿಸಿ ಭೀಮಸೇನನನ್ನು ಸಂತೋಷಪಡಿಸಿದಳು.
ಯಥಾ ಚ ಸುಕೃತೀ ಸ್ವರ್ಗೇ ಮೋದತೇಽಪ್ಸರಸಾ ಸಹ |
ಸ ತಥಾ ಪರಮಪ್ರೀತಸ್ತಯಾ ರೇಮೇ ಮಹಾದ್ಯುತಿಃ ॥27॥
ಪುಣ್ಯವನ್ನು ಮಾಡಿದವನು ಸ್ವರ್ಗದಲ್ಲಿ ಅಪ್ಸರೆಯರ ಜೊತೆಯಲ್ಲಿ ಸಂತೋಷಪಡುವಂತೆ, ಮಹಾದ್ಯುತಿಯಾದ ಭೀಮನು ಪರಮಸಂತೋಷದಿಂದ ಅವಳ ಜೊತೆಯಲ್ಲಿ ರಮಿಸಿದನು.
ರಮಯಂತೀ ತತೋ ಭೀಮಂ ತತ್ರತತ್ರ ಮನೋಜವಾ |
ಸಾ ರೇಮೇ ತೇನ ಸಂಹರ್ಷಾದತೃಪ್ಯಂತೀ ಮುಹುರ್ಮುಹುಃ ॥28॥
ಮನೋಜವಳಾದ ಅವಳು ಅಲ್ಲಲ್ಲಿ ಭೀಮನಿಗೆ ಸುಖವನ್ನು ಕೊಡುತ್ತಾ ತಾನು ಭೀಮನನ್ನು ಪುನಃ ಪುನಃ ರಮಿಸಿ ತೃಪ್ತಿಯನ್ನು ಪಡೆಯದೇ ಸಂತೋಷಪಟ್ಟಳು.
ಅಹಸ್ಸು ವಿಚರಂತೀ ಸಾ ನಿಶಾಕಾಲೇಷು ಪಾಂಡವಮ್ |
ಆನೀಯ ವೈ ಸ್ವಕೇ ಗೇಹೇ ದರ್ಶಯಾಮಾಸ ಮಾತರಮ್ ॥29॥
ಹಗಲಿನಲ್ಲಿ ಈ ರೀತಿ ಸಂಚರಿಸಿ ರಾತ್ರಿ ವೇಳೆಗೆ ಭೀಮಸೇನನನ್ನು ಕರೆದುಕೊಂಡು ಬಂದು ತನ್ನ ಮನೆಯಲ್ಲಿದ್ದ ಕುಂತಿಗೆ ತೋರಿಸುತ್ತಿದ್ದಳು.
ಭ್ರಾತೃಭಿಃ ಸಹಿತೋ ನಿತ್ಯಂ ಸ್ವಪತೇ ಪಾಂಡವಸ್ತದಾ |
ಕುಂತ್ಯಾಃ ಪರಿಚರಂತೀ ಸ ತಸ್ಯಾಃ ಪಾರ್ಶ್ವೇಽವಸನ್ನಿಶಾಮ್ |

ಕಾಮಾಂಶ್ಚ ಮುಖವಾಸಾದೀನಾನಯಿಷ್ಯತಿ ಭೋಜನಮ್ ॥30॥
ಭೀಮಸೇನನು ಪ್ರತಿದಿನವೂ ಸಹೋದರರ ಜೊತೆಯಲ್ಲಿಯೇ ನಿದ್ರಿಸುತ್ತಿದ್ದನು. ಹಿಡಿಂಬಿಯು ಕುಂತಿಯ ಪರಿಚಾರಿಕೆಯನ್ನು ಮಾಡುತ್ತಾ ಕುಂತಿಯ ಪಕ್ಕದಲ್ಲಿಯೇ ರಾತ್ರಿಯನ್ನು ಕಳೆಯುತ್ತಿದ್ದಳು. ಕುಂತಿಗೆ ಇಷ್ಟವಾದ ಮುಖ ಕೈ ಹಚ್ಚಿಕೊಳ್ಳುವ ಅಂಗರಾಗಗಳನ್ನೂ ಮತ್ತು ಆಹಾರವನ್ನೂ ತರುತ್ತಿದ್ದಳು.
ವೈಶಂಪಾಯನಃ
ತಸ್ಯಾಂ ರಾತ್ರ್ಯಾಂ ವ್ಯತೀತಾಯಾಮಾಜಗಾಮ ಮಹಾವ್ರತಃ।
ಪಾರಾಶರ್ಯೋ ಮಹಾಪ್ರಾಜ್ಞೋ ದಿವ್ಯದರ್ಶೀ ಮಹಾತಪಾಃ ॥
ಆ ರಾತ್ರಿಯು ಕಳೆಯುತ್ತಿರಲು, ಮಹಾವ್ರತಧಾರಿಗಳೂ, ಮಹಾತಪಸ್ವಿಗಳೂ, ದಿವ್ಯದರ್ಶಿಗಳೂ, ಮಹಾಪ್ರಾಜ್ಞರೂ ಆದ ಪರಾಶರರ ಪುತ್ರರಾದ ವೇದವ್ಯಾಸರು ಅಲ್ಲಿಗೆ ಬಂದರು.
ತೇಽಭಿವಾದ್ಯ ಮಹಾತ್ಮಾನಂ ಕೃಷ್ಣದ್ವೈಪಾಯನಂ ತದಾ।
ತಸ್ಥುಃ ಪ್ರಾಂಜಲಯಃ ಸರ್ವೇ ಸಸ್ನುಷಾ ಚೈವ ಮಾಧವೀ ॥32॥
ಪಾಂಡವರು ಮಹಾತ್ಮರಾದ ವ್ಯಾಸರಿಗೆ ನಮಸ್ಕಾರವನ್ನು ಮಾಡಿ, ಕುಂತಿಯೂ ಹಿಡಿಂಬಿಯೂ ಸೇರಿ ಎಲ್ಲರೂ ಕೈಮುಗಿದು ನಿಂತರು.
ವ್ಯಾಸಃ
ಮಯೇದಂ ಮನಸಾ ಪೂರ್ವಂ ವಿದಿತಂ ಭರತರ್ಷಭಾಃ।
ಯಥಾ ತು ತೈರಧರ್ಮೇಣ ಧಾರ್ತರಾಷ್ಟ್ರೈರಮರ್ಷಣೈಃ ॥33॥
ಭರತಶ್ರೇಷ್ಠರೇ, ಅಸಹನಶೀಲರಾದ ದುರ್ಯೋಧನಾದಿಗಳು ನಿಮ್ಮ ವಿಷಯದಲ್ಲಿ ಹೇಗೆ ಅಧರ್ಮದಿಂದ ನಡೆದುಕೊಂಡರು ಎಂಬುದನ್ನು ನಾನು ಮೊದಲೇ ಮನಸ್ಸಿನಲ್ಲಿಯೇ ತಿಳಿದಿದ್ದೆ.
ತದ್ ವಿದಿತ್ವಾಸ್ಮಿ ಸಂಪ್ರಾಪ್ತಃ ಚಿಕೀರ್ಷನ್ ವೈ ಪರಂ ಹಿತಮ್।
ನ ವಿಷಾದೋಽಥ ಕರ್ತವ್ಯಃ ಸರ್ವಮೇವ ಸುಖಾಯ ವಃ ॥34॥
ಅದನ್ನು ತಿಳಿದು ನಿಮಗೆ ಹಿತವನ್ನು ಮಾಡಲು ಬಯಸಿ ಇಲ್ಲಿಗೆ ಬಂದಿದ್ದೇನೆ. ನೀವು ವಿಷಾದ ಮಾಡಬೇಕಾದ ಅವಶ್ಯಕತೆಯಿಲ್ಲ. ಎಲ್ಲವೂ ಶುಭಪ್ರದವೇ ಆಗುತ್ತದೆ.
ಸುಹೃದ್ವಿರಂಜನಂ ಕರ್ಮ ಪುರಾ ಕೃತಮರಿಂದಮಾಃ।
ತಸ್ಯ ಸಿದ್ಧಿರಿಯಂ ಪ್ರಾಪ್ತಾ ಮಾ ಶೋಚತ ಪರಂತಪಾಃ ॥35॥
ಅರಿಂದಮರೇ, ನೀವು ಹಿಂದೆ ಪ್ರೀತಿಪಾತ್ರರನ್ನು ವಿಯೋಜಿಸಿದ್ದೀರಿ. ಅದರ ಫಲವು ಈಗ ಪ್ರಾಪ್ತವಾಗಿದೆ. ಪರಂತಪರೇ, ಶೋಕ ಪಡಬೇಡಿ.
ಸಮಾಪ್ತೇ ದುಷ್ಕೃತೇ ಚೈವಂ ಯೂಯಂ ಚೈವ ನ ಸಂಶಯಃ।
ಸ್ವರಾಷ್ಟ್ರೇ ವಿಹರಿಷ್ಯಂತೋ ಭವಿಷ್ಯಥ ಸಬಾಂಧವಾಃ ॥36॥
ಆ ಪಾಪಫಲವು ಕಳೆದ ಮೇಲೆ ನೀವು ನಿಸ್ಸಂಶಯವಾಗಿ ನಿಮ್ಮ ರಾಷ್ಟ್ರದಲ್ಲಿ ಬಂಧುಗಳೊಡನೆ ವಿಹರಿಸುವಿರಿ.
ಸಮಾಪ್ತೇ ಚೈವ ಮೇ ಸರ್ವೇ ಯೂಯಂ ಚೈವ ನ ಸಂಶಯಃ।
ದೀನತೋ ಬಾಲತಶ್ಚೈವ ಸ್ನೇಹಂ ಕುರ್ವಂತಿ ಬಾಂಧವಾಃ ॥37॥
ಆ ಕರ್ಮವು ಕಳೆದ ಮೇಲೆ ನೀವೆಲ್ಲರೂ ಶುಭವನ್ನು ಕಾಣುವಿರಿ ಎಂಬುದರಲ್ಲಿ ಸಂಶಯವಿಲ್ಲ. ಬಂಧುಗಳು ದೀನರಾದ ತಮ್ಮ ಸಂಬಂಧಿಗಳಾದ ಬಾಲಕರಲ್ಲಿ ಸ್ನೇಹವನ್ನು ಮಾಡುತ್ತಾರೆ.
ತಸ್ಮಾದಭ್ಯಧಿಕಃ ಸ್ನೇಹೋ ಯುಷ್ಮಾಸು ಮಮ ಸಂಪ್ರತಿ।
ಸ್ನೇಹಪೂರ್ವಂ ಚಿಕೀರ್ಷಾಮಿ ಹಿತಂ ಯತ್ ತನ್ನಿಬೋಧತ ॥38॥
ನೀವು ದೀನರೂ ಮತ್ತು ಬಾಲಕರಾದ ನನ್ನ ಪೌತ್ರರೂ ಆಗಿರುವುದರಿಂದ ಈಗ ನಿಮ್ಮಲ್ಲಿ ಅಧಿಕವಾದ ಸ್ನೇಹವಿದೆ. ಆ ಸ್ನೇಹದಿಂದ ನಾನು ನಿಮಗೆ ಏನು ಹಿತವನ್ನು ಮಾಡಲು ಬಯಸುತ್ತೇನೆ ಎಂಬುದನ್ನು ಕೇಳಿ.
ವಸತೇಹ ಪ್ರತಿಚ್ಛನ್ನಾ ಮಮಾಗಮನಕಾಂಕ್ಷಿಣಃ।
ಏತದ್ ವೈ ಶಾಲಿಹೋತ್ರಸ್ಯ ತಪಸಾ ನಿರ್ಮಿತಂ ಸರಃ ॥39॥
ಇದು ಶಾಲಿಹೋತ್ರರು ತಮ್ಮ ತಪಸ್ಸಿನಿಂದ ನಿರ್ಮಿಸಿದ ಸರೋವರ. ಇಲ್ಲಿ ಯಾರಿಗೂ ತಿಳಿಯದಂತೆ ನನ್ನ ಆಗಮನವನ್ನು ನಿರೀಕ್ಷಿಸುತ್ತಾ ವಾಸಮಾಡಿ.
ರಮಣೀಯಮಿದಂ ತೋಯಂ ಕ್ಷುತ್ಪಿಪಾಸಾಶ್ರಮಾಪಹಮ್।
ಕಾರ್ಯಾರ್ಥಿನಸ್ತು ಷಣ್ಮಾಸಾನ್ ವಿಹರಧ್ವಂ ಯಥಾಸುಖಮ್ ॥40॥
ಈ ಸರೋವರದ ನೀರು ಹಸಿವು, ನೀರಡಿಕೆ ಮತ್ತು ಶ್ರಮವನ್ನು ಪರಿಹರಿಸುವುದಾಗಿ ರಮಣೀಯವಾಗಿದೆ. ಕಾರ್ಯಾರ್ಥಿಗಳಾದ ನೀವು ಇಲ್ಲಿ ಸುಖವಾಗಿ ಆರು ತಿಂಗಳ ಕಾಲ ವಿಹರಿಸಿ.
ವೈಶಂಪಾಯನಃ
ಏವಂ ಸ ತಾನ್ ಸಮಾಶ್ವಾಸ್ಯ ವ್ಯಾಸಃ ಪಾರ್ಥಾನರಿಂದಮಾನ್।
ಸ್ನೇಹಾತ್ ಪಾರ್ಥಾನ್ ಪರಿಷ್ವಜ್ಯ ಕುಂತೀಮಾಶ್ವಾಸಯತ್ ಪ್ರಭುಃ।
ಸ್ನುಷೇ ಮಾ ರೋದ ಮಾ ರೋದೇತ್ಯೇವಂ ವ್ಯಾಸೋಽಬ್ರವೀದ್ ವಚಃ ॥
ವ್ಯಾಸರು ಅರಿಂದಮರಾದ ಪಾಂಡವರನ್ನು ಹೀಗೆ ಸಮಾಧಾನಪಡಿಸಿ ಸ್ನೇಹದಿಂದ ಅವರನ್ನು ಆಲಿಂಗಿಸಿ, ಪ್ರಭುಗಳಾದ ಅವರು ``ಸೊಸೆಯೇ ಅಳಬೇಡ, ಅಳಬೇಡ'' ಎಂದು ಹೇಳಿ ಕುಂತಿಗೆ ಸಮಾಧಾನದ ಮಾತುಗಳನ್ನು ಆಡಿದರು.

ವ್ಯಾಸಃ
ಜೀವಪುತ್ರೇ ಸುತಸ್ತೇಽಯಂ ಧರ್ಮನಿತ್ಯೋ ಯುಧಿಷ್ಠಿರಃ |
ಪೃಥಿವ್ಯಾಂ ಪಾರ್ಥಿವಾನ್ ಸರ್ವಾನ್ ಪ್ರಶಾಸಿಷ್ಯತಿ ಧರ್ಮರಾಟ್ ॥
ಬದುಕಿರುವ ಪುತ್ರರನ್ನುಳ್ಳ ಸೊಸೆಯೇ, ನಿನ್ನ ಮಗನಾದ ಈ ಧರ್ಮನಿತ್ಯನಾದ ಯುಧಿಷ್ಠಿರನು ಭೂಮಿಯಲ್ಲಿ ರಾಜರುಗಳನ್ನು ಗೆದ್ದು ಧರ್ಮರಾಜನಾಗಿ ಎಲ್ಲರನ್ನೂ ಆಳುವನು.
ಧರ್ಮೇಣ ಜಿತ್ವಾ ಪೃಥಿವೀಮಖಿಲಾಂ ಧರ್ಮವಿದ್ ವಶೀ |
ಸ್ಥಾಪಯಿತ್ವಾ ವಶೇ ಸರ್ವಾಂ ಸಪರ್ವತವನಾಂ ಶುಭಾಮ್ |
ಭೀಮಸೇನಾರ್ಜುನಬಲಾದ್ ಭೋಕ್ಷ್ಯತ್ಯಯಮಸಂಶಯಮ್ ॥43॥
ಆತ್ಮನಿಗ್ರಹವುಳ್ಳ ಧರ್ಮಜ್ಞನಾದ ಇವನು ಧರ್ಮದಿಂದ ಸಮಗ್ರವಾದ ಭೂಮಿಯನ್ನು ಜಯಿಸಿ, ಪರ್ವತವನಗಳಿಂದ ಸಹಿತವಾದ ಈ ಭೂಮಿಯನ್ನು ತನ್ನ ವಶದಲ್ಲಿಟ್ಟುಕೊಂಡು ಭೀಮಾರ್ಜುನರ ಬಲದಿಂದ ಭೂಮಿಯನ್ನು ರಕ್ಷಿಸುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ.
ಪುತ್ರಾಸ್ತವ ಚ ಮಾದ್ರ್ಯಾಶ್ಚ ಪಂಚೈತೇ ಸುಮಹಾಬಲಾಃ |
ಸ್ವರಾಷ್ಟ್ರೇ ವಿಹರಿಷ್ಯಂತಿ ಸುಖಂ ಸುಮನಸಃ ಸದಾ ॥44॥
ನಿನ್ನ ಮತ್ತು ಮಾದ್ರಿಯ ಮಕ್ಕಳಾದ ಈ ಐದು ಜನರು ತಮ್ಮ ರಾಷ್ಟ್ರದಲ್ಲಿ ಯಾವಾಗಲೂ ಸಂತೋಷದಿಂದ ವಿಹರಿಸುವರು.
ಯಕ್ಷ್ಯಂತಿ ಚ ನರವ್ಯಾಘ್ರಾ ವಿಜಿತ್ಯ ಪೃಥಿವೀಮಿಮಾಮ್ |
ರಾಜಸೂಯಾಶ್ವಮೇಧಾದ್ಯೈಃ ಕ್ರತುಭಿರ್ಭೂರಿದಕ್ಷಿಣೈಃ ॥45॥
ನರವ್ಯಾಘ್ರರಾದ ನಿನ್ನ ಮಕ್ಕಳು ಸಮಗ್ರವಾದ ಭೂಮಿಯನ್ನು ಗೆದ್ದು ಬಹಳ ದಕ್ಷಿಣೆಗಳನ್ನು ಕೊಟ್ಟು ರಾಜಸೂಯಾಶ್ವಮೇಧ ಮೊದಲಾದ ಯಾಗಗಳನ್ನು ನೆರವೇರಿಸುವರು.
ಅನುಗೃಹ್ಯ ಸುಹೃದ್ವರ್ಗಂ ಧನೇನ ಚ ಬಲೇನ ಚ |
ಪಿತೃಪೈತಾಮಹಂ ರಾಜ್ಯಮಾಹರಿಷ್ಯಂತಿ ತೇ ಸುತಾಃ |
ಸ್ನುಷಾ ಕಮಲಪತ್ರಾಕ್ಷೀ ನಾಮ್ನಾ ಕಮಲಮಾಲಿಕಾ ॥46॥
ವಶವರ್ತಿನೀ ತು ಭೀಮಸ್ಯ ಪುತ್ರಮೇಷಾ ಜನಿಷ್ಯತಿ |
ತೇನ ಪುತ್ರೇಣ ಕೃಚ್ಛ್ರೇಷು ಭವಿಷ್ಯಥ ಚ ತಾರಿತಾಃ ॥47॥
ನಿನ್ನ ಮಕ್ಕಳು ಬಂಧುವರ್ಗವನ್ನು ಧನದಿಂದಲೂ ಮತ್ತು ತಮ್ಮ ಬಲದಿಂದಲೂ ಅನುಗ್ರಹಿಸಿ ಪಿತೃಪಿತಾಮಹರಿಂದ ಬಂದ ರಾಜ್ಯವನ್ನು ಪುನಃ ಪಡೆಯುವರು. ಈ ಕಮಲನಯನೆಯಾದ ನಿನ್ನ ಸೊಸೆಯ ಹೆಸರು `ಕಮಲಮಾಲಿಕೆ' ಎಂದು. ಅವಳು ಭೀಮನಿಗೆ ವಶವರ್ತಿನಿಯಾಗಿದ್ದು ಒಬ್ಬ ಮಗನನ್ನು ಪಡೆಯುವಳು. ಆ ಪುತ್ರನು ನಿಮ್ಮನ್ನು ವಿಪತ್ತುಗಳಿಂದ ದಾಟಿಸುವನು.
ಇಹ ಮಾಸಂ ಪ್ರತೀಕ್ಷಧ್ವಮಾಗಮಿಷ್ಯಾಮ್ಯಹಂ ಪುನಃ |
ದೇಶಕಾಲೌ ವಿದಿತ್ವೈವ ವೇತ್ಸ್ಯಧ್ವಂ ಪರಮಾಂ ಮುದಮ್ ॥48॥
ನಾನು ಹಿಂದಿರುಗಿ ಬರುವವರೆಗೆ ಇಲ್ಲಿ ಒಂದು ತಿಂಗಳ ಕಾಲ ನನ್ನನ್ನು ನಿರೀಕ್ಷಿಸುತ್ತಾ ವಾಸಮಾಡಿ. ಸುತ್ತಮುತ್ತಲಿನ ದೇಶಕಾಲಗಳನ್ನು ತಿಳಿದು ಶ್ರೇಷ್ಠವಾದ ಸಂತೋಷವನ್ನು ಹೊಂದಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಹಿಡಿಂಬವಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಐವತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಸಾ ನಂದನಾದಿಷು ವನೇಷು ವಿಹೃತ್ಯ ತೇನ
ಸಾಯಂ ಪ್ರಯಾತಿ ಪೃಥಯಾ ಸಹಿತಾಂಶ್ಚ ಪಾರ್ಥಾನ್ |
ಏವಂ ಯಯಾವಪಿ ತಯೋರಿಹ ವತ್ಸರಾರ್ಧೇ
ಜಾತಶ್ಚ ಸೂನುರತಿವೀರ್ಯಬಲೋಪಪನ್ನಃ ॥62॥
ಹಿಡಿಂಬೆ ನಂದನವನ ಮುಂತಾದ ಉದ್ಯಾನಗಳಲ್ಲಿ ಭೀಮನೊಂದಿಗೆ ವಿಹರಿಸಿ ಸಂಜೆಯ ಹೊತ್ತಿಗೆ ಕುಂತಿ ಪಾಂಡವರು ಇದ್ದೆಡೆಗೆ ಹಿಂತಿರುಗುತ್ತಿದ್ದಳು. ಹೀಗೆ ಆರು ತಿಂಗಳು ಕಳೆದುವು. ಅವರಿಗೆ ಅತಿ ವೀರ್ಯ ಬಲಯುಕ್ತನಾದ ಒಬ್ಬ ಮಗ ಹುಟ್ಟಿದ.
ದೇವೋಽಪಿ ರಾಕ್ಷಸತನುರ್ನಿರ್ಋತಿಃ ಪುರಾ ಯ
ಆವೇಶಯುಕ್ತ ಗಿರಿಶಸ್ಯ ಘಟೋತ್ಕಚಾಖ್ಯಃ |
ಪೂರ್ವಂ ಘಟೋಪಮಮಮುಷ್ಯ ಶಿರೋ ಬಭೂವ
ಕೇಶಾ ನಿಮೇಷತ ಉದಾಸುರತೋ ಹಿ ನಾಮ ॥63॥
ಹಿಂದೆ ದೇವತೆಯಾಗಿದ್ದೂ ರಾಕ್ಷಸ ಶರೀರಿಯಾಗಿದ್ದ ನಿರ್ಋತಿ ಈಗ ಶಿವನ ಆವೇಶಯುಕ್ತನಾಗಿ ಘಟೋತ್ಕಚ ಎಂಬ ಹೆಸರಿನಿಂದ ಮಾತೃಜಾತಿ ಪ್ರಯುಕ್ತ ರಾಕ್ಷಸನಾಗಿ ಜನಿಸಿದ. ಹುಟ್ಟಿದಾಗ ತಲೆ ಮಡಿಕೆಯಂತೆ ಇತ್ತು. ಕೂದಲು ಇರಲಿಲ್ಲ. ನಿಮಿಷದಲ್ಲಿ ಮೇಲ್ಮುಖವಾಗಿ ಕೂದಲು ಬೆಳೆದುವು. ಅದರಿಂದ ಅವನಿಗೆ ಆ ಹೆಸರು.
ಜಾತೇ ಸುತೇ ಸಮಯತೋ ಭಗವತ್ಕೃತಾತ್ಸ

ಭೀಮೋ ಜಗಾದ ಸಸುತಾಂ ಗಮನಾಯ ತಾಂ ಚ |
ಸ್ಮೃತ್ಯಾಭಿಯಾನ ಉಭಯೋರಪಿ ಸಾ ಪ್ರತಿಜ್ಞಾಂ
ತೇಷಾಂ ವಿಧಾಯ ಚ ಯಯೌ ಸುರಲೋಕಮೇವ ॥64॥
ಮಗ ಹುಟ್ಟಿದಾಗ ಭೀಮಸೇನ ವೇದವ್ಯಾಸರ ಮಾತಿನಂತೆ ಹಿಡಿಂಬೆಗೆ ಮಗನೊಂದಿಗೆ ಹೊರಟು ಹೋಗಲು ಆಜ್ಞೆ ಮಾಡಿದ. ನೆನೆದಾಗ ತಾಯಿ ಮಕ್ಕಳಿಬ್ಬರೂ ಬರುವೆವೆಂದು ಪಾಂಡವರಿಗೆ ಮಾತುಕೊಟ್ಟು ಅವಳು ದೇವಲೋಕಕ್ಕೆ ಹೊರಟುಹೋದಳು.
ವ್ಯಾಸೋಽಪಿ ಪಾಂಡುತನಯೈಃ ಸಹಿತೋ ಬಕಸ್ಯ
ರೌದ್ರಾದ್ ವರಾಜ್ಜ್ವಯವಧಾಪಗತಸ್ಯ ನಿತ್ಯಂ |
ಯಾತೋ ವಧಾಯ ಪರಮಾಗಣಿತೋರುಧಾಮಾ
ಪೂರ್ಣಾಕ್ಷಯೋರುಸುಖ ಆಶು ತದೈಕಚಕ್ರಾಂ ॥65॥
ಉತ್ತಮ ಅಸಂಖ್ಯ ಮಹಾಪ್ರಕಾಶಶಾಲಿ ಪೂರ್ಣ ಅಕ್ಷಯ ಮಹಾಸುಖಶಾಲಿಯಾದ ವ್ಯಾಸರು ಶಿವವರದಿಂದ ಎಂದೂ ಪರಾಭವ ಮರಣರಹಿತನಾದ ಬಕಾಸುರನ ಸಂಹಾರಕ್ಕಾಗಿ ಪಾಂಡವರೊಂದಿಗೆ ಬೇಗನೆ ಏಕಚಕ್ರಾನಗರಿಗೆ ಹೋದರು.
* * * *
ನೂರ ಐವತ್ತೊಂಭತ್ತನೆಯ ಅಧ್ಯಾಯ
(ವ್ಯಾಸರ ನಿರ್ಗಮನ, ಶಾಲಿಹೋತ್ರಾಶ್ರಮದಲ್ಲಿ ಪಾಂಡವರ ವಾಸ, ಘಟೋತ್ಕಚನ ಜನನ)
ವೈಶಂಪಾಯನಃ
ಸ ತೈಃ ಪ್ರಾಂಜಲಿಭಿಃ ಸರ್ವೈಃ ತಥೇತ್ಯುಕ್ತೋ ಜನಾಧಿಪ |
ಜಗಾಮ ಭಗವಾನ್ ವ್ಯಾಸೋ ಯಥಾಗತಮೃಷಿಃ ಪ್ರಭುಃ ॥1॥
ಮಹಾರಾಜನೇ, ಅವರೆಲ್ಲರೂ ಕೈಗಳನ್ನು ಜೋಡಿಸಿ ``ಹಾಗೆಯೇ ಆಗಲಿ'' ಎಂದು ಹೇಳಿದ ಮೇಲೆ ಋಷಿಗಳೂ ಮತ್ತು ಪ್ರಭುಗಳೂ ಆದ ಭಗವಾನ್ ವ್ಯಾಸರು ಬಂದಂತೆಯೇ ಹೊರಟು ಹೋದರು.
ಗತೇ ಭಗವತಿ ವ್ಯಾಸೇ ಪಾಂಡವಾಃ ವಿಗತಜ್ವರಾಃ |
ಊಷುಸ್ತತ್ರ ಚಿರಂ ಕಾಲಂ ವಟವೃಕ್ಷೇ ಯಥಾಸುಖಮ್ ॥2॥
ಪೂಜ್ಯರಾದ ವೇದವ್ಯಾಸರು ಹೊರಟು ಹೋದಮೇಲೆ ಪಾಂಡವರು ನಿಶ್ಶಂಕೆಯಾಗಿ ಆ ವಟವೃಕ್ಷದ ಸಮೀಪದಲ್ಲಿ ಸುಖವಾಗಿ ಬಹುಕಾಲವನ್ನು ಕಳೆದರು.
ಶಾಕಮೂಲಫಲಾಹಾರಾಸ್ತಪಃ ಕುರ್ವಂತಿ ಪಾಂಡವಾಃ |
ತತಃ ಪರಂ ಮಹಾರಾಜ ತದಾ ಕಮಲಮಾಲಿಕಾ ॥3॥
ರಮಯಂತೀ ಸದಾ ಭೀಮಂ ತತ್ರತತ್ರ ಮನೋಜವಾ |
ದಿವ್ಯಾಭರಣವಸ್ತ್ರಾಂಗೀ ದಿವ್ಯಸ್ರಗನುಲೇಪನಾ ॥4॥
ಮಹಾರಾಜನೇ, ಪಾಂಡವರುಸೊಪ್ಪು ಗೆಡ್ಡೆ ಹಣ್ಣುಗಳನ್ನು ಆಹಾರ ಮಾಡಿಕೊಂಡು ತಪಸ್ಸನ್ನು ಮಾಡಿದರು. ಆಗ ಕಮಲಮಾಲಿಕೆಯು ದಿವ್ಯವಸ್ತ್ರಗಳನ್ನೂ, ದಿವ್ಯಾಭರಣ- ಗಳನ್ನೂ, ದಿವ್ಯಮಾಲೆಗಳನ್ನೂ, ದಿವ್ಯಗಂಧಗಳನ್ನೂ ಧರಿಸಿ ಮನೋಜವದಿಂದ ಭೀಮನನ್ನು ಅಲ್ಲಲ್ಲಿಗೆ ಕರೆದುಕೊಂಡು ಹೋಗಿ ಅವನ ಒಡನೆ ರಮಿಸಿದಳು.
ಏವಂ ಭ್ರಾತೄನ್ ಸಪ್ತ ಮಾಸಾನ್ ಹಿಡಿಂಬಾಽವಾಸಯದ್ ವನೇ |
ಪಾಂಡವಾನ್ ಭೀಮಸೇನಾರ್ಥಂ ರಾಕ್ಷಸೀ ಕಾಮರೂಪಿಣೀ ॥5॥
ಹೀಗೆ ಕಾಮರೂಪಿಯೂ, ರಾಕ್ಷಸಿಯೂ ಆದ ಹಿಡಿಂಬಿಯು ಆ ಕಾಡಿನಲ್ಲಿ ಭೀಮಸೇನನ ಸಲುವಾಗಿ ಪಾಂಡವರು ಮತ್ತು ಕುಂತಿಯನ್ನು ಏಳು ತಿಂಗಳ ಕಾಲ ವಾಸಮಾಡುವಂತೆ ಮಾಡಿದಳು.
ಅತೃಪ್ತಾ ಭೀಮಸೇನಸ್ಯ ಸಪ್ತಮಾಸೋಪಸಂಗತಾ |
ಸುಖಂ ಸ ವಿಹರನ್ ಭೀಮಸ್ತಂ ಕಾಲಂ ಪರಿಣಾಮಯತ್ ॥6॥
ಭೀಮಸೇನನ ಜೊತೆಯಲ್ಲಿ ಏಳು ತಿಂಗಳ ಕಾಲ ವಿಹರಿಸಿದರೂ ಅವಳು ತೃಪ್ತಳಾಗಲಿಲ್ಲ. ಅವಳ ಜೊತೆಯಲ್ಲಿ ಸುಖವಾಗಿ ವಿಹರಿಸುತ್ತಾ ಭೀಮಸೇನನು ಏಳು ತಿಂಗಳನ್ನು ಕಳೆದನು.
ತತೋಽಲಭತ ಸಾ ಗರ್ಭಂ ರಾಕ್ಷಸೀ ಕಾಮರೂಪಿಣೀ |
ಪ್ರಜಜ್ಞೇ ರಾಕ್ಷಸೀ ಪುತ್ರಂ ಭೀಮಸೇನಾನ್ಮಹಾಬಲಾತ್ ॥7॥
ಕಾಮರೂಪಿಣಿಯಾದ ಆ ರಾಕ್ಷಸಿಯು ಮಹಾಬಲನಾದ ಭೀಮಸೇನನಿಂದ ಗರ್ಭವನ್ನು ಧರಿಸಿ ತಕ್ಷಣದಲ್ಲಿಯೇ ಮಗನನ್ನು ಪಡೆದಳು.
ವಿರೂಪಾಕ್ಷಂ ಮಹಾವಕ್ತ್ರಂ ಶಂಕುಕರ್ಣಂ ವಿಭೀಷಣಮ್ |
ಭೀಮರೂಪಂ ಸುತಾಮ್ರಾಕ್ಷಂ ತೀಕ್ಷ್ಣದಂಷ್ಟ್ರಂ ಮಹಾರವಮ್ ॥8॥
ಮಹೇಷ್ವಾಸಂ ಮಹಾವೀರ್ಯಂ ಮಹಾಸತ್ವಂ ಮಹಾಜವಮ್ |
ಮಹಾಕಾಯಂ ಮಹಾಕಾಲಂ ಮಹಾಪಾದಂ ಮಹಾಭುಜಮ್ |
ಅಮಾನುಷಂ ಮಾನುಷಜಂ ಭೀಮವೇಗಮರಿಂದಮಮ್ ॥9॥
ವಿರೂಪಾಕ್ಷನೂ, ದೊಡ್ಡ ವದನವುಳ್ಳವನೂ, ಶಂಕುಕರ್ಣನೂ, ವಿಭೀಷಣನೂ, ಭಯಂಕರವಾದ ರೂಪವನ್ನು ಹೊಂದಿದವನೂ, ಕೆಂಪಾದ ಕಣ್ಣುಳ್ಳವನೂ, ಹರಿತವಾದ ಕೋರೆದಾಡೆಯುಳ್ಳವನೂ, ಮಹಾರವವುಳ್ಳವನೂ, ಮಹಾಧನುರ್ಧಾರಿಯೂ, ಮಹಾವೀರ್ಯನೂ, ಮಹಾಸತ್ವನೂ, ಮಹಾಜವನೂ, ಮಹಾಕಾಯನೂ, ಮಹಾಪಾದನೂ, ಮಹಾಭುಜನೂ, ಮಹಾಕಪ್ಪುಬಣ್ಣದಿಂದ ಕೂಡಿದವನೂ, ಭೀಮವೇಗವುಳ್ಳವನೂ,ಅರಿಂದಮನೂ, ಅಮಾನುಷನೂ, ಆದರೆ ಮಾನುಷ ಶರೀರವುಳ್ಳ

ಭೀಮನಿಂದ ಜನಿಸಿದವನೂ ಆದ ಪುತ್ರನನ್ನು ಪಡೆದಳು.
ಬಾಲೋऽಪಿ ವಿಕ್ರಮಂ ಪ್ರಾಪ್ತೋ ಮಾನುಷೇಷು ವಿಶಾಂಪತೇ |
ಸರ್ವಾಸ್ತ್ರೇಷು ಪರಂ ವೀರಃ ಪ್ರಕರ್ಷಮಗಮದ್ ಬಲೀ ॥10॥
ರಾಜನೇ, ಅವನು ಬಾಲನಾಗಿದ್ದಾಗಲೇ ಮನುಷ್ಯರಲ್ಲಿ ವಿಕ್ರಮವನ್ನು ಸಾಧಿಸಿ ಎಲ್ಲಾ ಅಸ್ತ್ರಗಳಲ್ಲಿಯೂ ನಿಪುಣತೆಯನ್ನು ಹೊಂದಿ ವೀರನೂ ಬಲಿಷ್ಠನೂ ಆದನು.
ಸದ್ಯೋ ಹಿ ಗರ್ಭಂ ರಾಕ್ಷಸ್ಯೋ ಲಭಂತೇ ಪ್ರಸವಂತಿ ಚ |
ಕಾಮರೂಪಧರಾಶ್ಚೈವ ಭವಂತಿ ಬಹುರೂಪಿಣಃ ॥11॥
ರಾಕ್ಷಸಿಯರು ತಕ್ಷಣ ಗರ್ಭವನ್ನು ಧರಿಸುತ್ತಾರೆ ಮತ್ತು ಆ ಕ್ಷಣದಲ್ಲಿಯೇ ಪ್ರಸವಿಸುತ್ತಾರೆ. ರಾಕ್ಷಸರು ಅನೇಕ ರೂಪವುಳ್ಳವರೂ ಮತ್ತು ಕಾಮರೂಪ- ವುಳ್ಳವರೂ ಆಗಿರುತ್ತಾರೆ.
ಪ್ರಣಮ್ಯ ವಿಕಚಃ ಪಾದಾವಗೃಹ್ಣಾತ್ ಸ ಪಿತುಸ್ತದಾ |
ಮಾತುಶ್ಚ ಪರಮೇಷ್ವಾಸಃ ತೌ ಚ ನಾಮಾಸ್ಯ ಚಕ್ರತುಃ ॥12॥
ತಲೆಯ ಮೇಲೆ ಕೂದಲಿಲ್ಲದ ಪರಮೇಶ್ವಾಸನಾದ ಅವನು ಹುಟ್ಟಿದ ತಕ್ಷಣ ತಂದೆ ತಾಯಿಗಳಿಗೆ ನಮಸ್ಕಾರವನ್ನು ಮಾಡಿದನು. ಅವರು ಅವನಿಗೆ ಹೆಸರಿಟ್ಟರು.
ಘಟೋऽಹಮುತ್ಕಚೋऽಸ್ಮೀತಿ ಮಾತರಂ ಸೋऽಭ್ಯಭಾಷತ | ಅಭವತ್ ತೇನ ನಾಮಾಸ್ಯ ಘಟೋತ್ಕಚ ಇತಿ ಸ್ಮ ಹ ॥13॥
ಜನಿಸಿದ ತಕ್ಷಣ ಕನ್ನಡಿಯಲ್ಲಿ ತನ್ನ ಮುಖವನ್ನೂ ಮತ್ತು ತಲೆಯನ್ನೂ ನೋಡಿಕೊಂಡ ಅವನು ತನ್ನ ತಲೆಯು ಘಟದಂತೆ ಕೆಂಪಾಗಿರುವುದನ್ನು ಗಮನಿಸಿ ತಾಯಿಯನ್ನು ಕುರಿತು ನಾನು ಘಟನೂ, ಉತ್ಕಚನೂ (ಶಿರಸ್ಸಿನಲ್ಲಿ ಮೇಲ್ಮುಖವಾದ ಕೂದಲು ಉಳ್ಳವನು) ಆಗಿದ್ದೇನೆ ಎಂದು ಹೇಳಿದನು. ಆದರಿಂದ ಅವನಿಗೆ ಘಟೋತ್ಕಚನೆಂದೇ ಹೆಸರಾಯಿತು.
ಅನುರಕ್ತಶ್ಚ ತಾನಾಸೀತ್ ಪಾಂಡವಾನ್ ಸ ಘಟೋತ್ಕಚಃ |
ತೇಷಾಂ ಚ ದಯಿತೋ ನಿತ್ಯಮಾತ್ಮಭೂತೋ ಬಭೂವ ಹ ॥14॥
ಆ ಘಟೋತ್ಕಚನು ಪಾಂಡವರಲ್ಲಿ ಅನುರಕ್ತನಾಗಿದ್ದು, ನಿತ್ಯವೂ ಅವರಿಗೆ ಪ್ರಿಯನಾಗಿದ್ದು, ಅವರಿಗೆ ಆತ್ಮಭೂತನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಷಷ್ಟ್ಯಧಿಕಶತತಮೋऽಧ್ಯಾಯಃ ॥
॥ ಇತಿ ಹಿಡಿಂಬವಧಪರ್ವಣಿ ಸಪ್ತಮೋऽಧ್ಯಾಯಃ ॥
॥ಹಿಡಿಂಬವಧಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಐವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಹಿಡಿಂಬವಧ ಪರ್ವವು ಮುಗಿಯಿತು
*****
9. ಬಕವಧಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಜಾತೇ ಸುತೇ ಸಮಯತೋ ಭಗವತ್ಕೃತಾತ್ಸ
ಭೀಮೋ ಜಗಾದ ಸಸುತಾಂ ಗಮನಾಯ ತಾಂ ಚ |
ಸ್ಮೃತ್ಯಾಭಿಯಾನ ಉಭಯೋರಪಿ ಸಾ ಪ್ರತಿಜ್ಞಾಂ
ತೇಷಾಂ ವಿಧಾಯ ಚ ಯಯೌ ಸುರಲೋಕಮೇವ ॥64॥
ಮಗ ಹುಟ್ಟಿದಾಗ ಭೀಮಸೇನ ವೇದವ್ಯಾಸರ ಮಾತಿನಂತೆ ಹಿಡಿಂಬೆಗೆ ಮಗನೊಂದಿಗೆ ಹೊರಟು ಹೋಗಲು ಆಜ್ಞೆ ಮಾಡಿದ. ನೆನೆದಾಗ ತಾಯಿ ಮಕ್ಕಳಿಬ್ಬರೂ ಬರುವೆವೆಂದು ಪಾಂಡವರಿಗೆ ಮಾತುಕೊಟ್ಟು ಅವಳು ದೇವಲೋಕಕ್ಕೆ ಹೊರಟುಹೋದಳು.
ವ್ಯಾಸೋऽಪಿ ಪಾಂಡುತನಯೈಃ ಸಹಿತೋ ಬಕಸ್ಯ
ರೌದ್ರಾದ್ ವರಾಜ್ಜಯವಧಾಪಗತಸ್ಯ ನಿತ್ಯಂ |
ಯಾತೋ ವಧಾಯ ಪರಮಾಗಣಿತೋರುಧಾಮಾ
ಪೂರ್ಣಾಕ್ಷಯೋರುಸುಖ ಆಶು ತದೈಕಚಕ್ರಾಂ ॥65॥
ಉತ್ತಮ ಅಸಂಖ್ಯ ಮಹಾಪ್ರಕಾಶಶಾಲಿ ಪೂರ್ಣ ಅಕ್ಷಯ ಮಹಾಸುಖಶಾಲಿಯಾದ ವ್ಯಾಸರು ಶಿವವರದಿಂದ ಎಂದೂ ಪರಾಭವ ಮರಣರಹಿತನಾದ ಬಕಾಸುರನ ಸಂಹಾರಕ್ಕಾಗಿ ಪಾಂಡವರೊಂದಿಗೆ ಬೇಗನೆ ಏಕಚಕ್ರಾನಗರಿಗೆ ಹೋದರು.
ತಾನ್ ಬ್ರಾಹ್ಮಣಸ್ಯ ಚ ಗೃಹೇ ಪ್ರಣಿಧಾಯ ಕೃಷ್ಣಃ
ಶಿಷ್ಯಾ ಮಮೈತ ಇತಿ ವಿಪ್ರಕುಮಾರರೂಪಾನ್ |
ಆಯಾಮಿ ಕಾಲ ಇತಿ ತಾನನುಶಾಸ್ಯ ಚಾಯಾತ್
ತೇ ತತ್ರ ವಾಸಮಥ ಚಕ್ರುರನೂಚ್ಯ ವೇದಾನ್ ॥66॥
ಬ್ರಾಹ್ಮಣಕುಮಾರರ ವೇಷ ಧರಿಸಿದ್ದ ಪಾಂಡವರನ್ನು ವೇದವ್ಯಾಸರು `ಇವರು ನನ್ನ ಶಿಷ್ಯರು' ಎನ್ನುತ್ತ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇರಿಸಿ `ಯೋಗ್ಯಕಾಲದಲ್ಲಿ ತಿರುಗಿ ಬರುತ್ತೇನೆ' ಎಂದು ಹೇಳಿಹೋದರು. ಪಾಂಡವರು ಅಲ್ಲಿ ವೇದಪಾರಾಯಣ ಮಾಡುತ್ತ ವಾಸಮಾಡಿದರು.
* * * *
ನೂರ ಅರವತ್ತನೆಯ ಅಧ್ಯಾಯ
(ಘಟೋತ್ಕಚ ಮತ್ತು ಹಿಡಿಂಬಿಯರ ಗಮನ, ಬ್ರಾಹ್ಮಣ ವೇಷದಿಂದ ಪಾಂಡವರ ಏಕಚಕ್ರನಗರ ಗಮನ, ಮಾರ್ಗದಲ್ಲಿ ವ್ಯಾಸರ

ದರ್ಶನ, ಏಕಚಕ್ರನಗರದಲ್ಲಿ ಬ್ರಾಹ್ಮಣನ ಮನೆಯಲ್ಲಿ ಅವರನ್ನಿಟ್ಟು ವ್ಯಾಸರ ಗಮನ)
ವೈಶಂಪಾಯನಃ
ಘಟೋತ್ಕಚೋ ಮಹಾಕಾಯಃ ಪಾಂಡವಾನ್ ಪೃಥಯಾ ಸಹ |
ಅಭಿವಾದ್ಯ ಯಥಾನ್ಯಾಯಮಬ್ರವೀಚ್ಚ ಪ್ರಸಾದ್ಯ ತಾನ್ ॥1॥
ಮಹಾಕಾಯನಾದ ಘಟೋತ್ಕಚನು ಪಾಂಡವರಿಗೂ ಮತ್ತು ಕುಂತಿಗೂ ನಮಸ್ಕಾರವನ್ನು ಮಾಡಿ ಅವರನ್ನು ಸಂತೋಷಪಡಿಸಿ ನ್ಯಾಯಯುಕ್ತವಾಗಿ ಹೀಗೆ ಮಾತನಾಡಿದನು.
ಕಿಂ ಕರೋಮ್ಯಹಮಾರ್ಯಾಣಾಂ ನಿಃಶಂಕಂ ವದತಾನಘಾಃ |
ಇತಿ ಬ್ರುವಂತಂ ಭೈಮಸೇನಿಂ ಕುಂತೀ ವಚನಮಬ್ರವೀತ್ ॥2॥
ಅನಘರೇ, ಪೂಜ್ಯರಾದ ನಿಮಗೆ ನಾನು ಏನು ಮಾಡಬೇಕು ಎಂದು ನಿಶ್ಶಂಕೆಯಿಂದ ಹೇಳಿ. ಹೀಗೆ ಹೇಳಿದ ಭೀಮಸೇನನ ಮಗನಾದ ಘಟೋತ್ಕಚನನ್ನು ಕುರಿತು ಕುಂತಿಯು ಹೇಳಿದಳು.
ತ್ವಂ ಕುರೂಣಾಂ ಕುಲೇ ಜಾತಃ ಸಾಕ್ಷಾದ್ ಭೀಮಸುತೋ ಹ್ಯಸಿ |
ಜ್ಯೇಷ್ಠಪುತ್ರಸ್ತು ಪಂಚಾನಾಂ ಸಾಹಾಯ್ಯಂ ಕುರು ಪುತ್ರಕ ॥3॥
ನೀನು ಕುರುಗಳ ವಂಶದಲ್ಲಿ ಸಾಕ್ಷಾತ್ ಭೀಮಸೇನನ ಮಗನಾಗಿ ಜನಿಸಿದ್ದೀಯೆ. ನೀನು ಐದು ಜನ ಪಾಂಡವರಿಗೂ ಜ್ಯೇಷ್ಠಪುತ್ರನಾದವನು. ಪುತ್ರನೇ, ನಮಗೆ ಸಹಾಯವನ್ನು ಮಾಡು.
ವೈಶಂಪಾಯನಃ
ಪೃಥಯಾಪ್ಯೇವಮುಕ್ತಸ್ತು ಪ್ರಣಮ್ಯೈವಂ ವಚೋಽಬ್ರವೀತ್ |
ಯಥಾ ಹಿ ರಾವಣೋ ಲೋಕೇ ಇಂದ್ರಜಿದ್ ವಾ ಮಹಾಬಲಃ ॥4॥
ತೇಷಾಂ ವೀರ್ಯಸಮೋ ವೀರ್ಯೇ ವಿಶಿಷ್ಟಶ್ಚಾಭವಂ ನೃಷು |
ಕೃತ್ಯಕಾಲ ಉಪಸ್ಥಾಸ್ಯೇ ಪಿತೄನಿತಿ ಘಟೋತ್ಕಚಃ |
ಆಮಂತ್ರ್ಯ ರಾಕ್ಷಸಶ್ರೇಷ್ಠಃ ಪ್ರತಸ್ಥೇ ಚೋತ್ತರಾಂ ದಿಶಮ್ ॥5॥
ಕುಂತಿಯು ಹೀಗೆ ಹೇಳಿದಾಗ ಘಟೋತ್ಕಚನು ಅವಳಿಗೆ ನಮಸ್ಕಾರವನ್ನು ಮಾಡಿ ಹೀಗೆ ಮಾತನಾಡಿದನು. ಲೋಕದಲ್ಲಿ ರಾವಣನೂ, ಇಂದ್ರಜಿತುವೂ ಹೇಗೆ ಮಹಾಬಲರಾಗಿದ್ದರೋ, ನಾನು ಮನುಷ್ಯರಲ್ಲಿ, ಪರಾಕ್ರಮದಲ್ಲಿ ಅವರಿಗೆ ಸಮನಾಗಿ ಅಥವಾ ಅವರಿಗಿಂತಲೂ ಶ್ರೇಷ್ಠನಾಗಿದ್ದೇನೆ. ನಿಮಗೆ ಕಾರ್ಯವಾಗಬೇಕಾದಾಗ ನಾನು ನಿಮ್ಮ ಬಳಿಗೆ ಬರುವೆನು ಎಂದು ಹೇಳಿ ಪಿತೃಗಳ ಅನುಮತಿಯನ್ನು ಪಡೆದು ರಾಕ್ಷಸಶ್ರೇಷ್ಠನಾದ ಘಟೋತ್ಕಚನು ಉತ್ತರದಿಕ್ಕಿಗೆ ಅಭಿಮುಖವಾಗಿ ಹೊರಟನು.
ಸ ಹಿ ಸೃಷ್ಟೋ ಭಗವತಾ ಶಕ್ತಿಹೇತೋರ್ಮಹಾತ್ಮನಾ |
ಕರ್ಣಸ್ಯಾಪ್ರತಿವೀರ್ಯಸ್ಯ ವಿನಾಶಾಯ ಮಹಾತ್ಮನಃ ॥6॥
ಮಹಾತ್ಮನಾದ ಮತ್ತು ಪ್ರತಿವೀರರಹಿತನಾದ ಕರ್ಣನ ವಿನಾಶಕ್ಕಾಗಿ ಮಹಾತ್ಮರಾದ ಬ್ರಹ್ಮದೇವರಿಂದ ಅವನು ಶಕ್ತ್ಯಾಯುಧಕ್ಕೆ ಬಲಿಯಾಗುವುದಕ್ಕಾಗಿ ಸೃಷ್ಟಿಸಲ್ಪಟ್ಟವನು.
ಸಂವಾಸಸಮಯೋಽತೀತಃ ತ್ವಯಾ ಕಮಲಮಾಲಿಕೇ |
ಪುನರ್ದ್ರಕ್ಷ್ಯಸಿ ರಾಜ್ಯಸ್ಥಾನಿತ್ಯಭಾಷತ ತಾಂ ತತಃ ॥7॥
ಆಗ ಭೀಮಸೇನನು ಹಿಡಿಂಬಿಯನ್ನು ಕುರಿತು ಕಮಲಮಾಲಿಕೆ ನಿನ್ನ ಜೊತೆಯಲ್ಲಿ ಇರುವ ಸಮಯವು ಮುಗಿಯಿತು. ನಾವು ರಾಜ್ಯವನ್ನು ಪಡೆದ ಮೇಲೆ ನೀನು ನಮ್ಮನ್ನು ನೋಡುವಿ ಎಂದು ಹೇಳಿದನು.
ಹಿಡಿಂಬಾ
ಯದಾ ಮೇ ತ್ವಂ ಸ್ಮರೇಃ ಕಾಂತ ರಿರಂಸೂ ರಹಸಿ ಪ್ರಭೋ |
ತದಾ ತವ ವಶಂ ಭೂಯ ಆಗಂತಾಸ್ಮ್ಯಾಶು ಭಾರತ ॥8॥
ಕಾಂತನೇ, ಪ್ರಭುವೇ, ನೀನು ಯಾವಾಗ ನನ್ನನ್ನು ಸ್ಮರಿಸುವೆಯೋ ಆಗ ಏಕಾಂತದಲ್ಲಿ ನನ್ನನ್ನು ರಮಿಸಲು ಬಯಸಿದರೆ, ನಾನು ಬೇಗ ಬಂದು ಪುನಃ ನಿನ್ನ ವಶಳಾಗುವೆನು.
ವೈಶಂಪಾಯನಃ
ಇತ್ಯುಕತ್ವ ಸಾ ಜಗಮಾಽಶು ಭಾವಮಾಸಜ್ಯ ಪಾಂಡವೇ |
ಹಿಡಿಂಬಾ ಸಮಯಂ ಸ್ಮೃತ್ವಾ ಸ್ವಾ ಂ ಗತಿಂ ಪ್ರತ್ಯಪದ್ಯತ ॥9॥
ಹಿಡಿಂಬಿಯು ಹೀಗೆ ಹೇಳಿ ಭೀಮಸೇನನಲ್ಲಿ ಪ್ರೀತಿಯನ್ನು ತುಂಬಿ ಮೊದಲು ಮಾಡಿದ ನಿಬಂಧನೆಯನ್ನು ಸ್ಮರಿಸಿ ಬೇಗ ಅಲ್ಲಿಂದ ಹೊರಟು ತನ್ನ ಗತಿಯನ್ನು ಹೊಂದಿದಳು.
ತತಸ್ತೇ ಪಾಂಡವಾಃ ಸರ್ವೇ ಶಾಲಿಹೋತ್ರಾಶ್ರಮೇ ಸದಾ |
ಪೂಜಿತಾಸ್ತೇನ ವನ್ಯೇನ ತಮಾಮಂತ್ರ್ಯ ಮಹಾಮುನಿಮ್ ॥10॥
ಅನಂತರ ಪಾಂಡವರು ಆ ಶಾಲಿಹೋತ್ರರ ಆಶ್ರಮದಲ್ಲಿ ಯಾವಾಗಲೂ ವನದಲ್ಲಿ ದೊರೆಯುವ ವಸ್ತುಗಳಿಂದ ಪೂಜಿತರಾಗಿ ಆ ಮಹಾಮುನಿಗಳ ಅಪ್ಪಣೆಯನ್ನು ಪಡೆದು ಹೊರಟರು.
ಜಟಾಃ ಕೃತ್ವಾ ಽಽತ್ಮನಃ ಸರ್ವೇ ವಲ್ಕಲಾಜಿನವಾಸಸಃ |
ಕುಂತ್ಯಾ ಸಹ ಮಹಾತ್ಮಾನೋ ಬಿಭ್ರತಸ್ತಾಪಸಂ ವಪುಃ ॥11॥
ಮಹಾತ್ಮರಾದ ಅವರೆಲ್ಲರೂ ಜಟೆಗಳನ್ನು ಮಾಡಿಕೊಂಡು, ನಾರು ಮಡಿಯನ್ನೂ ಮತ್ತು ಕೃಷ್ಣಾಜಿನವನ್ನೂ ಉಟ್ಟು ತಾಪಸವೇಷವನ್ನು ಧರಿಸಿ ಕುಂತಿಯ ಜೊತೆಯಲ್ಲಿ (ಹೊರಟರು).

ಬ್ರಾಹ್ಮಂ ವೇದಮಧೀಯಾನಾ ವೇದಾಂಗಾನಿ ಚ ಸರ್ವಶಃ |
ನೀತಿಶಾಸ್ತ್ರಂ ಚ ಧರ್ಮಜ್ಞ ಧರ್ಮಜ್ಞಾನಂ ಚ ಪಾಂಡವಾಃ ॥12॥
ಧರ್ಮಜ್ಞನಾದ ಜನಮೇಜಯನೇ, ಪಾಂಡವರು ಪರಬ್ರಹ್ಮ ಪ್ರತಿಪಾದಕವಾದ ವೇದವನ್ನೂ ಮತ್ತು ಎಲ್ಲಾ ವೇದಾಂಗಗಳನ್ನೂ, ನೀತಿಶಾಸ್ತ್ರವನ್ನೂ ಮತ್ತು ಧರ್ಮಶಾಸ್ತ್ರವನ್ನೂ ಅಧ್ಯಯನ ಮಾಡುತ್ತಾ (ಹೊರಟರು).
ಶಾಲಿಹೋತ್ರಪ್ರಸಾದೇನ ಲಬ್ಧ್ವಾ ಪ್ರೀತಿಮನುತ್ತಮಾಮ್ |
ತೇ ವನೇನ ವನಂ ಗತ್ವಾ ಘ್ನಂತೋ ಮೃಗಗಣಾನ್ ಬಹೂನ್ ॥13॥
ಶಾಲಿಹೋತ್ರರ ಅನುಗ್ರಹದಿಂದ ಬಹಳ ಸಂತೋಷವನ್ನು ಹೊಂದಿ ಅನೇಕ ಮೃಗಸಮೂಹಗಳನ್ನು ಕೊಲ್ಲುತ್ತಾ ಅವರು ಕಾಡಿನಿಂದ ಕಾಡಿಗೆ ಪ್ರಯಾಣ ಮಾಡಿದರು.
ಅತಿಕ್ರಮ್ಯ ಯಯೂ ರಾಜಂಸ್ತ್ವರಮಾಣಾ ಮಹಾಬಲಾಃ |
ಮತ್ಸ್ಯಾಂಸ್ತ್ರಿಗರ್ತಾನ್ ಪಾಂಚಾಲಾನ್ ಕೀಚಕಾನಾಂ ವನಾನ್ಯಪಿ ॥14॥
ಮಹಾಬಲರಾದ ಅವರು ತ್ವರೆಯಿಂದ ನಡೆಯುತ್ತಾ, ಮತ್ಸದೇಶವನ್ನೂ, ತ್ರಿಗರ್ತದೇಶವನ್ನೂ, ಪಾಂಚಾಲದೇಶವನ್ನೂ, ಬಿದಿರಿನ ಕಾಡುಗಳನ್ನೂ ದಾಟುತ್ತಾ ಹೊರಟರು.
ರಮಣೀಯಾನ್ ವನೋದ್ದೇಶಾನ್ ಪ್ರೇಕ್ಷಮಾಣಾಃ ಸರಾಂಸಿ ಚ |
ಕ್ವಚಿದ್ ವಹಂತೋ ಜನನೀಂ ತ್ವರಮಾಣಾ ಮಹಾರಥಾಃ ॥15॥
ಮಹಾರಥರಾದ ಅವರು ರಮಣೀಯವಾದ ವನಪ್ರದೇಶವನ್ನೂ ಮತ್ತು ಸರೋವರಗಳನ್ನೂ ನೋಡುತ್ತಾ ಕೆಲವೊಮ್ಮೆ ತಾಯಿಯನ್ನು ಎತ್ತಿಕೊಂಡು, ತ್ವರೆಯಿಂದ ಹೊರಟರು.
ಕ್ವಚಿಚ್ಛನ್ನೇನ ಗಚ್ಛಂತಸ್ತೇ ಜಗ್ಮುಃ ಪೃಥಯಾ ಸಹ |
ಪಥಿ ದ್ವೈಪಾಯನಂ ಸರ್ವೇ ದದೃಶುಸ್ತಂ ಪಿತಾಮಹಮ್ ॥16॥
ವೇಷವನ್ನು ಮರೆಸಿಕೊಂಡು ತಾಯಿಯ ಜೊತೆಯಲ್ಲಿ ಹೊರಟ ಅವರೆಲ್ಲರೂ ಒಮ್ಮೆ ದಾರಿಯಲ್ಲಿ ಪಿತಾಮಹರಾದ ದ್ವೈಪಾಯನರನ್ನು ನೋಡಿದರು.
ಅಭಿಪ್ರಣಮ್ಯ ಶಿರಸಾ ಪಾರಾಶರ್ಯಮುಪೇತ್ಯ ಚ |
ತೇ ಪಾದೌ ಜಗೃಹುಸ್ತಸ್ಯ ಸಹ ಮಾತ್ರಾ ಪರಂತಪ ॥17॥
ಪರಂತಪನೇ, ಅವರು ಪರಾಶರರ ಪುತ್ರರಾದ ವ್ಯಾಸರನ್ನು ಸಮೀಪಿಸಿ ಶಿರಸಾ ಪ್ರಣಾಮವನ್ನು ಮಾಡಿ, ತಾಯಿಯ ಜೊತೆಯಲ್ಲಿ ಅವರ ಪಾದಗಳನ್ನು ಹಿಡಿದರು.
ವ್ಯಾಸಃ
ತದಾಶ್ರಮಾನ್ನಿರ್ಗಮನಂ ಮಯಾ ಜ್ಞಾತಂ ಪರಂತಪಾಃ |
ಘಟೋತ್ಕಚಸ್ಯ ಚೋತ್ಪತ್ತಿಂ ಜ್ಞಾತ್ವಾ ಪ್ರೀತಿರವರ್ಧತ ॥18॥
ಪರಂತಪರೇ, ನೀವು ಶಾಲಿಹೋತ್ರರ ಆಶ್ರಮದಿಂದ ಹೊರಟ ವಿಷಯವು ನನಗೆ ತಿಳಿಯಿತು. ಘಟೋತ್ಕಚನ ಜನನವನ್ನು ತಿಳಿದು ಬಹಳ ಸಂತೋಷವೂ ಆಯಿತು.
ಇದಂ ನಗರಮಭ್ಯಾಶೇ ರಮಣೀಯಂ ನಿರಾಮಯಮ್ |
ವಸತೇಹ ಪ್ರತಿಚ್ಛನ್ನಾ ಮಮಾಗಮನಕಾಂಕ್ಷಿಣಃ ॥19॥
ಸಮೀಪದಲ್ಲಿರುವ ಈ ನಗರವು ಮನೋಹರವೂ ಮತ್ತು ನಿರ್ಬಾಧವೂ ಆಗಿದೆ. ವೇಷವನ್ನು ಮರೆಸಿಕೊಂಡು ನನ್ನ ಆಗಮನವನ್ನು ನಿರೀಕ್ಷಿಸುತ್ತಾ ನೀವು ಇಲ್ಲಿ ವಾಸ ಮಾಡಿ.
ವೈಶಂಪಾಯನಃ
ಏವಂ ಸ ತಾನ್ ಸಮಾಶ್ವಾಸ್ಯ ವ್ಯಾಸಃ ಪಾರ್ಥಾನರಿಂದಮಾನ್ |
ಏಕಚಕ್ರಾಮಭಿಗತಾನ್ ಕುಂತೀಮಾಶ್ವಾಸಯತ್ ಪ್ರಭುಃ ॥20॥
ಹೀಗೆ ಏಕಚಕ್ರನಗರಕ್ಕೆ ಹೊರಟ ಅರಿಂದಮರಾದ ಪಾಂಡವರನ್ನು ಸಮಾಧಾನಪಡಿಸಿ ಪ್ರಭುಗಳಾದ ವ್ಯಾಸರು ಕುಂತಿಗೂ ಸಮಾಶ್ವಾಸನೆಯ ಮಾತುಗಳನ್ನು ಆಡಿದರು.
ವ್ಯಾಸಃ
ಕುರ್ಯಾನ್ನ ಕೇವಲಂ ಧರ್ಮಂ ದುಷ್ಕೃತಂ ಚ ತಥಾ ನರಃ |
ಸುಕೃತಂ ದುಷ್ಕೃತಂ ಲೋಕೇ ನ ಕರ್ತಾ ನಾಪಿ ಶೋಭನೇ |
ಅವಶ್ಯಂ ಲಭತೇ ಕರ್ತಾ ಫಲಂ ವೈ ಪುಣ್ಯಪಾಪಯೋಃ ॥21॥
ಯಾವ ಮನುಷ್ಯನೂ ಕೇವಲ ಸತ್ಕರ್ಮವನ್ನಾಗಲೀ ಅಥವಾ ಕೇವಲ ದುಷ್ಕರ್ಮವನ್ನಾಗಲೀ ಮಾಡುವುದಿಲ್ಲ. ಶೋಭನಳೇ, ಲೋಕದಲ್ಲಿ ಸತ್ಕರ್ಮ ಮತ್ತು ದುಷ್ಕರ್ಮ ಎರಡನ್ನೂ ಮಾಡದೇ ಇರುವವರು ಇರುವುದಿಲ್ಲ. ಮಾಡಿದ ಪುಣ್ಯಪಾಪಗಳಿಗೆ ಕರ್ತೃವಾದವನು ಅವಶ್ಯವಾಗಿ ಫಲವನ್ನು ಪಡೆಯುತ್ತಾನೆ.
ದುಷ್ಕೃತಸ್ಯ ಫಲೇನೈವಂ ಪ್ರಾಪ್ತಾ ವ್ಯಸನಮುತ್ತಮಮ್ |
ತಸ್ಮಾನ್ಮಾಧವಿ ಮಾ ರೋದಃ ಮಾ ಚ ಲೋಕೇ ಮನಃ ಕೃಥಾಃ ॥22॥
ನೀವು ನಿಮ್ಮ ದುಷ್ಕರ್ಮದ ಫಲವಾಗಿ ಈ ಒಂದು ದೊಡ್ಡ ಕಷ್ಟವನ್ನು ಪಡೆದಿದ್ದೀರಿ. ಆದ್ದರಿಂದ ಮಾಧವಿಯೇ, ಅಳಬೇಡ. ದೇವರನ್ನು ಬಿಟ್ಟು ಲೋಕದ ವಿಷಯಗಳಲ್ಲಿ ಮನಸ್ಸನ್ನು ಇಡಬೇಡ.
ವೈಶಂಪಾಯನಃ

ಏವಮುಕತತ್ವ ನಿವೇಶ್ಯೈತಾನ್ ಬ್ರಾಹ್ಮಣಸ್ಯ ನಿವೇಶನೇ |
ಜಗಾಮ ಭಗವಾನ್ ವ್ಯಾಸೋ ಯಥಾಕಾಮಮೃಷಿಃ ಪ್ರಭುಃ ॥23॥
ಪೂಜ್ಯರಾದ ವ್ಯಾಸರು ಹೀಗೆ ಹೇಳಿ ಅವರನ್ನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇಟ್ಟು, ಪ್ರಭುಗಳಾದ ಆ ಋಷಿಗಳು ತಮ್ಮ ಇಚ್ಛೆಯಂತೆ ಹೊರಟು ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಷ್ಟ್ಯಧಿಕಶತತಮೋऽಧ್ಯಾಯಃ ॥
॥ ಇತಿ ಬಕವಧಪರ್ವಣಿ ಪ್ರಥಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಅರವತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಭಿಕ್ಷಾಮಟತ್ಸು ಸತತಂ ಪ್ರತಿಹುಂಕೃತೇನ
ಭೀಮೇ ವಿಶಾಂ ಸದನ ಏವ ಗೃಹಪ್ರಮಾಣಂ |
ಭಾಂಡಂ ಕುಲಾಲವಿಹಿತಂ ಪ್ರತಿಗೃಹ್ಯ ಗಚ್ಛ-
ತ್ಯಾಶಂಕಯಾವಗಮನಸ್ಯ ತಮಾಹ ಧರ್ಮಃ ॥67॥
ಪಾಂಡವರು ಭಿಕ್ಷಾಟನೆ ಮಾಡುತ್ತಿದ್ದಾಗ ಭೀಮ ಯಾವಾಗಲೂ ಒಬ್ಬ ಕುಂಬಾರ ಮಾಡಿಕೊಟ್ಟಿದ್ದ ಒಂದು ಮನೆಯಷ್ಟು ದೊಡ್ಡದಾದ ಮಡಿಕೆಯನ್ನು ಹಿಡಿದು ವೈಶ್ಯರ ಮನೆಗೇ ಭಿಕ್ಷೆಗೆ ಹೋಗುತ್ತಿದ್ದ. ಆಗ ಅವನು ಮಾಡುತ್ತಿದ್ದ ಪ್ರತಿ ಹುಂಕಾರದಿಂದಲೂ ಇವರು ಪಾಂಡವರೆಂದು ಜನ ತಿಳಿದಾರೆಂಬ ಭಯದಿಂದ ಧರ್ಮರಾಜ ಭೀಮನಿಗೆ ಹೇಳಿದ.
ಸ್ಥೂಲಂ ಹಿ ಸದ್ಮ ಪೃಥಿವೀಸಹಿತಂ ತ್ವರಕ್ಷ
ಉದ್ಧೃತ್ಯ ವಹ್ನಿಮುಖತಸ್ತದು ಚೈಕದೋಷ್ಣಾ |
ಭಾಂಡಂ ತದರ್ಥಮುರು ಕುಂಭಕರೇಣ ದತ್ತಂ
ಭಿಕ್ಷಾಂ ಚ ತೇನ ಚರಸಿ ಪ್ರತಿಹುಂಕೃತೇನ ॥68॥
ಒಂದು ದೊಡ್ಡ ಮನೆಯನ್ನು ಅದು ಇದ್ದ ಸ್ಥಳ ಸಹಿತವಾಗಿ ಒಂದು ಕೈಯಿಂದೆತ್ತಿ ಅಗ್ನಿಮುಖದಿಂದ ರಕ್ಷಿಸಿದಿ. ಅದಕ್ಕೆ ಮನೆಯೊಡನೆಯನಾದ ಕುಂಬಾರ ಮನೆಯಷ್ಟು ದೊಡ್ಡ ಮಡಿಕೆ ಮಾಡಿಕೊಟ್ಟ. ನೀನು ಪ್ರತಿಯೊಂದು ಹುಂಕಾರದಿಂದಲೂ ಆ ಮಡಿಕೆಯಿಂದ ಭಿಕ್ಷಾಟನೆ ಮಾಡುತ್ತಿರುವಿ.
ಧರ್ಮಸ್ಯ ತೇ ಸುನಿಯತೇರ್ಬಲತಶ್ಚ ಬೋಧೋ
ಭೂಯಾತ್ ಸುಯೋಧನಜನಸ್ಯ ತತೋ ಭಯಂ ಮೇ |
ಮಾತ್ರಾ ಸಹೈವ ವಸ ಫಲ್ಗುನಪೂರ್ವಕೈಸ್ತ್ವ-
ಮಾನೀತಮೇವ ಪರಿಭುಂಕ್ಷ್ವ ನ ತು ವ್ರಜೇಥಾಃ ॥69॥
ನಿನ್ನ ಧರ್ಮನಿಷ್ಠೆಯಿಂದಲೂ ಬಲದಿಂದಲೂ ದುರ್ಯೋಧನನ ಗೂಢಾಚಾರರಿಗೆ ನಮ್ಮ ಬಗ್ಗೆ ಸುಳಿವು ಸಿಗಬಹುದು. ಅದರಿಂದ ನನಗೆ ಭಯ ಉಂಟಾಗಿದೆ. ನೀನು ತಾಯಿಯೊಂದಿಗೇ ಇರು. ಅರ್ಜುನಾದಿಗಳು ತರುವ ಅನ್ನವನ್ನೆ ಉಣ್ಣು. ಹೋಗಬೇಡ.
ಇತ್ಯುಕ್ತ ಆಶು ಸ ಚಕಾರ ತಥೈವ ಭೀಮ-
ಸ್ತೇऽಪಿ ಸ್ವಧರ್ಮಪರಿರಕ್ಷಣಹೇತುಮೌನಾಃ |
ಭಿಕ್ಷಾಂ ಚರಂತ್ಯಥ ಚತುರ್ಷ್ವಪಿ ತೇಷು ಯಾತೇ-
ಷ್ವೇಕತ್ರ ಮತೃಸಹಿತಃ ಸ ಕದಾಚಿದಾಸ್ತೇ ॥70॥
ಧರ್ಮರಾಜ ಹೀಗೆ ಹೇಳಿದಾಗ ಭೀಮ ಒಡನೆಯೆ ಹಾಗೇ ಮಾಡಿದ. ಉಳಿದವರು ಸ್ವಧರ್ಮ ರಕ್ಷಣೆಗಾಗಿ ಮೌನದಿಂದಿದ್ದು ಭಿಕ್ಷಾಟನ ಮಾಡುತ್ತಿದ್ದರು. ಬಳಿಕ ಒಂದು ದಿನ ನಾಲ್ವರೂ ಭಿಕ್ಷಾಟನೆ ಹೋಗಿದ್ದಾಗ ಭೀಮನೊಬ್ಬನೇ ತಾಯಿಯೊಂದಿಗೆ ಕುಳಿತಿದ್ದ.
ತತ್ಕಾಲ ಏವ ರುದಿತಂ ನಿಜವಾಸಹೇತೋ-
ರ್ವಿಪ್ರಸ್ಯ ದಾರಸಹಿತಸ್ಯ ನಿಶಮ್ಯ ಭೀಮಃ |
ಸ್ತ್ರೀಬಾಲಸಂಯುತಗೃಹೇ ಶಿಶುಲಾಳನಾದೌ
ಲಜ್ಜೇದಿತಿ ಸ್ಮ ಜನನೀಮವದನ್ನ ಚಾಗಾತ್ ॥71॥
ಅದೇ ಸಮಯದಲ್ಲಿ ತಾವು ವಾಸವಾಗಿದ್ದ ಮನೆಯೊಡೆಯ ಬ್ರಾಹ್ಮಣ ಪತ್ನಿಯೊಂದಿಗೆ ಅಳುತ್ತಿದ್ದುದನ್ನು ಕೇಳಿ ಭೀಮ ಮಕ್ಕಳಿರುವ ಮನೆಯಲ್ಲಿ ಹೆಂಗಸು ಮಗುವಿನ ಲಾಲನಾದಿಗಳಲ್ಲಿ ಲಜ್ಜೆಪಡಬಹುದೆಂದು ತಾಯಿಯನ್ನೇ ಕಳಿಸಿದ. ತಾನು ಹೋಗಲಿಲ್ಲ.
ಜಾನೀಹಿ ವಿಪ್ರರುದಿತಂ ಕುತ ಇತ್ಯತಶ್ಚ
ಯೋಗ್ಯಂ ವಿಧಾಸ್ಯ ಇತಿ ಸಾ ಪ್ರಯಯೌ ಚ ಶೀಘ್ರಂ |
ಸಾ ಸಂವೃತೈವ ಸಕಲಂ ವಚನಂ ಗೃಹೇऽಸ್ಯ
ಶುಶ್ರಾವ ವಿಪ್ರವರ ಆಹ ತದಾ ಪ್ರಿಯಾಂ ಸಃ ॥72॥
`ಬ್ರಾಹ್ಮಣ ಯಾವ ಕಾರಣದಿಂದ ಅಳುತ್ತಿದ್ದಾನೆ ಎಂಬುದನ್ನು ತಿಳಿದುಕೊ, ಅದಕ್ಕೆ ತಕ್ಕ ಪರಿಹಾರವನ್ನು ನಾನು ಮಾಡುವೆನೆಂದು ಹೇಳಿ ಭೀಮ ಕುಂತಿಯನ್ನು ಕಳಿಸಿದ. ಕುಂತಿ ಬೇಗನೆ ಹೋದಳು ಮರೆಯಲ್ಲಿ ನಿಂತು ಮನೆಯೊಳಗೆ ಬ್ರಾಹ್ಮಣನಾಡಿದ ಎಲ್ಲ ಮಾತುಗಳನ್ನೂ ಕೇಳಿದಳು. ಬ್ರಾಹ್ಮಣ ತನ್ನ ಪತ್ನಿಗೆ ಹೀಗೆ ಹೇಳುತ್ತಿದ್ದ.

ದಾತವ್ಯ ಏವ ಹಿ ಕರೋಽದ್ಯ ಚ ರಕ್ಷಸೋಽಸ್ಯ
ಸಾಕ್ಷಾದ್ಬಕಸ್ಯ ಗಿರಿಸನ್ನಿಭಭಕ್ಷ್ಯಭೋಜ್ಯಃ |
ಪುಂಸಾನಸಾ ಚ ಸಹಿತೋಽನಡುಹಾ ಪುಮಾಂಸ್ತು
ನೈವಾಸ್ತಿ ನೋಽಪ್ರದದತಾಂ ಚ ಸಮಸ್ತನಾಶಃ ॥73॥
ಬೆಟ್ಟದಷ್ಟು ಗಾತ್ರದ ಭಕ್ಷ್ಯಭೋಜ್ಯಗಳ ರಾಶಿಯನ್ನು ಬಂಡಿಯಲ್ಲಿ ತುಂಬಿ ಎತ್ತುಗಳು ಮತ್ತು ಮನುಷ್ಯನೊಂದಿಗೆ ನಾವು ಇಂದೇ ಬಕ ರಾಕ್ಷಸನಿಗೆ ಕಷ್ಟವಾಗಿ ಕೊಡಬೇಕಾಗಿದೆ. ನಮ್ಮಲ್ಲಿ ಮನುಷ್ಯನಿಲ್ಲ. ಆದರೆ ಕೊಡದಿದ್ದರೆ ಸರ್ವನಾಶ ನಿಶ್ಚಿತ.
* * * *
ನೂರ ಅರವತ್ತೊಂದನೆಯ ಅಧ್ಯಾಯ
(ಪಾಂಡವರ ಭೈಕ್ಷಚರ್ಯೆ, ಪುರವಾಸಿಗಳ ಪ್ರೀತಿ, ಬ್ರಾಹ್ಮಣ ಗೃಹದಲ್ಲಿ ಆರ್ತನಾದ, ಕಾರಣವನ್ನು ತಿಳಿಯಲು ಕುಂತಿಯ ಪ್ರವೇಶ)
ಜನಮೇಜಯಃ
ಏಕಚಕ್ರಾಂ ಗತಾಃ ಪಾರ್ಥಾಃ ಕುಂತೀಪುತ್ರಾ ಮಹಾಬಲಾಃ |
ಅತಃ ಪರಂ ದ್ವಿಜಶ್ರೇಷ್ಠ ಕಿಮಕುರ್ವತ ಕರ್ಶಿತಾಃ ॥1॥
ಬ್ರಾಹ್ಮಣಶ್ರೇಷ್ಠರೇ, ಏಕಚಕ್ರನಗರವನ್ನು ತಲುಪಿದ ಮಹಾಬಲರೂ, ಕಷ್ಟಕ್ಕೆ ಸಿಲುಕಿದವರೂ ಆದ ಕುಂತೀಪುತ್ರರಾದ ಪಾಂಡವರು ಮುಂದೆ ಏನು ಮಾಡಿದರು?
ವೈಶಂಪಾಯನಃ
ಏಕಚಕ್ರಾಂ ಗತಾಃ ಪಾರ್ಥಾ ಬ್ರಾಹ್ಮಣಸ್ಯ ನಿವೇಶನೇ |
ರಮಣೀಯಾನಿ ಪಶ್ಯಂತೋ ವನಾನ್ಯುಪವನಾನಿ ಚ ॥2॥
ಪಾರ್ಥಿವಾನಪಿ ಚೋದ್ದೇಶಾನ್ ಸರಿತಶ್ಚ ಸರಾಂಸಿ ಚ |
ಚೇರುರ್ಭೈಕ್ಷಂ ಸದಾ ತೇ ತು ಸರ್ವ ಏವ ವಿಶಾಂಪತೇ ॥3॥
ಏಕಚಕ್ರನಗರವನ್ನು ತಲುಪಿದ ಪಾಂಡವರು, ಬ್ರಾಹ್ಮಣನ ಮನೆಯಲ್ಲಿ ವಾಸಮಾಡಿ ಸುತ್ತಮುತ್ತಲಿನ ರಮಣೀಯವಾದ ವನ ಉಪವನಗಳನ್ನೂ, ಸರೋವರ ನದಿಗಳನ್ನೂ, ಭೂಪ್ರದೇಶಗಳನ್ನೂ ನೋಡುತ್ತಾ ಭಿಕ್ಷಾನ್ನದಿಂದ ಜೀವನ ಮಾಡಿದರು.
ಯುಧಿಷ್ಠಿರಂ ಚ ಕುಂತೀಂ ಚ ಚಿಂತಯಂತ ಉಪಾಸತೇ |
ಭೈಕ್ಷಂ ಚರಂತಸ್ತು ತದಾ ಜಟಿಲಾ ಬ್ರಹ್ಮಚಾರಿಣಃ |
ಬಭೂವುರ್ನಾಗರಾಣಾಂ ತೇ ಸ್ವಗುಣೈಃ ಪ್ರಿಯದರ್ಶನಾಃ ॥4॥
ಯುಧಿಷ್ಠಿರನನ್ನೂ ಮತ್ತು ಕುಂತಿಯನ್ನೂ ಸೇವಿಸುತ್ತಾ ಕೃಷ್ಣಾಜಿನಧಾರಿ- ಗಳಾದ, ಸುಂದರರಾದ ಬ್ರಹ್ಮಚಾರಿಗಳಾದ, ಅವರು ಭೈಕ್ಷ್ಯವನ್ನು ಆಚರಿಸುತ್ತಾ ತಮ್ಮ ಗುಣಗಳಿಂದ ನಗರವಾಸಿಗಳಿಗೆ ಪ್ರೀತಿಪಾತ್ರರಾದರು.
ನಾಗರಾಃ
ದರ್ಶನೀಯಾ ದ್ವಿಜಾಃ ಶುದ್ಧಾ ದೇವಗರ್ಭೋಪಮಾಃ ಶುಭಾಃ |
ಭೈಕ್ಷಾನರ್ಹಾಶ್ಚ ರಾಜ್ಯಾರ್ಹಾಃ ಸುಕುಮಾರಾಸ್ತಪಸ್ವಿನಃ ॥5॥
ಈ ಬ್ರಾಹ್ಮಣರೆಲ್ಲರೂ ಮಂಗಳಸ್ವರೂಪರಾಗಿ, ಶುದ್ಧರಾಗಿ, ಸುಂದರರಾಗಿ, ದೇವಕುಮಾರರಂತಿದ್ದಾರೆ. ಸುಕುಮಾರರೂ, ತಪಸ್ವಿಗಳೂ ಆದ ಇವರು, ರಾಜ್ಯವನ್ನು ಆಳಲು ಅರ್ಹರಾದವರು. ಭೈಕ್ಷ್ಯಚರ್ಯೆಯನ್ನು ಮಾಡಲು ಅರ್ಹರಾದವರಲ್ಲ.
ಸರ್ವಲಕ್ಷಣಸಂಪನ್ನಾ ಭೈಕ್ಷಂ ನಾರ್ಹಂತಿ ನಿತ್ಯಶಃ |
ಕಾರ್ಯಾರ್ಥಿನಶ್ಚರಂತೀತಿ ತರ್ಕಯಂತ ಇತಿ ಬ್ರುವನ್ ॥6॥
ಸರ್ವಲಕ್ಷಣಸಂಪನ್ನರಾದ ಇವರು ಭೈಕ್ಷ್ಯವನ್ನು ಬೇಡಲು ಅರ್ಹರಲ್ಲ. ಏನೋ ಕಾರ್ಯಾರ್ಥಿಗಳಾಗಿ ನಿತ್ಯವೂ ಭಿಕ್ಷವನ್ನು ಬೇಡುತ್ತಾರೆ ಎಂದು ಊಹಿಸಿ ಹೀಗೆ ಮಾತನಾಡಿದರು.
ಬಂಧೂನಾಮಾಗಮಾನ್ನಿತ್ಯಮುಪಚಿಂತ್ಯ ತು ನಾಗರಾಃ |
ಭಾಜನಾನಿ ಚ ಪೂರ್ಣಾನಿ ಭಕ್ಷ್ಯಭೋಜ್ಯೈರಕಾರಯನ್ ॥7॥
ಪಾಂಡವರು ಮನೆಗೆ ಭಿಕ್ಷೆಗೆ ಬಂದಾಗ ನಗರವಾಸಿಗಳು ತಮ್ಮ ಬಂಧುಗಳು ಮನೆಗೆ ಬಂದರೆಂದು ತಿಳಿದು ಅವರ ಪಾತ್ರೆಗಳನ್ನು ಭಕ್ಷ್ಯಭೋಜ್ಯಗಳಿಂದ ತುಂಬುತ್ತಿದ್ದರು.
ಮೌನವ್ರತೇನ ಸಂಪೂರ್ಣಾ ಭೈಕ್ಷಂ ಗೃಹ್ಣಂತಿ ಪಾಂಡವಾಃ |
ಮಾತಾ ಚಿರಗತಾನ್ ದೃಷ್ಟ್ವಾ ಶೋಚತೀತಿ ಚ ಪಾಂಡವಾಃ ॥8॥
ತ್ವರಮಾಣಾ ನಿವರ್ತಂತೇ ಮಾತೃಗೌರವಯಂತ್ರಿತಾಃ |
ನಿವೇದಯಂತಿ ಸ್ಮ ಸದಾ ಭೈಕ್ಷಂ ಕುಂತ್ಯೈ ಚ ತೇ ನಿಶಿ ॥9॥
ಪಾಂಡವರು ಪೂರ್ಣವಾದ ಮೌನವ್ರತವನ್ನು ಧರಿಸಿ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದರು. ಹೊರಟು ಬಹಳ ಹೊತ್ತಾದರೇ ತಾಯಿಯು ಗಾಭರಿಯಾಗುವಳೆಂದು ಚಿಂತಿಸಿ, ತಾಯಿಯ ಮೇಲಿನ ಗೌರವದಿಂದ ಪಾಂಡವರು ಬೇಗ ಹಿಂತಿರುಗುತ್ತಿದ್ದರು. ರಾತ್ರಿಯ ವೇಳೆಯಲ್ಲಿ ತಂದ ಭಿಕ್ಷವನ್ನು ತಾಯಿಯಾದ ಕುಂತಿಗೆ ಒಪ್ಪಿಸುತ್ತಿದ್ದರು.
ತಯಾ ವಿಭಕ್ತಾನ್ ಭಿಕ್ಷಾಶಾನ್ ಭುಂಜತೇ ಸ್ಮ ಪೃಥಕ್ಪೃಥಕ್ |
ಅರ್ಧಂ ತು ಭುಂಜತೇ ವೀರಾಃ ಸಹ ಮಾತ್ರಾ ಪರಂತಪಾಃ ॥10॥
ಅವಳು ವಿಭಾಗಿಸಿದ ಭಿಕ್ಷಾನ್ನವನ್ನು ಅವರು ಬೇರೆ ಬೇರೆಯಾಗಿ ತಿನ್ನುತ್ತಿದ್ದರು. ಭಿಕ್ಷಾನ್ನದ ಅರ್ಧಭಾಗವನ್ನು ಕುಂತಿಯು ಮತ್ತು ಪರಂತಪರಾದ ನಾಲ್ಕು ಮಕ್ಕಳು ಸೇವಿಸುತ್ತಿದ್ದರು.

ಅರ್ಧಂ ಸರ್ವಸ್ಯ ಭೈಕ್ಷಸ್ಯ ಭೀಮೋ ಭುಂಕ್ತೇ ಮಹಾಭುಜಃ |
ನ ಚಾಶಿತಂ ಸ್ಮ ಭವತಿ ಕಲ್ಯಾಣಾನ್ನಭೃತಃ ಪುರಾ ॥11॥
ಉಳಿದ ಅರ್ಧವನ್ನು ಮಹಾಭುಜನಾದ ಭೀಮಸೇನನೊಬ್ಬನೇ ಸೇವಿಸುತ್ತಿದ್ದನು. ಇಷ್ಟಾದರೂ ಹಿಂದೆ ಒಳ್ಳೆಯ ಊಟವನ್ನು ಮಾಡಿದ ಭೀಮಸೇನನಿಗೆ ಊಟ ಮಾಡಿದಂತೆ ಆಗುತ್ತಿರಲಿಲ್ಲ.
ಭೀಮೋ ವಿಕ್ರೀಡಯಿತ್ವಾ ತು ಮಿಥೋ ಬ್ರಾಹ್ಮಣಬಂಧುಷು |
ಕುಂಭಕಾರೇಣ ಸಂಬಂಧಂ ಕೃತ್ವಾ ಪಾತ್ರಂ ಬೃಹತ್ತತಃ ॥12॥
ಭೀಮನು ಬ್ರಾಹ್ಮಣಬಂಧುಗಳ ಜೊತೆಯಲ್ಲಿ ಹೀಗೆ ಪರಸ್ಪರವಾಗಿ ಆಟವಾಡಿ ಒಬ್ಬ ಕುಂಬಾರನ ಉರಿಯುತ್ತಿದ್ದ ಮನೆಯನ್ನು ಎತ್ತಿ ಅವನನ್ನು ರಕ್ಷಿಸಿ ಅವನ ಪ್ರೀತಿಯನ್ನು ಪಡೆದು ಅವನಿಂದ ಒಂದು ದೊಡ್ಡ ಪಾತ್ರೆಯನ್ನು ಮಾಡಿಸಿದನು.
ಸ ದದಾತಿ ಮಹತ್ ಪಾತ್ರಂ ಭೀಮಾಯ ಪ್ರಹಸನ್ನಿವ |
ತಸ್ಯಾದ್ಭುತಂ ಕರ್ಮ ಕೃತ್ವಾ ಮಹನ್ಮೃದ್ಭಾರಮಾದದೇ ॥13॥
ತಸ್ಯ ಭಾರಃ ಶತಗುಣಃ ಕುಂಭಕಾರಮತೋಷಯತ್ |
ಚಕ್ರೇ ಚಕ್ರೇ ತು ಮೃದ್ಭಾಂಡಂ ಸತತಂ ಭೈಕ್ಷಹಾರಕಮ್ ॥14॥
ಕುಂಬಾರನು ಭೀಮನಿಗೆ ನಗುತ್ತಾ ದೊಡ್ಡ ಪಾತ್ರೆಯನ್ನು ಮಾಡಿಕೊಡುತ್ತಿದ್ದನು. ಒಂದು ಬಾರಿ ಭೀಮನು ಎತ್ತಿದ ನೂರುಮಣ ಭಾರವಾದ ಮಣ್ಣಿನ ಮುದ್ದೆಯನ್ನು ನೋಡಿ ಸಂತುಷ್ಟನಾದ ಕುಂಬಾರನು ಸತತವಾಗಿ ಅವನಿಗೆ ಭಿಕ್ಷೆಯನ್ನು ತರುವ ದೊಡ್ಡ ದೊಡ್ಡ ಮಣ್ಣಿನ ಪಾತ್ರೆಗಳನ್ನು ಮಾಡಿಕೊಡುತ್ತಿದ್ದನು.
ತದಾದಾಯಾಗತಂ ದೃಷ್ಟ್ವಾ ಹಸಂತಿ ಪ್ರಹಸಂತಿ ಚ |
ಭಕ್ಷ್ಯಭೋಜ್ಯಾನಿ ವಿವಿಧಾನ್ಯಾದಾಯ ಪ್ರಕ್ಷಿಪಂತಿ ಚ ॥15॥
ಅಷ್ಟು ದೊಡ್ಡಪಾತ್ರೆಯನ್ನು ತೆಗೆದುಕೊಂಡು ಭಿಕ್ಷೆಗೆ ಬಂದ ಭೀಮನನ್ನು ನೋಡಿ ನಗರ ವಾಸಿಗಳು ಚೆನ್ನಾಗಿ ನಕ್ಕು ಆ ಪಾತ್ರೆಯೊಳಗೆ ವಿವಿಧವಾದ ಭಕ್ಷ್ಯಭೋಜ್ಯಗಳನ್ನು ಹಾಕುತ್ತಿದ್ದರು.
ಫಲಮೂಲಾನಿ ಚಾನ್ಯಾನಿ ಸಖಾಯಶ್ಚಾಹರಂತಿ ಚ |
ಏವಮೇಷ ಸದಾ ಭುಕತ್ವ ಮಾತ್ರೇ ವದತಿ ವೈ ರಹಃ ॥16॥
ನ ಚಾಶಿತೋಽಸ್ಮಿ ಭವತಿ ಕಲ್ಯಾಣಾನ್ನಭೃತಃ ಪುರಾ |
ಸ ವೈವರ್ಣ್ಯಂ ಚ ಕಾರ್ಶ್ಯಂ ಚ ಜಗಾಮಾತೃಪ್ತಿಕಾರಿತಮ್ ॥17॥
ಸ್ನೇಹಿತರು ಬೇರೆ ಫಲಗಳನ್ನೂ, ಗೆಡ್ಡೆಗೆಣಸುಗಳನ್ನೂ ತಂದು ಹಾಕುತ್ತಿದ್ದರು. ಅದೆಲ್ಲವನ್ನೂ ತಿಂದರೂ ಹಿಂದೆ ಒಳ್ಳೆಯ ಊಟವನ್ನು ಮಾಡಿದ ಭೀಮನು ತಾಯಿಯನ್ನು ಕುರಿತು ಏಕಾಂತದಲ್ಲಿ ``ಪೂಜ್ಯಳೇ ನಾನು ಊಟವನ್ನು ಮಾಡಿಲ್ಲ'' ಎಂದು ಹೇಳುತ್ತಿದ್ದನು. ಅವನು ತನ್ನ ಹೊಟ್ಟೆಯು ತುಂಬದ ಕಾರಣ ಕೃಶನಾಗಿ ಕಳೆಗುಂದಿದನು.
ತಥೈವ ವಸತಾಂ ತೇಷಾಂ ತತೋ ರಾಜನ್ ಮಹಾತ್ಮನಾಮ್ |
ಅತಿಚಕ್ರಾಮ ಸುಮಹಾನ್ ಕಾಲೋಽಥ ಭರತರ್ಷಭ ॥18॥
ಭರತಶ್ರೇಷ್ಠನಾದ ರಾಜನೇ, ಆ ಮಹಾತ್ಮರು ಅಲ್ಲಿ ಹಾಗೆ ವಾಸ ಮಾಡುತ್ತಿರಲು ಬಹಳ ಕಾಲವು ಕಳೆದು ಹೋಯಿತು.
ತತಃ ಕದಾಚಿದ್ ಭೈಕ್ಷಾರ್ಥಂ ಗತಾಸ್ತೇ ಪುರುಷರ್ಷಭಾಃ |
ಸಂಗತ್ಯ ಭೀಮಸೇನಸ್ತು ತತ್ರಾಸ್ತೇ ಪೃಥಯಾ ಸಹ ॥19॥
ಅನಂತರ ಒಮ್ಮೆ ಭಿಕ್ಷೆಯನ್ನು ತರಲು ಆ ಪುರುಷಶ್ರೇಷ್ಠರು ಮನೆಯಿಂದ ಹೊರಗೆ ಹೋದರು. ಭೀಮಸೇನನು ತಾಯಿಯ ಜೊತೆಯಲ್ಲಿ ಮನೆಯಲ್ಲಿಯೇ ಇದ್ದನು.
ಅಥಾರ್ತಿಜಂ ಮಹಾಶಬ್ದಂ ಬ್ರಾಹ್ಮಣಸ್ಯ ನಿವೇಶನೇ |
ಭೃಶಮುತ್ಪತಿತಂ ಕ್ರೂರಂ ಕುಂತೀ ಶುಶ್ರಾವ ಭಾರತ ॥20॥
ಭಾರತನೇ, ಆಗ ಆ ಬ್ರಾಹ್ಮಣನ ಮನೆಯಲ್ಲಿ ದುಃಖದಿಂದ ಒಮ್ಮೆಲೇ ಉಂಟಾದ ಕ್ರೂರವಾದ ಮಹಾಶಬ್ದವನ್ನು ಕುಂತಿಯು ಕೇಳಿದಳು.
ರೋರೂಯಮಾಣಾಂಸ್ತಾನ್ ಸರ್ವಾನ್ ಪರಿದೇವಯತಶ್ಚ ಸಾ |
ಕಾರುಣ್ಯಾತ್ ಸಾಧುಭಾವಾಚ್ಚ ಕುಂತೀ ರಾಜನ್ ನ ಚಕ್ಷಮೇ ॥21॥
ರಾಜನೇ, ಆ ಮನೆಯವರೆಲ್ಲರೂ ಮತ್ತೆ ಮತ್ತೆ ಅಳುವುದನ್ನೂ, ವಿಲಾಪ ಮಾಡುವುದನ್ನೂ ಕೇಳಿದ ಕುಂತಿಯು ಸಜ್ಜನಳಾದ ಕಾರಣ ಕರುಣೆಯಿಂದ ಕರಗಿ ಅದನ್ನು ಸಹಿಸಲಿಲ್ಲ.
ಮಥ್ಯಮಾನೇವ ದುಃಖೇನ ಹೃದಯೇನ ಪೃಥಾ ತತಃ |
ಉವಾಚ ಭೀಮಂ ಕಲ್ಯಾಣೀ ಕೃಪಾನ್ವಿತಮಿದಂ ವಚಃ ॥22॥
ಕಲ್ಯಾಣಿಯಾದ ಕುಂತಿಯು ದುಃಖದಿಂದ ಕೂಡಿದ ಹೃದಯದಿಂದ ಕಡೆಯಲ್ಪಟ್ಟವಳಂತೆ ಕೃಪೆಯಿಂದ ಕೂಡಿ ಭೀಮನನ್ನು ಕುರಿತು ಈ ಮಾತುಗಳನ್ನು ಆಡಿದಳು.
ವಸಾಮಃ ಸುಸುಖಂ ಪುತ್ರ ಬ್ರಾಹ್ಮಣಸ್ಯ ನಿವೇಶನೇ |
ಅಜ್ಞಾತಾ ಧಾರ್ತರಾಷ್ಟ್ರಾಣಾಂ ಸತ್ಕೃತಾ ವೀತಮನ್ಯವಃ ॥23॥
ಪುತ್ರನೇ, ಈ ಬ್ರಾಹ್ಮಣನ ಮನೆಯಲ್ಲಿ ದುರ್ಯೋಧನಾದಿಗಳಿಗೆ ತಿಳಿಯದಂತೆ ನಾವು ಸತ್ಕೃತರಾಗಿ, ಶಾಂತರಾಗಿ ಸುಖದಿಂದ ವಾಸಿಸುತ್ತಿದ್ದೇವೆ.
ಸಾ ಚಿಂತಯೇ ಸದಾ ಪುತ್ರ ಬ್ರಾಹ್ಮಣಸ್ಯಾಸ್ಯ ಕಿಂ ನ್ವಹಮ್ |
ಕದಾ ಪ್ರಿಯಂ ಕರಿಷ್ಯಾಮಿ ಯತ್ಕುಟ್ಯಾಮುಷಿತಾ ವಯಮ್ ॥24॥

ಪುತ್ರನೇ, ಯಾವ ಬ್ರಾಹ್ಮಣನ ಮನೆಯಲ್ಲಿ ನಾವು ಸುಖವಾಗಿ ವಾಸಿಸುತ್ತಿದ್ದೇವೆಯೋ ಅವನಿಗೆ ಏನು ಉಪಕಾರವನ್ನು ಮಾಡಲಿ ಎಂದು ಯಾವಾಗಲೂ ಯೋಚಿಸುತ್ತಿರುತ್ತೇನೆ.
ಏತಾವಾನ್ ಪುರುಷಸ್ತಾತ ಕೃತಂ ಯಸ್ಮಿನ್ ನ ನಶ್ಯತಿ |
ಯಾವಚ್ಚ ಕುರ್ಯಾದನ್ಯೋಽಸ್ಯ ಕುರ್ಯಾದಭ್ಯಧಿಕಂ ತತಃ ॥25॥
ಯಾರಿಗೆ ಉಪಕಾರವನ್ನು ಮಾಡಿದರೆ ಅದು ಎಂದೂ ನಾಶವಾಗುವುದಿಲ್ಲವೋ ಈ ಬ್ರಾಹ್ಮಣನು ಅಂತಹ ವ್ಯಕ್ತಿ. ಪುತ್ರನೇ, ಇನ್ನೊಬ್ಬರು ನಮಗೆ ಏನು ಉಪಕಾರವನ್ನು ಮಾಡುತ್ತಾರೆಯೋ ನಾವು ಅವರಿಗೆ ಅದಕ್ಕಿಂತ ಹೆಚ್ಚಿನ ಉಪಕಾರವನ್ನು ಮಾಡಬೇಕು.
ತಥೇದಂ ಬ್ರಾಹ್ಮಣಸ್ಯಾಸ್ಯ ದುಃಖಮಾಪತಿತಂ ಧ್ರುವಮ್ |
ತತ್ರಾಸ್ಯ ಯದಿ ಸಾಹಾಯ್ಯಂ ಕುರ್ಯಾಂ ಸಾಧು ಕೃತಂ ಭವೇತ್ |
ಗತ್ವಾ ಜ್ಞಾಸ್ಯಾಮಿ ಯದ್ ದುಃಖಂ ಬ್ರಾಹ್ಮಣಸ್ಯಾಭವತ್ ತದಾ ॥26॥
ಈಗ ಈ ಬ್ರಾಹ್ಮಣನಿಗೆ ನಿಶ್ಚಿತವಾಗಿ ದುಃಖವು ಒದಗಿದೆ. ಅವನಿಗೆ ಈಗ ಸಹಾಯ ಮಾಡಿದರೆ ಒಳ್ಳೆಯ ಕೆಲಸವನ್ನು ಮಾಡಿದಂತಾಗುತ್ತದೆ. ನಾನು ಹೋಗಿ ಬ್ರಾಹ್ಮಣನ ದುಃಖದ ಕಾರಣವನ್ನು ತಿಳಿಯುವೆನು.
ಭೀಮಸೇನಃ
ಜ್ಞಾಯತಾಮಸ್ಯ ಯದ್ ದುಃಖಂ ಯತಶ್ಚೈವ ಸಮುತ್ಥಿತಮ್ |
ವಿದಿತ್ವಾ ವ್ಯವಸಿಷ್ಯಾಮಿ ಯದ್ಯಪಿ ಸ್ಯಾತ್ ಸುದುಷ್ಕರಮ್ ॥27॥
ನೀನು ಹೋಗಿ ಅವನಿಗೆ ಏನು ದುಃಖವು ಬಂದಿದೆ ಮತ್ತು ಅದು ಯಾರಿಂದ ಉಂಟಾಗಿದೆ ಎಂದು ತಿಳಿ. ಅದನ್ನು ತಿಳಿದ ಮೇಲೆ ನಾನು ಆ ಕಾರ್ಯವು ದುಸ್ತರವಾಗಿದ್ದರೂ ಅದನ್ನು ಮಾಡಲು ನಿರ್ಧರಿಸುವೆನು.
ವೈಶಂಪಾಯನಃ
ತಥೈವ ಕಥಯಂತೌ ತೌ ಭೂಯಃ ಶುಶ್ರುವತುಃ ಸ್ವನಮ್ |
ಆರ್ತಿಜಂ ತಸ್ಯ ದುಃಖಸ್ಯ ಸಭಾರ್ಯಸ್ಯ ವಿಶಾಂಪತೇ ॥28॥
ರಾಜನೇ, ಹಾಗೆ ಮಾತನಾಡುತ್ತಿದ್ದ ಅವರು ಪುನಃ ಬ್ರಾಹ್ಮಣನ ಮತ್ತು ಅವನ ಪತ್ನಿಯ ದುಃಖದಿಂದ ಉಂಟಾದ ರೋದನ ಧ್ವನಿಯನ್ನು ಕೇಳಿದರು.
ಅಂತರ್ಗೃಹಂ ತತಸ್ತಸ್ಯ ಬ್ರಾಹ್ಮಣಸ್ಯ ಮಹಾತ್ಮನಃ |
ವಿವೇಶ ಕುಂತೀ ತ್ವರಿತಾ ಬದ್ಧವತ್ಸೇವ ಸೌರಭೀ ॥29॥
ಆಗ ಕುಂತಿಯು ಕರುವನ್ನು ಕಟ್ಟಿಹಾಕಿದ ಕಡೆಗೆ ತಾಯಿಯಾದ ಹಸುವು ಹೋಗುವಂತೆ ತ್ವರಿತವಾಗಿ ಆ ಮಹಾತ್ಮನಾದ ಬ್ರಾಹ್ಮಣನ ಗೃಹದ ಒಳಭಾಗವನ್ನು ಪ್ರವೇಶಿಸಿದಳು.
ತತಸ್ತಂ ಬ್ರಾಹ್ಮಣಂ ತತ್ರ ಭಾರ್ಯಯಾ ಚ ಸುತೇನ ಚ |
ದುಹಿತ್ರಾ ಚೈವ ಸಹಿತಂ ದದರ್ಶ ವಿನತಾನನಮ್ ॥30॥
ಅನಂತರ ಅವಳು ಆ ಬ್ರಾಹ್ಮಣನು ಪತ್ನಿ, ಪುತ್ರ ಮತ್ತು ಪುತ್ರಿಯರ ಜೊತೆಯಲ್ಲಿ ತಲೆಯನ್ನು ತಗ್ಗಿಸಿ ಕುಳಿತಿರುವುದನ್ನು ನೋಡಿದಳು.
ಬ್ರಾಹ್ಮಣಃ
ಧಿಗಿದಂ ಜೀವಿತಂ ಲೋಕೇ ಗತಸಾರಮನರ್ಥಕಮ್ |
ದುಃಖಮೂಲಂ ಪರಾಧೀನಂ ಭೃಶಮಪ್ರಿಯಭಾವಿ ಚ ॥31॥
ನನ್ನ ಜೀವನಕ್ಕೆ ಧಿಕ್ಕಾರವಿರಲಿ. ಇದು ಅನರ್ಥದಾಯಕವಾದುದು. ಇನ್ನು ಯಾವ ಶ್ರೇಷ್ಠವಾದ ವಿಷಯವೂ ಜೀವನದಲ್ಲಿ ಉಳಿದಿಲ್ಲ. ಪರಾಧೀನವಾದ ಈ ಜೀವನವು ಬಹಳ ದುಃಖಕ್ಕೆ ಕಾರಣವಾಗಿದೆ ಮತ್ತು ಮುಂದೆ ಯಾವ ಶುಭವೂ ಉಂಟಾಗುವ ಸೂಚನೆ ಇಲ್ಲ.
ಜೀವಿತೇ ಪರಮಂ ದುಃಖಂ ಜೀವಿತೇ ಪರಮೋ ಜ್ವರಃ |
ಜೀವಿತೇ ವರ್ತಮಾನಸ್ಯ ದ್ವಂದ್ವಾನಾಮಾಗಮೋ ಧ್ರುವಃ ॥32॥
ಜೀವಿಸುವವನಿಗೆ ಪರಮದುಃಖವೂ, ಪರಮಸಂತಾಪವೂ ಉಂಟಾಗುತ್ತದೆ. ಅವನಿಗೆ ಸುಖದುಃಖಾದಿದ್ವಂದ್ವಗಳ ಆಘಾತವು ನಿಶ್ಚಯವಾಗಿ ಉಂಟಾಗುತ್ತದೆ.
ಏಕಾತ್ಮನಾ ಚ ಧರ್ಮಾರ್ಥೌ ಕಾಮಂ ಚ ನ ನಿಷೇವ್ಯತೇ |
ಏತೈಶ್ಚ ವಿಪ್ರಯೋಗೇಽಪಿ ದುಃಖಂ ಪರತರಂ ಮತಮ್ ॥33॥
ಜೀವಿಸಿದ್ದವನು ಯಾವಾಗಲೂ ಧರ್ಮಾರ್ಥಕಾಮಗಳನ್ನು ಸೇವಿಸುತ್ತಾನೆ ಎಂಬ ನಿಯಮವಿಲ್ಲ. ಈ ಬಂಧುಗಳಿಂದ ವಿಯೋಗವನ್ನು ಪಡೆದರೆ ಅದು ಬಹಳ ದುಃಖಕರವಾದುದು.
ಆಹುಃ ಕೇಚಿತ್ ಪರಂ ಮೋಕ್ಷಂ ಸ ಚ ನಾಸ್ತಿ ಕಥಂಚನ |
ಅರ್ಥಪ್ರಾಪ್ತೌ ಚ ನರಕಂ ಕೃತ್ಸ್ನಮೇವೋಪಲಭ್ಯತೇ ॥34॥
ಅರ್ಥೇಪ್ಸುನಾ ಪರಂ ದುಃಖಮರ್ಥಪ್ರಾಪ್ತೌ ತತೋಽಧಿಕಮ್ |
ಜಾತಸ್ನೇಹಸ್ಯ ಚಾರ್ಥೇಷು ವಿಪ್ರಯೋಗೇ ಮಹತ್ತರಮ್ ॥35॥
ಕೆಲವರು ಮೋಕ್ಷವನ್ನು ಬಹಳ ಶ್ರೇಷ್ಠವೆಂದು ಹೇಳುತ್ತಾರೆ. ಅದು ಎಂದೂ ಇಲ್ಲ. ಧನವನ್ನು ಸಂಪಾದಿಸುವುದರಲ್ಲಿ ಸಮಸ್ತ ನರಕವು ಇಲ್ಲಿಯೇ ಅನುಭವಕ್ಕೆ ಬರುತ್ತದೆ. ಧನವನ್ನು ಸಂಪಾದಿಸಲು ಬಹಳ ದುಃಖವನ್ನು ಪಡಬೇಕು. ಧನವನ್ನು ಗಳಿಸಿದ ಮೇಲೆ ಅದರ ರಕ್ಷಣೆಗಾಗಿ ಅದಕ್ಕಿಂತ ಹೆಚ್ಚಿನ ದುಃಖ. ಧನದಲ್ಲಿ ಮಮತೆ ಉಂಟಾದ ಮೇಲೆ ಅದನ್ನು ಕಳೆದುಕೊಂಡರೆ ಅದಕ್ಕಿಂತ ಹೆಚ್ಚಿನ ದುಃಖವು ಉಂಟಾಗುತ್ತದೆ.
ತದಿದಂ ಜೀವಿತಂ ಪ್ರಾಪ್ಯ ಕಲ್ಪಕಾಲಂ ಮಹಾಭಯಮ್ |

ತ್ಯಾಗೋಽಪ್ಯಯಂ ಮಯಾ ಪ್ರಾಪ್ತೋ ಭಾರ್ಯಯಾ ಸಹಿತೇನ ಚ ॥
ನಾನು ಕ್ಲುಪ್ತವಾದ ಆಯುಸ್ಸುಳ್ಳ ಮಹಾಭಯಪ್ರದವಾದ ಈ ಜೀವನವನ್ನು ಹೊಂದಿದೆ. ಈಗ ಪತ್ನಿಯಿಂದ ಸಹಿತನಾಗಿ ಜೀವನವನ್ನು ತೊರೆಯಬೇಕಾದ ಕಾಲವು ಬಂದಿದೆ.
ನ ಹಿ ಯೋಗಂ ಪ್ರಪಶ್ಯಾಮಿ ಯೇನ ಮುಚ್ಯೇಯಮಾಪದಃ |
ಪುತ್ರದಾರೇಣ ವಾ ಸಾರ್ಧಂ ಪ್ರಾದ್ರವೇಯಮನಾಮಯಮ್ ॥37॥
ನನಗೆ ಈ ಆಪತ್ತಿನಿಂದ ಬಿಡುಗಡೆಯನ್ನು ಹೊಂದುವ ಯಾವ ಉಪಾಯವೂ ಕಾಣುತ್ತಿಲ್ಲ. ಹೆಂಡತಿ ಮಕ್ಕಳ ಜೊತೆಯಲ್ಲಿ ನಿರಾತಂಕವಾಗಿ ಓಡಿಹೋಗುವ ಉಪಾಯವೂ ಕಾಣುತ್ತಿಲ್ಲ.
ಉದಿತಂ ಹಿ ಮಯಾ ಪೂರ್ವಂ ನ ಸ್ವಾರ್ಥಂ ವೇತ್ಥ ಬ್ರಾಹ್ಮಣಿ |
ಕ್ಷೇಮಂ ಯತಸ್ತತೋ ಗಂತುಂ ತ್ವಯಾ ತು ಮಮ ನ ಶ್ರುತಮ್ ॥
ನಾನು ಹಿಂದೆ ನನ್ನ ಪತ್ನಿಯಾದ ನಿನಗೆ, ``ಬ್ರಾಹ್ಮಣಿ, ನಿನಗೆ ಸ್ವಾರ್ಥವು ತಿಳಿಯುತ್ತಿಲ್ಲ. ಎಲ್ಲಿ ನಮಗೆ ಕ್ಷೇಮವಿದೆಯೋ ಅಲ್ಲಿಗೆ ಹೋಗಬೇಕು'' ಎಂದು ಹೇಳಿದೆ. ನೀನು ನನ್ನ ಮಾತುಗಳನ್ನು ಕೇಳಲಿಲ್ಲ.
ಇಹ ಜಾತಾ ವಿವೃದ್ಧಾಽಸ್ಮಿ ಪಿತಾ ಮಾತಾ ಮಮೇತಿ ವೈ |
ಉಕ್ತವತ್ಯಸಿ ದುರ್ಮೇಧೇ ಯಾಚ್ಯಮಾನಾ ಮಯಾಽಸಕೃತ್ ॥39॥
ದುರ್ಬುದ್ಧಿಯುಳ್ಳವಳೇ, ನಾನು ಎಷ್ಟುಬಾರಿ ನಿನ್ನನ್ನು ಬೇಡಿಕೊಂಡರೂ ನೀನು ``ನಾನು ಇಲ್ಲಿಯೇ ಹುಟ್ಟಿ ಬೆಳೆದಿದ್ದೇನೆ. ನನ್ನ ತಂದೆತಾಯಿಗಳು ಇಲ್ಲಿಯೇ ಇದ್ದಾರೆ'' ಎಂದು ಹೇಳಿದೆ.
ಸ್ವರ್ಗತಶ್ಚ ಪಿತಾ ವೃದ್ಧಃ ತಥಾ ಮಾತಾ ಚಿರಂ ತವ |
ಬಾಂಧವಾ ಭೂತಪೂರ್ವಾಶ್ಚ ತತ್ರ ವಾಸೋ ನ ಕಾರಿತಃ ॥40॥
ನಿನ್ನ ವೃದ್ಧನಾದ ತಂದೆಯು ಸ್ವರ್ಗಸ್ಥನಾದನು. ತಾಯಿಯು ಮೊದಲೇ ಹೊರಟು ಹೋದಳು. ಬಾಂಧವರು ಯಾರು ಉಳಿಯಲಿಲ್ಲ. ಆದರೂ ಬೇರೆ ಕಡೆಗೆ ಹೋಗಿ ವಾಸ ಮಾಡಲಿಲ್ಲ.
ನ ಭೋಜನಂ ವಿರುದ್ಧಂ ಸ್ಯಾನ್ನ ಸ್ತ್ರೀದೇಶೋ ನಿಬಂಧನಃ |
ಸುದೂರಮಪಿ ಕಾರ್ಯಾರ್ಥಂ ವ್ರಜೇದ್ ಗರುಡಹಂಸವತ್ ॥41॥
ಎಲ್ಲಿಗೆ ಹೋದರೆ ನಮ್ಮ ಭೋಜನವು ನಿಷ್ಕಂಟಕವಾಗುತ್ತದೆಯೋ ಅಲ್ಲಿಗೆ ಹೋಗಬೇಕು. ಪತ್ನಿಯ ದೇಶವು ಎಂದೂ ಬಂಧಿಸಬಾರದು. ನಮ್ಮ ಕಾರ್ಯದ ಸಲುವಾಗಿ ಗರುಡಹಂಸಗಳಂತೆ ಬಹಳ ದೂರವಾದರೂ ಹೋಗಲೇ ಬೇಕು.
ಸೋಽಯಂ ತೇ ಬಂಧುಕಾಮಾಯಾ ಅಶೃಣ್ವಂತ್ಯಾ ವಚೋ ಮಮ |
ಬಂಧುಪ್ರಣಾಶಃ ಸಂಪ್ರಾಪ್ತೋ ಭೃಶಂ ದುಃಖಕರೋ ಮಮ ॥42॥
ಬಂಧುಗಳ ಮೇಲಿನ ಆಸೆಯಿಂದ ನನ್ನ ಮಾತನ್ನು ಕೇಳದಿದ್ದ ನಿನ್ನಿಂದ ಈಗ, ನನಗೆ ಅತ್ಯಂತ ದುಃಖಕರವಾದ ಬಂಧುನಾಶವು ಸಂಪ್ರಾಪ್ತವಾಗಿದೆ.
ಸೇಯಮಾಪದನುಪ್ರಾಪ್ತಾ ಭುಂಕ್ಷ್ವ ಬ್ರಾಹ್ಮಣಿ ತತ್ಫಲಮ್ |
ಅಥವಾ ತ್ವದ್ವಿನಾಶಾಯ ನ ಹಿ ಶಕ್ಷ್ಯಾಮಿ ಕಂಚನ ॥43॥
ಬ್ರಾಹ್ಮಣಿಯೇ, ಈ ಆಪತ್ತು ಬಂದೊದಗಿದೆ. ಅದರ ಫಲವನ್ನು ಭೋಗಿಸು ಅಥವಾ ನಿನ್ನನ್ನು ಕಳೆದುಕೊಳ್ಳಲು ನಾನು ಎಂದೂ ಬಯಸುವುದಿಲ್ಲ.
ಪರಿತ್ಯಕ್ತುಮಹಂ ಬಂಧುಂ ಸ್ವಯಂ ಶೀಘ್ರಂ ನೃಶಂಸವತ್ |
ಸಹಧರ್ಮಚರೀಂ ದಾಂತಾಂ ಸದಾ ಮಾತೃಸಮಾಂ ತಥಾ ॥44॥
ಸಹಧರ್ಮಚಾರಿಣಿಯಾದ, ಇಂದ್ರಿಯನಿಗ್ರಹವುಳ್ಳ, ತಾಯಿಯಂತೆ ನನ್ನನ್ನು ಪೋಷಿಸುವ ನಿನ್ನನ್ನು ಕೃತಘ್ನನಂತೆ ಶೀಘ್ರವಾಗಿ ನಾನೇ ಪರಿತ್ಯಾಗ ಮಾಡಲು ನನ್ನ ಮನಸ್ಸು ಒಪ್ಪುವುದಿಲ್ಲ.
ಸಖಾಯಂ ವಿಹಿತಂ ದೇವೈರ್ನಿತ್ಯಂ ಪರಮಿಕಾಂ ರತಿಮ್ |
ಮಾತ್ರಾ ಪಿತ್ರಾ ವಿರಹಿತಾಂ ಸದಾ ದಾಕ್ಷಿಣ್ಯಭಾಗಿನೀಮ್ ॥45॥
ವರಯಿತ್ವಾ ಯಥಾನ್ಯಾಯಂ ಮಂತ್ರವತ್ ಪರಿಗೃಹ್ಯ ಚ |
ಕುಲೀನಾಂ ಶೀಲಸಂಪನ್ನಾಮಪತ್ಯಜನನೀಮಥ ॥46॥
ತ್ವಾಮಹಂ ಜೀವಿತಸ್ಯಾರ್ಥೇ ಸಾಧ್ವೀಮನಪಕಾರಿಣೀಮ್ |
ಪರಿತ್ಯಕ್ತುಂ ನ ಶಕ್ಷ್ಯಾಮಿ ಭಾರ್ಯಾಂ ನಿತ್ಯಮನುವ್ರತಾಮ್ ॥47॥
ದೇವತೆಗಳಿಂದ ಸ್ನೇಹಿತೆ ಎಂದು ವಿಹಿತವಾದಂತಹ, ನನ್ನ ಪರಮರತಿಗೆ ಕಾರಣವಾದಂತಹ, ತಂದೆತಾಯಿಗಳಿಂದ ರಹಿತಳಾದಂತಹ, ಯಾವಾಗಲೂ ಕರುಣಾಶೀಲಳಾದಂತಹ, ಸತ್ಕುಲಪ್ರಸೂತಳಾದಂತಹ, ಶೀಲಸಂಪನ್ನಳಾ- ದಂತಹ, ನನಗೆ ನನ್ನ ಮಕ್ಕಳನ್ನು ನೀಡಿದಂತಹ, ನಿನ್ನನ್ನು ಮಂತ್ರ- ಪೂರ್ವಕವಾಗಿ ಧಾರ್ಮಿಕ ವಿಧಿಯಿಂದ ಪರಿಗ್ರಹಿಸಿ ಈಗ ನನ್ನ ಜೀವನದ ಸಲುವಾಗಿ ಎಂದೂ ಅಪಕಾರ ಮಾಡದಿರುವ ನಿತ್ಯವೂ ಅನುವ್ರತಳಾದ ಪತಿವ್ರತೆಯಾದ ನಿನ್ನನ್ನು ನಾನು ಪರಿತ್ಯಾಗ ಮಾಡಲಾರೆ.
ಪ್ರಾರ್ಥಯೇಽಹಂ ಪರಾಂ ಪ್ರೀತಿಂ ಯಸ್ಮಿನ್ ಸ್ವರ್ಗಫಲಾನಿ ಚ |
ದಯಿತಂ ಮೇ ಕಥಂ ಬಾಲಮಹಂ ತ್ಯಕ್ತುಮಿಹೋತ್ಸಹೇ ॥48॥
ನಾನು ಯಾರಿಂದ ಪರಮಸಂತೋಷವನ್ನೂ ಮತ್ತು ಸ್ವರ್ಗಫಲವನ್ನೂ ಬಯಸುತ್ತೇನೆಯೋ ಅಂತಹ ಪ್ರೀತಿಪಾತ್ರನಾದ ಚಿಕ್ಕ ವಯಸ್ಸಿನ ಪುತ್ರನನ್ನೂ ಪರಿತ್ಯಾಗ ಮಾಡಲು ಬಯಸುವುದಿಲ್ಲ.
ಯಸ್ಯ ಜಾತಸ್ಯ ಪಿತರೋ ಮುಖಂ ದೃಷ್ಟ್ವಾ ದಿವಂ ಗತಾಃ |

ಪಿತೄಣಾಂ ಋಣನಿರ್ಮುಕ್ತೋ ಯಸ್ಯ ಜಾತಸ್ಯ ತೇಜಸಾ ॥49॥
ತಮಹಂ ಜ್ಯೇಷ್ಠಪುತ್ರಂ ಮೇ ಕುಲನಿಸ್ತಾರಕಂ ಭುವಿ |
ಮಮ ಪಿಂಡೋದಕನಿಧಿಂ ಕಥಂ ತ್ಯಕ್ಷ್ಯಾಮಿ ಪುತ್ರಕಮ್ ॥50॥
ಯಾವ ಪುತ್ರನು ಜನಿಸಿದಾಗ ಪಿತೃಗಳು ಅವನ ಮುಖವನ್ನು ನೋಡಿ ಸ್ವರ್ಗಕ್ಕೆ ಪ್ರಯಾಣ ಮಾಡಿ ನನ್ನನ್ನು ಪಿತೃಋಣದಿಂದ ನಿರ್ಮುಕ್ತನನ್ನಾಗಿ ಮಾಡಿದರೋ, ಅಂತಹ ವಂಶೋದ್ಧಾರಕನಾದ ನನಗೆ ಭವಿಷ್ಯದಲ್ಲಿ ಪಿಂಡದಾನ ಮತ್ತು ತಿಲತರ್ಪಣವನ್ನು ಕೊಡಬೇಕಾದ ನನ್ನ ಜ್ಯೇಷ್ಠಪುತ್ರನನ್ನು ಹೇಗೆ ಪರಿತ್ಯಾಗ ಮಾಡಲಿ?
ಕುತ ಏವ ಪರಿತ್ಯಕ್ತುಂ ಪುತ್ರೀಂ ಶಕ್ಷ್ಯಾಮ್ಯಹಂ ಸ್ವಯಮ್ |
ಭರ್ತುರರ್ಥಾಯ ನಿಕ್ಷಿಪ್ತಾಂ ನ್ಯಾಸಂ ಧಾತ್ರಾ ಮಹಾತ್ಮನಾ ॥51॥
ಮಗಳನ್ನಾದರೋ ಹೇಗೆ ಪರಿತ್ಯಾಗ ಮಾಡಲಿ? ಅವಳು ಪತಿಯ ಮನೆಗೆ ಕಳುಹಿಸಿಕೊಡಬೇಕಾದ, ವಿಧಿಯು ನಮ್ಮಲ್ಲಿ ನ್ಯಾಸವಾಗಿ ಇಟ್ಟ ಒಂದು ವಸ್ತು.
ಯಸ್ಯಾಂ ದೌಹಿತ್ರಜಾಂಲ್ಲೋಕಾನಾಶಂಸೇ ಪಿತೃಭಿಃ ಸಹ |
ಸ್ವಯಮುತ್ಪಾದಿತಾಂ ಬಾಲಾಂ ಕಥಮುತ್ಸ್ರಷ್ಟುಮುತ್ಸಹೇ ॥52॥
ಯಾರಿಂದ ನಾನು ದೌಹಿತ್ರರಿಂದ ಉಂಟಾದ ಪಿತೃಲೋಕಗಳನ್ನು ಪಿತೃಗಳ ಜೊತೆಯಲ್ಲಿ ಹೊಂದಲು ಆಸೆ ಪಡುತ್ತೇನೋ ಅಂತಹ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು ಹೇಗೆ ಪರಿತ್ಯಾಗ ಮಾಡಲಿ?
ಮನ್ಯಂತೇ ಕೇಚಿದಧಿಕಂ ಸ್ನೇಹಂ ಪುತ್ರೇ ಪಿತುರ್ಜನಾಃ |
ಕನ್ಯಾಯಾಂ ಕೇಚಿದಪರೇ ಮಮ ತುಲ್ಯಾವುಭೌ ಮತೌ ॥53॥
ಕೆಲವರು ಪುತ್ರನಲ್ಲಿ ಅಧಿಕ ಪ್ರೀತಿ ಎಂದು ಹೇಳುತ್ತಾರೆ. ಕೆಲವರು ಪುತ್ರಿಯಲ್ಲಿ ಅಧಿಕ ಪ್ರೀತಿ ಎಂದು ಹೇಳುತ್ತಾರೆ. ನನಗೆ ಮಾತ್ರ ಇಬ್ಬರೂ ಸಮಾನರು ಎಂದು ತೋರುತ್ತದೆ.
ಯಸ್ಯಾಂ ಕಾಮಪ್ರತಿಷ್ಠಾ ಚ ವರಂ ನಿತ್ಯಮಥೋ ಸುಖಮ್ |
ಅಪಾಪಾಂ ತಾಂ ಕಥಂ ಬಾಲಾಮಹಮುತ್ಸ್ರಷ್ಟುಮುತ್ಸಹೇ ॥54॥
ಯಾರಿಂದ ಮುಂದೆ ಒದಗಲಿರುವವರ ಪತಿಗೆ ಕಾಮವೂ, ಶ್ರೇಷ್ಠವಾದ ಸುಖವೂ ದೊರೆಯುವುದೋ, ಅಂತಹ ಪಾಪಶೂನ್ಯಳಾದ ಮಗಳನ್ನು ಹೇಗೆ ಪರಿತ್ಯಾಗ ಮಾಡಲಿ?
ಮೇಧಾವಿನೀಮದೋಷಾಂ ಚ ಶುಶ್ರೂಷುಮನಹಂಕೃತಾಮ್ |
ಕಾಂಕ್ಷಮಾಣಾಂ ರತಿಂ ಚೇಹ ಸುಖಾನಿ ಚ ಬಹೂನಿ ಚ ॥55॥
ಉತ್ಪಾದಯತ್ಯಪತ್ಯಾನಿ ಧರ್ಮಕಾಮಾರ್ಥಹೇತವೇ |
ಆತ್ಮಾನಮಪಿ ಚೋತ್ಸೃಜ್ಯ ಮಯಿ ಪ್ರೇತವಶಂ ಗತೇ ॥56॥
ಇನ್ನು ಮೇಧಾವಿಯೂ, ಸಾಧುಸ್ವಭಾವದವಳೂ, ಅಹಂಕಾರವಿಲ್ಲದವಳೂ, ಯಾವಾಗಲೂ ನನ್ನ ಸೇವೆಯನ್ನು ಮಾಡುವವಳೂ, ನನ್ನಿಂದ ರತಿಯನ್ನೂ ಮತ್ತು ಅನೇಕ ಸುಖವನ್ನೂ ಅಪೇಕ್ಷಿಸುವವಳೂ, ನನಗೆ ಧರ್ಮಕಾಮಾರ್ಥಸಿದ್ಧಿಗಾಗಿ ಮಕ್ಕಳನ್ನು ಕೊಡುವವಳೂ, ನಾನು ಮೃತನಾದರೆ ತನ್ನ ಜೀವವನ್ನೂ ಪರಿತ್ಯಾಗ ಮಾಡುವವಳೂ ಆದ ನನ್ನ ಪತ್ನಿಯನ್ನು ಹೇಗೆ ಪರಿತ್ಯಾಗ ಮಾಡಲಿ.
ತ್ಯಕ್ತ್ವಾ ಹ್ಯೇತೇ ಮಯಾ ಸರ್ವೇ ನೇಹ ಶಕ್ಷ್ಯಂತಿ ಜೀವಿತುಮ್ |
ಏಷಾಂ ಚಾನ್ಯತಮತ್ಯಾಗೋ ನೃಶಂಸೋ ಗರ್ಹಿತೋ ಬುಧೈಃ ॥57॥
ನಾನು ಇವರನ್ನು ಪರಿತ್ಯಾಗ ಮಾಡಿದರೆ ಇವರು ಯಾರೂ ಜೀವಿಸಿರುವುದಿಲ್ಲ. ನಾನು ಇವರಲ್ಲಿ ಯಾರೊಬ್ಬರನ್ನು ಪರಿತ್ಯಾಗ ಮಾಡಿದರೂ ಅದು ತುಂಬಾ ಕ್ರೂರವಾದುದು ಮತ್ತು ಜ್ಞಾನಿಗಳಿಂದ ನಿಂದ್ಯವಾದುದು.
ಸ ಕೃಚ್ಛ್ರಮಹಮಾಪನ್ನೋ ನ ಶಕ್ತಸ್ತರ್ತುಮಾಪದಮ್ |
ಅಹೋ ಧಿಕ್ ಕಾಂ ಗತಿಂ ತ್ವದ್ಯ ಗಮಿಷ್ಯಾಮಿ ಸಬಾಂಧವಃ |
ಸರ್ವೈಃ ಸಹ ಮೃತಿಃ ಶ್ರೇಯೋ ನ ಹಿ ಮೇ ಜೀವಿತುಂ ಕ್ಷಮಮ್ ॥58॥
ನಾನು ಬಹಳ ದುಃಖಕರವಾದ ಆಪತ್ತಿನಲ್ಲಿ ಸಿಲುಕಿ ಅದನ್ನು ದಾಟುವ ಉಪಾಯವನ್ನು ಕಾಣುತ್ತಿಲ್ಲ. ಅಯ್ಯೋ ನನಗೆ ಧಿಕ್ಕಾರವಿರಲಿ. ಬಾಂಧವರ ಜೊತೆಯಲ್ಲಿ ಇರುವ ನನಗೆ ಏನು ಗತಿಯಾಗುವುದು? ನಾವೆಲ್ಲರೂ ಒಟ್ಟಿಗೆ ಮರಣ ಹೊಂದುವುದೇ ಲೇಸು. ಜೀವಿಸಿರುವುದು ಸಾಧ್ಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಅರವತ್ತೊಂದನೆಯ ಅಧ್ಯಾಯ ಮುಗಿಯಿತು.

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಅನ್ಯತ್ರ ಯಾಮ ಇತಿ ಪೂರ್ವಮುದಾಹೃತಂ ಮೇ
ನೈತತ್ ಪ್ರಿಯೇ ತವ ಮನೋಗತಮಾಸ ತೇನ |
ಯಾಸ್ಯಾಮಿ ರಾಕ್ಷಸಮುಖಂ ಸ್ವಯಮೇವ ಮರ್ತುಂ
ಭಾರ್ಯೈನಮಾಹ ನ ಭವಾನಹಮತ್ರ ಯಾಮಿ ॥74॥

`ನಾವು ಬೇರೆ ಕಡೆಗೆ ಹೋಗೋಣ ಎಂದು ನಾನು ಹಿಂದೆ ಹೇಳಿದೆ. ಪ್ರಿಯೆ, ಅದು ನಿನ್ನ ಮನಸಿಗೆ ಬರಲಿಲ್ಲ. ಅದರಿಂದ ಈಗ ನಾನೇ ಸಾಯಲು ರಾಕ್ಷಸನ ಬಾಯಿಗೆ ಬೀಳುವೆ' ಎಂದ ಬ್ರಾಹ್ಮಣ. `ನೀನಲ್ಲ. ನಾನು ಹೋಗುವೆನು' ಎಂದಳು ಪತ್ನಿ.
* * * *
ನೂರ ಅರವತ್ತೆರಡನೆಯ ಅಧ್ಯಾಯ
(ತನ್ನನ್ನು ಕಳುಹಿಸಿಕೊಡುವಂತೆ ಪತ್ನಿಯ ಒತ್ತಾಯ, ಬ್ರಾಹ್ಮಣನಿಂದ ನಿರಾಕರಣೆ)
ಬ್ರಾಹ್ಮಣೀ
ನ ಸಂತಾಪಸ್ತ್ವಯಾ ಕಾರ್ಯಃ ಪ್ರಾಕೃತೇನೇವ ಕರ್ಹಿಚಿತ್ |
ನ ಹಿ ಸಂತಾಪಕಾಲೋಽಯಂ ವಿಶೇಷಾತ್ ಪುರುಷಸ್ಯ ಹ ॥1॥
ಸಾಧಾರಣಪುರುಷರಂತೆ ನೀನು ಯಾವ ಕಾರಣದಿಂದಲೂ ಸಂತಾಪವನ್ನು ಮಾಡಬಾರದು. ಅದರಲ್ಲೂ ವಿಶೇಷವಾಗಿ ಪುರುಷನಿಗೆ ಈ ಸಂತಾಪಕಾಲವು ತರವಲ್ಲ.
ಅವಶ್ಯಂ ನಿಧನಂ ಸರ್ವೈರ್ಗಂತವ್ಯಮಿಹ ಮಾನವೈಃ |
ಅವಶ್ಯಕರಣೀಯಾರ್ಥೇ ಸಂತಾಪೋ ನೈವ ವಿದ್ಯತೇ ॥2॥
ಎಲ್ಲಾ ಮನುಷ್ಯರೂ ಒಂದು ದಿನ ಸಾಯಲೇ ಬೇಕು. ಅವಶ್ಯವಾಗಿ ನಡೆಯಲೇ ಬೇಕಾದ ಕಾರ್ಯದಲ್ಲಿ ಸಂತಾಪವನ್ನು ಮಾಡಬಾರದು.
ಭಾರ್ಯಾ ಪುತ್ರಶ್ಚ ದುಹಿತಾ ಸರ್ವಮಾತ್ಮಾರ್ಥಮಿಷ್ಯತೇ |
ವ್ಯಥಾಂ ಚ ಜಹಿ ಬುದ್ಧ್ಯಾ ತ್ವಂ ಸ್ವಯಂ ಯಾಸ್ಯಾಮಿ ತತ್ರ ವೈ ॥3॥
ಹೆಂಡತಿ, ಮಗ ಮತ್ತು ಮಗಳು ಎಲ್ಲರನ್ನೂ ತನ್ನ ಸಲುವಾಗಿ ಮನುಷ್ಯನು ಅಪೇಕ್ಷಿಸುತ್ತಾನೆ. ನೀನು ಬುದ್ಧಿಯಿಂದ ಯೋಚಿಸಿ ವ್ಯಥೆಯನ್ನು ಪರಿತ್ಯಜಿಸು. ನಾನೇ ಸ್ವತಃ ರಾಕ್ಷಸನ ಬಳಿ ಹೋಗುವೆನು.
ಏತದ್ಧಿ ಪರಮಂ ನಾರ್ಯಾಃ ಕಾರ್ಯಂ ಲೋಕೇ ಸನಾತನಮ್ |
ಪ್ರಾಣಾನಪಿ ಪರಿತ್ಯಜ್ಯ ಭರ್ತುರ್ಹಿ ಹಿತಮಾಚರೇತ್ ॥4॥
ಪ್ರಾಣವನ್ನಾದರೂ ಪರಿತ್ಯಾಗ ಮಾಡಿ ಪತಿಗೆ ಹಿತವನ್ನು ಮಾಡುವುದು ಲೋಕದಲ್ಲಿ ಸ್ತ್ರೀಯರ ಸನಾತನವಾದ ಪರಮಧರ್ಮವಾಗಿದೆ.
ತಚ್ಚ ತತ್ರ ಕೃತಂ ಕರ್ಮ ತವಾಪೀದಂ ಸುಖಾವಹಮ್ |
ಭವತ್ಯಮುತ್ರ ಚಾಕ್ಷಯ್ಯಂ ಲೋಕೇಽಸ್ಮಿಂಶ್ಚ ಯಶಸ್ಕರಮ್ ॥5॥
ನಾನು ಹಾಗೆ ಮಾಡಿದ ಕರ್ಮವು ನಿನಗೂ ಸುಖವನ್ನು ತಂದು ಕೊಡುತ್ತದೆ. ನನಗೂ ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ ಅಕ್ಷಯವಾದ ಸುಖವನ್ನೂ ತಂದು ಕೊಡುತ್ತದೆ.
ಏಷ ಚೈವ ಗುರುರ್ಧರ್ಮೋ ಯಂ ಪ್ರವಕ್ಷ್ಯಾಮ್ಯಹಂ ತವ |
ಕಾಮಶ್ಚ ತವ ಧರ್ಮಶ್ಚ ಭೂಯಾನರ್ಥಃ ಪ್ರದೃಶ್ಯತೇ ॥6॥
ನಾನು ನಿನಗೆ ಹೇಳುತ್ತಿರುವುದೇ ಶ್ರೇಷ್ಠವಾದ ಧರ್ಮ. ನಿನಗೆ ಪುನಃ ಧರ್ಮವೂ, ಅರ್ಥವೂ ಮತ್ತು ಕಾಮವೂ ಉಂಟಾಗುತ್ತದೆ.
ಯದರ್ಥಮಿಷ್ಯತೇ ಭಾರ್ಯಾ ಪ್ರಾಪ್ತಃ ಸೋಽರ್ಥಸ್ತ್ವಯಾ ಮಯಿ |
ಕುಮಾರಶ್ಚೈವ ಕನ್ಯಾ ಚ ಕೃತಾಽಹಮನೃಣಾ ತ್ವಯಾ ॥7॥
ಯಾವ ಉದ್ದೇಶದಿಂದ ಜನರು ಪತ್ನಿಯನ್ನು ಪಡೆಯುತ್ತಾರೋ ಆ ಉದ್ದೇಶವು ಈಡೇರಿದೆ. ಪುತ್ರನೂ ಮತ್ತು ಪುತ್ರಿಯೂ ಜನಿಸಿದ್ದಾರೆ. ನನ್ನನ್ನು ನೀನು ಋಣಮುಕ್ತಳನ್ನಾಗಿ ಮಾಡಿದ್ದೀಯೆ.
ಸಮರ್ಥಃ ಪೋಷಣೇ ವಾಪಿ ಸುತಯೋರನ್ವವೇಕ್ಷಣೇ |
ನ ತ್ವಹಂ ಸುತಯೋಃ ಶಕ್ತಾ ತಥಾ ರಕ್ಷಣಪೋಷಣೇ ॥8॥
ನೀನು ಮಕ್ಕಳನ್ನು ಪೋಷಿಸುವುದಕ್ಕೂ ಮತ್ತು ರಕ್ಷಿಸುವುದಕ್ಕೂ ಸಮರ್ಥನಾಗಿದ್ದೀಯೆ. ನಾನು ನಿನ್ನಂತೆ ಮಕ್ಕಳ ಪೋಷಣೆರಕ್ಷಣೆಗಳನ್ನು ಮಾಡಲು ಸಮರ್ಥಳಲ್ಲ.
ಮಮಾಪಿ ತ್ವದ್ವಿಹೀನಾಯಾಃ ಸರ್ವಕಾಮಾರ್ಥಮಾನದ |
ಕಥಂ ಸ್ಯಾತಾಂ ಯುತೌ ಬಾಲೌ ವೃತ್ತಿಶ್ಚಾಪಿ ಕಥಂ ಭವೇತ್ ॥9॥
ನನಗೆ ಎಲ್ಲಾ ಕಾಮವನ್ನೂ, ಅರ್ಥವನ್ನೂ, ಮಾನವನ್ನೂ ತಂದು ಕೊಟ್ಟ ಪತಿಯೇ, ನೀನಿಲ್ಲದೇ ನಾನು ಈ ಮಕ್ಕಳಿಂದ ಕೂಡಿಕೊಂಡು ಬದುಕಲು ನನ್ನ ಜೀವನ ವೃತ್ತಿಯು ಹೇಗೆ ನಡೆಯುತ್ತದೆ?
ಕಥಂ ಹಿ ವಿಧವಾ ಬಾಲಾ ಬಾಲಪುತ್ರಾ ವಿನಾ ತ್ವಯಾ |
ಮಿಥುನಂ ಜೀವಯಿಷ್ಯಾಮಿ ಸ್ಥಿತಾ ಸಾಧುಗತೇ ಪಥಿ ॥10॥
ನಿನ್ನನ್ನು ಕಳೆದುಕೊಂಡು ಚಿಕ್ಕಮಕ್ಕಳನ್ನು ಹೊಂದಿ ಚಿಕ್ಕವಯಸ್ಸಿನ ವಿಧವೆಯಾದ ನಾನು ಸಜ್ಜನರ ಮಾರ್ಗದಲ್ಲಿದ್ದು ಹೇಗೆ ಮಕ್ಕಳನ್ನು ಬದುಕಿಸಿಕೊಳ್ಳುತ್ತೇನೆ?
ಅಹಂ ಕೃತಾವಲೇಪೈಶ್ಚ ಪ್ರಾರ್ಥ್ಯಮಾನಾಮಿಮಾಂ ಸುತಾಮ್ |
ಅಯುಕ್ತೈಸ್ತತ್ರ ಸಂಬಂಧೇ ಕ್ಲಿಶ್ಯಮಾನಾ ದುರಾತ್ಮಭಿಃ ॥11॥
ಸ್ಥಾತುಂ ಪಥಿ ನ ಶಕ್ಷ್ಯಾಮಿ ಸಜ್ಜನೇಷ್ಟೇ ದ್ವಿಜೋತ್ತಮ |
ಸ್ತ್ರೀಜನ್ಮ ಗರ್ಹಿತಂ ನಾಥ ಲೋಕೇ ದುಷ್ಟಜನಾಕುಲೇ ॥12॥
ಗರ್ವಿಷ್ಠರಾದ, ಅಯೋಗ್ಯರಾದ, ದುರಾತ್ಮರು ಈ ಮಗಳನ್ನು ಕೊಡು ಎಂದು ಒತ್ತಾಯ ಮಾಡಿ ನನ್ನನ್ನು ಕ್ಲೇಶಪಡಿಸಿದಾಗ ನಾನು ಸಜ್ಜನರ ಮಾರ್ಗದಲ್ಲಿ ನಡೆಯುವುದು ಸಾಧ್ಯವಾಗುವುದಿಲ್ಲ. ಎಲೈ ದ್ವಿಜೋತ್ತಮನೇ, ದುಷ್ಟಜನರು ತುಂಬಿರುವ ಲೋಕದಲ್ಲಿ ಸ್ತ್ರೀ

ಜನ್ಮವು ನಿಂದನೀಯವಾದುದು.
ಮಾತಾಪಿತ್ರೋರ್ವಶೇ ಕನ್ಯಾ ಪ್ರೌಢಾ ಭರ್ತುರ್ವಶೇ ತಥಾ |
ಅನಾಥತ್ವಂ ಸ್ತ್ರಿಯೋ ದ್ವಾರಂ ದುಷ್ಟಾನಾಂ ವಿವೃತಂ ಹಿ ತತ್ |
ವಸ್ತ್ರಖಂಡಂ ಘೃತಾಕ್ತಂ ಹಿ ಯಥಾ ಸಂಕೃಷ್ಯತೇ ಶ್ವಭಿಃ ||13||
ಸ್ತ್ರೀಯು ಕನ್ಯೆಯಾಗಿರುವಾಗ ಮಾತಾಪಿತೃಗಳ ರಕ್ಷಣೆಯಲ್ಲಿರುತ್ತಾಳೆ. ಪ್ರೌಢಳಾದಾಗ ಪತಿಯ ರಕ್ಷಣೆಯಲ್ಲಿರುತ್ತಾಳೆ. ಸ್ತ್ರೀಯು ಅನಾಥಳಾದರೆ, ದುಷ್ಟರಿಗೆ ಬಾಗಿಲನ್ನು ತೆರೆದಂತಾಗುತ್ತದೆ. ತುಪ್ಪದಲ್ಲಿ ಅದ್ದಿದ ವಸ್ತ್ರವನ್ನು ನಾಯಿಗಳು ಎಳೆದಾಡುವಂತೆ ಅವಳನ್ನು ಎಳೆದಾಡುತ್ತಾರೆ.
ಕಥಂ ತವ ಸುತಂ ಚೇಮಮೇಕಂ ಬಾಲಮಸಂಸ್ಕೃತಮ್ |
ಪಿತೃಪೈತಾಮಹೇ ಮಾರ್ಗೇ ನಿಯಂತುಮಹಮುತ್ಸಹೇ ||14||
ನಾನು ಇನ್ನೂ ಸಂಸ್ಕಾರವನ್ನು ಪಡೆಯದಿರುವ, ಈ ನಿನ್ನ ಏಕಮಾತ್ರ ಪುತ್ರನನ್ನು ಪಿತೃಪಿತಾಮಹರು ನಡೆದ ಮಾರ್ಗದಲ್ಲಿ ನಡೆಸಲು ಹೇಗೆ ಸಮರ್ಥಳಾಗುತ್ತೇನೆ?
ಕಥಂ ಶಕ್ಷ್ಯಾಮಿ ಬಾಲೇಽಸ್ಮಿನ್ ಗುಣಾನಾಧಾತುಮೀಪ್ಸಿತಾನ್ |
ಅನಾಥೇ ಸರ್ವತೋ ಲುಪ್ತೇ ಯಥಾ ತ್ವಂ ಧರ್ಮನಂದನಃ ||15||
ನಿನ್ನನ್ನು ಕಳೆದುಕೊಂಡು ಅನಾಥಳಾದರೆ, ಧರ್ಮನಂದನನಾದ ನಿನ್ನಂತೆ ನಾನು ಈ ಬಾಲನಲ್ಲಿ ಇಷ್ಟವಾದ ಗುಣಗಳನ್ನುಂಟು ಮಾಡಲು ಹೇಗೆ ಸಮರ್ಥಳಾಗುತ್ತೇನೆ?
ಸುತಾಮಪಿ ಚ ತೇ ಬಾಲಾಮನಾಥಾಂ ಪರಿಭೂಯ ಮಾಮ್ |
ಅನರ್ಹಾಃ ಪ್ರಾರ್ಥಯಿಷ್ಯಂತಿ ಶೂದ್ರಾ ವೇದಶ್ರುತಿಂ ಯಥಾ ||16||
ನಿನ್ನನ್ನು ಕಳೆದುಕೊಂಡು ನಾನು ಅನಾಥಳಾದರೆ ನಮ್ಮ ಸಂಬಂಧಕ್ಕೆ ಅನರ್ಹರಾದ ಜನರು ನನ್ನನ್ನು ಪರಾಭವಗೊಳಿಸಿ ಶೂದ್ರರು ವೇದವನ್ನು ಸ್ವೀಕರಿಸುವಂತೆ ಇವಳನ್ನು ತಾವು ಸ್ವೀಕರಿಸಲು ನನಗೆ ಒತ್ತಾಯವನ್ನು ತರುತ್ತಾರೆ.
ತಾಂ ಚೇದಹಂ ನ ದಿತ್ಸೇಯಂ ಸದ್ಗುಣೈರುಪಬೃಂಹಿತಾಮ್ |
ಪ್ರಮಥ್ಯೈನಾಂ ಹರೇಯುಸ್ತೇ ಹವಿರ್ಧ್ವಾಂಕ್ಷಾ ಇವಾಧ್ವರೇ ||17||
ಒಂದು ಪಕ್ಷ ನಾನು ಸದ್ಗುಣಭೂಷಿತಳಾದ ಇವಳನ್ನು ಕೊಡಲು ಇಷ್ಟಪಡದಿದ್ದರೆ, ತಮ್ಮ ಬಲದಿಂದ ನನ್ನನ್ನು ಸೋಲಿಸಿ ಯಜ್ಞದ ಹವಿಸ್ಸನ್ನು ಕಾಗೆಗಳು ಹೊತ್ತುಕೊಂಡು ಹೋದಂತೆ ಇವಳನ್ನು ಎತ್ತಿಕೊಂಡು ಹೋಗುತ್ತಾರೆ.
ಸಂಪ್ರೇಕ್ಷಮಾಣಾ ಪುತ್ರೀಂ ತೇ ನಾನುರೂಪಮಿವಾತ್ಮನಃ | ಅನರ್ಹವಶಮಾಪನ್ನಾಮಿಮಾಂ ಚಾಪಿ ಸುತಾಂ ತವ |
ಅವಜ್ಞಾತಾ ನರೈರ್ದೃಷ್ಟ್ವಾ ಮರಿಷ್ಯಾಮಿ ನ ಸಂಶಯಃ ||18||
ನಿನ್ನ ಮಗಳಾದ ಇವಳು ನಮಗೆ ಅನುರೂಪರಲ್ಲದ ಅನರ್ಹರ ವಶವಾಗುವುದನ್ನು ನೋಡಿ, ಸಮಾಜದಿಂದ ಅವಮಾನ ಮಾಡಲ್ಪಟ್ಟು ನಾನು ಮರಣವನ್ನು ಹೊಂದುವೆನು. ಇದರಲ್ಲಿ ಸಂಶಯವಿಲ್ಲ.
ತೌ ಚ ಹೀನೌ ಮಯಾ ಬಾಲೌ ತ್ವಯಾ ಚೈವ ತಥಾಽಽತ್ಮಜೌ |
ವಿನಶ್ಯೇತಾಂ ನ ಸಂದೇಹೋ ಮತ್ಸ್ಯಾವಿವ ಜಲಕ್ಷಯೇ ||19||
ನಾನು ಮತ್ತು ನೀನು ಇಬ್ಬರೂ ಇಲ್ಲದಿದ್ದರೆ ಈ ಮಕ್ಕಳು ನೀರು ಇಂಗಿದ ಮೇಲೆ ಮೀನುಗಳು ನಾಶಹೊಂದುವಂತೆ ನಾಶವನ್ನು ಹೊಂದುವರು.
ತ್ರಿತಯಂ ಸರ್ವಥಾ ಸರ್ವಂ ವಿನಶಿಷ್ಯತ್ಯಸಂಶಯಮ್ |
ತ್ವಯಾ ವಿಹೀನಂ ತಸ್ಮಾತ್ ತ್ವಂ ಮಾಂ ಪರಿತ್ಯಕ್ತುಮರ್ಹಸಿ ||20||
ನೀನಿಲ್ಲದಿದ್ದರೆ, ನಾನು, ಮಗ ಮತ್ತು ಮಗಳು, ಈ ಮೂವರೂ ಖಂಡಿತವಾಗಿ ನಾಶವನ್ನು ಹೊಂದುವೆವು. ಆದ್ದರಿಂದ ನೀನು ನನ್ನನ್ನು ಬಿಟ್ಟುಕೊಡಬೇಕು.
ಇಷ್ಟಾ ಹ್ಯೇಷಾ ಕುಲಸ್ತ್ರೀಣಾಂ ಪೂರ್ವಂ ಭರ್ತುಃ ಪರಾ ಗತಿಃ |
ಅನಿಷ್ಟಮಿಹ ಪುತ್ರಾಣಾಂ ವಿಷಯೇ ಪರಿವರ್ತಿತುಮ್ ||21||
ಕುಲಸ್ತ್ರೀಯರಾದವರಿಗೆ ಪತಿಗಿಂತ ಮೊದಲು ಪರಲೋಕಕ್ಕೆ ಹೋಗುವುದು ಇಷ್ಟವಾದ ವಿಷಯ. ಪತಿಯ ಮರಣಾನಂತರ ಮಕ್ಕಳನ್ನು ನೋಡಿಕೊಳ್ಳುವುದು ಅನಿಷ್ಟವಾದ ವಿಷಯ.
ಮಿತಂ ದದಾತಿ ಹಿ ಪಿತಾ ಮಿತಂ ಮಾತಾ ಮಿತಂ ಸುತಃ |
ಅಮಿತಸ್ಯ ಹಿ ದಾತಾರಂ ಕಾ ಪತಿಂ ನಾಭಿನಂದತಿ ||22||
ತಂದೆಯು ಮಿತವಾದುದನ್ನು ಕೊಡುತ್ತಾನೆ. ತಾಯಿಯೂ, ಮಗನೂ ಮಿತವಾದುದನ್ನು ಕೊಡುತ್ತಾರೆ. ಅಮಿತವಾದುದನ್ನು ಕೊಡುವ ಪತಿಯನ್ನು ಯಾರು ಅಭಿನಂದಿಸುವುದಿಲ್ಲ.
ಪರಿತ್ಯಕ್ತಃ ಸುತಶ್ಚೈವ ದುಹಿತೇಯಂ ತಥಾ ಮಯಾ |
ಬಾಂಧವಾಶ್ಚ ಪರಿತ್ಯಕ್ತಾಸ್ತ್ವದರ್ಥಂ ಜೀವಿತಂ ಚ ಮೇ ||23||
ನಾನು ನಿನ್ನ ಸಲುವಾಗಿ ಮಗನನ್ನು ಬಿಟ್ಟಿದ್ದೇನೆ, ಮಗಳನ್ನು ಬಿಟ್ಟಿದ್ದೇನೆ, ಎಲ್ಲ ಬಂಧುಗಳನ್ನೂ ಬಿಟ್ಟಿದ್ದೇನೆ. ನಿನ್ನ ಸಲುವಾಗಿ ಜೀವಿಸಿದ್ದೇನೆ.
ಯಜ್ಞೈಸ್ತಪೋಭಿರ್ನಿಯಮೈರ್ದಾನೈಶ್ಚ ವಿವಿಧೈಸ್ತಥಾ |
ವಿಶೇಷ್ಯತೇ ಸ್ತ್ರಿಯಾ ಭರ್ತುರ್ನಿತ್ಯಂ ಪ್ರಿಯಹಿತೇಸ್ಥಿತಾ ||24||
ಸ್ತ್ರೀಯರಿಗೆ ಯಜ್ಞ, ತಪಸ್ಸು, ನಿಯಮ, ವಿವಿಧ ದಾನಗಳಿಗಿಂತಲೂ ಯಾವಾಗಲೂ ಪತಿಗೆ ಪ್ರಿಯವನ್ನೂ ಮತ್ತು ಹಿತವನ್ನೂ

ಬಯಸುವುದು ಶ್ರೇಷ್ಠವಾದ ಧರ್ಮವೆಂದು ಹೇಳಲ್ಪಡುತ್ತದೆ.
ತದಿದಂ ಯಚ್ಚಿಕೀರ್ಷಾಮಿ ಧರ್ಮ್ಯಂ ಪರತರಂ ಮಮ |
ಇಷ್ಟಂ ಚೈವ ಹಿತಂ ಚೈವ ತವ ಚೈವ ಕುಲಸ್ಯ ನಃ ॥25॥
ಆದ್ದರಿಂದ ನಾನು ನಿನಗೂ, ನಿಮ್ಮ ಕುಲಕ್ಕೂ ಮತ್ತು ನನ್ನ ಕುಲಕ್ಕೂ ಇಷ್ಟವೂ ಮತ್ತು ಹಿತವೂ ಆದ ಶ್ರೇಷ್ಠವಾದ ಧರ್ಮಕಾರ್ಯವನ್ನು ಆಚರಿಸಲು ಬಯಸುತ್ತೇನೆ.
ಇಷ್ಟಾನಿ ವಾಪ್ಯಪತ್ಯಾನಿ ದ್ರವ್ಯಾಣಿ ಸುಹೃದಃ ಪ್ರಿಯಾಃ |
ಆಪದ್ಧರ್ಮಪ್ರಮೋಕ್ಷಾಯ ಭಾರ್ಯಾ ಚಾಪಿ ಮನಸ್ವಿನೀ ॥26॥
ಇಷ್ಟವಾದ ಮಕ್ಕಳನ್ನೂ, ದ್ರವ್ಯವನ್ನೂ, ಸುಹೃದರನ್ನೂ, ಪ್ರಿಯೆಯನ್ನೂ ಪಡೆದಿದ್ದಾಯಿತು. ಆಪತ್ತಿನಿಂದ ಬಿಡುಗಡೆಗೊಳಿಸಲು ಧೈರ್ಯ- ಶಾಲಿನಿಯಾದ ಪತ್ನಿಯನ್ನೂ ಪಡೆದಿದ್ದಾಯಿತು. (ಆದ್ದರಿಂದ ನಾನು ನಿನ್ನನ್ನು ಆಪತ್ತಿನಿಂದ ಬಿಡಿಸುತ್ತೇನೆ.)
ಏಕತೋ ವಾ ಕುಲಂ ಕೃತ್ಸ್ನಮಾತ್ಮಾ ವಾ ಕುಲವರ್ಧನಃ |
ನ ಸಮಂ ಸರ್ವಮೇವೇತಿ ಬುಧಾನಾಮೇಷ ನಿಶ್ಚಯಃ ॥27॥
ಒಂದು ಕಡೆ ತನ್ನ ಸಮಗ್ರವಾದ ಕುಲ, ಇನ್ನೊಂದು ಕಡೆ ಕುಲವರ್ಧನನಾದ ತಾನೊಬ್ಬನೇ, ಇವೆರಡೂ ಎಂದೂ ಸಮವಲ್ಲವೆಂದು ಜ್ಞಾನಿಗಳು ನಿಶ್ಚಯಿಸಿರುತ್ತಾರೆ.
ಸ ಕುರುಷ್ವ ಮಯಾ ಕಾರ್ಯಂ ತಾರಯಾತ್ಮಾನಮಾತ್ಮನಾ |
ಅನುಜಾನೀಹಿ ಮಾಮಾರ್ಯ ಸುತೌ ತೇ ಪರಿರಕ್ಷ ವೈ ॥28॥
ಆದ್ದರಿಂದ ಅಂತಹ ನೀನು ನಿನ್ನಿಂದಲೇ ನಿನ್ನನ್ನು ದಾಟಿಸಿಕೋ. ಪೂಜ್ಯನೇ, ನನಗೆ ಅನುಮತಿಯನ್ನು ಕೊಡು. ನಿನ್ನ ಮಕ್ಕಳನ್ನು ರಕ್ಷಿಸು.
ಅವಧ್ಯಾಃ ಸ್ತ್ರಿಯ ಇತ್ಯಾಹುರ್ಧರ್ಮಜ್ಞಾ ಧರ್ಮನಿಶ್ಚಯೇ |
ಧರ್ಮಜ್ಞಾನ್ ರಾಕ್ಷಸಾನಾಹುರ್ನ ಹನ್ಯಾತ್ ಸ ಚ ಮಾಮಪಿ ॥29॥
ಧರ್ಮಜ್ಞರಾದವರು ಧರ್ಮವಿಚಾರವನ್ನು ಮಾಡುತ್ತಾ, ಸ್ತ್ರೀಯರು ಅವಧ್ಯರು ಎಂದು ಹೇಳುತ್ತಾರೆ. ರಾಕ್ಷಸರನ್ನೂ ಧರ್ಮಜ್ಞರೆಂದು ಹೇಳುತ್ತಾರೆ. ಆದ್ದರಿಂದ ಆ ರಾಕ್ಷಸನು ನನ್ನನ್ನು ಕೊಲ್ಲದೆಯೂ ಇರಬಹುದು.
ನಿಃಸಂಶಯಂ ವಧಃ ಪುಂಸಾಂ ಸ್ತ್ರೀಣಾಂ ಸಂಶಯಿತೋ ವಧಃ |
ಅತೋ ಮಾಮೇವ ಧರ್ಮಜ್ಞ ಪ್ರಸ್ಥಾಪಯಿತುಮರ್ಹಸಿ ॥30॥
ಪುರುಷರ ವಧೆಯು ನಿಶ್ಚಿತವಾದುದು. ಸ್ತ್ರೀಯರ ವಧೆಯಲ್ಲಿ ಸಂಶಯವಿದೆ. ಧರ್ಮಜ್ಞನೇ, ಆ ಕಾರಣದಿಂದಲೂ ನೀನು ನನ್ನನ್ನೇ ಕಳುಹಿಸಿಕೊಡಬೇಕು.
ಭುಕ್ತಂ ಪ್ರಿಯಾಣ್ಯವಾಪ್ತಾನಿ ಧರ್ಮತಶ್ಚರಿತೋ ಮಯಾ |
ತ್ವತ್ಪ್ರಸೂತಿಃ ಪ್ರಿಯಾ ಪ್ರಾಪ್ತಾ ಮಾ ತಪ್ಯೇ ತ್ಯಜ್ಯ ಜೀವಿತಮ್ ॥31॥
ನಿನ್ನ ಪತ್ನಿಯಾಗಿ ಅನೇಕ ಭೋಗಗಳನ್ನು ಭೋಗಿಸಿದೆ. ಪ್ರಿಯವಸ್ತುಗಳನ್ನು ಪಡೆದಿದ್ದಾಯಿತು. ಧರ್ಮವನ್ನು ಆಚರಿಸಿದ್ದಾಯಿತು. ನಿನಗೆ ಪ್ರಿಯವಾದ ಸಂತಾನವನ್ನೂ ನೀಡಿದೆ. ನಾನು ಜೀವಿತವನ್ನು ತೊರೆದು ಸಂತಾಪಪಡಬೇಕಾದ ಕಾರಣವಿಲ್ಲ.
ಸಮೀಕ್ಷ್ಯ ತದಹಂ ಸರ್ವಂ ವ್ಯವಸಾಯಂ ಕರೋಮಿ ಚ |
ಉತ್ಸೃಜ್ಯಾಪಿ ಚ ಮಾಮಾರ್ಯ ವೇತ್ಸ್ಯಸ್ಯನ್ಯಾಮಪಿ ಸ್ತ್ರಿಯಮ್ ॥32॥
ತತಃ ಪ್ರತಿಷ್ಠಿತೋ ಧರ್ಮೋ ಭವಿಷ್ಯತಿ ಪುನಸ್ತವ |
ನ ಚಾಪ್ಯಧರ್ಮಃ ಕಲ್ಯಾಣ ಬಹುಪತ್ನೀಕತಾ ನೃಣಾಮ್ |
ಸ್ತ್ರೀಣಾಂ ತ್ವಧರ್ಮಃ ಸುಮಹಾನ್ ಭರ್ತುಃ ಪೂರ್ವಸ್ಯ ಲಂಘನೇ ॥33॥
ನಾನು ಇವೆಲ್ಲವನ್ನೂ ವಿಮರ್ಶೆ ಮಾಡಿ ಈ ನಿರ್ಧಾರಕ್ಕೆ ಬಂದಿದ್ದೇನೆ. ಪೂಜ್ಯನಾದ ನೀನು ನನ್ನನ್ನು ಪರಿತ್ಯಾಗ ಮಾಡಿದರೂ ಪುನಃ ಇನ್ನೊಬ್ಬ ಪತ್ನಿಯನ್ನು ಪಡೆಯುತ್ತೀಯೆ. ಆಗ ನಿನ್ನ ಧರ್ಮವು ಪುನಃ ಪ್ರತಿಷ್ಠಿತವಾಗುತ್ತದೆ. ಕಲ್ಯಾಣನಾದವನೇ, ಪುರುಷರು ಪುನಃ ವಿವಾಹವಾದರೆ, ಅದು ಅಧರ್ಮವಲ್ಲ. ಆದರೆ ಸ್ತ್ರೀಯರು ಮೊದಲನೆಯ ಪತಿಯನ್ನು ಬಿಟ್ಟು ಪುನಃ ಮದುವೆಯಾದರೆ, ದೊಡ್ಡ ಅಧರ್ಮವಾಗುತ್ತದೆ.
ಏತತ್ ಸರ್ವಂ ಸಮೀಕ್ಷ್ಯ ತ್ವಮಾತ್ಮತ್ಯಾಗಂ ಚ ಗರ್ಹಿತಮ್|
ಆತ್ಮಾನಂ ತಾರಯ ಬ್ರಹ್ಮನ್ ಕುಲಂ ಚ ಮಮ ದಾರಕೌ ॥34॥
ಬ್ರಾಹ್ಮಣನೇ, ಇವೆಲ್ಲವನ್ನೂ ವಿಚಾರಮಾಡಿ ನಿಂದನೀಯವಾದ ಆತ್ಮ ಪರಿತ್ಯಾಗವನ್ನು ಬಿಟ್ಟು ನನ್ನ ಕಾರಣದಿಂದ, ನಿನ್ನನ್ನೂ, ಕುಲವನ್ನೂ ಮತ್ತು ಮಕ್ಕಳನ್ನೂ ಆಪತ್ತಿನಿಂದ ದಾಟಿಸು.
ವೈಶಂಪಾಯನಃ
ಏವಮುಕ್ತಸ್ತಯಾ ಭರ್ತಾ ತಾಂ ಸಮಾಲಿಂಗ್ಯ ಭಾರತ |
ಮುಮೋಚ ಬಾಷ್ಪಂ ಶನಕೈಃ ಸಭಾರ್ಯೋ ಭೃಶದುಃಖಿತಃ ॥35॥
ಭಾರತನೇ, ಅವಳು ಹೀಗೆ ಹೇಳಿದಾಗ ಪತಿಯು ಅವಳನ್ನು ಆಲಿಂಗಿಸಿ ಬಹಳ ದುಃಖಿತನಾಗಿ ಪತ್ನಿಯ ಜೊತೆಯಲ್ಲಿ ನಿಧಾನವಾಗಿ ಕಣ್ಣೀರಿಟ್ಟನು.
ಮೈವಂ ವದೇಥಾಃ ಕಲ್ಯಾಣಿ ವಿಶಿಷ್ಟೋಽಹಂ ಸುಮಧ್ಯಮೇ |
ವಿಶೇಷತಃ ಸ್ತ್ರಿಯಂ ರಕ್ಷೇತ್ ಪುರುಷೇಣೋಪಸರ್ಪಿಣಾ |
ಯೋ ವೇತ್ತಿ ಧರ್ಮಮರ್ಥಂ ಚ ಕಾಮಂ ಮೋಹಂ ಚ ತತ್ತ್ವತಃ ॥36॥

ಕಲ್ಯಾಣಿಯೇ, ಸುಂದರಿಯೇ, ಹೀಗೆ ಹೇಳಬೇಡ. ನಾನು ವಿಶಿಷ್ಟನಾದವನು. ಸ್ತ್ರೀಯರನ್ನು ಪರಪುರುಷನು ಸಮೀಪಿಸದಂತೆ ವಿಶೇಷವಾಗಿ ರಕ್ಷಣೆ ಮಾಡಬೇಕು. ಯಾವನು ಧರ್ಮವನ್ನೂ, ಅರ್ಥವನ್ನೂ, ಕಾಮವನ್ನೂ ಮತ್ತು ಮೋಹವನ್ನು ಯಥಾರ್ಥವಾಗಿ ತಿಳಿಯುತ್ತಾನೋ, ಅವನು ಹೀಗೆಯೇ ಮಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಆದಿಪರ್ವದಲ್ಲಿ
ನೂರಅರವತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಅರ್ಥೇ ತವಾದ್ಯ ತನುಸಂತ್ಯಜನಾದಹಂ ಸ್ಯಾಂ
ಲೋಕೇ ಸತೀಪ್ರಚರಿತೇ ತದೃತೇ ತ್ವಧಶ್ಚ ।
ಕನ್ಯಾಹ ಚೈನಮಹಮೇವ ನ ಕನ್ಯಯಾರ್ಥ
ಇತ್ಯುಕ್ತ ಆಹ ಧಿಗಿತಿ ಸ್ಮ ಸ ವಿಪ್ರವರ್ಯಃ ॥75॥
`ನಿನಗಾಗಿ ನಾನೀನ ಶರೀರತ್ಯಾಗ ಮಾಡಿದರೆ ನಾನು ಪತಿವ್ರತೆ ಎಂಬ ಕೀರ್ತಿ ಹೊಂದಬಲ್ಲೆ. ಪತಿವ್ರತೆಯರ ಲೋಕವನ್ನೂ ಹೊಂದಬಲ್ಲೆ. ಇಲ್ಲದಿದ್ದರೆ ಅಧೋಲೋಕವನ್ನು ಪಡೆಯಬೇಕಾದೀತು' ಎಂದಳು ಪತ್ನಿ. ಆಗ ಮಗಳು ತಂದೆಗೆ ಹೇಳಿದಳು. `ನಾನು ಹೋಗುವೆನು. ಕನ್ಯೆಯಿಂದ ಏನು ಪ್ರಯೋಜನವಿಲ್ಲ ತಾನೆ?' ಬ್ರಾಹ್ಮಣನೆಂದ `ಛಿ ಹಾಗೆನ್ನಬೇಡ'.
ಕನ್ಯೋದಿತಾ ಬತ ಕುಲದ್ವಯತಾರಿಣೀತಿ
ಜಾಯಾ ಸಖೇತಿ ವಚನಂ ಶ್ರುತಿಗಂ ಸುತಶ್ಚ ।
ಆತ್ಮೈವ ತೇನ ನ ತು ಜೀವನಹೇತುತೋಽಹಂ
ಧೀಪೂರ್ವಕಂ ನೃಶನಕೇ ಪ್ರತಿಪಾದಯಾಮಿ ॥76॥
ಕನ್ಯೆ `ಎರಡೂ ಕುಲಗಳನ್ನು ಉದ್ಧರಿಸುವವಳು' ಎಂದು ವರ್ಣಿತಳಾಗಿದ್ದಾಳೆ. ಪತ್ನಿಯು ಸಖಿ ಎನ್ನುವ ವಚನ ಶ್ರುತಿಯಲ್ಲಿದೆ. ಮಗನೆಂದರೆ ತನ್ನದೆ ಆದ ಇನ್ನೊಂದು ರೂಪ. ಅದರಿಂದ ನನ್ನ ಪ್ರಾಣರಕ್ಷಣೆಗಾಗಿ ತಿಳಿದೂ ತಿಳಿದೂ ನಿಮ್ಮನ್ನು ನರಭಕ್ಷಕನ ಬಾಯಿಗೆ ಕೊಡಲಾರೆ.
ಏವಂ ರುದತ್ಸು ಸಹಿತೇಷು ಕುಮಾರಕೋಽಸ್ಯ
ಪ್ರಾಹ ಸ್ವಹಸ್ತಗತೃಣಂ ಪ್ರತಿದರ್ಶ್ಯ ಚೈಷಾಂ ।
ಏತೇನ ರಾಕ್ಷಸಮಹಂ ನಿಹನಿಷ್ಯ ಏವೇ-
ತ್ಯುಕ್ತೇ ಸುವಾಕ್ಯಮನು ಸಾ ಪ್ರವಿವೇಶ ಕುಂತೀ ॥77॥
ಹೀಗೆ ಎಲ್ಲರೂ ಕೂಡಿ ಅಳುತ್ತಿದ್ದಾಗ ಎಳೆಯ ವಯಸ್ಸಿನ ಮಗ ತನ್ನ ಕೈಯಲ್ಲಿ ಒಂದು ಹುಲ್ಲುಕಡ್ಡಿಯನ್ನು ಎತ್ತಿ ತೋರಿಸಿ `ಈ ಹುಲ್ಲು ಕಡ್ಡಿಯಿಂದ ನಾನು ರಾಕ್ಷಸನನ್ನು ಕೊಲ್ಲುವೆ' ಎಂದ. ಈ ಮಾತು ಶುಭಶಕುನವೆಂದು ಕುಂತಿ ಕೂಡಲೆ ಒಳಗೆ ಪ್ರವೇಶಿಸಿದಳು.
ಪೃಷ್ಟಸ್ತಯಾಹ ಸ ತು ವಿಪ್ರವರೋ ಬಕಸ್ಯ
ವೀರ್ಯಂ ಬಲಂ ಚ ದಿತಿಜಾರಿಭಿರಪ್ಯಸಹ್ಯಂ ।
ಸಂವತ್ಸರತ್ರಯಯುತೇ ದಶಕೇ ಕರಂ ಚ
ಪ್ರಾತಿಸ್ವಿಕಂ ದಶಮುಖಸ್ಯ ಚ ಮಾತುಲಸ್ಯ ॥78॥
ಕುಂತಿ ಕೇಳಿದಾಗ ಆ ಬ್ರಾಹ್ಮಣೋತ್ತಮ ದೇವತೆಗಳಿಗೂ ಇದಿರಿಸಲಾಗದಂಥ ಬಕನ ವೀರ್ಯಪರಾಕ್ರಮಗಳನ್ನೂ ಅವನು ರಾವಣನ ಸೋದರ ಮಾವನಾಗಿದ್ದುದನ್ನೂ ಹದಿಮೂರು ವರ್ಷಗಳಿಂದಲೂ ಪ್ರತಿದಿನ ಸರದಿಯಂತೆ ಒಂದೊಂದು ಮನೆಯವರು ಅವನಿಗೆ ಕೊಡಬೇಕಾಗಿದ್ದ ಕಪ್ಪವನ್ನೂ ವಿವರಿಸಿದ.
ಶ್ರುತ್ವಾ ತಮುಗ್ರಬಲಮತ್ಯುರವೀರ್ಯಮೇವ
ರಾಮಾಯಣೇ ರಘುವರೋರುಶರಾತಿಭೀತಂ ।
ವಿಷ್ಟಂ ಬಿಲೇಷ್ವಥ ನೃಪಾನ್ ವಶಮಾಶು ಕೃತ್ವಾ
ಭೀತ್ಯೈವ ತೈಸ್ತದನು ದತ್ತಕರಂ ನನಂದ ॥79|
`ಬಕ ಭಯಂಕರ ಬಲ ಉಳ್ಳವ. ಅತ್ಯಂತ ಮಹಾಪರಾಕ್ರಮಶಾಲಿ. ರಾಮಾಯಣ ಕಾಲದಲ್ಲಿ ಶ್ರೀರಾಮನ ಮಹಾಬಾಣಕ್ಕೆ ಬಲುಭೀತನಾಗಿ ಗುಹೆಯೊಳಗೆ ಅಡಗಿದವ. ಬಳಿಕ ಈಗ ರಾಜರುಗಳನ್ನು ತನ್ನ ವಶಮಾಡಿಕೊಂಡು ಅವರಿಂದ ತನಗಿಷ್ಟವಾದ ಕಪ್ಪವನ್ನು ತೆಗೆದುಕೊಳ್ಳುತ್ತಿದ್ದಾನೆ. ಅವರು ಭೀತಿಯಿಂದ ಕೊಡುತ್ತಿದ್ದಾರೆ' ಎಂದು ಬ್ರಾಹ್ಮಣ ಹೇಳಿದ್ದನ್ನು ಕೇಳಿ ಕುಂತಿ ಆನಂದಪಟ್ಟಳು.
* * * *
ನೂರ ಅರವತ್ಮೂರನೆಯ ಅಧ್ಯಾಯ
(ಕನ್ಯೆಯ ವಚನ, ಬಾಲಕನ ವಚನ, ಕುಂತಿಯ ಪ್ರವೇಶ, ಬ್ರಾಹ್ಮಣನಿಂದ ಬಕವೃತ್ತಾಂತ ಕಥನ)
ವೈಶಂಪಾಯನಃ
ತಯೋರ್ದುಃಖಿತಮಾಕರ್ಣ್ಯ ಅತಿಮಾತ್ರಂ ನಿಶಮ್ಯ ಸಾ ।
ಭೃಶಂ ದುಃಖಪರೀತಾಂಗೀ ಕನ್ಯಾ ತಾವಭ್ಯಭಾಷತ ॥1॥

ತಂದೆತಾಯಿಗಳ ದುಃಖದ ಮಾತುಗಳನ್ನು ಕೇಳಿ ತಾನೂ ದುಃಖತಪ್ತಳಾದ ಅವರ ಕನ್ಯೆಯು ಅವರಿಬ್ಬರನ್ನು ಕುರಿತು ಮಾತನಾಡಿದಳು.
ಕಿಮಿದಂ ಭೃಶದುಃಖಾರ್ತೌ ಕರುಣಂ ವಿಲಪಿಷ್ಯಥಃ |
ಮಮಾಪಿ ಶ್ರೂಯತಾಂ ಕಿಂಚಿತ್ ವಚನಂ ಯದಿ ರೋಚತೇ ॥2॥
ನೀವೇಕೆ ಇಷ್ಟು ದುಃಖದಿಂದ ಕರುಣಾಜನಕವಾಗಿ ವಿಲಾಪವನ್ನು ಮಾಡುತ್ತಿದ್ದೀರಿ? ನಿಮಗೆ ಇಷ್ಟವಾಗುವುದಾದರೆ ನನ್ನ ಮಾತನ್ನೂ ಸ್ವಲ್ಪ ಕೇಳಿ.
ಧರ್ಮತೋಽಹಂ ಪರಿತ್ಯಾಜ್ಯಾ ಯುವಯೋರ್ನಾತ್ರ ಸಂಶಯಃ |
ತ್ಯಕ್ತವ್ಯಾಂ ಮಾಂ ಪರಿತ್ಯಜ್ಯ ತ್ರಾತಂ ಸರ್ವಂ ಮಮೈಕಯಾ ॥3॥
ಧರ್ಮದ ದೃಷ್ಟಿಯಿಂದ ನೀವಿಬ್ಬರೂ ನನ್ನನ್ನು ಎಂದಾದರೂ ಪರಿತ್ಯಾಗ ಮಾಡಲೇ ಬೇಕು ಎಂಬುದರಲ್ಲಿ ಸಂಶಯವಿಲ್ಲ. ಪರಿತ್ಯಾಗ ಮಾಡಬೇಕಾದ ನನ್ನನ್ನು ಈಗಲೇ ಪರಿತ್ಯಜಿಸಿ. ನನ್ನೊಬ್ಬಳಿಂದ ಎಲ್ಲವನ್ನೂ ರಕ್ಷಿಸಿಕೊಳ್ಳಿ.
ಇತ್ಯರ್ಥಮಿಷ್ಯತೇಽಪತ್ಯಂ ತಾರಯಿಷ್ಯತಿ ಮಾಮಿತಿ |
ಅಸ್ಮಿನ್ನುಪಸ್ಥಿತೇ ಕಾಲೇ ಹರತಂ ವ್ಯಸನಂ ಮಯಾ ॥4॥
ನಮ್ಮನ್ನು ಆಪತ್ತುಗಳಿಂದ ದಾಟಿಸುತ್ತಾರೆ ಎಂಬ ಕಾರಣದಿಂದ ಜನರು ಮಕ್ಕಳನ್ನು ಅಪೇಕ್ಷಿಸುತ್ತಾರೆ. ಈ ಉಪಸ್ಥಿತವಾದ ಆಪತ್ಕಾಲದಲ್ಲಿ ನನ್ನನ್ನು ಪರಿತ್ಯಾಗ ಮಾಡಿ ನಿಮ್ಮ ಈ ಆಪತ್ತನ್ನು ಪರಿಹರಿಸಿಕೊಳ್ಳಿ.
ಇಹ ವಾ ತಾರಯೇದ್ ದುಃಖಾದುತ ವಾ ಪ್ರೇತ್ಯ ತಾರಯೇತ್ |
ಸರ್ವಥಾ ತಾರಯೇತ್ಪುತ್ರ ಆತ್ಮಾ ವೈ ಪುತ್ರ ಉಚ್ಯತೇ ॥5॥
ಪುತ್ರನು ಈ ಲೋಕದಲ್ಲಾಗಲೀ ಅಥವಾ ಪರಲೋಕದಲ್ಲಾಗಲೀ ಸರ್ವಥಾ ದುಃಖದಿಂದ ಪಾರು ಮಾಡುತ್ತಾನೆ. ಪುತ್ರನನ್ನು ಆತ್ಮ ಎಂದೇ ಕರೆಯುತ್ತಾರೆ.
ಪುನ್ನಾಮ್ನೋ ನರಕಾತ್ ತ್ರಾಣಾತ್ ತನಯಃ ಪುತ್ರ ಉಚ್ಯತೇ |
ಆಕಾಂಕ್ಷಂತೀಹ ದೌಹಿತ್ರಾನ್ ಯದಿ ನಿತ್ಯಂ ಪಿತಾಮಹಾಃ |
ತಾನ್ ಸ್ವಯಂ ವೈ ಪರಿತ್ರಾಸ್ಯೇ ರಕ್ಷಂತೀ ಜೀವಿತಂ ಪಿತುಃ ॥7॥
ಪುತಿ ಎಂಬ ನರಕದಿಂದ ರಕ್ಷಣೆ ಮಾಡುವ ಕಾರಣದಿಂದ ಸುತನನ್ನು ಪುತ್ರನೆಂದು ಕರೆಯುತ್ತಾರೆ. ಪಿತಾಮಹರು ಅದೇ ಕಾರಣಕ್ಕಾಗಿ ಯಾವಾಗಲೂ ದೌಹಿತ್ರರನ್ನು ಬಯಸುತ್ತಾರೆ. ನಾನು ತಂದೆಯ ಜೀವಿತವನ್ನು ರಕ್ಷಿಸಿ ಆ ಪಿತಾಮಹರನ್ನು ದೌಹಿತ್ರರ ಬದಲಾಗಿ ನಾನೇ ರಕ್ಷಿಸುವೆನು.
ಭ್ರಾತಾ ಹಿ ಮಮ ಬಾಲೋಽಯಂ ಗತೇ ಲೋಕಾಂತರಂ ತ್ವಯಿ |
ಅಚಿರೇಣೈವ ಕಾಲೇನ ವಿನಶಿಷ್ಯತ್ಯಸಂಶಯಃ ॥7॥
ನನ್ನ ತಮ್ಮನು ಇನ್ನೂ ಬಹಳ ಚಿಕ್ಕವನು. ನೀನು ಲೋಕಾಂತರಕ್ಕೆ ಹೋದರೆ, ಸ್ವಲ್ಪಕಾಲದಲ್ಲಿಯೇ ಅವನು ವಿನಾಶ ಹೊಂದುವುದು ನಿಶ್ಚಿತ.
ತಾತೇಽಪಿ ಹಿ ಗತೇ ಸ್ವರ್ಗಂ ವಿನಷ್ಟೇ ಚ ಮಮಾನುಜೇ |
ಪಿಂಡಃ ಪಿತೄಣಾಂ ವ್ಯುಚ್ಛಿದ್ಯೇತ್ ತತ್ ತೇಷಾಂ ವಿಪ್ರಿಯಂ ಭವೇತ್ ॥
ನನ್ನ ತಂದೆಯೂ ಸ್ವರ್ಗಸ್ಥನಾಗಿ ತಮ್ಮನೂ ವಿನಾಶವನ್ನು ಹೊಂದಿದರೇ ಪಿತೃಗಳಿಗೆ ಪಿಂಡಲೋಪವಾಗುತ್ತದೆ. ಅದು ಅವರಿಗೆ ಅಪ್ರಿಯವಾದುದು.
ಪಿತ್ರಾ ತ್ಯಕ್ತಾ ತಥಾ ಮಾತ್ರಾ ಭ್ರಾತ್ರಾ ಚೈವ ನ ಸಂಶಯಃ |
ದುಃಖಾದ್ ದುಃಖತರಂ ಪ್ರಾಪ್ಯ ಗಚ್ಛೇಯಮತಥೋಚಿತಾ ॥9॥
ತಂದೆಯಿಂದಲೂ, ತಾಯಿಯಿಂದಲೂ ಮತ್ತು ತಮ್ಮನಿಂದಲೂ ಪರಿತ್ಯಕ್ತಳಾದ ದುಃಖವನ್ನು ಅನುಭವಿಸಲು ಅರ್ಹಳಲ್ಲದ ನಾನು, ಒಂದು ದುಃಖದಿಂದ ಅದಕ್ಕಿಂತ ಹೆಚ್ಚಿನ ಇನ್ನೊಂದು ದುಃಖವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ತ್ವಯಿ ರೋಗವಿನಿರ್ಮುಕ್ತೇ ಭ್ರಾತ್ರಾ ಮಾತ್ರಾ ಸಹೈವ ತು |
ಸಂತಾನಶ್ಚೈವ ಪಿಂಡಶ್ಚ ಪ್ರತಿಷ್ಠಾಸ್ಯತ್ಯಸಂಶಯಮ್ ॥10॥
ನೀನು ತಾಯಿ ಮತ್ತು ತಮ್ಮನ ಜೊತೆಯಲ್ಲಿ ಈ ಸಂಕಟದಿಂದ ಪಾರಾದರೆ, ಕುಲದ ಸಂತತಿಯೂ, ಪಿತೃಗಳ ಪಿಂಡಪ್ರಾಪ್ತಿಯೂ ಸುಭದ್ರವಾಗಿರುವುದರಲ್ಲಿ ಸಂಶಯವಿಲ್ಲ.
ಆತ್ಮಾ ಪುತ್ರಃ ಸಖಾ ಭಾರ್ಯಾ ಕೃಚ್ಛ್ರಂ ತು ದುಹಿತಾ ಕಿಲ |
ಸ ಕೃಚ್ಛ್ರಾನ್ಮೋಚಯಾತ್ಮಾನಂ ಮಾಂ ಚ ಧರ್ಮೇಣ ಯೋಜಯ ॥11॥
ಪುತ್ರನೂ ಆತ್ಮನೇ (ತಾನೇ). ಹೆಂಡತಿಯು ಮಿತ್ರಳು. ಮಗಳು ಒಂದು ದುಃಖವೆಂದು ಹೇಳುತ್ತಾರಷ್ಟೇ. ಅಂತಹ ನೀನು ನಿನ್ನನ್ನು ಮಗಳೆಂಬ ದುಃಖದಿಂದ ಬಿಡಿಸಿಕೊಂಡು ನನ್ನನ್ನೂ ಧರ್ಮಮಾರ್ಗದಲ್ಲಿಡು.
ಅನಾಥಾ ಕೃಪಣಾ ಬಾಲಾ ಯತ್ರ ಕ್ವಚನ ಶಾಯಿನೀ |
ಭವಿಷ್ಯಾಮಿ ತ್ವಯಾ ತಾತ ವಿಹೀನಾ ಕೃಪಣಾ ಬತ ॥12॥
ತಂದೆಯೇ, ನೀನಿಲ್ಲದಿದ್ದರೆ ನಾನು ಅನಾಥಳೂ, ಕೃಪಣಳೂ ಆಗಿ ಎಲ್ಲೆಂದರಲ್ಲಿ ಮಲಗಿಕೊಂಡು ಕಾಲವನ್ನು ಕಳೆಯಬೇಕಾಗುತ್ತದೆ.
ಅತಸ್ತ್ವಹಂ ಕರಿಷ್ಯಾಮಿ ಕುಲಸ್ಯಾಸ್ಯ ವಿಮೋಕ್ಷಣಮ್ |
ಫಲಸಂಸ್ಥಾ ಭವಿಷ್ಯಾಮಿ ಕೃತ್ವಾ ಕರ್ಮ ಸುದುಷ್ಕೃತಮ್ ॥13॥
ಆದ್ದರಿಂದ ನಾನು ಈ ಕುಲವನ್ನು ಸಂಕಟದಿಂದ ಪಾರು ಮಾಡುವೆನು. ಸುದುಷ್ಕರವಾದ ಕರ್ಮವನ್ನು ಮಾಡಿ ಫಲಭಾಗಿಯಾಗುವೆನು.

ಅಥವಾ ಯಾಸ್ಯಸೇ ತತ್ರ ತ್ಯಕ್ತ್ವಾ ಮಾಂ ದ್ವಿಜಸತ್ತಮ |
ಪೀಡಿತಾಽಹಂ ಭವಿಷ್ಯಾಮಿ ತಚ್ಚಾಪ್ಯವೇಕ್ಷಸ್ವ ಮಾಮಪಿ ॥14॥
ಬ್ರಾಹ್ಮಣಶ್ರೇಷ್ಠನೇ, ಅಥವಾ ನೀನು ನನ್ನನ್ನು ಬಿಟ್ಟು ಪರಲೋಕಕ್ಕೆ ಹೋಗುವುದಾದರೆ, ನಾನು ದುಷ್ಟರಿಂದ ಪೀಡಿತಳಾಗುವೆನು ಎಂಬುದನ್ನೂ ಗಮನಿಸು.
ಅತೋಽಸ್ಮದರ್ಥಂ ಧರ್ಮಾರ್ಥಂ ಪ್ರಸವಾರ್ಥಂ ಚ ಸತ್ತಮ |
ಆತ್ಮಾನಂ ಪರಿರಕ್ಷಸ್ವ ತ್ಯಕ್ತವ್ಯಾಂ ಮಾಂ ಪರಿತ್ಯಜ ॥15॥
ಆದ್ದರಿಂದ ಸಜ್ಜನನಾದ ತಂದೆಯೇ, ನನ್ನ ಸಲುವಾಗಿ ಧರ್ಮದ ಸಲುವಾಗಿ ಮತ್ತು ಸಂತತಿಯ ಸಲುವಾಗಿ ನಿನ್ನನ್ನು ರಕ್ಷಿಸಿಕೋ. ಪರಿತ್ಯಾಗ ಮಾಡಬೇಕಾದ ನನ್ನನ್ನು ಪರಿತ್ಯಾಗ ಮಾಡು.
ಅವಶ್ಯಕರಣೀಯೇಽರ್ಥೇ ಮಾ ಸ್ಮ ಕಾಲವ್ಯತಿಕ್ರಮಃ |
ತ್ವಯಾ ದತ್ತೇನ ತೋಯೇನ ಭವಿಷ್ಯತಿ ಹಿತಂ ಚ ಮೇ ॥16॥
ಅವಶ್ಯವಾಗಿ ಮಾಡಲೇಬೇಕಾದ ಕೆಲಸದ ವಿಷಯದಲ್ಲಿ ವಿಳಂಬವನ್ನು ಮಾಡಬಾರದು. ನೀನು ಕೊಡುವ ತರ್ಪಣದಿಂದ ನನಗೆ ಹಿತವುಂಟಾಗುವುದು.
ಕಿಂ ನು ತಸ್ಮಾತ್ ಪರಂ ದುಃಖಂ ಯದ್ ವಯಂ ಸ್ವರ್ಗತೇ ತ್ವಯಿ |
ಯಾಚಮಾನಾಃ ಪರಾದನ್ನಂ ಪರಿಧಾವೇಮಹಿ ಶ್ವವತ್ ॥17॥
ನೀನು ಪರಲೋಕಕ್ಕೆ ಹೋದರೆ, ನಾವು ಅನ್ನಕ್ಕಾಗಿ ಪರರನ್ನು ಬೇಡಿ, ನಾಯಿಗಳಂತೆ ಅಲೆದಾಡುವುದಕ್ಕಿಂತ ಹೆಚ್ಚಿನ ದುಃಖವು ಯಾವುದಿದೆ?
ತ್ವಯಿ ರೋಗವಿನಿರ್ಮುಕ್ತೇ ಶೋಕಾದಸ್ಮಾತ್ ಸಬಾಂಧವೇ |
ನಮೃತೇವ ಸತೀ ಲೋಕೇ ಭವಿಷ್ಯಾಮಿ ಸುಖಾನ್ವಿತಾ ॥18॥
ನೀನು ಮತ್ತು ನಿನ್ನ ಬಂಧುಗಳು ಈ ಸಂಕಟವೆಂಬ ರೋಗದಿಂದ ಪಾರಾದರೆ, ನಾನು ಮರಣ ಹೊಂದಿದರೂ ಈ ಲೋಕದಲ್ಲಿ ಬದುಕಿರುವವರಂತೆ ಸುಖವಾಗಿರುವೆನು.
ಇತ್ಯೇತದುಭಯಂ ತಾತ ನಿಶಮ್ಯ ತವ ಯದ್ವಿತಮ್ |
ತದ್ ವ್ಯವಸ್ಯ ತಥಾಽಂಬಾಯಾ ಹಿತಂ ಸ್ವಸ್ಯ ಸುತಸ್ಯ ಚ ॥19॥
ತಂದೆಯೇ, ಇವೆಲ್ಲವನ್ನೂ ವಿಚಾರ ಮಾಡಿ ನಿನಗೂ, ತಾಯಿಗೂ ಮತ್ತು ತಮ್ಮನಿಗೂ, ಯಾವುದು ಹಿತವೆಂದು ನಿರ್ಧರಿಸು.
ಮಾತಾಪಿತ್ರೋಃ ಪುನಃ ಪುತ್ರಾ ಭವಿತಾರೋ ಗುಣಾನ್ವಿತಾಃ |
ನ ತು ಪುತ್ರಸ್ಯ ಪಿತರೌ ಪುನರ್ಜಾತು ಭವಿಷ್ಯತಃ ॥20॥
ತಂದೆತಾಯಿಗಳಿಗೆ ಪುನಃ ಗುಣವಂತರಾದ ಮಕ್ಕಳು ಜನಿಸುವರು. ಆದರೆ ತಂದೆತಾಯಿಗಳನ್ನು ಕಳೆದುಕೊಂಡ ಪುತ್ರನು ಇನ್ನೊಮ್ಮೆ ತಂದೆತಾಯಿಗಳನ್ನು ಪಡೆಯುವುದಿಲ್ಲ.
ವೈಶಂಪಾಯನಃ
ಏವಂ ಬಹುವಿಧಂ ತಸ್ಯಾ ನಿಶಮ್ಯ ಪರಿದೇವಿತಮ್ |
ಪಿತಾ ಮಾತಾ ಚ ಸಾ ಚೈವ ಕನ್ಯಾ ಪ್ರರುರುದುಸ್ತ್ರಯಃ ॥21॥
ಹೀಗೆ ಅವಳು ಬಹುವಿಧವಾಗಿ ಗೋಳಾಡುವುದನ್ನು ಕೇಳಿ, ತಂದೆ, ತಾಯಿ ಮತ್ತು ಆ ಕನ್ಯೆಯೂ ಸಹ ಗಟ್ಟಿಯಾಗಿ ಅತ್ತರು.
ತಥಾ ಪ್ರರುದಿತಾನ್ ಸರ್ವಾನ್ ನಿಶಮ್ಯ ತು ಸುತಸ್ತಯೋಃ |
ಉತ್ಫುಲ್ಲನಯನೋ ಬಾಲಃ ಕಲಮವ್ಯಕ್ತಮಬ್ರವೀತ್ ॥22॥
ಹಾಗೆ ಎಲ್ಲರೂ ಅಳುತ್ತಿರುವುದನ್ನು ನೋಡಿದ ಅವರ ಚಿಕ್ಕಮಗುವಾದ ಪುತ್ರನು ಕಣ್ಣುಗಳನ್ನು ಅರಳಿಸಿ ಅವ್ಯಕ್ತ ಮಧುರವಚನಗಳಿಂದ ಮಾತನಾಡಿದನು.
ಮಾ ಪಿತಾ ರೋದ ಮಾ ಮಾತರ್ಮಾ ಸ್ವಸೇತಿ ಪುನಃಪುನಃ |
ಪ್ರಹಸನ್ನಿವ ಸರ್ವಾಂಸ್ತಾನೇಕೈಕಂ ಸೋಪಸರ್ಪತಿ ॥23॥
ತಂದೆಯೇ ಅಳಬೇಡ. ಅಮ್ಮಾ ಅಳಬೇಡ, ಅಕ್ಕಾ ಅಳಬೇಡ ಎಂದು ಹೇಳುತ್ತಾ, ನಗುತ್ತಾ ಅವನು ಒಬ್ಬೊಬ್ಬರ ಕಡೆಗೂ ಮತ್ತೆ ಮತ್ತೆ ಹೋದನು.
ತತಃ ಸ ತೃಣಮಾದಾಯ ಪ್ರಹೃಷ್ಟಃ ಪುನರಬ್ರವೀತ್ |
ಅನೇನ ತಂ ಹನಿಷ್ಯಾಮಿ ರಾಕ್ಷಸಂ ಪುರುಷಾದನಮ್ ॥24॥
ಅನಂತರ ಆ ಮಗುವು ಒಂದು ಕಡ್ಡಿಯನ್ನು ತೆಗೆದುಕೊಂಡು ಆ ನರಭಕ್ಷಕನಾದ ರಾಕ್ಷಸನನ್ನು ಈ ಕಡ್ಡಿಯಿಂದ ಕೊಲ್ಲುವೆನು ಎಂದು ಸಂತೋಷದಿಂದ ಹೇಳಿತು.
ವೈಶಂಪಾಯನಃ
ತಥಾಽಪಿ ತೇಷಾಂ ದುಃಖೇನ ಪರೀತಾನಾಂ ನಿರೀಕ್ಷ್ಯ ಚ |
ತಥಾ ಬ್ರುವಂತಂ ತಂ ಬಾಲಂ ಹರ್ಷಃ ಸಮಭವತ್ ತದಾ ॥25॥
ಆ ಮಾತುಗಳನ್ನು ಕೇಳಿ ದುಃಖದಿಂದ ಗೋಳಾಡುತ್ತಿದ್ದ ಆ ಮೂವರಿಗೂ ಸಂತೋಷವುಂಟಾಯಿತು.
ಇದಮಂತರಮಿತ್ಯೇವ ಕುಂತೀ ಸಮುಪಸೃತ್ಯ ತಾನ್ |
ಗತಾಸೂನಮೃತೇನೇವ ಸಾಂತ್ವಯಾಮಾಸ ವೈ ಗಿರಾ ॥26॥
ಇದೇ ಒಳ್ಳೆಯ ಸಮಯ ಎಂದು ತಿಳಿದು ಕುಂತಿಯು ಒಳಗೆ ಪ್ರವೇಶಿಸಿ, ಅವರನ್ನು ಸಮೀಪಿಸಿ, ಪ್ರಾಣಹೋದವರನ್ನು ಅಮೃತದಿಂದ

ಉಜ್ಜೀವಿಸುವಂತೆ ತನ್ನ ಮಧುರವಾದ ಮಾತುಗಳಿಂದ ಸಮಾಧಾನಪಡಿಸಿದಳು.
ಕುಂತೀ
ಕುತೋಮೂಲಮಿದಂ ದುಃಖಂ ಜ್ಞಾತುಮಿಚ್ಛಾಮಿ ತತ್ತ್ವತಃ |
ತದ್ ವಿದಿತ್ವಾऽಪಕರ್ಷೇಯಂ ಶಕ್ಯಂ ಚೇದಂ ಪರೀಕ್ಷಿತುಮ್ ॥27॥
ಈ ದುಃಖಕ್ಕೆ ಏನು ಕಾರಣವೆಂದು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ. ಅದನ್ನು ತಿಳಿದು ನಾನು ದುಃಖವನ್ನು ನಿವಾರಣೆ ಮಾಡುತ್ತೇನೆ. ಈ ದುಃಖವನ್ನು ನಿವಾರಣೆ ಮಾಡುವುದು ಸಾಧ್ಯವೆನಿಸುತ್ತದೆ.
ಬ್ರಾಹ್ಮಣಃ
ಉಪಪನ್ನಂ ಸತಾಮೇತದ್ ಯದ್ ಬ್ರವೀಷಿ ತಪೋಧನೇ |
ನ ತು ದುಃಖಮಿದಂ ಶಕ್ಯಂ ಮಾನುಷೇಣ ವ್ಯಪೋಹಿತುಮ್ ॥28॥
ತಪಸ್ವಿನಿಯೇ, ಹೀಗೆ ಮಾತನಾಡುವುದು ಸಜ್ಜನರಿಗೆ ಯೋಗ್ಯವಾಗಿಯೇ ಇದೆ. ಆದರೆ ಯಾವ ಮನುಷ್ಯನೂ ಈ ದುಃಖವನ್ನು ಪರಿಹಾರ ಮಾಡಲು ಸಾಧ್ಯವಿಲ್ಲ.
ತಥಾऽಪಿ ತತ್ತ್ವಮಾಖ್ಯಾಸ್ಯೇ ಏತದ್ದುಃಖಸ್ಯ ಸಂಭವಮ್ |
ಶಕ್ಯಂ ವಾ ಯದಿ ವಾऽಶಕ್ಯಂ ಶೃಣು ಭದ್ರೇ ಯಥಾತಥಮ್ ॥29॥
ಆದರೂ ಸಹ ಈ ದುಃಖಕ್ಕೆ ಏನು ಕಾರಣವೆಂದು ವಸ್ತುಸ್ಥಿತಿಯನ್ನು ಹೇಳುವೆನು. ಅದನ್ನು ಪರಿಹರಿಸಲು ಶಕ್ಯವೋ ಅಥವಾ ಅಶಕ್ಯವೋ ಅದು ಬೇರೆಯ ವಿಷಯ. ಮಂಗಳಸ್ವರೂಪಳೇ, ನಿಜಸ್ಥಿತಿಯನ್ನಂತೂ ಕೇಳು.
ಸಮೀಪೇ ನಗರಸ್ಯಾಸ್ಯ ಬಕೋ ನಾಮೇಹ ರಾಕ್ಷಸಃ |
ಇತೋ ಗವ್ಯೂತಿಮಾತ್ರೇऽಸ್ತಿ ಯಮುನಾಗಹ್ವರೇ ಗುಹಾ ॥30॥
ತಸ್ಯಾಂ ಘೋರಃ ಸ ವಸತಿ ಜಿಘಾಂಸುಃ ಪುರುಷಾದಕಃ |
ಬಕೋ ನಾಮ ಸ ನಾಮ್ನಾ ವೈ ದುಷ್ಟಾತ್ಮಾ ರಾಕ್ಷಸಾಧಮಃ ॥31॥
ಈ ನಗರದ ಸಮೀಪದಲ್ಲಿ ಇಲ್ಲಿಗೆ ಒಂದು ಗವ್ಯೂತಿ ದೂರದಲ್ಲಿ, ಯಮುನಾ ತೀರದ ಒಂದು ಗುಹೆಯಲ್ಲಿ ಘೋರನಾದ ಬಕನೆಂಬ ರಾಕ್ಷಸನು ವಾಸಿಸುತ್ತಾನೆ. ಆ ರಾಕ್ಷಸಾಧಮನು ದುಷ್ಟನೂ, ನರಭಕ್ಷಕನೂ ಮತ್ತು ಮನುಷ್ಯರನ್ನು ಕೊಲ್ಲುವವನೂ ಆಗಿದ್ದಾನೆ.
ಈಶೋ ಜನಪದಸ್ಯಾಸ್ಯ ಪುರಸ್ಯ ಚ ಮಹಾಬಲಃ |
ಪ್ರಲಂಭಕಃ ಕಾಮರೂಪೀ ರಾಕ್ಷಸೋ ವೈ ಮಹಾಬಲಃ ॥32॥
ಈ ದೇಶಕ್ಕೆ ಮತ್ತು ಪಟ್ಟಣಕ್ಕೆ ಮಹಾಬಲನಾದ ಅವನು ಒಡೆಯ. ಅವನು ಕಾಮರೂಪಿಯೂ, ವಂಚಕನೂ ಮಹಾಬಲಿಷ್ಠನೂ ಆದ ರಾಕ್ಷಸ.
ತೇನೋಪಸೃಷ್ಟಾ ನಗರೀ ವರ್ಷಮದ್ಯ ತ್ರಯೋದಶಮ್ |
ಸ ಪುಷ್ಟೋ ಮಾನುಷೈರ್ಮಾಂಸೈರ್ದುರ್ಬುದ್ಧಿಃ ಪುರುಷಾದಕಃ ॥33॥
ಈ ಪಟ್ಟಣವು ಹದಿಮೂರು ವರ್ಷದಿಂದ ಅವನ ಉಪದ್ರವಕ್ಕೆ ಒಳಗಾಗಿದೆ. ಆ ನರಭಕ್ಷಕನಾದ ದುರ್ಬುದ್ಧಿಯು ಮನುಷ್ಯಮಾಂಸದಿಂದ ಪುಷ್ಟನಾಗಿದ್ದಾನೆ.
ತೇನೇಯಂ ಪುರುಷಾದೇನ ಭಕ್ಷ್ಯಮಾಣಾ ದುರಾತ್ಮನಾ |
ಅನಾಥಾ ನಗರೀ ನಾಥಂ ತ್ರಾತಾರಂ ನಾಧಿಗಚ್ಛತಿ ॥34॥
ಆ ದುಷ್ಟನಾದ ನರಭಕ್ಷಕನಿಂದ ಭಕ್ಷಿಸಲ್ಪಟ್ಟು ಅನಾಥವಾದ ಈ ನಗರವು ಯಾವ ರಕ್ಷಕನನ್ನೂ ಕಾಣುತ್ತಿಲ್ಲ.
ಗುಹಾಯಾಂ ಚ ವಸಂಸ್ತತ್ರ ಬಾಧತೇ ಸತತಂ ಜನಮ್|
ಸ್ತ್ರಿಯೋ ಬಾಲಾಂಶ್ಚ ವೃದ್ಧಾಂಶ್ಚ ಯೂನಶ್ಚಾಪಿ ದುರಾತ್ಮವಾನ್ ॥35॥
ಅಲ್ಲಿ ಗುಹೆಯಲ್ಲಿ ವಾಸಮಾಡುವ ದುಷ್ಟಾತ್ಮನಾದ ಅವನು ಸ್ತ್ರೀಯರನ್ನೂ, ಬಾಲರನ್ನೂ, ವೃದ್ಧರನ್ನೂ, ಯುವಕರನ್ನೂ ಸತತವಾಗಿ ಪೀಡಿಸುತ್ತಾನೆ.
ಅತ್ರ ಮಂತ್ರೈಶ್ಚ ಹೋಮೈಶ್ಚ ಭೋಜನೈಶ್ಚಾಪಿ ರಾಕ್ಷಸಃ |
ಈಡಿತೋ ದ್ವಿಜಮುಖ್ಯೈಶ್ಚ ಪೂಜಿತಶ್ಚ ದುರಾತ್ಮವಾನ್ ॥36॥
ಇಲ್ಲಿ ಅವನ ಸಲುವಾಗಿ ಮಂತ್ರಗಳನ್ನು ಜಪಿಸಿ, ಹೋಮಗಳನ್ನು ಮಾಡಿ, ಬ್ರಾಹ್ಮಣರು ಅವನಿಗೆ ಭೋಜನಗಳನ್ನು ಒದಗಿಸಿ ಸ್ತೋತ್ರಗಳನ್ನು ಮಾಡಿದ್ದಾರೆ.
ಯದಾ ಚ ಸಕಲಾನೇವಂ ಪ್ರಸೂದಯತಿ ರಾಕ್ಷಸಃ |
ತದೈನಂ ಬ್ರಾಹ್ಮಣಾಃ ಸರ್ವೇ ಸಮಯೇ ಸನ್ನ್ಯಯೋಜಯನ್ ॥37॥
ಯಾವಾಗ ಆ ರಾಕ್ಷಸನು ಎಲ್ಲರನ್ನೂ ಹೀಗೆ ಕೊಲ್ಲಲು ಪ್ರಾರಂಭಿಸಿದನೋ, ಆಗ ಬ್ರಾಹ್ಮಣರು ಅವನನ್ನು ಒಂದು ನಿಬಂಧನೆಗೆ ಒಳಪಡಿಸಿದರು.
ಮಾऽಸ್ಮಾನ್ ಕಾಮಾದ್ ವಧೀ ರಕ್ಷೋ ದಾಸ್ಯಾಮಸ್ತೇ ಬಲಿಂ ವಯಮ್ |
ಪರ್ಯಾಯೇಣ ಯಥಾಕಾಮಮಿಹ ಮಾಂಸೋದನಂ ಪ್ರಭೋ ॥38॥
ರಾಕ್ಷಸನೇ, ಮನಸ್ಸಿಗೆ ಬಂದಂತೆ ನಮ್ಮನ್ನು ಕೊಲ್ಲಬೇಡ. ನಾವೇ ನಿನಗೆ ಆಹಾರವನ್ನು ಒದಗಿಸುವೆವು. ಪ್ರಭುವೇ, ಪರ್ಯಾಯ ಕ್ರಮದಿಂದ ನಿನ್ನ ಮನಸ್ಸಿಗೆ ಒಪ್ಪುವ ಮಾಂಸೋದನವನ್ನು ಒದಗಿಸುವೆವು.
ಅನ್ನಂ ಮಾಂಸಸಮಾಯುಕ್ತಂ ತಿಲಚೂರ್ಣಸಮನ್ವಿತಮ್ |
ಸರ್ಪಿಷಾ ಚ ಸಮಾಯುಕ್ತಂ ವ್ಯಂಜನೈಶ್ಚ ವಿಭೂಷಿತಮ್ ॥39॥

ಪಿಂಡಾನ್ ಲಾಜಾಂಸ್ತಥಾಽಪೂಪಾನ್ ಸೂಪಂಬಹುವಿಧೋದನಮ್ |
ಶೃತಾನ್ ಶೃತಾನ್ಪಾನಕುಂಭಾನ್ ಸೂಪಂ ಮಾಂಸಂ ಶೃತಾಶೃತಮ್ |
ವನಮಾಹಿಷವಾರಾಹಾಭಾಲ್ಲೂಕಂ ಚ ಶೃತಾಶೃತಮ್ ॥40॥
ಸರ್ಪಿಃಕುಂಭಾಂಶ್ಚ ವಿವಿಧಾನ್ ದಧಿಕುಂಭಾಂಸ್ತಥಾ ಬಹೂನ್ |
ಆಜ್ಯಸಿಕ್ತೈಃ ಸಮಾಯುಕ್ತೈಸ್ತಿಲಚೂರ್ಣೈಃ ಸಮಾಕುಲಾನ್ ॥41॥
ಮಾಂಸದಿಂದಲೂ, ಎಳ್ಳುಪುಡಿಯಿಂದಲೂ, ತುಪ್ಪದಿಂದಲೂ ಮತ್ತು ವ್ಯಂಜನಗಳಿಂದಲೂ ಕೂಡಿದ ಅನ್ನ, ಉಂಡೆಗಳು, ಅರಳು, ಅಪೂಪ, ತೊವ್ವೆ, ಬಹುವಿಧವಾದ ಅನ್ನಗಳು, ಚೆನ್ನಾಗಿ ಕಾಯಿಸಿದ ಪಾನಕುಂಭಗಳು, ಕಾಡೆಮ್ಮೆ, ವರಾಹ ಮತ್ತು ಕರಡಿ ಇವುಗಳ ಹಸಿಯ ಮತ್ತು ಬಿಸಿಯ ಮಾಂಸಗಳು, ಅನೇಕ ತುಪ್ಪದ ಕೊಡಗಳು, ಅನೇಕ ಮೊಸರಿನ ಮಡಿಕೆಗಳು, ತುಪ್ಪದಿಂದ ಕೂಡಿದ ತಿಲಚೂರ್ಣಗಳಿಂದ ಕೂಡಿದ ಬಹುವಿಧವಾದ ಖಾದ್ಯಪದಾರ್ಥಗಳು, (ಎಲ್ಲವನ್ನೂ ಒದಗಿಸುತ್ತೇವೆ).
ಕುಲಾತ್ ಕುಲಾಚ್ಚ ಪುರುಷಂ ಬಲೀವರ್ದೌ ಚ ಕಾಳಕೌ |
ಏತದ್ಭಾಗಂ ಪ್ರದಾಸ್ಯಾಮಃ ಸಮಯೇ ಪರಿತಿಷ್ಠ ವೈ ॥42॥
ಒಂದೊಂದು ಮನೆಯಿಂದ ಒಬ್ಬ ಮನುಷ್ಯ ಮತ್ತು ಎರಡು ಕಪ್ಪು ಎತ್ತುಗಳು ಇವನ್ನು ನಿನ್ನ ಭಾಗವಾಗಿ ಕೊಡುವೆವು. ನಮ್ಮ ನಿಬಂಧನೆಗೆ ಒಳಪಡುವವನಾಗು.
ಪ್ರಾಪ್ಸ್ಯಸಿ ತ್ವಮಸಂಕ್ರುದ್ಧೋರಕ್ಷೋ ಭಾಗಂ ಪ್ರಕಲ್ಪಿತಮ್ |
ತಿಷ್ಠೇಹ ಸಮಯೇಽಸ್ಮಾಕಮಿತ್ಯಯಾಚಂತ ತಂ ದ್ವಿಜಾಃ |
ಬಾಢಮಿತ್ಯೇವ ತದ್ರಕ್ಷೋ ವಚಸ್ತತ್ ಪ್ರತ್ಯಗೃಹ್ಣತ ॥43॥
ರಾಕ್ಷಸನೇ. ನಿನ್ನ ಈ ಭಾಗವನ್ನು ನೀನು ಸಿಟ್ಟು ಮಾಡದೆ ಪಡೆಯುವೆ. ನಮ್ಮ ನಿಬಂಧನೆಗೆ ಒಳಪಡು ಎಂದು ಬ್ರಾಹ್ಮಣರು ಅವನನ್ನು ಬೇಡಿದರು. ಆ ರಾಕ್ಷಸನು ಹಾಗೆಯೇ ಆಗಲಿ ಎಂದು ಹೇಳಿ ಅವರ ಮಾತನ್ನು ಸ್ವೀಕರಿಸಿದನು.
ಪರಚಕ್ರಾನ್ನಬಿಭ್ಯಚ್ಚ ರಕ್ಷಣಂ ಸ ಕರೋತಿ ಚ |
ತಸ್ಮಿನ್ ಭಾಗೇ ವಿನಿರ್ದಿಷ್ಟೇ ಚಾಸ್ಥಿತಃ ಸಮಯಂ ಬಲೀ ॥44॥
ಏಕೈಕಂ ಚೈವ ಪುರುಷಂ ಸಂಪ್ರಯಚ್ಛಂತಿ ವೇತನಮ್ |
ಸ ವಾರೋ ಬಹುಭಿರ್ವರ್ಷೈರ್ಭವಿಷ್ಯತ್ಯಸುಖಾಯ ವೈ ॥45॥
ಅವನ ಭಾಗವು ಹೀಗೆ ಪ್ರತಿಜ್ಞೆ ಮಾಡಲ್ಪಡುತ್ತಿರಲು ಬಲಿಷ್ಠನಾದ ಅವನು ಆ ನಿಯಮವನ್ನು ಸ್ವೀಕರಿಸಿ ಪರರಾಷ್ಟ್ರಗಳ ರಾಜರುಗಳಿಗೆ ಹೆದರದೆ ನಮ್ಮ ರಕ್ಷಣೆಯನ್ನು ಮಾಡುತ್ತಾನೆ. ಪ್ರತಿಯೊಂದು ಮನೆಯೂ ಅವನಿಗೆ ಪರ್ಯಾಯದಿಂದ ಒಬ್ಬೊಬ್ಬ ಪುರುಷನನ್ನು ಆಹಾರವಾಗಿ ಕೊಡುತ್ತದೆ. ಪರ್ಯಾಯ ಕ್ರಮದಿಂದ ನಮ್ಮ ದುಃಖಕ್ಕಾಗಿ ಬರುವ ಆ ವಾರವು ಎಷ್ಟೋ ವರುಷಗಳಿಗೊಮ್ಮೆ ಬರುವುದು.
ತದ್ವಿಮೋಕ್ಷಾಯ ಯೇ ಚಾಪಿ ಯತಂತೇ ಪುರುಷಾಃ ಕ್ವಚಿತ್ |
ಸಪುತ್ರದಾರಾಂಸ್ತಾನ್ ಹತ್ವಾ ತದ್ರಕ್ಷೋ ಭಕ್ಷಯಿಷ್ಯತಿ ॥46॥
ಅದನ್ನು ತಪ್ಪಿಸಿಕೊಳ್ಳಲು ಯಾರಾದರೂ ಪ್ರಯತ್ನಪಟ್ಟರೆ ಆ ರಾಕ್ಷಸನು ಅವರ ಪತ್ನೀ ಪುತ್ರರನ್ನೆಲ್ಲಾ ಕೊಂದು ತಿನ್ನುವನು.
ನಗರಂ ಚೈವ ದೇಶಂ ಚ ರಕ್ಷೋ ಬಲಸಮನ್ವಿತಮ್ |
ರಕ್ಷತ್ಯಸುರರಾಣ್ನಿತ್ಯಮಿಮಂ ಜನಪದಂ ಬಲೀ ॥47॥
ವೇತ್ರಕೀಯಗೃಹೇ ರಾಜಾ ಯಥಾನ್ಯಾಯಮುಪಾಶ್ರಿತಃ |
ಅನಾಮಯಂ ಜನಸ್ಯಾಸ್ಯ ನ ಕರೋತೀಹ ಶಾಶ್ವತಮ್ ॥48॥
ಬಲಿಷ್ಠನಾದ ಅಸುರರಾಜನಾದ ರಾಕ್ಷಸನು ಈ ನಗರವನ್ನೂ, ದೇಶವನ್ನೂ ಮತ್ತು ಜನಪದವನ್ನೂ ರಕ್ಷಿಸುತ್ತಾನೆ. ಅವನು ಏಕಚಕ್ರನಗರದಲ್ಲಿ ಅವನ ನ್ಯಾಯದಂತೆ ಬೀಡುಬಿಟ್ಟಿದ್ದಾನೆ. (ಏಕಚಕ್ರನಗರಕ್ಕೆ ವೇತ್ರಕೀಯ ಎಂದೂ ಹೆಸರು). ಏಕಚಕ್ರನಗರದ ಜನರಿಗೆ ಅವನು ಶಾಶ್ವತವಾದ ಕ್ಷೇಮವನ್ನು ಮಾಡುವನಂತೂ ಅಲ್ಲ.
ಏತದರ್ಹಾ ವಯಂ ನೂನಂ ವಸಾಮೋ ದುರ್ಬಲಾಶ್ರಯೇ |
ಸತ್ಸು ಚಾನ್ಯೇಷು ದೇಶೇಷು ಕುರಾಜವಿಷಯಂ ಗತಾಃ ॥49॥
ನಾವು ಈ ದುಃಖಕ್ಕೆ ಯೋಗ್ಯರೆಂದು ತೋರುತ್ತದೆ. ಬೇರೆ ದೇಶಗಳು ಇರುವಾಗ ಈ ಕೆಟ್ಟ ರಾಜನ ದೇಶಕ್ಕೆ ಬಂದು ಧರ್ಮದಿಂದ ದುರ್ಬಲನಾದ ಅವನ ಆಶ್ರಯದಲ್ಲಿ ನಾವು ವಾಸಿಸುತ್ತಿದ್ದೇವೆ.
ಬ್ರಾಹ್ಮಣಾಃ ಕಸ್ಯ ವಕ್ತವ್ಯಾಃ ಕಸ್ಯ ನಾಚ್ಛಂದಚಾರಿಣಃ |
ಗುಣೈರೇತೇ ವಸಂತ್ಯೇವ ಕಾಮಗಾಃ ಪಕ್ಷಿಣೋ ಯಥಾ ॥50॥
ಬ್ರಾಹ್ಮಣರು ಯಾರ ಆದೇಶಕ್ಕೆ ತಲೆಬಾಗಬೇಕಾಗಿದೆ ಯಾರ ಮನಸ್ಸನ್ನು ಅನುಸರಿಸಿ ನಡೆಯಬೇಕಾಗಿದೆ? ಬೇಕಾದಲ್ಲಿಗೆ ಹೋಗುವ ಅವರು ಪಕ್ಷಿಗಳಂತೆ ಸಮೂಹದಲ್ಲಿ ಇಂತಹ ಗುಣಗಳನ್ನು ಹೊಂದಿ ವಾಸಮಾಡುತ್ತಾರೆ.
ರಾಜಾನಂ ಪ್ರಥಮಂ ವಿಂದೇತ್ ತತೋ ಭಾರ್ಯಾಂ ತತೋ ಧನಮ್ |
ರಾಜನ್ಯಸತಿ ಲೋಕೇಽಸ್ಮಿನ್ ಕುತೋ ಭಾರ್ಯಾ ಕುತೋ ಧನಮ್ ॥51॥
ಮೊದಲು ರಾಜನನ್ನು ಪಡೆಯಬೇಕು. ಅನಂತರ ಭಾರ್ಯೆಯನ್ನೂ, ಅನಂತರ ಧನವನ್ನೂ ಪಡೆಯಬೇಕು. ಈ ಲೋಕದಲ್ಲಿ ರಾಜನೇ ಇಲ್ಲದಿದ್ದರೆ, ಭಾರ್ಯೆ ಎಲ್ಲಿಂದ ಮತ್ತು ಧನವು ಎಲ್ಲಿಂದ?
ತ್ರಯೇಣ ಸಂಚಯೇನೇಹ ಜ್ಞಾತೀನ್ ಪುತ್ರಾಂಶ್ಚ ಧಾರಯೇತ್ |
ವಿಪರೀತಂ ಮಯಾ ತ್ವೇತತ್ ತ್ರಯಂ ಚ ಸಮುಪಾರ್ಜಿತಮ್ ॥52॥
ಮೊದಲು ಈ ಮೂರು ವಸ್ತುಗಳನ್ನು ಸಂಪಾದಿಸಿ ಅನಂತರ ಬಂಧುಗಳನ್ನೂ ಮತ್ತು ಪುತ್ರರನ್ನೂ ಸಂಪಾದಿಸಬೇಕು. ನಾನು ಇದನ್ನು

ವಿಪರೀತವಾಗಿ ಮಾಡಿದೆ.
ತೇ ಚೇಮಮಾಪದಂ ಪ್ರಾಪ್ಯ ಭೃಶಂ ತಪ್ಯಾಮಹೇ ವಯಮ್ |
ಸೋಽಯಮಸ್ಮಾನನುಪ್ರಾಪ್ತೋ ಕರಃ ಕುಲವಿನಾಶನಃ ॥53॥
ನಾವು ಈ ಆಪತ್ತನ್ನು ಹೊಂದಿ ಸಂಕಟದಿಂದ ನರಳುತ್ತಿದ್ದೇವೆ. ಈ ದಿನ ಕುಲನಾಶಕವಾದ ಕಪ್ಪವನ್ನು ಕೊಡುವ ಸರದಿ ನಮ್ಮದಾಗಿದೆ.
ಭೋಜನಂ ಪುರುಷಂ ಪೇಯಂ ಪ್ರದೇಯಂ ವೇತನಂ ಮಯಾ |
ನ ಚ ಮೇ ವಿದ್ಯತೇ ವಿತ್ತಂ ಸಂಕ್ರೇತುಂ ಪುರುಷಂ ಕ್ವಚಿತ್ ॥54॥
ನಾನು ಅವನಿಗೆ ಭೋಜನವನ್ನೂ, ಪುರುಷನನ್ನೂ, ಪೇಯವಸ್ತುಗಳನ್ನೂ ವೇತನವಾಗಿ ಕೊಡಬೇಕು. ಇನ್ನೊಬ್ಬ ಪುರುಷನನ್ನು ಕೊಂಡುಕೊಂಡು ಕಳುಹಿಸಲು ನನ್ನ ಬಳಿ ಧನವಿಲ್ಲ.
ಸುಹೃಜ್ಜನಂ ಪ್ರದಾತುಂ ಚ ನ ಶಕ್ಷ್ಯಾಮಿ ಕಥಂಚನ |
ಗತಿಂ ಚಾನ್ಯಾಂ ನ ಪಶ್ಯಾಮಿ ತಸ್ಮಾನ್ಮೋಕ್ಷಾಯ ರಾಕ್ಷಸಾತ್ ॥55॥
ನನ್ನ ಆಪ್ತಬಂಧುಗಳಾದ ಕುಟುಂಬದ ಸದಸ್ಯರನ್ನು ಏನಾದರೂ ಕೊಡಲಾರೆ. ಆ ರಾಕ್ಷಸನಿಂದ ಬಿಡುಗಡೆ ಹೊಂದಲು ಬೇರೆ ಯಾವ ಉಪಾಯವೂ ಕಾಣುತ್ತಿಲ್ಲ.
ಸೋಽಹಂ ದುಃಖಾರ್ಣವೇ ಮಗ್ನೋ ಮಹತ್ಯಸುಕರೇ ಭೃಶಮ್ |
ಸಹೈವಾಹಂ ಗಮಿಷ್ಯಾಮಿ ಬಾಂಧವೈರದ್ಯ ರಾಕ್ಷಸಮ್ ॥56॥
ಆದ್ದರಿಂದ ಬಹಳ ಕಷ್ಟಕರವಾದ ದುಃಖಸಾಗರದಲ್ಲಿ ಮುಳುಗಿದ ನಾನು ಈ ದಿನ ಬಂಧುಗಳ ಜೊತೆಯಲ್ಲಿಯೇ ಆ ರಾಕ್ಷಸ ಬಳಿಗೆ ಹೋಗುವೆನು.
ತತೋ ನಃ ಸಹಿತಾನ್ ರಕ್ಷಃ ಸರ್ವಾನೇವೋಪಭೋಕ್ಷ್ಯತಿ |
ದುಃಖಮೂಲಮಿದಂ ಭದ್ರೇ ಮಯೋಕ್ತಂ ಪ್ರಶ್ನತೋಽನೇ ॥57॥
ಅನಂತರ ಆ ರಾಕ್ಷಸನು ನಮ್ಮೆಲ್ಲರನ್ನೂ ಒಟ್ಟಿಗೆ ತಿನ್ನುವನು. ಮಂಗಳಸ್ವರೂಪಳೇ ಮತ್ತು ಅನಘಳೇ, ನಿನ್ನ ಪ್ರಶ್ನೆಗೆ ಅನುಗುಣವಾಗಿ ನನ್ನ ದುಃಖದ ಕಾರಣವನ್ನು ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಅರವತ್ಮೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಏವಂ ಬಲಾಢ್ಯಮಮುಮಾಶು ನಿಹತ್ಯ ಭೀಮಃ
ಕೀರ್ತಿಂ ಚ ಧರ್ಮಮಧಿಕಂ ಪ್ರತಿಯಾಸ್ಯತೀಹ |
ಸರ್ವೇ ವಯಂ ಚ ತಮನು ಪ್ರಗೃಹೀತಧರ್ಮಾ
ಯಾಸ್ಯಾಮ ಇತ್ಯವದದಾಶು ಧರಾಸುರಂ ತಂ ॥80॥
ಇಂತಹ ಬಲಾಢ್ಯನಾದ ಬಕನನ್ನು ಕೊಂದು ಭೀಮ ಬೇಗನೆ ಅಧಿಕ ಕೀರ್ತಿಯನ್ನೂ ಪುಣ್ಯವನ್ನೂ ಗಳಿಸುತ್ತಾನೆ. ನಾವೂ ಅವನಿಗೆ ಸಹಕರಿಸಿ ಪುಣ್ಯಭಾಗಿಗಳಾಗಿ ಕೀರ್ತಿಯನ್ನೂ ಪುಣ್ಯವನ್ನೂ ಗಳಿಸೋಣ ಎಂದು ಕುಂತಿ ಆಲೋಚಿಸಿ ಒಡನೆ ಬ್ರಾಹ್ಮಣಿಗೆ ಹೇಳಿದಳು.
ಸಂತಿ ಸ್ಮ ವಿಪ್ರವರ ಪಂಚ ಸುತಾ ಮಮಾದ್ಯ
ತೇಷ್ವೇಕ ಏವ ನರವೈರಿಮುಖಾಯ ಯಾತು |
ಇತ್ಯುಕ್ತ ಆಹ ಸ ನ ತೇ ಸುತವಧ್ಯಯಾಹಂ
ಪಾಪೋ ಭವಾನಿ ತವ ಹಂತ ಮನೋಽತಿಧೀರಂ ॥81॥
`ಬ್ರಾಹ್ಮಣೋತ್ತಮ, ನನಗೆ ಈಗ ಐದು ಮಂದಿ ಮಕ್ಕಳಿದ್ದಾರೆ. ಅವರಲ್ಲಿ ಒಬ್ಬ ರಾಕ್ಷಸನ ಬಾಯಿಗೆ ಹೋಗಲಿ' ಎಂದು ಕುಂತಿ ಹೇಳಿದಾಗ ಬ್ರಾಹ್ಮಣನೆಂದ, `ನಿನ್ನ ಮಗನನ್ನು ಕೊಲ್ಲಿಸಿ ನಾನು ಪಾಪಕ್ಕೆ ಗುರಿಯಾಗಲಾರೆ, ಏನಿದ್ದರೂ ನಿನ್ನದು ಕಲ್ಲೆದೆಯೆ ಸರಿ!'
ಉಕ್ತೈವಮಾಹ ಚ ಪೃಥಾ ತನಯೇ ಮದೀಯೇ
ವಿದ್ಯಾಸ್ತಿ ದಿಕ್ಪತಿಭಿರಪ್ಯವಿಷಹ್ಯರೂಪಾ |
ಉಕ್ತೋಽಪಿ ನೋ ಗುರುಭಿರೇಷ ನಿಯುಂಕ್ತ ಏತಾಂ
ವಧ್ಯಸ್ತಥಾಪಿ ನ ಸುರಾಸುರಪಾಲಕೈಶ್ಚ ॥82॥
ಬ್ರಾಹ್ಮಣ ಹೀಗೆ ಹೇಳಿದಾಗ ಕುಂತಿ ಹೇಳಿದಳು, `ನನ್ನ ಮಗನಲ್ಲಿ ದಿಕ್ಪಾಲಕರಾದ ಇಂದ್ರಾದಿ ದೇವತೆಗಳಿಗೂ ಇದಿರಿಸಲಾಗದಂಥ ಮಂತ್ರಬಲವಿದೆ. ಗುರುಗಳು ಹೇಳಿದರೂ ಇವನು ಮಂತ್ರವನ್ನು ಎಂದೂ ಆತ್ಮರಕ್ಷಣೆಗೆ ಬಳಸಿಕೊಳ್ಳುವುದಿಲ್ಲ. ಆದರೂ ದೇವಾಧಿಪತಿಗಳಿಂದಾಗಲಿ ದಾನವೇಂದ್ರರಿಂದಾಗಲಿ ಎಂದೂ ವಧ್ಯನೂ ಆಗುವುದಿಲ್ಲ.
ನೂರ ಅರವತ್ನಾಲ್ಕನೆಯ ಅಧ್ಯಾಯ
(ತನ್ನ ಒಬ್ಬ ಪುತ್ರನನ್ನು ಕಳುಹಿಸುವುದಾಗಿ ಹೇಳಿ ಬ್ರಾಹ್ಮಣನಿಗೆ ಕುಂತಿಯ ಆಶ್ವಾಸನೆ)
ಕುಂತೀ
ನ ವಿಷಾದಸ್ತ್ವಯಾ ಕಾರ್ಯೋ ಭಯಾದಸ್ಮಾತ್ ಕಥಂಚನ |
ಉಪಾಯಃ ಪರಿದೃಷ್ಟೋಽತ್ರ ತಸ್ಮಾನ್ಮೋಕ್ಷಾಯ ರಾಕ್ಷಸಾತ್ ॥1॥
ಬ್ರಾಹ್ಮಣನೇ, ನೀನು ಈ ಭಯದ ಕಾರಣದಿಂದ ವಿಷಾದವನ್ನು ಮಾಡಬಾರದು. ಆ ರಾಕ್ಷಸನಿಂದ ಬಿಡುಗಡೆ ಹೊಂದುವುದಕ್ಕೆ ನಾನು

ಒಂದು ಉಪಾಯವನ್ನು ಕಂಡಿದ್ದೇನೆ.
ನೈವ ಸ್ವಯಂ ಸಪುತ್ರಸ್ಯ ಗಮನಂ ತತ್ರ ರೋಚಯೇ |
ಏಕಸ್ತವ ಸುತೋ ಬಾಲಃ ಕನ್ಯಾ ಚೈಕಾ ತಪಸ್ವಿನೀ ॥2॥
ಪುತ್ರಸಹಿತನಾಗಿ ನೀನು ಹೋಗುವುದು ನನಗೆ ಇಷ್ಟವಾಗುವುದಿಲ್ಲ. ನಿನಗೆ ಒಬ್ಬನೇ ಚಿಕ್ಕ ಪುತ್ರ ಮತ್ತು ಒಬ್ಬಳೇ ಶೋಚನೀಯಳಾದ ಪುತ್ರಿ.
ನ ಚೈತಯೋಸ್ತಥಾ ಪತ್ನ್ಯಾ ಗಮನಂ ತತ್ರ ರೋಚಯೇ |
ಮಮ ಪಂಚ ಸುತಾ ಬ್ರಹ್ಮಂಸ್ತೇಷಾಮೇಕೋ ಗಮಿಷ್ಯತಿ |
ತ್ವದರ್ಥಂ ಬಲಿಮಾದಾಯ ತಸ್ಯ ಪಾಪಸ್ಯ ರಕ್ಷಸಃ ॥3॥
ಅಲ್ಲಿಗೆ ನಿನ್ನ ಪತ್ನಿಯು ಹೋಗುವುದಾಗಲೀ ಅಥವಾ ಈ ಇಬ್ಬರು ಮಕ್ಕಳು ಹೋಗುವುದಾಗಲೀ ನನಗೆ ಇಷ್ಟವಿಲ್ಲ. ಬ್ರಾಹ್ಮಣನೇ, ನನಗೆ ಐದು ಜನ ಪುತ್ರರಿದ್ದಾರೆ. ಅವರಲ್ಲಿ ಒಬ್ಬನು ಪಾಪಿಯಾದ ರಾಕ್ಷಸನ ಬಳಿಗೆ ಆಹಾರವನ್ನು ತೆಗೆದುಕೊಂಡು ಹೋಗುವನು.
ಬ್ರಾಹ್ಮಣಃ
ನಾಹಮೇತದ್ ವರಿಷ್ಯಾಮಿ ಜೀವಿತಾರ್ಥಂ ಕಥಂಚನ |
ಬ್ರಾಹ್ಮಣಸ್ಯಾತಿಥೇಶ್ಚೈವ ಸ್ವಾರ್ಥೇ ಪ್ರಾಣೈರ್ವಿಯೋಜನಮ್ ॥4॥
ಅತಿಥಿಯಾದ ಬ್ರಾಹ್ಮಣನನ್ನು ನನ್ನ ಸ್ವಾರ್ಥಕ್ಕಾಗಿ ಕೊಲ್ಲುವುದನ್ನು ನಾನು ಎಂದೂ ನನ್ನ ಜೀವನದ ಸಲುವಾಗಿ ಅಂಗೀಕರಿಸುವುದಿಲ್ಲ.
ನನ್ವೇತದ್ಧರ್ಮನಿತ್ಯಾನಾಂ ಕುಲೀನಾನಾಂ ಸುದುಷ್ಕರಮ್ |
ಯದ್ ಬ್ರಾಹ್ಮಣಾರ್ಥಂ ವಿಸೃಜೇದಾತ್ಮಾನಂ ಚೈವ ವಾऽऽತ್ಮಜಮ್ ॥5॥
ಬ್ರಾಹ್ಮಣರ ಸಲುವಾಗಿ ತನ್ನನ್ನೇ ಆಗಲಿ ಅಥವಾ ತನ್ನ ಪುತ್ರನನ್ನೇ ಆಗಲಿ ತ್ಯಾಗ ಮಾಡಬೇಕೆಂಬುದು ನಿತ್ಯವೂ ಧರ್ಮವನ್ನು ಆಚರಿಸುವ ಕುಲೀನರಾದವರಿಗೆ ಸುದುಷ್ಕರವಾದ ಧರ್ಮವಷ್ಟೇ.
ಆತ್ಮನಸ್ತು ಮಮ ಶ್ರೇಯೋ ಯೋಕ್ತವ್ಯಮಿತಿ ರೋಚಯೇ |
ಬ್ರಹ್ಮವಧ್ಯಾತ್ಮವಧ್ಯಾಭ್ಯಾಂ ಶ್ರೇಯಾನಾತ್ಮವಧೋ ಮಮ ॥6॥
ನಾನು ನನ್ನನ್ನು ಶ್ರೇಯೋಭಾಗಿಯಾಗಿ ಮಾಡಿಕೊಳ್ಳಬೇಕೆಂದು ಬಯಸುತ್ತೇನೆ. ಬ್ರಹ್ಮವಧೆ ಮತ್ತು ಆತ್ಮವಧೆ ಇವೆರಡರಲ್ಲಿ ಆತ್ಮವಧೆಯೇ ಒಳ್ಳೆಯದೆಂದು ನನ್ನ ಅಭಿಪ್ರಾಯ.
ಬ್ರಹ್ಮವಧ್ಯಾ ಪರಂ ಪಾಪಂ ನಿಷ್ಕೃತಿರ್ನಾತ್ರ ವಿದ್ಯತೇ |
ಅಬುದ್ಧಿಪೂರ್ವಂ ಕೃತ್ವಾऽಪಿ ಪ್ರತ್ಯವಾಯೋ ನ ಬುಧ್ಯತೇ ॥7॥
ಬ್ರಹ್ಮವಧೆಯು ಬಹಳ ದೊಡ್ಡ ಪಾಪ. ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಅದನ್ನು ತಿಳಿಯದೇ ಮಾಡಿದರೂ ಸಹ ಎಲ್ಲಿಯೂ ಪ್ರಾಯಶ್ಚಿತ್ತವು ಕಾಣುವುದಿಲ್ಲ.
ನ ತ್ವಹಂ ವಧಮಾಕಾಂಕ್ಷೇ ಸ್ವಯಮೇವಾತ್ಮನಃ ಶುಭೇ |
ಪರೈಃ ಕೃತೇ ವಧೇ ಪಾಪಂ ನ ಕಿಂಚಿನ್ಮಮ ವಿದ್ಯತೇ ॥8॥
ಶುಭಳಾದವಳೇ ನಾನು ನಾನಾಗಿಯೇ ನನ್ನ ವಧೆಯನ್ನು ಬಯಸುತ್ತಿಲ್ಲ. ಇನ್ನೊಬ್ಬರಿಂದ ನನ್ನ ವಧೆಯು ಉಂಟಾದರೆ ನನಗೆ ಪಾಪವಿಲ್ಲ.
ಅಭಿಸಂಧಿಕೃತೇ ತಸ್ಮಿನ್ ಬ್ರಾಹ್ಮಣಸ್ಯ ವಧೇ ಮಯಾ |
ನಿಷ್ಕೃತಿಂ ನ ಹಿ ಪಶ್ಯಾಮಿ ಭೃಶಂ ಸಂತರ್ತುಮೇವ ಚ ॥9॥
ಆದರೆ, ನಾನು ಉದ್ದೇಶಪೂರ್ವಕವಾಗಿ ಬ್ರಾಹ್ಮಣನ ವಧೆಯನ್ನು ಮಾಡಿಸಿದರೆ ಅದಕ್ಕೆ ಪ್ರಾಯಶ್ಚಿತ್ತವಿಲ್ಲ. ನಾನು ಆ ಪಾಪವನ್ನು ದಾಟಲಾರೆ.
ಆಗತಸ್ಯ ಗೃಹಾಭ್ಯಾಶೇ ತಥೈವ ಶರಣಾರ್ಥಿನಃ |
ಯಾಚಮಾನಸ್ಯ ಚ ವಧೋ ನೃಶಂಸಂ ಪರಮಂ ಮತಮ್ ॥10॥
ಆಶ್ರಯವನ್ನು ಬಯಸಿ ಮನೆಗೆ ಬಂದು ಬೇಡುತ್ತಿರುವ ಬ್ರಾಹ್ಮಣ ವಧೆಯು ಅತ್ಯಂತ ಕ್ರೂರವೆಂದು ನನ್ನ ಅಭಿಪ್ರಾಯ.
ಕುರ್ಯಾಚ್ಚ ವಿಹಿತಂ ಕರ್ಮ ನ ನೃಶಂಸಂ ಕಥಂಚನ |
ಇತಿ ಪೂರ್ವೇ ಮಹಾತ್ಮಾನಃ ಪ್ರಾಹುರ್ಧರ್ಮವಿದೋ ಜನಾಃ ॥11॥
ವಿಹಿತ ಕರ್ಮವನ್ನು ಮಾಡಬೇಕು. ಕ್ರೂರವಾದ ಕರ್ಮವನ್ನು ಎಂದೂ ಮಾಡಬಾರದು. ಧರ್ಮವನ್ನು ತಿಳಿದ ಹಿಂದಿದ್ದ ಮಹಾನುಭಾವರೆಲ್ಲರೂ ಹೀಗೆಯೇ ಹೇಳಿದ್ದಾರೆ.
ಶ್ರೇಯಸೇ ಸಹ ದಾರೇಣ ವಿನಾಶೋऽದ್ಯ ಮಮ ಸ್ವಯಮ್|
ಬ್ರಾಹ್ಮಣಸ್ಯ ವಧಂ ನಾಹಮನುಮಂಸ್ಯೇ ಕಥಂಚನ ॥12॥
ನಾನು ಈ ದಿನ ನನ್ನ ಪತ್ನಿಯ ಜೊತೆಯಲ್ಲಿ ವಿನಾಶವನ್ನು ಹೊಂದಿದರೆ, ನನಗೆ ಶ್ರೇಯಸ್ಸಾಗುತ್ತದೆ. ನಾನು ಬ್ರಾಹ್ಮಣನ ವಧೆಗೆ ಯಾವ ರೀತಿಯಲ್ಲೂ ಸಮ್ಮತಿಸುವುದಿಲ್ಲ.
ಕುಂತೀ
ಮಮಾಪ್ಯೇಷಾ ಮತಿರ್ಬ್ರಹ್ಮನ್ ವಿಪ್ರಾ ರಕ್ಷ್ಯಾ ಇತಿ ಸ್ಥಿತಾ |
ನ ಚಾಪ್ಯನಿಷ್ಟಃ ಪುತ್ರೋ ಮೇ ಯದಿ ಪುತ್ರಶತಂ ಭವೇತ್ ॥13॥
ಬ್ರಾಹ್ಮಣನೇ, ನಾನೂ ಹೀಗೆಯೇ ತಿಳಿದಿದ್ದೇನೆ. ಬ್ರಾಹ್ಮಣರನ್ನು ರಕ್ಷಣೆ ಮಾಡಬೇಕೆಂದೇ ನನ್ನ ಅಭಿಪ್ರಾಯ ಮತ್ತು ನನಗೆ ನೂರು

ಪುತ್ರರಿದ್ದರೂ ಯಾವ ಪುತ್ರನೂ ಅನಿಷ್ಟನಲ್ಲ.
ನ ಚಾಸೌ ರಾಕ್ಷಸಃ ಶಕ್ತೋ ಮಮ ಪುತ್ರವಿನಾಶನೇ |
ವೀರ್ಯವಾನ್ ಮಂತ್ರಸಿದ್ಧಶ್ಚ ತೇಜಸ್ವೀ ಚ ಸುತೋ ಮಮ ॥14॥
ನನ್ನ ಮಗನು ತೇಜಸ್ವಿಯೂ, ಪರಾಕ್ರಮಶಾಲಿಯೂ, ಮಂತ್ರಸಿದ್ಧನೂ ಆಗಿದ್ದಾನೆ. ಈ ರಾಕ್ಷಸನು ನನ್ನ ಮಗನನ್ನು ವಿನಾಶ ಮಾಡಲು ಸಮರ್ಥನಲ್ಲ.
ರಾಕ್ಷಸಾಯ ಚ ತತ್ಸರ್ವಂ ಪ್ರಾಪಯಿಷ್ಯತಿ ಭೋಜನಮ್ |
ಮೋಕ್ಷಯಿಷ್ಯತಿ ಚಾತ್ಮಾನಮಿತಿ ಮೇ ನಿಶ್ಚಿತಾ ಮತಿಃ ॥15॥
ಅವನು ರಾಕ್ಷಸನ ಬಳಿಗೆ ಎಲ್ಲಾ ಭೋಜನ ಪದಾರ್ಥಗಳನ್ನೂ ತೆಗೆದುಕೊಂಡು ಹೋಗುವನು. ಅಷ್ಟೇ ಅಲ್ಲದೇ ತನ್ನನ್ನು ಆ ರಾಕ್ಷಸನಿಂದ ಬಿಡಿಸಿಕೊಳ್ಳುವನು ಎಂದೂ ನನ್ನ ನಿಶ್ಚಿತವಾದ ಅಭಿಪ್ರಾಯ.
ಸಮಾಗತಾಶ್ಚ ವೀರ್ಯೇಣ ದೃಷ್ಟಪೂರ್ವಾಶ್ಚ ರಾಕ್ಷಸಾಃ |
ಬಲವಂತೋ ಮಹಾಕಾಯಾ ನಿಹತಾಶ್ಚಾಪ್ಯನೇಕಶಃ ॥16॥
ಹಿಂದೆ ಬಲಿಷ್ಠರೂ, ಮಹಾಕಾಯರೂ ಆದ ಅನೇಕ ರಾಕ್ಷಸರು ಇವನ ಜೊತೆಯಲ್ಲಿ ಯುದ್ಧಕ್ಕೆ ಬಂದು ಇವನ ಪರಾಕ್ರಮದಿಂದ ನಿಹತರಾಗಿದ್ದಾರೆ.
ನ ತ್ವಿದಂ ಕೇಷುಚಿದ್ ಬ್ರಹ್ಮನ್ ವ್ಯಾಹರ್ತವ್ಯಂ ಕಥಂಚನ |
ವಿದ್ಯಾರ್ಥಿನೋ ಹಿ ಮೇ ಪುತ್ರಾನ್ ವಿಪ್ರಕುರ್ಯುಃ ಕುತೂಹಲಾತ್ ॥17॥
ಬ್ರಾಹ್ಮಣನೇ, ಈ ವಿಷಯವನ್ನು ಯಾರಿಗೂ ಹೇಳಬಾರದು.  ಬೇರೆಯವರು ಈ ವಿಷಯವನ್ನು ತಿಳಿದರೆ, ವಿದ್ಯಾರ್ಥಿಗಳಾದ ನನ್ನ ಮಕ್ಕಳಿಗೆ ತಮ್ಮ ಕುತೂಹಲದಿಂದ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡುವಂತೆ ಹೇಳಿ ಅವರ ವಿದ್ಯಾಭ್ಯಾಸಕ್ಕೆ ಭಂಗ ತರುತ್ತಾರೆ.
ಗುರುಣಾ ಚಾನನುಜ್ಞಾತೋ ಗ್ರಾಹಯೇದ್ ಯತ್ ಸುತೋ ಮಮ |
ನ ಸ ಕುರ್ಯಾತ್ ತಥಾ ಕಾರ್ಯಂ ವಿದ್ಯಯೇತಿ ಸತಾಂ ಮತಮ್ ॥18॥
ಗುರುಗಳಿಂದ ಅಥವಾ ಹಿರಿಯರಿಂದ ಅನುಜ್ಞೆಯನ್ನು ಪಡೆಯದೇ ನನ್ನ ಪುತ್ರನು ಎಂತಹ ಕೆಲಸವನ್ನು ಮಾಡುತ್ತಾನೋ ಅನುಜ್ಞೆಯನ್ನು ಪಡೆದರೆ ಅಂತಹ ಕೆಲಸವನ್ನು ಮಾಡುವುದಿಲ್ಲ. (ತನ್ನ ಮನಸ್ಸಿಗೆ ತಕ್ಕಂತೆ ವರ್ತಿಸುತ್ತಾನೆ). ಇದು ಸಜ್ಜನರ ಅಭಿಪ್ರಾಯವೂ ಹೌದು.
ವೈಶಂಪಾಯನಃ
ಏವಮುಕ್ತಸ್ತು ಪೃಥಯಾ ಸ ವಿಪ್ರೋಃ ಭಾರ್ಯಯಾ ಸಹ |
ಹೃಷ್ಟಃ ಸಂಪೂಜಯಾಮಾಸ ತದ್ವಾಕ್ಯಮಮೃತೋಪಮಮ್ ॥19॥
ಕುಂತಿಯು ಹೀಗೆ ಹೇಳುತ್ತಿರಲಾಗಿ ಆ ಬ್ರಾಹ್ಮಣನು ಪತ್ನಿಯ ಜೊತೆಯಲ್ಲಿ ಬಹಳ ಸಂತೋಷಗೊಂಡು ಅವಳ ಅಮೃತದಂತಹ ಮಾತುಗಳನ್ನು ಸಮ್ಮಾನಿಸಿದನು.
ತತಃ ಕುಂತೀ ಚ ವಿಪ್ರಶ್ಚ ಸಹಿತಾವನಿಲಾತ್ಮಜಮ್ |
ತಮಬ್ರೂತಾಂ ಕುರುಷ್ವೇತಿ ಪ್ರತಿಜಜ್ಞೇ ತಥೇತಿ ಸಃ ॥20॥
ಅನಂತರ ಕುಂತಿಯೂ ಮತ್ತು ಬ್ರಾಹ್ಮಣನೂ ಭೀಮಸೇನನ ಬಳಿಗೆ ಹೋಗಿ ಈ ಕಾರ್ಯವನ್ನು ಮಾಡು ಎಂದು ಹೇಳಿದರು. ಭೀಮಸೇನನು ಸಹ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುಃಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಆದಿಪರ್ವದಲ್ಲಿ
ನೂರಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಉಕ್ತೇ್ವವಮೇತ್ಯ ನಿಖಿಲಂ ಚ ಜಗಾದ ಭೀಮ
ಉದ್ಧರ್ಷ ಆಸ ಸ ನಿಶಮ್ಯ ಮಹಾಸ್ವಧರ್ಮಂ |
ಪ್ರಾಪ್ತಂ ವಿಲೋಕ್ಯ ತಮತೀವ ವಿಘೂರ್ಣನೇತ್ರಂ
ದೃಷ್ಟ್ವಾ ಜಗಾದ ಯಮಸೂನುರುಪೇತ್ಯ ಚಾನ್ಯೈಃ ॥83॥
ಕುಂತಿ ಬ್ರಾಹ್ಮಣನಿಗೆ ಹೀಗೆ ಹೇಳಿ, ಭೀಮನ ಬಳಿಗೆ ಬಂದು ಎಲ್ಲವನ್ನೂ ಹೇಳಿದಳು. ಭೀಮ ತಾಯಿಯ ಮಾತನ್ನು ಕೇಳಿ ತನಗೆ ಮಹತ್ತಾದ ಸ್ವಧರ್ಮಸಾಧನೆಯ ಅವಕಾಶ ಲಭಿಸಿತೆಂದು ತಿಳಿದು ಹಿರಿಹಿರಿ ಹಿಗ್ಗಿದ. ಧರ್ಮರಾಜ ಅರ್ಜುನಾದಿಗಳೊಂದಿಗೆ ಬಂದು ಭೀಮನ ಕಣ್ಣುಗಳು ಹಿಗ್ಗಿನಿಂದ ಸುತ್ತುತ್ತಿರುವುದನ್ನು ಕಂಡು ತಾಯಿಯ ಮುಂದೆ ಪ್ರಶ್ನೆ ಮಾಡಿದ.
ಮಾತಃ ಕಿಮೇಷ ಮುದಿತೋ ಏತಿರಾಮಿತಿ ಸ್ಮ
ತಸ್ಯೈ ಚ ಸಾ ನಿಖಿಲಮಾಹ ಸ ಚಾಬ್ರುವೀತ್ತಾಂ |
ಕಷ್ಟಂ ತ್ವಯಾ ಕೃತಮಹೋ ಬಲಮೇವ ಯಸ್ಯ
ಸರ್ವೇಶ್ರಿತಾ ವಾಯುಮಮುಂ ಚ ನಿಹಂಸಿ ಭೀಮಂ ॥84॥
`ಅಮ್ಮ, ಭೀಮ ಏಕೆ ಬಹಳ ಹಿಗ್ಗಿದ್ದಾನೆ?' ಎಂದು ಧರ್ಮರಾಜ ಕೇಳಿದ. ಆಗ ಕುಂತಿ ಅವನಿಗೆ ಎಲ್ಲವನ್ನೂ ವಿವರಿಸಿದಳು. ಅವನು ಹೇಳಿದ, `ಆಶ್ಚರ್ಯ! ನೀನೀಗ ಎಂಥ ಅಪಾಯದ ಕಾರ್ಯಕ್ಕೆ ತೊಡಗಿರುವೆ! ಯಾರ ಬಲವನ್ನೇ ನಾವೆಲ್ಲರೂ ಅವಲಂಬಿಸಿರುವೆವೋ

ಆ ಭೀಮನನ್ನೇ ಕೊಲ್ಲಿಸುತ್ತಿರುವೆಯಲ್ಲ!
ಯದ್ಬಾಹುವೀರ್ಯಪರಮಾಶ್ರಯತೋ ಹಿ ರಾಜ್ಯ-
ಮಿಚ್ಛಾಮ ಏವ ನಿಖಿಲಾರಿವಧಂ ಸ್ವಧರ್ಮಂ |
ಸೋಽಯಂ ತ್ವಯಾದ್ಯ ನಿಶಿಚಾರಿಮುಖಾಯ ಮಾತಃ
ಪ್ರಸ್ಥಾಪ್ಯತೇ ವದ ಮಮಾಶುಕಯೈವ ಬುದ್ಧ್ಯಾ ॥85॥
ಯಾರ ಬಾಹುಬಲದ ಮಹಾ ಅವಲಂಬನೆಯಿಂದಲೆ ನಾವು ರಾಜ್ಯವನ್ನೂ ಸಕಲ ಶತ್ರುಗಳ ನಾಶವನ್ನೂ ಸ್ವಧರ್ಮರಕ್ಷಣೆಯನ್ನೂ ಹೊಂದಲು ಬಯಸಿರುವೆವೋ ಆ ಭೀಮನನ್ನು ಈಗ ರಾಕ್ಷಸ ಬಾಯಿಗೆ ಕಳಿಸುತ್ತಿರುವೆಯಲ್ಲ! ಬೇಗನೆ ನನಗೆ ಹೇಳು. ಯಾವ ಅಭಿಪ್ರಾಯದಿಂದ ನೀನು ಹೀಗೆ ಮಾಡುತ್ತಿರುವೆ?
ಇತ್ಯುಕ್ತವಂತಮಮುಮಾಹ ಸುಧೀರಬುದ್ಧಿಃ
ಕುಂತೀ ನ ಪುತ್ರಕ ನಿಹಂತುಮಯಂ ಹಿ ಶಕ್ಯಃ |
ಸರ್ವೈಃ ಸುರೈರಸುರಯೋಗಿಭಿರಪ್ಯನೇನ
ಚೂರ್ಣೀಕೃತೋ ಹಿ ಶತಶೃಂಗಗಿರಿಃ ಪ್ರಸೂತ್ಯಾಂ ॥86॥
ಧರ್ಮರಾಜ ಹೀಗೆ ಹೇಳಿದಾಗ ಒಳ್ಳೆಯ ಧೈರ್ಯ ತುಂಬಿದ ಹೃದಯದವಳಾದ್ದರಿಂದ ಕುಂತಿ ಹೇಳಿದಳು. ಮಗು, ಭೀಮನನ್ನು ಕೊಲ್ಲಲು ಯಾವ ದೇವತೆಗಳಿಗೂ ಅಸುರ ಜಾತಿಯವರಿಗೂ ಶಕ್ಯವಿಲ್ಲ. ಏಕೆಂದರೆ ಅವನು ಹುಟ್ಟಿದಾಗಲೇ ಶತಶೃಂಗ ಪರ್ವತವನ್ನು ಪುಡಿ ಮಾಡಿದನು.
ಏಷ ಸ್ವಯಂ ಹಿ ಮರುದೇವ ನರಾತ್ಮಕೋಽಭೂತ್
ಕೋ ನಾಮ ಹಂತುಮಿಮಮಾಪ್ತಬಲೋ ಜಗತ್ಸು |
ಇತ್ಯೇವಮಸಿತ್ವತಿ ಸ ತಾಮವದತ್ ಪರೇದ್ಯು-
ರ್ಭೀಮೋ ಜಗಾಮ ಶಕಟೇನ ಕೃತೋರುಭೋಗಃ ॥87॥
`ಭೀಮ ಸಾಕ್ಷಾದ್ ವಾಯುದೇವನೆ ಮಾನವ ಶರೀರಿಯಾಗಿ ಜನಿಸಿದ್ದಾನೆ. ಇವನನ್ನು ಕೊಲ್ಲಲು ಪ್ರಪಂಚದಲ್ಲಿ ಯಾರು ತಾನೆ ಶಕ್ತಿ ಉಳ್ಳವನಿದ್ದಾನೆ?' ಎಂದಳು ಕುಂತಿ. `ಹಾಗಾದರೆ ಹಾಗೇ ಆಗಲಿ' ಎಂದ ಧರ್ಮರಾಜ. ಮರುದಿನ ಭೀಮ ಅಭ್ಯಂಗಸ್ನಾನ ಗಂಧಮಾಲ್ಯಧಾರಣಾಧಿ ಉತ್ತಮ ಸುಖಭೋಗಗಳನ್ನು ಮಾಡಿ ಮುಗಿಸಿ ಬಂಡಿಯನ್ನುಹೊಡೆದುಕೊಂಡು ಕಾಡಿಗೆ ಹೊರಟ.
ಗತ್ವಾ ತ್ವರನ್ ಬಕವನಸ್ಯ ಸಕಾಶಮ್ ಆಶು
ಭೀಮಃ ಸ ಪಾಯಸಸುಭಕ್ಷ್ಯಪಯೋಘಟಾದ್ಯೈಃ |
ಯುಕ್ತಂ ಚ ಶೈಲನಿಭಮುತ್ತಮಮಾದ್ಯರಾಶಿಂ
ಸ್ಪರ್ಶಾತ್ ಪುರೈವ ನರಭಕ್ಷಿತುರತ್ತುಮೈಚ್ಛತ್ ॥88॥
ಭೀಮ ಬೇಗನೆ ಬಕಾಸುರನಿದ್ದ ಕಾಡಿನ ಸಮೀಪಕ್ಕೆ ಹೋಗಿ ಒಳ್ಳೆಯ ಪಾಯಸ ಒಳ್ಳೆಯ ಭಕ್ಷ್ಯ, ಕೊಡಗಳಲ್ಲಿ ತುಂಬಿದ ಹಾಲು ಮುಂತಾದವುಗಳಿಂದ ಕೂಡಿದ ಬೆಟ್ಟದಷ್ಟು ಗಾತ್ರದ ಉತ್ತಮ ಅನ್ನದ ರಾಶಿಯನ್ನು ಆ ರಾಕ್ಷಸನ ಸ್ಪರ್ಶವಾಗುವ ಮುನ್ನ ಬೇಗನೆ ಉಣ್ಣಲು ಬಯಸಿದ.
ತೇನೈವ ಚಾನ್ನಸಮಿತೌ ಪರಿಭುಜ್ಯಮಾನ
ಉತ್ಪಾಟ್ಯ ವೃಕ್ಷಮಮುಮಾದ್ರುವದಾಶು ರಕ್ಷಃ |
ವಾಮೇನ ಮಾರುತಿರಪೋಹ್ಯ ತದಾ ಪ್ರಹಾರಾನ್
ಹಸ್ತೇನ ಭೋಜ್ಯಮಖಿಲಂ ಸಹಭಕ್ಷ್ಯಮಾದತ್ ॥89॥
ಭೀಮನೇ ಅನ್ನದ ರಾಶಿಯನ್ನು ಉಣ್ಣಲು ತೊಡಗಿದಾಗ ಬಕರಾಕ್ಷಸ ಮರವನ್ನು ಕಿತ್ತುಹಿಡಿದು ಭೀಮನ ಬಳಿಗೆ ಓಡಿಬಂದ. ಭೀಮ ಎಡಗೈಯಿಂದ ಮರದ ಏಟನ್ನು ತಡೆದ. ಎಲ್ಲ ಅನ್ನವನ್ನೂ ಭಕ್ಷ್ಯ ಸಮೇತವಾಗಿ ಉಂಡ.
* * * *
ನೂರ ಅರವತ್ತೈದನೆಯ ಅಧ್ಯಾಯ
(ಭೀಮನ ಮುಖ ಅರಳಿರುವುದನ್ನು ನೋಡಿ ಧರ್ಮರಾಜನ ಶಂಕೆ, ಕುಂತಿಯಿಂದ ಸಮಾಧಾನ, ಬಂಡಿ ಅನ್ನವನ್ನು ತೆಗೆದುಕೊಂಡು ಬಕನ ಸಮೀಪಕ್ಕೆ ಹೋಗಿ ಭೀಮನಿಂದ ಭಕ್ಷಣ)
ವೈಶಂಪಾಯನಃ
ಪ್ರತಿಜ್ಞಾತೇಽಥ ಭೀಮೇನ ಕರಿಷ್ಯಾಮೀತಿ ಭಾರತ |
ಆಜಗ್ಮುಃ ಸಹಿತಾಃ ಸರ್ವೇ ಭೈಕ್ಷಮಾದಾಯ ಪಾಂಡವಾಃ ॥1॥
ಭಾರತನೇ, ಭೀಮಸೇನನು ನಾನು ಮಾಡುವೆನು ಎಂದು ಪ್ರತಿಜ್ಞೆ ಮಾಡುವ ಹೊತ್ತಿಗೆ ಎಲ್ಲಾ ಪಾಂಡವರು ಭಿಕ್ಷೆಯನ್ನು ತೆಗೆದುಕೊಂಡು ಜೊತೆಯಲ್ಲಿ ಬಂದರು.
ಭೀಮಸೇನಂ ತತೋ ದೃಷ್ಟ್ವಾ ಆಘೂರ್ಣ್ಣವದನಂ ತಥಾ |
ಬುಬೋಧ ಧರ್ಮರಾಜಸ್ತು ಹೃಷಿತಂ ಭೀಮಮಚ್ಯುತಮ್ ॥2॥
ಭೀಮಸೇನನ ಅರಳಿದ ಮುಖವನ್ನು ನೋಡಿ ಧರ್ಮರಾಜನು ಭಕ್ಷ್ಯಾದಿಗಳಿಂದಲೂ, ಬಲದಿಂದಲೂ ಎಂದೂ ಚ್ಯುತನಾಗದ ಭೀಮನು ಹರ್ಷಗೊಂಡಿದ್ದಾನೆ ಎಂದು ತಿಳಿದನು.
ಹರ್ಷಿತುಂ ಕಾರಣಂ ಯತ್ ತನ್ಮನಸಾಽಚಿಂತಯದ್ ಗುರುಃ |
ಪ್ರಸಮೀಕ್ಷ್ಯ ತದಾ ರಾಜನ್ ಶ್ರೋತುಕಾಮೋ ವಿಶಾಂಪತಿಃ ॥3॥

ಹರ್ಷಕ್ಕೆ ಕಾರಣವೇನೆಂದು ಹಿರಿಯನಾದ ಧರ್ಮರಾಜನು ಮನಸ್ಸಿನಲ್ಲಿಯೇ ಯೋಚಿಸಿದನು. ರಾಜನೇ, ಮನಸ್ಸಿನಲ್ಲಿ ಒಂದು ನಿರ್ಧಾರಕ್ಕೆ ಬಂದು ಅನಂತರ ಧರ್ಮರಾಜನು ಅದನ್ನು ಕೇಳಲು ಬಯಸಿದನು.
ಆಕಾರೇಣೈವ ತಂ ಜ್ಞಾತ್ವಾ ಪಾಂಡುಪುತ್ರೋ ಯುಧಿಷ್ಠಿರಃ |
ರಹಃ ಸಮುಪವಿಶ್ಯೈಕಃ ತತಃ ಪಪ್ರಚ್ಛ ಮಾತರಮ್ ॥4॥
ಭೀಮಸೇನನ ಆಕಾರದಿಂದಲೇ ಕಾರಣವನ್ನು ಊಹಿಸಿದ ಪಾಂಡುಸುತನಾದ ಯುಧಿಷ್ಠಿರನು ತಾಯಿಯ ಸಮೀಪದಲ್ಲಿ ಏಕಾಂತದಲ್ಲಿ ಒಬ್ಬನೇ ಕುಳಿತು ತಾಯಿಯನ್ನು ಕೇಳಿದನು.
ಕಿಂ ಚಿಕೀರ್ಷತ್ಯಯಂ ಕರ್ಮ ಭೀಮೋ ಭೀಮಪರಾಕ್ರಮಃ |
ಭವತ್ಯನುಮತೇ ಕಚ್ಚಿತ್ ಸ್ವಯಂ ಕರ್ತುಮಿಹೇಚ್ಛತಿ ॥5॥
ಭೀಮಪರಾಕ್ರಮವುಳ್ಳ ಈ ಭೀಮನು ಏನು ಮಾಡಲು ಹೊರಟಿದ್ದಾನೆ? ನಿನ್ನ ಅನುಮತಿಯಿಂದ ಮಾಡುತ್ತಿದ್ದಾನೋ ಅಥವಾ ತಾನೇ ಸ್ವಂತ ಇಚ್ಛೆಯಿಂದ ಮಾಡುತ್ತಿದ್ದಾನೋ?
ಕುಂತೀ
ಮಮೈವ ವಚನಾದೇವ ಕರಿಷ್ಯತಿ ಪರಂತಪಃ |
ಬ್ರಾಹ್ಮಣಾರ್ಥೇ ಮಹತ್ ಕೃತ್ಯಂ ಮೋಕ್ಷಾಯ ನಗರಸ್ಯ ಚ ॥6॥
ಪರಂತಪನಾದ ಭೀಮಸೇನನು ನನ್ನ ವಚನದಿಂದಲೇ ಮಾಡಲು ಹೊರಟಿದ್ದಾನೆ. ಬ್ರಾಹ್ಮಣರಿಗೆ ಸಹಾಯ ಮಾಡುವ ಸಲುವಾಗಿ ಮತ್ತು ಈ ನಗರದ ಸಂಕಟವನ್ನು ಬಿಡಿಸುವ ಸಲುವಾಗಿ ಮಹಾಕಾರ್ಯವನ್ನು ಮಾಡುವನು.
ಯುಧಿಷ್ಠಿರಃ
ಕಿಮಿದಂ ಸಾಹಸಂ ತೀಕ್ಷ್ಣಂ ಭವತ್ಯಾ ದುಷ್ಕರಂ ಕೃತಮ್ |
ಪರಿತ್ಯಾಗಂ ಹಿ ಪುತ್ರಸ್ಯ ನ ಪ್ರಶಂಸಂತಿ ಸಾಧವಃ ॥7॥
ತಾಯಿ, ನೀನು ಇದೇನು ದುಷ್ಕರವಾದ, ಉಗ್ರವಾದ, ವಿಚಾರಶೂನ್ಯವಾದ ಕಾರ್ಯವನ್ನು ಮಾಡುತ್ತಿದ್ದೀಯೆ? ಪುತ್ರನ ಪರಿತ್ಯಾಗವನ್ನು ಸಜ್ಜನರು ಹೊಗಳುವುದಿಲ್ಲ.
ಕಥಂ ಪರಸುತಸ್ಯಾರ್ಥೇ ಸ್ವಪುತ್ರಂ ತ್ಯಕ್ತುಮರ್ಹಸಿ |
ಲೋಕವೃತ್ತವಿರುದ್ಧಂ ಚ ಪುತ್ರತ್ಯಾಗಃ ಕೃತಸ್ತ್ವಯಾ ॥8॥
ಇನ್ನೊಬ್ಬನ ಮಗನ ಸಲುವಾಗಿ ನಿನ್ನ ಮಗನನ್ನು ಹೇಗೆ ಪರಿತ್ಯಾಗ ಮಾಡುತ್ತಿದ್ದೀಯೆ? ನೀನು ಮಾಡುತ್ತಿರುವ ಪುತ್ರತ್ಯಾಗವು ಲೋಕಾಚಾರಕ್ಕೆ ವಿರುದ್ಧವಾದುದು.
ಯಸ್ಯ ವಿಕ್ರಮಮಾಶ್ರಿತ್ಯ ಸುಖಂ ಸರ್ವೇ ಸ್ವಪಾಮಹೇ |
ರಾಜ್ಯಂ ಚಾಪಹೃತಂ ಕ್ಷುದ್ರೈರಾಜಿಹೀರ್ಷಾಮಹೇ ಪುನಃ ॥9॥
ಅವನ ಪರಾಕ್ರಮವನ್ನು ಅವಲಂಬಿಸಿ ನಾವೆಲ್ಲರೂ ಸುಖವಾಗಿ ನಿದ್ದೆ ಮಾಡುತ್ತಿದ್ದೇವೆ ಮತ್ತು ಕ್ಷುದ್ರರು ಅಪಹರಿಸಿದ ನಮ್ಮ ರಾಜ್ಯವನ್ನು ಪುನಃ ಸಂಪಾದಿಸಲು ಬಯಸುತ್ತಿದ್ದೇವೆ.
ಯಸ್ಯ ದುರ್ಯೋಧನೋ ವೀರ್ಯಂ ಚಿಂತಯನ್ನಮಿತೌಜಸಃ |
ನ ಶೇತೇ ವಸತೀಃ ಸರ್ವಾ ದುಃಖಾಚ್ಛಕುನಿನಾ ಸಹ ॥10॥
ಅಮಿತಪರಾಕ್ರಮಿಯಾದ ಅವನ ಸಾಮರ್ಥ್ಯವನ್ನು ಚಿಂತಿಸಿ ದುರ್ಯೋಧನನು ಶಕುನಿಯ ಜೊತೆಯಲ್ಲಿ ಎಲ್ಲಾ ರಾತ್ರಿಗಳನ್ನೂ ದುಃಖದಿಂದ ಕಳೆಯುತ್ತಿದ್ದಾನೆ.
ಯಸ್ಯ ವೀರಸ್ಯ ವೀರ್ಯೇಣ ಮುಕ್ತಾ ಜತುಗೃಹಾದ್ ವಯಮ್ |
ಅನ್ಯೇಭ್ಯಶ್ಚೈವ ಪಾಪೇಭ್ಯೋ ನಿಹತಶ್ಚ ಪುರೋಚನಃ ॥11॥
ಆ ವೀರನ ಪರಾಕ್ರಮದಿಂದಲೇ ನಾವು ಜತುಗೃಹದಿಂದಲೂ, ಉಳಿದ ಸಂಕಟಗಳಿಂದಲೂ ಮುಕ್ತರಾಗಿ ಪುರೋಚನನನ್ನು ಕೊಂದಿದ್ದೇವೆ.
ಯಸ್ಯ ಬಾಹೂ ಸಮಾಶ್ರಿತ್ಯ ವಸುಪೂರ್ಣಾಂ ವಸುಂಧರಾಮ್ |
ಇಮಾಂ ಮನ್ಯಾಮಹೇ ಪ್ರಾಪ್ತಾಂ ನಿಹತ್ಯ ಧೃತರಾಷ್ಟ್ರಜಾನ್ ॥12॥
ಅವನ ಬಾಹುಬಲವನ್ನು ಆಶ್ರಯಿಸಿ ನಾವು ದುರ್ಯೋಧನಾದಿಗಳನ್ನು ಸಂಹರಿಸಿ ಈ ವಸುಪೂರ್ಣವಾದ ಭೂಮಿಯನ್ನು ನಾವು ಪಡೆದಿದ್ದೇವೆ ಎಂದು ತಿಳಿದಿದ್ದೇವೆ.
ತಸ್ಯ ವ್ಯವಸಿತಸ್ತ್ಯಾಗೋ ಬುದ್ಧಿಮಾಸ್ಥಾಯ ಕಾಂ ತ್ವಯಾ |
ಕಚ್ಚಿನ್ನು ದುಃಖೈರ್ಬುದ್ಧಿಸ್ತೇ ವಿಪ್ಲುತಾ ಗತಚೇತಸಃ ॥13॥
ಅಂತಹ ಭೀಮನ ಪರಿತ್ಯಾಗವನ್ನು ಮಾಡಲು ನೀನು ಯಾವ ಯೋಚನೆಯನ್ನು ಮಾಡಿ ನಿರ್ಧರಿಸಿದೆ. ಅನುಭವಿಸಿದ ಕಷ್ಟಗಳಿಂದ ನಿನ್ನ ಪ್ರಜ್ಞೆಯು ಮತ್ತು ಬುದ್ಧಿಯು ವಿಪ್ಲವವನ್ನು ಹೊಂದಿವೆಯೇ?
ಕುಂತೀ
ಯುಧಿಷ್ಠಿರ ನ ಸಂತಾಪಃ ಕಾರ್ಯಃ ಪ್ರತಿ ವೃಕೋದರಮ್ |
ನ ಚಾಯಂ ಬುದ್ಧಿದೌರ್ಬಲ್ಯಾದ್ ವ್ಯವಸಾಯಃ ಕೃತೋ ಮಯಾ |
ನ ಚ ಶೋಕೇನ ಬುದ್ಧಿರ್ಮೇ ವಿಪ್ಲುತಾ ಗತಚೇತನಾ ॥14॥
ಯುಧಿಷ್ಠಿರನೇ, ಭೀಮನ ವಿಷಯದಲ್ಲಿ ನೀನು ಸಂತಾಪ ಪಡಬೇಕಾಗಿಲ್ಲ. ನಾನು ಬುದ್ಧಿದೌರ್ಬಲ್ಯದಿಂದ ಈ ನಿರ್ಧಾರವನ್ನು ತೆಗೆದುಕೊಂಡಿಲ್ಲ ಅಥವಾ ಶೋಕಗಳಿಂದ ನನ್ನ ಬುದ್ಧಿಯಾಗಲೀ, ಚೇತನವಾಗಲೀ ವಿಪ್ಲವವನ್ನು ಹೊಂದಿಲ್ಲ.

ಇಹ ವಿಪ್ರಸ್ಯ ಭವನೇ ವಯಂ ಪುತ್ರ ಸುಖೋಷಿತಾಃ |
ತಸ್ಯ ಪ್ರತಿಕ್ರಿಯಾ ತಾತ ಮಯ್ಯೆಷಾ ಪ್ರಸಮೀಕ್ಷಿತಾ ॥15॥
ನಾವು ಈ ಬ್ರಾಹ್ಮಣನ ಮನೆಯಲ್ಲಿ ಸುಖವಾಗಿ ವಾಸಿಸುತ್ತಿದ್ದೇವೆ. ಅದಕ್ಕೆ ಪ್ರತ್ಯುಪಕಾರವನ್ನು ಮಾಡಲು ನಾನು ಈ ರೀತಿ ಆಲೋಚಿಸಿದ್ದೇನೆ.
ಏತಾವಾನೇವ ಪುರುಷಃ ಕೃತಂ ಯಸ್ಮಿನ್ನ ನಶ್ಯತಿ |
ಯಾವಚ್ಚ ಕುರ್ಯಾದನ್ಯೋಽಸ್ಯ ಕುರ್ಯಾದ್ ಬಹುಗುಣಂ ತತಃ |
ಬ್ರಾಹ್ಮಣಾರ್ಥೇ ಮಹಾಧರ್ಮಂ ಜಾನೀತಾರ್ಥಂ ವೃಕೋದರೇ ॥16॥
ಯಾವನಿಗೆ ಮಾಡಿದ ಉಪಕಾರವು ನಾಶ ಹೊಂದುವುದಿಲ್ಲವೋ ಅವನು ಶ್ರೇಷ್ಠನಾದ ಪುರುಷ. ಇನ್ನೊಬ್ಬರು ನಮಗೆ ಏನು ಉಪಕಾರವನ್ನು ಮಾಡುತ್ತಾರೋ ಅದಕ್ಕಿಂತ ನೂರುಪಟ್ಟು ನಾವು ಅವರಿಗೆ ಪ್ರತ್ಯುಪಕಾರವನ್ನು ಮಾಡಬೇಕು. ಭೀಮಸೇನನು ಬ್ರಾಹ್ಮಣರ ಸಲುವಾಗಿ ಮಹಾಧರ್ಮ- ರೂಪವಾದ ಪ್ರಯೋಜನವನ್ನು ಪಡೆಯುವನೆಂದು ತಿಳಿಯಿರಿ.
ದೃಷ್ಟ್ವಾ ವೀರಸ್ಯ ವಿಕ್ರಾಂತಂ ತದಾ ಜತುಗೃಹೇ ಮಹತ್ |
ಹಿಡಿಂಬಸ್ಯ ವಧಾಚ್ಚೈವಂ ಜಾನೀತಾರ್ಥಂ ವೃಕೋದರೇ ॥17॥
ಆಗ ಜತುಗೃಹದಲ್ಲಿ ಈ ವೀರನ ಮಹಾಪರಾಕ್ರಮವನ್ನು, ಅನಂತರ ಹಿಡಿಂಬನ ವಧೆಯನ್ನು ನೋಡಿ ಭೀಮಸೇನನು ಇದನ್ನು ಸಾಧಿಸುವನೆಂದು ತಿಳಿಯಿರಿ.
ಬಾಹ್ವೋರ್ಬಲಂ ಹಿ ಭೀಮಸ್ಯ ನಾಗಾಯುತಸಮಂ ಮಹತ್ |
ಯೇನ ಯೂಯಂ ಗಜಪ್ರಖ್ಯಾ ನಿರ್ವ್ಯೂಢಾ ವಾರಣಾವತಾತ್ ॥18॥
ಈ ಭೀಮನ ಬಾಹುಗಳಲ್ಲಿ ಹತ್ತುಸಾವಿರ ಆನೆಗಳ ಮಹಾಬಲವು ತುಂಬಿದೆ. ಆದ್ದರಿಂದಲೇ ಆನೆಗಳಂತಿರುವ ನೀವೆಲ್ಲರೂ ವಾರಣಾವತದಿಂದ ಅವನಿಂದ ಹೊತ್ತು ತರಲ್ಪಟ್ಟಿರಿ.
ವೃಕೋದರಬಲಶ್ಚಾನ್ಯೋ ನ ಜಾತೋ ನ ಜನಿಷ್ಯತಿ |
ಯೋಽಭ್ಯುದೀಯಾದ್ ಯುಧಿ ಶ್ರೇಷ್ಠಮಪಿ ವಜ್ರಧರಂ ಸ್ವಯಮ್ ॥
ವೃಕೋದರನ ಬಲವುಳ್ಳವನು ಇದುವರೆಗೆ ಹುಟ್ಟಲಿಲ್ಲ ಮತ್ತು ಮುಂದೆ ಹುಟ್ಟುವುದಿಲ್ಲ. ಅವನು ಬೇಕಾದರೆ, ಯುದ್ಧದಲ್ಲಿ ಶ್ರೇಷ್ಠನಾದ ವಜ್ರಧರನಾದ ಇಂದ್ರನನ್ನೂ ತಾನೊಬ್ಬನೇ ಎದುರಿಸುತ್ತಾನೆ.
ಜಾತಮಾತ್ರಃ ಪುರಾ ಚೈವ ಮಮಾಂಕಾತ್ ಪತಿತೋ ಗಿರೌ |
ಶರೀರಗೌರವಾದ್ ಯಸ್ಯ ಶಿಲಾ ಗಾತ್ರೈರ್ವಿಚೂರ್ಣಿತಾ ॥20॥
ಹಿಂದೆ ಅವನು ಹುಟ್ಟಿದಾಗ ನನ್ನ ತೊಡೆಯ ಮೇಲಿಂದ ಪರ್ವತದ ಮೇಲೆ ಬಿದ್ದಾಗ ಅವನ ಶರೀರದ ಭಾರದಿಂದ ಪರ್ವತಶಿಲೆಯು ವಿಚೂರ್ಣಿತವಾಯಿತು.
ತದಹಂ ಪ್ರಜ್ಞಯಾ ಜ್ಞಾತ್ವಾ ಬಲಂ ಭೀಮಸ್ಯ ಪಾಂಡವ |
ಪ್ರತಿಕಾರೇ ಚ ವಿಪ್ರಸ್ಯ ತತಃ ಕೃತವತೀ ಮತಿಮ್ ॥21॥
ಪಾಂಡವನೇ, ನಾನು ಭೀಮನ ಆ ಬಲವನ್ನು ನನ್ನ ಪ್ರಜ್ಞೆಯಿಂದ ಆಲೋಚಿಸಿ ಬ್ರಾಹ್ಮಣನಿಗೆ ಪ್ರತ್ಯುಪಕಾರವನ್ನು ಮಾಡುವುದಕ್ಕೋಸ್ಕರ ಹೀಗೆ ನಿಶ್ಚಯಿಸಿದೆ.
ನ ಚ ಮೋಹಾನ್ನ ಚಾಜ್ಞಾನಾನ್ನ ಚ ಲೋಭಾನ್ನ ಚ ಭ್ರಮಾತ್ |
ಇದಂ ವ್ಯವಸಿತಂ ವೀರ ಬುದ್ಧಿಪೂರ್ವಮಿದಂ ಕೃತಮ್ ॥22॥
ವೀರನೇ ಮೋಹದಿಂದಾಗಲೀ, ಅಜ್ಞಾನದಿಂದಾಗಲೀ, ಲೋಭ- ದಿಂದಾಗಲೀ ಅಥವಾ ಭ್ರಾಂತಿಯಿಂದಾಗಲೀ ನಾನು ಈ ನಿರ್ಧಾರಕ್ಕೆ ಬಂದಿಲ್ಲ. ಬುದ್ಧಿಪೂರ್ವಕವಾಗಿ ಈ ನಿರ್ಣಯಕ್ಕೆ ಬಂದಿದ್ದೇನೆ.
ಅರ್ಥೌ ದ್ವಾವಪಿ ನಿರ್ವೃತ್ತೌ ಯುಧಿಷ್ಠಿರ ಭವಿಷ್ಯತಃ |
ಪ್ರತಿಕಾರಶ್ಚ ವಾಸಸ್ಯ ಧರ್ಮಶ್ಚ ಚರಿತೋ ಮಹಾನ್ ॥23॥
ಯುಧಿಷ್ಠಿರನೇ, ಇದರಿಂದ ನಮಗೆ ಎರಡು ಪ್ರಯೋಜನಗಳು ಸಿದ್ಧಿಸುವವು. ಮೊದಲನೆಯದು, ನಾವು ವಾಸ ಮಾಡಿರುವುದಕ್ಕೆ ಪ್ರತ್ಯುಪಕಾರ ಮತ್ತು ಎರಡನೆಯದು ಮಹಾಧರ್ಮ ಸಂಪಾದನೆ.
ಯೋ ಬ್ರಾಹ್ಮಣಸ್ಯ ಸಾಹಾಯ್ಯಂ ಕುರ್ಯಾದರ್ಥೇಷು ಕೇಷುಚಿತ್ |
ಕ್ಷತ್ರಿಯಃ ಸ ಶುಭಾಂಲ್ಲೋಕಾನಾಪ್ನುಯಾದಿತಿ ನಿಶ್ಚಿತಮ್ ॥24॥
ಯಾವ ಕ್ಷತ್ರಿಯನು ಅವಶ್ಯಕವಾದ ವಿಷಯಗಳಲ್ಲಿ ಬ್ರಾಹ್ಮಣನಿಗೆ ಸಹಾಯ ಮಾಡುವನೋ, ಅವನಿಗೆ ಶುಭಲೋಕ ಪ್ರಾಪ್ತಿಯಾಗುವುದು ಎಂಬುದು ನಿಶ್ಚಿತವಾದುದು.
ಕ್ಷತ್ರಿಯಃ ಕ್ಷತ್ರಿಯಸ್ಯೈವ ಕುರ್ವಾಣೋ ವಧಮೋಕ್ಷಣಮ್ |
ವಿಪುಲಾಂ ಕೀರ್ತಿಮಾಪ್ನೋತಿ ಲೋಕೇಽಸ್ಮಿಂಶ್ಚ ಪರತ್ರ ಚ ॥25॥
ಕ್ಷತ್ರಿಯನು ಇನ್ನೊಬ್ಬ ಕ್ಷತ್ರಿಯನನ್ನು ವಧೆಯಿಂದ ಪಾರು ಮಾಡಿದರೆ ಈ ಲೋಕದಲ್ಲೂ ಮತ್ತು ಪರಲೋಕದಲ್ಲೂ ಅಪಾರವಾದ ಕೀರ್ತಿಯನ್ನು ಪಡೆಯುತ್ತಾನೆ.
ವೈಶ್ಯಸ್ಯೈವ ಚ ಸಾಹಾಯ್ಯಂ ಕುರ್ವಾಣಃ ಕ್ಷತ್ರಿಯೋ ಯುಧಿ |
ಸ ಸರ್ವೇಷ್ವಪಿ ಲೋಕೇಷು ಪ್ರಜಾ ರಂಜಯತೇ ಧ್ರುವಮ್ ॥26॥
ಕ್ಷತ್ರಿಯನಾದವನು ವೈಶ್ಯನಿಗೆ ಸಹಾಯವನ್ನು ಮಾಡಿದರೆ, ಅವನು ಎಲ್ಲಾ ಲೋಕಗಳಲ್ಲಿಯೂ ನಿಶ್ಚಿತವಾಗಿ ಪ್ರಜೆಗಳನ್ನು ರಂಜಿಸುತ್ತಾನೆ.

ಶೂದ್ರಂ ತು ಮೋಕ್ಷಯನ್ ಪುತ್ರ ಉದ್ವಿಗ್ನಂ ಶರಣಾರ್ಥಿನಮ್ |
ಪ್ರಾಪ್ನೋತೀಹ ಕುಲೇ ಜನ್ಮ ಸದ್ರುವ್ಯೇ ರಾಜಸತ್ಕೃತೇ ॥27॥
ಸಂಕಟದಲ್ಲಿರುವ ಶರಣಾರ್ಥಿಯಾದ ಶೂದ್ರನನ್ನು ಸಂಕಟದಿಂದ ಮೋಚನೆ ಮಾಡಿದರೆ, ಸಂಪದ್ಯುಕ್ತವಾದ ರಾಜನಿಂದ ಸತ್ಕೃತವಾದ ಕುಲದಲ್ಲಿ ಜನ್ಮವನ್ನು ಪಡೆಯುತ್ತಾನೆ.
ಏವಂ ಹಿ ಭಗವಾನ್ ವ್ಯಾಸಃ ಪುರಾ ಕೌರವನಂದನ |
ಪ್ರೋವಾಚ ಸುತರಾಂ ಪ್ರಾಜ್ಞಃ ತಸ್ಮಾದೇತಚ್ಚಿಕೀರ್ಷಿತಮ್ ॥28॥
ಕೌರವನಂದನನೇ, ಹೀಗೆ ಪ್ರಾಜ್ಞರಾದ ಭಗವಾನ್ ವ್ಯಾಸರು ಹಿಂದೆ ಹೇಳಿದ್ದಾರೆ. ಆದ್ದರಿಂದ ಈ ಕೆಲಸವನ್ನು ಮಾಡಲು ಬಯಸುತ್ತಿದ್ದೇನೆ.
ಯುಧಿಷ್ಠಿರಃ
ಉಪಪನ್ನಮಿದಂ ಮಾತಸ್ತ್ವಯಾ ಸದ್ಬುದ್ಧಿಪೂರ್ವಕಮ್ |
ಆರ್ತಸ್ಯ ಬ್ರಾಹ್ಮಣಸ್ಯೈವಮನುಕ್ರೋಶಾದಿದಂ ಕೃತಮ್ ॥29॥
ತಾಯಿ, ಸಂಕಟದಲ್ಲಿ ಸಿಲುಕಿದ ಬ್ರಾಹ್ಮಣನ ಮೇಲಿನ ಕೃಪೆಯಿಂದ ಸದ್ಬುದ್ಧಿಪೂರ್ವಕವಾಗಿ ನೀನು ಮಾಡುತ್ತಿರುವ ಈ ಕಾರ್ಯವು ಯುಕ್ತವಾಗಿದೆ.
ಧ್ರುವಮೇಷ ಮಹಾಬಾಹುರ್ವಿಜಿತ್ಯ ಪುರುಷಾದಕಮ್ |
ಆಗಂತಾ ನಗರಂ ಚೈವ ತಸ್ಮಾತ್ ಪಾಪಾದ್ ವಿಮೋಕ್ಷ್ಯತೇ ॥30॥
ಖಂಡಿತವಾಗಿ ಈ ಮಹಾಬಾಹುವು ನರಭಕ್ಷಕನಾದ ಆ ರಾಕ್ಷಸನನ್ನು ಗೆದ್ದು (ಸಂಹರಿಸಿ) ನಗರಕ್ಕೆ ಹಿಂದಿರುಗುವನು ಮತ್ತು ಈ ನಗರವನ್ನು ಸಂಕಟದಿಂದ ವಿಮೋಚನೆಗೊಳಿಸುವನು.
ಯಥಾ ಚೈವ ನ ನೋ ವಿದ್ಯುರ್ನರಾ ನಗರವಾಸಿನಃ |
ತಥಾಽಯಂ ಬ್ರಾಹ್ಮಣೋ ವಾಚ್ಯಃ ಪರಿಗೃಹ್ಯ ಚ ಯತ್ನತಃ ॥31॥
ಈ ಬ್ರಾಹ್ಮಣನನ್ನು ಕರೆದು ನಗರವಾಸಿಗಳು ನಮ್ಮ ನಿಜಸ್ವರೂಪವನ್ನು ತಿಳಿಯದಂತೆ ಎಲ್ಲವನ್ನೂ ಮಾಡಬೇಕೆಂದು ಅವನಿಗೆ ಪ್ರಯತ್ನಪೂರ್ವಕವಾಗಿ ಹೇಳಬೇಕು.
ವೈಶಂಪಾಯನಃ
ಯುಧಿಷ್ಠಿರೇಣ ಸಮ್ಮಂತ್ರ್ಯ ಬ್ರಾಹ್ಮಣಾರ್ಥಮರಿಂದಮ |
ಕುಂತೀ ಪ್ರವಿಶ್ಯ ತಾನ್ ಸರ್ವಾನ್ ಸಾಂತ್ವಯಾಮಾಸ ಭಾರತ ॥32॥
ಅರಿಂದಮನಾದ ಭಾರತನೇ, ಕುಂತಿಯು ಯುಧಿಷ್ಠಿರನ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ, ಒಳಗೆ ಬಂದು ಬ್ರಾಹ್ಮಣನಿಗೆ ಉಪಕಾರವನ್ನು ಮಾಡುವ ಸಲುವಾಗಿ ಅವರೆಲ್ಲರನ್ನೂ ಸಮಾಧಾನ ಪಡಿಸಿದಳು.
ಅಥ ರಾತ್ರ್ಯಾಂ ವ್ಯತೀತಾಯಾಂ ಭೀಮಸೇನೋ ಮಹಾಬಲಃ |
ಬ್ರಾಹ್ಮಣಂ ಸಮುಪಾಗಮ್ಯ ವಾಕ್ಯಮೇತದುವಾಚ ಹ ॥33॥
ಅನಂತರ ರಾತ್ರಿಯು ಕಳೆಯುತ್ತಿರಲು, ಮಹಾಬಲನಾದ ಭೀಮಸೇನನು ಬ್ರಾಹ್ಮಣನ ಸಮೀಪಕ್ಕೆ ಬಂದು ಈ ಮಾತುಗಳನ್ನು ಆಡಿದನು.
ಆಪದಸ್ತತ್ವಂ ಪ್ರಮುಚ್ಯೇಯಂ ಸಪುತ್ರಂ ಬ್ರಾಹ್ಮಣ ಪ್ರಿಯಮ್ |
ಮಾ ಭೈಷೀ ರಾಕ್ಷಸಾತ್ ತಸ್ಮಾನ್ಮಾಂ ದದಾತು ಬಲಿಂ ಭವಾನ್ ॥34॥
ಬ್ರಾಹ್ಮಣನೇ, ನಮಗೆ ಪ್ರಿಯನಾದ ನಿನ್ನನ್ನು ನಿನ್ನ ಕುಟುಂಬದ ಜೊತೆಯಲ್ಲಿ ಈ ಸಂಕಟದಿಂದ ಪಾರು ಮಾಡುತ್ತೇನೆ. ನೀನು ಆ ರಾಕ್ಷಸನಿಗೆ ಹೆದರಬೇಡ. ನನ್ನನ್ನು ನೀನು ಅವನಿಗೆ ಆಹಾರವಾಗಿ ಕೊಡು.
ಇಹ ಮಾಮಶಿತಂ ಕರ್ತುಂ ಪ್ರಯತಸ್ವ ಭವದ್ಗೃಹೇ |
ಅಥಾತ್ಮಾನಂ ಪ್ರದಾಸ್ಯಾಮಿ ತಸ್ಮೈ ಘೋರಾಯ ರಕ್ಷಸೇ ॥35॥
ಇಲ್ಲಿ ನಿನ್ನ ಮನೆಯಲ್ಲಿ ನನಗೆ ಭೋಜನವನ್ನು ಕೊಡಲು ಪ್ರಯತ್ನಿಸು. ಅನಂತರ ನಾನು ಆ ಘೋರನಾದ ರಾಕ್ಷಸನಿಗೆ ನನ್ನನ್ನೇ ಕೊಡುವೆನು.
ತ್ವರಧ್ವಂ ಕಿಂ ವಿಲಂಬಧ್ವಂ ಮಾ ಚಿರಂ ಕುರುತಾನಘಾಃ |
ವ್ಯವಸ್ಯೇಯಂ ಮಮ ಪ್ರಾಣೈರ್ಯುಷ್ಮಾನ್ ರಕ್ಷಿತುಮದ್ಯ ವೈ ॥36॥
ಅನಘರೇ, ತ್ವರೆ ಮಾಡಿ. ವಿಳಂಬವನ್ನು ಮಾಡಬೇಡಿ. ನನ್ನ ಪ್ರಾಣಗಳಿಂದ ಈ ದಿನ ನಿಮ್ಮನ್ನು ರಕ್ಷಿಸಲು ನಿರ್ಧರಿಸಿದ್ದೇನೆ.
ವೈಶಂಪಾಯನಃ
ಏವಮುಕ್ತಸ್ತು ಭೀಮೇನ ಬ್ರಾಹ್ಮಣೋ ಭರತರ್ಷಭ |
ಸುಹೃದಾಂ ತತ್ ಸಮಾಖ್ಯಾಯ ದದಾವನ್ನಂ ಸುಸಂಸ್ಕೃತಮ್ ॥37॥
ಭರತರ್ಷಭನೇ, ಭೀಮನು ಹೀಗೆ ಹೇಳುತ್ತಿರಲು ಆ ಬ್ರಾಹ್ಮಣನು ಆ ಎಲ್ಲಾ ವಿಷಯವನ್ನು ತನ್ನ ಸುಹೃದರಿಗೆ ತಿಳಿಸಿ ಭೀಮನಿಗೆ ಸುಸಂಸ್ಕೃತವಾದ ಅನ್ನವನ್ನು ನೀಡಿದನು.
ಪಿಶಿತೋದನಮಾಜಹ್ರುರಥಾಸ್ಮೈ ಪುರವಾಸಿನಃ |
ಸಘೃತಂ ಸೋಪದಂಶಂ ಚ ಸೂಪೈರ್ನಾನಾವಿಧೈಃ ಸಹ ॥38॥
ಅನಂತರ ನಗರವಾಸಿಗಳು ಭೀಮಸೇನನಿಗೆ ಘೃತದಿಂದ ಕೂಡಿದ ಉಪ್ಪಿನಕಾಯಿಗಳಿಂದ ಕೂಡಿದ ನಾನಾವಿಧ ಸೂಪಗಳಿಂದ ಕೂಡಿದ ಮಾಂಸಾನ್ನವನ್ನು ತಂದು ಕೊಟ್ಟರು.

ತದಾऽಶಿತ್ವಾ ಭೀಮಸೇನೋ ಮಾಂಸಾನಿ ವಿವಿಧಾನಿ ಚ |
ಮೋದಕಾನಿ ಚ ಮುಖ್ಯಾನಿ ಚಿತ್ರೋದನಚಯಾನ್ ಬಹೂನ್ |
ತತೋऽಪಿಬದ್ ದಧಿಘಟಾನ್ ಸುಬಹೂನ್ ದ್ರೋಣಸಮ್ಮಿತಾನ್ ॥
ಆಗ ಭೀಮಸೇನನು ವಿವಿಧವಾದ ಮಾಂಸಗಳನ್ನೂ, ಶ್ರೇಷ್ಠವಾದ ಕಡುಬುಗಳನ್ನೂ, ಅನೇಕ ವಿಧವಾದ ಚಿತ್ರಾನ್ನಗಳನ್ನೂ ತಿಂದು ಹಂಡೆಯಂತಿದ್ದ ಅನೇಕ ಮಡಕೆಗಳಲ್ಲಿದ್ದ ಮೊಸರನ್ನು ಕುಡಿದನು.
ತಸ್ಯ ಭುಕ್ತವತಃ ಪೌರಾ ಯಥಾರ್ಹಂ ಸಮುಪಾರ್ಜಿತಮ್ |
ಉಪಜಹ್ರುರ್ಭೂತಭಾಗಂ ಸಮೃದ್ಧಂ ಸರ್ವಸಂಪದಾ ॥40॥
ಭೀಮಸೇನನು ಊಟ ಮಾಡಿದ ಮೇಲೆ ನಗರವಾಸಿಗಳು ಸಮೃದ್ಧವಾದ ಎಲ್ಲ ವಿಶೇಷಗಳಿಂದಲೂ ಕೂಡಿದ ರಾಕ್ಷಸನ ಭಾಗವಾದ ಅನ್ನವನ್ನೂ ಯಥೋಚಿತವಾಗಿ ತಂದರು.
ತತೋ ರಾತ್ರ್ಯಾಂ ವ್ಯತೀತಾಯಂ ಸವ್ಯಂಜನದಧಿಪ್ಲುತಮ್ |
ಸಮಾರುಹ್ಯಾನ್ನಸಂಪೂರ್ಣಂ ಶಕಟಂ ಸ ವೃಕೋದರಃ |
ಪ್ರಯಯೌ ತೂರ್ಯನಿರ್ಘೋಷೈಃ ಪೌರೈಶ್ಚ ಪರಿವಾರಿತಃ ॥41॥
ಅನಂತರ ರಾತ್ರಿಯು ಕಳೆಯುತ್ತಿರಲು ಭೀಮಸೇನನು ವ್ಯಂಜನ ದಧಿಗಳಿಂದ ಕೂಡಿದ ಅನ್ನದಿಂದ ಪೂರ್ಣವಾದ ಶಕಟವನ್ನೇರಿ ಪೌರರಿಂದ ಪರಿವಾರಿತನಾಗಿ ವಾದ್ಯಘೋಷಗಳೊಡನೆ ಹೊರಟನು.
ಆತ್ಮಾನಮೇಷೋऽನ್ನಭೂತೋ ರಾಕ್ಷಸಾಯ ಪ್ರದಾಸ್ಯತಿ |
ತರುಣೋऽಪ್ರತಿರೂಪಶ್ಚ ದೃಢಔದರಿಕೋ ಯುವಾ ॥42॥
ವಾಗ್ಭಿರೇವಂಪ್ರಕಾರಾಭಿಃ ಸ್ತೂಯಮಾನೋ ವೃಕೋದರಃ |
ಚುಚೋದ ಸ ಬಲೀವರ್ದೌ ಯುಕ್ತೌ ಚಾಂಗಾರಕಾಳಕೌ ॥43॥
ಈ ಅಸದೃಶನಾದ ಯುವಕನು ಒಳ್ಳೆಯ ಭೋಕ್ತೃ. ತನ್ನನ್ನೇ ರಾಕ್ಷಸನಿಗೆ ಅನ್ನವಾಗಿ ಕೊಡಲು ಹೊರಟಿದ್ದಾನೆ. ಇಂತಹ ಮಾತುಗಳಿಂದ ಪೌರರು ಹೊಗಳುತ್ತಿರಲು ಭೀಮಸೇನನು ಅಂಗಾರದಂತೆ ಕಪ್ಪಾದ ಎತ್ತುಗಳನ್ನು ಹೂಡಿದ ಗಾಡಿಯನ್ನು ನಡೆಸಿದನು.
ವಾದಿತ್ರಾಣಾಂ ಪ್ರಣಾದೇನ ತತಸ್ತಂ ಪುರುಷಾದಕಮ್ |
ಅಭ್ಯಾಗಚ್ಛತ್ ಸುಸಂಹೃಷ್ಟಃ ಸ ತತ್ರ ಮನುಜೈರ್ವೃತಃ ॥44॥
ಅನಂತರ ಬಹಳ ಸಂತೋಷಗೊಂಡ ಭೀಮನು ಪೌರರಿಂದ ಸುತ್ತುವರಿಯಲ್ಪಟ್ಟು ವಾದ್ಯಗಳ ಮಹಾಘೋಷದೊಂದಿಗೆ ಆ ನರಭಕ್ಷಕನು ಇದ್ದ ಸ್ಥಳವನ್ನು ಸಮೀಪಿಸಿದನು.
ಸಂಪ್ರಾಪ್ಯ ಸ ಚ ತಂ ದೇಶಮೇಕಾಕೀ ಸಮುಪಾಯಯೌ |
ಪುರುಷಾದಭಯಾದ್ ಭೀತಃ ತತ್ರೈವಾಸೀಜ್ಜನವ್ರಜಃ॥45॥
ಆ ಪ್ರದೇಶವನ್ನು ತಲುಪಿದ ಅವನು ಒಬ್ಬನೇ ಮುಂದೆ ಹೊರಟನು. ರಾಕ್ಷಸನಿಗೆ ಹೆದರಿದ ಜನಸಮೂಹವು ಹಿಂದೆಯೇ ಉಳಿಯಿತು.
ಸ ಗತ್ವಾ ದೀರ್ಘಮಧ್ವಾನಂ ದಕ್ಷಿಣಾಮಭಿತೋ ದಿಶಮ್ |
ಯಥೋಪದಿಷ್ಟಮುದ್ದೇಶೇ ದದರ್ಶ ವಿಪುಲಂ ದ್ರುಮಮ್ ॥46॥
ಅವನು ದಕ್ಷಿಣಾಭಿಮುಖನಾಗಿ ದೀರ್ಘವಾಗಿ ಪ್ರಯಾಣಮಾಡಿ ಜನರು ತಿಳಿಸಿದ್ದಂತೆ ಸ್ವಲ್ಪ ಉನ್ನತ ಪ್ರದೇಶದಲ್ಲಿ ಒಂದು ದೊಡ್ಡ ವೃಕ್ಷವನ್ನು ನೋಡಿದನು.
ಕೇಶಾಸ್ಥಿಮಜ್ಜಾಮೇದೋಭಿರ್ಬಾಹೂರುಚರಣೈರಪಿ |
ಆರ್ದ್ರೈಃ ಶುಷ್ಕೈಶ್ಚ ಸಂಕೀರ್ಣಮಭಿತೋऽಥ ವನಸ್ಪತಿಮ್ ॥47॥
ಆ ವೃಕ್ಷದ ಸುತ್ತಲೂ ಒಣಗಿದ ಮತ್ತು ಹಸಿಯಾದ ಕೇಶ, ಅಸ್ಥಿ, ಮಜ್ಜ, ಮೇದಸ್ಸುಗಳು ಮತ್ತು ಬಾಹುಗಳು, ತೊಡೆಗಳು, ಪಾದಗಳು, ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು.
ಗೃಧ್ರಕಂಕ ವಳಚ್ಛನ್ನಂ ಗೋಮಾಯುಕುಲಸಂಕುಲಮ್ |
ಉಗ್ರಗಂಧಮಚಕ್ಷುಷ್ಯಂ ಶ್ಮಶಾನಮಿವ ದಾರುಣಮ್ ॥48॥
ಆ ವೃಕ್ಷಪ್ರದೇಶವು ಹದ್ದು, ಕಂಕ, ಬಳ ಮೊದಲಾದ ಕ್ರೂರಪಕ್ಷಿಗಳಿಂದಲೂ, ನರಿಗಳ ಸಮೂಹದಿಂದಲೂ ನಿಬಿಡವಾಗಿದ್ದು ದುರ್ವಾಸನೆಯಿಂದ ಕೂಡಿದ್ದು, ಕಣ್ಣಿನಿಂದ ನೋಡಲು ಅಸಾಧ್ಯವಾದ ದಾರುಣವಾದ ಸ್ಮಶಾನದಂತೆ ಇದ್ದಿತು.
ತಂ ಪ್ರವಿಶ್ಯ ಮಹಾವೃಕ್ಷಂ ಚಿಂತಯಾಮಾಸ ವೀರ್ಯವಾನ್ |
ಯಾವನ್ನ ದೃಶ್ಯತೇ ರಕ್ಷೋ ಬಕಸ್ತು ಬಲದರ್ಪಿತಃ ॥49॥
ರುಚಿರಂ ವಿವಿಧೈರ್ಭೋಜ್ಯೈರನ್ನೈರ್ಗಿರಿನಿಭೈರಿದಮ್ |
ಶಕಟಂ ಸೂಪಸಂಪೂರ್ಣಂ ಯಾವದ್ ದ್ರಕ್ಷ್ಯತಿ ರಾಕ್ಷಸಃ ॥50॥
ತಾವದೇವ ಪ್ರಭೋಕ್ಷ್ಯೇऽಹಂ ದುರ್ಲಭಂ ವೈ ಪುನರ್ಭವೇತ್ |
ವಿಪ್ರಕೀರ್ಯೇತ ಸರ್ವಂ ಹಿ ಪ್ರಯುದ್ಧೇ ಮಯಿ ರಕ್ಷಸಾ ॥51॥
ಪರಾಕ್ರಮಶಾಲಿಯಾದ ಭೀಮಸೇನನು ಆ ಮಹಾವೃಕ್ಷವನ್ನು ಸಮೀಪಿಸಿ ಹೀಗೆ ಯೋಚಿಸಿದನು. ಆ ಬಲದರ್ಪದಿಂದ ಕೂಡಿದ ರಾಕ್ಷಸನು ಎಲ್ಲಿಯವರೆಗೆ ಕಣ್ಣಿಗೆ ಬೀಳುವುದಿಲ್ಲವೋ ಮತ್ತು ಎಲ್ಲಿಯವರೆಗೆ ಆ ಬಕ ರಾಕ್ಷಸನು ವಿವಿಧ ಭೋಜ್ಯಗಳಿಂದಲೂ, ಅನ್ನಗಳಿಂದಲೂ, ಸೂಪಗಳಿಂದಲೂ ತುಂಬಿದ ಈ ಮನೋಹರವಾದ ಬಂಡಿಯನ್ನು ನೋಡುವುದಿಲ್ಲವೋ, ಅಷ್ಟರವರೆಗೆ ನಾನು ಎಲ್ಲವನ್ನೂ ತಿಂದು ಬಿಡುವೆನು. ಪುನಃ ಇಂತಹ ಅನ್ನವು ದೊರೆಯುವುದು ದುರ್ಲಭ. ನಾನು ರಾಕ್ಷಸನ ಜೊತೆಯಲ್ಲಿ ಹಾಗೆಯೇ ಯುದ್ಧವನ್ನು ಮಾಡಿದರೆ, ಎಲ್ಲವೂ ಚೆಲ್ಲಾಪಿಲ್ಲಿಯಾಗುತ್ತವೆ.

ಅಭೋಜ್ಯಂ ಚ ಶವಂ ಸ್ಪೃಷ್ಟ್ವಾ ನಿಗೃಹೀತೇ ಬಕೇ ಭವೇತ್ |
ಸ ತ್ವೇವಂ ಭೀಮಕರ್ಮಾ ತು ಭೀಮಸೇನೋಽಭಿಲಕ್ಷ್ಯ ಚ |
ಉಪವಿಷ್ಟಃ ಶನೈರನ್ನಂ ಭುಂಕ್ತೇ ಸ್ಮ ಪರಮಂ ವರಮ್ ॥52॥
ನಾನು ಬಕನನ್ನು ನಿಗ್ರಹಿಸಿದರೆ, ಆಗ ಶವವನ್ನು ಮುಟ್ಟಿದ ಮೇಲೆ ಎಲ್ಲವೂ ಅಭೋಜ್ಯವಾಗುತ್ತದೆ. ಭೀಮಕರ್ಮನಾದ ಭೀಮಸೇನನು ಹೀಗೆ ಆಲೋಚಿಸಿ ಕುಳಿತುಕೊಂಡು ನಿಧಾನವಾಗಿ ಆ ಶ್ರೇಷ್ಠವಾದ ಅನ್ನವನ್ನು ತಿನ್ನಲು ಪ್ರಾರಂಭಿಸಿದನು.
ತಂ ತತಃ ಸರ್ವತೋಽಪಶ್ಯನ್ ದ್ರುಮಾನಾರುಹ್ಯ ನಾಗರಾಃ |
ನಾರಕ್ಷೋ ಬಲಿಮಶ್ನೀಯಾದೇವಂ ಬಹು ಚ ಮಾನವಾಃ |
ಭುಂಕ್ತೇ ಬ್ರಾಹ್ಮಣರೂಪೇಣ ಬಕೋಽಯಮಿತಿ ಚಾಬ್ರುವನ್ ॥53॥
ನಗರವಾಸಿಗಳು ಸುತ್ತಲೂ ಮರಗಳನ್ನೇರಿ ಭೀಮಸೇನನನ್ನು ನೋಡಿದರು. ಆ ಮನುಷ್ಯರೆಲ್ಲರೂ ರಾಕ್ಷಸನಲ್ಲದವನು ಹೀಗೆ ಆಹಾರವನ್ನು ತಿನ್ನಲು ಸಾಧ್ಯವಿಲ್ಲ. ಬಕನೇ ಬ್ರಾಹ್ಮಣರೂಪದಿಂದ ತಿನ್ನುತ್ತಿದ್ದಾನೆ ಎಂದು ಮಾತನಾಡಿಕೊಂಡರು.
ಸ ತಂ ಹಸತಿ ತೇಜಸ್ವೀ ತದನ್ನಮುಪಯೋಜಯನ್ |
ಆಸಾದ್ಯ ಚ ವನಂ ತಸ್ಯ ರಕ್ಷಸಃ ಪಾಂಡವೋ ಬಲೀ |
ಆಜುಹಾವ ತತೋ ನಾಮ್ನಾ ತದನ್ನಮುಪಯೋಜಯನ್ ॥54॥
ಬಲಿಷ್ಠನೂ, ತೇಜಸ್ವಿಯೂ ಆದ ಪಾಂಡವನು ಆ ರಾಕ್ಷಸನ ಕಾಡನ್ನು ತಲುಪಿ, ಅವನನ್ನು ಹಾಸ್ಯ ಮಾಡುತ್ತಾ, ಆ ಅನ್ನವನ್ನು ತಿನ್ನುತ್ತಾ, ಹೆಸರನ್ನು ಹಿಡಿದು ಬಕನನ್ನು ಕರೆದನು.
ತತಃ ಸ ರಾಕ್ಷಸಃ ಶ್ರುತ್ವಾ ಭೀಮಸೇನಸ್ಯ ತದ್ವಚಃ |
ಆಜಗಾಮ ಸುಸಂಕ್ರುದ್ಧೋ ಯತ್ರ ಭೀಮೋ ವ್ಯವಸ್ಥಿತಃ |
ಮಹಾಕಾಯೋ ಮಹಾವೇಗೋ ದಾರಯನ್ನಿವ ಮೇದಿನೀಮ್ ॥55॥
ಆಗ ಆ ಮಹಾಕಾಯನೂ, ಮಹಾವೇಗವುಳ್ಳವನೂ ಆದ ಆ ರಾಕ್ಷಸನು ಭೀಮಸೇನನ ಮಾತನ್ನು ಕೇಳಿ ಭೀಮಸೇನನು ಇದ್ದ ಕಡೆಗೆ ಭೂಮಿಯನ್ನು ಸೀಳುವವನಂತೆ ನಡೆದುಕೊಂಡು ಬಂದನು.
ತ್ರಿಶಿಖಾಂ ಭ್ರುಕುಟಿಂ ಕೃತ್ವಾ ಸಂದಶ್ಯ ದಶನಚ್ಛದಮ್ |
ಭುಂಜಾನಮನ್ನಂ ತಂ ದೃಷ್ಟ್ವಾ ಭೀಮಸೇನಂ ಸ ರಾಕ್ಷಸಃ |
ವಿವೃತ್ಯ ನೇತ್ರೇ ಸಂಕ್ರುದ್ಧ ಇದಂ ವಚನಮಬ್ರವೀತ್ ॥56॥
ಆ ರಾಕ್ಷಸನು ತನ್ನ ಹುಬ್ಬುಗಳನ್ನು ಗಂಟಿಕ್ಕಿ, ಹಲ್ಲುಗಳನ್ನು ಕಡಿದು, ಕಣ್ಣುಗಳನ್ನು ಅರಳಿಸಿ, ಮಹಾಕೋಪದಿಂದ ಕೂಡಿದವನಾಗಿ ಅನ್ನವನ್ನು ತಿನ್ನುತ್ತಿದ್ದ ಭೀಮಸೇನನನ್ನು ಕುರಿತು ಈ ಮಾತನ್ನಾಡಿದನು.
ಕೋಽಯಮನ್ನಮಿದಂ ಭುಂಕ್ತೇ ಮದರ್ಥಂ ಸಮುಪಾಹೃತಮ್ |
ಪಶ್ಯತೋ ಮಮ ದುರ್ಬುದ್ಧಿರ್ಯಿಯಾಸುರ್ಯಮಸಾದನಮ್ ॥57॥
ದುರ್ಬುದ್ಧಿಯೂ, ಯಮಪಟ್ಟಣಕ್ಕೆ ಹೋಗಲು ಅಪೇಕ್ಷೆಯುಳ್ಳವನೂ ಆದ ಯಾವನು ನನ್ನ ಕಣ್ಣೆದುರಿಗೆ, ನನಗಾಗಿ ತಂದ ಈ ಅನ್ನವನ್ನು ತಿನ್ನುತ್ತಿದ್ದಾನೆ?
ವೈಶಂಪಾಯನಃ
ಭೀಮಸೇನಸ್ತು ತಚ್ಛ್ರುತ್ವಾ ಪ್ರಹಸನ್ನಿವ ಭಾರತ |
ರಾಕ್ಷಸಂ ತಮನಾದೃತ್ಯ ಭುಂಕ್ತ ಏವ ಪರಾಙ್ಮುಖಃ ॥58॥
ಭಾರತನೇ, ಭೀಮಸೇನನು ಅದನ್ನು ಕೇಳಿ ಆ ರಾಕ್ಷಸನನ್ನು ಗಣನೆಗೇ ತಂದುಕೊಳ್ಳದೆ ಅವನ ಕಡೆಗೆ ಬೆನ್ನು ಮಾಡಿ ತಿನ್ನುವುದನ್ನು ಮುಂದುವರಿಸಿದನು.
ತತಃ ಸ ಭೈರವಂ ಕೃತ್ವಾ ಸಮುದ್ಯಮ್ಯ ಕರಾವುಭೌ |
ಅಭ್ಯದ್ರವದ್ ಭೀಮಸೇನಂ ಜಿಘಾಂಸುಃ ಪುರುಷಾದಕಃ ॥59॥
ಆಗ ಆ ನರಭಕ್ಷಕನು ಭೈರವನಾದವನ್ನು ಮಾಡಿ ಎರಡೂ ಕೈಗಳನ್ನು ಎತ್ತಿ ಹೊಡೆಯಲು ಅಪೇಕ್ಷಿಸಿ ಭೀಮಸೇನನ ಕಡೆಗೆ ಓಡಿ ಬಂದನು.
ತಥಾಽಪಿ ಪರಿಭೂಯೈನಂ ನೇಕ್ಷಮಾಣೋ ವೃಕೋದರಃ |
ರಾಕ್ಷಸಂ ಭುಂಕ್ತ ಏವಾನ್ನಂ ಪಾಂಡವಃ ಪರವೀರಹಾ ॥60॥
ಆದರೂ ಸಹ ಪರವೀರನಾಶಕನಾದ ಪಾಂಡುಪುತ್ರನಾದ ಭೀಮಸೇನನು ಅವನನ್ನು ಲೆಕ್ಕಿಸದೆ, ಆ ರಾಕ್ಷಸನ ಕಡೆಗೆ ತಿರುಗಿ ನೋಡದೆ, ತನ್ನ ಊಟವನ್ನು ಮುಂದುವರೆಸಿದನು.
ಅಮರ್ಷೇಣ ತು ಸಂಪೂರ್ಣಃ ಕುಂತೀಪುತ್ರಸ್ಯ ರಾಕ್ಷಸಃ |
ಜಘಾನ ಪೃಷ್ಠೇ ಪಾಣಿಭ್ಯಾಮುಭಾಭ್ಯಾಂ ಪೃಷ್ಠತಃ ಸ್ಥಿತಃ ॥61॥
ಕ್ರೋಧದಿಂದ ಪೂರ್ಣನಾದ ರಾಕ್ಷಸನು ಹಿಂದೆ ನಿಂತು ತನ್ನ ಎರಡೂ ಕೈಗಳಿಂದ ಭೀಮಸೇನನ ಬೆನ್ನಿನ ಮೇಲೆ ಬಲವಾಗಿ ಹೊಡೆದನು.

ತಥಾ ಬಲವತಾ ಭೀಮಃ ಪಾಣಿಭ್ಯಾಂ ಭೃಶಮಾಹತಃ |
ನೈವಾವಲೋಕಯಾಮಾಸ ಭುಂಕ್ತ ಏವ ಪರಾಙ್ಮುಖಃ ॥62॥
ಆ ಬಲಿಷ್ಠನಾದ ರಾಕ್ಷಸನು ಎರಡೂ ಕೈಗಳಿಂದ ಜೋರಾಗಿ ಹೊಡೆದರೂ, ಭೀಮನು ಅವನನ್ನು ನೋಡದೆ, ಅವನ ಕಡೆಗೆ ಬೆನ್ನು ಮಾಡಿ ತಿನ್ನುತ್ತಲೇ ಇದ್ದನು.

ತತಃ ಸ ಭೂಯಃ ಸಂಕ್ರುದ್ಧೋ ವೃಕ್ಷಮಾದಾಯ ರಾಕ್ಷಸಃ |
ತಾಡಯಿಷ್ಯಂಸ್ತದಾ ಭೀಮಂ ಪುನರಭ್ಯದ್ರವದ್ ಬಲೀ ॥63॥
ಆಗ ಇನ್ನೂ ಸಿಟ್ಟಿಗೆದ್ದ ಆ ರಾಕ್ಷಸನು ಭೀಮಸೇನನನ್ನು ಹೊಡೆಯಲು ಬಯಸಿ, ಒಂದು ಮರವನ್ನು ಎತ್ತಿಕೊಂಡು ಭೀಮಸೇನನ ಕಡೆಗೆ ಓಡಿ ಬಂದನು.
ನ್ಯಸ್ತಂ ಕ್ರುದ್ಧೇನ ತಂ ವೃಕ್ಷಂ ಪ್ರತಿಜಗ್ರಾಹ ವೀರ್ಯವಾನ್ |
ಸವ್ಯೇನ ಪಾಣಿನಾ ಭೀಮೋ ದಕ್ಷಿಣೇನಾಪಿ ಭುಕ್ತವಾನ್ ॥64॥
ಪರಾಕ್ರಮಶಾಲಿಯಾದ ಭೀಮಸೇನನು ರಾಕ್ಷಸನು ತನ್ನ ಬಳಿ ಇಟ್ಟ ವೃಕ್ಷವನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಿಂದ ಊಟವನ್ನು ಮಾಡುತ್ತಲೇ ಇದ್ದನು.
ತತೋ ಭೀಮಃ ಶನೈರ್ಭುಕ್ತ್ವಾ ತದನ್ನಂ ಪುರುಷರ್ಷಭ |
ವಾರ್ಯುಪಸ್ಪೃಶ್ಯ ಸಂಹೃಷ್ಟಃ ತಸ್ಥೌ ಗಿರಿರಿವಾಚಲಃ ॥65॥
ಪುರುಷರ್ಷಭನೇ ಅನಂತರ ಭೀಮನು ನಿಧಾನವಾಗಿ ಊಟ ಮಾಡಿ ಕೈ ತೊಳೆದು ಸಂತೋಷದಿಂದ ಅಲುಗಾಡದ ಪರ್ವತದಂತೆ ಎದ್ದು ನಿಂತನು.
ಭುಜವೇಗಂ ತಥಾಽಽಸ್ಫೋಟಂ ಕ್ಷ್ವೇಲಿತಂ ಚ ಮಹಾಸ್ವನಮ್ |
ಕೃತ್ವಾಽಽಹ್ವಯತ ಸಂಕ್ರುದ್ಧೋ ಭೀಮಸೇನೋಽಥ ರಾಕ್ಷಸಮ್ ॥66॥
ಅನಂತರ ಭೀಮಸೇನನು ಭುಜವೇಗವನ್ನು ಅಭ್ಯಾಸ ಮಾಡಿ ಭುಜಗಳಿಂದಲೂ ಕೈಗಳಿಂದಲೂ ಆಸ್ಫೋಟಶಬ್ದವನ್ನು ಮಾಡಿ ಮಹಾಸ್ವನವುಳ್ಳ ಸಿಂಹನಾದವನ್ನು ಮಾಡಿ ಕೋಪದಿಂದ ರಾಕ್ಷಸನನ್ನು ಕರೆದನು.
ಭೀಮಸೇನಃ
ಬಹುಕಾಲಂ ಸುಪುಷ್ಟಂ ತೇ ಶರೀರಂ ರಾಕ್ಷಸಾಧಮ |
ಮದ್ಬಾಹುಬಲಮಾಶ್ರಿತ್ಯ ನ ತ್ವಂ ಭೂಯೋ ಭವಿಷ್ಯಸಿ ॥67॥
ರಾಕ್ಷಸಾಧಮನೇ, ಬಹುಕಾಲದಿಂದ ನಿನ್ನ ಶರೀರವು ಚೆನ್ನಾಗಿ ಕೊಬ್ಬಿದೆ. ನನ್ನ ಬಾಹುಬಲಕ್ಕೆ ವಶನಾದ ನೀನು ಇನ್ನು ಉಳಿಯುವುದಿಲ್ಲ.
ಅದ್ಯಪ್ರಭೃತಿ ಸ್ವಪ್ಸ್ಯಂತಿ ವೇತ್ರಕೀಯನಿವಾಸಿನಃ |
ನಿರುದ್ವಿಗ್ನಾಃ ಪುರಸ್ಯಾಸ್ಯ ಕಂಟಕೇ ಸೂದ್ಧೃತೇ ಮಯಾ ॥68॥
ನಾನು ಏಕಚಕ್ರನಗರಕ್ಕೆ ಕಂಟಕಪ್ರಾಯನಾದ ನಿನ್ನನ್ನು ಕಿತ್ತೊಗೆದ ಮೇಲೆ ಇಂದಿನಿಂದ ಏಕಚಕ್ರನಗರವಾಸಿಗಳು ಉದ್ವೇಗವಿಲ್ಲದೆ ಮಲಗಿ ನಿದ್ರೆ ಮಾಡುತ್ತಾರೆ.
ಅದ್ಯ ಯುದ್ಧೇ ಶರೀರಂ ತೇ ಕಂಕ ಗೋಮಾಯುವಾಯಸಾಃ |
ಮಯಾ ಹತಸ್ಯ ಖಾದಂತು ವಿಕುರ್ವಂತು ಚ ಭೂತಳೇ ॥69॥
ಈ ದಿನ ನನ್ನಿಂದ ಯುದ್ಧದಲ್ಲಿ ಹತನಾದ ನಿನ್ನ ಶರೀರವನ್ನು ಕಂಕಗಳು, ನರಿಗಳು ಮತ್ತು ಕಾಗೆಗಳು ತಿನ್ನುತ್ತಾ ಭೂಮಿಯ ಮೇಲೆ ಎಳೆದಾಡಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಅರವತ್ತೈದನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಪೀತ್ವಾ ಪಯೋ ತ್ವರಿತ ಏನಮವೀಕ್ಷಮಾಣ
ಆಚಮ್ಯ ತೇನ ಯುಯುಧೇ ಗುರುವೃಕ್ಷಶೈಲೈಃ |
ತೇನಾಹತೋಽಥ ಬಹುಭಿರ್ಗಿರಿಭಿರ್ಬಲೇನ
ಜಗ್ರಾಹ ಚೈನಮಥ ಭೂಮಿತಳೇ ಪಿಪೇಷ ॥90॥
ಭೀಮ ರಾಕ್ಷಸನನ್ನು ನೋಡದೆ ಸಾವಧಾನವಾಗಿಯೆ ಹಾಲನ್ನು ಕುಡಿದು ಹಸ್ತ ಪ್ರಕ್ಷಾಲನಾದಿಗಳನ್ನೂ ಮಾಡಿ ಆಚಮನ ಮಾಡಿ ರಾಕ್ಷಸನೊಂದಿಗೆ ಯುದ್ಧ ಮಾಡಿದ. ಬಲಿಷ್ಠವಾದ ಮರ-ಬೆಟ್ಟಗಳಿಂದ ಹೊಡೆಯಲ್ಪಟ್ಟ ಬಕನು ಭೀಮನ ಬಲದಿಂದ ಹಿಡಿಯಲ್ಪಟ್ಟ. ಕೂಡಲೇ ಭೀಮನು ಭೂತಲದಲಿ ಹಾಕಿ ಬಕನನ್ನು ಬಡಿದ.
ಆಕ್ರಮ್ಯ ಪಾದಮಪಿ ಪಾದತಳೇನ ತಸ್ಯ
ದೋರ್ಭ್ಯಾಂ ಪ್ರಗೃಹ್ಯ ಚ ಪರಂ ವಿದದಾರ ಭೀಮಃ |
ಮೃತ್ವಾ ಸ ಚೋರು ತಮ ಏವ ಜಗಾಮ ಪಾಪೋ
ವಿಷ್ಣುದ್ವಿಡೇವ ಹಿ ಶನೈರನಿವೃತ್ತಿ ಚೋಗ್ರಂ ॥91॥
ಭೀಮ ಬಕರಾಕ್ಷಸನ ಒಂದು ಕಾಲನ್ನು ತನ್ನ ಕಾಲಿಂದ ಒತ್ತಿಹಿಡಿದು ಮತ್ತೊಂದು ಕಾಲನ್ನು ಎರಡು ಕೈಗಳಿಂದ ಹಿಡಿದು ಕುತ್ತಿಗೆವರೆಗೆ ಸೀಳಿದ. ಕೇವಲ ವಿಷ್ಣುದ್ವೇಷಿಯೆ ಆದ ಆ ಪಾಪಿ ಸತ್ತು ಕ್ರಮವಾಗಿ ಪುನರಾವೃತ್ತಿ ರಹಿತವಾದ ಘೋರವಾದ ಮಹಾತಮಸ್ಸನ್ನು ಹೊಂದಿದ.
ಹತ್ವಾ ತಮಕ್ಷತಬಲೋ ಜಗದಂತಕಂ ಸ

ಯೋ ರಾಕ್ಷಸೋ ನ ವಶ ಆಸ ಜರಾಸುತಸ್ಯ |
ಭೌಮಸ್ಯ ಪೂರ್ವಮಪಿ ನೋ ಭರತಸ್ಯ ರಾಜ್ಞೋ
ಭೀಮೋ ನ್ಯಧಾಪಯದಮುಷ್ಯ ಶರೀರಮಗ್ರೇ ॥92॥
ಬಕರಾಕ್ಷಸ ಜರಾಸಂಧನಿಗೂ ಮಣಿಯಲಿಲ್ಲ, ನರಕಾಸುರನಿಗೂ ವಶನಾಗಲಿಲ್ಲ, ಭರತರಾಜನಿಗೂ ವಶನಾಗಲಿಲ್ಲ, ಅಂಥ ಲೋಕಕಂಟಕನಾದ ಬಕನನ್ನು ಅಕ್ಷಯ ಬಲಶಾಲಿ ಭೀಮ ಕೊಂದು ಅವನ ಶರೀರವನ್ನು ಏಕಚಕ್ರನಗರದ ಮುಂಭಾಗದಲ್ಲಿ ಇರಿಸಿದ.
ದ್ವಾರ್ಯೇವ ತತ್ ಪ್ರತಿ ನಿಧಾಯ ಪುನಃ ಸ ಭೀಮಃ |
ಸ್ನಾತ್ವಾ ಜಗಾಮ ನಿಜಸೋದರಪಾರ್ಶ್ವಮೇವ |
ಶ್ರುತ್ವಾಸ್ಯ ಕರ್ಮ ಪರಮಂ ತುತುಷುಃ ಸಮೇತಾ
ಮಾತ್ರಾ ಚ ತೇ ತದನು ವಪೌರತಃ ಪುರಸ್ಥಾಃ ॥93॥
ದೃಷ್ಟ್ವೈವ ರಾಕ್ಷಸಶರೀರಮುರು ಪ್ರಭೀತಾ
ಜ್ಞಾತ್ವೈವ ಹೇತುಭಿರಥ ಕ್ರಮಶೋ ಮೃತಂ ಚ |
ವಿಪ್ರಸ್ಯ ತಸ್ಯ ವಚನಾದಪಿ ಭೀಮಸೇನ-
ಭಗ್ನಂ ನಿಶಮ್ಯ ಪರಮಂ ತುತುಷುಶ್ಚ ತಸ್ಮೈ ॥94॥
ಭೀಮಸೇನ ಬಕನ ಶವವನ್ನು ನಗರದ್ವಾರದಲ್ಲಿ ನಿಲ್ಲಿಸಿ ಸ್ನಾನಮಾಡಿ ಸೋದರರ ಬಳಿಗೆ ನಡೆದ. ಅವನು ಮಾಡಿದ ಮಹಾಕಾರ್ಯವನ್ನು ಕೇಳಿ ಅವರೂ ತಾಯಿಯೂ ಬಹಳ ಸಂತೋಷಗೊಂಡರು. ಬಕನ ಬಗ್ಗೆ ಮೊದಲೇ ಭಯಯುಕ್ತರಾಗಿದ್ದ ಪಟ್ಟಣಿಗರು ಅವನ ಶವವನ್ನು ಕಂಡು ಇನ್ನೂ ಭಯಗ್ರಸ್ತರಾದರು. ಕಲ್ಲಿಂದ ಹೊಡೆಯುವುದು ಮುಂತಾದವುಗಳ ಮೂಲಕ ಶವಲಕ್ಷಣಗಳಿಂದ ಕ್ರಮವಾಗಿ ಶವವೆಂದು ನಿರ್ಧರಿಸಿ ಕೊನೆಗೆ ಬ್ರಾಹ್ಮಣನ ಮಾತಿನಿಂದ ಬಕ ಭೀಮನಿಂದ ಹತನಾಗಿರುವನೆಂದೂ ತಿಳಿದು ನಿರ್ಭೀತರಾಗಿ ಭೀಮನ ಬಗ್ಗೆ ಬಹಳ ಸಂತುಷ್ಟರಾದರು.
ಅನ್ನಾತ್ಮಕಂ ಕರಮಮುಷ್ಯ ಚ ಸಂಪ್ರಚಕ್ರುಃ
ಸೋಽಪ್ಯೇತಮಾಶು ನರಸಿಂಹವಪುರ್ಧರಸ್ಯ |
ಚಕ್ರೇ ಹರೇಸ್ತದನು ಸತ್ಯವತೀಸುತಸ್ಯ
ವಿಷ್ಣೋರ್ಹಿ ವಾಕ್ ಪ್ರಚುದಿತಾಃ ಪ್ರಯಯುಸ್ತತಶ್ಚ ॥95॥
ಪಟ್ಟಣಿಗರು ಅನ್ನದ ರೂಪದಲ್ಲಿ ಕಪ್ಪವನ್ನು ಭೀಮನಿಗೇ ನೀಡಿದರು. ಭೀಮ ಅದನ್ನು ನರಸಿಂಹರೂಪಧರನಾದ ಹರಿಗೆ ಅರ್ಪಿಸಿದ. ಬಳಿಕ ವೇದವ್ಯಾಸರೂಪನಾದ ಹರಿಯ ಆಜ್ಞೆಯಿಂದ ಪ್ರೇರಿತರಾಗಿ ಪಾಂಡವರು ನಗರದಿಂದ ಮುಂದೆ ನಡೆದರು.
* * * *

ನೂರ ಅರವತ್ತಾರನೆಯ ಅಧ್ಯಾಯ
(ಭೀಮ ಬಕರ ಯುದ್ಧ ಮತ್ತು ಬಕವಧೆ )
ವೈಶಂಪಾಯನಃ
ಏವಮುಕತ್ವ ತು ಸಂಕ್ರುದ್ಧಃ ಪಾರ್ಥೋ ಬಕಜಿಘಾಂಸಯಾ |
ಉಪಾಧಾವದ್ ಬಕಶ್ಚಾಪಿ ಪಾರ್ಥಂ ಪಾರ್ಥಿವಸತ್ತಮ ॥1॥
ಎಲೈ ರಾಜಶ್ರೇಷ್ಠನೇ, ಭೀಮಸೇನನು ಹೀಗೆ ಮಾತನಾಡಿ ಬಕನನ್ನು ಕೊಲ್ಲುವ ಅಪೇಕ್ಷೆಯಿಂದ ಬಕನ ಕಡೆಗೆ ಧಾವಿಸಿದನು. ಬಕನೂ ಸಹ ಭೀಮಸೇನನ ಕಡೆಗೆ ಧಾವಿಸಿದನು.
ಮಹಾಕಾಯೋ ಮಹಾವೇಗೋ ದಾರಯನ್ನಿವ ಮೇದಿನೀಮ್ |
ವಿರೂಪರೂಪಃ ಪಿಂಗಾಕ್ಷೋ ಭೀಮಸೇನಮಭಿದ್ರುವತ್ ॥2॥
ಮಹಾಕಾಯನೂ, ಮಹಾವೇಗವುಳ್ಳವನೂ, ಕೆಂಪುಕಣ್ಣುಳ್ಳವನೂ, ವಿಕೃತರೂಪವುಳ್ಳವನೂ, ಆದ ಬಕನು ಭೂಮಿಯನ್ನು ಸೀಳುವಂತೆ ಭೀಮಸೇನನ ಕಡೆಗೆ ಓಡಿಬಂದನು.
ತ್ರಿಶಿಖಾಂ ಭ್ರುಕುಟೀಂ ಕೃತ್ವಾ ದಷ್ಟ್ವಾ ಚ ದಶನಚ್ಛದಮ್ |
ತತಃ ಸ ಭೂಯಃ ಸಂಕ್ರುದ್ಧೋ ವೃಕ್ಷಮಾದಾಯ ರಾಕ್ಷಸಃ |
ತಾಡಯಿಷ್ಯಂಸ್ತದಾ ಭೀಮಂ ತರಸಾಽಭ್ಯದ್ರುವದ್ ಬಲೀ ॥3॥
ತನ್ನ ಹುಬ್ಬುಗಳನ್ನು ಗಂಟಿಕ್ಕಿ ತುಟಿಯನ್ನು ಕಚ್ಚಿ ಆ ರಾಕ್ಷಸನು ತುಂಬಾ ಕೋಪದಿಂದ ಭೀಮಸೇನನನ್ನು ಹೊಡೆಯಲು ಪುನಃ ಇನ್ನೊಂದು ಮರವನ್ನು ಎತ್ತಿಕೊಂಡು ಭೀಮಸೇನನ ಕಡೆಗೆ ಓಡಿಬಂದನು.
ಕ್ಷಿಪ್ತಂ ಕ್ರುದ್ಧೇನ ತಂ ವೃಕ್ಷಂ ಪ್ರತಿಜಗ್ರಾಹ ವೀರ್ಯವಾನ್ |
ಸವ್ಯೇನ ಪಾಣಿನಾ ಭೀಮಃ ಪ್ರಹಸನ್ನಿವ ಭಾರತ ॥4॥
ಭಾರತನೇ, ಕ್ರುದ್ಧನಾದ ರಾಕ್ಷಸನು ಎಸೆದ ಆ ವೃಕ್ಷವನ್ನು ವೀರ್ಯವಂತನಾದ ಭೀಮನು ಅವನನ್ನು ಅಪಹಾಸ ಮಾಡುವಂತೆ ತನ್ನ ಎಡಗೈಯಿಂದ ಹಿಡಿದನು.
ತತಃ ಸ ಪುನರುದ್ಯಮ್ಯ ವೃಕ್ಷಾನ್ ಬಹುವಿಧಾನ್ ಬಲೀ |
ಪ್ರಾಹಿಣೋದ್ ಭೀಮಸೇನಾಯ ತಸ್ಮೈ ತಾಂಶ್ಚೈವ ಪಾಂಡವ ॥5॥
ಅನಂತರ ಆ ಬಲಿಷ್ಠನಾದ ರಾಕ್ಷಸನು ಅನೇಕ ವಿಧವಾದ ಮರಗಳನ್ನು ಕಿತ್ತು ಭೀಮನ ಮೇಲೆ ಎಸೆದನು. ಪಾಂಡುವಂಶದಲ್ಲಿ ಜನಿಸಿದ ಜನಮೇಜಯನೇ, ಭೀಮಸೇನನೂ ಅವುಗಳನ್ನು ತನ್ನ ಕೈಯಲ್ಲಿ ಹಿಡಿದು ಬಕನ ಮೇಲೆ ಎಸೆದನು.

ತದ್ವೃಕ್ಷಯುದ್ಧಮಭವನ್ಮಹೀರುಹವಿನಾಶನಮ್ |
ಸುಘೋರಂ ವೈ ಮಹಾರಾಜ ಬಕಪಾಂಡವಯೋಸ್ತದಾ ॥6॥
ಮಹಾರಾಜನೇ, ಅಗ ಭೀಮಸೇನನಿಗೂ ಮತ್ತು ಬಕನಿಗೂ ಅಲ್ಲಿದ್ದ ವೃಕ್ಷಗಳನ್ನೆಲ್ಲಾ ನಾಶಮಾಡುವಂತಹ ಘೋರವಾದ ವೃಕ್ಷಯುದ್ಧವಾಯಿತು.
ನಾಮ ವಿಶ್ರಾವ್ಯ ತು ಬಕಃ ಸಮಭಿದ್ರುತ್ಯ ಪಾಂಡವಮ್ |
ಭುಜಾಭ್ಯಾಂ ಪರಿಜಗ್ರಾಹ ಭೀಮಸೇನಂ ಮಹಾಬಲಮ್ ॥7॥
ಆಗ ಬಕನು ತನ್ನ ಹೆಸರನ್ನು ಗಟ್ಟಿಯಾಗಿ ಹೇಳುತ್ತಾ ಓಡಿಬಂದು ಮಹಾಬಲನಾದ ಭೀಮಸೇನನನ್ನು ತನ್ನ ಭುಜಗಳಿಂದ ಹಿಡಿದನು.
ಭೀಮಸೇನೋಽಪಿ ತದ್ರಕ್ಷಃ ಪರಿಗೃಹ್ಯ ಮಹಾಭುಜಃ |
ವಿಸ್ಫುರಂತಂ ಮಹಾವೇಗಂ ವಿಚಕರ್ಷ ಬಲಾದ್ ಬಲೀ ॥8॥
ಮಹಾಭುಜನಾದ ಭೀಮಸೇನನೂ ತನ್ನ ಬಲದಿಂದ ಆ ರಾಕ್ಷಸನನ್ನು ಹಿಡಿದು ಬಿಡಿಸಿಕೊಳ್ಳಲು ಒದ್ದಾಡುತ್ತಿದ್ದ ಮಹಾವೇಗವುಳ್ಳ ಆ ರಾಕ್ಷಸನನ್ನು ಭೂಮಿಯ ಮೇಲೆ ಎಳೆದನು.
ಸ ಕೃಷ್ಯಮಾಣೋ ಭೀಮೇನ ಕರ್ಷಮಾಣಶ್ಚ ಪಾಂಡವಮ್ |
ಸಮಯುಧ್ಯತ ತೀವ್ರೇಣ ಕ್ಲಮೇನ ಪುರುಷಾದಕಃ |
ತಯೋರ್ವೇಗೇನ ಮಹತಾ ಪೃಥಿವೀ ಸಮಕಂಪತ ॥9॥
ಆ ರಾಕ್ಷಸನು ಭೀಮನಿಂದ ಎಳೆದಾಡಲ್ಪಟ್ಟು, ಭೀಮನನ್ನೂ ಎಳೆದಾಡುತ್ತಾ ಬಹಳ ಶ್ರಮದಿಂದ ಯುದ್ಧ ಮಾಡಿದನು. ಅವರ ಮಹಾವೇಗಕ್ಕೆ ಭೂಮಿಯು ನಡುಗಿತು.
ಪಾದಪಾಂಶ್ಚ ಮಹಾಕಾಯಾಂಶ್ಚೂರ್ಣಯಾಮಾಸತುಸ್ತದಾ |
ಜಗ್ರಾಹ ಭೀಮಃ ಪಾಣಿಭ್ಯಾಂ ಗೃಹೀತ್ವಾ ಚೈನಮಾಕ್ಷಿಪತ್ ॥10॥
ಅವರಿಬ್ಬರೂ ದೊಡ್ಡ ದೊಡ್ಡ ಮರಗಳನ್ನು ಮುರಿದು ಪುಡಿ ಮಾಡಿದರು. ಭೀಮನು ತನ್ನ ಎರಡೂ ಕೈಗಳಿಂದ ರಾಕ್ಷಸನನ್ನು ಹಿಡಿದು ಎಸೆದನು.
ಆಕ್ಷಿಪ್ತೋ ಭೀಮಸೇನೇನ ಪುನರೇವೋತ್ಥಿತೋ ಹಸನ್ |
ಆಲಿಂಗ್ಯಾವಿದ್ಧ್ಯ ಚೈವೈನಂ ನ್ಯಹನದ್ ವಸುಧಾತಳೇ ॥11॥
ಭೀಮನಿಂದ ಎಸೆಯಲ್ಪಟ್ಟ ರಾಕ್ಷಸನು ಪುನಃ ಎದ್ದುನಿಂತು ನಗುತ್ತಾ ಭೀಮಸೇನನನ್ನು ಆಲಿಂಗಿಸಿ ಭೂಮಿಯ ಮೇಲೆ ಅವನನ್ನು ಹೊಡೆದನು.
ಭೀಮೋ ವ್ಯಸರ್ಜಯಚ್ಚೈನಂ ಸಮಾಶ್ವಾಸಿಹಿ ಚೇತ್ಯಪಿ |
ಆಸ್ಫೋಟಯಾಮಾಸ ಬಲೀ ಉತ್ತಿಷ್ಠಸ್ವೇತಿ ಚಾಬ್ರವೀತ್ ॥12॥
ಭೀಮನು ಅವನನ್ನು ಸುಧಾರಿಸಿಕೋ ಎಂದು ಹೇಳಿ ಸ್ವಲ್ಪ ಸಮಯ ಬಿಟ್ಟು ತನ್ನ ಭುಜಗಳನ್ನು ತಟ್ಟಿ ಎದ್ದೇಳು ಎಂದು ಹೇಳಿದನು.
ಸಮುತ್ಪತ್ಯ ತತಃ ಕ್ರುದ್ಧೋ ರೂಪಂ ಕೃತ್ವಾ ಮಹತ್ತರಮ್ |
ವಿರೂಪಃ ಸಹಸಾ ತಸ್ಥೌ ತರ್ಜಯಿತ್ವಾ ವೃಕೋದರಮ್ ॥13॥
ಆ ಕ್ರುದ್ಧನಾದ ರಾಕ್ಷಸನು ಭಯಂಕರವಾದ ದೊಡ್ಡ ವಿಕಾರವಾದ ರೂಪವನ್ನು ಮಾಡಿಕೊಂಡು ಹಾರಿ ಬಂದು ಭೀಮನ ಎದುರಿಗೆ ನಿಂತು ಅವನನ್ನು ಹೆದರಿಸಿದನು.
ಅಹಸದ್ ಭೀಮಸೇನೋಽಥ ರಾಕ್ಷಸಂ ಭೀಮದರ್ಶನಮ್ |
ಭೀಮಸೇನಸ್ತು ಜಗ್ರಾಹ ಗ್ರೀವಾಯಾಂ ಭೀಮದರ್ಶನಮ್ |
ಭುಜಾಭ್ಯಾಂ ಜಾನುನೈಕೇನ ಪೃಷ್ಠೇ ಸಮಭಿಪೀಡಯತ್ ॥14॥
ಆಗ ಭೀಮಸೇನನು ಭಯಂಕರವಾಗಿ ಕಾಣುತ್ತಿದ್ದ ಆ ರಾಕ್ಷಸನನ್ನು ನೋಡಿ ಅಪಹಾಸವನ್ನು ಮಾಡಿ ಅವನನ್ನು ಕತ್ತಿನಲ್ಲಿ ಹಿಡಿದುಕೊಂಡು, ತನ್ನ ಮಂಡಿಯನ್ನು ಅವನ ಬೆನ್ನಿನ ಕೆಳಬಾಗದಲ್ಲಿ ಇಟ್ಟು, ತನ್ನ ಭುಜಗಳಿಂದ ಅವನನ್ನು ಪೀಡಿಸಿದನು.
ತತಃ ಕ್ರುದ್ಧೋ ವಿಸೃಜ್ಯೈನಂ ಸ ಭೀಮಸ್ತಸ್ಯ ರಕ್ಷಸಃ |
ಸ್ವಾಂ ಕಟೀಮೀಷದುತ್ಕ್ಷಿಪ್ಯ ಬಾಹೂ ಚೈವ ಪರಾಮೃಶತ್ ॥15॥
ಅನಂತರ ಕ್ರುದ್ಧನಾದ ಭೀಮನು ಅವನನ್ನು ಬಿಟ್ಟು ತನ್ನ ಸೊಂಟವನ್ನು ಸ್ವಲ್ಪ ಮೇಲಕ್ಕೆತ್ತಿ ಆ ರಾಕ್ಷಸನ ಎರಡು ಬಾಹುಗಳನ್ನು ಹಿಡಿದನು.
ತಸ್ಯ ಬಾಹೂ ಸಮಾದಾಯ ತ್ವರಮಾಣೋ ವೃಕೋದರಃ |
ಉತ್ಕ್ಷಿಪ್ಯ ಚಾವಧೂಯೈನಂ ಪಾತಯನ್ ಬಲವಾನ್ ಭುವಿ ॥16॥
ತಂ ತು ವಾಮೇನ ಪಾದೇನ ಕ್ರುದ್ಧೋ ಭೀಮಪರಾಕ್ರಮಃ |
ಉರಸ್ಯೇನಂ ಸಮಾಜ್ಘ್ನೇ ಭೀಮಸ್ತು ಪತಿತಂ ಭುವಿ ॥17॥
ವೇಗಶಾಲಿಯಾದ ಭೀಮನು ಅವನ ಎರಡು ಬಾಹುಗಳನ್ನೂ ಹಿಡಿದು ಅವನನ್ನು ಕೊಡವಿ ಮೇಲಕ್ಕೆಸೆದು ಭೂಮಿಯ ಮೇಲೆ ಬೀಳಿಸಿದನು. ಭೀಮಪರಾಕ್ರಮವುಳ್ಳ ಕ್ರುದ್ಧನಾದ ಭೀಮನು ಭೂಮಿಯ ಮೇಲೆ ಬಿದ್ದ ಅವನಿಗೆ ತನ್ನ ಎಡಗಾಲಿನಿಂದ ಎದೆಯಲ್ಲಿ ಒದ್ದನು.
ಸ ಸಂಕ್ರುದ್ಧಃ ಸಮುತ್ಪತ್ಯ ಭೀಮಮಪ್ಯಹನದ್ ಭೃಶಮ್ |
ವ್ಯಾತ್ತಾನನೋ ದೀಪ್ತಜಿಹ್ವೋ ಬಾಹುಮುದ್ಯಮ್ಯ ದಕ್ಷಿಣಮ್ ॥18॥
ತೇನಾಭಿದ್ರುತ್ಯ ಕ್ರುದ್ಧೇನ ಭೀಮೋ ಮೂರ್ಧ್ನಿ ಸಮಾಹತಃ |

ಮುಷ್ಟಿನಾ ಜಾನುನಾ ಚೈವ ವಾಮೇ ಪಾರ್ಶ್ವೇ ಸಮರ್ಪಿತಃ ॥19॥
ಬಹಳ ಕೋಪಗೊಂಡ ಆ ರಾಕ್ಷಸನು ನೆಗೆದು ಬಾಯಿಯನ್ನು ಅಗಲವಾಗಿ ತೆಗೆದು ನಾಲಿಗೆಯನ್ನು ಚಾಚಿ ಬಲಬಾಹುವನ್ನು ಎತ್ತಿ ಭೀಮನಿಗೆ ಹೊಡೆದನು. ಮತ್ತೆ ಕೋಪದಿಂದ ಓಡಿಬಂದು ಭೀಮನ ತಲೆಗೆ ಹೊಡೆದನು. ತನ್ನ ಮುಷ್ಟಿಯಿಂದ ಮತ್ತು ಮಂಡಿಯಿಂದ ಭೀಮನ ಎಡಪಕ್ಕೆಗಳಿಗೆ ಹೊಡೆದನು.
ಏವಂ ನಿಹನ್ಯಮಾನಃ ಸ ರಾಕ್ಷಸೇನ ಬಲೀಯಸಾ |
ರೋಷೇಣ ಮಹತಾऽऽವಿಷ್ಟೋ ಭೀಮೋ ಭೀಮಪರಾಕ್ರಮಃ |
ಸ ಸಂಕ್ರುದ್ಧಃ ಸಮುತ್ಪತ್ಯ ಭೀಮೋ ಜಗ್ರಾಹ ರಾಕ್ಷಸಮ್ ॥20॥
ಹೀಗೆ ಬಲಿಷ್ಠನಾದ ರಾಕ್ಷಸನಿಂದ ಚೆನ್ನಾಗಿ ಹೊಡೆಯಲ್ಪಟ್ಟ ಭೀಮಪರಾಕ್ರಮವುಳ್ಳ ಭೀಮನು ಮಹಾರೋಷದಿಂದ ಕೂಡಿದವನಾಗಿ ಹಾರಿ ಆ ರಾಕ್ಷಸನನ್ನು ಹಿಡಿದನು.
ತಾವನ್ಯೋನ್ಯಂ ಪೀಡಯಂತೌ ಪುರುಷಾದವೃಕೋದರೌ |
ಮತ್ತಾವಿವ ಮಹಾನಾಗಾವನ್ಯೋನ್ಯಂ ವಿಚಕರ್ಷತುಃ ॥21॥
ಭೀಮಬಕರಿಬ್ಬರೂ ಪರಸ್ಪರವಾಗಿ ಪೀಡಿಸುತ್ತಾ ಮದಿಸಿದ ಮಹಾಗಜಗಳಂತೆ ಒಬ್ಬರನ್ನೊಬ್ಬರು ಎಳೆದಾಡಿದರು.
ಬಾಹುವಿಕ್ಷೇಪಶಬ್ದೈಶ್ಚ ಭೀಮರಾಕ್ಷಸಯೋಸ್ತದಾ |
ವೇತ್ರಕೀಯಪುರೀ ಸರ್ವಾ ವಿತ್ರಸ್ತಾ ಸಮಪದ್ಯತ ॥22॥
ಆಗ ಭೀಮ ಮತ್ತು ರಾಕ್ಷಸರ ಬಾಹುಗಳ ಶಬ್ದದಿಂದಲೂ ಮತ್ತು ಎಸೆಯುವ ಶಬ್ದಗಳಿಂದಲೂ ಏಕಚಕ್ರನಗರದ ಎಲ್ಲಾ ಜನರೂ ಸಂತ್ರಸ್ತರಾದರು.
ತಯೋರ್ವೇಗೇನ ಮಹತಾ ತತ್ರ ಭೂಮಿರಕಂಪತ |
ಪಾದಪಾನ್ ವೀರುಧಶ್ಚೈವ ಚೂರ್ಣಯಾಮಾಸತುಶ್ಚ ತೌ ॥23॥
ಅವರ ಮಹಾವೇಗದಿಂದ ಅಲ್ಲಿ ಭೂಮಿಯು ನಡುಗಿತು. ಅವರು ವೃಕ್ಷಗಳನ್ನೂ ಮತ್ತು ಲತೆಗಳನ್ನೂ ಪುಡಿ ಮಾಡಿದರು.
ಸಮಾಗತೌ ಚ ತೌ ವೀರಾವನ್ಯೋನ್ಯವಧಕಾಂಕ್ಷಿಣೌ |
ಅಶ್ಮಭಿಃ ಪಾದವೇಗೈಶ್ಚ ಚೂರ್ಣಯಾಮಾಸತುಸ್ತದಾ ॥24॥
ಪರಸ್ಪರ ವಧೆಯನ್ನು ಬಯಸಿ ಯುದ್ಧ ಮಾಡಿದ ಅವರಿಬ್ಬರೂ ಕಲ್ಲುಗಳಿಂದಲೂ ಮತ್ತು ತಮ್ಮ ಪಾದದ ವೇಗಗಳಿಂದಲೂ ಎಲ್ಲವನ್ನೂ ಪುಡಿಮಾಡಿದರು.
ಅಥ ತಂ ಲೋಳಯಿತ್ವಾ ತು ಭೀಮಸೇನೋ ಮಹಾಬಲಃ |
ಅಗೃಹ್ಣಾತ್ ಪರಿರಭ್ಯೈನಂ ಭುಜಾಭ್ಯಾಂ ಭರತರ್ಷಭ ॥25॥
ಭರತರ್ಷಭನೇ, ಅನಂತರ ಮಹಾಬಲನಾದ ಭೀಮಸೇನನು ಅವನನ್ನು ತೂಗಾಡಿಸಿ ತನ್ನ ಭುಜಗಳಿಂದ ಆಲಿಂಗಿಸಿ ಗಟ್ಟಿಯಾಗಿ ಹಿಡಿದನು.
ಜಾನುಭ್ಯಾಂ ಪರಿಜಗ್ರಾಹ ಭೀಮಸೇನೋ ಬಕಂ ಬಲಾತ್ |
ವಿಸ್ಫುರಂತಂ ಮಹಾಕಾಯಂ ವಿಚಕರ್ಷ ಮಹಾಬಲಃ ॥26॥
ಮಹಾಬಲನಾದ ಭೀಮಸೇನನು ಮಹಾಕಾಯನಾದ ಬಕನನ್ನು ತನ್ನ ಬಲದಿಂದ ಮಂಡಿಗಳಲ್ಲಿ ಹಿಡಿದು ಬಿಡಿಸಿಕೊಳ್ಳಲು ಮಿಸುಕಾಡುತ್ತಿದ್ದ ಅವನನ್ನು ಎಳೆದಾಡಿದನು.
ವಿಕೃಷ್ಯಮಾಣೋ ಭೀಮೇನ ಚಕರ್ಷ ಯುಧಿ ಪಾಂಡವಮ್ |
ಸಮಯುಜ್ಯತ ತೀವ್ರೇಣ ಶ್ರಮೇಣ ಪುರುಷಾದಕಃ ॥27॥
ಭೀಮನಿಂದ ಎಳೆಯಲ್ಪಟ್ಟ ರಾಕ್ಷಸನು ಯುದ್ಧದಲ್ಲಿ ಭೀಮನನ್ನೂ ಎಳೆದನು. ಆದರೆ ಆ ನರಭಕ್ಷಕನಿಗೆ ತೀವ್ರವಾದ ಆಯಾಸವುಂಟಾಯಿತು.
ಕ್ಷೀಯಮಾಣಂ ತು ತಂ ಭೀಮೋ ನಿರೀಕ್ಷ್ಯ ಪುರುಷಾದಕಮ್ |
ನಿಷ್ಪೀಡ್ಯ ಭೂಮೌ ಪದ್ಭ್ಯಾಂ ವೈ ಸಮಾಜ್ಘ್ನೇ ವೃಕೋದರಃ ॥28॥
ಆ ನರಭಕ್ಷಕನ ಶಕ್ತಿಯು ಕ್ಷೀಣಿಸುತ್ತಿರುವುದನ್ನು ಕಂಡ ಭೀಮನು ಅವನನ್ನು ಭೂಮಿಯ ಮೇಲೆ ಕೆಡವಿ ತನ್ನ ಪಾದಗಳಿಂದ ಒದ್ದನು.
ತತೋಽಸ್ಯ ಜಾನುನಾ ಪೃಷ್ಠಮವಪೀಡ್ಯ ಬಲಾದಿವ |
ಬಾಹುನಾ ಪರಿಜಗ್ರಾಹ ದಕ್ಷಿಣೇನ ಶಿರೋಧರಾಮ್ ॥29॥
ಅನಂತರ ತನ್ನ ಮಂಡಿಯಿಂದ ಅವನ ಬೆನ್ನನ್ನು ಬಲವಾಗಿ ಒತ್ತಿ ಹಿಡಿದು ಬಲಗೈಯಿಂದ ಅವನು ಕತ್ತನ್ನು ಹಿಡಿದನು.
ಸವ್ಯೇನ ಚ ಕಟೀದೇಶೇ ವಾಸಸ್ಯಾದಾಯ ಪಾಂಡವಃ |
ಬಭಂಜ ತತ್ ತದಾ ರಕ್ಷೋ ವ್ಯನದದ್ ಭೈರವಂ ರವಮ್ ॥30॥
ಪಾಂಡವನಾದ ಭೀಮನು ತನ್ನ ಎಡಗೈಯನ್ನು ವಸ್ತ್ರವನ್ನುಡುವ ಅವನ ಕಟಿದೇಶದಲ್ಲಿ ಊರಿ ಅವನನ್ನು ಹಿಂದಕ್ಕೆ ಎಳೆದು ಮುರಿದನು. ಆಗ ಆ ರಾಕ್ಷಸನು ಭೈರವನಾದವನ್ನು ಮಾಡಿದನು.
ತತೋಽಸ್ಯ ರುಧಿರಂ ವಕ್ತ್ರಾತ್ ಪ್ರಸುಸ್ರಾವ ವಿಶಾಂಪತೇ |
ಭಜ್ಯಮಾನಸ್ಯ ಭೀಮೇನ ತಸ್ಯ ಘೋರಸ್ಯ ರಕ್ಷಸಃ ॥31॥
ರಾಜನ್, ಭೀಮನಿಂದ ಆ ಘೋರನಾದ ರಾಕ್ಷಸನು ಮುರಿಯಲ್ಪಡುವಾಗ ಅವನು ಮುಖದಿಂದ ರಕ್ತವು ಸುರಿಯಿತು.
ತತೋ ಭೀಮಸ್ತಮಾದಾಯ ಗತಾಸುಂ ಪುರುಷಾದಕಮ್ |
ನಗರದ್ವಾರಮಾಸಾದ್ಯ ಹ್ಯುತ್ಸಸರ್ಜ ಮಹಾಬಲಃ ॥32॥

ಅನಂತರ ಮಹಾಬಲನಾದ ಭೀಮನು ಮೃತನಾದ ನರಭಕ್ಷಕನನ್ನು ಎಳೆದುಕೊಂಡು ನಗರದ್ವಾರಕ್ಕೆ ಬಂದು ಅಲ್ಲಿ ಅವನನ್ನು ವಿಸರ್ಜಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಟ್‌ಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಅರವತ್ತಾರನೆಯ ಅಧ್ಯಾಯ ಮುಗಿಯಿತು.
ನೂರ ಅರವತ್ತೇಳನೆಯ ಅಧ್ಯಾಯ
(ಶರಣಾಗತರಾದ ಬಕಪರಿವಾರಕ್ಕೆ ಭೀಮನಿಂದ ಅಭಯದಾನ ಮತ್ತು ನಿಯಮ ಬಂಧನ, ಪುನಃ ಕೆಲವು ಕಾಲ ಏಕಚಕ್ರನಗರದಲ್ಲಿ ವಾಸ )
ವೈಶಂಪಾಯನಃ
ತೇನ ಶಬ್ದೇನ ವಿತ್ರಸ್ತೋ ಜನಸ್ತಸ್ಯಾಥ ರಕ್ಷಸಃ |
ನಿಷ್ಪಪಾತ ಗೃಹಾದ್ ರಾಜನ್ ಸಹೈವ ಪರಿಚಾರಿಭಿಃ॥1॥
ಭೀಮೇನ ದದೃಶುಶ್ಚೈನಂ ಬಕಂ ಚ ವಿನಿಪಾತಿತಮ್ |
ತತಸ್ತು ನಿಹತಂ ದೃಷ್ಟ್ವಾ ರಾಕ್ಷಸೇಂದ್ರಂ ಮಹಾಬಲಮ್ |
ಬಕಾಃ ಪರಮಸಂತ್ರಸ್ತಾ ಭೀಮಂ ಶರಣಮಾಯಯುಃ ॥2॥
ರಾಜನೇ, ಬಕನನ್ನು ಮುರಿದ ಶಬ್ದದಿಂದ ಹೆದರಿದ ಬಕನ ಪರಿವಾರಜನರು ತಮ್ಮ ಪರಿಚಾರಕರೊಂದಿಗೆ ತಮ್ಮ ಬಿಡಾರಗಳಿಂದ ಹೊರಗೆ ಬಂದರು. ಅವರು ಭೀಮನಿಂದ ಕೆಳಗೆ ಉರುಳಿಸಲ್ಪಟ್ಟಿದ್ದ ಬಕನನ್ನು ನೋಡಿದರು. ಆನಂತರ ಮಹಾಬಲನಾದ ರಾಕ್ಷಸೇಂದ್ರನು ನಿಹತನಾದುದನ್ನು ನೋಡಿ ಬಕನ ಬಂಧುಗಳೆಲ್ಲರೂ ಬಹಳ ಹೆದರಿಕೆಯಿಂದ ಭೀಮನಿಗೆ ಶರಣಾಗತರಾದರು.
ತಾನ್ ಭೀತಾನ್ ವಿಗತಜ್ಞಾನಾನ್ ಭೀಮಃ ಪ್ರಹರತಾಂ ವರಃ |
ಸಾಂತ್ವಯಾಮಾಸ ಬಲವಾನ್ ಸಮಯೇ ಚ ನ್ಯವೇಶಯತ್ ॥3॥
ಭೀತರಾಗಿ ಜ್ಞಾನಶೂನ್ಯರಾದ ಅವರನ್ನು ನೋಡಿ ಬಲಿಷ್ಠನಾದ ಮತ್ತು ಪ್ರಹಾರಮಾಡುವವರಲ್ಲಿ ಶ್ರೇಷ್ಠನಾದ ಭೀಮನು ಸಮಾಧಾನದ ಮಾತುಗಳನ್ನಾಡಿ ಅವರನ್ನು ನಿಯಮದಲ್ಲಿ ಸ್ಥಾಪಿಸಿದನು.
ನ ಹಿಂಸ್ಯಾ ಮಾನುಷಾ ಭೂಯೋ ಯುಷ್ಮಾಭಿರಿಹ ಕರ್ಹಿಚಿತ್ |
ಹಿಂಸತಾಂ ಚ ವಧಃ ಶೀಘ್ರಮೇವಮೇವ ಭವಿಷ್ಯತಿ ॥4॥
ನೀವು ಇಲ್ಲಿ ಮನುಷ್ಯರಿಗೆ ಯಾವ ಕಾರಣದಿಂದಲೂ ಹಿಂಸೆಯನ್ನು ಕೊಡಬಾರದು. ಹಿಂಸೆಯನ್ನು ಕೊಟ್ಟವರಿಗೆ ಶೀಘ್ರವಾಗಿ ಇಂತಹ ವಧೆಯೇ ಉಂಟಾಗುವುದು.
ತಸ್ಯ ತದ್ವಚನಂ ಶ್ರುತ್ವಾ ತಾನಿ ರಕ್ಷಾಂಸಿ ಭಾರತ |
ಏವಮಸ್ತ್ವಿತಿ ತಂ ಪ್ರಾಹುರ್ಜಗೃಹುಃ ಸಮಯಂ ಚ ತಮ್ ॥5॥
ಭಾರತನೇ, ಭೀಮನ ಆ ಮಾತುಗಳನ್ನು ಕೇಳಿ ಆ ರಾಕ್ಷಸರು ಹಾಗೆಯೇ ಆಗಲಿ ಎಂದು ಒಪ್ಪಿ ಅವನ ನಿಯಮವನ್ನು ಸ್ವೀಕರಿಸಿದರು.
ಸಗಣಸ್ತು ಬಕಭ್ರಾತಾ ಪ್ರಾಣಮತ್ ಪಾಂಡವಂ ತದಾ |
ತತಃ ಪ್ರಭೃತಿ ರಕ್ಷಾಂಸಿ ತತ್ರ ಸೌಮ್ಯಾನಿ ಭಾರತ |
ನಗರೇ ಪ್ರತ್ಯದೃಶ್ಯಂತ ನರೈರ್ನಗರವಾಸಿಭಿಃ ॥6॥
ಆಗ ಬಕನ ತಮ್ಮನು ತನ್ನ ಪರಿವಾರದೊಂದಿಗೆ ಭೀಮನಿಗೆ ನಮಸ್ಕಾರ ಮಾಡಿದನು. ಭಾರತನೇ, ಅಲ್ಲಿಂದ ಮುಂದಕ್ಕೆ ಆ ನಗರದಲ್ಲಿ ರಾಕ್ಷಸರು ಸೌಮ್ಯರೂಪದಿಂದ ಸಂಚರಿಸುವುದನ್ನು ನಗರವಾಸಿಗಳಾದ ಜನರು ನೋಡಿದರು.
ತತೋ ಭೀಮಸ್ತಮಾದಾಯ ಗತಾಸುಂ ಪುರುಷಾದಕಮ್ |
ನಿಷ್ಕರ್ಣನೇತ್ರಂ ನಿರ್ಜಿಹ್ವಂ ನಿಃಸಂಜ್ಞಂ ಕಂಠಪೀಡನಾತ್ |
ಕುರ್ವನ್ ಬಹುವಿಧಾಂ ಚೇಷ್ಟಾಂ ಪುರದ್ವಾರಮಕರ್ಷತ ॥7॥
ಅನಂತರ ಭೀಮನು ಕಂಠಪೀಡೆಯ ಕಾರಣದಿಂದ ಕಣ್ಣು, ಕಿವಿ ಮತ್ತು ನಾಲಿಗೆಗಳನ್ನು ಕಳೆದುಕೊಂಡು, ಸಂಜ್ಞೆಯನ್ನೂ ಕಳೆದುಕೊಂಡು ಮೃತನಾಗಿದ್ದ ಆ ನರಭಕ್ಷಕನನ್ನು ಅನೇಕ ವಿಧ ಚೇಷ್ಟೆಯನ್ನು ಮಾಡುತ್ತಾ ಪುರದ್ವಾರದವರೆಗೆ ಎಳೆದು ತಂದನು.
ಸ ಏವ ರಾಕ್ಷಸೋ ನೂನಂ ಪುನರಾಯಾತಿ ನಃ ಪುರೀಮ್ |
ಸಬಾಲವೃದ್ಧಾಃ ಪುರುಷಾ ಇತಿ ಭೀತಾಃ ಪ್ರದುದ್ರುವುಃ ॥8॥
ಆ ರಾಕ್ಷಸನೇ ಪುನಃ ನಗರಕ್ಕೆ ಬರುತ್ತಿದ್ದಾನೆ ಎಂದು ತಿಳಿದು ಬಾಲರೂ ವೃದ್ಧರೂ ಸೇರಿದಂತೆ ಪುರುಷರು ಹೆದರಿಕೆಯಿಂದ ಓಡಿದರು.
ದ್ವಾರದೇಶೇ ವಿನಿಕ್ಷಿಪ್ಯ ನಗರಸ್ಯ ಜಗಾಮ ಹ |
ತತಃ ಸ ಭೀಮಸ್ತಂ ಹತ್ವಾ ಗತ್ವಾ ಬ್ರಾಹ್ಮಣವೇಶ್ಮ ತತ್ |
ಬಲೀವರ್ದೌ ಚ ಶಕಟಂ ಬ್ರಾಹ್ಮಣಾಯ ನ್ಯವೇದಯತ್ ॥9॥
ಭೀಮನು ಬಕನ ಶವವನ್ನು ನಗರದ ಕೋಟೆಯ ಬಾಗಿಲಿನ ಹತ್ತಿರ ಇಟ್ಟು ಹೊರಟನು. ಅನಂತರ ಬಕನನ್ನು ಕೊಂದ ಆ ಭೀಮನು ಬ್ರಾಹ್ಮಣನ ಮನೆಗೆ ಹೋಗಿ ಎತ್ತುಗಳನ್ನು ಮತ್ತು ಗಾಡಿಯನ್ನು ಬ್ರಾಹ್ಮಣನಿಗೆ ಅರ್ಪಿಸಿದನು.
ಆಚಚಕ್ಷೇಽಥ ತತ್ಸರ್ವಂ ರಾತ್ರೌ ಯುದ್ಧಮಭೂದ್ ಯಥಾ |
ತತೋ ನರಾ ವಿನಿಷ್ಕ್ರಮ್ಯ ನಾಗರಾಃ ಕಾಲ್ಯಮೇವ ತು |
ದದೃಶುರ್ನಿಹಿತಂ ಭೂಮೌ ರಾಕ್ಷಸಂ ರುಧಿರೋಕ್ಷಿತಮ್ ॥10॥
ರಾತ್ರಿ ನಡೆದ ಯುದ್ಧದ ವಿವರವನ್ನು ಅವನಿಗೆ ತಿಳಿಸಿದನು. ಅನಂತರ ಆ ನಗರವಾಸಿಗಳು ಪ್ರಾತಃಕಾಲದಲ್ಲಿ ಹೊತ್ತಿಗೆ ಮುಂಚೆಯೇ

ಎದ್ದು, ದ್ವಾರದೇಶದಲ್ಲಿ ಸತ್ತು ಭೂಮಿಯಲ್ಲಿ ಬಿದ್ದಿರುವ ರಕ್ತದಿಂದ ತೊಯ್ದ ಆ ರಾಕ್ಷಸನನ್ನು ನೋಡಿದರು.
ತಮದ್ರಿಕೂಟಪ್ರತಿಮಂ ವಿನಿಷ್ಕೀರ್ಣಂ ಭಯಾವಹಮ್ |
ಏಕಚಕ್ರಾಂ ಪುನರ್ಗತ್ವಾ ಪ್ರವೃತ್ತಿಂ ಪ್ರದದುಃ ಪುರೇ ॥11॥
ಪರ್ವತದ ಸಮೂಹದಂತೆ ಇದ್ದ ಅವನು ಭಯಂಕರವಾಗಿ ಘಾಸಿಸಲ್ಪಟ್ಟಿರುವುದನ್ನು ನೋಡಿ ಏಕಚಕ್ರನಗರದೊಳಗೆ ಪ್ರವೇಶಿಸಿ ಎಲ್ಲರಿಗೂ ವಾರ್ತೆಯನ್ನು ತಿಳಿಸಿದರು.
ತತಃ ಸಹಸ್ರಶೋ ರಾಜನ್ ನರಾ ನಗರವಾಸಿನಃ |
ತತ್ರಾಜಗ್ಮುರ್ಬಕಂ ದ್ರಷ್ಟುಂ ಸಸ್ತ್ರೀಕಾ ವೃದ್ಧಬಾಲಕಾಃ ॥12॥
ರಾಜನೇ, ಅನಂತರ ಆ ನಗರವಾಸಿಗಳಾದ ಪುರುಷರೂ, ಸ್ತ್ರೀಯರೂ, ವೃದ್ಧರೂ ಮತ್ತು ಬಾಲಕರೂ ಬಕನನ್ನು ನೋಡಲು ಸಹಸ್ರಸಂಖ್ಯೆಯಲ್ಲಿ ಬಂದರು.
ತತಸ್ತೇ ವಿಸ್ಮಿತಾಃ ಸರ್ವೇ ಕರ್ಮ ದೃಷ್ಟ್ವಾಽತಿಮಾನುಷಮ್ |
ದೈವತಾನ್ಯರ್ಚಯಾಮಾಸುಃ ಸರ್ವ ಏವ ವಿಶಾಂಪತೇ ॥13॥
ರಾಜನೇ, ಆಗ ಮನುಷ್ಯರಲ್ಲಿ ಮೀರಿದ ಸಾಮರ್ಥ್ಯದ ಆ ಕರ್ಮವನ್ನು ನೋಡಿ ಅವರೆಲ್ಲರೂ ವಿಸ್ಮಿತರಾಗಿ ಏಕಚಕ್ರನಗರದಲ್ಲಿದ್ದ ಎಲ್ಲಾ ದೇವಾಲಯಗಳಲ್ಲಿ ಪೂಜೆಯನ್ನು ಸಲ್ಲಿಸಿದರು.
ತತಃ ಪರೀಕ್ಷಯಾಮಾಸುಃ ಕಸ್ಯ ವಾರೋಽದ್ಯ ಭೋಜನೇ |
ಜ್ಞಾತ್ವಾ ಚಾಗಮ್ಯ ತಂ ವಿಪ್ರಂ ಪಪ್ರಚ್ಛುಃ ಸರ್ವಮೇವ ತತ್ ॥14॥
ಆನಂತರ ರಾಕ್ಷಸನಿಗೆ ಭೋಜನವನ್ನು ಒದಗಿಸಲು ಇವತ್ತು ಯಾರ ವಾರ ಎಂದು ವಿಚಾರಿಸಿ ಆ ಬ್ರಾಹ್ಮಣನ ಬಳಿಗೆ ಬಂದು ಎಲ್ಲ ವಿಷಯದಲ್ಲಿಯೂ ಅವನನ್ನು ಪ್ರಶ್ನಿಸಿದರು.
ಏವಂ ಪೃಷ್ಟೋ ಬಹುವಿಧಂ ರಕ್ಷಮಾಣಶ್ಚ ಪಾಂಡವಾನ್ |
ಉವಾಚ ನಾಗರಾನ್ ಸರ್ವಾನ್ ಕಾಶ್ಯಪೋ ನಾಮತಸ್ತದಾ ॥15॥
ಹೀಗೆ ಬಹುವಿಧವಾಗಿ ಕೇಳಲ್ಪಟ್ಟ ಆ ಕಾಶ್ಯಪ ಎಂಬ ಹೆಸರಿನ ಬ್ರಾಹ್ಮಣನು ಪಾಂಡವರ ರಹಸ್ಯವನ್ನು ರಕ್ಷಣೆ ಮಾಡುತ್ತಾ ನಗರವಾಸಿಗಳನ್ನು ಕುರಿತು ಹೇಳಿದನು.
ಆಜ್ಞಾಪಿತಂ ಮಾಮನಿಶಂ ರುದಂತಂ ಸಹ ಬಂಧುಭಿಃ |
ದದರ್ಶ ಬ್ರಾಹ್ಮಣಃ ಕಶ್ಚಿನ್ಮಂತ್ರಸಿದ್ಧೋ ಮಹಾಬಲಃ ॥16॥
ನಾಳೆಗೆ ಅನ್ನವನ್ನು ಒದಗಿಸಬೇಕೆಂಬ ಆದೇಶವನ್ನು ತಿಳಿದು ನಾನು ಬಂಧುಗಳ ಜೊತೆಯಲ್ಲಿ ಅಳುತ್ತಿರುವಾಗ ಮಂತ್ರಸಿದ್ಧನೂ, ಮಹಾಬಲನೂ ಆದ ಒಬ್ಬ ಬ್ರಾಹ್ಮಣನು ನನ್ನನ್ನು ನೋಡಿದನು.
ಪರಿಪೃಚ್ಛ್ಯ ಸ ಮಾಂ ಪೂರ್ವಂ ಪರಿಕ್ಲೇಶಂ ಪುರಸ್ಯ ಚ |
ಅಬ್ರವೀದ್ ಬ್ರಾಹ್ಮಣಶ್ರೇಷ್ಠ ಆಶ್ವಾಸ್ಯ ಪ್ರಹಸನ್ನಿವ ॥17॥
ಆ ಬ್ರಾಹ್ಮಣಶ್ರೇಷ್ಠನು ಮೊದಲು ನನ್ನನ್ನು ವಿಚಾರಿಸಿ ನಗರಕ್ಕೆ ಒದಗಿರುವ ಸಂಕಟವನ್ನು ಗಮನಿಸಿ ನಗುತ್ತಾ ಸಮಾಧಾನದ ಮಾತುಗಳನ್ನು ಆಡಿದನು.
ಪ್ರಾಪಯಿಷ್ಯಾಮ್ಯಹಂ ತಸ್ಮಾ ಇದಮನ್ನಂ ದುರಾತ್ಮನೇ |
ಮನ್ನಿಮಿತ್ತಂ ಭಯಂ ಚಾಪಿ ನ ಕಾರ್ಯಮಿತಿ ವೀರ್ಯವಾನ್ ॥18॥
ಆ ದುರಾತ್ಮನಿಗೆ ನಾನು ಅನ್ನವನ್ನು ತೆಗೆದುಕೊಂಡು ಹೋಗಿ ಕೊಡುವೆನು. ನನ್ನ ಸಲುವಾಗಿ ಭಯಪಡುವುದು ಬೇಡ ಎಂದೂ ಆ ಪರಾಕ್ರಮಶಾಲಿಯು ಹೇಳಿದನು.
ಸ ತದನ್ನಮುಪಾದಾಯ ಗತೋ ಬಕವನಂ ಪ್ರತಿ |
ತೇನ ನೂನಂ ಭವೇದೇತತ್ ಕರ್ಮ ಲೋಕಹಿತಂ ಕೃತಮ್ ॥19॥
ಅವನು ಆ ಅನ್ನವನ್ನು ತಗೆದುಕೊಂಡು ಬಕವನಕ್ಕೆ ಹೋದನು. ಪ್ರಾಯಶಃ ಅವನೇ ಈ ಲೋಕಹಿತವಾದ ಕಾರ್ಯವನ್ನು ಮಾಡಿರಬೇಕು.
ತತಸ್ತೇ ಬ್ರಾಹ್ಮಣಾಃ ಸರ್ವೇ ಕ್ಷತ್ರಿಯಾಶ್ಚ ಸುವಿಸ್ಮಿತಾಃ |
ವೈಶ್ಯಾಃ ಶೂದ್ರಾಶ್ಚ ಮುದಿತಾಃ ಚಕ್ರುರ್ಬ್ರಹ್ಮಮಹಂ ತದಾ ॥20॥
ಆಗ ಅಲ್ಲಿದ್ದ ಎಲ್ಲಾ ಬ್ರಾಹ್ಮಣರು ಮತ್ತು ಕ್ಷತ್ರಿಯರು ಬಹಳ ವಿಸ್ಮಿತರಾದರು. ಕ್ಷತ್ರಿಯರೂ, ವೈಶ್ಯರೂ ಮತ್ತು ಶೂದ್ರರೂ ಸೇರಿ ಸಂತೋಷದಿಂದ ಬ್ರಾಹ್ಮಣರಿಗೆ ಒಂದು ಉತ್ಸವವನ್ನು ಮಾಡಿದರು.
ತತೋ ಜಾನಪದಾಃ ಸರ್ವ ಆಜಗ್ಮುರ್ನಗರಂ ಪ್ರತಿ |
ತಮದ್ಭುತತಮಂ ದ್ರಷ್ಟುಂ ಪಾರ್ಥಾಸ್ತತ್ರೈವ ಚಾಭವನ್ ॥21॥
ಆನಂತರ ಆ ಅದ್ಭುತವಾದ ದೃಶ್ಯವನ್ನು ನೋಡಲು ಗ್ರಾಮಗಳಿಂದ ನಗರಕ್ಕೆ ಜನಗಳು ಬರಲು ಆರಂಭಿಸಿದರು. ಪಾಂಡವರೂ ಅಲ್ಲಿಯೇ ಇದ್ದರು.
ವೇತ್ರಕೀಯಗೃಹೇ ಸರ್ವೇ ಪರಿವಾರ್ಯ ವೃಕೋದರಮ್ |
ವಿಸ್ಮಯಾದಭ್ಯಗಚ್ಛಂಸ್ತಂ ಭೀಮಂ ಭೀಮಪರಾಕ್ರಮಮ್ ॥22॥
ಏಕಚಕ್ರನಗರದಲ್ಲಿ ಎಲ್ಲರೂ ಭೀಮಪರಾಕ್ರಮನಾದ ಭೀಮನನ್ನು ಸುತ್ತುವರೆದು ಆಶ್ಚರ್ಯದಿಂದ ಅವನ ಬಳಿ ನಿಂತರು.
ನ ವೈ ನ ಸಂಭವೇತ್ ಸರ್ವಂ ಬ್ರಾಹ್ಮಣೇಶು ಮಹಾತ್ಮಸು |
ಇತಿ ಸತ್ಕೃತ್ಯ ತಂ ಪೌರಾಃ ಪರಿವವ್ರುಃ ಸಮಂತತಃ ॥23॥

ಮಹಾತ್ಮರಾದ ಬ್ರಾಹ್ಮಣರಿಗೆ ಯಾವುದೂ ಅಸಾಧ್ಯವಲ್ಲ ಎಂದು ಹೇಳಿ ಪೌರರು ಭೀಮನಿಗೆ ಸತ್ಕಾರವನ್ನು ಮಾಡಿ ಅವನನ್ನು ಸುತ್ತುವರಿದರು.
ಅಯಂ ತ್ರಾತಾಽರ್ಥಿನಃ ಸರ್ವಾನ್ ಪಿತೇವ ಪರಮಾರ್ಥವಿತ್ |
ಅಸ್ಯ ಶುಶ್ರೂಷಯಾ ಪಾದೌ ಪ್ರತಿವಾರಮುಪಾಸ್ಮಹೇ |
ಪಶುಮದ್ದಧಿಮಚ್ಚಾಸ್ಯ ವಾರಂ ಭಕ್ತಮುಪಾಹರನ್ ॥24॥
ಪರಮಾರ್ಥವನ್ನು ತಿಳಿದ ಈ ಬ್ರಾಹ್ಮಣನು ತಂದೆಯಂತೆ ಶರಣಾರ್ಥಿಗಳಾದ ನಮ್ಮೆಲ್ಲರನ್ನು ರಕ್ಷಿಸುವನು. ನಾವು ಪ್ರತಿದಿನವೂ ಇವನ ಸೇವೆಯನ್ನು ಮಾಡಿ ಇವನ ಪಾದಗಳನ್ನು ಆರಾಧಿಸೋಣ ಎಂದು ತಿಳಿದು ಪ್ರತಿದಿನವೂ ಅವನಿಗೆ ಯೋಗ್ಯಪಶುಗಳಿಂದ ಮತ್ತು ದಧಿಯಿಂದ ಕೂಡಿದ ಅನ್ನವನ್ನು ತಂದು ಒಪ್ಪಿಸಿದರು.
ತಸ್ಮಿನ್ ಹತೇ ತೇ ಪುರುಷಾ ಭೀತಾಃ ಸಮನುಬೋಧನಾಃ |
ತತಃ ಸಂಪ್ರಾದ್ರುವನ್ ಪಾರ್ಥಾಃ ಸಹ ಮಾತ್ರಾ ಪರಂತಪಾಃ ॥25॥
ಬಕನು ಮೃತನಾದ ಮೇಲೆ ಪಾಂಡವರು ಈ ಬ್ರಾಹ್ಮಣನೇ (ಭೀಮನೇ) ಬಕನನ್ನು ಕೊಂದನು ಎಂದು ಜನರಿಗೆ ತಿಳಿಯಬಹುದು ಎಂಬ ಹೆದರಿಕೆಯಿಂದ ನಗರದೊಳಗೆ ಓಡಿಹೋದರು.
ಆಗಚ್ಛನ್ನೇಕಚಕ್ರಾಂ ತೇ ಪಾಂಡವಾಃ ಸಂಶಿತವ್ರತಾಃ |
ವೈದಿಕಾಧ್ಯಯನೇ ಯುಕ್ತಾ ಜಟಿಲಾ ಬ್ರಹ್ಮಚಾರಿಣಃ ॥26॥
ಒಳ್ಳೆಯ ವ್ರತಧಾರಿಗಳಾದ ಪಾಂಡವರು ಏಕಚಕ್ರನಗರವನ್ನು ಪ್ರವೇಶಿಸಿ ಬ್ರಹ್ಮಚಾರಿಗಳಿಗೆ ಯೋಗ್ಯವಾದ ನಾರುಮಡಿಗಳನ್ನು ಉಟ್ಟು ವೇದಾಧ್ಯಯನದಲ್ಲಿ ತೊಡಗಿದರು.
ಅವಸಂಸ್ತೇ ಚ ಪತ್ರಾಪಿ ಬ್ರಾಹ್ಮಣಸ್ಯ ನಿವೇಶನೇ |
ಮಾತ್ರಾ ಸಹೈಕಚಕ್ರಾಯಾಂ ದೀರ್ಘಕಾಲಂ ಸುಖೋಷಿತಾಃ ॥27॥
ಅವರು ಏಕಚಕ್ರನಗರದಲ್ಲಿ ತಾಯಿಯ ಜೊತೆಯಲ್ಲಿ ಅದೇ ಬ್ರಾಹ್ಮಣನ ಮನೆಯಲ್ಲಿ ದೀರ್ಘಕಾಲ ಸುಖವಾಗಿ ವಾಸಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಬಕವಧಪರ್ವಣಿ ಅಷ್ಟಮೋಽಧ್ಯಾಯಃ ॥
॥ ಬಕವಧಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಅರವತ್ತೇಳನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಬಕವಧಪರ್ವವು ಮುಗಿಯಿತು
* * * *

## 10. ಚೈತ್ರರಥ ಪರ್ವ

### ನೂರ ಅರವತ್ತೆಂಟನೆಯ ಅಧ್ಯಾಯ

(ಪಾಂಡವರು ವಾಸವಾಗಿದ್ದ ಮನೆಗೆ ಒಬ್ಬ ಬ್ರಾಹ್ಮಣನ ಪ್ರವೇಶ, ದ್ರೌಪದಿಯ ಸ್ವಯಂವರವನ್ನು ಪ್ರಸ್ತಾಪಿಸಿ ಅವನಿಂದ ಧೃಷ್ಟದ್ಯುಮ್ನ, ದ್ರೌಪದಿಯರ ಜನನ ಕಥನ.)
ಜನಮೇಜಯಃ
ತೇ ತದಾ ಪುರುಷವ್ಯಾಘ್ರಾ ನಿಹತ್ಯ ಬಕರಾಕ್ಷಸಮ್ |
ಅತ ಊರ್ಧ್ವಂ ತದಾ ಬ್ರಹ್ಮನ್ ಕಿಮಕುರ್ವತ ಪಾಂಡವಾಃ ॥1॥
ಬ್ರಾಹ್ಮಣರೇ, ಪುರುಷವ್ಯಾಘ್ರರಾದ ಆ ಪಾಂಡವರು ಬಕರಾಕ್ಷಸನನ್ನು ಸಂಹಾರ ಮಾಡಿ ಅಲ್ಲಿಂದ ಮುಂದೆ ಏನು ಮಾಡಿದರು?
ವೈಶಂಪಾಯನಃ
ತತ್ರೈವ ನ್ಯವಸನ್ ರಾಜನ್ ನಿಹತ್ಯ ಬಕರಾಕ್ಷಸಮ್ |
ಅಧೀಯಾನಾ ನರವ್ಯಾಘ್ರಾ ಬ್ರಾಹ್ಮಣಸ್ಯ ನಿವೇಶನೇ॥2॥
ರಾಜನೇ, ನರವ್ಯಾಘ್ರರಾದ ಪಾಂಡವರು ಬಕರಾಕ್ಷಸನನ್ನು ಸಂಹಾರ ಮಾಡಿ ಅದೇ ಬ್ರಾಹ್ಮಣನ ಮನೆಯಲ್ಲಿ ವೇದಾಧ್ಯಯನವನ್ನು ಮಾಡುತ್ತಾ ವಾಸಮಾಡಿದರು.
ತತಃ ಕದಾಚಿತ್ ಕಾಲೇ ತು ಬ್ರಾಹ್ಮಣಃ ಸಂಶಿತವ್ರತಃ |
ಪ್ರತಿಶ್ರಯಾರ್ಥಂ ತದ್ ವೇಶ್ಮ ಬ್ರಾಹ್ಮಣಸ್ಯಾಗಮತ್ ತದಾ ॥3॥
ಅನಂತರ ಒಮ್ಮೆ ಒಬ್ಬ ವ್ರತನಿಷ್ಠನಾದ ಬ್ರಾಹ್ಮಣನು ಆಶ್ರಯವನ್ನು ಹುಡುಕಿಕೊಂಡು ಅತಿಥಿಯಾಗಿ ಅದೇ ಬ್ರಾಹ್ಮಣನ ಮನೆಗೆ ಬಂದನು.
ಸ ಸಮ್ಯಕ್ ಪೂಜಯಿತ್ವಾ ತು ವಿದ್ವಾನ್ ವಿಪ್ರರ್ಷಭಸ್ತದಾ |
ದದೌ ಪ್ರತಿಶ್ರಯಂ ತಸ್ಮೈ ತದಾ ಸರ್ವಾತಿಥಿವ್ರತಃ ॥4॥
ಸರ್ವಾತಿಥಿವ್ರತ ಧರಿಸಿದ್ದ ಮನೆಯ ಒಡೆಯನಾದ ವಿದ್ವಾಂಸನಾದ ಬ್ರಾಹ್ಮಣಶ್ರೇಷ್ಠನು ಅತಿಥಿಬ್ರಾಹ್ಮಣನಿಗೆ ಚೆನ್ನಾಗಿ ಸತ್ಕಾರ ಮಾಡಿ ಆಶ್ರಯವನ್ನು ನೀಡಿದನು.
ತತಸ್ತೇ ಪಾಂಡವಾಃ ಸರ್ವೇ ಕುಂತೀ ಚ ಭರತರ್ಷಭ |
ಉಪಾಸಾಂಚಕ್ರಿರೇ ವಿಪ್ರಂ ಕಥಯಂತಃ ಕಥಾಃ ಶುಭಾಃ ॥5॥
ಭರತರ್ಷಭನೇ, ಅನಂತರ ಆ ಎಲ್ಲ ಪಾಂಡವರೂ ಮತ್ತು ಕುಂತಿಯೂ ಬ್ರಾಹ್ಮಣನ ಸಮೀಪದಲ್ಲಿ ಕುಳಿತು ಅನೇಕ ಒಳ್ಳೆಯ ಕಥೆಗಳನ್ನು ಮಾತನಾಡಿದರು.

ಕಥಯಾಮಾಸ ದೇಶಾನ್ ಸ ತೀರ್ಥಾನಿ ವಿವಿಧಾನಿ ಚ |
ರಾಜ್ಞಶ್ಚ ವಿವಿಧಾಕಾರಾನ್ ಪುರಾಣಿ ಚ ವನಾನಿ ಚ ||6||
ಆ ಅತಿಥಿಬ್ರಾಹ್ಮಣನು ತಾನು ಸಂಚರಿಸಿದ ದೇಶಗಳನ್ನೂ, ಪಟ್ಟಣಗಳನ್ನೂ, ಅನೇಕ ವಿಧವಾದ ತೀರ್ಥಗಳನ್ನೂ, ವನಗಳನ್ನೂ, ಮತ್ತು ಅನೇಕಾಕಾರವುಳ್ಳ ರಾಜರುಗಳನ್ನೂ ಕುರಿತು ಕಥನ ಮಾಡಿದನು.
ಸ ತತ್ರಾಕಥಯದ್ ವಿಪ್ರಃ ಕಥಾಂತೇ ಜನಮೇಜಯ |
ಪಾಂಚಾಲೇಷ್ವದ್ಭುತಾಕಾರಂ ಯಾಜ್ಞಸೇನ್ಯಾಃ ಸ್ವಯಂವರಮ್ ||7||
ಜನಮೇಜಯನೇ, ಆ ಎಲ್ಲ ಕಥೆಗಳು ಮುಗಿದಮೇಲೆ ಆ ಬ್ರಾಹ್ಮಣನು ಪಾಂಚಾಲನಗರದಲ್ಲಿ ನಡೆಯಲಿರುವ ದ್ರುಪದನ ಮಗಳ ಅದ್ಭುತವಾದ ಸ್ವಯಂವರವನ್ನು ಉಲ್ಲೇಖಿಸಿದನು.
ಧೃಷ್ಟದ್ಯುಮ್ನಸ್ಯ ಚೋತ್ಪತ್ತಿಂ ದ್ರೋಣಸ್ಯ ಚ ಶಿಖಂಡಿನಃ |
ಅಯೋನಿಜತ್ವಂ ಕೃಷ್ಣಾಯಾ ದ್ರುಪದಸ್ಯ ಮಹಾಮಖೇ ||8||
ಶಿಖಂಡಿಯ ಉತ್ಪತ್ತಿಯನ್ನೂ, ದ್ರೋಣರ ಉತ್ಪತ್ತಿಯನ್ನೂ, ದ್ರುಪದನ ಮಹಾಯಜ್ಞದಲ್ಲಿ ಧೃಷ್ಟದ್ಯುಮ್ನನ ಉತ್ಪತ್ತಿಯನ್ನೂ ಮತ್ತು ಅಯೋನಿಜೆಯಾದ ದ್ರೌಪದಿಯ ಉತ್ಪತ್ತಿಯನ್ನೂ ಕುರಿತು ಹೇಳಿದನು.
ತದದ್ಭುತತಮಂ ಶ್ರುತ್ವಾ ಪಾಂಡವಾಃ ಸತ್ಯವಿಕ್ರಮಾಃ |
ವಿಸ್ತರೇಣೈವ ಪಪ್ರಚ್ಛುಃ ಕಥಾಂ ತಾಂ ಪುರುಷರ್ಷಭಾಃ ||9||
ಆ ಅದ್ಭುತವಾದ ವಿಷಯವನ್ನು ಕೇಳಿದ ಸತ್ಯವಿಕ್ರಮರಾದ, ಪುರುಷಶ್ರೇಷ್ಠರಾದ ಪಾಂಡವರ ಆ ಕಥೆಯನ್ನು ವಿಸ್ತಾರವಾಗಿ ಹೇಳಬೇಕೆಂದು ಆ ಬ್ರಾಹ್ಮಣನನ್ನು ಕೇಳಿದರು.
ಪಾಂಡವಾಃ
ಕಥಂ ದ್ರುಪದಪುತ್ರಸ್ಯ ಧೃಷ್ಟದ್ಯುಮ್ನಸ್ಯ ಪಾವಕಾತ್ |
ಸಂಭವೋ ವೇದಿಮಧ್ಯೇ ಚ ಕಥಂ ಕೃಷ್ಣಾ ವ್ಯಜಾಯತ ||10||
ದ್ರುಪದಪುತ್ರನಾದ ಧೃಷ್ಟದ್ಯುಮ್ನನು ಹೇಗೆ ಪಾವಕನಿಂದ ಜನಿಸಿದನು? ಕೃಷ್ಣೆಯು ಹೇಗೆ ವೇದಿಮಧ್ಯದಿಂದ ಜನಿಸಿದಳು?
ಕಥಂ ದ್ರೋಣಾನ್ಮಹೇಷ್ವಾಸಾತ್ ಸರ್ವಾಣ್ಯಸ್ತ್ರಾಣ್ಯಶಿಕ್ಷಯತ್ |
ಧೃಷ್ಟದ್ಯುಮ್ನೋ ಮಹೇಷ್ವಾಸಃ ಕಥಂ ದ್ರೋಣಸ್ಯ ಮೃತ್ಯುತಾ |
ಕಥಂ ಪ್ರಿಯಸಖಾಯೌ ತೌ ಭಿನ್ನೌ ಕಸ್ಯ ಕೃತೇಽನಘ ||11||
ಧೃಷ್ಟದ್ಯುಮ್ನನು ಮಹೇಷ್ವಾಸರಾದ ದ್ರೋಣರಿಂದ ಹೇಗೆ ಎಲ್ಲಾ ಅಸ್ತ್ರಗಳನ್ನು ಪಡೆದನು? ಮಹೇಷ್ವಾಸನಾದ ಧೃಷ್ಟದ್ಯುಮ್ನನು ಹೇಗೆ ದ್ರೋಣರಿಗೆ ಮೃತ್ಯುವಾಗುವನು? ಅನಘನೇ, ಪ್ರಿಯಸ್ನೇಹಿತರಾದ ದ್ರೋಣದ್ರುಪದರಿಗೆ ಏಕೆ ವಿರೋಧವುಂಟಾಯಿತು?
ವೈಶಂಪಾಯನಃ
ಏವಂ ತೈಶ್ಚೋದಿತೋ ವಿಪ್ರೋ ರಾಜನ್ ಸ ಪುರುಷರ್ಷಭೈಃ |
ಕಥಯಾಮಾಸ ತತ್ಸರ್ವಂ ದ್ರೌಪದೀಸಂಭವಂ ತದಾ ||12||
ರಾಜನೇ, ಆ ಪುರುಷರ್ಷಭರಿಂದ ಹೀಗೆ ಪ್ರಶ್ನಿಸಲ್ಪಟ್ಟ ಆ ಬ್ರಾಹ್ಮಣನು ಆಗ ದ್ರೌಪದಿಯ ಉತ್ಪತ್ತಿ ಮೊದಲಾದ ಎಲ್ಲಾ ವಿಷಯಗಳನ್ನು ನಿರೂಪಿಸಿದನು.
ಬ್ರಾಹ್ಮಣಃ
ಗಂಗಾದ್ವಾರಂ ಪ್ರತಿ ಮಹಾನ್ ಬಭೂವರ್ಷಿರ್ಮಹಾತಪಾಃ |
ಭರದ್ವಾಜೋ ಮಹಾಪ್ರಾಜ್ಞಃ ಸತತಂ ಸಂಶಿತವ್ರತಃ ||13||
ಗಂಗಾದ್ವಾರದ ಸಮೀಪದಲ್ಲಿ ಮಹಾತಪಸ್ವಿಗಳೂ, ಮಹಾಪ್ರಾಜ್ಞರೂ, ಸಂತತವಾಗಿ ವ್ರತಧಾರಿಗಳೂ ಆದ ಭರದ್ವಾಜರೆಂಬ ಮಹರ್ಷಿಗಳು ಇದ್ದರು.
ಸೋಽಭಿಷೇಕ್ತುಂ ಗತೋ ಗಂಗಾಂ ಪೂರ್ವಮೇವಾಗತಾಂ ಸತೀಮ್|
ದದರ್ಶಾಪ್ಸರಸಂ ತತ್ರ ಘೃತಾಚೀಮಾಪ್ಲುತಾಮೃಷಿಃ ||14||
ಆ ಋಷಿಗಳು ಗಂಗೆಯಲ್ಲಿ ಸ್ನಾನಕ್ಕಾಗಿ ಹೊರಟು ಅಲ್ಲಿ ತಮಗಿಂತ ಮೊದಲು ಬಂದು ಆಗತಾನೇ ಸ್ನಾನವನ್ನು ಮಾಡಿದ್ದ ಘೃತಾಚಿ ಎಂಬ ಅಪ್ಸರೆಯನ್ನು ನೋಡಿದರು.
ತಸ್ಯಾ ವಾಯುರ್ನದೀತೀರೇ ವಾಸೋ ವ್ಯಪಹರತ್ ತದಾ |
ಅಪಕೃಷ್ಟಾಂಬರಾಂ ದೃಷ್ಟ್ವಾ ತಾಮೃಷಿಶ್ಚಕಮೇ ತದಾ ||15||
ನದಿಯ ತೀರದ ವಾಯುವು ಅವಳ ಮೇಲಿನ ವಸ್ತ್ರವನ್ನು ಆಗ ಹಾರಿಸಿತು. ವಿವಸ್ತ್ರಳಾದ ಅವಳನ್ನು ನೋಡಿದ ಭರದ್ವಾಜ ಋಷಿಗಳು ಅವಳಲ್ಲಿ ಕಾಮವನ್ನು ಹೊಂದಿದರು.
ತಸ್ಯಾಂ ಸಂರಕ್ತಮನಸಃ ಕೌಮಾರಬ್ರಹ್ಮಚಾರಿಣಃ |
ಹೃಷ್ಟಸ್ಯ ರೇತಶ್ಚಸ್ಕಂದ ತದೃಷಿರ್ದ್ರೋಣ ಆದಧೇ ||16||
ಕೌಮಾರ ಬ್ರಹ್ಮಚಾರಿಗಳಾದ ಅವರಿಗೆ ಅವಳಲ್ಲಿ ಮನಸ್ಸು ನಾಟಿದಾಗ ಸಂತೋಷದಿಂದ ರೇತಃಸ್ಖಲನವಾಯಿತು. ಋಷಿಗಳು ಆ ರೇತಸ್ಸನ್ನು ದ್ರೋಣಪರಿಮಿತವಾದ ಕಲಶದಲ್ಲಿ ಹಿಡಿದುಕೊಂಡರು.
ತತಃ ಸಮಭವದ್ ದ್ರೋಣಃ ಕುಮಾರಸ್ತಸ್ಯ ಧೀಮತಃ |
ಅಧ್ಯಗೀಷ್ಟ ಚ ವೇದಾಂಶ್ಚ ವೇದಾಂಗಾನಿ ಚ ಸರ್ವಶಃ ||17||
ಮೇಧಾವಿಗಳಾದ ಆ ಋಷಿಗಳ ಕುಮಾರರಾಗಿ ದ್ರೋಣರು ಕಲಶದಿಂದ ಎದ್ದು ಬಂದರು. ಅವರು ಎಲ್ಲಾ ವೇದಗಳನ್ನೂ ಮತ್ತು

ವೇದಾಂಗಗಳನ್ನೂ ಅಧ್ಯಯನ ಮಾಡಿದರು.
ಭರದ್ವಾಜಸಖಾ ಹ್ಯಾಸೀತ್ ಪೃಷತೋ ನಾಮ ಪಾರ್ಥಿವಃ |
ತಸ್ಯಾಪಿ ದ್ರುಪದೋ ನಾಮ ತದಾ ಸಮಭವತ್ ಸುತಃ ॥18॥
ಭರದ್ವಾಜರಿಗೆ ಪೃಷತ ಎಂಬ ರಾಜನು ಸ್ನೇಹಿತನಾಗಿದ್ದನು. ಅವನಿಗೂ ಸಹ ದ್ರುಪದನೆಂಬ ಪುತ್ರನು ಜನಿಸಿದನು.
ಸ ನಿತ್ಯಮಾಶ್ರಮಂ ಗತ್ವಾ ದ್ರೋಣೇನ ಸಹ ಪಾರ್ಷತಃ |
ಚಿಕ್ರೀಡಾಧ್ಯಯನಂ ಚೈವ ಚಕಾರ ಕ್ಷತ್ರಿಯರ್ಷಭಃ ॥19॥
ಆ ಕ್ಷತ್ರಿಯರ್ಷಭನಾದ ಪೃಷತನ ಮಗನಾದ ದ್ರುಪದನು ನಿತ್ಯವೂ ಭರದ್ವಾಜರ ಆಶ್ರಮಕ್ಕೆ ಹೋಗಿ ದ್ರೋಣರ ಜೊತೆಯಲ್ಲಿ ಅಧ್ಯಯನವನ್ನು ಮಾಡಿ ಆಟವಾಡುತ್ತಿದ್ದನು.
ತತಸ್ತು ಪೃಷತೇಽತೀತೇ ಸ ರಾಜಾ ದ್ರುಪದೋಽಭವತ್ |
ದ್ರೋಣೋಽಪಿ ರಾಮಂ ಶುಶ್ರಾವ ದಿತ್ಸಂತಂ ವಸು ಸರ್ವಶಃ ॥20॥
ಪೃಷತನು ಸ್ವರ್ಗಸ್ಥನಾಗಲು ದ್ರುಪದನು ರಾಜನಾದನು. ದ್ರೋಣರಿಗೆ ಪರುಶುರಾಮರು ತಮ್ಮ ಎಲ್ಲಾ ದ್ರವ್ಯವನ್ನು ಬ್ರಾಹ್ಮಣರಿಗೆ ದಾನ ಮಾಡಿ ಕಾಡಿಗೆ ಹೋಗುತ್ತಿದ್ದಾರೆ ಎಂಬ ಸುದ್ದಿಯು ತಿಳಿಯಿತು.
ವನಂ ತು ಪ್ರಸ್ಥಿತಂ ರಾಮಂ ಭರದ್ವಾಜಸುತೋಽಬ್ರವೀತ್ |
ಆಗತಂ ವಿತ್ತಕಾಮಂ ಮಾಂ ವಿದ್ಧಿ ದ್ರೋಣಂ ದ್ವಿಜರ್ಷಭಮ್ ॥21॥
ಕಾಡಿಗೆ ಹೊರಟಿದ್ದ ಪರಶುರಾಮರನ್ನು ಸಮೀಪಿಸಿ ಭರದ್ವಾಜರ ಪುತ್ರರಾದ ದ್ರೋಣರು, ಸ್ವಾಮಿ ನಾನು ದ್ರೋಣನೆಂಬ ಬ್ರಾಹ್ಮಣ. ಧನಕಾಮನೆಯಿಂದ ನಿಮ್ಮ ಬಳಿಗೆ ಬಂದಿದ್ದೇನೆ ಎಂದು ತಿಳಿಯಿರಿ ಎಂದು ಹೇಳಿದರು.
ರಾಮಃ
ಶರೀರಮಾತ್ರಮೇವಾದ್ಯ ಮಮೇದಮವಶೇಷಿತಮ್ |
ಅಸ್ತ್ರಾಣಿ ವಾ ಶರೀರಂ ವಾ ಬ್ರಹ್ಮನ್ನನ್ಯತರಂ ವೃಣು ॥22॥
ಈ ದಿನ ಎಲ್ಲವನ್ನೂ ದಾನಮಾಡಿದ ಮೇಲೆ ನನ್ನ ಶರೀರವು ಮಾತ್ರ ಉಳಿದಿದೆ, ಅಸ್ತ್ರಗಳು ಉಳಿದಿವೆ, ಬ್ರಾಹ್ಮಣನೇ, ಅಸ್ತ್ರ ಅಥವಾ ಶರೀರದಲ್ಲಿ ಯಾವುದಾದರೂ ಒಂದನ್ನು ಬೇಡು.
ದ್ರೋಣಃ
ಅಸ್ತ್ರಾಣಿ ಚೈವ ಸರ್ವಾಣಿ ತೇಷಾಂ ಸಂಹಾರಮೇವ ಚ |
ಪ್ರಯೋಗಂ ಚೈವ ಸರ್ವೇಷಾಂ ದಾತುಮರ್ಹತಿ ಮೇ ಭವಾನ್ ॥23॥
ನನಗೆ ಎಲ್ಲಾ ಅಸ್ತ್ರಗಳನ್ನೂ, ಅವುಗಳ ಸಂಹಾರ ಕ್ರಮವನ್ನೂ, ಅವುಗಳನ್ನು ಪ್ರಯೋಗಿಸುವ ರೀತಿಯನ್ನೂ ಉಪದೇಶಮೂಲಕವಾಗಿ ತಾವು ದಾನಮಾಡಬೇಕು.
ರಾಮಃ
ತಥೇತ್ಯುಕ್ತ್ವಾ ತತಸ್ತಸ್ಮೈ ಪ್ರದದೌ ಭೃಗುನಂದನಃ |
ಪ್ರತಿಗೃಹ್ಯ ತದಾ ದ್ರೋಣಃ ಕೃತಕೃತ್ಯೋಽಭವತ್ ತದಾ ॥24॥
ಭೃಗುನಂದನರಾದ ಪರಶುರಾಮರು ಹಾಗೆಯೇ ಆಗಲಿ ಎಂದು ಹೇಳಿ ದ್ರೋಣರಿಗೆ ಪರಿಕರಸಹಿತವಾಗಿ ಎಲ್ಲಾ ಅಸ್ತ್ರಗಳನ್ನೂ ನೀಡಿದರು. ಆಗ ದ್ರೋಣರು ಎಲ್ಲಾ ಅಸ್ತ್ರಗಳನ್ನೂ ಸ್ವೀಕರಿಸಿ ಕೃತಕೃತ್ಯರಾದರು.
ಸ ಪ್ರಹೃಷ್ಟಮನಾಶ್ಚಾಪಿ ರಾಮಾತ್ ಸದ್ಯೋ ನ್ಯವರ್ತತ |
ಬ್ರಹ್ಮಾಸ್ತ್ರಂ ಸಮನುಪ್ರಾಪ್ಯ ನರೇಷ್ವಭ್ಯಧಿಕೋಽಭವತ್ ॥25॥
ದ್ರೋಣರು ಸಂತುಷ್ಟಮನಸ್ಸಿನಿಂದ ತಕ್ಷಣದಲ್ಲಿಯೇ ಪರಶುರಾಮರ ಆಶ್ರಮದಿಂದ ಹಿಂದಿರುಗಿದರು. ಬ್ರಹ್ಮಾಸ್ತ್ರವನ್ನು ಹೊಂದಿ ಮನುಷ್ಯರಲ್ಲಿ ಅತಿ ಶ್ರೇಷ್ಠರಾದರು.
ತತೋ ದ್ರುಪದಮಾಸಾದ್ಯ ಭಾರದ್ವಾಜಃ ಪ್ರತಾಪವಾನ್ |
ಅಬ್ರವೀತ್ ಪುರುಷವ್ಯಾಘ್ರ ಸಖಾಯಂ ವಿದ್ಧಿ ಮಾಮಿತಿ ॥26॥
ಅನಂತರ ಪ್ರತಾಪಶಾಲಿಗಳಾದ ದ್ರೋಣರು ದ್ರುಪದನನ್ನು ಸಮೀಪಿಸಿ ಪುರುಷವ್ಯಾಘ್ರನೇ, ನನ್ನನ್ನು ನಿನ್ನ ಸ್ನೇಹಿತನೆಂದು ತಿಳಿ ಎಂದು ಹೇಳಿದರು.
ದ್ರುಪದಃ
ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ |
ನಾರಾಜಾ ಪಾರ್ಥಿವಸ್ಯಾಪಿ ಸಖಿಪೂರ್ವಂ ಕಿಮಿಷ್ಯತೇ ॥27॥
ಶ್ರೋತ್ರಿಯನಲ್ಲದವನು ಶ್ರೋತ್ರಿಯನಿಗೂ, ರಥವಿಲ್ಲದವನು ರಥಿಕನಿಗೂ, ರಾಜನಲ್ಲದವನು ರಾಜನಿಗೂ ಸ್ನೇಹಿತನಾಗುವುದಿಲ್ಲ. ಜೀರ್ಣವಾದ ಸಖ್ಯವನ್ನು ಏಕೆ ಬಯಸುತ್ತಿದ್ದೀಯೆ?
ಬ್ರಾಹ್ಮಣಃ
ಸ ವಿನಿಶ್ಚಿತ್ಯ ಮನಸಾ ಪಾಂಚಾಲ್ಯಂ ಪ್ರತಿ ಬುದ್ಧಿಮಾನ್ |
ಜಗಾಮ ಕುರುಮುಖ್ಯಾನಾಂ ನಗರಂ ನಾಗಸಾಹ್ವಯಮ್ ॥28॥
ಮೇಧಾವಿಗಳಾದ ಆ ದ್ರೋಣರು ದ್ರುಪದನಿಗೆ ಏನು ಮಾಡಬೇಕೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿ ಕುರುಶ್ರೇಷ್ಠರ ಪಟ್ಟಣವಾದ ಹಸ್ತಿನಪುರಕ್ಕೆ ಬಂದರು.
ತಸ್ಮೈ ಪಾರ್ಥಾನ್ ಸಮಾದಾಯ ವಸೂನಿ ವಿವಿಧಾನಿ ಚ |

ಪ್ರಾಪ್ತಾಯ ಪ್ರದದೌ ಭೀಷ್ಮಃ ಶಿಷ್ಯಾನ್ ದ್ರೋಣಾಯ ಧೀಮತೇ ॥29॥
ಹಾಗೆ ಬಂದ ಮೇಧಾವಿಗಳಾದ ದ್ರೋಣರಿಗೆ ಭೀಷ್ಮರು ಎಲ್ಲಾ ಪಾಂಡವರನ್ನೂ ಕರೆದುಕೊಂಡು ಬಂದು ಅನೇಕ ವಿಧವಾದ ದ್ರವ್ಯಗಳನ್ನು ಕೊಟ್ಟು ಇವರು ನಿಮ್ಮ ಶಿಷ್ಯರು ಎಂದು ಒಪ್ಪಿಸಿದರು.
ದ್ರೋಣಃ ಶಿಷ್ಯಾಂಸ್ತತಃ ಸರ್ವಾನಿದಂ ವಚನಮಬ್ರುವೀತ್ |
ಸಮಾನೀಯ ತತಃ ಶಿಷ್ಯಾನ್ ದ್ರುಪದಸ್ಯಾಸುಖಾಯ ವೈ ॥30॥
ಅನಂತರ ದ್ರೋಣರು ತಮ್ಮ ಎಲ್ಲಾ ಶಿಷ್ಯರನ್ನೂ ಒಟ್ಟುಗೂಡಿಸಿ ಕರೆದು ದ್ರುಪದನ ಅಹಿತಕ್ಕಾಗಿ ಈ ಮಾತನ್ನಾಡಿದರು.
ಗುರುಶುಶ್ರೂಷಣಂ ಚೈವ ತಥೈವ ಗುರುದಕ್ಷಿಣಾ |
ಕೃತಾಸ್ತ್ರೈಸ್ತತ್ ಪ್ರದೇಯಾ ಸ್ಯಾತ್ ತದ್ ಋತಂ ವದತಾನಘಾಃ ॥31॥
ನೀವು ಗುರುಶುಶ್ರೂಷೆಯನ್ನು ಮಾಡಿ ಅಸ್ತ್ರವಿದ್ಯೆಯನ್ನು ಸಂಪಾದಿಸಿದ ಮೇಲೆ ಗುರುದಕ್ಷಿಣೆಯನ್ನು ಕೊಡಬೇಕಾಗುತ್ತದೆ. ಅನಘರೇ, ನನ್ನ ಎದುರಿನಲ್ಲಿ ಪ್ರತಿಜ್ಞೆಯನ್ನು ಮಾಡಿ.
ಬ್ರಾಹ್ಮಣಃ
ತಥೇತ್ಯುವಾಚ ತಂ ಪಾರ್ಥಃ ಪಾದೌ ಜಗ್ರಾಹ ಬುದ್ಧಿಮಾನ್ |
ಯದಾ ಚ ಪಾಂಡವಾಶ್ಚಾನ್ಯೇ ಕೃತಾಸ್ತ್ರಾಃ ಸರ್ವತೋಽಭವನ್ |
ತತೋ ದ್ರೋಣೋಽಬ್ರುವೀದ್ ಭೂಯೋ ದಾತವ್ಯಾ ಗುರುದಕ್ಷಿಣಾ॥
ಆಗ ಬುದ್ಧಿವಂತನಾದ ಅರ್ಜುನನು ದ್ರೋಣರ ಪಾದಗಳನ್ನು ಹಿಡಿದು ಹಾಗೆಯೇ ಆಗಲಿ ಎಂದು ಹೇಳಿದನು. ಪಾಂಡವರೂ ಉಳಿದ ರಾಜಕುಮಾರರೆಲ್ಲರೂ ಅಸ್ತ್ರವಿದ್ಯೆಯನ್ನು ಸಂಪಾದಿಸಿದ ಮೇಲೆ ದ್ರೋಣರು ನನಗೆ ಗುರುದಕ್ಷಿಣೆಯನ್ನು ಕೊಡಬೇಕು ಎಂದು ಪುನಃ ಹೇಳಿದರು.
ಪಾರ್ಷತೋ ದ್ರುಪದೋ ನಾಮ ವೇತ್ರವತ್ಯಾಂ ನರೇಶ್ವರಃ |
ತಸ್ಮಾದಾಕೃಷ್ಯ ತದ್ರಾಜ್ಯಂ ಮಮ ಶೀಘ್ರಂ ಪ್ರದೀಯತಾಮ್ ॥33॥
ಪೃಷತನ ಮಗನಾದ ದ್ರುಪದರಾಜನು ಪಾಂಚಾಲನಗರದಲ್ಲಿ ರಾಜನಾಗಿದ್ದಾನೆ. (ಪಾಂಚಾಲ ನಗರದ ಸುತ್ತಲೂ ಬೆತ್ತಗಳು ಬೆಳೆದಿರುವುದರಿಂದ ಅದಕ್ಕೆ ವೇತ್ರವತೀ ಎಂದೂ ಹೆಸರು) ಅವನ ರಾಜ್ಯವನ್ನು ಅವನಿಂದ ಸೆಳೆದುಕೊಂಡು ಶೀಘ್ರವಾಗಿ ನನಗೆ ತಂದು ಒಪ್ಪಿಸಬೇಕು.
ಬ್ರಾಹ್ಮಣಃ
ಧಾರ್ತರಾಷ್ಟ್ರೈಶ್ಚ ಸಹಿತಾಃ ಪಾಂಚಾಲಾನ್ ಪಾಂಡವಾ ಯಯುಃ |
ಯಜ್ಞಸೇನೇನ ಸಂಗಮ್ಯ ಕರ್ಣದುರ್ಯೋಧನಾದಯಃ |
ನಿರ್ಜಿತಾಃ ಸಂನ್ಯವರ್ತಂತ ತಥಾಽನ್ಯೇ ಕ್ಷತ್ರಿಯರ್ಷಭಾಃ ॥34॥
ಪಾಂಡವರು ದುರ್ಯೋಧನಾದಿಗಳ ಜೊತೆಯಲ್ಲಿ ಪಾಂಚಾಲದೇಶಕ್ಕೆ ಹೋದರು. ಕರ್ಣದುರ್ಯೋಧನಾದಿಗಳು ಮತ್ತು ಉಳಿದ ಕ್ಷತ್ರಿಯಶ್ರೇಷ್ಠರು ಯಜ್ಞಸೇನನ ಜೊತೆಯಲ್ಲಿ ಯುದ್ಧಮಾಡಿ ಸೋತು ಹಿಂದಿರುಗಿದರು.
ತತಃ ಪಾಂಡುಸುತಾಃ ಪಂಚ ನಿರ್ಜಿತ್ಯ ದ್ರುಪದಂ ಯುಧಿ |
ದ್ರೋಣಾಯ ದರ್ಶಯಾಮಾಸುರ್ಬದ್ಧ್ವಾ ಸಸಚಿವಂ ತದಾ ॥35॥
ಅನಂತರ ಐವರು ಪಾಂಡುಪುತ್ರರು ಯುದ್ಧದಲ್ಲಿ ದ್ರುಪದನನ್ನು ಸೋಲಿಸಿ ಅವನನ್ನೂ ಅವನ ಮಂತ್ರಿಯನ್ನೂ ಕಟ್ಟಿ ತಂದು ದ್ರೋಣರಿಗೆ ತೋರಿಸಿದರು.
ಮಹೇಂದ್ರಪುತ್ರಃ ಪಾಂಚಾಲಂ ಜಿತವಾನರ್ಜುನಸ್ತದಾ |
ತದ್ ದೃಷ್ಟ್ವಾ ತು ಮಹಾವೀರ್ಯಂ ಫಲ್ಗುನಸ್ಯಾಮಿತೌಜಸಃ |
ಮಹೇಂದ್ರಮಿವ ದುರ್ಧರ್ಷಂ ಮಹೇಂದ್ರ ಇವ ದಾನವಮ್ ॥36॥
ಮಹೇಂದ್ರಪುತ್ರನಾದ ಅರ್ಜುನನು ಮಹೇಂದ್ರನಂತೆ ದುರ್ಧರ್ಷನಾದ (ಸೋಲಿಸಲು ಅಸಾಧ್ಯನಾದ) ಪಾಂಚಾಲರಾಜನನ್ನು ಮಹೇಂದ್ರನು ದಾನವನನ್ನು ಗೆದ್ದಂತೆ ಗೆದ್ದು ತಂದನು.
ವ್ಯಸ್ಮಯಂತ ಜನಾಃ ಸರ್ವೇ ಯಜ್ಞಸೇನಸ್ಯ ಬಾಂಧವಾಃ |
ನಾಸ್ತ್ಯ ರ್ಜುನಸಮೋ ವೀರ್ಯೇ ರಾಜಪುತ್ರ ಇತಿ ಬ್ರುವನ್ ॥37॥
ಅಮಿತಪರಾಕ್ರಮಿಯಾದ ಅರ್ಜುನನ ಮಹಾವೀರ್ಯವನ್ನು ನೋಡಿ ಯಜ್ಞಸೇನನ ಬಂಧುಜನರೆಲ್ಲರೂ ವಿಸ್ಮಯಪಟ್ಟು ಪರಾಕ್ರಮದಲ್ಲಿ ಅರ್ಜುನನಿಗೆ ಸಮಾನನಾದ ರಾಜಕುಮಾರನು ಇನ್ನೊಬ್ಬನಿಲ್ಲ ಎಂದು ಹೇಳಿದರು.
ದ್ರೋಣಃ
ಪ್ರಾರ್ಥಯಾಮಿ ತ್ವಯಾ ಸಖ್ಯಂ ಪುನರೇವ ನರಾಧಿಪ |
ನಾರಾಜಾ ಕಿಲ ವೈ ರಾಜ್ಞಃ ಸಖಾ ಭವಿತುಮರ್ಹತಿ ॥38॥
ರಾಜನೇ, ನಾನು ನಿನ್ನ ಜೊತೆಯಲ್ಲಿ ಪುನಃ ಮೈತ್ರಿಯನ್ನು ಪ್ರಾರ್ಥಿಸುತ್ತೇನೆ. ರಾಜನಲ್ಲದವನು ರಾಜನಿಗೆ ಮಿತ್ರನಾಗಲಾರನಷ್ಟೆ?
ಅತಃ ಪ್ರಯತಿತಂ ರಾಜ್ಯೇ ಯಜ್ಞಸೇನ ಮಯಾ ನೃಪ |
ರಾಜಾಽಸಿ ದಕ್ಷಿಣೇ ತೀರೇ ಭಾಗೀರಥ್ಯಾಹಮುತ್ತರೇ ॥39॥
ಯಜ್ಞಸೇನರಾಜನೇ, ಅದಕ್ಕಾಗಿ ನಾನು ರಾಜ್ಯವನ್ನು ಪಡೆಯಲು ಪ್ರಯತ್ನಿಸಿದೆ. ನೀನು ಭಾಗೀರಥಿಯ ದಕ್ಷಿಣತೀರದಲ್ಲಿ ರಾಜನಾಗಿರು, ನಾನು ಭಾಗೀರಥಿಯ ಉತ್ತರಭಾಗದಲ್ಲಿ ರಾಜನಾಗಿರುತ್ತೇನೆ.
ಕನ್ಯಾಕುಬ್ಜೇ ಚ ಕಾಂಪಿಲ್ಯೇ ವಸೇಥಾಸ್ತ್ವಂ ನರೋತ್ತಮ |

ಬ್ರಾಹ್ಮಣೈಃ ಸಹಿತೋ ರಾಜಾನ್ನಹಿಚ್ಛತ್ರೇ ವಸಾಮ್ಯಹಮ್ ॥40॥
ನರೋತ್ತಮನೇ, ನೀನು ಕನ್ಯಾಕುಬ್ಜದಲ್ಲಿಯೂ ಮತ್ತು ಕಾಂಪಿಲ್ಯದಲ್ಲಿಯೂ ವಾಸಮಾಡು. ನಾನು ಬ್ರಾಹ್ಮಣರ ಜೊತೆಯಲ್ಲಿ ಅಹಿಚ್ಛತ್ರದಲ್ಲಿ ವಾಸಮಾಡುತ್ತೇನೆ.
ಬ್ರಾಹ್ಮಣಃ
ಅಸತ್ಕಾರಃ ಸ ಸುಮಹಾನ್ ಮುಹೂರ್ತಮಪಿ ತಸ್ಯ ತು |
ನಾಪೈತಿ ಹೃದಯಾದ್ ರಾಜ್ಞೋ ದುರ್ಮನಾಃ ಸ ಕೃಶೋಽಭವತ್ ॥
ದ್ರೋಣರಿಂದ ಅದ ಅವಮಾನವು ರಾಜನಿಗೆ ಒಂದು ಕ್ಷಣವೂ ಮನಸ್ಸನ್ನು ಬಿಟ್ಟು ಅಗಲಲಿಲ್ಲ. ರಾಜನು ಚಿಂತಾಕ್ರಾಂತನೂ ಮತ್ತು ಕೃಶನೂ ಆದನು.
ಅಮರ್ಷೀ ದ್ರುಪದೋ ರಾಜಾ ಕರ್ಮಸಿದ್ಧಾನ್ ದ್ವಿಜೋತ್ತಮಾನ್ |
ಅನ್ವಿಚ್ಛನ್ ಪರಿಚಕ್ರಾಮ ಬ್ರಾಹ್ಮಣಾವಸಥಾನ್ ಬಹೂನ್ ॥42॥
ಕ್ರೋಧಿಯಾದ ದ್ರುಪದರಾಜನು ಕರ್ಮಸಿದ್ಧಿಯುಳ್ಳ ಬ್ರಾಹ್ಮಣಶ್ರೇಷ್ಠರನ್ನು ಹುಡುಕುತ್ತಾ ಬ್ರಾಹ್ಮಣರ ಅನೇಕ ಅಗ್ರಹಾರಗಳಲ್ಲಿ ಸಂಚರಿಸಿದನು.
ದ್ರೋಣೇನ ವೈರಂ ದ್ರುಪದೋ ನ ಸುಷ್ವಾಪ ಸ್ಮರಂಸ್ತದಾ |
ಪುತ್ರಜನ್ಮ ಪರೀಪ್ಸನ್ ಸ ಶೋಕೋಪಹತಚೇತನಃ ॥43॥
ಶೋಕತಪ್ತವಾದ ಮನಸ್ಸುಳ್ಳ ಆ ದ್ರುಪದನು ಪುತ್ರಜನ್ಮವನ್ನು ನಿರೀಕ್ಷಿಸುತ್ತಾ ದ್ರೋಣರು ಮಾಡಿದ ವಿರೋಧವನ್ನು ಮರೆಯದೆ ನಿದ್ರೆಯನ್ನೇ ಮಾಡಲಿಲ್ಲ.
ಪುತ್ರಜನ್ಮ ಪರೀಪ್ಸನ್ ವೈ ಶೋಕೋಪಹತಚೇತನಃ |
ನಾಸ್ತಿ ಶ್ರೇಷ್ಠಂ ಮಮಾಪತ್ಯಮಿತಿ ನಿಶ್ಚಿತ್ಯ ಚಿಂತಯನ್ ॥44॥
ಜಾತಾನ್ ಪುತ್ರಾನ್ ಸ ನಿರ್ವೇದಾದ್ ಧಿಗ್ ಬಂಧೂನಿತಿ ಚಾಬ್ರವೀತ್|
ನಿರ್ವೇದಃ ಪರಮಶ್ಚಾಸೀದ್ ದ್ರೋಣಾಪ್ರಿಯಚಿಕೀರ್ಷಯಾ ॥45॥
ಶೋಕತಪ್ತಮನಸ್ಸುಳ್ಳ ಅವನು ಪುತ್ರಜನ್ಮವನ್ನು ಬಯಸಿ ನನಗೆ ಶ್ರೇಷ್ಠನಾದ ಪುತ್ರನಿಲ್ಲ ಎಂದು ತಿಳಿದು ಮಕ್ಕಳನ್ನು ಪಡೆದ ತನ್ನ ಬಂಧುಗಳನ್ನು ಯೋಚಿಸಿ ಬೇಸರದಿಂದ ಅವರಿಗೆ ಧಿಕ್ಕಾರವನ್ನು ಹೇಳಿದನು. ದ್ರೋಣರಿಗೆ ಪ್ರತೀಕಾರವನ್ನು ಮಾಡಲು ಬಯಸಿದ ಅವನಿಗೆ ಬಹಳ ಬೇಸರವುಂಟಾಯಿತು.
ಪ್ರಭಾವಂ ವಿನಯಂ ಶಿಕ್ಷಾಂ ದ್ರೋಣಸ್ಯ ಚರಿತಾನಿ ಚ |
ಕ್ಷಾತ್ರೇಣ ಚ ಬಲೇನಾಸ್ಯ ಪರಾಜೇತುಂ ಹಿ ನಾಶಕತ್ ॥46॥
ಅವನು ದ್ರೋಣರ ಪ್ರಭಾವವನ್ನೂ, ವಿನಯವನ್ನೂ, ಚರಿತೆಗಳನ್ನೂ ಮತ್ತು ಶಿಕ್ಷ್ಯರನ್ನೂ ತನ್ನ ಕ್ಷಾತ್ರಬಲದಿಂದ ಸೋಲಿಸಲು ಸಮರ್ಥನಾಗಲಿಲ್ಲ.
ಅಪ್ರಾಪ್ತವಾನ್ ನರಶ್ರೇಷ್ಠೋ ಯತಮಾನೋಽಪಿ ಭಾರತ |
ಅಭಿತಃ ಸೋಽಥ ಕಲ್ಮಾಷೀಂ ಗಂಗಾಕೂಲೇ ಪರಿಭ್ರಮನ್ ॥47॥
ಬ್ರಾಹ್ಮಣಾವಸಥಂ ಪುಣ್ಯಮಾಸಸಾದ ಮಹೀಪತಿಃ |
ತತ್ರ ನಾಸ್ನಾತಕಃ ಕಶ್ಚಿನ್ನ ಚಾಸೀದವ್ರತೀ ದ್ವಿಜಃ ॥48॥
ಭಾರತನೇ, ಎಷ್ಟು ಪ್ರಯತ್ನ ಮಾಡಿದರೂ ಆ ನರಶ್ರೇಷ್ಠನಿಗೆ ಒಬ್ಬ ಅನುಕೂಲನಾದ ಬ್ರಾಹ್ಮಣನೂ ದೊರೆಯಲಿಲ್ಲ. ಅವನು ಗಂಗಾತೀರದ ಸಮೀಪದಲ್ಲಿ ಕಲ್ಮಾಷವೃಕ್ಷದ ವನದಲ್ಲಿ ಸಂಚರಿಸುತ್ತಾ ಪವಿತ್ರವಾದ ಬ್ರಾಹ್ಮಣರ ಒಂದು ಅಗ್ರಹಾರವನ್ನು ತಲುಪಿದನು. ಆ ಅಗ್ರಹಾರದಲ್ಲಿ ಸ್ನಾತಕನಾಗದಿದ್ದ ಅಥವಾ ವ್ರತವನ್ನು ಧರಿಸದಿದ್ದ ಒಬ್ಬ ಬ್ರಾಹ್ಮಣನೂ ಇರಲಿಲ್ಲ.
ಅಧೀಯಾನೌ ಮಹಾಭಾಗೌ ಸೋಽಪಶ್ಯತ್ ಸಂಶಿತವ್ರತೌ |
ಯಾಜೋಪಯಾಜೌ ಬ್ರಹ್ಮರ್ಷೀ ಶಾಮ್ಯಂತೌ ಪೃಷತಾತ್ಮಜಃ ॥49॥
ಪೃಷತನ ಮಗನಾದ ಆ ದ್ರುಪದನು, ಆ ಅಗ್ರಹಾರದಲ್ಲಿ ವೇದಾಧ್ಯಯನವನ್ನು ಮಾಡುತ್ತಿದ್ದಂತಹ ಒಳ್ಳೆಯ ವ್ರತಧಾರಿಗಳಾದ, ಶಾಂತರಾದ ಮಹಾನುಭಾವರಾದ ಬ್ರಹ್ಮರ್ಷಿಗಳಾದ ಯಾಜೋಪಯಾಜರನ್ನು ನೋಡಿದನು.
ಸಂಹಿತಾಧ್ಯಯನೇ ಯುಕ್ತೌ ಗೋತ್ರತಶ್ಚಾಪಿ ಕಾಶ್ಯಪೌ |
ತರುಣೌ ತೌ ಯುಕ್ತರೂಪೌ ಬ್ರಾಹ್ಮಣಾವೃಷಿಸತ್ತಮೌ |
ಸ ಉಪಾಮಂತ್ರಯಾಮಾಸ ಸರ್ವಕಾಮೈರತಂದ್ರಿತಃ ॥50॥
ತರುಣರೂ, ಸುಂದರರೂ, ಋಷಿಶ್ರೇಷ್ಠರೂ ಆಗಿದ್ದ ಆ ಇಬ್ಬರು ಬ್ರಾಹ್ಮಣರು ಕಾಶ್ಯಪಗೋತ್ರದವರಾಗಿದ್ದು ಸಂಹಿತಾಧ್ಯಯನದಲ್ಲಿ ನಿರತ- ರಾಗಿದ್ದರು. ರಾಜನು ಸ್ವಲ್ಪವೂ ತಡಮಾಡದೆ ಅವರಿಗೆ ಸರ್ವಕಾಮಗಳನ್ನೂ ಪ್ರತಿಜ್ಞೆ ಮಾಡಿ ಅವರನ್ನು ಆಹ್ವಾನಿಸಿದನು.
ಸ ಬುದ್ಧ್ವಾ ಬಲಬುದ್ಧಿಂ ತು ಕನೀಯಾಂಸಮುಪಹ್ವರೇ |
ಪ್ರಪೇದೇ ಛಂದಯನ್ ಕಾಮೈರುಪಯಾಜಂ ಧೃತವ್ರತಮ್ ॥51॥
ರಾಜನು ಅವರಲ್ಲಿ ಚಿಕ್ಕವರಾದ ಉಪಯಾಜರ ತಪೋಬಲವನ್ನು ಮತ್ತು ಜ್ಞಾನವನ್ನೂ ಅರಿತು ಏಕಾಂತದಲ್ಲಿ ಧೃತವ್ರತರಾದ ಉಪಯಾಜರಿಗೆ ಅವರಿಗೆ ಇಷ್ಟವಾದ ಕಾಮವನ್ನು ಕೊಡುತ್ತೇನೆಂದು ಹೇಳಿ ಅವರನ್ನು ಸಮೀಪಿಸಿದನು.
ಪಾದಶುಶ್ರೂಷಣೇ ಯುಕ್ತಃ ಪ್ರಿಯವಾಕ್ ಸರ್ವಕಾಮದಃ |
ಅರ್ಚಯಿತ್ವಾ ಯಥಾನ್ಯಾಯಮುಪಯಾಜಮುವಾಚ ಹ ॥52॥
ಸರ್ವಕಾಮದನೂ, ಪ್ರಿಯವಚನನೂ ಆದ ಅವನು ಉಪಯಾಜರ ಪಾದಸೇವೆಯಲ್ಲಿ ನಿರತನಾಗಿ ಅವರನ್ನು ಶಾಸ್ತ್ರೋಕ್ತರೀತಿಯಿಂದ

ಅರ್ಚಿಸಿ ಅವರನ್ನು ಕುರಿತು ಮಾತನಾಡಿದನು.
ಯೇನ ಮೇ ಕರ್ಮಣಾ ಬ್ರಹ್ಮನ್ ಪುತ್ರಃ ಸ್ಯಾದ್ ದ್ರೋಣಮೃತ್ಯವೇ|
ಅರ್ಜುನಸ್ಯ ತಥಾ ಭಾರ್ಯಾ ಭವೇದ್ ಯಾ ವರವರ್ಣಿನೀ |
ಉಪಯಾಜ ಕೃತೇ ತಸ್ಮಿನ್ ಗವಾಂ ದಾಸ್ಯಾಮಿ ತೇಽರ್ಬುದಮ್ ॥53॥
ಬ್ರಾಹ್ಮಣರೇ, ಯಾವ ಕರ್ಮದಿಂದ ನನಗೆ ದ್ರೋಣರಿಗೆ ಮೃತ್ಯುವಾಗುವ ಪುತ್ರನು ಜನಿಸುವನೋ ಹಾಗೆಯೇ ಅರ್ಜುನನಿಗೆ ಭಾರ್ಯೆಯಾಗುವ ಸುಂದರಿಯಾದ ಪುತ್ರಿಯು ಜನಿಸುವಳೋ ಅಂತಹ ಕರ್ಮವನ್ನು ಮಾಡಿಸಿ. ಅಂತಹ ಕರ್ಮವನ್ನು ಮಾಡಿದರೆ ನಿಮಗೆ ಒಂದು ಅರ್ಬುದ ಗೋದಾನವನ್ನು ಕೊಡುವೆನು.
ಯದನ್ಯತ್ ತೇ ದ್ವಿಜಶ್ರೇಷ್ಠ ಮನಸಃ ಸುಪ್ರಿಯಂ ಭವೇತ್ |
ಸರ್ವಂ ತತ್ ತೇ ಪ್ರದಾಸ್ಯಾಮಿ ನ ಹಿ ಮೇಽಸ್ತ್ಯತ್ರ ಸಂಶಯಃ ॥54॥
ಬ್ರಾಹ್ಮಣಶ್ರೇಷ್ಠರೇ, ಅದಲ್ಲದೇ ನಿಮ್ಮ ಮನಸ್ಸಿಗೆ ಪ್ರಿಯವಾದ ಏನೇನು ವಸ್ತುಗಳು ಇವೆಯೋ ಅವೆಲ್ಲವನ್ನೂ ನಿಮಗೆ ಕೊಡುವೆನು. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಇತ್ಯುಕ್ತೋ ನಾಹಮಿತ್ಯೇವಂ ತಮೃಷಿಃ ಪ್ರತ್ಯುವಾಚ ಹ |
ಆರಾಧಯಿಷ್ಯನ್ ದ್ರುಪದಃ ಸ ತಂ ಪರ್ಯಚರತ್ ಪುನಃ ॥55॥
ದ್ರುಪದನು ಹೀಗೆ ಹೇಳಿದಾಗ ಉಪಯಾಜರು ನಾನು ಮಾಡುವುದಿಲ್ಲ ಎಂದು ಅವನಿಗೆ ಉತ್ತರವನ್ನು ಕೊಟ್ಟರು. ದ್ರುಪದನು ಅವರನ್ನು ಒಲಿಸುವ ಸಲುವಾಗಿ ಪುನಃ ಅವರ ಪರಿಚರ್ಯೆಯನ್ನು ಮಾಡಿದನು.
ತತಃ ಸಂವತ್ಸರಸ್ಯಾಂತೇ ದ್ರುಪದಂ ಸ ದ್ವಿಜೋತ್ತಮಃ |
ಉಪಯಾಜೋಽಬ್ರವೀದ್ ರಾಜನ್ ಕಾಲೇ ಮಧುರಯಾ ಗಿರಾ ॥56॥
ರಾಜನೇ, ಅನಂತರ ಒಂದು ವರ್ಷವು ಕಳೆದ ಮೇಲೆ ದ್ವಿಜಶ್ರೇಷ್ಠರಾದ ಉಪಯಾಜರು ದ್ರುಪದನನ್ನು ಕುರಿತು ಯೋಗ್ಯವಾದ ಕಾಲದಲ್ಲಿ ಮಧುರವಾದ ಮಾತುಗಳಿಂದ ನುಡಿದರು.
ಜ್ಯೇಷ್ಠೋ ಭ್ರಾತಾ ಮಮಾಗೃಹ್ಣಾದ್ ವಿಚರನ್ ವನನಿರ್ಝರೇ |
ಅಪರಿಜ್ಞಾತಶೌಚಾಯಾಂ ಭೂಮೌ ನಿಪತಿತಂ ಫಲಮ್ ॥57॥
ನನ್ನ್ನ ಅಣ್ಣನು ಕಾಡಿನ ಝರಿಯ ಬಳಿಯಲ್ಲಿ ಸಂಚರಿಸುತ್ತಾ ಶುದ್ಧಿಯು ತಿಳಿಯದಿದ್ದ ಭೂಮಿಯ ಮೇಲೆ ಬಿದ್ದಿದ್ದ ಒಂದು ಫಲವನ್ನು ಎತ್ತಿ ಕೊಂಡನು.
ತದಪಶ್ಯಮಹಂ ಭ್ರಾತುರಸಾಂಪ್ರತಮನುವ್ರಜನ್ |
ವಿಮರ್ಶಂ ಸಂಕರಾದಾನೇ ನಾಯಂ ಕುರ್ಯಾತ್ ಕಥಂಚನ ॥58॥
ನಾನು ಅಣ್ಣನ ಹಿಂದೆ ಹೋಗುತ್ತಾ ಅವನು ಮಾಡಿದ ಆ ಅನುಚಿತಕಾರ್ಯವನ್ನು ನೋಡಿ ಶುದ್ಧಾಶುದ್ಧಿಗಳು ಬೆರೆತ ವಸ್ತುಗಳ ವಿಷಯದಲ್ಲಿ ಇವನು ಎಂದೂ ವಿಮರ್ಶೆ ಮಾಡುವುದಿಲ್ಲವೆಂದು ತಿಳಿದೆ.
ದೃಷ್ಟ್ವಾ ಫಲಸ್ಯಾಪಗಮಂ ದೋಷಾಂಸ್ತಸ್ಯಾನುಬಂಧಿಕಾನ್ |
ವಿವಿನಕ್ತಿ ನಾಚಾಶೌಚಂ ಯಃ ಸೋಽನ್ಯತ್ರಾಪಿ ಕಥಂಚನ ॥59॥
ಯಾರು ಕೆಳಗೆ ಬಿದ್ದ ಫಲವನ್ನು ನೋಡಿ ಅದರಲ್ಲಿರಬಹುದಾದ ಅಶುಚಿತ್ವ ಸಂಬಂಧಿಯಾದ ದೋಷಗಳನ್ನು ಪ್ರತ್ಯೇಕಮಾಡಿ ತಿಳಿಯುವುದಿಲ್ಲವೋ ಅವನು ಬೇರೆ ಕಡೆಯಲ್ಲಿಯೂ ಕೂಡ ಹಾಗೆಯೇ ಮಾಡುತ್ತಾನೆ.
ಸಂಹಿತಾಧ್ಯಯನಂ ಕುರ್ವನ್ ವಸನ್ ಗುರುಕುಲೇ ಚ ಯಃ |
ಭೈಕ್ಷಮುಚ್ಛಿಷ್ಟಮನ್ಯೇಷಾಂ ಭುಂಜತಿ ಸ್ಮ ಸದಾ ಸದಾ ॥60॥
ಅವನು ಗುರುಕುಲದಲ್ಲಿ ಸಂಹಿತಾಧ್ಯಯನವನ್ನ್ನು ಮಾಡುವ ಕಾಲದಲ್ಲಿ ಉಳಿದವರು ತಿಂದು ಬಿಟ್ಟ ಶೇಷವನ್ನು ಆಗಾಗ ಭುಂಜಿಸುತ್ತಿದ್ದನು.
ತಮಹಂ ಫಲಾರ್ಥಿನಂ ಮನ್ಯೇ ಭ್ರಾತರಂ ತರ್ಕಚಕ್ಷುಷಾ |
ತಂ ವೈ ಗಚ್ಛಸ್ವ ನೃಪತೇ ಸ ತ್ವಾಂ ಸಂಯಾಜಯಿಷ್ಯತಿ ॥61॥
ರಾಜನೇ, ನನ್ನ ತರ್ಕಬುದ್ಧಿಯಿಂದ ನನ್ನ ಅಣ್ಣನು ಫಲಾರ್ಥಿ ಎಂದು ಊಹಿಸುತ್ತೇನೆ. ನೀನು ಅವನ ಬಳಿಗೆ ಹೋಗು ಅವನು ನಿನಗೆ ಯಾಗವನ್ನು ಮಾಡಿಸುವನು.
ಜುಗುಪ್ಸಮಾನೋ ನೃಪತಿರ್ಮನಸಾಽನುವಿಚಿಂತಯನ್ |
ಉಪಯಾಜವಚಃ ಶ್ರುತ್ವಾ ನೃಪತಿಃ ಸರ್ವಧರ್ಮವಿತ್ |
ಅಭಿಸಂಪೂಜ್ಯ ಪೂಜಾರ್ಹಮೃಷಿಂ ಯಾಜಮುವಾಚ ಸಃ ॥62॥
ಬೇಸರಗೊಂಡ, ಸರ್ವಧರ್ಮವನ್ನೂ ತಿಳಿದ, ರಾಜನು ಉಪಯಾಜನ ಮಾತುಗಳನ್ನು ಕೇಳಿ ಅದನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಪೂಜಾರ್ಹನಾದ ಯಾಜನನ್ನು ಸಮೀಪಿಸಿ ಅವನನ್ನು ಸತ್ಕರಿಸಿ ಮಾತನಾಡಿದನು.
ಅಯುತಾನಿ ದದಾನ್ಯಷ್ಟೌ ಗವಾಂ ಯಾಜಯ ಮಾಂ ವಿಭೋ |
ದ್ರೋಣವೈರಾಭಿಸಂತಪ್ತಂ ಮಾಂ ಸಂಹ್ಲಾದಯಿತುಮರ್ಹಸಿ ॥63॥
ವಿಭುಗಳೇ, ನನಗೆ ಯಾಗವನ್ನು ಮಾಡಿಸಿ. ನಿಮಗೆ ಎಂಭತ್ತುಸಾವಿರ ಗೋದಾನವನ್ನು ಮಾಡುತ್ತೇನೆ. ದ್ರೋಣವೈರದಿಂದ ಬೆಂದುಹೋದ ನನ್ನನ್ನು ನೀವು ಉಜ್ಜೀವಿಸಬೇಕು.
ಸ ಹಿ ಬ್ರಹ್ಮವಿದಾಂ ಶ್ರೇಷ್ಠೋ ಬ್ರಹ್ಮಾಸ್ತ್ರೇ ಚಾಪ್ಯನುತ್ತಮಃ |
ತಸ್ಮಾದ್ ದ್ರೋಣಃ ಪರಾಜೈಷೀನ್ಮಾಂ ವೈ ಸ ಸಖಿವಿಗ್ರಹೇ |

ಕ್ಷತ್ರಿಯೋ ನಾಸ್ತಿ ತುಲ್ಯೋಽಸ್ಯ ಪೃಥಿವ್ಯಾಂ ಕಶ್ಚಿದಗ್ರಣೀಃ ॥64॥
ದ್ರೋಣರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರು, ಬ್ರಹ್ಮಾಸ್ತ್ರವನ್ನು ಹೊಂದಿದವರಲ್ಲಿಯೂ ಶ್ರೇಷ್ಠರು. ಆದ್ದರಿಂದಲೇ ದ್ರೋಣರು ಸ್ನೇಹಿತನಾದ ನನ್ನ ಜೊತೆಯಲ್ಲಿ ಯುದ್ಧಮಾಡಿ ನನ್ನನ್ನು ಸೋಲಿಸಿದರು. ಭೂಮಿಯಲ್ಲಿ ಅವರಿಗೆ ಸಮನಾದ ಶ್ರೇಷ್ಠವಾದ ಕ್ಷತ್ರಿಯನು ಯಾವನೂ ಇಲ್ಲ.
ಕೌರವಾಚಾರ್ಯಮುಖ್ಯಸ್ಯ ಭಾರದ್ವಾಜಸ್ಯ ಧೀಮತಃ |
ದ್ರೋಣಸ್ಯ ಶರಜಾಲಾನಿ ಪ್ರಾಣಿದೇಹಹರಾಣಿ ಚ ॥65॥
ಕೌರವಾಚಾರ್ಯಶ್ರೇಷ್ಠರಾದ ಮೇಧಾವಿಗಳಾದ ಭರದ್ವಾಜರ ಪುತ್ರರಾದ ದ್ರೋಣರ ಬಾಣಸಮೂಹಗಳು ಪ್ರಾಣಿಗಳ ದೇಹವನ್ನು ವಿನಾಶಿಸುತ್ತವೆ.
ಷಡರತ್ನಿ ಧನುಶ್ಚಾಸ್ಯ ತಾಳಮಾತ್ರಮನುತ್ತಮಮ್ |
ಸ ಹಿ ಬ್ರಾಹ್ಮಣವೇಗೇನ ಕ್ಷಾತ್ರಂ ವೇಗಮಸಂಶಯಮ್ ॥66॥
ಪ್ರತಿಹಂತಿ ಮಹೇಷ್ವಾಸೋ ಭಾರದ್ವಾಜೋ ಮಹಾಮನಾಃ |
ಕ್ಷತ್ರೋಚ್ಛೇದಾಯ ವಿಹಿತೋ ಜಾಮದಗ್ನ್ಯ ಇವೋತ್ಥಿತಃ ॥67॥
ಆರು ಮೊಳ ಎತ್ತರದ ಅವರ ಶ್ರೇಷ್ಠವಾದ ಧನುಸ್ಸು ತಾಳೆಮರದಷ್ಟು ಎತ್ತರವಿದೆ. ಆ ಮಹೇಷ್ವಾಸರೂ, ಮಹಾಧೈರ್ಯಶಾಲಿಗಳೂ ಆದ ದ್ರೋಣರು ತಮ್ಮ ಬ್ರಾಹ್ಮಣವೇಗದಿಂದ ಕ್ಷತ್ರಿಯವೇಗವನ್ನು ನಿಸ್ಸಂಶಯವಾಗಿ ನಾಶಮಾಡುತ್ತಾರೆ. ಅವರು ಕ್ಷತ್ರಿಯಕುಲದ ನಾಶಕ್ಕೆ ಉದ್ಭವಿಸಿದ ಪರಶುರಾಮರಂತೆ ಬ್ರಹ್ಮದೇವರಿಂದ ಸೃಷ್ಟಿಸಲ್ಪಟ್ಟಿದ್ದಾರೆ.
ತಸ್ಯ ಹ್ಯಸ್ತ್ರಬಲಂ ಘೋರಮಪ್ರಸಹ್ಯಂ ನರೈರ್ಭುವಿ |
ಬ್ರಾಹ್ಮಮುಚ್ಚಾವಚಂ ತೇಜೋ ಹುತಾಹುತಿರಿವಾನಲಃ ॥68॥
ಅವರ ಘೋರವಾದ ಅಸ್ತ್ರಬಲವನ್ನು ಭೂಮಿಯಲ್ಲಿ ಯಾವ ನರರೂ ಸಹಿಸಲು ಸಾಧ್ಯವಿಲ್ಲ. ಅವರ ಉಚ್ಚಾವಚವಾದ ಅಸ್ತ್ರಗಳ ಬಲವೂ ಹಾಗೆಯೇ, ಅವರ ಬ್ರಾಹ್ಮತೇಜಸ್ಸು ಹಾಗೆಯೇ. ಅವರು ಆಹುತಿಯನ್ನು ಹಾಕಿದ ಅಗ್ನಿಯಂತೆ ಜ್ವಲಿಸುತ್ತಿದ್ದಾರೆ.
ಬ್ರಹ್ಮಕ್ಷತ್ರೇ ಚ ವಿಹಿತೇ ಬ್ರಹ್ಮತೇಜೋ ವಿಶಿಷ್ಯತೇ |
ಸೋಽಹಂ ಕ್ಷಾತ್ರಾದ್ ಬಲಾದ್ಧೀನೋ ಬ್ರಹ್ಮತೇಜಃ ಪ್ರಪೇದಿವಾನ್ ॥69॥
ಬ್ರಾಹ್ಮಣರು ಮತ್ತು ಕ್ಷತ್ರಿಯರು ಒಂದು ಕಡೆ ಸೇರಿದರೆ ಬ್ರಹ್ಮತೇಜಸ್ಸೇ ಕ್ಷಾತ್ರತೇಜಸ್ಸಿಗಿಂತ ಶ್ರೇಷ್ಠವಾಗುತ್ತದೆ. ಆದ್ದರಿಂದ ನಾನು ಕ್ಷಾತ್ರಬಲದಿಂದಲೂ ಹೀನನಾಗಿ ಬ್ರಹ್ಮತೇಜಸ್ಸನ್ನು ಆಶ್ರಯಿಸಿ ಬಂದಿದ್ದೇನೆ.
ದ್ರೋಣಾದ್ ವಿಶಿಷ್ಟಮಾಸಾದ್ಯ ಭವಂತಂ ಬ್ರಹ್ಮವಿತ್ತಮಮ್ |
ದ್ರೋಣಾಂತಕಮಹಂ ಪುತ್ರಂ ಲಭೇಯಂ ಯುಧಿ ದುರ್ಜಯಮ್ ॥
ದ್ರೋಣರಿಗಿಂತಲೂ ಶ್ರೇಷ್ಠರಾದ ಬ್ರಹ್ಮಜ್ಞಾನಿಗಳಾದ ತಮ್ಮನ್ನು ಸಮೀಪಿಸಿ ತಮ್ಮ ಅನುಗ್ರಹದಿಂದ ಯುದ್ಧದಲ್ಲಿ ದುರ್ಜಯನಾದ ದ್ರೋಣರಿಗೆ ಮೃತ್ಯುವಾಗುವ ಮಗನನ್ನು ನಾನು ಪಡೆಯಲು ಬಯಸುತ್ತೇನೆ.
ಪಾಂಡೋಃ ಸ್ನುಷಾರ್ಥಂ ಕನ್ಯಾ ಚ ಭವೇದಿತಿ ಮತಿರ್ಮಮ |
ತತ್ಕರ್ಮ ಕುರು ಮೇ ಯಾಜ ಪ್ರದದಾಮ್ಯರ್ಬುದಂ ಗವಾಮ್ ॥71॥
ಪಾಂಡುವಿಗೆ ಸೊಸೆಯಾಗುವ ಒಬ್ಬ ಮಗಳೂ ಬೇಕೆಂದು ನನ್ನ ಅಭಿಪ್ರಾಯ. ಯಾಜರೇ, ನನ್ನ ಸಲುವಾಗಿ ಅಂತಹ ಕರ್ಮವನ್ನು ಮಾಡಿ. ನಾನು ನಿಮಗೆ ಒಂದು ಹತ್ತು ಕೋಟಿ ಗೋದಾನವನ್ನು ಮಾಡುತ್ತೇನೆ.
ಯಾಜೋ ದ್ರೋಣವಿನಾಶಾಯ ಪ್ರತಿಜಜ್ಞೇ ತಥೈವ ಸಃ |
ತಥೇತ್ಯುಕತ್ವ ತು ತಂ ಯಜ್ಞಂ ಪುತ್ರಕಾಮೀಯಮಾರಭತ್ ॥72॥
ಯಾಜರು ದ್ರೋಣವಿನಾಶದ ಸಲುವಾಗಿ ಹಾಗೆಯೇ ಮಾಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿ ಪುತ್ರಕಾಮೇಷ್ಟಿಯಾಗವನ್ನು ಮಾಡಲು ಆರಂಭಿಸಿದರು.
ಗುರ್ವರ್ಥ ಇತಿ ಚಾಕಾಮ ಉಪಯಾಜೋಽಪ್ಯಯೋಜಯತ್ |
ಯಾಜಸ್ತು ಯಜತಾಂ ಶ್ರೇಷ್ಠೋ ಹವ್ಯವಾಹಮತರ್ಪಯತ್ ॥73॥
ತಮಗೆ ಇಷ್ಟವಿಲ್ಲದಿದ್ದರೂ ಅಣ್ಣನ ಪ್ರೀತಿಗೋಸ್ಕರ ಉಪಯಾಜರು ಆ ಯಾಗದಲ್ಲಿ ಭಾಗವಹಿಸಿದರು. ಯಜ್ಞಮಾಡುವವರಲ್ಲಿ ಶ್ರೇಷ್ಠರಾದ ಯಾಜರು ತಮ್ಮ ಯಜ್ಞದಿಂದ ಅಗ್ನಿದೇವತೆಯನ್ನು ಸಂತೋಷಪಡಿಸಿದರು.
ತತಸ್ತಸ್ಯ ನರೇಂದ್ರಸ್ಯ ಉಪಯಾಜೋ ಮಹಾಯಶಾಃ |
ಆಚಖ್ಯೌ ಕರ್ಮವೈತಾನಂ ತಥಾ ಪುತ್ರಫಲಸ್ಯ ವೈ ॥74॥
ಆಗ ಮಹಾಕೀರ್ತಿವಂತರಾದ ಉಪಯಾಜರು ಆ ರಾಜನಿಗೆ ಪುತ್ರಫಲವನ್ನು ಪಡೆಯಲು ಮಾಡುವ ಆ ಯಜ್ಞದ ಸಂಬಂಧಿಯಾದ ಎಲ್ಲಾ ವಿವರಗಳನ್ನೂ ನೀಡಿದರು.
ಸ ಚ ಪುತ್ರೋ ಮಹಾವೀರ್ಯೋ ಮಹಾತೇಜಾ ಮಹಾಬಲಃ |
ಇಷ್ಯತೇ ಯದ್ವಿಧೋ ರಾಜನ್ ಭವಿತಾ ವೈ ತಥಾವಿಧಃ ॥75॥
ರಾಜನೇ, ನೀನು ಎಂತಹ ಮಹಾವೀರ್ಯನಾದ, ಮಹಾತೇಜಸ್ವಿಯಾದ, ಮಹಾಬಲನಾದ ಪುತ್ರನನ್ನು ಬಯಸುತ್ತೀಯೋ ನಾವು ಮಾಡುವ ಕರ್ಮದಿಂದ ಅಂತಹ ಪುತ್ರನೇ ಜನಿಸುವನು.
ಯಥೋಕ್ತಂ ಕಲ್ಪಯಾಮಾಸ ರಾಜಾ ವಿಪ್ರೇಣ ತಂ ಕ್ರತುಮ್ |
ಭಾರದ್ವಾಜಸ್ಯ ಹಂತಾರಂ ಸೋಽಭಿಸಂಧಾಯ ಭೂಮಿಪಃ ॥76॥
ಆ ರಾಜನು ದ್ರೋಣಾಚಾರ್ಯರ ಹಂತಕನನ್ನು ಉದ್ದೇಶಿಸಿ ಉಪಯಾಜರು ಹೇಳಿದಂತೆ ಆ ಯಾಗಕ್ಕೆ ಸಂಬಂಧಿಸಿದ ಎಲ್ಲಾ

ವಸ್ತುಗಳನ್ನೂ ಅಣಿಮಾಡಿದನು.
ಆಜಹ್ರೇ ತತ್ ತಥಾ ಸರ್ವಂ ದ್ರುಪದಃ ಕರ್ಮಸಿದ್ಧಯೇ |
ಯಾಜಸ್ತು ಸವನಸ್ಯಾಂತೇ ದೇವೀಮಾಹ್ವಯಾಪಯತ್ ತದಾ ॥77॥
ದ್ರುಪದನು ತನ್ನ ಕರ್ಮದ ಸಿದ್ಧಿಗಾಗಿ ಆ ಎಲ್ಲಾ ವಸ್ತುಗಳನ್ನೂ ಹಾಗೆಯೇ ತಂದು ಒದಗಿಸಿದನು, ಹೋಮದ ಕೊನೆಯಲ್ಲಿ ಯಾಜರು ರಾಣಿಯನ್ನು ಕರೆಸಿದರು.
ಯಾಜಃ
ಪ್ರೇಹಿ ಮಾಂ ರಾಜ್ಞಿ ಪೃಷತಿ ಮಿಥುನಂ ತ್ವಾಮುಪಸ್ಥಿತಮ್ |
ಕುಮಾರಶ್ಚ ಕುಮಾರೀ ಚ ಪತಿವಂಶವಿವೃದ್ಧಯೇ ॥78॥
ದ್ರುಪದನ ಪತ್ನಿಯಾದ ರಾಣಿಯೇ, ಬೇಗ ನನ್ನ ಬಳಿಗೆ ಬಾ. ಪತಿವಂಶದ ಅಭಿವೃದ್ಧಿಗಾಗಿ ಅವಳಿಮಕ್ಕಳಾದ ಒಬ್ಬ ಪುತ್ರನೂ ಮತ್ತು ಪುತ್ರಿಯೂ ನಿನ್ನನ್ನು ಎದುರು ನೋಡುತ್ತಿದ್ದಾರೆ.
ದೇವೀ
ನಾಲಿಪ್ತಂ ವೈ ಮಮ ಮುಖಂ ಪುಣ್ಯಾನ್ ಗಂಧಾನ್ ಬಿಭರ್ಮಿ ಚ|
ನ ಪತ್ನೀ ತೇಽಸ್ಮಿ ಸೂತ್ಯರ್ಥಂ ತಿಷ್ಠ ಯಾಜ ಮಮ ಪ್ರಿಯೇ ॥79॥
ನನ್ನ ಮುಖಕ್ಕೆ ಇನ್ನೂ ಲೇಪನವನ್ನು ಮಾಡಿಕೊಂಡಿಲ್ಲ. ಸುಗಂಧ ದ್ರವ್ಯಗಳನ್ನು ಹಾಕಿಕೊಂಡಿಲ್ಲ. ಪ್ರಸವದ ಸಲುವಾಗಿ ಬಾ ಎಂದು ಕರೆಯಲು ನಾನು ನಿನ್ನ ಪತ್ನಿಯಲ್ಲ. ಯಾಜನೇ, ಸ್ವಲ್ಪ ಸಮಯ ತಡೆದು ನನ್ನ ಪ್ರಿಯವನ್ನು ಸಾಧಿಸು.
ಯಾಜಃ
ಯಾಜೇನ ಶ್ರಪಿತಂ ಹವಿರುಪಯಾಜೇನ ಮಂತ್ರಿತಮ್ |
ಕಥಂ ಕಾಮಂ ನ ಸಂದಧ್ಯಾತ್ ಪೃಷತಿ ಪ್ರೇಹಿ ತಿಷ್ಠ ವಾ ॥80॥
ಯಾಜರು ಸಿದ್ಧಪಡಿಸಿ ಉಪಯಾಜರು ಮಂತ್ರಿಸಿದ ಹವಿಸ್ಸು ಹೇಗೆ ತನ್ನ ಫಲವನ್ನು ಕೊಡದೆ ಇದ್ದೀತು. ರಾಣಿಯೇ ಬೇಕಾದರೆ ಬಾ ಇಲ್ಲದಿದ್ದರೆ ಬಿಡು.
ಬ್ರಾಹ್ಮಣಃ
ಏವಮುಕ್ತೇತ್ವ ತು ಯಾಜೇನ ಹುತೇ ಹವಿಷಿ ಸಂಸ್ಕೃತೇ |
ಉತ್ತಸ್ಥೌ ಪಾವಕಾತ್ ತಸ್ಮಾತ್ ಕುಮಾರೋ ದೇವಸನ್ನಿಭಃ ॥81॥
ಹೀಗೆ ಹೇಳಿ ಆ ಸಂಸ್ಕೃತವಾದ ಹವಿಸ್ಸು ಯಾಜರಿಂದ ಅಗ್ನಿಯಲ್ಲಿ ಹೋಮ ಮಾಡಲ್ಪಡುತ್ತಿರಲು ಅಗ್ನಿಯಿಂದಲೇ ದೇವಕಾಂತಿಯುಳ್ಳ ಕುಮಾರನು ಎದ್ದು ಬಂದನು.
ಜ್ವಾಲಾವರ್ಣೋ ಘೋರರೂಪಃ ಕಿರೀಟೀ ವರ್ಮ ಚೋತ್ತಮಮ್ |
ಬಿಭ್ರತ್ ಸಖಡ್ಗಃ ಸಶರೋ ಧನುಷಾ ವಿನದನ್ ಮುಹುಃ ॥82॥
ಅಧ್ಯಾರೋಹದ್ ದೃಢರಥಂ ತೇನ ಸ ಪ್ರಯಯೌ ತದಾ |
ತತಃ ಪ್ರಣೇದುಃ ಪಾಂಚಾಲಾಃ ಪ್ರಹೃಷ್ಟಾಃ ಸಾಧುಸಾಧ್ವಿತಿ ॥83॥
ಅವನು ಜ್ವಾಲಾವರ್ಣವುಳ್ಳವನೂ, ಘೋರರೂಪವುಳ್ಳವನೂ ಆಗಿ, ಶ್ರೇಷ್ಠವಾದ ಕಿರೀಟವನ್ನು ಧರಿಸಿ, ಕೈಯಲ್ಲಿ ಖಡ್ಗಚರ್ಮಗಳನ್ನೂ, ಧನುಸ್ಸನ್ನೂ ಮತ್ತು ಶರಗಳನ್ನೂ ಹಿಡಿದು, ಮತ್ತೆ ಮತ್ತೆ ಗರ್ಜನೆಯನ್ನು ಮಾಡುತ್ತಾ ಶ್ರೇಷ್ಠವಾದ ರಥವನ್ನು ಏರಿ ಅಲ್ಲಿಂದ ಹೊರಟನು. ಆಗ ಪಾಂಚಾಲರೆಲ್ಲರೂ ಸಂತೋಷದಿಂದ ಸಾಧು ಸಾಧು ಎಂದು ಸಿಂಹನಾದವನ್ನು ಮಾಡಿದರು.
ಭಯಾಪಹೋ ರಾಜಪುತ್ರಃ ಪಾಂಚಾಲಾನಾಂ ಯಶಸ್ಕರಃ |
ರಾಜ್ಞಃ ಶೋಕಾಪಹೋ ಜಾತ ಏಷ ದ್ರೋಣವಧಾಯ ವೈ |
ಇತ್ಯುವಾಚ ಮಹದ್ಭೂತಮದೃಶ್ಯಂ ಖೇಚರಂ ತದಾ ॥84॥
ಈಗ ಜನಿಸಿದ ಕುಮಾರನು ಪಾಂಚಾಲರಿಗೆ ಯಶಸ್ಸನ್ನು ಕೊಟ್ಟು ರಾಜನಿಗೆ ಶೋಕವನ್ನೂ ಭಯವನ್ನೂ ಪರಿಹರಿಸಿ ದ್ರೋಣಸಂಹಾರ ಮಾಡುವನು ಎಂದು ಆಕಾಶ ಸಂಚಾರಿಯಾದ ಒಂದು ಮಹಾಭೂತವು ಆಗ ಅದೃಶ್ಯವಾಗಿ ನುಡಿಯಿತು.
ಕುಮಾರೀ ಚಾಪಿ ಪಾಂಚಾಲೀ ಅರ್ಜುನಾರ್ಥೇ ವಿನಿರ್ಮಿತಾ |
ಸುಭಗಾ ದರ್ಶನೀಯಾಂಗೀ ವೇದಿಮಧ್ಯಾತ್ ಸಮುತ್ಥಿತಾ |
ಮಾನುಷಂ ವಿಗ್ರಹಂ ಕೃತ್ವಾ ಶ್ರೀಃ ಸಾಕ್ಷಾದ್ ದೇವವರ್ಣಿನೀ ॥85॥
ಕುಮಾರಿಯಾದ ಪಾಂಚಾಲಿಯು ಅರ್ಜುನನ ಸಲುವಾಗಿ ಜನಿಸಿದಳು. ಸುಂದರಿಯೂ ಮನೋಹರವಾದ ಅವಯವವುಳ್ಳವಳೂ ಆದ ಅವಳು ವೇದಿಮಧ್ಯದಿಂದ ಮೇಲೆದ್ದು ಬಂದಳು. ದೇವಸುಂದರಿಯಾದ, ಸಾಕ್ಷಾತ್ ಶ್ರೀದೇವಿಯಾದ ಅವಳು ಮಾನುಷ ಶರೀರವನ್ನು ಧರಿಸಿ ಮೇಲೆದ್ದು ಬಂದಳು.
(ದ್ರೌಪದಿಯ ದೇಹದಲ್ಲಿ ಭಾರತಿ, ಪಾರ್ವತಿ, ಶಚಿ, ಶ್ಯಾಮಲೆ ಮತ್ತು ಉಷೆಯರಿದ್ದಾರೆ. ಅವರೆಲ್ಲರಿಗೂ ತಮ್ಮ ತಮ್ಮ ಪತಿಗಳನ್ನು ಆಶ್ರಯಿಸುವ ಕಾರಣದಿಂದ ಶ್ರೀ ಎಂದು ಹೆಸರಿದೆ. ಆದ್ದರಿಂದ ಶ್ರೀದೇವಿಯು ಜನಿಸಿದಳು ಎಂದು ಹೇಳಿದ್ದಾರೆ)
ನೀಲೋತ್ಪಲಸಮೋ ಗಂಧೋ ಯಸ್ಯಾಃ ಕ್ರೋಶಾತ್ ಪ್ರವಾಯತಿ |
ಯಾ ಬಿಭರ್ತಿ ಪರಂ ರೂಪಂ ಯಸ್ಯಾ ನಾಸ್ತಿ ಸಮಾ ಭುವಿ ॥86॥
ಅವಳ ಶರೀರದ ನೀಲೋತ್ಪಲ ಗಂಧ ಸಮಾನವಾದ ಗಂಧವು ಒಂದು ಕ್ರೋಶದ ದೂರದಿಂದ ಗಾಳಿಯಲ್ಲಿ ಬರುತ್ತದೆ. ಅವಳ ಶ್ರೇಷ್ಠವಾದ ರೂಪಕ್ಕೆ ಸಮಾನವಾದ ರೂಪವುಳ್ಳವಳು ಭೂಮಿಯಲ್ಲಿ ಯಾರೂ ಇಲ್ಲ.
ಸದೃಶೀ ಪಾಂಡುಪುತ್ರಸ್ಯ ಅರ್ಜುನಸ್ಯಾತಿಭದ್ರಿಕಾ |

ಊಚುಃ ಪ್ರಹೃಷ್ಟಮನಸೋ ರಾಜಭಕ್ತಿಪುರಸ್ಕೃತಾಃ ॥87॥
ಅವಳು ಪಾಂಡುಪುತ್ರನಾದ ಅರ್ಜುನನಿಗೆ ಯೋಗ್ಯಳಾದವಳು ಮತ್ತು ಅತ್ಯಂತ ಮಂಗಲಸ್ವರೂಪಳಾದವಳು ಎಂದು. ರಾಜಭಕ್ತಿ ಪುರುಷರೆಲ್ಲಾ ಮನಸ್ಸಂತೋಷದಿಂದ ಹೇಳಿದರು.
ತಾಂ ಚಾಪಿ ಜಾತಾಂ ಸುಶ್ರೋಣೀಂ ವಾಗುವಾಚಾಶರೀರಿಣೀ।
ಸರ್ವಯೋಷಿದ್ವರಾ ಕೃಷ್ಣಾ ಕ್ಷಯಂ ಕ್ಷತ್ರಂ ನಿನೀಷತಿ ॥88॥
ಆ ಸುಂದರಿಯು ಜನಿಸಿದಾಗಲೂ ಅಶರೀರವಾಣಿಯಾಯಿತು. ಎಲ್ಲ ಸ್ತ್ರೀಯರಿಗಿರಿಂತ ಶ್ರೇಷ್ಠಳಾದ ಈ ಕೃಷ್ಣೆಯು ಕ್ಷತ್ರಿಯಕುಲವನ್ನು ನಾಶಮಾಡುತ್ತಾಳೆ.
ಸುರಕಾರ್ಯಮಿದಂ ಲೋಕೇ ಕರಿಷ್ಯತಿ ಸುಮಧ್ಯಮಾ।
ಅಸ್ಯಾಃ ಹೇತೋಃ ಕ್ಷತ್ರಿಯಾಣಾಂ ಮಹದುತ್ಪತ್ಸ್ಯತೇ ಭಯಮ್ ॥89॥
ಕ್ಷತ್ರಿಯಕುಲ ನಾಶವು ದೇವಕಾರ್ಯ. ಲೋಕದಲ್ಲಿ ಈ ಸುಂದರಿಯು ಅದನ್ನು ಮಾಡುವಳು. ಇವಳ ನಿಮಿತ್ತದಿಂದಾಗಿ ಕ್ಷತ್ರಿಯರಿಗೆ ದೊಡ್ಡ ಭಯವು ಉಂಟಾಗಲಿದೆ.
ತಚ್ಛ್ರುತ್ವಾ ಸರ್ವಪಾಂಚಾಲಾಃ ಪ್ರಣೇದುಃ ಸಿಂಹಸಂಘವತ್।
ತಚ್ಛ್ರುತ್ವಾ ದ್ರುಪದೋ ರಾಜಾ ಹರ್ಷಾದಶ್ರೂಣ್ಯವರ್ತಯತ್ ॥90॥
ಇದನ್ನು ಕೇಳಿದ ಎಲ್ಲಾ ಪಾಂಚಾಲರೂ ಸಿಂಹನಾದದಿಂದ ಗರ್ಜನೆಯನ್ನು ಮಾಡಿದರು. ಇದನ್ನು ಕೇಳಿದ ದ್ರುಪದರಾಜನು ಸಂತೋಷದಿಂದ ಕಣ್ಣೀರನ್ನು ಸುರಿಸಿದನು.
ಪರಿಷ್ವಜ್ಯ ಸುತಾಂ ಕೃಷ್ಣಾಂ ಸ್ನುಷಾ ಪಾಂಡೋರಿತಿ ಬ್ರುವನ್।
ಅಂಕಮಾರೋಪ್ಯ ಪಾಂಚಾಲೀಂ ರಾಜಾ ಹರ್ಷಮವಾಪ ಸಃ ॥91॥
ಅವನು ಮಗಳನ್ನು ಆಲಿಂಗಿಸಿ, ಪಾಂಡುವಿನ ಸೊಸೆಯೆಂದು ಹೇಳಿ, ತೊಡೆಯ ಮೇಲೆ ಕೂಡಿಸಿಕೊಂಡು ಬಹಳ ಸಂತೋಷ ಪಟ್ಟನು.
ತಯೋಸ್ತು ನಾಮನೀ ಚಕ್ರುರ್ದ್ವಿಜಾಃ ಸಂಪೂರ್ಣಮಾನಸಾಃ।
ಧೃಷ್ಟತ್ವಾದಪ್ರಧೃಷ್ಯತ್ವಾದ್ ದ್ಯುಮ್ನಾದ್ಯುತ್ಸಂಭವಾದಪಿ ॥92॥
ಧೃಷ್ಟದ್ಯುಮ್ನಃ ಕುಮಾರೋಽಯಂ ದ್ರುಪದಸ್ಯ ಭವತ್ವಿತಿ।
ಕೃಷ್ಣೇತ್ಯೇವಾಬ್ರುವನ್ ಕೃಷ್ಣಾಂ ಕೃಷ್ಣಾಽಭೂತ್ ಸಾ ಹಿ ವರ್ಣತಃ ॥93॥
ಬ್ರಾಹ್ಮಣರು ತುಂಬಿದ ಮನಸ್ಸಿನಿಂದ ಅವರಿಬ್ಬರಿಗೂ ನಾಮಕರಣವನ್ನು ಮಾಡಿದರು. ಧೈರ್ಯಶಾಲಿಯಾದುದರಿಂದ ಶತ್ರುಗಳಿಂದ ಸೋಲಿಸಲ್ಪಡಲು ಸಾಧ್ಯವಾಗದುದರಿಂದ, ಕಾಂತಿಯುಕ್ತನಾದ್ದರಿಂದ ಮತ್ತು ಕಾಂತಿಯಿಂದ ಜನಿಸಿದುದರಿಂದ, ಈ ದ್ರುಪದನ ಕುಮಾರನಿಗೆ ಧೃಷ್ಟದ್ಯುಮ್ನ ಎಂದು ಹೆಸರಾಗಲಿ (ಎಂದು ಹೇಳಿದರು). ಈ ಕುಮಾರಿಯು ಕೃಷ್ಣವರ್ಣದವಳಾದ್ದರಿಂದ ಬ್ರಾಹ್ಮಣರು ಅವಳನ್ನು ಕೃಷ್ಣಾ ಎಂದೇ ಕರೆದರು.
ತಥಾ ತನ್ಮಿಥುನಂ ಜಜ್ಞೇ ದ್ರುಪದಸ್ಯ ಮಹಾಮಖೇ।
ಧೃಷ್ಟದ್ಯುಮ್ನಸ್ತು ಪಾಂಚಾಲಃ ಸಿಂಹನಾದೇನ ನಾದಯನ್ ॥94॥
ಸೋಽಧ್ಯಾರೋಹದ್ ರಥವರಂ ತೇನ ಸಂಪ್ರಯಯೌ ಗೃಹಮ್।
ಕೃಷ್ಣಾ ಚ ಶಿಬಿಕಾಂ ಪ್ರಾಪ್ಯ ಪ್ರವಿವೇಶ ನಿವೇಶನಮ್ ॥95॥
ದ್ರುಪದನ ಮಹಾಯಜ್ಞದಲ್ಲಿ ಹೀಗೆ ಆ ಅವಳಿ ಮಕ್ಕಳು ಜನಿಸಿದರು. ದ್ರುಪದನ ಮಗನಾದ ಧೃಷ್ಟದ್ಯುಮ್ನನು ಸಿಂಹನಾದದಿಂದ ಗರ್ಜಿಸುತ್ತಾ ಶ್ರೇಷ್ಠವಾದ ರಥವನ್ನೇರಿ ಮನೆಗೆ ಹೊರಟನು. ದ್ರೌಪದಿಯಾದರೋ ಪಲ್ಲಕ್ಕಿಯಲ್ಲಿ ಕುಳಿತು ಅರಮನೆಯನ್ನು ಪ್ರವೇಶಿಸಿದಳು.
ದ್ರೋಣಂ ಸಂಪೂಜ್ಯ ವಿಧಿವದ್ ಗುರುರಿತ್ಯೇವ ಧರ್ಮತಃ।
ಪರಿದಾಯ ಸುತಂ ಶಿಷ್ಯಂ ಧೃಷ್ಟದ್ಯುಮ್ನಂ ತು ಸೋಮಕಃ।
ಅಸ್ಯಾಸತ್ತ್ರಣಿ ಪ್ರಸೀದೇತಿ ಪ್ರಬ್ರುವೀತ್ ಪ್ರಿಯವಾದನಃ ॥96॥
ಸೋಮಕರಾಜನಾದ ದ್ರುಪದನು ದ್ರೋಣರನ್ನು ಧರ್ಮದಿಂದ ಗುರುಗಳೆಂದೇ ವಿಧಿವತ್ತಾಗಿ ಪೂಜಿಸಿ, ತನ್ನ ಪುತ್ರನಾದ ಧೃಷ್ಟದ್ಯುಮ್ನನನ್ನು ಅವರಿಗೆ ಶಿಷ್ಯನನ್ನಾಗಿ ಒಪ್ಪಿಸಿ ಇವನಿಗೆ ಎಲ್ಲಾ ಅನುಗ್ರಹವನ್ನು ಮಾಡಿ, ಎಲ್ಲಾ ಅಸ್ತ್ರಗಳನ್ನು ಕಲಿಸಬೇಕು ಎಂದು ಪ್ರಿಯವಾದ ಮಾತುಗಳನ್ನು ಆಡಿದನು.
ಮಹಾಪ್ರಭಾವೋ ಬ್ರಹ್ಮರ್ಷಿರ್ಜ್ಞಾತ್ವಾ ತಸ್ಯ ತು ಸಂಭವಮ್।
ಉಪಾಕರೋದಸ್ತ್ರಹೇತೋರ್ಭಾರದ್ವಾಜಃ ಪ್ರತಾಪವಾನ್ ॥97॥
ಮಹಾಪ್ರಭಾವಶಾಲಿಗಳಾದ ಬ್ರಹ್ಮರ್ಷಿಗಳಾದ ದ್ರೋಣರು ಅವನ ಉತ್ಪತ್ತಿಯನ್ನು ತಿಳಿದಿದ್ದರೂ, ಪ್ರತಾಪಶಾಲಿಗಳಾದ ಅವರು ಅವನನ್ನು ಅಸ್ತ್ರವಿದ್ಯೆಯಲ್ಲಿ ಶಿಷ್ಯನಾಗಿ ಸ್ವೀಕರಿಸಿ ಶಿಕ್ಷಣವನ್ನು ಪ್ರಾರಂಭಿಸಿದರು.
ಅಮೋಕ್ಷಣೀಯಂ ದೈವಂ ಹಿ ಭಾವಿ ಮತ್ವಾ ಮಹಾಮತಿಃ।
ತಥಾ ತತ್ಕೃತವಾನ್ ದ್ರೋಣ ಆತ್ಮಕೀರ್ತ್ಯರ್ಥಕಾರಣಾತ್ ॥98॥
ಮಹಾಮತಿಗಳಾದ ದ್ರೋಣರು ದೈವನಿಯತಿಯನ್ನು ಯಾರೂ ತಪ್ಪಿಸಲು ಸಾಧ್ಯವಿಲ್ಲವೆಂದು ತಿಳಿದು ಹಾಗೆಯೇ ತಮ್ಮ ಕೀರ್ತಿಯು ನಾಶವಾಗಬಾರದೆಂಬ ಕಾರಣದಿಂದಲೂ ಹಾಗೆ ಮಾಡಿದರು. (ಧೃಷ್ಟದ್ಯುಮ್ನನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು.)
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ

ನೂರ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ನೂರ ಅರವತ್ತೊಂಭತ್ತನೆಯ ಅಧ್ಯಾಯ
(ಜತುಗೃಹದಲ್ಲಿ ಪಾಂಡವರ ದಾಹವನ್ನು ಕೇಳಿ ದ್ರುಪದನ ವಿಷಾದ ಮತ್ತು ಅರ್ಜುನನ ಬಗ್ಗೆ ಚಿಂತೆ)
ಬ್ರಾಹ್ಮಣಃ
ಶ್ರುತ್ವಾ ಜತುಗೃಹೇ ವೃತ್ತಂ ಬ್ರಾಹ್ಮಣಾಃ ಸಪುರೋಹಿತಾಃ |
ಪಾಂಚಾಲರಾಜಂ ದ್ರುಪದಮಿದಂ ವಚನಮಬ್ರುವನ್ ॥1॥
ಜತುಗೃಹದಲ್ಲಿ ನಡೆದ ವೃತ್ತಾಂತವನ್ನು ಕೇಳಿ ಬ್ರಾಹ್ಮಣರು ಮತ್ತು ಪುರೋಹಿತರು ಪಾಂಚಾಲರಾಜನಾದ ದ್ರುಪದನನ್ನು ಕುರಿತು ಈ ಮಾತನ್ನಾಡಿದರು.
ಧಾರ್ತರಾಷ್ಟ್ರಾಃ ಸಹಾಮಾತ್ಯಾ ಮಂತ್ರಯಿತ್ವಾ ಪರಸ್ಪರಮ್ |
ಪಾಂಡವಾನಾಂ ವಿನಾಶಾಯ ಮತಿಂ ಚಕ್ರುಃ ಸುದುಷ್ಕರಮ್ ॥2॥
ಧೃತರಾಷ್ಟ್ರನ ಪುತ್ರರು ಮತ್ತು ಮಂತ್ರಿಗಳು ಸೇರಿ ಪರಸ್ಪರವಾಗಿ ಮಂತ್ರಾಲೋಚನೆ- ಯನ್ನು ನಡೆಸಿ, ಪಾಂಡವರ ವಿನಾಶದ ಸಲುವಾಗಿ ದುಷ್ಕರವಾದ ಬುದ್ಧಿಯನ್ನು ತಳೆದರು.
ದುರ್ಯೋಧನೇನ ಪ್ರಹಿತಃ ಪುರೋಚನ ಇತಿ ಶ್ರುತಃ |
ವಾರಣಾವತಮಾಸಾದ್ಯ ಕೃತ್ವಾ ಜತುಗೃಹಂ ಮಹತ್ ॥3॥
ತಸ್ಮಿನ್ ಗೃಹೇ ಸುವಿಶ್ವಸ್ತಾನ್ ಪಾಂಡವಾನ್ ಪೃಥಯಾ ಸಹ |
ಅರ್ಧರಾತ್ರೇ ಮಹಾರಾಜ ದಗ್ಧವಾನ್ ಸ ಪುರೋಚನಃ ॥4॥
ಮಹಾರಾಜನೇ, ದುರ್ಯೋಧನನಿಂದ ಕಳುಹಿಸಲ್ಪಟ್ಟ ಪುರೋಚನ- ನೆಂಬುವನು ವಾರಣಾವತಕ್ಕೆ ಬಂದು ದೊಡ್ಡ ಜತುಗೃಹವನ್ನು ನಿರ್ಮಾಣ ಮಾಡಿಸಿ ನಂಬಿಕೆಯಲ್ಲಿದ್ದ ಪಾಂಡವರನ್ನು ಕುಂತಿಯ ಜೊತೆಯಲ್ಲಿ ಅರ್ಧರಾತ್ರಿಯಲ್ಲಿ ದಹನ ಮಾಡಿದನು.
ಅಗ್ನಿನಾ ತು ಸ್ವಯಮಪಿ ದಗ್ಧಃ ಕ್ಷುದ್ರೋ ನೃಶಂಸವತ್ |
ಏತಚ್ಛ್ರುತ್ವಾ ಸುಸಂಹೃಷ್ಟೋ ಧಾರ್ತರಾಷ್ಟ್ರಃ ಸಬಾಂಧವಃ ॥5॥
ಕ್ಷುದ್ರನಾದ ಅವನು ತಾನೂ ಕೂಡ ನೃಶಂಸನಂತೆ ಅಗ್ನಿಯಿಂದ ದಗ್ಧನಾದನು. ಇದನ್ನು ಕೇಳಿ ದುರ್ಯೋಧನನು ಮತ್ತು ಅವನ ಬಂಧುಗಳು ಸಂತುಷ್ಟರಾದರು.
ಶ್ರುತ್ವಾ ತು ಪಾಂಡವಾನ್ ದಗ್ಧಾನ್ ಧೃತರಾಷ್ಟ್ರೋಽಂಬಿಕಾಸುತಃ |
ಅಲ್ಪಶೋಕಃ ಪ್ರಹೃಷ್ಟಾತ್ಮಾ ಶಶಾಸ ವಿದುರಂ ತದಾ ॥6॥
ಪಾಂಡವರು ದಗ್ಧರಾದರೆಂಬ ವಾರ್ತೆಯನ್ನು ಕೇಳಿದ ಅಂಬಿಕಾಸುತನಾದ ಧೃತರಾಷ್ಟ್ರನು ಅಲ್ಪಶೋಕವುಳ್ಳವನಾಗಿ ಮನಸ್ಸಿನಲ್ಲಿ ಸಂತೋಷದಿಂದ ಕೂಡಿದವನಾಗಿ, ಆಗ ವಿದುರನಿಗೆ ಆದೇಶವನ್ನು ನೀಡಿದನು.
ಪಾಂಡವಾನಾಂ ಮಹಾಪ್ರಾಜ್ಞ ಕುರು ಪಿಂಡೋದಕಕ್ರಿಯಾಮ್ |
ಅದ್ಯ ಪಾಂಡುರ್ಹತಃ ಕ್ಷತ್ತಃ ಪಾಂಡವಾನಾಂ ವಿನಾಶನೇ ॥7॥
ಮಹಾಪ್ರಾಜ್ಞನೇ, ಪಾಂಡವರಿಗೆ ಪಿಂಡೋದಕಕ್ರಿಯೆಗಳನ್ನು ಮಾಡು. ಪಾಂಡವರು ನಾಶಹೊಂದಿರುವುದರಿಂದ ಈ ದಿನ ಪಾಂಡು ಮೃತನಾಗಿದ್ದಾನೆ.
ತಸ್ಮಾದ್ ಭಾಗೀರಥೀಂ ಗತ್ವಾ ಕುರು ಪಿಂಡೋದಕಕ್ರಿಯಾಮ್ |
ಅಹೋ ವಿಧಿವಶಾದೇವ ಗತಾಸ್ತೇ ಯಮಸಾದನಮ್ ॥8॥
ವಿದುರನೇ, ಆದ್ದರಿಂದ ಭಾಗೀರಥಿಗೆ ಹೋಗಿ ಪಿಂಡೋದಕ ಕ್ರಿಯೆಗಳನ್ನು ಮಾಡು. ಅಯ್ಯೋ, ವಿಧಿನಿಯತಿಯಂತೆಯೇ ಆ ಪಾಂಡವರು ಯಮಲೋಕವನ್ನು ತಲುಪಿದ್ದಾರೆ.
ಇತ್ಯುಕ್ತ್ವಾ ಪ್ರಾರುದತ್ ತತ್ರ ಧೃತರಾಷ್ಟ್ರಃ ಸಸೌಬಲಃ |
ಶ್ರುತ್ವಾ ಭೀಷ್ಮೋಽಪಿ ವಿದುರಾತ್ ಕೃತವಾನೌರ್ಧ್ವದೇಹಿಕಮ್ ॥9॥
ಹೀಗೆ ಹೇಳಿ ಧೃತರಾಷ್ಟ್ರನು ಶಕುನಿಯ ಜೊತೆಯಲ್ಲಿ ಅಲ್ಲಿ ರೋದನವನ್ನು ಮಾಡಿದನು. ಭೀಷ್ಮರೂ ಸಹ ವಿದುರನಿಂದ ವಿಷಯವನ್ನು ತಿಳಿದು ಉತ್ತರಕ್ರಿಯೆಗಳನ್ನು ಮಾಡಿದರು.
ಪಾಂಡವಾನಾಂ ವಿನಾಶಾಯ ಕೃತಂ ಕರ್ಮ ದುರಾತ್ಮನಾ |
ಏತತ್ಕಾರ್ಯಸ್ಯ ಕರ್ತಾ ತು ನ ದೃಷ್ಟೋ ನ ಶ್ರುತಃ ಪುರಾ |
ಏತದ್‌ವೃತ್ತಂ ಮಹಾಭಾಗ ಪಾಂಡವಾನ್ ಪ್ರತಿ ನಃ ಶ್ರುತಮ್ ॥10॥
ದುರಾತ್ಮನಾದ ದುರ್ಯೋಧನನು ಪಾಂಡವರ ವಿನಾಶಕ್ಕೋಸ್ಕರ ಇಂತಹ ದುಷ್ಕಾರ್ಯವನ್ನು ಮಾಡಿದನು. ಇಂತಹ ಹೀನಕಾರ್ಯವನ್ನು ಮಾಡುವವನನ್ನು ಹಿಂದೆ ಯಾರೂ ನೋಡಲಿಲ್ಲ ಅಥವಾ ಕೇಳಲಿಲ್ಲ. ಮಹಾನುಭಾವನೇ, ಪಾಂಡವರ ವಿಷಯದಲ್ಲಿ ನಾವು ಈ ವೃತ್ತಾಂತವನ್ನು ಕೇಳಿದ್ದೇವೆ.
ಶ್ರುತ್ವಾ ತು ವಚನಂ ತೇಷಾಂ ಯಜ್ಞಸೇನೋ ಮಹಾಮತಿಃ |
ಯಥಾ ಸ ಜನಕಃ ಶೋಚೇದೌರಸಸ್ಯ ವಿನಾಶನೇ |
ತಥಾಽತಪ್ಯತ ಪಾಂಚಾಲಃ ಪಾಂಡವಾನಾಂ ವಿನಾಶನೇ ॥11॥
ಈ ಬ್ರಾಹ್ಮಣರ ವಚನವನ್ನು ಕೇಳಿ ಮಹಾಮತಿಯಾದ ಯಜ್ಞಸೇನನು ಔರಸಪುತ್ರನನ್ನು ಕಳೆದುಕೊಂಡ ತಂದೆಯಂತೆ, ಪಾಂಡವರ

ವಿನಾಶದ ವಿಷಯದಲ್ಲಿ ಪಾಂಡವರನ್ನು ನೆನೆದು ಶೋಕವನ್ನು ಮತ್ತು ತಾಪವನ್ನು ಪಟ್ಟನು.
ಸಮಾಹೂಯ ಪ್ರಕೃತಯಃ ಸಹಿತಾಃ ಸಹಬಾಂಧವೈಃ |
ಕಾರುಣ್ಯಾದೇವ ಪಾಂಚಾಲಃ ಪ್ರೋವಾಚೇದಂ ವಚಸ್ತದಾ ॥12॥
ಪಾಂಚಾಲರಾಜನಾದ ಅವನು ಬಂಧುಗಳಿಂದ ಕೂಡಿದ ತನ್ನ ಪ್ರಜೆಗಳನ್ನು ಕರೆದು ಕರುಣೆಯಿಂದಲೇ ಆಗ ಈ ಮಾತುಗಳನ್ನು ಆಡಿದನು.
ದ್ರುಪದಃ
ಅಹೋ ರೂಪಮಹೋ ಧೈರ್ಯಮಹೋ ವೀರ್ಯಂ ಚ ಶಿಕ್ಷಿತಮ್ |
ಚಿಂತಯಾಮಿ ದಿವಾರಾತ್ರಮರ್ಜುನಂ ಪ್ರತಿ ಬಾಂಧವಾಃ ॥13॥
ಬಾಂಧವರೇ ಆ ಅರ್ಜುನನ ರೂಪ, ಅವನ ಧೈರ್ಯ, ಅವನ ಪರಾಕ್ರಮ, ಅವನ ಶಿಕ್ಷಣ ಎಂತಹದು! (ಎಷ್ಟು ಆಶ್ಚರ್ಯಕರವಾದುದು.) ನಾನು ಹಗಲೂರಾತ್ರಿಯೂ ಅರ್ಜುನನನ್ನೇ ಚಿಂತಿಸುತ್ತಿದ್ದೇನೆ.
ಭ್ರಾತೃಭಿಃ ಸಹಿತೋ ಮಾತ್ರಾ ಸೋಽದಹ್ಯತ ಹುತಾಶನೇ |
ಕಿಮಾಶ್ಚರ್ಯಮಿತೋ ಲೋಕೇ ಕಾಲೋ ಹಿ ದುರತಿಕ್ರಮಃ ॥14॥
ಸೋದರರಿಂದಲೂ ಮತ್ತು ತಾಯಿಯಿಂದಲೂ ಸಹಿತನಾಗಿ ಅವನು ಅಗ್ನಿಯಲ್ಲಿ ದಗ್ಧನಾದನು. ಪ್ರಪಂಚದಲ್ಲಿ ಇದಕ್ಕಿಂತ ಯಾವುದು ಆಶ್ಚರ್ಯಕರವಾದುದು? ಕಾಲವನ್ನು ಯಾರೂ ಮೀರಲು ಸಾಧ್ಯವಿಲ್ಲ.
ಮಿಥ್ಯಾಪ್ರತಿಜ್ಞೋ ಲೋಕೇಷು ಕಿಂ ವದಿಷ್ಯಾಮಿ ಸಾಂಪ್ರತಮ್ |
ಅಂತರ್ಗತೇನ ದುಃಖೇನ ದಹ್ಯಮಾನೋ ದಿವಾನಿಶಮ್ ॥15॥
ಮನಸ್ಸಿನಲ್ಲಿರುವ ದುಃಖದಿಂದ ಹಗಲಿರುಳು ಬೇಯುತ್ತಿರುವ ನಾನು ಸುಳ್ಳು ಪ್ರತಿಜ್ಞೆಯನ್ನು ಮಾಡಿ ಈಗ ಜನರಿಗೆ ಏನು ಹೇಳಲಿ?
ಯಾಜೋಪಯಾಜೌ ಸತ್ಕೃತ್ಯ ಯಾಚಿತೌ ತೌ ಮಯಾಽನೌ |
ಭಾರದ್ವಾಜಸ್ಯ ಹಂತಾರಂ ದೇವೀಂ ಚಾಪಿ ತಥಾಽರ್ಜುನೇ ॥16॥
ನಾನು ಯಾಜೋಪಯಾಜರನ್ನು ಸತ್ಕರಿಸಿ ದ್ರೋಣನನ್ನು ಕೊಲ್ಲುವ ನಿರ್ದುಷ್ಟನಾದ ಮಗನನ್ನೂ, ಅರ್ಜುನನ ಪತ್ನಿಯಾಗುವ ನಿರ್ದುಷ್ಟಳಾದ ಪುತ್ರಿಯನ್ನೂ ಬೇಡಿದೆ.
ಲೋಕಸ್ತದ್ವೇದ ಯಚ್ಚೈವ ತಥಾ ಯಾಜೇನ ಮೇ ಶ್ರುತಮ್ |
ಯಾಜೇನ ಪುತ್ರಕಾಮೀಯಂ ಹುತ್ವಾ ಚೋತ್ಪಾದಿತಾವುಭೌ ॥17॥
ಧೃಷ್ಟದ್ಯುಮ್ನಶ್ಚ ಕೃಷ್ಣಾ ಚ ಮಮ ಪುಷ್ಟಿಕರಾವುಭೌ |
ಕಿಂ ಕರಿಷ್ಯಾಮಿ ತೇ ನಷ್ಟಾಃ ಪಾಂಡವಾಃ ಪೃಥಯಾ ಸಹ ॥18॥
ಯಾಜರು ನನಗೆ ಏನು ವಾಗ್ದಾನ ಮಾಡಿದರೆಂಬುದು ಎಲ್ಲ ಜನರಿಗೂ ತಿಳಿದಿದೆ. ಯಾಜರು ಪುತ್ರಕಾಮೇಷ್ಟಿಯಾಗವನ್ನು ಮಾಡಿ ನನಗೆ ಪುಷ್ಟಿಯನ್ನು ಕೊಡುವ ಧೃಷ್ಟದ್ಯುಮ್ನ ಮತ್ತು ದ್ರೌಪದಿ ಇವರಿಬ್ಬರನ್ನೂ ಕರುಣಿಸಿದರು. ಪಾಂಡವರೂ ಕುಂತಿಯೂ ನಷ್ಟವಾಗಿದ್ದಾರೆ. ಈಗ ನಾನೇನು ಮಾಡಲಿ?
ಬ್ರಾಹ್ಮಣಃ
ಇತ್ಯೇವಮುಕತ್ವ ಪಾಂಚಾಲಃ ಶುಶೋಚ ಪರಮಾತುರಃ ॥19॥
ಹೀಗೆ ಮಾತನಾಡಿ ದ್ರುಪದನು ಪರಮಾತುರನಾಗಿ ಶೋಕಪಟ್ಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ದ್ವಿತಿಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಅರವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಪೂರ್ವಂ ಹಿ ಪಾರ್ಷತ ಇಮಾನ್ ಜತುಗೇಹದಗ್ಧಾನ್
ಶ್ರುತ್ವಾತಿದುಃಖಿತಮನಾಃ ಪುನರೇವ ಮಂತ್ರಃ |
ಯಾಜೋಪಯಾಜಮುಖನಿಃಸೃತ ಏವಮೇಷ
ನಾಸತ್ಯತಾರ್ಹ ಇತಿ ಜೀವನಮೇಷು ಮೇನೇ ॥97॥
ಪಾಂಡವರು ಅರಗಿನ ಮನೆಯಲ್ಲಿ ಸುಟ್ಟವಾರ್ತೆ ಕೇಳಿದಾಗ ದ್ರುಪದ ಮೊದಲಿಗೆ ಮನಸ್ಸಿನಲ್ಲಿ ಬಹಳ ದುಃಖಿತನಾದ. ಆದರೆ ಬಳಿಕ ಯಾಜೋಪಯಾಜರ ಮುಖದಿಂದ ಬಂದ ಮಂತ್ರ ಹೀಗೆ ಸುಳ್ಳಾಗಲಾರದು ಎಂದುಕೊಂಡು ಪಾಂಡವರು ಬದುಕಿಯೆ ಇರುತ್ತಾರೆ ಎಂದು ನಂಬಿದ.
ಯತ್ರ ಕ್ವಚಿತ್ ಪ್ರತಿವಸಂತಿ ನಿಲೀನರೂಪಾಃ
ಪಾರ್ಥಾಃ ಇತಿ ಸ್ಮ ಸ ತು ಫಲ್ಗುನಕಾರಣೇನ
ಚಕ್ರೇ ಸ್ವಯಂವರವಿಘೋಷಣಮಾಶು ರಾಜಾ
ತ್ವನ್ಯೈರಧಾರ್ಯಧನುರೀಶವರಾಚ್ಚ ಚಕ್ರೇ ॥98॥

ಪಾಂಡವರು ಎಲ್ಲಿಯಾದರೂ ಮಾರುವೇಷದಿಂದ ಇರಲೇಬೇಕೆಂದು ಬಗೆದು ದ್ರುಪದರಾಜ ಅರ್ಜುನನ ಸಲುವಾಗಿ ಸ್ವಯಂವರ ಘೋಷಣೆಯನ್ನು ಮಾಡಿದ. ಮತ್ತು ರುದ್ರುವರದಿಂದ ಅರ್ಜುನನಿಗೆ ಹೊರತು ಬೇರೆಯವರಿಗೆ ಎತ್ತಲಾಗದ ಧನುಸ್ಸನ್ನು ಸಂಪಾದಿಸಿದ.
* * * *
ನೂರ ಎಪ್ಪತ್ತನೆಯ ಅಧ್ಯಾಯ
(ಬ್ರಾಹ್ಮಣನಿಂದ ಪಾಂಡವರಿಗೆ ದ್ರುಪದನ ಪುರೋಹಿತರ ಸಮಾಧಾನ ವಚನಗಳ ಕಥನ. ಮತ್ತು ಸ್ವಯಂವರ ಘೋಷಣೆಯ ಸೂಚನೆಯ ಕಥನ.)
ವೈಶಂಪಾಯನಃ
ದೃಷ್ಟ್ವಾ ಶೋಚಂತಮತ್ಯರ್ಥಂ ಪಾಂಚಾಲಮಿದಮಬ್ರವೀತ್ |
ಪುರೋಧಾಃ ಸತ್ವಸಂಪನ್ನಃ ಸಮ್ಯಗ್ವಿದ್ಯಾವಿಶೇಷವಾನ್ ॥1॥
ಬಹಳ ಶೋಕಪಡುತ್ತಿರುವ ಪಾಂಚಾಲರಾಜನನ್ನು ಕುರಿತು ಸತ್ಯಸಂಪನ್ನನೂ ಮತ್ತು ಒಳ್ಳೆಯ ವಿದ್ಯಾವಿಶಾರದನೂ ಆದ ಅವನ ಪುರೋಹಿತನು ಮಾತನಾಡಿದನು.
ವೃದ್ಧಾನುಶಾಸನೇ ಸಕ್ತಾಃ ಪಾಂಡವಾ ಧರ್ಮಚಾರಿಣಃ |
ತಾದೃಶಾ ನ ವಿನಶ್ಯಂತಿ ನೈವ ಯಾಂತಿ ಪರಾಭವಮ್ ॥2॥
ಪಾಂಡವರು ಧರ್ಮಚಾರಿಗಳು ಮತ್ತು ಯಾವಾಗಲೂ ಹಿರಿಯರ ಆದೇಶವನ್ನು ಪಾಲಿಸುವವರು. ಅಂತಹವರು ಎಂದೂ ವಿನಾಶವನ್ನಾಗಲೀ, ಪರಾಭವವನ್ನಾಗಲೀ ಹೊಂದುವುದಿಲ್ಲ.
ಮಯಾ ದೃಷ್ಟಮಿದಂ ಸತ್ಯಂ ಶೃಣುಷ್ವ ಮನುಜಾಧಿಪ |
ಬ್ರಾಹ್ಮಣೈಃ ಕಥಿತಂ ಸತ್ಯಂ ವೇದೇಷು ಚ ಮಯಾ ಶ್ರುತಮ್ ॥3॥
ರಾಜನೇ, ನಾನು ಈ ಸತ್ಯವನ್ನು ನೋಡಿದ್ದೇನೆ. ನನ್ನ ಮಾತನ್ನು ಕೇಳು. ಈ ಸತ್ಯವಚನವನ್ನು ಬ್ರಾಹ್ಮಣರು ಹೇಳಿದ್ದಾರೆ ಮತ್ತು ವೇದಗಳಲ್ಲಿಯೂ ನಾನು ಕೇಳಿದ್ದೇನೆ.
ಬೃಹಸ್ಪತಿಮತೇನಾಥ ಪೌಲೋಮ್ಯಾ ಚ ಪುರಾ ಶ್ರುತಮ್ |
ನಷ್ಟಮಿಂದ್ರಂ ಬಿಸಗ್ರಂಥ್ಯಾಮುಪಶ್ರುತ್ಯಾ ತು ದರ್ಶಿತಮ್ ॥4॥
ಹಿಂದೆ ವೃತ್ರಾಸುರನನ್ನು ಕೊಂದು ಇಂದ್ರನು ಕಮಲದ ನಾಳದಲ್ಲಿ ಅಡಗಿಕೊಂದು ಕಣ್ಣಿಗೆ ಕಾಣಿಸದಿದ್ದಾಗ ಪೌಲೋಮಿಯು ಬೃಹಸ್ಪತ್ಯಾಚಾರ್ಯರ ಅಭಿಪ್ರಾಯದಂತೆ ಶುಭಶಕುನಗಳನ್ನು ಕೇಳಿ ಇಂದ್ರನು ಬದುಕಿರುವುದನ್ನು ನಿರ್ಧರಿಸಿದಳು.
ಉಪಶ್ರುತಿರ್ಮಹಾರಾಜ ಪಾಂಡವಾರ್ಥೇ ಮಯಾ ಶ್ರುತಾ |
ಯತ್ರ ವಾ ತತ್ರ ಜೀವಂತಿ ಪಾಂಡವಾಸ್ತೇ ನ ಸಂಶಯಃ ॥5॥
ಮಹಾರಾಜನೇ, ಪಾಂಡವರ ವಿಷಯದಲ್ಲಿಯೂ ನಾನು ಅಂತಹ ಉಪಶ್ರುತಿಯನ್ನು ಕೇಳಿದ್ದೇನೆ. ಎಲ್ಲಾದರೂ ಪಾಂಡವರು ಬದುಕಿಯೇ ಇದ್ದಾರೆ. ಇದರಲ್ಲಿ ಸಂಶಯವಿಲ್ಲ.
ಮಯಾ ದೃಷ್ಟಾನಿ ಲಿಂಗಾನಿ ಧ್ರುವಮೇಷ್ಯಂತಿ ಪಾಂಡವಾಃ |
ಯನ್ನಿಮಿತ್ತಮಿಹಾಯಾಂತಿ ತಚ್ಛೃಣುಷ್ವ ನರಾಧಿಪ ॥6॥
ನಾನು ಅನೇಕ ಶುಭನಿಮಿತ್ತಗಳನ್ನು ನೋಡಿದ್ದೇನೆ. ಪಾಂಡವರು ನಿಶ್ಚಯವಾಗಿ ಬಂದೇ ಬರುತ್ತಾರೆ. ರಾಜನೇ, ಪಾಂಡವರು ಯಾವ ಕಾರಣದಿಂದ ಇಲ್ಲಿಗೆ ಬರುತ್ತಾರೆಂಬುದನ್ನು ಹೇಳುತ್ತೇನೆ ಕೇಳು.
ಸ್ವಯಂವರಃ ಕ್ಷತ್ರಿಯಾಣಾಂ ಕನ್ಯಾದಾನೇ ಪ್ರತಿಶ್ರುತಃ |
ಸ್ವಯಂವರಸ್ತು ನಗರೇ ಘುಷ್ಯತಾಂ ರಾಜಸತ್ತಮ ॥7॥
ಕನ್ಯಾದಾನದ ವಿಷಯದಲ್ಲಿ ಕ್ಷತ್ರಿಯರಿಗೆ ಸ್ವಯಂವರವು ವಿಹಿತವಾಗಿದೆ. ರಾಜಶ್ರೇಷ್ಠನೇ, ನಗರದಲ್ಲಿ ಸ್ವಯಂವರವನ್ನು ಘೋಷಿಸು.
ಯತ್ರ ವಾ ನಿವಸಂತಸ್ತೇ ಪಾಂಡವಾಃ ಪೃಥಯಾ ಸಹ |
ದೂರಸ್ಥಾ ವಾ ಸಮೀಪಸ್ಥಾಃ ಸ್ವರ್ಗಸ್ಥಾ ವಾಽಪಿ ಪಾಂಡವಾಃ ॥8॥
ಶ್ರುತ್ವಾ ಸ್ವಯಂವರೇ ರಾಜನ್ ಸಮೇಷ್ಯಂತಿ ನ ಸಂಶಯಃ |
ತಸ್ಮಾತ್ ಸ್ವಯಂವರೋ ರಾಜನ್ ಘುಷ್ಯತಾಂ ಮಾಚಿರಂ ಕೃಥಾಃ ॥9॥
ಪಾಂಡವರು ಕುಂತಿಯ ಜೊತೆಯಲ್ಲಿ ಎಲ್ಲೇ ವಾಸಮಾಡುತ್ತಿದ್ದರೂ ಅವರು ದೂರದಲ್ಲಿರಲಿ ಅಥವಾ ಸಮೀಪದಲ್ಲಿರಲಿ, ಅಥವಾ ಸ್ವರ್ಗದಲ್ಲಿಯೇ ಇರಲಿ ಸ್ವಯಂವರದ ವಾರ್ತೆಯನ್ನು ಕೇಳಿ ನಿಸ್ಸಂಶಯವಾಗಿ ಬಂದೇ ಬರುವರು. ರಾಜನೇ, ಆದ್ದರಿಂದ ಸ್ವಯಂವರವನ್ನು ಘೋಷಿಸು, ತಡಮಾಡಬೇಡ.
ಬ್ರಾಹ್ಮಣಃ
ಶ್ರುತ್ವಾ ಪುರೋಹಿತೇನೋಕ್ತಂ ಪಾಂಚಾಲಃ ಪ್ರೀತಿಮಾಂಸ್ತದಾ |
ಘೋಷಯಾಮಾಸ ನಗರೇ ದ್ರೌಪದ್ಯಾಸ್ತು ಸ್ವಯಂವರಮ್ ॥10॥
ಪುರೋಹಿತನಿಂದ ಹೀಗೆ ಹೇಳಲ್ಪಟ್ಟ ಪಾಂಚಾಲನು ಸಂತೋಷದಿಂದ ಕೂಡಿದವನಾಗಿ ನಗರದಲ್ಲಿ ದ್ರೌಪದಿಯ ಸ್ವಯಂವರವನ್ನು ಘೋಷಿಸಿದನು.
ಪುಷ್ಯಮಾಸೇ ತು ರೋಹಿಣ್ಯಾಂ ಶುಕ್ಲಪಕ್ಷೇ ಶುಭೇ ತಿಥೌ |
ದಿವಸೈಃ ಪಂಚಸಪ್ತತ್ಯಾ ಭವಿಷ್ಯತಿ ಸ್ವಯಂವರಃ ॥11॥
ಪುಷ್ಯಮಾಸದಲ್ಲಿ ಶುಕ್ಲಪಕ್ಷದಲ್ಲಿ ಚಂದ್ರನು ರೋಹಿಣಿನಕ್ಷತ್ರ ಸಹಿತನಾಗಿರುವಾಗ ಶುಭತಿಥಿಯಲ್ಲಿ ಎಪ್ಪತ್ತೈದು ದಿವಸಗಳ ಅಂತರದಲ್ಲಿ (ಇಂದಿಗೆ ಎಪ್ಪತ್ತೈದು ದಿನಗಳ ಅನಂತರ) ಸ್ವಯಂವರವು ಜರುಗುವುದು.

ದೇವಗಂಧರ್ವಯಕ್ಷಾಶ್ಚ ಋಷಯಶ್ಚ ತಪೋಧನಾಃ ।
ಸ್ವಯಂವರಂ ದ್ರಷ್ಟುಕಾಮಾ ಗಚ್ಛಂತ್ಯೇವ ನ ಸಂಶಯಃ ॥12॥
ಆ ಸ್ವಯಂವರವನ್ನು ನೋಡಲು ದೇವಗಂಧರ್ವಯಕ್ಷರು, ತಪೋಧನರಾದ ಋಷಿಗಳು ನಿಸ್ಸಂಶಯವಾಗಿ ಬಂದೇ ಬರುತ್ತಾರೆ.
ತವ ಪುತ್ರಾ ಮಹಾತ್ಮಾನೋ ದರ್ಶನೀಯಾ ವಿಶೇಷತಃ ।
ಯದೃಚ್ಛಯಾ ತು ಪಾಂಚಾಲೀ ಗಚ್ಛೇದ್ ವಾಽನ್ಯತಮಂ ಪತಿಮ್ ॥
ನಿನ್ನ ಮಕ್ಕಳು ಮಹಾನುಭಾವರೂ, ವಿಶೇಷವಾಗಿ ಸುಂದರರೂ ಆಗಿದ್ದಾರೆ. ದೇವೇಚ್ಛೆಯಿಂದ ಪಾಂಚಾಲಿಯು ಇವರಲ್ಲಿ ಒಬ್ಬನನ್ನು ಪತಿಯನ್ನಾಗಿ ವರಿಸಬಹುದು.
ಕೋ ಹಿ ಜಾನಾತಿ ಲೋಕೇಷು ಪ್ರಜಾಪತಿವಿಧಿಂ ಪರಮ್ ।
ತಸ್ಮಾತ್ ಸಪುತ್ರಾ ಗಚ್ಛೇಥಾ ಯದಿ ಬ್ರಾಹ್ಮಣಿ ರೋಚತೇ ॥14॥
ಬ್ರಹ್ಮದೇವರ ಸಂಕಲ್ಪವು ಹೇಗಿದೆಯೆಂದು ಲೋಕದಲ್ಲಿ ಯಾರು ತಿಳಿದಿದ್ದಾರೆ? ಆದ್ದರಿಂದ ಬ್ರಾಹ್ಮಣಿಯೇ, ನಿನಗೆ ಸಮ್ಮತವಾದರೆ ಮಕ್ಕಳನ್ನು ಕರೆದುಕೊಂಡು ನೀನೂ ಹೋಗು.
ನಿತ್ಯಕಾಲಂ ಸುಭಿಕ್ಷಾಸ್ತೇ ಪಾಂಚಾಲಾಸ್ತು ತಪೋಧನೇ ।
ಯಜ್ಞಸೇನಸ್ತು ರಾಜಾಽಸೌ ಬ್ರಹ್ಮಣ್ಯಃ ಸತ್ಯಸಂಗರಃ ॥15॥
ತಪೋಧನಳೇ, ಪಾಂಚಾಲದೇಶವು ಯಾವಾಗಲೂ ಸುಭಿಕ್ಷವಾದ ದೇಶ. ಅದೂ ಅಲ್ಲದೇ ಈ ಯಜ್ಞಸೇನರಾಜನು ಸತ್ಯಸಂಧನೂ ಮತ್ತು ಬ್ರಾಹ್ಮಣವತ್ಸಲನೂ ಆಗಿದ್ದಾನೆ.
ಬ್ರಹ್ಮಣ್ಯಾ ನಾಗರಾಶ್ಚಾಥ ಬ್ರಾಹ್ಮಣಾಶ್ಚಾತಿಥಿಪ್ರಿಯಾಃ ।
ನಿತ್ಯಕಾಲಂ ಪ್ರದಾಸ್ಯಂತಿ ಆಮಂತ್ರಣಮಯಾಚಿತಮ್ ॥16॥
ಆ ನಗರವಾಸಿಗಳೆಲ್ಲರೂ ಬ್ರಾಹ್ಮಣವಾತ್ಸಲ್ಯವನ್ನು ಹೊಂದಿರುವವರು. ಅಲ್ಲಿಯ ಬ್ರಾಹ್ಮಣರು ಅತಿಥಿಪ್ರಿಯರು. ಅವರು ನೀವು ಯಾಚನೆಯನ್ನು ಮಾಡದೆಯೇ ನಿಮಗೆ ಯಾವಾಗಲೂ ಆಮಂತ್ರಣವನ್ನು ನೀಡುವರು.
ಅಹಂ ಚ ತತ್ರ ಗಚ್ಛಾಮಿ ಮಮೈಭಿಃ ಸಹ ಶಿಷ್ಯಕೈಃ ।
ಏಕಸಾರ್ಥಾ ಪ್ರಯಾತಾಃ ಸ್ಮ ಬ್ರಾಹ್ಮಣಿ ಯದಿ ರೋಚತೇ ॥17॥
ನಾನೂ ಸಹ ನನ್ನ ಈ ಶಿಷ್ಯರ ಜೊತೆಯಲ್ಲಿ ಅಲ್ಲಿಗೆ ಹೋಗುತ್ತೇನೆ. ಬ್ರಾಹ್ಮಣಿಯೇ, ನಿನಗೆ ಸಮ್ಮತವಾದರೆ ನಾವೆಲ್ಲರೂ ಒಂದೇ ಗುಂಪಾಗಿ ಹೋಗೋಣ.
ವೈಶಂಪಾಯನಃ
ಏತಾವದುಕ್ತ್ವಾ ವಚನಂ ಬ್ರಾಹ್ಮಣೋ ವಿರರಾಮ ಹ ॥18॥
ಆ ಬ್ರಾಹ್ಮಣನು ಇಷ್ಟು ಮಾತುಗಳನ್ನು ಹೇಳಿ ಸುಮ್ಮನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ತೃತಿಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಉತ್ಪತ್ತಿ ಪೂರ್ವಕಕಥಾಂ ದ್ರುಪದಾತ್ಮಜಾಯಾ
ವ್ಯಾಸೋ ಹ್ಯನೂಚ್ಯ ಜಗತಾಂ ಗುರುರೀಶ್ವರಶ್ಚ ।
ಯಾತೇತ್ಯಚೋದಯದಥಾಪ್ಯಪರೇ ದ್ವಿಜಾಗ್ರ್ಯಾ-
ಸ್ತಾನ್ ಬ್ರಾಹ್ಮಣಾ ಇತಿ ಭುಜಿರ್ನವಿತೇತಿ ಚೋಚುಃ ॥96॥
ಜಗದ್ಗುರುವೂ ಸರ್ವೇಶ್ವರರೂ ಆದ ಶ್ರೀವೇದವ್ಯಾಸರು ಪಾಂಡವರಿಗೆ ದ್ರೌಪದಿಯ ಬಗ್ಗೆ ಅವಳ ಉತ್ಪತ್ತಿಯನ್ನು ಮೊದಲು ಮಾಡಿ ಎಲ್ಲ ಕಥೆಯನ್ನು ಹೇಳಿ ನೀವು ಸ್ವಯಂವರಕ್ಕೆ ಹೋಗಿರೆಂದು ಹೇಳಿದರು. ಬೇರೆ ಬ್ರಾಹ್ಮಣೋತ್ತಮರೂ ಪಾಂಡವರನ್ನು ಬ್ರಾಹ್ಮಣರೆಂದೇ ತಿಳಿದಿದ್ದರಿಂದ `ಬನ್ನಿ, ನಾವೆಲ್ಲ ಹೋಗೋಣ, ಭೋಜನ ಲಭಿಸುತ್ತದೆ' ಎಂದರು.
* * * *

ನೂರ ಎಪ್ಪತ್ತೊಂದನೆಯ ಅಧ್ಯಾಯ
(ಬ್ರಾಹ್ಮಣರ ಜೊತೆಯಲ್ಲಿ ಪಾಂಚಾಲನಗರವನ್ನು ಕುರಿತು ಪಾಂಡವರ ಗಮನ. ವ್ಯಾಸರ ಆಶ್ವಾಸನ ಮತ್ತು ಬ್ರಾಹ್ಮಣರ ಸಂವಾದ)
ವೈಶಂಪಾಯನಃ
ಏತತ್ ಶ್ರುತ್ವಾ ವಚಃ ಸರ್ವೇ ಕೌಂತೇಯಾ ಸಂಶಿತವ್ರತಾಃ ।
ಮನಸಾ ದ್ರೌಪದೀಂ ಜಗ್ಮುರನಂಗಶರಪೀಡಿತಾಃ ॥1॥
ಈ ಮಾತುಗಳನ್ನು ಕೇಳಿದ ಕುಂತೀಪುತ್ರರಾದ ಸಂಶಿತವ್ರತರಾದ ಪಾಂಡವರೆಲ್ಲರೂ ಕಾಮಬಾಣಪೀಡಿತರಾಗಿ ಮನಸ್ಸಿನಲ್ಲಿಯೇ ದ್ರೌಪದಿಯನ್ನು ಚಿಂತಿಸಿದರು.
ಊಷುಸ್ತಾಂ ರಜನೀಂ ರಾಜನ್ ಶಲ್ಯವಿದ್ಧಾ ಇವಾಭವನ್ ।
ವ್ಯುಷ್ಟಾಯಾಂ ದುರ್ಮತೀಭೂತ್ವಾ ಅಸ್ವಸ್ಥಮನಸೋಽಭವನ್ ॥2॥
ರಾಜನೇ ಅವರು ಆ ರಾತ್ರಿಯನ್ನು ಎದೆಯಲ್ಲಿ ಶಲ್ಯವನ್ನು ಚುಚ್ಚಿದಂತೆ ಕಳೆದರು. ರಾತ್ರಿಯ ಕಳೆಯುತ್ತಿರಲು ಎಲ್ಲರೂ ಕಲುಷಿತ

ಮನಸ್ಸುಳ್ಳವರಾಗಿ ಮಾನಸಿಕ ಅಸ್ವಸ್ಥತೆಗೆ ಒಳಗಾದರು.
ತತಃ ಕುಂತೀ ಸುತಾನ್ ದೃಷ್ಟ್ವಾ ಸರ್ವಾನ್ ತಾನ್ ಹತಚೇತಸಃ |
ಯುಧಿಷ್ಠಿರಮುವಾಚೇದಂ ವಚನಂ ಸತ್ಯಭಾಷಿಣೀ ||3||
ಆಗ ಕುಂತಿಯು ತನ್ನ ಎಲ್ಲಾ ಮಕ್ಕಳು ಪ್ರಜ್ಞಾಹೀನರಾಗಿರುವುದನ್ನು ಗಮನಿಸಿ ಸತ್ಯವಚನವುಳ್ಳ ಅವಳು ಯುಧಿಷ್ಠಿರನನ್ನು ಕುರಿತು ಈ ಮಾತನ್ನು ಆಡಿದಳು.
ಚಿರರಾತ್ರೋಷಿತಾಃ ಸ್ಮೇಹ ಬ್ರಾಹ್ಮಣಸ್ಯ ನಿವೇಶನೇ |
ರಮಮಾಣಾಃ ಪುರೇ ರಮ್ಯೇ ಲಬ್ಧಭೈಕ್ಷ್ಯಾ ಯುಧಿಷ್ಠಿರ ||4||
ಯುಧಿಷ್ಠಿರನೇ, ಈ ಸುಂದರವಾದ ಪಟ್ಟಣದಲ್ಲಿ ನಾವು ಭಿಕ್ಷೆಯನ್ನು ಪಡೆದು ಸಂತೋಷಪಡುತ್ತಾ ಈ ಬ್ರಾಹ್ಮಣನ ಮನೆಯಲ್ಲಿ ಬಹುಕಾಲವನ್ನು ಕಳೆದಿದ್ದೇವೆ.
ಯಾನೀಹ ರಮಣೀಯಾನಿ ವನಾನ್ಯುಪವನಾನಿ ಚ |
ಸರ್ವಾಣಿ ತಾನಿ ದೃಷ್ಟಾನಿ ಪುನಃಪುನರರಿಂದಮ ||5||
ಅರಿಂದಮನೇ, ಇಲ್ಲಿರುವ ರಮಣೀಯವಾದ ಎಲ್ಲಾ ವನಗಳನ್ನೂ ಮತ್ತು ಉಪವನಗಳನ್ನೂ ಮತ್ತೆ ಮತ್ತೆ ನೋಡಿದ್ದೇವೆ.
ಪುನರ್ದೃಷ್ಟಾನಿ ತಾನ್ಯೇವ ತಥಾ ನ ಪ್ರೀಣಯಂತಿ ನಃ |
ಭೈಕ್ಷಂ ಚ ನ ತಥಾ ವೀರ ಲಭ್ಯತೇ ಕುರುನಂದನ ||6||
ಮತ್ತೆ ಮತ್ತೆ ನೋಡಿದಾಗ ಅವು ನಮಗೆ ಮೊದಲಿನ ಸಂತೋಷವನ್ನುಂಟು ಮಾಡುವುದಿಲ್ಲ. ವೀರನಾದ ಕುರುನಂದನನೇ, ಮೊದಲಿನಂತೆಯೇ ಈಗ ಭಿಕ್ಷೆಯೂ ದೊರೆಯುತ್ತಿಲ್ಲ.
ತೇ ವಯಂ ಸಾಧು ಪಾಂಚಾಲಾನ್ ಗಚ್ಛಾಮ ಯದಿ ಮನ್ಯಸೇ |
ಅಪೂರ್ವದರ್ಶನಂ ತಾತ ರಮಣೀಯಂ ಭವಿಷ್ಯತಿ ||7||
ಅಂತಹ ನಾವು ನಿಮಗೆ ಸಮ್ಮತವಾದರೆ ಪಾಂಚಾಲದೇಶಕ್ಕೆ ಹೋಗೋಣ. ಪ್ರೀತಿಪಾತ್ರನೇ, ಹೊಸದಾಗಿ ನೋಡುವುದರಿಂದ ಆ ದೇಶವು ಮನೋಹರವಾಗಿರುವುದು.
ಸುಭಿಕ್ಷಶ್ಚೈವ ಪಾಂಚಾಲಾಃ ಶ್ರೂಯಂತೇ ಶತ್ರುಕರ್ಶನ |
ಯಜ್ಞಸೇನಸ್ತು ರಾಜಾಽಸೌ ಬ್ರಹ್ಮಣ್ಯ ಇತಿ ಶುಶ್ರುಮ ||8||
ಶತ್ರುಕರ್ಶನನೇ, ಪಾಂಚಾಲದೇಶವು ಸುಭಿಕ್ಷವಾದ ದೇಶ ಎಂದು ಕೇಳಿದ್ದೇವೆ. ಈ ಯಜ್ಞಸೇನರಾಜನೂ ಸಹ ಬ್ರಾಹ್ಮಣವತ್ಸಲನೆಂದೂ ಕೇಳಿದ್ದೇವೆ.
ಏಕತ್ರ ಚಿರವಾಸೋಽಯಂ ಕ್ಷಮೋ ನ ಚ ಮತೋ ಮಮ |
ತಸ್ಮಾತ್ ತತ್ರೈವ ಗಚ್ಛಾಮೋ ವಯಂ ತು ಯದಿ ಮನ್ಯಸೇ ||9||
ಒಂದೇಕಡೆಯಲ್ಲಿ ಬಹಳ ಕಾಲ ವಾಸಮಾಡುವುದು ಸರಿಯಲ್ಲ ಮತ್ತು ನನಗೆ ಆ ಅಭಿಪ್ರಾಯವೂ ಇಲ್ಲ. ಆದ್ದರಿಂದ ನಿನಗೆ ಸಮ್ಮತವಾದರೆ, ನಾವೆಲ್ಲರೂ ಅಲ್ಲಿಗೇ ಹೋಗೋಣ.
ಯುಧಿಷ್ಠಿರಃ
ಭವತ್ಯಾ ಯನ್ಮತಂ ಕಾರ್ಯಂ ತ್ವಿಹಾಸ್ಮಾಕಂ ಪರಂ ಹಿತಮ್ |
ಅನುಜಾಂಸ್ತು ನ ಜಾನಾಮಿ ಗಚ್ಛೇಯುರ್ನೇತಿ ವಾ ಪುನಃ ||10||
ಪೂಜ್ಯಳಾದ ನಿನಗೆ ಅಭಿಮತವಾದುದೇ ನಮಗೆ ಅತ್ಯಂತ ಹಿತವಾದ ಕಾರ್ಯ. ಆದರೆ ತಮ್ಮಂದಿರು ಹೊರಡುವರೋ ಇಲ್ಲವೋ ನಾನು ತಿಳಿದಿಲ್ಲ.
ವೈಶಂಪಾಯನಃ
ತತಃ ಕುಂತೀ ಭೀಮಸೇನಮರ್ಜುನಂ ಚ ಯಮೌ ತಥಾ |
ಉವಾಚ ಗಮನಂ ತೇ ಚ ತಾಂ ತಥೇತ್ಯಬ್ರುವಂಸ್ತದಾ ||11||
ಅನಂತರ ಕುಂತಿಯು ಭೀಮಸೇನನನ್ನೂ, ಅರ್ಜುನನನ್ನೂ, ನಕುಲ ಸಹದೇವರನ್ನೂ ಕರೆದು, ಹೊರಡುವ ವಿಷಯವನ್ನು ಹೇಳಿದಳು. ಅವರೆಲ್ಲರೂ ಹಾಗೆಯೇ ಆಗಲಿ ಎಂದು ಒಪ್ಪಿದರು.
ತತ ಆಮಂತ್ರ್ಯ ತಂ ವಿಪ್ರಂ ಕುಂತೀ ರಾಜಸುತೈಃ ಸಹ |
ಪ್ರತಸ್ಥೇ ನಗರಂ ರಮ್ಯಂ ದ್ರುಪದಸ್ಯ ಮಹಾತ್ಮನ ಃ ||12||
ಅನಂತರ ಕುಂತಿಯು ರಾಜಕುಮಾರರ ಜೊತೆಯಲ್ಲಿ ಹೋಗಿ ಆ ಬ್ರಾಹ್ಮಣನ ಅನುಮತಿಯನ್ನು ಪಡೆದು ಮಹಾತ್ಮನಾದ ದ್ರುಪದನ ಸುಂದರ ನಗರವನ್ನು ಕುರಿತು ಹೊರಟಳು.
ವಸತ್ಸು ತೇಷು ಪ್ರಚ್ಛನ್ನಂ ಪಾಂಡವೇಷು ಮಹಾತ್ಮಸು |
ಆಜಗಾಮ ತದಾ ದ್ರಷ್ಟುಂ ವ್ಯಾಸಃ ಸತ್ಯವತೀಸುತಃ ||13||
ಮಹಾತ್ಮರಾದ ಪಾಂಡವರು ಬ್ರಾಹ್ಮಣನ ಮನೆಯಲ್ಲಿ ಪ್ರಚ್ಛನ್ನವಾಗಿ ವಾಸಮಾಡುತ್ತಿರುವಾಗಲೇ ಸತ್ಯವತೀಸುತರಾದ ವ್ಯಾಸರು ಅವರನ್ನು ನೋಡಲು ಬಂದಿದ್ದರು.
ತಮಾಗತಮಭಿಪ್ರೇಕ್ಷ್ಯ ಪ್ರತ್ಯುದ್ಗಮ್ಯ ಪರಂತಪಾಃ |
ಪ್ರಣಿಪತ್ಯಾಭಿವಾದ್ಯೈನಂ ತಸ್ಥುಃ ಪ್ರಾಂಜಲಯೋಽಗ್ರತಃ ||14||
ಅವರು ಬಂದುದನ್ನು ನೋಡಿ ಪರಂತಪರಾದ ಪಾಂಡವರೆಲ್ಲರೂ ಎದ್ದು, ಅಭಿಮುಖವಾಗಿ ಹೋಗಿ, ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ಅವರ ಎದುರಿಗೆ ನಿಂತರು.

ಸಮನುಜ್ಞಾಯ ತಾನ್ ಸರ್ವಾನಾಸೀನಾನ್ ಮುನಿರಬ್ರವೀತ್ |
ಪ್ರಸನ್ನಃ ಪೂಜಿತಃ ಪಾರ್ಥೈಃ ಪ್ರೀತಿಪೂರ್ವಮಿದಂ ವಚಃ ॥15॥
ಅವರಿಗೆಲ್ಲಾ ಕುಳಿತುಕೊಳ್ಳಲು ಅನುಮತಿಯನ್ನು ನೀಡಿ ಅವರಿಂದ ಪೂಜಿಸಲ್ಪಟ್ಟು ಪ್ರಸನ್ನರಾದ ವ್ಯಾಸರು ಅವರಿಗೆ ಪ್ರೀತಿಪೂರ್ವಕವಾಗಿ ಈ ಮಾತನ್ನು ಹೇಳಿದರು.
ಅಪಿ ಧರ್ಮೇಣ ವರ್ತಧ್ವಂ ಶಾಸ್ತ್ರೇಣೈವ ಪರಂತಪಾಃ |
ಅಪಿ ವಿಪ್ರೇಷು ವಃ ಪೂಜಾ ಪೂಜಾರ್ಹೇಷು ಯಥಾವಿಧಿ ॥16॥
ಪರಂತಪರೇ, ನೀವು ಶಾಸ್ತ್ರೋಕ್ತವಾದ ಧರ್ಮದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದೀರಾ? ಪೂಜಾರ್ಹರಾದ ಬ್ರಾಹ್ಮಣರಿಗೆ ವಿಧಿವತ್ತಾಗಿ ಪೂಜೆಯನ್ನು ಮಾಡುತ್ತಿದ್ದೀರಾ?
ವೈಶಂಪಾಯನಃ
ಅಥ ಧರ್ಮಾರ್ಥವದ್ ವಾಕ್ಯಮುಕ್ತ್ವಾ ಸ ಭಗವಾನೃಷಿಃ |
ವಿಚಿತ್ರಾರ್ಥಕಥಾಸ್ತಾಸ್ತಾಃ ಪುನರೇವೇದಮಬ್ರವೀತ್ ॥17॥
ಅನಂತರ, ಭಗವಾನ್ವ್ಯಾಸರು ಧರ್ಮಾರ್ಥಯುಕ್ತವಾದ ವಿಚಿತ್ರವಾದ ಕಥೆಗಳನ್ನು ಹೇಳಿ ಪುನಃ ಹೀಗೆ ಮಾತನಾಡಿದರು.
ಆಸೀತ್ ತಪೋನಿಧೇಃ ಕಾಚಿದ್ ಋಷೇಃ ಕನ್ಯಾ ಮನಸ್ವಿನೀ |
ವಿಲಗ್ನಮಧ್ಯಾ ಸುಶ್ರೋಣೀ ಸುಭ್ರೂಃ ಸರ್ವಗುಣಾನ್ವಿತಾ ॥18॥
ಹಿಂದೆ ತಪೋನಿಧಿಯಾದ ಒಬ್ಬ ಋಷಿಗೆ ಧೈರ್ಯಶಾಲಿನಿಯಾದ ಕನ್ಯೆಯೊಬ್ಬಳಿದ್ದಳು. ಅವಳು ಕೃಶೋದರಿಯೂ, ಸುಶ್ರೋಣಿಯೂ, ಒಳ್ಳೆಯ ಹುಬ್ಬುಳ್ಳವಳೂ ಆಗಿ, ಎಲ್ಲ ಗುಣಗಳಿಂದ ಕೂಡಿದವಳೂ ಆಗಿದ್ದಳು.
ಕರ್ಮಭಿಃ ಸ್ವಕೃತೈಃ ಸಾ ತು ದುರ್ಭಗಾ ಸಮಪದ್ಯತ |
ನಾಧ್ಯಗಚ್ಛತ್ ಪತಿಂ ಸಾ ತು ಕನ್ಯಾ ರೂಪವತೀ ಸತೀ ॥19॥
ಅವಳು ತಾನು ಹಿಂದೆ ಮಾಡಿದ ಕರ್ಮಗಳ ಫಲವಾಗಿ ದೌರ್ಭಾಗ್ಯವನ್ನು ಹೊಂದಿ ರೂಪವತಿಯಾದರೂ ಸಹ ಪತಿಯನ್ನು ಪಡೆಯಲಿಲ್ಲ.
ತಪಸ್ತಪ್ತುಮಥಾರೇಭೇ ಪತ್ಯರ್ಥಮಸುಖಂ ತತಃ |
ತೋಷಯಾಮಾಸ ಮಹತಾ ಭಗವಂತಂ ಮಹೇಶ್ವರಮ್ ॥20॥
ಪತಿಯನ್ನು ಪಡೆಯುವ ಸಲುವಾಗಿ ಆಗ ಅವಳು ಉಗ್ರವಾದ ತಪಸ್ಸನ್ನು ಆಚರಿಸಲು ಆರಂಭಿಸಿದಳು. ದೊಡ್ಡ ತಪಸ್ಸನ್ನು ಮಾಡಿ ಭಗವಂತನಾದ ಮಹೇಶ್ವರನನ್ನು ಸಂತೋಷಪಡಿಸಿದಳು.
ತಸ್ಯಾಸ್ತು ಭಗವಾಂಸ್ತುಷ್ಟಃ ತಾಮುವಾಚ ತಪಸ್ವಿನೀಮ್ |
ವರಂ ವರಯ ಭದ್ರೇ ತ್ವಂ ವರದೋಽಸ್ಮಿ ತವೇಪ್ಸಿತಮ್ ॥21॥
ಮಹೇಶ್ವರನು ಅವಳಿಗೆ ಪ್ರಸನ್ನನಾಗಿ ಆ ತಪಸ್ವಿನಿಯನ್ನು ಕುರಿತು ಮಂಗಳಸ್ವರೂಪಳೇ, ವರವನ್ನು ಕೇಳು. ನೀನು ಕೇಳಿದ ವರವನ್ನು ನಾನು ಕೊಡುತ್ತೇನೆ ಎಂದು ಹೇಳಿದನು.
ಅಥೇಶ್ವರಮುವಾಚೇದಮಾತ್ಮಜೇನಾಭಿಚೋದಿತಾ |
ಪತಿಂ ಸರ್ವಗುಣೋಪೇತಮಿಚ್ಛಾಮೀತಿ ಪುನಃಪುನಃ ॥22॥
ಕಾಮದಿಂದ ಪೀಡಿತಳಾದ ಅವಳು ಈಶ್ವರನನ್ನು ಕುರಿತು ಎಲ್ಲ ಗುಣಗಳಿಂದ ಕೂಡಿದ ಪತಿಯನ್ನು ಬಯಸುತ್ತೇನೆ ಎಂದು ಮತ್ತೆ ಮತ್ತೆ ಹೇಳಿದಳು.
ತಾಮಥ ಪ್ರತ್ಯುವಾಚೇದಮೀಶಾನೋ ವದತಾಂ ವರಃ |
ಪಂಚ ತೇ ಪತಯೋ ಭದ್ರೇ ಭವಿಷ್ಯಂತೀತಿ ಶಂಕರಃ ॥23॥
ಮಾತನಾಡುವವರಲ್ಲಿ ಶ್ರೇಷ್ಠನಾದ ಈಶ್ವರನಾದ ಶಂಕರನು ಅವಳನ್ನು ಕುರಿತು, ಭದ್ರೇ ನಿನಗೆ ಐದು ಜನರು ಪತಿಗಳಾಗುವರು ಎಂದು ಹೇಳಿದನು.
ಪ್ರತಿಬ್ರುವಾಣಾಮೇಕಂ ಮೇ ಪತಿಂ ದೇಹೀತಿ ಶಂಕರಮ್ |
ಪುನರೇವಾಬ್ರವೀದೇನಾಮಿದಂ ವಚನಮುತ್ತಮಮ್ ॥24॥
ಅವಳು ನನಗೆ ಒಬ್ಬನೇ ಪತಿಯನ್ನು ಕೊಡು ಎಂದು ಹೇಳುತ್ತಿರುವಾಗ ಶಂಕರನು ಪುನಃ ಅವಳನ್ನು ಕುರಿತು ಈ ಶ್ರೇಷ್ಠವಾದ ಮಾತನ್ನು ಆಡಿದನು.
ಪಂಚಕೃತ್ವಸ್ತ್ವಯಾಪ್ಯುಕ್ತಃ ಪತಿಂ ದೇಹೀತ್ಯಹಂ ಪುನಃ |
ದೇಹಮನ್ಯಂ ಗತಾಯಾಸ್ತೇ ಯಥೋಕ್ತಂ ವೈ ಭವಿಷ್ಯತಿ ॥25॥
ನೀನು ಐದು ಬಾರಿ ಪತಿಯನ್ನು ಕೊಡು ಎಂದು ಕೇಳಿದೆ. ಆದ್ದರಿಂದ ನೀನು ದೇಹಾಂತರವನ್ನು ಹೊಂದಿದಾಗ ನಾನು ಹೇಳಿದಂತೆಯೇ ಆಗುವುದು.
ದ್ರುಪದಸ್ಯ ಕುಲೇ ಜಾತಾ ಕನ್ಯಾ ಸಾ ವರವರ್ಣಿನೀ |
ನಿರ್ದಿಷ್ಟಾ ಭವತಾಂ ಕನ್ಯಾ ಕೃಷ್ಣಾ ಪಾರ್ಷತ್ಯನಿಂದಿತಾ ॥26॥
ಆ ಸುಂದರಿಯು ದ್ರುಪದನ ಮಗಳಾಗಿ ಜನಿಸಿದ್ದಾಳೆ. ದ್ರುಪದನ ಮಗಳಾದ ಅನಿಂದಿತಳಾದ ಕೃಷ್ಣೆಯು ನಿಮಗೆ ಯುಕ್ತಳಾಗಿರುವ ಕನ್ಯೆ.
ಪಾಂಚಾಲನಗರೀಂ ತಸ್ಮಾತ್ ಪ್ರವಿಶಧ್ವಂ ಮಹಾಬಲಾಃ |
ಸುಖಿನಸ್ತಾಮನುಪ್ರಾಪ್ಯ ಭವಿಷ್ಯಥ ನ ಸಂಶಯಃ |
ರಾಜ್ಯಂ ಚೈವಾಗತಂ ಪ್ರಾಪ್ತಾ ಇಂದ್ರಪ್ರಸ್ಥಂ ಗಮಿಷ್ಯಥ ॥27॥

ಆದ್ದರಿಂದ ಮಹಾಬಲರಾದ ನೀವು ಪಾಂಚಾಲನಗರಕ್ಕೆ ಹೋಗಿ. ಈಗ ದುಃಖದಲ್ಲಿರುವ ನೀವು ಅವಳನ್ನು ಪಡೆದು ಸುಖವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ತಾನಾಗಿ ಒದಗುವ ರಾಜ್ಯವನ್ನು ಸ್ವೀಕರಿಸಿ ನೀವು ಇಂದ್ರಪ್ರಸ್ಥಕ್ಕೆ ಹೋಗುವಿರಿ.
ವೈಶಂಪಾಯನಃ
ಏವಮುಕತ್ವ ಮಹಾಭಾಗಃ ಪಾಂಡವಾನಾಂ ಪಿತಾಮಹಃ |
ಪಾರ್ಥಾನಾಮಂತ್ರ್ಯ ಕುಂತೀಂ ಚ ಪ್ರಾತಿಷ್ಠತ ಮಹಾತಪಾಃ ॥28॥
ಪಾಂಡವರ ಪಿತಾಮಹರಾದ ಆ ಮಹಾನುಭಾವರೂ, ಮಹಾತಪಸ್ವಿಗಳೂ ಆದ ವ್ಯಾಸರು ಹೀಗೆ ಹೇಳಿ, ಪಾಂಡವರ ಮತ್ತು ಕುಂತಿಯ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟರು.
ವೈಶಂಪಾಯನಃ
ತತಸ್ತೇ ನರಶಾರ್ದೂಲಾ ಭ್ರಾತರಃ ಪಂಚ ಪಾಂಡವಾಃ |
ಪ್ರಯಯುರ್ದ್ರೌಪದೀಂ ದ್ರಷ್ಟುಂ ತಂ ಚ ದೇಶಂ ಮಹೋತ್ಸವಮ್ ॥
ಅನಂತರ ನರಶಾರ್ದೂಲರಾದ ಮತ್ತು ಸಹೋದರರಾದ ಆ ಐದು ಜನ ಪಾಂಡವರು ದ್ರೌಪದಿಯನ್ನೂ, ಪಾಂಚಾಲನಗರವನ್ನೂ, ಸ್ವಯಂವರಮಹೋತ್ಸವವನ್ನೂ ನೋಡಲು ಅಲ್ಲಿಗೆ ಹೊರಟರು.
ತೇ ಪ್ರಯಾತಾ ನರವ್ಯಾಘ್ರಾ ಮಾತ್ರಾ ಸಹ ಪರಂತಪಾಃ |
ಬ್ರಾಹ್ಮಣಾನ್ ದದೃಶುರ್ಮಾರ್ಗೇ ಗಚ್ಛತಃ ಸಹಿತಾನ್ ಬಹೂನ್ ॥30॥
ತಾಯಿಯ ಜೊತೆಯಲ್ಲಿ ಹೊರಟ ಪರಂತಪರಾದ ಆ ನರವ್ಯಾಘ್ರರು ಮಾರ್ಗದಲ್ಲಿ ಜೊತೆಯಲ್ಲಿ ಹೋಗುತ್ತಿರುವ ಅನೇಕ ಬ್ರಾಹ್ಮಣರನ್ನು ನೋಡಿದರು.
ತಾನೂಚುರ್ಬ್ರಾಹ್ಮಣಾ ರಾಜನ್ ಪಾಂಡವಾನ್ ಬ್ರಹ್ಮಚಾರಿಣಃ |
ಕ್ವ ಭವಂತೋ ಗಮಿಷ್ಯಂತಿ ಕುತೋ ವಾಽಽಗಚ್ಛತೇತಿ ಹ ॥31॥
ರಾಜನೇ, ಆ ಬ್ರಾಹ್ಮಣರು, ಆ ಬ್ರಹ್ಮಚಾರಿಗಳಾದ ಪಾಂಡವರನ್ನು ಕುರಿತು, ನೀವು ಎಲ್ಲಿಗೆ ಹೋಗುತ್ತಿದ್ದೀರಿ ಮತ್ತು ಎಲ್ಲಿಂದ ಬರುತ್ತಿದ್ದೀರಿ ಎಂದು ಕೇಳಿದರು.
ಯುಧಿಷ್ಠಿರಃ
ಆಗತಾನೇಕಚಕ್ರಾಯಾಃ ಸೋದರ್ಯಾನ್ ದೇವದರ್ಶಿನಃ |
ಭವಂತೋ ಹಿ ವಿಜಾನಂತು ಸಹಿತಾನ್ ಮಾತೃಚಾರಿಣಃ ॥32॥
ಗಚ್ಛತೋ ನಸ್ತು ಪಾಂಚಾಲಾನ್ ದ್ರುಪದಸ್ಯ ಪುರಂ ಪ್ರತಿ |
ಸ್ವಯಂವರೋ ಮಹಾಂಸ್ತತ್ರ ಭವಿತಾ ಸುಮಹೋತ್ಸವಃ ॥33॥
ನಾವೆಲ್ಲರೂ ಸಹೋದರರು, ತಾಯಿಯ ಜೊತೆಯಲ್ಲಿ ಏಕಚಕ್ರನಗರದಿಂದ ಬಂದು ದೇವರ ದರ್ಶನಕ್ಕಾಗಿ ಪಾಂಚಾಲನಗರಕ್ಕೆ ಹೋಗುತ್ತಿದ್ದೇವೆಂದು ನೀವು ತಿಳಿಯಿರಿ. ಪಾಂಚಾಲದೇಶದಲ್ಲಿ ದ್ರುಪದನ ಪಟ್ಟಣಕ್ಕೆ ಹೋಗುವ ನಮಗೆ ಅಲ್ಲಿ ದೊಡ್ಡ ಸ್ವಯಂವರವೆಂಬ ಮಹೋತ್ಸವವು ಉಂಟಾಗುವುದು.
ಬ್ರಾಹ್ಮಣಾಃ
ಏಕಸಾರ್ಥಂ ಪ್ರಯಾತಾಃ ಸ್ಮ ವಯಮಪ್ಯತ್ರ ಗಾಮಿನಃ |
ತತ್ರಾಪ್ಯುತ್ಸವಸಂಕಾಶೋ ಭವಿತಾ ಉತ್ಸವೋ ಮಹಾನ್ ॥34॥
ನಾವೆಲ್ಲರೂ ಜೊತೆಯಾಗಿ ಹೊರಟು ಅಲ್ಲಿಗೇ ಹೋಗುತ್ತಿದ್ದೇವೆ. ಅಲ್ಲಿ ನಮ್ಮ ಮನಸ್ಸಿಗೆ ಸಂತೋಷವಾಗುವಂತಹ ದೊಡ್ಡ ಸ್ವಯಂವರ ಮಹೋತ್ಸವವು ನಡೆಯುವುದು.
ಯಜ್ಞಸೇನಸ್ಯ ದುಹಿತಾ ದ್ರುಪದಸ್ಯ ಮಹಾತ್ಮನಃ |
ವೇದಿಮಧ್ಯಾತ್ ಸಮುತ್ಪನ್ನಾ ಪದ್ಮಪತ್ರನಿಭೇಕ್ಷಣಾ ॥35॥
ಮಹಾತ್ಮನಾದ ದ್ರುಪದರಾಜನಾದ ಯಜ್ಞಸೇನನ ಮಗಳು ವೇದಿಮಧ್ಯದಿಂದ ಜನಿಸಿದವಳಾಗಿ, ಕಮಲನಯನೆಯಾಗಿದ್ದಾಳೆ.
ದರ್ಶನೀಯಾಽನವದ್ಯಾಂಗೀ ಸುಕುಮಾರೀ ಯಶಸ್ವಿನೀ |
ಧೃಷ್ಟದ್ಯುಮ್ನಸ್ಯ ಭಗಿನೀ ದ್ರೋಣಶತ್ರೋಃ ಪ್ರತಾಪಿನಃ ॥36॥
ದ್ರೋಣಶತ್ರುವಾದ, ಪ್ರತಾಪಶಾಲಿಯಾದ, ಧೃಷ್ಟದ್ಯುಮ್ನನ ತಂಗಿಯಾದ ಅವಳು ಸುಕುಮಾರಿಯೂ, ಸುಂದರಿಯೂ, ನಿರ್ದುಷ್ಟ ಶರೀರವುಳ್ಳವಳೂ ಮತ್ತು ಕೀರ್ತಿವಂತಳೂ ಆಗಿದ್ದಾಳೆ.
ಜಾತೋ ಯಃ ಪಾವಕಾತ್ ಕ್ರೂರಃ ಸಶರಃ ಸಶರಾಸನಃ |
ಸುಸಮಿದ್ಧಾನ್ಮಹಾಭಾಗ ಪಾವಕಾತ್ತು ಮಹಾರಥಃ ॥37॥
ಮಹಾನುಭಾವನೇ, ಆ ಮಹಾರಥನಾದ ಧೃಷ್ಟದ್ಯುಮ್ನನಾದರೋ ಉರಿಯುತ್ತಿರುವ ಅಗ್ನಿಯಿಂದ ಬಿಲ್ಲುಬಾಣಗಳನ್ನು ಧರಿಸಿ ಕ್ರೂರರೂಪದಿಂದ ಎದ್ದು ಬಂದವನು.
ಯಸ್ಮಿನ್ ಸ ಜಾಯಮಾನೇ ಚ ವಾಗುವಾಚಾಶರೀರಿಣೀ |
ಏಷ ಮೃತ್ಯುಶ್ಚ ಶಿಷ್ಯಶ್ಚ ಭಾರದ್ವಾಜಸ್ಯ ಜಾಯತೇ ॥38॥
ಅವನು ಜನಿಸಿದಾಗ ಇವನು ದ್ರೋಣರ ಶಿಷ್ಯನೂ ಮತ್ತು ಮೃತ್ಯುವೂ ಆಗುತ್ತಾನೆ ಎಂದು ಅಶರೀರವಾಣಿಯಾಯಿತು.
ಸ್ವಸಾ ತಸ್ಯ ತು ವೇದ್ಯಂತರ್ಜಾತಾ ತಸ್ಮಿನ್ ಮಹಾಮಖೇ |
ಸ್ತ್ರೀರತ್ನಮತಿರೂಪಾಂಗೀ ಶ್ಯಾಮಾ ನೀಲೋತ್ಪಲಂ ಯಥಾ ॥39॥
ಆ ದೊಡ್ಡ ಯಜ್ಞದಲ್ಲಿ ಈ ಕನ್ಯೆಯು ಅವನ ತಂಗಿಯಾಗಿ ವೇದಿಮಧ್ಯದಿಂದ ಜನಿಸಿ ಬಂದವಳು. ಮಹಾಸುಂದರಿಯಾದ ಅವಳು

ಒಂದು ಸ್ತ್ರೀರತ್ನ. ಅವಳು ನೀಲೋತ್ಪಲದಂತೆ ಶ್ಯಾಮವರ್ಣದಿಂದ ಕೂಡಿದ್ದಾಳೆ.
ತಾಂ ಯಜ್ಞಸೇನಸ್ಯ ಸುತಾಂ ದ್ರೌಪದೀಂ ಪರಮಸ್ತ್ರಿಯಮ್ |
ಗಚ್ಛಾಮಸ್ತತ್ರ ವೈ ದ್ರಷ್ಟುಂ ತಂ ಚೈವಾಸ್ಯಾಃ ಸ್ವಯಂವರಮ್ ॥40॥
ನಾವು ಯಜ್ಞಸೇನನ ಮಗಳಾದ ಶ್ರೇಷ್ಠವನಿತೆಯಾದ ದ್ರೌಪದಿಯನ್ನೂ ಮತ್ತು ಅವಳ ಸ್ವಯಂವರವನ್ನೂ ನೋಡಲು ಅಲ್ಲಿಗೆ ಹೋಗುತ್ತಿದ್ದೇವೆ.
ರಾಜಾನೋ ರಾಜಪುತ್ರಾಶ್ಚ ಜ್ವಲಂತೋ ಭೂರಿದಕ್ಷಿಣಾಃ |
ಸ್ವಾಧ್ಯಾಯವಂತಃ ಶುಚಯೋ ಮಹಾತ್ಮಾನೋ ಧೃತವ್ರತಾಃ ॥41॥
ತರುಣಾ ದರ್ಶನೀಯಾಶ್ಚ ನಾನಾದೇಶಸಮಾಗತಾಃ |
ಮಹಾರಥಾಃ ಕೃತಾಸತ್ರಶ್ಚ ಸಮೇಷ್ಯಂತಿ ಚ ಭೂಮಿಪಾಃ ॥42॥
ಅಲ್ಲಿಗೆ ಕಾಂತಿಯಿಂದ ಬೆಳಗುವ, ಬಹಳ ದಕ್ಷಿಣೆಯನ್ನು ಕೊಡುವ ಸ್ವಾಧ್ಯಾಯವನ್ನು ಮಾಡಿದವರೂ, ಶುಚಿರ್ಭೂತರೂ, ಮಹಾತ್ಮರೂ, ಧೃತವ್ರತರೂ, ಸುಂದರರೂ, ಅಸ್ತ್ರಜ್ಞರೂ, ಮಹಾರಥರೂ ಆದ ರಾಜರುಗಳು ನಾನಾದೇಶಗಳಿಂದ ಬರುತ್ತಾರೆ.
ತೇ ತತ್ರ ವಿವಿಧಾದಾನಾ ವಿಜಯಾರ್ಥಂ ನರರ್ಷಭಾಃ |
ಪ್ರದಾಸ್ಯಂತಿ ಧನಂ ಗಾಶ್ಚ ಸರ್ವತಃ ಪ್ರತಿಗೃಹ್ಯ ಚ |
ಸಹಾಸ್ಮಾಭಿರ್ಬಹೂನಬ್ದಾನ್ ಮಾತ್ರಾ ಸಹ ನಿವತ್ಸ್ಯಥ ॥43॥
ಆ ನರಶ್ರೇಷ್ಠರು ಸ್ವಯಂವರದಲ್ಲಿ ವಿಜಯವನ್ನು ಸಾಧಿಸುವ ಸಲುವಾಗಿ ಧನ, ಗೋವು ಮೊದಲಾದ ಅನೇಕ ಶ್ರೇಷ್ಠವಾದ ದಾನಗಳನ್ನು ಕೊಡುವರು. ಅವೆಲ್ಲವನ್ನೂ ನಮ್ಮ ಜೊತೆಯಲ್ಲಿ ಸ್ವೀಕರಿಸಿ ನಿಮ್ಮ ತಾಯಿಯ ಜೊತೆಯಲ್ಲಿ ಬಹಳ ವರ್ಷಗಳ ಕಾಲ ವಾಸ ಮಾಡಿ.
ಪ್ರತಿಗೃಹ್ಯ ಚ ತತ್ಸರ್ವಂ ದೃಷ್ಟ್ವಾ ಚೈವ ಸ್ವಯಂವರಮ್ |
ಅನುಭೂಯೋತ್ಸವಂ ಚೈವ ಗಮಿಷ್ಯಾಮೋ ಯಥೇಪ್ಸಿತಮ್॥44॥
ಆ ಎಲ್ಲಾ ದಾನವನ್ನೂ ಸ್ವೀಕರಿಸಿ, ಸ್ವಯಂವರವನ್ನು ನೋಡಿ, ಉತ್ಸವವನ್ನು ಅನುಭವಿಸಿ, ನಮಗೆ ಇಷ್ಟವಾದ ಕಡೆಗೆ ನಾವು ಹೋಗುವೆವು.
ನಟಾ ವೈತಾಲಿಕಾಶ್ಚೈವ ನರ್ತಕಾಸ್ತತ್ರ ಮಾಗಧಾಃ |
ನಿಯೋಧಕಾಶ್ಚ ದೇಶೇಭ್ಯಃ ಸಮೇಷ್ಯಂತಿ ಮಹಾಬಲಾಃ ॥45॥
ನಟರೂ, ವೈತಾಲಿಕರೂ, ನರ್ತಕರೂ, ಮಾಗಧರೂ, ಬಲಿಷ್ಠರಾದ ಯೋಧರೂ, ಅನೇಕದೇಶಗಳಿಂದ ಅಲ್ಲಿಗೆ ಬರುತ್ತಾರೆ.
ಏವಂ ಕೌತೂಹಲಂ ದೃಷ್ಟ್ವಾ ಭುಕತ್ವ ಚ ಪ್ರತಿಗೃಹ್ಯ ಚ |
ಸಹಾಸ್ಮಾಭಿರ್ಮಹಾತ್ಮಾನೋ ರಂಗಂ ಪ್ರತಿ ನಿವತ್ಸ್ಯಥ ॥46॥
ಹೀಗೆ ಅವರ ಚಮತ್ಕಾರಗಳನ್ನೆಲ್ಲಾ ನೋಡಿ ದಾನವನ್ನು ಸ್ವೀಕರಿಸಿ ಒಳ್ಳೆಯ ಭೋಜನವನ್ನು ಮಾಡಿ ಮಹಾತ್ಮರಾದ ನೀವು ಸ್ವಯಂವರ ರಂಗಮಂಟಪದ ಬಳಿಯಲ್ಲಿಯೇ ವಾಸ ಮಾಡಿ.
ದರ್ಶನೀಯಾಂಶ್ಚ ವಃ ಸರ್ವಾನೇಕರೂಪಾನಿವ ಸ್ಥಿತಾನ್ |
ಸಮೀಕ್ಷ್ಯ ಕೃಷ್ಣಾ ವರಯೇತ್ ಸಂಗತ್ಯಾಽನ್ಯತರಂ ವರಮ್ ॥47॥
ಮನೋಹರರಾದ ಒಳ್ಳೆಯ ರೂಪವನ್ನು ಹೊಂದಿರುವಂತೆ ಕಾಣುವ ನಿಮ್ಮನ್ನು ನೋಡಿ ದ್ರೌಪದಿಯು ನಿಮ್ಮಲ್ಲಿ ಯಾರಾದರೂ ಒಬ್ಬನನ್ನು ಸ್ವಯಂವರದಲ್ಲಿ ವರಿಸಬಹುದು.
ಅಯಮೇಕತರೋ ಭ್ರಾತಾ ದರ್ಶನೀಯೋ ಮಹಾಭುಜಃ |
ನಿರ್ಯತ್ನವಾನಪಿ ಜಯೇತ್ ಸಂಗತ್ಯ ದ್ರವಿಣಂ ಮಹತ್ ॥48॥
ನಿಮ್ಮಲ್ಲಿ ಒಬ್ಬನಾದ, ಸುಂದರನಾದ, ಮಹಾಭುಜನಾದ ಈ ಸಹೋದರನು (ಭೀಮನು) ಅನಾಯಾಸವಾಗಿ ದೊಡ್ಡ ದ್ರವ್ಯವನ್ನು (ಕನ್ಯೆಯನ್ನು) ಗಳಿಸಿಯಾನು.
ಯುಧಿಷ್ಠಿರಃ
ಪರಮಂ ಭೋಗಮಿಚ್ಛಾಮೋ ದ್ರಷ್ಟುಂ ತತ್ರ ಸ್ವಯಂವರಮ್ |
ಭವದ್ಭಿಃ ಸಹಿತಾಃ ಸರ್ವೇ ಕನ್ಯಾಯಾಸ್ತಂ ಸ್ವಯಂವರಮ್ ॥49॥
ನಾವೆಲ್ಲರೂ ನಿಮ್ಮ ಜೊತೆಯಲ್ಲಿ ಕನ್ಯೆಯ ಆ ಸ್ವಯಂವರವನ್ನು ನೋಡಿ ಶ್ರೇಷ್ಠವಾದ ಭೋಗವನ್ನು ಪಡೆಯಲು ಬಯಸುತ್ತೇವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಭೀಮೋಽಪಿ ರುದ್ರವರರಕ್ಷಿತರಾಕ್ಷಸಂ ತಂ
ಹತ್ವಾ ತೃಣೋಪಮತಯಾ ಹರಿಭಕ್ತವಂದ್ಯಃ |
ಉಷ್ಯಾಥ ತತ್ರ ಕತಿಚಿದ್ದಿನಮಚ್ಯುತಸ್ಯ
ವ್ಯಾಸಾತ್ಮನೋ ವಚನತಃ ಪ್ರಯಯೌ ನಿಜೈಶ್ಚ ॥105॥
ಹರಿಭಕ್ತರಿಗೆ ವಂದ್ಯನಾದ ಭೀಮಸೇನ ರುದ್ರದೇವರ ವರದಿಂದ ಸುರಕ್ಷಿತನಾಗಿದ್ದ ಬಕರಾಕ್ಷಸನನ್ನು ತೃಣೀಕರಿಸಿ ಕೊಂದು

ಏಕಚಕ್ರನಗರದಲ್ಲಿ ಕೆಲವು ದಿನವಿದ್ದು ವ್ಯಾಸರೂಪಿ ಹರಿಯ ಮಾತಿನಂತೆ ತನ್ನವರೊಂದಿಗೆ ಪ್ರಯಾಣ ಮಾಡಿದ.
ಮಂಗಲ್ಯಮೇತದತುಲಂ ಪ್ರತಿಯಾತ ಶೀಘ್ರಂ
ಪಾಂಚಾಲಕಾನ್ ಪರಮಭೋಜನಮತ್ರ ಸಿಧ್ಯೇತ್ |
ವಿಪ್ರೈರಿತಸ್ತತ ಇತೀರಿತವಾಕ್ಯಮೇತೇ
ಶೃಣ್ವಂತ ಏವ ಪರಿಚಕ್ರಮುರುತ್ತರಾಶಾಂ ॥106॥
ಅನುಪಮವಾದ ವಿವಾಹ ಮಂಗಲ ಮಹೋತ್ಸವ ನಡೆಯಲಿದೆ. ಅದರಿಂದ ಬೇಗನೆ ಪಾಂಚಾಲದೇಶಕ್ಕೆ ಬನ್ನಿರಿ. ಅಲ್ಲಿ ಉತ್ತಮವಾದ ಭೋಜನ ಲಭಿಸುವುದು ಎಂದು ಅಲ್ಲಲ್ಲಿ ಬ್ರಾಹ್ಮಣರು ಹೇಳಿದ ಮಾತನ್ನು ಕೇಳುತ್ತ ಪಾಂಡವರು ಉತ್ತರದಿಕ್ಕಿಗೆ ನಡೆದರು.
ಷಣ್ಣಾಂ ಚ ಮಧ್ಯಗಮುದೀರ್ಣಭುಜಂ ವಿಶಾಲ-
ವಕ್ಷಸ್ಥಲಂ ಬಹಳಪೌರುಷಲಕ್ಷಣಂ ಚ |
ದೃಷ್ಟ್ವೈವ ಮಾರುತಿಮಸಾವುಪಲಪ್ಸ್ಯತೀಹ
ಕೃಷ್ಣಾಮಿತಿ ಸ್ಮ ಚ ವಚಃ ಪ್ರವದಂತಿ ವಿಪ್ರಾಃ ॥107॥
ಆರು ಜನರ ಮಧ್ಯದಲ್ಲಿ ಮಹಾಬಾಹು ವಿಶಾಲವಕ್ಷಃಸ್ಥಳ ಮತ್ತು ಮಹಾಪೌರುಷ ಲಕ್ಷಣಗಳಿಂದ ಒಪ್ಪುವ ಭೀಮನನ್ನು ಕಂಡು ಇವನೇ ದ್ರೌಪದಿಯನ್ನು ಪಡೆಯುತ್ತಾನೆ ಎಂದು ಬ್ರಾಹ್ಮಣರು ಹೇಳಿದರು.
ರಾತ್ರೌ ದಿವಾ ಚ ಸತತಂ ಪಥಿ ಗಚ್ಛಮಾನಾಃ
ಪ್ರಾಪುಃ ಕದಾಚಿದಥ ವಿಷ್ಣುಪದೀಂ ನಿಶಾಯಾಂ |
ಸರ್ವಸ್ಯ ರಕ್ಷಿತುಮಗಾದಿಹ ಪೃಷ್ಠತಸ್ತು
ಭೀಮೋಽಗ್ರ ಏವ ಶತಮನ್ಯುಸುತೋಂತರಾನ್ಯೇ ॥108॥
ರಾತ್ರಿಹಗಲು ಎಡೆಬಿಡದೆ ದಾರಿ ನಡೆಯುತ್ತ ಪಾಂಡವರು ಒಂದು ರಾತ್ರಿ ಗಂಗಾನದಿಯ ಬಳಿಗೆ ಬಂದರು. ಆಗ ಎಲ್ಲರ ರಕ್ಷಣೆಗಾಗಿ ಹಿಂದಿನಿಂದ ಭೀಮ ನಡೆಯುತ್ತಿದ್ದ. ಮುಂದೆ ಅರ್ಜುನ ನಡುವೆ ಇತರರು ನಡೆಯುತ್ತಿದ್ದರು.
ಪ್ರಾಪ್ತೇ ತದೋಲ್ಮುಕಧರೇಽರ್ಜುನ ಏವ ಗಂಗಾಂ
ಗಂಧರ್ವರಾಜ ಇಹ ಚಿತ್ರರಥೋಽರ್ಧರಾತ್ರೇ |
ದೃಷ್ಟ್ವೈವ ವಿಪ್ರರಹಿತಾನುದಕಾಂತರಸ್ಥಃ
ಕ್ಷತ್ರಾತ್ಮಜಾ ಇತಿ ಹ ಧರ್ಷಯಿತುಂ ಸ ಚಾಗಾತ್ ॥109॥
ಉರಿವ ಕೊಳ್ಳಿಯನ್ನು ಹಿಡಿದಿದ್ದ ಅರ್ಜುನ ಗಂಗೆಯ ಬಳಿಗೆ ಬಂದಾಗ ಅಲ್ಲಿ ನೀರಲ್ಲಿದ್ದ ಚಿತ್ರರಥನೆಂಬ ಗಂಧರ್ವ ಅರ್ಧರಾತ್ರಿಯಲ್ಲಿ, ಜೊತೆಗೆ ಬ್ರಾಹ್ಮಣರೂ ಇಲ್ಲದೆ ಬರುತ್ತಿದ್ದ ಪಾಂಡವರನ್ನು ಕಂಡು ಕ್ಷತ್ರಿಯರೆಂದು ಅವರನ್ನು ಆಕ್ರಮಿಸಲು ತೊಡಗಿದ.
ಹಂತಾಸ್ಮಿ ವೋ ಹ್ಯುಪಗತಾನುದಕಾಂತಮಸ್ಯಾ
ನದ್ಯಾಶ್ಚ ಮರ್ತ್ಯಚರಣಾಯ ನಿಷಿದ್ಧಕಾಲೇ |
ಇತ್ಥಂ ವದಂತಮಮುಮಾಹ ಸುರೇಂದ್ರಸೂನು-
ರ್ಗಂಧರ್ವ ನಾಸ್ತ್ರವಿದುಷಾಂ ಭಯಮಸ್ತಿ ತೇಽದ್ಯ ॥110॥
ಮಾನವರು ಸಂಚರಿಸಲು ನಿಷಿದ್ಧವಾದ ಈ ರಾತ್ರಿಕಾಲದಲ್ಲಿ ನದೀ ನೀರಿನ ಬಳಿಗೆ ಬಂದಿರುವ ನಿಮ್ಮನ್ನು ನಾನು ಕೊಲ್ಲುವೆನೆಂದು ಗಂಧರ್ವ ನುಡಿದಾಗ ಅರ್ಜುನನೆಂದ `ಗಂಧರ್ವ! ಅಸ್ತ್ರಗಳನ್ನು ಬಲ್ಲ ನಮಗೆ ನಿನ್ನ ಭಯವಿಲ್ಲ'.
ಸರ್ವಂ ಹಿ ಫೇನವದಿದಂ ಬಹುಲಂ ಬಲಂ ತೇ
ನಾರ್ಥಪ್ರದಂ ಭವತಿ ಚಾಸ್ತ್ರವಿದಿ ಪ್ರಯುಕ್ತಂ |
ಇತ್ಯುಕ್ತವಂತಮಮುಮುತ್ತಮಯಾನಸಂಸ್ಥೋ
ಬಾಣಾನ್ ಕ್ಷಿಪನ್ನಭಿಸಸಾರ ಸುರೇಶಭೃತ್ಯಃ ॥111॥
`ನಿನ್ನ ಸಮಸ್ತ ಮಹಾಬಲವೂ ಕೂಡ ಅಸ್ತ್ರಜ್ಞರಾದ ನಮ್ಮ ಮೇಲೆ ಪ್ರಯೋಗಿಸಿದಾಗ, ಬಂಡೆಗಲ್ಲಿನ ಮೇಲೆ ನೀರಿನ ನೊರೆಯಂತೆ ಏನೂ ಪ್ರಯೋಜನವಾಗದು. `ಹೀಗೆ ಅರ್ಜುನ ಹೇಳಿದಾಗ ಆ ಗಂಧರ್ವ ಉತ್ತಮವಾದ ರಥದಲ್ಲಿ ನಿಂತು ಬಾಣ ಎಸೆಯುತ್ತ ಪಾಂಡವರ ಮೇಲೇರಿ ಬಂದ.
ಆಗ್ನೇಯಮಸ್ತ್ರಮಭಿಮಂತ್ರ್ಯ ತದೋಲ್ಮುಕೇ ಸ
ಚಿಕ್ಷೇಪ ಶಕ್ರತನಯೋಽಸ್ಯ ರಥಶ್ಚ ದಗ್ಧಃ |
ತಂ ಚಾಗ್ನಿನಾ ಪರಿಗೃಹೀತಮಭಿಪ್ರಗೃಹ್ಯ
ಕೇಶೇಷು ಸಂಚಕರ್ಷಾಶು ಸುರೇಂದ್ರಸೂನುಃ ॥112॥
ಆಗ ಅರ್ಜುನ ಕೊಳ್ಳಿಯಲ್ಲಿ ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ಎಸೆದ. ಗಂಧರ್ವನ ರಥ ಸುಟ್ಟುಹೋಯಿತು. ಅಗ್ನಿಯಿಂದ ಅಮೃತನಾದ ಗಂಧರ್ವನನ್ನು ಕೂದಲುಗಳಲ್ಲಿ ಹಿಡಿದು ಸೆಳೆದ, ಅರ್ಜುನ.
ಪಾರ್ಥೇನ ಸಂಧರ್ಷಿತಃ ಶರಣಂ ಜಗಾಮ
ಧರ್ಮಾತ್ಮಜಂ ತಮಪಿ ಸೋಽಥ ನಿಜಾಸ್ತ್ರಮುಗ್ರಂ |
ಸಂಜಹ್ರ ಏವ ತತ ಆಸ ಚ ನಾಮತೋಽಸಾ-
ವಂಗಾರವರ್ಣ ಇತಿ ವರ್ಣವಿಪರ್ಯಯೇಣ ॥113॥
ಅರ್ಜುನನಿಂದ ಆಕ್ರಮಿಸಲ್ಪಟ್ಟ ಚಿತ್ರರಥ ಧರ್ಮರಾಜನನ್ನೂ ಅರ್ಜುನನನ್ನೂ ಶರಣಾದ. ಆಗ ಅರ್ಜುನ ತನ್ನ ಭಯಂಕರ ಅಸ್ತ್ರವನ್ನು ಉಪಸಂಹರಿಸಿದ. ಚಿತ್ರರ್ಥ ಮೈಬಣ್ಣ ವ್ಯತ್ಯಾಸವಾದ್ದರಿಂದ ಅವನು ಅಂಗಾರವರ್ಣ ಎಂಬ ಹೆಸರು ಪಡೆದ.

ಗಂಧರ್ವ ಉಲ್ಬಣಸುರಕ್ತತನುಃ ಸ ಭೂತ್ವಾ
ಸ್ವರ್ಣಾವದಾತ ಉತ ಪೂರ್ವಮುಪೇತ್ಯ ಸಖ್ಯಂ |
ಪಾರ್ಥೇನ ದುರ್ಲಭಮಹಾಸ್ತ್ರಮಿದಂ ಯಯಾಚೇ
ಜಾನನ್ನಪಿ ಸ್ಮ ನ ಹಿ ತಾದೃಶಮೇಷ ವೇದ ॥114॥
ಗಂಧರ್ವ ಹಿಂದೆ ಬಂಗಾರದಂಥ ಸ್ವಚ್ಛವರ್ಣದವನಿದ್ದು ಈಗ ಕಡು ಕೆಂಪಾದ ಮೈಯವನಾಗಿ ಅರ್ಜುನನೊಡನೆ ಸಖ್ಯಮಾಡಿಕೊಂಡು ದುರ್ಲಭವಾದ ಮಹಾ ಆಗ್ನೇಯಾಸ್ತ್ರವನ್ನು ಬೇಡಿದ. ಅದನ್ನು ಅವನು ಮೊದಲೆ ತಿಳಿದಿದ್ದರೂ ಅರ್ಜುನನು ತಿಳಿದಂತೆ ತಿಳಿದಿರಲಿಲ್ಲ.
ವಿದ್ಯಾ ಸುಶಿಕ್ಷಿತತಮಾ ಹಿ ಸುರೇಶ ಸೂನೌ
ತಾಮಸ್ಯ ಚಾವದದಸಾವಪಿ ಕಾಲತೋಽಸ್ಮೈ |
ಗಂಧರ್ವಗಾಮವದದನ್ವಗದೃಶ್ಯವಿದ್ಯಾಂ
ಪಶ್ಚಾದಿತಿ ಸ್ಮ ಪುರುಹೂತಸುತಸ್ಯ ವಾಕ್ಯಾತ್ ॥115॥
ಅರ್ಜುನನಲ್ಲಿ ಆನ್ನೇಯಾಸ್ತ್ರವಿದ್ಯೆ ಬಲು ಚೆನ್ನಾಗಿ ಸಾಧಿತವಾಗಿತ್ತು. ಅದನ್ನು ಅವನು ಗಂಧರ್ವನಿಗೆ ಉಪದೇಶಿಸಿದ. ಗಂಧರ್ವನೂ ಗಂಧರ್ವರಲ್ಲಿರುವ ಅದೃಶ್ಯ ವಿದ್ಯೆಯನ್ನು ಅರ್ಜುನನಿಗೆ ಕಾಲಾಂತರದಲ್ಲಿ ಉಪದೇಶಿಸಿದ. ಏಕೆಂದರೆ ಕಾಲಾಂತರದಲ್ಲಿಯೇ ನಾನು ಅದನ್ನು ಸ್ವೀಕರಿಸುವೆನೆಂದು ಅರ್ಜುನ ನುಡಿದ.
ಆಧಿಕ್ಯತಃ ಸ್ವಗತಸಂವಿದ ಏವ ಸಾಮ್ಯೇ
ನೈವೇಚ್ಛತಿ ಸ್ಮ ನಿಮಯಂ ಸ ಧನಂಜಯೋಽತ್ರ |
ಧರ್ಮಾರ್ಥಮೇವ ಸ ತು ತಾಂ ಪರಿದಾಯ ತಸ್ಮೈ
ಕಾಲೇನ ಸಂವಿದಮಮುಷ್ಯ ಚ ಧರ್ಮತೋಽಯಾತ್ ॥116॥
ಅರ್ಜುನ ತನ್ನಲ್ಲಿರುವ ವಿದ್ಯೆ ಹೆಚ್ಚು ಶ್ರೇಷ್ಠವಾದ್ದರಿಂದ ಇಬ್ಬರ ವಿದ್ಯೆಗಳಲ್ಲಿ ಸಾಮ್ಯವಿದ್ದರೆ ಮಾತ್ರ ಶಕ್ಯವಾಗುವಂಥ ವಿನಿಮಯವನ್ನು ಒಪ್ಪಲಿಲ್ಲ. ಅದರಿಂದ ಧರ್ಮಾರ್ಥವಾಗಿಯೆ ಅದನ್ನು ಗಂಧರ್ವನಿಗೆ ನೀಡಿ ಸ್ವಲ್ಪ ಕಾಲ ಕಳೆದ ಬಳಿಕ ಅವನ ವಿದ್ಯೆಯನ್ನು ಧರ್ಮಾರ್ಥವಾಗಿಯೆ ಪಡೆದ.
* * * *

ನೂರ ಎಪ್ಪತ್ತೆರಡನೆಯ ಅಧ್ಯಾಯ
(ಅರ್ಧರಾತ್ರಿಯಲ್ಲಿ ಪಾಂಡವರ ಗಂಗಾಪ್ರಾಪ್ತಿ. ಚಿತ್ರರಥಗಂಧರ್ವನ ಜೊತೆಯಲ್ಲಿ ಅರ್ಜುನನ ಯುದ್ಧ, ಚಿತ್ರರಥನ ಪರಾಜಯ. ಆಗ್ನೇಯಾಸ್ತ್ರವನ್ನು ಕೊಟ್ಟು ಗಂಧರ್ವನಿಂದ ಅರ್ಜುನನ ಗಾಂಧರ್ವಾಸ್ತ್ರ ಗ್ರಹಣ)
ವೈಶಂಪಾಯನಃ
ತೇ ಪ್ರತಸ್ಥುಃ ಪುರಸ್ಕೃತ್ಯ ಮಾತರಂ ಭರತರ್ಷಭಾಃ |
ಸಮೈರುದಙ್ಮುಖೈರ್ಮಾರ್ಗೈರ್ಯಥೋದ್ದಿಷ್ಟಂ ಮಹಾಬಲಾಃ ॥
ಆ ಮಹಾಬಲರಾದ ಭರತರ್ಷಭರು ತಾಯಿಯನ್ನು ಮುಂದೆ ಮಾಡಿಕೊಂಡು ಉತ್ತರಾಭಿಮುಖವಾದ ಸಮವಾದ ಮಾರ್ಗದಲ್ಲಿ ಉದ್ದೇಶಿಸಿದಂತೆ ಹೊರಟರು.
ತೇ ಗಚ್ಛಂತಸ್ತ್ವಹೋರಾತ್ರಂ ಪಾಂಚಾಲನಗರಂ ಪ್ರತಿ |
ಅಭ್ಯಾಜಗ್ಮುರ್ಲೋಕನದೀಂ ಗಂಗಾಂ ಭಾಗೀರಥೀಂ ಪ್ರತಿ ॥2॥
ಅವರು ಪಾಂಚಾಲನಗರವನ್ನು ಉದ್ದೇಶಿಸಿ ಹಗಲೂ ರಾತ್ರಿಯೂ ಪ್ರಯಾಣ ಮಾಡುತ್ತಾ ಲೋಕಪಾವನೆಯಾದ ಭಾಗೀರಥೀ ನದಿಯನ್ನು ತಲುಪಿದರು.
ಚಂದ್ರಾಸ್ತಮನವೇಳಾಯಾಮರ್ಧರಾತ್ರೇ ಸಮಾಗತೇ |
ತೇ ಚೈವಾತ್ರಾನುಮಜ್ಜಂತಸ್ತೀರ್ಥಂ ಸೋಮಾಶ್ರಯಾಯಣಮ್ ॥3॥
ಅರ್ಧರಾತ್ರಿಯಲ್ಲಿ ಚಂದ್ರಾಸ್ತ ಸಮಯದಲ್ಲಿ ಮಹೇಶ್ವರನು ತಲೆಯಲ್ಲಿ ಧರಿಸಿದ ಗಂಗಾತೀರ್ಥದಲ್ಲಿ ಸ್ನಾನ ಮಾಡಲು ಬಯಸಿದರು.
ಉಲ್ಮುಕಂ ತು ಸಮುದ್ಯಮ್ಯ ತೇಷಾಮಗ್ರೇ ಧನಂಜಯಃ |
ಪ್ರಕಾಶಾರ್ಥಂ ಯಯೌ ತತ್ರ ರಕ್ಷಾರ್ಥಂ ಚ ಧನಂಜಯಃ ॥4॥
ಅರ್ಜುನನು ಅವರ ಮುಂಭಾಗದಲ್ಲಿ ಬೆಳಕಿನ ಸಲುವಾಗಿ ಮತ್ತು ರಕ್ಷಣೆಯ ಸಲುವಾಗಿ ಉರಿಯುತ್ತಿರುವ ಒಂದು ಪಂಜನ್ನು ಹಿಡಿದುಕೊಂಡು ಹೊರಟನು.
ಅಥ ತತ್ರ ಜಲೇ ರಮ್ಯೇ ವಿಜನೇ ಕ್ರೀಡಯನ್ ಸ್ತ್ರಿಯಃ |
ಈರ್ಕ್ಷ್ಯ ಗಂಧರ್ವರಾಜಸ್ತು ಜಲಕ್ರೀಡಾಮುಪಾಗತಃ ॥5॥
ಆಗ ಅಲ್ಲಿ ಮನೋಹರವಾದ ಆ ನೀರಿನಲ್ಲಿ ನಿರ್ಜನವಾದ ಪ್ರದೇಶದಲ್ಲಿ ತನ್ನ ಸ್ತ್ರೀಯರ ಜೊತೆಯಲ್ಲಿ ಜಲಕ್ರೀಡೆಯಾಡಲು ಗಂಧರ್ವರಾಜನಾದ ಚಿತ್ರರಥನು ಬಂದಿದ್ದನು.
ಶಬ್ದಮೇಷಾಂ ಸ ಶುಶ್ರಾವ ನದೀಂ ಸಮುಪಸರ್ಪತಾಮ್ |
ತೇನ ಶಬ್ದೇನ ಚೋದ್ರಿಕ್ತಃ ಚುಕ್ರೋಧ ಸಹಸಾ ಬಲೀ ॥6॥
ಅವನು ನದಿಯ ಬಳಿಗೆ ಬರುತ್ತಿರುವ ಈ ಪಾಂಡವರ ಶಬ್ದವನ್ನು ಕೇಳಿದನು. ಬಲಿಷ್ಠನಾದ ಅವನು ಆ ಶಬ್ದವನ್ನು ಕೇಳಿದ ಕೂಡಲೇ ಕೋಪೋದ್ರಿಕ್ತನಾದನು.

ಸ ದೃಷ್ಟ್ವಾ ಪಾಂಡವಾಂಸ್ತತ್ರ ಸಹ ಮಾತ್ರಾ ಪರಂತಪಾನ್ |
ವಿಷ್ಫಾರಯನ್ ಧನುರ್ಘೋರಮಿದಂ ವಚನಮಬ್ರವೀತ್ ||7||
ಅವನು ಅಲ್ಲಿ ತಾಯಿಯ ಜೊತೆಯಲ್ಲಿದ್ದ ಪರಂತಪರಾದ ಪಾಂಡವರನ್ನು ನೋಡಿ ತನ್ನ ಘೋರವಾದ ಧನುಸ್ಸನ್ನು ಬಗ್ಗಿಸುತ್ತಾ ಹೀಗೆ ಮಾತನಾಡಿದನು.
ಅಂಗಾರವರ್ಣಃ
ಸಂಧ್ಯಾ ಸಂರಜ್ಯತೇ ಘೋರಾ ಪರ್ವರಾತ್ರ್ಯಾಗಮೇಷು ಯಾ |
ಅಶೀತಿತ್ರುಟಿಭಿರ್ಹೀನಾನ್ ತ್ರೀನ್ ಮುಹೂರ್ತಾನ್ ಪ್ರಚಕ್ಷತೇ ||8||
ಪರ್ವರಾತ್ರಿಗಳಲ್ಲಿ ಘೋರವಾದ ಸಂಧ್ಯಾಕಾಲವು ಸಂಬದ್ಧವಾಗುತ್ತದೆ. ಎಂಭತ್ತು ತ್ರುಟಿಗಳಿಂದ ಹೀನವಾದ ಮೂರು ಮುಹೂರ್ತಗಳನ್ನು ಘೋರವೆಂದು ಹೇಳುತ್ತಾರೆ.
ಅಷ್ಟಮಿ, ಅಮಾವಾಸ್ಯೆ ಮೊದಲಾದವು ಪರ್ವಕಾಲಗಳು. ರಾತ್ರಿಯ ಅರ್ಧಭಾಗಕ್ಕೆ ಪೂರ್ವದ ಕಾಲವನ್ನು ಪೂರ್ವರಾತ್ರಿ ಎಂತಲೂ, ಅನಂತರದ ಭಾಗವನ್ನು ಅಪರರಾತ್ರಿ ಎಂತಲೂ ಕರೆಯುತ್ತಾರೆ. ಆ ರಾತ್ರಿ ಮಧ್ಯಬಿಂದುವಿನಿಂದ ಎರಡೂ ಕಡೆಗಳಲ್ಲಿ ಒಂದೂವರೆ ಮುಹೂರ್ತಗಳು ಘೋರವಾದ ಕಾಲ. ಒಂದೂವರೆ ಮುಹೂರ್ತಗಳೆಂದರೆ ಮೂರು ಘಳಿಗೆಗಳು. ಒಂದು ಘಳಿಗೆಗೆ ಅರವತ್ತು ತ್ರುಟಿಗಳು. ಪೂರ್ವರಾತ್ರದ ಕೊನೆಯ ಮೂರು ಘಳಿಗೆಗಳಲ್ಲಿ ಎರಡು ಘಳಿಗೆ ಮತ್ತು ಇಪ್ಪತ್ತು ತ್ರುಟಿಗಳು ಘೋರವಾದ ಕಾಲ. ಅಲ್ಲಿ ಇನ್ನೂ ನಲವತ್ತು ತ್ರುಟಿಗಳು ಉಳಿಯುತ್ತವೆ. ಅಪರರಾತ್ರದ ಮೊದಲನೇ ಘಳಿಗೆಯ ಇಪ್ಪತ್ತು ತ್ರುಟಿಗಳು ಮತ್ತು ಎರಡು ಘಳಿಗೆಗಳು ಇವು ಘೋರವಾದ ಕಾಲ. ಪೂರ್ವರಾತ್ರದ ಎರಡು ಘಳಿಗೆ ಮತ್ತು ಇಪ್ಪತ್ತು ತ್ರುಟಿಗಳೂ ಸಹ ಘೋರವಾದ ಕಾಲ. ಇನ್ನು ಪೂರ್ವರಾತ್ರದ ಕೊನೆಯಲ್ಲಿ ನಲವತ್ತು ತ್ರುಟಿಗಳು ಅಪರರಾತ್ರದ ಆರಂಭದಲ್ಲಿ ನಲವತ್ತು ತ್ರುಟಿಗಳೂ ಸೇರಿ ಮಧ್ಯದಲ್ಲಿ ಎಂಭತ್ತು ತ್ರುಟಿಗಳ ಕಾಲವಿದೆ. ಅದಂತೂ ಉಳಿದ ನಾಲ್ಕು ಘಳಿಗೆ ನಲವತ್ತು ತ್ರುಟಿಗಳಿಗಿಂದ ಬಹಳ ಘೋರವಾದ ಕಾಲ. ಈ ಆರು ಘಳಿಗೆಗಳನ್ನು ಒಟ್ಟಾಗಿ ಸಂಧ್ಯಾಕಾಲವೆಂದು ಕರೆಯುತ್ತಾರೆ.
ವಿಹಿತಾನ್ ಕಾಮಚಾರಾಯ ಯಕ್ಷಗಂಧರ್ವರಕ್ಷಸಾಮ್ |
ಶೇಷಂ ಕಾಲಂ ಮನುಷ್ಯಾಣಾಂ ಕಾಮಚಾರಮಿಹ ಸ್ಮೃತಮ್ ||9||
ಈ ಘೋರವಾದ ಕಾಲವು ಯಕ್ಷರಾಕ್ಷಸಗಂಧರ್ವರಿಗೆ ಕಾಮಚಾರದ ಕಾಲ ಎಂದು ವಿಹಿತವಾಗಿದೆ. ದಿವಸದಲ್ಲಿ ಉಳಿದ ಕಾಲವು ಮನುಷ್ಯರಿಗೆ ಕಾಮಚಾರದ ಕಾಲ ಎಂದು ಹೇಳಲ್ಪಡುತ್ತದೆ. (ಆ ಕಾಲವನ್ನು ಬಿಟ್ಟು ಬೇರೆ ಕಾಲದಲ್ಲಿ ಮನುಷ್ಯರು ಗಂಗೆಯನ್ನು ಮುಟ್ಟುವಂತಿಲ್ಲ.)
ಲೋಭಾತ್ ಪ್ರಚಾರಂ ಚರತಸ್ತಾಸು ವೇಳಾಸು ವೈ ನರಾನ್ |
ಉಪಕ್ರಮ್ಯ ನಿಗೃಹ್ಣೀಮೋ ರಾಕ್ಷಸೈಃ ಸಹ ಬಾಲಿಶಾನ್ ||10||
ಬಾಲಿಶರಾದ ಮನುಷ್ಯರು ಆ ನಿಷಿದ್ಧವಾದ ಕಾಲದಲ್ಲಿ ಗಂಗೆಯ ಸಮೀಪದಲ್ಲಿ ತಿರುಗಾಡಿದರೆ, ನಾವೂ ಮತ್ತು ರಾಕ್ಷಸರೂ ಸೇರಿ ಅವರ ಮೇಲೆ ಎರಗಿ ಅವರನ್ನು ನಿಗ್ರಹಿಸುತ್ತೇವೆ.
ಅತೋ ರಾತ್ರ್ಯಾಂ ಪ್ರಾಪ್ನುವಂತಿ ಭೂಯಿಷ್ಠಂ ಪಾಪಚೇತಸಃ |
ನಿಘ್ನಂತ್ಯೇತೇ ನಿತ್ಯಮೇಷು ಕ್ಷಣೇಷು ನೃಪತೀನಪಿ ||11||
ಆದ್ದರಿಂದ ರಾತ್ರಿಯ ವೇಳೆಯಲ್ಲಿ ಪಾಪಚೇತನರಾದ ರಾಕ್ಷಸರು ಹೆಚ್ಚಾಗಿ ಇಲ್ಲಿಗೆ ಬರುತ್ತಾರೆ. ಈ ಘೋರವಾದ ಮುಹೂರ್ತದ ಕಾಲದಲ್ಲಿ ಅವರು ಯಾವಾಗಲೂ ರಾಜರನ್ನೂ ಸಹ ಕೊಲ್ಲುತ್ತಾರೆ.
ಆರಾಚ್ಚ ತಿಷ್ಠತಾಸ್ಮಾಕಂ ಸಮೀಪಂ ನೋಪಗಚ್ಛತ |
ಕಸ್ಮಾನ್ಮಾಂ ನಾಭಿಜಾನೀಥ ಪ್ರಾಪ್ತಂ ಭಾಗೀರಥೀಜಲಮ್ ||12||
ನೀವು ದೂರ ನಿಲ್ಲಿ. ನಮ್ಮ ಸಮೀಪಕ್ಕೆ ಬರಬೇಡಿ. ಭಾಗೀರಥೀ ಜಲದಲ್ಲಿ ಪ್ರಾಪ್ತನಾಗಿರುವ ನನ್ನನ್ನು ನೀವು ಏಕೆ ಗಮನಿಸುತ್ತಿಲ್ಲ?
ಅಂಗಾರಪರ್ಣಂ ಗಂಧರ್ವಂ ವಿತ್ತ ಮಾಂ ಪ್ರಬಲಾಶ್ರಯಮ್ |
ಅಹಂ ಹಿ ಮಾನೀ ಚೇರ್ಷ್ಯುಶ್ಚ ಕುಬೇರಸ್ಯ ಪ್ರಿಯಃ ಸಖಾ ||13||
ನಾನು ಅಂಗಾರಪರ್ಣನೆಂಬ ಗಂಧರ್ವ. ನನಗೆ ಪ್ರಬಲನಾದ ಕುಬೇರನ ಆಶ್ರಯವಿದೆ. ನಾನು ಗರ್ವಿಷ್ಠ ಮತ್ತು ಅಸೂಯಾಪರ. ಕುಬೇರನು ನನ್ನ ಪ್ರಿಯಮಿತ್ರನಾಗಿದ್ದಾನೆ.
ಅಂಗಾರಪರ್ಣಮಿತಿ ಚ ವನಂ ಖ್ಯಾತಮಿದಂ ಮಮ |
ಅನುಗಂಗಂ ಮಹಚ್ಚಿತ್ರಮಸ್ಮಿನ್ ನಿತ್ಯಂ ಚರಾಮ್ಯಹಮ್ ||14||
ಗಂಗೆಯ ಸಮೀಪದಲ್ಲಿರುವ ಈ ದೊಡ್ಡದಾದ ಮತ್ತು ಸುಂದರವಾದ ವನವು ಅಂಗಾರಪರ್ಣವನ ಎಂದು ನನ್ನ ಹೆಸರಿನಿಂದಲೇ ಪ್ರಖ್ಯಾತವಾಗಿದೆ. ನಾನು ಇಲ್ಲಿ ಯಾವಾಗಲೂ ಸಂಚರಿಸುತ್ತೇನೆ.
ನ ಕೌಣಪಾಃ ಶೃಂಗಿಣೋ ವಾ ನ ಚ ದೇವಾ ಜನವ್ರಜಃ |
ಇದಂ ಸಮುಪಸರ್ಪಂತಿ ತತ್ ಕಿಂ ಸಮುಪಸರ್ಪಥ ||15||
ಈ ವನಕ್ಕೆ ರಾಕ್ಷಸರಾಗಲೀ, ಶೃಂಗವುಳ್ಳ ಪ್ರಾಣಿಗಳಾಗಲೀ, ದೇವತೆಗಳಾಗಲೀ, ಮನುಷ್ಯರಾಗಲೀ ಬರುವುದಿಲ್ಲ. ನೀವು ಏಕೆ ಬರುತ್ತಿದ್ದೀರಿ?
ಅರ್ಜುನಃ
ಸಮುದ್ರೇ ಹಿಮವತ್ಪಾರ್ಶ್ವೇ ನದ್ಯಾಮಸ್ಯಾಂ ಚ ದುರ್ಮತೇ |
ರಾತ್ರಾವಹನಿ ಸಂಧ್ಯಾಯಾಂ ಕಸ್ಯ ಕ್ಲೃಪ್ತಃ ಪರಿಗ್ರಹಃ ||16||
ದುರ್ಬುದ್ಧಿಯೇ, ಸಮುದ್ರದಲ್ಲಾಗಲೀ, ಹಿಮಾಲಯದ ತಪ್ಪಲಿನಲ್ಲಾಗಲೀ, ಈ ನದಿಯಲ್ಲಾಗಲೀ, ರಾತ್ರಿಯಕಾಲದಲ್ಲಾಗಲೀ, ಹಗಲಿನಲ್ಲಾಗಲೀ ಅಥವಾ ಸಂಧ್ಯಾಕಾಲದಲ್ಲಾಗಲೀ ಇದು ಇಂತಹವನಿಗೆ ಸೇರಿದುದು, ಇನ್ನೊಬ್ಬನಿಗಲ್ಲ ಎಂಬ ನಿಯಮವು ಎಲ್ಲಿದೆ?

ಭಕ್ತೋ ವಾಪ್ಯರ್ಥವಾಽಭುಕ್ತೋ ರಾತ್ರಾವಹನಿ ಖೇಚರ |
ನ ಕಾಲ ನಿಯಮೋಹ್ಯಸ್ತಿ ಗಂಗಾಂ ಪ್ರಾಪ್ಯ ಸರಿದ್ವರಾಮ್ ॥17॥
ಭೋಜನವಾಗಿರಲಿ, ಇಲ್ಲದಿರಲಿ, ರಾತ್ರಿ ಇರಲಿ, ಹಗಲಿರಲಿ, ನದಿಗಳಲ್ಲಿ ಶ್ರೇಷ್ಠವಾದ ಗಂಗೆ ಸಿಕ್ಕಿದಾಗ ಸ್ನಾನಕ್ಕೆ ಕಾಲ ನಿಯಮವಿಲ್ಲ.
ವಯಂ ಚ ಶಕ್ತಿಸಂಪನ್ನಾ ಅಕಾಲೇ ತ್ವಾಂ ಚ ಧೃಷ್ಣುಮಃ |
ಅಶಕ್ತಾ ಹಿ ರಣೇ ಕ್ರೂರ ಯುಷ್ಮಾನರ್ಚಂತಿ ಮಾನವಾಃ ॥17॥
ಶಕ್ತಿಸಂಪನ್ನರಾದ ನಾವು ಇಲ್ಲಿ ಅಕಾಲದಲ್ಲಿ ಬಂದರೂ ನಿನ್ನನ್ನು ಪರಾಭವಗೊಳಿಸುತ್ತೇವೆ. ಎಲೈ ಕ್ರೂರನೇ, ಯುದ್ಧ ಮಾಡಲು ಅಸಮರ್ಥರಾದ ಮನುಷ್ಯರು ಮಾತ್ರ ನಿಮ್ಮನ್ನು ಪೂಜಿಸುತ್ತಾರೆ.
ಪುರಾ ಹಿಮವತಶ್ಚೈಷಾ ಹೇಮಶೃಂಗಾದ್ ವಿನಿಸ್ಸೃತಾ |
ಗಂಗಾ ಪ್ರತಿದಿಶಂ ಗತ್ವಾ ಸಪ್ತಧಾ ಪ್ರವಿಭಜ್ಯತೇ ॥18॥
ಹಿಂದೆ ಹಿಮಾಲಯದ ಹೇಮಶೃಂಗದಿಂದ ಹೊರ ಬಂದ ಈ ಗಂಗೆಯು ಎಲ್ಲ ದಿಕ್ಕುಗಳಲ್ಲೂ ಹರಿದು ಏಳು ಕವಲುಗಳಾಗಿ ವಿಭಾಗವನ್ನು ಹೊಂದುತ್ತದೆ.
ಸ ಭೂತ್ವೈಕಪ್ರವಾಹಾ ಚ ಶುಚಿರಾಕಾಶಗಾ ಪುನಃ |
ದೇವೇಷು ಗಂಗಾ ಗಂಧರ್ವ ಪ್ರಾಪ್ನೋತ್ಯಲಕನಂದತಾಮ್ ॥19॥
ಅದೇ ಪವಿತ್ರವಾದ ಗಂಗೆಯು ಒಂದೇ ಪ್ರವಾಹವಾಗಿ ಪುನಃ ಸೇರಿ ಆಕಾಶದಲ್ಲಿ ಹರಿಯುತ್ತದೆ. ಗಂಧರ್ವನೇ, ದೇವಲೋಕದಲ್ಲಿ ಹರಿಯುವ ಆ ಗಂಗೆಯು ಅಲಕನಂದಾ ಎನಿಸಿಕೊಳ್ಳುತ್ತದೆ.
ತಥಾ ಪಿತೃನ್ ವೈತರಣೀ ದುಸ್ತರಾ ಪಾಪಕರ್ಮಭಿಃ |
ಗಂಗಾ ಭುವಿ ಚ ಗಂಧರ್ವ ಯಥಾ ದ್ವೈಪಾಯನೋಽಬ್ರವೀತ್ ॥20॥
ಹಾಗೆಯೇ, ಅದೇ ಗಂಗೆಯು ಪಿತೃಲೋಕದಲ್ಲಿ ಪಾಪಿಗಳು ದಾಟಲು ಅಸಾಧ್ಯವಾದ ವೈತರಣಿಯಾಗಿ ಹರಿಯುತ್ತದೆ. ಗಂಧರ್ವನೇ, ಹಾಗೆಯೇ, ಗಂಗೆಯು ಭೂಮಿಯಲ್ಲಿಯೂ ಹರಿಯುತ್ತದೆ ಎಂದು ವ್ಯಾಸರು ಹೇಳಿದ್ದಾರೆ.
ಅಸಂಬಾಧಾ ದೇವನದೀ ಸರ್ವೇಷಾಂ ಪಾವನೀ ಶುಭಾ |
ಕಥಮಿಚ್ಛಸಿ ತಾಂ ರೋದ್ಧುಂ ನೈಷ ಧರ್ಮಃ ಸನಾತನಃ ॥21॥
ದೇವನದಿಯು ಯಾರಿಗೂ ಬರಬೇಡವೆಂದು ಬಾಧಿಸುವವಳಲ್ಲ. ಅವಳು ಎಲ್ಲರನ್ನೂ ಪಾವನಗೊಳಿಸುವ ಪವಿತ್ರವಾದ ನದಿಯಾಗಿದ್ದಾಳೆ. ಅವಳನ್ನು ತಡೆಯಲು ಏಕೆ ಬಯಸುತ್ತಿದ್ದೀಯೆ? ಇದು ಸನಾತನ ಧರ್ಮವಲ್ಲ.
ಅನಾಶ್ಚರ್ಯಮಸಂಬಾಧಂ ತವ ವಾಚಾ ಕಥಂ ವಯಮ್ |
ನ ಸ್ಪೃಶೇಮ ಯಥಾಕಾಮಂ ಪುಣ್ಯಂ ಭಾಗೀರಥೀಜಲಮ್ ॥22॥
ಕೇವಲ ನಿನ್ನ ಮಾತಿಗೋಸ್ಕರವಾಗಿ ಬಹಳ ಆಶ್ಚರ್ಯಕರವಾದ ಮತ್ತು ನಿಷೇಧರಹಿತವಾದ ಈ ಪವಿತ್ರವಾದ ಭಾಗೀರಥೀಜಲವನ್ನು ನಮ್ಮ ಇಚ್ಛೆಯಂತೆ ನಾವು ಹೇಗೆ ಸ್ಪರ್ಶಮಾಡದೆ ಇರುತ್ತೇವೆ?
ಅಂಗಾರವರ್ಣಸ್ತಚ್ಛ್ರುತ್ವಾ ಕ್ರುದ್ಧ ಆಯಮ್ಯ ಕಾರ್ಮುಕಮ್ |
ಮುಮೋಚ ಸಾಯಕಾನ್ ದೀಪ್ತಾನಹೀನ್ ದೀಪ್ತಾನನಾನಿವ ॥23॥
ಅಂಗಾರವರ್ಣನು ಆ ಮಾತುಗಳನ್ನು ಕೇಳಿ ಕೋಪಗೊಂಡು ತನ್ನ ಬಿಲ್ಲನ್ನು ಬಗ್ಗಿಸಿ ಜ್ವಲಿಸುವ ಮುಖವುಳ್ಳ ಸರ್ಪಗಳಂತಿರುವ ಜ್ವಲಿಸುವ ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಮಾಡಿದನು.
ಉಲ್ಮುಖಂ ಭ್ರಾಮಯಂಸ್ತೂರ್ಣಂ ಪಾಂಡವಶ್ಚ ನರೋತ್ತಮ |
ವ್ಯಪೋವಾಹ ಶರಾಂಸ್ತಸ್ಯ ಸರ್ವಾನೇವ ಧನಂಜಯಃ ॥24॥
ಎಲೈ ನರೋತ್ತಮನೇ, ಪಾಂಡುಪುತ್ರನಾದ ಧನಂಜಯನು ತನ್ನ ಕೈಯಲ್ಲಿದ್ದ ಪಂಜನ್ನು ಶೀಘ್ರವಾಗಿ ತಿರುಗಿಸುತ್ತಾ ಅವನ ಎಲ್ಲಾ ಬಾಣಗಳನ್ನ್ನು ನಿವಾರಿಸಿದನು.
ಅರ್ಜುನಃ
ವಿಭೀಷಿಕಾಂ ಹಿ ಗಂಧರ್ವ ನತು ಪ್ರಾಜ್ಞೇಷು ಯೋಜಯ |
ಅಸ್ತ್ರಜ್ಞೇಷು ಪ್ರಯುಕ್ತೇಯಂ ಫೇನವತ್ ಪ್ರವಿಲೀಯತೇ ॥25॥
ಗಂಧರ್ವನೇ, ಪ್ರಾಜ್ಞರಿಗೆ ಈ ಬೆದರಿಕೆಯನ್ನು ಹಾಕಬೇಡ. ಅಸ್ತ್ರಜ್ಞರಲ್ಲಿ ಪ್ರದರ್ಶಿಸಿದ ಈ ಬೆದರಿಕೆಯು ನೊರೆಯಂತೆ ಕರಗಿ ಹೋಗುತ್ತದೆ.
ಮಾನುಷಾನ್ನ ತು ಗಂಧರ್ವಾನ್ ಸರ್ವಾನ್ ಗಂಧರ್ವ ಲಕ್ಷಯೇಃ
ತಸ್ಮಾದಸ್ತ್ರೇಣ ದಿವ್ಯೇನ ಯೋತ್ಸ್ಯೇಽಹಂ ನ ತು ಮಾಯಯಾ ॥26॥
ಗಂಧರ್ವನೇ, ಎಲ್ಲ ಗಂಧರ್ವರಿಗಿಂತ (ನನ್ನಂತಹ) ಮಾನುಷರೇ ಶ್ರೇಷ್ಠರೆಂದು ತಿಳಿಯುತ್ತೇನೆ. ಆದ್ದರಿಂದ ನಿನ್ನ ಜೊತೆಯಲ್ಲಿ ದಿವ್ಯಾಸ್ತ್ರಗಳಿಂದಲೇ ಯುದ್ಧವನ್ನು ಮಾಡುವೆನು. ಮಾಯಾಯುದ್ಧವನ್ನು ಮಾಡುವುದಿಲ್ಲ.
ತದಿದಂ ಜಾತವೇದಾಸ್ತು ಪ್ರಾದಾದಸ್ತ್ರಂ ಬೃಹಸ್ಪತೇಃ |
ತಸ್ಮಾದಗಾದ್ ಭರದ್ವಾಜಂ ಗುರುಪುತ್ರಂ ಶತಕ್ರತೋಃ ॥27॥
ಈ ಅಸ್ತ್ರವನ್ನು (ಆಗ್ನೇಯಾಸ್ತ್ರವನ್ನು) ಅಗ್ನಿಯು ಬೃಹಸ್ಪತಿಗಳಿಗೆ ಕೊಟ್ಟನು. ಬೃಹಸ್ಪತಿಗಳಿಂದ ಈ ಅಸ್ತ್ರವು ಇಂದ್ರನ ಗುರುಪುತ್ರರಾದ ಭರದ್ವಾಜರಿಗೆ ಬಂದಿತು.
ಭರದ್ವಾಜಾತ್ ತತೋ ರಾಮಂ ಭಾರ್ಗವಾಚ್ಚ ಗುರುಂ ಮಮ |
ಸ ತ್ವಿದಂ ಮಹ್ಯಮದದಾದ್ ದ್ರೋಣೋ ಬ್ರಾಹ್ಮಣಸತ್ತಮಃ ॥28॥

ಭರದ್ವಾಜರಿಂದ ಪರಶುರಾಮರಿಗೂ, ಪರಶುರಾಮರಿಂದ ನಮ್ಮ ಗುರುಗಳಾದ ದ್ರೋಣರಿಗೂ ಬಂದಿತು. ಆ ಬ್ರಾಹ್ಮಣಶ್ರೇಷ್ಠರಾದ ದ್ರೋಣರು ನನಗೆ ಈ ಅಸ್ತ್ರವನ್ನು ಕೊಟ್ಟಿದ್ದಾರೆ.
ವೈಶಂಪಾಯನಃ
ಇತ್ಯುಕತ್ವ ಪಾಂಡವಃ ಕ್ರುದ್ಧೋ ಗಂಧರ್ವಾಯ ಮಮೋಚ ಹ |
ಪ್ರದೀಪ್ತಮಸ್ತ್ರಮಾಗ್ನೇಯಂ ದದಾಹಾಸ್ಯ ರಥಂ ತತಃ ॥29॥
ಹೀಗೆ ಹೇಳಿ ಪಾಂಡವನಾದ ಅರ್ಜುನನು ಕೋಪದಿಂದ ಪ್ರದೀಪ್ತವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರವು ಗಂಧರ್ವನ ರಥವನ್ನು ಸುಟ್ಟು ಹಾಕಿತು.
ರಥಾತ್ ತು ವಿಪ್ಲುತಂ ತಂ ತು ಗಂಧರ್ವಂ ಸುಮಹಾಬಲಮ್ |
ಅಸ್ತ್ರತೇಜಃಪ್ರರೂಢಂ ಚ ಗಂಧರ್ವಂ ಸುಮಹಾಬಲಮ್ ॥30॥
ಶಿರೋರುಹೇಷು ಜಗ್ರಾಹ ಮಾಲ್ಯವತ್ಸು ಧನಂಜಯಃ |
ಭ್ರಾತೄನ್ ಪ್ರತಿ ಚಕರ್ಷಾಥ ಸೋಽಸ್ತ್ರಪಾತಾದಚೇತನಮ್ ॥31॥
ಆ ಮಹಾಬಲಿಷ್ಠನಾದ ಗಂಧರ್ವನು ಅಸ್ತ್ರದ ತೇಜಸ್ಸಿಗೆ ಸಿಕ್ಕಿ ರಥದಿಂದ ಭೂಮಿಗೆ ಹಾರಿದಾಗ ಅರ್ಜುನನು ಪುಷ್ಪಮಾಲೆಗಳನ್ನು ಧರಿಸಿದ್ದ ಅವನನ್ನು ಕೇಶಗಳಲ್ಲಿ ಹಿಡಿದು ಅಸ್ತ್ರಸಂಯೋಗದಿಂದ ಅಚೇತನನಾಗಿದ್ದ ಅವನನ್ನು ತನ್ನ ಸಹೋದರರ ಕಡೆಗೆ ಎಳೆದನು.

ಯುಧಿಷ್ಠಿರಂ ತಸ್ಯ ಭಾರ್ಯಾ ಪ್ರಪೇದೇ ಶರಣಾರ್ಥಿನೀ |
ನಾಮ್ನಾ ಕುಂಭೀನಸೀ ನಾಮ ಪತಿತ್ರಾಣಮಭೀಪ್ಸತೀ ॥32॥
ಆಗ ಕುಂಭೀನಸೀ ಎಂಬ ಹೆಸರಿನ ಅವನ ಪತ್ನಿಯು ಪತಿಯ ರಕ್ಷಣೆಯನ್ನು ಮಾಡಲು ಬಯಸಿ ಯುಧಿಷ್ಠಿರನಿಗೆ ಶರಣಾಗತಳಾದಳು.
ಗಂಧರ್ವೀ
ತ್ರಾಹಿ ತ್ವಂ ಮಾಂ ಮಹಾರಾಜ ಪತಿಂ ಚೇಮಂ ವಿಮುಂಚ ಮೇ |
ಗಂಧರ್ವೀಂ ಶರಣಂ ಪ್ರಾಪ್ತಾಂ ದೀನಾಂ ಕುಂಭೀನಸೀಂ ಪ್ರಭೋ ॥
ಮಹಾರಾಜನೇ ನನ್ನನ್ನು ರಕ್ಷಿಸು. ನಾನು ಕುಂಭೀನಸೀ ಎಂಬ ಗಂಧರ್ವಿ. ದೀನಳಾದ ನಾನು ನಿನಗೆ ಶರಣಾಗತಳಾಗಿದ್ದೇನೆ. ನನ್ನ ಪತಿಯನ್ನು ಬಿಡಿಸು.
ವೈಶಂಪಾಯನಃ
ಶ್ರುತ್ವಾಽನುಗ್ರಹಭಾವಾಚ್ಚ ಪಾರ್ಥಃ ಪಾರ್ಥಮುವಾಚ ಹ |
ಅಭಯಂ ಪ್ರತಿಪದ್ಯಸ್ವ ಗಚ್ಛ ಗಂಧರ್ವ ಮಾ ಶುಚಃ |
ಪ್ರದಿಶತ್ಯಭಯಂ ತೇಽತ್ರ ಕುರುರಾಜೋ ಯುಧಿಷ್ಠಿರಃ ॥34॥
ಈ ಮಾತುಗಳನ್ನು ಕೇಳಿದ ಅರ್ಜುನನು ಕರುಣೆಯಿಂದ ಕೂಡಿದವನಾಗಿ ಯುಧಿಷ್ಠಿರನನ್ನು ನೋಡುತ್ತಾ ಗಂಧರ್ವನನ್ನು ಕುರಿತು ಹೇಳಿದನು. ಗಂಧರ್ವನೇ, ನೀನು ಅಭಯವನ್ನು ಹೊಂದಿ ಹೊರಡು. ಶೋಕ ಪಡಬೇಡ. ಕುರುರಾಜನಾದ ಯುಧಿಷ್ಠಿರನು ನಿನಗೆ ಇಲ್ಲಿ ಅಭಯದಾನವನ್ನು ಮಾಡುತ್ತಿದ್ದಾನೆ.
ಗಂಧರ್ವಃ
ಜಿತೋಽಹಂ ಪೂರ್ವಕಂ ನಾಮ ಮುಂಚಾಮ್ಯಂಗಾರಪರ್ಣತಾಮ್|
ಯಶೋಹೀನಂ ನಚ ಶ್ಲಾಘ್ಯಂ ಸ್ವನಾಮ್ನಾ ಜನಸಂಸದಿ ॥35॥
ನಿನ್ನಿಂದ ಪರಾಭವವನ್ನು ಹೊಂದಿದ ನಾನು ಚಿತ್ರರಥ ಎಂಬ ಮೊದಲಿನ ಹೆಸರನ್ನು ಬಿಡುತ್ತೇನೆ. ನಿನ್ನ ಅಸ್ತ್ರಪ್ರತಾಪಕ್ಕೆ ಸಿಲುಕಿ ಅಂಗಾರಪರ್ಣನಾದ ನಾನು ಅಂಗಾರವರ್ಣ ಎಂಬ ಹೆಸರನ್ನು ಬಿಡುವುದಿಲ್ಲ. ನಿನ್ನ ಅಸ್ತ್ರದಿಂದ ನನ್ನ ರಥವು ದಗ್ಧವಾದ ಮೇಲೆ ಜನರ ಸಮೂಹದಲ್ಲಿ ಚಿತ್ರರಥ ಎಂಬ ನನ್ನ ಮೊದಲಿನ ನಾಮವು ಎಂದೂ ಶ್ಲಾಘ್ಯವಾಗುವುದಿಲ್ಲ.
ಸಾಧಿದಂ ಲಬ್ಧವಾಂಲ್ಲಾಭಂ ಯೋ ಮೇ ದಿವ್ಯಾಸ್ತ್ರಧಾರಿಣಮ್ |
ಗಾಂಧರ್ವ್ಯಾ ಮಾಯಯಾ ಯೋದ್ಧುಂ ದಿಶಾಮ್ಯಸ್ತ್ರಂ ಪರಾವರಮ್ ॥36॥
ನಾನು ಆಧಿಯ ಜೊತೆಯಲ್ಲಿ (ಮಾನಸ ವ್ಯಥೆಯ ಜೊತೆಯಲ್ಲಿ) ಸುಖವನ್ನು ಕೊಡುವ ಈ ಲಾಭವನ್ನು ಪಡೆದಿದ್ದೇನೆ. ಈ ಲಾಭವೆಂದರೆ ದಿವ್ಯಾಸ್ತ್ರಧಾರಿಗಳಾದ ಗಂಧರ್ವರ ಜೊತೆಯಲ್ಲಿ ಗಾಂಧರ್ವಮಾಯೆಯಿಂದ ಯುದ್ಧವನ್ನು ಮಾಡಲು ನಿನಗೆ ಬಹಳ ಶ್ರೇಷ್ಠವಾದ ಗಂಧರ್ವಾಸ್ತ್ರವನ್ನು ಕೊಡುತ್ತಿರುವುದು.
ಅಸ್ತ್ರಾಗ್ನಿನಾ ವಿಚಿತ್ರೋಽಯಂ ದಗ್ಧೋ ಮೇ ರಥ ಉತ್ತಮಃ |
ಸೋಽಹಂ ಚಿತ್ರರಥೋ ಭೂತ್ವಾ ನಾಮ್ನಾ ದಗ್ಧರಥೋಽಭವಮ್ ॥37॥
ನಿನ್ನ ಅಸ್ತ್ರದ ಅಗ್ನಿಯಿಂದ ನನ್ನ ಶ್ರೇಷ್ಠವಾದ ಮತ್ತು ವಿಚಿತ್ರವಾದ ರಥವು ದಗ್ಧವಾಯಿತು. ಮೊದಲು ಚಿತ್ರರಥನಾಗಿದ್ದ ನಾನು ಈಗ ದಗ್ಧರಥನಾಗಿದ್ದೇನೆ.
ಸಂಭೃತಾ ತ್ವೇವ ವಿದ್ಯೇಯಂ ತಪಸ್ಯೈವ ಪುರಾ ಮಯಾ |
ನಿವೇದಯಿಷ್ಯೇ ತಾಮದ್ಯ ಪ್ರಾಣದಾಯ ಮಹಾತ್ಮನೇ ॥38॥
ಈ ಗಾಂಧರ್ವಾಸ್ತ್ರ ವಿದ್ಯೆಯನ್ನು ಹಿಂದೆ ನಾನು ತಪಸ್ಸಿನಿಂದಲೇ ಸಂಪಾದಿಸಿದ್ದೇನೆ. ಈ ದಿನ ನನ್ನ ಪ್ರಾಣವನ್ನು ಉಳಿಸಿದ ಮಹಾತ್ಮನಾದ ನಿನಗೆ ಆ ವಿದ್ಯೆಯನ್ನು ನಿವೇದಿಸುವೆನು.
ಸಂಸ್ತಂಭಿತಂ ಚ ತರಸಾ ಜಿತಂ ಶರಣಮಾಗತಮ್ |
ಯೋಽರಿಂ ಸಂಯೋಜಯೇತ್ ಪ್ರಾಣೈಃ ಕಲ್ಯಾಣಂ ಕಿಂ ನ ಸೋಽರ್ಹತಿ ॥

ತನ್ನ ಬಲದಿಂದ ಶತ್ರುವನ್ನು ಸ್ತಂಭೀಭೂತನನ್ನಾಗಿ ಮಾಡಿ ಪರಾಭವಗೊಳಿಸಿ ಅನಂತರ ಶರಣಾಗತನಾದ ಆ ಶತ್ರುವನ್ನು ಯಾರು ಪ್ರಾಣಗಳಿಂದ ಸಂಯೋಜಿಸುತ್ತಾರೋ ಅವರು ಯಾವ ಕಲ್ಯಾಣಕ್ಕೆ ಅರ್ಹರಾಗುವುದಿಲ್ಲ?

ಚಾಕ್ಷುಷೀ ನಾಮ ವಿದ್ಯೇಯಂ ಯಾಂ ಸೋಮಾಯ ದದೌ ಮನುಃ |
ದದೌ ಸ ವಿಶ್ವಾವಸವೇ ಮಮ ವಿಶ್ವಾವಸುರ್ದದೌ ॥40॥

ಈ ವಿದ್ಯೆಗೆ ಚಾಕ್ಷುಷೀ ಎಂದು ಹೆಸರು. ಇದನ್ನು ಮನು ಚಂದ್ರನಿಗೆ ಕೊಟ್ಟನು. ಚಂದ್ರನು ವಿಶ್ವಾವಸುಗಂಧರ್ವನಿಗೆ ಕೊಟ್ಟನು. ವಿಶ್ವಾವಸು ಗಂಧರ್ವನಿಂದ ಅದು ನನಗೆ ಬಂದಿತು.

ಸೇಯಂ ಕಾಪುರುಷಂ ಪ್ರಾಪ್ತಾ ಗುರುದತ್ತಾ ಪ್ರಣಶ್ಯತಿ |
ಆಗಾಮೋಽಸ್ಯಾ ಮಯಾ ಪ್ರೋಕ್ತಸ್ತಸ್ಯಾ ವೀರ್ಯಂ ನಿಬೋಧ ಮೇ ॥41॥

ಗುರುಪರಂಪರೆಯಿಂದ ಬಂದ ಈ ವಿದ್ಯೆಯು ಅಯೋಗ್ಯ ಪುರುಷನನ್ನು ಹೊಂದಿದರೆ, ನಾಶವನ್ನು ಹೊಂದುತ್ತದೆ. ಈ ವಿದ್ಯೆಯ ಆಗತಿ ಪ್ರಕಾರವನ್ನು ಹೇಳಿದೆ. ಅದರ ಸಾಮರ್ಥ್ಯವನ್ನು ಕೇಳು.

ಯಚ್ಚಕ್ಷುಷಾ ದ್ರಷ್ಟುಮಿಚ್ಛೇತ್ ತ್ರಿಷು ಲೋಕೇಷು ಕಿಂಚನ |
ತತ್ಪಶ್ಯೇದ್ ಯಾದೃಶಂ ರೂಪಂ ತಾದೃಶಂ ದ್ರಷ್ಟುಮರ್ಹತಿ ॥42॥

ಮೂರುಲೋಕಗಳಲ್ಲಿರುವ ಯಾವ ವಸ್ತುವನ್ನು ಕಣ್ಣಿನಿಂದ ನೋಡಬೇಕೆಂದು ಬಯಸುತ್ತಾನೋ ಅಂತಹ ವಸ್ತುವನ್ನು ಮನುಷ್ಯರು ಕಾಣದ ಎಲ್ಲಾ ಸೂಕ್ಷ್ಮ ವಿವರಗಳೊಂದಿಗೆ ನೋಡುತ್ತಾನೆ.

ಏಕಪಾದೇನ ಷಣ್ಮಾಸಾನ್ ಸ್ಥಿತೋ ವಿದ್ಯಾಂ ಲಭೇದಿಮಾಮ್ |
ಅನ್ವಾದೇಕ್ಷ್ಯಾಮ್ಯಹಂ ವಿದ್ಯಾಂ ಸ್ವಯಂ ತುಭ್ಯಂ ವ್ರತೇ ಕೃತೇ ॥43॥

ಒಂದೇ ಪಾದದಲ್ಲಿ ನಿಂತು ಆರು ತಿಂಗಳು ತಪಸ್ಸನ್ನು ಮಾಡಿದರೆ ಈ ವಿದ್ಯೆಯು ಲಭಿಸುತ್ತದೆ. ನೀನು ಈ ವ್ರತವನ್ನು ಮಾಡಿದರೇ ನಾನಾಗಿಯೇ ನಿನಗೆ ಈ ವಿದ್ಯೆಯನ್ನು ಉಪದೇಶಿಸುವೆನು.

ವಿದ್ಯಯಾ ಹ್ಯನಯಾ ರಾಜನ್ ವಯಂ ನೃಭ್ಯೋ ವಿಶೇಷಿಣಃ |
ಅನಾಹಾರ್ಯಾಶ್ಚ ದೇವಾನಾಮನುಭಾವಾತ್ ಪ್ರವರ್ತಿನಾಮ್ ॥44॥

ರಾಜನೇ, ಈ ವಿದ್ಯೆಯ ಬಲದಿಂದಲೇ ನಾವು ಮನುಷ್ಯರಿಗಿಂತಲೂ ಶ್ರೇಷ್ಠರಾಗಿದ್ದೇವೆ. ಈ ವಿದ್ಯೆಯ ಸಾಮರ್ಥ್ಯದಿಂದಲೇ ಸತತ ಉದ್ಯಮಶೀಲರಾದ ದೇವತೆಗಳಿಂದ ಪರಾಭವವನ್ನು ಅನುಭವಿಸದೆಯೂ ಇದ್ದೇವೆ.

ಗಂಧರ್ವಜಾನಾಮಶ್ವಾನಾಮಹಂ ಪುರುಷಸತ್ತಮ |
ಭ್ರಾತೃಭ್ಯಸ್ತವ ಪಂಚಭ್ಯಃ ಪೃಥಗ್ ದಾತಾ ಶತಂಶತಮ್ ॥45॥

ಪುರುಷಶ್ರೇಷ್ಠನೇ, ಗಂಧರ್ವಜಾತಿಯ ನೂರು ನೂರು ಅಶ್ವಗಳನ್ನು ನಿನಗೂ ಮತ್ತು ನಿನ್ನ ಸಹೋದರರಿಗೂ ಪ್ರತ್ಯೇಕವಾಗಿ ಕೊಡುವೆನು.

ದೇವಗಂಧರ್ವವಾಹಾಸ್ತೇ ದಿವ್ಯಗಂಧಾ ಮನೋಜವಾಃ |
ಕ್ಷೀಣೇಕ್ಷೀಣೇ ಭವಂತ್ಯನ್ಯೇ ನ ಹೀಯಂತೇ ಚ ರಂಹಸಃ ॥46॥

ದೇವಗಂಧರ್ವರನ್ನು ಕೊಂಡೊಯ್ಯುವ ಈ ಅಶ್ವಗಳು ಮನೋಜವವನ್ನೂ ದಿವ್ಯಗಂಧವನ್ನೂ ಹೊಂದಿವೆ. ಉಳಿದ ಅಶ್ವಗಳು ಇವುಗಳೆದುರಿನಲ್ಲಿ ಶಕ್ತಿ ಹ್ರಾಸವನ್ನೂ, ಅದರಿಂದ ವೇಗ ಹ್ರಾಸವನ್ನೂ ಹೊಂದುತ್ತವೆ. ಈ ಅಶ್ವಗಳು ವೇಗ ಹ್ರಾಸವನ್ನು ಹೊಂದುವುದಿಲ್ಲ.

ಪುರಾ ಕೃತಂ ಮಹೇಂದ್ರಸ್ಯ ವಜ್ರಂ ವೃತ್ರನಿಬರ್ಹಣೇ |
ದಶಧಾ ಶತಧಾ ಚೈವ ತಚ್ಛೀರ್ಣಂ ವೃತ್ರಮೂರ್ಧನಿ ॥47॥

ಹಿಂದೆ ವೃತ್ರನನ್ನು ಸಂಹಾರ ಮಾಡುವ ಉದ್ದೇಶದಿಂದ ಇಂದ್ರನಿಗೆ ವಜ್ರಾಯುಧವು ಮಾಡಲ್ಪಟ್ಟಿತು. ಅದು ವೃತ್ರಾಸುರನ ತಲೆಯ ಮೇಲೆ ಬಿದ್ದು ನೂರಾರು ಚೂರುಗಳಾಗಿ ಒಡೆಯಿತು.

ತಸ್ಯ ಭಾಗಃ ಪೃಥಗ್ಭೂತಃ ಸರ್ವಭೂತೈರುಪಾಸ್ಯತೇ |
ಲೋಕೇ ಯತ್ ಸಾಧನಂ ಕಿಂಚಿತ್ ಸಾ ವೈ ವಜ್ರತನುಃ ಸ್ಮೃತಾ ॥48॥

ಆ ವಜ್ರದ ಭಾಗಗಳು ಬೇರೆ ಬೇರೆಯಾಗಿ ಎಲ್ಲರಿಂದಲೂ ಉಪಾಸನೆ ಮಾಡಲ್ಪಡುತ್ತವೆ. ಲೋಕದಲ್ಲಿ ಯಾವುದು ಶ್ರೇಷ್ಠವಾದ ಸಾಧನವೋ ಅದರಲ್ಲಿ ವಜ್ರದ ಒಂದು ಭಾಗವಿದೆ.

ಬ್ರಹ್ಮ ವಜ್ರಂ ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ರಥಂ ವಿದುಃ |
ವೈಶ್ಯವಜ್ರಂ ತು ವೈ ಸೀರಂ ಶುಶ್ರೂಷಾ ಹೀನಯೋನಿಷು ॥49॥

ಬ್ರಾಹ್ಮಣರಿಗೆ ವೇದವು ವಜ್ರ. ಕ್ಷತ್ರಿಯರಿಗೆ ರಥವನ್ನು ವಜ್ರವೆಂದು ಹೇಳುತ್ತಾರೆ. ವೈಶ್ಯರಿಗೆ ನೇಗಿಲೇ ವಜ್ರ. ಶೂದ್ರರಿಗೆ ಶುಶ್ರೂಷೆಯೇ ವಜ್ರ.

ಸಾಧನಂ ಕ್ಷತ್ರಧರ್ಮಸ್ಯ ಮನೋಜ್ಞಾ ವಾಜಿನಃ ಸ್ಮೃತಾಃ |
ರಥಶ್ಚಾಪಿ ತಥಾ ಸೂತೋ ಧನುಶ್ಚ ಭರತರ್ಷಭ ॥50॥

ಎಲೈ ಭರತರ್ಷಭನೇ, ಕ್ಷತ್ರಿಯಧರ್ಮ ಸಾಧನೆಗೆ ಮನೋಜ್ಞವಾದ ಅಶ್ವಗಳೂ, ರಥ, ಸೂತ ಮತ್ತು ಧನುಸ್ಸುಗಳೂ ಉಪಯುಕ್ತವಾದವು ಎಂದು ಹೇಳಲ್ಪಡುತ್ತವೆ.

ಕಾಮವರ್ಣಾಃ ಕಾಮಗಮಾಃ ಕಾಮತಃ ಸಮುಪಸ್ಥಿತಾಃ |
ಇಮೇ ಗಂಧರ್ವಜಾಃ ಕಾಮಂ ಪೂರಯಿಷ್ಯಂತಿ ಮೇ ಹಯಾಃ ॥51॥

ಕಾಮವರ್ಣವುಳ್ಳ, ಕಾಮಗಮನವುಳ್ಳ, ನಿನ್ನ ಇಚ್ಛಾಮಾತ್ರದಿಂದ ನಿನ್ನ ಎದುರಿಗೆ ಬಂದು ನಿಲ್ಲುವ ಈ ಗಂಧರ್ವಜಾತಿಯ ಕುದುರೆಗಳು ನಿನ್ನ ಎಲ್ಲಾ ಕ್ಷತ್ರಿಯಕಾಮಗಳನ್ನೂ ಪೂರ್ಣಗೊಳಿಸುತ್ತವೆ.

ಅರ್ಜುನಃ
ಯದಿ ಪ್ರೀತೇನ ದತ್ತಂ ವಾ ಸಂಶಯೇ ಜೀವಿತಸ್ಯ ವಾ |
ವಿದ್ಯಾ ವಿತ್ತಂ ಶುಭಂ ವಾಽಪಿ ನ ತದ್ ಗಂಧರ್ವ ಕಾಮಯೇ ॥52॥
ಗಂಧರ್ವನೇ, ನೀನು ಇವುಗಳನ್ನು ಪ್ರೀತಿಯಿಂದ ಕೊಟ್ಟರೂ ಅಥವಾ ಪ್ರಾಣಸಂಶಯದಿಂದ ಕೊಟ್ಟರೂ ಅಥವಾ ವಿದ್ಯೆಗೆ ಫಲವಾಗಿ ಕೊಟ್ಟರೂ ಈ ಶುಭವಾದ ಧನವನ್ನು ನಾನು ಬಯಸುವುದಿಲ್ಲ.
ಗಂಧರ್ವಃ
ಸಂಯೋಗೋ ವೈ ಪ್ರೀತಿಕರಃ ಸ ಸತ್ಸು ಪ್ರತಿದೃಶ್ಯತೇ |
ಜೀವಿತಸ್ಯ ಪ್ರದಾನೇನ ಪ್ರೀತೋ ವಿದ್ಯಾಂ ದದಾನಿ ತೇ ॥53॥
ಸಜ್ಜನರ ಸಂಯೋಗವೇ ಸಂತೋಷಕರವಾದುದು. ನನಗೆ ಜೀವಿತವನ್ನು ಪ್ರದಾನ ಮಾಡಿದುದರಿಂದ ಸಂತುಷ್ಟನಾಗಿ ನಿನಗೆ ಈ ವಿದ್ಯೆಯನ್ನು ಕೊಡುತ್ತಿದ್ದೇನೆ.
ತ್ವತ್ತೋ ಹ್ಯಹಂ ಗ್ರಹೀಷ್ಯಾಮಿ ಅಸ್ತ್ರಮಾಗ್ನೇಯಮುತ್ತಮಮ್ |
ತಥೈವ ಸಖ್ಯಂ ಬೀಭತ್ಸೋ ಚಿರಾಯ ಭರತರ್ಷಭ ॥54॥
ಭರತಶ್ರೇಷ್ಠನೇ, ನಿನ್ನಿಂದ ನಾನು ಶ್ರೇಷ್ಠವಾದ ಆಗ್ನೇಯಾಸ್ತ್ರವನ್ನು ಪಡೆಯುವೆನು ಮತ್ತು ಎಲೈ ಬೀಭತ್ಸುವೇ, ಬಹುಕಾಲದವರೆಗೆ ನಿನ್ನ ಸ್ನೇಹವನ್ನು ಬಯಸುವೆನು.
ಅರ್ಜುನಃ
ಅಸ್ತ್ರೇಣಾಸ್ತ್ರಂ ವೃಣೇ ವೃತ್ತಃ ಸಂಯೋಗಃ ಶಾಶ್ವತೋಽಸ್ತು ನೌ |
ಸಖೇ ಗಂಧರ್ವ ತದ್ ಬ್ರೂಹಿ ಯುಷ್ಮಭ್ಯೋ ಯದ್ ಭಯಂ ತ್ಯಜೇತ್ ॥
ಅಸ್ತ್ರಗಳ ವಿನಿಮಯದಿಂದ ನಿನ್ನ ಅಸ್ತ್ರವನ್ನು ಸ್ವೀಕರಿಸುತ್ತೇನೆ. ನಮ್ಮಿಬ್ಬರ ಈ ಸ್ನೇಹಸಂಬಂಧ ಶಾಶ್ವತವಾಗಲಿ. ಮಿತ್ರನಾದ ಗಂಧರ್ವನೇ, ನಿಮಗೆ ಯಾವುದರಿಂದ ಭಯವು ದೂರವಾಗುತ್ತದೆ ಎಂದು ಹೇಳು. (ನಾನು ಅದನ್ನು ಸಾಧಿಸುತ್ತೇನೆ.)
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಾಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****

ನೂರ ಎಪ್ಪತ್ಮೂರನೆಯ ಅಧ್ಯಾಯ
(ಬ್ರಾಹ್ಮಣ ಪುರಸ್ಕಾರವಿಲ್ಲದಿರುವುದು ಧರ್ಷಣಕ್ಕೆ ಕಾರಣ ಎಂದು ಹೇಳಿ ಪುರೋಹಿತರನ್ನು ಸಂಪಾದಿಸಲು ಗಂಧರ್ವನಿಂದ ಸೂಚನೆ.)
ಅರ್ಜುನಃ
ಕಾರಣಂ ಬ್ರೂಹಿ ಗಂಧರ್ವ ಕಿಂ ತದ್ ಯೇನಾದ್ಯ ಧರ್ಷಿತಾಃ |
ಯತ್ ತದ್ ಬ್ರಹ್ಮವಿದಃ ಸಂತಃ ಸರ್ವೇ ರಾತ್ರಾವರಿಂದಮಾಃ ॥1॥
ಗಂಧರ್ವನೇ, ವೇದಾಧ್ಯಯನವನ್ನು ಮಾಡುವವರೂ ಮತ್ತು ಶತ್ರುತಾಪನರೂ ಆದ ನಾವೆಲ್ಲರೂ ಈ ದಿನ ಧರ್ಷಣೆಯನ್ನು ಹೊಂದುವುದಕ್ಕೆ ಏನು ಕಾರಣ ಎಂದು ಹೇಳು.
ಗಂಧರ್ವಃ
ಅನಗ್ನಯೋಽನಾಹುತಯೋ ನ ಚ ವಿಪ್ರಪುರಸ್ಕೃತಾಃ |
ಧರ್ಷಿತಾಃ ಸ್ಥ ತತೋ ಯೂಯಂ ಮಯಾ ಪಾಂಡವನಂದನ ॥2॥
ಪಾಂಡುನಂದನನೇ, ನೀವು ಅಗ್ನಿಯಿಲ್ಲದೆ, ಆಹುತಿಗಳಿಲ್ಲದೆ, ಬ್ರಾಹ್ಮಣರನ್ನು ಮುಂದೆ ಮಾಡಿಕೊಳ್ಳದೆ ಬರುತ್ತಿದ್ದಿರಿ. ಆದ್ದರಿಂದ ನಾನು ನಿಮ್ಮ ಮೇಲೆ ಆಕ್ರಮಣವನ್ನು ಮಾಡಿದೆ.
ಯಕ್ಷರಾಕ್ಷಸಗಂಧರ್ವಪಿಶಾಚೋರಗಪನ್ನಗಾಃ |
ಧರ್ಷಯಂತಿ ನರವ್ಯಾಘ್ರ ನಬ್ರಾಹ್ಮಣಪುರಸ್ಕೃತಾನ್ ॥3॥
ನರಶ್ರೇಷ್ಠನೇ, ಬ್ರಾಹ್ಮಣನನ್ನು ಹಿಂಬಾಲಿಸದಿದ್ದರೆ ಯಕ್ಷರಾಕ್ಷಸ ಗಂಧರ್ವರು ಪಿಶಾಚಗಳು ಮತ್ತು ಸರ್ಪಗಳು ಆಕ್ರಮಣ ಮಾಡುತ್ತವೆ.
ಜಾನತಾ ಚ ಮಯಾ ತಸ್ಮಾತ್ ತೇಜಶ್ಚಾಭಿಜನಂ ಚ ವಃ |
ಇಯಂ ಮತಿಮತಾಂ ಶ್ರೇಷ್ಠ ಧರ್ಷಿತುಂ ವೈ ಕೃತಾ ಮತಿಃ ॥4॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನೇ, ಇದನ್ನು ತಿಳಿದ ನಾನು ನಿಮ್ಮ ಶ್ರೇಷ್ಠವಾದ ಉತ್ಪತ್ತಿಯನ್ನು ಮತ್ತು ತೇಜಸ್ಸನ್ನು ತಿಳಿದಿದ್ದರೂ ನಿಮ್ಮ ಮೇಲೆ ಆಕ್ರಮಣ ಮಾಡಲು ನಿರ್ಧರಿಸಿದೆ.
ಕೋ ಹಿ ವಸ್ತ್ರಿಷು ಲೋಕೇಷು ನ ವೇದ ಭರತರ್ಷಭ |
ಸ್ವೈರ್ಗುಣೈರ್ವಿಸ್ತೃತಂ ಶ್ರೀಮದ್ ಯಶೋಽಗ್ರ್ಯಂ ಭೂರಿವರ್ಚಸಾಮ್ ॥5॥
ಭರತರ್ಷಭನೇ, ಮಹಾವರ್ಚಸ್ವಿಗಳಾದ ನಿಮ್ಮ ಗುಣಗಳಿಂದಲೇ ವಿಸ್ತಾರವಾದ ನಿಮ್ಮ ಶ್ರೇಷ್ಠವಾದ ಕೀರ್ತಿಯನ್ನು ಮೂರುಲೋಕಗಳಲ್ಲಿ ಯಾವನು ತಿಳಿದಿಲ್ಲ?
ಯಕ್ಷರಾಕ್ಷಸಗಂಧರ್ವಾಃ ಪಿಶಾಚೋರಗಪನ್ನಗಾಃ |
ವಿಸ್ತಾರಂ ಕುರುವಂಶಸ್ಯ ಶ್ರೀಮಂತಃ ಕಥಯಂತಿ ತೇ ॥6॥
ಕಾಂತಿಯುತರಾದ ಯಕ್ಷರಾಕ್ಷಸಗಂಧರ್ವರೂ, ಪಿಶಾಚಿಗಳು, ಉರಗ, ಸರ್ಪಗಳೂ ಕುರುವಂಶದ ವಿಸ್ತಾರವನ್ನು ಹೇಳುತ್ತಾರೆ.

ನಾರದಪ್ರಭೃತೀನಾಂ ಚ ಮಹರ್ಷೀಣಾಂ ಮಯಾ ಪುರಾ |
ಶ್ರುತಂ ಕಥಯತಾಂ ಪಾರ್ಥ ಕುರೂಣಾಂ ವಂಶಮಾದಿತಃ ॥7॥
ನಾನು ನಾರದರೇ ಮೊದಲಾದ ಮಹರ್ಷಿಗಳು ಕುರುವಂಶವನ್ನು ಪ್ರಾರಂಭದಿಂದ ಹೇಳುವುದನ್ನು ಕೇಳಿದ್ದೇನೆ.
ಸ್ವಯಂ ಚಾಪಿ ಮಯಾ ದೃಷ್ಟಶ್ಚರತಾ ಸಾಗರಾಂಬರಾಮ್|
ಇಮಾಂ ವಸುಮತೀಂ ಕೃತ್ಸ್ನಾಂ ಪ್ರಭಾವಃ ಸುಕುಲಸ್ಯ ಚ ॥8॥
ಅಲ್ಲದೆ, ಸಾಗರಾಂತವಾದ ಈ ಭೂಮಿಯನ್ನು ಸಮಗ್ರವಾಗಿ ಸಂಚರಿಸುವ ನಾನೂ ಸಹ ನಿಮ್ಮ ಶ್ರೇಷ್ಠವಾದ ಕುಲದ ಪ್ರಭಾವವನ್ನು ನೋಡಿದ್ದೇನೆ.
ವೇದೇ ಧನುಷಿ ಚಾಚಾರ್ಯಮಭಿಜಾನಾಮಿ ಚಾರ್ಜುನ |
ವಿಶ್ರುತಂ ತ್ರಿಷು ಲೋಕೇಷು ಭಾರದ್ವಾಜಂ ಯಶಸ್ವಿನಮ್ ॥9॥
ಅರ್ಜುನನೇ, ವೇದವಿದ್ಯೆಯಲ್ಲೂ ಮತ್ತು ಧನುರ್ವಿದ್ಯೆಯಲ್ಲಿಯೂ ಮೂರುಲೋಕಗಳಲ್ಲೂ ಪ್ರಖ್ಯಾತರಾದ ಕೀರ್ತಿವಂತರಾದ ನಿಮ್ಮ ಆಚಾರ್ಯರನ್ನು ತಿಳಿದಿದ್ದೇನೆ.
ಸರ್ವವೇದವಿದಾಂ ಶ್ರೇಷ್ಠಂ ಸರ್ವಶಸ್ತ್ರಭೃತಾಂ ವರಮ್ |
ದ್ರೋಣಮಿಷ್ವಸ್ತ್ರಕುಶಲಂ ಧನುಷ್ಯಂಗಿರಸಾಂ ವರಮ್ ॥10॥
ಎಲ್ಲಾ ವೇದಗಳಲ್ಲೂ ಶ್ರೇಷ್ಠರಾದ, ಎಲ್ಲಾ ಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠರಾದ, ಆಂಗಿರಸ ಕುಲೋತ್ಪನ್ನರಾದ, ಅಸ್ತ್ರಗಳಲ್ಲಿ ಮತ್ತು ಧನುರ್ವಿದ್ಯೆಯಲ್ಲಿ ಕುಶಲರಾದ ದ್ರೋಣರು ನಿಮ್ಮ ಆಚಾರ್ಯರೆಂದು ತಿಳಿದಿದ್ದೇನೆ.
ಧರ್ಮಂ ವಾಯುಂ ಚ ಶಕ್ರಂ ಚ ವಿಜಾನಾಮ್ಯಶ್ವಿನಾವಪಿ |
ಪಾಂಡು ಚ ನೃಪಶಾರ್ದೂಲಂ ಷಡೇತಾನ್ ಕುಲವರ್ಧನಾನ್ ॥11॥
ಕುರುವಂಶವರ್ಧನರಾದ ಧರ್ಮ, ವಾಯು, ಇಂದ್ರ, ಅಶ್ವಿನಿಗಳು ಮತ್ತು ನೃಪಶಾರ್ದೂಲನಾದ ಪಾಂಡು, ಈ ಆರು ಜನರನ್ನೂ ಚೆನ್ನಾಗಿ ತಿಳಿದಿದ್ದೇನೆ.
ಪುತ್ರಾನೇತಾನಹಂ ಪಾರ್ಥ ದೇವಮಾನುಷಸತ್ತಮಾನ್ |
ದಿವ್ಯಾತ್ಮಾನೋ ಮಹಾತ್ಮಾನಃ ಸರ್ವಶಸ್ತ್ರಭೃತಾಂ ವರಾಃ ॥12॥
ಅರ್ಜುನನೇ, ದೇವತೆಗಳು ಶ್ರೇಷ್ಠಮನುಷ್ಯರಾಗಿ ಅವತರಿಸಿದ ಈ ಎಲ್ಲಾ ಮಹಾತ್ಮರೂ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ, ದೇವಲೋಕಸಂಬಂಧಿಗಳೂ ಆದ ಈ ಪುತ್ರರನ್ನೂ ತಿಳಿದಿದ್ದೇನೆ.
ಭವಂತೋ ಭ್ರಾತರಃ ಸರ್ವೇ ಶೂರಾಶ್ಚ ಚರಿತವ್ರತಾಃ |
ಉತ್ತಮಾಂ ತು ಮನೋವೃತ್ತಿಂ ಭವತಾಂ ಭಾವಿತಾತ್ಮನಾಮ್ ॥13॥
ಜಾನನ್ನಪಿ ಚ ವಃ ಪಾರ್ಥ ಕೃತವಾನಿಹ ಧರ್ಷಣಾಮ್ |
ಸ್ತ್ರೀಸಕಾಶೇಷು ಕೌರವ್ಯ ನ ಪುಮಾನ್ ಕ್ಷಂತುಮರ್ಹತಿ |
ಧರ್ಷಣಾಮಾತ್ಮನಃ ಪಶ್ಯನ್ ಬಾಹುದ್ರವಿಣಮಾತ್ಮನಃ ॥14॥
ಅಣ್ಣತಮ್ಮಂದಿರಾದ ನೀವೆಲ್ಲರೂ ಶೂರರು ಮತ್ತು ಅನೇಕ ವ್ರತಗಳನ್ನು ಮಾಡಿದವರು. ಸುಸಂಸ್ಕೃತವಾದ ಮನಸ್ಸುಳ್ಳ ನಿಮ್ಮ ಶ್ರೇಷ್ಠವಾದ ಮನಃಸ್ಥಿತಿಯನ್ನು ತಿಳಿದಿದ್ದರೂ ಸಹ ನಾನು ನಿಮ್ಮ ಮೇಲೆ ಆಕ್ರಮಣ ಮಾಡಿದೆ. ಎಲೈ ಅರ್ಜುನನೇ, ತನ್ನ ಬಾಹುಬಲವನ್ನು ತಿಳಿದ ವ್ಯಕ್ತಿಯು ಸ್ತ್ರೀಯರ ಎದುರಿನಲ್ಲಿ ತನಗೆ ಅವಮಾನವಾದರೆ, ಅದನ್ನು ಸಹಿಸುವುದಿಲ್ಲ.
ನಕ್ತಂ ಚ ಬಲಮಸ್ಮಾಕಂ ಭೂಯ ಏವಾಭಿವರ್ಧತೇ |
ಯತಸ್ತತೋ ಮಾಂ ಕೌಂತೇಯ ಸದಾರಂ ಮನ್ಯುರಾವಿಶತ್ ॥15॥
ಕೌಂತೇಯನೇ, ರಾತ್ರಿಯ ವೇಳೆಯಲ್ಲಿ ನಮ್ಮ ಬಲವು ಹೆಚ್ಚುತ್ತದೆ. ಆದ್ದರಿಂದ ಪತ್ನಿಯರಿಂದ ಕೂಡಿದ ನನಗೆ ಕೋಪವುಂಟಾಯಿತು.
ಸೋಽಹಂ ತ್ವಯೇಹ ವಿಜಿತಃ ಸಂಖೇ ತಾಪತ್ಯನಂದನ |
ಕೇನೇಹ ವಿಧಿನಾ ಸರ್ವಂ ಕೀರ್ತ್ಯಮಾನಂ ನಿಬೋಧ ಮೇ ॥16॥
ತಾಪತ್ಯನಂದನನೇ, ನಾನು ಯುದ್ಧದಲ್ಲಿ ನಿನಗೆ ಯಾವ ಕಾರಣದಿಂದ ಸೋತೆ ಎಂಬುದನ್ನು ಹೇಳುತ್ತೇನೆ ಕೇಳು.
ಬ್ರಹ್ಮಚರ್ಯಂ ಪರೋ ಧರ್ಮಃ ಸ ಚಾಪಿ ನಿಯತಸ್ತ್ವಯಿ |
ಯಸ್ಮಾದಸ್ಮಾದಹಂ ಪಾರ್ಥ ರಣೇಽಸ್ಮಿನ್ ವಿಜಿತಸ್ತ್ವಯಾ ॥17॥
ಪಾರ್ಥನೇ, ನಿನ್ನಲ್ಲಿ ಶ್ರೇಷ್ಠವಾದ ಬ್ರಹ್ಮಚರ್ಯಧರ್ಮವು ನಿಯತವಾಗಿ ಇರುವುದರಿಂದ ನಾನು ಯುದ್ಧದಲ್ಲಿ ನಿನ್ನಿಂದ ಪರಾಭವವನ್ನು ಹೊಂದಿದೆ.
ಯಸ್ತು ಸ್ಯಾತ್ ಕ್ಷತ್ರಿಯಃ ಕಶ್ಚಿತ್ ಕಾಮವೃತ್ತಃ ಪರಂತಪ |
ನಕ್ತಂ ಚ ಯುಧಿ ಯುಧ್ಯೇತ ನ ಸ ಜೀವೇತ್ ಕಥಂಚನ ॥18॥
ಪರಂತಪನೇ, ಯಾವ ಕ್ಷತ್ರಿಯನು ಬ್ರಹ್ಮಚರ್ಯವಿಲ್ಲದೆ ಕಾಮಲಂಪಟನಾಗಿರುತ್ತಾನೆಯೋ ಅವನು ರಾತ್ರಿಯಲ್ಲಿ ಯುದ್ಧಮಾಡಿದರೆ ಎಂದೂ ಬದುಕಿ ಉಳಿಯುವುದಿಲ್ಲ.
ಯಸ್ತು ಸ್ಯಾತ್ ಕಾಮವೃತ್ತೋಽಪಿ ರಾಜಾ ರಾಜೀವಲೋಚನ |
ಜಯೇನ್ನಕ್ತಂಚರಾನ್ ಸರ್ವಾನ್ ಸ ಪುರೋಹಿತಧೂರ್ಗತಃ ॥19॥
ರಾಜೀವಲೋಚನನೇ, ಯಾವ ರಾಜನು ಕಾಮವೃತ್ತನಾದರೂ ಪುರೋಹಿತನನ್ನು ಮುಂದೆ ಮಾಡಿಕೊಂಡು ನಡೆಯುತ್ತಾನೋ ಅವನು ಎಲ್ಲಾ ರಾತ್ರಿಚರರನ್ನೂ ಜಯಿಸುತ್ತಾನೆ.
ತಸ್ಮಾತ್ ತಾಪತ್ಯ ಯತ್ ಕಿಂಚಿನ್ನೃಣಾಂ ಶ್ರೇಯ ಇಹೇಪ್ಸಿತಮ್ |

ತಸ್ಮಿನ್ ಕರ್ಮಣಿ ಯೋಕ್ತವ್ಯಾ ದಾಂತಾತ್ಮಾನಃ ಪುರೋಹಿತಾಃ ॥20॥
ತಾಪತ್ಯನೇ, ಆದ್ದರಿಂದ ಮನುಷ್ಯರು (ರಾಜರು) ಏನಾದರೂ ಶ್ರೇಯಸ್ಸನ್ನು ಬಯಸಿದರೆ ಮೊದಲು ಅದಕ್ಕಾಗಿ ದಾಂತರಾದ ಪುರೋಹಿತರನ್ನು ಸಂಪಾದಿಸಬೇಕು.
ವೇದೇ ಷಡಂಗೇ ನಿಯತಾಃ ಶುಚಯಃ ಸತ್ಯವಾದಿನಃ।
ಧರ್ಮಾತ್ಮಾನಃ ಕೃತಾತ್ಮಾನಃ ಸ್ಯುರ್ನೃಪಸ್ಯ ಪುರೋಹಿತಾಃ ॥21॥
ವೇದವೇದಾಂಗಗಳಲ್ಲಿ ಕುಶಲರಾದವರೂ, ಶುಚಿಯಾದವರೂ, ನಿಯಮವನ್ನು ಪಾಲಿಸುವವರೂ, ಸತ್ಯವನ್ನು ನುಡಿಯುವವರೂ, ಧರ್ಮಾತ್ಮರೂ, ತೃಪ್ತರಾದವರೂ ರಾಜನಿಗೆ ಪುರೋಹಿತರಾಗಲು ಅರ್ಹರಾಗುತ್ತಾರೆ.
ಜಯಶ್ಚ ನಿಯತೋ ರಾಜ್ಞಃ ಸ್ವರ್ಗಶ್ಚ ಸ್ಯಾದನಂತರಮ್।
ಯಸ್ಯ ಸ್ಯಾದ್ ಧರ್ಮವಿದ್ ವಾಗ್ಮೀ ಪುರೋಧಾಃ ಶೀಲವಾನ್ ಶುಚಿಃ ॥22॥
ಯಾವ ರಾಜನಿಗೆ ಧರ್ಮಜ್ಞನೂ, ವಾಗ್ಮಿಯೂ, ಶೀಲವಂತನೂ, ಶುಚಿಯೂ ಆದ ಪುರೋಹಿತನು ದೊರಕುತ್ತಾನೋ ಆ ರಾಜನು ಈ ಲೋಕದಲ್ಲಿ ಜಯವನ್ನೂ ಅನಂತರ ಪರಲೋಕದಲ್ಲಿ ಸ್ವರ್ಗವನ್ನೂ ಪಡೆಯುತ್ತಾನೆ.
ಅಲಬ್ಧಸ್ಯ ಚ ಲಾಭಾಯ ಲಬ್ಧಸ್ಯ ಪರಿರಕ್ಷಣೇ।
ಪುರೋಹಿತಂ ಪ್ರಕುರ್ವೀತ ರಾಜಾ ಗುಣಸಮನ್ವಿತಮ್ ॥23॥
ಪಡೆಯದಿದ್ದ ಲಾಭವನ್ನು ಪಡೆಯಲು ಮತ್ತು ಪಡೆದ ಸಂಪತ್ತನ್ನು ರಕ್ಷಿಸಿಕೊಳ್ಳಲು ರಾಜನು ಗುಣವಂತನಾದ ಪುರೋಹಿತನನ್ನು ಸಂಪಾದಿಸಬೇಕು.
ಪುರೋಹಿತಮತೇ ತಿಷ್ಠೇದ್ ಯ ಇಚ್ಛೇತ್ ಪೃಥಿವೀಂ ನೃಪಃ।
ಪ್ರಾಪ್ತುಂ ಮೇರುವರೋತ್ತಂಸಾಂ ಸಾಗರಾಂಬರಧಾರಿಣೀಮ್ ॥24॥
ಯಾವ ರಾಜನು ಮೇರುಸಹಿತವಾದ ಸಾಗರಾಂತವಾದ ಭೂಮಿಯನ್ನು ಬಯಸುತ್ತಾನೋ ಅವನು ಪುರೋಹಿತರ ಅಭಿಪ್ರಾಯದಂತೆ ನಡೆದು ಕೊಳ್ಳಬೇಕು.
ನ ಹಿ ಕೇವಲಶೌರ್ಯೇಣ ತಾಪತ್ಯಾಭಿಜನೇನ ಚ।
ಜಯೇದಬ್ರಾಹ್ಮಣಃ ಕಶ್ಚಿದ್ ಭುವಿ ಭೂಮಿಪತಿಃ ಕ್ವಚಿತ್ ॥25॥
ತಾಪತ್ಯನೇ, ಬ್ರಾಹ್ಮಣನಲ್ಲದ, ಭೂಮಿಯಲ್ಲಿರುವ ಯಾವ ರಾಜನೂ, ಕೇವಲ ಶೌರ್ಯದ ಕಾರಣದಿಂದ ಅಥವಾ ಕೇವಲ ಉತ್ತಮಜನ್ಮದ ಕಾರಣದಿಂದ ಎಂದೂ ಜಯಿಸುವುದಿಲ್ಲ.
ತಸ್ಮಾದೇವಂ ವಿಜಾನೀಹಿ ಕುರೂಣಾಂ ಕೀರ್ತಿವರ್ಧನ।
ಬ್ರಾಹ್ಮಣಪ್ರಮುಖಂ ರಾಜ್ಯಂ ಶಕ್ಯಂ ಪಾಲಯಿತುಂ ಚಿರಮ್ ॥26॥
ಕೌರವರ ಕೀರ್ತಿವರ್ಧನನಾದ ಅರ್ಜುನನೇ, ಆದ್ದರಿಂದ ಇದನ್ನು ತಿಳಿ. ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಚಿರಕಾಲ ರಾಜ್ಯವನ್ನು ಆಳುವುದು ಸಾಧ್ಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****
ನೂರ ಎಪ್ಪತ್ನಾಲ್ಕನೆಯ ಅಧ್ಯಾಯ
(ತಾಪತ್ಯೋಪಾಖ್ಯಾನ, ತಪತೀ ಮತ್ತು ಸಂವರಣರ ಸಮಾಗಮ. ಸಂವರಣನ ವಚನಗಳು, ತಪತಿಯ ಅಂತರ್ಧಾನ.)
ಅರ್ಜುನಃ
ತಾಪತ್ಯ ಇತಿ ಯದ್ವಾಕ್ಯಮುಕ್ತವಾನಸಿ ಮಾಮಿಹ।
ತದಹಂ ಶ್ರೋತುಮಿಚ್ಛಾಮಿ ತಾಪತ್ಯಾರ್ಥವಿನಿಶ್ಚಯಮ್ ॥1॥
ಗಂಧರ್ವನೇ, ನೀನು ನನ್ನನ್ನು ತಾಪತ್ಯ ಎಂದು ಕರೆದೆ. ತಾಪತ್ಯ ಶಬ್ದದ ಅರ್ಥವನ್ನು ನಾನು ನಿನ್ನಿಂದ ಕೇಳಿ ತಿಳಿಯಲು ಬಯಸುತ್ತೇನೆ.
ತಪತೀ ನಾಮ ಕಾ ಚೈಷಾ ತಾಪತ್ಯಾ ಯತ್ಕೃತೇ ವಯಮ್।
ಕೌಂತೇಯಾ ಹಿ ವಯಂ ಸಾಧೋ ಯತ್ ತದಿಚ್ಛಾಮಿ ವೇದಿತುಮ್ ॥
ಯಾರ ನಿಮಿತ್ತವಾಗಿ ನಾವು ತಾಪತ್ಯರೋ ಅಂತಹ ತಪತಿ ಎಂಬುವವಳು ಯಾರು. ಸಜ್ಜನನೇ, ನಾವು ಕುಂತಿಯ ಪುತ್ರರಾಗಿ ಕೌಂತೇಯರಷ್ಟೇ? ಇದನ್ನು ತಿಳಿದುಕೊಳ್ಳಲು ಬಯಸುತ್ತೇನೆ.
ವೈಶಂಪಾಯನಃ
ಏವಮುಕ್ತಃ ಸ ಗಂಧರ್ವಃ ಪ್ರತ್ಯುವಾಚ ಯಶಸ್ವಿನಮ್।
ಅರ್ಜುನಂ ತ್ರಿಷು ಲೋಕೇಷು ವಿಶ್ರುತಂ ಶ್ರುತವದ್ವಚಃ ॥3॥
ಇದನ್ನು ಕೇಳಿದ ಆ ಗಂಧರ್ವನು ಮೂರುಲೋಕಗಳಲ್ಲಿಯೂ ಪ್ರಖ್ಯಾತನಾದ ಕೀರ್ತಿವಂತನಾದ ಅರ್ಜುನನನ್ನು ಕುರಿತು ಶ್ರುತಿಸಮ್ಮತವಾದ ಮಾತುಗಳನ್ನು ಆಡಿದನು.
ಅಹಂ ತೇ ಕಥಯಿಷ್ಯಾಮಿ ಕಥಾಮತಿಮನೋರಮಾಮ್।
ಯಥಾವದಖಿಲಾಂ ಪಾರ್ಥ ಧರ್ಮ್ಯಾಂ ಧರ್ಮಭೃತಾಂ ವರ ॥4॥

ಪಾರ್ಥನೇ, ಧರ್ಮಭೃತರಲ್ಲಿ ಶ್ರೇಷ್ಠನೇ, ನಾನು ನಿನಗೆ ಈ ಧಾರ್ಮಿಕವಾದ, ಅತಿ ಮನೋಹರವಾದ ಕಥೆಯನ್ನು ಸಮಗ್ರವಾಗಿ ಹೇಳುವೆನು.
ಉಕ್ತವಾನಸ್ಮಿ ಪಾರ್ಥ ತ್ವಾಂ ತಾಪತ್ಯ ಇತಿ ಯದ್ವಚಃ |
ತತ್ ತೇಽಹಂ ಕಥಯಿಷ್ಯಾಮಿ ಶೃಣು ಚೈಕಮನಾ ನೃಪ ॥5॥
ಪಾರ್ಥನೇ, ನಾನು ನಿನ್ನನ್ನು ತಾಪತ್ಯನೆಂದು ಕರೆದೆನಷ್ಟೇ? ರಾಜನೇ, ನಾನು ನಿನಗೆ ಅದನ್ನು ಹೇಳುವೆನು. ಏಕಾಗ್ರ ಮನಸ್ಸಿನಿಂದ ಕೇಳು.
ಯ ಏಷ ದಿವಿ ತೇಜಸ್ವೀ ನಾಕಂ ವ್ಯಾಪ್ನೋತಿ ತೇಜಸಾ |
ಸಾ ತಸ್ಯ ತಪತೀ ನಾಮ ಬಭೂವ ಸದೃಶೀ ಸುತಾ ॥6॥
ತನ್ನ ತೇಜಸ್ಸಿನಿಂದ ಸ್ವರ್ಗವನ್ನು ವ್ಯಾಪಿಸುವ, ಆಕಾಶದಲ್ಲಿ ಸಂಚರಿಸುವ, ತೇಜಸ್ವಿಯಾದ ಸೂರ್ಯನಿಗೆ `ತಪತೀ' ಎಂಬ ಅನುರೂಪಳಾದ ಮಗಳು ಜನಿಸಿದಳು.
ವಿವಸ್ವತೋಽಥ ಕೌಂತೇಯ ಸಾವಿತ್ರ್ಯವರಜಾ ವಿಭೋ |
ವಿಶ್ರುತಾ ತ್ರಿಷು ಲೋಕೇಷು ತಪತೀ ತಪಸಾ ಯುತಾ ॥7॥
ಕೌಂತೇಯನೇ, ಅವಳು ವಿವಸ್ವಂತನ (ಸೂರ್ಯನ) ಮಗಳು ಮತ್ತು ಸಾವಿತ್ರಿಯ ತಂಗಿ. ವಿಭುವೇ, ಅವಳು ತಪಸ್ಸಿನಿಂದ ಕೂಡಿದವಳಾಗಿ ಮೂರುಲೋಕಗಳಲ್ಲಿಯೂ ತಪತೀ ಎಂದೇ ಪ್ರಸಿದ್ಧಳಾದಳು.
ನ ದೇವೀ ನಾಸುರೀ ಚೈವ ನ ಯಕ್ಷೀ ನ ಚ ಕಿನ್ನರೀ |
ನಾಪ್ಸರಾ ನ ಚ ಗಂಧರ್ವೀ ತಥಾರೂಪಾ ನ ಕಾಚನ ॥8॥
ದೇವತಾಸ್ತ್ರೀಯರಾಗಲೀ, ಅಸುರಸ್ತ್ರೀಯರಾಗಲೀ, ಯಕ್ಷಿಯರಾಗಲೀ, ಕಿನ್ನರಿಯರಾಗಲೀ, ಅಪ್ಸರೆಯರಾಗಲೀ, ಗಂಧರ್ವಿಯರಾಗಲೀ ಯಾರೂ ಅಂತಹ ರೂಪವನ್ನು ಹೊಂದಿರಲಿಲ್ಲ.
ಸುವಿವಿಕ್ತಾನವದ್ಯಾಂಗೀ ಸುಸ್ಮಿತಾಯತಲೋಚನಾ |
ಸ್ವಾಚಾರಾ ಚೈವ ಸಾಧ್ವೀ ಚ ಸುವೇಷಾ ಚೈವ ಭಾಮಿನೀ ॥9॥
ಅವಳು ಚೆನ್ನಾಗಿ ವಿಭಕ್ತವಾದ ಅವಯವಗಳಿಂದ ಕೂಡಿದವಳೂ, ಒಳ್ಳೆಯ ಮಂದಸ್ಮಿತವನ್ನೂ, ದೀರ್ಘವಾದ ನೇತ್ರವನ್ನೂ ಹೊಂದಿದವಳೂ, ಒಳ್ಳೆಯ ಆಚಾರವನ್ನು ಹೊಂದಿದವಳೂ, ಒಳ್ಳೆಯ ವೇಷವನ್ನು ಧರಿಸಿದವಳೂ ಆದ ಸಾಧ್ವಿಯಾದ ಭಾಮಿನಿ.
ನ ತಸ್ಯಾಃ ಸದೃಶಂ ಕಂಚಿತ್ ತ್ರಿಷು ಲೋಕೇಷು ಭಾರತ |
ಭರ್ತಾರಂ ಸವಿತಾ ಮೇನೇ ರೂಪಶೀಲಗುಣಶ್ರುತೈಃ ॥10॥
ಭಾರತನೇ, ತಂದೆಯಾದ ಸೂರ್ಯನು ರೂಪಶೀಲಗುಣವಿದ್ಯೆಗಳಲ್ಲಿ ಅವಳಿಗೆ ಅನುರೂಪನಾದ ಪತಿಯನ್ನು ಮೂರುಲೋಕಗಳಲ್ಲಿಯೂ ಕಾಣಲಿಲ್ಲ.
ಸಂಪ್ರಾಪ್ತಯೌವನಾಂ ಪಶ್ಯನ್ ದೇವೋ ದುಹಿತರಂ ಶುಭಾಮ್ |
ದ್ವಿರಷ್ಟವರ್ಷಾಂ ತಾಂ ಪಶ್ಯನ್ ಸವಿತಾ ರೂಪಶಾಲಿನೀಮ್|
ನೋಪಲೇಭೇ ತತಃ ಶಾಂತಿಂ ಸಂಪ್ರದಾನಂ ವಿಚಿಂತಯನ್ ॥11॥
ಸೂರ್ಯನು ರೂಪಶಾಲಿನಿಯಾದ, ಹದಿನಾರು ವರ್ಷವನ್ನು ಕಳೆದು ಯೌವನವನ್ನು ಹೊಂದಿದ, ಶುಭಳಾದ ತನ್ನ ಮಗಳನ್ನು ನೋಡಿ ಯಾರಿಗೆ ಕೊಡಬೇಕು ಎಂದು ವಿಚಾರ ಮಾಡುತ್ತಾ ಮನಸ್ಸಿನ ಶಾಂತಿಯನ್ನು ಕಳೆದುಕೊಂಡನು.
ಅಥರ್ಕ್ಷಪುತ್ರಃ ಕೌಂತೇಯ ಕುರೂಣಾಮೃಷಭೋ ಯುವಾ |
ಸೂರ್ಯಮಾರಾಧಯಾಮಾಸ ನೃಪಃ ಸಂವರಣಸ್ತದಾ |
ಅರ್ಘ್ಯಮಾಲ್ಯೋಪಹಾರೈಶ್ಚ ಶಶ್ವತ್ ಸ ನೃಪತಿಸ್ತದಾ ॥12॥
ಕೌಂತೇಯನೇ, ಆಗ ಕುರುವಂಶದಲ್ಲಿ ಶ್ರೇಷ್ಠನಾದ ಋಕ್ಷರಾಜನ ಮಗನಾದ ಯುವಕನಾದ ಸಂವರಣನು ಅರ್ಘ್ಯಮಾಲ್ಯ ನೈವೇದ್ಯಗಳಿಂದ ಸೂರ್ಯನನ್ನು ಬಹುಕಾಲ ಆರಾಧಿಸಿದನು.
ನಿಯಮೈರುಪವಾಸೈಶ್ಚ ತಪೋಭಿರ್ವಿವಿಧೈರಪಿ |
ಶುಶ್ರೂಷುರನಹಂವಾದೀ ಶಶ್ವತ್ ಪೌರವನಂದನ |
ಅಂಶುಮಂತಂ ಸಮುದ್ಯಂತಂ ಪೂಜಯಾಮಾಸ ಭಕ್ತಿಮಾನ್ ॥13॥
ಪೌರವನಂದನನೇ, ಅವನು ನಿಯಮಗಳನ್ನು ಧರಿಸಿ, ಉಪವಾಸಗಳನ್ನು ಮಾಡಿ, ಅನೇಕ ವಿಧವಾದ ತಪಸ್ಸುಗಳನ್ನು ಆಚರಿಸಿ, ಅಹಂಕಾರವನ್ನು ತೊರೆದು, ಸೇವಾತತ್ಪರನಾಗಿ, ಉದಯಿಸುವ ಸೂರ್ಯನನ್ನು ಭಕ್ತಿಯಿಂದ ಪೂಜಿಸಿದನು.
ಕೃತಜ್ಞಂ ಚ ಸುಧರ್ಮಜ್ಞಂ ರೂಪೇಣಾಸದೃಶಂ ಭುವಿ |
ತಪತ್ಯಾಃ ಸದೃಶಂ ಮೇನೇ ಸೂರ್ಯಃ ಸಂವರಣಂ ಪತಿಮ್ ॥
ಸೂರ್ಯನು ಕೃತಜ್ಞನೂ, ಧರ್ಮವನ್ನು ಚೆನ್ನಾಗಿ ತಿಳಿದವನೂ, ಭೂಮಿಯಲ್ಲಿ ಅಸದೃಶರೂಪವುಳ್ಳವನೂ ಆದ ಸಂವರಣನನ್ನು ತಪತಿಗೆ ಯೋಗ್ಯನಾದ ಪತಿ ಎಂದು ಭಾವಿಸಿದನು.
ದಾತುಮೈಚ್ಛತ್ ತತಃ ಕನ್ಯಾಂ ತಸ್ಮೈ ಸಂವರಣಾಯ ತಾಮ್ |
ನೃಪೋತ್ತಮಾಯ ಕೌರವ್ಯ ವಿಶ್ರುತಾಭಿಜನಾಯ ಚ ॥15॥
ಕೌರವ್ಯನೇ, ಪ್ರಖ್ಯಾತವಾದ ವಂಶದಲ್ಲಿ ಜನಿಸಿದ ನೃಪಶ್ರೇಷ್ಠನಾದ ಸಂವರಣನಿಗೆ ಆ ತನ್ನ ಮಗಳನ್ನು ಕೊಡಲು ಬಯಸಿದನು.
ಯಥಾ ಹಿ ದಿವಿ ದೀಪ್ತಾಂಶುಃ ಪ್ರಭಾಸಯತಿ ತೇಜಸಾ |
ತಥಾ ಭುವಿ ಮಹೀಪಾಲೋ ದೀಪ್ತ್ಯಾ ಸಂವರಣೋಽಭವತ್ ॥16॥

ಆಕಾಶದಲ್ಲಿ ಹೇಗೆ ಸೂರ್ಯನು ತನ್ನ ತೇಜಸ್ಸಿನಿಂದ ಬೆಳಗುತ್ತಾನೋ ಹಾಗೆ ಭೂಮಿಯಲ್ಲಿ ಸಂವರಣರಾಜನು ತನ್ನ ತೇಜಸ್ಸಿನಿಂದ ಬೆಳಗುತ್ತಿದ್ದನು.
ಯಥಾಽರ್ಚಯಂತಿ ಚಾದಿತ್ಯಮುದ್ಯಂತಂ ಬ್ರಹ್ಮವಾದಿನಃ |
ತಥಾ ಸಂವರಣಂ ಪಾರ್ಥ ಬ್ರಾಹ್ಮಣಾವರಜಾಃ ಪ್ರಜಾಃ | ॥17॥
ಪಾರ್ಥನೇ, ಹೇಗೆ ಬ್ರಾಹ್ಮಣರು ಉದಯಿಸುವ ಸೂರ್ಯನನ್ನು ಅರ್ಚಿಸುತ್ತಾರೋ, ಹಾಗೆ ಬ್ರಾಹ್ಮಣೇತರ ಪ್ರಜೆಗಳೆಲ್ಲರೂ ಸಂವರಣನನ್ನು ಪೂಜಿಸುತ್ತಿದ್ದರು.
ಸ ಸೋಮಮತಿ ಕಾಂತತ್ವಾದ್ ಆದಿತ್ಯಮತಿ ತೇಜಸಾ |
ಬಭೂವ ನೃಪತಿಃ ಶ್ರೀಮಾನ್ ಸುಹೃದಾಂ ದುರ್ಹೃದಾಮಪಿ ॥18॥
ಆ ರಾಜನು ಸುಹೃಜ್ಜನರಿಗೆ ಚಂದ್ರನಿಗಿಂತ ಅಧಿಕ ಕಾಂತಿಯುಕ್ತನೂ, ಶತ್ರುಗಳಿಗೆ ಸೂರ್ಯನಿಗಿಂತ ಅಧಿಕ ತೇಜಸ್ವಿಯೂ ಆಗಿದ್ದನು.
ಏವಂಗುಣಾಯ ನೃಪತೇ ತಥಾವೃತ್ತಾಯ ನಿತ್ಯಶಃ |
ತಸ್ಮೈ ದಾತುಂ ಮನಶ್ಚಕ್ರೇ ತಪತೀಂ ತಪನಃ ಸ್ವಯಮ್ ॥19॥
ರಾಜನೇ, ಇಂತಹ ಗುಣವನ್ನು ಮತ್ತು ಇಂತಹ ನಡತೆಯನ್ನು ಯಾವಾಗಲೂ ಹೊಂದಿದ್ದ ಅವನಿಗೆ ತಪತಿಯನ್ನು ಕೊಡಲು ಸೂರ್ಯನು ತಾನೇ ನಿರ್ಧರಿಸಿದನು.
ಸ ಕದಾಚಿದಥೋ ರಾಜಾ ಶ್ರೀಮಾನುರುಹಯೋ ಭುಜಃ |
ಚಚಾರ ಮೃಗಯಾಂ ಪಾರ್ಥ ಪರ್ವತೋಪವನೇ ಕಿಲ ॥20॥
ಪಾರ್ಥನೇ, ಒಮ್ಮೆ ಮಹಾಭುಜನಾದ ಆ ರಾಜನು ಶ್ರೇಷ್ಠವಾದ ಕುದುರೆಯನ್ನೇರಿ ಪರ್ವತದ ಸಮೀಪದಲ್ಲಿ ಬೇಟೆಯಾಡುತ್ತಿದ್ದನು.
ಚರತೋ ಮೃಗಯಾಂ ತಸ್ಯ ಕ್ಷುತ್ಪಿಪಾಸಾಶ್ರಮಾನ್ವಿತಃ |
ಮಮಾರ ರಾಜ್ಞಃ ಕೌಂತೇಯ ಗಿರಾವಪ್ರತಿಮೋ ಹಯಃ ॥21॥
ಕೌಂತೇಯನೇ, ಅವನು ಬೇಟೆಯಾಡುತ್ತಿರುವಾಗ ಅವನ ಅಸದೃಶವಾದ ಕುದುರೆಯು ಹಸಿವುನೀರಡಿಕೆಗಳಿಂದ ಬಳಲಿ ಸತ್ತುಹೋಯಿತು.
ಸ ಮೃತಾಶ್ವಶ್ಚರನ್ ಪಾರ್ಥ ಪದ್ಭ್ಯಾಮೇವ ಗಿರೌ ನೃಪಃ |
ದದರ್ಶಾಸದೃಶೀಂ ಲೋಕೇ ಕನ್ಯಾಮಾಯತಲೋಚನಾಮ್ ॥22॥
ಪಾರ್ಥನೇ, ಆ ರಾಜನು ಕುದುರೆಯನ್ನು ಕಳೆದುಕೊಂಡು ಪರ್ವತದಲ್ಲಿ ಪಾದಗಳಿಂದಲೇ ಸಂಚರಿಸುತ್ತಾ ದೀರ್ಘನೇತ್ರೆಯಾದ, ಲೋಕದಲ್ಲಿ ಅಸದೃಶೆಯಾದ ಒಬ್ಬ ಕನ್ಯೆಯನ್ನು ನೋಡಿದನು.
ಸ ಏಕ ಏಕಾಮಾಸಾದ್ಯ ಕನ್ಯಾಂ ತಾಮರಿಮರ್ದನಃ |
ತಸ್ಥೌ ನೃಪತಿಶಾರ್ದೂಲಃ ಪಶ್ಯನ್ನವಿಚಲೇಕ್ಷಣಃ ॥23॥
ಶತ್ರುಮರ್ದನನಾದ, ನೃಪತಿಶಾರ್ದೂಲನಾದ ಅವನು ಏಕಾಕಿನಿ- ಯಾಗಿರುವ ಆ ಕನ್ಯೆಯನ್ನು ನೋಡಿ ಏಕದೃಷ್ಟಿಯಿಂದ ಅವಳನ್ನು ನೋಡುತ್ತಾ ನಿಂತನು.
ಸ ಹಿ ತಾಂ ತರ್ಕಯಾಮಾಸ ರೂಪತೋ ನೃಪತಿಃ ಶ್ರಿಯಮ್ |
ಪುನಃ ಸ ಕಾಮಯಾಮಾಸ ರವೇರಿಷ್ಟಾಮಿವ ಪ್ರಭಾಮ್ ॥24॥
ಆ ರಾಜನು ಅವಳ ರೂಪವನ್ನು ನೋಡಿ ಅವಳು ಶ್ರೀದೇವಿ ಎಂದು ಊಹಿಸಿದನು. ಪುನಃ ಅವಳನ್ನು ಸೂರ್ಯನ ಪ್ರಭೆ ಎಂದು ತಿಳಿದನು.
ಗಿರಿಪ್ರಸ್ಥೇ ತು ಸಾ ಯಸ್ಮಿನ್ ಸ್ಥಿತಾ ತ್ವಸಿತಲೋಚನಾ |
ಸಸವೃಕ್ಷಲತಾಗುಲ್ಮೋ ಹಿರಣ್ಮಯ ಇವಾಭವತ್ ॥25॥
ಕಪ್ಪಾದ ಕಣ್ಣುಳ್ಳ ಅವಳು ಗಿರಿಪ್ರಸ್ಥದಲ್ಲಿ ನಿಂತಿರುವಾಗ ವೃಕ್ಷಲತಾ- ಗುಲ್ಮಗಳಿಂದ ಕೂಡಿದ ಪರ್ವತದ ಆ ಪ್ರದೇಶವು ಸುವರ್ಣಮಯವಾಗಿ ಕಾಣುತ್ತಿದ್ದಿತು.
ಅವಮೇನೇ ಸ ತಾಂ ದೃಷ್ಟ್ವಾ ಸರ್ವಪ್ರಾಣಭೃತಾಂ ಸ್ತ್ರಿಯಃ |
ಅವಾಪ್ತಂ ಚಾತ್ಮನೋ ಮೇನೇ ಸ ರಾಜಾ ಚಕ್ಷುಷಃ ಫಲಮ್ ॥26॥
ಅವಳನ್ನು ನೋಡಿದ ರಾಜನು ಎಲ್ಲಾ ಮನುಷ್ಯಸ್ತ್ರೀಯರೂ ಸಹ ಅವಳಿಗಿಂತ ಹೀನರೆಂದು ತಿಳಿದು, ತಾನು ಕಣ್ಣುಗಳನ್ನು ಹೊಂದಿದುದ್ದಕ್ಕೆ ತನಗೆ ಫಲವು ದೊರೆಯಿತೆಂದು ತಿಳಿದನು.
ಜನ್ಮಪ್ರಭೃತಿ ಯತ್ಕಿಂಚಿದ್ ದೃಷ್ಟವಾನ್ ಸ ಮಹೀಪತಿಃ |
ರೂಪಂ ನ ಸದೃಶಂ ತಸ್ಯಾಃ ತರ್ಕಯಾಮಾಸ ಕಿಂಚನ ॥27॥
ಆ ರಾಜನು ಹುಟ್ಟಿದಾಗಿನಿಂದ ಏನೇನು ನೋಡಿದ್ದರೂ, ಅವಳ ರೂಪಕ್ಕೆ ಸದೃಶವಾದ ರೂಪವನ್ನು ಎಂದೂ ನೋಡಿರಲಿಲ್ಲ (ಅವಳ ರೂಪಕ್ಕೆ ಸದೃಶವಾದ ರೂಪವು ಎಲ್ಲಿಯೂ ಇಲ್ಲ) ಎಂದು ಭಾವಿಸಿದನು.
ತಸ್ಯಾಂ ಬದ್ಧಮನಶ್ಚಕ್ಷುಃ ಪಾಶೈರ್ಗುಣಮಯೈಸ್ತದಾ |
ನಾತಿಚಕ್ರಾಮ ತಂ ದೇಶಂ ಬುಬುಧೇ ನ ಚ ಕಿಂಚನ ॥28॥
ಅವಳ ಗುಣಗಳು ಎಂಬ ಪಾಶಗಳಿಂದ ಕಟ್ಟಲ್ಪಟ್ಟ ಚಕ್ಷುಸ್ಸನ್ನು ಮತ್ತು ಮನಸ್ಸನ್ನು ಹೊಂದಿದ ರಾಜನು ಆ ಪ್ರದೇಶವನ್ನು ಬಿಟ್ಟು ಕದಲಲಿಲ್ಲ. ಅವನಿಗೆ ಬೇರೆ ಯಾವ ವಿಷಯವೂ ತಿಳಿಯಲಿಲ್ಲ.
ಅಸ್ಯಾ ನೂನಂ ವಿಶಾಲಾಕ್ಷ್ಯಾಃ ಸದೇವಾಸುರಮಾನುಷಮ್ |
ಲೋಕಂ ನಿರ್ಮಥ್ಯ ಧಾತ್ರೇದಂ ರೂಪಮಾವಿಷ್ಕೃತಂ ವರಮ್ |

ಇತಿ ತಾಂ ತರ್ಕಯಾಮಾಸ ರೂಪದ್ರವಿಣಸಂಪದಾ ॥29॥
ಅವನು ಅವಳ ರೂಪಸಂಪತ್ತನ್ನು ನೋಡಿ ಬ್ರಹ್ಮನು ದೇವಾಸುರ- ಮನುಷ್ಯಲೋಕವನ್ನು ಕಡೆದು ಈ ವಿಶಾಲಾಕ್ಷಿಯ ಶ್ರೇಷ್ಠವಾದ ರೂಪವನ್ನು ನಿರ್ಮಿಸಿದ್ದಾನೆ ಎಂದು ತಿಳಿದನು.
ಕನ್ಯಾಮಸದೃಶೀಂ ಲೋಕೇ ನೃಪಃ ಸಂವರಣಸ್ತದಾ |
ತಾಂ ಚ ದೃಷ್ಟ್ವೈವ ಕಲ್ಯಾಣೀಂ ಕಲ್ಯಾಣಾಭಿಜನೋ ನೃಪಃ |
ಜಗಾಮ ಮನಸಾ ಚಿಂತಾಂ ಕಾಮಮಾರ್ಗಣಪೀಡಿತಃ ॥30॥
ಆಗ ಕಲ್ಯಾಣಾಭಿಜನವುಳ್ಳ ಸಂವರಣರಾಜನು ಆ ಕಲ್ಯಾಣಿಯಾದ, ಅಸದೃಶೆಯಾದ ಕನ್ಯೆಯನ್ನು ನೋಡಿದ ತಕ್ಷಣವೇ ಮನಸ್ಸಿನಲ್ಲಿ ಚಿಂತಾಕ್ರಾಂತನಾಗಿ ಕಾಮಬಾಣಗಳಿಂದ ಪೀಡಿತನಾದನು.
ತುದ್ಯಮಾನಃ ಸುತೀವ್ರೇಣ ನೃಪತಿರ್ಮನ್ಮಥಾಗ್ನಿನಾ |
ಅಪ್ರಗಲ್ಭಃ ಪ್ರಗಲ್ಭಾಂ ತಾಮುವಾಚಾಥ ಯಶಸ್ವಿನೀಮ್ ॥31॥
ತೀವ್ರವಾದ ಮನ್ಮಥಾಗ್ನಿಯಿಂದ ಹಿಂಸಿಸಲ್ಪಡುತ್ತಿದ್ದ ಆ ರಾಜನು ಗಂಭೀರಳಾದ ಮತ್ತು ಯಶಸ್ವಿನಿಯಾದ ಆ ಕನ್ಯೆಯನ್ನು ಕುರಿತು ಅಷ್ಟೇನೂ ಗಂಭೀರವಲ್ಲದ ಮಾತುಗಳನ್ನು ಆಡಿದನು.
ಸಂವರಣಃ
ಕಾಽಸಿ ಕಸ್ಯಾಸಿ ರಂಭೋರು ಕಿಮರ್ಥಂ ಚೇಹ ತಿಷ್ಠಸಿ |
ಕಥಂ ಚ ನಿರ್ಜನೇಽರಣ್ಯೇ ಚರಸ್ಯೇಕಾ ಶುಚಿಸ್ಮಿತೇ ॥32॥
ರಂಭೋರುವೇ, ನೀನು ಯಾರು? ಯಾರಿಗೆ ಸೇರಿದವಳು? ಇಲ್ಲಿ ಏಕೆ ನಿಂತಿದ್ದೀಯೇ? ಶುಚಿಸ್ಮಿತೆಯೇ, ಈ ನಿರ್ಜನವಾದ ಅರಣ್ಯದಲ್ಲಿ ಒಬ್ಬಳೇ ಏಕೆ ಸಂಚರಿಸುತ್ತಿದ್ದೀಯೇ?
ತ್ವಂ ಹಿ ಸರ್ವಾನವದ್ಯಾಂಗೀ ಸರ್ವಾಭರಣಭೂಷಿತಾ |
ವಿಭೂಷಣಮಿವೈತೇಷಾಂ ಭೂಷಣಾನಾಮಭೀಪ್ಸಿತಮ್ ॥33॥
ನಿರ್ದುಷ್ಟವಾದ, ಸರ್ವಾವಯವುಳ್ಳವಳೂ, ಸರ್ವಾಭರಣ- ಭೂಷಿತಳಾದ ನೀನು, ನೀನು ಧರಿಸಿರುವ ಆಭರಣಗಳಿಗೆ ಇಷ್ಟವಾದ ಆಭರಣದಂತೆ ಇದ್ದೀಯೆ.
ನ ದೇವೀಂ ನಾಸುರೀಂ ಚೈವ ನ ಯಕ್ಷೀಂ ನ ಚ ಕಿನ್ನರೀಮ್ |
ನ ಚ ಭೋಗವತೀಂ ಮನ್ಯೇ ನ ಗಂಧರ್ವೀಂ ನ ಮಾನುಷೀಮ್ ॥
ನೀನು ದೇವಿಯಾಗಲೀ, ಆಸುರಿಯಾಗಲೀ, ಕಿನ್ನರಿಯಾಗಲೀ, ಯಕ್ಷಿಯಾಗಲೀ, ಅಪ್ಸರೆಯಾಗಲೀ, ಗಂಧರ್ವಿಯಾಗಲೀ, ಮಾನುಷಿಯಾಗಲೀ,, ನಾಗಕನ್ಯೆಯಾಗಲೀ ಯಾರೂ ಅಲ್ಲವೆಂದು ನಾನು ಭಾವಿಸಿದ್ದೇನೆ.
ಯಾ ಹಿ ದೃಷ್ಟಾ ಮಯಾ ಕಾಶ್ಚಿತ್ ಶ್ರುತಾಶ್ಚಾಪಿ ವರಾಂಗನಾಃ
ನ ತಾಸಾಂ ಸದೃಶೀಂ ಮನ್ಯೇ ತ್ವಾಮಹಂ ಮತ್ತಗಾಮಿನಿ ॥35॥
ಮತ್ತಗಾಮಿನಿಯೇ, ನಾನು ಎಷ್ಟು ವರಾಂಗನೆಯರನ್ನು ನೋಡಿದ್ದೇನೆಯೋ ಅಥವಾ ಕೇಳಿದ್ದೇನೆಯೋ, ನೀನು ಅವರಾರಿಗೂ ಸಮಾನಳಲ್ಲ (ಬಹಳ ಶ್ರೇಷ್ಠಳು) ಎಂದು ಭಾವಿಸಿದ್ದೇನೆ.
ಗಂಧರ್ವಃ
ಏಷ ತಾಂ ಸ ಮಹೀಪಾಲೋ ಬಭಾಷೇ ನ ತು ಸಾ ತದಾ |
ಕಾಮಾರ್ತಂ ನಿರ್ಜನೇಽರಣ್ಯೇ ಪ್ರತ್ಯಭಾಷತ ಕಿಂಚನ ॥36॥
ಈ ರಾಜನು ಅವಳನ್ನು ಕುರಿತು ಹೀಗೆ ಮಾತನಾಡಿದನು. ಆದರೆ, ನಿರ್ಜನವಾದ ಆ ಅರಣ್ಯದಲ್ಲಿ ಕಾಮಾರ್ತನಾದ ರಾಜನನ್ನು ಕುರಿತು ಅವಳು ಏನನ್ನೂ ಮಾತನಾಡಲಿಲ್ಲ.
ತಥಾ ಲಾಲಪ್ಯಮಾನಸ್ಯ ಪಾರ್ಥಿವಸ್ಯಾಯತೇಕ್ಷಣಾ |
ಸೌದಾಮಿನೀವ ಚಾಭ್ರೇಷು ತತ್ರೈವಾಂತರಧೀಯತ ॥37॥
ರಾಜನು ಹಾಗೆ ಅಸಂಗತವಾಗಿ ಮಾತನಾಡುತ್ತಿರುವಾಗಲೇ, ದೀರ್ಘನೇತ್ರೆಯಾದ ಅವಳು ಮೋಡದಲ್ಲಿ ಮಿಂಚು ಮಾಯವಾದಂತೆ, ಅಲ್ಲಿಯೇ ಅಂತರ್ಧಾನ ಹೊಂದಿದಳು.
ತಾಮನ್ವಿಚ್ಛನ್ ಸ ನೃಪತಿಃ ಪರಿಚಕ್ರಾಮ ತತ್ ತದಾ |
ವನಂ ವನಜಪತ್ರಾಕ್ಷೀಂ ಭ್ರಮನ್ನುನ್ಮತ್ತವತ್ ತದಾ ॥38॥
ಆ ರಾಜನು ಆಗ ಆ ಕಮಲಾಕ್ಷಿಯನ್ನು ಹುಡುಕುತ್ತಾ ಹುಚ್ಚನಂತೆ ಕಾಡಿನಲ್ಲಿಯೇ ಅಲೆದಾಡಿದನು.
ಅಪಶ್ಯಮಾನಃ ಸ ತು ತಾಂ ಬಹು ತತ್ರ ವಿಲಪ್ಯ ಚ |
ನಿಶ್ಚೇಷ್ಟಃ ಕೌರವಶ್ರೇಷ್ಠೋ ಮುಹೂರ್ತಂ ಸ ವ್ಯತಿಷ್ಠತ ॥39॥
ಆ ಕೌರವಶ್ರೇಷ್ಠನು ಅವಳನ್ನು ಕಾಣದೇ ಬಹಳವಾಗಿ ವಿಲಾಪವನ್ನು ಮಾಡಿ ಒಂದು ಮುಹೂರ್ತದ ಕಾಲ ನಿಶ್ಚೇಷ್ಟನಾಗಿ ನಿಂತನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುಃಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * *

ನೂರ ಎಪ್ಪತ್ತೈದನೆಯ ಅಧ್ಯಾಯ

(ಭೂಮಿಯ ಮೇಲೆ ಬಿದ್ದ ಸಂವರಣನ ಬಳಿಗೆ ತಪತಿಯ ಆಗಮನ ಮತ್ತು ಅವರ ಸಂವಾದ)
ಗಂಧರ್ವಃ
ಅಥ ತಸ್ಯಾಮದೃಶ್ಯಾಯಾಂ ನೃಪತಿರ್ಭಾವಮೋಹಿತಃ |
ಪಾತನಃ ಶತ್ರುಸಂಘಾನಾಂ ಪಪಾತ ಧರಣೀತಳೇ ||1||
ಆಗ ಅವಳು ಅದೃಶ್ಯರಾಗುತ್ತಿರಲು ಶತ್ರುಗಳ ಸಮೂಹವನ್ನು ನೆಲದ ಮೇಲೆ ಉರುಳಿಸುವ ಆ ರಾಜನು ಕಾಮಮೋಹಿತನಾಗಿ ತಾನೇ ನೆಲದ ಮೇಲೆ ಉರುಳಿದನು.
ತಸ್ಮಿನ್ ನಿಪತಿತೇ ಭೂಮಾವಥ ಸಾ ಚಾರುವರ್ಣಿನೀ |
ಪುನಃ ಪೀನಾಯತಶ್ರೋಣೀ ದರ್ಶಯಾಮಾಸ ತಂ ನೃಪಮ್ ||2||
ರಾಜನು ಹಾಗೆ ಭೂಮಿಯ ಮೇಲೆ ಬೀಳುತ್ತಿರಲು ಆ ಪೀನಾಯತಶ್ರೋಣಿಯಾದ ಸುಂದರಿಯು ಪುನಃ ರಾಜನಿಗೆ ಕಾಣಿಸಿಕೊಂಡಳು.
ಆಬಭಾಷೇಽಥ ಕಲ್ಯಾಣೀ ವಾಚಾ ಮಧುರಯಾ ನೃಪಮ್ |
ತಂ ಕುರೂಣಾಂ ಕುಲಕರಂ ಕಾಮಾಭಿಹತಚೇತಸಮ್ ||3||
ಆ ಕಲ್ಯಾಣಿಯು ತನ್ನ ಮಧುರವಾದ ಮಾತುಗಳಿಂದ ಕುರುವಂಶ- ವರ್ಧನನಾದ ಕಾಮಮೋಹಿತನಾದ ಆ ರಾಜನನ್ನು ಕುರಿತು ಮಾತನಾಡಿದಳು.
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ನ ತ್ವಮರ್ಹಸ್ಯರಿಂದಮ |
ಮೋಹಂ ನೃಪತಿಶಾರ್ದೂಲ ಮೋಘಮಾವಿಷ್ಕೃತಂ ಕೃತಮ್ ||4||
ಅರಿಂದಮನೇ, ನಿನಗೆ ಮಂಗಳವಾಗಲಿ. ಏಳು, ಏಳು. ನೃಪಶಾರ್ದೂಲನೇ, ನೀನು ವ್ಯರ್ಥವಾಗಿ ಮೋಹಕ್ಕೆ ಒಳಗಾಗಲು ಅರ್ಹನಲ್ಲ.
ಗಂಧರ್ವಃ
ಏವಮುಕ್ತಃ ಸ ನೃಪತಿರ್ವಾಚಾ ಮಧುರಯಾ ತದಾ |
ದದರ್ಶ ವಿಪುಲಶ್ರೋಣೀಂ ತಾಮೇವಾಭಿಮುಖೇ ಸ್ಥಿತಾಮ್ ||5||
ಹೀಗೆ ಮಧುರವಾದ ಮಾತುಗಳಿಂದ ಸಂಬೋಧಿಸಲ್ಪಟ್ಟ ಆ ರಾಜನು ಕಣ್ಣುಗಳನ್ನು ತೆರೆದು ತನ್ನ ಎದುರಿಗೆ ನಿಂತಿದ್ದ ವಿಪುಲಶ್ರೋಣಿಯಾದ ಆ ಸುಂದರಿಯನ್ನೇ ನೋಡಿದನು.
ಅಥ ತಾಮಸಿತಾಪಾಂಗೀಮಾಬಭಾಷೇ ನರಾಧಿಪಃ |
ಮನ್ಮಥಾಭಿಪರೀತಾತ್ಮಾ ಸಂದಿಗ್ಧಾಕ್ಷರಯಾ ಗಿರಾ ||6||
ಆಗ ಮನ್ಮಥಾಕ್ರಾಂತನಾದ ಆ ರಾಜನು ತೊದಲುವ ನುಡಿಗಳಿಂದ ಆ ಅಸಿತನೇತ್ರೆಯನ್ನು ಕುರಿತು ಮಾತನಾಡಿದನು.
ಸಾಧು ಮಾಮಸಿತಾಪಾಂಗೇ ಕಾಮಾರ್ತಂ ಮತ್ತಕಾಶಿನಿ |
ಭಜಸ್ವೇಹ ಯಥಾ ನಾಹಂ ಪ್ರಾಣಾನ್ ಜಹ್ಯಾಂ ಶುಚಿಸ್ಮಿತೇ ||7||
ಅಸಿತನೇತ್ರಳೇ, ಮತ್ತಕಾಶಿನಿಯೇ, ಶುಚಿಸ್ಮಿತೆಯೇ, ಕಾಮಾರ್ತನಾದ ನನ್ನನ್ನು, ನಾನು ಪ್ರಾಣವನ್ನು ಬಿಡದಿರುವಂತೆ ಅನುಕೂಲಳಾಗಿ ಭಜಿಸು.
ತ್ವದರ್ಥಂ ಹಿ ವಿಶಾಲಾಕ್ಷಿ ಮಾಮಯಂ ನಿಶಿತೈಃ ಶರೈಃ |
ಕಾಮಃ ಕಮಲಪತ್ರಾಭೇ ಪ್ರತಿವಿಧ್ಯನ್ ನ ಶಾಮ್ಯತಿ ||8||
ವಿಶಾಲಾಕ್ಷಿಯೇ, ಕಮಲನೇತ್ರೆಯೇ, ನಿನ್ನ ಸಲುವಾಗಿ ನನ್ನನ್ನು ತನ್ನ ಬಾಣಗಳಿಂದ ಪೀಡಿಸುತ್ತಿರುವ ಮನ್ಮಥನು ಶಾಂತನಾಗುತ್ತಿಲ್ಲ.
ಗ್ರಸ್ತಮೇವಮನಾಕ್ರಂದಂ ಭದ್ರೇ ಕಾಮಮಹಾಹಿನಾ |
ಮಾಂ ಚ ಪೀನಘನಶ್ರೋಣಿ ಸಂಜೀವಯಿತುಮರ್ಹಸಿ ||9||
ಭದ್ರೆಯೇ, ಪೀನಘನಶ್ರೋಣಿಯೇ, ಕಾಮವೆಂಬ ಮಹಾಸರ್ಪದಿಂದ ನಿಶ್ಶಬ್ದವಾಗಿ ಹಿಡಿಯಲ್ಪಟ್ಟ ನನ್ನನ್ನು ನೀನು ಬದುಕಿಸಲು ಅರ್ಹಳಾಗಿದ್ದೀಯೆ.
ತ್ವಯ್ಯಧೀನಾಶ್ಚ ಮೇ ಪ್ರಾಣಾಃ ಕಿನ್ನರೋದ್ಗೀತಭಾಷಿಣಿ |
ಚಾರುಸರ್ವಾನವದ್ಯಾಂಗಿ ಪದ್ಮೇಂದುಸದೃಶಾನನೇ ||10||
ಕಿನ್ನರಭಾಷಿಣಿಯೇ, ನಿರ್ದುಷ್ಟವಾದ ಮತ್ತು ಮನೋಹರವಾದ ಅವಯವಗಳನ್ನು ಉಳ್ಳವಳೇ, ಪದ್ಮ ಮತ್ತು ಚಂದ್ರರಿಗೆ ಹೋಲುವ ಮುಖವುಳ್ಳವಳೇ, ನನ್ನ ಪ್ರಾಣಗಳು ನಿನ್ನ ಅಧೀನವಾಗಿವೆ.
ನ ಹ್ಯಹಂ ತ್ವಾಮೃತೇ ಭೀರು ಶಕ್ಷ್ಯೇ ಜೀವಿತುಮಾತ್ಮನಾ |
ಭಕ್ತಂ ಮಾಮಸಿತಾಪಾಂಗೇ ನ ಪರಿತ್ಯಕ್ತುಮರ್ಹಸಿ ||11||
ಭೀರುವೇ, ನೀನಿಲ್ಲದೇ ನಾನು ಬದುಕಲಾರೆ. ಅಸಿತನೇತ್ರೆಯೇ, ನಿನ್ನ ಭಕ್ತನಾದ ನನ್ನನ್ನು ಪರಿತ್ಯಾಗ ಮಾಡಬೇಡ.
ತ್ವಂ ಹಿ ಮಾಂ ಪ್ರೀತಿಯೋಗೇನ ತ್ರಾತುಮರ್ಹಸಿ ಭಾಮಿನಿ |
ಗಾಂಧರ್ವೇಣ ಚ ಮಾಂ ಭೀರು ವಿವಾಹೇನೈಹಿ ಸುಂದರಿ |
ವಿವಾಹಾನಾಂ ಹಿ ವಾಮೋರು ಗಾಂಧರ್ವಃ ಶ್ರೇಷ್ಠ ಉಚ್ಯತೇ ||12||
ಭಾಮಿನಿಯೇ, ನೀನು ನಿನ್ನ ಪ್ರೀತಿಯನ್ನು ಕೊಟ್ಟು ನನ್ನನ್ನು ರಕ್ಷಿಸಬೇಕು. ಸುಂದರಿಯೇ, ಭೀರುವೇ, ಗಾಂಧರ್ವವಿವಾಹ ಪದ್ಧತಿಯಂತೆ ನನ್ನ ಬಳಿಗೆ ಬಾ. ವಾಮೋರುವೇ, ಎಲ್ಲಾ ವಿವಾಹಗಳಲ್ಲಿ ಗಾಂಧರ್ವವಿವಾಹವು ಶ್ರೇಷ್ಠವೆಂದು ಹೇಳಲ್ಪಡುತ್ತದೆ.
ಕನ್ಯಾ
ನಾಹಮೀಶಾಽಽತ್ಮನೋ ರಾಜನ್ ಕನ್ಯಾ ಪಿತೃಮತೀ ಹ್ಯಹಮ್ |
ಮಯಿ ಚೇದಸ್ತಿ ತೇ ಪ್ರೀತಿರ್ಯಾಚಸ್ವ ಪಿತರಂ ಮಮ ||13||

ರಾಜನೇ, ನಾನು ಸ್ವತಂತ್ರಳಲ್ಲ. ನಾನು ತಂದೆಗೆ ಅಧೀನಳಾದ ಕನ್ಯೆ. ನಿನಗೆ ನನ್ನ ಮೇಲೆ ಪ್ರೀತಿ ಇದ್ದರೆ, ನನ್ನ ತಂದೆಯನ್ನು ಯಾಚಿಸು.
ಯಥಾ ಹಿ ತೇ ಮಯಾ ಪ್ರಾಣಾಃ ಸಂಭೃತಾಶ್ಚ ನರೇಶ್ವರ |
ದರ್ಶನಾದೇವ ಭೂಯಸ್ತ್ವಂ ತಥಾ ಪ್ರಾಣಾನ್ ಮಮಾಹರ ॥14॥
ನರೇಶ್ವರನೇ, ನಾನು ಹೇಗೆ ನಿನ್ನ ಪ್ರಾಣಗಳನ್ನು ತುಂಬಿ ನಿನ್ನನ್ನು ರಕ್ಷಿಸಿದ್ದೇನೆಯೋ, ಹಾಗೆಯೇ, ನೀನೂ ಸಹ ನಿನ್ನ ದರ್ಶನ ಮಾತ್ರದಿಂದ ಹೊರಟಿರುವ ನನ್ನ ಪ್ರಾಣಗಳನ್ನು ಆರಕ್ಷಿಸು.
ನ ಚಾಹಮೀಶ ದೇವಸ್ಯ ತಸ್ಮಾನ್ನೃಪತಿಸತ್ತಮ |
ಸಮೀಪಂ ನೋಪಗಚ್ಛಾಮಿ ನ ಸ್ವತಂತ್ರಾ ಹಿ ಯೋಷಿತಃ ॥15॥
ರಾಜಶ್ರೇಷ್ಠನೇ, ನಾನು ತಂದೆಯಾದ ಸೂರ್ಯದೇವನ ಮೇಲೆ ಅಧಿಕಾರವನ್ನು ಹೊಂದಿದವಳಲ್ಲ. ಆದ್ದರಿಂದ ನಿನ್ನ ಸಮೀಪಕ್ಕೆ ಬರುವುದಿಲ್ಲ. ಸ್ತ್ರೀಯರು ಸ್ವತಂತ್ರರಲ್ಲವಷ್ಟೇ?
ಕಾ ಹಿ ಸರ್ವೇಷು ಲೋಕೇಷು ವಿಶ್ರುತಾಭಿಜನಂ ನೃಪಮ್ |
ಕನ್ಯಾ ನಾಭಿಲಷೇನ್ನಾಥಂ ಭರ್ತಾರಂ ಭಕ್ತವತ್ಸಲಮ್ ॥16॥
ಯಾವ ಕನ್ಯೆಯು ತಾನೆ ಮೂರುಲೋಕಗಳಲ್ಲಿಯೂ ಪ್ರಖ್ಯಾತವಾದ ಕುಲದಲ್ಲಿ ಜನ್ಮವನ್ನು ಹೊಂದಿರುವ ಭಕ್ತವತ್ಸಲನಾದ ರಾಜನಾದ ನಿನ್ನಂತಹ ನಾಥನನ್ನು ಪತಿಯನ್ನಾಗಿ ಬಯಸುವುದಿಲ್ಲ?
ತಸ್ಮಾದೇವಂಗತೇ ಕಾಲೇ ಯಾಚಸ್ವ ಪಿತರಂ ಮಮ |
ಆದಿತ್ಯಂ ಪ್ರಣಿಪಾತೇನ ತಪಸಾ ನಿಯಮೇನ ಚ ॥17॥
ಆದ್ದರಿಂದ ಇಂತಹ ಪರಿಸ್ಥಿತಿ ಇರುವಾಗ ನೀನು ನಮಸ್ಕಾರ, ತಪಸ್ಸು ಮತ್ತು ನಿಯಮಗಳಿಂದ ನನ್ನ ತಂದೆಯಾದ ಸೂರ್ಯನನ್ನು ಯಾಚಿಸು.
ಸ ಚೇತ್ ಕಾಮಯತೇ ದಾತುಂ ತವ ಮಾಮರಿಮರ್ದನ |
ಭವಿಷ್ಯಾಮ್ಯಥ ತೇ ರಾಜನ್ ಸತತಂ ವಶವರ್ತಿನೀ ॥18॥
ಶತ್ರುಮರ್ದನನಾದ ರಾಜನೇ, ಅವನು ನನ್ನನ್ನು ನಿನಗೆ ಕೊಡಲು ಬಯಸಿದರೆ, ಅನಂತರ ನಾನು ನಿನಗೆ ಯಾವಾಗಲೂ ವಶವರ್ತಿನಿಯಾಗಿ ಇರುವೆನು.
ಅಹಂ ಹಿ ತಪತೀ ನಾಮ ಸಾವಿತ್ರ್ಯವರಜಾ ಸುತಾ |
ಅಸ್ಯ ಲೋಕಪ್ರದೀಪಸ್ಯ ಸವಿತುಃ ಕ್ಷತ್ರಿಯರ್ಷಭ ॥19॥
ಕ್ಷತ್ರಿಯಷರ್ಭನೇ, ನಾನು ಲೋಕಪ್ರದೀಪನಾದ ಸೂರ್ಯದೇವನ ತಪತಿ ಎಂಬ ಮಗಳು, ಸಾವಿತ್ರಿಯ ತಂಗಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****
ನೂರ ಎಪ್ಪತ್ತಾರನೆಯ ಅಧ್ಯಾಯ
(ತಪತಿಯ ಅಂತರ್ಧಾನ, ಸಂವರಣನ ವಿಲಾಪ ಮತ್ತು ಮೂರ್ಛೆ, ಮಂತ್ರಿಯಿಂದ ಸಮಾಧಾನ, ಸಂವರಣನ ತಪಸ್ಸು, ವಸಿಷ್ಠರ ಆಗಮನ)
ಗಂಧರ್ವಃ
ಏವಮುಕತ್ವ ತತಸ್ತೂರ್ಣಂ ಜಗಾಮೋರ್ಧ್ವಮನಿಂದಿತಾ |
ತಪತೀ ತಪತೀತ್ಯೇವ ವಿಲಲಾಪಾತುರೋ ನೃಪಃ ॥1॥
ಅನಿಂದಿತಳಾದ ತಪತೀಯು ಹೀಗೆ ಹೇಳಿ ಶೀಘ್ರವಾಗಿ ಊರ್ಧ್ವಮುಖವಾಗಿ ಪ್ರಯಾಣ ಮಾಡಿದಳು. ರಾಜನು ಕಾಮಾತುರನಾಗಿ ತಪತೀ ತಪತೀ ಎಂದು ವಿಲಾಪ ಮಾಡಿದನು.
ಪ್ರಸ್ಖಲಂಶ್ಚಾಸಕೃದ್ ರಾಜಾ ಪುನರುತ್ಥಾಯ ಧಾವತಿ |
ಧಾವಮಾನಸ್ತು ತಪತೀಮದೃಷ್ಟ್ವೈವ ಮಹೀಪತೇ ॥2॥
ರಾಜನೇ, ರಾಜನು ತಪತೀಯನ್ನು ಕಾಣದೇ ಓಡಿದನು. ಅನೇಕ ಬಾರಿ ಎಡವಿ ಮತ್ತೆ ಎದ್ದು ಓಡಿದನು.
ಅಮಾತ್ಯಃ ಸಾನುಯಾತ್ರಸ್ತು ಸಂದದರ್ಶ ಮಹಾವನೇ |
ಕ್ಷಿತೌ ನಿಪತಿತಂ ಕಾಲೇ ಶಕ್ರಧ್ವಜಮಿವೋಚ್ಛ್ರಿತಮ್ ॥3॥
ಅನುಚರರಿಂದ ಕೂಡಿದ ಅವನ ಅಮಾತ್ಯನು ಕಾಡಿನಲ್ಲಿ ಎತ್ತರವಾದ ಇಂದ್ರಧ್ವಜದಂತೆ ಭೂಮಿಯ ಮೇಲೆ ಬಿದ್ದಿದ್ದ ಅವನನ್ನು ಸರಿಯಾದ ಸಮಯದಲ್ಲಿ ನೋಡಿದನು.
ತಂ ಹಿ ದೃಷ್ಟ್ವಾ ಮಹೇಷ್ವಾಸಂ ನಿರಸ್ತಂ ಪತಿತಂ ಕ್ಷಿತೌ |
ಬಭೂವ ಸೋಽಸ್ಯ ಸಚಿವಃ ಸಂಪ್ರದೀಪ್ತ ಇವಾಗ್ನಿನಾ ॥4॥
ಆ ಮಹೇಷ್ವಾಸನಾದ ರಾಜನು ಭೂಮಿಯ ಮೇಲೆ ಬಿದ್ದಿರುವುದನ್ನು ನೋಡಿ ಅವನ ಆ ಸಚಿವನು ಅಗ್ನಿಯಿಂದ ಸಂದೀಪ್ತನಾದಂತೆ ಆದನು.
ತ್ವರಯಾ ಚೋಪಸಂಗೃಹ್ಯ ಸ್ನೇಹಾದಾಗತಸಂಭ್ರಮಃ |
ತಂ ಸಮುತ್ಥಾಪಯಾಮಾಸ ನೃಪತಿಂ ಕಾಮಮೋಹಿತಮ್ |
ಭೂತಳಾದ್ ಭೂಮಿಪಾಲೇಶಂ ಪಿತೇವ ಪತಿತಂ ಸುತಮ್ ॥5॥

ರಾಜನ ಮೇಲಿನ ಸ್ನೇಹದಿಂದ ಗಾಬರಿಯುಳ್ಳವನಾಗಿ ಆ ಮಂತ್ರಿಯು ಕಾಮಮೋಹಿತನಾದ ರಾಜನನ್ನು, ಬಿದ್ದ ಮಗನನ್ನು ತಂದೆಯು ಎತ್ತುವಂತೆ, ತನ್ನ ಕೈಗಳಿಂದ ಹಿಡಿದು ಭೂತಳದಿಂದ ಎಬ್ಬಿಸಿದನು.
ಪ್ರಜ್ಞಯಾ ತಪಸಾ ಚೈವ ವೃದ್ಧಃ ಕೀರ್ತ್ಯಾ ದಮೇನ ಚ |
ಅಮಾತ್ಯಸ್ತಂ ಸಮುತ್ಥಾಪ್ಯ ಬಭೂವ ವಿಗತಜ್ವರಃ |
ಉವಾಚ ಚೈನಂ ಕಲ್ಯಾಣಂ ವಾಚಾ ಮಧುರಯೋತ್ಥಿತಮ್ ॥6॥
ಮಾ ಭೈರ್ಮನುಜಶಾರ್ದೂಲ ಭದ್ರಂ ಚಾಸ್ತು ತವಾನಘ |
ಕ್ಷುತ್ಪಿಪಾಸಾಶ್ರಮಾರ್ತಂ ತು ತರ್ಕಯಾಮಾಸ ತಂ ನೃಪಮ್ ॥7॥
ಪ್ರಜ್ಞೆಯಿಂದಲೂ, ತಪಸ್ಸಿನಿಂದಲೂ, ಕೀರ್ತಿಯಿಂದಲೂ ಮತ್ತು ಇಂದ್ರಿಯನಿಗ್ರಹದಿಂದಲೂ ಕೂಡಿದ ವೃದ್ಧನಾದ ಮಂತ್ರಿಯು ಅವನನ್ನು ಎಬ್ಬಿಸಿ ಮನಸ್ಸಿನ ಆತಂಕವನ್ನು ತೊರೆದನು. ಆ ಕಲ್ಯಾಣನಾದ ರಾಜನನ್ನು ಕುರಿತು ಮಧುರವಾದ ಮಾತುಗಳಿಂದ ರಾಜಶಾರ್ದೂಲನೇ, ಹೆದರಬೇಡ. ಅನಘನೇ, ನಿನಗೆ ಮಂಗಳವಾಗಲಿ ಎಂದು ಹೇಳಿದನು.  ರಾಜನು ಹಸಿವು ಮತ್ತು ಬಾಯಾರಿಕೆಗಳಿಂದ ಬಳಲಿದ್ದಾನೆ ಎಂದೂ ಊಹಿಸಿದನು.
ಪತಿತಂ ಪಾತನಂ ಸಂಖೇ ಶಾತ್ರವಾಣಾಂ ಮಹೀತಳೇ |
ವಾರಿಣಾಽಥ ಸುಶೀತೇನ ಶಿರಸ್ಯಸ್ಯಾವಸೇಚಯತ್ ॥8॥
ಶತ್ರುಗಳನ್ನು ಯುದ್ಧದಲ್ಲಿ ಉರುಳಿಸುವ ರಾಜನು ತಾನೇ ಭೂತಳದಲ್ಲಿ ಉರುಳಿರುವುದನ್ನು ನೋಡಿ ಮಂತ್ರಿಯು ಅವನ ತಲೆಯ ಮೇಲೆ ಶೀತಲವಾದ ನೀರನ್ನು ಚಿಮುಕಿಸಿದನು.
ಅಸ್ಪೃಶನ್ಮಕುಟಂ ರಾಜ್ಞಃ ಪುಂಡರೀಕಸುಗಂಧಿನಾ |
ತತಃ ಪ್ರತ್ಯಾಗತಪ್ರಾಣಃ ತದ್ಬಲಂ ಬಲವಾನ್ ನೃಪಃ |
ಸರ್ವಂ ವಿಸರ್ಜಯಾಮಾಸ ತಮೇಕಂ ಸಚಿವಂ ವಿನಾ ॥9॥
ಮಂತ್ರಿಯು ಕಮಲದಂತೆ ಸುಗಂಧಯುಕ್ತವಾದ ತನ್ನ ಹಸ್ತದಿಂದ ರಾಜನ ಶಿರಸ್ಸನ್ನು ಮುಟ್ಟಿದನು. ಆಗ ಪ್ರಜ್ಞೆಯನ್ನು ಮರಳಿ ಪಡೆದ ಬಲಿಷ್ಠನಾದ ಆ ರಾಜನು ಆ ಸಚಿವನೊಬ್ಬನನ್ನು ಬಿಟ್ಟು ಉಳಿದ ಸೈನ್ಯವನ್ನೆಲ್ಲಾ ಹಿಂದಕ್ಕೆ ಕಳುಹಿಸಿದನು.
ತತಸ್ತಸ್ಯಾಜ್ಞಯಾ ರಾಜ್ಞೋ ವಿಪ್ರತಸ್ಥೇ ಮಹದ್ಬಲಮ್ |
ಸ ತು ರಾಜಾ ಗಿರಿಪ್ರಸ್ಥೇ ತಸ್ಮಿನ್ ಪುನರುಪಾವಿಶತ್ ॥10॥
ಆಗ ಆ ರಾಜನ ಆಜ್ಞೆಯಂತೆ ಅವನ ದೊಡ್ಡ ಸೈನ್ಯವು ಅಲ್ಲಿಂದ ಹೊರಟಿತು. ಆ ರಾಜನಾದರೋ ಅಲ್ಲಿಯೇ ಗಿರಿಪ್ರಸ್ಥದಲ್ಲಿ ಪುನಃ ಕುಳಿತನು.
ಸ ತು ತಸ್ಮಿನ್ ಗಿರಿವರೇ ಶುಚಿರ್ಭೂತ್ವಾ ಕೃತಾಂಜಲಿಃ |
ಆರಿರಾಧಯಿಷುಃ ಸೂರ್ಯಂ ತಸ್ಥಾವೂರ್ಧ್ವಭುಜಃ ಕ್ಷಿತೌ ॥11॥
ಜಗಾಮ ಮನಸಾ ಚೈವಂ ವಸಿಷ್ಠಮೃಷಿಸತ್ತಮಮ್ |
ಪುರೋಹಿತಮಮಿತ್ರಘ್ನಂ ತದಾ ಸಂವರಣೋ ನೃಪಃ ॥12॥
ಆ ರಾಜನು ಆ ಶ್ರೇಷ್ಠಪರ್ವತದಲ್ಲಿ ಶುಚಿರ್ಭೂತನಾಗಿ ಭುಜಗಳನ್ನು ಮೇಲೆತ್ತಿ ಕೈಗಳನ್ನು ಮುಗಿದು ನೆಲದ ಮೇಲೆ ನಿಂತು ಸೂರ್ಯನನ್ನು ಆರಾಧಿಸಲು ಬಯಸಿದವನಾಗಿ ಮನಸ್ಸಿನಲ್ಲಿ ಕುಲಾಚಾರ್ಯರಾದ, ಶತ್ರುನಾಶಕರಾದ, ಋಷಿಶ್ರೇಷ್ಠರಾದ ವಸಿಷ್ಠರನ್ನು ಸ್ಮರಿಸಿದನು.
ನಕ್ತಂದಿವಮಥೈಕಸ್ಥೇ ಸ್ಥಿತೇ ತಸ್ಮಿನ್ ಜನಾಧಿಪೇ |
ಅಥಾಜಗಾಮ ವಿಪ್ರರ್ಷಿಸ್ತದಾ ದ್ವಾದಶಮೇಽಹನಿ ॥13॥
ಆ ರಾಜನು ಒಂದೇ ಕಡೆಯಲ್ಲಿ ಕುಳಿತು ಹಗಲೂ ರಾತ್ರಿಯೂ ಏಕಪ್ರಕಾರವಾಗಿ ವಸಿಷ್ಠರನ್ನು ಧ್ಯಾನ ಮಾಡುತ್ತಿರಲು ಹನ್ನೆರಡನೆಯ ದಿವಸ ವಸಿಷ್ಠರು ಅಲ್ಲಿಗೆ ಬಂದರು.
ಸ ವಿದಿತ್ವೈವ ನೃಪತಿಂ ತಪತ್ಯಾ ಕ್ಷತಮಾನಸಮ್ |
ದಿವ್ಯೇನ ಜಕ್ಷುಷಾ ಜ್ಞಾತ್ವಾ ಭಾವಿತಾತ್ಮಾ ಮಹಾನೃಷಿಃ ॥14॥
ಪರಿಶುದ್ಧ ಮನಸ್ಸುಳ್ಳ ಆ ಮಹರ್ಷಿಗಳು ತಮ್ಮ ದಿವ್ಯದೃಷ್ಟಿಯಿಂದ ರಾಜನ ಮನಸ್ಸು ತಪತಿಯಿಂದ ಘಾಯಗೊಂಡಿದೆ ಎಂದು ತಿಳಿದೇ ಅಲ್ಲಿಗೆ ಬಂದರು.
ತಥಾ ತು ನಿಯತಾತ್ಮಾನಂ ತಂ ವೈ ನೃಪತಿಸತ್ತಮಮ್ |
ಆಬಭಾಷೇ ಸ ಧರ್ಮಾತ್ಮಾ ತಸ್ಯೈವಾರ್ಥಚಿಕೀರ್ಷಯಾ ॥15॥
ಆ ರೀತಿಯಲ್ಲಿ ಮನಸ್ಸನ್ನು ನಿಯಂತ್ರಿಸಿ ಧ್ಯಾನಮಾಡುತ್ತಿದ್ದ ರಾಜಶ್ರೇಷ್ಠನನ್ನು ಕುರಿತು ಧರ್ಮಾತ್ಮರಾದ ಅವರು ಅವನ ಕಾರ್ಯವನ್ನೇ ಸಾಧಿಸುವ ಸಲುವಾಗಿ ಅವನನ್ನು ಕುರಿತು ಮಾತನಾಡಿದರು.
ಸ ತಸ್ಯ ಮನುಜೇಂದ್ರಸ್ಯ ಪಶ್ಯತೋ ಭಗವಾನೃಷಿಃ |
ಊರ್ಧ್ವಮಾಚಕ್ರಮೇ ದ್ರಷ್ಟುಂ ಭಾಸ್ಕರಂ ಭಾಸ್ಕರದ್ಯುತಿಃ ॥18॥
ಸೂರ್ಯನ ತೇಜಸ್ಸುಳ್ಳ ಪೂಜ್ಯರಾದ ಆ ಋಷಿಗಳು, ರಾಜನು ನೋಡುತ್ತಿರುವಂತೆಯೇ ಸೂರ್ಯನನ್ನು ಸಂದರ್ಶಿಸಲು ಊರ್ಧ್ವಮಾರ್ಗದಲ್ಲಿ ಹೊರಟರು.
ಯೋಜನಾನಾಂ ತು ನಿಯುತಂ ಕ್ಷಣಾದ್ ಗತ್ವಾ ತಪೋಧನಃ |
ಸಹಸ್ರಾಂಶುಂ ತತೋ ವಿಪ್ರಃ ಕೃತಾಂಜಲಿರುಪಸ್ಥಿತಃ ॥19॥
ತಪೋಧನರಾದ ಅವರು ಒಂದು ಕ್ಷಣದಲ್ಲಿ ಒಂದು ಲಕ್ಷ ಯೋಜನಮಾರ್ಗವನ್ನು ಕ್ರಮಿಸಿ ಸಹಸ್ರಾಂಶುವಾದ ಸೂರ್ಯನ ಎದುರಿಗೆ ಕೈ

ಮುಗಿದು ನಿಂತರು.
ವಸಿಷ್ಠೋಽಹಮಿತಿ ಪ್ರೀತ್ಯಾ ಸ ಚಾತ್ಮಾನಂ ನ್ಯವೇದಯತ್ |
ತಮುವಾಚ ಮಹಾತೇಜಾ ವಿವಸ್ವಾನ್ ಮುನಿಸತ್ತಮಮ್ |
ಮಹರ್ಷೇ ಸ್ವಾಗತಂ ತೇಽಸ್ತು ಕಥಯಸ್ವ ಯಥೇಪ್ಸಿತಮ್ ॥20॥
ಅವರು ಸೂರ್ಯನನ್ನು ಕುರಿತು `ನಾನು ವಸಿಷ್ಠ' ಎಂದು ತಮ್ಮನ್ನು ನಿವೇದಿಸಿಕೊಂಡರು. ಮಹಾತೇಜಸ್ವಿಯಾದ ಸೂರ್ಯನು ಆ ಋಷಿಶ್ರೇಷ್ಠರನ್ನು ಕುರಿತು `ಮಹರ್ಷಿಗಳೇ, ನಿಮಗೆ ಸ್ವಾಗತ. ಏನು ಕಾರ್ಯವಾಗಬೇಕಾಗಿದೆ ಎಂದು ಹೇಳಿ' ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಟ್‌ಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
*****

ನೂರ ಎಪ್ಪತ್ತೇಳನೆಯ ಅಧ್ಯಾಯ
(ಸೂರ್ಯನಿಂದ ತಪತಿಯನ್ನು ತಂದು ಸಂವರಣನ ಜೊತೆಯಲ್ಲಿ ವಿವಾಹ. ರಾಜನು ವನದಲ್ಲಿಯೇ ವಿಹರಿಸುತ್ತಿರಲು ರಾಜ್ಯದಲ್ಲಿ ಅನಾವೃಷ್ಟಿ. ವಸಿಷ್ಠರಿಂದ ರಾಜನ ಆನಯನ, ಸುಭಿಕ್ಷೆ.)
ಗಂಧರ್ವಃ
ಯೋಜನಾನಾಂ ಚತುಷ್ಷಷ್ಟಿಂ ನಿಮೇಷಾತ್ ತ್ರಿಶತಂ ತಥಾ |
ಅಶ್ವೈರ್ಗಚ್ಛತಿ ನಿತ್ಯಂ ಯಸ್ತಂ ಪಾರ್ಶ್ವಸ್ಥೋಽಬ್ರವೀದಿದಮ್ ॥1॥
ಯಾವ ಸೂರ್ಯನು ಒಂದು ನಿಮಿಷದಲ್ಲಿ ತನ್ನ ಕುದುರೆಗಳಿಂದ ಮುನ್ನೂರ ಅರವತ್ತನಾಲ್ಕು ಯೋಜನಗಳನ್ನು ಕ್ರಮಿಸುತ್ತಾನೋ ಅಂತಹ ಸೂರ್ಯನ ಪಾರ್ಶ್ವದಲ್ಲಿ ನಿಂತು ವಸಿಷ್ಠರು ಹೀಗೆ ಹೇಳಿದರು.
ಅಜಾಯ ಲೋಕತ್ರಯಭಾವನಾಯ
ಭೂತಾತ್ಮನೇ ಗೋಪತಯೇ ವೃಷಾಯ |
ಸೂರ್ಯಾಯ ಸರ್ಗಪ್ರಳಯಾಲಯಾಯ
ನಮೋ ಮಹಾಕಾರುಣಿಕೋತ್ತಮಾಯ ॥2॥
ಜನ್ಮರಹಿತನಾದ, ಮೂರುಲೋಕಗಳ ಸೃಷ್ಟಿಕರ್ತನಾದ ಸರ್ವಜೀವರ ಸ್ವಾಮಿಯಾದ, ರಶ್ಮಿಗಳಿಗೆ ಒಡೆಯನಾದ ಸರ್ವೋತ್ತಮನಾದ, ಮಹಾಕಾರುಣಿಕನಾದ, ಸೃಷ್ಟಿಸಂಹಾರಗಳಿಗೆ ಕಾರಣನಾದ ಸೂರ್ಯನಿಗೆ ನಮಸ್ಕಾರ.
ವಿವಸ್ವತೇ ಜ್ಞಾನಹೃದಂತರಾತ್ಮನೇ ಜಗತ್ಪ್ರದೀಪಾಯ ಜಗದ್ಧಿತೈಷಿಣೇ |
ಸ್ವಯಂಭುವೇ ದೀಪ್ತಸಹಸ್ರಚಕ್ಷುಷೇ ಸುರೋತ್ತಮಾಯಾಮಿತ-
ತೇಜಸೇ ನಮಃ ॥3॥
ಜ್ಞಾನಪೂರ್ಣವಾದ ಮನಸ್ಸುಳ್ಳ, ಜಗತ್ತನ್ನು ಬೆಳಗುವ, ಜಗತ್ತಿನ ಹಿತೈಷಿಯಾದ, ಸ್ವಯಂಭುವಾದ, ಪ್ರಕಾಶಮಾನವಾದ ಸಹಸ್ರಕಣ್ಣುಳ್ಳ, ಅಮಿತ ತೇಜಸ್ವಿಯಾದ, ದೇವಶ್ರೇಷ್ಠನಾದ ವಿವಸ್ವಂತನಿಗೆ ನಮಸ್ಕಾರ. (ಇಲ್ಲಿಯ ವಿಶೇಷಣಗಳನ್ನು ಸೂರ್ಯನಲ್ಲಿಯೂ, ಸೂರ್ಯನ ಅಂತರ್ಯಾಮಿಯಾದ ನಾರಾಯಣನಲ್ಲಿಯೂ ಯಥಾಯೋಗ್ಯವಾಗಿ ಅನ್ವಯ ಮಾಡಿಕೊಳ್ಳಬೇಕು.)

ಸೂರ್ಯಃ
ಸ್ತುತೋಽಹಂ ವರದಸ್ತೇನ ವರಂ ವರಯ ಸುವ್ರತ |
ಸ್ತುತಿಸ್ತ್ವಯೋಕ್ತಾ ಭಕ್ತಾನಾಂ ಜಪ್ಯೇಯಂ ವರದೋಽಸ್ಮ್ಯಹಮ್ ॥
ಸುವ್ರತನೇ, ನೀನು ನನ್ನನ್ನು ಸ್ತೋತ್ರ ಮಾಡಿದ್ದೀಯೆ. ಆದ್ದರಿಂದ ವರವನ್ನು ಕೇಳು. ನಾನು ವರವನ್ನು ಕೊಡಲು ಸಿದ್ಧನಾಗಿದ್ದೇನೆ. ನೀನು ಮಾಡಿದ ಸ್ತುತಿಯು ಭಕ್ತರು ಜಪವನ್ನು ಮಾಡಲು ಯೋಗ್ಯವಾಗಿದೆ.
ವಸಿಷ್ಠಃ
ಯೈಷಾ ತೇ ತಪತೀ ನಾಮ ಸಾವಿತ್ರ್ಯವರಜಾ ಸುತಾ |
ತಾಂ ತ್ವಾಂ ಸಂವರಣಸ್ಯಾರ್ಥೇ ವರಯಾಮಿ ವಿಭಾವಸೋ ॥5॥
ಎಲೈ ಸೂರ್ಯನೇ, ಸಾವಿತ್ರಿಯ ತಂಗಿಯಾದ, ನಿನ್ನ ಮಗಳಾದ ತಪತಿಯನ್ನು ನಾನು ಸಂವರಣನ ಸಲುವಾಗಿ ಬೇಡುತ್ತಿದ್ದೇನೆ.
ಸ ಹಿ ರಾಜಾ ಬೃಹತ್ಕೀರ್ತಿರ್ಧರ್ಮಾರ್ಥವಿದುದಾರಧೀಃ |
ಯುಕ್ತಃ ಸಂವರಣೋ ಭರ್ತಾ ದುಹಿತುಸ್ತೇ ವಿಹಂಗಮ ॥6॥
ಎಲೈ ಆಕಾಶಸಂಚಾರಿಯಾದ ಸೂರ್ಯನೇ, ಆ ಸಂವರಣರಾಜನು ಬೃಹತ್ಕೀರ್ತಿಯುಳ್ಳವನೂ, ಧರ್ಮಾರ್ಥಗಳನ್ನು ತಿಳಿದವನೂ, ಉದಾರವಾದ ಬುದ್ಧಿಯುಳ್ಳವನೂ ಆಗಿ ನಿನ್ನ ಮಗಳಿಗೆ ಯೋಗ್ಯನಾದ ಪತಿಯಾಗಿದ್ದಾನೆ.
ಗಂಧರ್ವಃ
ಇತ್ಯುಕ್ತಃ ಸವಿತಾ ತೇನ ದದಾಮೀತ್ಯೇವ ನಿಶ್ಚಿತಃ |
ಪ್ರತ್ಯಭಾಷತ ತಂ ವಿಪ್ರಂ ಪ್ರತಿನಂದ್ಯ ದಿವಾಕರಃ ॥7॥
ವಸಿಷ್ಠರ ಈ ಮಾತನ್ನು ಕೇಳಿ ಸೂರ್ಯನು ಸಂತೋಷಪಟ್ಟು ಕೊಡುತ್ತೇನೆ ಎಂದು ನಿಶ್ಚಯಿಸಿ ವಸಿಷ್ಠರನ್ನು ಕುರಿತು

ಮಾತನಾಡಿದನು.
ವರಃ ಸಂವರಣೋ ರಾಜ್ಞಾಂ ತ್ವಮೃಷೀಣಾಂ ವರೋ ಮುನೇ |
ತಪತೀ ಯೋಷಿತಾಂ ಶ್ರೇಷ್ಠಾ ಕಿಮನ್ಯತ್ರಾಪಸರ್ಜನಾತ್ ॥8॥
ಸಂವರಣನು ರಾಜರಲ್ಲಿ ಶ್ರೇಷ್ಠನಾದವನು. ಮುನಿಯೇ, ನೀವು ಋಷಿಗಳಲ್ಲಿ ಶ್ರೇಷ್ಠರಾದವರು. ತಪತಿಯು ಕನ್ಯೆಯರಲ್ಲಿ ಶ್ರೇಷ್ಠಳಾದವಳು. ಕೊಡುವುದನ್ನು ಬಿಟ್ಟು ಬೇರೆ ಏನು ಮಾಡಲು ಸಾಧ್ಯ.
ಗಂಧರ್ವಃ
ತತಃ ಸರ್ವಾನವದ್ಯಾಂಗೀಂ ತಪತೀಂ ತಪನಃ ಸ್ವಯಮ್ |
ದದೌ ಸಂವರಣಸ್ಯಾರ್ಥೇ ವಸಿಷ್ಠಾಯ ಮಹಾತ್ಮನೇ ॥9॥
ಅನಂತರ ನಿರ್ದುಷ್ಟವಾದ, ಸರ್ವಅವಯವಗಳುಳ್ಳ ತಪತಿಯನ್ನು ಸೂರ್ಯನು ತಾನೇ ಸಂವರಣನ ಸಲುವಾಗಿ ಮಹಾತ್ಮರಾದ ವಸಿಷ್ಠರಿಗೆ ಕೊಟ್ಟನು.
ಪ್ರತಿಜಗ್ರಾಹ ತಾಂ ಕನ್ಯಾಂ ಮಹರ್ಷಿಸ್ತಪತೀಂ ತದಾ |
ವಸಿಷ್ಠೋಽಥ ವಿಸೃಷ್ಟಶ್ಚ ಪುನರೇವಾಜಗಾಮ ಹ ॥10॥
ಯತ್ರ ವಿಖ್ಯಾತವೀರ್ಯಃ ಸ ಕುರೂಣಾಮೃಷಭೋಽಭವತ್ |
ಸ ರಾಜಾ ಮನ್ಮಥಾವಿಷ್ಟಃ ತದ್ಗತೇನಾಂತರಾತ್ಮನಾ ॥11॥
ಮಹರ್ಷಿಗಳಾದ ವಸಿಷ್ಠರು ಆಗ ಆ ಕನ್ಯೆಯನ್ನು ಸ್ವೀಕರಿಸಿದರು. ಅವರು ಸೂರ್ಯನ ಅನುಮತಿಯನ್ನು ಪಡೆದು ಎಲ್ಲಿ ಕೌರವಶ್ರೇಷ್ಠನಾದ, ವಿಖ್ಯಾತನಾದ ಸಂವರಣರಾಜನು ಅವಳಲ್ಲೇ ಅನುರಕ್ತವಾದ ಮನಸ್ಸಿನಿಂದ ಕಾಮಾವಿಷ್ಟನಾಗಿದ್ದನೋ, ಅಲ್ಲಿಗೆ ಪುನಃ ಬಂದರು.
ದೃಷ್ಟ್ವಾ ತು ದೇವಕನ್ಯಾಂ ತಾಂ ತಪತೀಂ ಚಾರುಹಾಸಿನೀಮ್ |
ವಸಿಷ್ಠೇನ ಸಹಾಯಾಂತೀಂ ಸ ಹೃಷ್ಟೋಽಭ್ಯಧಿಕಂ ಬಭೌ ॥12॥
ದೇವಕನ್ಯೆಯೂ, ಚಾರುಹಾಸಿನಿಯೂ ಆದ ಅವಳು ವಸಿಷ್ಠರ ಜೊತೆಯಲ್ಲಿ ಬರುತ್ತಿರುವುದನ್ನು ನೋಡಿ ರಾಜನು ಬಹಳ ಸಂತೋಷವನ್ನು ಹೊಂದಿ ಕಾಂತಿಯುಕ್ತನಾದನು.
ಕೃಚ್ಛ್ರಾದ್ ದ್ವಾದಶರಾತ್ರೇಷು ತಸ್ಯ ರಾಜ್ಞಃ ಸಮಾಹಿತೇ |
ಆಜಗಾಮ ವಿಶುದ್ಧಾತ್ಮಾ ವಸಿಷ್ಠೋ ಭಗವಾನೃಷಿಃ ॥13॥
ಹನ್ನೆರಡು ರಾತ್ರಿಗಳನ್ನು ಆ ರಾಜನು ಕಷ್ಟದಿಂದ ಕಳೆಯುತ್ತಿರಲು ಅವನ ಸಮಾಧಾನಕ್ಕೋಸ್ಕರವಾಗಿ ವಿಶುದ್ಧಾತ್ಮರಾದ ಮತ್ತು ಪೂಜ್ಯರಾದ ವಸಿಷ್ಠಋಷಿಗಳು ಅಲ್ಲಿಗೆ ಬಂದರು.
ತಪಸಾಽಽರಾಧ್ಯ ವಿಧಿವದ್ ದೇವಂ ಗೋಪತಿಮೀಶ್ವರಮ್ |
ಲೇಭೇ ಸಂವರಣೋ ಭಾರ್ಯಾಂ ವಸಿಷ್ಠಸ್ಯ ಚ ತೇಜಸಾ ॥14॥
ಸಂವರಣನು ಗೋಪತಿಯಾದ ಸೂರ್ಯದೇವನನ್ನು ವಿಧಿವತ್ತಾಗಿ ತಪಸ್ಸಿನಿಂದ ಅರಾಧಿಸಿ ಮತ್ತು ವಸಿಷ್ಠರ ತೇಜಸ್ಸಿನ ಕಾರಣದಿಂದಲೂ ಕೂಡ ಭಾರ್ಯೆಯನ್ನು ಪಡೆದನು.
ತತಸ್ತಸ್ಮಿನ್ ಗಿರಿಶ್ರೇಷ್ಠೇ ದೇವಗಂಧರ್ವಸೇವಿತೇ |
ಜಗ್ರಾಹ ವಿಧಿವತ್ ಪಾಣಿಂ ತಪತ್ಯಾಃ ಸ ನರರ್ಷಭಃ ॥15॥
ಅನಂತರ ಆ ರಾಜನು ದೇವಗಂಧರ್ವರಿಂದ ಸೇವಿತರಾದ ಆ ಶ್ರೇಷ್ಠವಾದ ಪರ್ವತದಲ್ಲಿ ತಪತಿಯನ್ನು ವಿಧಿಪೂರ್ವಕವಾಗಿ ಪಾಣಿಗ್ರಹಣ ಮಾಡಿದನು.
ವಸಿಷ್ಠೇನಾಭ್ಯನುಜ್ಞಾತಃ ತಸ್ಮಿನ್ನೇವ ಧರಾಧರೇ |
ಸೋಽಕಾಮಯತ ರಾಜರ್ಷಿರ್ವಿಹರ್ತುಂ ಸಹ ಭಾರ್ಯಯಾ ॥16॥
ಆ ರಾಜರ್ಷಿಯು ವಸಿಷ್ಠರ ಅನುಮತಿಯನ್ನು ಪಡೆದು, ಅದೇ ಪರ್ವತದಲ್ಲಿ ಪತ್ನಿಯ ಜೊತೆಯಲ್ಲಿ ವಿಹರಿಸಲು ಬಯಸಿದನು.
ತತಃ ಪುರೇಷು ರಾಷ್ಟ್ರೇಷು ವಾಹನೇಷು ಬಲೇಷು ಚ |
ಆದಿದೇಶ ಮಹೀಪಾಲಃ ತಮೇವ ಸಚಿವಂ ತದಾ ॥17॥
ಅನಂತರ ಆ ಮಂತ್ರಿಯನ್ನೇ ಪಟ್ಟಣಗಳಿಗೆ, ರಾಷ್ಟ್ರಕ್ಕೆ, ವಾಹನಗಳಿಗೆ ಮತ್ತು ಸೈನ್ಯಕ್ಕೂ ಅಧಿಪತಿಯನ್ನಾಗಿ ಆ ರಾಜನು ನೇಮಿಸಿದನು.
ನೃಪತಿಂ ತ್ವಭ್ಯನುಜ್ಞಾಪ್ಯ ವಸಿಷ್ಠೋಽಥಾಪಚಕ್ರಮೇ |
ಸ ಹಿ ರಾಜಾ ಗಿರೌ ತಸ್ಮಿನ್ ವಿಜಹಾರಾಮರೋಪಮಃ ॥18॥
ವಸಿಷ್ಠರು ರಾಜನ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟುಹೋದರು. ದೇವಸದೃಶನಾದ ಆ ರಾಜನು ಆ ಪರ್ವತದಲ್ಲಿ ವಿಹಾರವನ್ನು ಮಾಡಿದನು.
ತತೋ ದ್ವಾದಶವರ್ಷಾಣಿ ಕಾನನೇಷು ಜಲೇಷು ಚ |
ರೇಮೇ ತಸ್ಮಿನ್ ಗಿರೌ ರಾಜಾ ಸಹಿತೋ ಭಾರ್ಯಯಾ ಯದಾ ॥19॥
ಅಲ್ಲಿಂದ ಹನ್ನೆರಡು ವರ್ಷಗಳಕಾಲ ಆ ರಾಜನು ತನ್ನ ಪತ್ನಿಯಿಂದ ಒಡಗೂಡಿ ಆ ಪರ್ವತದಲ್ಲಿ, ಕಾಡುಗಳಲ್ಲಿಯೂ, ಜಲಪ್ರವಾಹಗಳಲ್ಲಿಯೂ ವಿಹರಿಸಿದನು.
ತಸ್ಯ ರಾಜ್ಞಃ ಪುರೇ ತಸ್ಮಿನ್ ಸಮಾ ದ್ವಾದಶ ಸರ್ವಶಃ |
ನ ವವರ್ಷ ಸಹಸ್ರಾಕ್ಷೋ ರಹಿತೇಽಥ ನೃಪೇ ತದಾ ॥20॥
ಆಗ ರಾಜನು ಇಲ್ಲದಿದ್ದ ಕಾರಣದಿಂದ ದೇವೇಂದ್ರನು ರಾಜನ ಆ ಪಟ್ಟಣದಲ್ಲಿ ಹನ್ನೆರಡು ವರ್ಷಗಳಕಾಲ ಎಲ್ಲಿಯೂ ಮಳೆಯನ್ನು

ಸುರಿಸಲಿಲ್ಲ.
ತತ್ ಕ್ಷುಧಾರ್ತೈರ್ನಿರಾನಂದೈಃ ಶವಭೂತೈಸ್ತದಾ ನರೈಃ |
ಅಭವತ್ ಪ್ರೇತರಾಜಸ್ಯ ಪುರಂ ಪ್ರೇತೈರಿವಾವೃತಮ್ ॥21॥
ಹಸಿವಿನಿಂದ ಬಳಲಿ, ಸುಖರಹಿತರಾಗಿ ಶವಗಳಂತೆ ಇದ್ದ ಮನುಷ್ಯರಿಂದ ತುಂಬಿದ ಆ ಪಟ್ಟಣವು ಪ್ರೇತಗಳಿಂದ ತುಂಬಿದ ಯಮಪಟ್ಟಣದಂತೆ ಆಯಿತು.
ತತಸ್ತಂ ತಾದೃಶಂ ದೃಷ್ಟ್ವಾ ಸ ಏವ ಭಗವಾನೃಷಿಃ |
ಅಭ್ಯಪದ್ಯತ ಧರ್ಮಾತ್ಮಾ ವಸಿಷ್ಠೋ ನರಸತ್ತಮಮ್ ॥22॥
ಆ ನಗರವು ಹಾಗಿರುವುದನ್ನು ನೋಡಿ ಪೂಜ್ಯರಾದ ಮತ್ತು ಧರ್ಮಾತ್ಮರಾದ ವಸಿಷ್ಠರೇ ಪುನಃ ರಾಜನ ಬಳಿಗೆ ಬಂದರು.
ತಂ ಚ ಪಾರ್ಥಿವಶಾರ್ದೂಲಮಾನಯಾಮಾಸ ತತ್ಪುರಮ್ |
ತಪತ್ಯಾ ಸಹಿತಂ ತತ್ರ ವರ್ಷೇ ದ್ವಾದಶಮೇ ಗತೇ |
ತತಃ ಪ್ರಹೃಷ್ಟಸ್ತತ್ರಾಸೀದ್ ಯಥಾಕಾಲಂ ಸುರಾರಿಹಾ ॥23॥
ಹನ್ನೆರಡು ವರ್ಷಗಳು ಕಳೆದ ಮೇಲೆ ವಸಿಷ್ಠರು ತಪತಿಯ ಜೊತೆಯಲ್ಲಿ ಆ ರಾಜಶಾರ್ದೂಲನನ್ನು ಪುನಃ ನಗರಕ್ಕೆ ಕರೆಸಿದರು. ಆಗ ಇಂದ್ರನು ಯೋಗ್ಯವಾದ ಕಾಲದಲ್ಲಿ ಸಂತುಷ್ಟನಾದನು.
ತತಸ್ತು ರಾಜಶಾರ್ದೂಲೇ ಪ್ರವಿಷ್ಟೇ ನಗರಂ ಪುನಃ |
ಪ್ರವವರ್ಷ ಸಹಸ್ರಾಕ್ಷಃ ಸಸ್ಯಾನಿ ಜನಯನ್ ಪ್ರಭುಃ |
ತತಸ್ತು ರಾಷ್ಟ್ರಂ ಮುಮುದೇ ತತ್ ಪುರಂ ಪರಯಾ ಮುದಾ ॥24॥
ಆ ರಾಜಶಾರ್ದೂಲನು ಪುನಃ ನಗರವನ್ನು ಪ್ರವೇಶಿಸಲು, ಪ್ರಭುವಾದ ಇಂದ್ರನು ಮಳೆಯನ್ನು ಸುರಿಸಿ ಸಸ್ಯಗಳನ್ನು ಅಭಿವೃದ್ಧಿ ಮಾಡಿದನು. ಆಗ ಶುದ್ಧಮನಸ್ಸುಳ್ಳ ರಾಜಶ್ರೇಷ್ಠನಿಂದ ಸತ್ಕೃತವಾದ ಆ ರಾಷ್ಟ್ರವು ಆ ರಾಜನ ನಿಮಿತ್ತದಿಂದಾಗಿ ಬಹಳ ಸಂತೋಷದಿಂದ ಕೂಡಿತು.
ತೇನ ಪಾರ್ಥಿವಮುಖ್ಯೇನ ಭಾವಿತಂ ಭಾವಿತಾತ್ಮನಾ |
ತತೋ ದ್ವಾದಶ ವರ್ಷಾಣಿ ಪುನರೀಜೇ ಜನಾಧಿಪಃ |
ಪತ್ನ್ಯಾ ತಪತ್ಯಾ ಸಹಿತೋ ಯಥಾ ಶಚ್ಯಾ ಮರುತ್ಪತಿಃ ॥25॥
ಅನಂತರ ಆ ರಾಜನು ಪುನಃ ಹನ್ನೆರಡು ವರ್ಷಗಳಕಾಲ ತಪತಿಯ ಜೊತೆಯಲ್ಲಿ, ಶಚಿಯ ಜೊತೆಯಲ್ಲಿ ಇಂದ್ರನು ಯಾಗ ಮಾಡಿದಂತೆ, ಯಾಗಗಳನ್ನು ಮಾಡಿದನು.
ಏವಮಾಸೀನ್ಮಹಾಭಾಗ ತಪತೀ ನಾಮ ಪೂರ್ವಿಕಾ |
ಸ್ವೈಷಾ ವೈವಸ್ವತೀ ಕನ್ಯಾ ಲಬ್ಧಾ ಸಂವರಣೇನ ಹ ॥26॥
ಮಹಾನುಭಾವನೇ, ನಿನ್ನ ವಂಶದ ಪೂರ್ವಜಳಾದ ತಪತಿಯು ಹೀಗಿದ್ದಳು. ವಿವಸ್ವಂತನ ಮಗಳಾದ ಅವಳನ್ನು ಸಂವರಣನು ಪಡೆದನಷ್ಟೇ.
ತಸ್ಯಾಂ ಸ ಜನಯಾಮಾಸ ಕುರುಂ ಸಂವರಣೋ ನೃಪಃ |
ತಪತ್ಯಾಂ ತಪತಾಂ ಶ್ರೇಷ್ಠ ತಾಪತ್ಯಸ್ತ್ವಂ ತತೋಽರ್ಜುನ ॥27॥
ಸಂವರಣರಾಜನು ಆ ತಪತಿಯಲ್ಲಿ ಕುರು ಎಂಬ ಮಗನನ್ನು ಪಡೆದನು. ತಪಸ್ವಿಗಳಲ್ಲಿ ಶ್ರೇಷ್ಠನಾದ ಅರ್ಜುನನೇ, ಆದ್ದರಿಂದ ನೀನು ತಾಪತ್ಯನಾಗಿದ್ದೀಯೆ.
ಕುರೂದ್ಭವಾ ಯತೋ ಯೂಯಂ ಕೌರವಾಃ ಕುರವಸ್ತಥಾ |
ಪೌರವಾ ಆಜಮೀಢಾಶ್ಚ ಭಾರತಾ ಭರತರ್ಷಭ |
ತಸ್ಮಾತ್ ತ್ವಾಂ ಕೌರವೇತ್ಯಾಹುಃ ಕುರೂಣಾಂ ಪ್ರಥಿತೇನ ಚ ॥28॥
ಕೌರವರಾದ ನೀವೆಲ್ಲರೂ ಕುರುವಂಶದಲ್ಲಿ ಜನಿಸಿದ ಕಾರಣದಿಂದ ಕುರುಗಳೂ ಹೌದು. ಭರತರ್ಷಭನೇ, ಹಾಗೆಯೇ ಪೌರವರೂ, ಆಜಮೀಢರೂ, ಭಾರತರೂ ಆಗಿದ್ದೀರಿ. ಆದ್ದರಿಂದ ನಿನ್ನನ್ನು ಪ್ರಖ್ಯಾತವಾದ ಕುರುವಂಶದ ನಾಮದಿಂದ ಕೌರವ ಎಂದು ಕರೆಯುತ್ತಾರೆ.
ತಾಪತ್ಯಮಖಿಲಂ ಪ್ರೋಕ್ತಂ ವೃತ್ತಾಂತಂ ತವ ಪೂರ್ವಿಕಮ್ |
ಪುರೋಹಿತಮುಖಾ ಯೂಯಂ ಭುಂಕ್ಷ್ವಧ್ವಂ ಪೃಥಿವೀಮಿಮಾಮ್ ॥
ನಾನು ನಿನಗೆ ನಿನ್ನ ಪೂರ್ವಿಕಳಾದ ತಪತಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಹೇಳಿದ್ದೇನೆ. ಪುರೋಹಿತರನ್ನು ಮುಂದೆ ಮಾಡಿಕೊಂಡು ನೀವು ಈ ಭೂಮಿಯನ್ನು ಆಳಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.

## ನೂರ ಎಪ್ಪತ್ತೆಂಟನೆಯ ಅಧ್ಯಾಯ

(ಗಂಧರ್ವನಿಂದ ವಿಶ್ವಾಮಿತ್ರೋಪಾಖ್ಯಾನ ಕಥನ. ವಸಿಷ್ಠ ವಿಶ್ವಾಮಿತ್ರರ ವಿರೋಧ, ವಿಶ್ವಾಮಿತ್ರರ ಪರಾಜಯ, ತಪಸ್ಸಿನಲ್ಲಿ ನಿಷ್ಠೆ.)
ವೈಶಂಪಾಯನಃ
ಸ ಗಂಧರ್ವವಚಃ ಶ್ರುತ್ವಾ ತತ್ ತದಾ ಭರತರ್ಷಭ |

ಅರ್ಜುನಃ ಪರಯಾ ಪ್ರೀತ್ಯಾ ಪೂರ್ಣಚಂದ್ರ ಇವಾಬಭೌ ॥1॥
ಭರತರ್ಷಭನೇ, ಆಗ ಅರ್ಜುನನು ಗಂಧರ್ವನ ಮಾತನ್ನು ಕೇಳಿ ಬಹಳ ಸಂತೋಷದಿಂದ ಪೂರ್ಣಚಂದ್ರನಂತೆ ಬೆಳಗಿದನು.
ಉವಾಚ ಚ ಮಹಾಪ್ರಾಜ್ಞೋ ಗಂಧರ್ವಂ ಕುರುಸತ್ತಮಃ |
ಜಾತಕೌತೂಹಲೋಽತೀವ ವಸಿಷ್ಠಸ್ಯ ತಪೋಬಲಾತ್ ॥2॥
ವಸಿಷ್ಠರ ತಪೋಬಲದಿಂದ ಕುತೂಹಲಗೊಂಡ ಮಹಾಪ್ರಾಜ್ಞನಾದ, ಕುರುಶ್ರೇಷ್ಠನಾದ ಅರ್ಜುನನು ಗಂಧರ್ವನನ್ನು ಕುರಿತು ಹೇಳಿದನು.
ವಸಿಷ್ಠ ಇತಿ ಯಸ್ಯೈತದ್ ಋಷೇರ್ನಾಮ ತ್ವಯೇರಿತಮ್ |
ಏತದಿಚ್ಛಾಮ್ಯಹಂ ಶ್ರೋತುಂ ಯಥಾವತ್ ತದ್ ಬ್ರವೀತು ಮೇ ॥3॥
ನೀನು ವಸಿಷ್ಠ ಎಂದು ಒಬ್ಬ ಋಷಿಯ ನಾಮವನ್ನು ಹೇಳಿದೆಯಷ್ಟೇ. ನಾನು ಅದನ್ನು ಯತಾರ್ಥವಾಗಿ ಮತ್ತು ವಿಸ್ತಾರವಾಗಿ ತಿಳಿಯಲು ಬಯಸುತ್ತೇನೆ.
ಸ ಏಷ ಗಂಧರ್ವಪತೇ ಪೂರ್ವೇಷಾಂ ನಃ ಪುರೋಹಿತಃ |
ಆಸೀದೇತನ್ಮಮಾಚಕ್ಷ್ವ ಕ ಏಷ ಭಗವಾನ್ ಋಷಿಃ ॥4॥
ಗಂಧರ್ವರಾಜನೇ, ವಸಿಷ್ಠರು ನಮ್ಮ ಪೂರ್ವಿಕರಿಗೆ ಪುರೋಹಿತ- ರಾಗಿದ್ದರು. ಪೂಜ್ಯರಾದ ಈ ಋಷಿಗಳು ಯಾರು ಎಂದು ತಿಳಿಸು.
ಗಂಧರ್ವಃ
ಬ್ರಹ್ಮಣೋ ಮಾನಸಃ ಪುತ್ರೋ ವಸಿಷ್ಠೋಽರುಂಧತೀಪತಿಃ |
ಅಜಿತಾವೇತೌ ನರವ್ಯಾಘ್ರ ಅಜಿತಾಃ ಸರ್ವ ಏವ ತೇ ॥5॥
ಕಾಮಕ್ರೋಧಾವುಭೌ ಯಸ್ಯ ಚರಣೌ ಸಂವವಾಹತುಃ |
ಯಸ್ತು ನೋಚ್ಛೇದನಂ ಚಕ್ರೇ ಕುಶಿಕಾನಾಮುದಾರಧೀಃ ॥6॥
ವಸಿಷ್ಠರು ಬ್ರಹ್ಮದೇವರ ಮಾನಸಪುತ್ರರು. ಅವರ ಪತ್ನಿ ಅರುಂಧತಿ. ನರವ್ಯಾಘ್ರನೇ, ಯಾರು ಕಾಮಕ್ರೋಧಗಳನ್ನು ಗೆದ್ದಿಲ್ಲವೋ ಅವರೆಲ್ಲರೂ ಪರಾಜಿತರೇ ಸರಿ. ಆದರೆ, ಕಾಮಕ್ರೋಧಗಳು ವಸಿಷ್ಠರ ಪಾದಸಂವಹನವನ್ನು ಮಾಡುತ್ತಿದ್ದವು. ಉದಾರಬುದ್ಧಿಯುಳ್ಳ ಅವರು ಕುಶಿಕರ ವಂಶವನ್ನು ನಿರ್ಮೂಲನ ಮಾಡಲಿಲ್ಲ.
ವಿಶ್ವಮಿತ್ರಾಪರಾಧೇನ ಧಾರಯನ್ ಮನ್ಯುಮುತ್ತಮಮ್ |
ಪುತ್ರವ್ಯಸನಸಂತಪ್ತಃ ಶಕ್ತಿಮಾನಪಿ ಯತ್ ಪ್ರಭುಃ |
ವಿಶ್ವಾಮಿತ್ರವಿನಾಶಾಯ ಮೇನೇ ಕರ್ಮ ನ ದಾರುಣಮ್ ॥7॥
ವಿಶ್ವಾಮಿತ್ರನು ಮಾಡಿದ ಅಪರಾಧದಿಂದ ಉಂಟಾದ ದೊಡ್ಡ ಕೋಪವನ್ನು ತಡೆದು, ಯಾವ ಕಾರ್ಯವನ್ನು ಮಾಡುವುದಕ್ಕೂ ಶಕ್ತಿ ಇದ್ದರೂ, ಅವರು ಪುತ್ರಶೋಕದಿಂದ ಸಂತಪ್ತರಾಗಿದ್ದರೂ, ವಿಶ್ವಾಮಿತ್ರನ ವಿನಾಶವನ್ನು ಮಾಡಲು ಯಾವ ದಾರುಣವಾದ ಕರ್ಮವನ್ನೂ ಅಭಿಪ್ರಾಯ ಪಡಲಿಲ್ಲ.
ಮೃತಾಂಶ್ಚ ಪುನರಾಹರ್ತುಂ ಶಕ್ತಃ ಪುತ್ರಾನ್ ಯಮಕ್ಷಯಾತ್|
ಕೃತಾಂತಂ ನಾತಿಚಕ್ರಾಮ ವೇಲಾಮಿವ ಮಹೋದಧಿಃ ॥8॥
ಮೃತರಾದ ಪುತ್ರರನ್ನು ಯಮಲೋಕದಿಂದ ಹಿಂದಕ್ಕೆ ಕರೆತರುವ ಸಾಮರ್ಥ್ಯವಿದ್ದ ಅವರು ಸಮುದ್ರವು ಹೇಗೆ ತೀರವನ್ನು ಮೀರುವುದಿಲ್ಲವೋ ಹಾಗೆ ಯಮನನ್ನು ಎಂದೂ ಮೀರಲಿಲ್ಲ.
ಯಂ ಪ್ರಾಪ್ಯ ವಿಜಿತಾತ್ಮಾನಂ ಮಹಾತ್ಮಾನಂ ನರಾಧಿಪಾಃ |
ಇಕ್ಷ್ವಾಕವೋ ಮಹೀಪಾಲಾ ಲೇಭಿರೇ ಪೃಥಿವೀಮಿಮಾಮ್ ॥9॥
ಇಕ್ಷ್ವಾಕುವಂಶದ ಮಹಾರಾಜರು ಅಂತಹ ಮನೋಜಯವುಳ್ಳ ಮಹಾತ್ಮರನ್ನು ಪುರೋಹಿತರನ್ನಾಗಿ ಪಡೆದು ಸಮಗ್ರವಾದ ಭೂಮಿಯನ್ನು ಸಂಪಾದಿಸಿದರು.
ಪುರೋಹಿತವರಂ ಪ್ರಾಪ್ಯ ವಸಿಷ್ಠಮೃಷಿಮುತ್ತಮಮ್|
ಈಜಿರೇ ಕ್ರತುಭಿಶ್ಚಾಪಿ ನೃಪಾಸ್ತೇ ಕುರುನಂದನ ॥10॥
ಕುರುನಂದನನೇ, ಆ ರಾಜರು ವಸಿಷ್ಠರಂತಹ ಶ್ರೇಷ್ಠರಾದ ಋಷಿಗಳನ್ನು ಪುರೋಹಿತರನ್ನಾಗಿ ಪಡೆದು ಅನೇಕ ಯಾಗಗಳನ್ನು ಮಾಡಿದರು.
ಸ ಹಿ ತಾನ್ ಯಾಜಯಾಮಾಸ ಸರ್ವಾನ್ ನೃಪತಿಸತ್ತಮಾನ್ |
ಮಹರ್ಷಿಃ ಪಾಂಡವಶ್ರೇಷ್ಠ ಬೃಹಸ್ಪತಿರಿವಾಮರಾನ್ |
ಯಥಾ ವಸಿಷ್ಠೇನ ಸಹ ಸ ಸೌದಾಸಃ ಸುಸಂಗತಃ |
ರಕ್ಷೋಭಿರ್ವಿಪ್ರಮುಕ್ತಸ್ತು ವಿಶ್ವಾಮಿತ್ರೇಣ ಯೋಜಿತೈಃ ॥11॥
ಪಾಂಡವಶ್ರೇಷ್ಠನೇ, ಬೃಹಸ್ಪತಿಗಳು ದೇವತೆಗಳಿಗೆ ಯಾಗ ಮಾಡಿಸಿದಂತೆ, ಆ ಮಹರ್ಷಿಗಳಾದ ವಸಿಷ್ಠರು ಇಕ್ಷ್ವಾಕುವಂಶದ ರಾಜರುಗಳಿಗೆಲ್ಲಾ ಯಾಗವನ್ನು ಮಾಡಿಸಿದರು. ವಸಿಷ್ಠರ ಜೊತೆಯಲ್ಲಿ ಒಳ್ಳೆಯ ಸಂಬಂಧವನ್ನು ಹೊಂದಿದ್ದ ಸೌದಾಸನು ವಿಶ್ವಾಮಿತ್ರರು ನಿಯೋಜಿಸಿದ ರಾಕ್ಷಸರಿಂದ ವಿಮೋಚನೆಯನ್ನು ಹೊಂದಿದನು.
ತಥಾ ದ್ವಿಜಸಹಾಯಾನ್ ವೈ ನ ಗಂಧರ್ವಾ ನ ರಾಕ್ಷಸಾಃ |
ಶಕ್ತಾಃ ಪ್ರಾರ್ದಯಿತುಂ ವೀರ ಮನಸಾಽಪಿ ಮಹಾಬಲಾಃ ॥12॥
ಎಲೈ ವೀರನೇ, ಹಾಗೆ ದ್ವಿಜ ಸಹಾಯವುಳ್ಳವರನ್ನು ಮಹಾಬಲಿಷ್ಠರಾದ ಗಂಧರ್ವರಾಗಲೀ, ರಾಕ್ಷಸರಾಗಲೀ, ಮನಸ್ಸಿನಿಂದಲೂ ಕೂಡ ಪೀಡಿಸಲು ಸಮರ್ಥರಲ್ಲ.

ತಸ್ಮಾದ್ ಧರ್ಮಪ್ರಧಾನಾತ್ಮಾ ವೇದಶಾಸ್ತ್ರವಿದೀಪ್ಸಿತಃ |
ಬ್ರಾಹ್ಮಣೋ ಗುಣವಾನ್ ಕಶ್ಚಿತ್ ಪುರೋಧಾಃ ಪರಿಗೃಹ್ಯತಾಮ್ ॥13॥
ಆದ್ದರಿಂದ ಧರ್ಮಪ್ರಧಾನನಾದವನೂ, ವೇದಶಾಸ್ತ್ರವನ್ನು ತಿಳಿದವನೂ, ಗುಣವಂತನೂ ಆದ, ನಿನಗೆ ಇಷ್ಟವಾದ ಒಬ್ಬ ಬ್ರಾಹ್ಮಣನನ್ನು ಪುರೋಹಿತನನ್ನಾಗಿ ಸ್ವೀಕರಿಸು.
ಕ್ಷತ್ರಿಯೇಣ ತು ಜಾತೇನ ಪೃಥಿವೀಂ ಜೇತುಮಿಚ್ಛತಾ |
ಪೂರ್ವಂ ಪುರೋಹಿತಃ ಕಾರ್ಯಃ ಪಾರ್ಥ ರಾಜ್ಯವಿವೃದ್ಧಯೇ ॥14॥
ಎಲೈ ಪಾರ್ಥನೇ, ಕ್ಷತ್ರಿಯನಾಗಿ ಜನಿಸಿದವನು ಪೃಥಿವಿಯನ್ನು ಜಯಿಸಲು ಬಯಸಿ ರಾಜ್ಯವನ್ನು ಅಭಿವೃದ್ಧಿ ಮಾಡಲು ಬಯಸಿದರೇ, ಮೊದಲು ಪುರೋಹಿತನನ್ನು ಸಂಪಾದಿಸಬೇಕು.
ಮಹೀಂ ಜಿಹೀರ್ಷತಾ ರಾಜ್ಞಾ ಬ್ರಹ್ಮ ಕಾರ್ಯಂ ಪುರಸ್ಕೃತಮ್ |
ನಾಬ್ರಹ್ಮಣ್ಯಂ ಭವೇತ್ ಕ್ಷತ್ರಮಬ್ರಹ್ಮಣ್ಯಂ ವಿನಶ್ಯತಿ |
ಬ್ರಹ್ಮ ಕ್ಷತ್ರೇಣ ಸಂಯುಕ್ತಂ ಕ್ಷತ್ರಂ ಬ್ರಹ್ಮಣಿ ನಿಷ್ಠಿತಮ್ ॥15॥
ಭೂಮಿಯನ್ನು ಗೆಲ್ಲಲು ಹೊರಟ ರಾಜನು ಬ್ರಾಹ್ಮಣನನ್ನು ಮುಂದಿಟ್ಟುಕೊಳ್ಳಬೇಕು. ಕ್ಷತ್ರಿಯಕುಲವು ಯಾವಾಗಲೂ ಬ್ರಾಹ್ಮಣ-ವತ್ಸಲರಾಗದೇ ಇರಬಾರದು. ಬ್ರಾಹ್ಮಣವಾತ್ಸಲ್ಯವನ್ನು ಹೊಂದದ ಕ್ಷತ್ರಿಯಕುಲವು ನಾಶವನ್ನು ಹೊಂದುತ್ತದೆ. ಬ್ರಾಹ್ಮಣಕುಲವು ಕ್ಷತ್ರಿಯ ಕುಲದಿಂದ ಸಂಯುಕ್ತವಾಗಿದೆ. ಕ್ಷತ್ರಿಯಕುಲವು ಬ್ರಾಹ್ಮಣಕುಲವನ್ನು ತನ್ನ ಆಧಾರವನ್ನಾಗಿ ಪಡೆದಿದೆ.
ಅರ್ಜುನಃ
ಕಿಂ ನಿಮಿತ್ತಮಭೂದ್ ವೈರಂ ವಿಶ್ವಾಮಿತ್ರವಸಿಷ್ಠಯೋಃ |
ವಸತೋರಾಶ್ರಮೇ ರಮ್ಯೇ ಶಂಸ ತತ್ ಸರ್ವಮೇವ ಮೇ ॥16॥
ಮನೋಹರವಾದ ಆಶ್ರಮದಲ್ಲಿ ವಾಸಿಸುವ ವಿಶ್ವಾಮಿತ್ರ ವಸಿಷ್ಠರಿಗೆ ಯಾವ ಕಾರಣದಿಂದ ವೈರವು ಉಂಟಾಯಿತು. ಎಲ್ಲವನ್ನೂ ನನಗೆ ಹೇಳು.
ಇದಂ ವಾಸಿಷ್ಠಮಾಖ್ಯಾನಂ ಪುರಾಣಂ ಪರಿಚಕ್ಷತೇ |
ಪಾರ್ಥ ಸರ್ವೇಷು ಲೋಕೇಷು ಯಥಾವತ್ ತನ್ನಿಬೋಧ ಮೇ ॥17॥
ಪಾರ್ಥನೇ, ಈ ವಸಿಷ್ಠರ ಕಥೆಯು ಬಹಳ ಹಿಂದಿನಕಾಲದಲ್ಲಿ ನಡೆಯಿತೆಂದು ಎಲ್ಲಾ ಲೋಕಗಳಲ್ಲಿಯೂ ಹೇಳುತ್ತಾರೆ. ಅದನ್ನು ನನ್ನಿಂದ ಸರಿಯಾಗಿ ಕೇಳಿ ತಿಳಿದುಕೋ.
ಕನ್ಯಾಕುಬ್ಜೇ ಮಹಾನಾಸೀತ್ ಪಾರ್ಥಿವೋ ಭರತರ್ಷಭ |
ಗಾಧೀತಿ ವಿಶ್ರುತೋ ಲೋಕೇ ಸತ್ಯಧರ್ಮಪರಾಯಣಃ ॥18॥
ಭರತರ್ಷಭನೇ, ಕನ್ಯಾಕುಬ್ಜದಲ್ಲಿ ಗಾಧೀ ಎಂದು ಪ್ರಖ್ಯಾತನಾದ ದೊಡ್ಡ ರಾಜನಿದ್ದನು. ಅವನು ಸತ್ಯಧರ್ಮಪರಾಯಣನಾಗಿದ್ದನು.
ತಸ್ಯ ಧರ್ಮಾತ್ಮನಃ ಪುತ್ರಃ ಸಮೃದ್ಧಬಲವಾಹನಃ |
ವಿಶ್ವಾಮಿತ್ರ ಇತಿ ಖ್ಯಾತೋ ಬಭೂವ ರಿಪುನಾಶನಃ ॥19॥
ಧರ್ಮಾತ್ಮನಾದ ಅವನಿಗೆ ವಿಶ್ವಾಮಿತ್ರನೆಂಬ ಪುತ್ರನು ಜನಿಸಿದನು. ಅವನು ಸಮೃದ್ಧವಾದ ಸೈನ್ಯ ಮತ್ತು ವಾಹನಗಳನ್ನು ಹೊಂದಿದವನಾಗಿ ರಿಪುನಾಶನನೆಂದು ಪ್ರಖ್ಯಾತನಾದನು.
ಸ ಚಚಾರ ಸಹಾಮಾತ್ಯೋ ಮೃಗಯಾಂ ಸುಮಹಾವನೇ |
ಮೃಗಾನ್ ನಿಘ್ನನ್ ವರಾಹಾಂಶ್ಚ ಚಚಾರ ಮರುಧನ್ವಸು ॥20॥
ಅವನು ಅಮಾತ್ಯರ ಜೊತೆಯಲ್ಲಿ ಒಂದು ದೊಡ್ಡ ಕಾಡಿನಲ್ಲಿ ಒಮ್ಮೆ ಬೇಟೆಯಾಡಿದನು. ಅವನು ಮೃಗಗಳನ್ನೂ, ವರಾಹಗಳನ್ನೂ ಕೊಲ್ಲುತ್ತಾ ಮರುಭೂಮಿಯಲ್ಲಿ ಸಂಚರಿಸಿದನು.
ವ್ಯಾಯಾಮಾರ್ತಸ್ತು ಸ ತದಾ ಮೃಗಲಿಪ್ಸುಃ ಪಿಪಾಸಿತಃ |
ಆಜಗಾಮ ರಥಿಶ್ರೇಷ್ಠೋ ವಸಿಷ್ಠಸ್ಯಾಶ್ರಮಂ ಪ್ರತಿ ॥21॥
ಮೃಗವನ್ನು ಹಿಡಿಯಲು ಹೋಗಿ ದಣಿದ ರಥಿಶ್ರೇಷ್ಠನಾದ ಅವನು ಬಾಯಾರಿಕೆಯಿಂದ ಕೂಡಿದವನಾಗಿ ವಸಿಷ್ಠರ ಆಶ್ರಮಕ್ಕೆ ಬಂದನು.
ವಸಿಷ್ಠಸ್ತು ಸ ತಂ ದೃಷ್ಟ್ವಾ ರಾಜರ್ಷಿಮತಿಥಿಂ ತದಾ |
ವಿಶ್ವಾಮಿತ್ರಂ ಸಶಿಷ್ಯೋ ವೈ ಪ್ರತಿಜಗ್ರಾಹ ಪೂಜಯಾ ॥22॥
ವಸಿಷ್ಠರಾದರೋ ಆ ರಾಜರ್ಷಿಯು ಅತಿಥಿಯಾಗಿ ಬಂದದ್ದನ್ನು ನೋಡಿ ತಮ್ಮ ಶಿಷ್ಯರ ಜೊತೆಯಲ್ಲಿ ವಿಶ್ವಾಮಿತ್ರರನ್ನು ಸತ್ಕಾರ ಪೂರ್ವಕವಾಗಿ ಸ್ವೀಕರಿಸಿದರು.
ಪಾದ್ಯೇನಾರ್ಘ್ಯಪ್ರದಾನೇನ ಸ್ವಾಗತೇನ ಚ ತಂ ನೃಪಮ್ |
ಪ್ರತಿಜಗ್ರಾಹ ಧರ್ಮಾತ್ಮಾ ವನ್ಯೇನ ಹವಿಷಾ ತದಾ ॥23॥
ಧರ್ಮಾತ್ಮರಾದ ಅವರು ಆ ರಾಜನಿಗೆ ಸ್ವಾಗತವನ್ನು ಹೇಳಿ, ಅರ್ಘ್ಯಪಾದ್ಯಗಳನ್ನು ನೀಡಿ, ಕಾಡಿನಲ್ಲಿ ಸಿಗುವ ಹವಿಷ್ಯ ಪದಾರ್ಥಗಳಿಂದ ಅವರನ್ನು ಸ್ವೀಕರಿಸಿದರು.
ತಸ್ಯೈವ ಕಾಮಧುಗ್ ಧೇನುರ್ವಸಿಷ್ಠಸ್ಯ ಮಹಾತ್ಮನಃ |
ಉಕ್ತಾ ನಂದಿನಿ ಧತ್ಸ್ವೇತಿ ಸಾ ಕಾಮಾನ್ ದುದುಹೇ ತದಾ ॥24॥
ಮಹಾತ್ಮರಾದ ವಸಿಷ್ಠರ, ಕೇಳಿದುದೆಲ್ಲವನ್ನೂ ಕೊಡುವ ನಂದಿನಿಯು, ನಂದಿನಿ ಕೊಡು ಎಂದು ಹೇಳಿದ ತಕ್ಷಣ ಅಭೀಷ್ಟವಾದ ಎಲ್ಲಾ ವಸ್ತುಗಳನ್ನು ಕೊಟ್ಟಿತು.

ಬಾಷ್ಪಾಢ್ಯಸ್ಯೋದನಸ್ಯಾತ್ರ ರಾಶಯಃ ಪರ್ವತೋಪಮಾಃ |
ನಿಷ್ಠಾನಾನಿ ಚ ಸೂಪಾಂಶ್ಚ ದಧಿಕುಲ್ಯಾಸ್ತಥೈವ ಚ ॥25॥
ಅಪೂಪಾನ್ ಘೃತಸಂಪೂರ್ಣಾನ್ ಭಕ್ಷ್ಯಾಣಾಂ ರಾಶಯಸ್ತಥಾ |
ಭೋಜನಾನಿ ಮಹಾರ್ಹಾಣಿ ಗೌಡ್ಯಾನ್ನಾನಿ ಸಹಸ್ರಶಃ ॥26॥
ಇಕ್ಷೂನ್ ಮಧೂನಿ ಲಾಜಾಂಶ್ಚ ಮೈರೇಯಾಂಶ್ಚ ವರಾಸವಾನ್ |
ವಸ್ತ್ರಾಣಿ ಚ ಮಹಾರ್ಹಾಣಿ ಕಂಬಳಾನಿ ಸಹಸ್ರಶಃ |
ಗ್ರಾಮ್ಯಾರಣ್ಯೌಷಧೀಶ್ಚೈವ ದುದುಹೇ ಪಯ ಏವ ಚ ॥27॥
ಹಬೆ ಬರುತ್ತಿರುವ ಪರ್ವತದಂತಿರುವ ಅನ್ನರಾಶಿಗಳನ್ನೂ, ಪಾತ್ರೆಗಳಲ್ಲಿರುವ ಸೂಪಗಳನ್ನೂ, ಮೊಸರಿನ ಸರೋವರಗಳನ್ನೂ, ಅಪೂಪಗಳನ್ನೂ, ತುಪ್ಪದಲ್ಲಿ ಮಾಡಿದ ಭಕ್ಷ್ಯಗಳ ರಾಶಿಗಳನ್ನೂ, ಅನರ್ಘ್ಯವಾದ ಭೋಜನಗಳನ್ನೂ, ಸಹಸ್ರಸಂಖ್ಯೆಯಲ್ಲಿ ಗೂಡೋದನ ಮೊದಲಾದ ಅನ್ನಗಳನ್ನೂ, ಸಕ್ಕರೆ, ಜೇನುತುಪ್ಪ ಅರಳುಗಳನ್ನೂ, ಶ್ರೇಷ್ಠವಾದ ಪಾನದ್ರವ್ಯವಾದ ಮೈರೇಯವನ್ನೂ, ಬೆಲೆಬಾಳುವ ವಸ್ತುಗಳನ್ನು, ಸಹಸ್ರ ಸಂಖ್ಯೆಯಲ್ಲಿದ್ದ ಕಂಬಳಿಗಳನ್ನೂ, ಗ್ರಾಮ ಮತ್ತು ಅರಣ್ಯದ ಔಷಧಿಗಳನ್ನೂ ಮತ್ತು ಹಾಲನ್ನೂ ನೀಡಿತು.
ಷಡ್ರಸಂ ಚಾಮೃತರಸಂ ರಸಾಯನಮನುತ್ತಮಮ್ |
ಭೋಜನೀಯಾನಿ ಪೇಯಾನಿ ಭಕ್ಷ್ಯಾಣಿ ವಿವಿಧಾನಿ ಚ |
ಲೇಹ್ಯಾನ್ಯಮೃತಕಲ್ಪಾನಿ ಚೋಷ್ಯಾಣಿ ಚ ತಥಾ ಪುನಃ ॥28॥
ಷಡ್ರಸೋಪೇತವಾದ, ಅಮೃತರಸದಿಂದ ಕುಡಿಯುವ ಶ್ರೇಷ್ಠವಾದ ರಸಾಯನವನ್ನೂ, ಅನೇಕ ಪೇಯಗಳನ್ನೂ, ವಿವಿಧವಾದ ಭಕ್ಷ್ಯಗಳನ್ನೂ, ಅಮೃತದಂತಿದ್ದ ಲೇಹ್ಯ ಮತ್ತು ಚೋಷ್ಯಗಳನ್ನೂ ಪುನಃ ನೀಡಿತು.
ತೈಃ ಕಾಮೈಃ ಸರ್ವಸಂಪನ್ನೈಃ ಪೂಜಿತಃ ಸ ಮಹೀಪತಿಃ |
ಸಾಮಾತ್ಯಃ ಸಬಲಸ್ತತ್ರ ತುತೋಷ ಸುಭೃಶಂ ತದಾ ॥29॥
ಸರ್ವಸಮೃದ್ಧವಾದ ಆ ಕಾಮಗಳಿಂದ ಸತ್ಕೃತನಾದ ರಾಜನು ತನ್ನ ಅಮಾತ್ಯರು ಮತ್ತು ಸೈನ್ಯದಿಂದೊಡಗೂಡಿ ಬಹಳ ಸಂತೋಷಪಟ್ಟನು.
ಷಡುನ್ನತಾಂ ಸುಪಾರ್ಶ್ವೋರುಂ ತ್ರಿಪೃಥುಂ ಪಂಚಸಂವೃತಾಮ್ |
ಮಂಡೂಕನೇತ್ರಾಂ ಸ್ವಾಕಾರಾಂ ಪೀನೌಧಮನಿಂದಿತಾಮ್ ॥30॥
ಸುವಾಲಧಿಂ ಶಂಕುಕರ್ಣೀಂ ಚಾರುಶೃಂಗೀಂ ಮನೋರಮಾಮ್ |
ಅಷ್ಟಾಯತಶಿರೋಗ್ರೀವಾಂ ವಿಸ್ಮಿತಃ ಸೋಽಭಿವೀಕ್ಷ್ಯ ತಾಮ್ |
ಅಭ್ಯನಂದತ್ ಸ ತಾಂ ನಂದೀಂ ವಸಿಷ್ಠಸ್ಯ ಯಶಸ್ವಿನೀಮ್ ॥31॥
ತೊಡೆಗಳು, ಪೃಷ್ಟ, ಲಲಾಟ, ಹಣೆ, ಹಿಣಿಲು, ಶ್ರೇಣಿ ಮತ್ತು ನಾಸಿಕ ಸ್ಥಾನಗಳಲ್ಲಿ ಉನ್ನತವಾಗಿದ್ದಂತಹ, ಒಳ್ಳೆಯ ಪಾರ್ಶ್ವಗಳನ್ನೂ ಮತ್ತು ತೊಡೆಗಳನ್ನೂ ಹೊಂದಿದ್ದಂತಹ, ವಿಸ್ತಾರವಾದ ಲಲಾಟ, ಪೃಷ್ಟ ಮತ್ತು ನೇತ್ರಗಳು ಈ ಮೂರನ್ನು ಹೊಂದಿದ್ದಂತಹ, ನಾಲಿಗೆ, ಹಲ್ಲುಗಳೂ, ಮೂಗು, ಯೋನಿ, ಗೊರಸುಗಳು ಈ ಸ್ಥಾನಗಳಲ್ಲಿ ಚಿಕ್ಕದಾಗಿದ್ದಂತಹ, ಕಪ್ಪೆಯ ನೇತ್ರದಂತೆ ಉಬ್ಬಿದನೇತ್ರವುಳ್ಳ, ಒಳ್ಳೆಯ ಆಕಾರವುಳ್ಳ, ದೊಡ್ಡ ಕೆಚ್ಚಲಿನಿಂದ ಕೂಡಿದ, ಅನಿಂದಿತವಾದ ಒಳ್ಳೆಯ ಬಾಲದಿಂದ ಕೂಡಿದ ಶಂಕುವಿನಿಂತೆ ಕರ್ಣವುಳ್ಳ, ಒಳ್ಳೆಯ ಶೃಂಗಗಳನ್ನು ಹೊಂದಿದ ಮನೋರಮವಾದ ಮೂಗು, ಸಾಸ್ನಾ (ಗಂಗೆದೊಗಲು), ಮುಖ, ಬಾಲ, ಕಾಲುಗಳು, ಗುಹ್ಯ, ಧ್ವನಿ ಮತ್ತು ಆಕಾರ ಈ ಎಂಟು ಸ್ಥಾನಗಳಲ್ಲಿ ದೀರ್ಘವಾಗಿದ್ದ, ದೀರ್ಘವಾದ ಶಿರಸ್ಸನ್ನೂ ಮತ್ತು ಕತ್ತನ್ನೂ ಹೊಂದಿದ್ದ ವಸಿಷ್ಠರ ಯಶಸ್ವಿನಿಯಾದ ಆ ಗೋವನ್ನು ನೋಡಿ ವಿಸ್ಮಿತನಾಗಿ ಆ ಗೋವನ್ನು ಅಭಿನಂದಿಸಿದನು.
ಅಬ್ರುವೀಚ್ಚ ಭೃಶಂ ತುಷ್ಟೋ ವಿಶ್ವಾಮಿತ್ರ ಋಷಿಂ ತದಾ |
ಅರ್ಬುದೇನ ಗವಾಂ ಬ್ರಹ್ಮಂಸ್ತಥಾ ರಾಜ್ಯೇನ ವಾ ಪುನಃ |
ಬ್ರಹ್ಮನ್ನಿಮಾಂ ಪ್ರಯಚ್ಛಸ್ವ ಭುಂಕ್ಷ್ವ ರಾಜ್ಯಂ ಮಹಾಮುನೇ ॥32॥
ಬಹಳ ಸಂತೋಷಗೊಂಡ ವಿಶ್ವಾಮಿತ್ರನು ಆಗ ವಸಿಷ್ಠರನ್ನು ಕುರಿತು ಹೇಳಿದನು. ಬ್ರಾಹ್ಮಣರೇ, ಅರ್ಬುದ ಗೋವುಗಳನ್ನಾಗಲೀ ಅಥವಾ ನನ್ನ ರಾಜ್ಯವನ್ನೇ ಆಗಲಿ ಕೊಡುತ್ತೇನೆ. ಈ ಗೋವನ್ನು ನನಗೆ ಕೊಡಿ. ಮಹರ್ಷಿಗಳೇ, ನನ್ನ ರಾಜ್ಯವನ್ನು ನೀವೇ ಭೋಗಿಸಿ ಎಂದು ಹೇಳಿದನು.
ವಸಿಷ್ಠಃ
ದೇವತಾಽಥಿತಿಪಿತ್ರರ್ಥೇ ಯಾಜ್ಯಾರ್ಥೇ ಚ ಪಯಸ್ವಿನೀ |
ಅದೇಯಾ ನಂದಿನೀ ಚೇಯಂ ರಾಜ್ಯೇನಾಪಿ ತವಾನಘ ॥33॥
ಈ ಹಾಲನ್ನು ಕೊಡುವ ನಂದಿನಿ ಗೋವು, ದೇವತಾತಿಥಿ ಪಿತೃಗಳಿಗೋಸ್ಕರವಾಗಿ ಮತ್ತು ಹೋಮದ್ರವ್ಯಗಳಿಗೋಸ್ಕರವಾಗಿ ಇದೆ. ಇದನ್ನು ಯಾರಿಗೂ ಕೊಡುವಂತಿಲ್ಲ. ಅನಘನೇ, ನಿನ್ನ ರಾಜ್ಯಕ್ಕೋಸ್ಕರವಾಗಿಯೂ ನಾನು ಇದನ್ನು ಕೊಡುವುದಿಲ್ಲ.
ವಿಶ್ವಾಮಿತ್ರಃ
ರತ್ನಂ ಹಿ ಭಗವನ್ನೇತದ್ ರತ್ನಹಾರೀ ಚ ಪಾರ್ಥಿವಃ |
ಕ್ಷತ್ರಿಯೋಽಹಂ ಭವಾನ್ ವಿಪ್ರಸ್ತಪಃಸ್ವಾಧ್ಯಾಯಸಾಧನಃ ॥34॥
ಪೂಜ್ಯರೇ, ಈ ಗೋವು ಒಂದು ರತ್ನ. ರಾಜನನ್ನು ರತ್ನಹಾರೀ ಎಂದು ಹೇಳುತ್ತಾರೆ. ನಾನು ಕ್ಷತ್ರಿಯ. ತಾವು ಸ್ವಾಧ್ಯಾಯನಿರತರಾದ ಬ್ರಾಹ್ಮಣರು.
ಬ್ರಾಹ್ಮಣೇಷು ಕುತೋ ವೀರ್ಯಂ ಪ್ರಶಾಂತೇಷು ಧೃತಾತ್ಮಸು |

ಅರ್ಬುದೇನ ಗವಾಂ ಯಸ್ತ್ವಂ ನ ದದಾಸಿ ಮಮೇಪ್ಸಿತಾಮ್ |
ಸ್ವಧರ್ಮಂ ನ ಪ್ರಹಾಸ್ಯಾಮಿ ಸ ನೇಷ್ಯೇ ತೇ ಬಲೇನ ಗಾಮ್ ॥35॥
ಪ್ರಶಾಂತರಾದ ಮತ್ತು ದಾಂತರಾದ ಬ್ರಾಹ್ಮಣರಲ್ಲಿ ಪರಾಕ್ರಮವು ಎಲ್ಲಿಂದ ಬರಬೇಕು. ನೀವು ನನಗೆ, ನನಗೆ ಇಷ್ಟವಾದ ಈ ಗೋವನ್ನು ಅರ್ಬುದ ಗೋವುಗಳ ಸಲುವಾಗಿಯೂ ಕೊಡದಿದ್ದರೇ, ನಾನು ನನ್ನ ಧರ್ಮವನ್ನು ಬಿಡುವುದಿಲ್ಲ. ನನ್ನ ಬಲದಿಂದ ಈ ಗೋವನ್ನು ತೆಗೆದುಕೊಂಡು ಹೋಗುವೆನು.
ಕ್ಷತ್ರಿಯೋಽಸ್ಮಿ ನ ವಿಪ್ರೋಽಹಂ ಬಾಹುವೀರ್ಯೋಽಸ್ಮಿ ಧರ್ಮತಃ |
ತಸ್ಮಾದ್ ಭುಜಬಲೇನೇಮಾಂ ಹರಿಷ್ಯಾಮೀಹ ಪಶ್ಯತಃ ॥36॥
ನಾನು ಕ್ಷತ್ರಿಯ. ಬ್ರಾಹ್ಮಣನಲ್ಲ. ಧರ್ಮದಿಂದಲೇ ನಾನು ಬಾಹುವೀರ್ಯವುಳ್ಳವನು. ಆದ್ದರಿಂದ ನೀವು ನೋಡುತ್ತಿರುವಂತೆಯೇ, ನನ್ನ ಭುಜಬಲದಿಂದ ಈ ಗೋವನ್ನು ಕರೆದುಕೊಂಡು ಹೋಗುವೆನು.
ವಸಿಷ್ಠಃ
ಅತ್ರ ಹವ್ಯಂ ಚ ಕವ್ಯಂ ಚ ಪ್ರಾಣಯಾತ್ರಾ ತಥೈವ ಚ |
ಆಯತ್ತಮಗ್ನಿಹೋತ್ರಂ ಚ ಆತಿಥ್ಯಂ ಚ ನ ಸಂಶಯಃ ॥37॥
ಹವ್ಯಕವ್ಯಗಳು ಹಾಗೆಯೇ ಜೀವನಯಾತ್ರೆ, ಅಗ್ನಿಹೋತ್ರ ಮತ್ತು ಆತಿಥ್ಯಗಳು ನಿಸ್ಸಂಶಯವಾಗಿ ಈ ಧೇನುವನ್ನು ಅವಲಂಬಿಸಿವೆ.
ಬಹುನಾ ಕಿಂ ಪ್ರಲಾಪೇನ ನ ದಾಸ್ಯೇ ಕಾಮದೋಹಿನೀಮ್ |
ಬಲಸ್ಥಶ್ಚಾಪಿ ರಾಜಾ ಚ ವೀರ್ಯವಾಂಶ್ಚ ನೃಪೋತ್ತಮ |
ಯಥೇಚ್ಛಸಿ ತಥಾ ಕ್ಷಿಪ್ರಂ ಕುರು ತ್ವಂ ಮಾ ವಿಚಾರಯ ॥37॥
ಹೆಚ್ಚು ಮಾತಾಡಿ ಪ್ರಯೋಜನವೇನು. ಇಷ್ಟವಾದುದನ್ನೆಲ್ಲಾ ಕೊಡುವ ಈ ಗೋವನ್ನು ನಾನು ಕೊಡುವುದಿಲ್ಲ. ನೃಪೋತ್ತಮನೇ, ಬಲಿಷ್ಠನೂ ಪರಾಕ್ರಮಶಾಲಿಯೂ ಆದ ರಾಜನಾದ ನೀನು ಶೀಘ್ರವಾಗಿ ನಿನ್ನ ಮನಸ್ಸಿಗೆ ಬಂದಂತೆ ಮಾಡು. ವಿಚಾರ ಮಾಡಬೇಡ.
ಗಂಧರ್ವಃ
ಏವಮುಕ್ತಸ್ತದಾ ಪಾರ್ಥ ವಿಶ್ವಾಮಿತ್ರೋ ಬಲಾದಿವ |
ಹಂಸಚಂದ್ರಪ್ರತೀಕಾಶಾಂ ನಂದಿನೀಂ ವೈ ಜಹಾರ ಗಾಮ್ ॥38॥
ಪಾರ್ಥನೇ, ವಸಿಷ್ಠರು ಹೀಗೆ ಹೇಳುತ್ತಿರಲು ವಿಶ್ವಾಮಿತ್ರನು ಹಂಸದಂತೆ, ಚಂದ್ರನಂತೆ ಶುಭ್ರವಾಗಿದ್ದ ಆ ನಂದಿನಿಯನ್ನು ತನ್ನ ಬಲದಿಂದ ಎಳೆದನು.
ಸಾ ತದಾ ಹ್ರಿಯಮಾಣಾಽಪಿ ವಿಶ್ವಾಮಿತ್ರಬಲೈರ್ಬಲಾತ್ |
ಕಶಾದಂಡಪ್ರಹಾರೈಶ್ಚ ಕಾಲ್ಯಮಾನಾ ಇತಸ್ತತಃ ॥39॥
ಹ್ರಿಯಮಾಣಾ ತಥಾ ತೇನ ವಸಿಷ್ಠಸ್ಯಾಥ ನಂದಿನೀ |
ಉದ್ಯಮ್ಯಾಭಿಮುಖೀ ಪಾರ್ಥ ತಸ್ಥೌ ಭಗವದುನ್ಮುಖೀ ॥40॥
ವಿಶ್ವಾಮಿತ್ರನ ಸೈನ್ಯದಿಂದ ಬಲಾತ್ಕಾರದಿಂದ ಎಳೆಯಲ್ಪಡುತ್ತಿದ್ದರೂ, ಚಾವಟಿ ಮತ್ತು ದೊಣ್ಣೆಗಳ ಹೊಡೆತದಿಂದ ಪೀಡಿಸಲ್ಪಟ್ಟು ಈ ಕಡೆ ಮತ್ತು ಆ ಕಡೆಗಳಲ್ಲಿ ಎಳೆಯಲ್ಪಡುತ್ತಿದ್ದರೂ ವಸಿಷ್ಠರ ಗೋವಾದ ಆ ನಂದಿನಿಯು ಆಗ ತಿರುಗಿ ವಸಿಷ್ಠರಿಗೆ ಅಭಿಮುಖವಾಗಿ ಮುಖವನ್ನು ಎತ್ತಿ ನಿಂತಿತು.
ಭೃಶಂ ಸಂತಪ್ಯಮಾನಾಽಪಿ ನಾಜಗಾಮಾಶ್ರಮಾತ್ ತತಃ |
ಆಶ್ರಮಾನ್ನೈವ ಗಚ್ಛಂತೀ ಹಂಭಾರಾವೈರ್ನನಾದ ಚ ॥41॥
ಪಾರ್ಥನೇ, ಬಹಳ ತಾಪಗಳಿಂದ ಬಳಲುತ್ತಿದ್ದರೂ, ಅದು ಆಶ್ರಮವನ್ನು ಬಿಟ್ಟು ಕದಲಲಿಲ್ಲ. ಆಶ್ರಮವನ್ನು ಬಿಟ್ಟು ಚಲಿಸದೆ, ಅಂಬಾ ಶಬ್ದಗಳಿಂದ ಅದು ನಾದವನ್ನು ಮಾಡಿತು.
ಸಾ ತು ತೇಷಾಂ ಬಲಾನ್ನಂದೀ ಬಲಾನಾಂ ಭರತರ್ಷಭ |
ವಿಶ್ವಾಮಿತ್ರಭಯೋದ್ವಿಗ್ನಾ ವಸಿಷ್ಠಂ ಸಮುಪಾಗತಮತ್ ॥42॥
ಭರತರ್ಷಭನೇ, ವಿಶ್ವಾಮಿತ್ರನ ಭಯದಿಂದಲೂ, ಸೈನ್ಯದ ಬಲದಿಂದಲೂ, ಉದ್ವಿಗ್ನಳಾದ ನಂದಿನಿಯು ವಸಿಷ್ಠರನ್ನು ಸಮೀಪಿಸಿತು.
ವಸಿಷ್ಠಃ
ಶೃಣೋಮಿ ತೇ ರವಂ ಭದ್ರೇ ರುದಂತ್ಯಾ ವೈ ಮುಹುರ್ಮುಹುಃ |
ಬಲಾದ್ ಹ್ರಿಯಸಿ ಮೇ ನಂದಿ ಕ್ಷಮಾವಾನ್ ಬ್ರಾಹ್ಮಣೋ ಹ್ಯಹಮ್ ॥43॥
ಮಂಗಳಸ್ವರೂಪಳೇ, ಮತ್ತೆ ಮತ್ತೆ ಅಳುತ್ತಿರುವ ನಿನ್ನ ಶಬ್ದವನ್ನು ಕೇಳುತ್ತಿದ್ದೇನೆ. ನಂದಿನಿ, ನಿನ್ನನ್ನು ಬಲಾತ್ಕಾರದಿಂದ ತೆಗೆದುಕೊಂಡು ಹೋಗುತ್ತಿದ್ದಾರೆ. ನಾನು ಕ್ಷಮೆಯುಳ್ಳ ಬ್ರಾಹ್ಮಣ.
ನಂದಿನೀ
ಪಾಷಾಣದಂಡಾಭಿಹತಾಂ ಕ್ರಂದಂತೀಂ ಮಾಮನಾಥವತ್ |
ವಿಶ್ವಾಮಿತ್ರತಪೋದ್ವಿಗ್ನಾಂ ಭಗವಾನ್ ಕಿಮುಪೇಕ್ಷಸೇ ॥44॥
ಪೂಜ್ಯರೇ, ಕಲ್ಲುಗಳಿಂದಲೂ ಮತ್ತು ದೊಣ್ಣೆಗಳಿಂದಲೂ ಹೊಡೆಯಲ್ಪಟ್ಟು ಅನಾಥಳಂತೆ ಮೊರೆಯಿಡುತ್ತಿರುವ ವಿಶ್ವಾಮಿತ್ರನು ಕೊಡುವ ತಾಪಗಳಿಂದ ಉದ್ವಿಗ್ನಳಾದ ನನ್ನನ್ನು ಉದಾಸೀನ ಮಾಡುತ್ತೀರಾ?
ಗಂಧವಃ
ಏವಂ ತಸ್ಯಾಂ ತಥಾ ಪಾರ್ಥ ಧರ್ಷಿತಾಯಾಂ ಮಹಾಮುನಿಃ |
ನ ಚಾಕ್ಷುಭ್ಯತ ನ ಧೈರ್ಯಾಚ್ಚ ವಿಚಚಾಲ ಸಮಾದಧೇ ॥45॥

ಪಾರ್ಥನೇ, ಹೀಗೆ ನಂದಿನಿಯು ಅಪಮಾನಕ್ಕೆ ಒಳಗಾದಾಗಲೂ, ಆ ಮಹರ್ಷಿಗಳು ಕ್ಷೋಭೆಯನ್ನು ಹೊಂದಲಿಲ್ಲ. ಧೈರ್ಯವನ್ನೂ ಕಳೆದುಕೊಳ್ಳಲಿಲ್ಲ. ಮನಸ್ಸಿನಲ್ಲಿ ಸಮಾಧಾನದಿಂದಲೇ ಇದ್ದರು.
ವಸಿಷ್ಠಃ
ಕ್ಷತ್ರಿಯಾಣಾಂ ಬಲಂ ವೀರ್ಯಂ ಬ್ರಾಹ್ಮಣಾನಾಂ ಬಲಂ ಕ್ಷಮಾ |
ಕ್ಷಮಾ ಮಾಂ ಭಜತೇ ಯಸ್ಮಾದ್ ಗಮ್ಯತಾಂ ಯದಿ ರೋಚತೇ ॥46॥
ಕ್ಷತ್ರಿಯರಿಗೆ ಪರಾಕ್ರಮವು ಬಲ. ಬ್ರಾಹ್ಮಣರಿಗೆ ಕ್ಷಮೆಯೇ ಬಲ. ನನ್ನನ್ನು ಕ್ಷಮೆಯು ಆವರಿಸಿದೆ. ಆ ಕಾರಣದಿಂದ ನಿನಗೆ ಇಷ್ಟವಿದ್ದರೇ ಹೋಗು.
ನಂದಿನೀ
ಕಿಂ ನು ತ್ಯಕ್ತಾऽಸ್ಮಿ ಭಗವನ್ ಯದೇವಂ ಮಾಂ ಪ್ರಭಾಷಸೇ |
ನ ತ್ಯಕ್ತಾऽಹಂ ತ್ವಯಾ ಬ್ರಹ್ಮನ್ನ ಶಕ್ಯಾ ನಯಿತುಂ ಬಲಾತ್ ॥47॥
ಪೂಜ್ಯರೇ, ನೀವು ಹೀಗೆ ಮಾತನಾಡುತ್ತಿರುವುದರಿಂದ ನನ್ನನ್ನು ಪರಿತ್ಯಾಗ ಮಾಡಿದ್ದೀರಾ. ಬ್ರಾಹ್ಮಣರೇ, ನೀವು ನನ್ನನ್ನು ಪರಿತ್ಯಾಗ ಮಾಡದಿದ್ದರೆ ನನ್ನನ್ನು ಯಾರೂ ತಮ್ಮ ಬಲದಿಂದ ಕರೆದುಕೊಂಡು ಹೋಗಲು ಸಾಧ್ಯವಿಲ್ಲ.
ವಸಿಷ್ಠಃ
ನ ತ್ವಾಂ ತ್ಯಜಾಮಿ ಕಲ್ಯಾಣಿ ಸ್ಥೀಯತಾಂ ಯದಿ ಶಕ್ಯತೇ |
ದೃಢೇನ ದಾಮ್ನಾ ಬದ್ಧ್ವೈವ ವತ್ಸಸ್ತೇ ಹ್ರಿಯತೇ ಬಲಾತ್ |
ಯೇನ ಕೇನಾಪ್ಯುಪಾಯೇನ ತ್ವಯಾ ವತ್ಸೋ ನಿವಾರ್ಯತಾಮ್ ॥48॥
ಕಲ್ಯಾಣಿಯೇ, ನಾನು ನಿನ್ನನ್ನು ಪರಿತ್ಯಾಗ ಮಾಡುತ್ತಿಲ್ಲ. ಸಾಧ್ಯವಾದರೇ ನೀನು ಇಲ್ಲಿಯೇ ಇರು. ನಿನ್ನ ಕರುವನ್ನು ಬಲವಾದ ಹಗ್ಗದಿಂದ ಕಟ್ಟಿ ಬಲಾತ್ಕಾರದಿಂದ ಎಳೆದುಕೊಂಡು ಹೋಗುತ್ತಿದ್ದಾರೆ. ಯಾವ ಉಪಾಯ- ದಿಂದಲಾದರೂ ನೀನು ನಿನ್ನ ಕರುವನ್ನು ರಕ್ಷಿಸು.
ಗಂಧರ್ವಃ
ಸ್ಥೀಯತಾಮಿತಿ ತಚ್ಛ್ರುತ್ವಾ ವಸಿಷ್ಠಸ್ಯ ಯಶಸ್ವಿನೀ |
ಊರ್ಧ್ವಾಂಚಿತಶಿರೋಗ್ರೀವಾ ಪ್ರಭಾವಾಚ್ಚಾರುದರ್ಶನಾ ॥49॥
ಕ್ರೋಧರಕ್ತೇಕ್ಷಣಾ ಸಾ ಗೌಃ ಹಂಭಾರವಘನಸ್ವನೈಃ |
ವಿಶ್ವಾಮಿತ್ರಸ್ಯ ತತ್ ಸೈನ್ಯಂ ವ್ಯದ್ರಾವಯತ ಸರ್ವಶಃ ॥50॥
ಇಲ್ಲಿಯೇ ಇರು ಎಂಬ ವಸಿಷ್ಠರ ಮಾತನ್ನು ಕೇಳಿ ಮನೋಹರವಾದ ಯಶಸ್ವಿನಿಯಾದ ಆ ಗೋವು ತನ್ನ ಕತ್ತನ್ನು ಮತ್ತು ಶಿರಸ್ಸನ್ನು ಮೇಲ್ಮುಖವಾಗಿ ಮಾಡಿ, ಕೆಂಪಾದ ಕಣ್ಣುಗಳನ್ನು ಹೊಂದಿ, ತನ್ನ ಅಂಭಾರವದ ಘನನಾದಗಳಿಂದ ಮತ್ತು ತನ್ನ ಪ್ರಭಾವದಿಂದ ವಿಶ್ವಾಮಿತ್ರನ ಆ ಸೈನ್ಯವನ್ನು ಎಲ್ಲ ಕಡೆಗಳಲ್ಲಿಯೂ ಚದುರಿಸಿತು.
ಕಶಾಗ್ರದಂಡಾಭಿಹತಾ ಕಾಲ್ಯಮಾನಾ ಇತಸ್ತತಃ |
ಕ್ರೋಧದೀಪ್ತೇಕ್ಷಣಾ ಕ್ರೋಧಂ ಭೂಯ ಏವ ಸಮಾದಧೇ ॥51॥
ಚಾವಟಿಯ ತುದಿಯ ಮತ್ತು ದೊಣ್ಣೆಗಳ ಹೊಡೆತದಿಂದ ಹಿಂಸಿಸಲ್ಪಟ್ಟ, ಕ್ರೋಧದಿಂದ ಉರಿಯುವ ಕಣ್ಣುಳ್ಳ, ಆ ನಂದಿನಿಯು ಇನ್ನೂ ಹೆಚ್ಚಿನ ಕ್ರೋಧವನ್ನು ತಂದುಕೊಂಡಿತು.
ಆದಿತ್ಯ ಇವ ಮಧ್ಯಾಹ್ನೇ ಕ್ರೋಧದೀಪ್ತವಪುರ್ಬಭೌ |
ಅಂಗಾರವರ್ಷಂ ಮುಂಚಂತೀ ಮುಹುರ್ವಾತಂ ಮುಖಾದ್ ವಮತ್ ॥
ಕ್ರೋಧದಿಂದ ಉರಿಯುವ ಅದರ ದೇಹವು ಮಧ್ಯಾಹ್ನದ ಸೂರ್ಯನಂತೆ ಪ್ರಕಾಶಿಸಿತು. ಅದು ತನ್ನ ಮುಖದಿಂದ ಕೆಂಡಗಳ ಮಳೆಯನ್ನು ಮತ್ತು ಬಿರುಗಾಳಿಯನ್ನು ಸೃಷ್ಟಿಸಿತು.
ಅಸೃಜತ್ ಪಹ್ಲವಾನ್ ಪುಚ್ಛಾತ್ ಪ್ರಸ್ರವಾಚ್ಛಂಬರಾಂಛಕಾನ್ |
ಯೋನಿದೇಶಾಚ್ಚ ಯವನಾನ್ ಶಕೃದ್ದೇಶಾಚ್ಛಕಾಂಸ್ತಥಾ ॥53॥
ಅದು ತನ್ನ ಮುಖದಿಂದ ವಮನವನ್ನು ಮಾಡಿ ಪಹ್ಲವರನ್ನೂ, ಪುಚ್ಛದಿಂದ ಪ್ರಸ್ರವರನ್ನೂ, ಶಂಭರರನ್ನೂ ಮತ್ತು ಶಕರನ್ನೂ, ಯೋನಿದೇಶದಿಂದ ಯವನರನ್ನೂ, ಗೋಮಯದೇಶದಿಂದ ಶಕರನ್ನೂ ಸೃಷ್ಟಿ ಮಾಡಿತು.
ಮೂತ್ರತಶ್ಚಸೃಜಚ್ಚಾಪಿ ನಂದಿನೀ ಕ್ರೋಧಮೂರ್ಛಿತಾ |
ಪೌಂಡ್ರಾನ್ ಕಿರಾತಾನ್ ದ್ರಮಿಳಾನ್ ಸಿಂಹಳಾನ್ ಬರ್ಬರಾಂಸ್ತಥಾ ॥56॥
ಕ್ರೋಧಮೂರ್ಛಿತವಾದ ಆ ನಂದಿಯು ಮೂತ್ರದಿಂದ ಪೌಂಡ್ರರನ್ನೂ, ಕಿರಾತರನ್ನೂ, ದ್ರಮಿಳರನ್ನೂ, ಸಿಂಹಳರನ್ನೂ, ಬರ್ಬರರನ್ನೂ ಸೃಷ್ಟಿ ಮಾಡಿತು.
ತಥೈವ ಬರ್ಬರಾನ್ ಮ್ಲೇಚ್ಛಾನ್ ಫೇನತಃ ಸಾ ಸಸರ್ಜ ಹ |
ತೈರ್ವಿಸೃಷ್ಟೈರ್ಮಹಾಸೈನ್ಯೈರ್ನಾನಾಮ್ಲೇಚ್ಛಗಣೈಸ್ತಥಾ ॥55॥
ನಾನಾವರಣಸಂಛನ್ನೈರ್ನಾನಾಯುಧಧರೈಸ್ತಥಾ |
ಅದೀರ್ಯತ ಸುಸನ್ನದ್ಧೈರ್ವಿಶ್ವಾಮಿತ್ರಸ್ಯ ಪಶ್ಯತಃ ॥56॥
ಹಾಗೆಯೇ ತನ್ನ ಬಾಯಿಯ ನೊರೆಯಿಂದ ಬರ್ಬರರನ್ನೂ, ಮ್ಲೇಚ್ಛರನ್ನೂ ಸೃಷ್ಟಿಮಾಡಿತು. ನಂದಿನಿಯು ಸೃಷ್ಟಿಸಿದ ನಾನಾಯುಧಧಾರಿಗಳಾದ, ಅನೇಕ ಕವಚಗಳನ್ನು ಧರಿಸಿದ, ಮ್ಲೇಚ್ಛ ಮೊದಲಾದ ಸುಸನ್ನದ್ಧವಾದ ಮಹಾಸೈನ್ಯದಿಂದ ವಿಶ್ವಾಮಿತ್ರನು ನೋಡುತ್ತಿರುವಂತೆಯೇ ಅವನ ಸೈನ್ಯವು ಚೆಲ್ಲಾಪಿಲ್ಲಿಯಾಯಿತು (ಒಡೆದು ಹೋಯಿತು).

ಏಕೈಕಶಸ್ತಸ್ಯ ಯೋಧಾಃ ಪಂಚಭಿಃ ಸಪ್ತಭಿರ್ವೃತಾಃ |
ಶಸ್ತ್ರವರ್ಷೇಣ ಮಹತಾ ಹನ್ಯಮಾನಂ ಬಲಂ ತತಃ |
ಪ್ರಭಗ್ನದರ್ಪಂ ಸಂತ್ರಸ್ತಂ ವಿಶ್ವಾಮಿತ್ರಸ್ಯ ಪಶ್ಯತಃ ||57||
ವಿಶ್ವಾಮಿತ್ರನ ಒಬ್ಬೊಬ್ಬ ಯೋಧನು ಈ ಸೈನ್ಯದ ಐದು ಅಥವಾ ಏಳು ಯೋಧರಿಂದ ಆವೃತನಾದನು. ದೊಡ್ಡ ಬಾಣದ ಮರೆಯಿಂದ ಪೀಡಿಸಲ್ಪಟ್ಟ ವಿಶ್ವಾಮಿತ್ರನ ಸೈನ್ಯವು ವಿಶ್ವಾಮಿತ್ರನ ಎದುರಿಗೇ ದರ್ಪವನ್ನು ಕಳೆದುಕೊಂಡು ಭಯಗ್ರಸ್ತವಾಯಿತು.
ತಸ್ಯ ತಚ್ಚತುರಂಗಂ ವೈ ಬಲಂ ಪರಮದುಃಸಹಮ್ |
ಪ್ರಭಗ್ನಂ ಸರ್ವತೋ ಘೋರಂ ಪಯಸ್ವಿನ್ಯಾ ವಿನಿರ್ಜಿತಮ್ ||58||
ವಿಶ್ವಾಮಿತ್ರನ ಪರಮ ದುಃಸಹವಾದ, ಘೋರವಾದ ಚತುರಂಗ ಬಲವು ಎಲ್ಲಾ ಕಡೆಗಳಲ್ಲಿಯೂ ಭಗ್ನಗೊಂಡು ನಂದಿನಿಯಿಂದ ಪರಾಜಿತವಾಯಿತು.
ನ ಚ ಪ್ರಾಣೈರ್ವಿಯುಜ್ಯಂತೇ ನಚ ಕೇಚನ ಸೈನಿಕಾಃ |
ವಿಶ್ವಾಮಿತ್ರಸ್ಯ ಸಂಕ್ರುದ್ಧಾದ್ ವಸಿಷ್ಠಾದ್ ಭರತರ್ಷಭ ||59||
ಭರತರ್ಷಭನೇ, ವಸಿಷ್ಠರ ಕೋಪದಿಂದ ವಿಶ್ವಾಮಿತ್ರನ ಯಾವ ಸೈನಿಕರೂ ಮೃತರಾಗಲಿಲ್ಲ.
ವಿಶ್ವಾಮಿತ್ರಸ್ಯ ತತ್ ಸೈನ್ಯಂ ಕಾಲ್ಯಮಾನಂ ತ್ರಿಯೋಜನಮ್ |
ಕ್ರೋಶಮಾನಂ ಭೃಶೋದ್ವಿಗ್ನಂ ತ್ರಾತಾರಂ ನಾಧ್ಯಗಚ್ಛತ ||60||
ಹೀಗೆ ಚದುರಿಸಲ್ಪಟ್ಟ ವಿಶ್ವಾಮಿತ್ರನ ಸೈನ್ಯವು ಮೂರುಯೋಜನದವರೆಗೆ ಭಯದಿಂದ ಓಡಿ ಕಿರುಚಿದರೂ, ಅದಕ್ಕೆ ಯಾರೂ ರಕ್ಷಕರು ದೊರೆಯಲಿಲ್ಲ.
ವಿಶ್ವಾಮಿತ್ರಸ್ತತೋ ದೃಷ್ಟ್ವಾ ಕ್ರೋಧಾವಿಷ್ಟಃ ಸ ರೋದಸೀ |
ವವರ್ಷ ಶರವರ್ಷಾಣಿ ವಸಿಷ್ಠೇ ಮುನಿಸತ್ತಮೇ ||61||
ಘೋರರೂಪಾಂಶ್ಚ ನಾರಾಚಾನ್ ಕ್ಷುರಾನ್ ಭಲ್ಲಾನ್ ಮಹಾಮುನಿಃ |
ವಿಶ್ವಾಮಿತ್ರಪ್ರಯುಕ್ತಾಂಸ್ತಾನ್ ವೈಣವೇನ ವ್ಯಮೋಚಯತ್ ||62||
ಅದನ್ನು ನೋಡಿದ ವಿಶ್ವಾಮಿತ್ರನು ಕ್ರೋಧಾವಿಷ್ಟನಾಗಿ ಭೂಮಿ- ಅಂತರಿಕ್ಷಗಳಲ್ಲಿ ಮತ್ತು ಮುನಿಶ್ರೇಷ್ಠರ ಮೇಲೆ ಬಾಣದ ಮಳೆಯನ್ನು ಕರೆದನು. ಮಹಾಮುನಿಗಳಾದ ವಸಿಷ್ಠರು ವಿಶ್ವಾಮಿತ್ರನು ಪ್ರಯೋಗಿಸಿದ ಘೋರವಾದ ಬಾಣಗಳನ್ನೂ, ಕ್ಷುರಗಳನ್ನೂ ಮತ್ತು ಭಲ್ಲಗಳನ್ನೂ ತನ್ನ ಬಿದಿರಿನಿಂದ ಮಾಡಿದ ಬ್ರಹ್ಮದಂಡದಿಂದ ವಿಮೋಚನೆಗೊಳಿಸಿದರು.
ವಸಿಷ್ಠಸ್ಯ ತದಾ ದೃಷ್ಟ್ವಾ ಕರ್ಮಕೌಶಲಮಾಹವೇ |
ವಿಶ್ವಾಮಿತ್ರೋಽಪಿ ಕೋಪೇನ ಭೂಯಃ ಶತ್ರುನಿಪಾತನಃ |
ದಿವ್ಯಾಸ್ತ್ರವರ್ಷಂ ತಸ್ಮೈ ತು ಪ್ರಾಹಿಣೋನ್ಮುನಯೇ ರುಷಾ ||63||
ಆಗ ಶತ್ರುನಿಪಾತನನಾದ ವಿಶ್ವಾಮಿತ್ರನು, ಯುದ್ಧದಲ್ಲಿ ವಸಿಷ್ಠರ ಕೌಶಲವನ್ನು ನೋಡಿ ಇನ್ನೂ ಹೆಚ್ಚು ಕೋಪವನ್ನು ತಾಳಿ, ಆ ಋಷಿಗಳ ಮೇಲೆ ಕೋಪದಿಂದ ದಿವ್ಯಾಸ್ತ್ರಗಳ ಮಳೆಯನ್ನು ಕರೆದನು.
ಆಗ್ನೇಯಂ ವಾರುಣಂ ಚೈಂದ್ರಂ ಯಾಮ್ಯಂ ವಾಯವ್ಯಮೇವ ಚ |
ವಿಸಸರ್ಜ ಮಹಾಭಾಗೇ ವಸಿಷ್ಠೇ ಬ್ರಹ್ಮಣಃ ಸುತೇ ||64||
ಅವನು ಬ್ರಹ್ಮಪುತ್ರರಾದ ಮಹಾನುಭಾವರಾದ ವಸಿಷ್ಠರ ಮೇಲೆ ಆಗ್ನೇಯಾಸ್ತ್ರವನ್ನೂ, ವಾರುಣಾಸ್ತ್ರವನ್ನೂ, ಐಂದ್ರಾಸ್ತ್ರವನ್ನೂ, ಯಾಮ್ಯಾಸ್ತ್ರವನ್ನೂ, ವಾಯವ್ಯಾಸ್ತ್ರವನ್ನೂ ಪ್ರಯೋಗಿಸಿದನು.
ಅಸ್ತ್ರಾಣಿ ಸರ್ವತೋ ಜ್ವಾಲಾಂ ವಿಸೃಜಂತಿ ಪ್ರಪೇದಿರೇ |
ಯುಗಾಂತಸಮಯೇ ಘೋರಾಃ ಪತಂಗಸ್ಯೇವ ರಶ್ಮಯಃ ||65||
ಆ ಅಸ್ತ್ರಗಳೆಲ್ಲವೂ ಯುಗಾಂತಕಾಲದ ಸೂರ್ಯನ ಘೋರವಾದ ಕಿರಣಗಳಂತೆ ಎಲ್ಲಾ ದಿಕ್ಕುಗಳಲ್ಲಿಯೂ ಜ್ವಾಲೆಯನ್ನು ಕಾರುತ್ತಾ ವಸಿಷ್ಠರನ್ನು ಸಮೀಪಿಸಿದವು.
ವಸಿಷ್ಠೋಽಪಿ ಮಹಾತೇಜಾ ಬ್ರಹ್ಮಶಕ್ತಿಪ್ರಯುಕ್ತಯಾ |
ಯಷ್ಟ್ಯಾ ನಿವಾರಯಾಮಾಸ ಸರ್ವಾಣ್ಯಸ್ತ್ರಾಣಿ ಸ ಸ್ಮಯನ್ ||66||
ಮಹಾತೇಜಸ್ವಿಗಳಾದ ವಸಿಷ್ಠರೂ ಸಹ ಶಕ್ತಿಯಿಂದ ಕೂಡಿದ್ದ ತಮ್ಮ ದಂಡದಿಂದ ನಗುತ್ತಲೇ ಎಲ್ಲಾ ಅಸ್ತ್ರಗಳನ್ನು ನಿವಾರಣೆ ಮಾಡಿದರು.
ತತಸ್ತೇ ಭಸ್ಮಸಾದ್ಭೂತಾಃ ಪತಂತಿ ಸ್ಮ ಮಹೀತಳೇ |
ಅಪೋಹ್ಯ ದಿವ್ಯಾನ್ಯಸ್ತ್ರಾಣಿ ವಸಿಷ್ಠೋ ವಾಕ್ಯಮಬ್ರವೀತ್ ||67||
ಆಗ ವಿಶ್ವಾಮಿತ್ರನು ಪ್ರಯೋಗಿಸಿದ ಅಸ್ತ್ರಗಳೆಲ್ಲವೂ ಸುಟ್ಟುಬೂದಿಯಾಗಿ ಭೂಮಿಯಲ್ಲಿ ಬಿದ್ದವು. ಆ ಎಲ್ಲಾ ದಿವ್ಯಾಸ್ತ್ರಗಳನ್ನೂ ನಿವಾರಣೆ ಮಾಡಿ ವಸಿಷ್ಠರು ವಿಶ್ವಾಮಿತ್ರರನ್ನು ಕುರಿತು ಹೇಳಿದರು.
ನಿರ್ಜಿತೋಽಸಿ ಮಹಾರಾಜ ದುರಾತ್ಮನ್ ಗಾಧಿನಂದನ |
ಯದಿ ತೇಽಸ್ತಿ ಪರಂ ಶೌರ್ಯಂ ತದ್ ದರ್ಶಯ ಮಯಿ ಸ್ಥಿತೇ ||68||
ದುರಾತ್ಮನಾದ ಗಾಧೀಪುತ್ರನಾದ ಮಹಾರಾಜನೇ, ನೀನು ಪರಾಜಿತನಾಗಿದ್ದೀಯೇ. ನಿನಗೆ ಬೇರೆ ಏನಾದರೂ ಶೌರ್ಯವಿದ್ದರೇ ಅದನ್ನು ನನ್ನ ಎದುರಿಗೆ ತೋರಿಸು.
ಗಂಧರ್ವಃ
ವಿಶ್ವಾಮಿತ್ರಸ್ತಥಾ ಚೋಕ್ತೋ ವಸಿಷ್ಠೇನ ನರಾಧಿಪ |

ನೋವಾಚ ಕಿಂಚಿದ್ ವ್ರೀಡಾಢ್ಯೋ ವಿದ್ರಾವಿತಮಹಾಬಲಃ ॥
ನರಾಧಿಪನೇ, ವಸಿಷ್ಠರು ಹೀಗೆ ಹೇಳುತ್ತಿರಲು ತನ್ನ ಮಹಾಸೈನ್ಯವೆಲ್ಲವೂ ದಿಕ್ಕಾಪಾಲಾಗಿ ಓಡಿದ ಆ ವಿಶ್ವಾಮಿತ್ರನು ನಾಚಿಕೆಯಿಂದ ಕೂಡಿದವನಾಗಿ ಏನನ್ನೂ ಮಾತನಾಡಲಿಲ್ಲ.
ತದ್ ದೃಷ್ಟ್ವಾ ಮಹದಾಶ್ಚರ್ಯಂ ಬ್ರಹ್ಮತೇಜೋಭವಂ ಬಲಮ್ |
ವಿಶ್ವಾಮಿತ್ರಃ ಕ್ಷತ್ರಭಾವಾನ್ನಿರ್ವಿಣ್ಣೋ ವಾಕ್ಯಮಬ್ರವೀತ್ ॥69॥
ಬ್ರಹ್ಮತೇಜಸ್ಸಿನಿಂದ ಉಂಟಾದ ಆಶ್ಚರ್ಯಕರವಾದ ಆ ಮಹಾಬಲವನ್ನು ನೋಡಿ ವಿಶ್ವಾಮಿತ್ರನು ತನ್ನ ಕ್ಷತ್ರಭಾವದಲ್ಲೇ ವೈರಾಗ್ಯವನ್ನು ಹೊಂದಿ ಮಾತನಾಡಿದನು.
ಧಿಗ್ ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಮ್ |
ಬಲಾಬಲೇ ವಿನಿಶ್ಚಿತ್ಯ ತಪ ಏವ ಪರಂ ಬಲಮ್ ॥70॥
ಕ್ಷತ್ರಿಯಬಲಕ್ಕೆ ಧಿಕ್ಕಾರವಿರಲಿ. ಬ್ರಹ್ಮತೇಜಸ್ಸಿನ ಬಲವೇ ಬಲ. ಬಲಾಬಲಗಳನ್ನು ನಿಶ್ಚಯಿಸುವುದಾದರೇ, ತಪಸ್ಸೇ ಶ್ರೇಷ್ಠವಾದ ಬಲ.
ಸ ರಾಜ್ಯಂ ಸ್ಫೀತಮುತ್ಸೃಜ್ಯ ತಾಂ ಚ ದೀಪ್ತಾಂ ನೃಪಶ್ರಿಯಮ್ |
ಭೋಗಾಂಶ್ಚ ಪೃಷ್ಠತಃ ಕೃತ್ವಾ ತಪ ಏವ ಸಮಾದದೇ ॥71॥
ಅವನು ಸಮೃದ್ಧವಾದ ರಾಜ್ಯವನ್ನು, ಮೆರೆಯುವ ನೃಪಸಂಪತ್ತನ್ನೂ ಮತ್ತು ಭೋಗಗಳನ್ನೂ ತಿರಸ್ಕರಿಸಿ ತಪಸ್ಸನ್ನು ಮಾಡಲು ಪ್ರಾರಂಭಿಸಿದನು.
ಸ ಗತ್ವಾ ತಪಸಾ ಸಿದ್ಧಿಂ ಲೋಕಾನ್ ವಿಷ್ಟಭ್ಯ ತೇಜಸಾ |
ತತಾಪ ಸರ್ವಾನ್ ಲೋಕಾಂಶ್ಚ ಬ್ರಾಹ್ಮಣತ್ವಮವಾಪ ಚ ॥72॥
ಅವನು ತಪಸ್ಸಿನ ಸಿದ್ಧಿಯನ್ನು ಪಡೆದು ತನ್ನ ತೇಜಸ್ಸಿನಿಂದ ಲೋಕಗಳ ಸ್ತಂಭನೆಯನ್ನು ಮಾಡಿ, ಎಲ್ಲಾ ಲೋಕಗಳಿಗೂ ತಾಪವನ್ನು ಕೊಟ್ಟು ಕೊನೆಗೆ ಬ್ರಾಹ್ಮಣತ್ವವನ್ನು ಪಡೆದನು.
ಅಪಿಬಚ್ಚ ಸುತಂ ಸೋಮಮಿಂದ್ರೇಣ ಸಹ ಕೌಶಿಕಃ |
ಏವಂವೀರ್ಯಸ್ತು ರಾಜರ್ಷಿರ್ವಿಪ್ರರ್ಷಿಃ ಸಂಬಭೂವ ಹ ॥73॥
ಆ ಕೌಶಿಕನು (ವಿಶ್ವಾಮಿತ್ರನು) ಇಂದ್ರನ ಜೊತೆಯಲ್ಲಿ ಸೋಮಪಾನವನ್ನು ಮಾಡಿದನು. ರಾಜರ್ಷಿಯಾದ ಅವನು ಇಂತಹ ಪರಾಕ್ರಮಶಾಲಿಯಾದ ಬ್ರಹ್ಮರ್ಷಿಯಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಸಪ್ತತ್ಯಧಿಕಶತತಮೋऽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಏಕಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.

## ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯ

(ವಸಿಷ್ಠ ವಿಶ್ವಾಮಿತ್ರರ ವಿರೋಧದ ವಿಸ್ತಾರ, ಕಲ್ಮಾಷಪಾದನ ಕಥೆ, ರಾಕ್ಷಸಾವಿಷ್ಟನಾದ ಕಲ್ಮಾಷಪಾದನಿಂದ ವಸಿಷ್ಠರ ಎಲ್ಲಾ ಮಕ್ಕಳ ಭಕ್ಷಣ. ಆತ್ಮಹತ್ಯೆಯನ್ನು ಮಾಡಿಕೊಳ್ಳಲು ವಸಿಷ್ಠರ ವಿಫಲ ಪ್ರಯತ್ನಗಳು.)
ಅರ್ಜುನಃ
ಋಷ್ಯೋಸ್ತು ಯತ್ಕೃತೇ ವೈರಂ ವಿಶ್ವಾಮಿತ್ರವಸಿಷ್ಠಯೋಃ |
ಬಭೂವ ಗಂಧರ್ವಪತೇ ಶಂಸ ನಃ ಸರ್ವಮೇವ ತು ॥1॥
ಗಂಧರ್ವಪತಿಯೇ, ವಿಶ್ವಾಮಿತ್ರ ಮತ್ತು ವಸಿಷ್ಠಋಷಿಗಳಿಗೆ ಯಾವ ನಿಮಿತ್ತದಿಂದ ವೈರವುಂಟಾಯಿತು ಎಂಬುದೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.
ಮಾಹಾತ್ಮ್ಯಂ ಚ ವಸಿಷ್ಠಸ್ಯ ಬ್ರಾಹ್ಮಣ್ಯಂ ಬ್ರಹ್ಮತೇಜಸಃ |
ವಿಶ್ವಾಮಿತ್ರಸ್ಯ ಚ ತಥಾ ಕ್ಷತ್ರಸ್ಯ ಚ ಮಹಾತ್ಮನಃ ॥2॥
ಬ್ರಹ್ಮತೇಜಯುಕ್ತರಾದ ವಸಿಷ್ಠರ ಬ್ರಾಹ್ಮಣ್ಯ ಮತ್ತು ಮಹಾತ್ಮ್ಯವನ್ನೂ, ಮಹಾತ್ಮನಾದ ಕ್ಷತ್ರಿಯ ವಿಶ್ವಾಮಿತ್ರನ ಮಹಾತ್ಮೆಯನ್ನೂ ಹೇಳಿ.
ನ ಶೃಣ್ವಾನಸ್ತ್ವಹಂ ತೃಪ್ತಿಮುಪಗಚ್ಛಾಮಿ ಖೇಚರ |
ಆಖ್ಯಾಹಿ ಗಂಧರ್ವಪತೇ ತತ್ಕಥಾಸಾರಮೇವ ಚ |
ಮಾಹಾತ್ಮ್ಯಂ ಚ ವಸಿಷ್ಠಸ್ಯ ವಿಚಿತ್ರಾಣಿ ಚ ಭಾಷಸೇ ॥3॥
ಖೇಚರನೇ, ಈ ಕಥೆಯನ್ನು ಕೇಳುವ ನನಗೆ ತೃಪ್ತಿಯೇ ಉಂಟಾಗುತ್ತಿಲ್ಲ. ಗಂಧರ್ವಪತಿಯೇ, ನೀನು ವಸಿಷ್ಠರ ಮಹಾತ್ಮ್ಯವನ್ನು ಮತ್ತು ವಿಚಿತ್ರವಾದ ಅವರ ಕಾರ್ಯಗಳನ್ನೂ ಹೇಳುತ್ತಿದ್ದೀಯೆ. ಆ ಕಥೆಯ ಸಾರವನ್ನು ಹೇಳು.
ಗಂಧರ್ವಃ
ಇದಂ ವಾಸಿಷ್ಠಮಾಖ್ಯಾನಂ ಪುರಾಣಂ ಪುಣ್ಯಮುತ್ತಮಮ್ |
ಪಾರ್ಥ ಸರ್ವೇಷು ಲೋಕೇಷು ವಿಶ್ರುತಂ ತನ್ನಿಬೋಧ ಮೇ ॥4॥
ಈ ಪವಿತ್ರವಾದ ಮತ್ತು ಶ್ರೇಷ್ಠವಾದ ವಸಿಷ್ಠರ ಕಥೆಯು ಪ್ರಾಚೀನವಾದುದು. ಪಾರ್ಥನೇ, ಇದು ಎಲ್ಲಾ ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ. ಅದನ್ನು ನನ್ನಿಂದ ತಿಳಿದುಕೊ.

ಕಲ್ಮಾಷಪಾದ ಇತ್ಯಸ್ಮಿನ್ ಲೋಕೇ ರಾಜಾ ಬಭೂವ ಹ |
ಇಕ್ಷ್ವಾಕೂಣಾಂ ಕುಲೇ ಜಾತಸ್ತೇಜಸಾऽಸದೃಶೋ ಭುವಿ ॥5॥
ಹಿಂದೆ ಭೂಮಿಯಲ್ಲಿ ಇಕ್ಷ್ವಾಕುವಂಶದಲ್ಲಿ ಜನಿಸಿದವನೂ, ಅಸದೃಶ ತೇಜಸ್ವಿಯೂ ಆದ ಕಲ್ಮಾಷಪಾದನೆಂಬ ರಾಜನಿದ್ದನು.
ಸ ಕದಾಚಿದ್ ವನೇ ರಮ್ಯೇ ಮೃಗಯಾಮಾಚರದ್ ಬಲೀ |
ಮೃಗಾನ್ ನಿಘ್ನನ್ ವರಾಹಾಂಶ್ಚ ಚಚಾರ ರಿಪುಸೂದನಃ ॥6॥
ಅವನು ಒಮ್ಮೆ ಮನೋಹರವಾದ ಕಾಡಿನಲ್ಲಿ ಬೇಟೆಯಾಡಿದನು. ಬಲಿಷ್ಠನಾದ, ಶತ್ರುಸಂಹಾರಕನಾದ ಅವನು, ಮೃಗಗಳನ್ನೂ ಮತ್ತು ವರಾಹಗಳನ್ನೂ ಕೊಲ್ಲುತ್ತಾ ಸಂಚರಿಸಿದನು.
ಸ ತು ರಾಜಾ ಮಹಾತ್ಮಾನಂ ವಾಸಿಷ್ಠಮೃಷಿಸತ್ತಮಮ್ |
ಸುತೃಷ್ಣಾರ್ತಃ ಕ್ಷುಧಾರ್ತಶ್ಚ ಏಕಾಯನಗತಃ ಪಥಿ ॥7॥
ಅಪಶ್ಯದಜಿತಃ ಸಂಖೇ ಮುನಿಂ ಪ್ರತಿಮುಖಾಗತಮ್ |
ಶಕ್ತಿಂ ನಾಮ ಮಹಾಭಾಗಂ ವಸಿಷ್ಠಕುಲನಂದನಮ್ ॥8॥
ಹಸಿವು ಮತ್ತು ಬಾಯಾರಿಕೆಗಳಿಂದ ಕೂಡಿದ ಆ ರಾಜನು, ಅವನು ಹೋಗುವ ದಾರಿಯಲ್ಲೇ ಎದುರಿಗೆ ಬರುತ್ತಿದ್ದ ವಸಿಷ್ಠಕುಲನಂದನನಾದ, ಮಹಾತ್ಮನಾದ, ಮಹಾನುಭಾವನಾದ ಶಕ್ತಿ ಎಂಬ ಋಷಿಶ್ರೇಷ್ಠರನ್ನು ಸಂಧಿಸಿದನು.
ಜ್ಯೇಷ್ಠಂ ಪುತ್ರಶತಾತ್ ಪುತ್ರಂ ವಸಿಷ್ಠಸ್ಯ ಮಹಾತ್ಮನಃ |
ಅಪಗಚ್ಛ ಪಥೋऽಸ್ಮಾಕಮಿತ್ಯೇವಂ ಪಾರ್ಥಿವೋऽಬ್ರವೀತ್ ॥9॥
ಆ ರಾಜನು ಮಹಾನುಭಾವರಾದ ವಸಿಷ್ಠರ ನೂರು ಮಕ್ಕಳಲ್ಲಿ ಜ್ಯೇಷ್ಠರೂ, ಶ್ರೇಷ್ಠರೂ ಆದ ಆ ಋಷಿಗಳನ್ನು ಕುರಿತು ನನ್ನ ಮಾರ್ಗದಿಂದ ದೂರ ಸರಿ ಎಂದು ಹೇಳಿದನು.
ಸ ಚಾಪ್ಯೃಷಿರುವಾಚೈನಂ ಸಾಂತ್ವಯಂಶ್ಲಕ್ಷ್ಣಯಾ ಗಿರಾ |
ಮಮ ಪಂಥಾ ಮಹಾರಾಜ ಧರ್ಮ ಏಷ ಸನಾತನಃ |
ರಾಜ್ಞಾ ಧರ್ಮೇಣ ಸಂಕಲ್ಪ್ಯ ದೇಯಃ ಪಂಥಾ ದ್ವಿಜಾತಯೇ ॥10॥
ಆ ಋಷಿಗಳಾದರೋ ಮಧುರವಾದ ಮಾತುಗಳಿಂದ ಅವನಿಗೆ ಸಮಾಧಾನವನ್ನು ಮಾಡುತ್ತಾ ಮಹಾರಾಜನೇ, ಇದು ನನ್ನ ಮಾರ್ಗ. ರಾಜನು ಧರ್ಮವನ್ನು ಅಭಿವೀಕ್ಷಿಸಿ ಬ್ರಾಹ್ಮಣನಿಗೆ ಮಾರ್ಗವನ್ನು ಕೊಡಬೇಕು ಎಂಬುದು ಸನಾತನವಾದ ಧರ್ಮ ಎಂದು ಹೇಳಿದರು.

ಗಂಧರ್ವಃ
ಋಷಿಸ್ತು ನಾಪಚಕ್ರಾಮ ತಸ್ಮಿನ್ ಧರ್ಮಪಥೇ ಸ್ಥಿತಃ |
ಅಪಿ ರಾಜಾ ಮುನೇರ್ಮಾರ್ಗಾತ್ ಕ್ರೋಧನ್ನಾಪಜಗಾಮ ಹ ॥11॥
ಧರ್ಮಮಾರ್ಗದಲ್ಲಿದ್ದ ಋಷಿಗಳು ಆ ಮಾರ್ಗದಿಂದ ಸರಿಯಲಿಲ್ಲ. ಕ್ರೋಧದಿಂದ ಕೂಡಿದ ರಾಜನು ಸಹ ಋಷಿಗಳ ಮಾರ್ಗದಿಂದ ಸರಿಯಲಿಲ್ಲ.
ಅಮುಂಚಂತಂ ತು ಪಂಥಾನಂ ತಮೃಷಿಂ ನೃಪಸತ್ತಮಃ |
ಜಘಾನ ಕಶಯಾ ಮೋಹಾನ್ನೃಪೋ ರಾಕ್ಷಸವನ್ಮುನಿಮ್ ॥12॥
ಆಗ ಆ ರಾಜಶ್ರೇಷ್ಠನು ಮೋಹವಶನಾಗಿ ಮಾರ್ಗವನ್ನು ಬಿಡದಿದ್ದ ಆ ಋಷಿಗಳಿಗೆ ರಾಕ್ಷಸನಂತೆ ಚಾವಟಿಯಿಂದ ಹೊಡೆದನು.
ಕಶಾಪ್ರಹಾರಾಭಿಹತೋ ರಾಜಾನಮೃಷಿಸತ್ತಮಃ |
ತಂ ಶಶಾಪ ನೃಪಶ್ರೇಷ್ಠಂ ವಾಸಿಷ್ಠಃ ಕ್ರೋಧಮೂರ್ಛಿತಃ ॥13॥
ಆ ಋಷಿಶ್ರೇಷ್ಠರಾದ ವಸಿಷ್ಠಪುತ್ರರು ಚಾವಟಿಯ ಏಟಿನಿಂದ ಕ್ರೋಧಮೂರ್ಛಿತರಾಗಿ ಆ ನೃಪಶ್ರೇಷ್ಠನಿಗೆ ಶಾಪವನ್ನು ಕೊಟ್ಟರು.
ಹಂಸಿ ರಾಕ್ಷಸವದ್ ಯನ್ಮಾಂ ರಾಜಾಪಶದ ತಾಪಸಮ್ |
ತಸ್ಮಾತ್ ತ್ವಮದ್ಯಪ್ರಭೃತಿ ಪುರುಷಾದೋ ಭವಿಷ್ಯಸಿ ॥14॥
ರಾಜಾಧಮನೇ, ತಾಪಸನಾದ ನನ್ನನ್ನು ರಾಕ್ಷಸನಂತೆ ಹೊಡೆಯುತ್ತಿರು- ವುದರಿಂದ ನೀನು ಈ ದಿನದಿಂದ ನರಭಕ್ಷಕನಾಗುವಿ.
ಮನುಷ್ಯಪಿಶಿತೇ ಸಕ್ತಶ್ಚರಿಷ್ಯಸಿ ಮಹೀಮಿಮಾಮ್ |
ಗಚ್ಛ ರಾಜಾಧಮೇತ್ಯುಕ್ತಃ ಶಕ್ತಿನಾ ವೀರ್ಯಶಕ್ತಿನಾ ॥15॥
ಮನುಷ್ಯಮಾಂಸದಲ್ಲಿ ಆಸಕ್ತನಾಗಿ ಈ ಭೂಮಿಯಲ್ಲಿ ಸಂಚರಿಸುವಿ. ರಾಜಾಧಮನೇ, ಹೊರಟುಹೋಗು ಎಂದು ವೀರ್ಯಶಾಲಿಗಳಾದ ಶಕ್ತಿಋಷಿಗಳಿಂದ ಶಪಿಸಲ್ಪಟ್ಟನು.
ತತೋ ಯಾಜ್ಯನಿಮಿತ್ತಂ ತು ವಿಶ್ವಾಮಿತ್ರವಸಿಷ್ಠಯೋಃ
ವೈರಮಾಸೀದ್ ತದಾ ತಂ ತು ವಿಶ್ವಾಮಿತ್ರೋऽನ್ವವಿಂದತ ॥16॥
ಅನಂತರ ತ್ರಿಶಂಕುಮಹಾರಾಜನಿಗೆ ಯಾಗವನ್ನು ಮಾಡಿಸುವ ಸಲುವಾಗಿ ವಿಶ್ವಾಮಿತ್ರ ವಸಿಷ್ಠರಿಗೆ ವೈರ ಉಂಟಾಯಿತು. ಆಗ ವಿಶ್ವಾಮಿತ್ರರು ತ್ರಿಶಂಕುವನ್ನು ಪರಿಗ್ರಹಿಸಿದರು. (ಇದು ಇಲ್ಲಿ ಪ್ರಾಸಂಗಿಕವಾಗಿ ವಿಸ್ತಾರ ಮಾಡದೇ ಹೇಳಿದ ಕಥೆ.)
ತಯೋರ್ವಿವದತೋರೇವಂ ಸಮೀಪಮುಪಚಕ್ರಮೇ |
ಋಷಿರುಗ್ರತಪಾಃ ಪಾರ್ಥ ವಿಶ್ವಾಮಿತ್ರಃ ಪ್ರತಾಪವಾನ್ ॥17॥
ಪಾರ್ಥನೇ, ಶಕ್ತಿಋಷಿಗಳೂ ಮತ್ತು ಕಲ್ಮಾಷಪಾದನೂ ಹೀಗೆ ವಿವಾದ ಮಾಡುತ್ತಿರುವಾಗ ಪ್ರತಾಪಶಾಲಿಗಳೂ, ಉಗ್ರತಪಸ್ವಿಗಳೂ ಆದ ವಿಶ್ವಾಮಿತ್ರಋಷಿಗಳು ಅಲ್ಲಿಗೆ ಬಂದರು.
ತತಃ ಸ ಬುಬುಧೇ ಪಶ್ಚಾತ್ ತಮೃಷಿಂ ನೃಪಸತ್ತಮ |

ಋಷೇಃ ಪುತ್ರಂ ವಸಿಷ್ಠಸ್ಯ ವಸಿಷ್ಠಮಿವ ತೇಜಸಾ ॥18॥
ನೃಪಶ್ರೇಷ್ಠನೇ, ಅನಂತರ ಅವರು ವಸಿಷ್ಠರಂತೆಯೇ ತೇಜಸ್ವಿಗಳಾದ ಆ ಋಷಿಗಳನ್ನೂ ವಸಿಷ್ಠರ ಪುತ್ರರೆಂದು ತಿಳಿದರು.
ಅಂತರ್ಧಾಯ ತದಾಽಽತ್ಮಾನಂ ವಿಶ್ವಾಮಿತ್ರಸ್ತು ಭಾರತ |
ತಾವುಭಾವುಪಚಕ್ರಾಮ ಚಿಕೀರ್ಷನ್ನಾತ್ಮನಃ ಪ್ರಿಯಮ್ ॥19॥
ಭಾರತನೇ, ವಿಶ್ವಾಮಿತ್ರರು ಆಗ ತಮ್ಮ ನಿಜರೂಪವನ್ನು ಮರೆಮಾಚಿ ತಮಗೆ ಪ್ರಿಯವಾದುದನ್ನು ನೆರವೇರಿಸಿಕೊಳ್ಳಲು ಅವರಿಬ್ಬರನ್ನು ಸಮೀಪಿಸಿದರು.
ಸ ತು ಶಪ್ತಸ್ತದಾ ತೇನ ಶಕ್ತಿನಾ ವೈ ನೃಪೋತ್ತಮಃ |
ಜಗಾಮ ಶರಣಂ ರಾಜಾ ಪ್ರಸಾದಯಿತುಮರ್ಹಯನ್ ॥20॥
ಶಕ್ತಿಋಷಿಗಳಿಂದ ಶಾಪಕ್ಕೆ ಒಳಗಾದ ಆ ರಾಜಶ್ರೇಷ್ಠನು ಆಗ ವಿಶ್ವಾಮಿತ್ರರನ್ನು ಪ್ರಸನ್ನೀಕರಿಸಿಕೊಳ್ಳಲು ಅವರನ್ನು ಪೂಜಿಸಿ ಅವರಿಗೆ ಶರಣಾಗತನಾದನು.
ತಸ್ಯ ಭಾವಂ ವಿದಿತ್ವಾ ತು ನೃಪತೇಃ ಕುರುನಂದನ |
ವಿಶ್ವಾಮಿತ್ರಸ್ತತೋ ರಕ್ಷ ಆದಿದೇಶ ನೃಪಂ ಪ್ರತಿ ॥21॥
ಕುರುನಂದನನೇ, ರಾಜನ ಮನಸ್ಸಿನ ಅಭಿಪ್ರಾಯವನ್ನು ತಿಳಿದ ವಿಶ್ವಾಮಿತ್ರರು ರಾಜನನ್ನು ಪ್ರವೇಶಿಸುವಂತೆ ಒಬ್ಬ ರಾಕ್ಷಸನಿಗೆ ಆದೇಶವನ್ನು ನೀಡಿದರು.
ಸ ಶಾಪಾತ್ ತಸ್ಯ ವಿಪ್ರರ್ಷೇರ್ವಿಶ್ವಾಮಿತ್ರಸ್ಯ ಚಾಜ್ಞಯಾ |
ರಾಕ್ಷಸಃ ಕಿನ್ನರೋ ನಾಮ ವಿವೇಶ ನೃಪತಿಂ ತದಾ ॥22॥
ಆಗ ಶಕ್ತಿಋಷಿಗಳ ಶಾಪದಿಂದಲೂ ಮತ್ತು ವಿಶ್ವಾಮಿತ್ರರ ಆಜ್ಞೆಯಿಂದಲೂ ಕಿನ್ನರನೆಂಬ ರಾಕ್ಷಸನು ರಾಜನನ್ನು ಪ್ರವೇಶಿಸಿದನು.
ರಕ್ಷಸಾ ತು ಗೃಹೀತಂ ತಂ ವಿದಿತ್ವಾ ಮುನಿಸತ್ತಮಃ |
ವಿಶ್ವಾಮಿತ್ರೋಽಪ್ಯಪಾಕ್ರಾಮತ್ ತಸ್ಮಾದ್ ದೇಶದರಿಂದಮ ॥23॥
ಅರಿಂದಮನೇ, ರಾಜನು ರಾಕ್ಷಸನಿಂದ ಗ್ರಸ್ತನಾಗಿದ್ದಾನೆಂದು ತಿಳಿದ ಮುನಿಶ್ರೇಷ್ಠರಾದ ವಿಶ್ವಾಮಿತ್ರರು ಆ ಪ್ರದೇಶದಿಂದ ಹೊರಟುಹೋದರು.
ತತಶ್ಚ ನೃಪತಿರ್ವಿದ್ವಾನ್ ರಕ್ಷನ್ನಾತ್ಮಾನಮಾತ್ಮನಾ |
ಬಲವತ್ ಪೀಡ್ಯಮಾನೋಽಪಿ ನಾನ್ವಬುಧ್ಯತ ಕಿಂಚನ ॥24॥
ಆಗ ವಿವೇಕಿಯಾದ ಆ ರಾಜನು ತನ್ನನ್ನು ತಾನೇ ರಕ್ಷಿಸಿಕೊಳ್ಳಲು ಪ್ರಯತ್ನಪಟ್ಟರೂ, ಬಲಿಷ್ಠನಾದ ರಾಕ್ಷಸನಿಂದ ಪೀಡಿತನಾಗಿ ಏನನ್ನೂ ತಿಳಿಯಲಿಲ್ಲ. (ರಾಜನ ಜ್ಞಾನವು ಅಸ್ಪಷ್ಟವಾಯಿತು.)
ದದರ್ಶ ತಂ ದ್ವಿಜಃ ಕಶ್ಚಿದ್ ರಾಜಾನಂ ಪುನರಾಗತಮ್ |
ಅಯಾಚತ್ ಕ್ಷುಧಿತಶ್ಚೈನಂ ಸಮಾಂಸಂ ಭೋಜನಂ ತದಾ ॥25॥
ಅದೇ ಮಾರ್ಗದಲ್ಲಿ ಪುನಃ ಬಂದ ರಾಜನನ್ನು ನೋಡಿದ ಹಸಿದಿದ್ದ ಒಬ್ಬ ಬ್ರಾಹ್ಮಣನು ಮಾಂಸಸಹಿತವಾದ ಭೋಜನವನ್ನು ಬೇಡಿದನು.
ತಮುವಾಚ ಸ ರಾಜರ್ಷಿರ್ದ್ವಿಜಂ ಮಿತ್ರಸಹಸ್ತದಾ |
ಆಸ್ಸ್ವ ಬ್ರಹ್ಮಂಸ್ತ್ವಮತ್ರೈವ ಮುಹೂರ್ತಮಿವ ಸಾಂತ್ವಯನ್ ॥26॥
ಆ ರಾಜರ್ಷಿಯಾದ ಮಿತ್ರಸಹನು ಆಗ ಆ ಬ್ರಾಹ್ಮಣನನ್ನು ಕುರಿತು ಬ್ರಾಹ್ಮಣನೇ, ನೀನು ಇಲ್ಲಿಯೇ ಒಂದು ಮುಹೂರ್ತದ ಕಾಲ ಇರು ಎಂದು ಸಮಾಧಾನ ಮಾಡಿದನು. (ಕಲ್ಮಾಷಪಾದನಿಗೆ ಮಿತ್ರಸಹ ಎಂದೂ ಹೆಸರು.)
ವಿನಿವೃತ್ತಃ ಪ್ರದಾಸ್ಯಾಮಿ ಭೋಜನಂ ತೇ ಯಥೇಪ್ಸಿತಮ್ |
ಇತ್ಯುಕ್ತ್ವಾ ಪ್ರಯಯೌ ರಾಜಾ ತಸ್ಥೌ ಸ ದ್ವಿಜಸತ್ತಮಃ ॥27॥
ನಾನು ಹಿಂದಿರುಗಿ ಬರುತ್ತಾ ನಿನಗೆ ಇಷ್ಟವಾದ ಭೋಜನವನ್ನು ಕೊಡುವೆನು ಎಂದು ಹೇಳಿ ರಾಜನು ಅಲ್ಲಿಂದ ಹೊರಟುಹೋದನು. ಆ ದ್ವಿಜಶ್ರೇಷ್ಠನು ಅಲ್ಲಿಯೇ ನಿಂತನು.
ಅಂತಃಪುರಂ ಗತೋ ರಾಜಾ ಶ್ರುತ್ವಾ ಬ್ರಾಹ್ಮಣಭಾಷಿತಮ್ |
ಸೋಽಂತಃಪುರಂ ಪ್ರವಿಶ್ಯಾಥ ನ ಸಸ್ಮಾರ ನರಾಧಿಪಃ ॥28॥
ಬ್ರಾಹ್ಮಣವಾಕ್ಯವನ್ನು ಕೇಳಿ ಅಂತಃಪುರಕ್ಕೆ ಹೋಗಿ ಅಂತಃಪುರವನ್ನು ಪ್ರವೇಶಮಾಡಿದ ರಾಜನು ಬ್ರಾಹ್ಮಣನ ಮಾತನ್ನು ಮರೆತುಬಿಟ್ಟನು.
ತತೋಽರ್ಧರಾತ್ರ ಉತ್ಥಾಯ ಸೂದಮಾನಾಯ್ಯ ಸತ್ತಮಃ |
ಉವಾಚ ವಚನಂ ಸ್ಮೃತ್ಯ ಬ್ರಾಹ್ಮಣಸ್ಯ ಪ್ರತಿಶ್ರುತಮ್ ॥29॥
ಸಜ್ಜನನಾದ ಆ ರಾಜನು ಅನಂತರ ಅರ್ಧರಾತ್ರಿಯಲ್ಲಿ ಎದ್ದು ತನ್ನ ಅಡಿಗೆಯವನನ್ನು ಕರೆಸಿ ಬ್ರಾಹ್ಮಣನಿಗೆ ತಾನು ಕೊಟ್ಟ ಮಾತನ್ನು ಸ್ಮರಿಸಿ ಹೀಗೆ ಮಾತನಾಡಿದನು.
ಗಚ್ಛಾಮುಷ್ಮಿನ್ನಸೌ ದೇಶೇ ಬ್ರಾಹ್ಮಣೋ ಮಾಂ ಪ್ರತೀಕ್ಷತೇ |
ಅನ್ನಾರ್ಥಿನಂ ತ್ವಮನ್ನೇನ ಸಮಾಂಸೇನೋಪಪಾದಯ ॥30॥
ಇಂತಹ ದೇಶದಲ್ಲಿ ಒಬ್ಬ ಬ್ರಾಹ್ಮಣನು ನನ್ನನ್ನು ನಿರೀಕ್ಷಿಸುತ್ತಿರುತ್ತಾನೆ. ನೀನು ಹೋಗಿ ಅನ್ನಾರ್ಥಿಯಾದ ಅವನಿಗೆ ಮಾಂಸೋದನವನ್ನು ಕೊಡು.
ಗಂಧರ್ವಃ

ಏವಮುಕ್ತಸ್ತದಾ ಸೂದಃ ಸೋಽನಾಸಾದ್ಯಾಮಿಷಂ ಕ್ವಚಿತ್ |
ನಿವೇದಯಾಮಾಸ ಪುನಸ್ತಸ್ಮೈ ರಾಜ್ಞೇ ವ್ಯಥಾನ್ವಿತಃ ॥31॥
ರಾಜನಿಂದ ಹೀಗೆ ಹೇಳಲ್ಪಟ್ಟ ಸೂದನು (ಪಾಚಕನು) ಎಲ್ಲಿಯೂ ಮಾಂಸವು ಸಿಗದಿರಲು ವ್ಯಥೆಯಿಂದ ಕೂಡಿದವನಾಗಿ ಪುನಃ ಆ ರಾಜನನ್ನು ಕಂಡು ನಿವೇದಿಸಿದನು.
ರಾಜಾ ತು ರಕ್ಷಸಾಽಽವಿಷ್ಟಃ ಸೂದಮಾಹ ಗತವ್ಯಥಃ |
ಅಪ್ಯೇನಂ ನರಮಾಂಸೇನ ಭೋಜಯೇತಿ ಪುನಃಪುನಃ ॥32॥
ರಾಜನು ರಾಕ್ಷಸನಿಂದ ಆವಿಷ್ಟನಾದ ಕಾರಣದಿಂದ ಯಾವ ಶಂಕೆಯೂ ಇಲ್ಲದೇ ಸೂದನನ್ನು ಕುರಿತು ನರಮಾಂಸದಿಂದಲಾದರೂ ಅವನಿಗೆ ಭೋಜನವನ್ನು ಕೊಡು ಎಂದು ಮತ್ತೆ ಮತ್ತೆ ಹೇಳಿದನು.
ತಥೇತ್ಯುಕ್ತ್ವಾ ತತಃ ಸೂದಃ ಸಂಸ್ಥಾನಂ ವಧ್ಯಘಾತಿನಾಮ್ |
ಗತ್ವಾಽಽಜಹಾರ ತ್ವರಿತೋ ನರಮಾಂಸಮಪೇತಭೀಃ ॥33॥
ಸೂದನು ಹಾಗೆಯೇ ಆಗಲಿ ಎಂದು ಹೇಳಿ ರಾಜಪುರುಷರು ಅಪರಾಧಿಗಳನ್ನು ವಧೆಮಾಡುವ ಸ್ಥಳಕ್ಕೆ ಶೀಘ್ರವಾಗಿ ಹೋಗಿ ಯಾವ ಭಯವೂ ಇಲ್ಲದೇ ನರಮಾಂಸವನ್ನು ತಂದನು.
ತತಃ ಸಂಸ್ಕೃತ್ಯ ವಿಧಿವದನ್ನಂ ಸಾಮಿಷಮಾಶು ವೈ |
ತಸ್ಮೈ ಪ್ರಾದಾದ್ ಬ್ರಾಹ್ಮಣಾಯ ಕ್ಷುಧಿತಾಯ ತಪಸ್ವಿನೇ ॥34॥
ಅನಂತರ ಆ ಮಾಂಸವನ್ನು ಯಥೋಕ್ತವಾಗಿ ಸಂಸ್ಕರಿಸಿ ಹಸಿದಿದ್ದ ತಪಸ್ವಿಯಾದ ಆ ಬ್ರಾಹ್ಮಣನಿಗೆ ಮಾಂಸಾನ್ನವನ್ನು ಕೊಟ್ಟನು.
ಸ ದಿವ್ಯಚಕ್ಷುರ್ದೃಷ್ಟ್ವಾ ತು ತದನ್ನಂ ದ್ವಿಜಸತ್ತಮಃ |
ಅಭೋಜ್ಯಮಿತಿ ಮತ್ವಾಽಽಹ ಕ್ರೋಧಪರ್ಯಾಕುಲೇಕ್ಷಣಃ ॥35॥
ಆ ಶ್ರೇಷ್ಠನಾದ ಬ್ರಾಹ್ಮಣನು ತನ್ನ ದಿವ್ಯದೃಷ್ಟಿಯಿಂದ ಆ ಅನ್ನವು ಅಭೋಜ್ಯವೆಂದು ತಿಳಿದು ಕ್ರೋಧಯುಕ್ತವಾದ ಕಣ್ಣುಗಳನ್ನು ಹೊಂದಿ ಹೀಗೆ ಹೇಳಿದನು.
ಯಸ್ಮಾದಭೋಜ್ಯಮನ್ನಂ ಮೇ ದದಾತಿ ಸ ನೃಪಾಧಮಃ |
ತಸ್ಮಾತ್ ತಸ್ಯೈವ ಮೂಢಸ್ಯ ಭವಿಷ್ಯತ್ಯತ್ರ ಲೋಲುಪಃ ॥36॥
ಸಕ್ತೋ ಮಾನುಷಮಾಂಸೇಷು ಯಥೋಕ್ತಂ ಶಕ್ತಿನಾ ಪುರಾ |
ಉದ್ವೇಜನೀಯೋ ಭೂತಾನಾಂ ಚರಿಷ್ಯತಿ ಮಹೀಮಿಮಾಮ್ ॥37॥
ಆ ರಾಜಾಧಮನು ನನಗೆ ಅಭೋಜ್ಯವಾದ ಅನ್ನವನ್ನು ಕೊಡುತ್ತಿರುವುದರಿಂದ ಅವನು ಶಕ್ತಿಋಷಿಗಳು ಹಿಂದೆ ಶಾಪವನ್ನು ಕೊಟ್ಟಂತೆ ನರಮಾಂಸಭಕ್ಷಣದಲ್ಲಿಯೇ ಲೋಲುಪನಾಗುವನು. ಎಲ್ಲರಿಗೂ ಭಯವನ್ನು ಉಂಟುಮಾಡುತ್ತಾ ಈ ಭೂಮಿಯಲ್ಲಿ ಸಂಚರಿಸುವನು.

ಗಂಧರ್ವಃ
ದ್ವಿರನುವ್ಯಾಹೃತೇ ವಾಕ್ಯೇ ಶಾಪೋ ಹಿ ಬಲವಾನಭೂತ್ |
ರಕ್ಷೋಬಲಸಮಾವಿಷ್ಟೋ ವಿಸಂಜ್ಞಶ್ಚಾಭವತ್ ತದಾ ॥38॥
ಶಾಪದ ವಾಕ್ಯವು ಎರಡು ಸಲ ಹೇಳಲ್ಪಡುತ್ತಿರಲು ಶಾಪವು ಬಲಿಷ್ಠವಾಯಿತು. ರಾಕ್ಷಸನಿಂದ ಗ್ರಸ್ತನಾದ ಆ ರಾಜನು ತನ್ನ ಎಲ್ಲಾ ಜ್ಞಾನವನ್ನೂ ಕಳೆದುಕೊಂಡನು.
ತತಃ ಸ ನೃಪತಿಃ ಪಾರ್ಥ ರಕ್ಷಸಾಽಪಹೃತೇಂದ್ರಿಯಃ |
ಉವಾಚ ಶಕ್ತಿಂ ದೃಷ್ಟ್ವಾ ತು ನಚಿರಾದಿವ ಭಾರತ ॥39॥
ಭಾರತನೇ, ಆಗ ರಾಕ್ಷಸನಿಂದ ಆಕ್ರಾಂತವಾದ ಇಂದ್ರಿಯಗಳುಳ್ಳ ಆ ರಾಜನು ಅಲ್ಪ ಸಮಯದಲ್ಲಿಯೇ ಶಕ್ತಿಋಷಿಗಳನ್ನು ನೋಡಿ ಹೀಗೆ ಮಾತನಾಡಿದನು.
ಯಸ್ಮಾದಸದೃಶಃ ಶಾಪಃ ಪ್ರಯುಕ್ತೋಽಯಂ ಮಯಿ ತ್ವಯಾ |
ತಸ್ಮಾತ್ ತ್ವತ್ತಃ ಪ್ರವರ್ತಿಷ್ಯೇ ಖಾದಿತುಂ ಮಾನುಷಾನಹಮ್ ॥40॥
ನೀನು ನನಗೆ ಅಸದೃಶವಾದ ಶಾಪವನ್ನು ಕೊಟ್ಟಕಾರಣದಿಂದ ನಿನ್ನನ್ನೇ ಆರಂಭಿಸಿ ನಾನು ಮನುಷ್ಯರನ್ನು ತಿನ್ನಲು ಪ್ರವೃತ್ತನಾಗುವೆನು.
ಏವಮುಕ್ತ್ವಾ ತತಃ ಸದ್ಯಃ ತಂ ಪ್ರಾಣೈರ್ವಿಪ್ರಯೋಜ್ಯ ಸಃ |
ಶಕ್ತಿನಂ ಭಕ್ಷಯಾಮಾಸ ವ್ಯಾಘ್ರಃ ಪಶುಮಿವೇಪ್ಸಿತಮ್ ॥41॥
ಹೀಗೆ ಹೇಳಿ ತಕ್ಷಣ ಶಕ್ತಿಋಷಿಗಳನ್ನು ಕೊಂದು ಹುಲಿಯು ಇಷ್ಟವಾದ ಹಸುವನ್ನು ತಿಂದಂತೆ ರಾಜನು ಭಕ್ಷಿಸಿದನು.
ಶಕ್ತಿನಂ ತು ಹತಂ ದೃಷ್ಟ್ವಾ ವಿಶ್ವಾಮಿತ್ರಸ್ತತಃ ಪುನಃ |
ವಸಿಷ್ಠಸ್ಯೈವ ಪುತ್ರೇಷು ತದ್ರಕ್ಷಃ ಸಂದಿದೇಶ ಹ ॥42॥
ಶಕ್ತಿಋಷಿಗಳು ನಿಹತವಾದುದನ್ನು ನೋಡಿದ ವಿಶ್ವಾಮಿತ್ರರು ಆ ರಾಕ್ಷಸನನ್ನು ಪುನಃ ವಸಿಷ್ಠಋಷಿಗಳ ಉಳಿದ ಪುತ್ರರ ಮೇಲೆ ನಿದೇಶಿಸಿದರು.
ಸ ತಾನ್ ಶತಾವರಾನ್ ಪುತ್ರಾನ್ ವಸಿಷ್ಠಸ್ಯ ಮಹಾತ್ಮನಃ |
ಭಕ್ಷಯಾಮಾಸ ಸಂಕ್ರುದ್ಧಃ ಸಿಂಹಃ ಕ್ಷುದ್ರಮೃಗಾನಿವ ॥43॥
ಆಗ ಆ ರಾಜನು ಮಹಾತ್ಮರಾದ ವಸಿಷ್ಠರ ನೂರಕ್ಕಿಂತ ಒಂದು ಕಡಿಮೆಯಾದ ಎಲ್ಲಾ ಮಕ್ಕಳನ್ನೂ ಕೋಪಗೊಂಡ ಸಿಂಹವು ಕ್ಷುದ್ರಮೃಗಗಳನ್ನು ತಿನ್ನುವಂತೆ ತಿಂದುಬಿಟ್ಟನು.

ವಸಿಷ್ಠೋ ಘಾತಿತಾನ್ ಶ್ರುತ್ವಾ ವಿಶ್ವಾಮಿತ್ರೇಣ ಸ್ವಾನ್ ಸುತಾನ್ |
ಧಾರಯಾಮಾಸ ಸಂಶೋಕಂ ಮಹಾದ್ರಿರಿವ ಮೇದಿನೀಮ್ ॥44॥
ವಸಿಷ್ಠರು ವಿಶ್ವಾಮಿತ್ರರಿಂದ ತನ್ನ ಎಲ್ಲಾ ಮಕ್ಕಳು ನಿಹತರಾದುದನ್ನು ಕೇಳಿ ಉಂಟಾದ ಮಹಾಶೋಕವನ್ನು ಪರ್ವತವು ಭೂಮಿಯನ್ನು ಧರಿಸಿದಂತೆ ಮನಸ್ಸಿನಲ್ಲಿಯೇ ಧರಿಸಿದರು.
ಚಕ್ರೇ ಚಾತ್ಮವಿನಾಶಾಯ ಬುದ್ಧಿಂ ಸ ಮುನಿಪುಂಗವಃ |
ನ ತ್ವೇವ ಕುಶಿಕೋಚ್ಛೇದಂ ಮೇನೇ ಮತಿಮತಾಂ ವರಃ ॥45॥
ಆ ಋಷಿಶ್ರೇಷ್ಠರು ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಮನಸ್ಸಿನಲ್ಲಿ ಯೋಚಿಸಿದರು. ಆದರೆ, ಸದ್ಬುದ್ಧಿಯನ್ನು ಹೊಂದಿದವರಲ್ಲಿ ಶ್ರೇಷ್ಠರಾದ ಅವರು ವಿಶ್ವಾಮಿತ್ರರ ವಂಶವನ್ನು ನಿರ್ಮೂಲನ ಮಾಡುವುದಕ್ಕೆ ಬಯಸಲಿಲ್ಲ.
ಸ ಮೇರುಕೂಟಾದಾತ್ಮಾನಂ ಮುಮೋಚ ಭಗವಾನೃಷಿಃ |
ಶಿರಸ್ತಸ್ಯ ಶಿಲಾಯಾಂ ಚ ತೂಲರಾಶಾವಿವಾಪತತ್ ॥46॥
ಪೂಜ್ಯರಾದ ಆ ಋಷಿಗಳು ಮೇರುಪರ್ವತದ ಶಿಖರದಿಂದ ತಲೆಕೆಳಕಾಗಿ ಬಿದ್ದರು. ಬಂಡೆಯ ಮೇಲೆ ಬಿದ್ದ ಅವರ ಶಿರಸ್ಸು ಹತ್ತಿಯ ರಾಶಿಯಲ್ಲಿ ಬಿದ್ದಂತಾಯಿತು. ಪಾತದಿಂದ ಆ ಋಷಿಶ್ರೇಷ್ಠರು ಮೃತರಾಗಲಿಲ್ಲ.
ನ ಮಮಾರ ಚ ಪಾತೇನ ತದಾ ಸ ಮುನಿಸತ್ತಮಃ |
ಅಥಾಽಗ್ನಿಮಿದ್ಧ್ವಾ ಭಗವಾನ್ ಸಂವಿವೇಶ ಮಹಾವನೇ ॥47॥
ತಂ ತದಾ ಸುಸಮಿದ್ಧೋಽಪಿ ನ ದದಾಹ ಹುತಾಶನಃ |
ದೀಪ್ಯಮಾನೋಽಪ್ಯಮಿತ್ರಘ್ನ ಶೀತೋಽಗ್ನಿರಭವತ್ ತದಾ ॥48॥
ಅನಂತರ ದೊಡ್ಡ ಕಾಡಿನಲ್ಲಿ ಅಗ್ನಿಯನ್ನು ಪ್ರಜ್ವಲಿಸಿ ಅದರಲ್ಲಿ ಪ್ರವೇಶ ಮಾಡಿದರು. ಅಗ್ನಿಯು ಬಹಳವಾಗಿ ಜ್ವಲಿಸುತ್ತಿದ್ದರೂ ಆಗ ಅವರನ್ನು ದಹಿಸಲಿಲ್ಲ. ಶತ್ರುಸಂಹಾರಕನೇ, ಆಗ ಉರಿಯುತ್ತಿದ್ದ ಅಗ್ನಿಯು ಶೀತಲವಾಯಿತು.
ಸ ಸಮುದ್ರಮಭಿಪ್ರೇತ್ಯ ಶೋಕಾವಿಷ್ಟೋ ಮಹಾಮುನಿಃ |
ಬದ್ಧ್ವಾ ಕಂಠೇ ಶಿಲಾಂ ಗುರ್ವೀಂ ನಿಪಪಾತ ತದಂಭಸಿ ॥49॥
ಮಹಾಮುನಿಗಳಾದ ವಸಿಷ್ಠರು ಶೋಕಾವಿಷ್ಟರಾಗಿ ಸಮುದ್ರಕ್ಕೆ ಹೋಗಿ ತಮ್ಮ ಕಂಠಕ್ಕೆ ಒಂದು ದೊಡ್ಡ ಶಿಲೆಯನ್ನು ಕಟ್ಟಿಕೊಂಡು ಸಮುದ್ರದ ನೀರಿನಲ್ಲಿ ಬಿದ್ದರು.
ಸ ಸಮುದ್ರೋರ್ಮಿವೇಗೇನ ಸ್ಥಲೇ ನ್ಯಸ್ತೋ ಮಹಾಮುನಿಃ |
ಜಗಾಮ ಸತತಂ ಖಿನ್ನಃ ಪುನರೇವಾಶ್ರಮಂ ಪ್ರತಿ ॥50॥
ತನ್ನ ಅಲೆಗಳ ವೇಗದಿಂದ ಸಮುದ್ರರಾಜನು ಆ ಮಹರ್ಷಿಗಳನ್ನು ದಡಕ್ಕೆ ತಂದುಹಾಕಿದನು. ಎಲ್ಲಾ ಪ್ರಯತ್ನಗಳೂ ವಿಫಲವಾದುದರಿಂದ ಖಿನ್ನರಾದ ಅವರು ಪುನಃ ತಮ್ಮ ಆಶ್ರಮಕ್ಕೆ ಬಂದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಎಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಎಂಭತ್ತನೆಯ ಅಧ್ಯಾಯ
(ಪುನಃ ಆತ್ಮಹತ್ಯೆಗೆ ವಸಿಷ್ಠರ ವಿಫಲ ಪ್ರಯತ್ನಗಳು. ಅದೃಶ್ಯಂತಿಯ ಜೊತೆಯಲ್ಲಿ ಸಂವಾದ. ಆಶ್ರಮಕ್ಕೆ ಪ್ರತಿನಿವೃತ್ತಿ. ಕಲ್ಮಾಷಪಾದನನ್ನು ರಾಕ್ಷಸನಿಂದ ವಿಮೋಚನೆಗೊಳಿಸಿ ಮದಯಂತಿಯಲ್ಲಿ ಪುತ್ರೋತ್ಪಾದನೆ)
ಗಂಧರ್ವಃ
ಸ ಆಶ್ರಮಪದಂ ದೃಷ್ಟ್ವಾ ರಹಿತಂ ತೈರ್ಮಹಾಮುನಿಃ |
ನಿರ್ಜಗಾಮ ಸುದುಃಖಾರ್ತಃ ಪುನರೇವಾಶ್ರಮಾತ್ ತತಃ ॥1॥
ಮಹರ್ಷಿಗಳಾದ ವಸಿಷ್ಠರು ತಮ್ಮ ಆಶ್ರಮಕ್ಕೆ ಹಿಂದಿರುಗಿ ಪುತ್ರರಿಲ್ಲದ ಆಶ್ರಮವನ್ನು ನೋಡಿ ಬಹಳ ದುಃಖದಿಂದ ಕೂಡಿದವರಾಗಿ ಪುನಃ ಆಶ್ರಮದಿಂದ ಹೊರಟರು.
ಸೋಽಪಶ್ಯತ್ ಸರಿತಂ ಪೂರ್ಣಾಂ ಪ್ರಾವೃಟ್ಕಾಲೇ ನವಾಂಭಸಾ |
ವೃಕ್ಷಾನ್ ವಂಜುಲನೀಪಾದೀನ್ ವಹಂತೀಂ ತೀರಜಾನ್ ಬಹೂನ್ ॥2॥
ಅವರು ಮಳೆಗಾಲದಲ್ಲಿ ಹೊಸ ನೀರಿನಿಂದ ಪೂರ್ಣವಾಗಿ ತೀರದಲ್ಲಿದ್ದ ವಂಜುಲ, ನೀಪ ಮೊದಲಾದ ಅನೇಕ ಮರಗಳನ್ನು ಕೊಚ್ಚಿಕೊಂಡು ಹೋಗುತ್ತಿದ್ದ ನದಿಯನ್ನು ನೋಡಿದರು.
ಅಂಭಸ್ಯಸ್ಯಾ ನಿಮಜ್ಜೇಯಮಿತಿ ದುಃಖಸಮನ್ವಿತಃ |
ತಥಾ ಪಾಶೈಸ್ತದಾಽಽತ್ಮಾನಂ ಗಾಢಂ ಬದ್ಧ್ವಾ ಮಹಾಮುನಿಃ |
ತಸ್ಯಾ ಜಲೇ ಮಹಾನದ್ಯಾ ನಿಮಮಜ್ಜ ಸುದುಃಖಿತಃ ॥3॥
ದುಃಖಸಮನ್ವಿತರಾದ ಅವರು ಈ ನದಿಯ ನೀರಿನಲ್ಲಿ ಮುಳುಗುತ್ತೇನೆ ಎಂದು ಯೋಚಿಸಿ ತಮ್ಮನ್ನು ತಾವೇ ಪಾಶಗಳಿಂದ ದೃಢವಾಗಿ ಕಟ್ಟಿಕೊಂಡು ದುಃಖದಿಂದ ಆ ಮಹಾನದಿಯ ನೀರಿನಲ್ಲಿ ಮುಳುಗಿದರು.
ಅಥ ಛಿತ್ವಾ ನದೀ ಪಾಶಂ ತಸ್ಯಾರಿಬಲಮರ್ದನ |
ಸ್ಥಲಸ್ಥಂ ತಮೃಷಿಂ ಕೃತ್ವಾ ವಿಪಾಶಂ ಸಾ ಸಮಾಸೃಜತ್ ॥4॥

ಶತ್ರುಸೈನ್ಯ ಮರ್ದನನಾದ ಅರ್ಜುನನೇ, ಆಗ ಆ ನದಿಯು ಪಾಶಗಳನ್ನು ಕತ್ತರಿಸಿ ಪಾಶರಹಿತರಾದ ಆ ಋಷಿಗಳನ್ನು ದಡಕ್ಕೆ ತಂದುಹಾಕಿದಳು.
ಉತ್ತತಾರ ತತಃ ಪಾಶೈರ್ವಿಮುಕ್ತಃ ಸ ಮಹಾನೃಷಿಃ |
ವಿಪಾಶೇತಿ ಚ ನಾಮಾಸ್ಯಾ ನದ್ಯಾಶ್ಚಕ್ರೇ ಮಹಾಮುನಿಃ ||5||
ಪಾಶಗಳಿಂದ ಮುಕ್ತರಾದ ಆ ಮಹರ್ಷಿಗಳು ನದಿಯನ್ನು ದಾಟಿ ಹೊರಗೆ ಬಂದರು. ಆ ಮಹಾಮುನಿಗಳು ಆ ನದಿಗೆ ವಿಪಾಶ ಎಂದೇ ನಾಮಕರಣ ಮಾಡಿದರು.
ಸಾ ವಿಪಾಶೇತಿ ವಿಖ್ಯಾತಾ ನದೀ ಲೋಕೇಷು ಭಾರತ |
ಋಷೇಸ್ತಸ್ಯ ನರವ್ಯಾಘ್ರ ವಚನಾತ್ ತಸ್ಯ ಧೀಮತಃ ||6||
ಎಲೈ ಭಾರತನೇ, ಆ ನದಿಯು ಈಗಲೂ ಲೋಕದಲ್ಲಿ ಆ ಮೇಧಾವಿಗಳಾದ ಋಷಿಗಳ ವಚನದಂತೆ ವಿಪಾಶ ಎಂಬ ಹೆಸರಿನಿಂದಲೇ ಪ್ರಖ್ಯಾತವಾಗಿದೆ.
ಉತ್ತೀರ್ಯ ಚ ತತೋ ರಾಜನ್ ದುಃಖಿತೋ ಭಗವಾನೃಷಿಃ |
ಶೋಕೇ ಬುದ್ಧಿಂ ತು ತಾಂ ಚಕ್ರೇ ನ ಚೈಕತ್ರ ವ್ಯತಿಷ್ಠತ |
ಸೋಽಪಶ್ಯತ್ ಪರ್ವತಾಂಶ್ಚೈವ ಸರಿತಶ್ಚ ಸರಾಂಸಿ ಚ ||7||
ರಾಜನೇ, ಪೂಜ್ಯರಾದ ಆ ಋಷಿಗಳು ದುಃಖದಿಂದ ನದಿಯನ್ನು ದಾಟಿ, ಪುನಃ ಶೋಕಹತರಾಗಿ ಒಂದು ಕಡೆಯಲ್ಲಿ ನಿಲ್ಲದೇ, ಪರ್ವತಗಳನ್ನೂ, ನದಿಗಳನ್ನೂ ಮತ್ತು ಸರೋವರಗಳನ್ನೂ ನೋಡಿದರು.
ದೃಷ್ಟ್ವಾ ಸ ಪುನರೇವರ್ಷಿರ್ನದೀಂ ಹೈಮವತೀಂ ತದಾ |
ಚಂಡಗ್ರಾಹವತೀಂ ದೃಷ್ಟ್ವಾ ಸ್ರೋತಸ್ಯಾತ್ಮಾನಮಾತ್ಮನಾ |
ಮಜ್ಜಯಾಮಾಸ ಶೋಕಾರ್ತೋ ಮರಣೇ ಕೃತನಿಶ್ಚಯಃ ||8||
ಆ ಋಷಿಗಳು ಹಿಮಾಲಯದಿಂದ ಹರಿದುಬರುತ್ತಿರುವ ಉಗ್ರವಾದ ಮೊಸಳೆಗಳಿಂದ ಕೂಡಿದ ನದಿಯನ್ನು ನೋಡಿ ಶೋಕಾರ್ತರಾಗಿ ತಮ್ಮ ಮರಣವನ್ನು ನಿಶ್ಚಯಿಸಿ ಅದರ ಪ್ರವಾಹದಲ್ಲಿ ಮುಳುಗಿದರು.
ಸಾ ತಮಗ್ನಿಸಮಂ ವಿಪ್ರಮುಪಲಭ್ಯ ಸರಿದ್ವರಾ |
ಶತಧಾ ವಿದ್ರುತಾ ತಸ್ಮಾಚ್ಛತದ್ರುರಿತಿ ವಿಶ್ರುತಾ ||9||
ಆ ಶ್ರೇಷ್ಠಳಾದ ನದಿಯು ಅಗ್ನಿಯಂತಿರುವ ಆ ಋಷಿಗಳನ್ನು ನೋಡಿ ನೂರು ಕವಲುಗಳಾಗಿ ಹರಿದು ಶತದ್ರು ಎಂದು ಪ್ರಖ್ಯಾತಳಾದಳು.
ತತಃ ಸ್ಥಲಗತಂ ದೃಷ್ಟ್ವಾ ಆತ್ಮಾನಾಮೃಷಿಸತ್ತಮಃ
ಮರ್ತುಂ ನ ಶಕ್ಯಮಿತ್ಯುಕ್ತ್ವಾ ಪುನರೇವಾಶ್ರಮಂ ಯಯೌ ||10||
ತಾವು ಮರಳಿನ ಮೇಲೆ ಬಿದ್ದಿರುವುದನ್ನು ಗಮನಿಸಿ ಆ ಋಷಿಶ್ರೇಷ್ಠರು ಮರಣವನ್ನು ಹೊಂದಲು ಸಾಧ್ಯವಿಲ್ಲ ಎಂದು ಹೇಳಿ ಪುನಃ ಆಶ್ರಮಕ್ಕೆ ಹಿಂದಿರುಗಿದರು.
ವಧ್ವಾಽದೃಶ್ಯಂತ್ಯಾಽನುಗತ ಆಶ್ರಮಾಭಿಮುಖಂ ವ್ರಜನ್ |
ಅಥ ಶುಶ್ರಾವ ಸಾಂಗಸ್ಯ ವೇದಾಧ್ಯಯನನಿಸ್ವನಮ್ |
ಪೃಷ್ಠತಃ ಪರಿಪೂರ್ಣಾರ್ಥೈಃ ಷಡ್ಭಿರಂಗೈರಲಂಕೃತಮ್ ||11||
ಸೊಸೆಯಾದ ಅದೃಶ್ಯಂತಿಯಿಂದ (ಅದೃಶ್ಯಂತಿ ಇದು ಸೊಸೆಯ ಹೆಸರು) ಹಿಂಬಾಲಿಸಲ್ಪಟ್ಟ ಅವರು ಆಶ್ರಮಾಭಿಮುಖವಾಗಿ ಹೋಗುತ್ತಾ ತಮ್ಮ ಹಿಂದಿನಿಂದ ಪರಿಪೂರ್ಣಾರ್ಥವುಳ್ಳ ಆರು ಅಂಗಗಳಿಂದಲೂ ಕೂಡಿದ ಸಾಂಗವೇದಾಧ್ಯಯನ ಧ್ವನಿಯನ್ನು ಕೇಳಿದರು.
ಅನುವ್ರಜತಿ ಕೋ ನ್ವೇಷ ಮಾಮಿತ್ಯೇವ ಚ ಸೋಽಬ್ರವೀತ್ |
ಅದೃಶ್ಯಂತ್ಯಹಮಿತ್ಯೇವ ತಂ ಸ್ನುಷಾ ಪ್ರತ್ಯುವಾಚ ಹ |
ಭಾರ್ಯಾ ಶಕ್ತೇರ್ಮಹಾಭಾಗಾ ತಪೋಯುಕ್ತಾ ಮನಸ್ವಿನೀ ||12||
ನನ್ನ ಹಿಂದೆ ಬರುತ್ತಿರುವವರು ಯಾರು ಎಂದು ಅವರು ಕೇಳಿದರು. ಶಕ್ತಿಋಷಿಗಳ ಪತ್ನಿಯಾದ ಮಹಾನುಭಾವಳೂ, ತಪಸ್ವಿನಿಯೂ, ಧೈರ್ಯಶಾಲಿನಿಯೂ ಆದ ಸೊಸೆಯಾದ ಅದೃಶ್ಯಂತಿಯು `ನಾನು' ಎಂದು ಉತ್ತರವನ್ನು ಕೊಟ್ಟಳು.
ವಸಿಷ್ಠಃ
ಪುರುಃ ಕಸ್ಯೈಷ ಸಾಂಗಸ್ಯ ವೇದಾಧ್ಯಯನನಿಸ್ವನಃ
ಪುತ್ರಿ ಸಾಂಗಸ್ಯ ದೇದಸ್ಯ ಶಕ್ತೇರಿವ ಮಯಾ ಶ್ರುತಃ ||13||
ಈ ಪೂರ್ಣವಾದ ಸಾಂಗವೇದ ವೇದಾಧ್ಯಯನ ಧ್ವನಿ ಯಾರದು. ಮಗಳೇ, ಈ ಸಾಂಗವೇದಾಧ್ಯಯನ ಧ್ವನಿಯು ನಾನು ಹಿಂದೆ ಕೇಳಿದ ಶಕ್ತಿಋಷಿಗಳ ಧ್ವನಿಯಂತಿದೆ.
ಅದೃಶ್ಯಂತೀ
ಅಯಂ ಕುಕ್ಷೌ ಸಮುತ್ಪನ್ನಃ ಶಕ್ತೇರ್ಗರ್ಭಃ ಸುತಸ್ಯ ತೇ |
ಸಮಾ ದ್ವಾದಶ ತಸ್ಯೇಹ ವೇದಾನಭ್ಯಸ್ಯತೋ ಗತಾಃ||14||
ನನ್ನ ಉದರದಲ್ಲಿ ತಮ್ಮ ಮಕ್ಕಳಾದ ಶಕ್ತಿಋಷಿಗಳ ಗರ್ಭವು ಉತ್ಪನ್ನವಾಗಿದೆ. ಗರ್ಭದಲ್ಲಿರುವ ಆ ಶಿಶುವು ಹನ್ನೆರಡು ವರ್ಷಗಳಿಂದಲೂ ವೇದಾಧ್ಯಯನವನ್ನು ಮಾಡುತ್ತಿದೆ.
ಗಂಧರ್ವಃ
ಏವಮುಕ್ತಸ್ತತೋ ಹೃಷ್ಟೋ ವಸಿಷ್ಠಃ ಶ್ರೇಷ್ಠಭಾಗಿನೀಮ್ |

ಅಸ್ತಿ ಸಂತಾನಮಿತ್ಯುಕ್ತ್ವಾ ಮೃತ್ಯೋಃ ಪಾರ್ಥ ನ್ಯವರ್ತತ ॥15॥
ಪಾರ್ಥನೇ, ಈ ಮಾತುಗಳನ್ನು ಕೇಳಿದ ವಸಿಷ್ಠರು ಹರ್ಷಿತರಾಗಿ ಶ್ರೇಷ್ಠಭಾಗಿನಿಯಾದ ತಮ್ಮ ಸೊಸೆಯನ್ನು ಕುರಿತು `ಓಹೋ ಸಂತಾನವಿದೆ' ಎಂದು ಹೇಳಿ ಮರಣಪ್ರಯತ್ನದಿಂದ ನಿವೃತ್ತರಾದರು.
ತತಃ ಪ್ರತಿನಿವೃತ್ತಃ ಸ ತಯಾ ವಧ್ವಾ ಸಹಾನಘ |
ಕಲ್ಮಾಷಪಾದಮಾಸೀನಂ ದದರ್ಶ ವಿಜನೇ ತದಾ ॥16॥
ಅನಘನೇ, ತಮ್ಮ ಸೊಸೆಯ ಜೊತೆಯಲ್ಲಿ ಹಿಂದೆ ಬರುತ್ತಿದ್ದ ಅವರು ದಾರಿಯಲ್ಲಿ ನಿರ್ಜನವಾದ ಪ್ರದೇಶದಲ್ಲಿ ಕಲ್ಮಾಷಪಾದನು ಕುಳಿತಿರುವುದನ್ನು ನೋಡಿದರು.
ಸ ತು ದೃಷ್ಟ್ವೈವ ತಂ ರಾಜಾ ಕ್ರುದ್ಧ ಉತ್ಥಾಯ ಭಾರತ |
ಆವಿಷ್ಟೋ ರಕ್ಷಸೋಗ್ರೇಣ ಇಯೇಷಾತ್ತುಮಥೌಜಸಾ ॥17॥
ಭಾರತನೇ, ಅವರನ್ನು ನೋಡಿದ ತಕ್ಷಣವೇ ಉಗ್ರನಾದ ರಾಕ್ಷಸನಿಂದ ಆವಿಷ್ಟನಾದ ಆ ರಾಜನು ಕ್ರುದ್ಧನಾಗಿ ಎದ್ದು ತನ್ನ ಬಲದಿಂದ ಅವರನ್ನು ತಿನ್ನಲು ಬಯಸಿದನು.
ಅದೃಶ್ಯಂತೀ ತು ತಂ ದೃಷ್ಟ್ವಾ ಘೋರಕರ್ಮಾಣಮಗ್ರತಃ |
ಭಯಸಂವಿಗ್ನಯಾ ವಾಚಾ ವಸಿಷ್ಠಮಿದಮಬ್ರವೀತ್ ॥18॥
ಅದೃಶ್ಯಂತಿಯು ಘೋರಕರ್ಮವನ್ನು ಮಾಡಲು ಹೊರಟಿರುವ ಅವನನ್ನು ನೋಡಿ ಭಯದಿಂದ ಕೂಡಿದ ಮಾತುಗಳಿಂದ ವಸಿಷ್ಠರನ್ನು ಕುರಿತು ಹೇಳಿದಳು.
ಅಸೌ ಮೃತ್ಯುರಿವೋಗ್ರೇಣ ದಂಡೇನ ಭಗವನ್ನಿಹ |
ಪ್ರಗೃಹೀತೋಽತಿಘೋರೇಣ ರಾಕ್ಷಸೋಽಭ್ಯೇತಿ ಭೀಷಣಃ ॥19॥
ಪೂಜ್ಯನಾದ ಯಮನು ಉಗ್ರವಾದ ದಂಡವನ್ನು ಹಿಡಿದು ಬಂದಂತೆ ಈ ಭಯಂಕರನಾದ ರಾಜನು ಘೋರನಾದ ರಾಕ್ಷಸನಿಂದ ಗ್ರಹೀತನಾಗಿ ಎದುರಿಗೆ ಬರುತ್ತಿದ್ದಾನೆ.
ತಂ ನಿವಾರಯಿತುಂ ಶಕ್ತೋ ನಾನ್ಯೋಽಸ್ತಿ ಭುವಿ ಕಶ್ಚನ |
ತ್ವದೃತೇಽದ್ಯ ಮಹಾಭಾಗ ಸರ್ವವೇದವಿದಾಂ ವರ ॥20॥
ಮಹಾನುಭಾವರೇ, ಸರ್ವವೇದಜ್ಞರಲ್ಲಿ ಶ್ರೇಷ್ಠರೇ, ಅವನನ್ನು ನಿವಾರಿಸಲು ನಿಮ್ಮನ್ನು ಬಿಟ್ಟು ಬೇರೆ ಯಾರಿಗೂ ಶಕ್ತಿಯಿಲ್ಲ.
ತ್ರಾಹಿ ಮಾಂ ಭಗವನ್ ಪಾಪಾದಸ್ಮಾದ್ ದಾರುಣದರ್ಶನಾತ್ |
ರಾಕ್ಷಸಾದ್ ಭಕ್ಷಿತುಂ ಯಾವದ್ ಯತ್ನಮೇತಚ್ಚಿಕೀರ್ಷತಿ ॥21॥
ಈ ಭಯಂಕರ ರೂಪವನ್ನು ಧರಿಸಿದ ರಾಕ್ಷಸನು ನನ್ನನ್ನು ತಿನ್ನಲು ಪ್ರಯತ್ನ ಮಾಡುವುದಕ್ಕಿಂತ ಮೊದಲೇ ಪೂಜ್ಯರಾದ ನೀವು ನನ್ನನ್ನು ಆ ರಾಕ್ಷಸನಿಂದ ರಕ್ಷಿಸಿ.
ವಸಿಷ್ಠಃ
ಮಾ ಭೈಃ ಪುತ್ರಿ ನ ಭೇತವ್ಯಂ ರಕ್ಷಸೋಽಸ್ಮಾತ್ ಕಥಂಚನ |
ನೈತದ್ರಕ್ಷೋ ಭಯಂ ಯಸ್ಮಾತ್ ಪಶ್ಯಸಿ ತ್ವಮುಪಸ್ಥಿತಮ್ ॥22॥
ಮಗಳೇ, ಈ ರಾಕ್ಷಸನಿಗೆ ಹೆದರಬೇಡ. ನೀನು ನೋಡುತ್ತಿರುವ ಯಾವನಿಂದ ನಿನಗೆ ಭಯವುಂಟಾಗಿದೆಯೋ ಅವನು ರಾಕ್ಷಸನಲ್ಲ.
ರಾಜಾ ಕಲ್ಮಾಷಪಾದೋಽಯಂ ವೀರ್ಯೇಣ ಪ್ರಥಿತೋ ಭುವಿ |
ಸ ಏಷೋಽಸ್ಮಿನ್ ವನೋದ್ದೇಶೇ ನಿವಸತ್ಯತಿಭೀಷಣಃ ॥23॥
ಇವನು ಭೂಮಿಯಲ್ಲಿ ತನ್ನ ಪರಾಕ್ರಮದಿಂದ ಪ್ರಖ್ಯಾತನಾದ ಕಲ್ಮಾಷಪಾದರಾಜ. ಅವನು ಅತಿಭಯಂಕರನಾಗಿ ಕಾಡಿನ ಈ ಪ್ರದೇಶದಲ್ಲಿ ವಾಸಿಸುತ್ತಿದ್ದಾನೆ.
ಗಂಧರ್ವಃ
ತಮಾಪತಂತಂ ಸಂಕ್ರುದ್ಧಂ ವಸಿಷ್ಠೋ ಭಗವಾನೃಷಿಃ |
ವಾರಯಾಮಾಸ ತೇಜಸ್ವೀ ಹುಂಕಾರೇಣೈವ ಭಾರತ ॥24॥
ಭಾರತನೇ, ಕೋಪದಿಂದ ಮೇಲೆ ಎರಗುತ್ತಿದ್ದ ಅವನನ್ನು ಪೂಜ್ಯರೂ, ತೇಜಸ್ವಿಗಳೂ ಆದ ವಸಿಷ್ಠಋಷಿಗಳು ಹುಂಕಾರದಿಂದಲೇ ನಿವಾರಿಸಿದರು.
ಮಂತ್ರಪೂತೇನ ಚ ಪುನಃ ಸ ತಮಭ್ಯುಕ್ಷ್ಯ ವಾರಿಣಾ |
ಮೋಕ್ಷಯಾಮಾಸ ಘೋರಾದ್ ವೈ ರಾಕ್ಷಸಾದ್ ರಾಜಸತ್ತಮ ॥25॥
ರಾಜಶ್ರೇಷ್ಠನೇ, ಅವರು ಪುನಃ ಮಂತ್ರಪೂತವಾದ ಜಲವನ್ನು ಅವನ ಮೇಲೆ ಪ್ರೋಕ್ಷಿಸಿ ಅವನನ್ನು ಆ ಘೋರನಾದ ರಾಕ್ಷಸನಿಂದ ಬಿಡುಗಡೆ ಮಾಡಿದರು.
ಸ ಹಿ ದ್ವಾದಶ ವರ್ಷಾಣಿ ವಾಸಿಷ್ಠಸ್ಯೈವ ತೇಜಸಾ |
ಗ್ರಸ್ತ ಆಸೀದ್ ಗ್ರಹೇಣೇವ ಪರ್ವಕಾಲೇ ದಿವಾಕರಃ ॥26॥
ಆ ರಾಜನಾದರೋ, ವಸಿಷ್ಠಪುತ್ರರಾದ ಶಕ್ತಿಋಷಿಗಳ ತಪಃಪ್ರಭಾವದಿಂದ ಪರ್ವಕಾಲದಲ್ಲಿ ಸೂರ್ಯನು ರಾಹುವಿನಿಂದ ಗ್ರಸ್ತವಾದಂತೆ ಹನ್ನೆರಡು ವರ್ಷಗಳ ಕಾಲ ರಾಕ್ಷಸನಿಂದ ಗ್ರಸ್ತನಾಗಿದ್ದನು.
ರಕ್ಷಸಾ ವಿಪ್ರಮುಕ್ತೋಽಥ ಸ ನೃಪಸ್ತದ್ವನಂ ಮಹತ್ |
ತೇಜಸಾ ರಂಜಯಾಮಾಸ ಸಂಧ್ಯಾಭ್ರಮಿವ ಭಾಸ್ಕರಃ ॥27॥
ರಾಕ್ಷಸನಿಂದ ವಿಮುಕ್ತನಾದ ಆ ರಾಜನು ಆ ದೊಡ್ಡ ಕಾಡನ್ನು ಸಂಧ್ಯಾಕಾಲದಲ್ಲಿ ಸೂರ್ಯನು ಮೋಡಗಳನ್ನು ಬೆಳಗಿಸಿದಂತೆ ತನ್ನ

ತೇಜಸ್ಸಿನಿಂದ ಬೆಳಗಿಸಿದನು.
ಪ್ರತಿಲಭ್ಯ ತತಃ ಸಂಜ್ಞಾಮಭಿವಾದ್ಯ ಕೃತಾಂಜಲಿಃ |
ಉವಾಚ ನೃಪತಿಃ ಕಾಲೇ ವಸಿಷ್ಠಮೃಷಿಸತ್ತಮಮ್ ||28||
ರಾಜನು ತನ್ನ ಜ್ಞಾನವನ್ನು ಮರಳಿ ಪಡೆದು ವಸಿಷ್ಠರಿಗೆ ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಯೋಗ್ಯವಾದ ಕಾಲದಲ್ಲಿ ಆ ಋಷಿಶ್ರೇಷ್ಠರನ್ನು ಕುರಿತು ಮಾತನಾಡಿದನು.
ಸೌದಾಸೋಽಹಂ ಮಹಾಭಾಗ ಯಾಜ್ಯಸ್ತೇ ದ್ವಿಜಸತ್ತಮ |
ಅಸ್ಮಿನ್ ಕಾಲೇ ಯದಿಷ್ಟಂ ತೇ ಬ್ರೂಹಿ ಕಿಂ ಕರವಾಣಿ ತೇ ||29||
ದ್ವಿಜಶ್ರೇಷ್ಠರೇ, ಮಹಾನುಭಾವರೇ, ನಾನು ನೀವು ಯಾಗ ಮಾಡಿಸಲು ಯೋಗ್ಯನಾದ ಸೌದಾಸ. (ಕಲ್ಮಾಷಪಾದನಿಗೆ ಸೌದಾಸ ಎಂದೂ ಹೆಸರು.) ಈಗ ನಿಮಗೆ ಏನು ಇಷ್ಟವಾಗಿದೆ ಅದನ್ನು ಹೇಳಿ. ನಾನು ನಿಮಗೆ ಏನು ಮಾಡಲಿ.
ನಾವಮಂಸ್ಯಾಮಿ ವೈ ಬ್ರಹ್ಮನ್ ಕದಾಚಿದ್ ಬ್ರಾಹ್ಮಣಾನಹಮ್ |
ತ್ವನ್ನಿದೇಶೇ ಸ್ಥಿತಃ ಶಶ್ವತ್ ಪೂಜಯಿಷ್ಯಾಮ್ಯಹಂ ದ್ವಿಜಾನ್ ||30||
ಬ್ರಾಹ್ಮಣರೇ, ನಾನು ಇನ್ನು ಮುಂದೆ ಎಂದೂ ಬ್ರಾಹ್ಮಣರನ್ನು ಅಪಮಾನ ಮಾಡುವುದಿಲ್ಲ. ನಿಮ್ಮ ಆಜ್ಞೆಯನ್ನು ಯಾವಾಗಲೂ ಶಿರಸಾಧರಿಸಿ ಬ್ರಾಹ್ಮಣರನ್ನು ಪೂಜಿಸುವೆನು.
ಇಕ್ಷ್ವಾಕೂಣಾಂ ತು ಯೇನಾಹಮನೃಣಃ ಸ್ಯಾಂ ದ್ವಿಜೋತ್ತಮ |
ತತ್ ತ್ವತ್ತಃ ಪ್ರಾಪ್ತುಮಿಚ್ಛಾಮಿ ಸರ್ವವೇದವಿದಾಂ ವರ ||31||
ಅಪತ್ಯಾಯೇಪ್ಸಿತಾಯ ತ್ವಂ ಮಹಿಷೀಂ ಗಂತುಮರ್ಹಸಿ |
ಶೀಲರೂಪಗುಣೋಪೇತಾಮಿಕ್ಷ್ವಾಕೂಣಾಂ ಹಿ ವೃದ್ಧಯೇ ||32||
ದ್ವಿಜಶ್ರೇಷ್ಠರೇ, ನಾನು ಇಕ್ಷ್ವಾಕುವಂಶದ ನನ್ನ ಪೂರ್ವಜರ ಋಣದಿಂದ ಮುಕ್ತನಾಗುವ ಪುತ್ರನನ್ನು ಪಡೆಯಲು ಇಚ್ಛಿಸುತ್ತೇನೆ. ಸರ್ವವೇದಜ್ಞರಲ್ಲಿ ಶ್ರೇಷ್ಠರಾದವರೇ, ಅಂತಹ ಪುತ್ರನನ್ನು ಪಡೆದು ಇಕ್ಷ್ವಾಕುಗಳ ವಂಶವನ್ನು ಬೆಳೆಸುವ ಸಲುವಾಗಿ ತಾವು ಶೀಲರೂಪಗುಣೋಪೇತಳಾದ ನನ್ನ ಪತ್ನಿಯ ಸಮಾಗಮವನ್ನು ಮಾಡಬೇಕು.
ಗಂಧರ್ವಃ
ದದಾನೀತ್ಯೇವ ತಂ ತತ್ರ ರಾಜಾನಂ ಪ್ರತ್ಯುವಾಚ ಹ |
ವಸಿಷ್ಠಃ ಪರಮೇಷ್ವಾಸಂ ಸತ್ಯಸಂಧೋ ಮಹಾತಪಾಃ ||33||
ಆ ಸತ್ಯಸಂಧರೂ, ಮಹಾತಪಸ್ವಿಗಳೂ ಆದ ವಸಿಷ್ಠರು ವೀರನಾದ ಆ ರಾಜನನ್ನು ಕುರಿತು `ಪುತ್ರನನ್ನು ಕೊಡುತ್ತೇನೆ' ಎಂದು ಹೇಳಿದರು.
ತತಃ ಪ್ರತಿಯಯೌ ಕಾಲೇ ವಸಿಷ್ಠಸಹಿತೋಽನಘ |
ಖ್ಯಾತಂ ಪುರವರಂ ಲೋಕೇಷ್ವಯೋಧ್ಯಾಂ ಮನುಜೇಶ್ವರಃ ||34||
ಅನಘನೇ, ಅನಂತರ ಕಲ್ಮಾಷಪಾದರಾಜನು ವಸಿಷ್ಠರ ಸಹಿತವಾಗಿ ಲೋಕದಲ್ಲಿ ಪ್ರಖ್ಯಾತವಾದ ಅಯೋಧ್ಯಾಪಟ್ಟಣಕ್ಕೆ ಯೋಗ್ಯವಾದ ಕಾಲದಲ್ಲಿ ಹೋದನು.
ಪ್ರಜಾಸ್ತಂ ಪ್ರತಿನಂದಂತ್ಯಃ ಸರ್ವಾಃ ಪ್ರತ್ಯುದ್ಯಯುಸ್ತದಾ |
ವಿಪಾಪ್ಮಾನಂ ಮಹಾತ್ಮಾನಂ ದಿವೌಕಸ ಇವೇಶ್ವರಮ್ ||35||
ಪಾಪರಹಿತನಾಗಿ ದೇವತೆಗಳಂತೆ ಕಂಗೊಳಿಸುವ ಮಹಾನುಭಾವನಾದ ತಮ್ಮ ರಾಜನನ್ನು ಕಂಡು ಎಲ್ಲಾ ಪ್ರಜೆಗಳು ಅವನನ್ನು ಪ್ರತಿನಂದಿಸುತ್ತಾ ಅವನನ್ನು ಸ್ವೀಕರಿಸಲು ಅವನ ಎದುರಿನಲ್ಲಿ ಬಂದರು.
ಅಚಿರಾತ್ ಸ ಮನುಷ್ಯೇಂದ್ರೋ ನಗರೀಂ ಪುಣ್ಯಕರ್ಮಣಾಮ್ |
ವಿವೇಶ ಸಹಿತಸ್ತೇನ ವಸಿಷ್ಠೇನ ಮಹಾತ್ಮನಾ ||36||
ಆ ರಾಜನು ಮಹಾತ್ಮರಾದ ವಸಿಷ್ಠರ ಜೊತೆಯಲ್ಲಿ ಬಹಳ ಶೀಘ್ರವಾಗಿ ಪುಣ್ಯವಂತರ ನಗರಿಯಾದ ಅಯೋಧ್ಯೆಯನ್ನು ಪ್ರವೇಶಿಸಿದನು.
ದದೃಶುಸ್ತಂ ತತೋ ರಾಜಾನ್ನಯೋಧ್ಯಾಪುರವಾಸಿನಃ |
ಪುಷ್ಯೇಣ ಸಹಿತಂ ಕಾಲೇ ನಿಶಾಕರಮಿವೋದಿತಮ್ ||37||
ರಾಜನೇ, ಆಗ ಆಯೋಧ್ಯಾಪುರವಾಸಿಗಳು ಪುಷ್ಯನಕ್ಷತ್ರದಲ್ಲಿ ಉದಯಿಸಿದ ಚಂದ್ರನಂತಿರುವ ಅವನನ್ನು ನೋಡಿದರು.
ಸ ಹಿ ತಾಂ ಪೂರಯಾಮಾಸ ಲಕ್ಷ್ಮ್ಯಾ ಲಕ್ಷ್ಮೀವತಾಂ ವರಃ |
ಅಯೋಧ್ಯಾಂ ವ್ಯೋಮ ಶೀತಾಂಶುಃ ಶರತ್ಕಾಲ ಇವೋದಿತಃ ||38||
ಸಂಪದ್ಯುಕ್ತರಲ್ಲಿ ಶ್ರೇಷ್ಠನಾದ ಅವನು ಶರತ್ಕಾಲದ ಚಂದ್ರನು ತನ್ನ ಕಾಂತಿಯಿಂದ ಆಕಾಶವನ್ನು ತುಂಬಿದಂತೆ ಅಯೋಧ್ಯಾಪಟ್ಟಣವನ್ನು ಸಂಪತ್ತಿನಿಂದ ತುಂಬಿದನು.
ಸಂಸಿಕ್ತಮೃಷ್ಟಪಂಥಾನಂ ಪತಾಕೋಚ್ಛ್ರಿತಭೂಷಿತಮ್ |
ಮನಃ ಪ್ರಹ್ಲಾದಯಾಮಾಸ ತಸ್ಯ ತತ್ಪುರಮುತ್ತಮಮ್ ||39||
ಅವನ ಆ ಶ್ರೇಷ್ಠವಾದ ಪಟ್ಟಣವು ಸಾರಿಸಿದ ನಿರ್ಮಲವಾದ ಮಾರ್ಗಗಳಿಂದಲೂ, ಉನ್ನತವಾದ ಪತಾಕೆಗಳಿಂದಲೂ ಭೂಷಿತವಾಗಿ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತಿತ್ತು.
ಹೃಷ್ಟಪುಷ್ಟಜನಾಕೀರ್ಣಾ ಸಾ ಪುರೀ ಕುರುನಂದನ |
ಅಶೋಭತ ತದಾ ತೇನ ಶಕ್ರೇಣವಾಮರಾವತೀ ||40||
ಕುರುನಂದನನೇ, ಹೃಷ್ಟಪುಷ್ಟ ಜನರಿಂದ ತುಂಬಿದ ಆ ಪಟ್ಟಣವು ಆಗ ಅವನಿಂದ ಇಂದ್ರನಿಂದ ಅಮರಾವತಿಯು ಶೋಭಿಸುವಂತೆ

ಶೋಭಿಸಿತು.
ತತಃ ಪ್ರವಿಷ್ಟೇ ಕೌಂತೇಯ ತಸ್ಮಿನ್ ರಾಜನಿ ತಾಂ ಪುರೀಮ್ |
ತಸ್ಯ ರಾಜ್ಞೋಽಥ ಸಾ ದೇವೀ ವಸಿಷ್ಠಮುಪಚಕ್ರಮೇ ||41||
ಋತಾವಥ ಮಹರ್ಷಿಸ್ತು ಸಂಬಭೂವ ತಯಾ ಸಹ |
ದೇವ್ಯಾ ದಿವ್ಯೇನ ವಿಧಿನಾ ವಸಿಷ್ಠಃ ಶ್ರೇಷ್ಠಭಾಗೃಷಿಃ ||42||
ಕೌಂತೇಯನೇ, ರಾಜನು ತನ್ನ ಪಟ್ಟಣವನ್ನು ಪ್ರವೇಶಿಸುತ್ತಿರಲು ರಾಣಿಯು ಯೋಗ್ಯವಾದ ಋತುಕಾಲದಲ್ಲಿ ವಸಿಷ್ಠರನ್ನು ಸಮೀಪಿಸಿದಳು. ಶ್ರೇಷ್ಠವಾದ ಫಲವನ್ನು ನೀಡುವ ವಸಿಷ್ಠಋಷಿಗಳು ದಿವ್ಯವಿಧಾನದಿಂದ ಆ ದೇವಿಯ ಸಮಾಗಮವನ್ನು ಮಾಡಿದರು.
ರಾಜ್ಞಾಽಭಿವಾದಿತಸ್ತೇನ ಜಗಾಮ ಪುನರಾಶ್ರಮಮ್ |
ದೀರ್ಘಕಾಲಧೃತಂ ಗರ್ಭಂ ಸುಷಾವ ನ ತು ತಂ ಯದಾ ||43||
ಪ್ರಾತಃಕಾಲದಲ್ಲಿ ರಾಜನಿಂದ ನಮಸ್ಕರಿಸಲ್ಪಟ್ಟ ಅವರು ತಮ್ಮ ಆಶ್ರಮಕ್ಕೆ ಹೊರಟು ಹೋದರು. ರಾಣಿಯು ದೀರ್ಘಕಾಲದಲ್ಲಿ ಆ ಗರ್ಭವನ್ನು ಧರಿಸಿದರೂ ಪ್ರಸವಿಸಲಿಲ್ಲ.
ಸಾಽಥ ದೇವ್ಯಶ್ಮನಾ ಕುಕ್ಷಿಂ ನಿರ್ಬಿಭೇದ ತದಾ ಸ್ವಕಮ್ |
ದ್ವಾದಶೇಽಥ ತತೋ ವರ್ಷೇ ಸಂಜಜ್ಞೇ ಮನುಷರ್ಷಭ |
ಅಶ್ಮಕೋ ನಾಮ ರಾಜರ್ಷಿಃ ಪತ್ತನಂ ಯೋ ನ್ಯವೇಶಯತ್ ||44||
ಆಗ ಆ ದೇವಿಯಾದ ಮದಯಂತಿಯು ಕಲ್ಲಿನಿಂದ ತನ್ನ ಉದರವನ್ನು ಕುಟ್ಟಿಕೊಂಡಳು. ಪುರಷರ್ಷಭನೇ, ಆಗ ಗರ್ಭವನ್ನು ಧರಿಸಿದ ಹನ್ನೆರಡನೆಯ ವರ್ಷದಲ್ಲಿ ಶಿಶುವನ್ನು ಪ್ರಸವಿಸಿದಳು. ಆ ಶಿಶುವು ಅಶ್ಮಕನೆಂಬ ರಾಜರ್ಷಿಯಾಗಿ ಈ ಪಟ್ಟಣವನ್ನು ನಿರ್ಮಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಶೀತ್ಯಧಿಕಶತತಮೋಽಧ್ಯಾಯಃ ||
|| ಇತಿ ಚೈತ್ರರಥಪರ್ವಣಿ ತ್ರಯೋದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಂಭತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಎಂಭತ್ತೊಂದನೆಯ ಅಧ್ಯಾಯ
(ಆಶ್ರಮದಲ್ಲಿ ಪರಾಶರರ ಜನನ. ವಸಿಷ್ಠರಿಂದ ಅವರ ಸಾಂತ್ವನ ಕಾರ್ತವೀರ್ಯನ ವಂಶಸ್ಥರಿಂದ ಭೃಗುಕುಲದ ವಧೆ. ಔರ್ವರ ಜನ್ಮ. ಮತ್ತು ಕ್ಷತ್ರಿಯರ ಅಂಧತ್ವ.)
ಗಂಧರ್ವಃ
ಆಶ್ರಮಸ್ಥಾ ತತಃ ಪುತ್ರಮದೃಶ್ಯಂತೀ ವ್ಯಜಾಯತ |
ಶಕ್ತೇಃ ಕುಲಕರಂ ರಾಜನ್ ದ್ವಿತೀಯಮಿವ ಶಕ್ತಿನಮ್ ||1||
ರಾಜನೇ, ಅದೃಶ್ಯಂತಿಯು ಆಶ್ರಮದಲ್ಲಿ ಶಕ್ತಿಯ ವಂಶಕರನಾದ ಎರಡನೆಯ ಶಕ್ತಿಯಂತಿದ್ದ ಪುತ್ರನನ್ನು ಪ್ರಸವಿಸಿದಳು.
ಜಾತಕರ್ಮಾದಿಕಾಸ್ತಸ್ಯ ಕ್ರಿಯಾಃ ಸ ಮುನಿಪುಂಗವಃ |
ಪೌತ್ರಸ್ಯ ಭರತಶ್ರೇಷ್ಠ ಚಕಾರ ಭಗವಾನ್ ಸ್ವಯಮ್ ||2||
ಭರತಶ್ರೇಷ್ಠನೇ, ಋಷಿಶ್ರೇಷ್ಠರಾದ ಪೂಜ್ಯರಾದ ವಸಿಷ್ಠರು ಮೊಮ್ಮಗನಿಗೆ ಜಾತಕರ್ಮಾದಿಕ್ರಿಯೆಗಳನ್ನು ತಾವೇ ಮಾಡಿದರು.
ಪರಾಸುತ್ವಮಯನ್ ಯೇನ ವಸಿಷ್ಠಸ್ಥಾಪಿತಸ್ತದಾ |
ಗರ್ಭಸ್ತೇನ ತತೋ ಲೋಕೇ ಪರಾಶರ ಇತಿ ಸ್ಮೃತಃ ||3||
ಪರಾಸುತ್ವವನ್ನು ಹೊಂದುತ್ತಿದ್ದ ಗರ್ಭವು ವಸಿಷ್ಠರಿಂದ ಸ್ಥಾಪಿಸಲ್ಪಟ್ಟಿದ್ದರಿಂದ ಆ ಕುಮಾರನಿಗೆ ಪರಾಶರ ಎಂದೇ ಹೆಸರಾಯಿತು.
(`ಪರ' ಎಂದರೆ ವಸಿಷ್ಠರಿಂದ `ಅಶರ' ಹಿಂಸೆಯಾಗದಂತೆ ರಕ್ಷಿಸಲ್ಪಟ್ಟವನು ಎಂಬರ್ಥದಲ್ಲಿ ಪರಾಶರ ಶಬ್ದವು ಇದೆ.)
ಅಮನ್ಯತ ಸ ಧರ್ಮಾತ್ಮಾ ವಸಿಷ್ಠಂ ಪಿತರಂ ತದಾ |
ಜನ್ಮಪ್ರಭೃತಿ ತಸ್ಮಿಂಸ್ತು ಪಿತರೀವ ವ್ಯವರ್ತತ ||4||
ಧರ್ಮಾತ್ಮರಾದ ಪರಾಶರರು ವಸಿಷ್ಠರನ್ನೇ ತಂದೆಯೆಂದು ತಿಳಿದು ಹುಟ್ಟಿದಾಗಿನಿಂದ ತಂದೆಯಂತೆಯೇ ಅವರಲ್ಲಿ ನಡೆದುಕೊಂಡರು.
ಸ ತಾತ ಇತಿ ವಿಪ್ರರ್ಷಿಂ ವಸಿಷ್ಠಂ ಪ್ರತ್ಯಭಾಷತ |
ಮಾತುಃ ಸಮೀಪೇ ಕೌಂತೇಯ ಅದೃಶ್ಯಂತ್ಯಾ ನರಾಧಿಪ ||5||
ನರಾಧಿಪನಾದ ಕೌಂತೇಯನೇ, ಅವನು ತನ್ನ ತಾಯಿ ಅದೃಶ್ಯಂತಿಯ ಸಮೀಪದಲ್ಲಿ ವಿಪ್ರರ್ಷಿಗಳಾದ ವಸಿಷ್ಠರನ್ನು ಅಪ್ಪಾ ಎಂದು ಕರೆಯುತ್ತಿದ್ದನು.
ತಾತೇತಿ ಪರಿಪೂರ್ಣಾರ್ಥಂ ತಸ್ಯೇದಂ ಮಧುರಂ ವಚಃ |
ಅದೃಶ್ಯಂತ್ಯಶ್ರುಪೂರ್ಣಾಕ್ಷೀ ಶೃಣ್ವಂತೀ ತಮುವಾಚ ಹ ||6||
ಮಗನ ಮುಖದಿಂದ ಅಪ್ಪಾ ಎಂಬ ಅರ್ಥಪೂರ್ಣವಾದ ಮಧುರವಾದ ಶಬ್ದವನ್ನು ಕೇಳಿ ಅದೃಶ್ಯಂತಿಯು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅವನನ್ನು ಕುರಿತು ಹೇಳಿದಳು.
ಮಾ ತಾತ ತಾತತಾತೇತಿ ನ ತೇ ತಾತೋ ಮಹಾಮುನಿಃ |
ರಕ್ಷಸಾ ಭಕ್ಷಿತಸ್ತಾತ ತವ ತಾತೋ ಮಹಾಮುನಿಃ ||7||
ಮಗು, (ಇವರನ್ನು) ಅಪ್ಪಾ ಅಪ್ಪಾ ಎಂದು ಕರೆಯಬೇಡ. ಈ ಮಹರ್ಷಿಗಳು ನಿನ್ನ ತಂದೆಯಲ್ಲ. ಮಹರ್ಷಿಗಳಾದ ನಿನ್ನ ತಂದೆಯು ಒಬ್ಬ ರಾಕ್ಷಸನಿಂದ ಭಕ್ಷಿಸಲ್ಪಟ್ಟರು.
ಮನ್ಯಸೇ ಯಂ ತು ತಾತಂ ತ್ವಂ ನೈವ ತಾತಸ್ತವಾನಘ |

ಆರ್ಯಸ್ತ್ವೇಷ ಪಿತಾ ತಸ್ಯ ಪಿತುಸ್ತವ ಮನಸ್ವಿನಃ ॥8॥
ಅನಘನೇ, ನೀನು ಯಾರನ್ನು ಅಪ್ಪಾ ಎಂದು ಕರೆಯುತ್ತಿದ್ದೀಯೋ, ಅವರು ನಿನ್ನ ಅಪ್ಪನಲ್ಲ. ಅವರು ಧೈರ್ಯಶಾಲಿಯಾದ ನಿನ್ನ ತಂದೆಯ ತಂದೆ ನಿನ್ನ ಅಜ್ಜ.
ಗಂಧರ್ವಃ
ಸ ಏವಮುಕ್ತೋ ದುಃಖಾರ್ತಃ ಸತ್ಯವಾಗೃಷಿಸತ್ತಮಃ |
ಸರ್ವಲೋಕವಿನಾಶಾಯ ಮತಿಂ ಚಕ್ರೇ ಮಹಾತಪಾಃ |
ವಸಿಷ್ಠೋ ವಾರಯಾಮಾಸ ಹೇತುನಾ ಯೇನ ತಚ್ಛೃಣು ॥9॥
ತಾಯಿಯು ಹೀಗೆ ಹೇಳಿದಾಗ ದುಃಖಾರ್ತರಾದ, ಮಹಾತಪಸ್ವಿಗಳಾದ, ಸತ್ಯವಚನರಾದ ಆ ಋಷಿಶ್ರೇಷ್ಠರು ಎಲ್ಲ ಲೋಕಗಳನ್ನೂ ವಿನಾಶ ಮಾಡಲು ನಿರ್ಧರಿಸಿದರು. ವಸಿಷ್ಠರು ಅವರನ್ನು ಯಾವ ಕಾರಣದಿಂದ ತಡೆದರು ಎಂದು ಹೇಳುತ್ತೇನೆ ಕೇಳು.
ವಸಿಷ್ಠಃ
ಕೃತವೀರ್ಯ ಇತಿ ಖ್ಯಾತೋ ಬಭೂವ ನೃಪತಿಃ ಕ್ಷಿತೌ |
ಯಾಜ್ಯೋ ವೇದವಿದಾಂ ಲೋಕೇ ಭೃಗೂಣಾಂ ಪಾರ್ಥಿವರ್ಷಭ ॥10॥
ಪಾರ್ಥಿವಶ್ರೇಷ್ಠನೇ, ಹಿಂದೆ ಭೂಮಿಯಲ್ಲಿ ಯಾಗಜ್ಞರಾದ ಭೃಗುಕುಲೋತ್ಪನ್ನರಿಂದ ಯಾಜ್ಯನಾದ ಕಾರ್ತವೀರ್ಯನೆಂಬ ರಾಜನಿದ್ದನು.
ಸ ತಾನನ್ವಗ್ರಹೀತ್ ತಾತ ಧಾನ್ಯೇನ ಚ ಧನೇನ ಚ |
ಸೋಮೇನ ತರ್ಪಯಾಮಾಸ ವಿಪುಲೇನ ವಿಶಾಂಪತಿಃ ॥11॥
ಆ ರಾಜನು ಸೋಮಯಾಗವನ್ನು ಮಾಡಿ, ಆ ಭೃಗುಕುಲದ ಬ್ರಾಹ್ಮಣರಿಗೆ ಧನ, ಧಾನ್ಯಗಳ ದಾನವನ್ನು ಮಾಡಿ, ಅನುಗ್ರಹವನ್ನು ಮಾಡಿ ಅವರನ್ನು ಸಂತೋಷ ಪಡಿಸಿದನು.
ತಸ್ಮಿಂಸ್ತು ನೃಪಶಾರ್ದೂಲೇ ಸ್ವರ್ಯಾತೇಽಥ ಕದಾಚನ |
ಬಭೂವ ತತ್ಕುಲೇ ರಾಜ್ಞಾಂ ದ್ರವ್ಯಕಾರ್ಯಮುಪಸ್ಥಿತಮ್ ॥12॥
ಆ ರಾಜಶಾರ್ದೂಲನು ಸ್ವರ್ಗಸ್ಥನಾಗುತ್ತಿರಲು ಒಮ್ಮೆ ಆ ವಂಶದ ರಾಜರುಗಳಿಗೆ ಧನದ ಅವಶ್ಯಕತೆಯುಂಟಾಯಿತು.
ತೇ ಭೃಗೂಣಾಂ ಧನಂ ಜ್ಞಾತ್ವಾ ರಾಜಾನಃ ಸರ್ವ ಏವ ಹಿ |
ಯಾಚಿಷ್ಣವೋಽಭಿಜಗ್ಮುಸ್ತಾನ್ ತಾತ ಭಾರ್ಗವನಂದನಾನ್ ॥13॥
ಎಲೈ ಮಗುವೇ, ಆ ರಾಜರೆಲ್ಲರೂ ಭೃಗುಗಳ ಬಳಿ ಧನವಿದೆಯೆಂದು ತಿಳಿದು ಆ ಭಾರ್ಗವನಂದನರನ್ನು ಬೇಡುವ ಉದ್ದೇಶದಿಂದ ಅವರ ಬಳಿಗೆ ಹೋದರು.
ಭೂಮೌ ತು ನಿದಧುಃ ಕೇಚಿದ್ ಭೃಗವೋ ಧನಮಕ್ಷಯಮ್ |
ದದುಃ ಕೇಚಿದ್ ದ್ವಿಜಾತಿಭ್ಯೋ ಜ್ಞಾತ್ವಾ ಕ್ಷತ್ರಿಯತೋ ಭಯಮ್ ॥14॥
ಭೃಗುಗಳಾದರೋ ಕೆಲವರು ಆ ಅಪಾರವಾದ ಧನವನ್ನು ಭೂಮಿಯಲ್ಲಿ ಮುಚ್ಚಿಟ್ಟಿದ್ದರು. ಇನ್ನು ಕೆಲವು ಭೃಗುಗಳು ಕ್ಷತ್ರಿಯರಿಂದ ಉಂಟಾಗಬಹುದಾದ ಭಯವನ್ನು ಗಮನಿಸಿ, ಬ್ರಾಹ್ಮಣರಿಗೆ ದಾನವನ್ನು ಕೊಟ್ಟಿದ್ದರು.
ಭೃಗವಸ್ತು ದದುಃ ಕೇಚಿತ್ ತೇಷಾಂ ವಿತ್ತಂ ಯಥೇಪ್ಸಿತಮ್ |
ಕ್ಷತ್ರಿಯಾಣಾಂ ತದಾ ತಾತ ಕಾರಣಾಂತರದರ್ಶನಾತ್ ॥15॥
ಪ್ರೀತಿಪಾತ್ರನೇ, ಇನ್ನೂ ಕೆಲವರು ಕಾರಣಾಂತರದಿಂದ ಕ್ಷತ್ರಿಯರಿಗೆ ಅವರ ಇಷ್ಟದಂತೆ ಧನವನ್ನು ಕೊಟ್ಟರು.
ತತೋ ಮಹೀತಳಂ ತಾತ ಕ್ಷತ್ರಿಯೇಣ ಯದೃಚ್ಛಯಾ |
ಖನತಾಽಧಿಗತಂ ವಿತ್ತಂ ಕಸ್ಮಿಂಶ್ಚಿದ್ ಭೃಗುವೇಶ್ಮನಿ ॥16॥
ಪ್ರೀತಿಪಾತ್ರನೇ, ಅನಂತರ ಒಬ್ಬ ಕ್ಷತ್ರಿಯನು ಭೂಮಿಯನ್ನು ಅಗೆಯುತ್ತಿದ್ದಾಗ ಒಬ್ಬ ಭೃಗುವಂಶದವನ ಗೃಹದಲ್ಲಿ ಧನವು ದೊರೆಯಿತು.
ತದ್ವಿತ್ತಂ ದದೃಶುಃ ಸರ್ವೇ ಸಮೇತಾಃ ಕ್ಷತ್ರಿಯರ್ಷಭ |
ಅವಮತ್ಯ ತತಃ ಕ್ರೋಧಾದ್ ಭೃಗೂಂಸ್ತೇ ಶರಣಾಗತಾನ್ ॥17॥
ನಿಜಘ್ನುಸ್ತೇ ಮಹೇಷ್ವಾಸ ಬಹೂನ್ ವೈ ನಿಶಿತೈಃ ಶರೈಃ |
ಆಗರ್ಭಾದನುಕೃಂತಂತಶ್ಚೇರುಶ್ಚೈವ ವಸುಂಧರಾಮ್ ॥18॥
ಕ್ಷತ್ರಿಯಶ್ರೇಷ್ಠನೇ, ಎಲ್ಲಾ ಕ್ಷತ್ರಿಯರೂ ಜೊತೆಯಾಗಿ ಆ ಧನವನ್ನು ನೋಡಿದರು. ಮಹೇಷ್ವಾಸನೇ, ಆಗ ಆ ಕ್ಷತ್ರಿಯರು ಭೃಗುಗಳು ಶರಣಾದರೂ ಸಹ ಅವರನ್ನು ಅನೇಕವಿಧವಾದ ಬಾಣಗಳಿಂದ ಕೊಂದರು. ಅವರು ಭೃಗುವಂಶದವರ ಗರ್ಭದಲ್ಲಿರುವ ಶಿಶುವನ್ನೂ ಸಹ ಬಿಡದೆ ಭೂಮಿಯಲ್ಲಿ ತಿರುಗಾಡಿದರು.
ತತ ಉತ್ಸಾದ್ಯಮಾನೇಷು ಭೃಗುಷ್ವೇವಂ ಭಯಾತ್ ತದಾ |
ಭೃಗುಪತ್ನ್ಯೋ ಗಿರಿಂ ತಾತ ಹಿಮವಂತಂ ಪ್ರಪೇದಿರೇ ॥19॥
ಭೃಗುಕುಲೋತ್ಪನ್ನರು ಹೀಗೆ ವಿನಾಶ ಮಾಡಲ್ಪಡುತ್ತಿರಲು ಭೃಗುಪತ್ನಿಯರು ಭಯದಿಂದ ಹಿಮಾಲಯ ಪರ್ವತವನ್ನು ಸೇರಿದರು.
ತಾಸಾಮನ್ಯತಮಾ ಗರ್ಭಂ ಧಾರಯಾಮಾಸ ತೇಜಸಾ |
ಊರುಣೇಕೇನ ವಾಮೋರೂಃ ಭರ್ತುಃ ಕುಲವಿವೃದ್ಧಯೇ ॥20॥
ಅವರಲ್ಲಿ ಒಬ್ಬ ವಾಮೋರುವು (ಸುಂದರಿಯು) ತನ್ನ ಸಾಮರ್ಥ್ಯದಿಂದ ಪತಿಯ ಕುಲದ ಅಭಿವೃದ್ಧಿಗಾಗಿ ತನ್ನ ಒಂದು ತೊಡೆಯಲ್ಲಿ ಗರ್ಭವನ್ನು ಧರಿಸಿದಳು.

ತಂ ಗರ್ಭಮುಪಲಭ್ಯಾಥ ಬ್ರಾಹ್ಮಣ್ಯೋಽನ್ಯಾ ಭಯಾರ್ದಿತಾಃ|
ಗತ್ವಾ ವೈ ಕಥಯಾಮಾಸುಃ ಕ್ಷತ್ರಿಯಾಣಾಮುಪಾಂತಿಕೇ ॥21॥
ಆಗ ಉಳಿದ ಬ್ರಾಹ್ಮಣಸ್ತ್ರೀಯರು ಆ ಗರ್ಭವನ್ನು ನೋಡಿ ಭಯದಿಂದ ಕೂಡಿದವರಾಗಿ ಕ್ಷತ್ರಿಯರ ಸಮೀಪಕ್ಕೆ ಹೋಗಿ ಆ ವೃತ್ತಾಂತವನ್ನು ತಿಳಿಸಿದರು.
ತತಸ್ತೇ ಕ್ಷತ್ರಿಯಾ ಜಗ್ಮುಃ ತಂ ಗರ್ಭಂ ಹಂತುಮುದ್ಯತಾಃ|
ದದೃಶುರ್ಬ್ರಾಹ್ಮಣೀಂ ತಾಂ ತೇ ದೀಪ್ಯಮಾನಾಂ ಸ್ವತೇಜಸಾ ॥22॥
ಆಗ ಆ ಕ್ಷತ್ರಿಯರು ಗರ್ಭವನ್ನು ಕೊಲ್ಲುವ ಉದ್ದೇಶದಿಂದ ಬಂದು ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಆ ಬ್ರಾಹ್ಮಣಿಯನ್ನು ನೋಡಿದರು.
ಅಥ ಗರ್ಭಃ ಸ ಭಿತ್ವೋರುಂ ಬ್ರಾಹ್ಮಣ್ಯಾ ನಿರ್ಜಗಾಮ ಹ|
ಮುಷ್ಣನ್ ದೃಷ್ಟೀಃ ಕ್ಷತ್ರಿಯಾಣಾಂ ಮಧ್ಯಾಹ್ನ ಇವ ಭಾಸ್ಕರಃ ॥23॥
ಆಗ ಆ ಗರ್ಭವು ಆ ಬ್ರಾಹ್ಮಣಿಯ ತೊಡೆಯನ್ನು ಭೇದಿಸಿ ಹೊರಗೆ ಬಂದು ಮಧ್ಯಾಹ್ನಕಾಲದ ಸೂರ್ಯನಂತೆ ಆ ಕ್ಷತ್ರಿಯರ ದೃಷ್ಟಿಯನ್ನೆಲ್ಲಾ ಅಪಹಾರ ಮಾಡಿತು.
ತತಶ್ಚಕ್ಷುರ್ವಿಹೀನಾಸ್ತೇ ಗಿರಿದುರ್ಗೇಷು ಬಭ್ರಮುಃ|
ತತಸ್ತೇ ಮೋಘಸಂಕಲ್ಪಾ ಭಯಾರ್ತಾಃ ಕ್ಷತ್ರಿಯಾಃ ಪುನಃ ॥24॥
ಬ್ರಾಹ್ಮಣೀಂ ಶರಣಂ ಜಗ್ಮುಃ ದೃಷ್ಟ್ಯರ್ಥಂ ತಾಮನಿಂದಿತಾಮ್|
ಊಚುಶ್ಚೈನಾಂ ಮಹಾಭಾಗಾಂ ಕ್ಷತ್ರಿಯಾಸ್ತೇ ವಿಚೇತಸಃ ॥25॥
ಅನಂತರ ನೇತ್ರಹೀನರಾದ ಆ ಕ್ಷತ್ರಿಯರು ಗಿರಿದುರ್ಗಗಳಲ್ಲಿ ಅಲೆದಾಡಿದರು. ಆಗ ಆ ಕ್ಷತ್ರಿಯರು ಭ್ರಷ್ಟಸಂಕಲ್ಪರಾಗಿ, ಭಯಾರ್ತರಾಗಿ ತಮ್ಮ ದೃಷ್ಟಿಯನ್ನು ಮರಳಿ ಪಡೆಯಲು ಆ ಅನಿಂದಿತಳಾದ ಬ್ರಾಹ್ಮಣ ವನಿತೆಗೇ ಶರಣಾಗತರಾದರು.
ಜ್ಯೋತಿಃಪ್ರಹೀಣಾ ದುಃಖಾರ್ತಾಃ ಶಾಂತಾರ್ಚಿಷ ಇವಾಗ್ನಯಃ|
ತವಾಪತ್ಯಪ್ರಸಾದೇನ ಗಚ್ಛೇತ್ ಕ್ಷತ್ರಂ ನಿರಾಮಯಮ್ ॥26॥
ಇದ್ದ ನೇತ್ರವನ್ನು ಕಳೆದುಕೊಂಡು ಶಾಂತವಾದ ಅಗ್ನಿಯಂತೆ ದುಃಖಾರ್ತರಾದ, ವಿಚೇತನರಾದ ಆ ಕ್ಷತ್ರಿಯರು ಆ ಮಹಾನುಭಾವಳಾದ ಬ್ರಾಹ್ಮಣಿಯನ್ನು ಕುರಿತು ನಿನ್ನ ಮಗನ ಅನುಗ್ರಹದಿಂದ ಕ್ಷತ್ರಿಯಕುಲವು ಸಂಕಟದಿಂದ ಪಾರಾಗಬೇಕು ಎಂದು ಮಾತನಾಡಿದರು.
ಪಾಪಾದಸ್ಮಾದುಪಾರಮ್ಯ ಪಶ್ಯೇಮ ಚ ತಥಾ ಪುನಃ|
ಸಪುತ್ರಾ ತ್ವಂ ಪ್ರಸಾದಂ ನಃ ಸರ್ವೇಷಾಂ ಕರ್ತುಮರ್ಹಸಿ|
ಪುನರ್ದೃಷ್ಟಿಪ್ರಸಾದೇನ ಕ್ಷತ್ರಿಯಾಂಸ್ತ್ರಾತುಮರ್ಹಸಿ ॥27॥
ನಾವು ಈ ಸಂಕಟದಿಂದ ನಿರ್ಮುಕ್ತರಾಗಿ ನಿಮ್ಮನ್ನು ಪೂಜ್ಯಭಾವನೆ- ಯಿಂದ ನೋಡುತ್ತೇವೆ. ಪುತ್ರಸಹಿತಳಾದ ನೀನು ನಮಗೆ ಪುನಃ ದೃಷ್ಟಿಯನ್ನು ಕೊಟ್ಟು ಕ್ಷತ್ರಿಯರಾದ ನಮ್ಮನ್ನು ಅನುಗ್ರಹಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರಎಂಭತ್ತೊಂದನೆಯ ಅಧ್ಯಾಯ ಮುಗಿಯಿತು.
*****
ನೂರ ಎಂಭತ್ತೆರಡನೆಯ ಅಧ್ಯಾಯ
(ಔರ್ವರ ಅನುಗ್ರಹದಿಂದ ಕ್ಷತ್ರಿಯರಿಗೆ ದೃಷ್ಟಿಪ್ರಾಪ್ತಿ. ಲೋಕವಿನಾಶಕ್ಕಾಗಿ ಔರ್ವರ ತಪಸ್ಸು. ಪಿತೃಗಳ ಮಾತಿನಂತೆ ತಪಸ್ಸನ್ನು ನಿಲ್ಲಿಸಿ, ಸಮುದ್ರದಲ್ಲಿ ಕ್ರೋಧಾಗ್ನಿಯ ವಿಸರ್ಜನೆ. ಪರಾಶರರು ಮಾಡಿದ ರಾಕ್ಷಸ ಸತ್ರ.)
ಬ್ರಾಹ್ಮಣೀ
ನಾಹಂ ಮುಷ್ಣಾಮಿ ವಸ್ತಾತಾ ದೃಷ್ಟಿಂ ನಾಸ್ಮಿ ರುಷಾಽನ್ವಿತಾ|
ಅಯಂ ತು ಭಾರ್ಗವೋ ನಾಮ ಊರುಜಃ ಕುಪಿತೋ ಧ್ರುವಮ್॥
ತೇನ ಚಕ್ಷೂಂಷಿ ವಸ್ತಾತಾ ಕುಪಿತೇನ ಮಹಾತ್ಮನಾ|
ಸ್ಮರತಾ ನಿಹತಾನ್ ಬಂಧೂನಾರ್ತಾನಿಹ ಕಥಂಚನ ॥2॥
ಪ್ರೀತಿಪಾತ್ರರೇ ನಾನು ರೋಷದಿಂದ ನಿಮ್ಮ ದೃಷ್ಟಿಯನ್ನು ಅಪಹರಿಸುತ್ತಿಲ್ಲ. ನನ್ನ ತೊಡೆಯಿಂದ ಹುಟ್ಟಿದ ಈ ಮಹಾತ್ಮನಾದ ಭಾರ್ಗವನು ತನ್ನ ಆರ್ತರಾದ ಬಂಧುಗಳು ನಿಹತರಾದ ಕಾರಣದಿಂದ ಕೋಪಗೊಂಡು ನಿಮ್ಮ ದೃಷ್ಟಿಯನ್ನು ಅಪಹರಿಸಿದ್ದಾನೆ.
ಗರ್ಭಾನಪಿ ಯದಾ ಯೂಯಂ ಭೃಗೂಣಾಂ ಹತ ಪೂರ್ವಕಾನ್|
ತದಾಽಯಮೂರುಣಾ ಗರ್ಭೋ ಮಯಾ ವರ್ಷಶತಂ ಧೃತಃ ॥3॥
ಯಾವಾಗ ನೀವು ಹಿಂದೆ ಭೃಗುಗಳ ಗರ್ಭಗಳನ್ನೂ ಕೊಲ್ಲಲು ಆರಂಭಿಸಿದರೋ ಆಗ ನಾನು ಇವನನ್ನು ನೂರುವರ್ಷಗಳ ಕಾಲ ನನ್ನ ತೊಡೆಯಲ್ಲಿ ಧರಿಸಿದೆ.
ಷಡಂಗಶ್ಚಾಖಿಲೋ ವೇದ ಇಮಂ ಗರ್ಭಸ್ಥಮೇವ ಚ|
ವಿವೇಶ ಭೃಗುವಂಶಸ್ಯ ಭೂಯಃ ಪ್ರಿಯಚಿಕೀರ್ಷಯಾ ॥4॥
ಭೃಗುವಂಶಕ್ಕೆ ಪುನಃ ಹಿತವನ್ನು ಮಾಡುವ ಅಪೇಕ್ಷೆಯಿಂದ ಷಡಂಗಸಹಿತವಾದ ವೇದಗಳು ಗರ್ಭಸ್ಥನಾದ ಇವನಿಗೆ ತಾವಾಗಿಯೇ ಬಂದವು.

ಸೋಽಯಂ ಪಿತೃವಧಾನ್ನೂನಂ ಕ್ರೋಧಾದ್ ವೋ ಹಂತುಮಿಚ್ಛತಿ |
ತೇಜಸಾ ಯಸ್ಯ ದಿವ್ಯೇನ ಚಕ್ಷೂಂಷಿ ಮುಷಿತಾನಿ ವಃ ॥5॥
ಅಂತಹ ಇವನು ನೀವು ಅವನ ತಂದೆಯ ವಧೆಯನ್ನು ಮಾಡಿದ ಕಾರಣದಿಂದ ನಿಮ್ಮ ಮೇಲೆ ಕ್ರುದ್ಧನಾಗಿ ನಿಮ್ಮನ್ನು ಕೊಲ್ಲಲು ಬಯಸುತ್ತಾನೆ. ಅವನ ದಿವ್ಯವಾದ ತೇಜಸ್ಸಿನಿಂದ ನಿಮ್ಮ ದೃಷ್ಟಿಯನ್ನು ಕಳೆದುಕೊಂಡಿದ್ದೀರಿ.
ತಮೇವ ಯೂಯಂ ಯಾಚಧ್ವಮೌರ್ವಂ ಮಮ ಸುತೋಪಮಮ್|
ಅಯಂ ವಃ ಪ್ರಣಿಪಾತೇನ ದೃಷ್ಟಿಂ ತುಷ್ಟಃ ಪ್ರದಾಸ್ಯತಿ ॥6॥
ನೀವು ನನ್ನ ಮಗನಾದ ಔರ್ವನನ್ನೇ ಬೇಡಿಕೊಳ್ಳಿ. ನಿಮ್ಮ ಪ್ರಣಾಮಗಳಿಂದ ಸಂತುಷ್ಟನಾದ ಅವನು ನಿಮಗೆ ದೃಷ್ಟಿಯನ್ನು ನೀಡುವನು.
ಗಂಧರ್ವಃ
ಏವಮುಕ್ತಾಸ್ತತಃ ಸರ್ವೇ ರಾಜಾನಸ್ತೇ ತಮೂರುಜಮ್ |
ಊಚುಃ ಪ್ರಸೀದೇತಿ ತದಾ ಪ್ರಸಾದಂ ಚ ಚಕಾರ ಸಃ ॥7॥
ಔರ್ವನ ತಾಯಿಯು ಹೀಗೆ ಹೇಳುತ್ತಿರಲು ಆ ಎಲ್ಲಾ ರಾಜರೂ ಆ ಔರ್ವರನ್ನು ಕುರಿತು ಪ್ರಸನ್ನನಾಗು ಎಂದು ಹೇಳಿದರು. ಆಗ ಔರ್ವರು ಅನುಗ್ರಹವನ್ನು ಮಾಡಿದರು.
ಏತೇನೈವ ತು ವಿಖ್ಯಾತೋ ನಾಮ್ನಾ ಲೋಕೇಷು ಸತ್ತಮಃ |
ಸ ಔರ್ವ ಇತಿ ವಿಖ್ಯಾತ ಊರುಂ ಭಿತ್ತ್ವಾ ವಿನಿಸ್ಸೃತಃ ॥8॥
ಸಜ್ಜನರಲ್ಲಿ ಅಗ್ರಗಣ್ಯರಾದ ಅವರು ತೊಡೆಯನ್ನು ಭೇದಿಸಿಕೊಂಡು ಬಂದದ್ದರಿಂದ ಔರ್ವ ಎಂಬ ನಾಮದಿಂದಲೇ ಲೋಕದಲ್ಲಿ ವಿಖ್ಯಾತರಾದರು.
ಚಕ್ಷೂಂಷಿ ಪ್ರತಿಲಭ್ಯಾಥ ಪ್ರತಿಜಗ್ಮುಸ್ತತೋ ನೃಪಾಃ |
ಭಾರ್ಗವಸ್ತು ಮುನಿರ್ಮೇನೇ ಲೋಕೇ ಪರಾಭವಮ್ ॥9॥
ತಮ್ಮ ದೃಷ್ಟಿಯನ್ನು ಮರಳಿ ಪಡೆದು, ರಾಜರು ಅಲ್ಲಿಂದ ಹೊರಟರು. ಭಾರ್ಗವರಾದ ಔರ್ವರು ಮಾತ್ರ ತಮಗೆ ಅವಮಾನವಾಯಿತೆಂದು ತಿಳಿದರು.
ಸ ಚಕ್ರೇ ತತ್ರ ಲೋಕಾನಾಂ ವಿನಾಶಾಯ ಮನಸ್ತದಾ |
ಸರ್ವೇಷಾಮೇವ ಕಾರ್ತ್ಸ್ನ್ಯೇನ ಮನಃಪ್ರವಣಮಾತ್ಮನಃ ॥10॥
ಅವರು ಸರ್ವಲೋಕಗಳನ್ನು ಸಮಗ್ರವಾಗಿ ವಿನಾಶ ಮಾಡಲು ನಿರ್ಧರಿಸಿ ಭಗವಂತನ ಮನನವನ್ನು ಮಾಡಿದರು.
ಇಚ್ಛನ್ನಪಚಿತಿಂ ಕರ್ತುಂ ಭೃಗೂಣಾಂ ಭೃಗುಸತ್ತಮಃ |
ಸರ್ವಲೋಕವಿನಾಶಾಯ ತೇಪೇ ತೂಗ್ರತರಂ ತಪಃ ॥11॥
ಭೃಗುಗಳಿಗೆ ಆದ ಅವಮಾನಕ್ಕೆ ಪ್ರತೀಕಾರವನ್ನು ಮಾಡಲು ಇಚ್ಛಿಸಿ ಆ ಭೃಗುವಂಶೋತ್ಪನ್ನರಾದ ಶ್ರೇಷ್ಠರಾದ ಔರ್ವರು ಸರ್ವಲೋಕ ವಿನಾಶವನ್ನು ಉದ್ದೇಶಿಸಿ ಉಗ್ರವಾದ ತಪಸ್ಸನ್ನು ಆಚರಿಸಿದರು.
ತಾಪಯಾಮಾಸ ತಾಂಲ್ಲೋಕಾನ್ ಸಸುರಾಸುರಮಾನವಾನ್ |
ತಪಸೋಗ್ರೇಣ ಮಹತಾ ಮಾನಯಿಷ್ಯನ್ ಪಿತಾಮಹಾನ್ ॥12॥
ತನ್ನ ಪಿತಾಮಹರ ಮೇಲಿನ ಗೌರವದಿಂದ ದೊಡ್ಡ ಉಗ್ರತಪಸ್ಸನ್ನು ಮಾಡಿ ದೇವಾಸುರಮನುಷ್ಯಸಹಿತವಾದ ಲೋಕಗಳಿಗೆ ತಾಪವನ್ನುಂಟು ಮಾಡಿದರು.
ತತಸ್ತಂ ಪಿತರಸ್ತಾತ ವಿಜ್ಞಾಯ ಭೃಗುಸತ್ತಮಮ್ |
ಪಿತೃಲೋಕಾದಿಹಾಗತ್ಯ ಸರ್ವ ಊಚುರಿದಂ ವಚಃ ॥13॥
ಆಗ ಪಿತೃಗಳು ಇದನ್ನು ತಿಳಿದು ಪಿತೃಲೋಕದಿಂದ ಇಲ್ಲಿಗೆ ಬಂದು ಭೃಗುಶ್ರೇಷ್ಠರಾದ ಔರ್ವರನ್ನು ಕುರಿತು ಎಲ್ಲರೂ ಹೀಗೆ ಮಾತನಾಡಿದರು.
ಪಿತರಃ
ಔರ್ವ ದೃಷ್ಟಃ ಪ್ರಭಾವಸ್ತೇ ತಪಸೋಗ್ರಸ್ಯ ಪುತ್ರಕ |
ಪ್ರಸಾದಂ ಕುರು ಲೋಕಾನಾಂ ನಿಯಚ್ಛ ಕ್ರೋಧಮಾತ್ಮನಃ ॥14॥
ಪುತ್ರನಾದ ಔರ್ವನೇ ನಿನ್ನ ಉಗ್ರವಾದ ತಪಸ್ಸಿನ ಪ್ರಭಾವವನ್ನು ನೋಡಿದೆವು. ಲೋಕಗಳಿಗೆ ಅನುಗ್ರಹವನ್ನು ಮಾಡು. ನಿನ್ನ ಕ್ರೋಧವನ್ನು ನಿಯಂತ್ರಿಸಿಕೋ.
ನಾನೀಶೈರ್ಹಿ ತದಾ ತಾತ ಭೃಗುಭಿರ್ಭಾವಿತಾತ್ಮಭಿಃ |
ವಧೋಽಪ್ಯುಪೇಕ್ಷಿತಃ ಸರ್ವೈಃ ಕ್ಷತ್ರಿಯಾಣಾಂ ವಿಹಿಂಸತಾಮ್ ॥15॥
ಪ್ರೀತಿಪಾತ್ರನೇ ಹಿಂದೆ ಕ್ಷತ್ರಿಯರು ಹಿಂಸೆಮಾಡಿದಾಗ ಸುಸಂಸ್ಕೃತ ಮನಸ್ಸುಳ್ಳ ಭೃಗುಗಳಾದ ನಾವು ಆ ವಧೆಯನ್ನು ಉಪೇಕ್ಷೆ ಮಾಡಿದುದು ನಾವು ಅಸಮರ್ಥರು ಎಂಬ ಕಾರಣಕ್ಕಾಗಿ ಅಲ್ಲ.
ಆಯುಷಾ ಹಿ ಪ್ರಕೃಷ್ಟೇನ ಯದಾ ನಃ ಖೇದ ಆವಿಶತ್ |
ತದಾಽಸ್ಮಾಭಿರ್ವಧೋ ಘೋರಃ ಕ್ಷತ್ರಿಯೈರೀಪ್ಸಿತಃ ಸ್ವಯಮ್ ॥16॥
ನಮ್ಮ ದೀರ್ಘಾಯುಷ್ಯದಿಂದ ನಮಗೆ ಖೇದವಾಯಿತು. (ನಿರಾಶರಾದ ನಮಗೂ ಆಯುಸ್ಸು ಮುಗಿಯುವ ವೇಳೆಯಲ್ಲಿ ಧನವಿಲ್ಲದ ನಿಮಿತ್ತವಾಗಿ ಬಂದ ದುಃಖದ ಕಾರಣದಿಂದ ಧನದಲ್ಲಿ ಆಸೆಯುಂಟಾಯಿತು.) ಆಗ ಕ್ಷತ್ರಿಯರ ಕೈಯಲ್ಲಿ ಘೋರವಾದ ವಧೆಯನ್ನು ನಾವೇ ಬಯಸಿದೆವು.

ನಿಖಾತಂ ತದ್ಧಿ ವೈ ವಿತ್ತಂ ಕಸ್ಮಿಂಶ್ಚಿದ್ ಭೃಗುವೇಶ್ಮನಿ |
ವೈರಾಯ್ಯೈವ ತತೋ ನ್ಯಸ್ತಂ ಕ್ಷತ್ರಿಯಾನ್ ಕೋಪಯಿಷ್ಣುಭಿಃ ॥17॥
ನಾವು ಕ್ಷತ್ರಿಯರನ್ನು ಕೋಪಗೊಳಿಸುವುದಕ್ಕಾಗಿಯೇ ಮತ್ತು ಅವರಿಗೆ ವೈರವನ್ನುಂಟುಮಾಡುವುದಕ್ಕಾಗಿಯೇ ಒಬ್ಬ ಭೃಗುವಿನ ಮನೆಯಲ್ಲಿ ಧನವನ್ನು ಹೂತಿಟ್ಟೆವು.
ಕಿಂ ಹಿ ವಿತ್ತೇನ ನಃ ಕಾರ್ಯಂ ಸ್ವರ್ಗೇಪ್ಸೂನಾಂ ದ್ವಿಜರ್ಷಭ |
ಯದಾ ಹಿ ಮೃತ್ಯುರಾಯಾತಿ ನ ಶಕ್ನೋತಿ ಚ ಸರ್ವಶಃ ॥18॥
ದ್ವಿಜಶ್ರೇಷ್ಠನೇ ಸ್ವರ್ಗವನ್ನು ಬಯಸುವ ನಮಗೆ ಧನದಿಂದ ಏನು ಆಗಬೇಕಾಗಿದೆ? ಮೃತ್ಯುವು ಬರುವಾಗ ಮೃತ್ಯುವು ಕೊಡುವ ಬುದ್ಧಿಯನ್ನು ನಿವಾರಣೆ ಮಾಡಲು ಯಾರೂ ಶಕ್ತರಲ್ಲ.
ತದಾಽಸ್ಮಾಭಿರಯಂ ದೃಷ್ಟ ಉಪಾಯಸ್ತತ್ರ ಧರ್ಮತಃ |
ಆತ್ಮಹಾ ಚ ಪುನಸ್ತಾತ ನ ಲೋಕಾಂಲ್ಲಭತೇ ಶುಭಾನ್ ॥19॥
ತತೋಽಸ್ಮಾಭಿಃ ಸಮೀಕ್ಷ್ಯೈವಮಾತ್ಮನಾಽಽತ್ಮಾ ವಿನಾಶಿತಃ |
ನ ಚೈತನ್ನಃ ಪ್ರಿಯಂ ತಾತ ಯದಿದಂ ಕರ್ತುಮಿಚ್ಛಸಿ ॥20॥
ಆಗ ನಾವು ಈ ಧರ್ಮಸಮ್ಮತವಾದ ಉಪಾಯವನ್ನು ಚಿಂತಿಸಿದೆವು. ಆತ್ಮಹತ್ಯೆಯನ್ನು ಮಾಡಿಕೊಂಡರೆ ಶುಭಲೋಕಗಳ ಪ್ರಾಪ್ತಿಯಾಗುವುದಿಲ್ಲ. ಇದನ್ನು ಗಮನಿಸಿ ನಾವು ನಮ್ಮ ಪ್ರಯತ್ನದಿಂದಲೇ ಈ ರೀತಿಯಲ್ಲಿ ದೇಹವನ್ನು ನಾಶಮಾಡಿಕೊಂಡೆವು. ನೀನು ಏನು ಮಾಡಲು ಹೊರಟಿರುವೆಯೋ ಅದು ನಮಗೆ ಇಷ್ಟವಲ್ಲ.
ನಿಯಚ್ಛೇದಂ ಮನಃ ಪಾಪಾತ್ ಸರ್ವಲೋಕಪರಾಭವಾತ್ |
ನ ಹಿ ನಿಃಕ್ಷತ್ರಿಯಾಃ ಕೇಚಿಲ್ಲೋಕಾಃ ಸಂತಿ ಸುಪುತ್ರಕ |
ದೂಷಯಂತಿ ಚ ನಸ್ತೇಜಃ ಕ್ರೋಧಮುತ್ಪತಿತಂ ಜಹಿ ॥21॥
ಸರ್ವಲೋಕವನ್ನು ವಿನಾಶಮಾಡುವುದರಿಂದ ಉಂಟಾಗುವ ಪಾಪದಿಂದ ನಿನ್ನ ಮನಸ್ಸನ್ನು ಹಿಂದಕ್ಕೆ ತೆಗೆ. ಪ್ರಿಯ ಪುತ್ರನೇ ರಾಜರಿಲ್ಲದಿರುವ ಲೋಕಗಳು ಯಾವವೂ ಇಲ್ಲ. ರಾಜನಿಲ್ಲದಿದ್ದರೆ ಪಾಪಿಷ್ಠರೂ ಮತ್ತು ಚೋರರೂ ನಮ್ಮ ಮೇಲೆ ಆಕ್ರಮಣವನ್ನು ಮಾಡಿ ದೂಷಿಸುತ್ತಾರೆ. ನಿನ್ನಲ್ಲಿ ಉಂಟಾದ ಕ್ರೋಧವನ್ನು ಸಂಹರಿಸು.
ಔರ್ವಃ
ಉಕ್ತವಾನಸ್ಮಿ ಯಾಂ ಕ್ರೋಧಾತ್ ಪ್ರತಿಜ್ಞಾಂ ಪಿತರಸ್ತಥಾ |
ಸರ್ವಲೋಕವಿನಾಶಾಯ ನ ಸಾ ಮೇ ವಿತಥಾ ಭವೇತ್ ॥22॥
ಪಿತೃಗಳೇ ನಾನು ಸರ್ವಲೋಕವಿನಾಶಕ್ಕಾಗಿ ಏನು ಪ್ರತಿಜ್ಞೆಯನ್ನು ಮಾಡಿದ್ದೇನೆಯೋ ಆ ನನ್ನ ಪ್ರತಿಜ್ಞೆಯು ಸುಳ್ಳಾಗಬಾರದು.
ವೃಥಾರೋಷಪ್ರತಿಜ್ಞೋಽಹಂ ನ ತು ಜೀವಿತುಮುತ್ಸಹೇ |
ಅನಿಸ್ತೀರ್ಣೋ ಹಿ ಮೇ ರೋಷೋ ದಹೇದಗ್ನಿರಿವಾರಣಿಮ್ ॥23॥
ನಾನು ವ್ಯರ್ಥವಾದ ರೋಷವನ್ನು ಹೊಂದಿ, ವ್ಯರ್ಥವಾದ ಪ್ರತಿಜ್ಞೆಯನ್ನು ಮಾಡಿ ಜೀವಿಸಲು ಇಷ್ಟಪಡುವುದಿಲ್ಲ. ಪ್ರತೀಕಾರವನ್ನು ಪಡೆಯದ ನನ್ನ ರೋಷವು ಅಗ್ನಿಯು ಅರಣಿಯನ್ನು ಸುಡುವಂತೆ ನನ್ನನ್ನೇ ಸುಟ್ಟೀತು.
ದೇಶಕಾಲೇನ ಸಂಜಾತಂ ಕ್ರೋಧಂ ಯಃ ಕ್ಷಂತುಮರ್ಹತಿ |
ನಾಲಂ ಸ ಮನುಜಃ ಸಮ್ಯಕ್ ತ್ರಿವರ್ಗಂ ಪರಿರಕ್ಷಿತುಮ್ |
ಸ್ಥಾನೇ ರೋಷಃ ಪ್ರಯುಕ್ತಃ ಸ್ಯಾನ್ನೃಪೈಃ ಸ್ವರ್ಗಜಿಗೀಷುಭಿಃ ॥24॥
ದೇಶಕಾಲೋಚಿತವಾಗಿ ಉಂಟಾದ ಕ್ರೋಧವನ್ನು ಯಾವ ಮನುಷ್ಯನು ಕ್ಷಮೆಯಿಂದ ಪರಿಹರಿಸಿಕೊಳ್ಳುವನೋ, ಅವನು ಧರ್ಮಾರ್ಥ ಕಾಮಗಳನ್ನು ಚೆನ್ನಾಗಿ ರಕ್ಷಿಸಲು ಅಶಕ್ತನಾಗುತ್ತಾನೆ. ಆದ್ದರಿಂದ ಸ್ವರ್ಗವನ್ನು ಗೆಲ್ಲುವ ಇಚ್ಛೆಯಿಂದ ಹಿಂದಿನ ರಾಜರು ಹೊಂದಿದ ರೋಷವು ಯುಕ್ತವಾಗಿಯೇ ಇದೆ.
ಅಶ್ರೌಷಮಹಮೂರುಸ್ಥೋ ಗರ್ಭಶಯ್ಯಾಗತಸ್ತದಾ |
ಆರಾವಂ ತು ಭೃಶಂ ತತ್ರ ಭೃಗೂಣಾಂ ಕ್ಷತ್ರಿಯೈರ್ವಧೇ ॥25॥
ಭೃಗುಗಳನ್ನು ಕ್ಷತ್ರಿಯರು ಕೊಲ್ಲುವಾಗ ನಾನು ನನ್ನ ತಾಯಿಯ ತೊಡೆಯಲ್ಲಿಯೇ ಗರ್ಭಶಯ್ಯಾಗತನಾಗಿ ಆ ಆರ್ತನಾದವನ್ನು ಕೇಳಿದೆ.
ಸಾಮರ್ಷೈರ್ಹಿ ತದಾ ಲೋಕೇ ಭೃಗೂಣಾಂ ಕ್ಷತ್ರಿಯಾಧಮೈಃ |
ಆಗರ್ಭೋತ್ಸಾದನಂ ಜಾತಂ ತದಾ ಮಾಂ ಮನ್ಯುರಾವಿಶತ್ ॥26॥
ಕ್ಷತ್ರಿಯಾಧಮರು ಸಿಟ್ಟಿನಿಂದ ಕೂಡಿದವರಾಗಿ ಭೃಗುಕುಲವನ್ನು ಗರ್ಭದ ಪರ್ಯಂತವೂ ನಾಶ ಮಾಡಿದರು. ಆಗ ನನಗೆ ಕ್ರೋಧವು ಉಂಟಾಯಿತು.
ಪ್ರಕೀರ್ಣಕೇಶಾಃ ಕಿಲ ಮೇ ಮಾತರಃ ಪಿತರಸ್ತಥಾ |
ಭಯಾತ್ ಸರ್ವೇಷು ಲೋಕೇಷು ನಾಧಿಜಗ್ಮುಃ ಪರಾಯಣಮ್ ॥27॥
ನನ್ನ ತಾಯಿಯರು ಮತ್ತು ತಂದೆಗಳು ತಲೆಕೂದಲುಗಳನ್ನು ಕೆದರಿಕೊಂಡು ಭಯದಿಂದ ಓಡಿದರೂ ಲೋಕಗಳಲ್ಲಿ ಯಾವ ರಕ್ಷಕನನ್ನೂ ಕಾಣಲಿಲ್ಲ.
ತಾನ್ ಭೃಗೂಣಾಂ ಪರಾನ್ ದಾರಾನ್ ಕಶ್ಚಿನ್ನಾಭ್ಯುಪಪದ್ಯತ |
ಮಾತಾ ತದಾ ದಧಾರೇಯಮೂರುಣೈಕೇನ ಮಾಂ ಶುಭಾ ॥28॥
ಆ ಭೃಗುಗಳ ಶ್ರೇಷ್ಠವಾದ ಪತ್ನಿಯರನ್ನು ರಕ್ಷಿಸಲು ಯಾರೂ ಮುಂದೆ ಬರಲಿಲ್ಲ. ಆಗ ಈ ನನ್ನ ಶುಭಳಾದ ತಾಯಿಯು ನನ್ನನ್ನು

ತನ್ನ ಒಂದು ತೊಡೆಯಲ್ಲಿ ಧರಿಸಿದಳು.
ಪ್ರತಿಷೇದ್ಧಾ ಹಿ ಪಾಪಸ್ಯ ಯದಾ ಲೋಕೇ ನ ವಿದ್ಯತೇ |
ತದಾ ಸರ್ವೇಷು ಲೋಕೇಷು ಪಾಪಕೃನ್ನೋಪಶಾಮ್ಯತಿ ॥29॥
ಲೋಕದಲ್ಲಿ ಪಾಪವನ್ನು ಪ್ರತಿಷೇಧ ಮಾಡುವವರು ಯಾರೂ ಇಲ್ಲದಿದ್ದರೆ ಆಗ ಯಾವಲೋಕದಲ್ಲಿಯೂ ಪಾಪವನ್ನು ಮಾಡುವವನು ಪಾಪದಿಂದ ಹಿಂದೆ ಸರಿಯುವುದಿಲ್ಲ.
ಯದಾ ತು ಪ್ರತಿಷೇದ್ಧಾರಂ ಪಾಪಂ ನ ಲಭತೇ ಕ್ವಚಿತ್ |
ತಿಷ್ಠಂತಿ ಬಹವೋ ಲೋಕಾಸ್ತದಾ ಪಾಪೇಷು ಕರ್ಮಸು ॥30॥
ಪಾಪವನ್ನು ಪ್ರತಿಷೇಧ ಮಾಡುವವನು ಇಲ್ಲದಿದ್ದರೆ ಅನೇಕ ಜನರು ಆ ಪಾಪಕರ್ಮಗಳಲ್ಲಿಯೇ ನಿರತರಾಗುತ್ತಾರೆ.
ಜಾನನ್ನಪಿ ಚ ಯಃ ಪಾಪಂ ಶಕ್ತಿಮಾನ್ನ ನಿಯಚ್ಛತಿ |
ಈಶಃ ಸ ಚಾಪಿ ತೇನೈವ ಕರ್ಮಣಾ ಸಂಪ್ರಯುಜ್ಯತೇ ॥31॥
ಪಾಪವನ್ನು ನೋಡಿ ಅದನ್ನು ನಿವಾರಿಸಲು ಶಕ್ತಿಯಿದ್ದವನೂ ಸಹ ಪಾಪವನ್ನು ನಿಯಂತ್ರಿಸದಿದ್ದರೆ ಆ ಪಾಪಕರ್ಮದ ಫಲವು ಅವನಿಗೂ ಸೇರುತ್ತದೆ.
ರಾಜಭಿಶ್ಚೇತರೈಶ್ಚೈವ ಯದಾ ವೈ ಪಿತರೋ ಮಮ |
ಶಕ್ತೈರ್ನ ಶಂಕಿತಾಸಾತತ್ರಾತುಮಿಷ್ಟಮದ್ಯೇಹ ಜೀವಿತಮ್ ॥32॥
ನನ್ನ ಪಿತೃಗಳು ಸಮರ್ಥರಾದ ರಾಜರುಗಳಿಂದಲೂ ಮತ್ತು ಇತರರಿಂದಲೂ ನಿಸ್ಸಂಶಯವಾಗಿ ಇಷ್ಟವಾದ ಜೀವನವು ರಕ್ಷಿಸಲ್ಪಡಲಿಲ್ಲವೋ ಅದರಿಂದ ನನಗೆ ಕ್ರೋಧವುಂಟಾಯಿತು.
ಅತ ಏಷಾಮಹಂ ಕ್ರುದ್ಧೋ ಲೋಕಾನಾಮೀಶ್ವರೋದ್ಯ ಸನ್ |
ಭವತಾಂ ಚ ವಚೋ ನಾಹಮಲಂ ಸಮತಿವರ್ತಿತುಮ್ ॥33॥
ನಾನು ಲೋಕವನ್ನು ನಿಯಂತ್ರಿಸಲು ಸಮರ್ಥನಾದ್ದರಿಂದ ಈ ಕ್ಷತ್ರಿಯರ ಮೇಲೆ ಕೋಪಗೊಂಡಿದ್ದೇನೆ. ಆದರೆ ನಾನು ನಿಮ್ಮ ಮಾತನ್ನೂ ಮೀರುವಂತಿಲ್ಲ.
ಮಮ ಚಾಪಿ ಭವೇದೇವಮೀಶ್ವರಸ್ಯ ಸತೋ ಮಹತ್ |
ಉಪೇಕ್ಷಮಾಣಸ್ಯ ಪುನರ್ಲೋಕಾನಾಂ ಕಿಲ್ಬಿಷಂ ಭಯಮ್ ॥34॥
ಸಮರ್ಥನಾದ ನಾನು ಈ ಅನ್ಯಾಯವನ್ನು ಉದಾಸೀನ ಮಾಡಿದರೆ ಲೋಕಕ್ಕೆ ಭಯವೂ, ನನಗೆ ಪಾಪವೂ ಉಂಟಾಗುತ್ತದೆ.
ಯಶ್ಚಾಯಂ ಮನ್ಯುನಾ ಮೇಽಗ್ನಿರ್ಲೋಕಾನಾದಾತುಮಿಚ್ಛತಿ |
ದಹೇದೇವ ಚ ಮಾಮೇಷ ನಿಗೃಹೀತಃ ಸ್ವತೇಜಸಾ ॥35॥
ಭವತಾಂ ಚ ವಿಜಾನಾಮಿ ಸರ್ವಲೋಕಹಿತೇಪ್ಸುತಾಮ್ |
ತಸ್ಮಾದ್ ವಿದಧ್ವಂ ಯಚ್ಛ್ರೇಯೋ ಲೋಕಾನಾಂ ಮಮ ಚೇಪ್ಸಥ ॥36॥
ನನ್ನ ಕ್ರೋಧದಿಂದ ಉತ್ಪನ್ನವಾದ ಯಾವ ಈ ಅಗ್ನಿಯು ಲೋಕಗಳನ್ನೇ ಸುಡಲು ಬಯಸುತ್ತಿದೆಯೋ, ಅದನ್ನು ನಾನು ನಿಗ್ರಹಿಸಿದರೆ, ಅದು ತನ್ನ ತೇಜಸ್ಸಿನಿಂದ ನನ್ನನ್ನೇ ಸುಡುತ್ತದೆ. ನಿಮಗಿರುವ ಸರ್ವಲೋಕಹಿತದ ಇಚ್ಛೆಯನ್ನು ನಾನು ತಿಳಿದಿದ್ದೇನೆ. ಆದ್ದರಿಂದ ಲೋಕಗಳಿಗೂ ಮತ್ತು ನನಗೂ ಯಾವುದು ಶ್ರೇಯಸ್ಸೆಂದು ನೀವೇ ವಿಧಾನ ಮಾಡಿ.
ಪಿತರಃ
ಯ ಏಷ ಮನ್ಯುಜಸ್ತೇಽಗ್ನಿರ್ಲೋಕಾನಾದಾತುಮಿಚ್ಛತಿ |
ಅಪ್ಸು ತಂ ಮುಂಚ ಭದ್ರಂ ತೇ ಲೋಕಾ ಹ್ಯಪ್ಸು ಪ್ರತಿಷ್ಠಿತಾಃ ॥37॥
ಪುತ್ರನೇ, ನಿನಗೆ ಮಂಗಳವಾಗಲಿ. ಲೋಕಗಳನ್ನೇ ದಹಿಸಲು ಇಚ್ಛಿಸುತ್ತಿರುವ ನಿನ್ನ ಕ್ರೋಧಾಗ್ನಿಯನ್ನು ನೀರಿನಲ್ಲಿ ವಿಸರ್ಜಿಸು. ಲೋಕಗಳೆಲ್ಲವೂ ನೀರಿನಲ್ಲಿಯೇ ಪ್ರತಿಷ್ಠಿತವಾಗಿವೆಯಷ್ಟೆ?
ತಸ್ಮಾದಪ್ಸು ಪ್ರಮುಂಚೇದಂ ಕ್ರೋಧಾಗ್ನಿಂ ದ್ವಿಜಸತ್ತಮ |
ಅಯಂ ತಿಷ್ಠತು ತೇ ವಿಪ್ರ ಯದೀಚ್ಛಸಿ ಮಹೋದಧೌ ॥38॥
ದ್ವಿಜಶ್ರೇಷ್ಠನೇ, ಆ ಕಾರಣದಿಂದ ನಿನ್ನ ಕ್ರೋಧಾಗ್ನಿಯನ್ನು ವಿಸರ್ಜಿಸು. ನಿನಗೆ ಸಮ್ಮತವಾದರೆ ಈ ಕ್ರೋಧಾಗ್ನಿಯು ಸಮುದ್ರದಲ್ಲಿಯೇ ಇರಲಿ.
ಮನ್ಯುಜೋಽಗ್ನಿರ್ದಹನ್ನಾಪೋ ಲೋಕಾಶ್ಚೈವಾಮ್ಮಯಾಃ ಸ್ಮೃತಾಃ |
ಏವಂ ಪ್ರತಿಜ್ಞಾ ಸತ್ಯೇಯಂ ಭವಿಷ್ಯತಿ ತವಾನಘ |
ನ ಚೈವ ಸಾಮರಾ ಲೋಕಾ ಭವಿಷ್ಯಂತಿ ಪರಾಭವಮ್ ॥39॥
ನೀರಿನಲ್ಲಿರುವ ಕ್ರೋಧಾಗ್ನಿಯು ನೀರನ್ನೇ ಸುಡುತ್ತಿರುತ್ತದೆ. ಎಲ್ಲ ಲೋಕಗಳು ಜಲಮಯವಾದುವೆಂದು ಹೇಳುತ್ತಾರೆ. ಅನಘನೇ, ಆಗ ನಿನ್ನ ಪ್ರತಿಜ್ಞೆಯೂ ರಕ್ಷಿತವಾಗುತ್ತದೆ. ಮತ್ತು ದೇವತೆಗಳಿಂದ ಸಹಿತವಾದ ಲೋಕಗಳು ಪರಾಭವವನ್ನು ಹೊಂದುವುದಿಲ್ಲ.
ವಸಿಷ್ಠಃ
ತತಸ್ತಂ ಕ್ರೋಧಜಂ ತಾತ ಔರ್ವೋಽಗ್ನಿಂ ವರುಣಾಲಯೇ |
ಉತ್ಸಸರ್ಜ ಸ ಚೈವಾಪ ಉಪಯುಂಕ್ತೇ ಮಹೋದಧೌ ॥40॥
ಪ್ರೀತಿಪಾತ್ರನೇ, ಆಗ ಅವರು ತಮ್ಮ ಕ್ರೋಧಾಗ್ನಿಯನ್ನು ವರುಣಾಲಯದಲ್ಲಿ ವಿಸರ್ಜಿಸಿದರು. ಆ ಅಗ್ನಿಯು ಸಮುದ್ರದಲ್ಲಿ ನೀರನ್ನು ದಹಿಸುತ್ತಾ ಇರುತ್ತದೆ.
ಮಹದ್ಧಯಶಿರೋ ಭೂತ್ವಾ ಯತ್ತದ್ ವೇದವಿದೋ ವಿದುಃ |

ತಮಗ್ನಿಮುದ್ಗಿರನ್ ವಕ್ತ್ರಾತ್ ಪಿಬತ್ಯಾಪೋ ಮಹೋದಧೌ ॥41॥
ವೇದವೇತ್ತರು ತಿಳಿದಿರುವ ದೊಡ್ಡಕುದುರೆಯ ರೂಪವನ್ನು ತೆಗೆದುಕೊಂಡು ಅಗ್ನಿಯು ಮುಖದಿಂದ ಅಗ್ನಿಯನ್ನು ಉಗುಳುತ್ತಾ ಸಮುದ್ರದಲ್ಲಿ ಜಲವನ್ನು ಕುಡಿಯುತ್ತಾನೆ.
ತಸ್ಮಾತ್ ತ್ವಮಪಿ ಭದ್ರಂ ತೇ ನ ಲೋಕಾನ್ ಹಂತುಮರ್ಹಸಿ ।
ಪರಾಶರ ಪರಂ ಧರ್ಮಂ ಜ್ಞಾತ್ವಾ ಜ್ಞಾನವಿದಾಂ ವರ ॥42॥
ಆದ್ದರಿಂದ ಪರಾಶರನೇ, ನಿಮಗೆ ಮಂಗಳವಾಗಲಿ. ಜ್ಞಾನಿಗಳಲ್ಲಿ ಶ್ರೇಷ್ಠನಾದವನೇ, ನೀನು ಈ ಶ್ರೇಷ್ಠವಾದ ಧರ್ಮವನ್ನು ತಿಳಿದು ಲೋಕಗಳನ್ನು ವಿನಾಶ ಮಾಡಬಾರದು.
ಗಂಧರ್ವಃ
ಏವಮುಕ್ತಃ ಸ ವಿಪ್ರರ್ಷಿರ್ವಸಿಷ್ಠೇನ ಮಹಾತ್ಮನಾ ।
ನಿಯಚ್ಛದಾತ್ಮನಃ ಕ್ರೋಧಂ ಸರ್ವಲೋಕಪರಾಭವಾತ್ ॥43॥
ಮಹಾತ್ಮರಾದ ವಸಿಷ್ಠರು ಹೀಗೆ ಹೇಳಿದಾಗ ವಿಪ್ರರ್ಷಿಗಳಾದ ಪರಾಶರರು ಸರ್ವಲೋಕವಿನಾಶದ ಉದ್ದೇಶದಿಂದ ಉತ್ಪನ್ನವಾದ ತಮ್ಮ ಕ್ರೋಧವನ್ನು ಶಮನಗೊಳಿಸಿದರು.
ಈಜೇ ಚ ಸ ಮಹಾತೇಜಾಃ ಸರ್ವವೇದವಿದಾಂ ವರಃ ।
ಋಷೀ ರಾಕ್ಷಸಸತ್ರೇಣ ಶಾಕ್ತೇಯೋಽಥ ಪರಾಶರಃ ॥44॥
ಮಹಾತೇಜಸ್ವಿಗಳೂ, ಸರ್ವವೇದಜ್ಞರಲ್ಲಿ ಶ್ರೇಷ್ಠರಾದವರೂ ಆದ ಶಕ್ತಿಪುತ್ರರಾದ ಪರಾಶರರು ರಾಕ್ಷಸಸತ್ರವನ್ನು ಮಾತ್ರ ಮಾಡಿಯೇ ಮಾಡಿದರು.
ತತೋ ವೃದ್ಧಾಂಶ್ಚ ಬಾಲಾಂಶ್ಚ ರಾಕ್ಷಸಾನ್ ಸ ಮಹಾಮತಿಃ ।
ದದಾಹ ವಿತತೇಂ ಸತ್ರೇ ಶಕ್ತೇರ್ವಧಮನುಸ್ಮರನ್ ॥45॥
ಆ ಮಹಾಮತಿಗಳಾದ ಪರಾಶರರು ತಮ್ಮ ತಂದೆಗಳಾದ ಶಕ್ತಿಋಷಿಗಳ ವಧೆಯನ್ನು ಸ್ಮರಿಸುತ್ತಾ ವಿಸ್ತಾರವಾದ ಯಜ್ಞದಲ್ಲಿ ವೃದ್ಧರೂ ಬಾಲರೂ ಆದ ರಾಕ್ಷಸರನ್ನು ದಹನ ಮಾಡಿದರು.
ನ ಹಿ ತಂ ವಾರಯಾಮಾಸ ವಸಿಷ್ಠೋ ರಕ್ಷಸಾಂ ವಧಾತ್ ।
ದ್ವಿತೀಯಾಮಸ್ಯ ಮಾ ಜ್ನೇ ಪ್ರತಿಜ್ಞಾಮಿತಿ ಚಿಂತಯನ್ ॥46॥
ವಸಿಷ್ಠರು ಅವರನ್ನು ರಾಕ್ಷಸವಧೆಯಿಂದ ನಿವಾರಣೆ ಮಾಡಲಿಲ್ಲ. ಪರಾಶರರ ಎರಡನೆಯ ಪ್ರತಿಜ್ಞೆಯನ್ನೂ ನಾನು ವ್ಯರ್ಥ ಮಾಡುವುದು ಬೇಡ ಎಂದು ಅವರು ಚಿಂತಿಸಿದರು. (ಲೋಕವಿನಾಶವು ಮೊದಲನೆಯ ಪ್ರತಿಜ್ಞೆ. ತಂದೆಯನ್ನು ಕೊಂದ ರಾಕ್ಷಸರ ವಿನಾಶವು ಪರಾಶರರ ಎರಡನೆಯ ಪ್ರತಿಜ್ಞೆ.)
ತ್ರಯಾಣಾಂ ಪಾವಕಾನಾಂ ಸ ಸತ್ರೇ ತಸ್ಮಿನ್ ಮಹಾಮುನಿಃ ।
ಆಸೀತ್ ಪುರಸ್ತಾದ್ ದೇವಾನಾಂ ಚತುರ್ಥ ಇವ ಪಾವಕಃ ॥47॥
ಮಹರ್ಷಿಗಳಾದ ಪರಾಶರರು ಯಜ್ಞದಲ್ಲಿರುವ ಮೂರು ಅಗ್ನಿಗಳ ಜೊತೆಯಲ್ಲಿ ದೇವತೆಗಳ ಎದುರಿನಲ್ಲಿ ನಾಲ್ಕನೆಯ ಅಗ್ನಿಯಂತೆ ಶೋಭಿಸಿದರು.
ತೇನ ಯಜ್ಞೇನ ಶುದ್ಧೇನ ಹೂಯಮಾನೇನ ಯುಕ್ತಿತಃ ।
ತದ್ ವಿದೀಪಿತಮಾಕಾಶಂ ಸೂರ್ಯೇಣೇವ ಘನಾತ್ಯಯೇ ॥48॥
ಪರಾಶರರು ತಮ್ಮ ಯೋಗದಿಂದ ಹಾಗೆ ಶುದ್ಧವಾಗಿ ಯಜ್ಞವನ್ನು ಮಾಡುತ್ತಿರಲು ಮೋಡವಿಲ್ಲದಾಗ ಸೂರ್ಯನಿಂದ ಬೆಳಗುವಂತೆ ಆಕಾಶವು ಬೆಳಗಿತು.
ತಂ ವಸಿಷ್ಠಾದಯಃ ಸರ್ವೇ ಮುನಯಸ್ತತ್ರೈವ ಮೇನಿರೇ ।
ತೇಜಸಾ ದೀಪ್ಯಮಾನಂ ತು ದ್ವಿತೀಯಮಿವ ಭಾಸ್ಕರಮ್ ॥49॥
ವಸಿಷ್ಠಾದಿ ಋಷಿಗಳು ತೇಜಸ್ಸಿನಿಂದ ಬೆಳಗುತ್ತಿದ್ದ ಅವರನ್ನು ಎರಡನೆಯ ಸೂರ್ಯನೆಂದೇ ತಿಳಿದರು.
ತತಃ ಪರಮದುಷ್ಪ್ರಾಪಮನ್ಯೈ ಋಷಿರುದಾರಧೀಃ ।
ಸಮಾಪಿಪಯಿಷುಃ ಸತ್ರಂ ತಮತ್ರಿಃ ಸಮುಪಾಗಮತ್ ॥50॥
ತಂ ನಿವಾರಯಿಷುಃ ಸತ್ರಂ ನಿಋತೇಃ ಪ್ರಿಯಕಾಮ್ಯಯಾ ।
ತತಃ ಪುಲಸ್ತ್ಯಃ ಪುಲಹಃ ಕ್ರತುಶ್ಚೈವ ಮಹಾತಪಾಃ ।
ತದಾಽಽಜಗ್ಮುರಮಿತ್ರಘ್ನ ರಕ್ಷಸಾಂ ಜೀವಿತೇಪ್ಸಯಾ ॥51॥
ಆಗ ನಿಋತಿಗೆ ಹಿತವನ್ನು ಮಾಡುವ ಸಲುವಾಗಿ ಆ ಯಜ್ಞವನ್ನು ನಿಲ್ಲಿಸಲು ಉದಾರಬುದ್ಧಿಯುಳ್ಳ ಅತ್ರಿಋಷಿಗಳು ಪರಮದುಷ್ಪ್ರಾಪರಾದ ಪರಾಶರರ ಸಮೀಪಕ್ಕೆ ಬಂದರು. ಆಗ ರಾಕ್ಷಸರ ಜೀವವನ್ನು ಉಳಿಸುವ ಸಲುವಾಗಿ ಮಹಾತಪಸ್ವಿಗಳಾದ ಪುಲಸ್ತ್ಯರೂ, ಪುಲರೂ ಮತ್ತು ಕ್ರತುಗಳೂ ಸಹ ಅಲ್ಲಿಗೆ ಬಂದರು.
ಪುಲಸ್ತ್ಯಸ್ತು ವಧಾತ್ ತೇಷಾಂ ರಕ್ಷಸಾಂ ಭರತರ್ಷಭ ।
ಉವಾಚೇದಂ ವಚಃ ಪಾರ್ಥ ಪರಾಶರಮರಿಂದಮಮ್ ॥52॥
ಭರತರ್ಷಭನೇ, ಪಾರ್ಥನೇ, ಪುಲಸ್ತ್ಯರು ಆ ರಾಕ್ಷಸರ ವಧೆಯ ನಿಮಿತ್ತದಿಂದ ಅರಿಂದಮರಾದ ಪರಾಶರರನ್ನು ಕುರಿತು ರಾಕ್ಷಸರನ್ನು ರಕ್ಷಿಸಲು ಬಯಸಿ ಹೀಗೆ ಮಾತನಾಡಿದರು.
ಕಚ್ಚಿತ್ ತಪಸ್ಯವಿಘ್ನಂ ತೇ ಕಚ್ಚಿನ್ನಂದಸಿ ಪುತ್ರಕ ।
ಅಜಾನತಾಮದೋಷಾಣಾಂ ಸರ್ವೇಷಾಂ ರಕ್ಷಸಾಂ ವಧಾತ್ ।

ಪ್ರಜೋಚ್ಛೇದಮಿಮಂ ಮಹ್ಯಂ ಮಾ ಕಾರ್ಷೀಸ್ತಾಪಸೋತ್ತಮ ॥53॥
ಪುತ್ರನೇ, ನಿನ್ನ ತಪಸ್ಸು ನಿರ್ವಿಘ್ನವಾಗಿ ನಡೆದಿದೆಯೇ? ನೀನು ಸಂತೋಷವಾಗಿದ್ದೀಯಾ? ತಾಪಸೋತ್ತಮನೇ, ನಿರಪರಾಧಿಗಳಾದ ಏನನ್ನೂ ತಿಳಿಯದ ಅನೇಕ ರಾಕ್ಷಸರ ವಧೆಯನ್ನು ಮಾಡಿ ನನ್ನ ಪ್ರಜೆಗಳನ್ನು ವಿನಾಶ ಮಾಡಬೇಡ.
ಅಧರ್ಮಿಷ್ಠಂ ವರಿಷ್ಠಃ ಸನ್ ಕುರುಷೇ ತ್ವಂ ಪರಾಶರ |
ಶಕ್ತಿನಂ ಚಾಪಿ ಧರ್ಮಜ್ಞಂ ನಾತಿಕ್ರಾಂತುಮಿಹಾರ್ಹಸಿ ॥54॥
ಪರಾಶರನೇ ನೀನು ಶ್ರೇಷ್ಠನಾದವನಾಗಿ ಇಂತಹ ಅಧರ್ಮದ ಕಾರ್ಯವನ್ನು ಮಾಡುತ್ತಿದ್ದೀಯೆ, ನೀನು ಧರ್ಮಜ್ಞರಾದ ಶಕ್ತಿಋಷಿಗಳನ್ನು ಮೀರಿ ನಡೆಯುತ್ತಿದ್ದೀಯೆ.
ಪ್ರಜಾನಾಂ ಚ ಮಮೋಚ್ಛೇದಂ ನ ವೈ ಕರ್ತುಂ ತ್ವಮರ್ಹಸಿ |
ಶಾಪಾದ್ಧಿ ಶಕ್ತೇರ್ವಾಸಿಷ್ಠ ತದಾ ತದುಪಪಾದಿತಮ್ ॥55॥
ನೀನು ನನ್ನ ಪ್ರಜೆಗಳ ವಿನಾಶವನ್ನು ಮಾಡಬಾರದು. ವಸಿಷ್ಠ- ಕುಲೋದ್ಭವನೇ ಶಕ್ತಿಋಷಿಗಳ ಶಾಪ (ದೋಷ)ದಿಂದಲೇ ಆಗ ಆ ಘಟನೆಯು (ಶಕ್ತಿವಧೆಯು) ನಡೆಯಿತು.
ಆತ್ಮಜೇನ ಸ ದೋಷೇಣ ಶಕ್ತಿರ್ನೀತ ಇತೋ ದಿವಮ್ |
ನ ಹಿ ತಂ ರಾಕ್ಷಸಃ ಕಶ್ಚಿಚ್ಛಕ್ತೋ ಭಕ್ಷಯಿತುಂ ಮುನೇ ॥56॥
ಶಕ್ತಿಋಷಿಗಳು ತಮ್ಮ ದೋಷದಿಂದಲೇ ಸ್ವರ್ಗಸ್ಥರಾದರು. ಮುನಿಯೇ, ಯಾವ ರಾಕ್ಷಸನೂ ಶಕ್ತಿಋಷಿಗಳನ್ನು ಭಕ್ಷಿಸಲು ಸಮರ್ಥನಲ್ಲ.

ವಾಸಿಷ್ಠಾ ಭಕ್ಷಿತಾಶ್ಚಾಸನ್ ಕೌಶಿಕೋತ್ಸೃಷ್ಟರಕ್ಷಸಾ |
ಶಾಪಂ ನ ಕುರ್ವಂತಿ ತದಾ ವಾಗಸತತ್ರ ನರವಾರಣಾಃ ॥57॥
ವಿಶ್ವಾಮಿತ್ರರು ನಿಯೋಜಿಸಿದ ರಾಕ್ಷಸನಿಂದ ವಸಿಷ್ಠಪುತ್ರರೆಲ್ಲರೂ ಭಕ್ಷಿತರಾದರು. ಮನುಷ್ಯರೂಪದ ದಿಗ್ಗಜಗಳಂತಿದ್ದ ವಾಗಸ್ತ್ರರಾದ ಅವರು ಆಗ ಶಾಪವನ್ನು ಕೊಡಲಿಲ್ಲ.
ಕ್ಷಮಾವಂತಂ ದಹೇದ್ ದೇಹಮಹಮ್ಮನ್ಯುಂ ಧ್ರುವಂ ತ್ವಿತಿ |
ಆತ್ಮನ್ಯೇವಾತ್ಮತಸ್ತೇನ ತತೋ ಮೃತ್ಯುಸ್ತದಾಽಭವತ್ ॥58॥
ದೇಹವನ್ನು ಕ್ಷಮಾವಂತವನ್ನಾಗಿ ಮಾಡಿ ಅಹಂಕಾರದಿಂದ ಉಂಟಾದ ಕ್ರೋಧವನ್ನು ನಿಶ್ಚಿತವಾಗಿ ಸುಡಬೇಕು ಎಂದು ತಿಳಿದ ಶಕ್ತಿಋಷಿಗಳು ಶಾಪವನ್ನು ಕೊಡದೆ ಇರುತ್ತಿರಲು ತನ್ನ ಹಂತಕನಲ್ಲಿ ಕ್ಷಮೆಯನ್ನು ತೋರಿದ ಆತ್ಮಾಪರಾಧದಿಂದಲೇ ಶಕ್ತಿಋಷಿಗಳು ಮೃತ್ಯುವಶರಾದರು.
ನಿಮಿತ್ತಭೂತಸ್ತತ್ರಾಸೀದ್ ವಿಶ್ವಾಮಿತ್ರಃ ಪರಾಶರ |
ರಾಜಾ ಕಲ್ಮಾಷಪಾದಸ್ತು ದಿವಮಾರೋಢುಮಿಚ್ಛತಿ ॥59॥
ಪರಾಶರರೇ, ವಿಶ್ವಾಮಿತ್ರರು ಈ ವಧೆಯಲ್ಲಿ ನಿಮಿತ್ತಮಾತ್ರರು. ಕಲ್ಮಾಷಪಾದರಾಜನು ಈಗ ಸ್ವರ್ಗವನ್ನು ಹೊಂದಲು ಬಯಸುತ್ತಾನೆ.
ಯೇ ಚ ಶಕ್ತ್ಯವರಾಃ ಪುತ್ರಾ ವಸಿಷ್ಠಸ್ಯ ಮಹಾಮುನೇ |
ತೇ ಚ ಸರ್ವೇ ಮುದಾ ಯುಕ್ತಾ ಮೋದಂತೇ ಸಹಿತಾಃ ಸುರೈಃ ॥60॥
ಮಹರ್ಷಿಯೇ, ವಸಿಷ್ಠರ ಮಕ್ಕಳಾದ ಶಕ್ತಿಯ ತಮ್ಮಂದಿರೆಲ್ಲರೂ ಈಗ ಸ್ವರ್ಗದಲ್ಲಿ ದೇವತೆಗಳ ಜೊತೆಯಲ್ಲಿ ಸುಖವಾಗಿದ್ದಾರೆ.
ಸರ್ವಮೇತದ್ ವಸಿಷ್ಠಸ್ಯ ವಿದಿತಂ ವೈ ಮಹಾತ್ಮನಃ |
ರಕ್ಷಸಾಂ ಚ ಸಮುಚ್ಛೇದ ಏಷ ತಾತ ತಪಸ್ವಿನಾಮ್ ॥61॥
ಈ ಶೋಚನೀಯರಾದ ರಾಕ್ಷಸರವಧೆ ಮುಂತಾದ ಎಲ್ಲವೂ ಮಹಾತ್ಮರಾದ ವಸಿಷ್ಠರಿಗೆ ತಿಳಿದಿದೆ.
ನಿಮಿತ್ತಭೂತಸ್ತ್ವಂ ಚಾತ್ರ ಕ್ರತೌ ವಾಸಿಷ್ಠನಂದನ |
ಸ ಸತ್ರಂ ಮುಂಚ ಭದ್ರಂ ತೇ ಸಮಾಪ್ತಮಿದಮಸ್ತು ತೇ ॥62॥
ವಾಸಿಷ್ಠನಂದನನೇ, ಈ ಯಾಗದಲ್ಲಿ ನೀನೂ ಸಹ ಕೇವಲ ನಿಮಿತ್ತಮಾತ್ರನಾದವನು. ನಿನಗೆ ಮಂಗಳವಾಗಲಿ. ಈ ಸತ್ರವನ್ನು ನಿಲ್ಲಿಸು. ಇದು ಸಮಾಪ್ತಿಯನ್ನು ಹೊಂದಲಿ.
ಗಂಧರ್ವಃ
ಏವಮುಕ್ತಃ ಪುಲಸ್ತ್ಯೇನ ವಸಿಷ್ಠೇನ ಚ ಧೀಮತಾ |
ತದಾ ಸಮಾಪಯಾಮಾಸ ಸತ್ರಂ ಶಾಂತಃ ಪರಾಶರಃ ॥63॥
ಪುಲಸ್ತ್ಯರು ಮತ್ತು ಮೇಧಾವಿಗಳಾದ ವಸಿಷ್ಠರು ಹೀಗೆ ಹೇಳುತ್ತಿರಲು ಪರಾಶರರು ಶಾಂತರಾಗಿ ಯಜ್ಞವನ್ನು ಸಮಾಪ್ತಿಗೊಳಿಸಿದರು.
ಸರ್ವರಾಕ್ಷಸಸತ್ರಾಯ ಸಂಭೂತಂ ಪಾವಕಂ ಮುನಿಃ |
ಉತ್ತರೇ ಹಿಮವತ್ಪಾರ್ಶ್ವೇ ಉತ್ಸಸರ್ಜ ಮಹಾವನೇ ॥64॥
ಸರ್ವರಾಕ್ಷಸರ ವಿನಾಶಕ್ಕಾಗಿ ಉತ್ಪಾದಿಸಿದ ಆ ಅಗ್ನಿಯನ್ನು ಆ ಋಷಿಗಳು ಹಿಮಾಲಯಪರ್ವತದ ಉತ್ತರಭಾಗದ ಮಹಾವನದಲ್ಲಿ ವಿಸರ್ಜನೆ ಮಾಡಿದರು.
ಸ ತತ್ರಾದ್ಯಾಪಿ ರಕ್ಷಾಂಸಿ ವೃಕ್ಷಾನಶ್ಮನ ಏವ ಚ |
ಭಕ್ಷಯನ್ ದೃಶ್ಯತೇ ವಹ್ನಿಃ ಸದಾ ಪರ್ವಣಿಪರ್ವಣಿ ॥65॥
ಅಲ್ಲಿ ಆ ವಹ್ನಿಯು ಪ್ರತಿ ಪರ್ವಕಾಲದಲ್ಲಿ ರಾಕ್ಷಸರನ್ನೂ, ವೃಕ್ಷಗಳನ್ನೂ ಮತ್ತು ಪಾಷಾಣಗಳನ್ನೂ ಭಕ್ಷಿಸುವುದು ಈಗಲೂ ಕಾಣುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವ್ಯಶೀತ್ಯಧಿಕಶತತಮೋಽಧ್ಯಾಯಃ ॥

॥ ಇತಿ ಚೈತ್ರರಥಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಎಂಭತ್ತೆರಡನೆಯ ಅಧ್ಯಾಯ ಮುಗಿಯಿತು.
*****

ನೂರ ಎಂಭತ್ಮೂರನೆಯ ಅಧ್ಯಾಯ
(ಸೌದಾಸನು ತನ್ನ ಭಾರ್ಯೆಯಲ್ಲಿ ವಸಿಷ್ಠರನ್ನು ನಿಯೋಜಿಸಲು ಬ್ರಾಹ್ಮಣಿಯ ಶಾಪ ಮೊದಲಾದ ವೃತ್ತಾಂತ ಕಥನ.)
ಅರ್ಜುನಃ
ರಾಜ್ಞಾ ಕಲ್ಮಾಷಪಾದೇನ ಗುರೌ ಬ್ರಹ್ಮವಿದಾಂ ವರೇ ।
ಕಾರಣಂ ಕಿಂ ಪುರಸ್ಕೃತ್ಯ ಭಾರ್ಯಾ ವೈ ಸನ್ನಿಯೋಜಿತಾ ॥1॥
ಕಲ್ಮಾಷಪಾದರಾಜನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ, ಗುರುಗಳಾದ ವಸಿಷ್ಠರಲ್ಲಿ ಯಾವ ಕಾರಣದಿಂದ ತನ್ನ ಪತ್ನಿಯನ್ನು ನಿಯೋಗ ಮಾಡಿದನು?
ಜಾನತಾ ಚ ಪರಂ ಧರ್ಮಂ ಲೌಕ್ಯಂ ತೇನ ಮಹರ್ಷಿಣಾ ।
ಅಗಮ್ಯಾಗಮನಂ ಕಸ್ಮಾದ್ ವಸಿಷ್ಠೇನ ಮಹಾತ್ಮನಾ ।
ಕೃತಂ ತೇನ ಪುರಾ ಸರ್ವಂ ವಕ್ತುಮರ್ಹಸಿ ಪೃಚ್ಛತಃ ॥2॥
ಲೋಕದ ಪರಮಧರ್ಮವನ್ನು ತಿಳಿದ ಮಹಾತ್ಮರಾದ ಮಹರ್ಷಿಗಳಾದ ವಸಿಷ್ಠರು ಹಿಂದೆ ಏಕೆ ಅಗಮ್ಯಾಗಮನವನ್ನು ಮಾಡಿದರು? ನನ್ನ ಪ್ರಶ್ನೆಗೆ ಉತ್ತರವಾಗಿ ನೀನು ಎಲ್ಲವನ್ನೂ ಹೇಳು.
ಗಂಧರ್ವಃ
ಧನಂಜಯ ನಿಬೋಧೇದಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ವಸಿಷ್ಠಂ ಪ್ರತಿ ದುರ್ಧರ್ಷಂ ತಥಾ ಮಿತ್ರಸಹಂ ನೃಪಮ್ ॥3॥
ಧನಂಜಯನೇ, ಮಹರ್ಷಿಗಳಾದ ವಸಿಷ್ಠರ ಮತ್ತು ದುರ್ಧರ್ಷನಾದ ಮಿತ್ರಸಹ (ಕಲ್ಮಾಷಪಾದ) ರಾಜನ ವಿಷಯದಲ್ಲಿ ಏನು ಪ್ರಶ್ನೆಗಳನ್ನು ಕೇಳಿದ್ದೀಯೋ ಅದಕ್ಕೆ ಉತ್ತರವಾಗಿ ನನ್ನ ಮಾತನ್ನು ಕೇಳು.
ಕಥಿತಂ ತೇ ಮಯಾ ಸರ್ವಂ ಯಥಾ ಶಪ್ತಃ ಸ ಪಾರ್ಥಿವಃ ।
ಶಕ್ತಿನಾ ಭರತಶ್ರೇಷ್ಠ ವಾಸಿಷ್ಠೇನ ಮಹಾತ್ಮನಾ ॥4॥
ಭರತಶ್ರೇಷ್ಠನೇ, ಆ ರಾಜನು ವಸಿಷ್ಠಪುತ್ರರಾದ ಮಹಾತ್ಮರಾದ ಶಕ್ತಿಋಷಿಗಳಿಂದ ಹೇಗೆ ಶಪಿತನಾದನು ಎಂಬ ಎಲ್ಲಾ ವಿಷಯವನ್ನು ನಿನಗೆ ಹೇಳಿದ್ದೇನೆ.
ಸ ತು ಶಾಪವಶಂ ಪ್ರಾಪ್ತಃ ಕ್ರೋಧಪರ್ಯಾಕುಲೇಕ್ಷಣಃ ।
ನಿರ್ಜಗಾಮ ಪುರಾದ್ ರಾಜನ್ ಸಹದಾರಃ ಪರಂತಪಃ ॥5॥
ಶಾಪವಶನಾದ ಪರಂತಪನಾದ ಆ ರಾಜನು ಕ್ರೋಧದಿಂದ ತುಂಬಿದ ಕಣ್ಣುಗಳುಳ್ಳವನಾಗಿ ತನ್ನ ಪತ್ನಿಯ ಜೊತೆಯಲ್ಲಿ ನಗರದಿಂದ ಹೊರಗೆ ಹೊರಟನು.
ಅರಣ್ಯಂ ನಿರ್ಜನಂ ಗತ್ವಾ ಸದಾರಃ ಪರಿಚಕ್ರಮೇ ।
ನಾನಾಮೃಗಸಮಾಕೀರ್ಣಂ ನಾನಾಪಕ್ಷಿಸಮಾಕುಲಮ್ ॥6॥
ಅವನು ಅನೇಕ ಮೃಗಗಳಿಂದಲೂ ಮತ್ತು ಅನೇಕ ಪಕ್ಷಿಗಳಿಂದಲೂ ತುಂಬಿದ ನಿರ್ಜನವಾದ ಅರಣ್ಯಕ್ಕೆ ಪತ್ನಿಯ ಹೋಗಿ ಜೊತೆಯಲ್ಲಿ ಅಲ್ಲಿ ತಿರುಗಾಡಿದನು.
ನಾನಾಗುಲ್ಮಲತಾಚ್ಛನ್ನಂ ನಾನಾದ್ರುಮಸಮಾಕುಲಮ್ ।
ಅರಣ್ಯಂ ಘೋರಸನ್ನಾದಂ ಶಾಪಗ್ರಸ್ತಃ ಪರಿಭ್ರಮನ್ ॥7॥
ಅನೇಕ ಲತೆಗಳಿಂದ ಮತ್ತು ಪೊದೆಗಳಿಂದ ತುಂಬಿದ, ಅನೇಕ ವೃಕ್ಷಗಳಿಂದ ನಿಬಿಡವಾದ, ಘೋರಶಬ್ದದಿಂದ ಕೂಡಿದ ಅರಣ್ಯದಲ್ಲಿ ಅವನು ಶಾಪಗ್ರಸ್ತನಾಗಿ ಸಂಚರಿಸಿದನು.
ಸ ಕದಾಚಿತ್ ಕ್ಷುಧಾಽಽವಿಷ್ಟೋ ಮೃಗಯನ್ ಭಕ್ಷ್ಯಮಾತ್ಮನಃ ।
ದದರ್ಶ ಸುಪರಿಕ್ಲಿಷ್ಟಃ ಕಸ್ಮಿಂಶ್ಚಿದ್ ವನನಿರ್ಝರೇ ॥8॥
ಬ್ರಾಹ್ಮಣಂ ಬ್ರಾಹ್ಮಣೀಂ ಚೈವ ಮಿಥುನಾಯೋಪಸಂಗತೌ ।
ತೌ ಸಮೀಕ್ಷ್ಯ ಚ ಸಂತ್ರಸ್ತಾವಕೃತಾರ್ಥೌ ಪ್ರಧಾವಿತೌ ।
ತಯೋಃ ಪ್ರದ್ರವತೋರ್ವಿಪ್ರಂ ಜಗೃಹೇ ನೃಪತಿರ್ಬಲಾತ್ ॥9॥
ಅವನು ಒಮ್ಮೆ ಹಸಿವಿನಿಂದ ಕೂಡಿದವನಾಗಿ ಬಹಳ ಕ್ಲೇಶವನ್ನು ಅನುಭವಿಸಿ ತನ್ನ ಆಹಾರವನ್ನು ಹುಡುಕುತ್ತಾ ಕಾಡಿನ ಒಂದು ಮೂಲೆಯಲ್ಲಿ ಮೈಥುನದಲ್ಲಿ ಉದ್ಯುಕ್ತರಾದ ಬ್ರಾಹ್ಮಣದಂಪತಿಗಳನ್ನು ನೋಡಿದನು. ಅವನನ್ನು ನೋಡಿದ ಆ ದಂಪತಿಗಳು ಅರ್ಧದಲ್ಲಿಯೇ ಎದ್ದು ಓಡಿದರು. ಅವರು ಹಾಗೆ ಓಡುತ್ತಿರುವಾಗ ರಾಜನು ತನ್ನ ಬಲದಿಂದ ಆ ಬ್ರಾಹ್ಮಣನನ್ನು ಹಿಡಿದುಕೊಂಡನು.
ದೃಷ್ಟ್ವಾ ಗೃಹೀತಂ ಭರ್ತಾರಮಥ ಬ್ರಾಹ್ಮಣ್ಯಭಾಷತ ।
ಶೃಣು ರಾಜನ್ ವಚೋ ಮಹ್ಯಂ ಯತ್ ತ್ವಾಂ ವಕ್ಷ್ಯಾಮಿ ಸುವ್ರತ ॥
ತನ್ನ ಪತಿಯು ರಾಜನಿಂದ ಗ್ರಸ್ತನಾದುದನ್ನು ನೋಡಿ ಬ್ರಾಹ್ಮಣಿಯು ಮಾತನಾಡಿದಳು. ಸುವ್ರತನಾದ ರಾಜನೇ, ನಾನು ಹೇಳುವ

ಮಾತುಗಳನ್ನು ಕೇಳು.
ಆದಿತ್ಯವಂಶಪ್ರಭವಸ್ತ್ವಂ ಹಿ ಲೋಕೇ ಚ ವಿಶ್ರುತಃ |
ಅಪ್ರಮತ್ತಃ ಸ್ಥಿತೋ ಧರ್ಮೇ ಗುರುಶುಶ್ರೂಷಣೇ ರತಃ |
ಶಾಪಂ ಪ್ರಾಪ್ತೋಽಸಿ ದುರ್ಧರ್ಷ ನ ಪಾಪಂ ಕರ್ತುಮರ್ಹಸಿ ॥11॥
ನೀನು ಆದಿತ್ಯ ವಂಶದಲ್ಲಿ ಜನಿಸಿದ ಲೋಕದಲ್ಲಿ ಪ್ರಖ್ಯಾತನಾದ ರಾಜ. ನೀನು ಯಾವಾಗಲೂ ಪ್ರಮಾದರಹಿತನಾಗಿ ಧರ್ಮವನ್ನು ಆಚರಿಸುವವನು ಮತ್ತು ಗುರುಗಳ ಶುಶ್ರೂಷೆಯಲ್ಲಿ ನಿರತನಾದವನು. ದುರ್ಧರ್ಷನೇ, ನೀನು ಶಾಪಕ್ಕೆ ಒಳಗಾಗಿದ್ದೀಯೆ. ಪಾಪಕಾರ್ಯವನ್ನು ಮಾಡಬೇಡ.
ಋತುಕಾಲೇ ತು ಸಂಪ್ರಾಪ್ತೇ ಭರ್ತ್ರಾಽಹಂ ಸಮುಪಾಗತಾ |
ಅಕೃತಾರ್ಥಿನ್ಯಹಂ ಭದ್ರ ಪ್ರಸವಾರ್ಥಶ್ಚ ಮೇ ಭವೇತ್ |
ಪ್ರಸೀದ ನೃಪತಿಶ್ರೇಷ್ಠ ಭರ್ತಾ ಮಮ ವಿಸೃಜ್ಯತಾಮ್ ॥12॥
ನಾನು ಋತುಕಾಲದಲ್ಲಿ ಪತಿಯ ಜೊತೆಯಲ್ಲಿ ಸೇರಿದ್ದೇನೆ. ಮಂಗಳಸ್ವರೂಪನೇ, ಅಕೃತಾರ್ಥಳಾದ ನನಗೆ ಸಂತತಿಯ ಅಪೇಕ್ಷೆಯಿದೆ. ರಾಜಶ್ರೇಷ್ಠನೇ, ನೀನು ಪ್ರಸನ್ನನಾಗಿ ನನ್ನ ಪತಿಯನ್ನು ಬಿಟ್ಟುಬಿಡು.
ಗಂಧರ್ವಃ
ಏವಂ ವಿಕ್ರೋಶಮಾಣಾಯಾಂ ತಸ್ಯಾಂ ಸ ಸುನೃಶಂಸಕೃತ್ |
ಭರ್ತಾರಂ ಭಕ್ಷಯಾಮಾಸ ವ್ಯಾಘ್ರೋ ಮೃಗಮಿವೇಪ್ಸಿತಮ್ ॥13॥
ಆ ಬ್ರಾಹ್ಮಣಿಯು ಹೀಗೆ ಗೋಳಾಡುತ್ತಿದ್ದರೂ ಅತ್ಯಂತ ಕ್ರೂರಕರ್ಮವನ್ನು ಮಾಡುವ ಆ ರಾಜನು ವ್ಯಾಘ್ರವು ಇಷ್ಟವಾದ ಜಿಂಕೆಯನ್ನು ಹಿಡಿದು ತಿನ್ನುವಂತೆ ಆ ಬ್ರಾಹ್ಮಣನನ್ನು ತಿಂದನು.
ತಸ್ಯಾಃ ಕ್ರೋಧಾಭಿಭೂತಾಯಾಸ್ತತ್ರಾಶ್ರೂಣ್ಯಪತನ್ ಭುವಿ |
ಸೋಽಗ್ನಿಃ ಸಮಭವದ್ ದೀಪ್ತಃ ತಂ ಚ ದೇಶಂ ವ್ಯದೀಪಯತ್ ॥14॥
ಕ್ರೋಧವಶಳಾದ ಆ ಬ್ರಾಹ್ಮಣಿಯ ಕಣ್ಣೀರಿನ ಹನಿಗಳು ಭೂಮಿಯ ಮೇಲೆ ಬಿದ್ದವು ಅವು ಅಗ್ನಿಯ ರೂಪವನ್ನು ತಳೆದು ಪ್ರಜ್ವಲಿಸಿ ಆ ಪ್ರದೇಶವನ್ನೆಲ್ಲಾ ಸುಟ್ಟುಹಾಕಿದವು.
ತತಃ ಸಾ ಶೋಕಸಂತಪ್ತಾ ಭರ್ತೃವ್ಯಸನದುಃಖಿತಾ |
ಕಲ್ಮಾಷಪಾದಂ ರಾಜರ್ಷಿಮಶಪದ್ ಬ್ರಾಹ್ಮಣೀ ರುಷಾ ॥15॥
ಭರ್ತೃವಿಯೋಗದಿಂದ ದುಃಖಿತಳಾದ ಶೋಕಸಂತಪ್ತಳಾದ ಆ ಬ್ರಾಹ್ಮಣಿಯು ಆಗ ಕೋಪದಿಂದ ರಾಜರ್ಷಿಯಾದ ಕಲ್ಮಾಷಪಾದನಿಗೆ ಶಾಪವನ್ನು ಕೊಟ್ಟಳು.
ಯಸ್ಮಾನ್ಮಮಾಕೃತಾರ್ಥಾಯಾಃ ತ್ವಯಾ ಕ್ಷುದ್ರ ನೃಶಂಸವತ್ |
ಪ್ರೇಕ್ಷಂತ್ಯಾ ಭಕ್ಷಿತೋ ಮೇಽದ್ಯ ಪ್ರಭುರ್ಭರ್ತಾ ಮಹಾಯಶಾಃ ॥16॥
ಕ್ಷುದ್ರನೇ, ಅಕೃತಾರ್ಥಳಾದ ನನ್ನ ಕಣ್ಣೆದುರಿಗೆ ನನ್ನ ಪ್ರಭುವೂ, ಮಹಾಕೀರ್ತಿವಂತನೂ ಆದ ನನ್ನ ಪತಿಯನ್ನು ಕ್ರೂರನಂತೆ ನೀನು ಇಂದು ಭಕ್ಷಿಸಿದ್ದೀಯೆ.
ತಸ್ಮಾತ್ ತ್ವಮಪಿ ದುರ್ಬುದ್ಧೇ ಮಚ್ಛಾಪಪರಿವಿಕ್ಷತಃ |
ಪತ್ನೀಮೃತಾವನುಪ್ರಾಪ್ಯ ಸಮ್ಯಕ್ ತ್ಯಕ್ಷಸಿ ಜೀವಿತಮ್ ॥17॥
ದುರ್ಬುದ್ಧಿಯೇ, ಆದ್ದರಿಂದ ನೀನೂ ಸಹ ನನ್ನ ಶಾಪದಿಂದ ಗ್ರಸ್ತನಾಗಿ ಋತುಕಾಲದಲ್ಲಿ ನಿನ್ನ ಪತ್ನಿಯನ್ನು ಸೇರಿದಾಗ ಪ್ರಾಣವನ್ನು ತ್ಯಜಿಸುವೆ.
ತೇನ ಪ್ರಸಾದ್ಯಮಾನಾ ಸಾ ಪ್ರಸಾದಮಕರೋದ್ ತದಾ |
ಯಸ್ಯ ಚರ್ಷೇರ್ವಸಿಷ್ಠಸ್ಯ ತ್ವಯಾ ಪುತ್ರಾ ವಿನಾಶಿತಾಃ ॥18॥
ತೇನ ಸಂಗತ್ಯ ತೇ ಭಾರ್ಯಾ ತನಯಂ ಜನಯಿಷ್ಯತಿ |
ಸ ತೇ ವಂಶಕರಃ ಪುತ್ರೋ ಭವಿಷ್ಯತಿ ನೃಪಾಧಮ ॥19॥
ಕಲ್ಮಾಷಪಾದನು ಅವಳ ಅನುಗ್ರಹವನ್ನು ಬೇಡುತ್ತಿರಲು ಆಗ ಬ್ರಾಹ್ಮಣಿಯು ಹೀಗೆ ಅನುಗ್ರಹ ಮಾಡಿದಳು - ಯಾವ ವಸಿಷ್ಠಋಷಿಯ ಪುತ್ರನನ್ನು ನೀನು ವಿನಾಶಮಾಡಿದ್ದೀಯೋ ಅಂತಹ ವಸಿಷ್ಠರ ಜೊತೆಯಲ್ಲಿ ಸಂಗವನ್ನು ಮಾಡಿ ನಿನ್ನ ಪತ್ನಿಯು ಪುತ್ರನನ್ನು ಪಡೆಯುವಳು. ನೃಪಾಧಮನೇ, ಆ ಪುತ್ರನು ನಿನಗೆ ವಂಶಕರನಾಗುವನು.
ಗಂಧರ್ವಃ
ಏವಂ ಶಪತ್ವಾ ತು ರಾಜಾನಂ ಸಾ ತದಾಽಽಂಗಿರಸೀ ಶುಭಾ |
ತಸ್ಯೈವ ಸನ್ನಿಧೌ ದೀಪ್ತಂ ಪ್ರವಿವೇಶ ಹುತಾಶನಮ್॥20॥
ರಾಜನನ್ನು ಕುರಿತು ಹೀಗೆ ಮಾತನಾಡಿ ಆಂಗಿರಸಗೋತ್ರದ ಆ ಪವಿತ್ರಳಾದ ಬ್ರಾಹ್ಮಣಿಯು ರಾಜನ ಸನ್ನಿಧಿಯಲ್ಲಿಯೇ ಅಗ್ನಿಯನ್ನು ಪ್ರಜ್ವಲಿಸಿ (ತನ್ನ ಪತಿಯ ಅಸ್ಥಿಗಳ ಜೊತೆಯಲ್ಲಿ) ಅಗ್ನಿಪ್ರವೇಶವನ್ನು ಮಾಡಿದಳು.
ವಸಿಷ್ಠಶ್ಚ ಮಹಾಭಾಗಃ ಸರ್ವಮೇತದಪಶ್ಯತ |
ಜ್ಞಾನಯೋಗೇನ ಮಹತಾ ತಪಸಾ ಚ ಪರಂತಪ ॥21॥
ಪರಂತಪನೇ, ಮಹಾನುಭಾವರಾದ ವಸಿಷ್ಠರು ತಮ್ಮ ಜ್ಞಾನಯೋಗ- ದಿಂದಲೂ ಮತ್ತು ಮಹಾತಪಸ್ಸಿನಿಂದಲೂ ಇದೆಲ್ಲವನ್ನೂ ತಿಳಿದರು.
ಮುಕ್ತಶಾಪಶ್ಚ ರಾಜರ್ಷಿಃ ಕಾಲೇನ ಮಹತಾ ತತಃ |

ಋತುಕಾಲೇ ನಿಪತಿತೋ ಭಾರ್ಯಯಾ ಸನ್ನಿವಾರಿತಃ ॥22॥
ಬಹುಕಾಲವು ಕಳೆದ ಬಳಿಕ ಶಾಪಮುಕ್ತನಾದ ಆ ರಾಜರ್ಷಿಯು ಋತುಕಾಲದಲ್ಲಿ ತನ್ನ ಪತ್ನಿಯ ಬಳಿಗೆ ಹೋದಾಗ ಅವಳು ಸಂಗವನ್ನು ನಿರಾಕರಿಸಿದಳು.
ನ ಹಿ ಸಸ್ಮಾರ ನೃಪತಿಸ್ತಂ ಶಾಪಂ ಕಾಮಮೋಹಿತಃ।
ದೇವ್ಯಾಃ ಸೋಽಥ ವಚಃ ಶ್ರುತ್ವಾ ವಿಸಂಜ್ಞಃ ಸಮಪದ್ಯತ।
ತಂ ಶಾಪಮನುಸಂಸ್ಮೃತ್ಯ ಪರ್ಯತಪ್ಯದ್ ಭೃಶಂ ತದಾ ॥23॥
ಕಾಮಮೋಹಿತನಾದ ರಾಜನು ಬ್ರಾಹ್ಮಣಿಯು ಕೊಟ್ಟಿದ್ದ ಆ ಶಾಪವನ್ನು ಮರೆತಿದ್ದನು. ರಾಣಿಯ ಮಾತುಗಳನ್ನು ಕೇಳಿ ಅವನು ವಿಸಂಜ್ಞನಾದನು. ಅನಂತರ ಬ್ರಾಹ್ಮಣಿಯ ಆ ಶಾಪದ ಸ್ಮೃತಿಯನ್ನು ಹೊಂದಿ ಬಹಳವಾಗಿ ಪರಿತಾಪಪಟ್ಟನು.
ಏತಸ್ಮಾತ್ ಕಾರಣಾದ್ ರಾಜಾ ವಸಿಷ್ಠಂ ಸನ್ನ್ಯಯೋಜಯತ್।
ಸ್ವದಾರೇ ಭರತಶ್ರೇಷ್ಠ ಶಾಪದೋಷಸಮನ್ವಿತಃ ॥24॥
ಭರತಶ್ರೇಷ್ಠನೇ, ಈ ಶಾಪದೋಷದಿಂದ ಕೂಡಿದ ಕಾರಣದಿಂದ ಆ ರಾಜನು ತನ್ನ ಪತ್ನಿಯಲ್ಲಿ ವಸಿಷ್ಠರನ್ನು ನಿಯೋಜಿಸಿದನು.
ಯದಾ ಕಲ್ಮಾಷಪಾದಸ್ತು ರಾಕ್ಷಸತ್ವಮವಾಪ ಸಃ।
ತದಾ ವಸಿಷ್ಠಃ ಕುರುಣಾ ಯಜ್ಞಾರ್ಥೇ ಸ ವೃತೋಽಭವತ್ ॥25॥
ಯದಾ ಕಲ್ಮಾಷಪಾದಸ್ತು ರಾಕ್ಷಸತ್ವಂ ವಿಸೃಷ್ಟವಾನ್।
ತದಾ ತೇನೈವ ರಾಜ್ಞಾ ತು ವಸಿಷ್ಠಃ ಸ ವೃತೋಽಭವತ್ ॥26॥
ಯಾವಾಗ ಕಲ್ಮಾಷಪಾದ ರಾಜನು ರಾಕ್ಷಸಭಾವವನ್ನು ಹೊಂದಿದನೋ ಆಗ ವಸಿಷ್ಠರು ಕುರುರಾಜನಿಂದ ಯಜ್ಞಾರ್ಥವಾಗಿ ವರಣ ಮಾಡಲ್ಪಟ್ಟಿದ್ದರು. ಕಲ್ಮಾಷಪಾದರಾಜನು ತನ್ನ ರಾಕ್ಷಸಭಾವವನ್ನು ತ್ಯಜಿಸಿದಾಗ ಅವನೇ ವಸಿಷ್ಠರನ್ನು ವರಣ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರ್ಯಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಚೈತ್ರರಥಪರ್ವಣಿ ಷೋಡಶೋಽಧ್ಯಾಯಃ ॥
ಚೈತ್ರರಥಪರ್ವ ಸಮಾಪ್ತಮ್
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರ ಎಂಭತ್ಮೂರನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಚೈತ್ರರಥ ಪರ್ವವು ಸಮಾಪ್ತವಾಯಿತು.
*****
11. ಸ್ವಯಂವರಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಪಾರ್ಥೇನ ಸೋಽಪಿ ಬಹುಲಾಶ್ಚ ಕಥಾಃ ಕಥಿತ್ವಾ
ಧೌಮ್ಯಸ್ಯ ಸಂಗ್ರಹಣಮಾಹ ಪುರೋಹಿತತ್ವೇ।
ದಾಸ್ಯಾಮಿ ದಿವ್ಯತುರಗಾನಿತಿ ಸೋಽರ್ಜುನಾಯ
ವಾಚಂ ನಿಗದ್ಯ ದಿವಮಾರುಹದಪ್ಯಗುಸ್ತೇ ॥117॥
ಗಂಧರ್ವ ಅರ್ಜುನನೊಡನೆ ಬಹಳ ಸಂಭಾಷಣೆ ನಡೆಸಿ ಧೌಮ್ಯರನ್ನು ಪೌರೋಹಿತ್ಯಕ್ಕೆ ಸ್ವೀಕರಿಸಿರೆಂದು ಸಲಹೆ ನೀಡಿದ. ಅರ್ಜುನನಿಗೆ ದಿವ್ಯವಾದ ದೇವಲೋಕದ ಕುದುರೆಗಳನ್ನು ಕೊಡುವೆನೆಂದು ಮಾತುಕೊಟ್ಟು ಅಂತರಿಕ್ಷಕ್ಕೆ ಏರಿದ. ಬಳಿಕ ಪಾಂಡವರು ಮುಂದೆ ನಡೆದರು.
ತೇ ಧೌಮ್ಯಮಾಪ್ಯ ಚ ಪುರೋಧಸಮುತ್ತಮಜ್ಞಂ
ವಿಪ್ರಾತ್ಮಜೋಪಮತಯಾ ವಿವಿಶುಃ ಪುರಂ ಚ।
ಪಾಂಚಾಲಕಸ್ಯ ನಿಖಿಲಾಂ ದದೃಶುಶ್ಚ ತತ್ರ
ಮೂರ್ಧಾವಸಿಕ್ತಸಮಿತಂ ಸಮಲಂಕೃತಾಂ ಚ ॥118॥
ಪಾಂಡವರು ಉತ್ತಮ ಜ್ಞಾನಿಯಾದ ಧೌಮ್ಯನನ್ನು ಪುರೋಹಿತನನ್ನಾಗಿ ಪಡೆದು ಬ್ರಾಹ್ಮಣಕುಮಾರರಂಥ ವೇಷದಿಂದ ದ್ರುಪದನ ನಗರವನ್ನು ಪ್ರವೇಶಿಸಿದರು. ಅಲ್ಲಿ ಅಲಂಕೃತವಾದ ಸರ್ವರಾಜರ ಸಮೂಹವನ್ನು ಕಂಡರು.
* * * *
ನೂರ ಎಂಭತ್ನಾಲ್ಕನೆಯ ಅಧ್ಯಾಯ
(ಗಂಧರ್ವವಚನದಂತೆ ಪಾಂಡವರಿಂದ ಧೌಮ್ಯರ ವರಣ, ಪಾಂಡವರ ಮತ್ತು ಧೌಮ್ಯರ ಹರ್ಷ. ಜೊತೆಯಲ್ಲಿ ಪಾಂಚಾಲದೇಶಕ್ಕೆ ಗಮನ.)
ಅರ್ಜುನಃ
ಅಸ್ಮಾಕಮನುರೂಪಂ ವೈ ಯಸ್ತಂ ಗಂಧರ್ವಸತ್ತಮ।
ಪುರೋಹಿತಂ ಮಮಾಚಕ್ಷ್ವ ಸರ್ವಂ ಹಿ ವಿದಿತಂ ತವ ॥1॥
ಗಂಧರ್ವಶ್ರೇಷ್ಠನೇ, ನೀನು ಎಲ್ಲವನ್ನೂ ತಿಳಿದಿದ್ದೀಯೆ. ನಮಗೆ ಅನುರೂಪರಾದ ಪುರೋಹಿತರು ಯಾರು ಎಂದು ಹೇಳು.
ಗಂಧರ್ವಃ
ಯವೀಯಾನ್ ದೇವಲಸ್ಯೈಷ ವನೇ ಭ್ರಾತಾ ತಪಸ್ಯತಿ।
ಧೌಮ್ಯ ಉತ್ಕಚಕೇ ತೀರ್ಥೇ ತಂ ವೃಣೀಷ್ವ ಯದೀಚ್ಛಸಿ ॥2॥
ದೇವಲಋಷಿಗಳ ತಮ್ಮಂದಿರಾದ ಧೌಮ್ಯರು ಉತ್ಕಚಕತೀರ್ಥದ ಸಮೀಪದಲ್ಲಿ ತಪಸ್ಸು ಮಾಡುತ್ತಿದ್ದಾರೆ. ನಿನಗೆ ಸಮ್ಮತವಾದರೆ

ಅವರನ್ನು ಪುರೋಹಿತರಾಗಿ ಸ್ವೀಕರಿಸು.
ವೈಶಂಪಾಯನಃ
ತತೋಽರ್ಜುನೋಸ್ತ್ರಮಾಗ್ನೇಯಂ ಪ್ರದದೌ ತದ್ ಯಥಾವಿಧಿ |
ಗಂಧರ್ವಾಯ ದದೌ ಪ್ರೀತೋ ವಚನಂ ಚೇದಮಬ್ರವೀತ್ ॥3॥
ಅನಂತರ ಅರ್ಜುನನು ಗಂಧರ್ವನಿಗೆ ಸಂತೋಷದಿಂದ ವಿಧಿವತ್ತಾಗಿ ಆಗ್ನೇಯಾಸ್ತ್ರವನ್ನು ಕೊಟ್ಟು ಈ ಮಾತನ್ನಾಡಿದನು.
ತ್ವಯ್ಯೇವ ತಾವತ್ ತಿಷ್ಠಂತು ಹಯಾ ಗಂಧರ್ವಸತ್ತಮ |
ಕಾರ್ಯಕಾಲೇ ಗ್ರಹೀಷ್ಯಾಮಿ ಸ್ವಸ್ತಿ ತೇಽಸ್ತ್ವತಿ ಚಾಬ್ರವೀತ್ ॥4॥
ಗಂಧರ್ವಶ್ರೇಷ್ಠನೇ, ಅಶ್ವಗಳು ನಿನ್ನ ಬಳಿಯಲ್ಲಿಯೇ ಇರಲಿ. ನನಗೆ ಬೇಕಾದಾಗ ಅವುಗಳನ್ನು ತೆಗೆದುಕೊಳ್ಳುವೆನು. ನಿನಗೆ ಮಂಗಳವಾಗಲಿ. ಎಂದು ಹೇಳಿದನು.
ತೇಽನ್ಯೋನ್ಯಮಭಿಸಂಪೂಜ್ಯ ಗಂಧರ್ವಃ ಪಾಂಡವಶ್ಚ ಹ |
ರಮ್ಯಾದ್ ಭಾಗೀರಥೀಕಚ್ಛಾದ್ ಯಥಾಕಾಮಂ ಪ್ರತಸ್ಥಿರೇ ॥5॥
ಆ ಪಾಂಡವನೂ ಮತ್ತು ಗಂಧರ್ವನೂ ಪರಸ್ಪರವಾಗಿ ಸತ್ಕರಿಸಿ ರಮ್ಯವಾದ ಭಾಗೀರಥೀತೀರದಿಂದ ತಮಗೆ ಇಷ್ಟವಾದ ಕಡೆಗೆ ಹೊರಟರು.
ತತ ಉತ್ಕಚಕಂ ತೀರ್ಥಂ ಗತ್ವಾ ಧೌಮ್ಯಾಶ್ರಮಾಂತಿಕೇ |
ತಂ ವವ್ರುಃ ಪಾಂಡವಾ ಧೌಮ್ಯಂ ಪೌರೋಹಿತ್ಯಾಯ ಪಾಂಡವ ॥
ಎಲೈ ಪಾಂಡವನೇ, ಅನಂತರ ಪಾಂಡವರು ಹೋಗಿ ಉತ್ಕಚಕತೀರ್ಥದ ಸಮೀಪದ ಆಶ್ರಮದಲ್ಲಿ ಧೌಮ್ಯರನ್ನು ಕಂಡು ಅವರನ್ನು ಪುರೋಹಿತನನ್ನಾಗಿ ವರಣ ಮಾಡಿದರು.
ತಾಂಶ್ಚಾಪಿ ಪ್ರತಿಜಗ್ರಾಹ ಸರ್ವವೇದವಿದಾಂ ವರಃ |
ಪಾದ್ಯೇನ ಫಲಮೂಲೇನ ಪೌರೋಹಿತ್ಯೇನ ಚೈವ ಹ |
ತೇನ ಚಾಶಂಸಿರೇ ಲಬ್ಧಾ ಂಶ್ರಿಯಂ ರಾಜ್ಯಂ ಚ ಪಾಂಡವಾಃ ॥7॥
ಸರ್ವವೇದಜ್ಞರಲ್ಲಿ ಶ್ರೇಷ್ಠರಾದ ಧೌಮ್ಯರು ಆ ಪಾಂಡವರನ್ನು ಪಾದ್ಯ-ಫಲಮೂಲಗಳಿಂದ ಸತ್ಕರಿಸಿ, ಪೌರೋಹಿತ್ಯವನ್ನು ಸಮ್ಮತಿಸಿ ಸ್ವೀಕರಿಸಿದರು. ಪಾಂಡವರು ಅವರನ್ನು ಪುರೋಹಿತರನ್ನಾಗಿ ಪಡೆದು ತಾವು ರಾಜ್ಯವನ್ನೂ ಮತ್ತು ರಾಜಲಕ್ಷ್ಮಿಯನ್ನೂ ಪಡೆದಂತೆಯೇ ಭಾವಿಸಿದರು.
ಬ್ರಾಹ್ಮಣಂ ತಂ ಪುರಸ್ಕೃತ್ಯ ಪಾಂಚಾಲ್ಯಾಶ್ಚ ಸ್ವಯಂವರೇ |
ಮಾತೃಷಷ್ಠಾಸ್ತತಸ್ತೇನ ಗುರುಣಾ ಸಹ ಸಂಗತಾಃ |
ನಾಥವಂತಮಿವಾತ್ಮಾನಂ ಮೇನಿರೇ ಭರತರ್ಷಭಾಃ ॥8॥
ಪಾಂಚಾಲಿಯ ಸ್ವಯಂವರಕ್ಕೆ ಹೋಗಲು ಉದ್ದೇಶಿಸಿದ್ದ ಆ ಭರತರ್ಷಭರು ಗುರುಗಳಾದ ಆ ಬ್ರಾಹ್ಮಣರ ಜೊತೆಯಲ್ಲಿ ಸಂಗತರಾಗಿ ತಾಯಿಯ ಜೊತೆಯಲ್ಲಿ ತಾವು ಇಂದು ಸನಾಥರಾಗಿದ್ದೇವೆ ಎಂದು ತಿಳಿದರು.
ಸ ಹಿ ವೇದಾರ್ಥತತ್ವಜ್ಞಸ್ತೇಷಾಂ ಗುರುರುದಾರಧೀಃ |
ವೇದವಿಚ್ಚೈವ ವಾಗ್ಮೀ ಚ ಧೌಮ್ಯಃ ಶ್ರೀಮಾನ್ ದ್ವಿಜೋತ್ತಮಃ ॥9॥
ಆ ಧೌಮ್ಯರು ವೇದವನ್ನೂ, ವೇದಾರ್ಥವನ್ನೂ ತಿಳಿದ ಕಾಂತಿಯುಕ್ತರಾದ ಉದಾರಬುದ್ಧಿಯುಳ್ಳ ವಾಗ್ಮಿಗಳಾದ ಬ್ರಾಹ್ಮಣಶ್ರೇಷ್ಠರು.
ತೇಜಸಾ ಚೈವ ಬುದ್ಧ್ಯಾ ಚ ರೂಪೇಣ ಯಶಸಾ ಶ್ರಿಯಾ |
ಮಂತ್ರೈಶ್ಚ ವಿವಿಧೈರ್ಧೌಮ್ಯಸ್ತುಲ್ಯ ಆಸೀದ್ ಬೃಹಸ್ಪತೇಃ ॥10॥
ಧೌಮ್ಯರು ತೇಜಸ್ಸಿನಿಂದಲೂ, ಬುದ್ಧಿಯಿಂದಲೂ, ರೂಪದಿಂದಲೂ, ಕೀರ್ತಿಯಿಂದಲೂ, ಕಾಂತಿಯಿಂದಲೂ, ಅನೇಕ ಮಂತ್ರಗಳಿಂದಲೂ ಬೃಹಸ್ಪತಿಗಳಿಗೆ ಸಮಾನರಾಗಿದ್ದರು.
ಸ ಚಾಪಿ ವಿಪ್ರಸ್ತಾನ್ ಮೇನೇ ಸ್ವಭಾವಾಭ್ಯಧಿಕಾನ್ ಭುವಿ |
ತೇನ ಧರ್ಮವಿದಾ ಪಾರ್ಥಾ ಯೋಜ್ಯಾಃ ಸರ್ವವಿದಾ ವೃತಾಃ ॥11॥
ಬ್ರಾಹ್ಮಣರಾದ ಆ ಧೌಮ್ಯರಾದರೋ ಆ ಪಾಂಡವರನ್ನು ಸ್ವಭಾವದಿಂದಲೇ ತಮಗಿಂತ ಉತ್ತಮರಾದವರೆಂದು ತಿಳಿದರು. ಧರ್ಮಜ್ಞರೂ, ಸರ್ವಜ್ಞರೂ ಆದ ಅವರು ಪಾಂಡವರನ್ನು ಶಿಷ್ಯರನ್ನಾಗಿ ಸ್ವೀಕರಿಸಿದರು.
ಮೇನಿರೇ ಸಹಿತಾ ವೀರಾಃ ಪ್ರಾಪ್ತಂ ರಾಜ್ಯಂ ಸ್ವಧರ್ಮತಃ |
ಬುದ್ಧಿವೀರ್ಯಬಲೋತ್ಸಾಹೈರ್ಯುಕ್ತಾ ದೇವಾ ಇವಾಪರಾಃ ॥12॥
ಧೌಮ್ಯರನ್ನು ಗುರುಗಳಾಗಿ ಹೊಂದಿ ಬುದ್ಧಿ, ವೀರ್ಯ, ಬಲೋತ್ಸಾಹ- ಗಳಿಂದ ಯುಕ್ತರಾಗಿ ದೇವತೆಗಳಂತಿದ್ದ ಆ ವೀರರಾದ ಪಾಂಡವರು ಧರ್ಮದಿಂದ ರಾಜ್ಯವನ್ನು ಸಂಪಾದಿಸಿದಂತೆಯೇ ಭಾವಿಸಿದರು.
ಮೇನಿರೇ ಸಹಿತಾ ಗಂತುಂ ಪಾಂಚಾಲ್ಯಾಸ್ತಂ ಸ್ವಯಂವರಮ್ |
ತತಸ್ತೇ ನರಶಾರ್ದೂಲಾ ಭ್ರಾತರಃ ಪಂಚ ಪಾಂಡವಾಃ |
ಪ್ರಯಯುರ್ದ್ರೌಪದೀಂ ದ್ರಷ್ಟುಂ ತಂ ಚ ದೇವಮಹೋತ್ಸವಮ್ ॥13॥
ಪಾಂಚಾಲಿಯ ಸ್ವಯಂವರಕ್ಕೆ ಜೊತೆಯಲ್ಲಿಯೇ ಹೋಗಲು ನಿರ್ಧರಿಸಿ. ನರಶಾರ್ದೂಲರಾದ, ಅಣ್ಣತಮ್ಮಂದಿರಾದ ಆ ಪಂಚಪಾಂಡವರು ದ್ರೌಪದಿಯನ್ನೂ ಮತ್ತು ಆ ದೇವಮಹೋತ್ಸವವನ್ನೂ ನೋಡುವುದಕ್ಕಾಗಿ ಹೊರಟರು.
ತೇ ಪ್ರಯಾತಾ ನರವ್ಯಾಘ್ರಾ ಮಾತ್ರಾ ಸಹ ಪರಂತಪಾಃ |
ಬ್ರಾಹ್ಮಣಾನ್ ದದೃಶುರ್ಮಾರ್ಗೇ ಗಚ್ಛತಃ ಸಗಣಾನ್ ಬಹೂನ್ ॥14॥

ತಾನೂಚುರ್ಬ್ರಾಹ್ಮಣಾ ರಾಜನ್ ಪಾಂಡವಾನ್ ಬ್ರಹ್ಮಚಾರಿಣಃ |
ಕ್ವ ಭವಂತೋ ಗಮಿಷ್ಯಂತಿ ಕುತೋ ವಾಽಽಗಚ್ಛತೇತಿ ಹ ॥15॥
ಪರಂತಪರಾದ ಆ ನರವ್ಯಾಘ್ರರು ತಾಯಿಯ ಜೊತೆಯಲ್ಲಿ ಹೊರಟು ಮಾರ್ಗದಲ್ಲಿ ಹೋಗುತ್ತಿದ್ದ ಅನೇಕ ಬ್ರಾಹ್ಮಣ ಸಮೂಹಗಳನ್ನು ನೋಡಿದರು. ರಾಜನೇ, ಬ್ರಹ್ಮಚಾರಿಗಳಾದ ಆ ಪಾಂಡವರನ್ನು ನೋಡಿ, ಆ ಬ್ರಾಹ್ಮಣರು ನೀವು ಎಲ್ಲಿಗೆ ಹೋಗುತ್ತಿರುವಿರಿ, ಎಲ್ಲಿಂದ ಬಂದಿದ್ದೀರಿ ಎಂದು ಕೇಳಿದರು.
ಯುಧಿಷ್ಠಿರಃ
ಆಗತಾನೇಕಚಕ್ರಾಯಾಃ ಸೋದರ್ಯಾನ್ ದೇವದರ್ಶಿನಃ |
ಭವಂತೋ ಹಿ ವಿಜಾನಂತು ಸಹಿತಾನ್ ಮಾತೃಚಾರಿಣಃ ॥16॥
ನಾವೆಲ್ಲರೂ ಏಕಚಕ್ರನಗರದಿಂದ ಬಂದ ಅಣ್ಣ-ತಮ್ಮಂದಿರು. ನಾವು ತಾಯಿಯ ಜೊತೆಯಲ್ಲಿ ಒಟ್ಟಿಗೆ ದೇವರ ದರ್ಶನಕ್ಕಾಗಿ ಹೋಗುತ್ತಿದ್ದೇವೆಂದು ತಿಳಿಯಿರಿ.
ಬ್ರಾಹ್ಮಣಾಃ
ಗಚ್ಛತಾದ್ಯೈವ ಪಾಂಚಾಲಾನ್ ದ್ರುಪದಸ್ಯ ನಿವೇಶನಮ್ |
ಸ್ವಯಂವರೋ ಮಹಾನತ್ರ ಭವಿತಾ ಸುಮಹೋತ್ಸವಃ ॥17॥
ಈ ದಿನವೇ ಪಾಂಚಾಲದೇಶದಲ್ಲಿ ದ್ರುಪದನ ಮನೆಗೆ ಹೋಗಿ. ಅಲ್ಲಿ ದೊಡ್ಡ ಸ್ವಯಂವರವೂ, ದೊಡ್ಡ ಉತ್ಸವವೂ ನಡೆಯಲಿದೆ.
ಏಕಸಾರ್ಥಂ ಪ್ರಯಾತಾಃ ಸ್ಮೋ ವಯಮಪ್ಯತ್ರ ಗಾಮಿನಃ |
ತತ್ರ ಹ್ಯದ್ಭುತಸಂಕಾಶೋ ಭವಿತಾ ಸುಮಹೋತ್ಸವಃ ॥18॥
ನಾವೆಲ್ಲರೂ ಜೊತೆಯಾಗಿ ಅಲ್ಲಿಗೇ ಹೋಗುತ್ತಿದ್ದೇವೆ. ಅಲ್ಲಿ ಅದ್ಭುತವಾದ ಮಹೋತ್ಸವವು ನಡೆಯಲಿದೆ.
ಯಜ್ಞಸೇನಸ್ಯ ದುಹಿತಾ ದ್ರುಪದಸ್ಯ ಮಹಾತ್ಮನಃ |
ವೇದಿಮಧ್ಯಾತ್ ಸಮುತ್ಪನ್ನಾ ಪದ್ಮಪತ್ರನಿಭೇಕ್ಷಣಾ ॥19॥
ಮಹಾತ್ಮನಾದ ದ್ರುಪದನ ಮಗಳು ವೇದಿಮಧ್ಯದಿಂದ ಜನಿಸಿದ್ದಾಳೆ. ಯಜ್ಞಸೇನನ ಮಗಳಾದ ಅವಳು ಪದ್ಮನೇತ್ರೆ.
ದರ್ಶನೀಯಾನವದ್ಯಾಂಗೀ ಸುಕುಮಾರೀ ಮನಸ್ವಿನೀ |
ಧೃಷ್ಟದ್ಯುಮ್ನಸ್ಯ ಭಗಿನೀ ದ್ರೋಣಶತ್ರೋಃ ಪ್ರತಾಪಿನಃ ॥20॥
ಅವಳು ಮನೋಹರವಾದ, ನಿರ್ದುಷ್ಟವಾದ ಅಂಗಗಳಿಂದ ಕೂಡಿದವಳು. ಸುಕಮಾರಿ ಮತ್ತು ಧೈರ್ಯಶಾಲಿನಿ. ಪ್ರತಾಪಶಾಲಿಯಾದ ದ್ರೋಣಶತ್ರುವಾದ ಧೃಷ್ಟದ್ಯುಮ್ನನ ತಂಗಿ.
ಯೋ ಜಾತಃ ಕವಚೀ ಖಡ್ಗೀ ಸಶರಃ ಸಶರಾಸನಃ |
ಸುಸಮಿದ್ಧೇ ಮಹಾಬಾಹುಃ ಪಾವಕೇ ಪಾವಕಪ್ರಭಃ ॥21॥
ಸ್ವಸಾ ತಸ್ಯಾನವದ್ಯಾಂಗೀ ದ್ರೌಪದೀ ತನುಮಧ್ಯಮಾ |
ನೀಲೋತ್ಪಲಸಮೋ ಗಂಧೋ ಯಸ್ಯಾಃ ಕ್ರೋಶಾತ್ ಪ್ರವಾಯತಿ ॥22॥
ಯಾವ ಧೃಷ್ಟದ್ಯುಮ್ನನನು ಸುಸಮಿದ್ಧವಾದ ಅಗ್ನಿಕುಂಡದಿಂದ ಕವಚವನ್ನು ಧರಿಸಿ, ಧನುಸ್ಸು, ಬಿಲ್ಲು-ಬಾಣಗಳನ್ನು ಹಿಡಿದು ಅಗ್ನಿಯ ಕಾಂತಿಯನ್ನು ಹೊಂದಿ, ಮಹಾಬಾಹುವಾಗಿ ಜನಿಸಿದನೋ, ಕೃಶೋದರಿಯಾದ ಅನವದ್ಯಾಂಗಿಯಾದ ದ್ರೌಪದಿಯು ಅವನ ತಂಗಿ. ಅವಳ ನೀಲೋತ್ಪಲ- ಸಮಾನವಾದ ಗಂಧವು ಒಂದು ಕ್ರೋಶದ ದೂರದಿಂದಲೂ ಬೀಸುತ್ತದೆ.
ತಾಂ ಯಜ್ಞಸೇನಸ್ಯ ಸುತಾಂ ಸ್ವಯಂವರಕೃತಕ್ಷಣಾಮ್ |
ಗಚ್ಛಾಮಹೇ ವಯಂ ದ್ರಷ್ಟುಂ ತಂ ಚ ದೇವಮಹೋತ್ಸವಮ್ ॥23॥
ನಾವು ಸ್ವಯಂವರ ಸಂದರ್ಭದಲ್ಲಿರುವ ಆ ಯಜ್ಞಸೇನನ ಮಗಳನ್ನು ಮತ್ತು ದೇವಮಹೋತ್ಸವವನ್ನು ನೋಡಲು ಹೋಗುತ್ತೇವೆ.
ರಾಜಾನೋ ರಾಜಪುತ್ರಾಶ್ಚ ಯಜ್ವಾನೋ ಭೂರಿದಕ್ಷಿಣಾಃ |
ಸ್ವಾಧ್ಯಾಯವಂತಃ ಶುಚಯೋ ಮಹಾತ್ಮಾನೋ ಮಹಾವ್ರತಾಃ ॥24॥
ತರುಣಾ ದರ್ಶನೀಯಾಶ್ಚ ನಾನಾದೇಶಸಮಾಗತಾಃ |
ಮಹಾರಥಾಃ ಕೃತಾಸ್ತ್ರಾಶ್ಚ ಸಮುಪೈಷ್ಯಂತಿ ಭೂಮಿಪಾಃ ॥25॥
ಅಲ್ಲಿಗೆ ಸ್ವಾಧ್ಯಾಯಶೀಲರೂ, ಶುಚಿಗಳೂ, ಮಹಾನುಭಾವರೂ, ಮಹಾವ್ರತಧಾರಿಗಳೂ, ಮಹಾರಥರೂ, ಅಸ್ತ್ರಜ್ಞರೂ, ತರುಣರೂ, ಸುಂದರರೂ, ಬಹಳ ದಕ್ಷಿಣೆಗಳನ್ನೂ ಕೊಡುವವರೂ ಆದ ಯಜ್ಞಶೀಲರಾದ ಅನೇಕ ರಾಜರು ಮತ್ತು ರಾಜಪುತ್ರರು ಬರುವರು.
ತೇ ತತ್ರ ವಿವಿಧಾನ್ ದೇಯಾನ್ ವಿಜಯಾರ್ಥಂ ನರೇಶ್ವರಾಃ |
ಪ್ರದಾಸ್ಯಂತಿ ಧನಂ ಗಾಶ್ಚ ಭಕ್ಷ್ಯಂ ಭೋಜ್ಯಂ ಚ ಸರ್ವಶಃ ॥26॥
ಅಲ್ಲಿ ಆ ರಾಜರು ತಮ್ಮ ವಿಜಯದ ಸಲುವಾಗಿ ಧನವನ್ನೂ, ಗೋವುಗಳನ್ನೂ, ಅನೇಕ ವಿಧವಾದ ಭಕ್ಷ್ಯಭೋಜ್ಯಗಳನ್ನೂ, ಇನ್ನೂ ಅನೇಕ ದಾನಗಳನ್ನೂ ಕೊಡುವರು.
ಪ್ರತಿಗೃಹ್ಯ ಚ ತತ್ ಸರ್ವಂ ದೃಷ್ಟ್ವಾ ಚೈವ ಸ್ವಯಂವರಮ್ |
ಅನುಭೂಯೋತ್ಸವಂ ಚೈವ ಗಮಿಷ್ಯಾಮೋ ಯಥೇಪ್ಸಿತಮ್ ॥27॥
ಅವೆಲ್ಲವನ್ನೂ ಸ್ವೀಕರಿಸಿ ಸ್ವಯಂವರವನ್ನು ನೋಡಿ, ಉತ್ಸವದಲ್ಲಿ ಆನಂದಿಸಿ ನಮಗೆ ಇಷ್ಟ ಬಂದಂತೆ ನಾವು ಅಲ್ಲಿಂದ ಹೊರಡೋಣ.
ಯೇ ಚ ವೈತಾಲಿಕಾಶ್ಚೈವ ನರ್ತಕಾಃ ಸೂತಮಾಗಧಾಃ |
ನಿಯೋಧಕಾಶ್ಚ ದೇಶೇಭ್ಯಃ ಸಮೇಷ್ಯಂತಿ ಮಹಾಬಲಾಃ ॥28॥

ಏವಂ ಕೌತೂಹಲಂ ದೃಷ್ಟ್ವಾ ಭುಕತ್ತ್ವ ಚ ಪ್ರತಿಗೃಹ್ಯ ಚ |
ಸಹಾಸ್ಮಾಭಿರ್ಮಹಾತ್ಮಾನಃ ಪುನಃ ಪ್ರತಿನಿವರ್ತ್ಸ್ಯಥ॥29॥
ಅಲ್ಲಿಗೆ ನಿಯೋಧಕಾರರೂ, ನರ್ತಕರೂ, ಸೂತಮಾಗಧರೂ, ಮಹಾಬಲರಾದ ಯೋಧರೂ ಅನೇಕ ದೇಶಗಳಿಂದ ಬರುವರು. ಹೀಗೆ ಕೌತೂಹಲವನ್ನು ನೋಡಿ ಭೋಜನವನ್ನು ಮಾಡಿ, ದಾನಗಳನ್ನು ಸ್ವೀಕರಿಸಿ, ಮಹಾತ್ಮರಾದ ನೀವು ನಮ್ಮ ಜೊತೆಯಲ್ಲಿ ಪುನಃ ಹಿಂದಿರುಗಬಹುದು.
ದರ್ಶನೀಯಾಂಶ್ಚ ವಃ ಸರ್ವಾನ್ ದೇವರೂಪಾನವಸ್ಥಿತಾನ್ |
ಸಮೀಕ್ಷ್ಯ ಕೃಷ್ಣಾ ವರಯೇತ್ ಸಂಗತ್ಯಾಽನ್ಯತಮಂ ಪತಿಮ್ ॥30॥
ದೇವತೆಗಳಂತೆ ರೂಪವುಳ್ಳ ಮನೋಹರರಾದ ನಿಮ್ಮೆಲ್ಲರನ್ನೂ ನೋಡಿ ದ್ರೌಪದಿಯು ನಿಮ್ಮಲ್ಲಿ ಯಾರನ್ನಾದರೂ ಒಬ್ಬನನ್ನು ಪತಿಯನ್ನಾಗಿ ವರಿಸಬಹುದು.
ಅಯಂ ಭ್ರಾತಾ ತವ ಶ್ರೀಮಾನ್ ದರ್ಶನೀಯೋ ಮಹಾಭುಜಃ |
ನಿಯುಧ್ಯಮಾನೋ ವಿಜಯೇತ್ ಸಂಗತ್ಯ ದ್ರವಿಣಂ ಬಹು ॥31॥
ಈ ನಿಮ್ಮ ಮಹಾಭುಜನಾದ, ಸುಂದರನಾದ, ಕಾಂತಿಯುಕ್ತನಾದ ಸಹೋದರನನು ನಿಯುಧ್ಯದಲ್ಲಿ (ಕುಸ್ತಿಯಲ್ಲಿ) ಪ್ರತಿಸ್ಪರ್ಧಿಯೊಡನೆ ಸಂಗತನಾಗಿ ಬಹಳ ಧನವನ್ನು ಗೆಲ್ಲಬಹುದು.
ಯುಧಿಷ್ಠಿರಃ
ಪರಮಂ ಭೋ ಗಮಿಷ್ಯಾಮೋ ದ್ರಷ್ಟುಂ ದೇವಮಹೋತ್ಸವಮ್ |
ಭವದ್ಭಿಃ ಸಹಿತಾಃ ಸರ್ವೇ ಕನ್ಯಾಯಾಸ್ತಂ ಸ್ವಯಂವರಮ್ ॥32॥
ಬ್ರಾಹ್ಮಣರೇ, ಬಹಳ ಸಂತೋಷ. ಆ ದೇವಮಹೋತ್ಸವವನೂ,ನ ಆ ಕನ್ಯೆಯ ಸ್ವಯಂವರವನ್ನೂ ನೋಡಲು ನಾವೂ ಸಹ ನಿಮ್ಮ ಜೊತೆಯಲ್ಲಿ ಬರುವೆವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರಶೀತ್ಯದಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಎಂಭತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ರಾಜನ್ಯಮಂಡಲಮುದೀಕ್ಷ್ಯ ಸುಪೂರ್ಣಮತ್ರ
ಕೃಷ್ಣಾಂ ಪ್ರಗೃಹ್ಯ ಸಹಜಃ ಪ್ರಗೃಹೀತಮಾಲಾಂ |
ತೇಷಾಂ ಚ ಮಧ್ಯಮಗಮತ್ ಕುಲವೀರ್ಯಸಂಪ-
ದ್ಯುಕ್ತಾಂ ವಿಭೂತಿಮಥ ಚಾಹ ಸಮಸ್ತರಾಜ್ಞಾಂ ॥119॥
ತುಂಬಿದ ರಾಜರ ಸಭೆಯನ್ನು ಕಂಡು ಸ್ವಯಂವರ ಮಾಲೆಯನ್ನು ಹಿಡಿದ ದ್ರೌಪದಿಯನ್ನು ಒಡಹುಟ್ಟಿದ ಧೃಷ್ಟದ್ಯುಮ್ನ ಕರೆತಂದು ರಾಜರ ಮಧ್ಯಕ್ಕೆ ನಡೆದ. ಎಲ್ಲ ರಾಜರ ಕುಲವೀರ್ಯ ಸಂಪತ್ತನ್ನೂ ಧನ ಸಂಪತ್ತನ್ನೂ ಅವಳಿಗೆ ವರ್ಣಿಸಿದ.
ತಾಂಶ್ಚ ಪ್ರದರ್ಶ್ಯ ಸಕಲಾನ್ ಸ ಹುತಾಶನಾಂಶ-
ಶ್ಚಾಪಂ ಚ ತತ್ ಪ್ರತಿನಿಧಾಯ ಸಪಂಚಬಾಣಂ |
ಆಹಾಭಿಭಾಷ್ಯ ಸಕಲಾನ್ ನೃಪತೀನಥೋಚ್ಚೈ-
ರ್ದೀಪ್ಯದ್ಹುತಾಶನವಪುರ್ಘನತುಲ್ಯಘೋಷಃ ॥120॥
ಉರಿವ ಬೆಂಕಿಯಂಥ ಶರೀರದ ಅಗ್ನಿಯ ಅವತಾರನಾದ ಧೃಷ್ಟದ್ಯುಮ್ನ ಎಲ್ಲ ರಾಜರನ್ನೂ ದ್ರುಪದಿಗೆ ಪರಿಚಯ ಮಾಡಿಕೊಟ್ಟು ಒಂದು ಬಿಲ್ಲನ್ನು ಐದು ಬಾಣಗಳೊಂದಿಗೆ ಅವರ ಮುಂದೆ ಇಟ್ಟು ಎಲ್ಲ ರಾಜರನ್ನೂ ಸಂಬೋಧಿಸಿ ಗಟ್ಟಿಯಾಗಿ ಗಟ್ಟಿಯಾಗಿ ಗುಡುಗಿನ ಧ್ವನಿಯಿಂದ ನುಡಿದ.
ಏತೇನ ಕಾರ್ಮುಕವರೇಣ ತರೂಪರಿಸ್ಥಂ
ಮತ್ಸ್ಯಾವಭಾಸಮುದಕೇ ಪ್ರತಿವೀಕ್ಷ್ಯ ಯೇನ |
ಏತೈಃ ಶರೈಃ ಪ್ರತಿಹತೋ ಭವತೀಹ ಮತ್ಸ್ಯಃ
ಕೃಷ್ಣಾನುಯಾಸ್ಯತಿ ತಮದ್ಯ ನರೇಂದ್ರ ವೀರಾಃ ॥121॥
`ವೀರರಾದ ರಾಜರೆ, ಮರದ ಮೇಲಿರುವ ಮತ್ಸ್ಯಾಕೃತಿಯರ ಪ್ರತಿಬಿಂಬವನ್ನು ನೀರಲ್ಲಿ ಕಂಡು ಈ ಬಿಲ್ಲಿನಿಂದ ಈ ಐದು ಬಾಣಗಳಿಂದ ಯಾರು ಅದನ್ನು ಭೇದಿಸುವನೋ ಅವನನ್ನು ಇಂದು ದ್ರೌಪದಿ ವರಿಸುತ್ತಾಳೆ'.
ಇತ್ಯಸ್ಯ ವಾಕ್ಯಮನು ಸರ್ವನರೇಂದ್ರಪುತ್ರಾ
ಉತ್ತಸ್ಥುರುದ್ಧತಮದಾಶ್ಚಲಕುಂಡಲಾಸ್ಯಾಃ |
ಅಸ್ತ್ರಂ ಬಲಂ ಚ ಬಹು ನೈಜಮಭೀಕ್ಷಮಾಣಾಃ
ಸ್ಪರ್ಧಂತ ಏವ ಚ ಮಿಥಃ ಸಮಲಂಕೃತಾಂಗಾಃ ॥122॥
ಧೃಷ್ಟದ್ಯುಮ್ನ ಹೀಗೆ ಹೇಳಿದೊಡನೆ ಮೈಯನ್ನು ಚೆನ್ನಾಗಿ ಸಿಂಗರಿಸಿಕೊಂಡಿದ್ದ ಎಲ್ಲ ರಾಜಕುಮಾರರೂ ಚಲಿಸುವ ಕರ್ಣಕುಂಡಗಳಿಂದ ಶೋಭಿಸುವ ಮುಖ ಉಳ್ಳವರಾಗಿ ಬೀಗಿದ ದರ್ಪದಿಂದ ತಮ್ಮ ಅಸ್ತ್ರಬಲವನ್ನು ಬಾಹುಬಲವನ್ನೂ ಹೆಚ್ಚೆಂದು ತಿಳಿಯುತ್ತ ಪರಸ್ಪರ ಸ್ಪರ್ಧಿಸುತ್ತ ಎದ್ದುನಿಂತರು.

* * * *

## ನೂರ ಎಂಭತ್ತೈದನೆಯ ಅಧ್ಯಾಯ

(ಸ್ವಯಂವರಕ್ಕಾಗಿ  ಪಾಂಡವರ ಮತ್ತು ಉಳಿದ ರಾಜರ ದ್ರುಪದಪುರಪ್ರವೇಶ. ಧೃಷ್ಟದ್ಯುಮ್ನನಿಂದ ಸ್ವಯಂವರದ ಘೋಷಣೆ.)
ವೈಶಂಪಾಯನಃ
ಏವಂ ಮತ್ವಾ ಪ್ರಯಾತಾಸ್ತೇ ಪಾಂಡವಾ ಜನಮೇಜಯ |
ಬ್ರಹ್ಮರೂಪಧರಾಃ ಸರ್ವೇ ಜಟಿಲಾ ಬ್ರಹ್ಮಚಾರಿಣಃ |
ರಾಜನ್ ದಕ್ಷಿಣಪಾಂಚಾಲಾನ್ ದ್ರುಪದೇನಾಭಿರಕ್ಷಿತಾನ್ ॥1॥
ಎಲೈ ಜನಮೇಜಯನೇ, ಹೀಗೆ ಆಲೋಚಿಸಿ ಬ್ರಹ್ಮಚಾರಿಗಳಾದ ಆ ಪಾಂಡವರು ನಾರುಮಡಿಗಳನ್ನುಟ್ಟು ಎಲ್ಲರೂ ಬ್ರಾಹ್ಮಣವೇಷವನ್ನು ಧರಿಸಿ ದ್ರುಪದನಿಂದ ಆಳಲ್ಪಟ್ಟ ದಕ್ಷಿಣಪಾಂಚಾಲದೇಶವನ್ನು ಕುರಿತು ಹೊರಟರು.
ತತಸ್ತೇ ತಂ ಮಹಾತ್ಮಾನಂ ಶುದ್ಧಾತ್ಮಾನಮಕಲ್ಮಷಮ್ |
ದದೃಶುಃ ಪಾಂಡವಾ ರಾಜನ್ ಪಥಿ ದ್ವೈಪಾಯನಂ ತದಾ |
ತಸ್ಮೈ ಯಥಾವತ್ ಸತ್ಕಾರಂ ಕೃತ್ವಾ ತೇನ ಚ ಸಾಂತ್ವಿತಾಃ ॥2॥
ರಾಜನೇ, ದಾರಿಯಲ್ಲಿ ಹೋಗುತ್ತಾ ಆ ಪಾಂಡವರು ಶುದ್ಧಾತ್ಮರಾದ ನಿರ್ದುಷ್ಟರಾದ ಮಹಾನುಭಾವರಾದ ದ್ವೈಪಾಯನರನ್ನು ನೋಡಿದರು. ಅವರಿಗೆ ಯಥಾಯೋಗ್ಯವಾಗಿ ಸತ್ಕಾರವನ್ನು ಮಾಡಿ ಅವರಿಂದ ಆಶ್ವಾಸನೆಯ ಮಾತುಗಳನ್ನು ಸ್ವೀಕರಿಸಿದರು.
ಕಥಯಿತ್ವಾಽಭ್ಯನುಜ್ಞಾತಾಃ ಪ್ರಯಯುರ್ದ್ರುಪದಕ್ಷಯಮ್ |
ಪಶ್ಯಂತೋ ರಮಣೀಯಾನಿ  ವನಾನಿ ಚ ಸರಾಂಸಿ ಚ ॥3॥
ವ್ಯಾಸರ ಜೊತೆಯಲ್ಲಿ ಅವರು ಮಾತನಾಡಿ, ಅವರ ಅನುಜ್ಞೆಯನ್ನು ಪಡೆದು ರಮಣೀಯವಾದ ವನಗಳನ್ನೂ ಮತ್ತು ಸರೋವರಗಳನ್ನೂ ನೋಡುತ್ತಾ ದ್ರುಪದನ ಮನೆಗೆ ಹೊರಟರು.
ತತ್ರ ತತ್ರ ವಸಂತಶ್ಚ  ಶನೈರ್ಜಗ್ಮುರ್ಮಹಾರಥಾಃ |
ಸ್ವಾಧ್ಯಾಯವಂತೋ ಮಧುರಾಃ ಪಾಂಡವಾಃ ಪ್ರಿಯವಾದಿನಃ ॥4॥
ಸ್ವಾಧ್ಯಾಯಶೀಲರೂ, ಮಧುರಪ್ರಿಯವಚನರೂ ಆದ ಮಹಾರಥರಾದ ಪಾಂಡವರು ಅಲ್ಲಲ್ಲಿ ತಂಗುತ್ತಾ ಮೆಲ್ಲನೆ ನಡೆದರು.
ಆನುಪೂರ್ವ್ಯೇಣ ಸಂಪ್ರಾಪ್ತಾಃ ಪಾಂಚಾಲಾನ್ ಕುರುನಂದನಾಃ |
ತೇ ತು ದೃಷ್ಟ್ವಾ ಪುರಂ ತಸ್ಯ ಸ್ಕಂಧಾವಾರಂ ಚ ಪಾಂಡವಾಃ ॥5॥
ಕುಂಭಕಾರಸ್ಯ ಶಾಲಾಯಾಂ ನಿವಾಸಂ ಚಕ್ರಿರೇ ತದಾ |
ತತ್ರ ಭಿಕ್ಷಾಂ ಸಮಾಜಹ್ರುರ್ಬ್ರಾಹ್ಮೀಂ ವೃತಿಂ ಸಮಾಶ್ರಿತಾಃ ॥6॥
ಆ ಕುರುನಂದನರು ಒಬ್ಬರ ಹಿಂದೆ ಒಬ್ಬರು ನಡೆದು ಪಾಂಚಾಲ ದೇಶವನ್ನು ಸೇರಿದರು. ಆ ಪಾಂಡವರು ಆ ಪಟ್ಟಣವನ್ನೂ, ಸೈನಿಕರ ಕಂಬಳ ಕುಟೀರಗಳನ್ನೂ ನೋಡಿ, ಒಬ್ಬ ಕುಂಬಾರನ ಶಾಲೆಯಲ್ಲಿ ಬಿಡಾರವನ್ನು ಮಾಡಿದರು. ಬ್ರಾಹ್ಮಣವೃತ್ತಿಯನ್ನು ಆಶ್ರಯಿಸಿದ ಅವರು ಅಲ್ಲಿ ಭಿಕ್ಷೆಯನ್ನು ತರುತ್ತಿದ್ದರು.
ತಾಂಶ್ಚ ಪ್ರಾಪ್ತಾಂಸ್ತಥಾ ವೀರಾನ್ ಜಜ್ಞಿರೇ ನ ನರಾಃ ಕ್ವಚಿತ್ |
ಯಜ್ಞಸೇನಸ್ಯ ಕಾಮಸ್ತು ಪಾಂಡವಾಯ ಕಿರೀಟಿನೇ ॥7॥
ಕೃಷ್ಣಾಂ ದದಾನೀತಿ ಸದಾ ನ ಚೈತದ್ ವಿವೃಣೋತಿ ಸಃ |
ಜಾಮಾತೃಬಲಸಂಯೋಗಂ ಮೇನೇ ಹಿ ಬಲವತ್ತರಮ್ ॥8॥
ಆ ವೀರರು ಅಲ್ಲಿಗೆ ಬಂದಿರುವ ವಿಷಯವು ನಗರವಾಸಿಗಳಾದ ಯಾರಿಗೂ ತಿಳಿಯಲಿಲ್ಲ. ಯಜ್ಞಸೇನನು ಪಾಂಡವನಾದ ಅರ್ಜುನನಿಗೆ ದ್ರೌಪದಿಯನ್ನು ಕೊಡಬೇಕು ಎಂಬ ಆಸೆಯನ್ನು ಹೊಂದಿದ್ದಾನೆ. ಆದರೆ ಅವನು ಯಾರಿಗೂ ಸ್ಪಷ್ಟವಾಗಿ ಹೇಳುವುದಿಲ್ಲ. ತನ್ನ ಬಲದ ಜೊತೆಗೆ (ಅರ್ಜುನನಂತಹ ಅಳಿಯನ) ಬಲವೂ ಸೇರಿದರೆ ಶ್ರೇಷ್ಠವಾಗಿರುತ್ತದೆಂದು ಯಜ್ಞಸೇನನು ತಿಳಿದಿದ್ದನು.
ಅನ್ವೇಷಮಾಣಃ ಪಾಂಚಾಲಃ ಕೌಂತೇಯಾನ್ ಜನಮೇಜಯ |
ದೃಢಂ ಧನುರನಾಯಮ್ಯಂ ಕಾರಯಾಮಾಸ ಭಾರತ ॥9॥
ಜನಮೇಜಯನೇ, ಕೌಂತೇಯರನ್ನು ಹುಡುಕುತ್ತಿದ್ದ ಯಜ್ಞಸೇನನು ಬಗ್ಗಿಸಲು ಅಸಾಧ್ಯವಾದ ಒಂದು ದೃಢವಾದ ಧನುಸ್ಸನ್ನು ಮಾಡಿಸಿದನು.
ತದ್ಧನುಃ ಕಿಂಧುರಂ ನಾಮ ದೇವದತ್ತಮುಪಾನಯತ್ |
ಜ್ಯಾಯಸೀ ತಸ್ಯ ಚ ಜ್ಯಾಽಸೀತ್ ಪ್ರತಿಬದ್ಧಾಮಹಾಬಲಾ ॥10॥
ನ ತು ಜ್ಯಾಂ ಪ್ರಸಹೇದನ್ಯಸ್ತದ್ಧನುಃ ಪ್ರವರಂ ಮಹತ್ |
ಶಂಕರೇಣ ವರಂ ದತ್ತಂ ಪ್ರೀತೇನ ಚ ಮಹಾತ್ಮನಾ ॥11॥
ದೇವದತ್ತವಾದ ಕಿಂಧುರವೆಂಬ ಶ್ರೇಷ್ಠವಾದ ಧನುಸ್ಸದು. ಅದಕ್ಕೆ ಈ ಧನುಸ್ಸನ್ನು ಬಲಿಷ್ಠ ಕಟ್ಟಲ್ಪಟ್ಟ ಹೆದೆ ಇತ್ತು. ಪ್ರೀತನಾದ ಮಹರುದ್ರನು ಅರ್ಜುನನ ಹೊರತು ಇನ್ನಾರೂ ಹೆದೆಯೇರಿಸಲಾರರೆಂದು ವರ ಸಹಿತವಾಗಿಯೇ ದ್ರುಪದನಿಗೆ ನೀಡಿದ್ದ.
ಯಂತ್ರಂ ವೈಹಾಯಸಂ ಚಾಪಿ ಕಾರಯಾಮಾಸ ಕೃತ್ರಿಮಮ್ |
ತೇನ ಯಂತ್ರೇಣ ಸಹಿತಂ ಕಾರಯಾಮಾಸ ಕಾಂಚನಮ್ ॥12॥
ಇದಂ ಸಜ್ಯಂ ಧನುಃ ಕೃತ್ವಾ ಛಿದ್ರೇಣಾನೇನ ಸಾಯಕೈಃ |
ಅತೀತ್ಯ ಲಕ್ಷ್ಯಂ ಯೋ ವೇದ್ಧಾ ಸ ಲಬ್ಧಾ ಚ ಸುತಾಮಿತಿ ॥13॥

ಅವನು ಆಕಾಶದಲ್ಲಿರುವ (ಎತ್ತರದಲ್ಲಿರುವ) ಒಂದು ಯಂತ್ರವನ್ನು ಮಾಡಿಸಿ ಆ ಯಂತ್ರದ ಜೊತೆಯಲ್ಲಿ ಒಂದು ಕೃತ್ರಿಮಮತ್ಸ್ಯವನ್ನೂ ಮಾಡಿಸಿದನು. ಈ ಧನುಸ್ಸನ್ನು ಹೆದೆಯೇರಿಸಿ ಯಂತ್ರದ ಮಧ್ಯ ಇರುವ ರಂಧ್ರದಿಂದ ಮೇಲ್ಮುಖವಾಗಿ ಬಾಣವನ್ನು ಬಿಟ್ಟು ಯಾವನು ಲಕ್ಷ್ಯವನ್ನು ಭೇದಿಸುತ್ತಾನೋ ಅವನು ತನ್ನ ಮಗಳನ್ನು ಪಡೆಯುವನು ಎಂದು ಅವನ ಅಭಿಪ್ರಾಯವಿದ್ದಿತು.

ಇತ್ಯೇವಂ ದ್ರುಪದೋ ರಾಜಾ ಸರ್ವತಃ ಸಮಘೋಷಯತ್ |
ತಚ್ಛ್ರುತ್ವಾ ಪಾಂಡವಾಃ ಸರ್ವೇ ಸಮೀಯುಸ್ತತ್ರ ಭಾರತ ॥14॥

ದ್ರುಪದನು ಈ ರೀತಿಯ ಅಭಿಪ್ರಾಯವನ್ನು ಎಲ್ಲ ಕಡೆಗಳಲ್ಲಿಯೂ ಘೋಷಣೆ ಮಾಡಿಸಿದನು. ಭಾರತನೇ, ಅದನ್ನು ಕೇಳಿದ ಪಾಂಡವರೆಲ್ಲರೂ ಅಲ್ಲಿಗೆ ಬಂದರು.

ಋಷಯಶ್ಚ ಮಹಾತ್ಮಾನಃ ಸ್ವಯಂವರದಿದೃಕ್ಷಯಾ |
ದುರ್ಯೋಧನಪುರೋಗಾಶ್ಚ ಸಕರ್ಣಕುರವೋ ನೃಪಾಃ ॥15॥
ಬ್ರಾಹ್ಮಣಾಶ್ಚ ಮಹಾಭಾಗಾ ದೇಶೇಭ್ಯಃ ಸಮುಪಾಗತಾಃ |
ಅಭ್ಯರ್ಚಿತಾ ರಾಜಗಣಾ ದ್ರುಪದೇನ ಮಹಾತ್ಮನಾ ॥16॥

ಸ್ವಯಂವರವನ್ನು ನೋಡಲು ಮಹಾತ್ಮರಾದ ಋಷಿಗಳು ಬಂದರು. ಕರ್ಣನಿಂದ ಸಹಿತನಾದ ದುರ್ಯೋಧನ ಮೊದಲಾದ ಕುರುರಾಜರು ಮಹಾನುಭಾವರಾದ ಬ್ರಾಹ್ಮಣರು ದೇಶ-ದೇಶಗಳಿಂದ ಬಂದರು. ಮಹಾತ್ಮನಾದ ದ್ರುಪದನು ಆ ರಾಜಗಣವೆಲ್ಲವನ್ನೂ ಮತ್ತು ಉಳಿದವರನ್ನೂ ಸತ್ಕರಿಸಿದನು.

ತತಃ ಪುರವರಶ್ರೇಷ್ಠೇ ಸಾಗರೋದ್ಧತನಿಸ್ವನೇ |
ಶಿಂಶುಮಾರಗಿರಿಂ ಪ್ರಾಪ್ಯ ನ್ಯವಿಶಂತ ಮಹಾರಥಾಃ॥17॥

ಅನಂತರ ಅಲ್ಲೋಲಕಲ್ಲೋಲವಾದ ಸಾಗರದಂತೆ ಘೋಷವನ್ನು ಹೊಂದಿದ್ದ ಆ ಶ್ರೇಷ್ಠವಾದ ಪಟ್ಟಣದಲ್ಲಿ ಶಿಂಶುಮಾರಗಿರಿಯನ್ನು ತಲುಪಿ, ಮಹಾರಥರು ಬಿಡಾರವನ್ನು ಮಾಡಿದರು.

ಪ್ರಾಗುತ್ತರೇ ಚ ನಗರಾದ್ ಭೂಮಿಭಾಗೇ ಸಮೇ ಶುಭೇ |
ಸಮಾಜವಾಟಃ ಶುಶುಭೇ ಭವನೈಃ ಸರ್ವತೋ ವೃತಃ ॥18॥

ನಗರದ ಈಶಾನ್ಯಭಾಗದಲ್ಲಿ ಶುಭವಾದ ಸಮತಲವಾದ ಭೂಮಿ- ಭಾಗದಲ್ಲಿ ಎಲ್ಲ ಕಡೆಗಳಲ್ಲಿಯೂ ಭವನಗಳಿಂದ ಅಲಂಕೃತವಾದ ಆ ಸಮಾಗಮಸ್ಥಾನವು ಶೋಭಿಸಿತು.

ಪ್ರಾಸಾದಪರಿಘೋಪೇತೋ ದ್ವಾರತೋರಣಮಂಡಿತಃ |
ವಿತಾನೇನ ವಿಚಿತ್ರೇಣ ಸರ್ವತಃ ಸಮಲಂಕೃತಃ ॥19॥

ಆ ಸ್ಥಾನವು ಪ್ರಾಸಾದಗಳಿಂದಲೂ, ಪರಿಘಗಳಿಂದಲೂ
ಕೂಡಿದುದಾಗಿ, ದ್ವಾರದಲ್ಲಿ ತೋರಣಗಳಿಂದಲೂ, ವಿಚಿತ್ರವಾದ ತಳಿರುತೋರಣಗಳಿಂದಲೂ ಎಲ್ಲಾ ಕಡೆಗಳಲ್ಲಿಯೂ ಅಲಂಕೃತವಾಗಿದ್ದಿತು.

ತೂರ್ಯೌಘಶತಸಂಕೀರ್ಣಃ ಪರಾರ್ಘ್ಯಾಗುರುಧೂಪಿತಃ |
ಚಂದನೋದಕಸಿಕ್ತಶ್ಚ ಮಾಲ್ಯದಾಮೈಶ್ಚ ಶೋಭಿತಃ ॥20॥
ಕೈಲಾಸಶಿಖರಪ್ರಖ್ಯೈರ್ನಭಸ್ಸ್ಥಲವಿಲೇಖಿಭಿಃ |
ಸರ್ವತಃ ಸಂವೃತೈರ್ನದ್ಧಃ ಪ್ರಾಸಾದೈಃ ಸುಕೃತೋಚ್ಛ್ರಿತೈಃ ॥21॥

ಆ ಸಮಾಜವಾಟವು ನೂರಾರು ತೂರ್ಯಗಳ ನಾದದಿಂದ ತುಂಬಿ, ಬೆಲೆಬಾಳುವ ಅಗರು ಧೂಪದಿಂದ ಸುವಾಸಿತವಾಗಿ, ಎಲ್ಲ ಕಡೆಗಳಲ್ಲಿಯೂ ಗಂಧೋದಕಗಳಿಂದ ಸಿಂಪಡಿಸಲ್ಪಟ್ಟು, ಹೂಮಾಲೆಗಳಿಂದ ಶೋಭಿತವಾಗಿದ್ದಿತು. ಕೈಲಾಸಶಿಖರದಂತಿರುವ ಆಕಾಶವನ್ನು ಭೇದಿಸುವಂತಿರುವ ಚೆನ್ನಾಗಿ ಕಟ್ಟಲ್ಪಟ್ಟ ಉನ್ನತವಾದ ಪ್ರಾಸಾದಗಳಿಂದ ಆವೃತವಾಗಿದ್ದಿತು.

ಸುವರ್ಣಜಾಲಸಂವೀತೈರ್ಮಣಿಕುಟ್ಟಿಮಭೂಷಿತೈಃ |
ಸುಖಾರೋಹಣಸೋಪಾನೈರ್ಮಹಾಸನಪರಿಚ್ಛದೈಃ ॥22॥
ಅಗ್ರಾಮ್ಯಸಮವಚ್ಛನ್ನೈರಗುರೂತ್ತಮಧೂಪಿತೈಃ |
ಹಂಸವರ್ಣೈಶ್ಚ ಬಹುಭಿರಾಯೋಜನಸುಗಂಧಿಭಿಃ ॥23॥
ಸಸಂಬಾಧಪಥದ್ವಾರೈಃ ಶಯನಾಸನಶೋಭಿತೈಃ |
ಬಹುಧಾತುಪಿನದ್ಧಾಂಗೈರ್ಹಿಮವಚ್ಛಿಖರೈರಿವ ॥24॥

ಆ ಪ್ರಾಸಾದಗಳಲ್ಲಿ ಸುವರ್ಣಜಾಲಗಳೂ, ಮಣಿಮಯವಾದ ಎತ್ತರವಾದ ಪ್ರದೇಶಗಳೂ, ಸುಖವಾಗಿ ಹತ್ತಬಹುದಾದ ಮೆಟ್ಟಿಲುಗಳೂ, ಶ್ರೇಷ್ಠವಾದ ಆಸನ ಮೊದಲಾದ ಸಾಮಗ್ರಿಗಳೂ ಇದ್ದವು. ಆ ಪ್ರಾಸಾದವು ಅಲಂಪಟರಾದ ಪುರುಷರಿಂದ ತುಂಬಿದ್ದು ಉತ್ತಮವಾದ ಅಗರು ಧೂಪದಿಂದ ಕೂಡಿ ಹಂಸದಂತೆ ಶ್ವೇತವರ್ಣವನ್ನು ಹೊಂದಿ ಅನೇಕ ಯೋಜನೆಗಳವರೆಗೆ ತನ್ನ ಸುಗಂಧವನ್ನು ಬೀರುತ್ತಿದ್ದಿತು. ಹೋಗುವ ಮತ್ತು ಬರುವ ಜನರು ಮತ್ತು ವಾಹನಗಳಿಂದ ನಿಬಿಡವಾದ ದ್ವಾರಗಳಿಂದಲೂ ಶಯನ ಮತ್ತು ಆಸನಗಳಿಂದಲೂ ಹಿಮಾಲಯ ಶಿಖರದಂತಿರುವ ಅನೇಕ ಧಾತುಗಳನ್ನು ಮೆಟ್ಟಿದ ಭಿತ್ತಿ ಮೊದಲಾದ ಅವಯವಗಳಿಂದಲೂ ಆ ಪ್ರಾಸಾದಗಳು ಶೋಭಿತವಾಗಿದ್ದವು.

ತತ್ರ ನಾನಾಪ್ರಕಾರೇಷು ವಿಮಾನೇಷು ಸ್ವಲಂಕೃತಾಃ |
ಸ್ಪರ್ಧಮಾನಾಸ್ತದಾಽನ್ಯೋನ್ಯಂ ನಿಷೇದುಃ ಸರ್ವಪಾರ್ಥಿವಾಃ ॥25॥

ಅಲ್ಲಿ ಚೆನ್ನಾಗಿ ಅಲಂಕೃತವಾದ ಅನೇಕ ವಿಧವಾದ ಉಪ್ಪರಿಗೆಯ ಮನೆಗಳಲ್ಲಿ ಆ ಎಲ್ಲ ರಾಜರುಗಳೂ ಅನ್ಯೋನ್ಯವಾಗಿ ಸ್ಪರ್ಧೆ

ಮಾಡುತ್ತಾ ಕುಳಿತುಕೊಂಡರು.
ತತ್ರೋಪವಿಷ್ಟಾ ದದೃಶುರ್ಮಹಾಸತ್ವಾನ್ ಪೃಥಗ್ಜನಾಃ |
ರಾಜಸಿಂಹಾನ್ ಮಹಾಭಾಗಾನ್ ಮೃಷ್ಟಸ್ರಗನುಲೇಪನಾನ್ ॥26॥
ಸಾಧಾರಣಜನರೂ ಸಹ ಸಮಾಜವಾಟದಲ್ಲಿ ತಮಗೆ ಯೋಗ್ಯವಾದ ಸ್ಥಳಗಳಲ್ಲಿ ಕುಳಿತು ಮಹಾಸತ್ವವುಳ್ಳವರೂ, ಮಹಾನುಭಾವರೂ, ಉತ್ತಮವಾದ ಮಾಲ್ಯಲೇಪನವನ್ನು ಧರಿಸಿದವರೂ ಆದ ಆ ರಾಜಸಿಂಹರನ್ನು ನೋಡಿದರು.
ಮಹಾಪ್ರಸಾದಾನ್ ಬ್ರಹ್ಮಣ್ಯಾನ್ ಸ್ವರಾಷ್ಟ್ರಪರಿರಕ್ಷಿಣಃ |
ಪ್ರಿಯಾನ್ ಸರ್ವಸ್ಯ ಲೋಕಸ್ಯ ಸುಕೃತೈಃ ಕರ್ಮಭಿಃ ಶುಭೈಃ ॥27॥
ಮಹಾನುಗ್ರಹಶೀಲರಾದ, ಬ್ರಾಹ್ಮಣವತ್ಸಲರಾದ, ತಮ್ಮ ತಮ್ಮ ರಾಷ್ಟ್ರಗಳನ್ನು ರಕ್ಷಿಸುವ, ಚೆನ್ನಾಗಿ ಮಾಡಿದ ತಮ್ಮ ಶುಭಕರ್ಮಗಳಿಂದ ಎಲ್ಲ ಜನರಿಗೂ ಪ್ರಿಯರಾದ ರಾಜರುಗಳನ್ನು ನೋಡಿದರು.
ತತೋಽಧಿಮಂಚೇಷು ತದಾ ಪೌರಜಾನಪದಾ ಜನಾಃ |
ಉಪೋಪವಿವಿಶುಃ ಸರ್ವೇ ಯಾಜ್ಞಸೇನೀದಿದೃಕ್ಷವಃ ॥28॥
ಅನಂತರ ಪೌರಜಾನಪದರು ತಮಗೆ ಕ್ಲೃಪ್ತವಾದ ಮಂಚಗಳಲ್ಲಿ ದ್ರೌಪದಿಯನ್ನು ನೋಡುವ ಆಸೆಯಿಂದ ಹತ್ತಿರ-ಹತ್ತಿರ ಕುಳಿತುಕೊಂಡರು.
ಬ್ರಾಹ್ಮಣೈಶ್ಚೈವ ಸಹಿತಾಃ ಪಾಂಡವಾಃ ಸಮುಪಾವಿಶನ್ |
ವೃದ್ಧಿಂ ಪಾಂಚಾಲದೇಶಸ್ಯ ಪಶ್ಯಂತಸ್ತಾಮನುತ್ತಮಾಮ್ ॥29॥
ಪಾಂಡವರೂ ಪಾಂಚಾಲದೇಶದ ಶ್ರೇಷ್ಠವಾದ ಆ ಸಮೃದ್ಧಿಯನ್ನು ನೋಡುತ್ತಾ ಬ್ರಾಹ್ಮಣರ ಜೊತೆಯಲ್ಲಿ ಕುಳಿತುಕೊಂಡರು.
ತತಃ ಸಮಾಜೋ ವವೃತೇ ಸ ರಾಜನ್ ದಿವಸಾನ್ ಬಹೂನ್ |
ರತ್ನಪ್ರದಾನಬಹುಲಃ ಶೋಭಿತೋ ನಟನರ್ತಕೈಃ ॥30॥
ರಾಜನೇ, ಅನಂತರ ನಟನರ್ತಕರಿಂದ ಶೋಭಿತವಾದ ಅನೇಕ ರತ್ನಪ್ರದಾನವನ್ನು ಹೊಂದಿದ ಆ ಸಮಾಜವು (ಸಮಾಗಮವು) ಬಹಳ ದಿನಗಳವರೆಗೆ ಬೆಳೆಯಿತು.
ವರ್ತಮಾನೇ ಸಮಾಜೇ ತು ರಮಣೀಯೇಽಹ್ನಿ ಷೋಡಶೇ |
ಆಪ್ಲುತಾ ಶುದ್ಧವಸನಾ ಸರ್ವಾಭರಣಭೂಷಿತಾ ॥31॥
ವೀರಕಾಂಸ್ಯಮುಪಾದಾಯ ಕಾಂಚನಂ ಸಮಲಂಕೃತಮ್ |
ಅವತೀರ್ಣಾ ತತೋ ರಂಗೇ ದ್ರೌಪದೀ ದ್ರುಪದಾತ್ಮಜಾ ॥32॥
ಹೀಗೆ ಆ ಸಮಾಜವು ಬೆಳೆಯುತ್ತಿರಲು ರಮಣೀಯವಾದ ಹದಿನಾರನೆಯ ದಿವಸದಲ್ಲಿ ದ್ರೌಪದಿಯು ಸ್ನಾನವನ್ನು ಮಾಡಿ, ಶುಭ್ರವಸ್ತ್ರವನ್ನು ಧರಿಸಿ, ಸರ್ವಾಭರಣಭೂಷಿತಳಾಗಿ ವೀರರ ಕೊರಳಿಗೆ ಯೋಗ್ಯವಾದ ಅಲಂಕೃತವಾದ ಸುವರ್ಣಮಯವಾದ ಮಾಲೆಯನ್ನು ಹಿಡಿದು ರಂಗಸ್ಥಳದಲ್ಲಿ ಅವತರಿಸಿದಳು.
ಪುರೋಹಿತಃ ಸೋಮಕಾನಾಂ ಮಂತ್ರವಿದ್ ಬ್ರಾಹ್ಮಣಃ ಶುಚಿಃ |
ಪರಿಸ್ತೀರ್ಯ ಜುಹಾವಾಗ್ನಿಮಾಜ್ಯೇನ ವಿಧಿನಾ ತದಾ ॥33॥
ಮಂತ್ರಜ್ಞನೂ, ಶುಚಿಯಾದ ಬ್ರಾಹ್ಮಣನೂ ಆದ ದ್ರುಪದನ ಪುರೋಹಿತನು ಪರಿಸ್ತರಣವನ್ನು ಮಾಡಿ ಆಜ್ಯದಿಂದ ಆಗ ವಿಧಿವತ್ತಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದನು.
ಸಂತರ್ಪಯಿತ್ವಾ ಜ್ವಲನಂ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಚ |
ವಾರಯಾಮಾಸ ಸರ್ವಾಣಿ ವಾದಿತ್ರಾಣಿ ಸಮಂತತಃ ॥34॥
ಪುರೋಹಿತನು ಅಗ್ನಿದೇವನನ್ನು ಸಂತೋಷಪಡಿಸಿ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿ, ಎಲ್ಲಾ ಕಡೆಗಳಲ್ಲಿಯೂ ಮೊಳಗುತ್ತಿದ್ದ ವಾದ್ಯಗಳನ್ನು ಪ್ರತಿಷೇಧಿಸಿದನು.
ನಿಃಶಬ್ದೇ ತು ಕೃತೇ ತಸ್ಮಿನ್ ಧೃಷ್ಟದ್ಯುಮ್ನೋ ವಿಶಾಂಪತೇ |
ರಂಗಮಧ್ಯಂ ಗತಸ್ತತ್ರ ಮೇಘಗಂಭೀರಯಾ ಗಿರಾ |
ವಾಕ್ಯಮುಚ್ಚೈರ್ಜಗಾದೇದಂ ಶ್ಲಕ್ಷ್ಣಮರ್ಥವದುತ್ತಮಮ್ ॥35॥
ಎಲೈ ರಾಜನೇ, ರಂಗಮಂಚವು ನಿಃಶಬ್ದವಾಗುತ್ತಿರಲು ಧೃಷ್ಟದ್ಯುಮ್ನನು ರಂಗಮಧ್ಯದಲ್ಲಿ ನಿಂತು ತನ್ನ ಮೇಘಗಂಭೀರವಾದ, ಮಧುರವಾದ, ಅರ್ಥಪೂರ್ಣವಾದ ಮತ್ತು ಉತ್ತಮವಾದ ಮಾತುಗಳಿಂದ ಉಚ್ಚಸ್ವರದಲ್ಲಿ ಹೀಗೆ ಹೇಳಿದನು.
ಧೃಷ್ಟದ್ಯುಮ್ನಃ
ಇದಂ ಧನುರ್ಲಕ್ಷ್ಯಮಿಮೇ ಚ ಬಾಣಾಃ
ಶೃಣ್ವಂತು ಮೇ ಕ್ಷತ್ರಿಯಾಃ ಸರ್ವ ಏವ |
ಯಂತ್ರಚ್ಛಿದ್ರೇಣಾಭ್ಯತಿಕ್ರಮ್ಯ ಲಕ್ಷ್ಯಂ
ಸಮರ್ಪಯಧ್ವಂ ಖಗಮೈರ್ದಶಾರ್ಧೈಃ ॥36॥
ಇದು ಧನುಸ್ಸು, ಇದು ಲಕ್ಷ್ಯ, ಇವು ಐದು ಬಾಣಗಳು. ಎಲ್ಲಾ ಕ್ಷತ್ರಿಯರೂ ನನ್ನ ಮಾತನ್ನು ಕೇಳಿ. ನೀವು ಯಂತ್ರದ ಮಧ್ಯದಲ್ಲಿರುವ ಛಿದ್ರದ ಮೂಲಕ ಆಕಾಶದಲ್ಲಿ ಹೋಗುವ ಐದು ಬಾಣಗಳನ್ನು ಪ್ರಯೋಗಿಸಿ ಲಕ್ಷ್ಯವನ್ನು ಭೇದಿಸಬೇಕು.
ಏತತ್ ಕೃತ್ವಾ ಕರ್ಮ ಸುದುಷ್ಕರಂ ಯಃ
ಕುಲೇನ ರೂಪೇಣ ಬಲೇನ ಯುಕ್ತಃ |
ತಸ್ಯಾದ್ಯ ಭಾರ್ಯಾ ಭಗಿನೀ ಮಮೇಯಂ

ಕೃಷ್ಣಾ ಭವಿತ್ರೀ ನ ಮೃಷಾ ಬ್ರವೀಮಿ ॥37॥
ಕುಲದಿಂದಲೂ, ರೂಪದಿಂದಲೂ ಮತ್ತು ಬಲದಿಂದಲೂ ಯುಕ್ತವಾದ ಯಾವನು ಈ ದುಸ್ಸಾಧ್ಯವಾದ ಕಾರ್ಯವನ್ನು ಮಾಡುತ್ತಾನೋ, ಅವನಿಗೆ ನನ್ನ ತಂಗಿಯಾದ ಈ ಕೃಷ್ಣೆಯು ಪತ್ನಿಯಾಗುವಳು. ಇದು ಸತ್ಯವಾದ ಮಾತು.
ವೈಶಂಪಾಯನಃ
ತಾನೇವಮುಕತ್ವ ದ್ರುಪದಸ್ಯ ಪುತ್ರಃ
ಪಶ್ಚಾದಿದಂ ದ್ರೌಪದೀಮಿತ್ಯುವಾಚ ।
ನಾಮ್ನಾ ಚ ಗೋತ್ರೇಣ ಚ ಕರ್ಮಣಾ ಚ
ಸಂಕೀರ್ತಯಂಸ್ತಾನ್ ನೃಪತೀನ್ ಸಮೇತಾನ್ ॥38॥
ಆ ರಾಜರುಗಳನ್ನು ಕುರಿತು ಹೀಗೆ ಹೇಳಿ, ದ್ರುಪದನ ಪುತ್ರನಾದ ಧೃಷ್ಟದ್ಯುಮ್ನನು ಅಲ್ಲಿಗೆ ಬಂದ ರಾಜರುಗಳನ್ನು ಅವರ ಹೆಸರು, ಗೋತ್ರ ಮತ್ತು ಕರ್ಮಗಳಿಂದ ದ್ರೌಪದಿಗೆ ಪರಿಚಯ ಮಾಡಿಕೊಡುತ್ತಾ ದ್ರೌಪದಿಯನ್ನು ಕುರಿತು ಹೀಗೆ ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚಾಶೀತ್ಯದಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರಎಂಭತ್ತೈದನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಕೇಚಿನ್ನಿರೀಕ್ಷ್ಯ ಧನುರೇತ್ಯ ನ ಮೇ ಸುಶಕ್ಯ-
ಮಿತ್ಯೇವ ಚಾಪಯಯುರನ್ಯ ಉತ ಪ್ರಚಾಲ್ಯ ।
ತತ್ರಾಸಸಾದ ಶಿಶುಪಾಲ ಉರುಪ್ರತಾಪಃ
ಸಂಗೃಹ್ಯ ತತ್ ಸಮನುರೋಪಣಯತ್ನ ಆಸೀತ್ ॥123॥
ಕೆಲವರು ಬಂದು ಆ ಬಿಲ್ಲನ್ನು ದೂರದಿಂದ ನೋಡಿಯೆ ಇದು ನಮಗೆ ಶಕ್ಯವಲ್ಲ ಎಂದು ಹಿಂದಿರುಗಿದರು. ಆಗ ಮಹಾಪ್ರತಾಪಿಯಾದ ಶಿಶುಪಾಲ ಬಂದ. ಬಿಲ್ಲನ್ನೆತ್ತಿ ಹೆದೆ ಏರಿಸಲು ಯತ್ನಿಸಿದ.
ಮಾಷಾಂತರಾಯ ಸ ಚಕರ್ಷ ಯದೈವ ಕೋಟ್ಯಾ
ಉನ್ನಮ್ಯ ತತ್ ಪ್ರತಿಜಘಾನ ತಮೇವ ಚಾಶು ।
ಅನ್ಯತ್ರ ಫಲ್ಗುನತ ಏತದಶಕ್ಯಮೇವೇ-
ತ್ಯಂಜೋ ಗಿರೀಶವರತಃ ಸ ಯಯೌ ಚ ಭಗ್ನಃ ॥124॥
ಶಿಶುಪಾಲ ಬಿಲ್ಲಿನ ತುದಿಯನ್ನೆಳೆದ. ಹೆದೆಗೂ ಬಿಲ್ಲಿನ ತುದಿಗೂ ಉದ್ದಿನ ಕಾಳಿನಷ್ಟೇ ಅಂತರವಿದ್ದಾಗ ತಕ್ಷಣ ಬಿಲ್ಲು ಸೆಟೆದು ಅವನಿಗೇ ಬಡಿಯಿತು. ಅರ್ಜುನನಿಗೆ ಹೊರತು ಬೇರೆಯವರಿಗೆ ಈ ಬಿಲ್ಲು ಹೆದೆಯೇರಿಸಲು ಅಶಕ್ಯವೆಂದು ಶಿವನ ವರವಿದ್ದುದರಿಂದ ಶಿಶುಪಾಲ ಹೀಗೆ ಸೋತು ಹಿಂದಿರುಗಿದ.
ಮದ್ರೇಶ ಏತ್ಯ ಚಕೃಷೇ ಸ್ಥವಿರೋಽಪಿ ವೀರ್ಯಾತ್
ಚೇದೀಶತೋಽಪ್ಯಧಿಕಮೇವ ಸ ಮುದ್ಗಮಾತ್ರೇ ।
ಶಿಷ್ಟೇಽಮುನಾ ಪ್ರತಿಹತಃ ಸ ಯಯಾವಶಕ್ಯಂ
ಮತ್ವಾಽಽತ್ಮನಸ್ತದನು ಭೂಪತಯೋ ವಿಷಣ್ಣಾಃ ॥125॥
ಮದ್ರರಾಜ ಶಲ್ಯ ವೃದ್ಧನಾದರೂ ಸ್ವಶಕ್ತಿಯಿಂದ ಶಿಶುಪಾಲನಿಗಿಂತ ಹೆಚ್ಚೇ ಬಿಲ್ಲು ಬಗ್ಗಿಸಿದ. ಹೆಸರು ಕಾಳಿನಷ್ಟು ಮಾತ್ರ ಅಂತರ ಉಳಿದಿದ್ದಾಗ ಬಿಲ್ಲು ಅವನಿಗೂ ಬಡಿಯಿತು. ಇದು ತನಗೆ ಅಶಕ್ಯವೆಂದು ಮನಗಂಡು ಅವನು ಹಿಂತಿರುಗಿದ. ಒಡನೆ ರಾಜರುಗಳು ವಿಷಣ್ಣರಾದರು.
ಸನ್ನೇಷು ಭೂಪತಿಷು ಮಾಗಧ ಆಸಸಾದ
ಸೋಽವಜ್ಞಯೈವ ಬಲವೀರ್ಯಮದೇನ ದೃಪ್ತಃ ।
ಚಾಪಂ ಚಕರ್ಷ ಚಲಪಾದತಳೋ ಬಲೇನ
ಶಿಷ್ಟೇ ಸ ಸರ್ಷಪಮಿತೇಽಭಿಹತೋಽಮುನೈವ ॥126॥
ಜಾನುನ್ಯಮುಷ್ಯ ಧರಣೀಂ ಯಯತುಸ್ತದೈವ
ದರ್ಪೇಣ ಚಾಸ್ಥಿರಪದಸ್ಥಿತಿಮಾತ್ರಹೇತೋಃ ।
ರೌದ್ರಾದ್ ವರಾತ್ಸ ಜಳತಾಂ ಗಮಿತೋಽಥ ರಾಜಾ
ರಾಜ್ಞಾಂ ಮುಖಾನ್ಯನಭಿವೀಕ್ಷ್ಯ ಯಯೌಸ್ವರಾಷ್ಟ್ರಂ ॥127॥
ರಾಜರು ಸುಮ್ಮನೆ ಕುಳಿತಿದ್ದಾಗ ಜರಾಸಂಧ ಬಂದ. ಬಲವೀರ್ಯ ಮದದಿಂದ ದೃಪ್ತನಾಗಿದ್ದ ಆತ ಅಲಕ್ಷ್ಯತೆಯಿಂದ ಬಿಲ್ಲು ಬಗ್ಗಿಸಿದ. ಆದರೆ ಸಾಸಿವೆಕಾಳಿನಷ್ಟು ಅಂತರವಿರುವಾಗ ಬಿಲ್ಲು ಅವನನ್ನು ಬಲವಾಗಿ ಬಡಿಯಿತು. ಅವನ ಅಂಗಾಲುಗಳು ಚಲಿಸಿದವು. ನೆಲದ ಮೇಲೆ ಕಾಲೂರಿ ನಿಲ್ಲಲಾಗದಿದ್ದಾಗ ದರ್ಪದಿಂದ ಅದನ್ನು ತೋರಗೊಡದೆ ಮೊಳಕಾಲೂರಿ ಹೇಗೋ ನೆಲವನ್ನಾಶ್ರಯಿಸಿ ನಿಂತ. ಶಿವನ ವರವಿದ್ದುದರಿಂದಲೆ ಅವನೂ ನಿಶ್ಚೇಷ್ಟನಾಗಬೇಕಾಯಿತು. ಲಜ್ಜೆಯಿಂದ ರಾಜರ ಮುಖ ನೋಡದೆ ತನ್ನೊಂದಿಗೆ ಹೊರಟು ಹೋದ.
ಪ್ರಾಯೋ ಗತಾಸ್ತಮನು ಭೂಪತಯೋಽಥ ಕರ್ಣೋ
ದುರ್ಯೋಧನಾರ್ಥಮನುಗೃಹ್ಯ ಧನುಶ್ಚಕರ್ಷ ।

ರಾಮಾದುಪಾತ್ತ ಶುಭಶಿಕ್ಷಿತಮಾತ್ರತೋSಸೌ
ರೋಮಾವಶಿಷ್ಟಮಕರೋದ್ ಧನುಷೋSಂತಮಾಶು ॥128॥
ಜರಾಸಂಧ ಪರಾಭವಗೊಂಡುಹೋದ ಅನಂತರ ಪ್ರಾಯಶಃ ಎಲ್ಲ ರಾಜರೂ ಹೊರಟು ಹೋದರು. ಆಗ ಕರ್ಣ ದುರ್ಯೋಧನನಿಗಾಗಿ ಬಿಲ್ಲನ್ನೆತ್ತಿ ಸೆಳೆದ. ಪರಶುರಾಮನಿಂದ ಪಡೆದ ಉತ್ತಮ ಶಿಕ್ಷಣದ ಬಲದಿಂದ ಬಿಲ್ಲಿನ ತುದಿಗೆ ಒಂದು ರೋಮದಷ್ಟು ಮಾತ್ರ ಅಂತರವಿರುವಂತೆ ಮಾಡಿದ.
ತಸ್ಮಿಂಶ್ಚ ತೇನ ವಿಹತೇ ಪ್ರತಿಸನ್ನಿವೃತ್ತೇ
ಭೀಮಾರ್ಜುನೌ ದ್ವಿಜಸದಸ್ಯುಪಸನ್ನಿವಿಷ್ಟೌ ।
ಉತ್ತಸ್ಥತೂ ರವಿಶಶಿಪ್ರತಿಮಾನರೂಪೌ
ವಿಪ್ರೇಷು ತತ್ರ ಚ ಭಿಯಾ ವಿನಿವಾರಯತ್ಸು ॥129॥
ಕರ್ಣನೂ ಬಿಲ್ಲಿನ ಏಟು ತಿಂದು ಹಿಂತಿರುಗಿದಾಗ ಬ್ರಾಹ್ಮಣರ ಸಭೆಯಲ್ಲಿ ಸೂರ್ಯ ಚಂದ್ರರಂತೆ ಹೊಳೆಯುತ್ತ ಕುಳಿತಿದ್ದ ಭೀಮಾರ್ಜುನರು, ಬ್ರಾಹ್ಮಣರು ಭಯದಿಂದ ತಡೆಯುತ್ತಿದ್ದಂತೆಯೇ ಎದ್ದುನಿಂತರು.
ವಿಪ್ರಾಶ್ಚ ಕೇಚಿದತಿಯುಕ್ತಮಿವೌ ಹಿ ವೀರೌ
ದೇವೋಪಮಾವಿತಿ ವಚೋ ಜಗದುಸ್ತತಸ್ತೌ ।
ದೃಷ್ಟ್ವೈವ ಕೃಷ್ಣಮುಖಪಂಕಜಮಾಶು ಚಾಪ-
ಸಾನ್ನಿಧ್ಯಮಾಯಯತುರುತ್ತಮವೀರ್ಯಸಾರೌ ॥130॥
ಕೆಲವು ಬ್ರಾಹ್ಮಣರು `ಇದು ಅತ್ಯಂತ ಯುಕ್ತ. ಏಕೆಂದರೆ ಇವರಿಬ್ಬರೂ ವೀರರು. ದೇವಸಮಾನರು' ಎಂಬ ಮಾತನ್ನಾಡಿದರು. ಆಗ ಉತ್ತಮ ವೀರ್ಯಬಲ ಉಳ್ಳ ಭೀಮಾರ್ಜುನರು ಮೊದಲಿಗೆ ಶ್ರೀಕೃಷ್ಣನ ಮುಖಕಮಲವನ್ನು ನೋಡಿ ಕೂಡಲೆ ಬಿಲ್ಲಿನ ಬಳಿಗೆ ಬಂದರು.
* * * *

ನೂರ ಎಂಭತ್ತಾರನೆಯ ಅಧ್ಯಾಯ
(ಧೃಷ್ಟದ್ಯುಮ್ನನಿಂದ ತಂಗಿಗೆ ಬಂದ ರಾಜರ ಪರಿಚಯ, ಸ್ಪರ್ಧೆಯಿಂದ ಲಕ್ಷ್ಯವೇಧವನ್ನು ಮಾಡಲು ಪ್ರಯತ್ನಿಸಿದ ರಾಜರ ವೈಫಲ್ಯ, ಪಾಂಡವರನ್ನು ನೋಡಿ ಕೃಷ್ಣನ ಹರ್ಷ, ಅರ್ಜುನನ ಧನುಸ್ಸಮೀಪ ಗಮನ)
ಧೃಷ್ಟದ್ಯುಮ್ನಃ
ದುರ್ಯೋಧನೋ ದುರ್ವಿಷಹೋ ದುರ್ಮುಖೋ ದುಷ್ಪ್ರಧರ್ಷಣಃ ।
ವಿವಿಂಶತಿರ್ವಿಕರ್ಣಶ್ಚ ಸಹೋ ದುಃಶಾಸನಃ ಸಮಃ ॥1॥
ದುರ್ಯೋಧನ, ದುರ್ವಿಷಹ, ದುರ್ಮುಖ, ದುಷ್ಪ್ರಧರ್ಷಣ, ವಿವಿಂಶತಿ, ವಿಕರ್ಣ, ಸಹ, ದುಃಶಾಸನ, ಸಮ.
ಯುಯುತ್ಸುರ್ವಾಯುವೇಗಶ್ಚ ಭೀಮವೇಗಶ್ಚ ವೀರ್ಯವಾನ್ ।
ಉಗ್ರಾಯುಧೋ ಬಲಾನೀಕಃ ಕನಕಾಯುರ್ವಿರೋಚನಃ ॥2॥
ಯುಯುತ್ಸು, ವಾಯುವೇಗ, ಭೀಮವೇಗ, ವೀರ್ಯವಾನ್, ಉಗ್ರಾಯುಧ, ಬಲಾನೀಕ, ಕನಕಾಯು, ವಿರೋಚನ.
ಸಕುಂಡಲಶ್ಚಿತ್ರಸೇನಃ ಸುವರ್ಚಾಃ ಕನಕಧ್ವಜಃ ।
ನಂದಕೋ ಬಾಹುಶಾಲೀ ಚ ಕುಂಡಲೀ ವಿಕಟಸ್ತಥಾ ॥3॥
ಕುಂಡಲಸಹಿತನಾದ ಚಿತ್ರಸೇನ, ಸುವರ್ಚ, ಕನಕಧ್ವಜ, ನಂದಕ, ಬಾಹುಶಾಲೀ, ಕುಂಡಲೀ, ವಿಕಟ.
ವಿಂದಶ್ಚಾಪ್ಯನುವಿಂದಶ್ಚ ಸದೀಪೀ ವಿಕಲಃ ಕರೀ ।
ಏತೇ ಚಾನ್ಯೇ ಚ ಬಹವೋ ಧಾರ್ತರಾಷ್ಟ್ರಾ ಮಹಾಬಲಾಃ ॥4॥
ವಿಂದ, ಅನುವಿಂದ, ಸದೀಪೀ, ವಿಕಲ, ಕರಿ, ಮಹಾಬಲರಾದ ಇವರೂ ಮತ್ತು ಇನ್ನೂ ಅನೇಕ ಧೃತರಾಷ್ಟ್ರಪುತ್ರರು.
ಕರ್ಣೇನ ಸಹಿತಾ ವೀರಾಃ ತ್ವದರ್ಥೇ ಸಮುಪಾಗತಾಃ ।
ಶತಸಂಖ್ಯಾ ಮಹಾತ್ಮಾನಃ ಸಮೇತಾ ದೇವರೂಪಿಣಃ ॥5॥
ದೇವತೆಗಳಂತಿರುವ ಮಹಾಪ್ರಯತ್ನಶಾಲಿಗಳಾದ ಈ ಶತವೀರರು ಕರ್ಣನ ಜೊತೆಯಲ್ಲಿ ನಿನ್ನನ್ನು ಪಡೆಯುವ ಸಲುವಾಗಿ ಇಲ್ಲಿಗೆ ಬಂದಿದ್ದಾರೆ.
ಶಕುನಿಶ್ಚಾಚಲಶ್ಚೈವ ವೃಷಕೋSಥ ಮಹಾಧನುಃ ।
ಏತೇ ಗಾಂಧಾರರಾಜಸ್ಯ ಸುತಾಃ ಸರ್ವೇ ಸಮಾಗತಾಃ ॥6॥
ಶಕುನಿ, ಅಚಲ, ವೃಷಕ, ಮಹಾಧನು ಈ ಎಲ್ಲಾ ಗಾಂಧಾರರಾಜನ ಪುತ್ರರೂ ಬಂದಿದ್ದಾರೆ.
ಅಶ್ವತ್ಥಾಮಾ ಚ ಭೋಜಶ್ಚ ಸರ್ವಶಸ್ತ್ರಭೃತಾಂ ವರೌ ।
ವಾರ್ಧಕ್ಷೇಮಿಃ ಸುವರ್ಚಾಶ್ಚ ಸೇನಾಬಿಂದುಶ್ಚ ವೀರ್ಯವಾನ್ ॥7॥
ಸರ್ವಶಸ್ತ್ರಭೃತರಲ್ಲಿ ಶ್ರೇಷ್ಠರಾದ ಅಶ್ವತ್ಥಾಮಾ, ಭೋಜ ಇವರಿಬ್ಬರು ವಾರ್ಧಕ್ಷೇಮಿ, ಸುವರ್ಚಾ, ವೀರ್ಯಶಾಲಿಯಾದ ಸೇನಾಬಿಂದು.
ಅಭಿಭೂಃ ಸಹ ಪುತ್ರೇಣ ವಸುನಾ ಚ ಸುವರ್ಚಸಾ ।
ಸುಮಿತ್ರಃ ಸುಕುಮಾರಶ್ಚ ವೃತ್ತಃ ಸತ್ಯಧೃತಿಸ್ತಥಾ ॥8॥
ವಸು ಮತ್ತು ಸುವರ್ಚಾ ಎಂಬ ಮಕ್ಕಳಿಂದ ಸಹಿತನಾದ ಅಭಿಭೂ, ಸುಮಿತ್ರ ಸುಕುಮಾರ, ವೃತ್ತ, ಸತ್ಯಧೃತಿ.
ಸೂರ್ಯಧ್ವಜೋ ರೋಚಮಾನೋ ನೀಲಶ್ಚಿತ್ರಾಯುಧಸ್ತಥಾ ।
ಅಂಶುಮಾಂಶ್ಚೇಕಿತಾನಶ್ಚ ಶ್ರೇಣಿಮಾಂಶ್ಚ ಮಹಾಬಲಃ ॥9॥

ಸೂರ್ಯಧ್ವಜ, ರೋಚಮಾನ, ನೀಲ, ಚಿತ್ರಾಯುಧ, ಅಂಶುಮಾನ್ ಚೇಕಿತಾನ, ಮಹಾಬಲನಾದ ಶ್ರೇಣಿಮಾನ್
ಸಮುದ್ರಸೇನಸ್ತತ್ಪುತ್ರ ಇಂದ್ರಸೇನಶ್ಚ ಪಾರ್ಥಿವಃ |
ಜರಾಸಂಧಃ ಸಪುತ್ರಶ್ಚ ಸುದಂಡೋ ದಂಡ ಏವ ಚ ||10||
ಸಮುದ್ರಸೇನ, ಅವನ ಪುತ್ರ, ಇಂದ್ರಸೇನ, ಪುತ್ರಸಹಿತನಾದ ಜರಾಸಂಧ, ಸುದಂಡ, ದಂಡ,
ಪೌಂಡ್ರಕೋ ವಾಸುದೇವಶ್ಚ ಭಗದತ್ತಶ್ಚ ವೀರ್ಯವಾನ್ |
ಕಳಿಂಗಸ್ತಾಮ್ರಲಿಪ್ತಶ್ಚ ಪತ್ತನಾಧಿಪತಿರ್ಮಹಾನ್ ||11|
ಪೌಂಡ್ರಕವಾಸುದೇವ, ಪರಾಕ್ರಮಶಾಲಿಯಾದ ಭಗದತ್ತ,
ಕಳಿಂಗಾಧಿಪತಿಯಾದ ತಾಮ್ರಲಿಪ್ತ, ಪತ್ತನಾಧಿಪತಿಯಾದ ಮಹಾನ್
ಮದ್ರರಾಜಸ್ತಥಾ ಶಲ್ಯಃ ಸಹಪುತ್ರೈರ್ಮಹಾಬಲಃ |
ರುಗ್ಮಾಂಗದೇನ ವೀರೇಣ ತಥಾ ರುಗ್ಮರಥೇನ ಚ ||12||
ಮಹಾಬಲನಾದ ತನ್ನ ಪುತ್ರರಾದ ರುಗ್ಮಾಂಗದ ಮತ್ತು ರುಗ್ಮರಥರಿಂದ ಕೂಡಿದ ಮದ್ರರಾಜನಾದ ಶಲ್ಯ
ಕೌರವ್ಯಃ ಸೋಮದತ್ತಶ್ಚ ಪುತ್ರಾಸ್ತ್ವಸ್ಯ ಮಹಾರಥಾಃ |
ಸಮವೇತಾಸ್ತ್ರಯಃಶೂರಾ ಭೂರಿರ್ಭೂರಿಶ್ರವಾಃ ಶಲಃ ||13||
ಕೌರವ್ಯನಾದ ಸೋಮದತ್ತ, ಮಹಾರಥರಾದ ಶೂರರಾದ ಅವನ ಮೂರು ಪುತ್ರರಾದ ಭೂರಿ, ಭೂರಿಶ್ರವ ಮತ್ತು ಶಲ
ಸುದಕ್ಷಿಣಶ್ಚ ಕಾಂಭೋಜೋ ದೃಢಧನ್ವಾ ಚ ಕೌರವಃ |
ಬೃಹದ್ಬಲಃ ಸುಷೇಣಶ್ಚ ಶಿಬಿರೌಶೀನರಸ್ತಥಾ ||14||
ಕಾಂಭೋಜಾಧಿಪತಿಯಾದ ಸುದಕ್ಷಿಣ, ದೃಢಧನುಸ್ಸನ್ನು ಹೊಂದಿದ ಬೃಹದ್ಬಲ, ಸುಷೇಣ, ಔಶೀನರನಾದ ಶಿಬಿ (ಶಿವಿ)
ಪಾಂಡ್ಯಕೇರಳಚೋಳೇಂದ್ರಾಸ್ತ್ರಯಸ್ತ್ರೇತಾಗ್ನಯೋ ಯಥಾ |
ಆಸನೇಷು ವಿರಾಜಂತೇ ಆಶಾಮಾಗಸ್ತ್ಯಮಾಶ್ರಿತಾಃ ||15||
ಆಗ್ನೇಯ ದಿಕ್ಕಿನಲ್ಲಿ ಆಸನದಲ್ಲಿ ವಿರಾಜಿಸುವ ಮೂರು ಅಗ್ನಿಗಳಂತಿರುವ ಪಾಂಡ್ಯ, ಕೇರಳ, ಚೋಳ ರಾಜರು
ಸಂಕರ್ಷಣೋ ರೌಹಿಣೇಯೋ ವಾಸುದೇವಶ್ಚ ವೀರ್ಯವಾನ್ |
ಸಾಂಬಶ್ಚ ಚಾರುದೇಷ್ಣಶ್ಚ ಸಾರಣೋಽಥ ಗದಸ್ತಥಾ ||16||
ರೋಹಿಣಿಯ ಪುತ್ರನಾದ ಬಲರಾಮ, ಪರಾಕ್ರಮಶಾಲಿಯಾದ ಕೃಷ್ಣ, ಸಾಂಬ, ಚಾರುದೇಷ್ಣ, ಸಾರಣ, ಗದ
ಅಕ್ರೂರಃ ಸಾತ್ವಿಕಶ್ಚೈವ ಯುಯುಧಾನಶ್ಚ ಸಾತ್ಯಕಿಃ |
ಕೃತವರ್ಮಾ ಚ ಹಾರ್ದಿಕ್ಯಃ ಪೃಥುರ್ವಿಪೃಥುರೇವ ಚ ||17||
ಅಕ್ರೂರ, ಸಾತ್ವಿಕ, ಯುಯುಧಾನ, ಸಾತ್ಯಕಿ, ಹೃದಿಕನ ಪುತ್ರನಾದ ಕೃತವರ್ಮ, ಪೃಥು, ವಿಪೃಥು
ವಿದೂರಥಶ್ಚ ಕಣ್ವಶ್ಚ ಸಮೀಕಃ ಸಾರಿಮೇಜಯಃ |
ವೀರೋ ಧನಪತಿಶ್ಚೈವ ಬಾಹ್ಲಿಕಾಂಗಾರಕಸ್ತಥಾ |
ಉಶೀನರಶ್ಚ ವಿಕ್ರಾಂತೋ ವೃಷ್ಣಯಸ್ತೇ ಪ್ರಕೀರ್ತಿತಾಃ ||18||
ವಿದೂರಥ, ಕಣ್ವ, ಸಮೀಕ, ಸಾರಿಮೇಜಯ, ಧನಪತಿ, ಬಾಹ್ಲೀಕ ದೇಶದ ಅಂಗಾರಕ, ಪರಾಕ್ರಮಶಾಲಿಯಾದ ಉಶೀನರ, ಈ ಎಲ್ಲಾ ವೃಷ್ಣಿಗಳೂ ಬಂದಿದ್ದಾರೆ.
ಭಗೀರಥೋ ಬೃಹತ್ಕತ್ರಃ ಸೈಂಧವಶ್ಚ ಬೃಹದ್ರಥಃ |
ಜಯದ್ರಥೋ ಬಾಹ್ಲಿಕಶ್ಚ ಶ್ರುತಾಯುರಥ ವೀರ್ಯವಾನ್ |
ಉಲ್ಮೂಕಃ ಕೈತವೋ ರಾಜಾ ಚಿತ್ರಾಂಗದಶುಭಾಂಗದೌ ||19||
ಭಗೀರಥ, ಬೃಹತ್ಕತ್ರ, ಬೃಹದ್ರಥ, ಜಯದ್ರಥ, ಬಾಹ್ಲೀಕ, ಪರಾಕ್ರಮಶಾಲಿಯಾದ ಶ್ರುತಾಯು, ಉಲ್ಮೂಕ, ಕೈತವ, ಚಿತ್ರಾಂಗದ, ಶುಭಾಂಗದರು,
ವತ್ಸರಾಜಶ್ಚ ಧೃತಿಮಾನ್ ಕೋಸಲಾಧಿಪತಿರ್ಮಹಾನ್ |
ಕರ್ಣಶ್ಚ ಸಹ ಪುತ್ರೇಣ ವೃಷಸೇನಶ್ಚ ವೀರ್ಯವಾನ್ ||20||
ವತ್ಸರಾಜನಾದ ಧೃತಿಮಾನ್, ಕೋಸಲಾಧಿಪತಿಯಾದ ಮಹಾನ್, ಪುತ್ರಸಹಿತನಾದ ಕರ್ಣ, ಪರಾಕ್ರಮಶಾಲಿಯಾದ ವೃಷಸೇನ,
ಬೃಹದ್ಬಲಶ್ಚ ಬಲವಾನ್ ರಾಜಾ ಚೈವಾಥ ದುರ್ಜಯಃ |
ದಮಘೋಷಾತ್ಮಜಶ್ಚೈವ ಶಿಶುಪಾಲೋ ಮಹಾಬಲಃ ||21||
ಚೇದೀನಾಮಧಿಪೋ ವೀರೋ ಬಲವಾನಂತಕೋಪಮಃ |
ಏತೇ ಚಾನ್ಯೇ ಚ ಬಹವೋ ನಾನಾಜನಪದೇಶ್ವರಾಃ ||22||
ಬಲಿಷ್ಠನಾದ ಬೃಹದ್ಬಲ, ರಾಜನಾದ ದುರ್ಜಯ, ಮಹಾಬಲನಾದ ದಮಘೋಷನ ಮಗನಾದ ಯಮನಂತಿರುವ ಚೇದಿರಾಜನಾದ, ವೀರನಾದ ಶಿಶುಪಾಲ, ಇವರೂ ಮತ್ತು ಇನ್ನೂ ಅನೇಕ ರಾಜರೂ ಮತ್ತು ಭೂಮಿಯಲ್ಲಿ ಪ್ರಸಿದ್ಧರಾದ ಅನೇಕ ಕ್ಷತ್ರಿಯರೂ ನಿನ್ನ ಸಲುವಾಗಿ ಬಂದಿದ್ದಾರೆ. (ವೃಷ್ಣ್ಯಂಧಕರು ಕೃಷ್ಣನ ಆದೇಶದಂತೆ ಸ್ವಯಂವರವನ್ನು ನೋಡುವುದಕ್ಕೆ ಮಾತ್ರ ಬಂದಿದ್ದಾರೆ. ಅವರು ಧನುಸ್ಸನ್ನು ಮುಟ್ಟುವುದೂ ಇಲ್ಲ. ಉಳಿದ ರಾಜರು ಮೊದಲಾದವರು ದ್ರೌಪದಿಯನ್ನು ಪಡೆಯಲು ಬಂದಿದ್ದಾರೆ)
ತ್ವದರ್ಥಮಾಗತಾ ಭದ್ರೇ ಕ್ಷತ್ರಿಯಾಃ ಪ್ರಥಿತಾ ಭುವಿ |
ಏತೇ ವಿಧ್ಯಂತಿ ವಿಕ್ರಾಂತಾಸ್ತ್ವದರ್ಥೇ ಲಕ್ಷಮುತ್ತಮಮ್ |
ವೇದ್ಧಾ ತು ಯೋ ಭವೇದೇಷಾಂ ತಂ ವರಂ ವರಯ ಸ್ವಯಮ್ ||23||

ಈ ವಿಕ್ರಾಮಶಾಲಿಗಳಾದ ಪುರುಷರು ನಿನ್ನ ಸಲುವಾಗಿ ಲಕ್ಷ್ಯವೇಧವನ್ನು ಮಾಡುತ್ತಾರೆ. ಯಾವನು ಲಕ್ಷ್ಯವೇಧವನ್ನು ಮಾಡುತ್ತಾನೆಯೋ ನೀನು ಅವನನ್ನು ಸ್ವಯಂವರದಲ್ಲಿ ವರಿಸು.

ವೈಶಂಪಾಯನಃ

ತೇಽಲಂಕೃತಾಃ ಕುಂಡಲಿನೋ ಯುವಾನಃ
ಪರಸ್ಪರಂ ಸ್ಪರ್ಧಮಾನಾಃ ಸಮೇತಾಃ |
ಅಸ್ತ್ರಂ ಬಲಂ ಚಾತ್ಮನಿ ಮನ್ಯಮಾನಾಃ
ಸರ್ವೇ ಸಮುತ್ಪೇತುರಹಂಕೃತೇನ ॥24॥

ಅಲಂಕೃತರೂ, ಕುಂಡಲಗಳನ್ನು ಧರಿಸಿದವರೂ, ಆದ ಅವರು ಪರಸ್ಪರ ಸ್ಪರ್ಧೆಯಿಂದ ಅಲ್ಲಿ ಸನ್ನಿಹಿತರಾಗಿ ತಮ್ಮಲ್ಲಿ ಶ್ರೇಷ್ಠವಾದ ಅಸ್ತ್ರವೂ ಬಲವೂ ಇದೆ ಎಂದು ತಿಳಿದು ಅಹಂಕಾರದಿಂದ ಎಲ್ಲರೂ ಮೇಲೆದ್ದರು.

ವೀರ್ಯೇಣ ರೂಪೇಣ ಕುಲೇನ ಚೈವ
ಶೀಲೇನ ಚೈವಾಥ ಚ ಯೌವನೇನ |
ಸಮೃದ್ಧದರ್ಪಾ ಮದವೇಗಭಿನ್ನಾ
ಮತ್ತಾ ಯಥಾ ಹೈಮವತಾ ಗಜೇಂದ್ರಾಃ ॥25॥

ವೀರ್ಯದಿಂದಲೂ, ರೂಪದಿಂದಲೂ, ಕುಲದಿಂದಲೂ, ಶೀಲದಿಂದಲೂ, ಯೌವನದಿಂದಲೂ, ಬಹಳ ದರ್ಪದಿಂದಲೂ ಕೂಡಿದವರಾಗಿ, ಕಾಮವೇಗದಿಂದ ತುಂಬಿದವರಾಗಿ ಹಿಮಾಲಯದ ಮದಿಸಿದ ಗಜಗಳಂತೆ (ಮೇಲೆದ್ದರು)

ಪರಸ್ಪರಂ ಸ್ಪರ್ಧಯಾ ವೀಕ್ಷಮಾಣಾಃ |
ಸಂಕಲ್ಪಜೇನಾಭಿಪರಿಪ್ಲುತಾಂಗಾಃ |
ಕೃಷ್ಣಾ ಮಮೈವೇತ್ಯಭಿಭಾಷಮಾಣಾ
ನೃಪಾಃ ಸಮುತ್ಪೇತುರಥಾಸನೇಭ್ಯಃ ॥26॥

ಒಬ್ಬರನ್ನೊಬ್ಬರು ಸ್ಪರ್ಧೆಯಿಂದ ನೋಡುತ್ತಾ ಕಾಮದಿಂದ ತುಂಬಿದ ಸರ್ವಶರೀರವುಳ್ಳವರಾಗಿ ದ್ರೌಪದಿಯು ನನಗೇ ಸೇರುವಳು ಎಂದು ಹೇಳುತ್ತಾ ರಾಜರು ತಮ್ಮ ಆಸನಗಳಿಂದ ಎದ್ದರು.

ತೇ ಕ್ಷತ್ರಿಯಾ ರಂಗಗತಾಃ ಸಮೇತಾ
ಜಿಹೀರ್ಷಮಾಣಾ ದ್ರುಪದಾತ್ಮಜಾಂ ತಾಮ್ |
ಚಕಾಶಿರೇ ಪರ್ವತರಾಜಕನ್ಯಾಮ್
ಉಮಾಂ ಯಥಾ ದೇವಗಣಾಃ ಸಮೇತಾಃ ॥27॥

ದ್ರೌಪದಿಯನ್ನು ಪಡೆಯುವ ಸಲುವಾಗಿ ರಂಗವನ್ನು ಪ್ರವೇಶಿಸಿದ ಆ ಕ್ಷತ್ರಿಯರು ಗಿರಿಜಾಸ್ವಯಂವರದಲ್ಲಿ ಒಟ್ಟಾಗಿ ಸೇರಿದ ದೇವತೆಗಳ ಸಮೂಹದಂತೆ ಶೋಭಿಸಿದರು.

ಕಂದರ್ಪಬಾಣಾಭಿನಿಪೀಡಿತಾಂಗಾಃ
ಕೃಷ್ಣಾಗತೈಸ್ತದ್ಧೃದಯೈರ್ನರೇಂದ್ರಾಃ |
ರಂಗಾವತೀರ್ಣಾ ದ್ರುಪದಾತ್ಮಜಾರ್ಥಂ
ದ್ವೇಷಂ ಹಿ ಚಕ್ರುಃ ಸುಹೃದೋಽಪಿ ಸರ್ವೇ ॥28॥

ಮನ್ಮಥನ ಬಾಣದಿಂದ ವಿದ್ಧರಾದ ಅವರು ದ್ರೌಪದಿಯನ್ನು ಪಡೆಯುವ ಸಲುವಾಗಿ ಅವಳಲ್ಲೇ ಆಸಕ್ತವಾದ ಮನಸ್ಸನ್ನು ಹೊಂದಿ ರಂಗವನ್ನು ಪ್ರವೇಶಿಸಿ ಮಿತ್ರರಾದವರೂ ಕೂಡ ಪರಸ್ಪರ ದ್ವೇಷವನ್ನು ಮಾಡಿದರು.

ಅಥಾಯಯುರ್ದೇವಗಣಾ ವಿಮಾನೈ
ರುದ್ರಾದಿತ್ಯಾ ವಸವೋಽಥಾಶ್ವಿನೌ ಚ
ಸಾಧ್ಯಾಶ್ಚ ಸರ್ವೇ ಮರುತಸ್ತಥೈವ
ಧರ್ಮಂ ಪುರಸ್ಕೃತ್ಯ ಧನೇಶ್ವರಂ ಚ ॥29॥

ಅನಂತರ ದೇವತೆಗಳು ಗಣಗಳಲ್ಲಿ ತಮ್ಮ ವಿಮಾನಗಳಲ್ಲಿ ಅಲ್ಲಿಗೆ ಬಂದರು. ರುದ್ರರೂ, ಆದಿತ್ಯರೂ, ವಸುಗಳೂ, ಅಶ್ವಿನಿಗಳೂ, ಯಮ ಮತ್ತು ಕುಬೇರರನ್ನು ಮುಂದೆ ಮಾಡಿಕೊಂಡು ಸಾಧ್ಯರೂ ಮತ್ತು ಮರುತ್ತುಗಳೂ (ಎಲ್ಲರೂ) ಬಂದರು.

ದೈತ್ಯಾಃ ಸುಪರ್ಣಾಶ್ಚ ಮಹೋರಗಾಶ್ಚ
ದೇವರ್ಷಯೋ ಗುಹ್ಯಕಾಶ್ಚಾರಣಾಶ್ಚ |
ವಿಶ್ವಾವಸುರ್ನಾರದಃ ಪರ್ವತಶ್ಚ
ಗಂಧರ್ವಮುಖ್ಯಾಃ ಸಹಿತಾಽಪ್ಸರೋಭಿಃ ॥30॥

ದೈತ್ಯರೂ, ಪಕ್ಷಿಗಳೂ, ಮಹಾಸರ್ಪಗಳೂ, ದೇವರ್ಷಿಗಳೂ, ಗುಹ್ಯಕರೂ, ಚಾರಣರೂ, ವಿಶ್ವಾವಸು, ನಾರದ, ಪರ್ವತ, ಅಪ್ಸರೆಯರಿಂದ ಸೇವಿತರಾದ ಗಂಧರ್ವಶ್ರೇಷ್ಠರೂ (ಎಲ್ಲರೂ ಬಂದರು)

ಹಲಾಯುಧಸ್ತತ್ರ ಚ ಕೇಶವಶ್ಚ
ವೃಷ್ಣ್ಯಂಧಕಾಶ್ಚೈವ ಯಥಾಪ್ರಧಾನಾಃ |
ಪ್ರೇಕ್ಷಾಂಬಭೂವುರ್ಯದುಪುಂಗವಾಸ್ತೇ
ಸ್ಥಿತಾ ಹಿ ಕೃಷ್ಣಸ್ಯ ಮತೇ ಬಭೂವುಃ ॥31॥

ಅಲ್ಲಿ ಬಲರಾಮ, ಕೃಷ್ಣ, ವೃಷ್ಣಿಗಳೂ, ಅಂಧಕರೂ ಮತ್ತು ವೃಷ್ಣ್ಯಂಧಕರಲ್ಲಿ ಹಿರಿಯರಾದವರೂ, ಯದುಪುಂಗವರೂ, ಎಲ್ಲರೂ

ಕೃಷ್ಣನ ಅಭಿಪ್ರಾಯವನ್ನು ಅನುಸರಿಸಿದವರಾಗಿ ರಂಗದಲ್ಲಿ ಕುಳಿತುಕೊಂಡು ಕೇವಲ ಪ್ರೇಕ್ಷಕರಾದರು.
ದೃಷ್ಟ್ವಾ ಹಿ ತಾನ್ ಮತ್ತಗಜೇಂದ್ರರೂಪಾನ್
ಪದ್ಮಾಭಿಪನ್ನಾನಿವ ವಾರಣೇಂದ್ರಾನ್ |
ಭಸ್ಮಾವೃತಾಂಗಾನಿವ ಹವ್ಯವಾಹಾನ್
ಪಾರ್ಥಾನ್ ಪ್ರದಧ್ಯೌ ಸ ಯದುಪ್ರವೀರಃ ॥32॥
ಯದುವೀರನಾದ ಕೃಷ್ಣನು ಪದ್ಮವನ್ನು ಪಡೆಯುವ ಸಲುವಾಗಿ ಬಂದ ಮದಿಸಿದ ಗಜಗಳಂತಿರುವ ಹಾಗೆಯೇ ಭಸ್ಮಾವೃತವಾದ ಅಗ್ನಿಯಂತೆ ಇರುವ ಪಾಂಡವರನ್ನು ನೋಡಿ ಮನಸ್ಸಿನಲ್ಲಿ ಚಿಂತಿಸಿದನು.
ಶಶಂಸ ರಾಮಾಯ ಯುಧಿಷ್ಠಿರಂ ಚ
ಭೀಮಂ ಸ ಜಿಷ್ಣುಂ ಯಮಜೌ ಚ ವೀರೌ |
ಶನೈಶ್ಶನೈಸ್ತಾಂಶ್ಚ ನಿರೀಕ್ಷ್ಯ ರಾಮೋ
ಜನಾರ್ದನಂ ಪ್ರೀತಮನಾ ದದರ್ಶ ॥33॥
ಕೃಷ್ಣನು ಬಲರಾಮನಿಗೆ ಯುಧಿಷ್ಠಿರನನ್ನೂ, ಭೀಮನನ್ನೂ ಅರ್ಜುನನ್ನೂ ವೀರರಾದ ನಕುಲ-ಸಹದೇವರನ್ನೂ ದೂರದಿಂದಲೇ ತೋರಿಸಿ ಪರಿಚಯಿಸಿದನು. ಬಲರಾಮನು ನಿಧಾನವಾಗಿ ಅವರನ್ನು ನೋಡಿ ಅನಂತರ ಕೃಷ್ಣನ ಮುಖವನ್ನು ನೋಡಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದನು.
ಅನ್ಯೇ ತು ವೀರಾ ನೃಪಪುತ್ರಪೌತ್ರಾಃ
ಕೃಷ್ಣಾಗತೈರ್ನೇತ್ರಮನಸ್ಸ್ವಭಾವೈಃ
ವ್ಯಾಯಚ್ಛಮಾನಾ ದದೃಶುರ್ನ ತಾನ್ ವೈ
ಸಂದಷ್ಟದಂತಚ್ಛದತಾಮ್ರವಕ್ತ್ರಾಃ ॥34॥
ಉಳಿದ ವೀರರಾದ, ದ್ರೌಪದಿಯಲ್ಲೇ ನೆಟ್ಟ ಮನಸ್ಸು ಮತ್ತು ದೃಷ್ಟಿಯುಳ್ಳ ರಾಜರು ಮತ್ತು ರಾಜಪುತ್ರರು ಹಲ್ಲುಮುಡಿಯನ್ನು ಕಚ್ಚಿ ಕೆಂಪಾದ ಮುಖವುಳ್ಳವರಾಗಿ ಬಹಳವಾಗಿ ದಕ್ಷಿಣೆಯನ್ನು ಕೊಡುತ್ತಾ ಪಾಂಡವರನ್ನು ಗಮನಿಸಲಿಲ್ಲ.
ತಥೈವ ವೀರಾಃ ಪೃಥುದೀರ್ಘಬಾಹವಃ
ಪಾರ್ಥಾ ಯಮೌ ಚೈವ ಮಹಾನುಭಾವೌ |
ತಾಂ ದ್ರೌಪದೀಂ ಪ್ರೇಕ್ಷ್ಯ ತದಾ ಸ್ಮ ಸರ್ವೇ
ಕಂದರ್ಪಬಾಣಾಭಿಹತಾ ಬಭೂವುಃ ॥35॥
ಹಾಗೆಯೇ, ಪೃಥುದೀರ್ಘಬಾಹುಗಳುಳ್ಳ ವೀರರಾದ ಕುಂತಿಯ ಮತ್ತು ಮಾದ್ರಿಯ ಮಕ್ಕಳಾದ ಮಹಾನುಭಾವರಾದ ಆ ಪಾಂಡವರೂ ಸಹ ದ್ರೌಪದಿಯನ್ನು ನೋಡಿ ಎಲ್ಲರೂ ಕಾಮಬಾಣವಶರಾದರು.
ದೇವರ್ಷಿಗಂಧರ್ವಸಮಾಕುಲಂ ತತ್
ಸುಪರ್ಣನಾಗಾಸುರಯಕ್ಷಜುಷ್ಟಮ್ |
ದಿವ್ಯೇನ ಗಂಧೇನ ಸಮಾಕುಲಂ ಚ
ದಿವ್ಯೈಶ್ಚ ಮಾಲ್ಯೈರವಕೀರ್ಯಮಾಣಮ್ |
ಸಮಾಹತೈರ್ದುಂದುಭಿಭಿಶ್ಚ ರಾಜನ್
ರರಾಜ ತತ್ ಸಂಕುಲಮಂತರಿಕ್ಷಮ್ ॥36॥
ರಾಜನೇ, ದೇವರ್ಷಿ ಗಂಧರ್ವರಿಂದ ತುಂಬಿದ, ಸುಪರ್ಣ, ನಾಗ ಮತ್ತು ಯಕ್ಷರಿಂದ ತುಂಬಿದ, ದಿವ್ಯಗಂಧದಿಂದಲೂ ದಿವ್ಯ ಮಾಲೆಗಳಿಂದಲೂ, ಎಲ್ಲ ಕಡೆಗಳಲ್ಲಿಯೂ ಶೋಭಿಸುವ, ದುಂದುಭಿಯ ನಾದಗಳಿಂದ ಕೂಡಿದ, ಅಂತರಿಕ್ಷವು ಬಹಳ ನಿಬಿಡವಾಗಿ ಪ್ರಕಾಶಿಸಿತು.
ವಿಮಾನಸಂಬಾಧಮಭೂತ್ ಸಮಂತಾತ್ |
ಸವೇಣುವೀಣಾಪಣವಾನುವಾದಮ್ |
ಸಮಾಜವಾಟೋಪರಿ ಸಂಸ್ಥಿತಾನಾಂ
ಮೇೈರೆಂಃ ಸಮಂತಾದಿವ ಗರ್ಜಮಾನೈಃ |
ಸಕರ್ಣದುರ್ಯೋಧನಸಾಲ್ವಶಲ್ಯಾ
ದ್ರೋಣ್ಯಾದಯಶ್ಚೈವ ಸವೀರ್ಯವಂತಃ ॥37॥
ಆ ಸಮಾಜವಾಟದ ಮೇಲೆ ಅಂತರಿಕ್ಷದಲ್ಲಿ ಇದ್ದ ವಿಮಾನಗಳು ವೇಣುವೀಣಾಪಣವಧ್ವನಿಗಳಿಂದ ಕೂಡಿ ಎಲ್ಲ ಕಡೆಯೂ ಗರ್ಜಿಸುವ ಮೇಘಗಳಿಂದಲೋ ಎಂಬಂತೆ ವಿಮಾನಗಳಿಗೆ ಸಂಮರ್ದವುಂಟಾಯಿತು.
ಕಳಿಂಗವಂಗಾಧಿಪಪಾಂಸುಪೌಂಡ್ರಾ
ವಿದೇಹರಾಜೋऽಥ ವನಾಧಿಪಶ್ಚ |
ಅನ್ಯೇ ಚ ನಾನಾನೃಪಪುತ್ರಪೌತ್ರಾ
ರಾಜಾಧಿಪಾಃ ಪಂಕಜಪತ್ರನೇತ್ರಾಃ ॥38॥
ಕರ್ಣದುರ್ಯೋಧನಶಲ್ಯರೂ, ಪರಾಕ್ರಮಶಾಲಿಗಳಾದ ದ್ರೋಣಾದಿಗಳೂ, ಕಳಿಂಗ, ವಂಗ, ಪಾಂಸುಪೌಂಡ್ರ, ವಿದೇಹ ಮತ್ತು ವನಗಳ ಅಧಿಪತಿಗಳಾದ ರಾಜರೂ ಉಳಿದ ಪುತ್ರ ಪೌತ್ರರಿಂದ ಒಡಗೂಡಿದ ಪದ್ಮನೇತ್ರರಾದ ಅನೇಕ ರಾಜರೂ
ಕಿರೀಟಹಾರಾಂಗದಕಂಕಣಾದ್ಯೈ-

ರ್ವಿಭೂಷಿತಾಲಂಕೃತಬಾಹವಸ್ತೇ |
ಸುರೂಪಿಣೋ ವಿಕ್ರಮಸತ್ವಯುಕ್ತಾ
ಬಲೇನ ದರ್ಪೇಣ ಚ ನರ್ದಮಾನಾಃ ॥39॥
ಕಿರೀಟ, ಹಾರ, ಅಂಗದ, ಕಂಕಣ ಮೊದಲಾದವುಗಳಿಂದ ಅಲಂಕೃತವಾದ ಬಾಹುಗಳುಳ್ಳ ಒಳ್ಳೆಯ ರೂಪವನ್ನೂ, ವಿಕ್ರಮವನ್ನೂ, ಬಲವನ್ನೂ ಹೊಂದಿದವರಾಗಿ ಬಲದಿಂದಲೂ, ದರ್ಪದಿಂದಲೂ ಕೂಡಿದವರಾಗಿ ಗರ್ಜಿಸಿದರು.
ತತಸ್ತು ತೇ ರಾಜಗಣಾಃ ಕ್ರಮೇಣ
ಕೃಷ್ಣಾನಿಮಿತ್ತಂ ಚ ಸಮೀಹಮಾನಾಃ |
ತತ್ಕಾರ್ಮುಕಂ ಸಂಹನನೋಪಪನ್ನಂ
ಸಜ್ಯಂ ನ ಶೇಕುಸ್ತರಸಾ ಹಿ ಕರ್ತುಮ್ ॥40॥
ಅನಂತರ ಆ ರಾಜರುಗಳು ಒಬ್ಬೊಬ್ಬರಾಗಿ ಬಂದು ದ್ರೌಪದಿಯನ್ನು ಪಡೆಯುವ ಸಲುವಾಗಿ ವ್ಯಾಪಾರವನ್ನು ಮಾಡುತ್ತಾ ದೃಢವಾದ ಆ ಧನುಸ್ಸನ್ನು ತಮ್ಮ ಬಲದಿಂದ ಹೆದೆಯೇರಿಸಲಾರದೇ ಹೋದರು.
ತೇ ವಿಕ್ರಮಂತಃ ಸ್ಫುರತಾ ದೃಢೇನ
ನಿಪೀಡ್ಯಮಾನಾ ಧನುಷಾ ನರೇಂದ್ರಾಃ |
ವಿವೇಷ್ಟಮಾನಾ ಧರಣೀತಳಸ್ಥಾ
ದೃಶ್ಯಂತ ತತ್ರ ಪ್ರತಿಭಗ್ನದರ್ಪಾಃ ॥41॥
ಆ ರಾಜರು ಪ್ರಯತ್ನವನ್ನು ಮಾಡಿ ಧನುಸ್ಸಿನ ಒಂದು ಕೋಟಿಯಿಂದ ಹೊಡೆಯಲ್ಪಟ್ಟು ಭೂಮಿಯ ಮೇಲೆ ಬಿದ್ದು ಹೊರಳಾಡುತ್ತಾ ಭಗ್ನದರ್ಪರಾಗಿ ಅಲ್ಲಿ ಕಾಣುತ್ತಿದ್ದರು.
ಹಾಹಾಕೃತಂ ತದ್ಧನುಷಾ ದೃಢೇನ
ವಿಸ್ರಸ್ತನಾನಾಭರಣಾಂಬರಸ್ರಜಮ್ |
ಕೃಷ್ಣಾನಿಮಿತ್ತಂ ಚ ನಿವೃತ್ತಭಾವಂ
ರಾಜ್ಞಾಂ ತದಾ ಮಂಡಲಮಾರ್ತ್ತಮಾಸೀತ್ ॥42॥
ಆ ದೃಢವಾದ ಧನುಸ್ಸಿನ ಹೊಡೆತದಿಂದ ಬಡಿಯಲ್ಪಟ್ಟು ಅಸ್ತವ್ಯಸ್ತವಾದ ಮಾಲ್ಯಾಭರಣವನ್ನುಳ್ಳ ದ್ರೌಪದಿಯನ್ನು ಪಡೆಯಲು ಬಂದ ಅ ರಾಜಸಮೂಹದಲ್ಲಿ ಹಾಹಾಕಾರವುಂಟಾಗಿ ಅವರಿಗೆ ದ್ರೌಪದಿಯನ್ನು ಪಡೆಯುವ ಆಸೆಯು ದೂರವಾಯಿತು.
ಏವಂ ತೇಷು ನಿವೃತ್ತೇಷು ಕ್ಷತ್ರಿಯೇಷು ಸಮಂತತಃ |
ಚೇದೀನಾಮಧಿಪೋ ವೀರೋ ಬಲವಾನಂತಕೋಪಮಃ ॥43॥
ದಮಘೋಷಾತ್ಮಜೋ ವೀರಃ ಶಿಶುಪಾಲೋ ಮಹಾದ್ಯುತಿಃ |
ತಮಪ್ಯಾರೋಪ್ಯಮಾಣಂ ತು ಮಾಷಮಾತ್ರೇಽಭ್ಯತಾಡಯತ್ ॥44॥
ಹೀಗೆ ಆ ಕ್ಷತ್ರಿಯರೆಲ್ಲರೂ ರಂಗಮಧ್ಯದಿಂದ ಹಿಂದೆ ಬರುತ್ತಿರಲು ಅಂತಕನಂತೆ ಬಲಿಷ್ಠನಾದ, ದಮಘೋಷಸುತನಾದ, ಮಹಾಕಾಂತಿವಂತನಾದ ಚೇದಿಪತಿಯಾದ ಶಿಶುಪಾಲನು ಧನುಸ್ಸಿನ ಬಳಿಗೆ ಬಂದನು. ಹೆದೆಯೇರಿಸಲು ಧನುಸ್ಸನ್ನು ಬಗ್ಗಿಸುತ್ತಿರುವಾಗ ಒಂದು ಉದ್ದಿನಕಾಳಿನಷ್ಟು ಅಂತರವಿರುವಾಗ ಧನುಸ್ಸು ಅವನಿಗೂ ಹೊಡೆಯಿತು.
ತಾಡಿತಃ ಸ ಧನುಷ್ಕೋಟ್ಯಾ ಪಪಾತೋರ್ವ್ಯಾಂ ವಿಯನ್ಮುಖಃ ॥45॥
ಧನುಷ್ಕೋಟಿಯಿಂದ ತಾಡಿತನಾದ ಅವನು ಭೂಮಿಯ ಮೇಲೆ ಆಕಾಶದ ಕಡೆ ಮುಖವನ್ನು ಮಾಡಿಕೊಂಡು ಬಿದ್ದನು.
ತತೋ ರಾಜಾ ಜರಾಸಂಧೋ ಮಹಾವೀರ್ಯೋ ಮಹಾಬಲಃ |
ಕಂಬುಗ್ರೀವಃ ಪೃಥುವ್ಯಂಸೋ ಮತ್ತವಾರಣವಿಕ್ರಮಃ ॥46॥
ಮತ್ತವಾರಣತಾಮ್ರಾಕ್ಷೋ ಮತ್ತವಾರಣವೇಗವಾನ್ |
ಧನುಷೋಽಭ್ಯಾಶಮಾಗತ್ಯ ತಸ್ಥೌ ಗಿರಿರಿವಾಚಲಃ ॥47॥
ಅನಂತರ ಮಹಾವೀರ್ಯನೂ, ಮಹಾಬಲನೂ, ಕಂಬುಗ್ರೀವನೂ, ಉನ್ನತ ಭುಜಗಳುಳ್ಳವನೂ, ಮತ್ತಗಜವಿಕ್ರಮವುಳ್ಳವನೂ , ಮತ್ತಗಜದಂತೆ ಕೆಂಪಾದ ಕಣ್ಣುಗಳುಳ್ಳವನೂ, ಮತ್ತಗಜದ ವೇಗವುಳ್ಳವನೂ ಆದ ಜರಾಸಂಧನು ಧನುಸ್ಸಿನ ಸಮೀಪಕ್ಕೆ ಬಂದು ಪರ್ವತದಂತೆ ನಿಂತನು.
ತಮಪ್ಯಾರೋಪ್ಯಮಾಣಂ ತು ಸರ್ಷಮಾತ್ರೇಽಭ್ಯತಾಡಯತ್ |
ಧನುಷಾ ವಿಧ್ಯಮಾನಸ್ತು ಜಾನುಭ್ಯಾಮಗಮನ್ಮಹೀಮ್ |
ತತ ಉತ್ಥಾಯ ರಾಜಾ ಸ ಸ್ವರಾಷ್ಟ್ರಮಭಿಜಗ್ಮಿವಾನ್ ॥48॥
ಧನುಸ್ಸನ್ನು ಹೆದೆಯೇರಿಸುವಾಗ ಒಂದು ಸಾಸಿವೆಯ ಕಾಳಿನಷ್ಟು ಮಾತ್ರ ಅಂತರವು ಉಳಿದಿರಲು ಅವನಿಗೂ ಧನುಸ್ಸು ಹೊಡೆಯಿತು. ಅವನು ಮಂಡಿಗಳ ಮೇಲೆ ನೆಲಕ್ಕೆ ಬಿದ್ದನು. ಅಲ್ಲಿಂದ ಎದ್ದು ತನ್ನ ರಾಷ್ಟ್ರಕ್ಕೆ ಹಿಂದಿರುಗಿದನು.
ತತಃ ಶಲ್ಯೋ ಮಹಾವೀರ್ಯೋ ಮದ್ರರಾಜೋ ಮಹಾಬಲಃ |
ತಮಥಾರೋಪ್ಯಮಾಣಂ ತು ಮುದ್ಗಮಾತ್ರೇಽಭ್ಯತಾಡಯತ್ ॥49॥
ಅನಂತರ ಮಹಾವೀರ್ಯನೂ, ಮಹಾಬಲನೂ ಆದ ಮದ್ರರಾಜನಾದ ಶಲ್ಯನು ಬಂದನು. ಧನುಸ್ಸನ್ನು ಬಗ್ಗಿಸುವಾಗ ಒಂದು ಹೆಸರುಕಾಳಿನಷ್ಟು ಮಾತ್ರ ಅಂತರವು ಉಳಿದಿರಲು, ಅವನಿಗೂ ಧನುಸ್ಸು ಬಡಿಯಿತು.
ಸ ಪಪಾತ ಮಹೀಂ ರಂಗಾದರ್ಧಯೋಜನದೂರತಃ |
ತಥೈವಾಗಾತ್ ಸ್ವಕಂ ರಾಜ್ಯಂ ಪಶ್ಚಾದನವಲೋಕಯನ್ ॥50॥

ಅವನು ಅರ್ಧಯೋಜನ ದೂರದಲ್ಲಿ ಹೋಗಿ ಭೂಮಿಯ ಮೇಲೆ ಬಿದ್ದನು. ಅನಂತರ ಹಿಂದೆ ತಿರುಗಿ ನೋಡದೆ ತನ್ನ ರಾಜ್ಯಕ್ಕೆ ಹೊರಟು ಹೋದನು.
ತತೋ ದುರ್ಯೋಧನೋ ರಾಜಾ ಧಾರ್ತರಾಷ್ಟ್ರಃ ಪರಂತಪಃ |
ಮಾನೀ ದೃಢಾಸ್ತ್ರಸಂಪನ್ನಃ ಸರ್ವೈಶ್ಚ ನೃಪಲಕ್ಷಣೈಃ ॥51॥
ಉತ್ಥಿತಃ ಸಹಸಾ ತತ್ರ ಭ್ರಾತೃಮಧ್ಯೇ ಮಹಾಬಲಃ |
ವಿಲೋಕ್ಯ ದ್ರೌಪದೀಂ ಹೃಷ್ಟೋ ಧನುಷೋಽಭ್ಯಾಶಮಾಗಮತ್ ॥52॥
ಅನಂತರ ಪರಂತಪನೂ, ಮಾನಿಯೂ, ದೃಢಾಸ್ತ್ರವುಳ್ಳವನೂ, ಎಲ್ಲಾ ರಾಜಲಕ್ಷಣದಿಂದಲೂ ಕೂಡಿದವನೂ ಮಹಾಬಲನೂ ಆದ ದುರ್ಯೋಧನನು ತನ್ನ ಭ್ರಾತೃಗಳ ಸಮೂಹದಿಂದ ಮೇಲೆದ್ದನು. ಅವನು ದ್ರೌಪದಿಯನ್ನು ನೋಡಿ ಹರ್ಷದಿಂದ ಧನುಸ್ಸಿನ ಸಮೀಪಕ್ಕೆ ಬಂದನು.
* (ಈ ಪ್ರಕರಣವು ತಾತ್ಪರ್ಯನಿರ್ಣಯದಲ್ಲಿಲ್ಲ).
ಸ ಬಭೌ ಧನುರಾದಾಯ ಶಕ್ರಶ್ಚಾಪಧರೋ ಯಥಾ |
ಆರೋಪ್ಯಮಾಣಂ ತದ್ ರಾಜಾ ಧನುಷಾ ಬಲಿನಾ ತದಾ ॥53॥
ಉತ್ತಾನಶಯ್ಯಮಪತದ್ ಅಂಗುಲ್ಯಂತರತಾಡಿತಃ |
ಸ ಯಯೌ ತಾಡಿತಸ್ತೇನ ವ್ರೀಡನ್ನಿವ ನರಾಧಿಪಃ ॥54॥
ಅವನು ಕೈಯಲ್ಲಿ ಧನುಸ್ಸನ್ನು ಹಿಡಿದು, ಧನುಸ್ಸನ್ನು ಹಿಡಿದ ಇಂದ್ರನಂತೆ ಶೋಭಿಸಿದನು. ಧನುಸ್ಸನ್ನು ಬಗ್ಗಿಸುವಾಗ ಇನ್ನೂ ಒಂದು ಬೆರಳಿನಷ್ಟು ಅಂತರವು ಉಳಿದಿರಲು ಆ ಧನುಸ್ಸು ಅವನಿಗೂ ಬಡಿದು ಅವನು ಉತ್ತಾನಶಾಯಿಯಾಗಿ (ಮುಖವನ್ನು ಮೇಲೆ ಮಾಡಿಕೊಂಡು) ಭೂಮಿಯ ಮೇಲೆ ಬಿದ್ದನು. ಧನುಸ್ಸಿನಿಂದ ತಾಡಿತನಾದ ಆ ರಾಜನು ನಾಚಿಕೆಯಿಂದಲೋ ಎಂಬಂತೆ ಹೊರಟು ಹೋದನು.
ತತೋ ವೈಕರ್ತನಃ ಕರ್ಣೋ ವೃಷಾ ವೈ ಸೂತನಂದನಃ |
ಧನುರಭ್ಯಾಶಮಾಗಮ್ಯ ತೋಲಯಾಮಾಸ ತದ್ಧನುಃ |
ತಂ ಚಾಪ್ಯರೋಪ್ಯಮಾಣಂ ತು ರೋಮಮಾತ್ರೇಽಭ್ಯತಾಡಯತ್ ॥
ಅನಂತರ ಸೂತನಂದನನಾದ, ವೃಷನಾದ, ವೈಕರ್ತನನೂ ಆದ ಕರ್ಣನು ಧನುಸ್ಸಿನ ಸಮೀಪಕ್ಕೆ ಬಂದು ಧನುಸ್ಸನ್ನು ಕೈಯಲ್ಲಿ ಹಿಡಿದು ಅದನ್ನು ಓಲಾಡಿಸಿದನು. ಧನುಸ್ಸನ್ನು ಬಗ್ಗಿಸುವಾಗ ಒಂದು ರೋಮಮಾತ್ರದಷ್ಟೇ ಅಂತರವು ಉಳಿದಿರಲು ಅವನಿಗೂ ಧನುಸ್ಸು ಬಡಿಯಿತು.
ತ್ರೈಲೋಕ್ಯವಿಜಯೀ ಕರ್ಣಃ ಸತ್ತ್ವೇ ತ್ರೈಲೋಕ್ಯವಿಶ್ರುತಃ |
ಧನುಷಾ ಸೋಽಪಿ ನಿರ್ಧೂತ ಇತಿ ಸರ್ವೇ ಭಯಾಕುಲಾಃ ॥56॥
ತ್ರೈಲೋಕ್ಯವಿಜಯಿಯೂ, ಬಲದಲ್ಲಿ ಮೂರು ಲೋಕದಲ್ಲಿಯೂ ವಿಶ್ರುತನೂ ಆದ ಕರ್ಣನೂ ಸಹ ಧನುಸ್ಸಿನಿಂದ ತಾಡಿತನಾದುದನ್ನು ನೋಡಿ ಎಲ್ಲರೂ ಭಯಗ್ರಸ್ತರಾದರು.
ಏವಂ ಕರ್ಣೇ ವಿನಿರ್ಧೂತೇ ಧನುಷಾऽನ್ಯೇ ನೃಪೋತ್ತಮಾಃ |
ಚಕ್ಷುರ್ಭಿರಪಿ ನಾಪಶ್ಯನ್ ವಿನಮ್ರಮುಖಪಂಕಜಾಃ ॥57॥
ದೃಷ್ಟ್ವಾ ಕರ್ಣಂ ವಿನಿರ್ಧೂತಂ ಲೋಕವೀರಾ ನೃಪೋತ್ತಮಾಃ |
ನಿರಾಶಾ ಧನುಷೋದ್ಧಾರೇ ದ್ರೌಪದೀಸಂಗಮೇऽಪಿ ಚ ॥58॥
ಕರ್ಣನು ನಿವೃತ್ತನಾದ ಮೇಲೆ ಭಯಾಕುಲರಾದ ನೃಪೋತ್ತಮರು ಮುಖಗಳನ್ನು ತಗ್ಗಿಸಿ ತಮ್ಮ ಕಣ್ಣುಗಳಿಂದ ಆ ಧನುಸ್ಸನ್ನು ನೋಡದೆ ಕುಳಿತರು. ಕರ್ಣನು ತಿರಸ್ಕೃತನಾದುದನ್ನು ನೋಡಿ ಲೋಕವೀರರಾದ ನೃಪೋತ್ತಮರು ಧನುಸ್ಸನ್ನು ಎತ್ತುವ ವಿಷಯದಲ್ಲಿಯೂ ಮತ್ತು ದ್ರೌಪದಿಯನ್ನು ಪಡೆಯುವ ವಿಷಯದಲ್ಲಿಯೂ ನಿರಾಶರಾದರು.
ತಸ್ಮಿಂಸ್ತು ಸಂಭ್ರಾಂತಜನೇ ಸಮಾಜೇ
ನಿಕ್ಷಿಪ್ತಶಸ್ತ್ರೇಷು ಜನಾಧಿಪೇಷು |
ಕುಂತೀಸುತೋ ಜಿಷ್ಣುರಿಯೇಷ ಕರ್ತುಂ
ಸಜ್ಯಂ ಧನುಸ್ತತ್ ಸಶರಂ ಚ ವೀರಃ ॥59॥
ಆ ಸಮಾಜದಲ್ಲಿ ಎಲ್ಲ ಜನರೂ ದಿಗ್ಭ್ರಾಂತರಾಗಿರಲು, ಎಲ್ಲ ರಾಜರೂ ತಮ್ಮ ಶಸ್ತ್ರಗಳನ್ನು ಕೆಳಗೆ ಹಾಕಿ ಕುಳಿತಿರಲು, ಕುಂತೀಪುತ್ರನಾದ, ವೀರನಾದ ಅರ್ಜುನನು (ಭೀಮಸೇನನ ಅನುಜ್ಞೆಯನ್ನು ಪಡೆದು) ಬಾಣಗಳಿಂದ ಸಹಿತವಾಗಿದ್ದ ಆ ಧನುಸ್ಸನ್ನು ಸಜ್ಯವನ್ನಾಗಿ ಮಾಡಲು (ಹೆದೆಯೇರಿಸಲು) ಬಯಸಿದನು.
ತತೋ ವರಿಷ್ಠಃ ಸುರದಾನವಾನಾಮ್
ಉದಾರಧೀರ್ವೃಷ್ಣಿಕುಲಪ್ರವೀರಃ |
ಜಹರ್ಷ ರಾಮೇಣ ಸ ಪೀಡ್ಯ ಹಸ್ತಂ
ಹಸ್ತಂ ಗತಾಂ ಪಾಂಡುಸುತಸ್ಯ ಮತ್ವಾ ॥60॥
ಆಗ ಸುರಾಸುರಲೋಕದಲ್ಲಿ ಅತ್ಯಂತ ಶ್ರೇಷ್ಠನಾದ, ಉದಾರ ಬುದ್ಧಿಯುಳ್ಳ, ವೃಷ್ಣಿಕುಲವೀರನಾದ ಕೃಷ್ಣನು ಬಲರಾಮನ ಕೈಯನ್ನು ಹಿಡಿದು ಮೃದುವಾಗಿ ಪೀಡಿಸಿ ಅರ್ಜುನನು ದ್ರೌಪದಿಯನ್ನು ಪಡೆದನೆಂದು ತಿಳಿದು ಸಂತೋಷಪಟ್ಟನು.
ನ ಜಜ್ಞುರನ್ಯೇ ನೃಪವೀರಮುಖ್ಯಾಃ
ಸಂಛನ್ನರೂಪಾನಥ ಪಾಂಡುಪುತ್ರಾನ್ |

ವಿನಾ ಹಿ ಭೀಷ್ಮಂ ಚ ಯದುಪ್ರವೀರೌ
ಧೌಮ್ಯಂ ಚ ಧರ್ಮಂ ಸಹ ಸೋದರಾಂಶ್ಚ ॥61॥
ಆದರೆ ಭೀಷ್ಮರನ್ನೂ ಕೃಷ್ಣಬಲರಾಮರನ್ನೂ ಮತ್ತು ಧೌಮ್ಯರನ್ನೂ ಬಿಟ್ಟು ಉಳಿದ ಯಾವ ರಾಜರುಗಳೂ ಸಹ ಗುಪ್ತರೂಪದಲ್ಲಿದ್ದ ಪಾಂಡುಪುತ್ರರಾದ ಧರ್ಮರಾಜ ಮತ್ತು ಅವನ ಸೋದರರನ್ನು ಗುರುತಿಸಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಷಡಶೀತ್ಯದಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಎಂಭತ್ತಾರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ತತ್ರಾರ್ಜುನಃ ಪವನಜಾತ್ ಪ್ರಿಯತೋಽಪ್ಯನುಜ್ಞಾ-
ಮಾದಾಯ ಕೇಶವಮಜಂ ಮನಸಾ ಪ್ರಣಮ್ಯ |
ಕೃತ್ವಾಗುಣಾನ್ವಿತಮದೋ ಧನುರಶ್ರಮೇಣ
ಯಂತ್ರಾಂತರೇಣ ಶರೈರಧುನೋಚ್ಚ ಲಕ್ಷಮ್ ॥131॥
ಅರ್ಜುನ ಲಕ್ಷ್ಯವೇಧಕ್ಕಾಗಿ ಪ್ರಿಯನಾದ ಭೀಮನಿಂದ ಅನುಜ್ಞೆ ಪಡೆದು ಶ್ರೀಕೃಷ್ಣನನ್ನೂ ಅನುಜ್ಞೆಗಾಗಿ ಮನಸಿನಿಂದ ನಮಿಸಿ ಅನಾಯಾಸವಾಗಿ ಬಿಲ್ಲಿಗೆ ಹೆದೆಯೇರಿಸಿ ಯಂತ್ರದ ಮಧ್ಯದಲ್ಲಿರುವ ತೂತಿನ ಮೂಲಕ ಲಕ್ಷ್ಯವನ್ನು ಐದೂ ಬಾಣಗಳಿಂದ ಹೊಡೆದ.
ಕೃಷ್ಣಾ ತದಾಸ್ಯ ವಿದಧೇ ನವಕಂಜಮಾಲಾಂ
ಮಧ್ಯೇ ಚ ತಾಂ ಪ್ರತಿವಿಧಾಯ ನರೇಂದ್ರಪುತ್ರೌ |
ಭೀಮಾರ್ಜುನೌ ಯಯತುರಚ್ಯುತಮಾಭಿನಮ್ಯ
ಕ್ಷುಬ್ಧಂ ತದಾ ನೃಪವರಾಬ್ಧಿರಿಮಾವಧಾವತ್ ॥132॥
ದ್ರೌಪದಿ ಆಗ ಹೊಸ ಕಮಲದ ಮಾಲೆಯನ್ನು ಅರ್ಜುನನ ಕೊರಳಲ್ಲಿ ಹಾಕಿದಳು. ಅವಳನ್ನು ಮಧ್ಯದಲ್ಲಿ ಮಾಡಿಕೊಂಡು ರಾಜಕುಮಾರರಾದ ಭೀಮಾರ್ಜುನರು ಕೃಷ್ಣನನ್ನು ನಮಿಸಿ ಹೊರಟರು. ಆಗ ಪ್ರಕ್ಷುಬ್ಧವಾದ ಸಮುದ್ರದಂತಿದ್ದ ರಾಜಶ್ರೇಷ್ಠರ ಸಮೂಹ ಭೀಮಾರ್ಜುನರ ಬಳಿಗೆ ಧಾವಿಸಿ ಬಂದಿತು.
* * * *

ನೂರ ಎಂಭತ್ತೇಳನೆಯ ಅಧ್ಯಾಯ
(ಬ್ರಾಹ್ಮಣರು ಅನೇಕ ರೀತಿಯಲ್ಲಿ ಮಾತನಾಡುತ್ತಿರಲು ಅರ್ಜುನನಿಂದ ಲಕ್ಷ್ಯವೇಧ, ಬ್ರಾಹ್ಮಣರ ಹರ್ಷ, ದ್ರೌಪದಿಯಿಂದ ಮಾಲಾರ್ಪಣೆ)
ವೈಶಂಪಾಯನಃ
ತದೋದತಿಷ್ಠದ್ ವಿಪ್ರಾಣಾಂ ಮಧ್ಯಾಜ್ಜಿಷ್ಣುರುದಾರಧೀಃ |
ಉದಕ್ರೋಶನ್ ವಿಪ್ರಮುಖ್ಯಾ ವಿಧುನ್ವಂತೋಽಜಿನಾನಿ ವೈ ॥1॥
ಆಗ ವಿಪ್ರರ ಸಮೂಹದ ಮಧ್ಯದಿಂದ ಉದಾರಬುದ್ಧಿಯುಳ್ಳ ಅರ್ಜುನನು ಎದ್ದನು. ಬ್ರಾಹ್ಮಣಶ್ರೇಷ್ಠರು ತಮ್ಮ ಕೃಷ್ಣಾಜಿನವನ್ನು ಕೊಡವುತ್ತಾ ಕೇಕೆ ಹಾಕಿದರು.
ದೃಷ್ಟ್ವಾ ಸಮುತ್ಥಿತಂ ಪಾರ್ಥಮಿಂದ್ರಕೇತುಸಮಪ್ರಭಮ್ |
ಕೇಚಿದಾಸನ್ ವಿಮನಸಃ ಕೇಚಿದಾಸನ್ ಮುದಾಽನ್ವಿತಾಃ ॥2॥
ಇಂದ್ರಧ್ವಜದ ಕಾಂತಿಯನ್ನು ಹೊಂದಿದ್ದ ಅರ್ಜುನನು ಎದ್ದುದನ್ನು ನೋಡಿ ಕೆಲವರಿಗೆ ಬೇಸರವಾಯಿತು. ಇನ್ನು ಕೆಲವರು ಹರ್ಷಪಟ್ಟರು.
ಆಹುಃ ಪರಸ್ಪರಂ ಕೇಚಿನ್ನಿಪುಣಾ ಬುದ್ಧಿಚಿಂತಕಾಃ |
ಯತ್ ಕರ್ಣಶಲ್ಯಪ್ರಮುಖೈಃ ಪಾರ್ಥಿವೈರ್ಲೋಕವಿಶ್ರುತೈಃ ॥3॥
ನಾನತಂ ಬಲವದ್ಭಿರ್ಹಿ ಧನುರ್ವೇದಪರಾಯಣೈಃ |
ತತ್ಕಥಂ ತ್ವಕೃತಾಸ್ತ್ರೇಣ ಪ್ರಾಣತೋ ದುರ್ಬಲೀಯಸಾ ॥4॥
ದ್ವಿಜಮಾತ್ರೇಣ ಶಕ್ಯಂ ಹಿ ಸಜ್ಯಂ ಕರ್ತುಂ ಧನುರ್ದ್ವಿಜಾಃ |
ಸಜ್ಯಂ ಚೇತ್ ಕೃತವಾನೇಷ ವಿದ್ಧಂ ಲಕ್ಷಂ ಕಥಂ ಭವೇತ್ ॥5॥
ನಿಪುಣರಾದ ಚಿಂತಕರಾದ ಅವರು ತಮ್ಮತಮ್ಮಲ್ಲಿಯೇ ಹೀಗೆ ಮಾತನಾಡಿಕೊಂಡರು. ಯಾವ ಧನುಸ್ಸನ್ನು ಧನುರ್ವೇದ ಪರಾಯಣರಾದ, ಬಲಿಷ್ಠರಾದ ಲೋಕವಿಖ್ಯಾತರಾದ, ಕರ್ಣ, ಶಲ್ಯ ಮೊದಲಾದ ರಾಜರುಗಳಿಂದ ಬಗ್ಗಿಸಲು ಸಾಧ್ಯವಾಗಲಿಲ್ಲವೋ ಅಂತಹ ಧನುಸ್ಸನ್ನು ಅಸ್ತ್ರಜ್ಞಾನವಿಲ್ಲದ ಪ್ರಾಣಶಕ್ತಿಯಿಂದ ದುರ್ಬಲನಾದ ಒಬ್ಬ ಬ್ರಾಹ್ಮಣನು ಹೇಗೆ ಹೆದೆಯೇರಿಸಲು ಸಾಧ್ಯ? ಬ್ರಾಹ್ಮಣರೇ, ಒಂದುಪಕ್ಷ ಅವನು ಹೆದೆಯೇರಿಸಿದರೂ ಲಕ್ಷ್ಯವೇಧವು ಹೇಗೆ ಉಂಟಾಗುವುದು?

ಅಪಹಾಸ್ಯಾ ಭವಿಷ್ಯಂತಿ ಬ್ರಾಹ್ಮಣಾಃ ಸರ್ವರಾಜಸು |
ಕರ್ಮಣ್ಯಸ್ಮಿನ್ನಸಂಸಿದ್ಧೇ ಚಾಪಲಾದಪರೀಕ್ಷಿತೇ ॥6॥
ಯದ್ಯೇಷ ದರ್ಪಾನ್ಮೋಹಾದ್ ವಾ ಯದಿ ವಾ ಬ್ರಹ್ಮಚಾಪಲಾತ್ |
ಪ್ರಸ್ಥಿತೋ ಧನುರಾಯಂತುಂ ವಾರ್ಯತಾಂ ಸಾಧು ಮಾ ಗಮತ್ ॥
ಚಪಲತೆಯಿಂದ ತನ್ನ ಶಕ್ತಿಯನ್ನು ತಿಳಿದುಕೊಳ್ಳದೆ ಈ ಕಾರ್ಯದಲ್ಲಿ ಈ ಬ್ರಾಹ್ಮಣನು ವಿಫಲನಾದರೆ ಎಲ್ಲ ಬ್ರಾಹ್ಮಣರೂ, ಎಲ್ಲ ರಾಜರುಗಳಿಂದ ಅಪಹಾಸ್ಯಕ್ಕೆ ಗುರಿಯಾಗುತ್ತಾರೆ. ಈ ಬ್ರಾಹ್ಮಣನು ದರ್ಪದಿಂದಲೋ, ಅಥವಾ ಮೋಹದಿಂದಲೋ ಅಥವಾ ಬ್ರಾಹ್ಮಣಚಪಲತೆಯಿಂದಲೋ ಧನುಸ್ಸನ್ನು ಬಗ್ಗಿಸಲು ಹೊರಟಿದ್ದರೆ ಬೇಗ ಅವನನ್ನು ತಡೆಯಿರಿ. ಅವನು ಮುಂದೆ ಹೋಗುವುದು ಬೇಡ.
ನಾಪಹಾಸ್ಯಾ ಭವಿಷ್ಯಾಮೋ ನ ಚ ಲಾಘವಮಾಸ್ಥಿತಾಃ |
ನ ಚ ವಿದ್ವಿಷತಾಂ ಲೋಕೇ ಗಮಿಷ್ಯಾಮೋ ಮಹೀಕ್ಷಿತಾಮ್ ॥8॥
ನಾವು ಅಪಹಾಸ್ಯಕ್ಕೆ ಗುರಿಯಾಗುವುದು ಬೇಡ. ಬ್ರಾಹ್ಮಣರಾದ ನಮಗೆ ಲಾಘವವು (ಕ್ಷಿಪ್ರತೆ ಮತ್ತು ನಿಖರತೆ) ಇಲ್ಲ. ನಾವು ನಮ್ಮನ್ನು ದ್ವೇಷಿಸುವ ರಾಜರುಗಳ ಮಧ್ಯೆ ಇನ್ನೊಮ್ಮೆ ಹೋಗಲಾರೆವು.
ಕೇಚಿದಾಹುರ್ಯುವಾ ಶ್ರೀಮಾನ್ ನಾಗರಾಜವರೋಪಮಃ |
ಪೀನಸ್ಕಂಧೋರುಬಾಹುಶ್ಚ ಧೈರ್ಯೇಣ ಹಿಮವಾನಿವ ॥9॥
ಇನ್ನೂ ಕೆಲವು ಬ್ರಾಹ್ಮಣರು ಈ ಬ್ರಾಹ್ಮಣಕುಮಾರನು ಯುವಕನೂ, ಕಾಂತಿಯುಕ್ತನೂ, ಶ್ರೇಷ್ಠವಾದ ಆನೆಯನ್ನು ಹೋಲುವವನೂ ಆಗಿದ್ದಾನೆ. ಎತ್ತರವಾದ ಭುಜಗಳು ಮತ್ತು ಪುಷ್ಟವಾದ ಬಾಹುಗಳನ್ನು ಹೊಂದಿದ ಇವನು ಧೈರ್ಯದಲ್ಲಿ ಹಿಮಾಲಯದಂತಿದ್ದಾನೆ.
ಸಂಭಾವ್ಯಂ ತಸ್ಯ ಕರ್ಮೇದಮುತ್ಸಾಹಾಚ್ಚಾನುಮೀಯತೇ |
ಶಕ್ತಿರಸ್ಯ ಮಹೋತ್ಸಾಹಾ ನ ಹ್ಯಶಕ್ತಃ ಸ್ವಯಂ ವ್ರಜೇತ್ ॥10॥
ಅವನು ಈ ಕಾರ್ಯವನ್ನು ಮಾಡಲು ಸಮರ್ಥನೆಂದು ಅವನ ಉತ್ಸಾಹದಿಂದ ಊಹಿಸಬಹುದಾಗಿದೆ. ಇವನಿಗೆ ಬಹಳ ಉತ್ಸಾಹವು ಮತ್ತು ಶಕ್ತಿಯೂ ಇದೆ. ಶಕ್ತಿಯಿಲ್ಲದವನು ತಾನೇ ಎದ್ದು ಹೋಗಲಾರ.
ನ ಚ ತದ್ ವಿದ್ಯತೇ ಕಿಂಚಿತ್ ಕರ್ಮ ಲೋಕೇಷು ಯದ್ ಭವೇತ್ |
ಬ್ರಾಹ್ಮಣಾನಾಮಸಾಧ್ಯಂ ವಾ ಧೃಷ್ಣು ಸ್ಥಾಸ್ನು ಚರಿಷ್ಣು ಚ ॥11॥
ಬ್ರಾಹ್ಮಣರಿಗೆ ಅಸಾಧ್ಯವಾದ ಕರ್ಮವು ಅದು ಧೈರ್ಯಯುಕ್ತ- ವಾಗಿರಬಹುದು, ಸ್ಥಿರವಾಗಿರಬಹುದು ಅಥವಾ ಚಲಿಸುವುದಾಗಿರಬಹುದು, ಲೋಕಗಳಲ್ಲಿ ಯಾವುದೂ ಇಲ್ಲ.
ಅಬ್ಭಕ್ಷಾ ವಾಯುಭಕ್ಷಾಶ್ಚ ಫಲಾಹಾರಾ ದೃಢವ್ರತಾಃ |
ದುರ್ಬಲಾ ಹಿ ಬಲೀಯಂಸೋ ವಿಪ್ರಾ ಹಿ ಬ್ರಹ್ಮತೇಜಸಾ ॥12॥
ಅಬ್ಭಕ್ಷರಾಗಿ, ವಾಯುಭಕ್ಷರಾಗಿ ಫಲಗಳನ್ನು ಸೇವಿಸಿ ಅನೇಕ ವ್ರತಗಳನ್ನು ಮಾಡಿ ಬ್ರಾಹ್ಮಣರು ಶರೀರದಿಂದ ದುರ್ಬಲರಾದರೂ ಬ್ರಹ್ಮತೇಜಸ್ಸಿನಿಂದ ಬಲಿಷ್ಠರಾದವರೇ ಸರಿ.
ಬ್ರಾಹ್ಮಣೋ ನಾವಮಂತವ್ಯಃ ಸದಸದ್ವಾ ಸಮಾಚರನ್ |
ವಿರೂಪೋ ವಾ ಸುರೂಪೋ ವಾ ಸಂಸ್ಕೃತಃ ಪ್ರಾಕೃತೋಽಪಿ ವಾ ॥13॥
ಬ್ರಾಹ್ಮಣನು ವಿರೂಪನಾಗಿರಲಿ ಅಥವಾ ಸುರೂಪನಾಗಿರಲಿ, ಸಂಸ್ಕೃತನಾಗಿರಲಿ ಅಥವಾ ಅಸಂಸ್ಕೃತನಾಗಿರಲಿ, ಒಳ್ಳೆಯ ಕಾರ್ಯವನ್ನು ಮಾಡಲಿ ಅಥವಾ ಕೆಟ್ಟಕಾರ್ಯವನ್ನು ಮಾಡಲಿ, ಅವನಿಗೆ ಅವಮಾನವನ್ನು ಮಾಡಬಾರದು.
ಸ್ವಾತ್ಮತೇಜೋ ವಿಗೂಹಂತೋ ಭಸ್ಮಚ್ಛನ್ನಾ ಇವಾಗ್ನಯಃ |
ಧನುರ್ವೇದೇ ಚ ವೇದೇ ಚ ಯೋಗೇಷು ವಿವಿಧೇಷು ಚ ॥14॥
ಬ್ರಾಹ್ಮಣರು ಬೂದಿಮುಚ್ಚಿದ ಕೆಂಡದಂತೆ ತಮ್ಮ ಪರಾಕ್ರಮವನ್ನು ಪ್ರಕಾಶಗೊಳಿಸದೆ ಧನುರ್ವೇದದಲ್ಲಿಯೂ, ವೇದದಲ್ಲಿಯೂ, ವಿವಿಧ ಯೋಗಗಳಲ್ಲಿಯೂ ಪಾರಂಗತರಾಗಿರುತ್ತಾರೆ.
ನ ತಂ ಪಶ್ಯಾಮಿ ಮೇದಿನ್ಯಾಂ ಬ್ರಾಹ್ಮಣೇಭ್ಯೋಽಧಿಕೋ ಭವೇತ್ |
ಮಂತ್ರಯೋಗಬಲೇನಾಪಿ ಮಹತಾಽಽತ್ಮಬಲೇನ ಚ ॥15॥
ಮಂತ್ರಯೋಗಬಲದಿಂದಾಗಲೀ ಅಥವಾ ಶ್ರೇಷ್ಠವಾದ ಆತ್ಮಬಲ- ದಿಂದಾಗಲೀ ಬ್ರಾಹ್ಮಣರಿಗಿಂತ ಶ್ರೇಷ್ಠವಾದ ವ್ಯಕ್ತಿಯು ಭೂಮಿಯಲ್ಲಿ ಯಾರೂ ಕಾಣುವುದಿಲ್ಲ.
ವಿದ್ವಾಂಸೋ ದೃಢತತ್ವಜ್ಞಾಃ ತಪಸಾ ಶಾಂತಿಮಾಗತಾಃ |
ನ ಪ್ರಕಾಶಂತಿ ಚಾತ್ಮಾನಂ ನ ಚಾಲ್ಯಾಃ ಪೂರ್ಣಕುಂಭವತ್ |
ಕಾಲೇನ ಜೃಂಭಯೇಯುಸ್ತೇ ಹೀನಲೋಕಮಿವ ದ್ವಿಜಾಃ ॥16॥
ವಿದ್ವಾಂಸರೂ, ಒಳ್ಳೆಯ ತತ್ವಜ್ಞಾನಿಗಳೂ, ತಪಸ್ಸಿನಿಂದ ಶಾಂತರಾದವರೂ ಆದ ಬ್ರಾಹ್ಮಣರು ತಮ್ಮನ್ನು ಪ್ರಕಾಶಿಸಿಕೊಳ್ಳುವುದಿಲ್ಲ. ತುಂಬಿದ ಕೊಡದಂತೆ ಅವರು ಅಲುಗಾಡುವುದಿಲ್ಲ. ಯೋಗ್ಯವಾದ ಕಾಲವು ಬಂದಾಗ ಸೂರ್ಯಚಂದ್ರರು ಇಲ್ಲದಿರುವಾಗ ನಕ್ಷತ್ರಗಳು ಬೆಳಗುವಂತೆ ಅವರು ಬೆಳಗುತ್ತಾರೆ.
ಏವಂ ತೇಷಾಂ ವಿಲಪತಾಂ ವಿಪ್ರಾಣಾಂ ವಿವಿಧಾ ಗಿರಃ |
ಅರ್ಜುನೋ ಧನುಷೋಽಭ್ಯಾಶೇ ತಸ್ಥೌ ಗಿರಿರಿವಾಚಲಃ ॥17॥
ಹೀಗೆ ಬ್ರಾಹ್ಮಣರು ವಿಧವಿಧವಾಗಿ ಮಾತನಾಡುತ್ತಿರಲು ಅರ್ಜುನನು ಆ ಧನುಸ್ಸಿನ ಸಮೀಪಕ್ಕೆ ಬಂದು ಪರ್ವತದಂತೆ ಸ್ಥಿರವಾಗಿ ನಿಂತನು.

ಅರ್ಜುನಃ ಪಾಂಡವಶ್ರೇಷ್ಠೋ ಧೃಷ್ಟದ್ಯುಮ್ನಮಥಾಬ್ರವೀತ್ |
ಏತದ್ಧನುರ್ಬ್ರಾಹ್ಮಣಾನಾಂ ಸಜ್ಯಂ ಕರ್ತುಮಲಂ ನು ಕಿಮ್ |
ತಸ್ಯ ತದ್ವಚನಂ ಶ್ರುತ್ವಾ ಧೃಷ್ಟದ್ಯುಮ್ನೋಽಬ್ರವೀದ್ ವಚಃ ॥18॥
ಪಾಂಡವ ಶ್ರೇಷ್ಠನಾದ ಅರ್ಜುನನು ಆಗ ಧೃಷ್ಟದ್ಯುಮ್ನನನ್ನು ಕುರಿತು, ಈ ಧನುಸ್ಸನ್ನು ಬ್ರಾಹ್ಮಣರು ಹೆದೆಯೇರಿಸಬಹುದೆ ಎಂದು ಕೇಳಿದನು. ಅವನ ಮಾತನ್ನು ಕೇಳಿ ಧೃಷ್ಟದ್ಯುಮ್ನನು ಉತ್ತರವನ್ನು ಕೊಟ್ಟನು.
ಬ್ರಾಹ್ಮಣೋ ವಾಽಥ ರಾಜನ್ಯೋ ವೈಶ್ಯೋ ವಾ ಶೂದ್ರ ಏವ ವಾ |
ಏತೇಷಾಂ ಯೋ ಧನುಃಶ್ರೇಷ್ಠಂ ಸಜ್ಯಂ ಕುರ್ಯಾದ್ ದ್ವಿಜೋತ್ತಮ ॥
ತಸ್ಮೈ ಪ್ರದೇಯಾ ಭಗಿನೀ ಸತ್ಯಮುಕ್ತಂ ಮಯಾ ವಚಃ |
ತಸ್ಯ ತದ್ವಚನಂ ಶ್ರುತ್ವಾ ಪ್ರಯಯೌ ಬ್ರಾಹ್ಮಣೈರ್ವೃತಃ ॥20॥
ಬ್ರಾಹ್ಮಣಶ್ರೇಷ್ಠನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರಲ್ಲಿ ಯಾವನು ಈ ಶ್ರೇಷ್ಠವಾದ ಧನುಸ್ಸನ್ನು ಹೆದೆಯಿಂದ ಬಿಗಿದು (ಲಕ್ಷ್ಯವೇಧವನ್ನು ಮಾಡುತ್ತಾನೋ) ಅವನಿಗೆ ನನ್ನ ತಂಗಿಯನ್ನು ಕೊಡುತ್ತೇನೆ ಇದು ನನ್ನ ಸತ್ಯವಾದ ಮಾತು. ಧೃಷ್ಟದ್ಯುಮ್ನನ ಆ ಮಾತನ್ನು ಕೇಳಿ ಅರ್ಜುನನು ಬ್ರಾಹ್ಮಣರ ಜೊತೆಯಲ್ಲಿ ಇನ್ನೂ ಧನುಸ್ಸಿನ ಸಮೀಪಕ್ಕೆ ಹೋದನು.
ತತಃ ಪಶ್ಚಾನ್ಮಹಾತೇಜಾಃ ಪಾಂಡವೋ ರಣದುರ್ಜಯಃ |
ಸ ತದ್ಧನುಃ ಪರಿಕ್ರಮ್ಯ ಪ್ರದಕ್ಷಿಣಮಥಾಕರೋತ್ ॥21॥
ಅನಂತರ ಮಹಾತೇಜಸ್ವಿಯಾದ ರಣದುರ್ಜಯನಾದ ಪಾಂಡು- ಪುತ್ರನಾದ ಅರ್ಜುನನು ಆ ಧನುಸ್ಸಿನ ಸಮೀಪಕ್ಕೆ ಹೋಗಿ ಪ್ರದಕ್ಷಿಣೆಯನ್ನು ಮಾಡಿದನು.
ಪ್ರಣಮ್ಯ ಶಿರಸಾ ಹೃಷ್ಟೋ ಜಗೃಹೇ ಚ ಪರಂತಪಃ |
ಪ್ರಣಮ್ಯ ಶಿರಸಾ ದೇವಮೀಶಾನಂ ವರದಂ ಶುಭಮ್ |
ಕೃಷ್ಣಂ ಚ ಮನಸಾ ಕೃತ್ವಾ ಜಗೃಹೇ ಚಾರ್ಜುನೋ ಧನುಃ ॥22॥
ಪರಂತಪನಾದ ಅರ್ಜುನನು ಧನುಸ್ಸಿಗೆ ಶಿರಸಾ ಪ್ರಣಾಮವನ್ನು ಮಾಡಿ ಸಂತೋಷದಿಂದ ಧನುಸ್ಸನ್ನು ಕೈಗೆತ್ತಿಕೊಂಡನು. ಅನಂತರ ವರದನಾದ ಮಂಗಳಪ್ರದನಾದ ರುದ್ರದೇವನಿಗೆ ಶಿರಸಾ ಪ್ರಣಾಮವನ್ನು ಮಾಡಿ ಮನಸ್ಸಿನಿಂದಲೇ ಕೃಷ್ಣನಿಗೆ ಪ್ರಣಾಮವನ್ನು ಮಾಡಿ ಅರ್ಜುನನು ಧನುಸ್ಸನ್ನು ಮೇಲಕ್ಕೆತ್ತಿದನು.
ಸಜ್ಯಂ ಚ ಚಕ್ರೇ ನಿಮಿಷಾಂತರೇಣ
ಶರಾಂಶ್ಚ ಜಗ್ರಾಹ ದಶಾರ್ಧಸಂಖ್ಯಾನ್ |
ವಿವ್ಯಾಧ ಲಕ್ಷಂ ನಿಪಪಾತ ತಚ್ಚ
ಛಿದ್ರೇಣ ಭೂಮೌ ಸಹಸಾಽತಿವಿದ್ಧಮ್ ॥23॥
ಒಂದು ನಿಮಿಷಕ್ಕೂ ಕಡಿಮೆ ಕಾಲದಲ್ಲಿ ಧನುಸ್ಸನ್ನು ಬಗ್ಗಿಸಿ ಹೆದೆಯನ್ನು ಬಿಗಿದು ಐದು ಬಾಣಗಳನ್ನು ಕೈಗೆ ತೆಗೆದುಕೊಂಡನು. ಆ ಬಾಣಗಳಿಂದ ವಿದ್ಧವಾದ ಲಕ್ಷ್ಯವು ಯಂತ್ರದ ಛಿದ್ರದ ಮೂಲಕವಾಗಿ ತಕ್ಷಣ ಭೂಮಿಯ ಮೇಲೆ ಬಿದ್ದಿತು.
ತತೋಽಂತರಿಕ್ಷೇ ಚ ಬಭೂವ ನಾದಃ
ಸಮಾಜಮಧ್ಯೇ ಚ ಮಹಾನ್ ನಿನಾದಃ |
ಪುಷ್ಪಾಣಿ ದಿವ್ಯಾನಿ ವವರ್ಷ ದೇವಃ
ಪಾರ್ಥಸ್ಯ ಮೂರ್ಧ್ನಿ ದ್ವಿಷತಾಂ ನಿಹಂತುಃ ॥24॥
ಆಗ ಅಂತರಿಕ್ಷದಲ್ಲಿ ದೊಡ್ಡ ನಾದವುಂಟಾಯಿತು. ಭೂಮಿಯಲ್ಲಿ ಸಮಾಜದಲ್ಲಿಯೂ ದೊಡ್ಡ ನಿನಾದವುಂಟಾಯಿತು.
ಶತ್ರುನಾಶನನಾದ ಇಂದ್ರನು ಅರ್ಜುನನ ತಲೆಯ ಮೇಲೆ ಸ್ವರ್ಗಲೋಕದ ಪುಷ್ಪಗಳಿಂದ ಪುಷ್ಪವೃಷ್ಟಿಯನ್ನು ಮಾಡಿದನು.
ಚೇಲಾಂಶ್ಚ ದುಧುವುಸ್ತತ್ರ ಬ್ರಾಹ್ಮಣಾಶ್ಚ ಸಹಸ್ರಶಃ |
ನನಂದುರ್ನನೃತುಶ್ಚಾತ್ರ ಧೂನ್ವಂತೋ ವ್ಯಜನಾನಿ ಚ ॥25॥
ಬ್ರಾಹ್ಮಣರು ಸಹಸ್ರಸಂಖ್ಯೆಯಲ್ಲಿ ಎದ್ದು ತಮ್ಮ ಉತ್ತರೀಯಗಳನ್ನು ಕೊಡವಿ ಹಾರಾಡಿಸಿದರು. ತಮ್ಮ ಕೃಷ್ಣಾಜಿನಗಳನ್ನೂ, ಬೀಸಣಿಗೆಗಳನ್ನೂ ಅಲುಗಾಡಿಸುತ್ತಾ ನರ್ತನ ಮಾಡಿ ಸಂತೋಷಪಟ್ಟರು.
ನ್ಯಪತಂಶ್ಚಾತ್ರ ನಭಸಃ ಸಮಂತಾತ್ ಪುಷ್ಪವೃಷ್ಟಯಃ |
ಶಂಖಾನಿ ಚೈವ ತೂರ್ಯಾಣಿ ವಾದಕಾಶ್ಚಾಭ್ಯವಾದಯನ್ |
ಸೂತಮಾಗಧಸಂಘಾಶ್ಚಾಪ್ಯಸ್ತುವಂಸ್ತತ್ರ ನಿಸ್ವನಮ್ ॥26॥
ಆಕಾಶದಿಂದ ಎಲ್ಲ ಕಡೆಗಳಲ್ಲಿಯೂ ಪುಷ್ಪವೃಷ್ಟಿಯಾಯಿತು. ದೇವವಾದಕರು ಶಂಖಗಳನ್ನೂ, ತೂರ್ಯಗಳನ್ನೂ ಮೊಳಗಿಸಿದರು. ಭೂಮಿಯ ಮೇಲಿದ್ದ ಸೂತ ಮಾಗಧರೂ ಸಹ ಆ ದೇವದುಂದುಭಿ ನಿಸ್ವನವನ್ನು ಪ್ರಶಂಸಿದರು.
ತಸ್ಮಿಂಸ್ತು ಶಬ್ದೇ ಮಹತಿ ಪ್ರವೃತ್ತೇ
ಯುಧಿಷ್ಠಿರೋ ಧರ್ಮಭೃತಾಂ ವರಿಷ್ಠಃ |
ಆವಾಸಮೇವಾಭಿಜಗಾಮ ಶೀಘ್ರಂ
ಸಾರ್ಧಂ ಯಮಾಭ್ಯಾಂ ಪುರುಷೋತ್ತಮಭ್ಯಾಮ್ ॥27॥
ಸಮಾಜದಲ್ಲಿ ಅಷ್ಟು ದೊಡ್ಡ ಶಬ್ದಕೋಲಾಹಲವು ನಡೆಯುತ್ತಿರುವಾಗ ಧರ್ಮಭೃತರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಪುರುಷಶ್ರೇಷ್ಠರಾದ
ನಕುಲಸಹದೇವರ ಜೊತೆಯಲ್ಲಿ ಶೀಘ್ರವಾಗಿ ತನ್ನ ನಿವಾಸಕ್ಕೆ ತೆರಳಿದನು.

ವಿದ್ಧಂ ಚ ಲಕ್ಷ್ಯಂ ಪ್ರಸಮೀಕ್ಷ್ಯ ಕೃಷ್ಣಾ
ಪಾರ್ಥಂ ಚ ಶಕ್ರಪ್ರತಿಮಂ ನಿರೀಕ್ಷ್ಯ ।
ಸ್ವಭಾವರೂಪಾಽಪಿ ನಚೇವ ನಿತ್ಯಾ
ವಿನಾಽಪಿ ಹಾಸಂ ಹಸತೀವ ಕನ್ಯಾ ॥28॥
ಮದಾದೃತೇಽಪಿ ಸ್ಖಲತೀವ ಭಾವೈ-
ರ್ವಾಚಾ ವಿನಾ ವ್ಯಾಹರತೀವ ದೃಷ್ಟ್ಯಾ ।
ಆದಾಯ ಶುಕ್ಲಂ ವರಮಾಲ್ಯದಾಮ
ಜಗಾಮ ಕುಂತೀಸುತಮುತ್ಸ್ಮಯಂತೀ ॥29॥
ದ್ರೌಪದಿಯು ಲಕ್ಷ್ಯವೇಧವನ್ನು ನೋಡಿ ಇಂದ್ರನಂತಿರುವ ಅರ್ಜುನನನ್ನು ನೋಡಿ ಸ್ವಾಭಾವಿಕವಾಗಿ ರೂಪವತಿಯಾದರೂ ತನ್ನ ಲಾವಣ್ಯವನ್ನು ಆಚ್ಛಾದನೆ ಮಾಡಿಕೊಳ್ಳುತ್ತಿದ್ದ ಅವಳು (ಸ್ವಾಭಾವಿಕವಾದ ರೂಪವನ್ನು ಹೊಂದಿದ್ದರೂ ನಿತ್ಯವೂ ಅಂತಹ ರೂಪವತಿಯಾಗಿ ಕಾಣಿಸಿಕೊಳ್ಳದವಳು)
ಮುಗುಳ್ನಗೆಯನ್ನು ನಗದಿದ್ದರೂ ಮುಗುಳ್ನಗುತ್ತಿರುವಂತೆ ಕಾಣುವಂತಹ, ಮದವಿಲ್ಲದಿದ್ದರೂ ಎಡವುವಂತೆ ತೋರುವ, ಮಾತುಗಳನ್ನಾಡದಿದ್ದರೂ ತನ್ನ ಮನಸ್ಸಿನಿಂದಲೂ ಮತ್ತು ದೃಷ್ಟಿಯಿಂದಲೂ ಮಾತಾಡುವಂತೆ ತೋರುವ, ಆ ಕನ್ಯೆಯಾದ ದ್ರೌಪದಿಯು ಒಳ್ಳೆಯ ಮುಗುಳ್ನಗೆಯನ್ನು ಬೀರುತ್ತಾ ಶ್ರೇಷ್ಠವಾದ ಬಿಳಿಯ ಹೂವಿನ ಮಾಲೆಯನ್ನು ಹಿಡಿದು ಕುಂತೀಸುತನಾದ ಅರ್ಜುನನ ಸಮೀಪಕ್ಕೆ ಹೋದಳು.
ಸಮೇತ್ಯ ತಸ್ಯೋಪರಿ ಸೋತ್ಸಸರ್ಜ
ಸಮಾಗತಾನಾಂ ಪುರತೋ ನೃಪಾಣಾಮ್ ।
ವಿನ್ಯಸ್ಯ ಮಾಲಾಂ ವಿನಯೇನ ತಸ್ಥೌ
ವಿಹಾಯ ರಾಜ್ಞಃ ಸಹಸಾ ನೃಪಾತ್ಮಜಾ ॥30॥
ಆ ರಾಜಕುಮಾರಿಯು ಅರ್ಜುನನನ್ನು ಸಮೀಪಿಸಿ ಸಮಾಗತರಾದ ಎಲ್ಲ ರಾಜರ ಎದುರಿಗೆ ಅವನ ಕಂಠದಲ್ಲಿ ಮಾಲೆಯನ್ನು ಹಾಕಿದಳು. ರಾಜರ ಸಮೂಹವನ್ನು ಬಿಟ್ಟು ಅರ್ಜುನನ ಸಮೀಪಕ್ಕೆ ಹೋದ ಅವಳು ಅವನ ಕೊರಳಿನಲ್ಲಿ ಮಾಲೆಯನ್ನು ಹಾಕಿ ವಿನಯದಿಂದ ನಿಂತುಕೊಂಡಳು.
ಶಚೀವ ದೇವೇಂದ್ರಮಥಾಗ್ನಿದೇವಂ
ಸ್ವಾಹೇವ ಲಕ್ಷ್ಮೀಶ್ಚ ಯಥಾ ಮುಕುಂದಮ್ ।
ಉಷೇವ ಸೂರ್ಯಂ ಮದನಂ ರತೀವ
ಮಹೇಶ್ವರಂ ಪರ್ವತರಾಜಪುತ್ರೀ ।
ರಾಮಂ ಯಥಾ ಮೈಥಿಲರಾಜಪುತ್ರೀ
ಭೈಮೀ ಯಥಾ ರಾಜವರಂ ನಲಂ ಹಿ ॥31॥
ಶಚಿಯಿಂದ ಕೂಡಿದ ದೇವೇಂದ್ರನಂತೆ, ಸ್ವಾಹಾದೇವಿಯಿಂದ ಕೂಡಿದ ಅಗ್ನಿಯಂತೆ, ಲಕ್ಷ್ಮಿಯಿಂದ ಕೂಡಿದ ಮುಕುಂದನಂತೆ, ಉಷೆಯಿಂದ ಕೂಡಿದ ಸೂರ್ಯನಂತೆ, ರತಿಯಿಂದ ಕೂಡಿದ ಮದನನಂತೆ, ಪಾರ್ವತಿಯಿಂದ ಕೂಡಿದ ಮಹೇಶ್ವರನಂತೆ, ಜಾನಕಿಯಿಂದ ಕೂಡಿದ ರಾಮನಂತೆ, ದಮಯಂತಿಯಿಂದ ಕೂಡಿದ ನಳನಂತೆ, ದ್ರೌಪದಿಯ ಜೊತೆಯಲ್ಲಿ ಅರ್ಜುನನು ಮೆರೆದನು.
ತಂ ಸಾಧುವಾದಾಃ ಪ್ರಶಶಂಸುರೇವ
ಧಿಕ್ ಕ್ಷತ್ರಮಿತ್ಯೇವ ವಚೋಽತ್ರ ಚೋಚುಃ ।
ಸ್ವಯಂವರೇ ಕ್ಷತ್ರಮಹೀಯತೇತಿ
ಹೃತಾ ಹಿ ಕೃಷ್ಣಾ ದ್ವಿಜಸತ್ತಮೇನ ॥32॥
ಆಗ ಸಾಧುವಾದರಾದ ಬ್ರಾಹ್ಮಣರು ಅರ್ಜುನನನ್ನು ಪ್ರಶಂಸಿಸಿದರು. ಕ್ಷತ್ರಿಯರಿಗೆ ಧಿಕ್ಕಾರವಿರಲಿ, ಸ್ವಯಂವರದಲ್ಲಿ ಕ್ಷತ್ರಿಯಕುಲವು ಹೀನವಾಯಿತು. ದ್ರೌಪದಿಯನ್ನು ಒಬ್ಬ ದ್ವಿಜಶ್ರೇಷ್ಠನು ಜಯಿಸಿದನು ಎಂಬ ಮಾತುಗಳು ಅಲ್ಲಿ ಕೇಳಿಬಂದವು.
ತಂ ದೃಷ್ಟ್ವಾ ದ್ರುಪದಃ ಪ್ರೀತೋ ಬಭೂವಾರಿನಿಷೂದನಃ ।
ಸಹ ಸೈನ್ಯೇನ ಪಾರ್ಥಸ್ಯ ಸಾಹಾಯ್ಯಾರ್ಥಮಿಯೇಷ ಸಃ ॥33॥
ಶತ್ರುನಾಶನನಾದ ಅರ್ಜುನನನ್ನು ನೋಡಿ ದ್ರುಪದಪುತ್ರನಾದ ಧೃಷ್ಟದ್ಯುಮ್ನನು ಸಂತುಷ್ಟನಾದನು. ಶತ್ರುಸಂಹಾರಕವಾದ ತನ್ನ ಸೈನ್ಯದ ಜೊತೆಯಲ್ಲಿ ಅವನು ಪಾರ್ಥನಿಗೆ ಸಹಾಯವನ್ನು ಮಾಡಲು ಬಯಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಸಪ್ತಾಶೀತ್ಯದಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಎಂಭತ್ತೇಳನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ದ್ರುಷ್ಟ್ವಂ ಹಿ ಕೇವಲಗತಿರ್ನ ತು ಕನ್ಯಕಾಯಾ
ಅರ್ಥೇ ನ ಚಾಪಮಿಹ ವೃಷ್ಣಿವರಾಃ ಸ್ಪೃಶಂತು ।
ಇತ್ಯಾಜ್ಞಯೈವ ವರಚಕ್ರಧರಸ್ಯ ಲಿಪ್ಸಾ-

ಮಪ್ಯತ್ರ ಚಕ್ರುರಿಹ ನೈವ ಯದುಪ್ರವೀರಾಃ ॥133॥
ಸ್ವಯಂವರವನ್ನು ನೋಡುವುದಕ್ಕಾಗಿ ಕೇವಲ ಹೋಗಬೇಕು ಹೊರತು ಕನ್ಯೆಗಾಗಿ ಅಲ್ಲ. ಅದರಿಂದ ಯಾದವ ವೀರರು ಸ್ವಯಂವರದಲ್ಲಿ ಬಿಲ್ಲನ್ನು ಸ್ಪರ್ಶಿಸಿಕೂಡಲೆಂದು ಶ್ರೀಕೃಷ್ಣನ ಆಜ್ಞೆ ಇದ್ದುದರಿಂದ ಯಾದವ ವೀರರು ಸ್ವಯಂವರ ಪಣವನ್ನು ಗೆಲ್ಲುವ ಆಸೆಯನ್ನೂ ಮಾಡಿರಲಿಲ್ಲ.
ಭೀಮಸ್ತು ರಾಜಸಮಿತಿಂ ಪ್ರತಿಸಂಪ್ರಯಾತಾಂ
ದೃಷ್ಟ್ವೈವ ಯೋಜನದಶೋಚ್ಛ್ರಯಮಾಶು ವೃಕ್ಷಂ |
ಆರುಜ್ಯ ಸರ್ವನೃಪತೀನಭಿತೋ ಪ್ಯತಿಷ್ಠದ್
ದೃಷ್ಟ್ವಾಽಪಲಾಯನಪರಾಶ್ಚ ಬಭೂವುರೇತೇ ॥134॥
ರಾಜಸಮೂಹ ತಮ್ಮ ಮೇಲೆ ಏರಿಬರುವುದನ್ನು ಕಂಡು ಭೀಮ ಹತ್ತು ಯೋಜನ ಎತ್ತರದ ಒಂದು ಮರವನ್ನು ಬೇಗನೆ ಕಿತ್ತು ಅವರಿಗೆ ಎದುರಾಗಿ ನಿಂತ. ರಾಜರು ನೋಡಿ ಪಲಾಯನ ಮಾಡಲು ತೊಡಗಿದರು.
ಭೀಮೋಽಯಮೇಷ ಪುರೂಹೂತಸುತೋಽನ್ಯ ಏತೇ
ಪಾರ್ಥಾ ಇತಿ ಸ್ಮ ಹಲಿನೇ ಹರಿರಭ್ಯವೋಚತ್ |
ದೃಷ್ಟ್ವೈವ ಸೋಽಪಿ ಮುದಮಾಪ ಶಿನೇಶ್ಚ ಪೌತ್ರಃ
ಖಡ್ಗಂ ಪ್ರಗೃಹ್ಯ ಹರ್ಷಾತ್ ಪರಿಪುಪ್ಲುವೇಽತ್ರ ॥135॥
ಶ್ರೀಕೃಷ್ಣ ಬಲರಾಮನಿಗೆ ಇವನು ಭೀಮ. ಇವನು ಅರ್ಜುನ, ಇವರು ಮಿಕ್ಕ ಪಾಂಡವರು ಎಂದು ಹೇಳಿದ. ಬಲರಾಮ ಪಾಂಡವರನ್ನು ನೋಡಿದ ಮಾತ್ರಕ್ಕೆ ಆನಂದಪಟ್ಟ. ಸಾತ್ಯಕಿ ಸಂತೋಷದಿಂದ ಕತ್ತಿ ಹಿರಿದು ಕೃಷ್ಣನ ಬಳಿ ಸುತ್ತಲೂ ಕುಣಿದಾಡಿದ.
ಪ್ರೀತೇಷು ಸರ್ವಯದುಷು ಪ್ರಪಲಾಯಿತೇಷು
ದುರ್ಯೋಧನಾದಿನೃಪತಿಷ್ವಖಿಲೇಷು ಭೀಮಾತ್ |
ಕರ್ಣೋಽಭ್ಯಯಾದ್ಧರಿಹಯಾತ್ಮಜಮಾಶು ಮದ್ರ-
ರಾಜೋ ಜಗಾಮ ಪವನಾತ್ಮಜಮೇವ ವೀರಃ ॥136॥
ಎಲ್ಲ ಯಾದವರೂ ಸಂತುಷ್ಟರಾದಾಗ, ದುರ್ಯೋಧನಾದಿ ಸಕಲ ರಾಜರೂ ಭೀಮನಿಂದಾಗಿ ಪಲಾಯನಗೈದಾಗ ವೀರಕರ್ಣ ಅರ್ಜುನನ ಮೇಲೂ ವೀರಶಲ್ಯ ಭೀಮನ ಮೇಲೂ ಆಕ್ರಮಣಗೈದರು.
ವಿಪ್ರೇಷು ದಂಡಪಟದರ್ಭಮಹಾಜಿನಾನಿ
ಕೋಪಾತ್ ಕ್ಷಿಪತ್ಸು ನ ವಿನಾಶನಮತ್ರ ಭೂಯಾತ್ |
ಕ್ಷತ್ರಸ್ಯ ವೈರತ ಇತಿ ದ್ರುಪದೇ ಚ ಕೃಷ್ಣಂ
ವಿಪ್ರಾಂಶ್ಚ ಯಾಚತಿ ಸ ಮಾರುತಿರಾರ ಶಲ್ಯಂ ॥137॥
ಬ್ರಾಹ್ಮಣರು ಕೋಪದಿಂದ ದಂಡ ಧೋತ್ರ ದರ್ಭೆ ಕೃಷ್ಣಾಜಿನಗಳನ್ನು ಎಸೆದಾಗ, ಬ್ರಾಹ್ಮಣರ ಕ್ರೋಧದಿಂದ ಕ್ಷತ್ರಿಯರ ವಿನಾಶವಾಗಬಾರದೆಂದು ಕೃಷ್ಣನನ್ನೂ ಬ್ರಾಹ್ಮಣರನ್ನೂ ದ್ರುಪದ ಬೇಡಿಕೊಳ್ಳುತ್ತಿದ್ದಾಗ ಅತ್ತ ಭೀಮ ಶಲ್ಯವನ್ನು ಇದಿರಿಸಿದ.
ನೂರ ಎಂಭತ್ತೆಂಟನೆಯ ಅಧ್ಯಾಯ
(ರಾಜರ ಕ್ಷೋಭೆ, ದ್ರುಪದನನ್ನು ಕೊಲ್ಲಲು ಪ್ರಯತ್ನ. ಭೀಮಸೇನನ ಸ್ಥೈರ್ಯ, ಕೃಷ್ಣನಿಂದ ಬಲರಾಮನಿಗೆ ಪಾಂಡವರ ಪ್ರತ್ಯೇಕ ಪರಿಚಯ.)
ವೈಶಂಪಾಯನಃ
ತಸ್ಮೈ ದಿತ್ಸತಿ ಕನ್ಯಾಂ ತು ಬ್ರಾಹ್ಮಣಾಯ ಮಹಾತ್ಮನೇ |
ಕೋಪ ಆಸೀನ್ಮಹೀಪಾನಾಮಾಲೋಕ್ಯಾನ್ಯೋನ್ಯಮಂತಿಕಾತ್ ॥1॥
ದ್ರುಪದನು ಮಹಾತ್ಮನಾದ ಆ ಬ್ರಾಹ್ಮಣನಿಗೆ ತನ್ನ ಕನ್ಯೆಯನ್ನು ಕೊಡಲು ಬಯಸುತ್ತಿರಲು ಅಲ್ಲಿ ನೆರೆದಿದ್ದ ರಾಜರುಗಳು ಸಮೀಪದಲ್ಲಿ ಒಬ್ಬರನ್ನೊಬ್ಬರು ನೋಡಿ, ದ್ರುಪದನ ಮೇಲೆ ಕೋಪಗೊಂಡರು.
ಅಸ್ಮಾನಯಮತಿಕ್ರಮ್ಯ ತೃಣೀಕೃತ್ಯ ಚ ಸಂಗತಾನ್ |
ದಾತುಮಿಚ್ಛತಿ ವಿಪ್ರಾಯ ದ್ರೌಪದೀಂ ಯೋಷಿತಾಂ ವರಾಮ್ ॥2॥
ಈ ದ್ರುಪದನು ಇಲ್ಲಿ ಸೇರಿದ ನಮ್ಮೆಲ್ಲರನ್ನೂ ಅತಿಕ್ರಮಿಸಿ ಮತ್ತು ತುಚ್ಛೀಕರಿಸಿ ಶ್ರೇಷ್ಠಕನ್ಯೆಯಾದ ದ್ರೌಪದಿಯನ್ನು ಬ್ರಾಹ್ಮಣನಿಗೆ ಕೊಡಲು ಬಯಸುತ್ತಿದ್ದಾನೆ.
ತೇ ಹನ್ಮೈನಂ ದುರಾತ್ಮಾನಂ ಯೋ ಹ್ಯಸ್ಮಾನವಮನ್ಯತೇ |
ನಾಯಮರ್ಹತಿ ಸತ್ಕಾರಂ ನ ಹಿ ವೃದ್ಧೋ ಮತೋ ಗುಣೈಃ ॥3॥
ನಮಗೆ ಅವಮಾನವನ್ನು ಮಾಡಿರುವ ಈ ದುರಾತ್ಮನಾದ ದ್ರುಪದನನ್ನು ನಾವು ಕೊಲ್ಲೋಣ. ಇವನು ಗುಣಗಳಿಂದ ವೃದ್ಧನಲ್ಲದ ಕಾರಣ ನಮ್ಮ ಸತ್ಕಾರಕ್ಕೆ ಅರ್ಹನಲ್ಲ.
ಹನ್ಮೈನಂ ಸಹ ಪುತ್ರೇಣ ದುರಾತ್ಮಾನಂ ನೃಪದ್ವಿಷಮ್ |
ಅಯಂ ಸರ್ವಾನಿಹಾಹೂಯ ಸತ್ಕೃತ್ಯ ಚ ನರಾಧಿಪಾನ್ |
ಗುಣವದ್ ಭೋಜಯಿತ್ವಾ ತು ತತಃ ಪಶ್ಚಾದ್ ವಿನಿಂದತಿ ॥4॥
ರಾಜದ್ವೇಷಿಯಾದ ದುರಾತ್ಮನಾದ ಈ ದ್ರುಪದನನ್ನು ಅವನ ಮಗನ ಜೊತೆಯಲ್ಲಿಯೇ ಕೊಲ್ಲೋಣ. ಅವನು ರಾಜರಾದ ನಮ್ಮೆಲ್ಲರನ್ನು ಇಲ್ಲಿಗೆ ಕರೆಸಿ, ಸತ್ಕಾರವನ್ನು ಮಾಡಿ, ಒಳ್ಳೆಯ ಭೋಜನವನ್ನು ನೀಡಿ, ಅನಂತರ ಅವಮಾನ ಮಾಡುತ್ತಿದ್ದಾನೆ.
ಅಸ್ಮಿನ್ ರಾಜಸಮಾವಾಯೇ ದೇವಾನಾಮಿವ ಸನ್ನಯೇ |

ಕಿಮಯಂ ಸದೃಶಂ ಕಂಚಿನ್ನೃಪತಿಂ ನೈವ ದೃಷ್ಟವಾನ್ ॥5॥
ದೇವತೆಗಳ ಸಮುದಾಯದಂತಿರುವ ಈ ರಾಜರ ಸಮೂಹದಲ್ಲಿ ಇವನಿಗೆ ಅನುರೂಪನಾದ ಒಬ್ಬ ರಾಜನೂ ದೊರೆಯಲಿಲ್ಲವೇ?
ನ ಚ ವಿಪ್ರೇಷ್ವಧೀಕಾರೋ ವಿದ್ಯತೇ ವರಣಂ ಪ್ರತಿ |
ಸ್ವಯಂವರಃ ಕ್ಷತ್ರಿಯಾಣಾಮಿತೀಯಂ ಪ್ರಥಿತಾ ಶ್ರುತಿಃ ॥6॥
ವಿಪ್ರರಿಗೆ ಸ್ವಯಂವರದಲ್ಲಿ ಅಧಿಕಾರವಿಲ್ಲ. ಕ್ಷತ್ರಿಯರಿಗೆ ಸ್ವಯಂವರದಲ್ಲಿ ಅಧಿಕಾರ ಎಂದು ವೇದದಲ್ಲಿ ಪ್ರಖ್ಯಾತವಾಗಿದೆ.
ಅಥವಾ ಯದಿ ಕನ್ಯೇಯಂ ನೇಹ ಕಿಂಚಿದ್ ಬುಭೂಷತಿ |
ತಿಲಶಃ ಪ್ರವಿಭಜ್ಯೈನಾಂ ಯಾಮ ರಾಷ್ಟ್ರಾಣಿ ಪಾರ್ಥಿವಾಃ ॥7॥
ರಾಜರೇ, ಅಥವಾ ಈ ಕನ್ಯೆಯು ನಮ್ಮಲ್ಲಿ ಯಾರನ್ನೂ ಬಯಸದಿದ್ದರೆ, ಇವಳನ್ನು ಎಳ್ಳಿನಷ್ಟು ಸಣ್ಣ ಚೂರುಗಳಾಗಿ ಕತ್ತರಿಸಿ ನಮ್ಮ ರಾಷ್ಟ್ರಗಳಿಗೆ ಹಿಂದಿರುಗೋಣ.
ಬ್ರಾಹ್ಮಣೋ ಯದಿ ವಾ ಬಾಲ್ಯಾನ್ಮೋಹಾದ್ ವಾ ಕೃತವಾನಿದಮ್|
ವಿಪ್ರಿಯಂ ಪಾರ್ಥಿವೇಂದ್ರಾಣಾಂ ನೈಷ ವರ್ಧ್ಯಃ ಕಥಂಚನ ॥8॥
ಯಾವ ಬ್ರಾಹ್ಮಣನು ಬಾಲ್ಯದಿಂದಲಾಗಲಿ, ಮೋಹದಿಂದಾಗಲಿ, ಕ್ಷತ್ರಿಯರಿಗೆ ಇಂತಹ ಅಪ್ರಿಯವನ್ನು ಮಾಡಿದ್ದಾನೆಯೋ, ಅಂತಹ ಬ್ರಾಹ್ಮಣನು ಅಭಿವೃದ್ಧಿಯನ್ನು ಹೊಂದುವುದಕ್ಕೆ ಅವಕಾಶ ಕೊಡಬಾರದು.
ಬ್ರಾಹ್ಮಣಾರ್ಥಂ ಚ ನೋ ರಾಜ್ಯಂ ಜೀವಿತಂ ಚ ವಸೂನಿ ಚ |
ಪುತ್ರಪೌತ್ರಂ ಚ ಯಚ್ಚಾನ್ಯದಸ್ಮಾಕಂ ವಿದ್ಯತೇ ಧನಮ್ ॥9॥
ನಮ್ಮ ರಾಜ್ಯವೂ, ಕೋಶವೂ, ಜೀವನವೂ, ಪುತ್ರ-ಪೌತ್ರರೂ ಇನ್ನು ಏನೇನಿದೆಯೋ ಅದೆಲ್ಲವೂ ಬ್ರಾಹ್ಮಣರ ಸಲುವಾಗಿಯೇ ಇದೆ. (ಆದರೆ ಇಂತಹ ಬ್ರಾಹ್ಮಣರ ಸಲುವಾಗಿ ಇಲ್ಲ.)
ಅವಮಾನಭಯಾದ್ ರೋಷಾತ್ ಸ್ವಧರ್ಮಪರಿರಕ್ಷಣಾತ್|
ಸ್ವಯಂವರಾಣಾಂ ಚಾನ್ಯೇಷಾಂ ಮಾ ಭೂದೇವಂವಿಧಾ ಗತಿಃ ॥10॥
ನಾವು ಮಾಡುವ ಅವಮಾನದ ಭಯದಿಂದಲಾಗಲಿ, ಅಥವಾ ನಮಗೆ ಉಂಟಾಗುವ ರೋಷದ ಭಯದಿಂದಲಾಗಲಿ, ಅಥವಾ ಸ್ವಯಂವರಕ್ಕೆ ಹೋಗದಿರುವ ತಮ್ಮ ಧರ್ಮವನ್ನು ರಕ್ಷಿಸುವ ಕಾರಣದಿಂದಾಗಲಿ, ಬ್ರಾಹ್ಮಣರು ಇನ್ನು ಮುಂದೆ ಸ್ವಯಂವರಕ್ಕೆ ಬರಬಾರದು. ಇಲ್ಲದಿದ್ದರೆ ಎಲ್ಲಾ ಸ್ವಯಂವರಗಳಿಗೂ ಇದೇ ಗತಿಯಾದೀತು.
ಇತ್ಯುಕ್ತ್ವಾ ರಾಜಶಾರ್ದೂಲಾ ರುಷ್ಟಾಃ ಪರಿಘಬಾಹವಃ |
ದ್ರುಪದಂ ಸಂಜಿಘೃಕ್ಷಂತಃ ಸಾಯುಧಾಃ ಸಮುಪಾದ್ರವನ್ ॥11॥
ತಾನ್ ಗೃಹೀತಶರಾನ್ ಪಾಪಾನ್ ಕ್ರುದ್ಧಾನಾಪತತೋ ಭೃಶಮ್|
ದ್ರುಪದೋ ವೀಕ್ಷ್ಯ ಸಂತ್ರಾಸಾದ್ ಬ್ರಾಹ್ಮಣಾನ್ಶರಣಂ ಗತಃ ॥12॥
ಪರಿಘ ಬಾಹುಗಳುಳ್ಳ ಆ ರಾಜಶಾರ್ದೂಲರು ರೋಷದಿಂದ ಹೀಗೆ ಹೇಳಿ ದ್ರುಪದನನ್ನು ಹಿಡಿಯಲು ಆಯುಧಗಳನ್ನು ಹಿಡಿದು ಮುಂದೆ ಬಂದರು. ಕೋಪದಿಂದ ತನ್ನ ಮೇಲೆ ಎರಗಿ ಬರುತ್ತಿರುವ ಬಾಣವನ್ನು ಹಿಡಿದ ಆ ಪಾಪಿಗಳಾದ ರಾಜರುಗಳನ್ನು ನೋಡಿ, ತ್ರಾಸವನ್ನು ಹೊಂದಿದ ದ್ರುಪದನು ಬ್ರಾಹ್ಮಣರಿಗೆ ಶರಣಾಗತನಾದನು.
ನ ಭಯಾನ್ನಾಪಿ ಕಾರ್ಪಣ್ಯಾನ್ನ ಪ್ರಾಣಪರಿರಕ್ಷಣಾತ್ |
ಜಗಾಮ ದ್ರುಪದೋ ವಿಪ್ರಾನ್ ಧರ್ಮಾರ್ಥೀ ಪ್ರತ್ಯಪದ್ಯತ ॥13॥
ವೇಗೇನಾಪತತಸ್ತಾಂಸ್ತು ಪ್ರಭಿನ್ನಾನಿವ ವಾರಣಾನ್ |
ಪಾಂಡುಪುತ್ರೌ ಮಹಾವೀರ್ಯೌ ಪ್ರತೀಯತುರರಿಂದವೌ ॥14॥
ಭಯದಿಂದಲಾಗಲಿ, ಅಥವಾ ಕಾರ್ಪಣ್ಯದಿಂದಲಾಗಲಿ, ಅಥವಾ ತನ್ನ ಪ್ರಾಣವನ್ನು ರಕ್ಷಣೆ ಮಾಡಿಕೊಳ್ಳುವುದಕ್ಕಾಗಲಿ, ದ್ರುಪದನು ಬ್ರಾಹ್ಮಣರನ್ನು ಆಶ್ರಯಿಸಲಿಲ್ಲ. ಕ್ಷತ್ರಿಯನು ಕಷ್ಟ ಒದಗಿದಾಗ ಬ್ರಾಹ್ಮಣರನ್ನು ಆಶ್ರಯಿಸಬೇಕು ಎಂಬ ಧರ್ಮವನ್ನು ಪಾಲಿಸುವುದಕ್ಕಾಗಿ ಅವನು ಬ್ರಾಹ್ಮಣರಿಗೆ ಶರಣಾಗತನಾದನು. ಮದಿಸಿದ ಆನೆಗಳಂತೆ ಮೇಲೆರಗುತ್ತಿರುವ ಆ ರಾಜರುಗಳನ್ನು ಅರಿಂದಮರಾದ ಮಹಾವೀರ್ಯರಾದ ಪಾಂಡುಪುತ್ರರಾದ ಭೀಮಾರ್ಜುನರು ಎದುರಿಸಿದರು.
ತತಃ ಸಮಾನೇದುರುದಾಯುಧಾಸ್ತೇ
ಮಹೀಕ್ಷಿತೋ ಬದ್ಧತಲಾಂಗುಲಿತ್ರಾಃ |
ಜಿಘಾಂಸಮಾನಾಃ ಕುರುರಾಜಸಿಂಹಾ-
ವಮರ್ಷಯಂತೋಽರ್ಜುನಭೀಮಸೇನೌ ॥15॥
ಆಗ ಕೈಗಳಿಗೆ ಚರ್ಮದ ರಕ್ಷಣೆಗಳನ್ನು ಹಾಕಿಕೊಂಡು, ಆಯುಧಗಳನ್ನು ಎತ್ತಿಹಿಡಿದು ಗರ್ಜಿಸುತ್ತಾ ಕುರುರಾಜಸಿಂಹರಾದ ಭೀಮಾರ್ಜುನರನ್ನು ಕೊಲ್ಲಲು ಬಯಸಿ ಆ ರಾಜರು ಭೀಮಾರ್ಜುನರಿಗೆ ಕೋಪವನ್ನು ಉಂಟು ಮಾಡಿ ಗರ್ಜಿಸಿದರು.
ತತಸ್ತು ಭೀಮೋಽದ್ಭುತವೀರ್ಯಕರ್ಮಾ
ಮಹಾಬಲೋ ವಜ್ರಸಮಾನವೇಗಃ |
ಉತ್ಪಾಟ್ಯ ದೋರ್ಭ್ಯಾಂ ದ್ರುಮಮೇಕವೀರೋ
ನಿಷ್ಪತ್ರಯಾಮಾಸ ಯಥಾ ಗಜೇಂದ್ರಃ ॥16॥
ಆಗ ಅದ್ಭುತನೂ, ವೀರ್ಯಕರ್ಮನೂ, ಮಹಾಬಲನೂ, ವಜ್ರದ ವೇಗವುಳ್ಳವನೂ ಆದ ಭೀಮಸೇನನು ಎರಡೂ ಬಾಹುಗಳಿಂದ ಒಂದು ಮರವನ್ನು ಕಿತ್ತು ಅದರ ಎಲೆಗಳನ್ನು ಉದುರಿಸಿ ಗಜರಾಜನಂತೆ ನಿಂತನು.
ತಂ ವೃಕ್ಷಮಾದಾಯ ರಿಪುಪ್ರಮಾಥೀ

ದಂಡೀವ ದಂಡಂ ಪಿತೃರಾಜ ಉಗ್ರಮ್ |
ತಸ್ಥೌ ಸಮೀಪೇ ಪುರುಷರ್ಷಭಸ್ಯ
ಪಾರ್ಥಸ್ಯ ಪಾರ್ಥಃ ಪೃಥುದೀರ್ಘಬಾಹುಃ ॥17॥
ರಿಪುಹಿಂಸಕನಾದ ಪುಷ್ಟವಾದ ಮತ್ತು ದೀರ್ಘವಾದ ಬಾಹುಗಳುಳ್ಳ ಆ ಭೀಮನು ಯಮನು ಉಗ್ರವಾದ ತನ್ನ ದಂಡವನ್ನು ಹಿಡಿದಂತೆ ಆ ಮರವನ್ನು ಹಿಡಿದು ಪುರುಷಶ್ರೇಷ್ಠನಾದ ತನ್ನ ತಮ್ಮನಾದ ಅರ್ಜುನನ ಸಮೀಪದಲ್ಲಿ ನಿಂತನು.
ತದಂತರೇ ಧರ್ಮಸುತೋಽಪಿ ಗತ್ವಾ
ವಿಜ್ಞಾಯ ಕುಂತೀಂ ಕುಶಲೀಂ ಕ್ಷಣೇನ |
ಆಗಮ್ಯ ತಸ್ಥೌ ಸಹ ಸೋದರಾಭ್ಯಾಂ
ಪುರುಷರ್ಷಭಾಭ್ಯಾಂ ಪುರುಷಪ್ರವೀರಃ ॥18॥
ಈ ಮಧ್ಯದಲ್ಲಿ ಧರ್ಮರಾಜನೂ ಸಹ ತನ್ನ ಬಿಡಾರಕ್ಕೆ ಹೋಗಿ ಕುಂತಿಯ ಕ್ಷೇಮವನ್ನು ತಿಳಿದು ಶೀಘ್ರವಾಗಿ ಹಿಂದಿರುಗಿ ಪುರುಷಶ್ರೇಷ್ಠರಾದ ತನ್ನ ತಮ್ಮಂದಿರ ಜೊತೆಯಲ್ಲಿ ಪುರುಷಪ್ರವೀರನಾದ ಅವನೂ ನಿಂತನು.
ತದಾಽಬ್ರವೀಜ್ಜಿಷ್ಣುರುದಾರಕರ್ಮಾ
ಮಾ ಸಿಂಹನಾದಂ ಕುರು ಪೂರ್ವಜೇಹ |
ಮಾ ಘೋರತಾಂ ದರ್ಶಯ ಶತ್ರುಮಧ್ಯೇ
ಸಾಧಾರಣಂ ಯೋಧಯ ತಾವದಾರ್ಯ ॥19॥
ಆಗ ಉದಾರಕರ್ಮವನ್ನುಳ್ಳ ಭೀಮಸೇನನನ್ನು ಕುರಿತು, ಅಣ್ಣ ಸಿಂಹನಾದವನ್ನು ಮಾಡಬೇಡ. ಶತ್ರುಗಳ ಮಧ್ಯದಲ್ಲಿ ನಿನ್ನ ಉಗ್ರತನವನ್ನು ಪ್ರದರ್ಶಿಸಬೇಡ. ಸಾಧಾರಣವಾಗಿ ಯುದ್ಧವನ್ನು ಮಾಡು ಎಂದು ಹೇಳಿದನು.
ತತ್ ಪ್ರೇಕ್ಷ್ಯ ಕರ್ಮಾತಿಮನುಷ್ಯಬುದ್ಧಿ-
ರ್ಜಿಷ್ಣುಃ ಸ ಹ ಭ್ರಾತುರುದಾರಕರ್ಮಾ |
ದಾಮೋದರೋ ಭ್ರಾತರಮುಗ್ರವೀರ್ಯಂ
ಹಲಾಯುಧಂ ವಾಕ್ಯಮಿದಂ ಬಭಾಷೇ ॥20॥
ಮನುಷ್ಯರಿಗೂ ಮೀರಿದ ಬುದ್ಧಿಯುಳ್ಳ ಉದಾರಕರ್ಮನಾದ ಅರ್ಜುನನು ತನ್ನ ಅಣ್ಣನ ಕರ್ಮವನ್ನು ನೋಡಿ ಹೀಗೆ ಮಾತನಾಡಿದನು. ಆಗ ಕೃಷ್ಣನು ಉಗ್ರವೀರ್ಯನಾದ ಹಲಾಯುಧನಾದ ತನ್ನ ಅಣ್ಣನನ್ನು ಕುರಿತು ಹೀಗೆ ಮಾತನಾಡಿದನು.
ಯ ಏಷ ಮತ್ತರ್ಷಗಜೇಂದ್ರಗಾಮೀ
ಮಹದ್ಧನುಃ ಕರ್ಷತಿ ತಾಲಮಾತ್ರಮ್ |
ಏಷೋಽರ್ಜುನೋ ನಾತ್ರ ವಿಚಾರ್ಯಮಸ್ತಿ
ಯದ್ಯಸ್ಮಿ ಸಂಕರ್ಷಣ ವಾಸುದೇವಃ ॥21॥
ಮತ್ತಗಜಗಾಮಿಯಾಗಿ ತಾಲಪ್ರಮಾಣದ ದೊಡ್ಡ ಧನುಸ್ಸನ್ನು ಬಗ್ಗಿಸುತ್ತಿರುವ ಇವನು ಅರ್ಜುನ. ಸಂಕರ್ಷಣನೇ, ನಾನು ಕೃಷ್ಣನೇ ಆದರೆ ಇವನು ಅರ್ಜುನನೇ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಯ ಏಷ ವೃಕ್ಷಂ ತರಸಾ ವಿರುಜ್ಯ
ರಾಜ್ಞಾಂ ವಿಕಾರೇ ಸಹಸಾಽನಿವೃತ್ತಃ |
ವೃಕೋದರೋ ನಾನ್ಯ ಇಹೈತದದ್ಯ
ಕರ್ತುಂ ಸಮರ್ಥೋ ಭುವಿ ಮರ್ತ್ಯಧರ್ಮಃ ॥22॥
ರಾಜರುಗಳು ಕೋಪವಿಕಾರಕ್ಕೆ ಒಳಗಾದಾಗ ಮಾಡುವಾಗ ಯಾವನು ವೇಗವಾಗಿ ಮರವನ್ನು ಕಿತ್ತು ಎಲೆಗಳನ್ನು ಉದುರಿಸಿ, ನಿವೃತ್ತನಾಗದೆ ಎದುರಿಗೆ ನಿಂತಿದ್ದಾನೆಯೋ ಅವನು ಭೀಮಸೇನ. ಭೂಮಿಯಲ್ಲಿ ಈದಿನ ಮರಣಶೀಲನಾದ ಯಾವ ಇನ್ನೊಬ್ಬ ವ್ಯಕ್ತಿಯೂ ಇಂತಹ ಕಾರ್ಯವನ್ನು ಮಾಡಲಾರ.
ಯೋಽಸೌ ಪುರಸ್ತಾತ್ ಕಮಲಾಯತಾಕ್ಷಃ
ಧನುರ್ಮಹಾನ್ ಸಿಂಹಗತಿರ್ನೃವೀರಃ |
ಧೀರಃ ಪ್ರಚಂಡೋಜ್ಜ್ವಲಚಾರುಘೋಣೋ
ವಿನಿಸ್ಸೃತಃ ಸೋಽಪ್ಯಥ ಧರ್ಮಪುತ್ರಃ ॥23॥
ಕಮಲನೇತ್ರೆಯಾದ ಕನ್ಯೆಯ ಎದುರಿಗೆ ದೊಡ್ಡ ಧನುಸ್ಸನ್ನು ಹಿಡಿದು ಸಿಂಹಗತಿಯನ್ನು ಹೊಂದಿರುವ ಉನ್ನತವಾದ ಸುಂದರ ನಾಸಿಕವನ್ನು ಹೊಂದಿರುವ ಈ ಧೀರನು ಮಾಲಾರ್ಪಣೆಗಿಂತ ಮೊದಲೇ ಹೊರಗೆ ಹೋಗಿದ್ದ ಯುಧಿಷ್ಠಿರ.
ಯೌ ತೌ ಕುಮಾರಾವಿವ ಕಾರ್ತಿಕೇಯೌ
ದ್ವಾವಾಶ್ವಿನೇಯಾವಿತಿ ಮೇ ವಿತರ್ಕಃ |
ಮುಕ್ತಾ ಹಿ ತಸ್ಮಾಜ್ಜತುವೇಶ್ಮದಾಹಾ-
ನ್ಮಯಾ ಶ್ರುತಾಃ ಪಾಂಡುಸುತಾಃ ಪೃಥಾ ಚ ॥24॥
ಷಣ್ಮುಖರಂತಿರುವ ಕುಮಾರರಾದ ಇವರಿಬ್ಬರು ಅಶ್ವಿನಿದೇವತೆಗಳ ಮಕ್ಕಳಾದ ನಕುಲ-ಸಹದೇವರು ಎಂದು ನನ್ನ ಊಹೆ. ಪಾಂಡವರೂ ಮತ್ತು ಕುಂತಿಯೂ ಜತುಗೃಹದಾಹದಿಂದ ಪಾರಾಗಿದ್ದಾರೆ ಎಂಬ ವಾರ್ತೆಯನ್ನು ನಾನು ಕೇಳಿದ್ದೇನೆ.
ವೈಶಂಪಾಯನಃ
ತಮಬ್ರವೀತ್ ತೋಯದನಿರ್ಮಲಾಭೋ

ಹಲಾಯುಧೋಽನಂತರಜಂ ಪ್ರತೀತಃ |
ಪ್ರೀತೋಽಸ್ಮಿ ದೃಷ್ಟ್ವಾ ಹಿ ಪಿತೃಷ್ವಸಾಂ ನಃ
ಪೃಥಾ ವಿಮುಕ್ತಾ ಸಹ ಕೌರವಾಗ್ರ್ಯೈಃ ॥25॥
ಆಗ ನಿರ್ಮಲವಾದ ಮೋಡದ ಕಾಂತಿಯನ್ನು ಹೊಂದಿದ್ದ ಹಲಾಯುಧನು ಸಂತೋಷದಿಂದ ತಮ್ಮನನ್ನು ಕುರಿತು ಮಾತನಾಡಿದನು. ನಮ್ಮ ಸೋದರತ್ತೆಯನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ. ಅವಳು ಕೌರವಶ್ರೇಷ್ಠರಾದ ಪಾಂಡವರ ಜೊತೆಯಲ್ಲಿ ಸಂಕಟದಿಂದ ಪಾರಾಗಿದ್ದಾಳೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಅಷ್ಟಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಎಂಭತ್ತೆಂಟನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ವಿಪ್ರೇಷು ದಂಡಪಟದರ್ಭಮಹಾಜಿನಾನಿ
ಕೋಪಾತ್ ಕ್ಷಿಪತ್ಸು ನ ವಿನಾಶನಮತ್ರ ಭೂಯಾತ್ |
ಕ್ಷತ್ರಸ್ಯ ವೈರತ ಇತಿ ದ್ರುಪದೇ ಚ ಕೃಷ್ಣಂ
ವಿಪ್ರಾಂಶ್ಚ ಯಾಚತಿ ಸ ಮಾರುತಿರಾರ ಶಲ್ಯಂ ॥137॥
ಬ್ರಾಹ್ಮಣರು ಕೋಪದಿಂದ ದಂಡ ಧೋತ್ರ ದರ್ಭೆ ಕೃಷ್ಣಾಜಿನಗಳನ್ನು ಎಸೆದಾಗ, ಬ್ರಾಹ್ಮಣರ ಕ್ರೋಧದಿಂದ ಕ್ಷತ್ರಿಯರ ವಿನಾಶವಾಗಬಾರದೆಂದು ಕೃಷ್ಣನನ್ನೂ ಬ್ರಾಹ್ಮಣರನ್ನೂ ದ್ರುಪದ ಬೇಡಿಕೊಳ್ಳುತ್ತಿದ್ದಾಗ ಅತ್ತ ಭೀಮ ಶಲ್ಯವನ್ನು ಇದಿರಿಸಿದ.
ವೃಕ್ಷಂ ತ್ವಸೌ ಪ್ರತಿನಿಧಾಯ ಚ ಮದ್ರರಾಜಂ
ದೋರ್ಭ್ಯಾಂ ಪ್ರಗೃಹ್ಯ ಜವತೋ ಗಗನೇ ನಿಧಾಯ |
ಬಂಧುತ್ವತೋ ಭುವಿ ಶನೈರದಧಾತ್ಸ ತಸ್ಯ
ವಿಜ್ಞಾಯ ವೀರ್ಯಮಗಮನ್ನಿಜರಾಜಧಾನೀಂ ॥138॥
ಭೀಮ ಮರವನ್ನು ಕೆಳಗಿಟ್ಟು ಬೇಗನೆ ಶಲ್ಯವನ್ನು ಎರಡು ಕೈಗಳಿಂದ ಆಕಾಶದಲ್ಲಿ ಎತ್ತಿಹಿಡಿದು ಬಂಧುತ್ವ ಪ್ರಯುಕ್ತ ಮೆಲ್ಲಗೆ ನೆಲಕ್ಕೆ ಇಳಿಸಿದ. ಆಗ ಶಲ್ಯ ಭೀಮನ ಬಾಹುಬಲವನ್ನು ತಿಳಿದು ತನ್ನ ರಾಜಧಾನಿಗೇ ಹಿಂತಿರುಗಿದ.
ಪಾರ್ಥೋಽಪಿ ತೇನ ಧನುಷಾ ಯುಯುಧೇ ಸ್ಮ ಕರ್ಣಂ
ಸೋಽಪ್ಯಸ್ತ್ರ ಬಾಹುಬಲಮಾವಿರಮುತ್ರ ಚಕ್ರೇ |
ತೌ ಧನ್ವಿನಾಮನುಪಮೌ ಚಿರಮಸ್ಯತಾಂ ಚ
ಸೂರ್ಯಾತ್ಮಜೋಽತ್ರ ವಚನಂ ವ್ಯಥಿತೋ ಬಭಾಷೇ ॥139॥
ಅರ್ಜುನ ಅದೇ ಬಿಲ್ಲಿನಿಂದ ಕರ್ಣನೊಡನೆ ಯುದ್ಧ ಮಾಡಿದ. ಕರ್ಣನೂ ಅಸ್ತ್ರಬಲ ಬಾಹುಬಲಗಳನ್ನು ಅವನ ಮುಂದೆ ಪ್ರದರ್ಶಿಸಿದ. ಇಬ್ಬರೂ ಅನುಪಮ ಬಿಲ್ಲುಗಾರರು. ಬಹುಹೊತ್ತು ಬಾಣಗಳನ್ನು ಎಸೆದರು. ಬಳಿಕ ಕರ್ಣ ವ್ಯಥಿತನಾಗಿ ನುಡಿದ.
ತ್ವಂ ಫಲ್ಗುನೋ ಹರಿಹಯೋ ದ್ವಿಜಸತ್ತಪೋ ವಾ
ಮೂರ್ತಂ ನ ಮೇ ಪ್ರಮುಖತಃ ಸ್ಥಿತಿಮನ್ಯ ಈಷ್ಟೇ |
ಯೋ ವಾಸ್ಮಿ ಕೋಽಪಿ ಯದಿ ತೇ ಕ್ಷಮಮದ್ಯ ಬಾಣಾನ್
ಮುಂಚಾನ್ಯಥೇಹಿ ರಣತಸ್ತ್ವತಿ ಪಾರ್ಥ ಆಹ ॥140॥
`ನೀನು ಅರ್ಜುನನೊ? ಇಂದ್ರನೋ? ಅಥವಾ ಮೂರ್ತಿಮತ್ತಾಗಿ ಬಂದು ನಿಂತ ಬ್ರಾಹ್ಮಣರ ತಪಸ್ಸೊ? ಬೇರೆ ಯಾರೂ ನನ್ನ ಮುಂದೆ ನಿಲ್ಲಲು ಶಕ್ತನಾಗಲಾರ' ಎಂದ ಕರ್ಣ. ಅರ್ಜುನನೆಂದ, `ನಾನು ಯಾರಾದರೇನು? ನಿನಗೆ ಶಕ್ತಿ ಇದ್ದರೆ ಬಾಣಗಳನ್ನು ಎಸೆ. ಇಲ್ಲದಿದ್ದರೆ ಯುದ್ಧದಿಂದ ಹಿಂತಿರುಗಿ ಹೋಗು.
ಕಾರ್ಯಂ ನ ಮೇ ದ್ವಿಜವರೈಃ ಪ್ರತಿಯೋಧನೇನೇ-
ತ್ಯುಕ್ತವಾನ್ ಯಯೌ ರವಿಸುತಃ ಸ ಸುಯೋಧನಾದ್ಯೈಃ |
ನಾಗಾಹ್ವಯಂ ಪುರಮಥ ದ್ರುಪದಾತ್ಮಜಾಂ ತಾ-
ಮಾದಾಯ ಚಾರ್ಜುನಯುತಃ ಪ್ರಯಯೌ ಸ ಭೀಮಃ ॥141॥
`ಬ್ರಾಹ್ಮಣೋತ್ತಮರೊಂದಿಗೆ ಯುದ್ಧದಿಂದ ನನಗೆ ಏನು ಫಲವಿಲ್ಲ' ಎಂದು ಹೇಳಿ ಕರ್ಣ ದುರ್ಯೋಧನಾದಿಗಳೊಡನೆ ಹಸ್ತಿನಾವತಿಗೆ ಹೊರಟು ಹೋದ. ಬಳಿಕ ಭೀಮ ಅರ್ಜುನನೊಂದಿಗೆ ದ್ರೌಪದಿಯನ್ನು ಕರೆದುಕೊಂಡು ನಡೆದ.
ಅಗ್ರೇಽಶ್ವಿಪುತ್ರಸಹಿತಃ ಸ ತು ಧರ್ಮಸೂನುಃ
ಪ್ರಾಯಾತ್ಕುಲಾಲಗೃಹಮನ್ವಪಿ ಭೀಮಪಾರ್ಥೌ |
ಭಿಕ್ಷೇತಿ ತೈರಭಿಹಿತೇ ಪ್ರಜಗಾದ ಕುಂತೀ
ಭುಙ್ಧ್ವಂ ಸಮಸ್ತಶ ಇತಿ ಪ್ರದದರ್ಶ ಕನ್ಯಾಂ ॥142॥
ಮುಂದಿನಿಂದ ನಕುಲ ಸಹದೇವರೊಂದಿಗೆ ಧರ್ಮರಾಜ ನಡೆದು ಕುಂಬಾರನ ಮನೆಗೆ ಬಂದ. ಹಿಂದಿನಿಂದ ಭೀಮಾರ್ಜುನರೂ ಬಂದರು. `ಭಿಕ್ಷೆ ಸಿಕ್ಕಿತು' ಎಂದು ಅವರು ಹೇಳಿದಾಗ ಕುಂತಿ `ಎಲ್ಲರೂ ಸ್ವೀಕರಿಸಿರಿ' ಎಂದಳು. ಬಳಿಕ ಕನ್ಯೆಯನ್ನು ಕಂಡಳು.

* * * *

नूರ ಎಂಭತ್ತೊಂಭತ್ತನೆಯ ಅಧ್ಯಾಯ
(ಕರ್ಣಾರ್ಜುನರ, ಭೀಮಶಲ್ಯರ, ಧರ್ಮರಾಜ ಸುಯೋಧನರ, ದ್ವಂದ್ವ ಯುದ್ಧ, ಕರ್ಣಾದಿಗಳ ಪರಾಜಯ, ಪಶ್ಚಾತ್‌ನಿವೃತ್ತಿ, ಭೀಮಾರ್ಜುನರಿಂದ ದ್ರೌಪದಿಯನ್ನು ಕರೆದುಕೊಂಡು ಕುಂತಿಯ ಸಮೀಪಗಮನ)
ವೈಶಂಪಾಯನಃ
ಅಜಿನಾನ್ಯವಧುನ್ವಂತಃ ಕರಕಾಂಶ್ಚ ದ್ವಿಜರ್ಷಭಾಃ |
ಊಚುಸ್ತೇ ಭೀರ್ನ ಕರ್ತವ್ಯಾ ವಯಂ ಯೋತ್ಸ್ಯಾಮಹೇ ರಿಪೂನ್ ॥
ಬ್ರಾಹ್ಮಣಶ್ರೇಷ್ಠರು ತಮ್ಮ ಕೃಷ್ಣಾಜಿನಗಳನ್ನು ಮತ್ತು ಕಮಂಡಲಗಳನ್ನು ಕೊಡವುತ್ತಾ ಹೆದರಬೇಡಿ ನಾವು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವೆವು ಎಂದು ಹೇಳಿದರು.
ತಾನೇವಂ ವದತೋ ವಿಪ್ರಾನರ್ಜುನಃ ಪ್ರಹಸನ್ನಿವ |
ಉವಾಚ ಪ್ರೇಕ್ಷಕಾ ಭೂತ್ವಾ ಯೂಯಂ ತಿಷ್ಠತ ಪಾರ್ಶ್ವತಃ ॥2॥
ಹೀಗೆ ಮಾತನಾಡುವ ಬ್ರಾಹ್ಮಣರನ್ನು ಕುರಿತು ಅರ್ಜುನನು ನಗುತ್ತಾ ನೀವು ಒಂದು ಕಡೆ ಪ್ರೇಕ್ಷಕರಾಗಿರಿ ಸಾಕು ಎಂದು ಹೇಳಿದನು.
ಅಹಮೇನಾನಜಿಹ್ಮಾಗ್ರೈಃ ಶತಶೋ ವಿಕಿರಂಛರೈಃ |
ವಾರಯಿಷ್ಯಾಮಿ ಸಂಕ್ರುದ್ಧಾನ್ ಮಂತ್ರೈರಾಶಾವಿಷಾನಿವ ॥3॥
ಹರಿತವಾದ ಅಗ್ರವಿರುವ ನೂರಾರು ಬಾಣಗಳನ್ನು ಪ್ರಯೋಗಿಸಿ ಸಂಕ್ರುದ್ಧರಾದ ಇವರನ್ನು ಮಂತ್ರಗಳಿಂದ ಸರ್ಪಗಳನ್ನು ನಿಗ್ರಹಿಸಿದಂತೆ ನಾನೇ ನಿರೋಧಿಸುವೆನು.
ಇತ್ಯುಕತ್ವ ಧನುರಾದಾಯ ಶುಲ್ಕಾವಾಪ್ತಮಹಾರಥಃ |
ಭ್ರಾತ್ರಾ ಭೀಮೇನ ಸಹಿತಃ ತಸ್ಥೌ ಗಿರಿರಿವಾಚಲಃ ॥4॥
ಹೀಗೆ ಹೇಳಿ ಸ್ವಯಂವರದಲ್ಲಿ ಶುಲ್ಕವಾಗಿ ಪಡೆದ ರಥವನ್ನೇರಿ ಧನುಸ್ಸನ್ನು ಹಿಡಿದು ಅಣ್ಣನಾದ ಭೀಮನ ಜೊತೆಯಲ್ಲಿ ಪರ್ವತದಂತೆ ಸ್ಥಿರವಾಗಿ ನಿಂತನು
ತತಃ ಕರ್ಣಮುಖಾನ್ ಕ್ರುದ್ಧಾನ್ ಕ್ಷತ್ರಿಯಾನ್ ಸಮುಪಸ್ಥಿತಾನ್ |
ಆಸೇದತುರುಭೌ ಪಾರ್ಥೌ ಗಜೌ ಪ್ರತಿಗಜಾನಿವ ॥5॥
ಅನಂತರ ಕರ್ಣ ಮೊದಲಾದ ಎದುರಿಗಿರುವ ಕ್ರುದ್ಧರಾದ ಕ್ಷತ್ರಿಯ ಸಮೂಹವನ್ನು ಎರಡು ಗಜಗಳು ಪ್ರತಿಗಜಗಳ ಮೇಲೆ ಎರಗಿದಂತೆ ಭೀಮಾರ್ಜುನರಿಬ್ಬರೂ ಸಮೀಪಿಸಿದರು.
ಊಚುಶ್ಚ ವಾಚಃ ಪರುಷಾಃ ತೇ ರಾಜಾನೋ ಯುಯುತ್ಸವಃ |
ಆಹವೇಷು ದ್ವಿಜಸ್ಯಾಪಿ ವಧೋ ದೃಷ್ಟೋ ಯುಯುತ್ಸತಃ ॥6॥
ಯುದ್ಧ ಮಾಡುವ ಇಚ್ಛೆಯನ್ನು ಹೊಂದಿದ್ದ ಆ ರಾಜರುಗಳು ಯುದ್ಧದಲ್ಲಿ ಯುದ್ಧ ಮಾಡುವ ಬ್ರಾಹ್ಮಣನ ವಧೆಯೂ ಧಾರ್ಮಿಕವಾಗಿದೆ ಎಂದು ಒರಟಾದ ಮಾತುಗಳನ್ನು ಆಡಿದರು.
ತತೋ ವೈಕರ್ತನಃ ಕರ್ಣೋ ಜಗಾಮಾರ್ಜುನಮೋಜಸಾ |
ಯುದ್ಧಾರ್ಥೀ ವಾಸಿತಾಹೇತೋರ್ಗಜಃ ಪ್ರತಿಗಜಂ ಯಥಾ ॥7॥
ಅನಂತರ ವೈಕರ್ತನನಾದ ಕರ್ಣನು ಯುದ್ಧವನ್ನು ಬಯಸಿ, ಮೊದಲನೆಯ ಸಲ ಋತುಮತಿಯಾದ ಹೆಣ್ಣಾನೆಯ ಸಮೀಪದಲ್ಲಿರುವ ಗಜವನ್ನು ಕುರಿತು ಪ್ರತಿಗಜವು ಹೋದಂತೆ ತನ್ನ ಸಾಮರ್ಥ್ಯದಿಂದ ಅರ್ಜುನನನ್ನು ಸಮೀಪಿಸಿದನು.
ಭೀಮಸೇನಂ ಯಯೌ ರಾಜಾ ಮದ್ರಾಣಾಮೀಶ್ವರೋ ಬಲೀ |
ದುರ್ಯೋಧನಾದಯಃ ಸರ್ವೇ ಬ್ರಾಹ್ಮಣೈಃ ಸಹ ಸಂಗತಾಃ ॥8॥
ಮದ್ರರಾಜನಾದ ಬಲಿಷ್ಠನಾದ ಶಲ್ಯನು ಭೀಮಸೇನನ ಜೊತೆಯಲ್ಲಿ ಯುದ್ಧಕ್ಕೆ ಹೋದನು. ದುರ್ಯೋಧನಾದಿಗಳೆಲ್ಲರೂ ಬ್ರಾಹ್ಮಣರ ಜೊತೆಯಲ್ಲಿ ಸೇರಿದರು.
ಮೃದುಪೂರ್ವಮಯತ್ನೇನ ಪ್ರತ್ಯಯುಧ್ಯಂಸ್ತದಾಽಽಹವೇ |
ತತೋಽರ್ಜುನಃ ಪ್ರತ್ಯವಿಧ್ಯತ್ ತಾಪಯಂಸ್ತಂ ತ್ರಿಭಿಃ ಶರೈಃ ॥9॥
ಕರ್ಣಂ ವೈಕರ್ತನಂ ಧೀಮಾನ್ ವಿಕೃಷ್ಯ ಬಲವದ್ ಧನುಃ |
ಬಲೇನ ಸುವ್ಯವಚ್ಛಿನ್ನೈರವಾರ್ಯಂ ತಮವಾರಯತ್ ॥10॥
ಅರ್ಜುನನು ಮೊದಲು ಹೆಚ್ಚು ಪ್ರಯತ್ನ ಪಡದೆ ಮೃದುವಾಗಿ ಯುದ್ಧ ಮಾಡಿದನು. ಅನಂತರ ಮೇಧಾವಿಯಾದ ಅವನು ದೃಢವಾದ ಧನುಸ್ಸನ್ನು ಎಳೆದು ಮೂರು ಬಾಣಗಳಿಂದ ಸೂರ್ಯಪುತ್ರನಾದ ಕರ್ಣನನ್ನು ಗಾಯಗೊಳಿಸಿ ಅವನಿಗೆ ತಾಪವನ್ನು ಉಂಟುಮಾಡಿದನು. ಯಾರಿಂದಲೂ ತಡೆಯಲು ಅಸಾಧ್ಯನಾದ ಆ ಕರ್ಣನನ್ನು ಬಲದಿಂದ ಪ್ರಯೋಗ ಮಾಡಿದ ತನ್ನ ಶ್ರೇಷ್ಠವಾದ ಬಾಣಗಳಿಂದ ತಡೆದನು.
ತೇಷಾಂ ಶರಾಣಾಂ ವೇಗೇನ ಶಿತಾನಾಂ ತಿಗ್ಮತೇಜಸಾಮ್ |
ವಿಮೋಹ್ಯಮಾನೋ ರಾಧೇಯೋ ಯತ್ನಾತ್ ತಮನುಧಾವತಿ ॥11॥
ಕ್ರೂರತೇಜಸ್ಸುಳ್ಳ ಹರಿತವಾದ ಆ ಬಾಣಗಳ ವೇಗದಿಂದ ಗಾಯಗೊಂಡು ಮೋಹವನ್ನು ಹೊಂದಿದವನಾಗಿ ಕರ್ಣನು ಬಹಳ ಕಷ್ಟಪಟ್ಟು ಅರ್ಜುನನನ್ನು ಎದುರಿಸಿ ಯುದ್ಧ ಮಾಡಿದನು.
ತಾವುಭಾವಪ್ಯನಿರ್ದೇಶ್ಯೌ ಲಾಘವಾಜ್ಜಯತಾಂ ವರೌ |
ಅಯುಧ್ಯೇತಾಂ ಸುಸಂಕ್ರುದ್ಧಾವನ್ಯೋನ್ಯಂ ವಿಜಯೈಷಿಣೌ ॥12॥

ಅನಿರ್ದೇಶ್ಯವಾದ ಕ್ಷಿಪ್ರತೆಯನ್ನು ಹೊಂದಿದ್ದ ಜಯಶಾಲಿಗಳಲ್ಲಿ ಶ್ರೇಷ್ಠರಾದ ಅವರಿಬ್ಬರೂ ಪರಸ್ಪರ ವಿಜಯವನ್ನು ಬಯಸಿ ಬಹಳ ಕ್ರೋಧದಿಂದ ಯುದ್ಧಮಾಡಿದರು.
ಕೃತೇ ಪ್ರತಿಕೃತಂ ಪಶ್ಯ ಪಶ್ಯ ಬಾಹುಬಲಂ ಚ ಮೇ |
ಇತಿ ಶೂರೌ ಸ್ವವಚನೈರಭಾಷೇತಾಂ ಪರಸ್ಪರಮ್ ॥13॥
ತತೋಽರ್ಜುನಸ್ಯ ಭುಜಯೋರ್ವೀರ್ಯಮಪ್ರತಿಮಂ ಭುವಿ |
ಜ್ಞಾತ್ವಾ ವೈಕರ್ತನಃ ಕರ್ಣಃ ಸಂರಬ್ಧಃ ಸಮಯೋಧಯತ್ ॥14॥
ನಿನ್ನ ಕಾರ್ಯಕ್ಕೆ ನನ್ನ ಪ್ರತೀಕಾರವನ್ನು ನೋಡು ನನ್ನ ಬಾಹುಬಲವನ್ನು ನೋಡು ಎಂದು ತಮ್ಮ ಮಾತುಗಳಿಂದ ಆ ಶೂರರು ಪರಸ್ಪರವಾಗಿ ಹೇಳಿದರು. ಆಗ ಯುದ್ಧದಲ್ಲಿ ಅರ್ಜುನನ ಬಲವು ಭೂಮಿಯಲ್ಲಿ ಅಸದೃಶವಾದುದೆಂದು ತಿಳಿದು ಸೂರ್ಯಪುತ್ರನಾದ ಕರ್ಣನು ಕೋಪದಿಂದ ಯುದ್ಧ ಮಾಡಿದನು.
ಅರ್ಜುನೇನ ಪ್ರಯುಕ್ತಾಂಸ್ತಾನ್ ಬಾಣಾನ್ ವೇಗವತಸ್ತಥಾ |
ಪ್ರತಿಹತ್ಯ ನನಾದೋಚ್ಚೈಃ ಸೈನ್ಯಾಸ್ತಮಭಿಪೂಜಯನ್ ॥15॥
ಅರ್ಜುನನಿಂದ ಪ್ರಯುಕ್ತವಾದ ಆ ವೇಗವುಳ್ಳ ಬಾಣಗಳನ್ನು ವಿನಾಶ ಮಾಡಿ ಗಟ್ಟಿಯಾದ ಸಿಂಹನಾದವನ್ನು ಮಾಡಿದನು. ಸೈನ್ಯದಲ್ಲಿದ್ದವರೆಲ್ಲರೂ ಕರ್ಣನ ಕೌಶಲವನ್ನು ಪೂಜಿಸಿದರು.
ಕರ್ಣಃ
ತುಷ್ಯಾಮಿ ತೇ ವಿಪ್ರಮುಖ್ಯ ಭುಜವೀರ್ಯಸ್ಯ ಸಂಯುಗೇ |
ಅವಿಷಾದಸ್ಯ ಚೈವಾಸ್ಯ ಶಸ್ತ್ರಾಸ್ತ್ರವಿಷಯಸ್ಯ ಚ ॥16॥
ಬ್ರಾಹ್ಮಣಶ್ರೇಷ್ಠನೇ, ಯುದ್ಧದಲ್ಲಿ ನಿನ್ನ ಧೈರ್ಯವನ್ನೂ ಈ ಶಸ್ತ್ರಾಸ್ತ್ರಗಳ ವಿಷಯಕವಾದ ನಿನ್ನ ಭುಜವೀರ್ಯವನ್ನೂ ನೋಡಿ ನನಗೆ ಸಂತೋಷವಾಗಿದೆ.
ಕಿಂ ತ್ವಂ ಸಾಕ್ಷಾದ್ ಧನುರ್ವೇದೋ ರಾಮೋ ವಾ ವಿಪ್ರಸತ್ತಮಃ |
ಅಥ ಸಾಕ್ಷಾದ್ಧರಿಹಯಃ ಸಾಕ್ಷಾದ್ವಾ ವಿಷ್ಣುರವ್ಯಯಃ ॥17॥
ನೀನೇನು ಶರೀರವನ್ನು ಧರಿಸಿ ಬಂದ ಧನುರ್ವೇದವೋ, ಅಥವಾ ಬ್ರಾಹ್ಮಣಶ್ರೇಷ್ಠನಾದ ಪರಶುರಾಮನೋ ಅಥವಾ ಸಾಕ್ಷಾದ್ ಇಂದ್ರನೋ ಅಥವಾ ಅವ್ಯಯನಾದ ಸಾಕ್ಷಾದ್ ವಿಷ್ಣುವೋ?
ಆತ್ಮಪ್ರಚ್ಛಾದನಾರ್ಥಂ ವೈ ಬಾಹುವೀರ್ಯಮುಪಾಶ್ರಿತಃ |
ವಿಪ್ರರೂಪಂ ವಿಧಾಯೇದಂ ತತೋ ಮಾಂ ಪ್ರತಿಯುಧ್ಯಸೇ ॥18॥
ನಿನ್ನ ನಿಜವಾದ ರೂಪವನ್ನು ಮರೆಮಾಡಿಕೊಳ್ಳಲು ಬ್ರಾಹ್ಮಣ ರೂಪವನ್ನು ಧರಿಸಿ, ಬಾಹುವೀರ್ಯವನ್ನು ಅವಲಂಬಿಸಿ ನನ್ನ ಜೊತೆಯಲ್ಲಿ ಯುದ್ಧ ಮಾಡುತ್ತಿದ್ದೀಯೆ.
ನ ಹಿ ಮಾಮಾಹವೇ ಕ್ರುದ್ಧಮನ್ಯಃ ಸಾಕ್ಷಾಚ್ಛಚೀಪತೇಃ |
ಪುಮಾನ್ ಯೋಧಯಿತುಂ ಶಕ್ತಃ ಪಾಂಡವಾದ್ವಾ ಕಿರೀಟಿನಃ ॥19॥
ಯುದ್ಧದಲ್ಲಿ ಕೋಪಗೊಂಡ ನನ್ನ ಜೊತೆಯಲ್ಲಿ ಸಾಕ್ಷಾದ್ ಇಂದ್ರನನ್ನು ಬಿಟ್ಟು, ಅಥವಾ ಪಾಂಡುಪುತ್ರನಾದ ಅರ್ಜುನನನ್ನು ಬಿಟ್ಟು ಬೇರೆ ಯಾರೂ ಎದುರಿಗೆ ನಿಂತು ಯುದ್ಧಮಾಡಲು ಶಕ್ತರಲ್ಲ.
ತ್ವಾಮಾಸಾದ್ಯ ಮಹಾಬಾಹೋ ಬಲಂ ಮೇ ಪ್ರತಿಹನ್ಯತೇ |
ದಗ್ಧಾ ಜತುಗೃಹೇ ಸರ್ವೇ ಪಾಂಡವಾಃ ಸಾರ್ಜುನಾಸ್ತದಾ ॥20॥
ಮಹಾಬಾಹುವೇ, ನಿನ್ನನ್ನು ಎದುರಿಸಿ ನನ್ನ ಬಲವು ಕುಂದಿಹೋಗುತ್ತಿದೆ. ಅರ್ಜುನನ ಜೊತೆಯಲ್ಲಿ ಎಲ್ಲಾ ಪಾಂಡವರೂ ಆಗ ಜತುಗೃಹದಲ್ಲಿ ದಗ್ಧರಾದರಷ್ಟೇ.
ವೈಶಂಪಾಯನಃ
ಇತ್ಯುವಾಚಾರ್ಜುನಮಿದಂ ಪ್ರತ್ಯಾಹಂತುಮಶಕ್ನುವನ್ |
ತಮೇವಂವಾದಿನಂ ತತ್ರ ಪ್ರತ್ಯುವಾಚಾಥ ಫಲ್ಗುನಃ ॥21॥
ಅರ್ಜುನನ ಶಸ್ತ್ರಗಳಿಗೆ ಪ್ರತೀಕಾರ ಮಾಡಲು ಅಶಕ್ತನಾದ ಕರ್ಣನು ಹೀಗೆ ಮಾತನಾಡಿದನು. ಆಗ ಹೀಗೆ ಮಾತನಾಡುವ ಕರ್ಣನನ್ನು ಕುರಿತು ಅಲ್ಲಿ ಅರ್ಜುನನು ಪ್ರತ್ಯುತ್ತರವನ್ನು ಕೊಟ್ಟನು.
ನಾಸ್ಮಿ ಕರ್ಣ ಧನುರ್ವೇದೋ ನಾಸ್ಮಿ ರಾಮಃ ಪ್ರತಾಪವಾನ್ |
ನಾಹಂ ವಿಷ್ಣುರ್ನ ಶಕ್ರೋಽಹಂ ಕಶ್ಚಿದನ್ಯೋ ಬಲಾನ್ವಿತಃ ॥22॥
ಕರ್ಣನೇ, ನಾನು ಧನುರ್ವೇದವಲ್ಲ, ಪ್ರತಾಪಶಾಲಿಯಾದ ಪರಶುರಾಮನೂ ಅಲ್ಲ, ನಾನು ವಿಷ್ಣುವೂ ಅಲ್ಲ, ಇಂದ್ರನೂ ಅಲ್ಲ. ನಾನು ಇವರಿಗಿಂತ ಅನ್ಯನಾದ ಬಲಾಢ್ಯನಾದ ಒಬ್ಬ ವ್ಯಕ್ತಿ.
ಬ್ರಾಹ್ಮಣೋಽಸ್ಮಿ ಯುಧಾಂ ಶ್ರೇಷ್ಠ ಸರ್ವಶಸ್ತ್ರಭೃತಾಂ ವರಃ |
ಬ್ರಾಹ್ಮೇ ಚಾಸ್ತ್ರೇ ಚ ವೇದೇ ಚ ನಿಷ್ಠಿತೋ ಗುರುಶಾಸನಾತ್ ॥23॥
ಯುದ್ಧ ಮಾಡುವವರಲ್ಲಿ ಶ್ರೇಷ್ಠನಾದವನೇ, ನಾನು ಎಲ್ಲಾ ಶಸ್ತ್ರಭೃತರಲ್ಲಿ ಶ್ರೇಷ್ಠನಾದ ಒಬ್ಬ ಬ್ರಾಹ್ಮಣ. ಅಸ್ತ್ರಗಳಲ್ಲಿಯೂ, ವೇದಗಳಲ್ಲಿಯೂ ಮತ್ತು ಉಳಿದ ಬ್ರಹ್ಮವಿದ್ಯೆಯಲ್ಲಿಯೂ ಗುರುಗಳ ಶಾಸನದಂತೆ ನಾನು ನಿಷ್ಠೆಯುಳ್ಳವನಾಗಿದ್ದೇನೆ.
ಸ್ಥಿತೋಽಸ್ಮ್ಯಥ ರಣೇ ಜೇತುಂ ತ್ವಾಂ ವೀರ ವಿಚಲೋ ಭವ |
ನಿರ್ಜಿತೋಽಸ್ಮೀತಿ ವಾ ಬ್ರೂಹಿ ತತೋ ವ್ರಜ ಯಥಾಸುಖಮ್ ॥24॥
ಈಗ ನಿನ್ನನ್ನು ಗೆಲ್ಲಲು ನಾನು ಯುದ್ಧದಲ್ಲಿ ಉಪಸ್ಥಿತನಾಗಿದ್ದೇನೆ. ವೀರನೇ ಸ್ಥಿರವಾಗಿರು. (ಸ್ಥಿರವಾಗಿ ನಿಂತು ಯುದ್ಧಮಾಡು)

ಇಲ್ಲದಿದ್ದರೆ ನಾನು ಸೋತಿದ್ದೇನೆ ಎಂದು ಹೇಳಿ ಸುಖವಾಗಿ ಮನೆಗೆ ಹಿಂದಿರುಗು.
ವೈಶಂಪಾಯನಃ
ಏವಮುಕತತ್ವ ತು ಕರ್ಣಸ್ಯ ಧನುರ್ಜ್ಯಾಮಥ ಸೋಽಚ್ಛಿನತ್ |
ತತಃ ಕರ್ಣವಿನಾಶಾಯ ಸಂದಧೇ ಶರಮರ್ಜುನಃ |
ಜಿತೋಽಸ್ಮೀತ್ಯಬ್ರುವೀತ್ ಕರ್ಣಃ ಸಂಜಹಾರ ತತೋಽರ್ಜುನಃ ॥25॥
ಹೀಗೆ ಮಾತನಾಡಿ ಅರ್ಜುನನು ಕರ್ಣನ ಧನುಸ್ಸಿನ ಹೆದೆಯನ್ನು ಕತ್ತರಿಸಿದನು. ಅನಂತರ, ಕರ್ಣವಿನಾಶವನ್ನು ಉದ್ದೇಶಿಸಿ ಬಿಲ್ಲಿನಲ್ಲಿ ಬಾಣವನ್ನು ಹೂಡಿದನು. ಆಗ ಕರ್ಣನು ಸೋತಿದ್ದೇನೆ ಎಂದು ಹೇಳಿದನು. ಅರ್ಜುನನು ಬಾಣವನ್ನು ಉಪಸಂಹಾರ ಮಾಡಿದನು.
ಯುದ್ಧಾಯೋಪಗತೌ ತತ್ರ ರಾಜನ್ ಶಲ್ಯವೃಕೋದರೌ |
ಬಲಿನೌ ಯುಗಪನ್ಮತ್ತೌ ಸ್ಪರ್ಧಯಾ ಚ ಬಲೇನ ಚ |
ಅನ್ಯೋನ್ಯಮಾಹ್ವಯಂತೌ ತೌ ಮತ್ತಾವಿವ ಮಹಾಗಜೌ ॥26॥
ರಾಜನೇ, ಅಲ್ಲಿ ಬಲಿಷ್ಠರಾದ ಶಲ್ಯವೃಕೋದರರು ಯುದ್ಧಕ್ಕೆ ಸಿದ್ಧರಾಗಿ ಒಬ್ಬರನ್ನೊಬ್ಬರು ಆಹ್ವಾನಿಸುತ್ತಾ ಸ್ಪರ್ಧೆಯಿಂದಲೂ ಮತ್ತು ಬಲದಿಂದಲೂ ಮತ್ತರಾಗಿ ಎರಡು ಮದಿಸಿದ ಮಹಾಗಜಗಳಂತೆ ಯುದ್ಧಮಾಡಿದರು.
ಮುಷ್ಟಿಭಿರ್ಜಾನುಭಿಶ್ಚೈವ ನಿಘ್ನಂತಾವಿತರೇತರಮ್ |
ಮುಹೂರ್ತಂ ತಾವಥಾನ್ಯೋನ್ಯಂ ಬಾಹುಭ್ಯಾಮಪಕರ್ಷತಾಮ್ ॥27॥
ಒಂದು ಮಹೂರ್ತದ ಕಾಲ ಪರಸ್ಪರವಾಗಿ ಮುಷ್ಟಿಗಳಿಂದಲೂ, ಮಂಡಿಗಳಿಂದಲೂ ಪ್ರಹಾರಮಾಡುತ್ತಾ ಅನಂತರ ಬಾಹುಗಳಿಂದ ಅವರು ಒಬ್ಬರನ್ನೊಬ್ಬರು ಎಳೆದಾಡಿದರು.
ತತೋ ಭೀಮಃ ಸಮುತ್ಕ್ಷಿಪ್ಯ ಬಾಹುಭ್ಯಾಂ ಶಲ್ಯಮಾಹವೇ |
ನಾವಧೀದ್ ಬಲಿನಾಂ ಶ್ರೇಷ್ಠೋ ಜಹಸುರ್ಬ್ರಾಹ್ಮಣಾಸ್ತದಾ ॥28॥
ಅನಂತರ ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನು ಯುದ್ಧದಲ್ಲಿ ತನ್ನ ಬಾಹುಗಳಿಂದ ಶಲ್ಯನನ್ನು ಮೇಲಕ್ಕೆಸೆದು ಕೊಲ್ಲಲಿಲ್ಲ. (ಚೆಂಡಿನಂತೆ ಮೇಲಕ್ಕೆಸೆದು ಪುನಃ ಚೆಂಡಿನಂತೆಯೇ ಅವನನ್ನು ಹಿಡಿದುಕೊಂಡು ಭೂಮಿಯ ಮೇಲೆ ನಿಲ್ಲಿಸಿದನು) ಆಗ ಬ್ರಾಹ್ಮಣರೆಲ್ಲರೂ ನಕ್ಕರು.
ತತೋ ರಾಜಸಮೂಹಸ್ಯ ಸಂಕ್ರುದ್ಧೋ ವೃಕ್ಷಮಾರುಜತ್ |
ತತಸ್ತು ಭೀಮಂ ಸಂಜ್ಞಾಭಿರ್ವಾರಯಾಮಾಸ ಧರ್ಮರಾಟ್ ॥29॥
ಆಕಾರಜ್ಞಸ್ತತೋ ಭ್ರಾತುಃ ಪಾಂಡವೋಽಪಿ ನ್ಯವರ್ತತ |
ಧರ್ಮರಾಜಶ್ಚ ಕೌರವ್ಯ ದುರ್ಯೋಧನಮಮರ್ಷಿಣಮ್ ॥30॥
ಬ್ರಹ್ಮರೂಪಪ್ರತಿಚ್ಛನ್ನೋ ರಾಜಾನಂ ಸಮಯೋಧಯತ್ |
ಭುಜಯೋರಂತರೇಽವಿಧ್ಯದ್ ಬಾಣೇನಾನತಪರ್ವಣಾ |
ದುರ್ಯೋಧನಮಮಿತ್ರಘ್ನಂ ಧರ್ಮರಾಜೋ ಯುಧಿಷ್ಠಿರಃ ॥31॥
ಅನಂತರ ಭೀಮನು ರಾಜಸಮೂಹದ ಮೇಲಿನ ಕ್ರೋಧದಿಂದ ಒಂದು ಮರವನ್ನು ಕೀಳಲು ಹೊರಟನು. ಆಗ ಧರ್ಮರಾಜನು ಸಂಕೇತವನ್ನು ಮಾಡಿ ಭೀಮನು ಹಾಗೆ ಮಾಡದಂತೆ ತಡೆದನು. ಅಣ್ಣನ ಇಂಗಿತವನ್ನು ತಿಳಿದ ಭೀಮನು ಆ ಕಾರ್ಯದಿಂದ ಹಿಂದೆ ಸರಿದನು. ಜನಮೇಜಯನೇ, ಬ್ರಾಹ್ಮಣರೂಪದಿಂದ ಪ್ರತಿಚ್ಛನ್ನನಾದ ಧರ್ಮರಾಜನು ಅಸೂಯಾಪರನಾದ ದುರ್ಯೋಧನನ ಜೊತೆಯಲ್ಲಿ ಯುದ್ಧಮಾಡಿದನು. ಧರ್ಮರಾಜನಾದ ಯುಧಿಷ್ಠಿರನು ಬಾಗಿದ ಅಗ್ರವುಳ್ಳ ಬಾಣದಿಂದ ಶತ್ರುಸಂಹಾರಕನಾದ ದುರ್ಯೋಧನನಿಗೆ ಭುಜಗಳ ಮಧ್ಯದಲ್ಲಿ ಹೊಡೆದನು.
ತತೋ ದುರ್ಯೋಧನಃ ಕ್ರುದ್ಧೋ ದಂಡಾಹತ ಇವೋರಗಃ |
ಪ್ರತ್ಯವಿಧ್ಯತ ರಾಜಾನಂ ಯತ್ನಂ ಪರಮಮಾಸ್ಥಿತಃ |
ಛಿತತ್ವ ರಾಜಾ ಧನುರ್ಜ್ಯಾಂ ತು ಧಾರ್ತರಾಷ್ಟ್ರಸ್ಯ ಸಂಯುಗೇ ॥32॥
ನಾರಾಚೇನ ಸುತೀಕ್ಷ್ಣೇನ ಕಾಯಾವರಣಭೇದಿನಾ |
ಹೃದಿ ವಿವ್ಯಾಧ ಭೂಯೋಽಸ್ಯ ಬಾಹ್ವೋರುರಸಿ ಚಾರ್ಪಯತ್ ॥33॥
ಆಗ ದುರ್ಯೋಧನನು ಕೋಲಿನಿಂದ ಹೊಡೆದ ಸರ್ಪದಂತೆ ಪರಮಪ್ರಯತ್ನವನ್ನು ಹೊಂದಿದವನಾಗಿ ಮಹಾಪ್ರಯತ್ನವನ್ನು ಮಾಡಿ ಪ್ರತಿಯಾಗಿ ಧರ್ಮರಾಜನಿಗೆ ಬಾಣಪ್ರಯೋಗವನ್ನು ಮಾಡಿದನು. ಧರ್ಮರಾಜನು ಹರಿತವಾದ ನಾರಾಚದಿಂದ ಅವನ ಧನುಸ್ಸನ್ನು ಮತ್ತು ಹೆದೆಯನ್ನು ಕತ್ತರಿಸಿ ಅವನ ಕವಚವನ್ನು ಭೇದಿಸಿ ಬಾಣಗಳನ್ನು ಅವನ ಹೃದಯಕ್ಕೂ, ಬಾಹುಗಳಿಗೂ, ವಕ್ಷಸ್ಥಳಕ್ಕೂ ಅರ್ಪಿಸಿದನು.
ಅಭ್ಯವರ್ಷಚ್ಚರೌ್ಯರಿಸ್ತಂ ಸ ಹಿತ್ವಾ ಪ್ರಾದ್ರುವದ್ರಣಾತ್ |
ದುಶ್ಶಾಸನಸ್ತು ಸಂಕ್ರುದ್ಧಃ ಸಹದೇವೇನ ಸಂಗತಃ ॥34॥
ಬಾಣಗಳ ಮಳೆಗೆ ಸಿಲುಕಿದ ದುರ್ಯೋಧನನು ಧರ್ಮರಾಜನನ್ನು ಬಿಟ್ಟು ಯುದ್ಧದಿಂದ ಓಡಿಹೋದನು. ದುಶ್ಶಾಸನನು ಕ್ರೋಧದಿಂದ ಸಹದೇವನ ಜೊತೆಯಲ್ಲಿ ಯುದ್ಧಮಾಡಿದನು.
ಯುದ್ಧ್ವಾ ಚ ಸುಚಿರಂ ಕಾಲಂ ಧನುಷಾ ಸ ಮಹಾರಥಃ |
ಉತ್ಸೃಜ್ಯ ಚ ಧನುಃ ಸಂಖೇ ಬಾಹುಭ್ಯಾಮೇವ ಕೌರವ ॥35॥
ಪಾಂಡವಂ ತ್ವಭಿದುದ್ರಾವ ಸೋಽಸಿಂ ಜಗ್ರಾಹ ಚರ್ಮ ಚ |
ವಿಕರ್ಣಚಿತ್ರಸೇನಾಭ್ಯಾಂ ನಿಗೃಹೀತಶ್ಚ ಕೌರವಃ ॥36॥

ಮಹಾರಥನಾದ ಅವನು ಧನುರ್ಬಾಣಗಳಿಂದ ಬಹಳ ಸಮಯ ಯುದ್ಧವನ್ನು ಮಾಡಿ ಧನುಸ್ಸನ್ನು ಬಿಟ್ಟು ಬಾಹುಗಳಿಂದಲೇ ಸಹದೇವನ ಜೊತೆ ಯುದ್ಧವನ್ನು ಮಾಡಲು ಅವನ ಕಡೆಗೆ ಬಂದನು. ಸಹದೇವನು ಖಡ್ಗಚರ್ಮಗಳನ್ನು ಹಿಡಿದುಕೊಂಡನು. ವಿಕರ್ಣ ಮತ್ತು ಚಿತ್ರಸೇನರು ದುಶ್ಶಾಸನನನ್ನು ತಡೆದರು.
ದುಸ್ಸಹೋ ನಕುಲಶ್ಚಾಪಿ ಯುದ್ಧಂ ಕರ್ತುಂ ಸಮುದ್ಯತೌ |
ತೌ ದೃಷ್ಟ್ವಾ ಕೌರವಾ ಯುದ್ಧಂ ವಾಕ್ಯಮೂಚುರ್ಮಹಾಬಲೌ ॥37॥
ದುಸ್ಸಹ ಮತ್ತು ನಕುಲರು ಯುದ್ಧವನ್ನು ಮಾಡಲು ಸನ್ನದ್ಧರಾದರು. ಮಹಾಬಲಿಷ್ಠರಾದ ಅವರು ಯುದ್ಧಸನ್ನದ್ಧರಾದುದನ್ನು ನೋಡಿ ಉಳಿದ ಕೌರವರು ಹೀಗೆ ಮಾತನಾಡಿದರು.
ನಿವರ್ತಂತಾಂ ಭವಂತೋ ವೈ ಕುತೋ ವಿಪ್ರೇಷು ವಿಗ್ರಹಃ |
ನ ಚೇಮೇ ಕೇವಲಂ ವಿಪ್ರಾ ನ ಚೈಷಾಂ ಮಾನುಷಂ ಬಲಮ್ ॥38॥
ನೀವು ಹಿಂದಿರುಗಿರಿ, ಬ್ರಾಹ್ಮಣರ ಜೊತೆಯಲ್ಲಿ ಏಕೆ ವಿರೋಧ? ಇವರು ಕೇವಲ ಬ್ರಾಹ್ಮಣರೂ ಅಲ್ಲ ಮತ್ತು ಇವರ ಬಲವು ಕೇವಲ ಮಾನುಷಬಲವೂ ಅಲ್ಲ.
ದ್ವಾವತ್ರ ಬ್ರಾಹ್ಮಣೌ ಕ್ರೂರೌ ವಾಯ್ವಗ್ನಿಸದೃಶೌ ಬಲೇ |
ಯೇ ವಾ ಕೇ ವಾ ನಮಸ್ತೇಭ್ಯೋ ಗಚ್ಛಾಮಃ ಸ್ವಪುರಂ ವಯಮ್ ॥
ಇಲ್ಲಿ ಈ ಇಬ್ಬರೂ ಬ್ರಾಹ್ಮಣರೂ ಬಲದಲ್ಲಿ ವಾಯು ಅಗ್ನಿಗಳಿಗೆ ಸದೃಶರಾಗಿ ಕ್ರೂರರಾಗಿದ್ದಾರೆ. ಅವರು ಯಾರಾದರೂ ಆಗಿರಲಿ ಅವರಿಗೆ ನಮಸ್ಕಾರವನ್ನು ಮಾಡಿ ನಮ್ಮ ಪಟ್ಟಣಕ್ಕೆ ಹಿಂದಿರುಗೋಣ.
ಏವಂ ಸಂಭಾಷ್ಯ ತೇ ವೀರಾ ವಿನಿವರ್ತಂತ ಕೌರವಾಃ |
ಜಹಸುರ್ಬ್ರಾಹ್ಮಣಾಸ್ತತ್ರ ಸಮೇತಾ ರಾಜಮಂಡಲೇ ॥40॥
ವೀರರಾದ ಕೌರವರು ಹೀಗೆ ಮಾತನಾಡಿ ಯುದ್ಧದಿಂದ ನಿವೃತ್ತರಾದರು. ಅಲ್ಲಿ ರಾಜಸಮೂಹದಲ್ಲಿ ಸೇರಿದ ಬ್ರಾಹ್ಮಣರು ಅವರನ್ನು ಹಾಸ್ಯ ಮಾಡಿದರು.
ತೇ ಪ್ರಯಾತಾಸ್ತತಸ್ತತ್ರ ಕ್ಷತ್ರಿಯಾ ರಣಮೂರ್ಧನಿ |
ಬ್ರಾಹ್ಮಣಾಶ್ಚ ಜಯಂ ಪ್ರಾಪ್ಯ ಕನ್ಯಾಮಾದಾಯ ನಿರ್ಯಯುಃ ॥41॥
ಆ ಕ್ಷತ್ರಿಯರು ಘೋರಯುದ್ಧದ ಸಂದರ್ಭದಲ್ಲಿ ಯುದ್ಧವನ್ನು ಬಿಟ್ಟು ಹೊರಟರು. ಬ್ರಾಹ್ಮಣರೂ ಸಹ ಜಯವನ್ನು ಹೊಂದಿ ಕನ್ಯೆಯನ್ನು ಕರೆದುಕೊಂಡು ಹೊರಟರು.
ಪಾತಿತೇ ಭೀಮಸೇನೇನ ಶಲ್ಯೇ ಕರ್ಣೇ ಚ ನಿರ್ಜಿತೇ |
ದುರ್ಯೋಧನೇ ಚಾಪಗತೇ ತಥಾ ದುಶ್ಶಾಸನೇ ರಣಾತ್ ॥42॥
ಶಂಕಿತಾಃ ಸರ್ವರಾಜಾನಃ ಸಮರೇ ಚಾತಿಮಾನುಷೇ |
ಊಚುಶ್ಚ ಸಹಿತಾಸ್ತತ್ರ ಸಾಧ್ವಿಮೇ ಬ್ರಾಹ್ಮಣರ್ಷಭಾಃ ॥43॥
ಭೀಮಸೇನನಿಂದ ಶಲ್ಯನು ಉರುಳಿಸಲ್ಪಡುತ್ತಿರಲು ಕರ್ಣನು ನಿರ್ಜಿತನಾಗುತ್ತಿರಲು, ದುರ್ಯೋಧನ ಮತ್ತು ದುಶ್ಶಾಸನರು ಯುದ್ಧವನ್ನು ಬಿಟ್ಟು ಹೋಗುತ್ತಿರಲು ಆ ಅತಿಮಾನುಷವಾದ ಯುದ್ಧವನ್ನು ನೋಡಿ ಶಂಕೆಯನ್ನು ಹೊಂದಿದ ಎಲ್ಲ ರಾಜರೂ ಒಟ್ಟಿಗೆ ಸೇರಿ ಹೀಗೆ ಮಾತನಾಡಿದರು.
ವಿಜ್ಞಾಯಂತಾಂ ಕ್ವಜನ್ಮಾನಃ ಕ್ವನಿವಾಸಾಸ್ತಥೈವ ಚ |
ಕೋ ಹಿ ರಾಧಾಸುತಂ ಕರ್ಣಂ ಶಕ್ತೋ ವಾರಯಿತುಂ ರಣೇ ॥44॥
ತಥೈವ ಮದ್ರರಾಜಾನಂ ಶಲ್ಯಂ ಬಲವತಾಂ ವರಮ್ |
ಬಲದೇವಾದೃತೇ ವೀರಾತ್ ಕೃಪಾದ್ವಾಪಿ ಶರದ್ವತಃ ॥45॥
ಕೃಷ್ಣಾದ್ ವಾ ದೇವಕೀಪುತ್ರಾತ್ ಫಲ್ಗುನಾದ್ ವಾ ಪರಂತಪಾತ್ |
ಕ್ರಿಯತಾಮಪಹಾರೋಽಸ್ಮಾದ್ ಯುದ್ಧಾದ್ ಬ್ರಾಹ್ಮಣಸಂಯುತಾತ್|
ತಥೈನಾನುಪಲಭ್ಯೇಹ ಪುನರ್ಯೋತ್ಸ್ಯಾಮಹೇ ವಯಮ್ ॥46॥
ಈ ಬ್ರಾಹ್ಮಣಶ್ರೇಷ್ಠರು ಯಾರೆಂದು ಚೆನ್ನಾಗಿ ತಿಳಿಯಿರಿ. ಅವರು ಎಲ್ಲಿ ಜನಿಸಿದವರು? ಮತ್ತು ಎಲ್ಲಿ ವಾಸಮಾಡುತ್ತಾರೆ? ಬಲರಾಮನನ್ನು ಬಿಟ್ಟು, ಕೃಪಾಚಾರ್ಯರನ್ನು ಬಿಟ್ಟು, ದೇವಕೀಪುತ್ರನಾದ ಕೃಷ್ಣನನ್ನು ಬಿಟ್ಟು, ಪರಂತಪನಾದ ಅರ್ಜುನನನ್ನು ಬಿಟ್ಟು ಬೇರೆ ಯಾರು ತಾನೇ ಯುದ್ಧದಲ್ಲಿ ಕರ್ಣನನ್ನು ತಡೆಯಲು ಸಾಧ್ಯ? ಹಾಗೆಯೇ ಬಲಿಷ್ಠರಲ್ಲಿ ಶ್ರೇಷ್ಠನಾದ ಮದ್ರರಾಜನನ್ನೂ ಸಹ ಯಾರು ತಡೆಯಲು ಸಾಧ್ಯ? ಈ ಬ್ರಾಹ್ಮಣಸಂಯುಕ್ತವಾದ ಯುದ್ಧದಿಂದ ಹಿಂದಕ್ಕೆ ಸರಿಯಿರಿ. ಇವರು ಯಾರೆಂದು ತಿಳಿದು ನಾವು ಪುನಃ ಯುದ್ಧವನ್ನು ಮಾಡೋಣ.
ತತ್ಕರ್ಮ ಭೀಮಸ್ಯ ಸಮೀಕ್ಷ್ಯ ಕೃಷ್ಣಃ
ಕುಂತೀಸುತೌ ತೌ ಪರಿಶಂಕಮಾನಃ |
ನಿವಾರಯಾಮಾಸ ಮಹೀಪತೀಂಸ್ತಾನ್
ಧರ್ಮೇಣ ಲಬ್ಧೇತ್ಯನುನೀಯ ಸರ್ವಾನ್ ॥47॥
ಭೀಮನ ಆ ಕರ್ಮವನ್ನು ನೋಡಿದ ಕೃಷ್ಣನು ಇವರು ಕುಂತೀಸುತರೆಂಬ ಶಂಕೆಗೆ ಒಳಗಾಗಿ ಎಲ್ಲಾ ರಾಜರುಗಳನ್ನೂ ಪ್ರಿಯೋಕ್ತಿಗಳಿಂದ ರಂಜಿಸುತ್ತಾ ಧರ್ಮದಿಂದಲೇ ದ್ರೌಪದಿಯು ಲಬ್ಧವಾಗಿದ್ದಾಳೆ ಎಂದು ಹೇಳಿ ಎಲ್ಲರನ್ನೂ ಸಮಾಧಾನಪಡಿಸಿ ಎಲ್ಲಾ ರಾಜರುಗಳನ್ನೂ ಯುದ್ಧದಿಂದ ಹಿಮ್ಮೆಟ್ಟಿಸಿದನು.
ಏವಂ ತೇ ಸನ್ನಿರುದ್ಧಾಸ್ತು ಯುದ್ಧಾದ್ ಯುದ್ಧವಿಶಾರದಾಃ |

ಯಥಾವಾಸಂ ಯಯುಃ ಸರ್ವೇ ವಿಸ್ಮಿತಾ ರಾಜಸತ್ತಮ ॥48॥
ರಾಜಶ್ರೇಷ್ಠನೇ, ಯುದ್ಧದಿಂದ ಹಿಮ್ಮೆಟ್ಟಿಸಲ್ಪಟ್ಟ ಯುದ್ಧವಿಶಾರದರಾದ ಅವರೆಲ್ಲರೂ ವಿಸ್ಮಿತರಾಗಿ ತಮ್ಮ ತಮ್ಮ ಆವಾಸಗಳಿಗೆ ಹೊರಟರು.
ವೃತ್ತೋ ಬ್ರಹ್ಮೋತ್ತರೋ ರಂಗಃ ಪಾಂಚಾಲೀ ಬ್ರಾಹ್ಮಣೈರ್ಹೃತಾ ।
ಇತಿ ಬ್ರುವಂತಃ ಪ್ರಯಯುರ್ಯೇ ತತ್ರಾಸನ್ ಸಮಾಗತಾಃ ॥49॥
ರಂಗದಲ್ಲಿ ಬ್ರಾಹ್ಮಣರದೇ ಮೇಲುಗೈಯಾಯಿತು, ದ್ರೌಪದಿಯನ್ನು ಬ್ರಾಹ್ಮಣರು ಜಯಿಸಿದರು ಎಂದು ಹೇಳಿ ಅಲ್ಲಿ ಸಮಾಗತ-ರಾಗಿದ್ದವರೆಲ್ಲರೂ ಹೊರಟರು.
ಬ್ರಾಹ್ಮಣೈಶ್ಚ ಪ್ರತಿಚ್ಛನ್ನೌ ರೌರವಾಜಿನವಾಸಿಭಿಃ ।
ಕೃಚ್ಛ್ರೇಣ ಜಗ್ಮತುಸ್ತತ್ರ ಭೀಮಸೇನಧನಂಜಯೌ ॥50॥
ಭೀಮಸೇನಾರ್ಜುನರು ರೌರವಾಜಿನಧಾರಿಗಳಾದ ಬ್ರಾಹ್ಮಣರಿಂದ ಪ್ರತಿಚ್ಛನ್ನರಾಗಿ ಮತ್ತೊಮ್ಮೆ ಯುದ್ಧವಾಗದಿರಲಿ ಎಂಬ ಮನಃಕ್ಲೇಶದಿಂದ ಅಲ್ಲಿಂದ ಹೊರಟರು. (ರೌರವ ಎಂದರೆ ಜಿಂಕೆಯ ಒಂದು ಪ್ರಭೇದ. ಅದರ ಚರ್ಮವನ್ನು ಧರಿಸಿದವರು ಎಂದರ್ಥ).
ವಿಮುಕ್ತೌ ಜನಸಂಬಾಧಾಚ್ಛತ್ರುಭಿಃ ಪರಿವೀಕ್ಷಿತೌ ।
ಕೃಷ್ಣಯಾಽನುಗತೌ ತತ್ರ ನೃವೀರೌ ಹಿ ವಿಚೇರತುಃ ॥51॥
ಶತ್ರುಗಳಿಂದ ವೀಕ್ಷಿಸಲ್ಪಟ್ಟು ಜನಜಂಗುಳಿಯಿಂದ ಹೊರಬಂದ ಆ ಮನುಷ್ಯವೀರರು ದ್ರೌಪದಿಯಿಂದ ಹಿಂಬಾಲಿಸಲ್ಪಟ್ಟವರಾಗಿ ನಡೆದರು.
ತೇಷಾಂ ಮಾತಾ ಬಹುವಿಧಂ ವಿನಾಶಂ ಪರ್ಯಚಿಂತಯತ್ ।
ಅನಾಗಚ್ಛತ್ಸು ಪುತ್ರೇಷು ಭೈಕ್ಷಕಾಲೇಽಭಿಗಚ್ಛತಿ ॥52॥
ಧಾರ್ತರಾಷ್ಟ್ರೈರ್ಹೃತಾ ನೂನಂ ವಿಜ್ಞಾಯ ಕುರುಪುಂಗವಾಃ ।
ಮಾಯಾನ್ವಿತೈರ್ವಾ ರಕ್ಷೋಭಿಃ ಸುಘೋರೈರ್ದೃಢವೈರಿಭಿಃ ॥53॥
ಭಿಕ್ಷೆ ಬೇಡುವ ಕಾಲವು ಮೀರಿದರೂ ಪುತ್ರರು ಬಿಡಾರಕ್ಕೆ ಬರದಿರುತ್ತಿರಲು ಅವರ ತಾಯಿಯಾದ ಕುಂತಿಯು ಅನೇಕ ವಿಧವಾದ ವಿನಾಶಗಳನ್ನು ಮನಸ್ಸಿನಲ್ಲಿ ಚಿಂತಿಸಿದಳು. ಕುರುಪುಂಗವರಾದ ನನ್ನ ಮಕ್ಕಳುಗಳನ್ನು ತಿಳಿದು ನಿಶ್ಚಿತವಾಗಿ ದುರ್ಯೋಧನಾದಿಗಳು ಸಂಹರಿಸಿದ್ದಾರೆ ಅಥವಾ ದೃಢವೈರವುಳ್ಳ ಮಾಯಾನ್ವಿತರಾದ ಉಗ್ರರಾದ ರಾಕ್ಷಸರಿಂದ ನನ್ನ ಪುತ್ರರು ಹತರಾಗಿದ್ದಾರೆ.
ವಿಪರೀತಂ ಮತಂ ಜಾತಂ ವ್ಯಾಸಸ್ಯಾಪಿ ಮಹಾತ್ಮನಃ ।
ಇತ್ಯೇವಂ ಚಿಂತಯಾಮಾಸ ಸುತಸ್ನೇಹಾನ್ವಿತಾ ಪೃಥಾ ॥54॥
ಮಹಾತ್ಮರಾದ ವ್ಯಾಸರ ಅಭಿಪ್ರಾಯವೂ ವಿಪರೀತವಾಯಿತು. ಹೀಗೆ ಪುತ್ರಸ್ನೇಹದಿಂದ ಕೂಡಿದ ಕುಂತಿಯು ಚಿಂತಿಸಿದಳು.
ತತೋ ಭುಕ್ತಜನಪ್ರಾಯೇ ಘನೈಃ ಸೂರ್ಯ ಇವಾವೃತಃ ।
ಬ್ರಾಹ್ಮಣೈಃ ಪ್ರಾವಿಶತ್ ತತ್ರ ಜಿಷ್ಣುರ್ಧರ್ಮಪುರಸ್ಕೃತಃ ॥55॥
ಆಗ ಜನರ ಭೋಜನವೆಲ್ಲವೂ ಇನ್ನೇನು ಮುಗಿದಿದೆ ಎನ್ನುವ ವೇಳೆಗೆ ಮೋಡಗಳಿಂದ ಆವೃತನಾದ ಸೂರ್ಯನಂತೆ ಅರ್ಜುನನು ಬ್ರಾಹ್ಮಣರಿಂದ ಆವೃತನಾಗಿ ಧರ್ಮರಾಜನನ್ನು ಮುಂದಿಟ್ಟುಕೊಂಡು ಅಲ್ಲಿ ಪ್ರವೇಶಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕೋನನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ಎಂಭತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಪ್ರಾಮಾದಿಕಂ ಚ ವಚನಂ ನ ಮೃಷಾ ತಯೋಕ್ತಂ
ಪ್ರಾಯೋ ಹಿ ತೇನ ಕಥಮೇತದಿತಿ ಸ್ಮ ಚಿಂತಾ ।
ತೇಷಾಂ ಬಭೂವ ವಸುದೇವಸುತೋ ಹರಿಶ್ಚ
ತತ್ರಾಜಗಾಮ ಪರಮೇಣ ಹಿ ಸೌಹೃದೇನ ॥143॥
ಕುಂತಿ ಪ್ರಮಾದದಿಂದ ಹೇಳಿದ ಮಾತೂ ಕೂಡ ಎಂದೂ ಸುಳ್ಳಾದುದಿಲ್ಲ. ಅದರಿಂದ ಇದು ಹೇಗೆ ಎಂದು ಪಾಂಡವರಿಗೆ ಚಿಂತೆಯಾಯಿತು. ಅಷ್ಟರಲ್ಲಿ ವಾಸುದೇವ ಶ್ರೀಕೃಷ್ಣ ಪರಮಸ್ನೇಹದಿಂದ ಅಲ್ಲಿಗೆ ಬಂದ.
* * * *

ನೂರ ತೊಂಭತ್ತನೆಯ ಅಧ್ಯಾಯ
(ಭೀಮಾರ್ಜುನರಿಂದ ಕುಂತಿಗೆ ದ್ರೌಪದಿಯ ನಿವೇದನೆ, ಕುಂತಿಯ ವಾಕ್ಯ, ಪಾಂಡವರ ದಿಗ್ಭ್ರಮೆ. ಐವರಿಗೂ ಪತ್ನಿಯೆಂಬ ಯುಧಿಷ್ಠಿರನ ನಿಶ್ಚಯ. ಕೃಷ್ಣಬಲರಾಮರ ಆಗಮನ ಮತ್ತು ಕುಶಲ ಪ್ರಶ್ನೆ.)
ವೈಶಂಪಾಯನಃ
ಗತ್ವಾ ತತೋ ಭಾರ್ಗವಕರ್ಮಶಾಲಾಂ
ಪಾರ್ಥೌ ಪೃಥಾಂ ಪ್ರೇಕ್ಷ್ಯ ಮಹಾನುಭಾವೌ ।

ತಾಂ ಯಾಜ್ಞಸೇನೀಂ ಪರಮಪ್ರತೀತಾಂ
ಭಿಕ್ಷೇತ್ಯಥಾವೇದಯತಾಂ ನರಾಗ್ರ್ಯೌ ॥1॥
ಮಹಾನುಭಾವರಾದ ಭೀಮಾರ್ಜುನರು ಅನಂತರ ಕುಂಬಾರನ ಕರ್ಮಶಾಲೆಗೆ ಹೋಗಿ, ತಾಯಿಯನ್ನು ನೋಡಿ ಪರಮಸಂತೋಷದಲ್ಲಿದ್ದ ದ್ರೌಪದಿಯನ್ನು ನರಶ್ರೇಷ್ಠರಾದ ಅವರು ಭಿಕ್ಷೆಯನ್ನು ತಂದಿದ್ದೇವೆ ಎಂದು ನಿವೇದಿಸಿದರು.
ಕುಟೀಗತಾ ಸಾ ತ್ವನವೇಕ್ಷ್ಯ ಪುತ್ರೌ
ಪ್ರೋವಾಚ ಭುಂಕ್ತೇತಿ ಸಮೇತ್ಯ ಸರ್ವೇ |
ಪಶ್ಚಾತ್ ತು ಕುಂತೀ ತ್ವಭಿವೀಕ್ಷ್ಯ ಕನ್ಯಾಂ
ಕಷ್ಟಂ ಮಯಾ ಭಾಷಿತಮಿತ್ಯುವಾಚ ॥2॥
ಮನೆಯ ಒಳಭಾಗದಲ್ಲಿದ್ದ ಅವಳು ಭೀಮಾರ್ಜುನರನ್ನು ನೋಡದೆ ಎಲ್ಲರೂ ಸೇರಿ ಭೋಗಿಸಿ ಎಂದು ಹೇಳಿದಳು. ಕುಂತಿಯು ಅನಂತರ ಕನ್ಯೆಯನ್ನು ನೋಡಿ ನನ್ನ ಮಾತು ದುಃಖಕರವಾಗಿದೆ ಎಂದು ಹೇಳಿದಳು.
ಸಾಽಧರ್ಮಭೀತಾ ಹಿ ವಿಲಜ್ಜಮಾನಾಂ
ತಾಂ ಯಾಜ್ಞಸೇನೀಂ ಪರಮಪ್ರತೀತಾ |
ಪಾಣೌ ಗೃಹೀತ್ವೋಪಜಗಾಮ ಕುಂತೀ
ಯುಧಿಷ್ಠಿರಂ ವಾಕ್ಯಮುವಾಚ ಚೇದಮ್ ॥3॥
ಅಧರ್ಮಕ್ಕೆ ಹೆದರಿದ ಆ ಕುಂತಿಯು ನಾಚಿಕೆಗೊಳ್ಳುತ್ತಿದ್ದ ದ್ರೌಪದಿಯನ್ನು ಪರಮಸಂತೋಷದಿಂದ ಕೈಯಲ್ಲಿ ಹಿಡಿದು ಯುಧಿಷ್ಠಿರನನ್ನು ಕುರಿತು ಈ ವಾಕ್ಯವನ್ನು ಹೇಳಿದಳು.
ಇಯಂ ಚ ಕನ್ಯಾ ದ್ರುಪದಸ್ಯ ರಾಜ್ಞಃ
ತವಾನುಜಾಭ್ಯಾಂ ಮಯಿ ಸನ್ನಿಸೃಷ್ಟಾ |
ಯಥಾನ್ವಿತಂ ಪುತ್ರ ಮಯಾಽಪಿ ಚೋಕ್ತಂ
ಸಮೇತ್ಯ ಭುಂಜೀಧ್ವಮಿತಿ ಪ್ರಮಾದಾತ್ ॥4॥
ಪುತ್ರನೇ, ದ್ರುಪದರಾಜನ ಕನ್ಯೆಯಾದ ಇವಳನ್ನು ನಿನ್ನ ತಮ್ಮಂದಿರು ನನಗೆ ಒಪ್ಪಿಸಿದರು. ನಾನೂ ಸಹ ಪ್ರಮಾದದಿಂದ ಎಂದಿನಂತೆ ಎಲ್ಲರೂ ಭೋಗಿಸಿ ಎಂದು ಹೇಳಿದೆ.
ಮಯಾ ಕಥಂ ನಾನೃತಮುಕ್ತಮದ್ಯ
ಭವೇತ್ ಕುರೂಣಾಮೃಷಭ ಬ್ರವೀಹಿ |
ಪಾಂಚಾಲರಾಜಸ್ಯ ಸುತಾಮಧರ್ಮೋ
ನ ಚೋಪವರ್ತೇತ ನಭೂತಪೂರ್ವಃ ॥5॥
ಕುರುಶ್ರೇಷ್ಠನೇ, ನನ್ನ ಮಾತು ಹೇಗೆ ಅನೃತವಾಗಲಾರದು ಎಂಬುದನ್ನು ಹೇಳು. ಹಿಂದೆ ಯಾವ ಸಜ್ಜನರೂ ಮಾಡದ ಅಧರ್ಮವು ಪಾಂಚಾಲರಾಜಕುಮಾರಿಯನ್ನು ಸ್ಪರ್ಶಿಸಬಾರದು.
ವೈಶಂಪಾಯನಃ
ತತೋ ಮುಹೂರ್ತಂ ತ್ವನುಚಿಂತ್ಯ ರಾಜಾ
ಯುಧಿಷ್ಠಿರೋ ಭ್ರಾತರಮುತ್ತಮೌಜಾಃ |
ಕುಂತೀಂ ಸಮಾಶ್ವಾಸ್ಯ ಕುರುಪ್ರವೀರೋ
ಧನಂಜಯಂ ವಾಕ್ಯಮಿದಂ ಬಭಾಷೇ ॥6॥
ಅನಂತರ ಉತ್ತಮತೇಜಸ್ವಿಯಾದ ಧರ್ಮರಾಜನು ಒಂದು ಮುಹೂರ್ತದ ಕಾಲ ಆಲೋಚಿಸಿ ತಮ್ಮನನ್ನು ಕುರಿತು ಆಲೋಚಿಸಿ, ಕುಂತಿಯನ್ನು ಸಮಾಧಾನಗೊಳಿಸಿ ಆ ಕುರುಪ್ರವೀರನು ಅರ್ಜುನನನ್ನು ಕುರಿತು ಈ ಮಾತನ್ನು ಆಡಿದನು.
ತ್ವಯಾ ಜಿತಾ ಪಾಂಡವ ಯಾಜ್ಞಸೇನೀ
ತ್ವಯೈವ ತೋಷಿಷ್ಯತಿ ರಾಜಪುತ್ರೀ |
ಪ್ರಜ್ವಾಲ್ಯತಾಮಗ್ನಿರಮಿತ್ರಸಾಹ
ಗೃಹಾಣ ಪಾಣಿಂ ವಿಧಿವತ್ ತ್ವಮಸ್ಯಾಃ ॥7॥
ಅರ್ಜುನನೇ, ದ್ರೌಪದಿಯನ್ನು ಜಯಿಸಿದವನು ನೀನು. ರಾಜಕುಮಾರಿಯು ಆ ಕಾರಣದಿಂದ ನಿನ್ನ ಜೊತೆಯಲ್ಲಿಯೇ ಸಂತೋಷಪಡುವವಳು. ಶತ್ರುಗಳನ್ನು ಸಹಿಸುವವನೇ, ಅಗ್ನಿಯನ್ನು ಪ್ರಜ್ವಲಿಸಿ ವಿಧಿಪೂರ್ವಕವಾಗಿ ಇವಳ ಪಾಣಿಗ್ರಹಣವನ್ನು ಮಾಡು.
ಅರ್ಜುನಃ
ಮಾ ಮಾಂ ನರೇಂದ್ರ ತ್ವಮಧರ್ಮರಾಜಂ
ಕೃಥಾ ನ ಧರ್ಮೋ ಹ್ಯಯಮೀಪ್ಸಿತೋಽನ್ಯೈಃ |
ಭವಾನ್ ನಿವೇಶ್ಯಃ ಪ್ರಥಮಂ ತತೋಽಯಂ
ಭೀಮೋ ಮಹಾಬಾಹುರಚಿಂತ್ಯಕರ್ಮಾ ॥8॥
ರಾಜೇಂದ್ರನೇ, ಬೇಡ. ನನ್ನನ್ನು ಅಧರ್ಮರಾಜನನ್ನಾಗಿ ಮಾಡಿ ನೀನು ಧರ್ಮರಾಜನಾಗಬೇಡ. ಉಳಿದವರು ಯಾರೂ ಹೀಗೆ ಮಾಡಿದರೆ ಇದನ್ನು ಧರ್ಮವೆಂದು ಒಪ್ಪುವುದಿಲ್ಲ. ಮೊದಲು ನೀನು ವಿವಾಹವನ್ನು ಮಾಡಿಕೊಳ್ಳಬೇಕು. ಅನಂತರ ಈ ಮಹಾಬಾಹುವೂ, ಅಚಿಂತ್ಯಕರ್ಮವುಳ್ಳವನೂ ಆದ ಭೀಮಸೇನನು ವಿವಾಹ ಮಾಡಿಕೊಳ್ಳಬೇಕು.

ಅಹಂ ತತೋ ನಕುಲೋಽನಂತರಂ ಮೇ
ಮಾದ್ರೀಸುತಃ ಸಹದೇವೋ ಜಘನ್ಯಃ |
ವೃಕೋದರೋಽಹಂ ಚ ಯವೌ ಚ ರಾಜ-
ನ್ನಿಯಂ ಚ ಕನ್ಯಾ ಭವತಶ್ಚ ಸರ್ವೇ ॥9॥
ಅನಂತರ ನಾನು, ಅನಂತರ ನಕುಲ, ಅನಂತರ ಮಾದ್ರಿಯ ಪುತ್ರರಲ್ಲಿ ಚಿಕ್ಕವನಾದ ಸಹದೇವ ವಿವಾಹ ಮಾಡಿಕೊಳ್ಳಬೇಕು. ರಾಜನೇ, ಭೀಮಸೇನ, ನಾನು, ನಕುಲ ಸಹದೇವರು ಮತ್ತು ಈ ಕನ್ಯೆ ಎಲ್ಲರೂ ನಿನ್ನ
ಅಧೀನರಾದವರು.
ಏವಂ ಗತೇ ಯತ್ ಕರಣೀಯಮತ್ರ
ಧರ್ಮ್ಯಂ ಯಶಸ್ಯಂ ಕುರು ತದ್ ವಿಚಿಂತ್ಯ |
ಪಾಂಚಾಲರಾಜಸ್ಯ ಹಿ ಯತ್ ಪ್ರಿಯಂ ಸ್ಯಾತ್
ತದ್ ಬ್ರೂಹಿ ಸರ್ವೇ ಸ್ಮ ವಶೇ ಸ್ಥಿತಾಸ್ತೇ ॥10॥
ಪರಿಸ್ಥಿತಿಯು ಹೀಗಿರುವಾಗ ಯಾವುದು ಧರ್ಮಸಮ್ಮತ ಮತ್ತು ಕೀರ್ತಿಪ್ರದ ಎಂದು ವಿಮರ್ಶೆ ಮಾಡಿ ಅದರಂತೆ ಮಾಡು. ಪಾಂಚಾಲರಾಜನಿಗೆ ಯಾವುದು ಪ್ರಿಯವಾಗುವುದೋ ಅದನ್ನು ಹೇಳು. ನಾವೆಲ್ಲರೂ ನಿನ್ನ ಅಧೀನರಾಗಿದ್ದೇವೆ.
ವೈಶಂಪಾಯನಃ
ದೃಷ್ಟ್ವಾ ತೇ ತತ್ರ ತಿಷ್ಠಂತೀಂ ಸರ್ವೇ ಕೃಷ್ಣಾಂ ಯಶಸ್ವಿನೀಮ್ |
ಸಂಪ್ರೇಕ್ಷ್ಯಾನ್ಯೋನ್ಯಮಾಸೀನಾ ಹೃದಯೈಸ್ತಾಮಧಾರಯನ್ ॥11॥
ಅಲ್ಲಿ ಕುಳಿತ ಅವರೆಲ್ಲರೂ ಅಲ್ಲಿಯೇ ನಿಂತಿದ್ದ ಯಶಸ್ವಿನಿಯಾದ ದ್ರೌಪದಿಯನ್ನು ನೋಡಿ ಅಣ್ಣತಮ್ಮಂದಿರ ಮುಖವನ್ನು ಪರಸ್ಪರ ನೋಡಿ ತಮ್ಮ ಹೃದಯಗಳಲ್ಲಿ ದ್ರೌಪದಿಯನ್ನು ಧರಿಸಿದರು.
ತೇಷಾಂ ಚ ದ್ರೌಪದೀಂ ದೃಷ್ಟ್ವಾ ಸರ್ವೇಷಾಮಮಿತೌಜಸಾಮ್ |
ಸಂಪ್ರಮಥ್ಯೇಂದ್ರಿಯಗ್ರಾಮಂ ಪ್ರಾದುರಾಸೀನ್ಮನೋಭವಃ ॥12॥
ದ್ರೌಪದಿಯನ್ನು ನೋಡಿದ ಅಮಿತಪರಾಕ್ರಮಿಗಳಾದ ಅವರಿಗೆ ಎಲ್ಲಾ ಇಂದ್ರಿಯಗಳನ್ನೂ ಅಲುಗಾಡಿಸುವಂತೆ ಮನಸ್ಸಿನಲ್ಲಿ ಅವಳ ವಿಷಯದಲ್ಲಿ ಕಾಮವು ಉಂಟಾಯಿತು.
ಕಾಮ್ಯರೂಪಂ ಹಿ ಪಾಂಚಾಲ್ಯಾ ವಿಧಾತ್ರಾ ವಿಹಿತಂ ಸ್ವಯಮ್ |
ಬಭೂವಾಧಿಕಮನ್ಯಾಭ್ಯಃ ಸರ್ವಭೂತಮನೋಹರಮ್ ॥13॥
ಬ್ರಹ್ಮದೇವರು ತಾವಾಗಿಯೇ ದ್ರೌಪದಿಗೆ ಒಳ್ಳೆಯ ಸೌಂದರ್ಯವನ್ನು ಕೊಟ್ಟಿದ್ದರು. ಸರ್ವಭೂತಮನೋಹರವಾದ ಅವಳ ಸೌಂದರ್ಯವು ಉಳಿದ ಸ್ತ್ರೀಯರ ಸೌಂದರ್ಯಕ್ಕಿಂತ ಅಧಿಕವಾಗಿದ್ದಿತು.
ತೇ ಮನ್ಯಮಾನಾಃ ಕೌಂತೇಯಾಃ ಸರ್ವಭೂತಮನೋಹರಾಮ್ |
ಚಕಮುಃ ಸತ್ತ್ವಸಂಪನ್ನಾ ವಿಧಾತ್ರಾ ಚ ಪ್ರಚೋದಿತಾಃ ॥14॥
ಧೈರ್ಯಸಂಪನ್ನರಾದ ಆ ಪಾಂಡವರು ದ್ರೌಪದಿಯು ಸರ್ವಭೂತ- ಮನೋಹರಳೆಂದು ತಿಳಿದು ಬ್ರಹ್ಮದೇವರ ಪ್ರೇರಣೆಯಿಂದ ಅವಳಲ್ಲಿ ಕಾಮವನ್ನು ಹೊಂದಿದರು.
ತೇಷಾಮಾಕಾರತತ್ತ್ವಜ್ಞಃ ಕುಂತೀಪುತ್ರೋ ಯುಧಿಷ್ಠಿರಃ |
ದ್ವೈಪಾಯನವಚಃ ಕೃತ್ಸ್ನಂ ಸಂಸ್ಮರನ್ ಮನುಜರ್ಷಭಃ ॥15॥
ಅಬ್ರವೀತ್ ಸಹಿತಾನ್ ಭ್ರಾತೄನ್ ಮಿಥೋ ಭೇದಭಯಾನ್ನೃಪಃ |
ಸರ್ವೇಷಾಂ ದ್ರೌಪದೀ ಭಾರ್ಯಾ ಮಹಿಷೀ ನೋ ಭವಿಷ್ಯತಿ ॥16॥
ಕುಂತೀಪುತ್ರನಾದ ಮನುಜಶ್ರೇಷ್ಠನಾದ ಯುಧಿಷ್ಠಿರನು ಅವರ ಆಕಾರದಿಂದ ಅವರ ಇಂಗಿತವನ್ನು ತಿಳಿದು ವೇದವ್ಯಾಸರ ಮಾತನ್ನು ಸಮಗ್ರವಾಗಿ ಸ್ಮರಿಸಿಕೊಂಡು ಅಣ್ಣತಮ್ಮಂದಿರಲ್ಲಿ ವಿರೋಧವುಂಟಾದೀತೆಂಬ ಭಯದಿಂದ ಎಲ್ಲರನ್ನೂ ಕುರಿತು ಹೀಗೆ ಹೇಳಿದನು. ದ್ರೌಪದಿಯು ನಮ್ಮೆಲ್ಲರಿಗೂ ಪತ್ನಿಯಾಗುವಳು.
ಪ್ರತ್ಯಗೃಹ್ಣಂಸ್ತತೋ ವಾಣೀಂ ಭ್ರಾತುರ್ಜ್ಯೇಷ್ಠಸ್ಯ ಪಾಂಡವಾಃ |
ಅನ್ಯೋನ್ಯಂ ಚಾನುಪಘ್ನಂತೋ ಧರ್ಮಾರ್ಥಂ ಕಾಮಮೀಪ್ಸಿತಮ್ ॥
ಆಗ ಪಾಂಡವರು ಧರ್ಮದ ಸಲುವಾಗಿ ಇಷ್ಟವಾದ ಕಾಮವನ್ನು ಪರಸ್ಪರವಾಗಿ ನಾಶಮಾಡಿಕೊಳ್ಳದೆ ಅಣ್ಣನ ಮಾತನ್ನು ಎಲ್ಲರೂ ಸ್ವೀಕರಿಸಿದರು.
ಜನಮೇಜಯಃ
ಸತಾಽಪಿ ಶಕ್ತೇನ ಚ ಕೇಶವೇನ
ಸಜ್ಯಂ ಧನುಸ್ತನ್ನ ಕೃತಂ ಕಿಮರ್ಥಮ್ |
ವಿದ್ಧಂ ಚ ಲಕ್ಷಂ ನ ಚ ಕಸ್ಯ ಹೇತೋ -
ರಾಚಕ್ಷ್ವ ತನ್ಮೇ ದ್ವಿಪದಾಂ ವರಿಷ್ಠ ॥18॥
ಸಮರ್ಥನಾದ ಕೇಶವನು ಸ್ವಯಂವರಸಮಾಜದಲ್ಲಿ ಇದ್ದರೂ ಏಕೆ ಧನುಸ್ಸಿಗೆ ರಜ್ಜುಬಂಧನವನ್ನು ಮಾಡಲಿಲ್ಲ? ಮನುಷ್ಯರಲ್ಲಿ ಶ್ರೇಷ್ಠರಾದ ವೈಶಂಪಾಯನರೇ, ಅವನು ಯಾವ ಕಾರಣದಿಂದ ಲಕ್ಷ್ಯವೇಧವನ್ನು ಮಾಡಲಿಲ್ಲ ಎಂದು ನನಗೆ ಹೇಳಿ.
ವೈಶಂಪಾಯನಃ
ಶಕ್ತೇನ ಕೃಷ್ಣೇನ ಚ ಕಾರ್ಮುಕಂ ತ-

ನ್ನಾರೋಪಿತಂ ಜ್ಞಾತುಕಾಮೇನ ಪಾರ್ಥಾನ್ |
ಪರಿಶ್ರವಾದೇವ ಬಭೂವ ಲೋಕೇ
ಜೀವಂತಿ ಪಾರ್ಥಾ ಇತಿ ನಿಶ್ಚಯೋಽಸ್ಯ ॥19॥
ಕೃಷ್ಣನು ಪಾಂಡವರು ಬದುಕಿದ್ದಾರೆ ಎಂಬ ವಾರ್ತೆಯನ್ನು ಮಾತ್ರ ಕೇಳಿ ಪಾಂಡವರು ಜೀವಿಸಿದ್ದಾರೆ ಎಂಬ ನಿಶ್ಚಯದಲ್ಲಿದ್ದನು. (ಆದರೆ ಪಾಂಡವರನ್ನು ನೋಡಿರಲಿಲ್ಲ) ಪಾಂಡವರನ್ನು ತಿಳಿಯುವ ಉದ್ದೇಶದಿಂದ ಅವನು ಧನುಸ್ಸಿಗೆ ಹೆದೆಯನ್ನು ಆರೋಪಿಸಲಿಲ್ಲ.
ಅನ್ಯಾನಶಕ್ತಾನ್ ನೃಪತೀನ್ ಸಮೀಕ್ಷ್ಯ
ಸ್ವಯಂವರೇ ಕಾರ್ಮುಕೇಣೋತ್ತಮೇನ |
ಧನಂಜಯಸ್ತು ಧನುರೇಕವೀರಃ
ಸಜ್ಯಂ ಕರೋತೀತ್ಯಭಿವೀಕ್ಷ್ಯ ಕೃಷ್ಣಃ ॥20॥
ಉಳಿದ ಯಾವ ರಾಜರೂ ಆ ಧನುಸ್ಸನ್ನು ಹೆದೆಯೇರಿಸಲು ಸಮರ್ಥರಲ್ಲ. ಏಕವೀರನಾದ ಧನಂಜಯನೊಬ್ಬನೇ ಅದನ್ನು ಮಾಡಲು ಸಮರ್ಥ ಎಂದು ಕೃಷ್ಣನು ತಿಳಿದಿದ್ದನು.
ಇತಿ ಸ್ವಯಂ ವಾಸುದೇವೋ ವಿಚಿಂತ್ಯ
ಪಾರ್ಥಾನ್ ವಿಚಿನ್ವನ್ ವಿವಿಧೈರುಪಾಯೈಃ |
ನ ತದ್ ಧನುಃ ಸಜ್ಯಮಿಯೇಷ ಕರ್ತುಂ
ಕೃಷ್ಣಸ್ಯ ವೈ ಪ್ರಾಣಸಮೋ ಹಿ ಪಾರ್ಥಃ ॥21॥
ಹೀಗೆ ಆಲೋಚಿಸಿದ ವಾಸುದೇವನು ಪಾರ್ಥರನ್ನು ಹುಡುಕಲು ಅನೇಕ ಉಪಾಯಗಳನ್ನು ಮಾಡಿದ ಕಾರಣದಿಂದ ಆ ಧನುಸ್ಸನ್ನು ಆರೋಪಿಸಲು ಬಯಸಲಿಲ್ಲ. ಕೃಷ್ಣನಿಗೆ ಅರ್ಜುನನು ಪ್ರಾಣಸಮನೆಂಬುವುದು ಪ್ರಸಿದ್ಧವಷ್ಟೇ?
ಭ್ರಾತುರ್ವಚಸ್ತತ್ ಪ್ರಸಮೀಕ್ಷ್ಯ ಸರ್ವೇ
ಜ್ಯೇಷ್ಠಸ್ಯ ಪಾಂಡೋಸ್ತನಯಾಸ್ತದಾನೀಮ್ |
ತಮೇವಾರ್ಥಂ ಧ್ಯಾಯಮಾನಾ ಮನೋಭಿ-
ರಾಸಾಂಚಕ್ರುರಥ ತತ್ರಾಮಿತೌಜಸಃ ॥22॥
ಅಣ್ಣನ ಮಾತುಗಳನ್ನು ಕೇಳಿದ ಅಮಿತಪರಾಕ್ರಮಿಗಳಾದ ಆ ಪಾಂಡವರು ಅದೇ ವಿಷಯವನ್ನು ಮನಸ್ಸಿನಲ್ಲಿ ಚಿಂತಿಸುತ್ತಾ ಕುಳಿತರು.
ವೃಷ್ಣಿಪ್ರವೀರಃ ಕುರುಪುಂಗವಾಂಸ್ತಾ-
ನಾಶಂಸಮಾನಃ ಸಹರೌಹಿಣೇಯಃ |
ಜಗಾಮ ತಾಂ ಭಾರ್ಗವಕರ್ಮಶಾಲಾಂ
ಯತ್ರಾಸತೇ ತೇ ಪುರುಷಪ್ರವೀರಾಃ ॥23॥
ಆಗ ವೃಷ್ಣಿಪ್ರವೀರನಾದ ಕೃಷ್ಣನು ಲಕ್ಷ್ಯವೇಧವನ್ನು ಮಾಡಿದವರು ಕುರುಪುಂಗವರೆಂದು ಆಶಂಸಿಸಿ ಬಲರಾಮನನ್ನು ಕರೆದುಕೊಂಡು, ಆ ಕುರುಪ್ರವೀರರು ವಾಸಿಸುತಿದ್ದ ಕುಂಬಾರನ ಮನೆಗೆ ಬಂದನು.
ತತ್ರೋಪವಿಷ್ಟಂ ಪೃಥುದೀರ್ಘಬಾಹುಂ
ದದರ್ಶ ಕೃಷ್ಣಃ ಸಹರೌಹಿಣೇಯಃ |
ಅಜಾತಶತ್ರುಂ ಪರಿವಾರ್ಯ ತಾಂಶ್ಚ
ಉಪೋಪವಿಷ್ಟಾನ್ ಜ್ವಲನಪ್ರಕಾಶಾನ್ ॥24॥
ಕೃಷ್ಣನು ಅಲ್ಲಿ ಕುಳಿತಿದ್ದ ಪೃಥುದೀರ್ಘಬಾಹುವಾದ ಯುಧಿಷ್ಠಿರನನ್ನು ಬಲರಾಮನ ಜೊತೆಯಲ್ಲಿ ನೋಡಿದನು. ಅಜಾತಶತ್ರುವನ್ನು ಸುತ್ತುವರಿದು ಸಮೀಪದಲ್ಲಿ ಕುಳಿತಿದ್ದ ಅಗ್ನಿಯಂತೆ ಪ್ರಕಾಶಿಸುತ್ತಿದ್ದ ಆ ತಮ್ಮಂದಿರನ್ನು ನೋಡಿದನು.
ತಾಂಶ್ಚಾಬ್ರವೀದ್ ವಾಸುದೇವೋಽಭಿಗಮ್ಯ
ಕುಂತೀಸುತಾನ್ ಧರ್ಮಭೃತಾಂ ವರಿಷ್ಠಾನ್ |
ಕೃಷ್ಣೋಽಹಮಸ್ಮೀತಿ ನಿಪೀಡ್ಯ ಪಾದೌ
ಯುಧಿಷ್ಠಿರಸ್ಯಾಜಮೀಢಸ್ಯ ತಸ್ಥೌ ॥25॥
ವಸುದೇವನ ಸುತನಾದ ಕೃಷ್ಣನು ಧರ್ಮಭೃತರಲ್ಲಿ ಶ್ರೇಷ್ಠರಾದ ಪಾಂಡವರನ್ನು ಸಮೀಪಿಸಿ, ನಾನು ಕೃಷ್ಣ ಎಂದು ಹೇಳಿ ಅಜಮೀಢ ವಂಶೋತ್ಪನ್ನನಾದ ಯುಧಿಷ್ಠಿರನ ಪಾದಗಳಿಗೆ ನಮಸ್ಕರಿಸಿ ನಿಂತನು.
ತಥೈವ ತಸ್ಯಾಪ್ಯನು ರೌಹಿಣೇಯಃ
ತೇ ಚಾಪಿ ಹೃಷ್ಟಾಃ ಕುರವೋಽಭ್ಯನಂದನ್ |
ಪಿತೃಷ್ವಸುಶ್ಚೈವ ಮಧುಪ್ರವೀರಾ-
ವಾಗೃಹ್ಣೀತಾಂ ಭಾರತಮುಖ್ಯ ಪಾದೌ ॥26॥
ಅನಂತರ ಹಾಗೆಯೇ ಬಲರಾಮನು ನಮಸ್ಕರಿಸಿದನು. ಕೃಷ್ಣ, ಬಲರಾಮರನ್ನು ನೋಡಿ, ಪಾಂಡವರು ಸಂತುಷ್ಟರಾದರು. ಭಾರತಶ್ರೇಷ್ಠನೇ, ಮಧುಪ್ರವೀರರಾದ ಕೃಷ್ಣ, ಬಲರಾಮರಿಬ್ಬರೂ ಸೋದರತ್ತೆಯಾದ ಕುಂತಿಯ ಪಾದಗಳಿಗೂ ನಮಸ್ಕರಿಸಿದರು.
ಅಜಾತಶತ್ರುಸ್ತು ಕುರುಪ್ರವೀರಃ
ಪಪ್ರಚ್ಛ ಕೃಷ್ಣಂ ಕುಶಲಂ ನಿವೇದ್ಯ |

ಕಥಂ ವಯಂ ವಾಸುದೇವ ತ್ವಯೇಹ
ಗೂಢಾ ವಸಂತೋ ವಿದಿತಾಃ ಸ್ಮ ಸರ್ವೇ ॥27॥
ಕುರುಪ್ರವೀರನಾದ ಅಜಾತಶತ್ರುವು ತನ್ನ ಕುಶಲವನ್ನು ನಿವೇದಿಸಿ, ಕೃಷ್ಣನನ್ನು ಕುರಿತು ಕುಶಲ ಪ್ರಶ್ನೆಯನ್ನು ಮಾಡಿದನು. ವಾಸುದೇವನೇ, ನಾವೆಲ್ಲರೂ ಇಲ್ಲಿ ಪ್ರಚ್ಛನ್ನರಾಗಿ ವಾಸ ಮಾಡುತ್ತಿರುವುದನ್ನು ನೀನು ಹೇಗೆ ತಿಳಿದೆ?
ತಮಬ್ರವೀದ್ ವಾಸುದೇವಃ ಪ್ರಹಸ್ಯ
ಗೂಢೋಽಪ್ಯಗ್ನಿರ್ಜ್ಞಾಯತ ಏವ ರಾಜನ್ ।
ತಂ ವಿಕ್ರಮಂ ಪಾಂಡವೇಯಾನತೀತ್ಯ
ಕೋಽನ್ಯಃ ಕರ್ತಾ ವಿದ್ಯತೇ ಮಾನುಷೇಷು ॥28॥
ಆಗ ವಾಸುದೇವನು ನಕ್ಕು, ಅಜಾತಶತ್ರುವನ್ನು ಕುರಿತು ಹೀಗೆ ಹೇಳಿದನು - ರಾಜನೇ, ಅಗ್ನಿಯು ಗೂಢವಾಗಿದ್ದರೂ ಎಲ್ಲರಿಗೂ ತಿಳಿಯುತ್ತದೆ. ಪಾಂಡುವಿನ ಮಕ್ಕಳನ್ನು ಬಿಟ್ಟು ಮನುಷ್ಯರಲ್ಲಿ ಯಾವನು ಆ ವಿಕ್ರಮವನ್ನು ಮಾಡುವವನು ಇದ್ದಾನೆ?
ದಿಷ್ಟ್ಯಾ ತಸ್ಮಾತ್ ಪಾವಕಾಚ್ಚಾಥ ಮುಕ್ತಾ
ಯೂಯಂ ಸರ್ವೇ ಪಾಂಡವಾಃ ಶತ್ರುಸಾಹಾಃ ।
ದಿಷ್ಟ್ಯಾ ಪಾಪೋ ಧೃತರಾಷ್ಟ್ರಃ ಸಪುತ್ರಃ
ಸಾಮಾತ್ಯೋ ವೈ ನ ಸಕಾಮೋಽಭವಿಷ್ಯತ್ ॥29॥
ಶತ್ರುಗಳ ವಿರೋಧವನ್ನು ಎದುರಿಸುವ ಪಾಂಡುಪುತ್ರರಾದ ನೀವೆಲ್ಲರೂ ಭಗವದನುಗ್ರಹದಿಂದ ಜತುಗೃಹದಾಹದಿಂದ ಮುಕ್ತರಾಗಿದ್ದೀರಿ. ದೈವಾನುಗ್ರಹದಿಂದ ಪುತ್ರಾಮಾತುಸಹಿತನಾಗಿ ದುಷ್ಟಬುದ್ಧಿಯನ್ನು ಹೊಂದಿದ ಧೃತರಾಷ್ಟ್ರನ ಆಸೆಯು ಈಡೇರಲಿಲ್ಲ.
ಭದ್ರಂ ವೋಽಸ್ತು ನಿಹಿತಂ ಯದ್ ಗುಹಾಯಾಂ
ವಿವೃದ್ಧಂ ವೈ ಜ್ವಲನಮಿವೇಧ್ಯಮಾನಮ್ ।
ಮಾ ವೋ ವಿದುಃ ಪಾರ್ಥಿವಾಃ ಕೇಚನೇಹ
ಯಾಸ್ಯಾವೋಽಽವಾಂ ಶಿಬಿರಾಯ್ಯೈವ ತಾವತ್ ॥30॥
ಹೃದಯಗುಹೆಯಲ್ಲಿರುವ ಗುಣಪೂರ್ಣನಾದ ಅಗ್ನಿಯಂತೆ ಜ್ವಲಿಸುವ ನಾರಾಯಣನ ಅನುಗ್ರಹದಿಂದ ನಿಮಗೆ ಮಂಗಳವಾಗಲಿ. ಪಾರ್ಥಿವರೇ ನಿಮ್ಮನ್ನು ಇಲ್ಲಿ ಯಾರೂ ತಿಳಿಯುವುದು ಬೇಡ. ನಾವಿಬ್ಬರೂ ನಮ್ಮ ಶಿಬಿರಕ್ಕೆ ಹಿಂದಿರುಗುತ್ತೇವೆ.
ಸೋಽನುಜ್ಞಾತಃ ಪಾಂಡವೇನಾವ್ಯಯಶ್ರೀಃ
ಪ್ರಾಯಾಚ್ಛೀಘ್ರಂ ಬಲದೇವೇನ ಸಾರ್ಧಮ್ ।
ತತ್ರೈವಾಸನ್ ಪಾಂಡವಾಶ್ಚಾಜಘನ್ಯಾ
ಮಾತ್ರಾ ಸಾರ್ಧಂ ಕೃಷ್ಣಯಾ ಚಾಪಿ ವೀರಾಃ ॥31॥
ಅಕ್ಷಯವಾದ ಸಂಪತ್ತನ್ನು ಹೊಂದಿದ್ದ ಕೃಷ್ಣನು ಧರ್ಮರಾಜನ ಅನುಮತಿಯನ್ನು ಪಡೆದು, ಬಲರಾಮನ ಜೊತೆಯಲ್ಲಿ ಶೀಘ್ರವಾಗಿ ಹಿಂದಿರುಗಿದನು. ಉತ್ಕೃಷ್ಟರೂ ಮತ್ತು ವೀರರೂ ಆದ ಪಾಂಡವರು ತಾಯಿ ಮತ್ತು ದ್ರೌಪದಿಯ ಜೊತೆಯಲ್ಲಿ ಅಲ್ಲಿಯೇ ಇದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಸಂಭಾಷ್ಯ ತೈಃ ಸ ಭಗವಾನಮಿತಾತ್ಮಶಕ್ತಿಃ
ಪ್ರಾಯಾನ್ನಿಜಾಂ ಪುರಮಮಾ ಯದುಭಿಃ ಸಮಸ್ತೈಃ ।
ಜ್ಞಾತುಂ ಚ ತಾನ್ನಿಶಿ ಸ ತು ದ್ರುಪದಃ ಸ್ವಪುತ್ರಂ
ಪ್ರಾಸ್ಥಾಪಯತ್ ಸ ಚ ವಿಲೀನ ಇಮಾನಪಶ್ಯತ್ ॥144॥
ಅಮಿತ ಆತ್ಮಶಕ್ತಿಯುಳ್ಳ ಭಗವಾನ್ ಶ್ರೀಕೃಷ್ಣ ಪಾಂಡವರೊಡನೆ ಮಾತನಾಡಿ ಸಮಸ್ತ ಯಾದವರೊಂದಿಗೆ ತನ್ನ ದ್ವಾರಕಾಪುರಿಗೆ ಹೊರಟು ಹೋದ. ಬಳಿಕ ದ್ರುಪದ ಪಾಂಡವರನ್ನು ಯಾರೆಂದು ತಿಳಿಯಲು ರಾತ್ರಿಯಲ್ಲಿ ತನ್ನ ಮಗನಾದ ಧೃಷ್ಟದ್ಯುಮ್ನನನ್ನು ಕಳಿಸಿದ. ಅವನು ಮರೆಯಲ್ಲಿ ನಿಂತು ಪಾಂಡವರನ್ನು ವೀಕ್ಷಿಸಿದ.
ಭಿಕ್ಷಾನ್ನಭೋಜಿನ ಉತೋ ಭಗಿನೀಂ ನಿಜಾಂ ಚ
ತತ್ರಾತಿತೃಪ್ತಹೃದಯಾಮಥ ಯುದ್ಧವಾರ್ತಾಂ ।
ತೇಷಾಂ ನಿಶಮ್ಯ ನದತಾಂ ಘನವದ್ ಗಭೀರಾಂ
ಕ್ಷತ್ರೋತ್ತಮಾ ಇತಿ ಮತಿಂ ಸ ಚಕಾರ ವೀರಃ ॥145॥
ಪಾಂಡವರು ಭಿಕ್ಷಾನ್ನ ಉಣ್ಣುವುದನ್ನೂ ತನ್ನ ತಂಗಿ ಅವರ ಬಳಿ ಬಲು ಸಂತೃಪ್ತ ಹೃದಯದವಳಾಗಿ ಇರುವುದನ್ನೂ ವೀರ ಧೃಷ್ಟದ್ಯುಮ್ನ ಕೂಡ. ಅವರು ಗುಡುಗಿನಂಥ ಗಂಭೀರ ಧ್ವನಿಯಿಂದ ಮಾತನಾಡುತ್ತ ಯುದ್ಧವಾರ್ತೆಯನ್ನು ಹೇಳಿಕೊಳ್ಳುವುದನ್ನು

ಹೇಳಿಕೊಳ್ಳುವುದನ್ನು ಕೇಳಿ ಇವರು ಉತ್ತಮ ಕ್ಷತ್ರಿಯರೆಂದು ನಿಶ್ಚಯಿಸಿದ.
* * * *

ನೂರ ತೊಂಭತ್ತೊಂದನೆಯ ಅಧ್ಯಾಯ
(ಧೃಷ್ಟದ್ಯುಮ್ನನಿಂದ ದ್ರೌಪದಿಯನ್ನು ಹಿಂಬಾಲಿಸಿ ಪಾಂಡವರ ಪರೀಕ್ಷಣ, ದ್ರುಪದನ ಬಳಿಗೆ ಪುನರಾಗಮನ)
ವೈಶಂಪಾಯನಃ
ಧೃಷ್ಟದ್ಯುಮ್ನಸ್ತು ಪಾಂಚಾಲ್ಯಾಃ ಪೃಷ್ಠತಃ ಕುರುನಂದನೌ |
ಅನ್ವಗಚ್ಚತ್ ತದಾ ಯಾಂತೌ ಭಾರ್ಗವಸ್ಯ ನಿವೇಶನಮ್ ॥1॥
ಧೃಷ್ಟದ್ಯುಮ್ನನು ಕುಂಬಾರನ ಮನೆಗೆ ಹೊರಟ ಕುರುನಂದನರಾದ ಭೀಮಾರ್ಜುನರ ಹಿಂದೆ ಹೊರಟ ದ್ರೌಪದಿಯನ್ನು ಹಿಂಬಾಲಿಸಿದನು.
ಸೋಽಜ್ಞಾಯಮಾನಃ ಪುರುಷಾನವಧಾರ್ಯ ಸಮಂತತಃ |
ಸ್ವಯಮಾರಾನ್ನಿವಿಷ್ಟೋಽಭೂದ್ ಭಾರ್ಗವಸ್ಯ ನಿವೇಶನಾತ್ ॥2॥
ಅವನು ತಾನು ಬೇರೆ ಯಾರಿಗೂ ತಿಳಿಯದಂತೆ ಎಲ್ಲರೂ ತನ್ನಿಂದ ದೂರವಿರುವುದನ್ನು ಗಮನಿಸಿ ತಾನು ಕುಂಬಾರನ ಮನೆಯ ಸಮೀಪದಲ್ಲಿ ನಿಂತನು.
ಜಿಜ್ಞಾಸಮಾನಸ್ತು ತದಾ ಸಂದಿದೇಶ ನೃಪಾತ್ಮಜಃ |
ಪುರುಷಾನ್ ದ್ರೌಪದೀಹೇತೋರ್ಜಾನೀಧ್ವಂ ಕೇ ತ್ವಿಮೇ ದ್ವಿಜಾಃ ॥3॥
ದ್ರೌಪದಿಯ ಸಲುವಾಗಿ ಪಾಂಡವರನ್ನು ತಿಳಿಯುವ ಉದ್ದೇಶದಿಂದ ರಾಜಕುಮಾರನಾದ ಧೃಷ್ಟದ್ಯುಮ್ನನು ಈ ಬ್ರಾಹ್ಮಣರು ಯಾರು ಎಂದು ತಿಳಿಯಿರಿ ಎಂದು ತನ್ನ ಗೂಢಚಾರರಿಗೆ ಆದೇಶವನ್ನು ನೀಡಿದನು.
ಸಾಯಂ ಚ ಭೀಮಶ್ಚ ರಿಪುಪ್ರಮಾಥೀ
ಜಿಷ್ಣುರ್ಯಮೌ ಚಾಪಿ ಮಹಾನುಭಾವೌ |
ಭೈಕ್ಷಂ ಚರಿತ್ವಾ ತು ಯುಧಿಷ್ಠಿರಸ್ಯ
ನಿವೇದಯಾಂಚಕ್ರುರದೀನಸತ್ವಾಃ ॥4॥
ಸಾಯಂಕಾಲದ ಸಮಯದಲ್ಲಿ ಶತ್ರುನಾಶಕನಾದ ಭೀಮನೂ, ಮಹಾನುಭಾವರಾದ ಅರ್ಜುನ, ನಕುಲ ಸಹದೇವರೂ ಭೈಕ್ಷ್ಯವನ್ನು ತಂದು ಅದೀನಸತ್ವರಾದ ಅವರು ಧರ್ಮರಾಜನಿಗೆ ನಿವೇದಿಸಿದರು.
ತತಸ್ತು ಕುಂತೀ ದ್ರುಪದಾತ್ಮಜಾಂ ತಾ-
ಮುವಾಚ ಕಾಲೇ ವಚನಂ ವದಾನ್ಯಾ |
ಅತೋಽಗ್ರ್ಯಮಾದಾಯ ಕುರುಷ್ವ ಭದ್ರೇ
ಬಲಿಂ ಚ ವಿಪ್ರಾಯ ಚ ದೇಹಿ ಭಿಕ್ಷಾಮ್ ॥5॥
ಆಗ ಉದಾರಳಾದ ಕುಂತಿಯು ದ್ರುಪದಾತ್ಮಜೆಯಾದ ಕೃಷ್ಣೆಯನ್ನು ಕುರಿತು ಹೇಳಿದಳು. ಭದ್ರೇ, ಈ ಅನ್ನದ ಶ್ರೇಷ್ಠವಾದ ಭಾಗವನ್ನು ತೆಗೆದು ಭೂತಬಲಿಯನ್ನು ನೀಡಿ ಬ್ರಾಹ್ಮಣರಿಗೆ ಭಿಕ್ಷೆಯನ್ನು ನೀಡು.
ಯೇ ಚಾನ್ನಮಿಚ್ಚಂತಿ ಹಿ ದೇಹಿ ತೇಭ್ಯಃ
ಪರಿಶ್ರಿತಾ ಯೇ ಪರಿತೋ ಮನುಷ್ಯಾಃ |
ತತಸ್ತು ಶೇಷಂ ಪ್ರವಿಭಜ್ಯ ಶೀಘ್ರ-
ಮರ್ಧಂ ಚತುರ್ಧಾ ಮಮ ಚಾತ್ಮನಶ್ಚ ॥6॥
ಬೇರೆ ಯಾರಾದರೂ ಮನುಷ್ಯರು ಅನ್ನವನ್ನು ಬಯಸುವವರಿದ್ದರೆ ಅವರಿಗೂ ಅನ್ನವನ್ನು ನೀಡು. ಉಳಿದ ಅನ್ನವನ್ನು ಎರಡು ಭಾಗವನ್ನು ಮಾಡಿ ಒಂದು ಅರ್ಧಭಾಗದಲ್ಲಿ ನಾಲ್ಕು ಮಕ್ಕಳಿಗೂ ನನಗೂ ನಿನಗೂ, ಸೇರಿ ಆರು ಭಾಗವನ್ನು ಮಾಡು.
ಅರ್ಧಂ ಚ ಭೀಮಾಯ ಚ ದೇಹಿ ಭದ್ರೇ
ಯ ಏಷ ನಾಗರ್ಷಭವೀರ್ಯರೂಪಃ |
ಶ್ಯಾಮೋ ಯುವಾ ಸಂಹನನೋಪಪನ್ನ
ಏಷೋ ಹಿ ವೀರೋ ಬಹುಭುಕ್ ಸದೈವ ॥7॥
ಭದ್ರೇ, ಉಳಿದ ಅರ್ಧಭಾಗವನ್ನು ಭೀಮಸೇನನಿಗೆ ಕೊಡು. ಶ್ರೇಷ್ಠಗಜದ ಪರಾಕ್ರಮವುಳ್ಳ ಶ್ಯಾಮನೂ, ಯುವಕನೂ, ದೃಢಶರೀರನೂ ಆದ ಈ ವೀರನು ಯಾವಾಗಲೂ ಬಹಳ ಊಟವನ್ನು ಮಾಡುವವನು.
ವೈಶಂಪಾಯನಃ
ಸಾ ಹೃಷ್ಟರೂಪೈವ ಚ ರಾಜಪುತ್ರೀ
ತಸ್ಯಾ ವಚಃ ಸಾಧ್ವವಿಶಂಕಮಾನಾ |
ಯಥಾ ತಯೋಕ್ತಂ ವಚನಂ ಚಕಾರ
ತೇ ಚಾಪಿ ಸರ್ವೇಽಭ್ಯವಜಹ್ರುರನ್ನಮ್ ॥8॥
ಆ ರಾಜಕುಮಾರಿಯು ಯಾವ ಶಂಕೆಯನ್ನೂ ಮಾಡದೆ ಸಂತೋಷದಿಂದಲೇ ಕುಂತಿಯು ಹೇಳಿದಂತೆ ಮಾಡಿದಳು. ಅವರೆಲ್ಲರೂ ರಾತ್ರಿಯಲ್ಲಿ ಊಟವನ್ನು ಮಾಡಿದರು.

ಕುಶೈಸ್ತು ಭೂಮೌ ಶಯನಂ ಚಕಾರ
ಮಾದ್ರೀಸುತಃ ಸಹದೇವಸ್ತರಸ್ವೀ |
ಅಥಾತ್ಮಕೀನಾನ್ಯಜಿನಾನಿ ಸರ್ವೇ
ಸಂಸ್ತೀರ್ಯ ವೀರಾಃ ಸುಷುಪುರ್ಧರಣ್ಯಾಮ್ ॥9॥
ಮಾದ್ರೀಸುತನಾದ ಸಹದೇವನು ಶೀಘ್ರವಾಗಿ ಭೂಮಿಯಲ್ಲಿ ದರ್ಭೆಗಳನ್ನು ಹಾಸಿ ಶಯನಗಳನ್ನು ಸಿದ್ಧಮಾಡಿದನು. ಅನಂತರ ಆ ವೀರರು ತಮ್ಮ ಕೃಷ್ಣಾಜಿನಗಳನ್ನು ಆ ದರ್ಭೆಗಳ ಮೇಲೆ ಹರಡಿ ಭೂಮಿಯಲ್ಲಿ ಮಲಗಿದರು.
ಅಗಸ್ತ್ಯಕಾಂತಾಮಭಿತೋ ದಿಶಂ ತು
ಶಿರಾಂಸಿ ತೇಷಾಂ ಕುರುಸತ್ತಮಾನಾಮ್ |
ಕುಂತೀ ಪುರಸ್ತಾತ್ ತು ಬಭೂವ ತೇಷಾಂ
ಕೃಷ್ಣಾ ತಿರಶ್ಚೈವ ಬಭೂವ ಸಾಧ್ವೀ ॥10॥
ಪಾಂಡವರು ದಕ್ಷಿಣಕ್ಕೆ ಶಿರಸ್ಸನ್ನು ಮಾಡಿ ಮಲಗಿದರು. ಕುಂತಿಯು ಆ ಕುರುಶ್ರೇಷ್ಠರ ಬಲಗಡೆಯಲ್ಲಿ ಎಂದರೆ ಪೂರ್ವದಲ್ಲಿ ದಕ್ಷಿಣಕ್ಕೆ ತಲೆ ಮಾಡಿ ಮಲಗಿದಳು. ದ್ರೌಪದಿಯು ಅವರ ಕೆಳಗೆ ಮಲಗಿದಳು. (ಉತ್ತರ ದಿಕ್ಕಿನಲ್ಲಿ ಮಲಗಿದಳು)
ಅಶೇತ ಭೂಮೌ ಸಹ ಪಾಂಡುಪುತ್ರೈಃ
ಪಾದೋಪಧಾನೇವ ಕೃತಾ ಕುಶೇಷು |
ನ ತತ್ರ ದುಃಖಂ ಚ ಸಮಾಸಸಾದ
ನ ಚಾವಮೇನೇ ಕುರುಪುಂಗವಾಂಸ್ತಾನ್ ॥11॥
ದ್ರೌಪದಿಯು ಪಾಂಡುಪುತ್ರರ ಜೊತೆಯಲ್ಲಿ ಅವರ ಪಾದದ ಕಡೆಯಲ್ಲಿ ಪಾದಗಳಿಗೆ ಇಟ್ಟ ದಿಂಬಿನಂತೆ ಮಲಗಿದಳು. ಅವಳು ದುಃಖವನ್ನು ಪಡಲಿಲ್ಲ. ನನ್ನ ಪತಿಗಳು ದರಿದ್ರರು ಎಂದು ಆ ಕುರುಪುಂಗವರನ್ನು ಅವಮಾನ ಮಾಡಲೂ ಇಲ್ಲ.
ತೇ ತತ್ರ ಶೂರಾಃ ಕಥಯಾಂಬಭೂವುಃ
ಕಥಾ ವಿಚಿತ್ರಾಃ ಪೃತನಾಧಿಕಾರಾಃ |
ಅಸ್ತ್ರಾಣಿ ದಿವ್ಯಾನಿ ರಥಾಂಶ್ಚ ನಾಗಾನ್
ತಥಾ ಗದಾಶ್ಚಾಪಿ ಪರಶ್ವಧಾಂಶ್ಚ ॥12॥
ಆ ಶೂರರಾದ ಪಾಂಡವರು ರಾತ್ರಿಯ ವೇಳೆಯಲ್ಲಿ ಸೈನ್ಯಕ್ಕೆ ಸಂಬಂಧಿಸಿದ ದಿವ್ಯಾಸ್ತ್ರಗಳು, ರಥಗಳು, ಗಜಗಳು, ಗದೆಗಳು, ಪರಶ್ವಧಗಳು ಇವುಗಳನ್ನು ಕುರಿತು ವಿಚಿತ್ರವಾದ ಮಾತುಗಳನ್ನು ಆಡಿದರು.
ತೇಷಾಂ ಕಥಾಸ್ತಾಃ ಪರಿಕೀರ್ತ್ಯಮಾನಾಃ |
ಪಾಂಚಾಲರಾಜಸ್ಯ ಸುತಸ್ತದಾನೀಮ್ |
ಶುಶ್ರಾವ ಕೃಷ್ಣಾಂ ಚ ತಥಾಽಭಿಪನ್ನಾಂ
ತೇ ಚಾಪಿ ಸರ್ವೇ ದದೃಶುರ್ಮನುಷ್ಯಾಃ ॥13॥
ಅವರು ಆಡುವ ಆ ಮಾತುಗಳನ್ನು ಅಜ್ಞಾತವಾಗಿ ಧೃಷ್ಟದ್ಯುಮ್ನನು ಕೇಳಿದನು. ದ್ರೌಪದಿಯು ಅಷ್ಟು ಸಮಾಧಾನ ಮತ್ತು ಸಂತೋಷದಿಂದ ಇರುವುದನ್ನೂ ಅವನು ನೋಡಿದನು, ಅವನ ಗೂಢಚಾರರೂ ನೋಡಿದರು.
ಧೃಷ್ಟದ್ಯುಮ್ನೋ ರಾಜಪುತ್ರಸ್ತು ಸರ್ವಂ
ವೃತ್ತಂ ತೇಷಾಂ ಕಥಿತಂ ಚೈವ ರಾತ್ರೌ |
ಸರ್ವಂ ರಾಜ್ಞೇ ದ್ರುಪದಾಯಾಖಿಲೇನ
ನಿವೇದಯಿಷ್ಯಂಸ್ತ್ವರಿತೋ ಜಗಾಮ ॥14॥
ಪ್ರಾತಃಕಾಲದಲ್ಲಿ ಧೃಷ್ಟದ್ಯುಮ್ನನು ರಾತ್ರಿ ತಾನು ಕೇಳಿದ ಅವರ ಮಾತುಕಥೆಗಳನ್ನೂ, ನೋಡಿದ ವಿಷಯಗಳನ್ನೂ ರಾಜನಾದ ದ್ರುಪದನಿಗೆ ತಿಳಿಸಲು ಬಯಸಿ ಶೀಘ್ರವಾಗಿ ಅವನ ಬಳಿಗೆ ಹೋದನು.
ಪಾಂಚಾಲರಾಜಸ್ತು ವಿಷಣ್ಣರೂಪ-
ಸ್ತಾನ್ ಪಾಂಡವಾನಪ್ರತಿವಿಂದಮಾನಃ |
ಧೃಷ್ಟದ್ಯುಮ್ನಂ ಪರ್ಯಪೃಚ್ಛನ್ಮಹಾತ್ಮಾ
ಕ್ವ ಸಾ ಗತಾ ಕೇನ ಹೃತಾ ಚ ಕೃಷ್ಣಾ ॥15॥
ಪಾಂಡವರನ್ನು ಎಲ್ಲೂ ಕಾಣದೆ ವಿಷಾದದಿಂದ ಕುಳಿತಿದ್ದ ಮಹಾನುಭಾವನಾದ ಪಾಂಚಾಲರಾಜನಾದ ದ್ರುಪದನು ಧೃಷ್ಟದ್ಯುಮ್ನನನ್ನು ನೋಡಿ, ದ್ರೌಪದಿಯು ಎಲ್ಲಿ ಹೋದಳು, ಅವಳನ್ನು ಜಯಿಸಿದವರು ಯಾರು ಎಂದು ಕೇಳಿದನು.
ಕಚ್ಚಿನ್ನ ಶೂದ್ರೇಣ ನ ಹೀನಜೇನ
ವೈಶ್ಯೇನ ವಾ ಕರಣೇನೋಪಪನ್ನಾ |
ಕಚ್ಚಿತ್ ಪದಂ ಮೂರ್ಧ್ನಿ ನ ಮೇ ವಿಷಕ್ತಂ
ಕಚ್ಚಿಚ್ಚ ಬಾಲಾ ಪತಿತಾ ನ ಶ್ಮಶಾನೇ ॥16॥
ಯಾವನಾದರೂ ಶೂದ್ರನಾಗಲಿ, ಅಥವಾ ಜಾತಿಹೀನನಾಗಲಿ ಅಥವಾ ವೈಶ್ಯನಾಗಲಿ ಅಥವಾ ಶೂದ್ರಕುಮಾರನಾಗಲಿ, ನನ್ನ ತಲೆಯ ಮೇಲೆ ತನ್ನ ಪಾದವನ್ನು ಇಟ್ಟಿಲ್ಲವಷ್ಟೇ? ನನ್ನ ಮಗಳು ಶ್ಮಶಾನದ ಪಾಲಾಗಿಲ್ಲವಷ್ಟೇ?
ಕಚ್ಚಿತ್ ಸುವರ್ಣಪ್ರತಿಮೋ ಮನುಷ್ಯ

ಉದ್ರಿಕ್ತವರ್ಣೋಽಪ್ಯಥ ವೇಹ ಕಚ್ಚಿತ್ |
ಕಚ್ಚಿನ್ನ ವಾಮೋ ಮಮ ಮೂರ್ಧ್ನಿ ಪಾದಃ
ಕೃಷ್ಣಾಭಿಮರ್ಶೇನ ಕೃತೋಽದ್ಯ ಪುತ್ರ ॥17॥
ಅವಳನ್ನು ಜಯಿಸಿದ ಮನುಷ್ಯನು ಶ್ರೇಷ್ಠವಾದ ಬ್ರಾಹ್ಮಣ ವರ್ಣಕ್ಕೆ ಸೇರಿದವನಷ್ಟೇ? ಅಥವಾ ಉದ್ರಿಕ್ತವಾದ ಕ್ಷತ್ರಿಯ ವರ್ಣಕ್ಕೆ ಸೇರಿದವನಷ್ಟೇ? ಪುತ್ರನೇ, ಯಾವನಾದರೂ ವಕ್ರನಾದವನು ಕೃಷ್ಣೆಯನ್ನು ಮುಟ್ಟಿ ನನ್ನ ತಲೆಯ ಮೇಲೆ ತನ್ನ ಎಡಗಾಲವನ್ನು ಇಟ್ಟಿಲ್ಲವಷ್ಟೇ?
ಕಚ್ಚಿಚ್ಚ ಯಿಷ್ಯೇ ಪರಮಪ್ರತೀತ-
ಸ್ತ್ವಾಂ ಯೋಜ್ಯ ಪಾರ್ಥೇನ ನರರ್ಷಭೇಣ |
ವದಸ್ವ ತತ್ತ್ವೇನ ಮಹಾನುಭಾವ
ಕೋಽಸೌ ವಿಜೇತಾ ದುಹಿತುರ್ಮಮಾದ್ಯ ॥18॥
ಪುತ್ರನೇ, ನಾನು ಎಂದಾದರೂ ಕೃಷ್ಣೆಯನ್ನು ಅರ್ಜುನನಿಗೆ ಕೊಟ್ಟು ಸುಖವಾಗಿ ನಿದ್ದೆ ಮಾಡುತ್ತೇನೆಯೇ? ಮಹಾನುಭಾವನೇ, ನನ್ನ ಮಗಳನ್ನು ಜಯಿಸಿದವರು ಯಾರು ಎಂದು ಇಂದು ನೀನು ನಿಜವಾಗಿ ಹೇಳು.
ವೈಚಿತ್ರವೀರ್ಯಸ್ಯ ತು ಕಚ್ಚಿದದ್ಯ
ಕುರುಪ್ರವೀರಸ್ಯ ಚರಂತಿ ಪೌತ್ರಾಃ |
ಕಚ್ಚಿಚ್ಚ ಪಾರ್ಥೇನ ಯವೀಯಸಾಽದ್ಯ
ಧನುರ್ಗೃಹೀತಂ ನಿಹತಂ ಚ ಲಕ್ಷ್ಯಮ್॥19॥
ಕುರುಪ್ರವೀರನಾದ ವಿಚಿತ್ರವೀರ್ಯನ ಪೌತ್ರರು ಇನ್ನೂ ಭೂಮಿಯಲ್ಲಿ ತಿರುಗಾಡುತ್ತಿದ್ದಾರಷ್ಟೇ? ಅಥವಾ ಕುಂತಿಯ ಮಕ್ಕಳಲ್ಲಿ ಚಿಕ್ಕವನಾದ ಅರ್ಜುನನು ಧನುಸ್ಸನ್ನು ಹಿಡಿದು ಲಕ್ಷ್ಯವೇಧವನ್ನು ಮಾಡಿದ್ದಾನಷ್ಟೇ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಏಕನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಸ್ವಯಂವರಪರ್ವಣಿ ಅಷ್ಟಮೋಽಧ್ಯಾಯಃ ॥
॥ ಸ್ವಯಂವರಪರ್ವ ಸಮಾಪ್ತಮ್॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ತೊಂಭತೊಂದನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಸ್ವಯಂವರಪರ್ವವು ಮುಗಿಯಿತು.
*****

12. ವೈವಾಹಿಕಪರ್ವ
ನೂರ ತೊಂಭತ್ತೆರಡನೆಯ ಅಧ್ಯಾಯ
(ಧೃಷ್ಟದ್ಯುಮ್ನನಿಂದ ರಾತ್ರಿಯ ವೃತ್ತಾಂತದ ಕಥನ, ದ್ರುಪದನಿಂದ ಧರ್ಮರಾಜನ ಬಳಿಗೆ ಪುರೋಹಿತನ ಪ್ರೇಷಣ, ಧರ್ಮರಾಜ ಮತ್ತು ಪುರೋಹಿತನ ಸಂವಾದ)
ವೈಶಂಪಾಯನಃ
ತತಸ್ತಥೋಕ್ತಃ ಪರಿಹೃಷ್ಟರೂಪಃ
ಪಿತ್ರೇ ಶಶಂಸಾಥ ನರೇಂದ್ರಪುತ್ರಃ |
ಧೃಷ್ಟದ್ಯುಮ್ನಃ ಸೋಮಕಾನಾಂ ಪ್ರಬರ್ಹೋ
ವೃತ್ತಂ ಯಥಾ ಯೇನ ಹೃತಾ ಚ ಕೃಷ್ಣಾ ॥1॥
ತಂದೆಯಿಂದ ಹೀಗೆ ಹೇಳಲ್ಪಟ್ಟವನಾಗಿ ಸೋಮಕವಂಶದಲ್ಲಿ
ಶ್ರೇಷ್ಠನಾದ, ರಾಜಕುಮಾರನಾದ ಧೃಷ್ಟದ್ಯುಮ್ನನು ಸಂತೋಷಗೊಂಡು ತನ್ನ ತಂದೆಯನ್ನು ಕುರಿತು ತಂದೆಯ ಚಿತ್ತದಂತೆಯೇ ಲಕ್ಷ್ಯವೇಧಿಯಾದ ಪುರುಷನು ದ್ರೌಪದಿಯನ್ನು ಕರೆದುಕೊಂಡು ಹೋದ ವಿಷಯವನ್ನು (ರಾತ್ರಿ ನಡೆದ ಘಟನೆಗಳನ್ನೂ) ಹೇಳಿದನು.
ಧೃಷ್ಟದ್ಯುಮ್ನಃ
ಯೋಽಸೌ ಯುವಾ ಸ್ವಾಯತಲೋಹಿತಾಕ್ಷಃ
ಕೃಷ್ಣಾಜಿನೀ ರೂಪಮತೀವ ಬಿಭ್ರತ್ |
ಯಃ ಕಾರ್ಮುಕಾಗ್ರ್ಯಂ ಕೃತವಾನಧಿಜ್ಯಂ
ಲಕ್ಷಂ ಚ ತತ್ ಪಾತಿತವಾನ್ ಪೃಥಿವ್ಯಾಮ್ ॥2॥
ಅಸಜ್ಜಮಾನಶ್ಚ ಗತಸ್ತರಸ್ವೀ
ದ್ವಿಜಾತಿಭಿಸ್ತೈರಭಿಪೂಜ್ಯಮಾನಃ |
ವಿಕ್ರಮ್ಯ ವಜ್ರೀವ ದಿತೇಃ ಸುತೇಷು
ಸರ್ವೈಶ್ಚ ದೇವೈರ್ಋಷಿಭಿಶ್ಚ ದೃಷ್ಟಃ ॥3॥
ಕೃಷ್ಣಾಜಿನವನ್ನು ಧರಿಸಿದ್ದ ಸೌಂದರ್ಯಶಾಲಿಯಾದ ವಿಸ್ತಾರವಾದ ನೇತ್ರಗಳುಳ್ಳ ಯಾವ ಯುವಕನು ಧನುಸ್ಸನ್ನು ಬಗ್ಗಿಸಿ ಹೆದೆಯೇರಿಸಿ ಲಕ್ಷ್ಯವನ್ನು ಭೂಮಿಯಲ್ಲಿ ಕೆಡವಿದನೋ, ಅವನು ಬ್ರಾಹ್ಮಣರಿಂದ ಸುತ್ತುವರೆಯಲ್ಪಟ್ಟು, ಸತ್ಕರಿಸಲ್ಪಟ್ಟು ಬ್ರಾಹ್ಮಣರ ಜೊತೆಯಲ್ಲೇ ಕೂಡಿಕೊಂಡು, ಇಂದ್ರನು ದಿತಿಪುತ್ರರ ಮೇಲೆ ಆಕ್ರಮಣವನ್ನು ಮಾಡಿದಂತೆ ಎಲ್ಲಾ ಋಷಿಗಳಿಂದ ಮತ್ತು

ದೇವತೆಗಳಿಂದ ದೃಷ್ಟನಾದ ಅವನು,
ಶ್ಯಾಮೋ ಯುವಾ ವಾರಣಮಂದಗಾಮೀ
  ಕೃತ್ವಾ ಮಹತ್ ಕರ್ಮ ಸುದುಷ್ಕರಂ ತತ್ |
ಕೃಷ್ಣಾಽಪಿ ಕೃಷ್ಣಾಜಿನಿನಂ ಜಗಾಮ
  ನಾಗಂ ಯಥಾ ನಾಗವಧೂಃ ಪ್ರಹೃಷ್ಟಾ  ||4||
ಶ್ಯಾಮವರ್ಣನೂ, ಗಜಗಾಮಿಯೂ, ಯುವಕನೂ ಆದ ಅವನು ಸುದುಷ್ಕರವಾದ ಆ ಮಹತ್ಕರ್ಮವನ್ನು ಮಾಡಿದ ಮೇಲೆ ಆನೆಯ ಹಿಂದೆ ಹೆಣ್ಣಾನೆಯು ಹೋದಂತೆ ಹರ್ಷಯುಕ್ತಳಾದ ದ್ರೌಪದಿಯು ಕೃಷ್ಣಾಜಿನವನ್ನು ಧರಿಸಿದ ಅವನ ಹಿಂದೆ ಹೋದಳು.
ಯಃ ಸೂತಪುತ್ರೇಣ ಚಕಾರ ಯುದ್ಧಂ
  ಶಂಕೇಽರ್ಜುನಂ ತಂ ತ್ರಿದಶೇಶವೀರ್ಯಮ್ |
ಅಮೃಷ್ಯಮಾಣೇಷು ನರಾಧಿಪೇಷು
  ಕ್ರುದ್ಧೇಷು ತಂ ತತ್ರ ಸಮಾಪತತ್ಸು  ||5||
ರಾಜರುಗಳೆಲ್ಲಾ ಇವನ ಶ್ರೇಷ್ಠವಾದ ಕರ್ಮವನ್ನು ಸಹಿಸದೆ ಕ್ರುದ್ಧರಾಗಿ ಯುದ್ಧಕ್ಕೆ ಬರುತ್ತಿರಲು, ಯಾವನು ಕರ್ಣನ ಜೊತೆಯಲ್ಲಿ ಯುದ್ಧಮಾಡಿದನೋ ಅವನನ್ನು ಇಂದ್ರನ ಪರಾಕ್ರಮವುಳ್ಳ ಅರ್ಜುನನೆಂದು ನಾನು ಶಂಕಿಸುತ್ತೇನೆ.
ತತೋ ವಟುಃ ಪಾರ್ಥಿವಸಂಘಮಧ್ಯೇ
  ಪ್ರಹೃಷ್ಟಮಾರುಜ್ಯ ಮಹೀಪ್ರರೋಹಮ್ |
ಅಕಾಲಯತ್ ತತ್ರ ಸ ಪಾರ್ಥಿವೌಘಂ
  ಭೀಮೋಽಂತಕಃ ಪ್ರಾಣಭೃತೋ ಯಥೈವ  ||6||
ಅನಂತರ ಯಾವ ವಟುವು ಆ ರಾಜಸಮೂಹದ ಮಧ್ಯದಲ್ಲಿ ಅರಳಿನಿಂತಿದ್ದ ಚಿಗುರಿದ ಮರವನ್ನು ಕಿತ್ತು ಯಮನು ಜೀವರನ್ನು ಓಡಿಸಿದಂತೆ ಎಲ್ಲ ರಾಜರ ಸಮೂಹವನ್ನು ಓಡಿಸಿದನೋ ಅವನನ್ನು ಭೀಮನೆಂದು ಶಂಕಿಸುತ್ತೇನೆ.
ತೌ ಪಾರ್ಥಿವಾನಾಂ ಮಿಷತಾಂ ನರೇಂದ್ರ
  ಕೃಷ್ಣಾಮುಪಾದಾಯ ಗತೌ ನರಾಗ್ರ್ಯೌ |
ವಿಭ್ರಾಜಮಾನಾವಿವ ಚಂದ್ರಸೂರ್ಯೌ
  ಬಾಹ್ಯಾಂ ಪುರಾದ್ ಭಾರ್ಗವಕರ್ಮಶಾಲಾಮ್  ||7||
ರಾಜನೇ, ಆ ಇಬ್ಬರು ಮನುಷ್ಯಶ್ರೇಷ್ಠರು ಉಳಿದ ರಾಜರು ನೋಡುತ್ತಿರುವಂತೆಯೇ ದ್ರೌಪದಿಯನ್ನು ಕರೆದುಕೊಂಡು ಜೊತೆಯಲ್ಲಿ ಪ್ರಕಾಶಿಸುವ ಚಂದ್ರಸೂರ್ಯರಂತೆ ನಡೆದು ಊರಿನ ಹೊರಗಿರುವ ಕುಂಬಾರನ ಮನೆಯನ್ನು ಪ್ರವೇಶಿಸಿದರು.
ತತ್ರೋಪವಿಷ್ಟಾಽರ್ಚಿರಿವಾನಲಸ್ಯ
  ತೇಷಾಂ ಜನಿತ್ರೀತಿ ಮಮ ಪ್ರತರ್ಕಃ |
ತಥಾವಿಧೈರೇವ ನರಪ್ರವೀರೈ-
  ರುಪೋಪವಿಷ್ಟಾ ತ್ರಿಭಿರಗ್ನಿಕಲ್ಪೈಃ  ||8||
ಅಲ್ಲಿ ಅಗ್ನಿಶಿಖೆಯನ್ನು ಹೋಲುತ್ತಾ ಕುಳಿತಿದ್ದವಳು ಅವರ ತಾಯಿಯೆಂದು ನನ್ನ ಊಹೆ. ಅವಳ ಸಮೀಪದಲ್ಲಿ ಅಂತಹದೇ ರೂಪವನ್ನು ಹೊಂದಿದ್ದ ಮೂವರು ಅಗ್ನಿಸದೃಶರಾದ ಪುರುಷಶ್ರೇಷ್ಠರು ಕುಳಿತಿದ್ದರು.
ತಸ್ಯಾಸ್ತತಸ್ತಾವಭಿವಾದ್ಯ ಪಾದಾ-
  ವುಪೋಪವಿಷ್ಟೌ ನರಲೋಕವೀರೌ |
ಭಿಕ್ಷಾಂ ಚ ತತ್ರೈವ ನಿವೇದ್ಯ ಕೃಷ್ಣಾಂ
  ಭಿಕ್ಷಾಪ್ರಚಾರಾಯ ಗತಾ ನರಾಗ್ರ್ಯಾಃ  ||9||
ಈ ಇಬ್ಬರು ನರಲೋಕವೀರರು ಅವಳ ಪಾದಗಳಿಗೆ ನಮಸ್ಕರಿಸಿ ಅವಳ ಸಮೀಪದಲ್ಲಿ ಕುಳಿತುಕೊಂಡರು. ಅವರು ದ್ರೌಪದಿಯನ್ನು ತಾಯಿಗೆ ಭಿಕ್ಷೆಯೆಂದು ನಿವೇದಿಸಿ ಭೈಕ್ಷವನ್ನು ತರಲು ಹೊರಗೆ ಹೋದರು.
ತೇಷಾಂ ತು ಭೈಕ್ಷಂ ಪ್ರತಿಗೃಹ್ಯ ಕೃಷ್ಣಾ
  ದತ್ವಾ ಬಲಿಂ ಬ್ರಾಹ್ಮಣಸಾಚ್ಚ ಕೃತ್ವಾ |
ತಾಂ ಚೈವ ವೃದ್ಧಾಂ ಪರಿವೇಷ್ಯ ತಾಂಶ್ಚ
  ನರಪ್ರವೀರಾನ್ ಸ್ವಯಮಪ್ಯಭುಂಕ್ತ  ||10||
ದ್ರೌಪದಿಯು ಅವರು ತಂದ ಭೈಕ್ಷದಲ್ಲಿ ಮೊದಲು ಭೂತಬಲಿಯನ್ನು ಕೊಟ್ಟು ಅನಂತರ ಬ್ರಾಹ್ಮಣರಿಗೆ ಒಂದು ಭಾಗವನ್ನು ನೀಡಿ ಆ ವೃದ್ಧಳಿಗೂ ಮತ್ತು ಆ ಇನ್ನಿತರ ಪುರುಷಶ್ರೇಷ್ಠರಿಗೂ ಬಡಿಸಿ ತಾನೂ ಭೋಜನವನ್ನು ಮಾಡಿದಳು.
ಸುಪ್ತಾಸ್ತು ತೇ ಪಾರ್ಥಿವ ಸರ್ವ ಏವ
  ಕೃಷ್ಣಾ ಚ ತೇಷಾಂ ಚರಣೋಪಧಾನಮ್ |
ಆಸೀತ್ ಪೃಥಿವ್ಯಾಂ ಶಯನಂ ಚ ತೇಷಾಂ
  ದರ್ಭಾಜಿನಾಗ್ರ್ಯಾಸ್ತರಣೋಪಪನ್ನಮ್  ||11||
ರಾಜನೇ, ಅವರೆಲ್ಲರೂ ಅನಂತರ ಮಲಗಿದರು. ದ್ರೌಪದಿಯು ಅವರ ಕಾಲಿನ ಕೆಳಗೆ ದಿಂಬಿನಂತೆ ಮಲಗಿದ್ದಳು. ಭೂಮಿಯ ಮೇಲೆ ಹರಡಿದ ದರ್ಭೆಗಳ ಮೇಲೆ ಹಾಕಿದ ಕೃಷ್ಣಾಜಿನವು ಅವರಿಗೆ ಶ್ರೇಷ್ಠವಾದ ಹಾಸಿಗೆಯಾಯಿತು.
ತೇ ನರ್ದಮಾನಾ ಇವ ಕಾಲಮೇಘಾಃ

ಕಥಾ ವಿಚಿತ್ರಾಃ ಕಥಯಾಂಬಭೂವುಃ |
ನ ವೈಶ್ಯಶೂದ್ರೌಪಯಿಕೀಃ ಕಥಾಸ್ತಾ
ನ ಚ ದ್ವಿಜಾರ್ಹಾಃ ಕಥಯಂತಿ ವೀರಾಃ ॥12॥
ಅವರು (ರಾತ್ರಿಯ ವೇಳೆಯಲ್ಲಿ) ಪ್ರಳಯಕಾಲದ ಮೋಡಗಳಂತೆ ಗರ್ಜಿಸುತ್ತಾ ವಿಚಿತ್ರವಾದ ಕಥೆಗಳನ್ನು ಹೇಳುತ್ತಿದ್ದರು. ಆ ವೀರರು ಹೇಳುತ್ತಿದ್ದ ಕಥೆಗಳು ವೈಶ್ಯರಿಗಾಗಲಿ, ಅಥವಾ ಶೂದ್ರರಿಗಾಗಲಿ ಉಪಯೋಗವಾಗುವಂತಹವುಗಳಾಗಲಿ ಅಥವಾ ಬ್ರಾಹ್ಮಣರಿಗೆ ಯೋಗ್ಯವಾದವುಗಳಾಗಲಿ ಆಗಿರಲಿಲ್ಲ.
ನಿಃಸಂಶಯಂ ಕ್ಷತ್ರಿಯಪುಂಗವಾಸ್ತೇ
ಯಥಾ ಹಿ ಯುದ್ಧಂ ಕಥಯಂತಿ ರಾಜನ್ |
ಆಶಾ ಹಿ ನೋ ವ್ಯಕ್ತಮಿಯಂ ಸಮೃದ್ಧಾ
ಮುಕ್ತಾನ್ ಹಿ ಪಾರ್ಥಾನ್ ಶೃಣುಮೋಽಗ್ನಿದಾಹಾತ್ ॥13॥
ರಾಜನೇ, ಅವರು ಯುದ್ಧದ ವಿಷಯವನ್ನು ಮಾತನಾಡುತ್ತಿದ್ದುದನ್ನು ಕೇಳಿದರೆ ಅವರು ನಿಸ್ಸಂಶಯವಾಗಿ ಕ್ಷತ್ರಿಯಶ್ರೇಷ್ಠರೇ ಸರಿ. ನನಗೆ ಈ ಮಹದಾಸೆಯಿದೆಯಷ್ಟೇ? ನಾವು ಪಾಂಡವರು ಅಗ್ನಿದಾಹದಿಂದ ಮುಕ್ತರಾಗಿದ್ದಾರೆಂದು ಕೇಳುತ್ತಿದ್ದೇವೆ.
ಯಥಾ ಹಿ ಲಕ್ಷ್ಯಂ ನಿಹತಂ ಧನುಶ್ಚ
ಸಜ್ಯಂ ಕೃತಂ ತೇನ ತಥಾ ಪ್ರಗೃಹ್ಯ |
ತಥಾಽವದನ್ನೇವ ಪರಸ್ಪರಂ ತೇ
ಚ್ಛನ್ನಂ ವಸಂತೋ ವಿಚರಂತಿ ಪಾರ್ಥಾಃ ॥14॥
ಅವನು ಧನುಸ್ಸನ್ನು ಹಿಡಿದು ಹೆದೆಯೇರಿಸಿ ಲಕ್ಷ್ಯವೇಧವನ್ನು ಹೇಗೆ ಮಾಡಿದ್ದನೋ ಅದಕ್ಕೆ ಅನುಗುಣವಾದ ಮಾತುಗಳನ್ನೇ ಅವರು ಪರಸ್ಪರವಾಗಿ ಆಡುತ್ತಿದ್ದರು. ಖಂಡಿತವಾಗಿ ಪಾರ್ಥರು ಛದ್ಮವೇಷದಲ್ಲಿ ವಾಸಿಸುತ್ತಾ ತಿರುಗಾಡುತ್ತಿದ್ದಾರೆ.
ವೈಶಂಪಾಯನಃ
ತತಃ ಸ ರಾಜಾ ದ್ರುಪದಃ ಪ್ರಹೃಷ್ಟಃ
ಪುರೋಹಿತಂ ಪ್ರೇಷಯಾಮಾಸ ತತ್ರ |
ವಿದ್ಯಾಮ ಯುಷ್ಮಾನಿತಿ ಭಾಷಮಾಣೋ
ಮಹಾತ್ಮಾನಃ ಪಾಂಡುಸುತಾಃ ಸ್ಥ ಕಚ್ಚಿತ್ ॥15॥
ಅನಂತರ ದ್ರುಪದರಾಜನು ಬಹಳ ಸಂತೋಷ ಹೊಂದಿ ತನ್ನ ಪುರೋಹಿತನನ್ನು ಕರೆದು ನೀವು ಏನಾದರೂ ಮಹಾನುಭಾವರಾದ ಪಾಂಡುಪುತ್ರರೇ ಎಂದು ಕೇಳಿ ಅವನಿಂದ ತಿಳಿದುಕೊಳ್ಳಲು ಅಲ್ಲಿಗೆ ತನ್ನ ಪುರೋಹಿತನನ್ನು ಕಳುಹಿಸಿದನು.
ಗೃಹೀತವಾಕ್ಯೋ ನೃಪತೇಃ ಪುರೋಧಾ
ಗತ್ವಾ ಪ್ರಶಂಸಾಮಭಿಧಾಯ ತೇಷಾಮ್ |
ವಾಕ್ಯಂ ಯಥಾವನ್ನೃಪತೇಃ ಸಮಗ್ರ-
ಮುವಾಚ ತೇಭ್ಯಃ ಸಮನುಕ್ರಮೇಣ ॥16॥
ರಾಜನ ವಾಕ್ಯವನ್ನು ಗ್ರಹಿಸಿದ ಪುರೋಹಿತನು ಕುಂಬಾರನ ಮನೆಗೆ ಹೋಗಿ ಅವರನ್ನು ಪ್ರಶಂಸಿಸಿ ರಾಜನ ಮಾತುಗಳನ್ನು ಯಥಾವತ್ತಾಗಿ ಕ್ರಮವಾಗಿ ಅವರಿಗೆ ಹೇಳಿದನು.
ವಿಜ್ಞಾತುಮಿಚ್ಛತ್ಯವನೀಶ್ವರೋ ವಃ
ಪಾಂಚಾಲರಾಜೋ ದ್ರುಪದೋ ವರಾರ್ಹಾನ್ |
ಲಕ್ಷಸ್ಯ ವೇದ್ಧಾರಮಿಮಂ ಹಿ ದೃಷ್ಟ್ವಾ
ಹರ್ಷಸ್ಯ ನಾಂತಂ ಪರಿವಸ್ಯತೇ ಸಃ ॥17॥
ಅವನೀಶ್ವರನಾದ ಪಾಂಚಾಲರಾಜ ದ್ರುಪದನು ಶ್ರೇಷ್ಠರಾದ ನಿಮ್ಮನ್ನು ತಿಳಿದುಕೊಳ್ಳಲು ಬಯಸುತ್ತಾನೆ. ಲಕ್ಷ್ಯವೇಧವನ್ನು ಮಾಡಿದ ಇವನನ್ನು ನೋಡಿ ಅವನ ಸಂತೋಷಕ್ಕೆ ಪಾರವೇ ಇಲ್ಲ.
ಆಚಕ್ಷಧ್ವಂ ಜ್ಞಾತಿಕುಲಾನುರೂಪಂ
ಶಿರಸ್ಸು ಪಾದಾನ್ ದ್ವಿಷತಾಂ ಕುರುಧ್ವಮ್ |
ಸಂಹ್ಲಾದಯಧ್ವಂ ಹೃದಯಂ ಮಮೇದಂ
ಪಾಂಚಾಲರಾಜಸ್ಯ ಸಹಾತ್ಮಜಸ್ಯ ॥18॥
ನಿಮಗೆ ಅನುರೂಪವಾದ ನಿಮ್ಮ ಕುಲವನ್ನೂ ನಿಮ್ಮ ಬಂಧುಗಳನ್ನೂ ತಿಳಿಸಿ. ಶತ್ರುಗಳ ತಲೆಯ ಮೇಲೆ ನಿಮ್ಮ ಪಾದಗಳನ್ನು ಊರಿ. ಪುತ್ರನಿಂದ ಕೂಡಿದ ಪಾಂಚಾಲರಾಜನಾದ ನನ್ನ ಈ ಮನಸ್ಸಿಗೆ ಸಂತೋಷವನ್ನು ಉಂಟುಮಾಡಿ.
ಪಾಂಡುರ್ಹಿ ರಾಜಾ ದ್ರುಪದಸ್ಯ ರಾಜ್ಞಃ
ಪ್ರಿಯಃ ಸಖಾ ಚಾತ್ಮಸಮೋ ಬಭೂವ |
ತಸ್ಯೈಷ ಕಾಮೋ ದುಹಿತಾ ಮಮೇಯಂ
ಸ್ನುಷಾ ಯದಿ ಸ್ಯಾದಿತಿ ಕೌರವಸ್ಯ ॥19॥
ಪಾಂಡುರಾಜನು ದ್ರುಪದರಾಜನ ಪ್ರಿಯನಾದ ಸ್ನೇಹಿತ. ಅವನು ದ್ರುಪದನ ಆತ್ಮದಂತೆಯೇ ಇದ್ದನು. ದ್ರುಪದನಿಗೆ ನನ್ನ ಮಗಳು ಕೌರವನಾದ ಪಾಂಡುವಿಗೆ ಸೊಸೆಯಾದರೆ ಮಾತ್ರ ಅವಳು ನನ್ನ ಮಗಳೇ ಸರಿ ಎಂಬ ಆಸೆಯಿದ್ದಿತು.
ಅಯಂ ಚ ಕಾಮೋ ದ್ರುಪದಸ್ಯ ರಾಜ್ಞೋ

ಹೃದಿ ಸ್ಥಿತೋ ನಿತ್ಯಮನಿಂದಿತಾಂಗಾಃ |
ಯದರ್ಜುನೋ ಮೇ ಪೃಥುದೀರ್ಘಬಾಹು-
ರ್ಧರ್ಮೇಣ ವಿಂದೇತ ಸುತಾಂ ಮಮೇತಿ ॥20॥
ನಿರ್ದುಷ್ಟ ಶರೀರವುಳ್ಳವರೇ, ದ್ರುಪದನ ಹೃದಯದಲ್ಲಿ ಪೃಥು- ದೀರ್ಘಬಾಹುವಾದ ಅರ್ಜುನನು ಧರ್ಮದಿಂದಲೇ ನನ್ನ ಮಗಳನ್ನು ಪಡೆಯಬೇಕು ಎಂಬ ಆಸೆಯು ಯಾವಾಗಲೂ ಇದೆ.
ವೈಶಂಪಾಯನಃ
ತಥೋಕ್ತವಾಕ್ಯಂ ತು ಪುರೋಹಿತಂ ತಂ
ಸ್ಥಿತಂ ವಿಧಿಜ್ಞಂ ಸಮುದೀಕ್ಷ್ಯ ರಾಜಾ |
ಸಮೀಪಸ್ಥಂ ಭೀಮಮಿದಂ ಶಶಾಸ
ಪ್ರದೀಯತಾಂ ಪಾದ್ಯಮರ್ಘ್ಯಂ ತಥಾಽಸ್ಮೈ
ಮಾನ್ಯಃ ಪುರೋಧಾ ದ್ರುಪದಸ್ಯ ರಾಜ್ಞ-
ಸ್ತಸ್ಮೈ ಪ್ರಯೋಜ್ಯಾಽಭ್ಯಧಿಕಾ ಚ ಪೂಜಾ ॥21॥
ಭೀಮಸ್ತಥಾ ಚ ಕೃತವಾನ್ ನರೇಂದ್ರ
ತಾಂ ಚೈವ ಪೂಜಾಂ ಪ್ರತಿಗೃಹ್ಯ ತತ್ರ |
ಸುಖೋಪವಿಷ್ಟಂ ತು ಪುರೋಹಿತಂ ತಂ
ಯುಧಿಷ್ಠಿರೋ ಬ್ರಾಹ್ಮಣಮಿತ್ಯುವಾಚ ॥22॥
ಹೀಗೆ ಮಾತನಾಡಿದ ಶಾಸ್ತ್ರಜ್ಞನಾದ ಪುರೋಹಿತನನ್ನು ನೋಡಿ ರಾಜನಾದ ಯುಧಿಷ್ಠಿರನು ಸಮೀಪದಲ್ಲಿದ್ದ ಭೀಮನನ್ನು ಕುರಿತು ಇವರಿಗೆ ಅರ್ಘ್ಯಪಾದ್ಯಗಳನ್ನು ಕೊಡಿ, ದ್ರುಪದರಾಜನ ಪುರೋಹಿತರು ನಮಗೆ ಮಾನ್ಯನಾದವರು, ಅವರಿಗೆ ವಿಶೇಷವಾದ ಪೂಜೆಯನ್ನು ಮಾಡಬೇಕು ಎಂದು ಆದೇಶ ನೀಡಿದನು. ನರೇಂದ್ರನೇ, ಅಣ್ಣನು ಹೇಳಿದಂತೆಯೇ ಪೂಜೆಯನ್ನು ಸ್ವೀಕರಿಸಿ ಎಂದು ಹೇಳಿ ಭೀಮನು ಆ ಪುರೋಹಿತರಿಗೆ ಪೂಜೆಯನ್ನು ಸಲ್ಲಿಸಿದನು. ಸುಖೋಪವಿಷ್ಟನಾದ, ಬ್ರಾಹ್ಮಣನಾದ ಪುರೋಹಿತರನ್ನು ಕುರಿತು ಯುಧಿಷ್ಠಿರನು ಹೀಗೆ ಮಾತನಾಡಿದನು.
ಯುಧಿಷ್ಠಿರಃ
ಪಾಂಚಾಲರಾಜೇನ ಸುತಾ ನಿಸೃಷ್ಟಾ
ಸ್ವಧರ್ಮದೃಷ್ಟೇನ ಯಥಾ ನಿಕಾಮಮ್ |
ಪ್ರದಿಷ್ಟಶುಲ್ಕಾ ದ್ರುಪದೇನ ರಾಜ್ಞಾ
ಸಾ ತೇನ ವೀರೇಣ ತಥಾಽನುವೃತ್ತಾ ॥23॥
ಪಾಂಚಾಲರಾಜನು ತನ್ನ ಕ್ಷತ್ರಿಯಧರ್ಮಕ್ಕೆ ಅನುಸಾರವಾಗಿ ಸ್ವಯಂವರವಿಧಾನದಿಂದ ತನ್ನ ಇಚ್ಛೆಯಂತೆ ಆದೇಶವನ್ನು ನೀಡಿದ್ದಾನೆ. ವೀರ್ಯಶುಲ್ಕದಿಂದ ತನ್ನ ಮಗಳನ್ನು ಪಡೆಯಬೇಕೆಂದು ದ್ರುಪದನ ಆಸೆ. ಆ ಆಸೆಯನ್ನು ಈ ವೀರನು ನೆರವೇರಿಸಿದ್ದಾನೆ.

ನ ತತ್ರ ವರ್ಣೇಷು ಕೃತಾ ವಿವಕ್ಷಾ
ನ ಜೀವಶಿಲ್ಪೇ ನ ಕುಲೇ ನ ಗೋತ್ರೇ |
ಕೃತೇನ ಸಜ್ಯೇನ ಹಿ ಕಾರ್ಮುಕೇಣ
ವಿದ್ಧೇನ ಲಕ್ಷ್ಯೇಣ ಚ ಸನ್ನಿಸೃಷ್ಟಾ ॥24॥
ದ್ರುಪದನು ಆದೇಶವನ್ನು ಕೊಡುವಾಗ ವರ್ಣದ ವಿಷಯದಲ್ಲಾಗಲಿ, ಲಕ್ಷ್ಯವೇಧವನ್ನು ಮಾಡಿದವನು ಮಾಡುವ ಇತರ ವಿಷಯಗಳಲ್ಲಾಗಲಿ ಅವನ ಕುಲ ಅಥವಾ ಗೋತ್ರದ ವಿಷಯಗಳಲ್ಲಾಗಲಿ ಯಾವ ನಿರ್ಬಂಧವನ್ನೂ ವ್ಯಕ್ತಪಡಿಸಲಿಲ. ಲ ಧನುಸ್ಸನ್ನು ಕಟ್ಟಿ ಬಾಣಪ್ರಯೋಗ ಮಾಡಿ ಲಕ್ಷ್ಯವೇಧವನ್ನು ಮಾಡಿದವನು ಮಗಳನ್ನು ಪಡೆಯುತ್ತಾನೆ ಎಂದಿಷ್ಟೇ ಆದೇಶವಿದ್ದಿತು.
ಸೇಯಂ ತಥಾಽನೇನ ಮಹಾತ್ಮನೇಹ
ಕೃಷ್ಣಾ ಜಿತಾ ಪಾರ್ಥಿವಸಂಘಮಧ್ಯೇ |
ನೈವಂ ಗತೇ ಸೌಮಕಿರದ್ಯ ರಾಜಾ
ಸಂತಾಪಮರ್ಹತ್ಯಸುಖೇನ ಕರ್ತುಮ್ ॥25॥
ಅಂತಹ ಕೃಷ್ಣೆಯು ಈ ಮಹಾತ್ಮನಿಂದ ರಾಜರ ಸಮೂಹದ ಮಧ್ಯದಲ್ಲಿ ಗೆಲ್ಲಲ್ಪಟ್ಟಿದ್ದಾಳೆ. ಹೀಗಿರುವಾಗ ಸೋಮಕವಂಶದಲ್ಲಿ ಬಂದ ದ್ರುಪದರಾಜನು ದುಃಖದಿಂದ ಸಂತಾಪ ಪಡುವುದು ಯುಕ್ತವಲ್ಲ.
ಕಾಮಶ್ಚ ಯೋಽಸೌ ದ್ರುಪದಸ್ಯ ರಾಜ್ಞಃ
ಸ ಚಾಪಿ ಸಂಪತ್ಸ್ಯತಿ ಪಾರ್ಥಿವಸ್ಯ |
ಸುಪ್ರಾಪ್ತರೂಪಂ ಹಿ ನರೇಂದ್ರಕನ್ಯಾ-
ಮಿಮಾಮಹಂ ಬ್ರಾಹ್ಮಣ ಸಾಧು ಮನ್ಯೇ ॥26॥
ದ್ರುಪದನ ಮನಸ್ಸಿನಲ್ಲಿದ್ದ ಕಾಮವು ನೆರವೇರುವುದು ಎಂದೇ ನನ್ನ ಅಭಿಪ್ರಾಯ. ಬ್ರಾಹ್ಮಣನೇ, ಈ ರಾಜಕುಮಾರಿಯು ಬಹಳ ಅನುರೂಪನಾದ ಪತಿಯನ್ನೇ ಪಡೆದಿದ್ದಾಳೆ ಎಂದು ನಾನು ಚೆನ್ನಾಗಿ ಭಾವಿಸಿದ್ದೇನೆ.
ನ ತದ್ಧನುರ್ಮಂದಬಲೇನ ಶಕ್ಯಂ
ಮೌರ್ವ್ಯಾ ಸಮಾಯೋಜಯಿತುಂ ತಥಾ ಹಿ |

ನ ಚಾಕೃತಾಸ್ತ್ರೇಣ ನ ಹೀನಜೇನ
ಲಕ್ಷಂ ತಥಾ ಪಾತಯಿತುಂ ಚ ಶಕ್ಯಮ್ ॥27॥
ಹೀನಬಲನಾದ ವ್ಯಕ್ತಿಯಿಂದ ಆ ಧನುಸ್ಸಿಗೆ ಹೆದೆಯೇರಿಸಲು ಸಾಧ್ಯವಿಲ್ಲ. ಅಸ್ತ್ರಜ್ಞಾನವಿಲ್ಲದವನೂ ಮತ್ತು ಹೀನಯೋನಿಯಲ್ಲಿ ಜನಿಸಿದವನೂ ಸಹ ಲಕ್ಷ್ಯವೇಧವನ್ನು ಮಾಡಲು ಶಕ್ತನಾಗುವುದಿಲ್ಲ.
ತಸ್ಮಾನ್ನ ಪಾಪಂ ದುಹಿತುರ್ನಿಮಿತ್ತಂ
ಪಾಂಚಾಲರಾಜೋಽರ್ಹತಿ ಕರ್ತುಮದ್ಯ ।
ನ ಚಾಪಿ ತತ್ಪಾತನಮನ್ಯಥೇಹ
ಕರ್ತುಂ ವಿಷಹ್ಯಂ ಭುವಿ ಮಾನವೇನ ॥28॥
ಆದ್ದರಿಂದ ಪಾಂಚಾಲರಾಜನು ಈ ದಿನ ಮಗಳ ನಿಮಿತ್ತದಿಂದ ಸಂತಾಪ ಪಡುವುದು ಯೋಗ್ಯವಲ್ಲ. ಇಲ್ಲದಿದ್ದರೆ ಭೂಮಿಯಲ್ಲಿ ಯಾವ ಮನುಷ್ಯನೂ ಆ ಲಕ್ಷ್ಯವನ್ನು ಉರುಳಿಸುತ್ತಿರಲಿಲ್ಲ.
ವೈಶಂಪಾಯನಃ
ಏವಂ ಬ್ರುವತ್ಯೇವ ಯುಧಿಷ್ಠಿರೇ ತು
ಪಾಂಚಾಲರಾಜಸ್ಯ ಸಮೀಪತೋಽನ್ಯಃ ।
ತತ್ರಾ ಜಗಮಾಶು ನರೋ ದ್ವಿತೀಯೋ
ನಿವೇದಯಿಷ್ಯನ್ನಥ ಸಿದ್ಧಮನ್ನಮ್ ॥29॥
ಯುಧಿಷ್ಠಿರನು ಹೀಗೆ ಹೇಳುತ್ತಿರುವಾಗಲೇ ಪಾಂಚಾಲರಾಜನ ಕಡೆಯಿಂದ ಇನ್ನೊಬ್ಬ ಚಾರನು ಬಂದು ಅನ್ನವು ಸಿದ್ಧವಾಗಿದೆ ಎಂದು ನಿವೇದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ದ್ವಿನವತ್ಯಧಿಕಶತತಮೋಽಧ್ಯಾ,ು ಃ ॥
॥ ಇತಿ ವೈವಾಹಿಕಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ತ್ತೊಂಭತ್ತೆರಡನೆಯ ಅಧ್ಯಾಯ ಮುಗಿಯಿತು.
*****
ನೂರ ತೊಂಭತ್ಮೂರನೆಯ ಅಧ್ಯಾಯ
(ದ್ರುಪದನಿಂದ ಪಾಂಡವರ ಪರೀಕ್ಷೆ, ಅವರು ಕ್ಷತ್ರಿಯರೆಂದು ನಿರ್ಧಾರ)
ದೂತಃ
ಜನ್ಯಾರ್ಥಮನ್ನಂ ದ್ರುಪದೇನ ರಾಜ್ಞಾ
ವಿವಾಹಹೇತೋರುಪಸಂಸ್ಕೃತಂ ಚ ।
ತದಾಪ್ನುವಧ್ವಂ ಕೃತಸರ್ವಕಾರ್ಯಾಃ
ಕೃಷ್ಣಾ ತು ತತ್ರೈತು ಚಿರಂ ನ ಕಾರ್ಯಮ್ ॥1॥
ದ್ರುಪದರಾಜನು ವಿವಾಹದಲ್ಲಿ ವರನಿಗೂ ಮತ್ತು ವರನ ಬಂಧುಗಳಿಗೂ ಕೊಡಬೇಕಾದ ಉತ್ತಮ ಭೋಜನವನ್ನು ಸಿದ್ಧಪಡಿಸಿದ್ದಾನೆ. ನಿಮ್ಮ ಎಲ್ಲಾ ಕಾರ್ಯಗಳನ್ನು ಮುಗಿಸಿ ಅಲ್ಲಿಗೆ ಬಂದು ಅದನ್ನು ಸ್ವೀಕರಿಸಿ. ದ್ರೌಪದಿಯೂ ಅಲ್ಲಿಗೆ ಬರಬೇಕು, ತಡಮಾಡಬಾರದು.
ಇಮೇ ರಥಾಃ ಕಾಂಚನರತ್ನಚಿತ್ರಾಃ
ಸದಶ್ವಯುಕ್ತಾ ವಸುಧಾಧಿಪಾರ್ಹಾಃ ।
ಏತಾನ್ ಸಮಾರುಹ್ಯ ಪುರೇತ ಸರ್ವೇ
ಪಾಂಚಾಲರಾಜಸ್ಯ ನಿವೇಶನಂ ತತ್ ॥2॥
ರಾಜರಿಗೆ ಯೋಗ್ಯವಾದ ಈ ರಥಗಳು ಸುವರ್ಣರತ್ನಗಳಿಂದ ಭೂಷಿತವಾಗಿ ಒಳ್ಳೆಯ ಅಶ್ವಗಳಿಂದ ಯುಕ್ತವಾಗಿವೆ. ಇವುಗಳನ್ನು ಏರಿ ನೀವೆಲ್ಲರೂ ಮುಂದೆ ಹೊರಟು ಪಾಂಚಾಲರಾಜನ ನಿವೇಶನಕ್ಕೆ ಹೋಗಿ.
ವೈಶಂಪಾಯನಃ
ತತಃ ಪ್ರಯಾತಾಃ ಕುರುಪುಂಗವಾಸ್ತೇ
ಪುರೋಹಿತಂ ತಂ ಪ್ರಥಮಂ ಪ್ರಯಾಪ್ಯ ।
ಆಸ್ಥಾಯ ಯಾನಾನಿ ಮಹಾಂತಿ ತಾನಿ
ಕುಂತೀ ಚ ಕೃಷ್ಣಾ ಚ ಸಹ ಪ್ರಯಾತೇ ॥3॥
ಅನಂತರ ಪಾಂಡವರು ಪುರೋಹಿತನನ್ನು ಮೊದಲು ಕಳುಹಿಸಿ ಆ ದೊಡ್ಡರಥಗಳನ್ನು ಏರಿ ಹೊರಟರು. ಕುಂತಿ ಮತ್ತು ದ್ರೌಪದಿಯರು ಒಂದೇ ರಥದಲ್ಲಿ ಕುಳಿತು ಹೊರಟರು.
ಸ ವೈ ತಥೋಕ್ತಸ್ತು ಯುಧಿಷ್ಠಿರೇಣ
ಪಾಂಚಾಲರಾಜಸ್ಯ ಪುರೋಹಿತಾಗ್ರ್ಯಃ ।
ಸರ್ವಂ ಯಥೋಕ್ತಂ ಕುರುನಂದನೇನ
ನಿವೇದಯಾಮಾಸ ನೃಪಾಯ ಗತ್ವಾ ॥4॥
ಯುಧಿಷ್ಠಿರನ ಜೊತೆಯಲ್ಲಿ ಮಾತನಾಡಿದ್ದ ಆ ಶ್ರೇಷ್ಠನಾದ ಪಾಂಚಾಲರಾಜನ ಪುರೋಹಿತನು ಪಾಂಚಾಲರಾಜನ ಬಳಿಗೆ ಹೋಗಿ ಯುಧಿಷ್ಠಿರನು ಹೇಳಿದ ಎಲ್ಲಾ ವಿಷಯಗಳನ್ನೂ ಅವನು ಹೇಳಿದಂತೆಯೇ ತಿಳಿಸಿದನು.

ಶ್ರುತ್ವಾ ತು ವಾಕ್ಯಂ ತು ಪುರೋಹಿತಸ್ಯ
ಯಾನ್ಯುಕ್ತವಾನ್ ಭಾರತ ಧರ್ಮರಾಜಃ |
ಜಿಜ್ಞಾಸಯೈವಾಥ ಕುರೂತ್ತಮಾನಾಂ
ದ್ರವ್ಯಾಣ್ಯನೇಕಾನ್ಯುಪಸಂಜಹಾರ ॥5॥
ಭಾರತನೇ, ಧರ್ಮರಾಜನು ಪುರೋಹಿತನಲ್ಲಿ ಹೇಳಿದ ಮಾತುಗಳನ್ನು ಕೇಳಿ ದ್ರುಪದನು ಆ ಕುರೂತ್ತಮರನ್ನು ತಿಳಿದುಕೊಳ್ಳುವ ಆಸೆಯಿಂದ ಅವರು ಬರುವ ಮನೆಯಲ್ಲಿ ಅನೇಕ ವಿಧವಾದ ವಸ್ತುಗಳನ್ನು ಸಂಗ್ರಹಿಸಿದನು.
ಫಲಾನಿ ಮಾಲ್ಯಾನ್ಯಥ ಸಂಸ್ಕೃತಾನಿ
ಚರ್ಮಾಣಿ ವರ್ಮಾಣಿ ತಥಾಽಽಸನಾನಿ |
ಗಾಶ್ಚೈವ ರಾಜನ್ನಥ ಚೈವ ರಜ್ಜೂ-
ರನ್ಯಾನಿ ಧಾನ್ಯಾನಿ ಕೃಷೇರ್ನಿಮಿತ್ತಮ್॥6॥
ಹಣ್ಣುಗಳು, ಪುಷ್ಪಮಾಲೆಗಳು, ಹದಮಾಡಿದ ಚರ್ಮಗಳು, ಕವಚಗಳು ಮತ್ತು ಆಸನಗಳು, ಗೋವುಗಳು ಮತ್ತು ಹಗ್ಗಗಳು, ಕೃಷಿಗೆ ಸಂಬಂಧಿಸಿದ ಎಲ್ಲಾ ಧಾನ್ಯಗಳು, ಎಲ್ಲವೂ ಅಲ್ಲಿದ್ದವು.
ಅನ್ಯೇಷು ಶಿಲ್ಪೇಷ್ವಪಿ ಯಾನ್ಯಪಿ ಸ್ಯುಃ
ಸರ್ವಾಣಿ ಕೃತ್ಯಾನ್ಯಖಿಲೇನ ತತ್ರ |
ಕ್ರೀಡಾನಿಮಿತ್ತಾನಿ ಚ ಯಾನಿ ತಾನಿ
ಸರ್ವಾಣಿ ತತ್ರೋಪಜಹಾರ ರಾಜಾ ॥7॥
ಬೇರೆ ಬೇರೆ ವಿದ್ಯೆಗಳಿಗೆ ಸಂಬಂಧಿಸಿದ ಎಲ್ಲಾ ವಸ್ತುಗಳೂ ಅಲ್ಲಿದ್ದವು. ಕ್ರೀಡೆಗೆ ಸಂಬಂಧಿಸಿದ ಎಲ್ಲಾ ಉಪಕರಣಗಳನ್ನೂ ರಾಜನು ಅಲ್ಲಿ ಸಂಗ್ರಹಿಸಿದ್ದನು.
ಸರ್ವಾಣಿ ಶಸತ್ರಣಿ ಚ ಭಾನುಮಂತಿ
ಖಡ್ಗಾ ಮಹಾಂತೋಽಥ ರಥಾಶ್ಚ ಚಿತ್ರಾಃ |
ಧನೂಂಷಿ ಚೋಗ್ರಾಣಿ ಶರಾಶ್ಚ ಮುಖ್ಯಾಃ
ಶಕ್ತ್ಯೃಷ್ಟಯಃ ಕಾಂಚನಭೂಷಿತಾಶ್ಚ ॥8॥
ಪ್ರಾಸಾನ್ ಭುಸುಂಡೀಶ್ಚ ಪರಶ್ವಥಾಂಶ್ಚ
ಸಾಂಗ್ರಾಮಿಕಾಂಶ್ಚೈವ ತಥಾಽಪಿ ಚಾನ್ಯಾನ್ |
ಶಯ್ಯಾಸನಾನ್ಯುತ್ತಮಸಂಸ್ಕೃತಾನಿ
ತಥೈವ ರಾಜನ್ ವಿವಿಧಾನಿ ತತ್ರ ॥9॥
ಹೊಳೆಯುವ ಎಲ್ಲಾ ಶಸ್ತ್ರಗಳೂ, ದೊಡ್ಡ ಖಡ್ಗಗಳೂ, ವಿಚಿತ್ರವಾದ ರಥಗಳೂ, ಬಿಲ್ಲುಗಳೂ, ನಿಶಿತವಾದ ಬಾಣಗಳೂ, ಸುವರ್ಣದಿಂದ ಅಲಂಕೃತವಾದ ಶಕ್ತಿ, ಋಷ್ಟಿ ಮುಂತಾದ ಆಯುಧಗಳೂ, ಪ್ರಾಸಗಳೂ, ಭುಸುಂಡಿಗಳೂ, ಪರಶ್ವಥಗಳೂ, ಮತ್ತು ಯುದ್ಧಕ್ಕೆ ಸಂಬಂಧಿಸಿದ ಇನ್ನೂ ಅನೇಕ ವಸ್ತುಗಳೂ ಹಾಗೆಯೇ, ಒಳ್ಳೆಯ ಹಾಸಿಗೆಗಳೂ, ಸುಸಂಸ್ಕೃತವಾದ ವಿಧವಿಧವಾದ ಆಸನಗಳೂ, ಎಲ್ಲವನ್ನೂ ರಾಜನು ಅಲ್ಲಿ ಸಂಗ್ರಹಿಸಿದನು.
ಕುಂತೀ ತು ಕೃಷ್ಣಾಂ ಪರಿಗೃಹ್ಯ ಸಾಧ್ವೀ-
ಮಂತಃಪುರಂ ದ್ರುಪದಸ್ಯಾವಿವೇಶ
ರಾಜಸ್ತ್ರಿಯಃ ಕೌರವ ರಾಜಪುತ್ರೀಂ
ಪ್ರತ್ಯರ್ಚಯಾಂಚಕ್ರುರದೀನಸತ್ತ್ವಾಮ್ ॥10॥
ಕುಂತಿಯು ಸಾಧ್ವಿಯಾದ ದ್ರೌಪದಿಯ ಕೈಯನ್ನು ಹಿಡಿದುಕೊಂಡು ದ್ರುಪದನ ಅಂತಃಪುರವನ್ನು ಪ್ರವೇಶಿಸಿದಳು. ಕೌರವನಾದ ಜನಮೇಜಯನೇ, ರಾಜಸ್ತ್ರೀಯರು ದೈನ್ಯರಹಿತರಾಗಿ ಸಹಜವಾಗಿದ್ದ ಆ ಕೌರವವಂಶದವಳಾದ, ರಾಜಕುಮಾರಿಯಾದ ಕುಂತಿಯನ್ನು ಪೂಜಿಸಿದರು.
ತಾನ್ ಸಿಂಹವಿಕ್ರಾಂತಗತೀನುದೀಕ್ಷ್ಯ
ಮಹರ್ಷಭಾಕ್ಷಾನಜಿನೋತ್ತರೀಯಾನ್ |
ವ್ಯೂಢಾಂತರಾಂಸಾನ್ ಭುಜಗೇಂದ್ರಭೋಗ-
ಪ್ರಲಂಬಬಾಹೂನ್ ಪುರುಷಪ್ರವೀರಾನ್ ॥11॥
ರಾಜಾ ಚ ರಾಜ್ಞಃ ಸಚಿವಾಶ್ಚ ಸರ್ವೇ
ಪುತ್ರಾಶ್ಚ ರಾಜ್ಞಃ ಸುಹೃದಸ್ತಥೈವ |
ಪ್ರೇಷ್ಯಾಶ್ಚ ಸರ್ವೇ ನಿಖಿಲೇನ ರಾಜನ್
ಹರ್ಷಂ ಸಮಾಪೇತುರತೀವ ತತ್ರ ॥12॥
ಸಿಂಹವಿಕ್ರಾಂತಗತಿವುಳ್ಳವರೂ, ವೃಷಭಾಕ್ಷರೂ, ಉನ್ನತ ಭುಜವುಳ್ಳವರೂ, ಭುಜಗೇಂದ್ರನ ಶರೀರದಂತೆ ಉದ್ದವಾದ ಬಾಹುವುಳ್ಳವರೂ, ಆದ ಆ ಪುರುಷಶ್ರೇಷ್ಠರನ್ನು ನೋಡಿ ರಾಜನೂ, ರಾಜನ ಎಲ್ಲಾ ಮಂತ್ರಿಗಳೂ, ರಾಜಪುತ್ರರೂ, ರಾಜನ ಬಂಧುಗಳೂ, ರಾಜನ ಎಲ್ಲಾ ಸೇವಕರೂ ಬಹಳ ಹರ್ಷವನ್ನು ಹೊಂದಿದರು.
ತೇ ತತ್ರ ವೀರಾಃ ಪರಮಾಸನೇಷು
ಸಪಾದಪೀಠೇಷ್ವವಿಶಂಕಮಾನಾಃ |

ಯಥಾನುಪೂರ್ವ್ಯಾದ್ ವಿವಿಶುರ್ನರಾಗ್ರ್ಯ-
ಸ್ತಥಾ ಮಹಾರ್ಹೇಷು ನವಿಸ್ಮಯಂತಃ ॥13॥
ಅಲ್ಲಿ ಆ ವೀರರು ಪಾದಪೀಠಗಳಿಂದ ಕೂಡಿದ ಶ್ರೇಷ್ಠವಾದ ಆಸನಗಳಲ್ಲಿ ಯಾವ ಶಂಕೆಯೂ ಇಲ್ಲದೆ ಆಶ್ಚರ್ಯವನ್ನೂ ಪಡದೆ ಜ್ಯೇಷ್ಠಕ್ರಮದಿಂದ ಎಲ್ಲರೂ ಕುಳಿತುಕೊಂಡರು.
ಉಚ್ಚಾವಚಂ ಪಾರ್ಥಿವಭೋಜನೀಯಂ
ಪಾತ್ರೇಷು ಜಾಂಬೂನದರಾಜತೇಷು |
ದಾಸಾಶ್ಚ ದಾಸ್ಯಶ್ಚ ಸುಮ್ಮೃಷ್ಟವೇಷಾಃ
ಜನ್ಯಂ ವರಂ ಚಾಪ್ಯುಪಜಹ್ರುರನ್ನಮ್ ॥14॥
ರಾಜರಿಗೆ ಯೋಗ್ಯವಾದ ಉಚ್ಚಾವಚವಾದ ಭೋಜನಪದಾರ್ಥಗಳನ್ನು ಸುವರ್ಣಮಯ ಮತ್ತು ರಜತಮಯ ಪಾತ್ರೆಗಳಲ್ಲಿ, ಅಲಂಕೃತರಾಗಿದ್ದ ದಾಸರು ಮತ್ತು ದಾಸಿಯರು ತಂದು ಆ ಜನ್ಯವಾದ ಶ್ರೇಷ್ಠವಾದ ಅನ್ನವನ್ನು ಬಡಿಸಿದರು.
ತೇ ತತ್ರ ಭುಕ್ತ್ವಾ ಪುರುಷಪ್ರವೀರಾ
ಯಥಾನುಕಾಮಂ ಸುಭೃಶಂ ಪ್ರತೀತಾಃ |
ಉತ್ಕ್ರಮ್ಯ ಸರ್ವಾಣಿ ವಸೂನಿ ತತ್ರ
ಸಾಂಗ್ರಾಮಿಕಾಣ್ಯಾವಿವಿಶುರ್ನೃವೀರಾಃ ॥15॥
ಆ ಪುರುಷಪ್ರವೀರರು ಅಲ್ಲಿ ತಮ್ಮ ಇಷ್ಟದಂತೆ ಭೋಜನವನ್ನು ಮಾಡಿ ಬಹಳ ಸಂತುಷ್ಟರಾಗಿ ಅಲ್ಲಿಂದ ಎದ್ದು ಉಳಿದ ಎಲ್ಲಾ ವಸ್ತುಗಳನ್ನೂ ದಾಟಿ ಯುದ್ಧದ ಸಲಕರಣೆಗಳಿದ್ದ ಕಡೆಗೆ ಬಂದರು.
ತಲ್ಲಕ್ಷಯಿತ್ವಾ ದ್ರುಪದಸ್ಯ ಪುತ್ರಾ
ರಾಜಾ ಚ ಸರ್ವೇ ಸಹ ಮಂತ್ರಿಮುಖ್ಯಾಃ |
ಸಮ್ಮಂತ್ರಯಾಮಾಸುರತೀವ ಹೃಷ್ಟಾಃ
ಕುಂತೀಸುತಾನ್ ಪಾರ್ಥಿವಪುತ್ರಪೌತ್ರಾನ್ ॥16॥
ಅದನ್ನು ಗಮನಿಸುತ್ತಿದ್ದ ರಾಜನೂ, ರಾಜಪುತ್ರರೂ ಮತ್ತು ಎಲ್ಲಾ ಮಂತ್ರಿಶ್ರೇಷ್ಠರೂ ಬಹಳ ಸಂತೋಷವನ್ನು ಹೊಂದಿದವರಾಗಿ, ಇವರು (ಈ ಕುಂತೀಪುತ್ರರು) ರಾಜರ ಮಕ್ಕಳು ಮತ್ತು ಮೊಮ್ಮಕ್ಕಳಾಗಿರಬೇಕು ಎಂದು ಮಂತ್ರಾಲೋಚನೆಯನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ತ್ರಿನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ವೈವಾಹಿಕಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರತೊಂಭತ್ತಮೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಪ್ರಾತಸ್ತು ತಸ್ಯ ಜನಿತುರ್ವಚಸಾ ಪುರೋಧಾ-
ಸ್ತಾನ್ ಪ್ರಾಪ್ಯ ಮಂತ್ರವಿಧಿನಾ ಮರುದಾತ್ಮಜೇನ |
ಸಂಪೂಜಿತೋಽತಿವಿದುಷಾ ಪ್ರತಿಗೃಹ್ಯತಾಂಶ್ಚ
ಪ್ರಾವೇಶಯನ್ನೃಪತಿಗೇಹಮಮೈವ ಮಾತ್ರಾ ॥146॥
ಬೆಳಿಗ್ಗೆ ದ್ರುಪದನ ಮಾತಿನಂತೆ ರಾಜಪುರೋಹಿತ ಪಾಂಡವರ ಬಳಿಗೆ ಬಂದು ವೇದೋಕ್ತ ವಿಧಿಗನುಸಾರ ಮಹಾಜ್ಞಾನಿಯಾದ ಭೀಮನಿಂದ ಸತ್ಕೃತನಾಗಿ ಅವರನ್ನು ಕುಂತೀಸಮೇತವಾಗಿ ಅರಮನೆಯೊಳಗೆ ಪ್ರವೇಶ ಮಾಡಿಸಿದ.
ತಾನಾಗತಾನ್ ಸಮಭಿಪೂಜ್ಯ ನಿಜಾತ್ಮಜಾಂ ಚ
ವಿಪ್ರಾದಿಯೋಗ್ಯಪೃಥಗುಕ್ತ ಪದಾರ್ಥಜಾತೈಃ |
ಪೂರ್ಣಾನ್ ಗೃಹಾಂಶ್ಚತುರ ಏವ ದಿದೇಶ ರಾಜಾ
ತತ್ರಾಯುಧಾದಿಪರಿಪೂರ್ಣಗೃಹಂ ಚ ತೇಽಗುಃ ॥147॥
ಚತುರನಾದ ದ್ರುಪದ ತನ್ನ ಅರಮನೆಗೆ ಬಂದ ಪಾಂಡವರನ್ನೂ ತನ್ನ ಮಗಳನ್ನೂ ಚೆನ್ನಾಗಿ ಸತ್ಕರಿಸಿ ಅವರಿಗೆ ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೆ ಉಚಿತವಾಗಿ ಪ್ರತ್ಯೇಕ ವಿಹಿತವಾದ ವಸ್ತುಗಳಿಂದ ನಾಲ್ಕು ಮನೆಗಳನ್ನು ಸಜ್ಜುಗೊಳಿಸಿ ತೋರಿಸಿದ. ಅವುಗಳಲ್ಲಿ ಕ್ಷತ್ರಿಯರಿಗೆ ವಿಹಿತವಾದ ಆಯುಧಾದಿ ವಸ್ತುಗಳಿಂದ ತುಂಬಿದ ಮನೆಯನ್ನೇ ಪಾಂಡವರು ಪ್ರವೇಶಿಸಿದರು.
ಚೇಷ್ಟಾಸ್ವರಾಕೃತಿವಿವಕ್ಷಿತವೀರ್ಯಶೌರ್ಯ-
ಪ್ರಾಗಲ್ಭ್ಯಪೂರ್ವಕಗುಣೈಃ ಕ್ಷಿತಿಭರ್ತೃಪುತ್ರಾನ್ |
ವಿಜ್ಞಾಯ ತಾನ್ ದ್ರುಪದ ಏತ್ಯ ಚ ಧರ್ಮಸೂನುಂ
ಪಪ್ರಚ್ಛ ಕೋಽಸಿ ನರವರ್ಯ ವದಸ್ವ ಸತ್ಯಂ ॥148॥
ಶಾರೀರಕ್ರಿಯೆಗಳು, ಕಂಠಧ್ವನಿ, ಮೈಯ ಆಕಾರ, ಮಾತು, ವೀರ್ಯ, ಶೌರ್ಯ, ಧೈರ್ಯ ಮುಂತಾದ ಕ್ಷತ್ರಿಯಲ್ಲಿರಬೇಕಾದ ಎಲ್ಲ ಗುಣಗಳಿದ್ದುದರಿಂದ ಪಾಂಡವರನ್ನು ರಾಜಕುಮಾರರೆಂದೇ ತಿಳಿದು ದ್ರುಪದ ಬಂದು ಧರ್ಮರಾಜನನ್ನು ಕೇಳಿದ. `ನರವರ್ಯನೆ, ನೀನಾರು, ನಿಜ ಹೇಳು'.
ಸ ಪ್ರಾಹ ಮಂದಹಸಿತಃ ಕಿಮಿಹಾದ್ಯ ರಾಜನ್
ಪೂರ್ವಂ ಹಿ ವರ್ಣವಿಷಯೇ ನ ವಿಶೇಷ ಉಕ್ತಃ |

ಪುತ್ರೀಕೃತೇ ತವ ಸುತೇನ ತು ಲಕ್ಷವೇಧ
ಉಕ್ತೋ ನರೇಂದ್ರಸಮಿತೌ ಸ ಕೃತೋಽಪ್ಯನೇನ ॥149॥
ಧರ್ಮರಾಜ ನಸುನಕ್ಕು ನುಡಿದ. `ರಾಜ, ಅದರಿಂದೇನು ಪ್ರಯೋಜನ? ಹಿಂದೆ ವರ್ಣದ ವಿಷಯದಲ್ಲಿ ವಿಶೇಷವೇನೂ ಉತ್ತಮವಾಗಿರಲಿಲ್ಲ. ಮಗಳಿಗಾಗಿ, ರಾಜರ ಮುಂದೆ ನಿನ್ನ ಮಗ, ಲಕ್ಷ್ಯವೇಧ ಮಾಡಬೇಕೆಂದು ಮಾತ್ರ ಹೇಳಿದ್ದ. ಅದನ್ನು ನನ್ನ ತಮ್ಮ ಮಾಡಿದ್ದಾನೆ!'
ಏವಂ ಬ್ರುವಾಣಮಥ ತಂ ಪೃಥಯಾ ಸಹೈವ
ರಾಜಾ ವದೇತಿ ಪುನರೇವ ಯಯಾಚ ಏಷಃ|
ಸರ್ವಂ ಪೃಥಾಪ್ಯವದತಾಂ ಸ ಚ ತೇನ ತುಷ್ಟೋ
ವಾಚಂ ಜಗಾದ ಕೃತಕೃತ್ಯ ಇಹಾಸಮದ್ಯ ॥150॥
ಧರ್ಮರಾಜ ಹೀಗೆ ಹೇಳಿದಾಗ ದ್ರುಪದ ಅವನನ್ನೂ ಕುಂತಿಯನ್ನೂ ಮತ್ತೆ ಮತ್ತೆ `ನಿಜ ಹೇಳಿರೆಂದು' ಬೇಡಿದ. ಆಗ ಧರ್ಮರಾಜ ಕುಂತಿ ಇಬ್ಬರೂ ಎಲ್ಲ ಸಂಗತಿಗಳನ್ನೂ ವಿವರವಾಗಿ ಹೇಳಿದರು. ಅದರಿಂದ ದ್ರುಪದ ಸಂತುಷ್ಟನಾಗಿ `ನಾನೀಗ ಕನ್ಯಾದಾನ ಕಾರ್ಯದಲ್ಲಿ ಕೃತಕೃತ್ಯನಾದೆನು' ನುಡಿದ.
ಪಾರ್ಥಾರ್ಥಮೇವ ಹಿ ಮಯೈಷ ಕೃತಃ ಪ್ರಯತ್ನಃ
ತ್ವಂ ಫಲ್ಗುನೋಽನ್ಯ ಉತ ವಾದ್ಯ ಕರಂ ಸುತಾಯಾಃ|
ಗೃಹ್ಣಾತ್ವಿತೀರಿತ ಇಮಂ ಸ ತು ಧರ್ಮಸೂನು-
ರಾಹಸ್ಮ ಸರ್ವ ಇತಿ ಮೇ ಮನಸಿ ಪ್ರರೂಢಂ ॥151॥
ಪಾರ್ಥನಿಗೋಸ್ಕರವೆಂದೇ ನಾನು ಈ ಪ್ರಯತ್ನ ಮಾಡಿದ್ದೇನೆ. ಈಗ ನೀನಾಗಲಿ ಅರ್ಜುನನಾಗಲಿ ಅಥವಾ ಇನ್ನೊಬ್ಬ ಪಾಂಡವನಾಗಲಿ ನನ್ನ ಮಗಳ ಪಾಣಿಗ್ರಹಣ ಮಾಡಲಿ' ಎಂದು ದ್ರುಪದ ಹೇಳಿದಾಗ ಧರ್ಮರಾಜ ನುಡಿದ, `ಎಲ್ಲರೂ ಪಾಣಿಗ್ರಹಣ ಮಾಡಲಿ ಎಂದು ನನ್ನ ಮನಸ್ಸಿನಲ್ಲಿ ಸಂಕಲ್ಪ ಮೂಡಿದೆ'.
ನಾತ್ರ ಪ್ರಮಾ ಮಮ ಹೃದಿ ಪ್ರತಿಭಾತ್ಯಥಾಪಿ
ಧರ್ಮಾಚಲಾ ಮಮ ಮತಿರ್ಹಿ ತದೇವ ಮಾನಂ|
ಇತ್ಯುಕ್ತವತ್ಯಪಿ ಸಹೈವ ಸುತೇನ ರಾಜಾ
ನೈವೈಚ್ಛದತ್ರ ಭಗವಾನಗಮಚ್ಚ ಕೃಷ್ಣಃ ॥152॥
`ಇದಕ್ಕೆ ಶಾಸ್ತ್ರಪ್ರಮಾಣವೇನೂ ನನ್ನ ಬುದ್ಧಿಯಲ್ಲಿ ಹೊಳೆಯುತ್ತಿಲ್ಲ. ಆದರೂ ನನ್ನ ಬುದ್ಧಿ ಧರ್ಮದಲ್ಲಿ ನಿಶ್ಚಲವಾಗಿದೆ. ಅದರಿಂದ ಅದೇ ಪ್ರಮಾಣ'. ಹೀಗೆ ಧರ್ಮರಾಜ ಹೇಳಿದರೂ ದ್ರುಪದ ಧೃಷ್ಟದ್ಯುಮ್ನರು ಸರ್ವಥಾ ಒಪ್ಪಲಿಲ್ಲ. ಅಷ್ಟರಲ್ಲಿ ಅಲ್ಲಿಗೆ ಭಗವಾನ್ ಬಾದರಾಯಣರು ಬಂದರು.
* * * *
ನೂರ ತೊಂಭತ್ತನಾಲ್ಕನೆಯ ಅಧ್ಯಾಯ
(ಧರ್ಮರಾಜನಿಂದ ತಾವು ಪಾಂಡುಪುತ್ರರೆಂದು ಕಥನ, ದ್ರುಪದನ ಹರ್ಷ, ಐದು ಜನರಿಗೆ ದ್ರೌಪದಿಯನ್ನು ಕೊಡಲು ಅಸಂತೋಷ)
ವೈಶಂಪಾಯನಃ
ತತ ಆಹೂಯ ಪಾಂಚಾಲೋ ರಾಜಪುತ್ರಂ ಯುಧಿಷ್ಠಿರಮ್|
ಪರಿಗ್ರಹೇಣ ಬ್ರಾಹ್ಮೇಣ ಪರಿಗೃಹ್ಯ ಮಹಾದ್ಯುತಿಃ ॥1॥
ಅನಂತರ ಪಾಂಚಾಲರಾಜನು ಯುಧಿಷ್ಠಿರನನ್ನು ಆಹ್ವಾನಿಸಿ, ಬ್ರಾಹ್ಮಣವಿಧಿಯಂತೆ ಅವನನ್ನು ಸತ್ಕರಿಸಿದನು.
ಪರ್ಯಪೃಚ್ಛದದೀನಾತ್ಮಾ ಕುಂತೀಪುತ್ರಂ ಯುಧಿಷ್ಠಿರಮ್|
ಕಥಂ ಜಾನೀಮ ಭವತಃ ಕ್ಷತ್ರಿಯಾನ್ ಬ್ರಾಹ್ಮಣಾನುತ ॥2॥
ಮಹಾತೇಜಸ್ವಿಯಾದ ಉದಾರಮನಸ್ಸುಳ್ಳ ಅವನು ಕುಂತೀಪುತ್ರನಾದ ಯುಧಿಷ್ಠಿರನನ್ನು ಕರೆದು ಹೀಗೆ ಕೇಳಿದನು. ನೀವು ಬ್ರಾಹ್ಮಣರೋ ಅಥವಾ ಕ್ಷತ್ರಿಯರೋ ಎಂದು ನಾವು ಹೇಗೆ ತಿಳಿಯೋಣ?
ವೈಶ್ಯಾನ್ ವಾ ಗುಣಸಂಪನ್ನಾನುತ ವಾ ಶೂದ್ರಯೋನಿಜಾನ್|
ಮಾಯಾಮಾಸ್ಥಾಯ ವಾ ಸಿದ್ಧಾಂಶ್ಚರತಃ ಸರ್ವತೋದಿಶಮ್ ॥3॥
ಕೃಷ್ಣಾಹೇತೋರನುಪ್ರಾಪ್ತಾನ್ ದೇವಸಂದರ್ಶನಾರ್ಥಿನಃ|
ಬ್ರವೀತು ನೋ ಭವಾನ್ ಸತ್ಯಂ ಸಂದೇಹೋಽತ್ರ ಚ ನೋಽಬಲಾನ್ ॥
ಅಥವಾ ಗುಣಸಂಪನ್ನರಾದ ವೈಶ್ಯರೋ, ಅಥವಾ ಶೂದ್ರಯೋನಿಯಲ್ಲಿ ಜನಿಸಿದವರೋ ಅಥವಾ ದ್ರೌಪದಿಯನ್ನು ಪಡೆಯುವ ನಿಮಿತ್ತವಾಗಿ ದೇವಸಂದರ್ಶನಾರ್ಥಿಗಳಾಗಿ ಮಾಯಾರೂಪವನ್ನು ಧರಿಸಿಬಂದ ಎಲ್ಲ ಕಡೆಯಲ್ಲೂ ಸಂಚಾರ ಮಾಡುವ ಸಿದ್ದರೋ ಎಂದು ಹೇಗೆ ತಿಳಿಯೋಣ? ನೀನು ನನಗೆ ಸತ್ಯವನ್ನು ಹೇಳು. ದುರ್ಬಲರಾದ ನಮಗೆ ಈ ವಿಷಯದಲ್ಲಿ ಸಂಶಯವಿದೆ.
ಅಪಿ ನಃ ಸಂಶಯಸ್ಯಾಂತೇ ಮನಸ್ತುಷ್ಟಿರಿಹಾವಿಶೇತ್|
ಅಪಿ ನೋ ಭಾಗಧೇಯಾನಿ ಶುಭಾನಿ ಸ್ಯುಃ ಪರಂತಪ ॥5॥
ಪರಂತಪನೇ, ನಮ್ಮ ಸಂಶಯಗಳು ಪರಿಹಾರವಾಗಿ ಮನಸ್ಸಿಗೆ ಸಂತೋಷವಾಗುವ ಅವಕಾಶವಿದೆಯೇ? ನಮ್ಮ ಅದೃಷ್ಟಗಳು ಶುಭವಾಗಿವೆಯೇ?
ಕಾಮಯೇಯಂ ಬ್ರೂಹಿ ಸತ್ಯಂ ಸತ್ಯಂ ರಾಜಸು ಶೋಭತೇ|
ಇಷ್ಟಾಪೂರ್ತೇನ ಚ ತಥಾಽವಕ್ತವ್ಯಮನೃತಂ ಭವೇತ್ ॥6॥

ಇದನ್ನು ತಿಳಿಯಲು ಇಚ್ಛಿಸುತ್ತೇನೆ. ಸತ್ಯವನ್ನು ಹೇಳು. ರಾಜರಿಗೆ ಸತ್ಯವಚನವು ಶೋಭಿಸುತ್ತದೆ. ಸತ್ಯವಚನವು ಉಂಟುಮಾಡುವ ಶೋಭೆಯನ್ನು ಇಷ್ಟಾಪೂರ್ತಗಳು ಉಂಟುಮಾಡುವುದಿಲ್ಲ. ಸುಳ್ಳನ್ನು ಯಾವಾಗಲೂ ಹೇಳಬಾರದಷ್ಟೇ?
ಶ್ರುತ್ವಾ ಹ್ಯಮರಸಂಕಾಶ ತವ ವಾಕ್ಯಮರಿಂದಮ |
ಧ್ರುವಂ ವಿವಾಹಕರಣಮಾಸ್ಥಾಸ್ಯಾಮಿ ವಿಧಾನತಃ ||7||
ದೇವತೆಯಂತಿರುವ ಅರಿಂದಮನೇ, ನಿನ್ನ ಉತ್ತರವನ್ನು ಕೇಳಿ ನಾನು ವಿವಾಹದ ವಿಧಾನಗಳನ್ನು ಅಣಿಗೊಳಿಸುವೆನು.
ಯುಧಿಷ್ಠಿರಃ
ಮಾ ರಾಜನ್ ವಿಮನಾ ಭೂಸ್ತ್ವಂ ಪಾಂಚಾಲ ಪ್ರೀತಿರಸ್ತು ತೇ |
ಈಪ್ಸಿತಸ್ತೇ ಧ್ರುವಃ ಕಾಮಃ ಸಂವೃತ್ತೋಽಯಮಸಂಶಯಮ್ ||8||
ಪಾಂಚಾಲರಾಜನೇ, ಮನಸ್ಸಿನಲ್ಲಿ ಖೇದವನ್ನು ಹೊಂದಬೇಡ. ನಿನಗೆ ಸಂತೋಷವಿರಲಿ, ನಿನ್ನ ಬಹುಕಾಲದ ಆಸೆಯು ನಿಸ್ಸಂಶಯವಾಗಿ ನೆರವೇರಿದೆ.
ವಯಂ ಹಿ ಕ್ಷತ್ರಿಯಾ ರಾಜನ್ ಪಾಂಡೋಃ ಪುತ್ರಾ ಮಹಾತ್ಮನಃ |
ಜ್ಯೇಷ್ಠಂ ಮಾಂ ವಿದ್ಧಿ ಕೌಂತೇಯಂ ಭೀಮಸೇನಾರ್ಜುನಾವಿಮೌ ||9||
ರಾಜನೇ, ನಾವು ಕ್ಷತ್ರಿಯರು. ಮಹಾತ್ಮನಾದ ಪಾಂಡುವಿನ ಪುತ್ರರು. ನಾನು ಕುಂತಿಯ ಹಿರಿಯಮಗ ಎಂದು ತಿಳಿ. ಇವರಿಬ್ಬರೂ ಭೀಮಸೇನಾರ್ಜುನರು.
ಆಭ್ಯಾಂ ತವ ಸುತಾ ರಾಜನ್ ನಿರ್ಜಿತಾ ರಾಜಸಂಸದಿ |
ಇಮೇ ಚ ತೇ ವಯಂ ರಾಜನ್ ಯತ್ರ ಕೃಷ್ಣಾ ಪ್ರತಿಷ್ಠಿತಾ ||10||
ರಾಜನೇ, ಇವರಿಬ್ಬರಿಂದ ನಿನ್ನ ಮಗಳು ರಾಜಸಭೆಯಲ್ಲಿ ಗೆಲ್ಲಲ್ಪಟ್ಟಳು. ರಾಜನೇ, ನಿನ್ನ ಮಗಳು ಯಾರನ್ನು ಆಶ್ರಯಿಸುವಳೋ ಅಂತಹ ಪಾಂಡವರು ನಾವು.
ವ್ಯೇತು ತೇ ಮಾನಸಂ ದುಃಖಂ ಕ್ಷತ್ರಿಯಾಃ ಸ್ಮೋ ನರಾಧಿಪ |
ಪದ್ಮಿನೀವ ಸುತೇಯಂ ತೇ ಹ್ರದಾದನ್ಯಹ್ರದಂ ಗತಾ ||11||
ರಾಜನೇ, ನಿನ್ನ ಮಾನಸಿಕ ಚಿಂತೆಯನ್ನು ತ್ಯಜಿಸು, ನಾವು ಕ್ಷತ್ರಿಯರು. ನಿನ್ನ ಮಗಳು ಒಂದು ಸರೋವರದಿಂದ ಇನ್ನೊಂದು ಸರೋವರಕ್ಕೆ ಹೋದ ಪದ್ಮಿನಿಯಂತೆ ನಮ್ಮನ್ನು ಸೇರಿದ್ದಾಳೆ.
ಇತಿ ತಥ್ಯಂ ಮಹಾರಾಜ ಸರ್ವಮೇತದ್ ಬ್ರುವೀಮಿ ತೇ |
ಭವಾನ್ ಹಿ ಗುರುರಸ್ಮಾಕಂ ಪರಮಂ ಚ ಪರಾಯಣಮ್ ||12||
ಮಹಾರಾಜನೇ, ಇದು ಸತ್ಯ, ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ನೀನು ನಮಗೆ ಗುರು, ಅಷ್ಟೇ ಅಲ್ಲದೇ ಶ್ರೇಷ್ಠನಾದ ಆಶ್ರಯದಾತನೂ ಹೌದು.
ವೈಶಂಪಾಯನಃ
ತತಃ ಸ ದ್ರುಪದೋ ರಾಜಾ ಹರ್ಷವ್ಯಾಕುಲಲೋಚನಃ |
ಪ್ರತಿವಕ್ತುಂ ನ ಶಕ್ತೋಽಭೂದ್ ಧರ್ಮಸೂನುಂ ತದಾಽನಘಮ್ ||
ಆಗ ದ್ರುಪದರಾಜನು ಸಂತೋಷದಿಂದ ಕಣ್ಣುಗಳಲ್ಲಿ ನೀರು ತುಂಬಿಕೊಂಡವನಾಗಿ ನಿರ್ದೋಷನಾದ ಯುಧಿಷ್ಠಿರನನ್ನು ಕುರಿತು ಮಾತನಾಡಲು ಸಮರ್ಥನಾಗಲಿಲ್ಲ.
ಯತ್ನೇನ ತು ಸ ತಂ ಹರ್ಷಂ ಸನ್ನಿಗೃಹ್ಯ ಪರಂತಪಃ |
ಅನುರೂಪಂ ತತೋ ರಾಜಾ ಪ್ರತ್ಯುವಾಚ ಯುಧಿಷ್ಠಿರಮ್ ||14||
ಪರಂತಪನಾದ ದ್ರುಪದನು ಪ್ರಯತ್ನಪೂರ್ವಕವಾಗಿ ತನ್ನ ಹರ್ಷವನ್ನು ನಿಗ್ರಹಿಸಿ ಯುಧಿಷ್ಠಿರನನ್ನು ಕುರಿತು ಅವನಿಗೆ ಅನುಗುಣವಾದ ರೀತಿಯಲ್ಲಿ ಮಾತನಾಡಿದನು.
ಪರ್ಯಪೃಚ್ಛದದೀನಾತ್ಮಾ ಯಥಾ ತೇ ಪ್ರದ್ರುತಾಃ ಪುರಾ |
ತಥಾಽಸ್ಮೈ ಸರ್ವಮಾಚಷ್ಟ ಆನುಪೂರ್ವ್ಯೇಣ ಪಾಂಡವಃ ||15||
ಉದಾರಬುದ್ಧಿಯುಳ್ಳ ಅವನು, ಹಿಂದೆ ಅವರು ಅರಗಿನ ಮನೆಯಿಂದ ಓಡಿಹೋದ ವಿಷಯವನ್ನೆಲ್ಲಾ ಬಗೆಬಗೆಯಾಗಿ ಪ್ರಶ್ನಿಸಿದನು. ಪಾಂಡವನಾದ ಧರ್ಮರಾಜನು ಅವನ ಪ್ರಶ್ನೆಯ ಕ್ರಮಗಳನ್ನು ಅನುಸರಿಸಿ ಎಲ್ಲವನ್ನೂ ಅವನಿಗೆ ತಿಳಿಸಿದನು.
ತಚ್ಛ್ರುತ್ವಾ ದ್ರುಪದೋ ರಾಜಾ ಕುಂತೀಪುತ್ರಸ್ಯ ಭಾಷಿತಮ್ |
ವಿಗರ್ಹಯಾಮಾಸ ತದಾ ಧೃತರಾಷ್ಟ್ರಂ ನರೇಶ್ವರಮ್ ||16||
ಕುಂತೀಪುತ್ರನಾದ ಧರ್ಮರಾಜನ ಮಾತುಗಳನ್ನು ಕೇಳಿದ ದ್ರುಪದರಾಜನು ಆಗ ಧೃತರಾಷ್ಟ್ರನನ್ನು ನಿಂದಿಸಿದನು.
ಆಶ್ವಾಸಯಾಮಾಸ ತದಾ ಕುಂತೀಪುತ್ರಂ ಯುಧಿಷ್ಠಿರಮ್ |
ಪ್ರತಿಜಜ್ಞೇ ಸ ರಾಜ್ಯಾಯ ದ್ರುಪದೋ ವದತಾಂ ವರಃ ||17||
ಮಾತನಾಡುವವರಲ್ಲಿ ಶ್ರೇಷ್ಠನಾದ ಆ ದ್ರುಪದನು ಕುಂತೀಪುತ್ರನಾದ ಯುಧಿಷ್ಠಿರನಿಗೆ ಆಶ್ವಾಸನೆಯನ್ನು ನೀಡಿ ಪಾಂಡವರ ರಾಜ್ಯಲಾಭಕ್ಕೋಸ್ಕರ ಪ್ರಯತ್ನಪಡುವುದಾಗಿ ಪ್ರತಿಜ್ಞೆಯನ್ನು ಮಾಡಿದನು.
ತತಃ ಕುಂತೀ ಚ ಕೃಷ್ಣಾ ಚ ಭೀಮಸೇನಾರ್ಜುನಾವಪಿ |
ಯಮೌ ಚ ರಾಜ್ಞಾ ಸಂದಿಷ್ಟಾ ವಿವಿಶುರ್ಭವನಂ ಮಹತ್ ||18||
ಅನಂತರ ರಾಜನ ಆದೇಶವನ್ನು ಪಡೆದು ಕುಂತಿಯೂ, ದ್ರೌಪದಿಯೂ ಭೀಮಸೇನಾರ್ಜುನರೂ ಮತ್ತು ನಕುಲಸಹದೇವರೂ ರಾಜನ ಅರಮನೆಯೊಳಗೆ ಪ್ರವೇಶಿಸಿದರು.

ತತ್ರ ತೇ ನ್ಯವಸನ್ ರಾಜನ್ ಯಜ್ಞಸೇನೇನ ಪೂಜಿತಾಃ |
ಪರ್ಯಾಶ್ವಸ್ತಾಂಸ್ತದಾ ರಾಜಾ ಸಹ ಪುತ್ರೈರುವಾಚ ತಾನ್ ॥19॥
ರಾಜನೇ, ಯಜ್ಞಸೇನನಿಂದ ಸತ್ಕೃತರಾಗಿ ಅವರು ಅಲ್ಲಿ ವಾಸವನ್ನು ಮಾಡಿದರು. ಅವರು ಸಮಾಧಾನವನ್ನು ಹೊಂದಿದ ಮೇಲೆ ರಾಜನು ತನ್ನ ಮಕ್ಕಳ ಜೊತೆಯಲ್ಲಿ ಅವರನ್ನು ಕುರಿತು ಮಾತನಾಡಿದನು.
ಗೃಹ್ಣಾತು ವಿಧಿವತ್ ಪಾಣಿಮದ್ಯೈವ ಕುರುನಂದನಃ |
ಪುಣ್ಯೇಽಹನಿ ಮಹಾಬಾಹುರರ್ಜುನಃ ಕುರುತಾಂ ಕ್ಷಣಮ್ ॥20॥
ಕುರುನಂದನನಾದ ಮಹಾಬಾಹುವಾದ ಅರ್ಜುನನು ಪವಿತ್ರವಾದ ಈ ದಿನವೇ ಅವಕಾಶವನ್ನು ಮಾಡಿಕೊಂಡು ಪಾಣಿಗ್ರಹಣವನ್ನು ಮಾಡಲಿ.
ವೈಶಂಪಾಯನಃ
ತತಸ್ತಮಬ್ರವೀದ್ ರಾಜಾ ಧರ್ಮಪುತ್ರೋ ಯುಧಿಷ್ಠಿರಃ |
ಮಮಾಪಿ ದಾರಸಂಬಂಧಃ ಕಾರ್ಯಸ್ತಾವದ್ ವಿಶಾಂಪತೇ |
ತಸ್ಮಾತ್ ಪೂರ್ವಂ ಮಯಾ ಕಾರ್ಯಂ
ತದ್ ಭವಾನನುಮನ್ಯತಾಮ್ ॥21॥
ಆಗ ಧರ್ಮಪುತ್ರನಾದ ಯುಧಿಷ್ಠಿರನು ಅವನನ್ನು ಕುರಿತು ಮಾತನಾಡಿದನು. ರಾಜನೇ, ನಾನೂ ವಿವಾಹವನ್ನು ಮಾಡಿಕೊಳ್ಳಬೇಕಾಗಿದೆ. ಆದ್ದರಿಂದ ನಾನು ಮೊದಲು ಪಾಣಿಗ್ರಹಣ ಮಾಡಬೇಕು. ಅದಕ್ಕೆ ನಿನ್ನ ಅನುಮತಿಯನ್ನು ಕೊಡು.
ದ್ರುಪದಃ
ಭವಾನ್ ವಾ ವಿಧಿವತ್ ಪಾಣಿಂ ಗೃಹ್ಣಾತು ದುಹಿತುರ್ಮಮ |
ಯಸ್ಯ ವಾ ಮನ್ಯಸೇ ವೀರ ತಸ್ಯ ಕೃಷ್ಣಾಮುಪಾದಿಶ ॥22॥
ನೀನೇ ಬೇಕಾದರೂ ವಿಧಿಪೂರ್ವಕವಾಗಿ ನನ್ನ ಮಗಳ ಪಾಣಿಗ್ರಹಣವನ್ನು ಮಾಡು. ಅಥವಾ ನಿಮ್ಮಲ್ಲಿ ಯಾರಿಗೆ ನಾನು ದ್ರೌಪದಿಯನ್ನು ಕೊಡಬೇಕೆಂದಾದರೂ ತಿಳಿಸು.
ಯುಧಿಷ್ಠಿರಃ
ಸರ್ವೇಷಾಂ ದ್ರೌಪದೀ ರಾಜನ್ ಮಹಿಷೀ ನೋ ಭವಿಷ್ಯತಿ |
ಏವಂ ಹಿ ವ್ಯಾಹೃತಂ ಪೂರ್ವಂ ಮಮ ಮಾತ್ರಾ ವಿಶಾಂಪತೇ ॥
ರಾಜನೇ, ದ್ರೌಪದಿಯು ನಮ್ಮೆಲ್ಲರಿಗೂ ರಾಣಿಯಾಗುವಳು. ರಾಜನೇ, ಹೀಗೆ ನನ್ನ ತಾಯಿಯು ಮೊದಲೇ ಹೇಳಿದ್ದಾಳೆ.
ಅಹಂ ಚಾಪ್ಯನಿವಿಷ್ಟೋ ವೈ ಭೀಮಸೇನಶ್ಚ ಪಾಂಡವಃ |
ಪಾರ್ಥೇನ ವಿಜಿತಾ ಚೈಷಾ ರತ್ನಭೂತಾ ಚ ತೇ ಸುತಾ ॥24॥
ನನಗಿನ್ನೂ ವಿವಾಹವಾಗಿಲ್ಲ. ಪಾಂಡವನಾದ ಭೀಮಸೇನನಿಗೂ ವಿವಾಹವಾಗಿಲ್ಲ, ರತ್ನದಂತಿರುವ ಈ ನಿನ್ನ ಮಗಳು ಅರ್ಜುನನಿಂದ ಜಯಿಸಲ್ಪಟ್ಟಿದ್ದಾಳೆ.
ಏಷ ನಃ ಸಮಯೋ ರಾಜನ್ ರತ್ನಸ್ಯ ಸಹಭೋಜನಮ್ |
ನ ಚೈನಂ ಹಾತುಮಿಚ್ಛಾಮಃ ಸಮಯಂ ರಾಜಸತ್ತಮ ॥25॥
ರಾಜನೇ, ರತ್ನವನ್ನು ನಾವೆಲ್ಲರೂ ಒಟ್ಟಿಗೆ ಭೋಗಿಸಬೇಕೆಂದು ನಮ್ಮ ನಿಯಮವಿದೆ. ರಾಜಶ್ರೇಷ್ಠನೇ, ಈ ನಿಯಮವನ್ನು ನಾವು ಪರಿತ್ಯಾಗ ಮಾಡಲು ಬಯಸುವುದಿಲ್ಲ.
ಅಕ್ರಮೇಣ ನಿವೇಶೇ ಚ ಧರ್ಮಲೋಪೋ ಮಹಾನ್ ಭವೇತ್ |
ಸರ್ವೇಷಾಂ ಧರ್ಮತಃ ಕೃಷ್ಣಾ ಮಹಿಷೀ ನೋ ಭವಿಷ್ಯತಿ |
ಆನುಪೂರ್ವ್ಯೇಣ ಗೃಹ್ಣಂತು ಸರ್ವೇಽಗ್ನೌ ಜ್ವಲಿತೇ ಕರಮ್ ॥26॥
ಜ್ಯೇಷ್ಠಕ್ರಮವನ್ನು ಬಿಟ್ಟು ದ್ರೌಪದಿಯನ್ನು ಯಾರಾದರೂ ಚಿಕ್ಕವರಿಗೆ ಕೊಟ್ಟರೆ ದೊಡ್ಡ ಧರ್ಮಲೋಪ ಉಂಟಾಗುತ್ತದೆ. ದ್ರೌಪದಿಯು ಧರ್ಮದಿಂದಲೇ ನಮ್ಮೆಲ್ಲರಿಗೂ ರಾಣಿಯಾಗುವಳು. ಜ್ವಲಿತವಾದ ಅಗ್ನಿಯ ಸನ್ನಿಧಿಯಲ್ಲಿ ನಾವೆಲ್ಲರೂ ಜ್ಯೇಷ್ಠಕ್ರಮದಿಂದ ಅವಳ ಪಾಣಿಯನ್ನು ಗ್ರಹಣ ಮಾಡುವೆವು.
ದ್ರುಪದಃ
ಏಕಸ್ಯ ಬಹ್ವ್ಯೋ ವಿಹಿತಾ ಮಹಿಷ್ಯಃ ಕುರುನಂದನ |
ನೈಕಸ್ಯಾ ಬಹವಃ ಪುಂಸೋ ವಿಧೀಯಂತೇ ಕದಾಚನ ॥27॥
ಕುರುನಂದನನೇ, ಒಬ್ಬನಿಗೆ ಅನೇಕ ಪತ್ನಿಯರು ವಿಹಿತರಾಗುತ್ತಾರೆ. ಆದರೆ, ಒಬ್ಬ ಸ್ತ್ರೀಗೆ ಅನೇಕ ಪುರುಷರು ಪತಿಗಳಾಗಿ ಎಂದೂ ವಿಧಾನ ಮಾಡಲ್ಪಡುವುದಿಲ್ಲ.
ನ ಚಾಪ್ಯಾಚರಿತಃ ಪೂರ್ವೈರಯಂ ಧರ್ಮೋ ಮಹಾತ್ಮಭಿಃ |
ನಚ ಧರ್ಮೋ ಹ್ಯನೇಕಸ್ಥಶ್ಚರಿತವ್ಯಃ ಸನಾತನಃ ॥28॥
ನೀನು ಸೂಚಿಸಿರುವ ಈ ಮಾರ್ಗವು ಹಿಂದಿನ ಮಹಾತ್ಮರಿಂದ ಆಚರಿಸಲ್ಪಟ್ಟಿಲ್ಲ. ಎಲ್ಲರೂ ಆಚರಿಸಬೇಕಾದ ಸನಾತನಧರ್ಮವು ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿರುವುದಿಲ್ಲ. ಎಲ್ಲರೂ ಒಂದೇ ರೀತಿಯಲ್ಲೇ ಅನುಸರಿಸಬೇಕು.
ಸೋಽಯಂ ನ ಲೋಕೇ ವೇದೇ ವಾ ಜಾತು ಧರ್ಮಃ ಪ್ರಶಸ್ಯತೇ |
ಲೋಕವೇದವಿರುದ್ಧಂ ಚ ನಾಧರ್ಮಂ ಧಾರ್ಮಿಕಃ ಶುಚಿಃ |
ಕರ್ತುಮರ್ಹಸಿ ಕೌಂತೇಯ ಕಸ್ಮಾತ್ ತೇ ಬುದ್ಧಿರೀದೃಶೀ ॥29॥

ಐದು ಜನರು ಒಬ್ಬಳನ್ನೇ ಮದುವೆ ಮಾಡಿಕೊಳ್ಳುವುದು ಲೋಕದಲ್ಲಾಗಲಿ, ವೇದದಲ್ಲಾಗಲಿ ಎಂದೂ ವಿಧಿಸಲ್ಪಡುವುದಿಲ್ಲ. ಕೌಂತೇಯನೇ, ಧಾರ್ಮಿಕನೂ ಮತ್ತು ಶುಚಿಯೂ ಆದ ನೀನು ಲೋಕಕ್ಕೂ ಮತ್ತು ವೇದಕ್ಕೂ ವಿರುದ್ಧವಾದ ಅಧರ್ಮವನ್ನು ಆಚರಿಸಬಾರದು. ನಿನಗೆ ಏಕೆ ಇಂತಹ ಬುದ್ಧಿಯುಂಟಾಗಿದೆ?

ಯುಧಿಷ್ಠಿರಃ

ಸೂಕ್ಷ್ಮೋ ಧರ್ಮೋ ಮಹಾರಾಜ ನಾಸ್ಯ ವಿದ್ಮೋ ಗತಿಂ ವಯಮ್ |
ಲೋಕವೇದಾವಿರುದ್ಧೋಽಯಂ ಧರ್ಮೋ ಧರ್ಮಭೃತಾಂ ವರ ॥30॥

ಮಹಾರಾಜನೇ, ಧರ್ಮದ ಗತಿಯು ಸೂಕ್ಷ್ಮವಾಗಿದೆ. ಅದನ್ನು ನಾವು ತಿಳಿಯಲಾರೆವು. ಧರ್ಮಭೃತರಲ್ಲಿ ಶ್ರೇಷ್ಠನಾದವನೇ, ನಾನು ಹೇಳುತ್ತಿರುವ ಈ ಕಾರ್ಯವು ಲೋಕಕ್ಕೂ ಮತ್ತು ವೇದಕ್ಕೂ ಅವಿರುದ್ಧವಾದ ಧರ್ಮವೇ ಆಗಿದೆ.

ಸರ್ವೇಷಾಮಾನುಪೂರ್ವ್ಯೇಣ ಯಾತಂ ತೈರನುಯಾಮಹೇ |
ನ ಮೇ ವಾಗನೃತಂ ಪ್ರಾಹ ನಾಧರ್ಮೇ ಧೀಯತೇ ಮತಿಃ ॥31॥

ಎಲ್ಲರಿಗೂ ಅನುಕೂಲವಾಗುವಂತೆ ಹಿಂದಿನವರು ನಡೆದ ಮಾರ್ಗದಲ್ಲಿಯೇ ನಾವು ನಡೆಯುತ್ತಿದ್ದೇವೆ. ನಾನು ಎಂದೂ ಸುಳ್ಳು ಮಾತನಾಡಿಲ್ಲ. ಅಥವಾ ನನ್ನ ಮನಸ್ಸು ಎಂದೂ ಅಧರ್ಮವನ್ನು ಯೋಚಿಸುವುದಿಲ್ಲ.

ಏವಂ ಚೈವ ವದತ್ಯಂಬಾ ಮಮಾಪಿ ಚ ಮನೋಗತಮ್ |
ಆಶ್ರಮೇಷು ವಿನಿರ್ದಿಷ್ಟಾದ್ ವ್ಯಾಸಾದೇತನ್ಮಯಾ ಶ್ರುತಮ್ ॥32॥

ತಾಯಿಯೂ ಹೀಗೆಯೇ ಹೇಳುತ್ತಾಳೆ. ನನ್ನ ಮನಸ್ಸಿನ ಅಭಿಪ್ರಾಯವೂ ಹೀಗೆಯೇ ಇದೆ. ನಾನು ಆಶ್ರಮಗಳಲ್ಲಿ ವಾಸಿಸುವ ವ್ಯಾಸರಿಂದಲೂ ಈ ವಿಷಯವನ್ನು ಹೀಗೆಯೇ ಕೇಳಿದ್ದೇನೆ.

ಧರ್ಮ ಏಷ ಧ್ರುವೋ ರಾಜನ್ ಯಸ್ಮಾದೇವಂ ಕರೋಮ್ಯಹಮ್ |
ಮಾ ಚ ತತ್ರ ವಿಶಂಕಾ ಭೂನ್ನ ಹ್ಯಧರ್ಮೇ ಮತಿರ್ಮಮ ॥33॥

ರಾಜನೇ, ನಾನು ಹೀಗೆ ಮಾಡುತ್ತಿರುವುದರಿಂದ ಇದು ನಿಶ್ಚಯವಾಗಿ ಧರ್ಮವೇ ಸರಿ. ನಿನಗೆ ಅದರಲ್ಲಿ ಸಂಶಯವು ಬೇಡ. ನಾನು ಎಂದೂ ಅಧರ್ಮವನ್ನು ಚಿಂತಿಸುವುದಿಲ್ಲ.

ದ್ರುಪದಃ

ತ್ವಂ ಚ ಕುಂತೀ ಚ ಕೌಂತೇಯ ಧೃಷ್ಟದ್ಯುಮ್ನಶ್ಚ ಮೇ ಸುತಃ |
ಕಥಯಂತ್ವಿಹ ಕರ್ತವ್ಯಂ ಶ್ವಃ ಕಾಲ್ಯೇ ಕರವಾಮಹೇ ॥34॥

ಕೌಂತೇಯನೇ, ನೀನೂ, ಕುಂತಿಯೂ ಮತ್ತು ಧೃಷ್ಟದ್ಯುಮ್ನನೂ ಸೇರಿ ವಿಚಾರ ಮಾಡಿ ಏನು ಮಾಡಬೇಕೆಂದು ತಿಳಿಸಿ. ನಾಳೆ ಬೆಳಿಗ್ಗೆ ಹಾಗೆಯೇ ಮಾಡೋಣ.

ವೈಶಂಪಾಯನಃ

ತೇ ಸಮೇತ್ಯ ತತಃ ಸರ್ವೇ ಕಥಯಂತಿ ಸ್ಮ ಭಾರತ |
ಅಥ ದ್ವೈಪಾಯನೋ ರಾಜನ್ನಾಜಗಾಮ ಯದೃಚ್ಛಯಾ ॥35॥

ಭಾರತನೇ, ಆಗ ಅವರೆಲ್ಲರೂ ಒಂದೆಡೆ ಸೇರಿ ಮಾತನಾಡಲು ಆರಂಬಿಸಿದರು.ರಾಜನೇ, ಆ ವೇಳೆಗೆ ಸರಿಯಾಗಿ ಅನಿರೀಕ್ಷಿತವಾಗಿ ಅಲ್ಲಿಗೆ ವೇದವ್ಯಾಸರು ಆಗಮಿಸಿದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಚತುರ್ನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ವೈವಾಹಿಕಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರತೊಂಭತ್ತನಾಲ್ಕನೆಯ ಅಧ್ಯಾಯ ಮುಗಿಯಿತು.

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19

ವ್ಯಾಸಂ ತಮೀಕ್ಷ್ಯ ಭಗವಂತಮಗಣ್ಯಪೂರ್ಣ-
ನಿತ್ಯಾವ್ಯಯಾತ್ಮಗುಣಮಾಶು ಸಮಸ್ತ ಏವ |
ನತ್ವಾಭಿಪೂಜ್ಯ ವರಪೀಠಗತಸ್ಯ ಚಾಜ್ಞಾ-
ಮಾದಾಯ ಚೋಪವಿವಿಶುಃ ಸಹಿತಾಸ್ತದಂತೇ ॥153॥

ಅಗಣಿತ ಗುಣಪೂರ್ಣರಾದ ನಿತ್ಯ ಅವ್ಯಯ ಸ್ವರೂಪಭೂತ ಗುಣಶಾಲಿಗಳಾದ ಭಗವಾನ್ ವೇದವ್ಯಾಸರನ್ನು ಕಂಡು ಎಲ್ಲರೂ ನಮಿಸಿ ಸತ್ಕರಿಸಿ, ಶ್ರೇಷ್ಠವಾದ ಆಸನದಲ್ಲಿ ಅವರು ಕುಳಿತ ಬಳಿಕ ಅವರಿಂದ ಆಜ್ಞೆ ಪಡೆದು ಅವರ ಬಳಿ ಎಲ್ಲರೂ ಜೊತೆಗೆ ಕುಳಿತರು.

ಕೃಷ್ಣಸ್ತದಾಹ ನೃಪತಿಂ ಪ್ರತಿ ದೇಹಿ ಕನ್ಯಾಂ
ಸರ್ವೇಭ್ಯ ಏವ ವೃಷವಾಯುಪುರಂದರಾ ಹಿ |
ನಾಸತ್ಯದಸ್ರಸಹಿತಾ ಇಮ ಏವ ಇಂದ್ರಾಃ
ಪೂರ್ವೇ ಚ ಸಂಪ್ರತಿತನಶ್ಚ ಹರೇರ್ಹಿ ಪಶ್ಚಾತ್ ॥154॥
ಏಷಾಂ ಶ್ರೀಯಶ್ಚ ನಿಖಿಲಾ ಅಪಿ ಚೈಕದೇಹಾಃ
ಪುತ್ರೀ ತವೈವ ನ ತತೋಽತ್ರ ವಿರುದ್ಧತಾ ಹಿ |
ಇತ್ಯುಕ್ತವತ್ಯಪಿ ಯದಾ ದ್ರುಪದಶ್ಚಕಾರ
ಸಂವಾದಿನೀಂ ನ ಧಿಯಮೇನಮಥಾಹ ಕೃಷ್ಣಃ ॥155॥

ವೇದವ್ಯಾಸರು ಆಗ ದ್ರುಪದನನ್ನು ಕುರಿತು `ಎಲ್ಲರಿಗೂ ಕನ್ಯಾದಾನ ಮಾಡು' ಇವರು ಯಮ ವಾಯು ಪುರಂದರ ನಾಸತ್ಯ ದಸ್ರುರು. ಯಜ್ಞನಾಮಕ ಹರಿಯ ಅನಂತರದಲ್ಲಿ ಇಂದ್ರಪದವಿಯನ್ನಾಳಿದ ಹಿಂದಿನ ಮತ್ತು ಈಗಿನ ಇಂದ್ರರು. ಇದರ ಪತ್ನಿಯರು ಒಂದೇ ಶರೀರಉಳ್ಳವರಾಗಿ ನಿನ್ನ ಮಗಳಾಗಿ ಜನಿಸಿದ್ದಾರೆ. ಅದರಿಂದ ಇಲ್ಲಿ ವಿರೋಧವಿಲ್ಲ' ಎಂದು ಹೇಳಿದರೂ ದ್ರುಪದ ಮಗಳನ್ನು ಐವರಿಗೆ ಕೊಡಲು ಮನಸ್ಸು ಮಾಡಲಿಲ್ಲ. ಆಗ ವೇದವ್ಯಾಸರು ಅವನಿಗೆ ಹೇಳಿದರು.

ದಿವ್ಯಂ ಹಿ ದರ್ಶನಮಿದಂ ತವ ದತ್ತಮದ್ಯ
ಪಶ್ಯಾಶು ಪಾಂಡುತನಯಾನ್ ದಿವಿ ಸಂಸ್ಥಿತಾಂಸ್ತ್ವಂ |
ಏತಾಂ ಚ ತೇ ದುಹಿತರಂ ಸಹ ತೈಃ ಪೃಥಕ್ಸ್ಥಾಂ
ತಲ್ಲಕ್ಷಣೈಃ ಸಹ ತತಃ ಕುರು ತೇ ಯಥೇಷ್ಟಂ ॥156॥

`ನಿನಗೆ ಈಗ ದಿವ್ಯದೃಷ್ಟಿ ನೀಡಿದ್ದೇನೆ. ದೇವಲೋಕದಲ್ಲಿರುವ ಪಾಂಡವರನ್ನೂ ಜೊತೆಗೆ, ಅವರೊಡನೆ ಬೇರೆ ಬೇರೆಯಾಗಿ ಆಯಾ ಲಕ್ಷಣಗಳಿಂದ ಒಪ್ಪುತ್ತ ನಿಂತಿರುವ ನಿನ್ನ ಮಗಳನ್ನೂ ಬೇಗನೆ ನೋಡು. ಬಳಿಕ ನಿನ್ನ ಇಷ್ಟದಂತೆ ಮಾಡು'.

ಇತ್ಯುಕ್ತವಾಕ್ಯಮನು ತಾನ್ ಸ ದದರ್ಶ ರಾಜಾ
ಕೃಷ್ಣಪ್ರಸಾದಬಲತೋ ದಿವಿ ತಾದೃಶಾಂಶ್ಚ |
ಏತಾನ್ ನಿಶಾಮ್ಯ ಚರಣೌ ಜಗದೀಶಿತುಶ್ಚ
ಭೀತೋ ಜಗಾಮ ಶರಣಂ ತದನಾದರೇಣ ॥157॥

ವೇದವ್ಯಾಸರು ಹೀಗೆ ಹೇಳಿದೊಡನೆ ಅವರ ಅನುಗ್ರಹ ಬಲದಿಂದ ರಾಜಾ ದ್ರುಪದ ದೇವಲೋಕದಲ್ಲಿ ಪಾಂಡವರು ಯಮ ವಾಯು ಪುರಂದರಾದಿ ಲಕ್ಷಣಯುಕ್ತರಾಗಿ ನಿಂತಿದ್ದುದನ್ನು ಮತ್ತು ದ್ರೌಪದಿ ಅವರ ಬಳಿಯಲ್ಲಿ ಶ್ಯಾಮಲಾ ಭಾರತ್ಯಾದಿ ಲಕ್ಷಣಯುಕ್ತಳಾಗಿ ಐದು ರೂಪಗಳಿಂದ ನಿಂತಿದ್ದುದನ್ನೂ ನೋಡಿ `ಜಗದೊಡೆಯನ ಪಾದಗಳನ್ನು ನಾನು ಅನಾದರಿಸಿದೆನಲ್ಲ!' ಎಂದು ಭೀತನಾಗಿ ಶರಣು ಹೊಂದಿದ.

* * * *

ನೂರ ತೊಂಭತ್ತೈದನೆಯ ಅಧ್ಯಾಯ

(ವ್ಯಾಸರನ್ನು ಕುರಿತು ದ್ರುಪದನ ಪ್ರಶ್ನೆ, ಧರ್ಮರಾಜ ಮತ್ತು ಕುಂತಿಯ ವಚನಗಳು, ವ್ಯಾಸರಿಂದ ದ್ರುಪದನಿಗೆ ಏಕಾಂತದಲ್ಲಿ ಉಪದೇಶ)

ವೈಶಂಪಾಯನಃ

ತತಸ್ತೇ ಪಾಂಡವಾಃ ಸರ್ವೇ ಪಾಂಚಾಲ್ಯಶ್ಚ ಮಹಾರಥಃ |
ಪ್ರತ್ಯುತ್ಥಾಯ ಮಹಾತ್ಮಾನಂ ಕೃಷ್ಣಂ ದೃಷ್ಟ್ವಾSಭ್ಯಪೂಜಯನ್ ॥1॥
ಆಸನೇ ಕಾಂಚನೇ ಶುಭ್ರೇ ನಿಷಸಾದ ಮಹಾಮುನಿಃ |
ಅಭಿನಂದ್ಯ ಚ ತಾನ್ ಸರ್ವಾನ್ ಪೃಷ್ಟ್ವಾ ಚ ಕುಶಲಂ ಹಿ ಸಃ ॥2॥

ಆಗ ಮಹಾರಥನಾದ ದ್ರುಪದನು ಮತ್ತು ಪಾಂಡವರೆಲ್ಲರೂ ಮಹಾನುಭಾವರಾದ ವ್ಯಾಸರನ್ನು ನೋಡಿ ಆಸನಗಳಿಂದ ಎದ್ದು ಅವರನ್ನು ಸತ್ಕರಿಸಿದರು. ಮಹಾಮುನಿಗಳಾದ ವ್ಯಾಸರು ಅವರನೆಲ್ಲಾ ಅಭಿನಂದಿಸಿ, ಕ್ಷೇಮವನ್ನು ವಿಚಾರಿಸಿ ಶುಭ್ರವಾದ ಕಾಂಚನಮಯವಾದ ಆಸನದಲ್ಲಿ ಕುಳಿತುಕೊಂಡರು.

ಅನುಜ್ಞಾತಾಸ್ತು ತೇ ಸರ್ವೇ ಕೃಷ್ಣೇನಾಮಿತತೇಜಸಾ |
ಆಸನೇಷು ಯಥಾರ್ಹೇಷು ನಿಷೇದುರ್ದ್ವಿಪದಾಂ ವರಾಃ ॥3॥

ಅಮಿತತೇಜಸ್ವಿಗಳಾದ ವ್ಯಾಸರಿಂದ ಅನುಮತಿಯನ್ನು ಪಡೆದ ಆ ನರಶ್ರೇಷ್ಠರು ಯಥಾಯೋಗ್ಯವಾಗಿ ತಮ್ಮತಮ್ಮ ಆಸನಗಳಲ್ಲಿ ಕುಳಿತು ಕೊಂಡರು.

ತತೋ ಮುಹೂರ್ತಂ ಮಧುರಾಂ ವಾಚಮುಚ್ಚಾರ್ಯ ಪಾರ್ಷತಃ |
ಪಪ್ರಚ್ಛ ತಂ ಮಹಾತ್ಮಾನಂ ದ್ರೌಪದ್ಯರ್ಥಂ ಮಹಾಮುನಿಮ್ ॥4॥
ಕಥಮೇಕಾ ಬಹೂನಾಂ ಸ್ಯಾನ್ನ ಚ ಸ್ಯಾದ್ ಧರ್ಮಸಂಕರಃ |
ಏತನ್ನೋ ಭಗವಾನ್ ಸರ್ವಂ ಪ್ರಬ್ರುವೀತು ಯಥಾತಥಮ್ ॥5॥

ಅನಂತರ, ದ್ರುಪದನು ಒಂದು ಮಹೂರ್ತದ ಕಾಲ ಮಧುರವಾದ ಬೇರೆಯ ಮಾತುಗಳನ್ನಾಡಿ ಮಹಾನುಭಾವರಾದ ಆ ಮಹಾಮುನಿಗಳನ್ನು ದ್ರೌಪದಿಯ ವಿಷಯದಲ್ಲಿ ಪ್ರಶ್ನೆ ಮಾಡಿದನು. ಪೂಜ್ಯರೇ, ಒಬ್ಬಳು ಅನೇಕರಿಗೆ ಪತ್ನಿಯಾದರೆ ಹೇಗೆ ಧರ್ಮಸಂಕರವಾಗುವುದಿಲ್ಲ? ಈ ವಿಷಯವನ್ನು ತಾವು ಯಥಾರ್ಥವಾಗಿ ತಿಳಿಸಬೇಕು.

ವ್ಯಾಸಃ

ಅಸ್ಮಿನ್ ಧರ್ಮೇ ವಿಪುಲಬ್ಧೇ ಲೋಕವೇದವಿರೋಧಿತೇ |
ಯಸ್ಯ ಯಸ್ಯ ಮತಂ ಯದ್ಯಚ್ಛ್ರೋತುಮಿಚ್ಛಾಮಿ ತಸ್ಯ ತತ್ ॥6॥

ಲೋಕದ ಮತ್ತು ವೇದದ ವಿರೋಧವುಳ್ಳ ಈ ಸಂಶಯಗ್ರಸ್ತವಾದ ಧರ್ಮದಲ್ಲಿ ಯಾರುಯಾರಿಗೆ ಏನೇನು ಅಭಿಪ್ರಾಯಗಳಿವೆಯೆಂದು ಕೇಳಲು ಬಯಸುತ್ತೇನೆ.

ದ್ರುಪದಃ

ಅಧರ್ಮೋSಯಂ ಮಮ ಮತೋ ವಿರುದ್ಧೋ ಲೋಕವೇದಯೋಃ|
ನ ಹ್ಯೇಕಾ ವಿದ್ಯತೇ ಪತ್ನೀ ಬಹೂನಾಂ ದ್ವಿಜಸತ್ತಮ ॥7॥

ಲೋಕವೇದವಿರುದ್ಧವಾದ ಇದು ಅಧರ್ಮವೆಂದು ನನ್ನ ಅಭಿಪ್ರಾಯ. ಬ್ರಾಹ್ಮಣಶ್ರೇಷ್ಠರೇ, ಅನೇಕರಿಗೆ ಒಬ್ಬಳೇ ಪತ್ನಿಯಿರುವುದಿಲ್ಲ.

ನ ಚಾಪ್ಯಾಚರಿತಃ ಪೂರ್ವೈರಯಂ ಧರ್ಮೋ ಮಹಾತ್ಮಭಿಃ |
ನ ಚ ಧರ್ಮೋಽಪ್ಯನೇಕಸ್ಥಶ್ಚರಿತವ್ಯಃ ಸನಾತನಃ ॥8॥
ಈ ಮಾರ್ಗವು ಪೂರ್ವದ ಮಹಾನುಭಾವರಿಂದ ಧರ್ಮವೆಂದು ಆಚರಿಸಲ್ಪಟ್ಟಿಲ್ಲ. ಎಲ್ಲರೂ ಆಚರಿಸಬೇಕಾದ ಸನಾತನವಾದ ಧರ್ಮವು ಒಬ್ಬೊಬ್ಬರಿಗೆ ಒಂದೊಂದು ರೀತಿ ಇರುವುದಿಲ್ಲ.
ಅತೋ ನಾಹಂ ಕರೋಮ್ಯೇನಂ ವ್ಯವಸಾಯಂ ಸುತಾಂ ಪ್ರತಿ |
ಧರ್ಮಸಂದೇಹಸಂದಿಗ್ಧಂ ಪ್ರತಿಭಾತೀಹ ಮಾಮಿದಮ್ ॥9॥
ಆದ್ದರಿಂದ ನಾನು ನನ್ನ ಮಗಳ ವಿಷಯದಲ್ಲಿ ಅನೇಕರಿಗೆ ಕೊಡುವ ನಿರ್ಧಾರವನ್ನು ಮಾಡುವುದಿಲ್ಲ. ಈ ಧರ್ಮವು ಸಂದೇಹಗ್ರಸ್ತವಾದುದೆಂದು ನನಗೆ ತೋರುತ್ತದೆ.
ಧೃಷ್ಟದ್ಯುಮ್ನಃ
ಯವೀಯಸಃ ಕಥಂ ಭಾರ್ಯಾಂ ಜ್ಯೇಷ್ಠೋ ಭ್ರಾತಾ ದ್ವಿಜರ್ಷಭ |
ಬ್ರಹ್ಮನ್ ಸಮಭಿವರ್ತೇತ ಸದ್ವೃತ್ತಃ ಸಂಸ್ತಪೋಧನ ॥10॥
ದ್ವಿಜಶ್ರೇಷ್ಠನೇ, ತಮ್ಮನ ಭಾರ್ಯೆಯನ್ನು ಸದ್ವೃತ್ತನಾದ ಅಣ್ಣನು ಹೇಗೆ ಸ್ವೀಕರಿಸಬಹುದು ?
ನ ತು ಧರ್ಮಸ್ಯ ಸೂಕ್ಷ್ಮತ್ವಾದ್ ಗತಿಂ ವೇದ್ಮಿ ಕಥಂಚನ |
ಅಧರ್ಮೋ ಧರ್ಮ ಇತಿ ವಾ ವ್ಯವಸಾಯೋ ನ ಶಕ್ಯತೇ ॥11॥
ಕರ್ತುಮಸ್ಮದ್ವಿಧೈರ್ಬ್ರಹ್ಮನ್ನತೋ ನ ವ್ಯವಸಾಮ್ಯಹಮ್ |
ಪಂಚಾನಾಂ ಮಹಿಷೀ ಕೃಷ್ಣಾ ಭವತ್ವಿತಿ ಕಥಂಚನ ॥12॥
ಧರ್ಮದ ಗತಿಯು ಸೂಕ್ಷ್ಮವಾದುದರಿಂದ ನನಗೆ ಏನೂ ತಿಳಿಯುತ್ತಿಲ್ಲ. ಇದು ಅಧರ್ಮವೆಂದಾಗಲೀ ಅಥವಾ ಧರ್ಮವೆಂದಾಗಲೀ ನಮ್ಮಂತಹವರು ನಿರ್ಧರಿಸಲು ಸಾಧ್ಯವಿಲ್ಲ. ಆದ್ದರಿಂದ ದ್ರೌಪದಿಯು ಐದುಜನರಿಗೂ ರಾಣಿಯಾಗಲಿ ಎಂಬ ನಿರ್ಧಾರವನ್ನು ನಾನು ತೆಗೆದುಕೊಳ್ಳುವುದಿಲ್ಲ.
ಯುಧಿಷ್ಠಿರಃ
ನ ಮೇ ವಾಗನೃತಂ ಪ್ರಾಹ ನಾಧರ್ಮೇ ಧೀಯತೇ ಮತಿಃ |
ವರ್ತತೇ ಚ ಮನೋ ಮೇಽತ್ರ ನೈಷೋಽಧರ್ಮಃ ಕಥಂಚನ ॥13॥
ನಾನು ಎಂದೂ ಸುಳ್ಳು ಮಾತನಾಡಿಲ್ಲ. ನನ್ನ ಮನಸ್ಸು ಎಂದೂ ಅಧರ್ಮವನ್ನು ಯೋಚಿಸುವುದಿಲ್ಲ. ನನ್ನ ಮನಸ್ಸಿಗೆ ಹೀಗೆಯೇ ಮಾಡಬೇಕೆಂದು ತೋರುತ್ತದೆ. ಆದ್ದರಿಂದ ಇದು ಅಧರ್ಮವಲ್ಲ.
ಶ್ರೂಯತೇ ಹಿ ಪುರಾಣೇಷು ಜಟಿಲೋ ನಾಮ ಗೌತಮಃ |
ತಸ್ಯ ಪುತ್ರೀ ಮಹಾಪ್ರಾಜ್ಞೀ ಗೌತಮಸ್ಯ ಯಶಸ್ವಿನೀ |
ಋಷೀನಧ್ಯಾಸಿತವತೀ ಸಪ್ತ ಧರ್ಮಭೃತಾಂ ವರಾನ್ ॥14॥
ಪುರಾಣಗಳಲ್ಲಿ ಗೌತಮಗೋತ್ರದ ಜಟಿಲ ಎಂಬ ಬ್ರಾಹ್ಮಣನ ಕಥೆಯು ಕೇಳಿಬರುತ್ತದೆ. ಆ ಗೌತಮರ ಮೇಧಾವಿನಿಯೂ, ಯಶಸ್ವಿನಿಯೂ ಆದ ಪುತ್ರಿಯು ಧರ್ಮಭೃತರಲ್ಲಿ ಶ್ರೇಷ್ಠರಾದ ಏಳು ಋಷಿಗಳನ್ನು ವಿವಾಹವಾದಳೆಂದು ನಾವು ಕೇಳುತ್ತೇವೆ.
ತಥೈವ ಮುನಿಜಾ ವಾರ್ಕ್ಷೀ ತಪೋಭಿರ್ಭಾವಿತಾನ್ ಮುನೀನ್ |
ದಶಾಭಜದೃಷೀನ್ ಭ್ರಾತ್ರೂ ನೇಕನಾಮ್ನಃ ಪ್ರಚೇತಸಃ ॥15॥
ಹಾಗೆಯೇ ಕಂಡು ಋಷಿಯ ಮಗಳಾದ ವಾರ್ಕ್ಷಿಯು ತಪಸ್ಸಿನಿಂದ ಪರಿಶುದ್ಧಾಂತಃಕರಣರಾದ ಒಂದೇ ನಾಮವನ್ನು ಧರಿಸಿದ ಅಣ್ಣ-ತಮ್ಮಂದಿರಾದ ಹತ್ತುಜನ ಪ್ರಚೇತಸರನ್ನು ವಿವಾಹವಾದದ್ದನ್ನು ಕೇಳುತ್ತೇವೆ.
ಗುರೋಶ್ಚ ವಚನಂ ಪ್ರಾಹುರ್ಧರ್ಮ್ಯಂ ಧರ್ಮಭೃತಾಂ ವರಾಃ |
ಗುರೂಣಾಂ ಚೈವ ಸರ್ವೇಷಾಂ ಜನಿತ್ರೀ ಪರಮೋ ಗುರುಃ ॥16॥
ಸಾ ಚಾಪ್ಯುಕ್ತವತೀ ಚಾಸ್ಮಾನ್ ಭೈಕ್ಷವದ್ ಭುಜ್ಯತಾಮಿತಿ |
ತಸ್ಮಾದೇತದಹಂ ಮನ್ಯೇ ಪರಂ ಧರ್ಮಂ ದ್ವಿಜೋತ್ತಮ ॥17॥
ಧರ್ಮವನ್ನು ಧರಿಸಿದವರಲ್ಲಿ ಶ್ರೇಷ್ಠರಾದವರು ಗುರುಗಳ ಮಾತನ್ನು ಧರ್ಮವೆಂದು ಹೇಳುತ್ತಾರೆ. ಎಲ್ಲಾ ಗುರುಗಳಿಗಿಂತಲೂ ಶ್ರೇಷ್ಠವಾದ ಗುರುವೆಂದರೆ ತಾಯಿಯೇ. ಅವಳೂ ಸಹ ಭೈಕ್ಷದಂತೆ ಎಲ್ಲರೂ ಸ್ವೀಕರಿಸಿ ಎಂದು ಹೇಳಿದ್ದಾಳೆ. ಬ್ರಾಹ್ಮಣೋತ್ತಮರೇ, ಆದ್ದರಿಂದ ನಾನು ಇದನ್ನು ಶ್ರೇಷ್ಠವಾದ ಧರ್ಮವೆಂದು ಭಾವಿಸುತ್ತೇನೆ.
ಕುಂತೀ
ಏವಮೇತದ್ ಯಥಾಽಽಹಾಹಂ ಧರ್ಮಚಾರೀ ಯುಧಿಷ್ಠಿರಃ |
ಭುಜ್ಯತಾಂ ಭ್ರಾತೃಭಿಃ ಸಾರ್ಧಮಿತ್ಯರ್ಜುನಮಚೋದಯಮ್ |
ಅನೃತಾನ್ಮೇ ಭಯಂ ತೀವ್ರಂ ಮುಚ್ಯೇಽಹಮನೃತಾತ್ ಕಥಮ್ ॥18॥
ಧರ್ಮಚಾರಿಯಾದ ಯುಧಿಷ್ಠಿರನು ನಾನು ಹೇಳಿದಂತೆಯೇ ಮಾತನಾಡಿದ್ದಾನೆ. ನಾನು ಅರ್ಜುನನನ್ನು ಕುರಿತು ಎಲ್ಲಾ ಸಹೋದರರೂ ಜೊತೆಯಲ್ಲಿ ಭುಂಜಿಸಿ ಎಂದು ಹೇಳಿದೆ. ನಾನು ಅನೃತವಚನದ ಕಾರಣದಿಂದ ತೀವ್ರವಾಗಿ ಭಯಪಡುತ್ತಿದ್ದೇನೆ. ಈ ಅನೃತದಿಂದ ನಾನು ಪಾರಾಗುವ ಬಗೆ ಹೇಗೆ?
ವ್ಯಾಸಃ
ಅನೃತಾನ್ಮೋಕ್ಷ್ಯಸೇ ಭದ್ರೇ ಧರ್ಮಶ್ಚೈಷ ಸನಾತನಃ |
ನನು ವಕ್ಷ್ಯಾಮಿ ಸರ್ವೇಷಾಂ ಪಾಂಚಾಲ ಶೃಣು ಮೇ ವಚಃ ॥19॥

ಭದ್ರೇ, ನೀನು ಅನೃತದಿಂದ ಮುಕ್ತಳಾಗುವಿ. ಇದು ಸನಾತನವಾದ ಧರ್ಮ. ನಾನು ಎಲ್ಲರನ್ನೂ ಕುರಿತು ಹೇಳುತ್ತಿದ್ದೇನೆ.
ದ್ರುಪದರಾಜನೇ ನನ್ನ ಮಾತನ್ನು ಕೇಳು.
ಯಥಾಽಯಂ ವಿಹಿತೋ ಧರ್ಮೋ ಯತಶ್ಚಾಯಂ ಸನಾತನಃ |
ಯಥಾ ಚಾಪ್ಯಾಹ ಕೌಂತೇಯಸ್ತಥಾ ಧರ್ಮೋ ನ ಸಂಶಯಃ ||20||
ಇದು ಹೇಗೆ ಧರ್ಮ, ಇದು ಯಾವ ರೀತಿಯಲ್ಲಿ ಸನಾತನ ಎಂದು ಹೇಳುತ್ತೇನೆ. ಧರ್ಮರಾಜನು ಹೇಳಿದಂತೆ ಇದು ಧರ್ಮವೇ ಸರಿ, ಇದರಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ತತ ಉತ್ಥಾಯ ಭಗವಾನ್ ಕೃಷ್ಣದ್ವೈಪಾಯನಃ ಪ್ರಭುಃ |
ಕರೇ ಗೃಹೀತ್ವಾ ರಾಜಾನಂ ರಾಜವೇಶ್ಮ ಸಮಾವಿಶತ್ ||21||
ಅನಂತರ, ಪೂಜ್ಯರಾದ, ಪ್ರಭುಗಳಾದ ದ್ವೈಪಾಯನರು ದ್ರುಪದರಾಜನನ್ನು ಕೈಯಲ್ಲಿ ಹಿಡಿದುಕೊಂಡು ಅರಮನೆಯ ಒಳಭಾಗಕ್ಕೆ ಪ್ರವೇಶಿಸಿದರು.
ಪಾಂಡವಾಸ್ತ್ವಥ ಕುಂತೀ ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ನಾನಾಕಥಾಭಿಸ್ತೇ ಸರ್ವೇ ಪ್ರತೀಕ್ಷಂತೇ ಸ್ಮ ತಾವುಭೌ ||22||
ಹೊರಗಡೆಯಲ್ಲಿ ಪಾಂಡವರೂ, ಕುಂತಿಯೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಅನೇಕ ಮಾತುಗಳನ್ನು ಆಡುತ್ತಾ ಅವರಿಬ್ಬರನ್ನು ನಿರೀಕ್ಷಿಸುತ್ತಾ ಕುಳಿತರು.
ತತೋ ದ್ವೈಪಾಯನಸ್ತಸ್ಮೈ ನರೇಂದ್ರಾಯ ವಿಶಾಂಪತೇ |
ಆಚಖ್ಯೌ ತದ್ಯಥಾ ಧರ್ಮೋ ಬಹೂನಾಮೇಕಪತ್ನಿತಾ ||23||
ರಾಜನೇ, ಅನಂತರ ದ್ವೈಪಾಯನರು ದ್ರುಪದನಿಗೆ ಅನೇಕರಿಗೆ ಒಬ್ಬಳೇ ಪತ್ನೀತ್ವವು ಹೇಗೆ ಧರ್ಮವಾಗುತ್ತದೆ ಎಂದು ವಿವರಿಸಿದರು.
ಯಥಾ ದೇವಾ ದದುಶ್ಚೈವ ರಾಜಪುತ್ರ್ಯಾಃ ಪುರಾ ವರಮ್ |
ಧರ್ಮಾದ್ಯಾಸ್ತಪಸಾ ತುಷ್ಟಾಃ ಪಂಚಪತ್ನೀತ್ವಮೀಶ್ವರಾಃ ||24||
ಹಿಂದೆ ರಾಜಪುತ್ರಿಯ ತಪಸ್ಸಿನಿಂದ ತುಷ್ಟರಾದ ಧರ್ಮಾದಿ ದೇವತೆಗಳು ಅವಳಿಗೆ ಪಂಚಪತ್ನೀತ್ವವನ್ನು ಹೇಗೆ ಕೊಟ್ಟರು ಎಂಬುದನ್ನು ವಿವರಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ ಪಂಚನವತ್ಯಧಿಕಶತತಮೋಽಧ್ಯಾಯಃ ||
|| ಇತಿ ವೈವಾಹಿಕಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ನೂರತೊಂಭತ್ತೈದನೆಯ ಅಧ್ಯಾಯ ಮುಗಿಯಿತು.
*****
ನೂರ ತೊಂಭತ್ತಾರನೆಯ ಅಧ್ಯಾಯ
(ವ್ಯಾಸರಿಂದ ಪಂಚಕನ್ಯೋಪಾಖ್ಯಾನ ಪ್ರಾರಂಭ. ಅದರಲ್ಲಿ ನಾಳಾಯನಿಯ ಜನ್ಮ. ಅನಂತರ ಪತಿಸೇವೆಯಿಂದ ನಾಳಾಯನಿಯ ವರಸ್ವೀಕಾರ. ಅನಂತರ ಇಂದ್ರಸೇನೆಯ ಜನ್ಮ. ರುದ್ರದೇವರಿಂದ ಪಂಚಪತ್ನೀತ್ವ ವರಸ್ವೀಕಾರ.)
ವ್ಯಾಸಃ
ಮಾ ಭೂದ್ ರಾಜಂಸ್ತವ ತಾಪೋ ಮನಸ್ಥಃ
ಪಂಚಾನಾಂ ಭಾರ್ಯಾ ದುಹಿತಾ ಮಮೇತಿ |
ಮಾತುರೇಷಾ ಪಾರ್ಥಿವ ಪ್ರಾರ್ಥಿತಾ ಸ್ಯಾತ್
ಪಂಚಾನಾಂ ಭಾರ್ಯಾ ದುಹಿತಾ ಮಮೇತಿ ||1||
ರಾಜನೇ, ನನ್ನ ಮಗಳು ಐವರ ಪತ್ನಿಯೆಂದು ಮನಸ್ಸಿನಲ್ಲಿ ಸಂತಾಪ ಪಡಬೇಡ. ರಾಜನೇ, ಈ ದ್ರೌಪದಿಯ ತಾಯಿಯು, ನನ್ನ ಮಗಳು ಐವರ ಪತ್ನಿಯಾಗಬೇಕೆಂದು ಪ್ರಾರ್ಥಿಸಿದ್ದಳು.
ಯಾಜೋಪಯಾಜೌ ಧರ್ಮಘೃಣೀ ತಪೋಭ್ಯಾಂ
ತೌ ಚಕ್ರತುಃ ಪಂಚಪತಿತ್ವಮಸ್ಯಾಃ |
ಸಾ ಧರ್ಮತಃ ಪಾಂಡುಸುತೈರವಾಪ್ತಾ
ಭಾರ್ಯಾ ಕೃಷ್ಣಾ ಮೋದತಾಂ ವೈ ಕುಲಂ ತೇ ||2||
ಧರ್ಮಿಷ್ಠರು ಮತ್ತು ಕೃಪಾಳುಗಳಾದ ಯಾಜೋಪಯಾಜರು ತಮ್ಮ ತಪಸ್ಸಿನ ಬಲದಿಂದ ಇವಳಿಗೆ ಪಂಚಪತಿತ್ವವನ್ನು ತಂದುಕೊಟ್ಟರು. ಆ ಕೃಷ್ಣೆಯನ್ನು ಪಾಂಡವರು ಧರ್ಮದಿಂದಲೇ ಪಡೆದಿದ್ದಾರೆ. ನಿನ್ನ ಕುಲವು ಸಂತೋಷ ಪಡಲಿ.
ಲೋಕೇ ನಾನ್ಯೋ ನಾಥವಾಂಸ್ತ್ವದ್ವಿಶಿಷ್ಟಃ
ಸರ್ವಾರೀಣಾಮಪ್ರಧೃಷ್ಯೋಽಸಿ ರಾಜನ್ |
ಭೂಯಸ್ತು ಮೇ ಶೃಣ್ವಿದಂ ತ್ವಂ ವಿಶೋಕೋ
ಯಥಾಗಮಂ ಪಂಚಪತಿತ್ವಮಸ್ಯಾಃ ||3||
ಲೋಕದಲ್ಲಿ ನಿನಗಿಂತ ಶ್ರೇಷ್ಠನಾದ ಇನ್ನೊಬ್ಬ ನಾಥನಿಲ್ಲ. ರಾಜನೇ, ನೀನು ಯಾವ ಶತ್ರುಗಳೂ ಸೋಲಿಸಲು ಅಸಾಧ್ಯನಾಗಿದ್ದೀಯೆ. ಪುನಃ ಶೋಕವನ್ನು ಬಿಟ್ಟು ಇವಳಿಗೆ ಪಂಚಪತಿತ್ವವು ಹೇಗೆ ಉಂಟಾಯಿತು ಎಂಬ ವಿಷಯದಲ್ಲಿ ನಾನು ಹೇಳುವುದನ್ನು ಕೇಳು.
ಏಷಾ ನಾಳಾಯನೀ ಪೂರ್ವಂ ಮೌದ್ಗಲ್ಯಂ ಸ್ಥವಿರಂ ಪತಿಮ್ |
ಆರಾಧಯಾಮಾಸ ತದಾ ಕುಷ್ಠಿನಂ ತಮನಿಂದಿತಾ ||4||

ನಾಳಾಯನೀ ಎಂಬ ಹೆಸರಿನ ಇವಳು ಹಿಂದೆ ವೃದ್ಧರಾದ ಮೌದ್ಗಲ್ಯನನ್ನು ಪತಿಯನ್ನಾಗಿ ಪಡೆದಳು. ಅನಿಂದಿತಳಾದ ಇವಳು ಕುಷ್ಠರೋಗಗ್ರಸ್ತನಾದ ಅವನನ್ನು ಆರಾಧಿಸಿದಳು. (ಆಚಾರ್ಯರ ವಚನದಂತೆ ಮೌದ್ಗಲ್ಯ ಎಂಬ ಶಬ್ದಕ್ಕೆ ಮುದ್ಗಲ ಎಂದೇ ಅರ್ಥಮಾಡಬೇಕೆಂದು ತೋರುತ್ತದೆ.)
ತ್ವಗಸ್ಥಿಭೂತಂ ಕಟುಕಂ ಲೋಲಮೀರ್ಷ್ಯುಂ ಸುಕೋಪನಮ್ |
ಸುಗಂಧೇತರಗಂಧಾಢ್ಯಂ ವಲೀಪಲಿತಧಾರಿಣಮ್ ॥5॥
ಸ್ಥವಿರಂ ವಿಕೃತಾಕಾರಂ ಶೀರ್ಯಮಾಣನಖತ್ವಚಮ್ |
ಉಚ್ಛಿಷ್ಟಮುಪಭುಂಜಾನಾ ಪರ್ಯುಪಾಸ್ತೇ ಮಹಾವ್ರತಾ ॥6॥
ಚರ್ಮ ಮತ್ತು ಅಸ್ಥಿಗಳನ್ನು ಮಾತ್ರ ಶರೀರವಾಗಿವುಳ್ಳ, ಚುಚ್ಚಿ ಮಾತನಾಡುವ ಸ್ವಭಾವವುಳ್ಳ, ವಿಷಯಾಸಕ್ತನೂ, ಅಸೂಯಾಪರನೂ, ಶೀಘ್ರಕೋಪನನೂ ಆದ, ದುರ್ಗಂಧದಿಂದ ಕೂಡಿದ, ಸುಕ್ಕು ಮತ್ತು ನೆರೆತ ಕೂದಲುಗಳಿಂದ ಕೂಡಿದ, ವಿರೂಪನಾದ, ನಖ ಮತ್ತು ಚರ್ಮಗಳು ಉದುರಿಹೋಗುತ್ತಿದ್ದ, ವೃದ್ಧನಾದ ಅವನನ್ನು ಮಹಾವ್ರತವನ್ನು ಧರಿಸಿದ ಅವಳು ಅವನ ಉಚ್ಛಿಷ್ಟವನ್ನು ಭೋಜನ ಮಾಡುತ್ತಾ ಚೆನ್ನಾಗಿ ಉಪಾಸನೆ ಮಾಡಿದಳು.
ತತಃ ಕದಾಚಿದಂಗುಷ್ಠೋ ಭುಂಜಾನಸ್ಯ ವ್ಯಶೀರ್ಯತ |
ಅನ್ನಾದುದ್ಧೃತ್ಯ ತಚ್ಚಾನ್ನಮುಪಭುಂಕ್ತೇಽವಿಶಂಕಿತಾ ॥7॥
ಅನಂತರ ಒಮ್ಮೆ ಮುದ್ಗಲನು ಭೋಜನ ಮಾಡುವಾಗ ಅವನ ಅಂಗುಷ್ಠವು ಭೋಜನಪಾತ್ರದಲ್ಲಿ ಬಿದ್ದುಹೋಯಿತು. ಅವಳು ಏನೂ ಬೇಸರಿಸದೆ ಅಂಗುಷ್ಠವನ್ನು ತೆಗೆದಿಟ್ಟು ಅದೇ ಅನ್ನವನ್ನು ಭುಂಜಿಸಿದಳು.
ತೇನ ತಸ್ಯಾಃ ಪ್ರಸನ್ನೇನ ಕಾಮವ್ಯಾಹಾರಿಣಾ ತದಾ |
ವರಂ ವೃಣೀಷ್ವೇತ್ಯಸಕೃದುಕ್ತಾ ವವ್ರೇ ವರಂ ತದಾ ॥8॥
ಅದರಿಂದ ಪ್ರಸನ್ನನಾದ ಮುದ್ಗಲನು ಅವಳ ಆಸೆಯನ್ನು ಪೂರೈಸುವ ಮಾತುಗಳನ್ನಾಡುತ್ತಾ ಬೇಕಾದ ವರವನ್ನು ಕೇಳು ಎಂದು ಅನೇಕ ಬಾರಿ ಹೇಳಿದಾಗ ಅವಳು ಅವರನ್ನು ಬೇಡಿದಳು.
ಮೌದ್ಗಲ್ಯಃ
ನಾಸ್ಮಿ ವೃದ್ಧೋ ನ ಕಟುಕೋ ನೇರ್ಷ್ಯುರ್ನೈವಾತಿಕೋಪನಃ |
ನ ಚ ದುರ್ಗಂಧವದನೋ ನ ಕೃಶೋ ನ ಚ ಲೋಲುಪಃ ॥9॥
ನಾನು ಮುದುಕನಲ್ಲ, ಕಟುಕನೂ ಅಲ್ಲ, ಅಸೂಯಾಪರನೂ ಅಲ್ಲ, ಕೋಪಶೀಲನೂ ಅಲ್ಲ, ದುರ್ಗಂಧಯುಕ್ತನಾಗಿಲ್ಲ, ಕೃಶನಲ್ಲ, ಇಂದ್ರಿಯಲೋಲುಪನೂ ಅಲ್ಲ.
ಕಥಂ ತ್ವಾಂ ರಮಯಾಮೀಹ ಕಥಂ ತ್ವಾಂ ವಾಸಯಾಮ್ಯಹಮ್ |
ವದ ಕಲ್ಯಾಣಿ ಭದ್ರಂ ತೇ ಯಥಾ ತ್ವಂ ಮನಸೇಚ್ಛಸಿ ॥10॥
ನಿನ್ನನ್ನು ಎಂತಹ ಮನೆಯಲ್ಲಿ ಇರುವಂತೆ ಮಾಡಬೇಕು, ಹೇಗೆ ನಿನ್ನನ್ನು ಸಂತೋಷ ಪಡಿಸಬೇಕು ಎಂದು ಹೇಳು. ಕಲ್ಯಾಣಿಯೇ, ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನ ಆಸೆಯಿದ್ದಂತೆ ನನಗೆ ಹೇಳು.
ವ್ಯಾಸಃ
ತದಾ ಸಾಽಕ್ಲಿಷ್ಟಕರ್ಮಾಣಂ ವರದಂ ಸರ್ವಕಾಮದಮ್ |
ಭರ್ತಾರಮನವದ್ಯಾಂಗೀ ಪ್ರಸನ್ನಂ ಪ್ರತ್ಯುವಾಚ ಹ ॥11॥
ಆಗ ಆ ಅನವದ್ಯಾಂಗಿಯು ಎಲ್ಲಾ ಕಾಮಗಳನ್ನು ಕೊಡುವ ಶಕ್ತಿಯನ್ನು ಹೊಂದಿದ ವರವನ್ನು ಕೊಡುವಂತಹ, ಎಲ್ಲ ಕಾರ್ಯಗಳನ್ನೂ ಅನಾಯಾಸವಾಗಿ ಮಾಡುವಂತಹ, ತನ್ನ ಮೇಲೆ ಪ್ರಸನ್ನನಾದ ತನ್ನ ಪತಿಯನ್ನು ಕುರಿತು ಮಾತನಾಡಿದಳು.
ನಾಳಾಯನೀ
ಪಂಚಧಾ ಮಾಂ ವಿಭಕ್ತಾತ್ಮಾ ಭಗವಂಲ್ಲೋಕವಿಶ್ರುತ |
ರಮಯ ತ್ವಮಚಿಂತ್ಯಾತ್ಮನ್ ಪುನಶ್ಚೈಕತ್ವಮಾಸ್ಥಿತಃ ॥12॥
ಪೂಜ್ಯನೇ, ಲೋಕಪ್ರಖ್ಯಾತನೇ, ಅಚಿಂತ್ಯಶಕ್ತಿಯುಳ್ಳವನೇ, ನೀನು ಐದು ದೇಹಗಳನ್ನು ತೆಗೆದುಕೊಂಡು ನನ್ನನ್ನು ರಮಿಸಿ ಪುನಃ ಒಂದೇ ದೇಹವನ್ನು ಸ್ವೀಕರಿಸಿ ನನ್ನನ್ನು ರಮಿಸಬೇಕು.
ವ್ಯಾಸಃ
ತಾಂ ತಥೇತ್ಯಬ್ರವೀದ್ ಧೀಮಾನ್ ಬ್ರಹ್ಮರ್ಷಿರ್ವೈ ಮಹಾತಪಾಃ |
ಸ ಪಂಚಧಾ ತು ಭೂತಾಂ ಚ ರಮಯಾಮಾಸ ಸರ್ವಶಃ ॥13॥
ನಾಳಾಯನೀಂ ಸುಕೇಶಾಂತಾಂ ಮೌದ್ಗಲ್ಯಶ್ಚಾರುಹಾಸಿನೀಮ್ |
ಆಶ್ರಮೇಷ್ವಧಿಕಂ ಚಾಪಿ ಪೂಜ್ಯಮಾನೋ ಮಹರ್ಷಿಭಿಃ ॥14॥
ಬ್ರಹ್ಮರ್ಷಿಯೂ, ಮಹಾತಪಸ್ವಿಯೂ ಮತ್ತು ಮೇಧಾವಿಯೂ ಆದ ಆ ಬ್ರಹ್ಮರ್ಷಿಯು ಹಾಗೆಯೇ ಆಗಲಿ ಎಂದು ಹೇಳಿದನು. ಅವನು ಐದು ರೂಪವನ್ನು ತೆಗೆದುಕೊಂಡು ಅವಳನ್ನು ರಮಿಸಿದನು. ಮೌದ್ಗಲ್ಯನು ಸುಂದರ ಮಂದಸ್ಮಿತವುಳ್ಳ, ಸುಂದರವಾದ ಬೈತಲೆಯುಳ್ಳ ನಾಳಾಯನಿಯನ್ನು ರಮಿಸಿದನು.
ವಿಚಚಾರ ಯಥಾಕಾಮಂ ಕಾಮರೂಪವಪುಃ ಪುನಃ ॥15॥
ಅವನು ತನ್ನ ಮನಸ್ಸಿಗೆ ಬಂದಂತೆ ಬೇರೆ ರೂಪಗಳನ್ನು ಧರಿಸಿ ಆಶ್ರಮಗಳಲ್ಲಿ ಮಹರ್ಷಿಗಳಿಂದ ಅಧಿಕವಾಗಿ ಪೂಜಿಸಲ್ಪಟ್ಟು ಸಂಚರಿಸಿದನು.
ಯದಾ ಯಯೌ ದಿವಂ ಚಾಪಿ ತತ್ರ ದೇವರ್ಷಿಭಿಃ ಸಹ |

ಸ್ವಧಾಮೃತಸಮಾಹಾರಃ ಸುರಲೋಕೇ ಚಚಾರ ಹ ॥16॥
ಅವನು ದೇವಲೋಕಕ್ಕೆ ಹೋದಾಗ ದೇವತೆಗಳ ಮತ್ತು ಋಷಿಗಳ ಜೊತೆಯಲ್ಲಿ ಪಿತೃನ್ನವಾದ ಸ್ವಧೆಗೆ ಸಮಾನವಾದ, ದೇವತಾನ್ನವಾದ ಅಮೃತಕ್ಕೆ ಸಮಾನವಾದ, ಆಹಾರವನ್ನು ಸೇವಿಸುತ್ತಾ ದೇವಲೋಕದಲ್ಲಿ ಸಂಚರಿಸಿದನು.
ಪೂಜ್ಯಮಾನಸ್ತಥಾ ಶಚ್ಯಾ ಶಕ್ರಸ್ಯ ಭವನೇಷ್ವಪಿ |
ಮಹೇಂದ್ರಸೇನಯಾ ಸಾರ್ಧಂ ಪರ್ಯಧಾವದ್ ರಿರಂಸಯಾ ॥17॥
ಇಂದ್ರನ ಭವನದಲ್ಲಿ ಶಚಿಯಿಂದ ಪೂಜಿಸಲ್ಪಟ್ಟು ಇಂದ್ರನ ದೊಡ್ಡ ಸೈನ್ಯದ ಜೊತೆಯಲ್ಲಿ ಸಂತೋಷಪಡುವ ಇಚ್ಛೆಯಿಂದ ತಿರುಗಾಡಿದನು.
ಸೂರ್ಯಸ್ಯ ಚ ರಥಂ ದಿವ್ಯಮಾರುಹ್ಯ ಭಗವಾನ್ ಪ್ರಭುಃ |
ಪರ್ಯುಪೇತ್ಯ ಪುನರ್ಮೇರುಂ ಮೇರೌ ವಾಸಮರೋಚಯತ್ ॥
ಪೂಜ್ಯನಾದ ಮತ್ತು ಸಮರ್ಥನಾದ ಅವನು ಸೂರ್ಯನ ದಿವ್ಯವಾದ ರಥವನ್ನು ಏರಿ ಮೇರುಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿ ಪುನಃ ಮೇರುಪರ್ವತದಲ್ಲಿ ವಾಸಮಾಡಲು ಇಚ್ಛಿಸಿದನು.
ಆಕಾಶಗಂಗಾಮಾಪ್ಲುತ್ಯ ತಯಾ ಸಹ ತಪೋನಿಧಿಃ |
ಅಂಶುಜಾಲೇಷು ಚಂದ್ರಸ್ಯ ಉವಾಸ ಚ ಯಥಾಽನಿಲಃ ॥19॥
ತಪೋನಿಧಿಯಾದ ಅವನು ತನ್ನ ಪತ್ನಿಯ ಜೊತೆಯಲ್ಲಿ ಆಕಾಶಗಂಗೆಯಲ್ಲಿ ಸ್ನಾನವನ್ನು ಮಾಡಿ ವಾಯುವಿನಂತೆ ಚಂದ್ರನ ಕಿರಣಸಮೂಹಗಳಲ್ಲಿ ವಾಸಿಸಿದನು.
ಗಿರಿರೂಪಂ ಯಥಾ ದಧ್ರೇ ಸ ಮಹರ್ಷಿಸ್ತದಾ ಪುನಃ |
ತತ್ಪ್ರಭಾವೇನ ಸಾ ತಸ್ಯ ಮಧ್ಯೇ ಜಜ್ಞೇ ಮಹಾನದೀ ॥20॥
ಆ ಮಹರ್ಷಿಯು ಒಂದು ಪರ್ವತದ ರೂಪವನ್ನು ಧರಿಸಿದಾಗ ಮಹರ್ಷಿಯ ಪ್ರಭಾವದಿಂದ ಅವಳು ಪರ್ವತದ ಮಧ್ಯೆ ಒಂದು ಮಹಾನದಿಯಾಗಿ ಹರಿದಳು.
ಯದಾ ಪುಷ್ಪಾಕುಲಃ ಸಾಲಃ ಸಂಜಜ್ಞೇ ಮುನಿಸತ್ತಮಃ |
ಲತಾತ್ವಮಥ ಸಂಪೇದೇ ತಮೇವಾಭ್ಯನುವೇಷ್ಟತೀ ॥21॥
ಆ ಮುನಿಶ್ರೇಷ್ಠನು ಪುಷ್ಪಗಳು ತುಂಬಿದ ಸಾಲವೃಕ್ಷವಾದಾಗ ಅವಳು ಲತೆಯಾಗಿ ಅವನನ್ನೇ ಸುತ್ತಿಕೊಂಡಿರುತ್ತಿದ್ದಳು.
ಪುಪೋಷ ಚ ವಪುರ್ಯದ್ವತ್ ತಸ್ಯ ತಸ್ಯಾನುಗಂ ಪುನಃ |
ಸಾ ಪುಪೋಷ ಸಮಂ ಭರ್ತುಃ ಸ್ಕಂಧೇನಾಪಿ ಚಚಾರ ಹ |
ತತಸ್ತಸ್ಯ ಚ ತಸ್ಯಾಶ್ಚ ತುಲ್ಯಾ ಪ್ರೀತಿರವರ್ಧತ ॥22॥
ಅವನು ಬೇರೆ ಬೇರೆ ಶರೀರಗಳನ್ನು ತೆಗೆದುಕೊಂಡು ಆ ಶರೀರಗಳನ್ನು ಪೋಷಿಸಿದಂತೆ ಅವಳೂ ಸಹ ಅದಕ್ಕೆ ಅನುಗುಣವಾದ ಶರೀರಗಳನ್ನು ತೆಗೆದುಕೊಂಡು ಅದನ್ನು ಪೋಷಿಸಿದಳು. ಅವಳು ಪತಿಯ ಹೆಗಲಿನ ಮೇಲೆ ಕುಳಿತುಕೊಂಡು ಸಂಚರಿಸಿದಳು. ಆಗ ಅವರಿಬ್ಬರಿಗೂ ಪರಸ್ಪರವಾಗಿ ಅತ್ಯಧಿಕವಾದ ಪ್ರೀತಿಯುಂಟಾಯಿತು.
ಯಥಾ ಹ ಭಗವಾಂಸ್ತಸ್ಯಾಃ ಪ್ರಸಾದಾದೃಷಿಸತ್ತಮಃ |
ವಿಜಜ್ಞುಷೀ ಚ ಸಾ ತತ್ರ ದೈವಯೋಗೇನ ಭಾಮಿನೀ ॥23॥
ಆ ಋಷಿಸತ್ತಮನು ಹೇಳಿದಂತೆ ಅವನು ಒಂದೇ ಶರೀರವನ್ನು ತೆಗೆದುಕೊಂಡಾಗ ನಾಳಾಯನಿಯು ಅವನ ಅನುಗ್ರಹದಿಂದ ಮತ್ತು ದೈವಯೋಗದಿಂದ ಒಂದೇ ಶರೀರವನ್ನು ತೆಗೆದುಕೊಂಡು ಜನಿಸಿದಳು.
ಸ ಚ ತಾಂ ತಪಸಾ ದೇವೀಂ ದೈವಯೋಗಾತ್ ತು ವೈ ದ್ವಿಜಃ |
ಏಕಪತ್ನೀಂ ಪುನರ್ಭರ್ತಾ ಸದೈವಾಗ್ರೇ ತಪಸ್ವಿನೀಮ್ ॥24॥
ಆ ಬ್ರಾಹ್ಮಣನು ದೈವಯೋಗದಿಂದ ಮೊದಲಿನಿಂದಲೂ ತಪಸ್ವಿನಿಯಾದ ಅವಳನ್ನು ಪುನಃ ಪತ್ನಿಯಾಗಿ ಪಡೆದನು.
ಅರುಂಧತೀವ ಸೀತೇವ ಬಭೂವಾತಿಪತಿವ್ರತಾ |
ದಮಯಂತ್ಯಾಶ್ಚ ಮಾತುಃ ಸಾ ವಿಶೇಷಮಧಿಕಂ ಯಯೌ |
ಏತತ್ತಥ್ಯಂ ಮಹಾರಾಜ ಮಾ ಭೂದ್ ಬುದ್ಧಿರತೋಽನ್ಯಥಾ ॥25॥
ಅವಳು ಅರುಂಧತಿಯಂತೆ, ಸೀತೆಯಂತೆ ಮಹಾಪತಿವ್ರತೆಯಾಗಿ ತಾಯಿಯಾದ ದಮಯಂತಿಯನ್ನೂ ಮೀರಿಸಿ ಅಧಿಕವಾಗಿ ಶೋಭಿಸಿದಳು. ಮಹಾರಾಜನೇ, ಇದು ಸತ್ಯವಾದ ವಿಷಯ. ನೀನು ಇದನ್ನು ಬೇರೆ ರೀತಿಯಲ್ಲಿ ತಿಳಿಯಬೇಡ.
ಏಷಾ ನಾಳಾಯನೀ ಜಜ್ಞೇ ದೈವಯೋಗೇನ ಕೇನಚಿತ್ |
ರಾಜಂಸ್ತವಾತ್ಮಜಾ ಕೃಷ್ಣಾ ವೇದ್ಯಾಂ ತೇಜಸ್ವಿನೀ ಶುಭಾ ॥26॥
ತಸ್ಮಿಂಸ್ತಸ್ಯಾ ಮನಃ ಸಕ್ತಂ ನ ಶಶಾಕ ಕದಾಚನ |
ತಯಾ ಪ್ರಣಿಹಿತೋ ಹ್ಯಾತ್ಮಾ ತಸ್ಯಾಸ್ತಸ್ಮಿನ್ ದ್ವಿಜೋತ್ತಮೇ ॥27॥
ಅದೇ ನಾಳಾಯನಿಯು ಯಾವುದೋ ದೈವಯೋಗದಿಂದ ನಿನ್ನ ಮಗಳಾಗಿ ವೇದಿಮಧ್ಯದಿಂದ ಮಂಗಳಸ್ವರೂಪಳೂ ತೇಜಸ್ವಿನಿಯೂ ಆಗಿ ಜನಿಸಿದ್ದಾಳೆ.
ಹಿಂದೆ ನಾಳಾಯನಿಯ ಮನಸ್ಸು ಆ ಮುದ್ಗಲನಲ್ಲಿ ಕಾಮದಿಂದ ಆಸಕ್ತವಾಗಿರಲಿಲ್ಲ. ಆಗ ಈ ರೀತಿಯಲ್ಲಿ ಅವಳು ತನ್ನ ದೇಹವನ್ನು ತನ್ನ ವ್ರತದ ಸಲುವಾಗಿ ದ್ವಿಜೋತ್ತಮನಿಗೆ ಅರ್ಪಿಸಿದ್ದಳು. ಆದರೆ ಪತಿಸೇವೆಯ ನಿಮಿತ್ತವಾಗಿ ಅವನ ದುರವಸ್ಥೆಯನ್ನು ಸಹಿಸಿಕೊಂಡು ಅವನನ್ನು ಸೇವಿಸಿದಳು. ಪತಿಯೆಂಬ ಕಾರಣದಿಂದ ಅವನನ್ನು ಸೇವಿಸಿದಳು. ಜುಗುಪ್ಸಿತ ದೇಹದಲ್ಲಿಯೂ ಪಾತಿವ್ರತ್ಯವನ್ನು ಬಿಡದಿದ್ದ ಅವಳು ಈಗಂತೂ ಪಾತಿವ್ರತ್ಯವನ್ನು ಎಂದೂ ತೊರೆಯುವುದಿಲ್ಲ. ಆ ದೇಹದಲ್ಲಿರುವ ತನ್ನ ತನ್ನ ಪತಿಗಳ ಜೊತೆಯಲ್ಲಿ ರಮಣ

ಮಾಡುವಳು.
ದ್ರುಪದಃ
ಬ್ರೂಹಿ ತತ್ಕಾರಣಂ ಯೇನ ಬ್ರಹ್ಮನ್ ಜಾತಾ ತಪಸ್ವಿನೀ |
ಸುತಾ ಮಮಾಧ್ವರೇ ಕೃಷ್ಣಾ ಸರ್ವವೇದವಿದಾಂ ವರ ॥28॥
ಬ್ರಹ್ಮರ್ಷಿಗಳೇ, ಸರ್ವವೇದಜ್ಞರಲ್ಲಿ ಶ್ರೇಷ್ಠರಾದವರೇ, ಆ ತಪಸ್ವಿನಿಯು ನನ್ನ ಯಜ್ಞದಲ್ಲಿ ಮಗಳಾಗಿ ಜನಿಸುವುದಕ್ಕೆ ಏನು ಕಾರಣ ಎಂದು ತಿಳಿಸಿ.
ವ್ಯಾಸಃ
ಶೃಣು ರಾಜನ್ ಯಥಾ ಹ್ಯಸ್ಯಾ ದತ್ತೋ ರುದ್ರೇಣ ವೈ ವರಃ |
ಯದರ್ಥಂ ಚೈವ ಸಂಭೂತಾ ತವ ಯಜ್ಞೇ ಯಶಸ್ವಿನೀ |
ಹಂತ ತೇ ಕಥಯಿಷ್ಯಾಮಿ ಕೃಷ್ಣಾಯಾಃ ಪೌರ್ವದೈಹಿಕಮ್ ॥29॥
ರಾಜನೇ, ಇವಳಿಗೆ ರುದ್ರದೇವರು ಹೇಗೆ ವರವನ್ನು ಕೊಟ್ಟರು, ಯಾವ ಕಾರಣದಿಂದ ಯಶಸ್ವಿನಿಯಾದ, ಇಂದ್ರಸೇನೆ ಎಂದು ವಿಖ್ಯಾತಳಾದ ಅವಳು ನಿನ್ನ ಯಜ್ಞದಲ್ಲಿ ಉದ್ಭವಿಸಿದಳು ಎಂದು ಹೇಳುತ್ತೇನೆ ಕೇಳು. ನಾನು ನಿನಗೆ ಸಂತೋಷದಿಂದ ನಾಳಾಯನಿಯಾದ ಕೃಷ್ಣೆಯ ಪೂರ್ವದೇಹದ ಚರಿತ್ರೆಯನ್ನು ಹೇಳುವೆನು.
ಇಂದ್ರಸೇನೇತಿ ವಿಖ್ಯಾತಾ ಪುರಾ ನಾಳಾಯನೀ ಶುಭಾ |
ಮೌದ್ಗಲ್ಯಂ ಪತಿಮಾಸಾದ್ಯ ಚಚಾರ ವಿಗತಜ್ವರಾ |
ಮೌದ್ಗಲ್ಯಸ್ಯ ಮಹರ್ಷೇಶ್ಚ ರಮಮಾಣಸ್ಯ ವೈ ತಯಾ ॥30॥
ಹಿಂದೆ ನಳನ ಪುತ್ರಿಯಾದ ಶುಭಳಾದ ಇಂದ್ರಸೇನೆಯು ಮುದ್ಗಲನನ್ನು ಪತಿಯಾಗಿ ಪಡೆದು ಯಾವ ಮನಸ್ಸಿನ ತಾಪವೂ ಇಲ್ಲದೆ ಸಂಚರಿಸಿದಳು. ಅವಳ ಜೊತೆಯಲ್ಲಿ ರಮಿಸುತ್ತಿದ್ದ ಮೌದ್ಗಲ್ಯರಿಗೆ ಅನೇಕ ವರ್ಷಗಳು ಒಂದು ಕ್ಷಣದಂತೆ ಕಳೆದುಹೋದವು.
ಸಂವತ್ಸರಗಣಾ ರಾಜನ್ ವ್ಯತೀಯುಃ ಕ್ಷಣವತ್ ತದಾ |
ತತಃ ಕದಾಚಿದ್ ಧರ್ಮಾತ್ಮಾ ತೃಪ್ತೋ ಭೂಮೇರ್ವ್ಯರಜ್ಯತ |
ಅನ್ವಿಚ್ಛನ್ ಸ ಪರಂ ಬ್ರಹ್ಮ ತ್ಯಾಗಧರ್ಮಪರೋಽಭವತ್ ॥31॥
ಉತ್ಸಸರ್ಜ ಸ ತಾಂ ವಿಪ್ರಃ ಸಾ ತದಾ ಚಾಪತದ್ ಭುವಿ |
ಮೌದ್ಗಲ್ಯೋ ರಾಜಶಾರ್ದೂಲ ತಪೋಭಿರ್ಭಾವಿತಃ ಸದಾ ॥32॥
ಅನಂತರ ಒಮ್ಮೆ ಆ ಧರ್ಮಾತ್ಮನು ಭೂಮಿಯಲ್ಲಿ ವಿರಕ್ತನಾದನು. ಪರಬ್ರಹ್ಮನ ಪ್ರಸಾದವನ್ನು ಬಯಸಿ ಅವನು ತ್ಯಾಗಧರ್ಮಪರನಾದನು. ರಾಜಶಾರ್ದೂಲನೇ, ತಪಸ್ಸುಗಳಿಂದ ಶುದ್ಧನಾದ ಆ ಮೌದ್ಗಲ್ಯಬ್ರಾಹ್ಮಣನು (ಮುದ್ಗಲ ಬ್ರಾಹ್ಮಣನು) ಅವಳನ್ನು ಪರಿತ್ಯಾಗ ಮಾಡಿದನು. ಆಗ ಅವಳು ಭೂಮಿಯ ಮೇಲೆ ಬಿದ್ದಳು.
ನಾಳಾಯನೀ
ಪ್ರಸೀದ ಭಗವನ್ ಮಹ್ಯಂ ನ ಮಾಮುತ್ಸ್ರಷ್ಟುಮರ್ಹಸಿ |
ಅವಿತೃಪ್ತಾಽಸ್ಮಿ ವಿಪ್ರರ್ಷೇ ಕಾಮಾನಾಂ ಮಮ ಕಾಮದ ॥33॥
ಆಗ ಅವಳು ಅವನನ್ನು ಕುರಿತು, ಕಾಮದನಾದ ವಿಪ್ರರ್ಷಿಯೇ, ಪೂಜ್ಯನಾದ ನೀನು ನನ್ನನ್ನು ಅನುಗ್ರಹಿಸು. ನನ್ನನ್ನು ಪರಿತ್ಯಾಗ ಮಾಡಬೇಡ, ನಿನ್ನ ಜೊತೆಯಲ್ಲಿ ನಾನು ಕಾಮತೃಪ್ತಿಯನ್ನು ಪಡೆದಿಲ್ಲ.ಎಂದು ಹೇಳಿದಳು.
ಋಷಿಃ
ಯಸ್ಮಾತ್ ತ್ವಂ ಮಯಿ ನಿಶ್ಶಂಕಾ ಹ್ಯವಕ್ತವ್ಯಂ ಪ್ರಭಾಷಸೇ |
ಆಚರಂತೀ ತಪೋವಿಘ್ನಂ ತಸ್ಮಾಚ್ಛೃಣು ವಚೋ ಮಮ ॥34॥
ನೀನು ನನಗೆ ಹೇಳಬಾರದ ವಿಷಯಗಳನ್ನು ನಿಶ್ಶಂಕವಾಗಿ ಹೇಳುತ್ತಾ ತಪೋವಿಘ್ನವನ್ನು ಮಾಡುತ್ತಿರುವುದರಿಂದ ನನ್ನ ಮಾತನ್ನು ಕೇಳು.
ಭವಿಷ್ಯಸಿ ನೃಲೋಕೇಽಸ್ಮಿನ್ ರಾಜಪುತ್ರೀ ಯಶಸ್ವಿನೀ |
ಪಾಂಚಾಲರಾಜಸ್ಯ ಸುತಾ ದ್ರುಪದಸ್ಯ ಮಹಾತ್ಮನಃ॥35॥
ನೀನು ಮನುಷ್ಯಲೋಕದಲ್ಲಿ ಪಾಂಚಾಲರಾಜನಾದ ಮಹಾತ್ಮನಾದ ದ್ರುಪದರಾಜನ ಮಗಳಾಗಿ ಕೀರ್ತಿವಂತಳಾದ ರಾಜಕುಮಾರಿಯಾಗಿ ಜನಿಸುವಿ.
ಭವಿತಾರಸ್ತತಸ್ತತ್ರ ಪತಯಃ ಪಂಚ ವಿಶ್ರುತಾಃ |
ತೈ ಸಾರ್ಧಂ ಮಧುರಾಕಾರೈಶ್ಚಿರಂ ರತಿಮವಾಪ್ಸ್ಯಸಿ ॥36॥
ಆಗ ನಿನಗೆ ಪ್ರಖ್ಯಾತರಾದ ಐದು ಜನರು ಪತಿಗಳಾಗುವರು. ಮನೋಹರವಾದ ಆಕಾರವನ್ನು ಹೊಂದಿರುವ ಅವರ ಜೊತೆಯಲ್ಲಿ ನೀನು ಬಹುಕಾಲ ಸುಖವನ್ನು ಅನುಭವಿಸುವಿ.
ವ್ಯಾಸಃ
ಸೈವಂ ಶಪ್ತಾ ತು ವಿಮನಾ ವನಂ ಪ್ರಾಯಾದ್ ಯಶಸ್ವಿನೀ |
ಭೋಗೈರತೃಪ್ತಾ ದೇವೇಶಂ ತಪಸಾಽಽರಾಧಯತ್ ತದಾ ॥37॥
ಹೀಗೆ ಶಪ್ತಳಾದ ಆ ಯಶಸ್ವಿನಿಯು ಮನಸ್ಸಿನಲ್ಲಿ ಬೇಸರಗೊಂಡು ಕಾಡಿಗೆ ಹೋದಳು. ಭೋಗಗಳಲ್ಲಿ ತೃಪ್ತಿಯನ್ನು ಹೊಂದದೆ ಅವಳು ಆಗ ರುದ್ರದೇವರನ್ನು ತಪಸ್ಸಿನಿಂದ ಆರಾಧಿಸಿದಳು.
ನಿರಾಶೀರ್ಮಾರುತಾಹಾರಾ ವ್ರತಶೀಲಾ ತಥೈವ ಚ |

ಅನುವರ್ತಮಾನಾ ಚಾದಿತ್ಯಂ ತಥಾ ಪಂಚತಪಾಽಭವತ್ ॥38॥
ಎಲ್ಲಾ ಆಸೆಗಳನ್ನೂ ತೊರೆದು ಕೇವಲ ವಾಯುವನ್ನು ಸೇವಿಸಿ, ವ್ರತಶೀಲಳಾಗಿ, ಸೂರ್ಯನು ತಿರುಗಿದಂತೆ ಅವನಿಗೆ ಅಭಿಮುಖಳಾಗಿ ತಿರುಗಿ ಪಂಚಾಗ್ನಿ ತಪಸ್ಸನ್ನು ಮಾಡಿದಳು.
ತೀವ್ರೇಣ ತಪಸಾ ತಸ್ಯಾಸ್ತುಷ್ಟಃ ಪಶುಪತಿಃ ಸ್ವಯಮ್ |
ವರಂ ಪ್ರಾದಾತ್ ತದಾ ರುದ್ರಃ ಸರ್ವಲೋಕೇಶ್ವರಃ ಪ್ರಭುಃ ॥39॥
ಅವಳ ತೀವ್ರವಾದ ತಪಸ್ಸಿನಿಂದ ಸಂತುಷ್ಟರಾದ ಪಶುಪತಿಯಾದ, ಸರ್ವಲೋಕೇಶ್ವರರಾದ, ಸಮರ್ಥರಾದ ರುದ್ರದೇವರು ತಾವಾಗಿಯೇ ಅವಳಿಗೆ ವರವನ್ನು ಕೊಟ್ಟರು.
ಮಹೇಶ್ವರಃ
ಭವಿಷ್ಯಸಿ ಪರಂ ಜನ್ಮನ್ ಮನುಷ್ಯೇಷು ವರಾಂಗನೇ |
ಭವಿಷ್ಯಂತಿ ಚ ತೇ ಭದ್ರೇ ಪತಯಃ ಪಂಚ ಸುವ್ರತಾಃ ॥40॥
ವರಾಂಗನೆಯೇ, ನೀನು ಮುಂದಿನ ಜನ್ಮದಲ್ಲಿ ಮನುಷ್ಯಲೋಕದಲ್ಲಿ ಜನಿಸುವಿ. ಆಗ ನಿನಗೆ ಒಳ್ಳೆಯ ವ್ರತವನ್ನು ಧರಿಸಿದ ಐದುಜನರು ಪತಿಗಳಾಗುವರು.
ಮಹೇಂದ್ರವಪುಷಃ ಸರ್ವೇ ಮಹೇಂದ್ರಸಮವಿಕ್ರಮಾಃ |
ತತ್ರಸ್ಥಾ ಚ ಮಹತ್ಕರ್ಮ ಸುರಾಣಾಂ ತ್ವಂ ಕರಿಷ್ಯಸಿ ॥41॥
ಅವರೆಲ್ಲರೂ ಮಹೇಂದ್ರನ ಶರೀರದಂತಿರುವ ಶರೀರವುಳ್ಳವರು ಮತ್ತು ಮಹೇಂದ್ರನ ವಿಕ್ರಮಕ್ಕೆ ಸಮವಾದ ವಿಕ್ರಮವುಳ್ಳವರು. ನೀನು ಅವರಲ್ಲಿದ್ದು ಮಹತ್ತಾದ ದೇವಕಾರ್ಯವನ್ನು ಮಾಡುವಿ.
ನಾಳಾಯನೀ
ಏಕಃ ಖಲು ಮಯಾ ಭರ್ತಾ ವೃತಃ ಪಂಚ ತ್ವಿಮೇ ಕಥಮ್ |
ಭವಿಷ್ಯಂತಿ ಮಮೈಕಸ್ಯಾಃ ಪತಯಸ್ತದ್ ಬ್ರವೀಹಿ ಮೇ ॥42॥
ನಾನು ಒಬ್ಬ ಪತಿಯನ್ನು ಕೇಳಿದೆ, ಒಬ್ಬಳಾದ ನನಗೆ ಐದು ಜನರು ಹೇಗೆ ಪತಿಗಳಾಗುವರು? ಅದನ್ನು ನನಗೆ ಹೇಳು.
ಮಹೇಶ್ವರಃ
ಪಂಚಕೃತ್ವಸ್ತ್ವಯಾ ಹ್ಯುಕ್ತಃ ಪತಿಂ ದೇಹೀತ್ಯಹಂ ಪುನಃ |
ಪಂಚ ತೇ ಪತಯೋ ಭದ್ರೇ ಭವಿಷ್ಯಂತಿ ಸುಖಾವಹಾಃ ॥43॥
ಭದ್ರೇ, ನೀನು ಐದು ಬಾರಿ ಪತಿಂದೇಹಿ ಎಂದು ಹೇಳಿದೆ, ಆದ್ದರಿಂದ ನಿನಗೆ ಸುಖವನ್ನು ಕೊಡುವ ಐದು ಜನರು ಪತಿಗಳಾಗುತ್ತಾರೆ.
ನಾಳಾಯನೀ
ಧರ್ಮ ಏಕಃ ಪತಿಃ ಸ್ತ್ರೀಣಾಂ ಪೂರ್ವಮೇವ ಪ್ರಕಲ್ಪಿತಃ |
ಬಹುಪತ್ನೀಕೃತಃ ಪುಂಸೋ ಧರ್ಮಶ್ಚ ಪಿತೃಭಿಃ ಕೃತಃ ॥44॥
ಒಬ್ಬ ಸ್ತ್ರೀಗೆ ಒಬ್ಬನೇ ಪತಿಯೆಂಬುದು ಧರ್ಮವೆಂದು ಹಿಂದಿನಿಂದಲೂ ನಿಯುಕ್ತವಾಗಿದೆ. ಪುರುಷನು ಅನೇಕ ಪತ್ನಿಯರನ್ನು ಹೊಂದಿದರೂ ಅದು ಧರ್ಮವೆಂದು ಹಿರಿಯರು ಅಂಗೀಕರಿಸಿದ್ದಾರೆ.
ಸ್ತ್ರೀಧರ್ಮಃ ಪೂರ್ವಮೇವಾಯಂ ನಿರ್ಮಿತೋ ಮುನಿಭಿಃ ಪುರಾ |
ಸಹ ಧರ್ಮಭೃತಾಂ ಭರ್ತುರೇಕಾ ಏಕಸ್ಯ ಚೋಚ್ಯತೇ ॥45॥
ಧರ್ಮಜ್ಞರ ಮಧ್ಯದಲ್ಲಿ ಋಷಿಗಳು ಒಬ್ಬಳಿಗೆ ಒಬ್ಬನೇ ಪತಿಯೆಂದು ಸ್ತ್ರೀಧರ್ಮವನ್ನು ನಿರ್ಮಿಸಿದ್ದಾರೆ.
ಏಕೋ ಭರ್ತಾ ಹಿ ನಾರೀಣಾಂ ಕೌಮಾರ ಇತಿ ಲೌಕಿಕಃ |
ಆಪತ್ಸು ಚ ವಿಯೋಗೇ ಚ ಸಂತಾನಾರ್ಥೇ ಪರಃ ಸ್ಮೃತಃ ॥46॥
ಬಾಲ್ಯದಲ್ಲಿಯೇ ಸ್ತ್ರೀಗೆ ಒಬ್ಬನೇ ಪತಿಯೆಂಬುವುದು ಲೋಕನೀತಿ. ಆಪತ್ತು ಉಂಟಾದಾಗ ಅಥವಾ ವಿಯೋಗವಾದರೆ ಸಂತಾನದ ಸಲುವಾಗಿ ನಿಯೋಗ ಪದ್ಧತಿಯಿಂದ ಎರಡನೆಯ ಪತಿಯು ಹೇಳಲ್ಪಡುತ್ತಾನೆ.
ಗಚ್ಛೇತ ಯಾ ತೃತೀಯಂ ತು ತಸ್ಯಾ ನಿಷ್ಕೃತಿರುಚ್ಯತೇ |
ಚತುರ್ಥೇ ಪತಿತಾ ಧರ್ಮಾತ್ ಪಂಚಮೇ ಬಂಧಕೀ ಭವೇತ್ ॥47॥
ಯಾವಳು ಮೂರನೆಯ ಪತಿಯನ್ನು ಹೊಂದುವಳೊ ಅವಳಿಗೆ ಪ್ರಾಯಶ್ಚಿತ್ತವು ಹೇಳಲ್ಪಡುತ್ತದೆ. ನಾಲ್ಕನೆಯ ಪತಿಯನ್ನು ಹೊಂದಿದವಳು ಪತಿತಳಾಗಿ ಧರ್ಮಭ್ರಷ್ಟಳಾಗುತ್ತಾಳೆ. ಐದನೆಯ ಪತಿಯನ್ನು ಹೊಂದಿದವಳು ವೇಶ್ಯೆಯೆನಿಸಿಕೊಳ್ಳುತ್ತಾಳೆ.
ಏವಂ ಗತೇ ಧರ್ಮಪಥೇ ನ ವೃಣೇ ಬಹುಪುಂಸ್ಕತಾಮ್ |
ಅಲೋಕಾಚರಿತಾತ್ ತಸ್ಮಾತ್ ಕಥಂ ಮುಚ್ಯೇಯ ಸಂಕರಾತ್ ॥48॥
ಧರ್ಮಮಾರ್ಗವು ಹೀಗಿರುವಾಗ ನಾನು ಅನೇಕರನ್ನು ಪತಿಗಳನ್ನಾಗಿ ಬಯಸುವುದಿಲ್ಲ. ಇದು ಲೋಕಾಚರಿತವಾದ ಮಾರ್ಗವಲ್ಲ. ಆದ್ದರಿಂದ ಈ ಸಾಂಕರ್ಯದೋಷದಿಂದ ನಾನು ಬಿಡುಗಡೆಯಾಗುವುದು ಹೇಗೆ?
ಮಹೇಶ್ವರಃ
ಅನಾವೃತಾಃ ಪುರಾ ನಾರ್ಯೋ ಹ್ಯಾಸನ್ ಶುಧ್ಯಂತಿ ಚಾರ್ತವೇ |
ಸಕೃದುಕ್ತಂ ತ್ವಯಾ ನೈತನ್ನಾಧರ್ಮಸ್ತೇ ಭವಿಷ್ಯತಿ ॥49॥
ಹಿಂದೆ ಸ್ತ್ರೀಯರು ಅನಾವೃತರಾಗಿದ್ದರು. (ಪತಿಯ ಜೊತೆಯಲ್ಲಿಯೇ ಇರಬೇಕೆಂಬ ನಿಯಮವು ಇರಲಿಲ್ಲ) ಪ್ರತಿ ಋತುಕಾಲದಲ್ಲಿ ಶುದ್ಧರಾಗುತ್ತಿದ್ದರು. ಪತಿಂದೇಹಿ ಎಂಬ ಮಾತನ್ನು ನೀನು ಒಂದು ಬಾರಿ ಹೇಳಲಿಲ್ಲ (ಐದು ಬಾರಿ ಹೇಳಿದೆ), ಆದ್ದರಿಂದ ನಿನಗೆ ಅಧರ್ಮವು ಉಂಟಾಗುವುದಿಲ್ಲ.

ನಾಳಾಯನೀ
ಯದಿ ಮೇ ಪತಯಃ ಪಂಚ ವರಾನಿಚ್ಛಾಮಿ ತೈರ್ಮಿಥಃ |
ಕೌಮಾರಂ ಚ ಭವೇತ್ ಸರ್ವೈಃ ಸಂಗಮೇಸಂಗಮೇ ಚ ಮೇ ॥60॥
ನನಗೆ ಐದು ಪತಿಗಳು ಆಗುವುದಾದರೆ ನಾನು ಆ ಪತಿಗಳಿಗೂ ಮತ್ತು ನನಗೂ ನಿನ್ನಿಂದ ವರವನ್ನು ಬೇಡುತ್ತೇನೆ. ನಾನು ಎಲ್ಲರ ಜೊತೆಯಲ್ಲಿ ಸಂಗವನ್ನು ಮಾಡಿದರೂ ಪ್ರತಿದಿನವೂ ನಾನು ಕುಮಾರಿಯೇ ಆಗಬೇಕು.
ಪತಿಶುಶ್ರೂಷಯಾ ಚೈವ ಸಿದ್ಧಿಃ ಪ್ರಾಪ್ತಾ ಮಯಾ ಪುರಾ |
ಭೋಗೇಚ್ಛಾ ಚ ಮಯಾ ಪ್ರಾಪ್ತಾ ಸ ಚ ಭೋಗಶ್ಚ ಮೇ ಭವೇತ್ ॥
ನಾನು ಹಿಂದೆ ಪತಿಸೇವೆಯಿಂದ ಸಿದ್ಧಿಯನ್ನು ಪಡೆದೆ. ಆದರೆ, ಭೋಗೇಚ್ಛೆಯು ಹೋಗಲಿಲ್ಲ ಆದ್ದರಿಂದ ನಾನು ಬಯಸುವ ಭೋಗವೂ ನನಗೆ ಉಂಟಾಗಬೇಕು.
ಮಹೇಶ್ವರಃ
ರತಿಶ್ಚ ಭದ್ರೇ ಸಿದ್ಧಿಶ್ಚ ನ ಭಜೇತೇ ಪರಸ್ಪರಮ್ |
ದುರ್ಭಗಾ ಲಪ್ಸ್ಯಸೇ ಸಿದ್ಧಿಂ ಯೋಗೇನ ಚ ಮಹತ್ವತಾಮ್ ॥52॥
ಭದ್ರೆಯೇ, ಸದಾ ರತಿಯೂ ಮತ್ತು ಪುಣ್ಯಸಿದ್ಧಿಯೂ ಜೊತೆಯಲ್ಲಿ ಹೋಗುವುದಿಲ್ಲ. ಐದು ಪತಿಗಳನ್ನು ಹೊಂದಿದರೆ ಏಕಪತಿತ್ವ ಇಲ್ಲದ ಕಾರಣ ದೌರ್ಭಾಗ್ಯವನ್ನು ಹೊಂದಿ ಸತತ ರತಿಯಿಂದಾಗಿ ಭೋಗದ ಸಿದ್ಧಿಯನ್ನು ಪಡೆಯುವಿ. ಅದನ್ನು ಬಿಟ್ಟು ಏಕಪತಿತ್ವವನ್ನು ಹೊಂದಿ ತಪಸ್ಸು ಮಾಡಿದರೆ ರೂಪಲಾವಣ್ಯಗಳಿಂದ ಮಹತ್ವವನ್ನೂ, ಪುಣ್ಯದಿಂದ ಮಹತ್ವವನ್ನೂ ಪಡೆಯುವಿ. ಬಹುಪತಿಗಳಿದ್ದರೆ ಯಾವಾಗಲೂ ರತಿಯ ಆಸೆಯಿಂದ ರೂಪಲಾವಣ್ಯಗಳು ನಾಶವನ್ನು ಹೊಂದುತ್ತವೆ.
ಅನ್ಯದೇಹಾಂತರೇ ತ್ವಂ ಚ ರೂಪಭಾಗ್ಯಗುಣಾನ್ವಿತಾ |
ಪಂಚಭಿಃ ಪ್ರಾಪ್ಯ ಕೌಮಾರಂ ಮಹಾಭಾಗಾ ಭವಿಷ್ಯಸಿ ॥43॥
ಮುಂದಿನ ಜನ್ಮದಲ್ಲಿ ಬೇರೆಯೇ ದೇಹದೊಳಗೆ ನೀನು ನಿನ್ನನ್ನೂ ಸೇರಿ ಐದುಜನ ದೇವಿಯರ ಜೊತೆಯಲ್ಲಿ ವಾಸಮಾಡಿ ನಿತ್ಯವೂ ಕುಮಾರಿಯಾಗಿ ಅಧಿಕವಾದ ಅಂಶದಿಂದ ಇರುತ್ತೀಯೆ.
ಶ್ಲೋಕದಲ್ಲಿ ಮಹಾಭಾಗಾ ಎಂಬಲ್ಲಿ ಭಾಗ ಎಂದರೆ ಅಂಶ ಎಂದೇ ಅರ್ಥ. ದೇಹದಲ್ಲಿರುವ ಇತರ ಸ್ತ್ರೀಯರ ಅಂಶಕ್ಕಿಂತ ನಿನ್ನ ಅಂಶವು ಅಧಿಕವಾಗಿರುವುದು ಎಂದು ತಾತ್ಪರ್ಯ. ಒಂದೇ ದಿವಸದಲ್ಲಿ ನಿನ್ನೊಬ್ಬಳ ಜೊತೆಯಲ್ಲಿಯೇ ಐದು ಜನ ಪತಿಗಳೂ ರಮಣವನ್ನು ಮಾಡಿದರೆ ಪಾತಿವ್ರತ್ಯರೂಪವಾದ ಗುಣವೂ, ಮಹತ್ವರೂಪವಾದ ಭಾಗ್ಯವೂ, ಅತಿಯಾದ ವಿಷಯಾಸಕ್ತಿಯಿಂದ ರೂಪಲಾವಣ್ಯಗಳೂ ನಾಶವನ್ನು ಹೊಂದುತ್ತವೆ. ನೀನು ಆ ದೇಹದಲ್ಲಿ ಕೇವಲ ಸಾಕ್ಷಿಯಾಗಿರುವ ಪಾರ್ವತಿಯೂ ಸೇರಿದಂತೆ ಧರ್ಮ,ಇಂದ್ರ ಮತ್ತು ಅಶ್ವಿನಿಗಳ ಪತ್ನಿಯರ ಜೊತೆಯಲ್ಲಿ ಸೇರಿ ಆ ದೇಹದ ಒಳಗೆ ಪ್ರವೇಶಿಸಿದರೆ ಒಂದೊಂದು ದಿವಸ ಒಬ್ಬೊಬ್ಬರಿಗೆ ಒಬ್ಬೊಬ್ಬ ಪತಿಯಿಂದ ಭೋಗ ಎಂದು ವಿಭಾಗವನ್ನು ಮಾಡಿದರೆ ನಿನ್ನ ಜೊತೆಯಲ್ಲಿ ವಾಯುವಿಗೆ, ಶ್ಯಾಮಲೆಯ ಜೊತೆಯಲ್ಲಿ ಧರ್ಮನಿಗೆ, ಶಚಿಯ ಜೊತೆಯಲ್ಲಿ ಇಂದ್ರನಿಗೆ, ಉಷೆಯ ಜೊತೆಯಲ್ಲಿ ಅಶ್ವಿನಿಗಳಿಗೆ ನಿಯಮದಿಂದ ಭಾಗಗಳು ಪೂರ್ಣವಾಗುತ್ತಿರಲು ಇದಕ್ಕೆ ಸಾಕ್ಷಿಯಾಗಿ ಪಾರ್ವತಿಯು ಅಲ್ಲಿ ಇರುವ ಕಾರಣದಿಂದ ಪಂಚಪಾಂಡವರಿಗೆ ತಮ್ಮ ತಮ್ಮ ಪತ್ನಿಯರ ಜೊತೆಯಲ್ಲಿಯೇ ಭೋಗವು ಪೂರ್ಣವಾಗಿ ಪಾರ್ವತಿಯ ಅಪೇಕ್ಷೆಯಿಲ್ಲದಿರುವುದರಿಂದ ಯಾರಿಗೂ ಪಾತಿವ್ರತ್ಯರೂಪವಾದ ಗುಣದ ಹಾನಿಯಾಗುವುದಿಲ್ಲ ಅಥವಾ ಮಹತ್ವರೂಪವಾದ ಭಾಗ್ಯದ ಹಾನಿಯೂ ಆಗುವುದಿಲ್ಲ. ಒಬ್ಬಳ ಜೊತೆಯಲ್ಲಿಯೇ ಐದುಜನರ ಭೋಗವಿಲ್ಲದಿರುವುದರಿಂದ, ಅತಿವಿಷಯಾಸಕ್ತಿ ಇಲ್ಲದಿರುವ ಕಾರಣದಿಂದ ರೂಪಯೌವನದ ಹಾನಿಯೂ ಆಗುವುದಿಲ್ಲ. ಬೇರೆ ಸ್ತ್ರೀಯರ ದಿನದಲ್ಲಿ (ಭಾರತಿಯ) ಸ್ವಲ್ಪಸನ್ನಿಧಾನವೂ ಇರುವುದರಿಂದ ಅವರ ಪತಿಯ ಅಂತರ್ಗತನಾದ ವಾಯುದೇವರ ಜೊತೆಯಲ್ಲಿ ನಿನಗೆ ಪರಕೀಯ ದೇಹದಿಂದಲೇ ಸದಾರಮಣ. ಆ ದಿನದಲ್ಲಿ ಅಭಿಮಾನವುಳ್ಳ ಅಯಾ ದೇವಿಯರಿಂದ ಕುಮಾರಭಾವವನ್ನು ರಕ್ಷಿಸಿದ ಆ ದೇಹದಲ್ಲಿ ಸೌಂದರ್ಯದ ಅನಾಶ. ಆ ದೇವಿಯರ ಅಂಶಕ್ಕಿಂತ ಹೀಗೆ ನಿನ್ನ ಅಂಶವೇ ಅಧಿಕವಾಗಿರುವುದರಿಂದ ನಿನಗೆ ಮಹಾಭಾಗದಿಂದ ಕೂಡಿರುವಿಕೆ ಎಲ್ಲವೂ ಸಿದ್ಧವಾಗುತ್ತದೆ. ರೂಪಭಾಗ್ಯಗುಣಾನ್ವಿತಾ ಎಂಬ ಶಬ್ದದಿಂದ ಭಾಗ್ಯವನ್ನು ಮೊದಲೇ ಹೇಳಿರುವುದರಿಂದ ಮಹಾಭಾಗಾ ಎಂಬಲ್ಲಿರುವ ಭಾಗ ಶಬ್ದಕ್ಕೆ ಭಾಗ್ಯವೆಂದು ಅರ್ಥಮಾಡದೆ ಅಂಶವೆಂದೇ ಅರ್ಥಮಾಡಬೇಕು.
ಗಚ್ಛ ಗಂಗಾಜಲಸ್ಥಾ ಚ ನರಂ ಪಶ್ಯಸಿ ಯಂ ಶುಭೇ |
ತಮಾನಯ ಮಮಾಭ್ಯಾಶಂ ಸುರರಾಜಂ ಶುಚಿಸ್ಮಿತೇ ॥54॥
ಶುಚಿಸ್ಮಿತೆಯೇ, ನೀನು ಗಂಗೆಗೆ ಹೋಗು, ಶುಭಳಾದವಳೇ, ಅಲ್ಲಿ ನೀನು ನೋಡುವ ಸುರರಾಜನಾದ ದೇವೇಂದ್ರನನ್ನು ನನ್ನ ಬಳಿಗೆ ಕರೆದುಕೊಂಡು ಬಾ.
ವ್ಯಾಸಃ
ಇತ್ಯುಕ್ತಾ ವಿಶ್ವರೂಪೇಣ ರುದ್ರಂ ಕೃತ್ವಾ ಪ್ರದಕ್ಷಿಣಮ್ |
ಜಗಾಮ ಗಂಗಾಮುದ್ದಿಶ್ಯ ಪುಣ್ಯಾಂ ತ್ರಿಪಥಗಾಂ ನದೀಮ್ ॥55॥
ವಿಶ್ವನಾಥನಾದ ರುದ್ರನಿಂದ ಹೀಗೆ ಹೇಳಲ್ಪಟ್ಟ ಅವಳು ಅವನಿಗೆ ಪ್ರದಕ್ಷಿಣೆಯನ್ನು ಮಾಡಿ ಪವಿತ್ರವಾದ ತ್ರಿಪಥೆಗೆಯಾದ ಗಂಗಾನದಿಯನ್ನು ಉದ್ದೇಶಿಸಿ ಹೊರಟಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮಾದಿಪರ್ವಣಿ
ಷಣ್ಣವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ವೈವಾಹಿಕಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ

ನೂರತೊಂಭತ್ತಾರನೆಯ ಅಧ್ಯಾಯ ಮುಗಿಯಿತು.
*****
ನೂರ ತೊಂಭತ್ತೇಳನೆಯ ಅಧ್ಯಾಯ
(ಪಂಚೇಂದ್ರೋಪಾಖ್ಯಾನ - ದೇವತೆಗಳ ಸತ್ರದಲ್ಲಿ ಬ್ರಹ್ಮದೇವರ ವಾಕ್ಯವನ್ನು ಕೇಳಿ ದೇವತೆಗಳಿಂದ ಗಂಗಾಸಮೀಪ ಗಮನ, ಅಲ್ಲಿ ಅಳುತ್ತಿರುವ ವನಿತೆಯ ದರ್ಶನ, ಅವಳನ್ನು ಕರೆದುಕೊಂಡು ರುದ್ರಸಮೀಪಕ್ಕೆ ಗಮನ, ರುದ್ರ ಮತ್ತು ಇಂದ್ರರ ಸಂವಾದ, ರುದ್ರನಿಂದ ಇಂದ್ರನ ನಿಂದೆ, ವ್ಯಾಸರಿಂದ ದ್ರುಪದನಿಗೆ ದಿವ್ಯದೃಷ್ಟಿಯನ್ನು ಕೊಟ್ಟು ಪಂಚೇಂದ್ರರ ಮತ್ತು ಅವರ ಸಮೀಪದಲ್ಲಿ ದ್ರೌಪದಿಯ ದರ್ಶನ, ದ್ರುಪದನ ಸಮಾಧಾನ ಮತ್ತು ಹರ್ಷ)
ವ್ಯಾಸಃ
ಪುರಾ ವೈ ನೈಮಿಶಾರಣ್ಯೇ ದೇವಾಃ ಸತ್ರಮುಪಾಸತೇ |
ತತ್ರ ವೈವಸ್ವತೋ ರಾಜನ್ ಶಾಮಿತ್ರಮಕರೋತ್ ತದಾ ||1||
ರಾಜನ್, ಹಿಂದೆ ನೈಮಿಶಾರಣ್ಯದಲ್ಲಿ ದೇವತೆಗಳು ಒಂದು ಸತ್ರವನ್ನು ಮಾಡಿದರು. ಅಲ್ಲಿ ಪಶುವಧೆ ಮಾಡುವ ಯಮನು ದೀಕ್ಷಿತನಾಗಿ ಕುಳಿತನು.
ತತೋ ಯಮೋ ದೀಕ್ಷಿತಸ್ತತ್ರ ರಾಜನ್
ನಾಮಾರಯತ್ ಕಿಂಚಿದಪಿ ಪ್ರಜಾಭ್ಯಃ |
ತತಃ ಪ್ರಜಾಸ್ತಾ ಬಹುಲಾ ಬಭೂವುಃ
ಕಾಲಾತಿಪಾತಾನ್ಮರಣಾತ್ ಪ್ರಹೀಣಾಃ ||2||
ರಾಜನ್, ಯಮನು ದೀಕ್ಷಿತನಾಗಿ ಕುಳಿತ ಕಾರಣದಿಂದ ಯಾವ ಪ್ರಜೆಗಳನ್ನೂ ಸಂಹಾರ ಮಾಡಲಿಲ್ಲ. ಆಗ ಮರಣವಿಲ್ಲದೆ ಅಧಿಕಕಾಲ ಬದುಕಿದ ಕಾರಣ ಪ್ರಜೆಗಳ ಸಂಖ್ಯೆಯು ಹೆಚ್ಚಾಯಿತು.
ತತಶ್ಚ ಶಕ್ರೋ ವರುಣಃ ಕುಬೇರಃ
ಸಾಧ್ಯಾಶ್ಚ ರುದ್ರಾ ವಸವಶ್ಚಾಶ್ವಿನೌ ಚ |
ಪ್ರಣೇತಾರಂ ಭುವನಸ್ಯ ಪ್ರಜಾಪತಿಂ
ಸಮಾಜಗ್ಮುಸ್ತತ್ರ ದೇವಾಸ್ತಥಾಽನ್ಯೇ ||3||
ಆಗ ಇಂದ್ರ, ವರುಣ, ಕುಬೇರ, ಸಾಧ್ಯರು, ರುದ್ರರು, ವಸುಗಳು ಅಶ್ವಿನಿಗಳು, ಮತ್ತು ಉಳಿದ ದೇವತೆಗಳು ಲೋಕನಾಯಕರಾದ ಬ್ರಹ್ಮದೇವರ ಬಳಿಗೆ ಬಂದರು.
ತತೋಽಬ್ರುವಂಲ್ಲೋಕಗುರುಂ ಸಮೇತಾ
ಭಯಂ ನಸ್ತೀವ್ರಂ ಮಾನುಷಾಣಾಂ ಸಮೃದ್ಧ್ಯಾ |
ತಸ್ಮಾದ್ ಭಯಾದುದ್ವಿಜಂತಃ ಸುಖೇಪ್ಸವಃ
ಪ್ರಯಾಮ ಸರ್ವೇ ಶರಣಂ ಭವಂತಮ್ ||4||
ಅನಂತರ ಅವರೆಲ್ಲರೂ ಒಟ್ಟಿಗೆ ಬ್ರಹ್ಮದೇವರನ್ನು ಕುರಿತು ಹೇಳಿದರು. ನಮಗೆ ಮನುಷ್ಯರ ವೃದ್ಧಿಯಿಂದ ತೀವ್ರವಾದ ಭಯವುಂಟಾಗಿದೆ. ನಾವೆಲ್ಲರೂ ಆ ಭಯದಿಂದ ನಡುಗುತ್ತಾ ಸುಖವನ್ನು ಬಯಸಿ ನಿಮಗೆ ಶರಣಾಗತರಾಗಿದ್ದೇವೆ.
ಬ್ರಹ್ಮಾ
ಕಿಂ ವೋ ಭಯಂ ಮಾನುಷೇಭ್ಯೋ
ಯೂಯಂ ಸರ್ವೇ ಯತೋಽಮರಾಃ |
ನ ವೋ ಮರ್ತ್ಯಸಕಾಶಾದ್ ವೈ ಭಯಂ ಭವತಿ ಕರ್ಹಿಚಿತ್ ||5||
ನೀವೆಲ್ಲರೂ ಮರಣರಹಿತರಾದ ಕಾರಣದಿಂದ ನಿಮಗೆ ಮನುಷ್ಯರಿಂದ ಏನು ಭಯ? ನಿಮಗೆ ಮನುಷ್ಯರಿಂದ ಯಾವ ಭಯವೂ ಉಂಟಾಗಲು ಸಾಧ್ಯವಿಲ್ಲ.
ದೇವಾಃ
ಮರ್ತ್ಯಾ ಹ್ಯಮರ್ತ್ಯಾ ಸಂಭೂತಾ ನ ವಿಶೇಷೋಽಸ್ತಿ ಕಶ್ಚನ |
ಅವಿಶೇಷಾದುದ್ವಿಜಂತೋ ವಿಶೇಷಾರ್ಥಮಿಹಾಗತಾಃ ||6||
ಈಗ ಮರ್ತ್ಯರೂ ಅಮರರಾಗಿದ್ದಾರೆ. ನಮ್ಮಲ್ಲಿ ಯಾವ ವಿಶೇಷವೂ ಉಳಿದಿಲ್ಲ. ಈ ಸಾಮ್ಯದಿಂದ ಭಯವನ್ನು ಹೊಂದಿ ನಮ್ಮ ಅತಿಶಯವನ್ನು ಉಳಿಸಿಕೊಳ್ಳಲು ಇಲ್ಲಿಗೆ ಬಂದಿದ್ದೇವೆ.
ಬ್ರಹ್ಮಾ
ವೈವಸ್ವತೋ ವ್ಯಾಪೃತಃ ಸತ್ರಹೇತೋಃ
ತೇನ ತ್ವಿಮೇ ನ ಮ್ರಿಯಂತೇ ಮನುಷ್ಯಾಃ |
ತಸ್ಮಿನ್ನೇಕಾಗ್ರೇ ಕೃತಸರ್ವಕಾರ್ಯೇ
ತದೈತೇಷಾಂ ಭವಿತೈವಾಂತಕಾಲಃ ||7||
ಯಮನು ಶಾಮಿತ್ರಕರ್ಮವನ್ನು ವಹಿಸಿ ಸತ್ರಯಾಗದಲ್ಲಿ ನಿರತನಾಗಿದ್ದಾನೆ. ಆದ್ದರಿಂದ ಈ ಮನುಷ್ಯರು ಸಾಯುತ್ತಿಲ್ಲ. ಏಕಾಗ್ರನಾಗಿ ಯಮನು ಸತ್ರಯಾಗದ ಎಲ್ಲಾ ಕಾರ್ಯಗಳನ್ನು ಮುಗಿಸಿದ ಮೇಲೆ ಈ ಪ್ರಜೆಗಳಿಗೆ ಮರಣಕಾಲವು ಉಂಟಾಗುವುದು.
ವೈವಸ್ವತಸ್ಯೇಹ ತನುರ್ವಿಭೂತ್ವಾ
ವೀರ್ಯೇಣ ಯುಷ್ಮಾಕಮುತ ಪ್ರವೃದ್ಧಾ |

ಏಷಾಮಂತೋ ಭವಿತಾ ಹ್ಯಂತಕಾಲೇ
ನಿಯಚ್ಛಧ್ವಂ ಮೋಹಮಮಿತ್ರಸಾಹಾಃ ॥8॥
ಯಮನ ದೇಹವೇ ಹೆಚ್ಚು ಸಾಮರ್ಥ್ಯವನ್ನು ಹೊಂದಿ ನಿಮ್ಮ ತೇಜಸ್ಸಿನಿಂದ ಇನ್ನೂ ಹೆಚ್ಚು ಸಾಮರ್ಥ್ಯವನ್ನು ಹೊಂದಿದಾಗ ಇವರಿಗೆ ಅಂತಕಾಲವು ಉಂಟಾಗುವುದು. ಶತ್ರುಸಾಹರೇ, ನಿಮ್ಮ ಮೋಹವನ್ನು ನಿಯಂತ್ರಿಸಿಕೊಳ್ಳಿ.
ವ್ಯಾಸಃ
ತತಸ್ತು ತೇ ಪೂರ್ವಜದೇವವಾಕ್ಯಂ
ಶ್ರುತ್ವಾ ಜಗ್ಮುರ್ಯತ್ರ ದೇವಾ ಯಜಂತೇ |
ಸಮಾಸೀನಾಸ್ತೇ ಸಮವೇತಾ ಮಹಾಬಲಾ
ಭಾಗೀರಥ್ಯಾಂ ದದೃಶುಃ ಪುಂಡರೀಕಮ್ ॥9॥
ಆಗ ಅವರು ಬ್ರಹ್ಮದೇವರ ವಾಕ್ಯವನ್ನು ಕೇಳಿ ದೇವತೆಗಳು ಸತ್ರಯಾಗವನ್ನು ಮಾಡುತ್ತಿದ್ದ ಗಂಗಾತೀರಕ್ಕೆ ಹೋದರು. ಮಹಾಬಲರಾದ ಅವರು ಒಟ್ಟಿಗೆ ಅಲ್ಲಿ ಕುಳಿತು ಭಾಗೀರಥಿಯಲ್ಲಿ ಒಂದು ಕಮಲವನ್ನು ನೋಡಿದರು.
ದೃಷ್ಟ್ವಾ ಚ ತದ್ ವಿಸ್ಮಿತಾಸ್ತೇ ಬಭೂವುಃ
ತೇಷಾಮಿಂದ್ರಸ್ತತ್ರ ಶೂರೋ ಜಗಾಮ |
ಸೋಽಪಶ್ಯದ್ ಯೋಷಾಮಥ ಪಾವಕಪ್ರಭಾಂ
ಯತ್ರ ಗಂಗಾ ಸತತಂ ದೇವೀ ಪ್ರಭೂತಾ ॥10॥
ಅದನ್ನು ನೋಡಿ ಅವರೆಲ್ಲರೂ ವಿಸ್ಮಿತರಾದರು. ಶೂರನಾದ ಇಂದ್ರನು ಅವರನ್ನು ಬಿಟ್ಟು ಮುಂದೆ ಹೋಗಿ ಗಂಗೆಯು ಸತತವಾಗಿ ಉತ್ಪತ್ತಿಯಾಗುವ ಸ್ಥಳದಲ್ಲಿ ಅಗ್ನಿಯ ಪ್ರಭೆಯನ್ನು ಹೊಂದಿದ ಒಬ್ಬ ವನಿತೆಯನ್ನು ನೋಡಿದನು.
ಸಾ ತತ್ರ ಯೋಷಾ ರುದತೀ ಜಲಾರ್ಥಿನೀ
ಗಂಗಾಂ ದೇವೀಂ ವ್ಯವಗಾಹ್ಯ ವ್ಯತಿಷ್ಠತ್ |
ತಸ್ಯಾಶ್ರುಬಿಂದುಃ ಪತಿತೋ ಜಲೇ ವೈ
ತತ್ಪದ್ಮಮಾಸೀದಥ ತತ್ರ ಕಾಂಚನಮ್ ॥11॥
ಜಲಾರ್ಥಿನಿಯಾದ ಆ ವನಿತೆಯು ಗಂಗೆಯಲ್ಲಿ ಸ್ನಾನಮಾಡಿ ಅಳುತ್ತಾ ನಿಂತಿದ್ದಳು. ಅವಳ ಕಣ್ಣುಗಳಿಂದ ಬಂದ ಕಣ್ಣೀರು ಗಂಗೆಯಲ್ಲಿ ಬಿದ್ದು ಕಾಂಚನಮಯವಾದ ಒಂದು ಪದ್ಮವಾಯಿತು.
ತದದ್ಭುತಂ ಪ್ರೇಕ್ಷ್ಯ ವಜ್ರೀ ತದಾನೀಮ್
ಅಪೃಚ್ಛತ್ ತಾಂ ಯೋಷಿತಮಂತಿಕಾದ್ ವೈ
ಕಾ ತ್ವಂ ಕುತೋ ರೋದಿಷಿ ಕಸ್ಯ ಹೇತೋ-
ರ್ವಾಕ್ಯಂ ತಥ್ಯಂ ಕಾಮಯೇಽಹಂ ಬ್ರವೀಹಿ ॥12॥
ಆ ಅದ್ಭುತವನ್ನು ನೋಡಿದ ಇಂದ್ರನು ಆಗ ಅವಳ ಸಮೀಪಕ್ಕೆ ಹೋಗಿ ಅವಳನ್ನು ನೀನು ಯಾರು? ಏತಕ್ಕೆ ಅಳುತ್ತಿದ್ದೀಯೆ? ಏನು ಉದ್ದೇಶ? ನಿಜವಾದ ತಥ್ಯವನ್ನು ಹೇಳು, ನಾನು ತಿಳಿದುಕೊಳ್ಳಲು ಬಯಸುತ್ತೇನೆ ಎಂದು ಹೇಳಿದನು.
ಸ್ತ್ರೀ
ತ್ವಂ ವೇತ್ಸ್ಯಸೇ ಮಾಮಿಹ ಯಾಽಸ್ಮಿ ಶಕ್ರ
ಯದರ್ಥಂ ಚಾಹಂ ರೋದಿಮಿ ಮಂದಭಾಗ್ಯಾ |
ಆಗಚ್ಛ ರಾಜನ್ ಪುರತೋ ಗಮಿಷ್ಯೇ
ದ್ರಷ್ಟಾಽಸಿ ತದ್ ರೋದಿಮಿ ಯತ್ಕೃತೇಽಹಮ್ ॥13॥
ಇಂದ್ರನೇ, ನಾನು ಯಾರು, ಮಂದಭಾಗ್ಯಳಾದ ನಾನು ಏತಕ್ಕೆ ಅಳುತ್ತಿದ್ದೇನೆ ಎಂದು ತಿಳಿಯುವಿ, ದೇವರಾಜನೇ, ನನ್ನ ಜೊತೆಯಲ್ಲಿ ಬಾ, ನಾನು ಮುಂದೆ ಹೋಗುವೆನು. ನಾನು ಏತಕ್ಕೆ ಅಳುತ್ತಿದ್ದೇನೆ ಎಂಬುದನ್ನು ನೀನು ತಿಳಿಯುವಿ.
ವ್ಯಾಸಃ
ತಾಂ ಗಚ್ಛಂತೀಮನ್ವಗಚ್ಛತ್ ತದಾನೀಂ
ಸೋಽಪಶ್ಯದಾರಾತ್ ತರುಣಂ ದರ್ಶನೀಯಮ್ |
ಸಿಂಹಾಸನಸ್ಥಂ ಯುವತೀಸಹಾಯಂ
ಕ್ರೀಡಂತಮಕ್ಷೈರ್ಗಿರಿರಾಜಮೂರ್ಧ್ನಿ ॥14॥
ತಮಬ್ರವೀದ್ ದೇವರಾಜೋ ಮಮೇದಂ
ತ್ವಂ ವಿದ್ಧಿ ವಿಶ್ವಂ ಭುವನಂ ವಶೇ ಸ್ಥಿತಮ್ |
ಈಶೋಽಹಮಸ್ಮೀತಿ ಸಮನ್ಯುರಬ್ರವೀದ್
ದೃಷ್ಟ್ವಾ ತಮಕ್ಷೈಃ ಸುಭೃಶಂ ಪ್ರಮತ್ತಮ್ ॥15॥
ಇಂದ್ರನು ಆಗ ಮುಂದೆ ಹೋಗುವ ಅವಳನ್ನು ಹಿಂಬಾಲಿಸಿ ಮನೋಹರನೂ, ಪತ್ನೀಸಹಿತನೂ, ಪರ್ವತದಮೇಲೆ ಸಿಂಹಾಸನದಲ್ಲಿ ಕುಳಿತು ಪಗಡೆಯನ್ನು ಆಡುತ್ತಿರುವವನೂ ಆದ ರುದ್ರದೇವರನ್ನು ನೋಡಿದನು.
ಅಕ್ಷಕ್ರೀಡೆಯಲ್ಲಿ ತಲ್ಲೀನರಾದ ಅವರನ್ನು ನೋಡಿ ದೇವರಾಜನಾದ ಇಂದ್ರನು ಅವರನ್ನು ಕುರಿತು ಈ ವಿಶ್ವವು ನನ್ನ ಅಧೀನದಲ್ಲಿದೆ ಎಂದು ತಿಳಿ. ಇದಕ್ಕೆ ನಾನು ಒಡೆಯ ಎಂದು ಕೋಪದಿಂದ ಹೇಳಿದನು. (ಹೀಗಿರುವಾಗ ನೀನು ಇವಳಿಗೆ ಶಾಪವನ್ನು ಕೊಟ್ಟು ಇವಳು ಅಳುವಂತೆ ಮಾಡಿದ್ದೀಯೆ)

ಕ್ರುದ್ಧಂ ಸ ಶಕ್ರಂ ಪ್ರಸಮೀಕ್ಷ್ಯ ದೇವೋ
ಜಹಾಸ ಶಕ್ರಂ ಚ ಶನೈರುದೀಕ್ಷ್ಯ |
ಸಂಸ್ತಂಭಿತೋಽಭೂದಥ ದೇವರಾಜಃ
ತೇನೇಕ್ಷಿತಃ ಸ್ಥಾಣುರಿವಾವತಸ್ಥೇ ॥16॥
ರುದ್ರದೇವರು ಕೋಪಗೊಂಡ ಶಕ್ರನನ್ನು ನಿಧಾನವಾಗಿ ನೋಡಿ ನಕ್ಕರು. ಅದರಿಂದ ಇಂದ್ರನು ಸ್ತಂಭಿತನಾಗಿ ವೃಕ್ಷದಂತೆ ಅಲುಗಾಡದೇ ನಿಂತನು.
ಯದಾ ತು ಪರ್ಯಾಪ್ತಿರಿಹಾಕ್ಷಕ್ರೀಡಯಾ
ತದಾ ದೇವೀಂ ರುದಂತೀಂ ತಾಮುವಾಚ
ಆನೀಯತಾಮೇಷ ಯತೋಽಕ್ಷಮಾರಾತ್
ನೈನಂ ದರ್ಪಃ ಪುನರಪ್ಯಾವಿಶೇತ ॥17॥
ಅಕ್ಷಕ್ರೀಡೆಯು ಮುಗಿದ ಮೇಲೆ ರುದ್ರದೇವರು ಆ ದೇವಿಯನ್ನು ಕುರಿತು, ಅವನನ್ನು ಕೈಯಲ್ಲಿ ಹಿಡಿದು ಪಗಡೆಯಾಡುತ್ತಿದ್ದ ಈ ಸ್ಥಳಕ್ಕೆ ಕರೆದುಕೊಂಡು ಬಾ, ಇನ್ನೊಮ್ಮೆ ಅವನಿಗೆ ದರ್ಪವು ಉಂಟಾಗಬಾರದು ಎಂದು ಹೇಳಿದರು.
ತದಾ ಶಕ್ರಃ ಸ್ಪೃಷ್ಟಮಾತ್ರೇ ತಯಾ ತು
ಸ್ರಸ್ತೈರಂಗೈಃ ಪತಿತೋಽಭೂದ್ ಧರಣ್ಯಾಮ್ |
ತಮಬ್ರವೀದ್ ಭಗವಾನುಗ್ರತೇಜಾ
ನೈವಂ ಪುನಃ ಶಕ್ರ ಕೃಥಾಃ ಕಥಂಚಿತ್ ॥18॥
ಆ ದೇವಿಯು ಸ್ಪರ್ಶಮಾಡಿದ ತಕ್ಷಣ ಇಂದ್ರನು ತನ್ನ ದೇಹದ ಅಂಗಗಳು ಸಡಿಲವಾಗಿ ಭೂಮಿಯಮೇಲೆ ಬಿದ್ದನು.
ಉಗ್ರತೇಜಸ್ವಿಗಳಾದ, ಪೂಜ್ಯರಾದ ರುದ್ರದೇವರು ಅವನನ್ನು ಕುರಿತು ಇಂದ್ರನೇ, ಇನ್ನೊಮ್ಮೆ ಹೀಗೆ ಮಾಡಬೇಡ ಎಂದು ಹೇಳಿದರು.
ವಿವರ್ತಯ್ಯೆನಂ ಚ ಮಹಾದ್ರಿರಾಜಂ
ಬಲಂ ಚ ವೀರ್ಯಂ ಚ ತವಾಪ್ರಮೇಯಮ್ |
ವಿವೃತ್ಯ ಚೈವಾವಿಶ ಮಧ್ಯಮಸ್ಯ
ಯತ್ರಾಸತೇ ತ್ವದ್ವಿಧಾಃ ಸೂರ್ಯಭಾಸಃ ॥19॥
ಈ ದೊಡ್ಡ ಪರ್ವತವನ್ನು ನಿನ್ನ ಅಪ್ರಮೇಯವಾದ ಬಲ ಮತ್ತು ಪರಾಕ್ರಮದಿಂದ ಹೊರಳಿಸಿ ಅದರ ಮಧ್ಯಭಾಗವನ್ನು ಪ್ರವೇಶಿಸು. ಅಲ್ಲಿ ಸೂರ್ಯನ ಕಾಂತಿಯನ್ನು ಹೊಂದಿರುವ ನಿನ್ನಂತಹವರು ಇದ್ದಾರೆ.
ಸ ತದ್ ವಿವೃತ್ಯ ಶಿಖರಂ ಮಹಾಗಿರೇಃ
ತುಲ್ಯದ್ಯುತೀಂಸ್ತಾಂಶ್ಚತುರೋ ದದರ್ಶ |
ಸ ತಾನಭಿಪ್ರೇಕ್ಷ್ಯ ಬಭೂವ ದುಃಖಿತಃ
ಕಥಂ ನಾಹಂ ಭವಿತಾ ವೈ ಯಥೇಮೇ ॥20॥
ಇಂದ್ರನು ಆ ಮಹಾಪರ್ವತದ ಶಿಖರವನ್ನು ಹೊರಳಿಸಿ ಸಮಾನವಾದ ಕಾಂತಿಯುಳ್ಳ ನಾಲ್ವರನ್ನು ನೋಡಿದನು. ಅವನು ಅವರನ್ನು ನೋಡಿ ನಾನು ಇವರ ಗತಿಯನ್ನು ಹೊಂದದಿರುವುದು ಹೇಗೆ ಎಂದು ಯೋಚಿಸಿ ದುಃಖಿತನಾದನು.
ತತೋ ದೇವೋ ಗಿರಿಶೋ ವಜ್ರಪಾಣಿಂ
ವಿವೃತ್ಯ ನೇತ್ರೇ ರುಷಿತೋಽಭ್ಯುವಾಚ |
ದರೀಮೇತಾಂ ಪ್ರವಿಶ ತ್ವಂ ಶತಕ್ರತೋ
ಯನ್ಮಾಂ ಬಾಲ್ಯಾದವಮಂಸ್ಥಾಃ ಪುರಸ್ತಾತ್ ॥21॥
ಆಗ ರುದ್ರದೇವರು ಕಣ್ಣುಗಳನ್ನು ಅರಳಿಸಿ ಸಿಟ್ಟಿನಿಂದ ವಜ್ರಪಾಣಿಯನ್ನು ಕುರಿತು ಶತಕ್ರತುವೇ, ಹುಡುಗತನದಿಂದ ನನ್ನನ್ನು ಮೊದಲು ಅವಮಾನ ಮಾಡಿದ ಕಾರಣ ನೀನೂ ಈ ಗುಹೆಯನ್ನು ಪ್ರವೇಶಿಸು ಎಂದು ಹೇಳಿದರು.
ಉಕ್ತಸ್ತ್ವೇವಂ ವಿಭುನಾ ದೇವರಾಜಃ
ಪ್ರವೇಪಮಾನೋ ಭೃಶಮೇವಾಭಿಷಂಗಾತ್ |
ಸ್ರಸ್ತೈರಂಗೈರನಿಲೇನೇವ ನುನ್ನ-
ಮಶ್ವತ್ಥಪತ್ರಂ ಗಿರಿರಾಜಮೂರ್ಧ್ನಿ ॥22॥
ಪ್ರಭುಗಳಾದ ರುದ್ರದೇವರಿಂದ ಹೀಗೆ ಹೇಳಲ್ಪಡುತ್ತಿರಲು ದೇವರಾಜನಾದ ಇಂದ್ರನು ಆ ಪರ್ವತದ ಶಿಖರದಲ್ಲಿ ವಾಯುವಿನಿಂದ ಕಂಪಿಸುವ ಅಶ್ವತ್ಥಪತ್ರದಂತೆ ಶಿಥಿಲವಾದ ಅವಯವವುಳ್ಳವನಾಗಿ ಭಯದಿಂದ ನಡುಗಿದನು.
ಸ ಪ್ರಾಂಜಲಿಃ ಸನ್ ವಿನತೇನಾನನೇನ
ಪ್ರವೇಪಮಾನಃ ಸಹಸೈವ ಮುಕ್ತಃ |
ಉವಾಚ ದೇವಂ ಬಹುರೂಪಮುಗ್ರಂ
ದೃಷ್ಟ್ವಾ ಶೇಷಂ ಭಗವಂಸ್ತ್ವಂ ಭವಾದ್ಯ ॥23॥
ಗುಹಾಪ್ರವೇಶದಿಂದ ನಿವಾರಿಸಲ್ಪಟ್ಟ ಇಂದ್ರನು ವಿನಯದಿಂದ ತಲೆಯನ್ನು ತಗ್ಗಿಸಿ ಕೈಗಳನ್ನು ಮುಗಿದು ನಡುಗುತ್ತಾ ಬಹುರೂಪನೂ, ಶೇಷರೂಪಿಯೂ ಆದ ಅವನನ್ನು ಕುರಿತು ಪೂಜ್ಯನೇ, ನನಗೆ ಈದಿನ ನೀನು ರಕ್ಷಕನಾಗು ಎಂದು ಹೇಳಿದನು.
ತಮಬ್ರವೀದುಗ್ರಧನ್ವಾ ಪ್ರಹಸ್ಯ
ನೈವಂವಿಧಾಃ ಶೇಷಮಿಹಾಪ್ನುವಂತಿ |

ಏತೇऽಪ್ಯೇವಂ ಭವಿತಾರಃ ಪುರಸ್ತಾತ್
ತಸ್ಮಾದೇತೇ ದರೀಮೇನಾಂ ಪ್ರವಿಷ್ಟಾಃ ॥24॥
ಉಗ್ರಧನ್ವರಾದ ರುದ್ರದೇವರು ನಕ್ಕು, ಅವನನ್ನು ಕುರಿತು ಹೀಗೆ ಅಹಂಕಾರದಿಂದ ಯುಕ್ತರಾದವರು ಮೋಕ್ಷಮಾರ್ಗಭೂತನಾದ, ಶೇಷರೂಪಿಯಾದ ನನ್ನನ್ನು ಹೊಂದುವುದಿಲ್ಲ. ಈ ನಾಲ್ಕೂ ಜನರೂ ಹಿಂದೆ ಹೀಗೆಯೇ ಅಹಂಕಾರಿಗಳಾಗಿದ್ದರು. ಆದ್ದರಿಂದ ಅವರು ಈ ಗುಹೆಯನ್ನು ಪ್ರವೇಶಿಸಿದ್ದಾರೆ.
ಏಷಾ ದೇವೀ ಭವಿತಾ ವೋ ನ ಸಂಶಯೋ
ಯೋನಿಂ ಸರ್ವೇ ಮಾನುಷೀಮಾವಿಶಧ್ವಮ್ ।
ತತ್ರ ಯೂಯಂ ಕರ್ಮ ಕೃತ್ವಾऽವಿಷಹ್ಯಂ
ಭೂಭಾರಸ್ಯ ನಿಧನಂ ಪ್ರಾಪಯಿತ್ವಾ ॥25॥
ಶಸ್ತ್ರೈರ್ದಿವ್ಯೈರ್ಮಾನುಷಾನ್ ಯೋಧಯಿತ್ವಾ
ಶೂರಾನ್ ಸರ್ವೇ ಚಾಹವೇ ತಾನ್ ವಿಮೃದ್ಯ ।
ಆಗಂತಾರಃ ಪುನರೇವೇಂದ್ರಲೋಕಂ
ಸ್ವಕರ್ಮಣಾ ಪೂಜ್ಯಮಾನಾ ಮಹಾರ್ಹಾಃ ।
ಸರ್ವೈರ್ಮಯಾ ಭಾಷಿತಮೇತದೇವಂ
ಕರ್ತವ್ಯಮನ್ಯದ್ ವಿವಿಧಾರ್ಥವಚ್ಚ ॥26॥
ಈ ದೇವಿಯು ನಿಮ್ಮೆಲ್ಲರಿಗೂ ಪತ್ನಿಯಾಗುವಳು. ಇದರಲ್ಲಿ ಸಂಶಯವಿಲ್ಲ. ಎಲ್ಲರೂ ಮನುಷ್ಯಯೋನಿಯನ್ನು ಪ್ರವೇಶಿಸಿ. ಅಲ್ಲಿ ನೀವು ಅಸಾಧಾರಣವಾದ ಕರ್ಮವನ್ನು ಮಾಡಿ ಭೂಭಾರವನ್ನು ಹರಣ ಮಾಡಿ ದಿವ್ಯಶಸ್ತ್ರಗಳಿಂದ ಮನುಷ್ಯರ ಜೊತೆಯಲ್ಲಿ ಯುದ್ಧವನ್ನು ಮಾಡಿ ಯುದ್ಧದಲ್ಲಿ ಆ ಶೂರರೆಲ್ಲರನ್ನೂ ವಿನಾಶಗೊಳಿಸಿ ಪುನಃ ಇಂದ್ರಲೋಕಕ್ಕೆ ಬಂದು ನಿಮ್ಮ ನಿಮ್ಮ ಕರ್ಮಗಳನ್ನು ಮಾಡಿ ಮಹಾಸತ್ಕಾರಕ್ಕೆ ಯೋಗ್ಯರಾಗಿ ಪೂಜ್ಯರಾಗುವಿರಿ. ನಾನು ಹೇಳಿದಂತೆ ನೀವೆಲ್ಲರೂ ಈ ಕಾರ್ಯವನ್ನು ಮಾಡಬೇಕು. ಇದರಿಂದ ಅನೇಕ ಪ್ರಯೋಜನಗಳಿವೆ.
ಪೂರ್ವೇಂದ್ರಾಃ
ಗಮಿಷ್ಯಾಮೋ ಮಾನುಷಂ ದೇವಲೋಕಾದ್
ದುರಾವರೋ ವಿಹಿತೋ ಯತ್ರ ಮೋಕ್ಷಃ ।
ದೇವಾಸ್ತ್ವಸ್ಮಾನಾದಧೀರನ್ ಜನನ್ಯಾಂ
ಧರ್ಮೋ ವಾಯುರ್ಮಘವಾನಶ್ವಿನೌ ಚ ॥27॥
ನಾವು ದೇವಲೋಕವನ್ನು ಬಿಟ್ಟು ದುರ್ಲಭವಾದ ಮೋಕ್ಷಕ್ಕೆ ಎಲ್ಲಿ ಶ್ರವಣಮನನಾದಿ ಸಾಧನಗಳು ವಿಹಿತವಾಗಿವೆಯೋ ಅಂತಹ ಮನುಷ್ಯ- ಲೋಕಕ್ಕೆ ಹೋಗುವೆವು. ದೇವತೆಗಳಾದ ಧರ್ಮ, ವಾಯು, ಇಂದ್ರ ಮತ್ತು ಅಶ್ವಿನೀದೇವತೆಗಳು ನಮ್ಮನ್ನು ತಾಯಿಯ ಉದರದಲ್ಲಿ ಆಧಾನ ಮಾಡಲಿ.
ವ್ಯಾಸಃ
ಏತಚ್ಛ್ರುತ್ವಾ ವಜ್ರಪಾಣೇರ್ವಚಸ್ತು
ದೇವಶ್ರೇಷ್ಠಃ ಪುನರೇವೇದಮಾಹ ।
ವೀರ್ಯೇಣಾಹಂ ಪುರುಷಂ ಕಾರ್ಯಹೇತೋ-
ರ್ದದ್ಯಾಮೇಷಾಂ ಪಂಚಮಂ ಮತ್ಪ್ರಸೂತಮ್ ॥28॥
ಇಂದ್ರನ ಈ ಮಾತುಗಳನ್ನು ಕೇಳಿ ದೇವಶ್ರೇಷ್ಠರಾದ ರುದ್ರದೇವರು, ನಾನು ದೇವಕಾರ್ಯದ ಸಲುವಾಗಿ ನನ್ನಿಂದ ಉತ್ಪನ್ನನಾದ ನನ್ನ ಪರಾಕ್ರಮವನ್ನು ತೆಗೆದುಕೊಂಡು ಜನಿಸುವ ಐದನೆಯ ಪುರುಷನನ್ನು ನಿಮಗೆ ಕೊಡುತ್ತೇನೆ ಎಂದು ಹೇಳಿದರು.
ತೇಷಾಂ ಕಾಮಂ ಭಗವಾನುಗ್ರಕರ್ಮಾ
ಪ್ರಾದಾದಿಷ್ಟಂ ಸನ್ನಿಸರ್ಗಾದ್ ಯಥೋಕ್ತಮ್ ।
ತಾಂ ಚಾಪ್ಯೇಷಾಂ ಯೋಷಿತಂ ಲೋಕಕಾಂತಾಂ
ಶ್ರಿಯಂ ಭಾರ್ಯಾಂ ವ್ಯದಧಾನ್ಮಾನುಷೇಷು ॥29॥
ಉಗ್ರಕರ್ಮರಾದ ರುದ್ರದೇವರು ಅವರಿಗೆ ಇಷ್ಟವಾದ ಕಾಮವನ್ನು ಕೊಟ್ಟು, ಹೇಳಿದಂತೆ ಅವರನ್ನು ಮನುಷ್ಯಯೋನಿಯಲ್ಲಿ ಹಾಕಿದರು. ಇವರ ಭಾರ್ಯೆಯಾದ ಲೋಕಮನೋಹರಳಾದ ಶ್ರೀದೇವಿಯನ್ನೂ ಮನುಷ್ಯಯೋನಿಯಲ್ಲಿ ಹಾಕಿದರು.
(ಸುಖರೂಪರಾದ ವಾಯುದೇವರಲ್ಲಿ ರತರಾದುದರಿಂದ ಭಾರತಿಗೆ ಶ್ರೀ ಎಂದು ಹೆಸರು. ಶಚಿ, ಶ್ಯಾಮಲೆ ಮತ್ತು ಉಷೆಯರು ತಮ್ಮ ತಮ್ಮ ಪತಿಗಳನ್ನು ಆಶ್ರಯಿಸಿರುವುದರಿಂದ ಅವರಿಗೂ ಶ್ರೀದೇವಿ ಎಂದು ಹೆಸರಿದೆ.)
ತೈರೇವ ಸಾರ್ಧಂ ತು ತತಃ ಸ ದೇವೋ
ಜಗಾಮ ನಾರಾಯಣಮಪ್ರಮೇಯಮ್ ।
ಸ ಚಾಪಿ ತದ್ ವ್ಯದಧಾತ್ ಸರ್ವಮೇವ
ತತಃ ಸರ್ವೇ ಸಂಬಭೂವುರ್ಧರಣ್ಯಾಮ್ ॥30॥
ರುದ್ರದೇವರು ಆ ಎಲ್ಲರನ್ನೂ ಕರೆದುಕೊಂಡು ಅಪ್ರಮೇಯನಾದ ನಾರಾಯಣನ ಬಳಿಗೆ ಹೋದರು. ನಾರಾಯಣನೂ ಸಹ ಎಲ್ಲವೂ ಹಾಗೆಯೇ ಆಗಲಿ ಎಂದು ಸಮ್ಮತಿಸಿದ ಮೇಲೆ ಅವರೆಲ್ಲರೂ ಭೂಮಿಯಲ್ಲಿ ಜನಿಸಿದರು.
ನರಂ ತು ದೇವಂ ವಿಬುಧಪ್ರಧಾನ-

ಮಿಂದ್ರಾದ್ ವಿಷ್ಣುಃ ಪಂಚಮಂ ಕಲ್ಪಯಿತ್ವಾ |
ಸ ಚಾಪಿ ಕೇಶೌ ಹರಿರುದ್ವಬರ್ಹ
ಶುಕ್ಲಮೇಕಮಪರಂ ಚಾಪಿ ಕೃಷ್ಣಮ್ ॥31॥
ವಿಷ್ಣುವು ದೇವಪ್ರಧಾನನಾದ ಇಂದ್ರನನ್ನು ಶೇಷದೇವರಿಂದ ಮತ್ತು ವಾಯುದೇವರಿಂದ ಕೂಡಿದ ನರಾವೇಶವುಳ್ಳವನಾಗಿ ಐದನೆಯವನನ್ನಾಗಿ ಕಲ್ಪಿಸಿ ತನ್ನ ಕೂದಲುಗಳಲ್ಲಿ ಒಂದು ಬಿಳಿಯ ಕೂದಲನ್ನೂ, ಒಂದು ಕಪ್ಪು ಕೂದಲನ್ನೂ ಕಿತ್ತನು.
ತೌ ಚಾಪಿ ಕೇಶೌ ವಿಶತಾಂ ಯದೂನಾಂ
ಕುಲೇ ಸ್ತ್ರಿಯೋ ದೇವಕೀಂ ರೋಹಿಣೀಂ ಚ |
ತಯೋಃ ಶ್ವೇತೋ ಬಲದೇವೋ ಬಭೂವ
ಕೃಷ್ಣೋ ದ್ವಿತೀಯಃ ಕೇಶವಃ ಸಂಬಭೂವ ॥32॥
ಆ ಎರಡು ಕೇಶಗಳೂ ಸಹ ಯದುಕುಲವನಿತೆಯರಾದ ರೋಹಿಣಿ ಮತ್ತು ದೇವಕಿಯರನ್ನು ಪ್ರವೇಶಿಸಿದವು. ಶ್ವೇತಕೇಶವು ಬಲರಾಮನಾಗಿ ಅವತರಿಸಿತು. ಎರಡನೆಯ ಕೃಷ್ಣಕೇಶವು ಕೇಶವನಾಗಿ (ಕೃಷ್ಣನಾಗಿ) ಅವತರಿಸಿತು.
ಯೇ ತೇ ಪೂರ್ವಂ ಶಕ್ರರೂಪಾ ನಿವಿಷ್ಟಾಃ
ತಸ್ಯಾಂ ದರ್ಯಾಂ ಪರ್ವತಸ್ಯೋತ್ತಮಸ್ಯ |
ಇಹೈವ ತೇ ಪಾಂಡವಾ ವೀರ್ಯವಂತಃ
ಶಕ್ರಸ್ಯಾಂಶಃ ಪಾಂಡವಃ ಸವ್ಯಸಾಚೀ ॥33॥
ಹಿಂದೆ ಆ ಶ್ರೇಷ್ಠಪರ್ವತದ ಗುಹೆಯಲ್ಲಿ ಇದ್ದವರೇ ಇಲ್ಲಿ ಪರಾಕ್ರಮಶಾಲಿಗಳಾದ ಪಾಂಡವರಾದರು. ಪಾಂಡುಪುತ್ರನಾದ ಸವ್ಯಸಾಚಿಯು ಇಂದ್ರನ ಅಂಶ. (ಇಂದ್ರನ ಅಂಶವಾಗಿ ಅವತರಿಸಿದನು)
ಏವಮೇತೇ ಪಾಂಡವಾಃ ಸಂಬಭೂವು-
ರ್ಯೇ ತೇ ರಾಜನ್ ಪೂರ್ವಮಿಂದ್ರಾ ಬಭೂವುಃ |
ಲಕ್ಷ್ಮೀಶ್ಚೈಷಾಂ ಪೂರ್ವಮೇವೋಪದಿಷ್ಟಾ
ಭಾರ್ಯಾ ಚೈಷಾ ದ್ರೌಪದೀ ವ್ಯಕ್ತರೂಪಾ ॥34॥
ರಾಜನೇ, ಹಿಂದೆ ಇಂದ್ರರಾಗಿದ್ದ ಇವರೆಲ್ಲರೂ ಪಾಂಡವರಾಗಿ ಜನಿಸಿದರು. ಎಲ್ಲಾ ಲಕ್ಷಣಗಳಿಂದ ಕೂಡಿದ ಇವರ ಭಾರ್ಯೆಯೇ ವ್ಯಕ್ತವಾದ ಸೌಂದರ್ಯವುಳ್ಳ ಈ ದ್ರೌಪದಿಯಾಗಿದ್ದಾಳೆ.
ಕಥಂ ಹಿ ಸ್ತ್ರೀ ಕರ್ಮಣೋಽನ್ತೇ ಮಹೀತಳಾತ್
ಸಮುತ್ತಿಷ್ಠೇದನ್ಯತೋ ದೈವಯೋಗಾತ್ |
ಯಸ್ಯಾ ರೂಪಂ ಸೋಮಸೂರ್ಯಪ್ರಕಾಶಂ
ಗಂಧಶ್ಚಾಗ್ರ್ಯಃ ಕ್ರೋಶಮಾತ್ರಾತ್ ಪ್ರವಾತಿ ॥35॥
ಇಂತಹ ದೈವಯೋಗವಿಲ್ಲದಿದ್ದರೆ ಯಜ್ಞರೂಪವಾದ ಕರ್ಮದ ಕೊನೆಯಲ್ಲಿ ಒಬ್ಬ ವನಿತೆಯು ಭೂಮಿಯಿಂದ ಎದ್ದು ಬರುವುದು ಹೇಗೆ? ಅಪ್ರತಿಮವಾದ ಸೋಮಸೂರ್ಯಕಾಂತಿಯನ್ನು ಹೊಂದಿರುವ ಅವಳ ಸೌಂದರ್ಯವೂ ಒಂದು ಕ್ರೋಶದಿಂದ ಬೀಸುವ ಅವಳ ಸುಗಂಧವೂ (ದೈವಯೋಗವಿಲ್ಲದಿದ್ದರೆ) ಹೇಗೆ ಸಾಧ್ಯವಾಗುತ್ತದೆ?
ಇದಂ ಚಾನ್ಯತ್ ಪ್ರೀತಿಪೂರ್ವಂ ನರೇಂದ್ರ
ದದಾಮಿ ತೇ ದಿವ್ಯಮತ್ಯದ್ಭುತಂ ಚ |
ದಿವ್ಯಂ ಚಕ್ಷುಃ ಪಶ್ಯ ಕುಂತೀಸುತಾಂಸ್ತ್ವಂ
ಪುಣ್ಯೈರ್ದಿವ್ಯೈಃ ಪೂರ್ವದೇಹೈರುಪೇತಾನ್ ॥36॥
ನರೇಂದ್ರನೇ, ನಾನು ನಿನಗೆ ಪ್ರೀತಿಪೂರ್ವಕವಾಗಿ ಅನುಗ್ರಹವನ್ನು ಮಾಡಿ ಅದ್ಭುತವಾದ ದಿವ್ಯದೃಷ್ಟಿಯನ್ನು ಕೊಡುತ್ತೇನೆ. ನೀನು ದಿವ್ಯಚಕ್ಷುಸ್ಸನ್ನು ಹೊಂದಿ ಈ ಕುಂತಿಯ ಪುತ್ರರು ಪವಿತ್ರವಾದ ಮತ್ತು ದಿವ್ಯವಾದ ಪೂರ್ವದೇಹಗಳನ್ನು ಹೊಂದಿರುವುದನ್ನು ನೋಡು.
ವೈಶಂಪಾಯನಃ
ತತೋ ವ್ಯಾಸಃ ಪರಮೋದಾರಕರ್ಮಾ
ಶುಚಿರ್ವಿಪ್ರಸ್ತಪಸಾ ತಸ್ಯ ರಾಜ್ಞಃ |
ಚಕ್ಷುರ್ದಿವ್ಯಂ ಪ್ರದದೌ ತೇನ ಸರ್ವಾನ್
ರಾಜಾಽಪಶ್ಯತ್ ಪೂರ್ವದೇಹೈರುಪೇತಾನ್ ॥37॥
ಅನಂತರ, ಶುಚಿಯೂ, ಪರಮೋದಾರಕರ್ಮರೂ, ವಿಪ್ರರೂ ಆದ ವ್ಯಾಸರು ತಮ್ಮ ತಪೋಬಲದಿಂದ ಆ ರಾಜನಿಗೆ ದಿವ್ಯದೃಷ್ಟಿಯನ್ನು ನೀಡಿದರು. ರಾಜನು ದಿವ್ಯದೃಷ್ಟಿಯಿಂದ ಪೂರ್ವದೇಹಗಳಿಂದ ಯುಕ್ತರಾದ ಆ ಎಲ್ಲರನ್ನೂ ನೋಡಿದನು.
ತತೋ ದಿವ್ಯಾನ್ ಹೇಮಕಿರೀಟಮಾಲಿನಃ
ಶಕ್ರಪ್ರಖ್ಯಾನ್ ಪಾವಕಾದಿತ್ಯವರ್ಣಾನ್
ಬದ್ಧಾಪೀಡಾಂಶ್ಚಾರುರೂಪಾಂಶ್ಚ ಯೂನೋ
ವ್ಯೂಢೋರಸ್ಕಾನ್ ಸಾಲಮಾತ್ರಾನ್ ದದರ್ಶ ॥38॥
ರಾಜನು ಚಿನ್ನದ ಕಿರೀಟವನ್ನೂ ಮತ್ತು ಮಾಲೆಗಳನ್ನೂ ಧರಿಸಿದ, ಇಂದ್ರನ ತೇಜಸ್ಸನ್ನು ಹೊಂದಿರುವ, ಅಗ್ನಿ ಮತ್ತು ಆದಿತ್ಯ

ವರ್ಣಗಳನ್ನು ಹೊಂದಿರುವ, ತಲೆಗಳ ಮೇಲೆ ಉಷ್ಣೀಷಗಳನ್ನು ಧರಿಸಿರುವ, ಮನೋಹರ ರೂಪವನ್ನುಳ್ಳ, ಉನ್ನತವಾದ ವಕ್ಷಸ್ಥಳವುಳ್ಳ, ಸಾಲವೃಕ್ಷದಂತೆ ಎತ್ತರವಾದ ಯುವಕರಾದ ಅವರೆಲ್ಲರನ್ನೂ ನೋಡಿದನು.

ದಿವ್ಯೈರ್ವಸ್ತ್ರೈರರಜೋಭಿಃ ಸುವರ್ಣೈ-
ರ್ಮಾಲ್ಯೈಶ್ಚಾ ಗ್ರ್ಯೈಃ ಶೋಭಮಾನಾನತೀವ |
ಸಾಕ್ಷಾತ್ ತ್ರ್ಯಕ್ಷಾನ್ ವಾಸವಾನ್ ವಾऽಥ ದಿವ್ಯಾನ್
ಆದಿತ್ಯಾನ್ ವಾ ಸರ್ವಗುಣೋಪಪನ್ನಾನ್ ॥39॥

ಶುಭ್ರವಾದ ಕಲ್ಮಶರಹಿತವಾದ ದಿವ್ಯವಸ್ತ್ರಗಳನ್ನು ಧರಿಸಿದ್ದಂತಹ, ಶ್ರೇಷ್ಠವಾದ ಸುವರ್ಣಮಾಲೆಗಳನ್ನು ಧರಿಸಿದ್ದಂತಹ, ಸಾಕ್ಷಾತ್ ರುದ್ರರಂತೆ ಅಥವಾ ಇಂದ್ರರಂತೆ ಅಥವಾ ಸೂರ್ಯರಂತೆ ಸರ್ವಗುಣದಿಂದ ಕೂಡಿದವರಾಗಿ ಬೆಳಗುತ್ತಿದ್ದ ಅವರನ್ನು ನೋಡಿದನು.

ಪೂರ್ವೇಂದ್ರಾಂಸ್ತಾನೇವಮೀಕ್ಷ್ಯಾಭಿರೂಪಾನ್
ಪ್ರೀತೋ ರಾಜಾ ದ್ರುಪದೋ ವಿಸ್ಮಿತಶ್ಚ |
ದಿವ್ಯಾಂ ಮಾಯಾಂ ತಾಮವಾಪ್ಯಾಪ್ರಮೇಯಾಂ
ತಾಂ ಚೈವಾಗ್ರ್ಯಾಂ ಶ್ರಿಯಮಿವ ರೂಪಿಣೀಂ ಚ ॥40॥
ಯೋಗ್ಯಾಂ ತೇಷಾಂ ರೂಪತೇಜೋಯಶೋಭಿಃ |
ಪುತ್ರೀಮಿಷ್ಟಾಂ ದೃಷ್ಟವಾನ್ ಪಾರ್ಥಿವೇಂದ್ರಃ ॥41॥

ದ್ರುಪದರಾಜನು ಅಭಿರೂಪರಾದ ಪೂರ್ವೇಂದ್ರರನ್ನು ಈ ರೀತಿಯಲ್ಲಿ ನೋಡಿ ವಿಸ್ಮಯವನ್ನೂ ಮತ್ತು ಸಂತೋಷವನ್ನೂ ಹೊಂದಿದನು. ರೂಪ, ತೇಜಸ್ಸು ಮತ್ತು ಕಾಂತಿಗಳಿಂದ ಅವರಿಗೆ ಅನುರೂಪಳಾದ ಲಕ್ಷ್ಮಿಯಂತೆ ಕಂಗೊಳಿಸುತ್ತಿರುವ ಅಪ್ರಮೇಯವಾದ ಮಹಿಮೆಯುಳ್ಳ ತನ್ನ ಮಗಳ ದಿವ್ಯವಾದ ರೂಪವನ್ನೂ ರಾಜನು ನೋಡಿದನು.

ಸ ತಾಂ ದೃಷ್ಟ್ವಾ ಮಹದಾಶ್ಚರ್ಯರೂಪಾಂ
ಜಗ್ರಾಹ ಪಾದೌ ಸತ್ಯವತ್ಯಾಃ ಸುತಸ್ಯ |
ನೈತಚ್ಚಿತ್ರಂ ಪರಮರ್ಷೇ ತ್ವಯೀತಿ
ಪ್ರಸನ್ನಚೇತಾಃ ಸ ಉವಾಚ ಚೈನಮ್ ॥42॥

ರಾಜನು ಮಹದಾಶ್ಚರ್ಯಕರವಾದ ದ್ರೌಪದಿಯ ಆ ರೂಪವನ್ನು ನೋಡಿ ಸತ್ಯವತೀಸುತರಾದ ವ್ಯಾಸರ ಪಾದಗಳನ್ನು ಹಿಡಿದು ಪರಮರ್ಷಿಗಳೇ, ನಿಮ್ಮಲ್ಲಿ ನಿಮ್ಮ ತಪಸ್ಸಿಗೆ ನಿಲುಕದ ಯಾವ ಆಶ್ಚರ್ಯವೂ ಇಲ್ಲ (ನಿಮ್ಮ ಯೋಗ್ಯತೆಗೆ ಇದು ಆಶ್ಚರ್ಯವಲ್ಲ) ಎಂದು ಪ್ರಸನ್ನವಾದ ಮನಸ್ಸಿನಿಂದ ಹೇಳಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತನವತ್ಯಧಿಕಶತತಮೋऽಧ್ಯಾಯಃ ॥
॥ ಇತಿ ವೈವಾಹಿಕಪರ್ವಣಿ ಷಷ್ಠೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರತೊಂಭತ್ತೇಳನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-19

ದತ್ವಾऽಭಯಂ ಸ ಭಗವಾನ್ ದ್ರುಪದಸ್ಯ ಕಾರ್ಯೇ
ತೇನೋಮಿತಿ ಸ್ಮ ಕಥಿತೇ ಸ್ವಯಮೇವ ಸರ್ವಾಂ |
ವೈವಾಹಿಕೀಂ ಕೃತಿಮಥ ವ್ಯದಧಾಚ್ಚ ಧೌಮ್ಯ-
ಯುಕ್ತಃ ಕ್ರಮೇಣ ಜಗೃಹುರ್ನಿಖಿಲಾಶ್ಚ ಪಾಣಿಮ್ ॥158॥

ಭಗವಾನ್ ವೇದವ್ಯಾಸರು ದ್ರುಪದನಿಗೆ ಅಭಯ ನೀಡಿ, ಅವನು ಕನ್ಯಾದಾನ ಕಾರ್ಯಕ್ಕೆ ಸಮ್ಮತಿಸಿದಾಗ ಧೌಮ್ಯರ ಜೊತೆಗೆ ತಾನೇನಿಂತು ಎಲ್ಲ ವಿವಾಹ ಕಾರ್ಯಗಳನ್ನು ನಡೆಸಿಕೊಟ್ಟರು. ಪಾಂಡವರೆಲ್ಲರೂ ಕ್ರಮವಾಗಿ ಪಾಣಿಗ್ರಹಣ ಮಾಡಿದರು.

ಪಾಂಚಾಲಕೇಷು ಚ ಮಹೋತ್ಸವ ಆಸ ರಾಜಾ
ತುಷ್ಟೋऽಭವತ್ ಸಹ ಸುತೈಃ ಸ್ವಜನೈಶ್ಚ ಸರ್ವೈಃ |
ಪೌರೈಶ್ಚ ಜಾನಪದಿಕೈಶ್ಚ ಯಥೈವ ರಾಮೇ
ದತ್ವಾ ಸುತಾಂ ಜನಕ ಆಪ ಮುದಂ ತತೋऽನು ॥159॥

ಪಾಂಚಾಲದೇಶದಲ್ಲಿ ಮಂಗಳ ಮಹೋತ್ಸವ ನಡೆಯಿತು. ರಾಜ ತನ್ನ ಮಕ್ಕಳು ಮತ್ತು ಬಂಧುಗಳೆಲ್ಲರ ಜೊತೆಗೆ, ಪೌರರ ಮತ್ತು ದೇಶವಾಸಿಗಳ ಜೊತೆಗೆ ಮಹೋತ್ಸವದ ಆನಂದವನ್ನು ಅನುಭವಿಸಿದ. ಹಿಂದೆ ಶ್ರೀರಾಮನಿಗೆ ತನ್ನ ಮಗಳನ್ನಿತ್ತು ಜನಕರಾಜ ಮುದಗೊಂಡಂತೆ, ದ್ರುಪದನೂ ಮುದಗೊಂಡ.

ಉದ್ವಾಹ್ಯ ತತ್ರ ನಿವಸತ್ಸು ಚ ಪಾಂಡವೇಷು
ಶ್ರುತ್ವೈವ ರಾಮಸಹಿತಃ ಸಹ ಯಾದವೈಶ್ಚ |
ಆದಾಯ ಪಾರಿಬರ್ಹಂ ಬಹುಲಂ ಸ ಕೃಷ್ಣ
ಆಯಾನ್ಮುದೈವ ಪೃಥಯಾ ಸಹಿತಾಂಶ್ಚ ಪಾರ್ಥಾನ್ ॥160॥

ಪಾಂಡವರು ಮದುವೆಯಾಗಿ ಪಾಂಚಾಲದೇಶದಲ್ಲಿದ್ದಾಗ ಆ ವೃತ್ತಾಂತವನ್ನು ಕೇಳಿ ಶ್ರೀಕೃಷ್ಣ ಬಲರಾಮ ಮತ್ತು ಯಾದವರ ಸಹಿತನಾಗಿ ಬಹಳ ಉಡುಗೊರೆಗಳನ್ನು ತೆಗೆದುಕೊಂಡು ಕುಂತೀಸಮೇತರಾದ ಪಾಂಡವರ ಬಳಿಗೆ ಆನಂದದಿಂದ ಬಂದ.

ದೃಷ್ಟ್ವೈವ ತಂ ಮುಮುದುರಾಶು ಕುರುಪ್ರವೀರಾ

ಆಶ್ಲಿಷ್ಯ ಕೃಷ್ಣಮಥ ನೇಮುರಸೌ ಚ ಕೃಷ್ಣಾಂ |
ದೃಷ್ಟ್ವಾ ಪ್ರದಾಯ ಗೃಹಯೋಗ್ಯಸಮಸ್ತಭಾಂಡಂ
ಸೌವರ್ಣಮೇಭ್ಯ ಉರುಭೂಷಣಮಚ್ಯುತೋಽದಾತ್ ॥161॥
ಶ್ರೀಕೃಷ್ಣನನ್ನು ಕಂಡೊಡನೆ ಪಾಂಡವರು ಆನಂದಿಸಿದರು. ಬೇಗನೆ ಅವನನ್ನು ಆಲಿಂಗಿಸಿ ನಮಿಸಿದರು. ಕೃಷ್ಣ ದ್ರೌಪದಿಯನ್ನು ನೋಡಿ ಮನೆಗೆ ಬೇಕಾಗುವ ಎಲ್ಲ ಪಾತ್ರೆಗಳನ್ನೂ ನೀಡಿ ಪಾಂಡವರಿಗೆ ಬಹಳ ಚಿನ್ನದ ಆಭರಣಗಳನ್ನು ನೀಡಿದ.
ದೇವಾಂಗಯೋಗ್ಯಶುಭಕುಂಡಲಹಾರಮೌಲಿ-
ಕೇಯೂರವಸ್ತ್ರಸಹಿತಾನ್ಯುರುಭೂಷಣಾನಿ |
ಷಣ್ಣಾಂ ಪೃಥಕ್ ಪೃಥಗದಾತ್ ಪೃಥಗೇವ ಯೋಗ್ಯಾ-
ನ್ಯನ್ಯದ್ ದದಾವಥ ಪಿತೃಷ್ವಸುರಾತ್ಮ ಯೋಗ್ಯಂ ॥162॥
ದೇವತೆಗಳ ಮೈಗೆ ಯೋಗ್ಯವಾದ ಶುಭಕರವಾದ ಕುಂಡಲ, ಹಾರ, ಕಿರೀಟ, ತೋಳ್ಬಂದಿ ವಸ್ತ್ರ ಮತ್ತು ಅನೇಕ ಆಭರಣಗಳನ್ನೂ ಆರುಮಂದಿಗೂ ಬೇರೆ ಬೇರೆಯಾಗಿ ಅವರವರಿಗೆ ತಕ್ಕುದಾದಂತೆ ಶ್ರೀಕೃಷ್ಣ ನೀಡಿದ, ಬಳಿಕ ಸೋದರತ್ತೆಯಾದ ಕುಂತಿಗೂ ಅವಳಿಗೆ ಯೋಗ್ಯವಾದ ಉಡುಗೊರೆ ಇತ್ತ.
ರತ್ನಾನಿ ಗಾ ಗಜತುರಂಗರಥಾನ್ ಸುವರ್ಣ-
ಭಾರಾನ್ ಬಹೂನಪಿ ದದಾವಥ ಚಾಶಿಷೋಽಗ್ರ್ಯಾಃ |
ವ್ಯಾಸೋಽಪ್ಯದಾದಿಹ ಪರತ್ರ ಚ ಪಾರ್ಷತೋಽಪಿ
ಭೂಷಾರಥಾಶ್ವಗಜರತ್ನಸುಕಾಂಚನಾನಿ ॥163॥
ಶ್ರೀಕೃಷ್ಣ ಪಾಂಡವರಿಗೆ ರತ್ನಗಳನ್ನೂ ಗೋವು ಗಜ ತುರಗ ರಥಗಳನ್ನೂ ಬಹಳ ಸುವರ್ಣ ಭಾರಗಳನ್ನೂ ಕೊಟ್ಟ. ಇಹ ಪರಗಳಲ್ಲಿ ಉತ್ತಮ ಸುಖದ ಆಶೀರ್ವಾದಗಳನ್ನು ವೇದವ್ಯಾಸರು ಇತ್ತರು. ದ್ರುಪದ ಭೂಷಣ ರಥ ಅಶ್ವಗಜ ರತ್ನ ಸುವರ್ಣಗಳನ್ನಿತ್ತ.
ದಾಸೀಶ್ಚ ದಾಸಸಹಿತಾಃ ಶುಭರೂಪವೇಷಾಃ
ಸಾಹಸ್ರಶೋ ದದತುರತ್ರ ಹರಿರ್ನೃಪಶ್ಚ |
ತಾಸಾಂ ವಿಚಿತ್ರವಸನಾನ್ಯುರುರತ್ನಮಾಲಾಃ
ಪ್ರತ್ಯೇಕಶೋ ದದತುರಪ್ಯುರುಭೂಷಣಾನಾಂ ॥164॥
ಮಂಗಲ ರೂಪವೇಷಗಳಿಂದ ಯುಕ್ತರಾದ ಸಾವಿರಾರು ದಾಸದಾಸಿಯರನ್ನೂ ಶ್ರೀಕೃಷ್ಣ ದ್ರುಪದರು ನೀಡಿದರು. ಬಹು ಆಭರಣಗಳಿಂದ ಅಲಂಕೃತರಾದ ದಾಸಿಯರೂ ಸುಂದರವಸ್ತ್ರಗಳನ್ನು, ಬಹಳ ರತ್ನಹಾರಗಳನ್ನು ಬೇರೆಬೇರೆಯಾಗಿ ನೀಡಿದರು.
ಮಾಸಾನ್ ಬಹೂನಪಿ ವಿಹೃತ್ಯ ಸಹೈವ ಪಾರ್ಥೈಃ
ಕೃಷ್ಣೋ ಯಯೌ ಯದುಪುರೀಂ ಸಹಿತೋಽಗ್ರಜೇನ |
ಅಂತರ್ಹಿತೇ ಭಗವತಿ ಪ್ರತತೋರುಶಕ್ತೌ
ವ್ಯಾಸೇ ಚ ವತ್ಸರಮಿಹೋಷುರಿಮೇ ತು ಪಾರ್ಥಾಃ ॥165॥
ಅನೇಕ ತಿಂಗಳುಗಳ ಕಾಲ ಪಾಂಡವರೊಂದಿಗೆ ಶ್ರೀಕೃಷ್ಣ ವಿಹರಿಸಿ ಬಲರಾಮನೊಂದಿಗೆ ದ್ವಾರಕೆಗೆ ತೆರಳಿದ. ಪೂರ್ಣಮಹಾಶಕ್ತಿಯುಳ್ಳ ಭಗವಾನ್ ವ್ಯಾಸರೂ ಅಂತರ್ಧಾನಗೊಂಡ ಬಳಿಕ ಪಾಂಡವರು ಒಂದು ವರ್ಷ ಪಾಂಚಾಲ ನಗರದಲ್ಲಿ ವಾಸವಾಗಿದ್ದರು.
ಊಷುಸ್ತಥೈವ ಪರಿವತ್ಸರಪಂಚಕಂ ತೇ
ಪಾಂಡೋರ್ಗೃಹೇ ಸುಸಖಿನೋಽಖಿಲಭೋಗಯುಕ್ತಾಃ |
ಕೃಷ್ಣಾ ಚ ತೇಷು ಪೃಥಗೇವ ಚತುಃಸ್ವರೂಪಾ
ರೇಮೇ ತಥೈಕತನುರಪ್ಯಭಿಮಾನಿಭೇದಾತ್ ॥183॥
ಪಾಂಡವರು ಪಾಂಡುವಿನ ಮನೆಯಲ್ಲಿ ಹಾಗೇ ಐದು ಪರಿವತ್ಸರಗಳಷ್ಟು ಕಾಲ ಸಕಲ ಭೋಗಯುಕ್ತರಾಗಿ ಸುಖಿಗಳಾಗಿ ವಾಸಮಾಡಿದರು. ದ್ರೌಪದಿ ಒಂದೇ ಶರೀರದವಳಾದರೂ ಅಭಿಮಾನಿ ಭೇದ ಪ್ರಯುಕ್ತ ಪ್ರತ್ಯೇಕ ನಾಲ್ಕು ಸ್ವರೂಪ ಉಳ್ಳವಳಾಗಿ ಪಾಂಡವರಲ್ಲಿ ರಮಿಸಿದಳು.
ಕನ್ಯೈವ ಸಾಽಭವದತಃ ಪ್ರತಿವಾಸರಂ ಚ
ಜನ್ಮಾಭವದ್ವ್ಯಭಿಮತೇಃ ಪೃಥಗೇವ ನಾಶಾತ್ |
ಪ್ರಾಯೋ ಹಿ ನಾಭಿಮತಿನಾಶಮವಾಪ ವಾಣೀ
ತಸ್ಮಾನ್ಮರುಚ್ಚ ಸಕಲೇಷ್ವಭಿವಿಷ್ಟ ಆಸೀತ್ ॥184॥
ಪ್ರತಿದಿನವೂ ದ್ರೌಪದಿ ಕನ್ಯೆಯಾಗುತ್ತಿದ್ದಳು. ಏಕೆಂದರೆ ಪ್ರತಿದಿನವೂ ಶರೀರಾಭಿಮಾನಗಳು ಪ್ರತ್ಯೇಕವಾಗಿ ನಾಶಹೊಂದಿ ಪುನರುತ್ಪತ್ತಿಯಾಗುತ್ತಿದ್ದುದರಿಂದ ಪ್ರತಿದಿನ ಮರಣವೂ ಜನನವೂ ಉಂಟಾಗುತ್ತಿತ್ತು. ಭಾರತಿ ಮಾತ್ರ ಎಂದೂ ಪೂರ್ತಿ ಶರೀರಾಭಿಮಾನನಾಶ ಹೊಂದುತ್ತಿರಲಿಲ್ಲ. ಅದರಿಂದ ವಾಯು ಎಲ್ಲ ನಾಲ್ಕೂ ಜನ ಪಾಂಡವರಲ್ಲಿ ಪ್ರವಿಷ್ಟನಾಗಿದ್ದ.
ಧರ್ಮಾತ್ಮಜಾದಿಷು ಮರುತ್ ಪ್ರತಿವಿಷ್ಟ ಏಷಾಂ
ಬುದ್ಧಿಂ ವಿಮೋಹ್ಯ ರಮತೇ ಸತತಂ ತಯಾ ಯತ್ |
ಶುದ್ಧೈವ ಸಾ ಹಿ ತತ ಏವ ದಿನೇದಿನೇ ಚ
ಸಮ್ಮೋಹತೋ ಮರಣವದ್ ಭವತೀಹ ಕನ್ಯಾ ॥185॥
ಧರ್ಮರಾಜ ಮುಂತಾದವರಲ್ಲಿ ಪ್ರವಿಷ್ಟನಾದ ವಾಯು ಸದಾ ಅವರ ಬುದ್ಧಿಯನ್ನು ಭಾರತೀದೇವಿಯ ವಿಷಯದಲ್ಲಿ ನಿಷ್ಕ್ರಿಯಗೊಳಿಸಿಯೆ ಅವಳೊಡನೆ ರಮಿಸುತ್ತಿದ್ದ. ಅದರಿಂದ ದೇವಿ ಶುದ್ಧಳೇ ಆಗಿರುತ್ತಿದ್ದಳು. ಪ್ರತಿದಿನದಲ್ಲಿಯೂ ಮರಣದಲ್ಲಿ

ಹೇಗೋಹಾಗೆ ಬುದ್ಧಿಗೆ ನಿಷ್ಕ್ರಿಯತೆ ಬರುತ್ತಿದ್ದುದರಿಂದ ಕನ್ಯೆಯೆ ಆಗುತ್ತಿದ್ದಳು.
ನೋ ಸುಪ್ತಿವತ್ ತ್ವಿದಮತೋಽನ್ಯವಶತ್ವತೋ ಹಿ
ದೇಹಸ್ಯ ಸಂಸ್ಮೃತಿತ ಏವ ಹರೇರ್ನ ಮೋಹಃ |
ನಾವೇಶವಚ್ಚ ತತ ಏವ ಮೃತೇಃ ಸ್ವರೂಪ-
ಮೇತತ್ ತ್ವತಃ ಪ್ರತಿದಿನಂ ಜನನಾದ್ಧಿ ಕನ್ಯಾ . |186॥
ದೇಹವನ್ನು ಅನ್ಯವಶಮಾಡಿ ಅಭಿಮಾನತ್ಯಾಗ ಮಾಡುತ್ತಿದ್ದುದರಿಂದ, ಹರಿಸ್ಮರಣೆಯನ್ನೂ ಮಾಡುತ್ತಿದ್ದುದರಿಂದ ದೇವಿಯರಿಗೆ ಇದು ಸುಪ್ತಿಯಂತೆಯೂ ಅಲ್ಲ, ಮೂರ್ಛೆಯಂತೆಯೂ ಅಲ್ಲ, ಆವೇಶದಂತೆಯೂ ಅಲ್ಲ, ಮರಣ ಸ್ವರೂಪವೇ ಆಗಿತ್ತು. ಅದರಿಂದ ಪ್ರತಿದಿನವೂ ಜನನವಿದ್ದುದರಿಂದ ಕನ್ಯೆಯಾಗುತ್ತಿದ್ದಳು.
ಏವಂ ಸ ವಾಯುರನುವಿಷ್ಟಯುಧಿಷ್ಠಿರಾದಿ-
ಭೀಮಾನ್ಮನೈವ ರಮತೇ ಸತತಂ ತಯೈಕಃ |
ಅನ್ಯಾದೃಶಾ ಹಿ ಸುರಭುಕ್ತಿರತೋಽನ್ಯರೂಪಾ
ಮಾನುಷ್ಯಭುಕ್ತಿ ರಿತಿ ನಾತ್ರ ವಿಚಾರ್ಯಮಸ್ತಿ ॥187॥
ಹೀಗೆ ಒಬ್ಬನೇ ವಾಯು ಧರ್ಮರಾಜಾದಿಗಳಲ್ಲಿ ಆವೇಶಗೊಂಡು ನಾಲ್ಕು ಅಂಶ ರೂಪಗಳಿಂದಲೂ ಭೀಮರೂಪದಿಂದಲೂ ಭಾರತೀದೇವಿಯೊಡನೆಯೇ ಸದಾ ರಮಿಸುತ್ತಿದ್ದ. ದೇವತೆಗಳು ರಮಿಸುವ ರೀತಿಯೇ ಬೇರೆ. ಮನುಷ್ಯರು ರಮಿಸುವ ರೀತಿಯೇ ಬೇರೆ. ಅದರಿಂದ ಈ ವಿಷಯದಲ್ಲಿ ವಿಚಾರಣೀಯವಾದ ಅಂಶ ಏನೂ ಉಳಿಯುವುದಿಲ್ಲ.
ವಾಸಿಷ್ಠಯಾದವವೃಷಾವಪಿ ಕೇಶವೌ ತೌ
ತತ್ರೋಷತುಃ ಪರಮಸೌಹೃದತೋ ಹಿ ತೇಷು |
ತಾಭ್ಯಾಮನಂತಗುಣಪೂರ್ಣಸುಖಾತ್ಮಕಾಭ್ಯಾಂ
ಪಾರ್ಥಾಶ್ಚ ತೇ ಮುಮುದಿರೇ ಯುತಸತ್ಕಥಾಭಿಃ ॥188॥
ವೇದವ್ಯಾಸರೂ ಶ್ರೀಕೃಷ್ಣನೂ ಪಾಂಡವರಲ್ಲಿ ಪರಮಪ್ರೀತಿಯಿಂದ ಅವರ ಮನೆಗಳಲಿಯೇ ವಾಸ ಮಾಡಿದರು. ಅನಂತಗುಣಪೂರ್ಣರೂ ಪೂರ್ಣ ಸುಖ ಸ್ವರೂಪರೂ ಆದ ಅವರಿಬ್ಬರೊಡನೆ ಪಾಂಡವರು ಅನ್ಯೋನ್ಯವಾಗಿ ಮಧುರ ಸಂಭಾಷಣೆಗಳಿಂದ ಆನಂದಿಸಿದರು.
* * * *

ನೂರ ತೊಂಭತ್ತೆಂಟನೆಯ ಅಧ್ಯಾಯ
(ವ್ಯಾಸರಿಂದ ದ್ರೌಪದಿಯ ದೇವತಾಂಶತ್ವ ಸಮರ್ಥನೆ. ದ್ರುಪದನಿಂದ ವ್ಯಾಸರ ಅಭಿಪ್ರಾಯದ ಅಂಗೀಕಾರ, ವಿವಾಹ, ಉಡುಗೊರೆಗಳು ಮತ್ತು ಎಲ್ಲರ ಹರ್ಷ.)
ವ್ಯಾಸಃ
ಇದಂ ಚಾಪಿ ಪುರಾವೃತ್ತಂ ಮನ್ನಿಬೋಧ ಚ ಭೂಮಿಪ |
ಕೀರ್ತ್ಯಮಾನಂ ನೃಪರ್ಷೀಣಾಂ ಪೂರ್ವೇಷಾಂ ದಾರಕರ್ಮಣಿ ॥1॥
ರಾಜನೇ, ಋಷಿಗಳ ಸಮುದಾಯದಲ್ಲಿ ವಿವಾಹದ ಪ್ರಸ್ತಾಪದಲ್ಲಿ ಹೇಳಲ್ಪಡುವ ಹಿಂದೆ ನಡೆದ ಒಂದು ಘಟನೆಯನ್ನು ನನ್ನಿಂದ ಕೇಳು.

ನಿತಂತುರ್ನಾಮ ರಾಜರ್ಷಿರ್ಬಭೂವ ಭುವಿ ವಿಶ್ರುತಃ |
ತಸ್ಯ ಪುತ್ರಾ ಮಹೇಶ್ವಾಸಾ ಬಭೂವುಃ ಪಂಚ ಭೂಮಿಪಾಃ ॥2॥
ಹಿಂದೆ ನಿತಂತು ಎಂಬ ಪ್ರಖ್ಯಾತನಾದ ರಾಜರ್ಷಿಯಿದ್ದನು. ಅವನಿಗೆ ವೀರರಾದ ಐದುಮಕ್ಕಳು ಜನಿಸಿದರು.
ಸಾಲ್ವೇಯಃ ಶೂರಸೇನಶ್ಚ ಶ್ರುತಸೇನಶ್ಚ ವೀರ್ಯವಾನ್ |
ತಿಂದುಸಾರೋಽದ್ರಿಸಾರಶ್ಚ ಕ್ಷತ್ರಿಯಾಃ ಕ್ರತುಯಾಜಿನಃ |
ನಾತಿಚಕ್ರಮುರನ್ಯೋನ್ಯಮನ್ಯೋನ್ಯಸ್ಯ ಪ್ರಿಯಂವದಾಃ ॥3॥
ಸಾಲ್ವೇಯ, ಶೂರಸೇನ, ಶ್ರುತಸೇನ, ತಿಂದುಸಾರ, ಅದ್ರಿಸಾರ ಎಂಬ ಯಾಗವನ್ನು ಮಾಡುವ ಕ್ಷತ್ರಿಯರು ಅವನ ಮಕ್ಕಳು. ಅವರು ಒಬ್ಬರನ್ನೊಬ್ಬರು ಮೀರುತ್ತಿರಲಿಲ್ಲ ಮತ್ತು ಪ್ರಿಯವಾಗಿ ಮಾತನಾಡುತ್ತಿದ್ದರು.
ಏತಾನ್ ನೈತಂತವಾನ್ ಪಂಚ ಶೈಬ್ಯಾ ಚಾತ್ರ ಸ್ವಯಂವರೇ |
ಅವಾಪ ತಾನ್ ಪತೀನ್‌ವೀರಾನ್ ಭೌಮಾಶ್ವೀ ಮನುಜಾಧಿಪಾನ್ |
ವೀಣೇವ ಮಧುರಾಭಾಷಾ ಗಾಂಧಾರಸ್ವರಮೂರ್ಚ್ಛಿತಾ ॥4॥
ನಿತಂತುವಿನ ಈ ಐದುಮಕ್ಕಳನ್ನು ಗಾಂಧಾರಾದಿಸ್ವರ ವಿಸ್ತಾರವನ್ನುಳ್ಳ ವೀಣೆಯಂತೆ ಮಧುರವಾಗಿ ಮಾತನಾಡುವ ಉಶೀನರನ ಮಗಳಾದ ಭೌಮಾಶ್ವಿಯು ಸ್ವಯಂವರದಲ್ಲಿ ಪತಿಗಳನ್ನಾಗಿ ಪಡೆದಳು.
ಉತ್ತಮಾ ಸರ್ವನಾರೀಣಾಂ ಭೌಮಾಶ್ವೀ ಹ್ಯಭವತ್ ತದಾ |
ಯಸ್ಯಾ ನೈತಂತವಾಃ ಪಂಚ ಪತಯಃ ಕ್ಷತ್ರಿಯರ್ಷಭಾಃ ॥5॥
ಕ್ಷತ್ರಿಯರ್ಷಭರಾದ ಐದುಜನ ನೈತಂತವರನ್ನು ಪತಿಗಳಾಗಿ ಹೊಂದಿದ ಕಾರಣ ಭೂಮಿಯಲ್ಲಿ ಅವಳು ಆಗ ಎಲ್ಲ ನಾರಿಯರಿಗಿಂತ ಶ್ರೇಷ್ಠಳಾದಳು.
ಬಭೂವುಃ ಪೃಥಿವೀಪಾಲಾಃ ಸರ್ವೈಃ ಸಮುದಿತಾ ಗುಣೈಃ |

ತೇಷಾಮೇಕಾಽಭವದ್ ಭಾರ್ಯಾ ರಾಜ್ಞಾವೌಶೀನರೀ ಶುಭಾ ॥6॥
ಆ ಐದುಜನ ಪತಿಗಳು ಗುಣಗಳಿಂದ ಕೂಡಿದ ರಾಜರಾದರು. ಉಶೀನರ ರಾಜನ ಕುಮಾರಿಯಾದ, ಶುಭಳಾದ ಅವಳು ಅವರೆಲ್ಲರಿಗೂ ಒಬ್ಬಳೇ ಪತ್ನಿಯಾದಳು.
ಭೌಮಾಶ್ವೀ ನಾಮ ಭದ್ರಂ ತೇ ತದಾ ರೂಪಗುಣಾನ್ವಿತಾ |
ಪಂಚಭ್ಯಃ ಪಂಚಧಾ ಪಂಚ ದಾಯಾದಾನ್ ಸಾ ವ್ಯಜಾಯತ ॥7॥
ರಾಜನೇ ನಿನಗೆ ಮಂಗಳವಾಗಲಿ. ಅಂತಹ ಗುಣರೂಪಗಳಿಂದ ಕೂಡಿದ ಭೌಮಾಶ್ವಿಯು ಐದುಜನ ಪತಿಗಳಿಂದ ಐದು ಮಕ್ಕಳನ್ನು ಪಡೆದಳು.
ತೇಭ್ಯೋ ನೈತಂತವೇಭ್ಯಶ್ಚ ರಾಜಶಾರ್ದೂಲ ವೈ ತದಾ |
ಪೃಥಗಾಖ್ಯಾಽಭವತ್ ತೇಷಾಂ ಭ್ರಾತೃಣಾಂ ಪಂಚಧಾ ಭುವಿ ॥8॥
ರಾಜಶಾರ್ದೂಲನೇ, ಆ ಐದುಜನ ನೈತಂತವರಿಂದ ಅವರ ವಂಶಗಳು ಬೇರೆ ಬೇರೆ ಹೆಸರುಗಳನ್ನು ಹೊಂದಿದವು.
ಯಥಾವತ್ ಕೀರ್ತ್ಯಮಾನಾಂಸ್ತಾನ್ ಶೃಣು ಮೇ ರಾಜಸತ್ತಮ |
ಸಾಲ್ವೇಯಾಃ ಶೂರಸೇನಾಶ್ಚ ಶ್ರುತಸೇನಾಶ್ಚ ಪಾರ್ಥಿವಾಃ ॥9॥
ತಿಂದುಸಾರಾದ್ರಿಸಾರಾಶ್ಚ ವಂಶಾ ಏಷಾಂ ನೃಪೋತ್ತಮ |
ಏವಮೇಕಾಽಭವದ್ ಭಾರ್ಯಾ ಭೌಮಾಶ್ವೀ ಭುವಿ ವಿಶ್ರುತಾ ॥10॥
ರಾಜಶ್ರೇಷ್ಠನೇ, ಆ ವಂಶದ ಹೆಸರುಗಳನ್ನು ನಾನು ಹೇಳುವೆನು ಕೇಳು. ಸಾಲ್ವೇಯರು, ಶೂರಸೇನರು, ಶ್ರುತಸೇನರು, ತಿಂದುಸಾರರು, ಅದ್ರಿಸಾರರು ಎಂದು ಆ ವಂಶದ ಹೆಸರುಗಳು. ನೃಪೋತ್ತಮನೇ, ಭೂಮಿಯಲ್ಲಿ ಪ್ರಖ್ಯಾತಳಾದ ಈ ಒಬ್ಬಳೇ ಭೌಮಾಶ್ವಿಯು ಐದುಜನರಿಗೆ ಪತ್ನಿಯಾಗಿದ್ದಳು.
ವ್ಯಾಸಃ
ಆಸೀತ್ ತಪೋವನೇ ಕಾಚಿದ್ ಋಷೇಃ ಕನ್ಯಾ ಮನಸ್ವಿನೀ |
ನಾಧ್ಯಗಚ್ಛತ್ ಪತಿಂ ಸಾ ತು ಕನ್ಯಾ ರೂಪವತೀ ಸತೀ ॥11॥
ಹಿಂದೆ ತಪೋವನದಲ್ಲಿ ಧೈರ್ಯಶಾಲಿನಿಯಾದ ಒಬ್ಬ ಋಷಿಕನ್ಯೆಯಿದ್ದಳು. ಅವಳು ಸೌಂದರ್ಯವತಿಯಾಗಿದ್ದರೂ, ಅವಳಿಗೆ ಪತಿಯು ದೊರೆಯಲಿಲ್ಲ. (ಇದು ಹನುಮದವತಾರದ ಕಾಲದಲ್ಲಿದ್ದ ವಿಪ್ರಕನ್ಯೆಯ ಕಥೆ.)
ತೋಷಯಾಮಾಸ ತಪಸಾ ಸಾ ತು ದೇವಂ ಮಹೇಶ್ವರಮ್ |
ತಾಮುವಾಚೇಶ್ವರಸ್ತುಷ್ಟೋ ವೃಣೀಥಾಃ ಕಾಮಮೀಪ್ಸಿತಮ್ ॥12॥
ಅವಳು ತಪಸ್ಸಿನಿಂದ ರುದ್ರದೇವರನ್ನು ಸಂತೋಷ ಪಡಿಸಿದಳು. ತಪಸ್ಸಿನಿಂದ ತುಷ್ಟರಾದ ರುದ್ರದೇವರು ನಿನಗೆ ಬೇಕಾದ ವರವನ್ನು ಕೇಳು ಎಂದು ಅವಳಿಗೆ ಹೇಳಿದರು.
ಅಥೇಶ್ವರಮುವಾಚೇದಮಾತ್ಮನೋ ಯದ್ಧಿತಂ ವಚಃ |
ಪತಿಂ ಸರ್ವಗುಣೋಪೇತಮಿಚ್ಛಾಮೀತಿ ಪುನಃ ಪುನಃ ॥13॥
ಆಗ ಅವಳು ರುದ್ರದೇವರನ್ನು ಕುರಿತು ತನಗೆ ಹಿತವಾದುದನ್ನು ಕೇಳುತ್ತಾ ಎಲ್ಲ ಗುಣಗಳಿಂದಲೂ ಕೂಡಿದ ಪತಿಯನ್ನು ಬಯಸುತ್ತೇನೆ ಎಂದು ಪುನಃ ಪುನಃ ಹೇಳಿದಳು.
ಏವಮುಕ್ತಸ್ತದಾ ದೇವ ಇದಂ ವಚನಮಬ್ರವೀತ್ |
ಪಂಚ ತೇ ಪತಯಃ ಶ್ರೇಷ್ಠಾ ಭವಿಷ್ಯಂತೀತಿ ಶಂಕರಃ ॥14॥
ಅವಳು ಹೀಗೆ ಹೇಳಿದಾಗ ರುದ್ರದೇವರು ನಿನಗೆ ಶ್ರೇಷ್ಠರಾದ ಪಂಚಪತಿಗಳು ಆಗುವರು ಎಂದು ಹೇಳಿದರು.
ಸಾ ಪ್ರಸಾದಯತೀ ದೇವಮಿದಂ ಭೂಯೋಽಭ್ಯಭಾಷತ |
ಏಕಂ ಪತಿಂ ಗುಣೋಪೇತಂ ತ್ವತ್ತೋಽರ್ಹಾಮೀತಿ ಶಂಕರ ॥15॥
ಅವಳು ರುದ್ರದೇವರನ್ನು ಒಲೈಸುತ್ತಾ ಪುನಃ ಶಂಕರನೇ, ನಿನ್ನ ಅನುಗ್ರಹದಿಂದ ಗುಣವಂತನಾದ ಒಬ್ಬ ಪತಿಯನ್ನು ಪಡೆಯಲು ಬಯಸುತ್ತೇನೆ ಎಂದು ಹೇಳಿದಳು.
ತಾಂ ದೇವದೇವಃ ಪ್ರೀತಾತ್ಮಾ ಪುನಃ ಪ್ರಾಹ ಶುಭಂ ವಚಃ |
ಪಂಚಕೃತ್ವಸ್ತ್ವಯಾ ಪ್ರೋಕ್ತಃ ಪತಿಂ ದೇಹೀತ್ಯಹಂ ಶುಭೇ ॥16॥
ದೇಹಮನ್ಯಂ ಗತಾಯಾಸ್ತೇ ಯಥೋಕ್ತಂ ವೈ ಭವಿಷ್ಯತಿ |
ಸೈವ ನಾಳಾಯನೀ ಭೂತ್ವಾ ರೂಪೇಣಾಪ್ರತಿಮಾ ಭುವಿ |
ಮೌದ್ಗಲ್ಯಂ ಪತಿಮಾಸಾದ್ಯ ಶಿವಾದ್ ವರಮವಾಪ್ಯ ಚ ॥17॥
ಆಗ ದೇವದೇವನಾದ ಶಂಕರನು ಅವಳನ್ನು ಕುರಿತು ಸಂತೋಷದಿಂದ ಶುಭವಾದ ಈ ಮಾತುಗಳನ್ನು ಆಡಿದನು - ಶುಭಳಾದವಳೇ, ನೀನು ಐದುಬಾರಿ ಪತಿಂದೇಹಿ ಎಂದು ಹೇಳಿದೆ. ನಿನಗೆ ಮುಂದಿನ ದೇಹದಲ್ಲಿ (ಮುಂದಿನ ಜನ್ಮದಲ್ಲಿ) ನಾನು ಹೇಳಿದಂತೆ ಆಗುವುದು. ಅವಳೇ ನಳನ ಮಗಳಾಗಿ (ಇಂದ್ರಸೇನೆ ಎಂಬ ಹೆಸರಿನಿಂದ) ಭೂಮಿಯಲ್ಲಿ ಜನಿಸಿ ಅಪ್ರತಿಮವಾದ ರೂಪದಿಂದ ಕೂಡಿದವಳಾಗಿ ಶಿವನ ವರದ ಬಲದಿಂದ ಮೌದ್ಗಲ್ಯರನ್ನು (ಮುದ್ಗಲರನ್ನು) ಪತಿಯನ್ನಾಗಿ ಪಡೆದಳು.
ದ್ರುಪದಸ್ಯೈಷಾ ತತೋ ಜಜ್ಞೇ ಸುತಾ ತೇ ದೇವರೂಪಿಣೀ |
ಪಂಚಾನಾಂ ಸಹಿತಾ ಕೃಷ್ಣಾರೂಪಾ ಪಾರ್ವತ್ಯನಿಂದಿತಾ ॥18॥
ದ್ರುಪದನೇ, ಅನಂತರ ದೇವರೂಪಿಣಿಯಾದ ಕೃಷ್ಣೆಯ ರೂಪವನ್ನು ಧರಿಸಿದ ಅನಿಂದಿತಳಾದ ಪಾರ್ವತಿಯು ತನ್ನನ್ನೂ ಸೇರಿ ಐದು ದೇವಿಯರಿಂದ ಸಹಿತಳಾಗಿ ನಿನ್ನ ಮಗಳಾಗಿ ಜನಿಸಿದಳು.

ಪಂಚಾನಾಂ ಸಹಿತಾ ಎಂಬುದಕ್ಕೆ ಪಂಚಭಿಃ ಸಹಿತಾ ಎಂದು ಅರ್ಥ ಮಾಡಬೇಕು. ಸಹಶಬ್ದಯೋಗವಿರುವುದರಿಂದ ತೃತೀಯಾವಿಭಕ್ತಿಯು ಅವಶ್ಯಕವಾದುದರಿಂದ ಹೀಗೆ ಅರ್ಥವನ್ನು ಮಾಡಬೇಕು. ಜನನ ಕಾಲದಲ್ಲಿಯೇ ಐವರ ಸಾಹಿತ್ಯವನ್ನು ಹೇಳಿರುವುದರಿಂದ ಇದು ಪತಿಗಳ ಸಂಖ್ಯೆಯನ್ನು ಹೇಳುವುದಿಲ್ಲ. ಆದರೆ ದ್ರೌಪದಿಯ ದೇಹದಲ್ಲಿ ಜನನಕಾಲದಲ್ಲಿಯೇ ಐದುಜನ ದೇವಿಯರು ಇದ್ದಾರೆಂದು ಹೇಳುವ ಅಭಿಪ್ರಾಯದಿಂದ ಬಂದಿದೆ. ಆ ದೇಹದಲ್ಲಿರುವ ಭಾರತಿ, ಶಚಿ, ಶ್ಯಾಮಲೆ ಮತ್ತು ಉಷೆ ನಾಲ್ವರು ಪ್ರಸಿದ್ಧರಾಗಿದ್ದಾರೆ. ಆದರೆ ಅಲ್ಲಿ ಪಾರ್ವತಿಯೂ ಇದ್ದಾಳೆ. ಬ್ರಹ್ಮದೇವರ ಶಾಪದಿಂದ ಪಾರ್ವತಿಯು ಅಲ್ಲಿದ್ದಾಳೆಂದು ಆಚಾರ್ಯರು ನಿರೂಪಿಸಿದ್ದಾರೆ. ದ್ರೌಪದಿಯ ದೇಹದಲ್ಲಿ  ಐದುಜನ ದೇವಿಯರಿದ್ದರೂ ಯಾರಿಗೂ ಪಾತಿವ್ರತ್ಯಲೋಪವಿಲ್ಲ ಎಂಬುದನ್ನು ಅನಿಂದಿತಾ ಎಂಬ ಪದದಿಂದ ಹೇಳಿದ್ದಾರೆ.

ಸ್ವರ್ಗಾಚ್ಛ್ರೀಃ  ಪಾಂಡವಾರ್ಥಾಯ ಸಮುತ್ಪನ್ನಾ ಮಹಾಮುಖೇ |
ಸೈವಂ ತಪಶ್ಚತ್ವ ತಪೋ ಘೋರಂ ದುಹಿತೃತ್ವಂ ಗತಾ ತವ ॥19॥

ಸ್ವರ್ಗದಿಂದ ಬಂದ ದ್ಯುನಾಮಕ ಸ್ತ್ರೀ ದೇವತೆಯಾಗ ಶ್ರೀದೇವಿಯು ಯಜ್ಞಕುಂಡದಲ್ಲಿ ಜನಿಸಿ ಪಾಂಡವರನ್ನು ಪಡೆಯುವ ಸಲುವಾಗಿ ಘೋರವಾದ ತಪಸ್ಸನ್ನು ಆಚರಿಸಿ, ನಿನ್ನ ಮಗಳಾಗಿ ಜನಿಸಿದ್ದಾಳೆ.

ಸೈಷಾ ದೇವೀ ರುಚಿರಾ ದೇವಜುಷ್ಟಾ
ಪಂಚಾನಾಮೇಕಾ ಸ್ವಕೃತೇನೈವ ಕರ್ಮಣಾ |
ಸೃಷ್ಟಾ ಪೂರ್ವಂ ದೇವಪತ್ನೀ ಸ್ವಯಂಭುವಾ
ಶ್ರುತ್ವಾ ರಾಜನ್ ದ್ರುಪದೇಷ್ಟಂ ಕುರುಷ್ವ ॥20॥

ಆದ್ದರಿಂದ ದೇವತೆಗಳಿಂದ ಸೇವಿತಳಾದ, ಮನೋಹರಳಾದ, ದೇವಿಯಾದ ಈ ನಿನ್ನ ಮಗಳು ತನ್ನ ಕರ್ಮಗಳಿಂದಲೇ, ಪಂಚಪತಿತ್ವವನ್ನು ಸಂಪಾದಿಸಿದ್ದಾಳೆ. ಬ್ರಹ್ಮದೇವರು ಇವಳನ್ನು ಅಂತಹ ಐದುಜನ ದೇವತೆಗಳ ಪತ್ನಿಯೆಂದೇ ಸೃಷ್ಟಿಸಿದ್ದಾರೆ. ದ್ರುಪದರಾಜನೇ, ಇದನ್ನು ಕೇಳಿ ನಿನಗೆ ಇಷ್ಟಬಂದಂತೆ ಮಾಡು.

ದ್ರುಪದಃ

ಅಶ್ರುತ್ವೈವೈವಂ ವಚನಂ ತೇ ಮಹರ್ಷೇ
ಮಯಾ ಪೂರ್ವಂ ಯತಿತಂ ವರ್ಜಯಿತ್ವಾ |
ನ ಹಿ ಶಕ್ಯಂ ವಿಹಿತಾಚ್ಚಾಪಯಾತುಂ
ತದೇವೇದಮುಪಪನ್ನಂ ವಿಧಾನಮ್ ॥21॥

ಮಹರ್ಷಿಗಳೇ, ಈ ನಿಮ್ಮ ಮಾತನ್ನು ನಾನು ಕೇಳುವುದಕ್ಕಿಂತ ಮೊದಲು ಐದು ಜನರಿಗೆ ಮಗಳನ್ನು ಕೊಡುವುದಿಲ್ಲವೆಂದು ಪ್ರಯತ್ನಮಾಡಿದೆ. ವಿಹಿತವಾದುದನ್ನು ಯಾರೂ ಮೀರಲು ಸಾಧ್ಯವಿಲ್ಲ. ನೀವು ಹೇಳಿದ ವಿಧಾನವೇ ಯುಕ್ತವಾದುದು.

ದಿಷ್ಟಸ್ಯ ಗ್ರಂಥಿರನಿವರ್ತನೀಯಾ
ಸ್ವಕರ್ಮಣಾ ವಿಹಿತೇಷ್ವೇವ ಕಿಂಚಿತ್ |
ಕೃತಂ ನಿಮಿತ್ತಂ ಹಿ ವರೈಕಹೇತೋಃ
ತದೇವೈತದುಪಪನ್ನಂ ಬಹೂನಾಮ್ ॥22॥

ಬ್ರಹ್ಮದೇವರು ಮಾಡಿದ ಘಟನೆಯನ್ನು ಯಾರೂ ವಿಘಟನೆ ಮಾಡಲು ಸಾಧ್ಯವಿಲ್ಲ. ನಾನು ಒಬ್ಬ ವರನನ್ನು ಪಡೆಯುವ ಉದ್ದೇಶದಿಂದ ಕ್ಷತ್ರಿಯನಾದ ನನಗೆ ವಿಹಿತವಾದ ಅನೇಕ ಉಪಾಯಗಳಲ್ಲಿ ಸ್ವಯಂವರವೆಂಬ ಒಂದು ಉಪಾಯವನ್ನು ಆಶ್ರಯಿಸಿದೆ. ಸ್ವಯಂವರದ ಪಣವು ಅರ್ಜುನನಿಂದ ಜಯಿಸಲ್ಪಟ್ಟಿತು. ಆದ್ದರಿಂದ ನನ್ನ ಮಗಳು ಅನೇಕರಿಗೆ ಪತ್ನಿಯಾಗುವುದು ಯುಕ್ತವಾಗಿದೆ.

ಯಥೈವ ಕೃಷ್ಣೋಕ್ತವತೀ ಪುರಸ್ತಾತ್
ನೈಕಾನ್ ಪತೀನ್ ಮೇ ಭಗವಾನ್ ದದಾತು |
ಸ ಚಾಪ್ಯೇತದ್ ವರಮಿತ್ಯಬ್ರವೀತ್ ತದಾ
ದೇವೋऽಪಿ ವೇದ ಪರಮಂ ಯದತ್ರ ॥23॥

ದ್ರೌಪದಿಯು ಹಿಂದೆ ನನಗೆ ಅನೇಕ ಪತಿಗಳನ್ನು ಪೂಜ್ಯರು ಕೊಡಬೇಕು ಎಂದು ಕೇಳಿದುದಕ್ಕೆ ಅನುಗುಣವಾಗಿ ರುದ್ರದೇವರೂ ಸಹ ಹಾಗೆಯೇ ಆಗಲಿ ಎಂಬ ವರವನ್ನು ಕೊಟ್ಟಿದ್ದಾರಷ್ಟೆ. ಅವರಿಗೂ ಕೂಡ ಈ ವಿಷಯದಲ್ಲಿ ಯಾವುದು ಶ್ರೇಷ್ಠ ಎಂಬುದು ತಿಳಿದಿದೆ.

ಯದಿ ತ್ವಯಂ ವಿಹಿತಃ ಶಂಕರೇಣ
ಧರ್ಮೋऽಧರ್ಮೋ ವಾ ನಾತ್ರ ಮಮಾಪರಾಧಃ |
ಗೃಹ್ಣಂತ್ವಿಮೇ ಪಾಂಡವಾಃ ಪಾಣಿಮಸ್ಯಾ
ಯಥಾಜೋಷಂ ವಿಹಿತೈಷಾಂ ಹಿ ಕೃಷ್ಣಾ ॥24॥

ಯಾವಾಗ ಇದು ರುದ್ರದೇವರ ಮನಸ್ಸಿಗೂ ಬಂದಿದೆ ಎಂದಾಯಿತೋ ಆಗ ಇದು ಧರ್ಮವೋ ಅಥವಾ ಅಧರ್ಮವೋ ಎಂದು ವಿಚಾರಮಾಡುವ ಅವಶ್ಯಕತೆಯಿಲ್ಲ. ನನಗೆ ಯಾವ ದೋಷವೂ ಬರುವುದಿಲ್ಲ. ಈ ಐದುಜನ ಪಾಂಡವರೂ ಸಂತೋಷದಿಂದ ಇವಳ ಪಾಣಿಗ್ರಹಣವನ್ನು ಮಾಡಲಿ. ಕೃಷ್ಣೆಯು ಇವರಿಗೆ ಪತ್ನಿಯಾಗಿ ವಿಹಿತಳಾಗಿದ್ದಾಳೆ.

ವೈಶಂಪಾಯನಃ

ತತ ಆಜಗ್ಮತುಸ್ತತ್ರ ತೌ ಕೃಷ್ಣದ್ರುಪದಾವುಭೌ |
ಕುಂತೀ ಸಪುತ್ರಾ ಯತ್ರಾಸ್ತೇ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥25॥

ಅನಂತರ, ವೇದವ್ಯಾಸರು ಮತ್ತು ದ್ರುಪದರಾಜನು ಒಳಭಾಗದಿಂದ ಕುಂತಿಯು, ಪಾಂಡವರು ಮತ್ತು ಧೃಷ್ಟದ್ಯುಮ್ನನು ಕುಳಿತಿದ್ದ ಕಡೆಗೆ ಬಂದರು.

ತತೋ ದ್ವೈಪಾಯನಃ ಕೃಷ್ಣೋ ಯುಧಿಷ್ಠಿರಮಥಾಬ್ರವೀತ್ |
ಅದ್ಯ ಪುಣ್ಯಮಹಶ್ಚಂದ್ರೋ ರೋಹಿಣ್ಯಾ ಚ ಸಮೇಷ್ಯತಿ ||26||
ಕ್ರಮೇಣ ಪುರುಷವ್ಯಾಘ್ರ ಪಾಣಿಂ ಗೃಹ್ಣಂತು ಪಾಂಡವಾಃ |
ದ್ರೌಪದ್ಯಾ ಧರ್ಮತಃ ಸರ್ವೇ ದೃಷ್ಟಮೇತತ್ ಪುರಾಽನಘ ||27||
ಆಗ ವ್ಯಾಸರು ಧರ್ಮರಾಜನನ್ನು ಕುರಿತು ಈ ದಿನ ಪವಿತ್ರವಾಗಿದೆ. ಚಂದ್ರನು ರೋಹಿಣೀನಕ್ಷತ್ರದಿಂದ ಕೂಡಿದ್ದಾನೆ. ಪುರುಷವ್ಯಾಘ್ರನೇ, ಪಾಂಡವರಾದ ನೀವು ಧರ್ಮದಿಂದಲೇ ಜ್ಯೇಷ್ಠಕ್ರಮದಿಂದ ದ್ರೌಪದಿಯ ಪಾಣಿಗ್ರಹಣವನ್ನು ಮಾಡಿ. ಅನಘನೇ, ಇದು ಮೊದಲೇ ಕ್ಲುಪ್ತವಾಗಿದೆ ಎಂದು ಹೇಳಿದರು.
ವೈಶಂಪಾಯನಃ
ತತೋ ರಾಜಾ ಯಜ್ಞಸೇನಃ ಸಪುತ್ರೋ
ಜನ್ಯಾರ್ಥಮುಕ್ತಂ ಬಹುರತ್ನಮಗ್ರ್ಯಮ್ |
ಸಮರ್ಪಯಾಮಾಸ ಸುತಾಂ ಚ ಕೃಷ್ಣಾಮ್
ಆಪ್ಲಾವ್ಯ ರತ್ನೈರ್ಬಹುಭಿರ್ವಿಭೂಷ್ಯ ||28||
ಅನಂತರ, ರಾಜನಾದ ಯಜ್ಞಸೇನನು ಧೃಷ್ಟದ್ಯುಮ್ನನೊಡನೆ, ಬಹುಪರಿವಾರೋಪೇತನಾದ ಧರ್ಮರಾಜನಿಗೆ ರತ್ನಾದಿಗಳಿಂದ ಕೂಡಿದ ಶ್ರೇಷ್ಠವಾದ ಅನೇಕ ಉಡುಗೊರೆಗಳನ್ನು ನೀಡಿದನು. ಮಗಳಾದ ಕೃಷ್ಣೆಯನ್ನು ಸ್ನಾನಮಾಡಿಸಿ ಅನೇಕ ರತ್ನಗಳಿಂದ ಅಲಂಕರಿಸಿ (ಅವಳನ್ನೂ ನೀಡಿದನು)
ತತಃ ಸರ್ವೇ ಸುಹೃದಸ್ತತ್ರ ತಸ್ಯ
ಸಮಾಜಗ್ಮುಃ ಸಚಿವಾ ಮಂತ್ರಿಣಶ್ಚ |
ದ್ರಷ್ಟುಂ ವಿವಾಹಂ ಪರಮಪ್ರತೀತಾ
ದ್ವಿಜಾಶ್ಚ ಪೌರಾಶ್ಚ ತಥಾ ಪ್ರಧಾನಾಃ ||29||
ಆಗ ಅವನ ಎಲ್ಲಾ ಸುಹೃದರೂ, ಸಚಿವರೂ, ಮಂತ್ರಿಗಳೂ ಪರಮಸಂತೋಷದಿಂದ ಆ ವಿವಾಹವನ್ನು ನೋಡಲು ಬಂದರು. ಹಾಗೆಯೇ, ಬ್ರಾಹ್ಮಣರೂ, ಪೌರರೂ ಮತ್ತು ಪ್ರಧಾನರೂ ಬಂದರು.
ತತ್ತಸ್ಯ ವೇಶ್ಮಾರ್ಥಿಜನೋಪಶೋಭಿತಂ
ವಿಕೀರ್ಣಪದ್ಮೋತ್ಪಲಶೋಭಿತಾಂಘ್ರಿಕಮ್ |
ಬಭೂವ ರತ್ನೌಘವಿಚಿತ್ರಮಾಲ್ಯಂ
ದಿವಂ ಯಥಾ ನಿರ್ಮಲತಾರಕಾಚಿತಮ್ ||30||
ಆಗ ದ್ರುಪದನ ಅರಮನೆಯು ಎಲ್ಲ ಕಡೆಗಳಿಂದಲೂ ಅತಿಥಿ ಜನಗಳಿಂದ ತುಂಬಿ ಅಲ್ಲಲ್ಲಿ ಹರಡಿದ ಪದ್ಮೋತ್ಪಲಗಳ ರಾಶಿಗಳಿಂದಲೂ, ರತ್ನಮಾಲೆಗಳ ರಾಶಿಗಳಿಂದಲೂ, ನಕ್ಷತ್ರಗಳಿಂದ ಕೂಡಿದ ಆಕಾಶದಂತೆ ಶೋಭಿಸಿತು.
ತತಸ್ತು ತೇ ಕೌರವರಾಜಪುತ್ರಾ
ವಿಭೂಷಿತಾಃ ಕುಂಡಲಿನಃ ಸುವೇಷಾಃ |
ಮಹಾರ್ಹವಸ್ತ್ರಾ ವರಚಂದನೋಕ್ಷಿತಾಃ
ಕೃತಾಭಿಷೇಕಾ ಕೃತಕೌತುಕಕ್ರಿಯಾಃ ||31||
ಪುರೋಹಿತೇನಾಗ್ನಿಸಮೇನ ತೇಜಸಾ
ಸಹೈವ ಧೌಮ್ಯೇನ ತಥಾ ಯಥಾವಿಧಿ |
ಕ್ರಮೇಣ ಸರ್ವೇ ವಿವಿಶುಶ್ಚ ತತ್ಸದೋ
ಮಹರ್ಷಭಾ ಗೋಷ್ಠಮಿವಾಭಿನಂದಿನಃ ||32||
ಅನಂತರ ಆ ಕೌರವರಾಜಪುತ್ರರು ಮಂಗಳಸ್ನಾನವನ್ನು ಮಾಡಿ, ಮಂಗಳಕ್ರಿಯೆಗಳನ್ನು ಮುಗಿಸಿ, ವಿಭೂಷಿತರಾಗಿ, ಕುಂಡಲಗಳನ್ನು ಧರಿಸಿ, ಒಳ್ಳೆಯ ವೇಷವನ್ನು ಧರಿಸಿ, ಬೆಲೆಬಾಳುವ ವಸ್ತ್ರಗಳನ್ನುಟ್ಟು, ಶ್ರೇಷ್ಠವಾದ ಚಂದನಲಿಪ್ತರಾಗಿ ಅಗ್ನಿಯಂತಿದ್ದ ಪುರೋಹಿತರಾದ ಧೌಮ್ಯರ ಜೊತೆಯಲ್ಲಿ ಆ ಸಭೆಗೆ ಮಹರ್ಷಭಗಳು ಗೋವುಗಳಿರುವ ಸ್ಥಳಕ್ಕೆ ಬಂದಂತೆ, ಆನಂದದಿಂದ ಕ್ರಮವಾಗಿ ಆ ಸಭೆಗೆ ಬಂದರು.
ತತಃ ಸಮಾಧಾಯ ಸ ವೇದಪಾರಗೋ
ಜುಹಾವ ಮಂತ್ರೈರ್ಜ್ವಲಿತಂ ಹುತಾಶನಮ್ |
ಯುಧಿಷ್ಠಿರಂ ಚಾಪ್ಯುಪನೀಯ ಮಂತ್ರವಿ-
ನ್ನಿಯೋಜಯಾಮಾಸ ಸಹೈವ ಕೃಷ್ಣಯಾ ||33||
ಅನಂತರ, ವೇದಪಾರಗರಾದ ಆ ಪುರೋಹಿತರು ಅಗ್ನಿಯಲ್ಲಿ ಹೋಮವನ್ನು ಮಾಡಿ, ಜ್ವಲಿತನಾದ ಹುತಾಶನನ ಎದುರಿಗೆ ಯುಧಿಷ್ಠಿರನನ್ನು ಕರೆದು ಮಂತ್ರಪೂರ್ವಕವಾಗಿ ಕೃಷ್ಣೆಯ ಪಾಣಿಗ್ರಹಣವನ್ನು ಮಾಡಿಸಿದರು.
ಪ್ರದಕ್ಷಿಣಂ ತೌ ಪರಿಗೃಹ್ಯ ಪಾಣಿನಾ
ಸಮಾನಯಾಮಾಸ ಸ ವೇದಪಾರಗಃ ||34||
ವೇದಪಾರಗರಾದ ಆ ಪುರೋಹಿತರು ಅವರಿಬ್ಬರಿಂದ ಕೈಯಲ್ಲಿ ಹಿಡಿದು ಪ್ರದಕ್ಷಿಣೆ ಮಾಡಿಸಿದರು.
ವಿಪ್ರಾಂಸ್ತು ಸಂತರ್ಪ್ಯ ಯುಧಿಷ್ಠಿರೋ ಧನ್ಯೈ-
ರ್ಗೋಭಿಶ್ಚ ರತ್ನೈರ್ವಿವಿಧೈಶ್ಚ ಪೂರ್ವಜಃ |

ಜಗ್ರಾಹ ಪಾಣಿಂ ನರದೇವ ಕನ್ಯಯಾ
ಧೌಮ್ಯೇನ ಮಂತ್ರೈರ್ವಿಧಿವದ್ಧುತೇऽಗ್ನೌ
ತತೋऽಂತರಿಕ್ಷಾತ್ ಕುಸುಮಾನಿ ಪೇತು-
ರ್ವವೌ ಚ ವಾಯುಃ ಸುಮನೋಜ್ಞಗಂಧಃ ॥35॥
ಅಗ್ರಜನಾದ ಧರ್ಮರಾಜನು ಬ್ರಾಹ್ಮಣರ ಸಂತರ್ಪಣೆಯನ್ನು ಮಾಡಿ ಅವರಿಗೆ ಗೋದಾನಗಳನ್ನೂ, ವಿವಿಧ ರತ್ನದಾನಗಳನ್ನೂ ಮಾಡಿ, ಧೌಮ್ಯರು ವಿಧಿಪ್ರಕಾರವಾಗಿ ಮಂತ್ರಗಳಿಂದ ಅಗ್ನಿಯನ್ನು ಅರ್ಚಿಸುತ್ತಿರಲು, ಕನ್ಯೆಯ ಪಾಣಿಗ್ರಹಣವನ್ನು ಮಾಡಿದನು. ಆಗ ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಸುಗಂಧಭರಿತವಾದ ವಾಯುವು ಎಲ್ಲ ಕಡೆಯೂ ಬೀಸಿತು.
ತತೋऽಭ್ಯನುಜ್ಞಾಯ ತಮಾಜಿಶೋಭನಂ
ಪುರೋಹಿತೋ ರಾಜಗೃಹಾದ್ ವಿನಿರ್ಯಯೌ |
ಕ್ರಮೇಣ ಚಾನೇನ ನರಾಧಿಪಾತ್ಮಜಾಃ
ವರಸ್ತ್ರಿಯಾಸ್ತೇ ಜಗೃಹುಃ ಕರಂ ತದಾ ॥36॥
ಅನಂತರ, ಯುದ್ಧದಲ್ಲಿ ಶೋಭಿಸುವ ಧರ್ಮರಾಜನ ಅನುಜ್ಞೆಯನ್ನು ಪಡೆದು ದ್ರುಪದನ ಪುರೋಹಿತನು ಅರಮನೆಯಿಂದ ಹೊರಟುಹೋದನು. ಆಗ, ವಿವಿಧ ರಾಜಕುಮಾರರಾದ ಭೀಮಸೇನ ಮೊದಲಾದವರು ಅದೇ ಕ್ರಮದಿಂದ ಶ್ರೇಷ್ಠಕನ್ಯೆಯಾದ ದ್ರೌಪದಿಯ ಪಾಣಿಗ್ರಹಣವನ್ನು ಮಾಡಿದರು.
ಇದಂ ಚ ತತ್ರಾದ್ಭುತಮುತ್ತಮಂ ತದಾ
ದಧಾತಿ ಕೃಷ್ಣಾ ವಪುಷಾऽತಿಮಾನುಷಮ್ |
ಮಹಾನುಭಾವಾ ಕಿಲ ಸಾಧುಮಧ್ಯಮಾ
ಬಭೂವ ಕನ್ಯೈವ ಗತೇ ಗತೇऽಹನಿ ॥37॥
ಇದೊಂದು ಅದ್ಭುತವಾದ ಮತ್ತು ಶ್ರೇಷ್ಠವಾದ ಘಟನೆಯು
ನಡೆಯಿತು. ಕೃಷ್ಣೆಯು ಪ್ರತಿದಿವಸವೂ ಕನ್ಯೆಯೇ ಆಗುತ್ತಿದ್ದಳು. ಇದು ಮನುಷ್ಯಲೋಕವನ್ನು ಮೀರಿದ ಘಟನೆಯಾದ್ದರಿಂದ ಅದ್ಭುತವಾದುದು. ಮಹಾನುಭಾವಳಾದ ಆ ಸುಂದರಿಗೆ ಮಾತ್ರ ಇದು ಸಾಧ್ಯ.
`ಗತೇ ಗತೇ ಹನಿ' ಎಂದು ಶ್ಲೋಕದಲ್ಲಿ ಐವರು ದೇವಿಯರಲ್ಲಿ ಇನ್ನೊಬ್ಬ ದೇವಿಯ ಪತಿಯ ದಿವಸವು ಕಳೆಯುತ್ತಿರಲು ಎಂದರ್ಥ. ಇದು ಉಪಲಕ್ಷಣ. ತನ್ನ ತನ್ನ ಪತಿಯ ದಿವಸವು ಬಂದಾಗ ಎಂದೂ ಇಟ್ಟುಕೊಳ್ಳಬೇಕು. ಹೊಸದಿವಸವು ಬಂದಾಗ ಹಿಂದಿನ ದಿವಸದ ಪತ್ನಿಯು ಆ ದೇಹದಲ್ಲಿ ಅಭಿಮಾನವನ್ನು ತ್ಯಾಗಮಾಡಿ, ಆ ದಿವಸದ ಪತ್ನಿಯು ಆ ದೇಹದಲ್ಲಿ ಹೊಸ ಅಭಿಮಾನವನ್ನು ಹೊಂದುವುದರಿಂದ ಅಭಿಮಾನೋತ್ಪತ್ತಿಯೇ ಜನನವಾದುದರಿಂದ ಪ್ರತಿದಿವಸವೂ ಅವಳು ಕುಮಾರಿಯೇ ಆಗುತ್ತಿದ್ದಳು. ಪ್ರತಿದಿವಸವೂ ಅವರವರ ಪತಿಗಳಿಂದ ಆಯಾ ದೇವಿಯರಿಗೆ ಮಾನಸಿಕ ವಿವಾಹವು ನಡೆಯುತ್ತಿದ್ದಿತು. ಇದನ್ನು ಮೊದಲನೆಯ ಅಧ್ಯಾಯಗಳಲ್ಲೇ ಒಂದು ಕಡೆಯಲ್ಲಿ ಮನುಷ್ಯರಿಗೆ ಅದೃಶ್ಯವಾಗಿ ದೇವತೆಗಳೇ ಆ ವಿವಾಹವನ್ನು ಮಾಡುತ್ತಿದ್ದರು ಎಂದು ಹೇಳಿದ್ದಾರೆ. ಆದ್ದರಿಂದ ಒಂದೇ ದೇಹದಲ್ಲಿ ಐದು ಜನ ದೇವಿಯರಿದ್ದರೂ ಯಾರಿಗೂ ಪಾತಿವ್ರತ್ಯಲೋಪವಾಗುವುದಿಲ್ಲ.
ಕೃತೇ ವಿವಾಹೇ ದ್ರುಪದೋ ಧನಂ ದದೌ
ಮಹಾರಥೇಭ್ಯೋ ಬಹುರೂಪಮುತ್ತಮಮ್ |
ಶತಂ ರಥಾನಾಂ ವರಹೇಮಭೂಷಿತಂ
ಚತುರ್ಯುಜಾಂ ಹೇಮವಿಚಿತ್ರಮಾಲಿನಾಮ್ ॥38॥
ಶತಂ ಗಜಾನಾಮಭಿಪದ್ಮಕಾನಾಂ
ಯಥಾ ಗಿರೀಣಾಮಿವ ಹೇಮಶೃಂಗಿಣಾಮ್ |
ಶತಂ ದದೌ ಸನ್ಮಣಿಹೇಮಭೂಷಣಾನ್
ಮನೋಜವಾನ್ ದ್ವಾದಶವಾರ್ಷಿಕಾನ್ ಹಯಾನ್ ॥39॥
ಹೈಮಾನಿ ಶಯ್ಯಾಸನಭಾಜನಾನಿ
ದ್ರವ್ಯಾಣಿ ಚಾನ್ಯಾನಿ ಮಹಾಸನಾನಿ |
ಪೃಥಕ್ಪೃಥಕ್ ಚೈವ ದಶಾಯುತಾನಿ
ಧನಂ ದದೌ ಸೌಮಕಿರಗ್ನಿಸಾಕ್ಷಿಕಮ್ ॥40॥
ವಿವಾಹವನ್ನು ನೆರವೇರಿಸಿ ದ್ರುಪದನು, ಮಹಾರಥರಾದ ತನ್ನ ಅಳಿಯಂದಿರಿಗೆ ಬಹುವಿಧವಾದ ಧನವನ್ನು ಕೊಟ್ಟನು. ನಾಲ್ಕು ಕುದುರೆಗಳನ್ನು ಹೂಡುವ ಸುವರ್ಣಮಯವಾದ ನೂರು ರಥಗಳು, ಹಾಗೆಯೇ, ಸುವರ್ಣಶೃಂಗವನ್ನು ಹೊಂದಿದ, ಪರ್ವತದಂತೆ ಕಾಣುವ, ಅಭಿಪದ್ಮಜಾತಿಯ (ಒಳಗೆ ಮದವನ್ನು ಹೊಂದಿದ್ದರೂ ಹೊರಗೆ ಮದವನ್ನು ತೋರಿಸದಿರುವ ಆನೆಗಳಿಗೆ ಅಭಿಪದ್ಮಕವೆಂದು ಹೆಸರು) ನೂರು ಗಜಗಳು, ಹಾಗೆಯೇ, ಮಣಿಹೇಮಭೂಷಿತವಾದ, ಮನೋಜವವನ್ನು ಹೊಂದಿದ ಹನ್ನೆರಡು ವರ್ಷ ಪ್ರಾಯದ ನೂರು ಅಶ್ವಗಳು, ಸುವರ್ಣಾಲಂಕೃತವಾದ ಶಯನ ಮತ್ತು ಆಸನಗಳು, ಭೋಜನಪಾತ್ರೆಗಳು, ಇನ್ನೂ ಅನೇಕ ದ್ರವ್ಯಗಳನ್ನೂ ಒಂದು ಲಕ್ಷ ಪರಿಮಿತವಾದ ಸುವರ್ಣಧನವನ್ನೂ ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ಅಗ್ನಿ- ಸಾಕ್ಷಿಕವಾಗಿ ದ್ರುಪದನು ಕೊಟ್ಟನು.
ತಥೈವ ದಾಸೀಶತಮಗ್ರ್ಯಯೌವನಂ
ಮಹಾರ್ಹವೇಷಾಭರಣಾಂಬರಸ್ರಜಮ್ |
ತಥೈವ ವಸತ್ರಣಿ ಚ ಭೂಷಣಾನಿ

ಪ್ರಭಾವಯುಕ್ತಾನಿ ಮಹಾಧನಾನಿ ॥41॥
ಹಾಗೆಯೇ, ಅನರ್ಘ್ಯವಾದ ವೇಷ, ಆಭರಣ, ವಸ್ತ್ರ ಮತ್ತು ಮಾಲೆಗಳಿಂದ ಭೂಷಿತವಾದ ಒಳ್ಳೆಯ ಯೌವನದಿಂದ ಕೂಡಿದ ನೂರು ಜನ ದಾಸಿಯರನ್ನೂ, ಇನ್ನೂ ಅನೇಕ ವಸ್ತ್ರಗಳನ್ನೂ, ಭೂಷಣಗಳನ್ನೂ, ಮಹಾಧನಗಳನ್ನೂ ನೀಡಿದನು.
ಕೃತೇ ವಿವಾಹೇ ಚ ತತಸ್ತು ಪಾಂಡವಾಃ
ಪ್ರಭೂತರತ್ನಾಮುಪಲಭ್ಯ ತಾಂ ಶ್ರಿಯಮ್ ।
ವಿಜಹ್ರುರಿಂದ್ರಪ್ರತಿಮಾ ಮಹಾಬಲಾಃ
ಪುರೇ ತು ಪಾಂಚಾಲನೃಪಸ್ಯ ತಸ್ಯ ಹ ॥42॥
ವಿವಾಹವು ಮುಗಿಯುತ್ತಿರಲು ಪಾಂಡವರು ಪ್ರಭೂತರತ್ನಗಳ ಜೊತೆಯಲ್ಲಿ ಬಂದ ಆ ಶ್ರೀದೇವಿಯನ್ನು ಪಡೆದು ಮಹಾಬಲರಾದ ಅವರು ಪಾಂಚಾಲರಾಜನ ಆ ಪಟ್ಟಣದಲ್ಲಿ ಇಂದ್ರರಂತೆ ವಿಹಾರಮಾಡಿದರು.
ಸರ್ವೇಽಪ್ಯತುಷ್ಯನ್ ನೃಪ ಪಾಂಡವೇಯಾಃ
ತಸ್ಯಾಃ ಶುಭೈಃ ಶೀಲಸಮಾಧಿವೃತ್ತೈಃ ।
ಸಾ ಚಾಪ್ಯೇಷಾ ಯಾಜ್ಞಸೇನೀ ತದಾನೀಂ
ವಿವರ್ಧಯಾಮಾಸ ಮುದಂ ಸ್ವಸುವೃತ್ತೈಃ ॥43॥
ದ್ರೌಪದಿಯ ಶೀಲ ಸಮಾಧಾನ ಮೊದಲಾದ ಶುಭಗುಣಗಳಿಂದ ಎಲ್ಲ ಪಾಂಡವರೂ ಸಂತೋಷಪಟ್ಟರು. ಆ ಯಾಜ್ಞಸೇನಿಯಾದರೋ ಆಗ ತನ್ನ ಒಳ್ಳೆಯ ವ್ರತನಿಯಮಗಳಿಂದ ಅವರ ಸುಖವನ್ನು ಅಭಿವೃದ್ಧಿ ಪಡಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಅಷ್ಟನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ವೈವಾಹಿಕಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ತೊಂಭತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *

## ನೂರ ತೊಂಭತ್ತೊಂಭತ್ತನೆಯ ಅಧ್ಯಾಯ
(ದ್ರೌಪದಿಗೆ ಕುಂತಿಯ ಆಶೀರ್ವಾದ. ಕೃಷ್ಣನು ಕಳುಹಿಸಿದ ಉಡುಗೊರೆಗಳು.)
ವೈಶಂಪಾಯನಃ
ಏವಂ ವಿವಾಹಂ ಕೃತ್ವಾ ತೇ ವೀರಾ ದ್ರುಪದವೇಶ್ಮನಿ ।
ಊಷುಃ ಸರ್ವೇ ಯಥಾ ಪುಣ್ಯಂ ಕೃತವಂತೋಽಂತರಿಕ್ಷಗಾಃ ॥1॥
ಆ ವೀರರೆಲ್ಲರೂ ಹೀಗೆ ವಿವಾಹವನ್ನು ಮಾಡಿಕೊಂಡು, ದ್ರುಪದನ ಮನೆಯಲ್ಲಿ ಪುಣ್ಯವನ್ನು ಮಾಡಿದವರು ಸ್ವರ್ಗದಲ್ಲಿ ವಾಸಿಸುವಂತೆ ವಾಸಿಸಿದರು.
ಪಾಂಡವೈಃ ಸಹ ಸಂಯೋಗಂ ಗತಸ್ಯ ದ್ರುಪದಸ್ಯ ತು ।
ನ ಬಭೂವ ಭಯಂ ಕಿಂಚಿದ್ ದೇವೇಭ್ಯೋಽಪಿ ಕಥಂಚನ ॥2॥
ಪಾಂಡವರ ಸಂಬಂಧವನ್ನು ಪಡೆದ ದ್ರುಪದನು ದೇವತೆಗಳ ಭಯವನ್ನೂ ತೊರೆದನು.
ಕುಂತೀಮಾಸಾದ್ಯ ತಾ ನಾರ್ಯೋ ದ್ರುಪದಸ್ಯ ಮಹಾತ್ಮನಃ ।
ಪಾದೌ ವವಂದಿರೇ ಹೃಷ್ಟಾಃ ಶಿರೋಭಿರ್ನಾಮ ಕೀರ್ತಯನ್ ॥3॥
ಮಹಾತ್ಮರಾದ ದ್ರುಪದನಾರಿಯರು ಕುಂತಿಯ ಸಮೀಪಕ್ಕೆ ಬಂದು ಸಂತೋಷದಿಂದ ತಮ್ಮ ಹೆಸರುಗಳನ್ನು ಹೇಳುತ್ತಾ ತಮ್ಮ ಶಿರಸ್ಸಿನಿಂದ ಅವರ ಪಾದಗಳಿಗೆ ನಮಸ್ಕರಿಸಿದರು.
ದ್ರೌಪದೀ ಕ್ಷೌಮಸಂವೀತಾ ಕೃತಕೌತುಕಮಂಗಲಾ ।
ಅಭಿವಾದ್ಯ ತದಾ ಶ್ವಶ್ರೂಂ ತಸ್ಥೌ ಪ್ರಹ್ವಾ ಕೃತಾಂಜಲಿಃ ॥4॥
ದ್ರೌಪದಿಯು ಮಂಗಳಕಾರ್ಯವನ್ನು ಮುಗಿಸಿ ಪೀತಾಂಬರವನ್ನು ಹೊದ್ದು ಅತ್ತೆಗೆ ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ವಿನಯದಿಂದ ನಿಂತುಕೊಂಡಳು.
ರೂಪಯೌವನಸಂಪನ್ನಾಂ ಶೀಲಾಚಾರಸಮನ್ವಿತಾಮ್ ।
ದ್ರೌಪದೀಮವದತ್ ಪ್ರೇಮ್ಣಾ ಪೃಥಾಽಽಶೀರ್ವಚನಂ ಸ್ನುಷಾಮ್ ॥5॥
ರೂಪಯೌವನಸಂಪನ್ನಳಾದ, ಶೀಲಾಚಾರಯುಕ್ತಳಾದ, ಸೊಸೆಯಾದ ದ್ರೌಪದಿಗೆ ಕುಂತಿಯು ಪ್ರೇಮದಿಂದ ಆಶೀರ್ವಚನವನ್ನು ನೀಡಿದಳು.
ಯಥೇಂದ್ರಾಣೀ ಹರಿಹಯೇ ಸ್ವಾಹಾ ಚೈವ ಹುತಾಶನೇ ।
ರೋಹಿಣೀ ಚ ಯಥಾ ಸೋಮೇ ದಮಯಂತೀ ಯಥಾ ನಳೇ ॥6॥
ಯಥಾ ವೈಶ್ರವಣೇ ಭದ್ರಾ ವಸಿಷ್ಠೇ ಚಾಪ್ಯರುಂಧತೀ ।
ಯಥಾ ನಾರಾಯಣೇ ಲಕ್ಷ್ಮೀಸ್ತಥಾ ತ್ವಂ ಭವ ಭರ್ತೃಷು ॥7॥

ಶಚಿಯು ಇಂದ್ರನಲ್ಲಿ ನಡೆದುಕೊಂಡಂತೆ, ಸ್ವಾಹಾದೇವಿಯು ಅಗ್ನಿಯಲ್ಲಿ ನಡೆದುಕೊಂಡಂತೆ, ರೋಹಿಣಿಯು ಚಂದ್ರನ ವಿಷಯದಲ್ಲಿ ನಡೆದುಕೊಂಡಂತೆ, ದಮಯಂತಿಯು ನಳನ ವಿಷಯದಲ್ಲಿ ನಡೆದುಕೊಂಡಂತೆ, ಭದ್ರೆಯು ಕುಬೇರನ ವಿಷಯದಲ್ಲಿ ನಡೆದುಕೊಂಡಂತೆ, ಅರುಂಧತಿಯು ವಸಿಷ್ಠರ ವಿಷಯದಲ್ಲಿ ನಡೆದುಕೊಂಡಂತೆ, ಲಕ್ಷ್ಮಿಯು ನಾರಾಯಣನಲ್ಲಿ ನಡೆದುಕೊಂಡಂತೆ, ನೀನು ಪತಿಗಳ ವಿಷಯದಲ್ಲಿ ನಡೆದುಕೋ.

ಜೀವ ತ್ವಂ ವೀರಸೂರ್ಭದ್ರೇ ಬಹುಪುತ್ರಸಮನ್ವಿತಾ |
ಸುಭಗಾ ಭೋಗಸಂಪನ್ನಾ ಯಜ್ಞಪತ್ನೀ ಭವಾನೇ ||8||
ಭದ್ರೆಯೇ, ವೀರರಾದ ಮಕ್ಕಳನ್ನು ಪಡೆದು, ಅನೇಕ ಪುತ್ರಸಮನ್ವಿತಳಾಗಿ ಬಹುಕಾಲ ಬಾಳು. ಅನಘಳೇ, ಸೌಭಾಗ್ಯದಿಂದ ಕೂಡಿದವಳಾಗಿ, ಭೋಗಸಂಪನ್ನಳಾಗಿ ಪತಿಯ ಜೊತೆಯಲ್ಲಿ ಯಜ್ಞವನ್ನು ಮಾಡುವವಳಾಗು.

ಅತಿಥೀನಾಗತಾನ್ ಸಾಧೂನ್ ವೃದ್ಧಾನ್ ಬಾಲಾನ್ ಗುರೂಂಸ್ತಥಾ|
ಪೂಜಯಂತ್ಯಾ ಯಥಾನ್ಯಾಯಂ ಶಶ್ವದ್ ಗಚ್ಛಂತು ತೇ ಸಮಾಃ ||9||
ಅತಿಥಿಗಳನ್ನೂ, ಅಭ್ಯಾಗತರನ್ನೂ, ಸಾಧುಗಳನ್ನೂ, ವೃದ್ಧರನ್ನೂ, ಬಾಲರನ್ನೂ, ಗುರುಗಳನ್ನೂ, ಶಾಸ್ತ್ರೋಕ್ತವಾಗಿ ಪೂಜಿಸುತ್ತಾ ನಿನ್ನ ಬಹುಕಾಲವು ಕಳೆಯಲಿ.

ಕುರುಜಾಂಗಲಮುಖ್ಯೇಷು ರಾಷ್ಟ್ರೇಷು ನಗರೇಷು ಚ |
ಅನು ತ್ವಮಭಿಷಿಂಚಸ್ವ ಕುರುರಾಜಂ ಯುಧಿಷ್ಠಿರಮ್ ||10||
ಕುರುಜಾಂಗಲಪ್ರಧಾನವಾದ ರಾಷ್ಟ್ರಗಳಲ್ಲಿ ಮತ್ತು ನಗರಗಳಲ್ಲಿ ಕುರುರಾಜನಾದ ಯುಧಿಷ್ಠಿರನ ಅನಂತರ ನೀನು ಅಭಿಷಿಕ್ತಳಾಗು.

ಪತಿಭಿರ್ನಿರ್ಜಿತಾಮುರ್ವೀಂ ವಿಕ್ರಮೇಣ ಮಹಾಬಲೈಃ |
ಕುರು ಬ್ರಾಹ್ಮಣಸಾತ್ ಸರ್ವಾಮಶ್ವಮೇಧೇ ಮಹಾಕ್ರತೌ ||11||
ಮಹಾಬಲರಾದ ಪತಿಗಳು ತಮ್ಮ ಪರಾಕ್ರಮದಿಂದ ಜಯಿಸಿದ ಭೂಮಿಯನ್ನು ಎಲ್ಲವನ್ನೂ ಅಶ್ವಮೇಧ ಮಹಾಕ್ರತುವಿನಲ್ಲಿ ಬ್ರಾಹ್ಮಣರಿಗೆ ದಾನ ಮಾಡು.

ಪೃಥಿವ್ಯಾಂ ಯಾನಿ ರತ್ನಾನಿ ಗುಣವಂತಿ ಗುಣಾನ್ವಿತೇ |
ತಾನ್ಯಾಪ್ನುಹಿ ತ್ವಂ ಕಲ್ಯಾಣಿ ಸುಖಿನೀ ಶರದಾಂ ಶತಮ್ ||12||
ಗುಣಾನ್ವಿತಳೇ, ಪೃಥಿವಿಯಲ್ಲಿರುವ ಎಲ್ಲಾ ಶ್ರೇಷ್ಠವಾದ ರತ್ನಗಳನ್ನೂ ನೀನು ಹೊಂದು. ಕಲ್ಯಾಣಿಯೇ, ನೂರು ವರ್ಷಗಳ ಕಾಲ ಸುಖದಿಂದ ಬಾಳು.

ಯಥಾ ಚ ತ್ವಾಽಭಿನಂದಾಮಿ ವಧ್ವದ್ಯ ಕ್ಷೌಮಸಂವೃತಾಮ್ |
ತಥಾ ಭೂಯೋಽಪಿ ನಂದಿಷ್ಯೇ ಸುತಾನ್ ಪುತ್ರಾನ್ ಗುಣಾನ್ವಿತಾನ್ ||13||
ವಧುವೇ, ಹೇಗೆ ಈ ದಿನ ಪೀತಾಂಬರವನ್ನು ಹೊದ್ದ ನಿನ್ನನ್ನು ಅಭಿನಂದಿಸುತ್ತಿದ್ದೇನೋ ಅದಕ್ಕಿಂತಲೂ ಹೆಚ್ಚಾಗಿ ಗುಣಾನ್ವಿತರಾದ ನನ್ನ ಪುತ್ರರನ್ನು ಅಭಿನಂದಿಸುತ್ತೇನೆ.

ವೈಶಂಪಾಯನಃ
ಪ್ರಾಹಿಣೋದ್ ವಾಸುದೇವಸ್ತು ಪಾಂಡವೇಭ್ಯೋ ರಿಪುಂಜಯಃ |
ಮುಕ್ತಾವೈಡೂರ್ಯಚಿತ್ರಾಣಿ ಹೈಮಾನ್ಯಾಭರಣಾನಿ ಚ ||14||
ವಾಸಾಂಸಿ ಚ ಮಹಾರ್ಹಾಣಿ ನಾನಾದೇಶ್ಯಾನಿ ಮಾಧವಃ |
ಕಂಬಲಾಜಿನರತ್ನಾನಿ ಸ್ಪರ್ಶವಂತಿ ಶುಭಾನಿ ಚ ||15||
ಶಯನಾಸನಯಾನಾನಿ ವಿವಿಧಾನಿ ಮಹಾಂತಿ ಚ |
ವೈಡೂರ್ಯರತ್ನಚಿತ್ರಾಣಿ ಶತಶೋ ಭಾಜನಾನಿ ಚ ||16||
ರೂಪಯೌವನದಾಕ್ಷಿಣ್ಯೈರುಪೇತಾಶ್ಚ ಸ್ವಲಂಕೃತಾಃ |
ಪ್ರೇಷ್ಯಾಃ ಸಂಪ್ರದದೌ ಕೃಷ್ಣೋ ನಾನಾದೇಶ್ಯಾಃ ಸಹಸ್ರಶಃ ||17||
ರಿಪುಂಜಯನಾದ ಶ್ರೀಕೃಷ್ಣನು ಪಾಂಡವರಿಗೆ ಅನೇಕ ಉಡುಗೊರೆಗಳನ್ನು ಕಳುಹಿಸಿದನು. ಮುತ್ತು ಮತ್ತು ವೈಡೂರ್ಯಗಳಿಂದ ಖಚಿತವಾದ ಸುವರ್ಣಾಭರಣಗಳು, ನಾನಾದೇಶದ ಬೆಲೆಬಾಳುವ ವಸ್ತುಗಳು, ಕಂಬಳಿಗಳು, ಅಜಿನಗಳು, ರತ್ನಗಳು, ಮೃದುಸ್ಪರ್ಶವುಳ್ಳ ಶಯನಗಳು, ಆಸನಗಳು, ವಿಧವಿಧವಾದ ದೊಡ್ಡ ವಾಹನಗಳು, ವೈಡೂರ್ಯರತ್ನಖಚಿತವಾದ ನೂರಾರು ಪಾತ್ರೆಗಳು, ರೂಪಯೌವನ ಸೌಜನ್ಯದಿಂದ ಕೂಡಿದ ಅಲಂಕೃತರಾದ, ನಾನಾದೇಶದಿಂದ ಕರೆತಂದ ಸಹಸ್ರಾರು ದಾಸಿಯರು, ಎಲ್ಲವನ್ನೂ ಕಳುಹಿಸಿದನು.

ಗಜಾನ್ ವಿನೀತಾನ್ ಭದ್ರಾಂಶ್ಚ ಸದಶ್ವಾಂಶ್ಚ ಸ್ವಲಂಕೃತಾನ್ |
ರಥಾಂಶ್ಚ ದಾಂತಾನ್ ಸೌವರ್ಣಾನ್ ಶುಭ್ರೈಃ ಪತ್ರೈರಲಂಕೃತಾನ್ ||18||
ಕೋಟಿಶಶ್ಚ ಸುವರ್ಣಾನಾಂ ತಥೈವ ಕೃತಕಂ ಬಹು |
ಕೃತಾಕೃತಮಮೇಯಾತ್ಮಾ ಪ್ರಾಹಿಣೋನ್ಮಧುಸೂದನಃ ||19||
ಪಳಗಿಸಿದ ಆನೆಗಳನ್ನೂ, ಮಂಗಳವಾದ, ಅಲಂಕೃತವಾದ ಶ್ರೇಷ್ಠ ಕುದುರೆಗಳನ್ನೂ, ದಂತಗಳಿಂದ ಮಾಡಿದ ಸುವರ್ಣಾಲಂಕೃತವಾದ ಪತ್ರಗಳಿಂದ ಅಲಂಕೃತವಾದ ಅನೇಕ ರಥಗಳನ್ನೂ, ಕೋಟಿಗಟ್ಟಲೆ ಸುವರ್ಣವನ್ನೂ, ಕೇವಲ ಸುವರ್ಣದಿಂದ ಮಾಡಿದ ಆಭರಣಗಳನ್ನೂ, ಸುವರ್ಣ ಮತ್ತು ರತ್ನಾದಿಗಳಿಂದ ಕೂಡಿದ ಆಭರಣಗಳನ್ನೂ ಮಧುಸೂದನನು ಕಳುಹಿಸಿದನು.

ತತ್ ಸರ್ವಂ ಪ್ರತಿಜಗ್ರಾಹ ಧರ್ಮರಾಜೋ ಯುಧಿಷ್ಠಿರಃ |
ಅರ್ಚಯಿಷ್ಯನ್ ಹೃಷೀಕೇಶಂ ಗೋವಿಂದಪ್ರಿಯಕಾಮ್ಯಯಾ ||20||
ಧರ್ಮರಾಜನಾದ ಯುಧಿಷ್ಠಿರನು ಕೃಷ್ಣನಿಗೆ ಸಂತೋಷವನ್ನುಂಟು ಮಾಡುವ ಆಸೆಯಿಂದ ಕೃಷ್ಣನನ್ನು (ಮನಸ್ಸಿನಲ್ಲಿಯೇ)

ಪೂಜಿಸುತ್ತಾ ಆ ಎಲ್ಲಾ ಉಡುಗೊರೆಗಳನ್ನೂ ಸ್ವೀಕರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಏಕೋನದ್ವಿಶತಶತತಮೋಽಧ್ಯಾಯಃ ॥
॥ ಇತಿ ವೈವಾಹಿಕಪರ್ವಣಿ ಅಷ್ಟಮೋಽಧ್ಯಾಯಃ ॥
॥ ವೈವಾಹಿಕಪರ್ವ ಸಮಾಪ್ತಮ್॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ನೂರ ತೊಂಭತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ವೈವಾಹಿಕ ಪರ್ವವು ಮುಗಿಯಿತು.
*****
ಮಹಾಭಾರತ
ಆದಿಪರ್ವ ಭಾಗ-4

13. ವಿದುರಾಗಮನಪರ್ವ
ಇನ್ನೂರನೆಯ ಅಧ್ಯಾಯ
(ಚಾರರಿಂದ ಪಾಂಡವರು ದ್ರೌಪದಿಯನ್ನು ಗೆದ್ದರೆಂದು ಸರ್ವತ್ರ ಪ್ರಚಾರ. ಕೆಲವು ರಾಜರ ಹರ್ಷ, ದುರ್ಯೋಧನಾದಿಗಳ ಅಸೂಯೆ, ಶಕುನಿಯ ದುರ್ನೀತಿ ಮತ್ತು ಭೂರಿಶ್ರವನ ಹಿತವಚನ)
ವೈಶಂಪಾಯನಃ
ತತೋ ರಾಜ್ಞಾಂ ಚರೈರಾಪ್ತೈಶ್ಚಾರಃ ಸಮುಪನೀಯತೇ ।
ಪಾಂಡವೈರುಪಸಂಪನ್ನಾ ದ್ರೌಪದೀ ಬಹುಭಿಸ್ತ್ವತಿ ॥1॥
ಅನಂತರ ರಾಜರುಗಳ ಆಪ್ತಚಾರರು ದ್ರೌಪದಿಯು ಪಂಚಪಾಂಡವರನ್ನು ಪತಿಯಾಗಿ ಪಡೆದಳು ಎಂಬ ವಾರ್ತೆಯನ್ನು ಎಲ್ಲ ಕಡೆಯಲ್ಲಿಯೂ ಹರಡಿದರು.
ಯೇನ ತದ್ಧನುರಾನಮ್ಯ ಲಕ್ಷ್ಯಂ ವಿದ್ಧಂ ಮಹಾತ್ಮನಾ ।
ಸೋಽರ್ಜುನೋ ಜಯತಾಂ ಶ್ರೇಷ್ಠೋ ವೃಷಃ - ಸರ್ವಧನುರ್ಭೃತಾಮ್ ॥2॥
ಯಾವ ಮಹಾತ್ಮನು ಆ ಧನುಸ್ಸನ್ನು ಬಗ್ಗಿಸಿ ಲಕ್ಷ್ಯವೇಧವನ್ನು ಮಾಡಿದನೋ ಅವನು ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಮತ್ತು ಜಯಶೀಲರಲ್ಲಿ ಶ್ರೇಷ್ಠನಾದ ಅರ್ಜುನನು.
ಯಃ ಶಲ್ಯಂ ಮದ್ರರಾಜಾನಮುತ್ಕ್ಷಿಪನ್ ನಾಹನದ್ ಬಲೀ ।
ತ್ರಾಸಯಂಶ್ಚಾಪಿ ಸಂಕ್ರುದ್ಧೋ ವೃಕ್ಷೇಣ ಪುರುಷಾನ್ ರಣೇ ॥3॥
ನ ಚಾಸ್ಯ ಸಂಭ್ರಮಃ ಕಶ್ಚಿದಾಸೀತ್ ತತ್ರ ಮಹಾತ್ಮನಃ ।
ಸ ಭೀಮೋ ಭೀಮಸನ್ನಾದಃ ಶತ್ರುಸೈನ್ಯಾಶ್ವಮರ್ದನಃ ॥4॥
ಯಾವ ಬಲಿಷ್ಠನು ಮದ್ರರಾಜನಾದ ಶಲ್ಯನನ್ನು ಮೇಲಕ್ಕೆ ಎಸೆದು ಕೊಲ್ಲಲಿಲ್ಲವೋ, ಯುದ್ಧದಲ್ಲಿ ಎದುರಾದವರನ್ನು ರೋಷದಿಂದ ಮರವನ್ನು ಕಿತ್ತು ಹೆದರಿಸಿದನೋ, ಆ ಕೆಲಸವನ್ನು ಮಾಡುವಾಗ ಯಾವ ಆ ಮಹಾನುಭಾವನಿಗೆ ಸ್ವಲ್ಪವೂ ಸಂಭ್ರಮ (ಗಡಿಬಿಡಿ) ಆಗಲಿಲ್ಲವೋ ಅವನು ಶತ್ರುಸೈನ್ಯದ ಅಶ್ವಗಳನ್ನು ನಾಶಮಾಡುವ ಭಯಂಕರ ಗರ್ಜನೆಯುಳ್ಳ ಭೀಮಸೇನ.
ಯೋಽಸಾವತ್ಯಕ್ರಮೀದ್ ಯುದ್ಧ್ಯನ್
ಯುದ್ಧೇ ದುರ್ಯೋಧನಂ ತದಾ ।
ಸ ರಾಜಾ ಪಾಂಡವಶ್ರೇಷ್ಠಃ ಶ್ರೇಷ್ಠವಾಗ್ ಬುದ್ಧಿವರ್ಧನಃ ॥5॥
ಯಾವನು ದುರ್ಯೋಧನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ದುರ್ಯೋಧನನನ್ನು ಮೀರಿಸಿದನೋ, ಅವನು ಶ್ರೇಷ್ಠವಚನವುಳ್ಳ, ಬುದ್ಧಿವರ್ಧನನಾದ, ಪಾಂಡವಶ್ರೇಷ್ಠನಾದ ಧರ್ಮರಾಜ.
ದುರ್ಯೋಧನಸ್ಯಾವರಜೈರ್ಯೌ ಯುಧ್ಯೇತಾಂ ಪ್ರತೀತವತ್ ।
ತೌ ಯವೌ ವೃತ್ತಸಂಪನ್ನೌ ಸಂಪನ್ನಬಲವಿಕ್ರಮೌ ॥6॥
ಯಾವ ಇಬ್ಬರು ದುರ್ಯೋಧನನ ತಮ್ಮಂದಿರ ಜೊತೆಯಲ್ಲಿ ಅನಾಯಾಸವಾಗಿ ಯುದ್ಧ ಮಾಡಿದರೋ ಅವರು ಬಲಸಂಪನ್ನರೂ, ವಿಕ್ರಮಸಂಪನ್ನರೂ, ಒಳ್ಳೆಯ ನಡತೆಯನ್ನುಳ್ಳವರೂ ಆದ ನಕುಲಸಹದೇವರು.
ಚಾರೈಃ ಪ್ರಣಿಹಿತೈರ್ಬುದ್ಧ್ವಾ ರಾಜಾನೋ ವಿಗತಜ್ವರಾಃ ।
ಬ್ರಹ್ಮರೂಪಧರಾನ್ ಬುದ್ಧ್ವಾ ತತ್ರ ತಾನ್ವೃಷಭೇಕ್ಷಣಾನ್ ।
ಪಾಂಡವಾನ್ ಮನುಜೇಂದ್ರಾಂಸ್ತೇ ಸಮಪದ್ಯಂತ ವಿಸ್ಮಿತಾಃ ॥7॥
ರಾಜರುಗಳು ಹೀಗೆ ತಾವು ನಿಯಮಿಸಿದ ಚಾರರ ಮೂಲಕ ತಿಳಿದು, ತಮ್ಮ ಮನೋಜ್ವರವನ್ನು ತ್ಯಜಿಸಿ, ಬ್ರಾಹ್ಮಣರೂಪಧಾರಿಗಳಾದ ವೃಷಭೇಕ್ಷಣರಾದ ಆ ಮನುಜೇಂದ್ರರು ಪಾಂಡವರೆಂದು ತಿಳಿದು ವಿಸ್ಮಿತರಾದರು.
ಸಾ ಸಪುತ್ರಾ ತದಾ ಕುಂತೀ ದಗ್ಧಾ ಜತುಗೃಹೇ ಶ್ರುತಾ ।
ಸರ್ವಭೂಮಿಪತೀನಾಂ ಚ ರಾಷ್ಟ್ರಾಣಾಂ ಚ ಯಶಸ್ವಿನೀ ।
ಪುನರ್ಜಾತಾನಿತಿ ಸ್ಮೈತಾನ್ ಮನ್ಯಂತೇ ಸರ್ವಭೂಮಿಪಾಃ ॥8॥
ಆ ಕುಂತಿಯು ತನ್ನ ಪುತ್ರರ ಜೊತೆಯಲ್ಲಿ ದಗ್ಧಳಾದಳೆಂದು ಕೇಳಿದ್ದ ಎಲ್ಲಾ ರಾಜರೂ, ಎಲ್ಲ ರಾಜರಿಂದಲೂ ಮತ್ತು

ರಾಷ್ಟ್ರಗಳಿಂದಲೂ ಸತ್ಕರಿಸಲ್ಪಟ್ಟ ಕೀರ್ತಿಶಾಲಿನಿಯಾದ ಆ ಕುಂತಿಯು ಮಕ್ಕಳ ಜೊತೆಯಲ್ಲಿ ಪುನರ್ಜನ್ಮವನ್ನು ಪಡೆದಳು ಎಂದು ತಿಳಿದರು.
ವ್ಯನಿಂದಂಶ್ಚ ತಥಾ ಭೀಷ್ಮಂ ಧೃತರಾಷ್ಟ್ರಂ ಚ ಕೌರವಮ್ |
ಕರ್ಮಣಾ ಸುನೃಶಂಸೇನ ಪುರೋಚನಕೃತೇನ ವೈ ॥9॥
ಪುರೋಚನನು ಮಾಡಿದ ಕ್ರೂರಕರ್ಮದ ನಿಮಿತ್ತದಿಂದಾಗಿ ಅವರು ಭೀಷ್ಮನನ್ನೂ ಮತ್ತು ಧೃತರಾಷ್ಟ್ರನನ್ನೂ ನಿಂದಿಸಿದರು.
ಧಾರ್ಮಿಕಾನ್ ವೃತ್ತಸಂಪನ್ನಾನ್ ಮಾತುಃ ಪ್ರಿಯಹಿತೇ ರತಾನ್ |
ಯದಾ ತಾನೀದೃಶಾನ್ ಪಾರ್ಥಾನ್ನೋತ್ಸಾದಯಿತುಮರ್ಹತಿ ॥
ಪಾಂಡವರು ಯಾವಾಗಲೂ ಧಾರ್ಮಿಕರೂ, ಶೀಲಸಂಪನ್ನರೂ, ತಾಯಿಯ ಹಿತದಲ್ಲಿಯೇ ಆಸಕ್ತರಾದವರೂ ಆದುದರಿಂದ ಧೃತರಾಷ್ಟ್ರನು ಇಂತಹ ಪಾಂಡವರನ್ನು ಎಂದೂ ನಾಶಮಾಡಬಾರದು. (ಎಂದು ಭಾವಿಸಿದರು)
ತತಃ ಸ್ವಯಂವರೇ ವೃತ್ತೇ ಧಾರ್ತರಾಷ್ಟ್ರಾಃ ಸ್ಮ ಭಾರತ |
ಮಂತ್ರಯಂತ ತತಃ ಸರ್ವೇ ಕರ್ಣಸೌಬಲದೂಷಿತಾಃ ॥11॥
ಭಾರತನೇ, ಸ್ವಯಂವರವು ನಡೆದ ಮೇಲೆ ಧೃತರಾಷ್ಟ್ರನ ಪುತ್ರರು ಕರ್ಣಶಕುನಿಗಳ ದುರಾಲೋಚನೆಯಿಂದ ದೂಷಿತರಾಗಿ ಎಲ್ಲರೂ ಸೇರಿ ಮಂತ್ರಾಲೋಚನೆಯನ್ನು ಮಾಡಿದರು.
ಶಕುನಿಃ
ಕಶ್ಚಿಚ್ಛತ್ರುಃ ಕರ್ಶನೀಯೋ ದರ್ಶನೀಯಸ್ತಥಾಽಪರಃ |
ಉತ್ಸಾದನೀಯಾಃ ಕೌಂತೇಯಾಃ ಸರ್ವಕ್ಷತ್ರಸ್ಯ ಮೇ ಮತಾಃ ॥12॥
ಕೆಲವು ಶತ್ರುಗಳನ್ನು ಹಿಂಸಿಸಬೇಕು. ಇನ್ನೂ ಕೆಲವು ಶತ್ರುಗಳನ್ನು ಸಂದರ್ಶಿಸಿ ಪೂಜಿಸಬೇಕು. ಪಾಂಡವರು ಮಾತ್ರ ಎಲ್ಲ ಕ್ಷತ್ರಿಯರಿಂದ ವಿನಾಶಮಾಡಲ್ಪಡಬೇಕು ಎಂದು ನನ್ನ ಅಭಿಪ್ರಾಯ.
ಏವಂ ಪರಾಜಿತಾಃ ಸರ್ವೇ ಯದಿ ಯೂಯಂ ಗಮಿಷ್ಯಥ |
ಸ ಕೃತ್ವಾ ಸಂವಿದಂ ಕಾಂಚಿದತ್ರಾಯಾಸ್ಯತ್ಯಸಂಶಯಮ್ ॥13॥
ಹೀಗೆ ನೀವೆಲ್ಲರೂ ಪರಾಜಿತರಾಗಿ ಹೋಗುತ್ತಿದ್ದರೆ, ಧರ್ಮರಾಜನು ಯಾರ ಜೊತೆಯಲ್ಲಾದರೂ ಸಂಭಾಷಣೆಯನ್ನು ಮಾಡಿಕೊಂಡು ಹಸ್ತಿನಪುರಕ್ಕೆ ಬರುವುದರಲ್ಲಿ ಸಂಶಯವಿಲ್ಲ.
ಅಯಂ ದೇಶಶ್ಚ ಕಾಲಶ್ಚ ಪಾಂಡವೋದ್ಧರಣಾಯ ನಃ |
ನ ಚೇದೇವಂ ಕರಿಷ್ಯಧ್ವಂ ಲೋಕೇ ಹಾಸ್ಯಾ ಭವಿಷ್ಯಥ ॥14॥
ಇದು ಪಾಂಡವರನ್ನು ವಿನಾಶಮಾಡುವುದಕ್ಕೆ ಯೋಗ್ಯವಾದ ಕಾಲ ಮತ್ತು ದೇಶ. ನೀವು ಹಾಗೆ ಮಾಡದಿದ್ದರೆ ಲೋಕದಲ್ಲಿ ಹಾಸ್ಯಾಸ್ಪದರಾಗುವಿರಿ.
ಯಮೇತೇ ಸಂಶ್ರಿತಾ ವಸ್ತುಂ ಕಾಮಯಂತೇ ಚ ಭೂಮಿಪಮ್ |
ಸೋಽಲ್ಪವೀರ್ಯಬಲೋ ರಾಜಾ ದ್ರುಪದೋ ವೈ ಮತೋ ಮಮ ॥15॥
ಈ ಪಾಂಡವರು ಯಾವ ರಾಜನನ್ನು ಆಶ್ರಯಿಸಿ ವಾಸಮಾಡಲು ಬಯಸುತ್ತಿದ್ದಾರೆಯೋ ಆ ದ್ರುಪದರಾಜನು ದುರ್ಬಲನಾದವನು ಮತ್ತು ಅಲ್ಪಪರಾಕ್ರಮವುಳ್ಳವನು ಎಂದು ನನ್ನ ಅಭಿಪ್ರಾಯ.
ಯಾವದೇತಾನ್ನ ಜಾನಂತಿ ಜೀವತೋ ವೃಷ್ಣಿಪುಂಗವಾಃ |
ಚೈದ್ಯಶ್ಚ ಪುರುಷವ್ಯಾಘ್ರಃ ಶಿಶುಪಾಲಃ ಪ್ರತಾಪವಾನ್ ॥16॥
ವೃಷ್ಣಿಪುಂಗವರು ಪಾಂಡವರು ಬದುಕಿದ್ದಾರೆಂದು ತಿಳಿಯುವುದಕ್ಕಿಂತ ಮೊದಲೇ, ಪ್ರತಾಪಶಾಲಿಯಾದ ಪುರುಷವ್ಯಾಘ್ರನಾದ ಶಿಶುಪಾಲನು ಹಾಗೆ ತಿಳಿಯುವುದಕ್ಕಿಂತ ಮೊದಲೇ (ಪಾಂಡವರನ್ನು ವಿನಾಶಮಾಡಬೇಕು)
ಏಕೀಭಾವಂ ಗತಾ ರಾಜ್ಞಾ ದ್ರುಪದೇನ ಮಹಾತ್ಮನಾ |
ದುರಾಧರ್ಷತರಾ ರಾಜನ್ ಭವಿಷ್ಯಂತಿ ನ ಸಂಶಯಃ ॥17॥
ರಾಜನೇ, ಇವರೆಲ್ಲರೂ ಮಹಾತ್ಮನಾದ ದ್ರುಪದನಿಂದ ಏಕೀಭಾವವನ್ನು ಹೊಂದಿದರೆ, ಅನಂತರ ಅವರನ್ನು ಸೋಲಿಸಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.
ಯಾವದತ್ವರತಾಂ ಸರ್ವೇ ಪ್ರಾಪ್ನುವಂತಿ ನರಾಧಿಪಾಃ |
ತಾವದೇವ ವ್ಯವಸ್ಯಾಮಃ ಪಾಂಡವಾನಾಂ ವಧಂ ಪ್ರತಿ ॥18॥
ಈ ರಾಜರೆಲ್ಲರೂ ಆಲಸ್ಯದಿಂದ ಇರುವಾಗಲೇ ನಾವು ಪಾಂಡವರ ವಧೆಗಾಗಿ ಪ್ರಯತ್ನವನ್ನು ಮಾಡೋಣ.
ಮುಕ್ತಾ ಜತುಗೃಹಾದ್ ಭೀಮಾದಾಶೀವಿಷಮುಖಾದಿವ |
ಪುನರ್ಯದೀಹ ಮುಚ್ಯಂತೇ ಮಹನ್ನೋ ಭಯಮಾವಿಶೇತ್ ॥19॥
ಭಯಂಕರವಾದ ಸರ್ಪದ ಮುಖದಿಂದ ಹೊರ ಬಂದಂತೆ ಅವರು ಜತುಗೃಹದಿಂದ ಹೊರಗೆ ಬಂದಿದ್ದಾರೆ. ಈಗಲೂ ಅವರು ವಿಮೋಚನೆಗೊಂಡರೆ ನಮಗೆ ದೊಡ್ಡ ಭಯವುಂಟಾದೀತು.
ತೇಷಾಮಿಹೋಪಯಾತಾನಾಮೇಷಾಂ ಚ ಪುರವಾಸಿನಾಮ್ |
ಅಂತರೇ ದುಷ್ಕರಂ ಸ್ಥಾತುಂ ಮೇಷಯೋರ್ಮಹತೋರಿವ ॥20॥
ಪಾಂಡವರು ಇಲ್ಲಿಗೆ ಬಂದರೆ, ನಾವು ಅವರ ಮತ್ತು ಪುರವಾಸಿಗಳ ಮಧ್ಯೆ ನಿಂತರೆ, ಯುದ್ಧಮಾಡುವ ಎರಡು ದೊಡ್ಡ ಮೇಷಗಳ ನಡುವೆ ನಿಂತಂತೆ ನಿಲ್ಲುವುದು ದುಷ್ಕರವಾಗುತ್ತದೆ.
ಹಂತ ಧೃಕ್ಪ್ರಗೃಹೀತಾನಿ ಬಲಾನಿ ಬಲಿನಃ ಸ್ವಯಂ |

ಯಾವನ್ನಃ ಕುರುಸೇನಾಯಾಂ ಪತಂತಿ ಪತಗಾ ಇವ ॥21॥
ತಾವತ್ ಸರ್ವಾಭಿಹಾರೇಣ ಪುರಮೇತದ್ ವಿನಾಶ್ಯತಾಮ್ |
ಏತದತ್ರ ಪರಂ ಮನ್ಯೇ ಪ್ರಾಪ್ತಕಾಲಂ ನರರ್ಷಭಾಃ ॥22॥
ಹಂತ ಎಂದರೆ ಸಂತೋಷ. ಪಾಂಡವರನ್ನು ಪರಿಗ್ರಹಿಸಿದ ದ್ರುಪದನ ಸೈನ್ಯವು ಮತ್ತು ಸ್ವತಃ ಬಲಿಷ್ಠರಾದ ಪಾಂಡವರು ಪತಂಗಗಳಂತೆ ಕುರುಸೇನೆಯ ಮೇಲೆ ಬೀಳುವುದಕ್ಕಿಂತ ಮುಂಚೆಯೇ, ಎಲ್ಲ ವಸ್ತುಗಳನ್ನೂ ಹೊಡೆದು (ಒಡೆದು) ಪಾಂಚಾಲನ ಪಟ್ಟಣವನ್ನು ನಾಶಮಾಡೋಣ. ರಾಜನೇ, ಇದು ಈ ಕಾಲದಲ್ಲಿ ನಾವು ಮಾಡಬಹುದಾದ ಶ್ರೇಷ್ಠವಾದ ಕಾರ್ಯವೆಂದು ಭಾವಿಸುತ್ತೇನೆ.
ವೈಶಂಪಾಯನಃ
ಶಕುನೇರ್ವಚನಂ ಶ್ರುತ್ವಾ ಭಾಷಮಾಣಸ್ಯ ದುರ್ಮತೇಃ |
ಭೂರಿಶ್ರವಾ ಇದಂ ವಾಕ್ಯಂ ನಿಜಗಾದ ಪರಂತಪಃ ॥23॥
ಹೀಗೆ ಮಾತನಾಡುವ ದುರ್ಮತಿಯಾದ ಶಕುನಿಯ ಮಾತುಗಳನ್ನು ಕೇಳಿ ಪರಂತಪನಾದ ಭೂರಿಶ್ರವನು ಈ ಮಾತುಗಳನ್ನು ಆಡಿದನು.

ಪ್ರಕೃತೀಃ ಸಪ್ತ ವೈ ಜ್ಞಾತ್ವಾ ಆತ್ಮನಶ್ಚ ಪರಸ್ಯ ಚ |
ತಥಾ ದೇಶಂ ಚ ಕಾಲಂ ಚ ಷಡ್ವಿಧಾಂಶ್ಚ ನಯೇದ್ ಗಣಾನ್ ॥
ಸ್ಥಾನಂ ವೃದ್ಧಿಂ ಕ್ಷಯಂ ಚೈವ ಭೂಮಿಂ ಮಿತ್ರಾಣಿ ವಿಕ್ರಮಮ್ |
ಸಮೀಕ್ಷ್ಯಾಥಾಭಿಯುಂಜೀತ ಪರಂ ವ್ಯಸನಪೀಡಿತಮ್ ॥25॥
ತನ್ನ ಮತ್ತು ಶತ್ರುವಿನ ಸಪ್ತಪ್ರಕೃತಿಗಳನ್ನೂ, ದೇಶಕಾಲಗಳನ್ನೂ, ಸ್ಥಾನ, ವೃದ್ಧಿ, ಕ್ಷಯ, ಭೂಮಿ, ಮಿತ್ರರು ಮತ್ತು ವಿಕ್ರಮ ಎಂಬ ಆರು ವಿಧವಾದ ಗುಣಗಳನ್ನೂ ಪರಿಶೀಲಿಸಿ ವ್ಯಸನಪೀಡಿತನಾದ ಶತ್ರುವಿನ ಮೇಲೆ ಆಕ್ರಮಣವನ್ನು ಮಾಡಬೇಕು.
ವಪುಷಾ ಭುವಿ ಭೂತಾನಾಂ ನೇತ್ರಾಣಿ ಹೃದಯಾನಿ ಚ |
ಶ್ರೋತ್ರಂ ಮಧುರಯಾ ವಾಚಾ ರಮಯತ್ಯರ್ಜುನೋ ನೃಣಾಮ್ ॥
ಅರ್ಜುನನು ತನ್ನ ದೇಹದಿಂದಲೇ ಭೂಮಿಯಲ್ಲಿರುವ ಎಲ್ಲರ ನೇತ್ರಗಳನ್ನೂ ಮತ್ತು ಮನಸ್ಸುಗಳನ್ನೂ ಸಂತೋಷಪಡಿಸುತ್ತಾನೆ. ತನ್ನ ಮಧುರವಾದ ಮಾತುಗಳಿಂದ ಎಲ್ಲರ ಶ್ರೋತ್ರಗಳನ್ನೂ ಸಂತೋಷಪಡಿಸುತ್ತಾನೆ.
ನ ತು ಕೇವಲದೈವೇನ ಪ್ರಜಾ ಭಾವೇನ ಭೇಜಿರೇ |
ಯದ್ ಬಭೂವ ಮನಃಕಾಂತಂ ಕರ್ಮಣಾ ಸ ಚಕಾರ ತತ್ ॥27॥
ಕೇವಲ ದೈವೇಚ್ಛೆಯಿಂದ ಪ್ರಜೆಗಳು ಪಾಂಡವರನ್ನು ಪ್ರೀತಿಯಿಂದ ಸೇವಿಸುವುದಲ್ಲ. ಅವರು ಎಲ್ಲರ ಮನಸ್ಸಿಗೂ ಪ್ರಿಯವಾದುದು ಯಾವುದೋ ಅದನ್ನೇ ತಮ್ಮ ಕರ್ಮಗಳಿಂದ ಮಾಡಿದ್ದಾರೆ.
ತತೋಽಹಂ ಪಾಂಡವಾನ್ ಮನ್ಯೇ ಮಿತ್ರಕೋಶಸಮನ್ವಿತಾನ್ |
ಬಲಸ್ಥಾನ್ ವಿಕ್ರಮಸ್ಥಾಂಶ್ಚ ಸ್ವಕೃತ್ಯೈಃ ಪ್ರಕೃತಿಪ್ರಿಯಾನ್ ॥28॥
ಆದ್ದರಿಂದ ಪಾಂಡವರು ಮಿತ್ರಕೋಶಸಂಪನ್ನರೆಂದೂ, ಬಲಿಷ್ಠರೆಂದೂ, ವಿಕ್ರಮಶಾಲಿಗಳೆಂದೂ, ತಮ್ಮ ಕಾರ್ಯಗಳಿಂದ ಪ್ರಜೆಗಳಿಗೆ ಪ್ರಿಯರೆಂದೂ ಭಾವಿಸುತ್ತೇನೆ.
ನ ಹ್ಯಯುಕ್ತಂ ನ ಚಾಸತ್ಯಂ ನಾನೃತಂ ನ ಚ ವಿಪ್ರಿಯಮ್ |
ಭಾಷಿತಂ ಚಾರುಭಾಷಸ್ಯ ಜಜ್ಞೇ ಪಾರ್ಥಸ್ಯ ಭಾರತೀ ॥29॥
ಚೆನ್ನಾಗಿ ಮಾತನಾಡುವ ಅರ್ಜುನನು ಎಂದೂ ಅಯುಕ್ತವಾದು- ದನ್ನಾಗಲೀ, ಸತ್ಯರಹಿತವಾದುದನ್ನಾಗಲೀ, ಕಪಟದಿಂದ ಕೂಡಿದುದನ್ನಾಗಲೀ, ಅಪ್ರಿಯವಾಗಲೀ ಆದ ಮಾತನ್ನು ಆಡಲಿಲ್ಲ.
ತಾನೇವಂ ಗುಣಸಂಪನ್ನಾನ್ ಸಂಪನ್ನಾನ್ ರಾಜಲಕ್ಷಣೈಃ |
ನ ತಾನ್ ಪಶ್ಯಾಮಿ ಯೇ ಶಕ್ತಾಃ ಸಮುಚ್ಛೇತ್ತುಂ ಯಥಾ ಬಲಾತ್ ॥
ಹೀಗೆ ಗುಣಸಂಪನ್ನರೂ, ರಾಜಲಕ್ಷಣಗಳಿಂದ ಕೂಡಿದವರೂ ಆದ ಅವರನ್ನು ತಮ್ಮ ಬಲದಿಂದ ವಿನಾಶಮಾಡಲು ಸಮರ್ಥರಾದ ಯಾರನ್ನೂ ನಾನು ಕಾಣುತ್ತಿಲ್ಲ.
ಪ್ರಭಾವಶಕ್ತಿರ್ವಿಪುಲಾ ಮಂತ್ರಶಕ್ತಿಶ್ಚ ಪುಷ್ಕಲಾ |
ತಥೈವೋತ್ಸಾಹಶಕ್ತಿಶ್ಚ ಪಾರ್ಥೇಷ್ವಭ್ಯಧಿಕಾ ಸದಾ ॥31॥
ಪಾಂಡವರಲ್ಲಿ ರಾಜರಿಗೆ ಇರಬೇಕಾದ ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿಗಳು ಯಾವಾಗಲೂ ಅತ್ಯಧಿಕವಾಗಿವೆ.
ಮೌಲಮಿತ್ರಬಲಾನಾಂ ಚ ಕಾಲಜ್ಞೋ ವೈ ಯುಧಿಷ್ಠಿರಃ |
ಸಾಮ್ನಾ ದಾನೇನ ಭೇದೇನ ದಂಡೇನೇತಿ ಯುಧಿಷ್ಠಿರಃ ॥32॥
ಅಮಿತ್ರಂ ಯತತೇ ಜೇತುಂ ನ ರೋಷೇಣೇತಿ ಮೇ ಮತಿಃ |
ಪರಿಕ್ರೀಯ ಧನೈಃ ಶತ್ರೂನ್ ಮಿತ್ರಾಣಿ ಚ ಬಲಾನಿ ಚ ॥33॥
ಮೂಲಂ ಚ ಸುದೃಢಂ ಕೃತ್ವಾ ಹಂತ್ಯರೀನ್ ಪಾಂಡವಸ್ತದಾ |
ಅಶಕ್ಯಾನ್ ಪಾಂಡವಾನ್ ಮನ್ಯೇ ದೇವೈರಪಿ ಸವಾಸವೈಃ |
ಯೇಷಾಮರ್ಥೇ ಸದಾ ಯುಕ್ತೌ ಕೃಷ್ಣಸಂಕರ್ಷಣಾವುಭೌ ॥34॥
ಕಾಲಜ್ಞನಾದ ಯುಧಿಷ್ಠಿರನು ತನ್ನ ಮತ್ತು ಮಿತ್ರರ ಬಲಗಳನ್ನು, ಸಾಮದಾನಭೇದದಂಡಗಳಿಂದ ಪರಿಗ್ರಹಿಸಿ ಶತ್ರುಗಳನ್ನು ಜಯಿಸಲು ಪ್ರವೃತ್ತನಾಗುತ್ತಾನೆ. ಕೇವಲ ರೋಷದಿಂದ ಪ್ರವೃತ್ತನಾಗುವುದಿಲ್ಲ ಎಂದು ನನ್ನ ಅಭಿಪ್ರಾಯ. ಪಾಂಡವನಾದ

ಧರ್ಮರಾಜನು ಶತ್ರುಗಳನ್ನೂ, ಮಿತ್ರರನ್ನೂ, ಸೈನ್ಯವನ್ನೂ, ಧನದಿಂದ ಕ್ರಯಮಾಡಿ ತನ್ನ ಮೂಲಬಲವನ್ನು ದೃಢಮಾಡಿ ಶತ್ರುಗಳನ್ನು ಕೊಲ್ಲುತ್ತಾನೆ. ಯಾರ ಹಿತದಲ್ಲಿ ಕೃಷ್ಣ ಮತ್ತು ಬಲರಾಮರು ಸದಾ ನಿರತರಾಗಿದ್ದಾರೋ ಅಂತಹ ಪಾಂಡವರನ್ನು ಇಂದ್ರನಿಂದ ಕೂಡಿದ ದೇವತೆಗಳೂ ಗೆಲ್ಲಲು ಸಾಧ್ಯವಿಲ್ಲ ಎಂದು ನನ್ನ ಅಭಿಪ್ರಾಯ.
ಶ್ರೇಯಶ್ಚ ಯದಿ ಮನ್ಯಧ್ವಂ ಮನ್ಯತಂ ಯದಿ ವೋ ಮತಮ್ |
ಸಂವಿದಂ ಪಾಂಡವೈಃ ಸಾರ್ಧಂ ಕೃತ್ವಾ ಯಾಮ ಯಥಾಗತಮ್ ॥35॥
ನನ್ನ ಅಭಿಪ್ರಾಯವು ನಿಮಗೆ ಸಮ್ಮತವಾದರೆ, ನಿಮಗೆ ಶ್ರೇಯಸ್ಸಾಗಬೇಕೆಂಬ ಅಭಿಪ್ರಾಯವಿದ್ದರೆ, ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಂಡು ನಾವು ಬಂದ ದಾರಿಯನ್ನು ಹಿಡಿದು ಹೋಗೋಣ.
ಗೋಪುರಾಟ್ಟಾಲಕೈರುಚ್ಚೈರುಪಕಲ್ಪಶತೈರಪಿ |
ಗುಪ್ತಂ ಪುರವರಶ್ರೇಷ್ಠಮೇತದದ್ಭಿಶ್ಚ ಸಂವೃತಮ್ ॥36॥
ಈ ಪಾಂಚಾಲರಾಜನ ಪಟ್ಟಣವು, ಗೋಪುರ ಅಟ್ಟಾಲಕ ಮತ್ತು ನೂರಾರು ಉಪಕಲ್ಪಗಳಿಂದಲೂ ಯುಕ್ತವಾಗಿದೆ ಮತ್ತು ಸುತ್ತಲೂ ನೀರಿನ ಕಂದಕವಿದೆ. (ಉಪಕಲ್ಪಗಳು ಎಂದರೆ ಶತ್ರುಸೈನ್ಯವನ್ನು ನಿರೀಕ್ಷಿಸಲು ಮಾಡಿದ ಎತ್ತರವಾದ ದಿಬ್ಬಗಳು.)
ತೃಣಧಾನ್ಯೇಂಧನರಸೈಸ್ತಥಾ ಯಂತ್ರಾಯುಧೌಷಧೈಃ |
ಗಲಕರ್ಷಕವಾಟೈಶ್ಚ ದ್ರವ್ಯಾಗಾರತುಷಾದಿಕೈಃ |
ಭೀಮೋಚ್ಛ್ರಿತಮಹಾಚಕ್ರಂ ಬೃಹದಟ್ಟಾಲಸಂಯುತಮ್ ॥37॥
ಈ ಪಟ್ಟಣದಲ್ಲಿ ತೃಣಧಾನ್ಯಇಂಧನರಸಗಳೂ ಪೂರ್ಣವಾಗಿ ತುಂಬಿವೆ. ಇದು ಯಂತ್ರ, ಆಯುಧ ಮತ್ತು ಔಷಧಿಗಳಿಂದ ಪೂರ್ಣವಾಗಿದೆ. ಶತ್ರುಗಳ ಸೈನಿಕರನ್ನು ವಧೆಮಾಡುವ ಯಂತ್ರಗಳೂ, ದ್ರವ್ಯಾಗಾರಗಳೂ, ತುಷಾದಿಗಳೂ ಇವೆ. ಭಯಂಕರವಾದ ಮತ್ತು ಎತ್ತರವಾದ ಮಹಾಚಕ್ರವು ಮತ್ತು ಎತ್ತರವಾದ ಅಟ್ಟಾಲಗಳೂ ಇವೆ.
ಐಷ್ಟಕೋ ದಾರುಕೋ ವಪ್ರೋ ಮಾನುಷಶ್ಚೇತಿ ಯಃ ಸ್ಮೃತಃ |
ಪ್ರಾಕಾರಕರ್ತೃಭಿರ್ಧೀರೈರ್ನೃಗರ್ಭಸ್ತತ್ರ ಪೂಜಿತಃ ॥38॥
ಇಟ್ಟಿಗೆಯಿಂದ ನಿರ್ಮಿಸಿದ, ಮರಗಳಿಂದ ನಿರ್ಮಿಸಿದ ಮತ್ತು ಮನುಷ್ಯರಿಂದ ನಿರ್ಮಿಸಿದ ವೃತ್ತಾಕಾರದ ಕೋಟೆಗೋಡೆಗಳಿಂದ ರಕ್ಷಿತವಾಗಿದೆ. ಅದರಲ್ಲಿಯೂ ಈ ಮೂರು ಪ್ರಾಕಾರಗಳಲ್ಲಿ ಧೀರರಾದ ಪುರುಷರಿಂದ ನಿರ್ಮಿತವಾದ ಮನುಷ್ಯಕೋಟೆಯು ಶ್ರೇಷ್ಠವೆಂದು ಹೇಳುತ್ತಾರೆ.
ತದೇತನ್ನರಗರ್ಭೇಣ ಪಾಂಡರೇಣ ವಿರಾಜತೇ |
ಸಾಲೇನಾಮ್ರೇಣ ತಾರೇಣ ಸರ್ವತಃ ಸಂವೃತಂ ಪುರಮ್ ॥39॥
ಈ ನರಗರ್ಭವಾದ ಶ್ವೇತವರ್ಣದ ಕೋಟೆಯಿಂದ ಈ ನಗರವು ಶೋಭಿಸುತ್ತದೆ. ಕೋಟೆಯ ಸುತ್ತಲೂ ಸಾಲವೃಕ್ಷಗಳೂ, ಆಮ್ರವೃಕ್ಷಗಳೂ, ತಾರವೃಕ್ಷಗಳೂ ಇದ್ದು ಅದರಿಂದ ಪಟ್ಟಣವು ರಕ್ಷಿತವಾಗಿದೆ.
ಅನುರಕ್ತಾಃ ಪ್ರಕೃತಯೋ ದ್ರುಪದಸ್ಯ ಮಹಾತ್ಮನಃ |
ದಾನಮಾನಾರ್ಚಿತಾಃ ಸರ್ವಾ ಬಾಹ್ಯಾಶ್ಚಾಭ್ಯಂತರಾಶ್ಚ ಯಾಃ ॥40॥
ಮಹಾತ್ಮನಾದ ದ್ರುಪದನ ಪ್ರಜೆಗಳೆಲ್ಲರೂ ಅವನಲ್ಲಿ ಅನುರಕ್ತ- ರಾದವರು. ಅವನು ನಗರದ ಒಳಗೆ ಮತ್ತು ಹೊರಗೆ ಇದ್ದ ಎಲ್ಲಾ ಪ್ರಜೆಗಳನ್ನೂ ದಾನಮಾನಗಳಿಂದ ಸತ್ಕರಿಸಿದ್ದಾನೆ.
ಪ್ರತಿರುದ್ಧಾಮಿಮಾಂ ಜ್ಞಾತ್ವಾ ರಾಜಭಿರ್ಭೀಮವಿಕ್ರಮೈಃ |
ಉಪಯಾಸ್ಯಂತಿ ದಾಶಾರ್ಹಾಃ ಸಮುದಗ್ರೋಚ್ಛ್ರಿತಾಯುಧಾಃ ॥41॥
ಪರಾಕ್ರಮಶಾಲಿಗಳಾದ ರಾಜರಾದ ನಾವು ಈ ಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿದರೆ, ದಾಶಾರ್ಹರು ತಮ್ಮ ಉನ್ನತವಾದ ಆಯುಧಗಳನ್ನು ಹಿಡಿದು ದ್ರುಪದನ ಸಹಾಯಕ್ಕೆ ಬರುವರು.
ತಸ್ಮಾತ್ ಸಂಧಿಂ ವಯಂ ಕೃತ್ವಾ ಧಾರ್ತರಾಷ್ಟ್ರಸ್ಯ ಪಾಂಡವೈಃ |
ಸ್ವರಾಷ್ಟ್ರಾಣ್ಯೇವ ಗಚ್ಛಾಮೋ ಯದ್ಯಾಪ್ತಂ ವಚನಂ ಮಮ ॥42॥
ಆದ್ದರಿಂದ ನನ್ನ ಮಾತು ನಿಮಗೆ ಹಿತವಾದರೆ, ದುರ್ಯೋಧನನಿಗೂ ಮತ್ತು ಪಾಂಡವರಿಗೂ ಸಂಧಿಯನ್ನು ಮಾಡಿ ನಮ್ಮ ನಮ್ಮ ರಾಷ್ಟ್ರಗಳಿಗೆ ಹೋಗೋಣ. ಇದು ನನ್ನ ಅಭಿಪ್ರಾಯ. ನಿಮಗೆ ಇಷ್ಟವಿದ್ದರೆ ಹೀಗೆ ಮಾಡಿ.
ಏತನ್ಮಮ ಮತಂ ಸರ್ವೈಃ ಕ್ರಿಯತಾಂ ಯದಿ ರೋಚತೇ |
ಏತದ್ಧಿ ಸುಕೃತಂ ಮನ್ಯೇ ಕ್ಷೇಮಂ ಚಾಪಿ ಮಹೀಕ್ಷಿತಾಮ್ ॥43॥
ಹೀಗೆ ಮಾಡಿದರೆ ಮಾತ್ರ ಒಳ್ಳೆಯ ಕಾರ್ಯವನ್ನು ಮಾಡಿದಂತಾಗುತ್ತದೆ ಮತ್ತು ಎಲ್ಲಾ ರಾಜರುಗಳಿಗೂ ಕ್ಷೇಮವಾಗುತ್ತದೆ ಎಂದು ನನ್ನ ಅಭಿಪ್ರಾಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ॥
ದ್ವಿಶತಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ವೈಚಿತ್ರವೀರ್ಯತನಯಾಃ ಸಹ ಸೌಬಲೇನ

ಕರ್ಣೇನ ಸಿಂಧುಪತಿನಾ ರಥಹಸ್ತಿಯೋಧೈಃ |
ಭೂರಿಶ್ರವಃ ಪ್ರಭೃತಿಭಿಶ್ಚ ಸಹೈವ ಹಂತುಂ
ಪಾಂಚಾಲರಾಜಮಗುರೇತ್ಯ ಪುರೀಂ ಪುನಸ್ತೇ ॥166॥
ಕೌರವರು ಶಕುನಿ ಕರ್ಣ ಜಯಪ್ರಥ ಭೂರಿಶ್ರವ ಮುಂತಾದವರೊಂದಿಗೆ ರಥಗಜ ಪದಾತಿ ಸೈನ್ಯಸಮೇತರಾಗಿ ತಮ್ಮ ನಗರಕ್ಕೆ ಹೋಗಿ ಪುನಃ ದ್ರುಪದನನ್ನು ಕೊಲ್ಲುವ ಉದ್ದೇಶದಿಂದ ಅವನ ನಗರವನ್ನು ಮುತ್ತಿ ಆಕ್ರಮಿಸಿದರು.
ತೈರರ್ದಿತೇ ಸ್ವಪುರ ಆಶು ಸ ಸೋಮಕಾನಾಂ
ರಾಜಾ ಸುತೈಃ ಸಹ ಸಸೈನಿಕ ಉದಸ್ತೋಽಭೂತ್ |
ತೇಷಾಂ ಚ ತಸ್ಯ ಚ ಬಭೂವ ಮಹಾನ್ ವಿಮರ್ದಃ
ಪುತ್ರೌ ಚ ತಸ್ಯ ನಿಹತೌ ವಿಧುತಾಶ್ಚ ಸೇನಾಃ ॥167॥
ಕೌರವರು ತನ್ನ ನಗರವನ್ನು ಆಕ್ರಮಿಸಲು ಬಂಆಗ ದ್ರುಪದ ಬೇಗನೆ ತನ್ನ ಮಕ್ಕಳೊಂದಿಗೆ ಸೈನಿಕರ ಸಮೇತರಾಗಿ ನಗರದಿಂದ ಹೊರಗೆ ಬಂದ. ಅವರಿಗೂ ಅವನಿಗೂ ದೊಡ್ಡ ಯುದ್ಧ ನಡೆಯಿತು. ಅವನು ಇಬ್ಬರು ಮಕ್ಕಳು ಹತರಾದರು. ಸೇನೆಗಳೂ ನಾಶವಾದುವು.
ಚಿತ್ರೇ ಹತೇ ಸಮರ ಆಶು ಸಚಿತ್ರಕೇತೌ
ಧಾವತ್ಸು ಸೈನಿಕವರೇಷು ಚ ಪಾರ್ಷತಸ್ಯ |
ಪಾರ್ಥಾ ರಥೈರಭಿಯಯುರ್ಧೃತಚಾಪಬಾಣಾ
ವೈಚಿತ್ರವೀರ್ಯತನಯಾನ್‍ರವಿಸೂನುಯುಕ್ತಾನ್ ॥168॥
ದ್ರುಪದನ ಮಕ್ಕಳು ಚಿತ್ರ ಮತ್ತು ಚಿತ್ರಕೇತುಗಳಿಬ್ಬರೂ ಯುದ್ಧದಲ್ಲಿ ಮಡಿದಾಗ ಅವನ ಉತ್ತಮ ಸೈನಿಕರೂ ಪಲಾಯನಗೈದಾಗ, ಪಾರ್ಥರು ರಥವೇರಿ ಬಿಲ್ಲು ಬಾಣಗಳನ್ನು ಧರಿಸಿ ಕೌರವರನ್ನೂ ಕರ್ಣನನ್ನೂ ಇದಿರಿಸಿದರು.
ತೈಸ್ತೇಷು ಪಂಚಸು ಸಮಂ ಪ್ರತಿಯೋಧಯತ್ಸು
ಭೂರಿಶ್ರವಾಃ ಸರವಿಜೋ ವಿರಥಂ ಚಕಾರ |
ಶಕ್ರಾತ್ಮಜಂ ತದನು ಪರ್ವತಸನ್ನಿಕಾಶಂ
ದೋರ್ಭ್ಯಾಂ ತು ಮಾರುತಿರುರುಂ ತರುಮುದ್ಬಬರ್ಹ ॥169॥
ಕೌರವರು ಪಂಚಪಾಂಡವರೊಡನೆ ಯುದ್ಧ ಮಾಡುತ್ತಿದ್ದಾಗ ಭೂರಿಶ್ರವ ಮತ್ತು ಕರ್ಣರು ಅರ್ಜುನನನ್ನು ವಿರಥನನ್ನಾಗಿ ಮಾಡಿದರು. ಒಡನೆ ಭೀಮ ಬೆಟ್ಟದಂಥ ಮರವನ್ನು ಕೈಗಳಿಂದ ಕಿತ್ತಿದ.
ಆಯಾಂತಮೀಕ್ಷ್ಯ ತರುಹಸ್ತ ಮಿಮಂ ಸಮೀರ-
ಸೂನುಂ ಸುಯೋಧನಮುಖಾ ನಿಖಿಲಾಃ ಸಕರ್ಣಾಃ |
ಭೂರಿಶ್ರವಾಃ ಶಕುನಿಭೂರಿಜಯದ್ರಥಾಶ್ಚ
ಸರ್ವೇಽಪಿ ದುದ್ರುವುರಥೋ ವಿವಿಶುಃ ಪುರಂ ಸ್ವಂ ॥170॥
ಭೀಮಸೇನ ಮರವನ್ನು ಹಿಡಿದುಕೊಂಡು ಬರುತ್ತಿದ್ದುದನ್ನು ನೋಡಿ ಎಲ್ಲ ದುರ್ಯೋಧನಾದಿಗಳೂ ಕರ್ಣ ಭೂರಿಶ್ರವ ಶಕುನಿ ಭೂರಿ ಜಯದ್ರಥರೂ ಎಲ್ಲರೂ ಪಲಾಯನ ಮಾಡಿದರು. ತಮ್ಮ ಪಟ್ಟಣಗಳನ್ನು ಹೊಕ್ಕರು.
* * * *
ಇನ್ನೂರ ಒಂದನೆಯ ಅಧ್ಯಾಯ
(ಅಭಿಯಾನ ಮಾಡಲು ಕರ್ಣನ ಆಗ್ರಹ, ಅಭಿಯಾನ. ದುರ್ಯೋಧನಾದಿಗಳ ಪರಾಜಯ, ಪ್ರತಿನಿವೃತ್ತಿ, ಕೃಷ್ಣನಿಂದ ಚತುರಂಗಬಲ ಪ್ರೇಷಣ.)
ವೈಶಂಪಾಯನಃ
ಸೌಮದತ್ತೇರ್ವಚಃ ಶ್ರುತ್ವಾ ಕರ್ಣೋ ವೈಕರ್ತನೋ ವೃಷಾ |
ಉವಾಚ ವಚನಂ ಕಾಲೇ ಕಾಲಜ್ಞಃ ಸರ್ವಕರ್ಮಣಾಮ್ ॥1॥
ಸೋಮದತ್ತನ ಮಗನಾದ ಭೂರಿಶ್ರವನ ಮಾತನ್ನು ಕೇಳಿ, ಎಲ್ಲ ಕರ್ಮಗಳ ಯೋಗ್ಯಕಾಲವನ್ನು ತಿಳಿದ ಶ್ರೇಷ್ಠನಾದ, ವೈಕರ್ತನನಾದ ಕರ್ಣನು ಆಗ ಮಾತನಾಡಿದನು.
ನೀತಿಪೂರ್ವಮಿದಂ ಸರ್ವಮುಕ್ತಂ ವಚನಮರ್ಥವತ್ |
ವಚನಂ ನಾಭ್ಯಸೂಯಾಮಿ ಶ್ರೂಯತಾಂ ಮದ್ವಚಸ್ಸ್ಥಿತಿಃ ॥2॥
ಭೂರಿಶ್ರವನು ನೀತಿಪೂರ್ವಕವಾಗಿ ಹೇಳಿದ ಎಲ್ಲ ಮಾತುಗಳೂ ಅರ್ಥಪೂರ್ಣವಾಗಿವೆ. ಆ ಮಾತುಗಳ ಮೇಲೆ ನನಗೆ ಅಸೂಯೆಯಿಲ್ಲ. ನನ್ನ ಮಾತಿನ ರೀತಿಯನ್ನು ಕೇಳಿ.
ದ್ವೈಧೀಭಾವೋ ನ ಗಂತವ್ಯಃ ಸರ್ವಕರ್ಮಸು ಮಾನವೈಃ |
ದ್ವಿಧಾಭೂತೇನ ಮನಸಾ ಹ್ಯನ್ಯತ್ ಕರ್ಮ ನ ಸಿಧ್ಯತಿ ॥3॥
ಮನುಷ್ಯರು ಯಾವ ಕಾರ್ಯದಲ್ಲಿಯೂ ಎರಡು ಮನಸ್ಸುಗಳಿಂದ ಪ್ರವೃತ್ತರಾಗಬಾರದು. ಒಂದೇ ಮನಸ್ಸಿಲ್ಲದೇ, ಎರಡು ಅಭಿಪ್ರಾಯದಿಂದ ಪ್ರವೃತ್ತವಾದರೆ, ಯಾವ ಕಾರ್ಯವೂ ಸಿದ್ಧಿಸುವುದಿಲ್ಲ.
ಸಂಪ್ರಯಾಣಾಸನಾಭ್ಯಾಂ ತು ಕರ್ಶನೇನ ತಥೈವ ಚ |
ನೈತಚ್ಛಕ್ಯಂ ಪುರಂ ಹಂತುಮಾಕ್ರಂದಶ್ಚಾಪ್ಯಶೋಭನಃ ॥4॥
ಕೇವಲ ದಂಡೆತ್ತಿಹೋಗಿ ಪಟ್ಟಣವನ್ನು ಮುತ್ತಿಗೆ ಹಾಕಿ ಪ್ರಜೆಗಳಿಗೆ ಹಿಂಸೆಯನ್ನು ಕೊಟ್ಟು ಆ ಪಟ್ಟಣವನ್ನು ಗೆಲ್ಲಲು ಸಾಧ್ಯವಿಲ್ಲ. ಪಟ್ಟಣದ ಹೊರಗಿನಿಂದ ಆಹಾರಾದಿಗಳ ಸರಬರಾಜನ್ನು ನಿಲ್ಲಿಸಿ ಪಟ್ಟಣದ ಪ್ರಜೆಗಳು ಗೋಳಾಡುವಂತೆ ಮಾಡುವುದು ಎಂದೂ

ಸರಿಯಲ್ಲ.
ಅವಮರ್ದನಕಾಲೋಽತ್ರ ಮತಶ್ಚಿಂತಯತೋ ಮಮ |
ಯಾವನ್ನೋ ವೃಷ್ಣಯಃ ಪಾರ್ಷ್ಣಿಂ ನ ಗೃಹ್ಣಂತಿ ರಣಪ್ರಿಯಾಃ ||5||
ಭವಂತೋ ಹೃಷ್ಟರೂಪಾಸ್ತು ಸ್ವಬಾಹುಬಲಶಾಲಿನಃ |
ಪ್ರಾಕಾರಮವಮೃದ್ನಂತು ಪರಿಘಾಶ್ಚ ಕಿರಂತ್ವಪಿ ||6||
ನನ್ನ ಚಿಂತನೆಗೆ ಇದು ನಾವು ಅವರ ಮೇಲೆ ಎರಗಬೇಕಾದ ಕಾಲವೆಂದು ತೋರುತ್ತದೆ. ರಣಪ್ರಿಯರಾದ ವೃಷ್ಣಿಗಳು ಬಂದು ದ್ರುಪದನ ಬೆಂಬಲಕ್ಕೆ ನಿಲ್ಲುವುದರೊಳಗೆ ನಿಮ್ಮ ಬಾಹುಬಲದಿಂದ ಯುಕ್ತರಾದ ನೀವೆಲ್ಲರೂ ಸಂತೋಷದಿಂದ ಹೋಗಿ ದ್ರುಪದಪಟ್ಟಣದ ಪ್ರಾಕಾರಗಳನ್ನು ಕೆಡವಿ, ಪರಿಖೆಗಳನ್ನು ಒಡೆಯಿರಿ.
ಪ್ರಸ್ರಾವಯಂತು ಸಲಿಲಂ ಕ್ರಿಯತಾಂ ವಿಷಮಂ ಸಮಮ್ |
ತೃಣಕಾಷ್ಠೇನ ಮಹತಾ ಖಾತಮಸ್ಯ ಪ್ರಪೂರ್ಯತಾಮ್ ||7||
ಕಂದಕದ ನೀರನ್ನೆಲ್ಲಾ ಹೊರಗೆ ಬಿಡಿ. ವಿಷಮವಾದ ಮಾರ್ಗವನ್ನು ಸಮವನ್ನು ಮಾಡಿ ಹಳ್ಳಗಳನ್ನು ಬಹಳ ತೃಣಕಾಷ್ಠಗಳನ್ನು ತುಂಬಿ ಮುಚ್ಚಿ.
ಘುಷ್ಯತಾಂ ರಾಜಸೈನ್ಯೇಷು ಪರೇಷಾಂ ಯೋ ಹನಿಷ್ಯತಿ |
ನಾಗಮಶ್ವಂ ಪದಾತಿಂ ವಾ ದಾನಮಾನಂ ಸ ಲಪ್ಸ್ಯತೇ ||8||
ನಾಗೇ ದಶಸಹಸ್ರಾಣಿ ಪಂಚ ಚಾಶ್ವಪದಾತಿಷು |
ರಥೇ ವೈ ದ್ವಿಗುಣಂ ನಾಗಾದ್ ವಸು ದಾಸ್ಯಂತಿ ಪಾರ್ಥಿವಾಃ ||9||
ನಮ್ಮ ಸೈನ್ಯಗಳಲ್ಲಿ ಯಾರು ಶತ್ರುಸೈನ್ಯದ ಗಜಗಳನ್ನು ಅಥವಾ ಪದಾತಿಗಳನ್ನು ವಧೆಮಾಡುತ್ತಾನೋ ಅವನು ರಾಜನಿಂದ ದಾನಮಾನಗಳನ್ನು ಪಡೆಯುತ್ತಾನೆ. ಗಜವನ್ನು ಕೊಂದರೆ ಹತ್ತುಸಾವಿರ ನಾಣ್ಯಗಳನ್ನೂ, ಅಶ್ವವನ್ನು ಕೊಂದರೆ ಅಥವಾ ಪದಾತಿಗಳನ್ನು ಕೊಂದರೆ ಐದುಸಾವಿರ ನಾಣ್ಯಗಳನ್ನೂ, ರಥಗಳನ್ನು ನಾಶಮಾಡಿದರೆ ಇಪ್ಪತ್ತುಸಾವಿರ ನಾಣ್ಯಗಳನ್ನೂ ರಾಜರು ಕೊಡುವರು ಎಂದು ಘೋಷಣೆಯನ್ನು ಮಾಡಿ.
ಯಶ್ಚ ಕಾಮಗುಣೇ ಸಕ್ತೋ ಬಾಲಶ್ಚ ಸ್ಥವಿರಶ್ಚ ಯಃ |
ಅಯುದ್ಧಮನಸೋ ಯೇ ತು ತೇ ಚ ತಿಷ್ಠಂತು ಭೀರವಃ ||10||
ಯಾರು ಕಾಮಾಸಕ್ತರೋ ಅಥವಾ ಬಾಲಕರೋ ಅಥವಾ ವೃದ್ಧರೋ ಅಥವಾ ಯುದ್ಧದಲ್ಲಿ ಮನಸ್ಸಿಲ್ಲದವರೋ ಅಥವಾ ಭೀರುಗಳೋ ಅವರು ಹಿಂದೆಯೇ ಉಳಿಯಲಿ.
ಪುದರಶ್ಚ ನ ದಾತವ್ಯೋ ನ ಗಂತವ್ಯಮಚೋದಿತೈಃ |
ಯಶೋ ರಕ್ಷತ ಭದ್ರಂ ವೋ ವಿಜೇಷ್ಯಾಮೋ ವಯಂ ಪುರಮ್ ||11||
ನಮ್ಮ ಸೈನ್ಯದಲ್ಲಿ ಹೆದರಿಕೆಯನ್ನುಂಟು ಮಾಡಬಾರದು. ಪ್ರೇರಣೆಯಿಲ್ಲದೆ ಮುಂದೆ ಹೋಗಬಾರದು. ನಿಮ್ಮ ಕೀರ್ತಿಯನ್ನು ಕಾಪಾಡಿಕೊಳ್ಳಿ. ನಿಮಗೆ ಮಂಗಳವಾಗಲಿ. ನಾವು ದ್ರುಪದನ ಪಟ್ಟಣವನ್ನು ಗೆಲ್ಲುವೆವು.
ಅನುಲೋಮಾಶ್ಚ ನೋ ವಾತಾಃ ಸರ್ವತೋ ಮೃಗಪಕ್ಷಿಣಃ |
ಅಗ್ನಯಶ್ಚ ವಿರಾಜಂತೇ ಶಸ್ತ್ರಾಣಿ ಕವಚಾನಿ ಚ ||12||
ವಾಯುವು ನಮಗೆ ಅನುಕೂಲವಾಗಿ ಬೀಸುತ್ತಿದೆ. ಎಲ್ಲಕಡೆಯಲ್ಲಿಯೂ ಮೃಗಪಕ್ಷಿಗಳು ಅನುಕೂಲವಾಗಿ ಸಂಚರಿಸುತ್ತಿವೆ. ಅಗ್ನಿಗಳೂ, ಶಸ್ತ್ರಗಳೂ ಮತ್ತು ಕವಚಗಳೂ ಹೊಳೆಯುತ್ತಿವೆ.
ವೈಶಂಪಾಯನಃ
ತತಃ ಕರ್ಣವಚಃ ಶ್ರುತ್ವಾ ಧಾರ್ತರಾಷ್ಟ್ರಪ್ರಿಯೈಷಿಣಃ |
ಭವಂತಿ ಹೃಷ್ಟಪುಷ್ಟಾಸ್ತು ರಾಜಾನೋ ಬಲವತ್ತರಾಃ ||13||
ನಿರ್ಯಯುಃ ಪೃಥಿವೀಪಾಲಾಶ್ಚಾಲಯಂತಃ ಪರಾನ್ ರಣೇ |
ನ ಹಿ ತೇಷಾಂ ಮನಃಸಕ್ತಿರಿಂದ್ರಿಯಾರ್ಥೇಷು ಸರ್ವಶಃ ||14||
ಅನಂತರ ಕರ್ಣನ ಮಾತುಗಳನ್ನು ಕೇಳಿ ದುರ್ಯೋಧನನ ಹಿತೈಷಿಗಳಾದ ಬಲಿಷ್ಠರಾದ ರಾಜರು ಹೃಷ್ಟಪುಷ್ಟರಾಗಿ ಭೂಮಿಯನ್ನು ಅಲುಗಾಡಿಸುತ್ತಾ ಶತ್ರುಗಳ ಮೇಲೆ ಯುದ್ಧಮಾಡಲು ಹೊರಟರು.
ಯಥಾ ಪರಪುರಘ್ನಾನಾಂ ಪ್ರಸಭೇ ಯುದ್ಧ ಏವ ಚ |
ವೈಕರ್ತನಪುರೋವಾತಃ ಸೈಂಧವೋರ್ಮಿಮಹಾಸ್ವನಃ ||15||
ದುಃಶಾಸನಸರಿನ್ಮಧ್ಯೇ ದುರ್ಯೋಧನಮಹಾಗ್ರಹಃ |
ಸ ರಾಜಸಾಗರೋ ಭೀಮೋ ಭೀಮಘೋಷಪ್ರದರ್ಶನಃ |
ಅಭಿದುದ್ರಾವ ವೇಗೇನ ಪುರಂ ತದಪಸವ್ಯತಃ ||16||
ಅವರಿಗೆ ಶತ್ರುಪಟ್ಟಣವನ್ನು ನಾಶಮಾಡಲು ಯುದ್ಧದಲ್ಲಿ ಆಸಕ್ತಿಯಿದ್ದಂತೆ ಇಂದ್ರಿಯವಿಷಯವಾದ ಭೋಗಸಾಮಗ್ರಿಗಳಲ್ಲಿ ಆಸಕ್ತಿಯಿರಲಿಲ್ಲ. ವೈಕರ್ತನನೆಂಬ ಮುಂದಿನ ಗಾಳಿಯನ್ನು ಹೊಂದಿದ ಸೈಂಧವನೆಂಬ ಊರ್ಮಿಯ ಮಹಾನಾದವುಳ್ಳ ಇನ್ನೊಬ್ಬರು ಜಯಿಸಲಾರದ ಸೇನಾನದಿಯ ಮಧ್ಯೆ ದುರ್ಯೋಧನನೆಂಬ ಮಹಾಮೊಸಳೆಯುಳ್ಳ ಭಯಂಕರವಾದ ಘೋಷವನ್ನು ತೋರಿಸುತ್ತಿದ್ದ ಆ ಭಯಂಕರವಾದ ರಾಜಸಾಗರವು ವೇಗವಾಗಿ ದ್ರುಪದಪಟ್ಟಣದ ಎಡಭಾಗವನ್ನು ಉದ್ದೇಶಿಸಿ ಓಡಿತು.
ತದನೀಕಮನಾಧೃಷ್ಯಂ ಶಸ್ತ್ರಾಗ್ನಿವ್ಯಪದೀಪಿತಮ್ |
ಸಮುತ್ಕುಪಿತಮಾಜ್ಞಾಯ ಚುಕ್ರುಶುರ್ದ್ರುಪದಾತ್ಮಜಾಃ ||17||

ಸೋಲಿಸಲು ದುಸ್ಸಾಧ್ಯವಾದ ಶಸತ್ರಗ್ನಿಯಿಂದ ಜ್ವಲಿತವಾದ ಆ ಸೈನ್ಯವು ಕುಪಿತವಾಗಿರುವುದನ್ನು ತಿಳಿದು ದ್ರುಪದನ ಪುತ್ರರು ಕೇಕೆ ಹಾಕಿದರು.
ತೇ ಮೇಘಸಮನಿರ್ಘೋಷೈರ್ಬಲೇನ ಸ್ಯಂದನೋತ್ತಮೈಃ |
ನಿರ್ಯಯುರ್ನಗರದ್ವಾರಾತ್ ತ್ರಾಸಯಂತಃ ಪರಾನ್ ರಣೇ ॥18॥
ಅವರು ಮೇಘಗಂಭೀರನಾದದಿಂದ ಕೂಡಿದ ಶ್ರೇಷ್ಠವಾದ ರಥಗಳಲ್ಲಿ ನಗರದ್ವಾರದಿಂದ ಹೊರಗೆ ಬಂದು ಯುದ್ಧದಲ್ಲಿ ಶತ್ರುಗಳನ್ನು ಹೆದರಿಸುತ್ತಾ ಶತ್ರುಗಳಿಗೆ ಅಭಿಮುಖವಾಗಿ ಹೊರಟರು.
ಧೃಷ್ಟದ್ಯುಮ್ನಃ ಶಿಖಂಡೀ ಚ ಸುಚಿತ್ರಃ ಪ್ರಿಯದರ್ಶನಃ |
ಚಿತ್ರಕೇತುಃ ಸುಕೇತುಶ್ಚ ಧ್ವಜಸೇನಶ್ಚ ವೀರ್ಯವಾನ್ |
ಪುತ್ರಾ ದ್ರುಪದರಾಜಸ್ಯ ಬಲವಂತೋ ಜಯೈಷಿಣಃ ॥19॥
ಧೃಷ್ಟದ್ಯುಮ್ನ, ಶಿಖಂಡಿ, ಸುಚಿತ್ರ, ಪ್ರಿಯದರ್ಶನ, ಚಿತ್ರಕೇತು, ಸುಕೇತು, ಧ್ವಜಸೇನ ದ್ರುಪದರಾಜನ ಬಲಿಷ್ಠರೂ, ವಿಜಯಾಪೇಕ್ಷಿಗಳಾದ ಈ ಪುತ್ರರು ಹೊರಟರು.
ದ್ರುಪದಶ್ಚ ಮಹಾವೀರ್ಯಃ ಪಾಂಡರೋಷ್ಣೀಷಕೇತನಃ |
ಪಾಂಡರವ್ಯಜನಚ್ಛತ್ರಃ ಪಾಂಡರಧ್ವಜವಾಹನಃ ॥20॥
ಮಹಾವೀರ್ಯನಾದ ದ್ರುಪದನೂ ಸಹ ಬಿಳಿಯ ರುಮಾಲನ್ನು ಧರಿಸಿ ಬಿಳಿಯ ಧ್ವಜವುಳ್ಳ ರಥದಲ್ಲಿ, ಬಿಳಿಯ ಛತ್ರಚಾಮರಗಳನ್ನು ಹೊಂದಿದವನಾಗಿ ಯುದ್ಧಕ್ಕೆ ಹೊರಟನು.
ಸ ಪುತ್ರಗಣಮಧ್ಯಸ್ಥಃ ಶುಶುಭೇ ರಾಜಸತ್ತಮಃ |
ಚಂದ್ರಮಾ ಜ್ಯೋತಿಷಾಂ ಮಧ್ಯೇ ಪೌರ್ಣಮಾಸ್ಯಾಮಿವೋದಿತಃ ॥21॥
ತನ್ನ ಪುತ್ರರ ಸಮೂಹದಲ್ಲಿದ್ದ ಆ ರಾಜಶ್ರೇಷ್ಠನು ಉಳಿದ ಆಕಾಶಜ್ಯೋತಿಗಳ ಮಧ್ಯೆ ಇರುವ ಪೌರ್ಣಮಾಸಿಯ ಚಂದ್ರನಂತೆ ಶೋಭಿಸಿದನು.
ಅಥೋದ್ಧೂತಪತಾಕಾಗ್ರಮಜಿಹ್ಮಗತಿಮವ್ಯಯಮ್ |
ದ್ರುಪದಾನೀಕಮಾಯಾಂತಂ ಕುರುಸೈನ್ಯಮಭಿದ್ರುವತ್ ॥22॥
ಅನಂತರ ಅನೇಕ ಪತಾಕೆಗಳನ್ನು ಹೊಂದಿದ್ದ, ನೇರವಾದ ಗತಿಯನ್ನು ಹೊಂದಿದ್ದ, ಅಪಾರವಾದ ದ್ರುಪದಸೈನ್ಯವು ಬರುವುದನ್ನು ನೋಡಿ ಕುರುಸೈನ್ಯವು ಅದಕ್ಕೆ ಅಭಿಮುಖವಾಗಿ ಹೋಯಿತು.
ತಯೋರುಭಯತೋ ಜಜ್ಞೇ ಭೈರವಸ್ತುಮುಲಃ ಸ್ವನಃ |
ಬಲಯೋಃ ಸಂಪ್ರಹರತೋಃ ಸ್ರವಂತ್ಯೋಃ ಸರಿತೋರಿವ ॥23॥
ಆ ಎರಡೂ ಸೈನ್ಯಗಳಿಂದ ಬಲಿಷ್ಠರಾಗಿ ಪ್ರಹಾರಮಾಡುವ ಎರಡು ಪರ್ವತಗಳಿಂದ ಎರಡು ನದಿಗಳು ಹರಿದಂತೆ, ಭಯಂಕರವಾದ ಘೋಷವುಂಟಾಯಿತು.
ಪ್ರಕೀರ್ಣರಥನಾಗಾಶ್ವೈಸ್ತಾನ್ಯನೀಕಾನಿ ಸರ್ವಶಃ |
ಜ್ಯೋತೀಂಷೀವ ಪ್ರಕೀರ್ಣಾನಿ ಸರ್ವತಃ ಪ್ರಚಕಾಶಿರೇ ॥24॥
ಯುದ್ಧಭೂಮಿಯಲ್ಲಿ ಅಲ್ಲಲ್ಲಿ ಚೆಲ್ಲಾಡಿ ಬಿದ್ದಿದ್ದ ರಥಗಳೂ, ನಾಗಗಳೂ ಮತ್ತು ಅಶ್ವಗಳೂ, ಆಕಾಶದಲ್ಲಿ ಚದುರಿದ ಜ್ಯೋತಿಗಳಂತೆ ಶೋಭಿಸಿದವು.
ಉತ್ಕೃಷ್ಟಭೇರೀನಿನದೇ ಸಂಪ್ರವೃತ್ತೇ ಮಹಾಹವೇ |
ಪ್ರಹರ್ಷಿತಾ ಮಹಾತ್ಮಾನಃ ಪಾಂಡವಾ ನಿರ್ಯಯುಸ್ತತಃ ॥25॥
ರಥಾಂಶ್ಚ ಮೇಘನಿರ್ಘೋಷಾನ್ ಯುಕ್ತಾನ್ ಪರಮವಾಜಿಭಿಃ |
ಆಸ್ಥಾಯ ಧ್ವಜಿನಃ ಶುಭ್ರಾನ್ ಧನ್ವಿನೋ ಭರತರ್ಷಭಾಃ ॥26॥
ಉತ್ಕೃಷ್ಟಭೇರೀನಿನಾದದಿಂದ ಪ್ರವೃತ್ತವಾದ ಮಹಾಯುದ್ಧದಲ್ಲಿ ಮಹಾತ್ಮರಾದ ಪಾಂಡವರು ಪ್ರಹರ್ಷಿತರಾಗಿ ನಗರದಿಂದ ಹೊರಗೆ ಹೊರಟರು. ಧನುಸ್ಸನ್ನು ಹಿಡಿದ ಆ ಭರತಶ್ರೇಷ್ಠರು ಮೇಘ- ಘೋಷಗಳನ್ನುಂಟು ಮಾಡುವ ಶ್ರೇಷ್ಠವಾದ ಅಶ್ವಗಳಿಂದ ಹೂಡಲ್ಪಟ್ಟ, ಧ್ವಜಗಳಿಂದ ಕೂಡಿದ ಶುಭ್ರವಾದ ರಥಗಳನ್ನು ಏರಿ ಯುದ್ಧಕ್ಕೆ ಹೊರಟರು.
ತತಃ ಪಾಂಡುಸುತಾನ್ ದೃಷ್ಟ್ವಾ ರಥಸ್ಥಾನಾತ್ತಕಾರ್ಮುಕಾನ್ |
ನೃಪಾಣಾಮಭವತ್ ಕಂಪೋ ವೇಪಥುರ್ಹೃದಯೇಷು ಚ ॥27॥
ಆಗ ರಥದಲ್ಲಿ ಕೈಯಲ್ಲಿ ಧನುಸ್ಸನ್ನು ಹಿಡಿದ ಪಾಂಡವರನ್ನು ನೋಡಿ ಶತ್ರುಪಕ್ಷದ ರಾಜರ ದೇಹದಲ್ಲಿ ಕಂಪವು, ಹೃದಯದಲ್ಲಿ ನಡುಕವೂ ಉಂಟಾಯಿತು.
ನಿರ್ಯಾತೇಷ್ವಥ ಪಾರ್ಥೇಷು ದ್ರೌಪದಂ ತದ್ಬಲಂ ರಣೇ |
ಆವಿಶತ್ ಪರಮೋ ಹರ್ಷಃ ಪ್ರಮೋದಶ್ಚ ಬಲಂ ಪ್ರತಿ ॥28॥
ಪಾಂಡವರು ಯುದ್ಧಕ್ಕಾಗಿ ಬರುತ್ತಿರಲು ದ್ರುಪದನ ಸೈನ್ಯಕ್ಕೆ ಪರಮಹರ್ಷವುಂಟಾಯಿತು. ಶತ್ರುಗಳ ಸೈನ್ಯದ ಮೇಲೆ ಎರಗಲು ಉತ್ಸಾಹವೂ ಉಂಟಾಯಿತು.
ಸುಮುಹೂರ್ತಂ ವ್ಯತಿಕರಃ ಸೈನ್ಯಾನಾಮಭವದ್ ಭೃಷಾಮ್ |
ತತೋ ದ್ವಂದ್ವಮಯುಧ್ಯಂತ ಮೃತ್ಯುಂ ಕೃತ್ವಾ ನಿವರ್ತನಮ್ ॥29॥
ಒಂದು ಮುಹೂರ್ತದ ಕಾಲ ಸೈನ್ಯಗಳಿಗೆ ಪರಸ್ಪರವಾಗಿ ಮಿಶ್ರಣವಾಯಿತು. ಅನಂತರ ಮೃತ್ಯುವಿಗೆ ಹೆದರದೆ, ಅವರು ದ್ವಂದ್ವಯುದ್ಧವನ್ನು ಆರಂಭಿಸಿದರು.

ಜಘ್ನತುಃ ಸಮರೇ ತಸ್ಮಿನ್ ಸುಚಿತ್ರಪ್ರಿಯದರ್ಶನೌ |
ಜಯದ್ರಥಶ್ಚ ಕರ್ಣಶ್ಚ ಪಶ್ಯತಃ ಸವ್ಯಸಾಚಿನಃ ||30||
ಯುದ್ಧದಲ್ಲಿ ಅರ್ಜುನನು ನೋಡುತ್ತಿರುವಂತೆಯೇ, ಜಯದ್ರಥ ಮತ್ತು ಕರ್ಣರು ದ್ರುಪದನ ಮಕ್ಕಳಾದ ಸುಚಿತ್ರ ಮತ್ತು ಪ್ರಿಯದರ್ಶನರನ್ನು ಕೊಂದರು.
ಅರ್ಜುನಃ ಪ್ರೇಕ್ಷ್ಯ ನಿಹತೌ ಸುಚಿತ್ರಪ್ರಿಯದರ್ಶನೌ |
ಜಯದ್ರಥಸುತಂ ತತ್ರ ಜಘಾನ ಪಿತುರಂತಿಕೇ ||31||
ಅರ್ಜುನನು ಸುಚಿತ್ರಪ್ರಿಯದರ್ಶನರು ನಿಹತರಾದುದನ್ನು ನೋಡಿ ಜಯದ್ರಥನ ಕಣ್ಣೆದುರಿಗೇ ಅವನ ಮಗನನ್ನು ಕೊಂದನು.
ವೃಷಸೇನಾದವರಜಂ ಸುಭಾನುಂ ವೈ ಧನಂಜಯಃ |
ಕರ್ಣಪುತ್ರಂ ಮಹಾವೀರ್ಯಂ ರಥನೀಡಾದಪಾಹರತ್ ||32||
ಧನಂಜಯನು ವೃಷಸೇನನ ತಮ್ಮನಾದ ಮಹಾಪರಾಕ್ರಮಿಯಾದ ಸುಭಾನುವೆಂಬ ಕರ್ಣಪುತ್ರನನ್ನು ರಥನೀಡದಿಂದ ಹಾರಿಸಿಕೊಂದನು.
ತೌ ಸುತೌ ನಿಹತೌ ದೃಷ್ಟ್ವಾ ರಾಜಸಿಂಹೌ ತರಸ್ವಿನೌ |
ನಾಮೃಷ್ಯೇತಾಂ ಮಹಾವೀರ್ಯೌ ಪ್ರಹಾರಮಿವ ಸದ್ಗಜೌ ||33||
ತಮ್ಮ ಮಕ್ಕಳು ನಿಹತರಾದುದನ್ನು ನೋಡಿ ರಾಜಸಿಂಹರೂ ಮತ್ತು ವೇಗಶಾಲಿಗಳೂ, ಮಹಾವೀರ್ಯವುಳ್ಳವರೂ ಆದ ಕರ್ಣಜಯದ್ರಥರು ಶ್ರೇಷ್ಠವಾದ ಗಜವು ಪ್ರಹಾರವನ್ನು ಸಹಿಸದಿರುವಂತೆ ಅದನ್ನು ನೋಡಿ ಸಹಿಸಲಿಲ್ಲ.
ತೌ ಜಗ್ಮತುರಸಂಭ್ರಾಂತೌ ಫಲ್ಗುನಸ್ಯ ರಥಂ ಪ್ರತಿ |
ತೌ ತು ಬದ್ಧತಳತ್ರಾಣೌ ತ್ರಾಯಮಾಣೌ ಪರಸ್ಪರಮ್ ||34||
ಅವರು ಹಸ್ತಗಳಿಗೆ ರಕ್ಷಣೆಯನ್ನು ಹಾಕಿಕೊಂಡು ಒಬ್ಬರನ್ನೊಬ್ಬರು ರಕ್ಷಿಸುತ್ತಾ ಯಾವ ಗಾಬರಿಯೂ ಇಲ್ಲದರೆ, ಅರ್ಜುನನ ರಥದ ಕಡೆಗೆ ಬಂದರು.
ಸನ್ನಿಪಾತಸ್ತಯೋರಾಸೀತ್ ಫಲ್ಗುನೇನ ಮಹಾಮೃಧೇ |
ವೃತ್ರಶಂಬರಯೋಃ ಸಂಖೇ ವಜ್ರಿಣೇವ ಮಹಾರಣೇ ||35||
ಮಹಾರಣದಲ್ಲಿ ಇಂದ್ರನಿಗೂ ಮತ್ತು ವೃತ್ರಶಂಬರರಿಗೂ ಘರ್ಷಣೆಯಾದಂತೆ ಅವರಿಬ್ಬರಿಗೂ ಅರ್ಜುನನ ಜೊತೆಯಲ್ಲಿ ಸನ್ನಿಪಾತ (ಘರ್ಷಣೆ) ಉಂಟಾಯಿತು.
ತಾನಶ್ವಾಂಜಘ್ನತುಸ್ತತ್ರ ಫಲ್ಗುನಸ್ಯ ನರರ್ಷಭೌ |
ತತಃ ಕಿಲಿಕಿಲಾಶಬ್ದಃ ಕುರೂಣಾಮಭವತ್ ತದಾ ||36||
ನರರ್ಷಭರಾದ ಅವರು ಅರ್ಜುನನ ರಥದ ನಾಲ್ಕೂ ಕುದುರೆಗಳನ್ನು ಕೊಂದರು. ಆಗ ಕುರುಗಳಿಗೆ ಸಂತೋಷಸೂಚಕವಾದ ಶಬ್ದಗಳುಂಟಾಯಿತು.
ತಾನ್ ಹಯಾನ್ ನಿಹತಾನ್ ದೃಷ್ಟ್ವಾ ಭೀಮಸೇನಃ ಪ್ರತಾಪವಾನ್|
ನಿಮೇಷಾಂತರಮಾತ್ರೇಣ ರಥಮಶ್ವೈರಯೋಜಯತ್ ||37||
ಆ ಕುದುರೆಗಳು ಹತವಾದುದನ್ನು ನೋಡಿ ಪ್ರತಾಪಶಾಲಿಯಾದ ಭೀಮಸೇನನು ಕಣ್ಣುಮುಚ್ಚಿತೆಗೆಯುವದರೊಳಗೆ ರಥಕ್ಕೆ ಬೇರೆ ಕುದುರೆಗಳನ್ನು ಹೂಡಿದನು.
ಉಪಯಾತಂ ರಥಂ ದೃಷ್ಟ್ವಾ ದುರ್ಯೋಧನಪುರಃಸರೌ |
ಸೌಬಲಃ ಸೌಮದತ್ತಿಶ್ಚ ಸಮೇಯಾತಾಂ ಪರಂತಪೌ ||38||
ಪುನಃ ಮುಂದೆ ಬಂದ ರಥವನ್ನು ನೋಡಿ ದುರ್ಯೋಧನನ ಮುಂಭಾಗದಲ್ಲಿದ್ದ ಪರಂತಪರಾದ ಶಕುನಿ ಮತ್ತು ಭೂರಿಶ್ರವರು ಯುದ್ಧಕ್ಕಾಗಿ ಮುಂದೆ ಬಂದರು.
ತೈಃ ಪಂಚಭಿರದೀನಾತ್ಮಾ ಭೀಮಸೇನೋ ಮಹಾಬಲಃ |
ಅಯುಧ್ಯತ ಬಲೈರ್ವೀರೈರಿಂದ್ರಿಯಾರ್ಥೈರಿವೇಶ್ವರಃ ||39||
ಮಹಾಬಲನೂ, ಧೈರ್ಯಶಾಲಿಯೂ ಆದ ಭೀಮಸೇನನು ಆ ಐದೂ ಜನರ ಸೈನ್ಯದ ಜೊತೆಯಲ್ಲಿ (ಕರ್ಣ, ಜಯದ್ರಥ, ದುರ್ಯೋಧನ, ಶಕುನಿ, ಭೂರಿಶ್ರವ, ಈ ಐವರ ಸೈನ್ಯದ ಜೊತೆಯಲ್ಲಿ) ತಪಸ್ವಿಯಾದವನು ಪಂಚೇದ್ರಿಯಾರ್ಥಗಳ ಜೊತೆಯಲ್ಲಿ ಹೋರಾಡುವಂತೆ ಯುದ್ಧವನ್ನು ಮಾಡಿದನು.
ತೈರ್ನಿರುದ್ಧೋ ನ ಸಂತ್ರಾಸಂ ಜಗಾಮ ಸಮಿತಿಂಜಯಃ |
ಪಂಚಭಿರ್ದ್ವಿರದೈರ್ಮತ್ತೈರ್ನಿರುದ್ಧ ಇವ ಕೇಸರೀ ||40||
ಅವರಿಂದ ನಿರುದ್ಧನಾದ ಸಮಿತಿಂಜಯನಾದ ಭೀಮನು ಐದು ಆನೆಗಳಿಂದ ನಿರುದ್ಧವಾದ ಸಿಂಹದಂತೆ ಸ್ವಲ್ಪವೂ ಹೆದರಲಿಲ್ಲ.
ತಸ್ಯ ತೇ ಯುಗಪತ್ ಪಂಚ ಪಂಚಭಿರ್ನಿಶಿತೈಃ ಶರೈಃ |
ಸಾರಥಿಂ ವಾಜಿನಶ್ಚೈವ ನಿನ್ಯುರ್ವೈವಸ್ವತಕ್ಷಯಮ್ ||41||
ಆಗ ಆ ಐದು ಜನರೂ ಏಕಕಾಲದಲ್ಲಿ ಐದು ಬಾಣಗಳನ್ನು ಪ್ರಯೋಗಮಾಡಿ ಭೀಮನ ಸಾರಥಿಯನ್ನೂ, ನಾಲ್ಕು ಕುದುರೆಗಳನ್ನೂ ಯಮಲೋಕಕ್ಕೆ ಕಳುಹಿಸಿದರು.
ಹತಾಶ್ವಾತ್ ಸ್ಯಂದನಶ್ರೇಷ್ಠಾದವರುಹ್ಯ ಮಹಾರಥಃ |
ಚಚಾರ ವಿವಿಧಾನ್ ಮಾರ್ಗಾನಸಿಮುದ್ಯಮ್ಯ ಪಾಂಡವಃ ||42||
ಅಶ್ವಗಳನ್ನು ಕಳೆದುಕೊಂಡ ಮಹಾರಥನಾದ ಭೀಮನು ರಥದಿಂದ ಧುಮುಕಿ ಕತ್ತಿಯನ್ನು ಹಿಡಿದು ಅಸಿಯುದ್ಧದ ವಿವಿಧ

ಮಾರ್ಗಗಳಲ್ಲಿ ಸಂಚರಿಸಿದನು.
ಅಶ್ವಸ್ಕಂಧೇಷು ಚಕ್ರೇಷು ಯುಗೇಷ್ವೀಷಾಸು ಚೈವ ಹ |
ವ್ಯಚರತ್ ಪಾತಯನ್ ಶತ್ರೂನ್ ಸುಪರ್ಣ ಇವ ಭೋಗಿನಃ ॥43॥
ಅವನು ಕುದುರೆಯ ಹೆಗಲಿನ ಬಳಿಯಲ್ಲಿಯೂ, ರಥದ ಚಕ್ರಗಳ ಬಳಿಯಲ್ಲಿಯೂ, ನೊಗಗಳ ಬಳಿಯಲ್ಲಿಯೂ, (ಈಶಾದಂಡದ ಮೂಕಿಯ) ಬಳಿಯಲ್ಲಿಯೂ ಸಂಚರಿಸುತ್ತಾ ಗರುಡನು ಸರ್ಪಗಳನ್ನು ಸಂಹರಿಸಿದಂತೆ ಶತ್ರುಗಳನ್ನು ಕತ್ತರಿಸಿದನು.
ವಿಧನುಷ್ಕಂ ವಿಕವಚಂ ವಿರಥಂ ಚ ಸಮೀಕ್ಷ್ಯ ತಮ್ |
ಅಭಿಪೇತುರ್ನರವ್ಯಾಘ್ರಮರ್ಜುನಪ್ರವರಾ ರಥಾಃ ॥44॥
ಧೃಷ್ಟದ್ಯುಮ್ನಃ ಶಿಖಂಡೀ ಚ ಯಮೌ ಚ ಯುಧಿ ದುರ್ಜಯೌ |
ತಸ್ಮಿನ್ ದಶರಥೇ ಯುದ್ಧೇ ಪ್ರವೃದ್ಧೇ ಶರವೃಷ್ಟಿಭಿಃ ॥45॥
ರಥಾ ಧ್ವಜಾಃ ಪತಾಕಾಶ್ಚ ಸರ್ವಮಂತರಧೀಯತ |
ತತ್ ಪ್ರವೃತ್ತಂ ಚಿರಂ ಕಾಲಂ ಯುದ್ಧಂ ಸಮಮಿವಾಭವತ್ ॥46॥
ಧನುಸ್ಸಿಲ್ಲದೆ, ಕವಚವಿಲ್ಲದೆ, ರಥವಿಲ್ಲದೆ, ಯುದ್ಧಮಾಡುತ್ತಿರುವ ಭೀಮಸೇನನನ್ನು ನೋಡಿ ಧೃಷ್ಟದ್ಯುಮ್ನ, ಶಿಖಂಡಿ, ಯುದ್ಧದಲ್ಲಿ ದುರ್ಜಯರಾದ ನಕುಲಸಹದೇವರು, ಅರ್ಜುನ ಇವರೆಲ್ಲರೂ ತಮ್ಮ ರಥಗಳಲ್ಲಿ ಭೀಮಸೇನನ ಬಳಿಗೆ ಬಂದರು. ಹತ್ತು ರಥಗಳಿಂದ ಕೂಡಿದ ಆ ಯುದ್ಧವು ಬೆಳೆದು ಉಂಟಾದ ಬಾಣವರ್ಷದಿಂದ ರಥಗಳೂ, ಧ್ವಜಗಳೂ, ಪತಾಕೆಗಳೂ ಎಲ್ಲವೂ ಮುಚ್ಚಿಹೋದವು. ಬಹುಕಾಲ ನಡೆದ ಆ ಯುದ್ಧವು ಸಮವಾಗಿ ನಡೆಯುವಂತೆ ತೋರುತ್ತಿತ್ತು. (ನಾಲ್ಕು ಪಾಂಡವರ ನಾಲ್ಕು ರಥಗಳು ಮತ್ತು ಧೃಷ್ಟದ್ಯುಮ್ನನ ರಥ ಹೀಗೆ ಒಂದು ಪಕ್ಷದಲ್ಲಿ ಐದು ರಥಗಳು. ಕರ್ಣ, ಜಯದ್ರಥ, ಭೂರಿಶ್ರವ, ಶಕುನಿ, ದುರ್ಯೋಧನ ಇವರ ಐದು ರಥಗಳು ಇನ್ನೊಂದು ಕಡೆ, ಹೀಗೆ ಒಟ್ಟು ಹತ್ತು ರಥಗಳು.)
ರಥೇನ ತಾನ್ ಮಹಾಬಾಹುರರ್ಜುನೋಽಭ್ಯಪತತ್ ಪುನಃ
ತಮಾಪತಂತಂ ದೃಷ್ಟ್ವೈವ ಮಹಾಬಾಹುರ್ಧನುರ್ಧರಃ |
ಕರ್ಣೋಽಸ್ತ್ರವಿದುಷಾಂ ಶ್ರೇಷ್ಠೋ ವಾರಯಾಮಾಸ ಸಾಯಕೈಃ ॥47॥
ತನ್ನ ಎದುರಿಗೆ ಬರುತ್ತಿದ್ದ ಅವರನ್ನು ನೋಡಿ ಮಹಾಬಾಹುವೂ, ಧನುರ್ಧರನೂ ಆದ ಅರ್ಜುನನು ಅವರ ಕಡೆಗೆ ಧಾವಿಸಿದನು. ಅಸ್ತ್ರಜ್ಞರಲ್ಲಿ ಶ್ರೇಷ್ಠನಾದ ಕರ್ಣನು ತನ್ನ ಬಾಣಗಳಿಂದ ಅರ್ಜುನನನ್ನು ತಡೆದನು.
ಸ ತೇನಾಭಿಹತಃ ಪಾರ್ಥೋ ವಾಸವಿರ್ವಜ್ರಸನ್ನಿಭಾನ್ |
ತ್ರೀನ್ ಶರಾನ್ ಸಂದಧೇ ಕ್ರುದ್ಧೋ ವಧಾತ್ ಕರ್ಣಸ್ಯ ಪಾಂಡವಃ ॥
ಕರ್ಣನ ಬಾಣಗಳಿಂದ ತಾಡಿತನಾದ ಇಂದ್ರನ ಮಗನಾದ ಅರ್ಜುನನು ಕರ್ಣನ ವಧೆಯ ಉದ್ದೇಶದಿಂದ ವಜ್ರದಂತಿದ್ದ ಮೂರು ಬಾಣಗಳನ್ನು ತೆಗೆದು ಕ್ರುದ್ಧನಾಗಿ ಧನುಸ್ಸಿನಲ್ಲಿ ಹೂಡಿದನು.
ತೈಃ ಶರೈರಾಹತಃ ಕರ್ಣಃ ಧ್ವಜಯಷ್ಟಿಮುಪಾಶ್ರಿತಃ |
ಅಪೋವಾಹ ರಥೇನಾಶು ಸೂತಃ ಪರಪುರಂಜಯಮ್ ॥49॥
ಆ ಶರಗಳಿಂದ ತಾಡಿತನಾದ ಕರ್ಣನನ್ನು ಧ್ವಜಯಷ್ಟಿಯನ್ನು ಹಿಡಿದು ನಿಂತನು. ಆಗ ಅವನ ಸೂತನು ಪರಪುರಂಜಯನಾದ ಕರ್ಣನು ರಥದಲ್ಲಿ ಯುದ್ಧಭೂಮಿಯಿಂದ ಹೊರಗೆ ಕರೆದುಕೊಂಡು ಹೋದನು.
ತತಃ ಪರಾಜಿತೇ ಕರ್ಣೇ ಧಾರ್ತರಾಷ್ಟ್ರಂ ಮಹದ್ಭಯಮ್ |
ವಿವೇಶ ಸಮುದಗ್ರಾಂಶ್ಚ ಪಾಂಡವಾನ್ ಪ್ರಸಮೀಕ್ಷ್ಯ ಚ ॥50॥
ಕರ್ಣನು ಪರಾಜಿತನಾಗುತ್ತಿರಲು ಬಲದಿಂದ ಬೆಳೆಯುತ್ತಿರುವ ಪಾಂಡವರನ್ನು ನೋಡಿ ದುರ್ಯೋಧನನಿಗೆ ದೊಡ್ಡ ಭಯವು ಉಂಟಾಯಿತು.
ತತ್ಪ್ರಕಂಪಿತಮತ್ಯರ್ಥಂ ದೃಷ್ಟ್ವಾ ವೈ ಸೌಬಲೋ ಬಲಮ್ |
ಗಿರಾ ಗಂಭೀರಯಾ ವೀರಃ ಸಮಾಶ್ವಸಯತಾಸಕೃತ್ ॥51॥
ಪಾಂಡವರ ಪರಾಕ್ರಮದಿಂದ ನಡುಗಿದ ಸೈನ್ಯವನ್ನು ನೋಡಿ, ವೀರನಾದ ಶಕುನಿಯು ತನ್ನ ಸೈನ್ಯವನ್ನು ಕುರಿತು ಅನೇಕಬಾರಿ ಸಮಾಶ್ವಾಸನೆಯ ಮಾತುಗಳನ್ನು ಆಡಿದನು.
ಧಾರ್ತರಾಷ್ಟ್ರೈಸ್ತತಃ ಸರ್ವೈರ್ದುರ್ಯೋಧನಪುರಸ್ಸರೈಃ |
ಛತ್ರಮಾಲ್ಯಾಂಬರಧರಂ ಪತಾಕಾಶತಶೋಭಿತಮ್ |
ಧೃತಂ ತತ್ಪುನರೇವಾಸೀದ್ ಬಲಂ ಪಾರ್ಥಪ್ರಕಂಪಿತಮ್ ॥52॥
ಆಗ ಮೊದಲು ಪಾರ್ಥನಿಂದ ಪ್ರಕಂಪಿತವಾದ ಕೌರವಬಲವು ದುರ್ಯೋಧನ ಪ್ರಮುಖರಾದ ಎಲ್ಲಾ ಧೃತರಾಷ್ಟ್ರನ ಮಕ್ಕಳಿಂದಲೂ ಕೂಡಿ, ಛತ್ರಮಾಲ್ಯಾಂಬರಗಳನ್ನು ಧರಿಸಿ, ನೂರಾರು ಪತಾಕೆಗಳಿಂದ ಶೋಭಿತವಾಗಿ ಪುನಃ ನಿಂತುಕೊಂಡಿತು.
ತತೋ ದುರ್ಯೋಧನಂ ದೃಷ್ಟ್ವಾ ಭೀಮೋ ಭೀಮಪರಾಕ್ರಮಃ |
ಅಕ್ರುಧ್ಯತ್ ಸ ಮಹಾಬಾಹುರಗಾರಂ ಜಾತುಷಂ ಸ್ಮರನ್ ॥53॥
ಆಗ ಭೀಮಪರಾಕ್ರಮನೂ, ಮಹಾಬಾಹುವೂ ಆದ ಭೀಮನು ದುರ್ಯೋಧನನನ್ನು ನೋಡಿ, ಅರಗಿನ ಮನೆಯನ್ನು ನೆನೆಸಿಕೊಂಡು ಕ್ರೋಧಾವಿಷ್ಟನಾದನು.
ತತಃ ಸಂಗ್ರಾಮಶಿರಸಿ ದದರ್ಶ ವಿಪುಲದ್ರುಮಮ್ |
ಆಯಾಮಭೂತಂ ತಿಷ್ಠಂತಂ ಸ್ಕಂಧಪಂಚಾಶದುನ್ನತಮ್ |
ಮಹಾಸ್ಕಂಧಂ ಮಹೋತ್ಸೇಧಂ ಶಕ್ರಧ್ವಜಮಿವೋಚ್ಛ್ರಿತಮ್ ॥54॥

ಆಗ ಆ ಉನ್ನತವಾದ ಸಂಗ್ರಾಮದಲ್ಲಿ ಭೀಮಸೇನನು ವಿಸ್ತಾರವಾಗಿ ಹರಡಿ ಐವತ್ತುಕೊಂಬೆಗಳಿಂದ ಕೂಡಿದ್ದ ದೊಡ್ಡ ಸ್ಕಂಧವನ್ನೂ, ಎತ್ತರವನ್ನೂ ಹೊಂದಿ, ಶಕ್ರಧ್ವಜದಂತೆ ಇದ್ದ ಒಂದು ಮಹಾಸಾಲವೃಕ್ಷವನ್ನು ನೋಡಿದನು.
ಸಾಲಮುತ್ಪಾಟ್ಯ ಪಾಣಿಭ್ಯಾಮುದ್ಯಮ್ಯ ಚ ರಣೇ ಬಲೀ |
ಅಭಿಪೇದೇ ಪರಾನ್ ಸಂಖೇ ವಜ್ರಪಾಣಿರಿವಾಸುರಾನ್ ॥55॥
ಬಲಿಷ್ಠನಾದ ಭೀಮಸೇನನು ಯುದ್ಧದಲ್ಲಿ ತನ್ನ ಎರಡೂ ಕೈಗಳಿಂದಲೂ ಸಾಲವೃಕ್ಷವನ್ನು ಹಿಡಿದು ಕಿತ್ತು ವಜ್ರಪಾಣಿಯಾದ ಇಂದ್ರನು ಅಸುರರ ಮೇಲೆ ಎರಗಿದಂತೆ ಯುದ್ಧದಲ್ಲಿ ಶತ್ರುಗಳ ಮೇಲೆ ಎರಗಿದನು.
ಭೀಮಸೇನಭಯಾರ್ತಾನಿ ಫಲ್ಗುನಾಭಿಹತಾನಿ ಚ |
ನ ಶೇಕುಸ್ತಾನ್ಯನೀಕಾನಿ ಧಾರ್ತರಾಷ್ಟ್ರಂ ನಿರೀಕ್ಷಿತುಮ್ ॥56॥
ಫಲ್ಗುನನಿಂದ ಪ್ರಹಾರಕ್ಕೆ ಒಳಗಾಗಿ ಭೀಮಸೇನನ ಭಯದಿಂದ ಆರ್ತವಾದ ಆ ಸೈನ್ಯವು ದುರ್ಯೋಧನನನ್ನು ನೋಡಲು ಸಹ ಸಮರ್ಥವಾಗಲಿಲ್ಲ.
ತಾನಿ ಸಂಭ್ರಾಂತಯೋಧಾನಿ ಶ್ರಾಂತವಾಜಿಗಜಾನಿ ಚ |
ದಿಶಃ ಪ್ರಾಕಾಲಯದ್ ಭೀಮೋ ದಿವೀವಾಭ್ರಾಣಿ ಮಾರುತಃ ॥57॥
ತಾನ್ ನಿವೃತ್ತಾನ್ ನಿರಾನಂದಾನ್ ಹತವಾರಣವಾಜಿನಃ |
ನಾನುಸಸ್ರುರ್ನ ಚಾಜಘ್ನುರ್ನೋಚುಃ ಕಿಂಚಿಚ್ಚ ದಾರುಣಮ್ ॥58॥
ದಿಗ್ಭ್ರಮೆಗೆ ಒಳಗಾದ ಯೋಧರನ್ನೂ, ದಣಿದ ಅಶ್ವಗಜಗಳನ್ನು ಹೊಂದಿದ ಆ ಸೈನ್ಯವನ್ನು ಆಕಾಶದಲ್ಲಿ ವಾಯುವು ಮೋಡಗಳನ್ನು ಚದುರಿಸಿದಂತೆ ಭೀಮಸೇನನು ದಿಕ್ಕುದಿಕ್ಕುಗಳಿಗೆ ಓಡಿಸಿದನು. ಪಾಂಡವರು ಅಶ್ವಗಳನ್ನೂ ಮತ್ತು ಗಜಗಳನ್ನೂ ಕಳೆದುಕೊಂಡು ದುಃಖಪೂರ್ಣರಾಗಿ ಹಿಂದಿರುಗುತ್ತಿದ್ದ ಆ ಸೈನ್ಯವನ್ನು ಅನುಸರಿಸಲಿಲ್ಲ ಅಥವಾ ಸೈನ್ಯಕ್ಕೆ ಪುನಃ ಪ್ರಹಾರ ಮಾಡಲಿಲ್ಲ ಅಥವಾ ಸೈನಿಕರಿಗೆ ಉಗ್ರವಾಗಿ ಮಾತನಾಡಲೂ ಇಲ್ಲ.
ಸ್ವಮೇವ ಶಿಬಿರಂ ಜಗ್ಮುಃ ಕ್ಷತ್ರಿಯಾಃ ಶರವಿಕ್ಷತಾಃ |
ಪರೇಽಪ್ಯಭಿಯಯುರ್ಹೃಷ್ಟಾಃ ಪುರಂ ಪೌರಸುಖಾವಹಾಃ ॥59॥
ಬಾಣಗಳಿಂದ ಗಾಯಗೊಂಡ ಕ್ಷತ್ರಿಯರು ತಮ್ಮ ಶಿಬಿರಗಳಿಗೆ ಹಿಂದಿರುಗಿದರು. ಪಾಂಡವರೂ ಸಹ ಪೌರರಿಗೆ ಸುಖವನ್ನುಂಟುಮಾಡುತ್ತಾ ಸಂತೋಷದಿಂದ ದ್ರುಪದರಾಜನ ಪಟ್ಟಣವನ್ನು ಪ್ರವೇಶಿಸಿದರು.
ಮುಹೂರ್ತಮಭವದ್ ವೈರಂ ತೇಷಾಂ ವೈ ಪಾಂಡವೈಃ ಸಹ |
ಯಾವತ್ ತದ್ಯುದ್ಧಮಭವನ್ಮಹದ್ ದೇವಾಸುರೋಪಮಮ್ |
ತಾವದೇವಾಭವಚ್ಛಾಂತಂ ನಿವೃತ್ತಾ ವೈ ಮಹಾರಥಾಃ ॥60॥
ಪಾಂಡವರಿಗೂ ಮತ್ತು ಕೌರವಸೈನ್ಯದ ಕ್ಷತ್ರಿಯರಿಗೂ ಒಂದು ಮುಹೂರ್ತದ ಕಾಲ ಯುದ್ಧದ ನಿಮಿತ್ತವಾಗಿ ವೈರವುಂಟಾಯಿತು. ಎಷ್ಟು ಶೀಘ್ರವಾಗಿ ದೇವಾಸುರ ಸಮರಸದೃಶವಾದ ಆ ಯುದ್ಧವು ನಡೆಯಿತೋ ಅಷ್ಟೇ ಶೀಘ್ರವಾಗಿ ಶಾಂತವೂ ಆಯಿತು. ಎಲ್ಲಾ ಮಹಾರಥರೂ ನಿವೃತ್ತರಾದರು.
ಸುವೃತ್ತಂ ಚಕ್ರಿರೇ ಸರ್ವೇ ಸುಪ್ರಾಪ್ತಾಮಬ್ರುವನ್ ವಧೂಮ್ |
ಕೃತಾರ್ಥಂ ದ್ರುಪದಂ ಚೋಚುರ್ಧೃಷ್ಟದ್ಯುಮ್ನಂ ಚ ಪಾರ್ಷತಮ್ ॥
ಪಾಂಡವರು ಒಳ್ಳೆಯ ಕೆಲಸವನ್ನು ಮಾಡಿದರು, ವಧುವಾದ ದ್ರೌಪದಿಯು ಚೆನ್ನಾಗಿ ಬಂದಿದ್ದಾಳೆ, ದ್ರುಪದ ಮತ್ತು ಧೃಷ್ಟದ್ಯುಮ್ನರು ಕೃತಾರ್ಥರಾಗಿದ್ದಾರೆ ಎಂದು ಎಲ್ಲರೂ ಮಾತನಾಡಿದರು.
ಶಕುನಿಃ ಸಿಂಧುರಾಜಶ್ಚ ಕರ್ಣದುರ್ಯೋಧನಾವಪಿ |
ತೇಷಾಂ ತದಭವದ್ ದುಃಖಂ ಹೃದಿ ವಾಚಾ ತು ನಾಬ್ರುವನ್ ॥62॥
ಶಕುನಿ, ಜಯದ್ರಥ, ಕರ್ಣ ದುರ್ಯೋಧನರಿಗೆ ಹೃದಯದಲ್ಲಿ ದುಃಖವಾಯಿತು. ಆದರೆ, ಬಾಯಿಯಿಂದ ಅದನ್ನು ಹೇಳಲಿಲ್ಲ.
ತತಃ ಪ್ರಯಾತಾ ರಾಜಾನಃ ಸರ್ವ ಏವ ಯಥಾಗತಮ್ |
ಧಾರ್ತರಾಷ್ಟ್ರಾ ಹಿ ತೇ ಸರ್ವೇ ಗತಾ ನಾಗಪುರಂ ತದಾ ॥63॥
ಅನಂತರ ಬಂದ ರಾಜರೆಲ್ಲರೂ ಬಂದಂತೆಯೇ ಹಿಂದಿರುಗಿದರು. ದುರ್ಯೋಧನಾದಿಗಳೆಲ್ಲರೂ ಹಸ್ತಿನಪುರಕ್ಕೆ ಹೋದರು.
ಪ್ರಾಗೇವ ಪುರರೋಧಾತ್ ತು ಪಾಂಡವೈರಶ್ವಸಾದಿನಃ |
ಪ್ರೇಷಿತಾ ಗಚ್ಛತಾರಿಷ್ಟಾನಸ್ಮಾನಾಖ್ಯಾತ ಶೌರಯೇ ॥64॥
ಕೌರವಸೈನ್ಯವು ಮುತ್ತಿಗೆ ಹಾಕುವುದಕ್ಕಿಂತ ಮುಂಚೆಯೇ, ಪಾಂಡವರು ಕೃಷ್ಣನಿಗೆ ನಮ್ಮ ಕುಶಲವನ್ನು ತಿಳಿಸಿ ಎಂಬ ಸಂದೇಶವನ್ನು ಕೊಡಲು ಅಶ್ವಾರೋಹಿಗಳನ್ನು ಕಳುಹಿಸಿದ್ದರು.
ತೇ ತ್ವದೀರ್ಘೇಣ ಕಾಲೇನ ಗತ್ವಾ ದ್ವಾರವತೀಂ ಪುರೀಮ್ |
ಊಚುಃ ಸಂಕರ್ಷಣೋಪೇಂದ್ರೌ ವಚನಂ ವಚನಕ್ಷಮೌ ॥65॥
ಮಾತನಾಡುವುದರಲ್ಲಿ ಚತುರರಾದ ಅವರು ಅಲ್ಪಕಾಲದಲ್ಲಿಯೇ ದ್ವಾರಾವತಿಗೆ ಬಂದು ಕೃಷ್ಣಬಲರಾಮರಿಗೆ ಪಾಂಡವರ ಮಾತುಗಳನ್ನು ತಿಳಿಸಿದರು.
ಕುಶಲಂ ಪಾಂಡವಾಃ ಸರ್ವಾನಾಹುಃ ಸ್ಮಾಂಧಕವೃಷ್ಣಯಃ |
ಆತ್ಮನೋಽತ್ರಾಕ್ಷತಾನಾಹುರ್ವಿಮುಕ್ತಾನ್ ಜಾತುಷಾದ್ ಗೃಹಾತ್ ॥
ಅಂಧಕವೃಷ್ಣಿವರ್ಯರೇ, ನಿಮ್ಮೆಲ್ಲರಿಗೂ ಪಾಂಡವರು ತಮ್ಮ ಕುಶಲವನ್ನು ತಿಳಿಸುತ್ತಿದ್ದಾರೆ. ತಾವು ಜತುಗೃಹದಿಂದ ಮುಕ್ತರಾಗಿರುವುದಾಗಿಯೂ, ಪಾಂಚಾಲರಾಜನ ಪಟ್ಟಣದಲ್ಲಿ ಯಾವ ಉಪದ್ರವವೂ ಇಲ್ಲದೆ ಇರುವುದಾಗಿಯೂ ಹೇಳಿದ್ದಾರೆ.

ಸಮಾಜೇ ದ್ರೌಪದೀಂ ಸ್ಮಾಹುರ್ಲಬ್ಧಾಂ ರಾಜೀವಲೋಚನಾಮ್ |
ಆತ್ಮನಃ ಸದೃಶೀಂ ಸರ್ವೇ ಶೀಲವೃತ್ತಸಮಾಧಿಭಿಃ ॥67॥
ರಾಜಸಮಾಜದಲ್ಲಿ ಶೀಲವೃತ್ತಸಮಾಧಿಗಳಿಂದ ಎಲ್ಲರೂ ತಮಗೆ ಅನುಗುಣಳಾದ ರಾಜೀವಲೋಚನೆಯಾದ ದ್ರೌಪದಿಯನ್ನು ಪಡೆದಿದ್ದಾಗಿಯೂ ನಿಮಗೆ ತಿಳಿಸುತ್ತಾರೆ.
ತಚ್ಛ್ರುತ್ವಾ ವಚನಂ ಕೃಷ್ಣಸ್ತಾನುವಾಚೋತ್ತರಂ ವಚಃ |
ಸರ್ವಮೇತದಹಂ ಜಾನೇ ವಧಾತ್ ತಸ್ಯ ತು ರಕ್ಷಸಃ ॥68॥
ಆ ಮಾತುಗಳನ್ನು ಕೇಳಿ ಕೃಷ್ಣನು ಹಿಡಿಂಬನ ವಧೆಯಿಂದ ಹಿಡಿದು ನಡೆದ ಎಲ್ಲಾ ಘಟನೆಗಳನ್ನೂ ನಾನು ತಿಳಿದಿದ್ದೇನೆ ಎಂದು ಉತ್ತರವನ್ನು ಕೊಟ್ಟನು.
ತತ ಉದ್ಯೋಜಯಾಮಾಸ ಕೇಶವಶ್ಚತುರಂಗಿಣೀಮ್ |
ಸೇನಾಮುಪಾದಿಶತ್ ತೂರ್ಣಂ ಪಾಂಚಾಲನಗರೀಂ ಪ್ರತಿ ॥69॥
ಅನಂತರ, ಶ್ರೀಕೃಷ್ಣನು ಶೀಘ್ರವಾಗಿ ತನ್ನ ಚತುರಂಗಯುಕ್ತವಾದ ಸೈನ್ಯವನ್ನು ಪಾಂಚಾಲನಗರಿಗೆ ಹೋಗುವಂತೆ ಆದೇಶವನ್ನು ನೀಡಿ ಕಳುಹಿಸಿದನು.
ತತಃ ಸಂಕರ್ಷಣಶ್ಚೈವ ಕೇಶವಶ್ಚ ಮಹಾಬಲಃ |
ಯಾದವೈಃ ಸಹ ಸರ್ವೈಶ್ಚ ಪಾಂಚಾಲಾನಭಿಜಗ್ಮತುಃ ॥70॥
ಅನಂತರ, ಸಂಕರ್ಷಣನೂ, ಮಹಾಬಲನಾದ ಕೇಶವನೂ ಮತ್ತು ಎಲ್ಲಾ ಯಾದವರೂ ಪಾಂಚಾಲನಗರಕ್ಕೆ ಬಂದರು.
ಪಿತೃಷ್ವಸಾರಂ ಸಂಪೂಜ್ಯ ದ್ರುಪದಂ ಚ ಮಹಾಧನೈಃ |
ದ್ರೌಪದೀಂ ಭೂಷಣೈಃ ಶುಭ್ರೈರ್ಭೂಷಯಿತ್ವಾ ಮಹಾಧನೈಃ ॥71॥
ಕೃಷ್ಣನು ಸೋದರತ್ತೆಯನ್ನೂ ಮತ್ತು ದ್ರುಪದನನ್ನೂ ಸತ್ಕರಿಸಿ, ಬೆಲೆಬಾಳುವ ಶುಭ್ರವಾದ ಆಭರಣಗಳಿಂದ ದ್ರೌಪದಿಯನ್ನು ಅಲಂಕರಿಸಿ ಮಹಾಧನಗಳನ್ನೂ ನೀಡಿದನು.
ನ್ಯಾಯತಃ ಪೂಜಿತಾ ರಾಜ್ಞಾ ದ್ರುಪದೇನ ಮಹಾತ್ಮನಾ |
ರೇಮಿರೇ ಪಾಂಡವೈಃ ಸಾರ್ಧಂ ಪಾಂಚಾಲನಗರೇ ತದಾ ॥72॥
ಮಹಾತ್ಮನಾದ ದ್ರುಪದನು ಅವರನ್ನು ಶಾಸ್ತ್ರವಿಧಾನದಿಂದ ಪೂಜಿಸಿದನು. ಆಗ, ಪಾಂಚಾಲನಗರದಲ್ಲಿ ಪಾಂಡವರ ಜೊತೆಯಲ್ಲಿ ಕೃಷ್ಣಬಲರಾಮರೂ, ಯಾದವರೂ, ದ್ರುಪದಾದಿಗಳೂ ಎಲ್ಲರೂ ಸಂತೋಷದಿಂದಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಏಕಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಒಂದನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯ ನಿರ್ಣಯ - ಅಧ್ಯಾಯ-19
ಜ್ಞಾತ್ವಾ ಸಮಸ್ತಮಪಿ ತದ್ವಿದುರೋಽಗ್ರಜಂ ಸ್ವಂ
ವರ್ಧಂತ ಏವ ತನಯಾ ಭವತೋ ನರೇಂದ್ರ |
ಇತ್ಯಾಹ ಸೋಽಪಿ ಮುದಿತಃ ಸ್ವಸುತೇನ ಕೃಷ್ಣಾ
ಪ್ರಾಪ್ತೇತಿ ಭೂಷಣವರಾಣ್ಯದಿಶಚ್ಚ ವಾಸಃ ॥171॥
ದ್ರೌಪದೀಸ್ವಯಂವರ ವೃತ್ತಾಂತವನ್ನೆಲ್ಲ ತಿಳಿದ ವಿದುರ ಧೃತರಾಷ್ಟ್ರನ ಬಳಿ `ರಾಜನೆ, ನಿನ್ನ ಮಕ್ಕಳು ಜಯಶಾಲಿಗಳಾಗಿ ಮೆರೆಯುತ್ತಿದ್ದಾರೆ' ಎಂದ. ಧೃತರಾಷ್ಟ್ರ ತನ್ನ ಮಗ ದುರ್ಯೋಧನನೆ ಸ್ವಯಂವರದಲ್ಲಿ ದ್ರೌಪದಿಯನ್ನು ಗೆದ್ದನೆಂದು ಬಗೆದು ಸಂತೋಷದಿಂದ ವಿದುರನಿಗೆ ಶ್ರೇಷ್ಠ ಆಭರಣಗಳನ್ನೂ ವಸ್ತ್ರಗಳನ್ನೂ ನೀಡಿದ.
ಪಾರ್ಥಾ ಇತಿ ಸ್ಮ ವಿದುರೋಽವದದಾಶು ಸೋಽಪಿ
ಸ್ವಾಕಾರಗೂಹನಪರೋ ಯದಿ ತರ್ಹ್ಯತೀವ |
ಭದ್ರಂ ಮೃತಾ ನ ಹಿ ಪೃಥಾಸಹಿತಾಃ ಸ್ಮ ಪಾರ್ಥಾ
ಸ್ತೇಷಾಂ ಪ್ರವೃತ್ತಿಮಪಿ ಮೇ ವದ ಸರ್ವಶಸ್ತ್ವಂ ॥172॥
ಒಡನೆ `ಪಾಂಡವರು!' ಎಂದ. ಈಗ ಧೃತರಾಷ್ಟ್ರ ತನ್ನ ಮನಸಿನೊಳಗಿನ ದುಷ್ಟಭಾವವನ್ನು ಮರೆಮಾಡುತ್ತ `ಓಹೋ! ಹಾಗಾದರೆ ಇನ್ನೂ ಒಳ್ಳೆಯದಾಯಿತು. ಇದು ಮಹಾ ಶುಭವಾರ್ತೆಯಾಯಿತು. ಪಾಂಡವರೂ ಕುಂತಿಯೂ ಸತ್ತಿಲ್ಲವಲ್ಲ! ಅವರ ಎಲ್ಲ ವೃತ್ತಾಂತವನ್ನೂ ನನಗೆ ಹೇಳು' ಎಂದ.
ಇತ್ಯುಕ್ತ ಆಹ ವಿದುರಃ ಸ ಹಿಡಿಂಬವಧ್ಯಾ-
ಪೂರ್ವಾಂ ಪ್ರವೃತ್ತಿಮಖಿಲಾಮಪಿ ಲಕ್ಷವೇಧಂ |
ಉದ್ವಾಹಮಪ್ಯಥ ನದೀಜಮುಖಾಶ್ಚ ಸರ್ವೇ
ತುಷ್ಟಾ ಬಭೂವುರಪಿ ವತ್ಸರಮೂಷುರೇವಂ ॥173॥
ಧೃತರಾಷ್ಟ್ರ ಹೀಗೆ ಹೇಳಿದಾಗ ವಿದುರ ಹಿಡಿಂಬ ವಧೆಯಿಂದ ತೊಡಗಿ ಎಲ್ಲ ವೃತ್ತಾಂತವನ್ನೂ ಲಕ್ಷ್ಯವೇಧವನ್ನೂ ವಿವಾಹವನ್ನೂ ವರ್ಣಿಸಿದ. ಭೀಷ್ಮಾದಿಗಳೆಲ್ಲರೂ ಸಂತುಷ್ಟರಾದರು. ಆದರೆ ಪಾಂಡವರ ವೃತ್ತಾಂತವನ್ನು ತಿಳಿದೂ ಕೂಡ ಒಂದು ವರ್ಷ ಭೀಷ್ಮಾದಿಗಳು ಸುಮ್ಮನಿದ್ದರು. ಪಾಂಡವರು ಆ ಒಂದು ವರ್ಷಕಾಲ ದ್ರುಪದನ ರಾಜ್ಯದಲ್ಲಿ ವಾಸವಾಗಿದ್ದರು.

* * * *

ಇನ್ನೂರ ಎರಡನೆಯ ಅಧ್ಯಾಯ

(ಸ್ವಯಂವರದಿಂದ ಹಿಂದಿರುಗಿದ ದುರ್ಯೋಧನಾದಿಗಳ ವಿಷಾದ, ವಿದುರನಿಂದ ಧೃತರಾಷ್ಟ್ರನಿಗೆ ವೃತ್ತಾಂತ ಕಥನ, ದುರ್ಯೋಧನಾದಿಗಳಿಂದ ದುರ್ಮಂತ್ರಣ.)

ವೈಶಂಪಾಯನಃ

ತತಃ ಸ್ವಯಂವರೇ ವೃತ್ತೇ ರಾಜಾನಃ ಸರ್ವ ಏವ ಹ |
ಯಥಾಗತಂ ವಿಪ್ರಜಗ್ಮುರ್ವಿದಿತ್ವಾ ಪಾಂಡವಾನ್ ವೃತಾನ್ ॥1॥

ಸ್ವಯಂವರವು ಜರುಗಿದ ಮೇಲೆ, ಬಂದ ರಾಜರೆಲ್ಲರೂ ದ್ರೌಪದಿಯಿಂದ ಪಾಂಡವರು ವೃತವಾದರು ಎಂದು ತಿಳಿದು ಹೊರಟುಹೋದರು.

ಅಥ ದುರ್ಯೋಧನೋ ರಾಜಾ ವಿಮನಾ ಭ್ರಾತೃಭಿಃ ಸಹ |
ಅಶ್ವತ್ಥಾಮ್ನಾ ಮಾತುಲೇನ ಕರ್ಣೇನ ಚ ಕೃಪೇಣ ಚ |
ವಿನಿವೃತ್ತೋ ವೃತಂ ದೃಷ್ಟ್ವಾ ದ್ರೌಪದ್ಯಾ ಶ್ವೇತವಾಹನಮ್ ॥2॥

ಅನಂತರ ದ್ರೌಪದಿಯು ಅರ್ಜುನನನ್ನು ವರಿಸಿದುದನ್ನು ನೋಡಿ ವಿಷಣ್ಣನಾದ ದುರ್ಯೋಧನನು ತನ್ನ ತಮ್ಮಂದಿರ, ಅಶ್ವತ್ಥಾಮಾಚಾರ್ಯರ, ಶಕುನಿಯ, ಕರ್ಣನ ಮತ್ತು ಕೃಪಾಚಾರ್ಯರ ಜೊತೆಯಲ್ಲಿ ಹಿಂದಿರುಗಿದನು.

ಅಥ ದುಃಶಾಸನೋ ರಾಜಾ ಮಂದಂ ಮಂದಮಿವಾಬ್ರವೀತ್ |
ಯದ್ಯಸೌ ಬ್ರಾಹ್ಮಣೋ ನ ಸ್ಯಾನ್ನ ಚ ವಿಂದೇತ ದ್ರೌಪದೀಮ್ ॥3॥

ಆಗ ದುಶ್ಶಾಸನನು ಮೆಲ್ಲಮೆಲ್ಲಗೆ ಹೀಗೆ ಹೇಳಿದನು. ಅವನು ಬ್ರಾಹ್ಮಣವೇಷಧಾರಿಯಾಗಿರದಿದ್ದರೆ ಖಂಡಿತವಾಗಿಯೂ ದ್ರೌಪದಿಯನ್ನು ಪಡೆಯುತ್ತಿರಲಿಲ್ಲ.

ನ ಹಿ ತಂ ತತ್ವತೋ ರಾಜಾ ವೇದ ಕಶ್ಚಿದ್ ಧನಂಜಯಮ್ |
ಧಿಗಸ್ಮತ್ಪೌರುಷಂ ಪಂಚ ಯದ್ ಧರಂತೀಹ ಪಾಂಡವಾಃ |
ದೈವಮೇವ ಪರಂ ಮನ್ಯೇ ಪೌರುಷಂ ತು ನಿರರ್ಥಕಮ್ ॥4॥

ರಾಜನಿಗೆ ಅವನು ಅರ್ಜುನ ಎಂಬ ಯಥಾರ್ಥತೆಯು ತಿಳಿಯಲಿಲ್ಲ. ಪಾಂಡವರು ಇನ್ನೂ ಬದುಕಿದ್ದಾರೆ. ನಮ್ಮ ಪೌರುಷಕ್ಕೆ ಧಿಕ್ಕಾರವಿರಲಿ. ದೈವವೇ ಪ್ರಬಲವಾದುದು. ಪೌರುಷವು ವ್ಯರ್ಥ.

ಏವಂ ಸಂಭಾಷಮಾಣಾಸ್ತೇ ನಿಂದಂತಶ್ಚ ಪುರೋಚನಮ್ |
ವಿವಿಶುರ್ಹಸ್ತಿನಪುರಂ ದೀನಾ ವಿಗತಚೇತಸಃ ॥5॥

ಹೀಗೆ ಮಾತನಾಡುತ್ತಾ ಪುರೋಚನನನ್ನು ನಿಂದಿಸುತ್ತಾ, ಜ್ಞಾನಶೂನ್ಯರಾದ ಅವರು ದೈನ್ಯದಿಂದ ಹಸ್ತಿನಪುರವನ್ನು ಪ್ರವೇಶಿಸಿದರು.

ತ್ರಸ್ತಾ ವಿಗತಸಂಕಲ್ಪಾ ದೃಷ್ಟ್ವಾ ಪಾರ್ಥಾನ್ ಮಹೌಜಸಃ |
ವಿಮುಕ್ತಾನ್ ಹವ್ಯವಾಹಾಚ್ಚ ಸಂಯುಕ್ತಾನ್ ದ್ರುಪದೇನ ಚ ॥6॥
ಧೃಷ್ಟದ್ಯುಮ್ನಂ ಚ ಸಂಚಿಂತ್ಯ ತಥೈವ ಚ ಶಿಖಂಡಿನಮ್ |
ದ್ರುಪದಸ್ಯಾತ್ಮಜಾಂಶ್ಚಾನ್ಯಾನ್ ಸರ್ವಯುದ್ಧವಿಶಾರದಾನ್ ॥7॥

ತಮ್ಮ ಸಂಕಲ್ಪವು ಭಗ್ನವಾಗಿ, ಪರಾಕ್ರಮಶಾಲಿಗಳಾದ ಪಾಂಡವರನ್ನು ನೋಡಿ ಹೆದರಿ, ಜತುಗೃಹದಿಂದ ಮುಕ್ತರಾದುದನ್ನೂ, ದ್ರುಪದನ ಸಂಬಂಧವನ್ನು ಹೊಂದಿದುದನ್ನೂ, ಧೃಷ್ಟದ್ಯುಮ್ನನನ್ನೂ, ಶಿಖಂಡಿಯನ್ನೂ ಸರ್ವವಿದ್ಯಾವಿಶಾರದರಾದ ದ್ರುಪದನ ಬೇರೆ ಪುತ್ರರನ್ನೂ ಚಿಂತಿಸುತ್ತಾ (ಪುನಃ ಹೆದರಿ, ಹಸ್ತಿನಪುರವನ್ನು ಪ್ರವೇಶಿಸಿದರು).

ವಿದುರಸ್ತ್ವಥ ತಾನ್ ಶ್ರುತ್ವಾ ದ್ರೌಪದ್ಯಾ ಪಾಂಡವಾನ್ ವೃತಾನ್ |
ವ್ರೀಡಿತಾನ್ ಧಾರ್ತರಾಷ್ಟ್ರಾಂಶ್ಚ ಭಗ್ನದರ್ಪಾನುಪಾಗತಾನ್ ॥8॥
ತತಃ ಪ್ರೀತಮನಾಃ ಕ್ಷತ್ತಾ ಧೃತರಾಷ್ಟ್ರಂ ವಿಶಾಂಪತೇ |
ಉವಾಚ ಕುರವೋ ದಿಷ್ಟ್ಯಾ ವರ್ಧಂತ ಇತಿ ವಿಸ್ಮಿತಃ ॥9॥

ವಿದುರನು ದ್ರೌಪದಿಯು ಪಾಂಡವರನ್ನು ವರಿಸಿದಳೆಂಬ ವಾರ್ತೆಯನ್ನು ಕೇಳಿ, ದುರ್ಯೋಧನಾದಿಗಳು ಭಗ್ನದರ್ಪರಾಗಿ, ನಾಚಿಕೆಯಿಂದ ಹಿಂದಿರುಗಿದುದನ್ನು ನೋಡಿ, ಸಂತೋಷಗೊಂಡು ಧೃತರಾಷ್ಟ್ರನನ್ನು ಕುರಿತು ರಾಜನೇ, ದೇವರದಯೆಯಿಂದ ಕುರುಗಳು ವರ್ಧಿಸುತ್ತಿದ್ದಾರೆ ಎಂದು ವಿಸ್ಮಯಪೂರ್ವಕವಾಗಿ ಹೇಳಿದನು.

ವೈಚಿತ್ರವೀರ್ಯಸ್ತು ತದಾ ನಿಶಮ್ಯ ವಿದುರಸ್ಯ ತತ್ |
ಅಬ್ರವೀತ್ ಪರಮಪ್ರೀತೋ ದಿಷ್ಟ್ಯಾ ದಿಷ್ಟ್ಯೇತಿ ಕೌರವಃ ॥10॥

ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರನು ಆಗ ವಿದುರನ ಆ ಮಾತನ್ನು ಕೇಳಿ ಪರಮಸಂತೋಷವುಳ್ಳವನಾಗಿ ದೇವರ ದಯೆ ಎಂದು ಹೇಳಿದನು.

ಮನ್ಯತೇ ಸ ವೃತಂ ಪುತ್ರಂ ಜ್ಯೇಷ್ಠಂ ದ್ರುಪದಕನ್ಯಯಾ |
ದುರ್ಯೋಧನಮವಿಜ್ಞಾನಾತ್ ಪ್ರಜ್ಞಾಚಕ್ಷುರ್ನರೇಶ್ವರಃ ॥11॥

ಪ್ರಜ್ಞಾಚಕ್ಷುವಾದ ಆ ರಾಜನು ತನ್ನ ಅಜ್ಞಾನದಿಂದ ತನ್ನ ಜ್ಯೇಷ್ಠಪುತ್ರನಾದ ದುರ್ಯೋಧನನನ್ನು ದ್ರೌಪದಿಯು ವರಿಸಿದ್ದಾಳೆ ಎಂದು ತಿಳಿದನು.

ಅಥ ತ್ವಾಜ್ಞಾಪಯಾಮಾಸ ದ್ರೌಪದ್ಯಾ ಭೂಷಣಂ ಬಹು |
ಆನೀಯತಾಂ ವೈ ಕೃಷ್ಣೇತಿ ಪುತ್ರಂ ದುರ್ಯೋಧನಂ ತದಾ ॥12॥

ಅನಂತರ ದ್ರೌಪದಿಗೆ ಅನೇಕ ಭೂಷಣಗಳನ್ನು ಸಿದ್ಧಪಡಿಸುವುದಕ್ಕೆ ಆದೇಶವನ್ನು ನೀಡಿ ದುರ್ಯೋಧನನನ್ನು ಕುರಿತು ದ್ರೌಪದಿಯನ್ನು ಕರೆದುಕೊಂಡು ಬಾ ಎಂದು ಹೇಳಿದನು.
ಅಥಾಸ್ಯ ಪಶ್ಚಾದ್ ವಿದುರ ಆಚಖ್ಯೌ ಪಾಂಡವಾನ್ ವೃತಾನ್ |
ಸರ್ವಾನ್ ಕುಶಲಿನೋ ರಾಜನ್ ಪೂಜಿತಾನ್ ದ್ರುಪದೇನ ಚ ॥13॥
ರಾಜನೇ, ಅನಂತರದಲ್ಲಿ ವಿದುರನು ಪಾಂಡವರು ದ್ರೌಪದಿಯಿಂದ ವೃತರಾದರೆಂದೂ, ಎಲ್ಲರೂ ಕ್ಷೇಮದಿಂದಿದ್ದಾರೆಂದೂ, ದ್ರುಪದನಿಂದ ಸತ್ಕೃತರಾಗಿದ್ದಾರೆಂದೂ ತಿಳಿಸಿದನು.
ಏತಚ್ಛ್ರುತ್ವಾ ತು ವಚನಂ ವಿದುರಸ್ಯ ನರಾಧಿಪಃ |
ಆಕಾರಾಚ್ಛಾದನಾರ್ಥಂ ತು ದಿಷ್ಟ್ಯಾ ದಿಷ್ಟ್ಯೇತಿ ಚಾಬ್ರವೀತ್ ॥14॥
ವಿದುರನ ಈ ಮಾತನ್ನು ಕೇಳಿ ರಾಜನಾದ ಧೃತರಾಷ್ಟ್ರನು ತನ್ನ ಆಕಾರವನ್ನು ಮುಚ್ಚಿಕೊಳ್ಳಲು `ದೇವರ ದಯೆ ದೇವರ ದಯೆ' ಎಂದು ಹೇಳಿದನು.
ಏವಂ ವಿದುರ ಭದ್ರಂ ತೇ ಯದಿ ಜೀವಂತಿ ಪಾಂಡವಾಃ |
ಸಾಧ್ವಾಚಾರಾ ತಥಾ ಕುಂತೀ ಸಂಬಂಧೋ ದ್ರುಪದೇನ ಚ |
ಬಭೂವ ಪರಮಶ್ಲಾಘ್ಯೋ ದಿಷ್ಟ್ಯಾ ದಿಷ್ಟ್ಯೇತಿ ಚಾಬ್ರವೀತ್ ॥15॥
ವಿದುರನೇ, ಪಾಂಡವರು ಜೀವಿಸಿದ್ದರೆ ಒಳ್ಳೆಯದೇ ಆಯಿತು. ನಿನಗೆ ಮಂಗಳವಾಗಲಿ. ಕುಂತಿಯು ಒಳ್ಳೆಯ ಆಚಾರವುಳ್ಳವಳು. ದ್ರುಪದನ ಜೊತೆಯಲ್ಲಿ ಸಂಬಂಧವು ಪರಮಶ್ಲಾಘ್ಯವಾಗಿದೆ. ದೇವರ ದಯೆ ಎಂದು ಹೇಳಿದನು.
ಧೃತರಾಷ್ಟ್ರಃ
ಅನ್ವವಾಯೇ ವಸೋರ್ಜಾತಃ ಪ್ರಕೃಷ್ಟೇ ಮಾನ್ಯಕೇ ಕುಲೇ |
ವೃತವಿದ್ಯಾತಪೋವೃದ್ಧಃ ಪಾರ್ಥಿವಾನಾಂ ಧುರಂಧರಃ ॥16॥
ದ್ರುಪದನು ಶ್ರೇಷ್ಠವಾದ ವಸುವಿನ ವಂಶದಲ್ಲಿ ಮಾನ್ಯವಾದ ಸೋಮಕಕುಲದಲ್ಲಿ ಜನಿಸಿದ್ದಾನೆ.
ಪುತ್ರಾಶ್ಚಾಸ್ಯ ತಥಾ ಪೌತ್ರಾಃ ಸರ್ವೇ ಸುಚರಿತವ್ರತಾಃ |
ತೇಷಾಂ ಸಂಬಂಧಿನಶ್ಚಾನ್ಯೇ ಬಹವಃ ಸುಮಹಾಬಲಾಃ ॥17॥
ಅವನ ಮಕ್ಕಳೂ ಮತ್ತು ಮೊಮ್ಮಕ್ಕಳೂ, ಹಾಗೆಯೇ ಉಳಿದ ಬಾಂಧವರೂ, ಮಹಾಬಲದಿಂದಲೂ, ಒಳ್ಳೆಯ ವ್ರತಾಚಾರಗಳಿಂದಲೂ ಕೂಡಿದವರು.
ಯಥೈವ ಪಾಂಡೋಃ ಪುತ್ರಾಸ್ತೇ ತಥೈವಾಭ್ಯಧಿಕಾ ಮಮ |
ಸೋಽಯಮಭ್ಯಧಿಕಾಽನ್ಯೇಭ್ಯೋ ವೃತಿರ್ವಿದುರ ಮೇ ಮತಾ ॥18॥
ಪಾಂಡುಪುತ್ರರು ಹೇಗೆ ನನಗೆ ಪ್ರೀತ್ಯಾಸ್ಪದರೋ, ದ್ರುಪದನ ಪುತ್ರಪೌತ್ರರು ಅದಕ್ಕಿಂತ ಹೆಚ್ಚಿನ ಪ್ರೀತ್ಯಾಸ್ಪದರು. ವಿದುರನೇ, ಈ ವರಣವು ಅತ್ಯಂತ ಶ್ರೇಷ್ಠವಾಗಿದೆ.
ಯತ್ ತೇ ಕುಶಲಿನೋ ವೀರಾ ಮಿತ್ರವಂತಶ್ಚ ಮೇ ಸುತಾಃ |
ಕೋ ಹಿ ದ್ರುಪದಮಾಸಾದ್ಯ ಮಿತ್ರಂ ಕ್ಷತ್ರಃ ಸಬಾಂಧವಮ್ |
ನ ಬುಭೂಷೇತ್ ಕಥಂ ಚಾರ್ಥೀ ಗತಶ್ರೀರಿವ ಪಾರ್ಥಿವಃ ॥19॥
ನನ್ನ ಮಕ್ಕಳಾದ ವೀರರಾದ ಪಾಂಡವರು ಕುಶಲಿಗಳೂ ಮತ್ತು ಮಿತ್ರವಂತರೂ ಆಗಿದ್ದಾರೆ. ವಿದುರನೇ, ಬಾಂಧವಸಹಿತನಾದ ದ್ರುಪದನನ್ನು ಮಿತ್ರನನ್ನಾಗಿ ಪಡೆದ ಯಾವನು ತಾನೆ ಮೊದಲು ತನ್ನ ಎಲ್ಲಾ ಧನವನ್ನು ಕಳೆದುಕೊಂಡು ಪುನಃ ಬಹುಧನಾಢ್ಯನಾದ ರಾಜನಂತೆ ಶೋಭಿಸುವುದಿಲ್ಲ.
ತಂ ತಥಾ ಭಾಷಮಾಣಂ ತು ವಿದುರಃ ಪ್ರತ್ಯಭಾಷತ |
ನಿತ್ಯಾ ಭವತು ತೇ ಬುದ್ಧಿರೇಷಾ ರಾಜನ್ ಶತಂ ಸಮಾಃ |
ಇತ್ಯುಕತತ್ವ ಪ್ರಯಯೌ ರಾಜನ್ ವಿದುರಃ ಸ್ವಂ ನಿವೇಶನಮ್ ॥20॥
ಹಾಗೆ ಮಾತನಾಡುತ್ತಿದ್ದ ಧೃತರಾಷ್ಟ್ರನನ್ನು ಕುರಿತು ವಿದುರನು ಪ್ರತ್ಯುತ್ತರವನ್ನು ಕೊಡುತ್ತಾ ರಾಜನೇ, ನಿನಗೆ ಈ ಬುದ್ಧಿಯು ನೂರುವರ್ಷಗಳ ಕಾಲ ಶಾಶ್ವತವಾಗಿರಲಿ ಎಂದು ಹೇಳಿ ತನ್ನ ಮನೆಗೆ ಹೋದನು.
ತತೋ ದುರ್ಯೋಧನಶ್ಚೈವ ರಾಧೇಯಶ್ಚ ವಿಶಾಂಪತೇ |
ಧೃತರಾಷ್ಟ್ರಸ್ಯ ತಚ್ಛ್ರುತ್ವಾ ವಚೋಽಬ್ರೂತಾಮಿದಂ ತತಃ ॥21॥
ರಾಜನೇ, ಅನಂತರ ದುರ್ಯೋಧನನೂ ಮತ್ತು ಕರ್ಣನೂ ಧೃತರಾಷ್ಟ್ರನ ಆ ಮಾತುಗಳನ್ನು ಕೇಳಿ, ಹೀಗೆ ಮಾತನಾಡಿದರು.
ಸನ್ನಿಧೌ ವಿದುರಸ್ಯ ತ್ವಾಂ ವಕ್ತುಂ ನ ನೃಪ ಶಕ್ನುಮಃ |
ವಿವಿಕ್ತಮಿತಿ ವಕ್ಷ್ಯಾವಃ ಕಿಂ ತವೇದಂ ಚಿಕೀರ್ಷಿತಮ್ ॥22॥
ರಾಜನೇ, ವಿದುರನ ಸನ್ನಿಧಿಯಲ್ಲಿ ನಾವು ನಿನಗೆ ಹೀಗೆ ಮಾತನಾಡಲು ಸಾಧ್ಯವಿಲ್ಲ. ಏಕಾಂತದಲ್ಲಿದ್ದೇವೆಂದು ಈಗ ಮಾತನಾಡುತ್ತಿದ್ದೇವೆ. ನೀನು ಇದೇನು ಮಾಡಲು ಬಯಸಿರುವೆ?
ಸಪತ್ನವೃದ್ಧಿಂ ತಾಂ ತ್ವದ್ಯ ಮನ್ಯಸೇ ವೃದ್ಧಿಮಾತ್ಮನಃ |
ಅಭಿಷ್ಟೌಷಿ ಚ ಯತ್ ಕ್ಷತ್ತುಃ ಸಮೀಪೇ ದ್ವಿಪದಾಂವರ ॥23॥
ಮನುಷ್ಯಶ್ರೇಷ್ಠನೇ, ಈ ದಿನ ನೀನು ಶತ್ರುಗಳ ವೃದ್ಧಿಯನ್ನು ನಿನ್ನ ವೃದ್ಧಿ ಎಂದು ತಿಳಿದು ವಿದುರನ ಎದುರಿನಲ್ಲಿ ಹೊಗಳುತ್ತಿದ್ದೀಯೆ.
ಅನ್ಯಸ್ಮಿನ್ ನೃಪ ಕರ್ತವ್ಯೇ ತ್ವಮನ್ಯತ್ ಕುರುಷೇಽನಘ |

ತೇಷಾಂ ಬಲವಿಘಾತೋ ಹಿ ಕರ್ತವ್ಯಸ್ತಾತ ನಿತ್ಯಶಃ ॥24॥
ತೇ ವಯಂ ಪ್ರಾಪ್ತಕಾಲಸ್ಯ ಚಿಕಿತ್ಸಾಂ ಮಂತ್ರಯಾಮಹೇ |
ಯಥಾ ನೋ ನ ಗ್ರಸೇಯುಸ್ತೇ ಸಪುತ್ರಗಣಬಾಂಧವಾನ್ ॥25॥
ಅನಘನಾದ ರಾಜನೇ, ನಮ್ಮ ಕರ್ತವ್ಯವು ಬೇರೆಯೇ ಇರುವಾಗ ನೀನು ಬೇರೆಯದನ್ನೇ ಮಾಡುತ್ತಿರುವೆ. ತಂದೆಯೇ, ನಾವು ಯಾವಾಗಲೂ ಪಾಂಡವರ ಬಲವಿಘಾತವನ್ನೇ ಮಾಡಬೇಕಷ್ಟೆ. ಅಂತಹ ನಾವು ಈಗ ಮಾಡಬೇಕಾಗಿ ಬಂದಿರುವ ಕಾರ್ಯದ ಉಪಾಯವನ್ನು ಚಿಂತಿಸುತ್ತಿದ್ದೇವೆ. ನಮ್ಮ ಮಕ್ಕಳು ಮತ್ತು ಬಂಧುಗಳ ಜೊತೆಯಲ್ಲಿ ಅವರು ನಮ್ಮನ್ನು ನುಂಗದಿರುವಂತೆ ಮಾಡಬೇಕು.
ವೈಶಂಪಾಯನಃ
ದುರ್ಯೋಧನೇನೈವಮುಕ್ತಃ ಕರ್ಣೇನ ಚ ವಿಶಾಂಪತೇ |
ಪುತ್ರಂ ಚ ಸೂತಪುತ್ರಂ ಚ ಧೃತರಾಷ್ಟ್ರೋಽಬ್ರವೀದಿದಮ್ ॥26॥
ಜನಮೇಜಯರಾಜನೇ, ದುರ್ಯೋಧನನಿಂದಲೂ, ಕರ್ಣನಿಂದಲೂ ಹೀಗೆ ಹೇಳಲ್ಪಟ್ಟ ಧೃತರಾಷ್ಟ್ರನು ಅವರಿಬ್ಬರನ್ನು ಕುರಿತು ಈ ಮಾತನ್ನು ಆಡಿದನು.
ಅಹಮಪ್ಯೇವಮೇವೈತಚ್ಚಿಂತಯಾಮಿ ಯಥಾ ಯುವಾಮ್ |
ವಿವೃತುಂ ನಾಹಮಿಚ್ಛಾಮಿ ತ್ವಾಕಾರಂ ವಿದುರಂ ಪ್ರತಿ ॥27॥
ನಾನೂ ಸಹ ನೀವಿಬ್ಬರೂ ಯೋಚಿಸಿದಂತೆಯೇ ಯೋಚಿಸುತ್ತಿದ್ದೇನೆ. ಆದರೆ, ವಿದುರನ ಎದುರಿಗೆ ಈ ಅಭಿಪ್ರಾಯವನ್ನು ಬಿಚ್ಚಿ ಹೇಳಲು ಬಯಸುವುದಿಲ್ಲ.
ಅತಸ್ತೇಷಾಂ ಗುಣಾನೇವ ಕೀರ್ತಯಾಮಿ ವಿಶೇಷತಃ |
ನ ಚ ಬುಧ್ಯೇತ ವಿದುರೋ ಮಮಾಭಿಪ್ರಾಯಮಿಂಗಿತೈಃ ॥28॥
ಆದ್ದರಿಂದ ನನ್ನ ಮನಸ್ಸಿನ ಅಭಿಪ್ರಾಯವನ್ನು ಇಂಗಿತಗಳಿಂದ ವಿದುರನು ತಿಳಿಯದಿರಲಿ ಎಂಬ ಕಾರಣದಿಂದ ವಿಶೇಷವಾಗಿ ಪಾಂಡವರ ಗುಣಗಳನ್ನೇ ವರ್ಣಿಸುತ್ತೇನೆ.
ಯಚ್ಚ ವೈ ಮನ್ಯಸೇ ಪ್ರಾಪ್ತಂ ತದ್ ಬ್ರೂಹಿ ತ್ವಂ ಸುಯೋಧನ |
ರಾಧೇಯ ಮನ್ಯಸೇ ತ್ವಂ ಚ ಯತ್ ಪ್ರಾಪ್ತಂ ತದ್ ಬ್ರವೀಹಿ ಮೇ ॥
ಸುಯೋಧನನೇ, ಈಗ ಏನು ಮಾಡಬೇಕೆಂದು ಬಯಸುತ್ತೀಯೋ ಅದನ್ನು ಹೇಳು. ರಾಧೇಯನೇ, ಈಗ ಏನು ಮಾಡುವುದನ್ನು ಯೋಗ್ಯವೆಂದು ತಿಳಿಯುತ್ತೀಯೋ ಅದನ್ನು ನನಗೆ ಹೇಳು.
ದುರ್ಯೋಧನಃ
ಪ್ರಚ್ಛನ್ನಂ ಕುಶಲೈರ್ವಿಪ್ರೈಃ ಸುತುಷ್ಟೈರಾಪ್ತಕಾರಿಭಿಃ |
ಕುಂತೀಪುತ್ರಾನ್ ಭೇದಯಾಮೋ ಮಾದ್ರೀಪುತ್ರೌ ಚ ತಾವುಭೌ ॥30॥
ಪ್ರಚ್ಛನ್ನರಾದ, ಆಪ್ತಕಾರಿಗಳಾದ, ಸುತುಷ್ಟರಾದ ವಿಪ್ರರಿಂದ ಕುಂತೀಪುತ್ರರಿಗೂ ಮತ್ತು ಆ ಇಬ್ಬರು ಮಾದ್ರೀಪುತ್ರರಿಗೂ ವಿರೋಧವನ್ನು ಉಂಟುಮಾಡೋಣ.
ಅಥವಾ ದ್ರುಪದೋ ರಾಜಾ ಮಹದ್ಭಿರ್ಧನಸಂಚಯೈಃ |
ಪುತ್ರಾಶ್ಚಾಸ್ಯ ಪ್ರಲೋಭ್ಯಂತಾಮಮಾತ್ಯಾಶ್ಚೈವ ಸರ್ವಶಃ |
ಪರಿತ್ಯಜೇಯೂ ರಾಜಾನಂ ಕುಂತೀಪುತ್ರಂ ಯುಧಿಷ್ಠಿರಮ್ ॥31॥
ಅಥವಾ ದ್ರುಪದನನ್ನೂ, ಅವನ ಪುತ್ರರನ್ನೂ, ಅವನ ಅಮಾತ್ಯರನ್ನೂ, ದೊಡ್ಡಧನರಾಶಿಗಳಿಂದ ಪ್ರಲೋಭನೆಗೊಳಿಸಿ ಕುಂತೀಪುತ್ರನಾದ
ಯುಧಿಷ್ಠಿರನನ್ನು ಪರಿತ್ಯಾಗ ಮಾಡುವಂತೆ ಮಾಡೋಣ.
ಅಥ ತತ್ರೈವ ವಾ ತೇಷಾಂ ನಿವಾಸಂ ರೋಚಯಂತು ತೇ |
ಇಹೈಷಾಂ ದೋಷವದ್ ವಾಸಂ ಕರ್ಣಯಂತು ಪೃಥಕ್ಪೃಥಕ್ |
ತೇ ಭಿದ್ಯಮಾನಾಸ್ತತ್ರೈವ ಮನಃ ಕುರ್ವಂತು ಪಾಂಡವಾಃ ॥32॥
ಅಥವಾ ಪಾಂಡವರು ದ್ರುಪದಪಟ್ಟಣದಲ್ಲಿಯೇ ವಾಸವನ್ನು ಮಾಡಲಿ. ಇಲ್ಲಿಗೆ ಬಂದರೆ, ಅವರ ವಾಸವು ದುಷ್ಟವಾಗುತ್ತದೆ ಎಂಬ ವಾರ್ತೆಯನ್ನು ಅವರು ಬೇರೆ ಬೇರೆಯಾಗಿ ಕೇಳುವಂತೆ ಮಾಡೋಣ. ಅವರು ಹೀಗೆ ಭೇದವನ್ನು ಹೊಂದಿ ಅಲ್ಲಿಯೇ ವಾಸಮಾಡಲು ಮನಸ್ಸು ಮಾಡಲಿ.
ಅಥವಾಽಕುಶಲಾನ್ ಕೇಚಿದುಪಾಯೈರ್ಬಹುಭಿರ್ನರಾಃ |
ಇತರೇತರತಃ ಪಾರ್ಥಾನ್ ಭೇದಯಂತ್ವನುರಾಗತಃ ॥33॥
ಅಥವಾ ಅಕುಶಲರಾದ ಪಾಂಡವರನ್ನು, ಬುದ್ಧಿವಂತರಾದ ಅನೇಕ ಜನರು ಅವರ ಅನುರಾಗವನ್ನು ಸಂಪಾದನೆ ಮಾಡಿ ಅವರಲ್ಲಿ ಪರಸ್ಪರವಾಗಿ ಭೇದವನ್ನುಂಟು ಮಾಡಲಿ.
ವ್ಯುತ್ಥಾಪಯಂತು ತಾಂ ಕೃಷ್ಣಾಂ ಬಹುತ್ವಾತ್ ಸಂಕರಂ ಹಿ ತತ್ |
ಅಥವಾ ಪಾಂಡವಾಂಸ್ತಸ್ಯಾ ಭೇದಯಂತು ತತಶ್ಚ ತಾಮ್ ॥34॥
ಅಥವಾ ಆ ದ್ರೌಪದಿಯನ್ನು ಪಾಂಡವರಿಗೆ ವಿರುದ್ಧವಾಗಿ ಎತ್ತಿಕಟ್ಟಲಿ. ಅನೇಕ ಪತಿಗಳಿರುವುದು ಸಂಕರವೇ ಸರಿ. ಅಥವಾ ಪಾಂಡವರಿಗೆ ದ್ರೌಪದಿಯ ವಿರೋಧವುಂಟಾಗುವಂತೆ ಮಾಡಲಿ. ಮೊದಲು ಪಾಂಡವರನ್ನು ಭೇದಿಸಲಿ. ಅನಂತರ ದ್ರೌಪದಿಯನ್ನು ಭೇದಿಸಲಿ.

ಭೀಮಸೇನಸ್ಯ ವಾ ರಾಜನ್ನುಪಾಯಕುಶಲೈರ್ನರೈಃ |
ಮೃತ್ಯುರ್ವಿಧೀಯತಾಂ ಛನ್ನೈಃ ಸ ಹಿ ತೇಷಾಂ ಬಲಾಧಿಕಃ ॥35॥
ರಾಜನ್, ಉಪಾಯಕುಶಲರಾದ ಜನರು ಪ್ರಚ್ಛನ್ನರಾಗಿ ಭೀಮಸೇನನ ವಧೆಯನ್ನು ಮಾಡಲಿ. ಅವನೇ ಅವರಲ್ಲಿ ಬಲಾಢ್ಯನಾದವನು.
ತಸ್ಮಿಂಸ್ತು ನಿಹತೇ ರಾಜನ್ ಹತೋತ್ಸಾಹಾ ಹತೌಜಸಃ |
ಯತಿಷ್ಯಂತೇ ನ ರಾಜ್ಯಾಯ ಸ ಹಿ ತೇಷಾಂ ವ್ಯಪಾಶ್ರಯಃ ॥36॥
ರಾಜನ್, ಭೀಮಸೇನನು ಕೊಲ್ಲಲ್ಪಟ್ಟರೆ, ಉಳಿದವರು ತಮ್ಮ ಉತ್ಸಾಹವನ್ನು ಮತ್ತು ಬಲವನ್ನು ಕಳೆದುಕೊಂಡು ರಾಜ್ಯಕ್ಕಾಗಿ ಪ್ರಯತ್ನಪಡುವುದಿಲ್ಲ. ಅವನೇ ಅವರಿಗೆ ಆಶ್ರಯನಾಗಿದ್ದಾನೆ.
ಅಜೇಯೋ ಹ್ಯರ್ಜುನಃ ಸಂಖ್ಯೇ ಪೃಷ್ಠಗೋಪೇ ವೃಕೋದರೇ |
ತಮೃತೇ ಫಲ್ಗುನೋ ಯುದ್ಧೇ ರಾಧೇಯಸ್ಯ ನ ಪಾದಭಾಕ್ ॥37॥
ಯುದ್ಧದಲ್ಲಿ ಭೀಮಸೇನನು ಅರ್ಜುನನ ಹಿಂದೆ ನಿಂತು ರಕ್ಷಕನಾಗಿರುವವರೆಗೆ, ಅರ್ಜುನನು ಅಜೇಯನಾಗಿರುತ್ತಾನೆ. ಭೀಮಸೇನನು ಇಲ್ಲದಿದ್ದರೆ, ಅರ್ಜುನನಿಗೆ ಯುದ್ಧದಲ್ಲಿ ಕರ್ಣನ ಶಕ್ತಿಯ ನಾಲ್ಕನೇ ಒಂದು ಭಾಗವೂ ಇಲ್ಲ
ತೇ ಜಾನಂತೋ ಹಿ ದೌರ್ಬಲ್ಯಂ ಭೀಮಸೇನೇ ಹತೇ ಸತಿ |
ಅಸ್ಮಾನ್ ಬಲವತೋ ಮತ್ವಾ ನ ಶಿಷ್ಯಂತ್ಯಬಲೀಯಸಃ ॥38॥
ಭೀಮಸೇನನು ಹತನಾದರೆ, ಅವರು ತಮ್ಮ ದೌರ್ಬಲ್ಯವನ್ನು ತಿಳಿದು, ನಮ್ಮನ್ನು ಬಲಿಷ್ಠರು ಎಂದು ತಿಳಿದು, ಆ ಕಾರಣದಿಂದ ದುರ್ಬಲರಾದ ಅವರು ಉಳಿಯುವುದೇ ಇಲ್ಲ.
ಇಹಾಗತೇಷು ಪಾರ್ಥೇಷು ನಿದೇಶವಶವರ್ತಿಷು |
ಪ್ರವರ್ತಿಷ್ಯಾಮಹೇ ರಾಜ್ಯಂ ಯಥಾಶ್ರದ್ಧಂ ಯಥಾಸುಖಮ್ ॥39॥
ಅಥವಾ (ಭೀಮಸೇನನು ಮೃತನಾದ ಮೇಲೆ) ಪಾಂಡವರು ಇಲ್ಲಿಗೆ ಬಂದರೆ, ನನ್ನ ಆಜ್ಞಾಧಾರಕರಾಗಿ, ನಮ್ಮ ವಶವರ್ತಿಗಳಾಗಿರುವ ಕಾರಣದಿಂದ ನಾವು ನಮಗೆ ಬೇಕಾದಂತೆ ಸುಖವಾಗಿ ರಾಜ್ಯವನ್ನು ಆಳುವೆವು.
ದರ್ಪಂ ವಾವದತಾಂ ತೇಷಾಂ ಕೇಚಿದತ್ರ ಮನಸ್ವಿನಃ |
ದ್ರುಪದಸ್ಯಾತ್ಮಜಾ ರಾಜನ್ ತೇ ಭಿದ್ಯಂತೇ ತತಃ ಪರೈಃ ॥40॥
ಮೊದಲು ದರ್ಪದ ಮಾತುಗಳನ್ನು ಆಡುತ್ತಿದ್ದ ಧೈರ್ಯಶಾಲಿಗಳಾದ ಪಾಂಡವರು ಮತ್ತು ದ್ರೌಪದಿಯೂ ಸಹ ಇಲ್ಲಿಗೆ ಬಂದ ಮೇಲೆ ಶತ್ರುಗಳಿಂದ ಭೇದಿಸಲ್ಪಡುತ್ತಾರೆ.
ಅಥವಾ ದರ್ಶನೀಯಾಭಿಃ ಪ್ರಮದಾಭಿರ್ವಿಲೋಭ್ಯತಾಮ್ |
ಏಕೈಕಃ ಪಾಂಡುಪುತ್ರಾಣಾಂ ತತಃ ಕೃಷ್ಣಾ ವಿರುದ್ಧ್ಯತಾಮ್ ॥41॥
ಅಥವಾ ಸುಂದರಿಯರಾದ ಕನ್ಯೆಯರನ್ನು ಒಬ್ಬೊಬ್ಬ ಪಾಂಡವನಿಗೂ ಕಳುಹಿಸಿ ಅವರನ್ನು ಪ್ರಲೋಭಗೊಳಿಸಬೇಕು. ಆಗ ದ್ರೌಪದಿಯು ವಿರುದ್ಧಳಾಗುತ್ತಾಳೆ.
ಪ್ರೇಷ್ಯತಾಂ ವಾಽಪಿ ರಾಜೇಂದ್ರ ತೇಷಾಮಾಗಮನಾಯ ಹಿ |
ತೇ ಲೋಪ್ತ್ರಹಾರ್ಯೈಃ ಸಂಧಾಯ ವಧ್ಯಂತಾಮಾಪ್ತಕಾರಿಭಿಃ ॥42॥
ರಾಜೇಂದ್ರನೇ, ಅವರು ಇಲ್ಲಿಗೆ ಬರುವಂತೆ ಹೇಳಿಕಳುಹಿಸಿ, ಅವರು ಇಲ್ಲಿಗೆ ಬಂದಮೇಲೆ ನಮಗೆ ಆಪ್ತರಾದ ದರೋಡೆಕೋರರ ಜೊತೆಯಲ್ಲಿ ಸಂಧಾನವನ್ನು ಮಾಡಿಕೊಂಡು ಅವರಿಂದ ಅವರನ್ನು ಕೊಲ್ಲಿಸಬೇಕು.
ಏತೇಷಾಮಪ್ಯುಪಾಯಾನಾಂ ನಿರ್ದೋಷೋ ಯೋ ಮತಸ್ತವ |
ತಸ್ಯ ಪ್ರಯೋಗಮಾತಿಷ್ಠ ಪುರಾ ಕಾಲೋಽತಿವರ್ತತೇ ॥43॥
ಈ ಉಪಾಯಗಳಲ್ಲಿ ಯಾವ ಉಪಾಯವು ಶ್ರೇಷ್ಠವೆಂದು ನಿನಗೆ ತೋರುವುದೋ ಅದನ್ನು ಕಾಲವು ಮಿಂಚಿಹೋಗುವುದಕ್ಕಿಂತ ಮುಂಚೆ ಅನುಷ್ಠಾನಮಾಡು.
ಯಾವದ್ಧ್ಯಕೃತವಿಶ್ವಾಸಾ ದ್ರುಪದೇ ಪಾರ್ಥಿವರ್ಷಭೇ |
ತಾವದೇವ ಹಿ ಶಕ್ಯಾಸ್ತೇ ನ ಶಕ್ಯಾಸ್ತು ತತಃ ಪರಮ್ ॥44॥
ಎಲ್ಲಿಯವರೆಗೆ ಪಾಂಡವರಿಗೆ ರಾಜಶ್ರೇಷ್ಠನಾದ ದ್ರುಪದನಲ್ಲಿ ವಿಶ್ವಾಸವು ಆಳವಾಗಿ ಬೆಳೆದಿರುವುದಿಲ್ಲವೋ ಅಷ್ಟರೊಳಗೆ ಅವರನ್ನು ನಿರ್ಮೂಲನಗೊಳಿಸಬೇಕು. ಅನಂತರ ಅದು ಸಾಧ್ಯವಿಲ್ಲ.
ಸೈಷಾ ಮಮ ಮತೀ ರಾಜನ್ ಪಾಂಡವಾನ್ ಪ್ರತಿ ದೃಶ್ಯತೇ |
ಸಾಧ್ವೀ ವಾ ಯದಿ ವಾಽಸಾಧ್ವೀ ಕಿಂ ವಾ ರಾಧೇಯ ಮನ್ಯಸೇ ॥
ರಾಜನ್, ಪಾಂಡವರ ವಿಷಯದಲ್ಲಿ ನನ್ನ ಬುದ್ಧಿಯು ಈ ರೀತಿ ಇದೆ. ಕರ್ಣನೇ, ಇದು ಒಳ್ಳೆಯದೋ ಅಥವಾ ಕೆಟ್ಟದ್ದೋ, ನಿನ್ನ ಅಭಿಪ್ರಾಯವೇನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದ್ವ್ಯಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಎರಡನೆಯ ಅಧ್ಯಾಯ ಮುಗಿಯಿತು.
*****

ಇನ್ನೂರ ಮೂರನೆಯ ಅಧ್ಯಾಯ

(ಕರ್ಣನ ಸಲಹೆ, ವಿಕ್ರಮವನ್ನು ಮಾಡಲು ಉಪದೇಶ, ಧೃತರಾಷ್ಟ್ರನ ಸಂದಿಗ್ದ ಮನಃಸ್ಥಿತಿ)
ಕರ್ಣಃ
ದುರ್ಯೋಧನ ತವ ಪ್ರಜ್ಞಾ ನ ಸಮ್ಯಗಿತಿ ಮೇ ಮತಿಃ |
ನ ಹ್ಯುಪಾಯೇನ ಶಕ್ಯಾಸ್ತೇ ಪಾಂಡವಾಃ ಕುರುನಂದನ ॥1॥
ದುರ್ಯೋಧನನೇ, ನಿನ್ನ ಬುದ್ಧಿಯು ಸರಿಯಾಗಿಲ್ಲವೆಂದು ನನ್ನ ಅಭಿಪ್ರಾಯ. ಕುರುನಂದನನೇ, ಪಾಂಡವರನ್ನು ಉಪಾಯದಿಂದ ಬಗ್ಗಿಸಲು ಸಾಧ್ಯವಿಲ್ಲ.
ಪೂರ್ವಮೇವ ತು ತೇ ಸರ್ವೈರುಪಾಯೈರ್ಯತಿತಾಸ್ತ್ವಯಾ |
ನಿಗೃಹೀತುಂ ತ್ವಯಾ ವೀರಾಃ ಶಕಿತಾ ನ ತು ಭಾರತ ॥2॥
ಭಾರತನೇ, ನೀನು ಮೊದಲೇ ಎಲ್ಲಾ ಉಪಾಯಗಳನ್ನು ಮಾಡಿ ಪ್ರಯತ್ನಪಟ್ಟಿದ್ದೀಯೆ. ಆದರೆ, ಅವರನ್ನು ನಿಗ್ರಹಿಸಲು ಸಾಧ್ಯವಾಗಲಿಲ್ಲ.
ಇಹೈವ ವರ್ತಮಾನಾಸ್ತೇ ಸಮೀಪೇ ತವ ಪಾರ್ಥಿವ |
ಅಜಾತಪಕ್ಷಾಃ ಶಿಶವೋ ನ ಶಕ್ಯಾಸ್ತವ ಬಾಧಿತುಮ್ ॥3॥
ಪಾರ್ಥಿವನೇ, ಆಗ ಅವರು ನಿನ್ನ ಸಮೀಪದಲ್ಲಿ ಇಲ್ಲಿಯೇ ಪಕ್ಷಗಳು ಮೂಡದ ಶಿಶುಗಳಾಗಿದ್ದರು. ಆದರೂ ನೀನು ಅವರನ್ನು ಬಾಧಿಸಲು ಸಾಧ್ಯವಾಗಲಿಲ್ಲ.
ಜಾತಪಕ್ಷಾ ವಿದೇಶಸ್ಥಾ ವಿವೃದ್ಧಾಃ ಸರ್ವ ಏವ ತೇ |
ನೋಪಾಯಸಾಧ್ಯಾಃ ಕೌಂತೇಯಾ ಮಮೈಷಾ ಮತಿರಚ್ಯುತಾ ॥4॥
ಈಗ ಅವರು ಜಾತಪಕ್ಷರಾಗಿ (ರೆಕ್ಕೆಗಳನ್ನು ಪಡೆದ ಹಕ್ಕಿಗಳಂತೆ) ವಿದೇಶದಲ್ಲಿ ಎಲ್ಲರೂ ಅಭಿವೃದ್ಧರಾಗಿದ್ದಾರೆ. ಕುಂತಿಯ ಪುತ್ರರಾದ ಪಾಂಡವರನ್ನು ಯಾವುದೇ ಉಪಾಯದಿಂದ ಗೆಲ್ಲಲು ಸಾಧ್ಯವಿಲ್ಲವೆಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ನ ಚ ತೇ ವ್ಯಸನೈಃ ಶಕ್ಯಾ ಯೋಕ್ತುಂ ದೃಷ್ಟಗುಣಾ ಹಿ ತೇ |
ಶಕ್ತಾಃ ಖಲ್ವೀಪ್ಸವಶ್ಚೈವ ಪಿತೃಪೈತಾಮಹಂ ಪದಮ್ ॥5॥
ಅವರ ಗುಣಗಳನ್ನು ಎಲ್ಲರೂ ನೋಡಿದ್ದಾರೆ. ಅವರಿಗೆ ಹೆಣ್ಣು ಮುಂತಾದ ಯಾವ ಚಟಗಳನ್ನೂ ಹಿಡಿಸಲು ಸಾಧ್ಯವಿಲ್ಲ. ಪಿತೃಪಿತಾಮಹರಿಂದ ರಾಜ್ಯವನ್ನು ಪಡೆಯಲು ಅವರು ಬಯಸುತ್ತಾರೆ ಮತ್ತು ಪಡೆಯಲು ಶಕ್ತರಾಗಿಯೂ ಇದ್ದಾರೆ.
ಪರಸ್ಪರೇಭ್ಯೋ ಭೇದಶ್ಚ ನಾಧಾತುಂ ತತ್ರ ಶಕ್ಯತೇ |
ಏಕಸ್ಯಾಂ ಹಿ ತಥಾ ಪತ್ನ್ಯಾಂ ನ ಭಿದ್ಯಂತೇ ಕಥಂಚನ ॥6॥
ಪಾಂಡವರಲ್ಲಿ ಪರಸ್ಪರವಾಗಿ ಭೇದವನ್ನುಂಟು ಮಾಡಲು ಸಾಧ್ಯವಿಲ್ಲ. ಹಾಗೆಯೇ, ಒಬ್ಬಳೇ ಪತ್ನಿಯ ವಿಷಯದಲ್ಲಿಯೂ ಕೂಡ ಅವರು ಪರಸ್ಪರ ವಿರೋಧವನ್ನು ಮಾಡಿಕೊಳ್ಳುವುದಿಲ್ಲ.
ನ ಚಾಪಿ ಕೃಷ್ಣಾ ಶಕ್ಯೇತ ತೇಭ್ಯೋ ಭೇದಯಿತುಂ ಪರೈಃ |
ಪರಿದ್ಯೂನಾನ್ ವೃತವತೀ ಕಿಮುತಾದ್ಯ ಪ್ರಜಾವೃತಃ ॥7॥
ಅಥವಾ ದ್ರೌಪದಿಯನ್ನೇ ಪಾಂಡವರಿಂದ ಭೇದಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಏನೂ ಇಲ್ಲದ ದರಿದ್ರರನ್ನು ಅವಳು ವರಿಸಿದಳು. ಈ ದಿನ ಇಷ್ಟು ಪ್ರಜೆಗಳ ಅನುರಾಗವಿರುವಾಗ (ಅವಳ ನಿಷ್ಠೆಯ ಬಗ್ಗೆ ಹೇಳುವುದೇನಿದೆ).
ಈಪ್ಸಿತಶ್ಚ ಗುಣಃ ಸ್ತ್ರೀಣಾಮೇಕಸ್ಯಾ ಬಹುಭರ್ತೃತಾ |
ತಂ ಚ ಪ್ರಾಪ್ತವತೀ ಕೃಷ್ಣಾ ಸಾ ನ ಭೇದಯಿತುಂ ಕ್ಷಮಾ ॥8॥
ಸ್ತ್ರೀಯರಿಗೆ ಅನೇಕ ಪತಿಗಳಿದ್ದರೆ, ಅದು ಇಷ್ಟವಾದ ಗುಣವೇ ಆಗಿರುತ್ತದೆ. ಕೃಷ್ಣೆಯು ಅದನ್ನೂ ಪಡೆದಿದ್ದಾಳೆ. ಆದ್ದರಿಂದ ಅವಳನ್ನು ಭೇದಿಸಲು ಸಾಧ್ಯವಿಲ್ಲ.
ಆರ್ಯವೃತ್ತಶ್ಚ ಪಾಂಚಾಲ್ಯಃ ಸ ಚ ರಾಜಾ ದೃಢವ್ರತಃ |
ನ ಸಂತ್ಯಕ್ಷ್ಯತಿ ಕೌಂತೇಯಾನ್ ರಾಜ್ಯದಾನೈರಪಿ ಧ್ರುವಮ್ ॥9॥
ಪಾಂಚಾಲರಾಜನು ಶ್ರೇಷ್ಠಗುಣವನ್ನು ಹೊಂದಿದವನು ಮತ್ತು ದೃಢವ್ರತನಾಗಿರುವವನು. ಅವನಿಗೆ ರಾಜ್ಯವನ್ನೇ ದಾನಮಾಡಿದರೂ ಅವನು ಪಾಂಡವರನ್ನು ಖಂಡಿತವಾಗಿ ಬಿಡುವುದಿಲ್ಲ.
ತಥಾಽಸ್ಯ ಪುತ್ರೋ ಗುಣವಾನನುರಕ್ತಶ್ಚ ಪಾಂಡವಾನ್ |
ತಸ್ಮಾನ್ನೋಪಾಯಸಾಧ್ಯಾಂಸ್ತಾನಹಂ ಮನ್ಯೇ ಕಥಂಚನ ॥10॥
ಅವನ ಮಗನಾದ ಈ ಧೃಷ್ಟದ್ಯುಮ್ನನು ಗುಣವಂತನೂ, ಪಾಂಡವರಲ್ಲಿ ಪ್ರೀತಿಯುಳ್ಳವನೂ ಆಗಿದ್ದಾನೆ. ಆದ್ದರಿಂದ ಪಾಂಡವರನ್ನು ಯಾವ ಉಪಾಯದಿಂದಲೂ ಗೆಲ್ಲಲು ಸಾಧ್ಯವಿಲ್ಲವೆಂದು ನಾನು ಭಾವಿಸುತ್ತೇನೆ.
ಇದಮದ್ಯ ಕ್ಷಮಂ ಕರ್ತುಮಸ್ಮಾಕಂ ಭರತರ್ಷಭ |
ಯಾವನ್ನ ಕೃತಮೂಲಾಶ್ಚ ಪಾಂಡವೇಯಾ ವಿಶಾಂಪತೇ |
ತಾವತ್ ಪ್ರಹರಣೀಯಾಸ್ತೇ ರೋಚತಾಂ ತತ್ರ ವಿಕ್ರಮಃ ॥11॥
ಭರತರ್ಷಭನೇ, ಈ ದಿನ ಈ ಕಾರ್ಯವನ್ನು ಮಾಡಲು ಸಾಧ್ಯ. ರಾಜನೇ, ಪಾಂಡವೇಯರ ಮೂಲವು ದೃಢವಾಗುವುದಕ್ಕಿಂತ ಮುಂಚೆಯೇ ಯುದ್ಧದಲ್ಲಿ ಅವರನ್ನು ಸೋಲಿಸಬೇಕು. ಅದಕ್ಕೆ ವಿಕ್ರಮವೊಂದೇ ದಾರಿ. ಅದನ್ನು ನೀನು ಬಯಸು.
ಅಸ್ಮತ್ಪಕ್ಷೋ ಮಹಾನದ್ಯ ಯಾವತ್ ಪಾಂಚಾಲಕೋ ಲಘುಃ |
ತಾವತ್ ಪ್ರಹರಣಂ ತೇಷಾಂ ಕ್ರಿಯತಾಮಿತಿ ರೋಚಯೇ ॥12॥
ಎಷ್ಟರವರೆಗೆ ನಮ್ಮ ಪಕ್ಷವು ದೊಡ್ಡದಾಗಿ ದ್ರುಪದನ ಪಕ್ಷವು ಸಣ್ಣದಾಗಿರುತ್ತದೆಯೋ ಅಷ್ಟರಲ್ಲಿಯೇ ಪಾಂಡವರ ಮೇಲೆ ಪ್ರಹಾರ

ಮಾಡಬೇಕೆಂದು ನಾನು ಇಷ್ಟಪಡುತ್ತೇನೆ.
ಬಾಹನಾನಿ ಪ್ರಭೂತಾನಿ ಮಿತ್ರಾಣಿ ಬಹುಳಾನಿ ಚ |
ಯಾವನ್ನ ತೇಷಾಂ ಗಾಂಧಾರೇ ತಾವದೇವಾಶು ವಿಕ್ರಮ ||13||
ಗಾಂಧಾರೀಪುತ್ರನಾದ ದುರ್ಯೋಧನನೇ, ಅವರ ವಾಹನಗಳು ಅಭಿವೃದ್ಧಿಯನ್ನು ಹೊಂದುವುದಕ್ಕಿಂತ ಮುಂಚೆಯೇ, ಅವರ ಮಿತ್ರರು ಬಹುಸಂಖ್ಯೆಯಲ್ಲಿ ಬೆಳೆಯುವುದಕ್ಕಿಂತ ಮುಂಚೆಯೇ ಬೇಗ ವಿಕ್ರಮವನ್ನು ಮಾಡು.
ಯಾವಚ್ಚ ರಾಜಾ ಪಾಂಚಾಲ್ಯೋ ನೋದ್ಯಮೇ ಕುರುತೇ ಮನಃ |
ಕುಂತೀಪುತ್ರೈರ್ಮಹಾವೀರ್ಯೈಸ್ತಾವದೇವಾಶು ವಿಕ್ರಮ ||14||
ಎಲ್ಲಿಯವರೆಗೆ ಪಾಂಚಾಲರಾಜನು ಮಹಾವೀರ್ಯರಾದ ಕುಂತೀಪುತ್ರರ ಜೊತೆಯಲ್ಲಿ ನಮ್ಮ ಜೊತೆಯಲ್ಲಿ ಯುದ್ಧಮಾಡಲು ಆಲೋಚಿಸುವುದಿಲ್ಲವೋ ಅಷ್ಟರೊಳಗೆ ನೀನೇ ಯುದ್ಧದ ಪ್ರಯತ್ನವನ್ನು ಮಾಡು.
ಸದಾ ಚ ವೈರೀ ದ್ರುಪದಃ ಸತತಂ ನಿಕೃತಸ್ತ್ವಯಾ |
ಯಾವನ್ನ ಬಾಧತೇ ಮಿತ್ರೈ ರೋಚತಾಂ ತತ್ರ ವಿಕ್ರಮಃ ||15||
ದ್ರುಪದನು ಯಾವಾಗಲೂ ನಿನ್ನ ವೈರಿ. ನಿನ್ನಿಂದ ಸತತವಾಗಿ ವಂಚನೆಗೆ ಒಳಗಾಗಿದ್ದಾನೆ. ಅವನು ಮಿತ್ರರ ಜೊತೆಯಲ್ಲಿ ಬಂದು ನಿನ್ನನ್ನು ಬಾಧಿಸುವುದಕ್ಕಿಂತ ಮುಂಚೆಯೇ ನೀನೇ ಯುದ್ಧದ ಪ್ರಯತ್ನವನ್ನು ಮಾಡು.
ಯಾವನ್ನಾಯಾತಿ ವಾರ್ಷ್ಣೇಯಃ ಕರ್ಷನ್ ಯಾದವವಾಹಿನೀಮ್ |
ರಾಜ್ಯಾರ್ಥೇ ಪಾಂಡವೇಯಾನಾಂ ತಾವಾದೇವಾಶು ವಿಕ್ರಮ ||16||
ಎಲ್ಲಿಯವರೆಗೆ ಕೃಷ್ಣನು ಯಾದವಸೈನ್ಯವನ್ನು ಎಳೆದುಕೊಂಡು ಪಾಂಡವರಿಗೆ ರಾಜ್ಯವನ್ನು ಕೊಡಿಸಲು ಬರುವುದಿಲ್ಲವೋ ಅಷ್ಟರೊಳಗೆ ನೀನೇ ಯುದ್ಧದ ಪ್ರಯತ್ನವನ್ನು ಮಾಡು.
ವಸೂನಿ ವಿವಿಧಾನ್ ಭೋಗಾನ್ ರಾಜ್ಯಮೇವ ಚ ಕೇವಲಮ್ |
ನಾಸಾಧ್ಯಮಸ್ತಿ ಕೃಷ್ಣಸ್ಯ ಪಾಂಡವಾರ್ಥೇ ಮಹೀಪತೇ ||17||
ರಾಜನೇ, ಪಾಂಡವರಿಗೆ ಹಿತವನ್ನು ಮಾಡಲು ಕೃಷ್ಣನಿಗೆ ಧನವೇ ಆಗಲಿ, ವಿವಿಧಭೋಗಗಳೇ ಆಗಲಿ, ರಾಜ್ಯವೇ ಆಗಲಿ, ಯಾವುದೂ (ಯಾವುದನ್ನು ತೊರೆಯುವುದೂ) ಅಸಾಧ್ಯವಲ್ಲ.
ವಿಕ್ರಮೇಣ ಮಹೀ ಪ್ರಾಪ್ತಾ ಭರತೇನ ಮಹಾತ್ಮನಾ |
ವಿಕ್ರಮೇಣೈವ ಲೋಕಾಂಸ್ತ್ರೀನ್ ಪ್ರಾಪ್ತವಾನ್ ಪಾಕಶಾಸನಃ ||18||
ಹಿಂದೆ ಮಹಾನುಭಾವನಾದ ಭರತನು ವಿಕ್ರಮದಿಂದಲೇ ಭೂಮಿಯನ್ನು ಸಂಪಾದಿಸಿದನು. ಪಾಕಶಾಸನನಾದ ಇಂದ್ರನು ವಿಕ್ರಮದಿಂದಲೇ ಮೂರುಲೋಕಗಳನ್ನೂ ಸಂಪಾದಿಸಿದನು.
ವಿಕ್ರಮಂ ಚ ಪ್ರಶಂಸಂತಿ ಕ್ಷತ್ರಿಯಸ್ಯ ವಿಶಾಂಪತೇ |
ಸ್ವಕೋ ಹಿ ಧರ್ಮಃ ಶೂರಾಣಾಂ ವಿಕ್ರಮಃ ಪಾರ್ಥಿವರ್ಷಭ ||19||
ರಾಜನೇ, ಕ್ಷತ್ರಿಯರಿಗೆ ವಿಕ್ರಮವೇ ಶ್ರೇಷ್ಠವೆಂದು ಹೊಗಳುತ್ತಾರೆ. ಪಾರ್ಥಿವಶ್ರೇಷ್ಠನೇ, ಶೂರರಿಗೆ ನಿಜವಾದ ಧರ್ಮ ಎಂದರೆ ವಿಕ್ರಮವೇ.
ತೇ ಬಲೇನ ವಯಂ ರಾಜನ್ ಮಹತಾ ಚತುರಂಗಿಣಾ |
ಪ್ರಮಥ್ಯ ದ್ರುಪದಂ ಶೀಘ್ರಮಾನಯಾಮೇಹ ಪಾಂಡವಾನ್ ||20||
ರಾಜನೇ, ಅಂತಹ ನಾವು ನಮ್ಮ ಚತುರಂಗಬಲದಿಂದ ದ್ರುಪದನನ್ನು ಸೋಲಿಸಿ ಇಲ್ಲಿಗೆ ಶೀಘ್ರವಾಗಿ ಪಾಂಡವರನ್ನು ಕರೆದುಕೊಂಡು ಬರೋಣ.
ನ ಹಿ ಸಾಮ್ನಾ ನ ಭೇದೇನ ನಚ ದಾನೇನ ಪಾಂಡವಾಃ |
ಶಕ್ಯಾಃ ಸಾಧಯಿತುಂ ತಸ್ಮಾದ್ ವಿಕ್ರಮೇಣೈವ ತಾನ್ ಜಹಿ ||21||
ವಿಕ್ರಮೇಣೈವ ಜಿತ್ವೇಮಾಮಖಿಲಾಂ ಭುಂಕ್ಷ್ವ ಮೇದಿನೀಮ್ |
ನಾನ್ಯಮತ್ರ ಪ್ರಪಶ್ಯಾಮಿ ಕಾರ್ಯೋಪಾಯಂ ಜನಾಧಿಪ ||22||
ಪಾಂಡವರನ್ನು ಸಾಮದಿಂದಲಾಗಲಿ, ಭೇದದಿಂದಲಾಗಲಿ, ದಾನದಿಂದಲಾಗಲಿ ಗೆಲ್ಲಲು ಸಾಧ್ಯವಿಲ್ಲ. ಆದ್ದರಿಂದ ವಿಕ್ರಮದಿಂದಲೇ ಅವರನ್ನು ಗೆಲ್ಲು. ಈ ಭೂಮಿಯನ್ನು ವಿಕ್ರಮದಿಂದಲೇ ಗೆದ್ದು ಅನುಭವಿಸು. ರಾಜನೇ, ಈ ವಿಷಯದಲ್ಲಿ ಬೇರೆ ಯಾವ ಉಪಾಯವೂ ಕಾಣುತ್ತಿಲ್ಲ.
ವೈಶಂಪಾಯನಃ
ಶ್ರುತ್ವಾ ಸ ರಾಧೇಯವಚೋ ಧೃತರಾಷ್ಟ್ರಃ ಪ್ರತಾಪವಾನ್ |
ಅಭಿಪೂಜ್ಯ ತತಃ ಪಶ್ಚಾದಿದಂ ವಚನಮಬ್ರವೀತ್ ||23||
ಕರ್ಣನ ಮಾತುಗಳನ್ನು ಕೇಳಿ ಪ್ರತಾಪಶಾಲಿಯಾದ ಧೃತರಾಷ್ಟ್ರನು ಅವನನ್ನು ಸಮ್ಮಾನಿಸಿ ಅನಂತರ ಈ ಮಾತನ್ನಾಡಿದನು.
ಉಪಪನ್ನಂ ಮಹಾಪ್ರಾಜ್ಞೇ ಕೃತಾಸ್ತ್ರೇ ಸೂತನಂದನೇ |
ತ್ವಯಿ ವಿಕ್ರಮಸಂಪನ್ನಮಿದಂ ವಚನಮೀದೃಶಮ್ ||24||
ಮಹಾಪ್ರಾಜ್ಞನಾದ, ಅಸ್ತ್ರಜ್ಞನಾದ, ಸೂತನಂದನನಾದ ನಿನ್ನಲ್ಲಿ ವಿಕ್ರಮಯುಕ್ತವಾದ ಇಂತಹ ಮಾತುಗಳು ಉಚಿತವಾಗಿಯೇ ಇವೆ.
ಭೂಯ ಏವ ತು ಭೀಷ್ಮಶ್ಚ ದ್ರೋಣೋ ವಿದುರ ಏವ ಚ |
ಯುವಾಂ ಚ ಕುರುತಾಂ ಬುದ್ಧಿಂ ಭವೇದ್ ಯಾವತ್ ಸುಖೋದಯಃ ||
ಆದರೆ, ಭೀಷ್ಮರ, ದ್ರೋಣರ ಮತ್ತು ವಿದುರನ ಜೊತೆಯಲ್ಲಿ ಆಲೋಚನೆಯನ್ನು ಮಾಡಿ, ನಮಗೆ ಯಾವುದರಿಂದ ಸುಖೋದಯವುಂಟಾಗುತ್ತದೆ ಎಂದು ನಿರ್ಧರಿಸಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ತ್ರ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಮೂರನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ನಾಲ್ಕನೆಯ ಅಧ್ಯಾಯ
(ಮಂತ್ರಿಗಳ ಎದುರಿನಲ್ಲಿ ದುರ್ಯೋಧನನಿಗೆ ಭೀಷ್ಮರ ಹಿತವಚನ, ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಲು ನಿರ್ಬಂಧ)
ವೈಶಂಪಾಯನಃ
ತತ ಆನಾಯ್ಯ ತಾನ್ ಸರ್ವಾನ್ ಮಂತ್ರಿಣಃ ಸುಮಹಾಯಶಾಃ |
ಧೃತರಾಷ್ಟ್ರೋ ಮಹಾರಾಜ ಮಂತ್ರಯಾಮಾಸ ವೈ ತದಾ ॥1॥
ಜನಮೇಜಯ ಮಹಾರಾಜನೇ, ಅನಂತರ ಮಹಾಕೀರ್ತಿಶಾಲಿಯಾದ ಧೃತರಾಷ್ಟ್ರನು ಎಲ್ಲಾ ಮಂತ್ರಿಗಳನ್ನೂ ಕರೆಸಿ ಅವರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿದನು.
ಭೀಷ್ಮಃ
ನ ರೋಚತೇ ವಿಕ್ರಮಸ್ತು ಪಾಂಡುಪುತ್ರೈಃ ಕಥಂಚನ |
ಯಥೈವ ಧೃತರಾಷ್ಟ್ರೋ ಮೇ ತಥಾ ಪಾಂಡುರಸಂಶಯಮ್ ॥2॥
ಪಾಂಡುಪುತ್ರರ ಮೇಲೆ ವಿಕ್ರಮಿಸುವುದು ಯಾವರೀತಿಯಿಂದಲೂ ನನಗೆ ಇಷ್ಟವಿಲ್ಲ. ನನಗೆ ಧೃತರಾಷ್ಟ್ರನು ಹೇಗೋ, ಪಾಂಡವೂ ಹಾಗೆಯೇ. ಇದರಲ್ಲಿ ಸಂಶಯವಿಲ್ಲ.
ಗಾಂಧಾರ್ಯಾಶ್ಚ ಯಥಾ ಪುತ್ರಾಸ್ತಥಾ ಕುಂತೀಸುತಾ ಮತಾಃ |
ಯಥಾ ಚ ಮಮ ತೇ ರಕ್ಷ್ಯಾ ಧೃತರಾಷ್ಟ್ರ ತಥಾ ತವ ॥3॥
ಗಾಂಧಾರಿಯ ಮಕ್ಕಳು ಹೇಗೋ, ಕುಂತಿಯ ಮಕ್ಕಳೂ ಹಾಗೆಯೇ. ಧೃತರಾಷ್ಟ್ರನೇ, ನಾನು ಹೇಗೆ ಅವರನ್ನು ರಕ್ಷಣೆಮಾಡಬೇಕೋ, ಹಾಗೆಯೇ ನಿನ್ನ ಮಕ್ಕಳನ್ನೂ ರಕ್ಷಣೆಮಾಡಬೇಕು.
ಯಥಾ ಚ ಮಮ ರಾಜ್ಞಶ್ಚ ತಥಾ ದುರ್ಯೋಧನಸ್ಯ ತೇ |
ತಥಾ ಕುರೂಣಾಂ ಸರ್ವೇಷಾಮನ್ಯೇಷಾಮಪಿ ಪಾರ್ಥಿವ ॥4॥
ಇದು ನನಗೂ ಮತ್ತು ರಾಜನಾದ ಧೃತರಾಷ್ಟ್ರನಿಗೂ ಹೇಗೆ ಅನ್ವಯಿಸುತ್ತದೆಯೋ, ಹಾಗೆಯೇ, ದುರ್ಯೋಧನನಾದ ನಿನಗೂ ಮತ್ತು ಎಲ್ಲಾ ಕುರುಗಳಿಗೂ ಅನ್ವಯಿಸುತ್ತದೆ.
ಏವಂ ಗತೇ ವಿಗ್ರಹಂ ತೈರ್ನ ರೋಚೇ
ಸಂಧಾಯ ವೀರೈರ್ದೀಯತಾಮದ್ಯ ಭೂಮಿಃ |
ತೇಷಮಪೀದಂ ಪ್ರಪಿತಾಮಹಾನಾಂ
ರಾಜ್ಯಂ ಪಿತುಶ್ಚೈವ ಕುರೂತ್ತಮಾನಾಮ್ ॥5॥
ರಾಜನೇ, ಹೀಗಿರುವಾಗ ನಾನು ಯುದ್ಧವನ್ನು ಬಯಸುವುದಿಲ್ಲ. ಆ ವೀರರ ಜೊತೆಯಲ್ಲಿ ಸಂಧಾನ ಮಾಡಿ, ಅವರಿಗೆ ರಾಜ್ಯವನ್ನು ಕೊಡು. ಅವರಿಗೂ ಸಹ ಈ ರಾಜ್ಯವು ಕುರುಶ್ರೇಷ್ಠರಾದ ಪ್ರಪಿತಾಮಹರಿಂದಲೂ ಮತ್ತು ತಂದೆಯಾದ ಪಾಂಡುವಿನಿಂದಲೂ ಬಂದಿದೆಯಷ್ಟೆ.
ದುರ್ಯೋಧನ ಯಥಾ ರಾಜ್ಯಂ ತ್ವಮಿದಂ ತಾತ ಪಶ್ಯಸಿ
ಮಮ ಪೈತೃಕಮೇವೇತಿ ತಥಾ ತೇಷಾಮಪಿ ಪ್ರಭೋ ॥6॥
ಪ್ರೀತಿಪಾತ್ರನಾದ ದುರ್ಯೋಧನನೇ, ನೀನು ಹೇಗೆ ಈ ರಾಜ್ಯವು ನಿನ್ನ ತಂದೆಯಿಂದ ಬಂದುದೆಂದು ಭಾವಿಸುತ್ತೀಯೋ ಹಾಗೆಯೇ ಅವರಿಗೂ ತಂದೆಯಿಂದ ಬಂದ ರಾಜ್ಯವಷ್ಟೆ?
ಯದಿ ರಾಜ್ಯಂ ನ ತೇ ಪ್ರಾಪ್ತಾಃ ಪೂರ್ವಮೇವ ತಪಸ್ವಿನಃ |
ಕುತ ಏತತ್ ತವಾಪೀದಂ ಭಾರತಸ್ಯಾಪಿ ಕಸ್ಯಚಿತ್ ॥7॥
ತಪಸ್ವಿಗಳಾದ ಅವರು ನಿನಗಿಂತ ಮೊದಲೇ ರಾಜ್ಯದಲ್ಲಿ ಅಧಿಕಾರವನ್ನು ಹೊಂದದಿದ್ದರೆ, ನಿನಗಾದರೂ ಹೇಗೆ ಅಧಿಕಾರ? ಅಥವಾ ಭರತವಂಶದಲ್ಲಿ ಹುಟ್ಟಿದ ಇನ್ನೊಬ್ಬನಿಗಾದರೂ ಹೇಗೆ ಅಧಿಕಾರ?
ಅಥ ಧರ್ಮೇಣ ರಾಜ್ಯಂ ತ್ವಂ ಪ್ರಾಪ್ತವಾನಸಿ ಭಾರತ |
ತೇಽಪಿ ರಾಜ್ಯಮನುಪ್ರಾಪ್ತಾಃ ಪೂರ್ವಮೇವ ನ ಸಂಶಯಃ ॥8॥
ಭಾರತನೇ, ಅಥವಾ ನೀನು ನಾನು ಧರ್ಮದಿಂದ ಪಡೆದಿದ್ದೇನೆ ಎಂದು ಭಾವಿಸುವುದಾದರೆ, ಅವರೂ ಸಹ ನಿನಗಿಂತ ಮೊದಲೇ ಧರ್ಮದಿಂದ ರಾಜ್ಯವನ್ನು ಪಡೆದಿದ್ದಾರೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಮಧುರೇಣೈವಮುಕ್ತತ್ವ ತಾನ್ ರಾಜ್ಯಸ್ಯಾರ್ಧಂ ಪ್ರದೀಯತಾಮ್ |
ಏತದ್ಧಿ ಪುರುಷವ್ಯಾಘ್ರ ಹಿತಂ ಸರ್ವಜನಸ್ಯ ನಃ ॥9॥
ಹೀಗೆ ಅವರಿಗೆ ಮಧುರವಾಗಿ ಹೇಳಿ ಅರ್ಧರಾಜ್ಯವನ್ನು ಕೊಡು. ಪುರುಷವ್ಯಾಘ್ರನೇ, ಇದು ನಮಗೂ ಮತ್ತು ಎಲ್ಲರಿಗೂ ಹಿತವಾದುದು.
ಅತೋಽನ್ಯಥಾ ಚೇತ್ ಕ್ರಿಯತೇ ನ ಹಿತಂ ನೋ ಭವಿಷ್ಯತಿ |
ತವಾಪ್ಯಕೀರ್ತಿಃ ಸಕಲಾ ಭವಿಷ್ಯತಿ ನ ಸಂಶಯಃ ॥10॥
ಇದನ್ನು ಬಿಟ್ಟು ಬೇರೆ ರೀತಿಯಲ್ಲಿ ನಡೆದುಕೊಂಡರೆ, ನಮಗೆ ಹಿತವಾಗುವುದಿಲ್ಲ. ನಿನಗೆ ಪುಷ್ಕಲವಾದ ಅಪಕೀರ್ತಿ

ಉಂಟಾಗುವುದರಲ್ಲಿ ಸಂಶಯವಿಲ್ಲ.
ಕೀರ್ತಿರಕ್ಷಣಮಾತಿಷ್ಠೇತ್ ಕೀರ್ತಿರ್ಹಿ ವಿಮಲಂ ಫಲಮ್ |
ನಷ್ಟಕೀರ್ತೇರ್ಮನುಷ್ಯಸ್ಯ ಜೀವಿತಂ ವಿಫಲಂ ಸ್ಮೃತಮ್ ॥11॥
ಪ್ರತಿಯೊಬ್ಬನೂ ಕೀರ್ತಿಯನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸಬೇಕು. ಕೀರ್ತಿಯೇ ನಿರ್ದುಷ್ಟವಾದ ಫಲ. ಕೀರ್ತಿನಾಶವನ್ನು ಹೊಂದಿದ ಮನುಷ್ಯನ ಜೀವನವನ್ನು ನಿಷ್ಫಲವೆಂದು ಹೇಳುತ್ತಾರೆ.
ಯಾವತ್ ಕೀರ್ತಿರ್ಮನುಷ್ಯಸ್ಯ ಲೋಕೇ ತಿಷ್ಠತಿ ಭಾರತ |
ತಾವಜ್ಜೀವತಿ ಗಾಂಧಾರೇ ನಷ್ಟಕೀರ್ತಿರ್ಹಿ ನಶ್ಯತಿ ॥12॥
ಗಾಂಧಾರಿಯ ಪುತ್ರನಾದ ಭಾರತನೇ, ಎಲ್ಲಿಯವರೆಗೆ ಕೀರ್ತಿಯಿರುತ್ತದೆಯೇ ಅಲ್ಲಿಯವರೆಗೆ ಮನುಷ್ಯನು ಲೋಕದಲ್ಲಿ ಬದುಕಿರುತ್ತಾನೆ. ಕೀರ್ತಿಯು ನಾಶ ಹೊಂದಿದ ದಿವಸ ಅವನು ನಾಶವನ್ನು ಹೊಂದುತ್ತಾನೆ.
ತದಿದಂ ಸಮುಪಾತಿಷ್ಠ ಧರ್ಮಂ ಕುರುಕುಲೋಚಿತಮ್ |
ಅನುರೂಪಂ ಮಹಾಬಾಹೋ ಪೂರ್ವೇಷಾಮಾತ್ಮನಃ ಕುರು ॥13॥
ಆದ್ದರಿಂದ, ಮಹಾಬಾಹುವೇ, ನೀನು ಕುರುಕುಲೋಚಿತವಾದ ನಿನಗೂ ಮತ್ತು ಪೂರ್ವಿಕರಿಗೂ ಅನುರೂಪವಾದ ಈ ಧರ್ಮವನ್ನು ಆಚರಿಸು.
ದಿಷ್ಟ್ಯಾ ಧರಂತಿ ತೇ ವೀರಾ ದಿಷ್ಟ್ಯಾ ಜೀವತಿ ಸಾ ಪೃಥಾ |
ದಿಷ್ಟ್ಯಾಪುರೋಚನಃ ಪಾಪೋ ನ ಸಕಾಮೋಽತ್ಯಯಂ ಗತಃ ॥14॥
ದೇವರದಯದಿಂದ ಪಾಂಡವರು ಬದುಕಿದ್ದಾರೆ. ದೇವರದಯದಿಂದ ಕುಂತಿಯು ಬದುಕಿದ್ದಾಳೆ. ದೇವರದಯದಿಂದಲೇ ಪಾಪಿಯಾದ ಪುರೋಚನನ ಆಸೆಯು ನೆರವೇರದೆ, ಅವನು ವಿನಾಶವನ್ನು ಹೊಂದಿದ್ದಾನೆ.
ತದಾಪ್ರಭೃತಿ ಗಾಂಧಾರೇ ನ ಶಕ್ನೋಮ್ಯಭಿವೀಕ್ಷಿತುಮ್ |
ಅದಾಹಯೋ ಯದಾ ಪಾರ್ಥಾಂಸ್ತ್ವಮಗ್ನೌ ಜತುವೇಶ್ಮನಿ ॥15॥
ಗಾಂಧಾರಿಯ ಪುತ್ರನೇ, ಯಾವಾಗ ನೀನು ಪಾಂಡವರನ್ನು ಅರಗಿನಮನೆಯಲ್ಲಿಟ್ಟು ಸುಡಿಸಿದೆಯೋ, ಆಗಿನಿಂದ ನಿನ್ನನ್ನು ನೋಡಲು ನನಗೆ ಸಾಧ್ಯವಾಗುತ್ತಿಲ್ಲ.
ಲೋಕೇ ಪ್ರಾಣಭೃತಾಂ ಕಿಂಚಿಚ್ಛ್ರುತ್ವಾ ಕುಂತೀಂ ತಥಾಗತಾಮ್ |
ದುಃಖಂ ತು ಜಾಯತೇ ರಾಜನ್ ಭವಾನ್ ಸರ್ವಸ್ಯ ಕಾರಣಮ್ ॥
ರಾಜನೇ, ಲೋಕದಲ್ಲಿ ಕುಂತಿಯ ದುರವಸ್ಥೆಯ ಮಾತುಗಳನ್ನು ಜನರು ಆಡುವಾಗ ನನಗೂ ದುಃಖವಾಗುತ್ತದೆ. ರಾಜನೇ, ಎಲ್ಲದಕ್ಕೂ ನೀನೇ ಕಾರಣ.
ನ ಚಾಪಿ ದೋಷೇಣ ತಥಾ ಲೋಕೋ ವೇತ್ತಿ ಪುರೋಚನಮ್ |
ಯಥಾ ತ್ವಾಂ ಪುರುಷವ್ಯಾಘ್ರ ಲೋಕೋ ದೋಷೇಣ ಗಚ್ಛತಿ ॥17॥
ಪುರುಷವ್ಯಾಘ್ರನೇ, ಜನರು ಹೇಗೆ ನಿನ್ನನ್ನು ದೋಷಿಯೆಂದು ಪರಿಗಣಿಸುತ್ತಾರೋ, ಹಾಗೆ, ಪುರೋಚನನನ್ನು ದೋಷಿಯೆಂದು ಪರಿಗಣಿಸುವುದಿಲ್ಲ.
ತದಿದಂ ಜೀವಿತಂ ತೇಷಾಂ ತವ ಕಿಲ್ಬಿಷನಾಶನಮ್ |
ಸಮ್ಮಂತವ್ಯಂ ಮಹಾರಾಜ ಪಾಂಡವಾನಾಂ ಚ ದರ್ಶನಮ್ ॥18॥
ಅವರು ಬದುಕಿರುವುದು ನಿನ್ನ ಪಾಪವನ್ನು ತೊಳೆಯಲು ದೊಡ್ಡಸಾಧನವಾಗಿದೆ. ಮಹಾರಾಜನೇ, ಪಾಂಡವರ ದರ್ಶನವನ್ನೂ ನೀನು ಅನುಮೋದಿಸಬೇಕು.
ನ ಚಾಪಿ ತೇಷಾಂ ವೀರಾಣಾಂ ಜಯತಾಂ ಕುರುನಂದನ |
ಪಿತ್ರ್ಯೋಂಽಶಃ ಶಕ್ಯ ಆದಾತುಮಪಿ ವಜ್ರಭೃತಾ ಸ್ವಯಮ್ ॥19॥
ಕುರುನಂದನನೇ, ಜಯಶಾಲಿಗಳಾದ, ವೀರರಾದ ಆ ಪಾಂಡವರ ತಂದೆಯ ಆಸ್ತಿಯನ್ನು ವಜ್ರವನ್ನು ಧರಿಸಿದ ಇಂದ್ರನೂ ಕಿತ್ತುಕೊಳ್ಳಲು ಸಾಧ್ಯವಿಲ್ಲ.
ತೇ ಹಿ ಧರ್ಮೇ ಸ್ಥಿತಾಃ ಸರ್ವೇ ಸರ್ವೇ ಚೈವೈಕಚೇತಸಃ |
ಅಧರ್ಮೇಣ ನಿರಸ್ತಾಶ್ಚ ತುಲ್ಯೇ ರಾಜ್ಯೇ ಚ ಧರ್ಮತಃ ॥20॥
ಅವರೆಲ್ಲರೂ ಧರ್ಮದಲ್ಲಿರುವವರು. ಎಲ್ಲರಿಗೂ ಒಂದೇ ವಿಧವಾದ ಮನಸ್ಸಿದೆ. ಎಲ್ಲರೂ ಅಧರ್ಮವನ್ನು ತ್ಯಜಿಸಿದ್ದಾರೆ. ಸಮಾನವಾದ ರಾಜ್ಯದಲ್ಲಿ ಅವರಿಗೂ ಧರ್ಮದಿಂದಲೇ ಅಧಿಕಾರವಿದೆ.
ಯದಿ ಧರ್ಮಸ್ತ್ವಯಾ ಕಾರ್ಯೋ ಯದಿ ಕಾರ್ಯಂ ಪ್ರಿಯಂ ಚ ಮೇ|
ಕ್ಷೇಮಂ ಚ ಯದಿ ಕರ್ತವ್ಯಂ ರಾಜ್ಯಂ ತೇಷಾಂ ಪ್ರಯಚ್ಛತಾಮ್ ॥21॥
ನೀನು ಧರ್ಮವನ್ನು ಮಾಡುವುದಾದರೆ, ನೀನು ನನಗೆ ಪ್ರಿಯವನ್ನು ಮಾಡುವುದಾದರೆ, ನೀನು ಕುರುಕುಲಕ್ಕೆ ಕ್ಷೇಮವನ್ನು ಮಾಡುವುದಾದರೆ, ಅವರಿಗೆ ರಾಜ್ಯವನ್ನು ಕೊಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುರಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಇನ್ನೂರ ಐದನೆಯ ಅಧ್ಯಾಯ
(ದ್ರೋಣರ ಹಿತವಚನ ಮತ್ತು ಕರ್ಣನ ವಿರೋಧ)
ದ್ರೋಣಃ
ಮಂತ್ರಾಯ ಸಮುಪಾನೀತೈರ್ಧೃತರಾಷ್ಟ್ರಹಿತೈರ್ನೃಪ |
ಧರ್ಮ್ಯಂ ಪಥ್ಯಂ ಯಶಸ್ಯಂ ಚ ವಾಚ್ಯಮಿತ್ಯನುಶುಶ್ರುಮಃ ॥1॥
ರಾಜನೇ, ಮಂತ್ರಾಲೋಚನೆಗೆ ಬಂದ ಧೃತರಾಷ್ಟ್ರನ ಆಪ್ತರು ಧರ್ಮಸಂಪಾದಕವಾದುದನ್ನೂ, ಹಿತವಾದುದನ್ನೂ, ಕೀರ್ತಿಕರವಾದುದನ್ನೂ ಹೇಳಬೇಕೆಂದು ನಾನು ಕೇಳಿದ್ದೇನೆ.
ಮಮಾಪ್ಯೇಷ ಮತಿಸ್ತಾತ ಯಾ ಭೀಷ್ಮಸ್ಯ ಮಹಾತ್ಮನಃ |
ಸಂವಿಭಜ್ಯಾಸ್ತು ಕೌಂತೇಯಾ ಏಷ ಧರ್ಮಃ ಸನಾತನಃ ॥2॥
ಪ್ರೀತಿಪಾತ್ರನೇ, ಮಹಾತ್ಮರಾದ ಭೀಷ್ಮರ ಅಭಿಪ್ರಾಯವೇ ನನ್ನ ಅಭಿಪ್ರಾಯವೂ ಆಗಿದೆ. ಕೌಂತೇಯರಿಗೆ ರಾಜ್ಯವನ್ನು ಹಂಚಬೇಕು. ಇದು ಸನಾತನವಾದ ಧರ್ಮ.
ಪ್ರೇಷ್ಯತಾಂ ದ್ರುಪದಾಯಾಶು ನರಃ ಕಶ್ಚಿತ್ ಪ್ರಿಯಂವದಃ |
ಬಹುಲಂ ರತ್ನಮಾದಾಯ ತೇಷಾಮರ್ಥಾಯ ಭಾರತ ॥3॥
ಭಾರತನೇ, ಪ್ರಿಯವಾಗಿ ಮಾತನಾಡುವ ಒಬ್ಬನನ್ನು ಪಾಂಡವರಿಗೆ ಕೊಡಲು, ಬಹಳ ರತ್ನಗಳನ್ನು ತೆಗೆದುಕೊಂಡು ಹೋಗುವಂತೆ ಮಾಡಿ ದ್ರುಪದನ ಸಮೀಪಕ್ಕೆ ಜಾಗ್ರುತೆಯಾಗಿ ಕಳುಹಿಸು.
ಮಿಥಃ ಕೃತ್ಯಂ ಚ ತಸ್ಮೈ ಸ ಆದಾಯ ಬಹು ಗಚ್ಛತು |
ವೃದ್ಧಿಂ ಚ ಪರಮಾಂ ಬ್ರೂಯಾತ್ ತತ್ಸಂಯೋಗೋದ್ಭವಾಂ ತದಾ ॥4॥
ಆ ಮನುಷ್ಯನು ಪಾಂಡವರಿಂದ ಕೌರವರಿಗೆ, ಕೌರವರಿಂದ ಪಾಂಡವರಿಗೆ ಆಗಬೇಕಾದ ಅನೇಕ ಕಾರ್ಯಗಳನ್ನು ತಿಳಿದುಕೊಂಡು ಹೋಗಲಿ. ಕೌರವರ ಜೊತೆಯಲ್ಲಿ ಪಾಂಡವರು ಸೇರಿದರೆ, ಇಬ್ಬರಿಗೂ ಅತಿಶಯವಾದ ವೃದ್ಧಿವುಂಟಾಗುವುದೆಂದು ಧರ್ಮರಾಜನಿಗೆ ಹೇಳಬೇಕು.
ಸುಪ್ರೀಯಮಾಣಂ ತ್ವಾಂ ಬ್ರೂಯಾದ್ ರಾಜನ್ ದುರ್ಯೋಧನಂ ತಥಾ |
ಅಸಕೃದ್ ದ್ರುಪದೇ ಚೈವ ಧೃಷ್ಟದ್ಯುಮ್ನೇ ಚ ಭಾರತ ॥5॥
ರಾಜನೇ, ಈ ಸಂಬಂಧದಿಂದ ಧೃತರಾಷ್ಟ್ರನಾದ ನಿನಗೂ ಮತ್ತು ದುರ್ಯೋಧನನಿಗೂ ಬಹಳ ಸಂತೋಷವಾಗಿದೆ ಎಂದು ಧರ್ಮರಾಜನಿಗೂ ಮತ್ತು ದ್ರುಪದ, ಧೃಷ್ಟದ್ಯುಮ್ನರಿಗೂ ಅನೇಕಬಾರಿ ಹೇಳಬೇಕು.
ಉಚಿತತ್ವಂ ಪ್ರಿಯತ್ವಂ ಚ ಯೋಗಸ್ಯಾಪಿ ಚ ವರ್ಣಯೇತ್ |
ಪುನಃ ಪುನಶ್ಚ ಕೌಂತೇಯಾನ್ ಮಾದ್ರೀಪುತ್ರೌ ಚ ಸಾಂತ್ವಯೇತ್ ॥6॥
ದ್ರುಪದನ ಯೋಗವು ನಮಗೆ ಉಚಿತವೂ ಆಗಿದೆ, ಪ್ರಿಯವೂ ಆಗಿದೆ ಎಂದು ವರ್ಣಿಸಬೇಕು. ಕುಂತಿಯ ಪುತ್ರರನ್ನೂ ಮತ್ತು ಮಾದ್ರಿಯ ಪುತ್ರರನ್ನೂ ಹಿಂದೆ ಮಾಡಿದ ಅಪಚಾರಗಳಿಗಾಗಿ ಪುನಃ ಪುನಃ ಸಮಾಧಾನಪಡಿಸಬೇಕು.
ಹಿರಣ್ಮಯಾನಿ ಶುಭ್ರಾಣಿ ಬಹೂನ್ಯಾಭರಣಾನಿ ಚ |
ವಚನಾತ್ ತವ ರಾಜೇಂದ್ರ ದ್ರೌಪದ್ಯಾಃ ಸಂಪ್ರಯಚ್ಛತು ॥7॥
ರಾಜೇಂದ್ರನೇ, ನಿನ್ನ ಆಜ್ಞೆಯಂತೆ ಹಿರಣ್ಮಯವಾದ ಶುಭ್ರವಾದ ಅನೇಕ ಆಭರಣಗಳನ್ನು ದ್ರೌಪದಿಗೆ ತೆಗೆದುಕೊಂಡುಹೋಗಿ ಕೊಡಬೇಕು.
ತಥಾ ದ್ರುಪದಪುತ್ರಾಣಾಂ ಸರ್ವೇಷಾಂ ಭರತರ್ಷಭ |
ಪಾಂಡವಾನಾಂ ಚ ಸರ್ವೇಷಾಂ ಕುಂತ್ಯಾ ಯುಕ್ತಾನಿ ಯಾನಿ ಚ ॥8॥
ಭರತರ್ಷಭನೇ, ಹಾಗೆಯೇ, ಎಲ್ಲಾ ದ್ರುಪದಪುತ್ರರಿಗೂ ಮತ್ತು ಎಲ್ಲಾ ಪಾಂಡವರಿಗೂ, ಹಾಗೆಯೇ ಕುಂತಿಗೂ ಯೋಗ್ಯವಾದ ಆಭರಣಗಳನ್ನು ಕೊಡಬೇಕು.
ದತ್ವಾ ತಾನಿ ಮಹಾರ್ಹಾಣಿ ಪಾಂಡವಾನ್ ಸಂಪ್ರಹರ್ಷಯ |
ಏವಂ ಸಾಂತ್ವಸಮಾಯುಕ್ತಂ ದ್ರುಪದಂ ಪಾಂಡವೈಃ ಸಹ |
ಉಕ್ತ್ವಾ ಸೋಽನಂತರಂ ಬ್ರೂಯಾತ್ ತೇಷಾಮಾಗಮನಂ ಪ್ರತಿ ॥9॥
ಹೀಗೆ ಪಾಂಡವರಿಗೆ ಅನರ್ಘ್ಯವಾದ ಆಭರಣಗಳನ್ನು ಕೊಟ್ಟು ಅವರನ್ನು ಸಂತೋಷಪಡಿಸಬೇಕು. ಹೀಗೆ, ದ್ರುಪದನಿಗೂ ಮತ್ತು ಪಾಂಡವರಿಗೂ ಮೊದಲು ಸಮಾಧಾನದ ಮಾತುಗಳನ್ನಾಡಿ ಅನಂತರ ಪಾಂಡವರನ್ನು ಇಲ್ಲಿಗೆ ಕರೆದುಕೊಂಡು ಬರುವ ವಿಷಯವನ್ನು ಪ್ರಸ್ತಾಪಿಸಬೇಕು.
ಅನುಜ್ಞಾತೇಷು ವೀರೇಷು ಬಲಂ ಗಚ್ಛತು ಶೋಭನಮ್ |
ದುಃಶಾಸನೋ ವಿಕರ್ಣಶ್ಚ ಪಾಂಡವಾನಾನಯತ್ವಿಹ ॥10॥
ದ್ರುಪದನು ಅನುಮತಿಯನ್ನು ಕೊಟ್ಟಮೇಲೆ, ಇಲ್ಲಿಂದ ನಮ್ಮ ಸೈನ್ಯವು ಹೊರಡಬೇಕು. ದುಶ್ಶಾಸನ ಮತ್ತು ವಿಕರ್ಣರು ಪಾಂಡವರನ್ನು ಇಲ್ಲಿಗೆ ಕರೆತರಲಿ.
ತತಸ್ತೇ ಪಾರ್ಥಿವಶ್ರೇಷ್ಠಾಃ ಪೂಜ್ಯಮಾನಾಃ ಸದಾ ತ್ವಯಾ |
ಪ್ರಕೃತೀನಾಮನುಮತೇ ಪದೇ ಸ್ಥಾಸ್ಯಂತಿ ಪೈತೃಕೇ ॥11॥
ಅನಂತರ, ಆ ರಾಜಶ್ರೇಷ್ಠರು ನಿನ್ನಿಂದ ಯಾವಾಗಲೂ ಸತ್ಕೃತರಾಗಿ ಪ್ರಜೆಗಳ ಅಭಿಪ್ರಾಯದಂತೆ ಪಾಂಡುವಿನ ಸ್ಥಾನವನ್ನು ಪಡೆಯುವರು.

ಏವಂ ತವ ಮಹಾರಾಜ ತೇಷು ಪುತ್ರೇಷು ಚೈವ ಹಿ |
ವೃತ್ತಮೌಪಯಿಕಂ ಮನ್ಯೇ ಭೀಷ್ಮೇಣ ಸಹ ಭಾರತ ॥12॥
ಮಹಾರಾಜನೇ, ಹೀಗೆ, ಆ ಪಾಂಡುಪುತ್ರರ ವಿಷಯದಲ್ಲಿ ಇಂತಹ ನಡತೆಯು ಹಿತಕಾರಿಯಾದುದೆಂದು ಭಾವಿಸುತ್ತೇನೆ. ಭಾರತನೇ, ಭೀಷ್ಮರೂ ಹೀಗೆಯೇ ಭಾವಿಸುತ್ತಾರೆ.
ಕರ್ಣಃ
ಯೋಜಿತಾವರ್ಥಮಾನಾಭ್ಯಾಂ ಸರ್ವಕಾರ್ಯೇಷ್ವನಂತರೌ |
ನ ಮಂತ್ರಯೇತಾಂ ತ್ವಚ್ಛ್ರೇಯಃ ಕಿಮದ್ಭುತತರಂ ತತಃ ॥13॥
ಎಲ್ಲ ಕಾರ್ಯಗಳಲ್ಲಿಯೂ, ಅಂತರಂಗದಲ್ಲಿರುವ, ಅರ್ಥಮಾನಗಳಿಂದ ಸತ್ಕರಿಸಲ್ಪಟ್ಟ ಭೀಷ್ಮದ್ರೋಣರು ನಿನ್ನ ಶ್ರೇಯಸ್ಸನ್ನು ಚಿಂತಿಸುತ್ತಿಲ್ಲ. ಇದಕ್ಕಿಂತ ಆಶ್ಚರ್ಯಕರವಾದುದು ಏನಿದೆ?
ದುಷ್ಟೇನ ಮನಸಾ ಯೋ ವೈ ಪ್ರಚ್ಛನ್ನೇನಾಂತರಾತ್ಮನಾ |
ಬ್ರೂಯಾನ್ನಿಃಶ್ರೇಯಸಂ ನಾಮ ಕಥಂ ಕುರ್ಯಾತ್ ಸತಾಂ ಮತಮ್ ॥
ಯಾವನು ದುಷ್ಟಮನಸ್ಸನ್ನು ಹೊಂದಿ ತನ್ನ ಅಂತರಂಗದ ಅಭಿಪ್ರಾಯವನ್ನು ಮುಚ್ಚಿಟ್ಟು ಶ್ರೇಯಸ್ಸಲ್ಲದುದನ್ನೇ ಶ್ರೇಯಸ್ಕರವೆಂದು ಹೇಳುತ್ತಾನೆಯೋ, ಅವನು ಸಜ್ಜನರ ಅಭಿಪ್ರಾಯವನ್ನು ಹೇಗೆ ಕಾರ್ಯಗತಗೊಳಿಸುತ್ತಾನೆ?
ನ ಮಿತ್ರಾಣ್ಯರ್ಥಕೃಚ್ಛ್ರೇಷು ಶ್ರೇಯಸೇ ವೇತರಾಯ ವಾ |
ವಿಧಿಪೂರ್ವಂ ಹಿ ಸರ್ವಸ್ಯ ದುಃಖಂ ವಾ ಯದಿ ವಾ ಸುಖಮ್ ॥15॥
ಅರ್ಥಸಂಕಟವುಂಟಾದಾಗ ಶ್ರೇಯಸ್ಸಿಗಾಗಲೀ ಅಥವಾ ವಿನಾಶಕ್ಕಾಗಲೀ ಮಿತ್ರರು ಕಾರಣರಾಗುವುದಿಲ್ಲ. ಎಲ್ಲರಿಗೂ ದುಃಖವಾಗಲೀ, ಸುಖವಾಗಲೀ, ವಿಧಿಯು ಬರೆದಂತೆ ಆಗುತ್ತದೆ.
ಕೃತಪ್ರಜ್ಞೋಽಕೃತಪ್ರಜ್ಞೋ ಬಾಲೋ ವೃದ್ಧಶ್ಚ ಮಾನವಃ |
ಸಸಹಾಯೋಽಸಹಾಯಶ್ಚ ಸರ್ವಃ ಸರ್ವತ್ರ ವಿಂದತಿ ॥16॥
ವಿದ್ವಾಂಸನಾಗಲಿ ಅಥವಾ ಅಜ್ಞನಾಗಲಿ, ಬಾಲನಾಗಲಿ ಅಥವಾ ವೃದ್ಧನಾಗಲಿ, ಸಹಾಯವನ್ನು ಹೊಂದಿರಲಿ ಅಥವಾ ಹೊಂದದಿರಲಿ, ಪ್ರತಿಯೊಬ್ಬ ಮನುಷ್ಯನು ಎಲ್ಲವನ್ನೂ (ಸುಖವನ್ನೂ ಮತ್ತು ದುಃಖವನ್ನೂ) ಎಲ್ಲ ಕಡೆಗಳಲ್ಲಿಯೂ ಪಡೆಯುತ್ತಾನೆ.
ಶ್ರೂಯತೇ ಹಿ ಪುರಾ ಕಶ್ಚಿದ್ ವಿನಂದ ಇತಿ ವಿಶ್ರುತಃ |
ಆಸೀದ್ ರಾಜಗೃಹೇ ರಾಜಾ ಮಾಗಧಾನಾಂ ಮಹೀಪತಿಃ ॥17॥
ಹಿಂದೆ ಮಗಧದೇಶದ ರಾಜಧಾನಿಯಾದ ರಾಜಗೃಹದಲ್ಲಿ ವಿನಂದನೆಂಬ ರಾಜನು ಇದ್ದನೆಂದು ಕೇಳಿದ್ದೇವೆ.
ಸ ಹೀನಃ ಕರಣೈಃ ಸರ್ವೈರುಚ್ಛ್ವಾಸಪರಮೋ ನೃಪಃ |
ಅಮಾತ್ಯಸಂಸ್ಥಃ ಸರ್ವೇಷು ಕಾರ್ಯೇಷ್ವೇವಾಭವತ್ ತದಾ ॥18॥
ಆ ರಾಜನು ಇಂದ್ರಿಯಹೀನನಾಗಿ, ಕೇವಲ ಉಸಿರಾಡುತ್ತಾ, ಆಗ ಎಲ್ಲಾ ಕಾರ್ಯಗಳಲ್ಲಿಯೂ ತನ್ನ ಅಮಾತ್ಯರನ್ನೇ ಅವಲಂಬಿಸಿದನು.
ತಸ್ಯಾಮಾತ್ಯಾ ಬಭೂವುಸ್ತೇ ಅನ್ಯೋನ್ಯಸಹಿತಾಸ್ತದಾ |
ತಸ್ಯಾಮಾತ್ಯೋ ಮಹಾಕರ್ಣಿರ್ಬಭೂವೈಕೇಶ್ವರಃ ಪುರಾ ॥19॥
ಅವನು ಅಮಾತ್ಯರು ಎಲ್ಲರೂ ಒಂದಾದರು. ಆಗ, ಅವನ ಅಮಾತ್ಯನಾದ ಮಹಾಕರ್ಣಿ ಎಂಬುವವನು ತಾನೇ ಪ್ರಭುವಾದನು.
ಸ ಲಬ್ಧಬಲಮಾತ್ಮಾನಾಂ ಮನ್ಯಮಾನೋಽವಮನ್ಯತೇ |
ಸ ರಾಜ್ಞೋ ವಸುರತ್ನಾನಿ ಸ್ತ್ರಿಯೋ ಭೋಜ್ಯಾನಿ ಯಾನಿ ಚ |
ಆದದೇ ಸರ್ವತೋ ಮೂಢ ಐಶ್ವರ್ಯಂ ಚ ಸ್ವಯಂ ತದಾ ॥20॥
ಅವನು ತನಗೆ ಈಗ ಬಲವುಂಟಾಗಿದೆಯೆಂದು ತಿಳಿದು ರಾಜನಿಗೆ ಅವಮಾನವನ್ನು ಮಾಡಿ, ರಾಜನ ಧನರತ್ನಗಳನ್ನೂ, ಸ್ತ್ರೀಯರನ್ನೂ, ಉಳಿದ ಭೋಜ್ಯವಸ್ತುಗಳನ್ನೂ, ಎಲ್ಲ ಐಶ್ವರ್ಯಗಳನ್ನೂ, ಮೂಢನಾಗಿ ತಾನೇ ತೆಗೆದುಕೊಂಡನು.
ತದಾದಾಯ ಚ ಲುಬ್ಧಸ್ಯ ಲಾಭಾಲ್ಲೋಭಃ ಪ್ರವರ್ತತೇ |
ತಥಾ ಹಿ ಸರ್ವಮಾದಾಯ ರಾಜ್ಯಮಸ್ಯ ಜಿಹೀರ್ಷತಿ ॥21॥
ಅವನ್ನೆಲ್ಲಾ ತೆಗೆದುಕೊಂಡು ಲುಬ್ಧನಾದ ಅವನಿಗೆ ಲಾಭದಿಂದ ಲೋಭವು ಇನ್ನೂ ಹೆಚ್ಚಾಯಿತು. ಅವನು ರಾಜನ ಸರ್ವಸ್ವವನ್ನೂ ತೆಗೆದುಕೊಂಡ ಮೇಲೆ ರಾಜ್ಯವನ್ನು ಅಪಹರಿಸಲು ಇಚ್ಛಿಸಿದನು.
ಹೀನಸ್ಯ ಕರಣೈಃ ಸರ್ವೈರುಚ್ಛ್ವಾಸಪರಮಸ್ಯ ಚ |
ಯತಮಾನೋ ನ ಶಕ್ನೋತಿ ರಾಜ್ಯಂ ಕರ್ತುಮಿತಿ ಶ್ರುತಿಃ |
ಕಿಮನ್ಯವಿಹಿತಾ ನೂನಂ ತಸ್ಯ ಸಾ ಪುರುಷೇಂದ್ರತಾ ॥22॥
ತನ್ನ ಎಲ್ಲಾ ಇಂದ್ರಿಯಗಳನ್ನು ಕಳೆದುಕೊಂಡು ಕೇವಲ ಶ್ವಾಸವೊಂದೇ ಉಳಿದಿದ್ದ ಆ ರಾಜನು ಎಷ್ಟು ಪ್ರಯತ್ನಪಟ್ಟರೂ ರಾಜ್ಯವನ್ನು ಆಳಲು ಸಾಧ್ಯವಾಗಲಿಲ್ಲ ಎಂದು ಕೇಳಿದ್ದೇವೆ.
ಮಹಾಕರ್ಣಿಗೆ ಆ ರಾಜ್ಯಭೋಗವು ವಿಧಿಯಿಂದಲ್ಲದೇ ಬೇರೆ ಯಾರಿಂದಲಾದರೂ ಕೊಡಲ್ಪಟ್ಟಿತೇನು?
ಯದಿ ತೇ ವಿಹಿತಂ ರಾಜ್ಯಂ ಭವಿಷ್ಯತಿ ನ ಸಂಶಯಃ |
ಮಿಷತಃ ಸರ್ವಲೋಕಸ್ಯ ಸ್ಥಾಸ್ಯತೇ ತ್ವಯಿ ತದ್ ಧ್ರುವಮ್ ॥23॥
ನಿನಗೆ ರಾಜ್ಯವು ದೊರೆಯಬೇಕೆಂದು ವಿಧಿಯ ಕ್ಲುಪ್ತಿಯಿದ್ದರೆ, ರಾಜ್ಯವು ನಿಸ್ಸಂಶಯವಾಗಿ ದೊರತೇ ತೀರುವುದು. ಎಲ್ಲ ಜನರು ನೋಡುತ್ತಿರುವಂತೆಯೇ, ಅದು ನಿನ್ನಲ್ಲಿಯೇ ಸ್ಥಿರವಾಗಿ ನಿಲ್ಲವುದು.
ಅತೋಽನ್ಯಥಾ ಚೇತ್ ವಿಹಿತಂ ಯತಮಾನೋ ನ ಲಪ್ಸ್ಯಸೇ |

ಏವಂ ವಿದ್ವನ್ನುಪಾದತ್ಸ್ವ ಮಂತ್ರಿಣಾಂ ಸಾಧ್ವಸಾಧುತಾಮ್ |
ದುಷ್ಟಾನಾಂ ಚೈವ ಬೋದ್ಧವ್ಯಮದುಷ್ಟಾನಾಂ ಚ ಭಾಷಿತಮ್ ॥24॥
ವಿಧಿಯ ಸಂಕಲ್ಪವು ಬೇರೆಯಾಗಿದ್ದರೆ, ಪ್ರಯತ್ನಪಟ್ಟರೂ ನಿನಗೆ ರಾಜ್ಯವು ಲಭಿಸುವುದಿಲ್ಲ. ಇದನ್ನು ತಿಳಿದು ಮಂತ್ರಿಗಳು ಹೇಳುವುದರಲ್ಲಿ ಯಾವುದು ಸಾಧು, ಯಾವುದು ಅಸಾಧು ಎಂದು ಯೋಚಿಸಿ ಸ್ವೀಕಾರಮಾಡು. ದುಷ್ಟವಾದ ಮಂತ್ರಾಲೋಚನೆಯನ್ನೂ ತೆಗೆದುಕೊಳ್ಳಬೇಕು. ಅದುಷ್ಟವಾದ ಮಂತ್ರಾಲೋಚನೆಯನ್ನೂ ತೆಗೆದುಕೊಳ್ಳಬೇಕು.
ದ್ರೋಣಃ
ವಿದ್ಮ ತೇ ಭಾವದೋಷೇಣ ಯದರ್ಥಮಿದಮುಚ್ಯತೇ |
ದುಷ್ಟಃ ಪಾಂಡವಹೇತೋಸ್ತ್ವಂ ದೋಷಂ ಖ್ಯಾಪಯಸೇ ತ್ಮನಃ ॥25॥
ಕರ್ಣನೇ, ನೀನು ಯಾವ ಮನೋದೋಷದಿಂದ ಹೀಗೆ ಮಾತನಾಡುತ್ತಿದ್ದೀಯೇ ಎಂದು ನಾವು ತಿಳಿದಿದ್ದೇವೆ. ಪಾಂಡವರ ಮೇಲೆ ದ್ವೇಷವುಳ್ಳ ನೀನು ನಿನ್ನ ದೋಷಗಳನ್ನು ಪಾಂಡವರ ಮೇಲೆ ಹೇರುತ್ತಿದ್ದೀಯೆ.
ಹಿತಂ ತು ಪರಮಂ ಕರ್ಣ ಬ್ರವೀಮಿ ಕುರುವರ್ಧನಮ್ |
ಅಥ ತ್ವಂ ಮನ್ಯಸೇ ದುಷ್ಟಂ ಬ್ರೂಹಿ ಯತ್ ಪರಮಂ ಹಿತಮ್ ॥26॥
ಕರ್ಣನೇ, ನಾನು ಹೇಳುತ್ತಿರುವುದು ಕುರುವಂಶಕ್ಕೆ ಪರಮಹಿತವಾದ ಧರ್ಮ. ಅದನ್ನು ನೀನು ದುಷ್ಟವೆಂದು ತಿಳಿಯುವುದಾದರೆ, ನಿನ್ನ ದೃಷ್ಟಿಯಲ್ಲಿ ಯಾವುದು ಪರಮಹಿತವೋ ಅದನ್ನು ಹೇಳು.
ಅತೋಽನ್ಯಥಾ ಚೇತ್ ಕ್ರಿಯತೇ ಯದ್ ಬ್ರವೀಮಿ ಪರಂ ಹಿತಮ್|
ಕುರವೋ ವೈ ವಿನಂಕ್ಷ್ಯಂತಿ ನಚಿರೇಣೈವ ಮೇ ಮತಿಃ॥27॥
ನಾನು ಹೇಳುವ ಹಿತವನ್ನು ಬಿಟ್ಟು ಬೇರೆ ಏನನ್ನಾದರೂ ಮಾಡಿದರೆ, ಕುರುಗಳು ಸ್ವಲ್ಪಕಾಲದಲ್ಲಿಯೇ ವಿನಾಶವನ್ನು ಹೊಂದುವರು ಎಂದು ನನ್ನ ಅಭಿಪ್ರಾಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಐದನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಶ್ರುತ್ವಾಥ ಕೃಷ್ಣಮುಪಯಾತಮುರು ಪ್ರದಾಯ
ರತ್ನಂ ಚ ಪಾಂಡುತನಯೇಷು ಗತಂ ಪುನಶ್ಚ |
ತಾತಪ್ಯಮಾನಹೃದಯಾಸ್ತು ಸುಯೋಧನಾದ್ಯಾ
ಮಂತ್ರಂ ಪ್ರಚಕ್ರುರಥ ಕರ್ಣಮುಖಾ ಯಯುಶ್ಚ ॥174॥
ಶ್ರೀಕೃಷ್ಣ ಪುನಃ ಬಂದು ಪಾಂಡವರಿಗೆ ಬಹಳ ರತ್ನಗಳನ್ನಿತ್ತು ಹೋದನೆಂದು ಕೇಳಿ ದುರ್ಯೋಧನಾದಿಗಳು ಮನಸಿನಲ್ಲಿ ಸಂತಾಪಪಟ್ಟು ಮಂತ್ರಾಲೋಚನೆ ಗೈದರು. ಕರ್ಣನನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೊರಟರು.
ಯುದ್ಧಾಯ ತೇಷು ಪುನರೇವ ರಥೈಃ ಪ್ರಯಾತೇ-
ಷ್ವಾಹಾಗ್ರಜಂ ಸ ವಿದುರೋಽಪಿ ನದೀಜಮುಖ್ಯಾನ್ |
ಏತೇ ಹಿ ಪಾಪತಮಚೇತಸ ಏತ್ಯ ಪಾರ್ಥಾನ್
ಯುದ್ಧಾಯ ಮೃತ್ಯುಮುಪಯಾಂತಿ ನ ಸಂಶಯೋಽತ್ರ ॥175॥
ಕೌರವರು ಪುನಃ ಯುದ್ಧಕ್ಕಾಗಿ ರಥವೇರಿ ಹೊರಟು ಹೋದಾಗ ವಿದುರ ಧೃತರಾಷ್ಟ್ರನಿಗೂ ಭೀಷ್ಮಾದಿಗಳಿಗೂ ಹೇಳಿದ. `ದುರ್ಯೋಧನಾದಿಗಳು ಅತ್ಯಂತ ಪಾಪಮಯ ಬುದ್ಧಿಯವರು. ಪಾಂಡವರ ಬಳಿಗೆ ಯುದ್ಧಕ್ಕೆ ಹೊಗಿ ಸಾಯುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಭೀಮಾರ್ಜುನೌ ವಿಷಹಿತುಂ ನ ಹಿ ಕಶ್ಚನಾಸ್ತಿ
ಸಾಮರ್ಥ್ಯಯುಕ್ ಸುರವರೇಷ್ವಪಿ ವರ್ಧಿತಾಸ್ತೇ |
ಜ್ಞಾತ್ವೈವ ವತ್ಸರತ ಏವ ಮಹಾನಧರ್ಮ-
ಸ್ತೇಷಾಮುಪೇಕ್ಷಣಕೃತಸ್ತದಲಂ ನಿಯುಂಕ್ಷ್ವ ॥176॥
ಭೀಮಾರ್ಜುನರನ್ನು ಇದಿರಿಸಲು ಸಾಮರ್ಥ್ಯ ಉಳ್ಳವರು ದೇವೋತ್ತಮರಲ್ಲಿಯೂ ಯಾರೂ ಇಲ್ಲ. ಅವನು ಈಗ ಪೂರ್ಣಬಲಿಷ್ಠರಾಗಿ ಬೆಳೆದುಬಿಟ್ಟಿದ್ದಾರೆ. ಅವರ ವೃತ್ತಾಂತವನ್ನು ತಿಳಿದೂ ನೀನು ಒಂದು ವರ್ಷಕಾಲ ಉಪೇಕ್ಷೆ ಮಾಡಿರುವುದು ಮಹಾಪಾಪಕರವಾಗಿದೆ. ಸಾಕು ಇನ್ನು ಈ ಉಪೇಕ್ಷೆ. ಯಾರಾದರೊಬ್ಬ ರಾಯಭಾರಿಯನ್ನು ಅವರ ಕಡೆಗೆ ಕಳಿಸು.
ಆನೀತಯೇ ಚ ವಿನಿಯುಜ್ಯ ಸುಸಾಂತ್ವಪೂರ್ವ-
ಮಾನೀಯ ಯೋಜಯ ನೃಪೈಷು ತಥಾರ್ಧರಾಜ್ಯಂ |
ಏವಂ ಕೃತಂ ತವ ಭವೇತ್ ಕುಲವೃದ್ಧಯೇ ಹಿ
ಧರ್ಮಾಯ ಚೋಭಯವಿನಾಶಕರೋಽನ್ಯಥಾ ಸ್ಯಾಃ ॥177॥
ರಾಜನೆ, ಪಾಂಡವರನ್ನು ಕರೆತರಲು ಒಬ್ಬ ರಾಯಭಾರಿಯನ್ನು ನೇಮಿಸಿ ಒಳ್ಳೆಯ ಸಾಂತ್ವನ ಪೂರ್ವಕವಾಗಿ ಕರೆಸಿಕೊಂಡು ಪ್ರೀತಿಯಿಂದ ಅವರಿಗೆ ಅರ್ಧರಾಜ್ಯ ಕೊಟ್ಟುಬಿಡು. ಹೀಗೆ ಮಾಡಿದಾಗ ನಿನ್ನ ಕುಲ ಮೆರೆಯುತ್ತದೆ. ನಿನಗೆ ಪುಣ್ಯ ಬರುತ್ತದೆ. ಹೀಗೆ

ಮಾಡದಿದ್ದರೆ ಅವೆರಡನ್ನೂ ಕೆಡಿಸಿಕೊಳ್ಳುತ್ತಿ.
* * * *
ಇನ್ನೂರ ಆರನೆಯ ಅಧ್ಯಾಯ
(ವಿದುರನ ಹಿತವಚನ)
ವಿದುರಃ
ರಾಜನ್ ನಿಃಸಂಶಯಂ ಶ್ರೇಯೋ ವಾಚ್ಯಸ್ತ್ವಮಸಿ ಬಾಂಧವೈಃ |
ನ ತ್ವಂ ಶುಶ್ರೂಷಮಾಣೋ ಹಿ ವಾಕ್ಯಂ ಸಂಪ್ರತಿ ತಿಷ್ಠಸಿ ॥1॥
ರಾಜನೇ, ನಿಸ್ಸಂಶಯವಾಗಿ ಬಾಂಧವರು ನಿನಗೆ ಶ್ರೇಯಸ್ಸಾಧನವಾದುದನ್ನೇ ಹೇಳಬೇಕು. ಆದರೆ, ಈಗ ನೀನು ಇನ್ನೊಬ್ಬರ ಮಾತನ್ನು ಕೇಳುವ ಪರಿಸ್ಥಿತಿಯಲ್ಲಿ ಇಲ್ಲ.
ಪ್ರಿಯಂ ಹಿತಂ ಚ ಯದ್ವಾಕ್ಯಮುಕ್ತವಾನ್ ಕುರುಸತ್ತಮಃ |
ಭೀಷ್ಮಃ ಶಾಂತನವೋ ರಾಜಾ ಮಹಾವೀರ್ಯಪರಾಕ್ರಮಃ ॥2॥
ತಥಾ ದ್ರೋಣೇನ ಬಹುಧಾ ಭಾಷಿತಂ ಹಿತಮುತ್ತಮಮ್ |
ತಚ್ಚ ರಾಧಾಸುತಃ ಕರ್ಣೋ ಮನ್ಯತೇ ನ ಹಿತಂ ವಚಃ ॥3॥
ಶಂತನುವಿನ ಮಗನಾದ ಮಹಾವೀರ್ಯಪರಾಕ್ರಮವುಳ್ಳ, ಕುರುಶ್ರೇಷ್ಠನಾದ ಭೀಷ್ಮನು ಯಾವ ಹಿತವಾದ ಮತ್ತು ಪ್ರಿಯವಾದ ವಚನಗಳನ್ನು ನುಡಿದನೋ, ಹಾಗೆಯೇ, ದ್ರೋಣರೂ ಸಹ ಅನೇಕ ವಿಧದಲ್ಲಿ ಹಿತವಚನಗಳನ್ನು ಆಡಿದರೋ, ಅದನ್ನು ರಾಧಾಸುತನಾದ ಕರ್ಣನು ಹಿತವಲ್ಲದ ವಚನಗಳೆಂದು ತಿಳಿದಿದ್ದಾನೆ.
ಚಿಂತಯಂಶ್ಚ ನ ಪಶ್ಯಾಮಿ ರಾಜಂಸ್ತವ ಸುಹೃತ್ತಮಮ್ |
ಆಭ್ಯಾಂ ಪುರುಷಸಿಂಹಾಭ್ಯಾಂ ಯೋ ವಾ ಸ್ಯಾತ್ ಪ್ರಜ್ಞಯಾಽಧಿಕಃ ॥4॥
ರಾಜನೇ, ನಾನು ಎಷ್ಟು ಯೋಚನೆ ಮಾಡಿದರೂ, ಈ ಇಬ್ಬರು ಪುರುಷಸಿಂಹರಿಗಿಂತ ಪ್ರಜ್ಞೆಯಲ್ಲಿ ಅಧಿಕರಾದವರೂ ಮತ್ತು ನಿನಗೆ ಸುಹೃತ್ತಮರಾದವರೂ ಯಾರೂ ಕಾಣಿಸುತ್ತಿಲ್ಲ.
ಇಮೌ ಹಿ ವೃದ್ಧೌ ವಯಸಾ ರಾಜನೀತಿವಿಶಾರದೌ |
ಸಮಾನೌ ತ್ವಯಿ ರಾಜೇಂದ್ರ ತೇಷು ಪಾಂಡುಸುತೇಷು ಚ ॥5॥
ಇವರಿಬ್ಬರೂ ರಾಜನೀತಿವಿಶಾರದರೂ ಮತ್ತು ವಯೋವೃದ್ಧರೂ ಆಗಿದ್ದಾರೆ. ರಾಜೇಂದ್ರನೇ, ಇವರು ನಿನ್ನಲ್ಲಿಯೂ, ಪಾಂಡುಪುತ್ರರಲ್ಲಿಯೂ ಸಮಾನವಾಗಿದ್ದಾರೆ.
ಧರ್ಮೇ ಚಾನವಮೌ ರಾಜನ್ ಸತ್ಯತಾಯಾಂ ಚ ಭಾರತ |
ರಾಮಾದ್ ದಾಶರಥೇಶ್ಚೈವ ಗಯಾಚ್ಚೈವ ನ ಸಂಶಯಃ ॥6॥
ಭರತವಂಶದ ರಾಜನೇ, ಇವರಿಬ್ಬರೂ ಧರ್ಮದಲ್ಲಿಯೂ ಮತ್ತು ಸತ್ಯದಲ್ಲಿಯೂ ದಶರಥರಾಮನಿಗಿಂತಲೂ, ಗಯನಿಗಿಂತಲೂ ಕಡಿಮೆಯಿಲ್ಲ ಎನ್ನುವುದರಲ್ಲಿ ಸಂಶಯವಿಲ್ಲ.
ನ ಚೋಕ್ತವಂತಾವಶ್ರೇಯಃ ಪುರಸ್ತಾದಪಿ ಕಿಂಚನ |
ನ ಚಾಪ್ಯಪಕೃತಂ ಕಿಂಚಿದನಯೋರ್ಲಕ್ಷ್ಯತೇ ತ್ವಯಿ ॥7॥
ಇದಕ್ಕಿಂತ ಮೊದಲು ನಿನಗೆ ಎಂದೂ ಶ್ರೇಯಸ್ಸಾಗದಿರುವ ವಿಷಯವನ್ನು ಮಾತನಾಡಿಲ್ಲ ಅಥವಾ ನಿನಗೆ ಯಾವ ಅಪಕಾರವನ್ನೂ ಮಾಡಿಲ್ಲ.
ತಾವಿಮೌ ಪುರುಷವ್ಯಾಘ್ರಾವನಾಗಸಿ ನೃಪ ತ್ವಯಿ |
ನ ಮಂತ್ರಯೇತಾಂ ತ್ವಚ್ಛ್ರೇಯಃ ಕಥಂ ಸತ್ಯಪರಾಕ್ರಮೌ ॥8॥
ಅಂತಹ ಸತ್ಯಪರಾಕ್ರಮರಾದ ಪುರುಷವ್ಯಾಘ್ರರು ನಿರಪರಾಧಿಯಾದ ನಿನ್ನ ಬಳಿ ಶ್ರೇಯಸ್ಸಾಧನವಲ್ಲದುದನ್ನು ಹೇಗೆ ಹೇಳುತ್ತಾರೆ. (ನಿನ್ನ ಶ್ರೇಯಸ್ಸಾಧನವನ್ನು ಹೇಗೆ ಹೇಳದೇ ಇರುತ್ತಾರೆ)
ಪ್ರಜ್ಞಾವಂತೌ ನೃಪ ಶ್ರೇಷ್ಠಾವಸ್ಮಿಂಲ್ಲೋಕೇ ನರಾಧಿಪ |
ತ್ವನ್ನಿಮಿತ್ತಮತೋ ನೇಮೌ ಕಿಂಚಿಜ್ಜಿಹ್ಮಂ ವದಿಷ್ಯತಃ ॥9॥
ರಾಜನೇ, ಇವರಿಬ್ಬರೂ ಪ್ರಜ್ಞಾವಂತರು ಮತ್ತು ಈ ಲೋಕದಲ್ಲಿ ಶ್ರೇಷ್ಠರಾದವರು. ಆದ್ದರಿಂದ ನಿನ್ನ ನಿಮಿತ್ತದಿಂದಾಗಿ ಎಂದೂ ಕಪಟವನ್ನು ಮಾತನಾಡುವುದಿಲ್ಲ.
ಇತಿ ಮೇ ನೈಷ್ಠಿಕೀ ಬುದ್ಧಿರ್ವರ್ತತೇ ಕುರುನಂದನ |
ನ ಚಾರ್ಥಹೇತೋರ್ಧರ್ಮಜ್ಞೌ ವಕ್ಷ್ಯತಃ ಪಕ್ಷಸಂಶ್ರಿತಮ್ |
ಏತದ್ಧಿ ಪರಮಂ ಶ್ರೇಯೋ ಮೇನಾತೇ ತವ ಭಾರತ ॥10॥
ಕುರುನಂದನನೇ, ಇದು ನನ್ನ ನಿಶ್ಚಿತವಾದ ಅಭಿಪ್ರಾಯ. ಧರ್ಮಜ್ಞರಾದ ಇವರು ಧನದ ಸಲುವಾಗಿ ಪಕ್ಷವನ್ನು ವಹಿಸಿ ಮಾತನಾಡುವುದಿಲ್ಲ. ಭಾರತನೇ, ಅವರು ನಿನಗೆ ಯಾವುದು ಶ್ರೇಯಸ್ಸೆಂದು ತಿಳಿದಿದ್ದಾರೋ ಅದನ್ನೇ ಹೇಳಿದ್ದಾರೆ.
ಅಥ ತೇ ಹೃದಯೇ ರಾಜನ್ ವಿಶೇಷಸ್ತೇಷು ವರ್ತತೇ |
ಅಂತರಂ ಸ್ವಂವಿವೃಣ್ವಾನಾಃ ಶ್ರೇಯಃ ಕುರ್ಯುರ್ನ ತೇ ಧ್ರುವಮ್ ॥
ರಾಜನೇ, ನಿನ್ನ ಮನಸ್ಸಿನಲ್ಲಿ ಕೌರವರಿಗೂ ಮತ್ತು ಪಾಂಡವರಿಗೂ ಅಂತರವಿದೆ. ಮೊದಲೇ ಇರುವ ಅಂತರವನ್ನು ಯಾರು ಇನ್ನೂ ವಿಶಾಲಗೊಳಿಸುತ್ತಾರೋ ಅವರೆಂದೂ ನಿನಗೆ ಶ್ರೇಯಸ್ಸನ್ನು ಮಾಡುವುದಿಲ್ಲ ಎಂಬುದು ನಿಶ್ಚಿತ.
ಏತದರ್ಥಂ ಮಹಾತ್ಮಾನಾವಿಮೌ ರಾಜನ್ ಮಹಾದ್ಯುತೀ |

ನೋಚತುರ್ವಿವೃತಂ ಕಿಂಚಿನ್ನ ಹ್ಯೇಷ ತವ ನಿಶ್ಚಯಃ ॥12॥
ರಾಜನೇ, ಈ ಕಾರಣದಿಂದ ಮಹಾಕಾಂತಿಯುಳ್ಳ ಈ ಇಬ್ಬರು ಮಹಾನುಭಾವರು ನಿನ್ನ ಎದುರಿಗೆ ನಿನ್ನ ಮಗನ ದೋಷವನ್ನು ಸ್ಪಷ್ಟವಾಗಿ ಹೇಳಲಿಲ್ಲ. ಆದರೆ, ನಿನ್ನ ಮನಸ್ಸಿನಲ್ಲಿ ಅವರು ಹೇಳಿದ ನಿಶ್ಚಯವಿಲ್ಲ.
ತಥಾಪ್ಯಶಕ್ಯತಾಂ ತೇಷಾಮಾಹತುಃ ಪುರುಷರ್ಷಭೌ |
ತತ್ ತಥಾ ಪುರುಷವ್ಯಾಘ್ರ ತವ ತದ್ ಭದ್ರಮಸ್ತು ತೇ ॥13॥
ಈ ಪುರುಷರ್ಷಭರು ಪಾಂಡವರನ್ನು ಗೆಲ್ಲುವುದು ಅಶಕ್ಯವೆಂದು ಏನು ಹೇಳಿದರೋ ಅದು ಹಾಗೆಯೇ ಸರಿ. ಪುರುಷವ್ಯಾಘ್ರನೇ, ನಿನಗೆ ಮಂಗಳವಾಗಲಿ.
ಕಥಂ ಹಿ ಪಾಂಡವಃ ಶ್ರೀಮಾನ್ ಸವ್ಯಸಾಚೀ ಧನಂಜಯಃ |
ಶಕ್ಯೋ ಹಿ ಜೇತುಂ ಸಂಗ್ರಾಮೇ ರಾಜನ್ ಮಘವತಾಽಪಿ ಹಿ ॥14॥
ರಾಜನೇ, ಕಾಂತಿಯುಕ್ತನೂ, ಸವ್ಯಸಾಚಿಯೂ ಆದ ಪಾಂಡುಪುತ್ರನಾದ ಅರ್ಜುನನನ್ನು ಯುದ್ಧದಲ್ಲಿ ಇಂದ್ರನಾದರೂ ಸಹ ಹೇಗೆ ಗೆಲ್ಲುತ್ತಾನೆ?
ಭೀಮಸೇನೋ ಮಹಾಬಾಹುರ್ನಾಗಾಯುತಬಲೋ ಮಹಾನ್ |
ಕಥಂ ಹಿ ಯುಧಿ ಶಕ್ಯೇತ ವಿಜೇತುಮಮರೈರಪಿ ॥15॥
ಹತ್ತುಸಾವಿರ ಆನೆಗಳ ಬಲವುಳ್ಳ ಮಹಾಬಾಹುವಾದ ಉನ್ನತನಾದ ಭೀಮಸೇನನನ್ನು ಯುದ್ಧದಲ್ಲಿ ದೇವತೆಗಳಾದರೂ ಗೆಲ್ಲಲು ಹೇಗೆ ಸಾಧ್ಯ?
ತಥೈವ ಕೃತಿನೌ ಯುದ್ಧೇ ಯಮೌ ಯಮಸುತಾವಿವ |
ಕಥಂ ವಿಷಹಿತುಂ ಶಕ್ಯೋ ರಣೇ ಜೀವಿತುಮಿಚ್ಛತಾ ॥16॥
ಹಾಗೆಯೇ, ಯಮಸುತರಂತೆ ಯುದ್ಧದಲ್ಲಿ ಕುಶಲರಾದ ನಕುಲಸಹದೇವರನ್ನು ಬದುಕಲು ಬಯಸುವ ಯಾವನು ಯುದ್ಧದಲ್ಲಿ ಎದುರಿಸಲು ಸಾಧ್ಯ?
ಯಸ್ಮಿನ್ ಧೃತಿರನುಕ್ರೋಶಃ ಕ್ಷಮಾ ಸತ್ಯಂ ಪರಾಕ್ರಮಃ |
ನಿತ್ಯಾನಿ ಪಾಂಡವೇ ಜ್ಯೇಷ್ಠೇ ಸ ಜಯೀ ನ ಕಥಂ ರಣೇ ॥17॥
ಯಾವ ಪಾಂಡುಪುತ್ರನಾದ ಯುಧಿಷ್ಠಿರನಲ್ಲಿ ಧೈರ್ಯವೂ, ದಯೆಯೂ, ಕ್ಷಮೆಯೂ, ಸತ್ಯವೂ ಮತ್ತು ಪರಾಕ್ರಮವೂ ಯಾವಾಗಲೂ ಇವೆಯೋ, ಅಂತಹ ಪಾಂಡವಜ್ಯೇಷ್ಠನಾದ ಧರ್ಮರಾಜನು ಯುದ್ಧದಲ್ಲಿ ಹೇಗೆ ಜಯಿಸದೇ ಇರುತ್ತಾನೆ.
ಯೇಷಾಂ ಪಕ್ಷಧರೋ ರಾಮೋ ಯೇಷಾಂ ಮಂತ್ರೀ ಚ ಕೇಶವಃ |
ಕಿಂ ನು ತೈರಜಿತಂ ಸಂಖ್ಯೇ ಯೇಷಾಂ ಪಕ್ಷೇ ಚ ಸಾತ್ಯಕಿಃ ॥18॥
ಯಾರ ಪಕ್ಷದಲ್ಲಿ ಬಲರಾಮನು ಮಂತ್ರಿಯಾಗಿ ಕೇಶವನು ಮತ್ತು ಸಾತ್ಯಕಿಯೂ ಇರುತ್ತಾರೋ, ಅಂತಹವನು ಯುದ್ಧದಲ್ಲಿ ಗೆಲ್ಲಲಾರದುದು ಏನಿದೆ?
ದ್ರುಪದಃ ಶ್ವಶುರೋ ಯೇಷಾಂ ಯೇಷಾಂ ಸ್ಯಾಲಾಶ್ಚ ಪಾರ್ಷತಾಃ |
ಧೃಷ್ಟದ್ಯುಮ್ನಮುಖಾ ವೀರಾ ಭ್ರಾತರೋ ದ್ರುಪದಾತ್ಮಜಾಃ |
ಚೈದ್ಯಶ್ಚ ಯೇಷಾಂ ಭ್ರಾತಾ ಚ ಶಿಶುಪಾಲೋ ಮಹಾರಥಃ ॥19॥
ಸೋಽಶಕ್ಯತಾಂ ಚ ವಿಜ್ಞಾಯ ತೇಷಾಂ ಯುದ್ಧೇನ ಭಾರತ |
ದಾಯಾದ್ಯತಾಂ ಚ ಧರ್ಮೇಣ ಸಮ್ಯಕ್ ತೇಷು ಸಮಾಚರ ॥20॥
ಯಾರಿಗೆ ದ್ರುಪದನು ಮಾವನೋ, ಯಾರಿಗೆ ಧೃಷ್ಟದ್ಯುಮ್ನ ಮೊದಲಾದ ದ್ರುಪದನ ಮಕ್ಕಳೆಲ್ಲರೂ ಭಾವಂದಿರೋ, ಯಾರಿಗೆ ಮಹಾರಥನಾದ ಶಿಶುಪಾಲನು ಅಣ್ಣನಾಗಿದ್ದಾನೆಯೋ, ಅಂತಹವರನ್ನು ಯುದ್ಧದಲ್ಲಿ ಗೆಲ್ಲುವುದು ಅಸಾಧ್ಯವೆಂದು ತಿಳಿದು, ಅವರು ನಿನ್ನ ದಾಯಾದಿಗಳು ಎಂದೂ ತಿಳಿದುಕೊಂಡು ಅವರಲ್ಲಿ ಧರ್ಮದಿಂದ ನಡೆದುಕೋ.
ಇದಂ ನಿರ್ದಗ್ಧಮಯಶಃ ಪುರೋಚನಕೃತಂ ಮಹತ್ |
ತೇಷಾಮನುಗ್ರಹೇಣಾದ್ಯ ರಾಜನ್ ಪ್ರಕ್ಷಾಲಯಾತ್ಮನಃ ॥21॥
ರಾಜನೇ, ಪುರೋಚನನು ಮಾಡಿದ ಪಾಪಕೃತ್ಯದಿಂದ ಪಾಂಡವರು ಸುಟ್ಟುಹೋದರು ಎಂಬ ಮಾತಿನಿಂದ ಉಂಟಾದ ದೊಡ್ಡ ಅಪಕೀರ್ತಿಯನ್ನು ಈ ದಿನ ಪಾಂಡವರ ಮೇಲೆ ಅನುಗ್ರಹವನ್ನು ಮಾಡಿ ತೊಳೆದುಕೊ.
ತೇಷಾಮನುಗ್ರಹಶ್ಚಾಯಂ ಸರ್ವೇಷಾಂ ಚೈವ ನಃ ಕುಲೇ |
ಜೀವಿತೇ ಪರಮಂ ಶ್ರೇಯಃ ಕ್ಷತ್ರಸ್ಯ ಚ ವಿವರ್ಧನಮ್ ॥22॥
ಅವರಿಗೆ ಮಾಡುವ ಅನುಗ್ರಹವು ನಮ್ಮ ಕುಲದಲ್ಲಿರುವ ಎಲ್ಲರಿಗೂ ಶುಭದಾಯಕವಾಗುತ್ತದೆ. ಪಾಂಡವರು ಬದುಕಿದ್ದರೆ, ನಮಗೆ ಪರಮಶ್ರೇಯಸ್ಸೂ, ಕ್ಷತ್ರಿಯರಿಗೆ ಅಭಿವೃದ್ಧಿಯೂ ಉಂಟಾಗುತ್ತದೆ.
ದ್ರುಪದೋ ಹಿ ಮಹಾನ್ ರಾಜಾ ಕೃತವೈರಶ್ಚ ನಃ ಪುರಾ |
ತಸ್ಯ ಸಂಗ್ರಹಣಂ ಶ್ರೇಯಃ ಸ್ವಪಕ್ಷಸ್ಯ ಚ ವರ್ಧನಮ್ ॥23॥
ದ್ರುಪದನು ದೊಡ್ಡರಾಜ. ನಾವು ಹಿಂದೆ ಅವನಿಗೆ ವಿರೋಧವನ್ನು ಮಾಡಿದ್ದೇವೆ. ಅವನನ್ನು ನಮ್ಮ ಪಕ್ಷಕ್ಕೆ ಸೇರಿಸಿಕೊಳ್ಳುವುದು ಒಳ್ಳೆಯದು. ಅದರಿಂದ ನಮ್ಮ ಪಕ್ಷವೂ ಬೆಳೆಯುತ್ತದೆ.
ಬಲವಂತಶ್ಚ ದಾಶಾರ್ಹಾ ಬಹವಶ್ಚ ವಿಶಾಂಪತೇ |
ಯತಃ ಕೃಷ್ಣಸ್ತತಸ್ತೇ ಸ್ಯುರ್ಯತಃ ಕೃಷ್ಣಸ್ತತೋ ಜಯಃ ॥24॥
ರಾಜನೇ, ದಾಶಾರ್ಹರು ಬಲಿಷ್ಠರೂ ಮತ್ತು ಅನೇಕ ಸಂಖ್ಯೆಯಲ್ಲಿರುವವರು. ಕೃಷ್ಣನು ಎಲ್ಲಿರುತ್ತಾನೋ ಅಲ್ಲಿಯೇ ಅವರೂ ಇರುತ್ತಾರೆ.

ಕೃಷ್ಣನು ಎಲ್ಲಿರುತ್ತಾನೋ ಅಲ್ಲಿಯೇ ಜಯವೂ ಲಭಿಸುತ್ತದೆ.
ಯಚ್ಚ ಸಾಂತ್ವೇನ ಶಕ್ಯೇತ ಕಾರ್ಯಂ ಸಾಧಯಿತುಂ ನೃಪ |
ಕೋ ದೈವಶಪ್ತಸ್ತತ್ ಕರ್ತುಂ ವಿಗ್ರಹೇಣ ಸಮಾಚರೇತ್ ॥25॥
ರಾಜನೇ, ಯಾವ ಕಾರ್ಯಗಳನ್ನು ಸಮಾಧಾನದ ಮಾತುಗಳನ್ನಾಡಿ ಸಾಧಿಸಲು ಸಾಧ್ಯವೋ, ಅದನ್ನು ಯಾವ ದೈವಶಪ್ತನು ವಿರೋಧದಿಂದ ಸಂಪಾದಿಸಲು ಬಯಸುತ್ತಾನೆ.
ಶ್ರುತ್ವಾ ಚ ಜೀವತಃ ಪಾರ್ಥಾನ್ ಪೌರಜಾನಪದಾ ಜನಾಃ |
ಅಭವನ್ ಮುದಿತಾ ವೃದ್ಧಸ್ತೇಷಾಂ ರಾಜನ್ ಕುರು ಪ್ರಿಯಮ್ ॥26॥
ಪಾಂಡವರು ಬದುಕಿದ್ದಾರೆಂದು ಕೇಳಿ ಪೌರಜಾನಪದರೆಲ್ಲರೂ ಸಂತೋಷವನ್ನು ಪಟ್ಟರು. ರಾಜನೇ, ವೃದ್ಧನಾದ ನೀನು ಅವರಿಗೆ ಪ್ರಿಯವನ್ನು ಮಾಡು.
ದುರ್ಯೋಧನಶ್ಚ ಕರ್ಣಶ್ಚ ಶಕುನಿಶ್ಚಾಪಿ ಸೌಬಲಃ |
ಅಧರ್ಮಾಶ್ಚಾಪಿ ದುಷ್ಪ್ರಜ್ಞಾ ಬಾಲಾ ಮೈಷಾಂ ವಚಃ ಕೃಥಾಃ ॥27॥
ದುರ್ಯೋಧನ, ಕರ್ಣ ಮತ್ತು ಶಕುನಿ ಇವರು ಅಧರ್ಮರತರಾದ ದುರ್ಬುದ್ಧಿಯುಳ್ಳ ಬಾಲಕರು. ಅವರ ಮಾತಿನಂತೆ ನಡೆಯಬೇಡ.
ಉಕ್ತಮೇತನ್ಮಯಾ ರಾಜನ್ ಪುರಾ ಗುಣವತಸ್ತವ |
ದುರ್ಯೋಧನಾಪರಾಧೇನ ಪ್ರಜೇಯಂ ತವ ನಶ್ಯತಿ ॥28॥
ರಾಜನೇ, ಗುಣವಂತನಾದ ನಿನಗೆ ನಾನು ಹಿಂದೆಯೇ ಈ ವಿಷಯವನ್ನು ಹೇಳಿದ್ದೇನೆ. ದುರ್ಯೋಧನನ ಅಪರಾಧದಿಂದ ನಿನ್ನ ಸಂತಾನವು ನಾಶವಾಗುತ್ತಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಷಡಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಆರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ಇತ್ಯುಕ್ತವತ್ಯನು ತಥೇತ್ಯವದನ್ನದೀಜೋ
ದ್ರೋಣಃ ಕೃಪಶ್ಚ ವಿದುರಂ ಸ ನೃಪೋಽಪ್ಯುವಾಚ |
ಯಾಹ್ಯಾನಯೇತಿ ಸ ಚ ವೇಗವತಾ ರಥೇನ
ತತ್ರಾಗಮತ್ ತದನು ತೈರಭಿಪೂಜಿತಶ್ಚ ॥178॥
ವಿದುರ ಹೀಗೆ ಹೇಳಿದಾಗ ಭೀಷ್ಮದ್ರೋಣಕೃಪರು ಹಾಗೆ ಮಾಡುವುದೇ ಯುಕ್ತ ಎಂದರು. ಧೃತರಾಷ್ಟ್ರ ವಿದುರನಿಗೆ ಹೇಳಿದ. `ನೀನೇ ಹೋಗು ಅವರನ್ನು ಕರೆದು ಬಾ'. ಒಡನೆ ವಿದುರ ವೇಗದ ರಥವೇರಿ ಪಾಂಚಾಲನಗರಕ್ಕೆ ಹೋದ. ಅಲ್ಲಿ ಪಾಂಡವರಿಂದ ಸತ್ಕೃತನಾದ.
ತತ್ಕಾಲ ಏವ ವಸುದೇವಸುತಶ್ಚ ಕೃಷ್ಣೋ
ವ್ಯಾಸಶ್ಚ ತಾನುಪಸಮೇತ್ಯ ದುರಂತಶಕ್ತೀ |
ಆದಾಯ ಕುಂತಿಸಹಿತಾನ್ ವಿದುರೇಣ ಯುಕ್ತೌ
ನಾಗಾಹ್ವಯಂ ಪುರಮಿತಾಂ ಸಹ ಭಾರ್ಯಯೈವ ॥179॥
ಅದೇ ಕಾಲದಲ್ಲಿ ಅನಂತಶಕ್ತಿಯುಳ್ಳ ಶ್ರೀಕೃಷ್ಣ ಮತ್ತು ವೇದವ್ಯಾಸರು ಪಾಂಡವರಲ್ಲಿಗೆ ಬಂದ ವಿದುರನೊಂದಿಗೆ ಸೇರಿದರು. ಪಾಂಡವರನ್ನು ಕುಂತಿ ಮತ್ತು ದ್ರೌಪದಿಯರೊಂದಿಗೆ ಹಸ್ತಿನಾವತಿಗೆ ಕರೆತಂದರು.
* * * *
ಇನ್ನೂರ ಏಳನೆಯ ಅಧ್ಯಾಯ
(ಪಾಂಡವರನ್ನು ತರಲು ಪಾಂಚಾಲದೇಶಕ್ಕೆ ವಿದುರನ ಪ್ರಯಾಣ. ಅಲ್ಲಿ ಅವನ ಮಧುರವಚನಗಳು)
ಧೃತರಾಷ್ಟ್ರಃ
ಭೀಷ್ಮಃ ಶಾಂತನವಶ್ಚೈವ ದ್ರೋಣಶ್ಚೈವ ಮಹಾಮತಿಃ |
ಹಿತಂ ಪರಮಕಂ ವಾಕ್ಯಂ ತ್ವಂ ಚ ಸತ್ಯಂ ಬ್ರವೀಷಿ ಮಾಮ್ ॥1॥
ಶಂತನುವಿನ ಪುತ್ರರಾದ ಭೀಷ್ಮರು, ಮಹಾಮತಿಗಳಾದ ದ್ರೋಣರು, ಮತ್ತು ನೀನು ಸತ್ಯವಾಗಿ ಪರಮಹಿತವನ್ನೇ ಹೇಳುತ್ತಿದ್ದೀರಿ.
ಯಥೈವ ಪಾಂಡೋರ್ಸ್ತೇ ವೀರಾಃ ಕುಂತೀಪುತ್ರಾ ಮಹಾಬಲಾಃ |
ತಥೈವ ಧರ್ಮತಃ ಸರ್ವೇ ಮಮ ಪುತ್ರಾ ನ ಸಂಶಯಃ ॥2॥
ಕುಂತೀಪುತ್ರರಾದ ಮಹಾಬಲರಾದ, ವೀರರಾದ ಪಾಂಡವರು ಹೇಗೋ, ನನಗೆ ಧರ್ಮದ ದೃಷ್ಟಿಯಿಂದ ನನ್ನ ಎಲ್ಲಾ ಪುತ್ರರೂ ಹಾಗೆಯೇ. ಇದರಲ್ಲಿ ಸಂಶಯವಿಲ್ಲ.
ಯಥೈವ ಮಮ ಪುತ್ರಾಣಾಮಿದಂ ರಾಜ್ಯಂ ವಿಧೀಯತೇ |
ತಥೈವ ಪಾಂಡುಪುತ್ರಾಣಾಮಿದಂ ರಾಜ್ಯಮಸಂಶಯಮ್ ॥3॥
ಹೇಗೆ ನನ್ನ ಪುತ್ರರಿಗೆ ಈ ರಾಜ್ಯವು ಪ್ರಾಪ್ತವಾಗುತ್ತದೋ ಹಾಗೆಯೇ, ಪಾಂಡುಪುತ್ರರಿಗೆ ನಿಸ್ಸಂಶಯವಾಗಿ ಈ ರಾಜ್ಯವು ಪ್ರಾಪ್ತವಾಗುತ್ತದೆ.

ಕ್ಷತ್ತರಾನಯ ಗಚ್ಛೈತಾನ್ ಸಹ ಮಾತ್ರಾ ಸುಸತ್ಕೃತಾನ್ |

ತಯಾ ಚ ದೇವರೂಪಿಣ್ಯಾ ಕೃಷ್ಣಯಾ ಸಹ ಭಾರತ ॥4॥
ವಿದುರನೇ, ನೀನು ಹೋಗಿ ತಾಯಿಯಾದ ಕುಂತಿಯನ್ನು ಮತ್ತು ಪಾಂಡವರನ್ನು ಸತ್ಕರಿಸಿ ದೇವರೂಪಿಣಿಯಾದ ಕೃಷ್ಣೆಯ ಜೊತೆಯಲ್ಲಿ ಅವರನ್ನು ಕರೆದುಕೊಂಡು ಬಾ.
ದಿಷ್ಟ್ಯಾ ಜೀವಂತಿ ತೇ ಪಾರ್ಥಾ ದಿಷ್ಟ್ಯಾ ಜೀವತಿ ಸಾ ಪೃಥಾ |
ದಿಷ್ಟ್ಯಾ ದ್ರುಪದಕನ್ಯಾಂ ಚ ಲಬ್ಧವಂತೋ ಮಹಾರಥಾಃ ॥5॥
ದೇವರ ದಯೆಯಿಂದ ಪಾಂಡವರು ಬದುಕಿದ್ದಾರೆ ಮತ್ತು ಕುಂತಿಯು ಬದುಕಿದ್ದಾಳೆ. ದೇವರ ದಯೆಯಿಂದ ಮಹಾರಥರಾದ ಪಾಂಡವರು ದ್ರುಪದಪುತ್ರಿಯನ್ನು ಪಡೆದಿದ್ದಾರೆ.
ದಿಷ್ಟ್ಯಾ ವರ್ಧಾಮಹೇ ಸರ್ವೇ ದಿಷ್ಟ್ಯಾ ಶಾಂತಃ ಪುರೋಚನಃ |
ದಿಷ್ಟ್ಯಾ ಮಮ ಪರಂ ದುಃಖಮಪನೀತಂ ಮಹಾದ್ಯುತೇ |
ತ್ವಮೇವ ಗತ್ವಾ ವಿದುರ ತಾನಿಹಾನಯ ಮಾಚಿರಮ್ ॥6॥
ದೇವರ ದಯೆಯಿಂದ ನಾವೆಲ್ಲರೂ ಅಭಿವೃದ್ಧಿಯನ್ನು ಹೊಂದುತ್ತಿದ್ದೇವೆ. ದೇವರ ದಯೆಯಿಂದಲೇ ಪುರೋಚನನು ನಾಶವನ್ನು ಹೊಂದಿದ್ದಾನೆ. ಮಹಾದ್ಯುತಿಯಾದ ವಿದುರನೇ, ದೇವರ ದಯೆಯಿಂದ ನನ್ನ ಪರಮದುಃಖವು ಪರಿಹಾರವಾಯಿತು. ನೀನೇ ಹೋಗಿ ಅವರನ್ನು ಶೀಘ್ರವಾಗಿ ಇಲ್ಲಿಗೆ ಕರೆದುಕೊಂಡು ಬಾ.
ವೈಶಂಪಾಯನಃ
ಏವಮುಕ್ತಸ್ತತಃ ಕ್ಷತ್ತಾ ರಥಮಾರುಹ್ಯ ಶೀಘ್ರಗಮ್ |
ಅಗಾತ್ ಕತಿಪಯಾಹೋಭಿಃ ಪಾಂಚಾಲಾನ್ ರಾಜಧರ್ಮವಿತ್ ॥7॥
ಧೃತರಾಷ್ಟ್ರನು ಹೀಗೆ ಹೇಳುತ್ತಿರಲು ರಾಜಧರ್ಮವನ್ನು ತಿಳಿದ ವಿದುರನು ಶೀಘ್ರಗಾಮಿಯಾದ ರಥವನ್ನು ಏರಿ ಕೆಲವು ದಿವಸಗಳು ಪ್ರಯಾಣಮಾಡಿ ಪಾಂಚಾಲದೇಶವನ್ನು ಸೇರಿದನು.
ತತೋ ಜಗಾಮ ವಿದುರೋ ಧೃತರಾಷ್ಟ್ರಸ್ಯ ಶಾಸನಾತ್ |
ಸಕಾಶಂ ಯಜ್ಞಸೇನಸ್ಯ ಪಾಂಡವಾನಾಂ ಚ ಭಾರತ ॥8॥
ಭಾರತನೇ, ಅನಂತರ ಧೃತರಾಷ್ಟ್ರನ ಶಾಸನದಂತೆ ವಿದುರನು ಯಜ್ಞಸೇನ ಮತ್ತು ಪಾಂಡವರ ಬಳಿಗೆ ಹೋದನು.
ಆಗತಂ ವಿದುರಂ ಶ್ರುತ್ವಾ ದ್ರುಪದೋ ರಾಜಸತ್ತಮಃ |
ಸ್ವಪುತ್ರೈಃ ಸಹ ಧರ್ಮಾತ್ಮಾ ಪೂಜಯಾಮಾಸ ಧರ್ಮತಃ ॥9॥
ವಿದುರನು ಬಂದುದನ್ನು ಕೇಳಿದ ಧರ್ಮಾತ್ಮನಾದ ರಾಜಶ್ರೇಷ್ಠನಾದ ದ್ರುಪದನು, ತನ್ನ ಸುತರಿಂದೊಡಗೂಡಿ ಅವನನ್ನು ಧರ್ಮದಿಂದ ಪೂಜಿಸಿದನು.
ತತ್ರ ಗತ್ವಾ ಚ ಧರ್ಮಜ್ಞಃ ಸರ್ವಶಾಸ್ತ್ರವಿಶಾರದಃ |
ದ್ರುಪದಂ ನ್ಯಾಯತೋ ರಾಜನ್ ಸಂಯುಕ್ತಮುಪತಸ್ಥಿವಾನ್ ॥10॥
ರಾಜನೇ, ಸರ್ವಶಾಸ್ತ್ರವಿಶಾರದನೂ ಮತ್ತು ಧರ್ಮಜ್ಞನೂ ಆದ ವಿದುರನು, ನ್ಯಾಯದಿಂದ ದ್ರುಪದನನ್ನು ಸಂಧಿಸಿ, ಅವನ ಸಮೀಪದಲ್ಲಿ ಕುಳಿತನು.
ಸ ಚಾಪಿ ಪ್ರತಿಜಗ್ರಾಹ ಧರ್ಮೇಣ ವಿದುರಂ ತತಃ |
ಚಕ್ರೇ ಪೂಜಾಂ ಯಥಾನ್ಯಾಯಂ ವಿದುರಸ್ಯ ಮಹಾತ್ಮನಃ ॥11॥
ಆಗ ದ್ರುಪದನೂ ಸಹ ಮಹಾತ್ಮನಾದ ವಿದುರನನ್ನು ಧರ್ಮದಿಂದ ಸ್ವೀಕರಿಸಿ, ಅವನಿಗೆ ಶಾಸ್ತ್ರವಿಧಾನದಂತೆ ಪೂಜೆಯನ್ನು ಮಾಡಿದನು.
ಚಕ್ರತುಶ್ಚ ಯಥಾನ್ಯಾಯಂ ಕುಶಲಪ್ರಶ್ನಸಂವಿದಮ್ |
ದದರ್ಶ ಪಾಂಡವಾಂಸ್ತತ್ರ ವಾಸುದೇವಂ ಚ ಭಾರತ ॥12॥
ಭಾರತನೇ, ಅವರು ಅಲ್ಲಿ ಪರಸ್ಪರವಾಗಿ ಯಥೋಚಿತವಾಗಿ ಕುಶಲಪ್ರಶ್ನೆಯನ್ನು ಮಾಡಿದರು. ವಿದುರನು ಅಲ್ಲಿ ಪಾಂಡವರನ್ನೂ ಮತ್ತು ಕೃಷ್ಣನನ್ನೂ ನೋಡಿದನು.
ತತಃ ಸ್ನೇಹಾತ್ ಪರಿಷ್ವಜ್ಯ ಪಪ್ರಚ್ಛಾನಾಮಯಂ ತತಃ |
ವಚನಾದ್ ಧೃತರಾಷ್ಟ್ರಸ್ಯ ಸ್ನೇಹಯುಕ್ತಂ ಪುನಃ ಪುನಃ |
ತೈಶ್ಚಾಪ್ಯಮಿತಬುದ್ಧಿಃ ಸ ಪೂಜಿತೋಽಥ ಯಥಾಕ್ರಮಮ್ ॥13॥
ಆಗ ಅವನು ಪಾಂಡವರನ್ನು ಪ್ರೀತಿಯಿಂದ ಆಲಿಂಗಿಸಿ, ಧೃತರಾಷ್ಟ್ರನ ಮಾತಿನಂತೆ, ಸ್ನೇಹದಿಂದ ಮತ್ತೆ ಮತ್ತೆ ಅವರ ಕ್ಷೇಮವನ್ನು ಕೇಳಿದನು. ಅಮಿತಬುದ್ಧಿಯಾದ ವಿದುರನು ಪಾಂಡವರಿಂದಲೂ ಯಥಾಕ್ರಮವಾಗಿ ಪೂಜಿಸಲ್ಪಟ್ಟನು.
ಪಾಂಡವಾ ವಿನಯೋಪೇತಾ ನತ್ವಾಽಽಲಿಂಗ್ಯ ವಿಶಾಂಪತೇ |
ದೃಷ್ಟ್ವಾ ಮುಹುರ್ಮುಹೂ ರಾಜನ್ ಹರ್ಷಾದಶ್ರೂಣ್ಯವರ್ತಯನ್ ॥14॥
ರಾಜನೇ, ವಿನಯಶೀಲರಾದ ಪಾಂಡವರು, ವಿದುರನಿಗೆ ನಮಸ್ಕರಿಸಿ ಅವನನ್ನುಆಲಿಂಗಿಸಿ ಮತ್ತೆ ಮತ್ತೆ ಅವನನ್ನು ನೋಡಿ ಸಂತೋಷದಿಂದ ಕಣ್ಣೀರನ್ನು ಸುರಿಸಿದರು.
ದೃಷ್ಟ್ವಾ ಕುಶಲಿನಶ್ಚೈತಾನ್ ತತಸ್ತಾನ್ ಪಾಂಡುನಂದನಾನ್ |
ಪ್ರದದೌ ಚಾಪಿ ರತ್ನಾನಿ ವಿವಿಧಾನಿ ವಸೂನಿ ಚ ॥15॥
ಅನಂತರ ವಿದುರನು ಪಾಂಡವರು ಕ್ಷೇಮದಿಂದ ಇರುವುದನ್ನು ನೋಡಿ, ಅವರಿಗೆ ಅನೇಕ ವಿಧವಾದ ರತ್ನಗಳನ್ನೂ ಮತ್ತು ಧನವನ್ನೂ ಕೊಟ್ಟನು.

ಪಾಂಡವಾನಾಂ ಚ ಕುಂತ್ಯಾಶ್ಚ ದ್ರೌಪದ್ಯಾಶ್ಚ ವಿಶೇಷತಃ |
ದ್ರುಪದಸ್ಯ ಚ ಪುತ್ರಾಣಾಂ ತಥಾ ದತ್ತಾನಿ ಕೌರವ್ಯೈಃ ||16||
ಪಾಂಡವರಿಗೂ, ಕುಂತಿಗೂ ಮತ್ತು ವಿಶೇಷವಾಗಿ ದ್ರೌಪದಿಗೂ ಮತ್ತು ದ್ರುಪದನ ಮಕ್ಕಳಿಗೂ ಕೌರವರು ಕೊಟ್ಟ ಅನೇಕ ರತ್ನಗಳನ್ನು ಕೊಟ್ಟನು.
ಸಂಕರ್ಷಣಂ ವಾಸುದೇವಂ ಪ್ರಣಮ್ಯ ವಿದುರಸ್ತತಃ |
ಆಸನೇ ಕಾಂಚನೇ ಶುಭ್ರೇ ನಿಷಸಾದ ಮಹಾಮತಿಃ ||17||
ಅನಂತರ ಮಹಾಮತಿಯಾದ ವಿದುರನು ಬಲರಾಮನಿಗೂ ಮತ್ತು ಕೃಷ್ಣನಿಗೂ ನಮಸ್ಕಾರವನ್ನು ಮಾಡಿ, ಸುವರ್ಣಮಯವಾದ ಪೀಠದಲ್ಲಿ ಕುಳಿತುಕೊಂಡನು.
ಕೃತ್ವಾ ಮಿಥಸ್ತು ಸಂಲ್ಲಾಪಂ ಮುದಾ ಪುನರಭಾಷತ |
ಭೀಷ್ಮದ್ರೋಣಾಜಮೀಢೈಶ್ಚ ಯದುಕ್ತಂ ಪಾಂಡವಾನ್ ಪ್ರತಿ |
ಅವದತ್ ತತ್ರ ತತ್ಸರ್ವಂ ಸರ್ವೇಷಾಮೇವ ಶೃಣ್ವತಾಮ್ ||18||
ಪರಸ್ಪರವಾಗಿ ಸಂತೋಷದಿಂದ ಮಾತನಾಡಿ ವಿದುರನು ಸಂತೋಷದಿಂದ ಭೀಷ್ಮದ್ರೋಣಧೃತರಾಷ್ಟ್ರರು ಪಾಂಡವರಿಗೆ ತಿಳಿಸಬೇಕೆಂದು ಹೇಳಿದ ವಿಷಯಗಳನ್ನು ಮಾತನಾಡಿದನು. ಅವನು ಎಲ್ಲವನ್ನೂ ಎಲ್ಲರೂ ಕೇಳುವಂತೆಯೇ ಮಾತನಾಡಿದನು.
ಪ್ರೋವಾಚ ಚಾಮಿತಪ್ರಜ್ಞಃ ಪ್ರಶ್ರಿತಂ ವಿನಯಾನ್ವಿತಮ್ |
ದ್ರುಪದಂ ಪಾಂಡುಪುತ್ರಾಣಾಂ ಸನ್ನಿಧೌ ಕೇಶವಸ್ಯ ಚ ||19||
ಅಮಿತಪ್ರಜ್ಞನಾದ ವಿದುರನು ಪಾಂಡವರ ಮತ್ತು ಕೃಷ್ಣರ ಸನ್ನಿಧಿಯಲ್ಲಿ ವಿನಯದಿಂದ ನಿಂತ ದ್ರುಪದನನ್ನು ಕುರಿತು ಹೀಗೆ ಹೇಳಿದನು.
ರಾಜನ್ ಶೃಣು ಸಹಾಮಾತ್ಯಃ ಸಪುತ್ರಶ್ಚ ವಚೋ ಮಮ |
ಧೃತರಾಷ್ಟ್ರಃ ಸಪುತ್ರಂ ತ್ವಾಂ ಸಹಾಮಾತ್ಯಂ ಸಬಾಂಧವಮ್ ||20||
ಅಬ್ರವೀತ್ ಕುಶಲಂ ರಾಜನ್ ಪ್ರೀಯಮಾಣಃ ಪುನಃ ಪುನಃ |
ಪ್ರೀತಿಮಾಂಸ್ತೇ ದೃಢಂ ಚಾಸೀತ್ ಸಂಬಂಧೇನ ನರಾಧಿಪ ||21||
ರಾಜನೇ, ನೀನು ಮತ್ತು ನಿನ್ನ ಮಕ್ಕಳು ನನ್ನ ಮಾತುಗಳನ್ನು ಕೇಳಿ, ಧೃತರಾಷ್ಟ್ರನು ತನ್ನ ಮಕ್ಕಳು ಮತ್ತು ಮಂತ್ರಿಗಳು ಮತ್ತು ಬಾಂಧವರ ಜೊತೆಯಲ್ಲಿ ಸಂತೋಷದಿಂದ ತನ್ನ ಕುಶಲವನ್ನು ಹೇಳಿಕಳಿಸಿದ್ದಾನೆ. ರಾಜನೇ, ನಿನ್ನ ಸಂಬಂಧದಿಂದ ಬಹಳ ಸಂತೋಷವಾಯಿತೆಂದು ಪುನಃ ಪುನಃ ಹೇಳಿದ್ದಾನೆ.
ಅಥ ಭೀಷ್ಮಃ ಶಾಂತನವಃ ಕೌರವ್ಯೈಃ ಸಹ ಸರ್ವಶಃ |
ಕುಶಲಂ ತ್ವಾಂ ಮಹೇಶ್ವಾಸಃ ಸರ್ವತಃ ಪರಿಪೃಚ್ಛತಿ ||22||
ಮತ್ತು ಶಂತನುವಿನ ಮಗನಾದ ವೀರನಾದ ಭೀಷ್ಮನು ಎಲ್ಲಾ ಕೌರವರ ಜೊತೆಯಲ್ಲಿ ನಿಮ್ಮೆಲ್ಲರ ಕುಶಲವನ್ನು ಕೇಳುತ್ತಿದ್ದಾನೆ.
ಭಾರದ್ವಾಜೋ ಮಹಾಪ್ರಾಜ್ಞೋ ದ್ರೋಣಃ ಪ್ರಿಯಸಖಸ್ತವ |
ಸಮಾಶ್ಲೇಷಮುಪೇತ್ಯ ತ್ವಾಂ ಕುಶಲಂ ಪರಿಪೃಚ್ಛತಿ ||23||
ಮಹಾಪ್ರಾಜ್ಞರಾದ ನಿನ್ನ ಪ್ರಿಯಸ್ನೇಹಿತರಾದ, ಭರದ್ವಾಜರ ಪುತ್ರರಾದ ದ್ರೋಣರು ನಿನ್ನನ್ನು ಆಲಿಂಗಿಸಿ ನಿನ್ನ ಕುಶಲವನ್ನು ಕೇಳುತ್ತಿದ್ದಾರೆ.
ಧೃತರಾಷ್ಟ್ರಸ್ತು ಪಾಂಚಾಲ್ಯ ತ್ವಯಾ ಸಂಬಂಧಮೇಯಿವಾನ್ |
ಕೃತಾರ್ಥಂ ಮನ್ಯತೇ ತ್ಮಾನಂ ತಥಾ ಸರ್ವೇಽಪಿ ಕೌರವಾಃ ||24||
ಪಾಂಚಾಲರಾಜನೇ, ಧೃತರಾಷ್ಟ್ರನು ನಿನ್ನ ಸಂಬಂಧವನ್ನು ಹೊಂದಿದವನಾಗಿ ತನ್ನನ್ನೂ ಮತ್ತು ಎಲ್ಲಾ ಕೌರವರನ್ನೂ ಕೃತಾರ್ಥರನ್ನಾಗಿ ಭಾವಿಸಿದ್ದಾನೆ.
ನ ತಥಾ ರಾಜ್ಯಸಂಪ್ರಾಪ್ತಿಸ್ತೇಷಾಂ ಪ್ರೀತಿಕರಾ ಮತಾ |
ಯಥಾ ಸಂಬಂಧಕಂ ಪ್ರಾಪ್ಯ ಯಜ್ಞಸೇನ ತ್ವಯಾ ಸಹ ||25||
ಯಜ್ಞಸೇನನೇ, ನಿನ್ನ ಸಂಬಂಧದಿಂದ ಕೌರವರಿಗೆ ಎಂತಹ ಸಂತೋಷವುಂಟಾಗಿದೆಯೋ, ಅಂತಹ ಸಂತೋಷವು ಅವರಿಗೆ ರಾಜ್ಯಪ್ರಾಪ್ತಿಯಿಂದಲೂ ಉಂಟಾಗಿಲ್ಲ.
ಏತದ್ ವಿದಿತ್ವಾ ತು ಭವಾನ್ ಪ್ರಸ್ಥಾಪಯತು ಪಾಂಡವಾನ್ |
ದ್ರಷ್ಟುಂ ಹಿ ಪಾಂಡುದಾಯಾದಾನ್ ತ್ವರಂತೇ ಕುರವೋ ಭೃಶಮ್ ||26||
ಇದನ್ನು ತಿಳಿದ ನೀನು ಪಾಂಡವರನ್ನು ಇಲ್ಲಿಂದ ಕಳುಹಿಸಿಕೊಡಬೇಕು. ಕುರುಗಳು ಪಾಂಡುಪುತ್ರರನ್ನು ನೋಡಲು ಬಹಳ ಕಾತುರರಾಗಿದ್ದಾರೆ.
ವಿಪ್ರೋಷಿತಾ ದೀರ್ಘಕಾಲಮೇತೇ ಚಾಪಿ ನರರ್ಷಭಾಃ |
ಉತ್ಸುಕಾ ನಾಗರಾ ದ್ರಷ್ಟುಂ ಭವಿಷ್ಯಂತಿ ಪೃಥಾಂ ತಥಾ ||27||
ಈ ನರರ್ಷಭರು ಹಸ್ತಿನಪುರವನ್ನು ಬಿಟ್ಟು ಬಹಳ ಸಮಯವಾಯಿತು. ನಗರವಾಸಿಗಳು ಇವರನ್ನು ಮತ್ತು ಕುಂತಿಯನ್ನು ನೋಡಲು ಉತ್ಸುಕರಾಗಿದ್ದಾರೆ.
ಕೃಷ್ಣಾಮಪಿ ಚ ಪಾಂಚಾಲೀಂ ಸರ್ವಾಸ್ತಾಃ ಕೌರವಸ್ತ್ರಿಯಃ |
ದ್ರಷ್ಟುಕಾಮಾಃ ಪ್ರತೀಕ್ಷಂತೇ ಪುರಂ ಚ ವಿಷಯಂ ಚ ನಃ ||28||
ಎಲ್ಲಾ ಕೌರವಸ್ತ್ರೀಯರು ಪಾಂಚಾಲರಾಜಕುಮಾರಿಯಾದ ಕೃಷ್ಣೆಯನ್ನು ನೋಡಲು ಬಯಸಿ ಅವಳ ನಿರೀಕ್ಷಣೆಯಲ್ಲಿದ್ದಾರೆ.

ಪಾಂಡವರೂ ಸಹ ಹಸ್ತಿನಪುರವನ್ನೂ ಮತ್ತು ಕುರುಜಾಂಗಲವನ್ನೂ ನೋಡುವ ಆಸೆಯುಳ್ಳವರಾಗಿದ್ದಾರೆ.
ಸ ಭವಾನ್ ಪಾಂಡುಪುತ್ರಾಣಾಮಾಜ್ಞಾಪಯತು ಮಾಚಿರಮ್ |
ಗಮನಂ ಸಹದಾರಾಣಾಮೇತದಾಗಮನಂ ಮಮ ॥29॥
ಅಂತಹ ನೀನು ಪಾಂಡುಪುತ್ರರಿಗೆ ಪತ್ನಿಯ ಜೊತೆಯಲ್ಲಿ ಇಲ್ಲಿಂದ ಶೀಘ್ರವಾಗಿ ಹೊರಡುವಂತೆ ಆಜ್ಞಾಪಿಸು. ಇದು ಇಲ್ಲಿಗೆ ನನ್ನ ಆಗಮನದ ಉದ್ದೇಶ.
ನಿಸೃಷ್ಟೇಷು ತ್ವಯಾ ರಾಜನ್ ಪಾಂಡವೇಷು ಮಹಾತ್ಮಸು |
ತತೋಽಹಂ ಪ್ರೇಷಯಿಷ್ಯಾಮಿ ಧೃತರಾಷ್ಟ್ರಸ್ಯ ಶೀಘ್ರಗಾನ್ |
ಆಗಮಿಷ್ಯಂತಿ ಕೌಂತೇಯಾಃ ಕುಂತೀ ಚ ಸಹ ಕೃಷ್ಣಯಾ ॥30॥
ರಾಜನೇ, ನೀನು ಮಹಾತ್ಮರಾದ ಪಾಂಡವರಿಗೆ ಆದೇಶವನ್ನು ನೀಡಿದರೆ, ನಾನು ಧೃತರಾಷ್ಟ್ರನ ಆಜ್ಞೆಯಂತೆ ಶೀಘ್ರಗಾಮಿಯಾದ ರಥಗಳನ್ನು ಕಳುಹಿಸುವೆನು. ಪಾಂಡುಪುತ್ರರೂ ಮತ್ತು ಕುಂತಿಯೂ ಕೃಷ್ಣೆಯ ಜೊತೆಯಲ್ಲಿ ಹಸ್ತಿನಪುರಕ್ಕೆ ಬರುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಏಳನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ತೇಷ್ವಾಗತೇಷು ಸುಮಹಾನಭವತ್ ಪ್ರಹರ್ಷಃ
ಪೌರಸ್ಯ ಜಾನಪದಿಕಸ್ಯ ಜನಸ್ಯ ಚೋಚ್ಚೈಃ |
ಭೀಷ್ಮಾದಿಕಾಶ್ಚ ಮುದಿತಾಃ ಪ್ರತಿಪೂಜ್ಯ ಗೇಹ-
ಮಾವೇಶಯನ್ ಸಹ ನೃಪೇಣ ಮಹೋತ್ಸವೇನ ॥180॥
ಪಾಂಡವರು ಬಂದುದನ್ನು ಕಂಡು ನಾಗರಿಕರಿಗೂ, ಹಳ್ಳಿಯ ಜನರಿಗೂ ಬಹಳ ಸಂತೋಷವಾಯಿತು. ಭೀಷ್ಮ ಮುಂತಾದವರಿಗೆ ಮಹಾ ಆನಂದ. ಅವರು ಧೃತರಾಷ್ಟ್ರ ಸಮೇತರಾಗಿ ಪಾಂಡವರನ್ನು ಉಪಚರಿಸಿ ಮಹಾ ಸಂಭ್ರಮದಿಂದ ಧೃತರಾಷ್ಟ್ರನ ಅರಮನೆಯೊಳಗೆ ಪ್ರವೇಶ ಮಾಡಿಸಿದರು.
ಕೃಷ್ಣಾಮಪೂಜಯದತೀವ ಚ ಸೌಬಲೀ ಸಾ
ದುರ್ಯೋಧನಸ್ಯ ದಯಿತಾ ಸಹಿತಾತ್ರ ತೇಽಪಿ |
ಊಷುಸ್ತತಶ್ಚ ನಿಜಪುತ್ರಕದುರ್ವಿನೀತ್ಯಾ
ಕೃಷ್ಣಾನಿಮಿತ್ತಮುರುಭೀತಿತ ಆಹ ಭೀಮಾತ್ ॥181॥
ಗಾಂಧಾರಿಯೂ ದುರ್ಯೋಧನನ ಮಡದಿಯಾದ ಭಾನುಮತಿಯೂ ದ್ರೌಪದಿಯನ್ನು ಬಹಳ ಉಪಚರಿಸಿದರು. ಅಂದಿನಿಂದ ಪಾಂಡವರು ಧೃತರಾಷ್ಟ್ರನ ಮನೆಯಲ್ಲಿಯೆ ವಾಸ ಮಾಡಿದರು. ಬಳಿಕ ಗಾಂಧಾರಿ ತನ್ನ ದುಷ್ಟಪುತ್ರನ ದುರ್ನಡತೆಯಿಂದ ದ್ರೌಪದಿಯ ನಿಮಿತ್ತವಾಗಿ ಅವನಿಗೆ ಭೀಮನಿಂದ ಅಪಾಯ ಬಂದೀತೆಂಬ ಮಹಾಭಯದಿಂದ ಕುಂತಿಗೆ ಹೇಳಿದಳು.
ಕುಂತಿ ಪ್ರಯಾಹಿ ಸಹಿತಾ ಸ್ನುಷಯಾ ಗೃಹಂ ಸ್ವಂ
ಭೀಮಾದ್ ಬಿಭೇಮಿ ನಿಜಪುತ್ರಕದುರ್ವಿನೀತ್ಯಾ |
ಕೃಷ್ಣಾ ತ್ರಿಲೋಕವನಿತಾಧಿಕರೂಪಸಾರಾ
ಯಸ್ಮಾದಿತಿ ಸ್ಮ ಸಸುತಾ ಪ್ರಯಯೌ ಗೃಹಂ ಸಾ ॥182॥
ಕುಂತಿ! ನೀನು ನಿನ್ನ ಸೊಸೆಯೊಂದಿಗೆ ನಿನ್ನ ಮನೆಗೇ ಹೋಗು. ನನ್ನ ಕೆಟ್ಟ ಮಗನ ದುನಡತೆಯಿಂದಾಗಿ ನಾನು ಭೀಮನಿಗೆ ಅಂಜುತ್ತೇನೆ. ಏಕೆಂದರೆ ದ್ರೌಪದಿ ಮೂಲ್ಲೋಕದ ಎಲ್ಲ ಸ್ತ್ರೀಯರಿಗಿಂತ ಹೆಚ್ಚಿನ ರೂಪಸೌಂದರ್ಯದಿಂದ ಉತ್ತಮಳೆನಿಸಿದವಳು'. ಗಾಂಧಾರಿ ಹೀಗೆ ಹೇಳಿದಾಗ ಕುಂತಿ ಮಕ್ಕಳೊಂದಿಗೆ ತನ್ನ ಮನೆಗೇ ಹೋದಳು.
* * * *
ಇನ್ನೂರ ಎಂಟನೆಯ ಅಧ್ಯಾಯ
(ಹಸ್ತಿನಪುರಕ್ಕೆ ಪಾಂಡವರ ಆಗಮನ, ಪೌರರ ಹರ್ಷ.)
ದ್ರುಪದಃ
ಏವಮೇತನ್ಮಹಾಪ್ರಾಜ್ಞ ಯಥಾಽಽತ್ಥ ವಿದುರಾದ್ಯ ಮಾಮ್ |
ಮಮಾಪಿ ಪರಮೋ ಹರ್ಷಃ ಸಂಬಂಧೇಽಸ್ಮಿನ್ ಕೃತೇ ವಿಭೋ ॥1॥
ಮಹಾಪ್ರಾಜ್ಞನಾದ ವಿದುರನೇ, ನೀನು ಈ ದಿನ ನನಗೆ ಹೇಳಿದಂತೆಯೇ ಎಲ್ಲವೂ ಸರಿ. ವಿಭುವೇ, ನನಗೂ ಕೌರವರ ಈ ಸಂಬಂಧದಿಂದ ಪರಮಹರ್ಷವಾಗಿದೆ.
ಗಮನಂ ಚಾಪಿ ಯುಕ್ತಂ ಸ್ಯಾದ್ ಗೃಹಮೇಷಾಂ ಮಹಾತ್ಮನಾಮ್ |
ನ ತು ತಾವನ್ಮಯಾ ಯುಕ್ತಮೇತದ್ ವಕ್ತುಂ ಸ್ವಯಾ ಗಿರಾ ॥2॥
ಈ ಮಹಾನುಭಾವರು ತಮ್ಮ ಮನೆಗಳಿಗೆ ಹೋಗುವುದು ಉಚಿತವಾದದ್ದು. ಆದರೆ, ನಾನಾಗಿಯೇ ಆ ಮಾತನ್ನು ಹೇಳಬಾರದು.
ಯದಾ ತು ಮನ್ಯತೇ ವೀರಾಃ ಕುಂತೀಪುತ್ರೋ ಯುಧಿಷ್ಠಿರಃ |
ಭೀಮಸೇನಾರ್ಜುನೌ ಚೈವ ಯಮೌ ಚ ಪುರುಷರ್ಷಭೌ ॥3॥
ರಾಮಕೃಷ್ಣೌ ಚ ಧರ್ಮಜ್ಞೌ ತದಾ ಗಚ್ಛಂತು ಪಾಂಡವಾಃ |

ಏತೌ ಹಿ ಪುರುಷವ್ಯಾಘ್ರಾವೇಷಾಂ ಪ್ರಿಯಹಿತೇ ರತೌ ॥4॥
ಕುಂತೀಪುತ್ರನಾದ ಯುಧಿಷ್ಠಿರನು, ಭೀಮಾರ್ಜುನರು, ಪುರುಷಶ್ರೇಷ್ಠರಾದ ನಕುಲಸಹದೇವರು, ಧರ್ಮಜ್ಞರಾದ ರಾಮಕೃಷ್ಣರು, ಯಾವಾಗ ಬಯಸುತ್ತಾರೋ, ಆಗ ಪಾಂಡವರು ಹೊರಡಲಿ. ಪುರುಷವ್ಯಾಘ್ರರಾದ ರಾಮಕೃಷ್ಣರು ಯಾವಾಗಲೂ ಪಾಂಡವರ ಹಿತದಲ್ಲಿಯೇ, ಆಸಕ್ತರಾದವರು.
ಯುಧಿಷ್ಠಿರಃ
ಪರವಂತೋ ವಯಂ ರಾಜಂಸ್ತ್ವಯಿ ಸರ್ವೇ ಸಹಾನುಗಾಃ।
ಯಥಾ ವಕ್ಷ್ಯಸಿ ನಃ ಪ್ರೀತ್ಯಾ ಚರಿಷ್ಯಾಮಸ್ತಥಾ ವಯಮ್ ॥5॥
ರಾಜನೇ, ನಾನು ಮತ್ತು ನನ್ನ ಅನುಚರರೆಲ್ಲರೂ ನಿನಗೆ
ಅಧೀನರಾಗಿದ್ದೇವೆ. ನೀನು ನಮಗೆ ಸಂತೋಷದಿಂದ ಯಾವತ್ತು ಹೇಳುತ್ತೀಯೋ ಆ ದಿನ ನಾವು ಹೊರಡುವೆವು.
ವೈಶಂಪಾಯನಃ
ತತೋಽಬ್ರವೀದ್ ವಾಸುದೇವೋ ಗಮನಂ ಮಮ ರೋಚತೇ।
ಯಥಾಽಯಂ ಮನ್ಯತೇ ರಾಜಾ ದ್ರುಪದಃ ಸರ್ವಧರ್ಮವಿತ್ ॥6॥
ಆಗ ವಾಸುದೇವನು ಸರ್ವಧರ್ಮವನ್ನು ತಿಳಿದ ದ್ರುಪದನು ಅಭಿಪ್ರಾಯಪಡುವಂತೆ ನನಗೂ ಪಾಂಡವರ ಗಮನವು ಇಷ್ಟವಾಗಿದೆ.
ದ್ರುಪದಃ
ಯಥೈತನ್ಮನ್ಯತೇ ವೀರೋ ದಾಶಾರ್ಹಃ ಪುರುಷೋತ್ತಮಃ।
ಪ್ರಾಪ್ತಕಾಲಂ ಮಹಾಬಾಹುಃ ಸಾ ಬುದ್ಧಿರ್ನಿಶ್ಚಿತಾ ಮಮ ॥7॥
ಪುರುಷೋತ್ತಮನೂ, ವೀರನೂ, ಮಹಾಬಾಹುವೂ, ದಾಶಾರ್ಹನೂ ಆದ ಕೃಷ್ಣನು ಹೇಗೆ ಯೋಚಿಸುತ್ತಾನೋ, ಅದರಂತೆ ನಡೆದು-ಕೊಳ್ಳಬೇಕೆಂಬುದು ನನ್ನ ನಿಶ್ಚಿತವಾದ ಬುದ್ಧಿ.
ಯಥೈವ ಹಿ ಮಹಾಭಾಗಾಃ ಕೌಂತೇಯಾ ಮಮ ಸಾಂಪ್ರತಮ್।
ತಥೈವ ವಾಸುದೇವಸ್ಯ ಪಾಂಡುಪುತ್ರಾ ನ ಸಂಶಯಃ ॥8॥
ಮಹಾನುಭಾವರಾದ ಪಾಂಡವರು ಈಗ ನನಗೆ ಹೇಗೋ, ವಾಸುದೇವನಿಗೂ ಹಾಗೆಯೇ ಎಂಬುವುದರಲ್ಲಿ ಸಂಶಯವಿಲ್ಲ.
ನ ತದ್ ಧ್ಯಾಯತಿ ಕೌಂತೇಯಃ ಪಾಂಡುಪುತ್ರೋ ಮಹಾಮನಾಃ।
ಯದ್ಯೇಷಾಂ ಪುರುಷವ್ಯಾಘ್ರಃ ಶ್ರೇಯೋ ಧಾಸ್ಯತಿ ಕೇಶವಃ ॥9॥
ಪುರುಷವ್ಯಾಘ್ರನಾದ ಕೇಶವನು ಯಾವಾಗಲೂ ಇವರಿಗೆ ಶ್ರೇಯಸ್ಸನ್ನೇ ಉಂಟುಮಾಡುವುದರಿಂದ ಪಾಂಡುಪುತ್ರನಾದ ಮಹಾ ಮನುಸ್ಸುಳ್ಳ
ಯುಧಿಷ್ಠಿರನು ಅದರ ವಿಷಯದಲ್ಲಿ ತಾನು ಯೋಚನೆಯನ್ನೇ ಮಾಡುವುದಿಲ್ಲ.
ವೈಶಂಪಾಯನಃ
ಪೃಥಾಯಾಸ್ತು ತತೋ ವೇಶ್ಮ ಪ್ರವಿವೇಶ ಮಹಾದ್ಯುತಿಃ।
ಪಾದೌ ಸ್ಪೃಷ್ಟ್ವಾ ಪೃಥಾಯಾಸ್ತು ಶಿರಸಾ ಚ ಮಹೀಂ ಗತಃ।
ದೃಷ್ಟ್ವಾ ತು ದೇವರಂ ಕುಂತೀ ಶುಶೋಚ ಚ ಮುಹುರ್ಮುಹುಃ ॥
ಮಹಾದ್ಯುತಿಯಾದ ವಿದುರನು ಅನಂತರ ಕುಂತಿಯ ಮನೆಗೆ ಬಂದನು. ಅವಳ ಪಾದಗಳನ್ನು ಮುಟ್ಟಿ ಅವಳಿಗೆ ಶಿರಸಾ ನಮಸ್ಕಾರವನ್ನು ಮಾಡಿದನು. ತನ್ನ ಮೈದುನನನ್ನು ನೋಡಿದ ಕುಂತಿಯು ಪುನಃ ಪುನಃ ಶೋಕಪಟ್ಟಳು.
ಕುಂತೀ
ವೈಚಿತ್ರವೀರ್ಯ ತೇ ಪುತ್ರಾಃ ಕಥಾಂಚಿಜ್ಜೀವಿತಾಸ್ತ್ವಯಾ।
ತ್ವತ್ಪ್ರಸಾದಾಜ್ಜತುಗೃಹೇ ತ್ರಾತಾಃ ಪ್ರತ್ಯಾಗತಾಸ್ತವ ॥11॥
ವಿಚಿತ್ರವೀರ್ಯನ ಪುತ್ರನಾದ ವಿದುರನೇ, ನಿನ್ನ ಮಕ್ಕಳು ನಿನ್ನ ನಿಮಿತ್ತದಿಂದಲೇ ಹೇಗೋ ಜೀವಿಸಿದ್ದಾರೆ. ನಿನ್ನ ಅನುಗ್ರಹದಿಂದಲೇ, ಅರಗಿನಮನೆಯಿಂದ ಮುಕ್ತರಾಗಿ ಈ ದಿನ ನಿನ್ನ ಬಳಿಗೆ ಬಂದಿದ್ದಾರೆ.
ಕೂರ್ಮಶ್ಚಿಂತಯತೇ ಪುತ್ರಾನ್ ಯತ್ರ ವಾ ತತ್ರ ವಾ ಗತಾನ್।
ಚಿಂತಯಾ ವರ್ಧಯೇತ್ ಪುತ್ರಾನ್ ಯಥಾ ಕುಶಲಿನಸ್ತಥಾ।
ತವ ಪುತ್ರಾಸ್ತು ಜೀವಂತಿ ತ್ವದ್ಭಕ್ತ್ಯಾ ಭರತರ್ಷಭ ॥12॥
ಕೂರ್ಮವು ತನ್ನ ಮರಿಗಳು ಎಲ್ಲೆಲ್ಲಿ ಹೋಗಿದ್ದರೂ ಅವುಗಳನ್ನು ಧ್ಯಾನದಿಂದಲೇ ಬೆಳೆಸುತ್ತದೆ. ಕುಶಲಿಗಳಾದ ನೀವೂ ಸಹ ಹಾಗೆಯೇ. ಭರತರ್ಷಭನೇ, ನಿನ್ನ ಮಕ್ಕಳು ನಿನ್ನ ಅನುರಾಗದಿಂದ ಮತ್ತು ಅಂಗೀಕಾರದಿಂದ ಜೀವಿಸಿದ್ದಾರೆ.
ಯಥಾ ಪರಭೃತಃ ಪುತ್ರಾನ್ ಅರಿಷ್ಟಾ ವರ್ಧಯೇತ್ ಸದಾ।
ತಥೈವ ತವ ಪುತ್ರಾಸ್ತು ಮಯಾ ತಾತ ಸುರಕ್ಷಿತಾಃ ॥13॥
ದುಃಖಾಸ್ತು ಬಹವಃ ಪ್ರಾಪ್ತಾಸ್ತಥಾ ಪ್ರಾಣಾಂತಿಕಾ ಮಯಾ।
ಅತಃ ಪರಂ ನ ಜಾನಾಮಿ ಕರ್ತವ್ಯಂ ಜ್ಞಾತುಮರ್ಹಸಿ ॥14॥
ಹೇಗೆ ಕೋಗಿಲೆಯ ಮರಗಳನ್ನು ಕಾಗೆಗಳು ಬೆಳೆಸುತ್ತವೆಯೋ ಹಾಗೆ ನಿನ್ನ ಮಕ್ಕಳನ್ನು ನಾನು ರಕ್ಷಿಸಿದ್ದೇನೆ. ನಾನು ಅನೇಕ ಪ್ರಾಣಾಂತಿಕವಾದ ವಿಪತ್ತುಗಳನ್ನು ಅನುಭವಿಸಿದೆ. ಇನ್ನು ಮುಂದೆ ಏನು ಮಾಡಬೇಕೆಂದು ತಿಳಿದಿಲ್ಲ. ಅದನ್ನು ನೀನೇ ಹೇಳಬೇಕು.
ವೈಶಂಪಾಯನಃ
ಇತ್ಯೇವಮುಕ್ತ್ವಾ ದುಃಖಾರ್ತಾ ಶುಶೋಚ ಪರಮಾತುರಾ।

ಪ್ರಣಿಪತ್ಯಾಬ್ರವೀತ್ ಕ್ಷತ್ತಾ ಮಾ ಶೋಚ ಇತಿ ಭಾರತ ॥15॥
ಭಾರತನೇ, ಹೀಗೆ ಹೇಳಿ ದುಃಖಾರ್ತಳಾಗಿ ಕುಂತಿಯು ಪರಮಾತುರಳಾಗಿ ಶೋಕಪಟ್ಟಳು. ವಿದುರನು ಅವಳಿಗೆ ನಮಸ್ಕರಿಸಿ ಶೋಕಪಡಬೇಡ ಎಂದು ಹೇಳಿದನು.
ವಿದುರಃ
ನ ವಿನಶ್ಯಂತಿ ಲೋಕೇಷು ತವ ಪುತ್ರಾ ಮಹಾಬಲಾಃ |
ನಚಿರೇಣೈವ ಕಾಲೇನ ಸ್ವರಾಜ್ಯಸ್ಥಾ ಭವಂತಿ ತೇ |
ಬಾಂಧವೈಃ ಸಹಿತಾಃ ಸರ್ವೈರ್ಮಾ ಶೋಕಂ ಕುರು ಮಾಧವಿ ॥16॥
ಮಹಾಬಲರಾದ ನಿನ್ನ ಪುತ್ರರು ಲೋಕದಲ್ಲಿ ನಾಶವನ್ನು ಹೊಂದುವುದಿಲ್ಲ. ಅಲ್ಪಕಾಲದಲ್ಲಿಯೇ ಅವರು ತಮ್ಮ ಎಲ್ಲಾ ಬಾಂಧವರ ಜೊತೆಯಲ್ಲಿ ತಮ್ಮರಾಜ್ಯವನ್ನು ಪಡೆಯುತ್ತಾರೆ. ಮಾಧವಿ, ಶೋಕವನ್ನು ಮಾಡಬೇಡ.
ವೈಶಂಪಾಯನಃ
ತತಸ್ತೈಃ ಸಮನುಜ್ಞಾತಾ ದ್ರುಪದೇನ ಮಹಾತ್ಮನಾ |
ಪಾಂಡವಾಶ್ಚೈವ ಕೃಷ್ಣಶ್ಚ ವಿದುರಶ್ಚ ಮಹಾಮತಿಃ ॥17॥
ಆದಾಯ ದ್ರೌಪದೀಂ ಕೃಷ್ಣಾಂ ಕುಂತೀಂ ಚೈವ ಯಶಸ್ವಿನೀಮ್ |
ಸವಿಹಾರಂ ಸುಖಂ ಜಗ್ಮುರ್ನಗರಂ ನಾಗಸಾಹ್ವಯಮ್ ॥18॥
ಅನಂತರ ಮಹಾತ್ಮನಾದ ದ್ರುಪದನಿಂದ ಅನುಜ್ಞೆಯನ್ನು ಪಡೆದ ಪಾಂಡವರು, ಕೃಷ್ಣನೂ, ಮಹಾಮತಿಯಾದ ವಿದುರನೂ, ದ್ರುಪದನ ಮಗಳಾದ ಕೃಷ್ಣೆಯನ್ನೂ, ಯಶಸ್ವಿನಿಯಾದ ಕುಂತಿಯನ್ನೂ ಕರೆದುಕೊಂಡು ವಿಹಾರಪೂರ್ವಕವಾಗಿ ಸುಖದಿಂದ ಹಸ್ತಿನಪುರಕ್ಕೆ ಹೊರಟರು.
ಸುವರ್ಣಕಕ್ಷ್ಯಾಗ್ರೈವೇಯಾನ್ ಸುವರ್ಣಾಂಕುಶಭೂಷಿತಾನ್ |
ಜಾಂಬೂನದಪರಿಷ್ಕಾರಾನ್ ಪ್ರಭಿನ್ನಕರಟಾಮುಖಾನ್ ॥19॥
ಅಧಿಷ್ಠಿತಾನ್ ಮಹಾಮಾತ್ರೈಃ ಸರ್ವಶಸ್ತ್ರಸಮನ್ವಿತಾನ್ |
ಸಹಸ್ರಂ ಪ್ರದದೌ ರಾಜಾ ನಾಗಾನಾಂ ವರವರ್ಣಿನಾಮ್ ॥20॥
ದ್ರುಪದನು ಪಾಂಡವರು ಹೊರಡುವಾಗ ಸೊಂಟದಲ್ಲಿ ಮತ್ತು ಕತ್ತಿನಲ್ಲಿ ಚಿನ್ನದ ಸರಪಣಿಗಳನ್ನುಳ್ಳ, ಚಿನ್ನದ ಅಂಕುಶದ ಜೊತೆಯಲ್ಲಿ ಚಿನ್ನದ ಆಭರಣಗಳಿಂದ ಅಲಂಕೃತವಾದ, ಮಾವುತರಿಂದ ಅಧಿಷ್ಠಿತವಾದ ಸರ್ವಶಸ್ತ್ರಸಮನ್ವಿತವಾದ, ಶ್ರೇಷ್ಠವಾದ ವರ್ಣವುಳ್ಳ, ಸಹಸ್ರ ಮದಗಜಗಳನ್ನು ಕೊಟ್ಟನು.
ರಥಾನಾಂ ಚ ಸಹಸ್ರಂ ವೈ ಸುವರ್ಣಮಣಿಚಿತ್ರಿತಮ್ |
ಚತುರ್ಯುಜಾಂ ಭಾನುಮಚ್ಚ ಪಂಚಾನಾಂ ಪ್ರದದೌ ತದಾ ॥21॥
ಸುವರ್ಣಮಣಿಗಳಿಂದ ಅಲಂಕೃತವಾದ, ನಾಲ್ಕು ಕುದುರೆಗಳನ್ನು ಹೂಡುವ, ಪ್ರಕಾಶಮಾನವಾದ ಸಹಸ್ರರಥಗಳನ್ನು ಐದೂ ಜನರಿಗೂ ಪ್ರತ್ಯೇಕವಾಗಿಕೊಟ್ಟನು.
ಪುನಃ ಸುವರ್ಣವರ್ಹಾಣಾಂ ವರಚಾಮರಮಾಲಿನಾಮ್ |
ಜಾತ್ಯಶ್ವಾನಾಂ ಚ ಪಂಚಾಶತ್ಸಹಸ್ರಂ ಪ್ರದದೌ ನೃಪಃ ॥22॥
ಪುನಃ ಸುವರ್ಣಮಯವಾದ ಬರ್ಹಾಲಂಕಾರಗಳಿಂದ ಭೂಷಿತವಾದ, ಶ್ರೇಷ್ಠವಾದ ಚಾಮರ ಮತ್ತು ಮಾಲೆಗಳಿಂದ ಕೂಡಿದ ಐವತ್ತುಸಾವಿರ ಜಾತ್ಯಶ್ವಗಳನ್ನು ಕೊಟ್ಟನು.
ದಾಸೀನಾಮಯುತಂ ರಾಜಾ ಪ್ರದದೌ ವರಭೂಷಣಾಮ್ |
ತತಃ ಸಹಸ್ರಂ ದಾಸಾನಾಂ ಪ್ರದದೌ ವರಧನ್ವಿನಾಮ್ ॥23॥
ರಾಜನು ಭೂಷಣಗಳಿಂದ ಅಲಂಕೃತರಾದ ಹತ್ತುಸಹಸ್ರದಾಸಿಯರನ್ನು ಕೊಟ್ಟನು. ಹಾಗೆಯೇ, ಧನುರ್ಧಾರಿಗಳಾದ ಸಹಸ್ರದಾಸರನ್ನೂ ಕೊಟ್ಟನು.
ಹೈಮಾನಿ ಶಯ್ಯಾಸನಭಾಜನಾನಿ
ದ್ರವ್ಯಾಣಿ ಚಾನ್ಯಾನಿ ಚ ಗೋಧನಾನಿ |
ಪೃಥಕ್ಪೃಥಕ್ ಚೈವ ದದೌ ಸ ಕೋಟಿಂ
ಪಾಂಚಾಲರಾಜಃ ಪರಮಪ್ರಹೃಷ್ಟಃ ॥24॥
ಹಾಗೆಯೇ ಸುವರ್ಣಮಯವಾದ ಶಯ್ಯಾಸನಗಳನ್ನೂ, ಪಾತ್ರೆಗಳನ್ನೂ, ಬೇರೆ ದ್ರವ್ಯಗಳನ್ನೂ, ಪಾಂಚಾಲರಾಜನು ಪರಮಸಂತೋಷದಿಂದ ಪ್ರತಿಯೊಬ್ಬರಿಗೂ ಕೋಟಿಸಂಖ್ಯೆಯಲ್ಲಿ ಕೊಟ್ಟನು.
ಶಿಬಿಕಾನಾಂ ಶತಂ ಪೂರ್ಣಂ ವಾಹಾನ್ ಪಂಚಶತಂ ವರಾನ್ |
ಏವಮೇತಾನಿ ಪಾಂಚಾಲೋ ಜನ್ಯರ್ಥೇ ಪ್ರದದೌ ಧನಮ್ ॥25॥
ಹಾಗೆಯೇ, ಪಾಂಚಾಲನು ಪೂರ್ಣವಾದ ನೂರು ಶಿಬಿಕೆಗಳನ್ನೂ, ಐನೂರು ಶ್ರೇಷ್ಠವಾದ ವಾಹನಗಳನ್ನೂ, ಪರಿಜನರಿಂದ ಕೂಡಿದ ಧರ್ಮರಾಜನಿಗೆ ಧನವಾಗಿ ಕೊಟ್ಟನು.
ಹರಣಂ ಚಾಪಿ ಪಾಂಚಾಲ್ಯಾ ಜ್ಞಾತಿದೇಯಂ ತು ಸೌಮಕಿಃ |
ಧೃಷ್ಟದ್ಯುಮ್ನೋ ಯಯೌ ತತ್ರ ಭಗಿನೀಂ ಗೃಹ್ಯ ಭಾರತ ॥26॥
ಸೋಮಕರಾಜನ ಕುಲದಲ್ಲಿ ಬಂದ ದ್ರುಪದನು ಪತಿಯ ಮನೆಗೆ ಹೊರಡುವಾಗ ಮಗಳಿಗೆ ಕೊಡಬೇಕಾದ ಎಲ್ಲಾ ದ್ರವ್ಯಗಳನ್ನೂ ಕೊಟ್ಟನು. ಭಾರತನೇ, ಆಗ ಧೃಷ್ಟದ್ಯುಮ್ನನು ತಂಗಿಯನ್ನು ಕರೆದುಕೊಂಡು ಹೊರಟನು.

ನಾನದ್ಯಮಾನೇ ಬಹುಭಿಸ್ತೂರ್ಯಶಬ್ದೈಃ ಸಹಸ್ರಶಃ |
ಶ್ರುತ್ವಾ ಚೋಪಸ್ಥಿತಾನ್ ವೀರಾನ್ ಧೃತರಾಷ್ಟ್ರೋಽಂಬಿಕಾಸುತಃ ||27||
ಪ್ರತಿಗ್ರಹಾಯ ಪಾಂಡೂನಾಂ ಪ್ರೇಷಯಾಮಾಸ ಕೌರವಾನ್ |
ವಿಕರ್ಣಂ ಚ ಮಹೇಶ್ವಾಸಂ ಚಿತ್ರಸೇನಂ ಚ ಭಾರತ |
ದ್ರೋಣಂ ಚ ಪರಮೇಷ್ವಾಸಂ ಗೌತಮಂ ಕೃಪಮೇವ ಚ ||28||
ಎಲ್ಲ ಕಡೆಗಳಲ್ಲಿಯೂ ಸಹಸ್ರಸಂಖ್ಯೆಯಲ್ಲಿ ಶಂಖತೂರ್ಯಾದಿ- ವಾದ್ಯಗಳು ಮೊಳಗುತ್ತಿರುವುದನ್ನು ಕೇಳಿ ಅಂಬಿಕಾಸುತನಾದ ಧೃತರಾಷ್ಟ್ರನು ವೀರರಾದ ಪಾಂಡವರು ಹತ್ತಿರವೇ ಬರುತ್ತಿದ್ದಾರೆ ಎಂದು ತಿಳಿದು ಪಾಂಡವರನ್ನು ಸ್ವೀಕರಿಸಲು ವಿಕರ್ಣನನ್ನೂ, ಚಿತ್ರಸೇನನನ್ನೂ, ದ್ರೋಣರನ್ನೂ, ಮಹಾಧನುಷ್ಕರಾದ ಮತ್ತು ಕೃಪಾಚಾರ್ಯರನ್ನೂ ಕಳುಹಿಸಿದನು.
ತೈಸ್ತೈಃ ಪರಿವೃತಾ ವೀರಾಃ ಶೋಭಮಾನಾ ಮಹಾರಥಾಃ |
ನಗರಂ ಹಸ್ತಿನಪುರಂ ಶನೈಃ ಪ್ರವಿವಿಶುಸ್ತದಾ ||29||
ಮಹಾರಥರಾದ, ವೀರರಾದ ಪೌಂಡವರು, ಕೌರವಸೈನ್ಯದಿಂದಲೂ, ಪಾಂಚಾಲಸೈನ್ಯದಿಂದಲೂ ಪರಿವೃತರಾಗಿ ನಿಧಾನವಾಗಿ ಹಸ್ತಿನಪುರವನ್ನು ಪ್ರವೇಶಿಸಿದರು.
ಪಾಂಡವಾನಾಗತಾನ್ ಶ್ರುತ್ವಾ ನಾಗರಾಸ್ತು ಕುತೂಹಲಾತ್ |
ಮಂಡಯಾಂಚಕ್ರಿರೇ ತತ್ರ ನಗರಂ ನಾಗಸಾಹ್ವಯಮ್ |
ಮುಕ್ತಾಪುಷ್ಪಾವಕೀರ್ಣಂ ತು ಜಲಸಿಕ್ತಂ ಚ ಸರ್ವತಃ ||30||
ಪಾಂಡವರು ಬರುತ್ತಿರುವುದನ್ನು ಕೇಳಿ, ನಗರವಾಸಿಗಳು ಸಂಭ್ರಮದಿಂದ ಹಸ್ತಿನಪುರವನ್ನು ಅಲಂಕರಿಸಿದರು. ಎಲ್ಲ ಕಡೆಗಳಲ್ಲಿಯೂ ನೀರಿನಿಂದ ತೊಳೆದು, ಮುತ್ತು ಪುಷ್ಪಗಳನ್ನು ಹರಡಿದ್ದರು.
ಧೂಪಿತಂ ದಿವ್ಯಧೂಪೇನ ಮಂಗಲ್ಯೈಶ್ಚಾಭಿಸಂವೃತಮ್ |
ಪತಾಕೋಚ್ಛ್ರಿತಮಾಲ್ಯಂ ಚ ಪುರಮಪ್ರತಿಮಂ ಬಭೌ ||31||
ದಿವ್ಯಧೂಪಗಳಿಂದ ಮತ್ತು ಮಂಗಳಪದಾರ್ಥಗಳಿಂದ ಉನ್ನತವಾದ ಪತಾಕೆ ಮತ್ತು ಮಾಲೆಗಳಿಂದ ಕೂಡಿದ ಆ ಪಟ್ಟಣವು ಅಸದೃಶವಾಗಿ ಮೆರೆಯಿತು.
ಶಂಖಭೇರೀನಿನಾದೈಶ್ಚ ನಾನಾವಾದಿತ್ರನಿಸ್ವನೈಃ |
ಕೌತೂಹಲೇನ ನಗರಂ ಪೂಜ್ಯಮಾನಮಿವಾಭವತ್ ||32||
ಶಂಖಭೇರೀನಾದಗಳಿಂದಲೂ, ನಾನಾವಾದಿತ್ರಘೋಷಗಳಿಂದಲೂ, ಜನರ ವಿಸ್ಮಯದಿಂದಲೂ, ಕೂಡಿದ ಆ ನಗರವೇ ಪೂಜಿಸಲ್ಪಡುವಂತೆ ತೋರುತ್ತಿತ್ತು.
ಯತ್ರ ತೇ ಪುರುಷವ್ಯಾಘ್ರಾಃ ಶೋಕದುಃಖಾಪಕರ್ಷಕಾಃ |
ನಿರ್ಗತಾಶ್ಚ ಪುರಾತ್ ಪೂರ್ವಂ ಧೃತರಾಷ್ಟ್ರಪ್ರಬಾಧಿತಾಃ ||33||
ಪುನರ್ನಿವೃತ್ತಾ ದಿಷ್ಟ್ಯಾ ವೈ ಸಹ ಮಾತ್ರಾ ಪರಂತಪಾಃ |
ಇತ್ಯೇವಮೀರಿತಾ ವಾಚೋ ಜನೈಃ ಪ್ರಿಯಚಿಕೀರ್ಷುಭಿಃ ||34||
ಶೋಕದುಃಖಗಳನ್ನು ಪರಿಹಾರಮಾಡುವ ಆ ಪುರುಷವ್ಯಾಘ್ರರು ಮೊದಲು ಧೃತರಾಷ್ಟ್ರನಿಂದ ಬಾಧಿಸಲ್ಪಟ್ಟು ಯಾವ ಪಟ್ಟಣದಿಂದ ಹೊರಗೆ ಹೋಗಿದ್ದರೋ, ದೇವರ ದಯೆಯಿಂದ ಪರಂತಪರಾದ ಅವರು ತಾಯಿಯ ಜೊತೆಯಲ್ಲಿ ಅಲ್ಲಿಗೇ ಹಿಂದಿರುಗಿದ್ದಾರೆ ಎಂಬ ಪ್ರಿಯಕಾರಿಗಳಾದ ಜನರ ಮಾತುಗಳು ಕೇಳಿಬಂದವು.
ತತ ಉಚ್ಚಾವಚಾ ವಾಚಃ ಪ್ರಿಯಾಃ ಸರ್ವತ್ರ ಭಾರತ |
ಉದೀರಿತಾ ಆಶೃಣ್ವಂತ ಪಾಂಡವಾ ಹೃದಯಂಗಮಾಃ ||35||
ಭಾರತನೇ, ಪಾಂಡವರು ಎಲ್ಲಾ ಕಡೆಯಲ್ಲಿಯೂ ಇಂತಹ ಶ್ರೇಷ್ಠವಾದ ಮತ್ತು ಕನಿಷ್ಠವಾದ ಹೃದಯಂಗಮವಾದ ಪ್ರಿಯವಚನಗಳನ್ನು ಕೇಳಿದರು.
ಪೌರಾಃ
ಅಯಂ ಸ ಪುರುಷವ್ಯಾಘ್ರಃ ಪುನರಾಯಾತಿ ಧರ್ಮವಿತ್ |
ಯೋ ನಃ ಸ್ವಾನಿವ ದಾಯಾದಾನ್ ಧರ್ಮೇಣ ಪರಿರಕ್ಷತಿ ||36||
ಈ ಧರ್ಮಜ್ಞನಾದ ಪುರುಷವ್ಯಾಘ್ರನು ಪುನಃ ನಗರಕ್ಕೆ ಬರುತ್ತಿದ್ದಾನೆ. ಅವನು ನಮ್ಮನ್ನು ತನ್ನ ಮಕ್ಕಳಂತೆ ಧರ್ಮದಿಂದ ನೋಡಿಕೊಳ್ಳುತ್ತಾನೆ.
ಅದ್ಯ ಪಾಂಡುರ್ಮಹಾರಾಜೋ ವನಾದಿಹ ಮನಃಪ್ರಿಯಃ |
ಆಗತಃ ಪ್ರಿಯಮಸ್ಮಾಕಂ ಚಿಕೀರ್ಷುರ್ನಾತ್ರ ಸಂಶಯಃ ||37||
ಮನೋಹರನಾದ ಪಾಂಡುಮಹಾರಾಜನು ಈ ದಿನ ನಮಗೆ ಪ್ರಿಯವನ್ನುಂಟುಮಾಡಲು ಕಾಡಿನಿಂದ ಮರಳಿ ಬಂದಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ.
ಕಿಂ ನ್ವದ್ಯ ಸುಕೃತಂ ಪುಣ್ಯಂ ಸರ್ವೇಷಾಂ ನಃ ಪ್ರಿಯಂ ಪರಮ್ |
ಯನ್ನಃ ಕುಂತೀಸುತಾ ವೀರಾ ಭರ್ತಾರಃ ಪುನರಾಗತಾಃ ||38||
ಈ ದಿನ ನಾವೆಲ್ಲರೂ ಏನು ಪುಣ್ಯವನ್ನು ಮಾಡಿದ್ದೇವೋ, ಯಾವ ಶ್ರೇಷ್ಠವಾದ ಪ್ರಿಯವನ್ನು ಮಾಡಿದ್ದೇವೋ, ವೀರರೂ, ನಮ್ಮ ಪ್ರಭುಗಳೂ ಆದ ಕುಂತೀಪುತ್ರರು ಪುನಃ ನಮ್ಮ ಸಮೀಪಕ್ಕೆ ಬಂದಿದ್ದಾರೆ.
ಯದಿ ದತ್ತಂ ಯದಿ ಹುತಂ ಯದಿ ವಾಽಪ್ಯಸ್ತಿ ನಸ್ತಪಃ |

ತೇನ ತಿಷ್ಠಂತು ನಗರೇ ಪಾಂಡವಾಃ ಶರದಾಂ ಶತಮ್ ॥39॥
ನಾವೇನಾದರೂ ದಾನವನ್ನು ಮಾಡಿದ್ದರೆ, ಹೋಮವನ್ನು ಮಾಡಿದ್ದರೆ ಅಥವಾ ತಪಸ್ಸನ್ನು ಮಾಡಿದ್ದರೆ, ಆ ಪುಣ್ಯದಿಂದ ಪಾಂಡವರು ಈ ನಗರದಲ್ಲಿಯೇ ನೂರುವರ್ಷ ವಾಸಮಾಡಲಿ.
ವೈಶಂಪಾಯನಃ
ತತಸ್ತೇ ಧೃತರಾಷ್ಟ್ರಸ್ಯ ಭೀಷ್ಮಸ್ಯ ಚ ಮಹಾತ್ಮನಃ |
ಅನ್ಯೇಷಾಂ ಚ ತದರ್ಹಾಣಾಂ ಚಕ್ರುಃ ಪಾದಾಭಿವಂದನಮ್ ॥40॥
ಅನಂತರ ಆ ಪಾಂಡವರು ಧೃತರಾಷ್ಟ್ರನಿಗೂ, ಮಹಾತ್ಮನಾದ ಭೀಷ್ಮನಿಗೂ, ಉಳಿದ ನಮಸ್ಕಾರಾರ್ಹರಿಗೂ ಪಾದಾಭಿವಂದನವನ್ನು ಮಾಡಿದರು.
ಕೃತ್ವಾ ತು ಕುಶಲಪ್ರಶ್ನಂ ಸರ್ವಸ್ಯ ನಗರಸ್ಯ ತೇ |
ಸಮಾವಿಶಂತ ವೇಶ್ಮಾನಿ ಧೃತರಾಷ್ಟ್ರಸ್ಯ ಶಾಸನಾತ್ ॥41॥
ಅವರು ಎಲ್ಲಾ ನಗರದ ಕುಶಲಪ್ರಶ್ನೆಯನ್ನು ಮಾಡಿ ಧೃತರಾಷ್ಟ್ರನ ಅಪ್ಪಣೆಯಂತೆ ತಮ್ಮ ಮನೆಗಳಿಗೆ ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಅಷ್ಟಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವಿದುರಾಗಮನಪರ್ವಣಿ ನವಮೋಽಧ್ಯಾಯಃ ॥
॥ ವಿದುರಾಗಮನಪರ್ವಂ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಎಂಟನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ವಿದುರಾಗಮನಪರ್ವವು ಮುಗಿಯಿತು.
*****
14. ರಾಜ್ಯಲಾಭಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-19
ತೇಽಪಿ ಸ್ಮ ಕರ್ಣಸಹಿತಾ ಮೃತಕಪ್ರತೀಕಾ
ನಾಗಾಹ್ವಯಂ ಪುರುಮಥಾಯಯುರಪ್ಯಮೀಷಾಂ |
ದೃಷ್ಟ್ವಾವಿರೋಧಮವದನ್ನೃಪತಿಶ್ಚ ಧರ್ಮ-
ಪುತ್ರಂ ಪುರಂದರಕೃತಸ್ಥಲಮಾಶು ಯಾಹಿ ॥207॥
ಕೌರವರು ಕರ್ಣಸಮೇತರಾಗಿ ಸತ್ತವರಂತೆ ಹಸ್ತಿನಾವತಿಗೆ ಹಿಂತಿರುಗಿದರು. ಧೃತರಾಷ್ಟ್ರ ಕೌರವ ಪಾಂಡವರೊಳಗಿನ ವಿರೋಧವನ್ನು ಕಂಡು ಧರ್ಮರಾಜನಿಗೆ ಹೇಳಿದ. `ನೀನು ಇಂದ್ರಪ್ರಸ್ಥಕ್ಕೆ ಬೇಗನೆ ಹೋಗು'.
ತತ್ರಾರ್ಧರಾಜ್ಯಮನುಭುಂಕ್ಷ್ವ ಸಹಾನುಜೈಸ್ತ್ವಂ
ಕೋಶಾರ್ಧಮೇವ ಚ ಗೃಹಾಣ ಪುರಾ ಹಿ ಶಕ್ರಃ |
ತತ್ರಾಭಿಷಿಕ್ತ ಉತ ಕಂಜಭವಾದಿದೇವೈ-
ಸ್ತತ್ರಸ್ಥ ಏವ ಸ ಚಕಾರ ಚಿರಂ ಚ ರಾಜ್ಯಂ ॥208॥
`ಯುಧಿಷ್ಠಿರ, ನೀನು ಆ ಇಂದ್ರಪ್ರಸ್ಥದಲ್ಲಿ ಸೋದರರೊಂದಿಗೆ ಅರ್ಧರಾಜ್ಯವನ್ನು ಭೋಗಿಸು. ಅರ್ಧಭಾಗ ಕೋಶವನ್ನು ಸ್ವೀಕರಿಸು. ಹಿಂದೆ ಇಂದ್ರ ಬ್ರಹ್ಮಾದಿ ದೇವತೆಗಳಿಂದ ಅಭಿಷಿಕ್ತನಾಗಿ ಅಲ್ಲಿ ಬಹುಕಾಲ ರಾಜ್ಯವಾಳಿದ.
ತ್ವಂ ವೀರ ಶಕ್ರಸಮ ಏವ ತತಸ್ತವೈವ
ಯೋಗ್ಯಂ ಪುರಂ ತದತ ಆಶ್ವಭಿಷೇಚಯಾಮಿ |
ಇತ್ಯುಕ್ತ ಆಹ ಸ ಯುಧಿಷ್ಠಿರ ಓಮಿತಿ ಸ್ಮ
ಚಕ್ರೇಽಭಿಷೇಕಮಪಿ ತಸ್ಯ ಸ ಆಂಬಿಕೇಯಃ ॥209॥
`ಯುಧಿಷ್ಠಿರ, ನೀನೂ ವೀರ, ಇಂದ್ರಸಮನೇ ಆಗಿರುತ್ತಿ. ನಿನಗೇ ಆ ಇಂದ್ರಪ್ರಸ್ಥ ಯೋಗ್ಯ. ಅದರಿಂದ ಬೇಗನೆ ನಿನಗೆ ಪಟ್ಟಾಭಿಷೇಕ ಮಾಡುವೆನು'. ಧೃತರಾಷ್ಟ್ರ ಹೀಗೆ ಹೇಳಿದಾಗ ಧರ್ಮರಾಜ ಆಗಲಿ ಎಂದ. ಧೃತರಾಷ್ಟ್ರ ಅವನಿಗೆ ಪಟ್ಟಾಭಿಷೇಕ ಮಾಡಿದ.
ತಸ್ಯಾಭಿಷೇಕಮಕರೋತ್ಪ್ರಥಮಂ ಹಿ ಕೃಷ್ಣೋ
ವಾಸಿಷ್ಠನಂದನ ಉರುರ್ಭವ ಚಕ್ರವರ್ತೀ |
ಯಷ್ಟಾಶ್ವಮೇಧನಿಖಿಲಾತ್ಮಕ ರಾಜಸೂಯ-
ಪೂರ್ವೈರ್ಮಖೈಃ ಸತತಮೇವ ಚ ಧರ್ಮಶೀಲಃ ॥210॥
ಧರ್ಮರಾಜನಿಗೆ ಮೊದಲು ವೇದವ್ಯಾಸರು ಅಭಿಷೇಕ ಮಾಡಿ ಆಶೀರ್ವದಿಸಿದರು. `ದೊಡ್ಡ ಚಕ್ರವರ್ತಿಯಾಗು. ಅಶ್ವಮೇಧ ಸರ್ವಸ್ವರೂಪದ ರಾಜಸೂಯ ಮುಂತಾದ ಯಾಗಗಳನ್ನು ಮಾಡು. ಸದಾ ಧರ್ಮಿಷ್ಠನಾಗು' ಎಂದು.
ಇತ್ಯೇವ ಪಾರ್ಷತಸುತಾಸಹಿತೇಽಭಿಷಿಕ್ತೇ
ಕೃಷ್ಣೋಽಪಿ ವೃಷ್ಣಿವೃಷಭಃ ಸ ತಥಾಭ್ಯಷಿಂಚತ್ |
ಏವಂ ಚ ಮಾರುತಿಶಿರಸ್ಯಭಿಷೇಕಮೇತೌ
ಸಂಚಕ್ರತುಃ ಸ್ಮ ಯುವರಾಜಪದೇ ಸಭಾರ್ಯಂ ॥211॥
ದ್ರೌಪದೀ ಸಮೇತನಾದ ಧರ್ಮರಾಜನಿಗೆ ವ್ಯಾಸರು ಅಭಿಷೇಕ ಮಾಡಿದ ಬಳಿಕ ಶ್ರೀಕೃಷ್ಣ ಅಭಿಷೇಕ ಮಾಡಿದ. ಇದೇ ರೀತಿ ಯುವರಾಜ ಪದವಿಯಲ್ಲಿ ದ್ರೌಪದೀ ಸಮೇತನಾದ ಭೀಮಸೇನನ ತಲೆಯ ಮೇಲೆ ವ್ಯಾಸಕೃಷ್ಣರು ಅಭಿಷೇಕ ಮಾಡಿದರು.

ಭೀಮೇ ಚ ಪಾರ್ಷತಸುತಾಸಹಿತೇऽಭಿಷಿಕ್ತೇ
ತಾಭ್ಯಾಮನಂತಸುಖಶಕ್ತಿ ಚಿದಾತ್ಮಕಾಭ್ಯಾಂ |
ಅನ್ಯೈಶ್ಚ ವಿಪ್ರವೃಷಭೈಃ ಸುಕೃತೇऽಭಿಷೇಕೇ
ಧರ್ಮಾತ್ಮಜಾನು ಮುಮುದುರ್ನಿಖಿಲಾಶ್ಚ ಸಂತಃ ॥212॥

ಧರ್ಮರಾಜನ ಅನಂತರ ದ್ರೌಪದೀ ಸಮೇತನಾದ ಭೀಮನನ್ನು ಅನಂತಸುಖ ಶಕ್ತಿ ಜ್ಞಾನಸ್ವರೂಪರಾದ ವ್ಯಾಸಕೃಷ್ಣರು ಅಭಿಷೇಕ ಮಾಡಿದಾಗ, ಬಳಿಕ ಬೇರೆ ವಿಪ್ರೋತ್ತಮರೂ ಚೆನ್ನಾಗಿ ಅಭಿಷೇಕ ಮಾಡಿದಾಗ ಎಲ್ಲ ಸಜ್ಜನರೂ ಆನಂದಪಟ್ಟರು.

ತಸ್ಮಿನ್ ಮಹೋತ್ಸವವರೇ ದಿನಸಪ್ತಕಾನು-
ವೃತ್ತೇ ವಸಿಷ್ಠವೃಷಭೇಣ ಚ ವೃಷ್ಣಿಪೇನ |
ಕೃಷ್ಣೇನ ತೇ ಯಯುರಮಾ ಪೃಥಯಾ ತಯಾ ಚ
ಪಾಂಚಾಲರಾಜಸುತಯಾ ಸ್ಥಲಮಿಂದ್ರವಾಸಂ ॥213॥

ಆ ಮಹಾಮಹೋತ್ಸವ ಏಳು ದಿನಗಳವರೆಗೆ ನಡೆದ ಬಳಿಕ ವ್ಯಾಸಕೃಷ್ಣರೊಂದಿಗೆ ಮತ್ತು ಕುಂತಿ ದ್ರೌಪದಿಯರೊಂದಿಗೆ ಪಾಂಡವರು ಇಂದ್ರಪ್ರಸ್ಥಕ್ಕೆ ಹೋದರು.

ಕೋಶಸ್ಯ ಚಾರ್ಧಸಹಿತಾಸ್ತು ಯದೈವ ಪಾರ್ಥಾ
ಗಚ್ಛಂತಿ ತಾನನುಯಯುರ್ನಿಖಿಲಾಶ್ಚ ಪೌರಾಃ |
ಊಚುಶ್ಚ ಹಾ ಬತ ಸುಯೋಧನ ಏಷ ಪಾಪೋ
ದೂರೇ ಚಕಾರ ನನು ಪಾಂಡುಸುತಾನ್ ಗುಣಾಢ್ಯಾನ್ ॥214॥

ಕೋಶದ ಅರ್ಧಭಾಗವನ್ನು ತೆಗೆದುಕೊಂಡು ಪಾಂಡವರು ಇಂದ್ರಪ್ರಸ್ಥಕ್ಕೆ ಹೊರಟರು. ಎಲ್ಲ ನಾಗರಿಕರೂ ಅವರನ್ನು ಹಿಂಬಾಲಿಸಿದರು. `ಅಯ್ಯೋ ಈ ಪಾಪಿ ದುರ್ಯೋಧನ ಗುಣಾಢ್ಯರಾದ ಪಾಂಡವರನ್ನು ನಮ್ಮಿಂದ ದೂರಮಾಡಿದ' ಎಂದರು.

ಭೀಮಪ್ರತಾಪಮವಲಂಬ್ಯ ಕಲಿಂಗಬಂಧಾತ್
ಮುಕ್ತಃ ಸುತಾಮಪಿ ಹಿ ತಸ್ಯ ಪುರಂ ವಿನಾಯ |
ದ್ವೇಷ್ಯೇವಮಪ್ಯತಿಬಲಾನ್ ಹಿ ಸದೈವ ಪಾರ್ಥಾನ್
ಯಾಮೋ ವಯಂ ಗುಣಿಭಿರದ್ಯ ಸಹೈವ ಪಾರ್ಥೈಃ ॥215॥

`ಈ ದುರ್ಯೋಧನ ಭೀಮನ ಬಲವನ್ನು ಆಶ್ರಯಿಸಿ ಕಲಿಂಗರಾಜನ ಬಂಧನದಿಂದ ಪಾರಾಗಿ ಅವನ ಕನ್ಯೆಯನ್ನು ಪಟ್ಟಣಕ್ಕೆ ತಂದ. ಹೀಗಿದ್ದರೂ ಅತ್ಯಂತ ಬಲಿಷ್ಠರಾದ ಪಾಂಡವರನ್ನು ಸದಾ ದ್ವೇಷಿಸುತ್ತಾನೆ. ಅದರಿಂದ ನಾವು ಈಗ ಗುಣವಂತರಾದ ಪಾಂಡವರೊಂದಿಗೆ ಹೊರಟು ಹೋಗುವೆವು' ಎಂದರು.

ಆಜ್ಞಾಪಯತ್ಯಪಿ ಸ ಭೇರಿರವೇಣ ಪಾರ್ಥಾನ್
ನೈವಾನುಗಚ್ಛತ ಯದಿ ವ್ರಜಥಾನು ವೋऽದ್ಯ |
ವಿತ್ತಂ ಹರಿಷ್ಯ ಇಹ ಸರ್ವಮಪೀತಿ ತಚ್ಚ
ಪಾಪಃ ಕರೋತು ನ ವಯಂ ವಿಜಹಾಮ ಪಾರ್ಥಾನ್ ॥216॥

`ಪಾಂಡವರನ್ನು ಹಿಂಬಾಲಿಸಬೇಡಿರಿ. ಹಿಂಬಾಲಿಸಿ ಹೋದಿರಾದರೆ ನಿಮ್ಮ ಎಲ್ಲ ಸಂಪತ್ತನ್ನೂ ಈಗಲೆ ರಾಜ್ಯದ ಬೊಕ್ಕಸಕ್ಕೆ ಸೇರಿಸುವೆವು' ಎಂದು ಭೇರಿಶಬ್ದದೊಂದಿಗೆ ಆಜ್ಞೆ ಮಾಡುತ್ತಿದ್ದಾನೆ. ಪಾಪಿ, ಅದನ್ನೂ ಮಾಡಲಿ. ನಾವು ಪಾಂಡವರನ್ನು ಬಿಟ್ಟಿರಲಾರೆವು ಎಂದರು.

ಸದ್ಭಿರ್ಹಿ ಸಂಗತಿರಿಹೈವ ಸುಖಸ್ಯ ಹೇತು-
ರ್ಮೋಕ್ಷೈಕಹೇತುರಥ ತದ್ವಿಪರೀತಮನ್ಯತ್ |
ತಸ್ಮಾದ್ ವ್ರಜೇಮ ಸಹ ಪಾಂಡುಸುತೈರ್ಹಿ ಶಕ್ರ-
ಪ್ರಸ್ಥಂ ತ್ವಿತಿ ಸ್ಮ ಧೃತಚೇತಸ ಆಹ ಧಾರ್ಮಃ ॥217॥

`ಸಜ್ಜನರ ಸಹವಾಸ ಇಹದಲ್ಲಿ ಸುಖಕಾರಣ. ಮೋಕ್ಷಕ್ಕೂ ಮುಖ್ಯಕಾರಣ. ದುರ್ಜನರೊಡನಾಟ ಅದಕ್ಕೆ ವಿಪರೀತವಾಗಿ ಇಹಪರಗಳೆರಡರಲ್ಲಿಯೂ ದುಃಖಕ್ಕೆ ಕಾರಣ. ಅದರಿಂದ ನಾವು ಪಾಂಡವರೊಂದಿಗೇ ಇಂದ್ರಪ್ರಸ್ಥಕ್ಕೆ ಹೋಗೋಣ' ಎಂದು ಸಜ್ಜನರು ಮನಸ್ಸಿನಲ್ಲಿ ನಿರ್ಧಾರ ಮಾಡಿದ್ದನ್ನು ತಿಳಿದು ಧರ್ಮರಾಜ ನುಡಿದ.

ಪ್ರೀತಿರ್ಯದಿ ಸ್ಮ ಭವತಾಂ ಮಯಿ ಸಾನುಜೇऽಸ್ತಿ
ತಿಷ್ಠಧ್ವಮತ್ರ ಪಿತುರೇವ ಹಿ ಶಾಸನೇ ಮೇ |
ಕೀರ್ತಿರ್ಹಿ ವೋऽನುಗಮನಾತ್ಪಿತುರತ್ಯಯೇನ
ನಶ್ಯೇನ್ನ ಇತ್ಯನುಸರಧ್ವಮಿಹಾಂಬಿಕೇಯಂ ॥218॥

`ನಿಮಗೆ ನನ್ನಲ್ಲಿ ನನ್ನ ತಮ್ಮಂದಿರಲ್ಲಿ ಪ್ರೀತಿ ಇರುವುದಾದರೆ ಇಲ್ಲಿಯೇ ಇರಿ. ಏಕೆಂದರೆ ನನಗೆ ಪಿತನಾದ ಧೃತರಾಷ್ಟ್ರನ ಶಾಸನದಂತೆ ನಡೆದುಕೊಂಡರೆ ಕೀರ್ತಿ. ನೀವು ನನ್ನನ್ನು ಹಿಂಬಾಲಿಸಿ ಬಂದರೆ ಪಿತೃಶಾಸನದ ಉಲ್ಲಂಘನೆಯಿಂದ ಕೀರ್ತಿ ನಶಿಸುವುದು. ಅದರಿಂದ ನೀವು ಪಿತನಿಗೆ ಅನುಕೂಲವಾಗಿ ಇಲ್ಲಿಯೇ ಇರಿ' ಎಂದ ಧರ್ಮರಾಜ.

ಇತ್ಯೇವ ತೈಃ ಪುರಜನಾ ನಿಖಿಲೈರ್ನಿಷಿದ್ಧಾಃ
ಕೃಚ್ಛ್ರೇಣ ತಸ್ಥುರಪಿ ತಾನ್ ಮನಸಾನ್ವಗಚ್ಛನ್ |
ಪ್ರಾಪ್ಯಾಥ ಶಕ್ರಪುರಮಸ್ಮರತಾಂ ಚ ಕೃಷ್ಣೌ
ದೇವೇಶವರ್ಧಕಿಮಥಾಗಮದತ್ರ ಸೋऽಪಿ ॥219॥

ಹೀಗೆ ಪಾಂಡವರು ಎಲ್ಲರೂ ನಾಗರಿಕರನ್ನು ತಡೆದುದರಿಂದ ಅವರು ಕಷ್ಟದಿಂದ, ದೇಹದಿಂದ ಹಸ್ತಿನಾವತಿಯಲ್ಲಿದ್ದರೂ ಮನಸ್ಸಿನಿಂದ ಪಾಂಡವರನ್ನೆ ಹಿಂಬಾಲಿಸಿ ಹೋದರು. ವ್ಯಾಸಕೃಷ್ಣರು ಇಂದ್ರಪ್ರಸ್ಥಕ್ಕೆ ಬಂದು ವಿಶ್ವಕರ್ಮನನ್ನು ನೆನೆದರು. ಒಡನೆ ಅವನು ಅಲ್ಲಿಗೆ ಬಂದ.

ವಾಸಿಷ್ಠಪೇನ ಯದುಪೇನ ಚ ಪಾಂಡವಾನಾಂ
ರತ್ನೋತ್ಕರಂ ಕುರು ಪುರಂ ಪುರುಹೂತಪುರ್ಯಾಃ |
ಸಾದೃಶ್ಯತಸ್ತ್ವತಿ ನಿಯುಕ್ತ ಉಭೌ ಪ್ರಣಮ್ಯ
ಸರ್ವೇಶ್ವರೌ ಸ ಕೃತವಾಂಶ್ಚ ಪುರಂ ತಥೈವ ॥220॥

ಇಂದ್ರನ ನಗರಕ್ಕೆ ಸಮವಾಗಿ ರತ್ನಮಯವಾದ ಒಂದು ಪಟ್ಟಣವನ್ನು ಪಾಂಡವರಿಗೆ ನಿರ್ಮಿಸಿಕೊಡು ಎಂದು ವ್ಯಾಸಕೃಷ್ಣರು ಆಜ್ಞೆ ಮಾಡಿದಾಗ ವಿಶ್ವಕರ್ಮ ಸರ್ವೇಶರಾದ ಅವರಿಬ್ಬರನ್ನೂ ನಮಿಸಿ ಹಾಗೇ ಪಟ್ಟಣವನ್ನು ನಿರ್ಮಿಸಿಕೊಟ್ಟ.

ದೇಶಂ ಚ ನಾತಿಜನಸಂವೃತಮನ್ಯದೇಶ-
ಸಂಸ್ಥೈರ್ಜನೈರಭಿಪುಪೂರಿರ ಆಶು ಪಾರ್ಥಾಃ |
ತೇಷಾಂ ಗುಣೈರ್ಹರಿಪದಾನತಿಹೇತುತಶ್ಚ
ರಾಷ್ಟ್ರಾಂತರಾ ಇಹ ಶುಭಾ ವಸತಿಂ ಸ್ಮ ಚಕ್ರುಃ ॥221॥

ಜನರಿಂದ ಅತಿನಿಬಿಡವಾಗದಂತೆ ಇಂದ್ರಪ್ರಸ್ಥ ಪ್ರದೇಶವನ್ನು ಪಾಂಡವರು ಬೇಗನೆ ಬೇರೆ ದೇಶದಲ್ಲಿದ್ದ ಜನರಿಂದ ತುಂಬಿಸಿದರು. ಅವರ ಸದ್ಗುಣಗಳಿಂದಲೂ ಹರಿಪಾದ ನಮನದ ನಿಮಿತ್ತದಿಂದಲೂ ಬೇರೆ ರಾಜ್ಯದ ಜನರು ಬಂದು ಇಲ್ಲಿ ಮನೆ ಮಾಡಿದರು.

ಪ್ರಸ್ಥಾಪ್ಯ ದೂರಮನುಜಸ್ಯ ಸುತಾನ್ ಸ ರಾಜಾ
ಚಕ್ರೇಽಭಿಷೇಕಮಪಿ ತತ್ರ ಸುಯೋಧನಸ್ಯ |
ದುಶ್ಶಾಸನಂ ಚ ಯುವರಾಜಮಸೌ ವಿಧಾಯ
ಮೇನೇ ಕೃತಾರ್ಥಮಿವ ಚ ಸ್ವಮಶಾಂತಕಾಮಃ ॥222॥

ತಮ್ಮನ ಮಕ್ಕಳನ್ನು ದೂರಕಳಿಸಿ ರಾಜಾ ಧೃತರಾಷ್ಟ್ರ ಹಸ್ತಿನಾವತಿಯಲ್ಲಿ ದುರ್ಯೋಧನನಿಗೆ ಅಭಿಷೇಕವನ್ನು ನಡೆಸಿದ. ದುಶ್ಶಾಸನನನ್ನು ಯುವರಾಜನನ್ನಾಗಿ ಮಾಡಿ ತನ್ನನ್ನು ತಾನು ಸ್ವಲ್ಪಮಟ್ಟಿಗೆ ಧನ್ಯನೆಂದು ತಿಳಿದ. ಏಕೆಂದರೆ ಅವನ ಭೋಗಲಾಲಸೆ ಇನ್ನೂ ಶಾಂತವಾಗಿರಲಿಲ್ಲ.

ಪಾರ್ಥಾಶ್ಚ ತೇ ಮುಮುದುರತ್ರ ವಸಿಷ್ಠವೃಷ್ಣಿ-
ವರ್ಯೋದಿತಾನಖಿಲತತ್ತ್ವವಿನಿರ್ಣಯಾಂಸ್ತು |
ಶೃಣ್ವಂತ ಏವ ಹಿ ಸದಾ ಪೃಥಿವೀಂ ಚ ಧರ್ಮಾದ್
ಭುಂಜಂತ ಆಶ್ರಿತರಮಾಪತಿಪಾದಯುಗ್ಮಾಃ ॥223॥

ಪಾಂಡವರು ರಮಾಪತಿಯ ಪಾದದ್ವಂದ್ವವನ್ನು ಆಶ್ರಯಿಸಿದರು. ವ್ಯಾಸಕೃಷ್ಣರು ಉಪದೇಶಿಸಿದ ಸಕಲ ತತ್ವನಿರ್ಣಯಗಳನ್ನು ಸದಾ ಕೇಳುತ್ತಲೇ ಧರ್ಮದಿಂದ ಭೂಮಿಯನ್ನು ಭೋಗಿಸುತ್ತ ಆನಂದಿಸಿದರು.

* * * *

ಇನ್ನೂರ ಒಂಭತ್ತನೆಯ ಅಧ್ಯಾಯ

(ಧೃತರಾಷ್ಟ್ರನಿಂದ ಧರ್ಮರಾಜನಿಗೆ ಅಭಿಷೇಕ, ಖಾಂಡವಪ್ರಸ್ಥಕ್ಕೆ ಹೋಗಲು ಆದೇಶ, ವೇದವ್ಯಾಸರ ಮತ್ತು ಯಾದವಕೃಷ್ಣನ ಜೊತೆಯಲ್ಲಿ ಖಾಂಡವಪ್ರಸ್ಥ ಪ್ರವೇಶ. ವಿಶ್ವಕರ್ಮನಿಂದ ನಗರ ನಿರ್ಮಾಣ ಮತ್ತು ಕೃಷ್ಣನ ಪ್ರಯಾಣ.)

ವೈಶಂಪಾಯನಃ
ದುರ್ಯೋಧನಸ್ಯ ಮಹಿಷೀ ಕಾಶಿರಾಜಸುತಾ ತದಾ |
ಧೃತರಾಷ್ಟ್ರಸ್ಯ ಪುತ್ರಾಣಾಂ ವಧೂಭಿಃ ಸಹಿತಾ ತದಾ ॥1॥
ಪಾಂಚಾಲೀಂ ಪ್ರತಿಜಗ್ರಾಹ ದ್ರೌಪದೀಂ ಶ್ರೀಮಿವಾಪರಾಮ್ |
ಪೂಜಯಾಮಾಸ ಪೂಜಾರ್ಹಾಂ ಶಚೀದೇವೀಮಿವಾಗತಾಮ್ ॥2॥

ಆಗ ದುರ್ಯೋಧನನ ಮಹಿಷಿಯಾದ ಕಾಶೀರಾಜಕುಮಾರಿಯು ಧೃತರಾಷ್ಟ್ರನ ಇತರ ಸೊಸೆಯರ ಜೊತೆಯಲ್ಲಿ ಇನ್ನೊಬ್ಬ ಶ್ರೀದೇವಿಯಂತಿದ್ದ ಪಾಂಚಾಲಿಯಾದ ದ್ರೌಪದಿಯನ್ನು ಸ್ವೀಕರಿಸಿದಳು. ಮನೆಗೆ ಬಂದ ಶಚೀದೇವಿಯಂತೆ ಪೂಜಾರ್ಹಳಾದ ಅವಳನ್ನು ಪೂಜಿಸಿದಳು.

ವವಂದೇ ತತ್ರ ಗಾಂಧಾರೀಂ ಮಾಧವೀ ಕೃಷ್ಣಯಾ ಸಹ |
ಆಶಿಷಶ್ಚ ಪ್ರಯುಕತತ್ವ ತು ದ್ರೌಪದೀಂ ಪರಿಷಸ್ವಜೇ ॥3॥

ಕುಂತಿಯು ಕೃಷ್ಣೆಯ ಜೊತೆಯಲ್ಲಿ ಅದೇ ಗಾಂಧಾರಿಗೆ ನಮಸ್ಕಾರವನ್ನು ಮಾಡಿದಳು. ಗಾಂಧಾರಿಯು ಆಶೀರ್ವಾದವನ್ನು ಮಾಡಿ ಕೃಷ್ಣೆಯನ್ನು ಆಲಿಂಗಿಸಿದಳು.

ಪರಿಷ್ವಜ್ಯ ಚ ಗಾಂಧಾರೀ ಕೃಷ್ಣಾಂ ಕಮಲಲೋಚನಾಮ್ |
ಪುತ್ರಾಣಾಂ ಮಮ ಪಾಂಚಾಲೀ ಮೃತ್ಯುರೇವೇತ್ಯಮನ್ಯತ ॥4॥

ಗಾಂಧಾರಿಯು ಕಮಲನೇತ್ರೆಯಾದ ಕೃಷ್ಣೆಯನ್ನು ಆಲಿಂಗಿಸಿ ಇವಳು ನನ್ನ ಪುತ್ರರಿಗೆ ಮೃತ್ಯುವೇ ಸರಿ ಎಂದು ಭಾವಿಸಿದಳು.

ಸಾ ಚಿಂತ್ಯ ವಿದುರಂ ಪ್ರಾಹ ಯುಕ್ತಿತಃ ಸುಬಲಾತ್ಮಜಾ |
ಕುಂತೀ ರಾಜಸುತಾ ಕ್ಷತ್ತಃ ಸವಧೂಃ ಸಪರಿಚ್ಛದಾ |
ಪಾಂಡೋರ್ನಿವೇಶನಂ ಶೀಘ್ರಂ ನೀಯತಾಂ ಯದಿ ರೋಚತೇ ॥5॥

ಸುಬಲರಾಜಕುಮಾರಿಯಾದ ಅವಳು ಆಲೋಚನೆಯನ್ನು ಮಾಡಿ ವಿದುರನನ್ನು ಕರೆದು, `ವಿದುರ, ಅವರಿಗೆ ಇಷ್ಟವಾಗುವುದಾದರೆ, ಕುಂತಿಯನ್ನು ತನ್ನ ಸೊಸೆ ಮತ್ತು ಪರಿವಾರದೊಂದಿಗೆ ಪಾಂಡುವಿನ ಅರಮನೆಗೆ ಶೀಘ್ರವಾಗಿ ಕರೆದುಕೊಂಡು ಹೋಗು' ಎಂದು ಹೇಳಿದಳು.
ಕರಣೇನ ಮುಹೂರ್ತೇನ ನಕ್ಷತ್ರೇಣ ತಿಥೌ ಶುಭೇ |
ಯಥಾ ಗೃಹಾಗತಾ ಕುಂತೀ ರಂಸ್ಯತೇ ಸ್ವಸುತೈಃ ಸುಖಮ್ ||6||
ಶುಭವಾದ ತಿಥಿ, ಮುಹೂರ್ತ, ಕರಣ ಮತ್ತು ನಕ್ಷತ್ರಗಳನ್ನು ನೋಡಿ ಮನೆಗೆ ಬಂದ ಕುಂತಿಯು ತನ್ನ ಮಕ್ಕಳ ಜೊತೆಯಲ್ಲಿ ಸುಖವಾಗಿರುವಂತೆ ವ್ಯವಸ್ಥೆಯನ್ನು ಮಾಡು.
ವೈಶಂಪಾಯನಃ
ತಥೇತ್ಯೇವ ತದಾ ಕ್ಷತ್ತಾ ಕಾರಯಾಮಾಸ ತತ್ ತದಾ |
ಪೂಜಯಾಮಾಸುರತ್ಯರ್ಥಂ ಬಾಂಧವಾಃ ಪಾಂಡವಾಂಸ್ತದಾ ||7||
ವಿದುರನು ಹಾಗೆಯೇ ಆಗಲಿ ಎಂದು ಹೇಳಿ ಎಲ್ಲವನ್ನೂ ಮಾಡಿದನು. ಆಗ ಬಾಂಧವರೆಲ್ಲರೂ ಪಾಂಡವರಿಗೆ ಬಹಳ ಸತ್ಕಾರವನ್ನು ಮಾಡಿದರು.
ಶ್ರೇಣಿಮುಖ್ಯಾಶ್ಚ ನಾಗರಾಃ ಪೂಜಯಂತಿ ಸ್ಮ ಪಾಂಡವಾನ್ |
ಭೀಷ್ಮೋ ದ್ರೋಣಸ್ತಥಾ ಕರ್ಣೋ ಬಾಹ್ಲೀಕಃ ಸಸುತಸ್ತದಾ ||8||
ಶಾಸನಾದ್ ಧೃತರಾಷ್ಟ್ರಸ್ಯ ಅಕುರ್ವನ್ನತಿಥಿಕ್ರಿಯಾಮ್ |
ಏವಂ ವಿಹರತಾಂ ತೇಷಾಂ ಪಾಂಡವಾನಾಂ ಮಹಾತ್ಮನಾಮ್ | ನೇತಾ ಸರ್ವಸ್ಯ ಕಾರ್ಯಸ್ಯ ವಿದುರೋ ರಾಜಶಾಸನಾತ್ ||9||
ಪ್ರಧಾನರು ಮೊದಲಾದ ನಗರವಾಸಿಗಳು, ಪಾಂಡವರನ್ನು ಪೂಜಿಸಿದರು. ಭೀಷ್ಮ, ದ್ರೋಣ, ಕರ್ಣ, ಬಾಹ್ಲೀಕ ಮತ್ತು ಅವನ ಪುತ್ರರು ಇವರೆಲ್ಲರೂ ಧೃತರಾಷ್ಟ್ರನ ಶಾಸನದಂತೆ ಪಾಂಡವರಿಗೆ ಅತಿಥಿಸತ್ಕಾರವನ್ನು ಮಾಡಿದರು. ಹೀಗೆ ವಿಹಾರವನ್ನು ಮಾಡುವ ಮಹಾನುಭಾವರಾದ ಪಾಂಡವರಿಗೆ ಎಲ್ಲ ಕಾರ್ಯಗಳಲ್ಲಿಯೂ ರಾಜಶಾಸನದಂತೆ ವಿದುರನು ಮಾರ್ಗದರ್ಶಕ- ನಾಗಿದ್ದನು.
ವಿಶ್ರಂತಾಸ್ತೇ ಮಹಾತ್ಮಾನಃ ಕಂಚಿತ್ ಕಾಲಂ ಸುಖೋಷಿತಾಃ | ಆಹೂತಾ ಧೃತರಾಷ್ಟ್ರೇಣ ರಾಜ್ಞಾ ಶಾಂತನವೇನ ಚ
||10||
ಆ ಮಹಾನುಭಾವರು ಸ್ವಲ್ಪಕಾಲ ಸುಖದಿಂದ ವಾಸಿಸಿ, ವಿಶ್ರಾಂತಿಯನ್ನು ಪಡೆದ ಮೇಲೆ ಧೃತರಾಷ್ಟ್ರನು ಮತ್ತು ಭೀಷ್ಮರು ಅವರನ್ನು ಆಹ್ವಾನಿಸಿದರು.
ಧೃತರಾಷ್ಟ್ರಃ
ಭ್ರಾತೃಭಿಃ ಸಹ ಕೌಂತೇಯ ನಿಬೋಧ ತ್ವಂ ವಚೋ ಮಮ |
ಪಾಂಡುನಾ ವರ್ಧಿತಂ ರಾಜ್ಯಂ ಪಾಂಡುನಾ ಪಾಲಿತಂ ಜಗತ್ ||11||
ಕೌಂತೇಯನಾದ ಧರ್ಮರಾಜನೇ, ನಿನ್ನ ತಮ್ಮಂದಿರ ಜೊತೆಯಲ್ಲಿ ನನ್ನ ಮಾತುಗಳನ್ನು ಕೇಳು. ಪಾಂಡುವು ಈ ರಾಜ್ಯವನ್ನು ಅಭಿವೃದ್ಧಿಪಡಿಸಿ ಜಗತ್ತನ್ನೇ ಪಾಲಿಸಿದನು.
ಶಾಸನಾನ್ಮಮ ಕೌಂತೇಯ ಭ್ರಾತಾ ಮಮ ಮಹಾಬಲಃ |
ಕೃತವಾನ್ ದುಷ್ಕರಂ ಕರ್ಮ ನಿತ್ಯಮೇವ ವಿಶಾಂಪತೇ ||12||
ರಾಜನಾದ ಕೌಂತೇಯನೇ, ನನ್ನ ಶಾಸನಕ್ಕನುಗುಣವಾಗಿ ಮಹಾಬಲನಾದ ನನ್ನ ತಮ್ಮನು ಯಾವಾಗಲೂ ದುಷ್ಕರವಾದ ಕರ್ಮಗಳನ್ನು ಮಾಡಿದನು.
ತಸ್ಮಾತ್ ತ್ವಮಪಿ ಕೌಂತೇಯ ಶಾಸನಂ ಕುರು ಮಾಚಿರಮ್ |
ಮಮ ಪುತ್ರಾ ದುರಾತ್ಮಾನೋ ದರ್ಪಾಹಂಕಾರಸಂಯುತಾಃ ||13||
ಶಾಸನಂ ನ ಕರಿಷ್ಯಂತಿ ಮಮ ನಿತ್ಯಂ ಯುಧಿಷ್ಠಿರ |
ಸ್ವಕಾರ್ಯನಿರತೈರ್ನಿತ್ಯಮವಲಿಪ್ತೈರ್ದುರಾತ್ಮಭಿಃ |
ಪುನರ್ವೈ ವಿಗ್ರಹೋ ಮಾ ಭೂತ್ ಖಾಂಡವಪ್ರಸ್ಥಮಾವಿಶ ||14||
ಆದ್ದರಿಂದ ಕೌಂತೇಯನೇ, ನೀನೂ ಸಹ ನನ್ನ ಶಾಸನವನ್ನು ಶೀಘ್ರವಾಗಿ ಅನುಸರಿಸು. ನನ್ನ ಪುತ್ರರು ದುಷ್ಟಮನಸ್ಸುಳ್ಳವರು ಮತ್ತು ದರ್ಪಾಹಂಕಾರಗಳಿಂದ ಕೂಡಿದವರು. ಯುಧಿಷ್ಠಿರನೇ, ಅವರು ನನ್ನ ಶಾಸನದಂತೆ ಯಾವಾಗಲೂ ನಡೆಯುವುದಿಲ್ಲ. ನಿತ್ಯವೂ ದುರಹಂಕಾರಿಗಳಾದ, ಸ್ವಾರ್ಥಿಗಳಾದ, ದುರಾತ್ಮರಾದ ಅವರ ಜೊತೆಯಲ್ಲಿ ಪುನಃ ವಿರೋಧವು ಉಂಟಾಗುವುದು ಬೇಡ. ನೀನು ಖಾಂಡವಪ್ರಸ್ಥಕ್ಕೆ ಹೋಗು.
ನ ಚ ವೋ ವಸತಸ್ತತ್ರ ಕಂಚಿಚ್ಛಕ್ತಃ ಪ್ರಬಾಧಿತುಮ್ |
ಸಂರಕ್ಷ್ಯಮಾಣಾನ್ ಪಾರ್ಥೇನ ತ್ರಿದಶಾನಿವ ವಜ್ರಿಣಾ ||15||
ಇಂದ್ರನು ತ್ರಿದಶರನ್ನು ಕಾಡಿಸಿದಂತೆ ಅರ್ಜುನನಿಂದ ರಕ್ಷಿಸಲ್ಪಟ್ಟು ಅಲ್ಲಿ ವಾಸಿಸುವ ನಿಮ್ಮನ್ನು ಬಾಧಿಸಲು ಯಾವನೂ ಶಕ್ತನಾಗುವುದಿಲ್ಲ.
ಅರ್ಧರಾಜ್ಯಂ ತು ಸಂಪ್ರಾಪ್ಯ ಖಾಂಡವಪ್ರಸ್ಥಮಾವಿಶ |
ಕೇಶವೋ ಯದಿ ಮನ್ಯೇತ ತತ್ ಕರ್ತವ್ಯಮಸಂಶಯಮ್ ||16||
ಅರ್ಧರಾಜ್ಯವನ್ನು ಪಡೆದು ಖಾಂಡವಪ್ರಸ್ಥಕ್ಕೆ ಹೋಗು. ಕೇಶವನು ಸಮ್ಮತಿಸುವುದಾದರೆ, ಶೀಘ್ರವಾಗಿ ಅದನ್ನು ಮಾಡು.
ವೈಶಂಪಾಯನಃ
ಪ್ರತಿಗೃಹ್ಯ ತು ತೇ ವಾಕ್ಯಂ ನೃಪಂ ಸರ್ವೇ ಪ್ರಣಮ್ಯ ಚ |

ವಾಸುದೇವೇನ ಸಮ್ಮಂತ್ರ್ಯ ಪಾಂಡವಾಃ ಸಮುಪಾವಿಶಾನ್ ॥17॥
ಧೃತರಾಷ್ಟ್ರನ ವಾಕ್ಯವನ್ನು ಸ್ವೀಕರಿಸಿ ಅವನಿಗೆ ಎಲ್ಲರೂ ನಮಸ್ಕರಿಸಿ ಕೃಷ್ಣನ ಜೊತೆಯಲ್ಲಿ ಸಮಾಲೋಚನೆ ನಡೆಸಿ ಪಾಂಡವರು ಒಂದು ಕಡೆ ಕುಳಿತರು.
ಧೃತರಾಷ್ಟ್ರಃ
ಅಭಿಷೇಕಸ್ಯ ಸಂಭಾರಾನ್ ಕ್ಷತ್ತರಾನಯ ಮಾಚಿರಮ್ |
ಅಭಿಷಿಕ್ತಂ ಕರಿಷ್ಯಾಮಿ ಅದ್ಯೈವ ಕುರುನಂದನಮ್ ॥18॥
ವಿದುರನೇ, ಶೀಘ್ರವಾಗಿ ಅಭಿಷೇಕದ ಸಾಮಗ್ರಿಗಳನ್ನು ತೆಗೆದುಕೊಂಡು ಬಾ. ಈ ದಿನವೇ ಕುರುನಂದನನಾದ ಧರ್ಮರಾಜನಿಗೆ ಅಭಿಷೇಕವನ್ನು ಮಾಡುವೆನು.
ಬ್ರಾಹ್ಮಣಾ ಆಗಮಶ್ರೇಷ್ಠಾಃ ಶ್ರೇಣಿಮುಖ್ಯಾಶ್ಚ ಸರ್ವಶಃ |
ಆಹೂಯಂತಾಂ ಪ್ರಕೃತಯೋ ಬಾಂಧವಾಶ್ಚ ವಿಶೇಷತಃ ॥19॥
ಬ್ರಾಹ್ಮಣರನ್ನೂ, ಆಗಮಶ್ರೇಷ್ಠರನ್ನೂ, ಸೇನಾಪ್ರಧಾನರನ್ನೂ, ಎಲ್ಲಾ ಪ್ರಜೆಗಳನ್ನೂ, ವಿಶೇಷವಾಗಿ ಬಂಧುಗಳನ್ನೂ ಆಹ್ವಾನಿಸಿ.
ಪುಣ್ಯಾಹಂ ವಾಚ್ಯತಾಂ ತಾತ ಗೋಸಹಸ್ರಂ ಚ ದೀಯತಾಮ್ |
ಗ್ರಾಮಮುಖ್ಯಶ್ಚ ವಿಪ್ರೇಭ್ಯೋ ದೀಯಂತಾಂ ಸಹದಕ್ಷಿಣಾಃ ॥20॥
ಅಂಗದೇ ಮಕುಟಂ ಕ್ಷತ್ತರ್ಹಸ್ತಾಭರಣಮಾನಯ |
ಮುಕ್ತಾವಲೀಶ್ಚ ಹಾರಂ ಚ ನಿಷ್ಕಾದೀನ್ ಕುಂಡಲಾನಿ ಚ |
ಕಟಿಬಂಧನಸೂತ್ರಂ ಚ ತಥೋದರನಿಬಂಧನಮ್ ॥21॥
ಪ್ರೀತಿಪಾತ್ರನೇ, ಪುಣ್ಯಾಹವಾಚನೆಯನ್ನು ಮಾಡಿಸು, ಸಹಸ್ರ ಗೋದಾನವನ್ನು ಮಾಡು, ಬ್ರಾಹ್ಮಣರಿಗೆ ದಕ್ಷಿಣೆ ಸಹಿತವಾಗಿ ಶ್ರೇಷ್ಠವಾದ ಗ್ರಾಮಗಳನ್ನು ದಾನಮಾಡು. ವಿದುರನೇ, ಧರ್ಮರಾಜನಿಗೆ ಕಿರೀಟವನ್ನೂ, ಹಸ್ತಾಭರಣವನ್ನೂ, ಮುಕ್ತಾವಲಿಗಳನ್ನೂ, ಹಾರಗಳನ್ನೂ, ಕುಂಡಲಗಳನ್ನೂ, ಕಟಿಸೂತ್ರವನ್ನೂ ಮತ್ತು ಉದರಬಂಧನವನ್ನೂ ತೆಗೆದುಕೊಂಡು ಬಾ.
ಅಷ್ಟೋತ್ತರಸಹಸ್ರಂ ತು ಬ್ರಾಹ್ಮಣಾಧಿಷ್ಠಿತಾ ಗಜಾಃ |
ಜಾಹ್ನವೀಸಲಿಲಂ ಶೀಘ್ರಮಾನೀಯಂತಾಂ ಪುರೋಹಿತೈಃ ॥22॥
ಒಂದು ಸಾವಿರದ ಎಂಟು ಬ್ರಾಹ್ಮಣರು ಪುರೋಹಿತರ ಜೊತೆಯಲ್ಲಿ ಗಜಗಳ ಮೇಲೆ ಪ್ರಯಾಣಮಾಡಿ, ಶೀಘ್ರವಾಗಿ ಗಂಗಾಜಲವನ್ನು ತರಲಿ.
ಅಭಿಷೇಕೋದಕಕ್ಲಿನ್ನಂ ಸರ್ವಾಭರಣಭೂಷಿತಮ್ |
ಔಪವಾಹ್ಯೋಪರಿಗತಂ ದಿವ್ಯಚಾಮರವೀಜಿತಮ್ ॥23॥
ಸುವರ್ಣಮಣಿಚಿತ್ರೇಣ ಶ್ವೇತಚ್ಛತ್ರೇಣ ಶೋಭಿತಮ್ |
ಜಯೇತಿ ದ್ವಿಜವಾಕ್ಯೇನ ಸ್ತೂಯಮಾನಂ ನೃಪೈಸ್ತಥಾ ॥24॥
ದೃಷ್ಟ್ವಾ ಕುಂತೀಸುತಂ ಜ್ಯೇಷ್ಠಮಾಜಮೀಢಂ ಯುಧಿಷ್ಠಿರಮ್ |
ಪ್ರೀತಾಃ ಪ್ರೀತೇನ ಮನಸಾ ಪ್ರಶಂಸಂತು ಪುರೇ ಜನಾಃ ॥25॥
ಪಾಂಡೋಃ ಕೃತೋಪಕಾರಸ್ಯ ರಾಜ್ಯಂ ದತ್ವಾ ಮಮೈವ ಚ |
ಪ್ರತಿಕ್ರಿಯಾಕೃತಮಿದಂ ಭವಿಷ್ಯತಿ ನ ಸಂಶಯಃ ॥26॥
ಅಭಿಷೇಕಜಲದಿಂದ ಆರ್ದ್ರನಾಗಿ, ಸರ್ವಾಭರಣಭೂಷಿತನಾಗಿ, ರಾಜವಾಹನದಲ್ಲಿ ಕುಳಿತು, ದಿವ್ಯಚಾಮರದಿಂದ ಬೀಸಲ್ಪಟ್ಟು, ಸುವರ್ಣಮಣಿಗಳಿಂದ ಸುಂದರವಾಗಿ ಕಾಣುವ ಶ್ವೇತಚ್ಛತ್ರದಿಂದ ಶೋಭಿತನಾಗಿ, ಬ್ರಾಹ್ಮಣರಿಂದಲೂ ಮತ್ತು ರಾಜರುಗಳಿಂದಲೂ ಜಯಶಬ್ದದಿಂದ ಸ್ತೋತ್ರಮಾಡಲ್ಪಡುವ ಅಜಮೀಢವಂಶದಲ್ಲಿ ಬಂದವನೂ, ಕುಂತಿಯ ಜ್ಯೇಷ್ಠಪುತ್ರನೂ ಆದ ಯುಧಿಷ್ಠಿರನನ್ನು ನೋಡಿ, ಸಂತೋಷವನ್ನು ಹೊಂದಿ ಪುರಜನರು ಸಂತುಷ್ಟವಾದ ಮನಸ್ಸಿನಿಂದ ಅವನನ್ನು ಪ್ರಶಂಸೆ ಮಾಡಲಿ. ನನಗೇ ರಾಜ್ಯವನ್ನು ಕೊಟ್ಟು ಉಪಕಾರವನ್ನು ಮಾಡಿದ ಪಾಂಡುವಿಗೆ ಇದು ನಿಸ್ಸಂಶಯವಾಗಿ ಪ್ರತ್ಯುಪಕಾರವಾಗುವುದು.
ವೈಶಂಪಾಯನಃ
ಭೀಷ್ಮೋ ದ್ರೋಣಃ ಕೃಪಃ ಕ್ಷತ್ತಾ ಸಾಧು ಸಾಧ್ವಿತ್ಯಭಾಷತಾಮ್ |
ಆಗ ಭೀಷ್ಮರು, ದ್ರೋಣರು, ಕೃಪರು ಮತ್ತು ವಿದುರನೂ ಸಾಧು ಸಾಧು ಎಂದು ಹೇಳಿದರು.
ಶ್ರೀವಾಸುದೇವಃ
ಯುಕ್ತಮೇತನ್ಮಹಾರಾಜ ಕೌರವಾಣಾಂ ಯಶಸ್ಕರಮ್ |
ಶೀಘ್ರಮದ್ಯೈವ ರಾಜೇಂದ್ರ ಯಥೋಕ್ತಂ ಕರ್ತುಮರ್ಹಸಿ ॥27॥
ಮಹಾರಾಜನೇ, ಇದು ಕೌರವರಿಗೆ ಉಚಿತವಾದುದು ಮತ್ತು ಕೀರ್ತಿಕರವಾದದ್ದು. ರಾಜೇಂದ್ರನೇ, ಈ ದಿನವೇ ನೀನು ಹೇಳಿದಂತೆ ಮಾಡುವುದು ಒಳ್ಳೆಯದು.
ಇತ್ಯೇವಮುಕ್ತಸ್ತ್ವ ವಾರ್ಷ್ಣೇಯಸ್ತ್ವರಯಾಮಾಸ ತಂ ತದಾ |
ಯಥೋಕ್ತಂ ಧೃತರಾಷ್ಟ್ರಶ್ಚ ಕಾರಯಾಮಾಸ ಕೌರವಃ ॥28॥
ವೃಷ್ಣಿಕುಲದಲ್ಲಿ ಜನಿಸಿದ ವಾಸುದೇವನು ಹೀಗೆ ಹೇಳಿ ಧೃತರಾಷ್ಟ್ರನಿಗೆ ತ್ವರೆಮಾಡಿಸಿದನು. ಕೌರವನಾದ ಧೃತರಾಷ್ಟ್ರನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು.
ತಸ್ಮಿನ್ ಕ್ಷಣೇ ಮಹಾರಾಜ ಕೃಷ್ಣದ್ವೈಪಾಯನಸ್ತದಾ |
ಆಗತ್ಯ ಕುರುಭಿಃ ಸರ್ವೈಃ ಪೂಜಿತಃ ಸಸುಹೃದ್ಗಣೈಃ ॥29॥

ಮಹಾರಾಜನೇ, ಆ ಕ್ಷಣದಲ್ಲಿ ವೇದವ್ಯಾಸರು ಅಲ್ಲಿಗೆ ಬಂದು ಕುರುಗಳಿಂದಲೂ, ಎಲ್ಲಾ ಸುಹೃದ್ಗಣದಿಂದಲೂ ಪೂಜಿತರಾದರು.
ಮೂರ್ಧಾವಸಿಕ್ತೈಃ ಸಹಿತೋ ಬ್ರಾಹ್ಮಣೈರ್ವೇದಪಾರಗೈಃ |
ಕಾರಯಾಮಾಸ ವಿಧಿವತ್ ಕೇಶವಾನುಮತೇ ತದಾ ॥30॥
ಮೂರ್ಧಾವಸಿಕ್ತ ರಾಜರುಗಳಿಂದಲೂ, ವೇದಪಾರಂಗತರಾದ ಬ್ರಾಹ್ಮಣರಿಂದಲೂ ಸಹಿತರಾಗಿ ವೇದವ್ಯಾಸರು ಕೇಶವನ ಅಭಿಪ್ರಾಯದಂತೆ ಎಲ್ಲವನ್ನೂ ವಿಧಿಪೂರ್ವಕವಾಗಿ ಮಾಡಿಸಿದರು.
ಕೃಪೋ ದ್ರೋಣಶ್ಚ ಭೀಷ್ಮಶ್ಚ ಧೌಮ್ಯಶ್ಚ ವ್ಯಾಸಕೇಶವೌ |
ಬಾಹ್ಲೀಕಃ ಸೋಮದತ್ತಶ್ಚ ಚಾತುರ್ವೇದ್ಯಾ ಪುರಸ್ಕೃತಾಃ |
ಅಭಿಷೇಕಂ ತದಾ ಚಕ್ರುರ್ಭದ್ರಪೀಠೇ ಸುಸಂಯತಮ್ ॥31॥
ಕೃಪಾಚಾರ್ಯರೂ, ದ್ರೋಣರೂ, ಭೀಷ್ಮರೂ, ಧೌಮ್ಯರೂ, ವ್ಯಾಸಕೇಶವರೂ, ಬಾಹ್ಲೀಕರಾಜರೂ, ಸೋಮದತ್ತ ಇವರುಗಳನ್ನು ಮುಂದೆಮಾಡಿಕೊಂಡು ನಿಯಮಶೀಲನಾದ ಧರ್ಮರಾಜನನ್ನು ಭದ್ರಪೀಠದಲ್ಲಿ ಕುಳ್ಳಿರಿಸಿ ನಾಲ್ಕೂ ವೇದಗಳ ಮಂತ್ರಗಳಿಂದ ಅಭಿಷೇಕವನ್ನು ಮಾಡಿದರು.
ಜಿತ್ವಾ ತು ಪೃಥಿವೀಂ ಕೃತ್ಸ್ನಾಂ ವಶೇ ಕೃತ್ವಾ ನರರ್ಷಭಾನ್ |
ರಾಜಸೂಯಾದಿಭಿರ್ಯಜ್ಞೈಃ ಕ್ರತುಭಿರ್ಭೂರಿದಕ್ಷಿಣೈಃ ॥32॥
ಸ್ನಾತ್ವಾ ಹ್ಯವಭೃಥಸ್ನಾನಂ ಮೋದತಾಂ ಬಾಂಧವೈಃ ಸಹ |
ಏವಮುಕತ್ವ ತು ತೇ ಸರ್ವೇ ಆಶೀರ್ಭಿರಭಿಪೂಜಯನ್ ॥33॥
ಸಮಗ್ರವಾದ ಪೃಥಿವಿಯನ್ನು ಗೆದ್ದು ರಾಜರುಗಳನ್ನು ವಶದಲ್ಲಿಟ್ಟುಕೊಂಡು ರಾಜಸೂಯಾದಿ ಯಜ್ಞಗಳನ್ನು ಮಾಡಿ ಭೂರಿದಕ್ಷಿಣೆಗಳನ್ನು ಕೊಟ್ಟು ಅವಭೃತಸ್ನಾನವನ್ನು ಮಾಡಿ ಬಾಂಧವರ ಜೊತೆಯಲ್ಲಿ ಸುಖದಿಂದಿರು. ಹೀಗೆ ಹೇಳಿ, ಅವರೆಲ್ಲರೂ ಆಶೀರ್ವಾದಗಳಿಂದ ಧರ್ಮರಾಜನನ್ನು ಸತ್ಕರಿಸಿದರು.
ಮೂರ್ಧಾಭಿಷಿಕ್ತಃ ಕೌರವ್ಯಃ ಸರ್ವಾಭರಣಭೂಷಿತಃ |
ಜಯೇತಿ ಸಂಸ್ತುತೋ ರಾಜಾ ಪ್ರದದೌ ಧನಮಕ್ಷಯಮ್ ॥34॥
ಮೂರ್ಧಾಭಿಷಿಕ್ತನಾದ ಧರ್ಮರಾಜನು ಜಯಶಬ್ದದಿಂದ ಸ್ತೋತ್ರಮಾಡಲ್ಪಟ್ಟವನಾಗಿ, ಸರ್ವಾಭರಣಭೂಷಿತನಾಗಿ ಅಕ್ಷಯವಾದ ಧನವನ್ನು ದಾನ ಮಾಡಿದನು.
ಸರ್ವಮೂರ್ಧಾವಸಿಕ್ತೈಶ್ಚ ಪೂಜಿತಃ ಕುರುನಂದನಃ |
ಔಪವಾಹ್ಯಮಥಾರುಹ್ಯ ದಿವ್ಯಚ್ಛತ್ರೋಪಶೋಭಿತಃ |
ರರಾಜಾನುಗತೋ ರಾಜಾ ಮಹೇಂದ್ರ ಇವ ದೈವತೈಃ ॥35॥
ಮೂರ್ಧಾಭಿಷಿಕ್ತನಾಗಿ, ಎಲ್ಲರಿಂದಲೂ ಸತ್ಕರಿಸಲ್ಪಟ್ಟ ಕುರುನಂದನನಾದ ಯುಧಿಷ್ಠಿರನು ರಾಜವಾಹನವನ್ನು ಏರಿ, ದಿವ್ಯಚ್ಛತ್ರದಿಂದ ಶೋಭಿತನಾಗಿ, ರಾಜರುಗಳಿಂದ ಹಿಂಬಾಲಿಸಲ್ಪಟ್ಟು, ದೇವತೆಗಳಿಂದ ಹಿಂಬಾಲಿಸಲ್ಪಟ್ಟ ಮಹೇಂದ್ರನಂತೆ ಶೋಭಿಸಿದನು.
ತತಃ ಪ್ರದಕ್ಷಿಣೀಕೃತ್ಯ ನಗರಂ ನಾಗಸಾಹ್ವಯಮ್ |
ಪ್ರವಿವೇಶ ತತೋ ರಾಜಾ ನಾಗರೈಃ ಪೂಜಿತೋ ಭೃಶಮ್ ॥36॥
ಅನಂತರ ಹಸ್ತಿನಪುರ ನಗರಕ್ಕೆ ಪ್ರದಕ್ಷಿಣೆಯನ್ನು ಮಾಡಿ, ನಗರವಾಸಿಗಳಿಂದ ಪೂಜಿಸಲ್ಪಟ್ಟು, ನಗರದೊಳಗೆ ಪ್ರವೇಶಿಸಿದನು.
ಮೂರ್ಧಾವಸಿಕ್ತಂ ಕೌಂತೇಯಮಭ್ಯನಂದಂತ ಬಾಂಧವಾಃ |
ಗಾಂಧಾರಿಪುತ್ರಾಃ ಶೋಚಂತ ಸರ್ವೇ ತೇ ಸಹ ಬಾಂಧವೈಃ ॥37॥
ಬಾಂಧವರೆಲ್ಲರೂ ಮೂರ್ಧಾವಸಿಕ್ತನಾದ ಕೌಂತೇಯನಾದ ಯುಧಿಷ್ಠಿರನನ್ನು ಅಭಿನಂದಿಸಿದರು. ಗಾಂಧಾರಿಯ ಪುತ್ರರೆಲ್ಲರೂ ಬಾಂಧವರ ಜೊತೆಯಲ್ಲಿ ಶೋಕವನ್ನು ಹೊಂದಿದರು.
ಜ್ಞಾತ್ವಾ ಶೋಕಂ ತು ಪುತ್ರಾಣಾಂ ಧೃತರಾಷ್ಟ್ರೋಽಬ್ರವೀನ್ನೃಪಮ್ |
ಸಮಕ್ಷಂ ವಾಸುದೇವಸ್ಯ ಕುರೂಣಾಂ ಚ ಸಮಕ್ಷತಃ ॥38॥
ತನ್ನ ಮಕ್ಕಳ ಶೋಕವನ್ನು ತಿಳಿದು ಧೃತರಾಷ್ಟ್ರನು ವಾಸುದೇವನ ಎದುರಿನಲ್ಲಿ ಮತ್ತು ಎಲ್ಲಾ ಕುರುಗಳ ಎದುರಿನಲ್ಲಿ ಧರ್ಮರಾಜನನ್ನು ಕುರಿತು ಹೇಳಿದನು.
ಧೃತರಾಷ್ಟ್ರಃ
ಅಭಿಷೇಕಂ ತ್ವಯಾ ಪ್ರಾಪ್ತಂ ದುಷ್ಪ್ರಾಪಮಕೃತಾತ್ಮಭಿಃ |
ಗಚ್ಛ ತ್ವಮದ್ಯೈವ ನೃಪ ಕೃತಕೃತ್ಯೋಽಸಿ ಪೌರವ ॥39॥
ನೀನು ಈ ದಿನ ಪುಣ್ಯಹೀನರು ಪಡೆಯಲು ಸಾಧ್ಯವಿಲ್ಲದ ಅಭಿಷೇಕವನ್ನು ಪಡೆದಿದ್ದೀಯೆ. ಪೌರವನಾದ ರಾಜನೇ, ನೀನು ಕೃತಕೃತ್ಯನಾಗಿದ್ದೀಯೆ. ಈ ದಿನವೇ ಹೊರಡು.
ಆಯುಃ ಪುರೂರವಾ ರಾಜನ್ ನಹುಷಶ್ಚ ಯಯಾತಿನಾ |
ತತ್ರೈವ ನಿವಸಂತಿ ಸ್ಮ ಖಾಂಡವಾಖ್ಯೇ ನೃಪೋತ್ತಮಾಃ ॥40॥
ರಾಜನೇ, ನೃಪಶ್ರೇಷ್ಠರಾದ ಆಯು, ಪುರೂರವ, ನಹುಷ ಮತ್ತು ಯಯಾತಿ ಇವರು ಖಾಂಡವಪ್ರಸ್ಥದಲ್ಲಿಯೇ ವಾಸವನ್ನು ಮಾಡಿದ್ದರು.

ರಾಜಧಾನೀ ತು ಸರ್ವೇಷಾಂ ಪೌರವಾಣಾಂ ಮಹಾಭುಜ |
ವಿನಾಶಿತಂ ಮುನಿಗಣೈರ್ಲೋಭಾದ್ ಬುಧಸುತಸ್ಯ ತು ॥41॥
ಮಹಾಭುಜನೇ, ಅದು ಎಲ್ಲಾ ಪೌರವರಿಗೂ ರಾಜಧಾನಿಯಾಗಿದ್ದಿತು. ಬುಧಸುತನಾದ ಪುರೂರವನ ಸ್ತ್ರೀಲೋಭದಿಂದ ಮುನಿಗಳ

ಸಮೂಹವು ಶಾಪವನ್ನು ಕೊಟ್ಟು ಆ ನಗರವನ್ನು ನಾಶಮಾಡಿತು.
ತಸ್ಮಾತ್ ತ್ವಂ ಖಾಂಡವಪ್ರಸ್ಥಂ ಪುರಂ ರಾಷ್ಟ್ರಂ ಚ ವರ್ಧಯ |
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ಕೃತಲಕ್ಷಣಾಃ ||42||
ತ್ವದ್ಭಕ್ತ್ಯಾ ಜಂತವಶ್ಚಾನ್ಯೇ ಭಜಂತ್ಯೇವ ಪುರಂ ಶುಭಮ್ |
ಪುರಂ ರಾಷ್ಟ್ರಂ ಸಮೃದ್ಧಂ ವೈ ಧನಧಾನ್ಯೈಃ ಸಮಾವೃತಮ್ |
ತಸ್ಮಾದ್ ಗಚ್ಛಸ್ವ ಕೌಂತೇಯ ಭ್ರಾತೃಭಿಃ ಸಹಿತೋಽನಘ ||43||
ಆದ್ದರಿಂದ ನೀನು ಖಾಂಡವಪ್ರಸ್ಥಕ್ಕೆ ಹೋಗಿ ಪುರವನ್ನೂ ಮತ್ತು ರಾಷ್ಟ್ರವನ್ನೂ ಅಭಿವೃದ್ಧಿಪಡಿಸು. ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಮತ್ತು ಪ್ರಾಣಿಗಳೂ ಸಹ ಶಂಖಚಕ್ರಚಿಹ್ನೆಗಳನ್ನು ಧರಿಸಿ ನಿನ್ನ ಮೇಲಿನ ಅನುರಾಗದಿಂದ ಆ ಶುಭವಾದ ಪಟ್ಟಣದಲ್ಲಿ ವಾಸಮಾಡುತ್ತಾರೆ. ಆ ಪುರವು ಮತ್ತು ರಾಷ್ಟ್ರವು ಧನಧಾನ್ಯಗಳಿಂದ ಪೂರ್ಣವಾಗಿದ್ದು ಸಮೃದ್ಧವಾಗಿದೆ. ಅನಘನಾದ ಕೌಂತೇಯನೇ, ಆದ್ದರಿಂದ ನೀನು ತಮ್ಮಂದಿರ ಜೊತೆಯಲ್ಲಿ ಅಲ್ಲಿಗೆ ಹೋಗು.
ವೈಶಂಪಾಯನಃ
ಪ್ರತಿಗೃಹ್ಯ ತು ತೇ ವಾಕ್ಯಂ ನೃಪಂ ಸರ್ವೇ ಪ್ರಣಮ್ಯ ಚ |
ರಥೈರ್ನಾಗೈರ್ಹಯೈಶ್ಚಾಪಿ ಸಹಿತಾಸ್ತು ಪದಾತಿಭಿಃ |
ಪ್ರತಸ್ಥಿರೇ ತತೋ ಘೋರಂ ವನಾಂತಂ ಮನುಜರ್ಷಭಾಃ ||44||
ಆ ಮನುಜರ್ಷಭರು ಧೃತರಾಷ್ಟ್ರನ ಆ ವಾಕ್ಯವನ್ನು ಸ್ವೀಕರಿಸಿ, ಅವನಿಗೆ ಎಲ್ಲರೂ ನಮಸ್ಕಾರವನ್ನು ಮಾಡಿ, ರಥಗಳಿಂದಲೂ, ಗಜಗಳಿಂದಲೂ, ಅಶ್ವಗಳಿಂದಲೂ, ಪದಾತಿಗಳಿಂದಲೂ ಸಹಿತರಾಗಿ ಘೋರವಾದ ಕಾಡಿನಂಚಿನಲ್ಲಿದ್ದ ಖಾಂಡವಪ್ರಸ್ಥಕ್ಕೆ ಹೊರಟರು.

ಪಾಂಡವೈಃ ಸಹಿತಾ ಗಂತುಂ ನಾರ್ಹತೇತಿ ಚ ನಾಗರಾನ್ |
ಘೋಷಯಾಮಾಸ ನಗರೇ ಧಾರ್ತರಾಷ್ಟ್ರಃ ಸಸೌಬಲಃ ||45||
ಪಾಂಡವರ ಜೊತೆಯಲ್ಲಿ ಖಾಂಡವಪ್ರಸ್ಥಕ್ಕೆ ಹೊರಟಿದ್ದ ನಗರವಾಸಿಗಳನ್ನು ದುರ್ಯೋಧನನೂ ಮತ್ತು ಶಕುನಿಯೂ ಸೇರಿ ಯಾರೂ ಪಾಂಡವರ ಹಿಂದೆ ಹೋಗಬಾರದು (ಹೋದರೆ, ಅವರ ಆಸ್ತಿಯೆಲ್ಲಾ ರಾಜವಶವಾಗುತ್ತದೆ) ಎಂದು ಡಂಗುರವನ್ನು ಸಾರಿಸಿ ನಿಲ್ಲಿಸಿದನು.
ತತಸ್ತೇ ಪಾಂಡವಾಸ್ತತ್ರ ಗತ್ವಾ ಕೃಷ್ಣಪುರೋಗಮಾಃ |
ಮಂಡಯಾಂಚಕ್ರಿರೇ ತದ್ವೈ ಪುರಂ ಸ್ವರ್ಗವದಚ್ಯುತಾಃ ||46||
ಅನಂತರ ಕೃಷ್ಣನನ್ನು ಮುಂದೆಮಾಡಿಕೊಂಡು ಅಲ್ಲಿಗೆ ಹೊರಟ ಉತ್ಸಾಹಾದಿಗಳಿಂದ ಚ್ಯುತರಾಗದ ಆ ಪಾಂಡವರು ಸ್ವರ್ಗದಂತೆ ಆ ಪಟ್ಟಣವನ್ನು ಅಲಂಕರಿಸಿದರು.
ವಾಸುದೇವೋ ಜಗನ್ನಾಥಶ್ಚಿಂತಯಾಮಾಸ ವಾಸವಮ್ |
ಮಹೇಂದ್ರಶ್ಚಿಂತಿತೋ ರಾಜನ್ ವಿಶ್ವಕರ್ಮಾಣಮಾದಿಶತ್ ||47||
ಜಗನ್ನಾಥನಾದ ವಾಸುದೇವನು ಇಂದ್ರನನ್ನು ಸ್ಮರಿಸಿದನು. ರಾಜನೇ, ಸ್ಮರಿಸಲ್ಪಟ್ಟ ಇಂದ್ರನು ವಿಶ್ವಕರ್ಮನಿಗೆ ಆದೇಶಿಸಿದನು.
ವಿಶ್ವಕರ್ಮನ್ ಮಹಾಪ್ರಾಜ್ಞ ಅದ್ಯಪ್ರಭೃತಿ ತತ್ ಪುರಮ್ |
ಇಂದ್ರಪ್ರಸ್ಥಮಿತಿ ಖ್ಯಾತಂ ದಿವ್ಯಂ ರಮ್ಯಂ ಭವಿಷ್ಯತಿ ||48||
ಮಹಾಪ್ರಾಜ್ಞನಾದ ವಿಶ್ವಕರ್ಮನೇ, ಇಂದಿನಿಂದ ಪ್ರಾರಂಭಿಸಿ, ಆ ನಗರವು ಇಂದ್ರಪ್ರಸ್ಥವೆಂದು ಪ್ರಖ್ಯಾತವಾಗಿ ದಿವ್ಯವೂ ಮತ್ತು ರಮ್ಯವೂ ಆಗುವುದು.
ವೈಶಂಪಾಯನಃ
ಮಹೇಂದ್ರಶಾಸನಾದ್ ಗತ್ವಾ ವಿಶ್ವಕರ್ಮಾ ತು ಕೇಶವಮ್ |
ಪ್ರಣಮ್ಯ ಪ್ರಣಿಪಾತಾರ್ಹಂ ಕಿಂ ಕರೋಮೀತ್ಯಭಾಷತ ||49||
ವಾಸುದೇವಸ್ತು ತಚ್ಛ್ರುತ್ವಾ ವಿಶ್ವಕರ್ಮಾಣಮೂಚಿವಾನ್ |
ಕುರುಷ್ವ ಕುರುರಾಜಾಯ ಮಹೇಂದ್ರಪುರಸನ್ನಿಭಮ್ |
ಇಂದ್ರೇಣ ಕೃತನಾಮಾನಮಿಂದ್ರಪ್ರಸ್ಥಂ ಮಹಾಪುರಮ್ ||50||
ಇಂದ್ರಶಾಸನದಂತೆ ವಿಶ್ವಕರ್ಮನು ಅಲ್ಲಿಗೆ ಹೋಗಿ, ಕೇಶವನಿಗೆ ನಮಸ್ಕರಿಸಿ ಏನು ಮಾಡಲಿ ಎಂದು ಕೇಳಿದನು. ಆ ಮಾತನ್ನು ಕೇಳಿ ವಾಸುದೇವನು ವಿಶ್ವಕರ್ಮನಿಗೆ ಹೇಳಿದನು. ಇಂದ್ರನು ನಾಮಕರಣ ಮಾಡಿ ಇಂದ್ರಪ್ರಸ್ಥವೆಂದು ಕರೆದಿರುವ ಈ ಮಹಾಪಟ್ಟಣವನ್ನು ಕುರುರಾಜನಾದ ಯುಧಿಷ್ಠಿರನ ಸಲುವಾಗಿ ಇಂದ್ರಪುರವಾದ ಅಮರಾವತಿಯಂತೆ ನಿರ್ಮಿಸು.
ವೈಶಂಪಾಯನಃ
ತತಃ ಪುಣ್ಯೇ ಶಿವೇ ದೇಶೇ ಶಾಂತಿಂ ಕೃತ್ವಾ ಮಹಾರಥಾಃ |
ಸ್ವಸ್ತಿ ವಾಚ್ಯ ಯಥಾನ್ಯಾಯಮಿಂದ್ರಪ್ರಸ್ಥಂ ಭವತ್ವಿತಿ ||51||
ನಗರಂ ಮಾಪಯಾಮಾಸುರ್ದ್ವೈಪಾಯನಪುರೋಗಮಾಃ |
ತತಸ್ತು ವಿಶ್ವಕರ್ಮಾ ತು ಚಕಾರ ಪುರಮುತ್ತಮಮ್ ||52||
ಅನಂತರ, ಮಹಾರಥರಾದ ಆ ಪಾಂಡವರು ಒಂದು ಪುಣ್ಯಮುಹೂರ್ತದಲ್ಲಿ ಮಂಗಳವಾದ ಒಂದು ಪ್ರದೇಶದಲ್ಲಿ ಶಾಂತಿಯನ್ನು ಮಾಡಿ, ಸ್ವಸ್ತಿವಾಚನವನ್ನು ಮಾಡಿಸಿ, ಶಾಸ್ತ್ರೋಕ್ತಪ್ರಕಾರದಿಂದ ಇಂದ್ರಪ್ರಸ್ಥನಗರವಾಗಲಿ ಎಂದು ಹೇಳಿದರು. ಆಗ ವೇದವ್ಯಾಸರು ಮೊದಲಾದವರು ಆ ನಗರವನ್ನು ಅಳೆದರು.

ಸಾಗರಪ್ರತಿರೂಪಾಭಿಃ ಪರಿಖಾಭಿರಲಂಕೃತಮ್ |
ಪ್ರಾಕಾರೇಣ ಚ ಸಂಪನ್ನಂ ದಿವಮಾವೃತ್ಯ ವಿಷ್ಠಿತಮ್ ॥53॥
ಪಾಂಡರಾಭ್ರಪ್ರಕಾಶೇನ ವೃತಂ ಶಶಿನಿಭೇನ ಚ |
ಶುಶುಭೇ ತತ್ ಪುರಶ್ರೇಷ್ಠಂ ನಾಗೈರ್ಭೋಗವತೀ ಯಥಾ ॥54॥
ಅನಂತರ ವಿಶ್ವಕರ್ಮನು ಸಾಗರದಂತಿದ್ದ ಪರಿಖೆಗಳಿಂದ ಅಲಂಕೃತವಾದ, ಅಂತರಿಕ್ಷದವರೆಗೂ ಹೋಗಿರುವಂತೆ ಕಾಣುವ ಕೋಟೆಯ ಗೋಡೆಗಳನ್ನು ಹೊಂದಿದ ಆ ಶ್ರೇಷ್ಠವಾದ ಪಟ್ಟಣವನ್ನು ನಿರ್ಮಿಸಿದನು. ಬಿಳಿಯ ಮೋಡಗಳ ಕಾಂತಿಯನ್ನು ಹೊಂದಿದ ಚಂದ್ರನ ಕಾಂತಿಯನ್ನು ಹೊಂದಿದ ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟ ಆ ಪಟ್ಟಣವು ನಾಗಗಳಿಂದ ಸುತ್ತಲ್ಪಟ್ಟ ಭೋಗವತೀ ಪಟ್ಟಣದಂತೆ ಶೋಭಿಸಿತು.
ದ್ವಿಪಕ್ಷಗರುಡಪ್ರಖ್ಯೈರ್ದ್ವಾರೈರ್ಘೋರಪ್ರದರ್ಶನೈಃ |
ಗುಪ್ತಮಭ್ರಘನಪ್ರಖ್ಯೈರ್ಗೋಪುರೈರ್ಮಂದರೋಪಮೈಃ ॥55॥
ವಿವಿಧೈರತಿವಿಸ್ತೀರ್ಣೈಃ ಶಸ್ತ್ರೋಪೇತೈಃ ಸುಸಂವೃತೈಃ |
ಶಕ್ತಿಭಿಶ್ಚಾವೃತಂ ತದ್ಧಿ ದ್ವಿಜಿಹ್ವೈರಿವ ಪನ್ನಗೈಃ ॥56॥
ತಲ್ಪೈಶ್ಚಾಭ್ಯಧಿಕೈರ್ಯುಕ್ತಂ ಶುಶುಭೇ ಯೋಧರಕ್ಷಿತಮ್ |
ತೀಕ್ಷ್ಣಾಭಿಶ್ಚ ಶತಘ್ನೀಭಿರ್ಯಂತ್ರಜಾಲೈಶ್ಚ ಶೋಭಿತಮ್ ॥57॥
ಅಲ್ಲಿಯ ಗೃಹಗಳು ಗರುಡನ ಪಕ್ಷದಂತಿರುವ ಎರಡು ಬಾಗಿಲುಗಳಿಂದ ಶೋಭಿತವಾಗಿದ್ದವು. ಬಿಳಿಯ ಮೋಡ ಮತ್ತು ಕರಿಯ ಮೋಡಗಳಿಗೆ (ಅಭ್ರ ಮತ್ತು ಘನ) ಹೋಲುವ ಕಾಂತಿಯನ್ನುಳ್ಳ, ಮಂದರಪರ್ವತದಂತೆ ಎತ್ತರವಾದ ಗೋಪುರಗಳಿಂದ ಕೂಡಿದ್ದಿತು. ಆ ಪಟ್ಟಣವು ಅತಿವಿಸ್ತೀರ್ಣವಾದ, ಸುಸಂವೃತವಾದ, ಶಸ್ತ್ರೋಪೇತವಾದ ಶಕ್ತಿ ಆಯುಧಗಳಿಂದ ಆವರಿಸಲ್ಪಟ್ಟು ಎರಡು ನಾಲಿಗೆಗಳುಳ್ಳ ಸರ್ಪಗಳಿಂದ ಆವರಿಸಲ್ಪಟ್ಟಂತೆ ಇದ್ದಿತು. ಅಲ್ಲಲ್ಲಿ ವಿಶ್ರಾಂತಿಸ್ಥಾನಗಳಿದ್ದು, ಯೋಧರಿಂದ ರಕ್ಷಿತವಾಗಿ ಆ ಪುರವು ಶೋಭಿಸಿತು.
ಆಯಸೈಶ್ಚ ಮಹಾಚಕ್ರೈಃ ಶುಶುಭೇ ತತ್ ಪುರೋತ್ತಮಮ್ |
ಸುವಿಭಕ್ತಮಹಾರಥ್ಯಂ ದೇವತಾಬಾಧವರ್ಜಿತಮ್ ॥58॥
ತೀಕ್ಷ್ಣವಾದ ಶತಘ್ನೀ ಆಯುಧಗಳಿಂದಲೂ, ಯಂತ್ರಜಾಲಗಳಿಂದಲೂ, ಕಬ್ಬಿಣದ ಮಹಾಚಕ್ರಗಳಿಂದಲೂ, ಆ ಪಟ್ಟಣವು ಶೋಭಿಸಿತು.

ವಿರೋಚಮಾನಂ ವಿವಿಧೈಃ ಪಾಂಡರೈರ್ಭವನೋತ್ತಮೈಃ |
ಹರ್ಮ್ಯಪ್ರಾಸಾದಸಂಬಾಧಂ ನಾನಾಽಽಪಣವಿಭೂಷಿತಮ್ ॥59॥
ಸುವಿಭಕ್ತವಾದ ರಾಜಮಾರ್ಗಗಳಿಂದ ಕೂಡಿದ್ದು, ದೇವತಾಬಾಧರೂಪವಾದ ಬಿರುಗಾಳಿ ಮೊದಲಾದವುಗಳಿಂದ ರಹಿತವಾಗಿದ್ದು, ಬಿಳಿಯ ಬಣ್ಣದ ಅನೇಕ ಭವನಗಳಿಂದಲೂ, ಹರ್ಮ್ಯಪ್ರಾಸಾದಿಗಳಿಂದಲೂ ನಿಬಿಡವಾಗಿದ್ದು, ಅನೇಕ ಆಪಣಸ್ಥಳಗಳಿಂದ ಯುಕ್ತವಾಗಿದ್ದು, ಆ ನಗರವು ಶೋಭಿಸಿತು.
ವಿಸ್ಪರ್ಧಯೇವ ಪ್ರಾಸಾದಾ ಹ್ಯನ್ಯೋನ್ಯಾಭ್ಯುಚ್ಛ್ರಿತಾಽಭವನ್ |
ಮಂಡಪಾಶ್ಚ ಸಭಾಃ ಶಾಲಾಃ ಪ್ರಪಾಶ್ಚೈವ ಸಮಂತತಃ ॥60॥
ಮಂಟಪಗಳೂ, ಸಭೆಗಳೂ, ಶಾಲೆಗಳೂ ಮತ್ತು ಅರವಟ್ಟಿಗೆಗಳೂ ಎಲ್ಲಾ ಕಡೆಯಲ್ಲಿಯೂ ಪರಸ್ಪರ ಸ್ಪರ್ಧಿಸುವಂತೆ ಒಂದಕ್ಕಿಂತ ಒಂದು ಎತ್ತರವಾಗಿದ್ದವು.
ತತ್ ತ್ರಿವಿಷ್ಟಪಸಂಕಾಶಮಿಂದ್ರಪ್ರಸ್ಥಂ ವ್ಯರೋಚತ |
ಮೇಘವೃಂದಮಿವಾಕಾಶೇ ವಿದ್ಯುತ್ಸೌದಾಮಿನೀವೃತಮ್ ॥61॥
ಆಕಾಶದಲ್ಲಿ ಬೆಳಗುವ ಮಿಂಚಿನಿಂದ ಕೂಡಿದ ಮೇಘವೃಂದದಂತೆ ಸ್ವರ್ಗದಂತಿದ್ದ ಇಂದ್ರಪ್ರಸ್ಥನಗರವು ಶೋಭಿಸಿತು.
ಇಂದ್ರಪ್ರಸ್ಥಸ್ಯ ಮಧ್ಯೇ ತು ಕೌರವಸ್ಯ ನಿವೇಶನಮ್ |
ಶುಶುಭೇ ಧನಸಂಪೂರ್ಣಂ ಧನಾಧ್ಯಕ್ಷಕ್ಷಯೋಪಮಮ್ ॥62॥
ಇಂದ್ರಪ್ರಸ್ಥನಗರದ ಮಧ್ಯದಲ್ಲಿ ಕುರುರಾಜನಾದ ಧರ್ಮರಾಜನ ಅರಮನೆಯು ಧನಸಂಪೂರ್ಣವಾಗಿದ್ದು, ಕುಬೇರನ ಅರಮನೆಯಂತೆ ಶೋಭಿಸಿತು.
ಗೃಹೈರಾದರ್ಶವಿಮಲೈರ್ವಿವಿಧೈಶ್ಚ ಲತಾಗೃಹೈಃ |
ಮನೋಹರೈಶ್ಚಿತ್ರಗೃಹೈಸ್ತಥಾ ಜಗತಿಪರ್ವತೈಃ ॥63॥
ಕನ್ನಡಿಯಂತೆ ಹೊಳೆಯುವ ಗೃಹಗಳಿಂದಲೂ, ವಿವಿಧವಾದ ಲತಾಗೃಹಗಳಿಂದಲೂ, ಮನೋಹರವಾದ ಚಿತ್ರಗೃಹಗಳಿಂದಲೂ, ಮಣಿಮಯವಾದ ಹಾಸುಗಲ್ಲುಗಳಿಂದಲೂ, ಕ್ರೀಡಾಪರ್ವತಗಳಿಂದಲೂ ಆ ನಗರವು ಶೋಭಿಸಿತು.
ಪುಷ್ಕರಿಣ್ಯಶ್ಚ ವಿವಿಧಾಃ ಪದ್ಮೋತ್ಪಲಸಮಾವೃತಾಃ |
ಹಂಸಕಾರಂಡವಾಕೀರ್ಣಾಶ್ಚಕ್ರವಾಕೋಪಶೋಭಿತಾಃ |
ರಮ್ಯಾಶ್ಚ ವಿವಿಧಾಸ್ತತ್ರ ವಾಪ್ಯಶ್ಚೈವ ಸಮಾವೃತಾಃ ॥64॥
ಅಲ್ಲಿ ಪದ್ಮ ಉತ್ಪಲಗಳಿಂದ ಕೂಡಿದ, ಹಂಸ, ಕಾರಂಡ ಮೊದಲಾದ ಜಲಪಕ್ಷಿಗಳಿಂದ ತುಂಬಿದ, ಚಕ್ರವಾಕ ಪಕ್ಷಿಗಳಿಂದ ಶೋಭಿತವಾದ ಅನೇಕ ಪುಷ್ಕರಿಣಿಗಳಿದ್ದವು. ಮನೋಹರವಾದ ಅನೇಕ ವಿಧವಾದ ಬಾವಿಗಳೂ ಅಲ್ಲಿದ್ದವು.
ವೇಶ್ಮಮಧ್ಯೇ ಶುಭಂ ದಿವ್ಯಮಿಂದ್ರವಾಸಗೃಹೋಪಮಮ್ |
ರಾಜ್ಞೋ ವಾಸಗೃಹಂ ರಮ್ಯಂ ವಿಶ್ವಕರ್ಮಾಽತ್ಯಕಾರಯತ್ |
ಸುವರ್ಣಮಣಿಸೋಪಾನಂ ಸರ್ವರತ್ನ ವಿಚಿತ್ರಿತಮ್ ॥65॥

ಆ ಮನೆಗಳ ಮಧ್ಯದಲ್ಲಿ ಇಂದ್ರನ ಮನೆಯಂತೆ ದಿವ್ಯವೂ, ಮಂಗಳವೂ ಆದ, ಮನೋಹರವಾದ, ರಾಜನ ವಾಸಗೃಹವನ್ನು ವಿಶ್ವಕರ್ಮನು ನಿರ್ಮಿಸಿದನು. ಅಲ್ಲಿ ಸರ್ವರತ್ನಖಚಿತವಾದ, ಸುವರ್ಣಮಣಿ- ಸೋಪಾನಗಳಿದ್ದವು.
ವಿಹಾರಭೂಮ್ಯೋ ವಿವಿಧಾಃ ಕಾರಿತಾಃ ಸುಮನೋಹರಾಃ |
ತಥಾ ಪ್ರಾಸಾದಮಾಲಾಶ್ಚ ಶೋಭಂತೇ ಸ್ಮ ಸಹಸ್ರಶಃ ॥66॥
ಅಲ್ಲಿ ವಿಧವಿಧವಾದ, ಮನೋಹರವಾದ, ವಿಹಾರಭೂಮಿಗಳೂ, ಸಹಸ್ರಸಂಖ್ಯೆಯಲ್ಲಿ ಪ್ರಾಸಾದಮಾಲೆಗಳೂ ಇದ್ದು, ನಗರವು ಶೋಭಿಸಿತು.
ನಿರಂತರಾ ರಾಜಮಾರ್ಗಾಃ ಸ್ತ್ರೀರತ್ನೈಃ ಶೋಭಿತಾಃ ಸ್ಥಿತಾಃ |
ತತ್ರಾಗಚ್ಛನ್ ದ್ವಿಜಾ ರಾಜನ್ ಸರ್ವೇ ವೇದವಿದಾಂ ವರಾಃ ॥67॥
ರಾಜಮಾರ್ಗದಲ್ಲಿ ನಿರಂತರವಾಗಿ ಸುಂದರಿಯರಾದ ಮತ್ತು ಅಲಂಕೃತರಾದ ಸ್ತ್ರೀಯರು ಓಡಾಡುತ್ತಿದ್ದರು.
ವೇದವಿದ್ಯಾವಿಶಾರದರಾದ ಬ್ರಾಹ್ಮಣರು ಅಲ್ಲಿಗೆ ಬಂದರು.
ನಿವಾಸಂ ರೋಚಯಂತಿ ಸ್ಮ ಸರ್ವಭಾಷಾವಿದಸ್ತಥಾ |
ವಣಿಜಶ್ಚಾಭ್ಯಯುಸ್ತತ್ರ ದೇಶೇಭ್ಯೋಽಪಿ ಧನಾರ್ಥಿನಃ ॥68॥
ಸರ್ವಭಾಷಾವಿದರೂ ಸಹ ಅಲ್ಲಿ ವಾಸಿಸಲು ಬಯಸಿದರು. ಧನಾರ್ಥಿಗಳಾದ ವರ್ತಕರೂ ಸಹ ಬೇರೆಬೇರೆ ದೇಶಗಳಿಂದ ಅಲ್ಲಿಗೆ ಬಂದರು.
ಸರ್ವಶಿಲ್ಪವಿದಶ್ಚೈವ ವಾಸಾಯಾಭ್ಯಾಗಮಂಸ್ತದಾ |
ಉದ್ಯಾನಾನಿ ಚ ರಮ್ಯಾಣಿ ನಗರಸ್ಯ ಸಮೀಪತಃ ॥69॥
ಎಲ್ಲಾ ಕರಕೌಶಲಗಳಲ್ಲಿ ನಿಪುಣರಾದವರು ಅಲ್ಲಿಗೆ ಬಂದರು. ಆ ನಗರದ ಸುತ್ತಲೂ ಮನೋಹರವಾದ ಉದ್ಯಾನಗಳಿದ್ದವು.
ಸಹಕಾರಾಮ್ರಪನಸೈಃ ಕಪಿತ್ಥೈರಪ್ಯುದುಂಬರೈಃ |
ನಾಳಿಕೇರೈಶ್ಚ ಲಿಕುಚೈಃ ಕ್ರಮುಕೈಶ್ಚ ಸಮಾವೃತಾಃ ॥70॥
ಆ ಉದ್ಯಾನಗಳು ಸಹಕಾರ, ಆಮ್ರ, ಪನಸ, ಕಪಿತ್ಥ, ಉದುಂಬರ, ನಾರಿಕೇಳ, ಲಿಕುಚ, ಕ್ರಮುಕ ಮೊದಲಾದ ಮರಗಳಿಂದ ತುಂಬಿದ್ದವು.
ಅಶೋಕೈಸ್ತಿಲಕೈರ್ಲೋಧ್ರೈರ್ನೀಲಾಶೋಕೈಶ್ಚ ಚಂಪಕೈಃ |
ಕರವೀರೈಃ ಕರ್ಣಿಕಾರೈರ್ನಾಗವೃಕ್ಷೈಃ ಸುಪುಷ್ಪಿತೈಃ ॥71॥
ಪುನ್ನಾಗೈರ್ನಾಗವೃಕ್ಷೈಶ್ಚ ಮಧೂಕೈಶ್ಚ ಸುಪುಷ್ಪಿತೈಃ |
ಸಾಲತಾಳಕದಂಬೈಶ್ಚ ವಕುಲೈಶ್ಚ ಸಕೇತಕೈಃ ॥72॥
ಅಲ್ಲಿ ಅಶೋಕ, ತಿಲಕ, ಲೋಧ್ರ, ನೀಲಾಶೋಕ, ಚಂಪಕ, ಕರವೀರ, ಕರ್ಣಿಕಾರ, ನಾಗವೃಕ್ಷ, ಪುನ್ನಾಗ, ಮಧೂಕ, ಸಾಲ, ತಾಲ, ಕದಂಬ, ವಕುಲ, ಕೇತಕ ಮೊದಲಾದ ಪುಷ್ಪವನ್ನು ಕೊಡುವ ವೃಕ್ಷಗಳಿದ್ದವು.
ಪುನ್ನಾಗೈಃ ಕದಳೀಭಿಶ್ಚ ಪಾರಿಜಾತೈಃ ಸುಪುಷ್ಪಿತೈಃ |
ಅನ್ಯೈಶ್ಚ ವಿವಿಧೈರ್ವೃಕ್ಷೈಃ ಫಲಭಾರಾವನಾಮಿಭಿಃ |
ನಿತ್ಯಪುಷ್ಪಫಲೋಪೇತೈಃ ಶೋಭಿತಾಸ್ತೇ ಗೃಹೋತ್ತಮಾಃ ॥73॥
ಪುನ್ನಾಗ, ಪಾರಿಜಾತ, ಮೊದಲಾದ ಪುಷ್ಪವನ್ನು ಕೊಡುವ ವೃಕ್ಷಗಳೂ, ಕದಳೀ ಮೊದಲಾದ ಫಲಭಾರದಿಂದ ಬಗ್ಗಿದ ವಿವಿಧ ವೃಕ್ಷಗಳೂ ಆ ಗೃಹಗಳ ಸುತ್ತಲೂ ಇದ್ದು ಆ ಗೃಹಗಳು ಶೋಭಿಸಿದವು.
ತಟಾಕಾನಿ ಚ ರಮ್ಯಾಣಿ ವಿವಿಧಾನಿ ಸಮಂತತಃ |
ನದೀ ಚ ನಂದಿನೀ ನಾಮ ಸಾ ಪುರೀಮುಪಗೂಹತೇ ॥64॥
ಆ ನಗರದಲ್ಲಿ ಅಲ್ಲಲ್ಲಿ ಮನೋಹರವಾದ ಕೆರೆಗಳಿದ್ದವು. ನಂದಿನಿ ಎಂಬ ನದಿಯು ಆ ಪಟ್ಟಣದ ಸುತ್ತಲೂ ಹರಿಯುತಿತ್ತು.
ಚಾತುರ್ವರ್ಣ್ಯಸಮಾಕೀರ್ಣಂ ಮಾನ್ಯೈಃ ಶಿಲ್ಪಿಭಿರಾವೃತಮ್ |
ಉಪಭೋಗಸಮರ್ಥೈಶ್ಚ ಸರ್ವದ್ರವ್ಯೈಃ ಸಮಾವೃತಮ್ |
ನಿತ್ಯಮಾರ್ಯಜನೋಪೇತಂ ನರನಾರೀಗಣೈರ್ಯುತಮ್ ॥75॥
ಆ ಪಟ್ಟಣವು ಚಾತುರ್ವಣ್ಯಜನರಿಂದಲೂ, ಶಿಲ್ಪಿಗಳಿಂದಲೂ, ನಿಬಿಡವಾಗಿದ್ದು, ಎಲ್ಲ ಭೋಗಸಾಮಗ್ರಿಗಳಿಂದಲೂ ಕೂಡಿದ್ದಿತು.
ಉತ್ತಮಗುಣವುಳ್ಳ ನರನಾರೀಗಣದಿಂದ ಕೂಡಿದ್ದಿತು.
ಮತ್ತವಾರಣಸಂಪೂರ್ಣಂ ಗೋಭಿರುಷ್ಟ್ರೈಃ ಖರೈರಜೈಃ |
ಸರ್ವದಾಽಭಿಸೃತಂ ಸದ್ಭಿಃ ಕಾರಿತಂ ವಿಶ್ವಕರ್ಮಣಾ ॥76॥
ತತ್ ತ್ರಿವಿಷ್ಟಪಸಂಕಾಶಮಿಂದ್ರಪ್ರಸ್ಥಂ ವ್ಯರೋಚತ |
ಮದಗಜಗಳಿಂದಲೂ, ಗೋವುಗಳಿಂದಲೂ, ಒಂಟೆಗಳಿಂದಲೂ, ಕತ್ತೆಗಳಿಂದಲೂ, ಮೇಕೆಗಳಿಂದಲೂ, ಅಲ್ಲಿನ ಮಾರ್ಗಗಳು ನಿಬಿಡವಾಗಿರುತ್ತಿದ್ದವು. ದ್ವೈಪಾಯನ ಮೊದಲಾದವರು ಹೇಳಿ ವಿಶ್ವಕರ್ಮನಿಂದ ಮಾಡಿಸಿದ ಆ ಇಂದ್ರಪ್ರಸ್ಥಪಟ್ಟಣವು ಸ್ವರ್ಗದಂತೆ ಶೋಭಿಸಿತು.
ಪುರೀಂ ಸರ್ವಗುಣೋಪೇತಾಂ ನಿರ್ಮಿತಾಂ ವಿಶ್ವಕರ್ಮಣಾ ॥77॥
ಪೌರವಾಣಾಮಧಿಪತಿಃ ಕುಂತೀಪುತ್ರೋ ಯುಧಿಷ್ಠಿರಃ |
ಕೃತಮಂಗಲಸತ್ಕಾರೋ ಬ್ರಾಹ್ಮಣೈರ್ವೇದಪಾರಗೈಃ ॥78॥
ದ್ವೈಪಾಯನಂ ಪುರಸ್ಕೃತ್ಯ ಧೌಮ್ಯಸ್ಯಾನುಮತೇ ಸ್ಥಿತಃ |
ಭ್ರಾತೃಭಿಃ ಸಹಿತೋ ರಾಜನ್ ಕೇಶವೇನ ಸಹಾಭಿಭೂಃ |

ವರ್ಧಮಾನಪುರದ್ವಾರಂ ಪ್ರವಿವೇಶ ಮಹಾದ್ಯುತಿಃ ॥79॥
ವಿಶ್ವಕರ್ಮನಿಂದ ನಿರ್ಮಿತವಾದ, ಸರ್ವಗುಣೋಪೇತವಾದ ಆ ಪಟ್ಟಣವನ್ನು (ಪ್ರವೇಶ ಮಾಡುತ್ತಾ) ಪೌರವರ ಅಧಿಪತಿಯಾದ ಕುಂತೀಪುತ್ರನಾದ ಯುಧಿಷ್ಠಿರನು, ವೇದಪಾರಗರಾದ ಬ್ರಾಹ್ಮಣರಿಂದ ಮಂಗಳಾಶಂಸನವನ್ನು ಮಾಡಿಸಿಕೊಂಡು, ಧೌಮ್ಯರ ಅಭಿಪ್ರಾಯದಂತೆ ವೇದವ್ಯಾಸರನ್ನು ಮುಂದೆಮಾಡಿಕೊಂಡು ತನ್ನ ತಮ್ಮಂದಿರಿಂದಲೂ ಮತ್ತು ಕೇಶವನಿಂದಲೂ ಸಹಿತನಾಗಿ, ಮಹಾಕಾಂತಿಯುಳ್ಳ ಅವನು ಪಟ್ಟಣದ ರಾಜದ್ವಾರವನ್ನು ಪ್ರವೇಶಿಸಿದನು.
ಶಂಖದುಂದುಭಿನಿರ್ಘೋಷಾಃ ಶ್ರೂಯಂತೇ ಬಹವೋ ಭೃಶಾಮ್ |
ಜಯೇತಿ ಬ್ರಾಹ್ಮಣಾ ವಾಚಃ ಶ್ರೂಯಂತೇ ಸ್ಮ ಸಹಸ್ರಶಃ ॥80॥
ಆಗ ಎಲ್ಲಾ ಕಡೆಗಳಲ್ಲಿಯೂ ತೀವ್ರವಾದ ಶಂಖ, ದುಂದುಭಿ ಘೋಷಗಳು ಕೇಳಿಬಂದವು. ಸಹಸ್ರಸಂಖ್ಯೆಯಲ್ಲಿ ಬ್ರಾಹ್ಮಣರು ಜಯಕಾರವನ್ನು ಮಾಡಿದರು.
ಸಂಸ್ತೂಯಮಾನೋ ಮುನಿಭಿಃ ಸೂತಮಾಗಧವಂದಿಭಿಃ |
ಔಪವಾಹ್ಯಗತೋ ರಾಜಾ ರಾಜಮಾರ್ಗಮತೀತ್ಯ ಚ |
ಕೃತಮಂಗಲಸತ್ಕಾರಂ ಪ್ರವಿವೇಶ ಗೃಹೋತ್ತಮಮ್ ॥81॥
ಋಷಿಗಳಿಂದಲೂ, ಸೂತಮಾಗಧವಂದಿಗಳಿಂದಲೂ, ಸ್ತೋತ್ರಮಾಡಲ್ಪಡುತ್ತಿದ್ದ ರಾಜನು ರಾಜವಾಹನದ ಮೇಲೆ ಕುಳಿತು ರಾಜಮಾರ್ಗವನ್ನು ದಾಟಿ, ಎಲ್ಲಾ ಮಂಗಳಸಂಸ್ಕಾರಗಳನ್ನೂ ಮಾಡಿದ್ದ ತನ್ನ ಶ್ರೇಷ್ಠವಾದ ಮನೆಯನ್ನು ಪ್ರವೇಶಿಸಿದನು.
ಪ್ರವಿಶ್ಯ ಭವನಂ ರಾಜಾ ಸತ್ಕಾರೈರಭಿಪೂಜಿತಃ |
ಪೂಜಯಾಮಾಸ ವಿಪ್ರೇಂದ್ರಾನ್ ಕೇಶವೇನ ಯಥಾಕ್ರಮಮ್ ॥82॥
ರಾಜನು ಸತ್ಕಾರಗಳಿಂದ ಪೂಜಿತನಾಗಿ ಆ ಭವನವನ್ನು ಪ್ರವೇಶಿಸಿ, ಕೇಶವನ ಜೊತೆಯಲ್ಲಿ ಶಾಸೊತ್ರೇಕ್ತಕ್ರಮದಿಂದ ಬ್ರಾಹ್ಮಣರನ್ನು ಪೂಜಿಸಿದನು.
ತತಸ್ತು ರಾಷ್ಟ್ರಂ ನಗರಂ ನರನಾರೀಗಣಾಯುತಮ್ |
ಗೋಧನೈಶ್ಚ ಸಮಾಕೀರ್ಣಂ ಸಸ್ಯವೃದ್ಧಿಸ್ತದಾಽಭವತ್ ॥83॥
ಅನಂತರ ಆ ರಾಷ್ಟ್ರವು ಮತ್ತು ನಗರವು, ನರನಾರೀಗಣದಿಂದಲೂ, ಗೋಧನಗಳಿಂದಲೂ ತುಂಬಿತು. ಅಲ್ಲಿ ಸಸ್ಯಸಮೃದ್ಧಿಯೂ ಉಂಟಾಯಿತು.
ಯೇಷಾಂ ಪುಣ್ಯಜನೋಪೇತಂ ರಾಷ್ಟ್ರಮಾವಸತಾಂ ಮಹತ್ |
ಪಾಂಡವಾನಾಂ ಮಹಾರಾಜಾ ಶಶ್ವತ್ ಪ್ರೀತಿರವರ್ಧತ ॥84॥
ಯಾವ ಪಾಂಡವರ ಆವಾಸದಿಂದ ಆ ಪುಣ್ಯಜನೋಪೇತವಾದ ನಗರವು ಮತ್ತು ರಾಷ್ಟ್ರವು ಅಭಿವೃದ್ಧಿಯನ್ನು ಹೊಂದಿತೋ, ಆ ಕಾರಣದಿಂದ ಪಾಂಡವರಿಗೆ ಆ ನಗರದಲ್ಲಿ ಪ್ರೀತಿಯು ಬೆಳೆಯಿತು.
ಸೌಬಲೇನ ಚ ಕರ್ಣೇನ ಧಾರ್ತರಾಷ್ಟ್ರೈಃ ಕೃಪೇಣ ಚ |
ತಥಾ ಭೀಷ್ಮೇಣ ರಾಜ್ಞಾ ಚ ಧರ್ಮಪ್ರಣಯಿನಸ್ತದಾ ॥85॥
ಪಾಂಡವಾಃ ಸಮಪದ್ಯಂತ ಖಾಂಡವಪ್ರಸ್ಥವಾಸಿನಃ |
ಪಂಚಭಿಸ್ತೈರ್ಮಹೇಷ್ವಾಸೈರಿಂದ್ರಕಲ್ಪೈಃ ಸಮಾವೃತಮ್ |
ಶುಶುಭೇ ತತ್ ಪುರಶ್ರೇಷ್ಠಂ ನಾಗೈರ್ಭೋಗವತೀ ಯಥಾ ॥86॥
ಶಕುನಿ, ಕರ್ಣ ಮತ್ತು ದುರ್ಯೋಧನಾದಿಗಳ ದುರ್ವ್ಯಾಪಾರಗಳ ನಿಮಿತ್ತದಿಂದ ಖಾಂಡವಪ್ರಸ್ಥದಲ್ಲಿ ವಾಸವನ್ನು ಮಾಡಿದ ಪಾಂಡವರು ಭೀಷ್ಮ ಮತ್ತು ಕೃಪರ ಮಾರ್ಗದರ್ಶನದಲ್ಲಿ ಧರ್ಮಾಚರಣೆಯನ್ನು ಮಾಡುವವರಾದರು. ಐದು ಜನ ಇಂದ್ರಕಲ್ಪರಾದ ಮಹಾವೀರರಿಂದ ಕೂಡಿದ ಆ ಪಟ್ಟಣವು ನಾಗಗಳಿಂದ ಕೂಡಿದ ಭೋಗವತಿಯಂತೆ ಶ್ರೇಷ್ಠವಾಗಿ ಮೆರೆಯಿತು.
ತತಸ್ತು ವಿಶ್ವಕರ್ಮಾಣಂ ಪೂಜಯಿತ್ವಾ ವಿಸೃಜ್ಯ ಚ |
ದ್ವೈಪಾಯನಂ ಚ ಸಂಪೂಜ್ಯ ವಿಸೃಜ್ಯ ಚ ನರಾಧಿಪ ॥87॥
ಅನಂತರ, ವಿಶ್ವಕರ್ಮನನ್ನು ಪೂಜಿಸಿ ಬೀಳ್ಕೊಟ್ಟು, ವೇದವ್ಯಾಸರನ್ನೂ ಪೂಜಿಸಿ ಬೀಳ್ಕೊಟ್ಟ ರಾಜನು ಹೊರಡಲು ಉದ್ಯುಕ್ತನಾಗಿದ್ದ ಕೇಶವನನ್ನು ಕುರಿತು ಹೇಳಿದನು.
ವಾರ್ಷ್ಣೇಯಮಬ್ರವೀದ್ ರಾಜಾ ಗಂತುಕಾಮಂ ಕೃತಕ್ಷಣಮ್ |
ತವ ಪ್ರಸಾದಾದ್ ವಾರ್ಷ್ಣೇಯ ರಾಜ್ಯಂ ಪ್ರಾಪ್ತಂ ಮಯಾಽನಘ |
ಪ್ರಸಾದಾದೇವ ತೇ ವೀರ ಶೂನ್ಯಂ ರಾಷ್ಟ್ರಂ ಸುದುರ್ಗಮಮ್ ॥88॥
ವಾರ್ಷ್ಣೇಯನೇ, ನಿನ್ನ ಅನುಗ್ರಹದಿಂದ ನನಗೆ ರಾಜ್ಯವು ಪ್ರಾಪ್ತವಾಯಿತು. ಅನಘನಾದ ವೀರನೇ, ನಿನ್ನ ಅನುಗ್ರಹದಿಂದಲೇ ಮೊದಲು ಶೂನ್ಯವಾಗಿದ್ದ ಈ ರಾಷ್ಟ್ರವು ಈಗ ಪ್ರಬಲವಾದ ಸೈನ್ಯದಿಂದ ಕೂಡಿ ಶತ್ರುಗಳಿಗೆ ದುರ್ಗಮವಾಗಿದೆ.
ತವೈವ ತು ಪ್ರಸಾದೇನ ರಾಜ್ಯಸ್ಥಾಶ್ಚ ಮಹಾಮತೇ |
ಗತಿಸ್ತ್ವಮಂತಕಾಲೇ ಚ ಪಾಂಡವಾನಾಂ ತು ಮಾಧವ ॥89॥
ಮಹಾಮತಿಯೇ, ನಿನ್ನ ಅನುಗ್ರಹದಿಂದಲೇ, ನಾವು ಈ ದಿನ ರಾಜ್ಯದಲ್ಲಿದ್ದೇವೆ. ಮಾಧವನೇ, ಪಾಂಡವರಾದ ನಮಗೆ ಅಂತ್ಯಕಾಲದಲ್ಲಿಯೂ ಸಹ ನೀನೇ ಗತಿ.
ಮಾತಾಽಸ್ಮಾಕಂ ಪಿತಾ ದೇವೋ ನ ಪಾಂಡುಂ ವಿದ್ಮ ವೈ ವಯಮ್ |
ಜ್ಞಾತ್ವಾ ತು ಕೃತ್ಯಂ ಕರ್ತವ್ಯಂ ಕಾರಯಸ್ವ ಭವಾನ್ ಹಿ ನಃ |
ಯದಿಷ್ಟಮನುಮಂತವ್ಯಂ ಪಾಂಡವಾನಾಂ ತ್ವಯಾಽನಘ ॥90॥

ನೀನೇ ನಮಗೆ ತಾಯಿ ಮತ್ತು ತಂದೆ. ನಾವು ಪಾಂಡುವನ್ನು ತಿಳಿಯಲೇ ಇಲ್ಲ. ನೀನೇ ನಾವು ಏನು ಮಾಡಬೇಕೆಂದು ನಿರ್ಧರಿಸಿ ಅದನ್ನು ನಮ್ಮಿಂದ ಮಾಡಿಸು. ಅನಘನೇ, ನಿನಗೆ ಯಾವುದು ಇಷ್ಟವೋ ಅದನ್ನು ಮಾಡುವುದಕ್ಕೆ ಪಾಂಡವರಿಗೆ ಅನುಮತಿಯನ್ನು ಕೊಡು.

ಶ್ರೀವಾಸುದೇವಃ
ತ್ವತ್ಪ್ರಸಾದಾನ್ಮಹಾರಾಜ ರಾಜ್ಯಂ ಪ್ರಾಪ್ತಂ ಸ್ವಧರ್ಮತಃ।
ಪಿತೃಪೈತಾಮಹಂ ರಾಜ್ಯಂ ಕಥಂ ನ ಸ್ಯಾತ್ ತವ ಪ್ರಭೋ ॥91॥
ಮಹಾರಾಜನೇ, ನಿನ್ನ ಪ್ರಸನ್ನತೆ ಮೊದಲಾದ ಶಾಂತಗುಣಗಳಿಂದಲೇ, ನೀನು ನಿನ್ನ ಧರ್ಮದಿಂದಲೇ ರಾಜ್ಯವನ್ನು ಪಡೆದಿದ್ದೀಯೆ. ಪ್ರಭುವೇ, ಪಿತೃಪಿತಾಮಹರಿಗೆ ಸೇರಿದ ರಾಜ್ಯವು ನಿನಗೆ ಹೇಗೆ ಬರದಿರಲು ಸಾಧ್ಯ?
ಧಾರ್ತರಾಷ್ಟ್ರಾ ದುರಾಚಾರಾಃ ಕಿಂ ಕರಿಷ್ಯಂತಿ ಪಾಂಡವಾನ್।
ಯಥೇಷ್ಟಂ ಪಾಲಯ ಮಹೀಂ ಸದಾ ಧರ್ಮಧುರಂ ವಹ ॥92॥
ದುರಾಚಾರಿಗಳಾದ ದುರ್ಯೋಧನಾದಿಗಳು ಪಾಂಡವರಿಗೆ ಏನು ಮಾಡಬಲ್ಲರು. ನಿನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಭೂಮಿಯನ್ನು ಆಳು.  ಯಾವಾಗಲೂ ಧರ್ಮದ ಭಾರವನ್ನು ಹೊತ್ತುಕೊಂಡು ಆಚರಿಸು.
ಧರ್ಮೋಪದೇಶಂ ಸಂಕ್ಷೇಪಾದ್ ಬ್ರಾಹ್ಮಣಾನ್ ಭರ ಪೌರವ।
ಅದ್ಯೈವ ನಾರದಃ ಶ್ರೀಮಾನಾಗಮಿಷ್ಯತಿ ಸತ್ವರಃ।
ಆದೃತ್ಯ ತಸ್ಯ ವಾಕ್ಯಾನಿ ಶಾಸನಂ ಕುರು ತಸ್ಯ ವೈ ॥93॥
ಎಲೈ ಪೌರವನೇ, ಅಧರ್ಮವನ್ನು ದೂರಮಾಡಿ ಧರ್ಮೋಪದೇಶವನ್ನೂ ಮತ್ತು ಬ್ರಾಹ್ಮಣರನ್ನೂ ಪೋಷಿಸು. ಈ ದಿನವೇ ಪೂಜ್ಯರಾದ ನಾರದರು ಶೀಘ್ರವಾಗಿ ಬರುತ್ತಾರೆ. ಅವರ ವಾಕ್ಯಗಳನ್ನು ಆಧರಿಸಿ ಅವರ ಶಾಸನದಂತೆ ನಡೆದುಕೋ.
ವೈಶಂಪಾಯನಃ
ಏವಮುಕ್ತ್ವಾ ತತಃ ಕುಂತೀಮಭಿವಾದ್ಯ ಜನಾರ್ದನಃ।
ಉವಾಚ ಶ್ಲಕ್ಷ್ಣಯಾ ವಾಚಾ ಗಮಿಷ್ಯಾಮಿ ನಮೋಽಸ್ತು ತೇ ॥94॥
ಜನಾರ್ದನನು ಹೀಗೆ ಮಾತನಾಡಿ, ಅನಂತರ ಕುಂತಿಗೆ ನಮಸ್ಕರಿಸಿ ಮಧುರವಾದ ಮಾತುಗಳಿಂದ ನಾನು ಹೋಗಿಬರುತ್ತೇನೆ, ನಿನಗೆ ನಮಸ್ಕಾರ ಎಂದು ಹೇಳಿದನು.
ಕುಂತೀ
ಜಾತುಷಂ ಗೃಹಮಾಸಾದ್ಯ ಮಯಾ ಪ್ರಾಪ್ತಂ ಚ ಕೇಶವ।
ಆರ್ಯೇಣಾಪಿ ತವಾಜ್ಞಾತಂ ಕುಂತಿಭೋಜೇನ ವಾಽನಘ ॥95॥
ಕೇಶವನೇ, ಅರಗಿನಮನೆಯನ್ನು ಹೊಂದಿ ನಾನು ಅಣ್ಣನಾದ ವಸುದೇವನಿಗೂ ತಿಳಿಯದಂತೆ, ತಂದೆಯಾದ ಕುಂತಿಭೋಜನಿಗೂ ತಿಳಿಯದಂತೆ ಮತ್ತು ನಿನಗೂ ತಿಳಿಯದಂತೆ ಅನೇಕ ಕ್ಲೇಶಗಳನ್ನು ಅನುಭವಿಸಿದೆ.
ತ್ವಯಾ ನಾಥೇನ ಗೋವಿಂದ ಸುಖಂ ಪ್ರಾಪ್ತಂ ಮಹತ್ತರಮ್।
ತ್ವಂ ಹಿ ನಾಥಸ್ತ್ವನಾಥಾನಾಂ ದರಿದ್ರಾಣಾಂ ವಿಶೇಷತಃ ॥96॥
ಗೋವಿಂದನೇ, ನೀನು ನಾಥನಾಗಿರುವ ಕಾರಣ ನಮಗೆ ಮಹತ್ತರವಾದ ಸುಖವು ಪ್ರಾಪ್ತವಾಯಿತು. ಅನಾಥರಿಗೆಲ್ಲಾ ನೀನೇ ನಾಥನಾದವನು. ಅದರಲ್ಲೂ ವಿಶೇಷವಾಗಿ ದರಿದ್ರರಿಗೆ ನಾಥನಾದವನು.
ಸರ್ವದುಃಖಾನಿ ಶಾಮ್ಯಂತಿ ತವ ಸಂದರ್ಶನಾನ್ಮಮ।
ಸ್ಮರಸ್ವೈನಾನ್ ಮಹಾಪ್ರಾಜ್ಞ ತೇನ ಜೀವಂತಿ ಪಾಂಡವಾಃ ॥97॥
ಮಹಾಪ್ರಾಜ್ಞನೇ, ನಿನ್ನ ದರ್ಶನದಿಂದ ನನಗೆ ಎಲ್ಲಾ ದುಃಖಗಳು ನಾಶಹೊಂದುತ್ತವೆ. ನೀನು ಈ ನನ್ನ ಮಕ್ಕಳನ್ನು ಸ್ಮರಿಸು. ಅದರಿಂದ ಪಾಂಡವರು ಜೀವಿಸುತ್ತಾರೆ.
ವೈಶಂಪಾಯನಃ
ಕರಿಷ್ಯಾಮೀತಿ ಚಾಮಂತ್ರ್ಯ ಅಭಿವಾದ್ಯ ಪಿತೃಷ್ವಸಾಮ್।
ಗಮನಾಯ ಮತಿಂ ಚಕ್ರೇ ವಾಸುದೇವಃ ಸಹಾನುಗಃ ॥98॥
ನೀನು ಹೇಳಿದ ಹಾಗೆಯೇ ಮಾಡುತ್ತೇನೆ ಎಂದು ಹೇಳಿ ವಾಸುದೇವನು ಸೋದರತ್ತೆಯಾದ ಕುಂತಿಗೆ ನಮಸ್ಕರಿಸಿ ತನ್ನ ಅನುಚರರ ಜೊತೆಯಲ್ಲಿ ಹೊರಡಲು ನಿರ್ಧರಿಸಿದನು.
ಅನುಜ್ಞಾಪ್ಯ ತತೋ ವೀರಾಃ ಸಹ ರಾಮೇಣ ಕೇಶವಃ।
ಯಯೌ ದ್ವಾರವತೀಂ ರಾಜನ್ ಪಾಂಡವಾನುಮತೇ ತದಾ ॥99॥
ರಾಜನೇ, ಕುಂತಿಯ ಅನುಮತಿಯನ್ನು ಪಡೆದು, ವೀರನಾದ ಕೇಶವನು ಬಲರಾಮನ ಜೊತೆಯಲ್ಲಿ ದ್ವಾರಕಾಪಟ್ಟಣಕ್ಕೆ ಪ್ರಯಾಣ ಮಾಡಿದನು ಮತ್ತು ಪಾಂಡವರ ಅಭಿಪ್ರಾಯದಂತೆಯೇ ನಡೆದುಕೊಂಡನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ನವಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಜ್ಯಲಾಭಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಒಂಭತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ತಂ ದ್ವ್ಯಷ್ಟಸಾಹಸ್ರಗೃಹೇಷು ದೃಷ್ಟ್ವಾ
ತಾವತ್ಸ್ವರೂಪೈರ್ವಿಹರಂತಮೇಕಂ |
ಸುವಿಸ್ಮಿತಃ ಪ್ರಯಯೌ ತಂ ಪ್ರಣಮ್ಯ
ಶಕ್ರಪ್ರಸ್ಥಂ ಪೂಜಿತಶ್ಚಾತ್ರ ಪಾರ್ಥೈಃ ॥150॥
ಶ್ರೀಕೃಷ್ಣ ಒಬ್ಬನೆ ಹದಿನಾರು ಸಾವಿರ ಮನೆಗಳಲ್ಲಿ ಅಷ್ಟು ರೂಪಗಳಿಂದ ವಿಹರಿಸುತ್ತಿದ್ದುದನ್ನು ಕಂಡು ಬಹಳ ವಿಸ್ಮಿತರಾದ ನಾರದರು ಅವನನ್ನು ನಮಿಸಿ ಇಂದ್ರಪ್ರಸ್ಥಕ್ಕೆ ಹೋದರು. ಅಲ್ಲಿ ಪಾಂಡವರು ಅವರನ್ನು ಸತ್ಕರಿಸಿದರು.
ಸ ಆಜ್ಞಯಾ ಬ್ರಹ್ಮಣ ಆಹ ಕೃಷ್ಣಾಂ
ಕ್ರಮಾತ್ಕರ್ತುಂ ಭೀಮ ಏವೈಕಸಂಸ್ಥಾಂ |
ಅನ್ಯಾ ದೇವೀಃ ಸ್ವಾಪಯಿತ್ವಾ ಶರೀರೇ
ತಸ್ಯಾ ಭಾರತ್ಯಾಃ ಪೂರ್ಣಭೋಗಾರ್ಥಮೇವ ॥151॥
ದ್ರೌಪದೀ ಶರೀರದಲ್ಲಿ ಅನ್ಯದೇವಿಯರನ್ನು ಸುಪ್ತಿಗೊಳಿಸಿ ಭಾರತೀದೇವಿಗೆ ಪೂರ್ಣರತಿ ಸುಖವನ್ನು ದೊರಕಿಸುವ ಸಲುವಾಗಿ ದ್ರೌಪದಿಯನ್ನು ಕ್ರಮವಾಗಿ ಭೀಮನ ಬಳಿಯಲ್ಲಿಯೆ ಹೆಚ್ಚುಕಾಲ ಇರಿಸಬೇಕೆಂದು ನಾರದರು ಬ್ರಹ್ಮನ ಆಜ್ಞೆಯಿಂದ ಹೀಗೆ ಹೇಳಿದರು.
ಸುಂದೋಪಸುಂದೌ ಭ್ರಾತರೌ ಬ್ರಹ್ಮವಾಕ್ಯಾತ್
ಪರಸ್ಪರಾದನ್ಯತೋ ನೈವ ವಧ್ಯೌ |
ತಿಲೋತ್ತಮಾರ್ಥೇ ನಿಹತೌ ಪರಸ್ಪರಂ
ತಯೋರ್ವಧಾರ್ಥೇ ಸೃಷ್ಟಯಾ ತೇನ ದೈತ್ಯೌ ॥152॥
ಸುಂದ ಉಪಸುಂದ ಎಂಬ ಇಬ್ಬರು ಅಣ್ಣತಮ್ಮಂದಿರು ಬ್ರಹ್ಮನ ವರದಿಂದ ಪರಸ್ಪರರಿಂದ ಹೊರತು ಅನ್ಯರಿಂದ ಸಾವಿಲ್ಲದವರಾಗಿದ್ದರು. ಅವರ ವಧೆಗಾಗಿ ತಿಲೋತ್ತಮೆ ಸೃಷ್ಟಳಾದಳು. ಅವಳಿಂದ ಮೋಹಿತರಾಗಿ ಆ ದೈತ್ಯರು ಅವಳ ಸಲುವಾಗಿ ಪರಸ್ಪರ ಹೋರಾಡಿ ಹತರಾದರು.
ಅತಃ ಪೃಥಗ್ ವತ್ಸರತೋ ಭವತ್ಸು
ಕ್ರಮಾತ್ ಕೃಷ್ಣಾ ತಿಷ್ಠತಾಂ ಯೋಽನ್ಯಯುಕ್ತಾಂ |
ಪಶ್ಯೇದ್ ವೋಽಸೌ ವತ್ಸರಂ ತೀರ್ಥಯಾತ್ರಾಂ
ಕುರ್ಯಾದಿತಿ ಸ್ಮಾಥ ಚಕ್ರುಸ್ತಥಾ ತೇ ॥153॥
ಅದರಿಂದ ದ್ರೌಪದಿ ನಿಮ್ಮಲ್ಲಿ ಜ್ಯೇಷ್ಠತ್ವ ಕ್ರಮದಿಂದ ಒಬ್ಬೊಬ್ಬರಿಗೆ ಒಂದೊಂದು ವರ್ಷ ಮೀಸಲಾಗಿರಲಿ, ಅವಳು ಒಬ್ಬರೊಂದಿಗೆ ಕೂಡಿರುವಾಗ ಅವಳನ್ನು ಇನ್ನೊಬ್ಬರು ಯಾರು ನೋಡುವರೋ ಅವರು ಒಂದು ವರ್ಷ ತೀರ್ಥಯಾತ್ರೆ ಮಾಡಲಿ ಎಂದು ನಾರದರು ಹೇಳಿದರು. ಪಾಂಡವರು ಹಾಗೇ ನಿಯಮ ಮಾಡಿಕೊಂಡರು.
* * * *
ಇನ್ನೂರ ಹತ್ತನೆಯ ಅಧ್ಯಾಯ
(ಇಂದ್ರಪ್ರಸ್ಥದಲ್ಲಿ ಪಾಂಡವರ ರಾಜ್ಯಭಾರ, ನಾರದರ ಆಗಮನ, ಅವರ ಜ್ಞಾನದ ಆಗಾಧತೆ, ಸುಂದೋಪಸುಂದರ ಉಲ್ಲೇಖ.)
ಜನಮೇಜಯಃ
ಏವಂ ಸಂಪ್ರಾಪ್ಯ ರಾಜ್ಯಂ ತದಿಂದ್ರಪ್ರಸ್ಥೇ ತಪೋಧನ |
ಅತ ಊರ್ಧ್ವಂ ಮಹಾಭಾಗ ಕಿಮಕುರ್ವತ ಪಾಂಡವಾಃ ॥1॥
ತಪೋಧನರಾದ ವೈಶಂಪಾಯನರೇ, ಇಂದ್ರಪ್ರಸ್ಥದಲ್ಲಿ ಹೀಗೆ ರಾಜ್ಯವನ್ನು ಪಡೆದ ಪಾಂಡವರು ಅನಂತರ ಏನು ಮಾಡಿದರು?
ಪೂರ್ವ ಏವ ಮಹಾತ್ಮಾನಃ ಸರ್ವೇ ಮಮ ಪಿತಾಮಹಾಃ |
ದ್ರೌಪದೀ ಧರ್ಮಪತ್ನೀ ಚ ಕಥಂ ತಾನನ್ವವರ್ತತ ॥2॥
ಮಹಾನುಭಾವರೇ, ಎಲ್ಲರೂ ನನ್ನ ಪಿತಾಮಹರು ಮತ್ತು ನನ್ನ ಪೂರ್ವಿಕರಾದ ಮಹಾನುಭಾವರು. ಧರ್ಮಪತ್ನಿಯಾದ ದ್ರೌಪದಿಯು ಅವರಲ್ಲಿ ಹೇಗೆ ನಡೆದುಕೊಂಡಳು?
ಕಥಮಾಸಂಶ್ಚ ಕೃಷ್ಣಾಯಾಮೇಕಸ್ಯಾಂ ತೇ ನರರ್ಷಭಾಃ |
ವರ್ತಮಾನಾ ಮಹೇಶ್ವಾಸಾ ನಾಭಿದ್ಯಂತ ಪರಸ್ಪರಮ್ ॥3॥
ಆ ನರಶ್ರೇಷ್ಠರು ತಮ್ಮೆಲ್ಲರ ಒಬ್ಬ ಪತ್ನಿಯ ವಿಷಯದಲ್ಲಿ ಹೇಗೆ ನಡೆದುಕೊಂಡರು? ಅವರಿಗೆ ಪರಸ್ಪರವಾಗಿ ಏಕೆ ವಿರೋಧವುಂಟಾಗಲಿಲ್ಲ?
ಶ್ರೋತುಮಿಚ್ಛಾಮ್ಯಹಂ ತ್ವತ್ತೋ ವಿಸ್ತರೇಣ ತಪೋಧನ |
ತೇಷಾಂ ಚೇಷ್ಟಿತಮನ್ಯೋನ್ಯಂ ಯುಕ್ತಾನಾಂ ಕೃಷ್ಣಯಾ ಸಹ ॥4॥
ತಪೋಧನರೇ, ಪರಸ್ಪರವಾಗಿ ಅವರ ಚೇಷ್ಟೆಗಳನ್ನೂ ಮತ್ತು ಕೃಷ್ಣೆಯ ಜೊತೆಯಲ್ಲಿ ಅವರ ನಡತೆಯನ್ನೂ ವಿಸ್ತಾರವಾಗಿ ತಿಳಿಯಲು ಬಯಸುತ್ತೇನೆ.
ವೈಶಂಪಾಯನಃ
ಧೃತರಾಷ್ಟ್ರಾಭ್ಯನುಜ್ಞಾತಾ ಇಂದ್ರಪ್ರಸ್ಥಂ ಪ್ರವಿಶ್ಯ ತತ್ |
ರೇಮಿರೇ ಪುರುಷವ್ಯಾಘ್ರಾಃ ಕೃಷ್ಣಯಾ ಸಹ ಪಾಂಡವಾಃ ॥5॥
ಧೃತರಾಷ್ಟ್ರನ ಅನುಮತಿಯನ್ನು ಪಡೆದು ಪುರುಷವ್ಯಾಘ್ರರಾದ ಪಾಂಡವರು ಆ ಇಂದ್ರಪ್ರಸ್ಥಕ್ಕೆ ಬಂದು ಕೃಷ್ಣೆಯ ಜೊತೆಯಲ್ಲಿ

ಸಂತೋಷದಿಂದಿದ್ದರು.
ಪ್ರಾಪ್ಯ ರಾಜ್ಯಂ ಮಹಾತೇಜಾಃ ಸತ್ಯಸಂಧೋ ಯುಧಿಷ್ಠಿರಃ |
ಪಾಲಯಾಮಾಸ ಧರ್ಮೇಣ ಪೃಥಿವೀಂ ಭ್ರಾತೃಭಿಃ ಸಹ ॥6॥
ಮಹಾತೇಜಸ್ವಿಯೂ, ಸತ್ಯಸಂಧನೂ ಆದ ಯುಧಿಷ್ಠಿರನು ರಾಜ್ಯವನ್ನು ಪಡೆದು, ತಮ್ಮಂದಿರ ಜೊತೆಯಲ್ಲಿ ಧರ್ಮದಿಂದ ಭೂಮಿಯನ್ನು ಆಳಿದನು.
ಜಿತಾರಯೋ ಮಹಾಪ್ರಾಜ್ಞಾಃ ಸತ್ಯಧರ್ಮಪರಾಯಣಾಃ |
ಮುದಂ ಪರಮಿಕಾಂ ಪ್ರಾಪ್ತಾಸ್ತತ್ರೋಷುಃ ಪಾಂಡುನಂದನಾಃ ॥7॥
ಸತ್ಯಧರ್ಮಪರಾಯಣರಾದ, ಮಹಾಪ್ರಾಜ್ಞರಾದ ಪಾಂಡವರು ಶತ್ರುಗಳನ್ನು ಜಯಿಸಿ, ಉತ್ಕೃಷ್ಟವಾದ ಸುಖವನ್ನು ಹೊಂದಿ ಅಲ್ಲಿ ವಾಸಿಸಿದರು.
ಕುರ್ವಾಣಾಃ ಪೌರಕಾರ್ಯಾಣಿ ಸರ್ವಾಣಿ ಭರತರ್ಷಭ |
ಆಸಾಂಚಕ್ರುರ್ಮಹಾರ್ಹೇಷು ಪರ್ಯಯೇಷ್ವಾಸನೇಷು ಚ ॥8॥
ಭರತರ್ಷಭನೇ, ಅವರು ಪೌರರಿಗೆ ಹಿತವಾದ ಎಲ್ಲಾ ಕಾರ್ಯಗಳನ್ನೂ ಮಾಡುತ್ತಾ, ಅನರ್ಘ್ಯವಾದ ದಿವ್ಯವಾದ ಆಸನಗಳಲ್ಲಿ ಕುಳಿತಿದ್ದರು.
ತೇಷು ತತ್ರೋಪವಿಷ್ಟೇಷು ಪಾಂಡವೇಷು ಮಹಾತ್ಮಸು |
ಆಯಯೌ ಧರ್ಮರಾಜಂ ತಂ ದ್ರಷ್ಟುಕಾಮೋಽಥ ನಾರದಃ ॥9॥
ಮಹಾತ್ಮರಾದ ಪಾಂಡವರು ಅಲ್ಲಿ ಹಾಗೆ ಕುಳಿತಿರಲು, ನಾರದರು ಧರ್ಮರಾಜನನ್ನು ನೋಡಲು ಬಯಸಿ ಅಲ್ಲಿಗೆ ಬಂದರು.
ಯಥಾ ನಕ್ಷತ್ರಜುಷ್ಟೇನ ಸುಪರ್ಣಚರಿತೇನ ಚ |
ಚಂದ್ರಸೂರ್ಯಪ್ರಕಾಶೇನ ಸೇವಿತೇನ ಮಹರ್ಷಿಭಿಃ॥10॥
ನಕ್ಷತ್ರಗಳಿಂದ ಕೂಡಿದ, ಗರುಡ ಮೊದಲಾದ ಪಕ್ಷಿಗಳು ಹಾರಾಡುವ, ಸೂರ್ಯಚಂದ್ರರ ಪ್ರಕಾಶದಿಂದ ಕೂಡಿದ, ಮಹರ್ಷಿಗಳಿಂದ ಸೇವಿತವಾದ, ಆಕಾಶಮಾರ್ಗದಿಂದ ಬಂದರು.
ನಭಸ್ಸ್ಥಲೇನ ದಿವ್ಯೇನ ದುರ್ಲಭೇನಾತಪಸ್ವಿನಾಮ್ |
ಭೂತಾರ್ಚಿತೋ ಭೂತಧರಾಂ ರಾಷ್ಟ್ರಮಂದಿರಭೂಷಿತಾಮ್ ॥11॥
ಅವೇಕ್ಷಮಾಣೋ ದ್ಯುತಿಮಾನಾಜಗಾಮ ಯದೃಚ್ಛಯಾ |
ಸರ್ವವೇದಾಂತಗೋ ವಿಪ್ರಃ ಸರ್ವವಿದ್ಯಾಸು ಪಾರಗಃ ॥12॥
ತಪಸ್ವಿಗಳಲ್ಲದವರಿಗೆ ದುರ್ಲಭವಾದ, ದಿವ್ಯವಾದ ಆಕಾಶದಿಂದ ರಾಷ್ಟ್ರ ಮತ್ತು ಮಂದಿರಗಳಿಂದ ಯುಕ್ತವಾದ ಭೂಮಿಯನ್ನು ನೋಡುತ್ತಾ, ಎಲ್ಲರಿಂದಲೂ ಪೂಜಿಸಲ್ಪಡುವ ಕಾಂತಿಯುಕ್ತರಾದ ನಾರದರು ಇದ್ದಕ್ಕಿದ್ದಂತೆಯೇ ಅಲ್ಲಿಗೆ ಬಂದರು. ಅವರು ಸರ್ವವೇದಾಂತಗಳನ್ನೂ ತಿಳಿದ, ಸರ್ವವಿದ್ಯೆಗಳಲ್ಲೂ ಪಾರಂಗತರಾದ ಬ್ರಾಹ್ಮಣರು.
ಪರೇಣ ತಪಸಾ ಯುಕ್ತೋ ಬ್ರಾಹ್ಮೇಣ ತಪಸಾ ವೃತಃ |
ನಯೇ ನೀತೌ ಚ ನಿರತೋ ವಿಶ್ರುತಶ್ಚ ಮಹಾಮುನಿಃ ॥13॥
ಅವರು ಶ್ರೇಷ್ಠವಾದ ತಪಸ್ಸಿನಿಂದ ಕೂಡಿದವರೂ, ಯಾವಾಗಲೂ ಪರಬ್ರಹ್ಮನ ಚಿಂತನೆಯಲ್ಲಿರುವವರೂ, ನಯದಲ್ಲಿಯೂ, ನೀತಿಯಲ್ಲಿಯೂ ನಿರತರಾದ, ಪ್ರಖ್ಯಾತರಾದ ಮಹಾಮುನಿಗಳು.
ಪರಾತ್ ಪರತರಂ ಪ್ರಾಪ್ತೋ ಧರ್ಮಮೇವಾಭಿಜಗ್ಮಿವಾನ್ |
ಅಯೋನಿಜಶ್ಚ ಗದಿತಃ ಶ್ರುತಿಭಿಶ್ಚ ಮಹಾಮುನಿಃ ॥14॥
ಅವರು ಸರ್ವೋತ್ತಮನಾದ ನಾರಾಯಣನನ್ನು ಹೊಂದಿದವರೂ, ಧರ್ಮವನ್ನೇ ಆಶ್ರಯಿಸಿದವರೂ ಮತ್ತು ಬ್ರಹ್ಮದೇವರ ತೊಡೆಯಿಂದ ಹುಟ್ಟಿದ ಕಾರಣ ವೇದಗಳಲ್ಲಿ ಅಯೋನಿಜರೆಂದು ಹೇಳಲ್ಪಡುವ ಮಹಾಮುನಿಗಳು.
ಭಾವಿತಾತ್ಮಾ ಗತರಜಾಃ ಶಾಂತೋ ಮೃದುರ್ಋಜುರ್ದ್ವಿಜಃ |
ಧರ್ಮೇಣಾಧಿಗತಃ ಸರ್ವೈರ್ದೇವದಾನವಮಾನುಷೈಃ ॥15॥
ಅವರು ಪರಿಶುದ್ಧವಾದ ಮನಸ್ಸುಳ್ಳವರೂ, ವಿರಾಗಿಗಳೂ, ಶಾಂತರೂ, ಮೃದುಸ್ವಭಾವದವರೂ, ಆರ್ಜವವನ್ನು ಹೊಂದಿದವರೂ, ಎಲ್ಲಾ ದೇವದಾನವಮನುಷ್ಯರಿಂದಲೂ ಧರ್ಮಿಷ್ಠರೆಂದೇ ತಿಳಿಯಲ್ಪಡುವವರು.
ಕ್ಷೀಣಕರ್ಮಸು ಪಾಪೇಷು ಭಕ್ಷ್ಯೇಷು ವಿವಿಧೇಷು ಚ |
ಸರ್ವಥಾ ಕೃತಮರ್ಯಾದೋ ವೇದೇಷು ವಿವಿಧೇಷು ಚ ॥16॥
ಪಾಪಕರ್ಮಗಳನ್ನೂ, ಪಾಪಕರ್ಮದ ಫಲಗಳಾದ ದುಃಖಭೋಗಗಳನ್ನೂ ಪರಿತ್ಯಾಗ ಮಾಡಿದವರು. ವಿವಿಧ ವೇದಗಳಲ್ಲಿ ಅಧ್ಯಯನಾದಿ ವಿಷಯದಲ್ಲಿ ನಿಯಮಗಳನ್ನು ಮಾಡಿದವರು.
ಶತಶಃ ಸೋಮಪಾ ಯಜ್ಞೇ ಸದಾ ಪುಣ್ಯಕೃದಗ್ನಿಚಿತ್ |
ಋಕ್ಸಾಮಯಜುಷಾಂ ವೇತ್ತಾ ನ್ಯಾಯವೃತ್ತಾಂತಕೋವಿದಃ ॥17॥
ಅವರು ಯಜ್ಞಗಳಲ್ಲಿ ನೂರಾರು ಬಾರಿ ಸೋಮಪಾನವನ್ನು ಮಾಡಿದವರು. ಯಾವಾಗಲೂ ಪುಣ್ಯವನ್ನು ಮಾಡುವವರು ಮತ್ತು ಅಗ್ನಿಚಯನವನ್ನು ಮಾಡುವವರು. ಋಗ್ವೇದ, ಸಾಮವೇದ ಮತ್ತು ಯಜುರ್ವೇದಗಳನ್ನು ತಿಳಿದವರು. ಬ್ರಹ್ಮತರ್ಕದ ನ್ಯಾಯದ ವಿಷಯಗಳಲ್ಲಿ ಕೋವಿದರಾದವರು.
ಋಜುರಾರೋಹವಾಂಛುಕ್ಲೋ ಭೂಯಿಷ್ಠಪಥಿಕೋಽನಘಃ |
ಶ್ಲಕ್ಷ್ಣಯಾ ಶಿಖಯೋಪೇತಃ ಸಂಪನ್ನಃ ಪರಮತ್ವಿಷಾ ॥18॥

ಋಜುಯೋಗಿಗಳಂತೆ ಯಾವಾಗಲೂ ಮೋಕ್ಷಮಾರ್ಗದಲ್ಲಿ ಮೇಲೆ ಹೋಗುವವರು. ದೋಷದೂರರು. ಅನೇಕ ಶಾಸ್ತ್ರಮಾರ್ಗಗಳಲ್ಲಿ ಸಂಚರಿಸುವವರು. ಮಧುರವಚನವುಳ್ಳವರು. ಮೃದುವಾದ ಶಿಖೆಯಿಂದಲೂ ಶ್ರೇಷ್ಠವಾದ ಕಾಂತಿಯಿಂದಲೂ ಕೂಡಿದವರು.

ಅವದಾತೇ ಚ ಸೂಕ್ಷ್ಮೇ ಚ ದಿವ್ಯೇ ಚ ರುಚಿರೇ ಶುಭೇ |
ಮಹೇಂದ್ರದತ್ತೇ ಮಹತೀ ಬಿಭ್ರತ್ ಪರಮವಾಸಸೀ ॥19॥

ಶುಭ್ರವಾದ, ಸೂಕ್ಷ್ಮವೂ, ದಿವ್ಯವೂ ಮತ್ತು ಮನೋಹರವೂ ಆದ ಮಹೇಂದ್ರನು ಕೊಟ್ಟ ಎರಡು ವಸ್ತ್ರಗಳನ್ನು ಉಟ್ಟಿದ್ದರು.

ಜಂಬೂನದಮಯೇ ದಿವ್ಯೇ ಗಂಡೂಪದಮುಖೇ ನವೇ |
ಅಗ್ನ್ಯರ್ಕಸದೃಶೇ ದಿವ್ಯೇ ಧಾರಯನ್ ಕುಂಡಲೇ ಶುಭೇ ॥20॥

ಎರಡೂ ಕಿವಿಗಳಲ್ಲಿಯೂ ಸೂರ್ಯನಂತೆ, ಅಗ್ನಿಯಂತೆ ಹೊಳೆಯುವ ಪವಿತ್ರವಾದ, ಹೊಸದಾದ, ದಿವ್ಯವಾದ ಎರಡು ಮಕರಕುಂಡಲಗಳನ್ನು ಧರಿಸಿದ್ದರು.

ಚಿತ್ರಂ ರಾಜತಮುಚ್ಛ್ರಿತ್ಯ ಚ್ಛತ್ರಂ ಪರಮವರ್ಚಸಮ್ |
ಪ್ರಾಪ್ಯ ದುಷ್ಪ್ರಾಪಮನ್ಯೇನ ಬ್ರಹ್ಮವರ್ಚಸಮುತ್ತಮಮ್ |
ಭವನೇ ಭೂಮಿಪಾಲಸ್ಯ ಬೃಹಸ್ಪತಿರಿವಾಪ್ಲುತಃ ॥21॥

ಒಳ್ಳೆಯ ಕಾಂತಿಯಿಂದ ಕೂಡಿದ ಶ್ವೇತಚ್ಛತ್ರವನ್ನು ಮೇಲೆತ್ತಿದಂತೆ ಇನ್ನೊಬ್ಬರು ಪಡೆಯಲು ಅಸಾಧ್ಯವಾದ ತಮ್ಮ ರಜತಕಾಂತಿಯನ್ನು ಹೆಚ್ಚಿಸಿ, ರಾಜನ ಮನೆಯಲ್ಲಿ ಬೃಹಸ್ಪತಿಗಳಂತೆ ಇಳಿದರು.

ಸಂಹಿತಾಯಾಂ ಚ ಸರ್ವೇಷಾಂ ಸ್ಥಿತಸ್ಯೋಪಸ್ಥಿತಸ್ಯ ಚ |
ದ್ವಿಪದಸ್ಯ ಚ ಧರ್ಮಸ್ಯ ಕ್ರಮಧರ್ಮಸ್ಯ ಪಾರಗಃ ॥22॥

ವೇದಗಳ ಎಲ್ಲಾ ಸಂಹಿತೆಗಳಲ್ಲಿಯೂ, ಸಂಹಿತೆಯಲ್ಲಿ ಜೊತೆಜೊತೆಯಲ್ಲಿರುವ ಎರಡು ಪದಗಳ ಉಚ್ಚಾರಣೆಯಲ್ಲಿಯೂ, ಜಟಾಂತಕ್ರಮಗಳ ಉಚ್ಚಾರಣೆಯ ರೀತಿಯಲ್ಲಿಯೂ ಅವರು ಪಾರಂಗತರಾಗಿದ್ದರು.

ಗಾಥಾಃ ಸಮನುಸಂಜಜ್ಞೇ ಸಾಮ್ನಾಂ ಪರಮವಲ್ಗುನಾ |
ಆತ್ಮನಾ ಸರ್ವಮೋಕ್ಷಿಭ್ಯಃ ಕೃತಿಮಾನ್ ಕೃತ್ಯವಿತ್ ತದಾ ॥23॥

ಪರಮ ಮನೋಹರವಾದ, ಸಾಮವೇದದ, ಎಲ್ಲಾ ಗಾನಗಳನ್ನೂ ಉತ್ಪತ್ತಿಯನ್ನು ಮಾಡಿ ಹಾಡುತ್ತಿದ್ದರು. ಎಲ್ಲಾ ಮೋಕ್ಷಾಪೇಕ್ಷಿಗಳಿಗೆ ತಾವೇ ಸಹಾಯವನ್ನು ಮಾಡಬೇಕೆಂಬ ಪ್ರಯತ್ನದಿಂದ ಕೂಡಿದವರಾಗಿದ್ದರು.

ಯಜುರ್ಧರ್ಮೇ ಬಹುವಿಧೇ ಮತೋ ಮತಿಮತಾಂ ವರಃ |
ವಿದಿತಾಚಾರ್ಯಸಮಯಃ ಚ್ಛೇತ್ತಾ ನಿಗಮಸಂಶಯಾನ್ ॥24॥

ಯಜುರ್ವೇದದ ಬಹುವಿಧವಾದ ಧರ್ಮಗಳಲ್ಲಿ ಮೇಧಾವಿಗಳಾದ ಅವರು ನಿಪುಣರಾಗಿದ್ದರು. ಶಾಸ್ತ್ರಪ್ರವರ್ತಕರಾದ ಆಚಾರ್ಯರ ನಿಯಮಗಳನ್ನು ತಿಳಿದು, ಕರ್ಮಮೀಮಾಂಸೆಯಲ್ಲಿಯೂ, ದೇವಮೀಮಾಂಸೆಯಲ್ಲಿಯೂ, ಬ್ರಹ್ಮಮೀಮಾಂಸೆಯಲ್ಲಿಯೂ ನಿಪುಣರಾಗಿ ತಾವು ಯಾವ ಸಂಶಯವನ್ನೂ ಹೊಂದದೆ, ಇನ್ನೊಬ್ಬರ ಸಂಶಯಗಳನ್ನೂ ಪರಿಹಾರ ಮಾಡುತ್ತಿದ್ದರು.

ಅರ್ಥನಿರ್ವಚನೇ ನಿತ್ಯಂ ಸಂಶಯಚ್ಛಿದಸಂಶಯಃ |
ಪ್ರಕೃತ್ಯಾ ಧರ್ಮಕುಶಲೋ ನಾನಾಧರ್ಮವಿಶಾರದಃ ॥25॥

ಅರ್ಥನಿರ್ವಚನವನ್ನು ಮಾಡುವುದರಲ್ಲಿ ನಿಪುಣರಾಗಿದ್ದರು. ತಾವು ಸಂಶಯವನ್ನು ಹೊಂದದೆ, ಇನ್ನೊಬ್ಬರ ಸಂಶಯಗಳನ್ನು ಪರಿಹರಿಸುತ್ತಿದ್ದರು. ಪ್ರಕೃತಿಯ ಮಹದಹಂಕಾರಾದಿ ನಾನಾವಿಕಾರಗಳನ್ನು ಚೆನ್ನಾಗಿ ತಿಳಿದಿದ್ದರು.

ಲೋಪೇನಾಗಮಧರ್ಮೇಣ ಸಂಯಮೇನ ಚ ವೃತ್ತಿಷು |
ಏಕಶಬ್ದಾಂಶ್ಚ ನಾನಾರ್ಥಾನೇಕಾರ್ಥಾಂಶ್ಚ ಪೃಥಕ್ಶ್ರುತಾನ್ |
ಪೃಥಗರ್ಥಾಭಿಧಾನಾಂಶ್ಚ ಪ್ರಯೋಗಾಣಾಮವೇಕ್ಷಿತಾ ॥26॥

ವ್ಯಾಕರಣಗಳಲ್ಲಿ ಬರುವ ಲೋಪಗಳನ್ನೂ, ಆದೇಶಗಳನ್ನೂ ಮತ್ತು ನಿಷೇಧಗಳನ್ನೂ ತಿಳಿದಿದ್ದರು. ನಾನಾರ್ಥವಿರುವ ಒಂದೊಂದು ಶಬ್ದಗಳನ್ನೂ, ಒಂದೇ ಅರ್ಥವಿರುವ ಅನೇಕ ಪರ್ಯಾಯ ಶಬ್ದಗಳನ್ನೂ, ಪರಸ್ಪರ ಭಿನ್ನವಾದ ಅರ್ಥವನ್ನು ಹೇಳುವ ಭಿನ್ನವಾದ ಶಬ್ದಗಳನ್ನೂ ತಿಳಿದು ಅಂತಹ ಪ್ರಯೋಗಗಳನ್ನು ಗಮನಿಸುತ್ತಿದ್ದರು.

ಪ್ರಮಾಣಭೂತೋ ಲೋಕೇಷು ಸರ್ವಾಧಿಕರಣೇಷು ಚ |
ಸರ್ವವರ್ಣವಿಕಾರೇಷು ನಿತ್ಯಂ ಸಕಲಪೂಜಿತಃ ॥27॥

ಪ್ರಮಾಣಗಳಾದ ಪ್ರತ್ಯಕ್ಷ, ಅನುಮಾನ, ಆಗಮಗಳ ಲಕ್ಷಣಾದಿಗಳನ್ನು ತಿಳಿದಿದ್ದರು. ಬ್ರಹ್ಮಮೀಮಾಂಸಾ ಶಾಸ್ತ್ರದ ಎಲ್ಲಾ ಅಧಿಕರಣಗಳ ವಿಷಯದಲ್ಲಿಯೂ, ಸರ್ವವರ್ಣವಿಕಾರಗಳ ವಿಷಯದಲ್ಲಿಯೂ (ಸ್ವರ, ಸ್ಪರ್ಶ, ಅಂತಃಸ್ಥ, ಊಷ್ಮ ಮೊದಲಾದ ವಿಭಾಗಗಳಲ್ಲಿಯೂ) ಯಾವಾಗಲೂ, ಎಲ್ಲರಿಂದಲೂ ಪೂಜಿತರಾಗಿದ್ದರು.

ಸ್ವರೇ ಸ್ವರೇ ಚ ವಿವಿಧೇ ವೃತ್ತೇಷು ತ್ರಿವಿಧೇಷು ಚ |
ಸಮಸ್ಥಾನೇಷು ಸರ್ವೇಷು ಸಮಾಮ್ನಾತೇಷು ಧಾತುಷು |
ಉದ್ದೇಶಾನಾಂ ಸಮಾಖ್ಯಾತಾ ಸರ್ವಮಾಖ್ಯಾತಮುದ್ದಿಶನ್ ॥28॥

ವೇದದಲ್ಲಿ ಬರುವ ಉದಾತ್ತ ಅನುದಾತ್ತ ಸ್ವರಿತಾದಿ ಪ್ರತಿಯೊಂದು ಸ್ವರದ ವಿಷಯದಲ್ಲಿಯೂ, ಶಾರ್ದೂಲವಿಕ್ರೀಡಿತ ಮೊದಲಾದ ವೃತ್ತಗಳ ವಿಷಯಗಳಲ್ಲಿಯೂ, ವರ್ಣೋತ್ಪತ್ತಿಯ ಸಮಾನಸ್ಥಾನದ ವಿಷಯದಲ್ಲಿಯೂ, ಧಾತು ಮತ್ತು ಧಾತ್ವರ್ಥ ಪಾಠದ ವಿಷಯದಲ್ಲಿಯೂ, ತಾವು ಸ್ವಯಂ ಉಚ್ಚಾರಣೆಯನ್ನು ಮಾಡಿ, ಇನ್ನೊಬ್ಬರಿಗೆ ವ್ಯಾಖ್ಯಾನ ಮಾಡುವುದರಲ್ಲಿ ನಿಪುಣರಾಗಿದ್ದರು.

ಅಭಿಸಂಧಿಷು ಸರ್ವಜ್ಞಃ ಪದಾನ್ಯಂಗಾನ್ಯನುಸ್ಮರನ್ |
ಕಾಲಧರ್ಮೇಣ ನಿರ್ದಿಷ್ಟಂ ಯಥಾರ್ಥಮವಿಚಾರಯನ್ ॥29॥

ಯಣಾದಿಸಂಧಿಗಳ ವಿಷಯದಲ್ಲಿ ಸರ್ವಜ್ಞರಾಗಿದ್ದರು. ಪದಸಂಜ್ಞೆಯನ್ನೂ, ಅಂಗಸಂಜ್ಞೆಯನ್ನೂ ತಿಳಿದವರಾಗಿದ್ದರು. ವರ್ತಮಾನಕಾಲಾದಿಗಳನ್ನು ಹೇಳುವ ಲಕಾರಾದಿಗಳಲ್ಲಿ ಯಾವ ಸಂಶಯವೂ ಇಲ್ಲದೆ ಸರಿಯಾದ ಜ್ಞಾನವನ್ನು ಹೊಂದಿದ್ದರು.
ಚಿಕೀರ್ಷಿತಂ ಚ ಯೋ ವೇತ್ತಾ ಚರ್ಕರೀತೇನ ಸಂಯುತಮ್ |
ವಿಭಾಷಿತಂ ಚ ಸಮಯಂ ಭಾಷಿತಂ ಹೃದಯಂಗಮಮ್ ॥30॥
ಸನ್ನಂತ ಪ್ರಯೋಗಗಳಿಂದ ಕೂಡಿದ, ಯಙ್ಲುಗಂತ ಪ್ರಯೋಗಗಳಿಂದ ಕೂಡಿದ ವಾಕ್ಯಗಳನ್ನು ಹೇಳುವುದರಲ್ಲಿ ನಿಪುಣರಾಗಿದ್ದರು. ವ್ಯಾಕರಣಶಾಸ್ತ್ರದಲ್ಲಿ ಬರುವ ವಿಭಾಷೆಗಳು, ಭೂತಕಾಲ, ವರ್ತಮಾನಕಾಲಗಳು ಅವರಿಗೆ ಚೆನ್ನಾಗಿ ತಿಳಿದಿದ್ದವು.
ಆತ್ಮನೇ ಚ ಪರಸ್ಮೈ ಚ ಸ್ವರಸಂಸ್ಕಾರಯೋಗವಿತ್ |
ಏಷಾಂ ಸ್ವರಾಣಾಂ ವೇತ್ತಾ ಚ ಬೋದ್ಧಾ ಪ್ರವಚನಃ ಸ್ವರಾನ್ ॥31॥
ಆತ್ಮನೇಪದ ಮತ್ತು ಪರಸ್ಮೈಪದಗಳನ್ನು ತಿಳಿದಿದ್ದರು. ಪ್ರತ್ಯಯಗಳಲ್ಲಿರುವ ಯಾವ ಸ್ವರದಿಂದ ಆತ್ಮನೇಪದವು ಯಾವ ಸ್ವರದಿಂದ ಪರಸ್ಮೈಪದವು ಬರುತ್ತದೆ ಎಂದು ತಿಳಿದಿದ್ದರು. ಸ್ವರಗಳಿಗೆ ಉಂಟಾಗುವ ಸಂಸ್ಕಾರಗಳನ್ನೂ, ಅಕಾರ ಮತ್ತು ಉಕಾರವು ಸೇರಿದರೆ ಓಕಾರವಾಗುತ್ತದೆ (ಇತ್ಯಾದಿಗಳನ್ನು) ತಿಳಿದಿದ್ದರು. ಉದಾತ್ತ, ಅನುದಾತ್ತ, ಸ್ವರಿತ ಮೊದಲಾದ ಸ್ವರಗಳನ್ನು ಚೆನ್ನಾಗಿ ತಿಳಿದು ಅವುಗಳನ್ನು ಉಚ್ಚರಿಸುತ್ತಿದ್ದರು.
ವಿಜ್ಞಾತಾ ಚೋಕ್ತವಾಕ್ಯಾನಾಮೇಕತಾಂ ಬಹುತಾಂ ತಥಾ |
ಬೋದ್ಧಾ ಹಿ ವಿವಿಧಾನರ್ಥಾನ್ ವಿವಿಧಾಂಶ್ಚ ವ್ಯತಿಕ್ರಮಾನ್ ॥32॥
ವಾಕ್ಯಗಳಲ್ಲಿರುವ ಏಕವಚನ, ದ್ವಿವಚನ ಮತ್ತು ಬಹುವಚನಗಳನ್ನೂ ತಿಳಿದಿದ್ದರು. ಶಕ್ಯವಾದ ಅರ್ಥ, ಗೌಣವಾದ ಅರ್ಥ ಮತ್ತು ಲಾಕ್ಷಣಿಕವಾದ ಅರ್ಥಗಳನ್ನೂ ತಿಳಿದಿದ್ದರು. ನಿರುಕ್ತದಲ್ಲಿ ಬರುವ ವರ್ಣವ್ಯತ್ಯಾಸಾದಿಗಳನ್ನೂ ತಿಳಿದಿದ್ದರು.
ಅಭೇದತಶ್ಚ ವಿಧಿನಾ ಬಹುಶಶ್ಚಾಪಿ ಭೇದತಃ |
ವಂಚನಾನಾಂ ಚ ವಿವಿಧಾ ದೇಶಾನಾಂ ಚ ಸಮೀಕ್ಷಿತಾ ॥33॥
ಒಂದೇ ಸ್ಥಾನಿಗೆ ಬರುವ ಅನೇಕ ಆದೇಶಗಳ ಅಭೇದವನ್ನೂ, ಕೆಲವು ವೇಳೆ ಒಂದೇ ಸ್ಥಾನಿಯಲ್ಲಿ ಇರುವ ಬಹುತ್ವವನ್ನೂ ತಿಳಿದಿದ್ದರು. ಗೂಢಾರ್ಥವುಳ್ಳ ವಿವಿಧವಾದ ಶ್ಲೋಕಗಳನ್ನೂ ತಿಳಿದಿದ್ದರು. ಆದೇಶಗಳನ್ನೂ ಗಮನಿಸುತ್ತಿದ್ದರು.
ನಾನಾರ್ಥಕುಶಲಸ್ತತ್ರ ತದ್ಧಿತೇಷು ಚ ಕೃತ್ಸು ಚ |
ಪರಿಭೂಷಯಿತಾ ವಾಚಾಂ ವರ್ಣತಃ ಸ್ವರತೋಽರ್ಥತಃ ॥34॥
ತದ್ಧಿತ ಪ್ರತ್ಯಯಗಳು ಮತ್ತು ಕೃತ್ ಪ್ರತ್ಯಯಗಳು ಇವುಗಳ ಅನೇಕಾರ್ಥಗಳನ್ನು ತಿಳಿದಿದ್ದರು. ವಾಕ್ಯದಲ್ಲಿರುವ ವರ್ಣಗಳನ್ನೂ, ಸ್ವರ, ಅರ್ಥ ಮತ್ತು ಸ್ಥಾನಗಳಿಗೆ ಅನುಗುಣವಾಗಿ ಉಚ್ಚರಿಸಿ ವಾಕ್ಯವನ್ನು ಅಲಂಕರಿಸುತ್ತಿದ್ದರು.
ಪ್ರತ್ಯಯಾನಾಂ ಸಮಾಖ್ಯಾತಾ ನಿಯತಂ ಪ್ರತಿಧಾತುಕಮ್ |
ಪಂಚ ಚಾಕ್ಷರಜಾತೀನಿ ಸ್ವರಸಂಜ್ಞಾನಿ ಯಾನಿ ಚ ॥35॥
ಒಂದೇ ಧಾತುವಿನ ಮೇಲೆ ನಿಯತವಾಗಿ ಬರುವ ಅನೇಕ ಪ್ರತ್ಯಯಗಳನ್ನು ಹೇಳುತ್ತಿದ್ದರು. ಸ್ಪರ್ಶಾಕ್ಷರಗಳ ಐದು ಜಾತಿಗಳನ್ನೂ ಮತ್ತು ಸ್ವರಾಕ್ಷರಗಳನ್ನೂ ತಿಳಿದಿದ್ದರು.
ವೇತ್ತಾ ನಾನಾರ್ಥಕುಶಲೋ ಗುಣೈರೇವಂ ವಿಭೂಷಿತಃ |
ನಾರದಸ್ತ್ವಥ ದೇವರ್ಷಿರಾಜಗಾಮ ಯದೃಚ್ಛಯಾ ॥36॥
ನಾನಾರ್ಥಗಳಲ್ಲಿ ಪಾರಂಗತರಾದ ಗುಣಗಳಿಂದ ಹೀಗೆ ಭೂಷಿತರಾದ ದೇವರ್ಷಿಗಳಾದ ನಾರದರು ಇದ್ದಕ್ಕಿದ್ದಂತೆಯೇ ಅಲ್ಲಿಗೆ ಬಂದರು.
ತಮಾಗತಮೃಷಿಂ ದೃಷ್ಟ್ವಾ ಪ್ರತ್ಯುದ್ಗಮ್ಯಾಭಿವಾದ್ಯ ಚ |
ಆಸನಂ ರುಚಿರಂ ತಸ್ಮೈ ಸ್ವಂ ದದೌ ಸ ಯುಧಿಷ್ಠಿರಃ ॥37॥
ಪ್ರಾಪ್ತರಾದ ಆ ಋಷಿಗಳನ್ನು ನೋಡಿ ಯುಧಿಷ್ಠಿರನು ಎದ್ದು ಅವರನ್ನು ಸಮೀಪಿಸಿ ಅವರಿಗೆ ನಮಸ್ಕಾರವನ್ನು ಮಾಡಿ ತನ್ನ ಶ್ರೇಷ್ಠವಾದ ಆಸನವನ್ನು ಅವರಿಗೆ ನೀಡಿದನು.
ಕೃಷ್ಣಾಜಿನೋತ್ತರೇ ತಸ್ಮಿನ್ನುಪವಿಷ್ಟೋ ಮಹಾನೃಷಿಃ |
ದೇವರ್ಷೇರುಪವಿಷ್ಟಸ್ಯ ಸ್ವಯಮರ್ಘ್ಯಂ ಯಥಾವಿಧಿ |
ಪ್ರಾದಾದ್ ಯುಧಿಷ್ಠಿರೋ ರಾಜಾ ರಾಜ್ಯಂ ಚಾಸ್ಮೈನ್ಯವೇದಯತ್ ॥
ಕೃಷ್ಣಾಜಿನವನ್ನು ಹಾಕಿದ ಆ ಆಸನದ ಮೇಲೆ ಮಹರ್ಷಿಗಳು ಕುಳಿತುಕೊಂಡರು. ಅವರು ಕುಳಿತುಕೊಂಡ ಮೇಲೆ ರಾಜನಾದ ಯುಧಿಷ್ಠಿರನು ತಾನೇ ಅವರಿಗೆ ವಿಧಿಪ್ರಕಾರವಾಗಿ ಅರ್ಘ್ಯವನ್ನು ಕೊಟ್ಟು ತನ್ನ ರಾಜ್ಯವನ್ನು ಅವರಿಗೆ ನಿವೇದಿಸಿದನು.
ಪ್ರತಿಗೃಹ್ಯ ತು ತಾಂ ಪೂಜಾಮೃಷಿಃ ಪ್ರೀತಮನಾ ಭವತ್ |
ಆಶೀರ್ಭಿರ್ವರ್ಧಯಿತ್ವಾ ತು ತಮುವಾಚಾಸ್ಯತಾಮಿತಿ ॥39॥
ಆ ಋಷಿಗಳು ಸಂತೋಷದಿಂದ ಆ ಪೂಜೆಯನ್ನು ಸ್ವೀಕರಿಸಿ, ಆಶೀರ್ವಚನಗಳಿಂದ ಅವನನ್ನು ಅಭಿವೃದ್ಧಿಪಡಿಸಿ ಕುಳಿತುಕೋ ಎಂದು ಹೇಳಿದರು.
ನಿಷಸಾದಾಭ್ಯನುಜ್ಞಾತಸ್ತದಾ ರಾಜಾ ಯುಧಿಷ್ಠಿರಃ |
ಪ್ರೇಷಯಾಮಾಸ ಕೃಷ್ಣಾಯೈ ಭಗವಂತಮುಪಸ್ಥಿತಮ್ ॥40॥
ಯುಧಿಷ್ಠಿರನು ಅವರ ಅನುಮತಿಯನ್ನು ಪಡೆದು ಕುಳಿತುಕೊಂಡು, ಕೃಷ್ಣೆಗೆ ಪೂಜ್ಯರು ಬಂದಿದ್ದಾರೆ ಎಂಬ ವಾರ್ತೆಯನ್ನು ಕಳುಹಿಸಿದನು.
ಶ್ರುತ್ವೈತದ್ ದ್ರೌಪದೀ ಚೈವ ಶುಚಿರ್ಭೂತ್ವಾ ಸಮಾಹಿತಾ |

ಜಗಾಮ ತತ್ರ ಯತ್ರಾಸ್ತೇ ನಾರದಃ ಸಹ ಪಾಂಡವೈಃ ॥41॥
ಅದನ್ನು ಕೇಳಿದ ದ್ರೌಪದಿಯು, ಶುಚಿರ್ಭೂತಳಾಗಿ, ಸಮಾಧಾನದಿಂದ ನಾರದರು ಮತ್ತು ಪಾಂಡವರು ಕುಳಿತಿದ್ದ ಕಡೆಗೆ ಬಂದಳು.
ತಸ್ಯಾಭಿವಾದ್ಯ  ಚರಣೌ ದೇವರ್ಷೇರ್ಧರ್ಮಚಾರಿಣೀ |
ಕೃತಾಂಜಲಿಃ ಸುಸಂವೀತಾ ಸ್ಥಿತಾ ವೈ ದ್ರುಪದಾತ್ಮಜಾ ॥42॥
ಧರ್ಮಚಾರಿಣಿಯಾದ ದ್ರುಪದನ ಮಗಳಾದ ಕೃಷ್ಣೆಯು ನಾರದರ ಪಾದಗಳಿಗೆ ನಮಸ್ಕರಿಸಿ, ಕೈಗಳನ್ನು ಮುಗಿದು, ಉತ್ತರೀಯವನ್ನು ಚೆನ್ನಾಗಿ ಹೊದ್ದುಕೊಂಡು ನಿಂತಳು.
ತಸ್ಯಾಶ್ಚಾಪಿ ಸ ಧರ್ಮಾತ್ಮಾ ಸತ್ಯವಾಗೃಷಿಸತ್ತಮಃ |
ಆಶಿಷೋ ವಿವಿಧಾಃ ಪ್ರೋಕ್ತ್ವಾ ರಾಜಪುತ್ರ್ಯಾಸ್ತು ನಾರದಃ |
ಗಮ್ಯತಾಮಿತಿ ಚೋವಾಚ ಭಗವಾಂಸ್ತಾಮನಿಂದಿತಾಮ್ ॥43॥
ಋಷಿಶ್ರೇಷ್ಠರಾದ ಧರ್ಮಾತ್ಮರಾದ ನಾರದರು ಆ ರಾಜಪುತ್ರಿಗೂ ಅನೇಕ ಆಶೀರ್ವಚನಗಳನ್ನು ಹೇಳಿ, ಅನಿಂದಿತಳಾದ ಅವಳಿಗೆ ಇನ್ನು ನೀನು ಹೋಗಬಹುದು ಎಂದು ಹೇಳಿದರು.
ಗತಾಯಾಮಥ ಕೃಷ್ಣಾಯಾಂ ಯುಧಿಷ್ಠಿರಪುರೋಗಮಾನ್ |
ವಿವಿಕ್ತೇ  ಪಾಂಡವಾನ್ ಸರ್ವಾನುವಾಚ ಭಗವಾನೃಷಿಃ ॥44॥
ದ್ರೌಪದಿಯು ಹೋದ ಮೇಲೆ ಪೂಜ್ಯರಾದ ನಾರದರು ಏಕಾಂತದಲ್ಲಿ ಯುಧಿಷ್ಠಿರ ಮೊದಲಾದ ಎಲ್ಲಾ ಪಾಂಡವರನ್ನೂ ಉದ್ದೇಶಿಸಿ ಮಾತನಾಡಿದರು.
ನಾರದಃ
ಪಾಂಚಾಲೀ ಭವತಾಮೇಕಾ ಧರ್ಮಪತ್ನೀ ಯಶಸ್ವಿನೀ |
ಯಥಾ ವೋ ನಾತ್ರ ಭೇದಃ ಸ್ಯಾತ್ ತಥಾ ನೀತಿರ್ವಿಧೀಯತಾಮ್ ॥
ಕೀರ್ತಿವಂತಳಾದ ಪಾಂಚಾಲಿಯು ನಿಮ್ಮೆಲ್ಲರಿಗೂ ಒಬ್ಬಳೇ ಧರ್ಮಪತ್ನಿಯಾಗಿದ್ದಾಳೆ. ಅವಳ ಸಲುವಾಗಿ ನಿಮ್ಮಲ್ಲಿ ಪರಸ್ಪರ ವಿರೋಧವುಂಟಾಗದಂತೆ ಒಂದು ನೀತಿಯನ್ನು ರೂಪಿಸಿ.
ಸುಂದೋಪಸುಂದೌ ಹ್ಯಸುರೌ ಭ್ರಾತರೌ ಸಹಿತಾವುಭೌ |
ದೇವೈರವಧ್ಯಾವನ್ಯೇಷಾಂ ತ್ರಿಷು ಲೋಕೇಷು ವಿಶ್ರುತೌ ॥46॥
ಹಿಂದೆ ಮೂರು ಲೋಕಗಳಲ್ಲೂ ಪ್ರಖ್ಯಾತರಾದ ಸುಂದ ಮತ್ತು ಉಪಸುಂದ ಎಂಬ ಅಣ್ಣತಮ್ಮಂದಿರಾದ ಅಸುರರಿದ್ದರು. ಅವರು ಯಾವಾಗಲೂ ಜೊತೆಯಲ್ಲೇ ಇರುತ್ತಿದ್ದರು. ದೇವತೆಗಳಿಂದಲೂ ಮತ್ತು ಉಳಿದವರಿಂದಲೂ ಅವಧ್ಯರಾಗಿದ್ದರು.
ಏಕರಾಜ್ಯಾವೇಕಗೃಹಾವೇಕಶಯ್ಯಾಸನಾವುಭೌ |
ತಿಲೋತ್ತಮಾಯಾಸ್ತೌ ಹೇತೋರನ್ಯೋನ್ಯಮಭಿಜಘ್ನತುಃ ॥47॥
ಅವರು ಒಂದೇ ರಾಜ್ಯ, ಒಂದೇ ಮನೆ, ಒಂದೇ ಹಾಸಿಗೆ, ಒಂದೇ ಆಸನ, ಹೀಗೆ ಯಾವಾಗಲೂ ಜೊತೆಯಲ್ಲಿಯೇ ಇರುತ್ತಿದ್ದರು. ಅವರಿಬ್ಬರೂ ತಿಲೋತ್ತಮೆಯ ನಿಮಿತ್ತದಿಂದಾಗಿ ಪರಸ್ಪರವಾಗಿ ಕೊಂದುಕೊಂಡರು.
ರಕ್ಷ್ಯತಾಂ ಸೌಹೃದಂ ತಸ್ಮಾದನ್ಯೋನ್ಯಂ ಪ್ರತಿಭಾವಿಕಮ್ |
ಯಥಾ ವೋ ನಾತ್ರ ಭೇದಃ ಸ್ಯಾತ್ ತತ್ ಕುರುಷ್ವ ಯುಧಿಷ್ಠಿರ ॥48॥
ಆದ್ದರಿಂದ ನಿಮ್ಮಲ್ಲಿ ಸ್ವಾಭಾವಿಕವಾಗಿರುವ ಪರಸ್ಪರ ಸೌಹೃದವನ್ನು ರಕ್ಷಿಸಿಕೊಳ್ಳಿ. ಯುಧಿಷ್ಠಿರನೇ, ಈ ವಿಷಯದಲ್ಲಿ ನಿಮಗೆ ಪರಸ್ಪರ ಭೇದ ಉಂಟಾಗದಂತೆ ನಡೆದುಕೊ.
ಯುಧಿಷ್ಠಿರ
ಸುಂದೋಪಸುಂದಾವಸುರೌ ಕಸ್ಯ ಪುತ್ರೌ ಮಹಾಮುನೇ |
ಉತ್ಪನ್ನಶ್ಚ ಕಥಂ ಭೇದಃ ಕಥಂ ಚಾನ್ಯೋನ್ಯಮಘ್ನತಾಮ್ ॥49॥
ಮಹರ್ಷಿಗಳೇ, ಅಸುರರಾದ ಸುಂದೋಪಸುಂದರು ಯಾರ ಮಕ್ಕಳು? ಅವರಲ್ಲಿ ಹೇಗೆ ವಿರೋಧವುಂಟಾಯಿತು? ಅವರು ಹೇಗೆ ಒಬ್ಬರನ್ನೊಬ್ಬರು ಕೊಂದರು?
ಅಪ್ಸರಾ ದೇವಕನ್ಯಾ ವಾ ಕಸ್ಯ ವೈಷಾ ತಿಲೋತ್ತಮಾ |
ಯಸ್ಯಾಃ ಕಾಮೇನ ಸಮ್ಮತ್ತೌ ಜಘ್ನತುಸ್ತೌ ಪರಸ್ಪರಮ್ ॥50॥
ಯಾರ ಮೇಲಿನ ಕಾಮದಿಂದ ಅವರು ಮತ್ತರಾಗಿ ಪರಸ್ಪರವಾಗಿ ಕೊಂದರೋ, ಅಂತಹ ಈ ತಿಲೋತ್ತಮೆಯು ಅಪ್ಸರೆಯೋ ಅಥವಾ ದೇವಕನ್ಯೆಯೋ? ಇವಳು ಯಾರಿಗೆ ಸೇರಿದವಳು?
ಏತತ್ಸರ್ವಂ ಯಥಾವೃತ್ತಂ ವಿಸ್ತರೇಣ ತಪೋಧನ |
ಶ್ರೋತುಮಿಚ್ಛಾಮಹೇ ವಿಪ್ರ ಪರಂ ಕೌತೂಹಲಂ ಹಿ ನಃ ॥51॥
ತಪೋಧನರಾದ ವಿಪ್ರರೇ, ಇದೆಲ್ಲವನ್ನೂ ಹಿಂದೆ ನಡೆದಂತೆ ವಿಸ್ತಾರವಾಗಿ ಹೇಳಿ. ಅದನ್ನು ಕೇಳಲು ನಾವು ಇಚ್ಛಿಸುತ್ತೇವೆ. ಈ ವಿಷಯದಲ್ಲಿ ನಮಗೆ ಬಹಳ ಕುತೂಹಲವಿದೆ.
ನಾರದಃ
ಶೃಣು ಮೇ ವಿಸ್ತರೇಣೇಮಮಿತಿಹಾಸಂ ಪುರಾತನಮ್ |
ಭ್ರಾತೃಭಿಃ ಸಹಿತಃ ಪಾರ್ಥ ಯಥಾವೃತ್ತಂ ಯುಧಿಷ್ಠಿರ ॥52॥
ಯುಧಿಷ್ಠಿರನೇ, ಈ ಪುರಾತನವಾದ ಇತಿಹಾಸವನ್ನು ನಾನು ವಿಸ್ತಾರವಾಗಿ ಹೇಳುತ್ತೇನೆ. ಪಾರ್ಥನೇ, ತಮ್ಮಂದಿರಿಂದ ಕೂಡಿಕೊಂಡು ಇದು ಹೇಗೆ ನಡೆಯಿತು ಎಂದು ಕೇಳು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಜ್ಯಲಾಭಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹತ್ತನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ಹನ್ನೊಂದನೆಯ ಅಧ್ಯಾಯ
(ಹಿರಣ್ಯಕಶಿಪುವಿನವ ವಂಶದಲ್ಲಿ ಸುಂದೋಪಸುಂದರ ಜನನ, ಬ್ರಹ್ಮದೇವರ ಕುರಿತು ತಪಸ್ಸು ಮತ್ತು ವರಪ್ರಾಪ್ತಿ.)
ನಾರದಃ
ಮಹಾಸುರಸ್ಯಾನ್ವವಾಯೇ ಹಿರಣ್ಯಕಶಿಪೋಃ ಪುರಾ ।
ನಿಕುಂಭೋ ನಾಮ ದೈತ್ಯೇಂದ್ರಃ ತೇಜಸಾ ಬಲವಾನಭೂತ್ ॥1॥
ಹಿಂದೆ ಮಹಾಸುರನಾದ ಹಿರಣ್ಯಕಶಿಪುವಿನ ವಂಶದಲ್ಲಿ ನಿಕುಂಭನೆಂಬ ದೈತ್ಯನು ಪರಾಕ್ರಮದಿಂದ ಬಲಿಷ್ಠನಾದನು.
ತಸ್ಯ ಪುತ್ರೌ ಮಹಾವೀರ್ಯೌ ಜಾತೌ ಭೀಮಪರಾಕ್ರಮೌ ।
ಸಹಾನ್ಯೋನ್ಯೇನ ಭುಂಜಾತೇ ವಿನಾಽನ್ಯೋನ್ಯಂ ನ ಗಚ್ಛತಾಮ್ ॥2॥
ಅವರ ಇಬ್ಬರು ಮಕ್ಕಳು ಮಹಾವೀರ್ಯರೂ, ಭಯಂಕರ ಪರಾಕ್ರಮವುಳ್ಳವರೂ ಆದರು. ಅವರು ಜೊತೆಯಲ್ಲಿಯೇ ಊಟ ಮಾಡುತ್ತಿದ್ದರು. ಒಬ್ಬರನ್ನು ಬಿಟ್ಟು ಇನ್ನೊಬ್ಬರು ಎಲ್ಲಿಗೂ ಹೋಗುತ್ತಿರಲಿಲ್ಲ.
ಅನ್ಯೋನ್ಯಸ್ಯ ಪ್ರಿಯಕರಾವನ್ಯೋನ್ಯಸ್ಯ ಪ್ರಿಯಂವದೌ ।
ಏಕಶೀಲಸಮಾಚಾರೌ ದ್ವಿಧೈವೈಕೋಽಭವಚ್ಚ ಯೌ ॥3॥
ಒಬ್ಬರಿಗೊಬ್ಬರು ಪ್ರಿಯವನ್ನು ಮಾಡುತ್ತಿದ್ದರು, ಪ್ರಿಯವಚನಗಳನ್ನು ಆಡುತ್ತಿದ್ದರು. ಒಂದೇ ಶೀಲ ಮತ್ತು ಆಚಾರವನ್ನುಳ್ಳ ಅವರು ಒಬ್ಬನೇ ಎರಡು ರೂಪವನ್ನು ಧರಿಸಿದಂತೆ ಇದ್ದರು.
ತೌ ವಿವೃದ್ಧೌ ಮಹಾವೀರ್ಯೌ ಕಾರ್ಯೇಷ್ವಪ್ಯೇಕನಿಶ್ಚಿತೌ ।
ತ್ರೈಲೋಕ್ಯವಿಜಯೇ ಯತ್ತೌ ಸಮಾಸ್ಥಾಯೈಕನಿಶ್ಚಯಮ್ ॥4॥
ದೀಕ್ಷಾಂ ಕೃತ್ವಾ ಗತೌ ವಿಂಧ್ಯಂ ತತ್ರೋಗ್ರಂ ತೇಪತುಸ್ತಪಃ ।
ತೌ ತು ದೀರ್ಘೇಣ ಕಾಲೇನ ತಪೋಯುಕ್ತೌ ಬಭೂವತುಃ ॥5॥
ಮಹಾವೀರ್ಯರಾದ ಅವರು ಬೆಳೆದು, ಮಾಡಬೇಕಾದ ಕಾರ್ಯದಲ್ಲಿಯೂ ಒಂದೇ ಬುದ್ಧಿಯನ್ನು ಹೊಂದಿರುತ್ತಿದ್ದರು. ಮೂರುಲೋಕಗಳನ್ನೂ ಜಯಿಸಬೇಕೆಂಬ ಒಂದೇ ಇಚ್ಛೆಯನ್ನು ಹೊಂದಿದವರಾಗಿ, ದೀಕ್ಷೆಯನ್ನು ವಹಿಸಿ, ವಿಂಧ್ಯಪರ್ವತಕ್ಕೆ ಹೋಗಿ ಅಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿದರು. ಅವರು ದೀರ್ಘಕಾಲದವರೆಗೆ ತಪೋನಿಷ್ಠರಾದರು.
ಕ್ಷುತ್ಪಿಪಾಸಾಪರಿಶ್ರಾಂತೌ ಜಟಾವಲ್ಕಲಧಾರಿಣೌ ।
ಮಲೋಪಚಿತಸರ್ವಾಂಗೌ ವಾಯುಭಕ್ಷೌ ಬಭೂವತುಃ ॥6॥
ಹಸಿವುನೀರಡಿಕೆಗಳಿಂದ ಬಳಲಿ, ಜಟಾವಲ್ಕಲಧಾರಿಗಳಾಗಿ, ಕಶ್ಮಲದಿಂದ ಕೂಡಿದ ದೇಹವುಳ್ಳವರಾಗಿ, ಅವರು ವಾಯುಭಕ್ಷರಾದರು.
ಆತ್ಮಮಾಂಸಾನಿ ಜುಹ್ವಂತೌ ಪಾದಾಂಗುಷ್ಠಾಗ್ರವಿಷ್ಠಿತೌ ।
ಊರ್ಧ್ವಬಾಹೂ ಹ್ಯನಿಮಿಷೌ ದೀರ್ಘಕಾಲಂ ಧೃತವ್ರತೌ ॥7॥
ತಮ್ಮ ಮಾಂಸವನ್ನು ಅಗ್ನಿಯಲ್ಲಿ ಹೋಮಮಾಡುತ್ತಾ, ಪಾದಾಂಗುಷ್ಠದ ಮೇಲೆ ಭೂಮಿಯಲ್ಲಿ ನಿಂತು, ಬಾಹುಗಳನ್ನು ಮೇಲಕ್ಕೆ ಎತ್ತಿ, ಕಣ್ಣಿನ ರೆಪ್ಪೆಗಳನ್ನು ಮುಚ್ಚದೇ, ದೀರ್ಘಕಾಲ ವ್ರತವನ್ನು ಧರಿಸಿ ತಪಸ್ಸನ್ನು ಮಾಡಿದರು.
ತಯೋಸ್ತಪಃಪ್ರಭಾವೇಣ ದೀರ್ಘಕಾಲಂ ಪ್ರತಾಪಿತಃ ।
ಧೂಮಂ ಪ್ರಮುಮುಚೇ ವಿಂಧ್ಯಸ್ತದದ್ಭುತಮಿವಾಭವತ್ ॥8॥
ಅವರ ತಪಸ್ಸಿನ ಪ್ರಭಾವದಿಂದ ಬಹುಕಾಲ ತಾಪವನ್ನು ಅನುಭವಿಸಿದ ವಿಂಧ್ಯಪರ್ವತವು ಹೊಗೆಯನ್ನು ಸೂಸಲು ಆರಂಭಿಸಿತು. ಅದು ಅದ್ಭುತವಾಗಿದ್ದಿತು.
ತತೋ ದೇವಾ ಭವನ್ ಭೀತಾ ಉಗ್ರಂ ದೃಷ್ಟ್ವಾ ತಯೋಸ್ತಪಃ ।
ತತಸ್ತಪೋವಿಘಾತಾರ್ಥಂ ದೇವಾ ವಿಘ್ನಾನಿ ಚಕ್ರಿರೇ ॥9॥
ಆಗ ದೇವತೆಗಳು ಅವರ ಉಗ್ರವಾದ ತಪಸ್ಸನ್ನು ನೋಡಿ, ಭೀತರಾಗಿ, ತಪಸ್ಸಿಗೆ ಭಂಗವನ್ನು ಮಾಡಲು ಅನೇಕ ವಿಘ್ನಗಳನ್ನು ಒಡ್ಡಿದರು.
ರತ್ನೈಃ ಪ್ರಲೋಭಯಾಮಾಸುಃ ಸ್ತ್ರೀಭಿಶ್ಚೋಭೌ ಪುನಃ ಪುನಃ ।
ನ ಚ ತೌ ಚಕ್ರತುರ್ಭಂಗಂ ವ್ರತಸ್ಯ ತು ಮಹಾವ್ರತೌ ॥10॥
ರತ್ನಗಳಿಂದಲೂ ಮತ್ತು ಸ್ತ್ರೀಯರಿಂದಲೂ ಅವರನ್ನು ಪುನಃಪುನಃ ಪ್ರಲೋಭಗೊಳಿಸಿದರು. ಆದರೆ, ಮಹಾವ್ರತವನ್ನು ಧರಿಸಿದ ಅವರಿಬ್ಬರೂ ತಮ್ಮ ವ್ರತದ ಭಂಗವನ್ನು ಮಾಡಲಿಲ್ಲ.
ಅಥ ಮಾಯಾಂ ಪುನರ್ದೇವಾಸ್ತಯೋಶ್ಚಕ್ರುರ್ಮಹಾತ್ಮನೋಃ ।
ಭಗಿನ್ಯೋ ಮಾತರೋ ಭಾರ್ಯಾಸ್ತಯೋಃ ಪರಿಜನಾಸ್ತಥಾ ॥11॥
ಪರಿಪಾತ್ಯಮಾನಾ ವಿತ್ರಸ್ತಾಃ ಶೂಲಹಸ್ತೇನ ರಕ್ಷಸಾ ।
ಸ್ರಸ್ತಾಭರಣಕೇಶಾಂತಾ ಏಕಾಂತಭ್ರಷ್ಟವಾಸಸಃ ॥12॥

ಅಭಿಭಾಷ್ಯ ತು ತಾಃ ಸರ್ವಾಸ್ತೌ ತ್ರಾಹೀತಿ ಪುನಃ ಪುನಃ |
ಯದಾ ಕ್ಷೋಭಂ ನ ಗಚ್ಛೇತಾಮಾರ್ತಿಂ ವೈಕತರಸ್ತಯೋಃ ॥13॥
ತತಃ ಸ್ತ್ರಿಯಸ್ತಾಃ ಸಂತ್ರಸ್ತಾಃ ಸರ್ವಮಂತರಧೀಯತ |
ತತಃ ಪಿತಾಮಹಃ ಸಾಕ್ಷಾದಭಿಗಮ್ಯ ಮಹಾಸುರೌ ॥14॥
ಅನಂತರ, ದೇವತೆಗಳು ಆ ಮಹಾತ್ಮರಿಗೆ ಮಾಯೆಯನ್ನು ಸೃಷ್ಟಿಸಿದರು. ಅವರ ಸೋದರಿಯರು, ತಾಯಿಯರೂ, ಪತ್ನಿಯರೂ, ಮತ್ತು ಪರಿಜನರೂ, ಕೈಯಲ್ಲಿ ಶೂಲವನ್ನು ಹಿಡಿದ ರಾಕ್ಷಸನಿಂದ ನೆಲಕ್ಕೆ ಉರುಳಿಸಿ, ಚದುರಿಸಲ್ಪಟ್ಟು, ತಮ್ಮ ವಸತತ್ರಭರಣಗಳನ್ನು ಮತ್ತು ಕೇಶಗಳನ್ನೂ ಅಸ್ತವ್ಯಸ್ತವಾಗಿ ಮಾಡಿಕೊಂಡರು. ಅವರೆಲ್ಲರೂ, ಅವರಿಬ್ಬರನ್ನೂ ಕುರಿತು, ನಮ್ಮನ್ನು ರಕ್ಷಿಸಿ, ನಮ್ಮನ್ನು ರಕ್ಷಿಸಿ ಎಂದು ಕೇಳಿದರು. ಇಷ್ಟು ಮಾಡಿದರೂ, ಅವರಿಬ್ಬರಲ್ಲಿ ಒಬ್ಬನೂ ದುಃಖದಿಂದ ವಿಚಲಿತನಾಗದಿದ್ದಾಗ, ಆ ಭೀತರಾದ ಸ್ತ್ರೀಯರೆಲ್ಲರೂ ಅದೃಶ್ಯರಾದರು.
ವರೇಣ ಚ್ಛಂದಯಾಮಾಸ ಸರ್ವಲೋಕಪಿತಾಮಹಃ |
ಆಗ ಸರ್ವಲೋಕಪಿತಾಮಹರಾದ ಬ್ರಹ್ಮದೇವರು ತಾವಾಗಿಯೇ, ಆ ಅಸುರರ ಬಳಿಗೆ ಬಂದು, ವರವನ್ನು ಬೇಡಿ ಎಂದು ಹೇಳಿದರು.
ತತಃ ಸುಂದೋಪಸುಂದೌ ತೌ ಭ್ರಾತರೌ ದೃಢವಿಕ್ರಮೌ ॥15॥
ದೃಷ್ಟ್ವಾ ಪಿತಾಮಹಂ ದೇವಮುಭೌ ತೌ ಪ್ರಾಂಜಲೀ ತದಾ |
ಊಚತುಶ್ಚ ಪ್ರಭುಂ ದೇವಂ ತತಸ್ತೌ ಸಹಿತೌ ತದಾ ॥16॥
ಆಗ, ಅಣ್ಣತಮ್ಮಂದಿರಾದ ಮತ್ತು ದೃಢವಿಕ್ರಮವುಳ್ಳ ಸುಂದೋಪಸುಂದರು ಬ್ರಹ್ಮದೇವರನ್ನು ನೋಡಿ, ಕೈಗಳನ್ನು ಮುಗಿದು, ಬ್ರಹ್ಮದೇವರನ್ನು ಕುರಿತು ಒಟ್ಟಿಗೆ ಮಾತನಾಡಿದರು.
ಆವಯೋಸ್ತಪಸಾಽನೇನ ಯದಿ ಪ್ರೀತಃ ಪಿತಾಮಹಃ |
ಮಾಯಾವಿದಾವಸ್ತ್ರವಿದೌ ಬಲಿನೌ ಕಾಮರೂಪಿಣೌ |
ಉಭಾವಪ್ಯಮರೌ ಸ್ಯಾವಃ ಪ್ರಸನ್ನೋ ಯದಿ ನೌ ಪ್ರಭುಃ ॥17॥
ನಮ್ಮ ಈ ತಪಸ್ಸಿನಿಂದ ಬ್ರಹ್ಮದೇವರಾದ ನೀವು ಪ್ರೀತರಾಗಿದ್ದರೆ, ನಾವು ಮಾಯಾವಿಶಾರದರೂ, ಅಸ್ತ್ರವೇತ್ತರೂ, ಬಲಿಷ್ಠರೂ ಮತ್ತು ಕಾಮರೂಪಿಗಳೂ ಆಗಬೇಕು. ಪ್ರಭುಗಳಾದ ನೀವು ಪ್ರಸನ್ನರಾಗಿದ್ದರೆ, ನಾವಿಬ್ಬರೂ ಅಮರರಾಗಬೇಕು (ಮೃತ್ಯುರಹಿತರಾಗಬೇಕು).
ಪಿತಾಮಹಃ
ಋತೇಽಮರತ್ವಾದನ್ಯದ್ ವಃ ಸರ್ವಮುಕ್ತಂ ಭವಿಷ್ಯತಿ |
ಅನ್ಯದ್ ವೃಣೀತಾಂ ಮೃತ್ಯೋಶ್ಚ ವಿಧಾನಮಮರೈಃ ಸಹ |
ಕರಿಷ್ಯಾಮೀದಮಿತಿ ಯನ್ಮಹದಪ್ಯುತ್ಥಿತಂ ತಪಃ ॥18॥
ಅಮರತ್ವವನ್ನು ಬಿಟ್ಟು ನೀವು ಕೇಳಿದುದೆಲ್ಲಾ ನಿಮಗೆ ದೊರೆಯುವುದು. ದೇವತೆಗಳ ಜೊತೆಯಲ್ಲಿ ಬೇರೆ ಒಂದು ಮೃತ್ಯುವಿಧಾನವನ್ನು ಕೇಳಿ. ನೀವು ಮಾಡಿದ ದೊಡ್ಡ ತಪಸ್ಸಿನ ನಿಮಿತ್ತದಿಂದಾಗಿ ನಾನು ಅದನ್ನು ಕೊಡುವೆನು.
ಸುಂದೋಪಸುಂದೌ
ಆವಯೋರ್ಹೇತುನಾ ಕೇನ ನಾಮರತ್ವಂ ವಿಧೀಯತೇ ॥19॥
ನಮಗೆ ಅಮರತ್ವವನ್ನು ಕೊಡದಿರಲು ಏನು ಕಾರಣ?
ಪಿತಾಮಹಃ
ತ್ರೈಲೋಕ್ಯವಿಜಯಾರ್ಥಾಯ ಭವದ್ಭ್ಯಾಮಾಸ್ಥಿತಂ ತಪಃ |
ಹೇತುನಾಽನೇನ ದೈತ್ಯೇಂದ್ರೌ ನ ವಾಂ ಕಾಮಂ ಕರೋಮ್ಯಹಮ್ ॥
ದೈತ್ಯೇಂದ್ರರೇ, ನೀವು ತ್ರಿಲೋಕವಿಜಯವನ್ನು ಉದ್ದೇಶಿಸಿ ತಪಸ್ಸನ್ನು ಮಾಡಿದ್ದೀರಿ. ಆ ಕಾರಣದಿಂದ ನಿಮಗೆ ಅಮರತ್ವವನ್ನು ಕೊಡುವುದಿಲ್ಲ.
ಸುಂದೋಪಸುಂದೌ
ತ್ರಿಷು ಲೋಕೇಷು ಯದ್ಭೂತಂ ಸರ್ವಂ ಸ್ಥಾವರಜಂಗಮಮ್ |
ಸರ್ವಸ್ಮಾನ್ನೌ ಭಯಂ ನ ಸ್ಯಾದ್ ಋತೇಽನ್ಯೋನ್ಯಾತ್ ಪಿತಾಮಹ ॥
ಪಿತಾಮಹನೇ, ನಮಗೆ ನಮ್ಮಲ್ಲೇ ಪರಸ್ಪರವಾಗಿ ಅಲ್ಲದೆ, ಮೂರುಲೋಕಗಳಲ್ಲಿರುವ ಯಾವ ಸ್ಥಾವರಜಂಗಮಪದಾರ್ಥದಿಂದಲೂ ಭಯವೂ ಮತ್ತು ಮೃತ್ಯುವೂ ಉಂಟಾಗಬಾರದು.
ಪಿತಾಮಹಃ
ಯತ್ ಪ್ರಾರ್ಥಿತಂ ಯಥೋಕ್ತಂ ತತ್ ಕಾಮಮೇವ ದದಾಮಿ ವಾಮ್ |
ಮೃತ್ಯೋರ್ವಿಧಾನಮೇತಚ್ಚ ಯಥಾವದ್ ವಾಂ ಭವಿಷ್ಯತಿ ॥22॥
ನಾನು ಮೊದಲು ಹೇಳಿದಂತೆ, ನೀವು ಪ್ರಾರ್ಥಿಸಿದ ಕಾಮವನ್ನು ನಿಮ್ಮಿಬ್ಬರಿಗೆ ಕೊಡುತ್ತೇನೆ. ಇದೇ ನಿಜವಾಗಿ ನಿಮ್ಮಿಬ್ಬರ ಮೃತ್ಯೋಪಾಯವಾಗುವುದು.
ನಾರದಃ
ತತಃ ಪಿತಾಮಹೋ ದತ್ವಾ ವರಮೇತತ್ ತದಾ ತಯೋಃ |
ನಿವರ್ತ್ಯ ತಪಸಸ್ತೌ ಚ ಬ್ರಹ್ಮಲೋಕಂ ಜಗಾಮ ಹ ॥23॥
ಆಗ ಬ್ರಹ್ಮದೇವರು ಅವರಿಗೆ ಈ ವರವನ್ನು ಕೊಟ್ಟು, ಅವರನ್ನು ತಪಸ್ಸಿನಿಂದ ಹಿಂದಿರುಗಿಸಿ ಬ್ರಹ್ಮಲೋಕಕ್ಕೆ ಹೋದರು.
ಲಬ್ಧ್ವಾ ವರಂ ಯಥಾನ್ಯಾಯಂ ದೈತ್ಯೇಂದ್ರಾವಪಿ ತಾವುಭೌ |

ಅವಧ್ಯೌ ಸರ್ವಲೋಕಸ್ಯ ಸ್ವಯಮೇವಾವನಿಂ ಗತೌ ॥24॥
ನ್ಯಾಯದಿಂದ ವರವನ್ನು ಪಡೆದ ಆ ಇಬ್ಬರು ದೈತ್ಯರು ಲೋಕದಲ್ಲಿ ಯಾರಿಂದಲೂ ಅವಧ್ಯರಾಗಿ ತಾವೇ ಭೂಮಿಗೆ ಬಂದರು.
ತೌ ತು ಲಬ್ಧವರೌ ದೃಷ್ಟ್ವಾ ಕೃತಕಾವೌ ಮಹಾಸುರೌ |
ಸರ್ವಃ ಸುಹೃಜ್ಜನಸ್ತಾಭ್ಯಾಂ ಪ್ರಹರ್ಷಮುಪಜಗ್ಮಿವಾನ್ ॥25॥
ವರವನ್ನು ಪಡೆದು ಕೃತಾರ್ಥರಾಗಿ ಹಿಂದಿರುಗಿದ ಆ ಮಹಾಸುರರನ್ನು ನೋಡಿ ಅವರ ಬಂಧುವರ್ಗವೆಲ್ಲವೂ ಸಂತೋಷದಿಂದ ಕೂಡಿತು.
ತತಸ್ತೌ ತು ಜಟಾ ಭಿತ್ವಾ ಮೌಲಿನೌ ಸಂಬಭೂವತುಃ |
ಮಹಾರ್ಹಾಭರಣೋಪೇತೌ ವಿರಜಾಂಬರಧಾರಿಣೌ |
ಅಕಾಲಕೌಮುದೀಂ ಚೈವಂ ಚಕ್ರತುಃ ಸರ್ವಕಾಮಿನೀಃ ॥27॥
ಅನಂತರ ಅವರು ಜಟೆಗಳನ್ನು ಬಿಚ್ಚಿ ಶಿಖೆಗಳನ್ನು ಧರಿಸಿದರು. ಅನರ್ಘ್ಯವಾದ ಆಭರಣಗಳನ್ನು ಧರಿಸಿ, ನಿರ್ಮಲವಾದ ವಸ್ತ್ರಧಾರಿಗಳಾಗಿ ಅವರು ತಮ್ಮೆದುರಿಗಿದ್ದ ಎಲ್ಲಾ ಸ್ತ್ರೀಯರಿಗೂ ತಮ್ಮ ಮುಖದ ಕಾಂತಿಯಿಂದ ಬೆಳದಿಂಗಳನ್ನು ಉಂಟುಮಾಡಿದರು.

ದೈತ್ಯೇಂದ್ರೌ ಪರಮಪ್ರೀತೌ ತಯೋಶ್ಚೈವ ಸುಹೃಜ್ಜನೇ |
ಭಕ್ಷ್ಯತಾಂ ಭುಜ್ಯತಾಂ ನಿತ್ಯಂ ರಮ್ಯತಾಂ ಗೀಯತಾಮಿತಿ |
ಪೀಯತಾಂ ದೀಯತಾಂ ಚೇತಿ ವಾಚ ಆಸನ್ ಗೃಹೇ ಗೃಹೇ ॥28॥
ದೈತ್ಯೇಂದ್ರರು ಪರಮಪ್ರೀತರಾದರು. ಅವರ ಸುಹೃಜ್ಜನಸಮೂಹದಲ್ಲಿ ಊಟವನ್ನು ಮಾಡಿ, ವಿಹಾರವನ್ನು ಮಾಡಿ, ಗಾನವನ್ನು ಮಾಡಿ, ಪಾನವನ್ನು ಮಾಡಿ, ದಾನವನ್ನು ಮಾಡಿ ಎಂಬ ಮಾತುಗಳು ಮನೆಮನೆಗಳಲ್ಲೂ ಕೇಳಿಬಂದವು.
ತತ್ರ ತತ್ರ ಮಹಾನಾದೈರುದ್ಘೃಷ್ಟತಳನಾದಿತೈಃ |
ಹೃಷ್ಟಂ ಪ್ರಮುದಿತಂ ಸರ್ವಂ ದೈತ್ಯಾನಾಮಭವತ್ ಪುರಮ್ ॥29॥
ಆ ದೈತ್ಯೇಂದ್ರರ ಪಟ್ಟಣವು ಮಹಾನಾದಗಳಿಂದಲೂ ಮತ್ತು ಸಂತೋಷದ ಚಪ್ಪಾಳೆಯ ಶಬ್ದಗಳಿಂದಲೂ ಕೂಡಿ, ತುಂಬ ಸಂತೋಷದಿಂದ ಯುಕ್ತವಾಯಿತು.
ತೈಸ್ತೈರ್ವಿಹಾರೈರ್ಬಹುಭಿರ್ದೈತ್ಯೇಂದ್ರಾಣಾಂ ಮಹೌಜಸಾಮ್ |
ಸಮಾಃ ಸಂಕ್ರೀಡತಾಂ ತೇಷಾಮಹರೇಕಮಿವಾಭವತ್ ॥30॥
ಮಹಾಪರಾಕ್ರಮವುಳ್ಳ ಆ ದೈತ್ಯೇಂದ್ರರು ಅನೇಕ ವಿಹಾರಗಳನ್ನು ಮಾಡಿ ಆಟವಾಡುತ್ತಿರುವಾಗ ಅವರಿಗೆ ವರ್ಷಗಳು ಒಂದು ದಿನದಂತೆ ಕಳೆದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕಾದಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಜ್ಯಲಾಭಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹನ್ನೊಂದನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ಹನ್ನೆರಡನೆಯ ಅಧ್ಯಾಯ
(ಸುಂದೋಪಸುಂದರಿಂದ ಸ್ವರ್ಗಾದಿಜಯ, ಋಷಿಗಳ ವಧೆ, ಭೂಮಿಯ ಉಗ್ರರೂಪತೆ.)
ನಾರದಃ
ಉತ್ಸವೇ ವರ್ತಮಾನೇ ತು ತ್ರೈಲೋಕ್ಯಾಕಾಂಕ್ಷಿಣಾವುಭೌ |
ಮಂತ್ರಯಿತ್ವಾ ತತಃ ಸೇನಾಂ ತಾವಾಜ್ಞಾಪಯತಾಂ ತದಾ ॥1॥
ಹೀಗೆ ಉತ್ಸವವು ನಡೆಯುತ್ತಿರಲು ಅವರಿಬ್ಬರೂ ಮೂರುಲೋಕಗಳನ್ನೂ ಜಯಿಸುವ ಆಸೆಯಿಂದ ಮಂತ್ರಾಲೋಚನೆಯನ್ನು ಮಾಡಿ, ಸೈನ್ಯಕ್ಕೆ ಆಜ್ಞೆಯನ್ನು ನೀಡಿದರು.
ಸುಹೃದ್ಭಿರಭ್ಯನುಜ್ಞಾತೌ ದೈತ್ಯವೃದ್ಧೈಶ್ಚ ಮಂತ್ರಿಭಿಃ |
ಕೃತ್ವಾ ಪ್ರಾಸ್ಥಾನಿಕೀಂ ಯಾತ್ರಾಮಸುರೌ ಯಯತುಸ್ತದಾ ॥2॥
ಸುಹೃಜ್ಜನರಿಂದಲೂ, ದೈತ್ಯವೃದ್ಧರಿಂದಲೂ, ಮಂತ್ರಿಗಳಿಂದಲೂ ಅನುಮತಿಯನ್ನು ಪಡೆದು, ಯುದ್ಧಕ್ಕೆ ಹೊರಡುವ ಸಮಯದ ಮಂಗಳಕಾರ್ಯವನ್ನು ಮಾಡಿ ಅವರು ಹೊರಟರು.
ಗದಾಪಟ್ಟಸಧಾರಿಣ್ಯಾ ಶೂಲಮುದ್ಗರಹಸ್ತಯಾ |
ಪ್ರಸ್ಥಿತೌ ಸಹಧರ್ಮಿಣ್ಯಾ ಮಹತ್ಯಾ ದೈತ್ಯಸೇನಯಾ ॥3॥
ಗದಾಪಟ್ಟಸಗಳನ್ನು ಧರಿಸಿ, ಶೂಲಮುದ್ಗರಗಳನ್ನು ಕೈಯಲ್ಲಿ ಹಿಡಿದು ತಮ್ಮ ಸಹಧರ್ಮಿಣಿಯಾದ ದೊಡ್ಡ ದೈತ್ಯಸೇನೆಯ ಜೊತೆಯಲ್ಲಿ ಅವರು ಹೊರಟರು.
ಮಂಗಲ್ಯೈಃ ಸ್ತುತಿಭಿಶ್ಚಾಪಿ ವಿಜಯಂ ಪ್ರತಿಸಂಹಿತೌ |
ಚಾರಣೈಃ ಸ್ತೂಯಮಾನೌ ತೌ ಜಗ್ಮತುಃ ಪರಯಾ ಮುದಾ ॥4॥
ವಿಜಯವನ್ನು ಅನುಸಂಧಾನಮಾಡಿ, ಮಂಗಳಗಳಿಂದಲೂ, ಸ್ತೋತ್ರಗಳಿಂದಲೂ, ಯುಕ್ತರಾಗಿ ಚಾರಣರಿಂದ ಸ್ತೋತ್ರಮಾಡಲ್ಪಟ್ಟು ಅವರು ಸಂತೋಷದಿಂದ ಹೊರಟರು.
ತಾವಂತರಿಕ್ಷಮುತ್ಪತ್ಯ ದೈತ್ಯೌ ಕಾಮಗಮಾವುಭೌ |

ದೇವಾನಾಮೇವ ಭವನಂ ಜಗ್ಮತುರ್ಯುದ್ಧದುರ್ಮದೌ ॥5॥
ಕಾಮಗಾಮಿಗಳಾದ ಆ ದೈತ್ಯರು ಅಂತರಿಕ್ಷಕ್ಕೆ ನೆಗೆದು, ಯುದ್ಧದುರ್ಮದರಾಗಿ, ದೇವತೆಗಳ ಲೋಕಕ್ಕೇ ಹೋದರು.
ತಯೋರಾಗಮನಂ ಜ್ಞಾತ್ವಾ ವರದಾನಂ ಚ ತತ್ ಪ್ರಭೋಃ |
ಹಿತ್ವಾ ತ್ರಿವಿಷ್ಟಪಂ ಜಗ್ಮುರ್ಬ್ರಹ್ಮಲೋಕಂ ತತಃ ಸುರಾಃ ॥6॥
ಅವರ ಆಗಮನವನ್ನು ತಿಳಿದು, ಅವರಿಗೆ ಬ್ರಹ್ಮದೇವರು ಕೊಟ್ಟ ವರವನ್ನು ತಿಳಿದಿದ್ದ ದೇವತೆಗಳು ಸ್ವರ್ಗಲೋಕವನ್ನು ಬಿಟ್ಟು ಬ್ರಹ್ಮಲೋಕಕ್ಕೆ ಹೋದರು.
ತಾವಿಂದ್ರಲೋಕಂ ನಿರ್ಜಿತ್ಯ ಯಕ್ಷರಕ್ಷೋಗಣಾಂಸ್ತಥಾ |
ಖೇಚರಾಣ್ಯಪಿ ಭೂತಾನಿ ಜಿಗ್ಯತುಸ್ತೀವ್ರವಿಕ್ರಮೌ ॥7॥
ತೀವ್ರಪರಾಕ್ರಮವುಳ್ಳ ಆ ಇಬ್ಬರು ದೈತ್ಯರು ಇಂದ್ರಲೋಕವನ್ನು ಗೆದ್ದು, ಯಕ್ಷರನ್ನು ಮತ್ತು ರಾಕ್ಷಸರ ಗಣಗಳನ್ನು ಗೆದ್ದು, ಅಂತರಿಕ್ಷದಲ್ಲಿ ಸಂಚರಿಸುವ ಭೂತಗಳನ್ನೂ ಗೆದ್ದರು.
ಅಂತರ್ಭೂಮಿಚರಾನ್ ನಾಗಾನ್ ಜಿತ್ವಾ ತೌ ತು ಮಹಾಸುರೌ |
ಸಮುದ್ರವಾಸಿನೀಃ ಸರ್ವಾ ಮ್ಲೇಚ್ಛಜಾತೀರ್ವಿಜಿಗ್ಯತುಃ ॥8॥
ಆ ಮಹಾಸುರರು ಭೂಮಿಯ ಒಳಗೆ ಸಂಚರಿಸುವ ನಾಗಗಳನ್ನೂ ಜಯಿಸಿ, ಸಮುದ್ರದಲ್ಲಿ ವಾಸಿಸುವ ಎಲ್ಲಾ ಮ್ಲೇಚ್ಛಜಾತಿಗಳನ್ನೂ ಗೆದ್ದರು.
ತತಃ ಸರ್ವಾಂ ಮಹೀಂ ಜೇತುಮಾರಬ್ಧಾವುಗ್ರತೇಜಸೌ |
ಸೈನಿಕಾಂಶ್ಚ ಸಮಾಹೂಯ ಸುತೀಕ್ಷ್ಣಂ ವಾಚಮೂಚತುಃ ॥9॥
ಅನಂತರ, ಸಮಗ್ರವಾದ ಭೂಮಿಯನ್ನು ಗೆಲ್ಲಲು ಉದ್ಯುಕ್ತರಾದ ಉಗ್ರತೇಜಸ್ವಿಗಳಾದ ಅವರು ಸೈನಿಕರನ್ನು ಕರೆದು, ಕ್ರೂರವಾದ ಮಾತುಗಳನ್ನು ಆಡಿದರು.
ರಾಜರ್ಷಯೋ ಮಹಾಯಜ್ಞೈರ್ಹವ್ಯಕವ್ಯೈರ್ದ್ವಿಜಾತಯಃ |
ತೇಜೋ ಬಲಂ ಚ ದೇವಾನಾಂ ವರ್ಧಯಂತೇ ಶ್ರಿಯಂ ತಥಾ ॥10॥
ರಾಜರ್ಷಿಗಳು ಮಹಾಯಜ್ಞಗಳಿಂದಲೂ, ಬ್ರಾಹ್ಮಣರು ಹವ್ಯಕವ್ಯಗಳಿಂದಲೂ, ದೇವತೆಗಳ ತೇಜಸ್ಸನ್ನೂ, ಬಲವನ್ನೂ ಮತ್ತು ಸಂಪತ್ತನ್ನೂ ಹೆಚ್ಚಿಸುತ್ತಾರೆ.
ತೇಷಾಮೇವಂ ಪ್ರವೃದ್ಧಾನಾಂ ಸರ್ವೇಷಾಮಸುರದ್ವಿಷಾಮ್ |
ಸಂಭೂಯ ಸರ್ವೈರಸ್ಮಾಭಿಃ ಕಾರ್ಯಃ ಸರ್ವಾತ್ಮನಾ ವಧಃ ॥11॥
ಹೀಗೆ ಪ್ರವೃದ್ಧರಾದ ಅಸುರದ್ವೇಷಿಗಳಾದ ಅವರನ್ನೆಲ್ಲ, ನಾವೆಲ್ಲರೂ ಒಟ್ಟಿಗೆ ಸೇರಿ ವಧೆಮಾಡಬೇಕು.
ಏವಂ ಸರ್ವಾನ್ ಸಮಾದಿಶ್ಯ ಪೂರ್ವತೀರೇ ಮಹೋದಧೇಃ |
ಕ್ರೂರಾಂ ಮತಿಂ ಸಮಾಸ್ಥಾಯ ಜಗ್ಮತುಃ ಸರ್ವತೋದಿಶಃ ॥12॥
ಹೀಗೆ ಎಲ್ಲರಿಗೂ ಆದೇಶವನ್ನು ನೀಡಿ, ಕ್ರೂರವಾದ ನಿಶ್ಚಯವನ್ನು ಹೊಂದಿ, ಪೂರ್ವಸಮುದ್ರದ ತೀರಕ್ಕೂ ಮತ್ತು ಎಲ್ಲಾ ದಿಕ್ಕುಗಳಿಗೂ ಹೊರಟರು.
ಯಜ್ಞೈರ್ಯಜಂತೇ ಯೇ ಕೇಚಿದ್ ಯಾಜಯಂತಿ ಚ ಯೇ ದ್ವಿಜಾಃ |
ತಾನ್ ಸರ್ವಾನಸುರೌ ದೃಷ್ಟ್ವಾ ಬಲಿನೌ ಜಘ್ನತುಸ್ತತಃ ॥13॥
ಯಾವ ಬ್ರಾಹ್ಮಣರು ಯಜ್ಞಗಳನ್ನು ಮಾಡುತ್ತಿದ್ದರೋ ಅಥವಾ ಯಜ್ಞಗಳನ್ನು ಮಾಡಿಸುತ್ತಿದ್ದರೋ ಅವರನ್ನು ನೋಡಿ ಬಲಿಷ್ಠರಾದ ಈ ಇಬ್ಬರು ಅಸುರರು ಅವರನ್ನು ಕೊಂದರು.
ಆಶ್ರಮೇಷ್ವಗ್ನಿಹೋತ್ರಾಣಿ ಋಷೀಣಾಂ ಭಾವಿತಾತ್ಮನಾಮ್ |
ಗೃಹೀತ್ವಾ ಪ್ರಕ್ಷಿಪಂತ್ಯಪ್ಸು ವಿಸ್ರಬ್ಧಾಃ ಸೈನಿಕಾಸ್ತದಾ ॥14॥
ಅವರ ಸೈನಿಕರು ಧ್ಯಾನಯೋಗಪರವಾದ ಋಷಿಗಳ ಆಶ್ರಮದಲ್ಲಿದ್ದ ಅಗ್ನಿಹೋತ್ರಗಳನ್ನು ತೆಗೆದುಕೊಂಡು ಯಾವ ಶಂಕೆಯೂ ಇಲ್ಲದೆ, ನೀರಿನಲ್ಲಿ ಎಸೆದರು.
ತಪೋಧನೈಶ್ಚ ಯೇ ಶಪ್ತಾಃ ಕ್ರುದ್ಧೈರುಕ್ತಾ ಮಹಾತ್ಮಭಿಃ |
ನಾಕ್ರಾಮಂತಿ ತಯೋಸ್ತೇನ ವರದಾನೇನ ಚ ಪ್ರಭೋಃ ॥15॥
ಕ್ರುದ್ಧರೂ, ಮಹಾತ್ಮರೂ ಆದ ಆ ತಪೋಧನರು ಕೊಟ್ಟ ಶಾಪಗಳು ಬ್ರಹ್ಮದೇವರ ವರದ ಕಾರಣದಿಂದಾಗಿ ಅವರಿಗೆ ನಾಟಲಿಲ್ಲ.
ನಾಕ್ರಾಮಂತಿ ಯದಾ ಶಾಪಾ ಬಾಣಾ ಮುಕ್ತಾಃ ಶಿಲಾಸ್ವಿವ |
ನಿಯಮಾಂಸ್ತು ಪರಿತ್ಯಜ್ಯ ವಿದ್ರವಂತಿ ದ್ವಿಜಾತಯಃ॥16॥
ತಾವು ಕೊಟ್ಟ ಶಾಪಗಳು ಕಲ್ಲಿನ ಮೇಲೆ ಪ್ರಯೋಗಿಸಿದ ಬಾಣಗಳಂತೆ ವಿಫಲವಾದಾಗ, ಬ್ರಾಹ್ಮಣರು ತಮ್ಮ ನಿಯಮಗಳನ್ನು ಬಿಟ್ಟು ಓಡಿಹೋದರು.
ಪೃಥಿವ್ಯಾಂ ಯೇ ತಪಃಸಿದ್ಧಾಃ ಶಾಂತಾ ದಮಪರಾಯಣಾಃ |
ತಯೋರ್ಭಯಾದ್ ದುದ್ರುವಿರೇ ವೈನತೇಯಾದಿವೋರಗಾಃ ॥17॥
ಭೂಮಿಯಲ್ಲಿದ್ದ ತಪಃಸಿದ್ಧರೂ, ಶಾಂತರೂ ಮತ್ತು ಇಂದ್ರಿಯನಿಗ್ರಹವುಳ್ಳವರೂ ಆದ ಋಷಿಗಳು ಗರುಡನ ಭಯದಿಂದ ಸರ್ಪಗಳು ಓಡುವಂತೆ ಅವರಿಬ್ಬರ ಭಯದಿಂದ ಓಡಿಹೋದರು.
ಮಥಿತೈರಾಶ್ರಮೈರ್ಭಗ್ನೈರ್ವಿಕೀರ್ಣೈಃ ಕಲಶೈಃ ಸ್ರುವೈಃ |
ಶೂನ್ಯಮಾಸೀಜ್ಜಗತ್ಸರ್ವಂ ಕಾಲೇನೇವ ಹತಂ ಯಥಾ ॥18॥

ಆಶ್ರಮಗಳೆಲ್ಲವೂ ನಿರ್ಮಥಿಸಲ್ಪಟ್ಟು ಕಲಶಗಳು ಮತ್ತು ಸ್ರುವಗಳು ಚೆಲ್ಲಾಪಿಲ್ಲಿಯಾಗಿ ಬಿದ್ದು, ಯಮನಿಂದ ಹತವಾದಂತೆ ಜಗತ್ತೆಲ್ಲವೂ ಶೂನ್ಯವಾಯಿತು.
ರಾಜರ್ಷಿಭಿರದೃಶ್ಯದ್ಭಿರ್ಋಷಿಭಿಶ್ಚ ತಪೋಧನೈಃ |
ಉಭೌ ವಿನಿಶ್ಚಯಂ ಕೃತ್ವಾ ವಿಕುರ್ವಾಣೌ ವಧೈಷಿಣೌ ॥19॥
ಪ್ರಭಿನ್ನಕರಟೌ ಮತ್ತೌ ಭೂತ್ವಾ ಕುಂಜರರೂಪಿಣೌ |
ಸಂಲ್ಲೀನಾನಪಿ ದುರ್ಗೇಷು ನಿನ್ಯತುರ್ಯಮಸಾದನಮ್ ॥20॥
ಅದೃಶ್ಯರಾದ ರಾಜರ್ಷಿಗಳನ್ನೂ ಮತ್ತು ತಪೋಧನರಾದ ಋಷಿಗಳನ್ನೂ ಕೊಲ್ಲಲು ಬಯಸಿದ ಅವರು ಇಂತಹ ಪ್ರತೀಕಾರವನ್ನು ಮಾಡಲು ನಿಶ್ಚಯಿಸಿ, ಎರಡು ಮದಿಸಿದ ಆನೆಗಳ ರೂಪವನ್ನು ಧರಿಸಿ, ದುರ್ಗಗಳಲ್ಲಿ ಅಡಗಿಕೊಂಡವರನ್ನೆಲ್ಲಾ ಯಮಲೋಕಕ್ಕೆ ಕಳುಹಿಸಿದರು.
ಸಿಂಹೌ ಭೂತ್ವಾ ಪುನರ್ವ್ಯಾಘ್ರೌ ಪುನಶ್ಚಾಂತರ್ಹಿತಾವುಭೌ |
ತೈರುಪಾಯೈಸ್ತು ತಾನ್ ಕ್ರುದ್ಧಾನ್ ಋಷೀನ್ ದೃಷ್ಟ್ವಾ ನಿಜಘ್ನತುಃ ॥
ಅವರು ಪುನಃ ಸಿಂಹರೂಪವನ್ನು ಧರಿಸಿ, ವ್ಯಾಘ್ರರೂಪವನ್ನು ಧರಿಸಿ, ಪುನಃ ಅಂತರ್ಧಾನವನ್ನು ಹೊಂದಿ ಆಯಾ ಉಪಾಯಗಳಿಂದ ಕ್ರುದ್ಧರಾದ ಋಷಿಗಳನ್ನು ನೋಡಿ ಅವರನ್ನು ಕೊಂದರು.
ನಿವೃತ್ತನಿತ್ಯಸ್ವಾಧ್ಯಾಯಾ ಪ್ರನಷ್ಟನೃಪತಿದ್ವಿಜಾ |
ಉತ್ಸನ್ನೋತ್ಸವಯಜ್ಞಾ ಚ ಬಭೂವ ವಸುಧಾ ತದಾ ॥22॥
ಭೂಮಿಯಲ್ಲಿ ನಿತ್ಯಸ್ವಾಧ್ಯಾಯಗಳು ನಾಶವನ್ನು ಹೊಂದಿದವು. ಕ್ಷತ್ರಿಯರೂ ಮತ್ತು ಬ್ರಾಹ್ಮಣರೂ ನಾಶವನ್ನು ಹೊಂದಿದರು ಮತ್ತು ಉತ್ಸವಗಳೂ ಮತ್ತು ಯಜ್ಞಗಳೂ ನಾಶವನ್ನು ಹೊಂದಿದವು.
ಹಾಹಾಭೂತಾ ಭಯಾರ್ತಾ ಚ ನಿವೃತ್ತವಿಪಣಾಪಣಾ |
ನಿವೃತ್ತದೇವಕಾರ್ಯಾ ಚ ಪುಣ್ಯೋದ್ವಾಹವಿವರ್ಜಿತಾ ॥23॥
ನಿವೃತ್ತಕೃಷಿಗೋರಕ್ಷಾ ವಿಧ್ವಸ್ತನಗರಾಶ್ರಯಾ |
ಅಸ್ಥಿಕಂಕಾಲಸಂಕೀರ್ಣಾ ಬಭೂವ ಹ್ಯುಗ್ರದರ್ಶನಾ ॥24॥
ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಹಾಹಾಕಾರವುಂಟಾಯಿತು. ಅಂಗಡಿಮುಂಗಟ್ಟುಗಳು ನಾಶವನ್ನು ಹೊಂದಿದವು. ದೇವಕಾರ್ಯಗಳೆಲ್ಲವೂ ನಿವೃತ್ತವಾದವು. ಪವಿತ್ರವಾದ ವಿವಾಹಗಳು ನಶಿಸಿಹೋದವು. ಕೃಷಿಗೋರಕ್ಷಗಳು ನಾಶವನ್ನು ಹೊಂದಿದವು. ನಗರಗಳನ್ನು ಆಶ್ರಯಿಸಿದ ಪ್ರದೇಶಗಳು ನಾಶವನ್ನು ಹೊಂದಿದವು. ಭೂಮಿಯು ಎಲ್ಲಾ ಕಡೆಗಳಿಂದಲೂ ತಲೆಬುರುಡೆಗಳಿಂದಲೂ, ದೇಹದ ಅಸ್ಥಿಗಳಿಂದಲೂ ತುಂಬಲ್ಪಟ್ಟು ನೋಡಲು ಭಯಂಕರವಾಗಿ, ಭಯಾರ್ತವಾಯಿತು.
ನಿವೃತ್ತಪಿತೃಕಾರ್ಯಂ ಚ ನಿರ್ವಷಟ್ಕಾರಮಂಗಲಮ್ |
ಜಗತ್ ಪ್ರತಿಭಯಾಕಾರಂ ದುಷ್ಪ್ರೇಕ್ಷ್ಯಮಭವತ್ ತದಾ ॥25॥
ಪಿತೃಕಾರ್ಯಗಳು ನಿವೃತ್ತವಾದವು. ವಷಟ್ಕಾರಗಳು ಮತ್ತು ಮಂಗಳಗಳು ಮಾಯವಾದವು. ಆಗ, ಜಗತ್ತು ಭೀಕರವಾದ ಆಕಾರವನ್ನು ತಳೆದು ನೋಡಲು ಅಸಾಧ್ಯವಾಯಿತು.
ಚಂದ್ರಾದಿತ್ಯೌ ಗ್ರಹಾಸ್ತಾರಾ ನಕ್ಷತ್ರಾಣಿ ದಿವೌಕಸಃ |
ಜಗ್ಮುರ್ವಿಷಾದಂ ತತ್ ಕರ್ಮ ದೃಷ್ಟ್ವಾ ಸುಂದೋಪಸುಂದಯೋಃ ॥
ಸುಂದೋಪಸುಂದರ ಆ ಉಗ್ರಕರ್ಮಗಳನ್ನು ನೋಡಿ ಚಂದ್ರಸೂರ್ಯರೂ, ಗ್ರಹಗಳೂ, ತಾರೆಗಳೂ, ನಕ್ಷತ್ರಗಳೂ, ದೇವತೆಗಳೂ, ಎಲ್ಲರೂ ವಿಷಾದವನ್ನು ಹೊಂದಿದರು.
ಏವಂ ಸರ್ವಾ ದಿಶೋ ದೈತ್ಯೌ ಜಿತ್ವಾ ಕ್ರೂರೇಣ ಕರ್ಮಣಾ |
ನಿಃಸಪತ್ನೌ ಕುರುಕ್ಷೇತ್ರೇ ನಿವೇಶಮಭಿಚಕ್ರತುಃ ॥27॥
ಹೀಗೆ ಆ ಇಬ್ಬರು ದೈತ್ಯರು ತಮ್ಮ ಕ್ರೂರಕರ್ಮದಿಂದ ಎಲ್ಲಾ ದಿಕ್ಕುಗಳನ್ನೂ ಗೆದ್ದು ಎಲ್ಲಾ ಶತ್ರುಗಳನ್ನೂ ನಿರ್ಮೂಲನಗೊಳಿಸಿ ಕುರುಕ್ಷೇತ್ರದಲ್ಲಿ ಮನೆಯನ್ನು ಮಾಡಿ ವಾಸವನ್ನು ಮಾಡಲು ಪ್ರಾರಂಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ದ್ವಾದಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಜ್ಯಲಾಭಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
ಇನ್ನೂರ ಹದಿಮೂರನೆಯ ಅಧ್ಯಾಯ
(ದೇವತೆಗಳಿಂದ ಬ್ರಹ್ಮದೇವರ ಬಳಿಯಲ್ಲಿ ದೂರು. ಬ್ರಹ್ಮದೇವರಿಂದ ವಿಶ್ವಕರ್ಮನಿಗೆ ತಿಲೋತ್ತಮೆಯನ್ನು ನಿರ್ಮಿಸಲು ಆದೇಶ. ತಿಲೋತ್ತಮೆಯ ಸೌಂದರ್ಯ.)
ನಾರದಃ
ತತೋ ದೇವರ್ಷಯಃ ಸರ್ವೇ ತೇ ಚೈವ ಪರಮರ್ಷಯಃ |
ಜಗ್ಮುಸ್ತದಾ ಪರಾಮಾರ್ತಿಂ ದೃಷ್ಟ್ವಾ ತತ್ಕದನಂ ಮಹತ್ ॥1॥
ಆಗ ದೇವರ್ಷಿಗಳೂ ಮತ್ತು ಉಳಿದ ಪರಮರ್ಷಿಗಳೂ, ಸುಂದೋಪಸುಂದರ ದುಷ್ಟಕಾರ್ಯಗಳನ್ನು ನೋಡಿ ಬಹಳ ದುಃಖಗೊಂಡರು.
ತೇಽಭಿಜಗ್ಮುರ್ಜಿತಕ್ರೋಧಾ ಜಿತಾತ್ಮಾನೋ ಜಿತೇಂದ್ರಿಯಾಃ |
ಪಿತಾಮಹಸ್ಯ ಭವನಂ ಜಗತಃ ಕೃಪಯಾ ತದಾ ॥2॥
ಜಗತ್ತಿನ ಮೇಲಿನ ಕೃಪೆಯಿಂದ ಜಿತಕ್ರೋಧರೂ, ಜಿತೇಂದ್ರಿಯರೂ, ಜಿತಮನಸ್ಕರೂ ಆದ ಅವರು, ಬ್ರಹ್ಮದೇವರ ಬಳಿಗೆ ಹೋದರು.

ತತೋ ದದೃಶುರಾಸೀನಂ ಸಹ ದೇವೈಃ ಪಿತಾಮಹಮ್ |
ಸಿದ್ಧೈರ್ಬ್ರಹ್ಮರ್ಷಿಭಿಶ್ಚೈವ ಸಮಂತಾತ್ ಪರಿವಾರಿತಮ್ ॥3॥
ಅನಂತರ ಸಿದ್ಧರಿಂದಲೂ, ಬ್ರಹ್ಮರ್ಷಿಗಳಿಂದಲೂ, ಸುತ್ತುವರಿಯಲ್ಪಟ್ಟ ದೇವತೆಗಳ ಜೊತೆಯಲ್ಲಿ ಕುಳಿತಿರುವ ಬ್ರಹ್ಮದೇವರನ್ನು ನೋಡಿದರು.
ತತ್ರ ಜಿಷ್ಣುರ್ಮಹಾದೇವಸ್ತಥಾಗ್ನಿರ್ವಾಯುನಾ ಸಹ |
ಚಂದ್ರಾದಿತ್ಯೌ ಚ ಧರ್ಮಶ್ಚ ಪರಮೇಷ್ಠೀ ತಥಾ ಬುಧಃ ॥4॥
ವೈಖಾನಸಾ ವಾಲಖಿಲ್ಯಾಃ ಸೋಮಪಾಶ್ಚ ಮರೀಚಿಪಾಃ |
ಅಜಶ್ಚೈವಾಜಮೀಢಾಶ್ಚ ತೇಜೋಮೀಢಾಸ್ತಪಸ್ವಿನಃ ॥5॥
ಋಷಯಃ ಸರ್ವ ಏವೈತೇ ಪಿತಾಮಹಮುಪಾಸತೇ |
ತತೋಽಭಿಗಮ್ಯ ಸಹಿತಾಃ ಸರ್ವ ಏವ ಮಹರ್ಷಯಃ ॥6॥
ಅಲ್ಲಿ ಇಂದ್ರ, ರುದ್ರ, ಅಗ್ನಿ, ವಾಯು, ಚಂದ್ರ, ಸೂರ್ಯ, ಮುಖ್ಯವಾಯು, ಬುಧ, ವೈಖಾನಸರು, ವಾಲಖಿಲ್ಯರು, ಸೋಮಪರು, ಮರೀಚಿಪರು, ಅಜ, ಆಜಮೀಢರು, ತೇಜೋಮೀಢರು, ತಪಸ್ವಿಗಳಾದ ಋಷಿಗಳು ಎಲ್ಲರೂ ಬ್ರಹ್ಮದೇವರನ್ನು ಉಪಾಸನೆ ಮಾಡುತ್ತಿದ್ದರು.
ಸುಂದೋಪಸುಂದಯೋಃ ಕರ್ಮ ಸರ್ವಮೇವ ಶಶಂಸಿರೇ |
ಯಥಾಕೃತಂ ಯಥಾಚೇಷ್ಟಂ ಕೃತಂ ಯೇನ ಕ್ರಮೇಣ ಚ |
ನ್ಯವೇದಯಂಸ್ತತಃ ಸರ್ವಮಖಿಲೇನ ಪಿತಾಮಹಮ್ ॥7॥
ಅನಂತರ ಎಲ್ಲ ಋಷಿಗಳೂ ಜೊತೆಯಲ್ಲಿ ಹೋಗಿ ಸುಂದೋಪಸುಂದರ ಎಲ್ಲಾ ದುಷ್ಕರ್ಮಗಳನ್ನೂ ವಿವರಿಸಿದರು. ಅವರು ಮಾಡಿದ ಕರ್ಮಗಳು, ಅವುಗಳನ್ನು ಮಾಡಿದ ರೀತಿ, ಅವುಗಳನ್ನು ಮಾಡಿದ ಕ್ರಮ, ಎಲ್ಲವನ್ನೂ ಸಮಗ್ರವಾಗಿ ಪಿತಾಮಹರಾದ ಬ್ರಹ್ಮದೇವರಿಗೆ ನಿವೇದಿಸಿದರು.
ತತೋ ದೇವಾಶ್ಚ ತೇ ಸರ್ವೇ ತೇ ಚೈವ ಪರಮರ್ಷಯಃ |
ತಮೇವಾರ್ಥಂ ಪುರಸ್ಕೃತ್ಯ ಪಿತಾಮಹಮಚೋದಯನ್ ॥9॥
ಅನಂತರ, ಆ ಎಲ್ಲಾ ದೇವತೆಗಳೂ ಮತ್ತು ಎಲ್ಲಾ ಋಷಿಗಳೂ ಅದೇ ವಿಷಯವನ್ನು ಮುಂದಿಟ್ಟುಕೊಂಡು ಬ್ರಹ್ಮದೇವರಿಗೆ ಒತ್ತಾಯವನ್ನು ಮಾಡಿದರು.
ತತಃ ಪಿತಾಮಹಃ ಶ್ರುತ್ವಾ ಸರ್ವೇಷಾಂ ತದ್ ವಚಸ್ತದಾ |
ಮುಹೂರ್ತಮಿವ ಸಂಚಿಂತ್ಯ ಕರ್ತವ್ಯಸ್ಯ ವಿನಿಶ್ಚಯಮ್ |
ತಯೋರ್ವಧಂ ಸಮುದ್ದಿಶ್ಯ ವಿಶ್ವಕರ್ಮಾಣಮಾಹ್ವಯತ್ ॥10॥
ಆಗ ಬ್ರಹ್ಮದೇವರು ಅವರೆಲ್ಲರ ಮಾತುಗಳನ್ನು ಕೇಳಿ ಒಂದು ಮುಹೂರ್ತದಕಾಲ ಕಾರ್ಯವನ್ನು ಮಾಡುವ ರೀತಿಯನ್ನು ಯೋಚನೆಮಾಡುವವರಂತೆ ಇದ್ದು ಅವರಿಬ್ಬರ ವಧೆಯನ್ನು ಉದ್ದೇಶಿಸಿ ವಿಶ್ವಕರ್ಮನನ್ನು ಕರೆದರು.
ದೃಷ್ಟ್ವಾ ಚ ವಿಶ್ವಕರ್ಮಾಣಂ ವ್ಯಾದಿದೇಶ ಪಿತಾಮಹಃ |
ಸೃಜ್ಯತಾಂ ಪ್ರಾರ್ಥನೀಯೇನ ರೂಪೇಣ ಸ್ತ್ರೀತ್ಯಥಾಬ್ರವೀತ್ ॥11॥
ವಿಶ್ವಕರ್ಮನನ್ನು ನೋಡಿ ಪಿತಾಮಹರಾದ ಬ್ರಹ್ಮದೇವರು ಅಪೇಕ್ಷಿತವಾದ ರೂಪವುಳ್ಳ ಒಂದು ಸ್ತ್ರೀಯನ್ನು ನಿರ್ಮಾಣಮಾಡು ಎಂದು ಹೇಳಿದರು.
ಪಿತಾಮಹಂ ನಮಸ್ಕೃತ್ಯ ತದ್ವಾಕ್ಯಮಭಿನಂದ್ಯ ವೈ |
ನಿರ್ಮಮೇ ಸ ಚ ತಾಂ ದಿವ್ಯಾಂ ಚಿಂತಯಿತ್ವಾ ಪ್ರಯತ್ನತಃ ॥12॥
ವಿಶ್ವಕರ್ಮನು ಅವರ ಮಾತನ್ನು ಅಭಿನಂದಿಸಿ, ಬ್ರಹ್ಮದೇವರಿಗೆ ನಮಸ್ಕಾರವನ್ನು ಮಾಡಿ, ಪ್ರಯತ್ನಪೂರ್ವಕವಾಗಿ ಚಿಂತನೆಯನ್ನು ಮಾಡಿ, ಒಬ್ಬ ದಿವ್ಯವಾದ ಸ್ತ್ರೀಯನ್ನು ನಿರ್ಮಿಸಿದನು.
ತ್ರಿಷು ಲೋಕೇಷು ಯತ್ ಕಿಂಚಿದ್ಭೂತಂ ಸ್ಥಾವರಜಂಗಮಮ್ |
ಸಮಾನಯದ್ ದರ್ಶನೀಯಂ ತತ್ತದ್ ಯತ್ನಾತ್ ತತಸ್ತತಃ ॥13॥
ಮೂರುಲೋಕಗಳಲ್ಲಿ, ಸ್ಥಾವರಜಂಗಮವಸ್ತುಗಳಲ್ಲಿ, ಮನೋಹರವಾದ ಅಂಶವು ಏನೇನಿದ್ದಿತೋ, ಅವೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಅಲ್ಲಲ್ಲಿಂದ ತೆಗೆದು ಒಂದು ಕಡೆ ಸೇರಿಸಿದನು.
ಕೋಟಿಶಶ್ಚೈವ ರತ್ನಾನಿ ತಸ್ಯಾ ಗಾತ್ರೇ ನ್ಯವೇಶಯತ್ |
ತಾಂ ರತ್ನಸಂಘಾತಮಯೀಮಸೃಜದ್ ದೇವರೂಪಿಣೀಮ್ ॥14॥
ಜೊತೆಗೆ, ಕೋಟಿಗಟ್ಟಲೆ ಸಣ್ಣಸಣ್ಣ ರತ್ನಗಳನ್ನು, ಅವಳ ದೇಹದಲ್ಲಿ ಸೇರಿಸಿದನು. ಹೀಗೆ ಮಾಡಿ, ರತ್ನದ ಸಮುದಾಯದಂತಿದ್ದ, ದೇವಸುಂದರಿಯಾದ ಆ ಸ್ತ್ರೀಯನ್ನು ಸೃಷ್ಟಿಸಿದನು.
ಸಾ ಪ್ರಯತ್ನೇನ ಮಹತಾ ನಿರ್ಮಿತಾ ವಿಶ್ವಕರ್ಮಣಾ |
ತ್ರಿಷು ಲೋಕೇಷು ನಾರೀಣಾಂ ರೂಪೇಣಾಪ್ರತಿಮಾ ಭುವಿ ॥15॥
ವಿಶ್ವಕರ್ಮನಿಂದ ಮಹಾಪ್ರಯತ್ನದಿಂದ ನಿರ್ಮಿಸಲ್ಪಟ್ಟ ಅವಳು, ಮೂರುಲೋಕದ ನಾರಿಯರಲ್ಲಿ ಅಸದೃಶಳಾಗಿದ್ದಳು.
ನ ತಸ್ಯಾಃ ಸೂಕ್ಷ್ಮಮಪ್ಯಸ್ತಿ ಯದ್ ಗಾತ್ರೇ ರೂಪಸಂಪದಾ |
ರಹಿತಂ ಸರ್ವಗಾತ್ರೇಷು ಯತ್ರ ದೃಷ್ಟಿರ್ನ ಸಜ್ಜತೇ ॥16॥
ಅವಳ ದೇಹದಲ್ಲಿ ಸೌಂದರ್ಯವಿಲ್ಲದ ಒಂದು ಸಣ್ಣಭಾಗವೂ ಇರಲಿಲ್ಲ. ಹಾಗೆಯೇ, ನೋಡುವವರ ದೃಷ್ಟಿಯನ್ನು ಸೆರೆಹಿಡಿಯದ

ಒಂದು ಅಂಶವೂ ಇರಲಿಲ್ಲ.
ಸಾ ವಿಗ್ರಹವತೀವ ಶ್ರೀಃ ಕಾಂತರೂಪಾ ವಪುಷ್ಮತೀ |
ಪಿತಾಮಹಮುಪಾತಿಷ್ಠತ್ ಕಿಂ ಕರೋಮೀತಿ ಚಾಬ್ರವೀತ್ ॥17॥
ದೇಹವನ್ನು ಧರಿಸಿದ ಶ್ರೀದೇವಿಯಂತೆ ಮನೋಹರಳೂ, ಶ್ರೇಷ್ಠವಾದ ದೇಹವುಳ್ಳವಳೂ ಆದ ಅವಳು ಬ್ರಹ್ಮದೇವರ ಸಮೀಪಕ್ಕೆ ಬಂದು ನಾನು ಏನು ಮಾಡಲಿ ಎಂದು ಕೇಳಿದಳು.
ಪ್ರೀತೋ ಭೂತ್ವಾ ಸ ದೃಷ್ಟ್ವೈವ ಪ್ರೀತ್ಯಾ ಚಾಸ್ಯೈ ವರಂ ದದೌ |
ಕಾಂತಿತ್ವಂ ಸರ್ವಭೂತಾನಾಂ ಸ್ವಶ್ರಿಯಾಽನುಪಮಂ ವಪುಃ ॥18॥
ಅವಳನ್ನು ನೋಡುವುದರಿಂದಲೇ ಸಂತುಷ್ಟರಾದ ಬ್ರಹ್ಮದೇವರು, ಸಂತೋಷದಿಂದ ಅವಳಿಗೆ ಎಲ್ಲ ಪ್ರಾಣಿಗಳಿಗಿಂತಲೂ ಹೆಚ್ಚಿನ ಕಾಂತಿಯನ್ನೂ, ಅನುಪಮವಾದ ಶರೀರಕಾಂತಿಯನ್ನೂ ವರವಾಗಿಕೊಟ್ಟರು.
ಸಾ ತೇನ ವರದಾನೇನ ಕರ್ತುಶ್ಚ ಕ್ರಿಯಯಾ ತದಾ |
ಜಹಾರ ಸರ್ವಭೂತಾನಾಂ ಚಕ್ಷೂಂಷಿ ಚ ಮನಾಂಸಿ ಚ ॥19॥
ಬ್ರಹ್ಮದೇವರ ವರದಾನದಿಂದಲೂ, ನಿರ್ಮಾಣಮಾಡಿದ ವಿಶ್ವಕರ್ಮನ ಕೌಶಲದಿಂದಲೂ, ಅವಳು ತನ್ನನ್ನು ನೋಡುವವರ ಕಣ್ಣು ಮತ್ತು ಮನಸ್ಸುಗಳನ್ನು ಸೆಳೆದಳು.
ತಿಲಂ ತಿಲಂ ಸಮಾದಾಯ ರತ್ನಾನಾಂ ಯದ್ ವಿನಿರ್ಮಿತಾ |
ತಿಲೋತ್ತಮೇತ್ಯತಸ್ತಸ್ಯಾ ನಾಮ ಚಕ್ರೇ ಪಿತಾಮಹಃ ॥20॥
ಪ್ರತಿಯೊಂದು ಸುಂದರ ವಸ್ತುವಿನಿಂದ ಮತ್ತು ರತ್ನಗಳಿಂದ ಎಳ್ಳಿನಷ್ಟು ಸಣ್ಣಸಣ್ಣ ಭಾಗಗಳನ್ನು ತೆಗೆದು ನಿರ್ಮಿಸಿದ್ದ ಕಾರಣ ಬ್ರಹ್ಮದೇವರು ಅವಳಿಗೆ ತಿಲೋತ್ತಮೆ ಎಂದು ನಾಮಕರಣ ಮಾಡಿದರು.
ಪಿತಾಮಹಃ
ಗಚ್ಛ ಸುಂದೋಪಸುಂದಾಭ್ಯಾಮಸುರಾಭ್ಯಾಂ ತಿಲೋತ್ತಮೇ |
ಪ್ರಾರ್ಥನೀಯೇನ ರೂಪೇಣ ಕುರು ಭದ್ರೇ ಪ್ರಲೋಭನಮ್ ॥21॥
ಭದ್ರೇ, ನೀನು ಅಸುರರಾದ ಸುಂದೋಪಸುಂದರು, ಪ್ರಾರ್ಥಿಸ್ವರೂಪದಿಂದ ಅವರ ಬಳಿಗೆ ಹೋಗಿ ಅವರನ್ನು ಪ್ರಲೋಭಿಸು.
ತ್ವತ್ಕೃತೇ ದರ್ಶನಾದೇವ ರೂಪಸಂಪತ್ಕೃತೇ ಚ ವೈ |
ವಿರೋಧಃ ಸ್ಯಾದ್ ಯಥಾ ತಾಭ್ಯಾಮನ್ಯೋನ್ಯಂ ತು ತಥಾ ಕುರು ॥
ನಿನ್ನನ್ನು ನೋಡಿದ ಮಾತ್ರದಿಂದಲೇ ನಿನ್ನ ಸಲುವಾಗಿ ಮತ್ತು ನಿನ್ನ ರೂಪದ ಸಲುವಾಗಿ, ಅವರಿಬ್ಬರಿಗೂ ಪರಸ್ಪರವಾಗಿ ವಿರೋಧ-ವುಂಟಾಗುವಂತೆ ಮಾಡು.
ನಾರದಃ
ಸಾ ತಥೇತಿ ಪ್ರತಿಜ್ಞಾಯ ನಮಸ್ಕೃತ್ವಾ ಪಿತಾಮಹಮ್ |
ಚಕಾರ ಮಂಡಲಂ ಸಾ ವೈ ವಿಬುಧಾನಾಂ ಪ್ರದಕ್ಷಿಣಮ್ ॥23॥
ಅವಳು ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ, ಬ್ರಹ್ಮದೇವರಿಗೆ ನಮಸ್ಕರಿಸಿ, ದೇವತೆಗಳ ಸಮೂಹಕ್ಕೆ ಪ್ರದಕ್ಷಿಣೆಯನ್ನು ಮಾಡಿದಳು.
ಪ್ರಾಙ್ಮುಖೋ ಭಗವಾನಾಸ್ತೇ ದಕ್ಷಿಣೇನ ಮಹೇಶ್ವರಃ |
ದೇವಾಶ್ಚೈವೋತ್ತರೇಣಾಸನ್ ಸರ್ವತಸ್ತ್ವ ೃಷಯೋಽಭವನ್ ॥24॥
ಪೂರ್ವದಲ್ಲಿ ಬ್ರಹ್ಮದೇವರು ಇದ್ದರು. ದಕ್ಷಿಣದಲ್ಲಿ ರುದ್ರದೇವರೂ, ಉತ್ತರದಲ್ಲಿ ಉಳಿದ ದೇವತೆಗಳೂ ಮತ್ತು ಎಲ್ಲಾ ಕಡೆಗಳಲ್ಲಿ ಋಷಿಗಳೂ ಇದ್ದರು.
ಕುರ್ವಂತ್ಯಾಂ ತು ತದಾ ತಸ್ಯಾಂ ಮಂಡಲಂ ತು ಪ್ರದಕ್ಷಿಣಮ್ |
ಬ್ರಹ್ಮಾ ವಿಷ್ಣುಶ್ಚ ಭಗವಾನ್ ತೃಣೀಕೃತ್ಯಾವತಿಷ್ಠತೇ ॥25॥
ಅವಳು ಆ ಋಷಿಗಳ ಮತ್ತು ದೇವತೆಗಳ ಸಮೂಹವನ್ನು ಪ್ರದಕ್ಷಿಣೆ ಮಾಡುವಾಗ ವಿಷ್ಣುವೂ ಮತ್ತು ಪೂಜ್ಯನಾದ ಬ್ರಹ್ಮನೂ ಅವಳನ್ನೂ ತೃಣೀಕರಿಸಿ ಕುಳಿತಿದ್ದರು.
ಇಂದ್ರಃ ಸ್ಥಾಣುಶ್ಚ ಭಗವಾನ್ ಧೈರ್ಯಂ ಕೃತ್ವಾ ಪ್ರತಿಷ್ಠಿತೌ |
ದ್ರಷ್ಟುಕಾಮಸ್ಯ ಚಾತ್ಯರ್ಥಂ ಗತಾಯಾಂ ಪಾರ್ಶ್ವತಸ್ತತಃ ॥24॥
ಅನ್ಯದಂಚಿತಪದ್ಮಾಕ್ಷಂ ಪಶ್ಚಿಮಂ ನಿಃಸೃತಂ ಮುಖಮ್ |
ಗತಾಯಾಶ್ಚೋತ್ತರಂ ಪಾರ್ಶ್ವಂ ಚೋತ್ತರಂ ವಿವೃತಂ ಮುಖಮ್ |
ಪೃಷ್ಠತಃ ಪರಿವರ್ತಂತ್ಯಾ ದಕ್ಷಿಣಂ ನಿಃಸೃತಂ ಮುಖಮ್ ॥25॥
ಇಂದ್ರ ಮತ್ತು ರುದ್ರರು ಮನಸ್ಸಿಗೆ ಧೈರ್ಯವನ್ನು ತಂದುಕೊಂಡು ಕುಳಿತಿದ್ದರು. ಬಲಗಡೆ ಹೋದ ಅವಳನ್ನು ನೋಡಲು ಬಯಸಿದ ರುದ್ರದೇವರಿಗೆ ಅರ್ಧಮುಚ್ಚಿದ ಕಣ್ಣುಳ್ಳ ಇನ್ನೊಂದು ಶಿರಸ್ಸು ಬಲಭಾಗದಲ್ಲಿ ಉಂಟಾಯಿತು. ಉತ್ತರದಿಕ್ಕಿಗೆ ಹೋದ ಅವಳನ್ನು ನೋಡಲು ಇನ್ನೊಂದು ಮುಖವು ಉಂಟಾಯಿತು. ಹಿಂಭಾಗದಲ್ಲಿ ಹೋದ ಅವಳನ್ನು ನೋಡಲು ಹಿಂಭಾಗದಲ್ಲಿ ಇನ್ನೊಂದು ಮುಖವು ಉಂಟಾಯಿತು.
ಮಹೇಂದ್ರಸ್ಯಾಪಿ ನೇತ್ರಾಣಾಂ ಪಾರ್ಶ್ವತಃ ಪೃಷ್ಠತೋಽಗ್ರತಃ |
ರಕ್ತಾನಾಂ ಚ ವಿಶಾಲಾನಾಂ ಸಹಸ್ರಂ ಸರ್ವತೋಽಭವತ್ ॥26॥
ಮಹೇಂದ್ರನಿಗೂ ಸಹ ಮುಂಭಾಗದಲ್ಲಿ, ಪಕ್ಕೆಗಳಲ್ಲಿ, ಹಿಂಭಾಗದಲ್ಲಿ, ಎಲ್ಲಾ ಕಡೆಗಳಲ್ಲಿಯೂ ವಿಶಾಲವಾದ, ರಕ್ತವಾದ

ಸಹಸ್ರನೇತ್ರಗಳು ಉಂಟಾದವು.
ಏವಂ ಚತುರ್ಮುಖಃ ಸ್ಥಾಣುರ್ಮಹಾದೇವೋಽಭವತ್ ಪುರಾ |
ತಥಾ ಸಹಸ್ರನೇತ್ರಶ್ಚ ಬಭೂವ ಬಲಸೂದನಃ ॥27॥
ಹೀಗೆ ಮಹಾದೇವನಾದ ರುದ್ರನು ಹಿಂದೆ ನಾಲ್ಕುಮುಖಗಳನ್ನು ಹೊಂದಿದನು. ಬಲಶತ್ರುವಾದ ಇಂದ್ರನೂ ಸಹ ಸಹಸ್ರನೇತ್ರಗಳನ್ನು ಹೊಂದಿದನು.
ತಥಾ ದೇವನಿಕಾಯಾನಾಮೃಷೀಣಾಂ ಚಾಪಿ ಸರ್ವಶಃ |
ಮುಖಾನ್ಯಭಿಪ್ರವರ್ತಂತೇ ಯೇನ ಯಾತಿ ತಿಲೋತ್ತಮಾ ॥28॥
ತಸ್ಯಾ ಗಾತ್ರೇ ನಿಪತಿತಾ ದೃಷ್ಟಿಸ್ತೇಷಾಂ ಮಹಾತ್ಮನಾಮ್|
ಸರ್ವೇಷಾಮೇವ ಭೂಯಿಷ್ಠಮೃತೇ ದೇವಂ ಪಿತಾಮಹಮ್ ॥29॥
ಹಾಗೆಯೇ, ಆ ದೇವತೆಗಳ ಸಮೂಹಕ್ಕೂ ಮತ್ತು ಎಲ್ಲಾ ಋಷಿಗಳಿಗೂ, ಆ ತಿಲೋತ್ತಮೆಯು ಹೋದ ಹೋದ ಕಡೆಗೆ, ಮುಖಗಳು ತಿರುಗಿದವು. ಅವಳ ದೇಹದಲ್ಲಿ ನಿಮಿತ್ತವಾದ ಆ ಮಹಾನುಭಾವರ ದೃಷ್ಟಿಯು ಬ್ರಹ್ಮದೇವರನ್ನು ಬಿಟ್ಟು ಉಳಿದೆಲ್ಲರಿಗೂ ಅವಳಲ್ಲಿಯೇ, ಸಂಲಗ್ನವಾಯಿತು.
ಗಚ್ಛಂತ್ಯಾ ಚ ತಯಾ ದೇವಾಃ ಸರ್ವೇ ಚ ಪರಮರ್ಷಯಃ |
ಕೃತಮಿತ್ಯೇವ ತತ್ ಕಾರ್ಯಂ ಮೇನಿರೇ ರೂಪಸಂಪದಾ ॥31॥
ಅವಳು ಹೋಗುತ್ತಿದ್ದಂತೆ, ಅವಳ ರೂಪಸಂಪತ್ತನ್ನು ನೋಡಿದ ಎಲ್ಲಾ ದೇವತೆಗಳೂ ಮತ್ತು ಋಷಿಗಳೂ, ಕಾರ್ಯವು ಆಯಿತು ಎಂದೇ ತಿಳಿದರು.
ತಿಲೋತ್ತಮಾಯಾಂ ತು ತದಾ ಗತಾಯಾಂ ಲೋಕಭಾವನಃ |
ಕೃತಂ ಕಾರ್ಯಮಿತಿ ಶ್ರೀಮಾನ್ ವ್ಯಾಜಹಾರ ಪಿತಾಮಹಃ |
ಸರ್ವಾನ್ ವಿಸರ್ಜಯಾಮಾಸ ದೇವಾನೃಷಿಗಣಾಂಶ್ಚ ತಾನ್ ॥32॥
ತಿಲೋತ್ತಮೆಯು ಅಲ್ಲಿಂದ ಹೋಗುತ್ತಿರಲು ಸೃಷ್ಟಿಕರ್ತರಾದ, ಕಾಂತಿಯುಕ್ತರಾದ ಬ್ರಹ್ಮದೇವರು, ಕಾರ್ಯವಾಯಿತು ಎಂದು ಹೇಳಿ, ಆ ಎಲ್ಲಾ ದೇವತೆಗಳನ್ನೂ ಮತ್ತು ಋಷಿಗಳನ್ನೂ ಕಳುಹಿಸಿಕೊಟ್ಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಜ್ಯಲಾಭಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹದಿಮೂರನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ಹದಿನಾಲ್ಕನೆಯ ಅಧ್ಯಾಯ
(ಸುಂದೋಪಸುಂದರ ಬಳಿಗೆ ತಿಲೋತ್ತಮೆಯ ಗಮನ. ಅವಳ ಸಲುವಾಗಿ ಅವರ ವಿರೋಧ. ಗದಾಯುದ್ಧದಿಂದ ಮರಣ. ನಾರದರ ಹಿತೋಪದೇಶ. ಪಾಂಡವರ ಸಮಯಬಂಧ.)
ನಾರದಃ
ಜಿತ್ವಾ ತು ಪೃಥಿವೀಂ ದೈತ್ಯೌ ನಿಃಸಪತ್ನೌ ಗತವ್ಯಥೌ |
ತ್ರೈಲೋಕ್ಯಂ ತು ವಶೇ ಕೃತ್ವಾ ಕೃತಕೃತ್ಯೌ ಬಭೂವತುಃ ॥1॥
ಆ ಇಬ್ಬರು ದೈತ್ಯರು ಭೂಮಿಯನ್ನು ಗೆದ್ದು, ಮೂರುಲೋಕಗಳನ್ನು ವಶದಲ್ಲಿ ತೆಗೆದುಕೊಂಡು, ಯಾವ ಶತ್ರುಗಳೂ ಇಲ್ಲದೇ, ಎಲ್ಲಾ ದುಃಖಗಳಿಂದಲೂ ಮುಕ್ತರಾಗಿ ಕೃತಕೃತ್ಯರಾದರು.
ದೇವಗಂಧರ್ವಯಕ್ಷಾಣಾಂ ನಾಗಪಾರ್ಥಿವರಕ್ಷಸಾಮ್ |
ಆದಾಯ ಸರ್ವರತ್ನಾನಿ ಪರಾಂ ತುಷ್ಟಿಮುಪಾಗತೌ ॥2॥
ಅವರು ದೇವಗಂಧರ್ವಯಕ್ಷರ, ನಾಗಪಾರ್ಥಿವರಾಕ್ಷಸರ ಎಲ್ಲಾ ರತ್ನಗಳನ್ನು ತೆಗೆದುಕೊಂಡು ಬಹಳ ಸಂತುಷ್ಟರಾದರು.
ಯದಾ ನ ಪ್ರತಿಷೇದ್ಧಾರಸ್ತಯೋಃ ಸಂತೀಹ ಕೇಚನ |
ನಿರುದ್ವಿಗ್ನೌ ತತೋ ಭೂತ್ವಾ ವಿಜಹ್ರಾತೇ ಯಥಾಽಮರೌ ॥3॥
ಅವರು ಮಾಡುವ ಕಾರ್ಯಗಳನ್ನು ನಿಷೇಧಿಸುವವರು ಯಾರೂ ಇಲ್ಲದಿದ್ದಾಗ, ಅವರು ಉದ್ವೇಗರಹಿತರಾಗಿ ದೇವತೆಗಳಂತೆ ವಿಹರಿಸಿದರು.
ಸ್ತ್ರೀಭಿರ್ಮಾಲ್ಯೈಶ್ಚ ಗಂಧೈಶ್ಚ ಭಕ್ಷ್ಯೈರ್ಭೋಜ್ಯೈಶ್ಚ ಪುಷ್ಕಳೈಃ |
ಪಾನೈಶ್ಚ ವಿವಿಧೈರನ್ಯೈಃ ಪರಾಂ ಪ್ರೀತಿಮವಾಪತುಃ ॥4॥
ಸ್ತ್ರೀಯರಿಂದಲೂ, ಮಾಲೆಗಳಿಂದಲೂ, ಸುಗಂಧದ್ರವ್ಯಗಳಿಂದಲೂ, ಪುಷ್ಕಳವಾದ ಭಕ್ಷ್ಯಭೋಜ್ಯಗಳಿಂದಲೂ
ವಿವಿಧಪಾನಗಳಿಂದಲೂ ಅವರು ಬಹಳ ಸುಖವನ್ನು ಹೊಂದಿದರು.
ಅಂತಃಪುರೇ ವನೋದ್ಯಾನೇ ಪರ್ವತೋಪವನೇಷು ಚ |
ಯಥೇಪ್ಸಿತೇಷು ದೇಶೇಷು ವಿಜಹ್ರಾತೇಽಮರಾವಿವ ॥5॥
ಅವರು ಅಂತಃಪುರದಲ್ಲಿಯೂ, ಉದ್ಯಾನವನದಲ್ಲಿಯೂ, ಪರ್ವತದ ಸಮೀಪದ ವನಗಳಲ್ಲಿಯೂ, ಮತ್ತು ತಮಗೆ ಇಷ್ಟವಾದ ಬೇರೆಬೇರೆ ಪ್ರದೇಶಗಳಲ್ಲಿಯೂ ದೇವತೆಗಳಂತೆ ವಿಹರಿಸಿದರು.
ತತಃ ಕದಾಚಿದ್ ವಿಂಧ್ಯಸ್ಯ ಪೃಷ್ಠೋತ್ತಮಶಿಲಾತಳೇ |

ಪುಷ್ಪಿತಾಗ್ರೇಷು ಸಾಲೇಷು ವಿಹಾರಮಭಿಜಗ್ಮತುಃ ॥6॥
ಅವರು ಒಮ್ಮೆ ವಿಂಧ್ಯಪರ್ವತದ ತಪ್ಪಲಿನಲ್ಲಿ, ಒಂದು ಶಿಲಾತಳದಲ್ಲಿ ಕುಳಿತು ಅರಳಿದ ಸಾಲವೃಕ್ಷಗಳ ವನದಲ್ಲಿ ವಿಹಾರವನ್ನು ಮಾಡಿದರು.
ದಿವ್ಯೇಷು ಸರ್ವಕಾಮೇಷು ಸಮಾನೀತೇಷು ತತ್ರ ತೌ ।
ವರಾಸನೇಷು ಸಂಹೃಷ್ಟೌ ಸಹ ಸ್ತ್ರೀಭಿರ್ನಿಷೀದತುಃ ॥7॥
ಅವರಿಗೆ ಪರಿಚಾರಕರು ದಿವ್ಯವಾದ ಇಷ್ಟಪದಾರ್ಥಗಳನ್ನು ತಂದುಕೊಡುತ್ತಿರಲು ಅವರು ಸಂತೋಷದಿಂದ ಶ್ರೇಷ್ಠವಾದ ಆಸನಗಳಲ್ಲಿ ಸ್ತ್ರೀಯರ ಜೊತೆಯಲ್ಲಿ ಕುಳಿತುಕೊಂಡರು.
ತತೋ ವಾದಿತ್ರನೃತ್ತಾಭ್ಯಾಮುಪಾತಿಷ್ಠಂಸ್ತತಃ ಸ್ತ್ರಿಯಃ ।
ಗೀತೈಶ್ಚ ಸ್ತುತಿಸಂಯುಕ್ತೈಃ ಪ್ರೀತ್ಯರ್ಥಮುಪಜಗ್ಮಿರೇ ॥8॥
ಆಗ ಸ್ತ್ರೀಯರು ವಾದಿತ್ರನೃತ್ಯಗಳಿಂದಲೂ, ಸ್ತುತಿಸಂಯುಕ್ತವಾದ ಗೀತಗಳಿಂದಲೂ ಅವರ ಸಂತೋಷಕ್ಕಾಗಿ ಆರಾಧಿಸಿದರು.
ತತಸ್ತಿಲೋತ್ತಮಾ ತಸ್ಮಿನ್ ವನೇ ಪುಷ್ಪಾಣಿ ಚಿನ್ವತೀ ।
ವೇಷಮಾದೀಪ್ತಮಾಧಾಯ ರಕ್ತೇನೈಕೇನ ವಾಸಸಾ ॥9॥
ನದೀತೀರೇಷು ಜಾತಾನ್ ಸಾ ಕರ್ಣಿಕಾರಾನ್ ಪ್ರಚಿನ್ವತೀ ।
ಶನೈರ್ಜಗಾಮ ತಂ ದೇಶಂ ಯತ್ರಾಸ್ತಾಂ ತೌ ಮಹಾಸುರೌ ॥10॥
ಆಗ ತಿಲೋತ್ತಮೆಯು ಆ ವನದಲ್ಲಿ ಒಂದು ಕೆಂಪುವಸ್ತ್ರವನ್ನು ಉಟ್ಟು, ಬೆಳಗುವ ವೇಷವನ್ನು ಧರಿಸಿ, ನದೀತೀರದಲ್ಲಿ ಬೆಳೆದಿದ್ದ ಕರ್ಣಿಕಾರ ವೃಕ್ಷಗಳ ಹೂಗಳನ್ನು ಆರಿಸುತ್ತಾ, ಆ ಇಬ್ಬರು ಅಸುರರು ಕುಳಿತಿದ್ದ ಪ್ರದೇಶಕ್ಕೆ ಮೆಲ್ಲನೆ ಬಂದಳು.
ತೌ ತು ಪೀತ್ವಾ ಪರಂ ಪಾನಂ ಮದರಕ್ತಾಂತಲೋಚನೌ ।
ದೃಷ್ಟ್ವೈವ ತಾಂ ವರಾರೋಹಾಂ ವ್ಯಥಿತೌ ಸಂಬಭೂವತುಃ ॥11॥
ಅವರಿಬ್ಬರೂ ಶ್ರೇಷ್ಠವಾದ ಪಾನವನ್ನು ಕುಡಿದು, ಮದದಿಂದ ಕೆಂಪಾದ ಕಣ್ಣುಳ್ಳವರಾಗಿ ಆ ಸುಂದರಿಯನ್ನು ನೋಡಿದ ತಕ್ಷಣವೇ, ವ್ಯಥೆಗೆ ಈಡಾದರು.
ತಾವಾಪ್ಲುತ್ಯಾಸನಂ ಹಿತ್ವಾ ಜಗ್ಮತುರ್ಯತ್ರ ಸಾ ಸ್ಥಿತಾ ।
ಉಭೌ ಚ ಕಾಮಸಂಪ್ರಾಪ್ತಾವುಭೌ ಪ್ರಾರ್ಥಯತಾಂ ಚ ತಾಮ್ ॥12॥
ಅವರು ತಮ್ಮ ಆಸನಗಳಿಂದ ಹಾರಿ ಅವಳು ಇದ್ದ ಕಡೆಗೆ ಹೋಗಿ, ಇಬ್ಬರೂ ಅವಳನ್ನು ಕಾಮಿಸಿ ಪ್ರಾರ್ಥಿಸಿದರು.
ದಕ್ಷಿಣೇ ಚ ಕರೇ ಕ್ರೂರಃ ಸುಂದೋ ಜಗ್ರಾಹ ಪಾಣಿನಾ ।
ಉಪಸುಂದೋಽಪಿ ಜಗ್ರಾಹ ವಾಮೇ ಪಾಣೌ ತಿಲೋತ್ತಮಾಮ್ ॥
ತಿಲೋತ್ತಮೆಯನ್ನು ಕ್ರೂರನಾದ ಸುಂದನು ಅವಳ ದಕ್ಷಿಣಹಸ್ತದಲ್ಲಿ ಹಿಡಿದುಕೊಂಡನು. ಉಪಸುಂದನೂ ಸಹ ತಿಲೋತ್ತಮೆಯನ್ನು ವಾಮಹಸ್ತದಲ್ಲಿ ಹಿಡಿದುಕೊಂಡನು.
ವರಪ್ರದಾನಮತ್ತೌ ತಾವೌರಸೇನ ಬಲೇನ ಚ ।
ಧನರತ್ನಮದಾಭ್ಯಾಂ ಚ ಸುರಪಾನಮದೇನ ಚ ॥14॥
ಅವರಿಬ್ಬರೂ ವರಪ್ರದಾನದಿಂದಲೂ, ಔರಸಬಲದಿಂದಲೂ, ಧನರತ್ನಗಳಿಂದಲೂ, ಸುರಾಪಾನದಿಂದಲೂ ಮದವನ್ನು ಹೊಂದಿದವರಾಗಿದ್ದರು.
ಸರ್ವೈರೇತೈರ್ಮದೈರ್ಮತ್ತಾವನ್ಯೋನ್ಯಭ್ರುಕುಟೀಕೃತೌ ।
ತೌ ಕಟಾಕ್ಷೇಣ ದೈತ್ಯೇಂದ್ರಾವಾಕರ್ಷತಿ ಮುಹುರ್ಮುಹುಃ ॥15॥
ಈ ಎಲ್ಲಾ ಮದಗಳನ್ನು ಹೊಂದಿ, ಪರಸ್ಪರವಾಗಿ ಕ್ರೋಧದಿಂದ ಹುಬ್ಬನ್ನು ಗಂಟಿಕ್ಕಿದ ಅವರಿಬ್ಬರನ್ನೂ ತಿಲೋತ್ತಮೆಯು ತನ್ನ ಕಟಾಕ್ಷದಿಂದ ಮತ್ತೆಮತ್ತೆ ಸೆಳೆದಳು.
ದಕ್ಷಿಣೇನ ಕಟಾಕ್ಷೇಣ ಸುಂದಂ ಜಗ್ರಾಹ ಕಾಮಿನೀ ।
ವಾಮೇನೈವ ಕಟಾಕ್ಷೇಣ ಉಪಸುಂದಂ ಜಿಘೃಕ್ಷತೀ ॥16॥
ಕಾಮಿನಿಯಾದ ಅವಳು ತನ್ನ ದಕ್ಷಿಣಕಟಾಕ್ಷದಿಂದ ಸುಂದನನ್ನು ಪರಿಗ್ರಹಿಸಿದಳು. ವಾಮಕಟಾಕ್ಷದಿಂದ ಉಪಸುಂದನನ್ನು ಪರಿಗ್ರಹಿಸಲು ಇಚ್ಛಿಸಿದಳು.
ಗಂಧಾಭರಣರೂಪೈಸ್ತೌ ವ್ಯಾಮೋಹಂ ಜಗ್ಮತುಸ್ತದಾ ।
ಮದಕಾಮಸಮಾವಿಷ್ಟಾವನ್ಯೋನ್ಯಮಿತಿ ಹೋಚತುಃ ॥17॥
ಅವಳ ರೂಪದಿಂದಲೂ, ಅವಳ ಗಂಧ ಮತ್ತು ಆಭರಣಗಳಿಂದಲೂ ಅವರಿಬ್ಬರೂ ವ್ಯಾಮೋಹಕ್ಕೆ ಒಳಗಾದರು. ಮದದಿಂದಲೂ ಮತ್ತು ಕಾಮದಿಂದಲೂ ಪೂರ್ಣರಾದ ಅವರು ಪರಸ್ಪರವಾಗಿ ಹೀಗೆ ಮಾತನಾಡಿದರು.
ಮಮ ಭಾರ್ಯಾ ತವ ಗುರುರಿತಿ ಸುಂದೋಽಭ್ಯಭಾಷತ ।
ಮಮ ಭಾರ್ಯಾ ತವ ವಧೂರುಪಸುಂದೋಽಭ್ಯಭಾಷತ ॥18॥
ಇವಳು ನನ್ನ ಪತ್ನಿ, ನಿನ್ನ ಅತ್ತಿಗೆ ಎಂದು ಸುಂದನು ಹೇಳಿದನು. ಇವಳು ನನ್ನ ಪತ್ನಿ, ನಿನ್ನ ಸೊಸೆ ಎಂದು ಉಪಸುಂದನು ಹೇಳಿದನು.
ನೈಷಾ ತವ ಮಮೈಷೇತಿ ತತ್ರ ತೌ ಮನ್ಯುರಾವಿಶತ್ ।
ತಸ್ಯಾ ಹೇತೋರ್ಗದೇ ಭೀಮೇ ತಾವುಭಾವಪ್ಯಗೃಹ್ಣತಾಮ್ ॥19॥
ಇವಳು ನಿನ್ನವಳಲ್ಲ, ನನ್ನವಳೇ ಎಂದು ಹೇಳುತ್ತಿದ್ದ ಅವರಿಗೆ ಕ್ರೋಧವು ಉಂಟಾಯಿತು. ಅವಳ ಸಲುವಾಗಿ ಅವರಿಬ್ಬರೂ ಭಯಂಕರವಾದ ಗದೆಗಳನ್ನು ಎತ್ತಿಕೊಂಡರು.

ತೌ ಪ್ರಗೃಹ್ಯ ಗದೇ ಭೀಮೇ ತಸ್ಯಾಃ ಕಾಮೇನ ಮೋಹಿತೌ |
ಅಹಂಪೂರ್ವಮಹಂಪೂರ್ವಮಿತ್ಯನ್ಯೋನ್ಯಂ ನಿಜಘ್ನತುಃ ॥20॥
ಅವರಿಬ್ಬರೂ ಕಾಮಮೋಹಿತರಾಗಿ ಭಯಂಕರವಾದ ಗದೆಗಳನ್ನು ಎತ್ತಿಕೊಂಡು ನಾನು ಮೊದಲು, ನಾನು ಮೊದಲು ಎಂದು ಹೇಳುತ್ತಾ, ಪರಸ್ಪರವಾಗಿ ಹೊಡೆದಾಡಿ ಸತ್ತರು.
ತೌ ಗದಾನಿಹತೌ ಭೀಮೌ ಪೇತತುರ್ಧರಣೀತಳೇ |
ರುಧಿರೇಣೈವ ಲಿಪ್ತಾಂಗೌ ದ್ವಾವಿವಾರ್ಕೌ ನಭಶ್ಚ್ಯುತೌ ॥21॥
ಭಯಂಕರರಾದ ಅವರಿಬ್ಬರೂ ಗದಾಪ್ರಹಾರಕ್ಕೆ ಸಿಲುಕಿ, ರಕ್ತದಿಂದ ತೊಯ್ದದೇಹವುಳ್ಳವರಾಗಿ, ಆಕಾಶದಿಂದ ಬಿದ್ದ ಎರಡು ಸೂರ್ಯರಂತೆ ಭೂಮಿಯ ಮೇಲೆ ಬಿದ್ದರು.
ತತಸ್ತಾ ವಿದ್ರುತಾ ನಾರ್ಯಸ್ತೇ ಚ ದೈತ್ಯಗಣಾಸ್ತದಾ |
ಪಾತಾಲಮಗಮನ್ ಸರ್ವೇ ವಿಷಾದಭಯಶಂಕಿತಾಃ ॥22॥
ಆಗ ಅಲ್ಲಿದ್ದ ನಾರಿಯರು ಮತ್ತು ದೈತ್ಯರ ಸಮೂಹಗಳು ಅಲ್ಲಿಂದ ಓಡಿಹೋದವು. ವಿಷಾದ ಮತ್ತು ಭಯಗಳಿಂದ ಕೂಡಿದವರಾಗಿ ಅವರು ಪಾತಾಳಲೋಕಕ್ಕೆ ಹೋದರು.
ತತಃ ಪಿತಾಮಹಸ್ತತ್ರ ಸಹದೇವೈರ್ಮಹರ್ಷಿಭಿಃ |
ಆಜಗಾಮ ವಿಶುದ್ಧಾತ್ಮಾ ಪೂಜಯಿಷ್ಯಂಸ್ತಿಲೋತ್ತಮಾಮ್ ॥23॥
ಆಗ ವಿಶುದ್ಧಾತ್ಮರಾದ ಬ್ರಹ್ಮದೇವರು, ದೇವತೆಗಳು ಮತ್ತು ಋಷಿಗಳಿಂದ ಕೂಡಿಕೊಂಡು ತಿಲೋತ್ತಮೆಯನ್ನು ಸತ್ಕರಿಸಲು ಆ ಪ್ರದೇಶಕ್ಕೆ ಬಂದರು.
ವರೇಣ ಚ್ಛಂದಿತಾ ಸಾ ಚ ಭಗವತ್ಪ್ರೀತಿಮೇವ ಸಾ |
ವರಯಾಮಾಸಾಥ ತತ್ರೈತಾಂ ಪ್ರೀತಃ ಪ್ರಾಹ ಪಿತಾಮಹಃ ॥24॥
ಬೇಕಾದ ವರವನ್ನು ಕೇಳು ಎಂದು ಬ್ರಹ್ಮದೇವರಿಂದ ಹೇಳಲ್ಪಟ್ಟ ಅವಳು, ಬ್ರಹ್ಮದೇವರ ಪ್ರೀತಿಯನ್ನೇ ವರವಾಗಿ ಬೇಡಿದಳು. ಆಗ ಬ್ರಹ್ಮದೇವರು ಸಂತೋಷದಿಂದ ಅವಳಿಗೆ ಹೀಗೆ ಹೇಳಿದರು.
ಆದಿತ್ಯಚರಿತಾಂಲ್ಲೋಕಾನ್ ವಿಚರಿಷ್ಯಸಿ ತೇಜಸಾ |
ತೇಜಸೈವ ಸುಜುಷ್ಟಾಂ ತ್ವಾಂ ನ ಹರಿಷ್ಯತಿ ಕಶ್ಚನ ॥25॥
ನೀನು ನಿನ್ನ ತೇಜಸ್ಸಿನಿಂದ ಸೂರ್ಯನು ಸಂಚರಿಸುವ ಲೋಕಗಳಲ್ಲಿ ಸಂಚರಿಸುವಿ. ಇಷ್ಟು ತೇಜಸ್ಸಿನಿಂದ ಕೂಡಿದ ನಿನ್ನನ್ನು ಯಾರೂ ಬಲಾತ್ಕಾರದಿಂದ ತೆಗೆದುಕೊಂಡು ಹೋಗುವುದಿಲ್ಲ.
ನಾರದಃ
ಏವಂ ತಸ್ಯೈ ವರಂ ದತ್ವಾ ಸರ್ವಲೋಕಪಿತಾಮಹಃ |
ಇಂದ್ರೇ ತ್ರೈಲೋಕ್ಯಮಾಧಾಯ ಬ್ರಹ್ಮಲೋಕಂ ಗತಃ ಪ್ರಭುಃ ॥26॥
ಸರ್ವಲೋಕಪಿತಾಮಹರಾದ ಬ್ರಹ್ಮದೇವರು ಹೀಗೆ ಅವಳಿಗೆ ವರವನ್ನು ಕೊಟ್ಟು, ಇಂದ್ರನಿಗೆ ತ್ರೈಲೋಕ್ಯಾಧಿಪತ್ಯವನ್ನು ಅನುಗ್ರಹಿಸಿ ಬ್ರಹ್ಮಲೋಕಕ್ಕೆ ಹೋದರು.
ಏವಂ ತೌ ಸಹಿತೌ ಭೂತ್ವಾ ಸರ್ವಾರ್ಥೇಷ್ವೇಕನಿಶ್ಚಯೌ |
ತಿಲೋತ್ತಮಾರ್ಥೇ ಸಂಕ್ರುದ್ಧಾವನ್ಯೋನ್ಯಮಭಿಜಘ್ನತುಃ ॥27॥
ಹೀಗೆ ಅವರಿಬ್ಬರೂ ಎಲ್ಲಾ ವಿಷಯಗಳಲ್ಲೂ ಸಮಾನವಾದ ನಿಶ್ಚಯವನ್ನು ಹೊಂದಿ ಜೊತೆಯಲ್ಲಿಯೇ ಇದ್ದರೂ, ತಿಲೋತ್ತಮೆಯ ಸಲುವಾಗಿ ಕ್ರುದ್ಧರಾಗಿ ಪರಸ್ಪರವಾಗಿ ಹೊಡದಾಡಿಕೊಂಡು ಮೃತರಾದರು.
ತಸ್ಮಾದ್ ಬ್ರವೀಮಿ ವಃ ಸ್ನೇಹಾತ್ ಸರ್ವಾನ್ ಭಾರತಸತ್ತಮಾನ್ |
ಯಥಾ ವೋ ನಾತ್ರ ಭೇದಃ ಸ್ಯಾತ್ ಸರ್ವೇಷಾಂ ದ್ರೌಪದೀಕೃತೇ ॥28॥
ತಥಾ ಕುರುತ ಭದ್ರಂ ವೋ ಮಮ ಚೇತ್ ಪ್ರಿಯಮಿಚ್ಛಥ |
ಯಥಾ ಸುಂದೋಪಸುಂದಾಭ್ಯಾಂ ತಥಾ ನ ಸ್ಯಾದ್ ಯುಧಿಷ್ಠಿರ ॥29॥
ಆದ್ದರಿಂದ ಭಾರತಶ್ರೇಷ್ಠರಾದ ನಿಮಗೆಲ್ಲರಿಗೂ ನಾನು ಪ್ರೀತಿಯಿಂದ ಹೇಳುತ್ತಿದ್ದೇನೆ. ದ್ರೌಪದಿಯ ವಿಷಯದಲ್ಲಿ ನಿಮ್ಮಲ್ಲಿ ವಿರೋಧ-ವುಂಟಾಗದಂತೆ ಪರಸ್ಪರವಾಗಿ ನಡೆದುಕೊಳ್ಳಿ. ನಿಮಗೆ ಮಂಗಳವಾಗಲಿ. ನನಗೆ ಪ್ರಿಯವಾದುದನ್ನು ಬಯಸುವುದಾದರೆ, ಹೀಗೆ ಮಾಡಬೇಕು. ಯುಧಿಷ್ಠಿರನೇ, ಸುಂದೋಪಸುಂದರಿಗೆ ಆದಂತೆ, ನಿಮಗೆ ಆಗಬಾರದು.
ವೈಶಂಪಾಯನಃ
ಏವಮುಕ್ತಾ ಮಹಾತ್ಮಾನೋ ನಾರದೇನ ಮಹರ್ಷಿಣಾ |
ಸಮಯಂ ಚಕ್ರಿರೇ ರಾಜಂಸ್ತೇಽನ್ಯೋನ್ಯೇನ ಸಮಾಗತಾಃ |
ಸಮಕ್ಷಂ ತಸ್ಯ ದೇವರ್ಷೇರ್ನಾರದಸ್ಯಾಮಿತೌಜಸಃ ॥31॥
ರಾಜನೇ, ಮಹರ್ಷಿಗಳಾದ ನಾರದರು ಹೀಗೆ ಹೇಳಿದಾಗ, ಮಹಾನುಭಾವರಾದ ಅವರು ಪರಸ್ಪರವಾಗಿ ಸಮಾಲೋಚನೆಯನ್ನು ಮಾಡಿ, ಅಮಿತ ತೇಜಸ್ಸುಳ್ಳ ದೇವರ್ಷಿಗಳಾದ ನಾರದರ ಎದುರಿಗೆ ನಿಯಮವನ್ನು ಮಾಡಿಕೊಂಡರು.
ಏಕೈಕಸ್ಯ ಗೃಹೇ ಕೃಷ್ಣಾ ವಸೇದ್ ವರ್ಷಮಕಲ್ಮಷಾ |
ದ್ರೌಪದ್ಯಾ ಚ ಸಮಾಸೀನಮನ್ಯೋನ್ಯಂ ಯೋ ವಿದರ್ಶಯೇತ್ |
ಸ ನೋ ದ್ವಾದಶ ವೈ ಮಾಸಾನ್ ವ್ರತಚಾರೀ ವನೇ ವಸೇತ್ ॥32॥
ಒಬ್ಬೊಬ್ಬರ ಮನೆಯಲ್ಲಿ ನಿಷ್ಕಲ್ಮಷಳಾದ ಕೃಷ್ಣೆಯ ಒಂದೊಂದು ವರ್ಷ ವಾಸಮಾಡಬೇಕು. ದ್ರೌಪದಿಯ ಜೊತೆಯಲ್ಲಿ ಏಕಾಂತದಲ್ಲಿ

ಕುಳಿತಿರುವವನನ್ನು ಯಾರಾದರೂ ನೋಡಿದರೆ, ಅವನು ಹನ್ನೆರಡು ತಿಂಗಳುಗಳ ಕಾಲ ವ್ರತವನ್ನು ಧಾರಣೆಮಾಡಿ ಕಾಡಿನಲ್ಲಿ ವಾಸಿಸಬೇಕು. (ಬ್ರಹ್ಮಚಾರೀ ವನೇ ವಸೇತ್ ಎಂಬ ಪಾಠವೂ ಇದೆ).

ಕೃತೇ ಚ ಸಮಯೇ ತಸ್ಮಿನ್ ಪಾಂಡವೈರ್ಧರ್ಮಚಾರಿಭಿಃ |
ತತಃ ಸ ಭಗವಾಂಸ್ತತ್ರ ಪಾಂಡವೈರರ್ಚಿತಃ ಪ್ರಭುಃ ॥33॥
ನಿರ್ಯಯೌ ಸುಶುಭೇ ಕಾಲೇ ಇಂದ್ರಪ್ರಸ್ಥಾನ್ಮಹಾತಪಾಃ |
ನಾರದೋಽಪ್ಯಗಮತ್ ಪ್ರೀತ ಇಷ್ಟಂ ದೇಶಂ ಮಹಾನೃಷಿಃ ॥34॥

ಧರ್ಮಚಾರಿಗಳಾದ ಪಾಂಡವರು ಹೀಗೆ ನಿಯಮವನ್ನು ಮಾಡಿಕೊಳ್ಳುತ್ತಿರಲು ಪೂಜ್ಯರಾದ, ಮಹಾತಪಸ್ವಿಗಳಾದ ನಾರದರು ಪಾಂಡವರಿಂದ ಅರ್ಚಿತರಾಗಿ, ಇಂದ್ರಪ್ರಸ್ಥದಿಂದ ಶುಭಮುಹೂರ್ತದಲ್ಲಿ ಹೊರಟುಹೋದರು. ಮಹರ್ಷಿಗಳಾದ ನಾರದರು ಸಂತೋಷದಿಂದ ತಮಗೆ ಇಷ್ಟವಾದ ದೇಶಕ್ಕೆ ಹೊರಟರು.

ಏವಂ ತೈಃ ಸಮಯಃ ಪೂರ್ವಂ ಕೃತೋ ನಾರದಚೋದಿತೈಃ |
ಯೇನ ಭೇದಂ ನ ಜಗ್ಮುಸ್ತೇ ತದಾಽನ್ಯೋನ್ಯೇನ ಭಾರತ ॥35॥

ಹೀಗೆ ಅವರು ನಾರದರಿಂದ ಪ್ರೇರಿಸಲ್ಪಟ್ಟು ನಿಯಮವನ್ನು ಮಾಡಿದರು. ಭಾರತನೇ, ಆ ಕಾರಣದಿಂದ ಅವರಿಗೆ ಪರಸ್ಪರವಾಗಿ ವಿರೋಧ- ವುಂಟಾಗಲಿಲ್ಲ.

ಏತದ್ ವಿಸ್ತರಶಃ ಸರ್ವಮಾಖ್ಯಾತಂ ತೇ ನರೇಶ್ವರ |
ಕಾಲೇ ಚ ತಸ್ಮಿನ್ ಸಂಪನ್ನಂ ಯಥಾವಜ್ಜನಮೇಜಯ ॥36॥

ಜನಮೇಜಯರಾಜನೇ, ಆ ಕಾಲದಲ್ಲಿ ನಡೆದ ಈ ಘಟನೆಗಳೆಲ್ಲವನ್ನೂ ನಿನಗೆ ವಿಸ್ತಾರವಾಗಿ ಹೇಳಿದ್ದೇನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುರ್ದಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಜ್ಯಲಾಭಪರ್ವಣಿ ಷಷ್ಠೋಽಧ್ಯಾಯಃ ॥
॥ ರಾಜ್ಯಲಾಭಪರ್ವ ಸಮಾಪ್ತಮ್ ॥

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ರಾಜ್ಯಲಾಭಪರ್ವವು ಮುಗಿಯಿತು.

* * * *

## 15. ಅರ್ಜುನವನವಾಸಪರ್ವ

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20

ತತಃ ಕದಾಚಿದ್ ಧರ್ಮರಾಜೇನ ಯುಕ್ತಾಂ
ಶಸತ್ರಗಾರೇ ವಿಪ್ರಗೋರಕ್ಷಣಾರ್ಥಂ |
ಶಸತ್ರದಿತ್ಸುಃ ಫಲ್ಗುನೋಽದ್ರಾಕ್ಸ ಶಸ್ತ್ರೈ
ರ್ದಸ್ಯೂನ್ ಹತ್ವಾ ತೀರ್ಥಯಾತ್ರೋನ್ಮುಖೋಽಭೂತ್ ॥154॥

ಬಳಿಕ ಒಮ್ಮೆ ಅರ್ಜುನ ಒಬ್ಬ ಬ್ರಾಹ್ಮಣನ ಗೋರಕ್ಷಣೆಗಾಗಿ ಶಸ್ತ್ರವನ್ನು ತೆಗೆಯಲು ಬಂದವನು ಅಲ್ಲಿ ದ್ರೌಪದಿ ಧರ್ಮರಾಜನ ಜೊತೆಗಿದ್ದುದನ್ನು ಕಂಡ. ಶಸ್ತ್ರದಿಂದ ಕಳ್ಳರನ್ನು ಕೊಂದ ಬಳಿಕ, ತೀರ್ಥಯಾತ್ರೆಗೆ ಹೊರಟ.

### ಇನ್ನೂರ ಹದಿನೈದನೆಯ ಅಧ್ಯಾಯ

(ಆಯುಧಾಗಾರದಲ್ಲಿದ್ದ ಧರ್ಮರಾಜ ದ್ರೌಪದಿ, ಬ್ರಾಹ್ಮಣನ ಗೋರಕ್ಷಣೆಗಾಗಿ ಅರ್ಜುನ ಅಲ್ಲಿಗೆ ಬಂದುದು, ಧರ್ಮರಾಜರನ್ನು ನೋಡಿ, ಅರ್ಜುನನ ವನವಾಸ ನಿಶ್ಚಯ.)

ವೈಶಂಪಾಯನಃ

ಏವಂ ತೇ ಸಮಯಂ ಕೃತ್ವಾ ನ್ಯವಸಂಸ್ತತ್ರ ಪಾಂಡವಾಃ |
ವಶೇ ಶಸ್ತ್ರಪ್ರತಾಪೇನ ಕುರ್ವಂತೋಽನ್ಯಾನ್ ಮಹೀಕ್ಷಿತಃ ॥1॥

ಆ ಪಾಂಡವರು ಹೀಗೆ ನಿಯಮವನ್ನು ಮಾಡಿಕೊಂಡು ತಮ್ಮ ಶಸ್ತ್ರಪ್ರತಾಪದಿಂದ ಉಳಿದ ರಾಜರನ್ನೆಲ್ಲಾ ವಶದಲ್ಲಿಟ್ಟುಕೊಳ್ಳುತ್ತಾ ಅಲ್ಲಿ ವಾಸಮಾಡಿದರು.

ತೇಷಾಂ ಮನುಜಸಿಂಹಾನಾಂ ಪಂಚಾನಾಮಮಿತೌಜಸಾಮ್ |
ಬಭೂವ ಕೃಷ್ಣಾ ಪಂಚಾನಾಂ ದಯಿತಾ ವಶವರ್ತಿನೀ ॥2॥

ಅಮಿತಪರಾಕ್ರಮಿಗಳಾದ ಆ ಐದೂ ಮನುಜಸಿಂಹರಿಗೆ ಕೃಷ್ಣೆಯು ವಶವರ್ತಿನಿಯಾಗಿ ಅತ್ಯಂತ ಪ್ರಿಯಳಾದಳು.

ತೇ ತಯಾ ತೈಶ್ಚ ಸಾ ವೀರೈಃ ಪತಿಭಿಃ ಸಹ ಪಂಚಭಿಃ |
ಬಭೂವ ಪರಮಪ್ರೀತಾ ನಾಗೈರಿವ ಸರಸ್ವತೀ ॥3॥

ಅವಳಿಂದ ಅವರು ಮತ್ತು ಆ ಐವರು ಪತಿಗಳಿಂದ ಅವಳೂ ಸಹ ಗಜಗಳಿಂದ ಸರೋವರವು ಸೇರಿದಂತೆ ಸೇರಿ, ಬಹಳ ಸಂತೋಷಗೊಂಡರು.

ವರ್ತಮಾನೇಷು ಧರ್ಮೇಣ ಪಾಂಡವೇಷು ಮಹಾತ್ಮಸು |
ನಾಮರ್ಷನ್ ಕುರವಃ ಸರ್ವೇ ಹೀನದೋಷಾನ್ ಸುಖಾನ್ವಿತಾನ್ ॥4॥

ನಿರ್ದುಷ್ಟರಾಗಿ, ಸುಖಾನ್ವಿತರಾಗಿ, ಮಹಾತ್ಮರಾದ ಪಾಂಡವರು ಧರ್ಮವನ್ನು ಆಚರಿಸುತ್ತಿರಲು ಎಲ್ಲಾ ಕುರುಗಳೂ ಸಹಿಸಲಿಲ್ಲ.

ಅಥ ದೀರ್ಘೇಣ ಕಾಲೇನ ಬ್ರಾಹ್ಮಣಸ್ಯ ವಿಶಾಂಪತೇ |

ಕಸ್ಯಚಿತ್ ತಸ್ಕರಾಃ ಕೇಚಿಜ್ಜಹ್ರುರ್ಗಾ ನೃಪಸತ್ತಮ ||5||
ರಾಜನೇ, ಎಷ್ಟೋ ಸಮಯವಾದ ಮೇಲೆ ಒಂದು ದಿನ ಕಳ್ಳರು ಒಬ್ಬ ಬ್ರಾಹ್ಮಣನ ಗೋವುಗಳನ್ನು ಕದ್ದರು.
ಹ್ರಿಯಮಾಣೇ ಧನೇ ತಸ್ಮಿನ್ ಬ್ರಾಹ್ಮಣಃ ಕ್ರೋಧಮೂರ್ಚ್ಛಿತಃ |
ಆಗಮ್ಯ ಖಾಂಡವಪ್ರಸ್ಥಮುದಕ್ರೋಶತ್ ಪಾಂಡವಾನ್ ||6||
ತನ್ನ ಧನವು ಅಪಹರಿಸಲ್ಪಡುತ್ತಿರಲು ಕ್ರೋಧಗೊಂಡ ಆ ಬ್ರಾಹ್ಮಣನು ಖಾಂಡವಪ್ರಸ್ಥಕ್ಕೆ ಬಂದು ಪಾಂಡವರ ಸಮೀಪದಲ್ಲಿ ಕೂಗಾಡಿದನು.
ಹ್ರಿಯತೇ ಗೋಧನಂ ಕ್ಷುದ್ರೈರ್ನೃಶಂಸೈರಕೃತಾತ್ಮಭಿಃ |
ಪ್ರಗೃಹ್ಯ ವೋಽಸ್ಮದ್ವಿಷಯಾದಭಿಧಾವಂತಿ ಪಾಂಡವಾಃ ||7||
ದುಷ್ಟರೂ, ಕ್ರೂರರೂ ಮತ್ತು ಅಲ್ಪರೂ ಆದ ಇವರು ನನ್ನ ಗೋಧನವನ್ನು ತೆಗೆದುಕೊಂಡು, ಈ ನಮ್ಮ ರಾಜ್ಯದಿಂದ ಹೊರಗೆ ಓಡುತ್ತಿದ್ದಾರೆ.
ಬ್ರಾಹ್ಮಣಸ್ಯಪ್ರಮತ್ತಸ್ಯ ಹವಿರ್ಧ್ವಾಂಕ್ಷೈರ್ವಿಲುಪ್ಯತೇ |
ಶಾರ್ದೂಲಸ್ಯ ಗೃಹಾಂ ಶೂನ್ಯಾಂ ನೀಚಃ ಕ್ರೋಷ್ಟಾಽಭಿಮನ್ಯತೇ ||8||
ಎಚ್ಚರಿಕೆಯಿಂದಿರುವ ಬ್ರಾಹ್ಮಣನ ಹವಿಸ್ಸನ್ನು ಕಾಗೆಗಳು ಚೆಲ್ಲಾಡುತ್ತಿವೆ. ಶೂನ್ಯವಾದ ವ್ಯಾಘ್ರದ ಗುಹೆಯಲ್ಲಿ ನೀಚವಾದ ನರಿಯು ತನ್ನದೆಂದು ಯೋಚಿಸುತ್ತಿದೆ.
ಬ್ರಾಹ್ಮಣಸ್ವೇ ಹೃತೇ ಚೋರೈರ್ಧರ್ಮಾರ್ಥೌ ಚ ವಿಲೋಪಿತೌ |
ರೋರೂಯಮಾಣೇ ಚ ಮಯಿ ಕ್ರಿಯತಾಮಸ್ತ್ರಧಾರಣಮ್ ||9||
ಚೋರರು ಬ್ರಾಹ್ಮಣಸ್ವತ್ತನ್ನು ಅಪಹರಿಸಿದರೆ ಧರ್ಮಾರ್ಥಗಳು ವಿನಾಶವನ್ನು ಹೊಂದುತ್ತವೆ. ನಾನು ಮತ್ತೆ ಮತ್ತೆ ಅಳುತ್ತಿರುವ ಈ ಸಮಯದಲ್ಲಿ ನೀವು ಶಸ್ತ್ರವನ್ನು ಧರಿಸಿ.
ವೈಶಂಪಾಯನಃ
ರೋರೂಯಮಾಣಸ್ಯಾಭ್ಯಾಶೇ ಭೃಶಂ ವಿಪ್ರಸ್ಯ ಪಾಂಡವಃ |
ತಾನಿ ವಾಕ್ಯಾನಿ ಶುಶ್ರಾವ ಕುಂತೀಪುತ್ರೋ ಧನಂಜಯಃ ||10||
ಮತ್ತೆ ಮತ್ತೆ ಅಳುತ್ತಿದ್ದ ಆ ಬ್ರಾಹ್ಮಣನ ಸಮೀಪದಲ್ಲಿದ್ದ ಕುಂತೀಪುತ್ರನಾದ ಧನಂಜಯನು ಆ ಮಾತುಗಳನ್ನು ಕೇಳಿದನು.
ಶ್ರುತ್ವಾಽರ್ಜುನೋ ಮಹಾಬಾಹುರ್ಮಾ ಭೈರಿತ್ಯಾಹ ತಂ ದ್ವಿಜಮ್ |
ಆಯುಧಾನಿ ಚ ಯತ್ರಾಸನ್ ಪಾಂಡವಾನಾಂ ಮಹಾತ್ಮನಾಮ್ ||11||
ಕೃಷ್ಣಯಾ ಸಹ ತತ್ರಾಸೀದ್ ಧರ್ಮಪುತ್ರೋ ಯುಧಿಷ್ಠಿರಃ |
ಸ ಪ್ರವೇಶಾಯ ಚಾಶಕ್ತೋ ಗಂತುಮಿಚ್ಛಂಶ್ಚ ಪಾಂಡವಃ ||12||
ಮಹಾಬಾಹುವಾದ ಅರ್ಜುನನು ಆ ಮಾತುಗಳನ್ನು ಕೇಳಿ ಬ್ರಾಹ್ಮಣನಿಗೆ ಹೆದರಬೇಡ ಎಂದು ಹೇಳಿದನು. ಮಹಾನುಭಾವರಾದ ಪಾಂಡವರ ಆಯುಧಗಳು ಇದ್ದ ಸ್ಥಳದಲ್ಲಿ ಧರ್ಮರಾಜನು ಕೃಷ್ಣೆಯ ಜೊತೆಯಲ್ಲಿ ಏಕಾಂತದಲ್ಲಿದ್ದನು. ಅರ್ಜುನನು ಒಳಗೆ ಹೋಗಬೇಕೆಂದು ಇಚ್ಛಿಸಿದರೂ, ಪ್ರವೇಶಿಸಲು ಶಕ್ತನಾಗಲಿಲ್ಲ.
ತಸ್ಯ ಚಾರ್ತಸ್ಯ ತೈರ್ವಾಕ್ಯೈಶ್ಚೋದ್ಯಮಾನಃ ಪುನಃ ಪುನಃ |
ಆಕ್ರಂದೇನ ಚ ಕೌಂತೇಯಶ್ಚಿಂತಯಾಮಾಸ ದುಃಖಿತಃ ||13||
ಆ ಬ್ರಾಹ್ಮಣನ ಆರ್ತನಾದದಿಂದಲೂ, ಆ ವಾಕ್ಯಗಳಿಂದಲೂ, ಪ್ರೇರಿತನಾದ ಅರ್ಜುನನು ದುಃಖದಿಂದ ಕೂಡಿ ಚಿಂತಿಸಿದನು.
ಹ್ರಿಯಮಾಣೇ ಧನೇ ತಸ್ಮಿನ್ ಬ್ರಾಹ್ಮಣಸ್ಯ ತಪಸ್ವಿನಃ |
ಉಪಪ್ರೇಕ್ಷಣಜೋಽಧರ್ಮಃ ಸುಮಹಾನ್ ಸ್ಯಾನ್ಮಹೀಪತೇಃ ||14||
ತಪಸ್ವಿಯಾದ ಬ್ರಾಹ್ಮಣನ ಧನವನ್ನು ಅಪಹರಿಸುತ್ತಿರುವಾಗ ಉದಾಸೀನವನ್ನು ಮಾಡಿದರೆ, ರಾಜನಿಗೆ ದೊಡ್ಡ ಅಧರ್ಮವುಂಟಾಗುತ್ತದೆ.
ಆಸ್ರುಪ್ರಮಾರ್ಜನಂ ತಸ್ಯ ಕರ್ತವ್ಯಮಿತಿ ನಿಶ್ಚಯಃ |
ಯದ್ಯಸ್ಯ ಕುರವೋ ದ್ವಾರಿ ನ ಕರೋಮ್ಯದ್ಯ ಕರ್ಷಣಮ್ ||15||
ನಾಸ್ತಿಕ್ಯಂ ಚಾಪಿ ಸರ್ವೇಷಾಮಸ್ಮಾಕಂ ಸ್ಯಾದಧರ್ಮಜಮ್ |
ಪ್ರತಿತಿಷ್ಠೇತ ಲೋಕೇಽಸ್ಮಿನ್ನಧರ್ಮಶ್ಚೈವ ನೋ ಮಹಾನ್ ||16||
ಬ್ರಾಹ್ಮಣನ ಕಣ್ಣೀರನ್ನು ಒರೆಸಬೇಕೆಂಬುದು ನಿಶ್ಚಯ. ನಮ್ಮ ಮನೆಯ ಬಾಗಿಲಿನಲ್ಲಿ ಕೇಳಿ ಬರುವ ಬ್ರಾಹ್ಮಣನ ಈ ಆರ್ತನಾದವನ್ನು ನಿವಾರಣೆ ಮಾಡದಿದ್ದರೆ, ನಮ್ಮೆಲ್ಲರಿಗೂ ಅಧರ್ಮದಿಂದ ಉಂಟಾದ ನಾಸ್ತಿಕ್ಯವು ಉಂಟಾಗುತ್ತದೆ. ಅಧರ್ಮದಿಂದ ಉಂಟಾದ ದೊಡ್ಡ ಅಪಕೀರ್ತಿಯು ಈ ಲೋಕದಲ್ಲಿ ಶಾಶ್ವತವಾಗಿ ಪ್ರತಿಷ್ಠಿತವಾಗುತ್ತದೆ.
ಅನಾಪೃಚ್ಛ್ಯೈವ ರಾಜಾನಂ ಗತೇ ಮಯಿ ನ ಸಂಶಯಃ |
ಅಜಾತಶತ್ರೋರ್ನೃಪತೇರ್ಮಮ ಚೈವಾಪ್ರಿಯಂ ಭವೇತ್ ||17||
ನಾನು ರಾಜನ ಅನುಮತಿಯನ್ನು ಪಡೆಯದೇ ಒಳಗೆ ಹೋಗಲು ಅದು ಧರ್ಮರಾಜನಿಗೂ ಮತ್ತು ನನಗೂ ಅಪ್ರಿಯವಾಗುತ್ತದೆ.
ಅನುಪ್ರವೇಶೇ ರಾಜ್ಞೋ ವಾ ವನವಾಸೋ ಭವೇನ್ಮಮ |
ಅಧರ್ಮೋ ವೈ ಮಹಾನಸ್ತು ವನೇ ವಾ ಮರಣಂ ಮಮ ||18||
ನಾನು ಒಳಗೆ ಪ್ರವೇಶಮಾಡಿದರೆ, ನನಗೆ ವನವಾಸವುಂಟಾಗುತ್ತದೆ. ದೊಡ್ಡ ಅಧರ್ಮವಾದರೂ ಆಗಲಿ, ನನಗೆ ಕಾಡಿನಲ್ಲಿ ಮರಣವೇ ಬೇಕಾದರೂ ಆಗಲಿ.

ಶರೀರಸ್ಯಾಪಿ ನಾಶಾತ್ ತು ಧರ್ಮ ಏವ ವಿಶಿಷ್ಯತೇ |
ಏವಂ ವಿನಿಶ್ಚಿತ್ಯ ತತಃ ಕುಂತೀಪುತ್ರೋ ಧನಂಜಯಃ ॥19॥
ಅನುಪ್ರವಿಶ್ಯ ರಾಜಾನಮಭಿವಾದ್ಯ ವಿನಿಃಸೃತಃ |
ಧನುರಾದಾಯ ಸಂಹೃಷ್ಟೋ ಬ್ರಾಹ್ಮಣಂ ಪ್ರತ್ಯಭಾಷತ ॥20॥
ಶರೀರದ ನಾಶಕ್ಕಿಂತಲೂ ಧರ್ಮವೇ ಶ್ರೇಷ್ಠವಾದುದು. ಕುಂತೀಪುತ್ರನಾದ ಧನಂಜಯನು ಹೀಗೆ ಆಲೋಚಿಸಿ, ಆಯುಧಾಗಾರದ ಒಳಗೆ ಹೋಗಿ ರಾಜನಿಗೆ ನಮಸ್ಕಾರವನ್ನು ಮಾಡಿ, ಧನುಸ್ಸನ್ನು ತೆಗೆದುಕೊಂಡು ಹೊರಗೆ ಬಂದು ಬ್ರಾಹ್ಮಣನನ್ನು ಕುರಿತು ಸಂತೋಷದಿಂದ ಹೀಗೆ ಹೇಳಿದನು.
ಬ್ರಾಹ್ಮಣಾಗಮ್ಯತಾಂ ಶೀಘ್ರಂ ಯಾವತ್ ಪರಧನೈಷಿಣಃ |
ನ ದೂರಾದ್ ಭವತಃ ಕ್ಷುದ್ರಾಸ್ತಾವದ್ ಗಚ್ಛಾವಹೇ ಸಹ |
ಯಾವದಾವರ್ತಯಾಮ್ಯದ್ಯ ಚೋರಹಸ್ತಾದ್ ಧನಂ ತವ ॥21॥
ಬ್ರಾಹ್ಮಣನೇ, ಬೇಗ ನನ್ನ ಜೊತೆಯಲ್ಲಿ ಬಾ. ಇನ್ನೊಬ್ಬರ ಧನವನ್ನು ಬಯಸುವ ಕ್ಷುದ್ರರು ನಿನ್ನ ಮನೆಯಿಂದ
ದೂರಹೋಗುವುದರೊಳಗೆ ನಾವು ಜೊತೆಯಲ್ಲಿ ಹೋಗೋಣ. ನಾನು ಈ ದಿನ ನಿನ್ನ ಗೋಧನವನ್ನು ಕಳ್ಳರ ಕೈಯಿಂದ ಕಸಿದು, ನಿನಗೆ ಒಪ್ಪಿಸುತ್ತೇನೆ.
ಸೋಽನುಸೃತ್ಯ ಮಹಾಬಾಹುರ್ಧನ್ವೀ ವರ್ಮೀ ರಥೀ ಧ್ವಜೀ |
ಶರೈರ್ವಿಧ್ವಸ್ಯ ತಾಂಶ್ಚೋರಾನಪಜಿತ್ಯ ಚ ತದ್ಧನಮ್ ॥22॥
ಬ್ರಾಹ್ಮಣಸ್ಯ ಉಪಾಕೃತ್ಯ ಯಶಃ ಪೀತ್ವಾ ಚ ಪಾಂಡವಃ |
ಆಜಗಾಮ ಪುರಂ ವೀರಃ ಸವ್ಯಸಾಚೀ ಪರಂತಪಃ ॥23॥
ಮಹಾಬಾಹುವಾದ ಪಾಂಡವನು ಧನುಸ್ಸನ್ನು ಹಿಡಿದು ಕವಚವನ್ನು ಧರಿಸಿ, ಧ್ವಜವುಳ್ಳ ರಥವನ್ನೇರಿ, ಕಳ್ಳರನ್ನು ಹಿಂಬಾಲಿಸಿ, ಬಾಣಗಳಿಂದ ಕಳ್ಳರನ್ನು ಧ್ವಂಸಗೊಳಿಸಿ ಬ್ರಾಹ್ಮಣನ ಧನವನ್ನು ತೆಗೆದುಕೊಂಡು ಅಪಾರವಾದ ಕೀರ್ತಿಯನ್ನು ಗಳಿಸಿ, ಬ್ರಾಹ್ಮಣನಿಗೆ ಗೋಧನವನ್ನು ಕೊಟ್ಟು, ಪರಂತಪನೂ, ಸವ್ಯಸಾಚಿಯೂ ಆದ ಆ ವೀರನು, ಇಂದ್ರಪ್ರಸ್ಥಪಟ್ಟಣಕ್ಕೆ ಹಿಂದಿರುಗಿದನು.
ಸೋಽಭಿವಾದ್ಯ ಗುರೂನ್ ಸರ್ವಾಂಸ್ತೈಶ್ಚಾಪಿ ಪ್ರತಿನಂದಿತಃ |
ಧರ್ಮರಾಜಮುವಾಚೇದಂ ವ್ರತಮಾದಿಶ್ಯತಾಂ ಮಮ ॥24॥
ಅವನು ಹಿರಿಯರಿಗೆಲ್ಲಾ ನಮಸ್ಕರಿಸಿ, ಅವರಿಂದ ಅಭಿನಂದಿತನಾಗಿ, ಧರ್ಮರಾಜನನ್ನು ಕುರಿತು, ನನಗೆ ವ್ರತವನ್ನು ಆದೇಶ ಮಾಡು ಎಂದು ಹೇಳಿದನು.
ಸಮಯಃ ಸಮತಿಕ್ರಾಂತೋ ಭವತ್ಸಂದರ್ಶನಾನ್ಮಮ |
ವನವಾಸಂ ಗಮಿಷ್ಯಾಮಿ ಸಮಯೋ ಹ್ಯೇಷ ನಃ ಕೃತಃ ॥25॥
ನಾನು ನಿಮ್ಮನ್ನು ನೋಡಿದ್ದರಿಂದ, ನಾವು ಮಾಡಿಕೊಂಡ ನಿಯಮವನ್ನು ಮುರಿದಿದ್ದೇನೆ. ನಾನು ವನವಾಸಕ್ಕೆ ಹೋಗುವೆನು. ಏಕೆಂದರೆ, ನಾವು ಹೀಗೆಯೇ ನಿಯಮವನ್ನು ಮಾಡಿದ್ದೇವಷ್ಟೇ.
ಇತ್ಯುಕ್ತೋ ಧರ್ಮರಾಜಸ್ತು ಸಹಸಾ ವಾಕ್ಯಮಬ್ರವೀತ್ |
ಕಥಮಿತ್ಯಬ್ರವೀದ್ ವಾಚಾ ಶೋಕಾರ್ತಃ ಸಜ್ಜಮಾನಯಾ ॥26॥
ಅರ್ಜುನನು ಹೀಗೆ ಹೇಳಿದಾಗ ಧರ್ಮರಾಜನು ತಕ್ಷಣದಲ್ಲಿ ಶೋಕಾರ್ತನಾಗಿ ಉಡುಗಿಹೋಗುತ್ತಿರುವ ಸ್ವರದಿಂದ ಹೇಗೆ ನಿಯಮಭಂಗವಾಯಿತು?
ಯುಧಿಷ್ಠಿರೋ ಗುಡಾಕೇಶಂ ಭ್ರಾತಾ ಭ್ರಾತರಮಬ್ರವೀತ್ |
ಪ್ರಮಾಣಮಸ್ಮಿ ಯದಿ ತೇ ಮತ್ತಃ ಶೃಣು ವಚೋ ಮಮ ॥27॥
ಅಣ್ಣನಾದ ಯುಧಿಷ್ಠಿರನು ತಮ್ಮನಾದ ಅರ್ಜುನನನ್ನು ಕುರಿತು ಹೇಳಿದನು. ನಿನಗೆ ನನ್ನ ಮಾತಿನಲ್ಲಿ ಗೌರವವಿದ್ದರೆ, ನಾನು ಹೇಳುವುದನ್ನು ಕೇಳು.
ಅನುಪ್ರವೇಶಂ ಯದ್ ವೀರ ಕೃತವಾಂಸ್ತ್ವಂ ಮಮಾಪ್ರಿಯಮ್ |
ಸರ್ವಂ ತದನುಜಾನಾಮಿ ವ್ಯಲೀಕಂ ನ ಚ ಮೇ ಹೃದಿ ॥28॥
ವೀರನೇ, ನೀನು ಮಾಡಿದ ಅನುಪ್ರವೇಶವು ನನಗೆ ಅಪ್ರಿಯವಾಗಿಲ್ಲ. ನಾನು ಅದನ್ನು ಸಮ್ಮತಿಸಿದ್ದೇನೆ. ನನ್ನ ಮನಸ್ಸಿನಲ್ಲಿ ಕಪಟವಿಲ್ಲ.
ಗುರೋರನುಪ್ರವೇಶೇನ ನೋಪಘಾತೋ ಯವೀಯಸಃ |
ಯವೀಯಸೋಽನುಪ್ರವೇಶೋ ಜ್ಯೇಷ್ಠಸ್ಯ ವಿಧಿಲೋಪಕೃತ್ ॥29॥
ಚಿಕ್ಕವರ ರಮಣಗೃಹವನ್ನು ದೊಡ್ಡವರು ಪ್ರವೇಶಿಸಿದರೆ ಚಿಕ್ಕವರಿಗೆ ಯಾವ ಧರ್ಮಲೋಪವೂ ಆಗುವುದಿಲ್ಲ. ದೊಡ್ಡವರ ರಮಣ ಗೃಹವನ್ನು ಚಿಕ್ಕವರು ಪ್ರವೇಶಿಸಿದರೆ ಮಾತ್ರ ಚಿಕ್ಕವರಿಗೆ ಧರ್ಮಲೋಪವಾಗುತ್ತದೆ.
ನಿವರ್ತಸ್ವ ಮಹಾಬಾಹೋ ಕುರುಷ್ವ ವಚನಂ ಮಮ |
ನ ಹಿ ತೇ ಧರ್ಮಲೋಪೋಽಸ್ತಿ ನ ಚ ಮೇ ಧರ್ಷಣಾ ಕೃತಾ ॥30॥
ಮಹಾಬಾಹುವೇ, ಹಿಂದಿರುಗು. ನನ್ನ ಮಾತಿನಂತೆ ನಡೆದುಕೋ. ನೀನು ನನಗೆ ಅವಮಾನವನ್ನು ಮಾಡಿಲ್ಲ. ಆದ್ದರಿಂದ ನಿನಗೆ ಯಾವ ಧರ್ಮಲೋಪವೂ ಇಲ್ಲ.
ಅರ್ಜುನಃ
ನ ವ್ಯಾಜೇನ ಚರೇದ್ ಧರ್ಮಮಿತಿ ಮೇ ಭವತಃ ಶ್ರುತಮ್ |

ನ ತಸ್ಮಾದ್ ವಿಚಲಿಷ್ಯಾಮಿ ಸತ್ಯೇನಾಯುಧಮಾಲಭೇ ॥31॥
ಒಂದು ನೆಪವನ್ನು ಹುಡುಕಿ ಧರ್ಮವನ್ನು ಆಚರಿಸಬಾರದು ಎಂದು ನಿನ್ನಿಂದಲೇ ಕೇಳಿದ್ದೇನೆ. ಆದ್ದರಿಂದ ನನ್ನ ನಿರ್ಧಾರವನ್ನು ಬದಲಿಸುವುದಿಲ್ಲ. ಆಯುಧವನ್ನು ಮುಟ್ಟಿ ಪ್ರತಿಜ್ಞೆಯನ್ನು ಮಾಡಿ ಹೇಳುತ್ತಿದ್ದೇನೆ.
ಆಜ್ಞಾ ತು ಮಮ ದಾತವ್ಯಾ ಭವತಾ ಕೀರ್ತಿವರ್ಧನ |
ಭವದಾಜ್ಞಾಮೃತೇ ಕಿಂಚಿನ್ನ ಕಾರ್ಯಮಿತಿ ನಿಶ್ಚಿತಮ್ ॥32॥
ಕೀರ್ತಿವರ್ಧನನೇ, ನನಗೆ ಅನುಮತಿಯನ್ನು ಕೊಡಬೇಕು. ನಿನ್ನ ಅನುಮತಿಯಿಲ್ಲದೆ, ನಾನು ಏನನ್ನೂ ಮಾಡತಕ್ಕುದಲ್ಲ ಎಂಬುದು ನಿಶ್ಚಿತವಾದುದು.
ವೈಶಂಪಾಯನಃ
ಸೋಽಭ್ಯನುಜ್ಞಾಪ್ಯ ರಾಜಾನಂ ಬ್ರಹ್ಮಚರ್ಯಾದಿದೀಕ್ಷಿತಃ |
ವನೇ ದ್ವಾದಶ ಮಾಸಾನ್ ಹಿ ವಾಸಾಯೋಪಜಗಾಮ ಹ ॥33॥
ಅರ್ಜುನನು ರಾಜನ ಅನುಮತಿಯನ್ನು ಪಡೆದು ಬ್ರಹ್ಮಚರ್ಯಾದಿ ವ್ರತಗಳಿಂದ ದೀಕ್ಷಿತನಾಗಿ ಕಾಡಿನಲ್ಲಿ ಹನ್ನೆರಡು ತಿಂಗಳುಗಳನ್ನು ಕಳೆಯುವುದಕ್ಕಾಗಿ ಇಂದ್ರಪ್ರಸ್ಥದಿಂದ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚದಶಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಅರ್ಜುನವನವಾಸಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಯುಧಿಷ್ಠಿರಾದ್ಯೈಃ ಸೌಹೃದಾದ್ವಾರಿತೋಽಪಿ
ಯಯೌ ಸತ್ಯಾರ್ಥಂ ಸ ಕದಾಚಿದ್ದ್ಯುನಾದ್ಯಾಂ |
ಕುರ್ವನ್ ಸ್ನಾನಂ ಮಾಯಯಾ ನಾಗವಧ್ವಾ
ಹೃತೋ ಲೋಕಂ ಭುಜಗಾನಾಂ ಕ್ಷಣೇನ ॥155॥
ಯುಧಿಷ್ಠಿರ ಮುಂತಾದವರು ಪ್ರೀತಿಯಿಂದ ಅರ್ಜುನನನ್ನು ತಡೆದರು. ಆದರೂ ಅವನು ಪ್ರತಿಜ್ಞಾಪಾಲನೆಗಾಗಿ ತೀರ್ಥಯಾತ್ರೆ ಕೈಗೊಂಡ. ಒಮ್ಮೆ ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದಾಗ ನಾಗಕನ್ಯೆ ಮಾಯೆಯಿಂದ ಕ್ಷಣದಲ್ಲಿ ಅವನನ್ನು ನಾಗಲೋಕಕ್ಕೆ ಒಯ್ದಳು.
ತಸ್ಯಾಃ ಪಿತಾ ಗರುಡೇನಾತ್ತಪತ್ಯುಃ
ಪುತ್ರಾಕಾಂಕ್ಷೀ ಚೋದಯಾಮಾಸ ಪಾರ್ಥಂ |
ಸಂವತ್ಸರ ಬ್ರಹ್ಮಚರ್ಯೇ ತು ಪಾರ್ಥೈಃ
ಕೃಷ್ಣಾಹೇತೋಃ ಸಮಯೇ ಸಾಧು ಬದ್ಧಂ ॥156॥
ನಾಗಕನ್ಯೆಯ ಪತಿಯನ್ನು ಗರುಡ ತಿಂದಿದ್ದ. ಅದರಿಂದ ಅವಳ ತಂದೆ ಅವಳಲ್ಲಿ ಒಬ್ಬ ಮಗನನ್ನು ಬಯಸಿ ಅರ್ಜುನನನ್ನು ಬೇಡಿದ. ಆದರೆ ದ್ರೌಪದಿಯ ನಿಮಿತ್ತವಾಗಿ ಪಾಂಡವರು ಅರ್ಜುನನನ್ನು ವಾರ್ಷಿಕ ಬ್ರಹ್ಮಚರ್ಯ ನಿಯಮವಲ್ಲಿ ಚೆನ್ನಾಗಿ ಬದ್ಧನನ್ನಾಗಿ ಮಾಡಿದ್ದರು.
ಪುನಃಪುನರ್ಯಾಚ್ಯಮಾನಃ ಸ ಪಾರ್ಥಃ
ಪುತ್ರಾರ್ಥಮಸ್ಯಾ ಭುಜಗೇನ ತಸ್ಯಾಂ |
ಉತ್ಪಾದಯಾಮಸ ಸುತಂ ಕುಜಾಂಶಂ
ನಾಮ್ನೇರಾವಂತಂ ವರುಣಾವೇಶಯುಕ್ತಂ ॥157॥
ಕನ್ಯೆಯಲ್ಲಿ ಪುತ್ರೋತ್ಪಾದನೆಗಾಗಿ ನಾಗ ಪುನಃ ಪುನಃ ಅರ್ಜುನನನ್ನು ಪ್ರಾರ್ಥಿಸಿದ್ದರಿಂದ ಅವನು ಅವಳಲ್ಲಿ ವರುಣಾವೇಶಯುಕ್ತ ಕುಂಜಾಂಶನಾದ ಇರಾವಾನ್ ಎಂಬ ಹೆಸರಿನ ಮಗನನ್ನು ಹುಟ್ಟಿಸಿದ.
ಗುಣಾಃ ಪಿತುರ್ಮಾತೃಜಾತಿಃ ಸುತಾನಾಂ
ಯಸ್ಮಾತ್ಸತಾಂ ಪ್ರಾಯಶಸ್ತೇನ ನಾಗಃ |
ಬಲೀ ಚ ಪಾರ್ಥಪ್ರಥಮೋದ್ಭವತ್ವಾ-
ನ್ಮಾಯವಿದಸ್ತ್ರೀ ಚ ಸುಧಾರ್ಮಿಕಶ್ಚ ॥158॥
ಮಕ್ಕಳಿಗೆ ಸಾಮಾನ್ಯವಾಗಿ ತಂದೆಯ ಗುಣಗಳೂ ತಾಯಿಯ ಜಾತಿಯೂ ಬರುತ್ತದೆ. ಅದರಿಂದ ಇರುವಾನ್ ನಾಗನಾಗಿಯೆ ಹುಟ್ಟಿದ. ಅರ್ಜುನನಿಂದ ಮೊದಲ ಬಾರಿಗೆ ಹುಟ್ಟಿದ ಮಗನಾದ್ದರಿಂದ ಬಲಿಷ್ಠನಾಗಿದ್ದ. ಮಾಯಾವಿಯೂ ಅಸ್ತ್ರಕೋವಿದನೂ ಒಳ್ಳೆಯ ಧಾರ್ಮಿಕನೂ ಆಗಿದ್ದ.
* * * *
ಇನ್ನೂರ ಹದಿನಾರನೆಯ ಅಧ್ಯಾಯ
(ಅರ್ಜುನನ ತೀರ್ಥಯಾತ್ರೆ, ಉಲೂಪಿಯಿಂದ ಅರ್ಜುನನ ಹರಣ, ನಾಗಲೋಕ ಪ್ರಾಪ್ತಿ, ಇರಾವಂತನ ಉತ್ಪತ್ತಿ.)
ವೈಶಂಪಾಯನಃ
ತಂ ಪ್ರಯಾಂತಂ ಮಹಾತ್ಮಾನಂ ಕೌರವಾಣಾಂ ಯಶಸ್ಕರಮ್ |
ಅನುಜಗ್ಮುರ್ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ॥1॥

ಕೌರವರ ಕೀರ್ತಿವರ್ಧನನಾದ, ಮಹಾನುಭಾವನಾದ ಅರ್ಜುನನು  ಹೊರಡುತ್ತಿರುವಂತೆ, ಮಹಾತ್ಮರೂ ವೇದಪಾರಂಗತರೂ ಆದ ಬ್ರಾಹ್ಮಣರು ಅವನನ್ನು ಹಿಂಬಾಲಿಸಿದರು.
ವೇದವೇದಾಂಗವಿದ್ವಾಂಸಸ್ತಥೈವಾಧ್ಯಾತ್ಮಚಿಂತಕಾಃ |
ಔಕ್ಷ್ಣಾಶ್ಚ ಭಗವದ್ಭಕ್ತಾ ದೂತಾಃ ಪೌರಾಣಿಕಾಶ್ಚ ಯೇ ||2||
ವೇದವೇದಾಂಗ ವಿದ್ವಾಂಸರೂ, ಆಧ್ಯಾತ್ಮಚಿಂತಕರೂ, ಸ್ನಾನಶೀಲರೂ, ಪೌರಾಣಿಕರೂ, ಭಗವದ್ಭಕ್ತರೂ (ಎಲ್ಲರೂ ಹಿಂಬಾಲಿಸಿದರು).
(ಔಕ್ಷ್ಣಾಃ= ವಾಗತಿಗಂಧನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ. ನಿರಂತರಗಮನಶೀಲಗಳಾದ ನದಿಗಳಲ್ಲಿ ಸ್ನಾನವು ಯಾರಿಗೋ ಅವರು ಔಕ್ಷರು. ಶುದ್ಧವಾದ ಅಂತಃಕರಣವುಳ್ಳವರು ಎಂದರ್ಥ.
ಕಥಕಾಶ್ಚಾಪರೇ ರಾಜನ್ ರಮಣಾಶ್ಚ ವನೌಕಸಃ |
ದಿವ್ಯಾಖ್ಯಾನಾನಿ ಯೇ ಚಾಪಿ ಪಠಂತಿ ಮಧುರಂ ದ್ವಿಜಾಃ ||3||
ರಾಜನ್, ಕಥೆಗಳನ್ನು ಹೇಳುವವರೂ, ವಿನೋದವನ್ನು ಮಾಡುವವರೂ, ವನವಾಸಿಗಳೂ, ದಿವ್ಯಾಖ್ಯಾನಗಳನ್ನು ಮಧುರವಾಗಿ ಹೇಳುವ ಬ್ರಾಹ್ಮಣರೂ (ಜೊತೆಯಲ್ಲಿ ಹೊರಟರು).
ಏತೈಶ್ಚಾನ್ಯೈಶ್ಚ ಬಹುಭಿಃ ಸಹಾಯೈಃ ಪಾಂಡುನಂದನಃ |
ವೃತಃ ಶ್ಲಕ್ಷ್ಣಜನ್ಯೈಃ ಪ್ರಾಯಾದ್ ಮರುದ್ಭಿರಿವ ವಾಸವಃ ||4||
ಪಾಂಡುನಂದನನಾದ ಅರ್ಜುನನು ಇವರಿಂದಲೂ ಮತ್ತು ಇನ್ನೂ ಅನೇಕ ಸಹಾಯಭೂತರಾದ ಶಿಷ್ಟಜನರಿಂದಲೂ ಪರಿವೃತನಾಗಿ ಇಂದ್ರನು ಮರುದ್ಗಣದ ಜೊತೆಯಲ್ಲಿ ಹೊರಟಂತೆ ಪ್ರಯಾಣ ಮಾಡಿದನು.
ರಮಣೀಯಾನಿ ಚಿತ್ರಾಣಿ ವನಾನಿ ಚ ಸರಾಂಸಿ ಚ |
ಸರಿತಃ ಸಾಗರಾಂಶ್ಚೈವ ದೇಶಾನಪಿ ಚ ಭಾರತ ||5||
ಪುಣ್ಯಾನ್ಯಪಿ ಚ ತೀರ್ಥಾನಿ ದದರ್ಶ ಭರತರ್ಷಭಃ |
ಸ ಗಂಗಾದ್ವಾರಮಾಸಾದ್ಯ ನಿವೇಶಮಕರೋತ್ ಪ್ರಭುಃ ||6||
ಎಲೈ ಭಾರತನೇ, ಭರತರ್ಷಭನಾದ ಅವನು ರಮಣೀಯವಾದ ಮತ್ತು ವಿಚಿತ್ರವಾದ ಕಾಡುಗಳನ್ನೂ, ಸರೋವರಗಳನ್ನೂ, ನದಿಗಳನ್ನೂ, ಸಾಗರಗಳನ್ನೂ, ದೇಶಗಳನ್ನೂ, ಪವಿತ್ರತೀರ್ಥಗಳನ್ನೂ ನೋಡುತ್ತಾ ಗಂಗಾದ್ವಾರಕ್ಕೆ ಬಂದು ಅಲ್ಲಿ ಸಮರ್ಥನಾದ ಅವನು ವಾಸವನ್ನು ಮಾಡಿದನು.
ತಸ್ಯ ತತ್ರಾದ್ಭುತಂ ಕರ್ಮ ಶೃಣು ತ್ವಂ ಜನಮೇಜಯ |
ಕೃತವಾನ್ ಯದ್ ವಿಶುದ್ಧಾತ್ಮಾ ಪಾಂಡೂನಾಂ ಪ್ರವರೋ ರಥೀ ||7||
ಜನಮೇಜಯನೇ, ಪಾಂಡವರಲ್ಲಿ ಶ್ರೇಷ್ಠನಾದ ವಿಶುದ್ಧಾತ್ಮನೂ ರಥಿಯೂ ಆದ ಅರ್ಜುನನು ಅಲ್ಲಿ ಮಾಡಿದ ಅದ್ಭುತಕರ್ಮವನ್ನು ಹೇಳುತ್ತೇನೆ, ಕೇಳು.
ನಿವಿಷ್ಟೇ ತತ್ರ ಕೌಂತೇಯೇ ಬ್ರಾಹ್ಮಣೈಃ ಸಹ ಭಾರತ |
ಅಗ್ನಿಹೋತ್ರಾಣಿ ವಿಪ್ರಾಸ್ತೇ ಪ್ರಾದುಶ್ಚಕ್ರುರನೇಕಶಃ ||8||
ಭಾರತನೇ, ಅರ್ಜುನನು ಅಲ್ಲಿ ಬ್ರಾಹ್ಮಣರ ಜೊತೆಯಲ್ಲಿ ಬೀಡು ಬಿಡುತ್ತಿರಲು, ಬ್ರಾಹ್ಮಣರು ಅನೇಕ ಸಂಖ್ಯೆಯಲ್ಲಿ ಅಗ್ನಿಹೋತ್ರಗಳನ್ನು ಮಾಡಿದರು.
ತೇಷು ಪ್ರಬೋಧ್ಯಮಾನೇಷು ಜ್ವಲಿತೇ ಚ ಹುತಾಶನೇ |
ಕೃತಪುಷ್ಪೋಪಹಾರೇಷು ತೀರಾಂತರಗತೇಷು ಚ ||9||
ಕೃತಾಭಿಷೇಕೈರ್ವಿದ್ವದ್ಭಿರ್ನಿಯತೈಃ ಸತ್ಪಥೇ ಸ್ಥಿತೈಃ |
ಶುಶುಭೇಽತೀವ ತದ್ ರಾಜನ್ ಗಂಗಾದ್ವಾರಂ ಮಹಾತ್ಮಭಿಃ ||10||
ಅವರು ಅರಣಿನಿರ್ಮಥನವನ್ನು ಮಾಡಿ, ಹುತಾಶನನನ್ನು ಜ್ವಲಿಸುವಂತೆ ಮಾಡಿ, ಆ ಗಂಗಾತೀರದಲ್ಲಿ ಪುಷ್ಪಗಳಿಂದ ಪೂಜಿಸಿದರು. ರಾಜನ್, ಆ ಗಂಗಾದ್ವಾರವು ಸನ್ಮಾರ್ಗದಲ್ಲಿರುವ ನಿಯಮಶೀಲರಾದ, ಸ್ನಾನವನ್ನು ಮಾಡಿದ ಮಹಾನುಭಾವರಾದ, ಅನೇಕ ವಿದ್ವಾಂಸರಿಂದ ಬಹಳವಾಗಿ ಶೋಭಿಸಿತು.
ಅಥ ಪರ್ಯಾಕುಲೇ ತಸ್ಮಿನ್ ನಿವೇಶೇ ಪಾಂಡವರ್ಷಭಃ |
ಅಭಿಷೇಕಾಯ ಕೌಂತೇಯೋ ಗಂಗಾಮವತತಾರ ಹ ||11||
ಪಾಂಡವಶ್ರೇಷ್ಠನಾದ ಅರ್ಜುನನು, ಜನನಿಬಿಡವಾದ ಆ ಪ್ರದೇಶದಲ್ಲಿ ಸ್ನಾನವನ್ನು ಮಾಡಲು ಗಂಗೆಯಲ್ಲಿ ಇಳಿದನು.
ತತ್ರಾಭಿಷೇಕಂ ಕೃತ್ವಾ ಸ ತರ್ಪಯಿತ್ವಾ ಪಿತಾಮಹಾನ್ |
ಉತ್ತಿತೀರ್ಷುರ್ಜಲಾದ್ ರಾಜನ್ನಗ್ನಿಕಾರ್ಯಚಿಕೀರ್ಷಯಾ ||12||
ಅಪಕೃಷ್ಟೋ ಮಹಾಬಾಹುರ್ನಾಗರಾಜಸ್ಯ ಕನ್ಯಯಾ |
ಅಂತರ್ಜಲೇ ಮಹಾಬಾಹುರುಲೂಪ್ಯಾ ಕಾಮಯಾನಯಾ ||13||
ಅರ್ಜುನನು ಅಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು, ಅಗ್ನಿಕಾರ್ಯವನ್ನು ಮಾಡುವ ಉದ್ದೇಶದಿಂದ ದಡಕ್ಕೆ ಪ್ರಯತ್ನಿಸುತ್ತಿರಲು, ನಾಗರಾಜಕನ್ನಿಕೆಯಾದ ಉಲೂಪಿಯು ಅವನನ್ನು ಕಾಮಿಸಿ, ಮಹಾಬಾಹುವಾದ ಅವನನ್ನು ನೀರಿನೊಳಗೆ ಎಳೆದಳು.
ದದರ್ಶ ಪಾಂಡವಸ್ತತ್ರ ಪಾವಕಂ ಸುಸಮಾಹಿತಃ |
ಕೌರವ್ಯಸ್ಯಾಥ ನಾಗಸ್ಯ ಭವನೇ ಪರಮಾರ್ಚಿತೇ ||14||
ಸಮಾಧಾನದಿಂದ ಕೂಡಿದ ಅರ್ಜುನನು ಅಲ್ಲಿಂದ ನಾಗರಾಜನಾದ ಧೃತರಾಷ್ಟ್ರನ ವೈಭವಯುಕ್ತವಾದ ಮನೆಗೆ ಹೋಗಿ ಅಲ್ಲಿ

ಜ್ವಲಿಸುತ್ತಿದ್ದ ಅಗ್ನಿಯನ್ನು ನೋಡಿದನು.
ತತ್ರಾಗ್ನಿಕಾರ್ಯಂ ಕೃತವಾನ್ ಕುಂತೀಪುತ್ರೋ ಧನಂಜಯಃ |
ಅಶಂಕಮಾನೇನ ಹುತಸ್ತೇನಾತುಷ್ಯದ್ ಹುತಾಶನಃ ॥15॥
ಕುಂತೀಪುತ್ರನಾದ ಧನಂಜಯನು ಅಲ್ಲಿ ಯಾವ ಶಂಕೆಯೂ ಇಲ್ಲದೆ ಅಗ್ನಿಕಾರ್ಯವನ್ನು ಮಾಡಿದನು. ಅದರಿಂದ ಅಗ್ನಿಯು ಪ್ರೀತನಾದನು.
ಅಗ್ನಿಕಾರ್ಯಂ ಸ ಕೃತ್ವಾ ತು ನಾಗರಾಜಸುತಾಂ ತದಾ |
ಪ್ರಹಸನ್ನಿವ ಕೌಂತೇಯ ಇದಂ ವಚನಮಬ್ರವೀತ್ ॥16॥
ಅಗ್ನಿಕಾರ್ಯವನ್ನು ಮುಗಿಸಿದ ಅರ್ಜುನನು ನಗುತ್ತಾ ಆ ನಾಗರಾಜಕನ್ನಿಕೆಯನ್ನು ಕುರಿತು ಈ ಮಾತನ್ನಾಡಿದನು.
ಕಿಮಿದಂ ಸಾಹಸಂ ಭೀರು ಕೃತವತ್ಯಸಿ ಭಾಮಿನಿ |
ಕಸ್ಯಾಯಂ ಸುಭಗೇ ದೇಶಃ ಕಾ ಚ ತ್ವಂ ಕಸ್ಯ ಚಾತ್ಮಜಾ ॥17॥
ಭೀರುವೇ ಮತ್ತು ಭಾಮಿನಿಯೇ, ಎಂತಹ ಸಾಹಸಕಾರ್ಯವನ್ನು ಮಾಡಿದೆ. ಸುಂದರಿಯೇ, ಈ ದೇಶವು ಯಾರದ್ದು? ನೀನು ಯಾರು? ಮತ್ತು ಯಾರ ಮಗಳು?
ಉಲೂಪೀ
ಐರಾವತಕುಲೇ ಜಾತಃ ಕೌರವ್ಯೋ ನಾಮ ಪನ್ನಗಃ |
ತಸ್ಯಾಹಂ ದುಹಿತಾ ಪಾರ್ಥ ಉಲೂಪೀ ನಾಮ ಪನ್ನಗೀ ॥18॥
ಐರಾವತಸರ್ಪದ ಕುಲದಲ್ಲಿ ಧೃತರಾಷ್ಟ್ರನೆಂಬ ಸರ್ಪವು ಜನಿಸಿದನು. ಅರ್ಜುನನೇ, ನಾನು ಅವನ ಮಗಳು. ನನ್ನ ಹೆಸರು ಉಲೂಪಿ. ನಾನು ಸರ್ಪಕನ್ನಿಕೆ.
ಸಾಽಹಂ ತ್ವಾಮಭಿಷೇಕಾರ್ಥಮವತೀರ್ಣಂ ಸರಿದ್ವರಾಮ್ |
ದೃಷ್ಟವತ್ಯೇವ ಕೌಂತೇಯ ಕಂದರ್ಪೇಣಾಸ್ಮಿ ಮೂರ್ಚ್ಛಿತಾ ॥19॥
ಕೌಂತೇಯನೇ, ಅಂತಹ ನಾನು ನೀನು ಸ್ನಾನಕ್ಕಾಗಿ ಗಂಗಾನದಿಯಲ್ಲಿ ಇಳಿದುದನ್ನು ನೋಡಿ, ನಿನ್ನ ದರ್ಶನಮಾತ್ರದಿಂದಲೇ ಕಾಮಕ್ಕೆ ಒಳಗಾಗಿ ಮೋಹಿತಳಾಗಿದ್ದೇನೆ.
ತಾಂ ಮಾಮನಂಗಮಥಿತಾಂ ತ್ವತ್ಕೃತೇ ಕುರುನಂದನ |
ಅನನ್ಯಾಂ ನಂದಯಸ್ವಾದ್ಯ ಪ್ರದಾನೇನಾತ್ಮನೋ ರಹಃ ॥20॥
ಕುರುನಂದನನೇ, ನಿನ್ನ ಸಲುವಾಗಿ ಮನ್ಮಥನ ಪೀಡೆಗೆ ಒಳಗಾದ, ನಿನ್ನಲ್ಲಿಯೇ ಮನಸ್ಸನ್ನು ಇಟ್ಟಿರುವ ನನ್ನನ್ನು ಏಕಾಂತದಲ್ಲಿ ನಿನ್ನ ಶರೀರವನ್ನು ದಾನಮಾಡಿ ಸಂತೋಷಪಡಿಸು.
ಅರ್ಜುನಃ
ಬ್ರಹ್ಮಚರ್ಯಮಿದಂ ಭದ್ರೇ ಮಮ ದ್ವಾದಶಮಾಸಿಕಮ್ |
ಧರ್ಮರಾಜೇನ ಚಾದಿಷ್ಟೋ ನಾಹಮಸ್ಮಿ ಸ್ವಯಂ ವಶಃ ॥21॥
ಭದ್ರೇ, ನಾನು ಹನ್ನೆರಡು ತಿಂಗಳುಕಾಲದ ಬ್ರಹ್ಮಚರ್ಯವ್ರತದಲ್ಲಿದ್ದೇನೆ. ಅದು ಧರ್ಮರಾಜನ ಆದೇಶ. ನಾನು ಸ್ವತಂತ್ರನಲ್ಲ.
ತವ ಚಾಪಿ ಪ್ರಿಯಂ ಕರ್ತುಮಿಚ್ಛಾಮಿ ಜಲಚಾರಿಣಿ |
ಅನೃತಂ ನೋಕ್ತಪೂರ್ವಂ ಚ ಮಯಾ ಕಿಂಚನ ಕರ್ಹಿ ಚಿತ್ ॥22॥
ಜಲಚರರೇ, ನಿನಗೂ ನಾನು ಪ್ರಿಯವನ್ನು ಮಾಡಲು ಬಯಸುತ್ತೇನೆ. ನಾನು ಹಿಂದೆ ಯಾವ ಕಾರಣದಿಂದಲೂ ಸುಳ್ಳು ಮಾತನಾಡಿಲ್ಲ. (ಅಸಂತೋಷಕರವಾದ ಮಾತನ್ನು ಆಡಿಲ್ಲ)
ಕಥಂಚಿನ್ನಾನೃತಂ ತಸ್ಯ ತವ ಚೈವ ಪ್ರಿಯಂ ಭವೇತ್ |
ನ ಹಿ ಪೀಡ್ಯೇತ ಮೇ ಧರ್ಮಸ್ತಥಾ ಕುರು ಭುಜಂಗಮೇ ॥23॥
ಭುಜಂಗಮೆಯೇ, ಧರ್ಮರಾಜನ ಮಾತು ಸುಳ್ಳಾಗದಂತೆ, ನಿನಗೂ ಪ್ರಿಯವಾಗುವಂತೆ, ನನ್ನ ಧರ್ಮವೂ ನಾಶವಾಗದಂತೆ ಏನು ಮಾಡಬಹುದೋ ಅದನ್ನು ಮಾಡು.
ಉಲೂಪೀ
ಜಾನಾಮ್ಯಹಂ ಕೌರವೇಯ ಯಥಾ ಚರಸಿ ಮೇದಿನೀಮ್ |
ಯಥಾ ಹಿ ತೇ ಬ್ರಹ್ಮಚರ್ಯಮಿತಿ ವಃ ಸಮಯಃ ಕೃತಃ ॥24॥
ಕೌರವೇಯನೇ, ನಾನು ನೀನು ಹೇಗೆ ಭೂಮಿಯನ್ನು ಸಂಚರಿಸುತ್ತಿದ್ದೀಯೇ, ನಿನಗೆ ಹೇಗೆ ಬ್ರಹ್ಮಚರ್ಯವು ಬಂದಿತು, ಹೇಗೆ ನೀವು ನಿಯಮವನ್ನು ಮಾಡಿಕೊಂಡಿರಿ ಎಲ್ಲವನ್ನೂ ತಿಳಿದಿದ್ದೇನೆ.
ತಥಾಹಿ ತೇ ಬ್ರಹ್ಮಚರ್ಯಮಿದಮಾದಿಷ್ಟವಾನ್ ಗುರುಃ |
ಪರಸ್ಪರಂ ವರ್ತಮಾನಾನ್ ದ್ರುಪದಸ್ಯ ಸುತಾಂ ಪ್ರತಿ ॥25॥
ಯೋ ನೋಽನುಪ್ರವಿಶೇನ್ಮೋಹಾತ್ ಸ ನೋ ದ್ವಾದಶಮಾಸಿಕಮ್|
ವನೇ ಚರೇದ್ ಬ್ರಹ್ಮಚರ್ಯಮಿತಿ ವಃ ಸಮಯಃ ಕೃತಃ ॥26॥
ದ್ರೌಪದಿಯ ಜೊತೆಯಲ್ಲಿ ಐವರಲ್ಲಿ ಯಾರಾದರೂ ಏಕಾಂತದಲ್ಲಿದ್ದಾಗ, ಇನ್ನೊಬ್ಬನು ಮೋಹದಿಂದ ಪ್ರವೇಶಮಾಡಿದರೆ, ಅವನು ಹನ್ನೆರಡು ತಿಂಗಲುಗಳ ಕಾಲ ಬ್ರಹ್ಮಚರ್ಯವನ್ನು ಧರಿಸಿ ವನವಾಸವನ್ನು ಮಾಡಬೇಕೆಂಬ ನಿಮ್ಮ ನಿಯಮವನ್ನು ಹಿರಿಯನಾದ ಧರ್ಮರಾಜನು ಹೇಳಿದನಷ್ಟೇ.
ತದಿದಂ ದ್ರೌಪದೀಹೇತೋರನ್ಯೋನ್ಯಸ್ಯ ಪ್ರವಾಸನಮ್ |

ಕೃತವಾಂಸ್ತತ್ರ ಧರ್ಮಾರ್ಥಮತ್ರ ಧರ್ಮೋ ನ ಲುಪ್ಯತೇ ॥27॥
ದ್ರೌಪದಿಯ ಸಲುವಾಗಿ ಈ ಪರಸ್ಪರ ಬ್ರಹ್ಮಚರ್ಯ ಮತ್ತು ವನವಾಸದ ನಿಯಮವು ಧರ್ಮದ ಉದ್ದೇಶದಿಂದ ಮನುಷ್ಯಲೋಕದಲ್ಲಿ ಮಾಡಲ್ಪಟ್ಟಿತು. ಆ ನಿಯಮವು ಈ ನಾಗಲೋಕದಲ್ಲಿ ಅನ್ವಯಿಸುವುದಿಲ್ಲ. (ನನ್ನ ಸ್ವೀಕಾರದಿಂದ ನಿನಗೆ ಧರ್ಮಹಾನಿಯಾಗುವುದಿಲ್ಲ)
ಪರಿತ್ರಾಣಂ ಚ ಕರ್ತವ್ಯಮಾರ್ತಾನಾಂ ಪೃಥುಲೋಚನ |
ಕೃತ್ವಾ ಮಮ ಪರಿತ್ರಾಣಂ ತವ ಧರ್ಮೋ ನ ಲುಪ್ಯತೇ ॥28॥
ವಿಸ್ತಾರನೇತ್ರವುಳ್ಳವನೇ, ಆರ್ತಪರಿತ್ರಾಣವನ್ನು ಮಾಡಬೇಕಷ್ಟೆ? ಆರ್ತಳಾದ ನನ್ನ ಪರಿತ್ರಾಣವನ್ನು ಮಾಡಿದರೆ ನಿನಗೆ ಧರ್ಮಲೋಪವಾಗುವುದಿಲ್ಲ.
ತ್ವಯಾ ಕಾಮಪ್ರಚಾರಾಯ ಪ್ರೇರಿತಂ ನ ಹಿ ಯನ್ಮನಃ |
ತಸ್ಮಾತ್ ತವ ಪ್ರತ್ಯವಾಯೋ ಯುಜ್ಯತೇ ನ ಹಿ ಕುತ್ರಚಿತ್ ॥29॥
ನೀನು ಸ್ವತಃ ಕಾಮಕ್ಕೆ ವಶನಾಗಿ ಮುಂದುವರಿಯುತ್ತಿಲ್ಲವಾದ ಕಾರಣ, ನಿನಗೆ ಯಾವ ಪ್ರತ್ಯವಾಯವೂ ಉಂಟಾಗುವುದಿಲ್ಲ.
ಯದಿ ವಾಽಪ್ಯಸ್ಯ ಧರ್ಮಸ್ಯ ಸೂಕ್ಷ್ಮೋಽಪಿ ಸ್ಯಾದ್ ವ್ಯತಿಕ್ರಮಃ |
ಸ ಚ ತೇ ಧರ್ಮ ಏವ ಸ್ಯಾದ್ ದತ್ವಾ ಪ್ರಾಣಾನ್ ಮಮಾರ್ಜುನ ॥
ಅರ್ಜುನನೇ, ಒಂದು ಪಕ್ಷ ನಿನ್ನ ಧರ್ಮಕ್ಕೆ ಸೂಕ್ಷ್ಮಾತಿಸೂಕ್ಷ್ಮವಾದ ವ್ಯತ್ಯಾಸವಾದರೂ ನನಗೆ ಪ್ರಾಣದಾನವನ್ನು ಮಾಡುವ ಕಾರಣದಿಂದ ನಿನಗೆ ಅದು ಧರ್ಮವೇ ಆಗುತ್ತದೆ.
ಭಕ್ತಾಂ ಭಜಸ್ವ ಮಾಂ ಪಾರ್ಥ ಸತಾಮೇತನ್ಮತಂ ಪ್ರಭೋ |
ನ ಕರಿಷ್ಯಸಿ ಚೇದೇವಂ ಮೃತಾಂ ಮಾಮುಪಧಾರಯ ॥31॥
ಪಾರ್ಥನೇ, ಅನುರಕ್ತಳಾದ ನನ್ನನ್ನು ಸ್ವೀಕರಿಸು. ಪ್ರಭುವೇ, ಇದು ಸಜ್ಜನರಿಗೆ ಸಮ್ಮತವಾದದ್ದು. ನೀನು ಹಾಗೆ ಮಾಡದಿದ್ದರೆ, ನಾನು ಮೃತಳಾದೆ ಎಂದು ತಿಳಿ.
ಪ್ರಾಣದಾನಾನ್ಮಹಾಬಾಹೋ ವರಂ ಧರ್ಮಮನುತ್ತಮಮ್ |
ಶರಣಂ ಚ ಪ್ರಪನ್ನಾಽಸ್ಮಿ ತ್ವಾಮದ್ಯ ಪುರುಷೋತ್ತಮ ॥32॥
ಮಹಾಬಾಹುವೇ, ಪ್ರಾಣದಾನವನ್ನು ಮಾಡಿ ಶ್ರೇಷ್ಠವಾದ ಧರ್ಮವನ್ನು ಗಳಿಸು. ಪುರುಷೋತ್ತಮನೇ, ಈ ದಿನ ನಾನು ನಿನಗೆ ಶರಣಾಗತಳಾಗಿದ್ದೇನೆ.
ದೀನಾನಾಥಾಂಶ್ಚ ಕೌಂತೇಯ ಪರಿರಕ್ಷಸಿ ನಿತ್ಯಶಃ |
ಸಾಽಹಂ ಶರಣಮಭ್ಯೇಮಿ ರೋರವೀಮಿ ಚ ದುಃಖಿತಾ ॥33॥
ಕೌಂತೇಯನೇ, ನೀನು ಯಾವಾಗಲೂ ದೀನರನ್ನೂ ಮತ್ತು ಅನಾಥರನ್ನೂ ರಕ್ಷಿಸುತ್ತೀಯೆ. ನಾನು ನಿನಗೆ ಶರಣಾಗತಳಾಗಿ ದುಃಖದಿಂದ ಮತ್ತೆ ಮತ್ತೆ ಅಳುತ್ತಿದ್ದೇನೆ.
ಯಾಚೇ ತ್ವಾಮಭಿಕಾಮಾಽಹಂ ತಸ್ಮಾತ್ ಕುರು ಮಮ ಪ್ರಿಯಮ್ |
ಸ್ಪೃಷ್ಟ್ವೈವಾತ್ಮಪ್ರದಾನೇನ ಸಕಾಮಾಂ ಕರ್ತುಮರ್ಹಸಿ ॥34॥
ನಾನು ನಿನ್ನನ್ನು ಬೇಡುತ್ತಿದ್ದೇನೆ. ನಿನ್ನಲ್ಲಿ ಬಹಳವಾದ ಕಾಮವನ್ನು ಹೊಂದಿದ್ದೇನೆ. ಆದ್ದರಿಂದ ನನಗೆ ಪ್ರಿಯವನ್ನು ಮಾಡು. ಶರೀರದಾನವನ್ನು ಮಾಡಿ ನನ್ನನ್ನು ಸ್ಪರ್ಶಿಸಿ, ನನ್ನ ಆಸೆಯನ್ನು ನೆರವೇರಿಸಬೇಕು.
ವೈಶಂಪಾಯನಃ
ಏವಮುಕ್ತಸ್ತು ಕೌಂತೇಯಃ ಪನ್ನಗೇಶ್ವರಕನ್ಯಯಾ |
ಕೃತವಾಂಸ್ತತ್ ತಥಾ ಸರ್ವಂ ಧರ್ಮಮುದ್ದಿಶ್ಯ ಕಾರಣಮ್ ॥35॥
ನಾಗರಾಜಕನ್ಯೆಯು ಹೀಗೆ ಹೇಳುತ್ತಿರಲು ಕುಂತೀಪುತ್ರನಾದ ಅರ್ಜುನನು, ಧರ್ಮದ ದೃಷ್ಟಿಯಿಂದಲೇ ಅವಳು ಹೇಳಿದಂತೆ ಮಾಡಿದನು.
ಸ ನಾಗಭವನೇ ರಾತ್ರಿಮುಷಿತ್ವಾ ತಾಂ ಪ್ರತಾಪವಾನ್ |
ಪುತ್ರಮುತ್ಪಾದಯಾಮಾಸ ಸ ತಸ್ಯಾಂ ಸುಮನೋಹರಮ್ |
ಇರಾವಂತಂ ಮಹಾಬಾಹುಂ ಮಹಾಬಲಪರಾಕ್ರಮಮ್ ॥36॥
ಪ್ರತಾಪಶಾಲಿಯಾದ ಅವನು, ಆ ರಾತ್ರಿಯ ನಾಗರಾಜಭವನದಲ್ಲಿ ವಾಸಮಾಡಿ ಅವಳಲ್ಲಿ ಮಹಾಬಾಹುವೂ, ಮಹಾಬಲಪರಾಕ್ರಮವನ್ನು ಹೊಂದಿದಂತಹ, ಸುಂದರನಾದ ಇರಾವಂತನೆಂಬ ಮಗನನ್ನು ಉತ್ಪಾದಿಸಿದನು.
ವಿಮಲೇಽಭ್ಯುದಿತೇ ಸೂರ್ಯೇ ಕೌರವ್ಯಸ್ಯ ನಿವೇಶನಾತ್ |
ನಿಶ್ಚಕ್ರಾಮ ತದಾ ಪಾರ್ಥಃ ಶುಭಂ ಭವನಮುತ್ತಮಮ್ ॥37॥
ನಿರ್ಮಲವಾದ ಸೂರ್ಯೋದಯವಾಗುತ್ತಿರಲು, ಅರ್ಜುನನು ಧೃತರಾಷ್ಟ್ರನ ನಿವೇಶನದಿಂದ ಹೊರಟು ತನ್ನ ಶ್ರೇಷ್ಠವೂ ಮತ್ತು ಪವಿತ್ರವೂ ಆದ ಮನೆಗೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಷೋಡಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಅರ್ಜುನವನವಾಸಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ತತೋ ಯಯಾವರ್ಜುನಸ್ತೀರ್ಥಯಾತ್ರಾ-
ಕ್ರಮೇಣ ಪಾಂಡ್ಯಾಂಸ್ತನಯೋಽಸ್ಯ ಮಾತ್ರಾ |
ಸಹ ತ್ಯಕ್ತೋ ಭುಜಗೈರ್ದೇವಲೋಕೇ
ಸಂಪೂಜಿತೋ ನ್ಯವಸದ್ ದೈವತೈಶ್ಚ ॥159॥
ಅಲ್ಲಿಂದ ಅರ್ಜುನ ತೀರ್ಥಯಾತ್ರಾ ಕ್ರಮದಿಂದ ಪಾಂಡ್ಯದೇಶಕ್ಕೆ ಹೊರಟು ಹೋದ. ನಾಗರು ಅರ್ಜುನನ ಮಗನನ್ನು ತಾಯಿಸಮೇತ ಬಹಿಷ್ಕರಿಸಿಬಿಟ್ಟರು. ಅವನು ದೇವಲೋಕದಲ್ಲಿ ಸತ್ಕೃತನಾಗಿ ಅಲ್ಲಿ ದೇವತೆಗಳೊಂದಿಗೇ ವಾಸ ಮಾಡಿದ.
ಸತ್ಯಾತ್ಯಯಾನ್ನೈವ ದೋಷೋರ್ಜುನಸ್ಯ
ತೇಜೀಯಸಶ್ಚಿಂತನೀಯಃ ಕಥಂಚಿತ್ |
ಶ್ರೇಷ್ಠಾಪರಾಧಾನ್ನನ್ಯದೋಷಸ್ಯ ಲೇಪ-
ಸ್ತೇಜೀಯಸಾಂ ನಿರ್ಣಯೋಽಯಂ ಹಿ ಶಾಸ್ತ್ರೇ ॥160॥
ಪ್ರತಿಜ್ಞಾಭಂಗ ಮಾಡಿದ ಪ್ರಯುಕ್ತ ಮಹಾಜ್ಞಾನಿಯಾದ ಅರ್ಜುನನಿಗೆ ಪಾಪ ಬಂದಿತೆಂದು ಯಾವ ರೀತಿಯಿಂದಲೂ ತಿಳಿಯಬಾರದು. ಏಕೆಂದರೆ ಮಹಾಜ್ಞಾನಿಗಳಿಗೆ ಸ್ವೋತ್ತಮಾಪರಾಧಕ್ಕಿಂತ ಬೇರೆ ಪಾಪ ಲೇಪವಾಗುವುದಿಲ್ಲ. ಇದು ಶಾಸ್ತ್ರಗಳಲ್ಲಿರುವ ನಿರ್ಣಯ.
ಅತಿಸ್ನೇಹಾಚ್ಚಾಗ್ರಜಾಭ್ಯಾಂ ತದಸ್ಯ
ಕ್ಷಾಂತಂ ಸುತಾ ಪಾಂಡ್ಯರಾಜೇನ ದತ್ತಾ |
ಸಂವತ್ಸರಾಂತೇ ಫಲ್ಗುನಸ್ಯಾಭಿರೂಪಾ
ಚಿತ್ರಾಂಗದಾ ವೀರಸೇನೇನ ತೋಷಾತ್ ॥161॥
ಅಣ್ಣಂದಿರು ಅತಿಸ್ನೇಹದಿಂದಾಗಿ ಅರ್ಜುನನ ಈ ಅಪರಾಧವನ್ನು ಕ್ಷಮಿಸಿದರು. ಒಂದು ವರ್ಷ ಕಳೆದ ಬಳಿಕ ಪಾಂಡ್ಯರಾಜ ವೀರಸೇನ ಅರ್ಜುನನಿಗೆ ಅನುರೂಪಳಾದ ತನ್ನ ಮಗಳಾದ ಚಿತ್ರಾಂಗದೆಯನ್ನು ಸಂತೋಷದಿಂದ ಮದುವೆ ಮಾಡಿಕೊಟ್ಟ.
ಸ ವೀರಸೇನಸ್ತ್ವಷ್ಟುರಂಶೋ ಯಮಸ್ಯಾ-
ಪ್ಯಾವೇಶಯುಕ್ ಸಾ ಚ ಕನ್ಯಾ ಶಚೀ ಹಿ |
ತಾರಾದೇಹೇ ಸೂರ್ಯಜಸ್ಯಾಂಗಸಂಗಾತ್
ಸ್ವರ್ಗಂ ನಾಗದಂತರಿಕ್ಷಾದಿಹಾಸೀತ್ ॥162॥
ಆ ವೀರಸೇನ ತ್ವಷ್ಟೃ ಎಂಬ ಸೂರ್ಯನ ಅಂಶ. ಯಮನ ಆವೇಶದಿಂದಲೂ ಯುಕ್ತ. ಕನ್ಯೆ ಚಿತ್ರಾಂಗದೆಯೂ ಶಚೀದೇವಿ. ತಾರೆಯ ಜನ್ಮದಲ್ಲಿ ಅವಳು ಸುಗ್ರೀವನ ಅಂಗಸಂಗ ಮಾಡಿದ್ದರಿಂದ ಸ್ವರ್ಗಕ್ಕೆ ಹೋಗಲಿಲ್ಲ. ಅಂತರಿಕ್ಷದಿಂದಲೆ ಹಿಂದೆ ಬಂದು ಇಲ್ಲಿ ಹುಟ್ಟಿದ್ದಳು.
ತೇನೈವ ಹೇತೋರ್ನಾತಿಸಾಮೀಪ್ಯಮಾಸೀತ್
ತಸ್ಯಾಃ ಪಾರ್ಥೇ ಪುತ್ರಿಕಾಪುತ್ರಧರ್ಮಾ |
ತಸ್ಯಾಂ ಜಾತೋ ಬಭ್ರುವಾಹೋಽರ್ಜುನೇನ
ಪೂರ್ವಂ ಜಯಂತಃ ಕಾಮದೇವಾಂಶಯುಕ್ತಃ ॥163॥
ಅದೇ ದೋಷದಿಂದಾಗಿ ಚಿತ್ರಾಂಗದೆಗೆ ಅರ್ಜುನನ ಒಡನಾಟವೂ ಬಹಳ ದಿನ ಸಿಗಲಿಲ್ಲ. ಅರ್ಜುನನಿಂದ ಅವಳಲ್ಲಿ ಪುತ್ರಿಕಾ ಪುತ್ರ ಧರ್ಮದಿಂದ ಬಭ್ರುವಾಹನ ಜನಿಸಿದ. ಅವನು ಹಿಂದೆ ಜಯಂತ. ಮನ್ಮಥನ ಅಂಶದಿಂದ ಯುಕ್ತನಾಗಿ ಹುಟ್ಟಿದ.
* * * *
ಇನ್ನೂರ ಹದಿನೇಳನೆಯ ಅಧ್ಯಾಯ
(ಬ್ರಾಹ್ಮಣರಿಗೆ ಎಲ್ಲಾ ವೃತ್ತಾಂತವನ್ನು ತಿಳಿಸಿ ಅರ್ಜುನನ ಪ್ರಯಾಣ, ಮಣಲೂರಿನಲ್ಲಿ ಚಿತ್ರಾಂಗದೆಯ ವಿವಾಹ.)
ವೈಶಂಪಾಯನಃ
ಕಥಯಿತ್ವಾ ತು ತತ್ ಸರ್ವಂ ಬ್ರಾಹ್ಮಣೇಭ್ಯಃ ಸ ಭಾರತ |
ಪ್ರಯಯೌ ಹಿಮವತ್ಪಾರ್ಶ್ವೇ ತತೋ ವಜ್ರಧರಾತ್ಮಜಃ ॥1॥
ಭಾರತನೇ, ಇಂದ್ರನ ಪುತ್ರನಾದ ಅರ್ಜುನನು ಬ್ರಾಹ್ಮಣರಿಗೆ ಆ ಎಲ್ಲಾ ವಿಷಯಗಳನ್ನೂ ತಿಳಿಸಿ ಅಲ್ಲಿಂದ ಹಿಮಾಲಯದ ಕಡೆಗೆ ಹೊರಟನು.
ಅಗಸ್ತ್ಯವಟಮಾಸಾದ್ಯ ವಸಿಷ್ಠಸ್ಯ ಚ ಪರ್ವತಮ್ |
ಭೃಗುತೀರ್ಥೇ ಚ ಕೌರವ್ಯಃ ಕೃತವಾಂಶೌಚಮಾತ್ಮನಃ ॥2॥
ಅವನು ಅಗಸ್ತ್ಯವಟವನ್ನು ತಲುಪಿ. ವಸಿಷ್ಠಪರ್ವತವನ್ನು ನೋಡಿ, ಭೃಗುತೀರ್ಥದಲ್ಲಿ ಯಜ್ಞವನ್ನು ಮಾಡಿದನು.
ಪ್ರದದೌ ಗೋಸಹಸ್ರಾಣಿ ಯಜ್ಞಾನುದ್ದಿಶ್ಯ ದಕ್ಷಿಣಾಃ |
ನಿವೇಶಾಂಶ್ಚ ದ್ವಿಜಾತಿಭ್ಯಃ ಸೋಽದದಾತ್ ಕುರುಸತ್ತಮಃ ॥3॥
ಮಾಡಿದ ಯಜ್ಞಗಳ ಉದ್ದೇಶದಿಂದ ಆ ಕುರುಶ್ರೇಷ್ಠನು ಬ್ರಾಹ್ಮಣರಿಗೆ ಸಹಸ್ರಗೋವುಗಳನ್ನೂ ಮತ್ತು ಗೃಹಗಳನ್ನೂ ದಾನಮಾಡಿದನು.
ಹಿರಣ್ಯಬಿಂದೋಸ್ತೀರ್ಥಾನಿ ಸ್ನಾತ್ವಾ ಪುರುಷಸತ್ತಮಃ |
ದೃಷ್ಟವಾನ್ ಪರ್ವತಶ್ರೇಷ್ಠಾನ್ ಪುಣ್ಯಾನ್ಯಾಯತನಾನಿ ಚ ॥4॥

ಪುರುಷಶ್ರೇಷ್ಠನಾದ ಅವನು ಹಿರಣ್ಯಬಿಂದು ತೀರ್ಥದಲ್ಲಿ ಸ್ನಾನವನ್ನು ಮಾಡಿ ಶ್ರೇಷ್ಠವಾದ ಪರ್ವತಗಳನ್ನೂ ಮತ್ತು ಪವಿತ್ರವಾದ ಆಶ್ರಮಗಳನ್ನೂ ನೋಡಿದನು.
ಅವತೀರ್ಯ ನರಶ್ರೇಷ್ಠೋ ಬ್ರಾಹ್ಮಣೈಃ ಸಹ ಭಾರತ |
ಪ್ರಾಚೀಂ ದಿಶಂ ಪ್ರತಿಪ್ರ್ಯಾಸುರ್ಜಗಾಮ ಭರತರ್ಷಭಃ ॥5॥
ಭಾರತನೇ, ಭರತರ್ಷಭನಾದ ನರಶ್ರೇಷ್ಠನಾದ ಅವನು ಹಿಮಾಲಯದಿಂದ ಇಳಿದು ಬ್ರಾಹ್ಮಣರ ಜೊತೆಯಲ್ಲಿ ಪೂರ್ವದಿಕ್ಕಿಗೆ ಹೊರಟನು.
ಆನುಪೂರ್ವ್ಯೇಣ ತೀರ್ಥಾನಿ ದೃಷ್ಟವಾನ್ ಕುರುಸತ್ತಮಃ |
ನದೀಂ ಚೋತ್ಪಲಿನೀಂ ರಮ್ಯಾಮರಣ್ಯಂ ನೈಮಿಶಂ ಪ್ರತಿ ॥6॥
ಕುರುಶ್ರೇಷ್ಠನಾದ ಅವನು ಒಂದಾದ ಮೇಲೆ ಒಂದರಂತೆ ಅನೇಕ ತೀರ್ಥಗಳನ್ನೂ, ಮನೋಹರವಾದ ನೈಮಿಷಾರಣ್ಯದ ಬಳಿಯಲ್ಲಿದ್ದ ಉತ್ಪಲಿನಿ ನದಿಯನ್ನು ನೋಡಿದನು.
ನಂದಾಮಪರನಂದಾಂ ಚ ಕೌಶಿಕೀಂ ಚ ಯಶಸ್ವಿನೀಮ್ |
ಮಹಾನದೀಂ ಗಯಾಂ ಚೈವ ಗಂಗಾಮಪಿ ಚ ಭಾರತ ॥7॥
ಭಾರತನೇ, ಅವನು ನಂದ, ಅಪರನಂದ, ಕೀರ್ತಿಶಾಲಿನಿಯಾದ ಕೌಶಿಕಿ, ಮಹಾನದಿ, ಗಯಾ, ಗಂಗಾ, ಈ ನದಿಗಳನ್ನೂ ನೋಡಿದನು.
ಏವಂ ಪುಣ್ಯಾನಿ ಸರ್ವಾಣಿ ಪಶ್ಯಮಾನಸ್ತಥಾಽಽಶ್ರಮಾನ್ |
ಆತ್ಮನಃ ಪಾವನಂ ಕುರ್ವನ್ ಬ್ರಾಹ್ಮಣೇಭ್ಯೋ ಧನಂ ದದೌ ॥8॥
ಹೀಗೆ, ಎಲ್ಲಾ ಪುಣ್ಯತೀರ್ಥಗಳನ್ನೂ ಮತ್ತು ಆಶ್ರಮಗಳನ್ನೂ ನೋಡುತ್ತಾ, ತನ್ನನ್ನು ಪವಿತ್ರೀಕರಿಸಿಕೊಳ್ಳುವವನಾಗಿ, ಬ್ರಾಹ್ಮಣರಿಗೆ ಧನವನ್ನು ದಾನಮಾಡಿದನು.
ಅಂಗವಂಗಕಳಿಂಗೇಷು ಯಾನಿ ಪುಣ್ಯಾನಿ ಕಾನಿ ಚಿತ್ |
ಜಗಾಮ ತಾನಿ ಸರ್ವಾಣಿ ತೀರ್ಥಾನ್ಯಾಯತನಾನಿ ಚ ॥9॥
ಅಂಗವಂಗಕಳಿಂಗದೇಶಗಳಲ್ಲಿ ಇರುವ ಎಲ್ಲಾ ಪುಣ್ಯತೀರ್ಥಗಳಿಗೂ ಮತ್ತು ಪುಣ್ಯಕ್ಷೇತ್ರಗಳಿಗೂ ಹೋದನು.
ದೃಷ್ಟ್ವಾ ಚ ವಿಧಿವತ್ ತಾನಿ ಧನಂ ಚಾಪಿ ದದೌ ಪುನಃ |
ಕಳಿಂಗರಾಷ್ಟ್ರದ್ವಾರೇ ತು ಬ್ರಾಹ್ಮಣಾಃ ಪಾಂಡವಾನುಗಾಃ |
ಅಭ್ಯನುಜ್ಞಾಯ ಕೌಂತೇಯಮುಪಾವರ್ತಂತ ಭಾರತ ॥11॥
ಅವುಗಳನ್ನೆಲ್ಲಾ ನೋಡಿ, ವಿಧಿಪೂರ್ವಕವಾಗಿ ಪುನಃ ಧನವನ್ನು ದಾನಮಾಡಿದನು. ಭಾರತನೇ, ಕಳಿಂಗದೇಶದ ದ್ವಾರದಲ್ಲಿ ಅವನನ್ನು ಅನುಸರಿಸಿಕೊಂಡು ಬಂದ ಬ್ರಾಹ್ಮಣರು ಅವನ ಅನುಮತಿಯನ್ನು ಪಡೆದು ಹಿಂದಿರುಗಿದರು.
ಸ ತು ತೈರಭ್ಯನುಜ್ಞಾತಃ ಕುಂತೀಪುತ್ರೋ ಧನಂಜಯಃ |
ಸಹಾಯೈರಲ್ಪಕೈಃ ಶೂರೈಃ ಪ್ರಯಯೌ ಲವಣಾರ್ಣವಮ್ ॥12॥
ಕುಂತೀಪುತ್ರನಾದ ಧನಂಜಯನು ಅವರ ಅನುಮತಿಯನ್ನು ಪಡೆದು ಅಲ್ಪಸಂಖ್ಯೆಯ ಶೂರರ ಜೊತೆಯಲ್ಲಿ ಲವಣಸಮುದ್ರದ ಕಡೆಗೆ ಹೊರಟನು.
ಸ ಕಳಿಂಗಾನತಿಕ್ರಮ್ಯ ದೇಶಾನಾಯತನಾನಿ ಚ |
ಧರ್ಮಾಣಿ ರಮಣೀಯಾನಿ ಪ್ರೇಕ್ಷಮಾಣೋ ಯಯೌ ಪ್ರಭುಃ ॥13॥
ಸಮರ್ಥನಾದ ಅವನು ಕಳಿಂಗದೇಶವನ್ನು ದಾಟಿ, ಧಾರ್ಮಿಕವೂ ಮತ್ತು ಮನೋಹರವೂ ಆದ ದೇಶಗಳನ್ನೂ ಮತ್ತು ಕ್ಷೇತ್ರಗಳನ್ನೂ ನೋಡುತ್ತಾ ನಡೆದನು.
ಶೂರ್ಪಾರ್ಕಾರಮಥಾಪ್ಲುತ್ಯ ಸಾಗರಾನೂಪಮಾಶ್ರಿತಃ |
ಮಹೇಂದ್ರಪರ್ವತಂ ದೃಷ್ಟ್ವಾ ತಾಪಸೈರುಪಶೋಭಿತಮ್ ॥14॥
ಅವನು ಸಾಗರದ ತೀರವನ್ನು ತಲುಪಿ, ಶೂರ್ಪಾರ್ಕಾರದಲ್ಲಿ ಸ್ನಾನವನ್ನು ಮಾಡಿ ಋಷಿಗಳಿಂದ ಸೇವಿತವಾದ ಮಹೇಂದ್ರಪರ್ವತವನ್ನು ನೋಡಿದನು.
ಗೋದಾವರ್ಯಾಂ ತತಃ ಸ್ನಾತ್ವಾ ತಾಮತೀತ್ಯ ಮಹಾಬಲಃ |
ಕಾವೇರೀಂ ತಾಮಥಾಸಾದ್ಯ ಸಂಗಮೇ ಸಾಗರಸ್ಯ ಹ |
ಸ್ನಾತ್ವಾ ಸಂಪೂಜ್ಯ ದೇವಾಂಶ್ಚ ಋಷೀಂಶ್ಚ ಪಿತೃಭಿಃ ಸಹ ॥15॥
ಮಹಾಬಲನಾದ ಅವನು ಅನಂತರ ಗೋದಾವರಿಯಲ್ಲಿ ಸ್ನಾನಮಾಡಿ ಅದನ್ನು ದಾಟಿ, ಕಾವೇರಿಸಾಗರಸಂಗಮವನ್ನು ತಲುಪಿ, ಅಲ್ಲಿ ಸ್ನಾನವನ್ನು ಮಾಡಿ, ಪಿತೃಗಳನ್ನೂ, ಋಷಿಗಳನ್ನೂ ಮತ್ತು ದೇವತೆಗಳನ್ನೂ ಪೂಜಿಸಿದನು.
ಸಮುದ್ರತೀರೇಣ ಶನೈರ್ಮಣಲೂರಂ ಜಗಾಮ ಹ |
ತತ್ರ ಸರ್ವಾಣಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ॥16॥
ಸಮುದ್ರತೀರದಲ್ಲೇ ಹೋಗುತ್ತಾ ಅಲ್ಲಿದ್ದ ಎಲ್ಲಾ ತೀರ್ಥಗಳನ್ನು ಮತ್ತು ಪವಿತ್ರವಾದ ಕ್ಷೇತ್ರಗಳನ್ನೂ ನೋಡುತ್ತಾ ಮಣಲೂರನ್ನು ತಲುಪಿದನು.
ಅತ್ರ ತ್ರಯೋದಶೇ ಮಾಸೇ ಮಣಲೂರೇಶ್ವರಂ ಪ್ರಭುಮ್ |
ಅನುಗಮ್ಯ ಮಹಾಬಾಹುಮಭ್ಯಗಚ್ಛನ್ಮಹೀಪತಿಮ್ ॥17॥
ಇಂದ್ರಪ್ರಸ್ಥದಿಂದ ಹೊರಟ ಹದಿಮೂರನೆಯ ತಿಂಗಳಿನಲ್ಲಿ ಹೀಗೆ ಸತತವಾಗಿ ಪ್ರಯಾಣ ಮಾಡುತ್ತಾ ಮಹಾಬಾಹುವಾದ, ಸಮರ್ಥನಾದ, ಮಣಲೂರರಾಜನನ್ನು ಸಮೀಪಿಸಿದನು.

ಮಣಲೂರೇಶ್ವರಂ ರಾಜನ್ ಧರ್ಮಜ್ಞಂ ಚಿತ್ರವಾಹನಮ್ |
ಸರ್ವಶಾಸ್ತ್ರೇಷು ನೇತಾರಂ ಸರ್ವಾಸ್ತ್ರಜ್ಞಮಕಲ್ಮಷಮ್ |
ಧರ್ಮೇ ಸತ್ಯೇ ದಮೇ ಶೌಚೇ ಶೌರ್ಯೇ ಚೈವ ವಿಶೇಷತಃ ॥19॥
ರಾಜನೇ, ಮಣಲೂರ ಅಧಿಪತಿಯಾದ ಚಿತ್ರವಾಹನ ಎಂಬ ರಾಜನು ಧರ್ಮಜ್ಞನಾಗಿದ್ದನು. ಸರ್ವಶಾಸ್ತ್ರಗಳಲ್ಲಿ ನಿಪುಣನೂ, ಸರ್ವಾಸ್ತ್ರವನ್ನು ತಿಳಿದವನೂ, ಕಲ್ಮಶರಹಿತನಾದವನೂ, ವಿಶೇಷವಾಗಿ ಧರ್ಮದಲ್ಲಿಯೂ, ಸತ್ಯದಲ್ಲಿಯೂ, ದಮದಲ್ಲಿಯೂ, ಶೌಚದಲ್ಲಿಯೂ ರತನಾದವನು ಆಗಿದ್ದನು.
ದ್ವಿಜರಾಜಋಷೀಣಾಂ ಚ ಧಾರ್ಮಿಕಾಣಾಂ ಮಹಾಸ್ಥಲೇ |
ಕೀರ್ತನೇ ಚೋಪಮಾಭೂತಂ ಕ್ಷತ್ರಧರ್ಮವಿದುತ್ತಮಮ್ |
ತಸ್ಯ ಚಿತ್ರಾಂಗದಾ ನಾಮ ದುಹಿತಾ ಚಾರುದರ್ಶನಾ ॥20॥
ಧಾರ್ಮಿಕರಾದ ಬ್ರಾಹ್ಮಣರೂ ಮತ್ತು ರಾಜರ್ಷಿಗಳೂ ದೊಡ್ಡಸ್ಥಳದಲ್ಲಿ ಸೇರಿ ಮಾತನಾಡುವಾಗ ಕ್ಷತ್ರಿಯಧರ್ಮವನ್ನು ತಿಳಿದು ಶ್ರೇಷ್ಠನಾಗಿದ್ದ ಅವನು ದೃಷ್ಟಾಂತವಾಗಿರುತ್ತಿದ್ದನು.
ತಾಂ ದದರ್ಶ ಪುರೇ ತಸ್ಮಿನ್ ವಿಚರಂತೀಂ ಯದೃಚ್ಛಯಾ |
ದೃಷ್ಟ್ವಾ ಚ ತಾಂ ವರಾರೋಹಾಂ ಚಕಮೇ ಚೈತ್ರವಾಹನೀಮ್ ॥21॥
ಅವನಿಗೆ ಮನೋಹರಳಾದ ಚಿತ್ರಾಂಗದೆ ಎಂಬ ಮಗಳಿದ್ದಳು. ಆ ಪಟ್ಟಣದಲ್ಲಿ ಸಂಚರಿಸುತ್ತಿದ್ದ ಚಿತ್ರವಾಹನನ ಮಗಳಾದ ಸುಂದರಿಯಾದ ಚಿತ್ರಾಂಗದೆಯನ್ನು ಅಕಸ್ಮಾತ್ತಾಗಿ ನೋಡಿ ಅವಳಲ್ಲಿ ಕಾಮವನ್ನು ಹೊಂದಿದನು.
ಅಭಿಗಮ್ಯ ಚ ರಾಜಾನಂ ಜ್ಞಾಪಯತ್ ಸ್ವಂ ಪ್ರಯೋಜನಮ್ |
ತಮುವಾಚಾಥ ರಾಜಾ ಸ ಸಾಂತ್ವಪೂರ್ವಮಿದಂ ವಚಃ ॥22॥
ಅವನು ರಾಜನನ್ನು ಸಮೀಪಿಸಿ ತನ್ನ ಉದ್ದೇಶವನ್ನು ತಿಳಿಸಿದನು. ರಾಜನು, ಸಮಾಧಾನಪೂರ್ವಕವಾಗಿ ಈ ಮಾತನ್ನಾಡಿದನು.
ರಾಜಾ ಪ್ರಭಾಕರೋ ನಾಮ ಕುಲೇಽಸ್ಮಿನ್ ಸಂಬಭೂವ ಹ |
ಅಪುತ್ರಃ ಪ್ರಸವೇನಾರ್ಥೀ ತಪಸ್ತೇಪೇ ಸ ಚೋತ್ತಮಮ್ ॥23॥
ಈ ಕುಲದಲ್ಲಿ ಹಿಂದೆ ಪ್ರಭಾಕರನೆಂಬ ರಾಜನಿದ್ದನು. ಮಕ್ಕಳಿಲ್ಲದ ಅವನು ಸಂತಾನವನ್ನು ಪಡೆಯುವ ಉದ್ದೇಶದಿಂದ ಶ್ರೇಷ್ಠವಾದ ತಪಸ್ಸನ್ನು ಮಾಡಿದನು.
ಉಗ್ರೇಣ ತಪಸಾ ತೇನ ಪ್ರಣಿಪತ್ಯ ಪ್ರಣಮ್ಯ ಚ |
ಈಶ್ವರಸ್ತೋಷಿತಸ್ತಾತ ದೇವದೇವ ಉಮಾಪತಿಃ ॥24॥
ಅವನು ಉಗ್ರವಾದ ತಪಸ್ಸನ್ನು ಮಾಡಿದುದರಿಂದ ಸಂತುಷ್ಟರಾದ ದೇವದೇವನಾದ ಉಮಾಪತಿಯಾದ ಈಶ್ವರನಿಗೆ ನಮಸ್ಕಾರವನ್ನು ಮಾಡಿದನು.
ಸ ತಸ್ಮೈ ಭಗವಾನ್ ಪ್ರಾದಾದೇಕಪ್ರಸವಜಂ ಕುಲೇ |
ಏಕೈಕಃ ಪ್ರಸವಸ್ತಸ್ಮಾದ್ ಭವತ್ಯಸ್ಮಿನ್ ಕುಲೇ ಸದಾ ॥25॥
ಅವನಿಗೆ ಪೂಜ್ಯನಾದ ಉಮಾಪತಿಯು ನಿಮ್ಮ ಕುಲದಲ್ಲಿ ಒಂದೊಂದೇ ಸಂತಾನವು ಉಂಟಾಗುತ್ತದೆ ಎಂದು ವರವನ್ನು ಕೊಟ್ಟನು. ಆದ್ದರಿಂದ ಈ ನಮ್ಮ ಕುಲದಲ್ಲಿ ಯಾವಾಗಲೂ ಒಂದೇ ಸಂತಾನವುಂಟಾಗುತ್ತದೆ.
ತೇಷಾಂ ಕುಮಾರಾಃ ಪೂರ್ವೇಷಾಂ ಸರ್ವೇಷಾಂ ಮಮ ಜಜ್ಞಿರೇ |
ಕನ್ಯಾ ತು ಮಮ ಜಾತೇಯಂ ಕುಲಸ್ಯೋತ್ಪಾದನೀ ಧ್ರುವಮ್ ॥26॥
ನನ್ನ ಎಲ್ಲಾ ಪೂರ್ವಜರಿಗೂ ಒಬ್ಬ ಪುತ್ರನು ಜನಿಸಿದನು. ನನಗೆ ಮಾತ್ರ ನಿಶ್ಚಯವಾಗಿ ನಮ್ಮ ಕುಲವನ್ನು ಬೆಳೆಸುವ ಈ ಕನ್ಯೆ ಜನಿಸಿದಳು.
ಪುತ್ರೋ ಮಮ್ಯೆವೇತಿ ಮೇ ಭಾವನಾ ಪುರುಷೋತ್ತಮ |
ಪುತ್ರಿಕಾ ಹೇತಿ ವಿಧಿನಾ ಸಮ್ಮತಾ ಭರತರ್ಷಭ ॥27॥
ಪುರುಷೋತ್ತಮನಾದ ಅರ್ಜುನನೇ, ಇವಳನ್ನು ನನ್ನ ಮಗನೆಂದೇ ಭಾವಿಸಿದ್ದೇನೆ. ಭರತರ್ಷಭನೇ, ಮಗಳೇ ಮಗ ಎಂಬ ವೇದವಾಕ್ಯವು ಇದಕ್ಕೆ ಸಮ್ಮತಿಯನ್ನು ಕೊಡುತ್ತದೆ. (ಹೇತು ವಿಧಿನಾ. ಪಾ)
ತಸ್ಮಾದೇಕಃ ಸುತೋ ಯೋಽಸ್ಯಾಂ ಜಾಯತೇ ಭಾರತ ತ್ವಯಾ |
ಏತಚ್ಛುಲ್ಕಂ ಭವತ್ವಸ್ಯಾಂ ಕುಲಕೃಜ್ಜಾಯತಾಮಿತಿ |
ಏತೇನ ಸಮಯೇನೇಮಾಂ ಪ್ರತಿಗೃಹ್ಣೀಷ್ವ ಭಾರತ ॥28॥
ಆದ್ದರಿಂದ ಭಾರತನೇ, ನಿನ್ನಿಂದ ಇವಳಲ್ಲಿ ಹುಟ್ಟುವ ಮಗನನ್ನು ಶುಲ್ಕವಾಗಿ ಕೇಳುತ್ತಿದ್ದೇನೆ. ಇವಳಲ್ಲಿ ಕುಲವರ್ಧಕನಾದ ಪುತ್ರನು ಜನಿಸಲಿ. ಭಾರತನೇ, ಈ ನಿಯಮವನ್ನು ಒಪ್ಪಿ ನೀನು ಇವಳನ್ನು ಸ್ವೀಕರಿಸು.
ವೈಶಂಪಾಯನಃ
ಸ ತಥೇತಿ ಪ್ರತಿಜ್ಞಾಯ ತಾಂ ಕನ್ಯಾಂ ಪ್ರತಿಗೃಹ್ಯ ಚ |
ಮಾಸೇ ತ್ರಯೋದಶೇ ಪಾರ್ಥಃ ಕೃತ್ವಾ ವೈವಾಹಿಕೀಂ ಕ್ರಿಯಾಮ್ |
ಉವಾಸ ನಗರೇ ತಸ್ಮಿನ್ ಮಾಸಾಂಸ್ತ್ರೀನ್ ಸ ತಯಾ ಸಹ ॥29॥
ಅರ್ಜುನನು ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ ಆ ಕನ್ಯೆಯನ್ನು ಸ್ವೀಕರಿಸಿ, ಹದಿಮೂರನೆಯ ತಿಂಗಳಿನಲ್ಲಿ ವಿವಾಹವಿಧಿಗಳನ್ನು ನೆರವೇರಿಸಿ, ಆ ನಗರದಲ್ಲಿ ಅವಳ ಜೊತೆಯಲ್ಲಿ ಮೂರು ತಿಂಗಳು ವಾಸಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತದಶಾಧಿಕದ್ವಿಶತತಮೋಽಧ್ಯಾಯಃ ॥

॥ ಇತಿ ಅರ್ಜುನವನವಾಸಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಪುತ್ರಂ ವೀರಂ ಜನಯಿತ್ವಾರ್ಜುನೋಽತೋ
ಗಚ್ಛನ್ ಪ್ರಭಾಸಂ ಶಾಪತೋ ಗ್ರಾಹದೇಹಾಃ |
ಅಮೂಮುಚಚ್ಚಾಪ್ಸರಸಃ ಪಂಚ
ತಾಭಿರ್ಗೃಹೀತಃ ಪ್ರವಿಕೃಷ್ಯ ತೀರಂ ॥164॥
ವೀರನಾದ ಬಭ್ರುವಾಹನನನ್ನು ಹುಟ್ಟಿಸಿ ಅರ್ಜುನ ಅಲ್ಲಿಂದ ಪ್ರಭಾಸಕ್ಕೆ ಹೋಗುತ್ತ ದಾರಿಯಲ್ಲಿ ಶಾಪದಿಂದ ಮೊಸಳೆಯ ಜನ್ಮ ಹೊಂದಿದ್ದ ಅವರು ಅಪ್ಸರೆಯರನ್ನು, ಅವರು ಈತನನ್ನು ಹಿಡಿದಾಗ, ತೀರಕ್ಕೆ ಎಳೆದು ತಂದು ಶಾಪದಿಂದ ವಿಮುಕ್ತಗೊಳಿಸಿದ.
ಏವಂ ಹಿ ತಾಸಾಂ ಶಾಪಮೋಕ್ಷಃ ಪ್ರದತ್ತೋ
ಯದಾಖಿಲಾ ವೋ ಯುಗಪತ್ ಸಂಪ್ರಕರ್ಷೇತ್ |
ಏಕಸ್ತದಾ ನಿಜರೂಪಾಪ್ತಿರೇವೇ-
ತ್ಯಲಂ ತುಷ್ಟೇನ ಬ್ರಾಹ್ಮಣೇನಾನತಾನಾಂ ॥165॥
ಒಬ್ಬ ಬ್ರಾಹ್ಮಣನಿಂದ ಶಪ್ತರಾದ ಈ ಅಪ್ಸರೆಯರು ಅವನಿಗೆ ಶರಣಾದಾಗ, ಸಂತುಷ್ಟನಾದ ಆ ಬ್ರಾಹ್ಮಣ `ಬಲಿಷ್ಠನಾದ ಒಬ್ಬನೇ ವ್ಯಕ್ತಿ ಯಾವಾಗ ನಿಮ್ಮೆಲ್ಲರನ್ನೂ ಜೊತೆಗೇ ತೀರಕ್ಕೆ ಎಳೆದು ತರುವನೋ ಆಗಲೆ ಅವನಿಂದ ನಿಮಗೆ ನಿಮ್ಮ ನಿಜ ರೂಪ ಲಭಿಸುತ್ತದೆ' ಎಂದು ಅವರಿಗೆ ಶಾಪಮೋಕ್ಷ ನೀಡಿದ.
ಇನ್ನೂರ ಹದಿನೆಂಟನೆಯ ಅಧ್ಯಾಯ
(ದಕ್ಷಿಣ ಸಮುದ್ರತೀರದಲ್ಲಿ ನಾರೀತೀರ್ಥದಲ್ಲಿ ಅರ್ಜುನನಿಂದ ಅಪ್ಸರೆಯರ ಮೋಚನ. ಮಣಲೂರಿಗೆ ಹಿಂದಿರುಗಿ, ಚಿತ್ರವಾಹನನಿಗೆ ಬಭ್ರುವಾಹನನನ್ನು ಸಮರ್ಪಿಸಿ ಪುನಃ ತೀರ್ಥಯಾತ್ರಾಗಮನ.)
ವೈಶಂಪಾಯನಃ
ತತಃ ಸಮುದ್ರೇ ತೀರ್ಥಾನಿ ದಕ್ಷಿಣೇ ಭರತರ್ಷಭ |
ಅಭ್ಯಗಚ್ಛತ್ ಸುಪುಣ್ಯಾನಿ ರಹಿತಾನಿ ತಪಸ್ವಿಭಿಃ ॥1॥
ಭರತರ್ಷಭನೇ, ಅನಂತರ ಅರ್ಜುನನು ದಕ್ಷಿಣಸಮುದ್ರದ ಸಮೀಪದಲ್ಲಿದ್ದ, ತಪಸ್ವಿಗಳಿಂದ ರಹಿತವಾದ ಪವಿತ್ರವಾದ ತೀರ್ಥಗಳಿಗೆ ಬಂದನು.
ವರ್ಜಯಂತಿ ಸ್ಮ ತೀರ್ಥಾನಿ ಪಂಚ ತತ್ರ ತು ತಾಪಸಾಃ |
ಅವತೀರ್ಣಾನಿ ತಾನ್ಯಾಸನ್ ಪುರಸ್ತಾತ್ ತು ತಪಸ್ವಿಭಿಃ ॥2॥
ಹಿಂದೆ ತಪಸ್ವಿಗಳು ಸೇವಿಸುತ್ತಿದ್ದ ಆ ತೀರ್ಥಗಳನ್ನು ಈಗ ಎಲ್ಲ ಮುನಿಗಳೂ ವರ್ಜಿಸುತ್ತಿದ್ದರು.
ಅಗಸ್ತ್ಯತೀರ್ಥಂ ಸೌಭದ್ರಂ ಪೌಲೋಮಂ ಚ ಸುಪಾವನಮ್ |
ಕರಂ ಧರ್ಮಪ್ಲವಂ ಚೈವ ಹಯಮೇಧಫಲಂ ಚ ಯತ್ ॥3॥
ಭಾರದ್ವಾಜಸ್ಯ ತೀರ್ಥಂ ಚ ಪಾಪಪ್ರಶಮನಂ ಮಹತ್ |
ವಿವಿಕ್ತಾನ್ಯುಪಲಕ್ಷ್ಯಾಥ ತಾನಿ ತೀರ್ಥಾನಿ ಪಾಂಡವಃ ॥4॥
ಅರ್ಜುನನು ಅಗಸ್ತ್ಯತೀರ್ಥ, ಸೌಭದ್ರತೀರ್ಥ, ಸುಪಾವನವಾದ ಪೌಲೋಮತೀರ್ಥ, ಅಶ್ವಮೇಧಫಲವನ್ನು ಕೊಟ್ಟು ಧರ್ಮದ ಹಡಗಿನಂತಿರುವ ಕರತೀರ್ಥ, ಮತ್ತು ಪಾಪನಾಶಕವಾದ ದೊಡ್ಡ ಭಾರದ್ವಾಜತೀರ್ಥ, ಈ ತೀರ್ಥಗಳು ನಿರ್ಜನವಾಗಿರುವುದನ್ನು ನೋಡಿದನು.
ದೃಷ್ಟ್ವಾ ಚ ವರ್ಜ್ಯಮಾನಾನಿ ಮುನಿಭಿರ್ಭಾವಿತಾತ್ಮಭಿಃ |
ತಪಸ್ವಿನಸ್ತತೋಽಪೃಚ್ಛತ್ ಪ್ರಾಂಜಲಿಃ ಕುರುನಂದನಃ |
ತೀರ್ಥಾನ್ಯೇತಾನಿ ವರ್ಜ್ಯಂತೇ ಕಿಮರ್ಥಂ ಬ್ರಹ್ಮವಾದಿಭಿಃ ॥5॥
ಶುದ್ಧವಾದ ಮನಸ್ಸುಳ್ಳ ಮುನಿಗಳಿಂದ ವರ್ಜಿಸಲ್ಪಟ್ಟ ಆ ತೀರ್ಥಗಳನ್ನು ನೋಡಿ ಅರ್ಜುನನು ತಪಸ್ವಿಗಳಿಗೆ ಕೈಗಳನ್ನು ಮುಗಿದು ಏಕೆ ಈ ತೀರ್ಥಗಳು ಬ್ರಾಹ್ಮಣರಿಂದ ಮತ್ತು ಋಷಿಗಳಿಂದ ವರ್ಜಿಸಲ್ಪಡುತ್ತವೆ ಎಂದು ಕೇಳಿದನು.
ತಾಪಸಾಃ
ಗ್ರಾಹಾಃ ಪಂಚ ವಸಂತ್ಯೇಷು ಹರಂತಿ ಚ ತಪೋಧನಾನ್ |
ಅತ ಏತಾನಿ ವರ್ಜ್ಯಂತೇ ತೀರ್ಥಾನಿ ಕುರುಸತ್ತಮ ॥6॥
ಇವುಗಳಲ್ಲಿ ಐದು ಮೊಸಳೆಗಳಿವೆ. ಅವು ತಪೋಧನರನ್ನು ಎಳೆದುಕೊಂಡು ಹೋಗುತ್ತವೆ. ಕುರುಶ್ರೇಷ್ಠನೇ, ಆ ಕಾರಣದಿಂದ ಋಷಿಗಳು ಈ ತೀರ್ಥಗಳನ್ನು ವರ್ಜಿಸುತ್ತಾರೆ.
ಶ್ರುತ್ವಾ ತು ವಚನಂ ತೇಷಾಂ ವಾರ್ಯಮಾಣಸ್ತಪೋಧನೈಃ |
ಜಗಾಮ ತಾನಿ ತೀರ್ಥಾನಿ ದ್ರಷ್ಟುಂ ಪುರುಷಸತ್ತಮಃ ॥7॥
ಪುರುಷಶ್ರೇಷ್ಠನಾದ ಅರ್ಜುನನು ಆ ಮಾತುಗಳನ್ನು ಕೇಳಿ, ತಪಸ್ವಿಗಳು ನಿಷೇಧಮಾಡುತ್ತಿದ್ದರೂ, ಆ ತೀರ್ಥಗಳನ್ನು ನೋಡಲು ಮುಂದೆ ಹೊರಟನು.

ತತಃ ಸೌಭದ್ರಮಾಸಾದ್ಯ ಮಹರ್ಷೇಸ್ತೀರ್ಥಮುತ್ತಮಮ್ |
ವಿಗಾಹ್ಯ ತರಸಾ ಶೂರಃ ಸ್ನಾನಂ ಚಕ್ರೇ ಪರಂತಪಃ ॥8॥
ಅನಂತರ ಸೌಭದ್ರನೆಂಬ ಮಹರ್ಷಿಗಳ ಶ್ರೇಷ್ಠವಾದ ತೀರ್ಥವನ್ನು ಸಮೀಪಿಸಿ ಅದರಲ್ಲಿ ಶೀಘ್ರವಾಗಿ ಇಳಿದು, ಶೂರನೂ ಪರಂತಪನೂ ಆದ ಅವನು ಸ್ನಾನವನ್ನು ಮಾಡಿದನು.
ಅಥ ತಂ ಪುರುಷವ್ಯಾಘ್ರಮಂತರ್ಜಲಚರೋ ಮಹಾನ್ |
ನಿಜಗ್ರಾಹ ಜಲೇ ಗ್ರಾಹಃ ಶಾಪಮೋಕ್ಷಾಯ ಭಾರತ ॥9॥
ಭಾರತನೇ, ಆಗ ಆ ನೀರಿನ ಒಳಗೆ ಸಂಚರಿಸುತ್ತಿದ್ದ ಒಂದು ದೊಡ್ಡ ಮೊಸಳೆಯು ತನ್ನ ಶಾಪಮೋಕ್ಷಕ್ಕಾಗಿಯೇ ಆ ಪುರುಷವ್ಯಾಘ್ರನನ್ನು ಹಿಡಿಯಿತು.
ಸ ತಮಾದಾಯ ಕೌಂತೇಯೋ ವಿಸ್ಫುರಂತಂ ಜಲೇಚರಮ್ |
ಉದತಿಷ್ಠನ್ಮಹಾಬಾಹುರ್ಬಲೇನ ಬಲಿನಾಂ ವರಃ ॥10॥
ಬಲಿಷ್ಠರಲ್ಲಿ ಶ್ರೇಷ್ಠನಾದ ಅರ್ಜುನನು ಒದರಾಡುತ್ತಿದ್ದ ಆ ಮೊಸಳೆಯನ್ನು ತನ್ನ ಶಕ್ತಿಯಿಂದ ಹಿಡಿದು ದಡದ ಮೇಲೆ ಎಳೆದುಕೊಂಡು ಬಂದನು.
ಉತ್ಕ್ಷಿಪ್ತ ಏವ ತು ಗ್ರಾಹಃ ಸೋಽರ್ಜುನೇನ ತಪಸ್ವಿನಾ |
ಬಭೂವ ನಾರೀ ಕಲ್ಯಾಣೀ ಸರ್ವಾಭರಣಭೂಷಿತಾ ॥11॥
ತಪಸ್ವಿಯಾದ ಅರ್ಜುನನು ಆ ಮೊಸಳೆಯನ್ನು ದಡದ ಮೇಲೆ ಹಾಕಿದ ತಕ್ಷಣ, ಅದು ಸರ್ವಾಭರಣಭೂಷಿತಳಾದ ಮನೋಹರಳಾದ ಒಂದು ನಾರಿಯಾಯಿತು.
ದೀಪ್ಯಮಾನಾ ಶ್ರಿಯಾ ರಾಜನ್ ದಿವ್ಯರೂಪಾ ಮನೋರಮಾ |
ತದದ್ಭುತತಮಂ ದೃಷ್ಟ್ವಾ ಕುಂತೀಪುತ್ರೋ ಧನಂಜಯಃ |
ತಾಂ ಸ್ತ್ರಿಯಂ ಪರಮಪ್ರೀತ ಇದಂ ವಚನಮಬ್ರವೀತ್ ॥12॥
ರಾಜನೇ, ದಿವ್ಯರೂಪವನ್ನು ಧರಿಸಿ, ಮನೋಹರಳಾಗಿ, ಕಾಂತಿಯಿಂದ ಬಳಲುತ್ತಿದ್ದ ಆ ಅದ್ಭುತದೃಶ್ಯವನ್ನು ನೋಡಿ, ಕುಂತೀಪುತ್ರನಾದ ಅರ್ಜುನನು ಬಹಳ ಸಂತೋಷದಿಂದ ಆ ನಾರಿಯನ್ನು ಕುರಿತು ಈ ಮಾತನ್ನಾಡಿದನು.
ಕಾ ವೈ ತ್ವಮಸಿ ಕಲ್ಯಾಣಿ ಕುತೋ ವಾಽಸಿ ಜಲೇಚರೀ |
ಕಿಮರ್ಥಂ ಚ ಮಹತ್ ಪಾಪಮಿದಂ ಕೃತವತೀ ಪುರಾ ॥13॥
ಕಲ್ಯಾಣಿಯೇ, ನೀನು ಯಾರು? ನೀನು ಏತಕ್ಕೆ ಜಲಚರಳಾಗಿದ್ದೆ? ನೀನು ಏತಕ್ಕೆ ಹಿಂದೆ ಈ ಮಹಾಪಾಪವನ್ನು ಮಾಡಿದೆ?
ಸ್ತ್ರೀ
ಅಪ್ಸರಾಽಸ್ಮಿ ಮಹಾಬಾಹೋ ದೇವಾರಣ್ಯವಿಚಾರಿಣೀ |
ಇಷ್ಟಾ ಧನಪತೇರ್ನಿತ್ಯಂ ವೃಂದಾ ನಾಮ ಮಹಾಬಲ ॥14॥
ಮಹಾಬಾಹುವೇ, ನಾನು ದೇವಾರಣ್ಯಗಳಲ್ಲಿ ಸಂಚರಿಸುವ ಅಪ್ಸರೆ. ಮಹಾಬಲನೇ, ನಾನು ಕುಬೇರನಿಗೆ ಯಾವಾಗಲೂ ಪ್ರಿಯಳಾದವಳು. ವೃಂದಾ ಎಂದು ನನ್ನ ಹೆಸರು. (ವರ್ಗಾ ನಾನು. ಪಾ)
ಮಮ ಸಖ್ಯಶ್ಚತಸ್ರೋಽನ್ಯಾಃ ಸರ್ವಾಃ ಕಾಮಗಮಾಃ ಶುಭಾಃ |
ತಾಭಿಃ ಸಾರ್ಧಂ ಪ್ರಯಾತಾಽಸ್ಮಿ ಲೋಕಪಾಲನಿವೇಶನಮ್ ॥15॥
ಒಮ್ಮೆ ಇಷ್ಟ ಬಂದ ಕಡೆಗೆ ಹೋಗುವ ಸಾಮರ್ಥ್ಯವುಳ್ಳ ಶುಭರಾದ ನನ್ನ ನಾಲ್ಕು ಸಖಿಯರ ಜೊತೆಯಲ್ಲಿ ನಾವೆಲ್ಲರೂ ಲೋಕಪಾಲಕನಾದ ಕುಬೇರನ ಮನೆಗೆ ಹೋದೆವು.
ತತಃ ಪಶ್ಯಾಮ ವೈ ಸರ್ವಾ ಬ್ರಾಹ್ಮಣಂ ಸಂಶಿತವ್ರತಮ್ |
ರೂಪವಂತಮಧೀಯಾನಮೇಕಮೇಕಾಂತಚಾರಿಣಮ್ ॥16॥
ಆಗ ನಾವೆಲ್ಲರೂ ಅಲ್ಲಿ ಅಧ್ಯಯನವನ್ನು ಮಾಡುತ್ತಿದ್ದ ವ್ರತಸ್ಥನಾದ, ಏಕಾಂತಚಾರಿಯಾದ ಮತ್ತು ಸುಂದರನಾದ ಒಬ್ಬ ಬ್ರಾಹ್ಮಣನನ್ನು ನೋಡಿದೆವು.
ತಸ್ಯೈವ ತಪಸಾ ರಾಜಂಸ್ತದ್ವನಂ ತೇಜಸಾ ವೃತಮ್ |
ಆದಿತ್ಯ ಇವ ತಂ ದೇಶಂ ಕೃತ್ಸ್ನಮಧ್ಯವಭಾಸಯತ್ ॥17॥
ರಾಜನೇ, ಆ ವನವೆಲ್ಲವೂ ಆ ಬ್ರಾಹ್ಮಣನ ತೇಜಸ್ಸಿನಿಂದ ತುಂಬಿದ್ದಿತು. ಅವನು ಆ ಎಲ್ಲಾ ಪ್ರದೇಶವನ್ನೂ ಸೂರ್ಯನಂತೆ ಬೆಳಗುತ್ತಿದ್ದನು.
ತಸ್ಯ ದೃಷ್ಟ್ವಾ ತಪಸ್ತಾದೃಗ್ ರೂಪಂ ಚಾದ್ಭುತದರ್ಶನಮ್ |
ಅವತೀರ್ಣಾಽಸ್ಮಿ ತಂ ದೇಶಂ ತಪೋವಿಘ್ನಚಿಕೀರ್ಷಯಾ ॥18॥
ಅವನ ತಪಸ್ಸನ್ನೂ, ಅದ್ಭುತವಾದ ರೂಪವನ್ನೂ ನೋಡಿ, ನಾನು ಅವನ ತಪಸ್ಸಿಗೆ ವಿಘ್ನಮಾಡಲು ಬಯಸಿ, ಆ ಪ್ರದೇಶಕ್ಕೆ ಹೋದೆನು.
ಅಹಂ ಚ ಸೌರಭೇಯೀ ಚ ಸಮೀಚೀ ಲಂಬುಸಾ ಲತಾ |
ಯೌಗಪದ್ಯೇನ ತಂ ವಿಪ್ರಮಭ್ಯಗಚ್ಛಾಮ ಭಾರತ ॥19॥
ಭಾರತನೇ, ನಾನು, ಸೌರಭೇಯೀ, ಸಮೀಚೀ, ಲಂಬುಸಾ, ಲತಾ ಇವರೆಲ್ಲರೂ ಒಂದೇಕಾಲಕ್ಕೆ ಆ ಬ್ರಾಹ್ಮಣ ಸಮೀಪಕ್ಕೆ ಹೋದೆವು.
ಗಾಯಂತ್ಯೋ ವೈ ಹಸಂತ್ಯಶ್ಚ ನೃತ್ಯಂತ್ಯೋ ವೈ ವರಾಂಗನಾಃ |
ಪ್ರೇಕ್ಷಣಾನಿ ಚ ಕುರ್ವಂತ್ಯೋ ವಿವೃತಂ ಕಾರಯಂತಿ ಚ |

ಅನಿಚ್ಛಂತೀರಿವಾಂಗಾನಿ ಹಾಸಭಾವವಿಲಾಸಿತೈಃ ॥20॥
ವರಾಂಗನೆಯರಾದ ನಾವು ಹಾಡುತ್ತಾ, ನಗುತ್ತಾ, ನರ್ತನವನ್ನು ಮಾಡುತ್ತಾ, ಅವನ ಕಡೆಗೆ ನೋಡುತ್ತಾ, ನಮ್ಮ ಹಾವಭಾವವಿಲಾಸಗಳಿಂದ ಇಷ್ಟವಿಲ್ಲದವರಂತೆ ಅವನಿಗೆ ನಮ್ಮ ಅಂಗಾಂಗಗಳನ್ನು ತೋರಿಸುತ್ತಾ (ತಪೋವಿಘ್ನವನ್ನು ಮಾಡಲು ಯತ್ನಿಸಿದೆವು).
ಬಾಹೂರುಮೂಲದಂತಾನಾಂ ದರ್ಶನಂ ವೈ ವರಾಂಗನಾಃ |
ಕುರ್ವಂತ್ಯೋ ಲೋಭಯಂತ್ಯಶ್ಚ ತಂ ದ್ವಿಜಂ ಪರಿತಃ ಶ್ರಿತಾಃ ॥21॥
ವರಾಂಗನೆಯರಾದ ನಾವು ಬಾಹುಮೂಲವನ್ನೂ, ಊರುಮೂಲವನ್ನೂ ಮತ್ತು ದಂತಗಳನ್ನೂ ಅವನಿಗೆ ತೋರಿಸುತ್ತಾ, ಅವನನ್ನು ಪ್ರಲೋಭಗೊಳಿಸುತ್ತಾ ಸುತ್ತಲೂ ಇದ್ದೆವು.
ಸ ಚ ನಾಸ್ಮಾಸು ಕೃತವಾನ್ ಮನೋ ವೀರ ಕಥಂಚನ |
ನಾಕಂಪತ ಮಹಾತೇಜಾಃ ಸ್ಥಿತಸ್ತಪಸಿ ನಿರ್ಮಲಃ ॥22॥
ವೀರನೇ, ಅವನು ನಮ್ಮ ಮೇಲೆ ಯಾವರೀತಿಯಲ್ಲಿಯೂ ಮನಸ್ಸನ್ನು ಹಾಕಲಿಲ್ಲ. ಮಹಾತೇಜಸ್ವಿಯೂ, ನಿರ್ಮಲನೂ, ತಪಸ್ವಿಯೂ ಆದ ಅವನು ಅಲುಗಾಡಲೂ ಇಲ್ಲ.
ಸೋಽಶಪತ್ ಕುಪಿತೋಽಸ್ಮಾಂಸ್ತು ಬ್ರಾಹ್ಮಣಃ ಕ್ಷತ್ರಿಯರ್ಷಭ |
ಗ್ರಾಹಭೂತಾ ಜಲೇ ಯೂಯಂ ಚರಿಷ್ಯಥ ಶತಂ ಸಮಾಃ ॥23॥
ಕ್ಷತ್ರಿಯರ್ಷಭನೇ, ಕುಪಿತನಾದ ಅವನು, ನೀವು ಮೊಸಳೆಗಳಾಗಿ ನೂರುವರ್ಷ ನೀರಿನಲ್ಲಿ ಸಂಚರಿಸುತ್ತಿರಿ ಎಂದು ನಮಗೆ ಶಾಪವನ್ನು ಕೊಟ್ಟನು.
ತತೋ ವಯಂ ಪ್ರವ್ಯಥಿತಾಃ ಸರ್ವಾ ಭಾರತಸತ್ತಮ |
ಯಾಚಾಮ ಶರಣಂ ವಿಪ್ರಂ ತಂ ತಪೋಧನಮಚ್ಯುತಮ್ ॥24॥
ಭರತಶ್ರೇಷ್ಠನೇ, ಆಗ ನಾವೆಲ್ಲರೂ ದುಃಖಗೊಂಡು ತಪಸ್ಸಿನಿಂದ ಚ್ಯುತನಾಗದ ಆ ತಪೋಧನನಾದ ವಿಪ್ರನಿಗೆ ಶರಣಾಗತರಾಗಿ ಬೇಡಿದೆವು.
ರೂಪೇಣ ವಯಸಾ ಚೈವ ಕಂದರ್ಪೇಣ ಚ ಧರ್ಷಿತಾಃ |
ಅಯುಕ್ತಂ ಕೃತವತ್ಯಶ್ಚ ಕ್ಷಂತುಮರ್ಹಸಿ ನೋ ದ್ವಿಜ ॥25॥
ಬ್ರಾಹ್ಮಣನೇ, ನಾವು ರೂಪದಿಂದಲೂ, ವಯಸ್ಸಿನಿಂದಲೂ, ಕಾಮದಿಂದಲೂ ದರ್ಪಿತರಾಗಿ ಅಯುಕ್ತವಾದ ಕೆಲಸವನ್ನು ಮಾಡಿದೆವು. ನಮ್ಮನ್ನು ಕ್ಷಮಿಸು.
ಏಷ ಏವ ವಧೋಽಸ್ಮಾಕಂ ಸುಪರ್ಯಾಪ್ತಸ್ತಪೋಧನ |
ಯದ್ ವಯಂ ಸಂಶಿತಾತ್ಮಾನಂ ಪ್ರಲೋಭಯಿತುಮಾಗತಾಃ ॥26॥
ತಪೋಧನನೇ, ನಿನ್ನಂತಹ ಪರಿಶುದ್ಧನಾದ ತಪಸ್ವಿಯನ್ನು ಪ್ರಲೋಭನಗೊಳಿಸಲು ನಾವು ಬಂದುದೇ ನಮಗೆ ಒಂದು ವಧೆ. ನಮಗೆ ಈ ವಧೆಯೇ ಸಾಕು.
ಅವಧ್ಯಾಸ್ತು ಸ್ತ್ರಿಯಃ ಸೃಷ್ಟಾ ಮನ್ಯಂತೇ ಧರ್ಮಚಿಂತಕಾಃ |
ತಸ್ಮಾದ್ ಧರ್ಮೇಣ ಧರ್ಮಜ್ಞ ನಾಸ್ಮಾನ್ ಹಿಂಸಿತುಮರ್ಹಸಿ ॥27॥
ಧರ್ಮಜ್ಞರಾದವರು ಸ್ತ್ರೀಯರು ಅವಧ್ಯರಾಗಿ ಸೃಷ್ಟರಾಗಿದ್ದಾರೆ ಎಂದು ಭಾವಿಸುತ್ತಾರೆ. ಆದ್ದರಿಂದ ಧರ್ಮಜ್ಞನೇ, ನಮ್ಮನ್ನು ಧರ್ಮದ ದೃಷ್ಟಿಯಿಂದ ಹಿಂಸಿಸಬೇಡ.
ಸರ್ವಭೂತೇಷು ಧರ್ಮಜ್ಞ ಮೈತ್ರೋ ಬ್ರಾಹ್ಮಣ ಉಚ್ಯತೇ |
ಸತ್ಯೋ ಭವತು ಕಲ್ಯಾಣ ಏಷ ವಾದೋ ಮನೀಷಿಣಾಮ್ ॥28॥
ಧರ್ಮಜ್ಞನೇ, ಎಲ್ಲ ಪ್ರಾಣಿಗಳಲ್ಲಿಯೂ ಬ್ರಾಹ್ಮಣನು ಮೈತ್ರಶೀಲನೆಂದು ಹೇಳುತ್ತಾರೆ. ಕಲ್ಯಾಣನೇ, ವಿವೇಕಿಗಳಾದವರ ಈ ಮಾತು ಸತ್ಯವಾಗಲಿ.
ಶರಣಂ ಚ ಪ್ರಪನ್ನಾನಾಂ ಶಿಷ್ಟಾಃ ಕುರ್ವಂತಿ ಪಾಲನಮ್ |
ಶರಣಂ ತ್ವಾಂ ಪ್ರಪನ್ನಾಃ ಸ್ಮ ತಸ್ಮಾತ್ ತ್ವಂ ಕ್ಷಂತುಮರ್ಹಸಿ ॥29॥
ಏವಮುಕ್ತಃ ಸ ಧರ್ಮಾತ್ಮಾ ಬ್ರಾಹ್ಮಣಃ ಶುಭಕರ್ಮಕೃತ್ |
ಪ್ರಸಾದಂ ಕೃತವಾನ್ ವೀರ ರವಿಸೋಮಸಮಪ್ರಭಃ ॥30॥
ಶಿಷ್ಟರಾದವರು ಶರಣಾಗತರಾದವರ ರಕ್ಷಣೆಯನ್ನು ಮಾಡುತ್ತಾರೆ. ನಾವು ನಿನಗೆ ಶರಣಾಗತರಾಗಿದ್ದೇವೆ. ನಮ್ಮನ್ನು ರಕ್ಷಿಸು. ವೀರನೇ, ಅವರು ಹೀಗೆ ಹೇಳಿದಾಗ, ಆ ಧರ್ಮಾತ್ಮನೂ, ಶುಭಕರ್ಮವನ್ನು ಮಾಡುವವನೂ, ಚಂದ್ರಸೂರ್ಯರ ಕಾಂತಿಯನ್ನು ಹೊಂದಿದವನೂ ಆದ ಆ ಬ್ರಾಹ್ಮಣನು ಅವರಿಗೆ ಅನುಗ್ರಹವನ್ನು ಮಾಡಿದನು.
ಬ್ರಾಹ್ಮಣಃ
ದಶಂ ಶತಸಹಸ್ರಂ ಚ ಸರ್ವಮಕ್ಷಯವಾಚಕಮ್ |
ಪರಿಮಾಣಂ ಶತಂ ತ್ವೇತನ್ನೇದಮಕ್ಷಯವಾಚಕಮ್ ॥31॥
ದಶ, ಶತ, ಸಹಸ್ರ ಈ ಶಬ್ದಗಳೆಲ್ಲವೂ ಅಕ್ಷಯವಾಚಕಗಳು. ನಾನು ಶಾಪಕೊಡುವಾಗ ಹೇಳಿದ ಶತ ಶಬ್ದವು ಅಕ್ಷಯವಾಚಕವಾಗಿರುವುದಿಲ್ಲ.
ಯದಾ ಚ ವೋ ಗ್ರಾಹಭೂತಾ ಗೃಹ್ಣಂತೀಃ ಪುರುಷಾನ್ ಜಲೇ |
ಉತ್ತರಿಷ್ಯೇಜ್ಜಲಾತ್ ಕಶ್ಚಿತ್ ಸ್ಥಲಂ ಪುರುಷಸತ್ತಮಃ ॥32॥

ತದಾ ಯೂಯಂ ಪುನಃ ಸರ್ವಾಃ ಸ್ವಂ ರೂಪಂ ಪ್ರತಿಪತ್ಸ್ಯಥ |
ಅನೃತಂ ನೋಕ್ತಪೂರ್ವಂ ಮೇ ಭವಿತಾಽಪಿ ಕದಾಚನ ॥33॥
ಮೊಸಳೆಗಳಾಗಿ ನೀರಿನಲ್ಲಿ ಮನುಷ್ಯರನ್ನು ಹಿಡಿಯುವ ನಿಮ್ಮನ್ನು ಯಾವಾಗ ಒಬ್ಬ ಪುರುಷಶ್ರೇಷ್ಠನು ನೀರಿನಿಂದ ದಡಕ್ಕೆ ಎಳೆದುಹಾಕುತ್ತಾನೋ, ಆಗ ನೀವೆಲ್ಲರೂ ನಿಮ್ಮ ನಿಮ್ಮ ರೂಪಗಳನ್ನು ಹೊಂದುವಿರಿ. ನನ್ನ ಮಾತು ಹಿಂದೆ ಎಂದೂ ಅನೃತವಾಗಿಲ್ಲ, ಮುಂದೆ ಯಾವಾಗಲೂ ಆಗುವುದಿಲ್ಲ.
ತಾನಿ ತೀರ್ಥಾನಿ ಸರ್ವಾಣಿ ತತಃ ಪ್ರಭೃತಿ ಚೈವ ಹ |
ನಾರೀತೀರ್ಥಾನಿ ನಾಮ್ನೇಹ ಖ್ಯಾತಿಂ ಯಾಸ್ಯಂತಿ ಸರ್ವಶಃ |
ಪುಣ್ಯಾನಿ ಚ ಭವಿಷ್ಯಂತಿ ಪಾವನಾನಿ ಮನೀಷಿಣಾಮ್ ॥34॥
ಆ ತೀರ್ಥಗಳೆಲ್ಲವೂ ಇನ್ನು ಮುಂದೆ ನಾರೀತೀರ್ಥಗಳೆಂದೇ ಪ್ರಸಿದ್ಧಿಯನ್ನು ಪಡೆಯುತ್ತವೆ. ಅವು ಮುಂದೆ ವಿವೇಕಿಗಳಾದವರಿಗೆ ಪವಿತ್ರವೂ, ಪುಣ್ಯಕರವೂ ಆದ ತೀರ್ಥಗಳಾಗುವುವು.
ವೃಂದಾ
ತತೋಽಭಿವಾದ್ಯ ತಂ ವಿಪ್ರಂ ಕೃತ್ವಾ ಚಾಪಿ ಪ್ರದಕ್ಷಿಣಮ್ |
ವಿಚಿಂತಯಾ ಚಾಪಸೃತ್ಯ ತಸ್ಮಾದ್ ದೇಶಾತ್ ಸುದುಃಖಿತಾಃ ॥35॥
ಆಗ ನಾವು ಆ ಬ್ರಾಹ್ಮಣನಿಗೆ ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡಿ, ಆ ಪ್ರದೇಶದಿಂದ ಹೊರಬಂದು ಚಿಂತೆಯಿಂದ ದುಃಖಿತರಾದೆವು.
ಕ್ವ ನು ನಾಮ ವಯಂ ಸರ್ವಾಃ ಕಾಲೇನಾಲ್ಪೇನ ತಂ ನರಮ್ |
ಸಮಾಗಚ್ಛೇಮ ಯೋ ನಸ್ತದ್ ರೂಪಮಾಪಾದಯೇತ್ ಪುನಃ ॥36॥
ನಾವೆಲ್ಲರೂ, ನಮ್ಮೆಲ್ಲರಿಗೂ ಮೊದಲಿನ ರೂಪವನ್ನು ತಂದುಕೊಡುವ ಆ ಮನುಷ್ಯನನ್ನು ಅಲ್ಪಕಾಲದಲ್ಲಿಯೇ ಎಲ್ಲಿ ಪಡೆಯುತ್ತೇವೆ?
ತಾ ವಯಂ ಚಿಂತಯಿತ್ವೈವಂ ಮುಹೂರ್ತಾದಿವ ಭಾರತ |
ದೃಷ್ಟವತ್ಯೋ ಮಹಾಭಾಗಂ ದೇವರ್ಷಿಮುತ ನಾರದಮ್ ॥37॥
ಭಾರತನೇ, ಹೀಗೆ ಚಿಂತಿಸುತ್ತಿದ್ದ ನಾವೆಲ್ಲರೂ ಒಂದು ಮುಹೂರ್ತದಲ್ಲಿ ಮಹಾನುಭಾವರಾದ ದೇವರ್ಷಿಗಳಾದ ನಾರದರನ್ನು ನೋಡಿದೆವು.
ಸಂಪ್ರಹೃಷ್ಟಾಃ ಸ್ಮ ತಂ ದೃಷ್ಟ್ವಾ ದೇವರ್ಷಿಮಮಿತದ್ಯುತಿಮ್ |
ಅಭಿವಾದ್ಯ ಚ ತಂ ಪಾರ್ಥ ಸ್ಥಿತಾ ವ್ರೀಡಿತಚೇತಸಃ ॥38॥
ಪಾರ್ಥನೇ, ಅಮಿತಕಾಂತಿಯನ್ನುಳ್ಳ ದೇವರ್ಷಿಗಳನ್ನು ನೋಡಿ, ನಾವು ಸಂತೋಷಗೊಂಡು ಅವರಿಗೆ ನಮಸ್ಕರಿಸಿ, ನಾಚಿಕೆಯಿಂದ ನಿಂತುಕೊಂಡೆವು.
ಸ ನೋಽಪೃಚ್ಛದ್ ದುಃಖಮೂಲಮುಕ್ತವತ್ಯೋ ವಯಂ ಚ ತತ್ |
ಶ್ರುತ್ವಾ ತಚ್ಚ ಯಥಾವೃತ್ತಮಿದಂ ವಚನಮಬ್ರವೀತ್ ॥39॥
ಅವರು ನಮ್ಮ ದುಃಖಕ್ಕೆ ಕಾರಣವನ್ನು ಕೇಳಿದರು. ನಾವು ಎಲ್ಲವನ್ನೂ ಹೇಳಿದೆವು. ನಡೆದ ಎಲ್ಲವನ್ನೂ ಕೇಳಿದ ಅವರು ಈ ಮಾತನ್ನಾಡಿದನು.
ದಕ್ಷಿಣೇ ಸಾಗರಾನೂಪೇ ಪಂಚ ತೀರ್ಥಾನಿ ಸಂತಿ ವೈ |
ಪುಣ್ಯಾನಿ ರಮಣೀಯಾನಿ ತಾನಿ ಗಚ್ಛತ ಮಾಚಿರಮ್ ॥40॥
ದಕ್ಷಿಣದ ಸಾಗರದ ಸಮೀಪದಲ್ಲಿ ಐದು ತೀರ್ಥಗಳಿವೆ. ಅವು ಪುಣ್ಯವೂ ಮತ್ತು ರಮಣೀಯವೂ ಆಗಿವೆ. ಬೇಗ ಅಲ್ಲಿಗೆ ಹೋಗಿ.
ತತ್ರಾಶು ಪುರುಷವ್ಯಾಘ್ರಃ ಪಾಂಡವೇಯೋ ಧನಂಜಯಃ |
ಮೋಕ್ಷಯಿಷ್ಯತಿ ಶುದ್ಧಾತ್ಮಾ ಪಾಪಾದಸ್ಮಾನ್ನ ಸಂಶಯಃ ॥41॥
ಅಲ್ಲಿ ಪುರುಷವ್ಯಾಘ್ರನಾದ, ಶುದ್ಧಾತ್ಮನಾದ, ಪಾಂಡುಪುತ್ರನಾದ ಧನಂಜಯನು ಬೇಗ ನಿಮ್ಮನ್ನು ಈ ಪಾಪದಿಂದ ಬಿಡುಗಡೆಗೊಳಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ.
ವೃಂದಾ
ಇತ್ಯುಕ್ತ್ವಾ ನಾರದಃ ಸರ್ವಾಸ್ತತ್ರೈವಾಂತರಧೀಯತ |
ತಸ್ಮಾತ್ ಸರ್ವಾ ವಯಂ ವೀರ ನಿವಸಾಮೋಽತ್ರ ನಿತ್ಯಶಃ ॥42॥
ನಾರದರು ನಮಗೆಲ್ಲರಿಗೂ ಹೀಗೆ ಹೇಳಿ ಅಲ್ಲಿಯೇ ಅದೃಶ್ಯರಾದರು. ವೀರನೇ, ಆ ಕಾರಣದಿಂದ ನಾವೆಲ್ಲರೂ ಯಾವಾಗಲೂ ಇಲ್ಲಿಯೇ ವಾಸಮಾಡುತ್ತಿದ್ದೇವೆ.
ತದಿದಂ ಸತ್ಯಮೇವಾದ್ಯ ಮೋಕ್ಷಿತಾಽಹಂ ತ್ವಯಾಽನಘ |
ಏತಾಸ್ತು ಮಮ ವೈ ಸಖ್ಯಶ್ಚತಸ್ರೋಽನ್ಯಾ ಹ್ರದೇ ಸ್ಥಿತಾಃ |
ಏತಾ ಅಪಿ ಮಹಾಬಾಹೋ ಮುನಿಶಾಪಾದ್ ವಿಮೋಕ್ಷಯ ॥43॥
ನಾರದರ ಮಾತು ಸತ್ಯವಾಯಿತು. ಅನಘನೇ, ನಾನು ಶಾಪದಿಂದ ಮುಕ್ತಳಾಗಿದ್ದೇನೆ. ಆದರೆ, ನನ್ನ ಉಳಿದ ನಾಲ್ಕು ಸಖಿಯರು ಇಲ್ಲಿಯೇ ತೀರ್ಥಗಳಲ್ಲಿದ್ದಾರೆ. ಮಹಾಬಾಹುವೇ, ಅವರನ್ನೂ ಸಹ ಬ್ರಾಹ್ಮಣಶಾಪದಿಂದ ವಿಮೋಚನೆಗೊಳಿಸು.
ವೈಶಂಪಾಯನಃ
ತಚ್ಛ್ರುತ್ವಾ ಪಾಂಡವಶ್ರೇಷ್ಠಃ ಸರ್ವಾ ಏವ ವಿಶಾಂಪತೇ |

ತಸ್ಮಾಚ್ಛಾಪಾದದೀನಾತ್ಮಾ ಮೋಕ್ಷಯಾಮಾಸ ವೀರ್ಯವಾನ್ ॥44॥
ರಾಜನ್, ಅದನ್ನು ಕೇಳಿ ಪಾಂಡವಶ್ರೇಷ್ಠನಾದ, ವೀರ್ಯವಂತನಾದ ಅರ್ಜುನನು ಉದಾರಮನಸ್ಸಿನಿಂದ ಅವರೆಲ್ಲರನ್ನೂ ಶಾಪದಿಂದ ಮೋಚನೆಮಾಡಿದನು.
ಉತ್ಥಾಯ ಚ ಜಲಾತ್ ಸರ್ವಾಃ ಪ್ರತಿಲಭ್ಯ ಸ್ವಕಂ ವಪುಃ |
ತಾಸ್ತದಾಽಪ್ಸರಸೋ ರಾಜನ್ನದೃಶ್ಯಂತ ಯಥಾ ಪುರಾ ॥45॥
ರಾಜನ್, ಅವರೆಲ್ಲರೂ ನೀರಿನಿಂದ ಮೇಲೆ ಬಂದು, ತಮ್ಮ ತಮ್ಮ ದೇಹಗಳನ್ನು ಹೊಂದಿ, ಮೊದಲಿನಂತೆ ಅಪ್ಸರೆಯರೇ ಆಗಿ ತೋರಿದರು.
ತೀರ್ಥಾನಿ ಶೋಧಯಿತ್ವಾಽಥ ತಥಾಽನುಜ್ಞಾಯ ತಾಃ ಪ್ರಭುಃ |
ಚಿತ್ರಾಂಗದಾಂ ಪುನರ್ದ್ರಷ್ಟುಂ ಮಣಲೂರಪುರಂ ಯಯೌ ॥46॥
ಅನಂತರ, ಅರ್ಜುನನು ಆ ತೀರ್ಥಗಳನ್ನು ಶೋಧಿಸಿ, ಆ ನಾರಿಯರ ಅನುಜ್ಞೆಯನ್ನು ಪಡೆದು ಚಿತ್ರಾಂಗದೆಯನ್ನು ನೋಡಲು ಪುನಃ ಮಣಲೂರ ನಗರಕ್ಕೆ ಬಂದನು.
ತಸ್ಯಾಮಜನಯತ್ ಪುತ್ರಂ ರಾಜಾನಂ ಬಭ್ರುವಾಹನಮ್ |
ತಂ ದೃಷ್ಟ್ವಾ ಪಾಂಡವೋ ರಾಜನ್ ಚಿತ್ರವಾಹನಮಬ್ರವೀತ್ ॥47॥
ಅವಳಲ್ಲಿ ಅವನು ರಾಜನಾದ ಬಭ್ರುವಾಹನನನ್ನು ಮಗನಾಗಿ ಪಡೆದನು. ರಾಜನ್, ಅವನನ್ನು ನೋಡಿ ಅರ್ಜುನನು ಚಿತ್ರವಾಹನನನ್ನು ಕುರಿತು ಹೇಳಿದನು.
ಚಿತ್ರಾಂಗದಾಯಾಃ ಶುಲ್ಕಾರ್ಥಂ ಗೃಹ್ಣೇಮಂ ಬಭ್ರುವಾಹನಮ್ |
ಚಿತ್ರಾಂಗದಾಂ ಪುನರ್ವಾಕ್ಯಮಬ್ರವೀತ್ ಪಾಕಶಾಸನಿಃ ॥48॥
ಚಿತ್ರಾಂಗದೆಯ ಶುಲ್ಕದ ಸಲುವಾಗಿ ಈ ಬಭ್ರುವಾಹನನನ್ನು ಸ್ವೀಕರಿಸು. ಇಂದ್ರನ ಪುತ್ರನಾದ ಅರ್ಜುನನು ಚಿತ್ರಾಂಗದೆಯನ್ನು ಕುರಿತು ಪುನಃ ಹೀಗೆ ಹೇಳಿದನು.
ಅನೇನ ತು ಮಹಿಷ್ಯದ್ಯ ಋಣಾನ್ಮುಕ್ತೋ ಜನಾಧಿಪಃ |
ಇಹೈವ ಭವ ಭದ್ರೇ ತ್ವಂ ಬಭ್ರುವಾಹನವರ್ಧನಾತ್ ॥49॥
ರಾಣಿಯೇ, ಈ ಬಭ್ರುವಾಹನನಿಂದ ರಾಜನು ಋಣಮುಕ್ತನಾಗಿದ್ದಾನೆ. ಭದ್ರೇ, ಬಭ್ರುವಾಹನನನ್ನು ಪೋಷಿಸುವ ಸಲುವಾಗಿ ನೀನು ಇಲ್ಲೇ ಇರು.
ಇಂದ್ರಪ್ರಸ್ಥನಿವಾಸಂ ಮೇ ಆಗತ್ವಾ ತತ್ರ ರಂಸ್ಯಸೇ |
ಕುಂತೀಂ ಯುಧಿಷ್ಠಿರಂ ಭೀಮಂ ಭ್ರಾತರೌ ಮೇ ಕನೀಯಸೌ ॥50॥
ಆಗತಾ ತತ್ರ ಪಶ್ಯೇಥಾ ಅನ್ಯಾನಪಿ ಚ ಬಾಂಧವಾನ್ |
ಬಾಂಧವೈಃ ಸಹಿತಾ ಭದ್ರೇ ನಂದಸೇ ತ್ವಮನಿಂದಿತೇ ॥51॥
ನಾನು ಇಂದ್ರಪ್ರಸ್ಥದಲ್ಲಿ ವಾಸಮಾಡುವಾಗ ನೀನು ಅಲ್ಲಿಗೆ ಬಂದು ನನ್ನ ಜೊತೆಯಲ್ಲಿ ಸುಖವಾಗಿರುವಿ. ಅಲ್ಲಿಗೆ ಬಂದು ನೀನು ಕುಂತಿಯನ್ನೂ, ಯುಧಿಷ್ಠಿರನನ್ನೂ, ಭೀಮಸೇನನನ್ನೂ, ನನ್ನ ತಮ್ಮಂದಿರಾದ ನಕುಲಸಹದೇವರನ್ನೂ ಉಳಿದ ಬಂಧುಗಳನ್ನೂ ನೋಡುವಿ. ಅನಿಂದಿತೆಯೇ, ಭದ್ರೆಯೇ, ಬಾಂಧವರಜೊತೆಯಲ್ಲಿ ನೀನು ಸುಖವನ್ನು ಹೊಂದುವಿ.
ಧರ್ಮೇ ಸ್ಥಿತಃ ಸತ್ಯಧೃತಿಃ ಕುಂತೀಪುತ್ರೋ ಯುಧಿಷ್ಠಿರಃ |
ಜಿತ್ವಾ ತು ಪೃಥಿವೀಂ ಕೃತ್ಸ್ನಾಂ ರಾಜಸೂಯಂ ಕರಿಷ್ಯತಿ ॥52॥
ಧರ್ಮಿಷ್ಠನಾದ, ಸತ್ಯಧೃತಿಯಾದ ಕುಂತೀಪುತ್ರನಾದ ಯುಧಿಷ್ಠಿರನು ಸಮಗ್ರವಾದ ಭೂಮಿಯನ್ನು ಗೆದ್ದು ರಾಜಸೂಯಯಾಗವನ್ನು ಮಾಡುವನು.
ತತ್ರಾಗಚ್ಛಂತಿ ರಾಜಾನಃ ಪೃಥಿವ್ಯಾಂ ನೃಪಸಂಜ್ಞಿತಾಃ |
ಬಹೂನಿ ರತ್ನಾನ್ಯಾದಾಯ ಆಗಮಿಷ್ಯತಿ ತೇ ಪಿತಾ ॥53॥
ಭೂಮಿಯಲ್ಲಿ ರಾಜನೆಂದು ಕರೆಸಿಕೊಳ್ಳುವ ಎಲ್ಲರೂ ಅಲ್ಲಿಗೆ ಬರುತ್ತಾರೆ. ನಿನ್ನ ತಂದೆಯೂ ಸಹ ಅನೇಕ ರತ್ನಗಳನ್ನು ತೆಗೆದುಕೊಂಡು ಅಲ್ಲಿಗೆ ಬರುವನು.
ಏಕಸಾರ್ಥಂ ಪ್ರಯಾತಾಽಸಿ ಚಿತ್ರವಾಹನಸೇನಯಾ |
ದ್ರಕ್ಷ್ಯಾಮಿ ರಾಜಸೂಯೇ ತ್ವಾಂ ಪುತ್ರಂ ಪಾಲಯ ಮಾ ಶುಚಃ ॥54॥
ನೀನು ಚಿತ್ರವಾಹನನ ಸೇನೆಯ ಜೊತೆಯಲ್ಲಿ ಒಂದೇ ಗುಂಪಿನಲ್ಲಿ ಬರುವಿ. ನಾನು ನಿನ್ನನ್ನು ರಾಜಸೂಯಯಾಗದಲ್ಲಿ ನೋಡುವೆನು. ಮಗನನ್ನು ರಕ್ಷಿಸು. ಶೋಕಪಡಬೇಡ.
ಬಭ್ರುವಾಹನನಾಮ್ನಾ ತು ಮಮ ಪ್ರಾಣೋ ಬಹಿಶ್ಚರಃ |
ತಸ್ಮಾದ್ ಭರಸ್ವ ಪುತ್ರಂ ವೈ ಪುರುವಂಶವಿವರ್ಧನಮ್ ॥55॥
ಬಭ್ರುವಾಹನನೆಂದರೆ ಹೊರಗೆ ಸಂಚರಿಸುತ್ತಿರುವ ನನ್ನ ಪ್ರಾಣವೆಂದು ತಿಳಿ. ಆದ್ದರಿಂದ ಪುರುವಂಶವರ್ಧನನಾದ ಈ ಮಗನನ್ನು ಪೋಷಿಸು.
ಚಿತ್ರವಾಹನದಾಯಾದಂ ಧರ್ಮಾತ್ ಪೌರವನಂದನಮ್ |
ಪಾಂಡವಾನಾಂ ಪ್ರಿಯಂ ಪುತ್ರಂ ತಸ್ಮಾತ್ ಪಾಲಯ ಸರ್ವದಾ |
ವಿಪ್ರಯೋಗೇಣ ಸಂತಾಪಂ ಮಾ ಕೃಥಾಸ್ತ್ವಮನಿಂದಿತೇ ॥56॥
ಪೌರವನಂದನನಾದ, ಚಿತ್ರವಾಹನನ ಉತ್ತರಾಧಿಕಾರಿಯಾದ, ಪಾಂಡವರಿಗೆ ಪ್ರಿಯನಾದ ಈ ಪುತ್ರನನ್ನು ಆ ಕಾರಣದಿಂದ

ಯಾವಾಗಲೂ ಪಾಲಿಸು. ಅನಿಂದಿತೆಯೇ, ನನ್ನ ವಿಯೋಗದಿಂದ ಸಂತಾಪವನ್ನು ಪಡಬೇಡ.
ವೈಶಂಪಾಯನಃ
ಚಿತ್ರಾಂಗದಾಮೇವಮುಕ್ತ್ವಾ ಸಾಗರಾನೂಪಮಾಶ್ರಿತಃ |
ಸ್ನಾನಂದೂರಂ ಸಮಾಪ್ಲುತ್ಯ ದತ್ವಾ ಬಹುಧನಂ ತದಾ |
ಕೇರಳಾನ್ ಸಮತಿಕ್ರಮ್ಯ ಗೋಕರ್ಣಮಭಿತೋಽಗಮತ್ ॥57॥
ಅರ್ಜುನನು ಚಿತ್ರಾಂಗದೆಯನ್ನು ಕುರಿತು ಈ ರೀತಿ ಹೇಳಿ ಸಮುದ್ರತೀರಕ್ಕೆ ಹೋಗಿ ಅನಂತಶಯನದಲ್ಲಿ ಸ್ನಾನವನ್ನು ಮಾಡಿ, ಬಹುಧನವನ್ನು ದಾನಮಾಡಿ, ಕೇರಳವನ್ನು ದಾಟಿ, ಗೋಕರ್ಣದ ಸಮೀಪಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟಾವಿಂಶತ್ಯಕದ್ವಿಶತತಮೋಽಧ್ಯಾಯಃ ॥
॥ ಇತಿ ಅರ್ಜುನವನವಾಸಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಹದಿನೆಂಟನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ವಿಚಿಂತ್ಯ ಕಾರ್ಯಂ ಯತಿರೂಪಂ ಗೃಹೀತ್ವಾ
ಕುಶಸ್ಥಲೀಂ ಪ್ರಯಯೌ ತಂ ಸಮೀಪೇ |
ಪ್ರಾಪ್ತಂ ಕೃಷ್ಣಃ ಪ್ರಾಹಸತ್ ಸಂವಿಜಾನನ್
ಸತ್ಯಾಸಹಾಯಃ ಶಯನೀಯಾಧಿರೂಢಃ ॥167॥
ಅರ್ಜುನ ತಾನೀಗ ಮಾಡಬೇಕಾದುದನ್ನು ಚೆನ್ನಾಗಿ ಆಲೋಚಿಸಿ ಸಂನ್ಯಾಸಿ ವೇಷಧರಿಸಿ ದ್ವಾರಕೆಗೆ ಹೊರಟ. ರಾತ್ರಿಯಲ್ಲಿ ಸತ್ಯಭಾಮೆಯೊಂದಿಗೆ ಪರ್ಯಂಕದಲ್ಲಿ ಕುಳಿತಿದ್ದ ಕೃಷ್ಣ ಅರ್ಜುನ ತಮ್ಮ ಸಮೀಪಕ್ಕೆ ಬಂದುದನ್ನು ತಿಳಿದು ನಕ್ಕ.
ಸರ್ವಜ್ಞಾ ಸಾ ಲೀಲಯಾ ಹಾಸಹೇತು-
ಮಪೃಚ್ಛತ್ತಂ ಸೋಽಪಿ ತಸ್ಯೈ ಬಭಾಷೇ |
ಲೀಲಾಭಾಜೌ ದರ್ಶನಾರ್ಥಂ ಪುನಸ್ತಾ-
ವಗಚ್ಛತಾಂ ರೈವತಂ ಶೈಲರಾಜಂ ॥168॥
ಸರ್ವಜ್ಞಳಾದರೂ ಲೀಲೆಯಿಂದ ಸತ್ಯಭಾಮೆ ಆ ನಗುವಿಗೆ ಕಾರಣವನ್ನು ಕೇಳಿದಳು. ಕೃಷ್ಣ ಹೇಳಿದ. ಲೀಲೆ ಮಾಡುತ್ತಲೆ ಇಬ್ಬರೂ ಸಂನ್ಯಾಸಿಯ ದರ್ಶನಕ್ಕೆ ರೈವತ ಪರ್ವತಕ್ಕೆ ನಡೆದರು.
* * * *
ಇನ್ನೂರ ಹತ್ತೊಂಭತ್ತನೆಯ ಅಧ್ಯಾಯ
(ಅರ್ಜುನನ ಪ್ರಭಾಸಪ್ರಾಪ್ತಿ. ಸುಭದ್ರೆಯ ಚಿಂತೆಯಿಂದ ಯತಿವೇಷಧಾರಣ. ಕೃಷ್ಣನ ಆಗಮನ, ಸಮ್ಮತಿ ಮತ್ತು ಭೋಜನಾದಿ ವ್ಯವಸ್ಥೆ. ದ್ವಾರಕಾಪಟ್ಟಣಕ್ಕೆ ಪ್ರತಿನಿವೃತ್ತಿ.)
ವೈಶಂಪಾಯನಃ
ಸೋಽಪರಾಂತೇಷು ತೀರ್ಥಾನಿ ಪುಣ್ಯಾನ್ಯಾಯತನಾನಿ ಚ |
ಸರ್ವಾಣಿ ಚಾನುಪೂರ್ವ್ಯೇಣ ಜಗಾಮಾಮಿತವಿಕ್ರಮಃ ॥1॥
ಅಮಿತವಿಕ್ರಮನಾದ ಅರ್ಜುನನು ಪಶ್ಚಿಮಸಮುದ್ರತೀರದಲ್ಲಿದ್ದ ಎಲ್ಲಾ ತೀರ್ಥಗಳಿಗೂ ಮತ್ತು ಪವಿತ್ರವಾದ ಕ್ಷೇತ್ರಗಳಿಗೂ ಕ್ರಮವಾಗಿ ಹೋದನು.
ಸಮುದ್ರೇ ಪಶ್ಚಿಮೇ ಯಾನಿ ತೀರ್ಥಾನ್ಯಾಯತನಾನಿ ಚ |
ತಾನಿ ಗತ್ವಾ ಸ ಸರ್ವಾಣಿ ಪ್ರಭಾಸಮುಪಜಗ್ಮಿವಾನ್ ॥2॥
ಪಶ್ಚಿಮಸಮುದ್ರತೀರದಲ್ಲಿದ್ದ ಎಲ್ಲಾ ತೀರ್ಥಗಳಿಗೂ ಮತ್ತು ಪವಿತ್ರವಾದ ಕ್ಷೇತ್ರಗಳಿಗೂ ಹೋಗಿ, ಅವನು ಪ್ರಭಾಸವನ್ನು ತಲುಪಿದನು.

ಚಿಂತಯಾಮಾಸ ರಾತ್ರೌ ತು ಗದೇನ ಕಥಿತಾಃ ಕಥಾಃ |
ಸುಭದ್ರಾಯಾಶ್ಚ ಮಾಧುರ್ಯರೂಪಸಂಪದ್ಗುಣಾನಿ ಚ ॥3॥
ಅವನು ರಾತ್ರಿಯಲ್ಲಿ ಗದನು ಹೇಳಿದ ಸುಭದ್ರೆಯ ಮಾಧುರ್ಯ, ಸದ್ಗುಣ ಮೊದಲಾದ ವಿಷಯದ ಮಾತುಗಳನ್ನು ಚಿಂತಿಸಿದನು.
ಪ್ರಾಪ್ತುಂ ತಾಂ ಚಿಂತಯಾಮಾಸ ಕೋಽತ್ರೋಪಾಯೋ ಭವೇದಿತಿ|
ವೇಷವೈಕೃತಮಾಪನ್ನಃ ಪರಿವ್ರಾಜಕರೂಪಧೃಕ್ ॥4॥
ಕುಕುರಾಂಧಕವೃಷ್ಣೀನಾಮಜ್ಞಾತೋ ವೇಷಧಾರಣಾತ್ |
ಭ್ರಮಮಾಣಶ್ಚರನ್ ಭೈಕ್ಷಂ ಪರಿವ್ರಾಜಕವೇಷಧೃಕ್ ॥5॥
ಅವಳನ್ನು ಪಡೆಯಲು ಯಾವುದು ಉಪಾಯ ಎಂದು ಯೋಚಿಸುತ್ತಾ, ತನ್ನ ವೇಷವನ್ನು ಬದಲಾಯಿಸಿ ಕುಕುರಾಂಧಕವೃಷ್ಣಿಗಳಿಗೆ ತನ್ನ ವೇಷವು ತಿಳಿಯದಂತೆ ಪರಿವ್ರಾಜಕವೇಷವನ್ನು ಧರಿಸಿ, ಭೈಕ್ಷವೃತ್ತಿಯನ್ನು ಮಾಡಿ ತಿರುಗಾಡಿದನು.
ಯೇನ ಕೇನಾಪ್ಯುಪಾಯೇನ ಪ್ರವಿಶ್ಯ ಚ ಗೃಹಂ ಮಹತ್ |
ದೃಷ್ಟ್ವಾ ಸುಭದ್ರಾಂ ಕೃಷ್ಣಸ್ಯ ಭಗಿನೀಮೇಕಸುಂದರೀಮ್ ॥6॥
ವಾಸುದೇವಮತಂ ಜ್ಞಾತ್ವಾ ಕರಿಷ್ಯಾಮಿ ಹಿತಂ ಶುಭಮ್ |

ಏವಂ ವಿನಿಶ್ಚಯಂ ಕೃತ್ವಾ ದೀಕ್ಷಿತೋ ವೈ ತದಾಽಭವತ್ ॥7|
ಯಾವ ಉಪಾಯದಿಂದಲಾದರೂ ಕೃಷ್ಣನ ಶ್ರೇಷ್ಠವಾದ ಗೃಹವನ್ನು ಪ್ರವೇಶಿಸಿ, ಕೃಷ್ಣನ ತಂಗಿಯಾದ ಏಕಸುಂದರಿಯಾದ ಸುಭದ್ರೆಯನ್ನು ನೋಡಿ, ಕೃಷ್ಣನ ಅಭಿಪ್ರಾಯವನ್ನು ತಿಳಿದು ಹಿತವನ್ನೂ, ಶುಭವನ್ನೂ ಸಂಪಾದಿಸುತ್ತೇನೆ. ಹೀಗೆ ಚಿಂತನೆಯನ್ನು ಮಾಡಿ ಅವನು ಯತಿರೂಪವನ್ನು ಧರಿಸಿ ದೀಕ್ಷಿತನಾದನು.
ತ್ರಿದಂಡೀ ಮುಂಡಿತಃ ಕುಂಡೀ ಅಕ್ಷಮಾಲಾಂಗುಲೀಯಕಃ |
ಯೋಗಭಾರವಹಃ ಪಾರ್ಥೋ ವಟವೃಕ್ಷಸ್ಯ ಕೋಟರಮ್ ॥8॥
ಪ್ರವಿಶನ್ನೇವ ಬೀಭತ್ಸುಶ್ಚಿಂತಯಾಮಾಸ ಕೇಶವಮ್ |
ಕೇಶವಶ್ಚಿಂತಿತಂ ಜ್ಞಾತ್ವಾ ದಿವ್ಯಜ್ಞಾನೇನ ದೃಷ್ಟವಾನ್ ॥9॥
ಅರ್ಜುನನು ತಲೆಯನ್ನು ವಪನಮಾಡಿ, ತ್ರಿದಂಡವನ್ನೂ ಮತ್ತು ಕಮಂಡಲವನ್ನೂ ಹಿಡಿದು ಅಕ್ಷಮಾಲೆಯನ್ನು, ಉಂಗುರಗಳನ್ನೂ ಧರಿಸಿ, ತನಗೆ ಬೇಕಾದ ದೇವಪೂಜಾದಿ ಸಾಮಗ್ರಿಗಳನ್ನು ತಾನೇ ಹೊತ್ತುಕೊಂಡು ವಟವೃಕ್ಷದ ಪೊಟರೆಗೆ (ನೆರಳಿಗೆ) ಹೋದನು. ಅರ್ಜುನನು ಅಲ್ಲಿಗೆ ಹೋಗುತ್ತಲೇ, ಕೃಷ್ಣನನ್ನು ಚಿಂತಿಸಿದನು.
ಶಯಾನಃ ಶಯನೇ ಧನ್ಯೇ ಸತ್ಯಭಾಮಾಸಹಾಯವಾನ್ |
ಕೇಶವಃ ಸಹಸಾ ರಾಜನ್ ಜಹಾಸ ಚ ನನಂದ ಚ ॥10॥
ಕೃಷ್ಣನು ಸತ್ಯಭಾಮೆಯ ಜೊತೆಯಲ್ಲಿ ಶ್ರೇಷ್ಠವಾದ ಹಾಸಿಗೆಯಲ್ಲಿ ಮಲಗಿ, ತನ್ನ ದಿವ್ಯಜ್ಞಾನದಿಂದ ಅರ್ಜುನನ ಚಿಂತಾವಿಷಯವನ್ನು ತಿಳಿದನು. ರಾಜನೇ, ಕೃಷ್ಣನು ಇದ್ದಕ್ಕಿದ್ದಂತೆಯೇ, ನಕ್ಕು ಸಂತೋಷಪಟ್ಟನು.
ಪುನಃ ಪುನಃ ಸತ್ಯಭಾಮಾ ಚಾಬ್ರುವೀತ್ ಪುರುಷೋತ್ತಮಮ್ |
ಭಗವಂಶ್ಚಿಂತಯಾಽಽವಿಷ್ಟಃ ಶಯನೇ ಶಯಿತಃ ಸುಖಮ್ ॥11॥
ಭವಾನ್ ಬಹುಪ್ರಕಾರೇಣ ಜಹಾಸ ಚ ಪುನಃಪುನಃ |
ಶ್ರೋತವ್ಯಂ ಯದಿ ವಾ ಕೃಷ್ಣ ಪ್ರಸಾದೋ ಯದಿ ಚೇನ್ಮಯಿ |
ವಕ್ತುಮರ್ಹಸಿ ಲೋಕೇಶ ತಚ್ಛ್ರೋತುಂ ಕಾಮಯೇ ಹ್ಯಹಮ್ ॥12॥
ಸತ್ಯಭಾಮೆಯು ಪುರುಷೋತ್ತಮನಾದ ಕೃಷ್ಣನನ್ನು ಕುರಿತು ಮತ್ತೆ ಮತ್ತೆ ಕೇಳಿದಳು. ಪೂಜ್ಯನೇ, ಚಿಂತೆಯಿಂದ ಕೂಡಿದ್ದ ನೀನು ಹಾಸಿಗೆಯಲ್ಲಿ ಸುಖವಾಗಿ ಮಲಗಿದ್ದೆ. ಈಗ, ಬಹುಪ್ರಕಾರದಿಂದ ಮತ್ತೆ ಮತ್ತೆ
ನಗುತ್ತಿದ್ದೀಯೆ. ಕೃಷ್ಣ, ನಾನು ಕೇಳಬಹುದಾದರೆ, ನನ್ನಲ್ಲಿ ನಿನಗೆ ಅನುಗ್ರಹವಿದ್ದರೆ, ನೀನು ಅದಕ್ಕೆ ಕಾರಣವನ್ನು ಹೇಳಬೇಕು. ಲೋಕೇಶನೇ, ನಾನು ಅದನ್ನು ಕೇಳಲು ಬಯಸುತ್ತೇನೆ.
ಶ್ರೀಭಗವಾನ್
ಪಿತೃಷ್ವಸಾಯಾಃ ಪುತ್ರೋ ಮೇ ಭೀಮಸೇನಾನುಜೋಽರ್ಜುನಃ |
ತೀರ್ಥಯಾತ್ರಾಂ ಗತಃ ಪಾರ್ಥಃ ಕಾರಣಾತ್ ಸಮಯಾತ್ ತದಾ ॥
ನನ್ನ ಸೋದರತ್ತೆಯ ಮಗನಾದ ಭೀಮಸೇನನ ತಮ್ಮನಾದ ಅರ್ಜುನನು ತಾವು ಮಾಡಿಕೊಂಡ ಸಮಯದ ನಿಮಿತ್ತದಿಂದ ತೀರ್ಥಯಾತ್ರೆಗೆ ಹೊರಟನು.
ತೀರ್ಥಯಾತ್ರಾಸಮಾಪ್ತೌ ತು ನಿವೃತ್ತೋ ನಿಶಿ ಭಾರತಃ |
ಸುಭದ್ರಾಂ ಚಿಂತಯಾನಸ್ತು ತದರ್ಥೇ ಚಾಪಿ ಮಾಂ ಪುನಃ ॥14॥
ಚಿಂತಯನ್ನೇವ ತಾಂ ಭದ್ರೇ ಯತಿರೂಪಧರೋಽಭವತ್ |
ಯತಿರೂಪಪ್ರತಿಚ್ಛನ್ನೋ ದ್ವಾರಕಾಂ ಪ್ರಾಪ್ಯ ಮಾಧವೀಮ್ ॥15॥
ಅರ್ಜುನನು ತೀರ್ಥಯಾತ್ರೆಯನ್ನು ಮುಗಿಸಿ, ರಾತ್ರಿಯಲ್ಲಿ ಮಲಗಿದಾಗಿ ಸುಭದ್ರೆಯನ್ನು ಕುರಿತು ಚಿಂತಿಸುತ್ತಾ, ಅವಳನ್ನು ಪಡೆಯುವ ಸಲುವಾಗಿ ಪುನಃ ನನ್ನನ್ನೂ ಚಿಂತಿಸುತ್ತಾ ಯತಿವೇಷವನ್ನು ಧರಿಸಿದ್ದಾನೆ.
ಯೇನ ಕೇನಾಪ್ಯುಪಾಯೇನ ದೃಷ್ಟ್ವಾ ತು ವರವರ್ಣಿನೀಮ್ |
ವಾಸುದೇವಮತಂ ಜ್ಞಾತ್ವಾ ಪ್ರಯತಿಷ್ಯೇ ಮನೋರಥಮ್ ॥16॥
ಯತಿರೂಪದಿಂದ ನನ್ನ ವೇಷವನ್ನು ಮರೆಸಿಕೊಂಡು ದ್ವಾರಕೆಗೆ ಬಂದು ಯಾವುದಾದರೂ ಉಪಾಯದಿಂದ ಸುಂದರಿಯಾದ ಸುಭದ್ರೆಯನ್ನು ನೋಡಿ ಕೃಷ್ಣನ ಅಭಿಪ್ರಾಯವನ್ನು ತಿಳಿದು ನನ್ನ ಮನೋರಥವನ್ನು ಪೂರೈಸಿಕೊಳ್ಳಲು ಪ್ರಯತ್ನಪಡುವೆನು.
ಏವಂ ವ್ಯವಸಿತಃ ಪಾರ್ಥೋ ಯತಿಲಿಂಗೇನ ಪಾಂಡವಃ |
ಛಾಯಾಯಾಂ ವಟವೃಕ್ಷಸ್ಯ ವೃಷ್ಟಿಂ ವರ್ಷತಿ ವಾಸವೇ |
ಯೋಗಭಾರಂ ವಹನ್ನೇವ ಮಾನಸಂ ದುಃಖಮಾಪ್ತವಾನ್ ॥17॥
ಪಾಂಡುಪುತ್ರನಾದ ಅರ್ಜುನನು ಹೀಗೆ ನಿರ್ಧರಿಸಿ, ಯತಿವೇಷವನ್ನು ಧರಿಸಿ, ವಟವೃಕ್ಷದ ಛಾಯೆಯಲ್ಲಿ ಇಂದ್ರನು ಮಳೆಯನ್ನು ಸುರಿಸುತ್ತಿರುವಂತೆಯೇ, ತನ್ನ ಯೋಗಭಾರವನ್ನು ಹೊತ್ತುಕೊಂಡು ಕುಳಿತು, ಮನಸ್ಸಿನಲ್ಲಿ ದುಃಖವನ್ನು ಹೊಂದಿದ್ದಾನೆ.
ಈದೃಶಂ ಮಾಂ ವಿಜಾನಾತಿ ಮಾಧವೋ ಯದಿ ಮಾಂ ಸ್ಮರನ್ |
ಕಿಂಚಿದ್ ವ್ಯಾಜಮವಷ್ಟಭ್ಯ ಯಾಯಾತ್ ಕತಿಪಯೈರ್ಜನೈಃ ॥18॥
ತದ್ಭಾವಂ ಪ್ರವಿಚಿಂತ್ಯೈವ ಹಸಿತಂ ಮೇ ಸುಲೋಚನೇ |
ನಾಸ್ತ್ಯನ್ಯನ್ಮಾ ವಿಶಂಕೇಥಾಃ ಶಪೇ ಸತ್ಯೇನ ಮೇ ಶುಭೇ ॥19॥
ಮಾಧವನು ನನ್ನನ್ನು ಸ್ಮರಿಸಿ ನಾನು ಈ ಅವಸ್ಥೆಯಲ್ಲಿರುವುದನ್ನು ತಿಳಿದರೆ, ಯಾವುದಾದರೂ ನೆಪವನ್ನು ಮಾಡಿಕೊಂಡು ಕೆಲವರ ಜೊತೆಯಲ್ಲಿ ಇಲ್ಲಿಗೆ ಬರುತ್ತಾನೆ. ಸುಲೋಚನೆಯೇ, ಅವನ ಈ ಅಭಿಪ್ರಾಯವನ್ನು ಚಿಂತಿಸಿ ನನಗೆ ನಗುವು ಬಂದಿತು. ಬೇರೆ ಏನೂ

ಕಾರಣವಿಲ್ಲ. ನನ್ನನ್ನು ಶಂಕಿಸಬೇಡ. ಶುಭಳಾದವಳೇ, ನಾನು ಪ್ರಮಾಣವನ್ನು ಮಾಡಿ ಹೇಳುತ್ತೇನೆ.
ವೈಶಂಪಾಯನಃ
ಭ್ರಾತರಂ ವ್ರೋಽಭಿಪಶ್ಯೇತಿ ಸತ್ಯಭಾಮಾಮುದೀರ್ಯ ಸಃ |
ತತ ಉತ್ಥಾಯ ಶಯನಾತ್ ಪ್ರಸ್ಥಿತೋ ಮಧುಸೂದನಃ ॥20॥
ನಿನ್ನ ಅಣ್ಣನನ್ನು ಹೋಗಿ ನೋಡು ಎಂದು ಸತ್ಯಭಾಮೆಗೆ ಹೇಳಿ, ಕೃಷ್ಣನು ಹಾಸಿಗೆಯಿಂದೆದ್ದು ಅಲ್ಲಿಂದ ಹೊರಟನು.
ಪ್ರಭಾಸಂ ಸಮನುಪ್ರಾಪ್ತಂ ಬೀಭತ್ಸುಮಪರಾಜಿತಮ್ |
ತೀರ್ಥಾನ್ಯನುಚರಂತಂ ಚ ಶುಶ್ರಾವ ಮಧುಸೂದನಃ ॥21॥
ತೀರ್ಥಯಾತ್ರಾಕ್ರಮದಿಂದ ಅಪರಾಜಿತನಾದ ಅರ್ಜುನನು ಪ್ರಭಾಸಕ್ಕೆ ಬಂದಿದ್ದಾನೆ ಎಂಬ ವಿಷಯವನ್ನು ಕೃಷ್ಣನು ತಿಳಿದನು.
ಚಾರಣಾನಾಂ ತು ವಚನಾದೇಕಾಕೀ ಸ ಜನಾರ್ದನಃ |
ತತೋಽಭ್ಯಗಚ್ಛತ್ ಕೌಂತೇಯಮಜ್ಞಾತೋಽನ್ಯೇನ ಮಾಧವಃ ॥22॥
ಚಾರರ ಮಾತುಗಳಿಂದ ಇದನ್ನು ತಿಳಿದ ಜನಾರ್ದನನು ಇನ್ನೊಬ್ಬರಿಗೆ ತಿಳಿಯದಂತೆ ಅರ್ಜುನನು ಇದ್ದ ಕಡೆಗೆ ಬಂದನು.
ದದೃಶಾತೇ ತದಾಽನ್ಯೋನ್ಯಂ ಪ್ರಭಾಸೇ ಕೃಷ್ಣಪಾಂಡವೌ |
ತಾವನ್ಯೋನ್ಯಂ ಸಮಾಕ್ಶ್ಲಿಷ್ಯ ಪೃಷ್ಟ್ವಾ ಚ ಕುಶಲಂ ಪಥಿ ॥23॥
ಆಸ್ತಾಂ ಪ್ರಿಯಸಖಾಯೌ ತೌ ನರನಾರಯಣಾವೃಷೀ |
ತತೋಽರ್ಜುನಂ ವಾಸುದೇವಸ್ತತ್ಕಾರ್ಯಂ ಪರ್ಯಪೃಚ್ಛತ |
ಕಿಮರ್ಥಂ ಪಾಂಡವೇಮಾನಿ ತೀರ್ಥಾನ್ಯನುಚರಸ್ಯುತ ॥24॥
ಆಗ ಪ್ರಭಾಸಕ್ಷೇತ್ರದಲ್ಲಿ ಕೃಷ್ಣಪಾಂಡವರು ಒಬ್ಬರನ್ನೊಬ್ಬರು ನೋಡಿದರು. ನರನಾರಾಯಣಋಷಿಗಳಾದ ಪ್ರಿಯಸ್ನೇಹಿತರಾದ ಅವರು ಪರಸ್ಪರವಾಗಿ ಆಲಿಂಗಿಸಿ, ಕುಶಲಪ್ರಶ್ನೆಯನ್ನು ಮಾಡಿ ಅಲ್ಲಿಯೇ ಇದ್ದರು. ಅನಂತರ ವಾಸುದೇವನು ಅರ್ಜುನನನ್ನು ಕುರಿತು ಪಾಂಡವನೇ, ಏಕೆ ಈ ತೀರ್ಥಯಾತ್ರೆಯನ್ನು ಮಾಡುತ್ತಿದ್ದೀಯೆ? ಅದರ ಉದ್ದೇಶವೇನು ಎಂದು ಕೇಳಿದನು.
ವೈಶಂಪಾಯನಃ
ತಥಾಽರ್ಜುನೋ ಯಥಾವೃತ್ತಂ ಸರ್ವಮಾಖ್ಯಾತವಾಂಸ್ತದಾ |
ಶ್ರುತ್ವಾ ಚೋವಾಚ ವಾರ್ಷ್ಣೇಯಸ್ತ್ವೇವಮೇತದಿತಿ ಪ್ರಭೋ ॥25॥
ರಾಜನೇ ಆಗ ಅರ್ಜುನನು ನಡೆದ ವಿಷಯಗಳೆಲ್ಲವನ್ನೂ ಹೇಳಿದನು. ಅದನ್ನು ಕೇಳಿದ ಕೃಷ್ಣನು ಹಾಗೆಯೇ ಆಗಲಿ ಎಂದು ಹೇಳಿದನು.

ತೌ ವಿಹೃತ್ಯ ಯಥಾನ್ಯಾಯಂ ಪ್ರಭಾಸೇ ಕೃಷ್ಣಪಾಂಡವೌ |
ಮಹೀಧರಂ ರೈವತಕಂ ವಾಸಾಯೈವಾಭಿಜಗ್ಮತುಃ ॥26॥
ಕೃಷ್ಣಪಾಂಡವರು ಪ್ರಭಾಸದಲ್ಲಿ ಯಥಾಯೋಗ್ಯವಾಗಿ ವಿಹರಿಸಿ ವಾಸಕ್ಕಾಗಿ ರೈವತಪರ್ವತಕ್ಕೆ ಹೋದರು.
ಪೂರ್ವಮೇವ ತು ಕೃಷ್ಣಸ್ಯ ವಚನಾತ್ ತು ಮಹೀಧರಮ್ |
ಪುರುಷಾಃ ಸಮಲಂಚಕ್ರುರುಪಜಹ್ರುಶ್ಚ ಭೋಜನಮ್ ॥27॥
ಕೃಷ್ಣನ ವಚನದಂತೆ ಮೊದಲೇ ಪುರುಷರು ಆ ಪರ್ವತವನ್ನು ಅಲಂಕರಿಸಿದ್ದರು. ಅಲ್ಲಿಗೆ ಕೃಷ್ಣಪಾಂಡವರಿಗೆ ಭೋಜನವನ್ನೂ ತಂದರು.
ಪ್ರತಿಗೃಹ್ಯಾರ್ಜುನಃ ಸರ್ವಮುಪಭುಜ್ಯ ಚ ಪಾಂಡವಃ |
ಸಹೈವ ವಾಸುದೇವೇನ ದೃಷ್ಟವಾನ್ ನಟನರ್ತಕಾನ್ ॥28॥
ಅರ್ಜುನನು ಎಲ್ಲವನ್ನೂ ಸ್ವೀಕರಿಸಿ, ಆಹಾರವನ್ನು ಸೇವಿಸಿ, ಕೃಷ್ಣನ ಜೊತೆಯಲ್ಲಿ ನಟನರ್ತಕರ ಕೌತುಕವನ್ನು ನೋಡಿದನು.
ಅಭ್ಯನುಜ್ಞಾತವಾಂತ್ಸರ್ವಾನರ್ಚಯಿತ್ವಾ ತು ಪಾಂಡವಃ |
ಸತ್ಕೃತಂ ಶಯನಂ ದಿವ್ಯಮಭ್ಯಗಚ್ಛತ್ ಸಹಾಚ್ಯುತಃ ॥29॥
ಪಾಂಡವನಾದ ಅರ್ಜುನನು ಎಲ್ಲರನ್ನೂ ಸತ್ಕರಿಸಿ ಬೀಳ್ಕೊಟ್ಟು ಅಚ್ಯುತನ ಜೊತೆಯಲ್ಲಿ ಸಿದ್ಧಪಡಿಸಿದ್ದ ದಿವ್ಯವಾದ ಶಯನಕ್ಕೆ ಬಂದನು.
ಸ ಕಥಾಂ ಕಥಯನ್ನೇವ ನಿದ್ರಯಾ ಜನಮೇಜಯ |
ಕೌಂತೇಯೋಽಪಿ ಹೃತಸ್ತಸ್ಮಿನ್ ಶಯನೇ ಸತ್ಯವಿಕ್ರಮಃ ॥30॥
ಜನಮೇಜಯನೇ, ಸತ್ಯವಿಕ್ರಮನಾದ, ಕೌಂತೇಯನಾದ ಅವನು, ಆ ಹಾಸಿಗೆಯಲ್ಲಿ ಮಲಗಿ ಮಾತನಾಡುತ್ತಲೇ ನಿದ್ರಾವಶನಾದನು.
ಮಧುರೇಣ ಸ ಗೀತೇನ ವೀಣಾಶಬ್ದೇನ ಚಾನಘ |
ಪ್ರಭೋಧ್ಯಮಾನೋ ಬುಬುಧೇ ಸ್ತುತಿಭಿರ್ಮಂಗಲೈಸ್ತಥಾ ॥31॥
ಅನಘನೇ, ಮಧುರವಾದ ಗೀತದಿಂದಲೂ, ವೀಣಾಶಬ್ದಗಳಿಂದಲೂ, ಸ್ತೋತ್ರಗಳಿಂದಲೂ, ಹಾಗೆಯೇ ಮಂಗಳಗಳಿಂದಲೂ ಎಚ್ಚರಿಸಲ್ಪಟ್ಟು, ಅವನು ಎಚ್ಚರಗೊಂಡನು.
ಸ ಕೃತ್ವಾಽವಶ್ಯಕಾರ್ಯಾಣಿ ವಾರ್ಷ್ಣೇಯೇನಾಭಿನಂದಿತಃ |
ವಾರ್ಷ್ಣೇಯಂ ಸಮನುಜ್ಞಾಯ ತತೋ ವಾಸಮರೋಚಯತ್ ॥32॥
ಅರ್ಜುನನು ಆ ಅವಶ್ಯಕ ಕೃತ್ಯಗಳನ್ನು ಮಾಡಿ ಕೃಷ್ಣನಿಂದ ಅಭಿನಂದಿಸಲ್ಪಟ್ಟು, ಕೃಷ್ಣನನ್ನು ಬೀಳ್ಕೊಟ್ಟು ಅಲ್ಲಿ ವಾಸಮಾಡಲು ಯೋಚಿಸಿದನು.
ತಥೇತ್ಯುಕತ್ವ ವಾಸುದೇವೋ ಭೋಜನಂ ವೈ ಶಶಾಸ ಹ |

ಯತಿರೂಪಧರಂ ಪಾರ್ಥಂ ವಿಸೃಜ್ಯ ಸಹಸಾ ಹರಿಃ |
ರಥೇನ ಕಾಂಚನಾಂಗೇನ ದ್ವಾರಕಾಮಭಿಜಗ್ಮಿವಾನ್ ॥33॥
ವಾಸುದೇವನು ಯತಿರೂಪಧರನಾದ ಅರ್ಜುನನಿಗೆ ಹಾಗೆಯೇ ಆಗಲಿ ಎಂದು ಅವನಿಗೆ ಭೋಜನವ್ಯವಸ್ಥೆಯನ್ನು ಮಾಡಿ ಅವನನ್ನು ಬಿಟ್ಟು ಸ್ವರ್ಣಮಯವಾದ ರಥದಲ್ಲಿ ಕುಳಿತು ಶೀಘ್ರವಾಗಿ ದ್ವಾರಕೆಗೆ ಹಿಂದಿರುಗಿದನು.
ಅಲಂಕೃತಾ ದ್ವಾರಕಾ ತು ಬಭೂವ ಜನಮೇಜಯ |
ದಿದೃಕ್ಷವಶ್ಚ ಗೋವಿಂದಂ ದ್ವಾರಕಾವಾಸಿನೋ ಜನಾಃ |
ನರೇಂದ್ರಮಾರ್ಗಮಾಜಗ್ಮುಸ್ತೂರ್ಯೈಃ ಶತಸಹಸ್ರಶಃ ॥34॥
ಜನಮೇಜಯನೇ, ದ್ವಾರಕಾಪಟ್ಟಣವು ಎಲ್ಲೆಡೆಯಲ್ಲಿಯೂ ಅಲಂಕೃತವಾಗಿತ್ತು. ಗೋವಿಂದನನ್ನು ನೋಡಲು ಬಯಸಿದ ದ್ವಾರಕಾವಾಸಿಗಳಾದ ಜನರು ನೂರುಸಾವಿರ ಸಂಖ್ಯೆಗಳಲ್ಲಿ ಮಂಗಳವಾದ್ಯಗಳನ್ನು ಮೊಳಗಿಸುತ್ತಾ ರಾಜಮಾರ್ಗಕ್ಕೆ ಬಂದರು.
ಕ್ಷಣಾರ್ಧಮಪಿ ವಾರ್ಷ್ಣೇಯಾ ಗೋವಿಂದವಿರಹಾಕ್ಷಮಾಃ |
ಕೌತೂಹಲಸಮಾವಿಷ್ಟಾ ಭೃಶಮುತ್ಪ್ರೇಕ್ಷ್ಯ ಸಂಸ್ಥಿತಾಃ ॥35॥
ವಾರ್ಷ್ಣೇಯರು ಅರ್ಧಕ್ಷಣವೂ ಗೋವಿಂದನ ವಿರಹವನ್ನು ಸಹಿಸುತ್ತಿರಲಿಲ್ಲ. ಕುತೂಹಲದಿಂದ ಕೂಡಿದವರಾಗಿ ಅವನನ್ನೇ ಚಿಂತಿಸುತ್ತಾ ಕುಳಿತಿರುತ್ತಿದ್ದರು.
ಅವಲೋಕಾಯ ನಾರೀಣಾಂ ಸಹಸ್ರಾಣಿ ಶತಾನಿ ಚ |
ಭೋಜವೃಷ್ಣ್ಯಂಧಕಾನಾಂ ಚ ಸಮವಾಯೋ ಮಹಾನಭೂತ್ ॥36॥
ಕೃಷ್ಣನನ್ನು ನೋಡಲು ಸಹಸ್ರಾರು ಸಂಖ್ಯೆಯಲ್ಲಿ ಬಂದ ಭೋಜ, ವೃಷ್ಣಿ ಮತ್ತು ಅಂಧಕ ಸ್ತ್ರೀಯರಿಗೆ ರಾಜಮಾರ್ಗದಲ್ಲಿ ದೊಡ್ಡ ಸಂವರ್ಧವುಂಟಾಯಿತು.
ಸ ತಥಾ ಸತ್ಕೃತಃ ಸರ್ವೈರ್ಭೋಜವೃಷ್ಣ್ಯಂಧಕಾತ್ಮಜೈಃ |
ಅಭಿವಾದ್ಯಾಭಿವಾದ್ಯಾಂಶ್ಚ ಸರ್ವೈಶ್ಚ ಪ್ರತಿನಂದಿತಃ ॥37॥
ಕೃಷ್ಣನು ಎಲ್ಲಾ ಭೋಜ, ವೃಷ್ಣಿ, ಅಂಧಕರಿಂದಲೂ, ಅವರ ಮಕ್ಕಳಿಂದಲೂ, ಹೀಗೆ ಸತ್ಕರಿಸಲ್ಪಟ್ಟು ನಮಸ್ಕಾರಯೋಗ್ಯರಾದವರಿಗೆ ನಮಸ್ಕಾರವನ್ನು ಮಾಡಿ ಎಲ್ಲರಿಂದಲೂ ಅಭಿನಂದಿಸಲ್ಪಟ್ಟನು.
ಕುಮಾರೈಃ ಸರ್ವಶೋ ವೀರಃ ಸತ್ಕಾರೇಣಾಭಿವಾದಿತಃ |
ಸಮಾನವಯಸಃ ಸರ್ವಾನಾಶ್ಲಿಷ್ಯ ಸ ಪುನಃಪುನಃ ॥38॥
ಕೃಷ್ಣಾಃ ಸ್ವಭವನಂ ರಮ್ಯಂ ಪ್ರವಿವೇಶ ಮಹಾದ್ಯುತಿಃ |
ಪ್ರವಾಸಾದಗತಂ ದೇವ್ಯಃ ಸರ್ವಾಃ ಕೃಷ್ಣಮಪೂಜಯನ್ ॥39॥
ತನ್ನ ಎಲ್ಲ ಮಕ್ಕಳಿಂದಲೂ ಸತ್ಕಾರಪೂರ್ವಕವಾಗಿ ನಮಸ್ಕರಿಸಲ್ಪಟ್ಟ ವೀರನೂ, ಮಹಾಕಾಂತಿವಂತನೂ ಆದ ಕೃಷ್ಣನು, ತನ್ನ ಸಮಾನವಯಸ್ಸಿನವರೆಲ್ಲರನ್ನೂ ಮತ್ತೆ ಮತ್ತೆ ಆಲಿಂಗಿಸಿ, ರಮ್ಯವಾದ ತನ್ನ ಮನೆಯನ್ನು ಪ್ರವೇಶಿಸಿದನು. ಪ್ರವಾಸದಿಂದ ಹಿಂದಿರುಗಿದ ಕೃಷ್ಣನನ್ನು ಅವನ ಎಲ್ಲಾ ಪತ್ನಿಯರೂ ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋನವಿಂಶತ್ಯಕದ್ವಿಶತತಮೋಽಧ್ಯಾಯಃ ॥
॥ ಇತಿ ಅರ್ಜುನವನವಾಸಪರ್ವಣಿ ಪಂಚಮೋಽಧ್ಯಾಯಃ ॥
॥ ಅರ್ಜುನವನವಾಸಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಹತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಅರ್ಜುನವನವಾಸಪರ್ವವು ಮುಗಿಯಿತು.
*****

16. ಸುಭದ್ರಾಹರಣಪರ್ವ

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20

ಆಕ್ರೀಡೋಽಸೌ ವೃಷ್ಣಿಭೋಜಾಂಧಕಾನಾಂ
ತತ್ರಾಪಶ್ಯತ್ ಕೇಶವಃ ಫಲ್ಗುನಂ ತಂ |
ಸ್ವಸುರ್ದಾನೇ ಸಃ ಪ್ರತಿಜ್ಞಾಂ ರಹೋಽಸ್ಮೈ
ಚಕ್ರೇ ಕೃಷ್ಣೋಽಥಾಸದತ್ ಸರ್ವವೃಷ್ಣೀನ್ ॥169॥
ಆ ಬೆಟ್ಟ ಭೋಜವೃಷ್ಣಿ ಅಂಧಕರಿಗೆ ವಿಹಾರಸ್ಥಾನವಾಗಿತ್ತು. ಅಲ್ಲಿ ಕೃಷ್ಣ ಅರ್ಜುನನನ್ನು ಕಂಡು ತಂಗಿಯನ್ನು ಅವನಿಗೆ ಕೊಡುವುದಾಗಿ ರಹಸ್ಯವಾಗಿ ಮಾತುಕೊಟ್ಟ. ಬಳಿಕ ಹೋಗಿ ಎಲ್ಲ ಯಾದವರನ್ನು ಕೂಡಿಕೊಂಡ.
ದೃಷ್ಟ್ವಾಗಿರೌ ರೌಹಿಣೇಯೋ ಯತೀಂದ್ರ-
ವೇಷಂ ಪಾರ್ಥಂ ಜ್ಞಾತಿಯುಕ್ತಃ ಪ್ರಣಮ್ಯ |
ಚಕ್ರೇ ಪೂಜಾಂ ಫಲ್ಗುನೋಽಪಿ ಪ್ರಣಾಮಂ
ಗುಣಜ್ಯೇಷ್ಠೋಽಸೀತಿ ಚಕ್ರೇ ಬಲಾಯ ॥170॥
ಬೆಟ್ಟದಲ್ಲಿ ಯತೀಶ್ವರನ ವೇಷದಲ್ಲಿದ್ದ ಅರ್ಜುನನನ್ನು ಬಲರಾಮ ಬಂಧು ಸಮೇತನಾಗಿ ದರ್ಶನ ಮಾಡಿ ನಮಿಸಿ ಸತ್ಕರಿಸಿದ. ಅರ್ಜುನನೂ ಬಲರಾಮನನ್ನು `ನೀನು ಗುಣದಲ್ಲಿ ನನಗಿಂತ ಉತ್ತಮನಿರುವಿ' ಎನ್ನುತ್ತ ನಮಿಸಿದ.
* * * *

ಇನ್ನೂರ ಇಪ್ಪತ್ತನೆಯ ಅಧ್ಯಾಯ

(ರೈವತಕಪರ್ವತದಲ್ಲಿ ವೃಷ್ಣ್ಯಂಧಕರ ಮಹೋತ್ಸವ, ಅಲ್ಲಿಗೆ ಕೃಷ್ಣಸುಭದ್ರೆಯ ಆಗಮನ. ಕೃಷ್ಣನಲ್ಲಿ ಅರ್ಜುನನ ಪ್ರಾರ್ಥನೆ. ಕೃಷ್ಣನಿಂದ ಉಪಾಯ ಸೂಚನೆ ಮತ್ತು ಧರ್ಮರಾಜನ ಅನುಮತಿ)
ವೈಶಂಪಾಯನಃ
ತತಃ ಕತಿಪಯಾಹಃಸು ತತ್ರ ರೈವತಕೇ ಗಿರೌ |
ವೃಷ್ಣ್ಯಂಧಕಾನಾಮಭವತ್ ಸುಮಹಾನುತ್ಸವೋ ನೃಪ ॥1॥
ರಾಜನೇ, ಅನಂತರ ಕೆಲವು ದಿನಗಳಲ್ಲಿ ರೈವತಕಪರ್ವತದಲ್ಲಿ ವೃಷ್ಣ್ಯಂಧಕರ ದೊಡ್ಡ ಉತ್ಸವವು ನಡೆಯಿತು.
ತತ್ರ ದಾನಂ ದದುರ್ವೀರಾ ಬ್ರಾಹ್ಮಣಾನಾಂ ಸಹಸ್ರಶಃ |
ಭೋಜವೃಷ್ಣ್ಯಯಂಧಕಾಶ್ಚೈವ ಮಹೇ ತಸ್ಮಿನ್ ಗಿರೌ ತದಾ ॥2॥
ಅಲ್ಲಿ ವೀರರಾದ ಭೋಜವೃಷ್ಣ್ಯಂಧಕರು, ಆ ಪರ್ವತದಲ್ಲಿ ಉತ್ಸವದ ಸಮಯದಲ್ಲಿ ಬ್ರಾಹ್ಮಣರಿಗೆ ಸಹಸ್ರಸಂಖ್ಯೆಯಲ್ಲಿ ದಾನವನ್ನು ಕೊಟ್ಟರು.
ಪ್ರಾಸಾದೈ ರತ್ನಚಿತ್ರೈಸ್ತು ಗಿರೇಸ್ತಸ್ಯ ಸಮಂತತಃ |
ಸ ದೇಶಃ ಶೋಭಿತೋ ರಾಜನ್ ದೀಪವೃಕ್ಷೈಃ ಸಮಂತತಃ ॥3॥
ಆ ಪರ್ವತದ ಸುತ್ತಲೂ ರತ್ನಖಚಿತವಾದ ಪ್ರಾಸಾದಗಳಿದ್ದವು. ರಾಜನೇ, ಆ ಪ್ರದೇಶವು ಸುತ್ತಲೂ ದೀಪವುಳ್ಳ ಮರಗಳಿಂದ ಕೂಡಿದ್ದಿತು.

ವಾದಿತ್ರಾಣಿ ಚ ತತ್ರ ಸ್ಮ ವಾದಕಾಃ ಸಮವಾದಯನ್ |
ನನೃತುರ್ನರ್ತಕಾಶ್ಚೈವ ಜಗುರ್ಗೀತಾನಿ ಗಾಯಕಾಃ ॥4॥
ಅಲ್ಲಿ ವಾದಕರು ವಾದ್ಯಗಳನ್ನು ನುಡಿಸಿದರು, ನರ್ತಕರು ನರ್ತನವನ್ನು ಮಾಡಿದರು, ಗಾಯಕರು ಗಾಯನವನ್ನು ಮಾಡಿದರು.
ಅಲಂಕೃತಾಃ ಕುಮಾರಾಶ್ಚ ವೃಷ್ಣೀನಾಂ ಸುಮಹೌಜಸಃ |
ಯಾನೈರ್ಹಾಟಕಚಿತ್ರಾಂಗೈಶ್ಚಂಚೂರ್ಯಂತೇ ಸ್ಮ ಸರ್ವಶಃ ॥5॥
ಮಹಾಪರಾಕ್ರಮಶಾಲಿಗಳಾದ ವೃಷ್ಣಿಕುಮಾರರು ಅಲಂಕೃತರಾಗಿ ಸುವರ್ಣಖಚಿತವಾದ ರಥಗಳಲ್ಲಿ ಅಲ್ಲಲ್ಲಿ ತಿರುಗಾಡುತ್ತಿದ್ದರು.
ಪೌರಾಶ್ಚ ಪಾದಚಾರೇಣ ಯಾನೈರುಚ್ಚಾವಚೈಸ್ತಥಾ |
ಸದಾರಾಃ ಸಾನುಯಾತ್ರಾಶ್ಚ ಶತಶೋಽಥ ಸಹಸ್ರಶಃ ॥6॥
ಅನೇಕ ವಿಧವಾದ ವಾಹನಗಳಲ್ಲಿ ಪೌರರು ತಮ್ಮ ಪತ್ನಿಯರ ಜೊತೆಯಲ್ಲಿ ಮತ್ತು ತಮ್ಮ ಅನುಚರರ ಜೊತೆಯಲ್ಲಿ ನೂರುಸಾವಿರ ಸಂಖ್ಯೆಗಳಲ್ಲಿ ತಿರುಗಾಡುತ್ತಿದ್ದರು. ಪಾದಚಾರಿಗಳೂ ತಿರುಗಾಡುತ್ತಿದ್ದರು.
ತತೋ ಹಲಧರಃ ಕ್ಷೀಬೋ ರೇವತೀಸಹಿತಃ ಪ್ರಭುಃ |
ಅನುಗಮ್ಯಮಾನೋ ಬಹುಭಿರಚರತ್ ತತ್ರ ಭಾರತ ॥7॥
ಆಗ ಮತ್ತನಾದ ಬಲರಾಮನು ಅನೇಕರಿಂದ ಹಿಂಬಾಲಿಸಲ್ಪಟ್ಟು ರೇವತಿಯ ಜೊತೆಯಲ್ಲಿ ಅಲ್ಲಿ ತಿರುಗಾಡಿದನು.
ತಥೈವ ರಾಜಾ ವೃಷ್ಣೀನಾಮುಗ್ರಸೇನಃ ಪ್ರತಾಪವಾನ್ |
ಉಪಗೀಯಮಾನೋ ಗಂಧರ್ವೈಃ ಸ್ತ್ರೀಸಹಸ್ರಸಹಾಯವಾನ್ ॥8॥
ಹಾಗೆಯೇ ವೃಷ್ಣಿಗಳ ಅಧಿಪತಿಯಾದ ಪ್ರತಾಪಶಾಲಿಯಾದ ಉಗ್ರಸೇನನು ಗಂಧರ್ವರಿಂದ ಗಾನಮಾಡಲ್ಪಟ್ಟು ಸಹಸ್ರಸ್ತ್ರೀಯರ ಜೊತೆಯಲ್ಲಿ ತಿರುಗಾಡಿದನು.
ರೌಗ್ಮಿಣೇಯಶ್ಚ ಸಾಂಬಶ್ಚ ಕ್ಷೀಬೌ ಸಮರದುರ್ಮದೌ |
ದಿವ್ಯಮಾಲ್ಯಾಂಬರಧರೌ ವಿಜಹ್ರಾತೇಽಮರಾವಿವ ॥9॥
ಯುದ್ಧದುರ್ಮದರಾದ, ಮತ್ತರಾದ ಪ್ರದ್ಯುಮ್ನ ಮತ್ತು ಸಾಂಬರು, ದಿವ್ಯಮಾಲ್ಯಗಳನ್ನೂ, ದಿವ್ಯವಸ್ತ್ರಗಳನ್ನೂ ಧರಿಸಿ, ದೇವತೆಗಳಂತೆ ವಿಹರಿಸಿದರು.
ಅಕ್ರೂರಃ ಸಾರಣಶ್ಚೈವ ಗದೋ ಭಾನುರ್ವಿಡೂರಥಃ |
ನಿಶಠಶ್ಚಾರುದೇಷ್ಣಶ್ಚ ಪೃಥುರ್ವಿಪೃಥುರೇವ ಚ ॥10॥
ಸತ್ಯಕಃ ಸಾತ್ಯಕಿಶ್ಚೈವ ರಂಗಕಾರಸಹಾಕರೌ |
ಹಾರ್ದಿಕ್ಯಃ ಕೃತವರ್ಮಾ ಚ ಯೇ ಚಾನ್ಯೇ ನಾನುಕೀರ್ತಿತಾಃ ॥11॥
ಏತೇ ಪರಿವೃತಾಃ ಸ್ತ್ರೀಭಿರ್ಗಂಧರ್ವೈಶ್ಚ ಪೃಥಕ್ಪೃಥಕ್ |
ತಮುತ್ಸವಂ ರೈವತಕೇ ಶೋಭಯಾಂಚಕ್ರಿರೇ ತದಾ ॥12॥
ಅಕ್ರೂರ, ಸಾರಣ, ಗದ, ಭಾನು, ವಿಡೂರಥ, ನಿಶಠ, ಚಾರುದೇಷ್ಣ, ಪೃಥು, ವಿಪೃಥು, ಸತ್ಯಕ, ಸಾತ್ಯಕಿ, ರಂಗಕಾರ, ಸಹಾಕರ, ಕೃತವರ್ಮ ಮತ್ತು ಇನ್ನೂ ಅನೇಕರು ತಮ್ಮ ಸ್ತ್ರೀಯರ ಮತ್ತು ಗಂಧರ್ವರ ಜೊತೆಯಲ್ಲಿ ಅಶ್ವಗಳ ಮೇಲೆ ಬೇರೆ ಬೇರೆಯಾಗಿ ತಿರುಗಾಡಿ, ರೈವತಪರ್ವತದಲ್ಲಿ ನಡೆಯುವ ಆ ಉತ್ಸವಕ್ಕೆ ಶೋಭೆಯನ್ನುಂಟು ಮಾಡಿದರು.
ವಾಸುದೇವೋ ಯಯೌ ತತ್ರ ಸಹ ಸ್ತ್ರೀಭಿರ್ಗುಣಾನ್ವಿತಃ |
ದತ್ವಾ ದಾನಂ ದ್ವಿಜಾತಿಭ್ಯಃ ಪರಿವ್ರಾಜಮಪಶ್ಯತ ॥13॥
ಗುಣಪೂರ್ಣನಾದ ವಾಸುದೇವನು ತನ್ನ ಸ್ತ್ರೀಯರ ಜೊತೆಯಲ್ಲಿ ಅಲ್ಲಿಗೆ ಹೋಗಿ, ಬ್ರಾಹ್ಮಣರಿಗೆ ದಾನವನ್ನು ಕೊಟ್ಟು, ಸಂನ್ಯಾಸಿಯ ವೇಷದಲ್ಲಿದ್ದ ಅರ್ಜುನನನ್ನೂ ನೋಡಿದನು.
ತದಾ ಕೌತೂಹಲೇ ತಸ್ಮಿನ್ ವರ್ತಮಾನೇ ಮಹೋತ್ಸವೇ |
ವಾಸುದೇವಶ್ಚ ಪಾರ್ಥಶ್ಚ ಸಹಿತೌ ಪರಿಜಗ್ಮತುಃ ॥14॥

ಆಗ ಆ ಉತ್ಸವವು ಕುತೂಹಲದಿಂದ ಜರುಗುತ್ತಿರಲು, ವಾಸುದೇವ ಮತ್ತು ಅರ್ಜುನರು ಜೊತೆಯಲ್ಲಿ ತಿರುಗಾಡಿದರು.
ತತ್ರ ಚಂಕ್ರಮಮಾಣೌ ತೌ ವಸುದೇವಸುತಾಂ ಶುಭಾಮ್ |
ಅಲಂಕೃತಾಂ ಸಖೀಮಧ್ಯೇ ಭದ್ರಾಂ ದದೃಶತುಸ್ತದಾ ॥15॥
ಹಾಗೆ ತಿರುಗಾಡುತ್ತಿದ್ದ ಅವರು ತನ್ನ ಸಖಿಯರ ಮಧ್ಯದಲ್ಲಿದ್ದ, ವಸುದೇವನ ಮಗಳಾದ ಮನೋಹರಳಾದ, ಅಲಂಕೃತಳಾದ ಸುಭದ್ರೆಯನ್ನು ನೋಡಿದರು.
ದೃಷ್ಟ್ವೈವ ತಾಮರ್ಜುನಸ್ಯ ಕಂದರ್ಪಃ ಸಮಜಾಯತ |
ತಂ ತ್ವನೇಕಾಗ್ರಮನಸಂ ಕೃಷ್ಣಃ ಪಾರ್ಥಮಲಕ್ಷಯತ್ ॥16॥
ಅರ್ಜುನನಿಗೆ ಅವಳನ್ನು ನೋಡಿದ ಕೂಡಲೇ ಕಾಮವು ಉಂಟಾಯಿತು. ಕೃಷ್ಣನು ಅರ್ಜುನನು ವ್ಯಗ್ರಚಿತ್ತನಾಗಿರುವುದನ್ನು ಗಮನಿಸಿದನು.
ಅಬ್ರುವೀತ್ ಪುಂಡರೀಕಾಕ್ಷಃ ಪ್ರಹಸನ್ನಿವ ಭಾರತ |
ವನೇಚರಸ್ಯ ಕಿಮಿದಂ ಕಾಮೇನಾಲೋಡ್ಯತೇ ಮನಃ ॥17॥
ಭಾರತನೇ, ಪುಂಡರೀಕಾಕ್ಷನು ನಗುತ್ತಾ ಅರ್ಜುನನನ್ನು ಕುರಿತು ವನವಾಸಿಯಾದ ಸನ್ಯಾಸಿಗೆ ಇದೇನು ಮನಸ್ಸು ಕಾಮದಿಂದ ಕದಡಿದೆ ಎಂದು ಕೇಳಿದನು.
ಮಮೈಷಾ ಭಗಿನೀ ಪಾರ್ಥ ಸಾರಣಸ್ಯ ಮಹೋದರಾ |
ಸುಭದ್ರಾ ನಾಮ ಭದ್ರಂ ತೇ ಪಿತುರ್ಮೇ ದಯಿತಾ ಸುತಾ |
ಯದಿ ತೇ ವರ್ತತೇ ಬುದ್ಧಿರ್ವಕ್ಷ್ಯಾಮಿ ಪಿತರಂ ಸ್ವಯಮ್ ॥18॥
ಅರ್ಜುನನೇ, ಇವಳು ನನ್ನ ತಂಗಿ. ಸಾರಣನ ಸಹೋದರಿ. ಇವಳ ಹೆಸರು ಸುಭದ್ರೆ. ನಿನಗೆ ಮಂಗಳವಾಗಲಿ. ಇವಳು ನನ್ನ ತಂದೆಗೆ ಪ್ರೀತಿಪಾತ್ರಳಾದ ಮಗಳು. ನಿನಗೆ ಅವಳಲ್ಲಿ ಮನಸ್ಸಿದ್ದರೆ, ನಾನೇ ತಂದೆಯ ಜೊತೆಯಲ್ಲಿ ಮಾತನಾಡುವೆನು.
ಅರ್ಜುನಃ
ದುಹಿತಾ ವಸುದೇವಸ್ಯ ವಾಸುದೇವಸ್ಯ ಚ ಸ್ವಸಾ |
ರೂಪೇಣ ಚೈವ ಸಂಪನ್ನಾ ಕಮಿವೈಷಾ ನ ಮೋಹಯೇತ್ ॥19॥
ವಸುದೇವನ ಮಗಳು, ವಾಸುದೇವನ ತಂಗಿ ಇಷ್ಟು ರೂಪದಿಂದ ಕೂಡಿದವಳು ಯಾರನ್ನು ಮೋಹಿಸುವುದಿಲ್ಲ?
ಕೃತಮೇತತ್ ತು ಕಲ್ಯಾಣಂ ಸರ್ವಂ ಮಮ ಭವೇದ್ ಧ್ರುವಮ್|
ಯದಿ ಸ್ಯಾನ್ಮಮ ವಾರ್ಷ್ಣೇಯ ಮಹಿಷೀಯಂ ಸ್ವಸಾ ತವ ॥20॥
ವಾರ್ಷ್ಣೇಯನೇ, ಈ ನಿನ್ನ ತಂಗಿಯು ನನ್ನ ಪತ್ನಿಯಾಗುವಂತೆ ನೀನು ಈ ಕಲ್ಯಾಣವನ್ನು ನೆರವೇರಿಸಿದರೆ ನನಗೆ ನಿಶ್ಚಯವಾಗಿ ಎಲ್ಲವನ್ನೂ ನೀನು ಮಾಡಿದಂತೆ ಆಗುತ್ತದೆ.
ಪ್ರಾಪ್ತೌ ತು ಕ ಉಪಾಯೋಽಸ್ಯಾಸ್ತಂ ಬ್ರವೀಹಿ ಜನಾರ್ದನ |
ಆಸ್ಥಾಸ್ಯಾಮಿ ತಥಾ ಸರ್ವಂ ಯದಿ ಶಕ್ಯಂ ನರೇಣ ತತ್ ॥21॥
ಜನಾರ್ದನನೇ, ಇವಳನ್ನು ಪಡೆಯಲು ಏನು ಉಪಾಯ ಎಂದು ಹೇಳು. ಮನುಷ್ಯರಿಂದ ಮಾಡಲು ಸಾಧ್ಯವಾದರೆ ನಾನು ಅದೆಲ್ಲವನ್ನೂ ಮಾಡುವೆನು.
ವಾಸುದೇವಃ
ಸ್ವಯಂವರಃ ಕ್ಷತ್ರಿಯಾಣಾಂ ವಿವಾಹಃ ಪುರುಷರ್ಷಭ |
ಸ ಚ ಸಂಶಯಿತಃ ಪಾರ್ಥ ಸ್ವಭಾವಸ್ಯ ನಿಮಿತ್ತತಃ ॥22॥
ಪುರುಷರ್ಷಭನೇ, ಸ್ವಯಂವರವು ಕ್ಷತ್ರಿಯರಿಗೆ ವಿಹಿತವಾದ ವಿವಾಹ ಪದ್ಧತಿ. ಆದರೆ, ನೀನು ಸಂನ್ಯಾಸಿಯ ವೇಷವನ್ನು ಧರಿಸಿರುವುದರಿಂದ ಅದು ಸಂಶಯಗ್ರಸ್ತವಾಗುತ್ತದೆ.
ಪ್ರಸಹ್ಯ ಹರಣಂ ಚಾಪಿ ಕ್ಷತ್ರಿಯಾಣಾಂ ಪ್ರಶಸ್ಯತೇ |
ವಿವಾಹಹೇತೋಃ ಕನ್ಯಾನಾಮಿತಿ ಧರ್ಮವಿದೋ ವಿದುಃ ॥23॥
ವಿವಾಹನಿಮಿತ್ತವಾಗಿ ಕನ್ಯೆಯನ್ನು ಬಲಾತ್ಕಾರದಿಂದ ಹಾರಿಸಿಕೊಂಡು ಹೋಗುವುದು ಕ್ಷತ್ರಿಯರಿಗೆ ಪ್ರಶಸ್ತವಾದುದೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ.
ಸ ತ್ವಮರ್ಜುನ ಕಲ್ಯಾಣೀಂ ಪ್ರಸಹ್ಯ ಭಗಿನೀಂ ಮಮ |
ಯತಿರೂಪಧರಸ್ತ್ವಂ ತು ಯದಾ ಕಾಲವಿಪಾಕತಾ |
ಹರ ಸ್ವಯಂವರೇ ಹ್ಯಸ್ಯಾಃ ಕೋ ವೈ ವೇದ ಚಿಕೀರ್ಷಿತಮ್ ॥24॥
ಅರ್ಜುನ, ನೀನು, ಕಲ್ಯಾಣಿಯಾದ ನನ್ನ ತಂಗಿಯನ್ನು ಬಲದಿಂದ ಹಾರಿಸಿಕೊಂಡು ಹೋಗು. ಯತಿರೂಪವನ್ನು ಧರಿಸಿದ ನೀನು ಕಾಲವು ಪಕ್ವವಾದಾಗ ಈ ಕಾರ್ಯವನ್ನು ಮಾಡು. ಸ್ವಯಂವರವನ್ನು ಮಾಡಿದರೆ, ಅವಳ ಬುದ್ಧಿಯು ಹೇಗಿರುವುದೋ ಅದು ಯಾರಿಗೆ ತಿಳಿಯುವುದು?
ವೈಶಂಪಾಯನಃ
ತತೋಽರ್ಜುನಶ್ಚ ಕೃಷ್ಣಶ್ಚ ವಿನಿಶ್ಚಿತ್ಯೇತಿಕೃತ್ಯತಾಮ್ |
ಶೀಘ್ರಗಾನ್ ಪುರುಷಾನ್ ರಾಜನ್ ಪ್ರೇಷಯಾಮಾಸತುಸ್ತದಾ ॥25॥
ಧರ್ಮರಾಜಾಯ ತತ್ಸರ್ವಮಿಂದ್ರಪ್ರಸ್ಥಗತಾಯ ವೈ |
ಶ್ರುತ್ವೈವ ಚ ಮಹಾಬಾಹುರನುಜಜ್ಞೇ ಸಮಾತೃಕಃ ॥26॥

ರಾಜನೇ, ಆಗ ಕೃಷ್ಣ ಮತ್ತು ಅರ್ಜುನರು ಮಾಡಬೇಕಾದ ರೀತಿಯನ್ನು ನಿರ್ಧರಿಸಿ, ಇಂದ್ರಪ್ರಸ್ಥದಲ್ಲಿದ್ದ ಧರ್ಮರಾಜನಿಗೆ ಶೀಘ್ರಗಾಮಿಗಳಾದ ಪುರುಷರ ಮೂಲಕ ವಾರ್ತೆಯನ್ನು ಕಳುಹಿಸಿದರು.  ಮಹಾಬಾಹುವಾದ ಧರ್ಮರಾಜನು ಮತ್ತು ಅವನ ತಾಯಿಯು ಈ ವಾರ್ತೆಯನ್ನು ಕೇಳಿದ ತಕ್ಷಣ ಅನುಮತಿಯನ್ನು ನೀಡಿದರು.
ಭೀಮಸೇನಸ್ತು ತಚ್ಛ್ರುತ್ವಾ ಕೃತಕೃತ್ಯಾ ಸ್ಮ ಶಕ್ಯತೇ |
ಇತ್ಯೇವಂ ಮನುಜೈಃ ಸಾರ್ಧಮುಕ್ತ್ವಾ ಪ್ರೀತಿಮುಪೇಯಿವಾನ್  ॥27॥
ಭೀಮಸೇನನು ಈ ವಾರ್ತೆಯನ್ನು ಕೇಳಿ (ಅರ್ಜುನನು ಸುಭದ್ರೆಯನ್ನು ವರಿಸಿದರೆ) ನಾವು ಕೃತಕೃತ್ಯರಾಗುತ್ತೇವೆ. ಅರ್ಜುನನಿಗೆ ಕೃಷ್ಣನು ಸೂಚಿಸಿದಂತೆ ಮಾಡಲು ಸಾಧ್ಯವಿದೆ ಎಂದು ತನ್ನ ಸಮೀಪದಲ್ಲಿದ್ದವರ ಜೊತೆಯಲ್ಲಿ ಹೇಳಿ ಸಂತೋಷವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ  ಏಕವಿಂಶತ್ಯಕದ್ವಿಶತತಮೋSಧ್ಯಾಯಃ ॥
॥ ಇತಿ ಸುಭದ್ರಾಹರಣಪರ್ವಣಿ ಪ್ರಥಮೋSಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸರ್ವಜ್ಞಂ ತಂ ವಾಗ್ಮಿನಂ ವೀಕ್ಷ್ಯರಾಮಃ
ಕನ್ಯಾಗಾರೇ ವರ್ಷಕಾಲೇ ನಿವಾಸಂ |
ಸತ್ಕಾರಪೂರ್ವಂ ಕಾರಯೇತ್ಯಾಹ ಕೃಷ್ಣಂ
ನೈವೇತ್ಯೂಚೇ ಕೇಶವೋ ದೋಷವಾದೀ ॥171॥
ಈ ಯತಿ ಸರ್ವಜ್ಞ ಮತ್ತು ಒಳ್ಳೆಯ ಮಾತುಗಾರ ಎಂದು ತಿಳಿದು ಬಲರಾಮ ಮಳೆಗಾಲದ ಚಾತುರ್ಮಸ್ಯ ಕಾಲ ಪೂರ್ತಿ ಅವನನ್ನು ಕನ್ಯಾಗಾರದ ಬಳಿಯಲ್ಲಿ ಸತ್ಕಾರ ಪೂರ್ವಕವಾಗಿ ಇರಿಸು ಎಂದು ಕೃಷ್ಣನಿಗೆ ಹೇಳಿದ. ಕೃಷ್ಣ ಬೇಡವೆಂದ. ಹಾಗೆ ಮಾಡಿದರೆ ದೋಷವಿದೆ ಎಂದ.
ಯುವಾ ಬಲೀ ದರ್ಶನೀಯೋSತಿವಾಗ್ಮೀ
ನಾಯಂ ಯೋಗ್ಯಃ ಕನ್ಯಕಾಗಾರವಾಸಂ |
ಇತ್ಯುಕ್ತವಂತಂ ರಾಮ ಆಹಾಪ್ತವಿದ್ಯೇ
ನಾಸ್ಮಿನ್ ಶಂಕೇತ್ಯೇವ ಲೋಕಾಧಿನಾಥಂ ॥172॥
`ಈ ಯತಿ ಯುವಕ ಬಲಿಷ್ಠ. ಸುಂದರ, ಬಲು ಮಾತುಗಾರ. ಅದರಿಂದ ಕನ್ಯಾಗಾರದ ಬಳಿಯಲ್ಲಿ ಇರಿಸಲು ತಕ್ಕವನಲ್ಲ' ಹೀಗೆ ಜಗದೀಶ್ವರನಾದ ಶ್ರೀಕೃಷ್ಣ ಹೇಳಿದಾಗ ಬಲರಾಮನೆಂದ `ಜ್ಞಾನಿಯಾದ ಈತನಲ್ಲಿ ಸಂದೇಹ ಸಲ್ಲದು' ಎಂದು.
ನಾಸ್ಮನ್ಮತೇ ರೋಚತೇ ತ್ವನ್ಮತಂ ತು
ಸರ್ವೇಷಾಂ ನಃ ಪೂಜ್ಯಮೇವಾಸ್ತು ತೇನ |
ಇತ್ಯುಕ್ತ್ವಾ ತಂ ಕೇಶವಃ ಸೋದರಾಯೈ
ಶುಶ್ರೂಷಸ್ವೇತ್ಯಾಹ ಸಂತಂ ಯತೀಂದ್ರಂ ॥173॥
ಶ್ರೀಕೃಷ್ಣನೆಂದ, `ನನ್ನ ಅಭಿಪ್ರಾಯದಲ್ಲಿ ನಿನ್ನ ಈ ನಿರ್ಣಯ ಸರಿ ಕಾಣುವುದಿಲ್ಲ. ಆದರೂ ನಮಗೆಲ್ಲರಿಗೂ ನಿನ್ನ ನಿರ್ಣಯ ಶಿರಸಾಧಾರ್ಯವಾದುದರಿಂದ ಹಾಗೇ ಆಗಲಿ'. ಹೀಗೆ ಹೇಳಿ ಶ್ರೀಕೃಷ್ಣ ಸುಭದ್ರೆಗೆ ಹೇಳಿದ, `ಈ ಯತೀಶ್ವರ ಒಳ್ಳೆಯವ, ಇಲ್ಲಿ ಇರುತ್ತಾನೆ, ಅವನನ್ನು ಸೇವಿಸು' ಎಂದು.
ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯ
(ಉತ್ಸವವನ್ನು ಮುಗಿಸಿ ಎಲ್ಲರ ನಿರ್ಗಮನ, ಅರ್ಜುನನ ಚಿಂತೆ,  ಬಲರಾಮಾದಿಗಳಿಂದ ಪುನಃ ಬಂದು ಚಾತುರ್ಮಾಸ್ಯವನ್ನು ಕನ್ಯಾಗಾರದಲ್ಲಿ ಕಳೆಯಬೇಕೆಂಬ ಪ್ರಾರ್ಥನೆ, ಕೃಷ್ಣನ ವಿರೋಧ ಸೂಚನೆ ಮತ್ತು ಅನುಮತಿ.)
ವೈಶಂಪಾಯನಃ
ಚಾರೈಃ ಸಂಚಾರಿತೇ ತಸ್ಮಿನ್ನನುಜ್ಞಾತೋ ಧನಂಜಯಃ |
ಗತಾಂ ರೈವತಕೇ ಕನ್ಯಾಂ ವಿದಿತ್ವಾ ಜನಮೇಜಯ  ॥1॥
ವಾಸುದೇವಾಭ್ಯನುಜ್ಞಾತಃ ಕಥಯಿತ್ವೇತಿಕೃತ್ಯತಾಮ್ |
ಕೃಷ್ಣಸ್ಯ ಮತಮಾಜ್ಞಾಯ ಪ್ರಯಯೌ ಭರತರ್ಷಭಃ ॥2॥
ಜನಮೇಜಯನೇ, ಚಾರರು ಧರ್ಮರಾಜನ ಅನುಮತಿಯನ್ನು ಅರ್ಜುನನಿಗೆ ತಿಳಿಸುತ್ತಿರಲು ಕೃಷ್ಣನ ಉತ್ತರವನ್ನು ತಿಳಿದುಕೊಂಡು ಮುಂದೆ ಮಾಡಬೇಕಾದ ರೀತಿಯನ್ನು ಸಮಾಲೋಚಿಸಿ ಕೃಷ್ಣನನ್ನು ಬೀಳ್ಕೊಟ್ಟು ತನ್ನ ಮೊದಲನೆಯ ಸ್ಥಾನಕ್ಕೆ ಹಿಂದಿರುಗಿದನು.
ವೃತ್ತೋತ್ಸವಾ ರೈವತಕೇ ವೃಷ್ಣಯೋSಪ್ಯಗಮನ್ ಪುರೀಮ್ |
ಸುಭದ್ರಾSಪ್ಯಥ ಶೈಲೇಂದ್ರಮಭ್ಯರ್ಚ್ಯ ಸಹ ರೈವತಮ್ ॥3॥
ದೈವತಾನಿ ಚ ಸರ್ವಾಣಿ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಚ |
ಪ್ರದಕ್ಷಿಣಂ ಗಿರಿಂ ಕೃತ್ವಾ ಪ್ರಯಯೌ ದ್ವಾರಕಾಂ ಪ್ರತಿ ॥4॥
ರೈವತಕ ಪರ್ವತದಲ್ಲಿ ಉತ್ಸವವನ್ನು ಮುಗಿಸಿದ ವೃಷ್ಣಿಗಳು ದ್ವಾರಕೆಗೆ ಹಿಂದಿರುಗಿದರು. ಸುಭದ್ರೆಯೂ ಸಹ ರೈವತ ಪರ್ವತವನ್ನು ಪೂಜಿಸಿ ಅಲ್ಲಿದ್ದ ದೇವತೆಗಳಿಗೆಲ್ಲಾ ನಮಸ್ಕರಿಸಿ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿ ದ್ವಾರಕೆಗೆ ಹೋದಳು.
ಗತಾಂ ರೈವತಕಾತ್ ಕನ್ಯಾಂ ಪ್ರವಿಷ್ಟಾಂ ದ್ವಾರಕಾಂ ಪ್ರತಿ |

ಚಿಂತಯಾನಸ್ತತೋ ಭದ್ರಾಮುಪವಿಷ್ಟಃ ಶಿಲಾತಳೇ॥5॥
ಅರ್ಜುನನು, ಸುಭದ್ರೆಯು ರೈವತಕ ಪರ್ವತದಿಂದ ದ್ವಾರಕೆಗೆ ಹೋದುದನ್ನು ನೋಡಿ ಒಂದು ಶಿಲಾತಳದಲ್ಲಿ ಅವಳನ್ನೇ ಧ್ಯಾನಿಸುತ್ತಾ ಕುಳಿತುಕೊಂಡನು.
ರಮಣೀಯೇ ವನೋದ್ದೇಶೇ ಬಹುಪಾದಪಸಂವೃತೇ |
ಸಾಲತಾಲಾಶ್ಚಕರ್ಣೈಶ್ಚ ಬಕುಲೈರರ್ಜುನೈಸ್ತಥಾ ॥6॥
ಚಂಪಕಾಶೋಕಪುನ್ನಾಗೈಃ ಕೇತಕೈಃ ಪಾಟಲೈಸ್ತಥಾ |
ಕರ್ಣಿಕಾರೈರಶೋಕೈಶ್ಚ ಅಂಕೋಲೈರತಿಮುಕ್ತಕೈಃ ॥7॥
ಏವಮಾದಿಭಿರನ್ಯೈಶ್ಚ ಸಂವೃತೇ ಸ ಶಿಲಾತಳೇ |
ಪುನಃ ಪುನಶ್ಚಿಂತಯಾನಃ ಸುಭದ್ರಾಂ ಭದ್ರಭಾಷಿಣೀಮ್ ॥8॥
ಸಾಲ, ತಾಲ, ಅಶ್ವಕರ್ಣ, ಬಕುಲ, ಅರ್ಜುನ, ಚಂಪಕ, ಅಶೋಕ, ಪುನ್ನಾಗ, ಕೇತಕ, ಪಾಟಲ, ಕರ್ಣಿಕಾರ, ಅಂಕೋಲ, ಅತಿಮುಕ್ತಿಕ ಮೊದಲಾದ ವೃಕ್ಷಗಳಿಂದ ಕೂಡಿದ ರಮಣೀಯವಾದ ವನಪ್ರದೇಶದಲ್ಲಿ ಶಿಲಾತಳದ ಮೇಲೆ ಕುಳಿತು ಮಂಜುಳಭಾಷಿಣಿಯಾದ ಸುಭದ್ರೆಯನ್ನು ಮತ್ತೆಮತ್ತೆ ಯೋಚಿಸತೊಡಗಿದನು.
ಯದೃಚ್ಛಯಾ ಚೋಪಪನ್ನಾನ್ ವೃಷ್ಣಿವೀರಾನ್ ದದರ್ಶ ಹ |
ಬಲದೇವಂ ಚ ಹಾರ್ದಿಕ್ಯಂ ಸಾಂಬಂ ಸಾರಣಮೇವ ಚ ॥9॥
ಪ್ರದ್ಯುಮ್ನಂ ಚ ಗದಂ ಚೈವ ಚಾರುದೇಷ್ಣಂ ವಿಡೂರಥಮ್ |
ಭಾನುಂ ಚ ನಿಶಠಂ ಚೈವ ವಿಪೃಥುಂ ಪೃಥುಮೇವ ಚ |
ತಥಾಽನ್ಯಾಂಶ್ಚ ಬಹೂನ್ ಪಶ್ಯನ್ ಹೃದಿ ಶೋಕಮಧಾರಯತ್ ॥10॥
ಆಗ ಅವನು ಅಲ್ಲಿಗೆ ಇದ್ದಕ್ಕಿದ್ದಂತೆ ಬಂದ ವೃಷ್ಣಿವೀರರಾದ ಬಲರಾಮ, ಕೃತವರ್ಮ, ಸಾಂಬ, ಸಾರಣ, ಪ್ರದ್ಯುಮ್ನ, ಗದ, ಚಾರುದೇಷ್ಣ, ವಿಡೂರಥ, ಭಾನು, ನಿಶಠ, ವಿಪೃಥು, ಪೃಥು ಮತ್ತು ಇನ್ನೂ ಅನೇಕ ಪುರುಷರನ್ನು ನೋಡಿ ತನ್ನ ಶೋಕವನ್ನು ತನ್ನ ಹೃದಯಲ್ಲಿಯೇ ಧರಿಸಿದನು.
ತತಸ್ತೇ ಸಹಿತಾಃ ಸರ್ವೇ ಯತಿಂ ದೃಷ್ಟ್ವಾ ಸಮುತ್ಸುಕಾಃ |
ವೃಷ್ಣಯೋ ವಿನಯೋಪೇತಾಃ ಪರಿವಾರ್ಯೋಪತಸ್ಥಿರೇ ॥11॥
ಆಗ ಆ ವೃಷ್ಣಿಗಳೆಲ್ಲರೂ ಉತ್ಸುಕರಾಗಿ ಯತಿಯನ್ನು ನೋಡಿ ಅವನನ್ನು ಸುತ್ತುವರಿದು ವಿನಯದಿಂದ ನಿಂತರು.
ತತೋಽರ್ಜುನಃ ಪ್ರೀತಮನಾಃ ಸ್ವಾಗತಂ ವ್ಯಾಜಹಾರ ಸಃ |
ಆಸ್ಯತಾಮಾಸ್ಯತಾಂ ಸರ್ವೈ ರಮಣೀಯೇ ಶಿಲಾತಳೇ ॥12॥
ಆಗ ಅರ್ಜುನನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಅವರಿಗೆ ಸ್ವಾಗತವನ್ನು ಹೇಳಿ ಎಲ್ಲರೂ ಮನೋಹರವಾದ ಈ ಶಿಲಾತಳದಲ್ಲಿ ಕುಳಿತುಕೊಳ್ಳಿ ಕುಳಿತುಕೊಳ್ಳಿ ಎಂದು ಹೇಳಿದನು.
ಇತ್ಯೇವಮುಕ್ತಾ ಯತಿನಾ ಪ್ರೀತಾಸ್ತೇ ಯಾದವರ್ಷಭಾಃ |
ಉಪೋಪವಿವಿಶುಃ ಸರ್ವೇ ಸುಸ್ವಾಗತಮಿತಿ ಸ್ಮ ಹ ॥13॥
ಯತಿಯಿಂದ ಹೀಗೆ ಹೇಳಲ್ಪಟ್ಟ ಆ ಯಾದವಶ್ರೇಷ್ಠರೆಲ್ಲರೂ ಅವನಿಗೂ ಸುಸ್ವಾಗತವನ್ನು ಕೋರಿ ಹತ್ತಿರದಲ್ಲಿ ಕುಳಿತುಕೊಂಡರು.
ಪಲ್ಲವೇಷು ನಿವಿಷ್ಟೇಷು ವೃಷ್ಣಿವೀರೇಷು ಪಾಂಡವಃ |
ಆಕಾರಂ ಗೂಹಮಾನಸ್ತು ಕುಶಲಪ್ರಶ್ನಮಬ್ರವೀತ್ ॥14॥
ವೃಷ್ಣಿವೀರರು ಚಿಗುರುಗಳ ಮೇಲೆ ಕುಳಿತುಕೊಳ್ಳುತ್ತಿರಲು ಅರ್ಜುನನು ತನ್ನ ಮನಸ್ಸಿನ ಅಭಿಪ್ರಾಯವನ್ನು ಮರೆಮಾಚಿ ಅವರ ಕುಶಲ ಪ್ರಶ್ನೆಯನ್ನು ಮಾಡಿದನು.
ಸರ್ವತ್ರ ಕುಶಲಂ ಚೋಕ್ತ್ವಾ ಬಲದೇವೋಽಬ್ರವೀದಿದಮ್ |
ಪ್ರಸಾದಂ ಕುರು ಮೇ ವಿಪ್ರ ಕುತಸ್ತ್ವಂ ಚಾಗತೋ ಹ್ಯಸಿ ॥15॥
ತ್ವಯಾ ದೃಷ್ಟಾನಿ ಪುಣ್ಯಾನಿ ವದಸ್ವ ವದತಾಂ ವರ |
ಪರ್ವತಾಂಶ್ಚೈವ ತೀರ್ಥಾನಿ ವನಾನ್ಯಾಯತನಾನಿ ಚ ॥16॥
ಬಲರಾಮನು ಎಲ್ಲವೂ ಕುಶಲ ಎಂದು ಹೇಳಿ ಈ ಮಾತನ್ನಾಡಿದನು. ಬ್ರಾಹ್ಮಣನೇ, ನಮ್ಮನ್ನು ಅನುಗ್ರಹಿಸು. ನೀನು ಎಲ್ಲಿಂದ ಬರುತ್ತಿದ್ದೀಯೆ? ಮಾತನಾಡುವವರಲ್ಲಿ ಶ್ರೇಷ್ಠನಾದವನೇ, ನೀನು ನೋಡಿದ ಪವಿತ್ರವಾದ ತೀರ್ಥಗಳನ್ನೂ, ವನಗಳನ್ನೂ, ಪರ್ವತಗಳನ್ನೂ, ದೇವಾಲಯಗಳನ್ನೂ ನಮಗೆ ತಿಳಿಸು.
ವೈಶಂಪಾಯನಃ
ತೀರ್ಥಾನಾಂ ದರ್ಶನಂ ಚೈವ ಪರ್ವತಾನಾಂ ಚ ಭಾರತ |
ಆಪಗಾನಾಂ ವನಾನಾಂ ಚ ಕಥಯಾಮಾಸ ಯಾದವೇ ॥17॥
ಜನಮೇಜಯನೇ, ಆಗ ಅರ್ಜುನನು ಬಲರಾಮನಿಗೆ ತಾನು ನೋಡಿದ ತೀರ್ಥಗಳನ್ನೂ, ಪರ್ವತಗಳನ್ನೂ, ನದಿಗಳನ್ನೂ ಮತ್ತು ವನಗಳನ್ನೂ ತಿಳಿಸಿದನು.
ತಾಃ ಕಥಾಃ ಕಥಯನ್ನೇವ ಕಥಾಂತೇ ಜನಮೇಜಯ |
ಕಥಾಂ ಧರ್ಮಾರ್ಥಸಂಯುಕ್ತಾಂ ವೃಷ್ಣಿವೀರೇ ನ್ಯವೇದಯತ್ ॥18॥
ಜನಮೇಜಯನೇ, ಅರ್ಜುನನು ಆ ಕಥೆಗಳನ್ನು ಹೇಳುತ್ತಲೇ ಕೊನೆಯಲ್ಲಿ ಧರ್ಮಾರ್ಥಯುಕ್ತವಾದ ಕಥೆಯನ್ನು ಬಲರಾಮನಿಗೆ ಹೇಳಿದನು.

ಶ್ರುತ್ವಾ ಧರ್ಮಕಥಾಂ ಪುಣ್ಯಾಂ ವೃಷ್ಣಿವೀರೋಽಭ್ಯಪೂಜಯತ್ |
ತತಸ್ತು ಯಾದವಾಃ ಸರ್ವೇ ಮಂತ್ರಯಂತಿ ಸ್ಮ ಭಾರತ ॥19॥
ವೃಷ್ಣಿವೀರನಾದ ಬಲರಾಮನು ಪವಿತ್ರವಾದ ಆ ಧರ್ಮ ಕಥೆಯನ್ನು ಕೇಳಿ ಯತಿಯನ್ನು ಪೂಜಿಸಿದನು. ಭಾರತನೇ, ಆಗ ಯಾದವರು ಪರಸ್ಪರವಾಗಿ ಮಂತ್ರಾಲೋಚನೆಯನ್ನು ಮಾಡಿದರು.
ಅಯಂ ದೇಶಾತಿಥಿಃ ಶ್ರೀಮಾನ್ ಯತಿಲಿಂಗಧರೋ ದ್ವಿಜಃ |
ಆವಾಸಂ ಕಮುಪಾಶ್ರಿತ್ಯ ವಸೇತ ನಿರುಪದ್ರವಃ ॥20॥
ಯತಿಚಿಹ್ನೆಯನ್ನು ಧರಿಸಿದ ಈ ಶ್ರೇಷ್ಠನಾದ ಬ್ರಾಹ್ಮಣನು ದೇಶಗಳನ್ನು ಸಂಚರಿಸುತ್ತಾ ಇಲ್ಲಿಗೆ ಅತಿಥಿಯಾಗಿ ಬಂದಿದ್ದಾನೆ. ಯಾವ ಆವಾಸದಲ್ಲಿ ಅವನು ಉಪದ್ರವವಿಲ್ಲದಂತೆ ಇರಬಹುದು?
ಇತ್ಯೇವಂ ಕಥಯಂತಸ್ತೇ ರೌಹಿಣೇಯೇನ ಯಾದವಾಃ |
ದದೃಶುಃ ಕೃಷ್ಣಮಾಯಾಂತಂ ಸರ್ವೇ ಯಾದವನಂದನಮ್ ॥21॥
ಬಲರಾಮನ ಜೊತೆಯಲ್ಲಿ ಹೀಗೆ ಮಾತನಾಡುತ್ತಿದ್ದ ಆ ಯಾದವರೆಲ್ಲರೂ ಯಾದವನಂದನನಾದ ಕೃಷ್ಣನು ಬರುತ್ತಿರುವದನ್ನು ನೋಡಿದರು.
ಏಹಿ ಕೇಶವ ತಾತೇತಿ ರೌಹಿಣೇಯೋಽಬ್ರವೀದಿದಮ್ |
ಯತಿಲಿಂಗಧರೋ ವಿದ್ವಾನ್ ದೇಶಾತಿಥಿರಯಂ ದ್ವಿಜಃ ॥22॥
ಪ್ರೀತಿಪಾತ್ರವಾದ ಕೇಶವನೇ, ಬಾ ಎಂದು ಕರೆದು ಬಲರಾಮನು ಹೀಗೆ ಹೇಳಿದನು. ಯತಿಚಿಹ್ನೆಯನ್ನು ಧರಿಸಿದ ವಿದ್ವಾಂಸನಾದ ಈ ಬ್ರಾಹ್ಮಣನು ದೇಶಾತಿಥಿಯಾಗಿ ಬಂದಿದ್ದಾನೆ.
ವರ್ಷಾರಾತ್ರನಿವಾಸಾರ್ಥಮಾಗತೋ ನಗರಂ ಪ್ರತಿ |
ಸ್ಥಾನೇ ಯಸ್ಮಿನ್ ನಿವಸತಿ ತನ್ಮೇ ಬ್ರೂಹಿ ಜನಾರ್ದನ ॥23॥
ವರ್ಷಾಕಾಲದಲ್ಲಿ ಇರಲು ಒಂದು ಆವಾಸವನ್ನು (ಗೃಹವನ್ನು) ಹುಡುಕುತ್ತಾ ಅವನು ನಗರಕ್ಕೆ ಬಂದಿದ್ದಾನೆ, ಜನಾರ್ದನನೇ, ಅವನು (ನಮ್ಮ ನಗರದಲ್ಲಿ) ಎಲ್ಲಿ ನಿವಾಸ ಮಾಡಬಹುದೆಂದು ಹೇಳು.
ಭಗವಾನ್
ತ್ವಯಿ ಸ್ಥಿತೇ ಮಹಾಭಾಗ ಪರವಾನಸ್ಮಿ ಧರ್ಮತಃ |
ಸ್ವಯಂ ತು ರುಚಿರೇ ಸ್ಥಾನೇ ವಾಸಯಾಮುಂ ಹಿ ಮಾನದ ॥24॥
ಮಹಾನುಭಾವನೇ, ನೀನು ಇರುವಾಗ ನಾನು ಧರ್ಮದಿಂದ ನಿನಗೆ ಅಧೀನನಾಗಿದ್ದೇನೆ. ಮಾನದನೇ. ನೀನೇ ಇವನಿಗೆ ಆವಾಸಕ್ಕಾಗಿ ಒಂದು ಮನೋಹರವಾದ ಸ್ಥಾನವನ್ನು ಕಲ್ಪಿಸು.
ವೈಶಂಪಾಯನಃ
ಸುಪ್ರೀತಸ್ತೇನ ವಾಕ್ಯೇನ ಪರಿಷ್ವಜ್ಯ ಜನಾರ್ದನಮ್ |
ಬಲದೇವೋಽಬ್ರವೀದ್ ವಾಕ್ಯಂ ಚಿಂತಯಿತ್ವಾ ಮಹಾಬಲಃ ॥25॥
ಆ ವಾಕ್ಯದಿಂದ ಸಂತೋಷಗೊಂಡ ಮಹಾಬಲನಾದ ಬಲರಾಮನು ಜನಾರ್ದನನನ್ನು ಆಲಂಗಿಸಿ ಆಲೋಚಿಸಿ ಹೀಗೆ ಮಾತನಾಡಿದನು.
ಬಲದೇವಃ
ಆರಾಮೇ ತು ವಸೇದ್ ಧೀಮಾಂಶ್ಚತುರೋ ವರ್ಷಮಾಸಕಾನ್ |
ಕನ್ಯಾಪುರೇ ಸುಭದ್ರಾಯಾ ಭುಕತತ್ವ ಭೋಜನಮಿಷ್ಟತಃ ॥26॥
ಮೇಧಾವಿಯಾದ ಇವನು ಸುಭದ್ರೆಯ ಕನ್ಯಾಂತಃಪುರಕ್ಕೆ ಹೊಂದಿಕೊಂಡಿರುವ ತೋಟದಲ್ಲಿ ಇಷ್ಟವಾದ ಭೋಜನವನ್ನು ಮಾಡಿಕೊಂಡು ಚಾತುರ್ಮಾಸದ ನಾಲ್ಕು ತಿಂಗಳ ಕಾಲ ವಾಸಮಾಡಲಿ.
ಲತಾಗೃಹೇಷು ವಸತಾಮಿತಿ ಮೇ ಧೀಯತೇ ಮತಿಃ |
ಲಬ್ಧಾನುಜ್ಞಾಸ್ತ್ವಯಾ ತತ್ರ ಮನ್ಯಂತೇ ಸರ್ವಯಾದವಾಃ ॥27॥
ಅಲ್ಲಿರುವ ಲತಾಗೃಹಗಳಲ್ಲಿ ಇವನು ವಾಸಮಾಡಲಿ ಎಂದು ನನ್ನ ಅಭಿಪ್ರಾಯ. ನೀನು ಅನುಮತಿಯನ್ನು ಕೊಟ್ಟರೆ ಎಲ್ಲಾ ಯಾದವರೂ ಹಾಗೆಯೇ ಭಾವಿಸುತ್ತಾರೆ.
ವಾಸುದೇವಃ
ಬಲವಾನ್ ದರ್ಶನೀಯಶ್ಚ ವಾಗ್ಮೀ ಶ್ರೀಮಾನ್ ಬಹುಶ್ರುತಃ |
ಕನ್ಯಾಪುರಸಮೀಪೇ ತು ನ ಯುಕ್ತಮಿತಿ ಮೇ ಮತಿಃ ॥28॥
ಇವನು ಬಲಿಷ್ಠನೂ, ಸುಂದರನೂ, ವಾಗ್ಮಿಯೂ, ಯೌವನದ ಕಾಂತಿಯನ್ನು ಹೊಂದಿದವನೂ ಮತ್ತು ಬಹುಶ್ರುತನೂ ಆಗಿದ್ದಾನೆ. ಕನ್ಯಾಂತಃಪುರದ ಸಮೀಪದಲ್ಲಿ ಇವನ ವಾಸವು ಯೋಗ್ಯವಲ್ಲ ಎಂದು ನನ್ನ ಅಭಿಪ್ರಾಯ.
ಗುರುಃ ಶಾಸ್ತಾ ಚ ನೇತಾ ಚ ಶಾಸ್ತ್ರಜ್ಞೋ ಧರ್ಮವಿತ್ತಮಃ |
ತ್ವಯೋಕ್ತಂ ನ ವಿರುಧ್ಯೇಽಹಂ ಕರಿಷ್ಯಾಮಿ ವಚಸ್ತವ |
ಶುಭಾಶುಭಸ್ಯ ವಿಜ್ಞಾನೇ ನಾನ್ಯೋಽಸ್ತಿ ಭುವಿ ಕಂಚನ ॥29॥
ನೀನು ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನೂ. ಶಾಸ್ತ್ರಜ್ಞನೂ, ಹಿರಿಯನೂ, ನಮ್ಮೆಲ್ಲರಿಗೂ ಆಜ್ಞೆಯನ್ನು ಮಾಡುವವನೂ ಮತ್ತು ನಮ್ಮ ನಾಯಕನೂ ಆಗಿದ್ದೀಯೆ. ಆದ್ದರಿಂದ ನಾನು ವಿರೋಧ ಮಾಡದೆ ನಿನ್ನ ಮಾತಿನಂತೆ ನಡೆದುಕೊಳ್ಳುವೆನು. ನಿನಗಿಂತ ಅಧಿಕವಾಗಿ ಶುಭಾಶುಭವನ್ನು ತಿಳಿದವರು ಭೂಮಿಯಲ್ಲಿ ಯಾರೂ ಇಲ್ಲ.

ಬಲದೇವಃ
ಅಯಂ ದೇಶಾತಿಥಿಃ ಶ್ರೀಮಾನ್ ಸರ್ವಧರ್ಮವಿಶಾರದಃ |
ಧೃತಿಮಾನ್ ವಿನಯೋಪೇತಃ ಸತ್ಯವಾನ್ ವಿಜಿತೇಂದ್ರಿಯಃ ॥30॥
ಇವನು ದೇಶಾತಿಥಿಯಾಗಿ ಬಂದಿದ್ದಾನೆ. ಕಾಂತಿಯುಕ್ತನೂ ಸರ್ವಧರ್ಮವಿಶಾರದನೂ, ಧೈರ್ಯಶಾಲಿಯೂ, ವಿನಯ- ಶಾಲಿಯೂ, ಸತ್ಯವಂತನೂ ಮತ್ತು ಜಿತೇಂದ್ರಿಯನೂ ಆಗಿದ್ದಾನೆ.
ಯತಿಲಿಂಗಧರೋ ಹ್ಯೇಷ ಕೋ ವಿಜಾನಾತಿ ಮಾನಸಮ್ |
ತ್ವಮಿಮಂ ಪುಂಡರೀಕಾಕ್ಷ ನೀತ್ವಾ ಕನ್ಯಾಪುರಂ ಶುಭಮ್ ॥31॥
ನಿವೇದಯ ಸುಭದ್ರಾಯ್ಯೆ ಮದ್ವಾಕ್ಯಪರಿಚೋದಿತಃ |
ಭಕ್ಷ್ಯೈರ್ಭೋಜ್ಯೈಶ್ಚ ಪಾನೈಶ್ಚ ಅನ್ಯೈರಿಷ್ಟೈಶ್ಚ ಪೂಜಯ ॥32॥
ಇವನು ಯತಿಗಳ ಚಿಹ್ನೆಯನ್ನು ಧರಿಸಿದವನು. ಅವನ ಮನಸ್ಸನ್ನು ಯಾರು ತಿಳಿಯುತ್ತಾರೆ? ಪುಂಡರೀಕಾಕ್ಷನೇ, ನೀನು ಇವನನ್ನು ಶುಭವಾದ ಕನ್ಯಾಪುರಕ್ಕೆ ಕರೆದುಕೊಂಡು ಹೋಗಿ ನನ್ನ ಮಾತಿನಂತೆ ಸುಭದ್ರೆಗೆ ಇವನಿಗೆ ಇಷ್ಟವಾದ ಭಕ್ಷ್ಯಭೋಜ್ಯಗಳನ್ನು, ಪಾನಗಳನ್ನು ಕೊಟ್ಟು ಇವನನ್ನು ಸತ್ಕರಿಸುವಂತೆ ಹೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕವಿಂಶತ್ಯಕದ್ವಿಶತತಮೋಽಧ್ಯಾಯಃ ॥
॥ ಇತಿ ಸುಭದ್ರಾಹರಣಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸಂಯಾಚಿತಃ ಫಲ್ಗುನೇನಾಹ ವಾಕ್ಯಂ
ಯದ್ ವಾಸುದೇವಸ್ತನ್ನ ಜಾನಾತಿ ಕಶ್ಚಿತ್ |
ಋತೇ ಪಿತ್ರೋರ್ವಿಪೃಥೋಃಸಾತ್ಯಕೇರ್ವಾ
ಸುಭದ್ರಾಂತೇ ಪ್ರದದಾನೀತಿ ಸತ್ಯಂ ॥175॥
ಅರ್ಜುನ ಯಾಚಿಸಿದಾಗ ಶ್ರೀಕೃಷ್ಣ ಸುಭದ್ರೆಯನ್ನು ಸತ್ಯವಾಗಿ ನಿನಗೇ ಕೊಡುವೆನೆಂದು ಮಾತುಕೊಟ್ಟಿದ್ದನ್ನು ತಂದೆತಾಯಿಗಳು ವಿಪೃಥು ಸಾತ್ಯಕಿ ಇವರನ್ನು ಹೊರತು ಇನ್ನಾರೂ ಅರಿತಿರಲಿಲ್ಲ.
ಅಸ್ತ್ರೇ ಶಸ್ತ್ರೇ ತತ್ತ್ವವಿದ್ಯಾಸು ಚೈವ
ಶಿಷ್ಯಃ ಶೈನೇಯೋ ವಾಸುದೇವೇಂದ್ರಸೂನ್ವೋಃ |
ತಸ್ಮಾದಸ್ಮೈ ಕಥಯಾಮಾಸ ಕೃಷ್ಣಃ
ಸ್ವಶಿಷ್ಯತ್ವಾದ್ವಿಪೃಥೋಶ್ಚಾಪಿ ಸರ್ವಂ ॥176॥
ಅಸ್ತ್ರ, ಶಸ್ತ್ರ, ತತ್ವಜ್ಞಾನಗಳಲ್ಲಿ ಸಾತ್ಯಕಿ ಕೃಷ್ಣಾರ್ಜುನರಿಬ್ಬರಿಗೂ ಶಿಷ್ಯ. ಅದರಿಂದ ಅವನಿಗೆ ಕೃಷ್ಣ ಹೇಳಿದ್ದ. ವಿಪೃಥು ಕೃಷ್ಣನ ಶಿಷ್ಯನಾದ್ದರಿಂದ ಅವನಿಗೂ ಕೃಷ್ಣ ಹೇಳಿದ್ದ.
ಅನ್ಯೇ ಸರ್ವೇ ವಾಸುದೇವಸ್ಯ ಪಾರ್ಥಾನ್
ಪ್ರಿಯಾನ್ ನಿತ್ಯಂ ಜಾನಮಾನಾ ಅಪಿ ಸ್ಮ |
ರಾಮೇಣಾದಿಷ್ಟಾ ಉದ್ಧವೋಽಥಾಹುಕಾದ್ಯಾ
ಹಾರ್ದಿಕ್ಯಾದ್ಯಾ ನೈವ ದಿತ್ಸಂತಿ ಜಿಷ್ಣೋಃ ॥177॥
ಉದ್ಧವ ಆಹುಕ ಕೃತವರ್ಮ ಮುಂತಾದ ಉಳಿದವರೆಲ್ಲರೂ ಪಾಂಡವರನ್ನು ಕೃಷ್ಣನಿಗೆ ಸದಾ ಪ್ರಿಯರೆಂದು ತಿಳಿದವರಾಗಿದ್ದರೂ ಕೂಡ ಬಲರಾಮನ ಆದೇಶಕ್ಕೆ ಬದ್ಧರಾಗಿದ್ದು ಸುಭದ್ರೆಯನ್ನು ಅರ್ಜುನನಿಗೆ ಕೊಡಲು ಒಪ್ಪುತ್ತಿರಲಿಲ್ಲ.
ದುರ್ಯೋಧನೇ ದಾತುಮಿಚ್ಛಂತಿ ಸರ್ವೇ
ರಾಮಪ್ರಿಯಾರ್ಥಂ ಜಾನಮಾನಾ ಹರೇಸ್ತತ್ |
ಅಪ್ಯಪ್ರಿಯಂ ರಾಕ್ಷಸಾವೇಶಯುಕ್ತಾ
ಸ್ತಸ್ಮಾತ್ ಸರ್ವಾನ್ ವಂಚಯಾಮಾಸ ಕೃಷ್ಣಃ ॥178॥
ಬಲರಾಮನ ಸಂತೋಷಕ್ಕಾಗಿ ಎಲ್ಲರೂ ಸುಭದ್ರೆಯನ್ನು ದುರ್ಯೋಧನನಿಗೇ ಕೊಡಲು ಬಯಸಿದ್ದರು. ಅದು ಕೃಷ್ಣನಿಗೆ ಇಷ್ಟವಲ್ಲ ಎಂದು ತಿಳಿದಿದ್ದರೂ ಅವರೆಲ್ಲರೂ ಆಗ ಅಸುರಾವೇಶಯುಕ್ತರಾಗಿದ್ದರು. ಅದರಿಂದ ಎಲ್ಲರನ್ನೂ ಕೃಷ್ಣ ವಂಚಿಸಿದ.
ಪ್ರದ್ಯುಮ್ನಸಾಂಬಪ್ರಮುಖಾಶ್ಚ ವಂಚಿತಾ
ಯಯುಸ್ತೀರ್ಥಾರ್ಥಂ ರಾಮಯುಕ್ತಾಃ ಸಮಗ್ರಾಃ |
ಪಿಂಡೋದ್ಧಾರಂ ತತ್ರ ಮಹೋತ್ಸವೇಷು-
ಏವಾವರ್ತಯತ್ಸು ಕ್ವಚಿದೂಚೇ ಸುಭದ್ರಾ ॥179॥
ಪ್ರದ್ಯುಮ್ನ ಸಾಂಬ ಮುಂತಾದವರನ್ನೂ ಕೃಷ್ಣ ವಂಚಿಸಿದ. ಒಂದುದಿನ ಎಲ್ಲರೂ ಬಲರಾಮನೊಂದಿಗೆ ಪಿಂಡೋದ್ಧಾರಕ ಕ್ಷೇತ್ರಕ್ಕೆ ತೀರ್ಥಯಾತ್ರೆಗಾಗಿ ಹೋಗಿದ್ದರು. ಅಲ್ಲಿ ದೊಡ್ಡ ಉತ್ಸವದಲ್ಲಿ ಎಲ್ಲರೂ ಪಾಲುಗೊಂಡಿದ್ದಾಗ ಇತ್ತ ದ್ವಾರಕೆಯಲ್ಲಿ ಸುಭದ್ರೆ ಅರ್ಜುನನ ಮುಂದೆ ಕೇಳಿದಳು.
ಯತೇ ತೀರ್ಥಾನಾಚರನ್ ಬಾಂಧವಾಂಸ್ತ್ವ-

ಮದ್ರಾಕ್ಷೀರ್ನಃ ಕಚ್ಚಿದಿಷ್ಟಾನ್ ಸ್ಮ ಪಾರ್ಥಾನ್ |
ಕುಂತೀಂ ಕೃಷ್ಣಾಂ ಚೇತ್ಯಾಹ ಪೃಷ್ಟಃ ಸ ಪಾರ್ಥ
ಓಮಿತ್ಯೇಷಾಮಾಹ ಚಾನಾಮಯಂ ಸಃ ॥180॥
`ಯತಿಯೆ, ನೀನು ತೀರ್ಥಾಟನೆ ಮಾಡುತ್ತ ನಮಗೆ ಬಂಧುಗಳೂ ಇಷ್ಟರೂ ಆದ ಪಾಂಡವರನ್ನು ಕುಂತಿಯನ್ನು ದ್ರೌಪದಿಯನ್ನು ಎಲ್ಲಿಯಾದರೂ ಕಂಡೆಯ?' ಹೀಗೆ ಸುಭದ್ರೆ ಕೇಳಿದಾಗ ಅರ್ಜುನ, `ಹೌದು, ಕಂಡೆ'ನೆಂದ. `ಅವರು ಕ್ಷೇಮದಿಂದ ಇದ್ದಾರೆ' ಎಂದ.
ಭೂಯಃ ಸಾವಾದೀದ್ಭಗವನ್ನಿಂದ್ರಸೂನು-
ರ್ಗತಸ್ತೀರ್ಥಾರ್ಥಂ ಬ್ರಾಹ್ಮಣೇಭ್ಯಃ ಶ್ರುತೋ ಮೇ |
ಕಚ್ಚಿದ್ ದೃಷ್ಟೋ ಭವತೇತ್ಯೋಮಿತಿ ಸ್ಮ
ಪಾರ್ಥೋಽಪ್ಯೂಚೇ ಕ್ವೇತಿ ಸಾಪೃಚ್ಛದೇನಂ ॥181॥
ಸುಭದ್ರೆ ಪುನಃ ಕೇಳಿದಳು. `ಪೂಜ್ಯನೆ ಅರ್ಜುನ ತೀರ್ಥಯಾತ್ರೆಗೆ ಹೋದನೆಂದು ನಾನು ಬ್ರಾಹ್ಮಣರಿಂದ ಕೇಳಿದ್ದೇನೆ. ಅವನನ್ನು ಎಲ್ಲಿಯಾದರೂ ನೋಡಿರುವೆಯಾ?' ಅರ್ಜುನನೆಂದ, `ಹೌದು ನೋಡಿದ್ದೇನೆ?' `ಎಲ್ಲಿ?' ಎಂದಳು ಅವಳು.
ಅತ್ರೈವೇತಿ ಸ್ಮಯಮಾನಂ ಚ ಪಾರ್ಥಂ
ಪುನಃಪುನಃ ಪರ್ಯಪೃಚ್ಛಚ್ಛುಭಾಂಗೀ |
ಸೋಽಪ್ಯಾಹೋನ್ಮತ್ತೇ ಸೋಽಸ್ಮಿ ಹೀತಿ ಸ್ಮಯಂಸ್ತಾಂ
ಫುಲ್ಲಾಕ್ಷೀ ತಂ ಸಾ ದದರ್ಶಾತಿಹೃಷ್ಟಾ ॥182॥
`ಇಲ್ಲಿಯೆ' ಎಂದ ಅರ್ಜುನ ನಗುತ್ತ. ಆ ಮಂಗಳಾಂಗಿ `ಎಲ್ಲಿ ಎಲ್ಲಿ' ಎಂದು ಪುನಃ ಪುನಃ ಕೇಳಿದಳು. `ಹುಚ್ಚಿ! ಅವನೆ ನಾನು' ಎಂದ ಅರ್ಜುನ, ನಗುತ್ತ. ಆಗ ಸುಭದ್ರೆ ಆನಂದ ತುಂದಿಲಳಾಗಿ ಕಣ್ಣರಳಿಸಿ ಅವನನ್ನು ನೋಡಿದಳು.
ತತೋಹರ್ಷಾಲ್ಲಜ್ಜಯಾ ಚೋತ್ಪಲಾಕ್ಷೀ
ಕಿಂಚಿನ್ನೋಚೇ ಪಾರ್ಥ ಏನಾಮುವಾಚ |
ಕಾಮಾವಿಷ್ಟೋ ಮುಖ್ಯಕಾಲೋ ಹ್ಯಯಂ ನಾ-
ವುದ್ವಾಹಾರ್ಥೋಕ್ತಸಿತ್ವತಿ ಸಾ ಚೈನಮಾಹ ॥183॥
ನಾತಿಕ್ರಮೋ ವಾಸುದೇವಸ್ಯ ಯುಕ್ತ
ಸ್ತಸ್ಮಾತ್ತೇನ ಸ್ವಪಿತೃಭ್ಯಾಂ ಚ ದತ್ತಾಂ |
ಯುಕ್ತೋ ನಿಜೈರ್ಬಂಧುಭಿಶ್ಚೋತ್ಸವೇ ಮಾಂ
ಸಮುದ್ವಹೇತ್ಯಥ ಕೃಷ್ಣಂ ಸ ದಧ್ಯೌ ॥184॥
ಸುಭದ್ರೆ ಆನಂದದಿಂದಲು ಲಜ್ಜೆಯಿಂದಲೂ ಏನೂ ಹೇಳದೆ ಸುಮ್ಮನಿದ್ದಳು. ಅನುರಾಗ ತುಂಬಿದ ಅರ್ಜುನನೆ ಅವಳಿಗೆ ಹೇಳಿದ, `ನಮ್ಮಿಬ್ಬರಲ್ಲಿ ಅನುರಾಗ ತುಂಬಿರುವ ಈ ಸಮಯವೇ ನಮ್ಮ ಗಾಂಧರ್ವ ವಿವಾಹಕ್ಕೆ ಮುಖ್ಯವಾದ ಶುಭ ಸಮಯವಾಗಲಿ' ಎಂದು. ಸುಭದ್ರೆ ಹೇಳಿದಳು, `ಕೃಷ್ಣನನ್ನು ಬಿಟ್ಟು ನಾವೇನನ್ನೂ ಮಾಡಬಾರದು. ಕೃಷ್ಣನೂ ನನ್ನ ತಂದೆತಾಯಿಗಳೂ ನನ್ನನ್ನು ನಿನಗೆ ಕೊಟ್ಟ ಮೇಲೆ ನೀನು ನಿನ್ನ ಬಂಧುಗಳೊಂದಿಗೆ ವಿವಾಹಮಹೋತ್ಸವದಲ್ಲಿ ನನ್ನನ್ನು ಮದುವೆಯಾಗು' ಎಂದು. ಆಗ ಅರ್ಜುನ ಕೃಷ್ಣನನ್ನು ಸ್ಮರಿಸಿದ.

## ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ

(ಕನ್ಯಾಗಾರದ ಸಮೀಪದಲ್ಲಿ ಅರ್ಜುನನ ವಾಸ, ಸುಭದ್ರೆಯ ಉಪಚಾರ, ಅರ್ಜುನ ಸುಭದ್ರೆಯರ ಸಂವಾದ, ಅರ್ಜುನನ ಜೊತೆಯಲ್ಲಿ ಸಮಾಲೋಚಿಸಿ ಕೃಷ್ಣನಿಂದ ಎಲ್ಲರನ್ನೂ ದ್ವೀಪಾಂತರಕ್ಕೆ ಪ್ರೇಷಣ.)

ವೈಶಂಪಾಯನಃ
ಸ ತಥೇತಿ ಪ್ರತಿಜ್ಞಾಯ ಯತಿನಾ ಸಹಿತೋ ಹರಿಃ |
ಕೃತ್ವಾ ತು ಸಂವಿದಂ ತೇನ ಪ್ರಹೃಷ್ಟಃ ಕೇಶವೋಽಭವತ್ ॥1॥
ಕೃಷ್ಣನು ಹಾಗೆಯೇ ಆಗಲಿ ಎಂದು ಬಲರಾಮನಿಗೆ ಹೇಳಿ ಯತಿವೇಷದಲ್ಲಿದ್ದ ಅರ್ಜುನನ ಜೊತೆಯಲ್ಲಿ ಸಮಾಲೋಚಿಸಿ ಸಂತುಷ್ಟನಾದನು.
ಪರ್ವತೇ ತೌ ವಿಹೃತ್ಯೈವ ಯಥೇಷ್ಟಂ ಕೃಷ್ಣಪಾಂಡವೌ |
ತಾಂ ಪುರೀಂ ಪ್ರವಿವೇಶಾಥ ಗೃಹ್ಯ ಹಸ್ತೇ ಚ ಪಾಂಡವಮ್ ॥2॥
ಕೃಷ್ಣಪಾಂಡವರು ಆ ಪರ್ವತದಲ್ಲಿ ತೃಪ್ತಿಯಾಗುವಂತೆ ವಿಹರಿಸಿದರು. ಅನಂತರ, ಕೃಷ್ಣನು ಅರ್ಜುನನ ಕೈಯನ್ನು ಹಿಡಿದು ದ್ವಾರಕೆಯನ್ನು ಪ್ರವೇಶಿಸಿದನು.
ಪ್ರವಿಶ್ಯ ಚ ಗೃಹಂ ರಮ್ಯಂ ಸರ್ವಭೋಗಸಮನ್ವಿತಮ್ |
ಪಾರ್ಥಮಾವೇದಯಾಮಾಸ ರುಗ್ಮಿಣೀಸತ್ಯಭಾಮಯೋಃ ॥3॥
ಸರ್ವಭೋಗಸಮನ್ವಿತವಾದ ಸುಂದರವಾದ ತನ್ನ ಗೃಹವನ್ನು ಪ್ರವೇಶಿಸಿ ರುಕ್ಮಿಣೀಸತ್ಯಭಾಮೆಯರಿಗೆ ಅರ್ಜುನನ ಪರಿಚಯವನ್ನು ಮಾಡಿಸಿದನು.
ಹೃಷೀಕೇಶವಚಃ ಶ್ರುತ್ವಾ ತೇ ಉಭೇ ಚೋಚತುರ್ಭೃಶಮ್ |
ಮನೋರಥೋ ಮಹಾನೇಷ ಹೃದಿ ನಃ ಪರಿವರ್ತತೇ ॥4॥
ಕದಾ ದ್ರಕ್ಷ್ಯಾಮ ಬೀಭತ್ಸುಂ ಪಾಂಡವಂ ಗೃಹಮಾಗತಮ್ |
ಇತಿ ಚಿಂತಯಮಾನಾನಾಂ ಪಾರ್ಥೋ ದುಃಖಮಪಾನುದತ್ ॥5॥

ಹೃಷೀಕೇಶನ ವಾಕ್ಯವನ್ನು ಕೇಳಿ ಅವರಿಬ್ಬರೂ ನಮ್ಮ ಮನಸ್ಸಿನಲ್ಲಿ ಮನೆಗೆ ಬಂದ ಪಾಂಡುಪುತ್ರನಾದ ಅರ್ಜುನನನ್ನು ಯಾವಾಗ ನೋಡುವೆವು ಎಂಬ ಮಹದಾಸೆ ಬಹಳ ಕಾಲದಿಂದ ಇದೆ ಎಂದು ಹೇಳಿದರು. ಅರ್ಜುನನು ಹೀಗೆ ಚಿಂತಿಸುವ ಅವರ ದುಃಖವನ್ನು ಪರಿಹರಿಸಿದನು.
ಪ್ರಾಪ್ತಮಜ್ಞಾತಪೂಜಾಭಿರುತ್ತಮಾಭಿರಪೂಜಯನ್ |
ಸ ತಂ ಪ್ರಿಯಾತಿಥಿಂ ಶ್ರೇಷ್ಠಂ ಸಮೀಕ್ಷ್ಯ ಯತಿಮಾಗತಮ್ |
ಸೋದರ್ಯಾಂ ಭಗಿನೀಂ ಕೃಷ್ಣಃ ಸುಭದ್ರಾಮಿದಮಬ್ರವೀತ್ ॥6॥
ಮನೆಗೆ ಬಂದ ಅರ್ಜುನನು ಮೊದಲು ಎಂದೂ ತಿಳಿಯದವನಂತೆ ಉತ್ತಮವಾದ ಸತ್ಕಾರಗಳಿಂದ ಪೂಜಿಸಿದನು. ತನಗೆ ಪ್ರಿಯಾತಿಥಿಯಾಗಿ ಬಂದ ಶ್ರೇಷ್ಠನಾದ ಯತಿಯನ್ನು ನೋಡಿ ಕೃಷ್ಣನು ತಂಗಿಯಾದ ಸುಭದ್ರೆಗೆ ಹೀಗೆ ಹೇಳಿದನು.
ಅಯಂ ದೇಶಾತಿಥಿರ್ಭದ್ರೇ ಸಂಯತೋ ವ್ರತವಾನೃಷಿಃ |
ಪ್ರಾಪ್ನೋತು ಸತತಂ ಪೂಜಾಂ ತವ ಕನ್ಯಾಪುರೇ ವಸನ್ ॥7॥
ಸುಭದ್ರೇ, ಈ ಋಷಿಯು ನಮಗೆ ದೇಶಾತಿಥಿಯಾಗಿ ಬಂದಿದ್ದಾನೆ. ಅವನು ವ್ರತವನ್ನು ಧರಿಸಿದವನು ಮತ್ತು ಸಂಯಮಿಯಾದವನು. ಕನ್ಯಾಪುರದಲ್ಲಿ ವಾಸಿಸುವ ಅವನನ್ನು ನೀನು ಸತತವಾಗಿ ಪೂಜಿಸು.
ಆರ್ಯೇಣ ಚ ಪರಿಜ್ಞಾತಃ ಪೂಜನೀಯೋ ಯತಿಃ ಸದಾ |
ತಸ್ಮಾದ್ ಭರಸ್ವ ವಾರ್ಷ್ಣೇಯಿ ಭಕ್ಷ್ಯೈರ್ಭೋಜ್ಯೈರ್ಯತಿಂ ಸದಾ ॥8॥
ಈ ಯತಿಯು ಅಣ್ಣನಾದ ಬಲರಾಮನಿಗೆ ಪರಿಚಿತನಾದವನು. ಆದ್ದರಿಂದ ಅವನನ್ನು ಸದಾ ಪೂಜಿಸು. ವೃಷ್ಣಿವಂಶೋದ್ಭವಳೇ, ಈ ಯತಿಯನ್ನು ಯಾವಾಗಲೂ ಭಕ್ಷ್ಯಭೋಜ್ಯಗಳಿಂದ ಪೋಷಿಸು.
ಏಷ ಯದ್ಯದೃಷಿರ್ಬ್ರೂಯಾತ್ ಕಾರ್ಯಮೇವ ನ ಸಂಶಯಃ |
ಸಖೀಭಿಃ ಸಹಿತಾ ಭದ್ರೇ ಭವೇಥಾ ವಶವರ್ತಿನೀ ॥9॥
ಈ ಋಷಿಯು ಏನೇನು ಹೇಳುವನೋ ಅದನ್ನೆಲ್ಲಾ ನಿಸ್ಸಂಶಯವಾಗಿ ಮಾಡಲೇಬೇಕು. ಸುಭದ್ರೇ, ನೀನು ನಿನ್ನ ಸಖಿಯರ ಜೊತೆಯಲ್ಲಿ ಅವನಿಗೆ ಸದಾ ವಶವರ್ತಿನಿಯಾಗಿರಬೇಕು.
ಪುರಾಽಪಿ ಯತಯೋ ಭದ್ರೇ ಯೇ ಭೈಕ್ಷಾರ್ಥಮನುವ್ರತಾಃ |
ತೇ ಬಭೂವುರ್ದಶಾರ್ಹಾಣಾಂ ಕನ್ಯಾಪುರನಿವಾಸಿನಃ ॥10॥
ಸುಭದ್ರೇ, ಹಿಂದೆಯೂ ಸಹ ಭೈಕ್ಷಾರ್ಥವಾಗಿ ಬಂದ ವ್ರತಶೀಲರಾದ ಯತಿಗಳು ದಶಾರ್ಹರ ಕನ್ಯಾಪುರದಲ್ಲಿಯೇ ವಾಸಿಸುತ್ತಿದ್ದರು.
ತೇಭ್ಯೋ ಭೋಜ್ಯಾನಿ ಭಕ್ಷ್ಯಾಣಿ ಯಥಾಕಾಮಮತಂದ್ರಿತಾಃ |
ಕನ್ಯಾಪುರಗತಾಃ ಕನ್ಯಾಃ ಪ್ರಯಚ್ಛಂತಿ ಯಶಸ್ವಿನಿ ॥11॥
ಯಶಸ್ವಿನಿಯೇ, ಅವರಿಗೆ ಆಯಾ ಕಾಲಕ್ಕೆ ಬೇಕಾದ, ಅವರಿಗೆ
ಇಷ್ಟವಾದ ಭಕ್ಷ್ಯಭೋಜ್ಯಗಳನ್ನು ಕನ್ಯಾಂತಃಪುರದಲ್ಲಿದ್ದ ಕನ್ಯೆಯರು ಆಲಸ್ಯವಿಲ್ಲದೇ ತೆಗೆದುಕೊಂಡು ಹೋಗಿ ಕೊಡುತ್ತಿದ್ದರು.
ವೈಶಂಪಾಯನಃ
ಸಾ ತಥೋಕ್ತಾಽಬ್ರವೀತ್ ಕೃಷ್ಣಂ ಕರಿಷ್ಯಾಮಿ ಯಥಾಽಽತ್ಥ ಮಾಮ್|
ತೋಷಯಿಷ್ಯಾಮಿ ಋಷ್ಯೇಣ ಕರ್ಮಣಾ ಚ ದ್ವಿಜರ್ಷಭಮ್ ॥12॥
ಹೀಗೆ ಹೇಳಲ್ಪಟ್ಟ ಸುಭದ್ರೆಯು ಕೃಷ್ಣನನ್ನು ಕುರಿತು ನೀನು ನನಗೆ ಹೇಳಿದಂತೆಯೇ ಮಾಡುವೆನು. ಈ ಬ್ರಾಹ್ಮಣ ಶ್ರೇಷ್ಠನನ್ನು ಋಷಿಗೆ ಉಚಿತವಾದ ಕರ್ಮಗಳಿಂದ ಸಂತೋಷಪಡಿಸುವೆನು ಎಂದು ಹೇಳಿದಳು.
ಏವಮೇತೇನ ರೂಪೇಣ ಕಂಚಿತ್ ಕಾಲಂ ಧನಂಜಯಃ |
ಉವಾಸ ಭಕ್ಷ್ಯೈರ್ಭೋಜ್ಯೈಶ್ಚ ಭದ್ರಯಾ ಪರಮಾರ್ಚಿತಃ ॥13॥
ಹೀಗೆ ಅರ್ಜುನನು ಯತಿವೇಷವನ್ನು ಧರಿಸಿ ಸ್ವಲ್ಪಕಾಲ ಸುಭದ್ರೆಯಿಂದ ಭಕ್ಷ್ಯಭೋಜ್ಯಗಳಿಂದ ಚೆನ್ನಾಗಿ ಸತ್ಕರಿಸಲ್ಪಟ್ಟು ಅಲ್ಲಿ ವಾಸಮಾಡಿದನು.
ತಸ್ಯ ಸರ್ವಗುಣೋಪೇತಾಂ ವಾಸುದೇವಸ್ಯ ಸೋದರಾಮ್ |
ಪಶ್ಯತಃ ಸತತಂ ಭದ್ರಾಂ ಪ್ರಾದುರಾಸೀನ್ಮನೋಭವಃ ॥14॥
ವಾಸುದೇವನ ತಂಗಿಯಾದ ಎಲ್ಲಾ ಗುಣಗಳಿಂದ ಕೂಡಿದ ಸುಭದ್ರೆಯನ್ನು ಸತತವಾಗಿ ನೋಡುತ್ತಿದ್ದ ಅವನಿಗೆ ಅವಳಲ್ಲಿ ಕಾಮವುಂಟಾಯಿತು.
ಗೂಹಯನ್ನಿವ ಚಾಕಾರಮಾಲೋಕ್ಯ ವರವರ್ಣಿನೀಮ್ |
ದೀರ್ಘಮುಷ್ಣಂ ನಿಶಶ್ವಾಸ ಪಾರ್ಥಃ ಕಾಮವಶಂ ಗತಃ ॥15॥
ಆ ಸುಂದರಿಯನ್ನು ನೋಡಿ ಕಾಮವಶನಾದ ಅರ್ಜುನನು ತನ್ನ ಆ ವಿಕಾರವನ್ನು ಮುಚ್ಚಿಕೊಂಡು ದೀರ್ಘವಾದ ಮತ್ತು ಉಷ್ಣವಾದ ನಿಟ್ಟುಸಿರನ್ನು ಬಿಡುತ್ತಿದ್ದನು.
ನ ಕೃಷ್ಣಾ ದ್ರೌಪದೀ ರೂಪಂ ವಾಸುದೇವಸಹೋದರಾ |
ಪ್ರಾಪ್ತಾ ಭೂದಿಂದ್ರಸೇನಾ ವಾ ಸಾಕ್ಷಾದ್ ವಾ ವರುಣಾತ್ಮಜಾ ॥16॥
ದ್ರುಪದನ ಮಗಳಾದ ಕೃಷ್ಣೆಯಾಗಲೀ, ನಳನ ಮಗಳಾದ ಇಂದ್ರಸೇನೆಯಾಗಲೀ, ವರುಣನ ಪುತ್ರಿಯಾದ ಲಕ್ಷ್ಮಿಯಾಗಲೀ, ವಾಸುದೇವನ ತಂಗಿಯ ಸೌಂದರ್ಯವನ್ನು ಹೊಂದಿರಲಿಲ್ಲ ಎಂದು ತಿಳಿದನು.
ಅತೀತಸಮಯೇ ಕಾಲೇ ಸೋದರಾಣಾಂ ಧನಂಜಯಃ |
ನ ಸಸ್ಮಾರ ಸುಭದ್ರಾಯಾಃ ಕಾಮಾಂಕುಶನಿವಾರಿತಃ ॥17॥

ಕಳೆಯುತ್ತಿದ್ದ ಸಮಯದಲ್ಲಿ ಸುಭದ್ರೆಯ ಸಲುವಾಗಿ ಕಾಮಾಂಕುಶಪೀಡಿತನಾದ ಅರ್ಜುನನು ತನ್ನ ಅಣ್ಣತಮ್ಮಂದಿರನ್ನು ಸ್ಮರಿಸಲಿಲ್ಲ.
ಕ್ರೀಡಾರತಿಪರಾಂ ಭದ್ರಾಂ ಸಖೀಜನಶತೈರ್ವೃತಾಮ್ ।
ಪ್ರೀಯತೇ ಸ್ಮಾರ್ಜುನಃ ಪಶ್ಯನ್ ಸ್ವಾಹಾಮಿವ ಹುತಾಶನಃ ॥18॥
ತನ್ನ ನೂರುಜನ ಸಖಿಯರ ಜೊತೆಯಲ್ಲಿ ಕ್ರೀಡೆಯಲ್ಲಿ ತಲ್ಲೀನಳಾದ ಸುಭದ್ರೆಯನ್ನು ನೋಡಿ ಸ್ವಾಹಾದೇವಿಯನ್ನು ನೋಡಿದ ಅಗ್ನಿಯಂತೆ ಅರ್ಜುನನು ಸಂತೋಷಪಡುತ್ತಿದ್ದನು.
ಪಾಂಡವಸ್ಯ ಸುಭದ್ರಾಯಾಃ ಸಕಾಶೇ ತು ಯಶಸ್ವಿನಃ ।
ಸಮುತ್ಪತ್ತಿಃ ಪ್ರಭಾವಶ್ಚ ಗದೇನ ಕಥಿತಃ ಪುರಾ ॥19॥
ಹಿಂದೆ ಸುಭದ್ರೆಯ ಹತ್ತಿರ ಕೃಷ್ಣಾಸೋದರನಾದ ಗದನು ಅರ್ಜುನನ ಜನನ ಪ್ರಕಾರವನ್ನೂ ಅವನ ಪ್ರಭಾವವನ್ನೂ ಹೇಳಿದ್ದನು.
ಶ್ರುತ್ವಾ ಚಾಶನಿನಿರ್ಘೋಷಂ ಕೇಶವೇನೋಪಸೀದತಾ ।
ಉಪಮಾಮರ್ಜುನಂ ಕೃತ್ವಾ ಮತ್ಸರಃ ಕಥಿತಃ ಪುರಾ ॥20॥
ಅರ್ಜುನನ ಜಾನಿರ್ಘೋಷವನ್ನು ಕೇಳಿದ ರಾಜರುಗಳು ಇನ್ನೊಬ್ಬ ರಾಜನನ್ನು ಕುರಿತು ನನ್ನ ಸಮಾನನಾದರೂ ನೀನೇನು ಅರ್ಜುನನೇ ಎಂಬ ಮತ್ಸರದ ಮಾತುಗಳನ್ನು ಕೃಷ್ಣನು ಹೇಳುವುದನ್ನು ಸುಭದ್ರೆಯು ಹಿಂದೆ ಕೇಳಿದ್ದಳು.
ಕ್ರುದ್ಧಮತ್ತಪ್ರಲಾಪಶ್ಚ ವೃಷ್ಣೀನಾಮರ್ಜುನಂ ಪ್ರತಿ ।
ಪೌರುಷಂ ಚೋಪಮಾಂ ಕೃತ್ವಾ ಪ್ರಾವರ್ತಂತ ಧನುಷ್ಮತಾಮ್ ॥21॥
ಧನುರ್ಧಾರಿಗಳಾದ ವೃಷ್ಣಿಗಳು ಕ್ರುದ್ಧರಾಗಿ ಅಥವಾ ಮತ್ತರಾಗಿ ಪ್ರಲಾಪಮಾಡುವಾಗ ಅರ್ಜುನನ ಹೆಸರನ್ನೂ ಅವನ ಪೌರುಷವನ್ನೂ ಉಲ್ಲೇಖಿಸಿ ಮಾತನಾಡುತ್ತಾರೆ ಎಂದೂ ಕೃಷ್ಣನು ಸುಭದ್ರೆಗೆ ಹೇಳಿದ್ದನು.
ಅನ್ಯೋನ್ಯಕಲಹೇ ಚಾಪಿ ವಿವಾದೇ ಚಾಪಿ ವೃಷ್ಣಯಃ ।
ಅರ್ಜುನೋಽಪಿ ನ ಮೇ ತುಲ್ಯಃ ಕುತಸ್ತ್ವಮಿತಿ ತೇಽಬ್ರುವನ್ ॥22॥
ವೃಷ್ಣಿಗಳು ಪರಸ್ಪರ ಕಲಹ ಮಾಡುತ್ತಾ ಅಥವಾ ವಿವಾದ ಮಾಡುತ್ತಾ ಅರ್ಜುನನೂ ನಮಗೆ ಸಮಾನನಲ್ಲ ಇನ್ನು ನೀನು ಎಲ್ಲಿಯವನು ಎಂದು ಹೇಳುತ್ತಾರೆ ಎಂಬುದನ್ನೂ ಕೃಷ್ಣನು ಹೇಳಿದ್ದನು.
ಜಾತಾಂಶ್ಚ ಪುತ್ರಾನ್ ಗೃಹ್ಣಂತ ಆಶಿಷೋ ವೃಷ್ಣಯೋಽಬ್ರುವನ್ ।
ಅರ್ಜುನಸ್ಯ ಸಮೋ ವೀರ್ಯೇ ಭವ ತಾತ ಧನುರ್ಧರಃ ॥23॥
ವೃಷ್ಣಿಗಳು ನವಜಾತರಾದ ಶಿಶುಗಳನ್ನು ಎತ್ತಿಕೊಂಡು ಮಗೂ, ಧನುರ್ಧರನಾಗಿ ಅರ್ಜುನನಿಗೆ ಸಮಾನವಾದ ಪರಾಕ್ರಮವನ್ನು ಹೊಂದು ಎಂದು ಆಶೀರ್ವಾದ ಮಾಡುತ್ತಾರೆ ಎಂದೂ ಕೃಷ್ಣನು ತಿಳಿಸಿದ್ದನು.
ತಸ್ಮಾತ್ ಸುಭದ್ರಾ ಚಕಮೇ ಪೌರುಷಾದ್ ಭರತರ್ಷಭಮ್ ।
ಸತ್ಯಸಂಧಸ್ಯ ರೂಪೇಣ ಚಾತುರ್ಯೇಣ ಚ ಮೋಹಿತಾ ॥24॥
ಆದ್ದರಿಂದ ಅವನ ಸೌಂದರ್ಯದಿಂದಲೂ, ಅವನ ಕೌಶಲದಿಂದಲೂ, ಅವನ ಪೌರುಷದಿಂದಲೂ, ಅವನ ಸತ್ಯಸಂಧತೆಯಿಂದಲೂ ಮೋಹಿತಳಾದ ಸುಭದ್ರೆಯು ಅರ್ಜುನನಲ್ಲಿ ಕಾಮವನ್ನು ಹೊಂದಿದ್ದಳು.
ಚಾರಣಾತಿಥಿಸಂಘಾನಾಂ ಶಠಸ್ಯ ಚ ನಿಶಠಸ್ಯ ಚ ।
ಅದೃಷ್ಟೇ ಕೃತಭಾವಾಽಭೂತ್ ಸುಭದ್ರಾ ಭರತರ್ಷಭೇ ॥25॥
ಚಾರರ ಮಾತುಗಳಿಂದಲೂ, ಅತಿಥಿಸಮೂಹದ ಮಾತುಗಳಿಂದಲೂ ಶಠ ಮತ್ತು ನಿಶಠರ ಮಾತುಗಳಿಂದಲೂ ಅರ್ಜುನನನ್ನು ಕೇಳಿದ್ದ ಅವಳು ಅವನನ್ನು ನೋಡದಿದ್ದರೂ ಆ ಭರತರ್ಷಭನಲ್ಲಿ ಪ್ರೀತಿಯನ್ನು ಹೊಂದಿದವಳಾದಳು.
ಕೀರ್ತಯನ್ ದದೃಶೇ ಯೋ ಯಃ ಕಥಂಚಿತ್ ಕುರುಜಾಂಗಲಮ್ ।
ತಂ ತಮೇವ ಸದಾ ಭದ್ರಾ ಬೀಭತ್ಸುಂ ಸ್ಮಾಭಿಪೃಚ್ಛತಿ ॥26॥
ಯಾರು ತನ್ನ ಮಾತುಗಳ ಮಧ್ಯದಲ್ಲಿ ಒಮ್ಮೊಮ್ಮೆ ಕುರುಜಾಂಗಲವನ್ನು ಪ್ರಸ್ತಾಪಿಸುತ್ತಿದ್ದರೋ ಅವರನ್ನು ಕುರಿತು ಸುಭದ್ರೆಯು ಅರ್ಜುನನ ವಿಷಯದಲ್ಲಿ ಪ್ರಶ್ನೆ ಮಾಡುತ್ತಿದ್ದಳು.
ಅಭೀಕ್ಷ್ಣಶಃ ಪರಿಪ್ರಶ್ನಾದಭೀಕ್ಷ್ಣ ಶ್ರವಣಾತ್ ತಥಾ ।
ಪ್ರತ್ಯಕ್ಷ ಇವ ಭದ್ರಾಯಾಃ ಪಾಂಡವಃ ಸಮಪದ್ಯತ ॥27॥
ಯಾವಾಗಲೂ ಅವನ ವಿಷಯವನ್ನೇ ಕೇಳುವುವರಿಂದ, ಯಾವಾಗಲೂ ಅವನ ವಿಷಯದಲ್ಲೇ ತಾನು ಪ್ರಶ್ನೆ ಮಾಡುವುದರಿಂದ ಸುಭದ್ರೆಗೆ ಅರ್ಜುನನು ಕಣ್ಣ ಮುಂದೆಯೇ ಇದ್ದಂತೆ ಆಗಿದ್ದನು.
ಭುಜೌ ಭುಜಗಸಂಕಾಶೌ ಜ್ಯಾಘಾತೇನ ಕಿಣೀಕೃತೌ ।
ಪಾರ್ಥೋಽಯಮಿತಿ ಪಶ್ಯಂತ್ಯಾ ನಿಃಸಂಶಯಮಜಾಯತ ॥28॥
ಆ ಯತಿಯ ಸರ್ಪ ಸದೃಶವಾದ, ಧನುಸ್ಸಿನ ಹಗ್ಗದ ಘರ್ಷಣೆಯಿಂದ ಜಡ್ಡುಗಟ್ಟಿದ ಭುಜಗಳನ್ನು ನೋಡಿ ಇವನೇ ಅರ್ಜುನ ಎಂದು ಸ್ಪಷ್ಟವಾದ ಬುದ್ಧಿಯು ಉಂಟಾಯಿತು.
ಯಥಾರೂಪಂ ಹಿ ಶುಶ್ರಾವ ಸುಭದ್ರಾ ಭರತರ್ಷಭಮ್ ।
ತಥಾರೂಪಮವೇಕ್ಷ್ಯೈನಂ ಪರಾಂ ಪ್ರೀತಿಮವಾಪ ಸಾ ॥29॥
ಭರತರ್ಷಭನಾದ ಅರ್ಜುನನು ಎಂತಹ ರೂಪವುಳ್ಳವನು ಎಂದು ಕೇಳಿದ್ದಳೋ ಅದೇ ರೂಪವುಳ್ಳ ಯತಿಯನ್ನು ನೋಡಿ ಅವಳು ತುಂಬಾ ಸಂತೋಷಪಟ್ಟಳು.
ಸಾ ಕದಾಚಿದುಪಾಸೀನಂ ಪಪ್ರಚ್ಛ ಕುರುನಂದನಮ್ ।

ಕಥಂ ಶೈಲಾಃ ಕಥಂ ದೇಶಾ ನಾನಾಜನಪದಾಃ ಕಥಮ್ ||30||
ಸರಾಂಸಿ ಸರಿತಶ್ಚೈವ ವನಾನಿ ಚ ಕಥಂ ಚ ತೇ |
ದಿಶಸ್ತಾಶ್ಚ ಕಥಂ ಪ್ರಾಪ್ತಾಶ್ಚರದ್ಭಗವತಾ ಸದಾ ||31||
ಒಮ್ಮೆ ಅವಳು ಕುಳಿತಿದ್ದ ಕುರುನಂದನನಾದ ಅರ್ಜುನನ್ನು ಪ್ರಶ್ನೆ ಮಾಡಿದಳು. ಪೂಜ್ಯರು ಸಂಚರಿಸುತ್ತಾ ನೋಡಿದ ಪರ್ವತಗಳು ಹೇಗಿವೆ? ದೇಶಗಳು ಹೇಗಿವೆ? ನಾನಾ ಜನಪದಗಳು ಹೇಗಿವೆ? ಆ ಸರೋವರಗಳು ನದಿಗಳು ಮತ್ತು ವನಗಳು ಹೇಗಿವೆ? ಪ್ರಯಾಣ ಮಾಡಿದ ದಿಕ್ಕುಗಳು ಹೇಗಿವೆ?
ವೈಶಂಪಾಯನಃ
ಸ ತದ್ ವ್ಯಕ್ತಂ ತದಾ ಭದ್ರಾಂ ಬಹುನರ್ಮಾನ್ವಿತಂ ಬ್ರುವನ್ |
ಉವಾಚ ಪರಮಪ್ರೀತಸ್ತಸ್ಯಾ ಬಹುವಿಧಾಃ ಕಥಾಃ ||32||
ಆಗ ಅರ್ಜುನನು ಅವಳ ಪ್ರಶ್ನೆಗೆ ಉತ್ತರವನ್ನು ಬಹಳ ಸ್ಪಷ್ಟವಾಗಿ ಹಾಸ್ಯದಿಂದ ಕೂಡಿದ ಮಾತುಗಳಿಂದ ಉತ್ತರವನ್ನು ಹೇಳಿ ಬಹಳ ಸಂತುಷ್ಟನಾಗಿ ಇನ್ನೂ ಅನೇಕ ವಿಧವಾದ ಕಥೆಗಳನ್ನು ಹೇಳಿದನು.
ನಿಶಮ್ಯ ವಿವಿಧಂ ತತ್ ಸ್ಮ ಲೋಕೇ ಚರಿತಮಾತ್ಮನಃ |
ಕಥಾಪರಿಗತೋ ಭಾವಃ ಕನ್ಯಾಯಾಃ ಸಮಪದ್ಯತ ||33||
ಅವನು ಆಚರಿಸಿದ ವಿವಿಧ ಕಾರ್ಯಗಳನ್ನು ಕೇಳಿದ ಅವಳಿಗೆ ಕಥೆಯನ್ನು ಕೇಳುತ್ತಿದ್ದಂತೆಯೇ ಅವನಲ್ಲಿ ಪ್ರೀತಿಯುಂಟಾಯಿತು.
ಪರ್ವಸಂಧೌ ತು ಕಸ್ಮಿಂಶ್ಚಿತ್ ಸುಭದ್ರಾ ಭರತರ್ಷಭಮ್ |
ರಹಸ್ಯೇಕಾಂತಮಾಸಾದ್ಯ ಹೃಷ್ಯಮಾಣಾಽಭ್ಯಭಾಷತ ||34||
ಒಮ್ಮೆ ಒಂದು ಪರ್ವಸಂಧಿಯಲ್ಲಿ ಸುಭದ್ರೆಯು ಭರತರ್ಷಭನಾದ ಅರ್ಜುನನನ್ನು ರಹಸ್ಯವಾಗಿ ಏಕಾಂತದಲ್ಲಿ ಸಮೀಪಿಸಿ ಸಂತೋಷದಿಂದ ಹೇಳಿದಳು.
ಯತಿನಾ ಚರತೋ ಲೋಕಾನ್ ಖಾಂಡವಪ್ರಸ್ಥವಾಸಿನೀ |
ಕಚ್ಚಿದ್ ಭಗವತಾ ದೃಷ್ಟಾ ಪೃಥಾಽಸ್ಮಾಕಂ ಪಿತೃಷ್ವಸಾ ||35||
ಪೂಜ್ಯಯತಿಗಳಾದ ತಾವು ಲೋಕಗಳನ್ನು ಸಂಚರಿಸುತ್ತಾ ಖಾಂಡವಪ್ರಸ್ಥದಲ್ಲಿ ನಮ್ಮ ಸೋದರತ್ತೆಯಾದ ಕುಂತಿಯನ್ನು ನೋಡಿದ್ದೀರಾ?
ಭ್ರಾತೃಭಿಃ ಪ್ರೀಯತೇ ಸರ್ವೈ ಕಚ್ಚಿದಾರ್ಯೋ ಯುಧಿಷ್ಠಿರಃ |
ಕಚ್ಚಿದ್ ಧರ್ಮಪರೋ ಭೀಮೋ ಧರ್ಮರಾಜಸ್ಯ ಧೀಮತಃ ||36||
ಪೂಜ್ಯನಾದ ಯುಧಿಷ್ಠಿರನು ತನ್ನ ಎಲ್ಲಾ ತಮ್ಮಂದಿರ ಜೊತೆಯಲ್ಲಿ ಸಂತೋಷದಿಂದ ಇದ್ದಾನೆಯೇ? ಧರ್ಮಿಷ್ಠನಾದ ಭೀಮನು ಮೇಧಾವಿಯಾದ ಧರ್ಮರಾಜನ ವಶವರ್ತಿಯಾಗಿದ್ದಾನೆಯೇ?
ನಿವೃತ್ತಸಮಯಃ ಕಚ್ಚಿದಪರಾಧೀ ಧನಂಜಯಃ |
ನಿಯಮೇ ಕಾಮಭೋಗಾನಾಂ ವರ್ತಮಾನಃ ಪ್ರಿಯೇ ರತಃ ||37||
ಮೊದಲು ಅಪರಾಧವನ್ನು ಮಾಡಿ ನಿಯಮದಂತೆ ತೀರ್ಥಯಾತ್ರೆಯನ್ನು ಮುಗಿಸಿದ ಅರ್ಜುನನು ಇಷ್ಟವಾದ ಕಾಮಭೋಗಗಳನ್ನು ಅನುಭವಿಸಿ ಸಂತೋಷದಲ್ಲಿದ್ದಾನೆಯೆ?
ಕ್ವ ನು ಪಾರ್ಥಶ್ಚರತ್ಯದ್ಯ ಬಹ್ವೀರ್ದುರ್ವಸತೀರ್ವಸನ್ |
ಸುಖೋಚಿತೋ ಹ್ಯದುಃಖಾರ್ಹೋ ದೀರ್ಘಬಾಹುರರಿಂದಮಃ |
ಕ್ವಚ್ಚಿಚ್ಛ್ರುತೋ ವಾ ದೃಷ್ಟೋ ವಾ ಪಾರ್ಥೋ ಭಗವತಾಽರ್ಜುನಃ ||38||
ಸುಖೋಚಿತನೂ, ದುಃಖಅನರ್ಹನೂ, ದೀರ್ಘಬಾಹುವೂ, ಅರಿಂದಮನೂ ಆದ ಅರ್ಜುನನು ಬಹಳ ಕಷ್ಟದ ದಿನಗಳನ್ನು ಕಳೆದು ಈಗ ಎಲ್ಲಿ ವಾಸಿಸುತ್ತಿದ್ದಾನೆ? ಪೂಜ್ಯರಾದ ತಾವು ಕುಂತಿಯ ಪುತ್ರನಾದ ಅರ್ಜುನನನ್ನು ಎಲ್ಲಾದರೂ ಕೇಳಿದ್ದೀರಾ? ಅಥವಾ ನೋಡಿದ್ದೀರಾ?
ವೈಶಂಪಾಯನಃ
ನಿಶಮ್ಯ ವಚನಂ ತಸ್ಯಾಸ್ತಾಮುವಾಚ ಹಸನ್ನಿವ |
ಮಾತಾ ಕುಶಲಿನೀ ಆರ್ಯಾ ಸಹಪುತ್ರಾ ಸಹಸ್ನುಷಾ ||39||
ಅವಳ ಮಾತುಗಳನ್ನು ಕೇಳಿ ನಗುತ್ತಾ ಅರ್ಜುನನು ಹೇಳಿದನು, ಪೂಜ್ಯಳಾದ ತಾಯಿಯು ಪುತ್ರರ ಮತ್ತು ಸೊಸೆಯ ಜೊತೆಯಲ್ಲಿ ಕ್ಷೇಮದಿಂದಿದ್ದಾಳೆ.
ಪ್ರೀಯತೇ ಪಶ್ಯತೀ ಪುತ್ರಾನ್ ಕುರುಕ್ಷೇತ್ರಂ ಚ ಪಶ್ಯತೀ |
ಅನುಜ್ಞಾತಶ್ಚ ಮಾತ್ರಾ ಚ ಸೋದರ್ಯೈಶ್ಚ ಧನಂಜಯಃ ||40||
ದ್ವಾರಕಾಮಾವಸತ್ಯೇಕೋ ಯತಿಲಿಂಗೇನ ಪಾಂಡವಃ |
ಪಶ್ಯಂತೀ ಸತತಂ ಕಸ್ಮಾನ್ನಾಭಿಜಾನಾಸಿ ಮಾಧವಿ ||41||
ಮಕ್ಕಳನ್ನೂ ಮತ್ತು ಕುರುಕ್ಷೇತ್ರವನ್ನು ನೋಡುತ್ತಾ ತಾಯಿಯು ಸಂತೋಷದಿಂದಿದ್ದಾಳೆ. ಪಾಂಡುಪುತ್ರನಾದ ಧನಂಜಯನು ತಾಯಿಯ ಮತ್ತು ಸೋದರರ ಅನುಮತಿಯನ್ನು ಪಡೆದು ಯತಿರೂಪವನ್ನು ಧರಿಸಿ ದ್ವಾರಕಾ ಪಟ್ಟಣದಲ್ಲಿ ಏಕಾಕಿಯಾಗಿ ವಾಸಿಸುತ್ತಿದ್ದಾನೆ. ಮಾಧವಿ, ಅವನನ್ನು ಯಾವಾಗಲೂ ನೋಡುತ್ತಿದ್ದರೂ ಏಕೆ ನೀನು ಗುರುತಿಸುತ್ತಿಲ್ಲ?
ವೈಶಂಪಾಯನಃ
ನಿಶಮ್ಯ ವಚನಂ ತಸ್ಯ ವಾಸುದೇವಸಹೋದರಾ |

ನಿಶ್ವಾಸಬಹುಲಾ ತಸ್ಥೌ ಕ್ಷಿತಿಂ ವಿಲಿಖತೀ ತದಾ ॥42॥
ಅವನ ಮಾತುಗಳನ್ನು ಕೇಳಿ ವಾಸುದೇವನ ತಂಗಿಯಾದ ಸುಭದ್ರೆಯು ಬಹಳವಾಗಿ ನಿಟ್ಟುಸಿರನ್ನು ಬಿಡುತ್ತಾ ಭೂಮಿಯನ್ನು ಕಾಲಿನ ಬೆರಳುಗಳಿಂದ ಕೆದಕುತ್ತಾ ನಿಂತಳು.
ತತಃ ಪರಮಸಂಹೃಷ್ಟಃ ಸರ್ವಶಸ್ತ್ರಭೃತಾಂ ವರಃ |
ಅರ್ಜುನೋಽಹಮಿತಿ ಪ್ರೀತಸ್ತಾಮುವಾಚ ಧನಂಜಯಃ ॥43॥
ಆಗ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಧನಂಜಯನು ಪರಮ ಸಂತೋಷದಿಂದ ನಾನೇ ಅರ್ಜುನ ಎಂದು ಅವಳಿಗೆ ಹೇಳಿದನು.
ಯಥಾ ಭಗವತೋ ಭಾವಃ ಶ್ರವಣಾನ್ಮಯಿ ಭಾಮಿನಿ |
ತ್ವದ್ಗತಃ ಸತತಂ ಭಾವಸ್ತಥಾ ಶತಗುಣೋ ಮಮ ॥44॥
ಭಾಮಿನಿಯೇ, ನನ್ನ ಗುಣಗಳನ್ನು ಕೇಳುವುದರಿಂದ ನನ್ನಲ್ಲಿ ನಿನಗೆ ಹೇಗೆ ಪೂಜ್ಯಭಾವನೆ ಉಂಟಾಗಿದೆಯೋ ಹಾಗೆ ನಿನ್ನ ಗುಣಗಳನ್ನು ಕೇಳುವುದರಿಂದ ಅದಕ್ಕಿಂತ ಮೂರುಪಟ್ಟು ಹೆಚ್ಚಾದ ಪೂಜ್ಯತ್ವ ಭಾವನೆ ನನಗೆ ನಿನ್ನಲ್ಲಿ ಉಂಟಾಗಿದೆ.
ಪ್ರಶಸ್ತೇಽಹನಿ ಧರ್ಮೇಣ ಭದ್ರೇ ಸ್ವಯಮಹಂ ವೃತಃ |
ಸತ್ಯವಾನಿವ ಸಾವಿತ್ರ್ಯಾ ಭವಿಷ್ಯಾಮಿ ಪತಿಸ್ತವ ॥45॥
ಸುಭದ್ರೆಯೇ, ಒಂದು ಪವಿತ್ರವಾದ ದಿನ ನೀನೇ ನನ್ನನ್ನು ಸಾವಿತ್ರಿಯು ಸತ್ಯವಂತನನ್ನು ವರಿಸಿದಂತೆ ವರಿಸುವುದರಿಂದ ನಾನು ನಿನ್ನ ಪತಿಯಾಗುವೆನು.
ಏವಮುಕ್ತ್ವಾ ತತಃ ಪಾರ್ಥಃ ಪ್ರವಿವೇಶ ಲತಾಗೃಹಮ್ |
ತತಃ ಸುಭದ್ರಾ ಲಲಿತಾ ಲಜ್ಜಾಭಾವಸಮನ್ವಿತಾ |
ಮುಮೋಹ ಭವನೇ ದಿವ್ಯೇ ಶಯನಾ ನತಥೋಚಿತಾ ॥46॥
ಅರ್ಜುನನು ಹೀಗೆ ಹೇಳಿ ತನ್ನ ಲತಾಗೃಹವನ್ನು ಪ್ರವೇಶಿಸಿದನು. ಆಗ ಲಲಿತಳಾದ ಸುಭದ್ರೆಯು ಲಜ್ಜೆಯಿಂದಲೂ ಮತ್ತು ಕಾಮದಿಂದಲೂ ಕೂಡಿದವಳಾಗಿ ತನ್ನ ದಿವ್ಯವಾದ ಭವನದಲ್ಲಿ ಹಾಸಿಗೆಯಲ್ಲಿ ಮಲಗಿ ಮೋಹಪರವಶಳಾಗಲು ಅರ್ಹಳಲ್ಲದ ಅವಳು ಮೋಹಪರವಶಳಾದಳು.
ಕನ್ಯಾಪುರೇ ಸಂಪ್ರವೃತ್ತಂ ಜ್ಞಾತ್ವಾ ದಿವ್ಯೇನ ಚಕ್ಷುಷಾ |
ಶಶಾಸ ರುಗ್ಮಿಣೀಂ ಕೃಷ್ಣೋ ಭೋಜನಾನಿ ತದಾಽರ್ಜುನೇ ॥47॥
ಕೃಷ್ಣನು ಕನ್ಯಾಂತಃಪುರದಲ್ಲಿ ನಡೆದ ಘಟನೆಯನ್ನು ತನ್ನ ದಿವ್ಯಜ್ಞಾನದಿಂದ ತಿಳಿದು ರುಕ್ಮಿಣಿಗೆ ಅರ್ಜುನನಿಗೆ ಭೋಜನಾದಿಗಳನ್ನು ಒದಗಿಸುವಂತೆ ಆದೇಶ ನೀಡಿದನು.
ತದಾಪ್ರಭೃತಿ ತಾಂ ಭದ್ರಾಂ ಚಿಂತಯನ್ ವೈ ಧನಂಜಯಃ |
ಆಸ್ತೇ ಸ್ಮ ಸ ತದಾಽಽರಾಮೇ ಕಾಮೇನ ಭೃಷಪೀಡಿತಃ |
ಸುಭದ್ರಾಽಪಿ ನ ಚ ಸ್ವಸ್ಥಾ ಪಾರ್ಥಂ ಪ್ರತಿ ಬಭೂವ ಸಾ ॥48॥
ಆಗಿನಿಂದ ಆರಂಭಿಸಿ ಧನಂಜಯನೂ ಸಹ ಸುಭದ್ರೆಯನ್ನೇ ಚಿಂತಿಸಿ ಕಾಮಪರವಶನಾಗಿ ತನ್ನ ಲತಾಗೃಹದಲ್ಲಿ ಇದ್ದನು.
ಸುಭದ್ರೆಯೂ ಸಹ ಅರ್ಜುನನನ್ನು ಚಿಂತಿಸಿ ತನ್ನ ಮನಃಸ್ವಾಸ್ಥ್ಯವನ್ನು ಕಳೆದುಕೊಂಡಳು.
ಕೃಶಾ ವಿವರ್ಣವದನಾ ಚಿಂತಾಶೋಕಪರಾಯಣಾ |
ನಿಶ್ವಾಸಪರಮಾ ಭದ್ರಾ ಮಾನಸೇನ ಮನಸ್ವಿನೀ ॥49॥
ನ ಶಯ್ಯಾಸನಭೋಗೇಷು ರತಿಂ ವಿಂದತಿ ಕೇನಚಿತ್ |
ನ ನಕ್ತಂ ನ ದಿವಾ ಶೇತೇ ಬಭೂವೋನ್ಮತ್ತದರ್ಶನಾ ॥50॥
ಕೃಶಳಾಗಿ, ಕಾಂತಿಹೀನಳಾಗಿ, ಚಿಂತಾಶೋಕಪರಾಯಣಳಾಗಿ, ಯಾವಾಗಲೂ ನಿಟ್ಟುಸಿರನ್ನು ಬಿಡುತ್ತಾ ಮನಸ್ವಿನಿಯಾದ ಅವಳು ಮನ್ಮಥನಿಂದ ಪೀಡಿತಳಾಗಿ ಶಯನಭೋಜನಾದಿ ಯಾವುದರಿಂದಲೂ ಸುಖವನ್ನು ಹೊಂದಲಿಲ್ಲ. ರಾತ್ರಿಯಾಗಲೀ, ಹಗಲಾಗಲೀ ನಿದ್ರೆಯನ್ನು ಮಾಡದೇ ಹುಚ್ಚಳಂತೆ ಆದಳು.
ಏವಂ ಶೋಕಪರಾಂ ಭದ್ರಾಂ ದೇವಕೀ ವಾಕ್ಯಮಬ್ರವೀತ್ |
ಮಾ ಶೋಕಂ ಕುರು ವಾರ್ಷ್ಣೇಯಿ ಧೃತಿಮಾಲಂಬ ಶೋಭನೇ ॥51॥
ನಿವೇದಯಿತ್ವಾ ರಾಮಾಯ ಕೃಷ್ಣೇ ಚೈವ ನರರ್ಷಭೇ |
ಪಶ್ಚಾಜ್ಜಾನಾಮಿ ತೇ ವಾರ್ತಾಂ ಮಾ ಶೋಕಂ ಕುರು ಮಾಧವಿ ॥52॥
ಹೀಗೆ ಶೋಕಪರಳಾದ ಸುಭದ್ರೆಯನ್ನು ಕುರಿತು ದೇವಕಿಯು ಮಾತನಾಡಿದಳು. ವಾರ್ಷ್ಣಿಯೇ, ಶೋಕಪಡಬೇಡ. ಶೋಭನಳೇ, ಧೈರ್ಯವನ್ನು ತಂದುಕೊ, ನಾನು ಬಲರಾಮನಿಗೂ, ಮತ್ತು ಪುರಷೋತ್ತಮನಾದ ಕೃಷ್ಣನಿಗೂ ವಿಷಯವನ್ನು ತಿಳಿಸಿ ಅನಂತರ ನಿನ್ನನ್ನು ವಿಚಾರಿಸುತ್ತೇನೆ. ಮಾಧವಿ, ಶೋಕಪಡಬೇಡ.
ವೈಶಂಪಾಯನಃ
ಏವಮುಕ್ತ್ವಾ ಚ ಸಾ ಮಾತಾ ಭದ್ರಾಯಾಃ ಪ್ರಿಯಕಾಮಿನೀ |
ನಿವೇದಯಾಮಾಸ ತದಾ ಭದ್ರಾಮಾನಕದುಂದುಭೇಃ |
ರಹಸ್ಯೇಕಾಸನಾ ತತ್ರ ಭರ್ತಾರಮಿದಮಬ್ರವೀತ್ ॥53॥
ಸುಭದ್ರೆಯ ಹಿತವನ್ನು ಬಯಸಿದ ದೇವಕಿಯು ಹೀಗೆ ಮಾತನಾಡಿ, ವಸುದೇವನಿಗೆ ಸುಭದ್ರೆಯ ಸ್ಥಿತಿಯನ್ನು ಏಕಾಸನದಲ್ಲಿ ಕುಳಿತು ತಿಳಿಸುತ್ತಾ ಹೀಗೆ ಮಾತನಾಡಿದಳು.
ಆರಾಮೇಽಸ್ತಿ ಯತಿಃ ಶ್ರೀಮಾನರ್ಜುನಃ ಸೋಽಥ ನಃ ಶ್ರುತಃ |

ಅಕ್ರೂರಾಯ ಚ ಕೃಷ್ಣಾಯ  ಆಹುಕಾಯ ಚ ಸಾತ್ಯಕೇಃ |
ನಿವೇದ್ಯತಾಂ ಮಹಾಪ್ರಜ್ಞ ಶ್ರೋತವ್ಯಂ ಯದಿ ಬಾಂಧವೈಃ ॥54॥
ಕನ್ಯಾರಾಮದಲ್ಲಿ ತೇಜಸ್ವಿಯಾದ ಯತಿ ಇದ್ದಾನೆ. ಅವನು ಅರ್ಜುನ ಎಂದು ನಾನು ಕೇಳಿದ್ದೇನೆ. ಮಹಾಪ್ರಜ್ಞನೇ, ಈ ವಿಷಯವನ್ನು ಬಂಧುಗಳಿಗೆ ತಿಳಿಸಬಹುದಾದರೆ ಅಕ್ರೂರನಿಗೂ, ಕೃಷ್ಣನಿಗೂ, ಆಹುಕನಿಗೂ ಮತ್ತು ಸಾತ್ಯಕಿಗೂ ಈ ವಿಷಯವನ್ನು ತಿಳಿಸು.
ವಸುದೇವಸ್ತು ತಚ್ಛ್ರುತ್ವಾ ಅಕ್ರೂರಾಹುಕಯೋಸ್ತದಾ |
ನಿವೇದಯಿತ್ವಾ ಕೃಷ್ಣೇಽಥ ಮಂತ್ರಯಾಮಾಸ ನೈಕಧಾ ॥55॥
ವಸುದೇವನಾದರೋ ಅದನ್ನು ಕೇಳಿ ಅಕ್ರೂರ ಮತ್ತು ಆಹುಕರಿಗೆ ತಿಳಿಸಿ ಅನಂತರ ಕೃಷ್ಣನ ಜೊತೆಯಲ್ಲಿ ಅನೇಕ ರೀತಿಯಲ್ಲಿ ಮಂತ್ರಾಲೋಚನೆ ಮಾಡಿದನು.
ಇದಂ ಕಾರ್ಯಮಿದಂ ಕೃತ್ಯಮಿದಮೇವ ಚ ನಿಶ್ಚಿತಮ್ |
ಅಕ್ರೂರಶ್ಚೋಗ್ರಸೇನಶ್ಚ ಸತ್ಯಕೇನ ಗದೇನ ಹ ॥56॥
ಪೃಥುಶ್ರವಾಶ್ಚ  ಕೃಷ್ಣಶ್ಚ ಸಹಿತಾಃ ಶಿನಿನಾ ಸಹ |
ರುಗ್ಮಿಣೀ ಸತ್ಯಭಾಮಾ ಚ ದೇವಕೀ ರೇವತೀ ತಥಾ ॥57॥
ವಸುದೇವೇನ ಸಹಿತಾಃ ಪುರೋಹಿತಮತೇ ಸ್ಥಿತಾಃ |
ವಿವಾಹಂ ಮಂತ್ರಯಾಮಾಸುರ್ದ್ವಾದಶೇಽಹನಿ ಭಾರತ ॥58॥
ಇದು ಮಾಡತಕ್ಕದ್ದು, ಇದೇ ಸರಿಯಾದ ಕಾರ್ಯ, ಇದೇ ನಿಶ್ಚಿತವಾದುದು ಎಂದು ಅಕ್ರೂರ, ಉಗ್ರಸೇನ, ಸತ್ಯಕ, ಗದ, ಪೃಥುಶ್ರವ, ಕೃಷ್ಣ, ಶಿನಿ, ರುಕ್ಮಿಣಿ, ಸತ್ಯಭಾಮೆ, ದೇವಕಿ, ರೇವತಿ, ವಸುದೇವ ಎಲ್ಲರೂ ಪುರೋಹಿತರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಅವತ್ತಿಗೆ ಹನ್ನೆರಡನೆಯ ದಿವಸದಲ್ಲಿ ವಿವಾಹವನ್ನು ನಿರ್ಧರಿಸಿದರು.
ಅಜ್ಞಾತಂ ರೌಹಿಣೇಯಸ್ಯ ಉದ್ಧವಸ್ಯ ಚ ಭಾರತ |
ವಿವಾಹಂ ತು ಸುಭದ್ರಾಯಾಃ ಕರ್ತುಕಾಮೋ ಗದಾಗ್ರಜಃ ॥59॥
ಮಹಾದೇವಸ್ಯ ಪೂಜಾರ್ಥಂ ವ್ಯಾಜೇನ ಮಧುಸೂದನಃ |
ನಗರೇ ಘೋಷಯಾಮಾಸ ಹಿತಾರ್ಥಂ ಸವ್ಯಸಾಚಿನಃ ॥60॥
ಭಾರತನೇ, ಗದಾಗ್ರಜನಾದ ಕೃಷ್ಣನು ಉದ್ಧವನಿಗೂ ಮತ್ತು ಬಲರಾಮನಿಗೂ ತಿಳಿಯದಂತೆ ಸುಭದ್ರೆಯ ವಿವಾಹವನ್ನು ಮಾಡಲು ಬಯಸಿ ಮಧುಸೂದನನಾದ ಅವನು ಅರ್ಜುನನ ಹಿತದ ಸಲುವಾಗಿ ಮಹಾದೇವನ ಪೂಜೆಯೆಂಬ ನೆಪದಿಂದ ನಗರದಲ್ಲಿ ಡಂಗುರವನ್ನು ಸಾರಿಸಿದನು.
ಇತಶ್ಚತುರ್ಥೇಽಹನಿ ಚ ಅಂತರ್ದ್ವೀಪಂ ತು ಗಮ್ಯತಾಮ್ |
ಸದಾರೈಃ ಸಾನುಯಾತ್ರೈಶ್ಚ ಸಪುತ್ರೈಃ ಸಹಬಾಂಧವೈಃ ॥61॥
ವಾಸುದೇವಸಮೈಶ್ಚಾಪಿ ಗಂತವ್ಯಂ ಸರ್ವಯಾದವೈಃ |
ಗಂತವ್ಯಂ ಸರ್ವವರ್ಣೈಶ್ಚ  ಗಂತವ್ಯಂ ಸರ್ವಯಾದವೈಃ ॥62॥
ಇವತ್ತಿಗೆ ನಾಲ್ಕನೇ ದಿನ ಎಲ್ಲರೂ ತಮ್ಮ ಪತ್ನಿ, ಪುತ್ರರೂ, ಸಹಚರರೂ ಮತ್ತು ಬಂಧುಗಳ ಜೊತೆಯಲ್ಲಿ ದ್ವೀಪಾಂತರಕ್ಕೆ ಹೋಗಬೇಕು. ವಾಸುದೇವನ ಜೊತೆಯಲ್ಲಿರುವ ಎಲ್ಲಾ ಯಾದವರೂ ಸಹ ಹೋಗತಕ್ಕದ್ದು. ಎಲ್ಲಾ ವರ್ಣದವರೂ ಮತ್ತು ಎಲ್ಲಾ ಯಾದವರೂ ಹೋಗತಕ್ಕದ್ದು.
ಏವಮುಕ್ತಾಸ್ತು ತೇ ಸರ್ವೇ ತಥಾ ಚಕ್ರುಶ್ಚ ಸರ್ವಶಃ |
ತತಃ ಸರ್ವದಶಾರ್ಹಾಣಾಮಂತರ್ದ್ವೀಪೇ ನರರ್ಷಭ |
ಚತುಸ್ತ್ರಿಂಶದಹೋರಾತ್ರಂ ಬಭೂವ ಪರಮೋತ್ಸವಃ ॥63॥
ಹೀಗೆ ಹೇಳಲ್ಪಟ್ಟ ಅವರೆಲ್ಲರೂ ಹಾಗೆಯೇ ಮಾಡಿದರು. ಅನಂತರ, ಮೂವತ್ತನಾಲ್ಕು ದಿವಸಗಳ ಕಾಲ ಅಂತರ್ದ್ವೀಪದಲ್ಲಿ ಎಲ್ಲಾ ದಾಶಾರ್ಹರಿಗೂ ದೊಡ್ಡ ಉತ್ಸವವು ಉಂಟಾಯಿತು.
ಕೃಷ್ಣರಾಮಾಹುಕಾಕ್ರೂರಾಃ ಪ್ರದ್ಯುಮ್ನಃ ಶಿನಿಸಾತ್ಯಕೀ |
ಸಮುದ್ರಂ ಪ್ರಯಯುರ್ಹೃಷ್ಟಾಃ ಕುಕುರಾಂಧಕವೃಷ್ಣಯಃ ॥64॥
ಯುಕ್ತಯಂತ್ರಪತಾಕಾಭಿರ್ವೃಷ್ಣಯೋ ಬ್ರಾಹ್ಮಣೈಃ ಸಹ |
ಸಮುದ್ರಂ ಪ್ರಯಯುರ್ನೌಭಿಃ ಸರ್ವೇ ಪುರನಿವಾಸಿನಃ ॥65॥
ಕೃಷ್ಣ, ಬಲರಾಮ, ಆಹುಕ, ಅಕ್ರೂರ, ಪ್ರದ್ಯುಮ್ನ, ಶಿನಿ, ಸಾತ್ಯಕಿ ಇವರು ಮತ್ತು ಕುಕರಾಂಧಕ ವೃಷ್ಣಿಗಳು ಸಂತೋಷದಿಂದ ಸಮುದ್ರವನ್ನು ನೋಡಲು ಹೋದರು. ದ್ವಾರಕಾನಿವಾಸಿಗಳಾದ ಎಲ್ಲ ವೃಷ್ಣಿಗಳೂ ಯಂತ್ರಪತಾಕೆಗಳಿಂದ ಸದ್ಯುತವಾದ ದೋಣಿಯನ್ನೇರಿ ಬ್ರಾಹ್ಮಣರ ಜೊತೆಯಲ್ಲಿ ಸಮುದ್ರವನ್ನು ನೋಡಲು ಹೊರಟರು.
ತತಸ್ತ್ವರಿತಮಾಗತ್ಯ ದಾಸೀಶತಸುಪೂಜಿತಾ |
ಸುಭದ್ರಾ ಪುಂಡರೀಕಾಕ್ಷಮಬ್ರವೀದ್ ಯತಿಶಾಸನಾತ್ ॥66॥
ಕೃತ್ಯವಾನ್ ದ್ವಾದಶಾಹಾನಿ ಸ್ಥಾತಾ ಸ ಭಗವಾನಿಹ |
ತಿಷ್ಠತಸ್ತಸ್ಯ ಕಃ ಕುರ್ಯಾದ್ ಉಪಸ್ಥಾನವಿಧಿಂ ಪ್ರತಿ ॥67॥
ಆಗ ತನ್ನ ನೂರು ದಾಸಿಯರಿಂದ ಸತ್ಕೃತಳಾದ ಸುಭದ್ರೆಯು ಬೇಗ ಬಂದು ಕೃಷ್ಣನನ್ನು ಕಂಡು ಯತಿಯ ಶಾಸನದಂತೆ ಈ ಮಾತನ್ನಾಡಿದಳು. ಪೂಜ್ಯನಾದ ಯತಿಯು ಯಾವುದೋ ಉದ್ದೇಶದಿಂದ ಹನ್ನೆರಡು ದಿವಸಗಳ ಕಾಲ ಇಲ್ಲೇ ಇರುತ್ತಾನೆ. ಇಲ್ಲಿರುವ ಸಮಯಯದಲ್ಲಿ ಅವನಿಗೆ ಯಾರು ಸತ್ಕಾರವನ್ನು ಮಾಡುತ್ತಾರೆ?

ತಮುವಾಚ ಹೃಷೀಕೇಶಃ ಕಸ್ತ್ವದನ್ಯೋ ವಿಶೇಷತಃ |
ತಮೃಷಿಂ ಪ್ರತ್ಯುಪಸ್ಥಾತುಮಿಹ ನಾರ್ಹತಿ ಮಾನವಃ ॥68॥
ತ್ವಮೇವಾಸ್ಯನ್ಮತೇನಾಸ್ಯ ಮಹರ್ಷೇರ್ವಶವರ್ತಿನೀ |
ಕುರು ಸರ್ವಾಣಿ ಕಾರ್ಯಾಣಿ ಕೀರ್ತಿಂ ಧರ್ಮಮವೇಕ್ಷ್ಯ ಚ ॥69॥
ತಸ್ಯ ಚಾತಿಥಿಮುಖ್ಯಸ್ಯ ಸರ್ವೇಷಾಂ ಚ ತಪಸ್ವಿನಾಮ್ |
ಸಂವಿಧಾನಪರಾ ಭದ್ರೇ ಭವ ತ್ವಂ ವಶವರ್ತಿನೀ ॥70॥
ಅವಳನ್ನು ಕುರಿತು ಕೃಷ್ಣನು, ನಿನ್ನನ್ನು ಬಿಟ್ಟು ಬೇರೆ ಯಾರಿದ್ದಾರೆ. ನಿನ್ನನ್ನು ಬಿಟ್ಟು ಅವನನ್ನು ಸತ್ಕರಿಸಲು ಬೇರೆ ಯಾರಿಗೂ ಸಾಧ್ಯವಿಲ್ಲ ಎಂದು ಹೇಳಿದನು. ನನ್ನ ಆದೇಶದಂತೆ ನೀನೇ ಆ ಮಹರ್ಷಿಯ ವಶವರ್ತಿನಿಯಾಗಿದ್ದು ಕೀರ್ತಿಯನ್ನು ಮತ್ತು ಧರ್ಮವನ್ನು ಗಮನಿಸಿ ಅವನ ಎಲ್ಲಾ ಕಾರ್ಯಗಳನ್ನೂ ಮಾಡು. ಸುಭದ್ರೆಯೇ, ಅತಿಥಿಶ್ರೇಷ್ಠನಾದ ಅವನಿಗೆ ಹಾಗೂ ಉಳಿದ ತಪಸ್ವಿಗಳಿಗೆ ಇಷ್ಟವಾದ ಉಪಚಾರವನ್ನು ಮಾಡುತ್ತಾ ನೀನು ಅವನ ವಶವರ್ತಿನಿಯಾಗಿ ಇರು. (ಎಂದು ಹೇಳಿದನು)
ವೈಶಂಪಾಯನಃ
ಏವಮಾದಿಶ್ಯ ಭದ್ರಾಂ ಚ ರಕ್ಷಾಂ ಚ ಮಧುಸೂದನಃ |
ಯಯೌ ಶಂಖನಿನಾದೇನ ಭೇರೀಣಾಂ ಚ ಮಹಾಸ್ವನೈಃ ॥71॥
ಮಧುಸೂದನನು ಸುಭದ್ರೆಗೆ ಹೀಗೆ ಆದೇಶವನ್ನು ನೀಡಿ ರಕ್ಷಣೆಯನ್ನು ಕೊಟ್ಟು ಶಂಖಭೇರಿಗಳ ಮಹಾಸ್ವನದೊಂದಿಗೆ ಅಲ್ಲಿಂದ ಹೊರಟನು.
ತತಸ್ತದ್ವೀಪಮಾಸಾದ್ಯ ದಾನಧರ್ಮಪರಾಯಣಾಃ |
ಉಗ್ರಸೇನಮುಖಾಃ ಸರ್ವೇ ವಿಜಹ್ರುಃ ಕುಕುರಾಂಧಕಾಃ ॥72॥
ಅನಂತರ, ಉಗ್ರಸೇನ ಪ್ರಮುಖರಾದ ಎಲ್ಲಾ ಕುಕುರರೂ ಮತ್ತು ಅಂಧಕರೂ ಇನ್ನೊಂದು ದ್ವೀಪಕ್ಕೆ ಹೋಗಿ ದಾನಧರ್ಮಗಳನ್ನು ಮಾಡಿ ಎಲ್ಲರೂ ವಿಹರಿಸಿದರು.
ಸಪ್ತಯೋಜನವಿಸ್ತಾರ ಆಯತೋ ದಶಯೋಜನಮ್ |
ಬಭೂವ ಸ ಮಹಾದ್ವೀಪಃ ಸಪರ್ವತಮಹಾವನಃ ॥73॥
ಪರ್ವತಗಳಿಂದಲೂ, ವನಗಳಿಂದಲೂ ಕೂಡಿದ್ದ ಆ ಮಹಾದ್ವೀಪವು ಏಳು ಯೋಜನ ಅಗಲವೂ ಮತ್ತು ಹತ್ತು ಯೋಜನ ಉದ್ದವೂ ಆಗಿದ್ದಿತು.
ಸೇತುಪುಷ್ಕರಿಣೀಜಾಲೈರಾಕ್ರೀಡಃ ಸರ್ವಸಾತ್ವತಾಮ್ |
ವಾಪೀಪಲ್ವಲಸ್ಯಂಶ್ಚ ಕಾನನೈಶ್ಚ ಮನೋರಮ್ಯೈಃ ॥74॥
ಅಲ್ಲಿ ಅನೇಕ ಸೇತುಗಳೂ, ಪುಷ್ಕರಿಣಿಯ ಸಮೂಹಗಳೂ, ಎಲ್ಲ ಸಾತ್ವರಿಗೆ ಬೇಕಾದ ಕ್ರೀಡಾಸ್ಥಾನಗಳೂ, ವಾಪಿಗಳೂ, ಪಲ್ವಲಗಳೂ, ಮನೋಹರವಾದ ಕಾನನಗಳೂ ಇದ್ದವು.
ವಾಸುದೇವೇನ ಚ ದ್ವೀಪಃ ಸ ಸರ್ವೈಃ ಕುಕುರಾಂಧಕೈಃ |
ಬಭೂವ ಪರಮೋಪೇತಃ ತ್ರಿವಿಷ್ಟಪ ಇವಾಮರೈಃ ॥75॥
ವಾಸುದೇವನಿಂದಲೂ, ಕುಕುರಾಂಧಕರಿಂದಲೂ ತುಂಬಿದ ಆ ದ್ವೀಪವು ದೇವತೆಗಳಿಂದ ತುಂಬಿದ ಸ್ವರ್ಗದಂತೆ ಶೋಭಾಯಮಾನ-ವಾಗಿದ್ದಿತು.
ಚತುಸ್ತ್ರಿಂಶದಹೋರಾತ್ರಂ ದಾನಧರ್ಮಪರಾಯಣಾಃ |
ಉಗ್ರಸೇನಮುಖಾಃ ಸರ್ವೇ ವಿಜಹ್ರುಃ ಕುಕುರಾಂಧಕಾಃ ॥76॥
ಮೂವತ್ತನಾಲ್ಕು ದಿವಸಗಳ ಕಾಲ ದಾನಧರ್ಮಪರಾಯಣರಾದ ಉಗ್ರಸೇನನೇ ನಾಯಕನಾದ ಕುಕುರಾಂಧಕರೆಲ್ಲರೂ ಹಗಲೂ ರಾತ್ರಿಯೂ ವಿಹರಿಸಿದರು.
ವಿಚಿತ್ರಮಾಲ್ಯಾಭರಣಾಶ್ಚಿತ್ರಗಂಧಾನುಲೇಪನಾಃ |
ವಿಹಾರಾಭಿಮುಖಾಃ ಸರ್ವೇ ಯಾದವಾಃ ಪಾನಹೇತವಃ ॥77॥
ಸುನೃತ್ತಗೀತವಾದಿತ್ರೈ ರಮಮಾಣಾಸ್ತದಾಽಭವನ್ |
ತತ್ರ ಯಾತೇ ದಶಾರ್ಹಾಣಾಮೃಷಭೇ ಶಾರ್ಙ್ಗಧನ್ವನಿ |
ಸುಭದ್ರೋದ್ವಾಹನಂ ಪಾರ್ಥಃ ಪ್ರಾಪ್ತಕಾಲಮಮನ್ಯತ ॥78॥
ವಿಚಿತ್ರವಾದ ಮಾಲ್ಯಗಳನ್ನೂ, ಆಭರಣಗಳನ್ನೂ ಧರಿಸಿ ವಿಚಿತ್ರವಾದ ಗಂಧವನ್ನು ಲೇಪಿಸಿಕೊಂಡು ಮದಹೇತುವಾದ ಪಾನಗಳನ್ನು ಮಾಡಿ ಎಲ್ಲ ಯಾದವರು ವಿಹಾರಶೀಲರಾಗಿ ನೃತ್ತ ವಾದಿತ್ರ ಗೀತಗಳಿಂದ ವಿಹರಿಸಿದರು. ದಶಾರ್ಹರ ನಾಯಕನಾಥ ಶಾರ್ಙ್ಗಧಾರಿಯಾದ ಕೃಷ್ಣನು ಅಲ್ಲಿಗೆ ಹೋಗುತ್ತಿರಲು ಅರ್ಜುನನು ಸುಭದ್ರೆಯನ್ನು ಕರೆದುಕೊಂಡು ಹೋಗಲು ಇದೇ ಯೋಗ್ಯವಾದ ಕಾಲವೆಂದು ಭಾವಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ದ್ವಾವಿಂಶತ್ಯಕದ್ವಿಶತತಮೋಽಧ್ಯಾಯಃ ॥
॥ ಇತಿ ಸುಭದ್ರಾಹರಣಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20

ಮಾತಾಪಿತೃಭ್ಯಾಂ ಸಹಿತೋಽಥ ಕೃಷ್ಣ-
ಸ್ತತ್ರೈವಾಯಾದ್ವಾಸವಶ್ಚಾಥ ಶಚ್ಯಾ ।
ಸಮಂ ಮುನೀಂದ್ರೈಃ ಫಲ್ಗುನೇನ ಸ್ಮೃತಃ
ಸಂಸ್ತತ್ರೈವಾಗಾತ್ ಪ್ರೀತಿಯುಕ್ತೋ ನಿಶಾಯಾಂ ॥185॥
ಆಗಲೆ ತಂದೆತಾಯಿಗಳೊಂದಿಗೆ ಕೃಷ್ಣ ಅಲ್ಲಿಗೆ ಬಂದ. ಅರ್ಜುನ ದೇವೇಂದ್ರನನ್ನೂ ನೆನೆದ. ದೇವೇಂದ್ರ ಅದೇ ರಾತ್ರಿಯಲ್ಲಿ ಪ್ರೀತಿಯಿಂದ ಶಚೀ ಸಮೇತನಾಗಿ ವಸಿಷ್ಠ ನಾರದಾದಿ ಮುನೀಂದ್ರರಿಂದೊಡಗೂಡಿ ಬಂದ.
ಕೃಷ್ಣಸ್ತತಃ ಪುರುಹೂತೇನ ಸಾಕಂ
ತಯೋರ್ವಿವಾಹಂ ಕಾರಯಾಮಾಸ ಸಮ್ಯಕ್ ।
ಮಾತಾಪಿತೃಭ್ಯಾಂ ಸಾತ್ಯಕಿನಾಪಿ ಯುಕ್ತೋ
ಮಹೋತ್ಸವೇಽನ್ಯಾವಿದಿತೋ ಮುನೀಂದ್ರೈಃ ॥186॥
ಶ್ರೀಕೃಷ್ಣ ಇಂದ್ರನೊಡನೆ, ತಂದೆತಾಯಿಗಳೊಡನೆ, ಸಾತ್ಯಕಿಯೊಡನೆ ಮತ್ತು ಮುನೀದ್ರರೊಡನೆ ಕೂಡಿ ಬೇರೆ ಯಾರಿಗೂ ತಿಳಿಯದಂಥ ಮಹೋತ್ಸವದಲ್ಲಿ ಸುಭದ್ರಾರ್ಜುನರಿಗೆ ಚೆನ್ನಾಗಿ ವಿವಾಹ ನಡೆಸಿದ.
ತತಃ ಕೃಷ್ಣಃ ಸ್ಯಂದನಂ ಫಲ್ಗುನಾರ್ಥೇ
ನಿಧಾಯ ಸ್ವಂ ಪ್ರಯಯೌ ತದ್ರಜನ್ಯಾಂ ।
ಗತೇಽಥ ಶಕ್ರೇ ರಥಮಾರುರೋಹ
ಪ್ರಾತಃ ಪಾರ್ಥಃ ಸಹಿತೋ ಭಾರ್ಯಯೈವ ॥187॥
ಬಳಿಕ ಶ್ರೀಕೃಷ್ಣ ತನ್ನ ರಥವನ್ನು ಅರ್ಜುನನಿಗಾಗಿ ಅಲ್ಲಿಯೆ ಇರಿಸಿ ಆ ರಾತ್ರಿಯೆ ಪಿಂಡೋದ್ಧಾರ ಕ್ಷೇತ್ರಕ್ಕೆ ಹೊರಟು ಹೋದ. ಇಂದ್ರನೂ ತನ್ನ ಲೋಕಕ್ಕೆ ಹೊರಟು ಹೋದ. ಬೆಳಿಗ್ಗೆ ಅರ್ಜುನ ಸುಭದ್ರೆಯೊಂದಿಗೆ ರಥವನ್ನೇರಿದ.
ಸರ್ವಾಯುಧೈರ್ಯುಕ್ತರಥಂ ಸಮಾಸ್ಥಿತೇ
ಗೃಹೀತಚಾಪೇ ಫಲ್ಗುನೇ ದ್ವಾರವತ್ಯಾಂ ।
ಆಸೀದ್ರಾವಃ ಕಿಂ ಕಿಮೇತತ್ ತ್ರಿದಂಡೀ
ಕನ್ಯಾಂ ಹರತ್ಯೇಷ ಕೋದಂಡಪಾಣಿಃ ॥188॥
ಸಕಲ ಆಯುಧಗಳಿಂದ ಯುಕ್ತವಾದ ಆ ರಥದಲ್ಲಿ ಧನುರ್ಧಾರಿಯಾಗಿ ಅರ್ಜುನ ನಿಂತಾಗ ದ್ವಾರಕೆಯಲ್ಲಿ ಕೋಲಾಹಲವೆದ್ದಿತು- `ಏನು ಏನಿದು? ತ್ರಿದಂಡಿ ಸಂನ್ಯಾಸಿ ದಂಡ ಬಿಟ್ಟು ಕೋದಂಡಪಾಣಿಯಾಗಿ ಕನ್ಯೆಯನ್ನು ಅಪಹರಿಸುತ್ತಿದ್ದಾನೆ!' ಎಂದು.
ತತಸ್ತು ತಂ ಸತನುತ್ರಂ ಮಹೇಂದ್ರ-
ದತ್ತೇ ದಿವ್ಯೇ ಕುಂಡಲೇ ವಾಸಸೀ ಚ ।
ದಿವ್ಯಾನಿ ರತ್ನಾನಿ ಚ ಭೂಷಣಾನಿ
ದೃಷ್ಟ್ವಾ ಬಿಭ್ರಾಣಂ ರಕ್ಷಿಣೋಽವಾರಯನ್ಸ್ಮ ॥189॥
ಮಹೇಂದ್ರ ನೀಡಿದ್ದ ದಿವ್ಯ ಕುಂಡಲಗಳನ್ನೂ ವಸ್ತ್ರಗಳನ್ನೂ ದಿವ್ಯರತ್ನಾಭರಣಗಳನ್ನೂ ಧರಿಸಿ ಕವಚವನ್ನು ತೊಟ್ಟಿದ್ದ ಅರ್ಜುನನನ್ನು ನೋಡಿ ನಗರ ರಕ್ಷಕರು ತಡೆದರು.
ತತಃ ಸ ಆಬದ್ಧತಳಾಂಗುಲಿತ್ರಃ
ಸತೂಣೀರಶ್ಚಾಪಮಾಯಮ್ಯ ಬಾಣೈಃ ।
ಚಕ್ರೇಂತರಿಕ್ಷಂ ಪ್ರದಿಶೋ ದಿಶಶ್ಚ
ನಿರಂತರಂ ಶಿಕ್ಷಯಾ ವಿದ್ಯಯಾ ಚ ॥190॥
ಅಂಗೈ ಬೆರಳುಗಳ ಕವಚವನ್ನು ತೊಟ್ಟು ಬತ್ತಳಿಕೆಯನ್ನು ಧರಿಸಿದ ಅರ್ಜುನ ಬಿಲ್ಲನ್ನೆಳೆದು ಬಾಣಗಳಿಂದ ಅಂತರಿಕ್ಷವನ್ನೂ ದಿಕ್ಕು ವಿದಿಕ್ಕುಗಳನ್ನೂ ಅಭ್ಯಾಸ ಬಲ ವಿದ್ಯಾಬಲಗಳಿಂದ ಪೂರ್ತಿಯಾಗಿ ತುಂಬಿಸಿ ಬಿಟ್ಟ.
ಚಕ್ರೇ ಸಾರಥ್ಯಂ ಕೇಶವೇನೈತದರ್ಥೇ
ಸುಶಿಕ್ಷಿತಾ ತಸ್ಯ ಸಮ್ಯಕ್ ಸುಭದ್ರಾ ।
ತಯಾ ಪಾರ್ಥೋ ವಾರಿತೋ ನೈವ ಕಂಚಿತ್
ಭಿನ್ನತ್ವಚಂ ಕೃತವಾನ್ ಕ್ರೀಡಮಾನಃ ॥191॥
ಸುಭದ್ರೆಯೆ ಅರ್ಜುನನಿಗೆ ಚೆನ್ನಾಗಿ ಸಾರಥ್ಯ ಮಾಡಿದಳು. ಇದಕ್ಕಾಗಿಯೆ ಕೃಷ್ಣ ಅವಳಿಗೆ ಒಳ್ಳೆಯ ಶಿಕ್ಷಣ ನೀಡಿದ್ದ. ಅವಳು ತಡೆದುದರಿಂದ ಅರ್ಜುನ ಯಾರಿಗೂ ಮೈಯಲ್ಲಿ ಗಾಯ ಮಾಡಲಿಲ್ಲ. ಆಟವಾಡಿದ.
* * * *
ಇನ್ನೂರ ಇಪ್ಪತ್ತೂರನೆಯ ಅಧ್ಯಾಯ
(ಇಂದ್ರ ಮೊದಲಾದ ದೇವತೆಗಳಿಂದ ಕೃಷ್ಣನ ಸನ್ನಿಧಿಯಲ್ಲಿ ಸುಭದ್ರೆಯ ವಿವಾಹ, ಕೃಷ್ಣನ ಸೂಚನೆಯಂತೆ ರಥದಲ್ಲಿ ಅರ್ಜುನ ಮತ್ತು ಸುಭದ್ರೆಯರ ನಿರ್ಗಮನ, ಕೆಲವರ ಹರ್ಷ ಮತ್ತು ಕೆಲವರ ರೋಷ)
ವೈಶಂಪಾಯನಃ
ವೃಷ್ಣ್ಯಂಧಕಪುರಾನ್ಮೋಕ್ಷಮಪಯಾನಂ ಧನಂಜಯಃ ।
ವಿನಿಶ್ಚಿತ್ಯ ತದಾ ಪಾರ್ಥಃ ಸುಭದ್ರಾಮಿದಮಬ್ರವೀತ್ ॥1॥
ಶೃಣು ಭದ್ರೇ ಯಥಾಶಾಸ್ತ್ರಂ ಹಿತಾರ್ಥಮೃಷಿಭಿಃ ಕೃತಮ್ ।

ಕನ್ಯಾಯಾಸ್ತು ಪಿತಾ ಭ್ರಾತಾ ಮಾತಾ ಮಾತುಲ ಏವ ಚ |
ಪಿತುರ್ಭ್ರಾತಾ ಗುರುಶ್ಚಾಪಿ ದಾತುಂ ಪ್ರಭವತಾಂ ಗತಾಃ ॥2॥
ಕುಂತಿಯ ಮಗನಾದ ಧನಂಜಯನು ವೃಷ್ಣ್ಯಂಧಕ ಪುರದಿಂದ ಹೊರಡುವುದೇ ಕ್ಲಿಷ್ಟಪರಿಸ್ಥಿತಿಯ ಮೋಚನೆ ಎಂದು ತಿಳಿದು ಸುಭದ್ರೆಯನ್ನು ಕುರಿತು ಹೀಗೆ ಮಾತನಾಡಿದನು. ಸುಭದ್ರೇ, ಋಷಿಗಳು ಶಾಸ್ತ್ರಾನುಸಾರವಾಗಿ ಲೋಕದ ಹಿತಕ್ಕಾಗಿ ಮಾಡಿದ ವ್ಯವಸ್ಥೆಯನ್ನು ಹೇಳುತ್ತೇನೆ ಕೇಳು. ಕನ್ಯಾದಾನವನ್ನು ಮಾಡಲು ತಂದೆಯೂ, ಸೋದರನೂ, ತಾಯಿಯೂ, ಸೋದರಮಾವನೂ, ತಂದೆಯ ಸೋದರನೂ, ಮತ್ತು ಗುರುವೂ ಅರ್ಹರಾಗುತ್ತಾರೆ.
ಮಹೋತ್ಸವಂ ಪಶುಪತೇರ್ದ್ರಷ್ಟುಕಾಮಃ ಪಿತಾ ಗತಃ |
ಅಂತರ್ದ್ವೀಪಂ ಗತೋ ಭದ್ರೇ ಪುತ್ರೈಃ ಪೌತ್ರೈಃ ಸಬಾಂಧವೈಃ ॥4॥
ಸುಭದ್ರೇ, ನಿನ್ನ ತಂದೆಯು ರುದ್ರದೇವರ ಮಹೋತ್ಸವವನ್ನು ನೋಡಲು ಮಕ್ಕಳು, ಮೊಮ್ಮಕ್ಕಳು ಮತ್ತು ಬಾಂಧವರೊಡನೆ ಅಂತರ್ದ್ವೀಪಕ್ಕೆ ಹೋಗಿದ್ದಾನೆ.
ಮಮ ಚೈವ ವಿಶಾಲಾಕ್ಷಿ ವಿದೇಶಸ್ಥಾಸ್ತು ಬಾಂಧವಾಃ |
ತಸ್ಮಾತ್ ಸುಭದ್ರೇ ಗಾಂಧರ್ವೋ ವಿವಾಹಃ ಪಂಚಮೋ ಭವೇತ್ ॥5॥
ವಿಶಾಲಾಕ್ಷಿಯೇ, ನನ್ನ ಬಂಧುಗಳೆಲ್ಲರೂ ಬೇರೆ ದೇಶದಲ್ಲಿದ್ದಾರೆ. ಆದ್ದರಿಂದ ಸುಭದ್ರೇ, ಐದನೆಯ ವಿವಾಹವಿಧಿಯಾದ ಗಾಂಧರ್ವ ವಿಧಿಯು ಸೂಕ್ತವೆನಿಸುತ್ತದೆ.
ಸಮಾಗಮೇ ತು ಕನ್ಯಾಯಾಃ ಕ್ರಿಯಾಃ ಪ್ರೋಕ್ತಾಶ್ಚತುರ್ವಿಧಾಃ |
ತಾಸಾಂ ಪ್ರವೃತ್ತಿಂ ಸಾಧೂನಾಂ ಶೃಣು ಮಾಧವಿ ತದ್ಯಥಾ ॥6॥
ಕನ್ಯೆಯನ್ನು ಸ್ವೀಕರಿಸಲು ನಾಲ್ಕುವಿಧವಾದ ಕ್ರಿಯೆಗಳು ಹೇಳಲ್ಪಟ್ಟಿವೆ. ಮಾಧವೀ, ಆ ಶಾಸ್ತ್ರಸಮ್ಮತವಾದ ನಾಲ್ಕುವಿಧಿಗಳ ವಿವರವನ್ನು ಹೇಳುತ್ತೇನೆ ಕೇಳು.
ವರಮಾಹೂಯ ವಿಧಿನಾ ಪಿತ್ರಾ ದತ್ತಾ ಯಥಾಽರ್ಥಿನೇ |
ಸಾ ಪತ್ನೀ ತು ಬುಧೈರುಕ್ತಾ ಸಾ ವಶ್ಯಾ ತು ಪತಿವ್ರತಾ ॥7॥
ಕನ್ಯಾರ್ಥಿಯಾದ ವರನನ್ನು ಕನ್ಯೆಯ ತಂದೆಯಾದವನು ಆಹ್ವಾನಿಸಿ ವಿಧಿಪೂರ್ವಕವಾಗಿ ದಾನ ಮಾಡಿದರೆ ಅವಳು ಜ್ಞಾನಿಗಳಿಂದ ಪತ್ನಿಯೆಂದು ಕರೆಯಲ್ಪಡುತ್ತಾಳೆ. ಅವಳು ಪತಿವ್ರತೆಯಾಗಿಯೂ ಪತಿಗೆ ವಶಳಾಗಿಯೂ ಇರುತ್ತಾಳೆ.
ಭೃತ್ಯಾನಾಂ ಭರಣಾರ್ಥಾಯ ಆತ್ಮನಃ ಪೋಷಣಾಯ ಚ |
ದಾನೇ ಗೃಹೀತಾ ಯಾ ನಾರೀ ಸಾ ಭಾರ್ಯೇತಿ ಬುಧೈರ್ಮತಾ ॥8॥
ಪರಿಜನರ ಪೋಷಣೆಗೋಸ್ಕರ ಮತ್ತು ತನ್ನ ಪೋಷಣೆಗೋಸ್ಕರ ದಾನವನ್ನು ಸ್ವೀಕರಿಸಿದರೆ ಆ ಸ್ತ್ರೀಯನ್ನು ಭಾರ್ಯೆ ಎಂದು ಜ್ಞಾನಿಗಳು ಕರೆಯುತ್ತಾರೆ.
ಧರ್ಮತೋ ವರಯಿತ್ವಾ ತು ಆನೀಯ ಸ್ವಂ ನಿವೇಶನಮ್ |
ನ್ಯಾಯೇನ ದತ್ತಾ ತಾರುಣ್ಯೇ ದಾರಾಃ ಪಿತೃಕೃತಾ ಭವೇತ್ ॥9॥
ಧರ್ಮದಿಂದಲೇ ಕನ್ಯಾವರಣ ಮಾಡಿ ತನ್ನ ಮನೆಗೆ ತಂದು ಅಲ್ಲಿ ದಾನ ಮಾಡಲ್ಪಟ್ಟು ತಾರುಣ್ಯದಲ್ಲೇ ಸ್ವೀಕರಿಸಿದ್ದ ವನಿತೆಯು ದಾರಾ ಎನಿಸುತ್ತಾಳೆ. ಇದು ಅವಳ ತಂದೆಯೇ ಏರ್ಪಡಿಸುವ ವಿವಾಹ.
ಜಾಯತೇ ಯಾಽನು ಭರ್ತಾರಂ ಜಾಯಾ ಇತ್ಯೇವ ನಾಮತಃ |
ದಾರಾಃ ಪತ್ನೀ ಚ ಭಾರ್ಯಾ ಚ ಜಾಯಾ ಚೇತಿ ಚತುರ್ವಿಧಾಃ |
ಚತಸ್ರ ಏವಾಗ್ನಿಸಾಕ್ಷ್ಯಾಃ ಕ್ರಿಯಾಯುಕ್ತಾಸ್ತು ಧರ್ಮತಃ ॥10॥
ಪತಿಯನ್ನು ಅನುಸರಿಸಿ ನನ್ನನ್ನು ಜಾಯೆಯನ್ನಾಗಿ ಮಾಡು ಎಂಬ ಪ್ರಾರ್ಥನೆಯನ್ನು ಮಾಡಿದ ಅವಳಲ್ಲಿ ಪತಿಯೇ ಜನಿಸುವುದರಿಂದ ಅವಳನ್ನು ಜಾಯಾ ಎಂದು ಕರೆಯುತ್ತಾರೆ. ದಾರಾ, ಪತ್ನಿ, ಭಾರ್ಯಾ, ಜಾಯಾ ಈ ನಾಲ್ವರೂ ಸ್ತ್ರೀಯರೂ ಅಗ್ನಿಸಾಕ್ಷಿಯಾಗಿ ವೈದಿಕ ಕ್ರಿಯೆಗಳಿಂದ ಧಾರ್ಮಿಕವಾಗಿ ಸ್ವೀಕರಿಸಲ್ಪಟ್ಟವರು.
ಗಾಂಧರ್ವೇಣ ವಿವಾಹೇನ ರಾಗಾತ್ ಪುತ್ರಾರ್ಥಕಾರಣಾತ್ |
ಆತ್ಮನಾಽನುಗೃಹೀತಾ ಯಾ ವಶ್ಯಾ ಸಾ ತು ಪ್ರಜಾವತೀ ॥11॥
ರಾಗದಿಂದಲಾಗಲೀ ಅಥವಾ ಮಗನನ್ನು ಪಡೆಯುವ ಕಾರಣದಿಂದಲಾಗಲೀ ಪತಿಯ ಅನುಗ್ರಹವನ್ನು ಸಂಪಾದಿಸಿ ಗಾಂಧರ್ವ ವಿವಾಹದಿಂದ ಅವನನ್ನು ವರಿಸಿ ವಶ್ಯಾ ಎನಿಸಿಕೊಂಡು ಪ್ರಜೆಗಳನ್ನು ಪಡೆಯುತ್ತಾಳೆ.
ಗಾಂಧರ್ವಸ್ತು ಕ್ರಿಯಾಹೀನೋ ರಾಗಾದೇವ ಪ್ರವರ್ತತೇ |
ಸಕಾಮಾಯಾಃ ಸಕಾಮೇನ ನಿರ್ಮಂತ್ರೋ ರಹಸಾ ಕೃತಃ ॥12॥
ಗಾಂಧರ್ವವಿಧಿಯು ಕ್ರಿಯಾಹೀನವಾದುದು. ಕೇವಲ ರಾಗದಿಂದಲೇ ಜರುಗುತ್ತದೆ. ಕಾಮವುಳ್ಳ ಪುರುಷನಿಗೆ ಕಾಮವುಳ್ಳ ವನಿತೆಯಿಂದ ಮಂತ್ರರಹಿತವಾಗಿ ಏಕಾಂತದಲ್ಲಿ ನಡೆಯುವ ಯೋಗವು ಗಾಂಧರ್ವವಿವಾಹ ಎನಿಸಿಕೊಳ್ಳುತ್ತದೆ.
ಮಯೋಕ್ತಮಕ್ರಿಯಂ ಚಾಪಿ ಕರ್ತವ್ಯಂ ಮಾಧವಿ ತ್ವಯಾ |
ಅಯನಂ ಚೈವ ಮಾಸಶ್ಚ ಋಕ್ಷಂ ಪಕ್ಷಸ್ತಥಾ ತಿಥಿಃ ॥13॥
ಕರಣಂ ಚ ಮುಹೂರ್ತಂ ಚ ಲಗ್ನಸಂಪತ್ ತಥಾಽದ್ಯ ವೈ |
ವಿವಾಹಸ್ಯ ವಿಶಾಲಾಕ್ಷಿ ಪ್ರಶಸ್ತಂ ಚೋತ್ತರಾಯಣಮ್ ॥14॥
ಮಾಧವೀ, ನಾನು ಸೂಚಿಸುವ ಗಾಂಧರ್ವವಿವಾಹವು ಕ್ರಿಯಾಶೂನ್ಯವಾದರೂ ನೀನು ಅದರಂತೆ ನಡೆದುಕೊಳ್ಳಬೇಕು. ಅಯನ, ಮಾಸ, ನಕ್ಷತ್ರ, ಪಕ್ಷ, ತಿಥಿ, ಕರಣ, ಮುಹೂರ್ತ, ಲಗ್ನ ಎಲ್ಲವೂ ಈದಿನ ಅನುಕೂಲವಾಗಿವೆ.

ವೈಶಾಖಶ್ಚೈವ ಮಾಸಾನಾಂ ಪಕ್ಷಾಣಾಂ ಶುಭ್ರ ಏವ ಚ |
ನಕ್ಷತ್ರಾಣಾಂ ತಥಾ ಹಸ್ತಸ್ತೃತೀಯಾ ಚ ತಿಥಿಷ್ವಪಿ ॥15॥
ವಿಶಾಲಾಕ್ಷಿಯೇ, ವಿವಾಹಕ್ಕೆ ಉತ್ತರಾಯಣವು ಪ್ರಶಸ್ತವಾದುದು. ಹಾಗೆಯೇ ಮಾಸಗಳಲ್ಲಿ ವೈಶಾಖವೂ, ಪಕ್ಷಗಳಲ್ಲಿ ಶುಕ್ಲಪಕ್ಷವೂ , ನಕ್ಷತ್ರಗಳಲ್ಲಿ ಹಸ್ತಾ ನಕ್ಷತ್ರವೂ, ತಿಥಿಗಳಲ್ಲಿ ತೃತೀಯಾ ತಿಥಿಯೂ ಪ್ರಶಸ್ತವಾದುವು.
ಲಗ್ನೋ ಹಿ ಮಕರಃ ಶ್ರೇಷ್ಠಃ ಕರಣಾನಾಂ ಬವಸ್ತಥಾ |
ಮೈತ್ರೋ ಮುಹೂರ್ತೋ ವೈವಾಹ್ಯ ಆವಯೋಃ ಶುಭಕರ್ಮಣಿ ॥16॥
ಲಗ್ನಗಳಲ್ಲಿ ಮಕರ ಲಗ್ನವು ಶ್ರೇಷ್ಠ, ಕರಣಗಳಲ್ಲಿ ಬವ ಕರಣವು ಪ್ರಶಸ್ತವಾದುದು. ನಮ್ಮಿಬ್ಬರ ಶುಭ ವಿವಾಹದ ಸಂದರ್ಭದಲ್ಲಿ ಮೈತ್ರ ಮುಹೂರ್ತವು ಪ್ರಶಸ್ತವಾದುದು.
ಸರ್ವಸಂಪದಿಯಂ ಭದ್ರೇ ಅದ್ಯ ರಾತ್ರೌ ಭವಿಷ್ಯತಿ |
ಭಗವಾನಸ್ತಮಭ್ಯೇತಿ ಆದಿತ್ಯಸ್ತಪತಾಂ ವರಃ ॥17॥
ಸುಭದ್ರೇ, ಲೋಕವನ್ನು ಬೆಳಗುವ ಪೂಜ್ಯನಾದ ಸೂರ್ಯನು ಅಸ್ತವನ್ನು ಹೊಂದಿದ ಮೇಲೆ ಈ ಎಲ್ಲಾ ಗ್ರಹನಕ್ಷತ್ರಾದಿ ಸಂಪತ್ತು ಈದಿನ ರಾತ್ರಿ ಉಂಟಾಗುವುದು.
ನಾರಾಯಣೋಽಪಿ ಧರ್ಮಜ್ಞೋ ನಾವಬುಧ್ಯೇತ ವಿಶ್ವಕೃತ್ |
ಧರ್ಮಸಂಕಟಮಾಪನ್ನೇ ಕಿಂ ನು ಕೃತ್ವಾ ಶುಭಂ ಭವೇತ್ ॥18॥
ಧರ್ಮಸಂಕಟ ಒದಗಿದಾಗ ವಿಶ್ವಕರ್ತನಾದ, ಧರ್ಮಜ್ಞನಾದ ನಾರಾಯಣನಿಗೂ ಏನು ಮಾಡಿದರೆ ಶುಭವುಂಟಾಗುವುದೆಂದು ತಿಳಿಯುವುದಿಲ್ಲ.
ಮನೋಭವೇನ ಕಾಮೇನ ಮೋಹಿತಂ ಮಾಂ ಪ್ರಲಾಪಿನಮ್ |
ಪ್ರತಿವಾಕ್ಯಂ ಚ ಮೇ ದೇವಿ ಕಿಂ ನ ವಕ್ಷ್ಯಸಿ ಮಾಧವಿ ॥19॥
ದೇವೀ, ಮನೋಭವವಾದ ಕಾಮಕ್ಕೆ ವಶನಾಗಿ ಬಾಯಿಗೆ ಬಂದಂತೆ ಮಾತನಾಡುತ್ತಿರುವ ನನಗೆ ಪ್ರತ್ಯುತ್ತರವನ್ನು ಕೊಡು. ಮಾಧವಿ, ನೀನು ಏಕೆ ಮಾತನಾಡುತ್ತಿಲ್ಲ?
ವೈಶಂಪಾಯನಃ
ಅರ್ಜುನಸ್ಯ ವಚಃ ಶ್ರುತ್ವಾ ಚಿಂತಯಂತೀ ಜನಾರ್ದನಮ್ |
ನೋವಾಚ ಕಿಂಚಿದ್ ವಚನಂ ಬಾಷ್ಪದೂಷಿತಲೋಚನಾ ॥20॥
ಅರ್ಜುನನ ಮಾತುಗಳನ್ನು ಕೇಳಿ ಸುಭದ್ರೆಯು ಕೃಷ್ಣನನ್ನು ಚಿಂತಿಸುತ್ತಾ ಕಣ್ಣೀರಿನಿಂದ ತುಂಬಿದ ನೇತ್ರವುಳ್ಳವಳಾಗಿ ಏನನ್ನೂ ಮಾತನಾಡಲಿಲ್ಲ.
ರಾಗೋನ್ಮಾದಪ್ರಲಾಪೀ ಸನ್ನರ್ಜುನೋ ಜಯತಾಂ ವರಃ |
ಚಿಂತಯಾಮಾಸ ಪಿತರಂ ಪ್ರವಿಶ್ಯ ಚ ಲತಾಗೃಹಮ್ ॥21॥
ಜಯಶೀಲರಲ್ಲಿ ಶ್ರೇಷ್ಠನಾದ ಅರ್ಜುನನು ಸುಭದ್ರೆಯ ಮೇಲಿನ ರಾಗದಿಂದಲೂ ಕಾಮದಿಂದ ಉಂಟಾದ ಉನ್ಮಾದದಿಂದಲೂ ಮನಸ್ಸಿಗೆ ಬಂದಂತೆ ಮಾತನಾಡುತ್ತಾ ಲತಾಗೃಹವನ್ನು ಪ್ರವೇಶಿಸಿ ತನ್ನ ತಂದೆಯಾದ ಇಂದ್ರನನ್ನು ಸ್ಮರಿಸಿದನು.
ಚಿಂತಯಾನಂ ತು ಕೌಂತೇಯಂ ಜ್ಞಾತ್ವಾ ಶಚ್ಯಾ ಶಚೀಪತಿಃ |
ಸಹಿತೋ ನಾರದಾದ್ಯೈಸ್ತು ಮುನಿಸಿದ್ಧಾಪ್ಸರೋಗಣೈಃ |
ಅರುಂಧತ್ಯಾ ವಸಿಷ್ಠೇನ ಆಜಗಾಮ ಕುಶಸ್ಥಲೀಮ್ ॥22॥
ಕುಂತಿಯ ಮಗನಾದ ಅರ್ಜುನನು ತನ್ನನ್ನೇ ಸ್ಮರಿಸುತ್ತಿರುವುದನ್ನು ತಿಳಿದ ಇಂದ್ರನು ಶಚಿ, ನಾರದಾದಿ ಮುನಿಗಳು, ಸಿದ್ಧರು, ಅಪ್ಸರೆಯರ ಸಮೂಹ, ಅರುಂಧತಿ ಮತ್ತು ವಸಿಷ್ಠರು ಇವರುಗಳ ಜೊತೆಯಲ್ಲಿ ದ್ವಾರಕಾ ಪಟ್ಟಣಕ್ಕೆ ಬಂದನು.
ಚಿಂತಿತಂ ಚ ಸುಭದ್ರಾಯಾಃ ಚಿಂತಯಿತ್ವಾ ಜನಾರ್ದನಃ |
ನಿದ್ರಯಾಽಪಹೃತಜ್ಞಾನಂ ರೌಹಿಣೇಯಂ ವಿನಾ ತದಾ |
ಸಹಾಕ್ರೂರೇಣ ಶಿನಿನಾ ಸತ್ಯಕೇನ ಗದೇನ ಚ ॥24॥
ವಸುದೇವೇನ ದೇವಕ್ಯಾ ಆಹುಕೇನ ಚ ಧೀಮತಾ |
ಆಜಗಾಮ ಪುರೀಂ ರಾತ್ರೌ ದ್ವಾರಕಾಂ ಸ್ವಜನೈರ್ವೃತಃ ॥25॥
ಸುಭದ್ರೆಯು ತನ್ನನ್ನು ಸ್ಮರಿಸುತ್ತಿರುವುದನ್ನು ತಿಳಿದ ಕೃಷ್ಣನು ನಿದ್ದೆ ಮಾಡುತ್ತಿದ್ದ ಬಲರಾಮನನ್ನು ಬಿಟ್ಟು ಅಕ್ರೂರ, ಶಿನಿ, ಸತ್ಯಕ, ಗದ, ವಸುದೇವ, ದೇವಕಿ, ಮೇಧಾವಿಯಾದ ಆಹುಕ ಮತ್ತು ಸ್ವಜನರಿಂದ ಸಹಿತನಾಗಿ ರಾತ್ರಿಯ ವೇಳೆಯಲ್ಲಿ ದ್ವಾರಕಾ ಪಟ್ಟಣಕ್ಕೆ ಬಂದನು.
ಪೂಜಯಿತ್ವಾ ತು ದೇವೇಶಂ ನಾರದಾದ್ಯೈರ್ಮಹರ್ಷಿಭಿಃ |
ಕುಶಲಪ್ರಶ್ನಮುಕ್ತತ್ವ ತು ದೇವೇಂದ್ರೇಣಾಭಿಯಾಚಿತಃ |
ವೈವಾಹಿಕೀಂ ಕ್ರಿಯಾಂ ಕೃಷ್ಣಸ್ತಥೇತ್ಯೇವಮುವಾಚ ಹ ॥26॥
ನಾರದಾದಿ ಮಹರ್ಷಿಗಳಿಂದ ದೇವೇಶನಾದ ಇಂದ್ರನನ್ನು ಪೂಜಿಸಿ ಕುಶಲ ಪ್ರಶ್ನೆಯನ್ನು ಮಾಡಿ ಕೃಷ್ಣನು ವಿವಾಹದ ವಿಧಿಯ ಬಗ್ಗೆ ದೇವೇಂದ್ರನಿಂದ ಪ್ರಾರ್ಥಿಸಲ್ಪಟ್ಟು ಹಾಗೆಯೇ ಆಗಲಿ ಎಂದು ಹೇಳಿ ಅನುಮತಿಯನ್ನು ಕೊಟ್ಟನು.
ಆಹುಕೋ ವಸುದೇವಶ್ಚ ಸಹಾಕ್ರೂರಃ ಸಸಾತ್ಯಕಿಃ |
ಅಭಿಪ್ರಣಮ್ಯ ಶಿರಸಾ ಪಾಕಶಾಸನಮಬ್ರುವನ್ ॥27॥
ಆಹುಕ, ವಸುದೇವ, ಅಕ್ರೂರ ಮತ್ತು ಸಾತ್ಯಕಿ ಇವರು ಇಂದ್ರನಿಗೆ ಶಿರಸಾ ಪ್ರಣಾಮವನ್ನು ಮಾಡಿ ಹೀಗೆ ಹೇಳಿದರು.

ದೇವದೇವ ನಮಸ್ತೇಽಸ್ತು ಲೋಕನಾಥ ಜಗತ್ಪತೇ |
ವಯಂ ಧನ್ಯಾಃ ಸ್ಮ ಲೋಕೇಷು ಬಾಂಧವೈಃ ಸಹಿತಾಃ ಪ್ರಭೋ |
ಕೃತಪ್ರಸಾದಾಸ್ತು ವಯಂ ತವ ವಾಕ್ಯೇನ ವಿಶ್ವಜಿತ್ ॥28॥
ದೇವದೇವನೇ, ಲೋಕನಾಥನೇ, ಜಗತ್ಪತಿಯೇ, ಪ್ರಭುವೇ, ನಿನ್ನ ವಿವಾಹವನ್ನು ಅನುಮೋದಿಸುವ ಮಾತುಗಳಿಂದ, ಬಾಂಧವರಿಂದ ಸಹಿತರಾದ ನಾವು ಧನ್ಯರಾಗಿದ್ದೇವೆ. ವಿಶ್ವಜಯಶಾಲಿಯೇ, ನಿನ್ನ ಮಾತು ನಮಗೆ ಅನುಗ್ರಹರೂಪವಾಗಿದೆ.
ಏವಮುಕ್ತತ್ವ ಪ್ರಸಾದ್ಯೈನಂ ಪೂಜಯಿತ್ವಾ ಪ್ರಯತ್ನತಃ |
ಮಹೇಂದ್ರಶಾಸನಾತ್ ಸರ್ವೇ ಸಹಿತಾಶ್ಚ ಮಹರ್ಷಿಭಿಃ ॥29॥
ವಿವಾಹಂ ಕಾರಯಾಮಾಸುಃ ಶಕ್ರಪುತ್ರಸ್ಯ ಶಾಸ್ತ್ರತಃ |
ಅರುಂಧತೀ ಶಚೀ ದೇವೀ ರುಗ್ಮಿಣೀ ದೇವಕೀ ತಥಾ ॥30॥
ಹೀಗೆ ಹೇಳಿ ಅವನನ್ನು ಸಂತೋಷಪಡಿಸಿ ಪ್ರಯತ್ನಪೂರ್ವಕವಾಗಿ ಪೂಜಿಸಿ ಮಹೇಂದ್ರನ ಶಾಸನದಂತೆ ಮಹರ್ಷಿಗಳಿಂದ ಸಹಿತರಾಗಿ ಎಲ್ಲ ಬಂಧುಗಳೂ ಇಂದ್ರಪುತ್ರನಾದ ಅರ್ಜುನನ ವಿವಾಹವನ್ನು ಶಾಸೊತ್ರೇಕ್ತರೀತಿಯಿಂದ ನೆರವೇರಿಸಿದರು.
ದಿವ್ಯಸ್ತ್ರೀಭಿಶ್ಚ ಸಹಿತಾಃ ಕ್ರಿಯಾಂ ಭದ್ರೇ ಪ್ರಯೋಜಯನ್ ॥31॥
ಒಂದು ಮಂಗಳಮಹೂರ್ತದಲ್ಲಿ ಅರುಂಧತಿ, ಶಚಿ, ರುಕ್ಮಿಣಿ, ದೇವಕಿ ಮತ್ತು ಉಳಿದ ದಿವ್ಯಸ್ತ್ರೀಯರು ಎಲ್ಲರೂ ಸೇರಿ ವಿವಾಹ ವಿಧಿಯನ್ನು ನೆರವೇರಿಸಿದರು.
ಮಹರ್ಷಿಃ ಕಾಶ್ಯಪೋ ಹೋತಾ ಸದಸ್ಯಾ ನಾರದಾದಯಃ |
ಪುಣ್ಯಾಶಿಷಃ ಪ್ರಯೋಕ್ತಾರಃ ಸರ್ವೇ ಹ್ಯಾಸಂಸ್ತದಾಽರ್ಜುನೇ ॥32॥
ಆಗ ಮಹರ್ಷಿಗಳಾದ ಕಾಶ್ಯಪರು ಹೋತೃಗಳಾಗಿದ್ದರು, ನಾರದಾದಿಗಳು ಸದಸ್ಯರಾಗಿದ್ದರು. ಉಳಿದವರೆಲ್ಲರೂ ಅರ್ಜುನನಿಗೆ ಮಂಗಳ ಆಶೀರ್ವಾದಗಳನ್ನು ನುಡಿದರು.
ಅಭಿಷೇಕಂ ತತಃ ಕೃತ್ವಾ ಮಹೇಂದ್ರಃ ಪಾಕಶಾಸನಿಮ್ |
ಲೋಕಪಾಲೈಸ್ತು ಸಹಿತಃ ಸರ್ವದೇವೈರಭಿಷ್ಟುತಃ |
ಕಿರೀಟಾಂಗದಹಾರಾದ್ಯೈರ್ಹಸ್ತಾಭರಣಕುಂಡಲೈಃ ॥33॥
ಭೂಷಯಿತ್ವಾ ತದಾ ಪಾರ್ಥಂ ದ್ವಿತೀಯಮಿವ ವಾಸವಮ್ |
ಪಾರ್ಥಂ ಪರಿಷ್ವಜ್ಯ ತದಾ ಪ್ರೀತಿಮಾಪ ಪುರಂದರಃ॥34॥
ಅನಂತರ, ಮಹೇಂದ್ರನು ಲೋಕಪಾಲಕರ ಜೊತೆಯಲ್ಲಿ ಅರ್ಜುನನಿಗೆ ಅಭಿಷೇಕವನ್ನು ಮಾಡಿ ಎಲ್ಲ ದೇವತೆಗಳಿಂದಲೂ ಸ್ತೋತ್ರ ಮಾಡಲ್ಪಟ್ಟು ಅರ್ಜುನನಿಗೆ ಕಿರೀಟ, ಹಾರ, ಅಂಗದಗಳಿಂದಲೂ, ಹಸ್ತಾಭರಣ- ಕುಂಡಲಗಳಿಂದಲೂ ಅಲಂಕಾರವನ್ನು ಮಾಡಿ ಎರಡನೆಯ ಇಂದ್ರನಂತಿದ್ದ ಅವನನ್ನು ಆಲಿಂಗಿಸಿ ಬಹಳ ಸಂತೋಷವನ್ನು ಹೊಂದಿದನು.
ಶಚೀ ದೇವೀ ತದಾ ಭದ್ರಾಮರುಂಧತ್ಯಾದಿಬಿಸ್ತಥಾ |
ಕಾರಯಾಮಾಸ ವೈವಾಹ್ಯಾನ್ ಮಾಂಗಲ್ಯಾನ್ ಯಾದವಸ್ತ್ರಿಯಃ ॥35॥
ಆಗ ಶಚೀದೇವಿಯು ಅರುಂಧತಿ ಮೊದಲಾದವರಿಂದಲೂ ಮತ್ತು ಯಾದವಸ್ತ್ರೀಯರಿಂದಲೂ ಸುಭದ್ರೆಗೆ ವಿವಾಹ ಸಂಬಂಧಿಯಾದ ಮಂಗಳ ಕ್ರಿಯೆಗಳನ್ನು ಮಾಡಿಸಿದಳು.
ಸಹಾಪ್ಸರೋಭಿರ್ಮುದಿತಾ ಭೂಷಣೈಶ್ಚಾಭ್ಯಭೂಷಯನ್ |
ಪೌಲೋಮೀಮಿವ ಮನ್ಯಂತೇ ಸುಭದ್ರಾಂ ಭದ್ರಭಾಷಿಣೀಮ್ ॥36॥
ಸಂತೋಷದಿಂದ ಕೂಡಿದವಳಾಗಿ ಅಪ್ಸರೆಯರ ಜೊತೆಯಲ್ಲಿ ಸೇರಿ ಸುಭದ್ರೆಗೆ ಆಭರಣಗಳಿಂದ ಅಲಂಕಾರವನ್ನು ಮಾಡಿದಳು. ಮಂಜುಳಭಾಷಿಣಿಯಾದ ಸುಭದ್ರೆಯನ್ನು ಎಲ್ಲ ಜನರೂ ಶಚಿಯಂತಿದ್ದಾಳೆ ಎಂದು ತಿಳಿದರು.
ತತೋ ವಿವಾಹೋ ವವೃತೇ ಸ್ವಿತಃ ಸರ್ವಗುಣಾನ್ವಿತಃ |
ತಸ್ಯಾಃ ಪಾಣಿಂ ಗೃಹೀತ್ವಾಽಸೌ ಮಂತ್ರಹೋಮಪುರಸ್ಕೃತಃ ॥37॥
ಅನಂತರ, ಪರಿಶುದ್ಧವಾದ ಮತ್ತು ಸರ್ವಗುಣಾನ್ವಿತವಾದ ವಿವಾಹವು ಜರುಗಿತು. ಅರ್ಜುನನು ಮಂತ್ರಹೋಮಪುರಸ್ಕರವಾಗಿ ಸುಭದ್ರೆಯ ಪಾಣಿಯನ್ನು ಗ್ರಹಣ ಮಾಡಿದನು.
ಯಥಾ ತಸ್ಯೈವ ಹಿ ಪಿತಾ ಶಚ್ಯಾ ಇವ ಶತಕ್ರತುಃ |
ಸಾ ಜಿಷ್ಣುಮಧಿಕಂ ಭೇಜೇ ಸುಭದ್ರಾ ಚಾರುದರ್ಶನಾ ॥38॥
ಪಾರ್ಥಸ್ಯ ಸದೃಶೀ ಭದ್ರಾ ರೂಪೇಣ ವಯಸಾ ತಥಾ |
ಸುಭದ್ರಾಯಾಶ್ಚ ಪಾರ್ಥೋಽಪಿ ಸದೃಶೋ ರೂಪಲಕ್ಷಣೈಃ |
ಇತ್ಯೂಚುಃ ಸ್ಮ ತದಾ ದೇವಾಃ ಪ್ರೀತಾಃ ಸೇಂದ್ರಪುರೋಗಮಾಃ ॥39॥
ಅವನ ತಂದೆಯೇ ಆದ ಇಂದ್ರನು ಶಚಿಯ ಜೊತೆಯಲ್ಲಿ ಶೋಭಿಸಿದಂತೆ ಸುಂದರಿಯಾದ ಸುಭದ್ರೆಯ ಜೊತೆಯಲ್ಲಿ ಅರ್ಜುನನು ಇನ್ನೂ ಅಧಿಕವಾಗಿ ಶೋಭಿಸಿದನು. ಸುಭದ್ರೆಯೂ ರೂಪದಿಂದಲೂ ಮತ್ತು ವಯಸ್ಸಿನಿಂದಲೂ ಅರ್ಜುನನಿಗೆ ಸದೃಶಳಾದವಳು. ಅರ್ಜುನನೂ ಸಹ ರೂಪಲಕ್ಷಣಗಳಿಂದ ಸುಭದ್ರೆಗೆ ಅನುರೂಪನಾದವನು ಎಂದು ಇಂದ್ರನೇ ಮೊದಲಾದ ದೇವತೆಗಳು ಮಾತನಾಡಿಕೊಂಡರು.
ಏವಂ ನಿವೇಶ್ಯ ದೇವಾಸ್ತು ಗಂಧರ್ವೈಶ್ಚಾಪ್ಸರೋಗಣೈಃ |
ಆಮಂತ್ರ್ಯ ಯಾದವಾಂತ್ಸರ್ವೇ ವಿಪ್ರಜಗ್ಮುರ್ಯಥಾಗತಮ್ |
ಯಾದವಾಃ ಪಾರ್ಥಮಾಮಂತ್ರ್ಯ ಅಂತರ್ದ್ವೀಪಂ ಗತಾಸ್ತದಾ ॥40॥

ಹೀಗೆ ದೇವತೆಗಳು ಗಂಧರ್ವರ ಮತ್ತು ಅಪ್ಸರೆಯರ ಜೊತೆಯಲ್ಲಿ ವಿವಾಹವನ್ನು ನೆರವೇರಿಸಿ ಎಲ್ಲ ಯಾದವರ ಅನುಮತಿಯನ್ನು ಪಡೆದು ಎಲ್ಲರೂ ಬಂದಂತೆಯೇ ಹೊರಟುಹೋದರು. ಯಾದವರೂ ಸಹ ಅರ್ಜುನನ ಅನುಮತಿಯನ್ನು ಪಡೆದು ಅಂತರ್ದ್ವೀಪಕ್ಕೆ ಹೊರಟುಹೋದರು.
ವಾಸುದೇವಸ್ತದಾ ಪಾರ್ಥಮುವಾಚ ಯದುನಂದನಃ |
ದ್ವಾವಿಂಶದ್ದಿವಸಾನ್ ಪಾರ್ಥ ಇಹೋಷ್ಯ ಭರತರ್ಷಭ ॥41॥
ಮಾಮಕಂ ರಥಮಾರೂಹ್ಯ ಸೈನ್ಯಸುಗ್ರೀವಯೋಜಿತಮ್ |
ಸುಭದ್ರಯಾ ಸುಖಂ ಪಾರ್ಥ ಖಾಂಡವಪ್ರಸ್ಥಮಾವಿಶ ॥42॥
ಆಗ ಯದುನಂದನನಾದ ವಾಸುದೇವನು ಅರ್ಜುನನನ್ನು ಕುರಿತು ಹೇಳಿದನು. ಭರತಶ್ರೇಷ್ಠನಾದ ಅರ್ಜುನನೇ, ನೀನು ಇಲ್ಲಿ ಇಪ್ಪತ್ತೆರಡು ದಿವಸಗಳ ಕಾಲ ಸುಭದ್ರೆಯ ಜೊತೆಯಲ್ಲಿ ವಾಸಮಾಡಿ ಅನಂತರ ಸೈನ್ಯಸುಗ್ರೀವಾದಿ ಅಶ್ವಗಳನ್ನು ಹೂಡಿದ ನನ್ನ ರಥವನ್ನು ಏರಿ ಸುಭದ್ರೆಯ ಜೊತೆಯಲ್ಲಿ ಸುಖವಾಗಿ ಖಾಂಡವಪ್ರಸ್ಥಕ್ಕೆ ಹೋಗು.
ಯಾದವೈಃ ಸಹಿತಃ ಪಶ್ಚಾದಾಗಮಿಷ್ಯಾಮಿ ಭಾರತ |
ಯತಿವೇಷೇಣ ನಿರತೋ ವಸೇಸ್ತ್ವಂ ರುಗ್ಮಿಣೀಗೃಹೇಃ ॥43॥
ಭಾರತನೇ,ಅನಂತರ ನಾನು ಯಾದವರ ಜೊತೆಯಲ್ಲಿ ಅಲ್ಲಿಗೆ ಬರುವೆನು. ನೀನು ಯತಿವೇಷವನ್ನು ಧರಿಸಿಯೇ ಸುವರ್ಣಾಭರಣಗಳಿಂದ ಭೂಷಿತಳಾದ ಸುಭದ್ರೆಯ ಜೊತೆಯಲ್ಲಿ ರುಗ್ಮಿಣಿಯ ಮನೆಯಲ್ಲಿ ವಾಸಮಾಡು.
ವೈಶಂಪಾಯನಃ
ಏವಮುಕತ್ವ ಪ್ರಚಕ್ರಾಮ ಅಂತರ್ದ್ವೀಪಂ ಜನಾರ್ದನಃ |
ಕೃತೋದ್ವಾಹಸ್ತದಾ ಪಾರ್ಥಃ ಕೃತಕಾರ್ಯೋಽಭವತ್ ತದಾ |
ತಸ್ಯಾಂ ಚೋತ್ಪತಿತೋ ಭಾವಃ ಪಾರ್ಥಸ್ಯ ಸಹಸಾಽಽಗತಃ ॥44॥
ಕೃಷ್ಣನು ಹೀಗೆ ಹೇಳಿ ಅಂತರ್ದ್ವೀಪಕ್ಕೆ ಹೋದನು. ವಿವಾಹವನ್ನು ಮಾಡಿಕೊಂಡ ಅರ್ಜುನನು ಆಗ ಕೃತಕೃತ್ಯನಾದನು. ಅವನಿಗೆ ಇದ್ದಂತೆಯೇ ಅವಳಲ್ಲಿ ಕಾಮವು ಅಧಿಕವಾಯಿತು.
ಸ ತಯಾ ಯುಯುಜೇ ವೀರೋ ಭದ್ರಯಾ ಭರತರ್ಷಭಃ |
ಅಭಿನಿಷ್ಪನ್ನಯಾ ರಾಮಃ ಸೀತಯೇವ ಸಮನ್ವಿತಃ |
ಸ ಹಿ ಜಿಷ್ಣುರ್ವಿಜಜ್ಞೇ ತಾಂ ಹ್ರೀಂ ಶ್ರಿಯಂ ಸನ್ನತಿಂ ಕ್ರಿಯಾಮ್ ॥45॥
ಭರತರ್ಷಭನಾದ ಅರ್ಜುನನು ಸೀತೆಯ ಜೊತೆಯಲ್ಲಿ ರಾಮನು ಸಂಯೋಗವನ್ನು ಹೊಂದಿದಂತೆ ಹೊಸದಾಗಿ ದೊರೆತ ಅವಳ ಜೊತೆಯಲ್ಲಿ ಸಂಯೋಗವನ್ನು ಹೊಂದಿದನು. ಅರ್ಜುನನು ಅವಳನ್ನು ಹ್ರೀ ಎಂದೂ, ಶ್ರೀ ಎಂದೂ, ಸನ್ನತಿ ಎಂದೂ, ಕ್ರಿಯಾ ಎಂದೂ ತಿಳಿದನು.
ದ್ವಾದಶಾನಾಂ ವರಸ್ತ್ರೀಣಾಂ ರೂಪೇಣಾಸದೃಶೀಂ ಸತೀಮ್ ॥46॥
ಅರ್ಜುನನು ಅಸದೃಶವಾದ ರೂಪವುಳ್ಳ ಅವಳನ್ನು ವಾಗೀಶ್ವರೀ, ಕ್ರಿಯಾ, ಕೀರ್ತಿ, ಲಕ್ಷ್ಮೀ, ಪುಷ್ಟಿ, ಸನ್ನತಿ, ಕಾಂತಿ, ಹ್ರೀ, ಶ್ರೀ, ಶುಚಿ, ಜ್ಯೇಷ್ಠಾ, ಪ್ರತಿ ಈ ದ್ವಾದಶಸ್ತ್ರೀಯರಲ್ಲಿ ಸುಭದ್ರೆಯನ್ನು ಶ್ರೀದೇವಿಯೆಂದೂ, ಸನ್ನತಿಯೆಂದೂ, ಕ್ರಿಯೆಯೆಂದೂ ತಿಳಿದನು. ಅಸಾಧಾರಣ ರೂಪವನ್ನು ಹೊಂದಿದವಳು ಎಂದೂ ತಿಳಿದನು.
ಸ ಪ್ರಕೃತ್ಯಾ ಶ್ರಿಯಾ ದೀಪ್ತಃ ಸಂದಿದೀಪೇ ತಯಾಽಧಿಕಮ್ |
ಉದ್ಯತ್ಸಹಸ್ರದೀಪ್ತಾಂಶುಃ ಶರದೀವ ದಿವಾಕರಃ |
ಸಾ ತು ತಂ ಮನುಜವ್ಯಾಘ್ರಮನುರಕ್ತಾ ಮನಸ್ವಿನೀ |
ಕನ್ಯಾ ಪುರಗತಾ ಭೂತ್ವಾ ತತ್ಪ್ರಸಾದಮಪದ್ಯತ ॥47॥
ಸಹಜವಾಗಿ ಬೆಳಗುತ್ತಿದ್ದ ಅವನು ಅವಳ ಜೊತೆಯಲ್ಲಿ ಸೇರಿ ಶರತ್ಕಾಲದಲ್ಲಿ ಸೂರ್ಯನು ಸಹಸ್ರಕಿರಣಗಳಿಂದ ಬೆಳಗುವಂತೆ ಬೆಳಗಿದನು. ಮನಸ್ವಿನಿಯಾದ ಸುಭದ್ರೆಯು ಮನುಜವ್ಯಾಘ್ರನಾದ ಅವನಲ್ಲಿ ಅನುರಾಗವನ್ನು ಹೊಂದಿ ದ್ವಾರಕಾಪಟ್ಟಣದಲ್ಲಿ ಇದ್ದು ಅವನ ಅನುಗ್ರಹವನ್ನು ಪಡೆದಳು.
ವೈಶಂಪಾಯನಃ
ವೃಷ್ಣ್ಯಂಧಕಪುರಾತ್ ತತ್ರ ಅಪಯಾಂತು ಧನಂಜಯಃ |
ವಿನಿಶ್ಚಿತ್ಯ ತದಾ ಪಾರ್ಥಃ ಸುಭದ್ರಾಮಿದಮಬ್ರವೀತ್ |
ದ್ವಿಜಾನಾಂ ಗಣಮುಖ್ಯಾನಾಂ ಯಥಾರ್ಹಂ ಪ್ರತಿಪಾದಯ ॥48॥
ಅರ್ಜುನನು ವೃಷ್ಣ್ಯಂಧಕ ಪುರವಾದ ದ್ವಾರಕೆಯಿಂದ ಹೊರಡಲು ನಿಶ್ಚಯಿಸಿ ಸುಭದ್ರೆಯನ್ನು ಕುರಿತು ಹೀಗೆ ಹೇಳಿದನು. ಬ್ರಾಹ್ಮಣರಿಗೆ ಮತ್ತು ನಿನ್ನ ಅನುಚರ ಸಮೂಹಕ್ಕೂ ಯೋಗ್ಯವಾದ ದಕ್ಷಿಣೆಯನ್ನು ಕೊಡು.
ಭೋಜ್ಯೈರ್ಭಕ್ಷ್ಯೈಶ್ಚ ಪೇಯೈಶ್ಚ ಪ್ರಯಚ್ಛ ಪ್ರತಿಯಾಸ್ಯತಾಮ್ |
ಆತ್ಮನಶ್ಚ ಸಮುದ್ದಿಶ್ಯ ಮಹಾವ್ರತಸಮಾಪನಮ್ ॥49॥
ನಿನ್ನನ್ನು ಬಿಟ್ಟು ಹೋಗುವವರಿಗೆ ನಿನ್ನ ಮಹಾವ್ರತದ ಸಮಾಪ್ತಿ ಎಂದು ಹೇಳಿ ಇಷ್ಟವಾದ ಭಕ್ಷ್ಯಭೋಜ್ಯಗಳನ್ನೂ, ಪೇಯಗಳನ್ನೂ ಕೊಡು.
ಗಚ್ಛ ಭದ್ರೇ ಸ್ವಯಂ ತೂರ್ಣಂ ಮಹಾರಾಜನಿವೇಶನಮ್ ॥50॥
ತೇಜೋಬಲಜವೋಪೇತೈಃ ಶ್ಲಕ್ಷ್ಣೈರ್ಹಯವರೋತ್ತಮೈಃ |
ಶೈಬ್ಯಸುಗ್ರೀವಸಂಯುಕ್ತಂ ರಥಂ ತೂರ್ಣಮಿಹಾನಯ ॥51॥

ಸುಭದ್ರೇ, ಬೇಗ ಮಹಾರಾಜನ ಅರಮನೆಗೆ ಹೋಗಿ ಶೀಘ್ರಗಾಮಿಗಳಾದ ತೇಜಸ್ಸು ಮತ್ತು ಬಲ ಮತ್ತು ಕೌಶಲದಿಂದ ಕೂಡಿದ ಶೈಬ್ಯ(ಸೈನ್ಯ) ಸುಗ್ರೀವಾದಿ ಕುದುರೆಗಳನ್ನು ಹೂಡಿದ ರಥವನ್ನು ಬೇಗ ಇಲ್ಲಿಗೆ ತೆಗೆದುಕೊಂಡು ಬಾ.

ವ್ರತಾರ್ಥಮಿವ ಭಾಷಿತ್ವಾ ಸಖೀಭಿಃ ಸುಭಗೇ ಸಹ |
ಕ್ಷಿಪ್ರಮಾದಾಯ ಪರ್ಯೇಹಿ ಸಹ ಸರ್ವಾಯುಧಾನಿ ಚ ॥52॥

ಸುಂದರಿಯೇ, ವ್ರತದ ಅಂಗವಾಗಿ ದೇವತಾದರ್ಶನವನ್ನು ಮಾಡಲು ತೆಗೆದುಕೊಂಡು ಹೋಗುತ್ತಿದ್ದೇನೆ ಎಂದು ಹೇಳಿ ಸಖಿಯರ ಜೊತೆಯಲ್ಲಿ ಸರ್ವಾಯುಧಗಳಿಂದ ಕೂಡಿದ ರಥವನ್ನು ತೆಗೆದುಕೊಂಡು ಬೇಗ ಹಿಂದಿರುಗು.

ಅನುಕರ್ಷಪತಾಕಾಶ್ಚ ತೂಣೀರಾಂಶ್ಚ ಧನೂಂಷಿ ಚ |
ಸರ್ವಾನ್ ರಥವರೇ ಕುರ್ಯಾಃ ಸೋತ್ಸೇಧಾಶ್ಚ ಮಹಾಗದಾಃ ॥53॥

ಪತಾಕೆಗಳನ್ನು ಎಳೆಯುವ ಹಗ್ಗಗಳನ್ನೂ, ಬತ್ತಳಿಕೆಗಳನ್ನೂ, ಧನುಸ್ಸುಗಳನ್ನೂ, ಮಹಾಗದೆಗಳನ್ನೂ, ಅವುಗಳನ್ನು ಎತ್ತುವ ಸಾಧನಗಳನ್ನೂ ಎಲ್ಲವನ್ನೂ ರಥದಲ್ಲಿ ತುಂಬಿಸು.

ವೈಶಂಪಾಯನಃ

ಅರ್ಜುನೇನೈವಮುಕ್ತಾ ಸಾ ಸುಭದ್ರಾ ಭದ್ರಭಾಷಿಣೀ |
ಜಗಾಮ ನೃಪತೇರ್ವೇಶ್ಮ ಸಖೀಭಿಸ್ತ್ವರಿತಾ ಸಹ ॥54॥

ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಮಂಜುಳಭಾಷಿಣಿಯಾದ ಸುಭದ್ರೆಯು ತನ್ನ ಸಖಿಯರ ಜೊತೆಯಲ್ಲಿ ಶೀಘ್ರವಾಗಿ ರಾಜಭವನಕ್ಕೆ ಹೋದಳು.

ಕ್ರೀಡಾರ್ಥಮಿತಿ ತತ್ರಸ್ಥಾನ್ ರಕ್ಷಿಣೋ ವಾಕ್ಯಮಬ್ರವೀತ್ |
ರಥೇನಾನೇನ ಯಾಸ್ಯಾಮಿ ಮಹಾವ್ರತಸಮಾಪನಮ್ |
ಶೈಬ್ಯಸುಗ್ರೀವಯುಕ್ತೇನ ಸಾಯುಧೇನ ಚ ಶಾರ್ಂಗಿಣಃ ॥55॥

ಅಲ್ಲಿದ್ದ ರಕ್ಷಕರಿಗೆ ನನ್ನ ಮಹಾವ್ರತದ ಸಮಾಪ್ತಿಯ ಸಂದರ್ಭದಲ್ಲಿ ಕ್ರೀಡಾರ್ಥವಾಗಿ ಶೈಬ್ಯ ಸುಗ್ರೀವಾದಿ ಅಶ್ವಗಳಿಂದ ಕೂಡಿದ ಮತ್ತು ಆಯುಧಗಳಿಂದ ಕೂಡಿದ ಕೃಷ್ಣನ ರಥವನ್ನು ಎಳೆದುಕೊಂಡು ಹೋಗುತ್ತಿರುವೆನು ಎಂದು ಹೇಳಿದಳು.

ಸುಭದ್ರಯೈವಮುಕ್ತೇ ತು ಜನಾಃ ಪ್ರಾಂಜಲಯೋಽಭವನ್ |
ರಥೇನಾನೇನ ಭದ್ರೇ ತ್ವಂ ಯಥೇಷ್ಟಂ ಕ್ರಿಯತಾಮಿತಿ ॥56॥

ಸುಭದ್ರೆಯು ಹೀಗೆ ಹೇಳುತ್ತಿರಲು ಪರಿಜನರು ಕೈಗಳನ್ನು ಜೋಡಿಸಿ ಸುಭದ್ರೇ, ಈ ರಥವನ್ನು ತೆಗೆದುಕೊಂಡು ನಿನಗೆ ಬೇಕಾದಂತೆ ಮಾಡು ಎಂದು ಹೇಳಿದರು.

ಯೋಜಯಿತ್ವಾ ರಥವರಂ ಕಲ್ಯಾಣೈರಭಿಭಾಷ್ಯ ತಾನ್ |
ಯಥೋಕ್ತಂ ಸರ್ವಮಾರೋಪ್ಯ ಆಯುಧಾನಿ ಚ ಭಾಮಿನೀ|
ಕ್ಷಿಪ್ರಮಾದಾಯ ಕಲ್ಯಾಣೀ ಸುಭದ್ರಾಽರ್ಜುನಮಬ್ರವೀತ್ ॥57॥

ಕಲ್ಯಾಣಿಯಾದ ಸುಭದ್ರೆಯು ಕುದುರೆಗಳನ್ನು ರಥಕ್ಕೆ ಹೂಡಿ ಪರಿಜನರಿಗೆ ಮಧುರವಾದ ಮಾತುಗಳನ್ನು ಆಡಿ, ಹೇಳಿದ ಎಲ್ಲಾ ವಸ್ತುಗಳನ್ನು ರಥದಲ್ಲಿ ತುಂಬಿಸಿ ಬೇಗ ರಥವನ್ನು ಅರ್ಜುನನ ಬಳಿಗೆ ತೆಗೆದುಕೊಂಡು ಬಂದು ಹೀಗೆ ಹೇಳಿದಳು.

ರಥೋಽಯಂ ರಥಿನಾಂ ಶ್ರೇಷ್ಠ ಆನೀತಸ್ತವ ಶಾಸನಾತ್ |
ಸ್ವಸ್ತಿ ಯಾಹಿ ಯಥಾಕಾಮಂ ಕುರೂನ್ ಕೌರವನಂದನ ॥58॥

ರಥಿಶ್ರೇಷ್ಠನೇ, ನಿನ್ನ ಅಪ್ಪಣೆಯಂತೆ ರಥವನ್ನು ತಂದಿದ್ದೇನೆ. ಕೌರವನಂದನನೇ, ನಿನ್ನ ಇಚ್ಛೆಯಂತೆ ಯಾವ ಅನಿಷ್ಟವೂ ಇಲ್ಲದಂತೆ ಕುರುಜಾಂಗಲಕ್ಕೆ ಪ್ರಯಾಣ ಮಾಡು.

ವೈಶಂಪಾಯನಃ

ನಿವೇದ್ಯ ತು ರಥಂ ಭರ್ತುಃ ಸುಭದ್ರಾ ಭದ್ರಸಮ್ಮತಾ |
ಬ್ರಾಹ್ಮಣಾನಾಂ ದದೌ ಹೃಷ್ಟಾ ತದಾ ಸಾ ವಿವಿಧಂ ವಸು ॥59॥

ಮಂಗಳ ಸ್ವರೂಪಳಾದ ಸುಭದ್ರೆಯು ತನ್ನ ಪತಿಗೆ ಈ ರೀತಿ ನಿವೇದಿಸಿ ಬ್ರಾಹ್ಮಣರಿಗೆ ಸಂತೋಷದಿಂದ ವಿಧವಿಧವಾದ ದಾನಗಳನ್ನು ಕೊಟ್ಟಳು.

ಸ್ನೇಹವಂತಿ ಚ ಭೋಜ್ಯಾನಿ ಪ್ರದದಾವೀಪ್ಸಿತಾನಿ ಚ |
ಯಥಾಕಾಮಂ ಯಥಾಶ್ರದ್ಧಂ ವಸಾತ್ರಣಿ ವಿವಿಧಾನಿ ಚ ॥60॥

ಅವರಿಗೆ ಇಷ್ಟವಾದ ದೃತಪಕ್ವವಾದ ಭೋಜ್ಯಗಳನ್ನು ವಿಧವಿಧವಾದ ವಸ್ತ್ರಗಳನ್ನೂ ತನ್ನ ಶ್ರದ್ಧೆಗೆ ಮತ್ತು ಅವರ ಆಸೆಗೆ ಅನುಗುಣವಾಗಿ ದಾನ ಮಾಡಿದಳು.

ತರ್ಪಿತಾ ವಿವಿಧೈರ್ಭಕ್ಷ್ಯೈಸ್ತಾನ್ಯವಾಪ್ಯ ವಸೂನಿ ಚ |
ಬ್ರಾಹ್ಮಣಾಃ ಸ್ವಗೃಹಂ ಜಗ್ಮುಃ ಪ್ರಯುಜ್ಯ ಪರಮಾಶಿಷಃ ॥61॥

ವಿಧವಿಧವಾದ ಭಕ್ಷ್ಯಗಳಿಂದಲೂ, ವಿಧವಿಧವಾದ ದಾನದಿಂದಲೂ, ತೃಪ್ತಿಗೊಂಡ ಬ್ರಾಹ್ಮಣರು ಶ್ರೇಷ್ಠವಾದ ಆಶೀರ್ವಾದಗಳನ್ನು ಮಾಡಿ ತಮ್ಮ ಮನೆಗಳಿಗೆ ಹೋದರು.

ಸುಭದ್ರಯಾ ತು ವಿಜ್ಞಪ್ತಃ ಪೂರ್ವಮೇವ ಧನಂಜಯಃ |
ಅಭೀಶುಗ್ರಹಣೇ ಪಾರ್ಥ ನ ಮೇಽಸ್ತಿ ಸದೃಶೋ ಭುವಿ ॥62॥

ಸುಭದ್ರೆಯು ಮೊದಲೇ ಅರ್ಜುನನಿಗೆ ಅರ್ಜುನ, ನನ್ನಂತೆ ರಥಾಶ್ವಗಳ ಕಡಿವಾಣಗಳನ್ನು ಹಿಡಿಯುವವರು ಭೂಮಿಯಲ್ಲಿ ಯಾರೂ ಇಲ್ಲ ಎಂದು ಹೇಳಿದ್ದಳು.

ತಸ್ಮಾತ್ ಸಾ ಪೂರ್ವಮಾರುಹ್ಯ ರಶ್ಮೀನ್ ಜಗ್ರಾಹ ಮಾದವೀ |
ಸೋದರಾ ವಾಸುದೇವಸ್ಯ ಕೃತಸ್ವಸ್ತ್ಯಯನಾ ಹಯಾನ್ ॥63॥
ಆದ್ದರಿಂದ ಕೃಷ್ಣನ ತಂಗಿಯಾದ ಅವಳು ಸ್ವಸ್ತಿವಾಚನವನ್ನು ಮಾಡಿಸಿ ಮೊದಲೇ ರಥವನ್ನೇರಿ ಕುದುರೆಗಳ ಕಡಿವಾಣವನ್ನು ಕೈಯಲ್ಲಿ ಹಿಡಿದಳು.
ವ್ಯತ್ಯಯಿತ್ವಾ ತು ತಲ್ಲಿಂಗಂ ಸಮುಚ್ಛ್ರಿತಮಹಾಧನುಃ |
ಆರುರೋಹ ರಥಶ್ರೇಷ್ಠಂ ಶುಕ್ಲವಾಸಾ ಧನಂಜಯಃ॥64॥
ಧನಂಜಯನು ತನ್ನ ಯತಿವೇಷವನ್ನು ತೊರೆದು ದೊಡ್ಡ ಧನುಸ್ಸನ್ನು ಹಿಡಿದು ಬಿಳಿಯ ವಸ್ತ್ರಗಳನ್ನು ಉಟ್ಟು ಶ್ರೇಷ್ಠವಾದ ರಥವನ್ನು ಏರಿದನು.
ಮಹೇಂದ್ರದತ್ತಂ ಮಕುಟಂ ತಥಾ ಹ್ಯಾಭರಣಾನಿ ಚ |
ಅಲಂಕೃತ್ಯ ತು ಕೌಂತೇಯಃ ಪ್ರಯಾತುಮುಪಚಕ್ರಮೇ ॥65॥
ಕುಂತೀಪುತ್ರನಾದ ಅರ್ಜುನನು ಇಂದ್ರನು ಕೊಟ್ಟ ಕಿರೀಟವನ್ನು ಮತ್ತು ಆಭರಣಗಳನ್ನು ಧರಿಸಿ ಅಲಂಕಾರ ಮಾಡಿಕೊಂಡು ಹೊರಡಲು ಅನುವಾದನು.
ತತಃ ಕನ್ಯಾಪುರೇ ಘೋಷಸ್ತುಮುಲಃ ಸಮಪದ್ಯತ |
ದೃಷ್ಟ್ವಾ ರಥಗತಂ ಪಾರ್ಥಂ ಖಡ್ಗಬಾಣಧನುರ್ಧರಮ್ ॥66॥
ಆಗ ರಥದಲ್ಲಿ ಖಡ್ಗ ಬಾಣ ಧನುಸ್ಸುಗಳನ್ನು ಹಿಡಿದ ಅರ್ಜುನನನ್ನು ನೋಡಿ ಕನ್ಯಾಪುರದಲ್ಲಿ ತುಮುಲನಾದ ಉಂಟಾಯಿತು.
ಅಭೀಷುಹಸ್ತಾಂ ಸುಶ್ರೋಣೀಮರ್ಜುನೇನ ರಥೇ ಸ್ಥಿತಾಮ್ |
ಜಗುಃ ಕನ್ಯಾಪುರೇ ಕನ್ಯಾ ವಾಸುದೇವಸಹೋದರಾಮ್ ॥67॥
ಅರ್ಜುನನ ರಥದಲ್ಲಿ ಕೃಷ್ಣನ ಸಹೋದರಿಯಾದ, ಸುಂದರಿಯಾದ ಸುಭದ್ರೆಯು ಕಡಿವಾಣವನ್ನು ಹಿಡಿದು ಕುಳಿತಿರುವುದನ್ನು ನೋಡಿ ಗಾನ ಮಾಡಿದರು.
ಸರ್ವೇ ಕಾಮಾಃ ಸಮೃದ್ಧಾಸ್ತೇ ಸುಭದ್ರೇ ಭದ್ರಭಾಷಿಣಿ |
ವಾಸುದೇವಪ್ರಿಯಂ ಲಬ್ಧ್ವಾ ಭರ್ತಾರಂ ವೀರಮರ್ಜುನಮ್ ॥68॥
ಸರ್ವಸೀಮಂತಿನೀನಾಂ ತ್ವಂ ಶ್ರೇಷ್ಠಾ ಕೃಷ್ಣಸಹೋದರೇ |
ಯಸ್ಮಾತ್ ಸರ್ವಮನುಷ್ಯಾಣಾಂ ಶ್ರೇಷ್ಠೋ ಭರ್ತಾ ತವಾರ್ಜುನಃ ॥
ಮಂಗಳಭಾಷಿಣಿಯಾದ ಸುಭದ್ರೆಯೇ, ಕೃಷ್ಣನಿಗೆ ಪ್ರಿಯನಾದ ವೀರನಾದ ಅರ್ಜುನನನ್ನು ಪತಿಯಾಗಿ ಪಡೆದು ನಿನ್ನ ಎಲ್ಲಾ ಕಾಮಗಳೂ ಪೂರ್ಣವಾಗಿವೆ. ಕೃಷ್ಣಸೋದರಿಯೇ, ನಿನ್ನ ಪತಿಯಾದ ಅರ್ಜುನನು ಎಲ್ಲಾ ಮನುಷ್ಯರಿಗಿಂತಲೂ ಶ್ರೇಷ್ಠನಾದ ಕಾರಣ ನೀನು ಎಲ್ಲಾ ಸುಮಂಗಲಿಯರಿಗಿಂತಲೂ ಶ್ರೇಷ್ಠಳಾದವಳು.
ಉಪಪನ್ನಸ್ತ್ವಯಾ ವೀರಃ ಸರ್ವಲೋಕಮಹಾರಥಃ |
ಸ್ವಸ್ತಿ ಯಾಹಿ ಗೃಹಂ ಭದ್ರೇ ಸುಹೃದ್ಭಿಃ ಸಂಗಮೋಽಸ್ತು ತೇ ॥70॥
ಸರ್ವಲೋಕಮಹಾರಥನಾದ, ವೀರನನ್ನು ಪತಿಯಾಗಿ ಪಡೆದಿದ್ದೀಯೆ. ನಿನಗೆ ಮಂಗಳವಾಗಲಿ, ಪತಿಗೃಹಕ್ಕೆ ಹೋಗಿ ಸುಹೃಜ್ಜನರಿಂದ ಸಮಾಗಮವನ್ನು ಪಡೆಯುವವಳಾಗು.
ವೈಶಂಪಾಯನಃ
ಏವಮುಕ್ತಾ ಪ್ರಹೃಷ್ಟಾಭಿಃ ಸಖೀಭಿಃ ಪ್ರತಿನಂದಿತಾ |
ಭದ್ರಾ ಭದ್ರಜವೋಪೇತಾನಶ್ವಾನ್ ಪುನರಚೋದಯತ್ |
ಪಾರ್ಶ್ವೇ ವಾಮೇ ಪುರಸ್ತಾಚ್ಚ ಸಖಾ ತಸ್ಯಾಗ್ರಣೀರಿವ ॥71॥
ಸಂತೋಷ ಹೊಂದಿದ ಸಖಿಯರಿಂದ ಹೀಗೆ ಅಭಿನಂದಿಸಲ್ಪಟ್ಟ ಸುಭದ್ರೆಯು ಪಾರ್ಥಸಾರಥಿಯಾದ ಕೃಷ್ಣನಂತೆ ಎಡಭಾಗದಲ್ಲಿ, ಬಲಭಾಗದಲ್ಲಿ ಮತ್ತು ಮುಂಭಾಗದಲ್ಲಿರುವ ವೇಗಶಾಲಿಗಳಾದ ಅಶ್ವಗಳನ್ನು ಪ್ರೇರಿಸಿ ಓಡಿಸಿದಳು.
ಅಥ ಕನ್ಯಾಪುರದ್ವಾರಾತ್ ಸಘೋಷಮಭಿನಿಃಸೃತಮ್ |
ದದೃಶುಸ್ತಂ ರಥಶ್ರೇಷ್ಠಂ ಜನಾ ಜೀಮೂತನಿಸ್ವನಮ್ ॥72॥
ಅನಂತರ ಕನ್ಯಾಪುರದ ದ್ವಾರದಿಂದ ಮೇಘಘೋಷದಂತೆ ನಾದವನ್ನು ಮಾಡುತ್ತಾ ಹೊರಗೆ ಹೊರಟ ಆ ಶ್ರೇಷ್ಠವಾದ ರಥವನ್ನು ಜನರು ನೋಡಿದರು.
ಸುಭದ್ರಾಸಂಗೃಹೀತಸ್ಯ ರಥಸ್ಯ ಮಹತೋ ರವಮ್ |
ಮೇಘಸ್ವನಮಿವಾಕಾಶೇ ಶುಶ್ರುವುಃ ಪುರವಾಸಿನಃ ॥73॥
ಪುರವಾಸಿಗಳೂ ಸಹ ಸುಭದ್ರೆಯ ಸಾರಥ್ಯದಿಂದ ಕೂಡಿದ ಮೇಘನಾದದಂತೆ ಗಂಭೀರವಾದ ಆ ರಥದ ಮಹಾಘೋಷವನ್ನು ಆಕಾಶದಲ್ಲಿ ಕೇಳಿದರು.
ಸುಭದ್ರಯಾ ಚ ಸಂಪನ್ನೇ ತಿಷ್ಠನ್ ರಥವರೇಽರ್ಜುನಃ |
ಪ್ರಬಭೌ ಪರಯೋಪೇತಃ ಕೈಲಾಸ ಇವ ಗಂಗಯಾ ॥74॥
ಸುಭದ್ರೆಯಿಂದ ಕೂಡಿದ ಆ ಶ್ರೇಷ್ಠರಥದಲ್ಲಿ ಕುಳಿತ ಅರ್ಜುನನು ಗಂಗೆಯ ಜೊತೆಯಲ್ಲಿ ಕೂಡಿದ ಕೈಲಾಸ ಪರ್ವತದಂತೆ ಅತ್ಯಂತವಾಗಿ ಶೋಭಿಸಿದನು.
ಪಾರ್ಥಃ ಸುಭದ್ರಾಸಹಿತೋ ವಿರರಾಜ ಮಹಾರಥಃ |
ಪಾರ್ಥಸ್ಯೈವ ಪಿತಾ ಶಕ್ರೋ ಯಥಾ ಶಚ್ಯಾ ಸಮನ್ವಿತಃ ॥75|

ಮಹಾರಥನಾದ ಪಾರ್ಥನು ಸುಭದ್ರೆಯನ್ನು ಕೂಡಿ ತಂದೆಯಾದ ಇಂದ್ರನು ಶಚಿಯಿಂದ ಕೂಡಿ ಶೋಭಿಸುವಂತೆ ಶೋಭಿಸಿದನು.
ಸುಭದ್ರಾಂ ಪ್ರೇಕ್ಷ್ಯ ಧರ್ಮೇಣ ಹ್ರಿಯಮಾಣಾಂ ಯಶಸ್ವಿನೀಮ್ |
ಚಕ್ರುಃ ಕಿಲಕಿಲಾಶಬ್ದಮಾಸಾದ್ಯ ಬಹವೋ ಜನಾಃ ॥76॥
ಯಶಸ್ವಿನಿಯಾದ ಸುಭದ್ರೆಯು ಧರ್ಮದಿಂದ ವರಿಸಲ್ಪಡುತ್ತಿರುವವನನ್ನು ನೋಡಿದ ಬಹಳ ಜನರು ಸಂತೋಷದ ಶಬ್ದಗಳನ್ನು ಮಾಡಿದರು.
ದಾಶಾರ್ಹಾಣಾಂ ಕುಲಸ್ಯ ಶ್ರೀಃ ಸುಭದ್ರಾ ಭದ್ರಭಾಷಿಣೀ |
ಅಭಿಕಾಮಾ ಸಕಾಮೇನ ಪಾರ್ಥೇನ ಸಹ ಗಚ್ಛತಿ ॥77॥
ದಾಶಾರ್ಹಕುಲದ ಲಕ್ಷ್ಮಿಯಾದ, ಭದ್ರಭಾಷಿಣಿಯಾದ ಸುಭದ್ರೆಯು ಅರ್ಜುನನಲ್ಲಿ ಅನುರಕ್ತಳಾಗಿ ತನ್ನಲ್ಲಿ ಅನುರಕ್ತನಾದ ಅರ್ಜುನನೊಂದಿಗೆ ಹೋಗುತ್ತಿದ್ದಾಳೆ (ಎಂದು ಮಾತನಾಡಿದರು)
ಅಥಾಪರೇ ತು ಸಂಕ್ರುದ್ಧಾ ಗೃಹ್ಣೀತ ಘ್ನತ ಮಾಚಿರಮ್ |
ಇತಿ ಸಂಭಾಷಮಾಣಾನಾಂ ಸನ್ನಾದಃ ಸಮಹಾನಭೂತ್ ॥78॥
ಇನ್ನು ಕೆಲವರು ಕ್ರೋಧವನ್ನು ತಾಳಿ ಅವನನ್ನು ಹಿಡಿಯಿರಿ, ಬೇಗ ವಧೆಮಾಡಿ ಎಂದು ಮಾತನಾಡಿದರು. ಹೀಗೆ ಮಾತನಾಡುವರ ಮಾತುಗಳಿಂದ ದೊಡ್ಡ ಶಬ್ದವುಂಟಾಯಿತು.
ಸ ತೇನ ಜನಘೋಷೇಣ ವೀರೋ ರಾಜ ಇವಾರ್ದಿತಃ |
ವವರ್ಷ ಶರವರ್ಷಾಣಿ ನ ತು ಕಂಚನ ರೋಷಯತ್ ॥79॥
ಈ ಜನಗಳ ಘೋಷದಿಂದ ಅರ್ಜಿತನಾದ ವೀರನಾದ ಗಜದಂತಿದ್ದ ಅರ್ಜುನನು ಜನರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಆದರೆ ಯಾರನ್ನೂ ಗಾಯಗೊಳಿಸಲಿಲ್ಲ ಅಥವಾ ವಧೆ ಮಾಡಲಿಲ್ಲ. ಆದ್ದರಿಂದ ಯಾರಿಗೂ ರೋಷವನ್ನು ಉಂಟುಮಾಡಲಿಲ್ಲ.
ಮುಮೋಚ ನಿಶಿತಾನ್ ಬಾಣಾನ್ ದೀಪ್ಯಮಾನಾನ್ ಸ್ವತೇಜಸಾ |
ಪ್ರಾಸಾದವರಸೇಂಷು ಹರ್ಮ್ಯೇಷು ಭವನೇಷು ಚ ॥80॥
ಕ್ಷೋಭಯಿತ್ವಾ ಪುರಶ್ರೇಷ್ಠಂ ಗರುತ್ಮಾನಿವ ಸಾಗರಮ್ |
ಪ್ರೇಕ್ಷನ್ ರೈವತಕದ್ವಾರಂ ನಿರ್ಯಯೌ ಭರತರ್ಷಭಃ ॥81॥
ತನ್ನ ಹೊಳೆಯುತ್ತಿದ್ದ ಹರಿತವಾದ ಬಾಣಗಳನ್ನು ಮನೆಗಳ ಉಪ್ಪರಿಗೆಗಳ ಮೇಲೆಯೂ, ಅನೇಕ ಅಂತಸ್ತುಗಳ ಮನೆಗಳ ಮೇಲೆಯೂ, ಉಳಿದ ಮನೆಗಳ ಮೇಲೆಯೂ ಪ್ರಯೋಗ ಮಾಡುತ್ತಿದ್ದನು. ಗರುಡನು ಸಾಗರವನ್ನು ಅಲ್ಲೋಲ ಕಲ್ಲೋಲ ಮಾಡಿದಂತೆ ದ್ವಾರಕಾಪಟ್ಟಣವನ್ನು ಅಲ್ಲೋಲಕಲ್ಲೋಲ ಮಾಡಿ ಭರತಶ್ರೇಷ್ಠನಾದ ಅರ್ಜುನನು ರೈವತಕ ಪರ್ವತದ ದ್ವಾರವನ್ನು ನೋಡುತ್ತಾ ಅಲ್ಲಿಂದ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ತ್ರಯೋವಿಂಶತ್ಯಕದ್ವಿಶತತಮೋಽಧ್ಯಾಯಃ ॥
॥ ಇತಿ ಸುಭದ್ರಾಹರಣಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸ ಶಿಕ್ಷಯಾ ತ್ವದ್ಭುತಯಾ ಶರೌಘೈ
ರ್ವಿದ್ರಾಪ್ಯ ತಾನ್ ಭೀಷಯಿತ್ವೈವ ಸರ್ವಾನ್ |
ನಿರ್ಗತ್ಯ ಪುರ್ಯಾ ವಿಪೃಥುಂ ದದರ್ಶ
ರಾಮೇಣ ಪುರ್ಯಾ ರಕ್ಷಣೇ ಸನ್ನಿಯುಕ್ತಂ ॥192॥
ಅತ್ಯದ್ಭುತವಾದ ಅಭ್ಯಾಸದಿಂದ ಬಾಣಸಮೂಹಗಳ ಮೂಲಕ ಯಾದವ ಸೈನಿಕರೆಲ್ಲರನ್ನೂ ಅಂಜಿಸಿಯೆ ಓಡಿಸಿದ ಅರ್ಜುನ. ನಗರದಿಂದ ಹೊರಗೆ ಬರುತ್ತ ಅಲ್ಲಿ ನಗರ ರಕ್ಷಣೆಗಾಗಿ ಬಲರಾಮನಿಂದ ನೇಮಿಸಲ್ಪಟ್ಟಿದ್ದ ವಿಪೃಥುವನ್ನು ಕಂಡ.
ಪ್ರಿಯಂ ಕುರ್ವನ್ನಿವ ರಾಮಸ್ಯ ಸೋಽಪಿ
ವ್ಯಾಜೇನ ಪಾರ್ಥಂ ಸೇನಯೈವಾವೃಣೋತ್ತಂ |
ಕೃಷ್ಣಾದೇಶಾನ್ನೈವ ಪಾರ್ಥಸ್ಯ ಚಕ್ರೇ
ಸಮ್ಯಗ್ರೋಧಂ ಯುಯುಧೇ ಚ ಚ್ಛಲೇನ ॥193॥
ವಿಪೃಥು ಬಲರಾಮನಿಗೆ ಪ್ರಿಯವಾದುದನ್ನೆ ಮಾಡುವಂತೆ ತೋರಿಕೊಂಡು ನೆಪಮಾತ್ರಕ್ಕೆ ಅರ್ಜುನನನ್ನು ಸೈನ್ಯದಿಂದ ಸುತ್ತುವರಿದ. ಕೃಷ್ಣನ ಆಜ್ಞೆ ಇದ್ದುದರಿಂದ ಅರ್ಜುನನಿಗೆ ಬಲವಾಗಿ ವಿರೋಧ ಮಾಡಲಿಲ್ಲ. ನೆಪಮಾತ್ರಕ್ಕೆ ಯುದ್ಧ ಮಾಡಿದ.
ಏಕೋಹ್ಯಸೌ ಮರುತಾಂ ಸೌಮ್ಯನಾಮಾ
ಶುಶ್ರೂಷಾರ್ಥಂ ವಾಸುದೇವಸ್ಯ ಜಾತಃ |
ತಂ ಯಾದವಂ ಶರವರ್ಷೈರ್ವವರ್ಷ
ಯಥಾ ಕ್ಷತಂ ನ ಭವೇತ್ ಸವ್ಯಸಾಚೀ ॥194॥
ವಿಪೃಥು ಮರುತ್ತುಗಳಲ್ಲಿ ಒಬ್ಬ. ಸೌಮ್ಯ ಎಂಬ ಹೆಸರಿನವನು. ಕೃಷ್ಣನ ಸೇವೆಗಾಗಿ ಅವತರಿಸಿದವನು. ಅರ್ಜುನ ಅವನಿಗೆ ಒಂದಿಷ್ಟೂ ಗಾಯವಾಗದಂತೆ ಅವನಮೇಲೆ ಬಾಣಗಳ ಮಳೆಗೆರೆದ.

ನಿರಾಯುಧಂ ವಿರಥಂ ಚೈವ ಚಕ್ರೇ
ಪಾರ್ಥಃ ಸೇನಾಂ ತಸ್ಯ ನೈವಾಹನಚ್ಚ |
ದೃಷ್ಟ್ವಾ ಶರಾಂಸ್ತಸ್ಯ ತೀಕ್ಷ್ಣಾಂಸ್ತ್ವಚೋಪಿ
ನಚ್ಛೇದಕಾನ್ ವಿಪೃಥುಃ ಸಂತುತೋಷ ॥195॥
ಅರ್ಜುನ ವಿಪೃಥುವನ್ನು ನಿರಾಯುಧನನ್ನಾಗಿಯೂ ವಿರಥನನ್ನಾಗಿಯೂ ಮಾಡಿದ. ಆದರೆ ಅವನ ಸೈನ್ಯವನ್ನು ನಾಶಮಾಡಲಿಲ್ಲ. ಅರ್ಜುನನ ತೀಕ್ಷ್ಣ ಬಾಣಗಳು ಚರ್ಮವನ್ನು ಕೂಡ ಗಾಯಗೊಳ್ಳಸದಿರುವುದನ್ನು ಕಂಡು ವಿಪೃಥು ಸಂತುಷ್ಟನಾದ.
ಶಿಕ್ಷಾಂ ಪಾರ್ಥಸ್ಯಾಧಿಕಂ ಮಾನಯಾನ
ಉಪೇತ್ಯ ಪಾರ್ಥಂ ಚ ಶಶಂಸ ಸರ್ವಂ |
ಆಜ್ಞಾಂ ವಿಷ್ಣೋಃ ಸನ್ನಿಯುಧ್ಯನ್ನಿವಾಸ್ಮೈ
ಕೃತ್ತಾಯುಧಃ ಫಲ್ಗುನೇನೈವ ಪೂರ್ವಂ ॥196॥
ವಿಪೃಥು ತನ್ನ ಆಯುಧಗಳೆಲ್ಲವೂ ತುಂಡಾದಾಗ ಅರ್ಜುನನೊಡನೆ ಮುಷ್ಟಿ ಯುದ್ಧಕ್ಕೆ ಹೊರಟವನಂತೆ ಅವನ ಬಳಿಗೆ ಬಂದ. ವಸ್ತುತಃ ಅರ್ಜುನನ ಉತ್ತಮವಾದ ಶಸತ್ರಭ್ಯಾಸ ಕೌಶಲ್ಯವನ್ನು ಅಭಿನಂದಿಸುವುದಕ್ಕಾಗಿ ಬಂದಿದ್ದ. ಹಾಗೆ ಬಂದು ಕೃಷ್ಣನ ಎಲ್ಲ ಆಜ್ಞೆಯನ್ನೂ ತಿಳಿಸಿದ.
ತತಃ ಪರಾಜಿತವಚ್ಛೀಘ್ರಮೇತ್ಯ
ಶಶಂಸ ಸರ್ವಂ ಹಲಿನೇಽಥ ಸೋಽಪಿ |
ಪ್ರದ್ಯುಮ್ನಸಾಂಬಾದಿಯುತೋಽಥ ಕೋಪಾ-
ದಾಯಾತ್ ಪುರೀಂ ಹಂತುಕಾಮೋರ್ಜುನಂ ಚ ॥197॥
ಬಳಿಕ ವಿಪೃಥು ಪರಾಜಿತನಂತೆ ಬೇಗನೆ ಪಿಂಡೋದ್ದಾರಕ್ಕೆ ಬಂದು ಬಲರಾಮನಿಗೆ ಎಲ್ಲವನ್ನೂ ಹೇಳಿದ. ಬಲರಾಮ ಕೋಪದಿಂದ ಅರ್ಜುನನನ್ನು ಕೊಲ್ಲಲು ಬಯಸಿ ಪ್ರದ್ಯುಮ್ನ ಸಾಂಬ ಮುಂತಾದವರೊಂದಿಗೆ ದ್ವಾರಕೆಗೆ ಬಂದ.
* * * *
ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ
(ದ್ವಾರಕೆಯಿಂದ ಸುಭದ್ರೆಯ ಜೊತೆಯಲ್ಲಿ ಅರ್ಜುನನ ನಿರ್ಗಮನ, ಮಧ್ಯಮಾರ್ಗದಲ್ಲಿ ವಿಪೃಥುವಿನ ಪ್ರತಿರೋಧ ಮತ್ತು ಸಮ್ಮತಿ, ವೃಷ್ಣ್ಯಂಧಕರ ಸಭೆ, ಬಲರಾಮನ ಕೋಪ, ಕೃಷ್ಣನ ಮೌನ.)
ವೈಶಂಪಾಯನಃ
ಶಾಸನಾತ್ ಪುರುಷೇಂದ್ರಸ್ಯ ಬಲೇನ ಮಹತಾ ಬಲೀ |
ಗಿರೌ ರೈವತಕೇ ನಿತ್ಯಂ ಬಭೂವ ವಿಪೃಥುಶ್ರವಾಃ ॥1॥
ಪುರುಷೋತ್ತಮನಾದ ಕೃಷ್ಣನ ಆಜ್ಞೆಯಂತೆ ಬಲಿಷ್ಠನಾದ ವಿಪೃಥುವು ದೊಡ್ಡ ಸೈನ್ಯದೊಂದಿಗೆ ಯಾವಾಗಲೂ ರೈವತಕ ಪರ್ವತದಲ್ಲಿ ಇರುತ್ತಿದ್ದನು.
ಪ್ರವಾಸೇ ವಾಸುದೇವಸ್ಯ ತಸ್ಮಿನ್ ಹಲಧರೋಪಮಃ |
ಸಂಬಭೂವ ತದಾ ಗೋಪ್ತಾ ಪುರಸ್ಯ ಪುರವರ್ಧನಃ ॥2॥
ಪ್ರಾಪ್ಯ ಪಾಂಡವನಿರ್ಯಾಣಂ ನಿರ್ಯಯೌ ವಿಪೃಥುಶ್ರವಾಃ |
ನಿಶಮ್ಯ ಪುರನಿರ್ಘೋಷಂ ಸ್ವಮನೀಕಮಚೋದಯತ್ ॥3॥
ಕೃಷ್ಣನು ಪ್ರವಾಸಕ್ಕೆ ಹೋದಾಗ ಬಲರಾಮನಿಗೆ ಸದೃಶನಾಗಿ ಪುರವರ್ಧನನಾಗಿದ್ದ ಅವನು ಪಟ್ಟಣಕ್ಕೆ ರಕ್ಷಕನಾಗಿರುತ್ತಿದ್ದನು. ಅರ್ಜುನನ ನಿರ್ಗಮನವನ್ನೂ, ನಗರದ ಘೋಷವನ್ನೂ ಗಮನಿಸಿದ ವಿಪೃಥುವು ತನ್ನ ಸೈನ್ಯವನ್ನು ಪ್ರಚೋದಿಸಿದನು.
ಸೋಽಭಿಪತ್ಯ ತದಾಽಧ್ವಾನಂ ದದರ್ಶ ಪುರುಷರ್ಷಭಮ್ |
ನಿಃಸೃತಂ ದ್ವಾರಕಾದ್ವಾರಾದಂಶುಮಂತಮಿವಾಂಬುದಾತ್ ॥4॥
ಸವಿದ್ಯುತಮಿವಾಂಭೋದಂ ಪ್ರೇಕ್ಷ್ಯ ಬಾಣಧನುರ್ಧರಮ್ |
ಪಾರ್ಥಮಾಸಾದ್ಯ ಯೋಧಾನಾಂ ವಿಸ್ಮಯಃ ಸಮಪದ್ಯತ ॥5॥
ಅವನು ರೈವತಕ ಪರ್ವತದಿಂದ ಮಾರ್ಗಕ್ಕೆ ಬಂದು ಮೋಡದಿಂದ ಹೊರಬಂದ ಸೂರ್ಯನಂತೆ ಅರ್ಜುನನು ದ್ವಾರಕಾ ಪಟ್ಟಣದಿಂದ ಹೊರಬರುತ್ತಿರುವುದನ್ನು ನೋಡಿದನು. ಮಿಂಚಿನಿಂದ ಕೂಡಿದ ಮೋಡದಂತೆ ಇದ್ದ ಧನುರ್ಬಾಣಧರನಾದ ಅರ್ಜುನನನ್ನು ನೋಡಿ ಮತ್ತು ಸಮೀಪಿಸಿ ಸೈನಿಕರಿಗೆ ಆಶ್ಚರ್ಯವುಂಟಾಯಿತು.
ಉದೀರ್ಣರಥನಾಗಾಶ್ವಮನೀಕಮಭಿವೀಕ್ಷ್ಯ ತತ್ |
ಉವಾಚ ಪರಮಪ್ರೀತಾ ಸುಭದ್ರಾ ಭರತರ್ಷಭಮ್ ॥6॥
ಸುಭದ್ರೆಯು ಸಮೃದ್ಧವಾದ ರಥ, ಗಜ, ಅಶ್ವಪತಾಕೆಗಳಿಂದ ಕೂಡಿದ ವಿಪೃಥುವಿನ ಆ ಸೈನ್ಯವನ್ನು ನೋಡಿ ಪರಮಸಂತುಷ್ಟಳಾಗಿ ಭರತಶ್ರೇಷ್ಠನಾದ ಅರ್ಜುನನನ್ನು ಕುರಿತು ಹೇಳಿದಳು.
ಸಂಗೃಹೀತುಮಭಿಪ್ರಾಯೋ ದೀರ್ಘಕಾಲಕೃತೋ ಮಮ |
ಯುಧ್ಯಮಾನಸ್ಯ ಸಂಗ್ರಾಮೇ ರಥಂ ತವ ನರರ್ಷಭ ॥7॥
ಪುರುಷಶ್ರೇಷ್ಠನೇ, ನೀನು ಯುದ್ಧಮಾಡುವಾಗ ನಿನ್ನ ರಥದ ಕುದುರೆಗಳ ಕಡಿವಾಣವನ್ನು ಹಿಡಿಯಬೇಕೆಂದು ನನಗೆ ಬಹುಕಾಲದಿಂದಲೂ ಆಸೆಯಿದ್ದಿತು.
ಓಜಸ್ತೇಜೋದ್ಯುತಿಬಲೈರಜಿತಸ್ಯ ಮಹಾತ್ಮನಃ |

ಪಾರ್ಥಸ್ಯ ವೈ ಸಾರಥಿತ್ವೇ ಭವೇಥಾ ಇತ್ಯಶಿಕ್ಷಯತ್ ॥8॥
ಓಜಸ್ಸು, ತೇಜಸ್ಸು, ಕಾಂತಿ, ಮತ್ತು ಬಲಗಳಿಂದ ಕೂಡಿ ಎಂದೂ ಪರಾಜಯವನ್ನು ಹೊಂದದ ಮಹಾನುಭಾವನಾದ ಅರ್ಜುನನಿಗೆ ನೀನು ಸಾರಥಿಯಾಗಬೇಕು ಎಂದು ಕೃಷ್ಣನು ನನಗೆ ಸಾರಥ್ಯವನ್ನು ಕಲಿಸಿದ್ದನು.
ಏವಮುಕ್ತಃ ಪ್ರಿಯಃ ಪ್ರೀತಃ ಪ್ರತ್ಯುವಾಚ ನರರ್ಷಭಃ |
ಚೋದಯಾಶ್ವಾನಸಂಸಕ್ತಾನ್ ವಿಶಂತು ವಿಪೃಥೋರ್ಬಲಮ್ ॥9॥
ಈ ಮಾತುಗಳನ್ನು ಕೇಳಿದ ಪುರುಷಶ್ರೇಷ್ಠನಾದ ಅರ್ಜುನನು ಸಂತೋಷಗೊಂಡು ಕುದುರೆಗಳು ಪರಸೈನ್ಯದೊಡನೆ ಸಂಸಕ್ತವಾಗದಂತೆ ಅವುಗಳನ್ನು ನಡೆಸಿ ವಿಪೃಥುವಿನ ಸೈನ್ಯವನ್ನು ಪ್ರವೇಶಿಸು ಎಂದು ಹೇಳಿದನು.
ಬಹುಭಿರ್ಯುಧ್ಯಮಾನಸ್ಯ ತಾವಕಾನಜಿಘಾಂಸತಃ |
ಪಶ್ಯ ಬಾಹುಬಲಂ ಭದ್ರೇ ಶರಾನ್ ವಿಕ್ಷಿಪತೋ ಮಮ ॥10॥
ಭದ್ರೇ, ನಿನ್ನವರಾದ ಬಹುಸೈನಿಕರ ಜೊತೆಯಲ್ಲಿ ಯುದ್ಧಮಾಡಿ ಯಾರನ್ನೂ ಗಾಯಗೊಳಿಸದಂತೆ ಬಾಣಗಳನ್ನು ಪ್ರಯೋಗಿಸುವ ನನ್ನ ಕೌಶಲವನ್ನು ನೋಡು.
ವೈಶಂಪಾಯನಃ
ಏವಮುಕ್ತಾ ತದಾ ಭದ್ರಾ ಪಾರ್ಥೇನ ಭರತರ್ಷಭ |
ಚುಚೋದ ಚಾಶ್ವಾನ್ ವಿಸ್ರಬ್ಧಾ ತತಸ್ತೇ ವಿವಿಶುರ್ಬಲಮ್ ॥11॥
ಭರತರ್ಷಭನೇ, ಅರ್ಜುನನು ಹೀಗೆ ಹೇಳುತ್ತಿರಲು ಸುಭದ್ರೆಯು ವಿಶ್ವಾಸದಿಂದ ರಥದ ಕುದುರೆಗಳನ್ನು ಪ್ರಚೋದಿಸಿದಳು. ಅವು ವಿಪೃಥುವಿನ ಸೈನ್ಯವನ್ನು ಹೊಕ್ಕವು.
ತದಾಹತಮಹಾವಾದ್ಯಂ ಸಮುದಗ್ರಧ್ವಜಾಯುಧಮ್ |
ಅನೀಕಂ ವಿಪೃಥೋರ್ಹೃಷ್ಟಂ ಪಾರ್ಥಮೇವಾನ್ವವರ್ತತ ॥12॥
ಮಹಾವಾದ್ಯಗಳ ನಾದದಿಂದ ಕೂಡಿದ, ಎತ್ತಿದ ಧ್ವಜ ಮತ್ತು ಆಯುಧಗಳಿಂದ ಕೂಡಿದ ಸಂತುಷ್ಟಗೊಂಡ ವಿಪೃಥುವಿನ ಸೈನ್ಯವು ಅರ್ಜುನನ ಕಡೆಗೆ ಮುಂದುವರಿಯಿತು.
ರಥೈರ್ಬಹುವಿಧೈರ್ಹೃಷ್ಟಾ ಸದಶ್ವೈಶ್ಚ ಮಹಾಜವೈಃ |
ಕಿರಂತಃ ಶರವರ್ಷಾಣಿ ಪರಿವವ್ರುರ್ಧನಂಜಯಮ್ ॥13॥
ಸಂತುಷ್ಟರಾದ ಆ ಸೈನಿಕರು ಮಹಾವೇಗವುಳ್ಳ ಸದಶ್ವಗಳು ಹೂಡಲ್ಪಟ್ಟ ರಥಗಳಲ್ಲಿ ಕುಳಿತು ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತೇಷಾಮಸ್ತ್ರಾಣಿ ಸಂವಾರ್ಯ ದಿವ್ಯೈರಸ್ತ್ರೈರ್ಮಹಾಸ್ತ್ರವಿತ್ |
ಆವೃಣೋನ್ಮಹದಾಕಾಶಂ ಶರೈಃ ಪರಪುರಂಜಯಃ ॥14॥
ಪರಪುರಂಜಯನಾದ, ಅಸ್ತ್ರಜ್ಞನಾದ ಅರ್ಜುನನು ಅವರ ಅಸ್ತ್ರಗಳನ್ನು ದಿವ್ಯಾಸ್ತ್ರಗಳಿಂದ ನಿರೋಧಿಸಿ ಸಮಗ್ರದ ಆಕಾಶವನ್ನೇ ಬಾಣಗಳಿಂದ ಮುಚ್ಚಿದನು.
ತೇಷಾಂ ಬಾಣಾನ್ ಮಹಾಬಾಹುರ್ವಿಸೃಷ್ಟಾನ್ ಸಂಧಿತಾನಪಿ |
ಚಿಚ್ಛೇದ ನಿಶಿತೈರ್ಬಾಣೈಃ ಶರಾಸೀಂಶ್ಚ ಧನೂಂಷಿ ಚ ॥15॥
ಮಹಾಬಾಹುವಾದ ಅರ್ಜುನನು ಅವರು ಪ್ರಯೋಗಿಸಿದ ಬಾಣಗಳನ್ನು,ಅವನ ಧನುಸ್ಸಿನಲ್ಲಿ ಹೂಡಿದ ಬಾಣಗಳನ್ನು,ಅವನ ಧನುಸ್ಸುಗಳನ್ನು ಮತ್ತು ಖಡ್ಗಗಳನ್ನು ಹರಿತವಾದ ಬಾಣಗಳಿಂದ ಕತ್ತರಿಸಿದನು.
ಯುಗಾನೀಷಾ ರಥಾದೀಂಶ್ಚ ಯಂತ್ರಾಣಿ ವಿವಿಧಾನಿ ಚ |
ಅಜಿಘಾಂಸುಶ್ಚರನ್ ಪಾರ್ಥಶ್ಚಿಚ್ಛೇದ ನಿಶಿತೈಃ ಶರೈಃ ॥16॥
ಅರ್ಜುನನು ಯಾವ ಸೈನಿಕರಿಗೂ ಹಿಂಸೆಯಾಗದಂತೆ ಅವರ ರಥಗಳ ನೊಗಗಳನ್ನು, ನಿಶಾದಂಡಗಳನ್ನು (ಮೂಕಿಗಳನ್ನು) ವಿವಿಧವಾದ ಯಂತ್ರಗಳನ್ನು ತನ್ನ ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿದನು.
ನಿರ್ಧನುಷ್ಕಾನ್ ವಿಕವಚಾನ್ ವಿರಥಾಂಶ್ಚ ಮಹಾರಥಾನ್ |
ಕೃತ್ವಾ ಪಾರ್ಥಃ ಪ್ರಿಯಾಂ ಪ್ರೀತಃ ಪ್ರೇಕ್ಷ್ಯತಾಮಿತ್ಯದರ್ಶಯತ್ ॥17॥
ಅರ್ಜುನನು ಆ ಮಹಾರಥರಾದ ಸೈನಿಕರನ್ನು ಧನುಸ್ಸು ಮತ್ತು ಕವಚದಿಂದ ರಹಿತರನ್ನಾಗಿ ಮಾಡಿ ಹಾಗೆಯೇ ರಥಹೀನರನ್ನಾಗಿ ಮಾಡಿ ಸಂತೋಷಗೊಂಡು ತನ್ನ ಪ್ರಿಯೆಯನ್ನು ಕುರಿತು ನೋಡು ಎಂದು ತೋರಿಸಿದನು.
ಸಾ ದೃಷ್ಟ್ವಾ ಮಹದಾಶ್ಚರ್ಯಂ ಸುಭದ್ರಾ ಪಾರ್ಥಮಬ್ರವೀತ್ |
ಆವಾಪ್ತಾರ್ಥಾಽಸ್ಮಿ ಭದ್ರಂ ತೇ ಯಾಹಿ ಪಾರ್ಥ ಯಥಾಸುಖಮ್ ॥
ಅವಳು ಆ ಮಹದಾಶ್ಚರ್ಯವನ್ನು ನೋಡಿ ಅರ್ಜುನನನ್ನು ಕುರಿತು ಅರ್ಜುನನೇ, ನಾನು ಕೃತಕೃತ್ಯಳಾಗಿದ್ದೇನೆ. ನಿನಗೆ ಮಂಗಳವಾಗಲಿ ಸುಖವಾಗಿ ಮುಂದೆಹೋಗು ಎಂದು ಹೇಳಿದಳು.
ವೈಶಂಪಾಯನಃ
ಸಂಸಕ್ತಂ ಪಾಂಡುಪುತ್ರೇಣ ಸಮೀಕ್ಷ್ಯ ವಿಪೃಥುರ್ಬಲಮ್ |
ತ್ವರಮಾಣೋಽಭಿನಿಷ್ಕ್ರಮ್ಯ ಸ್ಥೀಯತಾಮಿತ್ಯಭಾಷತ ॥19॥
ವಿಪೃಥುವು ತನ್ನ ಸೈನ್ಯವು ಅರ್ಜುನನ ಜೊತೆಯಲ್ಲಿ ಸಂಸಕ್ತವಾದುದನ್ನು ನೋಡಿ ಬೇಗ ಹೊರಗೆ ಬಂದು ತನ್ನ ಸೈನ್ಯಕ್ಕೆ ನಿಲ್ಲಿ ಎಂದು ಹೇಳಿದನು.
ತತ್ತು ಸೇನಾಪತೇರ್ವಾಕ್ಯಂ ನಾತ್ಯವರ್ತಂತ ಯಾದವಾಃ |

ಸಾಗರೇ ಮಾರುತೋದ್ಧೂತಾ ವೇಲಾಮಿವ ಮಹೋರ್ಮಯಃ ॥20॥
ಸಾಗರದಲ್ಲಿ ವಾಯು ಎಬ್ಬಿಸಿದ ಮಹಾಅಲೆಗಳು ತೀರವನ್ನು ಮೀರದಿರುವಂತೆ ಸೇನಾಪತಿಯ ಆ ಆಜ್ಞೆಯನ್ನು ಯಾದವಸೈನಿಕರು ಮೀರಲಿಲ್ಲ.
ತತೋ ರಥವರಾತ್ ತೂರ್ಣಮವರುಹ್ಯ ನರರ್ಷಭಃ।
ಅಭಿಗಮ್ಯ ನರವ್ಯಾಘ್ರಂ ಪ್ರಹೃಷ್ಟಃ ಪರಿಷಸ್ವಜೇ ॥21॥
ಆಗ ಪುರುಷಶ್ರೇಷ್ಠನಾದ ವಿಪೃಥು ಬೇಗ ತನ್ನ ಶ್ರೇಷ್ಠವಾದ ರಥದಿಂದ ಇಳಿದು ಅರ್ಜುನನಿಗೆ ಎದುರಾಗಿ ಬಂದು ಆ ನರವ್ಯಾಘ್ರನನ್ನು ಸಂತೋಷದಿಂದ ಆಲಿಂಗಿಸಿದನು.
ಸೋಽಬ್ರವೀತ್ ಪಾರ್ಥಮಾಸಾದ್ಯ ದೀರ್ಘಕಾಲಮಿದಂ ತವ।
ನಿವಾಸಮಭಿಜಾನಾಮಿ ಶಂಖಚಕ್ರಗದಾಧರಾತ್ ॥22॥
ಅವನು ಅರ್ಜುನನ್ನು ಸಮೀಪಿಸಿ ನಿನ್ನ ಈ ನಿವಾಸವನ್ನು ಕೃಷ್ಣನಿಂದ ನಾನು ಬಹುಕಾಲದಿಂದಲೂ ತಿಳಿದಿದ್ದೇನೆ ಎಂದು ಹೇಳಿದನು.
ನ ಚಾಸ್ತ್ಯವಿದಿತಂ ಕಿಂಚಿದ್ ಯದ್ಯದಾಚರಿತಂ ತ್ವಯಾ।
ಸುಭದ್ರಾಸಂಪ್ರಯೋಗೇಣ ಪ್ರೀತಸ್ತವ ಜನಾರ್ದನಃ ॥23॥
ನೀನು ಮಾಡಿದ ಎಲ್ಲಾ ಕ್ರಿಯೆಗಳೂ ನನಗೆ ತಿಳಿದಿವೆ. ಯಾವುದೂ ಅಜ್ಞಾತವಲ್ಲ. ಸುಭದ್ರೆಯ ಸಮಾಗಮದಿಂದ ಕೃಷ್ಣನು ನಿನ್ನಲ್ಲಿ ಪ್ರೀತನಾಗಿದ್ದಾನೆ.
ಪ್ರಾಪ್ತಸ್ಯ ಯತಿಲಿಂಗೇನ ದ್ವಾರಕಾಂ ತು ಧನಂಜಯ।
ವಿಸೃಷ್ಟಾ ಸರ್ವವೃಷ್ಣೀನಾಮೃಷಭೇಣ ಚ ಸೋದರಾ ॥24॥
ಧನಂಜಯನೇ, ನೀನು ಯತಿವೇಷವನ್ನು ಧರಿಸಿ ದ್ವಾರಕೆಗೆ ಬಂದಾಗ ಸರ್ವವೃಷ್ಣಿಗಳಲ್ಲಿ ಶ್ರೇಷ್ಠನಾದ ಕೃಷ್ಣನೇ ತನ್ನ ತಂಗಿಯನ್ನು ನಿನ್ನ ಸೇವೆಗೆ ನಿಯೋಜಿಸಿದನು.
ತ್ವಮಿಮಾಂ ವೀರ ದಶಾರ್ಹೀಂ ಶಚೀಮಿವ ಶಚೀಪತಿಃ।
ಭಕ್ತಾಂ ಗುಣವತೀಂ ಭದ್ರಾಂ ಸದಾ ಸತ್ಕರ್ತುಮರ್ಹಸಿ ॥25॥
ವೀರನೇ, ನೀನು ದಾಶಾರ್ಹ ಕನ್ಯೆಯಾದ, ಗುಣವಂತಳಾದ, ನಿನ್ನಲ್ಲಿ ಅನುರಕ್ತಳಾದ ಸುಭದ್ರೆಯನ್ನು, ಇಂದ್ರನು ಶಚಿಯನ್ನು ಸತ್ಕರಿಸಿದಂತೆ ಯಾವಾಗಲೂ ಸತ್ಕರಿಸಬೇಕು.
ಬಂಧುರ್ಭವ ಸುಭದ್ರಾಯಾ ಗತಿಶ್ಚ ತ್ವಂ ಧನಂಜಯ।
ಬಂಧುಮಾನಸಿ ರಾಮೇಣ ಮಹೇಂದ್ರಾವರಜೇನ ಚ ॥26॥
ಧನಂಜಯನೇ, ನೀನು ಬಲರಾಮನನ್ನು ಮತ್ತು ಮಹೇಂದ್ರನ ತಮ್ಮನಾದ ಕೃಷ್ಣನನ್ನು ಹಿತರನ್ನಾಗಿ ಪಡೆದು ಬಂಧುಗಳಿಂದ ಕೂಡಿದವನಾಗಿದ್ದೀಯೆ. ಹಾಗೆಯೇ ನೀನು ಸುಭದ್ರೆಗೆ ಬಂಧುವೂ, ಗತಿಯೂ ಆಗಬೇಕು.
ಮಾಮೇವ ಹಿ ಸದಾಽಕಾರ್ಷೀನ್ಮಂತ್ರಿಣಂ ಮಧುಸೂದನಃ।
ಅಂತರೇಣ ಸುಭದ್ರಾಂ ಚ ತ್ವಾಂ ಚ ವಕ್ತುಂ ಧನಂಜಯ ॥27॥
ಧನಂಜಯನೇ, ಮಧುಸೂದನನು ನಿನ್ನನ್ನೂ ಮತ್ತು ಸುಭದ್ರೆಯನ್ನೂ ಮಧ್ಯಮಾರ್ಗದಲ್ಲಿ ನಿಲ್ಲಿಸಿ ಮಾತನಾಡಲು ನನ್ನನ್ನೇ ಯಾವಾಗಲೂ ಮಂತ್ರಿಯಾಗಿ ನಿಯೋಜಿಸಿದನು.
ಇಮಂ ರಥವರಂ ದಿವ್ಯಂ ಸರ್ವಶಾಸ್ತ್ರಸಮನ್ವಿತಮ್।
ಇದಮೇವಾನುಯಾತ್ರಂ ಚ ನಿರ್ದಿಶ್ಯ ಗದಪೂರ್ವಜಃ।
ಅಂತರ್ದ್ವೀಪಂ ತದಾ ವೀರ ಯಾತೋ ವೃಷ್ಣಿಸುಖಾವಹಃ ॥28॥
ಎಲೈ ವೀರನೇ, ವೃಷ್ಣಿಗಳಿಗೆ ಸುಖಪ್ರದನಾದ ಕೃಷ್ಣನು ಸರ್ವಶಸ್ತ್ರಸಮನ್ವಿತವಾದ ದಿವ್ಯವಾದ ಇದೇ ಶ್ರೇಷ್ಠ ರಥವನ್ನು, ಇದೇ ಪರಿಜನಸಮೂಹವನ್ನು ನಿರ್ದೇಶ ಮಾಡಿ ಗದನ ಅಣ್ಣನಾದ ಅವನು ಅಂತರ್ದ್ವೀಪಕ್ಕೆ ಹೋದನು.
ದೀರ್ಘಕಾಲಾವರುದ್ಧಂ ತ್ವಾಂ ಸಂಪ್ರಾಪ್ತಂ ಪ್ರಿಯಯಾ ಸಹ।
ಪಶ್ಯಂತು ಭ್ರಾತರಸ್ತತ್ರ ವಜ್ರಪಾಣಿಮಿವಾಮರಾಃ ॥29॥
ದೀರ್ಘಕಾಲ ದೂರದಲ್ಲಿದ್ದು ಪ್ರಿಯೆಯ ಜೊತೆಯಲ್ಲಿ ಬಂದ ನಿನ್ನನ್ನು ನಿನ್ನ ಅಣ್ಣತಮ್ಮಂದಿರು ಇಂದ್ರಪ್ರಸ್ಥದಲ್ಲಿ ದೇವತೆಗಳು ಇಂದ್ರನನ್ನು ನೋಡಿದಂತೆ ನೋಡಲಿ.
ಆಗತೇ ತು ದಶಾರ್ಹಾಣಾಮೃಷಭೇ ಶಾರ್ಙ್ಗಧನ್ವನಿ।
ಭದ್ರಾಮನುಗಮಿಷ್ಯಂತಿ ರತ್ನಾನಿ ಚ ವಸೂನಿ ಚ ॥30॥
ದಶಾರ್ಹರ ನಾಯಕನಾದ ಸಾರಂಗಧಾರಿಯಾದ ಕೃಷ್ಣನು ಹಿಂದಿರುಗಿ ಬಂದ ಮೇಲೆ ರತ್ನಗಳೂ ಮತ್ತು ಧನಗಳೂ ಸುಭದ್ರೆಯ ಹಿಂದೆ ಬರಲಿವೆ.
ಅರಿಷ್ಟಂ ಗಚ್ಛ ಪಂಥಾನಂ ಸುಖೀ ಭವ ಧನಂಜಯ।
ನಷ್ಟಶೋಕೈರ್ವಿಶೋಕಸ್ಯ ಸುಹೃದ್ಭಿಃ ಸಂಗಮೋಽಸ್ತು ತೇ ॥31॥
ಧನಂಜಯನೇ, ಕ್ಷೇಮದಿಂದ ಪ್ರಯಾಣ ಮಾಡು, ಸುಖವನ್ನು ಹೊಂದು. ಶೋಕರಹಿತರಾದ ಬಂಧುಗಳ ಜೊತೆಯಲ್ಲಿ ಶೋಕರಹಿತನಾದ ನಿನಗೆ ಸಮಾಗಮವುಂಟಾಗಲಿ.
ತತೋ ವಿಪೃಥುಮಾಮಂತ್ರ್ಯ ಪಾರ್ಥಃ ಪ್ರೀತೋಽಭಿವಾದ್ಯ ಚ।
ಕೃಷ್ಣಸ್ಯ ಮತಮಾಸ್ಥಾಯ ಕೃಷ್ಣಸ್ಯ ರಥಮಾಸ್ಥಿತಃ।
ಪೂರ್ವಮೇವ ತು ಪಾರ್ಥಾಯ ಕೃಷ್ಣೇನ ವಿನಿಯೋಜಿತಮ್ ॥32॥

ಅನಂತರ ಅರ್ಜುನನು ಸಂತೋಷದಿಂದ ವಿಪ್ರಥುವಿಗೆ ನಮಸ್ಕಾರವನ್ನು ಮಾಡಿ ಅವನ ಅನುಮತಿಯನ್ನು ಪಡೆದು, ಕೃಷ್ಣನು ತನಗಾಗಿ ಮೊದಲೇ ಸಿದ್ಧಪಡಿಸಿದ್ದ ಕೃಷ್ಣರಥವನ್ನೇರಿ ಕೃಷ್ಣನ ಮನಸ್ಸಿನ ಅಭಿಪ್ರಾಯದಂತೆ ಮುಂದೆ ನಡೆದನು.
ಸರ್ವರತ್ನಸುಸಂಪೂರ್ಣಂ ಸರ್ವಭೋಗಸಮಾನ್ವಿತಮ್ |
ರಥೇನ ಕಾಂಚನಾಂಗೇನ ಕಲ್ಪಿತೇನ ಯಥಾವಿಧಿ ॥33॥
ಶೈಬ್ಯಸುಗ್ರೀವಯುಕ್ತೇನ ಕಿಂಕಿಣೀಜಾಲಮಾಲಿನಾ |
ಸರ್ವಶಸೊತ್ರೇಪಪನ್ನೇನ ಜೀಮೂತರವನಾದಿನಾ ॥34॥
ಜ್ವಲಿತಾಗ್ನಿಪ್ರಕಾಶೇನ ದ್ವಿಷತಾಂ ಹರ್ಷಘಾತಿನಾ |
ಸನ್ನದ್ಧಃ ಕವಚೀ ಖಡ್ಗೀ ಬದ್ಧಗೋಧಾಂಗುಲಿತ್ರವಾನ್ ॥35॥
ಗುಪ್ತಃ ಸೇನಾನುಯಾತ್ರೇಣ ರಥಮಾರೋಪ್ಯ ಮಾಧವೀಮ್ |
ರಥೇನಾಕಾಶಗೇನೇವ ಪ್ರಯಯೌ ಸ್ವಪುರಂ ಪ್ರತಿ ॥36॥
ಅರ್ಜುನನು ಸರ್ವರತ್ನಸಂಪೂರ್ಣವಾದ, ಸರ್ವಭೋಗ ಸಮನ್ವಿತವಾದ, ಸುವರ್ಣಮಯವಾದ, ಶಾಸೊತ್ರೇಕ್ತವಿಧಿಯಿಂದ ನಿರ್ಮಿತವಾದ ಕಿಂಕಿಣೀ ಮಾಲೆಗಳಿಂದ ಅಲಂಕೃತವಾದ ಸರ್ವಶಸ್ತ್ರಗಳಿಂದ ಕೂಡಿದ ಮೇಘಗರ್ಜನೆಯಂತೆ ಘೋಷವನ್ನು ಹೊಂದಿದ ಅಗ್ನಿಯ ಪ್ರಕಾಶದಂತೆ ಹೊಳೆಯುವ, ಶತ್ರುಗಳ ಸಂತೋಷವನ್ನು ನಾಶಮಾಡುವ, ಶೈಬ್ಯ ಸುಗ್ರೀವ ಅಶ್ವಗಳನ್ನು ಹೂಡಿದ ರಥದಲ್ಲಿ, ಕವಚವನ್ನು ಧರಿಸಿ, ಖಡ್ಗವನ್ನು ಹಿಡಿದು ಅಂಗುಲಿ ತ್ರಾಣಗಳನ್ನು ಧರಿಸಿ ಅಲ್ಪ ಸೇನೆಯಿಂದ ಹಿಂಬಾಲಿಸಲ್ಪಟ್ಟು, ಸುಭದ್ರೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಆಕಾಶ ಮಾರ್ಗದಲ್ಲಿ ರಥದಲ್ಲಿ ಹೋಗುವಂತೆ ಪ್ರಯಾಣ ಮಾಡಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.
ಹ್ರಿಯಮಾಣಾಂ ತು ತಾಂ ದೃಷ್ಟ್ವಾ ಸುಭದ್ರಾಂ ಸೈನಿಕೋ ಜನಃ |
ವ್ಯಾಕ್ರೋಶತ್ ಪ್ರಾದ್ರುವತ್ ಸರ್ವೇ ದ್ವಾರಕಾಮಭಿತಃ ಪುರೀಮ್ ॥37॥
ಸುಭದ್ರೆಯು ಅಪಹರಿಸಲ್ಪಡುವುದನ್ನು ನೋಡಿದ ಸೈನಿಕ ಜನರೆಲ್ಲರೂ ದ್ವಾರಕಾ ಪಟ್ಟಣದ ಎಲ್ಲ ಕಡೆಗಳಿಂದ ಕಿರಿಚುತ್ತಾ ದ್ವಾರಕಾ ಪಟ್ಟಣದ ಸಭೆಗೆ ಓಡಿಬಂದರು.
ತೇ ಸಮಾಸಾದ್ಯ ಸಹಿತಾಃ ಸುಧರ್ಮಾಮಭಿತಃ ಪುರೀಮ್ |
ಸಭಾಪಾಲಸ್ಯ ತತ್ ಸರ್ವಮಾಚಖ್ಯುಃ ಪಾರ್ಥವಿಕ್ರಮಮ್ ॥38॥
ಅವರು ಎಲ್ಲ ಕಡೆಗಳಿಂದಲೂ ಒಟ್ಟಿಗೆ ಓಡಿಬಂದು ಸುಧರ್ಮಾ ಸಭೆಯನ್ನು ತಲುಪಿ ಸಭಾಪಾಲಕರಿಗೆ ಅರ್ಜುನನ ವಿಕ್ರಮವನ್ನೆಲ್ಲಾ ವಿವರಿಸಿದರು.
ತೇಷಾಂ ಶ್ರುತ್ವಾ ಸಭಾಪಾಲೋ ಭೇರೀಂ ಸನ್ನಾಹಯತ್ ತದಾ |
ಸಮಾಜ್ಞೇ ಮಹಾಘೋಷಾಂ ಜಾಂಬೂನದಪರಿಷ್ಕೃತಾಮ್ ॥39॥
ಅವರ ಮಾತುಗಳನ್ನು ಕೇಳಿದ ಸಭಾಪಾಲಕನು ಸುವರ್ಣಾಲಂಕೃತವಾದ ಮಹಾಘೋಷವುಳ್ಳ ಭೇರಿಯನ್ನು ಬಾರಿಸಿದನು.
ಕ್ಷೋಭಿತಾಸ್ತೇನ ಶಬ್ದೇನ ಭೋಜವೃಷ್ಣ್ಯಂಧಕಾಸ್ತದಾ |
ಅಂತರ್ದ್ವೀಪಾತ್ ಸಮುತ್ಪೇತುಃ ಸಹಸಾ ಸಹಿತಾಸ್ತದಾ |
ಅನ್ನಪಾನಮಪಾಹಾಯ ಸಮಾಪೇತುಃ ಸಮಂತತಃ ॥42॥
ಆ ಶಬ್ದವನ್ನು ಕೇಳಿ ಕ್ಷೋಭೆಗೊಂಡ ಭೋಜರೂ, ವೃಷ್ಣಿಗಳೂ ಮತ್ತು ಅಂಧಕರೂ ತಕ್ಷಣದಲ್ಲಿಯೇ ಅಂತರ್ದ್ವೀಪದಿಂದ ಅಲ್ಲಿಗೆ ಬಂದರು. ಅನ್ನಪಾನಗಳನ್ನು ತೊರೆದು ಅವರು ಎಲ್ಲ ಕಡೆಗಳಿಂದಲೂ ಅಲ್ಲಿಗೆ ಶೀಘ್ರವಾಗಿ ಬಂದರು.
ತತೋ ಜಾಂಬೂನದಾಂಗಾನಿ ಪರಾರ್ಧ್ಯಾಸ್ತರಣಾನಿ ಚ |
ಮಣಿವಿದ್ರುಮಚಿತ್ರಾಣಿ ಜ್ವಲಿತಾಗ್ನಿಪ್ರಭಾಣಿ ಚ ॥43॥
ಭೇಜಿರೇ ಪುರುಷವ್ಯಾಘ್ರಾ ವೃಷ್ಣ್ಯಂಧಕಮಹಾರಥಾಃ
ಸಿಂಹಾಸನಾನಿ ಶತಶೋ ಧಿಷ್ಣ್ಯಾನೀವ ಹುತಾಶನಾಃ ॥44॥
ಅನಂತರ, ಪುರುಷವ್ಯಾಘ್ರರಾದ ವೃಷ್ಣ್ಯಂಧಕ ಮಹಾರಥರು ಸುವರ್ಣಮಯವಾದ ಬೆಲೆಬಾಳುವ ಹೊದಿಕೆಗಳಿಂದ ಕೂಡಿದ ಮಣಿಗಳಿಂದಲೂ, ಹವಳಗಳಿಂದಲೂ ಅಲಂಕರಿಸಿದ ಅಗ್ನಿಜ್ವಾಲೆಯಂತೆ ಬೆಳಗುವ ಶ್ರೇಷ್ಠವಾದ ಸಿಂಹಾಸನಗಳಲ್ಲಿ ತಮ್ಮತಮ್ಮ ಸ್ಥಾನಗಳಲ್ಲಿ ಜ್ವಲಿಸುವ ಅಗ್ನಿಗಳಂತೆ ಜ್ವಲಿಸುತ್ತಾ ನೂರಾರು ಸಂಖ್ಯೆಯಲ್ಲಿ ಕುಳಿತರು.
ತೇಷಾಂ ಸಮುಪವಿಷ್ಟಾನಾಂ ದೇವಾನಾಮುಪಸಂಗಮೇ |
ಆಚಖ್ಯೌ ಚೇಷ್ಟಿತಂ ಜಿಷ್ಣೋಃ ಸಭಾಪಾಲಃ ಸಹಾನುಗಃ ॥45॥
ದೇವತೆಗಳಂತಿದ್ದ ಅವರೆಲ್ಲರೂ ಕುಳಿತುಕೊಂಡ ಮೇಲೆ ಸಭಾಪಾಲನು ತನ್ನ ಅನುಚರರೊಂದಿಗೆ ಅರ್ಜುನನು ಮಾಡಿದ ಎಲ್ಲಾ ಚೇಷ್ಟೆಗಳನ್ನೂ ವಿವರಿಸಿದನು.
ತಚ್ಛ್ರುತ್ವಾ ವೃಷ್ಣಿವೀರಾಸ್ತೇ ಮದರಕ್ತಾಂತಲೋಚನಾಃ |
ಅಮೃಷ್ಯಮಾಣಾಃ ಪಾರ್ಥಸ್ಯ ಸಮುತ್ಪೇತುರ್ಮಹಾಬಲಾಃ ॥46॥
ಅದನ್ನು ಕೇಳಿದ ಆ ಮಹಾಬಲಿಷ್ಠರಾದ ವೃಷ್ಣಿವೀರರು ಅರ್ಜುನನನ್ನು ಸಹಿಸದೆ ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ತಮ್ಮ ಆಸನದಿಂದ ಎದ್ದರು.
ಯೋಜಯಿತ್ವಾ ರಥಾನಾಶು ನಾಗಾನಶ್ವಾಂಸ್ತಥೈವ ಚ |
ಕವಚಾನಾಹರನ್ ಕ್ಷಿಪ್ರಂ ಪ್ರಾಸಾನಾಹರತೇತಿ ಚ |
ಧನೂಂಷಿ ಚ ಮಹಾರ್ಹಾಣಿ ಕವಚಾನಿ ಬೃಹಂತಿ ಚ ॥47॥

ತಮ್ಮ ರಥಗಳನ್ನು ಬೇಗ ಹೂಡಿ ಗಜಗಳನ್ನೂ, ಅಶ್ವಗಳನ್ನೂ ತೆಗೆದುಕೊಂಡು ಬಂದು ಕವಚವನ್ನು ಧರಿಸಿ ಬೇಗ ಪ್ರಾಸಗಳನ್ನು, ಧನುಸ್ಸುಗಳನ್ನು, ಬೆಲೆಬಾಳುವ ಕವಚಗಳನ್ನು ತೆದುಕೊಂಡು ಬನ್ನಿ ಎಂದು ಹೇಳಿದರು.
ಸೂತಾನ್ ವಿಚುಕ್ರುಶುಃ ಕೇಚಿದ್ ರಥಾನ್ ಯೋಜಯತೇತಿ ಚ |
ಸ್ವಯಂ ಚ ತುರಗಾನ್ ಕೇಚಿತ್ ನಿನ್ಯುರ್ಹೇಮವಿಭೂಷಿತಾನ್ ॥48॥
ರಥೇಷ್ವಾನೀಯಮಾನೇಷು ಕವಚೇಷು ಧ್ವಜೇಷು ಚ |
ಅಭಿಕ್ರಂದೋ ನೃವೀರಾಣಾಂ ತದಾಸೀತ್ ತುಮುಲೋ ಮಹಾನ್ ॥
ಕೆಲವರು ತಮ್ಮ ಸೂತರನ್ನು ಕುರಿತು ಬೇಗ ರಥಗಳನ್ನು ಹೂಡಿ ಎಂದು ಕಿರುಚುತ್ತಿದ್ದರು. ಇನ್ನು ಕೆಲವರು ಸುವರ್ಣಾಲಂಕೃತವಾದ ತುರಗಗಳನ್ನು ತಾವೇ ರಥದ ಬಳಿ ತೆಗೆದುಕೊಂಡು ಹೋಗುತ್ತಿದ್ದರು. ರಥಗಳನ್ನು ತರಲ್ಪಡುತ್ತಿರಲು ಹಾಗೆಯೇ ವೀರರಾದ ಯಾದವರು ಕವಚಗಳನ್ನು ಧರಿಸಿ ಧ್ವಜಗಳನ್ನು ಎತ್ತುತ್ತಿರಲು ಆಗ ದೊಡ್ಡ ತುಮುಲ ನಾದವು ಉಂಟಾಯಿತು.
ವನಮಾಲೀ ತತಃ ಕ್ಷೀಬಃ ಕೈಲಾಸಶಿಖರೋಪಮಃ |
ನೀಲವಾಸಾ ಮದೋತ್ಸಿಕ್ತ ಇದಂ ವಚನಮಬ್ರವೀತ್ ॥50॥
ಆಗ ವನಮಾಲಿಯೂ, ನೀಲವಸ್ತ್ರವನ್ನು ಧರಿಸಿದವನೂ, ಮತ್ತನೂ, ಕೈಲಾಸಶಿಖರದಂತೆ ಉನ್ನತನೂ ಆಗಿದ್ದ ಬಲರಾಮನು ಹೀಗೆ ಮಾತನಾಡಿದನು.
ಕಿಮಿದಂ ಚಾಕೃತಪ್ರಜ್ಞಾಸ್ತೂಷ್ಣೀಂಭೂತೇ ಜನಾರ್ದನೇ |
ಅಸ್ಯ ಭಾವಮವಿಜ್ಞಾಯ ಸಂಕ್ರುದ್ಧಾ ಮೋಘಗರ್ಜಿತಾಃ ॥51॥
ಮೂರ್ಖರೇ, ಕೃಷ್ಣನು ಸುಮ್ಮನಿರುವಾಗ ಅವನ ಅಭಿಪ್ರಾಯವನ್ನು ತಿಳಿಯದೇ ನೀವು ಏಕೆ ಕ್ರುದ್ಧರಾಗಿ ವ್ಯರ್ಥವಾಗಿ ಗರ್ಜಿಸುತ್ತಿದ್ದೀರಿ?
ಏಷ ತಾವದಭಿಪ್ರಾಯಮಾಖ್ಯಾತು ಮಮ ಯದ್ಹೃದಿ |
ಯದಸ್ಯ ಸೂಚಿತಂ ಕರ್ತುಂ ತತ್ ಕುರುಧ್ವಮತಂದ್ರಿತಾಃ ॥52॥
ಇವನು ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ನನಗೆ ತಿಳಿಸಲಿ, ಅನಂತರ ಅವನು ಮಾಡಬೇಕೆಂದು ಸೂಚಿಸುವ ಕಾರ್ಯವನ್ನು ಆಲಸ್ಯವಿಲ್ಲದೆ ಮಾಡಿ.
ತತಸ್ತೇ ವಚನಂ ಶ್ರುತ್ವಾ ಗ್ರಾಹ್ಯರೂಪಂ ಹಲಾಯುಧಾತ್ |
ತೂಷ್ಣೀಂಭೂತಾಸ್ತತಃ ಸರ್ವೇ ಸಾಧುಸಾಧ್ವಿತಿ ಚಾಬ್ರುವನ್ ॥53॥
ಆಗ ಅವರು ಬಲರಾಮನ ಯುಕ್ತವಾದ ಮಾತುಗಳನ್ನು ಕೇಳಿ ಒಳ್ಳೆಯದು ಒಳ್ಳೆಯದು ಎಂದು ಹೇಳುತ್ತಾ ಎಲ್ಲರೂ ಸುಮ್ಮನಾದರು.
ಸಮಾ ವಾಚೋ ನಿಶಮ್ಯೈವ ಬಲದೇವಸ್ಯ ಧೀಮತಃ |
ಪುನರೇವ ಸಭಾಮಧ್ಯೇ ಸರ್ವೇ ತೇ ಸಮುಪಾವಿಶನ್ ॥54॥
ಮೇಧಾವಿಯಾದ ಬಲರಾಮನ ಸಮಾಧಾನದ ಮಾತುಗಳನ್ನು ಕೇಳಿ ಅವರೆಲ್ಲರೂ ಪುನಃ ಸಭೆಯಲ್ಲಿ ಕುಳಿತುಕೊಂಡರು.
ತತೋಽಬ್ರವೀತ್ ಕಾಮಪಾಲೋ ವಾಸುದೇವಂ ಪರಂತಪಮ್ |
ತ್ರೈಲೋಕ್ಯನಾಥ ಭೋ ಕೃಷ್ಣ ಭೂತಭವ್ಯಭವಿಷ್ಯವಿತ್ |
ಕಿಮುವಾಽತ್ರೋಪವಿಷ್ಟೋಽಸಿ ಪ್ರೇಕ್ಷಮಾಣೋ ಜನಾಕುಲಮ್ ॥55॥
ಅನಂತರ ಬಲರಾಮನು ಪರಂತಪನಾದ ಕೃಷ್ಣನನ್ನು ಕುರಿತು ತ್ರೈಲೋಕ್ಯನಾಥನೇ, ಭೂತಭವ್ಯಭವಿಷ್ಯತ್ತನ್ನು ತಿಳಿದಿರುವ ಕೃಷ್ಣನೇ, ಈ ಜನರ ವ್ಯಾಕುಲತೆಯನ್ನು ನೋಡುತ್ತಾ ಏಕೆ ಸುಮ್ಮನೆ ಇಲ್ಲಿ ಕುಳಿತಿದ್ದೀಯೆ?
ಸತ್ಕೃತಸ್ತ ಽವ ತ್ಕೃತೇ ಪಾರ್ಥಃ ಸರ್ವೈರಸ್ಮಾಭಿರಚ್ಯುತ |
ನ ಚ ಸೋಽರ್ಹತಿ ತಾಂ ಪೂಜಾಂ ದುರ್ಬುದ್ಧಿಃ ಕುಲಪಾಂಸನಃ |
ಕೋ ಹಿ ತತ್ರೈವ ಭುಕತ್ವಽನ್ನಂ ಭಾಜನಂ ಭೇತ್ತುಮರ್ಹತಿ ॥56॥
ಅಚ್ಯುತನೇ, ನಿನ್ನ ಸಲುವಾಗಿ ನಾವೆಲ್ಲರೂ ಅರ್ಜುನನನ್ನು ಸತ್ಕರಿಸಿದೆವು. ಕುಲಪಾಂಸನನಾದ ಆ ದುರ್ಬುದ್ಧಿಯು ನಮ್ಮ ಪೂಜೆಗೆ ಅರ್ಹನಲ್ಲ. ಯಾವನು ತಾನೆ ಅಲ್ಲಿಯೇ ಊಟವನ್ನು ಮಾಡಿ ಅಲ್ಲಿಯೇ ಪಾತ್ರೆಯನ್ನು ಒಡೆಯುತ್ತಾನೆ.
ಮನ್ಯಮಾನಃ ಕುಲೇ ಜಾತಮಾತ್ಮಾನಂ ಪುರುಷಃ ಕ್ವಚಿತ್ |
ಈಪ್ಸಮಾನಶ್ಚ ಸಂಬಂಧಂ ಕೃತಪೂರ್ವಂ ಚ ಮಾನಯನ್ |
ಕೋ ಹಿ ನಾಮ ಭವೇದರ್ಥೀ ಸಾಹಸೇನ ಚರೇದ್ ಬುಧಃ ॥57॥
ಯಾವ ಮನುಷ್ಯನು ಒಳ್ಳೆಕುಲದಲ್ಲಿ ತಾನು ಜನಿಸಿದವನೆಂದು ತಿಳಿದು ಒಳ್ಳೆಕುಲದ ಸಂಬಂಧವನ್ನು ಅಪೇಕ್ಷಿಸಿ ಹಿಂದೆ ಮಾಡಿದ ಉಪಕಾರವನ್ನು ಗೌರವಿಸಿ ತನ್ನ ಕಾರ್ಯವನ್ನು ಸಾಧಿಸಬೇಕಾದ ವಿವೇಕಿಯು ಇಂತಹ ಸಾಹಸದ ಕೆಲಸವನ್ನು ಮಾಡುತ್ತಾನೆ.
ಸೋಽವಮತ್ಯ ಚ ನಾಮಾಸ್ಮಾನವಮತ್ಯ ಚ ಕೇಶವಮ್ |
ಪ್ರಸಹ್ಯ ಹೃತವಾನದ್ಯ ಸುಭದ್ರಾಂ ಮೃತ್ಯುಮಾತ್ಮನಃ ॥60॥
ಅವನು ಕೃಷ್ಣನನ್ನು ಅವಮಾನ ಮಾಡಿ, ನಮ್ಮೆಲ್ಲರನ್ನೂ ಅವಮಾನ ಮಾಡಿ ತನಗೆ ಮೃತ್ಯುರೂಪಳಾದ ಸುಭದ್ರೆಯನ್ನು ಈ ದಿನ ಬಲಾತ್ಕಾರದಿಂದ ಅಪಹರಿಸಿದ್ದಾನೆ.
ಕಥಂ ಹಿ ಶಿರಸೋ ಮಧ್ಯೇ ಕೃತಂ ತೇನ ಪದಂ ಮಮ |
ತ್ವಯಾ ಚೇದಭ್ಯನುಜ್ಞಾತೋ ಮರ್ಷಯಿಷ್ಯಾಮಿ ಮಾಧವ |
ನ ಮರ್ಷಯಿಷ್ಯೇ ಗೋವಿಂದ ಪಾದಸ್ಪರ್ಶಮಿವೋರಗಃ ॥61॥
ಅವನು ಹೇಗೆ ನನ್ನ ತಲೆಯ ಮೇಲೆ ಕಾಲಿಡಲು ಸಾಧ್ಯ? ಮಾಧವನೇ, ನಿನ್ನ ಸಮ್ಮತಿಯಿದ್ದರೆ ನಾನು ಸುಮ್ಮನಾಗುವೆನು. ಗೋವಿಂದನೇ, ಇಲ್ಲದಿದ್ದರೆ ಸರ್ಪವು ಪಾದಸ್ಪರ್ಶವನ್ನು ಸಹಿಸದಿರುವಂತೆ ನಾನು ಸಹಿಸುವುದಿಲ್ಲ.

ಅದ್ಯ ನಿಷ್ಕೌರವಾಮೇಕಃ ಕರಿಷ್ಯಾಮಿ ವಸುಂಧರಾಮ್ ।
ನ ಹಿ ಮೇ ಮರ್ಷಣೀಯೋಽಯಮರ್ಜುನಸ್ಯ ವ್ಯತಿಕ್ರಮಃ ।
ತಮಹಂ ಭ್ರಾತೃಭಿಃ ಸಾರ್ಧಂ ನಿಹನ್ಮಿ ಕುಲಪಾಂಸನಮ್ ॥62॥
ಈ ದಿನ ನಾನೊಬ್ಬನೇ ಭೂಮಿಯ ಮೇಲೆ ಕೌರವರ ಕುಲವು ಇಲ್ಲದಂತೆ ಮಾಡುತ್ತೇನೆ. ಅರ್ಜುನನ ಈ ಅಪಚಾರವನ್ನು ನಾನು ಕ್ಷಮಿಸಲು ಸಾಧ್ಯವಿಲ್ಲ. ಕುಲಪಾಂಸನನಾದ ಅವನನ್ನು ಅವನ ಸಹೋದರರ ಜೊತೆಯಲ್ಲಿ ಕೊಲ್ಲುತ್ತೇನೆ.
ವೈಶಂಪಾಯನಃ
ರೌಹಿಣೇಯಂ ಗರ್ಜಮಾನಂ ಮೇಘದುಂದುಭಿನಿಸ್ವನಮ್ ।
ಅನ್ವಪದ್ಯಂತ ತೇ ಸರ್ವೇ ಭೋಜವೃಷ್ಣ್ಯಂಧಕಾಸ್ತಥಾ ॥63॥
ಮೇಘಸ್ವನದಂತೆ, ದುಂದುಭಿಯ ಸ್ವನದಂತೆ ಗರ್ಜಿಸುತ್ತಿದ್ದ ಬಲರಾಮನನ್ನು ಎಲ್ಲಾ ಭೋಜರೂ, ವೃಷ್ಣಿಗಳೂ ಮತ್ತು ಅಂಧಕರೂ ಅನುಮೋದಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸುಭದ್ರಾಹರಣಪರ್ವಣಿ ಪಂಚಮೋಽಧ್ಯಾಯಃ ॥
॥ ಸುಭದ್ರಾಹರಣಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಸುಭದ್ರಾಹರಣಪರ್ವವು ಮುಗಿಯಿತು.
*****
17. ಹರಣಹಾರಿಕಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಕೃಷ್ಣೋಽಪಿ ಸರ್ವಂ ವಿಪೃಥೋರ್ನಿಶಮ್ಯ
ಪ್ರಾಪ್ತಃ ಸುಧರ್ಮಾಂ ವಿಮನಾ ಇವಾಸೀತ್ ।
ಅವಾಙ್ಮುಖಸ್ತತ್ರ ಯದುಪ್ರವೀರಾಃ
ಪ್ರದ್ಯುಮ್ನಾದ್ಯಾ ಆಹುರುಚ್ಚೈರ್ನದಂತಃ ॥198॥
ಶ್ರೀಕೃಷ್ಣನೂ ವಿಪೃಥುವಿನಿಂದ ಎಲ್ಲವನ್ನೂ ಕೇಳಿ ಸುಧರ್ಮ ಸಭೆಗೆ ಬಂದ. ಬಲು ಬೇಸರಗೊಂಡವನಂತೆ ಮುಖತಗ್ಗಿಸಿ ಕುಳಿತ. ಪ್ರದ್ಯುಮ್ನ ಮುಂತಾದ ಯಾದವ ವೀರರು ದೊಡ್ಡ ಧ್ವನಿಯಿಂದ ಗರ್ಜಿಸುತ್ತ ನುಡಿದರು.
ಮಾಯಾವೃತಂ ತಂ ವಿನಿಹತ್ಯ ಶೀಘ್ರಂ
ವಯಂ ಸುಭದ್ರಾಮಾನಯಾಮ ಕ್ಷಣೇನ ।
ಇತ್ಯುಕ್ತವಾಕ್ಯಾನವದದ್ ಬಲಸ್ತಾನ್
ಕೃಷ್ಣಾಜ್ಞಯಾ ಯಾಂತು ನ ಸ್ವೇಚ್ಛಯೈವ ॥199॥
`ಕಪಟವನ್ನೆ ವ್ರತವಾಗಿಟ್ಟುಕೊಂಡಿರುವ ಆ ಅರ್ಜುನನನ್ನು ನಾವು ಕೊಂದು ಬೇಗನೆ ಕ್ಷಣದಲ್ಲಿ ಸುಭದ್ರೆಯನ್ನು ತರೋಣ' ಎಂದರು. ಅವರು ಹೀಗೆ ಹೇಳಿದಾಗ ಬಲರಾಮ ಅವರಿಗೆ `ಕೃಷ್ಣನ ಆಜ್ಞೆಪಡೆದೇ ಹೊರಡಿರಿ. ಸ್ವೇಚ್ಛೆಯಿಂದಲ್ಲ' ಎಂದ.
ಜ್ಞಾತವ್ಯಮೇತಸ್ಯ ಮತಂ ಪುರಸ್ತಾತ್
ಹರೇರ್ವಿರೋಧೇ ನ ಜಯೋ ಭವೇದ್ವಃ ।
ಇತ್ಯುಕ್ತವಾಕ್ಯೇ ಹಲಿನಿ ಸ್ಮ ಸರ್ವೇ
ಪಪ್ರಚ್ಛುರಾನಮ್ಯ ಜನಾರ್ದನಂ ತಂ ॥200॥
`ಮೊದಲು ಕೃಷ್ಣನ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕು. ಅವನ ಸಮ್ಮತಿ ಇಲ್ಲದಿದ್ದಲ್ಲಿ ನಿಮಗೆ ಕಾರ್ಯಜಯವಾಗುವುದಿಲ್ಲ'. ಹೀಗೆ ಬಲರಾಮ ಹೇಳಿದಾಗ ಎಲ್ಲರೂ ಕೃಷ್ಣನಿಗೆ ನಮಿಸಿ ಕೇಳಿದರು.
ಅಥಾಬ್ರುವೀದ್ವಾಸುದೇವೋಽಮಿತೌಜಾಃ
ಶೃಣ್ವಂತು ಸರ್ವೇ ವಚನಂ ಮದೀಯಂ ।
ಪುರೈವೋಕ್ತಂ ತನ್ಮಯಾ ಕನ್ಯಕಾಯಾ
ಮಾಯಾಬ್ರುತೋನಾರ್ಹತಿ ಸನ್ನಿಧಿಸ್ಥಿತಿಂ ॥201॥
ಬಳಿಕ ಅಮಿತಶಕ್ತಿ ಉಳ್ಳ ಕೃಷ್ಣ ನುಡಿದ, `ಎಲ್ಲರೂ ನನ್ನ ಮಾತನ್ನು ಕೇಳಿ, ಮೊದಲೆ ನಾನು ಹೇಳಿದ್ದೆ, ಕಪಟ ವ್ರತವನ್ನು ತೊಟ್ಟ ಈ ಯತಿ ಕನ್ಯೆಯ ಬಳಿ ಇರಲು ತಕ್ಕವಲ್ಲ ಎಂದು.
ತಾಂ ಮೇ ವಾಚಂ ನಾಗ್ರಹೀದಗ್ರಜೋಽಯಂ
ಬಹೂನ್ ದೋಷಾನ್ ವ್ಯಾಹರತೋಽಪ್ಯತೋ ಮಯಾ ।
ಅನುಲ್ಲಂಘ್ಯತ್ವಾದಗ್ರಜೋಽನುಪ್ರವೃತ್ತಃ
ಕನ್ಯಾಗೃಹೇ ವಾಸನೇ ಕೂಟಬದ್ಧೇಃ ॥202॥
`ನಾನು ಅದರಲ್ಲಿ ಬಹಳ ತೊಂದರೆಗಳಿವೆ ಎಂದು ಹೇಳುತ್ತಿದ್ದರೂ ನನ್ನ ಆ ಮಾತನ್ನು ಅಣ್ಣ ಒಪ್ಪಲಿಲ್ಲ. ಅದರಿಂದ ಅಣ್ಣನ ಅಭಿಪ್ರಾಯವನ್ನು ಮೀರಲಾಗದೆಂದು ನಾನು ಕಪಟ ಬುದ್ಧಿಯವನಾದ ಅರ್ಜುನನನ್ನು ಕನ್ಯಾಗೃಹದ ಬಳಿ ಇರಿಸಲು ಮುಂದಾದೆ.
ಅತೀತಶ್ಚಾಯಂ ಕಾರ್ಯಯೋಗೋಽಸಮಕ್ಷಂ
ಹೃತಾ ಕನ್ಯಾ ಏತೋ ನೋಽತ್ರ ಕಾ ಮಾನಹಾನಿಃ ।

ಭೂಯಸ್ತರಾಂ ಮಾನಿನಸ್ತಸ್ಯ ಸಾ ಸ್ಯಾತ್
ಜ್ಞಾತಾ ಚ ವೋ ವಿಪೃಥೋಃ ಪಾರ್ಥತಾಸ್ಯ ॥203॥
`ಈಗ ಕಾರ್ಯ ಮಿಂಚಿಹೋಯಿತು. ನಮ್ಮ ಅನುಪಸ್ಥಿತಿಯಲ್ಲಿ ಆತ ಕನ್ಯೆಯನ್ನು ಅಪಹರಿಸಿದ್ದಾನೆ. ಆದರೂ ಅದರಿಂದ ನಮಗೆ ಏನು ಮಾನಹಾನಿಯಾದಂತಾಯಿತು? ಬಹಳ ಅಭಿಮಾನಿಯಾದ ಅವನಿಗೇ ಮಾನಹಾನಿಯಾದೀತು. ಅವನು ಅರ್ಜುನನೆಂಬುದು ವಿಪೃಥುವಿನಿಂದ ನಿಮಗೇ ಗೊತ್ತಾಗಿದೆ.
ದೇಯಾ ಚ ಕನ್ಯಾ ನಾಸ್ತಿ ಪಾರ್ಥೇನ ತುಲ್ಯೋ
ವರೋಽಸ್ಮಾಕಂ ಕೌರವೇಯಶ್ಚ ಪಾರ್ಥಃ|
ಪೌತ್ರಶ್ಚ ಕೃಷ್ಣಸ್ಯ ಸುಪೂರ್ಣಶಕ್ತೇಃ
ಪೈತೃಶ್ವಸೇಯೋ ವೀರತಮೋ ಗುಣಾಢ್ಯಃ ॥204॥
`ಕನ್ಯೆಯನ್ನು ಒಬ್ಬ ವರನಿಗೆ ಕೊಡಲೇಬೇಕು. ನಮಗೆ ಅರ್ಜುನನಂಥ ವರ ಇನ್ನೊಬ್ಬನಿಲ್ಲ. ಆತ ಕುರುಕುಲದವನು. ಪರಿಪೂರ್ಣಶಕ್ತರಾದ ವೇದವ್ಯಾಸರ ಮೊಮ್ಮಗ. ಅಲ್ಲದೇ ನಮ್ಮ ಸೋದರತ್ತೆಯ ಮಗನೂ ಆಗಿದ್ದಾನೆ. ಮಹಾವೀರ, ಒಳ್ಳೆಯ ಗುಣಶಾಲಿಯೂ ಕೂಡ.
ಅರ್ಥೋರ್ಽಸ್ಮಾಭಿಃ ಸ್ವಯಮೇವಾಹರತ್ ಸ
ಶಕ್ರಾತ್ಮಜೋ ನಾತ್ರ ನಃ ಕಾರ್ಯಹಾನಿಃ|
ಅನುದ್ರುತ್ಯೈನಂ ಯದಿ ಚ ಸ್ಯಾತ್ ಪರಾಜಯೋ
ಹಾನಿರ್ದೃಢಂ ಯಶಸೋ ವೋ ಭವೇತ ॥205॥
`ಇಂಥ ಅರ್ಜುನನನ್ನು ನಾನೇ ಕೇಳಬೇಕಾಗಿತ್ತು. ಈಗ ಅವನು ತಾನಾಗಿ ಬಂದು ಕನ್ಯೆಯನ್ನು ಅಪಹರಿಸಿದ್ದಾನೆ. ಇದರಲ್ಲಿ ನಮಗೆ ಕಾರ್ಯಹಾನಿ ಏನಾಗಲಿಲ್ಲ. ಇನ್ನು ಅವನನ್ನು ಬೆನ್ನಟ್ಟಿ ಹೋಗಿ ಒಂದುವೇಳೆ ನೀವೆ ಪರಾಜಿತರಾದಿರೆಂದರೆ ನಿಮ್ಮ ಯಶಸ್ಸಿಗೆ ನಿಶ್ಚಯವಾಗಿ ಕುಂದು ಬಂದೀತು.
ಜಿತ್ವಾ ಯದ್ಯೇನಂ ಕನ್ಯಕಾ ಚಾಹೃತಾ ಚೇತ್
ಪರಾಮೃಷ್ಟಾಂ ನೈವ ಕಶ್ಚಿದ್ದಿಲಿಪ್ಸೇತ್|
ಅತೋ ನ ಮೇ ರೋಚತೇ ವೋಽನುಯಾನ-
ಮಿತ್ಯೂಚಿವಾನಾಸ ತೂಷ್ಣೀಂ ಪರೇಶಃ ॥206॥
`ಅರ್ಜುನನನ್ನು ಗೆದ್ದು ಕನ್ಯೆಯನ್ನು ನೀವು ತಿರುಗಿ ತಂದರೂ ಇನ್ನೊಬ್ಬರು ಸ್ಪರ್ಶಿಸಿದ ಆ ಕನ್ಯೆಯನ್ನು ಯಾರೊಬ್ಬನೂ ಮದುವೆಯಾಗಲು ಬಯಸಲಾರ. ಅದರಿಂದ ಅವನನ್ನು ನೀವು ಬೆನ್ನಟ್ಟಿ ಹೋಗುವುದು ನನಗೆ ಸರಿಕಾಣುವುದಿಲ್ಲ'. ಹೀಗೆ ಹೇಳಿ ಕೃಷ್ಣ ಸುಮ್ಮನಾದ.
ಶ್ರುತ್ವಾ ಹಲೀ ಕೃಷ್ಣವಾಕ್ಯಂ ಬಭಾಷೇ
ಮಾ ಯಾತ ಚಿತ್ತಂ ವಿದಿತಂ ಮಮಾಸ್ಯ|
ಅಸ್ಯಾನುವೃತ್ತಿರ್ವಿಜಯಾಯ ನಃ ಸ್ಯಾತ್
ಶುಭಾಯ ಶಾಂತ್ಯೈ ಪರತಶ್ಚ ಮುಕ್ತ್ಯೈ ॥207॥
ಬಲರಾಮ ಕೃಷ್ಣನ ಮಾತನ್ನು ಕೇಳಿ ಯಾದವ ವೀರರಿಗೆ ನುಡಿದ `ನೀವು ಹೋಗಬೇಡಿರಿ. ಕೃಷ್ಣನ ಅಭಿಪ್ರಾಯ ನನಗೆ ತಿಳಿಯಿತು. ಅವನು ಹೇಳಿದಂತೆ ನಡೆಯುವುದರಲ್ಲಿಯೆ ನಮಗೆ ವಿಜಯವಿದೆ. ಮಂಗಳ, ಸಕಲಾರಿಷ್ಟ ಶಾಂತಿ ಪರಲೋಕದಲ್ಲಿ ಮುಕ್ತಿ ಎಲ್ಲವೂ ಇದೆ'.
ತತೋಽರ್ಜುನೋ ಯತ್ರ ತಿಷ್ಠೇನ್ನ ಕಶ್ಚಿತ್
ಪರಾಜವಂ ಯಾತಿ ಕೃಷ್ಣಾಜ್ಞಯೈವ|
ರಥೇನ ತೇನೈವ ಯಯೌ ಸಭಾರ್ಯಃ
ಶಕ್ರಪ್ರಸ್ಥಂ ಚಾವಿಶದ್ ಭ್ರಾತೃಗುಪ್ತಂ ॥208॥
ಅರ್ಜುನನೆಲ್ಲಿರುವನೋ ಅಲ್ಲಿ ಯಾರೊಬ್ಬನಿಗೂ ಪರಾಭವವೆ ಇಲ್ಲವೆಂದು ವೇದವ್ಯಾಸರ ಶಾಸನವೆ ಇದೆ. ಅಂಥ ಅರ್ಜುನ ಕೃಷ್ಣ ರಥದಿಂದಲೆ ಪ್ರಯಾಣ ಮಾಡಿದ. ಸೋದರರಿಂದ ಪಾಲಿತವಾಗುತ್ತಿದ್ದ ಇಂದ್ರಪ್ರಸ್ಥವನ್ನು ಪತ್ನೀಸಮೇತನಾಗಿ ಪ್ರವೇಶಿಸಿದ.
* * * *

ಇನ್ನೂರ ಇಪ್ಪತ್ತೈದನೆಯ ಅಧ್ಯಾಯ

(ಕೃಷ್ಣನ ಹಿತೋಪದೇಶದಿಂದ ಬಲರಾಮಾದಿಗಳ ಸಮಾಧಾನ, ಅರ್ಜುನನನ್ನು ಹಿಂಬಾಲಿಸಿದ ಯಾದವರ ಪ್ರತಿನಿವೃತ್ತಿ, ನೀಳದೇಶವನ್ನು ಅತಿಕ್ರಮಿಸಿ ಅರ್ಜುನನ ಕುರುದೇಶ ಪ್ರಾಪ್ತಿ.)
ವೈಶಂಪಾಯನಃ
ಉಕ್ತವಂತೋ ಯದಾ ವಾಕ್ಯಮಸಕೃತ್ ಸರ್ವವೃಷ್ಣಯಃ|
ತತೋಽಬ್ರವೀದ್ ವಾಸುದೇವೋ ವಾಕ್ಯಂ ಧರ್ಮಾರ್ಥಸಂಹಿತಮ್ ॥
ಎಲ್ಲ ವೃಷ್ಣಿಗಳೂ ಅನೇಕ ಬಾರಿ ಹೀಗೆ ಮಾತನಾಡಿದ ಮೇಲೆ ವಾಸುದೇವನು ಧರ್ಮಾರ್ಥಯುಕ್ತವಾದ ಮಾತುಗಳನ್ನು ಆಡಿದನು.
ಮಯೋಕ್ತಂ ನ ಶ್ರುತಂ ಪೂರ್ವಂ ಸಹಿತೈಃ ಸರ್ವಯಾದವೈಃ|
ಅತಿಕ್ರಾಂತಮತಿಕ್ರಾಂತಂ ನ ನಿವರ್ತತಿ ಕರ್ಹಿ ಚಿತ್ ॥2॥
ನಾನು ಮೊದಲು ಹೇಳಿದ ಮಾತುಗಳನ್ನು ಯಾವ ಯಾದವರೂ ಕೇಳಲಿಲ್ಲ. ಆದದ್ದು ಆಗಿಹೋಯಿತು, ಕಳೆದು ಹೋದದನ್ನು

ಹಿಂದಿರುಗಿಸಲು ಸಾಧ್ಯವಿಲ್ಲ.
ಶ್ರುಣುಧ್ವಂ ಸಹಿತಾಃ ಸರ್ವೇ ಮಮ ವಾಕ್ಯಂ ಸಹೇತುಕಮ್ |
ನಾವಮಾನಂ ಕುಲಸ್ಯಾಸ್ಯ ಗುಡಾಕೇಶಃ ಪ್ರಯುಕ್ತವಾನ್ ॥3॥
ನನ್ನ ಯುಕ್ತಿಯುಕ್ತವಾದ ಮಾತುಗಳನ್ನು ಎಲ್ಲರೂ ಜೊತೆಯಲ್ಲಿ ಕೇಳಿ. ಅರ್ಜುನನು ನಮ್ಮ ವಂಶಕ್ಕೆ ಯಾವ ಅವಮಾನವನ್ನೂ ಮಾಡಿಲ್ಲ.
ಸಮ್ಮಾನೋಽಭ್ಯಧಿಕಸ್ತೇನ ಪ್ರಯುಕ್ತೋಽಯಂ ನ ಸಂಶಯಃ |
ಅರ್ಥಲುಬ್ಧಾನ್ ನ ವಃ ಪಾರ್ಥೋ ಮನ್ಯತೇ ಸಾತ್ವತಾನ್ ಸದಾ ॥4॥
ಅದಕ್ಕೆ ಬದಲಾಗಿ ಅವನು ನಿಸ್ಸಂಶಯವಾಗಿ ನಮಗೆ ಹೆಚ್ಚಿನ ಸನ್ಮಾನವನ್ನೇ ಮಾಡಿದ್ದಾನೆಂದು ನನ್ನ ಅಭಿಪ್ರಾಯ. ಅರ್ಜುನನು ನಮ್ಮನ್ನು ಎಂದೂ ಧನದ ಲೋಭವುಳ್ಳವರು ಎಂದು ತಿಳಿದಿಲ್ಲ. (ಹಾಗೆ ತಿಳಿದಿದ್ದರೆ ಅವನು ಅಧಿಕವಾದ ಕನ್ಯಾಶುಲ್ಕವನ್ನು ಕೊಟ್ಟು ಸುಭದ್ರೆಯನ್ನು ಕರೆದುಕೊಂಡು ಹೋಗಿರುತ್ತಿದ್ದನು. ಹಾಗೆ ತಿಳಿಯದಿರುವುದು ಮೊದಲನೆಯ ಸನ್ಮಾನ)
ಸ್ವಯಂವರಮನಾಧೃಷ್ಯಂ ಮನ್ಯತೇ ಚಾಪಿ ಪಾಂಡವಃ |
ಪ್ರದಾನಮಪಿ ಕನ್ಯಾಯಾಃ ಪಶುವತ್ ಕೋ ನು ಮಂಸ್ಯತಿ ॥5॥
ಅರ್ಜುನನು ಸ್ವಯಂವರವನ್ನು ಅನಾಧೃಷ್ಯವೆಂದು ತಿಳಿದಿಲ್ಲ. (ಸ್ವಯಂವರದಲ್ಲಿ ಏನಾದರೂ ಪಣವನ್ನು ಒಡ್ಡಿದರೆ ಆ ಪಣವನ್ನು ಪೂರೈಸುವ ವೀರರು ಯಾದವರಲ್ಲೂ ಅನೇಕರಿರುವುದರಿಂದ ತನಗೆ ಸುಭದ್ರೆಯು ದೊರೆಯದಿರಬಹುದೆಂದು ತಿಳಿದಿದ್ದಾನೆ. ಇದು ನಮಗೆ ನೀಡಿದ ಎರಡನೆಯ ಸನ್ಮಾನ) ಪಶುದಾನವನ್ನು ಮಾಡಿದಂತೆ ಕನ್ಯಾದಾನವನ್ನು ಯಾವ ವೀರನು ಮನ್ನಿಸುತ್ತಾನೆ?
ವಿಕ್ರಿಯಂ ಚಾಪ್ಯಪತ್ಯಸ್ಯ ಕಃ ಕುರ್ಯಾತ್ ಪುರುಷೋ ಭುವಿ |
ಏತಾನ್ ದೋಷಾಂಸ್ತು ಕೌಂತೇಯೋ ದೃಷ್ಟವಾನಿತಿ ಮೇ ಮತಿಃ ॥6॥
ಭೂಮಿಯಲ್ಲಿ ಯಾವ ಪುರುಷನು ತನ್ನ ಮಕ್ಕಳ ವಿಕ್ರಯವನ್ನು ಮಾಡುತ್ತಾನೆ? (ಯಾದವರು ತಮ್ಮ ಪುತ್ರಿಯ ವಿಕ್ರಯವನ್ನು ಮಾಡುವುದಿಲ್ಲವೆಂದು ಅವನು ತಿಳಿದಿರುವುದು ನಮಗೆ ಮೂರನೆಯ ಸನ್ಮಾನ) ಕುಂತೀಪುತ್ರನಾದ ಅರ್ಜುನನು ಈ ದೋಷಗಳನ್ನು ಗಮನಿಸಿದ್ದಾನೆಂದು ನನ್ನ ಅಭಿಪ್ರಾಯ.
ಕ್ಷತ್ರಿಯಾಣಾಂ ತು ವೀರ್ಯೇಣ ಪ್ರಶಸ್ತಂ ಹರಣಂ ಬಲಾತ್ |
ಅತಃ ಪ್ರಸಹ್ಯ ಹೃತವಾನ್ ಕನ್ಯಾಂ ಧರ್ಮೇಣ ಪಾಂಡವಃ ॥7॥
ಕ್ಷತ್ರಿಯರಿಗೆ ತಮ್ಮ ಪರಾಕ್ರಮದಿಂದ ಬಲಾತ್ಕಾರದಿಂದ ಕನ್ಯೆಯನ್ನು ಹರಣಮಾಡುವುದು ಪ್ರಶಸ್ತವಾದುದು. ಆದ್ದರಿಂದ ಅರ್ಜುನನು ಬಲಪ್ರಯೋಗವನ್ನು ಮಾಡಿ ಧರ್ಮದಿಂದಲೇ ಕನ್ಯೆಯನ್ನು ಅಪಹರಿಸಿದ್ದಾನೆ.
ಉಚಿತಶ್ಚೈವ ಸಂಬಂಧಃ ಸುಭದ್ರಾ ಚ ಯಶಸ್ವಿನೀ |
ಏತಸ್ಯಾಃ ಸದೃಶಃ ಪಾರ್ಥಃ ಪ್ರಸಹ್ಯ ಹೃತವಾನುತ ॥8॥
ಈ ಸಂಬಂಧವು ನಮಗೆ ಉಚಿತವೇ ಆಗಿದೆ. ಯಶಸ್ವಿನಿಯಾದ ಸುಭದ್ರೆಗೆ ಅರ್ಜುನನು ಸದೃಶನಾದ ಪತಿ. ಅವಳನ್ನು ಅವನು ತನ್ನ ಪರಾಕ್ರಮದಿಂದ ಅಪಹರಿಸಿದ್ದಾನೆ.
ಭರತಸ್ಯಾನ್ವಯೇ ಜಾತಂ ಶಂತನೋಃ ಪೌತ್ರಮದ್ಯ ವೈ |
ಕುಂತಿಭೋಜಾತ್ಮಜಾಪುತ್ರಂ ಕೋ ಬುಭೂಷೇನ್ನ ಚಾರ್ಜುನಮ್ ॥9॥
ಭರತಕುಲದಲ್ಲಿ ಜನಿಸಿದ ಶಂತನುವಿನ ಪೌತ್ರನಾದ, ಕುಂತಿಭೋಜನ ಮಗಳಾದ ಕುಂತಿಯ ಪುತ್ರನಾದ ಅರ್ಜುನನನ್ನು ಈ ದಿನ ಹೊಂದಿ ಯಾರು ತಾನೆ ಶೋಭಿಸುವುದಿಲ್ಲ?
ನ ಚ ಪಶ್ಯಾಮಿ ಯಃ ಪಾರ್ಥಂ ವಿಕ್ರಮೇಣ ಪರಾಜಯೇತ್ |
ಅಪಿ ಸರ್ವೇಷು ಲೋಕೇಷು ಸದೇವಮನುಜೇಷ್ವಪಿ ॥10॥
ಅಲ್ಲದೇ, ದೇವಾಸುರಮನುಷ್ಯಸಹಿತವಾದ ಎಲ್ಲಾ ಲೋಕಗಳಲ್ಲಿ ಅರ್ಜುನನನ್ನು ತನ್ನ ಪರಾಕ್ರಮದಿಂದ ಸೋಲಿಸುವ ಒಬ್ಬ ವ್ಯಕ್ತಿಯನ್ನೂ ನಾನು ಕಾಣುತ್ತಿಲ್ಲ.
ಸ ಚ ನಾಮ ರಥಸ್ತಾದೃಜ್ ಮದೀಯಾಸ್ತೇ ಚ ವಾಜಿನಃ |
ಮಮ ಶಸಾಣತ್ರ ವಿಶೇಷೇಣ ತೂಣೀ ಚಾಕ್ಷಯಸಾಯಕೌ |
ಯೋದ್ಧಾ ಪಾರ್ಥಶ್ಚ ಶೀಘ್ರಾಸ್ತ್ರಃ ಕೋ ನು ತೇನ ಸಮೋ ಭವೇತ್ ॥
ಆ ನನ್ನ ರಥವು ಅಂತಹ ಮಹಿಮೆವುಳ್ಳದ್ದು. ಅಶ್ವಗಳೂ ನನ್ನವೇ, ಶಸ್ತ್ರಗಳೂ ವಿಶೇಷವಾಗಿ ನನ್ನವೇ, ಅಕ್ಷಯಬಾಣಗಳುಳ್ಳ ಬತ್ತಳಿಕೆಗಳಿವೆ, ಶೀಘ್ರಾಸ್ತ್ರನಾದ ಅರ್ಜುನನು ಯುದ್ಧಮಾಡುವವನು. ಅವನಿಗೆ ಸಮಾನರು ಯಾರಿದ್ದಾರೆ?
ತಮನುದ್ರುತ್ಯ ಸಾಂತ್ವೇನ ಪರಮೇಣ ಧನಂಜಯಮ್ |
ಹೃಷ್ಟಾಃ ಸರ್ವೇ ನಿವರ್ತಧ್ವಂ ಮಮೈಷಾ ಪರಮಾ ಮತಿಃ ॥12॥
ಅರ್ಜುನನನ್ನು ಪರಮಸಮಾಧಾನದಿಂದ ಹಿಂಬಾಲಿಸಿ ಅವನನ್ನು ಸಂತೋಷಪಡಿಸಿ ನೀವೂ ಸಂತುಷ್ಟರಾಗಿ ಹಿಂದಿರುಗಿ. ಇದು ನನ್ನ ಶ್ರೇಷ್ಠವಾದ ಅಭಿಪ್ರಾಯ.
ಯದಿ ನಿರ್ಜಿತ್ಯ ವಃ ಪಾರ್ಥೋ ಬಲಾದ್ ಗಚ್ಛೇತ್ ಸ್ವಕಂ ಪುರಮ್|
ವಿನಶ್ಯೇದ್ ವೋ ಯಶಃ ಸದ್ಯೋ ನ ತು ಸಾಂತ್ವೇ ಪರಾಜಯಃ |
ಪಿತೃಷ್ವಸಾಯಾಃ ಪುತ್ರೋ ಮೇ ಸಂಬಂಧಂ ನಾರ್ಹತಿ ದ್ವಿಷಾಮ್ ॥13॥
ಒಂದು ಪಕ್ಷ ಅರ್ಜುನನು ನಿಮ್ಮನ್ನು ಗೆದ್ದು ತನ್ನ ಪಟ್ಟಣಕ್ಕೆ ಹೋದರೆ ನಿಮ್ಮ ಕೀರ್ತಿಯು ತಕ್ಷಣದಲ್ಲಿಯೇ ನಾಶವನ್ನು ಹೊಂದುತ್ತದೆ. ಸಮಾಧಾನದಿಂದ ರಾಜಿ ಮಾಡಿಕೊಂಡರೆ ಅದೆಂದೂ ಪರಾಜಯವಲ್ಲ. ನನ್ನ ಸೋದರತ್ತೆಯ ಪುತ್ರನಾದ ಅರ್ಜುನನು ನನ್ನ ಶತ್ರುಗಳ

ಸಂಬಂಧಕ್ಕೆ ಯೋಗ್ಯನಲ್ಲವೇ ಹೊರತು, ನಮ್ಮ ಸಂಬಂಧಕ್ಕೆ ಯೋಗ್ಯನಲ್ಲ ಎಂಬ ಮಾತು ಎಂದಿಗೂ ಇಲ್ಲ.
ವೈಶಂಪಾಯನಃ
ತಚ್ಛ್ರುತ್ವಾ ವಾಸುದೇವಸ್ಯ ತಥಾ ಕರ್ತುಂ ಜನಾಧಿಪ |
ಉದ್ಯೋಗಂ ಕೃತವಂತಸ್ತೇ ಭೇರೀಂ ಸನ್ನಾದ್ಯ ಯಾದವಾಃ ॥14॥
ಜನಾಧಿಪನೇ, ವಾಸುದೇವನ ಆ ಮಾತುಗಳನ್ನು ಕೇಳಿ ಅದರಂತೆ ನಡೆದುಕೊಳ್ಳಲು ನಿರ್ಧರಿಸಿ ಯಾದವರೆಲ್ಲರೂ ಭೇರಿನಾದವನ್ನು ಮಾಡಿ ತಮ್ಮ ಉದ್ಯೋಗವನ್ನು ಉಪಕ್ರಮಿಸಿದರು.
ಅರ್ಜುನಸ್ತು ತದಾ ಶ್ರುತ್ವಾ ಭೇರೀಸನ್ನಾದನಂ ಮಹತ್ |
ಕೌಂತೇಯಸ್ತ್ವರಮಾಣಸ್ತು ಸುಭದ್ರಾಮಭ್ಯಭಾಷತ ॥15॥
ಅರ್ಜುನನಾದರೋ ಭೇರಿಗಳ ಈ ದೊಡ್ಡಧ್ವನಿಯನ್ನು ಕೇಳಿ ತ್ವರೆಮಾಡುತ್ತಾ ಸುಭದ್ರೆಗೆ ಹೇಳಿದನು.
ಅರ್ಜುನಃ
ಆಯಾಂತಿ ವೃಷ್ಣಯಃ ಸರ್ವೇ ಸಸುಹೃಜ್ಜನಬಾಂಧವಾಃ |
ತ್ವದರ್ಥಂ ಯೋದ್ಧುಕಾಮಾಸ್ತೇ ಮದರಕ್ತಾಂತಲೋಚನಾಃ ॥16॥
ನಿನ್ನ ಸುಹೃಜನರೂ ಮತ್ತು ಬಾಂಧವರಾದ ಎಲ್ಲಾ ವೃಷ್ಣಿಗಳೂ ಬರುತ್ತಿದ್ದಾರೆ. ಮದದಿಂದ ಕೆಂಪಾದ ಕಣ್ಣುಳ್ಳ ಅವರು ನಿನ್ನ ಸಲುವಾಗಿ ಯುದ್ಧಮಾಡಲು ಬಯಸಿದ್ದಾರೆ.
ಪ್ರಮದಾನಶುಚೀನ್ ಮೂಢಾನ್ ಸುರಾಮತ್ತಾನ್ ನರಾಧಮಾನ್ |
ವಮನಂ ಪಾನಶಾಟೀಂಸ್ತಾನ್ ಕರಿಷ್ಯಾಮಿ ಶರೋತ್ತಮೈಃ |
ಉತಾಹೋ ವಾ ಮದೋನ್ಮತ್ತಾನ್ ನಯಿಷ್ಯಾಮಿ ಯಮಕ್ಷಯಮ್ ॥
ನಾನು ನನ್ನ ಶ್ರೇಷ್ಠವಾದ ಬಾಣಗಳಿಂದ ಪ್ರಮತ್ತರೂ, ಅಶುಚಿಗಳೂ ಮೂಢರೂ, ಸುರಾಪಾನಮತ್ತರೂ, ಸುರೆಯ ಹಂಡೆಯಂತಿರುವವರೂ ಆದ ಆ ನರಾಧಮರನ್ನು ಸುರೆಯನ್ನು ಕಕ್ಕುವಂತೆ ಮಾಡುವೆನು, ಇಲ್ಲದಿದ್ದರೆ ಮದೋನ್ಮತ್ತರಾದ ಅವರನ್ನು ಯಮಲೋಕಕ್ಕೆ ಕಳುಹಿಸುವೆನು.
ವೈಶಂಪಾಯನಃ
ಏವಮುಕ್ತ್ವಾ ಪ್ರಿಯಾಂ ಪಾರ್ಥೋ ನ್ಯವರ್ತತ ಮಹಾಬಲಃ |
ನಿವರ್ತಮಾನಂ ದೃಷ್ಟ್ವೈವ ಸುಭದ್ರಾ ತ್ರಸ್ತತಾಂ ಗತಾ |
ಏವಂ ಮಾ ವದ ಪಾರ್ಥೇತಿ ಪಾದಯೋಃ ಪತಿತಾ ತದಾ ॥18॥
ಮಹಾಬಲನಾದ ಅರ್ಜುನನು ತನ್ನ ಪ್ರಿಯೆಗೆ ಹೀಗೆ ಹೇಳಿ ಹಿಂದಿರುಗಿ ನಿಂತನು. ಹಿಂದಿರುಗಿದ ಅರ್ಜುನನನ್ನು ನೋಡಿದ ಕೂಡಲೇ ಸುಭದ್ರೆಯು ಭಯಗ್ರಸ್ತಳಾದಳು. ಅರ್ಜುನ, ಹೀಗೆ ಮಾಡಬೇಡ ಎಂದು ಹೇಳುತ್ತಾ ಅವನ ಪಾದಗಳ ಮೇಲೆ ಬಿದ್ದಳು.
ಸುಭದ್ರಾ
ಸುಭದ್ರಾ ತು ಕಲಿರ್ಜಾತಾ ವೃಷ್ಣೀನಾಂ ನಿಧನಾಯ ಚ |
ಏವಂ ಬ್ರುವಂತಃ ಪೌರಾಸ್ತೇ ಜನವಾದಂ ಜನಾಃ ಪ್ರಭೋ ॥19॥
ಮಮ ಶೋಕಂ ವಿವರ್ಧಂತೇ ತಸ್ಮಾತ್ ಪಾಪಂ ನ ಚಿಂತಯ |
ಪರಿವಾದಭಯಾನ್ಮುಕ್ತಾ ತ್ವತ್ಪ್ರಸಾದಾದ್ ಭವಾಮ್ಯಹಮ್ ॥20॥
ಪ್ರಭು, ವೃಷ್ಣಿಗಳ ನಿಧನಕ್ಕಾಗಿ ಸುಭದ್ರೆಯು ಕಲಹಬೀಜಳಾದಳು ಎಂಬ ಅಪವಾದವನ್ನು ಪೌರಜನರು ಎಲ್ಲಾ ಕಡೆಯಲ್ಲಿ ಹರಡಿ ನನ್ನ ಶೋಕವನ್ನು ಹೆಚ್ಚಿಸುತ್ತಾರೆ, ಆದ್ದರಿಂದ ಕೆಟ್ಟದ್ದನ್ನು ಯೋಚಿಸಬೇಡ. ನಿನ್ನ ಅನುಗ್ರಹದಿಂದ ನಾನು ಲೋಕಾಪವಾದದಿಂದ ಮುಕ್ತಳಾಗುತ್ತೇನೆ.
ವೈಶಂಪಾಯನಃ
ಏವಮುಕ್ತಸ್ತತಃ ಪಾರ್ಥಃ ಪ್ರಿಯಯಾ ಭದ್ರಯಾ ತದಾ |
ಗಮನಾಯ ಮತಿಂ ಚಕ್ರೇ ಪಾರ್ಥಃ ಸತ್ಯಪರಾಕ್ರಮಃ ॥21॥
ಪ್ರಿಯೆಯಾದ ಸುಭದ್ರೆಯು ಹೀಗೆ ಹೇಳಿದಾಗ ಸತ್ಯಪರಾಕ್ರಮನಾದ  ಪಾರ್ಥನು ಅಲ್ಲಿಂದ ಪುನಃ ಹೊರಡಲು ನಿರ್ಧರಿಸಿದನು.
ಸ್ಮಿತಪೂರ್ವಂ ತದಾಽಽಭಾಷ್ಯ ಪರಿಷ್ವಜ್ಯ ಪ್ರಿಯಾಂ ತದಾ |
ಉತ್ಥಾಪ್ಯ ಚ ತತಃ ಪಾರ್ಥೋ ಯಾಹಿ ಯಾಹೀತಿ ಸೋಽಬ್ರವೀತ್ ॥
ಅರ್ಜುನನು ತನ್ನ ಪ್ರಿಯೆಯನ್ನು ಎತ್ತಿ ಅವಳನ್ನು ಆಲಿಂಗಿಸಿ ಮುಗುಳ್ನಗೆಯಿಂದ ಮಾತನಾಡಿಸಿ ಹೊರಡು ಹೊರಡು ಎಂದು ಹೇಳಿದನು.
ತತಃ ಸುಭದ್ರಾ ತ್ವರಿತಾ ರಶ್ಮೀನ್ ಸಂಗೃಹ್ಯ ಪಾಣಿನಾ |
ಚೋದಯಾಮಾಸ ಜವನಾನ್ ಶೀಘ್ರಮಶ್ವಾನ್ ಕೃತತ್ವರಾ ॥23॥
ಆಗ ಸುಭದ್ರೆಯು ಶೀಘ್ರವಾಗಿ ಕಡಿವಾಣವನ್ನು ಹಿಡಿದು ತ್ವರೆಮಾಡಿ ವೇಗವಾಗಿ ಚಲಿಸುವ ಅಶ್ವಗಳನ್ನು ಪ್ರಚೋದಿಸಿದಳು.
ತತಸ್ತು ಕೃತಸನ್ನಾಹಾ ವೃಷ್ಣಿವೀರಾಃ ಸಮಾಹಿತಾಃ |
ಪ್ರತ್ಯಾನಯಾರ್ಥಂ ಪಾರ್ಥಸ್ಯ ಜವನೈಸ್ತುರಗೋತ್ತಮೈಃ ॥24॥
ಅನಂತರ, ಏಕಾಗ್ರತೆಯಿಂದ ಕೂಡಿದ್ದ ವೃಷ್ಣಿವೀರರು ಅರ್ಜುನನು ಹಿಂದೆ ಕರೆತರಲು ವೇಗವಾಗಿ ಚಲಿಸುವ ಕುದುರೆಗಳನ್ನು ರಥಗಳಿಗೆ ಹೂಡಿ ಹೊರಟರು.
ರಾಜಮಾರ್ಗಮನುಪ್ರಾಪ್ತಾ ದೃಷ್ಟ್ವಾ ಪಾರ್ಥಸ್ಯ ವಿಕ್ರಮಮ್ |

ಪ್ರಾಸಾದಪಂಕ್ತಿಸ್ತಂಭೇಷು ವೇದಿಕಾಸು ಧ್ವಜೇಷು ಚ |
ಅರ್ಜುನಸ್ಯ ಶರಾನ್ ದೃಷ್ಟ್ವಾ ವಿಸ್ಮಯಂ ಪರಮಂ ಗತಾಃ ॥25॥
ಅವರು ರಾಜಮಾರ್ಗವನ್ನು ತಲುಪಿ ಪ್ರಾಸಾದಪಂಕ್ತಿಗಳಲ್ಲಿಯೂ, ಕಂಬಗಳಲ್ಲಿಯೂ, ವೇದಿಕೆಗಳಲ್ಲಿಯೂ, ಧ್ವಜಗಳಲ್ಲಿಯೂ ನಾಟಿದ್ದ ಅರ್ಜುನನ ಬಾಣಗಳನ್ನು ನೋಡಿ ಅವನ ವಿಕ್ರಮವನ್ನು ನೆನೆದು ಬಹಳ ವಿಸ್ಮಿತರಾದರು.
ಕೇಶವಸ್ಯ ವಚಸ್ತಥ್ಯಂ ಮನ್ಯಮಾನಾಸ್ತು ಯಾದವಾಃ |
ಅತೀತ್ಯ ಶೈಲಂ ರೈವತಕಂ ಶ್ರುತ್ವಾ ತು ವಿಪೃಥೋರ್ವಚಃ ॥26॥
ಅರ್ಜುನೇನ ಕೃತಂ ಶ್ರುತ್ವಾ ಗಂತುಕಾಮಾಸ್ತು ವೃಷ್ಣಯಃ |
ಶ್ರುತ್ವಾ ದೀರ್ಘಗತಂ ಪಾರ್ಥಂ ನ್ಯವರ್ತಂತ ನರಾಧಿಪಾಃ ॥27॥
ಕೃಷ್ಣನ ಮಾತು ಸತ್ಯವೆಂದು ತಿಳಿದ ಯಾದವರು ರೈವತಕಪರ್ವತವನ್ನು ದಾಟಿ ವಿಪೃಥುವಿನ ಮಾತುಗಳನ್ನು ಕೇಳಿ, ಅರ್ಜುನನ ಕೌಶಲದ ಕಾರ್ಯವನ್ನು ಕೇಳಿ ಮುಂದೆ ಪ್ರಯಾಣ ಮಾಡಲು ಬಯಸಿ ಅರ್ಜುನನು ಬಹಳ ದೂರ ಹೋಗಿದ್ದಾನೆ ಎಂಬ ವಾರ್ತೆಯನ್ನು ಕೇಳಿ ಹಿಂದಿರುಗಿದರು.
ಪುರೋದ್ಯಾನಮತಿಕ್ರಮ್ಯ ವಿಶಾಲಂ ಚ ಗಿರಿವ್ರಜಮ್ |
ಸಾನೂನ್ಯುಜ್ಜಾಯಿನೀಂ ಚೈವ ವನಾನ್ಯುಪವನಾನಿ ಚ |
ಪುಣ್ಯೇಷ್ವಾನರ್ತರಾಷ್ಟ್ರೇಷು ವಾಪೀಪದ್ಮಸರಾಂಸಿ ಚ ॥28॥
ಪ್ರಾಪ್ಯ ಧೇನುಮತೀತೀರ್ಥಮಶ್ವರೋಧಸರಃ ಪ್ರತಿ |
ಪ್ರೇಕ್ಷ್ಯವೃತ್ತಸ್ತತಃ ಶೈಲಮಂಬುದಂ ಚ ನಗೋತ್ತಮಮ್ ॥29॥
ಇತ್ತಕಡೆ ಅರ್ಜುನನು ಪುರೋದ್ಯಾನವನ್ನು ದಾಟಿ ವಿಶಾಲವಾದ ಗಿರಿವ್ರಜವನ್ನೂ, ಪರ್ವತಶಿಖರಗಳನ್ನೂ, ವನಉಜ್ಜಯಿನಿಯನ್ನೂ, ವನ ಮತ್ತು ಉಪವನಗಳನ್ನೂ, ಪವಿತ್ರವಾದ ಆರ್ತ ದೇಶವನ್ನೂ, ವಾಪಿಗಳನ್ನೂ, ಪದ್ಮಸರೋವರಗಳನ್ನೂ ದಾಟಿ ಧೇನುಮತಿ ತೀರ್ಥವನ್ನೂ, ಅಶ್ವರೋಧ ಸರೋವರವನ್ನೂ ತಲುಪಿ ಎಲ್ಲವನ್ನೂ ನೋಡಿ ಸಂತುಷ್ಟನಾಗಿ ಅಲ್ಲಿಂದ ಮುಂದೆ ಪರ್ವತಶ್ರೇಷ್ಠವಾದ ಅಂಬುದ ಪರ್ವತದ ಕಡೆಗೆ ಸಾಗಿದನು.
ಆರಾಚ್ಛೃಂಗಮಥಾಸ್ಥಾಯ ತೀರ್ತ್ವಾ ಕಾರವತೀಂ ನದೀಮ್ |
ಪ್ರಾಪ್ಯ ಸಾಲ್ವೇಯರಾಷ್ಟ್ರಾಣಿ ನಿಷಧಾನಪ್ಯತೀತ್ಯ ಚ ॥30॥
ದೇವಾಪೃಥುಪುರಂ ಪಶ್ಯನ್ ಸರ್ವತಃ ಸುಸಮಾಹಿತಃ |
ತಮತೀತ್ಯ ಮಹಾಬಾಹುರ್ದೇವಾರಣ್ಯಮಪಶ್ಯತ ॥31॥
ಅನಂತರ, ಶೃಂಗ ಪರ್ವತವನ್ನು ತಲುಪಿ ಕಾರವತಿ ನದಿಯನ್ನು ದಾಟಿ, ಸಾಲ್ವರಾಷ್ಟ್ರಗಳನ್ನೂ, ನಿಷಧರಾಷ್ಟ್ರಗಳನ್ನೂ ದಾಟಿ ದೇವಾಪೃಥು ಪಟ್ಟಣವನ್ನು ನೋಡುತ್ತಾ ಸಮಾಧಾನದಿಂದ ಅದನ್ನು ದಾಟಿ ಮಹಾಬಾಹುವಾದ ಅವನು ದೇವಾರಣ್ಯವನ್ನು ನೋಡಿದನು.
ಪೂಜಯಾಮಾಸುರಾಯಾಂತಂ ದೇವಾರಣ್ಯೇ ಮಹರ್ಷಯಃ |
ಸ ವನಾನಿ ನದೀಃ ಶೈಲಾನ್ ಗಿರಿಪ್ರಸ್ರವಣಾನಿ ಚ ॥32॥
ಅತೀತ್ಯ ಚ ತದಾ ಪಾರ್ಥಃ ಸುಭದ್ರಾಸಾರಥಿಸ್ತಥಾ |
ಕೌರವಂ ವಿಷಯಂ ಪ್ರಾಪ್ಯ ವಿಶೋಕಃ ಸಮಪದ್ಯತ ॥33॥
ದೇವಾರಣ್ಯದಲ್ಲಿ ಮಹರ್ಷಿಗಳು ಅಲ್ಲಿಗೆ ಬಂದ ಅರ್ಜುನನನ್ನು ಪೂಜಿಸಿದರು. ಅರ್ಜುನನು ಅಲ್ಲಿಂದ ಹೊರಟು ವನಗಳನ್ನೂ, ನದಿಗಳನ್ನೂ, ಪರ್ವತಗಳನ್ನೂ, ಗಿರಿನದಿಗಳನ್ನೂ ದಾಟಿ ಸುಭದ್ರೆಯ ಸಾರಥ್ಯದಲ್ಲಿ ಕುರುದೇಶವನ್ನು ತಲುಪಿ ನಿಶ್ಚಿಂತನಾದನು.
ಸೋದರ್ಯಾಣಾಂ ಮಹಾಬಾಹುಃ ಸಿಂಹಾಶ್ರಯಮಿವಾಶಯಮ್ |
ಆರಾದುಪವನೋಪೇತಂ ದದರ್ಶಾಪ್ರತಿಮಂ ಪುರಮ್ ॥36॥
ಮಹಾಬಾಹುವಾದ ಅರ್ಜುನನು ಸಿಂಹದ ಗುಹೆಯಂತೆ ತನ್ನ ಸಹೋದರರಿಗೆ ಆಶ್ರಯವಾದ, ಉಪವನಗಳಿಂದ ಕೂಡಿದ ಆ ಅಸದೃಶವಾದ ಪಟ್ಟಣವನ್ನು ದೂರದಿಂದ ನೋಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಹರಣಹಾರಿಕಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸಂಭಾವಿತೋ ಭ್ರಾತೃಭಿಶ್ಚಾತಿತುಷ್ಟೈ-
ರೂಚೇಽಥ ಸರ್ವಂ ತೇಷು ಯಚ್ಚಾತ್ಮವೃತ್ತಂ |
ಶಾಂತೇಷು ವಾಕ್ಯಾದಾತ್ಮನೋ ಯಾದವೇಷು
ಕೃಷ್ಣೋ ಯುಕ್ತೋ ಹಲಿನಾಗಾಚ್ಚ ಪಾರ್ಥಾನ್ ॥209॥
ಸೋದರರೆಲ್ಲರೂ ಬಲು ಸಂತುಷ್ಟರಾಗಿ ಅರ್ಜುನನನ್ನು ಆದರಿಸಿದರು. ಬಳಿಕ ಅರ್ಜುನ ತನ್ನ ಎಲ್ಲ ವೃತ್ತಾಂತವನ್ನೂ ಬಣ್ಣಿಸಿದ. ಕೃಷ್ಣ ತನ್ನ ಮಾತಿನಿಂದ ಯಾದವರೆಲ್ಲರೂ ಶಾಂತರಾದಾಗ ಬಲರಾಮನೊಂದಿಗೆ ಪಾಂಡವರ ಬಳಿಗೆ ಬಂದ.
*****

ಇನ್ನೂರ ಇಪ್ಪತ್ತಾರನೆಯ ಅಧ್ಯಾಯ
(ಅರ್ಜುನನ ಸ್ವಭವನ ಪ್ರಾಪ್ತಿ, ಗೋಪಾಲಿಕೆ ವೇಷದಿಂದ ಸುಭದ್ರೆಯ ಪ್ರವೇಶ, ಕುಂತಿಯ ಮತ್ತು ದ್ರೌಪದಿಯ ಆಶೀರ್ವಾದ, ಎಲ್ಲರ ಹರ್ಷ.)
ವೈಶಂಪಾಯನಃ
ಕ್ರೋಶಮಾತ್ರೇ ಪುರಸ್ಯಾಸೀದ್ ಗೋಷ್ಠಃ ಪಾರ್ಥಸ್ಯ ಶೋಭನಃ |
ತತ್ರಾಭಿಯಾತ್ವಾ ಬೀಭತ್ಸುರ್ನಿವಿಷ್ಟೋ ಯದುಕನ್ಯಯಾ ॥1॥
ಇಂದ್ರಪ್ರಸ್ಥ ಪಟ್ಟಣದಿಂದ ಒಂದು ಕ್ರೋಶ ದೂರದಲ್ಲಿ ಅರ್ಜುನನ ಶ್ರೇಷ್ಠವಾದ ಕೊಟ್ಟಿಗೆ ಇದ್ದಿತು. ಅರ್ಜುನನು ಸುಭದ್ರೆಯ ಜೊತೆಯಲ್ಲಿ ಹೋಗಿ ಅಲ್ಲಿ ತಂಗಿದನು. (ಒಂದು ಮೈಲು ಕ್ರೋಶ)
ತತಃ ಸುಭದ್ರಾಂ ಸತ್ಕೃತ್ಯ ಪಾರ್ಥೋ ವಚನಮಬ್ರವೀತ್ |
ಗೋಪಾಲಿಕಾನಾಂ ವೇಷೇಣ ಗಚ್ಛ ತ್ವಂ ವ್ರಜಿನಂ ಪುರಮ್ ॥2॥
ಅನಂತರ ಅರ್ಜುನನು ಸುಭದ್ರೆಯನ್ನು ಸತ್ಕರಿಸಿ ನೀನು ಗೋಪಾಲಿಕೆ ವೇಷದಿಂದ ವ್ರಜಿನ ಪಟ್ಟಣಕ್ಕೆ ಹೋಗು ಎಂದು ಹೇಳಿದನು. ವ್ರಜಿನ ಎಂದರೆ ವಕ್ರ. ಕೌರವರು ಮೊದಲು ವಕ್ರವಾದ ವಾಸ್ತುವಿನಿಂದ ನಿರ್ಮಿಸಿದ ಕಾರಣ ಇಂದ್ರಪ್ರಸ್ಥಕ್ಕೆ ವ್ರಜಿನಪುರ ಎಂದು ಹೆಸರು. ಸುತ್ತಲೂ ಗೋಶಾಲೆಗಳಿರುವದರಿಂದಲೂ ಅದು ವ್ರಜಿನಪುರ. ಶತ್ರುಗಳು ಪ್ರವೇಶಿಸದಂತೆ ವಕ್ರವಾದ ಮಾರ್ಗಗಳನ್ನು ಹೊಂದಿರುವುದರಿಂಲೂ ಅದು ವ್ರಜಿನಪುರ. ದುರ್ಜನರಿಗೆ ಸಹಿಸಲು ಅಸಾಧ್ಯವಾಗಿ ವಕ್ರವಾಗಿರುವ ಕಾರಣದಿಂದಲೂ ಅದು ವ್ರಜಿನಪುರ. ನಾನಾ ಸೇವಕ ವ್ರಜವುಳ್ಳ ಧರ್ಮರಾಜನು ನೇತಾರನಾದುದರಿಂದಲೂ ಅದಕ್ಕೆ ವ್ರಜಿನಪುರ ಎಂದು ಹೆಸರು.
ಕಾಮವ್ಯಾಹಾರಿಣೀ ಕೃಷ್ಣಾ ರೋಚತಾಂ ತೇ ವಚೋ ಮಮ |
ದೃಷ್ಟ್ವಾ ತು ಪರುಷಂ ಬ್ರೂಯಾತ್ ಸಹ ತತ್ರ ಮಯಾ ಗತಾಮ್ ॥3॥
ದ್ರೌಪದಿಯು ತನ್ನ ಮನಸ್ಸಿಗೆ ಬಂದಂತೆ ಪ್ರಿಯವಾಗಿ ಅಥವಾ ನಿಷ್ಠುರವಾಗಿ ಮಾತನಾಡುವ ಸ್ವಭಾವದವಳು. ನೀನು ನನ್ನ ಮಾತನ್ನು ಕೇಳು. ನೀನು ನನ್ನ ಜೊತೆಯಲ್ಲಿ ಅವಳ ಸಮೀಪಕ್ಕೆ ಬಂದರೆ ಅವಳು ನಿಷ್ಠುರವಾಗಿ ಮಾತುಗಳನ್ನು ಆಡಬಹುದು.
ಅನ್ಯವೇಷೇಣ ತು ಗತಾಂ ದೃಷ್ಟ್ವಾ ಸಾ ತ್ವಾ ಪ್ರಿಯಂ ವದೇತ್ |
ಯತ್ತು ಸಾ ಪ್ರಥಮಂ ಬ್ರೂಯಾನ್ನ ತಸ್ಯಾಸ್ತಿ ನಿವರ್ತನಮ್ ॥4॥
ತಸ್ಮಾನ್ಮಾನಂ ಚ ದರ್ಪಂ ಚ ವ್ಯಪನೀಯ ಸ್ವಯಂ ವ್ರಜ |
ತಸ್ಯ ತದ್ವಚನಂ ಶ್ರುತ್ವಾ ಸುಭದ್ರಾ ಪ್ರತ್ಯಭಾಷತ |
ಏವಮೇತತ್ ಕರಿಷ್ಯಾಮಿ ಯಥಾ ತ್ವಂ ಪಾರ್ಥ ಭಾಷಸೇ ॥5॥
ನೀನು ವೇಷಾಂತರದಿಂದ ಹೋದರೆ ಅವಳು ನಿನ್ನನ್ನು ನೋಡಿ ಪ್ರಿಯವಾಗಿಯೇ ಮಾತನಾಡುತ್ತಾಳೆ. ಅವಳು ಮೊದಲು ಏನು ನುಡಿಯುತ್ತಾಳೋ ಅದನ್ನು ಎಂದಿಗೂ ಬದಲಾಯಿಸುವುದಿಲ್ಲ. ಆದ್ದರಿಂದ ನೀನು ಮಾನವನ್ನೂ ಮತ್ತು ದರ್ಪವನ್ನೂ ಬಿಟ್ಟು ನೀನೆ ಅಲ್ಲಿಗೆ ಹೋಗು. ಅವನ ಈ ಮಾತುಗಳನ್ನು ಕೇಳಿ ಸುಭದ್ರೆಯು ಪಾರ್ಥನೇ, ನಿನ್ನ ಮಾತಿನಂತೆಯೇ ನಡೆಯುವೆನು ಎಂದು ಪ್ರತ್ಯುತ್ತರವನ್ನು ಕೊಟ್ಟಳು.
ವೈಶಂಪಾಯನಃ
ಸುಭದ್ರಾವಚನಂ ಶ್ರುತ್ವಾ ಸುಪ್ರೀತಃ ಪಾಕಶಾಸನಿಃ |
ಗೋಪಾಲಾನ್ ಸ ಸಮಾನೀಯ ತ್ವರಿತೋ ವಾಕ್ಯಮಬ್ರವೀತ್ ॥6॥
ಸುಭದ್ರೆಯ ಮಾತನ್ನು ಕೇಳಿ ಸಂತೋಷಗೊಂಡ ಅರ್ಜುನನು ತಕ್ಷಣ ಗೋಪಾಲಕರನ್ನು ಕರೆದು ಮಾತನಾಡಿದನು.
ತರುಣ್ಯಃ ಸಂತಿ ಯಾವತ್ಯಸ್ತಾಃ ಸರ್ವಾ ವ್ರಜಯೋಷಿತಃ |
ಆಗಚ್ಛಂತು ಗಮಿಷ್ಯಂತ್ಯಾ ಭದ್ರಯಾ ಸಹ ಸಂಗತಾಃ |
ಇಂದ್ರಪ್ರಸ್ಥಂ ಪುರವರಂ ಕೃಷ್ಣಾಂ ದ್ರಷ್ಟುಂ ಯಶಸ್ವಿನೀಮ್ ॥7॥
ವ್ರಜಸ್ತ್ರೀಯರಲ್ಲಿ ಎಷ್ಟು ಜನ ತರುಣಿಯರಿದ್ದಾರೆಯೋ ಅವರೆಲ್ಲರೂ ಯಶಸ್ವಿನಿಯಾದ ದ್ರೌಪದಿಯನ್ನು ನೋಡಲು ಶ್ರೇಷ್ಠವಾದ ಇಂದ್ರಪ್ರಸ್ಥ ಪಟ್ಟಣಕ್ಕೆ ಹೋಗುತ್ತಿರುವ ಸುಭದ್ರೆಯ ಜೊತೆಯಲ್ಲಿ ಸೇರಿಕೊಂಡು ಒಟ್ಟಿಗೆ ಹೋಗಲಿ.
ವೈಶಂಪಾಯನಃ
ಏತಚ್ಛ್ರುತ್ವಾ ತು ಗೋಪಾಲೈರಾನೀತಾ ವ್ರಜಯೋಷಿತಃ |
ತತಸ್ತಾಭಿಃ ಪರಿವೃತಾಂ ವ್ರಜಸ್ತ್ರೀಭಿಃ ಸಮಂತತಃ ॥8॥
ಸುಭದ್ರಾಂ ತ್ವರಮಾಣಸ್ತು ರಕ್ತಕೌಶೇಯವಾಸಸೀಮ್ |
ಪಾರ್ಥಃ ಪ್ರಸ್ಥಾಪಯಾಮಾಸ ಕೃತ್ವಾ ಗೋಪಾಲಿಕಾವಪುಃ ॥9॥
ಈ ಮಾತನ್ನು ಕೇಳಿ ಗೋಪಾಲಕರು ವ್ರಜತರುಣಿಯರನ್ನು ಕರೆದು ತಂದರು. ಆಗ ಅರ್ಜುನನು ಸುಭದ್ರೆಗೆ ಕೆಂಪುರೇಶ್ಮೆಯ ವಸ್ತ್ರಗಳನ್ನು ಉಡಿಸಿ ಗೋಪಾಲಿಕರ ವೇಷದಲ್ಲಿ ಅಲಂಕರಿಸಿ ಅವರ ಜೊತೆಯಲ್ಲಿ ಶೀಘ್ರವಾಗಿ ಕಳುಹಿಸಿದನು.
ಸಾऽಧಿಕಂ ತೇನ ರೂಪೇಣ ಶೋಭಮಾನಾ ಯಶಸ್ವಿನೀ |
ಗೋಪಾಲಿಕಾಮಧ್ಯಗತಾ ಪ್ರಯಯೌ ವ್ರಜಿನಂ ಪುರಮ್ ॥10॥
ಗೋಪಾಲಿಕೆಯರ ಮಧ್ಯದಲ್ಲಿ ಗೋಪಾಲಿಕರ ವೇಷವನ್ನು ಧರಿಸಿದ್ದ ಯಶಸ್ವಿನಿಯಾದ ಸುಭದ್ರೆಯು ಇನ್ನೂ ಅಧಿಕವಾಗಿ ಶೋಭಿಸುತ್ತಾ ಇಂದ್ರಪ್ರಸ್ಥಕ್ಕೆ ಹೊರಟಳು.
ತತಃ ಪುರವರಶ್ರೇಷ್ಠಮಿಂದ್ರಪ್ರಸ್ಥಂ ಯಶಸ್ವಿನೀ |
ತ್ವರಿತಾ ಖಾಂಡವಪ್ರಸ್ಥಮಾಸಸಾದ ವಿವೇಶ ಚ ॥11॥

ಅನಂತರ, ಯಶಸ್ವಿನಿಯಾದ ಅವಳು ಖಾಂಡವಪ್ರಸ್ಥ ಪ್ರದೇಶವನ್ನು ತಲುಪಿ ಅಲ್ಲಿ ಇಂದ್ರಪ್ರಸ್ಥನಗರವನ್ನು ಪ್ರವೇಶಿಸಿದಳು.
ಸಾ ಗೃಹಶ್ರೇಷ್ಠಮಾಸಾದ್ಯ ವೀರಪತ್ನೀ ಯಶಸ್ವಿನೀ |
ವವಂದೇ ಪೃಥುತಾಮ್ರಾಕ್ಷೀ ಪೃಥಾಂ ಭದ್ರಾ ಪಿತೃಷ್ವಸಾಮ್ ॥12॥
ವೀರಪತ್ನಿಯೂ, ಯಶಸ್ವಿನಿಯೂ ವಿಶಾಲರಕ್ತಾಕ್ಷಿಯೂ ಆದ ಸುಭದ್ರೆಯು ಶ್ರೇಷ್ಠವಾದ ಮನೆಯನ್ನು ಪ್ರವೇಶಿಸಿ ತನ್ನ ಸೋದರತ್ತೆಯನ್ನು ನಮಸ್ಕರಿಸಿದಳು.
ತತೋಽಭಿಗಮ್ಯ ತ್ವರಿತಾ ಪೂರ್ಣೇಂದುಸದೃಶಾನನಾ |
ವವಂದೇ ದ್ರೌಪದೀಂ ಭದ್ರಾ ಪ್ರೇಷ್ಯಾಽಹಮಿತಿ ಚಾಬ್ರವೀತ್ ॥13॥
ಪೂರ್ಣೇಂದುಸದೃಶವಾದ ಮುಖವುಳ್ಳ ಅವಳು ಶೀಘ್ರವಾಗಿ ಅಲ್ಲಿಂದ ಬಂದು ದ್ರೌಪದಿಯನ್ನು ಸಮೀಪಿಸಿ ನಾನು ನಿನ್ನ ಸೇವಕಿ ಎಂದು ಹೇಳುತ್ತಾ ಅವಳಿಗೆ ನಮಸ್ಕರಿಸಿದಳು.
ಪ್ರತ್ಯುತ್ಥಾಪ್ಯ ತು ತಾಂ ದೇವೀಂ ಕೃಷ್ಣಾ ಕೃಷ್ಣಸಹೋದರೀಮ್ |
ಸಸ್ವಜೇ ಚಾವದತ್ ಪ್ರೀತ್ಯಾ ನಿಃಸಪತ್ನೋಽಸ್ತು ತೇ ಪತಿಃ ॥14॥
ಕೃಷ್ಣೆಯು ಕೃಷ್ಣಸಹೋದರಿಯಾದ ಅವಳನ್ನು ಎತ್ತಿ ಆಲಿಂಗಿಸಿ ನಿನ್ನ ಪತಿಯು ನಿಶ್ಶತ್ರುವಾಗಲಿ ಎಂದು ಪ್ರೀತಿಯಿಂದ ಹೇಳಿದಳು.
ವೀರಸೂರ್ಭವ ಭದ್ರೇ ತ್ವಂ ಭವ ಭರ್ತೃಪ್ರಿಯಾ ತಥಾ |
ಓಜಸಾ ನಿರ್ಜಿತಾ ಬಹ್ವೀರುವಾಚ ಪರಮಾಶಿಷಃ ॥15॥
ತಥೈವ ಮುದಿತಾ ಭದ್ರಾ ತಾಮುವಾಚ ತಥಾಽಸ್ತ್ವಿತಿ |
ಮಂಗಳಸ್ವರೂಪಳೇ, ನೀನು ಪತಿಗೆ ಪ್ರಿಯಳಾಗಿ ವೀರರಾದ ಮಕ್ಕಳನ್ನು ಪಡೆ ಎಂದು ಮೊದಲಾಗಿ ಅವಳ ಕಾಂತಿಯಿಂದ ಮನಸೋತು ಅನೇಕ ಮಂಗಳಾಶೀರ್ವಾದದ ಮಾತುಗಳನ್ನು ಆಡಿದಳು. ಸುಭದ್ರೆಯೂ ಸಹ ಸಂತೋಷದಿಂದ ಅವಳನ್ನು ಕುರಿತು ನಿನ್ನ ಆಶೀರ್ವಾದದಂತೆಯೇ ಆಗಲಿ ಎಂದು ಹೇಳಿದಳು.
ತತಃ ಸುಭದ್ರಾಂ ವಾರ್ಷ್ಣೇಯೀ ಪರಿಷ್ವಜ್ಯ ಶುಭಾನನಾಮ್ ॥16॥
ಅಂಕೇ ನಿವೇಶ್ಯ ಮುದಿತಾ ವಾಸುದೇವಂ ಪ್ರಶಸ್ಯ ಚ |
ತತಃ ಕಿಲಕಿಲಾಶಬ್ದಃ ಕ್ಷಣೇನ ಸಮಪದ್ಯತ ॥17॥
ಅನಂತರ, ವಾರ್ಷ್ಣೇಯಿಯಾದ ಕುಂತಿಯು ಸುಂದರವಾದ ಸುಭದ್ರೆಯನ್ನು ಆಲಿಂಗಿಸಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೃಷ್ಣನನ್ನು ಪ್ರಶಂಸಿಸಿ ಸಂತೋಷಪಟ್ಟಳು.
ಹರ್ಷಾದಾನರ್ತಯೋಧಾನಾಮಾಸಾದ್ಯ ವೃಜಿನಂ ಪುರಮ್ |
ದೇವಪುತ್ರಪ್ರಕಾಶಾಸ್ತೇ  ಜಾಂಬೂನದಮಯಧ್ವಜಾಃ ॥18॥
ಆ ವೇಳೆಗೆ  ಅರ್ಜುನನನ್ನು ಹಿಂಬಾಲಿಸಿ ಇಂದ್ರಪ್ರಸ್ಥವನ್ನು ತಲುಪಿದ ಯಾದವಸೈನಿಕರ ಕೋಲಾಹಲ ಶಬ್ದವುಂಟಾಯಿತು.
ಪೃಷ್ಠತೋಽನುಯಯುಃ ಪಾರ್ಥಂ ಪುರುಹೂತಮಿವಾಮರಾಃ |
ಗೋಭಿರುಷ್ಟ್ರೈಃ ಸದಶ್ವೈಶ್ಚ ಯುಕ್ತಾನಿ ಬಹುಲಾ ಜನಾಃ ॥19॥
ದೇವಕುಮಾರರಂತಿದ್ದ ಆ ಸೈನಿಕರು ಸುವರ್ಣಮಯವಾದ ಧ್ವಜಗಳುಳ್ಳ ರಥಗಳಲ್ಲಿ ಕುಳಿತು ದೇವತೆಗಳು ಇಂದ್ರನನ್ನು ಹಿಂಬಾಲಿಸಿದಂತೆ ಅರ್ಜುನನನ್ನು ಹಿಂಬಾಲಿಸಿದ್ದರು.
ದದೃಶುರ್ಯಾನಮುಖ್ಯಾನಿ ದಾಶಾರ್ಹಪುರವಾಸಿನಾಮ್ |
ತತಃ ಪುರವರೇ ಯೂನಾಂ ಪ್ರಹರ್ಷಃ ಸಮಜಾಯತ ॥20॥
ಇಂದ್ರಪ್ರಸ್ಥನಿವಾಸಿಗಳು ವೃಷಭಗಳಿಂದಲೂ, ಒಂಟೆಗಳಿಂದಲೂ, ಅಶ್ವಗಳಿಂದಲೂ ಹೂಡಲ್ಪಟ್ಟ ದ್ವಾರಕಾನಿವಾಸಿಗಳ ಶ್ರೇಷ್ಠವಾದ ವಾಹನಗಳನ್ನು ನೋಡಿದರು.
ಪ್ರವಾಸಾದಗತಂ ಪಾರ್ಥಂ ದೃಷ್ಟ್ವಾ ಸ್ವಮಿವ ಬಾಂಧವಮ್ |
ಸೋಽಭಿಯಾಯ ನರಶ್ರೇಷ್ಠೋ ದಾಶಾರ್ಹಗಣಸಂವೃತಃ ॥21॥
ಆಗ ಪ್ರವಾಸದಿಂದ ಹಿಂದಿರುಗಿದ ಅರ್ಜುನನನ್ನು ನೋಡಿ ತಮ್ಮ ಬಂಧುವೆಂದೇ ತಿಳಿದು ಇಂದ್ರಪ್ರಸ್ಥನಿವಾಸಿಗಳಾದ ಯುವಕರು ಬಹಳ ಸಂತೋಷವನ್ನು ಹೊಂದಿದರು.
ಪೌರೈಃ ಪುರವರೇ ಪ್ರೀತ್ಯಾ ಪರಯಾ ಚಾಭಿನಂದಿತಃ |
ಪ್ರಾಪ್ಯ ಚಾಂತಃಪುರದ್ವಾರಮವರುಹ್ಯ ರಥರ್ಷಭಮ್ |
ವವಂದೇ ಧೌಮ್ಯಮಾಸಾದ್ಯ ಮಾತರಂ ಚ ಧನಂಜಯಃ ॥22॥
ನರಶ್ರೇಷ್ಠನಾದ ಅರ್ಜುನನು ಇಂದ್ರಪ್ರಸ್ಥ ನಿವಾಸಿಗಳಿಂದ ಸಂತೋಷದಿಂದ ಅಭಿನಂದಿಸಲ್ಪಟ್ಟು ಯಾದವಸಮೂಹದಿಂದ ಆವೃತನಾಗಿ ಮುಂದೆ ಸಾಗಿದನು. ಅಂತಃಪುರದ್ವಾರವನ್ನು ತಲುಪಿ ತನ್ನ ಶ್ರೇಷ್ಠವಾದ ರಥದಿಂದ ಇಳಿದು ಧೌಮ್ಯರನ್ನು ಸಮೀಪಿಸಿ ಅರ್ಜುನನು ಅವರಿಗೂ ಮತ್ತು ಕುಂತಿಗೂ ನಮಸ್ಕಾರ ಮಾಡಿದನು.
ಸ್ಪೃಷ್ಟ್ವಾ ಚ ಚರಣೌ ರಾಜ್ಞೋ ಭೀಮಸ್ಯ ಚ ಧನಂಜಯಃ |
ಯಮಾಭ್ಯಾಂ ವಂದಿತೋ ಹೃಷ್ಟಃ ಸಸ್ವಜೇ ತೌ ನನಂದ ಚ ॥23॥
ಬ್ರಾಹ್ಮಣಪ್ರಮುಖಾನ್ ಸರ್ವಾನ್ ಭ್ರಾತೃಭಿಃ ಸಹ ಸಂಗತಃ |
ಯಥಾರ್ಹಂ ಮಾನಯಾಮಾಸ ಪೌರಜಾನಪದಾನಪಿ ॥24॥
ಧನಂಜಯನೇ, ಧರ್ಮರಾಜನ ಪಾದಗಳಿಗೂ ಭೀಮನ ಪಾದಗಳಿಗೂ ನಮಸ್ಕರಿಸಿ ನಕುಲ ಸಹದೇವರಿಂದ ನಮಸ್ಕರಿಸಲ್ಪಟ್ಟು ಅವರನ್ನು ಆಲಿಂಗಿಸಿ ಬಹಳ ಸಂತೋಷವನ್ನು ಹೊಂದಿದನು. ಅವನು ತನ್ನ ಸಹೋದರರ ಜೊತೆಯಲ್ಲಿ ಬ್ರಾಹ್ಮಣರೇ ಮೊದಲಾದ

ಎಲ್ಲಾ ಪೌರರನ್ನೂ ಮತ್ತು ಜಾನಪದರನ್ನೂ ಯಥೋಚಿತವಾಗಿ ಸತ್ಕರಿಸಿದನು.
(ಅರ್ಜುನನನ್ನು ದ್ರೌಪದಿಯು ಮೂದಲಿಸುವ ಮೂರು ಅಧಿಕ ಶ್ಲೋಕಗಳು ಔತ್ತರೇಯ ಪಾಠದಲ್ಲಿದೆ).
ತತಸ್ತಾನ್ಯನುಯಾತ್ರಾಣಿ ಪ್ರದಾಯ ಗುರವೇ ವಸೂನ್ |
ಪೂಜಯಾಂಚಕ್ರುರಾಸಾದ್ಯ ಕುಂತೀಪುತ್ರಂ ಯುಧಿಷ್ಠಿರಮ್ ॥25॥
ಅನಂತರ, ಅರ್ಜುನನನ್ನು ಹಿಂಬಾಲಿಸಿ ಬಂದ ಯಾದವರು ಹಿರಿಯನಾದ ಕುಂತೀಪುತ್ರನಾದ ಯುಧಿಷ್ಠಿರನಿಗೆ ತಂದ ಧನವನ್ನು ಕೊಟ್ಟು ನಮಸ್ಕರಿಸಿದರು.
ಪುರಸ್ತಾದೇವ ವೈ ತೇಷಾಂ ಸ ಮಹಾತ್ಮಾ ಮಹಾಯಶಾಃ |
ಪೂಜನಾರ್ಹೋಽಭವದ್ ರಾಜಾ ಯಥಾ ವೈ ಗದಪೂರ್ವಜಃ ॥26॥
ಪಾಂಡವೇನ ಯಥಾರ್ಹಂ ತೇ ಪೂಜಾರ್ಹೇಣ ಸುಪೂಜಿತಾಃ
ನ್ಯವಿಶಾಂತಾಭ್ಯನುಜ್ಞಾತಾ ರಾಜ್ಞಾ ತುಷ್ಟಾ ಯಶಸ್ವಿನಾ ॥27॥
ಗದಾಗ್ರಜನಾದ ಕೃಷ್ಣನು ಹೇಗೆ ಯಾದವರಿಗೆ ಪೂಜ್ಯನೋ ಹಾಗೆಯೇ ಮಹಾಕೀರ್ತಿವಂತನೂ, ಮಹಾನುಭಾವನೂ ಆದ ಧರ್ಮರಾಜನು ಈ ಸಂಬಂಧವಾಗುವುದಕ್ಕೆ ಮೊದಲಿಂದಲೂ ಯಾದವರಿಗೆ ಪೂಜಾರ್ಹನಾಗಿದ್ದನು. ಪೂಜಾರ್ಹನಾದ ಧರ್ಮರಾಜನಿಂದ ಯಥೋಚಿತವಾಗಿ ಪೂಜಿಸಲ್ಪಟ್ಟ ಆ ಯಾದವರು ಕೀರ್ತಿವಂತನಾದ ಅವನ ಅನುಜ್ಞೆಯನ್ನು ಪಡೆದು ತಮ್ಮ ಆಸನಗಳಲ್ಲಿ ಸಂತೋಷದಿಂದ ಕುಳಿತುಕೊಂಡರು.
ತಾಮದೀನಾಮದೀನಾರ್ಹಾಂ ಸುಭದ್ರಾಂ ಪ್ರೀತಿವರ್ಧಿನೀಮ್ |
ಸಾಕ್ಷಾಚ್ಛ್ರಿಯಮಮನ್ಯಂತ ಪಾರ್ಥಾಃ ಕೃಷ್ಣಸಹೋದರಾಮ್ ॥28॥
ದೈನ್ಯಕ್ಕೆ ಅರ್ಹಳಲ್ಲದ, ಉದಾರಳಾದ, ಸಂತೋಷಕಾರಕಳಾದ ಕೃಷ್ಣನ ತಂಗಿಯಾದ ಸುಭದ್ರೆಯನ್ನು ಪಾಂಡವರು ಸಾಕ್ಷಾತ್ ಲಕ್ಷ್ಮಿಯೆಂದು ತಿಳಿದರು.
ಗುರೂಣಾಂ ಶ್ವಶುರಾಣಾಂ ಚ ದೇವರಾಣಾಂ ತಥೈವ ಚ |
ಸುಭದ್ರಾ ಸ್ವೇನ ವೃತ್ತೇನ ಬಭೂವ ಪರಮಪ್ರಿಯಾ ॥29॥
ಸುಭದ್ರೆಯು ತನ್ನ ನಡತೆಯಿಂದ ಹಿರಿಯರಿಗೂ, ಮಾವಂದಿರಿಗೂ ಮತ್ತು ಪತಿಯ ಸಹೋದರರಿಗೂ ಪರಮಪ್ರಿಯಳಾದಳು.
ತತಸ್ತೇ ಹೃಷ್ಟಮನಸಃ ಪಾಂಡವೇಯಾ ಮಹಾರಥಾಃ |
ಯುಧಿಷ್ಠಿರಮುಖಾಃ ಪ್ರೀತಾ ಬಭೂವುರ್ಜನಮೇಜಯ |
ಕುಂತೀ ಚ ಸತತಂ ಪ್ರೀತಾ ಕೃಷ್ಣಾ ಚ ಸತತಂ ತಥಾ ॥30॥
ಜನಮೇಜಯನೇ, ಆಗ ಮಹಾರಥರಾದ ಪಾಂಡುಪುತ್ರರಾದ
ಯುಧಿಷ್ಠಿರಾದಿಗಳು ಸಂತೋಷಗೊಂಡ ಮನಸ್ಸುಳ್ಳವರಾಗಿ ಆನಂದವನ್ನು ಹೊಂದಿದರು. ಕುಂತಿಯು ಮತ್ತು ದ್ರೌಪದಿಯೂ ಸಹ ಅನಂದವನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಷಡ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಹರಣಹಾರಿಕಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸಾರ್ಧಂ ಯಯೌ ಶಕಟೈ ರತ್ನಪೂರ್ಣೈಃ
ಶಕ್ರಪ್ರಸ್ಥಂ ಪೂಜಿತಸ್ತತ್ರ ಪಾರ್ಥೈಃ |
ದದೌ ತೇಷಾಂ ತಾನಿ ರಾಮೇಣ ಯುಕ್ತ-
ಸ್ತಥಾ ಕೃಷ್ಣಾಯೈ ಭೂಷಣಾನಿ ಸ್ವಸುಶ್ಚ ॥210॥
ರತ್ನಗಳಿಂದ ತುಂಬಿದ ಬಂಡಿಗಳೊಂದಿಗೇ ಬಲರಾಮ ಸಮೇತನಾದ ಕೃಷ್ಣ ಇಂದ್ರಪ್ರಸ್ಥಕ್ಕೆ ಬಂದಿದ್ದ. ಅಲ್ಲಿ ಅವನು ಪಾಂಡವರಿಂದ ಸತ್ಕೃತನಾದ. ರತ್ನಗಳನ್ನು ಪಾಂಡವರಿಗೂ ದ್ರೌಪದಿಗೂ ಸುಭದ್ರೆಗೂ ಕೊಟ್ಟ.
ಮಾಸಾನುಷಿತ್ವಾ ಕತಿಚಿದ್ರೌಹಿಣೇಯೋ
ಯಯೌ ಪುರೀಂ ಸ್ವಾಂ ಕೇಶವೋಽತ್ರಾವಸಚ್ಚ |
ಬಹೂನ್ ವರ್ಷಾನ್ ಪಾಂಡವೈಃ ಪೂಜ್ಯಮಾನಃ
ಪ್ರೀತಿಂ ತೇಷಾಮಾದಧಾನೋಽಧಿಕಾಂ ಚ ॥211॥
ಕೆಲವು ತಿಂಗಳು ಬಲರಾಮ ಅಲ್ಲಿ ಇದ್ದು ತನ್ನ ಪಟ್ಟಣಕ್ಕೆ ಹಿಂತಿರುಗಿದ. ಕೃಷ್ಣ ಅಲ್ಲಿಯೆ ಪಾಂಡವರಿಂದ ಸತ್ಕೃತನಾಗಿ ಅವರಲ್ಲಿ ತನ್ನವರೆಂಬ ಪ್ರೀತಿಯನ್ನು ದಿನೇದಿನೇ ಹೆಚ್ಚಿಸುತ್ತ ಬಹುವರ್ಷಗಳ ಕಾಲ ವಾಸಮಾಡಿದ.
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ
(ಯಾದವರಿಂದ ಇಂದ್ರಪ್ರಸ್ಥಕ್ಕೆ ಉಡುಗೊರೆಗಳ ಆಹರಣ, ಇಂದ್ರಪ್ರಸ್ಥದಲ್ಲಿ ಏಳು ದಿನಗಳ ಕಾಲ ಅರ್ಜುನ-ಸುಭದ್ರೆಯರ ವಿವಾಹ, ಯಾದವರ ನಿರ್ಗಮನ, ಇಂದ್ರಪ್ರಸ್ಥದಲ್ಲಿ ಕೃಷ್ಣನ ವಾಸ.)
ವೈಶಂಪಾಯನಃ
ಅಥ ಶುಶ್ರಾವ ನಿವೃತ್ತೇ ವೃಷ್ಣೀನಾಂ ಪರಮೋತ್ಸವೇ |

ಅರ್ಜುನೇನ ಹೃತಾಂ ಭದ್ರಾಂ ಶಂಕಚಕ್ರಗದಾಧರಃ ॥1॥
ಅಂತರ್ದ್ವೀಪದಲ್ಲಿ ವೃಷ್ಣಿಗಳ ಪರಮೋತ್ಸವವು ಮುಗಿದ ಮೇಲೆ ಶಂಕಚಕ್ರಗದಾಧರನಾದ ಕೃಷ್ಣನು ಅರ್ಜುನನು ಸುಭದ್ರೆಯನ್ನು ಅಪಹರಿಸಿಕೊಂಡು ಹೋಗಿದ್ದಾನೆಂಬ ವಾರ್ತೆಯನ್ನು ಕೇಳಿದನು.
ಪುರಸ್ತಾದೇವ ಪೌರಾಣಾಂ ಸಂಶಯಃ ಸಮಜಾಯತ |
ಜಾನತಾ ವಾಸುದೇವೇನ ವಾಸಿತೋ ಭರತರ್ಷಭಃ ॥2॥
ಪೌರರಿಗೆ ವಾಸುದೇವನು ಎಲ್ಲವನ್ನೂ ತಿಳಿದೇ ಅರ್ಜುನನನ್ನು ದ್ವಾರಕೆಗೆ ಕರೆದುಕೊಂಡು ಬಂದಿದ್ದಾನೆ ಎಂಬ ಸಂಶಯವಿದ್ದಿತು.
ಲೋಕಸ್ಯ ವಿದಿತಂ ಹ್ಯಾಸೀತ್ ಪೂರ್ವಂ ವಿಪೃಥುನಾ ಯದಾ |
ಸಾಂತ್ವಯಿತ್ವಾಽಭ್ಯನುಜ್ಞಾತೋ ಭದ್ರಯಾ ಸಹ ಸಂಗತಃ ॥3॥
ವಿಪೃಥುವು ಸುಭದ್ರೆಯ ಸಹಿತನಾದ ಅರ್ಜುನನ ಜೊತೆಯಲ್ಲಿ ಸಮಾಧಾನದ ಮಾತುಗಳನ್ನಾಡಿ ಅವರನ್ನು ಬೀಳ್ಕೊಟ್ಟ ವಿಷಯವೂ ಸಹ ಜನರಿಗೆ ತಿಳಿದಿದ್ದಿತು.
ದಿತ್ಸಿತಾಂ ಸೋದರಾಂ ತಸ್ಮೈ ಪತತ್ರಿವರಕೇತುನಾ |
ಅರ್ಹತೇ ಪುರುಷೇಂದ್ರಾಯ ಪಾರ್ಥಾಯಾಯತಲೋಚನಾಮ್ ॥4॥
ಸತ್ಕೃತ್ಯ ಚತುರಂಗೇಣ ಬಲೇನ ಮಹತಾ ವೃತಃ |
ಭದ್ರಯಾ ಸಹ ಬೀಭತ್ಸುಃ ಪ್ರಾಪಿತೋ ವ್ರಜಿನಂ ಪುರಮ್ ॥5॥
ಯೋಗ್ಯನಾದ ಪುರುಷಶ್ರೇಷ್ಠನಾದ ಅರ್ಜುನನಿಗೆ ತನ್ನ ತಂಗಿಯಾದ ವಿಶಾಲನೇತ್ರೆಯಾದ ಸುಭದ್ರೆಯನ್ನು ಕೊಡಲು ಬಯಸಿದ ಗರುಡಧ್ವಜನಾದ ಕೃಷ್ಣನು ಅರ್ಜುನನನ್ನು ಸತ್ಕರಿಸಿ ದೊಡ್ಡ ಚತುರಂಗಸೈನ್ಯದ ಜೊತೆಯಲ್ಲಿ ಸುಭದ್ರಾಸಹಿತನಾದ ಅರ್ಜುನನನ್ನು ಇಂದ್ರಪ್ರಸ್ಥಕ್ಕೆ ಕಳುಹಿಸಿದ್ದಾನೆ.
ಇತಿ ಪೌರಜನಾಃ ಸರ್ವೇ ವದಂತಿ ಸ್ಮ ಸಮಂತತಃ |
ಶ್ರುತ್ವಾ ತು ಪುಂಡರೀಕಾಕ್ಷಃ ಸಂಪ್ರಾಪ್ತಂ ಸ್ವಪುರೋತ್ತಮಮ್ ॥6॥
ಅರ್ಜುನಂ ಪಾಂಡವಶ್ರೇಷ್ಠಮಿಂದ್ರಪ್ರಸ್ಥಗತಂ ತದಾ |
ಯಿಯಾಸುಃ ಖಾಂಡವಪ್ರಸ್ಥಮಮಂತ್ರಯತ ಕೇಶವಃ ॥7॥
ಹೀಗೆ ಪೌರಜನರು ಎಲ್ಲಾ ಸ್ಥಳಗಳಲ್ಲಿಯೂ ಮಾತನಾಡುತ್ತಿದ್ದರು. ಪುಂಡರೀಕಾಕ್ಷನಾದ ಕೇಶವನು ಅರ್ಜುನನು ತನ್ನ ನಗರವಾದ ಇಂದ್ರಪ್ರಸ್ಥವನ್ನು ತಲುಪಿದ್ದಾನೆಂದು ಕೇಳಿ ತಾನೂ ಇಂದ್ರಪ್ರಸ್ಥಕ್ಕೆ ಹೋಗಲು ಬಯಸಿ ಮಂತ್ರಾಲೋಚನೆಯನ್ನು ಮಾಡಿದನು.
ಪೂರ್ವಂ ಸತ್ಕೃತ್ಯ ರಾಜಾನಮಾಹುಕಂ ಮಧುಸೂದನಃ |
ರಾಜಾ ವಿಪೃಥುರಕ್ರೂರಃ ಸಂಕರ್ಷಣಭಯೇ ಸಖೇ ॥8॥
ಪಿತ್ರಾ ಚ ಪುರುಷೇಂದ್ರೇಣ ಪುರಸ್ತಾದಭಿಮಾನಿತಃ |
ಸಂಪ್ರೀತಃ ಪ್ರೀಯಮಾಣೇನ ವೃಷ್ಣಿರಾಜ್ಞಾ ಜನಾರ್ದನಃ ॥9॥
ಸ್ನೇಹಿತನೇ, ಸಂಕರ್ಷಣಭಯವಿದ್ದ ಕಾರಣ ಮಧುಸೂದನನು ಮತ್ತು ವಸುದೇವನು ಮತ್ತು ಮೊದಲೇ ವಿಪೃಥು ಮತ್ತು ಅಕ್ರೂರರನ್ನು ಮತ್ತು ಆಹುಕನನ್ನು ಸುಭದ್ರೆಯ ವಿವಾಹದ ವಿಷಯದಲ್ಲಿ ಅಭಿಮಾನವುಳ್ಳವರನ್ನಾಗಿ ಮಾಡಿದನು. (ಎಂದು ಜನಗಳು ಆಡಿಕೊಳ್ಳುತ್ತಿದ್ದರು.)
ಅಭಿಮಂತ್ರ್ಯಾಭ್ಯನುಜ್ಞಾತೋ ಯೋಜಯಾಮಾಸ ವಾಹಿನೀಮ್ |
ತತಸ್ತು ಯಾನಾನ್ಯಾಸಾದ್ಯ ದಾಶಾರ್ಹಪುರವಾಸಿನಾಮ್ ॥10॥
ಸಂತೋಷಗೊಂಡ ವೃಷ್ಣಿರಾಜನನ್ನು ನೋಡಿ ಸಂತೋಷಗೊಂಡ ಜನಾರ್ದನನು ಅವನ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಸೈನ್ಯವನ್ನು ನಿಯೋಜಿಸಿದನು.
ಸಿಂಹನಾದಃ ಪ್ರಹೃಷ್ಟಾನಾಂ ಕ್ಷಣೇನ ಸಮಪದ್ಯತ |
ಯೋಜಯಂತಃ ಸದಶ್ವಾಂಸ್ತು ಯಾನಯುಗ್ಯರಥಾಂಸ್ತದಾ ॥11॥
ಅನಂತರ, ಒಂದು ಕ್ಷಣದಲ್ಲಿ ಸಂತುಷ್ಟರಾದ ದಾಶಾರ್ಹಪುರವಾಸಿಗಳು ತಮ್ಮ ತಮ್ಮ ವಾಹನಗಳನ್ನು ಸಮೀಪಿಸಿ ಸಿಂಹನಾದವನ್ನು ಮಾಡಿದರು.
ಗಜಾಂಶ್ಚ ಪರಮಪ್ರೀತಾಃ ಸಮಪದ್ಯಂತ ವೃಷ್ಣಯಃ |
ವೃಷ್ಣ್ಯಂಧಕಮಹಾಮಾತ್ರೈಃ ಸಹ ವೀರೈರ್ಮಹಾರಥೈಃ ॥12॥
ಭ್ರಾತೃಭಿಶ್ಚ ಕುಮಾರೈಶ್ಚ ಯೋಧೈಶ್ಚ ಶತಶೋ ವೃತಃ |
ಸೈನ್ಯೇನ ಮಹತಾ ಶೌರಿರಭಿಗುಪ್ತಃ ಪರಂತಪಃ ॥13॥
ಪ್ರಯಾಣಕ್ಕೆ ಯೋಗ್ಯವಾದ ಶ್ರೇಷ್ಠವಾದ ಅಶ್ವಗಳನ್ನು ರಥದಲ್ಲಿ ಹೂಡುತ್ತಾ ಗಜಗಳನ್ನು ಸಿದ್ಧಪಡಿಸುತ್ತಾ ವೃಷ್ಣಿಗಳು ವೃಷ್ಣ್ಯಂಧಕ ಪ್ರಧಾನರಿಂದಲೂ, ವೀರರಾದ ಮಹಾರಥರಿಂದಲೂ ಕೂಡಿ ಪರಮ ಸಂತುಷ್ಟರಾದರು. ಪರಂತಪನಾದ ಕೃಷ್ಣನು ತನ್ನ ಸೋದರರಿಂದಲೂ, ಪುತ್ರರಿಂದಲೂ, ಯೋಧರಿಂದಲೂ, ನೂರಾರು ಸಂಖ್ಯೆಯಲ್ಲಿ ಆವೃತನಾಗಿ ದೊಡ್ಡ ಸೈನ್ಯದಿಂದ ರಕ್ಷಿತನಾಗಿ ಮುಂದೆ ಪ್ರಯಾಣ ಮಾಡಿದನು.
ತತ್ರ ದಾನಪತಿರ್ಧೀಮಾನ್ ಜಗಾಮ ಸುಮಹಾಯಶಾಃ |
ಅಕ್ರೂರೋ ವೃಷ್ಣಿವೀರಾಣಾಂ ಸೇನಾಪತಿರರಿಂದಮಃ ॥14॥
ಆಗ ಮಹಾಕೀರ್ತಿವಂತನಾದ ಮೇಧಾವಿಯೂ, ಅರಿಂದಮನೂ ಆದ ವೃಷ್ಣಿವೀರರ ಸೇನಾಪತಿಯಾದ ದಾನಪತಿಯಾದ ಅಕ್ರೂರನೂ ಹೊರಟನು.

ಅನಾಧೃಷ್ಟಿರ್ಮಹಾಬಾಹುರುದ್ಧವಶ್ಚ ಮಹಾಯಶಾಃ |
ಸಾಕ್ಷಾದ್ ಬೃಹಸ್ಪತೇಃ ಶಿಷ್ಯೋ ಮಹಾಬುದ್ಧಿರ್ಮಹಾಯಶಾಃ ॥15॥
ಎಂದೂ ಘರ್ಷಣೆಗೆ ಒಳಗಾಗದ ಬೃಹಸ್ಪತಿಯ ಸಾಕ್ಷಾತ್‌ಶಿಷ್ಯನಾದ ಮಹಾಬುದ್ಧಿಯೂ, ಮಹಾಕೀರ್ತಿವಂತನೂ ಆದ ಉದ್ಧವನೂ ಹೊರಟನು.
ಸಾತ್ಯಕಿಶ್ಚ ಮಹೇಶ್ವಾಸಃ ಕೃತವರ್ಮಾ ಮಹಾರಥಃ |
ಪ್ರದ್ಯುಮ್ನಶ್ಚೈವ ಸಾಂಬಶ್ಚ ನಿಶಂಕುಃ ಶಂಕುರೇವ ಚ ॥16॥
ಮಹಾಧನುರ್ಧಾರಿಯಾದ ಸಾತ್ಯಕಿಯೂ, ಮಹಾರಥನಾದ ಕೃತವರ್ಮನೂ, ಪ್ರದ್ಯುಮ್ನ, ಸಾಂಬ, ನಿಶಂಕು ಮತ್ತು ಶಂಕು ಇವರೂ ಹೊರಟರು.
ಚಾರುದೇಷ್ಣಶ್ಚ ವಿಕ್ರಾಂತೋ ಝಿಲ್ಲಿರ್ವಿಪೃಥುರೇವ ಚ |
ಸಾರಣಶ್ಚ ಮಹಾತೇಜಾ ಗದಶ್ಚ ವಿದುಷಾಂ ವರಃ ॥17॥
ವಿಕ್ರಮಶಾಲಿಯಾದ ಚಾರುದೇಷ್ಣ, ಝಿಲ್ಲಿ, ವಿಪೃಥು ಮಹಾತೇಜಸ್ವಿಯಾದ ಸಾರಣ, ಜ್ಞಾನಶ್ರೇಷ್ಠನಾದ ಗದ ಎಲ್ಲರೂ ಹೊರಟರು.
ಏತೇ ಚಾನ್ಯೇ ಚ ಬಹವೋ ವೃಷ್ಣಿಭೋಜಾಂಧಕಾಸ್ತಥಾ |
ಆಜಗ್ಮುಃ ಖಾಂಡವಪ್ರಸ್ಥಮಾದಾಯ ಹರಣಂ ಬಹು ॥18॥
ಇವರೂ ಮತ್ತು ಇನ್ನೂ ಅನೇಕ ವೃಷ್ಣಿಗಳು, ಭೋಜರು ಮತ್ತು ಅಂಧಕರೂ ಬಹಳವಾದ ಉಡುಗೊರೆಗಳನ್ನು ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಹೊರಟರು.
ಅನ್ವಾಹಾರ್ಯಂ ಸಮಾದಾಯ ಪೃಥಗ್ ವೃಷ್ಣಿಪುರೋಗಮಾಃ |
ಪ್ರಯಯುಃ ಸಿಂಹನಾದೇನ ಸುಭದ್ರಾಮವಲೋಕಕಾಃ ॥19॥
ವೃಷ್ಣಿಪ್ರಮುಖರು ವಧುವಿನ ಜೊತೆಯಲ್ಲಿ ತೆಗೆದುಕೊಂಡು ಹೋಗಬೇಕಾದ ಎಲ್ಲ ವಸ್ತುಗಳನ್ನು ತೆಗೆದುಕೊಂಡು ಸಿಂಹನಾದವನ್ನು ಮಾಡುತ್ತಾ ಸುಭದ್ರೆಯನ್ನು ನೋಡುವ ಆಸೆಯಿಂದ ಹೊರಟರು.
ತೇ ತ್ವದೀರ್ಘೇಣ ಕಾಲೇನ ಕೃಷ್ಣೇನ ಸಹ ಯಾದವಾಃ |
ಪುರಮಾಸಾದ್ಯ ಪಾರ್ಥಾನಾಂ ಪರಾಂ ಪ್ರೀತಿಮವಾಪ್ನುವನ್ ॥20॥
ಕೃಷ್ಣನಿಂದ ಸಹಿತಳಾದ ಆ ಯಾದವರು ಅಲ್ಪಕಾಲದಲ್ಲಿಯೇ ಪಾರ್ಥರ ಪಟ್ಟಣವಾದ ಇಂದ್ರಪ್ರಸ್ಥವನ್ನು ತಲುಪಿ ಬಹಳ ಸಂತೋಷವನ್ನು ಹೊಂದಿದರು.
ತತೋ ಯುಧಿಷ್ಠಿರೋ ರಾಜಾ ಶ್ರುತ್ವಾ ಮಾಧವಮಾಗತಮ್ |
ಪ್ರತಿಗ್ರಹಾರ್ಥಂ ಕೃಷ್ಣಸ್ಯ ಯಮೌ ಪ್ರಾಸ್ಥಾಪಯದ್ ಗೃಹಾತ್ ॥21॥
ಆಗ ರಾಜನಾದ ಯುಧಿಷ್ಠಿರನು ಬರುತ್ತಿದ್ದಾನೆಂಬ ವಾರ್ತೆಯನ್ನು ಕೇಳಿ ಅವನನ್ನು ಸ್ವೀಕರಿಸಲು ನಕುಲಸಹದೇವರನ್ನು ತನ್ನ ಮನೆಯಿಂದ ಕಳುಹಿಸಿದನು.
ತಾಭ್ಯಾಂ ಪ್ರತಿಗೃಹೀತಂ ತು ವೃಷ್ಣಿಚಕ್ರಂ ಸಮೃದ್ಧಿಮತ್ |
ವಿವೇಶ ಖಾಂಡವಪ್ರಸ್ಥಂ ಪತಾಕಾಧ್ವಜಶೋಭಿತಮ್ ॥22॥
ನಕುಲಸಹದೇವರಿಂದ ಸ್ವೀಕರಿಸಲ್ಪಟ್ಟ ಪತಾಕೆ ಮತ್ತು ಧ್ವಜಗಳಿಂದ ಶೋಭಿತವಾದ ಸಮೃದ್ಧವಾದ ವೃಷ್ಣಿಸೈನ್ಯವು ಖಾಂಡವಪ್ರಸ್ಥವನ್ನು ಪ್ರವೇಶಿಸಿತು.
ಚಂದನಸ್ಯ ರಸೈಃ ಶೀತೈಃ ಪುಣ್ಯಗಂಧೈರ್ನಿಷೇವಿತಮ್ |
ದಹ್ಯತಾಽಗುರುಣಾ ಚೈವ ದೇಶೇದೇಶೇ ಸುಗಂಧಿನಮ್ ॥23॥
ಸುಮೃಷ್ಟಜನತಾಕೀರ್ಣಂ ವಣಿಗ್ಭಿರುಪಶೋಭಿತಮ್ |
ಪ್ರತಿಪೇದೇ ಮಹಾಬಾಹುಃ ಸಹ ರಾಮೇಣ ಕೇಶವಃ ॥24॥
ಶೀತಲವಾದ ಚಂದನರಸದಿಂದ ತೊಯ್ದಮಾರ್ಗಗಳುಳ್ಳ, ಸುಗಂಧಗಳಿಂದ ಯುಕ್ತವಾದ ಎಲ್ಲ ಕಡೆಗಳಲ್ಲಿಯೂ ಉರಿಯುವ ಅಗುರು ಸುಗಂಧದಿಂದ ವ್ಯಾಪ್ತವಾದ, ಅಲಂಕೃತರಾದ ಜನರಿಂದ ನಿಬಿಡವಾದ, ವೈಶ್ಯರಿಂದ ಶೋಭಿತವಾದ ಇಂದ್ರಪ್ರಸ್ಥನಗರವನ್ನು ಬಲರಾಮನ ಜೊತೆಯಲ್ಲಿ ಕೃಷ್ಣನು ತಲುಪಿದನು.
ವೃಷ್ಣ್ಯಂಧಕೈಸ್ತಥಾ ಭೋಜೈಃ ಸಮೇತಃ ಪುರುಷೋತ್ತಮಃ |
ಸಂಪೂಜ್ಯಮಾನಃ ಪೌರೈಶ್ಚ ಬ್ರಾಹ್ಮಣೈಶ್ಚ ಸಹಸ್ರಶಃ |
ವಿವೇಶ ಭವನಂ ರಾಜ್ಞಃ ಪುರಂದರಗೃಹೋಪಮಮ್ ॥25॥
ವೃಷ್ಣಿ, ಅಂಧಕ, ಭೋಜರಿಂದ ಸಹಿತನಾದ ಪುರುಷೋತ್ತಮನಾದ ಕೃಷ್ಣನು ಸಹಸ್ರಸಂಖ್ಯೆಯಲ್ಲಿ ಪೌರರಿಂದಲೂ, ಬ್ರಾಹ್ಮಣರಿಂದಲೂ ಪೂಜಿಸಲ್ಪಟ್ಟು ಇಂದ್ರನ ಅರಮನೆಯಂತಿದ್ದ ಧರ್ಮರಾಜನ ಭವನವನ್ನು ಪ್ರವೇಶಿಸಿದನು.
ಯುಧಿಷ್ಠಿರಸ್ತು ರಾಮೇಣ ಸಮಾಗಚ್ಛದ್ ಯಥಾವಿಧಿ |
ಮೂರ್ಧ್ನಿ ಕೇಶವಮಾಘ್ರಾಯ ಪರಿಷ್ವಜ್ಯ ಚ ಬಾಹುನಾ ॥26॥
ಯುಧಿಷ್ಠಿರನಾದರೋ ಕೃಷ್ಣನನ್ನು ಬಾಹುಗಳಿಂದ ಆಲಿಂಗಿಸಿ, ಶಿರಸ್ಸಿನಲ್ಲಿ ಆಘ್ರಾಣಿಸಿ ವಿಧಿಪೂರ್ವಕವಾಗಿ ಬಲರಾಮನೊಡನೆ ಸಮಾಗಮವನ್ನು ಹೊಂದಿದನು.
ತಂ ಪ್ರೀಯಮಾಣಃ ಕೃಷ್ಣಸ್ತು ವಿನಯೇನಾಭ್ಯಪೂಜಯತ್ |
ಭೀಮಂ ಚ ಪುರುಷವ್ಯಾಘ್ರಂ ವಿಧಿವತ್ ಪ್ರತ್ಯಪೂಜಯತ್ ॥27॥
ಸಂತೋಷಗೊಂಡ ಕೃಷ್ಣನು ವಿನಯದಿಂದ ಅವನನ್ನು ಪೂಜಿಸಿದನು, ಹಾಗೆಯೇ ಪುರುಷವ್ಯಾಘ್ರನಾದ ಭೀಮನನ್ನೂ ವಿಧಿವತ್ತಾಗಿ

ಪೂಜಿಸಿದನು.
ತಾಂಶ್ಚ ವೃಷ್ಣ್ಯಂಧಕಶ್ರೇಷ್ಠಾನ್ ಧರ್ಮರಾಜೋ ಯುಧಿಷ್ಠಿರಃ |
ಪ್ರತಿಜಗ್ರಾಹ ಸತ್ಕಾರೈರ್ಯಥಾವಿಧಿ ಯಥೋಚಿತಮ್ ॥28॥
ಧರ್ಮರಾಜನಾದ ಯುಧಿಷ್ಠಿರನು ಆ ವೃಷ್ಣ್ಯಂಧಕಪ್ರಧಾನರನ್ನು ಸ್ವೀಕರಿಸಿ ಯಥೋಚಿತವಾಗಿ ವಿಧಿವತ್ತಾಗಿ ಸತ್ಕರಿಸಿದನು.
ಗುರುವತ್ ಪೂಜಯಾಮಾಸ ಕಾಂಶ್ಚಿತ್ ಕಾಂಶ್ಚಿದ್ ವಯಸ್ಯವತ್ |
ಕಾಂಶ್ಚಿದಭ್ಯವದತ್ ಪ್ರೀತಃ ಕೈಶ್ಚಿದಪ್ಯಭಿವಾದಿತಃ ॥29॥
ಕೆಲವರನ್ನು ಹಿರಿಯರಂತೆ ಪೂಜಿಸಿದನು, ಕೆಲವರನ್ನು ಸ್ನೇಹಿತರಂತೆ ಸತ್ಕರಿಸಿದನು, ಕೆಲವರನ್ನು ಸಂತೋಷದಿಂದ ಅಭಿವಂದಿಸಿದನು, ಇನ್ನೂ ಕೆಲವರಿಂದ ಅವನೇ ಅಭಿವಂದಿಸಲ್ಪಟ್ಟನು.
ತತಃ ಪೃಥಾ ಚ ಪಾರ್ಥಾಶ್ಚ ಮುದಿತಾಃ ಕೃಷ್ಣಯಾ ಸಹ |
ಪುಂಡರೀಕಾಕ್ಷಮಾಸಾದ್ಯ ಬಭೂವುರ್ಮುದಿತೇಂದ್ರಿಯಾಃ ॥30॥
ಅನಂತರ, ಕುಂತಿಯು ಮತ್ತು ಪಾಂಡವರು ಸಂತೋಷಗೊಂಡು ಕೃಷ್ಣೆಯ ಜೊತೆಯಲ್ಲಿ ಕೃಷ್ಣನನ್ನು ಸಮೀಪಿಸಿ ಪರಮಸಂತುಷ್ಟರಾದರು.
ಹರ್ಷಾದಭಿಗತೌ ದೃಷ್ಟ್ವಾ ಸಂಕರ್ಷಣಜನಾರ್ದನೌ |
ಬಂಧುಮಂತಂ ಪೃಥಾ ಪಾರ್ಥಂ ಯುಧಿಷ್ಠಿರಮಮನ್ಯತ ॥31॥
ಸಂತೋಷದಿಂದ ಬಂದ ಕೃಷ್ಣಬಲರಾಮರನ್ನು ನೋಡಿ ಕುಂತಿಯು ಯುಧಿಷ್ಠಿರನನ್ನು ಬಂಧುಯುಕ್ತನೆಂದು ಭಾವಿಸಿದಳು.
ತತಃ ಸಂಕರ್ಷಣಾಕ್ರೂರಾವಪ್ರಮೇಯಮದೀನವತ್ |
ಭದ್ರವತ್ಯೈ ಸುಭದ್ರಾಯೈ ಧನೌಘಮುಪಜಹ್ರತುಃ ॥32॥
ಪ್ರವಾಳಾನಿ ಚ ಹಾರಾಣಿ ಭೂಷಣಾನಿ ಸಹಸ್ರಶಃ |
ಕುಥಾಸ್ತರಪರಿಸ್ತೋಮಾನ್ ವ್ಯಾಲಾಜಿನಪುರಸ್ಕೃತಾನ್ ॥33॥
ಅನಂತರ, ಅದೀನರಾದ ಸಂಕರ್ಷಣ ಅಕ್ರೂರರು ಅಸಂಖ್ಯಾತವಾದ ಧನರಾಶಿಯನ್ನು ಮಂಗಳಯುಕ್ತಳಾದ ಸುಭದ್ರೆಗೆ ಉಡುಗೊರೆಯಾಗಿ ಕೊಟ್ಟರು. ಹವಳಗಳನ್ನೂ, ಹಾರಗಳನ್ನೂ, ಸಹಸ್ರಾರು ಭೂಷಣಗಳನ್ನೂ,ನ ಆಸನಗಳ ಮೇಲೆ ಹಾಕುವ ಹಾಸುಗಳನ್ನೂ, ವ್ಯಾಲಾಜಿನ ಮೊದಲಾದವುಗಳನ್ನೂ ಕೊಟ್ಟರು.
ತದಾಽಽಭರಣರತ್ನೌಘೈರ್ದೀಪ್ತಪ್ರಭಮಜಾಯತ |
ಶಯನಾಸನಯಾನೈಶ್ಚ ಯುಧಿಷ್ಠಿರನಿವೇಶನಮ್ ॥34॥
ಆಗ ಶಯನಾಸನವಾಹನಗಳಿಂದಲೂ, ಆಭರಣರತ್ನ ಸಮೂಹಗಳಿಂದಲೂ, ಯುಧಿಷ್ಠಿರನ ಮನೆಯು ಶ್ರೇಷ್ಠವಾದ ಪ್ರಭೆವುಳ್ಳದ್ದಾಯಿತು.
ತತಃ ಪ್ರೀತಿಕರೋ ಯೂನಾಂ ವಿವಾಹಪರಮೋತ್ಸವಃ |
ಭದ್ರವತ್ಯೈ ಸುಭದ್ರಾಯೈ ಸಪ್ತರಾತ್ರಮವರ್ತತ ॥35॥
ಅನಂತರ, ಯುವಕರಿಗೆ ಸಂತೋಷಕರವಾದ ಸುಭದ್ರೆಯ ವಿವಾಹ ಮಹೋತ್ಸವವು ಏಳು ದಿನಗಳವರೆಗೆ ಜರುಗಿತು.
ತತೋ ದದೌ ವಾಸುದೇವಃ ಕನ್ಯಾರ್ಥೇ ಧನಮುತ್ತಮಮ್ |
ಹರಣಂ ವೈ ಸುಭದ್ರಾಯಾ ಜ್ಞಾತಿದೇಯಂ ಮಹಾಯಶಾಃ ॥36॥
ರಥಾನಾಂ ಕಾಂಚನಾಂಗಾನಾಂ ಕಿಂಕಿಣೀಜಾಲಮಾಲಿನಾಮ್ |
ಚತುರ್ಯುಜಾಮುಪೇತಾನಾಂ ಸೂತೈಃ ಕುಶಲಸಮ್ಮಿತೈಃ ॥37॥
ಸಹಸ್ರಂ ಪ್ರದದೌ ಕೃಷ್ಣೋ ಗವಾಂ ನಿಯುತಮೇವ ಚ |
ಉಪಪಾದ್ಯ ತು ವಶ್ಯಾನಾಂ ದೋಗ್ಧ್ರೀಣಾಂ ಪುಣ್ಯವರ್ಚಸಾಮ್ ॥38॥
ಆಗ ಮಹಾಕೀರ್ತಿವಂತನಾದ ವಾಸುದೇವನು ತನ್ನ ತಂಗಿಯಾದ ಸುಭದ್ರೆಗೆ ವಿವಾಹಕಾಲದಲ್ಲಿ ಬಂಧುಗಳು ಕೊಡಬೇಕಾದ ಎಲ್ಲ ವಸ್ತುಗಳನ್ನೂ ಮತ್ತು ಶ್ರೇಷ್ಠವಾದ ಧನಗಳನ್ನೂ ಕೊಟ್ಟನು. ಕೃಷ್ಣನು ಸುವರ್ಣಾಂಗಗಳಿಂದ ಕೂಡಿದ, ಕಿಂಕಿಣೀಜಾಲವನ್ನು ಧರಿಸಿದ, ನಾಲ್ಕುಅಶ್ವಗಳಿಂದ ಉಪೇತವಾದ, ಕುಶಲರೆಂದು ಪ್ರಸಿದ್ಧರಾದ ಸೂತರನ್ನು ಹೊಂದಿದ್ದ ಸಹಸ್ರರಥಗಳನ್ನು ಉಡುಗೊರೆಯಾಗಿ ಕೊಟ್ಟನು. ಸಾಧುಗಳಾದ ಹಾಲನ್ನು ಕೊಡುವ ಪುಣ್ಯಕೀರ್ತಿಯುಳ್ಳ ಒಂದು ಲಕ್ಷ ಗೋವುಗಳನ್ನು ಒಟ್ಟುಮಾಡಿ ಅವುಗಳನ್ನು ಕೊಟ್ಟನು.
ಗಜಾನಾಂ ತು ಪ್ರಭಿನ್ನಾನಾಂ ತ್ರಿಧಾ ಪ್ರಸ್ರವತಾಂ ಮದಮ್ |
ಗಿರಿಕೂಟನಿಕಾಶಾನಾಂ ಸಮರೇಷ್ವನಿವರ್ತಿನಾಮ್ |
ಸುವರ್ಣಕಕ್ಷ್ಯಾಗ್ರೈವೇಯಸುವರ್ಣಾಂಕುಶಭೂಷಿತಮ್ ॥39॥
ಕ್ಲೃಪ್ತಾನಾಂ ಪಟುಘಂಟಾನಾಂ ಚಾರೂಣಾಂ ಹೇಮಮಾಲಿನಾಮ್|
ಹಸ್ತ್ಯಾರೋಹೈರುಪೇತಾನಾಂ ಸಹಸ್ರಂ ಸಾಹಸಪ್ರಿಯಃ ॥40॥
ಮೂರು ಕಡೆಗಳಿಂದಲೂ ಮದದ್ರವವನ್ನು ಸುರಿಸುವ ಪರ್ವತಸಮೂಹದಂತಿರುವ ಯುದ್ಧದಿಂದ ಹಿಂದಿರುಗದ, ಸುವರ್ಣಕಕ್ಷೆಗ್ರೈವೇಯ ಮತ್ತು ಅಂಕುಶಗಳಿಂದ ಕೂಡಿದ ಹೇಮಮಾಲೆಗಳನ್ನೂ, ಒಳ್ಳೆಯ ಘಂಟೆಗಳನ್ನೂ, ಕಟ್ಟಿದ್ದ ಮಾವುತರಿಂದ ಸಹಿತವಾದ ಮನೋಹರವಾದ ಸಹಸ್ರ ಗಜಗಳನ್ನೂ ಸಾಹಸಪ್ರಿಯನಾದ ಅವನು ಕೊಟ್ಟನು.
ಪ್ರದದೌ ವಾಸುದೇವಸ್ತು ವಸುದೇವಾಜ್ಞಯಾ ತದಾ |
ಬಡಬಾನಾಂ ಚ ಶುಭ್ರಾಣಾಂ ಚಂದ್ರಾಂಶುಸಮವರ್ಚಸಾಮ್ ॥41॥

ದದೌ ಜನಾರ್ದನಃ ಪ್ರೀತ್ಯಾ ಸಹಸ್ರಂ ಹೇಮಮಾಲಿನಾಮ್ |
ಕಾಂಭೋಜಾರಟ್ಟಬಾಹ್ಲೀಕಸಿಂಧುಜಾನಾಂ ಚ ಭಾರತ ॥42॥
ವಸುದೇವನ ಆಜ್ಞೆಯಂತೆ ವಾಸುದೇವನು ಚಂದ್ರನಸಮಾನ ಕಾಂತಿಯನ್ನು ಹೊಂದಿದ್ದ, ಹೇಮಮಾಲೆಗಳನ್ನು ಧರಿಸಿದ್ದ ಶುಭ್ರವಾದ ಸಹಸ್ರ ಹೆಣ್ಣು ಕುದುರೆಗಳನ್ನು ಸಂತೋಷದಿಂದ ಕೊಟ್ಟನು. ಭಾರತನೇ, ಆ ಕುದುರೆಗಳು ಕಾಂಭೋಜ, ಅರಟ್ಟ, ಬಾಹ್ಲೀಕ, ಸೈಂಧವ ಮೊದಲಾದ ಅನೇಕ ಜಾತಿಗಳಿಗೆ ಸೇರಿದವು.
ಸುವರ್ಣಕೃತಸನ್ನಾಹಘಂಟಾರಾವವಿನಾದಿನಾನ್ |
ಶ್ವೇತಚಾಮರಸಂಚ್ಛನ್ನಾನ್ ಸರ್ವಶಸ್ತ್ರೈರಲಂಕೃತಾನ್ ॥43॥
ಜಾತ್ಯಶ್ವಾನಾಂ ಸಹಸ್ರಾಣಿ ಪಂಚಾಶತ್ ಪ್ರದದೌ ತದಾ |
ಹಯಾನಾಂ ಚಂದ್ರಕಾಶಾನಾಂ ಶ್ಯಾಮಕರ್ಣಂ ದದೌ ಶತಮ್ ॥44॥
ಸುವರ್ಣಮಯವಾದ ಕಡಿವಾಣಗಳಿಂದ ಕೂಡಿದ, ಘಂಟಾ- ಶಬ್ದಗಳಿಂದ ಭೂಷಿತವಾದ, ಶ್ವೇತಚಾಮರಗಳನ್ನು ಹೊಂದಿದ್ದ, ಯಾವಶಸ್ತ್ರಗಳಿಂದಲೂ ಗಾಯವಾಗದ ಐವತ್ತುಸಹಸ್ರ ಸಂಖ್ಯೆಯ ಒಳ್ಳೆಯ ಜಾತಿಯ ಕುದುರೆಗಳನ್ನು ಕೊಟ್ಟನು. ಒಂದು ಕಿವಿಯು ಕಪ್ಪಾಗಿದ್ದು ಉಳಿದೆಲ್ಲ ಕಡೆಯೂ ಶರೀರವು ಬೆಳ್ಳಗಿರುವ ನೂರು ಕುದುರೆಗಳನ್ನು ಕೊಟ್ಟನು.
ತಥೈವಾಶ್ವತರೀಣಾಂ ಚ ದಾಂತಾನಾಂ ವಾತರಂಹಸಾಮ್ |
ಶತಾನ್ಯಂಜನಕೇಶಾನಾಂ ಶ್ವೇತಾನಾಂ ಪಂಚ ಪಂಚ ಚ ॥45॥
ಪಳಗಿಸಿದ ವಾಯುವೇಗವುಳ್ಳ ತಲೆಯ ಮೇಲೆ ಕಪ್ಪುಕೂದಲುಗಳನ್ನುಳ್ಳ, ಉಳಿದೆಲ್ಲ ಕಡೆಯೂ ಬಿಳಿಯಾದ ಇಪ್ಪತ್ತೈದು ಅಶ್ವತರಿಗಳನ್ನು (ಹೇಸರಗತ್ತೆಗಳನ್ನು) ಕೊಟ್ಟನು.
ಶಿಬಿಕಾನಾಂ ಸಹಸ್ರಂ ಚ ಪ್ರದದೌ ಮಧುಸೂದನಃ |
ಕೃಷ್ಣಾನಾಮಪಿ ಚಾಶ್ವಾನಾಂ ಬಾಹ್ಲೀಕಾನಾಂ ಜನಾರ್ದನಃ |
ದದೌ ಶತಸಹಸ್ರಂ ವೈ ಕನ್ಯಾಧನಮನುತ್ತಮಮ್ ॥46॥
ಮಧುಸೂದನನು ಒಂದು ಸಹಸ್ರ ಪಲ್ಲಕ್ಕಿಗಳನ್ನು ಕೊಟ್ಟನು. ಜನಾರ್ದನನು ಬಾಹ್ಲೀಕದೇಶದ ಜಾತಿಯ ಹತ್ತುಸಾವಿರ ಕಪ್ಪುಕುದುರೆಗಳನ್ನು ಶ್ರೇಷ್ಠವಾದ ಕನ್ಯಾಧನವಾಗಿ ಕೊಟ್ಟನು.
ಸ್ನಾಪನಾಚ್ಛಾದನೇ ಚೈವ ಭೋಜನೇ ಪಾಚನೇ ತಥಾ |
ಆದಾನೋದ್ವಾಸನೇ ಚೈವ ಪ್ರೇಷಣೇ ಯತ್ರ ಕುತ್ರ ಚಿತ್ |
ಅನುಲೇಪನೇ ಚ ಗಂಧಾನಾಂ ಪೇಷಣೇ ಚ ವಿಚಕ್ಷಣಮ್ ॥47॥
ಸರ್ವಕರ್ಮಣಿ ನಿಷ್ಣಾತಂ ಯುಕ್ತಂ ಚ ವಯಸಾऽನ್ವಿತಮ್ |
ಸ್ತ್ರೀಣಾಂ ಸಹಸ್ರಂ ಗೌರೀಣಾಂ ಸವೇಷಾಣಾಂ ಸುವರ್ಚಸಾಮ್ ॥48॥
ಸ್ನಾನಮಾಡಿಸುವುದರಲ್ಲಿಯೂ, ವಸ್ತ್ರಉಡಿಸುವುದರಲ್ಲಿಯೂ, ಭೋಜನದಲ್ಲಿಯೂ, ಪಾಕದಲ್ಲಿಯೂ, ಸ್ವೀಕರಿಸುವುದರಲ್ಲಿಯೂ, ಕಳುಹಿಸಿಕೊಡುವುದರಲ್ಲಿಯೂ, ವಿಸರ್ಜನಮಾಡುವುದರಲ್ಲಿಯೂ, ಗಂಧವನ್ನು ಅರೆದು ಅನುಲೇಪನಮಾಡುವುದರಲ್ಲಿಯೂ ಸಮರ್ಥರಾದ ಎಲ್ಲ ಕರ್ಮಗಳಲ್ಲಿಯೂ ನಿಪುಣರಾದ ಒಳ್ಳೆಯ ವಯಸ್ಸಿನಿಂದ ಕೂಡಿದ, ಒಳ್ಳೆಯ ವೇಷವನ್ನೂ ಕಾಂತಿಯನ್ನೂ ಧರಿಸಿದ ಇಪ್ಪತ್ತೆರಡು ವರ್ಷದ ಒಂದು ಸಾವಿರ ಯುವತಿಯರನ್ನು ಉಡುಗೊರೆಯಾಗಿ ಕೊಟ್ಟನು.
ಸುವರ್ಣಶತಕೀರ್ಣಾನಾಮರೋಗಾಣಾಂ ಸುವರ್ಚಸಾಮ್ |
ಪರಿಚರ್ಯಾಸು ದಕ್ಷಾಣಾಂ ಪ್ರದದೌ ಪುಷ್ಕರೇಕ್ಷಣಃ ॥49॥
ಕೃತಾಕೃತಸ್ಯ ಮುಖ್ಯಸ್ಯ ಕನಕಸ್ಯ ಸುವರ್ಚಸಃ |
ಮನುಷ್ಯಭಾರಾನ್ ದಾಶಾರ್ಹಃ ಪ್ರದದೌ ಪ್ರಯುತಂ ತದಾ ॥50॥
ಭೂಷಣಾನಾಂ ಚ ಮುಖ್ಯಾನಾಂ ಶತಭಾರಂ ದದೌ ಧನಮ್ |
ಮುಕ್ತಾಹಾರಾಣಿ ಶುಭ್ರಾಣಿ ಶತಸಂಖ್ಯಾನಿ ಕೇಶವಃ ॥51॥
ಸುವರ್ಣಾಭರಣಗಳಿಂದ ಭೂಷಿತರಾದ ರೋಗರಹಿತರಾದ ಕಾಂತಿಯುಕ್ತರಾದ ಪರಿಚರ್ಯೆಯಲ್ಲಿ ಕುಶಲರಾದ ಯುವತಿಯರ ಸಮೂಹವನ್ನು ಕಮಲನಯನನಾದ ಕೃಷ್ಣನು ಉಡುಗೊರೆಯಾಗಿ ನೀಡಿದನು. ಕೇವಲ ಸುವರ್ಣಗಳಿಂದ ಮಾಡಿದ ಆಭರಣಗಳನ್ನು, ರತ್ನಗಳನ್ನು ಮೆತ್ತಿದ್ದ ಸುವರ್ಣಾಭರಣಗಳನ್ನು ಹತ್ತು ಮನುಷ್ಯರು ಹೊರುವ ಭಾರವುಳ್ಳ ಹತ್ತು ಸಾವಿರ ಆಭರಣಗಳನ್ನು ಕೃಷ್ಣನು ಆಗ ಕೊಟ್ಟನು. ಮುಖ್ಯವಾದ ಭೂಷಣಗಳ ನೂರರಷ್ಟು ಭಾರದ ಧನವನ್ನು ಕೊಟ್ಟನು. ಕೇಶವನು ನೂರರ ಸಂಖ್ಯೆಯಲ್ಲಿ ಶುಭ್ರವಾದ ಮುತ್ತಿನ ಹಾರಗಳನ್ನು ಕೊಟ್ಟನು.
ಪ್ರವಾಳಾನಾಂ ಸಹಸ್ರಂ ಚ ತಥಾ ವೈ ಶಯನಾಸನಾನ್ |
ಸುವರ್ಣಪಾದಪೀಠಾನಾಂ ಮಹಾರ್ಹಾಸ್ತರಣಾಂಸ್ತಥಾ |
ಪರ್ಯಂಕಾಣಾಂ ಸಹಸ್ರಂ ದದೌ ಕನ್ಯಾಧನಂ ತಥಾ ॥53॥
ಒಂದು ಸಹಸ್ರ ಹವಳಗಳನ್ನು, ಹಾಗೆಯೇ ಹಾಸಿಗೆ ಮತ್ತು ಆಸನಗಳನ್ನು, ಸುವರ್ಣಮಯವಾದ ಪಾದಪೀಠಗಳನ್ನು, ಅನರ್ಘ್ಯವಾದ ಹಾಸುವ ಬಟ್ಟೆಗಳನ್ನು, ಒಂದು ಸಹಸ್ರಮಂಚಗಳನ್ನು, ಕನ್ಯಾಧನವಾಗಿ ಕೊಟ್ಟನು.
ರಾಮಃ ಪಾಣಿಗ್ರಹನಿಕಂ ದದೌ ಪಾರ್ಥಾಯ ಲಾಂಗಲೀ |
ಪ್ರೀಯಮಾಣೋ ಹಲಧರಃ ಸಂಬಂಧಪ್ರೀತಮಾನಸಃ ॥54॥
ನೇಗಿಲನ್ನು ಹಿಡಿದ ಬಲರಾಮನು ಸಂತುಷ್ಟನಾಗಿ ಅರ್ಜುನನಿಗೆ ಅನೇಕ ಮದುವೆಯ ಉಡುಗೊರೆಗಳನ್ನು ಈ ಸಂಬಂಧಿಂದ ಪ್ರಸನ್ನನಾಗಿ ನೀಡಿದನು.

ಸ ಮಹಾಧನರತ್ನೌಘೋ ವಸ್ತ್ರಕಂಬಲಫೇನವಾನ್ |
ಮಹಾರಥಗಜಗ್ರಾಹೋ ಜಾತ್ಯಶ್ವೈಃ ಶೈವಲಾಕುಲಃ |
ಪಾಂಡುಸಾಗರಮಾವಿದ್ಧಂ ಪ್ರವಿವೇಶ ಮಹಾನದಃ ||55||
ಆ ಮಹಾಧನ ಮತ್ತು ರತ್ನಗಳ ಪ್ರವಾಹವು ವಸ್ತ್ರಕಂಬಳಿಗಳ ರೂಪದ ನೊರೆಯಿಂದಲೂ, ಮಹಾರಥಗಳೂ ಮತ್ತು ಗಜಗಳೆಂಬ ಮೊಸಳೆಗಳಿಂದಲೂ, ಜಾತ್ಯಶ್ವಗಳೆಂಬ ಶೈವಲದಿಂದಲೂ ಕೂಡಿದುದವಾಗಿ ಮಹಾನದಿಯ ರೂಪದಲ್ಲಿ ಪಾಂಡುಸಾಗರದ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಪಾಂಡುಸಾಗರವನ್ನು ಪ್ರವೇಶಿಸಿತು.
ಪೂರ್ಣಮಾಪೂರಯಂಸ್ತೇಷಾಮಭೀಷ್ಟಃ ಸರ್ವಭೋಗವಾನ್ |
ಪ್ರತಿಜಗ್ರಾಹ ತತ್ಸರ್ವಂ ಧನೌಘಂ ವೈ ಯುಧಿಷ್ಠಿರಃ ||56||
ಮೊದಲೇ ಪೂರ್ಣವಾಗಿದ್ದ ಅವರ ಸಮೃದ್ಧಿಯನ್ನು ಇನ್ನೂ ಹೆಚ್ಚಿಸುತ್ತಾ ಹರಿದುಬಂದ ಸರ್ವಭೋಗಪ್ರದವಾದ ಇಷ್ಟವಾದ ಆ ನದಿಯ ರೂಪದ ಧನರಾಶಿಯೆಲ್ಲವನ್ನೂ ಧರ್ಮರಾಜನು ಸ್ವೀಕರಿಸಿದನು.
ಪೂಜಯಾಮಾಸ ತಾಂಶ್ಚೈವ ವೃಷ್ಣ್ಯಂಧಕಮಹಾರಥಾನ್ |
ತೇ ಸಮೇತಾ ಮಹಾತ್ಮಾನಃ ಕುರುವೃಷ್ಣ್ಯಂಧಕೋತ್ತಮಾಃ ||57||
ವಿಜಹ್ರುರಮರಾವಾಸೇ ನರಾಃ ಸುಕೃತಿನೋ ಯಥಾ |
ತತ್ರತತ್ರ ಮಹಾಪಾನೈರಾಸವೈಶ್ಚ ಮಹಾಧನೈಃ ||58||
ಧರ್ಮರಾಜನು ವೃಷ್ಣ್ಯಂಧಕ ಮಹಾರಥರೆಲ್ಲರನ್ನೂ ತಾನು ಪೂಜಿಸಿದನು. ಮಹಾನುಭಾವರಾದ ಕುರುಶ್ರೇಷ್ಠರು, ವೃಷ್ಣಿಶ್ರೇಷ್ಠರು ಮತ್ತು ಅಂಧಕಶ್ರೇಷ್ಠರು ಒಟ್ಟಿಗೆ ಸೇರಿ ಪುಣ್ಯವನ್ನು ಮಾಡಿದ
ಪುರುಷನು ಸ್ವರ್ಗದಲ್ಲಿ ವಿಹಾರ ಮಾಡಿದಂತೆ ವಿಹಾರವನ್ನು ಮಾಡಿದರು.
ಅಲ್ಲಲ್ಲಿ ಮಹಾಪಾನಗಳಿಂದಲೂ, ಮಹಾಧನಗಳಿಂದಲೂ, ಮಹಾಆಸವಗಳಿಂದಲೂ, ಸಂತೋಷಪಡುತ್ತಾ ವಿಹರಿಸಿದರು.
ಪೀತ್ವಾಪೀತ್ವಾ ಚ ಮೈರೇಯಾನ್ ಉತ್ಕೃಷ್ಟತಳತಾಡಿತಾಃ |
ಯಥಾಯೋಗಂ ಯಥಾಪ್ರೀತಿ ವಿಜಹ್ರುಃ ಕುರುವೃಷ್ಣಯಃ ||60||
ಕುರುವೃಷ್ಣಿಗಳು ಮೈರೇಯರಸವನ್ನು ಮತ್ತೆ ಮತ್ತೆ ಪಾನಮಾಡುತ್ತಾ ಚಪ್ಪಾಳೆಗಳನ್ನು ತಟ್ಟಿ ತಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ಯಥೋಚಿತವಾಗಿ ವಿಹರಿಸಿದರು.
ಏವಂ ಬಹುವಿಧೈರ್ಭೋಗೈರ್ವಿಹೃತ್ಯ ದಿವಸಾನ್ ಬಹೂನ್ |
ಪೂಜಿತಾಃ ಕುರುಭಿರ್ಜಗ್ಮುಃ ಪುನರ್ದ್ವಾರವತೀಂ ಪ್ರತಿ ||61||
ಹೀಗೆ ಅನೇಕ ದಿವಸಗಳವರೆಗೆ ಅನೇಕ ಭೋಗಗಳಿಂದ ಕುರುಗಳ ಜೊತೆಯಲ್ಲಿ ವಿಹಾರವನ್ನು ಮಾಡಿ ಕುರುಗಳಿಂದ ಪೂಜಿಸಲ್ಪಟ್ಟು ಪುನಃ ದ್ವಾರಾವತೀ ಪಟ್ಟಣಕ್ಕೆ ಹಿಂತಿರುಗಿದರು.
ರತ್ನಾನ್ಯಾದಾಯ ಶುಭ್ರಾಣಿ ದತ್ತಾನಿ ಕುರುಸತ್ತಮೈಃ |
ರಾಮಂ ಪುರಸ್ಕೃತ್ಯ ಯಯುರ್ವೃಷ್ಣ್ಯಂಧಕಮಹಾರಥಾಃ ||62||
ಕುರುಶ್ರೇಷ್ಠರು ಕೊಟ್ಟ ದಿವ್ಯವಾದ ರತ್ನಗಳನ್ನು ತೆಗೆದುಕೊಂಡು ವೃಷ್ಣ್ಯಂಧಕ ಮಹಾರಥರು ರಾಮನನ್ನು ಮುಂದೆಮಾಡಿಕೊಂಡು ಅಲ್ಲಿಂದ ಹೊರಟರು.
ರಾಮಃ ಸುಭದ್ರಾಂ ಸಂಪೂಜ್ಯ ಪರಿಷ್ವಜ್ಯ ಸ್ವಸಾಂ ತದಾ |
ನ್ಯಾಸೇತಿ ದ್ರೌಪದೀಮುಕತ್ವ ಪರಿದಾಯ ಮಹಾಬಲಃ ||63||
ಪಿತೃಷ್ವಸಾಯಾಶ್ಚರಣಾವಭಿವಾದ್ಯ ಯಯೌ ತದಾ |
ತಸ್ಮಿನ್ ಕಾಲೇ ಪೃಥಾ ಪ್ರೀತಾ ಪೂಜಯಾಮಾಸ ತಂ ತಥಾ ||64||
ವೃಷ್ಣಿಪ್ರವೀರಃ ಪಾರ್ಥೈಶ್ಚ ಪೌರೈಶ್ಚ ಪರಮಾರ್ಚಿತಃ |
ಯಯೌ ದ್ವಾರವತೀಂ ರಾಮೋ ವೃಷ್ಣಿಭಿಃ ಸಹ ಸಂಯುತಃ ||65||
ಬಲರಾಮನು ಸುಭದ್ರೆಯನ್ನು ಆಲಿಂಗಿಸಿ ತಂಗಿಯಾದ ಅವಳನ್ನು ಸತ್ಕರಿಸಿ ಇವಳನ್ನು ನ್ಯಾಸವಾಗಿ ನಿನ್ನ ಬಳಿ ಇಟ್ಟಿದ್ದೇನೆ ಎಂದು ದ್ರೌಪದಿಗೆ ಹೇಳಿ ಅವಳ ಅನುಮತಿಯನ್ನು ಪಡೆದು ಸೋದರತ್ತೆಯ ಪಾದಗಳಿಗೆ ನಮಸ್ಕರಿಸಿ ಅಲ್ಲಿಂದ ಹೊರಟನು. ಆ ಕಾಲದಲ್ಲಿ ಕುಂತಿಯು ಸಂತೋಷದಿಂದ ಬಲರಾಮನನ್ನು ಪೂಜಿಸಿದಳು. ವೃಷ್ಣಿವೀರನಾದ ಬಲರಾಮನು ಪಾಂಡವರಿಂದಲೂ ಮತ್ತು ಪೌರರಿಂದಲೂ ಉತ್ತಮವಾಗಿ ಸತ್ಕರಿಸಲ್ಪಟ್ಟು ವೃಷ್ಣಿಗಳ ಜೊತೆಯಲ್ಲಿ ದ್ವಾರವತೀ ನಗರಕ್ಕೆ ಹಿಂದಿರುಗಿದನು.
ವಾಸುದೇವಸ್ತು ಪಾರ್ಥೇನ ತತ್ರೈವ ಸಹ ಭಾರತ |
ಚತುಸ್ತ್ರಿಂಶದಹೋರಾತ್ರಂ ರಮಮಾಣೋ ಮಹಾಬಲಃ ||66||
ಉವಾಸ ನಗರೇ ರಮ್ಯೇ ಶಕ್ರಪ್ರಸ್ಥೇ ಮಹಾತ್ಮನಾ |
ವ್ಯಚರದ್ ಯಮುನಾಕೂಲೇ ಪಾರ್ಥೇನ ಸಹ ಭಾರತ ||67||
ವಾಸುದೇವನಾದರೋ ಇನ್ನೂ ಮೂವತ್ನಾಲ್ಕು ದಿವಸಗಳು ಮಹಾತ್ಮನಾದ ಅರ್ಜುನನ ಜೊತೆಯಲ್ಲಿ ವಿಹಾರ ಮಾಡುತ್ತಾ ಮನೋಹರವಾದ ಇಂದ್ರಪ್ರಸ್ಥನಗರದಲ್ಲಿ ವಾಸಿಸಿ ಅರ್ಜುನನ ಜೊತೆಯಲ್ಲಿ ಯಮುನಾತೀರದಲ್ಲಿ ಸಂಚರಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ ||
|| ಇತಿ ಹರಣಹಾರಿಕಪರ್ವಣಿ ತೃತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.

*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಆಸನ್ ಕೃಷ್ಣಾಯಾಃ ಪಂಚ ಸುತಾ ಗುಣಾಢ್ಯಾ
ವಿಶ್ವೇದೇವಾಃ ಪಂಚಗಂಧರ್ವಮುಖ್ಯೈಃ |
ಆವಿಷ್ಟಾಸ್ತೇ ಚಿತ್ರರಥಾಭಿತಾಮ್ರ-
ಕಿಶೋರಗೋಪಾಲಬಲ್ಯೈಃ ಕ್ರಮೇಣ ॥212॥
ದ್ರೌಪದಿಯಲ್ಲಿ ಪಾಂಡವರಿಂದ ಐದು ಮಂದಿ ಗುಣಾಢ್ಯರಾದ ಮಕ್ಕಳು ಜನಿಸಿದರು. ಅವರು ಹಿಂದೆ ವಿಶ್ವೇದೇವತೆಗಳು ಕ್ರಮವಾಗಿ ಚಿತ್ರರಥ ಅಭಿತಾಮ್ರ ಕಿಶೋರ ಗೋಪಾಲ ಬಲ ಎಂಬ ಐವರು ಶ್ರೇಷ್ಠ ಗಂಧರ್ವರಿಂದ ಆವಿಷ್ಟರು.
ಪ್ರತಿವಿಂಧ್ಯಃ ಸುತಸೋಮಃ ಶ್ರುತಾಖ್ಯಕೀರ್ತಿಃ
ಶತಾನೀಕ ಉತ ಶ್ರುತಕ್ರಿಯಃ |
ಯುಧಿಷ್ಠಿರಾದ್ಯೈಃ ಕ್ರಮಶಃ ಪ್ರಜಾತಾ-
ಸ್ತೇಷಾಂ ದ್ವಯೋಶ್ಚಾವರಜೋಽಭಿಮನ್ಯುಃ ॥213॥
ಪ್ರತಿವಿಂಧ್ಯ ಸುತಸೋಮ ಶ್ರುತಕೀರ್ತಿ ಶತಾನೀಕ ಶ್ರುತಕ್ರಿಯ- ಇವರೆ ಆ ಐವರು ಮಕ್ಕಳು. ಕ್ರಮವಾಗಿ ಯುಧಿಷ್ಠಿರ ಮುಂತಾದ ಐವರಿಂದ ಹುಟ್ಟಿದರು. ಅವರಲ್ಲಿ ಪ್ರತಿವಿಂಧ್ಯ ಸುತಸೋಮರ ಬಳಿಕ ಹುಟ್ಟಿದವನು ಅಭಿಮನ್ಯು.
ಚಂದ್ರಾಂಶಯುಕ್ತೋಽತಿತರಾಂ ಬುಧೋಽಸೌ
ಜಾತಃ ಸುಭದ್ರಾ ಜಠರೇಽರ್ಜುನೇನ |
ಧರ್ಮೇರಶಕ್ರಾಂಶಯುತೋಽಶ್ವಿನೋಶ್ಚ
ತಥೈವ ಕೃಷ್ಣಸ್ಯ ಸ ಸನ್ನಿಧಾನಯುಕ್ ॥214॥
ಚಂದ್ರನ ಬಹು ಆವೇಶಯುಕ್ತನಾದ ಬುಧನೆ ಅಭಿಮನ್ಯು. ಅರ್ಜುನನಿಂದ ಸುಭದ್ರೆಯ ಗರ್ಭದಲ್ಲಿ ಅವತರಿಸಿದ್ದ. ಅವನು ಯಮ ವಾಯು ಇಂದ್ರರ ಅಂಶಗಳಿಂದಲೂ ಶ್ರೀಕೃಷ್ಣನ ಸನ್ನಿಧಾನದಿಂದಲೂ ಯುಕ್ತನಾಗಿದ್ದ.
ಸರ್ವೇಽಪಿ ತೇ ವೀರ್ಯವಂತಃ ಸುರೂಪಾ
ಭಕ್ತಾ ವಿಷ್ಣೋಃ ಸರ್ವಶಾಸ್ತ್ರೇಷ್ವಭಿಜ್ಞಾಃ |
ಮೋದಂ ಯುಯುಃ ಪಾಂಡವಾಸ್ತೈಃ ಸುತೈಶ್ಚ
ವಿಶೇಷತಃ ಸಾತ್ವತೀನಂದನೇನ ॥215॥
ಪಾಂಡವರ ಮಕ್ಕಳು ಎಲ್ಲರೂ ಬಲಶಾಲಿಗಳು, ಸ್ಫುರದ್ರೂಪಿಗಳು, ವಿಷ್ಣುಭಕ್ತರು, ಸರ್ವಶಾಸ್ತ್ರಾಭಿಜ್ಞರು. ಈ ಮಕ್ಕಳನ್ನು ಅವರಲ್ಲಿಯೂ ವಿಶೇಷವಾಗಿ ಅಭಿಮನ್ಯುವನ್ನು ನೋಡಿ ಪಾಂಡವರು ಆನಂದಿಸಿದರು.
* * * *

ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯ
(ಅಭಿಮನ್ಯುವಿನ ಜನನ, ಕೃಷ್ಣನಿಂದ ಅವನ ಲಾಲನ, ಅರ್ಜುನನಿಂದ ಶಸ್ತ್ರಾಸ್ತ್ರ ಪ್ರಾಪ್ತಿ, ಪಂಚದ್ರೌಪದೇಯರ ಜನನ.)
ವೈಶಂಪಾಯನಃ
ತತಃ ಸುಭದ್ರಾ ಸೌಭದ್ರಂ ಕೇಶವಸ್ಯ ಪ್ರಿಯಾ ಸ್ವಸಾ |
ಜಯಂತಮಿವ ಪೌಲೋಮೀ ದ್ಯುತಿಮಂತಮಜೀಜನತ್ ॥1॥
ಅನಂತರ, ಕೇಶವನ ಪ್ರೀತಿಪಾತ್ರಳಾದ ತಂಗಿಯಾದ ಸುಭದ್ರೆಯು ಪೌಲೋಮಿಯು ಜಯಂತನನ್ನು ಪಡೆದಂತೆ ಕಾಂತಿಯುಕ್ತನಾದ ಮಗನನ್ನು ಪಡೆದಳು.
ದೀರ್ಘಬಾಹುಂ ಮಹಾಸತ್ವಂ ವೃಷಭಾಕ್ಷಮರಿಂದಮಮ್ |
ಸುಭದ್ರಾ ಸುಷುವೇ ವೀರಮಭಿಮನ್ಯುಂ ನರರ್ಷಭಮ್ ॥2॥
ದೀರ್ಘಬಾಹುವೂ, ಮಹಾಸತ್ವನೂ, ವೃಷಭಾಕ್ಷನೂ, ಅರಿಂದಮನೂ, ವೀರನೂ, ನರಶ್ರೇಷ್ಠನೂ ಆದ ಅಭಿಮನ್ಯುವನ್ನು ಸುಭದ್ರೆಯು ಪ್ರಸವಿಸಿದಳು.
ಅಭೀಶ್ಚ ಮನ್ಯುಮಾಂಶ್ಚೈವ ತತಸ್ತಮರಿಮರ್ದನಮ್ |
ಅಭಿಮನ್ಯುರಿತಿ ಪ್ರಾಹುರಾರ್ಜುನಿಂ ಬ್ರಾಹ್ಮಣರ್ಷಭಾಃ ॥3॥
ಭಯರಹಿತನಾದ ಕಾರಣದಿಂದ ಮತ್ತು ಶತ್ರುಗಳ ಮೇಲೆ ಮನ್ಯು ಎಂದರೆ ಕೋಪವುಳ್ಳ ಕಾರಣದಿಂದ ಅರಿಮರ್ದನನಾದ ಆ ಅರ್ಜುನನ ಪುತ್ರನನ್ನು ಬ್ರಾಹ್ಮಣಶ್ರೇಷ್ಠರು ಅಭಿಮನ್ಯು ಎಂದು ಕರೆದರು.
ಸ ಸಾತ್ವತ್ಯಾಮತಿರಥಃ ಸಂಬಭೂವ ಧನಂಜಯಾತ್ |
ಮಖೇ ನಿರ್ಮಥ್ಯಮಾನಾದ್ವಾ ಶಮೀಗರ್ಭಾದ್ಧುತಾಶನಃ ॥4॥
ಅತಿರಥನಾದ ಅವನು ನಿರ್ಮಥಿಸಲ್ಪಡುವ ಶಮಿಯ ಅರಣ್ಯಗಳ ಗರ್ಭದಿಂದ ಅಗ್ನಿಯು ಉದಯಿಸುವಂತೆ ಧನಂಜಯನಿಂದ ಸಾತ್ವತಿಯಾದ ಸುಭದ್ರೆಯಲ್ಲಿ ಉದಯಿಸಿದನು.
ಯಸ್ಮಿಂಜಾತೇ ಮಹಾಬಾಹುಃ ಕುಂತೀಪುತ್ರೋ ಯುಧಿಷ್ಠಿರಃ |

ಅಯುತಂ ಗಾ ದ್ವಿಜಾತಿಭ್ಯಃ ಪ್ರಾದಾನ್ನಿಷ್ಕಾಂಶ್ಚ ತಾವತಃ ॥5॥
ಅವನ ಜನನ ಸಮಯದಲ್ಲಿ ಮಹಾಬಾಹುವಾದ ಕುಂತೀಪುತ್ರನಾದ ಯುಧಿಷ್ಠಿರನು ಅಯುತಗೋವುಗಳನ್ನು ಮತ್ತು ಅಯುತನಿಷ್ಕಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು.
ಲಾಲಿತೋ ವಾಸುದೇವಸ್ಯ ಬಾಲ್ಯಾತ್ ಪ್ರಭೃತಿ ಚಾಭವತ್ |
ಪಿತೄಣಾಂ ಚೈವ ಸರ್ವೇಷಾಂ ಪ್ರಜಾನಾಮಿವ ಚಂದ್ರಮಾಃ ॥6॥
ಅಭಿಮನ್ಯುವು ಬಾಲ್ಯದಿಂದಲೂ ಕೃಷ್ಣನಿಂದ ಲಾಲಿತನಾದನು. ಎಲ್ಲಾ ಪ್ರಜೆಗಳಿಗೆ ಚಂದ್ರನಂತೆ, ಎಲ್ಲಾ ಪಿತೃಗಳಿಗೆ ಆಹ್ಲಾದಕರನಾದನು.
ಜನ್ಮಪ್ರಭೃತಿ ಕೃಷ್ಣಸ್ತು ಚಕ್ರೇ ತಸ್ಯ ಕ್ರಿಯಾಃ ಶುಭಾಃ |
ಸ ಚಾಪಿ ವವೃಧೇ ಬಾಲಃ ಶುಕ್ಲಪಕ್ಷೇ ಯಥಾ ಶಶೀ ॥7॥
ಅವನ ಜನನದಿಂದ ಆರಂಭಿಸಿ ಎಲ್ಲಾ ಸಂಸ್ಕಾರಗಳನ್ನು ಕೃಷ್ಣನೇ ಅವನಿಗೆ ಮಾಡಿಸಿದನು. ಆ ಬಾಲನಾದರೋ ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದಿದನು.
ಚತುಷ್ಪಾದಂ ದಶವಿಧಂ ಧನುರ್ವೇದಮರಿಂದಮ |
ಅರ್ಜುನಾದ್ ವೇದ ವೇದಜ್ಞಾತ್ ಸಕಲಂ ದಿವ್ಯಮಾನುಷಮ್ ॥8॥
ಅರಿಂದಮನೇ, ವಿಧಿಪಾದ, ಮಂತ್ರಪಾದ, ಪೂಜಾಪಾದ ಮತ್ತು ರಹಸ್ಯಪಾದ ಎಂಬ ನಾಲ್ಕು ಪಾದಗಳಿಂದ ಕೂಡಿದ ಶಿಕ್ಷಾ, ವಿಧಿ, ಪ್ರಯೋಗ, ಮುಷ್ಟಿ, ಲಕ್ಷ್ಯನಿಪಾತನ, ಅಸ್ತ್ರ, ಅಸ್ತ್ರತಪಶ್ಚರ್ಯ, ದಿವ್ಯಪ್ರಮೋಕ್ಷ, ಮಾನುಷಪ್ರಮೋಕ್ಷ, ಮತ್ತು ಉಪಸಂಹಾರ ಎಂಬ ಹತ್ತು ವಿಧದಿಂದ ಕೂಡಿದ ದಿವ್ಯಮಾನುಷಪ್ರಭೇದವುಳ್ಳ ಧನುರ್ವೇದವನ್ನು ಸರ್ವವೇದಜ್ಞಾನಿಯಾದ ಅರ್ಜುನನಿಂದ ಅವನು ಸಮಗ್ರವಾಗಿ ಕಲಿತನು.
ವಿಜ್ಞಾನೇಷ್ವಪಿ ಶಸ್ತ್ರಾಣಾಂ ಸೌಷ್ಠವೇ ಚ ಮಹಾಬಲಃ |
ಕ್ರಿಯಾಸ್ವಪಿ ಚ ಸರ್ವಾಸು ವಿಶೇಷಾನಭ್ಯಶಿಕ್ಷಯತ್ ॥9॥
ಶಸ್ತ್ರಗಳ ವಿಜ್ಞಾನದಲ್ಲಿಯೂ, ಶಸ್ತ್ರಗಳ ಕೌಶಲದಲ್ಲಿಯೂ ಮತ್ತು ಎಲ್ಲಾ ಕ್ರಿಯೆಗಳಲ್ಲಿಯೂ ಮಹಾಬಲನಾದ ಅವನು ಅರ್ಜುನನಿಂದ ವಿಶೇಷವಾದುದನ್ನು ಕಲಿತನು.
ಆಗಮೇ ಚ ಪ್ರಯೋಗೇ ಚ ಚಕ್ರೇ ತುಲ್ಯಮಿವಾತ್ಮನಃ |
ತುತೋಷ ಪುತ್ರಂ ಸೌಭದ್ರಂ ಪ್ರೇಕ್ಷಮಾಣೋ ಧನಂಜಯಃ ॥10॥
ವಿದ್ಯೆಯಲ್ಲಿಯೂ ಮತ್ತು ವಿದ್ಯೆಯ ಅನುಷ್ಠಾನದಲ್ಲಿಯೂ ಅರ್ಜುನನು ಅವನನ್ನು ತನಗೆ ಸಮಾನನನ್ನಾಗಿ ಮಾಡಿದನು. ಸುಭದ್ರೆಯ ಮಗನಾದ ಅಭಿಮನ್ಯುವನ್ನು ನೋಡುತ್ತಾ ಅರ್ಜುನನು ಬಹಳ ಸಂತೋಷಪಟ್ಟನು.
ಸರ್ವಸಂಹನನೋಪೇತಂ ಸರ್ವಲಕ್ಷಣಲಕ್ಷಿತಮ್ |
ದುರ್ಧರ್ಷಮೃಷಭಸ್ಕಂಧಂ ವ್ಯಾತ್ತಾನನಮಿವಾಂತಕಮ್ ॥11॥
ಸಿಂಹದರ್ಪಂ ಮಹೇಷ್ವಾಸಂ ಮತ್ತಮಾತಂಗವಿಕ್ರಮಮ್ |
ಮೇಘದುಂದುಭಿನಿರ್ಘೋಷಂ ಪೂರ್ಣಚಂದ್ರನಿಭಾನನಮ್ ॥12॥
ಕೃಷ್ಣಸ್ಯ ಸದೃಶಂ ಶೌರ್ಯೇ ವೀರ್ಯೇ ರೂಪೇ ತಥಾಽಽಕೃತೌ |
ದದರ್ಶ ಪುತ್ರಂ ಬೀಭತ್ಸುರ್ಜಯಂತಂ ಮಘವಾನಿವ ॥13॥
ದೃಢವಾದ ಶರೀರದಿಂದ ಕೂಡಿದ, ಸರ್ವಲಕ್ಷಣಸಂಪನ್ನನಾದ, ಶತ್ರುಗಳಿಗೆ ಎಂದೂ ಸೋಲದ, ವೃಷಭಸ್ಕಂಧನಾದ ಆಕರ್ಷಿಸುತ್ತಿರುವ, ಯಮನಂತಿದ್ದ, ಸಿಂಹದದರ್ಪವುಳ್ಳ ಮಹಾಧನುರ್ಧರನಾದ ಮದಗಜವಿಕ್ರಮವನ್ನು ಹೊಂದಿದ, ಮೇಘದುಂದುಭಿನಿರ್ಘೋಷವನ್ನು ಹೊಂದಿದ, ಪೂರ್ಣಚಂದ್ರನಂತಿರುವ ಮುಖವುಳ್ಳ, ಶೌರ್ಯದಲ್ಲಿಯೂ, ವೀರ್ಯದಲ್ಲಿಯೂ, ರೂಪದಲ್ಲಿಯೂ, ಆಕಾರದಲ್ಲಿಯೂ ಕೃಷ್ಣನನ್ನು ಹೋಲುವ ತನ್ನ ಮಗನನ್ನು ಕಂಡು ಅರ್ಜುನನು ಇಂದ್ರನು ಜಯಂತನನ್ನು ಕಂಡು ಸಂತೋಷಪಡುವಂತೆ ಸಂತೋಷಪಟ್ಟನು.
ಪೂರ್ವಮೇವ ತು ಪಾಂಚಾಲೀ ಪಂಚಭಿಃ ಪತಿಭಿಃ ಶುಭಾ |
ಲೇಭೇ ಪಂಚ ಸುತಾನ್ ವೀರಾನ್ ಶ್ರೇಷ್ಠಾನ್ ಪಂಚಾನಲಾನಿವ ॥14॥
ಇದಕ್ಕೆ ಮೊದಲೇ ದ್ರೌಪದಿಯು ಪಂಚಪತಿಗಳಿಂದ ಪಂಚಾಗ್ನಿಗಳಂತಿರುವ ವೀರರಾದ ಶ್ರೇಷ್ಠಪುತ್ರರನ್ನು ಪಡೆದಳು.
ಯುಧಿಷ್ಠಿರಾತ್ ಪ್ರತಿವಿಂಧ್ಯಂ ಸುತಸೋಮಂ ವೃಕೋದರಾತ್ |
ಅರ್ಜುನಾತ್ ಶ್ರುತಕೀರ್ತಿಂ ಚ ಶತಾನೀಕಂ ಚ ನಾಕುಲಿಮ್ ॥15॥
ಸಹದೇವಾತ್ ಶ್ರುತಕ್ರಿಯಮೇತಾನ್ ಪಂಚ ಮಹಾರಥಾನ್ |
ಪಾಂಚಾಲೀ ಸುಷುವೇ ವೀರಾನ್ ಆದಿತ್ಯಾನದಿತಿರ್ಯಥಾ ॥16॥
ಯುಧಿಷ್ಠಿರನಿಂದ ಪ್ರತಿವಿಂಧ್ಯನನ್ನು, ಭೀಮಸೇನನಿಂದ ಸುತಸೋಮನನ್ನು,ನ ಅರ್ಜುನನಿಂದ ಶ್ರುತಕೀರ್ತಿಯನ್ನು, ನಕುಲನಿಂದ ಶತಾನೀಕನನ್ನು, ಸಹದೇವನಿಂದ ಶ್ರುತಕ್ರಿಯನನ್ನು ಈ ವೀರರಾದ ಮಹಾರಥರನ್ನು ದ್ರೌಪದಿಯು ಅದಿತಿಯು ಆದಿತ್ಯರನ್ನು ಪಡೆದಂತೆ ಪಡೆದಳು.
ಶಾಸ್ತ್ರತಃ ಪ್ರತಿವಿಂಧ್ಯಂ ತಮೂಚುರ್ವಿಪ್ರಾ ಯುಧಿಷ್ಠಿರಮ್ |
ಪರಪ್ರಹರಣಜ್ಞಾನೇ ಪ್ರತಿವಿಂಧ್ಯೋ ಭವತ್ವಯಮ್ ॥17॥
ಬ್ರಾಹ್ಮಣರು ಯುಧಿಷ್ಠಿರನ್ನು ಕುರಿತು ಶಾಸ್ತ್ರದೃಷ್ಟಿಯಿಂದ ಸಮಾಲೋಚಿಸಿ, ಶತ್ರುಗಳ ಎದುರಿನಲ್ಲಿ ವಿಂಧ್ಯಪರ್ವತದಂತೆ ಅಚಲನಾಗಿರುವ ಕಾರಣದಿಂದಲೂ, ತಾನೇ ಶಸ್ತ್ರಜ್ಞಾನವನ್ನು ಸಂಪಾದಿಸಿ ಪ್ರತಿಭಟರನ್ನು ಹಿಂಸಿಸುವ ಕಾರಣದಿಂದಲೂ ಇವನಿಗೆ

ಪ್ರತಿವಿಂಧ್ಯನೆಂದು ಹೆಸರಿರಲಿ ಎಂದು ಹೇಳಿದರು.
ಸುತೇ ಸೋಮಸಹಸ್ರೇ ತು ಸೋಮಾರ್ಕಸಮತೇಜಸಾಮ್ |
ಸುತಸೋಮಂ ಮಹಾಪ್ರಾಜ್ಞಂ ಸುಷುವೇ ಭೀಮಸೇನತಃ ॥18॥
ಸೋಮಯಾಗವನ್ನು ಮಾಡಿದ ಸಹಸ್ರರಾಜರ ಮಧ್ಯದಲ್ಲಿ ಸೂರ್ಯನಂತೆ, ಚಂದ್ರನಂತೆ ತೇಜಃಶಾಲಿಯಾದ ಮಹಾಪ್ರಾಜ್ಞನಾದ ಸುತಸೋಮನನ್ನು ಭೀಮಸೇನನಿಂದ ಪಡೆದಳು. (ಸುತಸೋಮರಿಗೆ ಸದೃಶನಾಗಿರುವುದರಿಂದ ಭೀಮನ ಮಗನಿಗೆ ಸುತಸೋಮ ಎಂದು ಹೆಸರು)
ಶ್ರುತಂ ಕರ್ಮ ಮಹತ್ ಕೃತ್ವಾ ನಿವೃತ್ತೇನ ಕಿರೀಟಿನಾ |
ಜಾತಃ ಪುತ್ರಸ್ತಥೇತ್ಯೇವಂ ಶ್ರುತಕೀರ್ತಿಃ ತತೋಽಭವತ್ ॥19॥
ದೊಡ್ಡ ಕರ್ಮವನ್ನು ಮಾಡಿ ಅದರ ಕೀರ್ತಿಯನ್ನು ಕೇಳುತ್ತಾ ಹಿಂದಿರುಗಿದ ಅರ್ಜುನನಿಗೆ ಜನಿಸಿದ ಪುತ್ರನು ಅದರಂತೆಯೇ ಶ್ರುತಕೀರ್ತಿ ಎಂಬ ನಾಮವನ್ನು ಧರಿಸಿದನು.
ಶತಾನೀಕಸ್ಯ ರಾಜರ್ಷೇಃ ಕೌರವ್ಯಸ್ಯ ಮಹಾತ್ಮನಃ |
ಚಕ್ರೇ ಪುತ್ರಂ ಸನಾಮಾನಂ ನಕುಲಃ ಕೀರ್ತಿವರ್ಧನಃ ॥20॥
ಕೀರ್ತಿವರ್ಧನನಾದ ನಕುಲನು ಮಹಾನುಭಾವನಾದ ತಮ್ಮ ಪೂರ್ವಿಕನಾದ ರಾಜರ್ಷಿಯಾದ ಶತಾನಿಕನ ಹೆಸರನ್ನೇ ತನ್ನ ಮಗನಿಗೆ ಇಟ್ಟನು.
ತತಸ್ತ್ವಜೀಜನತ್ ಕೃಷ್ಣಾ ನಕ್ಷತ್ರೇ ವಹ್ನಿದೈವತೇ |
ಸಹದೇವಾತ್ ಸುತಂ ತಸ್ಮಾತ್ ಶ್ರುತಸೇನೇತಿ ತಂ ವಿದುಃ ॥21॥
ಅನಂತರ, ದ್ರೌಪದಿಯು ಕೃತ್ತಿಕಾನಕ್ಷತ್ರದಲ್ಲಿ ಸಹದೇವನಿಂದ ಪಡೆದ ಮಗುವನ್ನು ಪ್ರಸವಿಸಿದಳು. ಆದ್ದರಿಂದ ಬ್ರಾಹ್ಮಣರು ಅವನಿಗೆ ಶ್ರುತಸೇನ ಎಂದು ಹೆಸರಿಟ್ಟರು.
ಏಕವರ್ಷಾಂತರಾಸ್ತ್ವೇವಂ ದ್ರೌಪದೇಯಾ ಯಶಸ್ವಿನಃ |
ಅನ್ವಜಾಯಂತ ರಾಜೇಂದ್ರ ಪರಸ್ಪರಹಿತೇ ರತಾಃ ॥22॥
ಈ ಕೀರ್ತಿಶಾಲಿಗಳಾದ ಈ ದ್ರೌಪದಿಯ ಮಕ್ಕಳಿಗೆ ಒಂದೊಂದು ವರ್ಷದ ಅಂತರವಿದೆ. ರಾಜೇಂದ್ರನಾದ ಜನಮೇಜಯನೇ, ಇವರು ಒಬ್ಬರಾದ ಮೇಲೆ ಒಬ್ಬರು ಜನಿಸಿ ಪರಸ್ಪರ ಹಿತದಲ್ಲಿ ರತರಾದರು.
ಜಾತಕರ್ಮಾಣ್ಯಾನುಪೂರ್ವ್ಯಾಚ್ಚೂಡೋಪನಯನಾನಿ ಚ |
ಚಕಾರ ವಿಧಿವದ್ ಧೌಮ್ಯಸ್ತೇಷಾಂ ಭರತಸತ್ತಮ ॥23॥
ಭರತಶ್ರೇಷ್ಠನೇ, ಧೌಮ್ಯರು ಅವರಿಗೆ ಜ್ಯೇಷ್ಠಕ್ರಮದಿಂದ ಜಾತಕರ್ಮ, ಚೂಡಾಕರ್ಮ, ಉಪನಯನ ಮೊದಲಾದ ಸಮಸ್ತ ಸಂಸ್ಕಾರಗಳನ್ನು
ವಿಧಿಪೂರ್ವಕವಾಗಿ ಮಾಡಿದರು.
ಕೃತ್ವಾ ತು ವೇದಾಧ್ಯಯನಂ ತತಃ ಸುಚರಿತವ್ರತಾಃ |
ಜಗೃಹುಃ ಸರ್ವಮಿಷ್ವಸ್ತ್ರಮರ್ಜುನಾದ್ ದಿವ್ಯಮಾನುಷಮ್ ॥24॥
ಶ್ರೇಷ್ಠವಾದ ವ್ರತಧಾರಿಗಳಾದ ದ್ರೌಪದೇಯರು ವೇಧಾಧ್ಯಯನವನ್ನು ಮಾಡಿ ಅನಂತರ ಅರ್ಜುನನಿಂದ ದಿವ್ಯಮಾನುಷಪ್ರಭೇದವುಳ್ಳ ಎಲ್ಲಾ ಅಸ್ತ್ರಶಸ್ತ್ರವಿದ್ಯೆಗಳನ್ನೂ ಕಲಿತರು.
ದಿವ್ಯಗರ್ಭೋಪಮೈಃ ಪುತ್ರೈರ್ವ್ಯೂಢೋರಸ್ಕೈರ್ಮಹಾಬಲೈಃ |
ಅನ್ವಿತಾ ರಾಜಶಾರ್ದೂಲ ಪಾಂಡವಾ ಮುದಮಾಪ್ನುವನ್ ॥25॥
ರಾಜಶಾರ್ದೂಲನೇ, ವಿಶಾಲ ವಕ್ಷಸ್ಥಳವುಳ್ಳ ಮಹಾಬಲಶಾಲಿಗಳಾದ ದೇವಕುಮಾರರಂತಿರುವ ಪುತ್ರರಿಂದ ಒಡಗೂಡಿ ಪಾಂಡವರು ಸಂತೋಷವನ್ನೂ ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಅಷ್ಟವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಹರಣಹಾರಿಕಪರ್ವಣಿ ಚತುರ್ಥೋಽಧ್ಯಾಯಃ ॥
॥ ಹರಣಹಾರಿಕಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಹರಣಹಾರಿಕಪರ್ವ ಸಮಾಪ್ತವಾಯಿತು.
*****
18. ಖಾಂಡವದಾಹಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ತತಃ ಕದಾಚಿತ್ ಖಾಂಡವಂ ಕೃಷ್ಣಪಾರ್ಥೌ
ಚಿಕ್ರೀಡಿಷೂ ಸತ್ಯಭಾಮಾಸುಭದ್ರೇ |
ಆದಾಯ ಯಾತೌ ಪರಿಚಾರಕೈಶ್ಚ
ರಥೇನ ಗಂಧರ್ವವರಾನುಗೀತೌ ॥216॥
ಒಂದು ದಿನ ಕೃಷ್ಣಾರ್ಜುನರು ಸತ್ಯಭಾಮಾ ಸುಭದ್ರೆಯರನ್ನು ಕರೆದುಕೊಂಡು ಸೇವಕರಿಂದ ಸಮೇತರಾಗಿ, ಗಂಧರ್ವಶ್ರೇಷ್ಠರು ಯಶೋಗಾನವನ್ನು ಮಾಡುತ್ತಿದ್ದಂತೆ ವಿಹಾರಕ್ಕಾಗಿ ರಥದಿಂದ ಖಾಂಡವವನಕ್ಕೆ ತೆರಳಿದರು.

* * * *

ಇನ್ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ

(ನಗರವಿಹಾರವನ್ನು ಮುಗಿಸಿ ಯಮುನಾ ತೀರದಲ್ಲಿ ವಿಹರಿಸಲು ಕೃಷ್ಣಾರ್ಜುನರ ನಿರ್ಧಾರ, ಖಾಂಡವವನ ಪ್ರಾಪ್ತಿ ಮತ್ತು ವರ್ಣನೆ.)

ವೈಶಂಪಾಯನಃ

ಇಂದ್ರಪ್ರಸ್ಥೇ ವಸಂತಸ್ತೇ ಜಘ್ನುರನ್ಯಾನ್ ನರಾಧಿಪಾನ್ |
ಶಾಸನಾದ್ ಧೃತರಾಷ್ಟ್ರಸ್ಯ ರಾಜ್ಞಃ ಶಾಂತನವಸ್ಯ ಚ ॥1॥

ಇಂದ್ರಪ್ರಸ್ಥದಲ್ಲಿ ವಾಸಮಾಡುತ್ತಾ ಪಾಂಡವರು ಧೃತರಾಷ್ಟ್ರನ ಮತ್ತು ಭೀಷ್ಮರ ಶಾಸನದಂತೆ ಬೇರೆ ರಾಜರನ್ನೂ ಸೋಲಿಸಿದರು. (ಸಂಹರಿಸಿದರು)

ಆಶ್ರಿತ್ಯ ಧರ್ಮರಾಜಾನಂ ಸರ್ವಲೋಕೋಽವಸತ್ ಸುಖಮ್ |
ಪುಣ್ಯಲಕ್ಷಣಧರ್ಮಾಣಂ ಸ್ವದೇಹಮಿವ ದೇಹಿನಃ ॥2॥

ಜೀವರು ಪುಣ್ಯದಿಂದ ಸಂಪಾದಿಸಿದ ತಮ್ಮ ದೇಹವನ್ನು ಹೊಂದಿ ಸುಖಪಡುವಂತೆ ಎಲ್ಲ ಜನರೂ ಧರ್ಮರಾಜನನ್ನು ಆಶ್ರಯಿಸಿ ಸುಖವಾಗಿದ್ದರು.

ಸ ಸಮಂ ಧರ್ಮಕಾಮಾರ್ಥಾನ್ ಸಿಷೇವೇ ಭರತರ್ಷಭ |
ತ್ರೀನಿವಾತ್ಮಸಮಾನ್ ಬಂಧೂನ್ ಬಂಧುಮಾನಿವ ಮಾನಯನ್ ॥3॥

ಭರತಶ್ರೇಷ್ಠನೇ, ಬಂಧುಗಳನ್ನು ಹೊಂದಿದವನು ತನ್ನ ಬಂಧುಗಳನ್ನು ಸಮಾನವಾಗಿ ಸಮ್ಮಾನಿಸುವಂತೆ ಧರ್ಮರಾಜನು ಧರ್ಮಾರ್ಥಕಾಮಗಳನ್ನು ಸಮಾನವಾಗಿ ಸಮ್ಮಾನಿಸಿ ಸೇವಿಸಿದನು.

ತೇಷಾಂ ಸಮವಿಭಕ್ತಾನಾಂ ಕ್ಷಿತೌ ದೇಹವತಾಮಿವ |
ಬಭೌ ಧರ್ಮಾರ್ಥಕಾಮಾನಾಂ ಚತುರ್ಥ ಇವ ಪಾರ್ಥಿವಃ ॥4॥

ತನ್ನ ರಾಷ್ಟ್ರದಲ್ಲಿ ಇರುವ ಸಮಾನವಾಗಿ ವಿಭಕ್ತವಾದ ಧರ್ಮಾರ್ಥಕಾಮಗಳ ಜೊತೆಯಲ್ಲಿ ರಾಜನು ನಾಲ್ಕನೆಯದಾದ ಮೋಕ್ಷದಂತೆ ಶೋಭಿಸಿದನು.

ಅಧ್ಯೇತಾರಂ ಯಥಾ ವೇದಾಃ ಪ್ರಯೋಕ್ತಾರಂ ಮಹಾಧ್ವರಾಃ |
ರಕ್ಷಿತಾರಂ ತಥಾ ವರ್ಣಾ ಲೇಭಿರೇ ತಂ ಜನಾಧಿಪಮ್ ॥5॥

ವೇದಾಧ್ಯಯನ ಮಾಡುವವನನ್ನು ವೇದಗಳು ಬಯಸುವಂತೆ, ಕರ್ಮನಿಷ್ಣಾತರನ್ನು ದೊಡ್ಡಯಜ್ಞಗಳು ಬಯಸುವಂತೆ ಎಲ್ಲಾ ಪ್ರಜೆಗಳು ಆ ರಾಜನನ್ನು ರಕ್ಷಕನನ್ನಾಗಿ ಬಯಸಿದರು.

ಅಧಿಷ್ಠಾನವತೀ ಲಕ್ಷ್ಮೀಃ ಪರಾಯಣವತೀ ಮಹೀ |
ಬಂಧುಮಾನಖಿಲೋ ಲೋಕಸ್ತೇನಾಸೀತ್ ಪೃಥಿವೀಕ್ಷಿತಾ ॥6॥

ಧರ್ಮರಾಜನು ರಾಜನಾಗಿರುವಾಗ ಅವನಿಂದ ಸಂಪತ್ತು ಅಧಿಷ್ಠಾನವನ್ನು ಪಡೆಯಿತು, ಭೂಮಿಯು ಶ್ರೇಷ್ಠವಾದ ಆಶ್ರಯವನ್ನು ಪಡೆಯಿತು, ಎಲ್ಲ ಜನರೂ ಬಂಧುವನ್ನು ಪಡೆದರು.

ಭ್ರಾತೃಭಿಃ ಸಹಿತೋ ರಾಜಾ ಚತುರ್ಭಿರಧಿಕಂ ಬಭೌ |
ಪ್ರಯುಜ್ಯಮಾನೋ ವಿತತೋ ವೇದೈರಿವ ಮಹಾಧ್ವರಃ ॥7॥

ಪ್ರಯೋಗಿಸಲ್ಪಡುವ ದೊಡ್ಡ ಯಜ್ಞವು ವೇದಗಳಿಂದ ಶೋಭಿಸುವಂತೆ ರಾಜನು ನಾಲ್ಕುಜನ ಸಹೋದರರಿಂದ ಕೂಡಿ ಇನ್ನೂ ಅಧಿಕವಾಗಿ ಶೋಭಿಸಿದನು.

ತಂ ತು ಧೌಮ್ಯಾದಯೋ ವಿಪ್ರಾಃ ಪರಿವಾರ್ಯೋಪತಸ್ಥಿರೇ |
ಬೃಹಸ್ಪತಿಸಮಾ ಬುದ್ಧ್ಯಾ ಪ್ರಜಾಪತಿಮಿವಾಧ್ವರೇ ॥8॥

ಬೃಹಸ್ಪತಿಗೆ ಸಮಾನವಾದ ಬುದ್ಧಿಯುಳ್ಳ ಧೌಮ್ಯಾದಿ ಬ್ರಾಹ್ಮಣರು ಯಜ್ಞದಲ್ಲಿ ದಕ್ಷಪ್ರಜಾಪತಿಯನ್ನು ಬ್ರಾಹ್ಮಣರು ಸುತ್ತುವರಿದಂತೆ ಅವನನ್ನು ಸುತ್ತುವರಿದು ನಿಂತರು.

ಧರ್ಮರಾಜೇ ಹ್ಯತಿಪ್ರೀತ್ಯಾ ಪೂರ್ಣಚಂದ್ರ ಇವಾಮಲೇ |
ಪ್ರಜಾನಾಂ ರೇಮಿರೇ ನಿತ್ಯಂ ನೇತ್ರಾಣಿ ಹೃದಯಾನಿ ಚ ॥9॥

ಧರ್ಮರಾಜನನ್ನು ನೋಡಿದಾಗ ನಿಷ್ಕಳಂಕನಾದ ಪೂರ್ಣಚಂದ್ರನನ್ನು ನೋಡಿದಂತೆ ಪ್ರಜೆಗಳ ನೇತ್ರಗಳೂ ಮತ್ತು ಮನಸ್ಸು ಸಂತೋಷಗೊಂಡಿತು.

ನ ತು ಕೇವಲದೈವೇನ ಪ್ರಜಾ ಭಾವೇನ ರೇಮಿರೇ |
ಯದ್ ಬಭೂವ ಮನಃಕಾಂತಂ ಕರ್ಮಣಾ ಸ ಚಕಾರ ತತ್ ॥10॥

ಪ್ರಜೆಗಳು ದೈವದತ್ತ ಐಹಿಕವಿಷಯಗಳ ಭೋಗದಿಂದ ಮಾತ್ರ ಸಂತೋಷಪಟ್ಟದ್ದಲ್ಲ, ಪ್ರಜೆಗಳ ಮನಸ್ಸಿಗೆ ಪ್ರಿಯವಾದುದನ್ನೆಲ್ಲಾ ರಾಜನು ತನ್ನ ಕರ್ಮದಿಂದ ಸಾಧಿಸಿದನು.

ನ ಹ್ಯಯುಕ್ತಂ ನ ದೈನ್ಯಂ ಚ ನಾನೃತಂ ನ ಚ ವಿಪ್ರಿಯಮ್ |
ಭಾಷಿತಂ ಚಾರುಭಾಷಸ್ಯ ಜಜ್ಞೇ ಪಾರ್ಥಸ್ಯ ಧೀಮತಃ ॥11॥

ಮೇಧಾವಿಯಾದ, ಸುಂದರವಾಗಿ ಮಾತನಾಡುವ ಧರ್ಮರಾಜನ ಮಾತು ಎಂದೂ ಅಯುಕ್ತವಾದುದಾಗಲೀ, ದೈನ್ಯದಿಂದ ಕೂಡಿದುದಾಗಲೀ, ನಾನೃತವಾಗಲೀ ಅಥವಾ ಅಪ್ರಿಯವಾಗಲೀ ಆಗಿರಲಿಲ್ಲ.

ಸ ಹಿ ಸರ್ವಸ್ಯ ಲೋಕಸ್ಯ ಹಿತಮಾತ್ಮನ ಏವ ಚ |
ಚಿಕೀರ್ಷುಃ ಸುಮಹಾತೇಜಾ ರೇಮೇ ಭರತಸತ್ತಮ ॥12॥

ಭರತಶ್ರೇಷ್ಠನೇ, ಮಹಾತೇಜಸ್ವಿಯಾದ ಅವನು ಎಲ್ಲ ಜನರಿಗೂ ಮತ್ತು ತನಗೂ ಹಿತವನ್ನು ಮಾಡಲು ಬಯಸಿ ಸಂತೋಷಪಟ್ಟನು.
ತಥಾ ತು ಮುದಿತಾಃ ಸರ್ವೇ ಪಾಂಡವಾ ವಿಗತಜ್ವರಾಃ |
ಅಜಯನ್ ಪೃಥಿವೀಪಾಲಾನ್ ತ್ರಾಸಯಂತಃ ಸ್ವತೇಜಸಾ ||13||
ಹಾಗೆ ಸಂತೋಷದಿಂದ ಕೂಡಿದ ನಿರಾತಂಕರಾದ ಎಲ್ಲ ಪಾಂಡವರು ತಮ್ಮ ಪರಾಕ್ರಮದಿಂದ ಉಳಿದ ರಾಜರನ್ನು ಹೆದರಿಸುತ್ತಾ ಅವರನ್ನು ಸೋಲಿಸಿದರು.
ತತಃ ಕತಿಪಯಾಹಃಸು ಬೀಭತ್ಸುಃ ಕೃಷ್ಣಮಬ್ರವೀತ್ |
ಕೃಷ್ಣಕೃಷ್ಣ ನಿವರ್ತಂತಾಂ ಗಚ್ಛಾವ ಯಮುನಾಂ ಪ್ರತಿ ||14||
ಅನಂತರ, ಕೆಲವು ದಿನಗಳು ಕಳೆದಮೇಲೆ ಅರ್ಜುನನು ಕೃಷ್ಣನನ್ನು ಕುರಿತು ಕೃಷ್ಣ, ನಗರ ವಿಹಾರವು ಸಾಕು. ನಾವು ಯಮುನಾ ನದಿಗೆ ಹೋಗೋಣ ಎಂದು ಹೇಳಿದನು.
ಸುಹೃಜ್ಜನಯುತಾಸ್ತತ್ರ ವಿಹೃತ್ಯ ಮಧುಸೂದನ |
ಸಾಯಾಹ್ನೇ ವಿನಿವರ್ತಾಮೋ ರೋಚತಾಂ ತೇ ಜನಾರ್ದನ ||15||
ಜನಾರ್ದನನೇ, ಮಧುಸೂದನನೇ, ನಿನ್ನ ಮನಸ್ಸಿಗೆ ಬಂದರೆ ನಾವು ಸುಹೃಜ್ಜನರ ಜೊತೆಯಲ್ಲಿ ಅಲ್ಲಿ ವಿಹರಿಸಿ ಸಾಯಂಕಾಲದ ಸಮಯಕ್ಕೆ ಹಿಂದಿರುಗೋಣ.
ವಾಸುದೇವಃ
ಕುಂತೀಮಾತರ್ಮಮಾಪ್ಯೇಷ ರೋಚತೇ ಯದ್ ವಯಂ ಜಲೇ |
ಸುಹೃಜ್ಜನವೃತಾಃ ಪಾರ್ಥ ವಿಹರೇಮ ಯಥಾಸುಖಮ್ ||16||
ಕುಂತೀಪುತ್ರನಾದ ಅರ್ಜುನನೇ, ನಾವು ಸುಹೃಜ್ಜನರ ಜೊತೆಯಲ್ಲಿ ಸಂತೋಷದಿಂದ ಜಲವಿಹಾರಮಾಡುವ ವಿಷಯವು ನನಗೂ ಇಷ್ಟವಾಗಿದೆ.
ವೈಶಂಪಾಯನಃ
ಆಮಂತ್ರ್ಯ ತೌ ಧರ್ಮರಾಜಮನುಜ್ಞಾಪ್ಯ ಚ ಭಾರತ |
ಜಗ್ಮತುಃ ಪಾರ್ಥಗೋವಿಂದೌ ಸುಹೃಜ್ಜನವೃತೌ ತದಾ ||17||
ಭಾರತನೇ, ಅವರಿಬ್ಬರೂ ಧರ್ಮರಾಜನ ಅನುಜ್ಞೆಯನ್ನು ಪಡೆದು ಅವನನ್ನು ಬೀಳ್ಕೊಟ್ಟು ಸುಹೃಜ್ಜನರಿಂದ ಸಹಿತರಾಗಿ ಯಮುನಾ ನದಿಯ ಬಳಿಗೆ ಬಂದರು.
ವಿಹರನ್ ಖಾಂಡವಪ್ರಸ್ಥೇ ಕಾನನೇಷು ಚ ಮಾಧವಃ |
ಪುಷ್ಪಿತೋಪವನಾಂ ರಮ್ಯಾಂ ದದರ್ಶ ಯಮುನಾಂ ನದೀಮ್ ||18||
ಮಾಧವನು ಖಾಂಡವಪ್ರಸ್ಥದ ವನಗಳಲ್ಲಿ ವಿಹರಿಸುತ್ತಾ ಪುಷ್ಪಭರಿತವಾದ ಉಪವನಗಳಿಂದ ಕೂಡಿದ ಮನೋಹರವಾದ ಯಮುನಾನದಿಯನ್ನು ನೋಡಿದನು.
ಆಲಯಂ ಸರ್ವಭೂತಾನಾಂ ಖಾಂಡವಂ ಖಡ್ಗಚರ್ಮಭೃತ್ |
ದದರ್ಶ ಖಾಂಡವಂ ದೇಶಂ ಸಹಿತಃ ಸವ್ಯಸಾಚಿನಾ ||19||
ಖಡ್ಗಚರ್ಮಧಾರಿಯಾದ ಕೃಷ್ಣನು ಸವ್ಯಸಾಚಿಯಾದ ಅರ್ಜುನನಿಂದ ಸಹಿತನಾಗಿ ಎಲ್ಲ ಪ್ರಾಣಿಗಳಿಗೂ ಆವಾಸಸ್ಥಾನವಾದ ಖಾಂಡವವನ ಪ್ರದೇಶವನ್ನು ನೋಡಿದನು.
ಖುಕ್ಷಗೋಮಾಯುಸಂಘುಷ್ಟಂ ಹಂಸಸಾರಸನಾದಿತಮ್ |
ಶಾಖಾಮೃಗಗಣೈರ್ಜುಷ್ಟಂ ನಿಕೇತಂ ಸರ್ವರಕ್ಷಸಾಮ್ ||20||
ದ್ವೀಪಿಗೋಮಾಯುಸಿಂಹರ್ಕ್ಷವರಾಹರುರುವಾರಣೈಃ |
ನಾನಾಮೃಗಸಹಸ್ರೈಶ್ಚ ಪಕ್ಷಿಭಿಶ್ಚ ಸಮಾವೃತಮ್ ||21||
ಅದು ಕರಡಿಗಳ ಮತ್ತು ನರಿಗಳ ಘೋಷದಿಂದಲೂ, ಹಂಸಸಾರಸ ಪಕ್ಷಿಗಳ ಕಲರವದಿಂದಲೂ, ಅನೇಕ ಕಪಿಸಮೂಹಗಳಿಂದಲೂ, ಕೂಡಿದುದಾಗಿ ಎಲ್ಲ ರಾಕ್ಷಸರಿಗೂ ಆವಾಸಸ್ಥಾನವಾಗಿದ್ದಿತು. ಅದು ದ್ವೀಪಿಗಳಿಂದಲೂ, ನರಿಗಳಿಂದಲೂ, ಸಿಂಹ, ಕರಡಿ, ವರಾಹಗಳಿಂದಲೂ, ರುರುಗಜಗಳಿಂದಲೂ, ಇನ್ನೂ ಸಹಸ್ರಾರು ಮೃಗಗಳಿಂದಲೂ ಮತ್ತು ಪಕ್ಷಿಗಳಿಂದಲೂ ಕೂಡಿದ್ದಿತು.
ಮಾನಾರ್ಹಂ ತಚ್ಚ ಸರ್ವೇಷಾಂ ದೇವದಾನವರಕ್ಷಸಾಮ್ |
ಆಲಯಂ ಪನ್ನಗೇಂದ್ರಸ್ಯ ತಕ್ಷಕಸ್ಯ ಮಹಾತ್ಮನಃ ||22||
ಎಲ್ಲಾ ದೇವದಾನವರಾಕ್ಷಸರ ಸಮ್ಮಾನಕ್ಕೆ ಯೋಗ್ಯವಾದ ಆ ಪ್ರದೇಶವು ಮಹಾನುಭಾವನಾದ ನಾಗೇಂದ್ರನಾದ ತಕ್ಷಕನ ಆವಾಸಸ್ಥಾನವಾಗಿದ್ದಿತು.
ವೇಣುಶಾಲ್ಮಲಿಮಾಲ್ವಂಗೈರುಪೇತಂ ವೇತ್ರಸಂವೃತಮ್ |
ಶಾಕಪದ್ಮಕತಾಲೈಶ್ಚ ಶತಶಾಖೈಶ್ಚ ರೌಹಿಣೈಃ ||23||
ಆ ಪ್ರದೇಶವು ಬಿದಿರು, ಶಾಲ್ಮಲಿ, (ಬೂರುಗಹತ್ತಿ) ಮಾಲ್ವಲ, ಮೊದಲಾದ ಮರಗಳಿಂದಲೂ, ವೇತ್ರದ(ಬೆತ್ತ) ಪೊದೆಗಳಿಂದಲೂ, ಶಾಕಪದ್ಮ ಮತ್ತು ತಾಲ ವೃಕ್ಷಗಳಿಂದಲೂ, ನೂರುಶಾಖೆಗಳುಳ್ಳ ವಟವೃಕ್ಷದಿಂದಲೂ ಕೂಡಿದ್ದಿತು.
ನಿರುದ್ದೇಶಸಮಪ್ರಖ್ಯಮಾವೃತಂ ಗಜಸಂಸ್ಥಿತೈಃ |
ಗುಲ್ಮೈಃ ಕೀಚಕವೇಣೂನಾಮಾಶೀವಿಷನಿಷೇವಿತಮ್ ||24||
ಆನೆಗಳು ಅಲ್ಲಲ್ಲಿ ನಿಲ್ಲುವುದರಿಂದ ಉನ್ನತಪ್ರದೇಶಗಳಿಂದ ಶೂನ್ಯವಾಗಿ ಸಮತಲವಾದ ಭೂಮಿಯಿಂದ ಕೂಡಿ ಕೀಚಕ ಮತ್ತು ವೇಣುಗುಲ್ಮಗಳಿಂದಲೂ ಕೂಡಿ ಮಹಾಸರ್ಪಗಳಿಗೂ ಆವಾಸಸ್ಥಾನವಾಗಿದ್ದಿತು.

ವಿಹಂಗೌಘಮಹಾಭಾಸಂ ಪ್ರತಾನಂ ದ್ರುಮಸಂಕಟಮ್ |
ಸ್ರುನಿವೇತ್ರಕುಳಿಂಗಾಕ್ಶ್ಯೈರ್ಹಿಂತಾಲೈಶ್ಚ ಸಮಾವೃತಮ್ ॥25॥
ಪಕ್ಷಿಗಳ ಸಮೂಹದಿಂದ ಮಹಾಕಾಂತಿಯಿಂದ ಕೂಡಿ ನಿಬಿಡವಾದ ಮತ್ತು ವಿಸ್ತಾರವಾದ ಸ್ರುನಿ, ವೇತ್ರ, ಕುಳಿಂಗಾಕ್ಷ, (ಕಾಡಿನಕಬ್ಬು) ಹಿಂತಾಲ ಮೊದಲಾದ ನಿಬಿಡವಾದ ಮರಗಳಿಂದ ಕೂಡಿದ್ದಿತು.
ವ್ಯಾಲದಂಷ್ಟ್ರಿಗ ಣಾಕೀರ್ಣಂ ವರ್ಜಿತಂ ಸರ್ವಮಾನುಷೈಃ |
ರಕ್ಷಸಾಂ ಭುಜಗೇಂದ್ರಾಣಾಂ ಪಕ್ಷಿಣಾಂ ಚ ಮಹಾಲಯಮ್ ॥26॥
ಮದಗಜಗಳಿಂದಲೂ, ದಂಷ್ಟ್ರಿಗಳ ಸಮೂಹದಿಂದಲೂ ಕೂಡಿದ್ದು ಪಕ್ಷಿಗಳಿಗೂ, ರಾಕ್ಷಸರಿಗೂ ಮತ್ತು ಮಹಾಸರ್ಪಗಳಿಗೂ ಆಶ್ರಯವಾಗಿದ್ದು ಆ ಕಾರಣದಿಂದ ಎಲ್ಲ ಮನುಷ್ಯರಿಂದಲೂ ಆ ಪ್ರದೇಶವು ವರ್ಜಿಸಲ್ಪಟ್ಟಿದ್ದಿತು.
ದೇವೇಶಃ ಸರ್ವಭೂತೇಶಃ ಸರ್ವಲೋಕವಿಭಾಗವಿತ್ |
ಪೀತಾಂಬರಧರೋ ದೇವಸ್ತದ್ವನಂ ಬಹುಧಾ ಚರನ್ ॥27॥
ಸದ್ರುಮಸ್ಯ ಸಯಕ್ಷಸ್ಯ ಸಭೂತಗಣಪಕ್ಷಿಣಃ |
ಖಾಂಡವಸ್ಯ ವಿನಾಶಂ ತಂ ದದರ್ಶ ಮಧುಸೂದನಃ ॥28॥
ದೇವತೆಗಳ ಒಡೆಯನೂ, ಸರ್ವಜೀವರಿಗೆ ಒಡೆಯನೂ ಸರ್ವಲೋಕವಿಭಾಗಗಳನ್ನು ತಿಳಿದವನೂ, ಪೀತಾಂಬರಧಾರಿಯೂ ಆದ ಕೃಷ್ಣನು ಆ ವನಪ್ರದೇಶದಲ್ಲಿ ಬಹಳವಾಗಿ ಸಂಚರಿಸುತ್ತಾ ವೃಕ್ಷಗಳಿಂದಲೂ, ಯಕ್ಷರಿಂದಲೂ, ಭೂತಗಣ ಮತ್ತು ಪಕ್ಷಿಗಣಗಳಿಂದಲೂ ಸಹಿತವಾದ ಆ ಖಾಂಡವವನದ ಆಸನ್ನವಾದ ವಿನಾಶವನ್ನು (ದಿವ್ಯಜ್ಞಾನದಿಂದ) ನೋಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಏಕೋನತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಖಾಂಡವದಾಹಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸ್ವೈರಂ ತಯೋಸ್ತತ್ರ ಚಿಕ್ರೀಡತೋಶ್ಚ
ಸ್ತ್ರೀರತ್ನಾಭ್ಯಾಂ ಮಂದವಾತಾನುಜುಷ್ಟೇ |
ವನೇ ಪ್ರಸೂನಸ್ತಬಕೋರುರಾಜಿತೇ
ಜಲೇ ಚ ತಿಗ್ಮದ್ಯುತಿಕನ್ಯಕಾಯಾಃ ॥217॥
ಭೂತ್ವಾ ವಿಪ್ರಸ್ತೌ ಯಯಾಚೇಽನ್ನಮೇತ್ಯ
ಕೃಶಾನುರೂಚೇ ಚ ಮತೇ ರಮೇಶಿತುಃ |
ಪಾರ್ಥಃ ಕೀದೃಕ್ ತೇಽನ್ನಮಿಷ್ಟಂ ವದೇತಿ
ಸ ಚಾವಾದೀದ್ವಹ್ನಿರಹಂ ವನಾರ್ಥೀ ॥218॥
ಹೂಗೊಂಚಲುಗಳಿಂದ ಶೋಭಿಸುತ್ತ ಮಂದಮಾರುತದಿಂದ ಯುಕ್ತವಾಗಿದ್ದ ಆ ಕಾಡಿನಲ್ಲಿಯೂ ಯಮುನಾ ಜಲದಲ್ಲಿಯೂ ಕೃಷ್ಣಾರ್ಜುನರು ಸ್ತ್ರೀರತ್ನ ಸಮೇತರಾಗಿ ಯಥೇಚ್ಛ ವಿಹರಿಸುತ್ತಿದ್ದಾಗ ಅಗ್ನಿ ಬ್ರಾಹ್ಮಣನಾಗಿ ಕೃಷ್ಣಾರ್ಜುನರ ಬಳಿಗೆ ಬಂದು ಅನ್ನವನ್ನು ಬೇಡಿದ. ಅರ್ಜುನ ಶ್ರೀಕೃಷ್ಣನ ಅನುಮತಿ ಪಡೆದು `ನಿನಗೆ ಎಂಥ ಅನ್ನಬೇಕು ಹೇಳು' ಎಂದ. `ನಾನು ಅಗ್ನಿ ಈ ಕಾಡನ್ನು ಬಯಸುತ್ತೇನೆ' ಎಂದ ಅಗ್ನಿ.
ಪ್ರಯಾಜಾನ್ ದೇವಾನನುಯಾಜಾಂಶ್ಚ ಶುಲ್ಕಂ
ಹವಿರ್ದಾನೇ ದೇವತಾನಾಮಯಾಚಿಷಂ |
ಬಲಹ್ರಾಸಸ್ತವ ಭೂಯಾದಿತಿ ಸ್ಮ
ಶಪ್ತ್ವೈವ ತೇ ತಾಂಶ್ಚ ದದುಃ ಪುರಾ ಮಮ ॥219॥
`ನಾನು ಬಹು ಹಿಂದೆ ದೇವತೆಗಳಿಗೆ ಹವಿಸ್ಸನ್ನು ಒಯ್ದು ಕೊಡುವುದಕ್ಕೆ ವೇತನವಾಗಿ ಪ್ರಯಾಜ ಅನುಯಾಜವೆಂಬ ಆಹುತಿಗಳನ್ನು ಕೊಡಬೇಕೆಂದು ಕೇಳಿಕೊಂಡೆ. ಅದಕ್ಕೆ ಅವರು ನಿನಗೆ ಪಚನಶಕ್ತಿ ಹ್ರಾಸವಾಗಲೆಂದು ಶಪಿಸಿ ಆ ಆಹುತಿಗಳನ್ನು ಕೊಟ್ಟರು.
ಪುನಃ ಪೂರ್ತಿಃ ಕೇನ ಮೇ ಸ್ಯಾದ್ಬಲಸ್ಯೇ-
ತ್ಯಬ್ಜೋದ್ಭವಂ ಪೃಷ್ಟವಾನಸ್ಮಿ ನತ್ವಾ |
ಯದಾ ವನಂ ಖಾಂಡವಂ ಹಿ ತ್ವಮತ್ಸಿ
ತದಾ ಬಲಂ ತೇ ಭವತೀತಿ ಸೋಽಬ್ರುವೀತ್ ॥220॥
`ನನಗೆ ಪಚನಶಕ್ತಿ ಪುನಃ ಯಾವುದರಿಂದ ತುಂಬಿ ಬಂದೀತೆಂದು ಬ್ರಹ್ಮನನ್ನು ನಮಿಸಿ ಕೇಳಿದೆ. ಖಾಂಡವವನವನ್ನು ಭಕ್ಷಿಸಿದಾಗ ಅದು ನಿನಗೆ ಲಭ್ಯವಾಗುವುದು ಎಂದ ಬ್ರಹ್ಮ.
ಶಕ್ರಸ್ಯೇದಂ ಖಾಂಡವಂ ತೇನ ವಿಘ್ನಂ
ಕರೋತ್ಯಸೌ ತೇನ ವಾಂ ಪ್ರಾರ್ಥಯಾಮಿ |
ಇತ್ಯುಕ್ತೇ ತಂ ಪಾರ್ಥ ಊಚೇ ಯದಿ ಸ್ಯಾತ್
ರಥೋ ಧನುಶ್ಚಾಥ ಶಕ್ರಂ ನಿರೋತ್ಸ್ಯೇ ॥221॥
`ಈ ಖಾಂಡವ ವನ ಇಂದ್ರನದು. ಅದರಿಂದ ಅವನು ನನಗೆ ವಿಘ್ನ ಮಾಡುತ್ತಿದ್ದಾನೆ. ಅದರಿಂದ ನಾನು ನಿನ್ನನ್ನು ಬೇಡುತ್ತೇನೆ' ಎಂದು

ಅಗ್ನಿ ಹೇಳಿದಾಗ ಅರ್ಜುನನೆಂದ, `ನನಗೆ ಒಂದು ರಥವೂ ಧನಸ್ಸೂ ಸಿಕ್ಕಿದರೆ ಇಂದ್ರನನ್ನು ಇದಿರಿಸಬಲ್ಲೆ' ಎಂದು.
* * * *

ಇನ್ನೂರ ಮೂವತ್ತನೆಯ ಅಧ್ಯಾಯ
(ಯಮುನಾತೀರದಲ್ಲಿ ವಿಪ್ರವೇಷದಿಂದ ಬಂದು ಅಗ್ನಿಯಿಂದ ತನ್ನ ದುಃಸ್ಥಿತಿಯನ್ನು ತಿಳಿಸಿ ಖಾಂಡವದಹನಕ್ಕಾಗಿ ಕೃಷ್ಣಾರ್ಜುನರ ಸಹಾಯದ ಪ್ರಾರ್ಥನೆ. ತಮ್ಮ ತಮ್ಮ ಅಸ್ತ್ರವನ್ನು ಪಡೆದ ಕೃಷ್ಣಾರ್ಜುನರಿಂದ ಆಶ್ವಾಸನೆ, ಖಾಂಡವದಾಹದ ಉಪಕ್ರಮ.)
ವೈಶಂಪಾಯನಃ
ವಿಹಾರದೇಶಂ ಸಂಪ್ರಾಪ್ಯ ನಾನಾದ್ರುಮಲತಾಕುಲಮ್ |
ಗೃಹೈರುಚ್ಚಾವಚೈರ್ಯುಕ್ತಂ ಪುರಂದರಪುರೋಪಮಮ್ ॥1॥
ಭಕ್ಷ್ಯೈರ್ಭೋಜ್ಯೈಶ್ಚ ಪೇಯೈಶ್ಚ ರಸವದ್ಭಿರ್ಮಹಾಧನೈಃ |
ಮಾಲ್ಯೈಶ್ಚ ವಿವಿಧೈರ್ಯುಕ್ತಂ ಗೃಹಂ ವಾರ್ಷ್ಣೇಯಪಾಂಡವೌ ॥2॥
ಆವಿವಿಶತುರಾಪೂರ್ಣಂ ರತ್ನೈರುಚ್ಚಾವಚೈಃ ಶುಭೈಃ |
ಯಥೋಪಜೋಷಂ ಸರ್ವಶ್ಚ ಜನಶ್ಚಿಕ್ರೀಡ ಭಾರತ ॥3॥
ನಾನಾದ್ರುಮಲತೆಗಳಿಂದ ಕೂಡಿದ್ದ, ಅನೇಕ ಸಣ್ಣಪುಟ್ಟಮರಗಳಿಂದ ಕೂಡಿದ್ದ, ಇಂದ್ರನ ಪಟ್ಟಣದಂತಿದ್ದ ವಿಹಾರದೇಶವನ್ನು ತಲುಪಿ ಅಲ್ಲಿ ಭಕ್ಷ್ಯಭೋಜ್ಯಗಳಿಂದಲೂ, ಮಹಾಬೆಲೆಬಾಳುವ ರುಚಿಯಾದ ಪಾನಗಳಿಂದಲೂ, ವಿವಿಧ ಪುಷ್ಪಮಾಲೆಗಳಿಂದಲೂ, ವಿಧವಿಧವಾದ ಶ್ರೇಷ್ಠವಾದ ರತ್ನಗಳಿಂಲೂ, ಪೂರ್ಣವಾಗಿದ್ದ ಒಂದು ಗೃಹವನ್ನು ಕೃಷ್ಣಾರ್ಜುನರು ಪ್ರವೇಶಿಸಿದರು. ಭಾರತನೇ, ಉಳಿದ ಜನರೂ ಸಹ ಅಲ್ಲಿ ತಮಗೆ ಇಷ್ಟಬಂದಂತೆ ವಿಹರಿಸಿದರು.
ವನೇ ಕಾಶ್ಚಿಜ್ಜಲೇ ಕಾಶ್ಚಿತ್ ಕಾಶ್ಚಿದ್ ವೇಶ್ಮಸು ಚಾಂಗನಾಃ |
ಯಥಾಜೋಷಂ ಯಥಾಪ್ರೀತಿ ಚಿಕ್ರೀಡುಃ ಕೃಷ್ಣಪಾರ್ಥಯೋಃ ॥4॥
ಕೃಷ್ಣಪಾರ್ಥರ ಅಂಗನೆಯರು ಕೆಲವರು ಜಲದಲ್ಲಿಯೂ, ಕೆಲವರು ವನದಲ್ಲಿಯೂ, ಕೆಲವರು ಗೃಹಗಳಲ್ಲಿಯೂ ತಮ್ಮ ಮನಸ್ಸಿಗೆ ತೋರಿದಂತೆ ಸಂತೋಷದಿಂದ ವಿಹರಿಸಿದರು.
ವಾಸುದೇವಪ್ರಿಯಾ ನಿತ್ಯಂ ಸತ್ಯಭಾಮಾ ಚ ಭಾಮಿನೀ |
ದ್ರೌಪದೀ ಚ ಸುಭದ್ರಾ ಚ ವಾಸಾಂಸ್ಯಾಭರಣಾನಿ ಚ ॥5॥
ಪ್ರಾಯಚ್ಛತಾಂ ಮಹಾರ್ಹಾಣಿ ಸ್ತ್ರೀಣಾಂ ತಾಃ ಸ್ಮ ಮದೋತ್ಕಟಾಃ |
ಕೃಷ್ಣನ ಪ್ರಿಯೆಯಾದ ಸುಂದರಿಯಾದ ಸತ್ಯಭಾಮೆಯು ಮತ್ತು ದ್ರೌಪದಿಯೂ ಮತ್ತು ಸುಭದ್ರೆಯೂ ಅತಿಶಯವಾದ ಆನಂದದಿಂದ ಅಲ್ಲಿಗೆ ಬಂದಿದ್ದ ಸ್ತ್ರೀಯರಿಗೆ ಬೆಲೆಬಾಳುವ ವಸ್ತ್ರಗಳನ್ನೂ ಮತ್ತು ಆಭರಣಗಳನ್ನು ದಾನ ಮಾಡಿದರು.
ಕಾಶ್ಚಿತ್ ಪ್ರಹೃಷ್ಟಾ ನನೃತುಶ್ಚುಕ್ರುಶುಶ್ಚ ತಥಾಽಪರಾಃ ॥6॥
ಜಹಸುಶ್ಚ ಪರಾ ನಾರ್ಯಃ ಪಪುಶ್ಚಾನ್ಯಾ ವರಾಸವಮ್ |
ರುರುಧುಶ್ಚಾಪರಾಸ್ತತ್ರ ಪ್ರಜಲ್ಪುಶ್ಚ ಪರಸ್ಪರಮ್ ॥7॥
ಕೆಲವರು ಸಂತೋಷದಿಂದ ನರ್ತಿಸಿದರು. ಇನ್ನು ಕೆಲವರು ಕೇಕೆ ಹಾಕುತ್ತಿದ್ದರು, ಕೆಲವು ಸ್ತ್ರೀಯರು ನಗುತ್ತಿದ್ದರು, ಇನ್ನು ಕೆಲವರು ಶ್ರೇಷ್ಠವಾದ ಆಸವಗಳನ್ನು ಪಾನಮಾಡುತ್ತಿದ್ದರು.
ಮಂತ್ರಯಾಮಾಸುರನ್ಯಾಶ್ಚ ರಹಸ್ಯಾನಿ ಪರಸ್ಪರಮ್ |
ಕಾಶ್ಚಿನ್ಮಾಲ್ಯಾನಿ ಚಿನ್ವಂತೀಃ ಕಾಶ್ಚಿನ್ಮಾಲ್ಯಾನಿ ದಧ್ರಿರೇ ॥8॥
ಇನ್ನು ಕೆಲವರು ಪರಸ್ಪರವಾಗಿ ತಡೆಯುತ್ತಿದ್ದರು, ಕೆಲವರು ಪರಸ್ಪರವಾಗಿ ಮಾತನಾಡುತ್ತಿದ್ದರು, ಇನ್ನು ಕೆಲವರು ಪರಸ್ಪರವಾಗಿ ರಹಸ್ಯವಿಷಯಗಳ ಮಂತ್ರಾಲೋಚನೆಯನ್ನು ಮಾಡುತ್ತಿದ್ದರು, ಕೆಲವರು ಹೂಮಾಲೆಗಳನ್ನು ಹೆಣೆಯುತ್ತಿದ್ದರು, ಇನ್ನು ಕೆಲವರು ಹೂಮಾಲೆಗಳನ್ನು ಧರಿಸುತ್ತಿದ್ದರು.
ವೇಣುವೀಣಾಮೃದಂಗಾನಾಂ ಮನೋಜ್ಞಾನಾಂ ಚ ಸರ್ವಶಃ |
ಶಬ್ದೇನ ಪೂರ್ಯತೇ ಹ ಸ್ಮ ತದ್ವನಂ ಸುಮಹದ್ರ್ಧಿಮತ್ ॥9॥
ಎಲ್ಲ ಕಡೆಗಳಲ್ಲಿಯೂ ವೇಣುವೀಣಾಮೃದಂಗ ಶಬ್ದಗಳಿಂದ ಸಮೃದ್ಧವಾದ ಆ ವನವು ತುಂಬಿಹೋಯಿತು.
ತಸ್ಮಿಂಸ್ತದಾ ವರ್ತಮಾನೇ ಕುರುದಾಶಾರ್ಹನಂದನೌ |
ಸಮೀಪಂ ಜಗ್ಮತುಃ ಕಂಚಿದುದ್ದೇಶಂ ಸುಮನೋಹರಮ್ ॥10॥
ಎಲ್ಲವೂ ಹೀಗೆ ಜರುಗುತ್ತಿರಲು ಕೃಷ್ಣಾರ್ಜುನರು ಅಲ್ಲಿಯೇ ಸ್ವಲ್ಪ ಎತ್ತರವಾದ ಮನೋಹರವಾದ ಒಂದು ಪ್ರದೇಶವನ್ನು ತಲುಪಿದರು.
ತತ್ರ ಗತ್ವಾ ಮಹಾತ್ಮಾನೌ ಕೃಷ್ಣೌ ಪರಪುರಂಜಯೌ |
ಮಹಾರ್ಹಾಸನಯೋ ರಾಜಂಸ್ತತಸ್ತೌ ಸನ್ನಿಷೀದತುಃ ॥11॥
ರಾಜನೇ, ಪರಪುರಂಜಯರಾದ, ಮಹಾನುಭಾವರಾದ ಕೃಷ್ಣಾರ್ಜುನರು ಅಲ್ಲಿಗೆ ಹೋಗಿ ಶ್ರೇಷ್ಠವಾದ ಆಸನಗಳಲ್ಲಿ ಕುಳಿತುಕೊಂಡರು.
ತತ್ರ ಪೂರ್ವವ್ಯತೀತಾನಿ ವಿಕ್ರಾಂತಾನಿ ಮಹಾಂತಿ ಚ |
ಬಹೂನಿ ಕಥಯಿತ್ವಾ ತೌ ರೇಮಾತೇ ಪಾರ್ಥಮಾಧವೌ ॥12॥
ಅಲ್ಲಿ ಕೃಷ್ಣಾರ್ಜುನರು ಹಿಂದೆ ನಡೆದ ಅನೇಕ ವಿಕ್ರಮದ ದೊಡ್ಡದೊಡ್ಡ ಕಥೆಗಳನ್ನು ಹೇಳುತ್ತಾ ವಿಹರಿಸಿದರು.
ತತೋಪವಿಷ್ಟೌ ಮುದಿತೌ ನಾಕಪೃಷ್ಠೇಽಶ್ವಿನಾವಿವ |
ಅಭ್ಯಾಗಚ್ಛತ್ ತದಾ ವಿಪ್ರೋ ವಾಸುದೇವಧನಂಜಯೌ ॥13॥

ಸ್ವರ್ಗದಲ್ಲಿ ಸಂತುಷ್ಟರಾದ ಅಶ್ವಿನೀದೇವತೆಗಳಂತೆ ಅಲ್ಲಿ ಕುಳಿತಿದ್ದ ಕೃಷ್ಣಾರ್ಜುನರ ಸಮೀಪಕ್ಕೆ ಆಗ ಒಬ್ಬ ವಿಪ್ರನು ಬಂದನು.
ಬೃಹತ್ಸಾಲಪ್ರತೀಕಾಶಃ ಪ್ರತಪ್ತಕನಕಪ್ರಭಃ |
ಹರಿಪಿಂಗೋಜ್ಜ್ವಲಶ್ಮಶ್ರುಃ ಪ್ರಮಾಣಾಯಾಮತಃ ಸಮಃ ॥14॥
ಅರುಣಾದಿತ್ಯಸಂಕಾಶಶ್ಚೀರವಾಸಾ ಜಟಾಧರಃ |
ಪದ್ಮಪತ್ರಾನನಃ ಪಿಂಗಸ್ತೇಜಸಾ ಪ್ರಜ್ವಲನ್ನಿವ |
ಜಗಾಮ ತೌ ಕೃಷ್ಣಪಾರ್ಥೌ ದಿಧಕ್ಷನ್ ಖಾಂಡವಂ ವನಮ್ ॥15॥
ದೊಡ್ಡ ಸಾಲವೃಕ್ಷದಂತೆ ತೋರುತ್ತಿದ್ದ ಪುಟವಿಟ್ಟ ಚಿನ್ನದ ಕಾಂತಿಯನ್ನು ಹೊಂದಿದ್ದ, ಹಸಿರುಕೆಂಪು ಬಣ್ಣದ ಉಜ್ವಲವಾದ ಮೀಸೆಯನ್ನು ಹೊಂದಿದ್ದ, ಅನುಗುಣವಾದ ಎತ್ತರ ಮತ್ತು ವಿಸ್ತಾರಗಳಿಂದ ಕೂಡಿದ್ದ, ಉದಯಿಸುವ ಸೂರ್ಯನ ಕಾಂತಿಯನ್ನು ಹೊಂದಿದ್ದ, ನಾರುಮಡಿಯನ್ನುಟ್ಟು ಜಟಾಧರನಾಗಿದ್ದ, ಪದ್ಮಪತ್ರದಂತೆ ಮುಖವನ್ನು ಹೊಂದಿದ್ದ, ಕೆಂಪುಬಣ್ಣದ ತೇಜಸ್ಸಿನಿಂದ ಉರಿಯುವವನಂತೆ ತೋರುತ್ತಿದ್ದ ಆ ಬ್ರಾಹ್ಮಣನು ಖಾಂಡವವನವನ್ನು ದಹಿಸುವ ಆಸೆಯಿಂದ ಕೃಷ್ಣಪಾರ್ಥರನ್ನು ಸಮೀಪಿಸಿದನು.
ಉಪಸೃಷ್ಟಂ ತು ತಂ ಕೃಷ್ಣೋ ಭ್ರಾಜಮಾನಂ ದ್ವಿಜೋತ್ತಮಮ್ |
ದೃಷ್ಟ್ವಾ ಜಗಾಮ ಮನಸಾ ಪಾವಕೋಽಯಮಿತಿ ಪ್ರಭುಃ ॥16॥
ಕೃಷ್ಣನು ಸಮೀಪಕ್ಕೆ ಬಂದ ಪ್ರಕಾಶಮಾನವಾಗಿದ್ದ ಆ ಬ್ರಾಹ್ಮಣನನ್ನು ನೋಡಿ ಇವನು ಅಗ್ನಿ ಎಂದು ತಿಳಿದನು.
ಅರ್ಜುನೋ ವಾಸುದೇವಶ್ಚ ತೂರ್ಣಮುತ್ಪತ್ಯ ತಸ್ಥತುಃ |
ಸೋಽಬ್ರವೀದರ್ಜುನಂ ಚೈವ ವಾಸುದೇವಂ ಚ ಮಾಧವಮ್ ॥
ಕೃಷ್ಣಾರ್ಜುನರಿಬ್ಬರೂ ತಕ್ಷಣ ಎದ್ದುನಿಂತರು. ಆ ವಿಪ್ರನು ಅರ್ಜುನನನ್ನೂ ಮತ್ತು ಮಾಧವನನ್ನೂ ಕುರಿತು ಹೇಳಿದನು.
ಲೋಕಪ್ರವೀರೌ ತಿಷ್ಠಂತೌ ಖಾಂಡವಸ್ಯ ಸಮೀಪತಃ |
ಬ್ರಾಹ್ಮಣೋ ಬಹುಭೋಕ್ತಾಽಸ್ಮಿ ಭುಂಜೇಽಪರಿಮಿತಂ ಸದಾ |
ಭಿಕ್ಷೇ ವಾರ್ಷ್ಣೇಯಪಾರ್ಥೌ ವಾಮೇಕಾಂ ತೃಪ್ತಿಂ ಪ್ರಯಚ್ಛತಾಮ್ ॥18॥
ಲೋಕವೀರರಾದ ನೀವಿಬ್ಬರೂ ಖಾಂಡವವನದ ಬಳಿಯಲ್ಲಿದ್ದೀರಿ. ನಾನು ಬಹುಭೋಜನವುಳ್ಳ ಬ್ರಾಹ್ಮಣ, ಯಾವಾಗಲೂ ಅಪರಿಮಿತವಾದ ಆಹಾರವನ್ನು ಭುಂಜಿಸುತ್ತೇನೆ. ಕೃಷ್ಣಾರ್ಜುನರಾದ ನಿಮ್ಮನ್ನು, ನಾನು ನನಗೆ ತೃಪ್ತಿಯಾಗುವಂತಹ ದೊಡ್ಡ ಒಂದು ಭೋಜನವನ್ನು ಬೇಡುತ್ತಿದ್ದೇನೆ.
ವೈಶಂಪಾಯನಃ
ಏವಮುಕ್ತೌ ತಮಬ್ರೂತಾಂ ತತಸ್ತೌ ಕೃಷ್ಣಪಾಂಡವೌ |
ಕೇನಾನ್ನೇನ ಭವಾಂಸ್ತೃಪ್ಯೇತ್ ತಸ್ಯಾನ್ನಸ್ಯ ಯತಾವಹೇ ॥19॥
ಅಗ್ನಿಯು ಹೀಗೆ ಹೇಳುತ್ತಿರಲು, ಕೃಷ್ಣಪಾಂಡವರು ಅವನನ್ನು ಕುರಿತು ನಿನಗೆ ಯಾವ ಅನ್ನದಿಂದ ತೃಪ್ತಿಯುಂಟಾಗುತ್ತದೆ ಎಂದು ಹೇಳು. ನಿನಗೆ ಆ ಅನ್ನವನ್ನು ದೊರಕಿಸಲು ನಾವು ಪ್ರಯತ್ನಪಡುವೆವು.
ಏವಮುಕ್ತಃ ಸ ಭಗವಾನ್ ಅಬ್ರವೀತ್ ತಾವುಭೌ ತತಃ |
ಭಾಷಮಾಣೌ ತದಾ ವೀರೌ ಕಿಮನ್ನಂ ಕ್ರಿಯತಾಮಿತಿ ॥20॥
ಯಾವ ಅನ್ನವನ್ನು ಕೊಡಬೇಕು ಎಂದು ಮಾತನಾಡುತ್ತಿದ್ದ ಆ ಇಬ್ಬರು ವೀರರನ್ನು ಕುರಿತು, ಆಗ ಪೂಜ್ಯನಾದ ಅಗ್ನಿಯು ಮಾತನಾಡಿದನು.
ನಾಹಮನ್ನಂ ಬುಭುಕ್ಷೇ ವೈ ಪಾವಕಂ ಮಾಂ ನಿಬೋಧತಮ್ |
ಯದನ್ನಮನುರೂಪಂ ಮೇ ತದ್ ಯುವಾಂ ಸಂಪ್ರಯಚ್ಛತಮ್ ॥21॥
ನಾನು ಸಾಮಾನ್ಯವಾದ ಅನ್ನವನ್ನು ತಿನ್ನುವವನಲ್ಲ. ನಾನು ಅಗ್ನಿ ಎಂದು ತಿಳಿಯಿರಿ. ನೀವಿಬ್ಬರೂ ನನಗೆ ಅನುರೂಪವಾದ ಅನ್ನವನ್ನು ನೀಡಬೇಕು.
ಇದಮಿಂದ್ರಃ ಸದಾ ದಾವಂ ಖಾಂಡವಂ ಪರಿರಕ್ಷತಿ |
ನ ಚ ಶಕ್ನೋಮ್ಯಹಂ ದಗ್ಧುಂ ರಕ್ಷ್ಯಮಾಣಂ ಮಹಾತ್ಮನಾ ॥22॥
ಈ ಖಾಂಡವವನವನ್ನು ಇಂದ್ರನು ಯಾವಾಗಲೂ ರಕ್ಷಿಸುತ್ತಾನೆ. ಮಹಾತ್ಮನಾದ ಅವನಿಂದ ರಕ್ಷಿಸಲ್ಪಡುವ ಈ ವನವನ್ನು ದಹಿಸುವ ಶಕ್ತಿ ನನಗಿಲ್ಲ.
ವಸತ್ಯಸ್ಯ ಸಖಾ ಚಾತ್ರ ತಕ್ಷಕಃ ಪನ್ನಗಃ ಸದಾ |
ಸಗಣಸ್ತತ್ಕೃತೇ ದಾವಂ ಪರಿರಕ್ಷತಿ ವಜ್ರಭೃತ್ ॥23॥
ಇಲ್ಲಿ ಯಾವಾಗಲೂ ಇಂದ್ರನ ಸ್ನೇಹಿತನಾದ ನಾಗೇಂದ್ರನಾದ ತಕ್ಷಕನು ತನ್ನ ಪರಿವಾರದೊಂದಿಗೆ ವಾಸಿಸುತ್ತಾನೆ. ಆ ಕಾರಣದಿಂದ ವಜ್ರಧರನಾದ ಇಂದ್ರನು ಈ ವನವನ್ನು ರಕ್ಷಿಸುತ್ತಾನೆ.
ತತ್ರ ಭೂತಾನ್ಯನೇಕಾನಿ ರಕ್ಷ್ಯಂತೇ ಸ್ಮ ಪ್ರಸಂಗತಃ |
ತಂ ನಿರ್ದಗ್ಧುಂ ನ ಶಕ್ನೋಮಿ ದಾವಂ ಶಕ್ರಸ್ಯ ತೇಜಸಾ ॥24॥
ತಕ್ಷಕನನ್ನು ರಕ್ಷಿಸುವ ಪ್ರಸಂಗದಿಂದ ಇಲ್ಲಿರುವ ಅನೇಕ ಪ್ರಾಣಿಗಳು ರಕ್ಷಿಸಲ್ಪಡುತ್ತವೆ. ಶಕ್ರನ ಪರಾಕ್ರಮದ ಕಾರಣದಿಂದಾಗಿ ನಾನು ಈ ವನವನ್ನು ಸುಡಲು ಸಮರ್ಥನಾಗುತ್ತಿಲ್ಲ.
ಸ ಮಾಂ ಪ್ರಜ್ವಲಿತಂ ದೃಷ್ಟ್ವಾ ಮೇಘಾಂಭೋಭಿರ್ವರ್ಷತಿ |
ಅತೋ ದಗ್ಧುಂ ನ ಶಕ್ನೋಮಿ ದಿಧಕ್ಷುರ್ದಾವಮೀಪ್ಸಿತಮ್ ॥25॥
ಇಲ್ಲಿ ನಾನು ಪ್ರಜ್ವಲಿತನಾದ ಕೂಡಲೇ ಇಂದ್ರನು ಮೇಘಗಳಿಂದ ಮಳೆಯನ್ನು ಸುರಿಸುತ್ತಾನೆ. ಆದ್ದರಿಂದ ನನಗೆ ಇಷ್ಟವಾದ ಈ

ವನವನ್ನು ದಹಿಸಲು ನನಗೆ ಸಾಧ್ಯವಾಗುತ್ತಿಲ್ಲ.
ಸ ಯುವಾಭ್ಯಾಂ ಸಹಾಯಾಭ್ಯಾಮಸ್ತ್ರವಿದ್ಭ್ಯಾಂ ಸಮಾಗತಃ |
ದಹೇಯಂ ಖಾಂಡವಂ ದಾವಮೇತದನ್ನಂ ವೃತಂ ಮಯಾ ॥26॥
ಅಂತಹ ನಾನು ಅಸ್ತ್ರಜ್ಞರಾದ ನಿಮ್ಮಿಬ್ಬರ ಸಹಾಯವನ್ನು ಹೊಂದಿದರೆ ಈ ಖಾಂಡವವನವನ್ನು ದಹಿಸಬಲ್ಲೆ. ಈ ಖಾಂಡವವನವನ್ನು ನನ್ನ ಅನ್ನವಾಗಿ ನಿಮ್ಮ ಬಳಿ ಬೇಡುತ್ತಿದ್ದೇನೆ.
ಯುವಾಂ ಹ್ಯುದಕಧಾರಾಸ್ತಾ ಭೂತಾನಿ ಚ ಮಹಾಭುಜೌ |
ಉತ್ತಮಾಸ್ತ್ರವಿದೌ ಸಮ್ಯಕ್ ಸರ್ವತೋ ವಾರಯಿಷ್ಯಥಃ ॥27॥
ಮಹಾಭುಜರಾದ, ಪರಮಾಸ್ತ್ರವೇತ್ತರಾದ ನೀವಿಬ್ಬರೂ ಆ ಮಳೆಯನೀರಿನ ಧಾರೆಗಳನ್ನು ಒಳಗೆ ಬರದಂತೆ, ಒಳಗಿರುವ ಪ್ರಾಣಿಗಳನ್ನು ಹೊರಗೆ ಹೋಗದಂತೆ ತಡೆಯುವಿರಿ.
ಜನಮೇಜಯಃ
ಕಿಮರ್ಥಂ ಭಗವಾನಗ್ನಿಃ ಖಾಂಡವಂ ದಗ್ಧುಮಿಚ್ಛತಿ |
ಕಸ್ಯ ವಾ ವಿಪ್ರಿಯಂ ಕುರ್ವನ್ ಕಸ್ಯ ವಾ ಪ್ರಿಯಮೇವ ಚ ॥
ಪೂಜ್ಯನಾದ ಅಗ್ನಿಯು ಏಕೆ ಖಾಂಡವವನವನ್ನು ದಹಿಸಲು ಬಯಸುತ್ತಾನೆ. ಅದರಿಂದ ಅವನು ಯಾರಿಗೆ ಪ್ರಿಯವನ್ನು ಉಂಟುಮಾಡಬೇಕು. ಅಥವಾ ಯಾರಿಗೆ ಅಪ್ರಿಯವನ್ನು ಉಂಟುಮಾಡಬೇಕು.
ರಕ್ಷ್ಯಮಾಣಂ ಮಹೇಂದ್ರೇಣ ನಾನಾಸತ್ವಸಮಾಯುತಮ್ |
ನ ಹ್ಯೇತತ್ಕಾರಣಂ ಬ್ರಹ್ಮನ್ನಲ್ಪಂ ಸಂಪ್ರತಿಭಾತಿ ಮೇ ॥29॥
ಬ್ರಾಹ್ಮಣರೇ, ಮಹೇಂದ್ರನಿಂದ ರಕ್ಷಿತವಾದ ನಾನಾ ಪ್ರಾಣಿಗಳಿಂದ ನಿಬಿಡವಾದ ಈ ವನವನ್ನು ದಹಿಸಲು ಅಗ್ನಿಗೆ ಒಂದು ಅಲ್ಪವಾದ ಕಾರಣವೂ ಇರಲಾರದೆಂದು ನನಗೆ ತೋರುತ್ತದೆ.
ನ ಹ್ಯಲ್ಪೇ ಕಾರಣೇ ವಹ್ನಿರ್ನಿರ್ಬಂಧಂ ಕರ್ತುಮರ್ಹತಿ |
ಯದ್ ದದಾಹ ಸುಸಂಕ್ರುದ್ಧಃ ಖಾಂಡವಂ ಹವ್ಯವಾಹನಃ ॥30॥
ಕ್ಷುಲ್ಲಕ ಕಾರಣಕ್ಕಾಗಿ ಅಗ್ನಿಯು ಇಂತಹ ಒತ್ತಾಯವನ್ನು ಮಾಡಲಾರನು. ಬಹಳ ರೋಷಗೊಂಡ ಅಗ್ನಿಯು ಖಾಂಡವವನ್ನು ದಹಿಸಿದನಷ್ಟೆ.
ಏತತ್ ವಿಸ್ತರಶೋ ಬ್ರಹ್ಮನ್ ಶ್ರೋತುಮಿಚ್ಛಾಮಿ ತತ್ವತಃ |
ಖಾಂಡವಸ್ಯ ಪುರಾ ದಾಹೋ ಯಥಾ ಸಮಭವನ್ಮುನೇ |
ತಥಾ ಮೇ ಕಾರಣಂ ಬ್ರೂಹಿ ಪರಂ ಕೌತೂಹಲಂ ಹಿ ಮೇ ॥31॥
ಬ್ರಾಹ್ಮಣರೇ, ಇದನ್ನು ವಿಸ್ತಾರವಾಗಿ ಮತ್ತು ಸರಿಯಾಗಿ ಕೇಳಲು ಬಯಸುತ್ತೇನೆ. ಋಷಿಗಳೇ, ಹಿಂದೆ ಖಾಂಡವದಾಹವು ಹೇಗೆ ಉಂಟಾಯಿತು ಎಂಬುದಕ್ಕೆ ನನಗೆ ಕಾರಣವನ್ನು ಹೇಳಿ. ಈ ವಿಷಯದಲ್ಲಿ ನನಗೆ ಬಹಳ ಕುತೂಹಲವಿದೆ.
ವೈಶಂಪಾಯನಃ
ಶೃಣು ಮೇ ಬ್ರುವತೋ ರಾಜನ್ ಸರ್ವಮೇತದ್ ಯಥಾತಥಮ್ |
ಯನ್ನಿಮಿತ್ತಂ ದದಾಹಾಗ್ನಿಃ ಖಾಂಡವಂ ಪೃಥಿವೀಪತೇ ॥32॥
ರಾಜನೇ, ಎಲ್ಲವನ್ನೂ ಯಥಾರ್ಥವಾಗಿ ಹೇಳುವ ನನ್ನ ಮಾತನ್ನು ಕೇಳು. ರಾಜನೇ, ಯಾವಕಾರಣದಿಂದ ಅಗ್ನಿಯು ಖಾಂಡವವನ್ನು ದಹಿಸಿದನು ಎಂದು ಹೇಳುತ್ತೇನೆ.
ಹಂತ ತೇ ಕಥಯಿಷ್ಯಾಮಿ ಪೌರಾಣೀಮೃಷಿಸಂಸ್ತುತಾಮ್ |
ಕಥಾಮಿಮಾಂ ನರಶ್ರೇಷ್ಠ ಖಾಂಡವಸ್ಯ ವಿನಾಶನೀಮ್ ॥33॥
ರಾಜನೇ, ಬಹಳ ಸಂತೋಷ. ಪುರಾಣಪ್ರಸಿದ್ಧವಾದ, ಋಷಿಗಳಿಂದ ಸ್ತುತ್ಯವಾದ ಖಾಂಡವವನದ ವಿನಾಶದ ಈ ಕಥೆಯನ್ನು ನಿನಗೆ ಹೇಳುವೆನು.
ಪೌರಾಣಃ ಶ್ರೂಯತೇ ತಾತ ರಾಜಾ ಹರಿಹಯೋಪಮಃ |
ಇಕ್ಷ್ವಾಕೂಣಾಮತಿರಥೋ ಯಜ್ವಾ ವಿಪುಳದಕ್ಷಿಣಃ ॥34॥
ಶ್ವೇತಕಿರ್ನಾಮ ವಿಖ್ಯಾತೋ ಬಲವಿಕ್ರಮಸಂಯುತಃ |
ಯಜ್ವಾ ದಾನಪತಿರ್ಧೀಮಾನ್ ಯಥಾ ನಾನ್ಯೋಽಸ್ತಿ ಕಂಚನ ॥35॥
ಪ್ರೀತಿಪಾತ್ರನೇ, ಇಕ್ಷ್ವಾಕುವಂಶದ ಇಂದ್ರನಂತಿದ್ದ ಶ್ವೇತಕಿ ಎಂಬ ರಾಜನು ಹಿಂದಿನಕಾಲದಲ್ಲಿ ಇದ್ದನು. ಅವನು ಅತಿರಥನೂ, ಯಾಗಗಳನ್ನು ಮಾಡುವವನೂ, ಬಹಳ ದಕ್ಷಿಣೆಯನ್ನು ಕೊಡುವವನೂ, ಬಲಪರಾಕ್ರಮಗಳಿಂದ ಕೂಡಿದವನೂ ಆಗಿ ಪ್ರಖ್ಯಾತನಾದನು. ಅವನಂತಹ ಯಜ್ಞಶೀಲರೂ, ದಾನಪತಿಯೂ ಮತ್ತು ಮೇಧಾವಿಯೂ ಯಾರೂ ಇರಲಿಲ್ಲ.
ಈಜೇ ಚ ಸ ಮಹಾಸತ್ರೈಃ ಕ್ರತುಭಿಶ್ಚಾಪ್ತದಕ್ಷಿಣೈಃ |
ತಸ್ಯ ನಾನ್ಯಾಽಭವದ್ ಬುದ್ಧಿರ್ದಿವಸೇದಿವಸೇ ನೃಪ ॥36॥
ಸತ್ರೇ ಕ್ರಿಯಾಸಮಾರಂಭೇ ದಾನೇಷು ವಿವಿಧೇಷು ಚ |
ಋಷಿಭಿಃ ಸಹಿತೋ ಧೀಮಾನ್ ಕಲ್ಪಜ್ಞೈಃ ಸಹ ಭೂಮಿಪಃ ॥37॥
ಅವನು ಮಹಾಸತ್ರಗಳನ್ನೂ, ಬಹಳ ದಕ್ಷಿಣೆಸಹಿತವಾದ ಅನೇಕ ಕ್ರತುಗಳನ್ನೂ ಮಾಡಿದನು. ಅವನಿಗೆ ದಿನಗಳು ಕಳೆದಂತೆ ಇದೇ ಬುದ್ಧಿಉಂಟಾಯಿತು. ಧಾರ್ಮಿಕ ಕ್ರಿಯಾಕಲಾಪಗಳನ್ನು ಬಲ್ಲ ಋಷಿಗಳಿಂದ ಕೂಡಿ ವಿವಿಧ ಯಜ್ಞಗಳನ್ನು ದಾನಗಳನ್ನೂ ಧರ್ಮರಾಜನು ಮಾಡಿದನು.

ತತಸ್ತು ಋತ್ವಿಜಸ್ತಸ್ಯ ಧೂಮವ್ಯಾಕುಲಲೋಚನಾಃ |
ಕಾಲೇನ ಮಹತಾ ಖಿನ್ನಾಸ್ತತ್ಯಜುಸ್ತಂ ನರಾಧಿಪಮ್ ॥38॥
ಮೇಧಾವಿಯಾದ ಆ ರಾಜನು ಯಜ್ಞದ ವಿಧಾನಗಳನ್ನು ತಿಳಿದ ಋಷಿಗಳಿಂದ ಸಹಿತನಾಗಿ ಅನೇಕ ಯಜ್ಞಗಳನ್ನು ಮಾಡಿದನು. ಆಗ ಹವ್ಯದಿಂದ ಉಪದ್ರುತವಾದ ಕಣ್ಣುಗಳುಳ್ಳ ಅವನ ಋತ್ವಿಜರು ಬಹಳ ಕಾಲದ ಮೇಲೆ ಖಿನ್ನರಾಗಿ ಆ ರಾಜನನ್ನು ತೊರೆದರು.
ತತಃ ಪ್ರಚೋದಯಾಮಾಸ ಋತ್ವಿಜಸ್ತಾನ್ ಮಹೀಪತಿಃ |
ಚಕ್ಷುರ್ವೈಕಲ್ಯತಾಂ ಪ್ರಾಪ್ತಾನ್ ನ ಪ್ರಪೇದುಶ್ಚ ತೇ ತು ತಮ್ ॥39॥
ತತಸ್ತೇಷಾಮನುಮತೇ ವಿಪ್ರೈಸ್ತು ನರಾಧಿಪಃ |
ಸತ್ರಂ ಸಮಾಪಯಾಮಾಸ ಋತ್ವಿಗ್ಭಿರಪರೈಃ ಸಹ ॥40॥
ಅನಂತರ ರಾಜನು ಮಂದದೃಷ್ಟಿಯುಳ್ಳ ಆ ಋತ್ವಿಜರನ್ನು ಬಹಳ ಒತ್ತಾಯಪಡಿಸಿದನು. ಆದರೆ ಅವರು ಅವನ ಸಮೀಪಕ್ಕೆ ಬರಲಿಲ್ಲ. ಆಗ ನಡೆಯುತ್ತಿದ್ದ ಸತ್ರಯಾಗಕ್ಕೆ ವಿಘ್ನವನ್ನು ಹೊಂದಿದ ರಾಜನು ಆ ಋತ್ವಿಜರ ಅನುಮತಿಯನ್ನು ಪಡೆದು ಬೇರೆ ಋತ್ವಿಜರಿಂದ ಆ ಸತ್ರವನ್ನು ಸಮಾಪ್ತಿಗೊಳಿಸಿದನು.
ತಸ್ಯೈವಂ ವರ್ತಮಾನಸ್ಯ ಕದಾಚಿತ್ ಕಾಲಪರ್ಯಯೇ |
ಸತ್ರಮಾಹರ್ತುಕಾಮಸ್ಯ ಸಂವತ್ಸರಶತಂ ಕಿಲ |
ಋತ್ವಿಜೋ ನಾಭ್ಯಪದ್ಯಂತ ಸಮಾಹರ್ತುಂ ಮಹಾತ್ಮನಃ ॥41॥
ಹೀಗೆ ಕಾಲವು ಕಳೆಯುತ್ತಿರಲು ಒಮ್ಮೆ ಅವನಿಗೆ ನೂರುವರ್ಷಗಳ ಕಾಲದ ಒಂದು ಸತ್ರಯಾಗವನ್ನು ಮಾಡಬೇಕೆಂದು ಆಸೆಯಾಯಿತು. ಆದರೆ ಆ ಮಹಾನುಭಾವನ ಸಲುವಾಗಿ ಆ ಸತ್ರವನ್ನು ನೆರವೇರಿಸಲು ಯಾವ ಋತ್ವಿಜರೂ ಮುಂದೆ ಬರಲಿಲ್ಲ.
ಸ ತು ರಾಜಾಽಕರೋದ್ ಯತ್ನಂ ಮಹಾಂತಂ ಸಸುಹೃಜ್ಜನಃ |
ಪ್ರಣಿಪಾತೇನ ಸಾಂತ್ವೇನ ದಾನೇನ ಚ ಮಹಾಯಶಾಃ ॥42॥
ಆ ಕೀರ್ತಿವಂತನಾದ ರಾಜನು ತನ್ನ ಸುಹೃಜ್ಜನಗಳ ಜೊತೆಯಲ್ಲಿ ಸೇರಿ ಋತ್ವಿಜರಿಗೆ ನಮಸ್ಕಾರವನ್ನು ಮಾಡಿ ಸಮಾಧಾನದ ಮಾತುಗಳನ್ನಾಡಿ ದಾನಗಳನ್ನು ಕೊಟ್ಟು ಮಹಾಪ್ರಯತ್ನವನ್ನು ಮಾಡಿದನು.
ಋತ್ವಿಜೋಽನುನಯಾಮಾಸ ಭೂಯೋಭೂಯಸ್ತ್ವತಂದ್ರಿತಃ |
ತೇ ಚಾಸ್ಯ ತಮಭಿಪ್ರಾಯಂ ನ ಚಕ್ರುರಮಿತೌಜಸಃ ॥43॥
ಮತ್ತೆಮತ್ತೆ ಆಲಸ್ಯವಿಲ್ಲದೆ ಅವನು ಋತ್ವಿಜರನ್ನು ಒಪ್ಪಿಸಲು ಪ್ರಯತ್ನ ಪಟ್ಟನು. ಆದರೆ, ಅಮಿತಶಕ್ತಿಯುಳ್ಳ ಋತ್ವಿಜರು ಅವನ ಅಭಿಪ್ರಾಯದಂತೆ ನಡೆಯಲು ಒಪ್ಪಲಿಲ್ಲ.
ಸ ಚಾಶ್ರಮಸ್ಥಾನ್ ರಾಜರ್ಷಿಸ್ತಾನುವಾಚ ರುಷಾಽನ್ವಿತಃ |
ಯದ್ಯಹಂ ಪತಿತೋ ವಿಪ್ರಾಃ ಶುಶ್ರೂಷಾಯಾಂ ನ ಚ ಸ್ಥಿತಃ ॥44॥
ಆಶು ತ್ಯಾಜ್ಯೋಽಸ್ಮಿ ಯುಷ್ಮಾಭಿರ್ಬ್ರಾಹ್ಮಣೈಶ್ಚ ಜುಗುಪ್ಸಿತಃ |
ತನ್ನಾರ್ಹತ ಕ್ರತುಶ್ರದ್ಧಾಂ ವ್ಯಾಘಾತಯಿತುಮುತ್ತಮಾಮ್ ॥45॥
ರಾಜರ್ಷಿಯಾದ ಅವನು ಸಿಟ್ಟಿನಿಂದ ಕೂಡಿದವನಾಗಿ ಆಶ್ರಮದಲ್ಲಿದ್ದ ಋಷಿಗಳಿಗೆ ಹೀಗೆ ಹೇಳಿದನು. ಬ್ರಾಹ್ಮಣರೇ, ನಾನು ಒಂದುಪಕ್ಷ ಪತಿತನಾಗಿದ್ದರೆ ಅಥವಾ ನಿಮ್ಮ ಸೇವೆಯಲ್ಲಿ ನಿರತನಾಗಿರದಿದ್ದರೆ ನೀವು ಮತ್ತು ಉಳಿದ ಬ್ರಾಹ್ಮಣರು ಜುಗುಪ್ಸಿತನಾದ ನನ್ನನ್ನು ತಕ್ಷಣ ಪರಿತ್ಯಾಗ ಮಾಡುವುದು ಯೋಗ್ಯವಾಗಿರುತ್ತಿತ್ತು, ನಾನು ಹಾಗೆ ಮಾಡಿಲ್ಲವಾದ ಕಾರಣ ನನ್ನ ಶ್ರೇಷ್ಠವಾದ ಕ್ರತುಶ್ರದ್ಧೆಯನ್ನು ನೀವು ವಿನಾಶಗೊಳಿಸಬಾರದು.
ಸಾಂತ್ವದಾನಾದಿಭಿರ್ವಾಕ್ಯೈರ್ಭವಂತಃ ಕಾರ್ಯವತ್ತಯಾ |
ಪ್ರಸಾದಯಿತ್ವಾ ವಕ್ಷ್ಯಾಮಿ ಯನ್ನಃ ಕಾರ್ಯಂ ದ್ವಿಜೋತ್ತಮಾಃ ॥46॥
ದ್ವಿಜೋತ್ತಮರೇ, ಕಾರ್ಯಸಾಧಕನಾದ ನಾನು ಸಾಂತ್ವದಾನಗಳಿಂದ ಕೂಡಿದ ಮಾತುಗಳಿಂದ ನಿಮ್ಮನ್ನು ಸಂತೋಷಗೊಳಿಸಿ ನನಗೆ ಆಗಬೇಕಾದ ಕಾರ್ಯದ ಬಗ್ಗೆ ಹೇಳುತ್ತಿದ್ದೇನೆ.
ಅಥವಾಽಹಂ ಪರಿತ್ಯಕ್ತೋ ಭವದ್ಭಿರ್ದ್ವೇಷಕಾರಣಾತ್ |
ಋತ್ವಿಜೋಽನ್ಯಾನ್ ಗಮಿಷ್ಯಾಮಿ ಯಾಜನಾರ್ಥಂ ದ್ವಿಜೋತ್ತಮಾಃ|
ಏತಾವದುಕ್ತ್ವಾ ವಚನಂ ವಿರರಾಮ ಸ ಪಾರ್ಥಿವಃ ॥47॥
ಅಥವಾ ನೀವು ನನ್ನ ಮೇಲಿನ ದ್ವೇಷದಿಂದ ನನ್ನನ್ನು ಪರಿತ್ಯಾಗ ಮಾಡಿದರೆ, ಬ್ರಾಹ್ಮಣಶ್ರೇಷ್ಠರೇ, ನಾನು ಯಾಗವನ್ನು ಮಾಡಿಸುವ ಸಲುವಾಗಿ ಬೇರೆ ಋತ್ವಿಜರ ಬಳಿ ಹೋಗುವೆನು. ಆ ರಾಜನು ಇಷ್ಟು ಮಾತುಗಳನ್ನಾಡಿ ಸುಮ್ಮನಾದನು.
ಯದಾ ನ ಶೇಕೂ ರಾಜಾನಂ ಯಾಜನಾರ್ಥಂ ಪರಂತಪಾಃ |
ತತಸ್ತೇ ಯಾಜಕಾಃ ಕ್ರುದ್ಧಾಸ್ತಮೂಚುರ್ನೃಪಸತ್ತಮಮ್ ॥48॥
ಪರಂತಪನಾದ ಜನಮೇಜಯನೇ, ಯಾವಾಗ ಆ ಯಾಜಕರು ರಾಜನಿಗೆ ಯಾಗವನ್ನು ಮಾಡಲು ತಿರಸ್ಕರಿಸಿದರೋ ಆಗ ಅವರು ಕ್ರುದ್ಧರಾಗಿ ಆ ರಾಜನಿಗೆ ಹೇಳಿದರು.
ತವ ಕರ್ಮಾಣ್ಯಜಸ್ರಂ ವೈ ವರ್ತಂತೇ ಪಾರ್ಥಿವೋತ್ತಮ |
ತತೋ ವಯಂ ಪರಿಶ್ರಾಂತಾಃ ಸತತಂ ಕರ್ಮವಾಹಿನಃ ॥49॥
ರಾಜಶ್ರೇಷ್ಠನೇ, ನಿನ್ನ ಕರ್ಮಗಳು ಸತತವಾಗಿ ನಡೆಯುತ್ತಿವೆ. ಯಾವಾಗಲೂ ನಿನ್ನ ಕರ್ಮಗಳನ್ನು ನಡೆಸುತ್ತಿರುವ ನಾವು ಬಳಲಿದ್ದೇವೆ.

ಶ್ರಮಾದಸ್ಮಾತ್ ಪರಿಶ್ರಾಂತಾನ್ ಸ ತ್ವಂ ನಸ್ತ್ಯಕ್ತುಮರ್ಹಸಿ |

ಬುದ್ಧಿಮೋಹಂ ಸಮಾಸ್ಥಾಯ ತ್ವರಾಸಂಭಾವಿತೋಽನಘ |
ಗಚ್ಛ ರುದ್ರಸಕಾಶಂ ತ್ವಂ ಸ ಹಿ ತ್ವಾಂ ಯೋಜಯಿಷ್ಯತಿ ॥50॥
ಆಯಾಸದಿಂದ ಬಳಲಿದ ನಮ್ಮನ್ನು ನೀನು ಪರಿತ್ಯಾಗ ಮಾಡು. ಅನಘನೇ, ನಾವು ಬುದ್ಧಿಮೋಹವನ್ನು ಹೊಂದಿ ಶೀಘ್ರವಾಗಿ ಮಾಡಿಸಿ ತಪ್ಪುಗಳನ್ನು ಮಾಡಬಹುದು. ನೀನು ರುದ್ರದೇವರ ಬಳಿಗೆ ಹೋಗು, ಅವರು ನಿನಗೆ ಸರಿಯಾದ ಪುರೋಹಿತರ ಯೋಗವನ್ನು ಒದಗಿಸುವರು.
ವೈಶಂಪಾಯನಃ
ಸಾಧಿಕ್ಷೇಪಂ ವಚಃ ಶ್ರುತ್ವಾ ಸಂಕ್ರುದ್ಧಃ ಶ್ವೇತಕಿರ್ನೃಪಃ |
ಕೈಲಾಸಪರ್ವತಂ ಗತ್ವಾ ತಪ ಉಗ್ರಂ ಸಮಾಸ್ಥಿತಃ ॥51॥
ನಿಂದಾಸಹಿತವಾದ ಮಾತುಗಳನ್ನು ಕೇಳಿ ಕೋಪಗೊಂಡ ಶ್ವೇತಕಿ ರಾಜನು ಕೈಲಾಸಪರ್ವತಕ್ಕೆ ಹೋಗಿ ಉಗ್ರವಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದನು.
ಆರಾಧಯನ್ ಮಹಾದೇವಂ ನಿಯತಃ ಸಂಶಿತವ್ರತಃ |
ಉಪವಾಸಪರೋ ರಾಜನ್ ದೀರ್ಘಕಾಲಮತಿಷ್ಠತ ॥52॥
ರಾಜನೇ, ಮಹಾದೇವನನ್ನು ಆರಾಧಿಸುತ್ತಾ ನಿಯಮಗಳನ್ನೂ ಮತ್ತು ವ್ರತಗಳನ್ನೂ ಹಿಡಿದ ಅವನು ಉಪವಾಸಪರನಾಗಿ ದೀರ್ಘಕಾಲ ತಪಸ್ಸುಮಾಡಿದನು.
ಕದಾಚಿದ್ ದ್ವಾದಶೇ ಕಾಲೇ ಕದಾಚಿದಪಿ ಷೋಡಶೇ |
ಆಹಾರಮಕರೋದ್ ರಾಜಾ ಮೂಲಾನಿ ಚ ಫಲಾನಿ ಚ ॥53॥
ಒಮ್ಮೊಮ್ಮೆ ಆ ರಾಜನು ದಿವಸದ ಕೊನೆಯ ಹನ್ನೆರಡನೆಯ ಅಥವಾ ಹದಿನಾರನೆಯ ಒಂದು ಭಾಗದಲ್ಲಿ ಗೆಡ್ಡೆಗಳನ್ನು ಅಥವಾ ಹಣ್ಣುಗಳನ್ನು ಆಹಾರವಾಗಿ ಸ್ವೀಕರಿಸುತ್ತಿದ್ದನು.
ಊರ್ಧ್ವಬಾಹುಸ್ತ್ವನಿಮಿಷಸ್ತಿಷ್ಠನ್ ಸ್ಥಾಣುರಿವಾಚಲಃ |
ಷಣ್ಮಾಸಾನಭವದ್ ರಾಜಾ ಶ್ವೇತಕಿಃ ಸುಸಮಾಹಿತಃ ॥54॥
ಬಾಹುಗಳನ್ನು ಮೇಲಕ್ಕೆತ್ತಿ, ರೆಪ್ಪೆಗಳನ್ನು ಮುಚ್ಚದೇ ಮರದಬುಡದಂತೆ ಅಚಲನಾಗಿ ನಿಂತು ಶ್ವೇತಕಿ ರಾಜನು ಮನಸ್ಸಮಾಧಾನದಿಂದ ಕೂಡಿ ತಪಸ್ಸನ್ನು ಮಾಡುತ್ತಾ ಆರು ತಿಂಗಳುಗಳನ್ನು ಕಳೆದನು.
ತಂ ತಥಾ ನೃಪಶಾರ್ದೂಲಂ ತಪ್ಯಮಾನಂ ಮಹತ್ತಪಃ |
ಶಂಕರಃ ಪರಮಪ್ರೀತ್ಯಾ ದರ್ಶಯಾಮಾಸ ಭಾರತ ॥55॥
ಭಾರತನೇ, ಅವನ ತಪಸ್ಸಿಗೆ ಮೆಚ್ಚಿದ ಶಂಕರನು ಪರಮಪ್ರೀತನಾಗಿ ಆ ನೃಪಶಾರ್ದೂಲನಿಗೆ ತನ್ನ ದರ್ಶನವನ್ನು ನೀಡಿದನು.
ಉವಾಚ ಚೈನಂ ಭಗವಾನ್ ಸ್ನಿಗ್ಧಗಂಭೀರಯಾ ಗಿರಾ |
ಪ್ರೀತೋಽಸ್ಮಿ ನರಶಾರ್ದೂಲ ತಪಸಾ ತೇ ಪರಂತಪ |
ವರಂ ವೃಣೀಷ್ವ ಭದ್ರಂ ತೇ ಯಂ ತ್ವಮಿಚ್ಛಸಿ ಪಾರ್ಥಿವ ॥56॥
ಮತ್ತು ಅವನನ್ನು ಕುರಿತು ಸ್ನಿಗ್ಧಗಂಭೀರವಾಣಿಯಿಂದ ಹೇಳಿದನು. ಪರಂತಪನಾದ ನರಶಾರ್ದೂಲನೇ, ನಾನು ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು. ರಾಜನೇ ನಿನಗೆ ಮಂಗಳವಾಗಲಿ.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ರುದ್ರಸ್ಯಾಮಿತತೇಜಸಃ |
ಪ್ರಣಿಪತ್ಯ ಮಹಾತ್ಮಾನಂ ರಾಜರ್ಷಿಃ ಪ್ರತ್ಯಭಾಷತ ॥57॥
ಅಮಿತತೇಜಸ್ವಿಗಳಾದ ರುದ್ರದೇವರ ಈ ಮಾತುಗಳನ್ನು ಕೇಳಿ ರಾಜರ್ಷಿಯಾದ ಅವನು ಮಹಾನುಭಾವರಾದ ಅವರಿಗೆ ನಮಸ್ಕರಿಸಿ ಮಾತನಾಡಿದನು.
ಯದಿ ಮೇ ಭಗವನ್ ಪ್ರೀತಃ ಸರ್ವಲೋಕನಮಸ್ಕೃತಃ |
ಸ್ವಯಂ ಮಾಂ ದೇವದೇವೇಶ ಯಾಜಯಸ್ವ ಸುರೇಶ್ವರ ॥58॥
ದೇವದೇವೇಶನೇ, ಸುರೇಶ್ವರನೇ, ಪೂಜ್ಯನೇ, ಸರ್ವಲೋಕ ನಮಸ್ಕೃತ್ಯನಾದ ನೀನು ನನಗೆ ಸಂತುಷ್ಟನಾಗಿದ್ದರೆ ನೀನೇ ನನ್ನಿಂದ ಯಾಗವನ್ನು ಮಾಡಿಸು.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ರಾಜ್ಞಾ ತೇನ ಪ್ರಭಾಷಿತಮ್ |
ಉವಾಚ ಭಗವಾನ್ ಪ್ರೀತಃ ಸ್ಮಿತಪೂರ್ವಮಿದಂ ವಚಃ ॥59॥
ರಾಜನು ಆಡಿದ ಈ ಮಾತುಗಳನ್ನು ಕೇಳಿ ಪೂಜ್ಯರಾದ ರುದ್ರದೇವರು ನಗುತ್ತಾ ಸಂತೋಷದಿಂದ ಈ ಮಾತನ್ನಾಡಿದರು.
ನಾಸ್ಮಾಕಮೇತದ್ವಿಷಯೋ ವರ್ತತೇ ಯಾಜನಂ ಪ್ರತಿ |
ತ್ವಯಾ ಚ ಸುಮಹತ್ ತಪ್ತಂ ತಪೋ ರಾಜನ್ ವರಾರ್ಥಿನಾ ॥60॥
ಯಾಗವನ್ನು ಮಾಡಿಸುವ ವಿಷಯವು ನಮಗೆ ಸೇರಿದುದಲ್ಲ. ರಾಜನೇ, ನೀನಾದರೂ ವರವನ್ನು ಉದ್ದೇಶಿಸಿ ದೊಡ್ಡ ತಪಸ್ಸನ್ನು ಆಚರಿಸಿದ್ದೀಯೆ.
ಯಾಜಯಿಷ್ಯಾಮಿ ರಾಜಂಸ್ತ್ವಂ ಸಮಯೇನ ಪರಂತಪ |
ಸಮಾ ದ್ವಾದಶ ರಾಜೇಂದ್ರ ಬ್ರಹ್ಮಚಾರೀ ಸಮಾಹಿತಃ ॥61॥
ಸತತಂ ತ್ವಾಜ್ಯಧಾರಾಭಿರ್ಯದಿ ತರ್ಪಯಸೇಽನಲಮ್ |

ಕಾಮಂ ಪ್ರಾರ್ಥಯಸೇ ಯಂ ತ್ವಂ ಮತ್ತಃ ಪ್ರಾಪ್ಸ್ಯಸಿ ತಂ ನೃಪ ॥62॥
ಪರಂತಪನಾದ ರಾಜನೇ, ಈ ಷರತ್ತಿನಮೇಲೆ ನಿನಗೆ ಯಾಗವನ್ನು ಮಾಡಿಸುತ್ತೇನೆ. ರಾಜೇಂದ್ರನೇ, ನೀನು ಬ್ರಹ್ಮಚಾರಿಯಾಗಿ ಇದ್ದು ಸಮಾಧಾನದಿಂದ ಕೂಡಿ ಸತತವಾಗಿ ಹನ್ನೆರಡುವರ್ಷಗಳ ಕಾಲ ಆಜ್ಯಧಾರೆಗಳಿಂದ ಅಗ್ನಿಯನ್ನು ಸಂತೋಷಗೊಳಿಸಿದರೆ ನೀನು ಕೇಳಿದ ವರವನ್ನು ನಾನು ನಿನಗೆ  ಕೊಡುವೆನು.
ವೈಶಂಪಾಯನಃ
ಏವಮುಕ್ತಸ್ತು ರುದ್ರೇಣ ಶ್ವೇತಕಿರ್ಮನುಜಾಧಿಪಃ |
ತಥಾ ಚಕಾರ ತತ್ ಸರ್ವಂ ಯಥೋಕ್ತಂ ಶೂಲಪಾಣಿನಾ ॥63॥
ರುದ್ರದೇವರಿಂದ ಹೀಗೆ ಹೇಳಲ್ಪಟ್ಟ ರಾಜನಾದ ಶ್ವೇತಕಿಯು ಶೂಲಪಾಣಿಗಳಾದ ಅವರು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು.
ಪೂರ್ಣೇ ತು ದ್ವಾದಶೇ ವರ್ಷೇ ಪುನರಾಯಾನ್ಮಹೇಶ್ವರಮ್ |
ದೃಷ್ಟ್ವೈವ ಸ ಚ ರಾಜಾನಂ ಶಂಕರೋ ಲೋಕಭಾವನಃ |
ಉವಾಚ ಪರಮಪ್ರೀತಃ ಶ್ವೇತಕಿಂ ನೃಪಸತ್ತಮಮ್ ॥64|
ಹನ್ನೆರಡು ವರ್ಷಗಳು ತುಂಬಿದಮೇಲೆ ಪುನಃ ರುದ್ರದೇವರ ಬಳಿಗೆ ಹೋದನು. ಆ ರಾಜನನ್ನು ನೋಡಿದ ಕೂಡಲೇ ಸಂತೋಷಗೊಂಡ ಲೋಕಭಾವನರಾದ ರುದ್ರದೇವರು ಶ್ವೇತಕಿಯನ್ನು ಕುರಿತು ಹೇಳಿದರು.
ತೋಷಿತೋಽಹಂ ನೃಪಶ್ರೇಷ್ಠ ತ್ವಯೇಹಾದ್ಯೇನ ಕರ್ಮಣಾ |
ಯಾಜನಂ ಬ್ರಾಹ್ಮಣಾನಾಂ ತು ವಿಧಿದೃಷ್ಟಂ ಪರಂತಪ |
ಅತೋಽಹಂ ತ್ವಾಂ ಸ್ವಯಂ ನಾದ್ಯ ಯಾಜಯಾಮಿ ಪರಂತಪ ॥65॥
ನೃಪಶ್ರೇಷ್ಠನೇ, ಶ್ರೇಷ್ಠವಾದ ಕರ್ಮದಿಂದ ನೀನು ನನ್ನನ್ನು ಸಂತೋಷಪಡಿಸಿದ್ದೀಯೆ, ಪರಂತಪನೇ ಯಾಗವನ್ನು ಮಾಡಿಸುವುದು ಬ್ರಾಹ್ಮಣರಿಗೆ ವಿಹಿತವಾದದ್ದು. ಪರಂತಪನೇ, ಆದ್ದರಿಂದ ನಾನು ಸ್ವತಃ ನಿನಗೆ ಯಾಗವನ್ನು ಮಾಡಿಸುವುದಿಲ್ಲ.
ಮಮಾಂಶಸ್ತು  ಕ್ಷಿತಿತಳೇ ಮಹಾಭಾಗೋ ದ್ವಿಜೋತ್ತಮಃ |
ದುರ್ವಾಸಾ ಇತಿ ವಿಖ್ಯಾತಃ ಸ ಹಿ ತ್ವಾಂ ಯಾಜಯಿಷ್ಯತಿ |
ಮನ್ನಿಯೋಗಾನ್ಮಹಾತೇಜಾಃ ಸಂಭಾರಾಃ ಸಂಭ್ರಿಯಂತು ತೇ ॥66॥
ಭೂಮಿಯಲ್ಲಿ ನನ್ನ ಅಂಶವೇ ಆದ ಮಹಾನುಭಾವರಾದ ಬ್ರಾಹ್ಮಣಶ್ರೇಷ್ಠರಾದ ದುರ್ವಾಸ ಎಂದು ಪ್ರಖ್ಯಾತರಾದ ಋಷಿಗಳಿದ್ದಾರೆ. ಮಹಾತೇಜಸ್ವಿಗಳಾದ ಅವರು ನನ್ನ ಶಾಸನದಂತೆ ನಿನಗೆ ಯಾಗವನ್ನು ಮಾಡಿಸುವರು. ನೀನು ಯಾಗಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸು.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ರುದ್ರೇಣ ಸಮುದಾಹೃತಮ್ |
ಸ್ವಪುರಂ ಪುನರಾಗಮ್ಯ ಸಂಭಾರಾನ್ ಪುನರಾರ್ಜಯತ್ ॥67॥
ರುದ್ರದೇವರು ಹೇಳಿದ ಈ ಮಾತುಗಳನ್ನು ಕೇಳಿ ಶ್ವೇತಕಿಯು ಪುನಃ ತನ್ನ ಪಟ್ಟಣಕ್ಕೆ ಬಂದು ಯಜ್ಞಸಾಮಗ್ರಿಗಳನ್ನು ಪುನಃ ಸಿದ್ಧಪಡಿಸಿದನು.
ತತಃ ಸಂಭೃತಸಂಭಾರೋ ಭೂಯೋ ರುದ್ರಮುಪಾಗಮತ್ |
ಸಂಭೃತಾ ಮಮ ಸಂಭಾರಾಃ ಸರ್ವೋಪಕರಣಾನಿ ಚ |
ತ್ವತ್ಪ್ರಸಾದಾನ್ಮಹಾದೇವ ಶ್ವೋ ಮೇ ದೀಕ್ಷಾ ಭವೇದಿತಿ ॥68॥
ಅನಂತರ, ಯಜ್ಞಸಾಮಗ್ರಿಗಳನ್ನು ಅಣಿಗೊಳಿಸಿ ಪುನಃ ರುದ್ರದೇವರ ಬಳಿಗೆ ಹೋಗಿ ಮಹಾದೇವನೇ, ನಿನ್ನ ಅನುಗ್ರಹದಿಂದ ಎಲ್ಲಾ ಸಾಮಗ್ರಿಗಳೂ ಮತ್ತು ಉಪಕರಣಗಳೂ ಸಿದ್ಧವಾಗಿವೆ. ನಾಳೆಯ ದಿನ ನನಗೆ ದೀಕ್ಷೆಯಾಗಬೇಕು ಎಂದು ಹೇಳಿದನು.
ಏತಚ್ಛ್ರುತ್ವಾ ತು ವಚನಂ ತಸ್ಯ ರಾಜ್ಞೋ ಮಹಾತ್ಮನಃ |
ದುರ್ವಾಸಸಂ ಸಮಾಹೂಯ ರುದ್ರೋ ವಚನಮಬ್ರವೀತ್ ॥69॥
ಏಷ ರಾಜಾ ಮಹಾಭಾಗಃ ಶ್ವೇತಕಿರ್ದ್ವಿಜಸತ್ತಮ |
ಏನಂ ಯಾಜಯ ವಿಪ್ರೇಂದ್ರ ಮನ್ನಿಯೋಗೇನ ಭೂಮಿಪಮ್ ॥70॥
ಮಹಾನುಭಾವನಾದ ರಾಜನ ಈ ಮಾತುಗಳನ್ನು ಕೇಳಿ ರುದ್ರದೇವರು ದುರ್ವಾಸರನ್ನು ಕರೆದು ಹೀಗೆ ಮಾತನಾಡಿದರು.
ಬ್ರಾಹ್ಮಣಶ್ರೇಷ್ಠರೇ, ಇವನು ಮಹಾನುಭಾವನಾದ ಶ್ವೇತಕಿ ಎಂಬ ರಾಜ. ವಿಪ್ರೇಂದ್ರರೇ, ನನ್ನ
ಆದೇಶದಂತೆ ಇವನಿಗೆ ಯಾಗವನ್ನು ಮಾಡಿಸಿ.
ವೈಶಂಪಾಯನಃ
ಬಾಢಮಿತ್ಯೇವ ವಚನಂ ರುದ್ರಂ ತ್ವೃಷಿರುವಾಚ ಹ |
ತತಃ ಸತ್ರಂ ಸಮಭವತ್ ತಸ್ಯ ರಾಜ್ಞೋ ಮಹಾತ್ಮನಃ |
ಯಥಾಕಾಮಂ ಯಥೋಕ್ತಂ ಚ ಸತ್ರಂ ಸುಬಹುದಕ್ಷಿಣಮ್ ॥71॥
ರುದ್ರದೇವರನ್ನು ಕುರಿತು ದುರ್ವಾಸರು ಹಾಗೆಯೇ ಆಗಲಿ ಎಂದು ಹೇಳಿದರು. ಅನಂತರ, ಮಹಾನುಭಾವನಾದ ರಾಜನ ಸತ್ರಯಾಗವು ಉದ್ದೇಶದಂತೆ ಶಾಸ್ತ್ರೋಕ್ತರೀತಿಯಲ್ಲಿ ಬಹುದಕ್ಷಿಣೆಯಿಂದ ಕೂಡಿದುದಾಗಿ ಜರುಗಿತು.
ತಸ್ಮಿನ್ ಪರಿಸಮಾಪ್ತೇ ತು ರಾಜ್ಞಃ ಸತ್ರೇ ಮಹಾತ್ಮನಃ |
ದುರ್ವಾಸಸಾಽಭ್ಯನುಜ್ಞಾತಾ ವಿಪ್ರತಸ್ಥುಃ ಸ್ಮ ಯಾಜಕಾಃ |
ಯೇ ತತ್ರ ದೀಕ್ಷಿತಾಃ ಸರ್ವೇ ಸದಸ್ಯಾಶ್ಚ ಮಹೌಜಸಃ ॥72॥

ಮಹಾತ್ಮನಾದ ರಾಜನ ಸತ್ರಯಾಗವು ಸಮಾಪ್ತಿಗೊಳ್ಳುತ್ತಿರಲು ಎಲ್ಲಾ ಯಾಜಕರು ದುರ್ವಾಸರ ಅನುಮತಿಯನ್ನು ಪಡೆದು ಹೊರಟುಹೋದರು. ಅಲ್ಲಿ ದೀಕ್ಷಿತರಾದ ಮಹಾಶಕ್ತಿಯುಳ್ಳ ಯಾಜಕರ ಜೊತೆಯಲ್ಲಿ ಎಲ್ಲಾ ಸದಸ್ಯರೂ ಹೊರಟುಹೋದರು.
ಸೋಽಪಿ ರಾಜಾ ಮಹಾಭಾಗಃ ಸ್ವಪುರಂ ಪ್ರಾವಿಶತ್ ತದಾ |
ತತೋ ಭಗವತೋ ವಹ್ನೇರ್ವಿಕಾರಃ ಸಮಜಾಯತ |
ತೇಜಸಾ ವಿಪ್ರಹೀಣಶ್ಚ ಗ್ಲಾನಿಶ್ಚೈನಂ ಸಮಾವಿಶತ್ ॥73॥
ಅನಂತರ ರಾಜನು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಆಗ ಅಗ್ನಿದೇವನಿಗೆ ಉದರದಲ್ಲಿ ವಿಕಾರವುಂಟಾಯಿತು. ತೇಜಸ್ಸನ್ನು ಕಳೆದುಕೊಂಡ ಅವನನ್ನು ಗ್ಲಾನಿಯು ಆವರಿಸಿತು.
ಸ ಲಕ್ಷಯಿತ್ವಾ ಚಾತ್ಮಾನಂ ತೇಜೋಹೀನಂ ಹುತಾಶನಃ |
ಜಗಾಮ ಸದನಂ ಪುಣ್ಯಂ ಬ್ರಹ್ಮಣೋ ಲೋಕಪೂಜಿತಮ್ ॥74॥
ಅಗ್ನಿಯು ತಾನು ತೇಜೋಹೀನನಾಗಿರುವುದನ್ನು ಗಮನಿಸಿ ಲೋಕಪೂಜಿತವಾದ, ಪವಿತ್ರವಾದ ಬ್ರಹ್ಮಸದನಕ್ಕೆ ಹೋದನು.
ತತ್ರ ಬ್ರಹ್ಮಾಣಮಾಸೀನಮಿದಂ ವಚನಮಬ್ರವೀತ್ |
ತೇಜಸಾ ವಿಪ್ರಹೀಣೋಽಸ್ಮಿ ಬಲೇನ ಚ ಜಗತ್ಪತೇ |
ಇಚ್ಛೇಯಂ ತ್ವತ್ಪ್ರಸಾದೇನ ಆತ್ಮನಃ ಪ್ರಕೃತಿಂ ಸ್ಥಿರಾಮ್ ॥75॥
ಅಲ್ಲಿ ಕುಳಿತಿದ್ದ ಬ್ರಹ್ಮದೇವನ್ನು ನೋಡಿ ಅಗ್ನಿಯು ಹೇಳಿದನು. ಜಗತ್ಪತಿಯೇ, ನಾನು ತೇಜಸ್ಸನ್ನೂ ಮತ್ತು ಬಲವನ್ನೂ ಕಳೆದುಕೊಂಡಿದ್ದೇನೆ. ನಿನ್ನ ಅನುಗ್ರಹದಿಂದ ಮೊದಲಿನ ತೇಜಸ್ಸು ಮತ್ತು ಬಲವನ್ನೂ ಸ್ಥಿರವಾಗಿ ಪಡೆಯಲು ಬಯಸುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ಭಗವಾಂತ್ಸರ್ವಲೋಕಕೃತ್ |
ಹವ್ಯವಾಹಮಿದಂ ವಾಕ್ಯಮುವಾಚ ಪ್ರಹಸನ್ನಿವ ॥76॥
ಈ ಮಾತುಗಳನ್ನು ಕೇಳಿ ಸರ್ವಲೋಕಕರ್ತರಾದ ಪೂಜ್ಯರಾದ ಬ್ರಹ್ಮದೇವರು ಅಗ್ನಿಯನ್ನು ಕುರಿತು ನಗುತ್ತಾ ಈ ಮಾತುಗಳನ್ನಾಡಿದರು.
ತ್ವಯಾ ದ್ವಾದಶವರ್ಷಾಣಿ ವಸೋರ್ಧಾರಾಹೃತಂ ಹವಿಃ |
ಉಪಯುಕ್ತಂ ಮಹಾಭಾಗ ತೇನ ತ್ವಾಂ ಗ್ಲಾನಿರಾವಿಶತ್ ॥77॥
ಮಹಾನುಭಾವನೇ, ನೀನು ಹನ್ನೆರಡುವರ್ಷಗಳ ಕಾಲ ಸತತವಾಗಿ ವಸುವಿನಿಂದ ಧಾರಾರೂಪದಿಂದ ಕೊಡಲ್ಪಟ್ಟ ಹವಿಸ್ಸನ್ನು ಭುಂಜಿಸಿದ್ದೀಯೆ, ಆದ್ದರಿಂದ ನಿನಗೆ ಗ್ಲಾನಿಯು ಉಂಟಾಗಿದೆ.
ತೇಜಸಾ ವಿಪ್ರಹೀಣಸ್ತ್ವಂ ಸಹಸಾ ಹವ್ಯವಾಹನ |
ಮಾ ಗಮಸ್ತ್ವಂ ವ್ಯಥಾಂ ವಹ್ನೇ ಪ್ರಕೃತಿಸ್ಥೋ ಭವಿಷ್ಯಸಿ |
ಅರುಚಿಂ ನಾಶಯಿಷ್ಯೇ ತೇ ಸಮಯಂ ಪ್ರತಿಪದ್ಯ ತು ॥78॥
ಹವ್ಯವಾಹನನೇ, ನೀನು ತೇಜಸ್ಸಿನಿಂಲೂ ಮತ್ತು ಬಲದಿಂದಲೂ ಹೀನನಾಗಿದ್ದೀಯೆ, ವಹ್ನಿಯೇ, ಆದರೆ ವ್ಯಥೆಪಡಬೇಡ, ನೀನು ಮೊದಲಿನ ಸ್ವಭಾವವನ್ನು ಹೊಂದುವಿ. ನಾನು ಸೂಕ್ತವಾದ ಸಮಯದಲ್ಲಿ ನಿನಗೆ ಉದರವಿಕಾರದಿಂದ ಉಂಟಾಗಿರುವ ಅರುಚಿಯನ್ನು ಪರಿಹರಿಸುವೆನು.
ಪುರಾ ದೇವನಿಯೋಗೇನ ನ ತ್ವಯಾ ಭಸ್ಮಸಾತ್ಕೃತಮ್ |
ಆಲಯಂ ದೇವಶತ್ರೂಣಾಂ ಸುಘೋರಃ ಖಾಂಡವಂ ವನಮ್ ॥79॥
ನೀನು ಹಿಂದೆ ದೇವತೆಗಳ ಆಜ್ಞೆಯಂತೆ ಎಲ್ಲ ರಾಕ್ಷಸರಿಗೆ ಆಶ್ರಯವಾದ ಘೋರವಾದ ಖಾಂಡವವನವನ್ನು ದಹಿಸಲಿಲ್ಲ.
ತತ್ರ ಸರ್ವಾಣಿ ಸತ್ವಾನಿ ನಿವಸಂತಿ ವಿಭಾವಸೋ |
ತೇಷಾಂ ತ್ವಂ ಮೇದಸಾ ತೃಪ್ತಃ ಪ್ರಕೃತಿಸ್ಥೋ ಭವಿಷ್ಯಸಿ ॥80॥
ಮತ್ಪ್ರಸಾದಾಚ್ಛವಿಃ ಸಮ್ಯಕ್ ತ್ವಯಿ ವಹ್ನೇ ಭವಿಷ್ಯತಿ |
ಗಚ್ಛ ಶೀಘ್ರಂ ವನಂ ದಗ್ಧುಂ ತತ್ರ ಮೋಕ್ಷ್ಯಸಿ ಕಿಲ್ಬಿಷಾತ್ ॥81॥
ಅಗ್ನಿಯೇ, ಅಲ್ಲಿ ಎಲ್ಲ ಪ್ರಾಣಿಗಳೂ ವಾಸಮಾಡುತ್ತಿವೆ. ನೀನು ಆ ಪ್ರಾಣಿಗಳ ಮೇದಸ್ಸನ್ನು ಭುಂಜಿಸಿ ತೃಪ್ತನಾಗು. ಮೊದಲಿನ ತೇಜಸ್ಸು ಮತ್ತು ಬಲಗಳನ್ನು ಹೊಂದುವಿ. ಅಗ್ನಿಯೇ, ನನ್ನ ಅನುಗ್ರಹದಿಂದ ನಿನಗೆ ಒಳ್ಳೆಯ ಕಾಂತಿಯುಂಟಾಗುವುದು. ಖಾಂಡವವನವನ್ನು ದಹಿಸಲು ನೀನು ಬೇಗ ಹೋಗು. ಅಲ್ಲಿ ನೀನು ಪಾತಕದಿಂದ ಮುಕ್ತನಾಗುವಿ.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ಪರಮೇಷ್ಠಿಮುಖಾಚ್ಚ್ಯುತಮ್ |
ಉತ್ತಮಂ ಜವಮಾಸ್ಥಾಯ ಪ್ರದುದ್ರಾವ ಹುತಾಶನಃ ॥82॥
ಬ್ರಹ್ಮದೇವರ ಮುಖದಿಂದ ಹೊರಹೊರಟ ಈ ಮಾತುಗಳನ್ನು ಕೇಳಿದ ಅಗ್ನಿಯು ಉತ್ತಮವಾದ ವೇಗವನ್ನು ಹೊಂದಿ ಅಲ್ಲಿಂದ ಓಡಿದನು.
ಆಗಮ್ಯ ಖಾಂಡವಂ ದಾವಮುತ್ತಮಂ ಜವಮಾಸ್ಥಿತಃ |
ಸಹಸಾ ಪ್ರಜ್ವಲತ್ಯಗ್ನಿಃ ಕ್ರುದ್ಧೋ ವಾಯುಸಮೀರಿತಃ ॥83॥
ಉತ್ತಮ ಜವವನ್ನು ಹೊಂದಿ ಖಾಂಡವವನವನ್ನು ತಲುಪಿ ತಕ್ಷಣದಲ್ಲಿಯೇ ಅಗ್ನಿಯು ವಾಯುವಿನಿಂದ ಸಹಕೃತನಾಗಿ, ಕ್ರುದ್ಧನಾಗಿ ಜ್ವಲಿಸಲು ಆರಂಭಿಸಿದನು.
ಪ್ರದೀಪ್ತಂ ಖಾಂಡವಂ ದೃಷ್ಟ್ವಾ ಯೇ ಸ್ಯುಸ್ತತ್ರ ನಿವಾಸಿನಃ |

ಪರಮಂ ಯತ್ನಮಾತಿಷ್ಠನ್ ಪಾವಕಸ್ಯ ಪ್ರಶಾಂತಯೇ ॥84॥
ಜ್ವಲಿಸುತ್ತಿರುವ ಅಗ್ನಿಯನ್ನು ನೋಡಿ ಖಾಂಡವವನ ನಿವಾಸಿಗಳು ಅಗ್ನಿಯನ್ನು ನಿವಾರಿಸಲು ಬಹಳ ಪ್ರಯತ್ನವನ್ನು ಪಟ್ಟರು.
ಕರೈಸ್ತು ಕರಿಣಃ ಶೀಘ್ರಂ ಜಲಮಾದಾಯ ಸತ್ವರಾಃ |
ಸಿಷಿಚುಃ ಪಾವಕಂ ಕ್ರುದ್ಧಾಃ ಶತಶೋಽಥ ಸಹಸ್ರಶಃ ॥85॥
ಆನೆಗಳು, ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ತಮ್ಮ ಸೊಂಡಿಲುಗಳಿಂದ ನೀರನ್ನು ತಂದು ಶೀಘ್ರವಾಗಿ ಅಗ್ನಿಯ ಮೇಲೆ ಸಿಂಪಡಿಸಿದವು.
ಬಹುಶೀರ್ಷಾಸ್ತಥಾ ನಾಗಾಃ ಶಿರೋಭಿರ್ಜಲಸಂತತಿಮ್ |
ಮುಮುಚುಃ ಪಾವಕಾಭ್ಯಾಶೇ ಸತ್ವರಾಃ ಕ್ರೋಧಮೂರ್ಚ್ಛಿತಾಃ ॥86॥
ಕ್ರೋಧಗೊಂಡ ಅನೇಕ ತಲೆಗಳುಳ್ಳ ಸರ್ಪಗಳು ಶೀಘ್ರವಾಗಿ ಅಗ್ನಿಯ ಸಮೀಪದಲ್ಲಿ ತಮ್ಮ ಮುಖಗಳಿಂದ ಜಲಸಂತತಿಯನ್ನು ಸೃಷ್ಟಿಸಿದವು.
ತಥೈವಾನ್ಯಾನಿ ಸತ್ವಾನಿ ನಾನಾಪ್ರಹರಣೋದ್ಯಮೈಃ |
ವಿಲಯಂ ಪಾವಕಂ ಶೀಘ್ರಮನಯನ್ ಭರತರ್ಷಭ ॥87॥
ಭರತಶ್ರೇಷ್ಠನೇ, ಹಾಗೆಯೇ ಉಳಿದ ಪ್ರಾಣಿಗಳು ತಮ್ಮ ಪ್ರಯತ್ನಗಳಿಂದ ಮತ್ತು ಸಲಕರಣೆಗಳಿಂದ ಶೀಘ್ರವಾಗಿ ಅಗ್ನಿಯನ್ನು ನಾಶಮಾಡಿದವು.
ಅನೇನ ತು ಪ್ರಕಾರೇಣ ಭೂಯೋ ಭೂಯಶ್ಚ ಪ್ರಜ್ವಲನ್ |
ಸಪ್ತಜಿಹ್ವಃ ಪ್ರಶಮಿತಃ ಖಾಂಡವೇ ಹವ್ಯವಾಹನಃ ॥88॥
ಮತ್ತೆಮತ್ತೆ ಪ್ರಜ್ವಲಿಸುವ ಸಪ್ತಜಿಹ್ವನಾದ ಅಗ್ನಿಯು ಈ ರೀತಿಯಿಂದ ಖಾಂಡವವನದಲ್ಲಿ ನಾಶಮಾಡಲ್ಪಟ್ಟನು.
ಸ ತು ನೈರಾಶ್ಯಮಾಪನ್ನಃ ಸದಾ ಗ್ಲಾನಿಸಮನ್ವಿತಃ |
ಪಿತಾಮಹಮುಪಾಗಚ್ಛತ್ ಸಂಕ್ರುದ್ಧೋ ಹವ್ಯವಾಹನಃ ॥89॥
ಕ್ರುದ್ಧನಾದ ಹವ್ಯವಾಹನನು ನಿರಾಶೆಯಿಂದಲೂ, ಸತತವಾದ ಗ್ಲಾನಿಯಿಂದಲೂ ಕೂಡಿದವನಾಗಿ ಬ್ರಹ್ಮದೇವನ ಬಳಿಗೆ ಹೋದನು.
ತಚ್ಚ ಸರ್ವಂ ಯಥಾನ್ಯಾಯಂ ಬ್ರಹ್ಮಣೇ ಸ ನ್ಯವೇದಯತ್ |
ಉವಾಚ ಚೈನಂ ಭಗವಾನ್ ಮುಹೂರ್ತಂ ಸ ವಿಚಿಂತ್ಯ ತು ॥90॥
ನಡೆದುದೆಲ್ಲವನ್ನೂ ಬ್ರಹ್ಮದೇವರಿಗೆ ಕ್ರಮಪ್ರಕಾರವಾಗಿ ತಿಳಿಸಿದನು. ಬ್ರಹ್ಮದೇವರು ಒಂದು ಮುಹೂರ್ತಕಾಲ ಆಲೋಚಿಸಿ ಅಗ್ನಿಯನ್ನು ಕುರಿತುಹೇಳಿದರು.
ಉಪಾಯಃ ಪರಿದೃಷ್ಟೋ ಮೇ ಯಥಾ ತ್ವಂ ಧಕ್ಷ್ಯಸೇಽನಘ |
ಕಾಲಂ ಚ ಕಂಚಿತ್ ಕ್ಷಮತಾಂ ತತಸ್ತಂ ಧಕ್ಷ್ಯತೇ ಭವಾನ್ ॥91॥
ಅನಘನೇ, ನೀನು ಖಾಂಡವವನವನ್ನು ಸುಡಲು ನಾನು ಉಪಾಯವನ್ನು ಯೋಚಿಸಿದ್ದೇನೆ. ಸ್ವಲ್ಪಕಾಲ ಸುಮ್ಮನಿರು. ಅನಂತರ ನೀನು ಖಾಂಡವವನ್ನು ದಹಿಸುವಿ.
ಭವಿಷ್ಯತಃ ಸಹಾಯೌ ತೌ ನರನಾರಾಯಣಾವೃಷೀ |
ತಾಭ್ಯಾಂ ತ್ವಂ ರಕ್ಷಿತೋ ದಾವಂ ಧಕ್ಷ್ಯಸೇ ಹವ್ಯವಾಹನ ॥92॥
ಮುಂದೆ ನಿನಗೆ ನರನಾರಾಯಣಋಷಿಗಳು ಸಹಾಯಕರಾಗುತ್ತಾರೆ. ಅಗ್ನಿಯೇ, ಅವರಿಂದ ರಕ್ಷಿತನಾಗಿ ನೀನು ಖಾಂಡವವನವನ್ನು ದಹಿಸುವಿ.
ವೈಶಂಪಾಯನಃ
ಏವಮಸ್ತ್ವಿತಿ ತಂ ವಹ್ನಿರ್ಬ್ರಹ್ಮಾಣಂ ಸಮಭಾಷತ |
ಕಾಲಸ್ಯ ಸಹನೋ ರಾಜನ್ ತಸ್ಯ ವಾಕ್ಯಂ ಸ್ವಯಂಭುವಃ |
ಅನುಸ್ಮೃತ್ಯ ಜಗಾಮಾಥ ಪುನರೇವ ಪಿತಾಮಹಮ್ ॥93॥
ಅಗ್ನಿಯು ಬ್ರಹ್ಮದೇವರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು. ರಾಜನೇ, ಬ್ರಹ್ಮದೇವರ ಮಾತನ್ನು ಅನುಸರಿಸಿ ಕಾಲವನ್ನು ಕಳೆಯುತ್ತಾ ಪುನಃ ಬ್ರಹ್ಮದೇವರ ಬಳಿಗೆ ಹೋದನು.
ಅಬ್ರುವೀಚ್ಚ ತದಾ ಬ್ರಹ್ಮ ಯಥಾ ತ್ವಂ ಧಕ್ಷ್ಯಸೇಽನಲ |
ಖಾಂಡವಂ ದಾವಮದ್ಯೈವ ಮಿಷತೋಽಸ್ಯ ಶಚೀಪತೇಃ ॥94॥
ಆಗ ಬ್ರಹ್ಮದೇವರು ಹೇಳಿದರು - ಅಗ್ನಿಯೇ, ನೀನು ಈ ದಿನವೇ ಶಚಿಪತಿಯಾದ ಇಂದ್ರನು ನೋಡುತ್ತಿರುವಂತೆಯೇ ಖಾಂಡವವನವನ್ನು ದಹಿಸುವಿ.
ನರನಾರಾಯಣೌ ಯೌ ತೌ ಪೂರ್ವದೇವೌ ವಿಭಾವಸೋ |
ಸಂಪ್ರಾಪ್ತೌ ಮಾನುಷಂ ದೇಹಂ ಕಾರ್ಯಾರ್ಥಂ ಹಿ ದಿವೌಕಸಾಮ್ ॥95॥
ಅರ್ಜುನಂ ವಾಸುದೇವಂ ಚ ಯೌ ತೌ ಲೋಕೋಽಭಿಮನ್ಯತೇ |
ತಾವೇತೌ ಸಹಿತೌ ವಹ್ನೇ ಖಾಂಡವಸ್ಯ ಸಮೀಪತಃ ॥96॥
ಅಗ್ನಿಯೇ, ಪ್ರಾಚೀನರಾದ, ಪ್ರಸಿದ್ಧರಾದ ನರನಾರಾಯಣ ಋಷಿಗಳು ದೇವಕಾರ್ಯವನ್ನು ಸಾಧಿಸುವ ಸಲುವಾಗಿ ಮನುಷ್ಯದೇಹವನ್ನು ಧರಿಸಿ ಇಲ್ಲಿಗೆ ಬಂದಿದ್ದಾರೆ. ಜನರು ಅವರನ್ನು ಅರ್ಜುನ ಮತ್ತು ಕೃಷ್ಣ ಎಂದು ತಿಳಿದಿದ್ದಾರೆ. ಅಗ್ನಿಯೇ, ಸದ್ಯಕ್ಕೆ ಅವರಿಬ್ಬರೂ ಖಾಂಡವದ ಸಮೀಪದಲ್ಲಿಯೇ ಇದ್ದಾರೆ.
ತೌ ತ್ವಂ ಯಾಚಸ್ವ ಸಾಹಾಯ್ಯೇ ದಾಹಾರ್ಥಂ ಖಾಂಡವಸ್ಯ ಚ |

ತತೋ ಧಕ್ಷ್ಯಸಿ ತಂ ದಾವಂ ರಕ್ಷಿತಂ ತ್ರಿದಶೈರಪಿ ॥97॥
ತೌ ತು ಸತ್ತ್ವಾನಿ ಸರ್ವಾಣಿ ಯತ್ನತೋ ವಾರಯಿಷ್ಯತಃ |
ದೇವರಾಜಂ ಚ ಸಹಿತೌ ತತ್ರ ಮೇ ನಾಸ್ತಿ ಸಂಶಯಃ ॥98॥
ನೀನು ಹೋಗಿ ಖಾಂಡವವನ್ನು ದಹಿಸಲು ಅವರ ಸಹಾಯವನ್ನು ಯಾಚಿಸು. ಅನಂತರ, ಅದು ದೇವತೆಗಳಿಂದ ರಕ್ಷಿತವಾದರೂ ನೀನು ಖಾಂಡವವನ್ನು ದಹಿಸುವಿ. ಅವರು ತಮ್ಮ ಪ್ರಯತ್ನದಿಂದ ಯಾವ ಪ್ರಾಣಿಯೂ ಹೊರಗೆ ಹೋಗದಂತೆ ತಡೆಯುವರು. ದೇವರಾಜನು ಸುರಿಸುವ ಮಳೆಯನ್ನೂ ಸಹ ಒಳಗೆ ಪ್ರವೇಶಿಸದಂತೆ ತಡೆಯುವರು.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ತ್ವರಿತೋ ಹವ್ಯವಾಹನಃ |
ಕೃಷ್ಣಪಾರ್ಥಾವುಪಾಗಮ್ಯ ಯತ್ ಪಾರ್ಥಂ ಪ್ರತ್ಯಭಾಷತ |
ತತ್ ತೇ ಕಥಿತವಾನಸ್ಮಿ ಪೂರ್ವಮೇವ ನೃಪೋತ್ತಮ ॥99॥
ಇದನ್ನು ಕೇಳಿದ ಅಗ್ನಿಯು ಬೇಗ ಕೃಷ್ಣಪಾರ್ಥರ ಸಮೀಪಕ್ಕೆ ಬಂದನು. ನೃಪೋತ್ತಮನೇ, ಅವನು ಪಾರ್ಥನಿಗೆ ಹೇಳಿದ ವಿಷಯವನ್ನು ನಾನು ಮೊದಲೇ ನಿನಗೆ ತಿಳಿಸಿದ್ದೇನೆ.
ತಚ್ಛ್ರುತ್ವಾ ವಚನಂ ತ್ವಗ್ನೇರ್ಬೀಭತ್ಸುರ್ಜಾತವೇದಸಮ್ |
ಅಬ್ರವೀನ್ನೃಪಶಾರ್ದೂಲ ತತ್ಕಾಲಸದೃಶಂ ವಚಃ |
ದಿಧಕ್ಷುಂ ಖಾಂಡವಂ ದಾವಮಕಾಮಸ್ಯ ಶತಕ್ರತೋಃ ॥100॥
ಅಗ್ನಿಯ ಮಹಾ ಮಾತುಗಳನ್ನು ಕೇಳಿ ಬೀಭತ್ಸುವು ಇಂದ್ರನ ಇಚ್ಛೆಗೆ ವಿರುದ್ಧವಾಗಿ ಖಾಂಡವವನ್ನು ಸುಡಲು ಬಯಸಿದ ಅಗ್ನಿಯನ್ನು ಕುರಿತು ಆ ಸಮಯಕ್ಕೆ ಉಚಿತವಾದ ಮಾತುಗಳನ್ನಾಡಿದನು.
ಉತ್ತಮಾಸತ್ರಾಣಿ ಮೇ ಸಂತಿ ದಿವ್ಯಾನಿ ಚ ಬಹೂನಿ ಚ |
ಯೈರಹಂ ಶಕ್ನುಯಾಂ ಯೋದ್ಧುಮಪಿ ವಜ್ರಭೃತೋ ಬಹೂನ್ ॥
ನನ್ನ ಬಳಿ ಅನೇಕ ದಿವ್ಯವಾದ ಉತ್ತಮಾಸ್ತ್ರಗಳಿವೆ. ಅವುಗಳ ಬಲದಿಂದ ನಾನು ಅನೇಕ ಇಂದ್ರರು ಬಂದರೂ ಅವರ ಜೊತೆಯಲ್ಲಿ ಯುದ್ಧಮಾಡುವ ಸಾಮರ್ಥ್ಯವನ್ನು ಹೊಂದಿದ್ದೇನೆ.
ಧನುರ್ಮೇ ನಾಸ್ತಿ ಭಗವನ್ ಬಾಹುವೀರ್ಯೇಣ ಸಮ್ಮಿತಮ್ |
ಕುರ್ವತಃ ಸಮರೇ ಯತ್ನಂ ವೇಗಂ ಯದ್ ವಿಷಹೇತ ವಾ ॥102॥
ಪೂಜ್ಯನೇ, ಆದರೆ ನನ್ನ ಬಾಹುಬಲಕ್ಕೆ ಯೋಗ್ಯವಾದ, ಯುದ್ಧದಲ್ಲಿ ನನ್ನ ಪ್ರಯತ್ನವನ್ನು ಮತ್ತು ವೇಗವನ್ನು ಸಹಿಸಬಲ್ಲ ಧನುಸ್ಸು ಇಲ್ಲ.
ಶರೈಸ್ತ್ವದರ್ಥೇ ಬಹುಭಿರಕ್ಷಯ್ಯೈಃ ಕ್ಷಿಪ್ರಮಸ್ಯತಃ |
ನ ಹಿ ವೋಢುಂ ರಥಃ ಶಕ್ತಃ ಶರಾನ್ ಮಮ ಯಥೇಪ್ಸಿತಾನ್ ॥103॥
ನಿನ್ನ ಸಲುವಾಗಿ ಅಕ್ಷಯಬಾಣಗಳನ್ನು ಪ್ರಯೋಗಿಸುವ ನನ್ನ ಇಷ್ಟವಾದ ಬಾಣಗಳನ್ನು ಸಹಿಸಬಲ್ಲ ರಥವೂ ಇಲ್ಲ.
ಅಶ್ವಾಂಶ್ಚ ದಿವ್ಯಾನಿಚ್ಛೇಯಂ ಪಾಂಡರಾನ್ ವಾತರಂಹಸಃ |
ರಥಂ ಚ ಮೇಘನಿರ್ಘೋಷಂ ಸೂರ್ಯಪ್ರತಿಮತೇಜಸಮ್ ॥104॥
ನನಗೆ ಶ್ವೇತವರ್ಣದ ವಾಯುವೇಗವುಳ್ಳ ದಿವ್ಯವಾದ ಅಶ್ವಗಳೂ ಬೇಕು. ಮೇಘಘೋಷದಂತಹ ಘೋಷದಿಂದ ಕೂಡಿದ ಸೂರ್ಯನಂತೆ ಪ್ರಕಾಶಿಸುವ ರಥವೂ ಬೇಕು.
ತಥಾ ಕೃಷ್ಣಸ್ಯ ವೀರ್ಯೇಣ ನಾಯುಧಂ ವಿದ್ಯತೇ ಸಮಮ್ |
ಯೇನ ನಾಗಾನ್ ಪಿಶಾಚಾಂಶ್ಚ ನಿಹನ್ಯಾನ್ಮಾಧವೋ ರಣೇ ॥105॥
ಹಾಗೆಯೇ, ಯಾವ ಆಯುಧದಿಂದ ಮಾಧವನು ಯುದ್ಧದಲ್ಲಿ ಸರ್ಪಗಳನ್ನೂ ಮತ್ತು ಪಿಶಾಚಿಗಳನ್ನೂ ಕೊಲ್ಲಬಹುದೋ ಅವನ ಪರಾಕ್ರಮಕ್ಕೆ ಸದೃಶವಾದ ಆಯುಧವಿಲ್ಲ.
ಉಪಾಯಂ ಕರ್ಮಣಃ ಸಿದ್ಧೌ ಭಗವನ್ ವಕ್ತುಮರ್ಹಸಿ |
ನಿವಾರಯೇಯಂ ಯೇನೇಂದ್ರಂ ವರ್ಷಮಾಣಂ ಮಹಾಶನಿಮ್ ॥
ಪೂಜ್ಯನೇ, ನಾನು ಇಂದ್ರನ ವಜ್ರಾಯುಧವನ್ನೂ, ಅವನು ಸುರಿಸುವ ಮಳೆಯನ್ನು ತಡೆದು ಕರ್ಮಸಿದ್ಧಿಯನ್ನು ಉಂಟುಮಾಡುವ ಉಪಾಯಗಳನ್ನು ನೀನೇ ಸೂಚಿಸಬೇಕು.
ಪೌರುಷೇಣ ತು ಯತ್ ಕಾರ್ಯಂ ತತ್ ಕರ್ತಾರೌ ಸ್ವ ಪಾವಕ |
ಕರಣಾನಿ ಸಮರ್ಥಾನಿ ಭಗವನ್ ದಾತುಮರ್ಹಸಿ ॥107॥
ಅಗ್ನಿಯೇ, ಪುರುಷಪ್ರಯತ್ನದಿಂದ ಏನು ಮಾಡಬಹುದೋ ಅದನ್ನು ನಾವಿಬ್ಬರೂ ಮಾಡುವೆವು. ಅಗ್ನಿಯೇ, ಸಮರ್ಥವಾದ ಸಾಧನಗಳನ್ನು ನೀನು ಒದಗಿಸಬೇಕು.
ವೈಶಂಪಾಯನಃ
ಏವಮುಕ್ತಸ್ತು ಭಗವಾನ್ ಧೂಮಕೇತುರ್ಹುತಾಶನಃ |
ಚಿಂತಯಾಮಾಸ ವರುಣಂ ಲೋಕಪಾಲಂ ದಿದೃಕ್ಷಯಾ ॥108॥
ಶ್ವೇತಕುಂಡಲಿನಂ ದೇವಂ ಸರ್ವಾಭರಣಭೂಷಿತಮ್ |
ಸ ಚ ಸಂಚಿಂತಿತಂ ಜ್ಞಾತ್ವಾ ದರ್ಶಯಾಮಾಸ ಪಾವಕಮ್ ॥109॥
ಹೀಗೆ ಹೇಳಲ್ಪಟ್ಟ ಪೂಜ್ಯನಾದ ಧೂಮಕೇತುವಾದ ಅಗ್ನಿಯು ಲೋಕಪಾಲನಾದ, ಶ್ವೇತಕುಂಡಲವುಳ್ಳ, ಸರ್ವಾಭರಣಭೂಷಿತನಾದ

ವರುಣ ದೇವನನ್ನು ನೋಡುವ ಇಚ್ಛೆಯಿಂದ ವರುಣನನ್ನು ಚಿಂತಿಸಿದನು. ವರುಣನಾದರೋ ಅಗ್ನಿಯ ಚಿಂತನೆಯನ್ನು ತಿಳಿದು ಅವನಿಗೆ ತನ್ನ ದರ್ಶನವನ್ನು ನೀಡಿದನು.
ತಮಬ್ರವೀದ್ ಧೂಮಕೇತುಃ ಪ್ರತಿಪೂಜ್ಯ ಜಲೇಶ್ವರಮ್ |
ಚತುರ್ಥಂ ಲೋಕಪಾಲಾನಾಂ ರಕ್ಷಿತಾರಂ ಮಹೇಶ್ವರಮ್ ॥110॥
ಅಗ್ನಿಯು ತನ್ನಿಂದ ನಾಲ್ಕನೆಯ ಲೋಕಪಾಲಕನಾದ ಜಲೇಶ್ವರನಾದ ರಕ್ಷಕನಾದ ಪ್ರಭುವಾದ ಅವನನ್ನು ಕುರಿತು ಹೇಳಿದನು.
ಸೋಮೇನ ರಾಜ್ಞಾ ಯದ್ ದತ್ತಂ ಧನುಶ್ಚೈವೇಷುಧೀ ಚ ಯೇ |
ತತ್ ಪ್ರಯಚ್ಛೋಭಯಂ ದಿವ್ಯಂ ತ್ವಮಸ್ಮೈ ಸವ್ಯಸಾಚಿನೇ ॥111॥
ದಿವ್ಯೈರಶ್ವೈಃ ಸಮಾಯುಕ್ತಂ ರಥಂ ಚ ಕಪಿಲಕ್ಷಣಮ್ |
ಕಾರ್ಯಂ ಚ ಸುಮಹತ್ ಪಾರ್ಥೋ ಗಾಂಡೀವೇನ ಕರಿಷ್ಯತಿ |
ಚಕ್ರೇಣ ವಾಸುದೇವಶ್ಚ ತನ್ಮದರ್ಥೇ ಪ್ರದೀಯತಾಮ್ ॥112॥
ಸೋಮರಾಜನು ನಿನಗೆ ಕೊಟ್ಟಿರುವ ದಿವ್ಯವಾದ ಧನುಸ್ಸನ್ನು ಮತ್ತು ಎರಡು ಬತ್ತಳಿಕೆಗಳನ್ನು ನೀನು ಈ ಸವ್ಯಸಾಚಿಯಾದ ಅರ್ಜುನನಿಗೆ ಕೊಡು. ದಿವ್ಯಾಶ್ವಗಳಿಂದ ಕೂಡಿದ ಕಪಿಧ್ವಜವುಳ್ಳ ರಥವನ್ನೂ ಸಹ ಕೊಡು. ಗಾಂಡೀವಧನುಸ್ಸಿನಿಂದ ಅರ್ಜುನನು ದೊಡ್ಡಕಾರ್ಯವನ್ನು ಮಾಡುವನು, ವಾಸುದೇವನು ಸುದರ್ಶನ ಚಕ್ರದಿಂದ ಮಹತ್ಕಾರ್ಯವನ್ನು ಮಾಡುವನು, ನನ್ನ ಸಲುವಾಗಿ ಅವುಗಳನ್ನು ಅವರಿಗೆ ಕೊಡು.
ವೈಶಂಪಾಯನಃ
ದದಾನೀತ್ಯೇವ ವರುಣಃ ಪಾವಕಂ ಪ್ರತ್ಯಭಾಷತ |
ತದದ್ಭುತಂ ಮಹಾವೀರ್ಯಂ ಯಶಃಕೀರ್ತಿವಿವರ್ಧನಮ್ ॥113॥
ಸರ್ವಶಸ್ತ್ರೈರನಾಧೃಷ್ಯಂ ಸರ್ವಶಸ್ತ್ರಪ್ರಮಾಥಿನಮ್ |
ಸರ್ವಾಯುಧಮಹಾಮಾತ್ರಂ ಪರಸೇನಾಪ್ರಧರ್ಷಣಮ್ ॥114॥
ಏಕಂ ಶತಸಹಸ್ರೇಣ ಸಮ್ಮಿತಂ ರಾಷ್ಟ್ರವರ್ಧನಮ್ |
ಚಿತ್ರಮುಚ್ಚಾವಚೈರ್ವರ್ಣೈಃ ಶೋಭಿತಂ ಶ್ಲಕ್ಷ್ಣಮವ್ರಣಮ್ ॥115॥
ದೇವಗಂಧರ್ವಋಷಿಭಿಃ ಪೂಜಿತಂ ಶಾಶ್ವತೀಃ ಸಮಾಃ |
ಪ್ರಾದಾಚ್ಚೈವ ಧನೂರತ್ನಮಕ್ಷಯ್ಯೇ ಚ ಮಹೇಷುಧೀ ॥116॥
ನಾನು ಕೊಡುತ್ತೇನೆ ಎಂದೇ ವರುಣನು ಅಗ್ನಿಗೆ ಪ್ರತ್ಯುತ್ತರವನ್ನು ಕೊಟ್ಟನು. ಅನಂತರ ಅದ್ಭುತವಾದ ಮಹಾವೀರ್ಯೋಪೇತವಾದ, ಕೀರ್ತಿದಾಯಕವಾದ, ಯಾವಶಸ್ತ್ರಗಳಿಂದಲೂ ಪರಾಭವಕ್ಕೆ ಒಳಗಾಗದ, ಎಲ್ಲ ಶಸ್ತ್ರಗಳನ್ನು ವಿನಾಶಗೊಳಿಸುವ, ಎಲ್ಲ ಆಯುಧಗಳಿಗಿಂತಲೂ ಪ್ರಧಾನವಾದ, ಶತ್ರುಸೈನ್ಯವನ್ನು ಸದೆಬಡಿಯುವ, ಒಂದು ಲಕ್ಷ ಶಸ್ತ್ರಗಳಿಗೆ ಸಮಾನವಾದ, ರಾಷ್ಟ್ರವರ್ಧಕವಾದ, ಅನೇಕ ವರ್ಣಗಳಿಂದ ಕೂಡಿದ ಮೃದುವಾದ ಮತ್ತು ಗಾಯಗಳಿಂದ, ದೇವಗಂಧರ್ವಋಷಿಗಳಿಂದ ಬಹುಕಾಲದಿಂದಲೂ ಪೂಜಿತವಾದ ಧನುಶ್ರೇಷ್ಠವಾದ ಗಾಂಡೀವ ಧನುಸ್ಸನ್ನು ಮತ್ತು ಅಕ್ಷಯಬತ್ತಳಿಕೆಗಳನ್ನು ಅರ್ಜುನನಿಗೆ ಕೊಟ್ಟನು.
ರಥಂ ಚ ದಿವ್ಯಾಸ್ತ್ರಯುಜಂ ಕಪಿಪ್ರವರಲಕ್ಷಣಮ್ |
ಉಪೇತಂ ಕಾಮಗೈರಶ್ವೈರ್ಗಾಂಧರ್ವೈರ್ಹೇಮಮಾಲಿಭಿಃ ॥117॥
ದಿವ್ಯಾಸ್ತ್ರಗಳಿಂದ ಕೂಡಿದ, ಕಪಿಶ್ರೇಷ್ಠನಾದ ಹನುಮಂತನ ಚಿನ್ಹೆಯುಳ್ಳ, ಚಿನ್ನದ ಮಾಲೆಗಳನ್ನು ಧರಿಸಿದ, ಮನಸ್ಸಿನ ಇಚ್ಛೆಯನ್ನು ಅನುಸರಿಸಿ ಹೋಗುವ ಗಾಂಧರ್ವಜಾತಿಯ ಅಶ್ವಗಳಿಂದ ಕೂಡಿದ ರಥವನ್ನೂ ಕೊಟ್ಟನು.
ಪಾಂಡರಾಭ್ರಪ್ರತೀಕಾಶೈರ್ಮನೋವಾಯುಸಮೈರ್ಜವೇ |
ಸರ್ವೋಪಕರಣೈರ್ಯುಕ್ತಮಜಯ್ಯಂ ದೇವದಾನವೈಃ ॥118॥
ಆ ರಥವು ಬಿಳಿಯಮೋಡಗಳ ಕಾಂತಿಯನ್ನು ಹೊಂದಿದ ವೇಗದಲ್ಲಿ ಮನೋವೇಗ ಮತ್ತು ವಾಯುವೇಗಕ್ಕೆ ಸಮವಾದ ಅಶ್ವಗಳಿಂದ ಕೂಡಿದ್ದು ಸರ್ವಾಯುಧಸಂಪನ್ನವಾಗಿ ದೇವತೆಗಳಿಂದಲೂ ಮತ್ತು ದಾನವರಿಂದಲೂ ಅಜೇಯವಾಗಿದ್ದಿತು.
ಭಾನುಮಂತಂ ಮಹಾಘೋಷಂ ಸರ್ವಭೂತಮನೋಹರಮ್ |
ಸಸರ್ಜ ಯಂ ಸುತಪಸಾ ಭುವನೇ ಭುವನಪ್ರಭುಃ ॥119॥
ಪ್ರಕಾಶಮಾನವಾದ, ಮಹಾಘೋಷವುಳ್ಳ, ಎಲ್ಲ ಪ್ರಾಣಿಗಳಿಗೂ ಮನೋಹರವಾದ ಆ ರಥವನ್ನು ಹಿಂದೆ ಭುವನಪ್ರಭುವಾದ ಪ್ರಜಾಪತಿಯಾದ ಬ್ರಹ್ಮದೇವರು ತಮ್ಮ ತಪಸ್ಸಿನಿಂದ ಸೃಷ್ಟಿಸಿದರು.
ಪ್ರಜಾಪತಿರನಿರ್ದೇಶ್ಯಂ ಯಸ್ಯ ರೂಪಂ ರವೇರಿವ |
ಯಂ ಸ್ಮ ಸೋಮಃ ಸಮಾರುಹ್ಯ ದಾನವಾನಜಯತ್ ಪ್ರಭುಃ ॥120॥
ಭವ್ಯರೂಪದಂತೆ ಆ ರಥದ ರೂಪವು ನಿರ್ದೇಶಿಸಲು ಅಸಾಧ್ಯವಾಗಿದ್ದಿತು. ಆ ರಥವನ್ನು ಏರಿ ಪ್ರಭುವಾದ ಸೋಮನು ಹಿಂದೆ ದಾನವರನ್ನು ಜಯಿಸಿದ್ದನು.
ನವಮೇಘಪ್ರತೀಕಾಶಂ ಜ್ವಲಂತಮಿವ ಚ ಶ್ರಿಯಾ |
ಆಶ್ರಿತಾ ತಂ ರಥಶ್ರೇಷ್ಠಂ ಶಕ್ರಾಯುಧಸಮಾ ಬಭೌ |
ತಾಪನೀಯಾ ಸುರುಚಿರಾ ಧ್ವಜಯಷ್ಟಿರನುತ್ತಮಾ ॥121॥
ಆ ರಥವನ್ನು ಆಶ್ರಯಿಸಿ ಶಕ್ರಾಯುಧಕ್ಕೆ ಸಮವಾದ ಸುವರ್ಣಾಲಂಕೃತವಾದ, ಮನೋಹರವಾದ, ಶ್ರೇಷ್ಠವಾದ ಧ್ವಜವಿದ್ದಿತು.
ತಸ್ಯಾಂ ತು ವಾನರೋ ದಿವ್ಯಃ ಸಿಂಹಲಾಂಗೂಲಲಕ್ಷಣಃ |

ಭೀಮೋ ನನರ್ದ ತತ್ರಸ್ಥಃ ಸಂಸ್ಥಿತೋ ಮೂರ್ಧ್ನ್ಯಶೋಭತ ॥122॥
ಧ್ವಜೇ ಭೂತಾನಿ ತತ್ರಾಸನ್ ವಿವಿಧಾನಿ ಮಹಾಂತಿ ಚ |
ನಾದೇನ ಪರಸೈನ್ಯಾನಾಂ ಯೇಷಾಂ ಪ್ರಜ್ಞಾ ಪ್ರಣಶ್ಯತಿ ॥123॥
ಆ ಧ್ವಜದಲ್ಲಿ ಸಿಂಹಲಾಂಗುಲವುಳ್ಳ ದಿವ್ಯವಾದ ವಾನರವು ಧ್ವಜದ ಮೇಲ್ಭಾಗದಲ್ಲಿ ಕುಳಿತು ಭಯಂಕರವಾಗಿ ಗರ್ಜಿಸುತ್ತಿತ್ತು. ಆ ಧ್ವಜದಲ್ಲಿ ಶ್ರೇಷ್ಠವಾದ ಕಪಿಯಲ್ಲದೇ ಇನ್ನೂ ಅನೇಕ ದೊಡ್ಡ ದೊಡ್ಡ ಭೂತಗಳಿದ್ದವು. ಅವುಗಳ ದೊಡ್ಡನಾದದಿಂದ ಶತ್ರುಸೈನ್ಯದ ಸೈನಿಕರ ಬುದ್ಧಿಯೇ ಕೆಡುತ್ತಿತ್ತು.
ಸ ತಂ ನಾನಾಪತಾಕಾಭಿಃ ಶೋಭಿತಂ ರಥಸತ್ತಮಮ್ |
ಪ್ರದಕ್ಷಿಣಮುಪಾವೃತ್ಯ ದೈವತೇಭ್ಯಃ ಪ್ರಣಮ್ಯ ಚ ॥124॥
ಸನ್ನದ್ಧಃ ಕವಚೀ ಖಡ್ಗೀ ಬದ್ಧಗೋಧಾಂಗುಲಿತ್ರವಾನ್ |
ಆರುರೋಹ ತದಾ ಪಾರ್ಥೋ ವಿಮಾನಂ ಸುಕೃತೀ ಯಥಾ ॥125॥
ಅರ್ಜುನನು ನಾನಾಪತಾಕೆಗಳಿಂದ ಶೋಭಿಸುತ್ತಿದ್ದ ಆ ಶ್ರೇಷ್ಠವಾದ ರಥಕ್ಕೆ ಪ್ರದಕ್ಷಿಣೆಯನ್ನು ಮಾಡಿ, ದೇವತೆಗಳಿಗೆ ನಮಸ್ಕರಿಸಿ ಯುದ್ಧಸಾಮಗ್ರಿಗಳಿಂದ ಸನ್ನದ್ಧನಾಗಿ ಕವಚವನ್ನೂ, ಕೈಬೆರಳುಗಳ ರಕ್ಷೆಗಳನ್ನೂ ಧರಿಸಿ, ಖಡ್ಗವನ್ನು ಹಿಡಿದು ಪುಣ್ಯವನ್ನು ಮಾಡಿದವನು ವಿಮಾನವನ್ನು ಹತ್ತುವಂತೆ ಆ ರಥವನ್ನು ಏರಿದನು.
ತಚ್ಚ ದಿವ್ಯಂ ಧನುಃಶ್ರೇಷ್ಠಂ ಬ್ರಹ್ಮಣಾ ನಿರ್ಮಿತಂ ಪುರಾ |
ಗಾಂಡೀವಮುಪಸಂಗೃಹ್ಯ ಬಭೂವ ಮುದಿತೋಽರ್ಜುನಃ ॥126॥
ಹಿಂದೆ ಬ್ರಹ್ಮದೇವರು ನಿರ್ಮಿಸಿದ ಶ್ರೇಷ್ಠವೂ, ದಿವ್ಯವೂ ಆದ ಗಾಂಡೀವ ಧನುಸ್ಸನ್ನು ಹಿಡಿದು ಅರ್ಜುನನು ಸಂತುಷ್ಟನಾದನು.
ಹುತಾಶನಂ ನಮಸ್ಕೃತ್ಯ ತತಸ್ತದತಿವೀರ್ಯವಾನ್ |
ಜಗ್ರಾಹ ಬಲಮಾಸ್ಥಾಯ ಜ್ಯಯಾ ಚ ಯುಯುಜೇ ಧನುಃ ॥127॥
ಅಗ್ನಿಯನ್ನು ನಮಸ್ಕರಿಸಿ ಅತಿಪರಾಕ್ರಮಶಾಲಿಯಾದ ಅರ್ಜುನನು ತನ್ನ ಬಲವನ್ನು ಉಪಯೋಗಿಸಿ ಧನುಸ್ಸನ್ನು ಹೆದೆಯಿಂದ ಕಟ್ಟಿದನು.
ಮೌರ್ವ್ಯಾಂ ತು ಯುಜ್ಯಮಾನಾಯಾಂ ಪಾಂಡವೇನ ಬಲೀಯಸಾ |
ಯೇಽಶೃಣ್ವನ್ ಕೂಜಿತಂ ತತ್ರ ತೇಷಾಂ ತು ವ್ಯಥತೇ ಮನಃ ॥128॥
ಬಲಿಷ್ಠನಾದ ಅರ್ಜುನನು ಧನುಸ್ಸನ್ನು ಬಗ್ಗಿಸಿ ಹೆದೆಯನ್ನು ಕಟ್ಟಿದಾಗ ಉಂಟಾದ ಶಬ್ದವನ್ನು ಕೇಳಿದ ಜನರು ಮನಸ್ಸಿನಲ್ಲಿಯೇ ವ್ಯಥೆಪಟ್ಟರು.
ಲಬ್ಧ್ವಾ ಧನೂ ರಥಂ ಚೈವ ತಥಾಽಕ್ಷಯ್ಯೇ ಮಹೇಷುಧೀ |
ಬಭೂವ ಕಲ್ಯಃ ಕೌಂತೇಯಃ ಪ್ರಹೃಷ್ಟಃ ಸಾಹ್ಯಕರ್ಮಣಿ ॥129॥
ಅರ್ಜುನನು ಶ್ರೇಷ್ಠವಾದ ಧನುಸ್ಸನ್ನೂ, ರಥವನ್ನೂ, ಅಕ್ಷಯಬತ್ತಳಿಕೆಗಳನ್ನೂ ಹೊಂದಿ ಸಂತುಷ್ಟನಾದನು. ಸಹಾಯಕರ್ಮವನ್ನು ಮಾಡಲು ಸಮರ್ಥನಾದನು.
ವಜ್ರನಾಭಂ ಪುನಶ್ಚಕ್ರಂ ದದೌ ಕೃಷ್ಣಾಯ ಪಾವಕಃ |
ಆಗ್ನೇಯಮಸ್ತ್ರಂ ದಯಿತಂ ಸ ಚ ಕಲ್ಯೋಽಭವತ್ ತದಾ ॥130॥
ಅಗ್ನಿಯು ವಜ್ರನಾಭಿಯುಳ್ಳ, ಆಗ್ನೇಯಾಸ್ತ್ರವನ್ನು ಹೋಲುವ, ವಿಷ್ಣುವಿನ ಪ್ರಿಯವಾದ ಚಕ್ರಾಯುಧವನ್ನು ಕೃಷ್ಣನಿಗೆ ಕೊಟ್ಟನು. ಕೃಷ್ಣನೂ ಕೂಡ ಶತ್ರುಗಳನ್ನು ನಿವಾರಿಸಲು ಆಗ ಸಮರ್ಥನಾದನು.
ಅಬ್ರವೀತ್ ಪಾವಕಶ್ಚೈತದೇತೇನ ಮಧುಸೂದನ |
ಅಮಾನುಷಾನಪಿ ರಣೇ ವಿಜೇಷ್ಯಸಿ ನ ಸಂಶಯಃ ॥131॥
ಆಗ ಅಗ್ನಿಯು ಕೃಷ್ಣನನ್ನು ಕುರಿತು ಮಧುಸೂದನನೇ, ನೀನು ಈ ಆಯುಧದಿಂದ ಅಮಾನುಷರನ್ನು ಸೋಲಿಸುತ್ತೀಯೆ ಎಂಬ ವಿಷಯದಲ್ಲಿ ಸಂಶಯವಿಲ್ಲ ಎಂದು ಹೇಳಿದನು.
ಅನೇನ ತ್ವಂ ಮನುಷ್ಯಾಣಾಂ ದೇವಾನಾಮಪಿ ಚಾಹವೇ |
ರಕ್ಷಃಪಿಶಾಚದೈತ್ಯಾನಾಂ ನಾಗಾನಾಂ ಚಾಧಿಕಸ್ತಥಾ |
ಭವಿಷ್ಯಸಿ ನ ಸಂದೇಹಃ ಪ್ರವೀರಾರೀನ್ ನಿಹನ್ ರಣೇ ॥132॥
ಈ ಆಯುಧವನ್ನು ಹಿಡಿದ ನೀನು ಯುದ್ಧದಲ್ಲಿ ಮನುಷ್ಯರಿಗಿಂತಲೂ, ದೇವತೆಗಳಿಗಿಂತಲೂ, ರಾಕ್ಷಸರಿಗಿಂತಲೂ, ಪಿಶಾಚಗಳಿಗಿಂತಲೂ, ದೈತ್ಯರಿಗಿಂತಲೂ, ಸರ್ಪಗಳಿಗಿಂತಲೂ ಅಧಿಕನಾಗುವಿ. ಮಹಾವೀರನೇ, ಯುದ್ಧದಲ್ಲಿ ಶತ್ರುಗಳನ್ನು ವಿನಾಶಪಡಿಸುವ ವಿಷಯದಲ್ಲಿ ಸಂಶಯವಿಲ್ಲ.
ತವೈತಚ್ಚಕ್ರಮಸ್ತ್ರಂ ಯತ್ ಸುದರ್ಶನಂ ನಾಮ ನಾಮತಃ |
ತಚ್ಚಾಸ್ಮಿನ್ನರ್ಪಯ ವಿಭೋ ದೈತ್ಯಘಾತೇ ಯಥಾ ಪುರಾ ॥133॥
ವಿಭುವೇ, ನಿನ್ನ ಚಕ್ರವೂ ಮತ್ತು ಆಯುಧವೂ ಆಗಿರುವ ಈ ಸುದರ್ಶನವನ್ನು ಮೊದಲಿನಂತೆ ದೈತ್ಯರನ್ನು ವಿನಾಶಮಾಡಲು ಪ್ರಯೋಗಿಸು.
ಕ್ಷಿಪ್ತಂ ಕ್ಷಿಪ್ತಂ ರಣೇ ಚೈತತ್ ತ್ವಯಾ ಮಾಧವ ಶತ್ರುಷು |
ಹತ್ವಾಽಪ್ರತಿಹತಂ ಸಂಖ್ಯೇ ಪಾಣಿಮೇಷ್ಯತಿ ತೇ ಪುನಃ ॥134॥
ಮಾಧವನೇ, ನೀನು ಈ ಆಯುಧವನ್ನು ಶತ್ರುಗಳ ಮೇಲೆ ಎಷ್ಟುಬಾರಿ ಪ್ರಯೋಗಿಸಿದರೂ ಅದು ಶತ್ರುಗಳನ್ನು ಕೊಂದು ತಾನು ಯುದ್ಧದಲ್ಲಿ ಯಾರಿಂದಲೂ ತಡೆಯಲ್ಪಡದೆ ಪುನಃ ಬಂದು ನಿನ್ನ ಕೈಯನ್ನೇ ಸೇರುವುದು.

ವರುಣಶ್ಚ ದದೌ ತಸ಼್್ಮೈ ಗದಾಮಶನಿನಿಸ್ವನಾಮ್ |
ದೈತ್ಯಾಂತಕರಣೀಂ ಘೋರಾಂ ಗದಾಂ ಕೌಮೋದಕೀಂ ಹರೇಃ ॥135॥
ವರುಣನು ವಜ್ರಾಯುಧದಂತಿರುವ ದೈತ್ಯವಿನಾಶಕವಾದ ಘೋರವಾದಹರಿಯ ಕೌಮೋದಕೀ ಗದೆಯನ್ನು ಕೃಷ್ಣನಿಗೆ ಕೊಟ್ಟನು.
ತತಃ ಪಾವಕಮಬ್ರೂತಾಂ ಪ್ರಹೃಷ್ಟಾವರ್ಜುನಾಚ್ಯುತೌ |
ಕೃತಾಸ್ತೌ ಶಸ್ತ್ರಸಂಪನ್ನೌ ರಥಿನೌ ಧ್ವಜಿನಾವಪಿ ॥136॥
ಕಲ್ಯೌ ಸ್ವೋ ಭಗವನ್ ಯೋದ್ಧುಮಪಿ ಸರ್ವೈಃ ಸುರಾಸುರೈಃ |
ಕಿಂ ಪುನರ್ವಜ್ರಿಣೈಕೇನ ಪನ್ನಗಾರ್ಥೇ ಯುಯುತ್ಸತಾ ॥137॥
ಆಗ ಸಂತೋಷಗೊಂಡ ಕೃಷ್ಣಾರ್ಜುನರು ಅಗ್ನಿಯನ್ನು ಕುರಿತು ಹೇಳಿದರು. ಪೂಜ್ಯನೇ, ಅಸ್ತ್ರವಿದ್ಯೆಯನ್ನು ಬಲ್ಲ ನಾವು ಶಸ್ತ್ರಸಂಪನ್ನರಾಗಿ ರಥಗಳಿಂದಲೂ, ಧ್ವಜಗಳಿಂದಲೂ ಯುಕ್ತರಾಗಿ ಎಲ್ಲಾ ದೇವಾಸುರರ ಜೊತೆಯಲ್ಲಿ ಯುದ್ಧಮಾಡಲು ಸಮರ್ಥರಾಗಿದ್ದೇವೆ. ಇನ್ನು ತಕ್ಷಕನ ಸಲುವಾಗಿ ಯುದ್ಧವನ್ನು ಮಾಡುವ ಒಬ್ಬ ಇಂದ್ರನ ಜೊತೆಯಲ್ಲಿ ಯುದ್ಧವನ್ನು ಮಾಡುವುದು ಯಾವ ದೊಡ್ಡ ವಿಷಯ.

ಅರ್ಜುನಃ
ಚಕ್ರಮಸ್ತ್ರಂ ಚ ವಾರ್ಷ್ಣೇಯೋ ವಿಸೃಜನ್ ಯುಧಿ ವೀರ್ಯವಾನ್ |
ತ್ರಿಷು ಲೋಕೇಷು ತನ್ನಾಸ್ತಿ ಯನ್ನ ಜೀಯಾಜ್ಜನಾರ್ದನಃ ॥138॥
ಯುದ್ಧದಲ್ಲಿ ಪರಾಕ್ರಮಶಾಲಿಯಾದ ವಿಷ್ಣುವು ತನ್ನ ಆಯುಧವಾದ ಸುದರ್ಶನವನ್ನು ಪ್ರಯೋಗಿಸಿದರೆ ಆ ಜನಾರ್ದನನು ಗೆಲ್ಲಲಾರದ ವಸ್ತುವು ಮೂರುಲೋಕಗಳಲ್ಲಿ ಯಾವುದೂ ಇಲ್ಲ.
ಗಾಂಡೀವಂ ಧನುರಾದಾಯ ತಥಾऽಕ್ಷಯ್ಯೇ ಮಹೇಷುಧೀ |
ಅಹಮಪ್ಯುತ್ಸಹೇ ಲೋಕಾನ್ ವಿಜೇತುಂ ಯುಧಿ ಪಾವಕ ॥139॥
ಅಗ್ನಿಯೇ, ನಾನೂ ಸಹ ಗಾಂಡೀವಧನುಸ್ಸನ್ನು ಹಿಡಿದು ಅಕ್ಷಯ ಬತ್ತಳಿಕೆಗಳನ್ನು ಧರಿಸಿ ಲೋಕಗಳನ್ನು ಯುದ್ಧದಲ್ಲಿ ಗೆಲ್ಲಲು ಪ್ರಯತ್ನಪಡುತ್ತೇನೆ.
ಸರ್ವತಃ ಪರಿವಾರ್ಯೈನಂ ನಾದೇನ ಮಹತಾ ಪ್ರಭೋ |
ಕಾಮಂ ಸಂಪ್ರಜ್ವಲಾದ್ಯೈವ ಕಲ್ಯೌ ಸ್ವಃ ಸಾಹ್ಯಕರ್ಮಣಿ ॥140॥
ಈ ಖಾಂಡವವನವನ್ನು ಎಲ್ಲಕಡೆಗಳಿಂದಲೂ ಸುತ್ತುವರಿದು ದೊಡ್ಡನಾದದಿಂದ ನಿನಗೆ ಇಷ್ಟಬಂದಂತೆ ಈ ದಿನವೇ ದಹಿಸು, ಪ್ರಭುವೇ ನಿನಗೆ ಸಹಾಯ ಮಾಡಲು ನಾವಿಬ್ಬರೂ ಸಮರ್ಥರಾಗಿದ್ದೇವೆ.
ಯದಿ ಖಾಂಡವಮೇಷ್ಯತಿ ಪ್ರಮಾದಾತ್
ಸಗಣೋ ವಾ ಪರಿರಕ್ಷಿತುಂ ಮಹೇಂದ್ರಃ |
ಶರತಾಡಿತಕಂಠಕುಂಡಲಾನಾಂ
ವ್ಯಸನಂ ದ್ರಕ್ಷ್ಯತಿ ದೇವವಾಹಿನೀನಾಮ್ ॥141॥
ಮಹೇಂದ್ರನು ಪ್ರಮಾದದಿಂದಲಾಗಲೀ ಅಥವಾ ರಕ್ಷಿಸುವ ಉದ್ದೇಶದಿಂದಾಗಲೀ ಈ ದಿನ ಖಾಂಡವಕ್ಕೆ ಬಂದರೆ ನನ್ನ ಬಾಣಗಳಿಂದ ಕತ್ತರಿಸಲ್ಪಟ್ಟ ಕಂಠಗಳನ್ನು ಮತ್ತು ಕುಂಡಲಗಳನ್ನೂ ಉಳ್ಳ ದೇವಸೈನ್ಯದ ದುಃಖವನ್ನು ಅವನು ನೋಡುವನು.

ವೈಶಂಪಾಯನಃ
ಏವಮುಕ್ತಃ ಸ ಭಗವಾನ್ ದಾಶಾರ್ಹೇಣಾರ್ಜುನೇನ ಹ |
ತೈಜಸಂ ರೂಪಮಾಸ್ಥಾಯ ದಗ್ಧುಂ ದಾವಂ ಪ್ರಚಕ್ರಮೇ ॥142॥
ಅರ್ಜುನನಿಂದಲೂ ಮತ್ತು ಕೃಷ್ಣನಿಂದಲೂ ಹೀಗೆ ಹೇಳಲ್ಪಟ್ಟ ಪೂಜ್ಯನಾದ ಅಗ್ನಿಯು ವಿಪ್ರರೂಪವನ್ನು ತ್ಯಜಿಸಿ ಜ್ವಾಲೆಯ ರೂಪವನ್ನು ಹೊಂದಿ ಖಾಂಡವವನ್ನು ದಹಿಸಲು ಪ್ರಾರಂಭಿಸಿದನು.
ಸರ್ವತಃ ಪರಿವಾರ್ಯೈನಂ ದಾವಂ ಸುವಿತತಂ ಪ್ರಭೋ |
ದದಾಹ ಖಾಂಡವಂ ಕ್ರುದ್ಧೋ ಯುಗಾಂತಮಿವ ದರ್ಶಯನ್ ॥143॥
ಪ್ರಭುವಾದ ಜನಮೇಜಯನೇ, ಅಗ್ನಿಯು ಖಾಂಡವವನವನ್ನು ಎಲ್ಲಾ ಕಡೆಗಳಿಂದಲೂ ಸುತ್ತುವರಿದು ಯುಗಾಂತವನ್ನು ತೋರಿಸುವವನೋ ಎಂಬಂತೆ ಕ್ರುದ್ಧನಾಗಿ ವಿಸ್ತಾರವಾದ ಆ ವನವನ್ನು ದಹಿಸಿದನು.
ಪರಿಗೃಹ್ಯ ಸಮಾವಿಷ್ಟಸ್ತದ್ವನಂ ಮನುಜರ್ಷಭ |
ಮೇಘಸ್ತನಿತನಿರ್ಘೋಷಃ ಸರ್ವಭೂತಾನಿ ನಿರ್ದಹನ್ ॥144॥
ಮನುಜಶ್ರೇಷ್ಠನೇ, ಆ ವನದಲ್ಲಿ ಕುಳಿತು ಅದನ್ನು ಸ್ವೀಕರಿಸಿ ಮೇಘಗರ್ಜನೆಯ ಘೋಷವನ್ನು ಉಂಟುಮಾಡಿ ಎಲ್ಲ ಪ್ರಾಣಿಗಳನ್ನೂ ದಹಿಸಿದನು.
ದಹ್ಯತಸ್ತಸ್ಯ ಚ ಬಭೌ ರೂಪಂ ದಾವಸ್ಯ ಭಾರತ |
ಮೇರೋರಿವ ಮಹೀಧ್ರಸ್ಯ ಕಾಂಚನಸ್ಯ ಮಹಾದ್ಯುತೇಃ ॥145॥
ಭಾರತನೇ, ಆ ವನವನ್ನು ದಹಿಸುವ ಅಗ್ನಿಯ ರೂಪವು ಮಹಾಪ್ರಕಾಶವುಳ್ಳ ಸುವರ್ಣಮಯವಾದ ಮೇರುಪರ್ವತದ ರೂಪವನ್ನು ಹೋಲುತ್ತಿದ್ದಿತು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ತ್ರಿಂಶತ್ಯಧಿಕದ್ವಿಶತತಮೋऽಧ್ಯಾಯಃ ॥
॥ ಇತಿ ಖಾಂಡವದಾಹಪರ್ವಣಿ ದ್ವಿತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ

ಇನ್ನೂರ ಮೂವತ್ತನೆಯ ಅಧ್ಯಾಯ ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ನರಾವೇಶಾದನ್ನದಾನಪ್ರತಿಶ್ರವಾತ್
ಸ್ವಸ್ಯಾಪಿ ಶಕ್ರಸ್ಯ ವಿರೋಧಮೈಚ್ಛತ್ |
ಪಾರ್ಥಃ ಕೃಷ್ಣಸ್ಯ ಪ್ರೇರಣಾಚ್ಚೈವ ವಹ್ನಿಃ
ಪಾರ್ಥಂ ಯಯಾಚೇ ಶಕ್ರವಿರೋಧಶಾಂತ್ಯೈ ॥222॥
ಅರ್ಜುನ ನರಾವೇಶದಿಂದಲೂ, ಅನ್ನದಾನ ಪ್ರತಿಜ್ಞೆ ಮಾಡಿದ್ದರಿಂದಲೂ, ಕೃಷ್ಣನ ಪ್ರೇರಣೆಯಿಂದಲೂ, ತನ್ನಿಂದ ಅಭಿನ್ನನೆ ಆದ ಇಂದ್ರನಲ್ಲಿ ಯುದ್ಧ ಮಾಡಲು ಬಯಸಿದ. ಅಗ್ನಿ ಇಂದ್ರನ ವಿರೋಧ ಪರಿಹಾರಕ್ಕೆ ಅರ್ಜುನನನ್ನೇ ಬೇಡಿದ್ದ.
ನ ಹಿ ಸ್ವದತ್ತಸ್ಯ ಪುನಃ ಸ ವೈರಂ
ಶಕ್ರಃ ಕುರ್ಯಾತ್ ಸ್ವಯಮಿಂದ್ರೋ ಹಿ ಪಾರ್ಥಃ |
ನಾಪ್ರೇರಿತೋ ವಿಷ್ಣುನಾ ತಸ್ಯ ರೋಧಂ
ಪಾರ್ಥಃ ಕುರ್ಯಾದಿತಿ ಕೃಷ್ಣಂ ಯಯಾಚೇ ॥223॥
ಇಂದ್ರ ತಾನು ಕೊಟ್ಟಿದ್ದಕ್ಕೆ ತಾನೇ ಪುನಃ ವಿರೋಧ ಮಾಡಲಾರ. ಏಕೆಂದರೆ ಅರ್ಜುನ ಸ್ವಯಂ ಇಂದ್ರನೆ. ಅರ್ಜುನ ಕೃಷ್ಣನ ಪ್ರೇರಣೆಯಿಲ್ಲದೆ ಇಂದ್ರನನ್ನು ವಿರೋಧಿಸಲಾರನೆಂದು ಅಗ್ನಿ ಕೃಷ್ಣನನ್ನೂ ಬೇಡಿದ್ದ.
ನ ಚಾಯುಕ್ತಃ ಕೇಶವೇನೈಷ ಶಕ್ತ
ಇತಿ ಕೃಷ್ಣಾದಾಪ ಭೂಯೋಽಪ್ಯನುಜ್ಞಾಂ |
ಯಯೌ ಸಮೀಪಂ ಚ ಹರೇರ್ಬದರ್ಯಾ-
ಮಾದಾಯ ಚಕ್ರಂ ಚಾಮುತಃ ಕೇಶವೇಽದಾತ್ ॥224॥
ಶ್ರೀಕೃಷ್ಣ ಜೊತೆಗೆ ಇಲ್ಲದಿದ್ದರೆ ಅರ್ಜುನ ಶಕ್ತನಾಗಲಾರ ಎಂದು ಅಗ್ನಿ ಪುನಃ ಕೃಷ್ಣನಿಂದಲೂ ಅನುಜ್ಞೆ ಪಡೆದ. ಬಳಿಕ ಬದರಿಯ ನಾರಾಯಣನ ಬಳಿಗೆ ಹೋದ. ಅವನಿಂದ ಚಕ್ರವನ್ನು ತೆಗೆದುಕೊಂಡು ಬಂದು ಕೃಷ್ಣನಿಗೆ ನೀಡಿದ.
ಚಕ್ರಂ ಗೋಮಂತೇ ಕೃಷ್ಣಮಾಪಾಪಿ ಪೂರ್ವಂ
ಭಕ್ತ್ಯಾವಹ್ನಿಃ ಕೇಶವೇಽದಾತ್ ಪುನಸ್ತತ್ |
ಚಕ್ರಂ ಚ ವಿಷ್ಣೋರ್ಬಹುಧಾ ವ್ಯವಸ್ಥಿತಂ
ತದಗ್ನಿದತ್ತಂ ಪ್ರಾಕ್ತನಂ ಚೈಕಧಾಸೀತ್ ॥225॥
ಈ ಹಿಂದೆಯೆ ಗೋಮಂತ ಪರ್ವತದಲ್ಲಿ ಕೃಷ್ಣನ ಕೈಗೆ ಸುದರ್ಶನ ಚಕ್ರ ಬಂದಿತ್ತು. ಅಗ್ನಿ ಈಗ ಭಕ್ತಿಯಿಂದ ಪುನಃ ಅದನ್ನೆ ಕೃಷ್ಣನಿಗೆ ನೀಡಿದ. ವಿಷ್ಣುವಿನ ಚಕ್ರ ಬಹುರೂಪವಾಗಿದೆ. ಅದರಿಂದ ಹಿಂದೆ ಬಂದಿದ್ದ ಚಕ್ರವೂ ಈಗ ಅಗ್ನಿದತ್ತವಾದ ಚಕ್ರವೂ ಸೇರಿ ಒಂದೇ ಆಯಿತು.
ಧನುಶ್ಚ ಗಾಂಡೀವಮಥಾಬ್ಜಜಸ್ಯ
ಕರೋತಿ ಯೇನಾಖಿಲಸಂಹೃತಿಂ ಸಃ |
ಅಂಶೇನ ದತ್ತಂ ತದುಮಾಪತೇಶ್ಚ
ಶಕ್ರಸ್ಯ ಸೋಮಸ್ಯ ಜಲೇಶಿತುಶ್ಚ ॥226॥
ಅಗ್ನಿ ಗಾಂಡೀವ ಧನುಸ್ಸನ್ನು ವರುಣನಿಂದ ತಂದು ಅರ್ಜುನನಿಗೆ ನೀಡಿದ. ಅದು ಬ್ರಹ್ಮನ ಧನುಸ್ಸು. ಆ ಧನುಸ್ಸಿನಿಂದ ಅವನು ಸರ್ವಲಯ ಮಾಡುತ್ತಾನೆ. ಅವನು ಅದನ್ನು ಒಂದು ಅಂಶದಿಂದ ಶಿವನಿಗೂ ಇಂದ್ರನಿಗೂ ಚಂದ್ರನಿಗೂ ವರುಣನಿಗೂ ಕೊಟ್ಟಿದ್ದ.
ತೇನೈವ ತೇ ಜಿಗ್ಯುರಥೋ ಜಗತ್ತ್ರಯಂ
ಪ್ರಸಾದತಸ್ತೇ ಕ್ರಮಶೋಽಬ್ಜಯೋನೇಃ |
ಅನನ್ಯಧಾರ್ಯಂ ವಿಜಯಾವಹಂ ಚ
ಭಾರೇಣ ಲಕ್ಷಸ್ಯ ಸಮಂ ಶುಭಾವಹಂ ॥227॥
ಆ ಗಾಂಡೀವ ಧನುಸ್ಸಿನಿಂದಲೆ ರುದ್ರಾದಿ ದೇವತೆಗಳು ಕ್ರಮವಾಗಿ ಬ್ರಹ್ಮನ ಅನುಗ್ರಹದಿಂದ ಮೂಲೋರ್ಕವನ್ನು ಗೆದ್ದರು. ಅದು ಬೇರೆಯವರಿಗೆ ಧರಿಸಲಾಗದುದು. ಲಕ್ಷಭಾರದಷ್ಟು ಭಾರ, ವಿಜಯಪ್ರದ ಮತ್ತು ಶುಭದಾಯಕ.
ರಥಂ ಚ ಶುಭ್ರಾಶ್ವಯುತಂ ಜಯಾವಹಂ
ತೂಣೌ ತಥಾ ಚಾಕ್ಷಯಸಾಯಕೌ ಶುಭೌ |
ಧ್ವಜಂ ಚ ರಾಮಸ್ಯ ಹನೂಮದಂಕ-
ಮಾದಾಯ ಸರ್ವಂ ವರುಣಾದರ್ಜುನೇಽದಾತ್ ॥228॥
ಬಿಳಿ ಕುದುರೆಗಳಿಂದ ಯುಕ್ತವಾಗಿದ್ದು ಶುಭದಾಯಕವಾದ ರಥವನ್ನೂ ಅಕ್ಷಯ ಬಾಣಗಳುಳ್ಳ ಶುಭದಾಯಕವಾದ ಎರಡು ಬತ್ತಳಿಕೆಗಳನ್ನೂ ಹನುಮಂತನ ಚಿಹ್ನೆಯುಳ್ಳ ಶ್ರೀರಾಮನ ಧ್ವಜವನ್ನೂ ಎಲ್ಲವನ್ನೂ ಅಗ್ನಿ ವರುಣನಿಂದ ತೆಗೆದುಕೊಂಡು ಬಂದು

ಅರ್ಜುನನಿಗೆ ನೀಡಿದ.
ವಿಶೇಷತೋ ಧ್ವಜಸಂಸ್ಥೋ ಹನೂಮ-
ತ್ಯಜೇಯತಾ ಸ್ಯಾಜ್ಜಯರೂಪೋ ಯತೋಽಸೌ ।
ಸರ್ವಂ ಚ ತದ್ ದಿವ್ಯಮಭೇದ್ಯಮೇವ
ವಿದ್ಯುತ್ಪ್ರಭಾ ಜ್ಯಾ ಚ ಗಾಂಡೀವಸಂಸ್ಥಾ ॥229॥
ಧ್ವಜದಲ್ಲಿ ಹನುಮಂತನಿದ್ದರೆ ರಥಿಕನಿಗೆ ವಿಶೇಷವಾಗಿ ಅಜೇಯತ್ವ ಬರುತ್ತದೆ. ಏಕೆಂದರೆ ಹನುಮಂತ ಜಯಸ್ವರೂಪ. ಗಾಂಡೀವ ಮುಂತಾದುವೆಲ್ಲವೂ ಲೋಕವಿಲಕ್ಷಣ ಮತ್ತು ಅಭೇದ್ಯ. ಗಾಂಡಿವನದಲ್ಲಿರುವ ಹೆದೆಯೂ ಮಿಂಚಿನಂತೆ ಹೊಳೆಯುವಂತಹುದು.
ಗಾಂಡೀವಮಪ್ಯಾಸ ಕೃಷ್ಣಪ್ರಸಾದಾತ್
ಶಕ್ಯಂ ಧರ್ತುಂ ಪಾಂಡವಸ್ಯಾಪ್ಯಧಾರ್ಯಂ ।
ದೇವೈಶ್ಚ ತೈರ್ಬ್ರಹ್ಮವರಾದ್ಧೃತಂ ತತ್
ಬ್ರಹ್ಮೈವಸಾಕ್ಷಾತ್ ಪ್ರಭುರಸ್ಯ ಧಾರಣೇ ॥230.।
ಗಾಂಡೀವ ಬ್ರಹ್ಮನಿಗೆ ಹೊರತು ಅನ್ಯರಿಗೆ ಧರಿಸಲಾಗದಿದ್ದರೂ ಶ್ರೀಕೃಷ್ಣನ ಅನುಗ್ರಹದಿಂದ ಅರ್ಜುನನಿಗೆ ಧರಿಸಲು ಶಕ್ಯವಾಯಿತು. ರುದ್ರಾದಿ ದೇವತೆಗಳೂ ಬ್ರಹ್ಮನ ವರದಿಂದ ಅದನ್ನು ಧರಿಸಿದ್ದರು. ಸ್ವಶಕ್ತಿಯಿಂದ ಬ್ರಹ್ಮನೊಬ್ಬನೆ ಅದನ್ನು ಧರಿಸಲು ಸಮರ್ಥ.
ಇಂದ್ರಸ್ಯ ದತ್ತಶ್ಚ ವರಃ ಸ್ವಯಂಭುವಾ
ತೇನಾಪಿ ಪಾರ್ಥಸ್ಯ ಬಭೂವ ಧಾರ್ಯಂ ।
ಇಂದ್ರೋ ಹ್ಯಸೌ ಫಲ್ಗುನತ್ವೇನ ಜಾತ-
ಸ್ತತಃ ಸೋಽಸ್ತ್ರೈಃ ಶರಶಾಲಾಂ ಚಕಾರ ॥231॥
ಇಂದ್ರನಿಗೆ ಬ್ರಹ್ಮ ವರನೀಡಿದ್ದ. ಅದರಿಂದಲೂ ಅರ್ಜುನನಿಗೆ ಗಾಂಡೀವವನ್ನು ಧರಿಸಲು ಶಕ್ಯವಾಯಿತು. ಏಕೆಂದರೆ ಇಂದ್ರನೇ ಅರ್ಜುನನಾಗಿ ಹುಟ್ಟಿದ್ದ. ಅದರಿಂದ ಅರ್ಜುನ ಅಸ್ತ್ರಗಳಿಂದ ಒಂದು ಭವನವನ್ನೇ ನಿರ್ಮಿಸಿದ.
* * * *

ಇನ್ನೂರ ಮೂವತ್ತೊಂದನೆಯ ಅಧ್ಯಾಯ
(ಕೃಷ್ಣಾರ್ಜುನರ ರಕ್ಷಣೆಯಲ್ಲಿ ಅಗ್ನಿಯಿಂದ ಖಾಂಡವ ದಹನ, ಸರ್ವಪ್ರಾಣಿಗಳ ವಿನಾಶ. ದೇವತಾಗಣದ ಜೊತೆಯಲ್ಲಿ ಬಂದು ಇಂದ್ರನ ಯುದ್ಧ ಮತ್ತು ಅರ್ಜುನನ ಪ್ರತೀಕಾರ.)
ವೈಶಂಪಾಯನಃ
ತೌ ರಥಾಭ್ಯಾಂ ಸುಯುಕ್ತಾಭ್ಯಾಂ ದಾವಸ್ಯೋಭಯತಃ ಸ್ಥಿತೌ ।
ದಿಕ್ಷು ಸರ್ವಾಸು ಭೂತಾನಾಂ ಚಕ್ರಾತೇ ಕದನಂ ತದಾ ॥1॥
ಕೃಷ್ಣಾರ್ಜುನರಿಬ್ಬರೂ ತಮ್ಮ ಸನ್ನದ್ಧವಾದ ರಥಗಳಲ್ಲಿ ಖಾಂಡವವನದ ಎರಡೂ ಕಡೆಗಳಲ್ಲಿ ನಿಂತು ಎಲ್ಲ ದಿಕ್ಕುಗಳಲ್ಲಿಯೂ ಆಗ ಯುದ್ಧವನ್ನು ಮಾಡಿದರು.
ಯತ್ರಯತ್ರ ಹಿ ದೃಶ್ಯಂತೇ ಪ್ರಾಣಿನಃ ಖಾಂಡವಾಲಯಾಃ ।
ಪಲಾಯಂತಸ್ತತ್ರತತ್ರ ತೌ ವೀರೌ ಪರ್ಯಧಾವತಾಮ್ ॥2॥
ಖಾಂಡವನಿವಾಸಿಗಳಾದ ಪ್ರಾಣಿಗಳು ತಪ್ಪಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾ ಎಲ್ಲೆಲ್ಲಿ ಕಾಣುತ್ತವೆಯೋ, ಅಲ್ಲಲ್ಲಿಗೆ ಆ ವೀರರು ಧಾವಿಸಿದರು.
ಛಿದ್ರಂ ನ ಸ್ಮ ಪ್ರಪಶ್ಯಂತಿ ರಥಯೋರಾಶುವಿಕ್ರಮಾಃ ।
ಆವಿದ್ಧಾವಿವ ದೃಶ್ಯೇತೇ ರಥಿನೌ ತೌ ರಥೋತ್ತಮೇ ॥3॥
ಮಹಾವಿಕ್ರಮಶಾಲಿಗಳಿಗೂ ಕೂಡ ಆ ರಥಗಳ ಮಧ್ಯೆ ವಿವರವು ಕಾಣಿಸುತ್ತಿರಲಿಲ್ಲ. ಆ ರಥೋತ್ತಮಗಳಲ್ಲಿ ಇದ್ದ ರಥಿಗಳಾದ ಅವರಿಬ್ಬರೂ ಪರಸ್ಪರವಾಗಿ ಸೇರಿಕೊಂಡಂತೆ ತೋರುತ್ತಿದ್ದರು.
ಖಾಂಡವೇ ದಹ್ಯಮಾನೇ ತು ಭೂತಾನ್ಯಥ ಸಹಸ್ರಶಃ ।
ಉತ್ಪೇತುರ್ಭೈರವಾನ್ ನಾದಾನ್ ವಿನದಂತೋ ದಿಶೋ ದಶ ॥4॥
ಖಾಂಡವವು ದಹಿಸಲ್ಪಡುತ್ತಿರಲು ಅಲ್ಲಿದ್ದ ಪ್ರಾಣಿಗಳು ಸಹಸ್ರಸಂಖ್ಯೆಯಲ್ಲಿ ಭೈರವನಾದವನ್ನು ಮಾಡುತ್ತಾ ಹತ್ತು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುವಂತೆ ಚೀರುತ್ತಾ ಮೇಲಕ್ಕೆ ನೆಗೆದವು.
ದಗ್ಧೈಕದೇಶಾ ಬಹವೋ ನಿಷ್ಪ್ರಾಶ್ಚ ವಿಚೇತಸಃ ।
ಸ್ಫುಟಿತಾಕ್ಷಾ ವಿಶೀರ್ಣಾಶ್ಚ ವಿಪ್ಲುತಾಕ್ಷಾ ವಿಚೇತಸಃ ॥5॥
ಅನೇಕ ಪ್ರಾಣಿಗಳ ದೇಹದ ಭಾಗಗಳು ಸುಟ್ಟುಹೋದವು. ಇನ್ನೂ ಇತರ ಪ್ರಾಣಿಗಳು ಅಗ್ನಿಯಿಂದ ಬೆಂದು ಪ್ರಜ್ಞಾಶೂನ್ಯವಾದವು. ಕೆಲವು ಪ್ರಾಣಿಗಳು ಕಣ್ಣುಗಳು ಸಿಡಿದು ಅಥವಾ ವಿಕಾರಹೊಂದಿ, ಅವಯವಗಳು ಬೇರೆಬೇರೆಯಾಗಿ ಪ್ರಜ್ಞೆಯನ್ನು ಕಳೆದುಕೊಂಡವು.
ಸಮಾಲಿಂಗ್ಯ ಸುತಾನನ್ಯೇ ಪಿತ್ರೂನ್ ಭ್ರಾತೄಂಸ್ತಥಾಽಪರೇ ।
ತ್ಯಕ್ತುಂ ನ ಶೇಕುಃ ಸ್ನೇಹೇನ ತತ್ರೈವ ನಿಧನಂ ಗತಾಃ ॥6॥
ಇನ್ನೂ ಕೆಲವು ಪ್ರಾಣಿಗಳು ಮಕ್ಕಳನ್ನು, ತಂದೆಗಳನ್ನೂ, ಇನ್ನೂ ಕೆಲವು ಸೋದರರನ್ನೂ ಆಲಿಂಗಿಸಿ ಸ್ನೇಹದಿಂದ ಒಬ್ಬರನ್ನೊಬ್ಬರು ಬಿಡಲು ಸಾಧ್ಯವಾಗದೆ, ಅಲ್ಲಿಯೇ ನಿಧನವನ್ನು ಹೊಂದಿದವು.
ವಿಕೃತೈರ್ದಶನೈರನ್ಯೇ ಖಮುತ್ಪೇತುಃ ಸಹಸ್ರಶಃ ।

ತತ್ರತತ್ರ ವಿಧೂನ್ವಂತಃ ಪುನರಗ್ನೌ ಪ್ರಪೇದಿರೇ ॥7॥
ವಿಕಾರವಾದ ಹಲ್ಲುಗಳನ್ನು ಹೊಂದಿ ಇನ್ನೂ ಕೆಲವು ಪ್ರಾಣಿಗಳು ಸಹಸ್ರಸಂಖ್ಯೆಯಲ್ಲಿ ಆಕಾಶಕ್ಕೆ ಹಾರಿದವು. ಅಲ್ಲಿಯೇ ಸ್ವಲ್ಪ ಒದ್ದಾಡಿ ಪುನಃ ಅಗ್ನಿಯೊಳಗೆ ಬಿದ್ದವು.
ದಗ್ಧಪಕ್ಷಾಕ್ಷಿಚರಣಾ ವಿವೇಷ್ಟಂತೋ ಮಹೀತಳೇ |
ತತ್ರತತ್ರ ಪ್ರದೃಶ್ಯಂತೇ ವಿನಶ್ಯಂತಃ ಶರೀರಿಣಃ ॥8॥
ತಮ್ಮ ಪಕ್ಷಗಳನ್ನೂ, ಕಣ್ಣುಗಳನ್ನೂ, ಪಾದಗಳನ್ನೂ ಸುಟ್ಟುಕೊಂಡು ಭೂಮಿಯ ಮೇಲೆ ಹೊರಳಾಡುತ್ತಾ ವಿನಾಶವನ್ನು ಹೊಂದುತ್ತಿರುವ ಪ್ರಾಣಿಗಳು ಅಲ್ಲಲ್ಲಿ ಕಂಡುಬಂದವು.
ಜಲಸ್ಥಾನೇಷು ತಪ್ತೇಷು ಕ್ವಾಥ್ಯಮಾನೇಷು ವಹ್ನಿನಾ |
ಗತಸತ್ವಾಃ ಸ್ಮ ದೃಶ್ಯಂತೇ ಕೂರ್ಮಮತ್ಸ್ಯಾಃ ಸಹಸ್ರಶಃ ॥9॥
ಜಲಾಶಯಗಳು ಬೆಂಕಿಯಿಂದ ಕಾದು ಕುದಿಯುತ್ತಿರಲು, ಅವುಗಳಲ್ಲಿದ್ದ ಮತ್ಸ್ಯಕೂರ್ಮಾದಿಗಳೂ ಸಹಸ್ರಸಂಖ್ಯೆಯಲ್ಲಿ ಪ್ರಾಣಗಳನ್ನು ಬಿಟ್ಟವು.
ಶರೀರೈಃ ಸಂಪ್ರದೀಪ್ತೈಶ್ಚ ದೇಹವಂತ ಇವಾಗ್ನಯಃ |
ಅದೃಶ್ಯಂತ ವನೇ ತತ್ರ ಪ್ರಾಣಿನಃ ಪ್ರಾಣಿಸಂಕ್ಷಯೇ ॥10॥
ಪ್ರಾಣಿಸಂಕ್ಷಯ ಉಂಟಾಗುವ ಆ ಕಾಲದಲ್ಲಿ ಪ್ರಾಣಿಗಳು ಹೊತ್ತಿ ಉರಿಯುತ್ತಿರುವ ತಮ್ಮ ದೇಹಗಳಿಂದ ಒಡಿ ದೇಹವುಳ್ಳ ಅಗ್ನಿಯಂತೆ ತೋರುತ್ತಿದ್ದವು.
ತಾಂಸ್ತಥೋತ್ಪತತಃ ಪಾರ್ಥಃ ಶರೈಃ ಸಂಛಿದ್ಯ ಖಂಡಶಃ |
ದೀಪ್ಯಮಾನೇ ತತಃ ಪ್ರಾಸ್ಯತ್ ಸಹಸ್ರಂ ಕೃಷ್ಣವರ್ತ್ಮನಿ ॥11॥
ಹಾಗೆ ಮೇಲೆ ಹಾರುವ ಪ್ರಾಣಿಗಳನ್ನು ಅರ್ಜುನನು ತನ್ನ ಬಾಣಗಳಿಂದ ಚೂರುಚೂರಾಗಿ ಕತ್ತರಿಸಿ ಉರಿಯುತ್ತಿರುವ ಅಗ್ನಿಯಲ್ಲಿ ಸಹಸ್ರಸಂಖ್ಯೆಯಲ್ಲಿ ಹಾಕುತ್ತಿದ್ದನು.
ತೇ ಶರಾಚಿತಸರ್ವಾಂಗಾ ನಿನದಂತೋ ಮಹಾರವಾನ್ |
ಊರ್ಧ್ವಮುತ್ಪತ್ಯ ವೇಗೇನ ನಿಪೇತುಃ ಪಾವಕೇ ಪುನಃ ॥12॥
ಮೈಯಲ್ಲೆಲ್ಲಾ ಬಾಣಗಳು ನೆಟ್ಟು, ಭೈರವನಾದಗಳನ್ನು ಮಾಡುತ್ತಾ, ಮೇಲ್ಮುಖವಾಗಿ ನೆಗೆದು ಪುನಃ ವೇಗದಿಂದ ಕೆಳಮುಖವಾಗಿ ಅಗ್ನಿಯಲ್ಲಿ ಬೀಳುತ್ತಿದ್ದವು.
ಶರೈರಭ್ಯಾಹತಾನಾಂ ಚ ದಹ್ಯತಾಂ ಚ ವನೌಕಸಾಮ್ |
ವಿರಾವಃ ಶ್ರೂಯತೇ ಹ್ಯಸ್ಮಿನ್ ಸಮುದ್ರಸ್ಯೇವ ಮಥ್ಯತಃ ॥13॥
ಬಾಣಗಳಿಂದ ಹೊಡೆಯಲ್ಪಟ್ಟು, ಅಗ್ನಿಯಿಂದ ದಹಿಸಲ್ಪಡುವ ಆ ಪ್ರಾಣಿಗಳ ಆರ್ತನಾದವು ಮಥಿಸಲ್ಪಡುವ ಸಮುದ್ರದ ಘೋಷದಂತೆ ಕೇಳಿಬರುತ್ತಿತ್ತು.
ವಹ್ನೇಶ್ಚಾಪಿ ಪ್ರವೃದ್ಧಸ್ಯ ಸಮುತ್ಪೇತುರ್ಮಹಾರ್ಚಿಷಃ |
ಜನಯಾಮಾಸುರುದ್ವೇಗಂ ಸುಮಹಾಂತಂ ದಿವೌಕಸಾಮ್ ॥14॥
ಚೆನ್ನಾಗಿ ಅಭಿವೃದ್ಧಿಯನ್ನು ಹೊಂದಿದ ಅಗ್ನಿಯ ದೊಡ್ಡದೊಡ್ಡ ಜ್ವಾಲೆಗಳು ಸ್ವರ್ಗವಾಸಿಗಳಾದ ದೇವತೆಗಳಿಗೆ ದೊಡ್ಡಭಯವನ್ನುಂಟು ಮಾಡಿದವು.
ತತೋ ಜಗ್ಮುರ್ಮಹಾತ್ಮಾನಃ ಸರ್ವ ಏವ ದಿವೌಕಸಃ |
ಶರಣಂ ದೇವರಾಜಂ ತಂ ಸಹಸ್ರಾಕ್ಷಂ ಪುರಂದರಮ್ ॥15॥
ಆಗ ಮಹಾನುಭಾವರಾದ ದೇವತೆಗಳೆಲ್ಲರೂ ದೇವರಾಜನಾದ, ಸಹಸ್ರಾಕ್ಷನಾದ ಪುರಂದರನನ್ನು ಶರಣುಹೊಂದಿದರು.
ದೇವಾಃ
ಕಿಮಿದಂ ಮಾನವಾಃ ಸರ್ವೇ ದಹ್ಯಂತೇ ಕೃಷ್ಣವರ್ತ್ಮನಾ |
ಕಚ್ಚಿನ್ನ ಸಂಕ್ಷಯಃ ಪ್ರಾಪ್ತೋ ಲೋಕಾನಾಮಮರೇಶ್ವರ ॥16॥
ಇದೇನು ಎಲ್ಲ ಮಾನವರೂ ಅಗ್ನಿಯಿಂದ ದಹಿಸಲ್ಪಡುತ್ತಿದ್ದಾರೆ? ದೇವರಾಜನೇ, ಲೋಕದ ವಿನಾಶವೇನೂ ಪ್ರಾಪ್ತವಾಗಿಲ್ಲವಷ್ಟೇ.
ವೈಶಂಪಾಯನಃ
ತಚ್ಛ್ರುತ್ವಾ ವೃತ್ರಹಾ ತೇಭ್ಯಃ ಸ್ವಯಮೇವಾನ್ವವೇಕ್ಷ್ಯ ಚ |
ಖಾಂಡವಸ್ಯ ವಿಮೋಕ್ಷಾರ್ಥಂ ಪ್ರಯಯೌ ಹರಿವಾಹನಃ ॥17॥
ಅದನ್ನು ಕೇಳಿದ ವೃತ್ರಹಂತೃವಾದ ಇಂದ್ರನು ತಾನೇ ಸ್ವತಃ ನೋಡಿ ಖಾಂಡವವನ್ನು ವಿಮೋಚನೆಗೊಳಿಸಲು ಹರ್ಯಶ್ವಗಳಿಂದ ಯುಕ್ತವಾದ ರಥದಲ್ಲಿ ಹೊರಟನು.
ಮಹತಾ ಮೇಘಜಾಲೇನ ನಾನಾರೂಪೇಣ ವಜ್ರಭೃತ್ |
ಆಕಾಶಂ ತಮಸಾಽಽಸ್ತೀರ್ಯ ಪ್ರಯಯಾವಮರೇಶ್ವರಃ ॥18॥
ವಜ್ರಧರನಾದ, ದೇವರಾಜನಾದ, ಇಂದ್ರನು ನಾನಾರೂಪಗಳನ್ನು ಹೊಂದಿದ ಮೇಘಗಳ ದೊಡ್ಡಸಮೂಹದಿಂದ ಆಕಾಶವನ್ನು ಮುಚ್ಚಿ ಕತ್ತಲೆಯನ್ನು ಉಂಟುಮಾಡಿ ಮುಂದೆ ನಡೆದನು.
ತತ್ರಾಕ್ಷಮಾತ್ರಾ ವಿಸೃಜನ್ ಧಾರಾಃ ಶತಸಹಸ್ರಶಃ |
ಅಭ್ಯವರ್ಷತ್ ಸಹಸ್ರಾಕ್ಷಃ ಪಾವಕಂ ಖಾಂಡವಂ ಪ್ರತಿ ॥19॥
ಅವನು ಒನಕೆಯ ಪ್ರಮಾಣದ ಮಳೆಯಧಾರಗಳನ್ನು, ನೂರಾರು ಸಾವಿರ ಸಂಖ್ಯೆಯಲ್ಲಿ ಸೃಷ್ಟಿಸುತ್ತಾ, ಖಾಂಡವವನ್ನು ದಹಿಸುವ

ಅಗ್ನಿಯ ಮೇಲೆ ಸುರಿಸಿದನು.
ಅಸಂಪ್ರಾಪ್ತಾಸ್ತು ತಾ ಧಾರಾಸ್ತೇಜಸಾ ಜಾತವೇದಸಃ |
ಖ ಏವ ಸಮಶುಷ್ಯಂತ ನ ಕಾಶ್ಚಿತ್ ಪಾವಕಂ ಗತಾಃ ॥20॥
ಆ ಮಳೆಯಧಾರಗಳು ಅಗ್ನಿಯ ಶಾಖದಿಂದ ಆಕಾಶದಲ್ಲೇ ಒಣಗಿಹೋದವು. ಯಾವ ಧಾರೆಯೂ ಅಗ್ನಿಯವರೆಗೆ ಬರಲಿಲ್ಲ.
ತತೋ ನಮುಚಿಹಾ ಕ್ರುದ್ಧೋ ಭೃಶಮರ್ಚಿಷ್ಮತಸ್ತದಾ |
ಪುನರೇವಾತಿವರ್ಷೇಣ ವವರ್ಷ ಬಲವೃತ್ರಹಾ ॥21॥
ಅನಂತರ ನಮುಚಿಸಂಹಾರಿಯೂ, ಬಲವೃತ್ರಸಂಹಾರಿಯೂ ಆದ ಇಂದ್ರನು ಅಗ್ನಿಯ ಮೇಲೆ ಕೋಪಗೊಂಡು ಪುನಃ ದೊಡ್ಡಮಳೆಯನ್ನು ಸುರಿಸಿದನು.
ಅರ್ಚಿರ್ಜ್ವಾಲಾಭಿಸಂಬದ್ಧಂ ಸ್ತನಯಿತ್ನುಸುಘೋಷವತ್ |
ಬಭೂವ ತದ್ವನಂ ಘೋರಂ ಧೂಮವಿದ್ಯುತ್ಸಮಾಕುಲಮ್ ॥22॥
ಅಗ್ನಿಯ ಜ್ವಾಲೆಗಳಿಂದಲೂ, ಮೇಘದ ಗರ್ಜನೆಯಿಂದಲೂ ಕೂಡಿದ ಆ ಘೋರವಾದ ವನವು ಹೊಗೆ ಮತ್ತು ಮಿಂಚುಗಳಿಂದ ತುಂಬಿಹೋಯಿತು.
ತಸ್ಯಾಭಿವರ್ಷತೋ ವಾರಿ ಖಾಂಡವಂ ಪ್ರತ್ಯವಾರಯತ್ |
ಶರವರ್ಷೇಣ ಬೀಭತ್ಸುರುತ್ತಮಾಸ್ತ್ರಾಣಿ ದರ್ಶಯನ್ ॥23॥
ಇಂದ್ರನು ಖಾಂಡವವನದ ಮೇಲೆ ಹಾಗೆ ಮಳೆಯನ್ನು ಸುರಿಸುತ್ತಿರಲು ಅರ್ಜುನನು ತನ್ನ ಉತ್ತಮಾಸ್ತ್ರಗಳನ್ನು ತೋರಿಸುತ್ತಾ, ತನ್ನ ಬಾಣಗಳ ಪ್ರಯೋಗದಿಂದ ಆ ಮಳೆಯ ಹನಿಗಳು ಖಾಂಡವವನಕ್ಕೆ ಬರದಂತೆ ತಡೆದನು.
ಶರೈಃ ಸಮಂತತಃ ಸರ್ವಂ ಖಾಂಡವಂ ಚಾಪಿ ಪಾಂಡವಃ |
ಛಾದಯಾಮಾಸ ತದ್ವರ್ಷಮಪಕೃತ್ಯ ತತೋ ವನಾತ್ ॥24॥
ಅರ್ಜುನನು ಖಾಂಡವವನವನ್ನು ಬಾಣಗಳಿಂದ ಸಂಪೂರ್ಣವಾಗಿ ಆಚ್ಛಾದಿಸಿ, ಆ ಮಳೆಯನ್ನು ತಡೆದು ಆ ಮಳೆಯು ಖಾಂಡವವನಕ್ಕೆ ಬರದಂತೆ ತಡೆದನು.
ನ ಚ ಸ್ಮ ಕಿಂಚಿಚ್ಛಕ್ನೋತಿ ಭೂತಂ ನಿಶ್ಚರಿತುಂ ತತಃ |
ಸಂಸ್ತೀರ್ಯಮಾಣೈಃ ಖಗಮೈರಸ್ಯತಾ ಸವ್ಯಸಾಚಿನಾ ॥25॥
ಅರ್ಜುನನು ಆಕಾಶದಲ್ಲಿ ಹರಡುತ್ತಿದ್ದ ಬಾಣಗಳ ನಿಮಿತ್ತದಿಂದಾಗಿ ಯಾವ ಪ್ರಾಣಿಯೂ ಅಲ್ಲಿಂದ ಚಲಿಸಲು ಸಾಧ್ಯವಾಗಲಿಲ್ಲ.
ತಕ್ಷಕಸ್ತು ನ ತತ್ರಾಸೀನ್ನಾಗರಾಜೋ ಮಹಾಬಲಃ |
ದಹ್ಯಮಾನೇ ತು ತಸ್ಮಿಂಸ್ತು ಕುರುಕ್ಷೇತ್ರೇಽಭವತ್ ತದಾ ॥26॥
ಖಾಂಡವವನವು ದಹಿಸಲ್ಪಡುತ್ತಿರುವಾಗ ಮಹಾಬಲನಾದ ನಾಗರಾಜನಾದ ತಕ್ಷಕನು ಅಲ್ಲಿ ಇರಲಿಲ್ಲ. ಅವನು ಆಗ ಕುರುಕ್ಷೇತ್ರಕ್ಕೆ ಹೋಗಿದ್ದನು.
ಅಶ್ವಸೇನಸ್ತು ತತ್ರಾಸೀತ್ ತಕ್ಷಕಸ್ಯ ಸುತೋ ಬಲೀ |
ಸ ಯತ್ನಮಕರೋತ್ ತೀವ್ರಂ ಮೋಕ್ಷಾರ್ಥಂ ಹವ್ಯವಾಹನಾತ್ ॥27॥
ತಕ್ಷಕನ ಮಗನಾದ ಬಲಿಷ್ಠನಾದ ಅಶ್ವಸೇನನು ಅಲ್ಲಿಯೇ ಇದ್ದನು. ಅವನು ಅಗ್ನಿಯಿಂದ ಪಾರಾಗಲು ಬಹಳ ಪ್ರಯತ್ನವನ್ನು ಮಾಡಿದನು.
ನ ಶಶಾಕ ಸ ನಿರ್ಗಂತುಂ ಕೌಂತೇಯಶರಪೀಡಿತಃ |
ಮೋಕ್ಷಯಾಮಾಸ ತಂ ಮಾತಾ ನಿಗೀರ್ಯ ಭುಜಗಾತ್ಮಜಾ ॥28॥
ಅರ್ಜುನನ ಬಾಣಗಳಿಂದ ಪೀಡಿತನಾದ ಅವನು ಅಲ್ಲಿಂದ ಹೊರಗೆಹೋಗಲು ಸಾಧ್ಯವಾಗಲಿಲ್ಲ. ಅವನ ತಾಯಿಯಾದ ಭುಜಗಕನ್ಯೆಯು ಅವನನ್ನು ನುಂಗಿ ಅಗ್ನಿಯಿಂದ ಪಾರುಮಾಡಿದಳು.
ತಸ್ಯ ಪೂರ್ವಂ ಶಿರೋ ಗ್ರಸ್ತಂ ಪುಚ್ಛಮಸ್ಯ ನಿಗೀರ್ಯತೇ |
ಊರ್ಧ್ವಮುತ್ಚಕ್ರಮೀತ್ ಸಾ ತು ಪನ್ನಗೀ ಪುತ್ರಗೃದ್ಧಿನೀ ॥29॥
ಅವಳು ಅವನನ್ನು ತಲೆಯ ಭಾಗದಿಂದ ನುಂಗಲು ಪ್ರಾರಂಭಿಸಿ ಪುಚ್ಛವನ್ನು ನುಂಗುತ್ತಾ ಮಗನನ್ನು ಉಳಿಸುವ ಆಸೆಯಿಂದ ಅಂತರಿಕ್ಷಕ್ಕೆ ನೆಗೆದಳು.
ತಸ್ಯಾಸ್ತೀಕ್ಷ್ಣೇನ ಭಲ್ಲೇನ ಪೃಥುಧಾರೇಣ ಪಾಂಡವಃ |
ಶಿರಶ್ಚಿಚ್ಛೇದ ಗಚ್ಛಂತ್ಯಾಸ್ತಾಮಪಶ್ಯತ್ ಸುರೇಶ್ವರಃ ॥30॥
ಅರ್ಜುನನು ಹರಿತವಾದ ಅಂಚುಳ್ಳ ಭಲ್ಲದಿಂದ ಅವಳ ತಲೆಯನ್ನು ಕತ್ತರಿಸಿದನು. ಅವಳು ಮೇಲಕ್ಕೆ ಹಾರಿದುದನ್ನು ಸುರೇಶ್ವರನಾದ ಇಂದ್ರನು ನೋಡಿದನು.
ತಂ ಮುಮೋಚಯಿಷುರ್ವಜ್ರೀ ವಾತವರ್ಷೇಣ ಪಾಂಡವಮ್ |
ಮೋಹಯಾಮಾಸ ತತ್ಕಾಲೇ ಹ್ಯಶ್ವಸೇನಸ್ತ್ವಮುಚ್ಯತ ॥31॥
ವಜ್ರಧರನಾದ ಇಂದ್ರನು ಅಶ್ವಸೇನನ ಮಾತೆಯನ್ನು ಪಾರುಮಾಡುವ ಉದ್ದೇಶದಿಂದ ವಾತವರ್ಷಗಳಿಂದ ಅರ್ಜುನನಿಗೆ ಮೋಹವುಂಟಾಗುವಂತೆ ಮಾಡಿದನು. ಈ ಮಧ್ಯದಲ್ಲಿ ಅಶ್ವಸೇನನು ಅಗ್ನಿಯಿಂದ ತಪ್ಪಿಸಿಕೊಂಡನು.
ತಾಂ ಚ ಮಾಯಾಂ ತದಾ ದೃಷ್ಟ್ವಾ ಘೋರಾಂ ನಾಗೇನ ವಂಚಿತಃ |
ದ್ವಿಧಾ ತ್ರಿಧಾ ಚ ಚಿಚ್ಛೇದ ಖಗತಾನ್ ಭರತರ್ಷಭ ॥32॥
ಭರತಶ್ರೇಷ್ಠನೇ, ಅರ್ಜುನನು ಘೋರವಾದ ಆ ವಂಚನೆಯನ್ನು ನೋಡಿ, ಅಶ್ವಸೇನನಿಂದ ವಂಚಿತನಾಗಿ ಆಕಾಶದಲ್ಲಿದ್ದ

ಪ್ರಾಣಿಗಳನ್ನು ಎರಡುಮೂರು ಭಾಗಗಳಾಗಿ ಕತ್ತರಿಸಿದನು.
ಶಶಾಪ ತು ತತಃ ಕ್ರುದ್ಧೋ ಬೀಭತ್ಸುಂ ಜಿಹ್ಮಗಾಮಿನೀ |
ಪಾವಕೋ ವಾಸುದೇವಶ್ಚಾಪ್ಯಪ್ರತಿಷ್ಠೋ ಭವತ್ವಿಹ॥33॥
ಕುಟಿಲಗತಿಯುಳ್ಳ ಸರ್ಪವು ಶೋಕದಿಂದ ಅರ್ಜುನನನ್ನು ಕುರಿತು ಅಗ್ನಿಯೂ, ವಾಸುದೇವನೂ ಮತ್ತು ನೀನೂ ಸಹ ಈ ಲೋಕದಲ್ಲಿ ಸ್ಥಿತಿಯನ್ನು ಹೊಂದುವುದು ಬೇಡ ಎಂದು ಶಾಪವನ್ನು ಕೊಟ್ಟಿತು.
(ತಾತ್ಪರ್ಯನಿರ್ಣಯದ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ ಅರ್ಜುನನೇ ಸರ್ಪಕ್ಕೆ ಶಾಪಕೊಟ್ಟಂತಿದೆ. ಇಲ್ಲಿ ಲಕ್ಷ್ಯಾಲಂಕಾರವು ಪ್ರಕ್ಷಿಪ್ತದಂತಿದೆ).
ತತೋ ಜಿಷ್ಣುಃ ಸಹಸ್ರಾಕ್ಷಂ ಖೇ ವಿತತ್ಯಾಶುಗೈಃ ಶರೈಃ |
ಯೋಧಯಾಮಾಸ ಸಂಕ್ರುದ್ಧೋ ವಂಚನಾಂ ತಾಮನುಸ್ಮರನ್ ॥34॥
ಆಗ ಅರ್ಜುನನು, ಇಂದ್ರನು ಮಾಡಿದ ಆ ವಂಚನೆಯನ್ನು ಸ್ಮರಿಸಿ, ಅವನ ಜೊತೆಯಲ್ಲಿ ಶುಕ್ರವಾದ ಬಾಣಗಳ ಮಳೆಯನ್ನು ಕರೆದು ಕ್ರೋಧದಿಂದ ಯುದ್ಧಮಾಡಿದನು.
ದೇವರಾಜೋಽಪಿ ತಂ ದೃಷ್ಟ್ವಾ ಸಂರಬ್ಧಮತಿಫಲ್ಗುನಮ್ |
ದಿವ್ಯಾಸ್ತ್ರಂ ವ್ಯಸೃಜದ್ ಯತ್ ತತಾನಾಖಿಲಾ ದಿಶಃ ॥35॥
ದೇವರಾಜನಾದ ಇಂದ್ರನೂ ಕೂಡ, ಕ್ರುದ್ಧನಾದ ಅರ್ಜುನನನ್ನು ನೋಡಿ ಅರ್ಜುನನನ್ನು ಮೀರಿಸುವ ಉದ್ದೇಶದಿಂದ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಎಲ್ಲ ದಿಕ್ಕುಗಳನ್ನೂ ಬಾಣಗಳಿಂದ ತುಂಬಿದನು.
ತತೋ ವಾಯುರ್ಮಹಾಘೋರಃ ಕ್ಷೋಭಯಾಮಾಸ ಸಾಗರಾನ್ |
ವಿಯತ್ಸ್ಥೋ ಜನಯನ್ ಮೇಘಾನ್ ಜಲಧಾರಮುಚೋಽತುಲಾನ್ ॥36॥
ಆಗ ಮಹಾಘೋರವಾದ ವಾಯುವು ಬೀಸಿ ಸಾಗರವನ್ನು ಅಲ್ಲೋಲಕಲ್ಲೋಲ ಮಾಡಿ, ಆಕಾಶದಲ್ಲಿ ಮೇಘಗಳನ್ನು ಉಂಟುಮಾಡಿ ಅಸದೃಶವಾದ ಆ ಮೇಘಗಳು ಮಳೆಯನ್ನು ಸುರಿಸುವಂತೆ ಮಾಡಿದನು.
ತದ್ವಿಘಾತಾರ್ಥಮಸೃಜದರ್ಜುನೋಽಪ್ಯಸ್ತ್ರಮದ್ಭುತಮ್ |
ವಾಯವ್ಯಮೇವಾಭಿಮಂತ್ರ್ಯ ಅಸ್ತ್ರಂ ಪ್ರತಿ ವಿಶಾರದಃ ॥37॥
ಅಸ್ತ್ರವಿಶಾರದನಾದ ಅರ್ಜುನನು ಆ ಅಸ್ತ್ರಕ್ಕೆ ಪ್ರತೀಕಾರವನ್ನು ಮಾಡಲು ತಾನೂ ಪುನಃ ವಾಯವ್ಯಾಸ್ತ್ರವನ್ನೇ ಅಭಿಮಂತ್ರಿಸಿ ಪ್ರಯೋಗಿಸಿದನು.
ತೇನೇಂದ್ರಾಶನಿಮೇಘಾನಾಂ ವೀರ್ಯೌಜಸ್ತದ್ ವಿನಾಶಿತಮ್ |
ಜಲಧಾರಾಶ್ಚ ತಾಃ ಶೋಷಂ ಜಗ್ಮುರ್ನೇಶುಶ್ಚ ವಿದ್ಯುತಃ ॥38॥
ಆಗ ಅರ್ಜುನನು ಪ್ರಯೋಗಮಾಡಿದ ವಾಯವ್ಯಾಸ್ತ್ರದಿಂದ ಇಂದ್ರನು ಸೃಷ್ಟಿಮಾಡಿದ ಮೇಘಗಳ ಮತ್ತು ಸಿಡಿಲುಗಳ ಆರ್ಭಟವು ವಿನಾಶವನ್ನು ಹೊಂದಿತು. ಜಲಧಾರೆಗಳೆಲ್ಲಾ ಒಣಗಿಹೋದವು. ಮಿಂಚುಗಳು ಮಾಯವಾದವು.
ಕ್ಷಣೇನ ಚಾಭವದ್ ವ್ಯೋಮ ಸಂಪ್ರಶಾಂತರಜಸ್ತಮಃ |
ಸುಖಶೀತಾನಿಲವಹಂ ಪ್ರಕೃತಿಸ್ಥಾರ್ಕಮಂಡಲಮ್ ॥39॥
ಒಂದು ಕ್ಷಣದಲ್ಲಿ ಆಕಾಶವು ಧೂಳಿನಿಂದಲೂ, ಕತ್ತಲಿನಿಂದಲೂ ಮುಕ್ತವಾಗಿ, ಪ್ರಶಾಂತವಾಯಿತು. ಸುಖಶೀತ ಅನಿಲವು ಬೀಸಿತು. ಸೂರ್ಯಮಂಡಲವು ಮೊದಲಿನಂತೆಯೇ ಬೆಳಗಿತು.
ನಿಷ್ಪ್ರತೀಕಾರಹೃಷ್ಟಶ್ಚ ಹುತಭುಗ್ವಿವಿಧಾಕೃತಿಃ |
ಪ್ರಜಜ್ವಾಲಾಥ ಸೋಽರ್ಚಿಷ್ಮಾನ್ ಸ್ವನಾದೈಃ ಪೂರಯನ್ ದಿಶಃ ॥40॥
ಪ್ರತೀಕಾರವನ್ನು ಮಾಡುವವರು ಯಾರೂ ಇಲ್ಲದಿದುರಿಂದ ಸಂತೋಷಗೊಂಡ ಅಗ್ನಿಯು ವಿವಿಧಾಕೃತಿಗಳನ್ನು ತಾಳಿ, ಮಹಾಜ್ವಾಲೆಗಳನ್ನು ಹೊಂದಿ ತನ್ನ ನಾದಗಳಿಂದ ದಿಕ್ಕುಗಳನ್ನು ತುಂಬುತ್ತಾ ಪ್ರಜ್ವಲಿಸಿದನು.
ಕೃಷ್ಣಾಭ್ಯಾಂ ರಕ್ಷಿತಂ ದೃಷ್ಟ್ವಾ ತಂ ಚ ದಾವಮಹಂಕೃತಾಃ |
ಸಮುತ್ಪೇತುರಥಾಕಾಶಂ ಸುಪರ್ಣಾದ್ಯಾಃ ಪತತ್ರಿಣಃ ॥41॥
ಖಾಂಡವವನವು ಕೃಷ್ಣಾರ್ಜುನರಿಂದ ರಕ್ಷಿಸಲ್ಪಟ್ಟಿದ್ದನ್ನು ನೋಡಿದ ಸುಪರ್ಣಾದಿಪಕ್ಷಿಗಳು ಅಹಂಕಾರದಿಂದ ಆಕಾಶಮಾರ್ಗದಿಂದ ಬಂದವು.
ಗರುಡಾ ವಜ್ರಸದೃಶೈಃ ಪಕ್ಷತುಂಡನಖೈಸ್ತಥಾ |
ಪ್ರಹರ್ತುಕಾಮಾಃ ಸಂಪೇತುರಾಕಾಶಂ ಕೃಷ್ಣಪಾಂಡವೌ ॥42॥
ಗರುಡಗಳು ವಜ್ರಸದೃಶವಾದ ತಮ್ಮ ಕೊಕ್ಕುಗಳೂ, ಉಗುರುಗಳೂ ಮತ್ತು ರೆಕ್ಕೆಗಳಿಂದ ಕೃಷ್ಣ ಮತ್ತು ಪಾಂಡವರನ್ನು ಹಿಂಸಿಸುವ ಉದ್ದೇಶದಿಂದ ಆಕಾಶದಲ್ಲಿ ಬಂದವು.
ತಥೈವೋರಗಸಂಘಾಶ್ಚ ಪಾಂಡವಸ್ಯ ಸಮೀಪತಃ |
ಉತ್ಸೃಜಂತೋ ವಿಷಂ ಘೋರಂ ವಿಚೇರುರ್ಜ್ವಲಿತಾನನಾಃ ॥43॥
ಹಾಗೆಯೇ, ಉರಗಸಮೂಹಗಳು ಘೋರವಾದ ವಿಷವನ್ನು ಉಗುಳುತ್ತಾ ದೀಪ್ತವಾದ ಮುಖವುಳ್ಳವುಗಳಾಗಿ ಅರ್ಜುನನ ಸಮೀಪದಲ್ಲಿ ಸಂಚರಿಸಿದವು
ತಾಂಶ್ಚಕರ್ತ ಶರೈಃ ಪಾರ್ಥಃ ಸರೋಷಾನ್ ದೃಶ್ಯ ಖೇಚರಾನ್ |
ವಿವಶಾ ವಿವಿಶುರ್ದೀಪ್ತಂ ದೇಹಾಭಾವಾಯ ಪಾವಕಮ್ ॥44॥
ಅರ್ಜುನನು ರೋಷದಿಂದ ಕೂಡಿದ, ಆಕಾಶದಲ್ಲಿ ಸಂಚರಿಸುವ ಆ ಪಕ್ಷಿಗಳನ್ನು ನೋಡಿ ಅವುಗಳನ್ನು ಕತ್ತರಿಸಿದನು. ಅವು

ವಿವಶವಾಗಿ ದೀಪ್ತವಾದ ಅಗ್ನಿಯಲ್ಲಿ ಬಿದ್ದು, ನಾಶವನ್ನು ಹೊಂದಿದವು.
ತತೋಽಸುರಾಃ ಸಗಂಧರ್ವಾ ಯಕ್ಷರಾಕ್ಷಸಪನ್ನಗಾಃ |
ಉತ್ಪೇತುರ್ನಾದಮತುಲಮುತ್ಸೃಜಂತೋ ರಣಾರ್ಥಿನಃ ||45||
ಅನಂತರ ಅಸುರರೂ, ಗಂಧರ್ವರೂ, ಪನ್ನಗಗಳೂ, ಯಕ್ಷರಾಕ್ಷಸರೂ, ಯುದ್ಧವನ್ನು ಬಯಸಿ ಘೋರವಾದ ನಾದವನ್ನು ಮಾಡುತ್ತಾ ಮೇಲೆರಗಿ ಬಂದರು.
ಅಯಃಕಾಂಚನಚಕ್ರಾಶ್ಚ ಗದಾಮುಸಲಪಾಣಯಃ |
ಕೃಷ್ಣಪಾರ್ಥೌ ಜಿಘಾಂಸಂತಃ ಕ್ರೋಧಸಮ್ಮೂರ್ಛಿತೌಜಸಃ ||46||
ಕೃಷ್ಣಾರ್ಜುನರನ್ನು ಕೊಲ್ಲಲು ಬಯಸಿ ಕ್ರೋಧದಿಂದ ಮೂರ್ಛಿತರಾದ ಮಹಾಬಲಶಾಲಿಗಳಾದ ಅವರು ಕೈಗಳಲ್ಲಿ ಗದೆಗಳನ್ನೂ, ಮುಸಲಗಳನ್ನೂ ಹಿಡಿದು ಅಯಃಚಕ್ರಗಳನ್ನೂ, ಕಾಂಚನಚಕ್ರಗಳನ್ನೂ ಪ್ರಯೋಗಿಸಿದರು.
ತೇಷಾಮಪಿ ವ್ಯಾಹರತಾಂ ಶಸ್ತ್ರವರ್ಷಾಣಿ ಮುಂಚತಾಮ್ |
ಪ್ರಮಮಾಥೋತ್ತಮಾಂಗಾನಿ ಬೀಭತ್ಸುರ್ನಿಶಿತೈಃ ಶರೈಃ ||47||
ಅರ್ಜುನನು ತನ್ನ ಹರಿತವಾದ ಬಾಣಗಳಿಂದ ಬಾಯಿಂದ ಮಾತನಾಡುತ್ತಾ ತನ್ನ ಮೇಲೆ ಬಾಣಗಳ ಮಳೆಯನ್ನು ಕರೆಯುತ್ತಿದ್ದ ಅವರ ತಲೆಗಳನ್ನು ಕತ್ತರಿಸಿದನು.
ಕೃಷ್ಣಶ್ಚ ಸುಮಹಾತೇಜಾಶ್ಚಕ್ರೇಣಾರಿವಿಘಾತಿನಾ |
ದೈತ್ಯದಾನವಸಂಘಾನಾಂ ಚಕಾರ ಕದನಂ ಮಹತ್ ||48||
ಮಹಾತೇಜಸ್ವಿಯಾದ ಕೃಷ್ಣನೂ ಸಹ ಶತ್ರುನಾಶಕವಾದ ಚಕ್ರವನ್ನು ಹಿಡಿದು ದೈತ್ಯದಾನವಸಮೂಹದ ಜೊತೆಯಲ್ಲಿ ದೊಡ್ಡಯುದ್ಧವನ್ನು ಮಾಡಿದನು.
ಅಪರೇ ತು ಶರೈರ್ವಿದ್ಧಾಶ್ಚಕ್ರವೇಗೇರಿತಾಸ್ತದಾ |
ವೇಲಾಮಿವ ಸಮಾಸಾದ್ಯ ವ್ಯವೇಷ್ಟಂತ ಮಹೌಜಸಃ ||49||
ಇನ್ನು ಕೆಲವು ಮಹಾಬಲಿಷ್ಠರು ಅರ್ಜುನನ ಶರದಿಂದ ತಾಡಿತರಾಗಿ, ಕೃಷ್ಣನ ವೇಗದಿಂದ ಎಸೆಯಲ್ಪಟ್ಟು ತೀರಕ್ಕೆ ಬಂದು ಹೊರಳಾಡಿದರು.
ತತಃ ಶಕ್ರೋಽತಿಸಂಕ್ರುದ್ಧಸ್ತ್ರಿದಶಾನಾಂ ಮಹೇಶ್ವರಃ |
ಪಾಂಡರಂ ಗಜಮಾಸ್ಥಾಯ ತಾವುಭೌ ಸಮುಪಾದ್ರವತ್ ||50||
ಅನಂತರ ದೇವತೆಗಳ ಒಡೆಯನಾದ ಇಂದ್ರನು ಅತ್ಯಂತ ಕ್ರೋಧದಿಂದ ಕೂಡಿದವನಾಗಿ ಬಿಳಿಯ ಆನೆಯಾದ ಐರಾವತದ ಮೇಲೆ ಕುಳಿತು ಅವರಿಬ್ಬರ ಕಡೆಗೆ ಧಾವಿಸಿಬಂದನು.
ಅಶನಿಂ ಗೃಹ್ಯ ತರಸಾ ವಜ್ರಂ ಚೋದ್ಯಮ್ಯ ಚಾಹವೇ |
ನಿಘ್ನತೈತಾವಿತಿ ಪ್ರಾಹ ಸುರಾನಸುರಸೂದನಃ ||51||
ಅಸುರ ಸಂಹಾರಕನಾದ ಅವನು ಯುದ್ಧದಲ್ಲಿ ಒಂದು ಕೈಯಲ್ಲಿ ಅಶನಿಯನ್ನು ಹಿಡಿದು, ಇನ್ನೊಂದು ಕೈಯಿಂದ ವಜ್ರಾಯುಧವನ್ನು ಮೇಲಕ್ಕೆತ್ತಿ ಇವರಿಬ್ಬರನ್ನೂ ಕೊಲ್ಲಿ ಎಂದು ದೇವತೆಗಳಿಗೆ ಹೇಳಿದನು.
ತತಃ ಸಮುದ್ಯತಾಂ ದೃಷ್ಟ್ವಾ ದೇವೇಂದ್ರೇಣ ಮಹಾಶನಿಮ್ |
ಜಗೃಹುಃ ಸರ್ವಶಾಸ್ತ್ರಾಣಿ ಸ್ವಾನಿಸ್ವಾನಿ ತತಸ್ತದಾ ||52||
ದೇವೇಂದ್ರನು ತನ್ನ ಕೈಯಲ್ಲಿ ಮಹಾಶನಿಯನ್ನು ಎತ್ತಿಹಿಡಿದುದನ್ನು ನೋಡಿದ ದೇವತೆಗಳು ತಮ್ಮ ಕೈಯಲ್ಲಿ ತಮ್ಮ ತಮ್ಮ ಆಯುಧಗಳನ್ನು ಎತ್ತಿಕೊಂಡರು.
ಕಾಲದಂಡಂ ಯಮೋ ರಾಜನ್ ಶಿಬಿಕಾಂ ಚ ಧನೇಶ್ವರಃ |
ಪಾಶಾಂಶ್ಚ ತತ್ರ ವರುಣಃ ತ್ರಿಶೂಲಂ ಚ ತಥಾ ಶಿವಃ ||53||
ಸ್ಕಂದಃ ಶಕ್ತಿಂ ಸಮಾದಾಯ ತಸ್ಥೌ ಮೇರುರಿವಾಚಲಃ |
ಓಷಧೀರ್ದೀಪ್ಯಮಾನಾಶ್ಚ ಜಗೃಹಾತೇಽಶ್ವಿನಾವಪಿ ||54||
ರಾಜನೇ, ಯಮನು ಕಾಲದಂಡವನ್ನೂ, ಶಿಬಿಕೆಯನ್ನು ಏರಿದ ಕುಬೇರನು ಮುದ್ಗಲವನ್ನೂ, ಶಿವನು ತ್ರಿಶೂಲವನ್ನೂ, ಸ್ಕಂದನು ಶಕ್ತಿಯನ್ನೂ ಹಿಡಿದು ಮೇರುಪರ್ವತದಂತೆ ಅಲುಗಾಡದೆ ನಿಂತರು. ಅಶ್ವಿನಿಗಳು ದೀಪ್ತವಾದ ಓಷಧಿಗಳನ್ನು ಹಿಡಿದರು.
ಜಗೃಹೇ ಚ ಧನುರ್ಧಾತಾ ಮುಸಲಂ ತು ಧನುಸ್ತಥಾ |
ಪರ್ವತಂ ಚಾಪಿ ಜಗ್ರಾಹ ಕ್ರುದ್ಧಸ್ತ್ವಷ್ಟಾ ಮಹಾಬಲಃ ||55||
ಧಾತೃವು ಧನುಸ್ಸನ್ನೂ ಮತ್ತು ಮುಸಲವನ್ನೂ ತೆಗೆದುಕೊಂಡನು. ಮಹಾಬಲನಾದ ತ್ವಷ್ಟೃಕ್ರೋಧದಿಂದ ಧನುಸ್ಸನ್ನೂ ಮತ್ತು ಪರ್ವತವನ್ನೂ ಕೈಗೆ ತೆಗೆದುಕೊಂಡನು.
ಸ್ಕಂದಸ್ತು ಶಕ್ತಿಂ ಜಗ್ರಾಹ ಮೃತ್ಯುರ್ದೇವಃ ಪರಶ್ವಧಮ್ |
ಪ್ರಗೃಹ್ಯ ಪರಿಘಂ ಘೋರಂ ಪ್ರಚಚಾರಾರ್ಯಮಾಽಪಿ ಚ ||56||
ಸ್ಕಂದನು ಶಕ್ತಿಯನ್ನೂ, ಯಮನ ತಮ್ಮನಾದ ಮೃತ್ಯುವು ಪರಶ್ವಧವನ್ನೂ, ಅರ್ಯಮನು ಘೋರವಾದ ಪರಿಘವನ್ನೂ ತೆಗೆದುಕೊಂಡು ಸಂಚರಿಸಿದರು.
ಮಿತ್ರಶ್ಚ ಕ್ಷುರಪರ್ಯಂತಂ ಚಕ್ರಂ ಗೃಹ್ಯ ವ್ಯತಿಷ್ಠತ |
ಪೂಷಾ ಭಗಶ್ಚ ಸಂಕ್ರುದ್ಧಃ ಸವಿತಾ ಚ ವಿಶಾಂಪತೇ ||57||
ಆತ್ತಕಾರ್ಮುಕನಿಸ್ತ್ರಿಂಶಾಃ ಕೃಷ್ಣಪಾರ್ಥಾವಭಿದ್ರವನ್ |

ರುದ್ರಾಶ್ಚ ವಸವಶ್ಚೈವ ಮರುತಶ್ಚ ಮಹಾಬಲಾಃ ॥58॥
ಮಿತ್ರನು ಕತ್ತಿಯಂತೆ ಅಲಗುಗಳನ್ನುಳ್ಳ ಚಕ್ರವನ್ನು ಹಿಡಿದು ಎದುರಾದನು. ರಾಜನೇ, ಪೂಷಾ, ಭಗ ಮತ್ತು ಸಂಕ್ರುದ್ಧನಾದ ಸವಿತೃ ಇವರು ಬಿಲ್ಲುಗಳನ್ನೂ ಮತ್ತು ಖಡ್ಗಗಳನ್ನೂ ಹಿಡಿದು ಕೃಷ್ಣಾರ್ಜುನರಿಗೆ ಅಭಿಮುಖವಾಗಿ ಬಂದರು.
ವಿಶ್ವೇದೇವಾಸ್ತಥಾ ಸಾಧ್ಯಾ ದೀಪ್ಯಮಾನಾಃ ಸ್ವತೇಜಸಾ |
ಏತೇ ಚಾನ್ಯೇ ಚ ಬಹವೋ ದೇವಾಸ್ತೌ ಪುರುಷೋತ್ತಮೌ ॥59॥
ಕೃಷ್ಣಪಾರ್ಥೌ ಜಿಘಾಂಸಂತಃ ಪ್ರತೀಯುರ್ವಿವಿಧಾಯುಧಾಃ |
ತತ್ರಾದ್ಭುತಾನ್ಯದೃಶ್ಯಂತ ವಿವಿಧಾನಿ ಮಹಾವನೇ ॥60॥
ರುದ್ರರೂ, ವಸುಗಳೂ, ಮಹಾಬಲರಾದ ಮರುತ್ತುಗಳೂ, ವಿಶ್ವೇದೇವತೆಗಳೂ, ಸಾಧ್ಯರೂ ತಮ್ಮ ತೇಜಸ್ಸಿನಿಂದ ಬೆಳಗುತ್ತಾ, ಇನ್ನೂ ಅನೇಕ ದೇವತೆಗಳ ಜೊತೆಯಲ್ಲಿ ಕೈಯಲ್ಲಿ ವಿವಿಧವಾದ ಆಯುಧಗಳನ್ನು ಹಿಡಿದು ಪುರುಷೋತ್ತಮರಾದ ಕೃಷ್ಣಾರ್ಜುನರನ್ನು ಕೊಲ್ಲುವ ಉದ್ದೇಶದಿಂದ ಅವರ ಕಡೆಗೆ ಧಾವಿಸಿದರು. ಭಾರತನೇ, ಆಗ ಆ ಕಾಡಿನಲ್ಲಿ ಅನೇಕವಿಧವಾದ ಅದ್ಭುತಗಳು ಕಂಡುಬಂದವು.

ಯುಗಾಂತಸಮರೂಪಾಣಿ ಭೂತೋತ್ಪಾತಾಶ್ಚ ಭಾರತ |
ತಥಾ ದೃಷ್ಟ್ವಾ ಸುಸಂರಬ್ಧಂ ಶಕ್ರಂ ದೇವೈಃ ಸಹಾಚ್ಯುತೌ ॥61॥
ಯುಗಾಂತಸಮಯದಲ್ಲಿ ಕಂಡುಬರುವ ಭೂತೋತ್ಪಾತಗಳು ಕಂಡುಬಂದವು.
ಅಭೀತೌ ಯುಧಿ ದುರ್ಧರ್ಷೌ ತಸ್ಥತುಃ ಸಜ್ಯಕಾರ್ಮುಕೌ |
ಆಗತಾಂಶ್ಚೈವ ತಾನ್ ದೃಷ್ಟ್ವಾ ದೇವಾನೇಕೈಕಶಸ್ತಥಾ ॥62॥
ಕೃಷ್ಣಪಾರ್ಥರು ದೇವತೆಗಳ ಜೊತೆಯಲ್ಲಿ ಕ್ರೋಧದಿಂದ ಬಂದ ಇಂದ್ರನನ್ನು ನೋಡಿ, ಹೆದರದೆ ಹೆದೆಯೇರಿಸಿದ ಬಿಲ್ಲುಗಳನ್ನು ಹಿಡಿದು ದುರ್ಧರ್ಷರಾಗಿ ನಿಂತರು.
ವಾರಯೇತಾಂ ಸುಸಂಕ್ರುದ್ಧೌ ಬಾಣೈರ್ವಜ್ರೋಪಮೈಸ್ತದಾ |
ಅಸಕೃದ್ ಭಗ್ನಸಂಕಲ್ಪಾಃ ಸುರಾಃ ಶರಬಹುಕ್ಷತಾಃ ॥63॥
ಬಹಳ ಕ್ರೋಧಗೊಂಡ ಕೃಷ್ಣಾರ್ಜುನರು ಒಬ್ಬೊಬ್ಬರಾಗಿ ಬಂದ ದೇವತೆಗಳನ್ನು ತಮ್ಮ ವಜ್ರಸದೃಶವಾದ ಬಾಣಗಳಿಂದ ಹಿಂದೆ ಕಳುಹಿಸಿದರು.
ಭಯಾದ್ ರಣಂ ಪರಿತ್ಯಜ್ಯ ಶಕ್ರಮೇವಾಭಿಸಂಶ್ರಯುಃ |
ದೃಷ್ಟ್ವಾ ನಿವಾರಿತಾನ್ ದೇವಾನ್ ಮಾಧವೇನಾರ್ಜುನೇನ ಚ ॥64॥
ಅನೇಕಬಾರಿ ಭಗ್ನಸಂಕಲ್ಪರಾದ ದೇವತೆಗಳು ಬಾಣಗಳಿಂದ ಗಾಯಗೊಂಡು ಭಯದಿಂದ ರಣವನ್ನು ಪರಿತ್ಯಾಗಮಾಡಿ ಇಂದ್ರನನ್ನೇ ಆಶ್ರಯಿಸಿದರು.
ಆಶ್ಚರ್ಯಮಗಮಂಸ್ತತ್ರ ಮುನಯೋ ದಿವಿ ನಿಷ್ಠಿತಾಃ |
ಶಕ್ರಶ್ಚಾಪಿ ತಯೋರ್ವೀರ್ಯಮುಪಲಭ್ಯಾಸಕೃದ್ ರಣೇ ॥65॥
ಕೃಷ್ಣಾರ್ಜುನರಿಂದ ಹಿಂದಿರುಗಿಸಲ್ಪಟ್ಟ ದೇವತೆಗಳನ್ನು ನೋಡಿ ಆಕಾಶದಲ್ಲಿ ನಿಂತ ಮುನಿಗಳು ಆಶ್ಚರ್ಯಚಕಿತರಾದರು.
ಬಭೂವ ಪರಮಪ್ರೀತೋ ಭೂಯಶ್ಚೈತಾವಯೋಧಯತ್ |
ತತೋಽಶ್ಮವರ್ಷಂ ಸುಮಹದ್ ವ್ಯಸೃಜತ್ ಪಾಕಶಾಸನಃ ॥66॥
ಇಂದ್ರನೂ ಸಹ ಯುದ್ಧದಲ್ಲಿ ಅವರ ಪರಾಕ್ರಮವನ್ನು ಅನೇಕಬಾರಿ ನೋಡಿ ಪರಮಸಂತುಷ್ಟನಾದನು. ಆದರೂ ಪುನಃ ಅವರ ಜೊತೆಯಲ್ಲಿ ಕಲ್ಲಿನ ಮಳೆ ಸುರಿಸುವ ಮೂಲಕ ಯುದ್ಧವನ್ನು ಮುಂದುವರೆಸಿದನು.
ಭೂಯ ಏವ ತದಾ ವೀರ್ಯಂ ಜಿಜ್ಞಾಸುಃ ಸವ್ಯಸಾಚಿನಃ |
ತಚ್ಛರೈರರ್ಜುನೋ ವರ್ಷಂ ಪ್ರತಿಜಘ್ನೇಽತ್ಯಮರ್ಷಣಃ ॥67॥
ಅನಂತರ ಪಾಕಶಾಸನನಾದ ಇಂದ್ರನು ಅರ್ಜುನನ ಪರಾಕ್ರಮವನ್ನು ತಿಳಿಯಲು ಬಯಸಿ, ಪುನಃ ದೊಡ್ಡದಾದ ಕಲ್ಲುಗಳ ಮಳೆಯನ್ನು ಸೃಷ್ಟಿಸಿದನು. ಬಹಳ ಸಿಟ್ಟಿನಿಂದ ಕೂಡಿದ ಅರ್ಜುನನು ಆ ಮಳೆಯನ್ನು ತನ್ನ ಬಾಣಗಳಿಂದ ನಾಶಮಾಡಿದನು.
ವಿಫಲಂ ಕ್ರಿಯಮಾಣಂ ತತ್ ಸಂಪ್ರೇಕ್ಷ್ಯ ಚ ಶತಕ್ರತುಃ |
ಭೂಯಃ ಸಂವರ್ಧಯಾಮಾಸ ತದ್ವರ್ಷಂ ದೇವರಾಡಪಿ ॥68॥
ತನ್ನ ಪ್ರಯತ್ನವು ವಿಫಲವಾಗುತ್ತಿರುವುದನ್ನು ನೋಡಿದ ದೇವರಾಜನಾದ ಇಂದ್ರನು ಆ ಮಳೆಯನ್ನು ಇನ್ನೂ ಹೆಚ್ಚು ಮಾಡಿದನು.
ಸೋಽಶ್ಮವರ್ಷಂ ಮಹಾವೇಗೈರಿಷುಭಿಃ ಪಾಕಶಾಸನಿಃ |
ವಿಲಯಂ ಗಮಯಾಮಾಸ ಹರ್ಷಯನ್ ಪಿತರಂ ತಥಾ ॥69॥
ಅರ್ಜುನನು ಮಹಾವೇಗವುಳ್ಳ ತನ್ನ ಬಾಣಗಳಿಂದ ಆ ಶಿಲಾವರ್ಷವನ್ನು ನಾಶಮಾಡಿ ತಂದೆಯಾದ ಇಂದ್ರನನ್ನು ಸಂತೋಷಪಡಿಸಿದನು.
ಸಮುತ್ಪಾಟ್ಯ ತು ಪಾಣಿಭ್ಯಾಂ ಮಂದರಾಚ್ಛಿಖರಂ ಮಹತ್ |
ಸದ್ರುಮಂ ವ್ಯಸೃಜಚ್ಛಕ್ರೋ ಜಿಘಾಂಸುಃ ಪಾಂಡುನಂದನಮ್ ॥70॥
ಆಗ ಇಂದ್ರನು ಮಂದರಪರ್ವತದ ವೃಕ್ಷಗಳಿಂದ ಕೂಡಿದ ದೊಡ್ಡಪರ್ವತವನ್ನು ತನ್ನ ಬಾಹುಗಳಿಂದ ಎತ್ತಿ ಅರ್ಜುನನನ್ನು ಕೊಲ್ಲಲು ಬಯಸಿ ಅರ್ಜುನನ ಮೇಲೆ ಎಸೆದನು.
ತತೋಽರ್ಜುನೋ ವೇಗವದ್ಭಿರ್ಜ್ವಲಿತಾನಲಸನ್ನಿಭೈಃ |
ಬಾಣೈರ್ವಿಧ್ವಂಸಯಾಮಾಸ ಗಿರೇಃ ಶೃಂಗಂ ಸಹಸ್ರಶಃ ॥71॥

ಆಗ ಅರ್ಜುನನು ವೇಗವುಳ್ಳ, ದೀಪ್ತವಾದ ಅಗ್ನಿಯಂತೆ ಪ್ರಕಾಶಮಾನವಾದ ತನ್ನ ಬಾಣಗಳಿಂದ ಆ ಪರ್ವತಶೃಂಗವನ್ನು ಸಹಸ್ರಾರು ಚೂರುಗಳನ್ನು ಮಾಡಿ ನಾಶಮಾಡಿದನು.
ಗಿರೇರ್ವಿಕೀರ್ಯಮಾಣಸ್ಯ ತಸ್ಯ ರೂಪಂ ತದಾ ಬಭೌ |
ಸಾರ್ಕಚಂದ್ರಗ್ರಹಸ್ಯೇವ ನಭಸಃ ಪ್ರವಿಶೀರ್ಯತಃ ॥72॥
ಅರ್ಜುನನ ಬಾಣಗಳ ವೇಗದಿಂದ ಬಿರಿದುಬೀಳುತ್ತಿದ್ದ ಆ ಪರ್ವತಶಿಖರವು ಚಂದ್ರಸೂರ್ಯಗ್ರಹಗಳಿಂದ ಕೂಡಿದ ಆಕಾಶವೇ ಬಿರಿಯುವಂತೆ ತೋರುತ್ತಿದ್ದಿತು.
ತೇನ ಚಾಪತತಾ ದೇಶೇ ಶೈಲೇನ ಮಹತಾ ಭೃಶಮ್ |
ಭೂಯ ಏವ ತತಸ್ತತ್ರ ಪ್ರಾಣಿನಾಂ ಪ್ರಾಣಸಂಕ್ಷಯಃ ॥73॥
ಆ ದೊಡ್ಡಶಿಖರವು ಭೂಮಿಯ ಮೇಲೆ ಬೀಳುತ್ತಾ ತನ್ನ ಭಾರದಿಂದ ಅನೇಕ ಪ್ರಾಣಿಗಳ ವಿನಾಶವನ್ನು ಉಂಟುಮಾಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಏಕತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಖಾಂಡವದಾಹಪರ್ವಣಿ ತೃತೀಯೋಽಧ್ಯಾಯಃ ॥
॥ ಖಾಂಡವದಾಹಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಖಾಂಡವದಾಹಪರ್ವವು ಮುಗಿಯಿತು.
* * * *
19. ಮಯದರ್ಶನಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ಸ ಯೋಜನದ್ವಾದಶಕಾಭಿವಿಸ್ತೃತಂ
ಪುರಂ ಚಕಾರಾಶು ಪುರಂದರಾತ್ಮಜಃ |
ಹುತಾಶನೋಽಪ್ಯಾಶು ವನಂ ಪ್ರಗೃಹ್ಯ
ಪ್ರಭಕ್ಷಯಾಮಾಸ ಸಮುದ್ಧತಾರ್ಚಿಃ ॥232॥
ಅರ್ಜುನ ಬೇಗನೆ ಬಾಣಗಳಿಂದ ಹನ್ನೆರಡು ಯೋಜನಗಳವರೆಗೆ ವಿಸ್ತೃತವಾದ ಶರಪಂಜರವನ್ನು ನಿರ್ಮಿಸಿದ. ಅಗ್ನಿ ಬೇಗನೆ ಜ್ವಾಲೆಯನ್ನು ಎತ್ತರಕ್ಕೆ ಚಾಚಿ ಕಾಡನ್ನು ಹಿಡಿದು ಭಕ್ಷಿಸತೊಡಗಿದ.
ಪ್ರಭಕ್ಷ್ಯಮಾಣಂ ನಿಜಕಕ್ಷವೀಕ್ಷ್ಯ
ಸಂಧುಕ್ಷಯಾಮಾಸ ತದಾಶುಶುಕ್ಷಣಿಂ |
ಅಕ್ಷೋಪಮಾಭಿರ್ಬಹುಲೇಕ್ಷಣೋಽಂಭಸಾಂ
ಧಾರಾಭಿರಾಕ್ಷುಬ್ಧಮನಾಃ ಕ್ಷಯಾಯ ॥233॥
ಇಂದ್ರ ತನ್ನ ಕಾಡು ಬೆಂಕಿಯಿಂದ ಭಕ್ಷಿತವಾಗುವುದನ್ನು ಕಂಡು ಮನಸ್ಸಿನಲ್ಲಿ ಕ್ಷೋಭೆಗೊಂಡವನಂತೆ ರಥದ ಅಚ್ಚು ಮರದಷ್ಟು ಗಾತ್ರದ ಜಲಧಾರೆಗಳಿಂದ ಬೆಂಕಿಯ ಜ್ವಾಲೆಯನ್ನು ಆರಿಸಲು ಯತ್ನಿಸಿದ.
ಅಸ್ತ್ರೈಸ್ತು ವೃಷ್ಟಿಂ ವಿನಿವಾರ್ಯ ಕೃಷ್ಣಃ
ಪಾರ್ಥಶ್ಚ ಶಕ್ರಂ ಸುರಪೂಗಯುಕ್ತಂ |
ಅಯುಧ್ಯತಾಂ ಸೋಽಪಿ ಪರಾಜಿತೋಽಭೂತ್
ಪ್ರೀತಶ್ಚ ದೃಷ್ಟ್ವಾ ಬಲಮಾತ್ಮನಸ್ತತ್ ॥234॥
ಕೃಷ್ಣಾರ್ಜುನರು ವಾಯವ್ಯಾದಿ ಅಸ್ತ್ರಗಳಿಂದ ಮಳೆಯನ್ನು ತಡೆದು, ದೇವ ಸಮೂಹ ಸಮೇತನಾಗಿ ಬಂದ ಇಂದ್ರನೊಡನೆ ಹೋರಾಡಿದರು. ಅವನು ಪರಾಜಿತನಾದ. ತನ್ನ ಮಗನ ಪರಾಕ್ರಮವನ್ನು ಕಂಡು ಸಂತುಷ್ಟನೂ ಆದ.
ಸ್ನೇಹಂ ಚ ಕೃಷ್ಣಸ್ಯ ತದಾಽರ್ಜುನೇ ಧೃತಂ
ವಿಲೋಕ್ಯ ಪಾರ್ಥಸ್ಯ ಬಲಂ ಚ ತಾದೃಶಂ |
ನಿವರ್ತ್ಯ ಮೇಘಾನತಿತುಷ್ಟಚಿತ್ತಃ
ಪ್ರಣಮ್ಯ ಕೃಷ್ಣಂ ತನಯಂ ಸಮಾಶ್ಲಿಷತ್ ॥235॥
ಅರ್ಜುನನಲ್ಲಿ ಶ್ರೀಕೃಷ್ಣನಿರಿಸಿದ್ದ ಪ್ರೀತಿಯನ್ನೂ ಅರ್ಜುನನ ಆ ಅಸಾಧಾರಣ ಪರಾಕ್ರಮವನ್ನೂ ಕಂಡು ದೇವೇಂದ್ರ ಬಹಳ ಸಂತುಷ್ಟಚಿತ್ತನಾಗಿ ಮೋಡಗಳನ್ನು ಹಿಂದೆ ಕಳಿಸಿ ಕೃಷ್ಣನನ್ನು ನಮಿಸಿ ಮಗನನ್ನು ಆಲಿಂಗಿಸಿದ.
ವಿಷ್ಣುಶ್ಚ ಶಕ್ರೇಣ ಸಹೈತ್ಯ ಕೇಶವಂ
ಸಮಾಶ್ಲಿಷನ್ನಿರ್ವಿಶೇಷೋಽಪ್ಯನಂತಃ |
ಸ ಕೇವಲಂ ಕ್ರೀಡಮಾನಃ ಸಶಕ್ರಃ
ಸ್ಥಿತೋ ಹಿ ಪೂರ್ವಂ ಯುಯುಧೇ ನ ಕಿಂಚಿತ್ ॥236॥
ಶ್ರೀವಿಷ್ಣು ಅನಂತನಾಗಿದ್ದು ಅವತಾರಗಳಲ್ಲಿ ಭೇದರಹಿತನಾದರೂ ಇಂದ್ರನೊಂದಿಗೆ ಬಂದು ಶ್ರೀಕೃಷ್ಣನನ್ನು ಆಲಿಂಗಿಸಿದ. ಅವನು ಅಷ್ಟರವರೆಗೆ ಇಂದ್ರನ ಜೊತೆ ನಿಂತು ಕೇವಲ ಕ್ರೀಡೆ ಮಾಡುತ್ತಿದ್ದನೇ ಹೊರತು ಒಂದಿಷ್ಟೂ ಯುದ್ಧ ಮಾಡಲಿಲ್ಲ.
ಬ್ರಹ್ಮಾ ಚ ಶರ್ವಶ್ಚ ಸಮೇತ್ಯ ಕೃಷ್ಣಂ
ಪ್ರಣಮ್ಯ ಪಾರ್ಥಸ್ಯ ಚ ಕೃಷ್ಣನಾಮ |

ಸಂಚಕ್ರತುಶ್ಚಾಪಿ ಶಿಕ್ಷಾಪ್ರಕರ್ಷಾತ್
ಚಕ್ರುಶ್ಚ ಸರ್ವೇ ಸ್ವಾಸ್ತ್ರದಾನೇ ಪ್ರತಿಜ್ಞಾಂ ।।237।।
ಬ್ರಹ್ಮನೂ ರುದ್ರನೂ ಬಂದು ಕೃಷ್ಣನನ್ನು ನಮಿಸಿ, ಅರ್ಜುನನ ಶಸಶತ್ರಭ್ಯಾಸ ಉತ್ಕೃಷ್ಟವಾದ್ದರಿಂದ ಅವನಿಗೆ ಕೃಷ್ಣ ಎಂದು ನಾಮಕರಣ ಮಾಡಿದರು. ಎಲ್ಲರೂ ಸಮಯ ಬಂದಾಗ ತಮ್ಮ ತಮ್ಮ ಅಸ್ತ್ರಗಳನ್ನು ಅವನಿಗೆ ಉಪದೇಶಿಸುವುದಾಗಿ ಪ್ರತಿಜ್ಞೆಗೈದರು.
ಅನುಜ್ಞಾತಾಸ್ತೇ ಪ್ರಯಯುಃ ಕೇಶವೇನ
ಕ್ರೀಡಾರ್ಥಮಿಂದ್ರೋ ಯುಯುಧೇ ಹಿ ತತ್ರ।
ಪ್ರೀತ್ಯಾ ಕೀರ್ತಿಂ ದಾತುಮಪ್ಯರ್ಜುನಸ್ಯ
ತತಸ್ತುಷ್ಟಃ ಸಹ ದೇವೈಸ್ತಯೋ ಸಃ ।।238।।
ಶ್ರೀಕೃಷ್ಣನ ಅನುಜ್ಞೆ ಪಡೆದು ಬ್ರಹ್ಮಾದಿ ದೇವತೆಗಳು ಹೊರಟುಹೋದರು. ಇಂದ್ರ ಕ್ರೀಡೆಗೋಸ್ಕರವೆ ಕೃಷ್ಣನೊಡನೆ ಯುದ್ಧ ಮಾಡಿದ್ದ. ಅಸುರಾವೇಶದಿಂದಲ್ಲ. ಅರ್ಜುನನಿಗೆ ಕೀರ್ತಿ ತಂದುಕೊಡುವುದಕ್ಕಾಗಿ ಅವನೊಡನೆಯೂ ಪ್ರೀತಿಯಿಂದಲೆ ಯುದ್ಧ ಮಾಡಿದ್ದ. ಅದರಿಂದ ಸಂತುಷ್ಟನಾಗಿ ದೇವತೆಗಳೊಂದಿಗೆ ಅವನೂ ಸ್ವರ್ಗಕ್ಕೆ ತೆರಳಿದ.
* * * *
ಇನ್ನೂರ ಮೂವತ್ತೆರಡನೆಯ ಅಧ್ಯಾಯ
(ಕೃಷ್ಣಾರ್ಜುನರ ರಕ್ಷಣೆಯಲ್ಲಿ ಅಗ್ನಿಯಿಂದ ಖಾಂಡವವನ ದಾಹ. ಕೃಷ್ಣಾರ್ಜುನರಿಂದ ಯುದ್ಧಕ್ಕೆ ಬಂದ ದೇವತೆಗಳ ಪರಾಜಯ. ಅಶರೀರವಾಣಿಯಿಂದ ಇಂದ್ರನ ನಿವೃತ್ತಿ. ಅಗ್ನಿಯ ಹರ್ಷ. ಮಯನಿಗೆ ಅಭಯದಾನ.)
ವೈಶಂಪಾಯನಃ
ತಥಾ ಶೈಲನಿಪಾತೇನ ಧರ್ಷಿತಾಃ ಖಾಂಡವಾಲಯಾಃ।
ದಾನವಾ ರಾಕ್ಷಸಾ ನಾಗಾಸ್ತರಕ್ಷ್ವೃಕ್ಷವನೌಕಸಃ ।।1।।
ದ್ವಿಪಾಃ ಪ್ರಭಿನ್ನಾಃ ಶಾರ್ದೂಲಾಃ ಸಿಂಹಾಃ ಕೇಸರಿಣಸ್ತಥಾ।
ಮೃಗಾಶ್ಚ ಮಹಿಷಾಶ್ಚೈವ ಶತಶಃ ಪಕ್ಷಿಣಸ್ತಥಾ ।।2।।
ಸಮುದ್ವಿಗ್ನಾ ವಿಸಸೃಪುಸ್ತಥಾಽನ್ಯಾ ಭೂತಜಾತಯಃ।
ತಂ ದಾವಂ ಸಮುದೈಕ್ಷಂತ ಕೃಷ್ಣಂ ಚಾಭ್ಯುದ್ಯತಾಯುಧಮ್।
ತತ್ಪಾತನಾದಶಬ್ದೇನ ತ್ರಾಸಿತಾ ಇವ ಚಾಭವನ್ ।।3।।
ಆ ರೀತಿಯಲ್ಲಿ ಗಿರಿಶೃಂಗವು ಬೀಳುತ್ತಿರಲು, ಖಾಂಡವನಿವಾಸಿಗಳಾದ ದಾನವರೂ, ರಾಕ್ಷಸರೂ, ನಾಗಗಳೂ, ವ್ಯಾಘ್ರಗಳೂ, ಕರಡಿಗಳೂ, ವನೌಕಸರೂ, ಮದಗಜಗಳೂ, ಶಾರ್ದೂಲಗಳೂ, ಕೇಸರವನ್ನು ಹೊಂದಿದ ಸಿಂಹಗಳೂ, ಮೃಗಗಳೂ, ಮಹಿಷಗಳೂ, ಪಕ್ಷಿಗಳೂ, ಮತ್ತು ಇತರಭೂತಜಾತಿಗಳೂ ಶತಸಂಖ್ಯೆಯಲ್ಲಿ ಉಪದ್ರವಕ್ಕೆ ಒಳಗಾಗಿ ಸಮದ್ವಿಗ್ನರಾಗಿ ಅಲ್ಲಲ್ಲಿ ತಿರುಗಾಡಿದವು. ಅವುಗಳು ಆಯುಧವನ್ನು ಎತ್ತಿಹಿಡಿದ ಕೃಷ್ಣನನ್ನೂ ಮತ್ತು ಸುಡಲ್ಪಡುತ್ತಿರುವ ವನವನ್ನೂ ನೋಡಿದವು. ಗಿರಿಶೃಂಗ ಉತ್ಪಾತದಿಂದ ಶಬ್ದದಿಂದ ಎಲ್ಲರೂ ಹೆದರಿಹೋದರು.
ಸ್ವತೇಜೋಭಾಸ್ವರಂ ಚಕ್ರಮುತ್ಸಸರ್ಜಾತಿವೇಗವಾನ್।
ತೇನಾರ್ತಾ ಜಾತಯಃ ಕ್ಷುದ್ರಾಃ ಸದಾನವನಿಶಾಚರಾಃ।
ನಿಕೃತ್ತಾಃ ಶತಶಃ ಪೇತುರನಲೇ ಪ್ರಾಣಿನಃ ಕ್ಷಣಾತ್ ।।4।।
ಕೃಷ್ಣನು ತನ್ನ ಪ್ರಕಾಶದಿಂದಲೇ ಬೆಳಗುವ ಚಕ್ರವನ್ನು ವೇಗದಿಂದ ಪ್ರಯೋಗಿಸಿದನು. ಅದರಿಂದ ಕ್ಷುದ್ರಜಾತಿಗಳೂ, ದಾನವರೂ ಮತ್ತು ನಿಶಾಚರರು ತಮ್ಮ ಕತ್ತುಗಳು ಕತ್ತರಿಸಲ್ಪಡುತ್ತಿರಲು ಆರ್ತವಾಗಿ ಒಂದೇ ಕ್ಷಣದಲ್ಲಿ ಅಗ್ನಿಯಲ್ಲಿ ಬಿದ್ದವು.
ನ್ಯಪತತ್ ರಾಕ್ಷಸಾಸ್ತತ್ರ ಕೃಷ್ಣಚಕ್ರವಿದಾರಿತಾಃ।
ವಸಾರುಧಿರಸಂಪೃಕ್ತಾಃ ಸಂಧ್ಯಾಯಾಮಿವ ತೋಯದಾಃ ।।5।।
ಕೃಷ್ಣನ ಚಕ್ರದಿಂದ ಸೀಳಲ್ಪಟ್ಟ ರಾಕ್ಷಸರು ಸಾಯಂಕಾಲದ ಮೋಡಗಳಂತೆ ಕೊಬ್ಬು ಮತ್ತು ರಕ್ತಗಳಿಂದ ತೊಯ್ದವರಾಗಿ ಕೆಳಗೆ ಬಿದ್ದರು.
ಪಿಶಾಚಾನ್ ಪಕ್ಷಿಣೋ ನಾಗಾನ್ ಪಶೂಂಶ್ಚೈವ ಸಹಸ್ರಶಃ।
ನಿಘ್ನಂಶ್ಚರತಿ ವಾರ್ಷ್ಣೇಯಃ ಕಾಲವತ್ ತತ್ರ ಭಾರತ ।।6।।
ಭಾರತನೇ, ವಾರ್ಷ್ಣೇಯನಾದ ಕೃಷ್ಣನು ಪಿಶಾಚಗಳನ್ನೂ, ಪಕ್ಷಿಗಳನ್ನು, ನಾಗಗಳನ್ನೂ ಮತ್ತು ಉಳಿದ ಪಶುಗಳನ್ನೂ ಸಹಸ್ರಸಂಖ್ಯೆಯಲ್ಲಿ ಕೊಲ್ಲುತ್ತಾ ಅಲ್ಲಿ ಯಮನಂತೆ ಸಂಚರಿಸಿದನು.
ಕ್ಷಿಪ್ತಂಕ್ಷಿಪ್ತಂ ಪುನಶ್ಚಕ್ರಂ ಕೃಷ್ಣಸ್ಯಾಮಿತತೇಜಸಃ।
ಹತ್ವಾಽನೇಕಾನಿ ಸತ್ವಾನಿ ಪಾಣಿಮೇತಿ ಪುನಃಪುನಃ ।।7।।
ಅಮಿತತೇಜಸ್ಸುಳ್ಳ ಕೃಷ್ಣನು ಪ್ರಯೋಗಿಸಿದಂತೆ ಆ ಚಕ್ರವು ಅನೇಕ ಪ್ರಾಣಿಗಳನ್ನು ಕೊಂದು ಪುನಃ ಪುನಃ ಕೃಷ್ಣನ ಕೈಯನ್ನೇ ಸೇರುತ್ತಿತ್ತು.
ತಥಾ ತು ನಿಘ್ನತಸ್ತಸ್ಯ ಸರ್ವಭೂತಾನಿ ಭಾರತ।
ಬಭೂವ ರೂಪಮತ್ಯುಗ್ರಂ ಸರ್ವಭೂತಾತ್ಮನಸ್ತದಾ ।।8।।
ಭಾರತನೇ, ಎಲ್ಲ ಪ್ರಾಣಿಗಳನ್ನೂ ಕೊಲ್ಲುವ ಅವನ ರೂಪವು ಪ್ರಳಯಕಾಲದಲ್ಲಿ ಸರ್ವಪ್ರಾಣಿಸಂಹಾರಕವಾದ ಅವನ ಘೋರರೂಪವನ್ನು ತೋರುತ್ತಿದ್ದಿತು.
ಸಮೇತಾನಾಂ ಹಿ ದೇವಾನಾಂ ದಾನವಾನಾಂ ಚ ಸರ್ವಶಃ।

ವಿಜೇತಾ ನಾಭವತ್ ಕಶ್ಚಿತ್ ಕೃಷ್ಣಪಾಂಡವಯೋರ್ಮೃಧೇ ॥9॥
ಅಲ್ಲಿ ಎಲ್ಲ ಕಡೆಗಳಿಂದಲೂ ಬಂದು ಸೇರಿದ ದೇವತೆಗಳು ಮತ್ತು ದಾನವರ ಮಧ್ಯದಲ್ಲಿ ಯುದ್ಧದಲ್ಲಿ ಕೃಷ್ಣಾರ್ಜುನರನ್ನು ಸೋಲಿಸುವವನು ಒಬ್ಬನೂ ಇರಲಿಲ್ಲ.
ತಯೋರ್ಬಲಾತ್ ಪರಿತ್ರಾತುಂ ತಂ ಚ ದಾವಂ ಯದಾ ಸುರಾಃ |
ನಾಶಕ್ನುವನ್ ಶಮಯಿತುಂ ತದಾಽಭೂವನ್ ಪರಾಙ್ಮುಖಾಃ ॥
ಪ್ರಾಣಿಗಳನ್ನು ಅವರಿಬ್ಬರ ಬಲದಿಂದ ಮೋಚನೆಮಾಡಲು ಅಥವಾ ಖಾಂಡವವನವನ್ನು ಅಗ್ನಿಯಿಂದ ಮೋಚನೆಮಾಡಲು ಅಸಮರ್ಥರಾದಾಗ ದೇವತೆಗಳು ಯುದ್ಧದಿಂದ ವಿಮುಖರಾದರು.
ಶತಕ್ರತುಸ್ತು ಸಂಪ್ರೇಕ್ಷ್ಯ ವಿಮುಖಾನ್ ದೇವತಾಗಣಾನ್ |
ಬಭೂವಾವಸ್ಥಿತಃ ಪ್ರೀತಃ ಪ್ರಶಂಸನ್ ಕೃಷ್ಣಪಾಂಡವೌ ॥11॥
ಇಂದ್ರನು ದೇವತೆಗಳ ಸಮೂಹವು ವಿಮುಖವಾದುದನ್ನು ನೋಡಿ ಕೃಷ್ಣಪಾಂಡವರನ್ನು ಸಂತೋಷದಿಂದ ಪ್ರಶಂಸೆಮಾಡುತ್ತಾ ಅಲ್ಲಿಯೇ ನಿಂತನು.
ವಿನಿವೃತ್ತೇಷು ದೇವೇಷು ವಾಗುವಾಚಾಶರೀರಿಣೀ |
ಶತಕ್ರತುಮಭಿಪ್ರೇಕ್ಷ್ಯ ತದಾ ಗಂಭೀರನಿಸ್ವನಾ ॥12॥
ದೇವತೆಗಳು ನಿವೃತ್ತರಾದ ಮೇಲೆ ಗಂಭೀರನಾದವುಳ್ಳ ಒಂದು ಅಶರೀರವಾಣಿಯು ಇಂದ್ರನನ್ನು ಉದ್ದೇಶಿಸಿ ಹೀಗೆ ಹೇಳಿತು.
ನ ತೇ ಸಖಾ ಸನ್ನಿಹಿತಸ್ತಕ್ಷಕಃ ಪನ್ನಗೋತ್ತಮಃ |
ದಾಹಕಾಲೇ ಖಾಂಡವಸ್ಯ ಕುರುಕ್ಷೇತ್ರಂ ಗತೋ ಹ್ಯಸೌ ॥13॥
ನಿನ್ನ ಸ್ನೇಹಿತನಾದ ಪನ್ನಗೇಂದ್ರನಾದ ತಕ್ಷಕನು ಇಲ್ಲಿ ಇರಲಿಲ್ಲ. ಖಾಂಡವದಹನಕಾಲದಲ್ಲಿ ಅವನು ಕುರುಕ್ಷೇತ್ರಕ್ಕೆ ಹೋಗಿದ್ದನು.
ನ ಚ ಶಕ್ಯೌ ತ್ವಯಾ ಜೇತುಂ ಯುದ್ಧೇಽಸ್ಮಿನ್ ಸಮವಸ್ಥಿತೌ |
ವಾಸುದೇವಾರ್ಜುನೌ ಶಕ್ರ ನಿಬೋಧೇದಂ ವಚೋ ಮಮ ॥14॥
ಇಂದ್ರನೇ, ಯುದ್ಧದಲ್ಲಿ ಜೊತೆಯಲ್ಲಿ ನಿಂತು ಎದುರಾದ ಈ ಕೃಷ್ಣಾರ್ಜುನರನ್ನು ಜಯಿಸಲು ನಿನಗೆ ಸಾಧ್ಯವಿಲ್ಲ. ಈ ನನ್ನ ಮಾತನ್ನು ಚೆನ್ನಾಗಿ ತಿಳಿ.
ನರನಾರಾಯಣಾವೇತೌ ತಾವೇತೌ ಲೋಕಭಾವನೌ |
ಭವಾನಪ್ಯಭಿಜಾನಾತಿ ಯದ್ವೀರ್ಯೌ ಯತ್ಪರಾಕ್ರಮೌ ॥15॥
ಲೋಕಭಾವನರಾದ ಈ ನರನಾರಾಯಣರು ಎಂತಹ ವೀರ್ಯವನ್ನೂ, ಎಂತಹ ಪರಾಕ್ರಮವನ್ನೂ ಹೊಂದಿದ್ದಾರೆಂದು ನೀನೂ ತಿಳಿದಿದ್ದೀಯೆ.
ನೈತೌ ಶಕ್ಯೌ ದುರಾಧರ್ಷೌ ವಿಜೇತುಮಮರೈರಪಿ |
ಅಪಿ ಸರ್ವೇಷು ಲೋಕೇಷು ಪುರಾಣಾವೃಷಿಸತ್ತಮೌ ॥16॥
ಪುರಾತನರಾದ, ಋಷಿಶ್ರೇಷ್ಠರಾದ, ಅದೃಶ್ಯರಾದ ಇವರಿಬ್ಬರನ್ನು ಎಲ್ಲ ಲೋಕಗಳಲ್ಲಿಯೂ ದೇವತೆಗಳೂ ಸಹ ಗೆಲ್ಲಲು ಸಾಧ್ಯವಿಲ್ಲ.
ಪೂಜನೀಯತಮಾವೇತಾವಪಿ ಸರ್ವೈಃ ಸುರಾಸುರೈಃ |
ಸಯಕ್ಷರಕ್ಷೋಗಂಧರ್ವನರ್ಗುಹ್ಯಕಿನ್ನರಪನ್ನಗೈಃ ॥17॥
ಇವರಿಬ್ಬರೂ ಎಲ್ಲಾ ಸುರಾಸುರರಿಂದಲೂ, ಯಕ್ಷರಿಂದಲೂ, ರಾಕ್ಷಸರಿಂದಲೂ, ಗಂಧರ್ವರಿಂದಲೂ, ಗುಹ್ಯಕರಿಂದಲೂ, ಕಿನ್ನರರಿಂದಲೂ ಮತ್ತು ಸರ್ಪಗಳಿಂದಲೂ ಪೂಜೆಗೆ ಅತ್ಯಂತ ಅರ್ಹರಾದವರು.
ತಸ್ಮಾದಿತಃ ಸುರೈಃ ಸಾರ್ಧಂ ಗಂತುಮರ್ಹಸಿ ವಾಸವ |
ದಿಷ್ಟಂ ಚಾಪ್ಯನುಪಶ್ಯೈತತ್ ಖಾಂಡವಸ್ಯ ಚ ನಾಶನಮ್ ॥18॥
ಇಂದ್ರನೇ, ಆದ್ದರಿಂದ ಖಾಂಡವವನದ ವಿನಾಶವು ಮೊದಲೇ ಕ್ಲುಪ್ತವಾಗಿದೆ ಎಂದು ತಿಳಿದು ದೇವತೆಗಳ ಜೊತೆಯಲ್ಲಿ ನೀನು ಹಿಂದಿರುಗುವುದು ಒಳ್ಳೆಯದು.
ವೈಶಂಪಾಯನಃ
ಇತಿ ವಾಕ್ಯಮುಪಶ್ರುತ್ಯ ತಥ್ಯಮಿತ್ಯಮರೇಶ್ವರಃ |
ರೋಷಾಮರ್ಷೌ ಸಮುತ್ಸೃಜ್ಯ ಸಂಪ್ರತಸ್ಥೇ ದಿವಂ ತದಾ ॥19॥
ದೇವರಾಜನಾದ ಇಂದ್ರನು ಈ ಮಾತುಗಳನ್ನು ಕೇಳಿ, ಅವುಗಳು ಸತ್ಯವೆಂದು ತಿಳಿದು, ರೋಷಾಮರ್ಷಗಳನ್ನು ತ್ಯಜಿಸಿ ಸ್ವರ್ಗಲೋಕಕ್ಕೆ ಹೊರಟನು.
ಸಂಪ್ರಸ್ಥಿತಂ ಮಹಾತ್ಮಾನಂ ಸರ್ವ ಏವ ದಿವೌಕಸಃ |
ತ್ವರಿತಾಃ ಸಹಿತಾ ರಾಜನ್ನನುಜಗ್ಮುಃ ಶತಕ್ರತುಮ್ ॥20॥
ರಾಜನೇ, ಮಹಾನುಭಾವನಾದ ಇಂದ್ರನು ಹಿಂದಿರುಗಿ ಹೊರಟಿದುದನ್ನು ನೋಡಿ, ಎಲ್ಲಾ ಸ್ವರ್ಗವಾಸಿಗಳೂ ಶೀಘ್ರವಾಗಿ ಅವನನ್ನು ಹಿಂಬಾಲಿಸಿದರು.
ದೇವರಾಜಂ ತಥಾ ಯಾಂತಂ ಸಹ ದೇವೈರುದೀಕ್ಷ್ಯ ತು |
ವಾಸುದೇವಾರ್ಜುನೌ ವೀರೌ ಸಿಂಹನಾದಂ ವಿನೇದತುಃ ॥21॥
ದೇವರಾಜನಾದ ಇಂದ್ರನು ದೇವತೆಗಳ ಜೊತೆಯಲ್ಲಿ ಹಿಂದಿರುಗುವುದನ್ನು ನೋಡಿದ ವೀರರಾದ ಕೃಷ್ಣಾರ್ಜುನರು ಸಿಂಹನಾದವನ್ನು ಮಾಡಿದರು.
ದೇವರಾಜೇ ಗತೇ ರಾಜನ್ ಪ್ರಹೃಷ್ಟೌ ಕೃಷ್ಣಪಾಂಡವೌ |

ನಿರ್ವಿಶಂಕೌ ಪುನರ್ದಾವಂ ದಾಹಯಾಮಾಸತುಸ್ತದಾ ॥22॥
ರಾಜನೇ, ದೇವರಾಜನು ಹಿಂದಿರುಗಿದ ಮೇಲೆ, ಕೃಷ್ಣಾರ್ಜುನರು ಸಂತೋಷಗೊಂಡು ಯಾವ ಭಯವೂ ಇಲ್ಲದೆ, ಪುನಃ ಖಾಂಡವವನವನ್ನು ಅಗ್ನಿಯಿಂದ ದಾಹಮಾಡಿಸಿದರು.
ಸ ಮಾರುತ ಇವಾಭ್ರಾಣಿ ನಾಶಯಿತ್ವಾಽರ್ಜುನಃ ಸುರಾನ್ ।
ವ್ಯಧಮಚ್ಛರಸಂಪಾತೈಃ ಪ್ರಾಣಿನಃ ಖಾಂಡವಾಲಯಾನ್ ॥23॥
ವಾಯುವು ಮೇಘಗಳನ್ನು ಚದುರಿಸಿದಂತೆ ಅರ್ಜುನನು ದೇವತೆಗಳನ್ನು ಚದುರಿಸಿ, ಖಾಂಡವನಿವಾಸಿಗಳಾದ ಪ್ರಾಣಿಗಳನ್ನು ತನ್ನ ಬಾಣಪ್ರಯೋಗದಿಂದ ನಾಶಮಾಡಿದನು.
ನ ಚ ಸ್ಮ ಕಿಂಚಿಚ್ಛಕ್ನೋತಿಽಭೂದ್ ಭೂತಂ ನಿಶ್ಚರಿತುಂ ತತಃ ।
ಸಂಭಾದ್ಯಮಾನಮಿಷುಭಿರಸ್ಯತಾ ಸವ್ಯಸಾಚಿನಾ ॥24॥
ಅರ್ಜುನನಿಂದ ಬಾಣಗಳಿಂದ ಸಂಪೂರ್ಣವಾಗಿ ಮುಚ್ಚಲ್ಪಟ್ಟ ಕಾರಣದಿಂದ ಯಾವೊಂದು ಪ್ರಾಣಿಯೂ ಖಾಂಡವವನದಿಂದ ಹೊರಗೆ ಬರಲು ಸಾಧ್ಯವಾಗಲಿಲ್ಲ.
ನಾಶಕಂಶ್ಚಾಪಿ ಭೂತಾನಿ ಮಹಾತ್ಮಾನಂ ರಣೇಽರ್ಜುನಮ್ ।
ನಿರೀಕ್ಷಿತುಮಮೋೀಷುಂ ಕರಿಷ್ಯಂತಿ ಕುತೋ ರಣಮ್ ॥25॥
ಯಾರಿಗೂ ಯುದ್ಧದಲ್ಲಿ ಮಹಾತ್ಮನಾದ ಅರ್ಜುನನನ್ನು ನೋಡುವುದಕ್ಕೂ ಸಾಧ್ಯವಾಗಲಿಲ್ಲ. ಇನ್ನು ಅವನ ಜೊತೆಯಲ್ಲಿ ಯುದ್ಧವನ್ನು ಹೇಗೆ ಮಾಡುತ್ತಾರೆ?
ಶತೇನೈಕಂ ಚ ವಿವ್ಯಾಧ ಶತಂ ಚೈಕೇನ ಪತ್ರಿಣಾ ।
ವ್ಯಸವಸ್ತೇ ಪತಂತ್ಯಗ್ನೌ ಸಾಕ್ಷಾತ್ ಕಾಲಹತಾ ಇವ ॥26॥
ಅರ್ಜುನನು ನೂರು ಬಾಣಗಳಿಂದ ಒಂದು ಪ್ರಾಣಿಯನ್ನು, ಒಂದು ಬಾಣದಿಂದ ನೂರು ಪ್ರಾಣಿಗಳನ್ನೂ ಹೊಡೆದು ಉರುಳಿಸಿದನು. ಸಾಕ್ಷಾತ್ ಯಮನ ಏಟಿಗೆ ಸಿಕ್ಕಿದಂತೆ ಆ ಪ್ರಾಣಿಗಳು ಪ್ರಾಣವನ್ನು ಕಳೆದುಕೊಂಡು ಅಗ್ನಿಯೊಳಗೆ ಬಿದ್ದವು.
ನ ಚಾಲಭಂತ ತೇ ಶರ್ಮ ರೋಧಃಸು ವಿಷಮೇಷು ಚ ।
ಪಿತೃದೇವನಿವಾಸೇಷು ಸಂತಾಪಶ್ಚೈವ ಜಾಯತೇ ॥27॥
ಕಾಡಿನ ಅಂಚುಗಳಲ್ಲಿಯೂ, ವಿಷಮಪ್ರದೇಶಗಳಲ್ಲಿಯೂ ಬಿದ್ದ ಆ ಪ್ರಾಣಿಗಳು ಎಂದೂ ಸುಖವನ್ನು ಪಡೆಯಲಿಲ್ಲ. ಪಿತೃನಿವಾಸಗಳಲ್ಲಿಯೂ, ದೇವನಿವಾಸಗಳಲ್ಲಿಯೂ ಸಂತಾಪವು ಉಂಟಾಯಿತು.
ಭೂತಸಂಘಸಹಸ್ರಾಣಿ ದೀನಾಶ್ಚಕ್ರುರ್ಮಹಾಸ್ವನಮ್ ।
ರುರುದುರ್ದಾರುಣಂ ಚೈವ ತಥಾನ್ಯೇ ಮೃಗಪಕ್ಷಿಣಃ ॥28॥
ಸಹಸ್ರಾರು ಪ್ರಾಣಿಸಮೂಹಗಳು ದೈನ್ಯದಿಂದ ಮಹಾನಾದವನ್ನು ಮಾಡಿದವು. ಇನ್ನೂ ಕೆಲವು ಮೃಗಪಕ್ಷಿಗಳು ದಾರುಣವಾಗಿ ರೋದನವನ್ನು ಮಾಡಿದವು.
ತೇನ ಶಬ್ದೇನ ವಿತ್ರೇಸುರ್ಗಂಗೋದಧಿಚರಾ ಝಷಾಃ ।
ಅಪ್ಸು ನ ವ್ಯಚರಂಶ್ಚೈವ ತಥಾಽನ್ಯೇ ಮೃಗಪಕ್ಷಿಣಃ ॥29॥
ಆ ಶಬ್ದದಿಂದ ಹೆದರಿದ ಮೀನುಗಳು ಗಂಗೆಯ ನೀರಿನೊಳಗೆ ತಾವು ಸಂಚರಿಸುವುದನ್ನು ನಿಲ್ಲಿಸಿದವು. ಉಳಿದ ಮೃಗಪಕ್ಷಿಗಳೂ ಸಂಚಾರವನ್ನು ನಿಲ್ಲಿಸಿ ಸ್ಥಗಿತವಾದವು.
ನ ಹ್ಯರ್ಜುನಂ ಮಹಾಬಾಹುಂ ನಾಪಿ ಕೃಷ್ಣಂ ಮಹಾಬಲಮ್ ।
ನಿರೀಕ್ಷಿತುಂ ಚ ಶಕ್ನೋತಿ ಕಶ್ಚಿದ್ ಯೋದ್ಧುಂ ಕುತಃ ಪುನಃ ॥30॥
ಮಹಾಬಾಹುವನ್ನಾದ ಅರ್ಜುನನನ್ನಾಗಲೀ, ಮಹಾಬಲನಾದ ಕೃಷ್ಣನನ್ನಾಗಲೀ ನೋಡಲು ಯಾರಿಗೂ ಧೈರ್ಯವಿರಲಿಲ್ಲ. ಇನ್ನು ಯುದ್ಧಮಾಡುವುದು ಎಲ್ಲಿಂದ?
ಏಕಾಯನಗತಾ ಯೇಽಪಿ ಉತ್ಪತಂತ್ಯತ್ರ ಕೇಚನ ।
ರಾಕ್ಷಸಾನ್ ದಾನವಾನ್ ನಾಗಾನ್ ಜಘ್ನೇ ಚಕ್ರೇಣ ತಾನ್ ಹರಿಃ ॥31॥
ತೇ ತು ಭಿನ್ನಶಿರೋದೇಹಾಶ್ಚಕ್ರವೇಗಾದ್ ಗತಾಸವಃ ।
ಪೇತುರಾಸ್ಯೇ ಮಹಾಕಾಯಾಃ ದೀಪ್ತಸ್ಯ ವಸುರೇತಸಃ ॥32|
ಒಂದೇ ಯಾನದಲ್ಲಿ ಕುಳಿತು ಮೇಲೆ ಹಾರುವ ರಾಕ್ಷಸರನ್ನೂ, ದಾನವರನ್ನೂ, ನಾಗಗಳನ್ನೂ, ಕೃಷ್ಣನು ತನ್ನ ಚಕ್ರದಿಂದ ಸಂಹರಿಸಿದನು. ಮಹಾಕಾಯರಾದ ಅವರು ತಲೆಗಳನ್ನು ಒಡೆದುಕೊಂಡು ಚಕ್ರವೇಗದಿಂದ ದೇಹಗಳು ಕತ್ತರಿಸಲ್ಪಟ್ಟು, ಪ್ರಾಣಗಳನ್ನು ಕಳೆದುಕೊಂಡು ಹಿರಣ್ಯರೇತನಾದ ಪ್ರಜ್ವಲಿಸುವ ಅಗ್ನಿಯ ಮುಖದಲ್ಲಿ ಬಿದ್ದರು.
ಸಮಾಂಸರುಧಿರೌಘೈಶ್ಚ ಮೇದೌಘೈಶ್ಚ ಸಮೀರಿತಃ ।
ಉಪರ್ಯಾಕಾಶಗೋ ವಹ್ನಿರ್ವಿಧೂಮ ಇವ ದೃಶ್ಯತೇ ॥33॥
ಮಾಂಸರುಧಿರ ಸಮೂಹಗಳಿಂದಲೂ, ಮೇದಸ್ಸಿನ ಸಮೂಹದಿಂದಲೂ, ಅಭಿವೃದ್ಧಿಗೊಂಡ ಅಗ್ನಿಯು ಮೇಲೆ ಆಕಾಶದಲ್ಲಿ ಧೂಮವೇ ಇಲ್ಲದಂತೆ ಪ್ರಕಾಶಿಸುತ್ತಿತ್ತು.
ದೀಪ್ತಾಕ್ಷೋ ದೀಪ್ತಜಿಹ್ವಶ್ಚ ದೀಪ್ತವ್ಯಾತ್ತಮಹಾನನಃ ।
ದೀಪ್ತೋರ್ಧ್ವಕೇಶಃ ಪಿಂಗಾಕ್ಷೋ ವಿಷ್ವಕ್ ಪ್ರಾಣಭೃತಾಂ ವರಃ ॥34॥
ತಾಂ ಸ ಕೃಷ್ಣಾರ್ಜುನಕೃತಾಂ ಸುಧಾಂ ಪ್ರಾಪ್ಯ ಹುತಾಶನಃ ।
ಬಭೂವ ಮುದಿತಃ ಸದ್ಯಃ ಪರಾಂ ನಿರ್ವೃತಿಮಾಗತಃ ॥35॥

ಉರಿಯುವ ಕಣ್ಣುಳ್ಳವನೂ, ಉರಿಯುವ ಜಿಹ್ವೆಯುಳ್ಳವನೂ, ಉರಿಯುವ ತೆರೆದ ದೊಡ್ಡ ಮುಖವನ್ನುಳ್ಳವನೂ, ಉರಿಯುವ ಊರ್ಧ್ವಕೇಶಗಳನ್ನುಳ್ಳವನೂ, ಪಿಂಗಾಕ್ಷನೂ, ಜೀವರಲ್ಲಿ ಶ್ರೇಷ್ಠನಾದವನೂ, ಆದ ವೈಶ್ವಾನರನು ಕೃಷ್ಣಾರ್ಜುನರು ಒದಗಿಸಿಕೊಟ್ಟ ಅಮೃತಾಹಾರವನ್ನು ಸ್ವೀಕರಿಸಿ ಸಂತೋಷಗೊಂಡು ತಕ್ಷಣದಲ್ಲಿ ಬಹಳ ತೃಪ್ತಿಯನ್ನು ಪಡೆದನು.
ಅಥಾಽಸುರಂ ಮಯಂ ನಾಮ ತಕ್ಷಕಸ್ಯ ನಿವೇಶನಾತ್ |
ವಿಪ್ರದ್ರವಂತಂ ಸಹಸಾ ದದರ್ಶ ಮಧುಸೂದನಃ ||36||
ತಮಗ್ನಿಃ ಪ್ರಾರ್ಥಯಾಮಾಸ ದಿಧಕ್ಷುರ್ವಾತಸಾರಥಿಃ |
ದೇಹವಾನ್ ವೈ ಜಟೀ ಭೂತ್ವಾ ನರ್ದಂಶ್ಚ ಜಲದೋ ಯಥಾ ||37||
ಆಗ ಮಧುಸೂದನನು ತಕ್ಷಕನ ನಿವೇಶನದಿಂದ ಹೊರಗೆ ಓಡಿಹೋಗುತ್ತಿರುವ ಮಯಾಸುರನನ್ನು ಇದ್ದಕ್ಕಿದ್ದಂತೆಯೇ ನೋಡಿದನು. ವಾತಸಾರಥಿಯಾದ ಅಗ್ನಿಯು ಅವನನ್ನು ದಹಿಸಲು ಬಯಸಿ ಕೃಷ್ಣನನ್ನು ಪ್ರಾರ್ಥಿಸಿದನು.
ಜಿಘಾಂಸುರ್ವಾಸುದೇವಶ್ಚ ಚಕ್ರಮುದ್ಯಮ್ಯ ವಿಷ್ಠಿತಃ |
ಸ ಚಕ್ರಮುದ್ಯತಂ ದೃಷ್ಟ್ವಾ ದಿಧಕ್ಷುಂ ಚ ಹುತಾಶನಮ್ ||38||
ಅಗ್ನಿಯು ದೇಹವನ್ನು ಧರಿಸಿ, ಜಟೆಯನ್ನೂ ಧರಿಸಿ, ಮೇಘದಂತೆ ಗರ್ಜಿಸುತ್ತಾ ಮಯನನ್ನು ಭಕ್ಷಿಸಲು ಬಯಸಿದನು. ವಾಸುದೇವನೂ ಸಹ ಚಕ್ರವನ್ನು ಎತ್ತಿಹಿಡಿದು ನಿಂತನು.
ಅಭಿಧಾಯಾರ್ಜುನೇತ್ಯೇವಂ ಮಯಶ್ಚುಕ್ರೋಶ ಭಾರತ |
ತಸ್ಯ ಭೀತಸ್ವನಂ ಶ್ರುತ್ವಾ ಮಾ ಭೈರಿತಿ ಧನಂಜಯಃ||39||
ಅವನು ಚಕ್ರವನ್ನು ಎತ್ತಿಹಿಡಿದ ವಾಸುದೇವನನ್ನೂ, ತನ್ನನ್ನು ತಿನ್ನಲು ಬಯಸಿದ ಅಗ್ನಿಯನ್ನೂ ನೋಡಿ, ಅರ್ಜುನ ಎಂದು ಗಟ್ಟಿಯಾಗಿ ಹೇಳಿ ಆ ಮಯನು ಕಿರುಚಿದನು.
ಪ್ರತ್ಯುವಾಚ ಮಯಂ ಪಾರ್ಥೋ ಜೀವಯನ್ನಿವ ಭಾರತ |
ಯಂ ನ ಭೇತವ್ಯಮಿತ್ಯಾಹ ಮಯಂ ಪಾರ್ಥೋ ದಯಾಪರಃ ||40||
ಅರ್ಜುನನು ಅವನ ಭಯಯುಕ್ತವಾದ ಸ್ವರವನ್ನು ಕೇಳಿ ಅವನನ್ನು ಪುನಶ್ಚೇತನಗೊಳಿಸುವಂತೆ ಹೆದರಬೇಡ ಎಂದು ಹೇಳಿದನು.
ತಂ ಪಾರ್ಥೇನಾಭಯೇ ದತ್ತೇ ನಮುಚೇರ್ಭ್ರಾತರಂ ಮಯಮ್|
ನ ಹಂತುಮೈಚ್ಛದ್ ದಾಶಾರ್ಹಃ ಪಾವಕೋ ನ ದದಾಹ ಚ ||41||
ದಯಾಪರನಾದ ಅರ್ಜುನನು ನಮುಚಿಯ ತಮ್ಮನಾದ ಮಯನಿಗೆ ಹೆದರಬೇಡ ಎಂದು ಹೇಳಿ ಅಭಯದಾನವನ್ನು ಮಾಡುತ್ತಿರಲು, ದಾಶಾರ್ಹನಾದ ಕೃಷ್ಣನು ಅವನನ್ನು ಕೊಲ್ಲಲು ಬಯಸಲಿಲ್ಲ. ಅಗ್ನಿಯೂ ಅವನನ್ನು ದಹಿಸಲಿಲ್ಲ.
ತದ್ವನಂ ಪಾವಕೋ ಧೀಮಾನ್ ದಿನಾನಿ ದಶ ಪಂಚ ಚ |
ದದಾಹ ಕೃಷ್ಣಪಾರ್ಥಾಭ್ಯಾಂ ರಕ್ಷಿತಃ ಪಾಕಶಾಸನಾತ್ ||42||
ಕೃಷ್ಣಾರ್ಜುನರಿಂದ ರಕ್ಷಿಸಲ್ಪಟ್ಟ ಮೇಧಾವಿಯಾದ ಅಗ್ನಿಯು ಇಂದ್ರನಿಂದ ರಕ್ಷಿಸಲ್ಪಟ್ಟ ಆ ಖಾಂಡವವನವನ್ನು ಹದಿನೈದು ದಿನಗಳ ಕಾಲ ದಹಿಸಿದನು.
ತಸ್ಮಿನ್ ವನೇ ದಹ್ಯಮಾನೇ ಷಡಗ್ನಿರ್ನ ದದಾಹ ಚ |
ಅಶ್ವಸೇನಂ ಮಯಂ ಚೈವ ಚತುರಃ ಶಾಂರ್ಗಕಾಂಸ್ತಥಾ ||43||
ಆ ವನವನ್ನು ಸುಡುತ್ತಿರುವಾಗ ಅಗ್ನಿಯು ಆರು ಜನರನ್ನು ಸುಡಲಿಲ್ಲ. ಅವರು ಅಶ್ವಸೇನ, ಮಯ ಮತ್ತು ಮರಿಗಳಾದ ನಾಲ್ಕು ಶಾಂರ್ಗಪಕ್ಷಿಗಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ದ್ವಾತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ||
|| ಇತಿ ಮಯದರ್ಶನಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-20
ದೈತ್ಯಾಶ್ಚ ನಾಗಾಶ್ಚ ಪಿಶಾಚಯಕ್ಷಾ
ಹತಾಃ ಸರ್ವೇ ತದ್ವನಸ್ಥಾ ಹಿ ತಾಭ್ಯಾಂ |
ಋತೇ ಚತುಷ್ಪಕ್ಷಿಣಶ್ಚಾಶ್ವಸೇನಂ
ಮಯಂ ಚ ನಾನ್ಯತ್ ಕಿಂಚಿದಾಸಾತ್ರ ಮುಕ್ತಂ ||239||
ದೈತ್ಯರು ನಾಗರು ಪಿಶಾಚರು ಯಕ್ಷರು ಮುಂತಾಗಿ ಆ ಕಾಡಿನಲ್ಲಿದ್ದ ಎಲ್ಲರೂ ಕೃಷ್ಣಾರ್ಜುನರಿಂದ ಹತರಾದರು. ನಾಲ್ಕು ಪಕ್ಷಿಗಳನ್ನೂ ಅಶ್ವಸೇನನನ್ನೂ ಮಯನನ್ನು ಬಿಟ್ಟರೆ ಬೇರೇನೂ ಅಲ್ಲಿ ಉಳಿಯಲಿಲ್ಲ.
ಅಯಮಗ್ನೇಜರಿತೇತ್ಯಾದಿಮಂತ್ರೈಃ
ಸ್ತುತ್ವಾ ವಹ್ನಿಂ ಪಕ್ಷಿಣೋ ನೋಪದಗ್ಧಾಃ |
ಸ ಚಾಶ್ವಸೇನಃ ಪುತ್ರಕಸ್ತಕ್ಷಕಸ್ಯ
ಮಾತ್ರಾ ಗ್ರಸ್ತಃ ಪ್ರಾತಿಲೋಮ್ಯೇನ ಕಂಠೇ ||240||
ಛಿನ್ನೇಽರ್ಜುನೇ ನಾಂತರಿಕ್ಷೇ ಪತಂತ್ಯಾ-

ಸ್ತಸ್ಯಾ ಶಕ್ರೇಣಾಮಿತಶ್ಛಿನ್ನಪುಚ್ಛಃ |
ವಧಾನ್ಮಾತುಃ ಪುಚ್ಛಭಂಗಾಚ್ಚ ರೋಷಾತ್
ಹಂತುಂ ಪಾರ್ಥಂ ಕರ್ಣತೂಣೀರಗೋಽಭೂತ್ ||241||
`ಅಯಮಗ್ನೇ ಜರಿತಾ' ಇತ್ಯಾದಿ ಮಂತ್ರಗಳಿಂದ ಅಗ್ನಿಯನ್ನು ಸ್ತೋತ್ರ ಮಾಡಿದ್ದರಿಂದ ಪಕ್ಷಿಗಳು ಸುಟ್ಟುಹೋಗಲಿಲ್ಲ. ಅಶ್ವಸೇನ ತಕ್ಷಕನ ಮಗ. ಅವನ ತಾಯಿ ಅವನನ್ನು ಹಿಂದು ಮುಂದಾಗಿ ನುಂಗಿ ಆಕಾಶದಲ್ಲಿ ಹಾರುತ್ತಿದ್ದಾಗ ಅವಳ ಕುತ್ತಿಗೆಯನ್ನು ಅರ್ಜುನ ಕತ್ತರಿಸಿದ. ಅದರಿಂದ ಅವನ ಬಾಲ ತುಂಡಾಯಿತು. ಆದರೆ ಅವನನ್ನು ಇಂದ್ರ ರಕ್ಷಿಸಿದ. ಅವನು, ತನ್ನ ತಾಯಿಯನ್ನು ಕೊಂದಿದ್ದಕ್ಕೆ ಮತ್ತು ತನ್ನ ಬಾಲವನ್ನೂ ಕತ್ತರಿಸಿದ್ದಕ್ಕೆ ಕೋಪದಿಂದ ಅರ್ಜುನನನ್ನು ಕೊಲ್ಲುವ ಉದ್ದೇಶದಿಂದ ಕರ್ಣನ ಬತ್ತಳಿಕೆಯನ್ನು ಸೇರಿಕೊಂಡ.
* * * *

ಇನ್ನೂರ ಮೂವತ್ತೂರನೆಯ ಅಧ್ಯಾಯ
(ಶಾಂರ್ಗಕಪಕ್ಷಿಗಳ ಅದಾಹಕ್ಕೆ ಕಾರಣಪ್ರಶ್ನೆ, ಮಂದಪಾಲಚರಿತೆ, ಮಕ್ಕಳಿಲ್ಲದ ಅವನಿಂದ ಶಾಂರ್ಗಕ- ಪಕ್ಷಿರೂಪವನ್ನು ಧರಿಸಿ ಮಕ್ಕಳ ಉತ್ಪಾದನೆ.)
ಜನಮೇಜಯಃ
ಕಿಮರ್ಥಂ ಶಾಂರ್ಗಕಾನಗ್ನಿರ್ನ ದದಾಹ ತಥಾಗತೇ |
ತಸ್ಮಿನ್ ವನೇ ದಹ್ಯಮಾನೇ ಬ್ರಹ್ಮನ್ನೇತದ್ ಪ್ರಚಕ್ಷ್ವಮೇ ||1||
ಬ್ರಾಹ್ಮಣಶ್ರೇಷ್ಠರೇ, ಖಾಂಡವವನವು ದಹಿಸಲ್ಪಡುತ್ತಿರುವ ಆ ಪರಿಸ್ಥಿತಿಯಲ್ಲಿ ಅಗ್ನಿಯು ಶಾಂರ್ಗಕಗಳನ್ನು ಏಕೆ ದಹಿಸಲಿಲ್ಲ. ಇದನ್ನು ನನಗೆ ತಿಳಿಸಿ.
ನಾಗಸ್ಯಾಪ್ಯಶ್ವಸೇನಸ್ಯ ದಾನವಸ್ಯ ಮಯಸ್ಯ ಚ |
ಕಾರಣಂ ಕೀರ್ತಿತಂ ಬ್ರಹ್ಮನ್ ಶಾಂರ್ಗಕಾಣಾಂ ನ ಕೀರ್ತಿತಮ್ ||2||
ಅಶ್ವಸೇನಸರ್ಪವು ಮತ್ತು ದಾನವನಾದ ಮಯನು ದಹಿಸಲ್ಪಡದಿರುವುದಕ್ಕೆ ಕಾರಣವನ್ನು ಹೇಳಿದ್ದೀರಿ. ಆದರೆ, ಬ್ರಾಹ್ಮಣಶ್ರೇಷ್ಠರೇ, ಶಾಂರ್ಗಕಗಳ ವಿಷಯದಲ್ಲಿ ಕಾರಣವನ್ನು ಹೇಳಲಿಲ್ಲ.
ತದೇತದದ್ಭುತಂ ಬ್ರಹ್ಮನ್ ಶಾಂರ್ಗಕಾಣಾಮನಾಶನಮ್ |
ಕೀರ್ತಯಸ್ವಾಗ್ನಿಸಮ್ಮರ್ದೇ ಕಥಂ ತೇ ನ ವಿನಾಶಿತಾಃ ||3||
ಬ್ರಾಹ್ಮಣರೇ, ಶಾಂರ್ಗಕಗಳ ಅದಾಹವು ಅದ್ಭುತವಾಗಿ ತೋರುತ್ತದೆ. ಅಂತಹ ಅಗ್ನಿಸಮ್ಮರ್ದವುಂಟಾದಾಗ ಅವು ಏಕೆ ದಹಿಸಲ್ಪಡಲಿಲ್ಲ ಎಂಬುದನ್ನು ಹೇಳಿ.
ವೈಶಂಪಾಯನಃ
ಯದರ್ಥಂ ಶಾಂರ್ಗಕಾನಗ್ನಿರ್ನ ದದಾಹ ತಥಾ ಗತೇ |
ತತ್ ತೇ ಸಮ್ಯಗ್ ಯಥಾವೃತ್ತಂ ಕಥಯಿಷ್ಯಾಮಿ ಭಾರತ ||4||
ಭಾರತನೇ, ಅಗ್ನಿಯು ಆ ಪರಿಸ್ಥಿತಿಯಲ್ಲಿ ಶಾಂರ್ಗಕಗಳನ್ನು ದಹಿಸದಿರುವುದಕ್ಕೆ ಕಾರಣವನ್ನು ಹೇಳುತ್ತಾ, ನಡೆದ ಘಟನೆಯನ್ನು ಸರಿಯಾಗಿ ಹೇಳುವೆನು.
ಧರ್ಮಜ್ಞಾನಾಂ ಮುಖ್ಯತಮಸ್ತಪಸ್ವೀ ಸಂಶಿತವ್ರತಃ |
ಆಸೀನ್ಮಹರ್ಷಿಃ ಶ್ರುತವಾನ್ ಮಂದಪಾಲ ಇತಿ ಶ್ರುತಃ ||5||
ಧರ್ಮಜ್ಞರಲ್ಲಿ ಶ್ರೇಷ್ಠನಾದವನೂ, ತಪಸ್ವಿಯೂ, ಶ್ರೇಷ್ಠವಾದ ವ್ರತಧಾರಿಯೂ, ಬಹುಶ್ರುತನೂ ಆದ ಮಂದಪಾಲನೆಂಬ ಮಹರ್ಷಿಯಿದ್ದನು.
ಮಾರ್ಗಂ ಸಮಾಸ್ಥಿತೋ ರಾಜನ್ ಋಷೀಣಾಮೂರ್ಧ್ವರೇತಸಾಮ್|
ಸ್ವಾಧ್ಯಾಯವಾನ್ ಧರ್ಮರತಸ್ತಪಸ್ವೀ ವಿಜಿತೇಂದ್ರಿಯಃ ||6||
ರಾಜನೇ, ಅವನು ಊರ್ಧ್ವರೇತಸ್ಕರಾದ ಋಷಿಗಳ ಮಾರ್ಗವನ್ನು ಹಿಡಿದು ಜಿತೇಂದ್ರಿಯನಾಗಿ ಸ್ವಾಧ್ಯಾಯವನ್ನು ಮಾಡುತ್ತಾ, ಧರ್ಮದಲ್ಲಿಯೂ ಮತ್ತು ತಪಸ್ಸಿನಲ್ಲಿಯೂ ರತನಾಗಿದ್ದನು.
ಸ ಗತ್ವಾ ತಪಸಾಂ ಪಾರಂ ದೇಹಮುತ್ಸೃಜ್ಯ ಭಾರತ |
ಜಗಾಮ ಪಿತೃಲೋಕಾಯ ನ ಲೇಭೇ ತತ್ರ ತತ್ಫಲಮ್ ||7||
ಅವನು ತಪಸ್ಸಿನ ಉನ್ನತಮಟ್ಟವನ್ನು ತಲುಪಿ, ದೇಹವನ್ನು ಪರಿತ್ಯಾಗಮಾಡಿ, ಪಿತೃಲೋಕಕ್ಕೆ ಹೋದನು. ಆದರೆ ಅಲ್ಲಿ ತನ್ನ ತಪಸ್ಸಿನ ಫಲವನ್ನು ಪಡೆಯಲಿಲ್ಲ.
ಸ ಲೋಕಾನಾವೃತಾನ್ ದೃಷ್ಟ್ವಾ ತಪಸಾ ನಿರ್ಜಿತಾನಪಿ |
ಪಪ್ರಚ್ಛ ಧರ್ಮರಾಜಸ್ಯ ಸಮೀಪಸ್ಥಾನ್ ದಿವೌಕಸಃ ||8||
ಅವನು ತಾನು ತಪಸ್ಸಿನಿಂದ ಸಂಪಾದಿಸಿದ ಲೋಕಗಳು ತನಗೆ ಮುಚ್ಚಲ್ಪಟ್ಟಿರುವುದನ್ನು ನೋಡಿ ಧರ್ಮರಾಜನ ಸಮೀಪದಲ್ಲಿದ್ದ ದೇವತೆಗಳನ್ನು ಕೇಳಿದನು.
ಮಂದಪಾಲಃ
ಕಿಮರ್ಥಮಾವೃತಾ ಲೋಕಾ ಮಯೇಹ ತಪಸಾಽರ್ಜಿತಾಃ |
ಕಿಂ ಮಯಾ ನ ಕೃತಂ ತತ್ರ ಯಸ್ಯೇದಂ ಕರ್ಮಣಃ ಫಲಮ್ ||9||

ನಾನು ತಪಸ್ಸಿನಿಂದ ಜಯಿಸಿದ ಲೋಕಗಳು ನನಗೆ ಏಕೆ ಮುಚ್ಚಲ್ಪಟ್ಟಿವೆ. ನಾನು ಯಾವ ಕರ್ಮವನ್ನು ಮಾಡದೇ ಇದ್ದುದರ ಫಲವಾಗಿ ಈ ಫಲವು ಉಂಟಾಗಿದೆ?
ತತ್ರಾಹಂ ತತ್ ಕರಿಷ್ಯಾಮಿ ಯದರ್ಥಮಿದಾಮಾವೃತಮ್ |
ಫಲಮೇತಸ್ಯ ತಪಸಃ ಕಥಯಧ್ವಂ ದಿವೌಕಸಃ ॥10॥
ನಾನು ಭೂಮಿಗೆ ಹೋಗಿ ಈ ಆವರಣವನ್ನು ತೆಗೆಯುವ ಕ್ರಮವನ್ನು ಮಾಡುತ್ತೇನೆ. ದೇವತೆಗಳೇ, ಈ ತಪಸ್ಸಿನ ಫಲವನ್ನು ಹೇಳಿ.
ದೇವಾಃ
ಋಣಿನೋ ಮಾನವಾ ಬ್ರಹ್ಮನ್ ಸರ್ವೇ ಜಾಯಂತಿ ತಚ್ಛೃಣು |
ಬ್ರಹ್ಮಚರ್ಯೇಣ ಯಜ್ಞೇನ ಪ್ರಜಯಾ ಚ ನ ಸಂಶಯಃ ॥11॥
ತದಪಾಕ್ರಿಯತೇ ಸರ್ವಂ ಯಜ್ಞೇನ ತಪಸಾ ಸುತೈಃ |
ತಪಸ್ವೀ ಯಜ್ಞಕೃಚ್ಚಾಸಿ ನ ಚ ತೇ ವಿದ್ಯತೇ ಪ್ರಜಾ ॥12॥
ಬ್ರಾಹ್ಮಣನೇ, ಅದನ್ನು ಕೇಳು. ಎಲ್ಲ ಮನುಷ್ಯರೂ ಹುಟ್ಟುತ್ತಾ ಮೂರು ಋಣಗಳನ್ನು ತೆಗೆದುಕೊಂಡು ಹುಟ್ಟುತ್ತಾರೆ. ಬ್ರಹ್ಮಚರ್ಯದಿಂದ, ಯಜ್ಞದಿಂದ ಮತ್ತು ಪ್ರಜೆಗಳಿಂದ ಆ ಋಣಗಳೆಲ್ಲವೂ ತೀರಿಸಲ್ಪಡುತ್ತವೆ. ನೀನು ಯಜ್ಞಗಳನ್ನು ಮಾಡಿ ತಪಸ್ವಿಯಾಗಿದ್ದರೂ, ನಿನಗೆ ಮಕ್ಕಳಿಲ್ಲ.
ತ ಇಮೇ ಪ್ರಸವಸ್ಯಾರ್ಥೇ ತವ ಲೋಕಾಃ ಸಮಾವೃತಾಃ |
ಪ್ರಜಾಯಸ್ವ ತತೋ ಲೋಕಾನುಪಭೋಕ್ತಾಸಿ ಶಾಶ್ವತಾನ್ ॥13॥
ನಿನಗೆ ಮಕ್ಕಳಿಲ್ಲದ ಕಾರಣ ಈ ಲೋಕಗಳು ಮುಚ್ಚಲ್ಪಟ್ಟಿವೆ. ನೀನು ಮಕ್ಕಳನ್ನು ಪಡೆ. ಅನಂತರ, ಶಾಶ್ವತವಾದ ಲೋಕಗಳನ್ನು ಅನುಭವಿಸುವಿ.
ಪುನ್ನಾಮ್ನೋ ನರಕಾತ್ ಪುತ್ರಸ್ತ್ರಾತೀತಿ ಪಿತರಂ ಮುನೇ |
ತಸ್ಮಾದಪತ್ಯಸಂತಾನೇ ಯತಸ್ವ ದ್ವಿಜಸತ್ತಮ ॥14॥
ಋಷಿಯೇ, ಪುತ್ ಎಂಬ ನರಕದಿಂದ ತಂದೆಯನ್ನು ರಕ್ಷಿಸುವ ಕಾರಣದಿಂದ ಮಗನನ್ನು ಪುತ್ರನೆಂದು ಕರೆಯುತ್ತಾರೆ. ದ್ವಿಜಶ್ರೇಷ್ಠನೇ, ಆದ್ದರಿಂದ ಮಕ್ಕಳನ್ನು ಪಡೆಯಲು ಪ್ರಯತ್ನಿಸು.
ವೈಶಂಪಾಯನಃ
ತಚ್ಛ್ರುತ್ವಾ ಮಂದಪಾಲಸ್ತು ತೇಷಾಂ ವಾಕ್ಯಂ ಮಹಾನೃಷಿಃ |
ಕ್ವ ತು ಶೀಘ್ರಮಪತ್ಯಂ ಸ್ಯಾದ್ ಬಹುಲಂ ಚೇತ್ಯಚಿಂತಯತ್ ॥15॥
ಅವರ ಮಾತನ್ನು ಕೇಳಿದ ಮಹರ್ಷಿಯಾದ ಮಂದಪಾಲನು ಹೇಗೆ ಶೀಘ್ರವಾಗಿ ಬಹಳ ಮಕ್ಕಳನ್ನು ಪಡೆಯಬಹುದು ಎಂದು ಚಿಂತಿಸಿದನು.
ಸ ಚಿಂತಯನ್ನಭ್ಯಗಚ್ಛತ್ ಬಹುಲಪ್ರಸವಾನ್ ಖಗಾನ್ |
ಶಾಂರ್ಗಿಕಾಂ ಶಾಂರ್ಗಕೋ ಭೂತ್ವಾ ಜರಿತಾಂ ಸಮುಪೇಯಿವಾನ್ ॥
ಸ ತಸ್ಯಾಂ ಜನಯಾಮಾಸ ಚತುರಃ ಶಂರ್ಗಕಾನೃಷೀನ್ |
ತಾನಪಾಸ್ಯ ಚ ತತ್ರೈವ ಜಗಾಮ ಲಪಿತಾಂ ಪ್ರತಿ ॥17॥
ಅವನು ಚಿಂತಿಸುತ್ತಾ, ಶಾಂರ್ಗಕಪಕ್ಷಿಗಳಿಗೆ ಬಹಳ ಮರಿಗಳಾಗುತ್ತವೆಂದು ನಿರ್ಧರಿಸಿದನು. ತಾನು ಶಾಂರ್ಗಕಪಕ್ಷಿಯ ರೂಪವನ್ನು ತೆಗೆದುಕೊಂಡು, ತನ್ನ ಪತ್ನಿಯಾದ ಜರಿತೆಯು ಆ ಪಕ್ಷಿಯ ಹೆಣ್ಣುರೂಪವನ್ನು ತೆಗೆದುಕೊಳ್ಳುವಂತೆ ಮಾಡಿ ಅವಳ ಸಮಾಗಮವನ್ನು ಮಾಡಿ ಅವಳಲ್ಲಿ ಋಷಿಗಳಾದ ನಾಲ್ಕು ಶಾಂರ್ಗಕಗಳನ್ನು ಉತ್ಪಾದಿಸಿದನು.
ಬಾಲಾನ್ ಸ ತಾನಂಡಗತಾನ್ ಸಹ ಮಾತ್ರಾ ಮುನಿರ್ವನೇ |
ತಸ್ಮಿನ್ ಗತೇ ಮಹಾಭಾಗೇ ಲಪಿತಾಂ ಪ್ರತಿ ಭಾರತ ॥18॥
ಆ ಋಷಿಯು ಇನ್ನೂ ಮೊಟ್ಟೆಯೊಳಗಿರುವ ಆ ಮಕ್ಕಳನ್ನು ತಾಯಿಯ ಜೊತೆಯಲ್ಲಿ ಆ ಕಾಡಿನಲ್ಲಿಯೇ ಬಿಟ್ಟು ತನ್ನ ಇನ್ನೊಬ್ಬ ಪತ್ನಿಯಾದ ಲಪಿತೆಯ ಬಳಿ ಹೋದನು.
ಅಪತ್ಯಸ್ನೇಹಸಂವಿಗ್ನಾ ಜರಿತಾ ಬಹ್ವಚಿಂತಯತ್ |
ತೇನ ತ್ಯಕ್ತಾನಸಂತ್ಯಾಜ್ಯಾನ್ ಋಷೀನಂಡಗತಾನ್ ವನೇ ॥19॥
ಭಾರತನೇ, ಆ ಮಹಾನುಭಾವನಾದ ಋಷಿಯು, ಲಪಿತೆಯ ಬಳಿ ಹೋಗುತ್ತಿರಲು, ಋಷಿಗಳಾದ ತನ್ನ ಮಕ್ಕಳ ಮೇಲಿನ ಸ್ನೇಹದಿಂದ ಉದ್ವಿಗ್ನಳಾದ ಜರಿತೆಯು ವನದಲ್ಲಿ ಬಹುವಾಗಿ ಚಿಂತಿಸಿದಳು.
ನಾಜಹಾತ್ ಪುತ್ರಕಾನ್ ತಾನ್ ಸ್ಮ ಜರಿತಾ ಖಾಂಡವೇ ನೃಪ |
ಬಭಾರ ಚೈತಾನ್ ಸಂಜಾತಾನ್ ಸ್ವಪುತ್ರಾನ್ ಸ್ನೇಹವದ್ ದ್ವಿಜ ॥20॥
ರಾಜನೇ, ಮಂದಪಾಲನಿಂದ ತ್ಯಜಿಸಲ್ಪಟ್ಟ ಪರಿತ್ಯಾಗಾನರ್ಹರಾದ ಮೊಟ್ಟೆಯೊಳಗಿರುವ ತನ್ನ ಪುತ್ರರಾದ ಋಷಿಗಳನ್ನು ಜರಿತೆಯು ಆ ಕಾಡಿನಲ್ಲಿ ಒಂದು ಕ್ಷಣವೂ ಬಿಟ್ಟು ಅಗಲಲಿಲ್ಲ. ಅವರು ಮೊಟ್ಟೆಯೊಡೆದು ಬಂದ ಮೇಲೆ, ಆ ತನ್ನ ಮಕ್ಕಳನ್ನು ಪ್ರೀತಿಯಿಂದ ಸಾಕಿದಳು.
ತತೋಽಗ್ನಿಂ ಖಾಂಡವಂ ದಗ್ಧುಮಾಯಾಂತಂ ದೃಷ್ಟವಾನೃಷಿಃ |
ಮಂದಪಾಲಶ್ಚರಂಸ್ತಸ್ಮಿನ್ ವನೇ ಲಪಿತಯಾ ಸಹ ॥21॥
ಅನಂತರ, ಆ ಕಾಡಿನಲ್ಲಿ ಲಪಿತೆಯ ಜೊತೆಯಲ್ಲಿ ಸಂಚರಿಸುತ್ತಾ ಮಂದಪಾಲಋಷಿ ಖಾಂಡವವನವನ್ನು ದಹಿಸಲು ಬರುತ್ತಿದ್ದ ಅಗ್ನಿಯನ್ನು ನೋಡಿದನು.

ತಂ ಸಂಕಲ್ಪಂ ವಿದಿತ್ವಾಸ್ಯ ಜ್ಞಾತ್ವಾ ಪುತ್ರಾಂಶ್ಚ ಬಾಲಕಾನ್ |
ಮಹರ್ಷಿರ್ಮಂದಪಾಲೋಽಸೌ ವಹ್ನಿಂ ಸ್ತೋತುಂ ಪ್ರಚಕ್ರಮೇ ॥22॥
ಅಗ್ನಿಯ ಆ ಸಂಕಲ್ಪವನ್ನು ತಿಳಿದ ಅವನು ತನ್ನ ಮಕ್ಕಳು ಇನ್ನೂ ಚಿಕ್ಕವರೆಂದು ಗಮನಿಸಿ, ಅಗ್ನಿಯನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು.
ಸೋಽಭಿತುಷ್ಟಾವ ವಿಪ್ರರ್ಷಿರ್ಬ್ರಾಹ್ಮಣಂ ಜಾತವೇದಸಮ್ |
ಪುತ್ರಾನ್ ಪ್ರತಿ ವದನ್ ಭೀತೋ ಲೋಕಪಾಲಂ ಮಹೌಜಸಮ್ ॥23॥
ಮಂದಪಾಲಋಷಿಯು ಬ್ರಾಹ್ಮಣರೂಪದಲ್ಲಿದ್ದ ಮಹಾಸಾಮರ್ಥ್ಯವುಳ್ಳ, ಲೋಕಪಾಲನಾದ ಆ ಅಗ್ನಿಯನ್ನು ತನ್ನ ಮಕ್ಕಳ ಕ್ಷೇಮದ ವಿಷಯದಲ್ಲಿ ಹೆದರಿ ಸ್ತೋತ್ರಮಾಡಿದನು.
ಮಂದಪಾಲಃ
ತ್ವಮಗ್ನೇ ಸರ್ವಲೋಕಾನಾಂ ಮುಖಂ ತ್ವಮಸಿ ಹವ್ಯವಾಟ್ |
ತ್ವಮಂತಃ ಸರ್ವಭೂತಾನಾಂ ಗೂಢಶ್ಚರಸಿ ಪಾವಕ ॥24॥
ಅಗ್ನಿಯೇ, ನೀನು ಎಲ್ಲಾ ಲೋಕಗಳಿಗೆ ಮುಖವಾಗಿದ್ದೀಯೆ. ನೀನು ದೇವತೆಗಳಿಗೆ ಹವಿಸ್ಸನ್ನು ತೆಗೆದುಕೊಂಡುಹೋಗಿ ಕೊಡುವವನು. ಪಾವಕನೇ, ನೀನು ಎಲ್ಲಾ ಪ್ರಾಣಿಗಳೊಳಗೆ ಅದೃಶ್ಯನಾಗಿ ಸಂಚರಿಸುತ್ತೀಯೆ.
ತ್ವಾಮೇಕಮಾಹುರ್ಮುನಯಸತ್ತ್ವಮಾಹುಸ್ತ್ರಿವಿಧಂ ಪುನಃ |
ತ್ವಾಮಷ್ಟಧಾ ಕಲ್ಪಯಿತ್ವಾ ಯಜ್ಞವಾಟಮಕಲ್ಪಯನ್ ॥25॥
ಋಷಿಗಳು ನಿನ್ನನ್ನು ಒಬ್ಬನೆಂದು ಹೇಳುತ್ತಾರೆ. ಪುನಃ ತ್ರೇತಾಗ್ನಿರೂಪನಾಗಿ ಮೂರು ವಿಧ ಎಂದು ಹೇಳುತ್ತಾರೆ. ನೀನು ಅಣಿಮಾದಿ ಅಷ್ಟೈಶ್ವರ್ಯಸಂಪನ್ನನೆಂದು ತಿಳಿದು ನಿನ್ನ ಆರಾಧನೆಗಾಗಿ ಯಜ್ಞಶಾಲೆಯನ್ನು ಕಲ್ಪಿಸುತ್ತಾರೆ.
ತ್ವಯಾ ಸೃಷ್ಟಮಿದಂ ಸರ್ವಂ ವದಂತಿ ಪರಮರ್ಷಯಃ |
ತ್ವದೃತೇ ಹಿ ಜಗತ್ ಸರ್ವಂ ಸದ್ಯೋ ನಶ್ಯೇದ್ ಹುತಾಶನ ॥26॥
ನೀನೇ ಈ ಜಗತ್ತನ್ನು ಸೃಷ್ಟಿಮಾಡಿದವನೆಂದು ಪರಮರ್ಷಿಗಳು ಹೇಳುತ್ತಾರೆ. ಅಗ್ನಿಯೇ, ನೀನಿಲ್ಲದಿದ್ದರೆ, ಈ ಜಗತ್ತು ತಕ್ಷಣವೇ ನಾಶವನ್ನು ಹೊಂದುತ್ತದೆ.
ಯಸ್ಯ ಕೃತ್ವಾ ನಮೋ ವಿಪ್ರಾಃ ಸ್ವಕರ್ಮವಿಹಿತಾಂ ಗತಿಮ್ |
ಗಚ್ಛಂತಿ ಸಹ ಪತ್ನೀಭಿಃ ಪುತ್ರೈರಪಿ ಚ ಶಾಶ್ವತೀಮ್ ॥27॥
ನಿನಗೆ ನಮಸ್ಕಾರವನ್ನು ಮಾಡಿ ಬ್ರಾಹ್ಮಣರು ತಮ್ಮ ಪತ್ನೀಪುತ್ರರ ಜೊತೆಯಲ್ಲಿ ತಮ್ಮ ಕರ್ಮಗಳಿಂದ ಸಂಪಾದಿಸಿದ ಶಾಶ್ವತವಾದ ಗತಿಯನ್ನು ಹೊಂದುತ್ತಾರೆ.
ತ್ವಾಮಗ್ನೇ ಜಲದಾನಾಹುಃ ಖೇ ವಿಷಕ್ತಾನ್ ಸವಿದ್ಯುತಃ |
ದಹಂತಿ ಸರ್ವಭೂತಾನಿ ತ್ವತ್ತೋ ನಿಷ್ಕ್ರಮ್ಯ ಹಾಯನಾಃ ॥28॥
ಅಗ್ನಿಯೇ, ಆಕಾಶದಲ್ಲಿ ಲಗ್ನವಾದ ಮಿಂಚುಗಳಿಂದ ಕೂಡಿದ ಮೋಡಗಳನ್ನು ನಿನ್ನ ರೂಪವೆಂದೇ ಹೇಳುತ್ತಾರೆ. ಚಲಿಸುವ ಮೋಡಗಳಿಂದ ಹೊರಟ ಮಿಂಚುಗಳು ನಿನ್ನಿಂದ ಹೊರಬಂದು ಎಲ್ಲಾ ಪ್ರಾಣಿಗಳನ್ನೂ ಸುಡುತ್ತವೆ.
ಜಾತವೇದಸ್ತ್ವಯ್ಯೈವೇದಂ ವಿಶ್ವಂ ಸೃಷ್ಟಂ ಮಹಾದ್ಯುತೇ |
ತವೈವ ಕರ್ಮ ವಿಹಿತಂ ಭೂತಂ ಸರ್ವಂ ಚರಾಚರಮ್ ॥29॥
ಜಾತವೇದನೇ, ಈ ಜಗತ್ತೆಲ್ಲವೂ ನಿನ್ನಿಂದಲೇ ಸೃಷ್ಟವಾಗಿದೆ. ಚರಾಚರವಾದ ಎಲ್ಲಾ ವಸ್ತುಗಳೂ ನಿನ್ನ ವ್ಯಾಪಾರದ ಸ್ಥಳವೇ ಆಗಿವೆ.
ತ್ವಯಾಽಽಪೋ ವಿಹಿತಾಃ ಪೂರ್ವಂ ತ್ವಯಿ ಸರ್ವಮಿದಂ ಜಗತ್ |
ತ್ವಯಿ ಹವ್ಯಂ ಚ ಕವ್ಯಂ ಚ ಯಥಾವತ್ ಸಂಪ್ರತಿಷ್ಠಿತಮ್ ॥30॥
ನೀನು ಮೊದಲು ಜಲವನ್ನು ಸೃಷ್ಟಿಸಿದೆ. ಈ ಜಗತ್ತೆಲ್ಲವೂ, ನಿನ್ನನ್ನು ಆಶ್ರಯಿಸಿದೆ. ಹವ್ಯಕವ್ಯಗಳೆಲ್ಲವೂ ಯಥಾರ್ಥವಾಗಿ ನಿನ್ನನ್ನೇ ಅವಲಂಬಿಸಿವೆ.
ತ್ವಮೇವ ದಹನೋ ದೇವ ತ್ವಂ ಧಾತಾ ತ್ವಂ ಬೃಹಸ್ಪತಿಃ |
ತ್ವಮಶ್ವಿನೌ ಯಮೌ ಮಿತ್ರಃ ಸೋಮಸ್ತ್ವಮಸಿ ಚಾನಿಲಃ ॥31॥
ಅಗ್ನಿಯೇ, ನೀನೇ ದಹನ, ನೀನೇ ಧಾತೃ, ನೀನೇ ಬೃಹಸ್ಪತಿ. ನೀನೇ ಅಶ್ವಿನಿದೇವತೆಗಳು. ಮಿತ್ರ, ಸೋಮ, ಅನಿಲ ಎಲ್ಲವೂ ನೀನೇ. (ಅಗ್ನಿಯ ಅಂತರ್ಯಾಮಿಯಾದ ಹರಿಯು ದಹನ, ಧಾತೃ ಮೊದಲಾದ ಎಲ್ಲಾ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ ಎಂದು ತಾತ್ಪರ್ಯ.)
ವೈಶಂಪಾಯನಃ
ಏವಂ ಸ್ತುತಸ್ತದಾ ತೇನ ಮಂದಪಾಲೇನ ಪಾವಕಃ |
ಹವ್ಯವಾಹಸ್ತು ನೃಪತೇ ಮುನೇರಮಿತತೇಜಸಃ |
ಉವಾಚ ಚೈನಂ ಪ್ರೀತಾತ್ಮಾ ಕಿಮಿಷ್ಟಂ ಕರವಾಣಿ ತೇ ॥32॥
ರಾಜನೇ, ಮಂದಪಾಲನಿಂದ ಹೀಗೆ ಸ್ತೋತ್ರಮಾಡಲ್ಪಟ್ಟ ಅಮಿತತೇಜಸ್ಸುಳ್ಳ ಮಂದಪಾಲಋಷಿಯ ಹವ್ಯವಾಹಕನಾದ ಅಗ್ನಿಯು ಸಂತೋಷದಿಂದ ಅವನನ್ನು ಕುರಿತು ನಿನಗೆ ಏನು ಪ್ರಿಯವನ್ನುಂಟುಮಾಡಲಿ ಎಂದು ಕೇಳಿದನು.
ತಮಬ್ರವೀನ್ಮಂದಪಾಲಃ ಪ್ರಾಂಜಲಿರ್ಹವ್ಯವಾಹನಮ್ |
ಸಂದಹನ್ ಖಾಂಡವೇ ದಾವಂ ಮಮ ಪುತ್ರಾನ್ ವಿಸರ್ಜಯ ॥33॥
ಮಂದಪಾಲನು ಅಗ್ನಿಗೆ ಕೈಗಳನ್ನು ಮುಗಿದು ಖಾಂಡವವನವನ್ನು ದಹಿಸುವಾಗ ನನ್ನ ಮಕ್ಕಳನ್ನು ಬಿಟ್ಟು ದಹಿಸಬೇಕು ಎಂದು

ಹೇಳಿದನು.
ತಥೇತಿ ತತ್ ಪ್ರತಿಶ್ರುತ್ಯ ಭಗವಾನ್ ಹವ್ಯವಾಹನಃ |
ಖಾಂಡವೇ ತೇನ ಕಾಲೇ ನ ಪ್ರಜಜ್ವಾಲ ದಿಧಕ್ಷಯಾ ॥34॥
ಹಾಗೆಯೇ ಆಗಲಿ ಎಂದು ಅವನಿಗೆ ವಾಗ್ದಾನ ಮಾಡಿದ್ದ ಪೂಜ್ಯನಾದ ಅಗ್ನಿಯು ಖಾಂಡವವನವನ್ನು ದಹಿಸುವ ಕಾಲದಲ್ಲಿ ಅವನ ಪುತ್ರರಾದ ಶಾಂರ್ಗಕಗಳನ್ನು ದಹಿಸಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ತ್ರಯಸ್ತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಮಯದರ್ಶನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಮೂವತ್ಮೂರನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ಮೂವತ್ನಾಲ್ಕನೆಯ ಅಧ್ಯಾಯ
(ಸಮೀಪಿಸುತ್ತಿರುವ ಅಗ್ನಿಯನ್ನು ನೋಡಿ ಜರಿತೆಯ ವಿಹ್ವಲತಾ, ಮಕ್ಕಳನ್ನು ಉಳಿಸಲು ಅವರ ಜೊತೆಯಲ್ಲಿ ಸಂವಾದ. ಮೂಷಿಕಬಿಲವನ್ನು ಪ್ರವೇಶಿಸಲು ಮಕ್ಕಳ ನಿರಾಕರಣೆ.)
ವೈಶಂಪಾಯನಃ
ತತಃ ಪ್ರಜ್ವಲಿತೇ ಶುಕ್ಲೇ ಶಾಂರ್ಗಕಾಸ್ತೇ ಸುದುಃಖಿತಾಃ |
ಬಭೂವುಃ ಪರಮೋದ್ವಿಗ್ನಾ ನಾಧಿಜಗ್ಮುಃ ಪರಾಯಣಮ್ ॥1॥
ಆಗ ಅಗ್ನಿಯು ಪ್ರಜ್ವಲಿಸುತ್ತಿರಲು ಆ ಶಾಂರ್ಗಕಗಳು ದುಃಖದಿಂದ ಕೂಡಿ ಬಹಳ ಉದ್ವಿಗ್ನವಾದವು. ಅವರಿಗೆ ಯಾವ ರಕ್ಷಕರೂ ಕಾಣಲಿಲ್ಲ.
ನಿಶಮ್ಯ ಪುತ್ರಕಾನ್ ಬಾಲಾನ್ ಮಾತಾ ತೇಷಾಂ ತಪಸ್ವಿನೀ |
ಜರಿತಾ ದುಃಖಶೋಕಾರ್ತಾ ವಿಲಲಾಪ ನರೇಶ್ವರ ॥2॥
ರಾಜನೇ, ತನ್ನ ಮಕ್ಕಳು ಇನ್ನೂ ಚಿಕ್ಕವರಾಗಿರುವುದನ್ನು ನೋಡಿ ತಪಸ್ವಿನಿಯಾದ ಅವರ ತಾಯಿಯಾದ ಜರಿತೆಯು ದುಃಖಶೋಕಗಳಿಂದ ಕೂಡಿ ವಿಲಾಪವನ್ನು ಮಾಡಿದಳು.
ಅಯಮಗ್ನಿರ್ದಹನ್ ಕಕ್ಷಮಿತ ಆಯಾತಿ ಭೀಷಣಃ |
ಜಗತ್ ಸಂದೀಪಯನ್ ಭೀಮೋ ಮಮ ದುಃಖವಿವರ್ಧನಃ ॥3॥
ಈ ಭಯಂಕರವಾದ ಅಗ್ನಿಯು ಕಾಡನ್ನು ಸುಡುತ್ತಾ ಈ ಕಡೆಗೇ ಬರುತ್ತಿದ್ದಾನೆ. ಜಗತ್ತನ್ನೇ ಸುಡುತ್ತಿರುವ ಈ ಅಗ್ನಿಯು ನನ್ನ ದುಃಖವನ್ನು ಹೆಚ್ಚಿಸುತ್ತಿದ್ದಾನೆ.
ಇಮೇ ಚ ಮಾರ್ಗಯಂತೀಹ ಶಿಶವೋ ಮಂದಚೇತಸಃ |
ಅಬರ್ಹಾಶ್ಚರಣೈರ್ಹೀನಾಃ ಪೂರ್ವೇಷಾಂ ನಃ ಪರಾಯಣಾಃ ॥4॥
ಮಂದಪ್ರಜ್ಞರಾದ ಇನ್ನೂ ರೆಕ್ಕೆಗಳೂ, ಪಾದಗಳೂ ಹುಟ್ಟದಿರುವ ನಮ್ಮ ಪೂರ್ವಜರಿಗೆ ಆಲಂಬನವಾದ ಈ ನನ್ನ ಮಕ್ಕಳು ಇಲ್ಲಿಯೇ ಏನನ್ನೋ ಹುಡುಕುತ್ತಿದ್ದಾರೆ.
ತ್ರಾಸಯಂಶ್ಚಾಯಮಾಯಾತಿ ಲೇಲಿಹಾನೋ ಮಹೀರುಹಾನ್ |
ಅಶಕ್ತಿಮಂತಶ್ಚ ಸುತಾ ಸರಣೇ ಗಮನೇ ಚ ಮೇ ॥5॥
ಈ ಅಗ್ನಿ ದೊಡ್ಡ ದೊಡ್ಡ ವೃಕ್ಷಗಳನ್ನೇ ಹೆದರಿಸುತ್ತಾ ಈ ಕಡೆಗೇ ಬರುತ್ತಿದ್ದಾನೆ. ನನ್ನ ಮಕ್ಕಳಾದರೋ ಚಲಿಸುವುದಕ್ಕೂ ಅಥವಾ ಮುಂದೆ ಹೋಗುವುದಕ್ಕೂ ಶಕ್ತಿಯಿಲ್ಲದವರು.
ಆದಾಯ ತಾನ್ ನಶಕ್ತಾಽಸ್ಮಿ ಪುತ್ರಾಂಸ್ತರಿತುಮಂತತಃ |
ನ ಚ ತ್ಯಕ್ತುಮಹಂ ಶಕ್ತಾ ಹೃದಯಂ ದೂಯತೀವ ಮೇ ॥6॥
ನನಗೆ ಈ ಮಕ್ಕಳನ್ನು ತೆಗೆದುಕೊಂಡು ಈ ಕಾಡನ್ನು ದಾಟಲು ಶಕ್ತಿಯಿಲ್ಲ. ಈ ಮಕ್ಕಳನ್ನು ಬಿಡಲೂ ನನಗೆ ಮನಸ್ಸಿಲ್ಲ. ನನ್ನ ಹೃದಯವು ದುಃಖದಿಂದ ಬಿರಿದುಹೋಗುತ್ತಿದೆ.
ಕಂ ನು ತ್ಯಜಾಮ್ಯಹಂ ಪುತ್ರಂ ಕಮಾದಾಯ ವ್ರಜಾಮ್ಯಹಮ್ |
ಕಿಂ ನು ಮೇ ಸ್ಯಾತ್ ಕೃತಂ ಕೃತ್ವಾ ಮನ್ಯಧ್ವಂ ಪುತ್ರಕಾಃ ಕಥಮ್ ॥7॥
ನಾನು ಯಾವ ಮಗನನ್ನು ಬಿಡಲಿ? ಯಾವ ಮಗನನ್ನು ತೆಗೆದುಕೊಂಡು ಹೋಗಲಿ? ಏನು ಮಾಡಿದರೆ ನಮಗೆ ಒಳ್ಳೆಯದಾಗುತ್ತದೆ? ಮಕ್ಕಳೇ ನಿಮ್ಮ ಅಭಿಪ್ರಾಯವೇನು?
ಚಿಂತಯಾನಾಽಪಿ ಮೋಕ್ಷಂ ವೈ ನಾಧಿಗಚ್ಛಾಮಿ ಕಿಂಚನ |
ಛಾದಯಿತ್ವಾ ಹಿ ವೋ ಗಾತ್ರೈಃ ಕರಿಷ್ಯೇ ಮರಣಂ ಸಹ ॥8॥
ಎಷ್ಟು ಯೋಚನೆ ಮಾಡಿದರೂ ಈ ಸಂಕಟದಿಂದ ಪಾರಾಗುವ ಉಪಾಯವು ಕಾಣುತ್ತಿಲ್ಲ. ನಿಮ್ಮೆಲ್ಲರನ್ನೂ ನನ್ನ ರೆಕ್ಕೆಗಳಿಂದ ಮುಚ್ಚಿಕೊಂಡು ನಾನು ಮರಣವನ್ನು ಹೊಂದುವೆನು.
ಜರಿತಾರೌ ಕುಲಂ ಹೀದಂ ಜ್ಯೇಷ್ಠೇ ತ್ವೇವ ಪ್ರತಿಷ್ಠಿತಮ್ |
ಸಾರಿಸೃಕ್ಕಃ ಪ್ರಜಾಯೇತ ಪಿತೄಣಾಂ ಕುಲವರ್ಧನಃ ॥9॥
ಸ್ತಂಬಮಿತ್ರಸ್ತಪಃ ಕುರ್ಯಾದ್ ದ್ರೋಣೋ ಬ್ರಹ್ಮವಿದುತ್ತಮಃ |
ಇತ್ಯೇವಮುಕತ್ವ ಪ್ರಯಯೌ ಪಿತಾ ವೋ ನಿರ್ಘೃಣಃ ಪುರಾ ॥10॥

ಹಿರಿಯ ಮಗನಾದ ಜರಿತಾರಿಯಲ್ಲಿ ಈ ವಂಶವು ಪ್ರತಿಷ್ಠಿತವಾಗಿದೆ, ಎರಡನೆಯ ಮಗನಾದ ಸಾರಿಸೃಕ್ಕನು ಮಕ್ಕಳನ್ನು ಪಡೆದು ಪಿತೃವಂಶವನ್ನು ಅಭಿವೃದ್ಧಿಪಡಿಸುತ್ತಾನೆ, ಮೂರನೆಯವನಾದ ಸ್ತಂಬಮಿತ್ರನು ತಪಸ್ಸನ್ನು ಮಾಡುತ್ತಾನೆ, ನಾಲ್ಕನೆಯವನಾದ ದ್ರೋಣನು ಶ್ರೇಷ್ಠನಾದ ಬ್ರಹ್ಮಜ್ಞಾನಿಯಾಗುತ್ತದೆ ಎಂದು ಹೇಳಿ ನಿರ್ದಯನಾದ ನಿಮ್ಮ ತಂದೆಯು ಹೊರಟುಹೋದನು.
ತ್ಯಕ್ತತ್ವಽಹಂ ಚರಿತುಂ ಬಾಲಾನ್ನ ಶಕ್ನೋಮಿ ತಪೋವನಾತ್ |
ಕಮುಪಾದಾಯ ಶಕ್ಯೇತ್ ಗಂತುಂ ಕಸ್ಯಾಪದುತ್ತಮಾ ॥11॥
ಈ ಮಕ್ಕಳನ್ನು ತಪೋವನದಲ್ಲಿಯೇ ಬಿಟ್ಟು ನಾನು ಹೊರಗೆ ಹೋಗಲಾರೆ. ನಾನು ಯಾರನ್ನು ಕರೆದುಕೊಂಡು ಹೋಗಲಿ? ವಿಪತ್ತು ಯಾರಿಗೆ ಹಿತವನ್ನುಂಟುಮಾಡುತ್ತದೆ?
ಕಿಂ ನು ಕೃತ್ವಾ ಕೃತಂ ಕಾರ್ಯಂ ಭವೇದಿತಿ ಚ ವಿಹ್ವಲಾ |
ನಾಪಶ್ಯತ್ ಸ್ವಧಿಯಾ ಮೋಕ್ಷಂ ಸ್ವಸುತಾನಾಂ ತದಾಽನಲಾತ್ ॥12॥
ಏನು ಮಾಡಿದರೆ ಒಳ್ಳೆಯದಾಗುತ್ತದೆ ಎಂದು ಚಿಂತಿಸುತ್ತಾ ವಿಹ್ವಲಳಾದ ಅವಳು ತನ್ನ ಮಕ್ಕಳನ್ನು ಅಗ್ನಿಯಿಂದ ಪಾರುಮಾಡಲು ತನ್ನ ಬುದ್ಧಿಯಿಂದ ಎಷ್ಟು ಯೋಚಿಸಿದರೂ, ಯಾವ ಉಪಾಯವನ್ನೂ ಕಾಣಲಿಲ್ಲ.
ಏವಂ ಬ್ರುವಂತೀಂ ಶಾಂರ್ಗಾಸ್ತೇ ಪ್ರತ್ಯೂಚುಶ್ಚ ಸ್ವಮಾತರಮ್ |
ಸ್ನೇಹಮುತ್ಸೃಜ್ಯ ಮಾತಸ್ತ್ವಂ ಪತ ಯತ್ರ ನ ಹವ್ಯವಾಟ್ ॥13॥
ಹೀಗೆ ಮಾತನಾಡುತ್ತಿದ್ದ ತಮ್ಮ ತಾಯಿಯನ್ನು ಕುರಿತು ಆ ಶಾಂರ್ಗಪಕ್ಷಿಗಳು ಹೇಳಿದವು. ಅಮ್ಮಾ ನಮ್ಮ ಮೇಲಿನ ಸ್ನೇಹವನ್ನು ತೊರೆದು ಅಗ್ನಿಯಿಲ್ಲದ ಕಡೆಗೆ ನೀನು ಹಾರಿಹೋಗು.
ಅಸ್ಮಾಸು ಹಿ ವಿನಷ್ಟೇಷು ಭವಿತಾರಃ ಸುತಾಸ್ತವ |
ತ್ವಯಿ ಮಾತರ್ವಿನಷ್ಟಾಯಾಂ ನ ತು ಸ್ಯಾತ್ ಕುಲಸಂತತಿಃ ॥14॥
ನಾವು ನಾಶವನ್ನು ಹೊಂದಿದರೂ ನಿನಗೆ ಬೇರೆ ಮಕ್ಕಳು ಜನಿಸುವರು. ನೀನು ನಾಶವನ್ನು ಹೊಂದಿದರೆ, ನಮ್ಮ ಕುಲದ ಸಂತತಿಯೇ ಉಂಟಾಗುವುದಿಲ್ಲ.
ಅನ್ವವೇಕ್ಷ್ಯೈತದುಭಯಂ ಕ್ಷೇಮಂ ಸ್ಯಾದ್ ಯತ್ ಕುಲಸ್ಯ ನಃ |
ತದ್ ವೈ ಕರ್ತುಂ ಪರಂ ಕಾಮೋ ಮಾತರೇಷ ಭವೇತ್ ತವ ॥15॥
ಅಮ್ಮಾ, ಈ ಎರಡು ಅಂಶಗಳನ್ನೂ ಗಮನಿಸಿ, ನಮ್ಮ ಕುಲದ ಕ್ಷೇಮವನ್ನೂ ಗಮನಿಸಿ ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಅದನ್ನು ಮಾಡಲು ನೀನು ನಿರ್ಧರಿಸು.
ಮಾ ವೈ ಕುಲವಿನಾಶಾಯ ಸ್ನೇಹಂ ಕಾರ್ಷೀಃ ಸುತೇಷು ತೇ |
ನ ಹೀದಂ ಕರ್ಮ ಮೋಘಂ ಸ್ಯಾಲ್ಲೋಕಕಾಮಸ್ಯ ನಃ ಪಿತುಃ ॥16॥
ನಿನ್ನ ಮಕ್ಕಳಲ್ಲಿ ಸ್ನೇಹವನ್ನು ಮಾಡಿ ಕುಲದ ವಿನಾಶವನ್ನು ಮಾಡಬೇಡ. ಪರಲೋಕಕಾಮನಾದ ನಮ್ಮ ತಂದೆಯು ನಿನ್ನನ್ನು ವಿವಾಹ ಮಾಡಿಕೊಂಡುದು ವ್ಯರ್ಥವಾಗದಿರಲಿ.
ಜರಿತಾ
ಇದಮಾಖೋರ್ಬಿಲಂ ಭೂಮೌ ವೃಕ್ಷಸ್ಯಾಸ್ಯ ಸಮೀಪತಃ |
ತದಾವಿಶಧ್ವಂ ತ್ವರಿತಾ ವಹ್ನೇರತ್ರ ನ ನೋ ಭಯಮ್ ॥17॥
ಈ ಮರದ ಸಮೀಪದಲ್ಲಿ ಇಲಿಯ ಒಂದು ಬಿಲವಿದೆ. ನೀವೆಲ್ಲರೂ ಬೇಗ ಅದರೊಳಗೆ ಹೋಗಿ. ಅಲ್ಲಿ ನಮಗೆ ಅಗ್ನಿಯ ಭಯವಿಲ್ಲ.
ತತೋಽಹಂ ಪಾಂಸುನಾ ಚ್ಛಿದ್ರಮಪಿಧಾಸ್ಯಾಮಿ ಪುತ್ರಕಾಃ |
ಏವಂ ಪ್ರತಿಕೃತಂ ಮನ್ಯೇ ಜ್ವಲಿತಾತ್ ಕೃಷ್ಣವರ್ತ್ಮನಃ ॥18॥
ಮಕ್ಕಳೇ, ಅನಂತರ ನಾನು ಆ ಬಿಲದ ದ್ವಾರವನ್ನು ಮಣ್ಣಿನಿಂದ ಮುಚ್ಚುವೆನು. ಹೀಗೆ ಮಾಡಿದರೆ, ಉರಿಯುತ್ತಿರುವ ಅಗ್ನಿಯಿಂದ ಪ್ರತೀಕಾರವು ದೊರೆಯುವುದೆಂದು ಭಾವಿಸುತ್ತೇನೆ.
ತತ ಏಷ್ಯಾಮ್ಯತೀತೇಽಗ್ನೌ ವಿಹಂತುಂ ಪಾಂಸುಸಂಚಯಮ್ |
ರೋಚತಾಮೇಷ ವೋ ಯೋಗೋ ವಿಮೋಕ್ಷಾಯ ಹುತಾಶನಾತ್ ॥
ಅಗ್ನಿಯು ಶಾಂತನಾದ ಮೇಲೆ ನಾನು ಪುನಃ ಬಂದು ಆ ಮುಚ್ಚಿರುವ ಮಣ್ಣನ್ನು ತೆಗೆಯುವೆನು. ಅಗ್ನಿಯಿಂದ ಪಾರಾಗಲು ನಾನು ಯೋಚಿಸಿರುವ ಈ ಉಪಾಯವು ನಿಮ್ಮ ಮನಸ್ಸಿಗೂ ಬರಲಿ.
ಶಾಂರ್ಗಕಾಃ
ಅಬರ್ಹಾನ್ ಮಾಂಸಭೂತಾನ್ ನಃ ಕ್ರವ್ಯಾದಾಖುರ್ವಿನಾಶಯೇತ್|
ಪಶ್ಯ ಮಾತರ್ಭಯಮಿದಂ ನ ಶಕ್ಷ್ಯಾಮ ನಿವಾರಿತುಮ್ ॥20॥
ರೆಕ್ಕೆಯು ಮೂಡದ ಮಾಂಸದಂತಿರುವ ನಮ್ಮನ್ನು ಮಾಂಸಹಾರಿಯಾದ ಇಲಿಯು ತಿಂದುಹಾಕಬಹುದು. ಅಮ್ಮಾ, ಈ ಭಯವನ್ನು ಗಮನಿಸು. ಇದನ್ನು ನಿವಾರಿಸಲು ನಾವು ಶಕ್ತರಾಗುವುದಿಲ್ಲ.
ಕಥಮಗ್ನಿರ್ನ ನೋ ಹನ್ಯಾತ್ ಕಥಮಾಖುರ್ನ ಭಕ್ಷಯೇತ್ |
ಕಥಂ ನ ಸ್ಯಾತ್ ಪಿತಾ ಮೋಘಃ ಕಥಂ ಮಾತಾ ಧ್ರಿಯೇತ ನಃ ॥21॥
ಅಗ್ನಿಯು ಹೇಗೆ ನಮ್ಮನ್ನು ದಹಿಸದೇ ಇದ್ದಾನು? ಇಲಿಯು ನಮ್ಮನ್ನು ಹೇಗೆ ಭಕ್ಷಿಸದೇ ಇದ್ದೀತು? ನಮ್ಮ ತಂದೆಯ ಸಂಕಲ್ಪವು ಹೇಗೆ ವ್ಯರ್ಥವಾಗದೇ ಇದ್ದೀತು? ನಮ್ಮ ತಾಯಿಯು ಹೇಗೆ ಬದುಕಿಯಾಳು?
ಬಿಲ ಆಖೋರ್ವಿನಾಶಃ ಸ್ಯಾದಗ್ನೇರಾಕಾಶಚಾರಿಣಾಮ್ |
ಅನ್ವವೇಕ್ಷ್ಯೈತದುಭಯಂ ಶ್ರೇಯಾನಾಖೋರ್ನ ಭಕ್ಷಣಮ್ ॥22॥

ಬಿಲದಲ್ಲಿ ಇಲಿಯಿಂದ ವಿನಾಶವು ಉಂಟಾಗುತ್ತದೆ. ಆಕಾಶದಲ್ಲಿ ಹಾರಿದರೆ ಅಗ್ನಿಯಿಂದ ವಿನಾಶವು ಉಂಟಾಗುತ್ತದೆ. ಇವೆರಡನ್ನೂ ಗಮನಿಸಿದರೆ, ಇಲಿಯಿಂದ ಮರಣವು ಎಂದೂ ಒಳ್ಳೆಯದಲ್ಲ.
ಗರ್ಹಿತಂ ಮರಣಂ ನಃ ಸ್ಯಾದಾಖುನಾ ಖಾದಿತೇ ಬಿಲೇ |
ಶಿಷ್ಟದೃಷ್ಟಃ ಪರಿತ್ಯಾಗಃ ಶರೀರಸ್ಯ ಹುತಾಶನೇ |
ಅಗ್ನಿದಾಹೇ ತು ನಿಯತಂ ಬ್ರಹ್ಮಲೋಕೇ ಧ್ರುವಾ ಗತಿಃ ॥23॥
ಇಲಿಯು ನಮ್ಮನ್ನು ಬಿಲದಲ್ಲಿ ಭಕ್ಷಿಸಿದರೆ, ನಮಗೆ ನಿಂದಿತವಾದ ಮರಣವು ಉಂಟಾಗುತ್ತದೆ. ಶರೀರವನ್ನು ಅಗ್ನಿಯಲ್ಲಿ ಪರಿತ್ಯಾಗ ಮಾಡುವುದು ಶಿಷ್ಟರ ಮಾರ್ಗದಲ್ಲಿ ಕಂಡುಬಂದಿದೆ. ಅಗ್ನಿಯಿಂದ ದಗ್ಧರಾದರೆ, ನಿಶ್ಚಯವಾಗಿ ಬ್ರಹ್ಮಲೋಕದಲ್ಲಿ ಶಾಶ್ವತವಾದ ಗತಿಯು ದೊರೆಯುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಚತುತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಮಯದರ್ಶನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಇನ್ನೂರ ಮೂವತ್ತೈದನೆಯ ಅಧ್ಯಾಯ
(ಇಲಿಯ ಬಿಲವನ್ನು ಪ್ರವೇಶಿಸಲು ತಾಯಿಯ ನಿರ್ಬಂಧ. ಮಕ್ಕಳಿಂದ ಅದರ ನಿರಾಕರಣೆ. ತಾಯಿಯು ಹೇಳಿದ ಶ್ಯೇನವೃತ್ತಾಂತದಲ್ಲಿ ಮಕ್ಕಳ ಅವಿಶ್ವಾಸ. ಜರಿತಾರಿಯಿಂದ ಅಗ್ನಿಯ ಸ್ತೋತ್ರ.)
ಜರಿತಾ
ಅಸ್ಮಾದ್ ಬಿಲಾನ್ನಿಷ್ಪತಿತಮಾಖುಂ ಶ್ಯೇನೋ ಜಹಾರ ತಮ್ |
ಕ್ಷುದ್ರಂ ಗೃಹೀತ್ವಾ ಪಾದಾಭ್ಯಾಂ ಭಯಂ ನ ಭವಿತಾ ತತಃ ॥1॥
ಈ ಬಿಲದಿಂದ ಹೊರಗೆ ಬಂದ ಇಲಿಯನ್ನು ಒಂದು ಶ್ಯೇನವು (ಗಿಡುಗವು) ಕಾಲುಗಳಲ್ಲಿ ಹಿಡಿದುಕೊಂಡು ಹಾರಿಹೋಯಿತು. ಆದ್ದರಿಂದ ಈ ಬಿಲದಲ್ಲಿ ಭಯವಿಲ್ಲ.
ಶಾಂರ್ಗಕಾಃ
ನ ವಿದ್ಮಹೇ ಹೃತಂ ಮಾತಃ ಶ್ಯೇನೇನಾಖುಂ ಕಥಂಚನ |
ಅನ್ಯೇಽಪಿ ಭವಿತಾರೋಽತ್ರ ತೇಭ್ಯೋಽಪಿ ಭಯಮೇವ ನಃ ॥2॥
ಅಮ್ಮಾ, ಶ್ಯೇನವು ಇಲಿಯನ್ನು ತೆಗೆದುಕೊಂಡುಹೋದ ವಿಷಯವು ನಮಗೆ ತಿಳಿದಿಲ್ಲ. ಬಿಲದಲ್ಲಿ ಬೇರೆ ಇಲಿಗಳೂ ಇರಬಹುದು. ಅವುಗಳಿಂದ ನಮಗೆ ಭಯವು ಇದ್ದೇ ಇದೆ.
ಸಂಶಯಂ ಹ್ಯಗ್ನಿರಾಗಚ್ಛೇದ್ ದೃಷ್ಟಂ ವಾಯೋರ್ನಿವರ್ತನಮ್ |
ಮೃತ್ಯುರ್ನೋ ಬಿಲವಾಸಿಭ್ಯೋ ಭವೇನ್ಮಾತರಸಂಶಯಃ ॥3॥
ಇಲ್ಲಿಗೆ ಅಗ್ನಿಯು ಬರುವುದು ಸಂದಿಗ್ಧವಾಗಿದೆ. ಏಕೆಂದರೆ ವಾಯುವಿನಿಂದ ಅಗ್ನಿಯು ಶಾಂತವಾಗುವುದುಂಟು. ಆದರೆ, ಬಿಲವಾಸಿಗಳಿಂದ ನಮಗೆ ಮೃತ್ಯುವುಂಟಾಗುವುದು ನಿಶ್ಚಿತವಾಗಿದೆ. ಇದರಲ್ಲಿ ಸಂಶಯವೇ ಇಲ್ಲ.
ನಿಃಸಂಶಯಾತ್ ಸಂಶಯಿತೋ ಮೃತ್ಯುರ್ಮಾತರ್ವಿಶಿಷ್ಯತೇ |
ಚರ ಖೇ ತ್ವಂ ಯಥಾನ್ಯಾಯಂ ಪುತ್ರಾನಾಪ್ಸ್ಯಸಿ ಶೋಭನಾನ್ ॥4॥
ನಿಸ್ಸಂಶಯ ಮೃತ್ಯುವಿಗಿಂತ ಸಂಶಯಗ್ರಸ್ತವಾದ ಮೃತ್ಯುವನ್ನು ಆರಿಸುವುದು ಒಳ್ಳೆಯದು. ನೀನು ಆಕಾಶಮಾರ್ಗದಲ್ಲಿ ಹಾರಿಹೋಗು. ನಿನಗೆ ಪುನಃ ಒಳ್ಳೆಯ ಮಕ್ಕಳು ಜನಿಸುವರು.
ಜರಿತಾ
ಅಹಂ ವೈ ಶ್ಯೇನಮಾಯಾಂತಮದ್ರಾಕ್ಷಂ ಬಿಲಮಂತಿಕಾತ್ |
ಸಂಚರಂತಂ ಸಮಾದಾಯ ಜಹಾರಾಖುಂ ಬಿಲಾದ್ ಬಲೀ ॥5॥
ನಾನು ಈ ಬಿಲದ ಹತ್ತಿರ ಶ್ಯೇನವು ಬಂದದ್ದನ್ನು ನೋಡಿದೆನು. ಬಿಲದಿಂದ ಹೊರಗೆ ಬಂದು ಸಂಚರಿಸುತ್ತಿದ್ದ ಇಲಿಯನ್ನು ಬಲಿಷ್ಠವಾದ ಶ್ಯೇನವು ಹಿಡಿದುಕೊಂಡು ಹೋಯಿತು.
ತಂ ಪತಂತಮಹಂ ಶ್ಯೇನಂ ತ್ವರಿತಾ ಪೃಷ್ಠಮನ್ವಗಾಮ್ |
ಆಶಿಷೋಽಸ್ಯ ಪ್ರಯುಂಜಾನಾ ಹರಂತಂ ಮೂಷಿಕಂ ಬಿಲಾತ್ ॥6॥
ಬಿಲದಿಂದ ಮೂಷಿಕವನ್ನು ಅಪಹರಿಸಿ ಹಾರಿಹೋಗುತ್ತಿದ್ದ ಶ್ಯೇನವನ್ನು ನಾನು ಅದಕ್ಕೆ ಆಶೀರ್ವಾದವನ್ನು ಮಾಡುತ್ತಾ ಶೀಘ್ರವಾಗಿ ಹಿಂಬಾಲಿಸಿದೆ.
ಯೋ ನೋ ದ್ವೇಷ್ಟಾರಮಾದಾಯ ಶ್ಯೇನರಾಜ ವಿಧಾವಸಿ |
ಭವ ತ್ವಂ ದಿವಮಾಸ್ಥಾಯ ನಿರಮಿತ್ರೋ ಹಿರಣ್ಮಯಃ ॥7॥
ಶ್ಯೇನರಾಜನೇ, ನಮ್ಮ ಶತ್ರುವನ್ನು ತೆಗೆದುಕೊಂಡು ಓಡಿಹೋಗುವ ನಿನಗೆ ಆಕಾಶದಲ್ಲಿ ಯಾವ ಶತ್ರುವೂ ಇಲ್ಲದಿರಲಿ. ನೀನು ಹಿರಣ್ಮಯನಾಗು.
ಸ ಯದಾ ಭಕ್ಷಿತಸ್ತೇನ ಕ್ಷುಧಿತೇನ ಪತತ್ರಿಣಾ |

ತದಾಽಹಂ ತಮನುಜ್ಞಾಪ್ಯ ಪ್ರತ್ಯುಪಾಯಾಂ ಗೃಹಾನ್ ಪ್ರತಿ ॥8॥
ಹಸಿದಿದ್ದ ಆ ಪಕ್ಷಿಯು ಇಲಿಯನ್ನು ಭಕ್ಷಿಸಿದ ಮೇಲೆ ನಾನು ಅದರ ಅನುಮತಿಯನ್ನು ಪಡೆದು ಮನೆಗೆ ಹಿಂದುರುಗಿದೆ.
ಪ್ರವಿಶಧ್ವಂ ಬಿಲಂ ಪುತ್ರಾ ವಿಸ್ರಬ್ಧಾ ನಾಸ್ತಿ ವೋ ಭಯಮ್ ।
ಶ್ಯೇನೇನ ಮಮ ಪಶ್ಯಂತ್ಯಾ ಹೃತ ಆಖುರ್ನ ಸಂಶಯಃ ॥9॥
ಮಕ್ಕಳೇ, ನಿಶ್ಶಂಕೆಯಿಂದ ಬಿಲವನ್ನು ಪ್ರವೇಶಿಸಿ. ನಿಮಗೆ ಭಯವಿಲ್ಲ. ನನ್ನ ಕಣ್ಣೆದುರಿಗೇ ಶ್ಯೇನವು ಸತ್ಯವಾಗಿ ಇಲಿಯನ್ನು ತೆಗೆದುಕೊಂಡು ಹೋಯಿತು.
ಶಾಂರ್ಗಕಾಃ
ನ ವಿದ್ಮಹೇ ವಯಂ ಮಾತರ್ಹೃತಮಾಖುಮಿತಃ ಪುರಾ ।
ಅವಿಜ್ಞಾಯ ನ ಶಕ್ಯಾಮಃ ಬಿಲಮಾವೇಶಿತುಂ ವಯಮ್ ॥10॥
ಅಮ್ಮಾ, ಶ್ಯೇನವು ಈ ಹಿಂದೆ ಇಲಿಯನ್ನು ತೆಗೆದುಕೊಂಡು ಹೋದುದನ್ನು ನಾವು ಅರಿಯೆವು. ಅದನ್ನು ತಿಳಿಯದೆ ನಾವು ಬಿಲವನ್ನು ಪ್ರವೇಶಿಸಲು ಸಾಧ್ಯವಿಲ್ಲ.
ಜರಿತಾ
ಅಹಂ ಹಿ ತಂ ವಿಜಾನಾಮಿ ಹೃತಂ ಶ್ಯೇನೇನ ಮೂಷಿಕಮ್ ।
ಅತ ಏವ ಭಯಂ ನಾಸ್ತಿ ಕ್ರಿಯತಾಂ ವಚನಂ ಮಮ ॥11॥
ನಾನು ಶ್ಯೇನವು ಇಲಿಯನ್ನು ತೆಗೆದುಕೊಂಡು ಹೋದದ್ದನ್ನು ನೋಡಿದ್ದೇನೆ. ಆದ್ದರಿಂದಲೇ ಭಯವಿಲ್ಲ. ನನ್ನ ಮಾತಿನಂತೆ ನಡೆದುಕೊಳ್ಳಿ.
ಶಾಂರ್ಗಕಾಃ
ನ ತ್ವಂ ಮಿಥ್ಯೋಪಚಾರೇಣ ಮೋಕ್ಷಯೇಥಾ ಭಯಂ ಮಹತ್ ।
ಸಮಾಕುಲೇಷು ಜ್ಞಾನೇಷು ನ ಬುದ್ಧಿಕೃತಮೇವ ತತ್ ॥12॥
ನೀನು ಸುಳ್ಳುಉಪಚಾರದ ಮಾತುಗಳಿಂದ ನಮ್ಮನ್ನು ಭಯದಿಂದ ಪಾರುಮಾಡಲು ಯೋಚಿಸಬೇಡ. ಜ್ಞಾನವು ಸಂದಿಗ್ಧವಾಗಿರುವಾಗ ತೆಗೆದುಕೊಳ್ಳುವ ನಿರ್ಧಾರವು ಒಳ್ಳೆಯದಾಗಿರುವುದಿಲ್ಲ.
ನ ಚೋಪಕೃತಮಸ್ಮಾಭಿರ್ನ ಚಾಸ್ಮಾನ್ ವೇತ್ಥ ಯೇ ವಯಮ್ ।
ಪೀಡ್ಯಮಾನಾನ್ ಭರಸ್ಯಸ್ಮಾನ್ ಕಾ ಸತೀ ಕೇ ವಯಂ ತವ ॥13॥
ನಾವು ನಿನಗೆ ಏನೂ ಉಪಕಾರವನ್ನು ಮಾಡಿಲ್ಲ. ನೀನು ನಮ್ಮನ್ನು ಯಾರು ಎಂದೂ ತಿಳಿದಿಲ್ಲ. ಕಷ್ಟಕ್ಕೆ ಸಿಲುಕಿರುವ ನಮ್ಮನ್ನು ಪೋಷಿಸಲು ಬಯಸುತ್ತಿದ್ದೀಯೆ. ಸಾಧ್ವಿಯಾದ ನೀನು ನಮಗೆ ಯಾರು? ನಾವು ನಿನಗೆ ಯಾರು?
ತರುಣೀ ದರ್ಶನೀಯಾಽಸಿ ಸಮರ್ಥಾ ಭರ್ತುರೇಷಣೇ ।
ಅನುಗಚ್ಛಸ್ವ ಭರ್ತಾರಂ ಪುತ್ರಾಂಲ್ಲಪ್ಸ್ಯಸಿ ಶೋಭನೇ ॥14॥
ನೀನು ತರುಣಿಯೂ, ಸುಂದರಿಯೂ, ಪತಿಯನ್ನು ನೋಡಿಕೊಳ್ಳುವ ಸಾಮರ್ಥ್ಯವುಳ್ಳವಳೂ ಆಗಿದ್ದೀಯೆ. ಶೋಭನಳೇ, ಪತಿಯನ್ನು ಅನುಸರಿಸಿಹೋಗು. ಮತ್ತೆ ಮಕ್ಕಳನ್ನು ಪಡೆಯುವಿ.
ವಯಮಗ್ನಿಂ ಸಮಾವಿಶ್ಯ ಲೋಕಾನ್ ಪ್ರಾಪ್ಸ್ಯಾಮಹೇ ಶುಭೇ ।
ಅಥಾಸ್ಮಾನ್ ನ ದಹೇದಗ್ನಿರಂಬಾಯಾಃ ಪುನರೇವ ನಃ ॥15॥
ಶುಭಳಾದವಳೇ, ನಾವು ಅಗ್ನಿಯನ್ನು ಪ್ರವೇಶಿಸಿ ಒಳ್ಳೆಯ ಲೋಕಗಳನ್ನು ಹೊಂದುವೆವು. ಅಮ್ಮಾ, ಒಂದುಪಕ್ಷ ಅಗ್ನಿಯು ನಮ್ಮನ್ನು ಸುಡದಿದ್ದರೆ, ನೀನು ಪುನಃ ನಮ್ಮ ಬಳಿಗೆ ಬಾ.
ವೈಶಂಪಾಯನಃ
ಏವಮುಕ್ತಾ ತತಃ ಶಾಂರ್ಗೀ ಪುತ್ರಾನುತ್ಸೃಜ್ಯ ಖಾಂಡವೇ ।
ಜಗಾಮ ತ್ವರಿತಾ ದೇಶಂ ಕ್ಷೇಮಮಗ್ನೇರನಾಶ್ರಯಮ್ ॥16॥
ಹೀಗೆ ಹೇಳಲ್ಪಟ್ಟ ಶಾಂರ್ಗೀಯು ಖಾಂಡವವನದಲ್ಲಿ ಮಕ್ಕಳನ್ನು ಬಿಟ್ಟು ಅಗ್ನಿಯಿಲ್ಲದ ಕ್ಷೇಮದ ದೇಶಕ್ಕೆ ಶೀಘ್ರವಾಗಿ ಹೊರಟುಹೋದಳು.
ತತಸ್ತೀಕ್ಷ್ಣಾರ್ಚಿರಭ್ಯಾಗಾಜ್ಜ್ವಲಿತೋ ಹವ್ಯವಾಹನಃ ।
ಯತ್ರ ಶಾಂರ್ಗಾ ಬಭೂವುಸ್ತೇ ಮಂದಪಾಲಸ್ಯ ಪುತ್ರಕಾಃ ॥17॥
ಅನಂತರ ಉಗ್ರವಾದ ಜ್ವಾಲೆಗಳಿಂದ ಕೂಡಿದ ಅಗ್ನಿಯು ಮಂದಪಾಲನ ಮಕ್ಕಳಾದ ಶಾಂರ್ಗಗಳು ಇದ್ದ ಕಡೆಗೆ ಬಂದನು.
ತತಸ್ತಂ ಜ್ವಲಿತಂ ದೃಷ್ಟ್ವಾ ಜ್ವಲನಂ ತೇ ವಿಹಂಗಮಾಃ ।
ವ್ಯಥಿತಾಃ ಕರುಣಾ ವಾಚಃ ಶ್ರಾವಯಾಮಾಸುರಂತಿಕಾತ್ ।
ಜರಿತಾರಿಸ್ತತೋ ವಾಕ್ಯಂ ಶ್ರಾವಯಾಮಾಸ ಪಾವಕಮ್ ॥18॥
ಜ್ವಲಿತವಾದ ಅಗ್ನಿಯನ್ನು ನೋಡಿ ಆ ಪಕ್ಷಿಗಳು ವ್ಯಥೆಯಿಂದ ಕೂಡಿ ಅಗ್ನಿಯ ಸಮೀಪದಲ್ಲಿ ನಿಂತು ಕರುಣಾಜನಕವಾದ ಮಾತುಗಳನ್ನು ಆಡಿದರು. ಜರಿತಾರಿಯು ಆಗ ಅಗ್ನಿಯನ್ನು ಸ್ತೋತ್ರಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಪಂಚತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಮಯದರ್ಶನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ

ಇನ್ನೂರ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ಮೂವತ್ತಾರನೆಯ ಅಧ್ಯಾಯ
(ಸಮೀಪದಲ್ಲಿ ಬರುತ್ತಿರುವ ಅಗ್ನಿಯನ್ನು ನೋಡಿ ಜರಿತಾರಿಯಾದಿಗಳ ಸ್ತೋತ್ರ. ಪ್ರಸನ್ನನಾದ ಅಗ್ನಿಯಿಂದ ಅವರ ಮೋಚನೆ.)
ಜರಿತಾರಿಃ
ಪುರತಃ ಕೃಚ್ಛ್ರಕಾಲಸ್ಯ ಧೀಮಾನ್ ಜಾಗರ್ತಿ ಪೂರುಷಃ |
ಸ ಕೃಚ್ಛ್ರಕಾಲಂ ಸಂಪ್ರಾಪ್ಯ ವ್ಯಥಾಂ ನೈವೈತಿ ಕರ್ಹಿಚಿತ್ ||1||
ಮೇಧಾವಿಯಾದವನು ಕಷ್ಟಕಾಲವು ಬರುವುದಕ್ಕಿಂತ ಮುಂಚೆಯೇ, ಎಚ್ಚರಿಕೆಯಿಂದಿರುತ್ತಾನೆ. ಅಂತಹವನು ಕಷ್ಟಕಾಲವು ಬಂದಾಗ ವ್ಯಥೆಪಡುವುದಿಲ್ಲ.
ಯಸ್ತು ಕೃಚ್ಛ್ರಮಸಂಪ್ರಾಪ್ತಂ ವಿಶ್ವಾಸಾನ್ನಾವಬುಧ್ಯತೇ |
ಸ ಕೃಚ್ಛ್ರಕಾಲೇ ವ್ಯಥಿತೋ ನ ಪ್ರಜಾನಾತಿ ಕಿಂಚನ ||2||
ಯಾವನು ಕಷ್ಟಕಾಲವು ಬರುವುದಕ್ಕಿಂತ ಮುಂಚೆ ಕೆಟ್ಟಧೈರ್ಯವನ್ನು ಹೊಂದಿ ಅದನ್ನು ನಿರೀಕ್ಷಿಸುವುದಿಲ್ಲವೋ, ಅವನು ಕಷ್ಟಕಾಲ ಬಂದಾಗ ವ್ಯಥೆಯನ್ನು ಪಡುತ್ತಾನೆ. ಆಗ ಅವನಿಗೆ ಏನೂ ತೋರುವುದಿಲ್ಲ.
ಸಾರಿಸೃಕ್ಕಃ
ಧೀರಸ್ತ್ವಮಸಿ ಮೇಧಾವೀ ಪ್ರಾಣಕೃಚ್ಛ್ರಮಿದಂ ಚ ನಃ |
ಶೂರಃ ಪ್ರಾಜ್ಞೋ ಬಹೂನಾಂ ಹಿ ಭವತ್ಯೇಕೋ ಗುಣಾಧಿಕಃ ||3||
ಜರಿತಾರಿಯೇ, ನೀನು ಧೀರನೂ, ಮೇಧಾವಿಯೂ ಆಗಿದ್ದೀಯೆ. ನಮಗೆ ಈಗ ಪ್ರಾಣಸಂಕಟವು ಬಂದೊದಗಿದೆ. ಅನೇಕಜನರಲ್ಲಿ ಒಬ್ಬನು ಶೂರನೂ, ಪ್ರಾಜ್ಞನೂ ಮತ್ತು ಗುಣಾಧಿಕನೂ ಆಗುತ್ತಾನೆ.
ಸ್ತಂಬಮಿತ್ರಃ
ಜ್ಯೇಷ್ಠಸ್ತಾತೋ ಭವತಿ ವೈ ಜ್ಯೇಷ್ಠೋ ಮುಂಚತಿ ಕೃಚ್ಛ್ರತಃ |
ಜ್ಯೇಷ್ಠಶ್ಚೇನ್ನ ಪ್ರಜಾನಾತಿ ಕನೀಯಾನ್ ಕಿಂ ಕರಿಷ್ಯತಿ ||4||
ಅಣ್ಣನು ತಂದೆಯಂತೆ ಇರುತ್ತಾನೆ. ಅಣ್ಣನು ಸಂಕಟಗಳಿಂದ ಪಾರುಮಾಡುತ್ತಾನೆ. ಅಣ್ಣನಿಗೇ ಉಪಾಯವು ತಿಳಿಯದಿದ್ದಾಗ ತಮ್ಮನು ಏನು ಮಾಡುವನು?
ದ್ರೋಣಃ
ಹಿರಣ್ಯರೇತಾಸ್ತ್ವರಿತೋ ಜ್ವಲನ್ನಾಯಾತಿ ನಃ ಕ್ಷಯಮ್ |
ಸಪ್ತಜಿಹ್ವೋಽನಲಃ ಕ್ಷಾಮೋ ಲೇಲಿಹಾನೋ ವಿಸರ್ಪತಿ ||5||
ಹಿರಣ್ಯರೇತನಾದ ಅಗ್ನಿಯು ಪ್ರಜ್ವಲಿಸುತ್ತಾ ನಮ್ಮ ನಿವಾಸದ ಕಡೆಗೆ ಬರುತ್ತಿದ್ದಾನೆ. ಸಪ್ತಜಿಹ್ವನಾದ ಹಸಿದ ಅಗ್ನಿಯು ತುಟಿಗಳನ್ನು ಸವರಿಕೊಳ್ಳುತ್ತಾ ಈ ಕಡೆಗೇ ಬರುತ್ತಿದ್ದಾನೆ.
ವೈಶಂಪಾಯನಃ
ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಮ್ |
ತುಷ್ಟಾವ ಪ್ರಾಂಜಲಿರ್ಭೂತ್ವಾ ಯತ್ ತಚ್ಛೃಣು ನರಾಧಿಪ ||6||
ರಾಜನೇ, ತನ್ನ ತಮ್ಮಂದಿರಿಂದ ಹೀಗೆ ಹೇಳಲ್ಪಟ್ಟ ಜರಿತಾರಿಯು ಅಗ್ನಿದೇವನಿಗೆ ಕೈಗಳನ್ನು ಮುಗಿದು ಸ್ತೋತ್ರಮಾಡಿದನು. ನೀನು ಅದನ್ನು ಕೇಳು.
ಜರಿತಾರಿಃ
ಆತ್ಮಾ ಸ ವಾಯುಃ ಪವನ ಶರೀರಮುತ ವೀರುಧಃ |
ಯೋನಿರಾಪಶ್ಚ ತೇ ಶುಕ್ಲ ಯೋನಿಸ್ತ್ವಮಸಿ ಚಾಂಭಸಃ ||7||
ಪವಿತ್ರನಾದ ಅಗ್ನಿಯೇ, ಪರಮಾತ್ಮನೂ, ವಾಯುವೂ, ಶರೀರವೂ, ಲತೆಗಳೂ ಮತ್ತು ಪ್ರಳಯಕಾಲದ ಜಲವೂ ನಿನ್ನ ಉತ್ಪತ್ತಿಸ್ಥಾನಗಳು. ನೀನು ಜಲದ ಉತ್ಪತ್ತಿಗೆ ಕಾರಣನಾಗಿಯೂ ಇದ್ದೀಯೆ.
ಊರ್ಧ್ವಂ ಚಾಧಶ್ಚ ಗಚ್ಛಂತಿ ವಿಸರ್ಪಂತಿ ಚ ಪಾರ್ಶ್ವತಃ |
ಅರ್ಚಿಷಸ್ತೇ ಮಹಾವೀರ್ಯ ರಶ್ಮಯಃ ಸವಿತುರ್ಯಥಾ ||8||
ಮಹಾವೀರ್ಯಶಾಲಿಯೇ, ನಿನ್ನ ಜ್ವಾಲೆಗಳು ಸೂರ್ಯನ ಕಿರಣಗಳಂತೆ ಮೇಲ್ಮುಖವಾಗಿಯೂ ಮತ್ತು ಕೆಳಮುಖವಾಗಿಯೂ ಹೋಗುತ್ತವೆ ಮತ್ತು ಪಾರ್ಶ್ವಗಳಲ್ಲಿಯೂ ಹರಡುತ್ತವೆ.
ಸಾರಿಸೃಕ್ಕಃ
ಮಾತಾ ಪ್ರಪನ್ನಾ ಪಿತರಂ ನ ವಿದ್ಮಃ
ಪಕ್ಷಾಶ್ಚ ನೋ ನ ಸುಜಾತಾ ಭವಂತಿ |
ನ ನಸ್ತ್ರಾತಾ ವಿದ್ಯತೇ ವೈ ತ್ವದನ್ಯಃ
ತಸ್ಮಾದಸ್ಮಾನ್ ಪರಿಧತ್ಸ್ವೈಕವೀರ ||9||
ತಾಯಿಯು ದೂರ ಹೋಗಿದ್ದಾಳೆ. ತಂದೆಯು ಎಲ್ಲಿದ್ದಾನೋ ತಿಳಿಯದು. ನಮಗೆ ರೆಕ್ಕೆಗಳು ಇನ್ನೂ ಚೆನ್ನಾಗಿ ಬೆಳೆದಿಲ್ಲ. ನಿನ್ನನ್ನು ಬಿಟ್ಟು ನಮಗೆ ಯಾರೂ ರಕ್ಷಕರಿಲ್ಲ. ಏಕವೀರನೇ, ಆದ್ದರಿಂದ ನೀನೇ ನಮ್ಮನ್ನು ಧರಿಸಿ ರಕ್ಷಿಸು.
ಯದಗ್ನೇ ತೇ ಶಿವಂ ರೂಪಂ ಯೇ ಚ ತೇ ಸಪ್ತ ಹೇತಯಃ |

ತೇನ ನಃ ಪರಿರಕ್ಷೇಥಾಃ ಪೀಡಿತಾನ್ ಶರಣೈಷಿಣಃ ॥10॥
ಅಗ್ನಿಯೇ, ದುಃಖದಿಂದ ಕೂಡಿ ನಿನಗೆ ಶರಣಾಗತರಾದ ನಮ್ಮನ್ನು ನಿನ್ನ ಮಂಗಳವಾದ ರೂಪದಿಂದ ಮತ್ತು ನಿನ್ನ ಸಪ್ತ ಆಯುಧಗಳಿಂದ ರಕ್ಷಿಸು.
ತ್ವಮೇವೈಕಸ್ತಪಸಾಂ ಜಾತವೇದೋ
ನಾನ್ಯಸ್ತಪ್ತಾ ವಿದ್ಯತೇ ಗೋಷು ದೇವ |
ಋಷೀನಸ್ಮಾನ್ ಬಾಲಕಾನ್ ಪಾಲಯಸ್ವ
ಪರೇಣಾಸ್ಮಾನ್ ಪ್ರೇಹಿ ವೈ ಹವ್ಯವಾಹ ॥11॥
ಜಾತವೇದನೇ, ತಪನಶಕ್ತಿಯುಳ್ಳವರಲ್ಲಿ ನೀನು ಪ್ರಧಾನನಾದವನು. ದೇವನೇ, ಕಿರಣಗಳಿಂದ ದಹಿಸುವವರು ಬೇರೆ ಯಾರೂ ಇಲ್ಲ. ಋಷಿಗಳೂ, ಬಾಲಕರೂ ಆದ ನಮ್ಮನ್ನು ರಕ್ಷಿಸು. ಹವ್ಯವಾಹನೇ, ನಮ್ಮನ್ನು ದೂರದಿಂದ ಬಳಸಿಕೊಂಡು ಹೋಗು.
ಸ್ತಂಬಮಿತ್ರಃ
ಸರ್ವಮಗ್ನೇ ತ್ವಮೇವೈಕಸ್ತ್ವಯಿ ಸರ್ವಮಿದಂ ಜಗತ್ |
ತ್ವಂ ಧಾರಯಸಿ ಭೂತಾನಿ ಭುವನಂ ತ್ವಂ ಬಿಭರ್ಷಿ ಚ ॥12॥
ಅಗ್ನಿಯೇ, ನೀನೇ ಎಲ್ಲವೂ ಆಗಿದ್ದೀಯೆ. ಈ ಜಗತ್ತು ನಿನ್ನನ್ನು ಆಶ್ರಯಿಸಿ ನಿನ್ನ ಅಧೀನವಾಗಿಯೇ ಇದೆ. ನೀನೇ ಎಲ್ಲಾ ಪ್ರಾಣಿಗಳನ್ನೂ ಮತ್ತು ಲೋಕಗಳನ್ನೂ ಧರಿಸಿ ಪೋಷಿಸುತ್ತೀಯೆ.
ದ್ರೋಣಃ
ತ್ವಮಗ್ನೇ ಹವ್ಯವಾಟ್ ಚೈವ ತ್ವಮೇವ ಪರಮಾ ಗತಿಃ |
ಮನೀಷಿಣಸ್ತ್ವಾಂ ಯಜಂತೇ ಬಹುಧಾ ಚೈಕಧಾಽಪಿ ಚ ॥13॥
ಅಗ್ನಿಯೇ, ನೀನೇ ಹವ್ಯವಾಹಕನಾದವನು. ನೀನೇ ಪರಮಗಮ್ಯನಾದವನು. ವಿವೇಕಿಗಳಾದವರು ನಿನ್ನನ್ನು ಬಹುರೂಪಗಳಿಂದಲೂ, ಒಂದೇ ರೂಪದಿಂದಲೂ, ಅರ್ಚಿಸುತ್ತಾರೆ.
ಸೃಷ್ಟ್ವಾ ಲೋಕಾಂಸ್ತ್ರೀನಿಮಾನ್ ಹವ್ಯವಾಹ
ಕಾಲೇ ಪ್ರಾಪ್ತೇ ಪಚಸಿ ಪುನಃ ಸಮಿದ್ಧಃ |
ಸರ್ವಸ್ಯಾಸ್ಯ ಭುವನಸ್ಯ ಪ್ರಸೂತಿಃ
ತ್ವಮಗ್ನೇ ಭವಸಿ ಪುನಃ ಪ್ರತಿಷ್ಠಾ ॥14॥
ಹವ್ಯವಾಹನೇ, ನೀನು ಈ ಮೂರುಲೋಕಗಳನ್ನು ಸೃಷ್ಟಿಮಾಡಿ, ಸಂಹಾರಕಾಲವು ಬಂದಾಗ ಸಮಿದ್ಧನಾಗಿ ಎಲ್ಲವನ್ನೂ ಸಂಹಾರಮಾಡುತ್ತೀಯೆ. ಅಗ್ನಿಯೇ, ನೀನೇ ಪುನಃ ಎಲ್ಲಾ ಲೋಕಗಳನ್ನೂ ಸೃಷ್ಟಿಮಾಡಿ ಅವುಗಳಿಗೆ ಆಧಾರನಾಗಿರುತ್ತೀಯೆ.
ತ್ವಮನ್ನಂ ಪ್ರಾಣಿನಾಂ ಭುಂಕ್ಷೇ ಅಂತರ್ಭೂತೋ ಜಗತ್ಪತೇ |
ನಿತ್ಯಪ್ರವೃದ್ಧಃ ಪಚಸಿ ತ್ವಯಿ ಸರ್ವಂ ಪ್ರತಿಷ್ಠಿತಮ್ ॥15॥
ನೀನು ಸರ್ವಪ್ರಾಣಿಗಳ ಶರೀರದೊಳಗಿದ್ದು ಈ ಜಠರಾಗ್ನಿರೂಪದಿಂದ ಅನ್ನವನ್ನು ಭುಂಜಿಸುತ್ತೀಯೆ. ನಿತ್ಯವೂ ಪ್ರವೃದ್ಧನಾಗಿ ಅನ್ನವನ್ನು ಪಚನಮಾಡುತ್ತೀಯೆ. ಎಲ್ಲವೂ ನಿನ್ನಲ್ಲಿ ಪ್ರತಿಷ್ಠಿತವಾಗಿದೆ.
ಸೂರ್ಯೋ ಭೂತ್ವಾ ರಶ್ಮಿಭಿರ್ಜಾತವೇದೋ
ಭೂಮೇರಾಪೋ ಭೂಮಿಗತಾನ್ ರಸಾಂಶ್ಚ |
ವಿಶ್ವಂ ಚಾದಾಯ ಪುನರುತ್ಸರ್ಗಕಾಲೇ
ಸೃಷ್ಟ್ವಾ ವೃಷ್ಟ್ಯಾ ಭಾವಯಸೀಹ ಶುಕ್ರ ॥16॥
ಜಾತವೇದನೆ, ನೀನೇ ಸೂರ್ಯನಾಗಿ ಭೂಮಿಯಲ್ಲಿರುವ ನೀರನ್ನು ಮತ್ತು ಭೂಮಿಯಲ್ಲಿರುವ ಎಲ್ಲಾ ರಸಗಳನ್ನೂ ನಿನ್ನ ಕಿರಣಗಳಿಂದ ತೆಗೆದುಕೊಂಡು ಅದನ್ನು ಪುನಃ ಕೊಡುವ ಕಾಲದಲ್ಲಿ ಮಳೆಯ ಮೂಲಕವಾಗಿ ನೀರನ್ನೂ ಮತ್ತು ರಸಗಳನ್ನೂ ಸೃಷ್ಟಿಮಾಡಿ ಪೋಷಿಸುತ್ತೀಯೆ.
ತ್ವತ್ತ ಏತಾಃ ಪುನಃ ಶುಕ್ರ ವೀರುಧೋ ಹರಿತಚ್ಛದಾಃ |
ಜಾಯಂತೇ ಪುಷ್ಕರಿಣ್ಯಶ್ಚ ಸುಭದ್ರಶ್ಚ ಮಹೋದಧಿಃ ॥17॥
ಶುಕ್ರನೇ, ನಿನ್ನಿಂದಾಗಿ ಈ ಎಲ್ಲಾ ಲತೆಗಳೂ ಪುನಃ ಹಸಿರು ಎಲೆಗಳಿಂದ ಕೂಡುತ್ತವೆ. ಪುಷ್ಕರಿಣಿಗಳೂ ಉಂಟಾಗುತ್ತವೆ. ಮಹಾಸಾಗರವು ಸುಭದ್ರವಾಗಿರುತ್ತದೆ.
ಶೋಭನಂ ಸದ್ಮ ತಿಗ್ಮಾಂಶೋ ವರುಣಸ್ಯ ಪರಾಯಣಮ್ |
ಶಿವಸ್ತ್ರಾತಾ ಭವಾಸ್ಮಾಕಂ ಮಾಽಸ್ಮಾನದ್ಯ ವಿನಾಶಯ ॥18॥
ತಿಗ್ಮಾಂಶುವೇ, ವರುಣನ ಆಲಯವು ನಿನ್ನ ಮಂಗಳವಾದ ನಿವಾಸಸ್ಥಾನ. ನೀನು ನಮಗೆ ಮಂಗಳಪ್ರದನೂ ಮತ್ತು ರಕ್ಷಕನೂ ಆಗು. ಈ ದಿನ ನಮ್ಮನ್ನು ನಾಶಮಾಡಬೇಡ.
ಪಿಂಗಲಾಕ್ಷ ಹಯಗ್ರೀವ ಕೃಷ್ಣವರ್ತ್ಮನ್ ಹುತಾಶನ |
ಪರೇಣ ಪ್ರೇಹಿ ಮುಂಚಾಸ್ಮಾನ್ ಸಾಗರಸ್ಯ ಗೃಹಾನಿವ ॥19॥
ಪಿಂಗಳಾಕ್ಷನೇ, ಹಯಗ್ರೀವನೇ, ಕೃಷ್ಣವರ್ತ್ಮನೇ, ಹುತಾಶನನೇ, ಸಾಗರದಲ್ಲಿರುವ ವಡವಾಗ್ನಿಯು ಮೊಸಳೆಗಳನ್ನು ಉಳಿಸಿ ಬಳಸಿಕೊಂಡು ಹೋಗುವಂತೆ ನೀನು ದೂರದಿಂದ ನಮ್ಮನ್ನು ಬಳಸಿಕೊಂಡುಹೋಗು. ನಮ್ಮನ್ನು ಬಿಡುಗಡೆಗೊಳಿಸು.
ಏವಮುಕ್ತೋ ಜಾತವೇದಾ ದ್ರೋಣೇನಾಕ್ಲಿಷ್ಟಕರ್ಮಣಾ |
ದ್ರೋಣಮಾಹ ಪ್ರತೀತಾತ್ಮಾ ಮಂದಪಾಲಪ್ರತಿಜ್ಞಯಾ ॥20॥

ಶುಭಕರ್ಮನಾದ ದ್ರೋಣನು ಹೀಗೆ ಹೇಳುತ್ತಿರಲು ಅಗ್ನಿಯು ಸಂತೋಷಗೊಂಡು ಮಂದಪಾಲನಲ್ಲಿ ತಾನು ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿ ದ್ರೋಣನನ್ನು ಕುರಿತು ಹೇಳಿದನು.
ಅಗ್ನಿಃ
ಋಷಿರ್ದ್ರೋಣಸ್ತ್ವಮಸಿ ಬ್ರಹ್ಮೈತದ್ ವ್ಯಾಹೃತಂ ತ್ವಯಾ |
ಈಪ್ಸಿತಂ ತೇ ಕರಿಷ್ಯಾಮಿ ನ ಚ ತೇ ವಿದ್ಯತೇ ಭಯಮ್ ||21||
ನೀನು ಋಷಿಯಾದ ದ್ರೋಣನಾಗಿದ್ದೀಯೆ. ನನ್ನ ಸ್ತೋತ್ರರೂಪದಲ್ಲಿ ನೀನು ವೇದವನ್ನೇ ಹೇಳಿದ್ದೀಯೆ. ನಿನ್ನ ಇಷ್ಟವನ್ನು ನೆರವೇರಿಸುವೆನು. ನಿನಗೆ ನನ್ನ ಭಯವು ಇರುವುದಿಲ್ಲ.
ಮಂದಪಾಲೇನ ಯೂಯಂ ಹಿ ಮಮ ಪೂರ್ವಂ ನಿವೇದಿತಾಃ |
ವರ್ಜಯೇಃ ಪುತ್ರಕಾನ್ ಮಹ್ಯಂ ದಹನ್ ದಾವಮಿತಿ ಸ್ಮ ಹ ||22||
ನಿಮ್ಮ ತಂದೆಯಾದ ಮಂದಪಾಲನು ನನ್ನನ್ನು ಕುರಿತು ಮೊದಲೇ, ನೀನು ಖಾಂಡವವನವನ್ನು ದಹಿಸುವಾಗ ನನ್ನ ಮಕ್ಕಳನ್ನು ಬಿಡಬೇಕು ಎಂದು ನಿಮ್ಮನ್ನು ನನಗೆ ಸಮರ್ಪಿಸಿದ್ದನು.
ಯಚ್ಚ ತದ್ವಚನಂ ತಸ್ಯ ತ್ವಯಾ ಯಚ್ಚೇಹ ಭಾಷಿತಮ್ |
ಉಭಯಂ ಮೇ ಗರೀಯಸ್ತತ್ವದ್ ಬ್ರೂಹಿ ಕಿಂ ಕರವಾಣಿ ತೇ |
ಭೃಶಂ ಪ್ರೀತೋಽಸ್ಮಿ ಭದ್ರಂ ತೇ ಬ್ರಹ್ಮನ್ ಸ್ತೋತ್ರೇಣ ತೇ ವಿಭೋ ||
ಅವನ ಆ ಮಾತು ಮತ್ತು ನಿನ್ನ ಈ ಸ್ತೋತ್ರರೂಪವಾದ ಮಾತು ಎರಡೂ ಸಹ ನನಗೆ ಪೂಜ್ಯವಾದದ್ದು. ಬ್ರಾಹ್ಮಣನೇ, ನಿನ್ನ ಸ್ತೋತ್ರದಿಂದ ನಾನು ಬಹಳ ಸಂತುಷ್ಟನಾಗಿದ್ದೇನೆ. ನಿನಗೆ ಏನು ಮಾಡಲಿ ಎಂದು ಹೇಳು.
ದ್ರೋಣಃ
ಇಮೇ ಮಾರ್ಜಾರಕಾಃ ಶುಕ್ಲ ನಿತ್ಯಮುದ್ವೇಜಯಂತಿ ನಃ |
ಏತಾನ್ ಕುರುಷ್ವ ದಂಷ್ಟ್ರಾಸು ಹವ್ಯವಾಡಾರ್ತ್ತಿಸಂಭವಾನ್ ||23||
ಶುಕ್ಲನೇ, ಈ ಮಾರ್ಜಾಲಗಳು ನಮಗೆ ನಿತ್ಯವೂ ಭಯವನ್ನು ಉಂಟುಮಾಡುತ್ತವೆ. ಹವ್ಯವಾಹನನೇ, ನಮಗೆ ದುಃಖವನ್ನು ನೀಡುವ ಇವುಗಳನ್ನು ನಿನ್ನ ಕೋರೆದಾಡೆಗಳಿಗೆ ಹಾಕಿಕೊಂಡು ವಿನಾಶಪಡಿಸು.
ವೈಶಂಪಾಯನಃ
ತಥಾ ತತ್ ಕೃತವಾನಗ್ನಿರಭ್ಯನುಜ್ಞಾಯ ಶಾಂರ್ಗಕಾನ್ |
ದದಾಹ ಖಾಂಡವಂ ಚೈವ ಸಮಿದ್ಧೋ ಜನಮೇಜಯ ||24||
ಆಗ ಅಗ್ನಿಯು ಶಾಂರ್ಗಕಗಳಿಗೆ ಹಾಗೆಯೇ ಆಗಲಿ ಎಂದು ಅನುಮತಿಯನ್ನು ನೀಡಿ ದ್ರೋಣನು ಹೇಳಿದಂತೆಯೇ ಮಾಡಿದನು. ಜನಮೇಜಯನೇ, ದೊಡ್ಡಜ್ವಾಲೆಗಳಿಂದ ಪ್ರವೃದ್ಧನಾಗಿ ಖಾಂಡವವನವನ್ನು ದಹಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಷಟ್‌ತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ||
|| ಇತಿ ಮಯದರ್ಶನಪರ್ವಣಿ ಪಂಚಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ
ಇನ್ನೂರ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
*****
ಇನ್ನೂರ ಮೂವತ್ತೇಳನೆಯ ಅಧ್ಯಾಯ
(ಮಂದಪಾಲನಿಗೆ ಲಪಿತೆಯ ಮತ್ತು ಜರಿತೆಯ ತಿರಸ್ಕಾರದ ವಚನಗಳು. ಪತ್ನೀಪುತ್ರರೊಡನೆ ಮಂದಪಾಲನ ದೇಶಾಂತರ ಗಮನ. ಸ್ವರ್ಗದಿಂದ ಇಂದ್ರನ ಆಗಮನ. ಸಂತೋಷಪ್ರಕಟನ ಮತ್ತು ವರದಾನ.)
ವೈಶಂಪಾಯನಃ
ಮಂದಪಾಲೋಽಪಿ ಕೌರವ್ಯ ಚಿಂತಯಾನಃ ಸುತಾನ್ ತದಾ |
ಉಕ್ತವಾನಪ್ಯಶೀತಾಂಶುಂ ಸ ನೈವ ಸ್ಮ ನ ತಪ್ಯತೇ |
ಸ ತಪ್ಯಮಾನಃ ಪುತ್ರಾರ್ಥೇ ಲಪಿತಾಮಿದಮಬ್ರವೀತ್ ||1||
ಜನಮೇಜಯನೇ, ಮಂದಪಾಲನು ಅಗ್ನಿದೇವನಲ್ಲಿ ತನ್ನ ಮಕ್ಕಳ ರಕ್ಷಣೆಯ ಪ್ರಾರ್ಥನೆಯನ್ನು ಮಾಡಿದ್ದರೂ, ಮಕ್ಕಳನ್ನು ನೆನೆದು ಸಂತಾಪಪಡದೇ ಇರಲಿಲ್ಲ. ಅವನು ಮಕ್ಕಳ ವಿಷಯದಲ್ಲಿ ಸಂತಾಪಪಡುತ್ತಾ ಲಪಿತೆಯನ್ನು ಕುರಿತು ಇದನ್ನು ಹೇಳಿದನು.
ಮಂದಪಾಲಃ
ಕಥಂ ತ್ವಶಕ್ತಾಃ ಪತನೇ ಲಪಿತೇ ಮಮ ಪುತ್ರಕಾಃ |
ವರ್ಧಮಾನೇ ಹುತವಹೇ ವಾತೇ ಶೀಘ್ರಂ ಪ್ರವಾಯತಿ ||2||
ಅಸಮರ್ಥಾ ವಿಮೋಕ್ಷಾಯ ಭವಿಷ್ಯಂತಿ ಮಮಾತ್ಮಜಾಃ |
ಕಥಂ ನು ಶಕ್ತಾ ತ್ರಾಣಾಯ ಮಾತಾ ತೇಷಾಂ ತಪಸ್ವಿನೀ ||3||
ಲಪಿತೆ, ಅಗ್ನಿಯು ಹಬ್ಬುತ್ತಿರಲು ಮತ್ತು ಗಾಳಿಯು ಜೋರಾಗಿ ಬೀಸುತ್ತಿರಲು ದುರ್ಬಲರಾದ ನನ್ನ ಮಕ್ಕಳು ಹೇಗೆ ಅಗ್ನಿಯಿಂದ ಬಿಡಿಸಿಕೊಳ್ಳಲು ಸಮರ್ಥರಾಗುವರು?
ಭವಿಷ್ಯತ್ಯಸುಖಾವಿಷ್ಟಾ ಪುತ್ರತ್ರಾಣಮಪಶ್ಯತೀ |
ಕಥಂ ಚ ಸರಣೇಽಶಕ್ತಾನ್ ಪತನೇ ಚ ಮಮಾತ್ಮಜಾನ್ ||4||

ಅವರ ಶೋಚನೀಯಳಾದ ತಾಯಿಯು ಮಕ್ಕಳನ್ನು ರಕ್ಷಿಸುವ ಉಪಾಯವನ್ನು ಕಾಣದೆ, ದುಃಖದಿಂದ ಕೂಡಿದವಳಾಗಿ ಹೇಗೆ ಮಕ್ಕಳನ್ನು ರಕ್ಷಿಸುವಳು?
ಸಾ ತಪ್ಯಮಾನಾ ಭೀತಾ ವಾ ಗಮನಾಯಾಭಿಧಾವತೀ |
ಜರಿತಾರಿಃ ಕಥಂ ಪುತ್ರಃ ಸಾರಿಸೃಕ್ಕಃ ಕಥಂ ಭವೇತ್ |
ಸ್ತಂಬಮಿತ್ರಃ ಕಥಂ ದ್ರೋಣಃ ಕಥಂ ಸಾ ಚ ತಪಸ್ವಿನೀ ||5||
ಚಲಿಸದೆ ಅಥವಾ ಹಾರದೆ, ಅಸಮರ್ಥಳಾದ ನನ್ನ ಮಕ್ಕಳನ್ನು ಸಂತಾಪದಿಂದಲೂ ಮತ್ತು ಭಯದಿಂದಲೂ ಅಲ್ಲಿಂದಿಲ್ಲಿಗೆ ಓಡುತ್ತಾ ಅವಳು ಹೇಗೆ ರಕ್ಷಿಸುವಳು?
ನನ್ನ ಮಗನಾದ ಜರಿತಾರಿಯು ಹೇಗಿದ್ದಾನೆ? ಸಾರಿಸೃಕ್ಕನು ಹೇಗಿದ್ದಾನೆ? ಸ್ತಂಬಮಿತ್ರನು ಹೇಗಿದ್ದಾನೆ? ದ್ರೋಣನು ಹೇಗಿದ್ದಾನೆ? ಆ ಶೋಚನೀಯಳಾದ ಜರಿತೆಯು ಹೇಗಿದ್ದಾಳೆ?
ವೈಶಂಪಾಯನಃ
ಲಾಲಪ್ಯಮಾನಂ ತಮೃಷಿಂ ಮಂದಪಾಲಂ ತಥಾ ವನೇ |
ಲಪಿತಾ ಪ್ರತ್ಯುವಾಚೇದಂ ಸಾಸೂಯಮಿವ ಭಾರತ ||6||
ಭಾರತನೇ, ಕಾಡಿನಲ್ಲಿ ಹೀಗೆ ಬಡಬಡಿಸುತ್ತಿರುವ ಆ ಮಂದಪಾಲ ಋಷಿಯನ್ನು ಕುರಿತು ಲಪಿತೆಯು ಅಸೂಯೆಯಿಂದ ಈ ಮಾತನ್ನಾಡಿದಳು.
ನ ತೇ ಪುತ್ರೇಷ್ವವೇಕ್ಷಾಽಸ್ತಿ ಯಾನ್ ಋಷೀನುಕ್ತವಾನಸಿ |
ತೇಜಸ್ವಿನೋ ವೀರ್ಯವಂತೋ ನ ತೇಷಾಂ ಜ್ವಲನಾದ್ ಭಯಮ್ ||
ನೀನು ಯಾವ ಋಷಿಗಳ ಹೆಸರನ್ನು ಹೇಳಿದೆಯೋ, ನಿನಗೆ ಮಕ್ಕಳಾದ ಅವರನ್ನು ನೋಡುವ ಆಸೆಯಿಲ್ಲ (ಅಥವಾ ನೋಡಬೇಕಾದ ಅಗತ್ಯವಿಲ್ಲ). ಅವರು ತೇಜಸ್ವಿಗಳೂ ಮತ್ತು ವೀರ್ಯವಂತರು. ಅವರಿಗೆ ಅಗ್ನಿಯಿಂದ ಭಯವಿಲ್ಲ.
ದಾವಾಗ್ನೇಃ ಪರಿದತ್ತಾಶ್ಚ ತ್ವಯಾ ಹಿ ಮಮ ಸನ್ನಿಧೌ |
ಪ್ರತಿಶ್ರುತಂ ತಥಾ ತೇನ ಜ್ವಲನೇನ ಮಹಾತ್ಮನಾ ||8||
ನೀನು ನನ್ನ ಸನ್ನಿಧಿಯಲ್ಲಿಯೇ ಅವರನ್ನು ಅಗ್ನಿಗೆ ನಿವೇದಿಸಿದ್ದೀಯೆ. ಮಹಾನುಭಾವನಾದ ಅಗ್ನಿಯೂ ಸಹ ರಕ್ಷಣೆಯ ವಾಗ್ದಾನವನ್ನು ಮಾಡಿದ್ದಾನೆ.
ಲೋಕಪಾಲೋಽನೃತಾಂ ವಾಚಂ ನ ಚ ವಕ್ತಾ ಕಥಂಚನ |
ನಾಸಮಂಜಸವೇತ್ತಾ ವೈ ನ ತೇ ತೇಷ್ವಸ್ತಿ ಮಾನಸಮ್ ||9||
ಲೋಕಪಾಲಕನಾದ ಅಗ್ನಿಯು ಎಂದೂ ಸುಳ್ಳನ್ನು ಹೇಳುವುದಿಲ್ಲ ಅಥವಾ ನಿನ್ನ ಮಾತನ್ನು ತಪ್ಪಾಗಿ ಗ್ರಹಿಸುವುದೂ ಇಲ್ಲ. ನಿನಗೆ ಆ ಮಕ್ಕಳಲ್ಲಿ ಮನಸ್ಸಿಲ್ಲ.
ತಾಮೇವ ಹಿ ಮಮಾಮಿತ್ರಾಂ ಚಿಂತಯನ್ ಪರಿತಪ್ಯಸೇ |
ಧ್ರುವಂ ಮಯಿ ನ ತೇ ಸ್ನೇಹೋ ಯಥಾ ತಸ್ಯಾಂ ಪುರಾಽಭವತ್ ||10||
ನನ್ನ ಶತ್ರುವಾದ ಅವಳನ್ನು (ಜರಿತೆಯನ್ನು) ಚಿಂತಿಸುತ್ತಾ ತಾಪಪಡುತ್ತಿದ್ದೀಯೆ. ಅವಳಲ್ಲಿ ಇದ್ದಂತೆ ನಿನಗೆ ನನ್ನಲ್ಲಿ ಸ್ನೇಹವಿಲ್ಲ ಎಂಬುದು ನಿಶ್ಚಿತವಾದುದು.
ನ ಹಿ ಪಕ್ಷವತಾ ಭಾವ್ಯಂ ನಿಃಸ್ನೇಹೇನ ಸುಹೃಜ್ಜನೇ |
ಪೀಡ್ಯಮಾನ ಉಪಸ್ಪ್ರಷ್ಟುಂ ಶಕ್ಯೋ ನಾತ್ಮಾ ಕಥಂಚನ ||11||
ಸುಹೃಜ್ಜನರಲ್ಲಿ ಸ್ನೇಹರಹಿತನಾಗಿ ಎಂದೂ ಪಕ್ಷಪಾತವನ್ನು ಮಾಡಬಾರದು. ಪಕ್ಷಪಾತ ಮಾಡುವ ಪುರುಷನ ಕರಸ್ಪರ್ಶವೂ ಸಹ ನ್ಯಾಯವಾಗುವುದಿಲ್ಲ. (ಸಹ್ಯವಾಗುವುದಿಲ್ಲ).
ಗಚ್ಛ ತ್ವಂ ಜರಿತಾಮೇವ ಯಸ್ಯಾರ್ಥೇ ಪರಿತಪ್ಯಸೇ |
ಚರಿಷ್ಯಾಮ್ಯದ್ಯ ಚೈವೈಕಾ ಯಥಾ ಕಾಪುರುಷೇ ರತಾ ||12||
ಯಾವ ಜರಿತೆಗಾಗಿ ಸಂಕಟಪಡುತ್ತಿದ್ದೀಯೋ, ನೀನು ಅವಳ ಬಳಿಗೇ ಹೋಗು. ನಾನು ದುಷ್ಟಪುರುಷನನ್ನು ಹೊಂದಿದ ಸ್ತ್ರೀಯಂತೆ ಒಬ್ಬಳೇ ಸಂಚರಿಸುವೆನು.
ಮಂದಪಾಲಃ
ನಾಹಮೇವಂ ಚರೇ ಲೋಕೇ ಯಥಾ ತ್ವಮಭಿಮನ್ಯಸೇ |
ಅಪತ್ಯಹೇತೋರ್ವಿಚರೇ ತಚ್ಚ ಕೃಚ್ಛ್ರತರಂ ಮಮ ||13||
ನೀನು ಯೋಚಿಸಿದಂತೆ ನಾನು ಹೋಗುತ್ತಿಲ್ಲ. ಮಕ್ಕಳ ಸಲುವಾಗಿ ನಾನು ಹೋಗುತ್ತಿದ್ದೇನೆ. ಮಕ್ಕಳ ಕಷ್ಟವು ನನಗೆ ಸಹಿಸಲು ಅಸಾಧ್ಯವಾದುದು.
ಭೂತಂ ಹಿತ್ವಾ ಭವಿಷ್ಯತ್ವೇ ಯೋ ರಮೇತ ಸ ಮಂದಧೀಃ |
ಅವಮತ್ಯ ತಥಾ ಲೋಕಾನ್ ಯಥೇಚ್ಛಸಿ ತಥಾ ಕುರು ||14||
ಕೈಯಲ್ಲಿರುವ ಮಕ್ಕಳನ್ನು ಬಿಟ್ಟು, ಹಾಗೆಯೇ ಜನರಿಗೆ ಅವಮಾನ ಮಾಡಿ ಮುಂದೆ ಹುಟ್ಟಬಹುದಾದ ಮಕ್ಕಳಲ್ಲಿ ಯಾವನು ಸಂತೋಷಪಡುತ್ತಾನೋ, ಅವನು ಮೂರ್ಖನಾದವನು. ನೀನು ನಿನಗೆ ಇಷ್ಟಬಂದಂತೆ ಮಾಡು.
ಏಷ ಹಿ ಜ್ವಲಮಾನೋಽಗ್ನಿರ್ಲೇಲಿಹಾನೋ ಮಹೀರುಹಾನ್ |
ದ್ವೇಷ್ಯಂ ಹಿ ಹೃದಿ ಸಂತಾಪಂ ಜನಯತ್ಯಶಿವಂ ಮಮ ||15||
ಈ ಅಭಿವೃದ್ಧನಾಗುತ್ತಿರುವ ಅಗ್ನಿಯು ವೃಕ್ಷಗಳನ್ನು ನುಂಗುತ್ತಾ, ನನ್ನ ಹೃದಯದಲ್ಲಿ ಸಹಿಸಲು ಅಸಾಧ್ಯವಾದ ಅಮಂಗಳವಾದ

ಸಂತಾಪವನ್ನು ಉಂಟುಮಾಡುತ್ತಿದ್ದಾನೆ.
ವೈಶಂಪಾಯನಃ
ತಸ್ಮಾದ್ ದೇಶಾದತಿಕ್ರಾಂತೇ ಜ್ವಲನೇ ಚ ಮಹಾತ್ಮನಿ |
ಜಗಾಮ ಪುತ್ರಕಾನೇವ ಜರಿತಾ ಪುತ್ರಗೃದ್ಧಿನೀ ॥16॥
ಮಹಾನುಭಾವನಾದ ಅಗ್ನಿಯು ಖಾಂಡವವನದಿಂದ ನಿವೃತ್ತನಾದ ಮೇಲೆ ಜರಿತೆಯು ಮಕ್ಕಳ ಮೇಲಿನ ಆಸೆಯಿಂದ, ಮಕ್ಕಳಿದ್ದಲ್ಲಿಗೆ ಹೋದಳು.
ಸಾ ತಾನ್ ಕುಶಲಿನಃ ಸರ್ವಾನ್ ವಿಮುಕ್ತಾನ್ ಜಾತವೇದಸಃ |
ರೋರೂಯಮಾಣಾ ಕೃಪಣಾ ಸುತಾನ್ ದೃಷ್ಟವತೀ ವನೇ ॥17॥
ಕೃಪಣಳಾದ ಅವಳು ಕಾಡಿನಲ್ಲಿ, ಅಗ್ನಿಯಿಂದ ಮುಕ್ತರಾದ, ಕ್ಷೇಮದಿಂದಿರುವ ಎಲ್ಲಾ ಮಕ್ಕಳನ್ನೂ ಅಳುತ್ತಾ ನೋಡಿದಳು.
ಅಶ್ರದ್ಧೇಯತಮಂ ತೇಷಾಂ ದರ್ಶನಂ ಸಾ ಪುನಃಪುನಃ |
ಏಕೈಕಶಶ್ಚ ಪುತ್ರಾಂಸ್ತಾನ್ ಕ್ರೋಶಮಾನಾಽನ್ವಪದ್ಯತ ॥18॥
ಅವರ ದರ್ಶನವು ಇನ್ನೊಮ್ಮೆ ಆಗುವುದಿಲ್ಲವೆಂದು ತಿಳಿದಿದ್ದ ಅವಳು ಕಿರುಚುತ್ತಾ ಒಬ್ಬೊಬ್ಬ ಮಗನ ಹತ್ತಿರಕ್ಕೂ ಹೋದಳು.
ಜರಿತಾ ತು ಪರಿಷ್ವಜ್ಯ ಪುತ್ರಸ್ನೇಹಾಚ್ಚುಚುಂಬ ಹ |
ತತೋಽಭ್ಯಗಚ್ಛತ್ ಸಹಸಾ ಮಂದಪಾಲೋಽಪಿ ಭಾರತ ॥19॥
ಜರಿತೆಯು ಪುತ್ರಸ್ನೇಹದಿಂದ ಮಕ್ಕಳನ್ನು ಆಲಿಂಗಿಸಿ ಚುಂಬಿಸಿದಳು. ಭಾರತನೇ, ಆ ವೇಳೆಗೆ ಸರಿಯಾಗಿ ಮಂದಪಾಲನೂ ಇದ್ದಕ್ಕಿದ್ದಂತೆಯೇ ಅಲ್ಲಿಗೆ ಬಂದನು.
ಅಥ ತೇ ಸರ್ವ ಏವೈನಂ ನಾಭ್ಯಜಾನಂತ ವೈ ಸುತಾಃ |
ಗುರುತ್ವಾನ್ಮಂದಪಾಲಸ್ಯ ತಪಸಶ್ಚ ವಿಶೇಷತಃ ॥20॥
ಮೊದಲು ಆ ಮಕ್ಕಳು ಅವನನ್ನು ಬಹಳ ಕಾಲ ಬೇರೆಯ ಸ್ಥಳದಲ್ಲಿದ್ದ ಕಾರಣದಿಂದ ಗುರುತಿಸಲಿಲ್ಲ. ಆದರೆ, ಅವನು ತಂದೆಯಾದ ಕಾರಣದಿಂದಲೂ, ವಿಶೇಷವಾದ ತಪಸ್ಸಿನ ನಿಮಿತ್ತದಿಂದಲೂ, ಅನಂತರ ಅವನನ್ನು ಗುರುತಿಸಿದರು.
ಅಭಿವಾದಯಾಮಹೇ ಸರ್ವೇ ಜಾತಪಕ್ಷಾಃ ಪ್ರಸಾದತಃ |
ಏವಮುಕ್ತವತಾಂ ತೇಷಾಂ ಪ್ರತಿನಂದ್ಯ ಮಹಾತಪಾಃ ॥21॥
ಪರಿಷ್ವಜ್ಯ ಚ ತಾನ್ ಸರ್ವಾನ್ ಮೂರ್ಧ್ನ್ಯಾಪಾಘ್ರಾಯ ಬಾಲಕಾನ್ |
ಪುತ್ರಸ್ಪರ್ಶಾತ್ ತು ಯಾ ಪ್ರೀತಿಸ್ತಾಮವಾಪ ಸ ಗೌತಮಃ ॥22॥
ನಿನ್ನ ಅನುಗ್ರಹದಿಂದ ರೆಕ್ಕೆಗಳನ್ನು ಹೊಂದಿದ ನಾವೆಲ್ಲರೂ ನಿನಗೆ ನಮಸ್ಕರಿಸುತ್ತೇವೆ. ಹೀಗೆ ಹೇಳಿದ ಅವರ ಮಾತಗಳನ್ನು ಅಭಿನಂದಿಸಿ, ಮಹಾತಪಸ್ವಿಯಾದ ಗೌತಮಗೋತ್ರದಲ್ಲಿ ಜನಿಸಿದ್ದ ಮಂದಪಾಲನು, ಆ ಎಲ್ಲಾ ಮಕ್ಕಳನ್ನೂ ಆಲಂಗಿಸಿ ಶಿರಸ್ಸಿನಲ್ಲಿ ಆಘ್ರಾಣಿಸಿ ಪುತ್ರಸ್ಪರ್ಶದಿಂದ ಪಡೆಯುವ ಸುಖವನ್ನು ಪಡೆದನು.
ಲಾಲಪ್ಯಮಾನಾ ಏಕೈಕಂ ಜರಿತಾ ಚ ಪುನಃಪುನಃ |
ಉಚ್ಯತೇ ವಚನಂ ಕಿಂಚಿನ್ನ ಚೈವ ಸಾಧ್ವಸಾಧು ವಾ ॥23॥
ಜರಿತೆಯು ಪುನಃ ಒಬ್ಬೊಬ್ಬನ ಹತ್ತಿರವೂ ಪ್ರಲಾಪಮಾಡಿದಳು. ಆದರೆ ಆ ಮಕ್ಕಳು ಶುಭವನ್ನಾಗಲಿ, ಅಶುಭವನ್ನಾಗಲಿ, ಏನನ್ನೂ ಮಾತನಾಡಲಿಲ್ಲ.
ಮಂದಪಾಲಃ
ಜ್ಯೇಷ್ಠಃ ಸುತಸ್ತೇ ಕತಮಸ್ತಥಾನುಜ್ಯೇಷ್ಠ ಏವ ಚ |
ಮಧ್ಯಮಃ ಕತಮಃ ಪುತ್ರಃ ಕನೀಯಾನ್ ಕತಮಶ್ಚ ತೇ ॥24॥
ನಿನ್ನ ಹಿರಿಯ ಪುತ್ರನು ಯಾರು? ಅವನ ತಮ್ಮನು ಯಾರು? ಮಧ್ಯಮಪುತ್ರನು ಯಾರು? ಕಿರಿಯವನು ಯಾರು?
ಏವಂ ಬ್ರುವಂತಂ ದುಃಖಾರ್ತಂ ಕಿಂ ಮಾಂ ನ ಪ್ರತಿಭಾಷಸೇ |
ಕೃತವಾನಪಿ ಹವ್ಯಾಶೇ ನೈವ ಶಾಂತಿಮಿತೋ ಲಭೇ ॥25॥
ಹೀಗೆ ಕೇಳುತ್ತಿರುವ ದುಃಖಾರ್ತನಾದ ನನಗೆ ನೀನು ಏಕೆ ಉತ್ತರವನ್ನು ಕೊಡುತ್ತಿಲ್ಲ? ನಾನು ಅಗ್ನಿಗೆ ಮಕ್ಕಳನ್ನು ನಿವೇದಿಸಿದ್ದರೂ, ಮನಸ್ಸಿಗೆ ಶಾಂತಿಯನ್ನು ಹೊಂದುತ್ತಿಲ್ಲ.
ವೈಶಂಪಾಯನಃ
ಏವಂ ಜರಾಂ ತತಃ ಪತ್ನೀಂ ಮಂದಪಾಲಸ್ತದಾಽಸ್ಪೃಶತ್ ॥26॥
ಹೀಗೆ ಹೇಳಿ, ಮಂದಪಾಲನು ತನ್ನ ಪತ್ನಿಯಾದ ಜರಿತೆಯನ್ನು ಕೈಯಿಂದ ಮುಟ್ಟಿದನು.
ಜರಿತಾ
ಕಿಂ ತೇ ಜ್ಯೇಷ್ಠೇ ಸುತೇ ಕಾರ್ಯಂ ಕಿಮನಂತರಜೇನ ವಾ |
ಕಿಂ ಚ ತೇ ಮಧ್ಯಮೇ ಕಾರ್ಯಂ ಕನಿಷ್ಠೇ ತಪೋಧನ ॥27॥
ನಿನಗೆ ಹಿರಿಯ ಮಗನಿಂದ ಏನಾಗಬೇಕಾಗಿದೆ? ಅವನ ತಮ್ಮನಿಂದ ಏನಾಗಬೇಕಾಗಿದೆ? ಮಧ್ಯಮಪುತ್ರನಿಂದ ಏನಾಗಬೇಕಾಗಿದೆ? ತಪೋಧನನೇ, ಕಿರಿಯ ಪುತ್ರನಿಂದ ಏನಾಗಬೇಕಾಗಿದೆ?
ಯತ್ರ ಮಾಂ ಸರ್ವಶೋ ಹೀನಾಮುತ್ಸೃಜ್ಯಾಸಿ ಗತಃ ಪುರಾ |
ತಾಮೇವ ಲಪಿತಾಂ ಗಚ್ಛ ತರುಣೀಂ ಚಾರುಹಾಸಿನೀಮ್ ॥28॥
ಯಾವ ಸಹಾಯವೂ ಇಲ್ಲದ ನನ್ನನ್ನು ಬಿಟ್ಟು ನೀನು ಯಾರ ಬಳಿಗೆ ಮೊದಲು ಹೋಗಿದ್ದೆಯೋ ಆ ತರುಣಿಯೂ,

ಚಾರುಹಾಸಿನಿಯೂ ಆದ ಲಪಿತೆಯ ಬಳಿಗೇ ಪುನಃ ಹೋಗು.
ಮಂದಪಾಲಃ
ನ ಸ್ತ್ರೀಣಾಂ ವಿದ್ಯತೇ ಕಿಂಚಿದನ್ಯತ್ರ ಪುರುಷಾಂತರಾತ್ |
ಸಾಪತ್ನಿಕಮೃತೇ ಲೋಕೇ ವರ್ತತೇ ಕಿಂಚಿದಪ್ರಿಯಮ್ ॥29॥
ಸ್ತ್ರೀಯರಿಗೆ ತನ್ನ ಪತಿಯ ವಿರಹವುಂಟಾದರೆ, ಸವತಿಯನ್ನು ಚಿಂತಿಸಿ ದುಃಖಪಡುವುದಕ್ಕಿಂತ ಅಪ್ರಿಯವಾದದ್ದು ಬೇರೆ ಯಾವುದೂ ಇಲ್ಲ.
ಸುವ್ರತಾ ಚಾಪಿ ಕಲ್ಯಾಣೀ ಸರ್ವಲೋಕಪರಿಶ್ರುತಾ |
ಅರುಂಧತೀ ಪರ್ಯಶಂಕದ್ ವಸಿಷ್ಠಮೃಷಿಸತ್ತಮಮ್ ॥30॥
ಸುವ್ರತಳೂ, ಸರ್ವಲೋಕವಿಖ್ಯಾತಳೂ, ಕಲ್ಯಾಣಿಯೂ ಆದ ಅರುಂಧತಿಯು ಋಷಿಶ್ರೇಷ್ಠರಾದ ವಸಿಷ್ಠರನ್ನೇ ಶಂಕಿಸಿದಳು.
ವಿಶುದ್ಧಭಾವಮತ್ಯಂತಂ ಸದಾ ಪ್ರಿಯಹಿತೇ ರತಮ್ |
ಸಪ್ತರ್ಷಿಮಧ್ಯಗಂ ವಿಪ್ರಮವಮೇನೇ ಚ ತಂ ಮುನಿಮ್ ॥31॥
ಅತ್ಯಂತ ಪರಿಶುದ್ಧರಾದ ತನ್ನ (ಅರುಂಧತಿಯ) ಪ್ರಿಯಹಿತಗಳಲ್ಲಿಯೇ ರತರಾದ ಸಪ್ತರ್ಷಿಗಳಲ್ಲಿ ಒಬ್ಬರಾದ ಆ ಋಷಿಗಳಿಗೆ ಅವಮಾನ ಮಾಡಿದಳು.
ಅಪಧ್ಯಾತಾ ಚ ಸಾ ತೇನ ತತೋ ಧೂಮ್ರಾರುಣಾಕೃತಿಃ |
ಲಕ್ಷ್ಯಾಲಕ್ಷ್ಯಾ ನಾತಿರೂಪಾ ನಿಮಿತ್ತಮಿವ ಲಕ್ಷ್ಯತೇ ॥32॥
ಋಷಿಯ ಅವಕೃಪೆಗೆ ಒಳಗಾದ ಅವಳು ಹೊಗೆಯಿಂದ ಕೂಡಿದ ಕೆಂಪುಬಣ್ಣವುಳ್ಳವಳಾಗಿ, ತನ್ನ ಮಹಾ ಸೌಂದರ್ಯವನ್ನು ಕಳೆದುಕೊಂಡು, ಪತಿಸೇವಾ, ಪತಿಪ್ರಾತಿಕೂಲ್ಯ ನಿಮಿತ್ತವನ್ನು ಅನುಸರಿಸಿ ಕೆಲವು ಸಲ ದೃಷ್ಟಿಗೋಚರಳಾಗುತ್ತಾಳೆ, ಕೆಲವು ಸಲ ದೃಷ್ಟಿಗೋಚರಳಾಗುವುದಿಲ್ಲ.
ಅಪತ್ಯಹೇತೋಃ ಸಂಪ್ರಾಪ್ತಂ ತಥಾ ತ್ವಮಪಿ ಮಾಮಿಹ |
ಇಷ್ಟಮೇವಂ ಗತಂ ಹಿತ್ವಾ ತ್ವಂ ತಥೈವ ಚ ವರ್ತಸೇ ॥33॥
ಮಕ್ಕಳ ನಿಮಿತ್ತದಿಂದಾಗಿ ಇಲ್ಲಿಗೆ ಬಂದ ನನ್ನನ್ನು ನನ್ನ ವಿಷಯದಲ್ಲಿ ನೀನೂ ಸಹ ಇಷ್ಟವಾದ ಸಖ್ಯವನ್ನು ತೊರೆದು ಹಾಗೆಯೇ ನಡೆದುಕೊಳ್ಳುತ್ತಿದ್ದೀಯೆ.
ನ ವೈ ಭಾರ್ಯೇತಿ ವಿಶ್ವಾಸಃ ಕಾರ್ಯಃ ಪುಂಸಾ ಕಥಂಚನ |
ಹಿತಂ ಕಾರ್ಯಮನುಧ್ಯಾತಿ ಭಾರ್ಯಾ ಪುತ್ರವತೀ ಸತೀ ॥34॥
ಮನುಷ್ಯನು ಹೆಂಡತಿ ಎಂಬ ಕಾರಣದಿಂದ ಎಂದೂ ಅವಳಲ್ಲಿ ವಿಶ್ವಾಸವನ್ನು ಮಾಡಬಾರದು. ಮಗನನ್ನು ಪಡೆದ ಹೆಂಡತಿಯು ಯಾವಾಗಲೂ ತನ್ನ ಸ್ವಾರ್ಥವನ್ನೇ ಚಿಂತಿಸುತ್ತಾಳೆ.
ವೈಶಂಪಾಯನಃ
ತತಸ್ತೇ ಸರ್ವ ಏವೈನಂ ಪುತ್ರಾಃ ಸಮ್ಯಗುಪಾಸತೇ |
ಸ ಚ ತಾನಾತ್ಮಜಾನ್ ರಾಜನ್ನಾಶ್ವಾಸಯಿತುಮಾರಭತ್ ॥35॥
ಅನಂತರ, ಆ ಮಕ್ಕಳೆಲ್ಲರೂ ಅವನನ್ನು ಸತ್ಕರಿಸಿದರು. ರಾಜನೇ, ಅವನಾದರೋ, ಆ ಮಕ್ಕಳಿಗೆ ಸಮಾಧಾನಮಾಡಲು ಪ್ರಾರಂಭಿಸಿದನು.
ಮಂದಪಾಲಃ
ಯುಷ್ಮಾಕಂ ಪರಿರಕ್ಷಾರ್ಥಂ ವಿಜ್ಞಪ್ತೋ ಜ್ವಲನೋ ಮಯಾ |
ಅಗ್ನಿನಾ ಚ ತಥೇತ್ಯೇವಂ ಪೂರ್ವಮೇವ ಪ್ರತಿಶ್ರುತಮ್ ॥36॥
ನಿಮ್ಮನ್ನು ರಕ್ಷಿಸಬೇಕೆಂದು ನಾನು ಅಗ್ನಿಗೆ ಮೊದಲೇ ವಿಜ್ಞಾಪನೆಯನ್ನು ಮಾಡಿದ್ದೆ. ಅಗ್ನಿಯೂ ಸಹ, ಹಾಗೆಯೇ ಆಗಲಿ ಎಂದು ವಾಗ್ದಾನ ಮಾಡಿದ್ದನು.
ಅಗ್ನೇರ್ವಚನಮಾದಾಯ ಮಾತುರ್ಧರ್ಮಜ್ಞತಾಂ ಚ ವಃ |
ಯುಷ್ಮಾಕಂ ಚ ವರಂ ವೀರ್ಯಂ ನಾಹಂ ಪೂರ್ವಮಿಹಾಗತಃ ॥37॥
ಅಗ್ನಿಯ ಮಾತನ್ನು ಸ್ವೀಕರಿಸಿ ನಿಮ್ಮ ತಾಯಿಯ ಧರ್ಮಶೀಲತೆಯನ್ನೂ ತಿಳಿದು, ನಿಮ್ಮ ತಪಃಶಕ್ತಿಯನ್ನೂ ತಿಳಿದ ನಾನು, ಆ ಕಾರಣದಿಂದ ಮೊದಲು ಇಲ್ಲಿಗೆ ಬರಲಿಲ್ಲ.
ನ ಸಂತಾಪೋ ಹಿ ವಃ ಕಾರ್ಯಃ ಪುತ್ರಕಾ ಮರಣಂ ಪ್ರತಿ |
ಋಷೀನ್ ವೇದ ಹುತಾಶೋಽಪಿ ಬ್ರಹ್ಮೈತದ್ ವಿದಿತಂ ಚ ವಃ ॥38॥
ಮಕ್ಕಳೇ, ಮರಣವುಂಟಾಗುತ್ತಿದ್ದಿತೆಂಬ ಸಂತಾಪವನ್ನು ಮಾಡಬೇಡಿ. ನಿಮಗೆ ವೇದದ ಜ್ಞಾನವಿದೆ. ಅಗ್ನಿಯೂ ಸಹ ನೀವು ಋಷಿಗಳೆಂದು ತಿಳಿದಿದ್ದಾನೆ.
ವೈಶಂಪಾಯನಃ
ಏವಮಾಶ್ವಾಸ್ಯ ಪುತ್ರಾಂಶ್ಚ ಭಾರ್ಯಾಮಾದಾಯ ಭಾರತ |
ಮಂದಪಾಲಸ್ತತೋ ದೇಶಾದನ್ಯಂ ದೇಶಂ ಜಗಾಮ ಹ ॥39॥
ಭಾರತನೇ, ಮಂದಪಾಲನು ಮಕ್ಕಳಿಗೆ ಹೀಗೆ ಸಮಾಧಾನವನ್ನು ಮಾಡಿ, ತನ್ನ ಪತಿಯನ್ನೂ ಕರೆದುಕೊಂಡು, ಆ ದೇಶವನ್ನು ಬಿಟ್ಟು ಬೇರೆ ದೇಶಕ್ಕೆ ಹೋದನು.
ಭಗವಾನಪಿ ತಿಗ್ಮಾಂಶುಃ ಸಮಿದ್ಧಃ ಖಾಂಡವಂ ವನಮ್ |

ದದಾಹ ಪರಮಪ್ರೀತಃ ಕೃಷ್ಣಾಭ್ಯಾಂ ಪರಿರಕ್ಷಿತಃ ॥40॥
ಪೂಜ್ಯನಾದ ಅಗ್ನಿಯು ಕೃಷ್ಣಾರ್ಜುನರಿಂದ ರಕ್ಷಿತನಾಗಿ ಪರಮಸಂತೋಷದಿಂದ ದೊಡ್ಡಜ್ವಾಲೆಗಳನ್ನು ಧರಿಸಿ ಖಾಂಡವವನವನ್ನು ದಹನಮಾಡಿದನು.
ವಸಾಮೇದೋವಹಾಃ ಕುಲ್ಯಾಸ್ತತ್ರ ಪೀತ್ವಾ ಚ ಪಾವಕಃ |
ಅಗಚ್ಛತ್ ಪರಮಾಂ ತೃಪ್ತಿಂ ದರ್ಶಯಾಮಾಸ ಚಾರ್ಜುನಮ್ ॥41॥
ಅಗ್ನಿಯು ವಸಾ ಮತ್ತು ಮೇದಸ್ಸುಗಳ ಸರೋವರಗಳನ್ನು ಪಾನಮಾಡಿ ಬಹಳ ತೃಪ್ತಿಯನ್ನು ಹೊಂದಿ ಅರ್ಜುನನಿಗೆ ತನ್ನ ರೂಪವನ್ನು ತೋರಿಸಿದನು.
ತತೋಽಂತರಿಕ್ಷಾದ್ ಭಗವಾನವತೀರ್ಯ ಶತಕ್ರತುಃ |
ಮರುತ್ವರಿವೃತಃ ಪಾರ್ಥಂ ಮಾಧವಂ ಚಾಬ್ರವೀದಿದಮ್ ॥42॥
ಆಗ, ಪೂಜ್ಯನಾದ ಇಂದ್ರನು ಮರುತ್ತಗಳ ಜೊತೆಯಲ್ಲಿ ಸ್ವರ್ಗದಿಂದ ಕೆಳಗೆ ಇಳಿದು ಬಂದು ಅರ್ಜುನನನ್ನೂ ಮತ್ತು ಕೃಷ್ಣನನ್ನೂ ಕುರಿತು ಹೀಗೆ ಹೇಳಿದನು.
ಕೃತಂ ಯುವಾಭ್ಯಾಂ ಕರ್ಮೇದಮಮರ್ತ್ಯೈರಪಿ ದುಷ್ಕರಮ್ |
ವರಾನ್ ವೃಣೀತಂ ತುಷ್ಟೋಽಸ್ಮಿ ದುರ್ಲಭಾನಪ್ಯಮಾನುಷಾನ್ ॥43॥
ನೀವಿಬ್ಬರೂ ದೇವತೆಗಳಿಗೂ ಅಸಾಧ್ಯವಾದ ಈ ಕರ್ಮವನ್ನು ಮಾಡಿದ್ದೀರಿ. ನಿಮಗೆ ಪ್ರಸನ್ನನಾಗಿದ್ದೇನೆ. ಮನುಷ್ಯರಿಗೆ ಲಭ್ಯವಾಗದ ದಿವ್ಯವಾದ ವರಗಳನ್ನು ಕೇಳಿ.
ಪಾರ್ಥಸ್ತು ವರಯಾಮಾಸ ಶಕ್ರಾದಸ್ತ್ರಾಣಿ ಸರ್ವಶಃ |
ಗೃಹೀತಂ ತಚ್ಚ ಶಕ್ರಸ್ತು ದದೌ ಕಾಲಂ ಚ ಕರ್ಮ ಚ ॥44॥
ಅರ್ಜುನನು ಇಂದ್ರನಿಂದ ಎಲ್ಲಾ ಅಸ್ತ್ರಗಳನ್ನೂ ಸ್ವೀಕರಿಸಲು ವರವನ್ನು ಕೇಳಿದನು. ಇಂದ್ರನಾದರೋ ಒಂದು ಕಾಲವನ್ನೂ ಮತ್ತು ಕರ್ಮವನ್ನೂ ಸೂಚಿಸಿ ವರವನ್ನು ನೀಡಿದನು.
ಇಂದ್ರಃ
ಯದಾ ಪ್ರಸನ್ನೋ ಭಗವಾನ್ ಮಹಾದೇವೋ ಭವಿಷ್ಯತಿ |
ತುಭ್ಯಂ ತದಾ ಪ್ರದಾಸ್ಯಾಮಿ ಪಾಂಡವಾಸ್ತ್ರಾಣಿ ಸರ್ವಶಃ ॥45॥
ಪಾಂಡವನೇ, ನಿನಗೆ ಯಾವಾಗ ರುದ್ರದೇವರು ಪ್ರಸನ್ನರಾಗುವರೋ, ಆಗ ನಿನಗೆ ಎಲ್ಲಾ ಅಸ್ತ್ರಗಳನ್ನೂ ಕೊಡುವೆನು.
ಅಹಮೇವ ಚ ತಂ ಕಾಲಂ ವೇತ್ಸ್ಯಾಮಿ ಕುರುನಂದನ |
ತಪಸಾ ಮಹತಾ ಚಾಪಿ ಭವತೋ ದಾಸ್ಯಾಮಿ ತಾನ್ಯಹಮ್ ॥46॥
ಕುರುನಂದನನೇ, ಆ ಕಾಲವು ಯಾವುದೆಂದು ನಾನೇ ತಿಳಿದಿದ್ದೇನೆ. ದೊಡ್ಡ ತಪಸ್ಸಿನಿಂದ ಕೂಡಿದ ನಾನು ನಿನಗೆ ಆ ಅಸ್ತ್ರಗಳನ್ನು ಕೊಡುವೆನು.
ಆಗ್ನೇಯಾನಿ ಚ ಸರ್ವಾಣಿ ವಾಯವ್ಯಾನಿ ಧನಂಜಯ |
ಮದೀಯಾನಿ ಚ ಸರ್ವಾಣಿ ಗ್ರಹೀಷ್ಯಸಿ ಧನಂಜಯ ॥47॥
ಧನಂಜಯನೇ, ನೀನೂ ಎಲ್ಲಾ ಆಗ್ನೇಯಾಸ್ತ್ರಗಳನ್ನೂ, ಎಲ್ಲಾ ವಾಯವ್ಯಾಸ್ತ್ರಗಳನ್ನೂ, ಎಲ್ಲಾ ಇಂದ್ರಾಸ್ತ್ರಗಳನ್ನೂ ಪಡೆಯುವಿ.
ವೈಶಂಪಾಯನಃ
ವಾಸುದೇವೋಽಪಿ ಪಾರ್ಥೇನ ಪ್ರೀತಿಂ ವವ್ರೇ ಚ ಶಾಶ್ವತೀಮ್ |
ದದೌ ಚ ತಸ್ಮೈ ದೇವೇಂದ್ರಸ್ತಂ ವರಂ ಪ್ರೀತಿಮಾಂಸ್ತದಾ ॥48॥
ವಾಸುದೇವನೂ ಸಹ ಅರ್ಜುನನ ಜೊತೆಯಲ್ಲಿ ಶಾಶ್ವತವಾದ ಪ್ರೀತಿಯಿರಲೆಂದು ವರವನ್ನು ಕೇಳಿದನು. ದೇವೇಂದ್ರನು ಸಂತೋಷದಿಂದ ಅವನಿಗೆ ಆ ವರವನ್ನು ಕೊಟ್ಟನು.
ಪಾವಕಶ್ಚಾಪಿ ತಂ ದಾವಂ ದಗ್ಧ್ವಾ ಸಮೃಗಪಕ್ಷಿಣಮ್ |
ಅಹೋಭಿರೇಕವಿಂಶದ್ಭಿರ್ವಿರರಾಮ ಸುತರ್ಪಿತಃ ॥49॥
ಅಗ್ನಿಯೂ ಸಹ ಮೃಗಪಕ್ಷಿಗಳಿಂದ ಕೂಡಿದ್ದ ಆ ವನವನ್ನು ಇಪ್ಪತ್ತೊಂದು ದಿನಗಳ ಕಾಲ ದಹಿಸಿ ತೃಪ್ತಿಯನ್ನು ಹೊಂದಿ ಶಾಂತನಾದನು.
ಜಗ್ಧ್ವಾ ಮಾಂಸಾನಿ ಪೀತ್ವಾ ಚ ಮೇದಾಂಸಿ ರುಧಿರಾಣಿ ಚ |
ಯುಕ್ತಃ ಪರಮಯಾ ಪ್ರೀತ್ಯಾ ತಾವುವಾಚ ವಿಶಾಂಪತೇ ॥50॥
ಜನಮೇಜಯರಾಜನೇ, ಮಾಂಸಗಳನ್ನು ಭಕ್ಷಿಸಿ, ಮೇದಸ್ಸುಗಳನ್ನೂ ಮತ್ತು ರಕ್ತಗಳನ್ನೂ ಪಾನಮಾಡಿ ಪರಮಪ್ರೀತನಾದ ಅಗ್ನಿಯು ಕೃಷ್ಣಾರ್ಜುನರನ್ನು ಕುರಿತು ಹೇಳಿದನು.
ಯುವಾಭ್ಯಾಂ ಪುರುಷಾಗ್ರ್ಯಾಭ್ಯಾಂ ತರ್ಪಿತೋಽಸ್ಮಿ ಯಥಾಸುಖಮ್ |
ಅನುಜಾನಾಮಿ ವಾಂ ವೀರೌ ಚರತಂ ಯತ್ರ ವಾಂಛಿತಮ್ ॥51॥
ಪುರುಷಶ್ರೇಷ್ಠರಾದ ನಿಮ್ಮಿಬ್ಬರಿಂದ ನಾನು ಬಹಳ ತೃಪ್ತಿಯನ್ನು ಹೊಂದಿದ್ದೇನೆ. ವೀರರಾದ ನಿಮಗೆ ಸಂತೋಷದಿಂದ ಅನುಮತಿಯನ್ನು ನೀಡುತ್ತಿದ್ದೇನೆ. ನಿಮಗೆ ಇಷ್ಟವಾದ ಸ್ಥಳಕ್ಕೆ ನೀವು ಹೋಗಬಹುದು.
ವೈಶಂಪಾಯನಃ
ಏವಂ ತೌ ಸಮನುಜ್ಞಾತೋ ಪಾವಕೇನ ಮಹಾತ್ಮನಾ |
ಅರ್ಜುನೋ ವಾಸುದೇವಶ್ಚ ದಾನವಶ್ಚ ಮಯಸ್ತಥಾ ॥52॥

ಪರಿಕ್ರಮ್ಯ ತತಃ ಸರ್ವೇ ತ್ರಯೋ ವೈ ಭರತರ್ಷಭ |
ರಮಣೀಯೇ ನದೀಕೂಲೇ ಸಹಿತಾಃ ಸಮುಪಾವಿಶನ್ ॥53॥
ಭರತಶ್ರೇಷ್ಠನೇ, ಮಹಾನುಭಾವನಾದ ಅಗ್ನಿಯಿಂದ ಹೀಗೆ ಅನುಮತಿಯನ್ನು ಪಡೆದ ಅರ್ಜುನ, ಕೃಷ್ಣ ಮತ್ತು ಮಯಾಸುರರು ಅನಂತರ, ಮೂವರೂ ಅವನಿಗೆ ಪ್ರದಕ್ಷಿಣೆಯನ್ನು ಮಾಡಿ ರಮಣೀಯವಾದ ನದೀತೀರದಲ್ಲಿ ಜೊತೆಯಲ್ಲಿ ಕುಳಿತುಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಸಪ್ತತ್ರಿಂಶತ್ಯಧಿಕದ್ವಿಶತತಮೋऽಧ್ಯಾಯಃ ॥
॥ ಇತಿ ಮಯದರ್ಶನಪರ್ವಣಿ ಷಷ್ಠೋऽಧ್ಯಾಯಃ ॥
॥ ಮಯದರ್ಶನಪರ್ವ ಸಮಾಪ್ತಮ್ ॥
॥ ಆದಿಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಇನ್ನೂರ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
ಮಯದರ್ಶನಪರ್ವವು ಮುಗಿಯಿತು.
ಇಲ್ಲಿಗೆ ಆದಿಪರ್ವವು ಮುಗಿಯಿತು.
*****

ಮಹಾಭಾರತ
ಸಭಾಪರ್ವ
1. ಮಂತ್ರಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಓಂ ಜನಾರ್ದನಾಜ್ಞಯಾ ಮಯಃ ಸಮಸ್ತ ಕೌತುಕೋತ್ತರಾಂ |
ಸಭಾಂ ವಿಧಾಯ ಭೂಭೃತೇ ದದೌ ಗದಾಂ ವೃಕೋದರೇ ॥1॥
ಶ್ರೀಕೃಷ್ಣನ ಆಜ್ಞೆಯಿಂದ ಮಯಾಸುರ ಎಲ್ಲ ಆಶ್ಚರ್ಯಗಳಿಂದ ತುಂಬಿ ಉತ್ತಮವಾಗಿರುವ ಸಭಾಭವನವನ್ನು ನಿರ್ಮಿಸಿ ಧರ್ಮರಾಜನಿಗೆ ನೀಡಿದ. ಹಾಗೆಯೆ ಒಂದು ಗದೆಯನ್ನು ಭೀಮನಿಗೆ ತಂದಿತ್ತ.
* * * *
ಒಂದನೆಯ ಅಧ್ಯಾಯ
(ತನಗೆ ಮಾಡಿದ ಉಪಕಾರಕ್ಕಾಗಿ ಪ್ರತ್ಯುಪಕಾರವನ್ನು ಸ್ವೀಕರಿಸೆಂದು ಅರ್ಜುನನಿಗೆ ಮಯನ ಪ್ರಾರ್ಥನೆ. ಅರ್ಜುನನ ನಿರಾಕರಣೆ, ಸಭೆಯನ್ನು ನಿರ್ಮಾಣ ಮಾಡುವಂತೆ ಕೃಷ್ಣನಿಂದ ಆದೇಶ.)
ಜನಮೇಜಯಃ
ಅರ್ಜುನೋ ಜಯತಾಂ ಶ್ರೇಷ್ಠೋ ಮೋಕ್ಷಯಿತ್ವಾ ಮಯಂ ತದಾ |
ಕಿಂ ಚಕಾರ ಮಹಾತೇಜಾಸ್ತನ್ಮೇ ಬ್ರೂಹಿ ದ್ವಿಜೋತ್ತಮ ॥1॥
ಎಲೈ ಬ್ರಾಹ್ಮಣಶ್ರೇಷ್ಠನೇ! ಮಹಾತೇಜಸ್ವಿಯಾದ ಜಯಶೀಲರಲ್ಲಿ ಅಗ್ರಗಣ್ಯನಾದ ಅರ್ಜುನನು ಮಯನನ್ನು ಅಗ್ನಿದಾಹದಿಂದ ವಿಮೋಚನೆಗೊಳಿಸಿ ಅನಂತರ ಏನು ಮಾಡಿದನೆಂದು ನನಗೆ ಹೇಳು.
ವೈಶಂಪಾಯನಃ
ಶೃಣು ರಾಜನ್ ಯಥಾತತ್ವಂ ಚರಿತಂ ಪೂರ್ವಜಸ್ಯ ತೇ |
ಮೋಕ್ಷಯಿತ್ವಾ ಮಯಂ ತತ್ರ ಪಾರ್ಥಃ ಶಸ್ತ್ರಭೃತಾಂ ವರಃ ॥2॥
ಗಾಂಡೀವಂ ಕಾರ್ಮುಕಶ್ರೇಷ್ಠಂ ತೂಣೀ ಚಾಕ್ಷಯಸಾಯಕೌ |
ದಿವ್ಯಾನ್ಯಸ್ತ್ರಾಣಿ ರಾಜೇಂದ್ರ ದುರ್ಲಭಾನಿ ನೃಪೈರ್ಭುವಿ ॥3॥
ರಥಂ ಧ್ವಜಂ ಪತಾಕಾಶ್ಚ ಶ್ವೇತಾಶ್ವೈಃ ಸಹ ವೀರ್ಯವಾನ್ |
ಏತಾನಿ ಪಾವಕಾತ್ ಪ್ರಾಪ್ಯ ಮುದಾ ಪರಮಯಾ ಯುತಃ |
ತಸ್ಥೌ ಪಾರ್ಥೋ ಮಹಾಬಾಹುಸ್ತದಾ ಸಹ ಮಯೇನ ಸಃ ॥4॥
ರಾಜನೇ! ನಿನ್ನ ಪೂರ್ವಜನಾದ ಅರ್ಜುನನ ಚರಿತ್ರೆಯನ್ನು ಯಥಾವತ್ತಾಗಿ ಹೇಳುತ್ತೇನೆ ಕೇಳು. ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನಾದ ಅರ್ಜುನನು ಮಯನನ್ನು ವಿಮೋಚನೆಗೊಳಿಸಿ, ಶ್ರೇಷ್ಠವಾದ ಗಾಂಡೀವಧನುಸ್ಸನ್ನೂ ಅಕ್ಷಯಬಾಣಗಳಿರುವ ಎರಡು ಬತ್ತಳಿಕೆಗಳನ್ನು ಮನುಷ್ಯರಿಗೆ ಎಂದೂ ಲಭ್ಯವಾಗದ ದಿವ್ಯವಾದ ಅಸ್ತ್ರಗಳನ್ನೂ ಅಗ್ನಿಯಿಂದ ಪಡೆದು ಸಂತೋಷದಿಂದ ಕೂಡಿದವನಾಗಿ; ಮಹಾಬಾಹುವಾದ ಅವನು ಸಂತೋಷದಿಂದ ಮಯನ ಜೊತೆಯಲ್ಲಿ ನಿಂತನು.
ವೈಶಂಪಾಯನಃ
ತತೋऽಬ್ರವೀನ್ಮಯಃ ಪಾರ್ಥಂ ವಾಸುದೇವಸ್ಯ ಸನ್ನಿಧೌ |
ಪಾಂಡವೇನ ಪರಿತ್ರಾತಃ ತತ್ಕೃತಂ ಪರ್ಯನುಸ್ಮರನ್ |
ಪ್ರಾಂಜಲಿಃ ಶ್ಲಕ್ಷ್ಣಯಾ ವಾಚಾ ಪೂಜಯಿತ್ವಾ ಪುನಃ ಪುನಃ ॥5॥
ಅನಂತರ ಕೃಷ್ಣನ ಸನ್ನಿಯಲ್ಲಿ ಅರ್ಜುನನನ್ನು ಕುರಿತು, ಅರ್ಜುನನಿಂದ ರಕ್ಷಿಸಲ್ಪಟ್ಟ ಮಯನು ಅವನ ಉಪಕಾರವನ್ನು ಬಹಳವಾಗಿ ಸ್ಮರಣೆ ಮಾಡುತ್ತಾ ಕೈಗಳನ್ನು ಮುಗಿದು ಮಧುರವಾದ ಮಾತುಗಳಿಂದ ಅವನನ್ನು ಮತ್ತೆ ಮತ್ತೆ ಗೌರವಿಸಿ ಮಾತನಾಡಿದನು.
ಅಸ್ಮಾಚ್ಚ ಕೃಷ್ಣಾತ್ ಸಂಕ್ರುದ್ಧಾತ್ ಪಾವಕಾಚ್ಚ ದಿಧಕ್ಷತಃ |
ತ್ವಯಾ ತ್ರಾತೋऽಸ್ಮಿ ಕೌಂತೇಯ ಬ್ರೂಹಿ ಕಿಂ ಕರವಾಣಿ ತೇ ॥6॥

ಕ್ರುದ್ಧನಾದ ಈ ಕೃಷ್ಣನಿಂದಲೂ ಮತ್ತು ದಹಿಸುವ ಅಗ್ನಿಯಿಂದಲೂ ನೀನು ನನ್ನನ್ನು ರಕ್ಷಿಸಿದ್ದೀಯೆ. ಎಲೈ ಕೌಂತೇಯನೇ ನಾನು ನಿನಗೆ ಏನು ಪ್ರತ್ಯುಪಕಾರವನ್ನು ಮಾಡಲಿ ಎಂದು ಹೇಳು.
ಅಹಂ ಹಿ ವಿಶ್ವಕರ್ಮಾ ವಾ ಅಸುರಾಣಾಂ ಪರಂತಪ |
ತಸ್ಮಾತ್ ತೇ ವಿಸ್ಮಯಂ ಕಿಂಚಿತ್ ಕುರ್ಯಾಮನ್ಯೈಃ ಸುದುಷ್ಕರಮ್ ॥
ಪರಂತಪನೇ! ನಾನು ಅಸುರರ ಶಿಲ್ಪಿಯಾದ ಮಯ. ಆದ್ದರಿಂದ ನಿನಗೆ ಬೇರೆಯವರು ಮಾಡಲು ಸಾಧ್ಯವಾಗದ ಆಶ್ಚರ್ಯಕರವಾದ ಏನನ್ನಾದರೂ ನಿರ್ಮಿಸುತ್ತೇನೆ. (ಕಟ್ಟಿಗೆಗೆ ಸಂಬಂಸಿದ ಕುಸುರಿ ಕೆಲಸಗಳೆಲ್ಲವನ್ನೂ ಮಾಡಬಲ್ಲವನಾದ್ದರಿಂದ ಮಯನು ವಿಶ್ವಕರ್ಮನೆನಿಸಿದ್ದಾನೆ).
ವೈಶಂಪಾಯನಃ
ಏವಮುಕ್ತೋ ಮಹಾವೀರ್ಯಃ ಪಾರ್ಥೋ ಮಾಯಾವಿನಂ ಮಯಮ್ |
ಧ್ಯಾತ್ವಾ ಮುಹೂರ್ತಂ ಕೌಂತೇಯಃ ಪ್ರಹಸನ್ ವಾಕ್ಯಮಬ್ರವೀತ್ ॥8॥
ಮಯನಿಂದ ಹೀಗೆ ಹೇಳಲ್ಪಟ್ಟ ಅರ್ಜುನನು, ಒಂದು ಕ್ಷಣ ಚಿಂತಿಸಿ ನಗುತ್ತಾ ಅನೇಕ ವಿಚಿತ್ರ ಶಕ್ತಿಯಿಂದ ಕೂಡಿದ್ದ ಮಯನನ್ನು ಕುರಿತು ಹೀಗೆ ಮಾತನಾಡಿದನು.
ಕೃತಮೇವ ತ್ವಯಾ ಸರ್ವಂ ಸ್ವಸ್ತಿ ಗಚ್ಛ ಮಹಾಸುರ |
ಪ್ರೀತಿಮಾನ್ ಭವ ನೋ ನಿತ್ಯಂ ಪ್ರೀತಿಮಂತೋ ವಯಂ ತ್ವಯಿ |
ಪ್ರಾಪ್ನೋಪಕಾರಾದರ್ಥಂ ಹಿ ನಾದಾಸ್ಯಾಮೀತಿ ಮೇ ವ್ರತಮ್ ॥9॥
ಮಹಾಸುರನೇ ! ನೀನು ನನಗೆ ಎಲ್ಲವನ್ನು ಮಾಡಿದಂತೆಯೇ ಆಯಿತು. ನೀನು ಹೊರಡು. ನಮ್ಮಲ್ಲಿ ಯಾವಾಗಲೂ ಪ್ರೀತಿಯನ್ನು ಇಟ್ಟು ಕೊಂಡಿರು. ನಾವು ನಿನ್ನಲ್ಲಿ ಯಾವಾಗಲೂ ಪ್ರೀತಿಯನ್ನು ಹೊಂದಿರುತ್ತೇವೆ. ಉಪಕಾರವನ್ನೂ ಮಾಡಿದುದಕ್ಕೆ ಪ್ರತಿಯಾಗಿ ನಾನು ಯಾವ ಉಪಕಾರವನ್ನೂ ಸ್ವೀಕರಿಸುವುದಿಲ್ಲ ಎಂಬುದು ನನ್ನ ವ್ರತವಾಗಿದೆ.
ಮಯಃ
ಯುಕ್ತಮೇತತ್ ತ್ವಯಿ ವಚೋ ಯದಾತ್ಥ ಪುರುಷರ್ಷಭ |
ಪ್ರೀತಿಪೂರ್ವಮಹಂ ಕಿಂಚಿತ್ ಕರ್ತುಮಿಚ್ಛಾಮಿ ತೇ ಪ್ರೀಯಮ್ ॥
ಪುರುಷಶ್ರೇಷ್ಠನೇ! ನೀನು ಹೇಳಿದ ಮಾತುಗಳು ನಿನಗೆ ಯೋಗ್ಯವಾಗಿಯೇ ಇವೆ. ನಾನು ನಿನ್ನ ಮೇಲಿನ ಪ್ರೀತಿಯಿಂದಲೇ ನಿನಗೆ ಪ್ರಿಯವಾದ ಏನನ್ನಾದರೂ ಮಾಡಲು ಬಯಸುತ್ತೇನೆ.
ಅಹಂ ಹಿ ವಿಶ್ವಕರ್ಮಾ ವೈ ದಾನವಾನಾಂ ಮಹಾಕವಿಃ |
ಸೋऽಹಂ ವೈ ತ್ವತ್ಕೃತೇ ಕಿಂಚಿತ್ ಕರ್ತುಮಿಚ್ಛಾಮಿ ಪಾಂಡವ ॥11॥
ನಾನು ಬಹಳ ಜ್ಞಾನವನ್ನು ಹೊಂದಿದ ದಾನವರ ಶಿಲ್ಪಿಯಾಗಿದ್ದೇನೆ. ಪಾಂಡವನೇ ! ಆ ಕಾರಣದಿಂದ ನಾನು ನಿನಗೆ ಏನಾದರೂ ಅಲ್ಪ ಕಾರ್ಯವನ್ನು ಮಾಡಲು ಬಯಸುತ್ತೇನೆ.
ದಾನವಾನಾಂ ಪುರಾ ಪಾರ್ಥ ಪ್ರಾಸಾದಾ ಹಿ ಮಯಾ ಕೃತಾಃ |
ಉದ್ಯಾನಾನಿ ಚ ರಮ್ಯಾಣಿ ಸರಾಂಸಿ ವಿವಿಧಾನಿ ಚ ॥12॥
ಪಾರ್ಥನೇ ! ನಾನು ಹಿಂದೆ ದಾನವರಿಗಾಗಿ ಅನೇಕ ಪ್ರಾಸಾದಗಳನ್ನು ಉದ್ಯಾನಗಳನ್ನು ಮತ್ತು ಅನೇಕ ವಿಧವಾದ ಸುಂದರವಾದ ಸರೋವರಗಳನ್ನು ನಿರ್ಮಿಸಿದ್ದೇನೆ.
ರಮ್ಯಾಣಿ ಸುಖದರ್ಶಾನಿ ಭೋಗಾಢ್ಯಾನಿ ಸಹಸ್ರಶಃ |
ವಿಚಿತ್ರಾಣಿ ಚ ಶಸಹತ್ರಣಿ ರಥಾಃ ಕಾಮಗಮಾಸ್ತಥಾ ॥13॥
ಸುಂದರವಾದ ನೋಡಲು ಸಂತೋಷವಾಗುವ ಅನೇಕ ಭೋಗಗಳಿಂದ ಕೂಡಿರುವ ವಿಚಿತ್ರವಾದ ಗೃಹಗಳನ್ನು ಸಹಸ್ರಸಂಖ್ಯೆಯಲ್ಲಿ ನಿರ್ಮಿಸಿದ್ದೇನೆ. ಹಾಗೂ ವಿಚಿತ್ರವಾದ ಶಸ್ತ್ರಗಳನ್ನೂ ರಥಿಕನ ಇಚ್ಛೆಯಂತೆ ಚಲಿಸುವ ರಥಗಳನ್ನೂ ನಿರ್ಮಿಸಿದ್ದೇನೆ.
ನಗರಾಣಿ ವಿಶಾಲಾನಿಸಾಟ್ಟ ಪ್ರಾಕಾರತೋರಣೈಃ |
ವಾಹನಾನಿ ಚ ಮುಖ್ಯಾನಿ ವಿಚಿತ್ರಾಣಿ ಸಹಸ್ರಶಃ ॥14॥
ವಿಶಾಲವಾದ ನಗರಗಳನ್ನೂ ಅವುಗಳಲ್ಲಿ ಉಪ್ಪರಿಗೆಗಳನ್ನೂ ಕೋಟೆಗಳನ್ನೂ ಮತ್ತು ತೋರಣಗಳನ್ನೂ ಶ್ರೇಷ್ಠವಾದ ಮತ್ತು ವಿಚಿತ್ರವಾದ ವಾಹನಗಳನ್ನೂ ಸಹಸ್ರಾರು ಸಂಖ್ಯೆಯಲ್ಲಿ ನಿರ್ಮಿಸಿದ್ದೇನೆ.
ಬಿಲಾನಿ ರಮಣೀಯಾನಿ ಸುಖಯುಕ್ತಾನಿ ವೈ ಭೃಶಮ್ |
ಏತೇ ಕೃತಾ ಮಯಾ ಸರ್ವೇ ತಸ್ಮಾದಿಚ್ಛಾಮಿ ಫಲ್ಗುನ ॥15॥
ಅರ್ಜುನನೇ! ಅನೇಕಸುಂದರವಾದ ಸುಖಯುಕ್ತವಾದ ಪ್ರಾಸಾದಗಳನ್ನು ಅಂತರ್ಭೂಮಿಯಲ್ಲಿ ರಚಿಸಿದ್ದೇನೆ. ನಾನು ಇವೆಲ್ಲವನ್ನೂ ಮಾಡಿದ್ದೇನೆ. ಆದ್ದರಿಂದ ನಿನಗೆ ಏನಾದರೂ ಉಪಕಾರವನ್ನು ಮಾಡಲು ಬಯಸುತ್ತೇನೆ.
ಅರ್ಜುನಃ
ಪ್ರಾಣಕೃಚ್ಛ್ರಾದ್ ವಿನಿರ್ಮುಕ್ತಮ್ ಆತ್ಮಾನಂ ಮನ್ಯಸೇ ಮಯಾ |
ಏವಂ ಗತೇ ನ ಶಕ್ಷ್ಯಾಮಿ ಕಿಂಚಿತ್ ಕಾರಯಿತುಂ ತ್ವಯಾ ॥16॥
ಮಯನೇ! ನಾನು ನಿನ್ನನ್ನು ಪ್ರಾಣಸಂಕಟದಿಂದ ವಿಮೋಚನೆಗೊಳಿಸಿದ್ದೇನೆ ಎಂದು ನೀನು ತಿಳಿದಿದ್ದೀಯೆ ಪರಿಸ್ಥಿತಿಯು ಹೀಗಿರುವಾಗ ನಾನು ನಿನ್ನಿಂದ ಯಾವ ಉಪಕಾರವನ್ನೂ ಪಡೆಯಲು ಬಯಸುವುದಿಲ್ಲ.
ನಚಾಪಿ ತವ ಸಂಕಲ್ಪಂ ಮೋಘಮಿಚ್ಛಾಮಿ ದಾನವ |
ಕೃಷ್ಣಸ್ಯ ಕ್ರಿಯತಾಂ ಕಿಂಚಿತ್ ತಥಾ ಪ್ರತಿಕೃತಂ ಮಯಾ ॥17॥

ದಾನವನೇ! ನಿನ್ನ ಸಂಕಲ್ಪವನ್ನೇ ವ್ಯರ್ಥಮಾಡುವುದಕ್ಕೂ ನನಗೆ ಮನಸ್ಸಿಲ್ಲ ಆದ್ದರಿಂದ ಕೃಷ್ಣನಿಗಾಗಿ ಏನಾದರೂ ಮಾಡು. ಅದನ್ನೇ ನನಗೆ ಮಾಡಿದ ಪ್ರತ್ಯುಪಕಾರವೆಂದು ಭಾವಿಸುತ್ತೇನೆ.
ಮಯಃ
ವಾಸುದೇವ ಮಯಾ ಕರ್ತುಂ ಕಿಮಿಚ್ಛಸಿ ಶುಭಾನನ ॥18॥
ಎಲೈ ಸುಂದರವದನನಾದ ವಾಸುದೇವನೇ! ನಾನು ಏನು ಮಾಡಬೇಕೆಂದು ಬಯಸುತ್ತೀಯೆ?
ವೈಶಂಪಾಯನಃ
ಚೋದಿತೋ ವಾಸುದೇವಸ್ತು ಮಯೇನ ಭರತರ್ಷಭ |
ಮುಹೂರ್ತಮಿವ ಸಂದಧ್ಯೌ ಕಿಮಯಂ ಚೋದ್ಯತಾಮಿತಿ ॥19॥
ಚೋದಯಾಮಾಸ ತಂ ಕೃಷ್ಣಃ ಸಭಾ ವೈ ಕ್ರಿಯತಾಮಿತಿ ॥20॥
ಭರತರ್ಷಭನೇ! ಮಯನಿಂದ ಹೀಗೆ ಪ್ರೇರಿಸಲ್ಪಟ್ಟ ವಾಸುದೇವನು ಒಂದು ಮೂಹೂರ್ತದ ಕಾಲ ಇವನಿಗೆ ಏನು ಆದೇಶವನ್ನು ನೀಡಲಿ ಎಂದು ಚಿಂತಿಸಿ, ಅನಂತರ ಒಂದು ಸಭೆಯನ್ನು ನಿರ್ಮಿಸು ಎಂದು ಮಯನಿಗೆ ಪ್ರೇರಿಸಿದನು.
ಶ್ರೀ ಭಗವಾನ್
ಧರ್ಮರಾಜಸ್ಯ ದಯಿತಾಂ ಯಾದೃಶೀಮಿವ ಮನ್ಯಸೇ |
ಯಾಂ ಕೃತಾಂ ನಾನುಕುರ್ಯುಸ್ತೇ ಮಾನವಾಃ ಪ್ರೇಕ್ಷ್ಯ ವಿಸ್ಮಿತಾಃ |
ಮನುಷ್ಯಲೋಕೇ ಕೃತ್ಸ್ನೇಽಸ್ಮಿನ್ ತಾದೃಶೀಂ ಕುರು ವೈ ಸಭಾಮ್ ॥21॥
ಮಯನೇ! ಎಂತಹ ಸಭೆಯನ್ನು ನಿರ್ಮಾಣ ಮಾಡಿದರೆ ಧರ್ಮರಾಜನಿಗೆ ಪ್ರಿಯವಾಗುವುದು ಎಂದು ನೀನು ಭಾವಿಸುತ್ತೀಯೋ, ಎಂತಹ ಸಭೆಯನ್ನು ನೋಡಿದ ಮೇಲೆ, ವಿಸ್ಮಿತರಾದ ಮನುಷ್ಯರು, ಮನುಷ್ಯಲೋಕದಲ್ಲಿ ಅಂತಹ ಸಭೆಯನ್ನು ನಿರ್ಮಾಣ ಮಾಡಲು ಸಾಧ್ಯವಿಲ್ಲವೋ, ಅಂತಹ ಸಭೆಯನ್ನು ನಿರ್ಮಾಣ ಮಾಡು.
ಯತ್ರ ದಿವ್ಯಾನಭಿಪ್ರಾಯಾನ್ ಪಶ್ಯೇಮ ವಿಹಿತಾಂಸ್ತ್ವಯಾ |
ಆಸುರಾನ್ ಮಾನುಷಾಂಶ್ಚೈವ ತಾದೃಶೀಂ ಕುರು ವೈ ಸಭಾಮ್ ॥22॥
ಯಾವ ಸಭೆಯಲ್ಲಿ ದೇವಲೋಕಕ್ಕೆ ಸಂಬಂಧಪಟ್ಟ ಅಭಿಪ್ರಾಯಗಳು (ಕಲ್ಪನೆಗಳು) ಮನುಷ್ಯಲೋಕಕ್ಕೆ ಮತ್ತು ಅಸುರಲೋಕಕ್ಕೆ ಸಂಬಂಸಿದ ಕಲ್ಪನೆಗಳು ನೋಡಲ್ಪಡಬಹುದೋ ಅಂತಹ ಸಭೆಯನ್ನು ನಿರ್ಮಾಣಮಾಡು.
ವೈಶಂಪಾಯನಃ
ಪ್ರತಿಗೃಹ್ಯ ತು ತದ್ವಾಕ್ಯಂ ಸಂಪ್ರಹೃಷ್ಟೋ ಮಯಸ್ತದಾ |
ವಿಮಾನಪ್ರತಿಮಾಂ ಚಕ್ರೇ ಪಾಂಡವಸ್ಯ ಸಭಾಂ ಮುದಾ ॥23॥
ಆಗ ಮಯನು ಸಂತೋಷದಿಂದ ಕೃಷ್ಣನ ಆ ವಾಕ್ಯವನ್ನು ಸ್ವೀಕರಿಸಿ ಅರ್ಜುನನ ಸಲುವಾಗಿ ಅನೇಕ ಉಪ್ಪರಿಗೆಗಳಿಂದ ಕೂಡಿದ ಸಭೆಯನ್ನು ಸಂತೋಷದಿಂದ ನಿರ್ಮಾಣ ಮಾಡಿದನು.
ತತಃ ಕೃಷ್ಣಶ್ಚ ಪಾರ್ಥಶ್ಚ ಧರ್ಮರಾಜೇ ಯುಷ್ಠಿರೇ |
ಸರ್ವಮೇತದ್ ಯಥಾಽಽವೇದ್ಯ ದರ್ಶಯಾಮಾಸತುರ್ಮಯಮ್ ॥24॥
ಅನಂತರ ಕೃಷ್ಣ ಮತ್ತು ಅರ್ಜುನರು ಮಯನನ್ನು ಧರ್ಮರಾಜನಾದ ಯುಷ್ಠಿರನ ಬಳಿ ಕರೆದುಕೊಂಡುಹೋಗಿ, ನಡೆದುದೆಲ್ಲವನ್ನೂ ಯಥಾವತ್ತಾಗಿ ನಿರೂಪಿಸಿ ಧರ್ಮರಾಜನಿಗೆ ಮಯನನ್ನು ತೋರಿಸಿದರು.
ತಸ್ಮೈ ಯುಷ್ಠಿರಃ ಪೂಜಾಂ ಯಥಾರ್ಹಮಕರೋತ್ ತದಾ |
ಆಸನಂ ಕಲ್ಪಯಾಮಾಸ ಪೂಜಯಾಮಾಸ ಚ ಪ್ರಭುಃ |
ಸ ಚ ತಾಂ ಪ್ರತಿಜಗ್ರಾಹ ಮಯಃ ಸತ್ಕೃತ್ಯ ಸತ್ಕೃತಃ ॥25॥
ಆಗ ಧರ್ಮರಾಜನು ಮಯನಿಗೆ ಯಥೋಚಿತವಾದ ಪೂಜೆಯನ್ನು ಮಾಡಿದನು. ಪ್ರಭುವಾದ ಅವನು ಮಯನಿಗೆ ಒಂದು ಆಸನವನ್ನು ನೀಡಿ ಗೌರವಿಸಿದನು. ಧರ್ಮರಾಜನಿಂದ ಸತ್ಕೃತನಾದ ಮಯನು ಧರ್ಮರಾಜನನ್ನು ಸತ್ಕರಿಸಿ ಅವನು ನೀಡಿದ ಪೂಜೆಯನ್ನು ಸ್ವೀಕರಿಸಿದನು.
ಸ ಪೂರ್ವದೇವಚರಿತಂ ತದಾ ತತ್ರ ವಿಶಾಂಪತೇ |
ಕಥಯಾಮಾಸ ದೈತೇಯಃ ಪಾಂಡಪುತ್ರೇಷು ಭಾರತ ॥26॥
ಭರತವಂಶೋತ್ಪನ್ನನಾದ ರಾಜನೇ! ಆಗ ದೈತೇಯನಾದ ಮಯನು ಪಾಂಡವರನ್ನು ಕುರಿತು ದಾನವರ ಅನೇಕ ಕಥೆಗಳನ್ನು ಹೇಳಿದನು.
ಸ ಕಾಲಂ ಕಂಚಿದಾಶ್ವಸ್ಯ ವಿಶ್ವಕರ್ಮಾ ವಿಚಿಂತ್ಯ ಚ |
ಸಭಾಂ ಪ್ರಚಕ್ರಮೇ ಕರ್ತುಂ ಪಾಂಡವಾನಾಂ ಮಹಾತ್ಮನಾಮ್ |
ಅಭಿಪ್ರಾಯೇಣ ಪಾರ್ಥಸ್ಯ ಕೃಷ್ಣಸ್ಯ ಚ ಮಹಾತ್ಮನಃ ॥27॥
ದೈತ್ಯರ ಶಿಲ್ಪಿಯಾದ ಮಯನು ಸ್ವಲ್ಪಸಮಯ ಸುಧಾರಿಸಿಕೊಂಡು ಮಹಾತ್ಮರಾದ ಕೃಷ್ಣ ಮತ್ತು ಅರ್ಜುನರ ಅಭಿಪ್ರಾಯಕ್ಕೆ ಅನುಗುಣವಾಗಿ ಮಹಾತ್ಮರಾದ ಪಾಂಡವರಿಗೋಸ್ಕರ ಸಭೆಯನ್ನು ನಿರ್ಮಾಣ ಮಾಡಲು ಉಪಕ್ರಮಿಸಿದನು.
ಪುಣ್ಯೇಽಹನಿ ಮಹಾಬಾಹುಃ ಕೃತಕೌತುಕಮಂಗಲಃ |
ತರ್ಪಯಿತ್ವಾ ದ್ವಿಜಶ್ರೇಷ್ಠಾನ್ ಪಾಯಸೇನ ಸಹಸ್ರಶಃ ॥28॥
ಧನಂ ಬಹುವಿಧಂ ದತ್ವಾ ತೇಭ್ಯ ಏವ ಚ ವೀರ್ಯವಾನ್ |
ದಶ ಕಿಷ್ಕುಸಹಸ್ರಾಣಿ ಮಾಪಯಾಮಾಸ ಸರ್ವತಃ ॥29॥

ಮಹಾಬಾಹುವಾದ ಮಯನು ಒಂದು ಶುಭದಿನದಲ್ಲಿ ಮಂಗಳಸ್ನಾನವನ್ನು ಮಾಡಿ ಪುಣ್ಯಹವಾಚನವನ್ನು ಮಾಡಿಸಿ ಸಹಸ್ರಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ಪಾಯಸಮಿಶ್ರಿತವಾದ ಭೋಜನವನ್ನು ಮಾಡಿಸಿ ಅವರಿಗೆ ಅನೇಕ ವಿಧವಾದ ಧನವನ್ನು ದಾನವಾಗಿಕೊಟ್ಟು ಸಮರ್ಥನಾದ  ಅವನು ಸಭೆಯ ನಿರ್ಮಾಣಕ್ಕಾಗಿ ಹತ್ತುಸಾವಿರ ಮೊಳಗಳಷ್ಟು ಭೂಮಿಯನ್ನು ಅಳೆಸಿದನು. ಒಂದು ಕಿಷ್ಕು ಎಂದರೆ ಒಂದು ಹಸ್ತ ಎಂದರೆ ಅಂಗೈ ಮತ್ತು ಬೆರಳುಗಳು ಒಟ್ಟು ಉದ್ದ ಇಂತಹ ಹತ್ತುಸಾವಿರ ಹಸ್ತಗಳನ್ನು ಪೂರ್ವ ಪಶ್ಚಿಮವಾಗಿ ಮತ್ತು ದಕ್ಷಿಣೋತ್ತರವಾಗಿ ಅಳೆದು ಸಭೆಯ ನಿರ್ಮಾಣಪ್ರದೇಶವನ್ನು ಗುರುತುಪಡಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪ್ರಥಮೋಽಧ್ಯಾಯಃ ॥
॥ ಮಂತ್ರಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಸಭಾಪರ್ವದಲ್ಲಿ ಮೊದಲನೆಯ ಅಧ್ಯಾಯ  ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಪುನಶ್ಚ ವತ್ಸರದ್ವಯಂ ಸಮುಷ್ಯ ಕೇಶವೋ ಯಯೌ |
ಸಮರ್ಚಿತಶ್ಚ ಪಾಂಡವೈರ್ವಿಯೋಜನೇಽಸ್ಯ ಚಾಕ್ಷಮೈಃ ॥3॥
ಇಂದ್ರಪ್ರಸ್ಥದಲ್ಲಿ ಶ್ರೀಕೃಷ್ಣ ಪುನಃ ಎರಡು ವರ್ಷಕಾಲ ವಾಸ ಮಾಡಿ ದ್ವಾರಕೆಗೆ ಹೊರಟ. ಆಗ ಅವನ ವಿಯೋಗವನ್ನು ಸಹಿಸಲು ಅಸಮರ್ಥರಾದ ಪಾಂಡವರು ಅವನನ್ನು ಬಹಳ ಸತ್ಕರಿಸಿದರು.
* * * *
ಎರಡನೆಯ ಅಧ್ಯಾಯ
(ಕೃಷ್ಣನ ಪ್ರಯಾಣ ಧರ್ಮರಾಜ ಮೊದಲಾದವರ ಸಾರಥ್ಯಗಳು  ಸ್ವಲ್ಪದೂರಹೋಗಿ ಧರ್ಮರಾಜಾದಿಗಳ ಹಿಂದುರುಗುವಿಕೆ. ಕೃಷ್ಣನ ದ್ವಾರಕಾಪ್ರಾಪ್ತಿ ಮತ್ತು ದ್ವಾರಕೆಯಲ್ಲಿ ಸುಖವಾಸ.)
ವೈಶಂಪಾಯನಃ
ಉಷಿತ್ವಾ ಖಾಂಡವಪ್ರಸ್ಥೇ ಸುಖವಾಸಂ ಜನಾರ್ದನಃ |
ಪಾರ್ಥೈಃ ಪ್ರೀತಿಸಮಾಯುಕ್ತೈಃ ಪೂಜನಾರ್ಹೋಽಭಿಪೂಜಿತಃ |
ಗಮನಾಯ ಮತಿಂ ಚಕ್ರೇ ಪಿತುರ್ದರ್ಶನಲಾಲಸಃ ॥1॥
ಪೂಜಾರ್ಹನಾದ ಜನಾರ್ದನನು ಇಂದ್ರಪ್ರಸ್ಥದಲ್ಲಿ ಸುಖವಾಗಿವಾಸಿಸಿ ಪ್ರೀತಿಯುಕ್ತರಾದ ಪಾಂಡವರಿಂದ ಪೂಜಿಸಲ್ಪಟ್ಟು ತಂದೆಯಾದ ವಸುದೇವನನ್ನು ನೋಡುವ ಆಕಾಂಕ್ಷೆಯುಳ್ಳವನಾಗಿ ಪ್ರಯಾಣಮಾಡಲು ನಿರ್ದರಿಸಿದನು.
ಧರ್ಮರಾಜಮಥಾಮಂತ್ರ್ಯ ಪೃಥಾಂ ಚ ಪೃಥುಲೋಚನಃ |
ವವಂದೇ ಚರಣೌ ಮೂರ್ಧ್ನಾ ಜಗದ್ವಂದ್ಯಃ ಪಿತೃಷ್ವಸುಃ ॥2॥
ಜಗದ್ವಂದ್ಯನಾದ ವಿಶಾಲನೇತ್ರನಾದ ಕೃಷ್ಣನು ಧರ್ಮರಾಜನ ಅನುಮತಿಯನ್ನು ಪಡೆದು,  ಸೋದರತ್ತೆಯಾದ  ಕುಂತಿಯ ಪಾದಗಳಿಗೆ ಶಿರಸಹಿತವಾದ ಸಾಷ್ಟಾಂಗಪ್ರಣಾಮಗಳನ್ನುಮಾಡಿದನು.
ಸ ತಯಾ ಮೂಧ್ನ್ಯುಪಾಘ್ರಾಯ ಪರಿಷ್ವಕ್ತಶ್ಚ ಕೇಶವಃ |
ದದರ್ಶಾನಂತರಂ ಕೃಷ್ಣೋ ಭಗಿನೀಂ ಸ್ವಾಂ ಮಹಾಯಶಾಃ ॥3॥
ಮಹಾ ಕೀರ್ತಿವಂತನಾದ ಕೇಶವನು, ಕುಂತಿಯಿಂದ ಆಲಿಂಗಿಸಲ್ಪಟ್ಟು ಶಿರಸ್ಸಿನಲ್ಲಿ ಆಘ್ರಾಣಿಸಲ್ಪಟ್ಟವನಾಗಿ, ಅನಂತರ ತನ್ನ ತಂಗಿಯಾದ ಸುಭದ್ರೆಯನ್ನು ನೋಡಿದನು.
ತಾಮುಪೇತ್ಯ ಹೃಷೀಕೇಶಃ ಪ್ರೀತ್ಯಾ ಬಾಷ್ಪಸಮನ್ವಿತಃ |
ಅರ್ಥ್ಯಂ ತಥ್ಯಂ ಹಿತಂ ವಾಕ್ಯಂ ಲಘು ಯುಕ್ತಮನುತ್ತಮಮ್ |
ಉವಾಚ ಭಗವಾನ್ ಭದ್ರಾಂ ಸುಭದ್ರಾಂ ಭದ್ರಭಾಷಿಣೀಮ್ ॥4॥
ಹೃಷೀಕೇಶನು ಮಂಜುಳವಾಗಿಮಾತನಾಡುವ ತಂಗಿಯಾದ ಸುಭದ್ರೆಯನ್ನು ಸಮೀಪಿಸಿ ವಾತ್ಸಲ್ಯದಿಂದ ಬಾಷ್ಪಪೂರಿತಲೋಚನನಾಗಿ ಪ್ರಾರ್ಥನೀಯಾವಾದ ಯಥಾರ್ಥವಾದ ಹಿತಕರವಾದ ಶ್ರೇಷ್ಠವಾದ, ಯುಕ್ತಿಯುಕ್ತವಾದ ಮಿತವಾದ ಮಾತುಗಳನ್ನು ಆಡಿದನು.
ತಯಾ ಸ ಗಜಗಾಮಿನ್ಯಾ ಶ್ರಾವಿತೋ ವಚನಾನಿ ಚ |
ಸಂಪೂಜಿತಶ್ಚಾಪ್ಯಸಕೃಚ್ಛಿರಸಾ ಚಾಭಿವಂದಿತಃ ॥5॥
ಕೃಷ್ಣನು, ಗಜಗಾಮಿನಿಯಾದ ಆ ಸುಭದ್ರೆಯಿಂದ ಮಧುರವಾಗಿ ಮಾತನಾಡಿಸಲ್ಪಟ್ಟು ಅರ್ಚಿಸಲ್ಪಟ್ಟು ಪುನಃ ಪುನಃ ನಮಸ್ಕರಿಸಲ್ಪಟ್ಟನು.
ತಾಮನುಜ್ಞಾಪ್ಯ ವಾರ್ಷ್ಣೇಯಃ ಪ್ರತಿನಂದ್ಯ ಚ ಭಾಮಿನೀಮ್ |
ದದರ್ಶಾನಂತರಂ ಕೃಷ್ಣಾಂ ಧೌಮ್ಯಂ ಚಾಪಿ ಜನಾರ್ದನಃ ॥6॥
ವೃಷ್ಣಿಕುಲಸಂಭೂತನಾದ  ಜನಾರ್ದನನು ಭಾಮಿನಿಯಾದ ಸುಭದ್ರೆಯನ್ನು ಅಭಿನಂದಿಸಿ ಅನುಮತಿಯನ್ನು ಪಡೆದು ಅನಂತರ ದ್ರೌಪದಿಯನ್ನು ಮತ್ತು ಧೌಮ್ಯರನ್ನು ಸಂದರ್ಶಿಸಿದನು.
ವವಂದೇ ಚ ಯಥಾನ್ಯಾಯಂ ಧೌಮ್ಯಂ ಪುರುಷಸತ್ತಮಃ |
ದ್ರೌಪದೀಂ ಸಾಂತ್ವಯಿತ್ವಾ ಚ ಸುಭದ್ರಾಂ ಪರಿರಭ್ಯ ಚ |
ಭ್ರಾತೄನಭ್ಯಗಮದ್ ೀಮಾನ್ ಪಾರ್ಥೇನ ಸಹಿತೋ ವಶೀ ॥7॥
ಪುರುಷಶ್ರೇಷ್ಠನಾದ ಕೃಷ್ಣನು ಯಥೋಚಿತವಾಗಿ ಧೌಮ್ಯರಿಗೆ ನಮಸ್ಕರಿಸಿದನು. ದ್ರೌಪದಿಯನ್ನು ಕುರಿತು ಸಮಾದಾನದ

ಮಾತುಗಳನ್ನು ಆಡಿ ಸುಭದ್ರೆಯನ್ನು ಆಲಿಂಗಿಸಿ ೀಮಂತನೂ, ಸ್ವತಂತ್ರನೂ,  ಆದ ಕೃಷ್ಣನು ಅರ್ಜುನನ ಜೊತೆಯಲ್ಲಿ ಉಳಿದ ಸಹೋದರರನ್ನು ನೋಡಲು ಹೊರಟನು.
ಭ್ರಾತೃಭಿಃ ಪಂಚಭಿಃ ಕೃಷ್ಣೋ ವೃತಃ ಶಕ್ರ ಇವಾಮರೈಃ |
ಯಾತ್ರಾಕಾಲಸ್ಯ ಯೋಗ್ಯಾನಿ ಕರ್ಮಾಣಿ ಗರುಡಧ್ವಜಃ ॥8॥
ಕರ್ತುಕಾಮಃ ಶುಚಿರ್ಭೂತ್ವಾ ಸ್ನಾತ್ವಾ ಚ ಸಮಲಂಕೃತಃ |
ಅರ್ಚಯಾಮಾಸ ದೇವಾಂಶ್ಚ ದ್ವಿಜಾಂಶ್ಚ ಯದುಪುಂಗವಃ ॥9॥
ಯದುಪುಂಗವನಾದ ಕೃಷ್ಣನು ದೇವತೆಗಳ ಜೊತೆಯಲ್ಲಿ ನೆರೆದ  ಇಂದ್ರನಂತೆ ಪಾಂಡವರ ಜೊತೆಯಲ್ಲಿ ಕೂಡಿದವನಾಗಿ, ಗರುಡಧ್ವಜನಾದ ಅವನು, ಪ್ರಯಾಣಕಾಲದಲ್ಲಿ ಆಚರಿಸಿಬೇಕಾದ ಯೋಗ್ಯವಾದ ಕರ್ಮಗಳನ್ನು  ಆಚರಿಸಿಲು ಬಯಸಿ ಸ್ನಾನವನ್ನುಮಾಡಿ ಶುಚಿಯಾಗಿ  ಅಲಂಕೃತನಾಗಿ ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ಪೂಜಿಸಿದನು.
ಮಾಲ್ಯೈರಪಿ ನಮಸ್ಕಾರೈರ್ಗಂಧೈರುಚ್ಚಾವಚೈಸ್ತಥಾ |
ಸ ಕೃತ್ವಾ ಸರ್ವಕಾರ್ಯಾಣಿ ಪ್ರತಸ್ಥೇ ಪುಷ್ಕರೇಕ್ಷಣಃ ॥10॥
ಕಮಲಲೋಚನನಾದ ಕೃಷ್ಣನು ಪುಷ್ಪಮಾಲೆಗಳಿಂದಲೂ ಗಂಧಗಳಿಂದಲೂ ಅನೇಕ ವಿಧವಾದ ದ್ರವ್ಯಗಳಿಂದಲೂ, ಮತ್ತು ನಮಸ್ಕಾರಗಳಿಂದಲೂ ಅವರನ್ನು ಅರ್ಚಿಸಿ ಉಳಿದ ಎಲ್ಲಾ ಕಾರ್ಯಗಳನ್ನು ಮಾಡಿ ಹೊರಟನು.
ಸ್ವಸ್ತಿ ವಾಚ್ಯಾರ್ಹತೋ ವಿಪ್ರಾನ್ ದಪುಷ್ಪಫಲಾಕ್ಷತೈಃ |
ವಸು ಪ್ರದಾಯ ಚ ತತಃ ಪ್ರದಕ್ಷಿಣಮವರ್ತತ ॥11॥
ಕೃಷ್ಣನು ಯೋಗ್ಯರಾದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಅವರನ್ನು ದ, ಪುಷ್ಪ ಮತ್ತು ಅಕ್ಷತೆಗಳಿಂದ ಪೂಜಿಸಿ ಅವರಿಗೆ ಧನವನ್ನು ದಾನಮಾಡಿ ಅನಂತರ ಪ್ರದಕ್ಷಿಣೆಯನ್ನು ಮಾಡಿದನು.
ತತಃ ಸ ಕೃತಮಂಗಲ್ಯೋ ಬ್ರಾಹ್ಮಣೈರ್ವೇದಪಾರಗೈಃ |
ಕಾಂಚನಂ ರಥಮಾಸ್ಥಾಯ ತಾರ್ಕ್ಷ್ಯಕೇತನಮಾಶುಗಮ್ ॥12॥
ಗದಾಚಕ್ರಾಸಿಶಾರ್ಙ್ಗಾದ್ಯೈರಾಯುಧೈಶ್ಚ ಸಮನ್ವಿತಮ್ |
ತಿಥಾವಥ ಚ ನಕ್ಷತ್ರೇ ಮುಹೂರ್ತೇ ಚ ಗುಣಾನ್ವಿತೇ |
ಪ್ರಯಯೌ ಪುಂಡರೀಕಾಕ್ಷಃ ಶೈಬ್ಯಸುಗ್ರೀವವಾಹನಃ ॥13॥
ಅನಂತರ ವೇದಪಾರಂಗತರಾದ ಬ್ರಾಹ್ಮಣರಿಂದ ಮಂಗಳವಾಚನವನ್ನು ಮಾಡಿಸಿಕೊಂಡ ಪುಂಡರೀಕಾಕ್ಷನಾದ ಕೃಷ್ಣನು ಗರುಡಧ್ವಜದಿಂದ ಕೂಡಿದ್ದ ಶೀಘ್ರವಾಗಿ ಸಂಚರಿಸುವ ಗದಾ, ಚಕ್ರ, ಅಸಿ, ಶಾರ್ಙ್ಗ, ಮೊದಲಾದ  ಆಯುಧಗಳಿಂದ ಕೂಡಿದ್ದ ಶೈಬ್ಯ ಸುಗ್ರೀವ ಮೊದಲಾದ ಅಶ್ವಗಳನ್ನು ಹೂಡಿದ್ದ ಸುವರ್ಣಮಯವಾದ ರಥವನ್ನು ಏರಿ ಶುಭನಕ್ಷತ್ರ, ಶುಭತಿಥಿ, ಶುಭಮೂಹೂರ್ತ, ಮತ್ತು ಉಳಿದ ಶುಭಗುಣಗಳುಳ್ಳ ಲಗ್ನದಲ್ಲಿ  ಇಂದ್ರಪ್ರಸ್ಥದಿಂದ ಹೊರಟನು.
ಅನ್ವಾರುರೋಹ ತಂ ಚಾಪಿ ಪ್ರೇಮ್ಣಾ ರಾಜಾ ಯುಷ್ಠಿರಃ |
ಅಪಾಸ್ಯ ಚಾಸ್ಯ ಯಂತಾರಂ ದಾರುಕಂ ಸೂತಮುತ್ತಮಮ್ |
ಅಭೀಶೂನ್ ಪ್ರತಿಜಗ್ರಾಹ ಸ್ವಯಂ ಕುರುಪತಿಸ್ತದಾ ॥14॥
ರಾಜನಾದ ಯುಷ್ಠಿರನು,  ಕೃಷ್ಣನು ಏರಿದ ಮೇಲೆ ಪ್ರೀತಿಯಿಂದ ರಥವನ್ನು ಏರಿ, ಕೃಷ್ಣನ ಶ್ರೇಷ್ಠಸಾರಥಿಯಾದ ದಾರುಕನನ್ನು ಬದಿಗೆ ಇರಿಸಿ, ಕುರುಪತಿಯಾದ ಧರ್ಮರಾಜನು ಕೃಷ್ಣನ ರಥದ ಅಶ್ವಗಳ ಕಡಿವಾಣವನ್ನು ತಾನೇ ಹಿಡಿದನು.
ಉಪಾರುಹ್ಯಾರ್ಜುನಶ್ಚಾಪಿ ಚಾಮರವ್ಯಜನಂ ಸಿತಮ್ |
ರುಗ್ಮದಂಡಂ ಬೃಹನ್ಮೂರ್ಧ್ನಿ ದುಧಾವಾಭಿಪ್ರದಕ್ಷಿಣಮ್ ॥15॥
ಅನಂತರ ಅರ್ಜುನನು ರಥವನ್ನು ಏರಿ ಸುವರ್ಣಮಯವಾದ ದಂಡವುಳ್ಳ  ದೊಡ್ಡ ಬಿಳಿಯ ಚಾಮರ ವ್ಯಜನಗಳನ್ನು ಪ್ರದಕ್ಷಿಣಾಕಾರವಾಗಿ ಕೃಷ್ಣನ ತಲೆಯ ಮೇಲೆ ಬೀಸಿದನು.
ತಥೈವ ಭೀಮಸೇನೋಽಪಿ ರಥಮಾರುಹ್ಯ ವೀರ್ಯವಾನ್ |
ಛತ್ರಂ ಶತಶಲಾಕಂ ಚ ದಿವ್ಯಮಾಲ್ಯೋಪಶೋಭಿತಮ್ ॥16॥
ವೈಡೂರ್ಯಮಣಿದಂಡಂ ಚ ಚಾಮೀಕರವಿಭೂಷಿತಮ್ |
ದಧಾರ ತರಸಾ ಭೀಮಃ ಛತ್ರಂ ತಚ್ಛಾರ್ಙ್ಗಧನ್ವನೇ  ॥17॥
ಅನಂತರ ಪರಾಕ್ರಮಶಾಲಿಯಾದ ಭೀಮಸೇನನು ರಥವನ್ನು ಏರಿ ನೂರು  ಸಲಾಕೆಗಳಿಂದ ಕೂಡಿದ ದಿವ್ಯಮಾಲೆಗಳಿಂದ ಅಲಂಕೃತವಾದ ವೈಡೂರ್ಯಮಣಿಯಿಂದ ಮಾಡಿದ ದಂಡವುಳ್ಳ ಸುವರ್ಣದಿಂದ ಭೂಷಿತವಾದ ಛತ್ರವನ್ನು ಶಾರ್ಙ್ಗಧಾರಿಯಾದ ಕೃಷ್ಣನ ಶಿರಸ್ಸಿನ ಮೇಲೆ ಹಿಡಿದನು.
ಉಪಾರುಹ್ಯ ರಥಂ ಶೀಘ್ರಂ ಚಾಮರವ್ಯಜನೇ ಸಿತೇ |
ನಕುಲಃ ಸಹದೇವಶ್ಚ ಧೂಯಮಾನೌ ಜನಾರ್ದನಮ್ ॥18॥
ಅನಂತರ ನಕುಲಸಹದೇವರು ಶೀಘ್ರವಾಗಿ ರಥವನ್ನು ಏರಿ ಶ್ವೇತವರ್ಣದ ಚಾಮರವ್ಯಜನಗಳನ್ನು ಕೃಷ್ಣನಿಗೆ ಬೀಸಿದರು.
ಸ ತತ ಭ್ರಾತೃಭಿಃ ಸಾರ್ಧಮ್ ಕೇಶವಃ ಪರವೀರಹಾ |
ಅನುಗಮ್ಯಮಾನಃ ಶುಶುಭೇ ಶಿಷ್ಯೈರಿವ ಗುರುಃ ಪ್ರಿಯೈಃ ॥19॥
ಪರವೀರರನ್ನು ಸಂಹರಿಸುವ ಕೇಶವನು, ಆ ಸಹೋದರರಿಂದ ಹೀಗೆ ಸೇವಿಸಲ್ಪಟ್ಟು ಅನುಸರಿಸಲ್ಪಪಟ್ಟವನಾಗಿ  ಪ್ರಿಯಶಿಷ್ಯರಿಂದ ಕೂಡಿದ ಗುರುವಿನಂತೆ ಶೋಭಿಸಿದನು.
ಅಭಿಮನ್ಯುಂ ಚ ಸೌಭದ್ರಂ ವೃದ್ಧೈಃ ಪರಿವೃತಸ್ತತಃ |

ರಥಮಾರೋಪ್ಯ ನಿರ್ಯಾತೋ ಧೌಮ್ಯೋ ಬ್ರಾಹ್ಮಣಪುಂಗವಃ ॥20॥
ಅನಂತರ ಬ್ರಾಹ್ಮಣಶ್ರೇಷ್ಠರಾದ ಧೌಮ್ಯರು ವೃದ್ಧರಿಂದ ಪರಿವೃತರಾಗಿ ಸುಭದ್ರೆಯ ಮಗನಾದ ಅಭಿಮನ್ಯುವನ್ನು ರಥದಲ್ಲಿ ಕೂಡಿಸಿಕೊಂಡು ಅಲ್ಲಿಂದ ಹೊರಟರು.
ಇಂದ್ರಪ್ರಸ್ಥಮತಿಕ್ರಮ್ಯ ಕ್ರೋಶಮಾತ್ರಂ ಮಹಾದ್ಯುತಿಃ |
ಪಾರ್ಥಮಾಮಂತ್ರ್ಯ ಗೋವಿಂದಃ ಪರಿಷ್ವಜ್ಯ ಸಹಾನುಜಮ್ ॥21॥
ಯುಷ್ಠಿರಂ ಪೂಜಯಿತ್ವಾ ಭೀಮಸೇನಂ ಯಮೌ ತಥಾ |
ಪರಿಷ್ವಕ್ತೋ ಭೃಶಂ ತಾಭ್ಯಾಂ ಯಮಾಭ್ಯಾಮಭಿವಾದಿತಃ ॥22॥
ಮಹಾತೇಜಸ್ವಿಯಾದ ಗೋವಿಂದನು ಇಂದ್ರಪ್ರಸ್ಥವನ್ನು ದಾಟಿ, ಒಂದು ಕ್ರೋಶದೂರ ಹೊದಮೇಲೆ ಯುಷ್ಠಿರನನ್ನು ಮತ್ತು ತಮ್ಮಂದಿರನ್ನು ಆಲಿಂಗಿಸಿ ಅನುಮತಿಯನ್ನು ಪಡೆದನು. ಯುಷ್ಠಿರನನ್ನು ಪೂಜಿಸಿ ಹಾಗೆಯೇ ಭೀಮಸೇನನನ್ನು ಪೂಜಿಸಿ ನಕುಲಸಹದೇವರಿಂದ ಆಲಿಂಗಿತನಾಗಿ ನಮಸ್ಕರಿಸಲ್ಪಟ್ಟನು.
ತತಸ್ತೈಃ ಸಂವಿದಂ ಕೃತ್ವಾ ಯಥಾವನ್ಮಧುಸೂದನಃ |
ಯೋಜನಾರ್ಧಮಥೋ ಗತ್ವಾ ಕೃಷ್ಣಃ ಪರಪುರಂಜಯಃ ॥23॥
ಯುಷ್ಠಿರಂ ಸಮಾಮಂತ್ರ್ಯ ನಿವರ್ತಸ್ವೇತಿ ಚಾಬ್ರುವೀತ್ |
ತತೋಽಭಿವಾದ್ಯ ಗೋವಿಂದಃ ಪಾದೌ ಜಗ್ರಾಹ ಧರ್ಮವಿತ್ ॥24॥
ಅನಂತರ ಶತ್ರುಪುರವನ್ನು ನಾಶಮಾಡುವ ಕೃಷ್ಣನು ಅವರ ಜೊತೆಯಲ್ಲಿ ಯಥೋಚಿತವಾಗಿ ಮಾತನಾಡಿ ಇನ್ನೂ ಅರ್ಧಯೋಜನ ಮುಂದೆ ಪ್ರಯಾಣಮಾಡಿ ಯುಷ್ಠಿರನನ್ನು ಕುರಿತು ಇನ್ನು ಹಿಂದಿರುಗು ಎಂದು ಹೇಳಿದನು. ಅನಂತರ ಮಧುಸೂದನನಾದ ಧರ್ಮವನ್ನು ತಿಳಿದ ಆ ಗೋವಿಂದನು, ಧರ್ಮರಾಜನ ಪಾದಗಳಿಗೆ ನಮಸ್ಕರಿಸಿದನು.
ನಿವರ್ತಯಿತ್ವಾ ಚ ತದಾ ಪಾಂಡವಾನ್ ಸ ಪದಾನುಗಾನ್ |
ಸ್ವಾಂ ಪುರೀಂ ಪ್ರಯಯೌ ಹೃಷ್ಟಃ ಪುರಂದರ ಇವಾಪರಃ ॥25॥
ಕೃಷ್ಣನು ತನ್ನನ್ನೇ ಹಿಂಬಾಲಿಸಿಕೊಂಡು ಬಂದ ಪಾಂಡವರನ್ನು ಹಿಂದಿರುಗಿಸಿ ಅನಂತರ ಸಂತೋಷದಿಂದ ಕೂಡಿದವನಾಗಿ ಇನ್ನೊಬ್ಬ ಇಂದ್ರನಂತೆ ತನ್ನ ದ್ವಾರಕಾಪಟ್ಟಣವನ್ನು ಕುರಿತು ಹೊರಟನು.
ಲೋಚನೈರನುಜಗ್ಮುಸ್ತೇ ತಮಾದೃಷ್ಟಿಪಥಾತ್ ಪುನಃ |
ಮನೋಭಿರನುಜಗ್ಮುಸ್ತೇ ಕೃಷ್ಣಂ ಪ್ರೀತಿಸಮನ್ವಿತಾಃ ॥26॥
ಪ್ರೀತಿಯುಳ್ಳ ಆ ಪಾಂಡವರು ಕೃಷ್ಣನು ಕಾಣುವವರೆಗೂ ತಮ್ಮ ನೇತ್ರಗಳಿಂದ ಅವನ್ನು ಹಿಂಬಾಲಿಸಿ, ಕೃಷ್ಣನು ಕಣ್ಮರೆಯಾದ ಮೇಲೆ ತಮ್ಮ ಮನಸ್ಸುಗಳಿಂದ ಅವನನ್ನು ಹಿಂಬಾಲಿಸಿದರು.
ಅತೃಪ್ತಮನಸಾಮೇವ ತೇಷಾಂ ಕೇಶವದರ್ಶನೇ |
ಕ್ಷಿಪ್ರಮಂತರ್ದಧೇ ಶೌರಿಃ ಚಕ್ಷುಷಾಂ ಪ್ರಿಯದರ್ಶನಃ ॥27॥
ಎಲ್ಲರ ನಯನಗಳಿಗೆ ಹಬ್ಬವನ್ನು ಉಂಟುಮಾಡುವ ಕೃಷ್ಣನು, ಪಾಂಡವರು ಮನಸ್ಸಿನಲ್ಲಿ ತನ್ನ ದರ್ಶನದಿಂದ ಇನ್ನೂ ತೃಪ್ತಿಯನ್ನು ಪಡೆಯದಿರುವಂತೆಯೇ, ಬೇಗ ಅಂತರ್ಧಾನವನ್ನು ಹೊಂದಿದನು.
ಅಕಾಮಾ ಇವ ಪಾರ್ಥಾಶ್ಚ ಗೋವಿಂದಗತಮಾನಸಾಃ |
ನಿವೃತ್ಯ ಪ್ರಯಯುಃ ಸರ್ವೇ ಸ್ವಂ ಪುರಂ ಭರತರ್ಷಭಾಃ ॥28॥
ಕೃಷ್ಣನಲ್ಲಿ ಆಸಕ್ತವಾದ ಮನಸ್ಸುಳ್ಳ ಭರತಶ್ರೇಷ್ಠರಾದ ಆ ಪಾಂಡವರೆಲ್ಲರೂ, ಮನಸ್ಸಿಲ್ಲದೆಯೇ ಹಿಂದಿರುಗಿ ತಮ್ಮ ಪಟ್ಟಣವನ್ನು ಕುರಿತು ಪ್ರಯಾಣ ಮಾಡಿದರು.
ನಿವೃತ್ತೋ ಧರ್ಮರಾಜಸ್ತು ಸಹ ಭ್ರಾತೃಭಿರಚ್ಯುತಃ |
ಸುಹೃಜ್ಜನವೃತೋ ರಾಜಾ ಪ್ರವಿವೇಶ ಪುರೋತ್ತಮಮ್ ॥29॥
ತನ್ನ ತಮ್ಮಂದಿರ ಜೊತೆಯಲ್ಲಿ ಹಿಂದಿರುಗಿದ ಭಕ್ತ್ಯಾದಿ ಗುಣಗಳಿಂದ ಚ್ಯುತನಾಗದ ಧರ್ಮರಾಜನು ಸುಹೃಜ್ಜನರಿಂದ ಪರಿವೃತನಾಗಿ ತನ್ನ ಪಟ್ಟಣವನ್ನು ಪ್ರವೇಶಿಸಿದನು.
ವಿಸೃಜ್ಯ ಸರ್ವಾನ್ ಸುಹೃದೋ ಭ್ರಾತೄನ್ ಪುತ್ರಾಂಶ್ಚ ಧರ್ಮರಾಟ್ |
ಮುಮೋದ ಪುರುಷವ್ಯಾಘ್ರೋ ದ್ರೌಪದ್ಯಾ ಸಹ ಭಾರತ ॥30॥
ಎಲೈ ಭಾರತನೇ! ಪುರುಷವ್ಯಾಘ್ರನಾದ ಧರ್ಮರಾಜನು ತನ್ನ ಎಲ್ಲಾ ಸುಹೃಜ್ಜನರನ್ನು ಕಳುಹಿಸಿಕೊಟ್ಟು ತನ್ನ ತಮ್ಮಂದಿರನ್ನೂ ಮಕ್ಕಳನ್ನೂ ಸಹ ಬೀಳ್ಕೊಟ್ಟು ದ್ರೌಪದಿಯ ಜೊತೆಯಲ್ಲಿ ಸಂತೋಷದಿಂದ ಕಾಲವನ್ನು ಕಳೆದನು.
ಸ್ಯಂದನೇನಾಥ ಕೃಷ್ಣೋಽಪಿ ಸಮಯೇ ದ್ವಾರಕಾಮಗಾತ್ |
ಕೇಶವೋಽಪಿ ಮುದಾ ಯುಕ್ತಃ ಪ್ರವಿವೇಶ ಪುರೋತ್ತಮಮ್ ॥31॥
ಆನಂತರ ಕೃಷ್ಣನೂ ಸಹ ಸಂತೋಷದಿಂದ ಕೂಡಿದವನಾಗಿ, ತನ್ನ ರಥದಲ್ಲಿ ದ್ವಾರಕೆಯನ್ನು ತಲುಪಿ ತನ್ನ ಶ್ರೇಷ್ಠವಾದ ಪಟ್ಟಣವನ್ನು ಪ್ರವೇಶಿಸಿದನು.
ದಾರುಕೇಣ ಚ ಸೂತೇನ ಸಹಿತೋ ದೇವಕೀಸುತಃ |
ಪೂಜ್ಯಮಾನೋ ಯದುಶ್ರೇಷ್ಠೈರುಗ್ರಸೇನೋದ್ಧವಾದಿಭಿಃ ॥32॥
ದೇವಕಿಸುತನಾದ ಕೃಷ್ಣನು, ತನ್ನ ಸೂತನಾದ ದಾರುಕನ ಜೊತೆಯಲ್ಲಿ ದ್ವಾರಕೆಯನ್ನು ಪ್ರವೇಶಿಸಿ ಯದುಶ್ರೇಷ್ಠರಾದ ಉಗ್ರಸೇನ, ಉದ್ಧವ ಮೊದಲಾದರಿಂದ ಪೂಜಿಸಿಲ್ಪಟ್ಟನು.
ಆಹುಕಂ ಪಿತರಂ ವೃದ್ಧಂ ಮಾತರಂ ಚ ಯಶಸ್ವಿನೀಮ್ |

ಅಭಿವಾದ್ಯ ಬಲಂ ಚೈವ ಸ್ಥಿತಃ ಕಮಲಲೋಚನಃ ॥33॥
ಕಮಲನಯನನಾದ ಕೃಷ್ಣನು, ಆಹುಕನನ್ನೂ, ತಂದೆಯಾದ ವೃದ್ಧನಾದ ವಸುದೇವನನ್ನೂ, ಕೀರ್ತಿಶಾಲಿಯಾದ ತನ್ನ ತಾಯಿಯನ್ನೂ ಮತ್ತು ಅಣ್ಣನಾದ ಬಲರಾಮನನ್ನೂ ನಮಸ್ಕರಿಸಿ ದ್ವಾರಕೆಯಲ್ಲಿ ನೆಲೆಸಿದನು.
ಪ್ರದ್ಯುಮ್ನಸಾಂಬೌ ನಿಶಠಂ ಚಾರುದೇಷ್ಣಂ ಗದಂ ತಥಾ |
ಅನಿರುದ್ಧಂ ಚ ಭಾನುಂ ಚ ಪರಿಷ್ವಜ್ಯ ಜನಾರ್ದನಃ ॥34॥
ವೃದ್ಧೈಸ್ತೈಶ್ಚಾಭ್ಯನುಜ್ಞಾತೋ ರುಗ್ಮಿಣ್ಯಾ ಭವನಂ ಯಯೌ |
ಸ ತತ್ರ ಭವನೇ ದಿವ್ಯೇ ಪ್ರಮುಮೋದ ಸುಖೀ ಸುಖಮ್ ॥35॥
ಜನಾರ್ದನನು ಪ್ರದ್ಯುಮ್ನ, ಸಾಂಬ, ನಿಶಠ, ಚಾರುದೇಷ್ಣ, ಗದಾ, ಅನಿರುದ್ಧ, ಭಾನು, ಮೊದಲಾದವರನ್ನು ಆಲಿಂಗಿಸಿ ಹಿರಿಯರಿಂದ ಅನುಮತಿಯನ್ನು ಪಡೆದು ರುಗ್ಮಿಣಿಯ ಅರಮನೆಗೆ ಹೋಗಿ ಆ ದಿವ್ಯಭವನದಲ್ಲಿ ಆನಂದಪೂರ್ಣನಾಗಿ ವಾಸಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ದ್ವಿತೀಯೋಽಧ್ಯಾಯಃ ॥
॥ ಮಂತ್ರಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
*****
ಮೂರನೆಯ ಅಧ್ಯಾಯ
(ಸಭೆಯನ್ನು ನಿರ್ಮಾಣ ಮಾಡುವ ದ್ರವ್ಯಗಳನ್ನು ತರಲು ಬಿಂದುಸರೋವರಕ್ಕೆ ಮಯನ ಪ್ರಯಾಣ, ಗದಾ ಮತ್ತು ಶಂಖಗಳ ಜೊತೆಯಲ್ಲಿ ನಿರ್ಮಾಣ ಸಾಮಗ್ರಿಗಳನ್ನು ತೆಗೆದುಕೊಂಡು ಹಿಂದಿರುಗುವಿಕೆ, ಭೀಮಾರ್ಜುನರಿಗೆ ಗದಾಶಂಖಗಳನ್ನು ಕೊಟ್ಟು ಸಭೆಯ ನಿರ್ಮಾಣ.)
ವೈಶಂಪಾಯನಃ
ಏತಸ್ಮಿನ್ನಂತರೇ ರಾಜನ್ ಮಯೋ ದೈತ್ಯಾಪಸ್ತಥಾ |
ವಿವತ್ ಕಲ್ಪಯಾಮಾಸ ಸಭಾಂ ಧರ್ಮಸುತಾಯ ವೈ |
ಅಥಾಬ್ರವೀನ್ಮಯಃ ಪಾರ್ಥಮರ್ಜುನಂ ಜಯತಾಂ ವರಮ್ ॥1॥
ಎಲೈರಾಜನೇ ! ದೈತ್ಯಾಪತಿಯಾದ ಮಯನು ಈ ಸಂದರ್ಭದಲ್ಲಿ ಧರ್ಮರಾಜನ ಸಲುವಾಗಿ ಶಾಸ್ತ್ರೋಕ್ತರೀತಿಯಿಂದ ಸಭೆಯನ್ನು ನಿರ್ಮಿಸಿದನು. ಆಗ ಜಯಶೀಲನಾದ ಕುಂತೀಪುತ್ರನಾದ ಅರ್ಜುನನನ್ನು ಕುರಿತು ಮಯನು ಮಾತನಾಡಿದನು.
ಆಪೃಚ್ಛೇ ತ್ವಾಂ ಗಮಿಷ್ಯಾಮಿ ಕ್ಷಿಪ್ರಮೇಷ್ಯಾಮಿ ಚಾಪ್ಯಹಮ್ |
ವಿಶ್ರುತಾಂ ತ್ರಿಷು ಲೋಕೇಷು ಪಾರ್ಥ ದಿವ್ಯಾಂ ಸಭಾಂ ತವ ॥2॥
ಪ್ರಾಣಿನಾಂ ವಿಸ್ಮಯಕರೀಂ ತವ ಪ್ರೀತಿವಿವರ್ಧನೀಮ್ |
ಪಾಂಡವಾನಾಂ ಚ ಸರ್ವೇಷಾಂ ಕರಿಷ್ಯಾಮಿ ಧನಂಜಯ ॥3॥
ಪಾರ್ಥನೇ! ನಾನು ನಿನ್ನ ಅನುಮತಿಯನ್ನು ಪಡೆದು ಇಲ್ಲಿಂದ ಹೊರಟು ಶೀಘ್ರವಾಗಿ ಹಿಂದಿರುಗುತ್ತೇನೆ. ನಿನಗಾಗಿ ಮೂರುಲೋಕಗಳಲ್ಲಿಯೂ ಪ್ರಖ್ಯಾತವಾದಂತಹ ಎಲ್ಲರಿಗೂ ಆಶ್ಚರ್ಯವನ್ನು ಉಂಟುಮಾಡುವಂತಹ ಪಾಂಡವರೆಲ್ಲರಿಗೂ ಸಂತೋಷವನ್ನು ಉಂಟುಮಾಡುವಂತಹ ದಿವ್ಯವಾದ ಸಭೆಯನ್ನು ನಿರ್ಮಿಸುವೆನು.
ಉತ್ತರೇಣ ತು ಕೈಲಾಸಂ ಮೈನಾಕಂ ಪರ್ವತಂ ಪ್ರತಿ |
ಯಕ್ಷ್ಯಮಾಣೇಷು ಕ್ರತುಷು ದಾನವೇಷು ತದಾ ಮಯಾ ॥4॥
ಕೃತಂ ಮಣಿಮಯಂ ಭಾಂಡಂ ಹೈಮಂ ಬಿಂದುಸರಃ ಪ್ರತಿ |
ಸಭಾಯಾಂ ದಾನವೇಂದ್ರಸ್ಯ ಯದಾಸೀದ್ ವೃಷಪರ್ವಣಃ |
ಆಗಮಿಷ್ಯಾಮಿ ತದ್ ಗೃಹ್ಯ ಯದಿ ತಿಷ್ಠತಿ ಭಾರತ ॥5॥
ಕೈಲಾಸಪರ್ವತದ ಉತ್ತರ ದಿಕ್ಕಿನಲ್ಲಿ, ಅಲ್ಲಿಂದ ಮೈನಾಕಪರ್ವತದವರೆಗೆ ಪ್ರಸರಿಸಿರುವ ಬಿಂದು ಸರೋವರವಿದೆ. ಹಿಂದೆ ದಾನವರು ಯಾಗವನ್ನು ಮಾಡುವಾಗ ನಾನು ಅನೇಕ ಸುವರ್ಣಮಯವಾದ ಮತ್ತು ಮಣಿಮಯವಾದ ಭಾಂಡಗಳನ್ನು ನಿರ್ಮಾಣಮಾಡಿ, ಅದನ್ನು ಬಿಂದುಸರೋವರದ ಸಮೀಪದಲ್ಲಿ ಇರಿಸಿದ್ದೆನು. ಅವೆಲ್ಲವೂ ದಾನವೇಂದ್ರನಾದ ವೃಷಪರ್ವತನ ಸಭೆಯಲ್ಲಿ ನಿರ್ಮಾಣಕ್ಕೆ ಉಪಯೋಗವನ್ನು ಪಡೆದಿದ್ದವು. ಎಲೈ ಭರತನೇ! ಅವುಗಳು ಇನ್ನೂ ಅಲ್ಲೇ ಇದ್ದರೆ ಅವುಗಳನ್ನು ತೆಗೆದುಕೊಂಡು ನಾನು ಹಿಂದಿರುಗುವೆನು.
ತತಃ ಸಭಾಂ ಕರಿಷ್ಯಾಮಿ ಪಾಂಡವಾಯ ಮಹಾತ್ಮನೇ |
ಮನಃಪ್ರಹ್ಲಾದಜನನೀಂ ಸರ್ವರತ್ನವಿಭೂಷಿತಾಮ್ ॥6॥
ಅನಂತರ ಮಹಾತ್ಮನಾದ ಪಾಂಡವನಾದ ಧರ್ಮರಾಜನ ಮನಸ್ಸಿಗೆ ಸಂತೋಷವನ್ನು ಉಂಟುಮಾಡುವಂತಹ ಸರ್ವರತ್ನಗಳಿಂದ ವಿಭೂಷಿತವಾದ ಸಭೆಯನ್ನು ನಿರ್ಮಾಣ ಮಾಡುವೆನು.
ಅಸ್ತಿ ಬಿಂದುಸರಸ್ಯೇವ ಗದಾ ಶ್ರೇಷ್ಠಾ ಕುರೂದ್ವಹ |
ನಿಹಿತಾ ಯೌವನಾಶ್ವೇನ ರಾಜ್ಞಾ ಹತ್ವಾ ರಿಪೂನ್ ರಣೇ ॥7॥
ಕುರುಶ್ರೇಷ್ಠನೇ! ಹಿಂದೆ ಯುವನಾಶ್ವನ ಮಗನಾದ ಮುಚುಕುಂದನು ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ ತನ್ನ ಶ್ರೇಷ್ಠವಾದ ಗದೆಯನ್ನು ಬಿಂದುಸರೋವರದ ಸಮೀಪದಲ್ಲಿಯೇ ಇರಿಸಿದನು.
ಸುವರ್ಣಬಿಂದುಭಿಶ್ಚಿತ್ರಾ ಗುರ್ವೀ ಭಾರಸಹಾ ದೃಢಾ |

ಸಾ ವೈ ಭಾರಸಹಸ್ರಸ್ಯ ಸಮ್ಮಿತಾ ಶತ್ರುಘಾತಿನೀ |
ಅನುರೂಪಾ ಚ ಭೀಮಸ್ಯ ಗಾಂಡೀವಂ ಭವತೋ ಯಥಾ ||8||
ಆ ಗದೆಯು ಚಿನ್ನದ ಬಿಂದುಗಳಿಂದ ಅಲಂಕೃತವಾಗಿದೆ. ಬಹಳ ಭಾರವುಳ್ಳದ್ದು . ಶತ್ರುವಿನ ಗದೆಯ ಭಾರವನ್ನು ತಡೆಯಬಲ್ಲದು. ಮತ್ತು ದೃಢವಾದುದೂ ಆಗಿದೆ. ಶತ್ರುಗಳನ್ನು ಸಂಹರಿಸುವ ಆ ಗದೆಯು ನೂರುಮಣ ಭಾರವನ್ನು ಹೊಂದಿದೆ. ನಿನಗೆ ಗಾಂಡೀವಧನುಸ್ಸು ಅನುರೂಪವಾಗಿರುವಂತೆ ಭೀಮಸೇನನಿಗೆ ಆ ಗದೆಯು ಅನುರೂಪವಾಗಿದೆ.
ವಾರುಣಶ್ಚ ಮಹಾಶಂಖೋ ದೇವದತ್ತಃ ಸುಘೋಷವಾನ್ |
ಸರ್ವಮೇತತ್ ಪ್ರದಾಸ್ಯಾಮಿ ಪಾಂಡವಾಯ ಮಹಾತ್ಮನೇ ||9||
ವರುಣನಿಗೆ ಸೇರಿದ ಒಳ್ಳೆಯ ಘೋಷವುಳ್ಳ ದೇವದತ್ತನೆಂಬ ಶಂಖವು ಅಲ್ಲಿದೆ. ಅವುಗಳನ್ನು ತಂದು ಮಹಾತ್ಮನಾದ ಧರ್ಮರಾಜನಿಗೆ ಒಪ್ಪಿಸುವೆನು.
ವೈಶಂಪಾಯನಃ
ಇತ್ಯುಕ್ತ್ವಾ ಸೋಽಸುರಃ ಪಾರ್ಥಂ ಪ್ರಾಗುದೀಚೀಮಗಾದ್ ದಿಶಮ್|
ಅಭ್ಯುತ್ತರೇಣ ಕೈಲಾಸಂ ಮೈನಾಕಂ ಪರ್ವತಂ ಪ್ರತಿ ||10||
ಅರ್ಜುನನನ್ನು ಕುರಿತು ಹೀಗೆ ಹೇಳಿ ಆ ಅಸುರನಾದ ಮಯನು ಕೈಲಾಸಪರ್ವತದ ಉತ್ತರ ಭಾಗದಲ್ಲಿ ಈಶಾನ್ಯದಿಕ್ಕಿನ ಕಡೆಗೆ ಇರುವ ಮೈನಾಕಪರ್ವತದ ಕಡೆಗೆ ಹೊರಟನು.
ಹಿರಣ್ಯಶೃಂಗೋ ಭಗವಾನ್ ಮಹಾಮಣಿಮಯೋ ಗಿರಿಃ |
ರಮ್ಯಂ ಬಿಂದುಸರೋ ನಾಮ ಯತ್ರ ರಾಜಾ ಭಗೀರಥಃ |
ದೃಷ್ಟ್ವಾ ಭಾಗೀರಥೀಂ ಗಂಗಾಮ್ ಉವಾಸ ಬಹವಃ ಸಮಾಃ ||11||
ಆ ಮೈನಾಕ ಪರ್ವತವು ಸುವರ್ಣಮಯವಾದ ಶೃಂಗಗಳಿಂದಲೂ ಮಹಾಮಣಿಗಳಿಂದಲೂ ಕೂಡಿರುವುದಾಗಿ ಬಹಳ ಪೂಜ್ಯವಾಗಿದೆ. ಅದರ ಸಮೀಪದಲ್ಲಿರುವ ಬಿಂದುಸರೋವರದಲ್ಲಿ ಭಗೀರಥರಾಜನು ಭಾಗೀರಥಿಯನ್ನು ಪ್ರತ್ಯಕ್ಷೀಕರಿಸಿಕೊಂಡು ಬಹಳ ವರ್ಷಗಳವರೆಗೆ ವಾಸಮಾಡಿದನು.
ಯತ್ರ ವೈ ಸರ್ವಭೂತಾನಾಮೀಶ್ವರೇಣ ಮಹಾತ್ಮನಾ |
ಆಹೃತಾಃ ಕ್ರತವೋ ಮುಖ್ಯಾಃ ಸಹಸ್ರಾಣಿ ಶತಾನಿ ಚ ||12||
ಆ ಬಿಂದುಸರೋವರದಲ್ಲಿಯೇ ಸರ್ವಜೀವರಿಗೆ ಒಡೆಯನಾದ ಮಹಾತ್ಮನಾದ ನಾರಾಯಣನು ನೂರಾರು ಸಾವಿರಾರು ಪ್ರಧಾನವಾದ ಯಾಗವನ್ನು ನೆರವೇರಿಸಿದನು.
ಯತ್ರ ಯೂಪಾ ಮಣಿಮಯಾಶ್ಚೈತ್ಯಾಶ್ಚೈವ ಹಿರಣ್ಮಯಾಃ |
ಶೋಭಾರ್ಥಂ ವಿಹಿತಾಸ್ತತ್ರ ನ ತ್ವದೃಷ್ಟಾರ್ಥತಃ ಕೃತಾಃ ||13||
ಅಲ್ಲಿ ಯೂಪಸ್ತಂಭಗಳು ಮಣಿಮಯವಾಗಿವೆ. ಎಲ್ಲ ಪವಿತ್ರ ವೃಕ್ಷಗಳು ಸುವರ್ಣಮಯವಾಗಿವೆ. ಕಾಂತಿಯನ್ನು ತರುವ ಸಲುವಾಗಿ ಹೀಗೆ ಮಾಡಲ್ಪಟ್ಟಿವೆ, ಪುಣ್ಯದ ದೃಷ್ಟಿಯಿಂದ ಅಲ್ಲ.
ಯತ್ರ ಭೂತಪತಿಃ ಸೃಷ್ಟ್ವಾ ಸರ್ವಾಲ್ಲೋಕಾನ್ ಸನಾತನಃ |
ಉಪಾಸ್ಯತೇ ತಿಗ್ಮತೇಜಾ ಧೃತೋ ಭೂತೈಃ ಸಹಸ್ರಶಃ ||14||
ಅಲ್ಲಿ ವೇದಪ್ರತಿಪಾದ್ಯನಾದ ಸರ್ವಜೀವರಿಗೆ ಒಡೆಯನಾದ ಮಹಾಪರಾಕ್ರಮಶಾಲಿಯಾದ ನಾರಾಯಣನು ಲೋಕಗಳನ್ನು ಸೃಷ್ಟಿಮಾಡಿ ಎಲ್ಲ ಜೀವರುಗಳಿಂದ ಸಹಸ್ರಾರು ಸಂಖ್ಯೆಯಲ್ಲಿ ಉಪಾಸನೆ ಮಾಡಲ್ಪಡುತ್ತಾನೆ.
ನರನಾರಾಯಣೌ ಬ್ರಹ್ಮಾ ಯಮಃ ಸ್ಥಾಣುಶ್ಚ ಪಂಚಮಃ |
ಉಪಾಸತೇ ಯತ್ರ ಪರಂ ಸಹಸ್ರಯುಗಪರ್ಯಯೇ ||15||
ಒಂದು ಸಹಸ್ರಚತುರ್ಯುಗಗಳು ಕಳೆದ ಮೇಲೆ ಅಲ್ಲಿ ನರನಾರಾಯಣರು ಬ್ರಹ್ಮದೇವರು ಯಮ ಮತ್ತು ರುದ್ರದೇವರು ಜೊತೆಯಲ್ಲಿ ಇರುತ್ತಾರೆ.
ಯತ್ರೇಷ್ಟಂ ವಾಸುದೇವೇನ ಸತ್ರೈರ್ವರ್ಷಸಹಸ್ರಕೈಃ |
ಶ್ರದ್ದಧಾನೇನ ಸತತಂ ಶಿಷ್ಟಾನಾಂ ಪ್ರತಿಪತ್ತಯೇ ||16||
ಅಲ್ಲಿ ವಾಸುದೇವನಾದ ನಾರಾಯಣನು, ಶಿಷ್ಟರಿಗೆ ಆಚಾರಕ್ರಮದಲ್ಲಿ ಶ್ರದ್ಧೆ ಹುಟ್ಟಿಸುವುದಕ್ಕಾಗಿ, ಸತತವಾಗಿ ಶ್ರದ್ಧೆಯಿಂದ ಅನೇಕ ಸಹಸ್ರವರ್ಷಗಳ ಕಾಲ ಸತ್ರಯಾಗವನ್ನು ಆಚರಿಸಿದನು.
ಸುವರ್ಣಮಾಲಿನೋ ಯೂಪಾಸ್ತಸ್ಯ ಚಿತ್ರಾಶ್ಚ ಭಾಸ್ವರಾಃ |
ದದೌ ಯತ್ರ ಸಹಸ್ರಾಣಾಮರ್ಬುದಾನಿ ಜನಾರ್ದನಃ ||17||
ಅಲ್ಲಿ ಇರುವ ಯೂಪಗಳು ವಿಚಿತ್ರವಾದವೂ ಪ್ರಕಾಶಮಾನವಾದವೂ ಮತ್ತು ಸುವರ್ಣಮಯವಾದ ಮಾಲೆಗಳಿಂದ ಅಲಂಕೃತವಾದವೂ ಆಗಿದ್ದವು. ಸತ್ರಯಾಗದ ಕೊನೆಯಲ್ಲಿ ಜನಾರ್ದನನು ಸಹಸ್ರಾರ್ಬುದಧನವನ್ನು ದಾನಮಾಡಿದನು.
ತತ್ರ ಗತ್ವಾ ಸ ಜಗ್ರಾಹ ಗದಾಂ ಶಂಖಂ ಚ ಭಾರತ |
ತಸ್ಮಾದ್ ಗಿರೇರುಪಾದಾಯ ಶಿಲಾಃ ಸುರುಚಿರಾಃ ಶುಭಾಃ ||18||
ಸಾಟಿಕಂ ಚ ಸಭಾದ್ರವ್ಯಂ ಯದಾಸೀದ್ ವೃಷಪರ್ವಣಃ |
ಕಿಂಕರೈಃ ಸಹ ರಕ್ಷೋಭಿರಗೃಹ್ಣಾತ್ ಸರ್ವಮೇವ ತತ್ ||19||
ಎಲೈ ಭಾರತನೇ! ಮಯನು ಅಲ್ಲಿಗೆ ಹೋಗಿ, ಅಲ್ಲಿಂದ ಗದೆಯನ್ನು ಶಂಖವನ್ನು ಮತ್ತು ಆ ಪರ್ವತದ ಸುಂದರವಾದ, ಶುಭ್ರವಾದ, ಪವಿತ್ರವಾದ, ಶಿಲೆಗಳನ್ನು ಮತ್ತು ವೃಷಪರ್ವನ ಸಭೆಯಲ್ಲಿದ್ದ ಸಟಿಕಮಯಾದ ಸಭಾನಿರ್ಮಾಣದ್ರವ್ಯಗಳನ್ನು ತೆಗೆದುಕೊಂಡು ಆ

ಪದಾರ್ಥಗಳನ್ನು ಕಿಂಕರ ಎಂಬ ಹೆಸರಿನ ರಾಕ್ಷಸರಿಂದ ಹೊರಿಸಿಕೊಂಡು ಎಲ್ಲವನ್ನೂ ತೆಗದುಕೊಂಡು ಬಂದನು.
ತದಾಹೃತ್ಯ ತು ತಾಂ ಚಕ್ರೇ ಪಾರ್ಥಾಯಾಪ್ರತಿಮಾಂ ಸಭಾಮ್ |
ವಿಶ್ರುತಾಂ ತ್ರಿಷು ಲೋಕೇಷು ದಿವ್ಯಾಂ ಮಣಿಮಯೀಂ ಶುಭಾಮ್ ॥20॥
ಅವುಗಳೆಲ್ಲವನ್ನೂ ತೆಗೆದುಕೊಂಡು ಬಂದು ಮಯನು ಧರ್ಮರಾಜನ ಸಲುವಾಗಿ ಮೂರುಲೋಕಗಳಲ್ಲಿಯೂ ಪ್ರಖ್ಯಾತವಾದ ಅಸದೃಶವಾದ, ಮಣಿಮಯವಾದ, ನಿರ್ಮಲವಾದ, ಮತ್ತು ದಿವ್ಯವಾದ ಸಭೆಯನ್ನು ನಿರ್ಮಾಣ ಮಾಡಿದನು.
ಗದಾಂ ಚ ಭೀಮಸೇನಾಯ ಪ್ರದದೌ ಪ್ರವರಾಂ ತದಾ |
ದೇವದತ್ತಂ ಚ ಪಾರ್ಥಾಯ ದದೌ ಶಂಖಮನುತ್ತಮಮ್ |
ಯಸ್ಯ ಶಂಖಸ್ಯ ನಾದೇನ ಭೂತಾನಿ ಪ್ರಚಕಂಪಿರೇ ॥21॥
ಶ್ರೇಷ್ಠವಾದ ಗದೆಯನ್ನು ಭೀಮಸೇನನಿಗೆ ಕೊಟ್ಟನು. ಶ್ರೇಷ್ಠವಾದ ದೇವದತ್ತ ಎಂಬ ಶಂಖವನ್ನು ಅರ್ಜುನನಿಗೆ ಕೊಟ್ಟನು. ಆ ಶಂಖದ ನಾದಕ್ಕೆ ಎಲ್ಲ ಮನುಷ್ಯರೂ ಮತ್ತು ಪ್ರಾಣಿಗಳೂ ನಡುಗುತ್ತಾರೆ.
ಸ ಕಾಲಂ ಕಂಚಿದಾಶ್ವಸ್ಯ ವಿಶ್ವಕರ್ಮಾ ವಿಚಿಂತ್ಯ ಚ |
ಸಭಾಂ ಪ್ರಚಕ್ರಮೇ ಕರ್ತುಂ ಪಾಂಡವಾನಾಂ ಮಹಾತ್ಮನಾಮ್ ॥22॥
ದಾನವರ ಶಿಲ್ಪಿಯಾದ ಮಯನು ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದು, ಚೆನ್ನಾಗಿ ಆಲೋಚಿಸಿ, ಮಹಾತ್ಮನಾದ ಪಾಂಡವರ ಸಲುವಾಗಿ ಸಭೆಯನ್ನು ನಿರ್ಮಾಣ ಮಾಡಲು ಉಪಕ್ರಮಿಸಿದನು.
ಅಭಿಪ್ರಾಯೇಣ ಪಾರ್ಥಾನಾಂ ಕೃಷ್ಣಸ್ಯ ಚ ಮಹಾತ್ಮನಃ |
ಸರ್ವರ್ತುಗುಣಸಂಪನ್ನಾಂ ದಿವ್ಯರೂಪಾಮಲಂಕೃತಾಮ್ |
ತರ್ಪಯಿತ್ವಾ ದ್ವಿಜಶ್ರೇಷ್ಠಾನ್ ಪಾಯಸೇನ ಸಹಸ್ರಶಃ ॥23॥
ಮಹಾತ್ಮನಾದ ಕೃಷ್ಣನ ಮತ್ತು ಪಾಂಡವರ ಅಭಿಪ್ರಾಯಕ್ಕೆ ಅನುಗುಣವಾಗಿ ಬ್ರಾಹ್ಮಣಶ್ರೇಷ್ಠರನ್ನು ಸಹಸ್ರಸಂಖ್ಯೆಯಲ್ಲಿ ಭೋಜನದಾನಾದಿಗಳಿಂದ ತೃಪ್ತಿಪಡಿಸಿ ಎಲ್ಲಾ ಋತುಗಳ ಗುಣಗಳಿಂದ ಕೂಡಿದ ದಿವ್ಯವಾದ ಅಲಂಕೃತವಾದಂತಹ ಸಭೆಯನ್ನು ನಿರ್ಮಿಸಿದನು.
ಸಭಾ ತು ಸಾ ಮಹಾರಾಜ ಶಾತಕುಂಭಮಯದ್ರುಮಾ |
ದಶಕಿಷ್ಕುಸಹಸ್ರಾಣಿ ಸಮಂತಾದಾಯತಾಽಭವತ್ ॥24॥
ಎಲೈ ಮಹಾರಾಜನೇ! ಸುವರ್ಣಮಯವಾದ ವೃಕ್ಷಗಳಿಂದ ಕೂಡಿದ ಆ ಸಭೆಯು ಎಲ್ಲಾ ಕಡೆಗಳಲ್ಲಿಯೂ ವಿಸ್ತಾರದಿಂದ ಹತ್ತು ಸಹಸ್ರ ಹಸ್ತಗಳ ಪರಿಮಾಣವುಳ್ಳದ್ದಾಗಿದ್ದಿತು.
ಯಥಾ ವಹ್ನೇರ್ಯಥಾಽರ್ಕಸ್ಯ ಸೋಮಸ್ಯ ಚ ಯಥೈವ ಹ |
ಭ್ರಾಜಮಾನಾ ತಥಾ ದಿವ್ಯಾ ಸಾ ಚಿತ್ರಾ ಪರಮಾ ಬಭೌ ॥25॥
ವಹ್ನಿಯ ಪ್ರಭೆಯಂತೆ, ಸೂರ್ಯನ ಪ್ರಭೆಯಂತೆ, ಚಂದ್ರನ ಕಾಂತಿಯಂತೆ ಆ ದಿವ್ಯವಾದ ಸಭೆಯು ವಿಚಿತ್ರವಾಗಿ ಪರಮಕಾಂತಿಯಿಂದ ಬೆಳಗುತ್ತಿದ್ದಿತು.
ಪ್ರತಿಘ್ನತೀವ ಪ್ರಭಯಾ ಪ್ರಭಾಮರ್ಕಸ್ಯ ಭಾಸ್ವರಾಮ್ |
ಪ್ರಬಭೌ ಜ್ವಲಮಾನೇವ ದಿವ್ಯಾ ದಿವ್ಯೇನ ವರ್ಚಸಾ ॥26॥
ತನ್ನ ಕಾಂತಿಯಿಂದ ಸೂರ್ಯನ ಕಾಂತಿಯನ್ನು ಸೋಲಿಸುವಂತಿದ್ದ ಆ ದಿವ್ಯವಾದ ಸಭೆಯು ತನ್ನ ದಿವ್ಯವಾದ ವರ್ಚಸ್ಸಿನಿಂದ ಬೆಳಗುತ್ತಿರುವಂತೆ ಕಂಡಿತು.
ನವಮೇಘಪ್ರತೀಕಾಶಾ ದಿವಮಾವೃತ್ಯ ವಿಷ್ಠಿತಾ |
ಆಯತಾ ವಿಮಲಾ ಶ್ಲಕ್ಷ್ಣಾ ವಿಪಾಪ್ಮಾ ವಿಗತಕ್ಲಮಾ ॥27॥
ಆ ಸಭೆಯು ಹೊಸ ಮೇಘದ ಕಾಂತಿಯನ್ನು ಹೊಂದಿ ಅಂತರಿಕ್ಷವನ್ನು ವ್ಯಾಪಿಸಿ ನಿಂತಿದ್ದಿತು. ಅದು ವಿಸ್ತಾರವಾಗಿಯೂ ಶುಭ್ರವಾಗಿಯೂ, ಮಧುರವಾಗಿಯೂ, ಪಾಪಪರಿಹಾರಕವಾಗಿಯೂ, ಶ್ರಮಪರಿಹಾರಶಕ್ತಿ ಉಳ್ಳದ್ದಾಗಿಯೂ ಇದ್ದಿತು.
ಉತ್ತಮದ್ರವ್ಯಸಂಪನ್ನಾ ಮಣಿಪ್ರಾಕಾರತೋರಣಾ |
ಬಹುರತ್ನಾ ಬಹುಧನಾ ನಿರ್ಮಿತಾ ವಿಶ್ವಕರ್ಮಣಾ ॥28॥
ದಾನವರ ಶಿಲ್ಪಿಯಾದ ಮಯನಿಂದ ನಿರ್ಮಿತವಾದ ಆ ಸಭೆಯು, ಉತ್ತಮದ್ರವ್ಯಗಳಿಂದಲೂ, ಬಹುರತ್ನಗಳಿಂದಲೂ, ಬಹುಧನದಿಂದಲೂ, ನಿರ್ಮಿತವಾಗಿ ಮಣಿಮಯವಾದ ಪ್ರಾಕಾರಗಳನ್ನು ಮತ್ತು ಬಿಲ್ಲಿನ ಆಕಾರದ ಪ್ರವೇಶದ್ವಾರಗಳನ್ನು ಹೊಂದಿದ್ದಿತು.
ತ್ರಿದಶಾನಾಂ ಸುಧರ್ಮಾ ವಾ ಬ್ರಹ್ಮಣೋ ವಾಽಪಿ ತಾದೃಶೀ |
ಆಸೀದ್ ರೂಪೇಣ ಸಂಪನ್ನಾ ಯಾಂ ಚಕ್ರೇಽಪ್ರತಿಮಾಂ ಮಯಃ ॥29॥
ದೇವತೆಗಳ ಸುಧರ್ಮಸಭೆಯು ಅಥವಾ ಬ್ರಹ್ಮದೇವರ ವೈಜಯಂತಿಸಭೆಯು ಎಂತಹ ರೂಪವನ್ನು ಹೊಂದಿರುತ್ತದೆಯೋ ಅಂತಹ ಅಸದೃಶವಾದ ರೂಪವನ್ನು ಮಯನು ನಿರ್ಮಿಸಿದ ಆ ಸಭೆಯು ಹೊಂದಿದ್ದಿತು.
ತಾಂ ಸ್ಮ ದಿವ್ಯಾಂ ಮಯೇನೋಕ್ತಾಃ ಕಿಂಕರಾ ನಾಮ ರಾಕ್ಷಸಾಃ |
ಸಭಾಮಷ್ಟೌ ಸಹಸ್ರಾಣಿ ರಕ್ಷಂತಿ ಚ ವಹಂತಿ ಚ ॥30॥
ಮಯನ ಆದೇಶವನ್ನು ಪಾಲಿಸುವ ಕಿಂಕರ ಎಂಬ ಹೆಸರಿನ ಎಂಟುಸಾವಿರ ರಾಕ್ಷಸರು ಆ ಸಭೆಯ ನಿರ್ಮಾಣದ ದ್ರವ್ಯಗಳನ್ನು ಹೊತ್ತುತಂದು ಸಭೆಯನ್ನು ನಿರ್ಮಿಸಿ ಅದನ್ನು ರಕ್ಷಿಸಿದರು.
ಅಂತರಿಕ್ಷಚರಾ ಘೋರಾ ಮಹಾಕಾಯಾ ಮಹಾಬಲಾಃ |

ರಕ್ತಾಕ್ಷಾಃ ಪಿಂಗಲಾಕ್ಷಾಶ್ಚ ಶಂಕುಕರ್ಣಾಃ ಪ್ರಹಾರಿಣಃ ॥31॥
ಆ ಕಿಂಕರ ರಾಕ್ಷಸರು ಮಹಾದೇಹವುಳ್ಳವರು ಮಹಾಬಲವುಳ್ಳವರು, ಘೋರರೂಪವುಳ್ಳವರು, ಕೆಂಪಾದ ಕಣ್ಣುಳ್ಳವರು, ಕೆಲವರು ಕಂದುಬಣ್ಣದ ಕಣ್ಣುಳ್ಳವರು, ಶಂಖದಂತೆ ಕಿವಿಯುಳ್ಳವರು ಮತ್ತು ಯಾರೊಡನೆಯೂ ಹೋರಾಡುವ ಸಾಮರ್ಥ್ಯವುಳ್ಳವರು. ಮತ್ತು ಅಂತರಿಕ್ಷದಲ್ಲಿ ಚಲಿಸುವ ಸಾಮರ್ಥ್ಯವುಳ್ಳವರು.
ತಸ್ಯಾಂ ಸಭಾಯಾಂ ನಳಿನೀಂ ಚಕಾರಾಪ್ರತಿಮಾಂ ಮಯಃ |
ವೈಡೂರ್ಯಪತ್ರವಿತತಾಂ ಮಣಿನಾಳಾಂ ಶುಭಾಂಬುಜಾಮ್ ॥32॥
ಆ ಸಭೆಯಲ್ಲಿ ಮಯನು ವೈಡೂರ್ಯಮಯಪತ್ರಗಳನ್ನೂ ಮಣಿಮಯವಾದ ನಾಳಗಳನ್ನೂ ಹೊಂದಿದ್ದ ಶುಭ್ರವಾದ ಪದ್ಮಗಳನ್ನು ಹೊಂದಿದ ಒಂದು ಅಸದೃಶವಾದ ಸರೋವರವನ್ನು ನಿರ್ಮಿಸಿದನು.
ಪದ್ಮಸೌಗಂಕವತೀಂ ನಾನಾದ್ವಿಜಗಣೈರ್ಯುತಾಮ್ |
ಪುಷ್ಪಿತೈಃ ಪಂಕಜೈಶ್ಚಿತ್ರಾಂ ಕೂರ್ಮೈರ್ಮತ್ಸ್ಯೈಶ್ಚ ಸಂಯುತಾಮ್ ॥33॥
ಆ ಸರೋವರವು ಪದ್ಮಗಂಧವುಳ್ಳದುದೂ ಅನೇಕ ಪಕ್ಷಿಗಳಿಂದ ಕೂಡಿದುದೂ ಅರಳಿದ ಕಮಲಗಳಿಂದ ಶೋಭಿಸುವುದೂ ಮತ್ತು ಜಲಪ್ರಾಣಿಗಳಾದ ಮತ್ಸ್ಯಕೂರ್ಮಗಳಿಂದ ಸಂಯುತವಾದುದೂ ಆಗಿದ್ದಿತು.
ಸುಖತೀರ್ಥಾಮಕಲುಷಾಂ ಸರ್ವರ್ತುಸಲಿಲಾಂ ಶುಭಾಮ್|
ಮಾರುತೇನೈವ ಚೋದ್ಧೂತೈರ್ಮುಕ್ತಾಬಿಂದುಭಿರಾಚಿತಾಮ್ |
ಮಹಾಮಣಿಶಿಲಾಪಟ್ಟಬದ್ಧಪರ್ಯಂತವೇದಿಕಾಮ್ ॥34॥
ಆ ಸರೋವರದ ನೀರು ಸುಖಸ್ಪರ್ಶವುಳ್ಳದ್ದಾಗಿಯೂ, ಕಾಲುಷ್ಯರಹಿತವಾಗಿಯೂ, ಎಲ್ಲ ಋತುಗಳಲ್ಲಿಯೂ ಸೇವ್ಯಮಾನವಾದುದಾಗಿಯೂ, ಪವಿತ್ರವಾಗಿಯೂ ಇದ್ದಿತು. ಮಂದವಾಯುವಿನಿಂದ ಉಂಟಾದ ಮುತ್ತಿನ ಬಿಂದುಗಳಿಂತಿರುವ ನೀರಿನ ಹನಿಗಳಿಂದ ಎಲ್ಲಾ ಕಡೆಯೂ ತುಂಬಿದ್ದಿತು. ಆ ಸರೋವರದ ದಡವು ಮಹಾಮಣಿಗಳಿಂದ ಮಾಡಿದ ಶಿಲೆಗಳಿಂದ ಬದ್ಧವಾದ- ವೇದಿಕೆಯುಳ್ಳದ್ದಾಗಿದ್ದಿತು.
ಮಣಿರತ್ನಚಿತಾಂ ತಾಂ ತು ಕೇಚಿದಭ್ಯೇತ್ಯ ಪಾರ್ಥಿವಾಃ |
ದೃಷ್ಟ್ವಾಪಿ ನಾಭ್ಯಜಾನಂತ ತೇऽಜ್ಞಾನಾತ್ ಪ್ರಪತಂತ್ಯುತ ॥35॥
ಸರೋವರದ ತಳದಲ್ಲಿ ಪೂರ್ಣವಾಗಿ ಮಣಿರತ್ನಗಳಿಂದ ತುಂಬಿದ, ಆ ಸರೋವರವನ್ನು ನೋಡಿ, ಅನೇಕ ರಾಜರು, ನೋಡಿದರೂ ಸರೋವರವೆಂದು ತಿಳಿಯದೆ ಅಜ್ಞಾನದಿಂದ ಅದರೊಳಗೆ ಬೀಳುತ್ತಿದ್ದರು.
ತಾಂ ಸಭಾಮಭಿತೋ ನಿತ್ಯಂ ಪುಷ್ಪವಂತೋ ಮಹಾದ್ರುಮಾಃ |
ಆಸನ್ ನಾನಾವಿಧಾ ನೀಲಾಃ ಶೀತಚ್ಛಾಯಾ ಮನೋರಮಾಃ ॥36॥
ಆ ಸಭೆಯ ಸುತ್ತಲೂ ಸರ್ವದಾ ಪುಷ್ಪಭರಿತವಾದ, ನಾನಾವಿಧವಾದ ಶೀತವಾದ ನೆರಳನ್ನು ಕೊಡುವ, ಮನೋರಮವಾದ ಅನೇಕ ಮಹಾವೃಕ್ಷಗಳು ಇದ್ದವು.
ಕಾನನಾನಿ ಸುಗೇಂನಿ ಪುಷ್ಕರಿಣ್ಯಶ್ಚ ಸರ್ವಶಃ |
ಹಂಸಕಾರಂಡವಯುತಾಶ್ಚಕ್ರವಾಕೋಪಕೂಜಿತಾಃ ॥37॥
ಆ ಮರಗಳ ಸುತ್ತ ಇದ್ದ ಕಾನನದಲ್ಲಿ ಸುಗಂಧವುಳ್ಳ ಅನೇಕ ಸರೋವರಗಳು ಹಂಸಕಾರಂಡವ ಮೊದಲಾದ ಪಕ್ಷಿಗಳಿಂದಲೂ ಚಕ್ರವಾಕ ಮೊದಲಾದ ಪಕ್ಷಿಗಳ ಧ್ವನಿಗಳಿಂದಲೂ ಕೂಡಿದುದಾಗಿ ಎಲ್ಲಾ ಕಡೆಗಳಲ್ಲಿ ಶೋಭಿಸುತ್ತಿತ್ತು.
ಜಲಜಾನಾಂ ಚ ಮಾಲ್ಯಾನಾಂ ಸ್ಥಲಜಾನಾಂ ಚ ಸರ್ವಶಃ |
ಮಾರುತೋ ಗಂಧಮಾದಾಯ ಪಾಂಡವಾನ್ ಸ್ಮ ನಿಷೇವತೇ ॥38॥
ವಾಯುವು ನೀರಿನಲ್ಲಿ ಬೆಳೆದ ಮತ್ತು ಭೂಮಿಯಲ್ಲಿ ಬೆಳೆದ ಪುಷ್ಪಗಳ ಸೌರಭವನ್ನು ತೆಗದುಕೊಂಡು ಬಂದು ಪಾಂಡವರ ಸೇವೆಯನ್ನು ಮಾಡುತ್ತಿದ್ದಿತು.
ಈದೃಶೀಂ ತಾಂ ಸಭಾಂ ಕೃತ್ವಾ ಮಾಸೈಃ ಪರಿಚತುರ್ದಶೈಃ |
ನಿರ್ಮಿತಾಂ ಧರ್ಮರಾಜಾಯ ಮಯೋ ರಾಜ್ಞೇ ನ್ಯವೇದಯತ್ ॥39॥
ಮಯನು ಹದಿನಾಲ್ಕುತಿಂಗಳುಗಳಕಾಲ ಇಂತಹ ಅದ್ಭುತವಾದ ಸಭೆಯನ್ನು ನಿರ್ಮಾಣ ಮಾಡಿ ರಾಜನಾದ ಧರ್ಮರಾಜನಿಗೆ ಸಭೆಯನ್ನು ನಿವೇದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತೃತೀಯೋऽಧ್ಯಾಯಃ ॥
॥ ಮಂತ್ರಪರ್ವಣಿ ತೃತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
*****

ನಾಲ್ಕನೆಯ ಅಧ್ಯಾಯ
(ಯುಷ್ಠಿರ ಸಭಾಪ್ರವೇಶ)
ವೈಶಂಪಾಯನಃ
ತಾಂ ತು ಕೃತ್ವಾ ಸಭಾಂ ಶ್ರೇಷ್ಠಾಂ ಮಯಶ್ಚಾರ್ಜುನಮಬ್ರವೀತ್ |
ಏಷಾ ಸಭಾ ಸವ್ಯಸಾಚಿನ್ ಧ್ವಜಾಗ್ರ್ಯಶ್ಚ ಭವಿಷ್ಯತಿ ॥1॥
ಅಂತಹ ಶ್ರೇಷ್ಠ ಸಭೆಯನ್ನು ನಿರ್ಮಾಣಮಾಡಿ ಮಯನು ಅರ್ಜುನನನ್ನು ಕುರಿತು, ಸವ್ಯಸಾಚಿಯೇ! ಇದು ನಾನು ನಿರ್ಮಿಸಿರುವ ಸಭೆ

ಮುಂದೆ ಶ್ರೇಷ್ಠವಾದ ಧ್ವಜವನ್ನು ನಿರ್ಮಿಸುವೆನು ಎಂದು ಹೇಳಿದನು.
ಭೂತಾನಾಂ ಚ ಮಹಾವೀರ್ಯೋ ಧ್ವಜಾಗ್ರೇ ಕಿಂಕರೋ ಗಣಃ |
ತವ ವಿಷಾರಘೋಷೇಣ ಮೇಘವನ್ನಿನದಿಷ್ಯತಿ ॥2॥
ಧ್ವಜದ ಅಗ್ರಭಾಗದಲ್ಲಿ ಮಹಾಬಲಶಾಲಿಗಳಾದ ಕಿಂಕರರೆಂಬ ಭೂತಗಳ ಗಣವಿರುತ್ತದೆ. ನಿನ್ನ ಧನುಸ್ಸಿನ ಠೇಂಕಾರದ ಧ್ವನಿಯನ್ನು ಕೇಳಿ ಅದು ಮೇಘದಂತೆ ಗರ್ಜಿಸುವುದು.
ಅಯಂ ಹಿ ಸೂರ್ಯಸಂಕಾಶೋ ಜ್ವಲನಸ್ಯ ರಥೋತ್ತಮಃ |
ಇಮೇ ಚ ದಿವಿಜಾಃ ಶ್ವೇತಾ ವೀರ್ಯವಂತೋ ಹಯೋತ್ತಮಾಃ ॥3॥
ಇದು ಸೂರ್ಯನಂತೆ ಹೊಳೆಯುವ ಶ್ರೇಷ್ಠವಾದ ಅಗ್ನಿಯರಥ. ಈ ಸಾಮರ್ಥ್ಯೋಪೇತವಾದ ಶ್ವೇತಾಶ್ವಗಳು ಸ್ವರ್ಗಲೋಕದಲ್ಲಿ ಜನಿಸಿದವು.
ಮಾಯಾಮಯಃ ಕೃತೋ ಹ್ಯೇಷ ಧ್ವಜೋ ವಾನರಲಕ್ಷಣಃ |
ಅಸಜ್ಜಮಾನೋ ವೃಕ್ಷೇಷು ಧೂಮರಾಶಿರಿವೋಚ್ಛ್ರಿತಃ ॥4॥
ವಾನರ ಚಿಹ್ನೆಯಿಂದ ಕೂಡಿದ ಈ ಧ್ವಜವು ವಿಚಿತ್ರಶಕ್ತಿಯಿಂದ ಕೂಡಿದೆ. ಎತ್ತರವಾಗಿರುವ ಈ ಧ್ವಜವು ಧೂಮದ ರಾಶಿಯು ಹೇಗೆ ಮರಗಳಲ್ಲಿ ಸಿಲುಕಿಹಾಕಿಕೊಳ್ಳುವುದಿಲ್ಲವೋ ಅದರಂತೆ ಸಂಚಾರ ಮಾಡುವಾಗ ವೃಕ್ಷಗಳಲ್ಲಿ ಸಿಲುಕಿಕೊಳ್ಳುವುದಿಲ್ಲ.
ಬಹುವರ್ಣಂ ಹಿ ಲಕ್ಷ್ಯೇತ ಧ್ವಜಂ ವಾನರಲಕ್ಷಣಮ್ |
ಧ್ವಜೋತ್ಕಟಂ ಹ್ಯನವಮಂ ಯುದ್ಧೇ ದ್ರಕ್ಷ್ಯಸಿ ವಿಷ್ಠಿತಮ್ ॥5॥
ಈ ವಾನರಧ್ವಜವು ಅನೇಕ ಬಣ್ಣಗಳಿಂದ ಕೂಡಿರುವುದಾಗಿ ತೋರುತ್ತದೆ. ಈ ವಾನರಾಷ್ಠಿತವಾದ ಧ್ವಜವು ಯುದ್ಧಭೂಮಿಯಲ್ಲಿ ಉಳಿದೆಲ್ಲಾ ಧ್ವಜಗಳಿಗಿಂತ ಶ್ರೇಷ್ಠವಾಗಿ ಎದ್ದುಕಾಣುತ್ತದೆ.
ವೈಶಂಪಾಯನಃ
ಇತ್ಯುಕ್ತ್ವಾಽಽಲಿಂಗ್ಯ ಬೀಭತ್ಸುಂ ವಿಸೃಷ್ಟಃ ಪ್ರಯಯೌ ಮಯಃ ॥6॥
ಅರ್ಜುನನನ್ನು ಕುರಿತು ಹೀಗೆ ಹೇಳಿದ ಮಯನು ಅರ್ಜುನನಿಂದ ಅಲಿಂಗಿಸಲ್ಪಟ್ಟು ಬೀಳ್ಕೊಟ್ಟು ಹೊರಟುಹೋದನು.
ತತಃ ಪ್ರವೇಶನಂ ಚಕ್ರೇ ತಸ್ಯಾಂ ರಾಜಾ ಯುಷ್ಠಿರಃ |
ಅಯುತಂ ಭೋಜಯಾಮಾಸ ಬ್ರಾಹ್ಮಣಾನಾಂ ನರಾಪಃ ॥7॥
ಪರಮಾನ್ನೇನ ಶುಚಿನಾ ಮೋದಕೈಶ್ಚ ಫಲೈಸ್ತಥಾ |
ಕೃಸರೇಣ ಚ ಶುದ್ಧೇನ ಹವಿಷ್ಯೇಣ ಚ ಸರ್ವಶಃ ॥8॥
ಭಕ್ಷ್ಯಪ್ರಕಾರೈರ್ವಿವಿಧೈರ್ಲೇಹ್ಯೈಶ್ಚಾಪಿ ತಥಾ ನೃಪಃ |
ಚೋಷ್ಯೈಶ್ಚ ವಿವಿಧೈ ರಾಜನ್ ಪೇಯೈಶ್ಚ ಬಹುವಿಸ್ತರೈಃ ॥9॥
ಎಲೈರಾಜನೇ! ರಾಜನಾದ ಯುಷ್ಠಿರನು ಅನಂತರ ಆ ಸಭೆಯ ಪ್ರವೇಶೋತ್ಸವವನ್ನು ಮಾಡಿದನು. ರಾಜನಾದ ಅವನು ಹತ್ತುಸಾವಿರ ಬ್ರಾಹ್ಮಣರಿಗೆ ಪರಮಾನ್ನ, ಶುದ್ಧವಾದ ಮೋದಕಗಳು, ಫಲಗಳು, ಶುದ್ಧವಾದ ಹವಿಷ್ಯವಾದ ಧಾನ್ಯಗಳು ನಾನಾವಿಧವಾದ ಭಕ್ಷ್ಯಗಳು ಮತ್ತು ಲೇಹ್ಯಗಳು ಹಾಗೂ ವಿಧವಿಧವಾದ ಚೋಷ್ಯಗಳು ಮತ್ತು ಬಹುವಿಸ್ತಾರವಾದ ಪೇಯಗಳಿಂದ ಭೋಜನವನ್ನು ಮಾಡಿಸಿದನು.

ಅಹತೈಶ್ಚೈವ ವಾಸೋಭಿರ್ಧನೇನ ಚ ಸಹಸ್ರಶಃ |
ತರ್ಪಯಾಮಾಸ ವಿಪ್ರೇಂದ್ರಾನ್ ನಾನಾದಿಗ್ಭ್ಯಃ ಸಮಾಗತಾನ್ ॥10॥
ಅವನು ನಾನಾದಿಕ್ಕುಗಳಿಂದ ಬಂದಿದ್ದ ವಿಪ್ರಶ್ರೇಷ್ಠರನ್ನು ಉತ್ತಮವಾದ ಅಖಂಡಿತವಾದ ವಸ್ತ್ರಗಳಿಂದಲೂ ಸಹಸ್ರಸಂಖ್ಯೆಯ ದಕ್ಷಿಣೆಯಿಂದಲೂ ಸಂತೋಷಪಡಿಸಿದನು.
ದದೌ ತೇಭ್ಯಃ ಸಹಸ್ರಾಣಿ ಗವಾಂ ಪ್ರತ್ಯೇಕಶಃ ಪ್ರಭುಃ |
ಪುಣ್ಯಾಹಘೋಷಸ್ತತ್ರಾಸೀದ್ ದಿವಃ ಸ್ಪೃಕ್ ಕೀರ್ತಿವರ್ಧನಃ ॥11॥
ಪ್ರಭುವಾದ ಧರ್ಮರಾಜನು ಅವರಲ್ಲಿ ಒಬ್ಬಬ್ಬರಿಗೂ ಒಂದು ಸಹಸ್ರಗೋವುಗಳನ್ನು ದಾನಮಾಡಿದನು. ರಾಜನ ಕೀರ್ತಿಯನ್ನು ಹೆಚ್ಚಿಸುವ ಬ್ರಾಹ್ಮಣ ಪುಣ್ಯಾಹಘೋಷವು ಅಲ್ಲಿ ಮುಗಿಲನ್ನು ಮುಟ್ಟಿತು.
ವಾದಿತ್ರೈರ್ವಿವಿಧೈರ್ಗಂಧೈರ್ಮಾಲ್ಯೈರುಚ್ಚಾವಚೈರಪಿ |
ಅಪೂಜಯತ್ ಕುರುಶ್ರೇಷ್ಠೋ ದೈವತಾನಿ ನಿವೇಶ್ಯ ಚ ॥12॥
ಕುರುರಾಜನಾದ ಯುಷ್ಠಿರನು ವಿವಿಧವಾದ ವಾದ್ಯಘೋಷಗಳ ಜೊತೆಯಲ್ಲಿ ದೇವತಾಪ್ರತಿಷ್ಠೆಯನ್ನು ಮಾಡಿ ಅನೇಕ ವಿಧವಾದ ಶ್ರೇಷ್ಠವಾದ ಗಂಧಮಾಲ್ಯಗಳಿಂದ ಪೂಜಿಸಿದನು.
ತತ್ರ ಮಲ್ಲಾ ನಟಾ ಹಲ್ಲಾಃ ಸೂತಮಾಗಧವಂದಿನಃ |
ಉಪತಸ್ಥುರ್ಮಹಾತ್ಮಾನಂ ಸಪ್ತರಾತ್ರಂ ಯುಷ್ಠಿರಮ್ ॥13॥
ಆ ಸಮಯದಲ್ಲಿ ಮಲ್ಲರು, ನಟರು, ನಾನಾವಾದ್ಯಕುಶಲರು. ಸೂತಮಾಗಧಬಂದಿಗಳು, ಮಹಾತ್ಮನಾದ ಧರ್ಮರಾಜನನ್ನು ಏಳುದಿವಸಗಳಕಾಲ ಸೇವೆಮಾಡಿದರು.
ತಥಾ ಸ ಪೂತಾಂ ತಾಂ ಕೃತ್ವಾ ಭ್ರಾತೃಭಿಃ ಸಹ ಪಾಂಡವಃ |
ತಸ್ಯಾಂ ಸಭಾಯಾಂ ರಮ್ಯಾಯಾಂ ರೇಮೇ ಶಕ್ರೋ ಯಥಾ ದಿವಿ ॥
ಆ ರೀತಿಯಲ್ಲಿ ಸಭೆಯನ್ನು ಪಾವನಗೊಳಿಸಿ ಧರ್ಮರಾಜನು ತನ್ನ ತಮ್ಮಂದಿರ ಜೊತೆಯಲ್ಲಿ ಆ ಸುಂದರವಾದ ಸಭೆಯನ್ನು ಪ್ರವೇಶಿಸಿ ದೇವೇಂದ್ರನು ಸ್ವರ್ಗದಲ್ಲಿ ಸುಖಿಸುವಂತೆ ಆನಂದಪಟ್ಟನು.

ಸಭಾಯಾಮೃಷಯಸ್ತಸ್ಯಾಂ ಪಾಂಡವೈಶ್ಚ ಸಹಾಸಿರೇ |
ಆಸಾಂಚಕ್ರುರ್ನರೇಂದ್ರಾಶ್ಚ ನಾನಾದೇಶ್ಯಾಃ ಸಮಾಗತಾಃ ||15||
ಆ ಸಭೆಯಲ್ಲಿ ಪಾಂಡವರ ಜೊತೆಯಲ್ಲಿ ಋಷಿಗಳೂ ಸಹ ಕುಳಿತಿದ್ದರು. ಅನೇಕ ದೇಶಗಳಿಂದ ಬಂದ ರಾಜಶ್ರೇಷ್ಠರೂ ಸಹ ಆ ಸಭೆಯಲ್ಲಿ ಕುಳಿತುಕೊಂಡರು.
ಅಸಿತೋ ದೇವಲಃ ಸತ್ಯಃ ಸುಮಾಲೀ ಚಾಪ್ಯಥಾಂಗಿರಾಃ |
ಅರ್ವಾವಸುಃ ಸುಮಿತ್ರಶ್ಚ ಮೈತ್ರೇಯಃ ಶೌನಕೋ ಬಲೀ ||16||
ಅಸಿತ, ದೇವಲ. ಸತ್ಯ, ಸುಮಾಲೀ, ಅಂಗಿರಸ, ಅರ್ವಾವಸು, ಸುಮಿತ್ರ, ಮೈತ್ರೇಯ, ಪ್ರಬಲರಾದ ಶೌನಕರು.
ಆತ್ರೇಯಃ ಕಣ್ವಜಠರೌ ಮೌದ್ಗಲ್ಯೋ ಹಸ್ತಿಕಾಶ್ಯಪೌ |
ಬಕೋ ದಾಲ್ಭ್ಯಃ ಸ್ಥೂಲಶಿರಾಃ ಕೃಷ್ಣದ್ವೈಪಾಯನಃ ಶುಕಃ |
ಸುಮಂತುರ್ಜೈಮಿನಿಃ ಪೈಲೋ ವೈಶಂಪಾಯನ ಏವ ಚ ||17||
ಆತ್ರೇಯ, ಕಣ್ವ, ಜಠರ, ಮೌದ್ಗಲ್ಯ, ಹಸ್ತಿ, ಕಾಶ್ಯಪ, ದಲ್ಭರಪುತ್ರನಾದ ಬಕ, ಸ್ಥೂಲಶಿರ, ಕೃಷ್ಣದ್ವೈಪಾಯನ, ಶುಕ, ಸುಮಂತು, ಜೈಮಿನಿ, ಪೈಲ, ವೈಶಂಪಾಯನ.
ತಿತ್ತಿರಿರ್ಯಾಜ್ಞವಲ್ಕ್ಯಶ್ಚ ಸಂಯುಕ್ತೋ ರೋಮಹರ್ಷಣಃ |
ಅಪ್ಸುಜಾತಶ್ಚ ಧೌಮ್ಯಶ್ಚ ಆಣಿಮಾಂಡವ್ಯಕೌಶಿಕೌ ||18||
ತಿತ್ತಿರಿ, ಯಾಜ್ಞವಲ್ಕ್ಯ, ಸಂಯುಕ್ತ, ರೋಮಹರ್ಷಣ, ಅಪ್ಸುಜಾತ, ಧೌಮ್ಯ, ಆಣಿಮಾಂಡವ್ಯ, ಕೌಶಿಕ,
ದಾಮೋಷ್ಣೀಷಸ್ತ್ರಿಷವಣಃ ಪರ್ಣಾದೋ ಘಟಜಾನುಕಃ |
ಮೌಂಜಾಯನೋ ವಾಯುಭಕ್ಷಃ ಪಾರಾಶರ್ಯಶ್ಚ ಹಾರಿತಃ ||19||
ದಾಮೋಷ್ಣೀಷ, ಸ್ತ್ರಿಷವಣ, ಪರ್ಣಾದ, ಘಟಜಾನುಕ, ಮೌಂಜಾಯನ, ವಾಯುಭಕ್ಷ, ಪರಾಶರರ ಪುತ್ರನಾದ ಹಾರಿತ,
ಶೀಲವಾನಶನಿರ್ಧಾತಾ ಶೂನ್ಯಪಾಲಃ ಕೃತಶ್ರಮಃ |
ಜಾತೂಕರ್ಣಃ ಶಿಖಾವಾಂಶ್ಚ ಪ್ರಲಂಬಃ ಪಾರಿಜಾತಕಃ ||20||
ಶೀಲವಾನ್, ಅಶನಿ, ಧಾತಾ, ಶೂನ್ಯಪಾಲ, ಕೃತಶ್ರಮ, ಜಾತೂಕರ್ಣ, ಶಿಖಾವಾನ್, ಪ್ರಲಂಬ, (ಸುಬಲ) ಪಾರಿಜಾತಕ,
ಪರ್ವತಶ್ಚ ಮಹಾಭಾಗೋ ಮಾರ್ಕಂಡೇಯಸ್ತಥಾ ಮುನಿಃ |
ಪವಿತ್ರಪಾಣಿಃ ಸಾವರ್ಣಿರ್ಭಾಲುಕಿರ್ಗಾಲವಸ್ತಥಾ ||21||
ಮಹಾನುಭಾವನಾದ ಪರ್ವತ, ಮಾರ್ಕಂಡೇಯ ಋಷಿ, ಪವಿತ್ರಪಾಣಿ, ಸಾವರ್ಣಿ, ವಾಲುಕಿ, ಗಾಲವ,
ಜಂಘಾಬಂಧಶ್ಚ ರೈಭ್ಯಶ್ಚ ಕೋಪವೇಗಸ್ತಥಾ ಭೃಗುಃ |
ಪರಿಬಭ್ರುಶ್ಚ ಕೌಂಡಿನ್ಯೋ ಬಭ್ರುಮಾಲೀ ಸನಾತನಃ ||22||
ಜಂಘಾಬಂಧ, ರೈಭ್ಯ, ಕೋಪವೇಗ, ಭೃಗು, ಪರಿಬಭ್ರು, ಕೌಂಡಿನ್ಯ, ಬಭ್ರುಮಾಲಿ, ಸನಾತನ,
ಕಕ್ಷೀವಾನೌಶಿಜಶ್ಚೈವ ನಾಚಿಕೇತೋಽಥ ಗೌತಮಃ |
ಪೈಂಗಿರ್ವರಾಹಃ ಶುನಕಃ ಶಾಂಡಿಲ್ಯಶ್ಚ ಮಹಾತಪಾಃ ||23||
ಉಶಿಜನ ಪುತ್ರನಾದ ಕಕ್ಷೀವಾನ್, ನಚಿಕೇತನ ಪುತ್ರನಾದ ಗೌತಮ, ಪಿಂಗಪುತ್ರನಾದ ವರಾಹ, ಶುನಕ, ಮಹಾತಪಸ್ವಿಯಾದ ಶಾಂಡಿಲ್ಯ.
ಕುರರೋ ವೇಣುಜಂಘಶ್ಚ ಕಲಾಪಃ ಕಠ ಏವ ಚ |
ಶಾರ್ಙ್ಗರಸ್ತೈಲಕುಂಡ್ಯಶ್ಚ ಪರ್ಣವಲ್ಕಸ್ತಥೈವ ಚ ||24||
ಕುರರ, ವೇಣುಜಂಘ, ಕಲಾಪ, ಕಠ, ಶಾರ್ಙ್ಗರ, ತೈಲಕುಂಡ್ಯ, ಪರ್ಣವಲ್ಕಲ,
ಮುನಯೋ ಧರ್ಮಸಹಿತಾ ಜಿತಾತ್ಮಾನೋ ಜಿತೇಂದ್ರಿಯಾಃ |
ಏತೇ ಚಾನ್ಯೇ ಚ ಬಹವೋ ವೇದವೇದಾಂಗಪಾರಗಾಃ ||25||
ಧರ್ಮಸಹಿತರಾದವರೂ ಜಿತಮನಸ್ಕರೂ ಜಿತೇಂದ್ರಿಯರೂ ಆದ ಈ ಎಲ್ಲಾ ಋಷಿಗಳೂ ಆಸಭೆಯಲ್ಲಿ ಆಸೀನರಾದರು. ಇವರೇ ಅಲ್ಲದೆ ವೇದವೇದಾಂಗಪಾರಂಗತರಾದ ಇನ್ನೂ ಅನೇಕ ಋಷಿಗಳು ಆ ಸಭೆಯಲ್ಲಿ ಆಸೀನರಾದರು.
ಉಪಾಸಿರೇ ಮಹಾತ್ಮಾನಃ ಸಭಾಯಾಮೃಷಿಸತ್ತಮಾಃ |
ಕಥಯಂತಃ ಕಥಾಃ ಶುಭ್ರಾಃ ಶುಚಯೋ ಧರ್ಮವತ್ಸಲಾಃ ||26||
ಧರ್ಮವತ್ಸಲರಾದ ಶುದ್ಧರಾದ ಮಹಾತ್ಮರಾದ ಋಷಿಶ್ರೇಷ್ಠರು ಆ ಸಭೆಯಲ್ಲಿ ಪವಿತ್ರವಾದ ಕಥೆಗಳನ್ನು ಹೇಳುತ್ತಾ ಧರ್ಮರಾಜನ ಸಮೀಪದಲ್ಲಿ ಕುಳಿತುಕೊಂಡರು.
ತಥೈವ ಕ್ಷತ್ರಿಯಶ್ರೇಷ್ಠಾ ಧರ್ಮರಾಜಮುಪಾಸಿರೇ |
ಶ್ರೀಮಾಂಶ್ಚ ಸುಮಹಾತ್ಮಾ ಚ ಮುಂಜಕೇತುರ್ವಿವರ್ಧನಃ |
ಸಂಗ್ರಾಮಜಯಮುಖ್ಯಾಶ್ಚಾಪ್ಯುಗ್ರಸೇನಶ್ಚ ಭಾರತ ||27||
ಎಲೈ ಭಾರತನೇ! ಹಾಗೆಯೇ ಆ ಸಭೆಯಲ್ಲಿ ಕ್ಷತ್ರಿಯಶ್ರೇಷ್ಠರೂ ಕೂಡ ಧರ್ಮರಾಜನನ್ನು ಉಪಾಸನೆ ಮಾಡಿದರು. ಕಾಂತಿಯುಕ್ತನೂ ಮಹಾತ್ಮನೂ ಆದ ಮುಂಜಕೇತು, ವಿವರ್ಧನ, ಸಂಗ್ರಾಮಜಯ, ಮೊದಲಾದವರು ಮತ್ತು ಉಗ್ರಸೇನ,
ಕ್ಷೇಮಶ್ಚ ವಸುದಾನಶ್ಚ ವೈದೇಹಶ್ಚ ಕೃತಕ್ಷಣಃ |
ಕಕ್ಷಸೇನಃ ಕ್ಷಿತಿಪತಿಃ ಕ್ಷೇಮಕಶ್ಚಾಪರಾಜಿತಃ ||28||
ಕ್ಷೇಮ, ವಸುದಾನ, ಅವಕಾಶವನ್ನು ಮಾಡಿಕೊಂಡು ಬಂದ ವಿದೇಹರಾಜ, ಕಕ್ಷಸೇನರಾಜ, ಯುದ್ಧದಲ್ಲಿ ಸೋಲದ ಕ್ಷೇಮಕರಾಜ.
ಕಾಂಭೋಜರಾಜಃ ಕಮಠಃ ಕಂಪನಶ್ಚ ಮಹಾಬಲಃ |

ಸತತಂ ಕಂಪಯಾಮಾಸ ಯವನಾನೇಕ ಏವ ಯಃ ॥29॥
ಯಥಾಽಸುರಾನ್ ಕಾಲಿಕೇಯಾನ್ ದೇವೋ ವಜ್ರಧರಸ್ತಥಾ |
ಬಲಪೌರುಷಸಂಪನ್ನಾನ್ ಕೃತಾಸ್ತ್ರಾನಮಿತೌಜಸಃ ॥30॥
ಕಾಂಬೋಜರಾಜ, ಕಮಠ, ಮತ್ತು ಯವನರನ್ನು ಸತತವಾಗಿ ನಡುಗಿಸಿದ ಮಹಾಬಲಿಷ್ಠನಾದ ಕಂಪನ.
ಮಹಾಪರಾಕ್ರಮಶಾಲಿಗಳಾದ ಅಸ್ತ್ರವಿದ್ಯೆಯನ್ನು ಬಲ್ಲ ಬಲಿಷ್ಠರಾದ ಪೌರುಷಸಂಪನ್ನರಾದ ಅಸುರರನ್ನು ಮತ್ತು ಕಾಲಿಕೇಯರನ್ನು ವಜ್ರಧರನಾದ ದೇವೇಂದ್ರನು ನಡುಗಿಸಿದಂತೆ ಕಂಪನನು ಯವನರನ್ನು ನಡುಗಿಸಿದ್ದವನು.
ಜಟಾಸುರೋ ಭದ್ರಕಾಂತಶ್ಚ ರಾಜಾ
ಕುಣಿಃ ಪುಲಿಂದಶ್ಚ ಕಿರಾತರಾಜಃ |
ತಥಾಽಂಗವಂಗೌ ಸಹ ಪುಂಡ್ರಕೇಣ
ಪಾಂಡ್ಯೋಽಥ ರಾಜಾ ಸಹ ಕೇರಳೇನ ॥31॥
ಜಟಾಸುರ, ಭದ್ರಕಾಂತರಾಜ, ಕುಣಿ, ಕಿರಾತರಾಜನಾದ ಪುಲಿಂದ, ಅಂಗ, ವಂಗ, ಪೌಂಡ್ರಕರಾಜನಾದ ಪಾಂಡ್ಯ ಮತ್ತು ಕೇರಳರಾಜರು,
ಕಿರಾತರಾಜಃ ಸುಮನಾಃ ಯವನಾಪತಿಸ್ತಥಾ |
ಪಾಂಚಾಲಶ್ಚ ವಿರಾಟಶ್ಚ ದ್ರುಮಶಲ್ಯಃ ಪೃಥುಶ್ರವಾಃ ॥32॥
ಕಿರಾತರಾಜನಾದ ಸುಮನಸ್, ಯವನಾಪತಿ, ಪಾಂಚಾಲ, ವಿರಾಟ, ದ್ರುಮಶಲ್ಯ, ಪೃಥುಶ್ರವ,
ಸುಶರ್ಮಾ ಚೇಕಿತಾನಶ್ಚ ಮುಖ್ಯಸೇನಶ್ಚ ಭಾರತ |
ಸುಧರ್ಮಾ ಚಾನಿರುದ್ಧಶ್ಚ ಶ್ರುತಾಯುಶ್ಚ ಮಹಾರಥಃ ॥33॥
ಸುಶರ್ಮಾ, ಚೇಕಿತಾನ, ಮುಖ್ಯಸೇನ, ಸುಧರ್ಮ, ಅನಿರುದ್ಧ ಮಹಾರಥನಾದ ಶ್ರುತಾಯು,
ಅನೂಪರಾಜೋ ದುರ್ಧರ್ಷಃ ಕ್ಷೇಮಜಿಚ್ಚ ಸುದಕ್ಷಿಣಃ |
ಶಿಶುಪಾಲೋ ದಶಗ್ರೀವಃ ಕರೂಶಾಪತಿಸ್ತಥಾ ॥34॥
ಸಮುದ್ರತೀರದ ರಾಜನಾದ ದುರ್ಧರ್ಷ, ಕ್ಷೇಮಜಿತ್, ಸುದಕ್ಷಿಣ, ಶಿಶುಪಾಲ, ದಶಗ್ರೀವ, ಕರೂಶಾಪತಿಯಾದ ದಂತವಕ್ರ,
ವೃಷ್ಣೀನಾಂ ಚೈವ ದುರ್ಧರ್ಷಾಃ ಕುಮಾರಾ ದೇವರೂಪಿಣಃ |
ಆಹುಕೋ ವಿಪೃಥುಶ್ಚೈವ ಗದಃ ಸಾರಣ ಏವ ಚ |
ಅಕ್ರೂರಃ ಕೃತವರ್ಮಾ ಚ ಸಾತ್ಯಕಿಶ್ಚ ಶಿನೇಃ ಸುತಃ ॥35॥
ದೇವತೆಗಳಂತೆ ಕಂಗೊಳಿಸುವ ಯುದ್ಧದಲ್ಲಿ ದುರ್ಧಷರಾದ ವೃಷ್ಣಿಕುಮಾರರು, ಆಹುಕ, ವಿಪೃಥು, ಗದ, ಸಾರಣ, ಅಕ್ರೂರ, ಕೃತವರ್ಮ, ಶಿನಿಪುತ್ರನಾದ ಸಾತ್ಯಕಿ,
ಭೀಷ್ಮಕೋ ಹೃದಿಕಶ್ಚೈವ ದ್ಯುಮತ್ಸೇನಶ್ಚ ವೀರ್ಯವಾನ್ |
ಕೇಕಯಾಶ್ಚ ಮಹೇಷ್ವಾಸಾ ಯಜ್ಞಸೇನಶ್ಚ ಸೋಮಕಿಃ ॥36॥
ಭೀಷ್ಮಕ, ಹೃದಿಕ, ಪರಾಕ್ರಮಶಾಲಿಯಾದ ದ್ಯುಮತ್ಸೇನ, ಧನುವಿದ್ಯೆಯಲ್ಲಿ ಪಾರಂಗತರಾದ ಕೇಕಯದೇಶದ ರಾಜರು, ಸೋಮಕನ ಮಗನಾದ ಯಜ್ಞಸೇನ.
ಏತೇ ಚಾನ್ಯೇ ಚ ಬಹವಃ ಕ್ಷತ್ರಿಯಾ ಮುಖ್ಯಸಮ್ಮತಾಃ |
ಉಪಾಸತೇ ಸಭಾಯಾಂ ಸ್ಮ ಕುಂತೀಪುತ್ರಂ ಯುಷ್ಠಿರಮ್ ॥37॥
ಇವರೂ ಎಲ್ಲಾ ಕ್ಷತ್ರಿಯರೂ ಮತ್ತು ಇನ್ನು ಅನೇಕ ಕ್ಷತ್ರಿಯಶ್ರೇಷ್ಠರೂ ಆ ಸಭೆಯಲ್ಲಿ ಕುಂತಿಪುತ್ರನಾದ ಯುಷ್ಠರನಿಗೆ ಸೇವೆಯನ್ನು ಸಲ್ಲಿಸಿದರು.
ಅರ್ಜುನಂ ತೂಪಸಂಗೃಹ್ಯ ರಾಜಪುತ್ರಾ ಯಶಸ್ವಿನಃ |
ಶಿಕ್ಷಂತೇ ಸ್ಮ ಧನುರ್ವೇದಂ ರೌರವಾಜಿನವಾಸಸಃ ॥38॥
ಅಲ್ಲಿ ಕೀರ್ತಿಮಂತರಾದ ರಾಜಕುಮಾರರು (ಕೌರವ ಎಂಬ ಜಿಂಕೆ ವಿಶೇಷ ಅದರ ಚರ್ಮವನ್ನು) ರೌರವಾಜಿನವನ್ನು ಧರಿಸಿ ಅರ್ಜುನನ್ನು ಸಮೀಪಿಸಿ ಅವನನ್ನು ಗುರುವೆಂದು ಸ್ವೀಕರಿಸಿ ಅವನಿಂದ ಧನುರ್ವಿದ್ಯೆಯನ್ನು ಕಲಿತರು.
ತತ್ರೈವ ಶಿಕ್ಷಿತಾಃ ಸರ್ವೇ ವೃಷ್ಣಿಪುತ್ರಾ ಯಶಸ್ವಿನಃ |
ಪ್ರದ್ಯುಮ್ನೋ ರೌಕ್ಮಿಣೇಯಶ್ಚ ಯುಯುಧಾನಶ್ಚ ಸಾತ್ಯಕಿಃ ॥39॥
ಚಾಣೂರೋ ದೇವರಾತಶ್ಚ ಭೋಜೋ ಭೈಮರಥೋಽಪಿ ಚ |
ಶತಾಯುಧಶ್ಚ ಕಾಳಿಂಗೋ ಯಜ್ಞಸೇನಶ್ಚ ಮಾಗಧಃ ॥40॥
ಏತೇ ಚಾನ್ಯೇ ಚ ಬಹವೋ ರಾಜಪುತ್ರಾ ಮಹಾಬಲಾಃ |
ಧನಂಜಯಮುಪಾತಿಷ್ಠನ್ ಧನುರ್ವೇದಚಿಕೀರ್ಷವಃ ॥41॥
ಕೀರ್ತಿವಂತರಾದ ಎಲ್ಲಾ ವೃಷ್ಣಿಕುಮಾರರೂ ಅಲ್ಲಿಯೇ ಧನುರ್ವಿದ್ಯೆಯನ್ನು ಕಲಿತರು. ರುಕ್ಮಿಣಿಯ ಮಗನಾದ ಪ್ರದ್ಯುಮ್ನ, ಯುಯುಧಾನ, ಸಾತ್ಯಕಿ, ಚಾಣೂರ, ದೇವರಾತ, ಭೋಜ, ಭೀಮರಥ, ಕಳಿಂಗಾಪತಿಯಾದ ಶತಾಯುಧ, ಮಗಧಾಪತಿಯಾದ ಯಜ್ಞಸೇನ, ಇವರೂ ಮತ್ತು ಇನ್ನು ಅನೇಕರಾದ ರಾಜಪುತ್ರರೂ ಧನುರ್ವೇದವನ್ನು ಕಲಿಯುವ ಆಸೆಯಿಂದ ಅರ್ಜುನನ ಉಪಸತ್ತಿಯನ್ನು ಮಾಡಿದರು.
ಧನಂಜಯಸಖಾ ತತ್ರ ನಿತ್ಯಮಾಸ್ತೇ ಸ ತುಂಬುರುಃ |
ಉಪಾಸತೇ ತಮಾಸೀನಂ ಗಂಧರ್ವಾಃ ಸಪ್ತವಿಂಶತಿಃ ॥42॥
ತುಂಬುರುವು ಆ ಸಭೆಯಲ್ಲಿ ನಿತ್ಯವೂ ಅರ್ಜುನನ ಸ್ನೇಹಿತನಾಗಿ ಇರುತ್ತಿದ್ದನು. ಇಪ್ಪತ್ತೇಳು ಮಂದಿ ಗಂಧರ್ವರು ಸಭೆಯಲ್ಲಿ

ಆಸೀನನಾದ ಅರ್ಜುನನಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು.
ಚಿತ್ರಸೇನಃ ಸಹಾಮಾತ್ಯೋ ಗಂಧರ್ವಾಪ್ಸರಸಾಂ ಗಣೈಃ |
ತಸ್ಯಾಂ ಸಭಾಯಾಮಾಸ್ತೇ ಸ್ಮ ಬಹುಭಿಃ ಪರಿವಾರಿತಃ ||43||
ಚಿತ್ರಸೇನನೆಂಬ ಗಂಧರ್ವರಾಜನು ಗಂಧರ್ವರ ಮತ್ತು ಅಪ್ಸರೆಯರ ಅನೇಕ ಗಣಗಳಿಂದ ಪರಿವಾರಿತನಾಗಿ ತನ್ನ ಮಂತ್ರಿಯ ಜೊತೆಯಲ್ಲಿ ಆ ಸಭೆಯಲ್ಲಿ ಯಾವಾಗಲೂ ಇರುತ್ತಿದ್ದನು.
ಗೀತವಾದಿತ್ರಕುಶಲಾಃ ಶಮ್ಯಾತಾಳವಿಶಾರದಾಃ |
ಪ್ರಮಾಣೇ ಚ ಲಯೇ ಸ್ಥಾನೇ ಕಿನ್ನರಾಶ್ಚ ಕೃತಶ್ರಮಾಃ ||44||
ಗೀತಾವಾದ್ಯಗಳಲ್ಲಿ ಕುಶಲರಾದ ಅನೇಕ ತಾಳ ಪ್ರಮಾಣಗಳಲ್ಲಿಯೂ ಲಯದಲ್ಲಿಯೂ, ಸ್ವರಸ್ಥಾನದಲ್ಲಿಯೂ, ಸ್ವರದಸ್ಥಾಯಿಯಲ್ಲಿಯೂ, ಪರಿಶ್ರಮವನ್ನು ಪಟ್ಟು ವಿಶಾರದರಾದ ಕಿನ್ನರರು, ಆ ಸಭೆಯಲ್ಲಿ ಇದ್ದರು.
ತೇ ಚೋದಿತಾಸ್ತುಂಬುರುಣಾ ಗಂಧರ್ವಾಃ ಕಿನ್ನರೈಃ ಸಹ |
ದಿವ್ಯತಾನೇಷು ಗಾಯಂತಿ ಗಾಥಾ ದಿವ್ಯಾಶ್ಚ ಭಾರತ ||45||
ಎಲೈ ಭಾರತನೇ! ತುಂಬುರುವಿನಿಂದ ಪ್ರೇರಿಸಲ್ಪಟ್ಟವರಾಗಿ ಆ ಗಂಧರ್ವರು ಕಿನ್ನರರ ಜೊತೆಯಲ್ಲಿ ಸೇರಿ ದಿವ್ಯವಾದ ತಾನಗಳಲ್ಲಿ ದಿವ್ಯವಾದ ಗೀತೆಗಳನ್ನು ಹಾಡುತ್ತಿದ್ದರು.
ಶಮ್ಯಾತಾಳೇಷು ಕುಶಲಾಃ ಗೀತವಾದ್ಯವಿಶಾರದಾಃ |
ಪಾಂಡವೇಯಾನೃಷೀಂಶ್ಚೈವ ರಮಯಂತ ಉಪಾಸತೇ ||46||
ಅವರು ಗೀತವಾದ್ಯಗಳಲ್ಲಿ ವಿಶಾರದರಾಗಿ, ವಿವಿಧತಾಳಪ್ರಭೇದಗಳಲ್ಲಿ ಕುಶಲರಾಗಿ, ಪಾಂಡವರನ್ನೂ ಮತ್ತು ಋಷಿಗಳನ್ನೂ ಸಂತೋಷ ಪಡಿಸುತ್ತಾ ಸಭೆಯಲ್ಲಿ ತಮ್ಮ ಸೇವೆಯನ್ನು ಅರ್ಪಿಸಿದರು.
ತಸ್ಯಾಂ ಸಭಾಯಾಮೃಷಯೋ ರಾಜಾನಶ್ಚ ಪೃಥಗ್ವಿಧಾಃ |
ದಿವೀವ ದೇವಾ ದೇವೇಶಂ ಯುಷ್ಠಿರಮುಪಾಸತೇ ||47||
ಆ ಸಭೆಯಲ್ಲಿ ಅನೇಕ ವಿಧವಾದ ಋಷಿಗಳು ಮತ್ತು ರಾಜರುಗಳು ಸ್ವರ್ಗದಲ್ಲಿ ದೇವತೆಗಳು ದೇವೇಂದ್ರನನ್ನು ಸತ್ಕರಿಸಿದಂತೆ ಯುಷ್ಠರನ ಸುತ್ತ ನೆರೆದು ಅವನನ್ನು ಸತ್ಕರಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುರ್ಥೋಽಧ್ಯಾಯಃ ||
|| ಮಂತ್ರಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
*****

ಐದನೆಯ ಅಧ್ಯಾಯ

(ಸಭೆಗೆ ನಾರದರ ಆಗಮನ, ಯುಷ್ಠಿರನ ಜೊತೆಯಲ್ಲಿ ಕುಶಲ ಪ್ರಶ್ನೆಯನ್ನು ಮಾಡುವ ನೆಪದಿಂದ ಅವನಿಗೆ ರಾಜನೀತಿಯ ಉಪದೇಶ)
ವೈಶಂಪಾಯನಃ
ಅಥೋಪವಿಷ್ಟೇಷ್ವೃಷಿಷು ಪಾರ್ಥಿವೇಷು ಚ ಭಾರತ |
ಮಹತ್ಸು ಚೋಪವಿಷ್ಟೇಷು ಗಂಧರ್ವೇಷು ಚ ಸರ್ವಶಃ ||1||
ಭರತವಂಶೋತ್ಪನ್ನನಾದ ಜನಮೇಜಯನೇ! ಅನಂತರ ಆ ಸಭೆಯಲ್ಲಿ ಎಲ್ಲಾ ಕಡೆಗಳಲ್ಲಿಯೂ ಋಷಿಗಳು, ರಾಜರು ಮತ್ತು ಮಹಾತ್ಮರಾದ ಗಂಧರ್ವರು ಕುಳಿತುಕೊಂಡಿರಲು (ಅಲ್ಲಿಗೆ ನಾರದರು ಬಂದರು.)
ವೇದೋಪನಿಷದಾಂ ವೇತ್ತಾ ಸುರಾಸುರಗಣಾರ್ಚಿತಃ |
ಇತಿಹಾಸಪುರಾಣಜ್ಞಃ ಕ್ರಿಯಾಕಲ್ಪವಿಶೇಷವಿತ್ ||2||
ಸ್ತುತಿಸ್ತೋಮಗ್ರಹಸ್ತೋಭಪದಕ್ರಮವಿಭಾಗವಿತ್ |
ನ್ಯಾಯವಿದ್ ಧರ್ಮತತ್ತ್ವಜ್ಞಃ ಷಡಂಗವಿದನುತ್ತಮಃ ||3||
ಐಕ್ಯಸಂಯೋಗನಾನಾತ್ವಸಮವಾಯವಿಶಾರದಃ |
ಶಿಕ್ಷಾಕ್ಷರವಿಶೇಷಜ್ಞಃ ಪುರಾಕಲ್ಪವಿಶೇಷವಿತ್ ||4||
ವಕ್ತಾ ಪ್ರಗಲ್ಭೋ ಮೇಧಾವೀ ಸ್ಮೃತಿಮಾನ್ ನಯವಿತ್ ಕವಿಃ |
ಪರಾಪರವಿಭಾಗಜ್ಞಃ ಪ್ರಮಾಣೇ ಕೃತನಿಶ್ಚಯಃ ||5||
ಪಂಚಾವಯವಯುಕ್ತಸ್ಯ ವಾಕ್ಯಸ್ಯ ಗುಣದೋಷವಿತ್ |
ಉತ್ತರೋತ್ತರವಕ್ತಾ ಚ ಬ್ರುವತೋಽಪಿ ಬೃಹಸ್ಪತೇಃ ||6||
ಧರ್ಮಕಾಮಾರ್ಥಮೋಕ್ಷೇಷು ಯಥಾವತ್ ಕೃತನಿಶ್ಚಯಃ |
ವಿಭುಶ್ಚೈವ ಚ ಕೋಶಸ್ಯ ಅನ್ವಿತಸ್ಯ ಮಹಾಮತಿಃ ||7||
ಪ್ರತ್ಯಕ್ಷದರ್ಶೀ ಸರ್ವಸ್ಯ ತಿರ್ಯಗೂರ್ಧ್ವಮಧಸ್ತಥಾ |
ಸಾಂಖ್ಯಯೋಗವಿಧಾನಜ್ಞೋ ನಿರ್ವಿವಿಕ್ಷುರುದಾರೇಃ ||8||
ಸಂವಿಗ್ರಹತತ್ತ್ವಜ್ಞೋ ಯಾನಾಸನವಿಭಾಗವಿತ್ |
ಷಾಡ್ಗುಣ್ಯವಿಯುಕ್ತಶ್ಚ ಅರ್ಥಶಾಸ್ತ್ರವಿಶಾರದಃ ||
ನೃತ್ತಗಾಂಧರ್ವವೇದೀ ಚ ಸರ್ವಸ್ಯಾಪ್ರತಿಮಸ್ತಥಾ ||9||
ಏತೈಶ್ಚಾನ್ಯೈಶ್ಚ ಬಹುಭಿರ್ಯುಕ್ತೋ ಗುಣಗಣೈರ್ಮುನಿಃ |

ಲೋಕಾನನುಚರನ್ ಸರ್ವಾನ್ ಆಗಮತ್ ತಾಂ ಸಭಾಮೃಷಿಃ ॥10॥
ವೇದ ಮತ್ತು ಉಪನಿಷತ್ತುಗಳನ್ನು ತಿಳಿದವರು; ದೇವತೆಗಳ ಮತ್ತು ಅಸುರರ ಸಮೂಹಗಳಿಂದ ಪೂಜಿಸಲ್ಪಡುವವರು. ಇತಿಹಾಸ ಪುರಾಣಗಳನ್ನು ತಿಳಿದವರು. ಕ್ರಿಯೆಗಳನ್ನು ಮತ್ತು ಕಲ್ಪೋಕ್ತವಿಧಾನಗಳನ್ನು ತಿಳಿದವರು. ಯಜ್ಞಕ್ಕೆ ಸಂಬಂಸಿದ ಸ್ತುತಿಸ್ತೋಮ ಮತ್ತು ಗ್ರಹಗಳನ್ನು ತಿಳಿದವರು. ವೇದಗಳಿಗೆ ಸಂಬಂಸಿದ ಸ್ತೋಭಾಕ್ಷರಗಳು ಪದ ಮತ್ತು ಕ್ರಮಗಳ ವಿಭಾಗಗಳನ್ನು ತಿಳಿದವರು. ವೇದಾಂಗವಾದ ಶಿಕ್ಷಾಶಾಸ್ತ್ರಕ್ಕೆ ಅನುಗುಣವಾಗಿ ಅಕ್ಷರಗಳ ಸ್ವರೂಪವನ್ನು ತಿಳಿದವರು. ಪುರಾಣಗಳನ್ನು ವಿಶೇಷವಾಗಿ ಅಧ್ಯಯನಮಾಡಿದವರು. ನ್ಯಾಯಗಳನ್ನು ಬಲ್ಲವರು. ಧರ್ಮತತ್ವಗಳನ್ನು ಅರಿತವರು. ವೇದದ ಆರು ಅಂಗವಿದ್ಯೆಗಳಲ್ಲಿಯೂ ಶ್ರೇಷ್ಠವಾದ ಪರಿಣತಿಯನ್ನು ಪಡೆದವರು, ಭೇದ, ಅಭೇದ, ಸಂಯೋಗ, ಸಮವಾಯ ಮೊದಲಾದ ಪರಿಕಲ್ಪಗಳನ್ನು ತಿಳಿದವರಲ್ಲಿ ವಿಶಾರದರು, ವಾಗ್ಮಿಗಳು ಪ್ರತಿಭಾನ್ವಿತರು, ಮೇಧಾವಿಗಳು, ಸ್ಮರಣಶಕ್ತಿಯುಳ್ಳವರು, ನೀತಿಶಾಸ್ತ್ರವನ್ನು ಬಲ್ಲವರು, ಕವಿಗಳು, ಉಚ್ಚನೀಚವಸ್ತುಗಳ ವಿಭಾಗಗಳನ್ನು ತಿಳಿದವರು. ಪ್ರಮಾಣಶಾಸ್ತ್ರವನ್ನು ಚನ್ನಾಗಿ ಅರಿತವರು, ಪಂಚಾವಯವಗಳುಳ್ಳ ಅನುಮಾನಪ್ರಯೋಗದ ಗುಣದೋಷಗಳನ್ನು ತಿಳಿದವರು. ಬೃಹಸ್ಪತಿಯ ಜೊತೆಯಲ್ಲಿ ಮಾತನಾಡಿದರೂ ಅವನ ಮಾತಿಗೆ ಮರು ಉತ್ತರವನ್ನು ಕೊಡುತ್ತಾ ಮತ್ತೆ ಮತ್ತೆ ವಾದವಾಡುವವರು. ಧರ್ಮ, ಅರ್ಥ ,ಕಾಮ, ಮೋಕ್ಷಗಳ ಯಥಾವಸ್ಥಿತವಾದ ಜ್ಞಾನವುಳ್ಳವರು, ಶಬ್ದಕೋಶಗಳನ್ನು ತಿಳಿದವರು. ಶಬ್ದಗಳ ಅನ್ವಯಪ್ರಕಾರದಲ್ಲಿ ಮಹಾಬುದ್ದಿಯುಳ್ಳವರು, ಊರ್ಧ್ವಲೋಕಗಳಲ್ಲಿ ಅಧೋಲೋಕಗಳಲ್ಲಿ ಮತ್ತು ಭೂಲೋಕದಲ್ಲಿ ನಡೆಯುವ ಎಲ್ಲಾ ವಿಷಯವನ್ನು ಪ್ರತ್ಯಕ್ಷವಾಗಿ ನೋಡುವವರು. ಸಾಂಖ್ಯಶಾಸ್ತ್ರವನ್ನು, ಯೋಗಶಾಸ್ತ್ರವನ್ನು ಬಲ್ಲವರು. ಉದಾರವಾದ ಬುದ್ದಿಯುಳ್ಳವರು. ತಮ್ಮ ಗುಣವನ್ನು ತೋರಿಸಿಕೊಳ್ಳದವರು. ರಾಜರಿಗೆ ಬೇಕಾದ ಸಂ,ಮತ್ತು ಯುದ್ದಗಳ ತತ್ವವನ್ನು ತಿಳಿದವರು. ಯುದ್ದಕ್ಕಾಗಿ ಪ್ರಯಾಣ ಮಾಡುವ ವಿಷಯವನ್ನು ಮತ್ತು ಶತ್ರುರಾಜರ ರಾಜ್ಯದ ಸುತ್ತಲೂ ಬೀಡು ಬಿಡುವ ವಿಷಯವನ್ನು ಚೆನ್ನಾಗಿ ತಿಳಿದವರು ರಾಜನೀತಿಗೆ ಬೇಕಾದ ಆರು ಗುಣಗಳ ವಿಧಾನವನ್ನು ಚೆನ್ನಾಗಿ ಬಲ್ಲವರು. ಅರ್ಥಶಾಸ್ತ್ರವನ್ನು ತಿಳಿದವರು. ನೃತ್ಯವನ್ನು ಗಾನವನ್ನು ತಿಳಿದವರು ಎಲ್ಲಾ ವಿಷಯಗಳಲ್ಲಿಯೂ ದೃಷ್ಟಾಂತರಹಿತರಾದವರು. ಈ ಗುಣಗಳಿಂದ ಮತ್ತು ಇನ್ನೂ ಅನೇಕ ಗುಣಗಣಗಳಿಂದ ಸಂಪನ್ನರಾದ ನಾರದಮಹರ್ಷಿಗಳು ಎಲ್ಲಾ ಲೋಕಗಳನ್ನು ಸಂಚರಿಸುತ್ತಾ ಆ ಧರ್ಮರಾಜನ ಸಭೆಗೆ ಬಂದರು.

ನಾರದಃ ಸುಮಹಾತೇಜಾ ಋಷಿಭಿಃ ಸಹಿತಸ್ತದಾ |
ಪಾರಿಜಾತೇನ ರಾಜೇಂದ್ರ ರೈವತೇನ ಚ ೀಮತಾ ॥10॥
ಸುಮುಖೇನ ಚ ಸೌಮ್ಯೇನ ದೇವರ್ಷಿರಮಿತದ್ಯುತಿಃ |
ಸಭಾಸ್ಥಾನ್ ಪಾಂಡವಾನ್ ದ್ರಷ್ಟುಂ ಪ್ರೀಯಮಾಣೋ ಮನೋಜವಃ ॥

ಎಲೈ ರಾಜೇಂದ್ರನೇ! ಅಮಿತಕಾಂತಿಯುಳ್ಳವರೂ ಮಹಾತೇಜಸ್ವಿಗಳೂ ದೇವರ್ಷಿಗಳೂ ಆದ ನಾರದರು ಸಭೆಯಲ್ಲಿದ್ದ ಪಾಂಡವರನ್ನು ನೋಡಿ ಸಂತೋಷಪಡಲು ಬಯಸಿ ಮನೋಜವವನ್ನು ಹೊಂದಿದ್ದ ಅವರು ಪಾರಿಜಾತ, ಮೇಧಾವಿಯಾದ ರೈವತ, ಸುಮುಖ, ಸೌಮ್ಯ, ಮೊದಲಾದ ಋಷಿಗಳ ಸಹಿತವಾಗಿ ಅಲ್ಲಿಗೆ ಬಂದರು.

ತಮಾಗತಮೃಷಿಂ ದೃಷ್ಟ್ವಾ ನಾರದಂ ಸರ್ವಧರ್ಮವಿತ್ |
ಸಹಸಾ ಪಾಂಡವಶ್ರೇಷ್ಠಃ ಪ್ರತ್ಯುತ್ಥಾಯಾನುಜೈಃ ಸಹ ॥12॥
ಅಭ್ಯವಾದಯತ ಪ್ರೀತ್ಯಾ ವಿನಯಾವನತಸ್ತದಾ |
ಜಯಾಶೀರ್ವಚನೇನಾಥ ಧರ್ಮರಾಜಾನಮರ್ಚಯತ್ ॥13॥

ಪ್ರಾಪ್ತರಾದ ನಾರದರನ್ನು ನೋಡಿ ಸರ್ವಧರ್ಮಜ್ಞನಾದ ಪಾಂಡವಶ್ರೇಷ್ಠನಾದ ಧರ್ಮರಾಜನು ತನ್ನ ಸಹೋದರರ ಜೊತೆಯಲ್ಲಿ ಶೀಘ್ರವಾಗಿ ಎದ್ದುನಿಂತು ಅವರಿಗೆ ನಮಸ್ಕಾರವನ್ನು ಮಾಡಿ, ಸಂತೋಷದಿಂದ ಕೂಡಿದವನಾಗಿ ವಿನಯದಿಂದ ತಲೆಯನ್ನು ಬಾಗಿಸಿ ನಿಲ್ಲಲು ನಾರದರು ಅವನನ್ನು ಜಯಶಬ್ದಗಳಿಂದಲೂ, ಆಶೀರ್ವಾದಗಳಿಂದಲೂ ಸತ್ಕರಿಸಿದರು.

ತದರ್ಹಮಾಸನಂ ತಸ್ಮೈ ಸಂಪ್ರದಾಯ ಯಥಾವಿ |
ಅರ್ಚಯಾಮಾಸ ರತ್ನೈಶ್ಚ ಸರ್ವಕಾಮೈಶ್ಚ ಪಾರ್ಥಿವಃ ॥14॥

ಧರ್ಮರಾಜನು ಅವರಿಗೆ ಯೋಗ್ಯವಾದ ಆಸನವನ್ನು ನೀಡಿ ವಿಪೂರ್ವಕವಾಗಿ ಸತ್ಕಾರವನ್ನು ಮಾಡಿ ರತ್ನಗಳಿಂದಲೂ ಮತ್ತು ಅವರಿಗೆ ಅಭೀಷ್ಟವಾದ ಎಲ್ಲಾ ವಸ್ತುಗಳಿಂದಲೂ ಅವರನ್ನು ಸಂತೋಷಪಡಿಸಿದನು.

ತುತೋಷ ಚ ಯಥಾವತ್ ಸ ಪೂಜಾಂ ಪ್ರಾಪ್ಯ ಯುಷ್ಠಿರಾತ್|
ಸೋSರ್ಚಿತಃ ಪಾಂಡವೈಃ ಸರ್ವೈರ್ಮಹರ್ಷಿರ್ವೇದಪಾರಗಃ |
ಧರ್ಮಕಾಮಾರ್ಥಸಂಯುಕ್ತಂ ಪಪ್ರಚ್ಛೇದಂ ಯುಷ್ಠಿರಮ್ ॥15॥

ಧರ್ಮರಾಜನಿಂದ ವಿವತ್ತಾಗಿ ಪೂಜೆಯನ್ನು ಸ್ವೀಕರಿಸಿದ ನಾರದರು ಸಂತೋಷಪಟ್ಟರು. ವೇದಪಾರಂಗತರಾದ ಮಹರ್ಷಿಗಳಾದ ನಾರದರು ಎಲ್ಲಾ ಪಾಂಡವರಿಂದಲೂ ಪೂಜಿಸಲ್ಪಟ್ಟು ಅನಂತರ ಯುಷ್ಠಿರನನ್ನು ಕುರಿತು ಧರ್ಮ, ಕಾಮ ಮತ್ತು ಅರ್ಥಗಳಿಂದ ಕೂಡಿದ ಈ ಕುಶಲಪ್ರಶ್ನೆಯನ್ನು ಮಾಡಿದರು.

ಕಚ್ಚಿದರ್ಥಾಶ್ಚ ಕಲ್ಪ್ಯಂತೇ ಮನಶ್ಚ ನ ವಿಹನ್ಯತೇ |
ಸುಖಾನಿ ಚಾನುಭೂಯಂತೇ ಧರ್ಮೇ ಚ ರಮತೇ ಮನಃ ॥16॥

ರಾಜನೇ! ನಿನಗೆ ಅರ್ಥವು ಸಿದ್ದಿಸುತ್ತಿದೆಯಷ್ಟೇ? ಮನಸ್ಸಿಗೆ ಖೇದವಾಗುವುದಿಲ್ಲವಷ್ಟೇ? ಭೋಗಗಳನ್ನು ಅನುಭವಿಸುತ್ತಿರುವೆಯಷ್ಟೇ? ನಿನ್ನ ಮನಸ್ಸು ಧರ್ಮದಲ್ಲೇ ರತವಾಗಿದೆಯಷ್ಟೇ?

ಕಚ್ಚಿದಾಚರಿತಾ ಪೂರ್ವೈರ್ನರದೇವ ಪಿತಾಮಹೈಃ |
ವರ್ತತೇ ವೃತ್ತಿರಕ್ಷೀಣಾ ಧರ್ಮಾರ್ಥಸಹಿತಾ ನೃಷು ॥19॥

ನರದೇವನೇ! ನಿನ್ನ ಪಿತಾಮಹರು ಆಚರಿಸಿದಂತಹ ಧರ್ಮಾರ್ಥ ಪೋಷಕವಾದಂತಹ ಪರಿಪೂರ್ಣವಾದ ನಡೆವಳಿಕೆಯನ್ನೇ ಪ್ರಜೆಗಳ

ವಿಷಯದಲ್ಲಿ ನೀನು ಆಚರಿಸುತ್ತಿರುವೆಯಷ್ಟೇ?
ಕಚ್ಚಿದರ್ಥೇನ ವಾ ಧರ್ಮಂ ಧರ್ಮೇಣಾರ್ಥಮಥಾಪಿ ವಾ |
ಉಭೌ ವಾ ಪ್ರೀತಿಸಾರೇಣ ನ ಕಾಮೇನ ವಿಬಾಧಸೇ ॥20॥
ಧರ್ಮದಿಂದ ಅರ್ಥವನ್ನಾಗಲೀ ಅಥವಾ ಅರ್ಥದಿಂದ ಧರ್ಮವನ್ನಾಗಲೀ ಅಥವಾ ಅತಿಯಾದ ಸ್ನೇಹಪರವಶನಾಗಿ ಆ ಸ್ನೇಹದಿಂದ ಉಂಟಾದ ಕಾಮದಿಂದ ಧರ್ಮ ಮತ್ತು ಅರ್ಥ ಎರಡನ್ನೂ ನೀನು ಬಾಸುತ್ತಿಲ್ಲವಷ್ಟೇ? ವನಿತಾದಿ ವಿಷಯಾಸಕ್ತನಾಗಿ ಧರ್ಮಾರ್ಥಗಳನ್ನು ಬಿಟ್ಟಿಲ್ಲವಷ್ಟೇ!
ಕಚ್ಚಿದರ್ಥಂ ಚ ಕಾಮಂ ಚ ಧರ್ಮಂ ಚ ಜಯತಾಂ ವರ |
ವಿಭಜ್ಯ ಕಾಲೇ ಕಾಲಜ್ಞಃ ಸದಾ ವರದ ಸೇವಸೇ ॥21॥
ವರದನಾದ ಮತ್ತು ಜಯಶೀಲನಾದ ರಾಜನೇ! ನೀನು ಸಮಯಪ್ರಜ್ಞೆ ಉಳ್ಳವನಾಗಿ ಸಮಯವನ್ನು ವಿಭಾಗಿಸಿ ಯೋಗ್ಯವಾದ ಸಮಯದಲ್ಲಿ ಧರ್ಮವನ್ನು ಮತ್ತು ಯೋಗ್ಯವಾದ ಸಮಯದಲ್ಲಿ ಕಾಮವನ್ನು ಯಾವಾಗಲೂ ಸೇವಿಸುತ್ತಿರುವೆಯಷ್ಟೇ?
ಕಚ್ಚಿದ್ ರಾಜಗುಣೈಃ ಷಡ್ಭಿಃ ಸಪ್ತೋಪಾಯಾಂಸ್ತಥೈವ ಚ |
ಬಲಾಬಲಂ ಚ ಸಮ್ಯಕ್ ಚ ಕಾರ್ಯಂ ದಶ ನಿಷೇವಸೇ ॥22॥
ನೀನು ರಾಜನ ಆರು ಗುಣಗಳಿಂದಲೂ ಸಪ್ತ ಉಪಾಯಗಳಿಂದಲೂ ಯುಕ್ತನಾದವನಾಗಿ ನಿನ್ನ ಮತ್ತು ಶತ್ರುಗಳ ಬಲಾಬಲಗಳನ್ನು ಚೆನ್ನಾಗಿ ವಿಮರ್ಶೆಮಾಡಿ, ಮಾಡಬೇಕಾದ ಹತ್ತು ವಿಧವಾದ ಕಾರ್ಯಗಳನ್ನು ಮಾಡುತ್ತಿರುವೆಯಷ್ಟೇ?
ಸಂ, ವಿಗ್ರಹ, ಯಾನ, ಆಸನ, ದ್ವಯೀಭಾವ, ಆಶ್ರಯ, ಇವು ಆರು ರಾಜನಿಗೆ ತಿಳಿದಿರಬೇಕಾದ ಗುಣಗಳು. ಸಾಮ, ದಾನ, ಭೇದ, ದಂಡ, ಪ್ರಭಾವ, ಉತ್ಸಾಹ, ಮಂತ್ರ, ಈ ಏಳು ಉಪಾಯಗಳು.
ಕಚ್ಚಿದಾತ್ಮಾನಮನ್ವೀಕ್ಷ್ಯ ಪರಾಂಶ್ಚ ಜಯತಾಂ ವರ |
ತಥಾ ಸಂಧಾಯ ಕರ್ಮಾಣಿ ಭಾರತಃ ಕಿಂ ನು ವರ್ತಸೇ ॥23॥
ಜಯಶೀಲನಾದ ರಾಜನೇ! ಭರತವಂಶದಲ್ಲಿ ಜನಿಸಿದ ನೀನು ನಿನ್ನ ಬಲವನ್ನು ಮತ್ತು ಶತ್ರುಗಳ ಬಲವನ್ನು ಚೆನ್ನಾಗಿ ವಿಮರ್ಶೆಮಾಡಿ ಸಂಧಾನ ಮಾಡಿಕೊಳ್ಳಬೇಕಾದ ಪ್ರಸಂಗಗಳಲ್ಲಿ ಅದಕ್ಕೆ ಅನುಗುಣವಾದ ಕಾರ್ಯಗಳನ್ನು ಮಾಡುತ್ತಿರುವೆಯಷ್ಟೇ?
ಕಚ್ಚಿತ್ ಪ್ರಕೃತಯಃ ಷಟ್ ತೇ ಹ್ಯಲುಪ್ತಾ ಭರತರ್ಷಭ |
ಆಪ್ತಾಶ್ಚೈವಾವ್ಯವಸಿನಃ ಸ್ವನುರಕ್ತಾಶ್ಚ ಸರ್ವಶಃ ॥24॥
ಭರತರ್ಷಭನೇ! ಆರು ವಿಧವಾದ ನಿನ್ನ ಪ್ರಜೆಗಳು ಸಮೃದ್ಧಿಯಿಂದ ಕೂಡಿರುವರಷ್ಟೇ? ನಿನಗೆ ಆಪ್ತರೆನಿಸಿಕೊಂಮಂತ್ರಿ ಮೊದಲಾದ ವರು ನಿನಗೆ ವಿರುದ್ಧವಾದ ಅಭಿಪ್ರಾಯವನ್ನು ಹೊಂದದೆ ಯಾವಾಗಲೂ ನಿನ್ನಲ್ಲೇ ಅನುರಕ್ತರಾಗಿರುವಷ್ಟೇ?
ಕಚ್ಚಿನ್ನ ತರ್ಕೈರತ್ಯೂಹೈರ್ಯೇ ಚಾಪ್ಯಪರಿಶಂಕಿತಾಃ |
ತ್ವಯಾ ವಾ ತವ ಚಾಮಾತ್ಯೈರ್ಭಿದ್ಯತೇ ತವ ಮಂತ್ರಿತಮ್ ॥25॥
ವಾದಕ್ಕೆ ಪ್ರತಿವಾದವನ್ನು ಮಾಡುವ, ಶತ್ರುಪಕ್ಷದವರೆಂಬ ಸೂಚನೆಯನ್ನು ಕೊಡದಿರುವ, ನಿನ್ನ ದೂತರು ನಿನ್ನ ಅಥವಾ ನಿನ್ನ ಮಂತ್ರಿಗಳ ಮಂತ್ರಾಲೋಚನೆಯನ್ನು ಭೇದಿಸುತ್ತಿಲ್ಲವಷ್ಟೇ?
ಮಿತ್ರೋದಾಸೀನಶತ್ರೂಣಾಂ ಕಚ್ಚಿದ್ ವೇತ್ಸಿ ಚಿಕೀರ್ಷಿತಮ್ |
ಕಚ್ಚಿತ್ ಸಂಂ ಯಥಾನ್ಯಾಯಂ ವಿಗ್ರಹಂ ಚೋಪಸೇವಸೇ ॥26॥
ನಿನ್ನ ಮಿತ್ರರು ಶತ್ರುಗಳು ಮತ್ತು ನಿನ್ನಲ್ಲಿ ಉದಾಸೀನರಾದವರು ಯಾವ ಕಾರ್ಯವನ್ನು ಮಾಡುವ ಅಭಿಪ್ರಾಯವನ್ನು ಹೊಂದಿದ್ದಾರೆಂದು ತಿಳಿದಿರುವೆಯಷ್ಟೇ? ಸಂಯ ಕಾಲ ಯಾವುದು, ಹೋರಾಟದ ಕಾಲ ಯಾವುದು ಎಂದು, ತಿಳಿದು ನೀನು ಅದನ್ನು ಅನುಸರಿಸುತ್ತಿರುವೆಯಷ್ಟೇ?
ಉದಾಸೀನೇಷು ವೃತ್ತಿಶ್ಚ ಮಧ್ಯಮೇಷೂಪಪದ್ಯತೇ |
ಕಚ್ಚಿದಾತ್ಮಸಮಾ ಬುದ್ಧ್ಯಾ ಶುಚಯೋ ವಿಗತಕ್ಲಮಾಃ ॥27॥
ಕುಲೀನಾಶ್ಚಾನುರಕ್ತಾಶ್ಚ ತ್ರಯಸ್ತೇ ವೀರ ಮಂತ್ರಿಣಃ ॥28॥
ನಿನ್ನಲ್ಲಿ ಉದಾಸೀನರಾದವರ ವಿಷಯದಲ್ಲಿಯೂ ಹಾಗೂ ನಿನ್ನಲ್ಲಿ ಮತ್ತು ನಿನ್ನ ಶತ್ರುಗಳಲ್ಲಿ ಇಬ್ಬರಲ್ಲಿಯೂ ತಟಸ್ಥರಾಗಿರುವವರ ವಿಷಯದಲ್ಲಿಯೂ ಸರಿಯಾಗಿ ನಡೆದುಕೊಳ್ಳುತಿದ್ದಿಯಷ್ಟೇ? ವೀರನೇ! ಬುದ್ಧಿಯಲ್ಲಿ ನಿನಗೆ ಸಮಾನರಾದಂತಹ ಶುದ್ಧರಾದ ಆಲಸ್ಯವನ್ನು ಹೊಂದದಿರುವ ಉನ್ನತಕುಲದಲ್ಲಿ ಪ್ರಸೂತರಾದ ನಿನ್ನಲ್ಲಿ ಅನುರಕ್ತರಾದ ಮೂರುಜನ ಮಂತ್ರಿಗಳನ್ನು ಹೊಂದಿರುವೆಯಷ್ಟೇ?
ಕಚ್ಚಿನ್ಮಂತ್ರಯಸೇ ನೈಕಃ ಕಚ್ಚಿನ್ನ ಬಹುಭಿಃ ಸಹ |
ಕಚ್ಚಿತ್ ತೇ ಮಂತ್ರಿತೋ ಮಂತ್ರೋ ನ ರಾಷ್ಟ್ರಂ ಪರಿಧಾವತಿ ॥29॥
ನೀನು ಮಂತ್ರಾಲೋಚನೆಯನ್ನು ಮಾಡುವಾಗ ಒಬ್ಬನೇ ಕುಳಿತುಮಾಡುವುದಿಲ್ಲವಷ್ಟೇ? ಅಥವಾ ಬಹಳಜನ ಪರಿಚಿತರ ಮತ್ತು ಅಪರಿಚಿತರ ಗುಂಪಿನಲ್ಲಿ ಕುಳಿತು ಮಾಡುವುದಿಲ್ಲವಷ್ಟೇ? ನಿನ್ನ ಮಂತ್ರಾಲೋಚನೆಯು ರಹಸ್ಯವಾಗಿ ಉಳಿಯದೆ ರಾಷ್ಟ್ರದಲ್ಲೆಲ್ಲಾ ಸಂಚಾರ ಮಾಡುವುದಿಲ್ಲವಷ್ಟೇ?
ಮಂತ್ರೋ ವಿಜಯಮೂಲಂ ಹಿ ರಾಜ್ಞಾಂ ಭವತಿ ಭಾರತ |
ಸುಸಂವೃತೋ ಮಂತ್ರಧರೈರಮಾತ್ಯೈಃ ಶಾಸ್ತ್ರಕೋವಿದೈಃ ॥30॥
ಭಾರತನೇ! ರಾಜರ ಮಂತ್ರಾಲೋಚನೆಯು ಶಾಸ್ತ್ರಕೋವಿದರಾದ ಮಂತ್ರಾಲೋಚನೆಯಲ್ಲಿ ಭಾಗವಹಿಸಿದ ಮಂತ್ರಿಗಳಿಂದ ರಹಸ್ಯವಾಗಿ ರಕ್ಷಿಸಲ್ಪಟ್ಟರೆ ಮಾತ್ರ ಆದು ವಿಜಯಕ್ಕೆ ಕಾರಣವಾಗುತ್ತದೆ.
ಕಚ್ಚಿನ್ನಿದ್ರಾವಶಂ ನೈಷಿ ಕಚ್ಚಿತ್ ಕಾಲೇ ವಿಬುದ್ಧ್ಯಸೇ |

ಕಚ್ಚಿಚ್ಚಾಪರರಾತ್ರೇಷು ಚಿಂತಯಸ್ಯರ್ಥಮರ್ಥವಿತ್ ॥31॥
ರಾಜನೇ! ನೀನು ಬಹಳ ನಿದ್ರಾವಶನಾಗಿರುವುದಿಲ್ಲವಷ್ಟೇ? ಸರಿಯಾದ ಕಾಲದಲ್ಲಿ ಏಳುವಿಯಷ್ಟೇ? ಆರ್ಥಜ್ಞನಾದ ನೀನು ಬೆಳಗಿನ ಜಾವದಲ್ಲಿ ಎದ್ದು ಅರ್ಥಗಳ ಚಿಂತನೆಯನ್ನು ಮಾಡುವಿಯಷ್ಟೇ?
ಕಚ್ಚಿದರ್ಥಾನ್ ವಿನಿಶ್ಚಿತ್ಯ ಲಘೂಪಾಯಾನ್ ಮಹೋದಯಾನ್ |
ಕ್ಷಿಪ್ರಮಾರಭಸೇ ಕರ್ತುಂ ನ ದೀರ್ಘಯಸಿ ತಾದೃಶಾನ್ ॥32॥
ಸುಲಭೋಪಾಯ ಸಾಧ್ಯವಾದ ಮತ್ತು ಮಹಾಫಲವನ್ನು ಕೊಡುವ ಅರ್ಥಗಳನ್ನು ನಿಶ್ಚಯಿಸಿ ಶೀಘ್ರವಾಗಿ ಅವುಗಳನ್ನು ಪ್ರಾರಂಭಿಸುತ್ತಿಯಷ್ಟೇ? ಅಂತಹ ಕಾರ್ಯಗಳಲ್ಲಿ ವಿಳಂಬಮಾಡುವುದಿಲ್ಲವಷ್ಟೇ?
ಕಚ್ಚಿನ್ನ ಸರ್ವೇ ಕರ್ಮಾಂತಾಃ ಪ್ರತ್ಯಕ್ಷಾಸ್ತೇ ನರರ್ಷಭ |
ಪರೋಕ್ಷಂ ವಾ ಮಹಾರಾಜ ಮಧ್ಯಂ ಹ್ಯತ್ರ ಪ್ರಶಸ್ಯತೇ ॥33॥
ನರರ್ಷಭನೇ! ನಿನ್ನ ಎಲ್ಲಾ ಸೇವಕರು ನಿನ್ನ ಎದುರಿನಲ್ಲೇ ಕೆಲಸಮಾಡುತ್ತಾರೆಯೇ? ಅಥವಾ ಎಲ್ಲರೂ ನಿನಗೆ ಪರೋಕ್ಷವಾಗಿಯೇ ಮಾಡುತ್ತಾರೆಯೇ? ಮಹಾರಾಜನೇ! ಕೆಲವು ಸೇವಕರನ್ನು ಪ್ರತ್ಯಕ್ಷದಲ್ಲಿ ಕೆಲಸಮಾಡುವಂತೆ ಇನ್ನು ಕೆಲವು ಸೇವಕರನ್ನು ಪರೋಕ್ಷದಲ್ಲಿ ಕೆಲಸಮಾಡುವಂತೆ ಇಟ್ಟು ಕೊಳ್ಳುವುದು ಪ್ರಶಸ್ತವಾದುದು.
ದಾನಸತ್ಕಾರಾದಿ ಕರ್ಮಗಳನ್ನು ಎದುರು ಇರುವ ಸೇವಕರ ಸಹಾಯದಿಂದ ತಾನೇ ಸ್ವತಃ ಮಾಡಬೇಕು. ಬಂಧನ, ಶಿಕ್ಷೆ ಮೊದಲಾದವುಗಳನ್ನು ಪರೋಕ್ಷವಾದ ಸೇವಕರಿಂದ ಮಾಡಿಸಬೇಕು.
ಕಚ್ಚಿದ್ ರಾಜನ್ ಕೃತಾನ್ಯೇವ ಕೃತಪ್ರಾಯಾಣಿ ವಾ ಪುನಃ |
ವಿದುಸ್ತೇ ವೀರ ಕರ್ಮಾಣಿ ನಾನವಾಪ್ತಾನಿ ಕರ್ಹಿಚಿತ್ ॥34॥
ರಾಜನೇ! ವೀರರಾದ ನಿನ್ನ ಪ್ರಜೆಗಳು ನೀನು ಆರಂಭಿಸಿ ಪೂರ್ಣಗೋಳಿಸಿದ ಅಥವಾ ಪೂರ್ಣಗೊಳ್ಳುವಂತಹ ಹಂತದಲ್ಲಿರುವ ಕಾರ್ಯಗಳನ್ನಷ್ಟೇ ತಿಳಿಯುತ್ತಾರಷ್ಟೇ? ನೀನು ಸಂಕಲ್ಪಿಸಿ ಪ್ರಾರಂಭಮಾಡದಿದ್ದ ಕಾರ್ಯಗಳನ್ನು ಎಂದೂ ತಿಳಿಯುವುದಿಲ್ಲವಷ್ಟೇ.
ಕಚ್ಚಿತ್ ಕಾರಣಿಕಾಃ ಸರ್ವೇ ಸರ್ವಶಾಸ್ತ್ರೇಷು ಕೋವಿದಾಃ |
ಕಾರಯಂತಿ ಕುಮಾರಾಂಶ್ಚ ಯೋಧಮುಖ್ಯಾಂಶ್ಚ ಸರ್ವಶಃ ॥35॥
ಯುದ್ಧಕೌಶಲವನ್ನು ಕಲಿಸುವ ಆಚಾರ್ಯರೆಲ್ಲರೂ ಎಲ್ಲ ಶಾಸ್ತ್ರಗಳಲ್ಲಿಯೂ ನಿಪುಣರಾಗಿದ್ದಾರಷ್ಟೇ? ಕುಮಾರರಿಗೆ ಒಳ್ಳೆಯ ಶಿಕ್ಷಣವನ್ನು ಕೊಟ್ಟು ಎಲ್ಲಾ ರೀತಿಯಿಂದಲೂ ಶ್ರೇಷ್ಠವಾದ ಯೋಧರನ್ನಾಗಿ ಮಾಡುತ್ತಾರಷ್ಟೇ?
ಕಚ್ಚಿತ್ ಸಹಸ್ರೈರ್ಮೂರ್ಖಾಣಾಮೇಕಮಿಚ್ಛಸಿ ಪಂಡಿತಮ್ |
ಪಂಡಿತೋ ಹ್ಯರ್ಥಕೃಚ್ಛ್ರೇಷು ಕುರ್ಯಾನ್ನಿಃಶ್ರೇಯಸಂ ಪರಮ್ ॥36॥
ಏಕೋಽಪ್ಯಮಾತ್ಯೋ ಮೇಧಾವೀ ಶೂರೋ ದಾಂತೋ ವಿಚಕ್ಷಣಃ |
ರಾಜಾನಂ ರಾಜಪುತ್ರಂ ವಾ ಪ್ರಾಪಯೇನ್ಮಹತೀಂ ಶ್ರಿಯಮ್ ॥37॥
ನೀನು ನೂರುಜನ ಮೂರ್ಖರ ಬದಲು ಒಬ್ಬ ಪಂಡಿತನ ಜೊತೆಯಲ್ಲಿ ಇರಲು ಬಯಸುತ್ತಿಯಷ್ಟೇ? ಅರ್ಥಸಂಕಟ ಒದಗಿದಾಗ ಪಂಡಿತನಾದವನು ಶ್ರೇಷ್ಠವಾದ ಶ್ರೇಯಸ್ಸನ್ನು ಉಂಟುಮಾಡಲು ಸಮರ್ಥನಾಗುತ್ತಾನೆ. ಅಮಾತ್ಯನು ಒಬ್ಬನೇ ಆದರೂ ಅವನು ಮೇಧಾವಿಯೂ, ಶೂರನೂ, ಇಂದ್ರಿಯನಿಗ್ರಹವುಳ್ಳವನೂ, ಮತ್ತು ನಿಪುಣನೂ ಆಗಿದ್ದರೆ ರಾಜನಿಗೂ ಮತ್ತು ರಾಜಪುತ್ರನಿಗೂ ಶ್ರೇಷ್ಠವಾದ ಸಂಪತ್ತನ್ನು ಹೊಂದಿಸಿಕೊಡಲು ಸಮರ್ಥನಾಗುತ್ತಾನೆ.
ಕಚ್ಚಿತ್ ಸರ್ವಾಣಿ ದುರ್ಗಾಣಿ ಧನಧಾನ್ಯೋದಕಾಯುಧೈಃ |
ಕಚ್ಚಿತ್ ಸೂತ್ರಾಣಿ ವರ್ಧಂತೇ ಸರ್ವಾಣಿ ಚ ನರರ್ಷಭ ॥38॥
ನರರ್ಷಭನೇ! ನಿನ್ನ ಎಲ್ಲಾ ಕೋಟೆಕೊತ್ತಗಳು ಜಲ, ಧನ, ಧಾನ್ಯ, ಆಯುಧಗಳಿಂದ ಪೂರ್ಣವಾಗಿವೆಯಷ್ಟೇ? ನಿನ್ನ ರಾಜ್ಯದಲ್ಲಿ ಅಶ್ವಶಾಸ್ತ್ರ, ಗಜಶಾಸ್ತ್ರ, ಮೊದಲಾದ ಎಲ್ಲಾ ಶಾಸ್ತ್ರಗಳು ಅಧ್ಯಯನದ ಸಂಪ್ರದಾಯದಲ್ಲಿ ಇವೆಯಷ್ಟೇ?
ಹಸ್ತಿಶಿಕ್ಷಾಶ್ವಸೂತ್ರಂ ಚ ರಥಸೂತ್ರಂ ಚ ವಾ ವಿಭೋ |
ಧನುರ್ವೇದಸ್ಯ ಸೂತ್ರಂ ಚ ಯಂತ್ರಸೂತ್ರಂ ಚ ನಾಗರಮ್ ॥39॥
ವಿಭುವೇ! ಗಜಶಿಕ್ಷಾಸೂತ್ರ, ಅಶ್ವಶಿಕ್ಷಾಶಾಸ್ತ್ರ, ರಥಶಾಸ್ತ್ರ, ಧರ್ನುವೇದಶಾಸ್ತ್ರ, ಯಂತ್ರಶಾಸ್ತ್ರ, ನಗರಶಾಸ್ತ್ರ ಎಲ್ಲಾ ಶಾಸ್ತ್ರಗಳೂ ಪ್ರಚಲಿತವಾಗಿವೆಯಷ್ಟೇ?
ಕಚ್ಚಿತ್ ಸೂತ್ರಾಣಿ ಸರ್ವಾಣಿ ಬ್ರಹ್ಮದಂಡಶ್ಚ ಸರ್ವಶಃ |
ವಿಷಯೋಗಾಶ್ಚ ತೇ ಸರ್ವೇ ವಿದಿತಾಃ ಶತ್ರುನಾಶನಾಃ ॥40॥
ಬ್ರಾಹ್ಮಣರಿಗೆ ಅಪಕಾರಮಾಡಿದಾಗ ವಿಸಬೇಕಾದ ದಂಡಗಳು, ಶತ್ರುಗಳನ್ನು ಸಂಹಾರಮಾಡುವ ಎಲ್ಲಾ ವಿಷಪ್ರಯೋಗಗಳನ್ನು ವಿಸುವ, ಎಲ್ಲಾ ಶಾಸ್ತ್ರಗಳೂ ನಿನಗೆ ತಿಳಿದಿವೆಯಷ್ಟೇ?
ಕಚ್ಚಿತ್ ಕೃತಂ ವಿಜಾನಾಸಿ ಕರ್ತಾರಂ ಚ ಪ್ರಶಂಸಸಿ |
ಸತಾಂ ಮಧ್ಯೇ ಮಹಾರಾಜ ಸತ್ಕೃತ್ಯ ಪ್ರತಿಪೂಜ್ಯ ಚ ॥41॥
ಮಹಾರಾಜನೇ! ಒಳ್ಳೆಯ ಕಾರ್ಯವನ್ನು ಮಾಡಿದವನನ್ನು ಗುರುತಿಸಿ ಅವನನ್ನು ಸಜ್ಜನರ ಮಧ್ಯದಲ್ಲಿ ಸಭೆಯಲ್ಲಿ ಸತ್ಕರಿಸಿ ದಾನಮಾನಾದಿಗಳಿಂದ ಪೂಜಿಸಿ ಪ್ರಶಂಸಿಸುತ್ತೀಯಷ್ಟೇ?
ಕಚ್ಚಿತ್ತೇ ಯಾಸ್ಯತೋ ಯಾತ್ರಾಂ ನಿತ್ಯಂ ಗಚ್ಛಂತ್ಯನುಷ್ಠಿತಾಃ |
ಚಾರಾಃ ಸಾಮ ಚ ದಾನಂ ಚ ತ್ರಯಃ ಪೂರ್ವಂ ಸಮಾ ಗುಣೈಃ ॥42॥
ನೀನು ಯುದ್ಧಕ್ಕೆ ಹೊರಡುವಾಗ ನಿನ್ನನ್ನು ಅನುಸರಿಸಿರುವವರೆಲ್ಲರೂ ಯಾವಾಗಲೂ ನಿನ್ನ ಜೊತೆಯಲ್ಲಿ ಹೊರಡುತ್ತಾರಷ್ಟೇ? ಸಾಮ ಮತ್ತು ದಾನಗಳನ್ನು ತಿಳಿದಿರುವೆಯಾ? ಮೂರುಮೂರು ಜನ ಗುಣವಂತರಾದ ಸಮಚಿತ್ತವುಳ್ಳ ಚಾರರ ಗುಂಪನ್ನು ನೀನು

ಯುದ್ಧಕ್ಕೆ ಹೊರಡುವ ಮುಂಚೆಯೇ ಶತ್ರುರಾಜ್ಯಕ್ಕೆ ಕಳುಹಿಸುತ್ತೀಯಷ್ಟೇ?
ಶತ್ರುಗಳ ರಾಜ್ಯದಲ್ಲಿ ಛದ್ಮವೇಶದಿಂದ ತಿಳಿಸಲು ಒಂದು ಗುಂಪು, ಅವರು ಸಂಗ್ರಹಿಸಿದ ವಾರ್ತೆಯನ್ನು ತಮ್ಮ ರಾಜ್ಯಕ್ಕೆ ತಲುಪಿಸಲು ಇನ್ನೊಂದುಗುಂಪು, ಈ ರಾಜ್ಯದಲ್ಲಿ ಆ ವಾರ್ತೆಯನ್ನು ತನಗೆ ತಿಳಿಸಲು ಇನ್ನೊಂದು ಗುಂಪು ಹೀಗೆ ಮೂರುಗುಂಪುಗಳು ಅಂತಹ ಚಾರರನ್ನು ಪ್ರಿಯವಚನಗಳು ಮತ್ತು ಯೋಗ್ಯವಾದ ದಾನಗಳಿಂದ ಸತ್ಕರಿಸಿ ಕಳುಹಿಸುತ್ತಿರುವೆಯಾ?
ಕಚ್ಚಿನ್ಮೂಲಂ ದೃಢಂ ಕೃತ್ವಾ ಯಾತ್ರಾಂ ಯಾಸ್ಯಸಿ ಭೂಮಿಪ |
ತಚ್ಚ ವಿಕ್ರಮಸೇ ಜೇತುಂ ಲಕ್ಷಂ ಚ ಪರಿರಕ್ಷಸಿ ॥43॥
ರಾಜನೇ! ನಿನ್ನ ಮೂಲಸ್ಥಾನದ ರಕ್ಷಣೆಯನ್ನು ಗಟ್ಟಿಮಾಡಿಕೊಂಡು ಯುದ್ಧಕ್ಕೆ ಹೊರಡುವೆಯಾ? ಶತ್ರುಸೈನ್ಯವನ್ನು ಜಯಿಸಿಲು ವಿಕ್ರಮವನ್ನು ತೋರುವೆಯಾ? ನಿನ್ನ ಲಕ್ಷ್ಯವನ್ನು ಎಂದೂ ಕಳೆದುಕೊಳ್ಳುವುದಿಲ್ಲವಷ್ಟೇ?
ಕಚ್ಚಿದಾತ್ಮಾನಮೇವಾಗ್ರೇ ವಿಜಿತ್ವಾ ವಿಜಿತೇಂದ್ರಿಯಃ |
ಆತ್ಮಾನಮುಪಮಾಂ ಕೃತ್ವಾ ವಿಜಯಾಯ ಪ್ರವರ್ತಸೇ ॥44॥
ಮೊದಲು ನಿನ್ನ ಮನಸ್ಸನ್ನು ಗೆದ್ದು ಜಿತೇಂದ್ರಿಯನಾಗಿ ನಿನ್ನನ್ನೇ ಸೈನ್ಯಕರಿಗೆ ದೃಷ್ಟಾಂತ ಮಾಡಿಕೊಂಡು ಅನಂತರ ಶತ್ರುವಿಜಯಕ್ಕಾಗಿ ಹೊರಡುವೆಯಾ?
ಕಚ್ಚಿದಷ್ಟಾದಶಾನ್ಯೇಷಾಂ ಸ್ವಪಕ್ಷೇ ದಶ ಸಪ್ತ ಚ |
ತ್ರಿಭಿಸ್ತ್ರಿಭಿರವಿಜ್ಞಾತೈರ್ವೇತ್ಸಿ ತೀರ್ಥಾನಿ ಚಾರಕೈಃ ॥45॥
ಅವಿಜ್ಞಾತರಾದ ಮೂರು ಮೂರು ಚಾರರ ಗುಂಪನ್ನು ನೇಮಿಸಿ ನಿನ್ನ ಪಕ್ಷದ ಹದಿನೆಂಟು ಅವಶ್ಯಕವಾಗಿ ತಿಳಿಯಬೇಕಾದ ವಿಷಯಗಳನ್ನೂ ಶತ್ರುಪಕ್ಷದಲ್ಲಿ ಅವಶ್ಯವಾಗಿ ತಿಳಿಯಬೇಕಾದ ಹದಿನೇಳು ಅಂಶಗಳನ್ನೂ ತಿಳಿಯುವುವೆಯಾ?
ತನ್ನ ಪಕ್ಷದಲ್ಲಿ ಸ್ವಾಮಿ, ಆಮಾತ್ಯ, ಜನಪದ, ದುರ್ಗ, ದಂಡ, ಕೋಶ, ಮಿತ್ರ ಎಂಬ ರಾಷ್ಟ್ರಾಲಂಕಾರಭೂಷಿತರಾದ ಏಳು ಪ್ರಕೃತಿಗಳು. ಹಾಗೆ ವಿದ್ವಾಂಸರು, ಕವಿಗಳು, ಸೂತರು, ಗಾಯಕರು. ವಿದೂಷಕರು, ಪುರಾಣ, ಪೌರಾಣಿಕರು, ಧರ್ಮಶಾಸ್ತ್ರನಿರ್ಣಯಕಾರರು ಈ ಏಳು ವರ್ಗದವರು ಸಭಾಲಂಕಾರರು. ಕರ್ಮಕಾರರು, ವೈದ್ಯರು, ಗಣಕರು, ಮತ್ತು ಸೇನೆ, ಇವರು ಎಲ್ಲರಿಗೂ ಉಪಕಾರವನ್ನು ಮಾಡುವ ಪ್ರಕೃತಿಗಳು. ಹೀಗೆ ತನ್ನ ಪಕ್ಷದಲ್ಲಿ ಹದಿನೆಂಟು ಅಂಶಗಳು. ಇಲ್ಲಿ ಸ್ವಾಮಿಯೆಂದರೆ ರಾಜ. ಪರಪಕ್ಷದಲ್ಲಿ ರಾಜನನ್ನು ಬಿಟ್ಟು ಹದಿನೇಳು ಅಂಶಗಳು.ಪವಿತ್ರವಾದ ತೀರ್ಥವನ್ನು ನಿತ್ಯವೂ ಸೇವಿಸುವಂತೆ ಇಷ್ಟು ಅಂಶಗಳನ್ನು ಯಾವಾಗಲೂ ಗಮನದಲ್ಲಿ ಇಟ್ಟುಕೊಂಡಿರಬೇಕು. ಆದ್ದರಿಂದ ಇವುಗಳು ಯಾವಾಗಲೂ ತೀರ್ಥಗಳೆನಿಸಿಕೊಳ್ಳುತ್ತವೆ.
ಕಚ್ಚಿದ್ ದ್ವಿಷಾಮವಿಜ್ಞಾತಃ ಕೃತಯತ್ನಶ್ಚ ಸರ್ವದಾ |
ನಿತ್ಯಯುಕ್ತೋ ರಿಪೂನ್ ಸರ್ವಾನ್ ವೀಕ್ಷಸೇ ರಿಪುಸೂದನ ॥46॥
ಶತ್ರುಸೂದನನೇ! ನೀನು ಶತ್ರುಗಳಿಗೆ ತಿಳಿಯದಂತೆ ಯಾವಾಗಲೂ ಪ್ರಯತ್ನಶೀಲನಾಗಿದ್ದು ನಿತ್ಯದಲ್ಲಿಯೂ ನಿನ್ನ ಆ ಎಲ್ಲ ಶತ್ರುಗಳನ್ನೂ ನೋಡುವುದರಲ್ಲಿ (ಚಾರರ ಮೂಲಕ) ತೊಡಗಿಸಿಕೊಂಡಿರುತ್ತೀಯಷ್ಟೇ?
ಕಚ್ಚಿದ್ ವಿನಯಸಂಪನ್ನಃ ಕುಲಪುತ್ರೋ ಬಹುಶ್ರುತಃ |
ಅನಸೂಯುರನುಪ್ರಷ್ಟಾ ಸತ್ಕೃತಸ್ತೇ ಪುರೋಹಿತಃ ॥47॥
ವಿನಯಸಂಪನ್ನನೂ, ಸತ್ಕುಲಪ್ರಸೂತನೂ, ಅನೇಕ ಶಾಸ್ತ್ರಗಳನ್ನು ಬಲ್ಲವನೂ, ಅಸೂಯಾರಹಿತನೂ, ಹೇಳಿದ ಮಾತನ್ನು ಕೇಳುವವನೂ, ಆದ ನಿನ್ನ ಪುರೋಹಿತನನ್ನು ನೀನು ಸತ್ಕರಿಸುತ್ತೀಯಷ್ಟೇ?
ಕಚ್ಚಿದಗ್ನಿಷು ತೇ ಯುಕ್ತೋ ವಿಧಿಜ್ಞೋ ಮತಿಮಾನೃಜುಃ |
ಹುತಂ ಚ ಹೋಷ್ಯಮಾಣಂ ಚ ಕಾಲೇ ವೇದಯತೇ ಸದಾ ॥48॥
ನಿನ್ನ ಪುರೋಹಿತನು ಬುದ್ಧಿವಂತನಾಗಿದ್ದು ಆರ್ಜವವನ್ನು ಹೊಂದಿದವನಾಗಿ ಅಗ್ನಿಹೋತ್ರದ ವಿಧಾನವನ್ನು ತಿಳಿದವನಾಗಿ ಆ ಕಾಲದಲ್ಲಿ ಮಾಡಬೇಕಾದ ಹೋಮವನ್ನೂ ಅನಂತರ ಕಾಲದಲ್ಲಿ ಮಾಡಬೇಕಾದ ಹೋಮವನ್ನೂ ತಿಳಿದು ನಿನಗೆ ತಿಳಿಸುತ್ತಿರುತ್ತಾನಷ್ಟೇ?
ಕಚ್ಚಿತ್ ಷಡಂಗನಿಷ್ಣಾತೋ ಜ್ಯೋತಿಷಾಂ ಪ್ರತಿಪಾದಕಃ |
ಉತ್ಪಾತೇಷು ಚ ಸರ್ವೇಷು ದೈವಜ್ಞಃ ಕುಶಲಃ ಸದಾ ॥49॥
ರಾಜನೇ! ನಿನ್ನ ಪುರೋಹಿತನು ಷಡಂಗಗಳಲ್ಲಿ ಪ್ರವೀಣನಾಗಿ ಜ್ಯೋತಿಶ್ಶಾಸ್ತ್ರದಲ್ಲಿ ಕುಶಲನಾಗಿ ಎಲ್ಲಾ ಅಪಶಕುನಗಳು ಉಂಟಾದಾಗ ಯಾವಾಗಲೂ ಅವುಗಳ ಫಲಗಳನ್ನು ತಿಳಿಯುದರಲ್ಲಿ ಕುಶಲನಾಗಿ ಇರುತ್ತಾನಷ್ಟೇ?
ಕಚ್ಚಿನ್ಮುಖ್ಯಾ ಮಹತ್ಸ್ವೇವ ಮಧ್ಯಮೇಷು ಚ ಮಧ್ಯಮಾಃ |
ಜಘನ್ಯಾಶ್ಚ ಜಘನ್ಯೇಷು ಭೃತ್ಯಾಃ ಕರ್ಮಸು ಯೋಜಿತಾಃ ॥50॥
ನಿನ್ನ ಭೃತ್ಯರಲ್ಲಿ ಉತ್ತಮರಾದವರನ್ನು ಉತ್ತಮರ ಸೇವೆಗೂ, ಮಧ್ಯಮರಾದವರನ್ನು ಮಧ್ಯಮರಸೇವೆಗೂ, ಅಧಮರಾದವರನ್ನು ಅಧಮರ ಸೇವೆಗೆ ನಿಯೋಜಿಸಿರುವೆಯಾ?
ಅಮಾತ್ಯಾನುಪಧಾತೀತಾನ್ ಪಿತೃಪೈತಾಮಹಾನ್ ಶುಚೀನ್ |
ಶ್ರೇಷ್ಠಾನ್ ಶ್ರೇಷ್ಠೇಷು ಕಚ್ಚಿತ್ ತ್ವಂ ನಿಯೋಜಯಸಿ ಕರ್ಮಸು ॥51॥
ನಿರ್ವ್ಯಾಜವಾಗಿ ನಿನ್ನಲ್ಲಿ ಅನುರಕ್ತನಾದ ಪಿತೃಪಿತಾಮಹರಕಾಲದಿಂದ ಅಮಾತ್ಯವೃತ್ತಿಯನ್ನು ಮಾಡಿರುವ ಶುದ್ಧರಾದ ಗುಣಸಂಪನ್ನರಾದ ಅಮಾತ್ಯರನ್ನು ಶ್ರೇಷ್ಠವಾದ ಕಾರ್ಯಗಳಲ್ಲಿ ನಿಯಮಿಸುತ್ತೀಯಷ್ಟೇ?
ಕಚ್ಚಿನ್ನೋಗ್ರೇಣ ದಂಡೇನ ಭೃಶಮುದ್ವೇಜಿತಪ್ರಜಮ್ |
ರಾಷ್ಟ್ರಂ ತವಾನುಶಾಸಂತಿ ಮಂತ್ರಿಣೋ ಭರತರ್ಷಭ ॥52॥
ಭರತರ್ಷಭನೇ! ಅಪರಾಧ ಮಾಡಿದವರಿಗೆ ಉಗ್ರವಾದ ದಂಡವನ್ನು ಕೊಟ್ಟು ಅದನ್ನು ನೋಡಿ ನಡುಗುತ್ತಿರುವ ಪ್ರಜೆಗಳನ್ನು ಮತ್ತು

ನಿನ್ನ ರಾಷ್ಟ್ರವನ್ನು ನಿನ್ನ ಮಂತ್ರಿಗಳೇ ಆಳುವುದಿಲ್ಲವಷ್ಟೇ?
ಕಚ್ಚಿತ್ ತ್ವಾಂ ನಾವಜಾನಂತಿ ಯಾಜಕಾಃ ಪತಿತಂ ಯಥಾ |
ಉಗ್ರಪ್ರತಿಗ್ರಹೀತಾರಂ ಕಾಮಯಾನಮಿವ ಸ್ತ್ರಿಯಃ ॥53॥
ಅತಿಕಾಮುಕನಾದ ಪುರುಷನನ್ನು ವನಿತೆಯರು ಅಪಮಾನಗೊಳಿಸಿದಂತೆ ಪ್ರಜೆಗಳಿಂದ ಅತಿಯಾದ ಕರವನ್ನು ಸ್ವೀಕರಿಸುವ ನಿನ್ನನ್ನು ಯಾಜಕರು ಪತಿತನಂತೆ ನೋಡಿ ಅವಮಾನ ಮಾಡುವುದಿಲ್ಲವಷ್ಟೇ?
ಕಚ್ಚಿದ್ ಧೃಷ್ಟಶ್ಚ ಶೂರಶ್ಚ ಮತಿಮಾನ್ ಧೃತಿಮಾನ್ ಶುಚಿಃ |
ಕುಲೀನಶ್ಚಾನುರಕ್ತಶ್ಚ ದಕ್ಷಃ ಸೇನಾಪತಿಸ್ತವ ॥54॥
ಧೈರ್ಯಶಾಲಿಯೂ, ಶೂರನೂ, ಮೇಧಾವಿಯೂ, ಸ್ಥೈರ್ಯವುಳ್ಳವನೂ, ಶುಚಿಯೂ, ಕುಲೀನನೂ, ನಿನ್ನಲ್ಲೇ ಅನುರಕ್ತನೂ, ಮತ್ತು ಸಮರ್ಥನೂ ಆದ ಪುರುಷನು ನಿನ್ನ ಸೇನಾಪತಿಯಾಗಿದ್ದಾನಷ್ಟೇ?
ಕಚ್ಚಿದ್ ಬಲಸ್ಯ ತೇ ಮುಖ್ಯಾಃ ಸರ್ವಯುದ್ಧವಿಶಾರದಾಃ |
ದೃಷ್ಟಾಪಃ ಪ್ರದಾನಾಃ ವಿಕ್ರಾಂತಾಃ ತ್ವಯಾ ಸತ್ಕೃತ್ಯ ಮಾನಿತಾಃ ॥55॥
ನಿನ್ನ ಸೈನ್ಯದಲ್ಲಿ ಮುಖ್ಯಸ್ಥಾನದಲ್ಲಿರುವವರೆಲ್ಲರೂ ಎಲ್ಲಾ ವಿಧವಾದ ಯುದ್ಧಗಳಲ್ಲಿಯೂ ನಿಪುಣರಾಗಿದ್ದಾರಷ್ಟೆ? ಯುದ್ಧದಲ್ಲಿ ಶತ್ರುಗಳ ಸಂಹಾರವನ್ನು ಮಾಡಿ ವಿಕ್ರಮವನ್ನು ತೋರಿಸಿದ ನಿನ್ನ ಸೈನಿಕರನ್ನು ನೀನು ಸತ್ಕರಿಸಿ ಸನ್ಮಾನಿಸುವಿಯಷ್ಟೇ?
ಕಚ್ಚಿದ್ ಬಲಸ್ಯ ಭಕ್ತಂ ಚ ವೇತನಂ ಚ ಯಥೋಚಿತಮ್ |
ಸಂಪ್ರಾಪ್ತಕಾಲೇ ದಾತವ್ಯಂ ದದಾಸಿ ನ ವಿಕರ್ಷಸಿ ॥56॥
ನಿನ್ನ ಸೈನ್ಯಕ್ಕೆ ಯೋಗ್ಯವಾದ ಕಾಲದಲ್ಲಿ ಕೊಡಬೇಕಾದ ಸಂಬಳವನ್ನು ಮತ್ತು ಭತ್ಯವನ್ನು ಸರಿಯಾದ ಸಮಯದಲ್ಲಿ ಕೊಡುತ್ತಿದ್ದೀಯಷ್ಟೇ? ನಿಷ್ಕಾರಣವಾಗಿ ಆ ಸಂಬಳ ಮತ್ತು ಭತ್ಯಗಳಲ್ಲಿ ಕಡಿತವನ್ನು ಮಾಡುವುದಿಲ್ಲವಷ್ಟೇ?
ಕಾಲಾತಿಕ್ರಮಣಾದೇತೇ ಭಕ್ತವೇತನಯೋರ್ಭೃತಾಃ |
ಭರ್ತುಃ ಕುಪ್ಯಂತಿ ದೂಷ್ಯಂತಿ ಸೋಽನರ್ಥಃ ಸುಮಹಾನ್ ಸ್ಮೃತಃ ॥
ಭಟರು ತಮಗೆ ಬರಬೇಕಾದ ಭತ್ಯ ಮತ್ತು ವೇತನಗಳು ಕಾಲಕ್ಕೆ ಸರಿಯಾಗಿ ಬರದಿದ್ದರೆ ಸ್ವಾಮಿಯ ಮೇಲೆ ಕೋಪಗೊಂಡು ಅವನನ್ನು ದೂಷಿಸುತ್ತಾರೆ. ಅದು ಮಹಾ ಅನರ್ಥಕ್ಕೆ ಕಾರಣವಾಗುತ್ತದೆ.
ಕಚ್ಚಿತ್ ಸರ್ವೇಽನುರಕ್ತಾಸ್ತ್ವಂ ಕುಲಪುತ್ರಾಃ ಪ್ರಧಾವತಃ |
ಕಚ್ಚಿತ್ ಪ್ರಾಣಾಂಸ್ತವಾರ್ಥೇಷು ಸಂತ್ಯಜಂತಿ ಸದಾ ಯು ॥58॥
ನೀನು ಯುದ್ಧಕ್ಕೆ ಹೋಗುವಾಗ ನಿನ್ನಲ್ಲಿ ಅನುರಕ್ತರಾದ ಕುಲಪುತ್ರರೆಲ್ಲರೂ ನಿನ್ನನ್ನು ಹಿಂಬಾಲಿಸುತ್ತಾರಷ್ಟೇ? ನಿನ್ನ ಸಲುವಾಗಿ ಯುದ್ಧದಲ್ಲಿ ಅವರು ಪ್ರಾಣತ್ಯಾಗವನ್ನು ಮಾಡಲೂ ಸಿದ್ಧರಾಗಿರುತ್ತಾರಷ್ಟೇ?
ಕಚ್ಚಿನ್ನೈಕೋ ಬಹೂನರ್ಥಾನ್ ಸರ್ವಶಃ ಸಾಂಪರಾಯಿಕಾನ್ |
ಅನುಶಾ ಯಥಾಕಾಮಂ ಕಾಮಾತ್ಮಾ ಶಾಸನಾನಿ ಚ ॥59॥
ನೀನು ಏಕಾಂಗಿಯಾಗಿ ಮೋಕ್ಷೋಪಯೋಗಿಯಾದ ಶ್ರವಣ ಮನನ ಮೊದಲಾದ ಅರ್ಥಗಳನ್ನು ಅಥವಾ ಪುರಾಣಗಳ ವಿಶಾಸನಗಳನ್ನು ನಿನ್ನ ಮನಸ್ಸಿಗೆ ಬಂದಂತೆ ಕಾಮಕ್ಕೆ ಒಳಗಾದವನಾಗಿ ಇವುಗಳಿಂದ ಏನು ಪ್ರಯೋಜನ ಎಂದು ತಿರಸ್ಕರಿಸುವುದಿಲ್ಲವಷ್ಟೆ?
ಕಚ್ಚಿತ್ ಪುರುಷಕಾರೇಣ ಪುರುಷಃ ಕರ್ಮ ಶೋಭಯನ್ |
ಲಭತೇ ಮಾನಮತ್ಯಂತಂ ಭೃತೋ ವಾ ವೇತನಂ ತ್ವಯಿ ॥60॥
ಮಹಾಪ್ರಯತ್ನದಿಂದ ಶ್ರೇಷ್ಠವಾದ ಕರ್ಮವನ್ನು ಮಾಡಿದ ನಿನ್ನ ಭಟನು ನಿನ್ನಿಂದ ಬಹಳವಾದ ಸನ್ಮಾನವನ್ನು ಮತ್ತು ವೇತನವೃದ್ಧಿಯನ್ನು ಪಡೆಯುತ್ತಾನಷ್ಟೇ?
ಕಚ್ಚಿದ್ ವಿದ್ಯಾವಿನೀತಾಂಶ್ಚ ನರಾನ್ ಜ್ಞಾನವಿಶಾರದಾನ್ |
ಯಥಾರ್ಹಂ ಗುಣತಶ್ಚೈವ ದಾನೇನಾಭ್ಯವಪದ್ಯಸೇ ॥61॥
ವಿದ್ಯಾಸಂಪನ್ನರಾದಂತಹ ಜ್ಞಾನಪಾರಂಗತರಾದಂತಹ ಮನುಷ್ಯರನ್ನು ಅವರವರ ಗುಣಕ್ಕೆ ಅನುಗುಣವಾದ ರೀತಿಯಲ್ಲಿ ದಾನದಿಂದ ಪೂಜಿಸುತ್ತಿರುವಿಯಷ್ಟೇ?
ಕಚ್ಚಿದ್ ದಾರಾರ್ಭಕಾಣಾಂ ತ್ವಂ ತವಾರ್ಥೇ ಮೃತ್ಯುಮೀಯುಷಾಮ್ |
ವ್ಯಸನೇ ಚಾಭ್ಯುಪೇತಾನಾಂ ಬಿಭರ್ಷಿ ಭರತರ್ಷಭ ॥62॥
ಭರತರ್ಷಭನೇ! ಯುದ್ಧದಲ್ಲಿ ನಿನ್ನಸಲುವಾಗಿ ಹತರಾದ ಸೈನಿಕರ ಹೆಂಡತಿ ಮಕ್ಕಳು ಕಷ್ಟಕ್ಕೆ ಸಿಲುಕಿ ನಿನಗೆ ಶರಣಾಗತರಾದಾಗ ಅವರನ್ನು ಪೋಷಿಸುತ್ತಿರುವಿಯಷ್ಟೇ?
ಕಚ್ಚಿದ್ ಭಯಾದುಪಗತಂ ರಿಪುಂ ವಾ ಗೃಹಮಾಗತಮ್ |
ಯು ವಾ ವಿಜಿತಂ ಪಾರ್ಥ ಪುತ್ರವತ್ ಪರಿರಕ್ಷಸಿ ॥63॥
ಕುಂತಿಪುತ್ರನೇ! ಯುದ್ಧದಲ್ಲಿ ಸೆರೆ ಸಿಕ್ಕಿದ ಅಥವಾ ಭಯದಿಂದ ನಿನ್ನ ಮನೆಗೆ ಬಂದು ಶರಣಾಗತನಾದ ಶತ್ರುವನ್ನು ನಿನ್ನ ಮಗನಂತೆ ರಕ್ಷಿಸುತ್ತಿರುವಿಯಷ್ಟೇ?
ಕಚ್ಚಿತ್ ತ್ವಮೇವ ಸರ್ವಸ್ಯಾಃ ಪೃಥಿವ್ಯಾಃ ಪೃಥಿವೀಪತೇ |
ಸಮಶ್ಚ ನಾತಿಶಂಕ್ಯಶ್ಚ ಯಥಾ ಪುತ್ರೋ ಯಥಾ ಪಿತಾ ॥64॥
ಭೂಮಿಪಾಲನೇ! ನೀನೇ ಎಲ್ಲಾ ಭೂಮಿಗೂ ಒಡೆಯನಾಗಿ ಎಲ್ಲರಿಗೂ ಸಮನಾಗಿ ಯಾರಿಂದಲೂ ಶಂಕಿಸಲ್ಪಡದೆ ಎಲ್ಲರಿಗೂ ಪುತ್ರನಂತೆ ಅಥವಾ ತಂದೆಯಂತೆ ವರ್ತಿಸುತ್ತಿರುವಿಯಷ್ಟೇ?

ಕಚ್ಚಿದ್ ವ್ಯಸನಿನಂ ಶತ್ರುಂ ನಿಶಮ್ಯ ಭರತರ್ಷಭ |
ಅಭಿಯಾಸಿ ಜವೇನೈವ ಸಮೀಕ್ಷ್ಯ ತ್ರಿವಿಧಂ ಬಲಮ್ |
ಪಾರ್ಷ್ಣಿಮೂಲೇ ಚ ವಿಜ್ಞಾಯ ವ್ಯವಸಾಯಪುರೋಗಮಃ ||65||
ಭರತರ್ಷಭನೇ! ಶತ್ರುವಿನ ವ್ಯಸನಸ್ಥಾನಗಳನ್ನು ತಿಳಿದು ಶತ್ರುವು ವ್ಯಸನಾಸಕ್ತನಾಗಿರುವ ಸಮಯದಲ್ಲಿ ನಿನ್ನ ಭುಜಬಲವನ್ನು ನಿನ್ನ ಸೇನಾಬಲವನ್ನು ಮತ್ತು ದೈವಬಲವನ್ನು ಗಮನಿಸಿ ಅವನಿಗೆ ಸಹಾಯಕರಾಗಿರುವವರು ಮತ್ತು ಆಧಾರಭೂತರಾದವರನ್ನು ಗಮನಿಸಿ ಪ್ರಯತ್ನವನ್ನು ಮುಂದೆಮಾಡಿಕೊಂಡು ಶೀಘ್ರವಾಗಿ ಅವನ ಮೇಲೆ ಯುದ್ಧಕ್ಕೆ ಹೊರಡುವಿಯಷ್ಟೇ?
ಬಲಸ್ಯ ಚ ಮಹಾರಾಜ ದತ್ವಾ ವೇತನಮಗ್ರತಃ |
ಕಚ್ಚಿಚ್ಚ ಬಲಮುಖ್ಯೇಭ್ಯಃ ಪರರಾಷ್ಟ್ರೇ ಪರಂತ |
ಅವಿಚ್ಛಿನ್ನಾನಿ ರತ್ನಾನಿ ಪ್ರಯಚ್ಛಸಿ ಯಥಾರ್ಹತಃ ||66||
ಮಹಾರಾಜನೇ! ಮತ್ತು ಪರಂತಪನೇ! ಪರರಾಷ್ಟ್ರಗಳಲ್ಲಿರುವ ನಿನ್ನ ಸೇನಾಮುಖ್ಯಸ್ಥರಿಗೆ ಮೊದಲೇ ವೇತನವನ್ನು ಕೊಟ್ಟು ಅವರು ಅಭೀಷ್ಟವಾದ ಕಾರ್ಯವನ್ನು ಮಾಡಿದ ಮೇಲೆ ಅದಕ್ಕೆ ಅನುಗುಣವಾಗಿ ರತ್ನಾದಿಗಳನ್ನು ಅವಿಚ್ಛಿನ್ನವಾಗಿ ಕೊಡುತ್ತಿರುವೆಯಷ್ಟೇ?
ಕಚ್ಚಿನ್ಮೂಲಂ ದೃಢಂ ಕೃತ್ವಾ ಯಾತ್ರಾಂ ಯಾಸಿ ವಿಶಾಂಪತೇ |
ತತೋ ವಿಕ್ರಮಸೇ ಜೇತುಂ ಜಿತ್ವಾ ಚ ಪರಿರಕ್ಷಸಿ ||67||
ರಾಜನೇ! ನಿನ್ನ ಮೂಲವನ್ನು ಭದ್ರಪಡಿಸಿಕೊಂಡು ಯುದ್ಧಕ್ಕೆ ಹೊರಟು ಪರಾಕ್ರಮವನ್ನು ತೋರಿಸಿ ಶತ್ರುವನ್ನು ಜಯಿಸಿ ಅನಂತರ ಆ ಶತ್ರುವನ್ನು ರಕ್ಷಿಸುತ್ತೀಯಷ್ಟೇ?
ಕಚ್ಚಿದಷ್ಟಾಂಗಸಂಯುಕ್ತಾ ಚತುರ್ವಿಧಬಲಾ ಚಮೂಃ |
ಬಲಮುಖ್ಯಾ ಸುನೀತಾ ತೇ ದ್ವಿಷತಃ ಪ್ರತಿಬಾಧತೇ ||68||
ಅಷ್ಟಾಂಗಗಳಿಂದ ಕೂಡಿದ ಚತುರ್ವಿಧವಾದ ನಿನ್ನ ಸೈನ್ಯವು ಬಲದಲ್ಲಿಯೂ ನೀತಿಯಲ್ಲಿಯೂ ಪ್ರಧಾನವಾಗಿದ್ದು ಶತ್ರುಗಳನ್ನು ಬಾಸುತ್ತಿದೆಯಷ್ಟೇ?
ಯಂತಾ, ಸಾರಥಿ, ಸೂತ, ಚರ್ಮ, ವರ್ಮ, ಶರ, ಚಾಪ, ಮತ್ತು ಅಯುಧ ಇದು ಸೈನ್ಯದ ಎಂಟು ಅಂಶಗಳು ಗಜ, ತುರಗ, ರಥ, ಪದಾತಿಗಳು, ಸೈನ್ಯದ ನಾಲ್ಕು ವಿಭಾಗಗಳು.
ಕಚ್ಚಿಲ್ಲವಂ ಚ ಮುಷ್ಟಿಂ ಚ ಪರರಾಷ್ಟ್ರೇ ಪರಂತಪ |
ಅಭಿಯಾಯ ಮಹಾರಾಜ ನಿಹಂಸಿ ಸಮರೇ ರಿಪೂನ್ ||69||
ಎಲೈ ಪರಂತಪನಾದ ಮಹಾರಾಜನೇ! ನೀನು ಪರರಾಷ್ಟ್ರಗಳ ಮೇಲೆ ದಂಡೆತ್ತಿಹೊಗಿ ಮೊದಲು ಆಯುಧಗಳಿಂದ ಕಟಾವು ಮಾಡುವ ಭತ್ತ ಗೋದಿ ಬೆಳೆಗಳನ್ನೂ ಮುಷ್ಟಿಯಿಂದ ಕೀಳುವ ಉದ್ದು ಹೆಸರು ಮುಂತಾದವುಗಳನ್ನೂ ನಾಶಮಾಡಿ ಅನಂತರ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುತ್ತೀಯಷ್ಟೇ?
ಕಚ್ಚಿತ್ ಸ್ವಪರರಾಷ್ಟ್ರೇಷು ಬಹವೋಽಕೃತಾಸ್ತ್ವಯಾ |
ಅರ್ಥಂ ಸಮನುತಿಷ್ಠಂತಿ ರಕ್ಷಂತಿ ಚ ಪರಸ್ಪರಮ್ ||70||
ನಿನ್ನ ರಾಷ್ಟ್ರ ಮತ್ತು ಪರರಾಷ್ಟ್ರಗಳಲ್ಲಿ ನಿನ್ನಿಂದ ನಿಯಮಿಸಲ್ಪಟ್ಟ ಅನೇಕ ಅಕಾರಿಗಳು ತಮ್ಮ ತಮ್ಮ ಕೆಲಸವನ್ನು ಚೆನ್ನಾಗಿ ನಿರ್ವಾಹಮಾಡಿ ಪರಸ್ಪರವಾಗಿ ರಕ್ಷಿಸಿಕೊಳ್ಳುತ್ತಿದ್ದಾರಷ್ಟೇ?
ಕಚ್ಚಿತ್ ತೇಽಭ್ಯವಹಾರ್ಯಾಣಿ ಗಾತ್ರಸಂಸ್ಪರ್ಶನಾನಿ ಚ |
ಘ್ರೇಯಾಣಿ ಚ ಮಹಾಹಾರ್ಣಿ ರಕ್ಷತ್ಯವಿಮನಾ ಭಿಷಕ್ ||71||
ನೀನು ತಿನ್ನುವ ಆಹಾರವನ್ನು ನೀನು ಹೊದೆಯುವ ವಸ್ತ್ರಗಳನ್ನು ನೀನು ಮೂಸಿನೋಡುವ ಬೆಲೆಬಾಳುವ ಸುಗಂಧ ದ್ರವ್ಯಗಳನ್ನು ವೈದ್ಯರು ಎಚ್ಚರಿಕೆಯಿಂದ ಪರೀಕ್ಷಿಸುತ್ತಿದ್ದಾರಷ್ಟೇ?
ಕಚ್ಚಿತ್ ಕೋಶಂ ಚ ಕೋಷ್ಠಂ ಚ ವಾಹನಂ ಪರಮಾಯುಧಮ್ |
ಆಯಶ್ಚ ಕೃತಕಲ್ಯಾಣೈಸ್ತವ ಭಕ್ತೈರನುಷ್ಠಿತಃ ||72||
ನಿನ್ನ ಕೋಶ, ಗೋಶಾಲೆ, ವಾಹನ, ಮತ್ತು ಆಯುಧ, ಇವುಗಳ ವೃದ್ಧಿಯನ್ನು ನಿನ್ನಿಂದ ಸತ್ಕರಿಸಲ್ಪಟ್ಟ ನಿನ್ನಲ್ಲಿ ಅನುರಕ್ತರಾದ ಅಕಾರಿಗಳು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆಯೇ?
ಕಚ್ಚಿದಾಭ್ಯಂತರೇಭ್ಯಶ್ಚ ಬಾಹ್ಯೇಭ್ಯಶ್ಚ ವಿಶಾಂಪತೇ |
ರಕ್ಷಸ್ಯಾತ್ಮಾನಮೇವಾಗ್ರೇ ತಾಂಶ್ಚ ತೇಭ್ಯೋ ಮಿಥಶ್ಚ ತಾನ್ ||73||
ರಾಜನೇ! ನೀನು ನಿನ್ನ ದೇಶದಲ್ಲಿ ಇರುವ ಸೂತ, ಸೇನಾಪತಿ, ಮೊದಲಾದವರಿಂದಲೂ ಪರರಾಷ್ಟ್ರಗಳಲ್ಲಿರುವ ಅಂತಪಾಲಕರಿಂದಲೂ ನಿನ್ನನ್ನು ರಕ್ಷಿಸಿಕೊಳ್ಳುತ್ತಿದ್ದೀಯಷ್ಟೇ? ನಿನ್ನ ಅಕಾರಿಗಳಲ್ಲಿ ಪರಸ್ಪರ ಭೇದ ಉಂಟಾಗದಂತೆ ಮತ್ತು ಶತ್ರುಗಳಿಂದ ಅವರಿಗೆ ಬಾಧೆ ಉಂಟಾಗದಂತೆ ರಕ್ಷಿಸುತ್ತಿದ್ದೀಯಷ್ಟೇ?
ಕಚ್ಚಿನ್ನ ಪಾನೇ ದ್ಯೂತೇ ವಾ ಕ್ರೀಡಾಸು ಪ್ರಮದಾಸು ಚ |
ಪ್ರತಿಜಾನಂತಿ ಪೂರ್ವಾಹ್ಣೇ ವ್ಯಯಂ ವ್ಯಸನಜಂ ತವ ||74||
ನೀನು ವ್ಯಸನಕ್ಕೆ (ಚಟಕ್ಕೆ) ಒಳಗಾಗಿ ರಾತ್ರಿಯ ವೇಳೆಯಲ್ಲಿ ಪಾನದಲ್ಲಿಯಾಗಲೀ ದ್ಯೂತದಲ್ಲಿ ಆಗಲೀ ಅಕ್ಷಕ್ರೀಡಾದಿಗಳಲ್ಲಾಗಲೀ, ಸ್ತ್ರೀಯರಲ್ಲಾಗಲೀ, ವ್ಯಯಮಾಡಿದ ಸಂಪತ್ತನ್ನು ನಿನ್ನ ಪ್ರಜೆಗಳು ತಿಳಿಯುವುದಿಲ್ಲವಷ್ಟೇ?
ಕಚ್ಚಿದಾಯಸ್ಯ ವಾಽರ್ಧೇನ ಚತುರ್ಭಾಗೇನ ವಾ ಪುನಃ |
ಪಾದಭಾಗೈಸ್ತ್ರಿಭಿರ್ವಾಽಪಿ ವ್ಯಯಃ ಸಂಶುದ್ಧ್ಯತೇ ತವ ||75||
ನಿನ್ನ ವ್ಯಯವು ನಿನ್ನ ಲಾಭದ ಅರ್ಧಭಾಗವನ್ನಾಗಲೀ ಅಥವಾ ಕಾಲುಭಾಗವನ್ನಾಗಲೀ ಅಥವಾ ಮುಕ್ಕಾಲು ಭಾಗವನ್ನಾಗಲೀ

ಎಂದೂ ಮೀರದೆ ಶುದ್ಧವಾಗಿರುತ್ತದೆಯಷ್ಟೇ?
ಕಚ್ಚಿದ್ ಜ್ಞಾತೀನ್ ಗುರೂನ್ ವೃದ್ಧಾನ್ ವಣಿಜಃ ಶಿಲ್ಪಿನಃ ಶ್ರಿತಾನ್ |
ಅಭಿಪುಷ್ಣಾಸಿ ಧನತೋ ಧಾನ್ಯೇನ ಚ ಸುದುರ್ಗತಾನ್ ॥76॥
ಬಂಧುಗಳಾಗಲೀ, ಗುರುಗಳಾಗಲೀ, ಹಿರಿಯರಾಗಲೀ ವರ್ತಕರಾಗಲೀ ಕುಶಲಕರ್ಮಿಗಳಾಗಲೀ ನಿನ್ನನ್ನು ಆಶ್ರಯಿಸಿರುವವರು ದುರ್ಗತಿಯನ್ನು ಹೊಂದಿದಾಗ ಅವರನ್ನು ಧನ ಧಾನ್ಯದಿಂದ ಪೋಷಿಸುತ್ತಿರುವಿಯಷ್ಟೇ?
ಕಚ್ಚಿದಾಯವ್ಯಯೇ ಯುಕ್ತಾಃ ಸರ್ವೇ ಗಣಕಲೇಖಕಾಃ |
ಅನುತಿಷ್ಠಂತಿ ಪೂರ್ವಾಹ್ಣೇ ನಿತ್ಯಮಾಯವ್ಯಯೌ ತವ ॥77॥
ನೀನು ಆಯವ್ಯಯಪರಿಶೋಧನೆಯಲ್ಲಿ ನಿಯಮಿಸಿದ ಲೇಖಕರು ಮತ್ತು ಗಣಕರು ಪ್ರತಿದಿನವೂ ಪ್ರಾತಃಕಾಲದಲ್ಲಿ ಆಯವ್ಯಯದ ಲೆಕ್ಕವನ್ನು ಸರಿಯಾಗಿ ಮಾಡುತಿದ್ದಾರಷ್ಟೇ?
ಕಚ್ಚಿದರ್ಥೇಷು ಸಂಪ್ರೌಢಾನ್ ಜಿತಕಾಮಾನನುಪ್ರಿಯಾನ್ |
ನಾಪಕರ್ಷಸಿ ಕರ್ಮಭ್ಯಃ ಪೂರ್ವಮಜ್ಞಾಯ ಕಿಲ್ಬಿಷಮ್ ॥78॥
ಅರ್ಥಶಾಸ್ತ್ರದಲ್ಲಿ ಪ್ರೌಢರಾದ ಆಶಾರಹಿತರಾದ ನಿನಗೆ ಪ್ರಿಯರಾದ ಅಕಾರಿಗಳನ್ನು ಅವರಲ್ಲಿ ಯಾವ ದೋಷವನ್ನೂ ತಿಳಿಯದೆ ಅವರವರ ಸ್ಥಾನದಿಂದ ನೀನು ತೆಗದುಹಾಕುವುದಿಲ್ಲವಷ್ಟೇ?
ಕಚ್ಚಿದ್ ವಿದಿತ್ವಾ ಪುರುಷಾನ್ ಉತ್ತಮಾಧಮಮಧ್ಯಮಾನ್ |
ತ್ವಂ ಕರ್ಮಸ್ವನುರೂಪೇಷು ನಿಯೋಜಯಸಿ ನಿತ್ಯಶಃ ॥79॥
ನಿನ್ನ ಸೇವಕರಲ್ಲಿ ಉತ್ತಮ ಮಧ್ಯಮ ಮತ್ತು ಅಧಮರನ್ನು ಗುರುತಿಸಿ ನಿತ್ಯವೂ ಅವರವರಿಗೆ ಅನುರೂಪವಾದ ಕಾರ್ಯಗಳಲ್ಲಿ ಅವರನ್ನು ನೇಮಿಸಿರುವೆಯಾ?
ಕಚ್ಚಿನ್ನ ಲುಬ್ಧಾಶ್ಚೋರಾ ವಾ ವೈರಿಣೋ ವಾ ವಿಶಾಂಪತೇ |
ಅಪ್ರಾಪ್ತವ್ಯವಹಾರಾ ವಾ ತವ ಕರ್ಮಸ್ವಷ್ಠಿತಾಃ ॥80॥
ರಾಜನೇ! ಆಸೆಬುರಕರನ್ನಾಗಲೀ, ಚೋರರನ್ನಾಗಲೀ ಅಥವಾ ಶತ್ರುಗಳನ್ನಾಗಲೀ ಅಥವಾ ಯಾರ ಚಲನವಲನ ತಿಳಿಯುವುದಿಲ್ಲವೋ ಅಂತಹವರನ್ನಾಗಲೀ ಎಂದೂ ಅಕಾರಿಯನ್ನಾಗಿ ನೇಮಿಸಿಲ್ಲವಷ್ಟೇ?
ಕಚ್ಚಿನ್ನ ಲುಬ್ಧೈಶ್ಚೋರೈರ್ವಾ ಕುಮಾರೈರ್ವಿಧಿಥೈರಪಿ |
ತ್ವಯಾ ವಾ ಪೀಡ್ಯತೇ ರಾಷ್ಟ್ರಂ ಕಚ್ಚಿತ್ ತುಷ್ಟಾಃ ಕೃಷೀವಲಾಃ ॥81॥
ನಿನ್ನ ರಾಷ್ಟ್ರವು ಲೋಭವುಳ್ಳವರಿಂದಾಗಲೀ ಜೋರರಿಂದಾಗಲೀ ಅನೇಕ ಬಾಲಬುದ್ಧಿಯವರಿಂದಾಗಲೀ ಅಥವಾ ನಿನ್ನಿಂದಾಗಲೀ ಪೀಡಿಸಲ್ಪಡುವುದಿಲ್ಲವಷ್ಟೇ? ನಿನ್ನ ಕೃಷೀವಲರು ಸಂತುಷ್ಟರಾಗಿದ್ದಾರಷ್ಟೇ?
ಕಚ್ಚಿದ್ ರಾಷ್ಟ್ರೇ ತಟಾಕಾನಿ ಪೂರ್ಣಾನಿ ಚ ಮಹಾಂತಿ ಚ |
ಭಾಗಶೋ ವಿನಿವಿಷ್ಟಾನಿ ನ ಕೃಷಿರ್ದೇವಮಾತೃಕಾ ॥82॥
ನಿನ್ನ ರಾಷ್ಟ್ರದಲ್ಲಿ ಕೆರೆಗಳು ಪೂರ್ಣವಾಗಿದ್ದು ಮತ್ತು ದೊಡ್ಡದಾಗಿದ್ದು ಅವುಗಳಿಗೆ ಯೋಗ್ಯವಾದ ಸ್ಥಳಗಳಲ್ಲಿ ಅವುಗಳನ್ನು ನಿರ್ಮಿಸಿದ್ದೀಯಷ್ಟೇ? ನಿನ್ನ ರಾಜ್ಯಕೃಷಿಯು ದೇವಮೂಲವಾದ ಮಳೆಯನ್ನೇ ಅವಲಂಬಿಸಿಲ್ಲವಷ್ಟೇ?
ಕಚ್ಚಿದ್ ಬೀಜಂ ಚ ಭಕ್ತಂ ಚ ಕರ್ಷಕಾಯಾವಸೀದತೇ |
ಪ್ರತಿಗುಂಜಾಶತಂ ವೃದ್ಧ್ಯಾ ದದಾಸ್ಯೃಣಮನುಗ್ರಹಾತ್ ॥83॥
ನಿನ್ನ ರಾಜ್ಯದ ಕೃಷೀವಲರು ದುರ್ಗತಿಗೆ ಈಡಾದಾಗ ಅವರಿಗೆ ನೂರುಸುವರ್ಣನಾಣ್ಯಗಳಿಗೆ ಒಂದು ಗುಂಜಿಯ ತೂಕದಷ್ಟು ಸುವರ್ಣನಾಣ್ಯದ ಬಡ್ಡಿಯ ಮೇರೆಗೆ ಅನುಗ್ರಹವನ್ನು ಮಾಡಿ ಸಾಲವನ್ನು ಕೊಡುತ್ತಿರುವಿಯಷ್ಟೇ?
ಕಚ್ಚಿತ್ ತೇ ದಯಿತಾಃ ಸರ್ವೇ ಕೃಷಿಗೋರಕ್ಷಜೀವಿನಃ |
ಕಚ್ಚಿತ್ ಸ್ವನುಷ್ಠಿತಾ ತಾತ ವಾರ್ತಾ ತೇ ಸಾಧುಭಿರ್ಜನೈಃ ॥84॥
ಪ್ರೀತಿಪಾತ್ರನೇ! ಕೃಷಿಯನ್ನೂ ಗೋರಕ್ಷೆಯನ್ನೂ ಅವಲಂಬಿಸಿ ಜೀವಿಸುವವರೆಲ್ಲರೂ ನಿನಗೆ ಪ್ರಿಯವಾಗಿದ್ದಾರಷ್ಟೇ? ನಿನ್ನ ರಾಜ್ಯದಲ್ಲಿ ಸಜ್ಜನರು ವ್ಯಾಪಾರಗಳನ್ನು ಚೆನ್ನಾಗಿ ಮಾಡುತ್ತಿದ್ದಾರಷ್ಟೇ?
ವಾರ್ತಾಯಾಂ ಸಂಶ್ರಿತಸ್ತಾತ ಲೋಕೋಽಯಂ ಸುಖಮೇಧತೇ |
ಕಚ್ಚಿಚ್ಛುಚಿಕೃತಪ್ರಜ್ಞಾಃ ಪಂಚ ಪಂಚಸ್ವನುಷ್ಠಿತಾಃ |
ಕ್ಷೇಮಂ ಕುರ್ವಂತಿ ಸಂಹತ್ಯ ರಾಜನ್ ಜನಪದೇ ತವ ॥85॥
ಪ್ರೀತಿಪಾತ್ರನೇ! ವ್ಯಾಪಾರವನ್ನು ಅವಲಂಬಿಸಿದ ಜನರು ಲೋಕದಲ್ಲಿ ಸುಖವಾಗಿರುತ್ತಾರೆ. ರಾಜನೇ! ನೀನು ನಿನ್ನ ರಾಷ್ಟ್ರದಲ್ಲಿ ಪ್ರತಿಗ್ರಾಮದಲ್ಲಿಯೂ ಅಕಾರಿಗಳನ್ನಾಗಿ ಇರಿಸಿದ ಐದೈದು ಜನ ವಿದ್ವಾಂಸರು ಆ ಗ್ರಾಮಗಳಿಗೆ ಕ್ಷೇಮವನ್ನು ಮಾಡುತ್ತಿರುವರಷ್ಟೇ?
ಕಚ್ಚಿನ್ನಗರಗುಪ್ತ್ಯರ್ಥಂ ಗ್ರಾಮಾ ನಗರವತ್ ಕೃತಾಃ |
ಗ್ರಾಮವಚ್ಚ ಕೃತಾ ರಕ್ಷಾ ತೇ ಚ ಸರ್ವೇ ತ್ವದರ್ಪಣಾಃ ॥86॥
ನಿನ್ನ ನಗರವನ್ನು ರಕ್ಷಿಸುವ ಸಲುವಾಗಿ ನಗರದ ಸುತ್ತಮುತ್ತಲಿನ ಗ್ರಾಮಗಳನ್ನು ನಗರದಂತೆಯೇ ಕಲ್ಪಿಸಿರುವಿಯಷ್ಟೇ. ಗ್ರಾಮಗಳನ್ನು ಸಹ ಗ್ರಾಮಗಳಿಗೆ ಯೋಗ್ಯವಾದ ರೀತಿಯಲ್ಲಿ ಅಷ್ಟೇ ಕೃಷೀವಲರನ್ನು ಇಟ್ಟು ರಕ್ಷಿಸಿರುವಿಯಷ್ಟೇ? ನಗರವಾಸಿಗಳು ಮತ್ತು ಗ್ರಾಮವಾಸಿಗಳು ನಿನ್ನಲ್ಲೇ ಅನುರಕ್ತರಾಗಿರುವರಷ್ಟೇ?
ಕಚ್ಚಿದ್ ಬಲೇನಾನುಮತಾಃ ಸಮಾನಿ ವಿಷಮಾಣಿ ಚ |
ಪುರಾಣಿ ಚಾರಾಃ ಸಾಧ್ಯಕ್ಷಾಃ ಚರಂತಿ ವಿಷಯೇ ತವ ॥87॥
ನಿನ್ನ ರಾಜ್ಯದಲ್ಲಿ ಯಾವಾಗಲೂ ಸಂಚರಣಸಾಮರ್ಥ್ಯವನ್ನು ಹೊಂದಿದ್ದ ನಿನ್ನ ಅಕಾರಿಗಳು. ಮಹಾ ನಗರಗಳಲ್ಲಿ ತಮ್ಮ

ಅಧ್ಯಕ್ಷರಿಂದ ಒಡಗೂಡಿ ಲೋಕಸಮ್ಮತವಾದ ಕಾರ್ಯಗಳನ್ನು ಮತ್ತು ರಾಜನೀತಿಗೆ ಮತ್ತು ಲೋಕಕ್ಕೆ ಅವಿರುದ್ಧವಾದ ಕಾರ್ಯಗಳನ್ನು ಆಚರಿಸುತ್ತಿರುವರಷ್ಟೇ?

ಕಚ್ಚಿತ್ ಸ್ತ್ರಿಯಃ ಸಾಂತ್ವಯಸಿ ಕಚ್ಚಿತ್ ತಾತ ಸುರಕ್ಷಿತಾಃ |
ಕಚ್ಚಿನ್ನ ಶ್ರದ್ದಧಾಸ್ಯಾಸಾಂ ಕಚ್ಚಿದ್ ಗುಹ್ಯಂ ನ ಭಾಷಸೇ ॥88॥

ಪ್ರೀತಿಪಾತ್ರನೇ! ಕಷ್ಟಕ್ಕೆ ಸಿಲುಕಿದ ಸ್ತ್ರೀಯರನ್ನು ನೀನು ಸಮಾಧಾನಪಡಿಸುತ್ತಿರುವಿಯಷ್ಟೇ?ನಿನ್ನ ರಾಜ್ಯದಲ್ಲಿ ಸ್ತ್ರೀಯರು ಸುರಕ್ಷಿತರಾಗಿ ಇರುವರಷ್ಟೇ? ನೀನು ಹೆಂಗಸರು ಆಡಿದ ಮಾತೆಲ್ಲವನ್ನೂ ನಂಬುವುದಿಲ್ಲವಷ್ಟೇ? ಮತ್ತು ಅವರ ಬಳಿ ರಹಸ್ಯವಾದ ವಿಷಯಗಳನ್ನು ಮಾತನಾಡುವುದಿಲ್ಲವಷ್ಟೇ?

ಕಚ್ಚಿಚ್ಚಾರಾನ್ನಿಶಿ ಶ್ರುತ್ವಾ ತತ್ಕಾರ್ಯಮನುಚಿಂತ್ಯ ಚ |
ಪ್ರಿಯಾಣ್ಯನುಭವನ್ ಶೇಷೇ ವಿದಿತ್ವಾಽಭ್ಯಂತರಂ ಜನಮ್ ॥89॥

ರಾತ್ರಿಯ ವೇಳೆಯಲ್ಲಿ ಚಾರರ ಆ ದಿನದ ಕಾರ್ಯಗಳನ್ನು ಕೇಳಿ ಅದನ್ನು ವಿಮರ್ಶೆಮಾಡಿ ಅಂತಃಪುರದಲ್ಲಿ ಇರುವ ಜನರನ್ನು ತಿಳಿದುಕೊಂಡು ರಾತ್ರಿಯ ವೇಳೆಯಲ್ಲಿ ಸುಖವನ್ನು ಅನುಭವಿಸುವಿಯಷ್ಟೇ?

ಕಚ್ಚಿದ್ ದ್ವೌ ಪ್ರಥಮೌ ಯಾಮೌ ರಾತ್ರೌ ಸುಪ್ತ್ವಾ ವಿಶಾಂಪತೇ|
ವಿಚಿಂತಯಸಿ ಧರ್ಮಾರ್ಥೌ ಯಾಮ ಉತ್ಥಾಯ ಪಶ್ಚಿಮೇ ॥90॥

ರಾಜನೇ! ರಾತ್ರಿಯಲ್ಲಿ ಮೊದಲ ಯಾಮವು ಕಳೆದಮೇಲೆ ಎರಡು ಯಾಮಗಳನ್ನು ನಿದ್ರೆಯಿಂದ ಕಳೆದು, ಮೂರನೆಯ ಯಾಮದಲ್ಲಿ ಎಚ್ಚರಗೊಂಡು ಧರ್ಮಾರ್ಥಗಳನ್ನು ಚಿಂತಿಸುತ್ತೀಯಷ್ಟೇ?

ಕಚ್ಚಿದ್ ದರ್ಶಯಸೇ ನಿತ್ಯಂ ಮನುಷ್ಯಾನ್ ಸಮಲಂಕೃತಃ |
ಉತ್ಥಾಯ ಕಾಲೇ ಕಾಲಜ್ಞೈಃ ಸಹ ಪಾಂಡವ ಮಂತ್ರಿಭಿಃ ॥91॥

ಪಾಂಡವನೇ! ನೀನು ಪ್ರಾತಃಕಾಲದಲ್ಲಿ ಎದ್ದು ಉಚಿತಕಾಲವನ್ನು ತಿಳಿದ ಮಂತ್ರಿಗಳ ಜೊತೆಯಲ್ಲಿ ನಿನ್ನ ಪ್ರಜೆಗಳಿಗೆ ಅಲಂಕೃತನಾಗಿ ದರ್ಶನವನ್ನು ಕೊಡುತ್ತಿರುವಿಯಷ್ಟೇ ?

ಕಚ್ಚಿದ್ ರಕ್ತಾಂಬರಧರಾಃ ಖಡ್ಗಹಸ್ತಾಃ ಸಕುಂಡಲಾಃ |
ಅಭಿತಸ್ತ್ವಾಮುಪಾಸಂತೇ ರಕ್ಷಣಾರ್ಥಮರಿಂದಮ ॥92॥

ಅರಿಂದಮನೇ! ರಕ್ತವಸ್ತ್ರವನ್ನು ಧರಿಸಿದ ಕರ್ಣಕುಂಡಲಗಳನ್ನು ಧರಿಸಿದ ಕೈಯಲ್ಲಿ ಖಡ್ಗವನ್ನು ಹಿಡಿದ ಅಂಗರಕ್ಷಕರು ಯಾವಾಗಲೂ ನಿನ್ನ ಸುತ್ತಲೂ ಇದ್ದು ನಿನ್ನ ರಕ್ಷಣೆಯನ್ನು ಮಾಡುತ್ತಾ ಸೇವೆಸಲ್ಲಿಸುವರಷ್ಟೇ?

ಕಚ್ಚಿದ್ ದಂಡ್ಯೇಷು ಯಮವತ್ ಪೂಜ್ಯೇಷು ಚ ವಿಶಾಂಪತೇ |
ಪರೀಕ್ಷ್ಯ ವರ್ತಸೇ ಸಮ್ಯಗ್ ಅಪ್ರಿಯೇಷು ಪ್ರಿಯೇಷು ॥93॥

ರಾಜನೇ! ನೀನು ಶಿಕ್ಷಾರ್ಹರಾದ ಅಪ್ರಿಯರಲ್ಲಿಯೂ, ಪೂಜಾರ್ಹರಾದ ಪ್ರಿಯರಲ್ಲಿಯೂ, ಚೆನ್ನಾಗಿ ಪರೀಕ್ಷೆಮಾಡಿ ಯಮನಂತೆ ನಿಷ್ಪಕ್ಷಪಾತದಿಂದ ವರ್ತಿಸುತ್ತಿರುವಿಯಾ?

ಕಚ್ಚಿಚ್ಛಾರೀರಮಾಬಾಧಮೌಷಧೈರ್ನಿಯಮೇನ ಚ |
ಮಾನಸಂ ವೃದ್ಧಸೇವಾಭಿಃ ಸದಾ ಪಾರ್ಥಾಪಕರ್ಷಸಿ ॥94॥

ಪಾರ್ಥನೇ! ನಿನ್ನ ಶರೀರದುಃಖಗಳನ್ನು ಔಷದಿ ಮತ್ತು ನಿಯಮಗಳಿಂದಲೂ ಮಾನಸದುಃಖವನ್ನು ವೃದ್ಧರಸೇವೆಯಿಂದಲೂ ಕಳೆದುಕೊಳ್ಳುತ್ತಿರುವಿಯಷ್ಟೇ?

ಕಚ್ಚಿದ್ ವೈದ್ಯಾಶ್ಚಿಕಿತ್ಸಾಯಾಮಷ್ಟಾಂಗಾಯಾಂ ವಿಶಾರದಾಃ |
ಸುಹೃದಶ್ಚಾನುರಕ್ತಾಶ್ಚ ಶರೀರೇ ತೇ ಹಿತಾಃ ಸದಾ ॥95॥

ನಿನ್ನ ವೈದ್ಯರು ಅಷ್ಟಾಂಗಚಿಕಿತ್ಸೆಯಲ್ಲಿ ವಿಶಾರದರಾಗಿ, ನಿನ್ನಲ್ಲಿ ವಿಶ್ವಾಸವುಳ್ಳವರಾಗಿ ಮತ್ತು ಅನುರಕ್ತರಾಗಿ ಯಾವಾಗಲೂ ನಿನ್ನ ಹಿತವನ್ನು ಸಾಸುತ್ತಿದ್ದಾರಷ್ಟೇ?

ಕಚ್ಚಿನ್ನ ಮೋಹಾನ್ಮಾನಾದ್ವಾ ಕಾಮಾದ್ವಾಽಪಿ ವಿಶಾಂಪತೇ |
ಅರ್ಥಿಪ್ರತ್ಯರ್ಥಿನಃ ಪ್ರಾಪ್ತಾನ್ ನಾಪಾಸ್ಯಸಿ ಕಥಂಚನ ॥94॥

ರಾಜನೇ! ಅರ್ಥಿಯಾಗಿ ಬಂದ ಸ್ವಜನರನ್ನಾಗಲೀ ಅಥವಾ ವಿರೋಧಿಗಳಾಗಿ ಬಂದ ಶತ್ರುಗಳನ್ನಾಗಲೀ ನೀನು ಮದದಿಂದಲಾಗಲೀ, ಅಹಂಕಾರದಿಂದಲಾಗಲೀ, ಅಥವಾ ಕಾಮದಿಂದಲಾಗಲೀ, ಯಾವ ಕಾರಣಕ್ಕಾಗಿಯೂ ಉದಾಸೀನಮಾಡುತ್ತಿಲ್ಲವಷ್ಟೇ?

ಕಚ್ಚಿನ್ನ ಲೋಭಾದ್ ದ್ವೇಷಾದ್ವಾ ವಿಸ್ರಂಭಾತ್ ಪ್ರಣಯೇನ ವಾ |
ವರ್ತಮಾನೋ ಮನುಷ್ಯಾಣಾಂ ವೃತ್ತಿಂ ತ್ವಮನುರುದ್ಧ್ಯಸೇ ॥95॥

ಲೋಭದಿಂದಲಾಗಲೀ, ದ್ವೇಷದಿಂದಲಾಗಲೀ, ಅತಿವಿಶ್ವಾಸದಿಂದಲಾಗಲೀ, ಅಥವಾ ಸ್ನೇಹದಿಂದಲಾಗಲೀ, ಕೂಡಿದವನಾಗಿ ನೀನು ನಿನ್ನ ಪ್ರಜೆಗಳ ಜೀವನೋಪಾಯಕ್ಕೆ ಭಂಗವನ್ನು ತರುತ್ತಿಲ್ಲವಷ್ಟೇ?

ಕಚ್ಚಿತ್ ಅರ್ಥೇಷು ಸಂಪ್ರೌಢಾನ್ ಅರ್ಥಕರ್ಮ ವಿಚಕ್ಷಣಾನ್|
ನಾಪಕರ್ಷಸಿ ಕರ್ಮಭ್ಯೋ ಹ್ಯರ್ಥಯುಕ್ತಾ ಇತೀವ ಹಿ ॥96॥

ಧನದ ವ್ಯವಹಾರದಲ್ಲಿ ನಿಷ್ಣಾತರಾದಂತಹ, ಮತ್ತು ಧನದ ವಿಷಯದಲ್ಲಿ ಸಮರ್ಪಕವಾಗಿ ಕಾರ್ಯವನ್ನು ನಿರ್ವಹಿಸುವಂತಹ, ನಿನ್ನ ಅಕಾರಿಗಳನ್ನು ಇವರು ಯಾವಾಗಲೂ ಧನದ ಸಮೀಪದಲ್ಲಿ ಇರುತ್ತಾರೆ ಎಂಬ ಕಾರಣದಿಂದ ಅವರನ್ನು ಅಕಾರಸ್ಥಾನದಿಂದ ತೆಗೆಯುವುದಿಲ್ಲವಷ್ಟೇ?

ಕಚ್ಚಿತ್ ಪೌರಾ ನ ಸಹಿತಾ ಯೇ ಚ ತೇ ರಾಷ್ಟ್ರವಾಸಿನಃ |
ತ್ವಯಾ ಸಹ ವಿರುದ್ಧ್ಯಂತೇ ಪರೈಃ ಕ್ರೀತಾಃ ಕಥಂಚನ ॥97॥

ನಿನ್ನ ರಾಷ್ಟ್ರವಾಸಿಗಳಾದ ಪ್ರಜೆಗಳು ಶತ್ರುಗಳಿಂದ ಕೊಂಡುಕೊಳ್ಳಲ್ಪಟ್ಟವರಾಗಿ, ಎಲ್ಲರೂ ಒಂದುಗೂಡಿ ನಿನಗೆ ವಿರೋಧವನ್ನು ಮಾಡುವುದಿಲ್ಲವಷ್ಟೇ?
ಕಚ್ಚಿತ್ ತೇ ದುರ್ಬಲಃ ಶತ್ರುರ್ಬಲಿನಾಽಪಿ ನಿಪೀಡಿತಃ |
ಮಂತ್ರೇಣ ಬಲವಾನ್ ಕಚ್ಚಿತ್ ತ್ವಮುಭಾಭ್ಯಾಂ ತಥಾ ಸಮಃ ॥98॥
ನಿನಗೆ ದುರ್ಬಲನಾದ ಒಬ್ಬ ಶತ್ರು, ಇನ್ನೊಬ್ಬನು ಮಂತ್ರಶಕ್ತಿಯಿಂದ ಬಲಿಷ್ಠನಾದವನು, ಅವನು ಪ್ರಬಲ ಶತ್ರುವಿನಿಂದ ಪೀಡಿತನಾದವನು, ಇವರಿಬ್ಬರ ವಿಷಯದಲ್ಲಿಯೂ ನೀನು ಒಂದೇ ರೀತಿ ಸಮನಾಗಿ ನಡೆದುಕೊಳ್ಳುವಿಯಷ್ಟೇ?
ಕಚ್ಚಿತ್ ಸರ್ವೇಽನುರಕ್ತಾಶ್ಚ ಭೂಮಿಪಾಲಾಃ ಪ್ರಧಾನತಃ |
ಕಚ್ಚಿತ್ ಪ್ರಾಣಾಂಸ್ತವಾರ್ಥೇಷು ಸಂತ್ಯಜಂತಿ ಸಮಾಹಿತಾಃ ॥99॥
ನಿನ್ನ ಪ್ರಧಾನರಾದ ಸಾಮಂತರೆಲ್ಲರೂ, ನಿನ್ನಲ್ಲಿ ಅನುರಕ್ತರಾಗಿ ನಿನ್ನ ಹಿತಕ್ಕಾಗಿ, ಸಂತೋಷದಿಂದ ತಮ್ಮ ಪ್ರಾಣಗಳನ್ನು ತ್ಯಾಗಮಾಡಲು ಸಿದ್ಧರಾಗಿದ್ದಾರಷ್ಟೇ?
ಕಚ್ಚಿತ್ ತೇ ಸರ್ವವಿದ್ಯೇಷು ಗುಣೇನಾರ್ಚಾ ಪ್ರವರ್ತತೇ |
ಬ್ರಾಹ್ಮಣಾನಾಂ ಚ ತತ್ ಸುಷ್ಠು ತವ ನಿಶ್ರೇಯಸಂ ಚ ತತ್ ॥100॥
ಬೇರೆ ಬೇರೆ ವಿದ್ಯೆಗಳಲ್ಲಿ ನಿಪುಣರಾದವರನ್ನು ಅವರ ವಿದ್ಯಾಗುಣಕ್ಕೆ ಅನುರೂಪವಾಗಿ ನೀನು ಪೂಜಿಸುತ್ತಿರುವೆಯಷ್ಟೇ? ವಿದ್ಯೆಗೆ ಅನುಗುಣವಾದ ಪೂಜೆಯು ಬ್ರಾಹ್ಮಣರಿಗೆ ಬಹಳ ಪ್ರಿಯವಾದುದು ಮತ್ತು ನಿನಗೆ ಒಳ್ಳೆಯ ಶ್ರೇಯಸ್ಸನ್ನು ಕೊಡುವಂತಹದು.
ಕಚ್ಚಿದ್ಧರ್ಮೇ ತ್ರಯೀಮೂಲೇ ಪೂರ್ವೈರಾಚರಿತೇ ಜನೈಃ |
ವರ್ತಮಾನಸ್ತಥಾ ಕರ್ತುಂ ತಸ್ಮಿನ್ ಕರ್ಮಣಿ ವರ್ತಸೇ ॥101॥
ನಿನ್ನ ಪೂರ್ವಜರು ಆಚರಿಸಿದ ವೇದಮೂಲವಾದ ಕರ್ಮಗಳನ್ನು ತಿಳಿದು ಅದರಂತೆ ಆಚರಿಸುತ್ತಿರುವಿಯಷ್ಟೇ?
ಕಚ್ಚಿತ್ತವ ಗೃಹೇಽನ್ನಾನಿ ಸ್ವಾದೂನ್ಯಶ್ನಂತಿ ವೈ ದ್ವಿಜಾಃ |
ಗುಣವಂತಿ ಗುಣೋಪೇತಾಸ್ತವಾದ್ಯ ಕುರುಸತ್ತಮ ॥102॥
ಕುರುಶ್ರೇಷ್ಠನೇ! ನಿನ್ನ ಮನೆಯಲ್ಲಿ ಗುಣವಂತರಾದ ಬ್ರಾಹ್ಮಣರು ಈಗ ಮಧುರವಾದ, ಮತ್ತು ಗುಣದಿಂದ ಕೂಡಿದ ಅನ್ನವನ್ನು ಭೋಜನಮಾಡುತ್ತಿದ್ದಾರೆಯೇ?
ಕಚ್ಚಿತ್ ಕ್ರತೂನ್ ಏಕಚಿತ್ತೋ ವಾಜಪೇಯಾಂಶ್ಚ ಸರ್ವಶಃ |
ಪೌಂಡರೀಕಾಂಶ್ಚ ಕಾರ್ತ್ಸ್ನ್ಯೇನ ಯಥಸೇ ಕರ್ತುಮಾದರಾತ್ ॥103॥
ವಾಜಪೇಯ, ಪೌಂಡರೀಕ, ಮೊದಲಾದ ಯಾಗಗಳನ್ನು ಏಕಚಿತ್ತದಿಂದ ಮತ್ತು ಆದರದಿಂದ ಸಮಗ್ರವಾಗಿ ಮಾಡಲು ಪ್ರಯತ್ನ ಪಡುತ್ತಿರುವೆಯಷ್ಟೇ?
ಕಚ್ಚಿದ್ ದ್ವಿಜಾನ್ ಗುರೂನ್ ವೃದ್ಧಾನ್ ದೈವತಾಂಸ್ತಾಪಸಾಂಸ್ತಥಾ |
ಚೈತ್ಯವೃಕ್ಷಾನ್ ಸುಕಲ್ಯಾಣಾನ್ ಬ್ರಾಹ್ಮಣಾಂಸ್ತ್ವಂ ನಮಸ್ಯಸಿ ॥104॥
ಬ್ರಾಹ್ಮಣರನ್ನೂ, ಗುರುಗಳನ್ನೂ, ಹಿರಿಯರನ್ನೂ, ದೇವತೆಗಳನ್ನೂ, ತಪಸ್ವಿಗಳನ್ನೂ, ಪೂಜನೀಯವಾದ ವೃಕ್ಷಗಳನ್ನೂ ಮತ್ತು ಮಂಗಳಕರವಾದ ಬ್ರಾಹ್ಮಣರನ್ನೂ ನಮಸ್ಕರಿಸುವಿಯಷ್ಟೇ?
ಕಚ್ಚಿದೇಷಾ ಚ ತೇ ಬುದ್ಧಿರ್ವೃತ್ತಿರೇಷಾ ಚ ತೇಽನಘ |
ಆಯುಷ್ಯಾಯ ಯಶಸ್ಯಾಯ ಧರ್ಮಾರ್ಥಶುಭದರ್ಶಿನೀ ॥105॥
ದೋಷದೂರನಾದವನೇ! ನಿನ್ನ ಈ ಬುದ್ಧಿಯು ಮತ್ತು ಈ ನಡವಳಿಕೆಯು ನಿನಗೆ ಅಯುಸ್ಸನ್ನೂ, ಕೀರ್ತಿಯನ್ನೂ, ಧರ್ಮಾರ್ಥಗಳನ್ನೂ ಸಂಪಾದಿಸಿಕೊಡುತ್ತಿವೆಯಷ್ಟೇ?
ಏತಯಾ ವರ್ತಮಾನಸ್ಯ ಬುದ್ಧ್ಯಾ ರಾಜ್ಯಂ ನ ಸೀದತಿ |
ನಿರ್ಜಿತ್ಯ ಚ ಮಹಾರಾಜ ಸೋಽನಂತಂ ಸುಖಮಶ್ನುತೇ ॥106॥
ಮಹಾರಾಜನೇ! ಇಂತಹ ಬುದ್ಧಿಯಿಂದ ನಡೆದುಕೊಳ್ಳುವ ರಾಜನಿಗೆ ಎಂದೂ ರಾಜ್ಯವು ನಾಶವನ್ನು ಹೊಂದುವುದಿಲ್ಲ. ಅವನು ಉಳಿದ ರಾಜರನ್ನು ಸೋಲಿಸಿ ಅನಂತವಾದ ಸುಖವನ್ನು ಹೊಂದುತ್ತಾನೆ.
ಕಚ್ಚಿದಾರ್ಯೋ ವಿಶುದ್ಧಾತ್ಮಾ ಹಾರಿತಶ್ಚೌರಕರ್ಮಣಿ |
ಅದುಷ್ಟಶಾಸ್ತ್ರಕುಶಲೈರ್ನ ಲೋಭಾದ್ ಬುದ್ಧ್ಯತೇಽಶುಚಿಃ ॥107॥
ಪರಿಶುದ್ಧನಾದ ನಿರಪರಾಯಾದ ಗೌರವಾನ್ವಿತನಾದ ಪುರುಷನನ್ನು ಪರೀಕ್ಷೆಮಾಡುವುದರಲ್ಲಿ ನಿಪುಣರಲ್ಲದ ಅಕಾರಿಗಳು, ಲೋಭದಿಂದ ಅವನ ಮೇಲೆ ಕಳ್ಳತನದ ಅಪವಾದವನ್ನು ಹೊರಿಸಿ ದೇಶಾಂತರಕ್ಕೆ ಕಳುಹಿಸಿದ ಆ ವ್ಯಕ್ತಿಯನ್ನು ನೀನು ಅಶುದ್ಧನೆಂದು ಭಾವಿಸುವುದಿಲ್ಲವಷ್ಟೇ?
ದುಷ್ಟೋ ಗೃಹೀತಸ್ತತ್ಕಾರೀ ತಜ್ಜ್ಞೈರ್ದೃಷ್ಟಃ ಸಕಾರಣೈಃ |
ಕಚ್ಚಿನ್ನ ಮುಚ್ಯತೇ ಸ್ತೇನೋ ಹ್ಯರ್ಥಲೋಭಾನ್ನರರ್ಷಭ ॥108॥
ನರಶ್ರೇಷ್ಠನೇ! ಕಳ್ಳನ ಚೋರಕರ್ಮವನ್ನು ನೋಡಿ ಕಳ್ಳತನದ ಪರೀಕ್ಷೆಯ ಕೆಲಸದಲ್ಲಿ ಕುಶಲರಾದವರು ಅದನ್ನು ಪುನಃ ನಿರ್ಧರಿಸಿದ ಮೇಲೆ ಧನದ ಲೋಭದಿಂದ ಕಳ್ಳರನ್ನು ವಿಮೋಚನೆಗೊಳಿಸುತ್ತಿಲ್ಲವಷ್ಟೇ?
ವ್ಯಕ್ತಂ ತೇ ಕಚ್ಚಿದಾಢ್ಯಸ್ಯ ದರಿದ್ರಸ್ಯ ಚ ಭಾರತ |
ಅರ್ಥಾನ್ನ ಪಥ್ಯಾ ಪಶ್ಯಂತಿ ತವಾಮಾತ್ಯಾ ಹೃತಾ ಧನೈಃ ॥109॥
ನಿನ್ನ ಅಮಾತ್ಯರಾದುದರಿಂದ ಸನ್ಮಾರ್ಗದಲ್ಲಿಯೇ ನಡೆಯಬೇಕಾದ ನಿನ್ನ ಅಮಾತ್ಯರು ಯಾರಿಂದಲಾದರೂ ದುಷ್ಟರಿಂದ ಧನವನ್ನು ಸ್ವೀಕರಿಸಿ ಭಾಗ್ಯವಂತನ ಅಥವಾ ದರಿದ್ರನ ಧನವನ್ನು ತಪ್ಪಾಗಿ ಗ್ರಹಿಸಿ ಅವರನ್ನು ನಾಶಪಡಿಸುಪಡಿಸುತ್ತಿಲ್ಲವಷ್ಟೇ?

ನಾಸ್ತಿಕ್ಯಮನೃತಂ ಕ್ರೋಧಂ ಪ್ರಮಾದಂ ದೀರ್ಘಸೂತ್ರತಾಮ್ |
ಅದರ್ಶನಂ ಜ್ಞಾನವತಾಮಾಲಸ್ಯಮಕೃತಜ್ಞತಾಮ್ ॥110॥
ಏಕಚಿಂತನಮರ್ಥಾನಾಮನರ್ಥಜ್ಞೈಶ್ಚ ಚಿಂತನಮ್ |
ನಿಶ್ಚಿತಾನಾಮನಾರಂಭಂ ಮಂತ್ರಸ್ಯಾಪರಿಪಾಲನಮ್ ॥111॥
ಮಂಗಲಸ್ಯಾಪ್ರಯೋಗಂ ಚ ಪ್ರಸಂಗಂ ವಿಷಯೇಷು ಚ |
ಕಚ್ಚಿತ್ ತ್ವಂ ವರ್ಜಯಸ್ಯೇತಾನ್ ರಾಜದೋಷಾಂಶ್ಚತುರ್ದಶ ॥112॥
ನಾಸ್ತಿಕ್ಯ, ಅನೃತ, ಕ್ರೋಧ, ಪ್ರಮಾದ, ಬಹಳ ವಿಳಂಬಮಾಡಿಕಾರ್ಯವನ್ನು ಆಚರಿಸುವುದು, ಜ್ಞಾನಿಗಳದರ್ಶನವನ್ನು ಮಾಡದಿರುವುದು, ಆಲಸ್ಯ, ಕೃತಜ್ಞತೆ ಇಲ್ಲದಿರುವುದು, ಯಾವಾಗಲೂ ಧನವನ್ನು ಚಿಂತಿಸುವುದು, ಅರ್ಥಶಾಸ್ತ್ರವನ್ನು ತಿಳಿಯದಿರುವ ಜನರ ಜೊತೆಯಲ್ಲಿ ಅರ್ಥವನ್ನು ಚಿಂತಿಸುವುದು, ಮಾಡಬೇಕೆಂದು ನಿಶ್ಚಯಮಾಡಿದ ಕಾರ್ಯಗಳನ್ನು ಪ್ರಾರಂಬಿಸದಿರುವುದು, ಮಂತ್ರಾಲೋಚನೆಯನ್ನು ರಕ್ಷಣೆಮಾಡಿಕೊಳ್ಳದಿರುವುದು ಮಂಗಳಕಾರ್ಯಗಳನ್ನು ಮಾಡದಿರುವುದು, ಭೋಗಗಳಲ್ಲಿ ಆಸಕ್ತನಾಗುವುದು, ಈ ಹದಿನಾಲ್ಕು ರಾಜದೋಷಗಳು. ನೀನು ಇವುಗಳನ್ನು ವರ್ಜಿಸಿರುವೆಯಾ?
ಕಚ್ಚಿತ್ ತೇ ಸಫಲಾ ವೇದಾಃ ಕಚ್ಚಿತ್ ತೇ ಸಫಲಂ ಧನಮ್ |
ಕಚ್ಚಿತ್ ತೇ ಸಫಲಾ ದಾರಾಃ ಕಚ್ಚಿತ್ ತೇ ಸಫಲಂ ಶ್ರುತಮ್ ॥113॥
ನಿನ್ನ ವೇದಗಳು ಸಫಲವಾಗಿವೆಯೇ, ನಿನ್ನ ಧನವು ಸಫಲವಾಗಿದೆಯೇ, ನಿನ್ನ ಪತ್ನಿಯರು ಸಫಲರಾಗಿದ್ದಾರೆಯೇ, ನಿನ್ನ ವಿದ್ಯೆಯು ಸಫಲವಾಗಿದೆಯೇ?
ಯುಷ್ಠಿರಃ
ಕಥಂ ವೈ ಸಫಲಾ ವೇದಾಃ ಕಥಂ ವೈ ಸಫಲಂ ಧನಮ್ |
ಕಥಂ ವೈ ಸಫಲಾ ದಾರಾಃ ಕಥಂ ವೈ ಸಫಲಂ ಶ್ರುತಮ್ ॥114॥
ವೇದಗಳು ಹೇಗೆ ಸಫಲವಾಗುತ್ತವೆ? ಧನವು ಹೇಗೆ ಸಫಲವಾಗುತ್ತದೆ? ಭಾರ್ಯೆಯು ಹೇಗೆ ಸಫಲಳಾಗುತ್ತಾಳೆ? ವಿದ್ಯೆಯು ಹೇಗೆ ಸಫಲವಾಗುತ್ತದೆ?
ನಾರದಃ
ಅಗ್ನಿಹೋತ್ರಫಲಾ ವೇದಾ ದತ್ತಭುಕ್ತಫಲಂ ಧನಮ್ |
ರತಿಪುತ್ರಫಲಾ ದಾರಾಃ ಶೀಲವೃತ್ತಫಲಂ ಶ್ರುತಮ್ ॥115॥
ಅಗ್ನಿಹೋತ್ರವು ವೇದಗಳ ಫಲವು, ದಾನ ಮತ್ತು ಭೋಗವು ಧನದ ಫಲ, ರತಿ ಮತ್ತು ಪುತ್ರರು ಭಾರ್ಯೆಯ ಫಲ, ಶೀಲವೃತ್ತಗಳು ವಿದ್ಯೆಯ ಫಲ.
ವೈಶಂಪಾಯನಃ
ಏತದಾಖ್ಯಾಯ ಸ ಮುನಿರ್ನಾರದೋ ವೈ ಮಹಾತಪಾಃ |
ಪಪ್ರಚ್ಛಾನಂತರಮಿದಂ ಧರ್ಮಾತ್ಮಾನಂ ಯುಷ್ಠಿರಮ್ ॥116॥
ಮಹಾತಪಸ್ವಿಗಳಾದ ಆ ನಾರದ ಮಹರ್ಷಿಗಳು, ಇದನ್ನು ಹೇಳಿ ಅನಂತರ ಧರ್ಮಾತ್ಮನಾದ ಯುಷ್ಠಿರನನ್ನು ಕುರಿತು ಹೀಗೆ ಪ್ರಶ್ನೆಮಾಡಿದರು.
ಕಚ್ಚಿದಭ್ಯಾಗತಾ ದೂರಾದ್ ವಣಿಜೋ ಲಾಭಕಾರಣಾತ್ |
ಯಥೋಕ್ತಮೇವ ಹಾರ್ಯಂತೇ ಶುಲ್ಕಂ ಶುಲ್ಕೋಪಜೀವಿಭಿಃ ॥117॥
ದೂರದಿಂದ ವ್ಯಾಪಾರವನ್ನು ಮಾಡಿ ಲಾಭವನ್ನು ಗಳಿಸಬೇಕೆಂದು ಬಂದ ವರ್ತಕರಿಂದ ನಿನ್ನ ತೆರಿಗೆಯ ಅಕಾರಿಗಳು ಶಾಸ್ತ್ರವಿಹಿತವಾದಷ್ಟು ತೆರಿಗೆಯನ್ನು ಮಾತ್ರ ಸ್ವೀಕರಿಸುತ್ತಿದ್ದಾರಷ್ಟೇ?
ಕಚ್ಚಿತ್ ತೇ ಪುರುಷಾ ರಾಜನ್ ಪುರೇ ರಾಷ್ಟ್ರೇ ಚ ಪಾಲಿತಾಃ |
ಉತ್ಪಾದಯಂತಿ ಪುಣ್ಯಾನಿ ಉಪಧಾಭಿರವಂಚಿತಾಃ ॥118॥
ರಾಜನೇ! ರಾಜಧಾನಿಯಲ್ಲಿಯೂ ಮತ್ತು ರಾಷ್ಟ್ರದಲ್ಲಿಯೂ ನಿನ್ನಿಂದ ರಕ್ಷಿಸಲ್ಪಟ್ಟ ಪ್ರಜೆಗಳು ಯಾವ ನೆಪಗಳಿಂದಲೂ ವಂಚಿತರಾಗದೆ ಪುಣ್ಯವಾದ ಕೆಲಸವನ್ನು ಮಾಡುತ್ತಿದ್ದಾರಷ್ಟೇ?
ಕಚ್ಚಿಚ್ಛೃಣೋಷಿ ವೃದ್ಧಾನಾಂ ಧರ್ಮಾರ್ಥಸಹಿತಾ ಗಿರಃ |
ನಿತ್ಯಮಾತ್ಮವಿದಾಂ ತಾತ ಯಥಾಧರ್ಮಾನುದರ್ಶಿನಾಮ್ ॥119॥
ಪ್ರೀತಿಪಾತ್ರನೇ! ಆತ್ಮಜ್ಞರಾದ ಧರ್ಮವನ್ನು ಯಥಾರ್ಥವಾಗಿನೋಡುವ ವೃದ್ಧರ ಧರ್ಮಾರ್ಥಯುಕ್ತವಾದ ಮಾತುಗಳನ್ನು ನೀನು ನಿತ್ಯವೂ ಕೇಳಿತ್ತಿರುವೆಯಷ್ಟೇ?
ಕಚ್ಚಿತ್ ತೇ ಕೃಷಿತಂತ್ರೇಷು ಗೋಷು ಪುಷ್ಪಫಲೇಷು ಚ |
ನಿಯುಕ್ತಾಃ ಕುಶಲಾಸ್ತೇಷು ವಿಭಾಗಜ್ಞಾಃ ಕುಲೋಚಿತಾಃ |
ಧರ್ಮಾರ್ಥಂ ಚ ದ್ವಿಜಾತಿಭ್ಯೋ ದೀಯೇತೇ ಮಧುಸರ್ಪಿಷೀ ॥120॥
ನೀನು ಕೃಷಿವಿಧಾನಗಳಲ್ಲಿಯೂ, ಗೋರಕ್ಷಣೆಯ ವಿಧಾನದಲ್ಲಿಯೂ, ಪುಷ್ಪಫಲಗಳ ಉತ್ಪಾದನೆಯಲ್ಲಿಯೂ, ಕುಲೋಚಿತರಾದಂತಹ ಅವುಗಳ ಪ್ರಭೇದಗಳನ್ನು ತಿಳಿದಂತಹ ಕುಶಲರಾದ ಪುರುಷರನ್ನೇ ಯೋಜಿಸಿರುವೆಯಷ್ಟೇ? ಬ್ರಾಹ್ಮಣರಿಗೆ ಧರ್ಮಾರ್ಥವಾಗಿ ಜೇನುತುಪ್ಪ ಮತ್ತು ಘೃತಗಳನ್ನು ಕೊಡುತ್ತಿರುವಿಯಷ್ಟೆ?
ದ್ರವ್ಯೋಪಕರಣಂ ಕಿಂಚಿತ್ ಸರ್ವದಾ ಸರ್ವಶಿಲ್ಪಿನಾಮ್ |
ಚಾತುರ್ಮಾಸ್ಯಾದಕೃತಂ ನಿಯತಂ ಸಂಪ್ರಯಚ್ಛಸಿ ॥121॥

ಮನೆಯನ್ನು ಕಟ್ಟುವವರು ಮೊದಲಾದ ಕುಶಲಕರ್ಮವನ್ನು ಬಲ್ಲವರಿಗೆ ತಮ್ಮ ಕಾರ್ಯಕ್ಕೆ ಬೇಕಾದ ದ್ರವ್ಯಗಳನ್ನು ಮತ್ತು ಉಪಕರಣಗಳನ್ನು ಮುಂದಿನ ನಾಲ್ಕು ತಿಂಗಳುಗಳಲ್ಲಿ ಬೇಕಾಗುವ ಪ್ರಮಾಣಕ್ಕಿಂತ ಅಕವಾಗಿ ನಿಯತವಾಗಿ ಕೊಡುತ್ತಿರುವಿಯಷ್ಟೇ?
ಕಚ್ಚಿತ್ ಕೃತಂ ಚ ಜಾನೀಷೇ ಕರ್ತಾರಂ ಚ ಪ್ರಶಂಸಸಿ |
ಸತಾಂ ಮಧ್ಯೇ ಮಹಾರಾಜ ಸತ್ಕರೋಷಿ ಚ ಪೂಜಯನ್ ॥122॥
ಸತ್ಕಾರ್ಯಮಾಡಿದವನನ್ನು ಗುರುತಿಸಿ ಅವನನ್ನು ಸಜ್ಜನರ ಮಧ್ಯದಲ್ಲಿ ಪ್ರಶಂಸಿಸಿ ಸತ್ಕಾರವನ್ನು ಮಾಡಿ ಗೌರವಿಸುತ್ತಿರುವಿಯಷ್ಟೇ?
ಕಚ್ಚಿತ್ ಸೂತ್ರಾಣಿ ಸರ್ವಾಣಿ ಗೃಹ್ಣಾಸಿ ಭರತರ್ಷಭ |
ಹಸ್ತಿಸೂತ್ರಾಶ್ವಸೂತ್ರಾಣಿ ರಥಸೂತ್ರಾಣಿ ಚಾಭಿಭೋ ॥123॥
ಶತ್ರುಗಳನ್ನು ಸೋಲಿಸುವವನೇ ಭರತರ್ಷಭನೇ! ಅಶ್ವಶಾಸ್ತ್ರ, ಗಜಶಾಸ್ತ್ರ, ತರ್ಕಶಾಸ್ತ್ರ, ಮೊದಲಾದ ಎಲ್ಲ ಶಾಸ್ತ್ರಗಳನ್ನೂ ಅಭ್ಯಾಸಮಾಡುತ್ತಿರುವಿವೆಯಷ್ಟೇ?
ಕಚ್ಚಿದಭ್ಯಸ್ಯತೇ ಶಶ್ವದ್ ಗೃಹೇ ತೇ ಭರತರ್ಷಭ |
ಧನುರ್ವೇದಸ್ಯ ಸೂತ್ರಂ ಚ ಯಂತ್ರಸೂತ್ರಂ ಚ ನಾಗರಮ್ ॥124॥
ಭರತರ್ಷಭನೇ! ನಿನ್ನ ಮನೆಯಲ್ಲಿ ಸರ್ವಕಾಲದಲ್ಲಿಯೂ ಧರ್ನುವೇದವಿದ್ಯೆಯು, ಯಂತ್ರವಿದ್ಯೆಯು ಮತ್ತು ನಗರವಿದ್ಯೆಯು ಅಭ್ಯಾಸಮಾಡಲ್ಪಡುತ್ತಿರುವುದಷ್ಟೇ?
ಕಚ್ಚಿದಸಽತ್ರಣಿ ಸರ್ವಾಣಿ ಬ್ರಹ್ಮದಂಡಶ್ಚ ತೇಽನಘ |
ವಿಷಯೋಗಾಶ್ಚ ತೇ ಸರ್ವೇ ವಿದಿತಾಃ ಶತ್ರುನಾಶನಾಃ ॥125॥
ದೋಷದೂರನಾದವನೇ! ನೀನು ಎಲ್ಲಾ ಅಸ್ತ್ರಗಳನ್ನೂ ಬ್ರಹ್ಮದಂಡವನ್ನೂ ಶತ್ರುನಾಶಕವಾದ ಎಲ್ಲಾ ವಿಷದಂಡಗಳನ್ನೂ ತಿಳಿದಿರುವೆಯಷ್ಟೇ?
ಕಚ್ಚಿದಗ್ನಿಭಯಾಚ್ಚೈವ ಮೃಗವ್ಯಾಲಭಯಾತ್ ತಥಾ |
ರೋಗರಕ್ಷೋಭಯಾಚ್ಚಾಪಿ ಸ್ವರಾಷ್ಟ್ರಂ ಪರಿರಕ್ಷಸಿ ॥126॥
ನಿನ್ನ ರಾಷ್ಟ್ರವನ್ನು ಅಗ್ನಿಭಯದಿಂದಲೂ, ವನ್ಯಮೃಗಗಳ ಭಯದಿಂದಲೂ, ಗಜಸರ್ಪಗಳ ಭಯದಿಂದಲೂ, ರೋಗ ಮತ್ತು ರಾಕ್ಷಸರ ಭಯದಿಂದಲೂ ರಕ್ಷಿಸುತ್ತಿರುವಿಯಷ್ಟೇ?
ಕಚ್ಚಿದಂಧಾಂಶ್ಚ ಮೂಕಾಂಶ್ಚ ಪಂಗೂನ್ ವ್ಯಂಗಾಂಶ್ಚ ಮಾನವಾನ್ |
ಪಿತೇವ ಪಾಸಿ ಧರ್ಮಜ್ಞ ತಥಾ ಪ್ರವ್ರಜಿತಾನಪಿ ॥127॥
ಧರ್ಮಜ್ಞನೇ! ನೀನು ಅಂಧರಾದ, ಮೂಕರಾದ, ಕುಂಟರಾದ, ಅಂಗಹೀನರಾದ ಮತ್ತು ಸನ್ಯಾಸವನ್ನು ಸ್ವೀಕರಿಸಿದ ಪ್ರಜೆಗಳನ್ನು ತಂದೆಯಂತೆ ರಕ್ಷಿಸುತ್ತಿರುವಿಯಷ್ಟೇ?
ವೈಶಂಪಾಯನಃ
ಏವಂ ಕುರೂಣಾಮೃಷಭೋ ಮಹಾತ್ಮಾ
ಶ್ರುತ್ವಾ ಗಿರೋ ಬ್ರಹ್ಮವಿದುತ್ತಮಸ್ಯ |
ಪ್ರಣಮ್ಯ ಪಾದಾವಭಿವಾದ್ಯ ಹೃಷ್ಟೋ
ರಾಜಾಽಬ್ರವೀನ್ನಾರದಂ ದೇವರೂಪಮ್ ॥128॥
ಹೀಗೆ ಮಹಾತ್ಮನಾದ ಕುರುಶ್ರೇಷ್ಠನಾದ ಧರ್ಮರಾಜನು ಬ್ರಹ್ಮಜ್ಞಾನಿಗಳಲ್ಲಿ ಅಗ್ರಗಣ್ಯರಾದ ದೇವತೆಯಂತೆ ಕಂಗೊಳಿಸುವ ಆ ನಾರದರ ಮಾತುಗಳನ್ನು ಕೇಳಿ ಅವರ ಪಾದಗಳಿಗೆ ನಮಸ್ಕರಿಸಿ ಸಂತೋಷದಿಂದ ಅವರನ್ನು ಕುರಿತು ಮಾತನಾಡಿದನು.
ಏವಂ ಕರಿಷ್ಯಾಮಿ ಯಥಾ ತ್ವಯೋಕ್ತಂ
ಪ್ರಜ್ಞಾ ಹಿ ಮೇ ಭೂಯ ಏವಾಭಿವೃದ್ಧಾ |
ಉಕತ್ತ್ವ ತಥಾ ಚೈವ ಚಕಾರ ರಾಜಾ
ಲೇಭೇ ಮಹೀಂ ಸಾಗರಮೇಖಲಾಂ ಚ ॥129॥
ಪೂಜ್ಯರೇ! ನೀವು ಹೇಳಿದಂತೆಯೇ ಮಾಡುತ್ತಿದ್ದೇನೆ. ನಿಮ್ಮ ಉಪದೇಶದಿಂದ ನನ್ನ ಜ್ಞಾನವು ಇನ್ನೂ ಅಭಿವೃದ್ಧಿಯಾಯಿತು. ಧರ್ಮರಾಜನು ಹೀಗೆ ಹೇಳಿ ಅದರಂತೆಯೇ ನಡೆದುಕೊಂಡು ಸಮುದ್ರಮೇಖಲೆಯಾದ ಭೂಮಿಯನ್ನು ಪಡೆದನು.
ನಾರದಃ
ಏವಂ ಯೋ ವರ್ತತೇ ರಾಜಾ ಚಾತುರ್ವರ್ಣ್ಯಸ್ಯ ರಕ್ಷಣೇ |
ಸ ವಿಹೃತ್ಯೈವ ಸುಸುಖೀ ಶಕ್ರಸ್ಯೈತಿ ಸಲೋಕತಾಮ್ ॥130॥
ಯಾವ ರಾಜನು ಈ ರೀತಿಯಲ್ಲಿ ನಡೆದುಕೊಂಡು ಚಾತುರ್ವರ್ಣ್ಯವನ್ನು ರಕ್ಷಿಸುತ್ತಾನೆಯೋ ಅವನು ಈ ಲೋಕದಲ್ಲಿ ಸುಖದಿಂದ ವಿಹಾರಮಾಡಿ ಮರಣಾನಂತರದಲ್ಲಿ ಇಂದ್ರಸಾಲೋಕ್ಯವನ್ನು ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ಪಂಚಮೋಽಧ್ಯಾಯಃ ॥
॥ ಮಂತ್ರಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * *

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21

ತತಃ ಕದಾಚಿತ್ ಪ್ರವರೇ ಸಭಾತಲೇ
ಧರ್ಮಾತ್ಮಜೋ ರಾಜಭಿರ್ಭ್ರಾತೃಭಿಶ್ಚ |
ವೃತೋ ನಿಶಮ್ಯೈವ ಸಭಾಃ ಸುರಾಣಾಂ
ಯಥಾ ಸ್ಥಿತಾ ನಾರದಮನ್ವಪೃಚ್ಛತ್ ॥55॥
ಒಮ್ಮೆ ದೊಡ್ಡ ಸಭಾಂಗಣದಲ್ಲಿ ರಾಜರುಗಳಿಂದಲೂ ಸೋದರರಿಂದಲೂ ಪರಿವೃತನಾದ ಯುಷ್ಠಿರ ನಾರದರಿಂದ ದೇವಸಭೆಗಳ ಬಗ್ಗೆ ಯಥಾವತ್ತಾಗಿ ಕೇಳಿ ತಿಳಿದ ಬಳಿಕ ಪುನಃ ಪ್ರಶ್ನಿಸಿದ.
* * * *

ಆರನೆಯ ಅಧ್ಯಾಯ
(ಸಂತುಷ್ಟನಾದ ಯುಷ್ಠಿರನಿಂದ ನಾರದರನ್ನು ಕುರಿತು ಉಳಿದ ಸಭೆಗಳ ಬಗ್ಗೆ ಪ್ರಶ್ನೆ, ಉತ್ತರವನ್ನು ಹೇಳಲು ನಾರದರ ಪ್ರತಿಜ್ಞೆ.)
ವೈಶಂಪಾಯನಃ
ಸಂಪೂಜ್ಯಾಥಾಭ್ಯನುಜ್ಞಾತೋ ಮಹರ್ಷೇರ್ವಚನಾತ್ ಪರಮ್|
ಪ್ರತ್ಯುವಾಚಾನುಪೂರ್ವ್ಯೇಣ ಧರ್ಮರಾಜೋ ಯುಷ್ಠಿರಃ ॥1॥
ಧರ್ಮರಾಜನಾದ ಯುಷ್ಠರನು ಮಹರ್ಷಿಗಳಾದ ನಾರದರ ವಚನದನಂತರ ಅವರನ್ನು ಸಂಪೂಜಿಸಿ ಅವರ ಅನುಮತಿಯನ್ನು ಪಡೆದು ಕ್ರಮವಾಗಿ ಮಾತನಾಡಲು ಪ್ರಾರಂಬಿಸಿದನು.
ಭಗವನ್ ಯನ್ಮಮಾಹೈತನ್ಮದರ್ಥಂ ಧರ್ಮಸಂಹಿತಮ್ |
ಯಥಾಶಕ್ತಿ ಯಥಾನ್ಯಾಯಂ ಕ್ರಿಯತೇಽಯಂ ವಿರ್ಮಯಾ ॥2॥
ಪೂಜ್ಯರೇ! ನೀವು ನನ್ನ ಸಲುವಾಗಿ ಹೇಳಿರುವ ಧರ್ಮಸಂಹಿತೆಯನ್ನು ನಾನು ಶಕ್ತಿಯಿದ್ದಷ್ಟು ಮತ್ತು ನನಗೆ ನ್ಯಾಯವೆಂದು ತೋರಿದ ರೀತಿಯಲ್ಲಿ ನಾನು ಅನುಸರಿಸಿಕೊಂಡು ಬರುತ್ತಿದ್ದೇನೆ.
ರಾಜಭಿಸ್ತು ತಥಾ ಕಾರ್ಯಂ ಪುರಾಣಜ್ಞೈರ್ನ ಸಂಶಯಃ |
ಯಥಾನ್ಯಾಯೋಪನೀತಾರ್ಥಂ ಕೃತಂ ಹೇತುಮದರ್ಥವತ್ ॥3॥
ಹಿಂದಿನ ರಾಜರುಗಳ ಚರಿತ್ರೆಯನ್ನು ಕೇಳಿದ ರಾಜರು, ಅವರಂತೆಯೇ ನ್ಯಾಯದಿಂದ ಪ್ರಾಪ್ತವಾದಂತಹ ಸಕಾರಣವಾದ ಮತ್ತು ಪ್ರಯೋಜನಕಾರಿಯಾದ ಕಾರ್ಯವನ್ನು ಮಾಡಲು ಪ್ರಯತ್ನಿಸಬೇಕು ಎಂಬುದರಲ್ಲಿ ಸಂಶಯವಿಲ್ಲ.
ವಯಂ ತು ಸತ್ಪಥೇ ತೇಷಾಂ ಯಾತುಮಿಚ್ಛಾಮಹೇ ಪ್ರಭೋ |
ನತು ಶಕ್ಯಂ ತಥಾ ಗಂತುಂ ಯಥಾ ತೈರ್ನಿಯತಾತ್ಮಭಿಃ ॥4॥
ಪ್ರಭುಗಳಾದ ನಾರದರೇ! ನಾನಾದರೋ ಆ ಪ್ರಾಚೀನರು ಹಾಕಿಕೊಟ್ಟ ಸನ್ಮಾರ್ಗದಲ್ಲಿ ನಡೆಯಲು ಬಯಸುತ್ತೇನೆ. ಆದರೆ ಆಜಿತಾತ್ಮನಾದ ನನಗೆ ಪ್ರಾಚೀನರು ನಡೆದಂತೆ ನಡೆಯುವದಕ್ಕೆ ಸಾಮರ್ಥ್ಯವಿಲ್ಲ.
ಏವಮುಕತ್ವ ಸ ಧರ್ಮಾತ್ಮಾ ವಾಕ್ಯಂ ತಮಭಿಪೂಜ್ಯ ಚ |
ಮುಹೂರ್ತಾತ್ ಪ್ರಾಪ್ತಕಾಲಂ ಚ ದೃಷ್ಟ್ವಾ ಲೋಕಚರಂ ಮುನಿಮ್ ॥
ಧರ್ಮಾತ್ಮನಾದ ಯುಷ್ಠಿರನು ಹೀಗೆ ಹೇಳಿ ನಾರದರನ್ನು ಪೂಜಿಸಿ ಒಂದು ಮೂಹೂರ್ತದ ನಂತರ ಇದು ಸರಿಯಾದ ಕಾಲ ಎಂದು ತಿಳಿದು, ಸಮಸ್ತ ಲೋಕಸಂಚಾರಿಗಳಾದ ನಾರದಮಹರ್ಷಿಗಳನ್ನು ಕುರಿತು(ಕೇಳಿದನು.)
ನಾರದಂ ಸುಸ್ಥಮಾಸೀನಮ್ ಉಪಾಸೀನೋ ಯುಷ್ಠಿರಃ |
ತಂ ತು ವಿಶ್ರಾಂತಮಾಸೀನಂ ದೇವರ್ಷಿಮಮಿತದ್ಯುತಿಮ್ |
ಅಪೃಚ್ಛದ್ ರಾಜಮಧ್ಯೇ ತಂ ಪ್ರೀತಿಪೂರ್ವಮಿದಂ ತದಾ ॥6॥
ಸುಖವಾದ ಆಸನದಲ್ಲಿ ನಾರದರು ಕುಳಿತ ನಂತರ ಸಮೀಪದಲ್ಲಿ ಕುಳಿತಿದ್ದ ಯುಷ್ಠಿರನು ಅಮಿತಕಾಂತಿಯುಳ್ಳ ದೇವರ್ಷಿಗಳಾದ ನಾರದರು ವಿಶ್ರಾಂತರಾಗಿರುವುದನ್ನು ಗಮನಿಸಿ, ರಾಜಸಮೂಹದ ಮಧ್ಯದಲ್ಲಿ ಪ್ರೀತಿಪೂರ್ವಕವಾಗಿ ಆಗ ಈ ಮಾತುಗಳನ್ನು ಆಡಿದನು.
ಭಗವನ್ ಸಂಚರಂಲ್ಲೋಕಾನ್ ಸದಾ ನಾನಾವಿಧಾನ್ ಬಹೂನ್ |
ಬ್ರಹ್ಮಣಾ ನಿರ್ಮಿತಾನ್ ಪೂರ್ವಂ ಪ್ರೇಕ್ಷಮಾಣೋ ಮನೋಜವಃ ॥
ಪೂಜ್ಯರೇ! ನೀವು ಮನೋಜವದಿಂದ ಯುಕ್ತರಾಗಿ ಬ್ರಹ್ಮದೇವರು ಸೃಷ್ಟಿಮಾಡಿದ ಬಹುವಿಧವಾದ ಅನೇಕ ಲೋಕಗಳನ್ನು ಹಿಂದೆ ನೋಡಿದ್ದೀರಿ.
ಈದೃಶೀ ಭವಿತಾ ಕಾಚಿದ್ ದೃಷ್ಟಪೂರ್ವಾ ಸಭಾ ಕ್ವಚಿತ್ |
ಇತೋ ವಾ ಶ್ರೇಯಸೀ ಬ್ರಹ್ಮಂಸ್ತನ್ಮಮಾಚಕ್ಷ್ವ ಪೃಚ್ಛತಃ ॥8॥
ಪೂಜ್ಯರೇ! ತಾವು ಇದಕ್ಕಿಂತ ಮೊದಲು ಈ ರೀತಿಯ ಸಭೆಯನ್ನು ಎಲ್ಲಿಯಾದರೂ ನೋಡಿದ್ದೀರಾ, ಅಥವಾ ಇದಕ್ಕಿಂತ ಉತ್ತಮವಾದ ಸಭೆಯನ್ನು ಎಲ್ಲಿಯಾದರೂ ನೋಡಿದ್ದೀರಾ ಎಂಬ ವಿಷಯವನ್ನು ಪ್ರಶ್ನೆಮಾಡುತ್ತಿರುವ ನನಗೆ ತಿಳಿಸಿ.
ತಚ್ಛ್ರುತ್ವಾ ನಾರದಸ್ತಸ್ಯ ಧರ್ಮರಾಜಸ್ಯ ಭಾಷಿತಮ್ |
ಪಾಂಡವಂ ಪ್ರತ್ಯುವಾಚೇದಂ ಸ್ಮಯನ್ ಮಧುರಯಾ ಗಿರಾ ॥9॥
ಧರ್ಮರಾಜನ ಆ ಮಾತುಗಳನ್ನು ಕೇಳಿದ ನಾರದರು ಮುಗುಳ್ನಗುತ್ತಾ ಮಧುರವಾದ ಮಾತುಗಳಿಂದ ಧರ್ಮರಾಜನಿಗೆ ಹೀಗೆ ಉತ್ತರವನ್ನು ಕೊಟ್ಟರು.
ಮಾನುಷೇಷು ನ ಮೇ ಕಾಚಿದ್ ದೃಷ್ಟಪೂರ್ವಾ ನಚ ಶ್ರುತಾ |

ಸಭಾ ಮಣಿಮಯೀ ರಾಜನ್ ಯಥೇಯಂ ತವ ಭಾರತ ॥10॥
ಭಾರತರಾಜನೇ! ನಿನ್ನ ಸಭೆಯು ಹೇಗೆ ಮಣಿಮಯವಾಗಿದೆಯೋ ಅಂತಹ ಸಭೆಯನ್ನು ನಾನು ಇದುವರೆಗೆ ಮನುಷ್ಯಲೋಕದಲ್ಲಿ ಎಂದೂ ನೋಡಲಿಲ್ಲ.
ಸಭಾಂ ತು ಪಿತೃರಾಜಸ್ಯ ವರುಣಸ್ಯ ಚ ೀಮತಃ|
ಕಥಯಿಷ್ಯೇ ತಥೇಂದ್ರಸ್ಯ ಕೈಲಾಸನಿಲಯಸ್ಯ ಚ ॥11॥
ನಾನು ನಿನಗೆ ಪಿತೃರಾಜನಾದ ಯಮನ ಸಭೆಯನ್ನೂ, ಮೇಧಾವಿಯಾದ ವರುಣನ ಸಭೆಯನ್ನೂ, ಇಂದ್ರನ ಸಭೆಯನ್ನೂ, ಕೈಲಾಸವಾಸಿಯದ ರುದ್ರನ ಸಭೆಯನ್ನೂ ವರ್ಣಿಸುತ್ತೇನೆ.
ಬ್ರಹ್ಮಣಶ್ಚ ಸಭಾಂ ದಿವ್ಯಾಂ ಕಥಯಿಷ್ಯೇ ಗತಕ್ಲಮಾಮ್|
ಯದಿ ತೇ ಶ್ರವಣೇ ಬುದ್ಧಿರ್ವರ್ತತೇ ಭರತರ್ಷಭ ॥12॥
ಭರತರ್ಷಭನೇ! ನಿನಗೆ ಆ ಸಭೆಗಳ ವಿವರವನ್ನು ಕೇಳುವ ಅಭಿಪ್ರಾಯವಿದ್ದರೆ ನಾನು ಆ ಸಭೆಗಳನ್ನೂ ಮತ್ತು ದುಃಖರಹಿತವಾದ ದಿವ್ಯವಾದ ಬ್ರಹ್ಮದೇವರ ಸಭೆಯನ್ನೂ ವರ್ಣಿಸುತ್ತೇನೆ.
ನಾರದೇನೈವಮುಕ್ತಸ್ತು ಧರ್ಮರಾಜೋ ಯುಷ್ಠಿರಃ|
ಪ್ರಾಂಜಲಿರ್ಭ್ರಾತೃಭಿಃ ಸಾರ್ಧಂ ತೈಶ್ಚ ಸರ್ವೈರ್ನೃಪೈರ್ವೃತಃ ॥13॥
ನಾರದಂ ಪ್ರತ್ಯುವಾಚೇದಂ ಸಭಾಮಧ್ಯೇ ವ್ಯವಸ್ಥಿತಮ್|
ಸಭಾಃ ಕಥಯ ತಾಃ ಸರ್ವಾಃ ಶ್ರೋತುಮಿಚ್ಛಾಮಹೇ ವಯಮ್ ॥14॥
ನಾರದರಿಂದ ಹೀಗೆ ಹೇಳಲ್ಪಟ್ಟ ಧರ್ಮರಾಜನಾದ ಯುಷ್ಠಿರನು ತನ್ನ ಸಹೋದರರ ಜೊತೆಯಲ್ಲಿ ಆ ಋಷಿಗಳಿಗೆ ಕೈಮುಗಿದು ಎಲ್ಲ ರಾಜರಿಂದ ಕೂಡಿಕೊಂಡವನಾಗಿ ಸಭೆಯ ಮಧ್ಯದಲ್ಲಿ ನಾರದರನ್ನು ಕುರಿತು ನಾವೆಲ್ಲರೂ, ಆ ಎಲ್ಲಾ ಸಭೆಗಳನ್ನೂ ಕೇಳಲು ಕೂತೂಹಲದಿಂದ ಕೂಡಿದ್ದೇವೆ. ದಯವಿಟ್ಟು ಅವುಗಳನ್ನು ವರ್ಣಿಸಿ ಎಂದು ಹೇಳಿದನು.
ಕಿಂದ್ರವ್ಯಾಸ್ತಾಃ ಸಭಾ ಬ್ರಹ್ಮನ್ ಕಿಂವಿಸ್ತಾರಾಃ ಕಿಮಾಯತಾಃ|
ಪಿತಾಮಹಂ ಚ ಕೇ ತಸ್ಯಾಂ ಸಭಾಯಾಂ ಪರ್ಯುಪಾಸತೇ ॥15॥
ಪೂಜ್ಯರೇ! ಆ ಸಭೆಗಳನ್ನು ಯಾವ ದ್ರವ್ಯಗಳಿಂದ ನಿರ್ಮಿಸಲಾಗಿದೆ? ಅವುಗಳ ಉದ್ದ ಅಗಲಗಳೆಷ್ಟು? ಬ್ರಹ್ಮದೇವರ ಸಭೆಯಲ್ಲಿ ಯಾರು ಬ್ರಹ್ಮದೇವರನ್ನು ಉಪಾಸನೆಮಾಡುತ್ತಾರೆ?
ವಾಸವಂ ದೇವರಾಜಂ ಚ ಯಮಂ ವೈವಸ್ವತಂ ಚ ಕೇ|
ವರುಣಂ ಚ ಕುಬೇರಂ ಚ ಸಭಾಯಾಂ ಸಮುಪಾಸತೇ ॥16॥
ಇಂದ್ರನ ಸಭೆಯಲ್ಲಿ ದೇವರಾಜನಾದ ಇಂದ್ರನನ್ನೂ, ಯಮನ ಸಭೆಯಲ್ಲಿ ವೈವಸ್ವತನಾದ ಯಮನನ್ನೂ, ವರುಣನ ಸಭೆಯಲ್ಲಿ ವರುಣನನ್ನೂ, ಮತ್ತು ಕುಬೇರನ ಸಭೆಯಲ್ಲಿ ಕುಬೇರನನ್ನೂ ಯಾರು ಉಪಾಸನೆ ಮಾಡುತ್ತಾರೆ?
ಏತತ್ ಸರ್ವಂ ಯಥಾತತ್ತ್ವಂ ದೇವರ್ಷೇ ವದತಸ್ತವ|
ಶ್ರೋತುಮಿಚ್ಛಾಮ ಸಹಿತಾಃ ಪರಂ ಕೌತೂಹಲಂ ಹಿ ನಃ ॥17॥
ದೇವರ್ಷಿಗಳೇ! ಈ ಎಲ್ಲ ವಿಷಯಗಳನ್ನು ಯಥಾರ್ಥವಾಗಿ ಹೇಳುವ ನಿಮ್ಮಿಂದ ನಾವೆಲ್ಲರೂ ಕೂಡಿ ಕೇಳಲು ಬಯಸುತ್ತೇನೆ. ನಮಗೆ ಈ ವಿಷಯದಲ್ಲಿ ತುಂಬಾ ಕುತೂಹಲವಿದೆ.
ವೈಶಂಪಾಯನಃ
ಏವಮುಕ್ತಃ ಪಾಂಡವೇನ ನಾರದಃ ಪ್ರತ್ಯುವಾಚ ಹ|
ಕ್ರಮೇಣ ರಾಜನ್ ದಿವ್ಯಾಸ್ತಾಃ ಶ್ರೂಯತಾಮಿಹ ನಃ ಸಭಾಃ ॥18॥
ರಾಜನೇ! ಪಾಂಡವನಾದ ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ನಾರದರು ನಮ್ಮಿಂದ ಕೇಳಿ ಎಂದು ಹೇಳಿ, ಆ ಎಲ್ಲಾ ದಿವ್ಯಸಭೆಗಳನ್ನೂ ಕ್ರಮವಾಗಿ ವರ್ಣಿಸಲು ಪ್ರಾರಂಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಷ್ಠೋಽಧ್ಯಾಯಃ ॥
॥ ಮಂತ್ರಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಆರನೇಯ ಅಧ್ಯಾಯವು ಮುಗಿಯಿತು.
*****

ಏಳನೆಯ ಅಧ್ಯಾಯ
(ಇಂದ್ರಸಭೆಯ ವರ್ಣನೆ)
ನಾರದಃ
ಶತಕ್ರತೋಃ ಸಭಾ ದಿವ್ಯಾ ಭಾಸ್ವರಾ ಕರ್ಮನಿರ್ಮಿತಾ|
ಸ್ವಯಂ ಶಕ್ರೇಣ ಕೌರವ್ಯ ನಿರ್ಜಿತಾರ್ಕಸಮಪ್ರಭಾ ॥1॥
ಕುರುರಾಜನಾದ ಯುಷ್ಠಿರನೇ! ಇಂದ್ರನ ಸಭೆಯು ದಿವ್ಯವೂ ಪ್ರಕಾಶಮಾನವೂ ಆಗಿದ್ದು, ಅವನ ಸತ್ಕರ್ಮಗಳಿಂದ ನಿರ್ಮಿತವಾಗಿದೆ. ಸೂರ್ಯನಿಗೆ ಸಮಾನವಾದ ಪ್ರಭೆಯುಳ್ಳ ಆ ಸಭೆಯು ಇಂದ್ರನ ಸತ್ಕರ್ಮಗಳ ಫಲವಾಗಿ ಜಿತವಾಗಿದೆ.
ವಿಸ್ತೀರ್ಣಾ ಯೋಜನಶತಂ ಶತಮಧ್ಯರ್ಧಮಾಯತಾ|
ವೈಹಾಯಸೀ ಕಾಮಗಮಾ ಪಂಚಯೋಜನಮುಚ್ಛ್ರಿತಾ ॥2॥

ಆ ಸಭೆಯ ವಿಸ್ತೀರ್ಣವು  ನೂರುಯೋಜನಗಳು ಅದರ ಉದ್ದ ನೂರೈವತ್ತು ಯೋಜನಗಳು. ಸಭೆಯ ಎತ್ತರ ಐದು ಯೋಜನಗಳು.
ಅದು ಆಕಾಶದಲ್ಲಿ ಯಥೇಷ್ಟವಾಗಿ ಸಂಚಾರಮಾಡುವ ಸಾಮರ್ಥ್ಯವುಳ್ಳದ್ದು.
ಜರಾಶೋಕಕ್ಲಮಾಪೇತಾ ನಿರಾತಂಕಾ ಶಿವಾ ಸುಖಾ |
ವೇಶ್ಮಾಸನವತೀ ರಮ್ಯಾ ದಿವ್ಯಪಾದಪಶೋಭಿತಾ ॥3॥
ಆ ಸಭೆಯಲ್ಲಿ ಮುಪ್ಪು ದುಃಖ ಆಯಸ ಮತ್ತು ಆತಂಕಗಳು ಇಲ್ಲ. ಅದು ಯಾವಾಗಲೂ ಮಂಗಳವೂ ಸುಖಪ್ರದವೂ ಆಗಿದೆ. ಅದರಲ್ಲಿ ಅನೇಕ ಮನೆಗಳು ಮತ್ತು ದಿವ್ಯ ಆಸನಗಳು ಇದ್ದು ಸುಂದರವಾಗಿದೆ. ಆ ಸಭೆಯಲ್ಲಿ ಅನೇಕ ದಿವ್ಯ ವೃಕ್ಷಗಳು ಶೋಭೆಯನ್ನು ತಂದುಕೊಡುತ್ತವೆ.
ತಸ್ಯಾಂ ದೇವೇಶ್ವರಃ ಪಾರ್ಥ ಸಭಾಯಾಂ ಪರಮಾಸನೇ |
ಆಸ್ತೇ ಶಚ್ಯಾ ಸಹೇಂದ್ರಾಣ್ಯಾ ಶ್ರಿಯಾ ಲಕ್ಷ್ಮ್ಯಾ ಚ ಭಾರತ ॥4॥
ಪಾರ್ಥನೇ! ಆ ಸಭೆಯಲ್ಲಿ ದೇವೇಶ್ವರನಾದ ಇಂದ್ರನು ಶ್ರೇಷ್ಠವಾದ ಆಸನದಲ್ಲಿ ತನ್ನ ಪತ್ನಿಯಾದ  ಶಚಿಯಿಂದಲೂ, ಮತ್ತು ಸ್ವರ್ಗಲೋಕದ ಲಕ್ಷ್ಮಿಯಿಂದಲೂ, ಸಹಿತನಾಗಿ ಆಸೀನನಾಗಿರುತ್ತಾನೆ.
ಬಿಭ್ರದ್ವಪುರನಿರ್ದೇಶ್ಯಂ ಕಿರೀಟೀ ಲೋಹಿತಾಂಗದಃ |
ವಿರಜೋಂಬರಶ್ಚಿತ್ರಮಾಲ್ಯೋ ಹ್ರೀಕೀರ್ತಿದ್ಯುತಿಭಿಃ ಸಹ ॥5॥
ಇಂದ್ರನ ದೇಹವು ಸಹ ಅನಿರ್ದೇಶ್ಯವಾದುದು. ಅವನು ಕಿರೀಟವನ್ನೂ ಅರುಣಬಣ್ಣದ ಅಂಗದಗಳನ್ನೂ ಶುದ್ಧವಾದ ವಸ್ತ್ರಗಳನ್ನೂ ವಿಚಿತ್ರವಾದ ಮಾಲೆಗಳನ್ನೂ ಧರಿಸಿ, ಕೀರ್ತಿಕಾಂತಿ ಮತ್ತು ವಿನಯಗಳಿಂದ ಕಂಗೊಳಿಸುತ್ತಾನೆ.
ತಸ್ಯಾಂ ತೂಪಾಸತೇ ನಿತ್ಯಂ ಮಹಾತ್ಮಾನಂ ಶತಕ್ರತುಮ್ |
ಮರುತಃ ಸರ್ವತೋ ರಾಜನ್ ಸರ್ವೇ ಚ ಗೃಹಮೇನಃ ॥6॥
ರಾಜನೇ! ಆ ಸಭೆಯಲ್ಲಿ ಮಹಾತ್ಮನಾದ ದೇವೇಂದ್ರನನ್ನು ಎಲ್ಲ ದಿಕ್ಕುಗಳಲ್ಲಿಯೂ ಮರುತ್ತುಗಳು ಮತ್ತು  ಗೃಹಸ್ಥರಾಗಿ ಸಿದ್ಧಿಯನ್ನು ಪಡೆದವರೆಲ್ಲರೂ ಯಾವಾಗಲೂ ಉಪಾಸನೆಮಾಡುತ್ತಾರೆ.
ಸಿದ್ಧಾ ದೇವರ್ಷಯಶ್ಚೈವ ಸಾಧ್ಯಾ ದೇವಗಣಾಸ್ತಥಾ |
ಮರುದ್ಗಣಾಶ್ಚ ಸಹಿತಾ ಭಾಸ್ವಂತೋ ಹೇಮಮಾಲಿನಃ ॥7॥
ಪ್ರಕಾಶಮಾನರಾಗಿ, ಸುವರ್ಣಮಯವಾದ, ಮಾಲೆಗಳನ್ನು ಧರಿಸಿದ ಸಿದ್ಧರು ದೇವರ್ಷಿಗಳು ಸಾಧ್ಯರು ದೇವಗಣವು ಮತ್ತು ಮರುದ್ಗಣವು ಅವನನ್ನು ಉಪಾಸನೆಮಾಡುತ್ತಾರೆ.
ಏತೇ ಸಾನುಚರಾಃ ಸರ್ವೇ ದಿವ್ಯರೂಪಾಃ ಸ್ವಲಂಕೃತಾಃ |
ಉಪಾಸತೇ ಮಹಾತ್ಮಾನಂ ದೇವರಾಜಂ ಶತಕ್ರತುಮ್ ॥8॥
ಇವರೆಲ್ಲರೂ ದಿವ್ಯರೂಪವನ್ನು ಧರಿಸಿ ಚೆನ್ನಾಗಿ ಅಲಂಕೃತರಾಗಿ ತಮ್ಮ ಅನುಚರರ ಜೊತೆಯಲ್ಲಿ ಮಹಾತ್ಮನಾದ ದೇವರಾಜನಾದ ಶತಕ್ರತುವನ್ನು ಉಪಾಸನೆಮಾಡುತ್ತಾರೆ.
ತಥಾ ದೇವರ್ಷಯಃ ಸರ್ವೇ ಪಾರ್ಥ ಶಕ್ರಮುಪಾಸತೇ |
ಅಮಲಾ ಧೂತಪಾಪ್ಮಾನೋ ದೀಪ್ಯಮಾನಾ ಇವಾಗ್ನಯಃ ॥9॥
ಪಾರ್ಥನೇ! ಹಾಗೆಯೇ ಪರಿಶುದ್ಧರಾದ ಪಾಪನಿರ್ಮುಕ್ತರಾದ ಅಗ್ನಿಗಳಂತೆ ಶೋಭಿಸುವ ಎಲ್ಲಾ ದೇವರ್ಷಿಗಳೂ ಶಕ್ರನನ್ನು ಉಪಾಸನೆ ಮಾಡುತ್ತಾರೆ.
ತೇಜಸ್ವಿನಃ ಸೋಮಪಾಶ್ಚ ವಿಪಾಪಾ ವಿಗತಕ್ಲಮಾಃ |
ಪರಾಶರಃ ಪರ್ವತಶ್ಚ ತಥಾ ಸಾವರ್ಣಿಗಾಲವೌ |
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹಾಮುನಿಃ ॥10॥
ತೇಜಸ್ವಿಗಳೂ, ಪಾಪರಹಿತರೂ, ಶ್ರಮರಹಿತರೂ, ಆದ ಸೋಮಪಾನಾರ್ಹರಾದ ಎಲ್ಲರೂ ದೇವೇಂದ್ರನನ್ನು ಉಪಾಸನೆಮಾಡುತ್ತಾರೆ. ಅಲ್ಲದೆ ಪರಾಶರ, ಪರ್ವತ, ಸಾವರ್ಣಿ, ಗಾಲವ, ಏಕತ, ದ್ವಿತ, ಮತ್ತು ಮಹರ್ಷಿ ತ್ರಿತ,
ಶಂಖಶ್ಚ ಲಿಖಿತಶ್ಚೈವ ತಥಾ ಗೌರಶಿರಾ ಮುನಿಃ |
ದುರ್ವಾಸಾ ವೈ ದೀರ್ಘತಮಾ ಯಾಜ್ಞವಲ್ಕ್ಯೋಽಥ ಭಾಲುಕಿಃ ॥11॥
ಉದ್ದಾಲಕಃ ಶ್ವೇತಕೇತುಃ ತಾಂಡ್ಯಃ ಶಾಟ್ಯಾಯನಿಸ್ತಥಾ |
ಹವಿಷ್ಮಾಂಶ್ಚ ಹವಿಷ್ಯಶ್ಚ ಹರಿಶ್ಚಂದ್ರಶ್ಚ ಪಾರ್ಥಿವಃ ॥12॥
ಹೃದ್ಯಶ್ಚೋದರಶಾಂಡಿಲ್ಯಃ ಪಾರಾಶರ್ಯಗವಿಷ್ಠಲೌ |
ಜಾಬಾಲಿರ್ವಾಮದೇವಶ್ಚ ಶಕ್ತಿರ್ಗಾರ್ಗ್ಯಸುವಾಮನೌ ॥13॥
ಶಂಖ, ಲಿಖಿತ, ಹಾಗೆಯೇ ಗೌರಶಿರಾ, ದುರ್ವಾಸ, ದೀರ್ಘತಮ, ಯಾಜ್ಞವಲ್ಕ್ಯ, ಭಾಲುಕಿ,  ಉದ್ದಾಲಕ, ಶ್ವೇತಕೇತು, ತಾಂಡ್ಯ, ಶಾಟ್ಯಾಯನಿ, ಹವಿಷ್ಮಾನ್, ಹವಿಷ್ಯ, ಹರಿಶ್ಚಂದ್ರರಾಜ. ಹೃದ್ಯ, ಔದರಶಾಂಡಿಲ್ಯ, ಪಾರಾಶರ್ಯ, ಗವಿಷ್ಠದ, ಜಾಬಾಲಿ,  ವಾಮದೇವ, ಶಕ್ತಿ, ಗಾರ್ಗ್ಯ, ಸುವಾಮನ,
ವಾತಸ್ಕಂಧೋ ವಿಶಾಖಶ್ಚ ವಿಧಾತಾ ಕಾಲ ಏವ ಚ |
ಅನಂತದತ್ತಸ್ತ್ವಷ್ಟಾ ಚ ವಿಶ್ವಕರ್ಮಾ ಚ ತುಂಬುರುಃ ॥14॥
ಮರುತ್ತಶ್ಚ ಮರೀಚಿಶ್ಚ ಸ್ಥಾಣುಶ್ಚಾತ್ರಿರ್ಮಹಾತಪಾಃ |
ಕಕ್ಷೀವಾನ್ ಗೌತಮಸ್ತಾರ್ಕ್ಷ್ಯಃ ತಥಾ ವೈಶ್ವಾನರೋ ಮುನಿಃ ॥15॥
ಷಡರ್ತುಃ ಕವಷೋ ಧೌಮ್ಯೋ ರೈಭ್ಯೋ ನಲಪರಾವಸೂ |

ಸ್ವಸ್ತ್ಯಾತ್ರೇಯೋ ಜರತ್ಕಾರುಃ ಕಹೋಳಃ ಕಾಶ್ಯಪಸ್ತಥಾ ॥16॥
ವಿಭಂಡಕರ್ಶ್ಯಶೃಂಗೌ ಚ ಉನ್ಮುಖೋ ವಿಮುಖಸ್ತಥಾ |
ಋಷಿಃ ಕಾಲಕವರ್ಷೀಯಃ ಸುಶ್ರುತೋಽಥ ಹಿರಣ್ಯದಃ ॥17॥
ಸಂವರ್ತೋ ವೇದಹವ್ಯಶ್ಚ ವಿಶ್ವಸೇನಶ್ಚ ವೀರ್ಯವಾನ್ |
ದಿವ್ಯಾ ಆಪಸ್ತಥೌಷಧ್ಯಃ ಶ್ರದ್ಧಾ ಮೇಧಾ ಸರಸ್ವತೀ ॥18॥
ವಾತಸ್ಕಂಧ, ವಿಶಾಖ, ವಿಧಾತ, ಕಾಲ, ಅನಂತದತ್ತ, ತ್ವಷ್ಟಾ, ವಿಶ್ವಕರ್ಮ, ತುಂಬುರು.ಮರುತ್ತ, ಮರೀಚಿ, ಸ್ಥಾಣು (ಋಷಿ), ಮಹಾತಪಸ್ವಿಯಾದ ಅತ್ರಿ, ಕಕ್ಷೀವಾನ್, ಗೌತಮ, ತಾರ್ಕ್ಷ್ಯ, ವೈಶ್ವಾನರ ಋಷಿ,ಷಡರ್ತು, ಕವಷ, ಧೌಮ್ಯ, ರೈಭ್ಯ, ನಲ, ಪರಾವಸು, ಸ್ವಸ್ತ್ಯಾತ್ರೇಯ, ಜರತ್ಕಾರು, ಕಹೋಳ, ಮತ್ತು ಕಾಶ್ಯಪ, ವಿಭಾಂಡಕ, ಋಷ್ಯಶೃಂಗ, ಉನ್ಮುಖ, ವಿಮುಖ, ಕಾಲಕವರ್ಷೀಯ, ಸುಶ್ರುತ, ಹಿರಣ್ಯದ,ಸಂವರ್ತ, ವೇದಹವ್ಯ, ಪರಾಕ್ರಮಿಯಾದ ವಿಶ್ವಸೇನ, ಜಲಾಭಿಮಾನಿದೇವತೆಗಳು, ಒಷಧಿ ಅಭಿಮಾನಿದೇವತೆಗಳು, ಶ್ರದ್ಧ, ಮೇಧ, ಸರಸ್ವತಿ, ಇವರೆಲ್ಲರೂ ದೇವೇಂದ್ರನನ್ನು ಉಪಾಸನೆಮಾಡುತ್ತಾರೆ.
ಅರ್ಥೋ ಧರ್ಮಶ್ಚ ಕಾಮಶ್ಚ ವಿದ್ಯುತಶ್ಚಾಪಿ ಪಾಂಡವ |
ಪ್ರಾಚೀ ದಿಗ್ ಯಜ್ಞವಾಹಾಶ್ಚ ಪಾವಕಾಃ ಸಪ್ತವಿಂಶತಿಃ ॥19॥
ಅರ್ಥ, ಧರ್ಮ, ಕಾಮ, ವಿದ್ಯುತ್‌ಗಳು, ಪೂರ್ವದಿಕ್, ಯಜ್ಞವಾಹಕರಾದ ಇಪ್ಪತ್ತೇಳು ಅಗ್ನಿಗಳು ಎಲ್ಲರೂ ದೇವೇಂದ್ರನನ್ನು ಉಪಾಸನೆಮಾಡುತ್ತಾರೆ.
ಅಗ್ನೀಷೋಮೌ ತಥೇಂದ್ರಾಗ್ನೀ ಮಿತ್ರಶ್ಚ ಸವಿತಾಽರ್ಯಮಾ |
ಭಗೋ ವಿಶ್ವೇ ಚ ಸಾಧ್ಯಾಶ್ಚ ಶುಕ್ರೋ ಮಂತ್ರೀ ಚ ಭಾರತ ॥20॥
ಯಜ್ಞಾಶ್ಚ ದಕ್ಷಿಣಾಶ್ಚೈವ ಗ್ರಹಾಃ ಸೋಮಾಶ್ಚ ಸರ್ವಶಃ |
ಯಜ್ಞವಾಹಾಶ್ಚ ಯೇ ಮಂತ್ರಾಃ ಸರ್ವೇ ಶಕ್ರಮುಪಾಸತೇ ॥21॥
ಭಾರತನೇ! ಅಗ್ನಿಸೋಮರು ಇಂದ್ರಾಗ್ನಿಗಳು, ಮಿತ್ರ, ಸವಿತಾ. ಅರ್ಯಮಾ, ಭಗ, ವಿಶ್ವೇದೇವತೆಗಳು ಸಾಧ್ಯರು ಮಂತ್ರಿಯಾದ ಶುಕ್ರ. ಯಜ್ಞಾಭಿಮಾನಿದೇವತೆಗಳು ದಕ್ಷಿಣಾಭಿಮಾನಿದೇವತೆಗಳು ಗ್ರಹಾಭಿಮಾನಿದೇವತೆಗಳು, ಎಲ್ಲಾ ಸೋಮಾಭಿಮಾನಿದೇವತೆಗಳು, ಯಜ್ಞದಲ್ಲಿ ಉಪಯೋಗಿಸುವ ಮಂತ್ರಗಳ ಅಭಿಮಾನಿಗಳಾದ ಎಲ್ಲಾ ದೇವತೆಗಳು ಇಂದ್ರನನ್ನು ಉಪಾಸನೆಮಾಡುತ್ತಾರೆ.
ತಥೈವಾಪ್ಸರಸೋ ರಾಜನ್ ರಂಭೋರ್ವಶ್ಯಥ ಮೇನಕಾ |
ಘೃತಾಚೀ ಪಂಚಚೂಡಾ ಚ ವಿಪ್ರಚಿತ್ತಿಪುರೋಗಮಾಃ ॥22॥
ರಾಜನೇ ಹಾಗೆಯೇ, ಅಪ್ಸರೆಯರಾದ ರಂಭೆ, ಊರ್ವಶಿ, ಮೇನಕಾ, ಘೃತಾಚೀ, ಪಂಚಚೂಡಾ, ವಿಪ್ರಚಿತ್ತಿ, ಮೊದಲಾದವರು ಇಂದ್ರನನ್ನು ಉಪಾಸನೆಮಾಡುತ್ತಾರೆ.
ವಿಶ್ವಾವಸುಶ್ಚಿತ್ರಸೇನಃ ಪರ್ವತಸ್ತುಂಬುರುಸ್ತಥಾ |
ವಿದ್ಯಾಧರಾಶ್ಚ ರಾಜೇಂದ್ರ ಗಂಧರ್ವಾಶ್ಚ ಮನೋರಮಾಃ ॥23॥
ನೃತ್ತವಾದಿತ್ರಗೀತೈಶ್ಚ ಭಾವೈಶ್ಚ ವಿವಿಧೈರಪಿ |
ರಮಯಂತಿ ಮಹಾತ್ಮಾನಂ ದೇವರಾಜಂ ಶತಕ್ರತುಮ್ ॥24॥
ರಾಜೇಂದ್ರನೇ! ಹಾಗೆಯೇ ವಿಶ್ವಾವಸು ಚಿತ್ರಸೇನ, ಪರ್ವತ, ತುಂಬುರು, ವಿದ್ಯಾಧರರು ಮತ್ತು ಮನೋಹರರಾದ ಗಂಧರ್ವರು ಇವರೆಲ್ಲರೂ ನೃತ್ಯ ವಾದಿತ್ರ ಗೀತಗಳಿಂದಲೂ ವಿವಿಧ ಭಾವಗಳಿಂದಲೂ ಮಹಾತ್ಮನಾದ ದೇವರಾಜನಾದ ಶತಕ್ರತುವನ್ನು ಸಂತೋಷಪಡಿಸುತ್ತಾರೆ.
ಸ್ತುತಿಭಿರ್ಮಂಗಲೈಶ್ಚೈವ ಸ್ತುವಂತಃ ಕರ್ಮಭಿಸ್ತಥಾ |
ವಿಕ್ರಮೈಶ್ಚ ಮಹಾತ್ಮಾನಂ ಸ್ತುವಂತೋ ರಮಯಂತಿ ತಮ್ ॥25॥
ಇವರು ಮಂಗಳವಾದ ಸ್ತೋತ್ರಗಳಿಂದಲೂ ಅವನು ಮಾಡಿದ ಪರಾಕ್ರಮದ ಕರ್ಮಗಳಿಂದಲೂ ಮಹಾತ್ಮನಾದ ಅವನನ್ನು ಸ್ತೋತ್ರಮಾಡುತ್ತಾ ಸಂತೋಷಪಡಿಸುತ್ತಾರೆ.
ಬ್ರಹ್ಮರಾಜರ್ಷಯಃ ಸರ್ವೇ ತಥಾ ದೇವರ್ಷಯೋಽಪ್ಯುತ |
ವಿಮಾನೈರ್ವಿವಿಧೈ ರಮ್ಯೈರ್ಭ್ರಾಜಮಾನೈರಿವಾಗ್ನಿಭಿಃ ॥26॥
ಸ್ರಗ್ವಿಣೋ ಭೂಷಿತಾಃ ಸರ್ವೇ ಯಾಂತಿ ಚಾಯಾಂತಿ ಚಾಪರೇ |
ಬೃಹಸ್ಪತಿಶ್ಚ ಶುಕ್ರಶ್ಚ ನಿತ್ಯಮಾಸ್ತಾಂ ವಿಶಾಂಪತೇ ॥27॥
ಹಾಗೆಯೇ ಎಲ್ಲಾ ಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ಮತ್ತು ದೇವರ್ಷಿಗಳೂ ಅಗ್ನಿಯಂತೆ ಪ್ರಕಾಶಮಾನವಾದ ವಿಚಿತ್ರವಾದ ವಿಮಾನಗಳಲ್ಲಿ ಎಲ್ಲರೂ ಮಾಲೆಗಳನ್ನು ಧರಿಸಿ ವಿಭೂಷಿತರಾಗಿ ಸಭೆಯಲ್ಲಿ ಗಮನಾಗಮನಗಳನ್ನು ಮಾಡುತ್ತಾರೆ. ರಾಜನೇ! ಆ ಸಭೆಯಲ್ಲಿ ಬೃಹಸ್ಪತಿ ಮತ್ತು ಶುಕ್ರಾಚಾರ್ಯರು ಯಾವಾಗಲೂ ಇರುತ್ತಾರೆ.
ಏತೇ ಚಾನ್ಯೇ ಚ ಬಹವೋ ವಿಪಾಪ್ಮಾನೋ ಯತವ್ರತಾಃ |
ವಿಮಾನೈಃ ಸೂರ್ಯಸಂಕಾಶೈಃ ಸೋಮವತ್ ಪ್ರಿಯದರ್ಶನಾಃ |
ಬ್ರಹ್ಮಣೋ ವಚನಾದ್ ರಾಜನ್ ಭೃಗುಃ ಸಪ್ತರ್ಷಯಸ್ತಥಾ ॥28॥
ಇವರೂ ಮತ್ತು ಇನ್ನೂ ಅನೇಕ ಧೃತವ್ರತರೂ ಪಾಪರಹಿತರೂ ಚಂದ್ರನಂತೆ ಪ್ರಿಯದರ್ಶನರೂ ಆದ ಅನೇಕರು ಸೂರ್ಯಪ್ರಭೆಯಂತೆ ಹೊಳೆಯುವ ವಿಮಾನಗಳಲ್ಲಿ ಅಲ್ಲಿ ಸಂಚರಿಸುತ್ತಾರೆ. ರಾಜನೇ! ಬ್ರಹ್ಮದೇವರ ವಚನದಂತೆ ಭೃಗು ಋಷಿಗಳು ಮತ್ತು ಸಪ್ತ ಋಷಿಗಳು ಅಲ್ಲಿ ಇರುತ್ತಾರೆ.
ಏಷಾ ಸಭಾ ಮಯಾ ದೃಷ್ಟಾ ದಿವ್ಯಾ ಪುಷ್ಕರಮಾಲಿನೀ |

ಶತಕ್ರತೋರ್ಮಹಾಬಾಹೋ ಯಾಮ್ಯಾಂ ಶೃಣು ಮಮಾನಘ ॥29॥
ಮಹಾಬಾಹುವೇ! ದೋಷರಹಿತನಾದವನೇ! ಇದು ನಾನು ನೋಡಿದ ದಿವ್ಯವಾದ ಪುಷ್ಪಮಾಲೆಗಳಿಂದ ಶೋಭಿಸುವ ಇಂದ್ರದೇವರ ಸಭೆ. ಯಮ ದೇವರ ಸಭೆಯನ್ನು ವರ್ಣಿಸುತ್ತೇನೆ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತಮೋಽಧ್ಯಾಯಃ ॥
॥ ಮಂತ್ರಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
*****

ಎಂಟನೆಯ ಅಧ್ಯಾಯ
(ಯಮಸಭೆಯ ವರ್ಣನೆ)
ನಾರದಃ
ಕಥಯಿಷ್ಯೇ ಸಭಾಂ ದಿವ್ಯಾಂ ಯಾಮ್ಯಾಂ ರಾಜನ್ ನಿಬೋಧ ಮೇ |
ವೈವಸ್ವತಸ್ಯ ಚಾರ್ಥಾಯ ವಿಶ್ವಕರ್ಮಾ ಚಕಾರ ಯಾಮ್ ॥1॥
ರಾಜನೇ! ನಾನು ವಿಶ್ವಕರ್ಮನು ಬಹಳ ಪ್ರಯೋಜನದ ಉದ್ದೇಶದಿಂದ ವೈವಸ್ವತನಾದ ಯಮನಿಗೆ ನಿರ್ಮಿಸಿದ ದಿವ್ಯವಾದ ಸಭೆಯನ್ನು ವರ್ಣಿಸುತ್ತೇನೆ ಕೇಳು.
ತೇಜಸ್ವಿನೀ ಸಭಾ ರಾಜನ್ ಬಭೂವ ಶತಯೋಜನಾ |
ವಿಸ್ತಾರಾಯಾಮಸಂಪನ್ನಾ ಭೂಯಸೀ ಚಾಪಿ ಪಾಂಡವ ॥2॥
ರಾಜನೇ! ಆ ಸಭೆಯು ಬಹಳ ತೇಜಸ್ಸುಳ್ಳದ್ದಾಗಿದೆ. ಉದ್ದವೂ ಅಗಲವೂ ನೂರು ಯೋಜನದಷ್ಟು ಇದೆ. ಪಾಂಡವನೇ! ಅದೊಂದು ಶ್ರೇಷ್ಠವಾದ ಸಭೆ.
ಅರ್ಕಪ್ರಕಾಶಾ ಭ್ರಾಜಿಷ್ಣುಃ ಸರ್ವತಃ ಕಾಮಚಾರಿಣೀ |
ನೈವಾತಿಶೀತಾ ನಾತ್ಯುಷ್ಣಾ ಮನಸಶ್ಚ ಪ್ರಹರ್ಷಿಣೀ ॥3॥
ಸೂರ್ಯನ ಪ್ರಕಾಶದಂತಹ ಪ್ರಕಾಶದಿಂದ ಬೆಳಗುವ ಆ ಸಭೆಯು, ಎಲ್ಲಾ ಕಡೆಗಳಲ್ಲಿಯೂ ಸಂಚಾರವನ್ನು ಹೊಂದುವ ಸಾಮರ್ಥ್ಯವನ್ನು ಹೊಂದಿದೆ. ಅದು ಸಮಶೀತೋಷ್ಣವಾಗಿದ್ದು ಮನಸ್ಸಿಗೆ ಹರ್ಷವನ್ನು ಕೊಡುತ್ತದೆ.
ನ ಶೋಕೋ ನ ಜರಾ ತಸ್ಯಾಂ ಕ್ಷುತ್ಪಿಪಾಸೇ ನಚಾಪ್ರಿಯಮ್ |
ನ ದೈನ್ಯಂ ನಚ ಕಾರ್ಪಣ್ಯಂ ಪ್ರತಿಕೂಲಂ ನಚಾಪ್ಯುತ ॥4॥
ಅಲ್ಲಿ ಶೋಕವಾಗಲೀ, ಮುಪ್ಪಾಗಲೀ, ಹಸಿವೆ ಬಾಯಾರಿಕೆಯಾಗಲೀ ಯಾವುದೇ ಅಪ್ರಿಯವಾಗಲೀ ದೈನ್ಯವಾಗಲೀ ಕಾರ್ಪಣ್ಯವಾಗಲೀ ಪ್ರತೀಕೂಲವಾದದ್ದಾಗಲೀ ಯಾವುದೂ ಉಂಟಾಗುವುದಿಲ್ಲ.
ಸರ್ವೇ ಕಾಮಾಃ ಸ್ಥಿತಾಸ್ತಸ್ಯಾಂ ಯೇ ದಿವ್ಯಾ ಯೇ ಚ ಮಾನುಷಾಃ |
ರಸವಂತಃ ಪ್ರಭೂತಾಶ್ಚ ಭಕ್ಷ್ಯಭೋಜ್ಯಾಶ್ಚ ಭಾರತ ॥5॥
ಎಲೈ ಭಾರತನೇ! ಆ ಸಭೆಯಲ್ಲಿ ಮನುಷ್ಯರು ಮತ್ತು ದೇವತೆಗಳು ಅಪೇಕ್ಷಿಸುವ ಎಲ್ಲಾ ಪದಾರ್ಥಗಳು ತುಂಬಿವೆ. ಒಳ್ಳೆಯ ರಸದಿಂದ ಕೂಡಿದ ಭಕ್ಷ್ಯ ಭೋಜ್ಯಗಳು. ಹೇರಳವಾಗಿವೆ.
ಪುಣ್ಯಗಂಧಾಃ ಸ್ರಜಸ್ತತ್ರ ನಿತ್ಯಪುಷ್ಪಫಲಾ ದ್ರುಮಾಃ |
ರಸವಂತಿ ಚ ರಮ್ಯಾಣಿ ಶೀತಾನ್ಯುಷ್ಣಾನಿ ಚೈವ ಹ ॥6॥
ವೃಕ್ಷಾಶ್ಚ ವಿವಿಧಾಸ್ತತ್ರ ನಿತ್ಯಪುಷ್ಪಾ ಮನೋರಮಾಃ |
ಶೀತಳಾನಿ ಚ ತೋಯಾನಿ ಸುಖೋಷ್ಣಾನಿ ಚ ಭಾರತ ॥7॥
ಆ ಸಭೆಯಲ್ಲಿರುವ ಹೂವಿನಮಾಲಿಕೆಗಳು ಪವಿತ್ರವಾದ ಸುಗಂಧವನ್ನು ಬೀರುತ್ತವೆ. ಅಲ್ಲಿಯ ವೃಕ್ಷಗಳು ಎಲ್ಲಾ ಋತುಗಳಲ್ಲಿಯೂ ಪುಷ್ಪಫಲಗಳಿಂದ ಕೂಡಿರುತ್ತವೆ. ಆ ವೃಕ್ಷದ ಫಲಗಳು ಮನೋಹರವಾಗಿಯೂ ರಸಪೂರ್ಣವಾಗಿಯೂ ಕೆಲವು ಶೀತಲವಾಗಿಯೂ, ಕೆಲವು ಬಿಸಿಯಾಗಿಯೂ, ಇರುತ್ತವೆ.
ಯಮಂ ವೈವಸ್ವತಂ ತಾತ ಪ್ರಹೃಷ್ಟಾಃ ಪರ್ಯುಪಾಸತೇ |
ಯಯಾತಿರ್ನಹುಷಃ ಪೂರುರ್ಮಾಂಧಾತಾ ಸೋಮಕೋ ನೃಗಃ |
ತ್ರಸದಸ್ಯುಶ್ಚೈತ್ರರಥಃ ಕೃತವೀರ್ಯಃ ಶ್ರುತಶ್ರವಾಃ ॥8॥
ವಿವಸ್ವತನ ಮಗನಾದ ಯಮಧರ್ಮರಾಜನನ್ನು ಈ ಕೆಳಕಂಡ ರಾಜರುಗಳೆಲ್ಲಾ ಸಂತೋಷದಿಂದ ಉಪಾಸನೆಮಾಡುತ್ತಾರೆ. ಯಯಾತಿ, ನಹುಷ, ಪೂರು, ಮಾಂಧಾತಾ, ಸೋಮಕ, ನೃಗ, ತ್ರಸದಸ್ಯು, ಚೈತ್ರರಥ, ಕೃತವೀರ್ಯ, ಶ್ರುತಶ್ರವ,
ಅರಿಪ್ರಂಡ್ರಃ ಸುವಿಘ್ನಶ್ಚ ಕೃತವೇದಃ ಕೃತಾಕೃತಿಃ |
ಪ್ರತರ್ದನಃ ಶಿಬಿರ್ಮಾತ್ಸ್ಯಃ ಪೃಥುವಕ್ಷಾ ಬೃಹದ್ರಥಃ ॥9॥
ಐಲೋ ಮರುತ್ತಃ ಕುಶಿಕಃ ಸಾಂಕಾಶ್ಯಃ ಸಾಂಕೃತಿರ್ಭವಃ |
ಶಂತನುಶ್ಚ ಸದಶ್ವೋರ್ಮಿಃ ಕಾರ್ತವೀರ್ಯಶ್ಚ ಪಾರ್ಥಿವಃ ॥10॥
ಅರಿಪ್ರಂಡ್ರ, ಸುವಿಘ್ನ, ಕೃತವೇದ, ಕೃತಾಕೃತಿ, ಪ್ರತರ್ದನ, ಶಿಬಿ, ಮಾತ್ಸ್ಯ, ಪೃಥುವಕ್ಷ, ಬೃಹದ್ರಥ, ಐಲವಂಶದ ಮರುತ್ತ, ಕುಶಿಕ, ಸಾಂಕಾಶ್ಯ, ಸಾಂಕೃತಿ, ಭವ, ಶಂತನು, ಸದಶ್ವ, ಊರ್ಮ್ಮಿ, ಕಾರ್ತವೀರ್ಯ.

ಭರತಸ್ತಥೈಲಃ ಸುರಥಃ ಸುನೀಥೋ ನೈಷಧೋ ನಳಃ |
ದಿವೋದಾಸೋ ವಸುಮನಾ ಅಂಬರೀಷೋ ಭಗೀರಥಃ ||11||
ವ್ಯಶ್ವಃ ಸದಶ್ವೋ ವಾಧ್ಯಶ್ವಃ ಪಂಚಹಸ್ತಃ ಪೃಥುಶ್ರವಾಃ |
ಋಷಭೋ ವೃಷಸೇನಶ್ಚ ಕೂಪಶ್ಚ ಸುಮಹಾಬಲಃ ||12||
ಐಲವಂಶದ ಭರತ, ಸುರಥ, ಸುನೀಥ, ನಿಷಧಾಪತಿಯಾದ ನಳ, ದಿವೋದಾಸ, ವಸುಮನಾ, ಅಂಬರೀಷ, ಭಗೀರಥ, ವ್ಯಶ್ವ, ಸದಶ್ವ, ವಾಧ್ಯಶ್ವ, ಪಂಚಹಸ್ತ, ಪೃಥುಶ್ರವಾ, ಋಷಭ, ವೃಷಸೇನ, ಮಹಾಬಲಿಷ್ಮನಾದ ಕೂಪ,
ಪೃಷದಶ್ವೋಽಥ ಸುಮನಾಃ ಪುರುಕುತ್ಸೋ ಧ್ವಜೀ ರಥೀ |
ಆರ್ಷ್ಟಿಷೇಣೋ ದಿಲೀಪಶ್ಚ ಮಹಾತ್ಮಾ ಚಾಪ್ಯುಶೀನರಃ ||13||
ಔಶೀನರಃ ಪುಂಡರೀಕೋ ಯಯಾತಿರ್ಭರತಃ ಶುಚಿಃ |
ಅಂಗೋಽರಿಷ್ಟಶ್ಚ ದೈವಾಶ್ವೋ ದುಃಷಂತಃ ಸಂಜಯೋ ಜಯಃ ||14||
ಭಾಗಸ್ವರಿಃ ಸುನೀಥಶ್ಚ ನಿಷಧೋಽಥ ನಿಮೀ ರಥೀ |
ಕರಂಧಮೋ ಬಾಹಕಶ್ಚ ಸುದ್ಯುಮ್ನೋ ಬಲವಾನ್ ಮಧುಃ ||15||
ಕಪೋತರೋಮಾ ತೃಣಕಃ ಸಹದೇವಾರ್ಜುನೌ ತಥಾ |
ರಾಮೋ ದಾಶರಥಿಶ್ಚೈವ ಲಕ್ಷ್ಮಣೋಽಥ ಪ್ರತರ್ದನಃ ||16||
ಪೃಷದಶ್ವ, ಸುಮನ, ಪುರುಕುತ್ಸ, ಧ್ವಜೀ, ರಥೀ, ಆರ್ಷ್ಟಿಷೇಣ, ದಿಲೀಪ, ಮಹಾತ್ಮನಾದ ಉಶೀನರ, ಉಶೀನರನ ಪುತ್ರನಾದ ಪುಂಡರೀಕ, ಯಯಾತಿ, ಭರತ, ಶುಚಿ, ಅಂಗ, ಅರಿಷ್ಟ. ದೇವಾಶ್ವ, ದುಃಷಂತ, ಸಂಜಯ, ಜಯ. ಭಾಗಸ್ವರಿ, ಸುನೀಥ, ನಿಷಧ, ನಿಮಿ, ರಥೀ, ಕರಂಧಮ, ಬಾಹಕ, ಸುದ್ಯುಮ್ನ, ಮಧು, ಕಪೋತರೋಮ, ತೃಣಕ, ಸಹದೇವ, ಅರ್ಜುನ, ದಾಶರಥಿರಾಮ, ಲಕ್ಷ್ಮಣ, ಪ್ರತರ್ದನ,
ಅಳರ್ಕಃ ಕಕ್ಷಸೇನಶ್ಚ ಗಯೋ ಗೌರಾಶ್ವ ಏವ ಚ |
ಜಾಮದಗ್ನ್ಯಶ್ಚ ರಾಮಶ್ಚ ನಾಭಾಗಸಗರೌ ತಥಾ ||17||
ಭೂರಿದ್ಯುಮ್ನೋ ಹ್ಯರಶ್ಚ ಪೃಥಾಶ್ವೋ ಜನಕಸ್ತಥಾ |
ವೈನ್ಯೋ ರಾಜಾ ಪಾರಿಷೇಣಃ ಪುರುಜೋ ಜನಮೇಜಯಃ ||18||
ಅಳರ್ಕ, ಕಕ್ಷಸೇನ, ಗಯ, ಗೌರಾಶ್ವ, ಜಾಮದಗ್ನ್ಯನಾದ ಪರಶುರಾಮ, ನಾಭಾಗ, ಸಗರ, ಭೂರಿದ್ಯುಮ್ನ, ಅೀರ, ಪೃಥಾಶ್ವ, ಜನಕ, ವೈನ್ಯ, ಪಾರಿಷೇಣ, ಪುರಜ, ಜನಮೇಜಯ,
ಬ್ರಹ್ಮದತ್ತಸ್ತ್ರಿಗರ್ತಶ್ಚ ರಾಜೋಪರಿಚರಸ್ತಥಾ |
ಮಹಾಭುಜೋ ಮಹಾಜಾನುರ್ಮಾಯಾಸೃಷ್ಟೋ ಹಯೋಽನಘಃ ||
ಪಾದ್ಮಶ್ಚ ಮುಚುಕುಂದಶ್ಚ ಇಂದ್ರದ್ಯುಮ್ನಃ ಪ್ರಸೇನಜಿತ್ |
ಅರಿಷ್ಟನೇಮಿಃ ಪ್ರದ್ಯುಮ್ನಃ ಪೃಥುಶ್ಚ ಜನಕಸ್ತಥಾ ||20||
ಬ್ರಹ್ಮದತ್ತ, ತ್ರಿಗರ್ತ, ರಾಜೋಪರಿಚರ, ಮಹಾಭುಜ, ಮಹಾಜಾನು, ಮಾಯಾಸೃಷ್ಟ ಹಯ, ಅನಘ, ಪಾದ್ಮ, ಮುಚುಕುಂದ, ಇಂದ್ರದ್ಯುಮ್ನ, ಪ್ರಸೇನಜಿತ್, ಅರಿಷ್ಠನೇಮಿ, ಪ್ರದುಮ್ನ, ಪೃಥು, ಜನಕ.
ಶತಂ ಮತ್ಸ್ಯಾ ನೃಪತಯಃ ಶತಂ ನೀಪಾಃ ಶತಂ ಗಯಾಃ |
ಧೃತರಾಷ್ಟ್ರಾಶ್ಚೈವ ಶತಮಶೀತಿರ್ಜನಮೇಜಯಾಃ ||21||
ನೂರು ಮತ್ಸ್ಯ ಭೂಪಾಲರು. ನೀಪರಾಜರು ನೂರು. ಗಯಾ ರಾಜರು ನೂರು. ಧೃತತಾಷ್ಟ್ರರು ನೂರು. ಜನಮೇಜಯರು ಎಂಬತ್ತು (ಇವರೆಲ್ಲರೂ ಯಮನನ್ನು ಉಪಾಸನೆಮಾಡುತ್ತಾರೆ.)
ಶತಂ ಚ ಬ್ರಹ್ಮದತ್ತಾನಾಂ ವೈರಿಣೋ ವೈರಿಣಸ್ತಥಾ |
ಶಂತನುಶ್ಚೈವ ರಾಜರ್ಷಿಃ ಪಾಂಡುಶ್ಚೈವ ಪಿತಾ ತವ ||22||
ಬ್ರಹ್ಮದತ್ತರು ನೂರುಮಂದಿ. ಮರುಭೂಮಿಯ ರಾಜರು ನೂರುಮಂದಿ, ರಾಜರ್ಷಿಯಾದ ಶಂತನು ಮತ್ತು ನಿನ್ನ ತಂದೆಯಾದ ಪಾಂಡು (ಎಲ್ಲರೂ ಮಯನನ್ನು ಉಪಾಸನೆಮಾಡುತ್ತಾರೆ.)
ಋಷಡ್ಗುವಃ ಶತರಥೋ ದೇವರಾಜೋ ಜಯದ್ರಥಃ |
ವೃಷಾದರ್ವಿಶ್ಚ ರಾಜರ್ಷಿರ್ಧಾಮ್ನಾ ಸಹ ಸಮೃದ್ಧಿನಾ ||23||
ಋಷಡ್ಗುವ, ಶತರಥ, ದೇವರಾಜ, ಜಯದ್ರಥ, ವೃಷಾದರ್ವಿ, ಧಾಮ, ಸಮೃದ್ಧಿ,
ಅಥಾಪರೇ ಸಹಸ್ರಾಣಿ ಯೇ ಗತಾಃ ಶಶಬಿಂದವಃ |
ಇಷ್ಟ್ವಾಽಶ್ವಮೇಧೈರ್ಬಹುಭಿರ್ಮಹದ್ಭಿರ್ಭೂರಿದಕ್ಷಿಣೈಃ ||24||
ಇವರಲ್ಲದೆ ಭೂರಿದಕ್ಷಿಣೆಯುಳ್ಳ ಅನೇಕ ಅಶ್ವಮೇಧಯಾಗಗಳನ್ನು ಮಾಡಿದ ಶಶಬಿಂದುವಿನ ವಂಶದ ಸಹಸ್ರಾರು ರಾಜರು ಸಹ (ಯಮನನ್ನು ಉಪಾಸನೆಮಾಡುತ್ತಾರೆ.)
ಏತೇ ರಾಜರ್ಷಯಃ ಪುಣ್ಯಾಃ ಕೀರ್ತಿಮಂತೋ ಬಹುಶ್ರುತಾಃ |
ತಸ್ಯಾಂ ಸಭಾಯಾಂ ರಾಜರ್ಷೇ ವೈವಸ್ವತಮುಪಾಸತೇ ||25||
ರಾಜರ್ಷಿಯಾದ ಧರ್ಮರಾಜನೇ! ಬಹುವಿದ್ಯಾಸಂಪನ್ನರೂ ಕೀರ್ತಿವಂತರೂ ಪುಣ್ಯವಂತರೂ ಆದ ಈ ರಾಜರ್ಷಿಗಳೆಲ್ಲರೂ ಆ ಸಭೆಯಲ್ಲಿ ವೈವಸ್ವತನಾದ ಯಮನನ್ನು ಉಪಾಸನೆಮಾಡುತ್ತಾರೆ.
ಅಗಸ್ತ್ಯೋಽಥ ಮತಂಗಶ್ಚ ಕಾಲೋ ಮೃತ್ಯುಸ್ತಥೈವ ಚ |
ಯಜ್ವಾನಶ್ಚೈವ ಸಿದ್ಧಾಶ್ಚ ಯೇ ಚ ಯೋಗಶರೀರಿಣಃ ||26||

ಅನಂತರ ಅಗಸ್ತ್ಯ ಮತಂಗ ಕಾಲ ಮೃತ್ಯು ಅನೇಕಯಾಗಗಳನ್ನುಮಾಡಿದವರು ಸಿದ್ಧರು ಯೋಗಶರೀರವುಳ್ಳವರು.
ಅಗ್ನಿಷ್ವಾತ್ತಾಶ್ಚ ಪಿತರಃ ಫೇನಪಾಶ್ಚೋಷ್ಮಪಾಶ್ಚ ಯೇ |
ಸ್ವಧಾವಂತೋ ಬರ್ಹಿಷದೋ ಮೂರ್ತಾಮೂರ್ತಾಶ್ಚ ಯೇ ಸ್ಮೃತಾಃ ॥27॥
ಅಗ್ನಿಷ್ವಾತ್ತ್ವ ಎಂಬ ಪಿತೃಗಣಗಳು ಫೇನಪರು ಊಷ್ಮಪರು, ಸ್ವಧಾವಂತರು, ಬರ್ಹಿಷದರು. ಮೂರ್ತಾಮೂರ್ತಾ ಪಿತೃಗಣಗಳು (ಯಮನನ್ನು ಉಪಾಸನೆಮಾಡುತ್ತಾರೆ.)
ಕಾಲಚಕ್ರಂ ಚ ಸಾಕ್ಷಾಚ್ಚ ಭಗವಾನ್ ಹವ್ಯವಾಹನಃ |
ನರಾ ದುಷ್ಕೃತಕರ್ಮಾಣೋ ದಕ್ಷಿಣಾಯನಮೃತ್ಯವಃ |
ಕಾಲಸ್ಯ ನಯನೇ ಯುಕ್ತಾ ಯಮಸ್ಯ ಪುರುಷಾಶ್ಚ ಯೇ ॥28॥
ಕಾಲಚಂಕ್ರದ ಅಭಿಮಾನಿದೇವತೆಗಳು ಸಾಕ್ಷಾತ್ ಪೂಜ್ಯನಾದ ಅಗ್ನಿದೇವ, ದಕ್ಷಿಣಾಯದಲ್ಲಿ ಮೃತ್ಯುವನ್ನು ಹೊಂದಿದ ದುಷ್ಟಕರ್ಮವನ್ನು ಮಾಡಿರುವ ಮನುಷ್ಯರು, ಕಾಲಚಕ್ರದ ತಿರುಗುವಿಕೆಯಲ್ಲಿ ಯುಕ್ತರಾದ ಯಮಭಟರು (ಇವರೆಲ್ಲರೂ ಯಮನನ್ನು ಉಪಾಸನೆಮಾಡುತ್ತಾರೆ.)
ತಸ್ಯಾಂ ಶಿಂಶುಪಪಾಲಾಶಾಃ ತಥಾ ಕಾಶಕುಶಾದಯಃ |
ಉಪಾಸತೇ ಯಮಂ ರಾಜನ್ ಮೂರ್ತಿಮಂತೋ ನಿರಾಮಯಾಃ ॥29॥
ರಾಜನೇ! ಆ ಸಭೆಯಲ್ಲಿ ಶಿಂಶುಪ ಫಲಾಶ ಮೊದಲಾದ ವೃಕ್ಷಾಭಿಮಾನಿದೇವತೆಗಳು, ಕಾಶ ಕುಶ ಮೊದಲಾದ ತೃಣಾಭಿಮಾನಿದೇವತೆಗಳು, ಶುದ್ಧವಾದ ಮತ್ತು ಸುಂದರವಾದ ದೇಹಗಳನ್ನು ಧರಿಸಿದವರಾಗಿ ಯಮದೇವರನ್ನು ಉಪಾಸನೆ ಮಾಡುತ್ತಾರೆ.
ಏತೇ ಚಾನ್ಯೇ ಚ ಬಹವಃ ಪಿತೃರಾಜಸಭಾಸದಃ |
ಅಶಕ್ಯಾಃ ಪರಿಸಂಖ್ಯಾತುಂ ನಾಮಭಿಃ ಕರ್ಮಭಿಸ್ತಥಾ ॥30॥
ಇವರೂ ಇನ್ನೂ ಅನೇಕಾನೇಕರೂ ಪಿತೃರಾಜನಾದ ಯಮನ ಸಭೆಯಲ್ಲಿ ಸಭಾಸದರಾಗಿರುತ್ತಾರೆ. ಅವರ ಹೆಸರುಗಳನ್ನಾಗಲೀ ಅವರು ಮಾಡಿದ ಕರ್ಮಗಳನ್ನಾಗಲೀ ಗಣನೆಮಾಡಲು ಸಾಧ್ಯವಿಲ್ಲ.
ಅಸಂಬಾಧಾ ಹಿ ಸಾ ಪಾರ್ಥ ರಮ್ಯಾ ಕಾಮಗಮಾ ಸಭಾ |
ದೀರ್ಘಕಾಲಂ ತಪಸ್ತಪ್ತ್ವಾ ನಿರ್ಮಿತಾ ವಿಶ್ವಕರ್ಮಣಾ ॥31॥
ಎಲೈ ಪಾರ್ಥನೇ! ಯಮದೇವರ ಆ ಸಭೆಯು ಜನಸಂಮರ್ದರಹಿತವಾಗಿ ಮನೋಹರವಾಗಿ ಮನಸ್ಸಿಗೆ ಬಂದಕಡೆ ಸಂಚಾರಮಾಡುವ ಸಾಮರ್ಥ್ಯವನ್ನು ಹೊಂದಿದೆ. ವಿಶ್ವಕರ್ಮನು ಬಹುಕಾಲ ತಪಸ್ಸನ್ನುಮಾಡಿ ಆ ಸಭೆಯನ್ನು ನಿರ್ಮಾಣ ಮಾಡಿದನು.
ಪ್ರಭಾಸಂತೀ ಜ್ವಲಂತೀ ಚ ತೇಜಸಾ ಸ್ವೇನ ಭಾರತ |
ತಾಮುಗ್ರತಪಸೋ ಯಾಂತಿ ಸುವ್ರತಾಃ ಸತ್ಯವಾದಿನಃ ॥32॥
ಎಲೈ ಭಾರತನೇ! ತನ್ನ ತೇಜಸ್ಸಿನಿಂದ ಆದು ಬೆಳಗುತ್ತಾ ಮತ್ತು ಪ್ರಕಾಶವನ್ನು ಸೂಸುತ್ತಾ ಇರುತ್ತದೆ. ಉಗ್ರತಪಸ್ಸನ್ನುಮಾಡಿದವರೂ, ಒಳ್ಳೆಯ ವ್ರತವನ್ನುಮಾಡಿದವರೂ ಮತ್ತು ಸತ್ಯವಾದಿಗಳೂ ಅಲ್ಲಿಗೆ ಹೋಗುತ್ತಾರೆ.
ಶಾಂತಾಃ ಸಂನ್ಯಾಸಿನಃ ಶುದ್ಧಾಃ ಪೂತಾಃ ಪುಣ್ಯೇನ ಕರ್ಮಣಾ |
ಸರ್ವೇ ಭಾಸ್ವರದೇಹಾಶ್ಚ ಸರ್ವೇ ಚ ವಿರಜೋಂಬರಾಃ ॥33॥
ಪುಣ್ಯಕರ್ಮಗಳನ್ನು ಆಚರಿಸುತ್ತಾ ಪವಿತ್ರರಾಗಿ ಶಾಂತರೂ ಶುದ್ಧರೂ ಆದ ಸಂನ್ಯಾಸಿಗಳು ಆ ಸಭೆಗೆ ಹೋಗುತ್ತಾರೆ. ಅವರೆಲ್ಲರೂ ಪ್ರಕಾಶಮಾನದೇಹವುಳ್ಳವರಾಗಿ ಶುಭ್ರವಾದ ವಸ್ತ್ರಗಳನ್ನು ಧರಿಸಿರುತ್ತಾರೆ.
ಚಿತ್ರಾಂಗದಾಶ್ಚಿತ್ರಮಾಲ್ಯಾಃ ಸರ್ವೇ ಜ್ವಲಿತಕುಂಡಲಾಃ |
ಸ್ವಕೃತೈಃ ಕರ್ಮಭಿಃ ಪುಣ್ಯೈಃ ಪಾರಿಬರ್ಹೈಶ್ಚ ಭೂಷಿತಾಃ ॥34॥
ಅವರೆಲ್ಲರೂ ವಿಚಿತ್ರಮಾಲೆಗಳನ್ನು ಧರಿಸಿ ವಿಚಿತ್ರವಾದ ಅಂಗದಗಳನ್ನು ಮತ್ತು ಜ್ವಲಿಸುವ ಕರ್ಣಕುಂಡಲಗಳನ್ನು ಧರಿಸಿರುತ್ತಾರೆ. ಅವರು ತಮ್ಮ ಪುಣ್ಯಕರ್ಮಗಳಿಂದಲೂ ಮತ್ತು ಪಾರಿಬರ್ಹಗಳಿಂದಲೂ ಭೂಷಿತರಾಗಿರುತ್ತಾರೆ.
ಗಂಧರ್ವಾಶ್ಚ ಮಹಾತ್ಮಾನಃ ಶತಶೋಽಪ್ಸರಸಾಂ ಗಣಾಃ |
ವಾದಿತ್ರಂ ನೃತ್ತಗೀತಂ ಚ ಹಾಸ್ಯಂ ಲಾಸ್ಯಂ ಚ ಸರ್ವಶಃ ॥35॥
ಅಲ್ಲಿ ಮಹಾತ್ಮರಾದ ಗಂಧರ್ವರೂ ನೂರು ಸಂಖ್ಯೆಯಲ್ಲಿ ಅಪ್ಸರೆಯರ ಸಮೂಹವೂ ಎಲ್ಲೆಡೆಗಳಲ್ಲಿಯೂ ಗೀತ ವಾದಿತ್ರ ನೃತ್ತ ಹಾಸ್ಯ ಮತ್ತು ಲಾಸ್ಯಗಳಿಂದ ಯಮದೇವರ ಸೇವೆಯನ್ನು ಮಾಡುತ್ತಾರೆ.
ಪುಣ್ಯಾಶ್ಚ ಗಂಧಾಃ ಶಬ್ದಾಶ್ಚ ತಸ್ಯಾಂ ಪಾರ್ಥ ಸಮಂತತಃ |
ದಿವ್ಯಾನಿ ಚೈವ ಮಾಲ್ಯಾನಿ ಉಪತಿಷ್ಠಂತಿ ನಿತ್ಯಶಃ ॥36॥
ಎಲೈ ಪಾರ್ಥನೇ! ಆ ಸಭೆಯಲ್ಲಿ ಎಲ್ಲಾ ಕಡೆಗಳಿಂದಲೂ ಪವಿತ್ರವಾದ ಗಂಧವೂ ಪವಿತ್ರವಾದ ಶಬ್ದಗಳೂ, ದಿವ್ಯವಾದ ಮಾಲೆಗಳೂ, ಯಾವಾಗಲೂ ಉಂಟಾಗುತ್ತವೆ.
ಶತಶೋಽಥ ಸಹಸ್ರಾಣಿ ಧರ್ಮಿಷ್ಠಂ ತಂ ಪ್ರಜೇಶ್ವರಮ್ |
ಉಪಾಸತೇ ಮಹಾತ್ಮಾನೋ ರೂಪಯುಕ್ತಾ ಸ್ವಲಂಕೃತಾಃ ॥37॥
ಧರ್ಮಿಷ್ಠನಾದ ಪ್ರಜಾಪತಿಯಾದ ಆ ಯಮನನ್ನು ಸುಂದರರೂ ಅಲಂಕೃತರೂ ಆದ ಮಹಾತ್ಮರು ನೂರಾರು ಸಾವಿರಾರು ಸಂಖ್ಯೆಯಲ್ಲಿ ಉಪಾಸನೆಮಾಡುತ್ತಾರೆ.
ಈದೃಶೀ ಸಾ ಸಭಾ ರಾಜನ್ ಪಿತೃರಾಜ್ಞೋ ಮಹಾತ್ಮನಃ |
ವರುಣಸ್ಯಾಪಿ ವಕ್ಷ್ಯಾಮಿ ಸಭಾಂ ಪುಷ್ಕರಮಾಲಿನೀಮ್ ॥38॥

ರಾಜನೇ! ಆ ಮಹಾತ್ಮನಾದ  ಪಿತೃರಾಜನಾದ ಯಮನ ಸಭೆಯು  ಹೀಗಿರುತ್ತದೆ. ಇನ್ನು ಪುಷ್ಕರಮಾಲೆಗಳಿಂದ ಅಲಂಕೃತವಾದ ವರುಣನ ಸಭೆಯನ್ನು ವರ್ಣಿಸುತ್ತೇನೆ ಕೇಳು.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟಮೋಽಧ್ಯಾಯಃ ॥
॥ ಮಂತ್ರಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಸಭಾಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
*****
ಒಂಭತ್ತನೆಯ ಅಧ್ಯಾಯ
(ವರುಣಸಭೆಯವರ್ಣನೆ)
ನಾರದಃ
ಯುಷ್ಠಿರ ಸಭಾ ದಿವ್ಯಾ ವರುಣಸ್ಯ ಮಿತಪ್ರಭಾ |
ಪ್ರಮಾಣೇನ ಯಥಾ ಯಾಮ್ಯಾ ಶುಭಪ್ರಾಕಾರತೋರಣಾ ॥1॥
ಯುಷ್ಠಿರನೇ! ವರುಣನ ದಿವ್ಯವಾದ ಅಮಿತಕಾಂತಿಯುಳ್ಳ ಸಭೆಯು ಒಳ್ಳೆಯ ಪ್ರಾಕಾರ ಮತ್ತು ತೋರಣಗಳಿಂದ ಅಲಂಕೃತವಾಗಿದ್ದು ಯಮಸಭೆಯಷ್ಟೇ ವಿಸ್ತಾರವುಳ್ಳದ್ದಾಗಿದೆ.
ಅಂತಃಸಲಿಲಮಾಸ್ಥಾಯ ವಿಹಿತಾ ವಿಶ್ವಕರ್ಮಣಾ |
ದಿವ್ಯೈಃ ರತ್ನಮಯೈರ್ವೃಕ್ಷೈಃ ಫಲಪುಷ್ಪಪ್ರದೈರ್ಯುತಾ ॥2॥
ನೀಲಪೀತಹರಿಚ್ಛ್ಯಾಮೈಃ ಸಿತೈರ್ಲೋಹಿತಕೈರಪಿ |
ಅವತಾನೈಸ್ತಥಾ ಗುಲ್ಮೈಃ ಪುಷ್ಪಮಂಜರಿಧಾರಿಭಿಃ ॥3॥
ವಿಶ್ವಕರ್ಮನು ನೀರಿನ ಮಧ್ಯದಲ್ಲಿ ದಿವ್ಯವಾದ ರತ್ನಮಯವಾದ ಫಲಪುಷ್ಪಗಳಿಂದ ತುಂಬಿದ ವೃಕ್ಷಗಳಿಂದ ಕೂಡಿದುದಾಗಿಯೂ ಮತ್ತು ಹೂವಿನ ಗೊಂಚಲುಗಳನ್ನು ಧರಿಸಿರುವ ನೀಲ, ಪೀತ, ಹಸಿರು, ಶ್ಯಾಮ,  ಶ್ವೇತ, ಕೆಂಪು, ಮೊದಲಾದ  ಬಣ್ಣಗಳ ಕೆಳಗೆ ವಿಸ್ತಾರವಾಗಿ  ಹರಡಿರುವ ಪೊದೆಗಳಿಂದ ಕೂಡಿದುದಾಗಿಯೂ ಅದನ್ನು ನಿರ್ಮಿಸಿದ್ದಾನೆ.
ಸದಾ ಶಕುನಯಸ್ತಸ್ಯಾಂ ನಾನಾವರ್ಣಾ ಮೃದುಸ್ವರಾಃ |
ಅನಿರ್ದೇಶ್ಯಾ ವಪುಷ್ಮಂತಃ ಶತಶೋಽಥ ಸಹಸ್ರಶಃ ॥4॥
ಆ ಸಭೆಯಲ್ಲಿ ನಾನಾವರ್ಣಗಳುಳ್ಳ ಮಧುರವಾದ ಸ್ವರಗಳಿಂದ ಕೂಗುವ ವರ್ಣಿಸಲು ಅಸಾಧ್ಯವಾದ ದೇಹಗಳನ್ನು ಹೊಂದಿರುವ ಪಕ್ಷಿಗಳು ನೂರಾರುಗಟ್ಟಲೆ ಮತ್ತು ಸಾವಿರಾರು ಗಟ್ಟಲೆ ಇವೆ.
ಸಾ ಸಭಾ ಸುಖಸಂಸ್ಪರ್ಶಾ ನಾತಿಶೀತಾ ನ ಘರ್ಮದಾ |
ಶುಭಾಸನವತೀ ರಮ್ಯಾ ಸಿತಾ ವರುಣಸಮ್ಮತಾ ॥5॥
ಆ ಸಭೆಯು ಅತಿಶೀತವಾಗಿಯೂ, ಉಷ್ಣವಾಗಿಯೂ ಇರದೆ, ಸುಖಸ್ಪರ್ಶವುಳ್ಳದ್ದಾಗಿದೆ. ವರುಣನಿಗೆ ಪ್ರಿಯವಾದ ಆ ಶ್ವೇತವರ್ಣದ ಸಭೆಯು, ಒಳ್ಳೆಯ ಆಸನಗಳಿಂದ ಕೂಡಿದ್ದು ಮನೋಹರವಾಗಿದೆ.
ತತ್ರಾಸ್ತೇ ವರುಣೋ ರಾಜಾ ವಾರುಣ್ಯಾ ಸಹ ಭಾರತ |
ದಿವ್ಯಮಾಲ್ಯಾಂಬರಧರೋ ದಿವ್ಯರತ್ನವಿಭೂಷಿತಃ ॥6॥
ಭಾರತನೇ! ಅಲ್ಲಿ ವರುಣನು ದಿವ್ಯಮಾಲ್ಯಗಳನ್ನು  ಮತ್ತು ವಸ್ತ್ರಗಳನ್ನು ಧರಿಸಿ ದಿವ್ಯರತ್ನಗಳಿಂದ ವಿಭೂಷಿತನಾಗಿ  ತನ್ನ ಪತ್ನಿಯಾದ ವಾರುಣಿಯ ಜೊತೆಯಲ್ಲಿ ಇರುತ್ತಾನೆ.
ದ್ವಿತೀಯೇನ ತು ನಾಮ್ನಾ ವೈ ಗೌರೀತಿ ಭುವಿ ವಿಶ್ರುತಾ |
ಪತ್ನ್ಯಾ ಸ ವರುಣೋ ದೇವಃ ಪ್ರಮೋದತಿ ಸುಖೀ ಸುಖಮ್ ॥7॥
ಗೌರಿ ಎಂಬ ನಾಮದಿಂದ ಭೂಮಿಯಲ್ಲಿ ಪ್ರಸಿದ್ಧವಾದ ವಾರುಣಿಯ ಇನ್ನೊಂದು ರೂಪದ ಜೊತೆಯಲ್ಲಿಯೂ ವರುಣದೇವನು ಅಲ್ಲಿ ಸುಖವನ್ನು ಅನುಭವಿಸುತ್ತಾನೆ.
ದಿವ್ಯಮಾಲ್ಯಾಂಬರಧರಾ ದಿವ್ಯಾಲಂಕಾರಭೂಷಿತಾಃ |
ಆದಿತ್ಯಾಸ್ತತ್ರ ವರುಣಂ ಜಲೇಶ್ವರಮುಪಾಸತೇ ॥8॥
ಅಲ್ಲಿ ದಿವ್ಯಮಾಲ್ಯಗಳನ್ನು ಮತ್ತು ವಸ್ತ್ರಗಳನ್ನು ಧರಿಸಿದ ದಿವ್ಯಾಲಂಕಾರಭೂಷಿತರಾದ  ಆದಿತ್ಯರು ಜಲೇಶ್ವರನಾದ ವರುಣನನ್ನು ಉಪಾಸನೆಮಾಡುತ್ತಾರೆ.
ವಾಸುಕಿಸ್ತಕ್ಷಕಶ್ಚೈವ ನಾಗಶ್ಚೈರಾವತಸ್ತಥಾ |
ಕೃಷ್ಣಶ್ಚ ಲೋಹಿತಶ್ಚೈವ ಪದ್ಮಶ್ಚಿತ್ರಶ್ಚ ವೀರ್ಯವಾನ್ ॥9॥
ಕಂಬಳಾಶ್ವತರೌ ನಾಗೌ ಧೃತರಾಷ್ಟ್ರಬಲಾಹಕೌ |
ಘೃಣಿನಾಗಶ್ಚ ನಾಗಶ್ಚ ಮಣಿಃ ಶಂಖನಖಸ್ತಥಾ ॥10॥
ಕೌರವ್ಯಃ ಸ್ವಸ್ತಿಕಶ್ಚೈವ ಏಲಾಪತ್ರಶ್ಚ ವಾಮನಃ |
ಅಪರಾಜಿತಶ್ಚ ದೋಷಶ್ಚ ನಂದಕಃ ಪೂರಣಸ್ತಥಾ ॥11॥
ಅಲ್ಲಿ  ವಾಸುಕಿ, ಕಕ್ಷಕ ಐರಾವತ ಕೃಷ್ಣಲೋಹಿತ ಪದ್ಮ ಪರಾಕ್ರಮಿಯಾದ ಚಿತ್ರ ಕಂಬಳ ಅಶ್ವತರ, ಧೃತರಾಷ್ಟ್ರ, ಬಲಾಹಕ, ಘೃಣಿನಾಗ, ನಾಗ, ಮಣಿ, ಶಂಖನಖ, ಕೌರವ್ಯ, ಸ್ವಸ್ತಿಕ, ಏಲಾಪತ್ರ, ವಾಮನ, ಅಪರಾಜಿತ, ದೋಷ, ನಂದಕ, ಪೂರಣ( ಮೊದಲಾದ ಸರ್ಪಗಳಿವೆ.)
ಅಭೀಕಃ ಶಭಿಕಃ ಶ್ವೇತೋ ಭದ್ರೋ ಭದ್ರೇಶ್ವರಸ್ತಥಾ |

ಮಣಿಮಾನ್ ಪಿಂಡಕಃ ಸಾರಃ ಕಾರ್ಕೋಟಕಧನಂಜಯೌ ॥12॥
ಪ್ರಹ್ಲಾದೋ ಮೂಷಿಕಾದಶ್ಚ ತಥೈವ ಜನಮೇಜಯಃ।
ಪತಾಕಿನೋ ಮಂಡಲಿನಃ ಫಣವಂತಶ್ಚ ಸರ್ವಶಃ ॥13॥
ಅಭೀಕ, ಶಭಿಕ, ಶ್ವೇತ, ಭದ್ರ, ಭದ್ರೇಶ್ವರ, ಮಣಿಮಾನ್, ಪಿಂಡಕ, ಸಾರ, ಕಾರ್ಕೋಟಕ, ಧನಂಜಯ, ಪ್ರಹ್ಲಾದ, ಮೂಷಿಕಾದ, ಮತ್ತು ಜನಮೇಜಯ, ಈ ಸರ್ಪಗಳೆಲ್ಲವೂ ಪತಾಕೆಗಳನ್ನು ಮಂಡಲಗಳನ್ನು ಮತ್ತು ಹೆಡೆಗಳನ್ನು ಹೊಂದಿ ಆ ಸಭೆಯಲ್ಲಿ ಎಲ್ಲಾ ಕಡೆಯಲ್ಲಿಯೂ ಇರುತ್ತವೆ.
ಅನಂತಶ್ಚ ಮಹಾನಾಗೋ ಯಂ ದೃಷ್ಟ್ವಾ ಸ ಜಲೇಶ್ವರಃ।
ಅಭ್ಯರ್ಚಯತಿ ಸತ್ಕಾರೈರಾಸನೇನ ಚ ತಂ ವಿಭುಮ್ ॥14॥
ಮಹಾನಾಗನಾದ ಅಲ್ಲಿರುವ ಅನಂತನನ್ನು (ಶೇಷನನ್ನು) ಜಲೇಶ್ವರನಾದ ವರುಣನು ನೋಡಿ, ವಿಭುವಾದ ಅವನನ್ನು ಆಸನಾದಿಸತ್ಕಾರಗಳಿಂದ ಭಕ್ತಿಯಿಂದ ಪೂಜಿಸುತ್ತಾನೆ.
ವಾಸುಕಿಪ್ರಮುಖಾಶ್ಚೈವ ಸರ್ವೇ ಪ್ರಾಂಜಲಯಃ ಸ್ಥಿತಾಃ।
ಅನುಜ್ಞಾತಾಶ್ಚ ಶೇಷೇಣ ಯಥಾರ್ಹಮುಪವಿಶ್ಯ ಚ।
ಏತೇ ಚಾನ್ಯೇ ಚ ಬಹವಃ ಸರ್ಪಾಸ್ತಸ್ಯಾಂ ಯುಷ್ಠಿರ॥15॥
ವಾಸುಕಿ ಮೊದಲಾದ ಸರ್ಪಗಳು ಶೇಷದೇವರ ಅನುಮತಿಯನ್ನು ಪಡೆದು ತಮತಮಗೆ ಯೋಗ್ಯವಾದ ಆಸನಗಳಲ್ಲಿ ಕುಳಿತು, ಶೇಷದೇವರಿಗೆ ಕೈಮುಗಿಯುತ್ತಾರೆ. ಯುಷ್ಠರನೇ! ಇವುಗಳೂ ಇನ್ನೂ ಅನೇಕ ಸರ್ಪಗಳೂ ಆ ಸಭೆಯಲ್ಲಿವೆ.
ವೈನತೇಯಶ್ಚ ಗರುಡೋ ಯೇ ಚಾನ್ಯೇ ಪರಿಚಾರಿಣಃ।
ಉಪಾಸತೇ ಮಹಾತ್ಮಾನಂ ವರುಣಂ ವಿಗತಜ್ವರಾಃ ॥16॥
ವೈನತೇಯನಾದ ಗರುಡನು ಅಲ್ಲಿದ್ದಾನೆ. ವರುಣನ ಪಾರಿಚಾಲಕರೆಲ್ಲರೂ ಬಹಳ ಎಚ್ಚರಿಕೆಯಿಂದ ಅಲ್ಲಿ ಮಹಾತ್ಮನಾದ ವರುಣನ ಸೇವೆಯನ್ನು ಮಾಡುತ್ತಾರೆ.
ಬಲಿರ್ವೈರೋಚನಿಶ್ಚೈವ ನರಕಃ ಪೃಥಿವೀಂಜಯಃ।
ಪ್ರಹ್ಲಾದೋ ವಿಪ್ರಚಿತ್ತಿಶ್ಚ ಕಾಲಕೇಯಾಶ್ಚ ಸರ್ವಶಃ।
ಸುಮುಖೋ ದುರ್ಮುಖಃ ಶಂಖಃ ಸುಮನಾಃ ಸುಮತಿಃ ಸ್ವನಃ ॥17॥
ವಿರೋಚನನ ಮಗನಾದ ಬಲಿ, ಭೂಮಿಯನ್ನು ಗೆದ್ದ ನರಕ, ಪ್ರಹ್ಲಾದ, ವಿಪ್ರಚಿತ್ತಿ, ಎಲ್ಲಾ ಕಾಲಕೇಯರು,ಸುಮುಖ, ದುರ್ಮುಖ, ಶಂಖ, ಸುಮನಾ, ಸುಮತಿ, ಮತ್ತು ಸ್ವನ, (ಇವರೆಲ್ಲರೂ ಅಲ್ಲಿರುತ್ತಾರೆ.)
ಘಟೋದರೋ ಮಹಾಪಾರ್ಶ್ವಃ ಕ್ರಥಶ್ಚ ಪಿತರಸ್ತಥಾ।
ವಿಶ್ವರೂಪಃ ಸ್ವರೂಪಶ್ಚ ವಿರೂಪಶ್ಚ ಮಹಾಶಿರಾಃ।
ದಶಗ್ರೀವಶ್ಚ ವಾಲೀ ಚ ಮೇಘವಾಸಾಶ್ಚ ಭಾರತ ॥18॥
ಘಟೋದರ, ಮಹಾಪಾರ್ಶ್ವ, ಕ್ರಥ, ಎಲ್ಲ ಪಿತೃಗಳು, ವಿಶ್ವರೂಪ, ಸ್ವರೂಪ, ವಿರೂಪ, ಮಹಾಶಿರಾ, ದಶಗ್ರೀವ, ವಾಲಿ, ಮೇಘವಾಸ,
ದೋದಂಭೋ ವಿಗದೂಭಶ್ಚ ಪ್ರಭವಶ್ಚೇಂದ್ರತಾಪನಃ।
ದೈತ್ಯದಾನವಸಂಘಾಶ್ಚ ಸರ್ವೇ ರುಚಿರಕುಂಡಲಾಃ ॥19॥
ದೋದಂಭ, ವಿಗದೂಭ, ಪ್ರಭವ, ಇಂದ್ರತಾಪನ, ಇವರಲ್ಲದೆ ಇನ್ನೂ ಅನೇಕ ದೈತ್ಯದಾನವಸಮೂಹವು ಸುಂದರವಾದ ಕರ್ಣಕುಂಡಲವನ್ನು ಧರಿಸಿ ಅಲ್ಲಿರುತ್ತಾರೆ.
ಸ್ರಗ್ವಿಣೋ ಮೌಲಿನಃ ಸರ್ವೇ ಸರ್ವೇ ಚ ಚರಿತವ್ರತಾಃ।
ಸರ್ವೇ ಲಬ್ಧವರಾಃ ಶೂರಾಃ ಸರ್ವೇ ವಿಜಿತಮೃತ್ಯವಃ ॥20॥
ಎಲ್ಲರೂ ಮಾಲೆಯನ್ನು ಮತ್ತು ಕಿರೀಟವನ್ನು ಧರಿಸಿರುತ್ತಾರೆ. ಎಲ್ಲರೂ ಮಹಾಚರಿತ್ರೆ ಮತ್ತು ವ್ರತಗಳನ್ನು ಹೊಂದಿದವರು. ಎಲ್ಲರೂ ಶೂರರು ಮತ್ತು ತಪಸ್ಸನ್ನುಮಾಡಿ ವರಗಳನ್ನು ಪಡೆದವರು ಮತ್ತು ಎಲ್ಲರೂ ಮೃತ್ಯುವನ್ನು ಜಯಿಸಿದವರು.
ತೇ ತಸ್ಯಾಂ ವರುಣಂ ಪಾರ್ಥ ಧರ್ಮಪಾಶಸ್ಥಿತಾಃ ಸದಾ।
ಉಪಾಸತೇ ಮಹಾತ್ಮಾನಂ ಸರ್ವೇ ದಿವ್ಯಪರಿಚ್ಛದಾಃ ॥21॥
ಪಾರ್ಥನೇ! ಅವರೆಲ್ಲರೂ ಧರ್ಮಪಾಶದಿಂದ ಬದ್ಧರಾಗಿ ದಿವ್ಯವಾದ ಸಲಕರಣೆಯನ್ನು ಹೊಂದಿ ಯಾವಾಗಲೂ ಮಹತ್ಮನಾದ ವರುಣನ ಉಪಾಸನೆಯನ್ನು ಮಾಡುತ್ತಾರೆ.
ತಥಾ ಸಮುದ್ರಾಶ್ಚತ್ವಾರೋ ನದೀ ಭಾಗೀರಥೀ ಚ ಯಾ।
ಕಾಳಿಂದೀ ವಿದಿಶಾ ವೇಣ್ಣಾ ನರ್ಮದಾ ವೇಗವಾಹಿನೀ ॥22॥
ಹಾಗೆಯೇ ನಾಲ್ಕು ಸಮುದ್ರಗಳು ಭಾಗೀರಥಿನದಿ, ಕಾಳಿಂದಿ, ವಿದಿಶಾ, ವೇಣ್ಣಾ, ನರ್ಮದಾ, ವೇಗವಾಹಿನಿ,
ವಿಪಾಶಾ ಚ ಶತದ್ರುಶ್ಚ ಚಂದ್ರಭಾಗಾ ಸರಸ್ವತೀ।
ಇರಾವತೀ ವಿತಸ್ತಾ ಚ ಸಿಂಧುರ್ದೇವನದಸ್ತಥಾ ॥23॥
ಗೋದಾವರೀ ಕೃಷ್ಣವೇಣೀ ಕಾವೇರೀ ಸರಿತಾಂ ವರಾ।
ಕಂಬುದಾ ಚ ವಿಶಲ್ಯಾ ಚ ಕೌಶಿಕೀ ಗೋಮತೀ ತಥಾ ॥24॥
ದೇವಿಕಾ ಚ ವಿಪಾಕಾ ಚ ತಥಾ ವೈತರಣೀ ನದೀ।
ತೃತೀಯಾ ಜ್ಯೇಷ್ಠಿಲಾ ಚೈವ ಶೋಣಶ್ಚೈವ ಮಹಾನದಃ ॥25॥
ಚರ್ಮಣ್ವತೀ ಶ್ವೇತನದೀ ಫಲ್ಗುನೀ ಚ ಮಹಾನದೀ।

ಸರಯೂಶ್ಚೀರವಲ್ಕೇಲಾ ಕುಲಿಶ್ಚ ಸರಿತಸ್ತಥಾ ॥26॥
ಏತಾಶ್ಚಾನ್ಯಾಶ್ಚ ಸರಿತಃ ತೀರ್ಥಾನಿ ಚ ಸರಾಂಸಿ ಚ |
ಹ್ರದಾಶ್ಚ ವರುಣಂ ದೇವಂ ಸಭಾಯಾಂ ಪರ್ಯುಪಾಸತೇ ॥27॥
ವಿಪಾಶಾ, ಶತದ್ರು, ಚಂದ್ರಭಾಗಾ, ಸರಸ್ವತೀ,ಇರಾವತೀ, ವಿತಸ್ತಾ, ಸಿಂಧು ದೇವನದ, ಗೋದಾವರಿ, ಕೃಷ್ಣವೇಣಿ, ನದಿಗಳಲ್ಲಿ ಶ್ರೇಷ್ಠವಾದ ಕಾವೇರಿ, ಕಂಬುದಾ, ವಿಶಲ್ಯಾ, ಕೌಶಿಕೀ, ಮತ್ತು ಗೋಮತಿ. ದೇವಿಕಾ, ವಿಪಾಕಾ, ವೈತರಣೀ, ಜ್ಯೇಷ್ಠಿಲಾ, ಶೋಣನದಾ, ಚರ್ಮಣ್ವತೀ, ಶ್ವೇತನದೀ, ಫಲ್ಗುನೀ, ಮಹಾನದೀ, ಸರಯೂ, ಚೀರವಲ್ಕಾ, ಕುಲಿ, ಮೊದಲಾದ ನದಿಗಳು.ಇವು ಮತ್ತು ಇನ್ನೂ ಅನೇಕ ನದಿಗಳು ತೀರ್ಥಗಳು, ಸರೋವರಗಳು, ಮತ್ತು ಮಡುಗಳು, ಆ ಸಭೆಯಲ್ಲಿ ವರುಣದೇವನನ್ನು ಉಪಾಸನೆ ಮಾಡುತ್ತಾರೆ.
ಕೂಪಾಶ್ಚ ಸಪ್ರಸ್ರವಣಾ ದೇಹವಂತೋ ಯುಷ್ಠಿರ |
ಪಲ್ವಲಾನಿ ತಟಾಕಾನಿ ದೇಹವಂತ್ಯಥ ಭಾರತ ॥28॥
ಭಾರತನೇ! ಭಾವಿಗಳು ಝರಿಗಳು, ಜೌಗುಪ್ರದೇಶಗಳು, ತಟಾಕಗಳು, ಇವುಗಳ ಅಭಿಮಾನಿಗಳು ದೇಹವನ್ನು ಧರಿಸಿ ವರುಣನನ್ನು ಉಪಾಸನೆಮಾಡುತ್ತಾರೆ.
ದಿಶಶ್ಚಾಥ ಮಹೀ ಚೈವ ವಿದಿಶಶ್ಚ ಮಹೀಧರಾಃ |
ಉಪಾಸತೇ ಮಹಾತ್ಮಾನಂ ಸರ್ವೇ ಜಲಚರಾಸ್ತಥಾ ॥29॥
ದಿಕ್ಕುಗಳು ವಿದಿಕ್ಕುಗಳು ಭೂಮಿ, ಮತ್ತು ಪರ್ವತಗಳು, ಮತ್ತು ಎಲ್ಲಾ ಜಲಚರಪ್ರಾಣಿಗಳು ಮಹಾತ್ಮನಾದ ವರುಣನನ್ನು ಉಪಾಸನೆಮಾಡುತ್ತಾರೆ.
ಗೀತವಾದಿತ್ರವಾದಾಶ್ಚ ಗಂಧರ್ವಾಪ್ಸರಸಾಂ ಗಣಾಃ |
ಸ್ತುವಂತಸ್ತತ್ರ ವರುಣಂ ಸಭಾಯಾಂ ಚ ಸಮಾಸತೇ ॥30॥
ಗಂಧರ್ವ ಮತ್ತು ಅಪ್ಸರೆಯರ ಸಮೂಹವು ಗೀತವಾದಿತ್ರ ನೃತ್ಯಗಳಿಂದ ವರುಣನನ್ನು ಸ್ತೋತ್ರಮಾಡುತ್ತಾ ಆ ಸಭೆಯನ್ನು ಅಲಂಕರಿಸಿರುತ್ತಾರೆ.
ಮಹೀಧರಾ ರತ್ನವಂತೋ ರಸಾ ಯೇ ಚ ಪ್ರತಿಷ್ಠಿತಾಃ |
ಕಥಯಂತಃ ಸುಮಧುರಾಃ ಕಥಾಸ್ತೇ ತು ಸಮಾಸತೇ ॥31॥
ಅನೇಕ ರತ್ನಗಳುಳ್ಳ ಪರ್ವತಗಳು ಮತ್ತು ರಸಗಳು ಸಹ ದೇಹವನ್ನು ಧರಿಸಿ ಸುಮಧುರವಾದ ಕಥೆಗಳನ್ನು ಹೇಳುತ್ತಾ ಆ ಸಭೆಯಲ್ಲಿ ಇರುತ್ತಾರೆ.
ವರುಣಸ್ಯ ಮಹಾಮಂತ್ರೀ ಸುನಾಭಃ ಪರ್ಯುಪಾಸತೇ |
ಪುತ್ರಪೌತ್ರೈಃ ಪರಿವೃತೋ ಗೋನಾಮ್ನಾ ಪುಷ್ಕರೇಣ ಚ |
ಸರ್ವೇ ವಿಗ್ರಹವಂತಸ್ತೇ ತಮೀಶ್ವರಮುಪಾಸತೇ ॥32॥
ವರುಣನ ಮಹಾ ಮಂತ್ರಿಯಾದ ಸುನಾಭನು ತನ್ನ ಮಕ್ಕಳು ಮತ್ತು ಮೊಮ್ಮಕ್ಕಳ ಜೊತೆಯಲ್ಲಿ ಮತ್ತು ಗೋ, ಎಂಬ ನಾಮವುಳ್ಳ ಪುಷ್ಕರನ ಜೊತೆಯಲ್ಲಿ ಸೇರಿ, ಅಲ್ಲಿ ಎಲ್ಲರೂ ದೇಹವನ್ನು ಧರಿಸಿ ಪ್ರಭುವಾದ ವರುಣನನ್ನು ಉಪಾಸನೆಮಾಡುತ್ತಾರೆ.
ಏಷಾ ಮಯಾ ಸಂಪ್ರಗೀತಾ ವಾರುಣೀ ಭರತರ್ಷಭ |
ದೃಷ್ಟಪೂರ್ವಾ ಸಭಾ ರಮ್ಯಾ ಕುಬೇರಸ್ಯ ಸಭಾಂ ಶೃಣು ॥33॥
ಭರತಶ್ರೇಷ್ಠನೇ! ನಾನು ನಿನಗೆ ಹಿಂದೆ ನೋಡಿದ ವರುಣನ ಸಭೆಯನ್ನು ವರ್ಣಿಸಿದೆ. ಇನ್ನು ಸುಂದರವಾದ ಕುಬೇರನ ಸಭೆಯನ್ನು ವರ್ಣಿಸುತ್ತೇನೆ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ನವಮೋಽಧ್ಯಾಯಃ ॥
॥ ಮಂತ್ರಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಒಂಭತ್ತನೆಯ ಅಧ್ಯಾಯವು ಮುಗಿಯಿತು.
*****
ಹತ್ತನೆಯ ಅಧ್ಯಾಯ
(ಕುಬೇರಸಭೆಯ ವರ್ಣನೆ)
ನಾರದಃ
ಸಭಾವೈಶ್ರವಣೀ ರಾಜನ್ ಶತಯೋಜನಮಾಯತಾ |
ವಿಸ್ತೀರ್ಣಾ ಸಪ್ತತಿಶ್ಚೈವ ಯೋಜನಾನಾಂ ಸಿತಪ್ರಭಾ ॥1॥
ರಾಜನೇ! ಕುಬೇರನ ಸಭೆಯು ಶ್ವೇತವರ್ಣದಿಂದ ಕೂಡಿದ್ದು, ನೂರುಯೋಜನ ಉದ್ದವೂ ಮತ್ತು ಎಪ್ಪತ್ತು ಯೋಜನ ಅಗಲವೂ ಆಗಿದೆ.
ತಪಸಾ ನಿರ್ಮಿತಾ ರಾಜನ್ ಸ್ವಯಂ ವೈಶ್ರವಣೇನ ಸಾ |
ಶಶಿಪ್ರಭಾ ಖೇಚರಣಾಂ ಕೈಲಾಸಶಿಖರೋಪಮಾ ॥2॥
ರಾಜನೇ! ಅದನ್ನು ಕುಬೇರನು ತಾನೇ ಸ್ವತಃ ತಪಸ್ಸಿನಿಂದ ನಿರ್ಮಿಸಿದ್ದಾನೆ. ಚಂದ್ರನಕಾಂತಿಯನ್ನು ಹೊಂದಿರುವ ಆ ಸಭೆಯು ಆಕಾಶದಲ್ಲಿ ಸಂಚರಿಸುವವರಿಗೆ ಕೈಲಾಸಪರ್ವತದ ಶಿಖರದಂತೆ ಕಾಣುತ್ತದೆ.
ಗುಹ್ಯಕೈರುಹ್ಯಮಾನಾ ಸಾ ಖೇ ವಿಷಕ್ತೇವೆ ದೃಶ್ಯತೇ |
ದಿವ್ಯೈರ್ಹೇಮಮಯೈರಗ್ರ್ಯೈಃ ಪಾದಪೈರುಪಶೋಭಿತಾ ॥3॥
ಅರ್ಚಿಷ್ಮತೀ ಭಾಸ್ವರಾ ಚ ದಿವ್ಯಗಂಧಾ ಮನೋರಮಾ |

ಸಿತಾಭ್ರನಿಚಯಾಕಾರಾ ಪ್ಲವಮಾನೇವ ದೃಶ್ಯತೇ ॥4॥
ದಿವ್ಯವಾದ ಸುವರ್ಣಮಯವಾದ ಶ್ರೇಷ್ಠವಾದ ವೃಕ್ಷಗಳಿಂದ ಶೋಭಿತವಾದ ಆ ಸಭೆಯನ್ನು ಗುಹ್ಯಕರು ಹೊತ್ತುಕೊಂಡು ಹೋಗುವಾಗ ಅದು ಆಕಾಶದಲ್ಲಿ ಅಂಟಿಕೊಂಡಂತೆ ಕಾಣುತ್ತದೆ. ಪ್ರಕಾಶಮಾನವಾಗಿ ಕಾಂತಿಯನ್ನು ಹೊರಸೂಸುತ್ತಾ, ದಿವ್ಯಗಂಧವನ್ನುಹೊಂದಿ ಮನೋಹರವಾಗಿರುವ ಆ ಸಭೆಯು ಬಿಳಿಯ ಮೋಡಗಳ ಸಮೂಹದಂತೆ ಆಕಾಶದಲ್ಲಿ ತೇಲುವಂತೆ ಕಾಣುತ್ತದೆ.
ತಸ್ಯಾಂ ವೈಶ್ರವಣೋ ರಾಜಾ ವಿಚಿತ್ರಾಭರಣಾಂಬರಃ |
ಸಹಿತಃ ತ್ರಿದಶೈಃ ಸಾರ್ಧಮಾಸ್ತೇ ರುಚಿರಕುಂಡಲಃ ॥5॥
ಆ ಸಭೆಯಲ್ಲಿ ರಾಜನಾದ ಕುಬೇರನು ವಿಚಿತ್ರವಾದ ಆಭರಣಗಳನ್ನು ಮತ್ತು ಅಂಬರಗಳನ್ನು ಧರಿಸಿ, ಮನೋಹರವಾದ ಕುಂಡಲಗಳನ್ನು ಧರಿಸಿ, ದೇವತೆಗಳ ಜೊತೆಯಲ್ಲಿ ವಾಸಿಸುತ್ತಾನೆ.
ಸ ಹಿ ಪತ್ನ್ಯಾ ಮಹಾರಾಜ ಋದ್ಧ್ಯಾ ಸಹ ವಿರಾಜತೇ |
ಸರ್ವಾಭರಣಭೂಷಿಣ್ಯಾ ವಪುಷ್ಮತ್ಯಾ ಧನೇಶ್ವರಃ ॥6॥
ಮಹಾರಾಜನೇ! ಧನೇಶ್ವರನಾದ ಅವನು ಅಲ್ಲಿ ಸರ್ವಾಭರಣಭೂಷಿತಳಾದ ಸುಂದರಿಯಾದ ಋದ್ಧಿ ಎಂಬ ಪತ್ನಿಯ ಜೊತೆಯಲ್ಲಿ ವಿರಾಜಿಸುತ್ತಾನೆ.
ದಿವಾಕರನಿಭೇ ದಿವ್ಯೇದಿವ್ಯಾಸ್ತರಣಸಂವೃತೇ |
ದಿವ್ಯಪಾದೋಪಧಾನೇ ಚ ನಿಷಣ್ಣಃ ಪರಮಾಸನೇ ॥7॥
ಅವನು ಸೂರ್ಯನಂತೆ ಹೊಳೆಯುವ ದಿವ್ಯವಾದ ಶ್ರೇಷ್ಠವಾದ ಆಸನದಲ್ಲಿ ದಿವ್ಯವಾದ ಆಸ್ತರಣದ ಮೇಲೆ ಪಾದಗಳಿಗೂ ಒಂದು ದಿವ್ಯವಾದ ದಿಂಬನ್ನು ಇಟ್ಟುಕೊಂಡು ಕುಳಿತಿರುತ್ತಾನೆ.
ಮಂದಾರಾಣಾಮುದಾರಾಣಾಂ ವನಾನಿ ಸುರಭೀಣ್ಯಥ |
ಸೌಗಂಕಾನಾಂ ಚಾದಾಯ ಗಂಧಂ ಗಂಧವಹಃ ಶುಚಿಃ ॥8॥
ನಲಿನ್ಯಾಶ್ಚಾರುಮುಖ್ಯಾಯಾಃ ಚಂದನಾನಾಂ ವನಸ್ಯ ಚ |
ಮನೋಹೃದಯಸಂಹ್ಲಾದೀ ವಾಯುಸ್ತಮುಪಸೇವತೇ ॥9॥
ಶುದ್ಧವಾದ ವಾಯುವು ಶ್ರೇಷ್ಠವಾದ ಮಂದಾರವನಗಳ ಸುಗಂಧವನ್ನೂ ಸೌಗಂಕವನಗಳ ಸುಗಂಧವನ್ನೂ ಶ್ರೇಷ್ಠವಾದ ಕಮಲಸರೋವರಗಳ ಸುಗುಂಧವನ್ನೂ ಚಂದನವನದ ಸುಗಂಧವನ್ನೂ ತೆಗೆದುಕೊಂಡು ಬೀಸಿ ಅಲ್ಲಿ ಮನಸ್ಸಿಗೂ ಮತ್ತು ಹೃದಯಕ್ಕೂ ಸಂತೋಷವನ್ನು ಉಂಟುಮಾಡುತ್ತಾನೆ.
ಯತ್ರ ತೇ ದೇವಗಂಧರ್ವಾ ಗಣೈರಪ್ಸರಸಾಂ ವೃತಾಃ |
ದಿವ್ಯತಾನೇಷು ಗೀತಾನಿ ಗಾಯಂತಿ ಭರತರ್ಷಭ ॥10॥
ಭರತರ್ಷಭನೇ! ಅಲ್ಲಿ ದೇವಗಂಧರ್ವರು, ಅಪ್ಸರೆಯರ ಸಮೂಹದಿಂದ ಕೂಡಿದವರಾಗಿ, ದಿವ್ಯತಾನಗಳಲ್ಲಿ ಗಾನವನ್ನು ಮಾಡುತ್ತಾರೆ.
ಮಿಶ್ರಕೇಶೀ ಚ ರಂಭಾ ಚ ಚಿತ್ರಸೇನಾ ಶುಚಿಸ್ಮಿತಾ|
ಚಾರುದೇಷ್ಣಾ ಘೃತಾಚೀ ಚ ಮೇನಕಾ ಪುಂಜಿಕಸ್ಥಲಾ ॥11॥
ವಿಶ್ವಾಚೀ ಸಹಜನ್ಯಾ ಚ ಪ್ರುಂಲೋಚಂತ್ಯುರ್ವಶೀ ತಥಾ |
ದಿವ್ಯಾ ಚ ಸೌರಭೇಯೀ ಚ ದೇವೀ ರಂಭಾ ಮನೋರಮಾ ॥12॥
ಗೋಪಾಲೀ ಪಂಚಚೂಳಾ ಚ ವಿದ್ಯುದ್ವರ್ಣಾ ಸುಲೋಚನಾ |
ಚಿತ್ರದೇವೀ ಚ ನೀಲಾ ಚ ಕಾಮ್ಯಾ ಚ ಲಲಿತಾ ತಥಾ ॥13॥
ಏತಾಃ ಸಹಸ್ರಶಶ್ಚಾನ್ಯಾ ನೃತ್ತಗೀತವಿಶಾರದಾಃ |
ಉಪತಿಷ್ಠಂತಿ ರಾಜಾನಂ ಪಾಂಡವಾಪ್ಸರಸಾಂ ಗಣಾಃ ॥14॥
ಮಿಶ್ರಕೇಶೀ, ರಂಭಾ, ಚಿತ್ರಸೇನಾ, ಶುಚಿಸ್ಮಿತಾ, ಚಾರುದೇಷ್ಣಾ, ಘೃತಾಚೀ, ಮೇನಕಾ, ಪುಂಜಿಕಸ್ಥಲಾ, ವಿಶ್ವಾಚೀ, ಸಹಜನ್ಯಾ, ಪ್ರುಂಲೋಚಂತೀ, ಊರ್ವಶೀ, ದಿವ್ಯಾ, ಸೌರಭೇಯೀ, ಮನೋಹರಳಾದ ರಂಭಾ, ಗೋಪಾಲೀ, ಪಂಚಚೂಡಾ, ವಿದ್ಯುದ್ವರ್ಣಾ, ಸುಲೋಚನಾ, ಚಿತ್ರದೇವೀ, ನೀಲಾ, ಕಾಮ್ಯಾ, ಲಲಿತಾ ಇವರೇ ಮೊದಲಾದ ನೃತ್ಯಗಾನವಿಶಾರದರಾದ ಅಪ್ಸರೆಯರ ಸಮೂಹಗಳು ಸಹಸ್ರಸಂಖ್ಯೆಯಲ್ಲಿ ಅಲ್ಲಿ ರಾಜನಾದ ಕುಬೇರನನ್ನು ಸ್ತೋತ್ರಮಾಡುತ್ತವೆ.
ಅನಿಶಂ ಗೀತವಾದಿತ್ರೈರ್ನೃತ್ತಗೀತೈಶ್ಚ ಸಾ ಸಭಾ |
ಅಶೂನ್ಯಾ ರುಚಿರಾ ಭಾತಿ ಗಂಧರ್ವಾಪ್ಸರಸಾಂ ಗಣೈಃ ॥15॥
ಆ ಸಭೆಯು ಯಾವಾಗಲೂ ನೃತ್ಯಗಾನಗಳಿಂದಲೂ ಗೀತವಾದಿತ್ರಗಳಿಂದಲೂ ಗಂಧರ್ವ ಅಪ್ಸರ ಗಣಗಳಿಂದಲೂ ಕೂಡಿದುದಾಗಿ ಮನೋಹರವಾಗಿ ಕಾಣುತ್ತದೆ.
ಗಂಧರ್ವಾಣಾಂ ಚ ಪತಯೋ ವಿಶ್ವಾವಸುಹಹಾಹುಹೂಃ |
ತುಂಬುರುಃ ಪರ್ವತಶ್ಚೈವ ಶೈಲೂಷಸ್ತ್ವಥ ನಾರದಃ ॥16॥
ಚಿತ್ರಸೇನಶ್ಚ ಗೀತಜ್ಞಃ ತಥಾ ಚಿತ್ರರಥೋಽಪಿ ಚ |
ಏತೇ ಚಾನ್ಯೇ ಚ ಗಂಧರ್ವಾ ಧನೇಶ್ವರಮುಪಾಸತೇ ॥17॥
ಗಂಧರ್ವರ ಪತಿಗಳಾದ ವಿಶ್ವಾವಸು, ಹಹಾ, ಹುಹೂ, ತುಂಬುರು, ಪರ್ವತ, ಶೈಲೂಷ, ಮತ್ತು ನಾರದ. ಸಂಗೀತಜ್ಞನಾದ ಚಿತ್ರಸೇನ ಚಿತ್ರರಥ ಇವರೇ ಮೊದಲಾದ ಗಂಧರ್ವರು ಕುಬೇರನನ್ನು ಉಪಾಸನೆಮಾಡುತ್ತಾರೆ.
ವಿದ್ಯಾಧರಾಪಾಶ್ಚೈವ ಚಂದ್ರಾಪೀಡಸ್ತಥಾನುಜೈಃ |

ಉಪಾಸತೇ ಮಹಾತ್ಮಾನಂ ಧನಾನಾಮೀಶ್ವರಂ ಪ್ರಭುಮ್ ॥18॥
ವಿದ್ಯಾಧರರ ಅಪತಿಯಾದ ಚಂದ್ರಾಪೀಡನು ತನ್ನ ಸಹೋದರರ ಜೊತೆಯಲ್ಲಿ ಮಹಾತ್ಮನಾದ ಕುಬೇರನನ್ನು ಉಪಾಸನೆಮಾಡುತ್ತಾನೆ.
ಕಿನ್ನರಾಃ ಶತಶಸ್ತತ್ರ ಭಗದತ್ತಪುರೋಗಮಾಃ |
ದ್ರುಮಃ ಕಿಂಪುರುಷೇಶಶ್ಚ ಉಪಾಸ್ತೇ ಧನದೇಶ್ವರಮ್ ॥19॥
ಅಲ್ಲಿ ಭಗದತ್ತ ಮೊದಲಾದ ಕಿನ್ನರರು ನೂರಾರು ಸಂಖ್ಯೆಯಲ್ಲಿಯೂ ಮತ್ತು ಕಿಂಪುರುಷರ ಅಪತಿಯಾದ ದ್ರುಮನೂ ಸಹ ಕುಬೇರನನ್ನು ಉಪಾಸನೇಮಾಡುತ್ತಾರೆ.
ರಾಕ್ಷಸಾನಾಂ ಪತಿಶ್ಚೈವ ಸಹ ಸರ್ವೈರ್ನಿಶಾಚರೈಃ |
ವಿಭೀಷಣಃ ಸುಧರ್ಮಿಷ್ಠ ಉಪಾಸ್ತೇ ಭ್ರಾತರಂ ಪ್ರಭುಮ್ ॥20॥
ರಾಕ್ಷಸರ ಅಪತಿಯಾದ ಒಳ್ಳೆಯ ಧರ್ಮಿಷ್ಠನಾದ ವಿಭೀಷಣನು ಎಲ್ಲ ರಾಕ್ಷಸನ ಜೊತೆಯಲ್ಲಿ ತನ್ನ ಸಹೋರರನಾದ ಕುಬೇರನನ್ನು ಉಪಾಸನೆಮಾಡುತ್ತಾನೆ.
ನೀನಾಂ ಪ್ರವರೌ ಮುಖ್ಯೌ ಶಂಖಪದ್ಮೌ ಧನೇಶ್ವರಮ್ |
ಸರ್ವಾನ್ ನೀನ್ ಪ್ರಗೃಹ್ಯೇತಾವುಪಾಸಾತೇ ಮಹೇಶ್ವರಮ್ ॥21॥
ನಿಗಳಲ್ಲಿ ಶ್ರೇಷ್ಠವಾದ ಶಂಖ ಮತ್ತು ಪದ್ಮನಿಗಳು ಉಳಿದ ಎಲ್ಲಾ ನಿಗಳ ಜೊತೆಯಲ್ಲಿ ಮಹೇಶ್ವರನಾದ ಕುಬೇರನನ್ನು ಉಪಾಸನೆಮಾಡುತ್ತಾರೆ.
ಕಿನ್ನರಾ ನಾಮ ಗಂಧರ್ವಾ ನರಾ ನಾಮ ತಥಾಽಪರೇ |
ಮಾಣಿಭದ್ರಶ್ಚ ಧನದಂ ಶ್ವೇತಭದ್ರಶ್ಚ ಗುಹ್ಯಕಃ ॥22॥
ಸ್ಥೂಣಶ್ಚ ಸೂರ್ಯಭಾನುಶ್ಚ ತಥಾ ಶೋಣಿಕತಿಂದುಕೌ |
ಕುಶೇರಲೋ ಗಂಧಪರ್ಣೋ ವೃಷೋದಶ್ಚ ಮಹಾಬಲಃ ॥23॥
ದ್ರುಮಃ ಕಿಂಪುರುಷಶ್ಚೈವ ಗಜಕರ್ಣೋ ವಿಶಾಲಕಃ |
ವರಾಹಕರ್ಣಃ ಸಂಕೃಷ್ಟಃ ಫಲಭಕ್ಷಃ ಫಲೋದಕಃ ॥24॥
ಅಂಗಚೂಡಃ ಶಿಲಾಪುಷ್ಪೋ ಹೇಮನೇತ್ರೋ ವಿಭೂಷಣಃ |
ಪುಷ್ಪಾನನಃ ಪಿಂಗಲಕಃ ಶೋಣಿತೋದಃ ಪ್ರಪಾಲಿತಃ ॥25॥
ವೃಕ್ಷಪಾರ್ಶ್ವೋ ನಿಕೇತಶ್ಚ ಚೀರವಾಸಾಸ್ತಥೈವ ಚ |
ಏತೇ ಚಾನ್ಯೇ ಚ ಬಹವೋ ಯಕ್ಷಾಃ ಶತಸಹಸ್ರಶಃ |
ಉಪಾಸತೇ ಸದಾ ಶ್ರೀಶ್ಚ ತಥೈವ ನಲಕೂಬರಃ ॥26॥
ಕಿನ್ನರನಾಮಕ ಗಂಧರ್ವರು, ನರನಾಮಕ ಬೇರೆ ಗಂಧರ್ವರು, ಮಾಣಿಭದ್ರ ಮತ್ತು ಗುಹ್ಯಕನಾದ ಶ್ವೇತಭದ್ರ ಸ್ಥೂಣ, ಸೂರ್ಯಭಾನು, ಶೋಣಿಕ, ತಿಂದುಕ, ಕುಶೇರಲ, ಗಂಧಪಣ, ವೃಷೋದ, ಕಿಂಪುರುಷನಾದ ದ್ರುಮ, ಗಜಕರ್ಣ, ವಿಶಾಲಕ, ವರಾಹಕರ್ಣ, ಸಂಕೃಷ್ಟ, ಫಲಭಕ್ಷ, ಫಲೋದಕ, ಅಂಗಚೂಡ, ಶಿಲಾಪುಷ್ಪ, ಹೇಮನೇತ್ರ,ವಿಭೂಷಣ, ಪುಷ್ಪಾನನ, ಪಿಂಗಲಕ, ಶೋಣಿತೋದ, ಪ್ರಪಾಲಿತ, ವೃಕ್ಷಪಾರ್ಶ್ವ, ನಿಕೇತ, ಮತ್ತು ಚೀರವಾಸ ಇವರೇ ಮೊದಲಾದ ಇನ್ನೂ ಅನೇಕ ಯಕ್ಷರು ಶತಸಹಸ್ರಸಂಖ್ಯೆಯಲ್ಲಿ ಕುಬೇರನನ್ನು ಉಪಾಸನೆಮಾಡುತ್ತಾರೆ. ಆ ಸಭೆಯ ಅಭಿಮಾನಿಯಾದ ಲಕ್ಷ್ಮೀ ಮತ್ತು ನಲಕೂಬರರು ಕುಬೇರನನ್ನು ಉಪಾಸನೆಮಾಡುತ್ತಾರೆ.
ಹಿಮವಾನ್ ಪಾರಿಯಾತ್ರಶ್ಚ ವಿಂಧ್ಯಕೈಲಾಸಮಂದರಾಃ |
ಮಲಯೋ ದರ್ದುರಶ್ಚೈವ ಮಹೇಂದ್ರೋ ಗಂಧಮಾದನಃ |
ಇಂದ್ರನೀಲಃ ಸುನಾಭಶ್ಚ ಉದಯಾಸ್ತೌ ಚ ಪರ್ವತೌ ॥27॥
ಏತೇ ಚಾನ್ಯೇ ಚ ಬಹವಃ ಸರ್ವೇ ಮೇರುಪುರೋಗಮಾಃ |
ಉಪಾಸತೇ ಮಹಾತ್ಮಾನಂ ಧನಾನಾಮೀಶ್ವರಂ ಪ್ರಭುಮ್ ॥28॥
ಹಿಮಾಲಯ, ಪಾರಿಯಾತ್ರ, ವಿಂಧ್ಯಾ, ಕೈಲಾಸ, ಮಂದರ, ಮಲಯ, ದರ್ದುರ, ಮಹೇಂದ್ರ, ಗಂಧಮಾದನ, ಇಂದ್ರನೀಲ ಸುನಾಭ, ಉದಯಾಸ್ತಪರ್ವತಗಳು ಇವೇ ಮೊದಲಾದ ಇನ್ನೂ ಅನೇಕ ಮೇರು ಮೊದಲಾದ ಪರ್ವತಗಳು ಪ್ರಭುವಾದ ಧನಪತಿಯಾದ ಮಹಾತ್ಮನಾದ ಕುಬೇರನನ್ನು ಉಪಾಸನೆಮಾಡುತ್ತಾರೆ.
ಅಹಂ ಚ ಬಹುಶಸ್ತತ್ರ ತಥಾ ದೇವರ್ಷಯೋಽಪರೇ |
ಭಗವಾನ್ ಭೂತಸಂಘೈಶ್ಚ ವೃತಃ ಸತತಮೀಶ್ವರಃ ॥29॥
ಉಮಾಪತಿಃ ಪಶುಪತಿಃ ಶೂಲಧೃಗ್ ಭಗನೇತ್ರಹಾ |
ತ್ರ್ಯಂಬಕೋ ವಿಶ್ವರೂಪಶ್ಚ ದೇವೀ ಚ ವಿಗತಕ್ಲಮಾ ॥30॥
ನಾನು ಮತ್ತು ಇನ್ನೂ ಅನೇಕ ದೇವರ್ಷಿಗಳು ಆ ಸಭೆಯಲ್ಲಿ ಹೆಚ್ಚಾಗಿ ಇರುತ್ತೇವೆ. ಉಮಾಪತಿಯೂ, ಪಶುಪತಿಯೂ, ಶೂಲಧಾರಿಯೂ. ಭಗನ ನೇತ್ರವನ್ನು ನಾಶಮಾಡಿದವನೂ ತ್ರ್ಯಂಬಕನೂ ವಿಶ್ವರೂಪನೂ ಆದ ಮಹೇಶ್ವರನು ತನ್ನ ಭೂತಸಂಘಗಳಿಂದಲೂ ಮತ್ತು ಮನೋಹರಳಾದ ಪತ್ನಿಯಾದ ಪಾರ್ವತಿಯಿಂದಲೂ ಕೂಡಿಕೊಂಡು ಅಲ್ಲಿ ಇರುತ್ತಾನೆ.
ನಂದೀಶ್ವರಶ್ಚ ಭಗವಾನ್ ಮಹಾಕಾಲಸ್ತಥೈವ ಚ |
ಶಂಕುಕರ್ಣಮುಖಾಃ ಸರ್ವೇ ದಿವ್ಯಾಃ ಪಾರಿಷದಾಸ್ತಥಾ |
ಕಾಷ್ಠಕೂಟಃ ಸೋಮನಂದೀ ವಿಜಯಶ್ಚ ತಪೋಕಃ ॥31॥
ಪೂಜ್ಯನಾದ ನಂದೀಶ್ವರನು ಮಹಾಕಾಲನು ಶಂಕುಕರ್ಣ ಮೊದಲಾದ ದಿವ್ಯ ಪಾರಿಷದರು ಕಾಷ್ಠಕೂಟ ಸೋಮನಂದಿ ಮತ್ತು

ತಪಸ್ವಿಯಾದ ವಿಜಯ ಮೊದಲಾದ (ರುದ್ರದೇವರ) ಪರಿಷದರು ಅಲ್ಲಿರುತ್ತಾರೆ.
ಶ್ವೇತಶ್ಚ ವೃಷಭಸ್ತತ್ರ ನರ್ದನ್ನಾಸ್ತೇ ಮಹಾರವಃ |
ನೈಋತಾ ರಾಕ್ಷಸಾಶ್ಚಾನ್ಯೇ ಗಂಧರ್ವಾಶ್ಚ ಸಮಾಸತೇ ॥32॥
ಈಶ್ವರನ ವಾಹನವಾದ ಶ್ವೇತವೃಷಭವು ಅಲ್ಲಿ ಮಹಾನಾದದಿಂದ ಗರ್ಜಿಸುತ್ತಿರುತ್ತದೆ. ಅಲ್ಲಿ ಬೇರೆ ಗಂಧರ್ವರು ರಾಕ್ಷಸರು ಮತ್ತು ನೈಋತರು ಇರುತ್ತಾರೆ.
ವಾಮನೈರ್ವಿಕಟೈಃ ಕುಬ್ಜೈಃ ಕ್ಷತಜಾಕ್ಷೈರ್ಮಹಾರವೈಃ |
ಮಾಂಸಮೇದೋವಸಾಹಾರೈರುಗ್ರಶ್ರವಣದರ್ಶನೈಃ ॥33॥
ನಾನಾಪ್ರಹರಣೈರ್ಘೋರೈರ್ವಾತೈರಿವ ಮಹಾಜವೈಃ |
ಪರಿಷದ್ಗಣೈಃ ಪರಿವೃತಮುಪಾಯಾಂತಂ ಮಹೇಶ್ವರಮ್ ॥34॥
ತಂ ದೃಷ್ಟ್ವಾ ದೇವದೇವೇಶಂ ಶಿವಂ ತ್ರೈಲೋಕ್ಯಭಾವನಮ್ |
ಪ್ರಣಮ್ಯ ಮೂರ್ಧ್ನಾ ಪೌಲಸ್ತ್ಯೋ ಬಹುರೂಪಮುಮಾಪತಿಮ್ ॥35॥
ವಾಮನರು ವಿರೂಪಿಗಳು, ಕುಬ್ಜರು, ರಕ್ತಾಕ್ಷರು, ಭೈರವನಾದವುಳ್ಳವರು ಮೊದಲಾದ ಮಾಂಸ ಮೇದಸ್ಸು ಮತ್ತು ಕೊಬ್ಬನ್ನೇ ಆಹಾರವಾಗಿವುಳ್ಳ, ನೋಡಲು ಮತ್ತು ಕೇಳಲು ಉಗ್ರವಾದ ನಾನಾ ಅಯುಧಗಳನ್ನು ಹೊಂದಿದ ಬಿರುಗಾಳಿಯಂತೆ ಶೀಘ್ರವಾಗಿ ಬರುವ ತನ್ನ ಪರಿಷದ್‌ಗಣದಿಂದ ಪರಿವೃತನಾಗಿ ಅಲ್ಲಿಗೆ ಬರುವ ತ್ರೈಲೋಕ್ಯನಾಥನಾದ ಉಮಾಪತಿಯಾದ ದೇವಿದೇವೇಶನಾದ ಬಹುರೂಪವುಳ್ಳ ಮಹೇಶ್ವರನನ್ನು ನೋಡಿ ಪೌಲಸ್ತ್ಯ ವಂಶದ ಕುಬೇರನು ಎದ್ದು ಶಿರಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತಾನೆ.
ತತೋಽಭ್ಯನುಜ್ಞಾಂ ಸಂಪ್ರಾಪ್ಯ ಮಹಾದೇವಾದ್ ಧನೇಶ್ವರಃ |
ಆಸ್ತೇ ಕದಾಚಿದ್ ಭಗವಾನ್ ಭವೋ ಧನಪತೇಃ ಸಖಾ ॥36॥
ಕುಬೇರನು ಅನಂತರ ರುದ್ರದೇವರಿಂದ ಅನುಮತಿಯನ್ನು ಪಡೆದು. ತನ್ನ ಆಸನದಲ್ಲಿ ಕುಳಿತುಕೊಂಡು ಪೂಜ್ಯನಾದ ರುದ್ರನಿಗೆ ಮಿತ್ರನಾಗಿರುತ್ತಾನೆ.
ಸಾ ಸಭಾ ತಾದೃಶೀ ರಾಜನ್ ಮಯಾ ದೃಷ್ಟ್ವಾಽಂತರಿಕ್ಷಗಾ |
ಪಿತಾಮಹಸಭಾಂ ತಾತ ಕಥಯಿಷ್ಯೇ ಗತಕ್ಲಮಾಮ್ ॥37॥
ರಾಜನೇ! ನಾನು ಅಂತರಿಕ್ಷದಲ್ಲಿ ಹಿಂದೆ ನೋಡಿದ ಆ ಸಭೆಯು ಇಂತಹ ಗುಣಗಳಿಂದ ಕೂಡಿದುದು. ಇನ್ನು ಆಯಾಸಾದಿ ದೋಷವಿಲ್ಲದಿರುವ ಬ್ರಹ್ಮದೇವರ ಸಭೆಯನ್ನು ವರ್ಣಿಸುತ್ತೇವೆ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ನವಮೋಽಧ್ಯಾಯಃ ॥
॥ ಮಂತ್ರಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹತ್ತನೆಯ ಅಧ್ಯಾಯವು ಮುಗಿಯಿತು.
*****
ಹನ್ನೊಂದನೆಯ ಅಧ್ಯಾಯ
(ಬ್ರಹ್ಮಸಭೆಯ ವರ್ಣನೆ)
ನಾರದಃ
ಪಿತಾಮಹಸಭಾಂ ತಾತ ಕಥಯಿಷ್ಯಾಮಿ ತಾಂ ಶೃಣು |
ನ ಶಕ್ಯತೇ ಯಾ ನಿರ್ದೇಷ್ಟುಮ್ ಏವಂರೂಪೇತಿ ಭಾರತ ॥1॥
ಪ್ರೀತಿಪಾತ್ರನೇ! ಬ್ರಹ್ಮದೇವರ ಸಭೆಯನ್ನು ವರ್ಣಿಸುತ್ತೇನೆ ಕೇಳು. ಭಾರತನೇ! ಅದನ್ನು ಈ ರೀತಿ ಇದೆಯೆಂದು ವರ್ಣಿಸಲು ಸಾಧ್ಯವಿಲ್ಲ.
ಪುರಾ ದೇವಯುಗೇ ತಾತ ವಿವಸ್ವಾನ್ ಭಗವಾನ್ ದಿವಃ |
ಆಗಚ್ಛನ್ಮಾನುಷಂ ಲೋಕಂ ದಿದೃಕ್ಷುರ್ವಿಗತಕ್ಲಮಃ ॥2॥
ಪ್ರೀತಿಪಾತ್ರನೇ! ಹಿಂದೆ ದೇವಯುಗದಲ್ಲಿ ಪೂಜ್ಯನಾದ ವಿವಸ್ವಾನ್‌ನಾಮಕನಾದ ಸೂರ್ಯನು, ಮನುಷ್ಯಲೋಕವನ್ನು ನೋಡುವ ಇಚ್ಛೆಯಿಂದ ಅನಾಯಾಸವಾಗಿ ಸ್ವರ್ಗದಿಂದ ಭೂಮಿಗೆ ಇಳಿದು ಬಂದನು.
ಚರನ್ ಮಾನುಷರೂಪೇಣ ಸಭಾಂ ದೃಷ್ಟ್ವಾ ಸ್ವಯಂಭುವಃ |
ಸಭಾಮಕಥಯನ್ಮಹ್ಯಂ ಬ್ರಾಹ್ಮೀಂ ತತ್ತ್ವೇನ ಭಾರತ ॥3॥
ಭಾರತನೇ! ಅವನು ಮನುಷ್ಯರೂಪವನ್ನು ಧರಿಸಿ ಸಂಚರಿಸುತ್ತಾ, ಬ್ರಹ್ಮದೇವರ ಸಭೆಯನ್ನು ನೋಡಿ ಅದನ್ನು ನನಗೆ ಯಥಾವತ್ತಾಗಿ ತಿಳಿಸಿದನು.
ಅಪ್ರಮೇಯಪ್ರಭಾಂ ದಿವ್ಯಾಂ ಮಾನಸೀಂ ಭರತರ್ಷಭ |
ಅನಿರ್ದೇಶ್ಯಾಂ ಪ್ರಭಾವೇಣ ಸರ್ವಭೂತಮನೋರಮಾಮ್ ॥4॥
ಭರತರ್ಷಭನೇ! ಅದು ಊಹಿಸಲು ಅಸಾಧ್ಯವಾದ ದಿವ್ಯವಾದ ಕಾಂತಿಯುಳ್ಳದ್ದು. ಮನಸ್ಸಿನ ಅಭಿಲಾಷೆಯೆಲ್ಲವನ್ನು ಪೂರೈಸುವಂತಹುದು. ಅದರ ಸಾಮರ್ಥ್ಯವು ಇಷ್ಟು ಎಂದು ಹೇಳಲು ಬರುವುದಿಲ್ಲ. ಅದು ಎಲ್ಲರ ದೃಷ್ಟಿಯಿಂದಲೂ ಮನೋಹರವಾದುದು. (ಎಂದು ಹೇಳಿದನು.)
ಶ್ರುತ್ವಾ ಗುಣಾನಹಂ ತಸ್ಯಾಃ ಸಭಾಯಾಃ ಪಾಂಡವರ್ಷಭ |
ದರ್ಶನೇಪ್ಸುಸ್ತದಾ ರಾಜನ್ ಆದಿತ್ಯಮಹಮಬ್ರುವಮ್ ॥5॥
ಪಾಂಡವರ್ಷಭನೇ! ಆ ಸಭೆಯ ಗುಣಗಳನ್ನು ಕೇಳಿದ ನಾನು ಆ ಸಭೆಯನ್ನು ನೋಡಲು ಬಯಸಿ ಸೂರ್ಯನನ್ನು ಕುರಿತು ಹೀಗೆ ಹೇಳಿದೆನು.

ಭಗವನ್ ದ್ರಷ್ಟುಮಿಚ್ಛಾಮಿ ಪಿತಾಮಹಸಭಾಮಹಮ್ |
ಕೇನ ವಾ ತಪಸಾ ಶಕ್ಯಂ ಕರ್ಮಣಾ ವಾಽಪಿ ಗೋಪತೇ ||6||
ಔಷಧೈರ್ವಾ ತಥಾ ಯುಕ್ತೈರುತ ವಾ ಮಾಯಯಾ ಕಯಾ |
ತನ್ಮಮಾಚಕ್ಷ್ವ ಭಗವನ್ ದ್ರಷ್ಟುಮಿಚ್ಛಾಮಿ ತಾಂ ಸಭಾಮ್ ||7||
ಪೂಜ್ಯನೇ! ನಾನು ಬ್ರಹ್ಮದೇವರ ಆ ಸಭೆಯನ್ನು ನೋಡಲು ಬಯಸುತ್ತೇನೆ. ಗೋಪತಿಯೇ! ಅದನ್ನು ಯಾವ ತಪಸ್ಸಿನಿಂದ, ಅಥವಾ ಕರ್ಮದಿಂದ ಅಥವಾ ಔಷಗಳ ಬಲದಿಂದ ಅಥವಾ ಯೋಗದಿಂದ ಅಥವಾ ಮಯಾಶಕ್ತಿಯಿಂದ ನೋಡಲು ಸಾಧ್ಯವೆಂಬುದನ್ನು ನನಗೆ ತಿಳಿಸು.
ಸ ಮಹ್ಯಂ ವಚನಂ ಶ್ರುತ್ವಾ ಸಹಸ್ರಾಂಶುರ್ದಿವಾಕರಃ |
ಪ್ರೋವಾಚ ಭರತಶ್ರೇಷ್ಠ ವ್ರತಂ ವರ್ಷಸಹಸ್ರಕಮ್ ||8||
ಭರತಶ್ರೇಷ್ಠನೇ! ನನ್ನ ಮಾತನ್ನು ಕೇಳಿದ ಸಹಸ್ರಕಿರಣನಾದ ಸೂರ್ಯನು ನನಗೆ ಆಗ ಒಂದು ಸಹಸ್ರವರ್ಷದ ವ್ರತವನ್ನು ಆದೇಶಿಸಿದನು.
ಬ್ರಹ್ಮವ್ರತಮುಪಾಸ್ಸ್ವ ತ್ವಂ ಪ್ರಯತೇನಾಂತರಾತ್ಮನಾ |
ತತೋಽಹಂ ಹಿಮವತ್ಪೃಷ್ಠೇ ವ್ರತಚರ್ಯಾಮುಪಾಗತಃ ||9||
ಜಿತವಾದ ಮನಸ್ಸಿನಿಂದ ನೀನು ನಿಯಮಬದ್ಧನಾಗಿ ಈ ಬ್ರಹ್ಮವ್ರತವನ್ನು ಅನುಷ್ಠಾನಮಾಡು ಎಂದು ಹೇಳಿದ ಅವನ ಮಾತಿನಂತೆ ನಾನು ಹಿಮಾಲಯದ ತಪ್ಪಲಿನಲ್ಲಿ ವ್ರತಚರ್ಯೆಯನ್ನು ಕೈಗೊಂಡೆನು.
ತತಃ ಸ ಭಗವಾನ್ ಸೂರ್ಯೋ ಮಾಮುಪಾದಾಯ ವೀರ್ಯವಾನ್ |
ಆಗಚ್ಛತ್ ತಾಂ ಸಭಾಂ ತಾತ ವಿಪಾಪಾಂ ವಿಗತಕ್ಲಮಾಮ್ ||10||
ಅನಂತರ ಆ ಭಗವಂತನಾದ ಪರಾಕ್ರಮಿಯಾದ ಸೂರ್ಯನು ನನ್ನನ್ನು ಕರೆದುಕೊಂಡು ಪಾಪರಹಿತವಾದ ಶ್ರಮಾದಿದೋಷರಹಿತವಾದ ಆ ಬ್ರಹ್ಮದೇವರ ಸಭೆಗೆ ಹೋದನು.
ಏವಂರೂಪೇತಿ ಸಾ ಶಕ್ಯಾ ನ ನಿರ್ದೇಷ್ಟುಂ ಜನಾಪ |
ಕ್ಷಣೇನ ಹಿ ಬಿಭರ್ತ್ಯನ್ಯದನಿರ್ದೇಶ್ಯಂ ವಪುಸ್ತಥಾ ||11||
ಜನಾಪನೇ! ಆ ಸಭೆಯನ್ನು ಹೀಗೆಯೇ ಇದೆಯೆಂದು ಹೇಳಲು ಬರುವುದಿಲ್ಲ. ಒಂದು ಕ್ಷಣದಲ್ಲಿ ಅದು ವರ್ಣಿಸಲು ಅಸಾಧ್ಯವಾದ ಇನ್ನೊಂದು ರೂಪವನ್ನು ತಾಳುತ್ತದೆ.
ನ ಜಾನೇ ಪರಿಮಾಣಂ ವಾ ಸಂಸ್ಥಾನಂ ವಾಽಪಿ ಭಾರತ |
ನಚ ರೂಪಂ ಮಯಾ ತಾದೃಕ್ ದೃಷ್ಟಪೂರ್ವಂ ಕದಾಚ ||12||
ನನಗೆ ಅದರ ಉದ್ದ ಅಗಲಗಳಾಗಲೀ ಅಥವಾ ಆಕಾರವಾಗಲೀ ಅಥವಾ ರೂಪವಾಗಲೀ ಯಾವುದೂ ತಿಳಿಯಲಿಲ್ಲ. ಭರತರ್ಷಭನೇ! ನಾನು ಅಂತಹ ವಸ್ತುವನ್ನು ಹಿಂದೆಂದೂ ನೋಡಲಿಲ್ಲ.
ಸುಸುಖಾ ಸಾ ಸಭಾ ರಾಜನ್ ನಶೀತಾ ನಚ ಘರ್ಮದಾ|
ನ ಕ್ಷುತ್ಪಿಪಾಸೇ ನಚ ಗ್ಲಾನಿಂ ಪ್ರಾಪ್ಯ ತಾಂ ಪ್ರಾಪ್ನುವಂತ್ಯುತ ||13||
ರಾಜನೇ! ಆ ಸಭೆಯು ಅತ್ಯಂತಸುಖಪೂರ್ಣವಾಗಿರುತ್ತದೆ. ಅಲ್ಲಿ ಶೈತ್ಯಬಾಧೆಯಾಗಲೀ ಉಷ್ಣತೆಯಬಾಧೆಯಾಗಲೀ ಇಲ್ಲ. ಆ ಸಭೆಗೆ ಹೋದವರು ಹಸಿವೆಯನ್ನಾಗಲೀ ಬಾಯಾರಿಕೆಯನ್ನಾಗಲೀ ಅಥವಾ ಶ್ರಮವನ್ನಾಗಲೀ ಹೊಂದುವುದಿಲ್ಲ.
ನಾನಾರೂಪೈರಿವ ಕೃತಾ ವಿಚಿತ್ರೈರಿವ ಭಾಸ್ವರೈಃ |
ದಿವ್ಯೈರ್ನಾನಾವಿಧೈರ್ಭಾವೈರ್ಭಾವದ್ಭಿರಮಿತಪ್ರಭೈಃ |
ಸ್ತಂಭೈರ್ನಚ ಧೃತಾ ಸಾ ತು ಶಾಶ್ವತೀ ನಚ ಸಾ ಕ್ಷರಾ ||14||
ಅ ಸಭೆಯು ಪ್ರಕಾಶಮಾನವಾದ ಅಮಿತ ಕಾಂತಿಯುಳ್ಳ ನಾನಾವಿಧವಾದ ವಿಚಿತ್ರವಾದ ಅನೇಕರೂಪಗಳುಳ್ಳ ದಿವ್ಯವಸ್ತುಗಳಿಂದ ಮಾಡಲ್ಪಟ್ಟಿದೆ. ಆ ಸಭೆಯು ನಿತ್ಯಾವಾದುದು. ಅದು ಸ್ತಂಭಗಳ ಮೇಲೆ ನಿಂತಿಲ್ಲ. ಮತ್ತು ನಾಶವನ್ನು ಹೊಂದುವುದಿಲ್ಲ.
ಅತಿ ಸೂರ್ಯಂ ಚ ಚಂದ್ರಂ ಚ ಶಿಖಿನಂ ಚ ಸ್ವಯಂಪ್ರಭಾ |
ದೀಪ್ಯತೇ ನಾಕಪೃಷ್ಠಸ್ಥಾ ಭಾಸಯಂತೀವ ಭಾಸ್ಕರಮ್ ||15||
ಸ್ವರ್ಗದ ಬೆನ್ನಿನಲ್ಲಿರುವ ಆ ಸಭೆಯು ತನ್ನ ಸ್ವಯಂಪ್ರಭೆಯಿಂದ ಸೂರ್ಯನನ್ನೂ ಚಂದ್ರನನ್ನೂ ಅಗ್ನಿಯನ್ನೂ ಮೀರಿಸಿ ಸೂರ್ಯನನ್ನೇ ಪ್ರಕಾಶಿಸುವಂತೆ ಬೆಳಗುತ್ತದೆ.
ತಸ್ಯಾಂ ಸ ಭಗವಾನಾಸ್ತೇ ವಿದಧದ್ ದೇವಮಾಯಯಾ |
ಸ್ವಯಮೇಕೋಽನಿಶಂ ರಾಜನ್ ಲೋಕಾನ್ ಲೋಕಪಿತಾಮಹಃ ||
ರಾಜನೇ! ಆ ಸಭೆಯಲ್ಲಿ ಪೂಜ್ಯನಾದ ಲೋಕಪಿತಾಮಹನಾದ ಬ್ರಹ್ಮನು ತಾನೊಬ್ಬನೇ ತನ್ನ ದಿವ್ಯವಾದ ಶಕ್ತಿಯಿಂದ ಯಾವಾಗಲೂ ಜೀವರನ್ನು ಸೃಷ್ಟಿಸುತ್ತಾ ಇರುತ್ತಾನೆ.
ಉಪಾತಿಷ್ಠಂತ ತತ್ರೈನಂ ಪ್ರಜಾನಾಂ ಪತಯಃ ಪ್ರಭುಮ್ |
ದಕ್ಷಃ ಪ್ರಚೇತಾಃ ಪುಲಹೋ ಮರೀಚಿಃ ಕಶ್ಯಪಸ್ತಥಾ |
ಆದಿತ್ಯಾಶ್ಚ ತಥಾ ರಾಜನ್ ರುದ್ರಾಶ್ಚ ವಸವೋಽಶ್ವಿನೌ ||17||
ಭೃಗುರತ್ರಿರ್ವಸಿಷ್ಠಶ್ಚ ಗೌತಮೋಽಥ ತಥಾಽಂಗಿರಾಃ |
ಪುಲಸ್ತ್ಯಶ್ಚ ಕ್ರತುಶ್ಚೈವ ಪ್ರಹ್ಲಾದಃ ಕರ್ದಮಸ್ತಥಾ ||18||
ಅಥರ್ವಾಂಗಿರಸಶ್ಚೈವ ವಾಲಖಿಲ್ಯಾ ಮರೀಚಿಪಾಃ |

ಮನೋ ವಿದ್ಯಾಽಂತರಿಕ್ಷಂ ಚ ವಾಯುಸ್ತೇಜೋ ಜಲಂ ಮಹೀ ॥19॥
ಶಬ್ದಃ ಸ್ಪರ್ಶೋ ತಥಾ ರೂಪಂ ರಸೋ ಗಂಧಶ್ಚ ಭಾರತ |
ಪ್ರಕೃತಿಶ್ಚ ವಿಕಾರಶ್ಚ ಯಚ್ಚಾನ್ಯತ್ ಕಾರಣಂ ಭುವಃ ॥20॥
ಪ್ರಭುವಾದ ಬ್ರಹ್ಮದೇವರನ್ನು ಅಲ್ಲಿ ದಕ್ಷ ಪ್ರಚೇತ ಪುಲಹ ಮರೀಚಿ ಕಶ್ಯಪ ಮೊದಲಾದ ಪ್ರಜಾಪತಿಗಳೂ ಆದಿತ್ಯರು ರುದ್ರರು ವಸುಗಳು ಮತ್ತು ಅಶ್ವಿನಿಗಳು ಮೊದಲಾದ ದೇವತೆಗಳೂ ಉಪಾಸನೆಯನ್ನು ಮಾಡುತ್ತಾರೆ. ಭೃಗು ಅತ್ರಿ ವಸಿಷ್ಠ ಗೌತಮ ಅಂಗೀರ ಪುಲಸ್ತ್ಯ ಕ್ರತು ಪ್ರಹ್ಲಾದ ಕರ್ದಮ ಅಥರ್ವಾ ಅಂಗಿರಸರು ವಾಲಖಿಲ್ಯರು ಮರೀಚಿ ಮನಸ್ಸು ವಿದ್ಯಾ ಅಂತರಿಕ್ಷ ವಾಯು ಅಗ್ನಿ ಜಲ ಭೂಮಿ ಶಬ್ದ ಸ್ಪರ್ಶ ರೂಪ ರಸ ಗಂಧ ಪ್ರಕೃತಿ ಮತ್ತು ಅದರ ವಿಕಾರಗಳು ಮತ್ತು ಜಗತ್ತಿಗೆ ಕಾರಣವಾದ ಎಲ್ಲ ವಸ್ತುಗಳೂ (ಅಲ್ಲಿ ದೇಹವನ್ನು ಧರಿಸಿ) ಬ್ರಹ್ಮದೇವರನ್ನು ಉಪಾಸನೆಮಾಡುತ್ತಾರೆ.
ಅಗಸ್ತ್ಯಶ್ಚ ಮಹಾತೇಜಾ ಮಾರ್ಕಂಡೇಯಶ್ಚ ದೀಪ್ತಿಮಾನ್ |
ಜಮದಗ್ನಿರ್ಭರದ್ವಾಜಃ ಸಂವರ್ತಶ್ಚ್ಯವನಸ್ತಥಾ ॥21॥
ದುರ್ವಾಸಾಶ್ಚ ಮಹಾಭಾಗ ಋಶ್ಯಶೃಂಗಶ್ಚ ಧಾರ್ಮಿಕಃ |
ಸನತ್ಕುಮಾರೋ ಭಗವಾನ್ ಯೋಗಾಚಾರ್ಯೋ ಮಹಾಯಶಾಃ ॥22॥
ಅಸಿತೋ ದೇವಲಶ್ಚೈವ ಜೈಗೀಷವ್ಯಶ್ಚ ತತ್ತ್ವವಿತ್ |
ಋಷಭೋ ಜಿತಶತ್ರುಶ್ಚ ಮಹಾವೀರ್ಯಸ್ತಥಾಽಽರಣಿಃ ॥23॥
ಆಯುರ್ವೇದಸ್ತಥಾಽಷ್ಟಾಂಗೋ ದೇಹವಾಂಸ್ತತ್ರ ಭಾರತ |
ಚಂದ್ರಮಾಃ ಸಹ ನಕ್ಷತ್ರೈರಾದಿತ್ಯಶ್ಚ ಗಭಸ್ತಿಮಾನ್ ॥24॥
ವಾಯವಃ ಕ್ರತವಶ್ಚೈವ ಸಂಕಲ್ಪಃ ಪ್ರಾಣ ಏವ ಚ |
ಮೂರ್ತಿಮಂತೋ ಮಹಾತ್ಮಾನೋ ಮಹಾವ್ರತಪರಾಯಣಾಃ |
ಏತೇ ಚಾನ್ಯೇ ಚ ಬಹವಃ ಸ್ವಯಂಭುವಮುಪಸ್ಥಿತಾಃ ॥25॥
ಮಹಾತೇಜಸ್ವಿಗಳಾದ ಅಗಸ್ತ್ಯರು ಕಾಂತಿಯುಕ್ತರಾದ ಮಾರ್ಕಡೇಯರು ಜಮದಗ್ನಿ ಭರದ್ವಾಜ ಸಂವರ್ತ ಚ್ಯವನ ಮಹಾನುಭಾವರಾದ ದೂರ್ವಾಸರು ಧಾರ್ಮಿಕರಾದ ಋಷ್ಯಶೃಂಗ್ಯರು ಪೂಜ್ಯರಾದ ಯೋಗಾಚಾರ್ಯರು ಮಹಾಕೀರ್ತಿಶಾಲಿಗಳಾದ ಸನತ್ಕುಮಾರರು ಅಸಿತ ದೇವಲ ತತ್ವಜ್ಞಾನಿಯಾದ ಜೈಗೀಷವ್ಯ ಜಿತಶತ್ರುವಾದ ಮಹಾಸಾಮರ್ಥ್ಯಹೊಂದಿದ ಋಷಭ ಮತ್ತು ಆರುಣಿ ಆಯುರ್ವೇದ ಅಷ್ಟಾಂಗವಿದ್ಯೆಗಳು ಎಲ್ಲವೂ ದೇಹವನ್ನು ಧರಿಸಿರುತ್ತವೆ. ಅಲ್ಲದೆ ಭಾರತ ಶ್ರೇಷ್ಠನೇ! ನಕ್ಷತ್ರಗಳಿಂದ ಕೂಡಿದ ಚಂದ್ರನೂ ತನ್ನ ಕಿರಣ ಸಮೂಹಗಳಿಂದ ಕೂಡಿದ ಸೂರ್ಯನೂ ವಾಯುಗಳು ಕ್ರತುಗಳು ಸಂಕಲ್ಪ ಪ್ರಾಣ ಮೊದಲಾದ ಮಹಾನುಭಾವರೆಲ್ಲರೂ ಮಹಾವ್ರತನಿಷ್ಠರಾಗಿ ದೇಹವನ್ನು ಧರಿಸಿ ಇವರೂ ಇನ್ನು ಅನೇಕರೂ ಬ್ರಹ್ಮದೇವರ ಉಪಾಸನೆಯನ್ನು ಮಾಡುತ್ತಾರೆ.
ಅರ್ಥೋ ಧರ್ಮಶ್ಚ ಕಾಮಶ್ಚ ಹರ್ಷೋ ದ್ವೇಷಸ್ತಪೋ ದಮಃ |
ಆಯಾಂತಿ ತತ್ರ ಸತತಂ ಗಂಧರ್ವಾಪ್ಸರಸಸ್ತಥಾ |
ವಿಂಶತಿಃ ಸಪ್ತ ಚೈವಾನ್ಯೇ ಲೋಕಪಾಲಾಶ್ಚ ಸರ್ವಶಃ ॥26॥
ಅರ್ಥ ಧರ್ಮ ಕಾಮ ಹರ್ಷ ದ್ವೇಷ ತಪಸ್ಸು ದಮ ಇಪ್ಪತ್ತೇಳು ಮಂದಿ ಗಂಧರ್ವಾಪ್ಸರೆಯರು ಮತ್ತು ಎಲ್ಲಾ ಲೋಕಪಾಲಕರು ಅಲ್ಲಿಗೆ ಸತತವಾಗಿ ಬರುತ್ತಾರೆ.
ಶುಕ್ರೋ ಬೃಹಸ್ಪತಿಶ್ಚೈವ ಬುಧೋಽಂಗಾರಕ ಏವ ಚ |
ಶನೈಶ್ಚರಶ್ಚ ರಾಹುಶ್ಚ ಗ್ರಹಾಃ ಸರ್ವೇ ತಥೈವ ಚ ॥27॥
ಶುಕ್ರ, ಬೃಹಸ್ಪತಿ, ಬುಧ, ಅಂಗಾರಕ, ಶನಿ, ರಾಹು ಈ ಎಲ್ಲ ಗ್ರಹಗಳೂ ಅಲ್ಲಿ ಇರುತ್ತವೆ.
ಮಂತ್ರಾ ರಥಂತರಂ ಚೈವಂ ಹರಿಮಾನ್ ವಸುಮಾನಪಿ |
ಆದಿತ್ಯಶ್ಚಾದ್ರಿರಾಜಾನೋ ನಾಮದ್ವಂದ್ವೈರುದಾಹೃತಾಃ |
ಮರುತೋ ವಿಶ್ವಕರ್ಮಾ ಚ ವಿಜ್ಞಾನಾನಿಚ ಭಾರತ ॥28॥
ಮಂತ್ರಗಳು, ರಥಂತರಾದಿ ಸಾಮಗಳು ಆದಿತ್ಯರು ದ್ವಂದ್ವನಾಮಗಳಿಂದ ಕೂಡಿದವರು ಎಲ್ಲಾ ವರ್ಷಗಳು ಮರುದ್ಗಣಗಳು ವಿಶ್ವಕರ್ಮನು ಮತ್ತು ಎಲ್ಲಾ ವಿಜ್ಞಾನಕರ್ಮಗಳು ಅಲ್ಲಿರುತ್ತಾರೆ.
ಸರ್ವೇ ಚ ಕಾಮಪ್ರಚುರಾಃ ಸಭಾಯಾಂ ತತ್ರ ನಿತ್ಯಶಃ |
ತಥಾ ಪಿತೃಗಣಾಃ ಸರ್ವೇ ದೈವತಾನಿ ಚ ಮೂರ್ತಿಮಾನ್ ॥29॥
ಆ ಸಭೆಯಲ್ಲಿ ಇದ್ದ ಎಲ್ಲರೂ ಪೂರ್ಣಕಾಮರಾಗಿರುತ್ತಾರೆ. ಹಾಗೆಯೇ ಪಿತೃಗಣಗಳು ಮತ್ತು ದೇವತಾಗಣಗಳು ಶರೀರಸಹಿತವಾಗಿ ಅಲ್ಲಿರುತ್ತಾರೆ.
ಋಗ್ವೇದಃ ಸಾಮವೇದಶ್ಚ ಯಜುರ್ವೇದಶ್ಚ ಪಾಂಡವ |
ಅಥರ್ವವೇದಶ್ಚ ತಥಾ ಶಾಸ್ತ್ರಾಣಿ ವಿವಿಧಾನಿ ಚ ॥30॥
ಪಾಂಡವನೇ! ಋಗ್ವೇದ ಸಾಮವೇದ ಯಜುರ್ವೇದ ಅಥರ್ವವೇದ ಮತ್ತು ವಿವಿಧವಾದ ಶಾಸ್ತ್ರಗಳು ಅಲ್ಲಿರುತ್ತವೆ.
ಇತಿ ಹಾಸೋಪವೇದಾಶ್ಚ ವೇದಾಂಗಾನಿ ಚ ಸರ್ವಶಃ |
ಗ್ರಹಾ ಯಜ್ಞಾಶ್ಚ ಸೋಮಾಶ್ಚ ದೈವತಾನಿ ಚ ಸರ್ವಶಃ ॥31॥
ಇತಿಹಾಸ ಉಪವೇದಗಳು ಎಲ್ಲಾ ವೇದಾಂಗಗಳು ಗ್ರಹಗಳು ಯಜ್ಞಗಳು ಸೋಮರಸಗಳು ಮತ್ತು ಎಲ್ಲಾ ದೇವತೆಗಳು ಅಲ್ಲಿರುತ್ತಾರೆ.
ಸಾವಿತ್ರೀ ದುರ್ಗತರಣೀ ವಾಣೀ ಸಪ್ತವಿಧಾ ತಥಾ |

ಮೇಧಾ ಧೃತಿಃ ಶ್ರುತಿಶ್ಚೈವ ಪ್ರಜ್ಞಾ ಕ್ಷಾಂತಿಃ ಸ್ಮೃತಿರ್ಯಶಃ ॥32॥
ಸಾವಿತ್ರೀ ದುರ್ಗಾ ವಾಣಿ ಮತ್ತು ಮೇಧಾ ಧೃತಿ ಶ್ರುತಿ ಪ್ರಜ್ಞಾ ಕ್ಷಾಂತಿ ಸ್ಮೃತಿ ಯಶಸ್ಸು ಎಂಬ ಏಳು ಮಾತೆಯರು ಅಲ್ಲಿರುತ್ತಾರೆ.
ಸಾಮಾನಿ ಸ್ತುತಿಗೀತಾನಿ ಗಾಥಾಶ್ಚ ವಿವಿಧಾ ಅಪಿ |
ಭಾಷ್ಯಾಣಿ ತರ್ಕಯುಕ್ತಾನಿ ದೇಹವಂತಿ ವಿಶಾಂಪತೇ ॥33॥
ರಾಜನೇ! ಅಲ್ಲಿ ಸಾಮಗಳು ಸ್ತೋತ್ರಗಳು ಗೀತೆಗಳು ವಿವಿಧವಾದ ಗಾಥೆಗಳು ತರ್ಕಸಹಿತವಾದ ಅನೇಕ ಭಾಷ್ಯಗಳು ದೇಹವನ್ನು ಧರಿಸಿ ಇರುತ್ತವೆ.
ಕ್ಷಣೋ ಲವೋ ಮುಹೂರ್ತಾಶ್ಚ ದಿವಾ ರಾತ್ರಿಶ್ಚ ಭಾರತ |
ಅರ್ಧಮಾಸಾಶ್ಚ ಮಾಸಾಶ್ಚ ಋತವಃ ಷಟ್ ಚ ಭಾರತ ॥34॥
ಸಂವತ್ಸರಾಶ್ಚತುರ್ಯಗಂ ಸಮಾ ರಾತ್ರಿಶ್ಚತುರ್ವಿಧಾ |
ಕಾಲಚಕ್ರಂ ಚ ಯದ್ ದಿವ್ಯಂ ನಿತ್ಯಗಂ ಧ್ರುವಮವ್ಯಯಮ್ ॥35॥
ಭಾರತನೇ! ಅಲ್ಲಿ ಕ್ಷಣ ಲವ ಮುಹೂರ್ತ ಹಗಲು ರಾತ್ರಿ ಪಕ್ಷಗಳು ಮಾಸಗಳು ಆರು ಋತುಗಳು ಸಂವತ್ಸರ ಚತುರ್ಯುಗಗಳು ನಾಲ್ಕುವಿಧವಾದ ರಾತ್ರಿಗಳು ನಿತ್ಯವೂ ಚಲಿಸುವ ನಾಶರಹಿತವಾದ ಶಾಶ್ವತವಾದ ದಿವ್ಯವಾದ ಕಾಲಚಕ್ರ ಎಲ್ಲವೂ ಇರುತ್ತವೆ.
ಅದಿತಿರ್ದಿತಿರ್ದನುಶ್ಚೈವ ವಿನತಾ ಸುರಸಾ ತಥಾ |
ಕಾಲಿಕಾ ಸುರಭೀ ದೇವೀ ಸರಮಾ ಚಾಥ ಗೌತಮೀ |
ಪ್ರಧಾ ಕದ್ರೂಶ್ಚ ತಾ ದೇವ್ಯಸ್ತತ್ರಾಸನ್ ದೇವಮಾತರಃ ॥36॥
ಅದಿತಿ ದಿತಿ ದನು ವಿನತಾ ಸುರಸಾ ಕಾಳಿಕಾ ಸುರಭೀ ಸರಮಾ ಗೌತಮೀ ಪ್ರಧಾ ಕದ್ರೂ ಮೊದಲಾದ ದೇವಮಾತೆಯರು ಅಲ್ಲಿರುತ್ತಾರೆ.

ರುದ್ರಾಣೀ ಶ್ರೀಶ್ಚ ಲಕ್ಷ್ಮೀಶ್ಚ ಭದ್ರಾ ಷಷ್ಠೀ ತಥಾ ಜರಾ |
ಪೃಥ್ವೀ ಚ ಗಂಗಾ ದೇವೀ ಚ ಹ್ರೀಃ ಸ್ವಾಹಾ ಕೀರ್ತಿರೇವ ಚ ॥37॥
ಸುರಾ ದೇವೀ ಶಚೀ ಚೈವ ತಥಾ ಪುಷ್ಟಿರರುಂಧತೀ |
ಸಂಪತ್ತಿರಾಶಾ ನಿಯತಿರ್ವೃಷ್ಟಿರ್ದೇವೀ ರತಿಸ್ತಥಾ |
ಏತಾಶ್ಚಾನ್ಯಾಶ್ಚ ತಾ ದಿವ್ಯಾ ಉಪತಸ್ಥುಃ ಪ್ರಜಾಪತಿಮ್ ॥38॥
ಪಾರ್ವತಿ ಶ್ರೀದೇವಿ ಲಕ್ಷ್ಮೀದೇವಿ ಭದ್ರಾ ಷಷ್ಠೀ ಜರಾ ಭೂಮಿ ಗಂಗಾ ಹ್ರೀ ದೇವಿ ಸ್ವಾಹಾ ಕೀರ್ತಿ ಸುರಾ ಶಚೀ ಪುಷ್ಟಿ ಅರುಂಧತೀ ಸಂಪತ್ತಿ ಆಶಾ ನಿಯತಿ ವೃಷ್ಟಿ ರತಿ ಇವರೂ ಮತ್ತು ಇನ್ನೂ ಅನೇಕ ದೇವಿಯರೂ ಅಲ್ಲಿ ಬ್ರಹ್ಮದೇವರನ್ನು ಉಪಾಸನೆಮಾಡುತ್ತಾರೆ.
ಆದಿತ್ಯಾ ವಸವೋ ರುದ್ರಾ ಮರುತಃ ಸರ್ವ ಏವ ಚ |
ವಿಶ್ವೇದೇವಾಶ್ಚ ಸಾಧ್ಯಾಶ್ಚ ಪಿತರಶ್ಚ ಮನೋಜವಾಃ ॥39॥
ವಸುರುದ್ರಾದಿತ್ಯರು ಎಲ್ಲಾ ಮರುತ್‌ಗಳು ವಿಶ್ವೇದೇವತೆಗಳು ಸಾಧ್ಯರು ಮತ್ತು ಮನೋಜವವುಳ್ಳ ಪಿತೃಗಳು ಬ್ರಹ್ಮದೇವರನ್ನು ಉಪಾಸನೆಮಾಡುತ್ತಾರೆ.
ಪಿತೃಣಾಂ ಚ ಗಣಾನ್ ವಿದ್ಧಿ ಸಪ್ತೈವ ಪುರುಷರ್ಷಭ|
ಚತ್ವಾರೋ ಮೂರ್ತಿಮಂತೋ ವೈ ತ್ರಯಶ್ಚಾಪ್ಯಶರೀರಿಣಃ ॥40॥
ಪುರುರ್ಷಭನೇ! ಪಿತೃಗಳ ಗಣವನ್ನು ಏಳು ಎಂದು ತಿಳಿ. ಅವರಲ್ಲಿ ನಾಲ್ವರು ಮೂರ್ತಿವುಳ್ಳವರು ಇನ್ನು ಮೂರುಗಣಗಳು ಅಮೂರ್ತ ಎಂದರೆ ಶರೀರ ಇಲ್ಲದವರು.
ವೈರಾಜಾಶ್ಚ ಮಹಾಭಾಗಾ ಅಗ್ನಿಷ್ವಾತ್ತಾಶ್ಚ ಭಾರತ |
ಗಾರ್ಹಪತ್ಯಾ ನಾಮ ಪರೇ ಪಿತರೋ ಲೋಕವಿಶ್ರುತಾಃ ॥41॥
ಭಾರತನೇ! ಮಹಾನುಭಾವರಾದ ವೈರಾಜರು ಅಗ್ನಿಷ್ವಾತ್ತರು ಗಾರ್ಹಪತ್ಯರು ಎಂಬ ಲೋಕವಿಶ್ರುತವಾದ ಬೇರೆ ಪಿತೃಗಳು ಅಲ್ಲಿದ್ದಾರೆ.
ಸೋಮಪಾ ಏಕಶೃಂಗಾಶ್ಚ ಅನ್ವಾಹಾರ್ಯಾಃ ಕಲಾಸ್ತಥಾ |
ಏತೇ ಚತುರ್ಷು ವರ್ಣೇಷು ಪೂಜ್ಯಂತೇ ಪಿತರೋ ನೃಪ ॥42॥
ಸೋಮಪರು ಏಕಶೃಂಗರು ಅನ್ವಾಹಾರ್ಯರು ಕಲರು ಈ ನಾಲ್ಕು ವಿಧಧ ಪಿತೃಗಳು ಎಲ್ಲಾ ವರ್ಣಗಳಲ್ಲಿಯೂ ಪೂಜಿಸಲ್ಪಡುತ್ತಾರೆ.
ಏತೈರಾಪ್ಯಾಯಿತಃ ಪೂರ್ವಂ ಸೋಮ ಆಪ್ಯಾಯತೇ ಜಗತ್ |
ತ ಏತೇ ಪಿತರಃ ಸರ್ವೇ ಪ್ರಜಾಪತಿಮುಪಸ್ಥಿತಾಃ ॥43॥
ಈ ಎಲ್ಲ ಪಿತೃಗಳಿಂದ ಸಂವೃದ್ಧಿಗೊಳಿಸಲ್ಪಟ್ಟ ಸೋಮವು ಪುನಃ ಜಗತ್ತನ್ನು ಸಂವೃದ್ಧಿಗೊಳಿಸುತ್ತದೆ. ಈ ಎಲ್ಲ ಪಿತೃಗಳು ಬ್ರಹ್ಮದೇವರನ್ನು ಉಪಾಸನೆಮಾಡುತ್ತಾರೆ.
ಉಪಾಸತೇ ಚ ಸಂಹೃಷ್ಟಾ ಬ್ರಹ್ಮಾಣಮಮಿತೌಜಸಮ್ |
ರಾಕ್ಷಸಾಶ್ಚ ಪಿಶಾಚಾಶ್ಚ ದಾನವಾ ಗುಹ್ಯಕಾಸ್ತಥಾ ॥44॥
ಅಮಿತ ಸಾಮರ್ಥ್ಯವುಳ್ಳ ಬ್ರಹ್ಮದೇವರನ್ನು ರಾಕ್ಷಸರು, ಪಿಶಾಚಿಗಳು, ದಾನವರು, ಮತ್ತು ಗುಹ್ಯಕರು, ಸಂತೋಷದಿಂದ ಉಪಾಸನೆಮಾಡುತ್ತಾರೆ.
ಸುಪರ್ಣಾ ನಾಗಪತಯಃ ಪಿತಾಮಹಮುಪಾಸತೇ |
ಸ್ಥಾವರಾ ಜಂಗಮಾಶ್ಚೈವ ಮಹಾಭೂತಾಸ್ತಥಾಽಪರೇ ॥45॥
ನಾಗಪತಿಗಳು ಪಕ್ಷಿಶ್ರೇಷ್ಠರು ಸ್ಥಾವರ ಮತ್ತು ಜಂಗಮಗಳಾದ ಎಲ್ಲಾ ಭೂತಗಳು ಬ್ರಹ್ಮದೇವರನ್ನು ಉಪಾಸನೆಮಾಡುತ್ತಾರೆ.
ಪುರಂದರಶ್ಚ ದೇವೇಂದ್ರೋ ವರುಣೋ ಧನದೋ ಯಮಃ |

ಮಹಾದೇವಶ್ಚ ಭಗವಾನ್ ಸದಾ ಗಚ್ಛತಿ ಪರ್ವಸು ।
ಮಹಾಸೇನಶ್ಚ ಭಗವಾನ್ ನಿತ್ಯಮಾಸ್ತೇ ಪಿತಾಮಹಮ್ ॥46॥
ದೇವೇಂದ್ರನಾದ ಪುರಂದರ ವರುಣ ಕುಬೇರ ಯಮ ಭಗವಂತನಾದ ರುದ್ರ ಇವರೆಲ್ಲರೂ ಎಲ್ಲ ಕಾಲಗಳಲ್ಲಿಯೂ ಉಪಾಸನೆಮಾಡುತ್ತಾರೆ. ಪೂಜ್ಯನಾದ ಷಣ್ಮುಖನು ಯಾವಾಗಲೂ ಅಲ್ಲಿಯೇ ಇದ್ದು ಬ್ರಹ್ಮದೇವರ ಉಪಾಸನೆಯನ್ನು ಮಾಡುತ್ತಾನೆ.
ದೇವೋ ನಾರಾಯಣಸ್ತಸ್ಯಾಂ ತಥಾ ದೇವರ್ಷಯಶ್ಚ ಯೇ ।
ಋಷಯೋ ವಾಲಖಿಲ್ಯಾಶ್ಚ ಯೋನಿಜಾಯೋನಿಜಾಸ್ತಥಾ ॥47॥
ದೇವದೇವನಾದ ನಾರಾಯಣನು ಅಲ್ಲಿ ನಿತ್ಯವೂ ಸನ್ನಿಹಿತನಾಗಿರುತ್ತಾನೆ. ಹಾಗೆಯೇ ದೇವರ್ಷಿಗಳು, ವಾಲಿಖಿಲ್ಯ ಋಷಿಗಳು, ಯೋನಿಜರು, ಮತ್ತು ಅಯೋನಿಜರಾದ ಋಷಿಗಳು ಅಲ್ಲಿರುತ್ತಾರೆ.
ಯತ್ಕಿಂಚಿತ್ ತ್ರಿಷು ಲೋಕೇಷು ದೃಶ್ಯಂ ಸ್ಥಾವರಜಂಗಮಮ್ ।
ಸರ್ವಂ ತಸ್ಯಾಂ ಮಯಾ ದೃಷ್ಟಮಿತಿ ವಿದ್ಧಿ ನರಾಧಿಪ ॥48॥
ನರಾಧಿಪನೇ! ಮೂರುಲೋಕಗಳಲ್ಲಿ ಸ್ಥಾವರಜಂಗಮಗಳಲ್ಲಿ ಏನೇನು ಸುಂದರವಾದ ವಸ್ತುಗಳು ನನ್ನಿಂದ ನೋಡಲ್ಪಟ್ಟಿವೆಯೋ, ಆ ಎಲ್ಲ ಸುಂದರವಸ್ತುಗಳನ್ನೂ ನಾನು ಆ ಸಭೆಯಲ್ಲಿ ನೋಡಿದ್ದೇನೆ ಎಂದು ತಿಳಿ.
ಅಷ್ಟಾಶೀತಿಸಹಸ್ರಾಣಿ ಯತೀನಾಮೂರ್ಧ್ವರೇತಸಾಮ್ ।
ಪ್ರಜ್ಞಾವತಾಂ ಚ ಪಂಚಾಶದ್ ಋಷೀಣಾಮಪಿ ಪಾಂಡವ ॥49॥
ತೇ ಸ್ಮ ತತ್ರ ಯಥಾಕಾಮಂ ಸರ್ವೇ ದೃಷ್ಟ್ವಾ ದಿವೌಕಸಃ ।
ಪ್ರಣಮ್ಯ ಶಿರಸಾ ತಸ್ಮೈ ಪುನರ್ಯಾಂತಿ ಯಥಾಸುಖಮ್ ॥50॥
ಪಾಂಡವನೇ! ಅಲ್ಲಿ ಎಂಬತ್ತೆಂಟುಸಾವಿರ ಊರ್ಧ್ವರೇತಸ್ಕರಾದ ಯತಿಗಳೂ ಪ್ರಜ್ಞಾಶಾಲಿಗಳಾದ ಐವತ್ತು ಜನ ಋಷಿಗಳೂ ಅಲ್ಲಿಗೆ ಅವರಿಗೆ ಇಷ್ಟವಾದಾಗ ಬಂದು ಬ್ರಹ್ಮದೇವರನ್ನು ಮತ್ತು ಉಳಿದ ದೇವತೆಗಳನ್ನು ಶಿರಸಾ ನಮಸ್ಕರಿಸಿ ಪುನಃ ಸುಖವಾಗಿ ಹೊರಟುಹೋಗುತ್ತಾರೆ.
ಅತಿಥೀನಾಗತಾನ್ ನಾಗಾನ್ ದೇವಾನ್ ದೈತ್ಯಾನ್ ತಥಾ ಮುನೀನ್ ।
ಯಕ್ಷಾನ್ ಸುಪರ್ಣಾನ್ ಕಾಲೇಯಾನ್ ಗಂಧರ್ವಾಪ್ಸರಸಸ್ತಥಾ ॥51॥
ಮಹಾಭಾಗಾನಮಿತಧೀರ್ಬ್ರಹ್ಮಾ ಲೋಕಪಿತಾಮಹಃ ।
ದಯಾವಾನ್ ಸರ್ವಭೂತೇಷು ಯಥಾರ್ಹಂ ಪ್ರತಿಪದ್ಯತೇ ॥52॥
ಅತಿಥಿಗಳಾಗಿ ಆಗಮಿಸಿದ ನಾಗರು ದೇವತೆಗಳು ದೈತ್ಯರು ಋಷಿಗಳು ಯಕ್ಷರು ಸುಪರ್ಣರು ಕಾಳೀಯರು ಗಂಧರ್ವರು ಅಪ್ಸರಸರು ಈ ಮಹಾನುಭಾವರನ್ನು ಅಗಾಧ ಪ್ರಜ್ಞೆಯುಳ್ಳ ಎಲ್ಲಾ ಪ್ರಾಣಿಗಳಲ್ಲಿ ದಯೆವುಳ್ಳ ಲೋಕಪಿತಾಮಹರಾದ ಬ್ರಹ್ಮದೇವರು ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಸತ್ಕರಿಸಿ ಅವರ ಜೊತೆಯಲ್ಲಿ ವ್ಯವಹರಿಸುತ್ತಾರೆ.
ಪ್ರತಿಗೃಹ್ಯ ತು ವಿಶ್ವಾತ್ಮಾ ಸ್ವಯಂಭೂರಮಿತಪ್ರಭಃ ।
ಸಾಂತ್ವಮಾನಾರ್ಥಸಂಭೋಗೈರ್ಯುನಕ್ತಿ ಮನುಜಾಧಿಪ ॥53॥
ಮನುಜಾಧಿಪನೇ! ಅಮಿತಕಾಂತಿಯುಳ್ಳ ಜಗತ್ಸ್ವಾಮಿಯಾದ ಬ್ರಹ್ಮದೇವರು ಅವರ ಪೂಜೆಯನ್ನು ಸ್ವೀಕರಿಸಿ ಅವರಿಗೆ ಸಮಾಧಾನದ ಮಾತುಗಳು ಗೌರವ ಅಪೇಕ್ಷಿಸಿದ ಅರ್ಥ ಮತ್ತು ಶ್ರೇಷ್ಠವಾದ ಗೋವುಗಳನ್ನು ಕೊಟ್ಟು ಅವರನ್ನು ಸತ್ಕರಿಸುತ್ತಾರೆ.
ಅಪರೈರುಪಯಾತೈಸ್ತು ಪ್ರತಿಯಾತೈಸ್ತಥಾಽಪರೈಃ ।
ಆಕುಲಾ ಸಾ ಸಭಾ ನಿತ್ಯಂ ಭವತಿ ಸ್ಮ ಸುಖಪ್ರದಾ ॥54॥
ಆ ಸಭೆಯು ಬರುವ ಮತ್ತು ಹೋಗುವ ವ್ಯಕ್ತಿಗಳಿಂದ ನಿರಂತರವಾಗಿ ನಿಬಿಡವಾಗಿದ್ದು ಸುಖಪ್ರದವಾಗಿರುತ್ತದೆ.
ಸರ್ವತೇಜೋಮಯೀ ದಿವ್ಯಾ ಮಹರ್ಷಿಗಣಸೇವಿತಾ ।
ಬ್ರಾಹ್ಮ್ಯಾ ಶ್ರಿಯಾ ದೀಪ್ಯಮಾನಾ ಕಾಂತ್ಯಾ ಚೈವ ಗತಕ್ಲಮಾ ॥55॥
ಸರ್ವತೇಜೋಮಯವಾದ ದಿವ್ಯವಾದ ಆ ಸಭೆಯು, ಮಹರ್ಷಿಗಳ ಗಣದಿಂದ ಸೇವಿಸಲ್ಪಡುತ್ತದೆ. ಬ್ರಾಹ್ಮಕಾಂತಿಯಿಂದ ಮತ್ತು ಸೌಂದರ್ಯದಿಂದ ಬೆಳಗಿದ ಆ ಸಭೆಯು ಆಯಾಸಾದಿ- ದುಃಖರಹಿತವಾಗಿರುತ್ತದೆ.
ಸಾ ಮಯಾ ತಾದೃಶೀ ದೃಷ್ಟಾ ಸರ್ವಲೋಕೇಷು ದುರ್ಲಭಾ ।
ಸಭೇಯಂ ರಾಜಶಾರ್ದೂಲ ಮನುಷ್ಯೇಷು ಯಥಾ ತವ ॥56॥
ರಾಜಶಾರ್ದೂಲನೇ! ಎಲ್ಲ ಲೋಕಗಳನ್ನು ಸಂಚರಿಸುವ ನಾನು ಹಿಂದೆ ಆ ಸಭೆಯನ್ನು ನೋಡಿದೆನು. ಮನುಷ್ಯಲೋಕದಲ್ಲಿ ಹೇಗೆ ನಿನ್ನ ಸಭೆಯು ದುರ್ಲಭವೋ ಹಾಗೆ ಆ ಸಭೆಯು ದೇವಲೋಕದಲ್ಲಿ ದುರ್ಲಭವಾದದು.
ಏತಾ ಮಯಾ ದೃಷ್ಟಪೂರ್ವಾಃ ಸಭಾ ದೇವೇಷು ಪಾಂಡವ ।
ತವೇಯಂ ಮಾನುಷೇ ಲೋಕೇ ಸರ್ವಶ್ರೇಷ್ಠತಮಾ ಶುಭಾ ॥57॥
ಪಾಂಡವನೇ! ಇವೆಲ್ಲವೂ ಹಿಂದೆ ನಾನು ದೇವಲೋಕದಲ್ಲಿ ನೋಡಿದ ಸಭೆಗಳು. ನಿನ್ನ ಈ ಸಭೆಯು ಮಾತ್ರ ಮನುಷ್ಯಲೋಕದಲ್ಲಿ ಅತ್ಯಂತಶ್ರೇಷ್ಠವೂ ಮತ್ತು ಶುಭಪ್ರದವೂ ಆಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ಏಕಾದಶೋಽಧ್ಯಾಯಃ ॥
॥ ಮಂತ್ರಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿಯಿತು.
* * * *

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಅಂತರಿಕ್ಷಂ ತ್ವಯಾ ಪ್ರೋಕ್ತಂ ಲಕ್ಷಯೋಜನಮುಚ್ಛ್ರಿತಂ |
ಅರ್ಧಕೋಟ್ಯುಚ್ಛ್ರಿತಃ ಸ್ವರ್ಗೋ ವಿಮಾನಾವಲಿಸಂಕುಲಃ ॥56॥
`ಭೂಮಿಯಿಂದ ಅಂತರಿಕ್ಷಲೋಕ ಒಂದು ಲಕ್ಷ ಯೋಜನೆ ಎತ್ತರದಲ್ಲಿ ಇದೆ ಎಂದು ನೀವು ಹೇಳಿರುವಿರಿ. ವಿಮಾನ ಸಮೂಹಗಳಿಂದ ತುಂಬಿದ ಸ್ವರ್ಗಲೋಕ ಅರ್ಧಕೋಟಿ ಯೋಜನ ಎತ್ತರವೆಂದೂ ಹೇಳಿರುವಿರಿ.
ಭುವಃ ಸ್ವರ್ಗಶ್ಚ ಕೋಟ್ಯೈವಯೋಜನಾನಾಂ ಪ್ರವಿಸ್ತೃತೌ |
ಮಹರ್ಜನಸ್ತಪಶ್ಚೈವ ಕ್ರಮಾದರ್ಧ್ಯರ್ಧಯೋಜನಾಃ ॥57॥
ಭುವರ್ಲೋಕವೂ ಸ್ವರ್ಗಲೋಕವೂ ಒಂದು ಕೋಟಿ ಯೋಜನ ವಿಸ್ತಾರವಾಗಿವೆ. ಮಹ, ಜನ, ತಪ ಲೋಕಗಳು ಕ್ರಮವಾಗಿ ಒಂದಕ್ಕಿಂತ ಇನ್ನೊಂದು ಒಂದೂವರೆಪಟ್ಟು ಎತ್ತರವಾಗಿದೆ.
ಪಂಚಾಶತ್ಕೋಟಿವಿಸ್ತಾರೋ ಯೋಜನಾನಾಂ ಸಮಸ್ತಶಃ |
ಯಾವಂತ ಏತೇ ಮಿಲಿತಾಸ್ತತ್ಪ್ರಮಾಣ ಉದೀರಿತಃ ॥58॥
ಸತ್ಯಾಖ್ಯೋ ಬ್ರಹ್ಮಲೋಕಸ್ತು ಯತ್ರ ಬ್ರಹ್ಮಾ ವಿರಾಜತೇ |
ತತಶ್ಚ ದ್ವಿಗುಣಃ ಪ್ರೋಕ್ತೋ ವಿಷ್ಣುಲೋಕಃ ಸನಾತನಃ ॥59॥
ಮಹ ಜನ ತಪ ಈ ಮೂರು ಲೋಕಗಳು ಒಟ್ಟು ಐವತ್ತು ಕೋಟಿ ಯೋಜನ ವಿಸ್ತಾರವಾಗಿವೆ. ಸತ್ಯಲೋಕ ತಪೋಲೋಕದಿಂದ ಸ್ವರ್ಗ ಮಹ ಜನ ತಪ ಈ ಎಲ್ಲ ಲೋಕಗಳ ಒಟ್ಟು ಎತ್ತರದಷ್ಟು ಎತ್ತರವಾಗಿದೆ. ಅದು ಬ್ರಹ್ಮಲೋಕ. ಅಲ್ಲಿ ಬ್ರಹ್ಮ ವಿಶೇಷವಾಗಿ ವಿರಾಜಿಸುತ್ತಾನೆ. ಅದಕ್ಕಿಂತ ಇಮ್ಮಡಿ ಎತ್ತರದಲ್ಲಿ ಸನಾತನವಾದ ವಿಷ್ಣುಲೋಕ ವೈಕುಂಠವಿದೆ.
ಉತ್ತರೋತ್ತರತಃ ಸರ್ವೇ ಸುಖೇ ಶತಗುಣೋತ್ತರಾಃ |
ಅನಂತಜನಸಂಪೂರ್ಣಾ ಅಪಿ ತೇ ಹೀಚ್ಛಯಾ ಹರೇಃ ॥60॥
ಅವಕಾಶವಂತೋ ದಿವ್ಯತ್ವಾತ್ ಪೂರ್ಯಂತೇ ನ ಕದಾಚನ |
ಸರ್ವಕಾಮಸಖ್ಯೈಃ ಪೂರ್ಣಾ ದಿವ್ಯಸ್ತ್ರೀಪುರುಷೋಜ್ವಲಾಃ ॥61॥
ಅಂತರಿಕ್ಷದಿಂದ ತೊಡಗಿ ಮೇಲೆ ಮೇಲೆ ಹೋದಂತೆ ಎಲ್ಲ ಲೋಕಗಳೂ ಸುಖದ ವಿಷಯದಲ್ಲಿ ಒಂದಕ್ಕಿಂತ ಒಂದು ನೂರು ಪಟ್ಟು ಶ್ರೇಷ್ಠ. ಅಸಂಖ್ಯ ಜನರಿಂದ ತುಂಬಿದ್ದರೂ ಹರೀಚ್ಛೆಯಿಂದ ದಿವ್ಯವಾಗಿರುವುದರಿಂದ ಸಾಕಷ್ಟು ಅವಕಾಶ ಉಳ್ಳವುಗಳಾಗಿವೆ. ಅವು ಎಂದೂ ಪೂರ್ತಿಯಾಗುವುದಿಲ್ಲ. ಅಭೀಷ್ಟವಾದ ಎಲ್ಲ ಸುಖಭೋಗಗಳಿಂದ ತುಂಬಿರುತ್ತವೆ. ದಿವ್ಯ ಸ್ತ್ರೀ ಪುರುಷರಿಂದ ಶೋಭಿಸುತ್ತವೆ.
ದಿವ್ಯರತ್ನಸಮಾಕೀರ್ಣಂ ತಥಾ ಪಾತಾಲಸಪ್ತಕಂ |
ಅಧಸ್ತಾಚ್ಛೇಷದೇವೇನ ಬಲಿನಾ ಸಮಧಿಷ್ಠಿತಂ ॥62॥
ದಿವ್ಯರತ್ನಗಳಿಂದ ತುಂಬಿದ ಏಳು ಪಾತಾಳಗಳೂ ಅಂತರಿಕ್ಷಾದಿ ಲೋಕಗಳಂತೆಯೇ ಒಂದಕ್ಕಿಂತ ಒಂದು ನೂರುಪಟ್ಟು ಶ್ರೇಷ್ಠ. ಅವುಗಳನ್ನು ಕೆಳಗೆ ಬಲಿಷ್ಠನಾದ ಶೇಷದೇವ ಹೊತ್ತಿದ್ದಾನೆ.
ಕಾಮಭೋಗಸಮಾಯುಕ್ತಾ ಬಹುವರ್ಷಸಹಸ್ರಿಣಃ |
ಸಪ್ತದ್ವೀಪೇಷು ಪುರುಷಾ ನಾರ್ಯಶ್ಚೋಕ್ತಾಃ ಸುರೂಪಿಣಃ ॥63॥
ಏಳು ಪಾತಾಳ ಲೋಕಗಳಲ್ಲಿಯೂ ಇರುವ ಸ್ತ್ರೀಪುರುಷರು ಸುರೂಪಿಗಳು. ಯಥೇಚ್ಛ ಸುಖಭೋಗಶಾಲಿಗಳು. ಮತ್ತು ಅನೇಕ ಸಾವಿರ ವರ್ಷಕಾಲ ಬಾಳುತ್ತಾರೆ.
ಏಷಾಂ ಚ ಸರ್ವಲೋಕಾನಾಂ ಧಾತಾ ನಾರಾಯಣಃ ಪರಃ |
ವಿಷ್ಣುಲೋಕಸ್ಥಿತೋ ಮುಕ್ತೈಃ ಸದಾ ಸರ್ವೈರುಪಾಸ್ಯತೇ ॥64॥
ಈ ಎಲ್ಲ ಲೋಕಗಳಿಗೆ ಸರ್ವೋತ್ತಮನಾದ ಶ್ರೀಹರಿಯೇ ರಕ್ಷಕ. ವಿಷ್ಣುಲೋಕಗಳಲ್ಲಿದ್ದು ಅವನು ಎಲ್ಲ ಮುಕ್ತರುಗಳಿಂದಲೂ ಆರಾಸಲ್ಪಡುತ್ತಾನೆ.
ಸೇವಕಾ ಬ್ರಹ್ಮಣಃ ಸರ್ವೇ ದೇದಾ ವೇವಾಶ್ಚ ಸರ್ವಶಃ |
ಶಕ್ರಸ್ಯ ಮುನಯಃ ಸರ್ವೇ ಹರಿಶ್ಚಂದ್ರಶ್ಚ ಭೂಮಿಪಃ ॥65॥
ಎಲ್ಲ ವೇದಾಭಿಮಾನಿಗಳೂ ಬ್ರಹ್ಮನಿಗೆ ಪರಿವಾರದವರು. ಎಲ್ಲ ದೇವತೆಗಳೂ ಮುನಿಗಳೂ ಹರಿಶ್ಚಂದ್ರನೂ ದೇವೇಂದ್ರನಿಗೆ ಪರಿವಾರದವರು.
ಅಖಿಲಾ ಅಪಿ ರಾಜಾನಃ ಪಾಂಡುಶ್ಚಾಸ್ಮತ್ಪಿತಾ ಮುನೇ |
ಯಮಸ್ಯೈವಾನುಗಾಃ ಪ್ರೋಕ್ತಾ ರಾಜಭಿಸ್ತೈರ್ಯಮೇನ ಚ ॥66॥
ಉಪಾಸ್ಯಮಾನೋ ಭಗವಾನ್ ರಾಮೋ ಯಮಸಭಾತಳೇ ॥67॥
ಎಲ್ಲ ರಾಜರೂ ತಮ್ಮ ತಂದೆಯಾದ ಪಾಂಡುವೂ ಯಮನಿಗೇ ಪರಿವಾರವೆಂದು ಹೇಳಿದಿರಿ. ಮುನಿಯೆ, ಆ ರಾಜರೂ ಯಮನೂ ಯಮಸಭೆಯಲ್ಲಿ ಭಗವಾನ್ ಶ್ರೀರಾಮಚಂದ್ರನನ್ನು ಆರಾಸುವರೆಂದೂ ಹೇಳಿದಿರಿ.
ಉಕ್ತ ಇಂದ್ರೇಣ ಚೋಪಾಸ್ಯೋ ವಾಮನಾತ್ಮಾ ಜನಾರ್ದನಃ |
ಪ್ರಾದುರ್ಭಾವಾಶ್ಚ ನಿಖಿಲಾ ಬ್ರಹ್ಮಣೋಪಾಸಿತಾಃ ಸದಾ |
ವರುಣಸ್ಯಾನುಗಾ ನಾಗಾಸ್ತತ್ರ ಮತ್ಸ್ಯಾಕೃತಿರ್ಹರಿಃ ॥68॥
ಇಂದ್ರ ವಾಮನರೂಪಿ ಹರಿಯನ್ನೂ ಬ್ರಹ್ಮ ಹರಿಯ ಎಲ್ಲ ಅವತಾರಗಳನ್ನೂ ಸದಾ ಆರಾಸುವರೆಂದೂ ಹೇಳಿದಿರಿ. ನಾಗಗಳು ವರುಣನ ಪರಿವಾರದವರು. ಅಲ್ಲಿ ಮತ್ಸ್ಯರೂಪಿ ಹರಿ ಆರಾಧ್ಯನೆನಿಸಿದ್ದಾನೆ.
ಗಂಧರ್ವಾ ಧನದಸ್ಯಾಪಿ ತತ್ರ ಕಲ್ಕೀ ಹರಿಃ ಪ್ರಭುಃ |

ರುದ್ರಸ್ಯೋಗ್ರಾಣಿ ಭೂತಾನಿ ನೃಸಿಂಹಾತ್ಮಾ ಶಿವೇನ ಚ ॥69॥
ಉಪಾಸ್ಯತೇ ಸದಾ ವಿಷ್ಣುರಿತ್ಯಾದ್ಯುಕ್ತಂ ತ್ವಯಾನಘ |
ಸರ್ವರತ್ನಸ್ಥಲಾನ್ ದಿವ್ಯಾನ್ ದೇವಲೋಕಾನ್ ಪ್ರಭಾಷತಾ ॥70॥
ಗಂಧರ್ವರು ಕುಬೇರನ ಪರಿವಾರ. ಅಲ್ಲಿ ಕಲ್ಕಿರೂಪನಾದ ಪ್ರಭು ಶ್ರೀಹರಿ ಉಪಾಸ್ಯನಾಗಿದ್ದಾನೆ. ಭಯಂಕರ ಭೂತಗಳು ರುದ್ರನ ಪರಿವಾರ. ನರಸಿಂಹ ರೂಪನಾದ ವಿಷ್ಣು ರುದ್ರನಿಂದ ಸದಾ ಉಪಾಸ್ಯನಾಗಿದ್ದಾನೆ ಎಂದು ಮುಂತಾಗಿ ದಿವ್ಯ ಸಕಲ ರತ್ನಸ್ಥಳಗಳುಳ್ಳ ದೇವಲೋಕಗಳನ್ನು ವರ್ಣಿಸುತ್ತ ಹೇಳಿದ್ದೀರಿ.
ತತ್ರ ಮೇ ಸಂಶಯೋ ಭೂಯಾನ್ ಹರಿಶ್ಚಂದ್ರಃ ಕಥಂ ನೃಪಃ |
ಐಂದ್ರಂ ಸಭಾತಳಂ ಪ್ರಾಪ್ತಃ ಪಾಂಡುರ್ನಾಸ್ಮತ್ಪಿತಾ ಮುನೇ ॥71॥
ಅದರಲ್ಲಿ ನನಗೆ ಒಂದು ದೊಡ್ಡ ಸಂಶಯ. ಮುನಿಯೆ, ರಾಜಾ ಹರಿಶ್ಚಂದ್ರನಿಗೆ ಇಂದ್ರನ ಸಭೆ ಲಭ್ಯವಾಗಿದೆ, ನಮ್ಮ ತಂದೆಯಾದ ಪಾಂಡುವಿಗೆ ಇಲ್ಲ, ಇದು ಹೇಗೆ?
ಇತ್ಯುಕ್ತೋ ನಾರದಃ ಪ್ರಾಹ ರಾಜಸೂಯಕೃತೋನ್ನತಿಂ |
ಹರಿಶ್ಚಂದ್ರಸ್ಯ ತಾಂ ದೃಷ್ಟ್ವಾ ಪಿತಾ ಯಮ ಸಭಾತಳೇ |
ಸ್ಥಿತಸ್ತ್ವಾಮವದತ್ ಪಾಂಡೂ ರಾಮದ್ವಯಸುದೈವತೇ ॥72॥
ಧರ್ಮರಾಜ ಹೀಗೆ ಕೇಳಿದಾಗ ನಾರದರು ಹೇಳಿದರು, `ಧರ್ಮರಾಜ, ಹರಿಶ್ಚಂದ್ರನಿಗೆ ರಾಜಸೂಯಯಾಗದಿಂದ ಉನ್ನತಿ ಲಭಿಸಿದೆ. ಅದನ್ನು ನೋಡಿ ನಿಮ್ಮ ತಂದೆ, ಪರಶುರಾಮ ಶ್ರೀರಾಮ ಇಬ್ಬರಿಂದ ಶೋಭಿಸುವ ಯಮನ ಸಭೆಯಲ್ಲಿ, ನಿನಗೆ ಈ ಮಾತನ್ನು ಹೇಳಿದ್ದಾನೆ'.
ಕರೋತು ರಾಜಸೂಯಂ ಮೇ ಪುತ್ರೋ ಜ್ಯೇಷ್ಠೋಽನುಜಾರ್ಚಿತಃ |
ಪಾಲಿತೋ ವಾಸುದೇವೇನ ಕಿಂ ತಸ್ಯಾಸಾಧ್ಯಮತ್ರ ಹಿ ॥73॥
`ನನ್ನ ಜ್ಯೇಷ್ಠ ಪುತ್ರ ರಾಜಸೂಯಯಾಗ ಮಾಡಲಿ. ಅಜೇಯರಾದ ತಮ್ಮಂದಿರಿಂದ ಅವನು ಸೇವಿತನಾಗಿದ್ದಾನೆ ಮತ್ತು ಶ್ರೀಕೃಷ್ಣನಿಂದ ರಕ್ಷಿತನೂ ಆಗಿದ್ದಾನೆ. ಅವನಿಗೆ ಇದರಲ್ಲಿ ಅಸಾಧ್ಯವೇನಿದೆ?'
* * * *

ಹನ್ನೆರಡನೆಯ ಅಧ್ಯಾಯ
(ಯುಷ್ಠಿರನ ಪ್ರಶ್ನೆಗೆ ಉತ್ತರವಾಗಿ ನಾರದರಿಂದ ಇಂದ್ರಸಭೆಯ ಪ್ರಾಪ್ತಿಗೆ ರಾಜಸೂಯಯಾಗವು ಕಾರಣವೆಂದು ತಿಳಿಸಿ, ಪಾಂಡುವಿನ ಆದೇಶವನ್ನು ಧರ್ಮರಾಜನಿಗೆ ತಿಳಿಸುವುದು.)
ಯುಷ್ಠಿರಃ
ಪ್ರಾಯಶೋ ರಾಜಲೋಕಾಸ್ತೇ ಕಥಿತಾ ವದತಾಂ ವರ |
ವೈವಸ್ವತಸಭಾಯಾಂ ವೈ ಯಥಾವದನುಪೂರ್ವಶಃ ॥1॥
ವಾಗ್ಮಿಗಳಲ್ಲಿ ಶ್ರೇಷ್ಠರಾದ ನಾರದರೇ! ನೀವು ರಾಜರುಗಳೆಲ್ಲರೂ ಹೆಚ್ಚಾಗಿ ಯಮದೇವರಸಭೆಯಲ್ಲಿಯೇ ಇರುತ್ತಾರೆ, ಎಂದು ಕ್ರಮಬದ್ಧವಾಗಿ ತಿಳಿಸಿದ್ದೀರಿ.
ವರುಣಸ್ಯ ಸಭಾಯಾಂ ಚ ನಾಗಾಸ್ತೇ ಕಥಿತಾ ವಿಭೋ |
ದೈತ್ಯೇಂದ್ರಾಶ್ಚೈವ ಭೂಯಿಷ್ಠಾಃ ಸರಿತಃ ಸಾಗರಾಸ್ತಥಾ ॥2॥
ಪ್ರಭುಗಳೇ! ವರುಣನ ಸಭೆಯಲ್ಲಿ ನಾಗಗಳು, ನದಿಗಳು ಮತ್ತು ಸಾಗರಗಳು ಮತ್ತು ಹೆಚ್ಚಾಗಿ ದೈತ್ಯೇಂದ್ರರು ಇರುತ್ತಾರೆ ಎಂದು ತಿಳಿಸಿದ್ದೀರಿ.
ತಥಾ ಧನಪತೇರ್ಯಕ್ಷಾ ರಾಕ್ಷಸಾ ಗುಹ್ಯಕಾಶ್ಚ ಯೇ |
ಗಂಧರ್ವಾಪ್ಸರಸಶ್ಚೈವ ಭಗವಾಂಶ್ಚ ವೃಷಧ್ವಜಃ ॥3॥
ಹಾಗೆಯೇ ಕುಬೇರನ ಸಭೆಯಲ್ಲಿ ಯಕ್ಷರು ರಾಕ್ಷಸರು ಗುಹ್ಯಕರು ಗಂಧರ್ವರು ಅಪ್ಸರೆಯರು ಮತ್ತು ಭಗವಂತನಾದ ವೃಷಧ್ವಜನಾದ ರುದ್ರನು ಇರುವನೆಂದು ತಿಳಿಸಿದ್ದೀರಿ.
ಪಿತಾಮಹಸಭಾಯಾಂ ತು ಕಥಿತಾಸ್ತೇ ಮಹರ್ಷಯಃ |
ಸರ್ವೇ ದೇವನಿಕಾಯಾಶ್ಚ ಸರ್ವಶಾಸ್ತ್ರಾಣಿ ಚೈವ ಹ ॥4॥
ಬ್ರಹ್ಮದೇವರ ಸಭೆಯಲ್ಲಿ ಎಲ್ಲ ಮಹರ್ಷಿಗಳೂ ಎಲ್ಲ ದೇವತೆಗಳ ಸಮೂಹವೂ ಎಲ್ಲ ಶಾಸ್ತ್ರಗಳೂ ಇರುತ್ತವೆ ಎಂದು ತಿಳಿಸಿದ್ದೀರಿ.
ಶಕ್ರಸ್ಯ ತು ಸಭಾಯಾಂ ತು ದೇವಾಃ ಸಂಕೀರ್ತಿತಾ ಮುನೇ |
ಉದ್ದೇಶತಶ್ಚ ಗಂಧರ್ವಾ ವಿವಿಧಾಶ್ಚ ಮಹರ್ಷಯಃ ॥5॥
ಋಷಿಗಳೇ! ಇಂದ್ರನ ಸಭೆಯಲ್ಲಿ ನಾಮನಿರ್ದೇಶವನ್ನು ಮಾಡಿ ಗಂಧರ್ವರನ್ನು ಅನೇಕ ಮಹರ್ಷಿಗಳನ್ನು ತಿಳಿಸಿದ್ದೀರಿ.
ಏಕ ಏವ ತು ರಾಜರ್ಷಿರ್ಹರಿಶ್ಚಂದ್ರೋ ಮಹಾಮುನೇ |
ಕಥಿತಸ್ತೇ ಸಭಾನಿತ್ಯೋ ದೇವೇಂದ್ರಸ್ಯ ಮಹಾತ್ಮನಃ ॥6॥
ಮಹರ್ಷಿಗಳೇ! ಮಹಾತ್ಮನಾದ ದೇವೇಂದ್ರನ ಸಭೆಯಲ್ಲಿ ರಾಜರ್ಷಿಗಳಲ್ಲಿ ಹರಿಶ್ಚಂದ್ರನೊಬ್ಬನೇ ಸದಾ ಇರುತ್ತಾನೆಂದು ತಿಳಿಸಿದ್ದೀರಿ. (ಬೇರೆ ರಾಜರುಗಳ ಹೆಸರನ್ನು ಹೇಳಲಿಲ್ಲ.)
ಕೇನ ಕರ್ಮವಿಪಾಕೇನ ಹರಿಶ್ಚಂದ್ರೋ ದ್ವಿಜರ್ಷಭ |
ತೇಷು ರಾಜಸಹಸ್ರೇಷು ಪ್ರಭಯಾಽಪ್ಯತಿರೋಚತೇ ॥7॥

ಬ್ರಾಹ್ಮಣಶ್ರೇಷ್ಠರೇ! ಸಹಸ್ರಾರು ರಾಜರ ಮಧ್ಯದಲ್ಲಿ ಹರಿಶ್ಚಂದ್ರನೊಬ್ಬನೇ ಯಾವ ಕರ್ಮವಿಪಾಕದಿಂದ ಉಳಿದೆಲ್ಲರನ್ನೂ ಮೀರಿ, ದೇವೇಂದ್ರನ ಸಭೆಯಲ್ಲಿ ಕಾಂತಿಯಿಂದ ಕಂಗೊಳಿಸುತ್ತಿದ್ದಾನೆ.
ಕಿಂ ಕರ್ಮ ತೇನಾಚರಿತಂ ತಪೋ ವಾಪಿ ವ್ರತೋಽಪಿ ವಾ |
ಯೇನಾಸೌ ಸಹ ಶಕ್ರೇಣ ಮೋದತೇ ಸುಮಹಾಯಶಾಃ ॥8॥
ಮಹಾಕೀರ್ತಿವಂತನಾದ ಅವನು ಯಾವುದರ ಬಲದಿಂದ ಇಂದ್ರಸಭೆಯಲ್ಲಿ ಸಂತೋಷಪಡುತ್ತಿದ್ದಾನೆಯೋ, ಅಂತಹ ಯಾವ ಕರ್ಮವನ್ನು ಅಥವಾ ತಪಸ್ಸನ್ನು ಅಥವಾ ವ್ರತವನ್ನು ಅವನು ಆಚರಿಸಿದ್ದಾನೆ.
ಪಿತೃಲೋಕಗತಶ್ಚಾಪಿ ತ್ವಯಾ ವಿಪ್ರ ಪಿತಾ ಮಮ |
ದೃಷ್ಟಃ ಪಾಂಡುರ್ಮಹಾಭಾಗಃ ಕಥಂ ತ್ವಾಸೀತ್ ಸಮಾಗಮಃ ॥9॥
ನೀವು ಯಮಲೋಕಕ್ಕೆ ಹೋದಾಗ ನನ್ನ ತಂದೆಯಾದ ಮಹಾನುಭಾವನಾದ ಪಾಂಡುವನ್ನು ನೋಡಿದಿರಷ್ಟೇ? ನಿಮ್ಮಿಬ್ಬರ ಸಮಾಗಮವು ಹೇಗಾಯಿತು?
ಕಿಮುಕ್ತವಾನ್ ಮಾ ಭಗವನ್ನೇತದಿಚ್ಛಾಮಿ ವೇದಿತುಮ್ |
ಅನಾಗತಮತಿಕ್ರಾಂತಂ ಸರ್ವಂ ತತ್ ತ್ವಯಿ ನಿಷ್ಠಿತಮ್ |
ತ್ವತ್ತಃ ಸರ್ವಮಿದಂ ಶ್ರೋತುಂ ಪರಂ ಕೌತೂಹಲಂ ಹಿ ಮೇ ॥10॥
ಪಾಂಡುವು ನನಗೆ ಏನು ಸಂದೇಶವನ್ನು ನೀಡಿದ್ದಾನೆ ಎಂದು ತಿಳಿಯಲು ಇಷ್ಟಪಡುತ್ತೇನೆ. ನೀವು ಭೂತ, ಭವಿಷ್ಯದ್, ವರ್ತಮಾನಗಳೆಲ್ಲವನ್ನೂ ತಿಳಿದವರು. ಆದ್ದರಿಂದ ನಿಮ್ಮಿಂದ ಈ ಪ್ರಶ್ನೆಗೆ ಉತ್ತರವನ್ನು ಕೇಳಲು ನನಗೆ ಬಹಳ ಕೂತೂಹಲವಿದೆ.
ನಾರದಃ
ಯನ್ಮಾಂ ಪೃಚ್ಛಸಿ ರಾಜೇಂದ್ರ ಹರಿಶ್ಚಂದ್ರಂ ಪ್ರತಿ ಪ್ರಭೋ |
ತತ್ ತೇಽಹಂ ಸಂಪ್ರವಕ್ಷ್ಯಾಮಿ ಮಾಹಾತ್ಮ್ಯಂ ತಸ್ಯ ೀಮತಃ ॥11॥
ರಾಜೇಂದ್ರನೇ! ನೀನು ಮೇಧಾವಿಯಾದ ಹರಿಶ್ಚಂದ್ರನ ಮಾಹಾತ್ಮ್ಯವನ್ನು ಕುರಿತು ಕಾರಣವನ್ನು ಕೇಳಿದೆಯಷ್ಟೇ. ಅದನ್ನು ನಾನು ನಿನಗೆ ಹೇಳುತ್ತೇನೆ.
ಇಕ್ಷ್ವಾಕೂಣಾಂ ಕುಲೇ ಜಾತಸ್ತ್ರಿಶಂಕುರ್ನಾಮ ಪಾರ್ಥಿವಃ |
ಅಯೋಧ್ಯಾಪತಿರ್ವೀರೋ ವಿಶ್ವಾಮಿತ್ರೇಣ ಸಂಸ್ಥಿತಃ ॥12॥
ಇಕ್ಷ್ವಾಕುಗಳ ವಂಶದಲ್ಲಿ ತ್ರಿಶಂಕು ಎಂಬ ವೀರನಾದ ರಾಜನು ಅಯೋಧ್ಯಾಪತಿಯಾಗಿ ಜನಿಸಿ, ವಿಶ್ವಾಮಿತ್ರರ ಬೆಂಬಲವನ್ನು ಪಡೆದನು.
ತಸ್ಯ ಸತ್ಯವತೀ ನಾಮ ಪತ್ನೀ ಕೇಕಯವಂಶಜಾ |
ತಸ್ಯಾಂ ಗರ್ಭಃ ಸಮಭವದ್ ಧರ್ಮೇಣ ಕುರುನಂದನ ॥13॥
ಕುರುನಂದನನೇ! ಕೇಕಯವಂಶದವಳಾದ ಸತ್ಯವತೀ ಎಂಬ ಅವಳ ಪತ್ನಿಯಲ್ಲಿ ಕಾಲಕ್ರಮದಲ್ಲಿ ಧರ್ಮದಿಂದ ಒಂದು ಗರ್ಭವು ಉಂಟಾಯಿತು.
ಸಾ ಚ ಕಾಲೇ ಮಹಾಭಾಗಾ ಜನ್ಮಮಾಸಂ ಪ್ರವಿಶ್ಯ ವೈ |
ಕುಮಾರಂ ಜನಯಾಮಾಸ ಹರಿಶ್ಚಂದ್ರಮಕಲ್ಮಷಮ್ |
ಸ ವೈ ರಾಜಾ ಹರಿಶ್ಚಂದ್ರಃ ತ್ರೈಶಂಕವ ಇತಿ ಸ್ಮೃತಃ ॥14॥
ಆ ಮಹಾನುಭಾವಳಾದ ಸತ್ಯವತಿಯು ಪ್ರಸವಮಾಸವು ಸಮೀಪಿಸಿದಾಗ ಹರಿಶ್ಚಂದ್ರನೆಂಬ ನಿರ್ದುಷ್ಟನಾದ ಮಗುವನ್ನು ಪ್ರಸವಿಸಿದಳು. ತ್ರಿಶಂಕುವಂಶದಲ್ಲಿ ಜನಿಸಿದುದರಿಂದ ಹರಿಶ್ಚಂದ್ರನನ್ನು ತ್ರೈಶಂಕವ ಎಂದು ಕರೆಯುತ್ತಾರೆ.
ಸ ರಾಜಾ ಬಲವಾನಾಸೀತ್ ಸಮ್ರಾಟ್ ಸರ್ವಮಹೀಭೃತಾಮ್|
ತಸ್ಯ ಸರ್ವೇ ಮಹೀಪಾಲಾಃ ಶಾಸನಾವನತಾಃ ಸ್ಥಿತಾಃ ॥15॥
ಅವನು ಬಲಿಷ್ಠನಾದ ರಾಜನಾಗಿ ಉಳಿದೆಲ್ಲಾ ರಾಜರುಗಳಿಗೂ ಚಕ್ರವರ್ತಿಯಾದನು. ಉಳಿದೆಲ್ಲಾ ರಾಜರೂ ಅವನ ಶಾಸನಕ್ಕೆ ತಲೆಬಾಗಿ ನಡೆಯುತ್ತಿದ್ದರು.
ತೇನೈಕಂ ರಥಮಾಸ್ಥಾಯ ಜೈತ್ರಂ ಹೇಮವಿಭೂಷಿತಮ್ |
ಶಸ್ತ್ರಪ್ರತಾಪೇನ ಜಿತಾ ದ್ವೀಪಾಃ ಸಪ್ತ ಜನೇಶ್ವರ ॥16॥
ಜನೇಶ್ವರನೇ! ಸುವರ್ಣಭೂಷಿತವಾದ ಒಂದು ರಥದಲ್ಲಿ ಕುಳಿತು ಜೈತ್ರಯಾತ್ರೆಯನ್ನು ಮಾಡಿ ತನ್ನ ಶಸ್ತ್ರಪ್ರತಾಪದಿಂದ ಅವನು ಸಪ್ತದ್ವೀಪಗಳನ್ನು ಗೆದ್ದನು.
ಸ ವಿಜಿತ್ಯ ಮಹೀಂ ಸರ್ವಾಂ ಸಶೈಲವನಕಾನನಾಮ್ |
ಆಜಹಾರ ಮಹಾರಾಜ ರಾಜಸೂಯಂ ಮಹಾಕ್ರತುಮ್ ॥17॥
ಮಹಾರಾಜನೇ! ಅವನು ಶೈಲವನಕಾನನಸಹಿತವಾದ ಸಮಗ್ರವಾದ ಭೂಮಿಯನ್ನು ಜಯಿಸಿ ಅತ್ಯಂತಶ್ರೇಷ್ಠವಾದ ರಾಜಸೂಯಯಾಗವನ್ನು ಮಾಡಿದನು.
ತಸ್ಯ ಸರ್ವೇ ಮಹೀಪಾಲಾ ಧನಾನ್ಯಾಜಹ್ರುರಾಜ್ಞಯಾ |
ದ್ವಿಜಾನಾಂ ಪರಿವೇಷ್ಟಾರಸ್ತಸ್ಮಿನ್ ಯಜ್ಞೇ ಚ ತೇಽಭವನ್ ॥18॥
ಎಲ್ಲ ರಾಜರುಗಳೂ ಅವನ ಅಜ್ಞೆಯಂತೆ ಅವನಿಗೆ ಕಪ್ಪಕಾಣಿಕೆಗಳನ್ನು ತಂದು ಒಪ್ಪಿಸಿ, ಅವನ ಯಜ್ಞದಲ್ಲಿ ಬ್ರಾಹ್ಮಣರಿಗೆ ಭೋಜನವನ್ನು ಬಡಿಸುವವರಾದರು.
ಸಮಾಪ್ತಯಜ್ಞೋ ವಿವದ್ಧರಿಶ್ಚಂದ್ರಃ ಪ್ರತಾಪವಾನ್ |

ಅಭಿಷಿಕ್ತಶ್ಚ ಶುಶುಭೇ ಸಾಮ್ರಾಜ್ಯೇ ಸ ನರಾಧಿಪಃ ॥19॥
ಪ್ರತಾಪಶಾಲಿಯಾದ ಹರಿಶ್ಚಂದ್ರನು ಯಜ್ಞವನ್ನು ವಿಧಿವತ್ತಾಗಿ ಪೂರ್ಣಗೊಳಿಸಿ, ಅವಭೃತಸ್ನಾನವನ್ನು ಮಾಡಿ ಅಭಿಷಿಕ್ತನಾಗಿ ಸಾಮ್ರಾಜ್ಯದ ಅಧಿಪತಿಯಾಗಿ ಶೋಭಿಸಿದನು.
ರಾಜಸೂಯೇಽಭಿಷಿಕ್ತಸ್ತು ಸಮಾಪ್ತವರದಕ್ಷಿಣಃ |
ಅದದಾದ್ ದ್ರವಿಣಂ ಪ್ರೀತ್ಯಾ ಯಾಚಕಾನಾಂ ಯುಧಿಷ್ಠಿರ |
ಯಥೋಕ್ತಂ ಚ ಕ್ರತೌ ತಸ್ಮಿಂಸ್ತತಃ ಪಂಚಗುಣಾಧಿಕಮ್ ॥20॥
ಎಲೈ ಯುಧಿಷ್ಠಿರನೇ! ರಾಜಸೂಯಯಾಗದಲ್ಲಿ ಶ್ರೇಷ್ಠವಾದ ದಕ್ಷಿಣೆಯನ್ನು ಕೊಟ್ಟು ಯಜ್ಞವನ್ನು ಮುಗಿಸಿ ಅಭಿಷಿಕ್ತನಾದ ಅವನುಯಾಚಕರಿಗೆ ಸಂತೋಷದಿಂದ ಆ ಯಜ್ಞದಲ್ಲಿ ಕೊಡಬೇಕಾದ ದಕ್ಷಿಣೆಗಿಂತ ಐದು ಪಟ್ಟು ಅಧಿಕವಾದ ದಕ್ಷಿಣೆಯನ್ನು ಕೊಟ್ಟನು.
ಅತರ್ಪಯಚ್ಚ ವಸುಭಿರ್ಬ್ರಾಹ್ಮಣಾನ್ ಭರತರ್ಷಭ |
ಯಜ್ಞಕಾಲೇಽಥ ಸಂಪ್ರಾಪ್ತಾನ್ ನಾನಾದಿಗ್ಭ್ಯಃ ಸಮಾಗತಾನ್ ॥21॥
ಭರತರ್ಷಭನೇ! ಅವನು ಯಜ್ಞಕಾಲದಲ್ಲಿ ನಾನಾದೇಶಗಳಿಂದ ಸಂಪ್ರಾಪ್ತರಾದ ಬ್ರಾಹ್ಮಣರನ್ನು ಭೂರಿದಕ್ಷಿಣೆಯನ್ನು ಕೊಟ್ಟು ಸಂತೋಷಗೊಳಿಸಿದನು.
ಭಕ್ಷ್ಯೈರ್ಭೋಜ್ಯೈಶ್ಚ ಪಾನೈಶ್ಚ ಯಥಾಕಾಮಮುದಾಹೃತೈಃ |
ರತ್ನೌಘತರ್ಪಿತೈಸ್ತುಷ್ಟೈರ್ದ್ವಿಜೈಶ್ಚ ಸಮುದಾಹೃತಃ |
ತೇಜಸ್ವೀ ಚ ಯಶಸ್ವೀ ಚ ಸರ್ವೇಭ್ಯೋಽಭ್ಯಧಿಕೋಽಭವತ್ ॥22॥
ಮೇಲೆ ಹೇಳಿದಂತೆ ಶ್ರೇಷ್ಠವಾದ ಭಕ್ಷ್ಯಭೋಜ್ಯಗಳಿಂದಲೂ ಪಾನಗಳಿಂದಲೂ ರತ್ನೌಘಗಳಿಂದಲೂ ಸಂತೃಪ್ತರಾದ ಬ್ರಾಹ್ಮಣರಿಂದ ಅವನು ಆಶೀರ್ವಾದವನ್ನು ಸ್ವೀಕರಿಸಿ ತೇಜಸ್ವಿಯೂ ಪರಾಕ್ರಮಶಾಲಿಯೂ ಎಲ್ಲರಿಗಿಂತ ಮಿಗಿಲಾದವನೂ ಆದನು.
ಏತಸ್ಮಾತ್ ಕಾರಣಾತ್ ಪಾರ್ಥ ಹರಿಶ್ಚಂದ್ರೋ ಯುಧಿಷ್ಠಿರ |
ತೇಷು ರಾಜಸಹಸ್ರೇಷು ಪ್ರಭಯಾಽಪ್ಯತಿರಿಚ್ಯತೇ ॥23॥
ಎಲೈ ಯುಧಿಷ್ಠಿರನೇ! ಈ ಕಾರಣದಿಂದ ಹರಿಶ್ಚಂದ್ರರಾಜನು ಸಹಸ್ರಾರು ರಾಜರ ಮಧ್ಯದಲ್ಲಿ ತನ್ನ ಕಾಂತಿಯಿಂದ ಎಲ್ಲರನ್ನು ಮೀರಿ ಕಂಗೊಳಿಸುತ್ತಿದ್ದಾನೆ.
ಯೇ ಯಜಂತೇ ಮಹೀಪಾಲಾ ರಾಜಸೂಯಂ ಮಹಾಕ್ರತುಮ್|
ಸಂಪ್ರಾಪ್ತಾಸ್ತೇ ಮಹೇಂದ್ರೇಣ ಮೋದಂತೇ ದಿವಿ ಭಾರತ ॥24॥
ಎಲೈ ಭಾರತನೇ! ಯಾವ ರಾಜರು ರಾಜಸೂಯಮಹಾಯಾಗವನ್ನು ಮಾಡುತ್ತಾರೆಯೋ ಅವರು ಇಂದ್ರಸಭೆಯನ್ನು ಸೇರಿ ದೇವೇಂದ್ರನ ಜೊತೆಯಲ್ಲಿ ಆನಂದಪಡುತ್ತಾರೆ.
ಯೇ ಚಾಪಿ ನಿಧನಂ ಪ್ರಾಪ್ತಾಃ ಸಂಗ್ರಾಮೇಷ್ವಪಲಾಯಿನಃ |
ತೇ ಪ್ರಾಪ್ತಾಸ್ತಾಂ ಸಭಾಂ ರಾಜನ್ ಮೋದಂತೇ ದಿವಿ ಭಾರತ ॥25॥
ಭಾರತನೇ! ರಾಜನೇ! ಯಾರು ಯುದ್ಧಗಳಲ್ಲಿ ಪಲಾಯನವನ್ನು ಮಾಡದೆ ನಿಧನವನ್ನು ಹೊಂದುತ್ತಾರೆಯೋ, ಅವರೂ ಸಹ ಸ್ವರ್ಗದಲ್ಲಿ ಇಂದ್ರಸಭೆಯನ್ನು ಸೇರಿ ಆನಂದಪಡುತ್ತಾರೆ.
ತಪಸಾ ಯೇ ಚ ಘೋರೇಣ ತ್ಯಕ್ತತ್ವ ಜೀರ್ಣಂ ಕಲೇವರಮ್ |
ತೇ ತತ್ ಸ್ಥಾನಂ ಸಮಾಸಾದ್ಯ ಶ್ರೀಮಂತೋ ಭಾಂತಿ ನಿತ್ಯಶಃ ॥25॥
ಮತ್ತು ಯಾರು ಘೋರವಾದ ತಪಸ್ಸನ್ನು ಮಾಡಿ ಜೀರ್ಣವಾದ ದೇಹವನ್ನು ತ್ಯಜಿಸುತ್ತಾರೆಯೋ, ಅವರೂ ಸಹ ಆ ಸಭೆಯ ಸ್ಥಾನವನ್ನು ಸೇರಿ ಕಾಂತಿಯಿಂದ ಯಾವಾಗಲೂ ಬೆಳಗುತ್ತಾರೆ.
ಪಿತಾಽಽಹ ತ್ವಾಂ ಚ ಕೌಂತೇಯ ಪಾಂಡುಃ ಕೌರವವರ್ಧನಃ|
ಹರಿಶ್ಚಂದ್ರೇ ಶ್ರಿಯಂ ದೃಷ್ಟ್ವಾ ನೃಪತೌ ಜಾತವಿಸ್ಮಯಃ ॥26॥
ಸಮರ್ಥೋಽಸಿ ಮಹೀಂ ಜೇತುಂ ಭ್ರಾತರಸ್ತೇ ವಶೇ ಸ್ಥಿತಾಃ |
ರಾಜಸೂಯಂ ಕ್ರತುಶ್ರೇಷ್ಠಮಾಹರಸ್ವೇತಿ ಭಾರತ ॥27॥
ತ್ವಯೀಷ್ಟವತಿ ಪುತ್ರೇಽಹಂ ಹರಿಶ್ಚಂದ್ರವದಾಶು ವೈ |
ಮೋದಿಷ್ಯೇ ಬಹುಳಾಃ ಶಶ್ವತ್ ಸಮಾಃ ಶಕ್ರಸ್ಯ ಸಂಸದಿ ॥28॥
ಕೌಂತೇಯನೇ! ಹರಿಶ್ಚಂದ್ರನ ಸಂಪತ್ತನ್ನು ನೋಡಿ ಆಶ್ಚರ್ಯಚಕಿತನಾದ ಕೌರವವರ್ಧನನಾದ ನಿನ್ನ ತಂದೆಯಾದ ಪಾಂಡುವು ನನ್ನನ್ನು ಕುರಿತು ಹೀಗೆ ಹೇಳಿದನು. ನೀನು ಭೂಮಿಯನ್ನು ಜಯಿಸಲು ಸಮರ್ಥನಾಗಿದ್ದೀಯೆ, ನಿನ್ನ ತಮ್ಮಂದಿರೆಲ್ಲಾ ನಿನ್ನ ವಶವಾಗಿದ್ದಾರೆ. ಭರತಕುಲೋತ್ಪನ್ನನೇ! ರಾಜಸೂಯಮಹಾಯಾಗವನ್ನು ಅನುಷ್ಠಾನಮಾಡು.ನನ್ನ ಪುತ್ರನಾಗಿ ನೀನು ಆ ಯಾಗವನ್ನು ಮಾಡಿದರೆ ನಾನೂ ಸಹ ತಕ್ಷಣದಲ್ಲಿಯೇ ಹರಿಶ್ಚಂದ್ರನಂತೆ ಇಂದ್ರಸಭೆಯನ್ನು ಸೇರಿ ಅಲ್ಲಿ ಬಹುಕಾಲದವರೆಗೆ ಆನಂದದಿಂದ ಇರುತ್ತೇನೆ.(ಎಂದು ನಿನಗೆ ತಿಳಿಸುವಂತೆ ಹೇಳಿದನು)
ಏವಂ ಭವತು ವಕ್ಷ್ಯೇಽಹಂ ಪುತ್ರಂ ತವ ನರಾಧಿಪ |
ಭೂಲೋಕಂ ಯದಿ ಗಚ್ಛೇಯಮಿತಿ ಪಾಂಡುಮಥಾಬ್ರುವಮ್ ॥29॥
ನರಾಧಿಪನೇ! ಈ ಮಾತನ್ನು ಕೇಳಿದ ನಾನು ಭೂಲೋಕಕ್ಕೆ ಹೋದರೆ ಈ ವಿಷಯವನ್ನು ಧರ್ಮರಾಜನಿಗೆ ತಿಳಿಸುವೆನು ಎಂದು ಹೇಳಿದೆನು.
ತಸ್ಯ ತ್ವಂ ಪುರುಷವ್ಯಾಘ್ರ ಸಂಕಲ್ಪಂ ಕುರು ಪಾಂಡವ |

ಗಂತಾರಸ್ತೇ ಮಹೇಂದ್ರಸ್ಯ ಪೂರ್ವೇ ಸರ್ವೇ ಪಿತಾಮಹಾಃ |
ಸಲೋಕತಾಂ ಸುರೇಂದ್ರಸ್ಯ ತ್ರೈಲೋಕ್ಯಾಪತೇರ್ನೃಪ ||30||
ಪಾಂಡವನಾದ ಧರ್ಮರಾಜನೇ! ಪುರುಷವ್ಯಾಘ್ರನೇ! ನೀನು ನಿನ್ನ ತಂದೆಯ ಸಂಕಲ್ಪವನ್ನು ನೆರವೇರಿಸು. ಹಾಗೆ ಮಾಡಿದರೆ ನಿನ್ನ ಪೂರ್ವಪಿತಾಮಹರೆಲ್ಲರೂ ತ್ರೈಲೋಕ್ಯಾಪತಿಯಾದ ಇಂದ್ರನ ಸಾಲೋಕ್ಯವನ್ನು ಪಡೆದು ಆ ಸಭೆಗೆ ಹೋಗುತ್ತಾರೆ.
ಬಹುವಿಘ್ನಶ್ಚ ನೃಪತೇ ಕ್ರತುರೇಷ ಸ್ಮೃತೋ ಮಹಾನ್ |
ಛಿದ್ರಾನ್ ಯಸ್ಯ ತು ವಾಂಛಂತಿ ಯಜ್ಞಘ್ನಾ ಬ್ರಹ್ಮರಾಕ್ಷಸಾಃ ||31||
ರಾಜನೇ! ಈ ಮಹಾಯಾಗಕ್ಕೆ ಅನೇಕ ವಿಘ್ನಗಳು ಬರುತ್ತವೆ ಎಂದು ಹೇಳುತ್ತಾರೆ. ಯಜ್ಞವನ್ನು ನಾಶಮಾಡುವ ಬ್ರಹ್ಮರಾಕ್ಷಸರು ಈ ಯಜ್ಞಕ್ಕೆ ಪ್ರತಿಬಂಧಕವನ್ನು ಮತ್ತು ದೋಷವನ್ನು ಉಂಟುಮಾಡಲು ಬಯಸುತ್ತಾರೆ.
ಯುದ್ಧಂ ಚ ಕ್ಷತ್ರಗಮನಂ ಪೃಥಿವೀಕ್ಷಯಕಾರಕಮ್ |
ಕಿಂಚಿದೇವ ನಿಮಿತ್ತಂತು ಭವತ್ಯತ್ರ ಕ್ಷಯಾವಹಮ್ |
ಏತತ್ ಸಂಚಿಂತ್ಯ ರಾಜೇಂದ್ರ ಯಜ್ಞಮೇತಂ ಸಮಾಚರ ||32||
ಯುದ್ಧವಾಗಲೀ ಕ್ಷತ್ರಿಯ ಸಂಚಲನವಾಗಲೀ ಲೋಕಕ್ಷಯಕ್ಕೆ ಕಾರಣವಾಗುತ್ತದೆ. ರಾಜೇಂದ್ರನೇ! ಒಂದು ಸಣ್ಣ ನಿಮಿತ್ತವೂ ಕೂಡ ಇಲ್ಲಿ ಮಹಾ ಹಾನಿಗೆ ಕಾರಣವಾಗುತ್ತದೆ. ಇದನ್ನು ಚೆನ್ನಾಗಿ ಯೋಚಿಸಿ ಈ ಯಜ್ಞವನ್ನು ಆಚರಣೆಮಾಡು.
ಅಪ್ರಮತ್ತೋತ್ಥಿತೋ ನಿತ್ಯಂ ಚಾತುರ್ವರ್ಣ್ಯಸ್ಯ ರಕ್ಷಣೇ |
ಭವ ಏಧಸ್ವ ಮೋದಸ್ವ ದಾನೈಸ್ತರ್ಪಯ ಚ ದ್ವಿಜಾನ್ ||33||
ಬಹಳ ಎಚ್ಚರಿಕೆಯಿಂದ ಕೂಡಿದವನಾಗಿದ್ದು ಯಾವಾಗಲೂ ಚಾತುರ್ವರ್ಣ್ಯವನ್ನು ರಕ್ಷಿಸು. ಸಂಪತ್ತನ್ನು ಹೊಂದು. ಅಭಿವೃದ್ಧಿಯನ್ನು ಹೊಂದು, ಆನಂದವನ್ನು ಅನುಭವಿಸು. ಬ್ರಾಹ್ಮಣರನ್ನು ದಾನಗಳಿಂದ ಸಂತೋಷಗೊಳಿಸು.
ಏತತ್ ತೇ ವಿಸ್ತರೇಣೋಕ್ತಂ ಯನ್ಮಾಂ ತ್ವ ಪರಿಪೃಚ್ಛಸಿ |
ಆಪೃಚ್ಛೇ ತ್ವಾಂ ಗಮಿಷ್ಯಾಮಿ ದಾಶಾರ್ಹನಗರಂ ಪ್ರತಿ ||34||
ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾನು ಇವೆಲ್ಲವನ್ನೂ ವಿಸ್ತಾರವಾಗಿ ಹೇಳಿದ್ದೇನೆ. ನಾನು ಇನ್ನು ನಿನ್ನ ಅನುಮತಿಯನ್ನು ಪಡೆದು ದ್ವಾರಕಾಪಟ್ಟಣಕ್ಕೆ ಪ್ರಯಾಣಮಾಡುವೆನು.
ವೈಶಂಪಾಯನಃ
ಏವಮಾಖ್ಯಾಯ ಪಾರ್ಥೇಭ್ಯೋ ನಾರದೋ ಜನಮೇಜಯ |
ಜಗಾಮ ತೈರ್ವೃತೋ ರಾಜನ್ ಋಷಿಭಿರ್ಯೈಃ ಸಮಾಗತಃ ||35||
ಜನಮೇಜಯನೇ! ನಾರದರು ಪಾಂಡವನನ್ನು ಕುರಿತು ಹೀಗೆ ಎಲ್ಲವನ್ನೂ ನಿರೂಪಿಸಿ ತಮ್ಮ ಜೊತೆಯಲ್ಲಿ ಬಂದ ಋಷಿಗಳ ಜೊತೆಯಲ್ಲಿ ಅಲ್ಲಿಂದ ಪ್ರಯಾಣಮಾಡಿದರು.
ಗತೇಽಥ ನಾರದೇ ಪಾರ್ಥೋ ಭ್ರಾತೃಭಿಃ ಸಹ ಕೌರವ |
ರಾಜಸೂಯಂ ಕ್ರತುಶ್ರೇಷ್ಠಂ ಚಿಂತಯಾಮಾಸ ಭಾರತ ||36||
ಎಲೈ! ಕುರುವಂಶದಲ್ಲಿ ಜನಿಸಿದ ಭರತರ್ಷಭನೇ! ನಾರದರು ಪ್ರಯಾಣಮಾಡಿದ ಮೇಲೆ ಯುಷ್ಠಿರನು ತನ್ನ ತಮ್ಮಂದಿರ ಜೊತೆಯಲ್ಲಿ ಕುಳಿತು ರಾಜಸೂಯಮಹಾಯಾಗವನ್ನು ಆಚರಿಸುವ ವಿಷಯದಲ್ಲಿ ಸಮಾಲೋಚನೆಯನ್ನು ನಡೆಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಾದಶೋಽಧ್ಯಾಯಃ ||
|| ಮಂತ್ರಪರ್ವಣಿ ದ್ವಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಏತಚ್ಛ್ರುತ್ವಾ ಧರ್ಮಸುತೋ ಭ್ರಾತೃಭಿಃ ಸಹಿತೋ ವಶೀ |
ಅವಾಪ್ತಿಂ ರಾಜಸೂಯಸ್ಯ ಮಂತ್ರಯಾಮಾಸ ಧರ್ಮವಿತ್ ||74||
ಇದನ್ನು ಕೇಳಿ ಜಿತೇಂದ್ರಿಯನಾದ ಧರ್ಮರಾಜ ಸೋದರರಿಂದೊಡಗೂಡಿ ರಾಜಸೂಯಯಾಗ ಮಾಡುವ ಬಗ್ಗೆ ಮಂತ್ರಾಲೋಚನೆ ಮಾಡಿದ.
* * * *
ಹದಿಮೂರನೆಯ ಅಧ್ಯಾಯ
(ರಾಜಸೂಯಯಜ್ಞಾಚರಣೆಯಬಗ್ಗೆ ಮಂತ್ರಿಗಳ ಜೊತೆಯಲ್ಲಿ ಯುಷ್ಠಿರನ ಸಮಾಲೋಚನೆ. ಮತ್ತು ರಾಜಸೂಯ ಯಾಗವನ್ನು ಮಾಡಲು ಸಂಕಲ್ಪ.)
ವೈಶಂಪಾಯನಃ
ಋಷೇಸ್ತದ್ವಚನಂ ಶ್ರುತ್ವಾ ನಿಶಶ್ವಾಸ ಯುಷ್ಠಿರಃ |
ಚಿಂತಯನ್ ರಾಜಸೂಯಾಪ್ತಿಂ ನ ಲೇಭೇ ಶರ್ಮ ಭಾರತ ||1||
ಭಾರತನೇ! ನಾರದರ ಆ ಮಾತುಗಳನ್ನು ಕೇಳಿದ ಯುಷ್ಠಿರನು ರಾಜಸೂಯವನ್ನು ಅನುಷ್ಠಾನಮಾಡುವ ವಿಷಯದಲ್ಲಿ ಚಿಂತಿಸುತ್ತಾ ದೀರ್ಘವಾದ ನಿಟ್ಟುಸಿರನ್ನು ಬಿಟ್ಟನು. ಅವನ ಮನಸ್ಸಿಗೆ ಸಮಾಧಾನವೇ ಆಗಲಿಲ್ಲ.
ರಾಜರ್ಷೀಣಾಂ ಚ ತಂ ಶ್ರುತ್ವಾ ಮಹಿಮಾನಂ ಮಹಾತ್ಮನಾಮ್

ಯಜ್ವನಾಂ ಕರ್ಮಭಿಃ ಪುಣ್ಯೈರ್ಲೋಕಪ್ರಾಪ್ತಿಂ ಸಮೀಕ್ಷ್ಯ ಚ ॥2॥
ಹರಿಶ್ಚಂದ್ರಂ ಚ ರಾಜರ್ಷಿಂ ರೋಚಮಾನಂ ವಿಶೇಷತಃ।
ಪಾರ್ಥಸ್ತಂ ಯಜ್ಞಮಾಹರ್ತುಂ ರಾಜಸೂಯಮಿಯೇಷ ಸಃ ॥3॥
ಮಹಾತ್ಮರಾದ ರಾಜರ್ಷಿಗಳ ಮಹಿಮೆಯನ್ನು ಕೇಳಿ, ಮಹಾಯಾಗಗಳನ್ನು ಮಾಡಿದವರು ತಮ್ಮ ಕರ್ಮಗಳಿಂದ ದಿವ್ಯಲೋಕವನ್ನು ಹೊಂದಿರುವುದನ್ನು ಗಮನಿಸಿ, ಅದರಲ್ಲಿಯೂ ರಾಜರ್ಷಿಯಾದ ಹರಿಶ್ಚಂದ್ರನು ಇಂದ್ರನ ಸಬೆಯಲ್ಲಿ ವಿಶೇಷವಾಗಿ ಶೋಭಿಸುತ್ತಿರುವುದನ್ನು ತಿಳಿದು, ಯುಷ್ಠಿರನು ಹೇಗಾದರೂ ಮಾಡಿ ರಾಜಸೂಯಯಾಗವನ್ನು ಮಾಡಲೇಬೇಕೆಂದು ಬಯಸಿದನು.
ಯುಷ್ಠಿರಶ್ಚ ತಾನ್ ಸರ್ವಾನರ್ಚಯಿತ್ವಾ ಸಭಾಸದಃ।
ಪ್ರತ್ಯರ್ಚಿತಶ್ಚ ತೈಃ ಸರ್ವೈರ್ಯಜ್ಞಾಯೈವ ಮನೋ ದಧೇ ॥4॥
ಯುಷ್ಠಿರನು ಆಗಮಿಸಿದ ಸಭಾಸದರನ್ನೆಲ್ಲಾ ಸತ್ಕರಿಸಿ ತಾನೂ ಅವರಿಂದ ಸತ್ಕರಿಸಲ್ಪಟ್ಟು ಯಜ್ಞವನ್ನೇ ಕುರಿತು ನಿರ್ಧರಿಸಿ ಚಿಂತಿಸಲು ಆರಂಭಿಸಿದನು.
ಸ ರಾಜಸೂಯಂ ರಾಜೇಂದ್ರಃ ಕುರೂಣಾಮೃಷಭಃ ಕೃತುಮ್।
ಆಹರ್ತುಂ ಪ್ರವಣಂ ಚಕ್ರೇ ಮನಃ ಸಂತತ್ಯ ಸೋಽಸಕೃತ್ ॥5॥
ಕುರುಶ್ರೇಷ್ಠನಾದ ರಾಜೇಂದ್ರನಾದ ಯುಷ್ಠಿರನು ಮತ್ತೆ ಮತ್ತೆ ಮನಸ್ಸಿನಲ್ಲಿ ಆಲೋಚಿಸಿ ರಾಜಸೂಯಯಾಗವನ್ನುಮಾಡುವ ವಿಷಯದಲ್ಲೇ ಬದ್ಧಾಧರನಾದನು.
ಭೂಯಶ್ಚಾದ್ಭುತವೀರ್ಯೌಜಾ ಧರ್ಮಮೇವಾನುಪಾಲಯನ್।
ಕಿಂ ಹಿತಂ ಸರ್ವಲೋಕಾನಾಂ ಭವೇದಿತಿ ಮನೋ ದಧೇ ॥6॥
ಅದ್ಭುತಪರಾಕ್ರಮವನ್ನು ಮತ್ತು ತೇಜಸ್ಸನ್ನು ಹೊಂದಿದ್ದ ಧರ್ಮರಾಜನು ಧರ್ಮವನ್ನೇ ಅನುಸರಿಸುತ್ತಾ ಎಲ್ಲಾ ಪ್ರಜೆಗಳಿಗೂ ಹೇಗೆ ಹಿತವಾದೀತು ಎಂದು  ಮನಸ್ಸಿನಲ್ಲಿ ಚಿಂತಿಸಿದನು.
ಅನುಗೃಹ್ಣನ್ ಪ್ರಜಾಃ ಸರ್ವಾಃ ಸರ್ವಧರ್ಮವಿದಾಂ ವರಃ।
ಅವಿಶೇಷೇಣ ಸರ್ವೇಷಾಂ ಹಿತಂ ಚಕ್ರೇ ಯುಷ್ಠಿರಃ ॥7॥
ಸರ್ವಧರ್ಮಗಳನ್ನು ತಿಳಿದವರಲ್ಲಿ ಶ್ರೇಷ್ಠನಾದ ಧರ್ಮರಾಜನು ಎಲ್ಲ ಪ್ರಜೆಗಳಿಗೂ ಅನುಗ್ರಹವನ್ನು ಮಾಡಲು ಬಯಸಿ ಎಲ್ಲರಿಗೂ ಒಂದೇರೀತಿಯಾಗಿ ಹಿತವನ್ನು ಉಂಟುಮಾಡಿದನು.
ಕ್ರಿಯತಾಂ ದೀಯತಾಂ ದೇಯಂ ಮುಕ್ತಕೋಪೋ ಬಲಾನ್ವಿತಃ।
ಸಾಧುಧರ್ಮೇತಿ ಪಾರ್ಥಸ್ಯ ನಾನ್ಯಚ್ಛೂಯೇತ ಭಾಷಿತಮ್ ॥8॥
ಪಾರ್ಥನರಾಜ್ಯದಲ್ಲಿ, ಸತ್ಕರ್ಮವನ್ನುಮಾಡಿ, ದಾನವನ್ನುಮಾಡಿ,  ಕೋಪವನ್ನು ಬಿಡಿ, ಬಲಿಷ್ಠರಾಗಿರಿ, ಸದ್ಧರ್ಮಗಳನ್ನು ಆಚರಿಸಿರಿ, ಎಂಬ ಮಾತನ್ನು ಬಿಟ್ಟು ಬೇರೆ ಮಾತುಗಳು ಕೇಳಿ ಬರುತ್ತಿರಲಿಲ್ಲ.
ಏವಂವೃತ್ತೇ ಜಗತ್ ತಸ್ಮಿನ್ ಪಿತರೀವಾನ್ವರಜ್ಯತ।
ನ ತಸ್ಯ ವಿದ್ಯತೇ ದ್ವೇಷ್ಟಾ ತತೋಽಸ್ಯಾಜಾತಶತ್ರುತಾ ॥9॥
ಇಂತಹ ನಡತೆಯನ್ನು ಹೊಂದಿದ್ದ ರಾಜನಲ್ಲಿ ಎಲ್ಲಾ ಪ್ರಜೆಗಳೂ  ತಂದೆಯಲ್ಲಿ ಹೊಂದುವಂತೆ ಅನುರಾಗವನ್ನು ಹೊಂದಿದ್ದರು. ಅವನನ್ನು ದ್ವೇಷಿಸುವವರು ಯಾರೂ ಇರಲಿಲ್ಲ. ಆದ್ದರಿಂದ ಅವನಿಗೆ ಅಜಾತಶತ್ರು ಎಂದು ಹೆಸರು.
ಪರಿಗ್ರಹಾನ್ನರೇಂದ್ರಸ್ಯ ಭೀಮಸ್ಯ ಪರಿಪಾಲನಾತ್।
ಶತ್ರೂಣಾಂ ಕ್ಷಪಣಾಚ್ಚೈವ ಬೀಭತ್ಸೋಃ ಸವ್ಯಸಾಚಿನಃ ॥10॥
ಬಲೀನಾಂ ಸಮ್ಯಗಾದಾನಾನ್ನಕುಲಸ್ಯ ಯಶಸ್ವಿನಃ।
ೀಮತಃ ಸಹದೇವಸ್ಯ ಧರ್ಮಾಣಾಮನುಶಾಸನಾತ್ ॥11॥
ಅವಿಗ್ರಹಾ ವೀತಭಯಾಃ ಸ್ವಧರ್ಮನಿರತಾಃ ಪ್ರಜಾಃ।
ನಿಕಾಮವರ್ಷೀ ಪರ್ಜನ್ಯಶ್ಚಾಸೀಜ್ಜನಪದೇ ತದಾ ॥12॥
ಧರ್ಮರಾಜನ ಎಲ್ಲಾ ಪ್ರಜೆಗಳ ಪ್ರೀತಿಪೂರ್ವಕಸ್ವೀಕಾರದಿಂದಲೂ, ಭೀಮನ ಧರ್ಮಪರಿಪಾಲನೆಯಿಂದಲೂ, ಸವ್ಯಸಾಚಿಯಾದ ಅರ್ಜುನನ ಶತ್ರುನಾಶದಿಂದಲೂ, ಕೀರ್ತಿವಂತನಾದ  ನಕುಲನ ಕಪ್ಪಕಾಣಿಕೆಗಳ ಸ್ವೀಕಾರದಿಂದಲೂ, ಮೇಧಾವಿಯಾದ ಸಹದೇವನ ಧರ್ಮಪರಿಪಾಲನೆಯಿಂದಲೂ, ಎಲ್ಲಾ ಪ್ರಜೆಗಳೂ ಪರಸ್ಪರ ಕಲಹಗಳಿಲ್ಲದೆ, ಯಾವ ಭಯವೂ ಇಲ್ಲದೆ, ತಮ್ಮ  ತಮ್ಮ ಧರ್ಮದಲ್ಲಿ ನಿರತರಾದರು. ಧರ್ಮರಾಜನ ರಾಜ್ಯದಲ್ಲೆಲ್ಲಾ ಪರ್ಜನ್ಯನು ಬೇಕಾದಷ್ಟು ಮಳೆಯನ್ನು ಸುರಿಸುತ್ತಿದ್ದನು.
ವಾರ್ಧುಷೀರ್ಯಜ್ಞಸಂತಾನೋ ಗೋರಕ್ಷಂ ಕರ್ಷಣಂ ವಣಿಕ್।
ವಿಶೇಷಾತ್ ಸರ್ವವರ್ಣಾನಾಂ ಸಂಜಜ್ಞೇ ರಾಜಕರ್ಮಣಿ ॥13॥
ರಾಜನ ಕರ್ಮಗಳಲ್ಲಿ ಎಲ್ಲಾ ವರ್ಣಗಳಿಗಿಂತಲೂ ವಿಶೇಷವಾಗಿ ಉಪಕಾರವನ್ನುಮಾಡಿ ಘೃತ ಕ್ಷೀರ ಧನ ಮೊದಲಾದ ದ್ರವ್ಯಗಳಿಂದ ಯಜ್ಞಗಳನ್ನು ವಿಸ್ತಾರವಾಗಿ ಆಚರಿಸಲು ಅನುಕೂಲ ಮಾಡಿಕೊಡುವ ವೃದ್ಧಿಜೀವಿಗಳಾದ ವರ್ತಕರ (ವೈಶ್ಯರ) ಸಮೂಹವು ವಿಶೇಷವಾಗಿ ಕೃಷಿಯನ್ನು ಮತ್ತು ಗೋ ರಕ್ಷಣೆಯನ್ನುಮಾಡಿತು.
ಅವರ್ಷಂ ಚಾತಿವರ್ಷಂ ಚ ವ್ಯಾಪಾವಕಮೂರ್ಛನಮ್।
ಸರ್ವಮೇತತ್ ತದಾ ನಾಸೀದ್ ಧರ್ಮನಿತ್ಯೇ ಯುಷ್ಠಿರೇ ॥14॥
ಯುಷ್ಠಿರನು ಯಾವಾಗಲೂ ಧರ್ಮದಿಂದಲೇ ರಾಜ್ಯವನ್ನು ಪಾಲಿಸುತ್ತಿರಲು ಅತಿವೃಷ್ಟಿಯಾಗಲೀ ಅವೃಷ್ಟಿಯಾಗಲೀ ವ್ಯಾಘ್ರಭಯವಾಗಲೀ ಅಗ್ನಿಭಯವಾಗಲೀ ಯಾವುದೂ ಇರಲಿಲ್ಲ.
ದಸ್ಯುತೋ ರಾಜತೋ ವಾಽಪಿ ಪರಚಕ್ರಾತ್ ಪರಸ್ಪರಮ್।

ರಾಜವಲ್ಲಭತಶ್ಚೈವ ನಾಶ್ರೂಯತ ಕ್ಲಮಃ ಕ್ವಚಿತ್ ॥15॥
ಕಳ್ಳರಿಂದಾಗಲೀ ರಾಜರಿಂದಾಗಲೀ ಅಥವಾ ಶತ್ರುಸೈನ್ಯದಿಂದಾಗಲೀ ಅಥವಾ ಪರಸ್ಪರರಿಂದಲೇ ಆಗಲೀ ಅಥವಾ ರಾಜನ ಸಮೀಪಬಂಧುಗಳಿಂದಾಗಲೀ ಯಾವ ತೊಂದರೆಯೂ ಕೇಳಿ ಬರುತ್ತಿರಲಿಲ್ಲ.
ಪ್ರಿಯಂ ಕರ್ತುಮುಪಸ್ಥಾತುಂ ಬಲಿಕರ್ಮ ಸ್ವಕರ್ಮಜಮ್ |
ಅಭಿಹರ್ತುಂ ನೃಪಂ ಜಗ್ಮುರ್ನಾನ್ಯೈಃ ಕಾರ್ಯೈಃ ಪೃಥಗ್ಜನಾಃ ॥16॥
ರಾಜನಿಗೆ ಪ್ರಿಯವನ್ನು ಮಾಡಲು ಅಥವಾ ಅವನನ್ನು ಪ್ರಶಂಸೆಮಾಡಲು ಅಥವಾ ತಮಗೆ ಯೋಗ್ಯವಾದ ಕಪ್ಪಕಾಣಿಕೆಗಳನ್ನು ಒಪ್ಪಿಸಲು ಸಾಮಾನ್ಯಜನರು ರಾಜನ ಬಳಿಗೆ ಹೋಗುತ್ತಿದ್ದರು. ಬೇರೆ ಯಾವ ಉದ್ದೇಶದಿಂದಲೂ ಹೋಗುತ್ತಿರಲಿಲ್ಲ.
ಧರ್ಮ್ಯೈರ್ಧನಾಗಮೈಸ್ತಸ್ಯ ವವೃಧೇ ನಿಚಯೋ ಮಹಾನ್ |
ಕಾಮತೋಽಪ್ಯುಪಯುಂಜಂತ ನ ಕ್ಷಯೈರ್ನಾಮಯೈರ್ಜನಾಃ ॥17॥
ಧರ್ಮದಿಂದ ಉಂಟಾದ ಧನಾಗಮನಗಳಿಂದ ಅವನ ಬೊಕ್ಕಸವು ಬಹಳವಾಗಿ ಅಭಿವೃದ್ಧಿಯನ್ನು ಹೊಂದಿತು. ಪ್ರಜೆಗಳು ತಮ್ಮ ಧನವನ್ನು ತಮ್ಮ ಮನಸ್ಸಿಗೆ ಬಂದಂತೆ ಉಪಯೋಗಿಸುತ್ತಿದ್ದರು. ಅವರಿಗೆ ಧನದ ಕ್ಷಯವಾಗಲೀ ರೋಗದ ಉಪದ್ರವವಾಗಲೀ ಇರಲಿಲ್ಲ.(ವ್ಯಾ ನಿವಾರಣೆಗಾಗಿ ಧನವನ್ನು ವ್ಯಯಮಾಡುತ್ತಿರಲಿಲ್ಲ.)
ಸ ಮಂತ್ರಿಣಃ ಸಮಾನಾಯ್ಯ ಭ್ರಾತೄಂಶ್ಚ ವದತಾಂ ವರಃ |
ರಾಜಸೂಯಂ ಪ್ರತಿ ತದಾ ಪುನಃ ಪುನರಪೃಚ್ಛತ ॥18॥
ಮಾತನಾಡುವವರಲ್ಲಿ ಶ್ರೇಷ್ಠನಾದ ಆ ಧರ್ಮರಾಜನು ತನ್ನ ಮಂತ್ರಿಗಳನ್ನು ಮತ್ತು ತಮ್ಮಂದಿರನ್ನು ಪುನಃ ಪುನಃ ಕರೆಸಿ ರಾಜಸೂಯಯಾಗದ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದನು.
ತೇ ಪೃಚ್ಛ್ಯಮಾನಾಃ ಸಹಿತಾ ವಚೋಽರ್ಥ್ಯಂ ಮಂತ್ರಿಣಸ್ತದಾ |
ಯುಷ್ಠಿರಂ ಮಹಾಪ್ರಾಜ್ಞಂ ಯಿಯಕ್ಷುಮಿದಮಬ್ರುವನ್ ॥19॥
ಆ ಮಂತ್ರಿಗಳೆಲ್ಲರೂ ಹೀಗೆ ರಾಜನಿಂದ ಕೇಳಲ್ಪಟ್ಟವರಾಗಿ ಮಹಾಪ್ರಾಜ್ಞನೂ ಯಾಗವನ್ನು ಮಾಡುವ ಇಚ್ಛೆಯುಳ್ಳವನೂ ಆದ ಯುಷ್ಠಿರನನ್ನು ಕುರಿತು ಅರ್ಥವತ್ತಾದ ಈ ಮಾತುಗಳನ್ನು ಹೇಳಿದರು.
ಮಂತ್ರಿಣಃ
ಸರ್ವವ್ಯಾಪೀ ಸರ್ವಗುಣಃ ಸರ್ವಸಾಹಶ್ಚ ಸರ್ವರಾಟ್ |
ಯಸ್ಮಿನ್ನಕೃತಃ ಸಮ್ರಾಟ್ ಯಜಮಾನೋ ಮಹಾಯಶಾಃ ॥20॥
ಯಾವ ಮಹಾಯಶಸ್ವಿಯಾದ ರಾಜನು ರಾಜಸೂಯಯಾಗದಲ್ಲಿ ಅರ್ಹತೆಯನ್ನು ಪಡೆದು ಅದನ್ನು ಅನುಷ್ಠಾನಮಾಡುತ್ತಾನೆಯೋ, ಅವನ ಕೀರ್ತಿಯು ಎಲ್ಲೆಡೆಯೂ ಹರಡುತ್ತದೆ. ಅವನು ಎಲ್ಲಾ ಗುಣಗಳನ್ನೂ ಹೊಂದುತ್ತಾನೆ. ಅವನು ಯಾವ ಶತ್ರುವನ್ನೂ ತಡೆಯಬಲ್ಲ. ಎಲ್ಲರಿಗೂ ರಾಜನಾಗಿ ಸಮ್ರಾಟ್ ಎನಿಸಿಕೊಳ್ಳುತ್ತಾನೆ.
ಅನೂಚಾನಾ ದಶ ದಶ ಪಿತೃತೋ ಮಾತೃತಸ್ತಥಾ |
ಅನುಕ್ತಾ ಯಂ ಪ್ರತಿಷ್ಠಂತೇ ಸೋಮಹಸ್ತಾ ದ್ವಿಜಾತಯಃ ॥21॥
ಪಿತೃಪಕ್ಷದಿಂದಲೂ, ಮತ್ತು ಮಾತೃಪಕ್ಷದಿಂದಲೂ, ಹತ್ತು ಹತ್ತು ಅನೂಚಾನರಾದ ವ್ಯಕ್ತಿಗಳು ಮತ್ತು ಬ್ರಾಹ್ಮಣರು ಕೈಯಲ್ಲಿ ಸೋಮವನ್ನು ಹಿಡಿದು ಅವನ ಬಳಿಗೆ ಬರುತ್ತಾರೆ. ಇನ್ನು ಕೆಲವರು ಅನುಕ್ತರಾದವರು ಅವನ ಬಳಿಗೆ ಬಂದು (ರಾಜಸೂಯಯಾಗದ ಕೊನೆಯಲ್ಲಿ) ಅಭಿಷೇಕವನ್ನು ಮಾಡುತ್ತಾರೆ.
ಯೇನಾಭಿಷಿಕ್ತೋ ನೃಪತಿರ್ವಾರುಣಂ ಗುಣಮೃಚ್ಛತಿ |
ತೇನ ರಾಜಾ ಚ ಸನ್ ಕೃತ್ಸ್ನಂ ಸಮ್ರಾಟ್ ಗುಣಮಭೀಪ್ಸತೇ ॥22॥
ಅಂತಹ ಅಭಿಷೇಕವನ್ನು ಪಡೆದ ರಾಜನು, ವರುಣನ ಗುಣವನ್ನು ಹೊಂದುತ್ತಾನೆ. ಅಲ್ಲಿಯವರೆಗೆ ರಾಜನೆನಿಸಿಕೊಂಡವನು ಅನಂತರ ಎಲ್ಲಾ ಸಮ್ರಾಟ್‌ಗುಣಗಳನ್ನು ಹೊಂದಿ ಸಮ್ರಾಜನೆನಿಸುತ್ತಾನೆ.
ತಸ್ಯ ಸಮ್ರಾಡ್‌ಗುಣಾರ್ಹಸ್ಯ ಭವತಃ ಕುರುನಂದನ |
ರಾಜಸೂಯಸ್ಯ ಸಮಯಂ ಮನ್ಯಂತೇ ಸುಹೃದಸ್ತವ |
ತಸ್ಯ ಯಜ್ಞಸ್ಯ ಸಮಯಃ ಸ್ವಾಧೀನಃ ಕ್ಷತ್ರಸಂಪದಾ ॥23॥
ಕುರುನಂದನನೇ! ಅಂತಹ ಸಮ್ರಾಟ್‌ಗುಣಗಳಿಗೆ ಅರ್ಹನಾದ ನೀನು ರಾಜಸೂಯಯಾಗವನ್ನು ಆಚರಿಸಲು ಇದು ಸೂಕ್ತವಾದ ಸಮಯ ಎಂದು ನಿನ್ನ ಹಿತೈಷಿಗಳೆಲ್ಲಾ ತಿಳಿಯುತ್ತಾರೆ. ಕ್ಷತ್ರಿಯ ಕುಲವು ಮತ್ತು ಸಂಪತ್ತು ನಿನ್ನ ಅಧೀನವಾಗಿರುವುದರಿಂದ ನಿನಗೆ ಇದು ಯಜ್ಞದ ಸಮಯ.
ನಾಮ್ನಾ ಷಡಗ್ನಯೋ ಯಸ್ಮಿನ್ ಚೀಯಂತೇ ಸಂಶಿತವ್ರತೈಃ |
ದರ್ವೀಹೋಮಾನುಪಾದಾಯ ಸರ್ವಾನಾಪ್ನೋತಿ ಯಃ ಕ್ರತೂನ್|
ಮಹಾಭಿಷೇಕೋ ಯಜ್ಞಾಂತೇ ಸರ್ವವಿತ್ ತೇನ ಚೋಚ್ಯತೇ ॥24॥
ಆ ಯಜ್ಞದಲ್ಲಿ ಶ್ರೇಷ್ಠವ್ರತವನ್ನು ಆಚರಿಸಿದ ಬ್ರಾಹ್ಮಣರು ಆರು ಅಗ್ನಿಗಳನ್ನು ಚಯನಮಾಡುತ್ತಾರೆ. ಸೃಕ್‌ನಲ್ಲಿ ಚರುವನ್ನಿಟ್ಟು ಮಾಡುವ ಹೋಮ ಮೊದಲಾದವುಗಳಿಂದ ಆ ಯಜ್ಞವನ್ನು ಸಮಗ್ರವಾಗಿ ಪೂರ್ಣಗೊಳಿಸಿ ಯಜ್ಞದ ಕೊನೆಯಲ್ಲಿ ಯಾರು ಮಹಾ ಅಭಿಷೇಕವನ್ನು ಹೊಂದುತ್ತಾರೆಯೋ ಅವರು ಎಲ್ಲವನ್ನೂ ಪಡೆದವರು ಎಂದು ಹೇಳಲ್ಪಡುತ್ತಾರೆ.
ಸಮರ್ಥೋಽಸಿ ಮಹಾಭಾಗ ಸರ್ವೇ ತೇ ವಶಗಾ ವಯಮ್ |
ಅವಿಚಾರ್ಯ ಮಹಾರಾಜ ರಾಜಸೂಯೇ ಮನಃ ಕುರು ॥25॥
ವೈಶಂಪಾಯನಃ

ಇತ್ಯೇವಂ ಸುಹೃದಃ ಸರ್ವೇ ಪೃಥಕ್ ಚ ಸಹ ಚಾಬ್ರುವನ್ ॥26॥
ಮಹಾಭಾಗನೇ! ನೀನು ಯಜ್ಞವನ್ನು ಆಚರಿಸಲು ಸಮರ್ಥನಾಗಿದ್ದೀಯೆ. ನಾವೆಲ್ಲರೂ ನಿನ್ನ ವಶರಾಗಿದ್ದೇವೆ. ಮಹಾರಾಜನೇ! ಬೇರೆ ಏನನ್ನೂ ವಿಚಾರಮಾಡದೆ ರಾಜಸೂಯಯಾಗವನ್ನು ಮಾಡಲು ಉದ್ಯುಕ್ತನಾಗು. ಹೀಗೆ ಹಿತೈಷಿಗಳು ಮತ್ತು ಉಳಿದವರು ಒಟ್ಟಿಗೆ ರಾಜನನ್ನು ಕುರಿತು ಹೇಳಿದರು.
ಸ ಧರ್ಮ್ಯಂ ಪಾಂಡವಸ್ತೇಷಾಂ ವಚಃ ಶ್ರುತ್ವಾ ವಿಶಾಂಪತೇ |
ಧೃಷ್ಟಮಿಷ್ಟಂ ವರಿಷ್ಠಂ ಚ ಜಗ್ರಾಹ ಮನಸಾಽರಿಹಾ ॥27॥
ಜನಮೇಜಯ ರಾಜನೇ! ಪಾಂಡುಪುತ್ರನಾದ ಶತ್ರುಸೂದನನಾದ ಆ ಧರ್ಮರಾಜನು ಧರ್ಮಯುಕ್ತವಾದ ಧೈರ್ಯದಿಂದಕೂಡಿದ ತನಗೆ ಪ್ರಿಯವಾದ ಆ ಶ್ರೇಷ್ಠವಾದ ಮಾತುಗಳನ್ನು ಕೇಳಿ ಮನಸ್ಸಿನಿಂದ ಸ್ವೀಕರಿಸಿದನು.
ಶ್ರುತ್ವಾ ಸುಹೃದ್ವಚಃ ಕಲ್ಯಂ ಜಾನಂಶ್ಚೈವಾತ್ಮನಃ ಕ್ಷಮಮ್ |
ಸಂಪ್ರಶಸ್ತಕ್ರಿಯಾರಂಭೇ ಪರೀಕ್ಷ್ಯಾಮುಪಚಕ್ರಮೇ ॥28॥
ಮಂಗಳಪ್ರದವಾದ ಹಿತೈಷಿಗಳ ಮಾತನ್ನು ಕೇಳಿ, ರಾಜಸೂಯಯಾಗವನ್ನು ಅನುಷ್ಠಾನಮಾಡುವುದಕ್ಕಾಗಿ ಅತ್ಯಂತ ಶ್ರೇಷ್ಠನಾದ ಧರ್ಮರಾಜನು ಕ್ರಿಯಾರಂಭವನ್ನು ಮಾಡುವ ಸಲುವಾಗಿ ಯಾಗವನ್ನು ಮಾಡುವ ಭೂಮಿಯ ಶೋಧನೆಯಲ್ಲಿ ತೊಡಗಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ತ್ರಯೋದಶೋಽಧ್ಯಾಯಃ ॥
॥ ಮಂತ್ರಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಸುಕಾರ್ಯಮೇತದಿತ್ಯಲಂ ನಿಶಮ್ಯ ಸೋದರೋದಿತಂ |
ಅಯಾತಯತ್ ಸ್ವಸಾರಥಿಂ ಸ ಕೇಶವಾಯ ಭೂಪತಿಃ ॥75॥
ಇದು ಬಹಳ ಒಳ್ಳೆಯ ಕಾರ್ಯ ಎಂದು ಸೋದರರು ಹೇಳಿದ್ದನ್ನು ಕೇಳಿ ರಾಜಾ ಯುಷ್ಠಿರ ಶ್ರೀಕೃಷ್ಣನ ಬಳಿಗೆ ತನ್ನ ಸಾರಥಿಯನ್ನು ಕಳಿಸಿದ.
ತದೈವ ಕೇಶವಸ್ಯ ಯಾಃ ಸ್ತ್ರಿಯಸ್ತದೀಯತಾತಕೈಃ |
ಸಹೋದರೈಶ್ಚ ಯಾಪಿತಃ ಸುದೂತ ಆಪ ಮಾಧವಂ ॥76॥
ಅದೇ ಸಮಯದಲ್ಲಿ ಕೃಷ್ಣನ ಹದಿನಾರು ಸಾವಿರ ಪತ್ನಿಯರ ತಂದೆಗಳೂ ಸೋದರರೂ ಕೃಷ್ಣನಿಗೆ ಒಬ್ಬ ದೂತನನ್ನು ಕಳಿಸಿದ್ದರು. ಅವನೂ ಬಂದ.
ಪ್ರಣಮ್ಯ ಕೇಶವಂ ವಚಃ ಸ ಆಹ ಮಾಗಧೇನ ತೇ |
ವಿವಾಹಬಾಂಧವಾ ರಣೇ ವಿಜಿತ್ಯ ರೋತಾ ಗಿರೌ ॥77॥
ದೂತ ಕೃಷ್ಣನನ್ನು ನಮಿಸಿ ಈ ಮಾತನ್ನು ನುಡಿದ. ನಿಮಗೆ ವಿವಾಹ ಸಂಬಂಧ ಬಂಧುಗಳಾಗಿರುವವರನ್ನು ಜರಾಸಂಧ ಯುದ್ಧದಲ್ಲಿ ಗೆದ್ದು ಬೆಟ್ಟದ ಕಣಿವೆಗಳಲ್ಲಿ ಬಂಸಿದ್ದಾನೆ.
ನೃಪಾಯುತದ್ವಯೇನ ಸೋಽಷ್ಟವಿಂಶಕೈಃ ಶತೈರಪಿ |
ಯಿಯಕ್ಷುರುಗ್ರರೂಪಿಣಂ ತ್ರಿಲೋಚನಂ ತ್ವಯಿ ಸ್ಥಿತೇ ॥78॥
ಜರಾಸಂಧ ಉಗ್ರರೂಪಿಯಾದ ಮುಕ್ಕಣ್ಣನಿಗೆ ಆ ಇಪ್ಪತ್ತೆರಡು ಸಾವಿರದ ಎಂಟು ನೂರು ಮಂದಿ ರಾಜರುಗಳನ್ನು ಬಲಿಕೊಡಲು ಸಂಕಲ್ಪಿಸಿದ್ದಾನೆ. ಇಷ್ಟೆಲ್ಲ ನೀವು ಇಲ್ಲಿ ಇರಲಾಗಿ ನಡೆದಿದೆ.
ವಿಮೋಚಯಸ್ವ ತಾನ್ ಪ್ರಭೋ ನಿಹತ್ಯ ಮಾಗಧೇಶ್ವರಂ |
ಅವೈದಿಕಂ ಮಖಂ ಚ ತಂ ವಿಲುಂಪ ಧರ್ಮಗುಪ್ತಯೇ ॥79॥
ಪ್ರಭು, ನೀನು ಆ ಜರಾಸಂಧನನ್ನು ಕೊಂದು ರಾಜರನ್ನು ಬಂಧನದಿಂದ ಬಿಡಿಸು. ವೈದಿಕ ಧರ್ಮರಕ್ಷಣೆಗಾಗಿ ಅವೈದಿಕವಾದ ಆ ಯಜ್ಞವನ್ನು ನಿಲ್ಲಿಸು.
ಇತೇರಿತೋಽಥ ಸಾರಥಿಂ ನಿಶಾಮ್ಯ ಧರ್ಮಜಸ್ಯ ಚ |
ನಿಶಮ್ಯ ತದ್ವಚಸ್ತದಾ ಜಗಾಮ ಪಾಂಡವಾಲಯಂ ॥80॥
ದೂತ ಹೀಗೆ ಹೇಳಿದಾಗ ಶ್ರೀಕೃಷ್ಣ ಧರ್ಮರಾಜನ ಸಾರಥಿಯನ್ನೂ ಕಂಡ ಅವನ ಮಾತನ್ನು ಕೇಳಿ ಪಾಂಡವರ ಅರಮನೆಗೆ ತೆರಳಿದ.
ಸ ಪಾಂಡವೈಃ ಸಮರ್ಚಿತೋ ಮಖಾಯ ಧರ್ಮಜೇನ ಚ |
ಪ್ರಪೃಷ್ಟ ಆಹ ಮಾಧವೋ ವಚೋ ಜಗತ್ಸುಖಾವಹಂ ॥81॥
ಶ್ರೀಕೃಷ್ಣ ಪಾಂಡವರಿಂದ ಸತ್ಕೃತನಾದ. ಬಳಿಕ ಯಾಗದ ವಿಷಯದಲ್ಲಿ ಧರ್ಮರಾಜ ಸಲಹೆ ಕೇಳಿದಾಗ ಲೋಕಕ್ಕೆ ಸುಖದಾಯಕವಾಗುವ ಮಾತನ್ನು ನುಡಿದ.
* * * *
ಹದಿನಾಲ್ಕನೆಯ ಅಧ್ಯಾಯ
(ಇಂದ್ರಪ್ರಸ್ಥಕ್ಕೆ ಶ್ರೀಕೃಷ್ಣನ ಆಗಮನ)
ವೈಶಂಪಾಯನಃ

ಚತುರ್ಭಿರ್ಭೀಮಸೇನಾದ್ಯೈರ್ಭ್ರಾತೃಭಿಃ ಸಹಿತೈರ್ಹಿತಮ್ |
ಏವಮುಕ್ತಸ್ತದಾ ಪಾರ್ಥೋ ಧರ್ಮ ಏವ ಮನೋ ದಧೇ ॥1॥
ತನ್ನ ನಾಲ್ವರು ತಮ್ಮಂದಿರಿಂದ ಒಟ್ಟಿಗೆ ಈ ರೀತಿ ಹೇಳಲ್ಪಟ್ಟ ಧರ್ಮರಾಜನು ರಾಜಸೂಯ ಯಾಗರೂಪವಾದ ಧರ್ಮವನ್ನು ಆಚರಿವುದೆಂದೇ ನಿರ್ಧರಿಸಿದನು.
ಸ ರಾಜಸೂಯಂ ರಾಜೇಂದ್ರಃ ಕುರೂಣಾಮೃಷಭಃ ಕ್ರತುಮ್ |
ಜಗಾಮ ಮನಸಾ ಸಮ್ಯಗಾಹರಿಷ್ಯನ್ ಯುಷ್ಠಿರಃ ॥2॥
ಕುರುಶ್ರೇಷ್ಠನಾದ ರಾಜೇಂದ್ರನಾದ ಯುಷ್ಠಿರನು ರಾಜಸೂಯ- ಯಾಗವನ್ನು ಮಾಡಲು ಬಯಸಿದವನಾಗಿ ಮನಸ್ಸಿನಲ್ಲಿ ಅದನ್ನೇ ಧ್ಯಾನಿಸಿದನು.
ಭೂಯಸ್ತ್ವದ್ಭುತವೀರ್ಯೌಜಾ ಧರ್ಮಮೇವಾನುಪಾಲಯನ್ |
ಕಿಂ ಹಿತಂ ಸರ್ವಲೋಕಸ್ಯ ಧರ್ಮರಾಜೋ ಮನೋ ದಧೇ ॥3॥
ಅದ್ಭುತವಾದ ಶೌರ್ಯಮತ್ತು ತೇಜಸ್ಸನ್ನು ಹೊಂದಿದ್ದ ಧರ್ಮರಾಜನು, ಧರ್ಮರಕ್ಷಣೆಯನ್ನೇ ಚಿಂತಿಸುತ್ತಾ ಎಲ್ಲಾ ಪ್ರಜೆಗಳಿಗೂ ಯಾವುದು ಹಿತವೆಂದು ಆಲೋಚಿಸಿದನು.
ಸ ಸರ್ವಶಃ ಮಹಾಪ್ರಾಜ್ಞೈಃ ಋತ್ವಿಗ್ಭಿಶ್ಚ ಮಹಾತ್ಮಭಿಃ |
ಧೌಮ್ಯದ್ವೈಪಾಯನಮುಖೈರ್ಮಂತ್ರಯಾಮಾಸ ಮಂತ್ರಿಭಿಃ ॥4॥
ಅವನು ಮಹಾತ್ಮರೂ ಮಹಾಪ್ರಾಜ್ಞರೂ ಆದ ಋತ್ವಿಕ್‌ಗಳ ಜೊತೆಯಲ್ಲಿಯೂ ಧೌಮ್ಯ ವ್ಯಾಸ ಮೊದಲಾದವರ ಜೊತೆಯಲ್ಲಿಯೂ ಮತ್ತು ಮಂತ್ರಿಗಳ ಜೊತೆಯಲ್ಲಿಯೂ ಕೂಡಿ ಎಲ್ಲಾ ವಿಧವಾದ ಮಂತ್ರಾಲೋಚನೆಯನ್ನೂ ನಡೆಸಿದನು.
ವಿರಾಟದ್ರುಪದಾಭ್ಯಾಂ ಚ ಸಾತ್ಯಕೇನ ಚ ೀಮತಾ |
ಯುಧಾಮನ್ಯೂತ್ತಮೌಜಾಭ್ಯಾಂ ಸೌಭದ್ರೇಣ ಚ ೀಮತಾ |
ದ್ರೌಪದೇಯೈಃ ಪರಂ ಶೂರೈರ್ಮಂತ್ರಯಾಮಾಸ ಸಂವೃತಃ ॥5॥
ಅವನು ವಿರಾಟ ದ್ರುಪದರಿಂದಲೂ ಮೇಧಾವಿಯಾದ ಸಾತ್ಯಕಿಯಿಂದಲೂ ಯುಧಾಮನ್ಯು ಮತ್ತು ಉತ್ತಮೌಜಸರಿಂದಲೂ ಮೇಧಾವಿಯಾದ ಅಭಿಮನ್ಯುವಿನಿಂದಲೂ ಶೂರರಾದ ದ್ರೌಪದಿಯ ಪುತ್ರರಿಂದಲೂ ಕೂಡಿ ಮಂತ್ರಾಲೋಚನೆಯನ್ನು ಮಾಡಿದನು.
ಯುಷ್ಠಿರಃ
ಭವಂತೋ ರಾಜಸೂಯಸ್ಯ ಸಮ್ರಾಡರ್ಹಸ್ಯ ಸುಕ್ರತೋಃ |
ಶ್ರದ್ದಧಾನಸ್ಯ ತತ್ತ್ವೇನ ಮಮಾವಾಪ್ತಿಃ ಕಥಂ ಭವೇತ್ ॥6॥
ಸಮ್ರಾಟ್‌ನಾದವನಿಗೆ ಮಾತ್ರ ಮಾಡಲು ಸಾಧ್ಯವಾದಂತಹ ಶ್ರೇಷ್ಠವಾದ ರಾಜಸೂಯಯಾಗವನ್ನು ಆಚರಿಸುವ ಶ್ರದ್ಧೆಯುಳ್ಳ ನನಗೆ ಆ ಯಾಗದ ಪ್ರಾಪ್ತಿಯು ಹೇಗೆ ಉಂಟಾಗುವುದೆಂದು ನೀವೆಲ್ಲರೂ ಯಥಾರ್ಥವಾಗಿ ತಿಳಿಸಿ.
ವೈಶಂಪಾಯನಃ
ಏವಮುಕ್ತಾಸ್ತು ತೇ ತೇನ ರಾಜ್ಞಾ ರಾಜೀವಲೋಚನಾಃ |
ಋಷಯೋ ಭ್ರಾತರಶ್ಚೈವ ತದ್ವಾಕ್ಯಂ ಪ್ರತ್ಯಪೂಜಯನ್ ॥7॥
ಇದಮೂಚುರ್ವಚಃ ಕಾಲೇ ಧರ್ಮಾತ್ಮಾನಂ ಯುಷ್ಠಿರಮ್ |
ಅರ್ಹಸ್ತ್ವಮಸಿ ರಾಜೇಂದ್ರ ರಾಜಸೂಯಂ ಮಹಾಕ್ರತುಮ್ ॥8॥
ಆ ರಾಜನಿಂದ ಹೀಗೆ ಹೇಳಲ್ಪಟ್ಟ, ರಾಜೀವಲೋಚನರಾದ ಋಷಿಗಳು ಮತ್ತು ಸಹೋದರರು, ಅವನ ಈ ಮಾತನ್ನು ಪೂಜಿಸಿ ಧರ್ಮಾತ್ಮನಾದ ಯುಷ್ಠಿರನನ್ನು ಕುರಿತು ಯೋಗ್ಯವಾದ ಕಾಲದಲ್ಲಿ ರಾಜೇಂದ್ರನೇ! ರಾಜಸೂಯಮಹಾಯಾಗವನ್ನು ಮಾಡಲು ನೀನು ಅರ್ಹನಾಗಿದ್ದೀಯೆ ಎಂಬ ಈ ಮಾತನ್ನು ಹೇಳಿದರು.
ಸಾಮರ್ಥ್ಯಯೋಗೌ ಸಂಪ್ರೇಕ್ಷ್ಯ ದೇಶಕಾಲೌ ವ್ಯಯಾಗಮೌ |
ವಿಮೃಶ್ಯ ಸಮ್ಯಕ್ ಚ ಯಾ ಕುರ್ವನ್ ರಾಜಾ ನ ಸೀದತಿ ॥9॥
ತನ್ನ ಸಾಮರ್ಥ್ಯವನ್ನು ಮತ್ತು ಮುಂದೆ ಒದಗಲಿರುವ ದ್ರವ್ಯಗಳನ್ನೂ, ದೇಶಕಾಲಗಳನ್ನೂ, ಧನದ ಅಯವ್ಯಯಗಳನ್ನೂ, ತಿಳಿದು ಬುದ್ಧಿಯಿಂದ ಚೆನ್ನಾಗಿ ಯೋಚಿಸಿ ಪ್ರವೃತ್ತನಾಗುವ ರಾಜನು ಎಂದೂ ಕಷ್ಟದಲ್ಲಿ ಸಿಲುಕಿಕೊಳ್ಳುವುದಿಲ್ಲ.
ಏವಮುಕ್ತಸ್ತು ಧರ್ಮಾತ್ಮಾ ಪುನರಾತ್ಮಾನಮಾತ್ಮನಿ |
ಅವೇಕ್ಷ್ಯ ಚ ವಿಮೃಶ್ಯೈವ ಸಂಶಯೇಷು ಪುನಃಪುನಃ ॥10॥
ಸರ್ವೈಸ್ತೈರ್ನಿಶ್ಚಿತಮತಿಃ ಕಾಲ ಇತ್ಯೇವ ಭಾರತ |
ಭೂಯೋ ವಿಮಮೃಶೇ ಪಾರ್ಥೋ ಲೋಕಾತ್ಮಹಿತಕಾರಣಾತ್ ॥11॥
ಹೀಗೆ ಹೇಳಲ್ಪಟ್ಟ ಧರ್ಮಿಷ್ಠನಾದ ಪಾರ್ಥನು ಪುನಃ ಪುನಃ ತನ್ನ ಮನಸ್ಸಿನಲ್ಲಿ ಆ ವಿಷಯವನ್ನು ಯೋಚಿಸಿ, ಪುನಃ ಪುನಃ ಸಂಶಯಗಳನ್ನು ಕಳೆದುಕೊಂಡು, ಅವರೆಲ್ಲರ ಬಲದಿಂದ ಇದು ಯೊಗ್ಯವಾದ ಕಾಲವೆಂದೇ ನಿರ್ಧರಿಸಿ, ಪುನಃ ಎಲ್ಲಾ ಪ್ರಜೆಗಳಿಗೂ ಮತ್ತು ತನಗೂ ಹಿತವಾದುದನ್ನು ವಿಮರ್ಶೆಮಾಡಿದನು.
ನ ಹಿ ಯಜ್ಞಸಮಾರಂಭಃ ಕೇವಲಾತ್ಮವಿವೃದ್ಧಯೇ |
ಭವತೀತಿ ಸಮಾಜ್ಞಾಯ ಯತ್ನತಃ ಕಾರ್ಯಮುದ್ವಹನ್ ॥12॥
ಯಜ್ಞದಂತಹ ದೊಡ್ಡಕಾರ್ಯವು ಕೇವಲ ತನ್ನೊಬ್ಬನ ಏಳಿಗೆಗೆ ಸೀಮಿತವಾಗಿರುವುದಿಲ್ಲ ಎಂದು ಚೆನ್ನಾಗಿ ತಿಳಿದ ರಾಜನು ಪ್ರಯತ್ನ ಪೂರ್ವಕವಾಗಿ ಕಾರ್ಯಭಾರವನ್ನು ವಹಿಸಿದನು.
ಸ ನಿಶ್ಚಯಾರ್ಥಂ ಕಾರ್ಯಸ್ಯ ಕೃಷ್ಣಮೇವ ಜನಾರ್ದನಮ್ |

ಸರ್ವಲೋಕಾತ್ ಪರಂ ಮತ್ವಾ ಜಗಾಮ ಮನಸಾ ಹರಿಮ್ ॥13॥
ಅವನು ಅಂತಿಮವಾದ ನಿರ್ಣಯವನ್ನು ತೆಗೆದುಕೊಳ್ಳಲು ಜನಾರ್ದನನಾದ ಕೃಷ್ಣನ ಅನುಮತಿಯೇ, ಬೇಕೆಂದು ತಿಳಿದು ಸರ್ವೋತ್ತಮನಾದ ಆ ಹರಿಯನ್ನು ಮನಸ್ಸಿನಲ್ಲಿ ಧ್ಯಾನಿಸಿದನು.
ಅಪ್ರಮೇಯಮನಾದ್ಯಂತಂ ಕಾಮಾಜ್ಜಾತಮಜಂ ನೃಷು |
ಪಾಂಡವಸ್ತರ್ಕಯಾಮಾಸ ಕರ್ಮಭಿರ್ದೇವನಿರ್ಮಿತೈಃ ॥14॥
ಪಾಂಡವನಾದ ಧರ್ಮರಾಜನು ಶ್ರೀಕೃಷ್ಣನು ಮಾಡಿದ ದೇವತೆಗಳಿಗೆ ಉಚಿತವಾದ ಕರ್ಮಗಳಿಂದ, ಅವನು ಅಪ್ರಮೆಯನು ಆದ್ಯಂತರಹಿತನು ಜನನರಹಿತನಾದರೂ, ತನ್ನ ಇಚ್ಛೆಯಿಂದ ಮನುಷ್ಯ ಕುಲದಲ್ಲಿ ಅವತಾರ ಮಾಡಿದವನು ಎಂದು ಊಹಿಸಿದನು.
ನಾಸ್ಯ ಕಿಂಚಿದವಿಜ್ಞೇಯಂ ನಾಸ್ಯ ಕಿಂಚಿದಕರ್ಮಜಮ್ |
ನಾಸ್ಯ ಕಿಂಚಿದ್ ಭವೇನ್ಮೋಘಂ ಇತಿ ಕೃಷ್ಣಮಮನ್ಯತ ॥15॥
ಅವನಿಗೆ ತಿಳಿಯದುದು ಯಾವುದೂ ಇಲ್ಲ. ಅವನ ಕರ್ಮದಿಂದ ಸಾಧ್ಯವಾಗದುದು ಯಾವುದೂ ಇಲ್ಲ. ಅವನ ಯಾವ ಕರ್ಮವೂ ವ್ಯರ್ಥವಾಗುವುದಿಲ್ಲ ಎಂದು ಕೃಷ್ಣನ ವಿಷಯದಲ್ಲಿ ತಿಳಿದನು.
ಸ ತು ತಾಂ ನೈಷ್ಠಿಕೀಂ ಬುದ್ಧಿಂ ಕೃತ್ವಾ ಪಾರ್ಥೋ ಯುಷ್ಠಿರಃ |
ಗುರುವದ್ ಭೂತಗುರವೇ ಪ್ರಾಹಿಣೋದ್ ದೂತಮಂಜಸಾ ॥16॥
ಪಾರ್ಥನಾದ ಯುಷ್ಠಿರನು ಹೀಗೆ ಏಕಾಗ್ರಬುದ್ಧಿಯನ್ನು ಹೊಂದಿ, ಸರ್ವಲೋಕಗುರುವಾದ ಕೃಷ್ಣನನ್ನು, ತನ್ನ ಗುರುವೆಂದು ಭಾವಿಸಿ ಅವನನ್ನು ಕರೆತರಲು ಅವನ ಬಳಿ ಒಬ್ಬದೂತನನ್ನು ಕಳುಹಿಸಿದನು.
ಶೀಘ್ರಗೇನ ರಥೇನಾಶು ದೂತಃ ಸಂಪ್ರಾಪ್ಯ ಯಾದವಾನ್ |
ದ್ವಾರಕಾವಾಸಿನಂ ಕೃಷ್ಣಂ ದ್ವಾರವತ್ಯಾಂ ಸಮಾಸದತ್ ॥17॥
ಆ ದೂತನಾದರೂ ಶೀಘ್ರವಾಗಿ ಚಲಿಸುವ ರಥವನ್ನು ಏರಿ ದ್ವಾರಕಾಪಟ್ಟಣವನ್ನು ಸೇರಿ ಯಾದವರನ್ನು ಸಮೀಪಿಸಿ ಕೃಷ್ಣನ ಸಮೀಪಕ್ಕೆ ಬಂದನು.
ಸ ಪ್ರಹ್ವಃ ಪ್ರಾಂಜಲಿರ್ಭೂತ್ವಾ ವ್ಯಜ್ಞಾಪಯತ ಮಾಧವಮ್ |
ಧರ್ಮರಾಜೋ ಹೃಷೀಕೇಶಂ ಧೌಮ್ಯವ್ಯಾಸಾದಿಭಿಃ ಸಹ ॥18॥
ಪಾಂಚಾಲಮಾತ್ಸ್ಯಸಹಿತೈರ್ಭ್ರಾತೃಭಿಃ ಸ್ವೈಶ್ಚ ಸರ್ವಶಃ |
ತ್ವದ್ದರ್ಶನಂ ಮಹಾಬಾಹೋ ಕಾಂಕ್ಷತೇ ಸ ಯುಷ್ಠಿರಃ ॥19॥
ಅವನು ವಿನಯದಿಂದ ಬಾಗಿ ಕೈಗಳನ್ನು ಜೋಡಿಸಿ ಕೃಷ್ಣನಿಗೆ ಹೀಗೆ ವಿಜ್ಞಾಪನೆಯನ್ನುಮಾಡಿದನು. ಮಹಾಬಾಹುವಾದ ಹೃಷೀಕೇಶನೇ! ಧರ್ಮರಾಜನು ವ್ಯಾಸ ಧೌಮ್ಯಾದಿಗಳಿಂದಲೂ ವಿರಾಟ ದ್ರುಪದರಿಂದಲೂ ತನ್ನ ತಮ್ಮಂದಿರಿಂದಲೂ ಕೂಡಿದವನಾಗಿ ನಿನ್ನ ದರ್ಶನವನ್ನು ಬಯಸುತ್ತಾನೆ.
ವೈಶಂಪಾಯನಃ
ಇಂದ್ರಸೇನವಚಃ ಶ್ರುತ್ವಾ ಯಾದವಪ್ರವರೋ ಬಲೀ |
ದರ್ಶನಾಕಾಂಕ್ಷಿಣಂ ಪಾರ್ಥಂ ದರ್ಶನಾಕಾಂಕ್ಷಣೋಽಚ್ಯುತಃ ॥20॥
ಆಮಂತ್ರ್ಯ ವಸುದೇವಂ ಚ ಬಲದೇವಂ ಚ ಮಾಧವಃ |
ಇಂದ್ರಸೇನೇನ ಸಹಿತ ಇಂದ್ರಪ್ರಸ್ಥಂ ಯಯೌ ತದಾ ॥21॥
ಆ ದೂತನಾದ ಇಂದ್ರಸೇನನ ಮಾತುಗಳನ್ನು ಕೇಳಿ ಯಾದವಶ್ರೇಷ್ಠನಾದ ಮತ್ತು ಬಲಿಷ್ಠನಾದ ಕೃಷ್ಣನು ಧರ್ಮರಾಜನು ತನ್ನನ್ನು ನೋಡಲು ಬಯಸುತ್ತಾನೆ ಎಂದೂ ಇತರರೂ ತನ್ನನ್ನು ನೋಡುವ ಇಚ್ಛೆಯುಳ್ಳವನಾಗಿದ್ದಾರೆಂದೂ ತಿಳಿದು ವಸುದೇವ ಮತ್ತು ಬಲರಾಮರ ಅನುಮತಿಯನ್ನು ಪಡೆದು ಇಂದ್ರಸೇನನ ಜೊತೆಯಲ್ಲಿ ಇಂದ್ರಪ್ರಸ್ಥಕ್ಕೆ ಹೊರಟನು.
ವ್ಯತೀತ್ಯ ದೇಶಾನ್ ವಿವಿಧಾನ್ ತ್ವರಾವಾನ್ ಕ್ಷಿಪ್ರವಾಹನಃ |
ಇಂದ್ರಪ್ರಸ್ಥಗತಂ ಪಾರ್ಥಮಭ್ಯಗಚ್ಛಜ್ಜನಾರ್ದನಃ ॥22॥
ಜನಾರ್ದನನು ಶೀಘ್ರಗಾಮಿಯಾದ ರಥವನ್ನು ಏರಿ, ತ್ವರೆಯಿಂದ ಕೂಡಿದವನಾಗಿ ಅನೇಕ ದೇಶಗಳನ್ನು ದಾಟಿ ಇಂದ್ರಪ್ರಸ್ಥದಲ್ಲಿ ಧರ್ಮರಾಜನನ್ನು ಸಂಸಿದನು.
ಸ್ವಗೃಹೇ ಪಿತೃವದ್ ಭ್ರಾತ್ರಾ ಧರ್ಮರಾಜೇನ ಪೂಜಿತಃ |
ಭೀಮೇನ ಚ ತತೋಽಪಶ್ಯತ್ ಸ್ವಸಾರಂ ಪ್ರೀತಿಮಾನ್ ಪ್ರಭುಃ ॥23॥
ತನ್ನ ಮನೆಯಲ್ಲಿ ತಂದೆಯಂತೆ ಧರ್ಮರಾಜನಿಂದಲೂ ಮತ್ತು ಭೀಮಸೇನನಿಂದಲೂ ಪೂಜಿಸಲ್ಪಟ್ಟ ಪ್ರಭುವಾದ ಕೃಷ್ಣನು, ಅನಂತರ ಸಂತೋಷದಿಂದ ಕೂಡಿದವನಾಗಿ ತನ್ನ ತಂಗಿಯಾದ ಸುಭದ್ರೆಯನ್ನು ನೋಡಿದನು.
ಪ್ರೀತಃ ಪ್ರಿಯೇಣ ವೈ ಸಖ್ಯಾ ರೇಮೇ ಸ ಸಹಿತಸ್ತದಾ |
ಅರ್ಜುನೇನ ಯಮಾಭ್ಯಾಂ ಚ ಶಿಷ್ಯವತ್ ಸಮುಪಸ್ಥಿತಃ ॥24॥
ಸಂತೋಷಗೊಂಡ ಕೃಷ್ಣನು ಅರ್ಜುನ ನಕುಲ ಸಹದೇವರಿಂದ ಶಿಷ್ಯರಂತೆ ಸಮೀಪಿಸಲ್ಪಟ್ಟವನಾಗಿ ತನ್ನ ಪ್ರಿಯ ಸ್ನೇಹಿತನಾದ ಅರ್ಜುನನ ಜೊತೆಯಲ್ಲಿ ಸಂತೋಷಗೊಂಡನು.
ತಂ ವಿಶ್ರಾಂತಂ ಸಮೇ ದೇಶೇ ಕ್ಷಣಿನಂ ಕಲ್ಯಮಚ್ಯುತಮ್ |
ಧರ್ಮರಾಜಃ ಸಮಾಗಮ್ಯ ಜ್ಞಾಪಯತ್ ಸ್ವಂ ಪ್ರಯೋಜನಮ್ ॥25॥
ಪ್ರಾತಃಕಾಲದಲ್ಲಿ ವಿಶ್ರಾಂತಿಯನ್ನು ಪಡೆದು ಸಮವಾದ ಪ್ರದೇಶದಲ್ಲಿ ವಿರಾಮದಿಂದ ಕುಳಿತಿದ್ದ ಮಂಗಳಕರನಾದ ಕೃಷ್ಣನನ್ನು ಸಮೀಪಿಸಿ ಧರ್ಮರಾಜನು ತನ್ನ ಉದ್ದೇಶವನ್ನು ತಿಳಿಸಿದನು.

ಪ್ರಾರ್ಥಿತೋ ರಾಜಸೂಯೋ ಮೇ ನಚಾಸೌ ಕೇವಲೇಪ್ಸಯಾ |
ಪ್ರಾಪ್ಯತೇ ಯೇನ ಕೇನೇಹ ವಿದಿತಂ ತವ ಚಾಚ್ಯುತ ॥26॥
ನಾನು ರಾಜಸೂಯಯಾಗವನ್ನು ಮಾಡಲು ಬಯಸಿದ್ದೇನೆ. ಅಚ್ಯುತನೇ ಅದನ್ನು ಕೇವಲ ತನ್ನ ಇಚ್ಛೆಯಿಂದ ಯಾವನೂ ಸಾಸಲಾಗುವುದಿಲ್ಲ ಎಂದು ನೀನು ತಿಳಿದಿದ್ದೀಯೆ.
ಯಸ್ಮಿನ್ ಸರ್ವಂ ಸಂಭವತಿ ಯದಾ ಸರ್ವೇಶ ಉಚ್ಯತೇ |
ರಾಜಸೂಯಾಭಿಷೇಕೋಽಯಂ ತದಾ ಸಾಮ್ರಾಜ್ಯಮಿಷ್ಯತೇ ॥27॥
ಯಾವನು ಎಲ್ಲಾ ಕರ್ಮವನ್ನೂ ಆಚರಿಸಿ ರಾಜಸೂಯಾಭಿಷೇಕವನ್ನು ಹೊಂದುವನೋ ಅವನು ಸರ್ವೇಶನೆನಿಸುತ್ತಾನೆ. ಅವನಿಗೆ ಸಾಮ್ರಾಜ್ಯ ಪದವಿಯೂ ದೊರೆಯುತ್ತದೆ.
ತಂ ರಾಜಸೂಯಂ ಸುಹೃದಃ ಪ್ರಾಪ್ಯಮಾಹುಃ ಸಮೇತ್ಯ ಮಾಮ್ |
ತತ್ರ ಮೇ ನಿಶ್ಚಿತಾ ಬುದ್ಧಿಸ್ತವ ಕೃಷ್ಣ ಗಿರಾ ಭವೇತ್ ॥28॥
ನನ್ನ ಬಂಧುಗಳು ನನ್ನ ಬಳಿಗೆ ಬಂದು ನೀನು ರಾಜಸೂಯವನ್ನು ಮಾಡಲು ಅರ್ಹನಾಗಿದ್ದೀಯೆ ಎಂದು ಹೇಳುತ್ತಿದ್ದಾರೆ. ಕೃಷ್ಣನೇ! ನಿನ್ನ ಮಾತಿನಿಂದ ಮಾತ್ರ ನನಗೆ ನಿಶ್ಚಯವುಂಟಾಗುತ್ತದೆ.
ಕೇಚಿದ್ಧಿ ಸೌಹೃದಾದೇವ ದೋಷಂ ನ ಪರಿಚಕ್ಷತೇ |
ಅರ್ಥಹೇತೋಸ್ತಥಾ ಚಾನ್ಯೇ ಪ್ರಿಯಮೇವ ವದಂತ್ಯುತ ॥29॥
ಕೆಲವರು ಸ್ನೇಹವಿರುವ ಕಾರಣದಿಂದಲೇ ದೋಷವನ್ನು ಹೇಳುವುದಿಲ್ಲ. ಇನ್ನು ಕೆಲವರು ಧನಲಾಭದ ಕಾರಣದಿಂದಾಗಿ ಪ್ರಿಯವಾಗಿಯೇ ಮಾತನಾಡುತ್ತಾರೆ.
ಪ್ರಿಯಮೇವ ಪ್ರತೀಕ್ಷಂತೇ ಕೇಚಿನ್ನಾತ್ಮನಿ ಯದ್ಧಿತಮ್ |
ಏವಂ ಪ್ರಾಯಃ ಪ್ರದೃಶ್ಯಂತೇ ಜನವಾದಾಃ ಪ್ರಯೋಜನೇ ॥30॥
ಕೆಲವರು ತಮಗೆ ಪ್ರಿಯವಾದುದನ್ನು  ನಿರೀಕ್ಷಿಸುತ್ತಾರೆ.ತಮಗೆ ಹಿತವಾದುದನ್ನು ನಿರೀಕ್ಷಿಸುವುದಿಲ್ಲ. ಹೀಗೆ ಜನರ ಮಾತುಗಳು ಹೆಚ್ಚಾಗಿ ತಮ್ಮ ಪ್ರಯೋಜನದ ಉದ್ದೇಶದಿಂದ ಕೂಡಿರುತ್ತವೆ.
ತ್ವಂ ತು ಸರ್ವಾನತೀತ್ಯೈತಾನ್ ಕಾಮಂ ಕ್ರೋಧಮತೀತ್ಯ ಚ |
ಪರಮಂ ನಃ ಕ್ಷಮಂ ಕಾಲೇ ಯಥಾವದ್ ವಕ್ತುಮರ್ಹಸಿ ॥31॥
ನೀನಾದರೋ ಇವೆಲ್ಲವನ್ನೂ ಮತ್ತು ಕಾಮಕ್ರೋಧಗಳನ್ನೂ ಮೀರಿ ನಮಗೆ ಈ ಕಾಲದಲ್ಲಿ ಯಾವುದು ಯೋಗ್ಯವಾದುದೆಂದು ಯಥಾರ್ಥವಾಗಿ ಹೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುರ್ದಶೋಽಧ್ಯಾಯಃ ॥
॥ ಮಂತ್ರಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ  ಮಹಾಭಾರತದ ಸಭಾಪರ್ವದಲ್ಲಿ  ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಕ್ರತುರ್ಯಥಾವಿಧಾನತಃ ಕೃತೋ ಹಿ ಪಾರಮೇಷ್ಠ್ಯಕಂ |
ಪದಂ ನಯೇತ ತತ್ಪದೇ ಸುಯೋಗ್ಯಮೇಷ ನಾನ್ಯಥಾ ॥82॥
ವಿಧ್ಯುಕ್ತವಾಗಿ ಈ ಯಾಗವನ್ನು ಮಾಡಿದರೆ ಮಾತ್ರ ಅದು ಬ್ರಹ್ಮಪದವಿಯನ್ನೂ ಕೊಡಬಲ್ಲದು. ಇಲ್ಲದಿದ್ದರೆ ಇಲ್ಲ. ಅದೂ ಆ ಪದವಿಗೆ ಯೋಗ್ಯನಾದವನಿಗೆ ಮಾತ್ರ. ಅಯೋಗ್ಯನಿಗೆ ಅಲ್ಲ.
ಅಯೋಗ್ಯಕಾಮ್ಯಹಾಪದೇ ವಿಧಾತುರೇಷ ಹಿ ಕ್ರತುಃ |
ಸಮಾನಯೋಗ್ಯತಾಗಣಾತ್ ಕರೋತಿ ಮುಕ್ತಿಗಂ ವರಂ ॥83॥
ಬ್ರಹ್ಮನ ಆ ಮಹಾಪದವಿಗೆ ಅನರ್ಹನು ಮಾಡುವ ಈ ಯಾಗ ಅವನನ್ನು ಮುಕ್ತಿಯಲ್ಲಿ ತಮ್ಮ ಸಮಾನ ಯೋಗ್ಯತೆ ಉಳ್ಳ ಇತರರಿಗಿಂತ ಶ್ರೇಷ್ಠನನ್ನಾಗಿ ಮಾಡಬಲ್ಲದು.
ಪುರಾ ತು ಮುಕ್ತಿತೋಽಕಂ ಸ್ವಜಾತಿತಃ ಕರೋತಿ ಚ |
ಅತಸ್ತ್ರಿಶಂಕುಪುತ್ರಕೋ ನೃಪಾನತೀತ್ಯ ವರ್ತತೇ ॥84॥
ಮುಕ್ತಿಗಿಂತ ಮೊದಲು ಈ ಯಾಗ ಯಜಮಾನನನ್ನು ತನ್ನ ಸಮಾನ ಜಾತಿಯವರಿಗಿಂತ ಶ್ರೇಷ್ಠನನ್ನಾಗಿ ಮಾಡುತ್ತದೆ. ಅದರಿಂದಲೆ ಹರಿಶ್ಚಂದ್ರ ಎಲ್ಲ ರಾಜರಿಗಿಂತ ಮಿಗಿಲಾಗಿದ್ದಾನೆ.
ಸುರಾಂಶಕೋಽಪಿ ತೇ ಪಿತಾ ವಿನಾ ಹಿ ರಾಜಸೂಯತಃ |
ನ ಶಕ್ಷ್ಯತಿ ತ್ರಿಶಂಕುಜಾದ್ ವರತ್ವಮಾಪ್ತುಮದ್ಯ ತು ॥85॥
ನಿನ್ನ ತಂದೆಯಾದ ಪಾಂಡು ದೇವಾಂಶ ಸಂಭೂತನಾದರೂ ರಾಜಸೂಯ ಯಾಗವಿಲ್ಲದೆ ಹರಿಶ್ಚಂದ್ರನಿಗಿಂತ ಹೆಚ್ಚಿನ ಸ್ಥಾನ ಪಡೆಯಲು ಶಕ್ತನಾಗುವುದಿಲ್ಲ.
ತಪಶ್ಚರನ್ ಸಮಾಗತೇ ಶಚೀಪತೌ ಪಿತಾ ತವ |
ಮರುದ್ಗಣೋತ್ತಮಃ ಪುರಾ ನ ತೂತ್ಥಿತಃ ಶಶಾಪ ಸಃ॥86॥
ಏಕೆಂದರೆ ನಿನ್ನ ತಂದೆ ಹಿಂದೆ ಮೂಲರೂಪದಲ್ಲಿ ಮರುತ್ತುಗಳಲ್ಲಿ ಉತ್ತಮನಾದ ಪರಾವಹ. ಅವನು ತಪಸ್ಸು ಮಾಡುತ್ತಿದ್ದಾಗ ದೇವೇಂದ್ರ ಬಂದರೂ ಎದ್ದು ನಿಲ್ಲಲಿಲ್ಲ. ಅದರಿಂದ ದೇವೇಂದ್ರ ಶಪಿಸಿದ.
ವ್ರಜಸ್ವ ಮಾನುಷೀಂ ತನುಂ ತತೋ ಮೃತಃ ಪುನರ್ದಿವಂ |

ಗತೋऽಪಿ ನ ಸ್ವಕಾಂ ತನುಂ ಪ್ರವೇಷ್ಟುಮತ್ರ ನೇಶಸೇ |
ತದಾಕಸ್ತ್ರಿಶಂಕುಜೋ ಭವಿಷ್ಯತಿ ತ್ವದಿತ್ಯಥ ॥87॥
`ಮನುಷ್ಯ ಜನ್ಮ ಹೊಂದು, ಬಳಿಕ ಸತ್ತು ಸ್ವರ್ಗಕ್ಕೆ ಹೋದರೂ ನಿನ್ನ ಮೂಲ ರೂಪವನ್ನು ಪ್ರವೇಶಿಸಲು ಶಕ್ತನಾಗಲಾರೆ. ಆಗ ನಿನಗಿಂತಲೂ ಹರಿಶ್ಚಂದ್ರ ಶ್ರೇಷ್ಠನೆನಿಸುತ್ತಾನೆ' ಎಂದು.
ಕ್ಷಮಾಪಿತಶ್ಚ ವಾಸವೋ ಜಗಾದ ರಾಜಸೂಯತಃ |
ತ್ರಿಶಂಕುಜಾಕೋ ಭವಾನವಾಪ್ಸ್ಯತಿ ಸ್ವಕಾಂ ತನುಂ ॥88॥
ಪರಾವಹ ಕ್ಷಮೆ ಕೇಳಿದಾಗ ದೇವೇಂದ್ರ ನುಡಿದ, `ರಾಜಸೂಯಯಾಗದಿಂದ ನೀನು ಹರಿಶ್ಚಂದ್ರನಿಗಿಂತ ಮಿಗಿಲೆನಿಸುವೆ ಮತ್ತು ನಿನ್ನ ಮೂಲರೂಪವನ್ನು ಹೊಂದುವಿ'.
ಅತಃ ಸುಕಾರ್ಯ ಏವ ತೇ ಯುಷ್ಠಿರ ಕ್ರತೂತ್ತಮಃ |
ಭವದ್ಭಿರಪ್ಯವಾಪ್ಯತೇ ಸ್ವಯೋಗ್ಯತಾಮುನಾಖಿಲಾ ॥89॥
ಅದರಿಂದ ಧರ್ಮರಾಜ, ಈ ಶ್ರೇಷ್ಠವಾದ ರಾಜಸೂಯಯಾಗ ನಿನಗೆ ಉತ್ತಮ ಕಾರ್ಯವೆನಿಸುತ್ತದೆ. ನೀವೂ ಕೂಡ ಈ ಯಾಗದಿಂದ ನಿಮ್ಮ ಯೋಗ್ಯತಾನುಗುಣ ಫಲವನ್ನು ಪೂರ್ಣವಾಗಿ ಹೊಂದುವಿರಿ.
ಉದೀರ್ಯ ಚೈವಮೀಶ್ವರಃ ಕ್ರತೋರಮುಷ್ಯ ಯೋಗ್ಯತಾ |
ವೃಕೋದರೇ ಯತೋऽಖಿಲಾ ಚತುರ್ಮುಖತ್ವಯೋಗ್ಯತಾ ॥90॥
ತತಃ ಸುಪೂರ್ಣಮಸ್ಯ ತತ್ಫಲಂ ವಿಧಾತುಮಂಜಸಾ |
ಜಗಾದ ವಾಯುವಾಹನೋ ವಚೋ ಯುಷ್ಠಿರಂ ತ್ವಿದಂ ॥91॥
ರಾಜಸೂಯಯಾಗಕ್ಕೆ ಪೂರ್ಣ ಅರ್ಹತೆ ಇರುವುದು ಭೀಮಸೇನನಲ್ಲಿಯೆ. ಏಕೆಂದರೆ ಅವನಲ್ಲಿಯೆ ಬ್ರಹ್ಮಪದವಿಯ ಯೋಗ್ಯತೆ ಇದೆ. ಅದರಿಂದ ರಾಜಸೂಯದ ಪೂರ್ಣಫಲವಾದ ಬ್ರಹ್ಮಪದವಿಯನ್ನು ಭೀಮನಿಗೆ ಚೆನ್ನಾಗಿ ಕೊಡಿಸುವ ಉದ್ದೇಶದಿಂದ ವಾಯುವಾಹನನಾದ ಶ್ರೀಕೃಷ್ಣ ಧರ್ಮರಾಜನಿಗೆ ಈ ಮಾತನ್ನು ಹೇಳಿದ.
ಕ್ವರಾಜಸೂಯಮದ್ಯ ತೇ ಜರಾಸುತೇ ತು ಜೀವತಿ |
ಜಯೇತ್ಕ ಏವಂ ತಂ ಯುಧಾ ಮೃತೋ ನ ಯೋऽಪಿ ಸೀರಿಣಾ ॥
ಜರಾಸಂಧ ಬದುಕಿರುವಷ್ಟು ಕಾಲ ನಿನಗೆ ಈ ರಾಜಸೂಯಯಾಗ ಎಲ್ಲಿ ಕೈಗೂಡೀತು? ಯಾರು ತಾನೆ ಅವನನ್ನು ಗೆಲ್ಲಬಲ್ಲ? ಬಲರಾಮನಿಂದಲೂ ಯುದ್ಧದಲ್ಲಿ ಅವನು ಹತನಾಗಲಿಲ್ಲ.
ವಿರಿಂಚಶರ್ವವಾಕ್ಯತಃ ಸಮಸ್ತ ಲೋಕಜಾಯಿನಿ |
ಸ್ಥಿತೇ ತು ತೇ ಜರಾಸುತೇ ನ ಸೇತ್ಸ್ಯತಿ ಕ್ರತೂತ್ತಮಃ ॥93॥
ಬ್ರಹ್ಮರುದ್ರರ ವರದಿಂದ ಸಮಸ್ತ ಲೋಕವನ್ನು ಗೆದ್ದಿರುವ ಈ ಜರಾಸಂಧನಿರುವಷ್ಟು ಕಾಲ ನಿನಗೆ ಈ ಶ್ರೇಷ್ಠವಾದ ಯಾಗ ಕೈಗೂಡುವುದಿಲ್ಲ.
* * * *
ಹದಿನೈದನೆಯ ಅಧ್ಯಾಯ
(ಯುಷ್ಠಿರನ ಸನ್ನಿಯಲ್ಲಿ ಕೃಷ್ಣನಿಂದ ಜರಾಸಂಧನ ಶೌರ್ಯದ ವರ್ಣನೆ)
ಶ್ರೀಭಗವಾನ್
ಸರ್ವೈರ್ಗುಣೈರ್ಮಹಾರಾಜ ಸಮ್ರಾಡಸಿ ನ ಸಂಶಯಃ |
ಜಾನಂಸ್ತ್ವೇವ ಚ ತೇ ಸರ್ವಂ ವ್ಯಕ್ತಂ ವಕ್ಷ್ಯಾಮ್ಯಶೇಷತಃ ॥1॥
ಮಹಾರಾಜನೇ! ನೀನು ಎಲ್ಲಾ ಗುಣಗಳಿಂದಲೂ ಸಮ್ರಾಟ್ ಎನಿಸಿಕೊಳ್ಳಲು ಅರ್ಹನಾಗಿದ್ದೀಯೆ ಎಂಬುದರಲ್ಲಿ ಸಂಶಯವಿಲ್ಲ. ಆದರೂ ಎಲ್ಲಾ ವಿಷಯಗಳನ್ನು ತಿಳಿದು ನಿನಗೆ ಎಲ್ಲವನ್ನು ಸ್ಪಷ್ಟವಾಗಿ ಹೇಳುವೆನು.
ಜಾಮದಗ್ನ್ಯೇನ ರಾಮೇಣ ಕ್ಷತ್ರಂ ಯದವಶೇಷಿತಮ್ |
ತಸ್ಮಾದರಾಜಕೇ ಲೋಕೇ ಯದಿದಂ ಕ್ಷತ್ರಸಂಜ್ಞಿತಮ್ ॥2॥
ಕೃತೋऽಯಂ ಕುಲಸಂಕಲ್ಪಃ ಕ್ಷತ್ರಿಯೈರ್ವಸುಧಾಪ್ಯೈಃ |
ನಿದೇಶವಾಗ್ಭಿಸ್ತತ್ ತೇ ಹ ವಿದಿತಂ ಭರತರ್ಷಭ ॥3॥
ಜಮದಗ್ನಿಯ ಮಗನಾದ ಪರಶುರಾಮದೇವರು ಕ್ಷತ್ರಿಯರನ್ನು ಕೊಂದಮೇಲೆ, ಅಲ್ಪ ಕ್ಷತ್ರಿಯರು ಉಳಿದರು. ಬೇರೆ ಬೇರೆ ಕ್ಷತ್ರಿಯಕುಲದ ಅವರೆಲ್ಲರೂ ಸೇರಿ ಅರಾಜಕತೆಯನ್ನು ನಿವಾರಿಸಲು ಒಂದು ಕುಲಸಂಕಲ್ಪವನ್ನು ಮಾಡಿದರು. ಭರತರ್ಷಭನೇ! ಈ ವಿಷಯವು ಋಷಿಗಳ ಪುರಾಣರೂಪವಾದ ಮಾತುಗಳಿಂದ ನಿನಗೂ ತಿಳಿದಿದೆ.
ಉಳಿದ ಕ್ಷತ್ರಿಯರಲ್ಲಿ ಯಾವನು ಬಲಿಷ್ಠನಾಗಿ, ಉಳಿದೆಲ್ಲರನ್ನು ವಶಪಡಿಸಿಕೊಳ್ಳುತ್ತಾನೆಯೋ ಅವನೇ ರಾಜನಾಗುವನು ಎಂಬುದು ಆ ಕುಲದ ಸಂಕಲ್ಪ.
ಐಲಸ್ಯೇಕ್ಷ್ವಾಕುವಂಶಸ್ಯ ಚ ಪ್ರಕೃತಿಂ ಪರಿಚಕ್ಷತೇ |
ರಾಜಾನಃ ಶ್ರೇಣಿಬದ್ಧಾಶ್ಚ ತತೋऽನ್ಯೇ ಕ್ಷತ್ರಿಯಾ ಭುವಿ ॥4॥
ಇಕ್ಷ್ವಾಕುವಿನ ಕನ್ಯಾವಂಶದಲ್ಲಿ ಜನಿಸಿದ ಐಲನಾದ ಪುರೂರವನನ್ನು, ಸೋಮವಂಶದ ಮೂಲಪುರುಷನೆಂದು ಹೇಳುತ್ತಾರೆ. ಭೂಮಿಯಲ್ಲಿ ಇರುವ ಎಲ್ಲರಾಜರೂ ಕ್ಷತ್ರಿಯರೂ ಸೇನಾನಿಗಳೂ ಆ ಮೂಲವಂಶದವರೇ ಆಗಿದ್ದಾರೆ.
ಐಲವಂಶ್ಯಾಸ್ತು ತೇ ರಾಜನ್ ತಥೈವೇಕ್ಷ್ವಾಕವೋ ನೃಪಾಃ |
ತಾನಿ ಚೈಕಶತಂ ವಿದ್ಧಿ ಕುಲಾನಿ ಭರತರ್ಷಭ ॥5॥

ರಾಜನೇ! ಆದ್ದರಿಂದ ಆ ಕ್ಷತ್ರಿಯರು ಐಲವಶಂಕ್ಕೂ ಸೇರಿದವರು. ಮತ್ತು ಇಕ್ಷ್ವಾಕುವಂಶಕ್ಕೂ ಸೇರಿದವರು. ಭರತರ್ಷಭನೇ! ಅಂತಹ ರಾಜಕುಲಗಳು ನೂರೊಂದು ಇವೆ.
ಯಯಾತೇಸ್ತ್ವೇವ ವಂಶ್ಯಾನಾಂ ವಿಸ್ತರೋ ದ್ವಿಗುಣೋ ಮಹಾನ್ |
ಭ್ರಾಜತೇ ವೈ ಮಹಾರಾಜ ಚತುರ್ಧಾ ತು ಯಥಾದಿಶಮ್ |
ತೇಷಾಂ ತಥೈವ ತಾಂ ಲಕ್ಷ್ಮೀಂ ಸರ್ವತ್ರ ಸಮುಪಾಸತೇ ॥6॥
ಯಯಾತಿಯೊಬ್ಬನ ವಂಶವೇ ಇದರ ಎರಡರಷ್ಟು ದೊಡ್ಡ ವಿಸ್ತಾರವನ್ನು ಹೊಂದಿದೆ. ಮಹಾರಾಜನೇ! ಆ ವಂಶವು ನಾಲ್ಕು ಕವಲುಗಳಾಗಿ ಒಡೆದು ನಾಲ್ಕು ದಿಕ್ಕುಗಳಲ್ಲಿಯೂ ಹಬ್ಬಿದೆ. ರಾಜಕುಲಗಳು ಈ ಯಯಾತಿಕುಲಗಳ ಸಂಪತ್ತನ್ನೇ ಆಶ್ರಯಿಸಿಕೊಂಡಿವೆ.
ಇದಾನೀಮೇವ ವೈ ರಾಜನ್ ಜರಾಸಂಧೋ ಮಹೀಪತಿಃ |
ಅಭಿಭೂಯ ಪ್ರಿಯಂ ತೇಷಾಂ ಕುಲಾನಾಮಭಿಷೇಚಿತಃ ॥7॥
ರಾಜನೇ! ಈಗಷ್ಟೇ ಮಹೀಪತಿಯಾದ ಜರಾಸಂಧನು ಆ ಎಲ್ಲಾ ಕುಲಗಳನ್ನೂ ಮೆಟ್ಟಿ ಅವರಿಗೆ ಅಪ್ರಿಯವಾದರೂ ಸಹ ಎಲ್ಲ ಕುಲಗಳ ಒಡೆಯನಾಗಿ ಅಭಿಷೇಕಮಾಡಲ್ಪಟ್ಟಿದ್ದಾನೆ.
ಸ್ಥಿತೋ ಮೂರ್ಧ್ನಿ ನರೇಂದ್ರಾಣಾಮೋಜಸಾಽಽಕ್ರಮ್ಯ ಸರ್ವಶಃ |
ಸೋಽವನೀಂ ಮಧ್ಯಮಾಂ ಭುಕ್ತ್ವಾ ಮಿಥೋ ಭೇದೇಷ್ವಮನ್ಯತ ॥8॥
ಅವನು ತನ್ನ ಪರಾಕ್ರಮದಿಂದ ಎಲ್ಲರನ್ನೂ ತುಳಿದು ಎಲ್ಲ ರಾಜರ ತಲೆಯನ್ನು ಮೆಟ್ಟಿ ಮಧ್ಯಪ್ರದೇಶವನ್ನು ಆಶ್ರಯಿಸಿ ಉಳಿದ ರಾಜರಿಗೆ ಪರಸ್ಪರ ಭೇದವನ್ನು ಉಂಟುಮಾಡುತ್ತಾ ಬಲಿಷ್ಠನಾಗಿದ್ದಾನೆ.
ಚತುರಂಗಬಲೋ ರಾಜಾ ಯಸ್ಮಿನ್ನೇಕಶತಂ ಭವೇತ್ |
ತತ್ಸಾಮ್ರಾಜ್ಯಂ ಜರಾಸಂಧಃ ಪ್ರಾಪ್ತೋ ಭವತಿ ಯೋನಿತಃ ॥9॥
ಆ ರಾಜನಿಗೆ ಚತುರಂಗಬಲವಿದೆ. ನೂರೊಂದು ಜನ ಯಯಾತಿವಂಶದಲ್ಲಿ ಬಂದ ರಾಜರು ಅನುಭವಿಸಬೇಕಾಗಿದ್ದ ಸಾಮ್ರಾಜ್ಯವನ್ನು ಜರಾಸಂಧನು ತನ್ನ ಪರಾಕ್ರಮದಿಂದ ತಾನು ಹುಟ್ಟಿದಾಗಿನಿಂದಲೂ ಅನುಭವಿಸುತ್ತಿದ್ದಾನೆ.
ತಂ ತು ರಾಜಾ ಮಹಾರಾಜ ಸಂಶ್ರಿತಃ ಕಿಲ ಸರ್ವಶಃ |
ರಾಜನ್ ಸೇನಾಪತಿರ್ಜಾತಃ ಶಿಶುಪಾಲಃ ಪ್ರತಾಪವಾನ್ ॥10॥
ಮಹಾರಾಜನೇ! ಪ್ರತಾಪಶಾಲಿಯಾದ ಶಿಶುಪಾಲನೆಂಬುವನು ಜರಾಸಂಧನನ್ನು ಸರ್ವಪ್ರಕಾರಗಳಿಂದಲೂ ಆಶ್ರಯಿಸಿ ಅವನ ಸೇನಾಪತಿಯಾಗಿದ್ದಾನೆ.
ತಮೇವ ಚ ಮಹಾರಾಜ ಶಿಷ್ಯವತ್ ಸಮುಪಸ್ಥಿತಃ |
ವಕ್ರಃ ಕರೂಶಾಪತಿರ್ಮಾಯಾಯೋಧೀ ಮಹಾಬಲಃ ॥11॥
ಮಹಾರಾಜನೇ! ಮಾಯಾಯೋಧಿಯೂ ಮಹಾಬಲವುಳ್ಳವನೂ ಕುಟಿಲಸ್ವಭಾವದವನೂ ಆದ ಕರೂಶಾಪತಿಯಾದ ದಂತವಕ್ರನೂ ಶಿಷ್ಯನಂತೆ ಅವನನ್ನೇ ಆಶ್ರಯಿಸಿದ್ದಾನೆ.
ಅಪರೌ ಚ ಮಹಾತ್ಮಾನೌ ಬಲವೀರ್ಯಪರಿಶ್ರುತೌ |
ಜರಾಸಂಧಂ ಸಮಾಶ್ರಿತ್ಯ ತಂ ಹಂಸಡಿಭಕಾವುಭೌ ॥12॥
ತಮ್ಮ ಬಲವೀರ್ಯಗಳಿಂದ ಪ್ರಸಿದ್ಧರಾದ ಮಹಾಪರಾಕ್ರಮಿಗಳಾದ ಹಂಸ ಡಿಬಕ ಎಂಬ ಇನ್ನಿಬ್ಬರು ಜರಾಸಂಧನನ್ನು ಆಶ್ರಯಿಸಿದ್ದಾರೆ.
ದಂತವಕ್ರಃ ಕರೂಶಶ್ಚ ಕಲಭೋ ಮೇಘವಾಹನಃ |
ಮೂರ್ಧ್ನಿ ದಿವ್ಯಂ ಮಣಿಂ ಬಿಭ್ರದ್ ಯಂ ತಂ ಭೂತಮಣಿಂ ವಿದುಃ ॥
ದಂತವಕ್ರ, ಕರೂಶ, ಕಲಭ, ತಲೆಯಮೇಲೆ ಮಣಿಯನ್ನು ಧರಿಸಿ ಭೂತಮಣಿಯೆಂದು ಕರೆಯಲ್ಪಡುವ ಮೇಘವಾಹನ ಇವರೆಲ್ಲರೂ ಜರಾಸಂಧನನ್ನು ಆಶ್ರಯಿಸದ್ದಾರೆ.
ಮುರಂ ಚ ಯವನಂ ಚೈವ ಶಾಸ್ತಿ ಯೋ ಯವನಾವುಭೌ |
ಅಪರ್ಯಂತಬಲೋ ರಾಜಾ ಪ್ರತೀಚ್ಯಾಂ ವರುಣೋ ಯಥಾ ॥14॥
ಆ ಮೇಘವಾಹನನು ಅಪರ್ಯಂತಬಲವುಳ್ಳವನಾಗಿ ಮುರ ಮತ್ತು ಯವನ ಎಂಬ ಇಬ್ಬರು ಯವನರನ್ನು ಸೋಲಿಸಿ ಪಶ್ಚಿಮದಿಕ್ಕಿನಲ್ಲಿ ವರುಣನಂತೆ ಮೆರೆಯುತ್ತಿದ್ದಾನೆ.
ಭಗದತ್ತೋ ಮಹಾರಾಜಃ ವೃದ್ಧಸ್ತವ ಪಿತುಃ ಸಖಾ|
ಸ ಚಾಪಿ ಪ್ರಣತಸ್ತಸ್ಯ ಕರ್ಮಣಾ ಚೈವ ಭಾರತ |
ಸ್ನೇಹಬದ್ಧಸ್ತು ಪಿತೃವನ್ಮನಸಾ ಭಕ್ತಿಮಾಂಸ್ತ್ವಯಿ ॥15॥
ಮಹಾರಾಜನೇ! ಭಾರತನೇ! ವೃದ್ಧನಾದ ಭಗದತ್ತಮಹಾರಾಜನು ನಿನ್ನ ತಂದೆಯಸ್ನೇಹಿತ. ಅವನೂ ಸಹ ಜರಾಸಂಧನಿಗೆ ವಶನಾಗಿ ಅವನ ಕೈಂಕರ್ಯವನ್ನು ಮಾಡುತ್ತಾನೆ. ಆದರೆ ಅವನು ಮನಸ್ಸಿನಲ್ಲಿ ಮಾತ್ರ ನಿನ್ನ ತಂದೆಯಲ್ಲಿ ಸ್ನೇಹವನ್ನು ಇಟ್ಟಿದ್ದಂತೆ ನಿನ್ನಲ್ಲಿಯೂ ಸ್ನೇಹವನ್ನು ಹೊಂದಿದ್ದಾನೆ.
ಪ್ರತೀಚ್ಯಾಂ ದಕ್ಷಿಣಸ್ಯಾಂ ಚ ಪೃಥಿವೀಂ ಪಾಂತಿ ಯೇ ನೃಪಾಃ |
ತೇ ಚಾಪಿ ಪ್ರಣತಾಸ್ತಸ್ಯ ಮಹಾತ್ಮನೋ ಭಯಾರ್ದಿತಾಃ ॥16॥
ದಕ್ಷಿಣದಿಕ್ಕಿನಲ್ಲಿಯೂ ಮತ್ತು ಪಶ್ಚಿಮದಿಕ್ಕಿನಲ್ಲಿಯೂ ಇರುವ ಭೂಮಿಯನ್ನುಪಾಲಿಸುವ ಮಹಾತ್ಮರಾದ ರಾಜರುಗಳೂ ಕೂಡ, ಜರಾಸಂಧನ ಭಯದಿಂದ ನಡುಗಿ ಅವನಿಗೆ ಪ್ರಣತರಾಗಿದ್ದಾರೆ.
ಮಾತುಲೋ ಭವತಃ ಶೂರಃ ಪುರುಜಿತ್ ಕುಂತಿವರ್ಧನಃ |

ಸ ತೇ ಸನ್ನತಿಮಾನೇಕಃ ಸ್ನೇಹತಃ ಶತ್ರುತಾಪನಃ ॥17॥
ಆದರೆ ನಿನ್ನ ಸೋದರಮಾವನಾದ ಶೂರನೂ ಕುಂತಿವರ್ಧನನೂ ಶತ್ರುಸಂಹಾರಕನೂ ಆದ ಪುರುಜಿತ್ ರಾಜನು ಮಾತ್ರ ನಿನ್ನಲ್ಲಿ ಸ್ನೇಹವನ್ನುಹೊಂದಿ ನಿನ್ನಲ್ಲಿ ನಿಷ್ಠೆಯನ್ನು ಹೊಂದಿದ್ದಾನೆ.
ಜರಾಸಂಧಂ ಗತಸ್ತ್ವೇವ ಪುರಾ ಯೋ ನ ಹತೋ ಮಯಾ |
ಪುರುಷೋತ್ತಮವಿಜ್ಞಾತೋ ಯೋಽಸೌ ಚೇದಿಷು ದುರ್ಮತಿಃ ॥18॥
ಆತ್ಮಾನಂ ಪ್ರತಿಜಾನೀತೇ ಲೋಕೇಽಸ್ಮಿನ್ ಪುರುಷೋತ್ತಮಮ್ |
ಆದತ್ತೇ ಸತತಂ ಮೋಹಾದ್ ಯಃ ಸ ಚಿಹ್ನಂ ಚ ಮಾಮಕಮ್ ॥19॥
ವಂಗಪುಂಡ್ರಕಿರಾತೇಷು ರಾಜಾ ಸಬಲವಾಹನಃ |
ಪೌಂಡ್ರಕೋ ವಾಸುದೇವೇತಿ ಯೋಽಸೌ ಲೋಕೇಷು ವಿಶ್ರುತಃ ॥20॥
ಹಿಂದೆ ನಾನು ಸಂಹರಿಸದೆ ಬಿಟ್ಟ ಚೇದಿರಾಜನಾದ ದುಷ್ಟನಾದ ಪೌಂಡ್ರಕನು ತಾನೇ ಪುರುಷೋತ್ತಮನೆಂದು ತಿಳಿದು ಜರಾಸಂಧನನ್ನು ಆಶ್ರಯಿಸಿದ್ದಾನೆ. ಅವನು ತಾನೇ ಪುರುಷೋತ್ತಮನೆಂದು ಯಾವಾಗಲೂ ಘೋಷಣೆಯನ್ನು ಮಾಡುತ್ತಾ ಮೋಹದಿಂದ ನನ್ನ ಚಿಹ್ನೆಗಳಾದ ಶಂಖ ಚಕ್ರಗಳನ್ನು ಧರಿಸಿದ್ದಾನೆ. ಅವನು ಸೈನ್ಯದಿಂದಲೂ ರಥಗಳಿಂದಲೂ ಕೂಡಿದವನಾಗಿ ವಂಗ ಪುಂಡ್ರ ಕಿರಾತ ದೇಶಗಳನ್ನು ಆಳುತ್ತಾ ಪೌಂಡ್ರಕವಾಸುದೇವನೆಂದು ಲೋಕದಲ್ಲಿ ಖ್ಯಾತಿಯನ್ನು ಪಡೆದಿದ್ದಾನೆ.
ಚತುರ್ಬಾಹುರ್ಮಹಾರಾಜ ಭೋಗ ಇಂದ್ರಸಮೋ ಬಲೀ |
ವಿದ್ಯಾಭುಜಬಲೋದ್ಯೋಗೈರಜಯತ್ ಪಾಂಡ್ಯಕೇಕಯಾನ್ ॥21॥
ಮಹಾರಾಜನೇ! ಅವನು ನಾಲ್ಕು ಬಾಹುಗಳನ್ನು ಉಳ್ಳವನು. ಬಲದಲ್ಲಿ ಇಂದ್ರನಿಗೆ ಸಮಾನನಾಗಿದ್ದಾನೆ. ತನ್ನ ವಿದ್ಯೆ ಭುಜಬಲ ಮತ್ತು ಪ್ರಯತ್ನಗಳಿಂದ ಪಾಂಡ್ಯ ಕೇಕಯ ರಾಜರುಗಳನ್ನು ಗೆದ್ದಿದ್ದಾನೆ.
ಭ್ರಾತಾ ಯಸ್ಯಾಕೃತಿಃ ಶೂರೋ ಜಾಮದಗ್ನ್ಯಸಮೋ ಯು |
ಸ ಭಕ್ತೋ ಮಾಗಧಂ ರಾಜಾ ಭೀಷ್ಮಕಃ ಪರವೀರಹಾ ॥22॥
ಪರಾಕ್ರಮದಲ್ಲಿ ಪರಶುರಾಮನಿಗೆ ಸಮನಾದ ಪರಸೈನ್ಯವನ್ನು ನಾಶಮಾಡುವ ಭೀಷ್ಮಕರಾಜನೂ ಸಹ ತನ್ನ ತಮ್ಮನಾದ ಆಕೃತಿಯೊಡನೆ ಜರಾಸಂಧನಿಗೆ ಶರಣಾಗತನಾಗಿದ್ದಾನೆ.
ಪ್ರಿಯಾಣ್ಯಾಚರತಃ ಪ್ರಹ್ವಾನ್ ಅಸ್ಮಾನ್ ಸಂಬಂನಸ್ತಥಾ |
ಭಜತೋ ನ ಭಜತ್ಯಸ್ಮಾನ್ ಮಾ ಪ್ರಿಯೇಷು ವ್ಯವಸ್ಥಿತಃ ॥23॥
ಭೀಷ್ಮಕನು ನಮ್ಮ ಕುಲದ ಹಿರಿಯನಾದ್ದರಿಂದ ನಾವು ಅವನಿಗೆ ಸಂಬಂಕರಾಗಿ ವಿನಯದಿಂದ ಅವನಿಗೆ ಪ್ರಿಯವನ್ನೇ ಆಚರಿಸುತ್ತಿದ್ದರೂ ಅವನು ಜರಾಸಂಧನಿಗೆ ಹೆದರಿ ನಮ್ಮಲ್ಲಿ ಅನುರಾಗವನ್ನು ಹೊಂದದೆ ನಮಗೆ ಪ್ರಿಯವಾದ ಯಾವುದೇ ಕಾರ್ಯವನ್ನು ಮಾಡುತ್ತಿಲ್ಲ.
ನ ಕುಲಂ ನ ಬಲಂ ರಾಜನ್ನಭಿಜ್ಞಾನಂ ತಥಾಽಽತ್ಮನಃ |
ಪಶ್ಯಮಾನೋ ಯಶೋ ದೀಪ್ತಂ ಜರಾಸಂಧಮುಪಾಶ್ರಿತಃ ॥24॥
ಭೀಷ್ಮಕನು ತನ್ನ ಕುಲವನ್ನಾಗಲೀ ತನ್ನ ಬಲವನ್ನಾಗಲೀ ಅಥವಾ ತನ್ನ ದೀಪ್ತವಾದ ಕೀರ್ತಿಯನ್ನಾಗಲೀ ಗಮನಿಸದೆ ಜರಾಸಂಧನಿಗೆ ಶರಣಾಗತನಾಗಿದ್ದಾನೆ.
ಉದೀಚ್ಯಾಶ್ಚೈವ ಭೋಜಾಶ್ಚ ಕುಲಾನ್ಯಷ್ಟಾದಶಾಭಿಭೋ |
ಜರಾಸಂಧಭಯಾದೇವ ಪ್ರತೀಚೀಂ ದಿಶಮಾಶ್ರಿತಃ ॥25॥
ಶತ್ರುಗಳನ್ನು ಸೋಲಿಸುವ ಸ್ವಭಾವವುಳ್ಳ ಧರ್ಮರಾಜನೇ ಉತ್ತರದಿಕ್ಕಿನಲ್ಲಿ ಇರುವ ಭೋಜವಂಶಕ್ಕೆ ಸೇರಿದ ಹದಿನೆಂಟು ಕುಲಗಳು ಜರಾಸಂಧನ ಭಯದಿಂದ ಉತ್ತರದಿಕ್ಕನ್ನು ಬಿಟ್ಟು ಪಶ್ಚಿಮದಿಕ್ಕಿನಲ್ಲಿ ನೆಲೆಸಿವೆ.
ಶೂರಸೇನಾ ಭದ್ರಕರಾ ಯೌಧಾಃ ಸಾಲ್ವಾ ಪಟಚ್ಚರಾಃ |
ಸುಸ್ಥಿರಾಶ್ಮವಿಘಟ್ಟಾಶ್ಚ ಕುಣಿಂದಾಃ ಕುಂತಿಭಿಃ ಸಹ ॥26॥
ಸಾಲ್ವೇಯಾನಾಂ ಚ ರಾಜಾಽಽಸೀತ್ ಸಾಮಾತ್ಯೋಽನುಚರೈಃ ಸಹ |
ದಕ್ಷಿಣಾ ಯೇ ಚ ಪಂಚಾಲಾಃ ಪೂರ್ವಾಃ ಕುಂತಿಷು ಮಾಲವಾಃ ॥
ತ ಉತ್ತರಾಂ ದಿಶಂ ಚಾಪಿ ಪರಿತ್ಯಜ್ಯ ಭಯಾರ್ದಿತಾಃ |
ಮತ್ಸ್ಯಾಃ ಸನ್ನ್ಯಸ್ತಪಾದಾಶ್ಚ ಪಶ್ಚಿಮಾಂ ದಿಶಮಾಸ್ಥಿತಾಃ ॥27॥
ಶೂರಸೇನರೂ ಭದ್ರಕರರೂ ಯೌಧರೂ ಸಾಲ್ವರೂ ಪಟಚ್ಚಕರೂ ಸುಸ್ಥಿರರೂ. ಅಶ್ಮವಿಘಟ್ಟಕರರೂ ಕುಣಿಂಧರೂ ಕುಂತಿಗಳೂ ಸಾಲ್ವೆಯರಾಜ ಅವನ ಮಂತ್ರಿಗಳೂ ಮತ್ತು ಅನುಚರರೂ ದಕ್ಷಿಣಪಾಂಚಾಲರೂ ಪೂರ್ವಕುಂತಿಗಳೂ ಮಾಳವರೂ ಮತ್ಸ್ಯರೂ ಸನ್ಯಸ್ತಪಾದರೂ ಇವರೆಲ್ಲರೂ ಜರಾಸಂಧನ ಭಯದಿಂದ ನಡುಗಿ ಉತ್ತರದಿಕ್ಕನ್ನು ಬಿಟ್ಟು ಪಶ್ಚಿಮ ದಿಕ್ಕಿನಲ್ಲಿ ಬಂದು ನೆಲೆಸಿದ್ದಾರೆ.
ತಥೈವ ಸರ್ವಪಾಂಚಾಲಾ ಜರಾಸಂಧಭಯಾರ್ದಿತಾಃ |
ಸ್ವರಾಷ್ಟ್ರಂ ಸಂಪರಿತ್ಯಜ್ಯ ವಿದ್ರುತಾಃ ಸರ್ವತೋದಿಶಮ್ ॥28॥
ಹಾಗೆಯೇ ಎಲ್ಲ ಪಾಂಚಾಲರೂ ಜರಾಸಂಭ ಭಯದಿಂದ ಪೀಡಿತರಾಗಿ ತಮ್ಮ ರಾಷ್ಟ್ರವನ್ನು ಪರಿತ್ಯಜಿಸಿ ದಿಕ್ಕು ದಿಕ್ಕುಗಳಿಗೆ ಓಡಿಹೋಗಿದ್ದಾರೆ.
ಅಗ್ರತೋ ಹ್ಯಸ್ಯ ಪಾಂಚಾಲಾ ತತ್ರಾನೀಕೇ ಮಹಾತ್ಮನಃ |
ಅನಿರ್ಗತೇ ಸಾರಬಲೇ ಮಾಗಧೇಭ್ಯೋ ಗಿರಿವ್ರಜಾತ್ ॥29॥
ಮಹಾಪ್ರಯತ್ನಶಾಲಿಯಾದ ಜರಾಸಂಧನ ಶ್ರೇಷ್ಠವಾದ ಸೈನ್ಯವು ಮಗಧದೇಶದಲ್ಲಿ ರಾಜದಾನಿಯಾದ ಗಿರಿವ್ರಜದಿಂದ

ಹೊರಡುವುದಕ್ಕೆ ಮೊದಲೇ ಪಾಂಚಾಲರು ಓಡಿಹೋಗಿದ್ದಾರೆ.
ಉಗ್ರಸೇನಸುತಃ ಕಂಸಃ ಪುರಾ ನಿರ್ಮಥ್ಯ ಬಾಂಧವಾನ್ |
ಬಾರ್ಹದ್ರುಥಸುತೇ ದಿವ್ಯೇ ಉಪಾಗಚ್ಛದ್ ವೃಥಾಮತಿಃ |
ಅಸ್ತಿಪ್ರಾಸ್ತೀ ಚ ತೇ ನಾಮ್ನಾ ಸಹದೇವಾನುಜೇಽಬಲೇ ॥30॥
ಉಗ್ರಸೇನನ ಮಗನಾದ ಕಂಸನು ತನ್ನ ಎಲ್ಲಾ ಬಂಧುಗಳನ್ನೂ ಹಿಂಸಿಸಿ ದುಷ್ಟಬುದ್ಧಿಯುಳ್ಳವನಾಗಿ ಜರಾಸಂಧನ ಇಬ್ಬರು ಹೆಣ್ಣುಮಕ್ಕಳಾದ ಅಸ್ತಿ ಪ್ರಾಸ್ತಿ ಎಂಬ ಸುಂದರಿಯರನ್ನು ವಿವಾಹವಾದನು. ಅವರಿಬ್ಬರೂ ಜರಾಸಂಧನ ಮಗನಾದ ಸಹದೇವನ ಸಹೋದರಿಯರು.
ಬಲೇನ ತೇನ ಸ್ವಜ್ಞಾತೀನ್ ಅಭಿಭೂಯ ವೃಥಾಮತಿಃ |
ಶ್ರೈಷ್ಠ್ಯಂ ಪ್ರಾಪ್ತಃ ಸ ತಸ್ಯಾಸೀದ್ ಇತಿ ಚಾಪನಯೋ ಮಹಾನ್ ॥31॥
ದುಷ್ಟಬುದ್ಧಿಯುಳ್ಳವನಾದ ಕಂಸನು ಜರಾಸಂಧನ ಬಲದಿಂದ ತನ್ನ ಬಂಧುಗಳೆಲ್ಲರನ್ನೂ ಮೆಟ್ಟಿನಿಂತು ಶ್ರೇಷ್ಠತ್ವವನ್ನು ಪಡೆದು, ಜರಾಸಂಧನ ಪಕ್ಷವನ್ನು ಅಲಂಬಿಸಿದ್ದಾನೆ ಎಂಬುದು ಇನ್ನೊಂದು ದೊಡ್ಡ ಅನರ್ಥವಾಗಿದೆ.
ಭೋಜರಾಜನ್ಯವೃದ್ಧೈಸ್ತು ಪೀಡ್ಯಮಾನೈರ್ದುರಾತ್ಮನಾ |
ಜ್ಞಾತಿತ್ರಾಣಮಭೀಪ್ಸದ್ಭಿರಸ್ಮತ್ಸಂಭಾವನಾ ಕೃತಾ |
ಸಂಕರ್ಷಣದ್ವಿತೀಯೇನ ಜ್ಞಾತಿತ್ರಾಣಂ ಮಯಾ ಕೃತಮ್ ॥32॥
ಆ ದುರಾತ್ಮನಿಂದ ಪೀಡಿತರಾದ ಭೋಜವಂಶದ ಕಿರಿಯರು ಬಾಂಧವರ ರಕ್ಷಣೆಯನ್ನು ಬಯಸಿ ನನ್ನನ್ನು ಉಪಸತ್ತಿಮಾಡಿದಾಗ, ನಾನು ಬಲರಾಮನ ಜೊತೆಯಲ್ಲಿ ಹೋಗಿ ಕಂಸನನ್ನು ಕೊಂದು ಬಂಧುಗಳ ರಕ್ಷಣೆಯನ್ನು ಮಾಡಿದೆನು.
ದತ್ತ್ವಾಽಕ್ರೂರಾಯ ಸುತನುಮಾಹುಕಸ್ಯ ಸುತಾಂ ತದಾ |
ಹತೌ ಕಂಸಸುನಾಮಾನೌ ಮಯಾ ರಾಮೇಣ ಚಾಪ್ಯುತ ॥33॥
ಆಹುಕನ ಮಗಳಾದ ಸುತನು ಎಂಬ ಕನ್ಯೆಯನ್ನು ಅಕ್ರೂರನಿಗೆ ಕೊಟ್ಟು ವಿವಾಹವನ್ನು ಮಾಡಿ ನಾನು ಮತ್ತು ಬಲರಾಮನು ಹೋಗಿ ಕಂಸನನ್ನು (ಮತ್ತು ಸುನಾಮನನ್ನು) ಕೊಂದೆವು.
ಹತ್ವಾ ಕಂಸಂ ತಥೈವಾಜೌ ಜರಾಸಂಧಸ್ಯ ಬಿಭ್ಯತಃ |
ಮಯಾ ರಾಮೇಣ ಚಾನ್ಯತ್ರ ಜ್ಞಾತಯಃ ಪರಿಪಾಲಿತಾಃ ॥34॥
ಹಾಗೆ ಕಂಸನನ್ನು ಕೊಂದು ಯುದ್ಧದಲ್ಲಿ ಜರಾಸಂಧನಿಗೆ ಹೆದರಿದ ನನ್ನ ಬಂಧುಗಳನ್ನು ನಾನು ಮತ್ತು ಬಲರಾಮನು ಬೇರೆಯ ಸ್ಥಳದಲ್ಲಿ ರಕ್ಷಣೆಯನ್ನು ಮಾಡಿದೆವು.
ಭಯೇ ತು ಸಮುಪಕ್ರಾಂತೇ ಜರಾಸಂಧೇ ಸಮುದ್ಯತೇ |
ಮಂತ್ರೋಽಯಂ ಮಂತ್ರಿತೋ ರಾಜನ್ ಕುಲೈರಷ್ಟಾದಶಾವರೈಃ ॥35॥
ರಾಜನೇ! ಜರಾಸಂಧನು ಹೀಗೆ ಬಲದಿಂದ ವಿಜೃಂಭಿಸಿ, ಉಳಿದೆಲ್ಲರಿಗೂ ಭಯವನ್ನು ಉಂಟುಮಾಡಿದಾಗ, ಹದಿನೆಂಟಕ್ಕಿಂತಲೂ ಹೆಚ್ಚಾದ ಕುಲಗಳ ರಾಜರುಗಳು ಹೀಗೆ ಮಂತ್ರಾಲೋಚನೆಯನ್ನು ಮಾಡಿದರು.
ಅನಾರಮಂತೋ ನಿಘ್ನಂತೋ ಮಹಾಸ್ತ್ರೈಃ ಶತುಘಾತಿಭಿಃ |
ನ ಹನ್ಯಾಮ ಬಲಂ ತಸ್ಯ ತ್ರಿಭಿರ್ವರ್ಷಶತೈರ್ವಯಮ್ ॥36॥
ನಾವೆಲ್ಲರೂ ಸೇರಿ ತನ್ನ ಶಕ್ತಿಯಿಂದ ನೂರು ಜನರನ್ನು ಒಂದೇ ಬಾರಿಗೆ ಸಂಹರಿಸುವ ಮಹಾಸ್ತ್ರಗಳಿಂದ ಸತತವಾಗಿ ಯುದ್ಧದಲ್ಲಿ ಸಂಹಾರಮಾಡಿದರೂ ಮುನ್ನೂರುವರ್ಷಗಳು ಯುದ್ಧಮಾಡಿದರೂ ನಾವು ಜರಾಸಂಧನ ಸೈನ್ಯವನ್ನು ನಾಶಮಾಡಲಾರೆವು. (ಎಂದು ಆಲೋಚನೆಮಾಡಿದರು.)
ತಸ್ಯಾಪ್ಯಮರಸಂಕಾಶೌ ಬಲೇನ ಬಲಿನಾಂ ವರೌ |
ನಾಮಭ್ಯಾಂ ಹಂಸಡಿಭಕಾವಿತ್ಯಾಸ್ತಾಂ ಯೋಧಸತ್ತಮೌ ॥37॥
ಆ ಜರಾಸಂಧನ ಬಳಿಯಲ್ಲಿ ಬಲಿಷ್ಠರಾದ ಬಲದಲ್ಲಿ ದೇವತೆಗಳಿಗೆ ಸರಿಸಮಾನರಾದ ಹಂಸ ಡಿಬಕರೆಂಬ ಇನ್ನಿಬ್ಬರು ಶ್ರೇಷ್ಠಯೋಧರಿದ್ದಾರೆ.
ತಾವುಭೌ ಸಹಿತೌ ವೀರೌ ಜರಾಸಂಧಶ್ಚ ವೀರ್ಯವಾನ್ |
ತ್ರಯಸ್ತ್ರಯಾಣಾಂ ಲೋಕಾನಾಂ ಪರ್ಯಾಪ್ತಾ ಇತಿ ಮೇ ಮತಿಃ ॥38॥
ಅವರಿಬ್ಬರೂ ಮತ್ತು ಪರಾಕ್ರಮಶಾಲಿಯಾದ ಜರಾಸಂಧ ಈ ಮೂವರು ಸೇರಿ ಮೂರುಲೋಕಗಳನ್ನೂ ಗೆಲ್ಲಲು ಸಮರ್ಥರಾಗುತ್ತಾರೆ ಎಂದು ನನ್ನ ಅಭಿಪ್ರಾಯ.
ನಹಿ ಕೇವಲಮಸ್ಮಾಕಂ ಯಾವಂತೋಽನ್ಯೇಽಪಿ ಪಾರ್ಥಿವಾಃ |
ತಥೈವ ತೇಷಾಮಾಸೀಚ್ಚ ಬುದ್ಧಿರ್ಬುದ್ಧಿಮತಾಂ ವರ ॥39॥
ಮೇಧಾವಿಗಳಲ್ಲಿ ಶ್ರೇಷ್ಠನೇ! ಇದು ಕೇವಲ ನಮ್ಮ ಅಭಿಪ್ರಾಯವಲ್ಲ. ಉಳಿದ ಎಷ್ಟು ಜನ ರಾಜರಿದ್ದಾರೋ ಅವರೆಲ್ಲರಿಗೂ ಇದೇ ಅಭಿಪ್ರಾಯವಿದೆ.
ಅಷ್ಟಾದಶ ಮಯಾ ತಸ್ಯ ಸಂಗ್ರಾಮಾ ರೋಮಹರ್ಷಣಾಃ |
ದತ್ತಾ ನಚ ಹತೋ ರಾಜನ್ ಜರಾಸಂಧೋ ಮಹಾಬಲಃ ॥40॥
ರಾಜನೇ! ನಾನು ಹದಿನೆಂಟುಬಾರಿ ಅವನ ಜೊತೆಯಲ್ಲಿ ರೋಮಾಂಚಕಾರಿಯಾದ ಯುದ್ಧವನ್ನು ಮಾಡಿದೆನು. ಆದರೆ ಮಹಾಬಲನಾದ ಜರಾಸಂಧನು ನನ್ನಿಂದ ಕೊಲ್ಲಲ್ಪಡಲಿಲ್ಲ.
ಅಥ ಹಂಸ ಇತಿ ಖ್ಯಾತ ಆಸೀತ್ ಕಶ್ಚಿನ್ನರಾಪಃ |

ನರೋಽನ್ಯಃ ಸ ಹತಸ್ತಸ್ಯ ಸಂಗ್ರಾಮೇಽಷ್ಟಾದಶಾವೃತಃ ॥41॥
ಜರಾಸಂಧನ ಬಳಿಯಲ್ಲಿ ಡಿಬಕನ ಅಣ್ಣನಲ್ಲದೆ ಹಂಸ ಎಂಬ ಹೆಸರಿನ ಇನ್ನೊಬ್ಬ ರಾಜನಿದ್ದನು. (ತಾತ್ಪರ್ಯನಿರ್ಣಯದಲ್ಲಿ ಇವನ ಉಲ್ಲೇಖವಿಲ್ಲ. ಆದರೆ ಹರಿಕಥಾಮೃತಸಾರದಲ್ಲಿ ಇಬ್ಬರು ಹಂಸರ ಉಲ್ಲೇಖವಿದೆ. 20ನೇ ಸಂ 13-17ನೇ ಶ್ಲೋಕಗಳು) ಹದಿನೆಂಟು ಅಕ್ಷೋಹಿಣಿ ಸೈನ್ಯದಿಂದ ಯುದ್ಧಕ್ಕೆ ಬಂದ ಅವನನ್ನು ನಾನು ಸಂಹರಿಸಿದೆನು.
ಹಂಸೋ ಹತ ಇತಿ ಪ್ರೋಕ್ತಮಥ ಕೇನಾಪಿ ಭಾರತ |
ತಚ್ಛ್ರುತ್ವಾ ಡಿಭಕೋ ರಾಜನ್ ಯಮುನಾಂಭಸ್ಯಮಜ್ಜತ ॥42॥
ಭಾರತನೇ! ಹಂಸನು ಹತನಾದನು ಎಂಬ ಮಾತನ್ನು ಯಾರೋ ಹೇಳಿದುದನ್ನು ಕೇಳಿ, ತನ್ನ ಅಣ್ಣನಾದ ಹಂಸನು ಮೃತನಾದನು ಎಂದು ತಿಳಿದು ಡಿಬಕನು ಯಮುನೆಯ ನೀರಿನಲ್ಲಿ ಮುಳುಗಿದನು.
ವಿನಾ ಹಂಸೇನ ಲೋಕೇಽಸ್ಮಿನ್ ನಾಹಂ ಜೀವಿತುಮುತ್ಸಹೇ |
ಇತ್ಯೇತಾಂ ಮತಿಮಾಸ್ಥಾಯ ಡಿಭಕೋ ನಿಧನಂ ಗತಃ ॥43॥
ಅಣ್ಣನಾದ ಹಂಸನನ್ನು ಬಿಟ್ಟು ನಾನು ಈ ಲೋಕದಲ್ಲಿ ಬದುಕಿರಲಾರೆ ಎಂಬ ಈ ಅಭಿಪ್ರಾಯವನ್ನು ತಳೆದು ಡಿಬಕನು ಯಮುನಾನದಿಯ ನೀರಿನಲ್ಲಿ ಮರಣಹೊಂದಿದನು.
ತಥಾ ತು ನಿಹತಂ ಶ್ರುತ್ವಾ ಹಂಸಃ ಪರಪುರಂಜಯಃ |
ಪ್ರಪೇದೇ ಯಮುನಾಮೇವ ಸೋಽಪಿ ತಸ್ಯಾಂ ನ್ಯಮಜ್ಜತ ॥44॥
ಶತ್ರುಗಳನ್ನು ಜಯಿಸುವ ಸಾಮರ್ಥ್ಯವುಳ್ಳ ಹಂಸನು ತನ್ನ ತಮ್ಮನಾದ ಡಿಬಕನು ಹಾಗೆ ಮೃತನಾದನೆಂಬ ವಾರ್ತೆಯನ್ನು ಕೇಳಿ ತಾನೂ ಸಹ ಯಮುನಾ ನದಿಗೆ ಬಂದು ಅಲ್ಲಿ ಮುಳುಗಿದನು.
ತತೋ ರಾಜಾ ಜರಾಸಂಧಃ ಶ್ರುತ್ವಾ ತೌ ನಿಧನಂ ಗತೌ |
ಸ್ವಪುರಂ ಶೂರಸೇನೇಭ್ಯಃ ಪ್ರಯಯೌ ಭರತರ್ಷಭ ॥45॥
ಅನಂತರ ಜರಾಸಂಧನು ತನ್ನ ಇಬ್ಬರು ಬೆಂಬಲಿಗರು ನಿಧನರಾದ ವಾರ್ತೆಯನ್ನು ತಿಳಿದು ಶೂರಸೇನ ದೇಶವನ್ನು ಬಿಟ್ಟು ತನ್ನ ಮಗಧದೇಶಕ್ಕೆ ಹಿಂದಿರುಗಿದನು.
ತತೋ ವಯಮಮಿತ್ರಘ್ನೇ ತಸ್ಮಿನ್ ಪ್ರತಿಗತೇ ನೃಪೇ |
ಪುನರಾನಂದಿನಃ ಸರ್ವೇ ಮಧುರಾಯಾಂ ವಸಾಮಹೇ ॥46॥
ಭರತರ್ಷಭನೇ! ಶತ್ರುಸಂಹಾರಕನಾದ ಜರಾಸಂಧನು ಹಿಂದಿರುಗಿದ ವಾರ್ತೆಯನ್ನು ಕೇಳಿದ ನಂತರ ನಾವು ಮಧುರಾಪಟ್ಟಣದಲ್ಲಿ ನಿಟ್ಟುಸಿರುಬಿಟ್ಟು ಸುಖವಾಗಿ ವಾಸಮಾಡುತ್ತಿದ್ದೇವೆ.
ಯದಾ ತು ಪುನರೇವೈನಂ ರಾಜನ್ ರಾಜೀವಲೋಚನಾ |
ಕಂಸಭಾರ್ಯಾ ಜರಾಸಂಧಂ ದುಹಿತಾ ಮಾಗಧಂ ನೃಪಮ್ ॥47॥
ಚೋದಯತ್ಯೇವ ರಾಜೇಂದ್ರ ಪತಿವ್ಯಸನದುಃಖಿತಾ |
ಪತಿಘ್ನಂ ಮೇ ಜಹೀತ್ಯೇವಂ ಪುನಃ ಪುನರರಿಂದಮ ॥48॥
ಅರಿಂದಮನೇ! ಆದರೆ ಕಂಸಭಾರ್ಯೆಯರಾದ ಅಸ್ತಿಪ್ರಾಪ್ತಿಯರು ಮತ್ತೆ ಮತ್ತೆ ಮಗಧರಾಜನಾದ ಜರಾಸಂಧನನ್ನು ಸಮೀಪಿಸಿ ಪತಿಯಮರಣದಿಂದ ದುಃಖಿತರಾಗಿ ನಮ್ಮ ಪತಿಯನ್ನು ಕೊಂದವನನ್ನು ಸಂಹಾರಮಾಡು ಎಂದು ಪುನಃ ಪುನಃ ಒತ್ತಾಯಮಾಡುತ್ತಿದ್ದಾರೆ.
ತತೋ ವಯಂ ಕುರುಶ್ರೇಷ್ಠ ತಂ ಮಂತ್ರಂ ಪೂರ್ವಮಂತ್ರಿತಮ್ |
ಸಂಸ್ಮರಂತೋ ವಿಮನಸೋ ವ್ಯಪಯಾತಾಶ್ಚ ಸರ್ವಶಃ |
ಪೃಥಕ್ತ್ವೇನ ದ್ರುತಾ ರಾಜನ್ ಸಂಕ್ಷಿಪ್ಯ ವಿಪುಲಾಂ ಶ್ರಿಯಮ್ ॥49॥
ಕುರುಶ್ರೇಷ್ಠನೇ! ಆ ಕಾರಣದಿಂದ ನಾನು ಮೊದಲು ಮಾಡಿದ ಮಂತ್ರಾಲೋಚನೆಯನ್ನು ಸ್ಮರಿಸಿ ಮನಸ್ಸಿಲ್ಲದೆಯೇ ಮಧುರಾಪಟ್ಟಣದಿಂದ ಸಂಪತ್ತಿನ ಅಲ್ಪಬಾಗವನ್ನು ತೆಗೆದುಕೊಂಡು ಓಡಿ ಹೋದೆವು.
ಅಪಯಾತಾ ಭಯಾತ್ ತಸ್ಯ ಸಧನಜ್ಞಾತಿಬಾಂಧವಾಃ |
ಇತಿ ಸಂಚಿಂತ್ಯ ಸರ್ವೇ ಸ್ಮ ಪ್ರತೀಚೀಂ ದಿಶಮಾಶ್ರಿತಾಃ ॥50॥
ಅವನ ಭಯದಿಂದ ನಾವು ಅಲ್ಪ ಧನ ಮತ್ತು ದಾಯಾದಿಗಳೊಡನೆ ಅಲ್ಲಿಂದ ಓಡಿಹೋಗಿ ಎಲ್ಲರೂ ಪಶ್ಚಿಮ ದಿಕ್ಕನ್ನು ಆಶ್ರಯಿಸಿದ್ದೇವೆ.
ಕುಶಸ್ಥಲೀಂ ಪುರೀಂ ಶೂನ್ಯಾಂ ರೈವತೇನ ನಿವೇಶಿತಾಮ್ |
ಪುರಂ ನಿವೇಶ್ಯ ನಂದಾಮೋ ಜರಾಸಂಧಭಯಾರ್ದಿತಾಃ ॥51॥
ಜರಾಸಂಧನ ಭಯದಿಂದ ಪೀಡಿತರಾದ ನಾವು ಹಿಂದೆ ರೈವತರಾಜನು ನಿರ್ಮಿಸಿ ಅನಂತರ ಶೂನ್ಯವಾಗಿದ್ದ ಕುಶಸ್ಥಲಿ ಪಟ್ಟಣವನ್ನು ಪುನರುಜ್ಜೀವನಗೊಳಿಸಿ ಪ್ರವೇಶಿಸಿ ಸುಖವಾಗಿದ್ದೇವೆ.
ತಥೈವ ದುರ್ಗಸಂಸ್ಕಾರಾನ್ ದೇವೈರಪಿ ದುರಾಸದಾನ್ |
ಸ್ತ್ರಿಯೋಽಪಿ ಯಸ್ಯಾಂ ಯುಧ್ಯೇಯುಃ ಕಿಂಪುನರ್ವೃಷ್ಣಿಪುಂಗವಾಃ ॥52॥
ಆ ದ್ವಾರಕಾಪಟ್ಟಣಕ್ಕೆ ದೇವತೆಗಳೂ ಪ್ರವೇಶಿಸಲಾರದಂತಹ ದುರ್ಗಸಂಸ್ಕಾರಗಳನ್ನು ಮಾಡಿದ್ದೇವೆ. ಅಲ್ಲಿ ವಾಸಿಸುವ ಸ್ತ್ರೀಯರೂ ಸಹ ಯುದ್ಧವನ್ನು ಮಾಡುವುದರಲ್ಲಿ ಕುಶಲರು. ಇನ್ನು ವೃಷ್ಣಿಪುಂಗವರ ಬಗ್ಗೆ ಹೇಳತಕ್ಕದೇನಿದೆ?
ತೇ ವಯಂ ಸಜನಾ ರಾಜನ್ ನಿವಸಾಮೋಽಕುತೋಭಯಾಃ |
ಆಲೋಕ್ಯ ಗಿರಿಮುಖ್ಯಂ ತಮ್ ಅಲಭಾಮ ಸುಖಂ ನೃಪ ॥53॥

ರಾಜನೇ! ಅಂತಹ ನಾವು ದ್ವಾರಕಾಪಟ್ಟಣದ ಮಧ್ಯದಲ್ಲಿರುವ ಇರುವ ಶ್ರೇಷ್ಠವಾದ ಪರ್ವತವನ್ನು ನೋಡುತ್ತಾ ಜರಾಸಂಧನ ಭಯವಿಲ್ಲದೆ ಸುಖವನ್ನು ಹೊಂದಿ ಬಾಳುತ್ತಿದ್ದೇವೆ.
ಮಾಧವಾ ಮಾಧವೀತೀರ್ಥಮಾಸಾದ್ಯ ಸುಖಿನೋಽಭವನ್ |
ಏವಂ ವಯಂ ಜರಾಸಂಧಾದಾದಿತಃ ಕೃತಕಿಲ್ಬಿಷಾಃ ॥54॥
ಸಾಮರ್ಥ್ಯವಂತಃ ಸಂಬಂಧಾದ್ ಭವಂತಂ ಸಮುಪಾಶ್ರಿತಾಃ |
ತ್ರಿಯೋಜನಾಯತಂ ಸದ್ಮ ವಿಸ್ತೀರ್ಣಂ ಯೋಜನಾಯುತಮ್ ॥55॥
ಯೋಜನಾಂತೇ ಶತದ್ವಾರಂ ವ್ಯುತ್ಕ್ರಮಕ್ರಮತೋರಣಮ್ |
ಅಷ್ಟಾದಶಾಕುಲೈರ್ನದ್ಧಂ ಕ್ಷತ್ರಿಯೈರ್ಯುದ್ಧದುರ್ಮದೈಃ ॥56॥
ಮಧು ಕುಲಕ್ಕೆ ಸೇರಿದವರೆಲ್ಲರೂ ಅಲ್ಲಿಯೇ ಮಾಧವೀತೀರ್ಥದ ಬಳಿ ವಾಸಿಸುತ್ತಾ ಸುಖವಾಗಿದ್ದಾರೆ. ಹೀಗೆ ಮೊದಲಿಂದಲೂ ಜರಾಸಂಧನಿಗೆ ವಿರೋಧವನ್ನು ಮಾಡಿದ ನಾವು ಸಂಬಂಧ ಮತ್ತು ಸಾಮರ್ಥ್ಯ ಇವೆರಡನ್ನು ಗಮನಿಸಿ ನಿನ್ನನ್ನು ಆಶ್ರಯಿಸಿದ್ದೇವೆ. ನಾವಿರುವ ಮನೆಯು ಮೂರು ಯೋಜನ ಉದ್ದವೂ ಮತ್ತು ಒಂದು ಯೋಜನ ಅಗಲವೂ ಆಗಿದೆ. ಮೂರುಯೋಜದ ಉದ್ದದಲ್ಲಿ ಒಂದೊಂದು ಯೋಜನದ ನಂತರ ಮೂರು ದ್ವಾರಗಳು, ಆ ದ್ವಾರಗಳಿಗೆ ಕ್ರಮ ಮತ್ತು ವ್ಯುತ್ಕ್ರಮಗಳಿಂದ ತೋರಣಗಳು ಇವೆ. ಹದಿನೆಂಟುಕುಲಗಳಿಗೆ ಸೇರಿದ ಯುದ್ಧದುರ್ಮದರಾದ ಕ್ಷತ್ರಿಯರಿಂದ ಆ ನಿವಾಸಗಳೆಲ್ಲವೂ ತುಂಬಲ್ಪಟ್ಟಿವೆ.
ಅಷ್ಟಾದಶ ಸಹಸ್ರಾಣಿ ಭ್ರಾತರಃ ಸಂತಿ ನಃ ಕುಲೇ |
ಆಹುಕಸ್ಯ ಶತಂ ಪುತ್ರಾ ಏಕೈಕಂ ತ್ರಿದಶೋಪಮಾಃ ॥57॥
ನಮ್ಮ ಕುಲದಲ್ಲಿ ಹದಿನೆಂಟುಸಾವಿರ ಅಣ್ಣ ತಮ್ಮಂದಿರಿದ್ದಾರೆ. ಆಹುಕನಿಗೆ ಒಬ್ಬೊಬ್ಬನೂ ದೇವತೆಯನ್ನು ಹೋಲುವ ನೂರು ಪುತ್ರರಿದ್ದಾರೆ.
ಚಾರುದೇಷ್ಣಃ ಸಹ ಭ್ರಾತ್ರಾ ವಜ್ರದೇವೋಽಥ ಸಾತ್ಯಕಿಃ |
ಅಹಂ ಚ ರೌಹಿಣೇಯಶ್ಚ ಸಾಂಬಃ ಶೌರ್ಯಸಮಾ ಯು |
ಏವಮೇತೇ ರಥಾಃ ಸಪ್ತ ರಾಜನ್ನನ್ಯಾನ್ ನಿಬೋಧ ಮೇ ॥58॥
ರಾಜನೇ! ಚಾರುದೇಷ್ಣ ಅವನ ತಮ್ಮ ವಜ್ರದೇವ ಸಾತ್ಯಕಿ ನಾನು (ಕೃಷ್ಣ), ಬಲರಾಮ ಮತ್ತು ಸಾಂಬ ಈ ಏಳುಜನರು ಯುದ್ಧದಲ್ಲಿ ಸಮಾನವಾದ ಪರಾಕ್ರಮವುಳ್ಳವರಾಗಿದ್ದೇವೆ. ಹಾಗೆಯೇ ರಥವಿದ್ಯೆಯಲ್ಲಿಯೂ ಸಮರ್ಥರಾಗಿದ್ದೇವೆ. ಉಳಿದವರನ್ನು ಹೇಳುತ್ತೇನೆ ಕೇಳು.
ಕೃತವರ್ಮಾಪ್ಯನಾಧೃಷ್ಟಿಃ ಶಮೀಕಃ ಸಮಿತಿಂಜಯಃ |
ಕಂಸಃ ಶಂಕುರ್ನಿರಾದಶ್ಚ ಸಪ್ತ ಚೈತೇ ಮಹಾರಥಾಃ ॥59॥
ಕೃತವರ್ಮ ಅನಾಧೃಷ್ಟಿ ಶಮೀಕ ಸಮಿತಿಂಜಯ ಕಂಸ ಶಂಕು. ನಿರಾದ ಈ ಏಳು ಮಹಾರಥರಿದ್ದಾರೆ.
ಪ್ರದ್ಯುಮ್ನಶ್ಚಾನಿರುದ್ಧಶ್ಚ ಭಾನುರಕ್ರೂರಸಾರಣೌ |
ನಿಶಠಶ್ಚ ಗದಶ್ಚೈವ ಸಪ್ತ ಚೈತೇ ಮಹಾರಥಾಃ ॥60॥
ಪ್ರದ್ಯುಮ್ನ ಅನಿರುದ್ಧ ಭಾನು ಅಕ್ರೂರ ಸಾರಣ ನಿಶಠ ಮತ್ತು ಗದ ಈ ಏಳು ಜನರು ಮಹಾರಥರಿದ್ದಾರೆ.
ವಿತದ್ರುರ್ಝಿಲ್ಲಿಬಭ್ರೂ ಚ ಉದ್ಧವೋಽಥ ವಿಡೂರಥಃ |
ವಸುದೇವೋಗ್ರಸೇನೌ ಚ ಸಪ್ತೈತೇ ಮಂತ್ರಿಪುಂಗವಾಃ ॥61॥
ವಿತದ್ರು ಝಿಲ್ಲಿ ಬಭ್ರು ಉದ್ಧವ ವಿಡೂರಥ ವಸುದೇವ ಮತ್ತು ಉಗ್ರಸೇನ ಈ ಏಳು ಮಂದಿ ಮಂತ್ರಿ ಶ್ರೇಷ್ಠರಿದ್ದಾರೆ.
ಪ್ರಸೇನಜಿಚ್ಚ ಯವೌ ರಾಜರಾಜಗುಣಾನ್ವಿತಃ |
ಸ್ಯಮಂತಕೋ ಮಣಿರ್ಯಸ್ಯ ರುಗ್ಮಂ ನಿಸ್ರವತೇ ಬಹು ॥62॥
ಪ್ರಸೇನ ಮತ್ತು ಸತ್ಯಜಿತ್ ಎಂಬ ಯಮಳರಿದ್ದಾರೆ. ಸತ್ಯಜಿತನು ರಾಜರಾಜಗುಣಗಳಿಂದ ಕೂಡಿದವನಾಗಿದ್ದಾನೆ. ಅವನ ಬಳಿ ಇರುವ ಸ್ಯಮಂತಕಮಣಿಯು ನಿತ್ಯವೂ ಸುವರ್ಣವನ್ನು ಸುರಿಸುತ್ತದೆ.
ಪುತ್ರಾಶ್ಚಾಂಧಕಭೋಜಸ್ಯ ವೃದ್ಧೋ ರಾಜಾ ಚ ತೇ ದಶ |
ಲೋಕಸಂಹನನಾ ವೀರಾ ವೀರ್ಯವಂತೋ ಮಹಾಬಲಾಃ |
ಸಂಸ್ಮರಂತೋ ಮಧ್ಯದೇಶಂ ವೃಷ್ಣಿವೀರಾ ಗತಜ್ವರಾಃ ॥63॥
ಅಂಧಕವಂಶದ ಅವಾಂತರವಂಶವಾದ, ಭೋಜವಂಶದ ವೃದ್ಧನಾದ ರಾಜ ಉಗ್ರಸೇನ ಮತ್ತು ಅವನ ಮಕ್ಕಳು ಸೇರಿ ಹತ್ತು ಜನರು ಇದ್ದಾರೆ. ಅವರೆಲ್ಲರೂ ಪರಾಕ್ರಮಶಾಲಿಗಳು ಮಹಾಬಲಿಷ್ಠರು ಮತ್ತು ಕಾಂತಿಯುಳ್ಳವರು ವೃಷ್ಣಿವೀರರಾದ ಇವರು ಮಗಧದೇಶದ ಮಧ್ಯದೇಶವನ್ನು ಸ್ಮರಿಸಿಕೊಂಡು ದೂರದಲ್ಲಿರುವುದರಿಂದ ಯಾವ ಮಾನಸ ಜ್ವರವೂ ಇಲ್ಲದೆ ವಾಸಿಸುತ್ತಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚದಶೋಽಧ್ಯಾಯಃ ॥
॥ ಮಂತ್ರಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹದಿನೈದನೆಯ ಅಧ್ಯಾಯವು ಮುಗಿಯಿತು.
*****

ಹದಿನಾರನೆಯ ಅಧ್ಯಾಯ
(ಕೃಷ್ಣನಿಂದ ರಾಜಸೂಯಯಾಗಕ್ಕೆ ಸಂಭವಿಸಬಹುದಾದ ವಿಘ್ನಗಳ ನಿರೂಪಣೆ)
ವಾಸುದೇವಃ

ಪಾಂಡವೈಶ್ಚಾಪಿ ಸತತಂ ನಾಥವಂತೋ ವಯಂ ನೃಪ |
ಸರ್ವಸಂಪದ್ಗುಣೈಃ ಸಿದ್ಧೇ ತಸ್ಮಿನ್ನೇವ ವ್ಯವಸ್ಥಿತೇ ॥
ಕ್ಷತ್ರೇ ಸಮ್ರಾಜಮಾತ್ಮಾನಂ ಕರ್ತುಮರ್ಹಸಿ ಭಾರತ ॥1॥
ಭಾರತರಾಜನೇ! ಪಾಂಡವರೆಂಬ ನಾಥರನ್ನು ಪಡೆದು ನಾವು ಯಾವಾಗಲೂ ಸನಾಥರಾಗಿದ್ದೇವೆ. ಕ್ಷತ್ರಿಯ ಸಮಾಜವೆಲ್ಲವೂ ಸಂಪದ್ಭರಿತವಾಗಿರುವಾಗ ನೀನು ನಿನ್ನನ್ನು ಸಮ್ರಾಜನನ್ನಾಗಿ ಮಾಡಿಕೊಳ್ಳಲು ಅರ್ಹನಾಗಿರುತ್ತೀಯೆ.
ದುರ್ಯೋಧನಂ ಶಾಂತನವಂ ದ್ರೋಣಂ ದ್ರೋಣಾಯನಿಂ ಕೃಪಮ್ |
ಕರ್ಣಂ ಚ ಶಿಶುಪಾಲಂ ಚ ರುಗ್ಮಿಣಂ ಚ ಧನುರ್ಧರಮ್ ॥2॥
ಏಕಲವ್ಯಂ ದ್ರುಮಂ ಶ್ವೇತಂ ಶಲ್ಯಂ ಶಕುನಿಮೇವ ಚ |
ಏತಾನಜಿತ್ವಾ ಸಂಗ್ರಾಮೇ ಕಥಂ ಶಕ್ನೋಷಿ ತಂ ಕ್ರತುಮ್ ॥3॥
ದುರ್ಯೋಧನನನ್ನು ಭೀಷ್ಮನನ್ನು ದ್ರೋಣರನ್ನು ಅಶ್ವತ್ಥಾಮರನ್ನು ಕೃಪರನ್ನು ಕರ್ಣನನ್ನು ಶಿಶುಪಾಲನನ್ನು ಧನುರ್ಧಾರಿಯಾದ ರುಗ್ಮಿಯನ್ನು ಏಕಲವ್ಯನನ್ನು ದ್ರುಮನನ್ನು ಶ್ವೇತನನ್ನು ಶಕುನಿಯನ್ನು ಯುದ್ಧದಲ್ಲಿ ಗೆಲ್ಲದೆ ನೀನು ಹೇಗೆ ರಾಜಸೂಯವನ್ನು ಮಾಡಲು ಸಾಧ್ಯ.
ಅಥ ತೇ ಗೌರವೇಣೈವ ನ ಯೋತ್ಸ್ಯಂತಿ ನರಾಧಿಪಾಃ |
ಏಕಸ್ತತ್ರ ಬಲೋನ್ಮತ್ತಃ ಕರ್ಣೋ ವೈಕರ್ತನೋ ವೃಷಾ |
ಯೋತ್ಸ್ಯತೇ ಸ ಬಲೋನ್ಮತ್ತೋ ದಿವ್ಯಾಸ್ತ್ರಬಲಗರ್ವಿತಃ ॥4॥
ಒಂದು ಪಕ್ಷ ನಿನ್ನಮೇಲಿನ ಗೌರವದಿಂದ ಉಳಿದ ಯಾವ ರಾಜರೂ ಯುದ್ಧಮಾಡದಿದ್ದರೂ ಬಲೋನ್ಮತ್ತನಾದ ಸೂತನಾದ ವೈಕರ್ತನನಾದ ಕರ್ಣನು ಮಾತ್ರ ನಿನ್ನ ಜೊತೆಯಲ್ಲಿ ಯುದ್ಧವನ್ನುಮಾಡುವನು. ಅವನು ಬಲೋನ್ಮತ್ತನೂ ಹೌದು. ದಿವ್ಯಾಸ್ತ್ರಗಳ ಬಲದಿಂದ ಗರ್ವವುಳ್ಳವನೂ ಹೌದು.
ನತು ಶಕ್ಯಂ ಮಹಾರಾಜ ಜರಾಸಂಧೇ ಮಹಾಬಲೇ |
ರಾಜಸೂಯಂ ತ್ವಯಾ ಪ್ರಾಪ್ತುಂ ತಸ್ಮಿನ್ ಜೀವತಿ ಪಾರ್ಥಿವೇ ॥5॥
ಮಹಾರಾಜನೇ! ಮಹಾಬಲಿಷ್ಠನಾದ ಜರಾಸಂಧರಾಜನು ಜೀವಿಸಿರುವಾಗ ನೀನು ರಾಜಸೂಯಯಾಗವನ್ನು ಮಾಡಲು ಸಾಧ್ಯವಿಲ್ಲ.
ತೇನ ರುದ್ಧಾ ಹಿ ರಾಜಾನೋ ಜಿತ್ವಾ ಸರ್ವೇ ಗಿರಿವ್ರಜೇ |
ಕಂದರಾಯಾಂ ನಗೇಂದ್ರಸ್ಯ ಸಿಂಹೇನೇವ ಮಹಾದ್ವಿಪಾಃ ॥6॥
ಅವನು ಯುದ್ಧದಲ್ಲಿ ರಾಜರನ್ನು ಗೆದ್ದು ಅವರೆಲ್ಲರನ್ನೂ ಗಿರಿವ್ರಜದ ಒಂದು ಗುಹೆಯಲ್ಲಿ ಸಿಂಹವು ಆನೆಗಳನ್ನು ಬಂಸಿ ಇಟ್ಟಂತೆ ಬಂಸಿದ್ದಾನೆ.
ಸೋಽಪಿ ರಾಜಾ ಜರಾಸಂಧ ಇಯಕ್ಷುರ್ವಸುಧಾಧಿಪೈಃ |
ಅಭಿಷಿಕ್ತೈಸ್ತು ರಾಜನ್ಯೈಃ ಸಹಸ್ರೈರುತ ಚಾಷ್ಟಭಿಃ ॥7॥
ಆ ರಾಜನಾದ ಜರಾಸಂಧನಾದರೂ ಮೂರ್ಧಾಭಿಷಿಕ್ತರಾದ ಒಂದುಸಾವಿರದ ಎಂಟುರಾಜರುಗಳನ್ನು ಪಶುಗಳನ್ನಾಗಿ ಮಾಡಿ ಯಾಗವನ್ನು ಮಾಡುವ ಅಭಿಪ್ರಾಯವನ್ನು ಹೊಂದಿದ್ದಾನೆ.
ಸ ಹಿ ನಿರ್ಜಿತ್ಯ ನಿರ್ಜಿತ್ಯ ಸರ್ವಾನ್ ವೈ ಪೃಥಿವೀಶ್ವರಾನ್ |
ಪುರಮಾನೀಯ ಬದ್ಧ್ವಾ ಚ ಚಕಾರ ಪುರುಷವ್ರಜಮ್ |
ಆರಾಧ್ಯ ಹಿ ಮಹಾದೇವಂ ನಿರ್ಜಿತಾಸ್ತೇನ ಪಾರ್ಥಿವಾಃ ॥8॥
ಅವನು ಭೂಮಿಪಾಲರನ್ನು ಒಬ್ಬೊಬ್ಬರನ್ನಾಗಿ ಗೆದ್ದು ತನ್ನ ಪಟ್ಟಣಕ್ಕೆ ಕರೆದುಕೊಂಡು ಬಂದು, ಒಂದು ಪುರುಷವ್ರಜವನ್ನು ಮಾಡಿದ್ದಾನೆ. ರುದ್ರದೇವರನ್ನು ಅರ್ಚಿಸಿ ಅವರ ಅನುಗ್ರಹದಿಂದ ಎಲ್ಲರಾಜರನ್ನೂ ಗೆದ್ದಿದ್ದಾನೆ.
ವಯಂ ಚೈವ ಮಹಾರಾಜ ಜರಾಸಂಧಭಯಾತ್ ತದಾ |
ಮಥುರಾಂ ಸಂಪರಿತ್ಯಜ್ಯ ಗತ್ವಾ ದ್ವಾರವತೀಂ ಪುರೀಮ್ |
ನಿವಸಾಮ ತಥಾऽದ್ಯಾಪಿ ಸಧನಜ್ಞಾತಿಬಾಂಧವಾಃ ॥9॥
ಮಹಾರಾಜನೇ ! ನಾವಾದರೂ ಜರಾಸಂಧನ ಭಯದಿಂದ (ಭಯದ ನಟನೆಯಿಂದ) ಆಗಲೇ ಮಥುರೆಯನ್ನು ಬಿಟ್ಟು ದ್ವಾರಾವತಿ ಪಟ್ಟಣಕ್ಕೆ ಹೋಗಿ ಇನ್ನೂ ಅಲ್ಲಿಯೇ ನಮ್ಮ ಧನ ದಾಯಾದಿಗಳ ಮತ್ತು ಬಂಧುಗಳ ಜೊತೆಯಲ್ಲಿ ಈಗಲೂ ವಾಸಿಸುತ್ತಿದ್ದೇವೆ.
ಕಂಸಹೇತೋರ್ಹಿ ಯದ್ ವೈರಂ ಮಾಗಧಸ್ಯ ಮಯಾ ಸಹ |
ಪಾರಂ ಗತ್ವಾ ಸ ತಸ್ಯಾಪಿ ಇಯಕ್ಷುರ್ದೇವಮುತ್ತಮಮ್ ॥10॥
ಕಂಸನ ಸಲುವಾಗಿ ನನಗೂ ಮತ್ತು ಜರಾಸಂಧನಿಗೂ ಏನು ವೈರ ಉಂಟಾಗಿದೆಯೋ ಅದರ ಪ್ರತೀಕಾರವನ್ನುಮಾಡಿ ಅನಂತರ ದೇವಶ್ರೇಷ್ಠನಾದ ರುದ್ರನನ್ನು ಕುರಿತು ಅವನು ಯಾಗವನ್ನು ಮಾಡುವವನಿದ್ದಾನೆ.
ಕಾಂಕ್ಷಸ್ವ ತೇಷಾಂ ಮೋಕ್ಷಾಯ ಜರಾಸಂಧವಧಾಯ ಚ |
ಯದೀಮಂ ನೃಪತೇ ಯಜ್ಞಂ ಪ್ರಾಪ್ತುಮಿಚ್ಛಸಿ ಭಾರತ ॥11॥
ಭಾರತರಾಜನೇ! ನೀನು ಈ ಯಾಗವನ್ನು ಮಾಡಲು ಅಪೇಕ್ಷಿಸುವುದಾದರೆ ಜರಾಸಂಧನ ವಧೆಯನ್ನು ಮತ್ತು ಸೆರೆಯಲ್ಲಿರುವ ಆ ರಾಜರುಗಳ ಮೋಕ್ಷವನ್ನು ಕುರಿತು ವಿಚಾರಮಾಡು.
ನಹ್ಯೇಷ ಹ್ಯನ್ಯಥಾ ಶಕ್ಯ ಆರಂಭೋ ಭರತರ್ಷಭ |
ರಾಜಸೂಯಸ್ಯ ಕಾರ್ತ್ಸ್ನ್ಯೇನ ಕರ್ತುಂ ಮತಿಮತಾಂ ವರ ॥12॥
ಮೇಧಾವಿಗಳಲ್ಲಿ ಶ್ರೇಷ್ಠನಾದವನೇ! ಭರತರ್ಷಭನೇ! ಅವೆರಡನ್ನು ಮಾಡದೆ ಬೇರೆರೀತಿಯಲ್ಲಿ ರಾಜಸೂಯವನ್ನು ಆರಂಭಿಸುವುದು

ಶಕ್ಯವಾಗುವುದಿಲ್ಲ.
ಜರಾಸಂಧವಧೋಪಾಯಶ್ಚಿಂತ್ಯತಾಂ ಭರತರ್ಷಭ |
ತಸ್ಮಿನ್ ಜಿತೇ ಜಿತಂ ಸರ್ವಂ ಸಕಲಂ ಪಾರ್ಥಿವಂ ಬಲಮ್ ॥13॥
ಭರತರ್ಷಭನೇ! ಜರಾಸಂಧನ ವಧೆಯಮಾರ್ಗವನ್ನು ಚಿಂತಿಸು, ಅವನನ್ನು ಗೆದ್ದರೆ ಎಲ್ಲಾ ರಾಜರ ಸೈನ್ಯವನ್ನೂ ಗೆದ್ದಂತೆಯೇ ಸರಿ.
ಇತ್ಯೇಷಾ ಮೇ ಮತೀ ರಾಜನ್ ಯದ್ವಾ ತ್ವಂ ಮನ್ಯಸೇ ನೃಪ |
ಏವಂ ಗತೇ ಮಮಾಚಕ್ಷ್ವ ಸ್ವಯಂ ನಿಶ್ಚಿತ್ಯ ಹೇತುಭಿಃ ॥14॥
ರಾಜನೇ! ಇದು ನನ್ನ ಅಭಿಪ್ರಾಯ. ನೀನೇ ಹೇತುಗಳಿಂದ ವಿಮರ್ಶೆಮಾಡಿ ನಿನ್ನ ಅಭಿಪ್ರಾಯವು ಏನೆಂದು ನನಗೆ ತಿಳಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷೋಡಶೋಽಧ್ಯಾಯಃ ॥
॥ ಮಂತ್ರಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹದಿನಾರನೆಯ ಅಧ್ಯಾಯವು ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಇತೀರಿತೇ ರಥಾಂಗಿನಾ ಜಗಾದ ಧರ್ಮನಂದನಃ |
ನಿವರ್ತಿತಂ ಮನಃ ಕ್ರತೋರಲಂ ಮಮಾಮುನಾ ಪ್ರಭೋ ॥94॥
ಶ್ರೀಕೃಷ್ಣ ಹೀಗೆ ಹೇಳಿದಾಗ ಧರ್ಮರಾಜ ಹೇಳಿದ, `ಪ್ರಭು, ಈ ನಿನ್ನ ಮಾತಿನಿಂದ ಜರಾಸಂಧ ನಿಮಿತ್ತವಾಗಿ ನನ್ನ ಮನಸ್ಸು ಯಾಗದ ಆಲೋಚನೆಯನ್ನು ಬಿಟ್ಟಿದೆ. ನನಗೆ ಈ ಯಾಗವೂ ಬೇಡ, ಅದರ ಫಲವೂ ಬೇಡ.
ಬಭೂವುರೇವ ಭೂಭೃತೋ ನ ಚಾರಾಜ್ಯಮಾಪಿರೇ |
ಯದಾ ಚ ಚಕ್ರವರ್ತಿನಸ್ತದೇದೃಶಾ ನ ಶತ್ರವಃ ॥95॥
`ಏಕೆಂದರೆ ಹಿಂದೆಯೂ ಅನೇಕ ರಾಜರಿದ್ದರು. ಅವರು ರಾಜಸೂಯಯಾಗ ಮಾಡಿ ಚಕ್ರವರ್ತಿಗಳೆನಿಸಲಿಲ್ಲ. ಕೆಲವರು ಹರಿಶ್ಚಂದ್ರನಂತೆ ಚಕ್ರವರ್ತಿಗಳಾದರು. ಆ ಕಾಲದಲ್ಲಿ ಅವರಿಗೆ ಜರಾಸಂಧನಂಥ ಶತ್ರುಗಳಿರಲಿಲ್ಲ'.
ಇತೀರಿತೇಽಮುನಾವದತ್ ಪ್ರಧಾನಮಾರುತಾತ್ಮಜಃ |
ಪದಂ ಚತುರ್ಮುಖಸ್ಯ ವಾ ಸುಸಾಧ್ಯಮೇವ ಯತ್ನತಃ ॥96॥
ಧರ್ಮರಾಜ ಹೀಗೆ ಹೇಳಿದಾಗ ಭೀಮನೆಂದ, `ಚತುರ್ಮುಖನ ಪದವಿಯನ್ನೂ ಕೂಡ ಪ್ರಯತ್ನದಿಂದ ಚೆನ್ನಾಗಿ ಸಂಪಾದಿಸಲು ಸಾಧ್ಯವೆ ಇದೆ'.
ನಿಜಾನುಭಾವವರ್ಜಿತಾ ಹರೇರನುಗ್ರಹೋಜ್ಝಿತಾಃ |
ಮಹಾಪ್ರಯತ್ನವರ್ಜಿತಾ ಜನಾ ನ ಜಗ್ಮುರುನ್ನತಿಂ ॥97॥
ತಮ್ಮಲ್ಲಿ ಸ್ವಾಭಾವಿಕ ಬಲವಿಲ್ಲ, ಹರಿಯ ಅನುಗ್ರಹವನ್ನು ಸಂಪಾದಿಸಲಿಲ್ಲ, ಮಹಾ ಪ್ರಯತ್ನವನ್ನು ಮಾಡುವುದಿಲ್ಲ ಎಂದರೆ ಇಂಥ ಜನರು ಎಂದೂ ಉನ್ನತಿಯನ್ನು ಪಡೆಯುವುದಿಲ್ಲ.
ಸ್ಥಿರೋಽನುಭಾವ ಏವ ಮೇ ಮಹಾನನುಗ್ರಹೋ ಹರೇಃ |
ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ ॥98॥
ನನ್ನಲ್ಲಿ ಸ್ಥಿರವಾದ ಬಲವಿದೆ. ಹರಿಯ ಪರಮಾನುಗ್ರಹವಿದೆ. ಪ್ರಯತ್ನ ಒಂದನ್ನು ಮುಂದಿಟ್ಟುಕೊಂಡು ಸಂಪತ್ತನ್ನು ಗಳಿಸೋಣ.
ಇತೀರಿತೇಽಮುನಾ ಹರಿಃ ಸಮುದ್ಯಮಾತ್ ಪ್ರಧಾನತಃ |
ಸ್ಥಿತೇ ಹಿ ಯಜ್ಞಕಾರಣೇ ವೃಕೋದರೇ ಜಗಾದ ಹ ॥99॥
ಹೀಗೆ ಭೀಮ ಹೇಳಿದಾಗ ಮಹಾಪ್ರಯತ್ನ ಮಾಡಿ ಯಜ್ಞಕ್ಕೆ ಮುಖ್ಯವಾಗಿ ಭೀಮನೆ ಕಾರಣನಾಗುವುದರಿಂದ ಶ್ರೀಕೃಷ್ಣ ನುಡಿದ.
ಸ ಏಕ ಏವ ಪೂರುಷೋ ಜರಾಸುತೋಽದ್ಯ ವರ್ತತೇ |
ಸಮಸ್ತ ಸದ್ವಿರೋಧಿನಾಂ ಬಲಂ ಕಲೇರನಂತರಃ ॥100॥
ಈಗ ಕಲಿಯ ಅನಂತರದಲ್ಲಿ ಸಮಸ್ತ ಸಜ್ಜನ ವಿರೋಧಿಗಳಿಗೆ ಬಲದಾಯಕನಾಗಿರುವವನು ಆ ಜರಾಸಂಧನೊಬ್ಬನೆ ಇದ್ದಾನೆ.
ತಥಾ ಸತಾಂ ಸಮಾಶ್ರಯೋ ಯದುದ್ಭವಾಃ ಸತಾಂ ಗುಣಾಃ |
ಸ ಏಕ ಏವ ತಾದೃಶಸ್ತ್ವಯಾ ವಿಚಿಂತ್ಯ ಯಾತ್ಯತಾಂ ॥101॥
ಅದೇ ರೀತಿಯಲ್ಲಿ ಸಜ್ಜನರ ಸದ್ಗುಣಗಳ ಅಭಿವ್ಯಕ್ತಿಗೆ ಕಾರಣನಾಗಿ ಅವರಿಗೆ ಆಸರೆಯಾಗಿ ನಿಲ್ಲಬಲ್ಲ ಒಬ್ಬ ವ್ಯಕ್ತಿ ಬೇಕು. ಅಂಥವನನ್ನು ಆಲೋಚಿಸಿ ಕಳಿಸು.
ಯದಿ ಸ್ಮ ತೇನ ಮಾಗಧೋ ನಿಹನ್ಯತೇ ಸತಾಂ ಜಯಃ |
ವಿಪರ್ಯಯೇಣ ಚಾಸತಾಮಿತಿ ಸ್ಮ ವಿದ್ಧಿ ನಾನ್ಯಥಾ ॥102॥
ಅವನಿಂದ ಜರಾಸಂಧ ಹತನಾದರೆ ಸಜ್ಜನರಿಗೆ ಜಯ. ಇಲ್ಲದಿದ್ದರೆ ದುರ್ಜನರಿಗೆ ಜಯ. ಇದು ಅನ್ಯಥಾ ಆಗದೆಂದು ತಿಳಿ.
ಸ ಪಾರಮೇಷ್ಠ್ಯಸತ್ಪದಂ ಪ್ರಯಾತ್ಯಸಂಶಯಂ ಯು |
ಯ ಏವ ಹಂತಿ ಮಾಗಧಂ ಸ ವೇದಧರ್ಮಪಾಲಕಃ ॥103॥
ನಿಹಂತಿ ಮಾಗಧೇಶ್ವರಂ ಯ ಏವ ವೈಷ್ಣವಂ ಜಗತ್ |
ಕರೋತಿ ಶರ್ವಪಾಲಿತೋ ಯತಃ ಸ ಬಾರ್ಹಹದ್ರಥಃ ॥104॥
(ಬಾರಹದ್ರಥಃ ಎಂದು ಬಿಡಿಸಿ ಹೇಳಬೇಕು)

ಯಾರು ಯುದ್ಧದಲ್ಲಿ ಜರಾಸಂಧನನ್ನು ಕೊಲ್ಲುವನೋ ಅವನು ಉತ್ತಮವಾದ ಬ್ರಹ್ಮಪದವಿಯನ್ನು ಗಳಿಸುತ್ತಾನೆ. ಸಂಶಯವಿಲ್ಲ.
ಯಾರು ಜರಾಸಂಧನನ್ನು ಕೊಂದು ಜಗತ್ತನ್ನು ವಿಷ್ಣುಭಕ್ತಿಭರಿತವನ್ನಾಗಿ ಮಾಡುತ್ತಾನೋ ಅವನೇ ವೇದ ಧರ್ಮಪಾಲಕ ನೆನಿಸುತ್ತಾನೆ.
ಏಕೆಂದರೆ ಜರಾಸಂಧ ಶಿವಭಕ್ತ.
ನಿಹಂತಿ ಶೈವನಾಯಕಂ ಯ ಏವ ವೈಷ್ಣವಾಗ್ರಣೀಃ |
ಇತಿ ಸ್ಮ ಭಾವಸಂಯುತೇ ವದತ್ಯಜೇSಬಿಭೇನ್ನೃಪಃ ॥105॥
ಯಾರು ಶೈವನಾಯಕನನ್ನು ಕೊಲ್ಲುವನೋ ಅವನೇ ವೈಷ್ಣವಾಗ್ರಣಿಯಾಗಿರುತ್ತಾನೆ. ಹೀಗೆ ಶ್ರೀಕೃಷ್ಣ ಅಭಿಪ್ರಾಯಗರ್ಭಿತವಾಗಿ
ಹೇಳಲು ಧರ್ಮರಾಜ ಭೀತನಾದ.
ಯುಷ್ಠಿರೇ ಬ್ರುವತ್ಯಜಂ ಮಖೇನ ಮೇ ತ್ವಲಂ ತ್ವಿತಿ |
ತಮಾಹ ಮಾರುತಾತ್ಮಜೋ ನಿಹನ್ಮಿ ಮಾಗಧಂ ರಣೇ ॥106॥
ನನಗೆ ಈ ಯಾಗವೆ ಬೇಡ ಎಂದು ಧರ್ಮರಾಜ ಭಯದಿಂದ ಶ್ರೀಕೃಷ್ಣನಿಗೆ ಹೇಳಿದಾಗ `ಜರಾಸಂಧನನ್ನು ನಾನು ಕೊಲ್ಲುತ್ತೇನೆ' ಎಂದ
ಭೀಮ.
ಇತೀರಿತೇSವದದ್ಧರಿರ್ವ್ರಜಾಮಹೇ ವಯಂ ತ್ರಯಃ |
ಅಹಂ ಚ ಭೀಮ ಫಲ್ಗುನೌ ನಿಹಂತುಮೇವ ಮಾಗಧಂ |
ವೃಕೋದರೇಣ ಹನ್ಯತೇ ಯದಿ ಸ್ಮ ಮಾಗಧಾಪಃ ॥107॥
ಮುಖಶ್ಚ ಸೇತ್ಸ್ಯತೇ ಧ್ರುವಂ ಜಗಚ್ಚ ತೇ ವಶೇ ಭವೇತ್ ॥108॥
ಭೀಮ ಹೀಗೆ ಹೇಳಿದಾಗ ಶ್ರೀಕೃಷ್ಣನೆಂದ `ನಾನು ಮತ್ತು ಭೀಮಾರ್ಜುನರು. ಹೀಗೆ ನಾವು ಮೂವರು ಕೂಡಿ ಜರಾಸಂಧನನ್ನು ಕೊಲ್ಲಲು
ಹೋಗುತ್ತೇವೆ. ಭೀಮ ಜರಾಸಂಧನನ್ನು ಕೊಂದರೆ ನಿನ್ನ ಯಾಗ ನಿಶ್ಚಯವಾಗಿ ಕೈಗೂಡುವುದು. ಜಗತ್ತೂ ನಿನ್ನ ವಶಕ್ಕೆ ಬರುವುದು'.
ಇತೀರಿತೇ ತು ಶೌರಿಣಾ ಜಗಾದ ಧರ್ಮನಂದನಃ |
ಸ ಶೂರಸೇನಮಂಡಲಪ್ರಹಾಣತೋ ಹರೇಸ್ತ್ರಸನ್ ॥109॥
ಶ್ರೀಕೃಷ್ಣ ಸ್ವಯಂ ಜರಾಸಂಧ ನಿಮಿತ್ತವಾಗಿ ಮಥುರೆಯನ್ನು ಬಿಟ್ಟು ಹೋದುದರಿಂದ ಭೀತನಾದ ಧರ್ಮರಾಜ ಶ್ರೀಕೃಷ್ಣನ
ಮಾತನ್ನು ಕೇಳಿ ನುಡಿದ.
ಭಯಾದ್ಧಿ ಯಸ್ಯ ಮಾಥುರಂ ವಿಹಾಯ ಮಂಡಲಂ ಗತಾಃ |
ಭವಂತ ಏವ ಸಾಗರಂ ತತೋ ಬಿಭೇಮ್ಯಹಂ ರಿಪೋಃ ॥110॥
`ಜರಾಸಂಧನ ಭಯದಿಂದ ನೀವೆ ಮಥುರೆಯನ್ನು ಬಿಟ್ಟು ಸಮುದ್ರ ಮಧ್ಯಕ್ಕೆ ಹೋಗಿರುವಿರಿ. ಅದರಿಂದ ಅವನಿಗೆ ನಾನು
ಹೆದರುತ್ತೇನೆ.
ಇವೌ ಹಿ ಭೀಮಫಲ್ಗುನೌ ಮಮಾಕ್ಷಿಣೀ ಸದಾ ಪ್ರಭೋ |
ಮನೋನಿಭೋ ಭವಾನ್ಸದಾ ನ ವೋ ವಿನಾಸ್ಮ್ಯತಃ ಪುಮಾನ್ ॥
ಪ್ರಭು, ಈ ಭೀಮಾರ್ನುಜರು ನನಗೆ ಸದಾ ಎರಡು ಕಣ್ಣುಗಳು, ನೀನು ನನಗೆ ಮನಸ್ಸು ಅಥವಾ ಜೀವ. ನೀವಿಲ್ಲದಿದ್ದರೆ ನಾನು
ಪುರುಷನಾಗಲಾರೆ.
ಅತೋ ನ ಜೀವಿತಾತ್ ಪ್ರಿಯಾನಹಂ ರಿಪೋರ್ಬಲೀಯಸಃ |
ಸಕಾಶಮಾತ್ಮ ಹೇತುತಃ ಪ್ರಯಾತಯಾಮಿವೋ ವಿಭೋ ॥112॥
ಅದರಿಂದ ನನಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯರಾಗಿರುವ ನಿಮ್ಮನ್ನು ನನ್ನ ಸ್ವಾರ್ಥಕ್ಕಾಗಿ ಬಲಿಷ್ಠನಾದ ಶತ್ರುವಿನ ಬಳಿಗೆ ಕಳಿಸಲಾರೆ.
ಇತೀರಿತೇSವದತ್ ಪುನರ್ವೃಕೋದರೋSರಿಕಕ್ಷಭುಕ್ |
ಯದೀಯನೇತೃಕಾ ರಮಾವಿರಿಂಚಶರ್ವಪೂರ್ವಕಾಃ ॥113॥
ವಶೇ ಚ ಯಸ್ಯ ತದ್‌ಬಲಂ ಸುರಾಸುರೋರಗಾದಿನಾಂ |
ಸ ಏಷ ಕೇಶವಃ ಪ್ರಭುಃ ಕ್ವ ಚಾಸ್ಯ ಬಾರ್ಹದ್ರಥಃ ॥114॥
(ಬಾರಹದ್ರಥಃ ಎಂದು ಬಿಡಿಸಿ ಹೇಳಬೇಕು)
ಧರ್ಮರಾಜನಿಗೆ ಹೀಗೆ ಹೇಳಿದಾಗ ಶತ್ರುಗಳೆಂಬ ಕಾಡಿಗೆ ಕಾಡ್ಗಿಚ್ಚಿನಂತಿರುವ ಭೀಮ ಪುನಃ ಹೇಳಿದ, `ರಮಾ ಬ್ರಹ್ಮ ರುದ್ರಾದಿಗಳು
ಕೂಡ ಯಾರ ಸಂಕಲ್ಪದ ಪ್ರೇರಣೆಯಿಂದ ಜಗತ್ತನ್ನು ಆಳುವರೋ, ಸುರ ಅಸುರ ಉರಗಾದಿಗಳ ಬಲ ಯಾರ ವಶದಲ್ಲಿರುವುದೋ ಆ
ವಿಷ್ಣುವೇ ಈ ಪ್ರಭು ಶ್ರೀಕೃಷ್ಣ. ಅವನ ಮುಂದೆ ಜರಾಸಂಧನೆಲ್ಲಿ?
ಅಧೃಷ್ಯಮಸ್ತಿ ಮೇ ಬಲಂ ಹರಿಃ ಪ್ರಣಾಯಕೋಕಸ್ಯ ಚ |
ಸಮಸ್ತಲೋಕನೇತರಿ ಪ್ರಭೌ ಹಿ ಸರ್ವಶಕ್ತಿತಾ ॥115॥
ಅಜೇಯತಾ ತಥಾರ್ಜುನೇ ಹರೇರ್ವರೋದ್ಭವಾಸ್ತಿ ಹಿ |
ಅತೋ ವಯಂ ತ್ರಯೋದ್ಯ ತಂ ಪ್ರಯಾಮ ಮಾಗಧಂ ರಿಪುಂ ॥116॥
ಹರಿಯ ಪ್ರೇರಣೆಯಂತೆ ನಡೆಯುವ ನನ್ನಲ್ಲಿ ಶತ್ರುಗಳಿಗೆ ಇದಿರಿಸಲಾಗದಂಥ ಬಲವಿದೆ. ಸಕಲ ಲೋಕನಾಯಕನಾದ ಪ್ರಭು
ಶ್ರೀಕೃಷ್ಣನಲ್ಲಿ ಸರ್ವಶಕ್ತಿ ಇದೆ. ಅರ್ಜುನನಲ್ಲಿ ಹರಿಯ ವರದಿಂದ ಬಂದ ಅಜೇಯತ್ವವಿದೆ. ಅದರಿಂದ ನಾವು ಮೂವರು ಈಗಲೇ
ಶತ್ರುವಾದ ಜರಾಸಂಧನ ಬಳಿಗೆ ಹೋಗುವೆವು.
ಹನಿಷ್ಯ ಏವ ಮಾಗಧಂ ಹರೇಃ ಪುರೋ ನ ಸಂಶಯಃ |
ಇತೀರಿತೇSಮುನಾ ಹರಿರ್ಜಗಾದ ಧರ್ಮನಂದನಂ ॥117॥
ನಾನು ಶ್ರೀಕೃಷ್ಣ ಸಮ್ಮುಖದಲ್ಲಿ ಜರಾಸಂಧನನ್ನು ಕೊಂದೇ ತೀರುತ್ತೇನೆ. ಇದಕ್ಕೆ ಸಂಶಯವಿಲ್ಲ. ಹೀಗೆ ಭೀಮ ಹೇಳಿದಾಗ ಶ್ರೀಕೃಷ್ಣ

ಧರ್ಮರಾಜನಿಗೆ ನುಡಿದ.
ವಯಂ ತ್ರಯಃ ಸಮೇತ್ಯ ತಂ ಪ್ರಯಾತಯಾಮ ಮೃತ್ಯವೇ |
ಹವಿಷ್ಯತಿ ಸುಟಂ ರಣೇ ವೃಕೋದರೋ ಜರಾಸುತಂ ॥118॥
ನಾವು ಮೂವರು ಕೂಡಿ ಜರಾಸಂಧನನ್ನು ಮೃತ್ಯುವಿಗೆ ಕಳಿಸಿಕೊಡುತ್ತೇವೆ. ನಿಶ್ಚಯವಾಗಿ ಭೀಮ ಜರಾಸಂಧನನ್ನು ಯುದ್ಧದಲ್ಲಿ ಕೊಲ್ಲುತ್ತಾನೆ.
ಭಯಂ ನ ಕಾರ್ಯಮೇವ ತೇ ಮಯಾ ಹತಃ ಸ ನೇತಿ ಹ |
ಮಯಾ ಹಿ ನೀತಿಹೇತುತಃ ಸ್ವಯಂ ನ ಹನ್ಯತೇ ರಿಪುಃ ॥119॥
ನಾನು ಇಂದಿನವರೆಗೂ ಅವನನ್ನು ಕೊಲ್ಲಲಿಲ್ಲವೆಂದು ನೀನು ಭಯಪಡಬೇಕಾಗಿಲ್ಲ. ನೀತಿಯನ್ನು ತೋರುವ ಸಲುವಾಗಿ ನಾನು ಸ್ವಯಂ ಅವನನ್ನು ಕೊಲ್ಲುತ್ತಿಲ್ಲ. ಅಷ್ಟೆ.
ಸ ಶರ್ವಸಂಶ್ರಯಾಗ್ರಣೀರ್ಮದಾಶ್ರಯೋತ್ತಮೇನ ತು |
ನಿಹನ್ಯತೇ ಯದಾ ತದಾ ಪ್ರಕಾಶಿತಂ ಹಿ ಮೇ ಬಲಂ ॥120॥
ಶಿವನನ್ನು ಆಶ್ರಯಿಸಿರುವವರಲ್ಲಿ ಅಗ್ರಗಣ್ಯ ಜರಾಸಂಧ. ನನ್ನನ್ನು ಆಶ್ರಯಿಸಿದವರಲ್ಲಿ ಅಗ್ರಗಣ್ಯನಾಗಿರುವವನೊಬ್ಬ ಅವನನ್ನು ಕೊಂದಾಗಲೆ ನನ್ನ ಶಕ್ತಿ ಎಷ್ಟೆಂಬುದು ಬೆಳಕಿಗೆ ಬರುತ್ತದೆ.
ಅತೋ ನ ಶಂಕಿತಂ ಮನಃ ಕುರುಷ್ವ ಭೂಪತೇ ಕ್ವಚಿತ್ |
ಪ್ರದರ್ಶಯಾಮಿ ತೇSನುಜೌ ನಿಹತ್ಯ ಮಾಗಧೇಶ್ವರಂ ॥121॥
ಅದರಿಂದ, ಧರ್ಮರಾಜ ನೀನು ಯಾರ ವಿಷಯದಲ್ಲಿಯೂ ಸಂದೇಹ ಪಡಬೇಡ. ಜರಾಸಂಧನನ್ನು ಕೊಂದು ನಿನ್ನ ತಮ್ಮಂದಿರನ್ನು ನಾನು ನಿನ್ನ ಮುಂದೇ ತಂದು ತೋರುತ್ತೇನೆ.
ಇತೀರಿತಃ ಸ ವಿಷ್ಣುನಾ ವಿಚಾರ್ಯ ತದ್ಗುಣಾನ್ ಪರಾನ್ |
ತಥೇತಿ ಚಾಹ ತೇ ತ್ರಯಃ ಪ್ರತಸ್ಥುರಾಶು ಮಾಗಧಾನ್ ॥122॥
ಹೀಗೆ ಶ್ರೀಕೃಷ್ಣ ಹೇಳಿದಾಗ ಧರ್ಮರಾಜ ಅವರ ಉತ್ತಮ ಗುಣಗಳನ್ನು ಪರ್ಯಾಲೋಚಿಸಿ `ಹಾಗೇ ಆಗಲಿ' ಎಂದ. ಅವರು ಮೂವರೂ ಬೇಗನೆ ಮಗಧ ದೇಶಕ್ಕೆ ಹೊರಟರು.
* * * *

ಹದಿನೇಳನೆಯ ಅಧ್ಯಾಯ
(ರಾಜಸೂಯ ವಿಷಯದಲ್ಲಿ ಕೃಷ್ಣ ಯುಷ್ಠಿರ ಭೀಮರ ಸಮಾಲೋಚನೆ)
ಯುಷ್ಠಿರಃ
ಉಕ್ತಂ ತ್ವಯಾ ಬುದ್ಧಿಮತಾ ಯನ್ನಾನ್ಯೋ ವಕ್ತುಮರ್ಹತಿ |
ಸಂಶಯಾನಾಂ ವಿನಿರ್ಮೋಕ್ತಾ ಕೋSನ್ಯಸ್ತ್ವತ್ತೋ ಹಿ ನಃ ಪುಮಾನ್ ॥1॥
ಕೃಷ್ಣನೇ ಬುದ್ಧಿವಂತನಾದ ನೀನು ನಮಗೆ ಇನ್ನು ಯಾರೂ ಹೇಳಲಾಗದ ವಿಷಯಗಳನ್ನು ಹೇಳಿದ್ದೀಯೆ ನಮಗೆ ನಮ್ಮ ಸಂಶಯವನ್ನು ನಿವಾರಿಸಲು ನಿನಗಿಂತ ಶ್ರೇಷ್ಠರಾದ ಪುರುಷರು ಯಾರಿದ್ದಾರೆ?
ಗೃಹೇ ಗೃಹೇ ಹಿ ರಾಜಾನಃ ಸ್ವಸ್ಯ ಸ್ವಸ್ಯ ಪ್ರಿಯಂಕರಾಃ |
ನಚ ಸಾಮ್ರಾಜ್ಯಮಾಪ್ತಾಸ್ತೇ ಸಮ್ರಾಟ್ಶಬ್ದೋ ಹಿ ಕೃತ್ಸ್ನಭಾಕ್ ॥2॥
ಮನೆಮನೆಗಳಲ್ಲಿ ರಾಜರು ಇದ್ದಾರೆ. ಅವರು ತಮತಮಗೆ ಹಿತವನ್ನು ಮಾಡಿಕೊಳ್ಳುತ್ತಿದ್ದಾರೆ. ಆದರೆ ಅವರಾರಿಗೂ ಸಮ್ರಾಜರಾರಲ್ಲ ಸಂಮ್ರಾಟ್ ಎಂಬ ಶಬ್ದವು ಎಲ್ಲರ ಜಯವನ್ನು ಒಳಗೊಂಡು ಸಂಪಾದಿಸಲು ಕಷ್ಟವಾದುದು.
ಕಥಂ ಪರಾನುಭಾವಜ್ಞಃ ಸ್ವಯಂ ಶಂಸಿತುಮರ್ಹತಿ |
ಪರೇಣ ಸಮವೇತಸ್ತು ಯಃ ಪ್ರಶಸ್ತಃ ಸ ಪೂಜ್ಯತೇ ॥3॥
ಶತ್ರುವಿನ ಬಲವನ್ನು ತಿಳಿದು ಯಾವನು ತಾನೆ ತನ್ನನ್ನು ತಾನು ಹೊಗಳಿಕೊಳ್ಳಲುಸಾಧ್ಯ? ಶತ್ರುವನ್ನು ಎದುರಿಸಿದಾಗಲೂ ಯಾರು ಪ್ರಶಸ್ತನಾಗಿ ಇರುತ್ತಾನೆಯೋ ಅವನು ಪೂಜ್ಯನಾಗುತ್ತಾನೆ.
ವಿಸ್ತೀರ್ಣಾ ಬಹುಳಾ ಭೂಮಿರ್ಬಹುರತ್ನಸಮಾಚಿತಾ |
ದೂರಂ ಗತ್ವಾ ವಿಜಾನಾತಿ ಶ್ರೇಯೋ ವೃಷ್ಣಿಕುಲೋದ್ವಹ ॥4॥
ವೃಷ್ಣಿಕುಲೋದ್ಭವನೇ! ಭೂಮಿಯು ಬಹಳ ವಿಸ್ತಾರವಾದುದು. ಅಲ್ಲಲ್ಲಿ ಅನೇಕ ರತ್ನಪ್ರಾಯರಾದ ಪುರುಷರು ಇದ್ದಾರೆ. ದೂರ ಪ್ರಯಾಣಮಾಡಿದರೆ ಮಾತ್ರ ಯಾರು ಶ್ರೇಷ್ಠರೆಂದು ತಿಳಿಯುತ್ತದೆ.
ಹಿತ್ವಾ ಕರಾನ್ ಯೌವನಾಶ್ವಃ ಪಾಲನಾಚ್ಚ ಭಗೀರಥಃ |
ಕಾರ್ತವೀರ್ಯಸ್ತಪೋಯೋಗಾದ್ ಬಲಾತ್ತು ಭರತೋ ವಿಭುಃ |
ಋದ್ಧ್ಯಾ ಮರುತ್ತಸ್ತಾನ್ ಪಂಚ ಸಾಮ್ರಾಜ್ಯೇನೇತಿ ಶುಶ್ರುಮಃ ॥5॥
ಯೌವನಾಶ್ವನು ತೆರಿಗೆಯನ್ನು ಪರಿತ್ಯಾಗಮಾಡುವುದರಿಂದ, ಭಗೀರಥನು ಚೆನ್ನಾಗಿ ಪಾಲನೆಮಾಡುವುದರಿಂದ, ಕಾರ್ತವೀರ್ಯನು ತಪಸ್ಸಿನ ಬಲದಿಂದ, ಭರತನು ತನ್ನ ಭುಜಬಲದಿಂದ, ಮರುತ್ತನು ತನ್ನ ಸಂಪತ್ತಿನ ಬಲದಿಂದ ಸಮ್ರಾಟ್ ಎಂಬ ಪಟ್ಟವನ್ನು ಪಡೆದರೆಂದು ನಾವು ಕೇಳಿದ್ದೇವೆ.
ಸರ್ವಾನ್ ವಂಶಾನನುಭೃಶಂ ನೈತೇ ಸಂತಿ ಯುಗೇಯುಗೇ |
ಶಮಮೇವ ಪರಂ ಮನ್ಯೇ ನತು ವಾಚಾ ಭವೇಚ್ಚಮಃ ॥6॥

ಇಂತಹ ಮಹಾಪುರುಷರು ಪ್ರತಿಯುಗದಲ್ಲಿಯೂ ಪ್ರತಿವಂಶದಲ್ಲಿಯೂ ಉಂಟಾಗುವುದಿಲ್ಲ. ಯುದ್ಧವನ್ನು ಬಿಟ್ಟು ಶಾಂತಿಯಿಂದ ಇರುವುದೇ ಲೇಸು ಎನಿಸುತ್ತದೆ. ಅದೇ ನನಗೆ ಮೋಕ್ಷವನ್ನು ಸಾಸಿಕೊಡುತ್ತದೆ. ಕೇವಲ ಮಾತಿನಿಂದ ಶಾಂತಿಯುಂಟಾಗುವುದಿಲ್ಲ.
ಭೀಮಃ
ಆರಂಭೇ ಪಾರಮೇಷ್ಠ್ಯಂ ತು ನಾಪ್ರಾಪ್ಯಮಿತಿ ಮೇ ಮತಿಃ |
ಏವಮೇವಾಭಿಜಾನಂತಿ ಕುಲೇ ಜಾತಾ ಮನಸ್ವಿನಃ |
ಕಶ್ಚಿತ್ ಕದಾಚಿದೇತೇಷಾಂ ಭವೇಜ್ಜ್ಯೇಷ್ಠೋ ಜನಾರ್ದನ ॥7॥
ಜನಾರ್ದನನೇ! ಪ್ರಯತ್ನದಿಂದ ಸಾಸಲ್ಪಡಬಹುದಾದರೆ ಬ್ರಹ್ಮಪದವಿಯನ್ನೇ ಸಾಸಬೇಕೆಂದು ನನ್ನ ಅಭಿಪ್ರಾಯ. ಸತ್ಕುಲದಲ್ಲಿ ಹುಟ್ಟಿದ ಧೈರ್ಯಶಾಲಿಗಳು ಹೀಗೆಯೇ ಆಲೋಚಿಸುತ್ತಾರೆ. ಜನಾರ್ದನನೇ! ಅವರಲ್ಲಿ ಒಮ್ಮೊಮ್ಮೆ ಒಬ್ಬನು ಶ್ರೇಷ್ಠನಾಗುತ್ತಾನೆ.
ಅನಾರಂಭಪರೋ ರಾಜಾ ವಲ್ಮೀಕ ಇವ ಸೀದತಿ |
ದುರ್ಬಲಶ್ಚಾಪ್ಯುಪಾಯೇನ ಬಲಿನಂ ಯೋಧಯಿಷ್ಯತಿ ॥8॥
ಉದ್ಯೋಗಪರನಾಗದ ರಾಜನು ಹುತ್ತದಂತೆ ನಶಿಸಿಹೋಗುತ್ತಾನೆ. ದುರ್ಬಲನಾದ ರಾಜನು ಉಪಾಯದಿಂದ ಬಲಿಷ್ಠನಾದ ರಾಜನ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಅತಂದ್ರಿತಸ್ತು ಪ್ರಾಯೇಣ ದುರ್ಬಲೋ ಬಲಿನಂ ರಿಪುಮ್ |
ಜಯೇತ್ ಸಮ್ಯಙ್ ನಯೋ ರಾಜನ್ ನೀತ್ಯರ್ಥೇ ಹಿ ಪ್ರವರ್ತತೇ ॥
ಆಲಸ್ಯವಿಲ್ಲದೆ ಸತತವಾಗಿ ಪ್ರಯತ್ನವನ್ನುಪಡುವ ದುರ್ಬಲರಾಜನೂ ಸಹ ಬಲಿಷ್ಠನಾದ ಶತ್ರುವನ್ನು ಗೆಲ್ಲುತ್ತಾನೆ. ರಾಜನೇ! ಸರಿಯಾದ ನೀತಿಯು ಎಲ್ಲದಕ್ಕೂ ಕಾರಣವಾಗುತ್ತದೆ. ಸರಿಯಾದ ನೀತಿಗಾಗಿಯೇ ಎಲ್ಲರೂ ಪ್ರಯತ್ನ ಪಡುತ್ತಾರೆ.
ಕೃಷ್ಣೇ ನಯೋ ಮಯಿ ಬಲಂ ಜಯಃ ಪಾರ್ಥೇ ಧನಂಜಯೇ |
ಮಾಗಧಂ ಸಾಧಯಿಷ್ಯಾಮೋ ವಯಂ ತ್ರಯ ಇವಾಗ್ನಯಃ ॥10॥
ಕೃಷ್ಣನಲ್ಲಿ ನೀತಿಯಿದೆ. ನನ್ನಲ್ಲಿ ಬಲವಿದೆ. ಅರ್ಜುನನಲ್ಲಿ ಶಕ್ತಿಯಿದೆ. ಮೂರು ಅಗ್ನಿಗಳಂತಿರುವ ನಾವು ಜರಾಸಂಧನನ್ನು ಗೆಲ್ಲುವೆವು.
ತ್ವದ್ಬುದ್ಧಿಬಲಮಾಶ್ರಿತ್ಯ ಸರ್ವಂ ಪ್ರಾಪ್ಸ್ಯತಿ ಧರ್ಮರಾಟ್ |
ಜಯೋಽಸ್ಮಾಕಂ ಹಿ ಗೋವಿಂದ ಯೇಷಾಂ ನಾಥೋ ಭವಾನ್ ಸದಾ ॥11॥
ಗೋವಿಂದನೇ! ನಿನ್ನ ಬುದ್ಧಿಬಲವನ್ನು ಅವಲಂಬಿಸಿ ಧರ್ಮರಾಜನು ಗೆಲ್ಲುವನು. ನಿನ್ನನ್ನು ನಾಥನಾಗಿ ಹೊಂದಿದ ನಮಗೆ ಯಾವಾಗಲೂ ಜಯವೇ ಉಂಟಾಗುತ್ತದೆ.
ಶ್ರೀಭಗವಾನ್
ಆತ್ಮನೋಽರ್ಥಪರೋ ಬಾಲೋ ನಾನುಬಂಧಮವೇಕ್ಷತೇ |
ತಂ ವಿಷಕ್ತಮಥೋ ಘ್ನಂತಿ ಬಾಲಮರ್ಥಪರಾಯಣಮ್ ॥12॥
ಸ್ವಾರ್ಥಪರನಾದ ಬಾಲಕನು ಮುಂದೆ ಉಂಟಾಗುವ ತೊಂದರೆಗಳನ್ನು ಗಮನಿಸುವುದಿಲ್ಲ. ಅಂತಹ ಸ್ವಾರ್ಥಿಯಾದ ಬಾಲಕನಂತೆ ತನ್ನ ಸ್ವಾರ್ಥದಲ್ಲಿ ಪ್ರಯತ್ನಶೀಲನಾದ ರಾಜನನ್ನು ಶತ್ರುಗಳು ಸಂಹರಿಸುತ್ತಾರೆ.
ತಸ್ಮಾದ್ ವಂಶ್ಯಾನನುಮೃಶನ್ನೇವಂ ನೈವ ಸತಾಂ ಯುಗೇ |
ಸಾಧಯೇದೇವ ತತ್ ಕಾರ್ಯಂ ವಿಚಾರ್ಯಾರಭತೇ ಹಿ ಯಃ ॥13॥
ಆದ್ದರಿಂದ ಯುಗಯುಗಗಳಲ್ಲಿ ಸಜ್ಜನರವಂಶಗಳಲ್ಲಿ ಬಂದ ಮಹಾಪುರುಷರನ್ನು ವಿಮರ್ಶೆಮಾಡಿ ಹೀಗೆ ಬಾಲಕನಂತೆ ನಡೆದುಕೊಳ್ಳಬಾರದು. ಯಾವನು ಚೆನ್ನಾಗಿ ವಿಚಾರಮಾಡಿ ಕಾರ್ಯವನ್ನು ಆರಂಭಿಸುತ್ತಾನೆಯೋ ಅವನು ಅದನ್ನು ಸಾಸುತ್ತಾನೆ.
ಸಂಗ್ರಾಹ್ಯಲಕ್ಷಣಂ ಪ್ರಾಪ್ತೋ ಧರ್ಮಾರ್ಥನಯಲಕ್ಷಣೈಃ |
ಬಾರ್ಹದ್ರಥಂ ಜರಾಸಂಧಂ ತಂ ವಿದ್ಧಿ ಭರತರ್ಷಭ ॥14॥
ಭರತರ್ಷಭನೇ! ಧರ್ಮ ಅರ್ಥ ಮತ್ತು ರಾಜನೀತಿಗಳನ್ನು ತಿಳಿದು ಮೇಧಾವಿಗಳ ಮಾರ್ಗದರ್ಶನದಲ್ಲಿ ಜರಾಸಂಧನು ಅಪೇಕ್ಷಣೀಯವಾದ ಧರ್ಮ ಅರ್ಥ ಮತ್ತು ರಾಜನೀತಿಗಳನ್ನು ಸಂಪಾದಿಸಿದ್ದಾನೆಂದು ತಿಳಿ.
ನಚೈನಂ ಪ್ರತಿಯುದ್ಧ್ಯಂತಿ ಕುಲಾನ್ಯೇಕಶತಂ ನೃಪಾಃ |
ತಸ್ಮಾದೇತದ್ಬಲಾದೇವ ಸಾಮ್ರಾಜ್ಯಂ ಕುರುತೇಽದ್ಯ ಸಃ ॥15॥
ನೂರೊಂದು ಕುಲಗಳಿಗೆ ಸೇರಿದ ರಾಜರು ಅವನ ಜೊತೆಯಲ್ಲಿ ಯುದ್ಧಮಾಡುವುದಿಲ್ಲ. ಆ ಬಲದಿಂದಲೇ ಅವನು ಈ ದಿನ ಸಾಮ್ರಾಜ್ಯವನ್ನು ಆಳುತ್ತಿದ್ದಾನೆ.
ರತ್ನಭಾಜೋ ಹಿ ರಾಜನ್ಯಾ ಜರಾಸಂಧಮುಪಾಸತೇ |
ನಚ ತುಷ್ಯತಿ ತೇನಾಪಿ ಬಲೇನಾನಯಮಾಸ್ಥಿತಃ ॥16॥
ಕೈಯಲ್ಲಿ ರತ್ನವನ್ನುಹಿಡಿದ ರಾಜರು ಜರಾಸಂಧನ ಸೇವೆಯನ್ನು ಮಾಡುತ್ತಿದ್ದಾರೆ. ಆದರೆ ಬಲದರ್ಪದಿಂದ ಅನೀತಿಯ ಮಾರ್ಗವನ್ನು ಹಿಡಿದ ಅವನು ಅದರಿಂದ ಸಂತೋಷಪಡುತ್ತಿಲ್ಲ.
ಮೂರ್ಧಾಭಿಷಿಕ್ತಂ ನೃಪತಿಂ ಪ್ರಧಾನಂ ಪುರುಷಂ ಚ ನ |
ನಾದತ್ತೇ ಯೋ ಪುಮಾನ್ ದೃಷ್ಟ್ವಾ ಭಾಗಂ ಪುರುಷತಃ ಕ್ವಚಿತ್ ॥17॥
ಯಾವನು ಸಜ್ಜನರನ್ನು ನೋಡಿ, ಅವರಿಂದ ಒಂದೊಂದು ಗುಣದ ಭಾಗವನ್ನು ಪುರಸ್ಕರಿಸುವುದಿಲ್ಲವೋ, ಅಂತಹವನು ಮೂರ್ಧಾಭಿಷಿಕ್ತನಾದ ರಾಜನಾದ ಶ್ರೇಷ್ಠ ಪುರುಷನನ್ನು ಕಣ್ಣಿನಿಂದಲೂ ನೋಡುವುದಿಲ್ಲ.
ಏವಂ ಸರ್ವಾನತೀತ್ಯೈಕೋ ಜರಾಸಂಧಃ ಶತಾವರಾನ್ |
ತಂ ದುರ್ಬಲತರೋ ರಾಜಾ ಕಥಂ ಪಾರ್ಥ ಉಪೇಷ್ಯತಿ ॥18॥

ಹೀಗೆ ಪ್ರತಾಪಶಾಲಿಯಾದ ಜರಾಸಂಧನು ನೂರಕ್ಕೆ ಸ್ವಲ್ಪ ಕಡಮೆಯಾದಷ್ಟು ರಾಜರುಗಳನ್ನು ತಾನೊಬ್ಬನೇ ಅತಿಕ್ರಮಿಸಿ ತನ್ನ ಅಧೀನದಲ್ಲಿ ಇಟ್ಟುಕೊಂಡಿದ್ದಾನೆ. ಬಹಳ ದುರ್ಬಲನಾದ ರಾಜನಾದ ನೀನು ಅವನ ಜೊತೆಯಲ್ಲಿ ಹೇಗೆ ಸೆಣಸುತ್ತೀಯೆ?
ತಂಡುಲಪ್ರಸ್ಥಕೋ ರಾಜಾ ಕಪರ್ದಿನಮುಪಾಸತೇ |
ಪ್ರೋಕ್ಷಿತಾನಾಂ ಪ್ರಮೃಷ್ಟಾನಾಂ ರಾಜ್ಞಾಂ ಪಶುಪತೇರ್ಗೃಹೇ |
ಪಶೂನಾಮಿವ ಕಾ ಪ್ರೀತಿರ್ಜೀವಿತೇ ಭರತರ್ಷಭ ॥19॥
ಶಿವಪೂಜೆಗಾಗಿ ಪ್ರತಿದಿವಸವೂ ಒಂದು ಮುಷ್ಟಿ ಅಕ್ಕಿಯನ್ನು ತೆಗೆದಿಡುವ ರಾಜನು, ಶಿವನನ್ನು ಉಪಾಸನೆಮಾಡುತ್ತಾನೆ. ಭರತಶ್ರೇಷ್ಠನೇ! ಶಿವಾಲಯದಲ್ಲಿ ಬಲಿಗೆ ಸಿದ್ಧವಾದ ಪ್ರೋಕ್ಷಿಸಿತೊಳೆಯಲ್ಪಟ್ಟ ಪಶುಗಳಂತೆ ನಮಗೆ ಜೀವನದಲ್ಲಿ ಏನು ಸುಖವಿದೆ?
ಕ್ಷತ್ರಿಯಃ ಶಸ್ತ್ರಮರಣೋ ಯದಾ ಭವತಿ ಸತ್ಕೃತಃ |
ನನು ಸ್ಮ ಮಾಗಧಂ ಸರ್ವಂ ಪ್ರತಿಬಾಧೇಮ ತಂ ವಯಮ್ ॥20॥
ಕ್ಷತ್ರಿಯನು ಯಾವಾಗ ಶಸ್ತ್ರಮರಣಕ್ಕೆ ಭಯಪಡುವುದಿಲ್ಲವೋ ಆಗ ಅವನು ಪೂಜ್ಯನಾಗುತ್ತಾನೆ. ನಾವೆಲ್ಲರೂ ಸೇರಿ ಜರಾಸಂಧನ ಜೊತೆಯಲ್ಲಿ ಯುದ್ಧಮಾಡುತ್ತೇವಷ್ಟೇ.
ಷಡಶೀತಿಃ ಸಮಾನೀತಾಃ ಶೇಷಾಶ್ಚಾನ್ಯೇ ಚತುರ್ದಶ |
ಜರಾಸಂಧೇನ ರಾಜಾನಸ್ತತಃ ಕ್ರೂರಂ ಪ್ರಪತ್ಸ್ಯತೇ ॥21॥
ಜರಾಸಂಧನಿಂದ ಎಂಭತ್ತಾರು ಕುಲದ ರಾಜರುಗಳು ಸಂಗ್ರಹಿಸಲ್ಪಟ್ಟಿದ್ದಾರೆ. ಅವನು ಇನ್ನೂ ಹದಿನಾಲ್ಕು ಕುಲದ ರಾಜರುಗಳನ್ನು ಸಂಗ್ರಹಿಸಬೇಕಾಗಿದೆ ಅನಂತರ ಅವನು ಆ ಕ್ರೂರಕರ್ಮವನ್ನು ಮಾಡುವನು.
ಪ್ರಾಪ್ನುಯಾತ್ ಸ ಯಶೋ ದೀಪ್ತಂ ತತ್ರ ಯೋ ವಿಘ್ನಮಾಚರೇತ್ |
ಜಯೇದ್ ಯಶ್ಚ ಜರಾಸಂಧಂ ಸ ಸಮ್ರಾಣ್ನಿಯತಂ ಭವೇತ್ ॥22॥
ಆ ಕ್ರೂರಕರ್ಮಕ್ಕೆ ಯಾವನು ವಿಘ್ನವನ್ನು ಮಾಡುತ್ತಾನೆಯೋ, ಅವನು ದೀಪ್ತವಾದ ಯಶಸ್ಸನ್ನು ಪಡೆಯುವನು. ಯಾವನು ಜರಾಸಂಧನನ್ನು ಜಯಿಸುತ್ತಾನೆಯೋ ಅವನು ನಿಶ್ಚಿತವಾಗಿ ಸಮ್ರಾಟ್ ಪದವಿಗೆ ಅರ್ಹನಾಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತದಶೋಽಧ್ಯಾಯಃ ॥
॥ ಮಂತ್ರಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿಯಿತು.
*****
ಹದಿನೆಂಟನೆಯ ಅಧ್ಯಾಯ
(ಯುಷ್ಠಿರ ಅರ್ಜುನರ ಸಂವಾದ)
ಯುಷ್ಠಿರಃ
ಸಮ್ರಾಡ್ಗುಣಮಭೀಪ್ಸನ್ ವೈ ಯುಷ್ಮಾನ್ ಸ್ವಾರ್ಥಪರಾಯಣಃ|
ಕಥಂ ಪ್ರಹಿಣುಯಾಂ ಭೀಮಂ ಬಲಾತ್ ಕೇವಲಸಾಹಸಾತ್ ॥1॥
ನಾನು ಸಮ್ರಾಟನಾಗಬೇಕೆಂದು ಆಶಿಸಿ ಸ್ವಾರ್ಥಪರನಾಗಿ ಏನೂ ವಿಮರ್ಶೆಮಾಡದೆ ಕೇವಲ ಸಾಹಸದಿಂದ ಬಲಾತ್ಕಾರದಿಂದ ಹೇಗೆ ಭೀಮನನ್ನು ಕಳುಹಿಸಲಿ?
ಭೀಮಾರ್ಜುನಾವುಭೌ ನೇತ್ರೇ ಮನೋ ಮನ್ಯೇ ಜನಾರ್ದನಮ್ |
ಮನಶ್ಚಕ್ಷುರ್ವಿಹೀನಸ್ಯ ಕೀದೃಶಂ ಜೀವಿತಂ ಭವೇತ್ ॥2॥
ಭೀಮ ಮತ್ತು ಅರ್ಜುನರು ನನ್ನ ಎರಡು ಕಣ್ಣುಗಳು. ಕೃಷ್ಣನು ನನ್ನ ಮನಸ್ಸು ಎಂದು ತಿಳಿದಿದ್ದೇನೆ. ಮನಸ್ಸು ಮತ್ತು ಕಣ್ಣುಗಳಿಲ್ಲದ ಪುರುಷನು ಹೇಗೆ ಜೀವಿಸಲು ಸಾಧ್ಯವಾಗುತ್ತದೆ?
ಜರಾಸಂಧಬಲಂ ಪ್ರಾಪ್ಯ ದುಷ್ಪಾರಂ ಭೀಮವಿಕ್ರಮಮ್ |
ಸಮಾ ಹಿ ಯಃ ಪರೋಕ್ಷಃ ಸ್ಯಾತ್ ಕಿಮು ತತ್ರ ವಿಚೇಷ್ಟಿತಮ್ |
ಅಸ್ಮಿನ್ನರ್ಥಾಂತರೇ ಯುಕ್ತಮನರ್ಥಂ ಪ್ರತಿಪದ್ಯತೇ ॥3॥
ಜರಾಸಂಧನು ಯುದ್ಧಮಾಡುವಾಗಲೆಲ್ಲಾ ನಾನು ಬಹಳವರ್ಷಗಳವರೆಗೆ ಅಂತಃಪುರದಲ್ಲಿಯೇ ಇದ್ದು ಅವನ ಪರಾಕ್ರಮವನ್ನು ನೋಡಲೇ ಇಲ್ಲ. ಇನ್ನು ಅವನನ್ನು ಎದುರಿಸುವುದು ಹೇಗೆ? ಜರಾಸಂಧನ ವಧೆಯರೂಪವಾದ ಪ್ರಯೋಜನವನ್ನು ಪಡೆಯಲು ಹೋಗಿ ಮಧ್ಯದಲ್ಲಿ ಭೀಮಾರ್ಜುನರ ನಾಶವೆಂಬ ಅನರ್ಥವನ್ನು ಪಡೆಯುವುದು ನಿಂದ್ಯವಾದುದು.
ಯಥಾವದ್ ವಿಮೃಶಾಮ್ಯೇಕಃ ತತ್ ತಾವಚ್ಛ್ರೂಯತಾಂ ಮಮ |
ಸನ್ನ್ಯಾಸಂ ರೋಚಯೇ ಸಾಧು ಕಾರ್ಯಸ್ಯಾಸ್ಯ ಜನಾರ್ದನ |
ಪ್ರತಿಹಂತಿ ಮನೋ ಮೇಽದ್ಯ ರಾಜಸೂಯೋ ದುರಾಹರಃ ॥4॥
ಜನಾರ್ದನನೇ! ನಾನು ಸರಿಯಾಗಿ ವಿಮರ್ಶೆಮಾಡಿದ್ದೇನೆ. ನನ್ನ ನಿರ್ಧಾರವನ್ನು ಕೇಳು ಈ ರಾಜಸೂಯಯಾಗದಿಂದ ಹಿಮ್ಮೆಟ್ಟುವುದೇ ಲೇಸು ಎಂದು ನನಗೆ ತೋರುತ್ತಿದೆ. ಈ ವಿಷಯವು ನನ್ನ ಮನಸ್ಸನ್ನು ಘಾತಿಸುತ್ತಿದೆ. ನಾನು ರಾಜಸೂಯಯಾಗವನ್ನು ಮಾಡಲಾರೆ ಎಂದು ನನ್ನ ಅಭಿಪ್ರಾಯ.
ವೈಶಂಪಾಯನಃ
ಪಾರ್ಥಃ ಪ್ರಾಪ್ಯ ಧನುಃಶ್ರೇಷ್ಠಮಕ್ಷಯ್ಯೌ ಚ ಮಹೇಷೂ |
ರಥಂ ಧ್ವಜಂ ಹಯಾಂಶ್ಚೈವ ಯುಷ್ಠಿರಮಭಾಷತ ॥5॥
ಶ್ರೇಷ್ಠವಾದ ಧನುಸ್ಸನ್ನೂ ಅಕ್ಷಯಬತ್ತಳಿಕಗಳನ್ನೂ ರಥಧ್ವಜ ಮತ್ತು ಅಶ್ವಗಳನ್ನೂ ಸಂಪಾದಿಸಿದ್ದ ಅರ್ಜುನನು. ಯುಷ್ಠಿರನನ್ನು

ಕುರಿತು ಮಾತನಾಡಿದನು.
ಧನುರಸ್ತ್ರಂ ಶರಾ ವೀರ್ಯಂ ಪಕ್ಷೋ ಭೂಮಿರ್ಯಶೋ ಬಲಮ್ |
ಪ್ರಾಪ್ತಮೇತನ್ಮಯಾ ರಾಜನ್ ದುಷ್ಪ್ರಾಪಂ ಯದಭೀಪ್ಸಿತಮ್ ॥6॥
ರಾಜನೇ! ಲೋಕದಲ್ಲಿ ಎಲ್ಲ ರಾಜರಿಗೂ ಇಷ್ಟವಾದ ಅದರ ಸಂಪಾದಿಸಲು ಅಸಾದ್ಯವಾದ ಧನುಸ್ಸು, ಅಸ್ತ್ರ, ಬಾಣಗಳು, ಪರಾಕ್ರಮ, ಪಕ್ಷ, ಭೂಮಿ, ಯಶಸ್ಸು, ಮತ್ತು ಬಲಗಳನ್ನು ನಾನು ಸಂಪಾದಿಸಿದ್ದೇನೆ.
ಕುಲೇ ಜನ್ಮ ಪ್ರಶಂಸಂತಿ ವೈದ್ಯಾಃ ಸಾಧು ಸುನಿಷ್ಠಿತಾಃ |
ಬಲೇನ ಸದೃಶಂ ನಾಸ್ತಿ ವೀರ್ಯಂ ತು ಮಮ ರೋಚತೇ ॥7॥
ವಿದ್ಯಾವಂತರಾದವರು ಮತ್ತು ಸತ್ಕರ್ಮಗಳಲ್ಲಿ ನಿರತರಾದವರು ಶ್ರೇಷ್ಠವಾದ ಕುಲದಲ್ಲಿ ಜನ್ಮವನ್ನು ಪ್ರಶಂಸಿಸುತ್ತಾರೆ. ಬಲಕ್ಕೆ ಸದೃಶವಾದ ಉಪಾಯವು ಇನ್ನೊಂದಿಲ್ಲ. ಆದ್ದರಿಂದ ಪರಾಕ್ರಮವೇ ಶ್ರೇಷ್ಠವೆಂದು ನನಗೆ ತೋರುತ್ತದೆ.
ಕೃತವಿದ್ಯಃ ಕುಲೇ ಜಾತೋ ನಿರ್ವೀರ್ಯಃ ಕಿಂ ಕರಿಷ್ಯತಿ |
ಕ್ಷತ್ರಿಯಃ ಸರ್ವಶೋ ರಾಜನ್ ಯಸ್ಯ ವೃತ್ತಿಃ ಪರಾಜಯೇ ॥8॥
ಸತ್ಕುಲದಲ್ಲಿ ಜನಿಸಿ ಶಸತ್ರರ್ಥವಿದ್ಯೆಯನ್ನು ಸಂಪಾದಿಸಿದವನು ಪರಾಕ್ರಮಶಾಲಿಯಾಗಿರಬೇಕು. ನಿರ್ವೀರ್ಯನಾದ ವ್ಯಕ್ತಿಯು ಏನುಮಾಡುವನು? ಯಾವನು ಶತ್ರುಗಳನ್ನು ಪರಾಭವಗೊಳಿಸುವ ಸ್ವಭಾವವನ್ನು ಹೊಂದಿರುತ್ತಾನೆಯೋ ಅವನೇ ಸರ್ವಪ್ರಕಾರದಿಂದಲೂ ಕ್ಷತ್ರಿಯನೆನಿಸುತ್ತಾನೆ.
ದ್ರವ್ಯಭೂತಾ ಗುಣಾಃ ಸರ್ವೇ ತಿಷ್ಠಂತಿ ಹಿ ಪರಾಕ್ರಮೇ |
ಜಯಸ್ಯ ಹೇತುಃ ಸಿದ್ಧಿರ್ಹಿ ಕರ್ಮ ದೈವಂ ಚ ಸಂಶ್ರಿತಮ್ ॥9॥
ಧನವನ್ನು ಆಶ್ರಯಿಸಿದ ಪರಪರಾಭವ ಮೊದಲಾದ ಎಲ್ಲಾಗುಣಗಳೂ ಪರಾಕ್ರಮವನ್ನು ಅವಲಂಬಿಸಿವೆ ಜಯಕ್ಕೆ ಕಾರಣವಾದುದು ಮಂತ್ರಸಿದ್ಧಿ ಮತ್ತು ದೈವವನ್ನು ಆಶ್ರಯಿಸಿದ ಪುಣ್ಯಕರ್ಮಗಳು.
ಸಂಯುಕ್ತೋ ಹಿ ಬಲ್ಯೈಃ ಕೈಶ್ಚಿತ್ ಪ್ರಮಾದಾನ್ನೋಹ ಯುಜ್ಯತೇ |
ತೇನ ದ್ವಾರೇಣ ಶತ್ರುಭ್ಯಃ ಕ್ಷೀಯತೇ ಸಬಲೋ ರಿಪುಃ ॥10॥
ಕೆಲವರು ಶತ್ರುಗಳ ಸೈನ್ಯವನ್ನು ಹೊಂದಿ ಅದನ್ನು ಎದುರಿಸುತ್ತಾರೆ. ಇನ್ನು ಕೆಲವರು ಪ್ರಮಾದದಿಂದ ಶತ್ರುಸೈನ್ಯವನ್ನು ಎದುರಿಸುವುದೇ ಇಲ್ಲ. ಆ ಕಾರಣದಿಂದ ಬಲಿಷ್ಠನಾಗಿದ್ದರೂ ಸಹ ತನ್ನ ಶತ್ರುಗಳಿಗೆ ವಶನಾಗಿ ನಾಶವನ್ನು ಹೊಂದುತ್ತಾನೆ.
ಅಬಲೇ ವಿಕ್ರಿಯಾ ಯಾದೃಕ್ ತಥಾ ಮೋಹೋ ಬಲಾನ್ವಿತೇ |
ಏತಾವುಭೌ ಮಹಾದೋಷೌ ನಿತ್ಯಂ ತ್ಯಾಜ್ಯೌ ಜಯಾರ್ಥಿನಾ ॥11॥
ದುರ್ಬಲನಾದವನಲ್ಲಿ ಯಾಚನಾದಿ ವಿಕಾರವಿರುವಂತೆ ಬಲಿಷ್ಠನಾದವನಲ್ಲಿ ಪ್ರಮಾದ ಎಂಬ ದೋಷವಿರುತ್ತದೆ. ಇದೆರಡೂ ದೊಡ್ಡ ದೋಷಗಳು. ಜಯವನ್ನು ಅಪೇಕ್ಷಿಸುವವರು ಯಾವಾಗಲೂ ಇವೆರಡನ್ನೂ ತ್ಯಜಿಸಬೇಕು.
ಜರಾಸಂಧವಿನಾಶಂ ಚ ರಾಜ್ಞಾಂ ಚ ಪರಿಮೋಕ್ಷಣಮ್ |
ಯದಿ ಕುರ್ಯಾಮ ಯಜ್ಞಾರ್ಥೇ ತದಾರಂಭೋ ಮಹಾನ್ ಭವೇತ್॥
ನಾವು ರಾಜಸೂಯಯಾಗದ ಸಲುವಾಗಿ ಜರಾಸಂಧನವಧೆಯನ್ನು ಮತ್ತು ಅವನು ಸೆರೆಯಲ್ಲಿ ಇಟ್ಟಿರುವ ರಾಜರ ಬಿಡುಗಡೆಯನ್ನು ಸಾಸುವುದಾದರೆ ಅದು ದೊಡ್ಡ ಉಪಕ್ರಮವಾಗುತ್ತದೆ.
ಅನಾರಂಭೇ ತು ನಿರ್ಯುಕ್ತೋ ಭವೇದಗುಣನಿಶ್ಚಯಃ |
ಗುಣಾನ್ನಿಸ್ಸಂಶಯಾದ್ ರಾಜನ್ ನೈರ್ಗುಣ್ಯಂ ಮನ್ಯಸೇ ಕಥಮ್ ॥13॥
ಉಪಕ್ರಮವನ್ನೇ ಮಾಡದಿದ್ದರೆ ಯಾವ ಕಾರ್ಯವನ್ನೂ ಮಾಡದವನು ದ್ರವ್ಯಪ್ರಾಪ್ತಿ ರಾಜ್ಯಪ್ರಾಪ್ತಿ ಮೊದಲಾದ ಯಾವ ಗುಣವನ್ನೂ ಹೊಂದುವುದಿಲ್ಲ ಎಂಬುದು ನಿಶ್ಚಯ. ರಾಜನೇ! ನಿಶ್ಚಯವಾಗಿ ಗುಣವನ್ನು ಸಂಪಾದಿಸದೆ ಇರುವ ಸ್ಥಿತಿಯನ್ನು ನೀನು ಹೇಗೆ ಶ್ರೇಷ್ಠವೆಂದು ಭಾವಿಸುತ್ತೀಯೆ?
ಕಾಲೋಽಯಂ ಸುಲಭಃ ಪಶ್ಚಾನ್ಮುನೀನಾಂ ಶಮಮಿಚ್ಛತಾಮ್ |
ಸಾಮ್ರಾಜ್ಯಂ ತು ತವೇಚ್ಛಂತೋ ವಯಂ ಯೋತ್ಸ್ಯಾಮಹೇ ಪರೈಃ ॥
ಈ ವರ್ತಮಾನಕಾಲವು ಜಯವನ್ನು ಬಯಸುವ ಕ್ಷತ್ರಿಯರಾದ ನಮಗೆ ಶ್ರೇಷ್ಠವಾದುದು. ಶಮವನ್ನೇ ಬಯಸುವ ಮುನಿಗಳಿಗೆ ಭವಿಷ್ಯತ್ಕಾಲವು ಶ್ರೇಷ್ಠವಾದುದು. (ರಾಜರಿಗೆ ನಾಳೆ ಮಾಡಬೇಕಾದುದನ್ನು ಈ ದಿನವೇ ಮಾಡು ಎಂದು ಸೂಚನೆಯಿರುವುದರಿಂದ ವರ್ತಮಾನಕಾಲವೇ ಶ್ರೇಷ್ಠ) ಆದ್ದರಿಂದ ನಿನಗೆ ಸಮ್ರಾಟ್‌ಪದವಿಯನ್ನು ಸಂಪಾದಿಸಿಕೊಡುವ ಸಲುವಾಗಿ ಶತ್ರುಗಳ ಜೊತೆಯಲ್ಲಿ ನಾವು ಯುದ್ಧವನ್ನು ಮಾಡುವೆವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟಾದಶೋಽಧ್ಯಾಯಃ ॥
॥ ಮಂತ್ರಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿಯಿತು.
*****
ಹತ್ತೊಂಭತ್ತನೆಯ ಅಧ್ಯಾಯ
(ಕೃಷ್ಣನಿಂದ ಯುಷ್ಠಿರನನ್ನು ಕುರಿತು, ಜರಾಸಂಧನ ಜನ್ಮವೃತಾಂತ ವರ್ಣನೆ)
ವಾಸುದೇವಃ
ಜಾತಸ್ಯ ಭಾರತೇ ವಂಶೇ ತಥಾ ಕುಂತ್ಯಾಃ ಸುತಸ್ಯ ಚ |
ಯಾ ವೈ ಯುಕ್ತಾ ಮತಿಃ ಸೇಯಮರ್ಜುನೇನ ಪ್ರದರ್ಶಿತಾ ॥1॥

ಭರತಕುಲದಲ್ಲಿ ಕುಂತಿಯಮಗನಾಗಿ ಜನಿಸಿದ ಪುರುಷನಿಗೆ ಯೋಗ್ಯವಾದ ಈ ಬುದ್ಧಿಯನ್ನೇ ಅರ್ಜುನನು ತೋರಿಸಿದ್ದಾನೆ.
ನ ಮೃತ್ಯೋಃ ಸಮಯಂ ವಿದ್ಮ ರಾತ್ರೌ ವಾ ಯದಿ ವಾ ದಿವಾ |
ನಚಾಪಿ ಕಂಚಿದಮರಮಯುದ್ಧೇನಾಪಿ ಶುಶ್ರುಮಃ ॥2॥
ಮೃತ್ಯುವಿನ ಸಮಯವನ್ನು ಯಾರೂ ತಿಳಿದಿಲ್ಲ. ರಾತ್ರಿಬರುವುದೋ ಹಗಲು ಬರುವುದೋ ತಿಳಿಯುವುದಿಲ್ಲ. ಯುದ್ಧಮಾಡದಿದ್ದರೂ ಸಹ ಮರಣರಹಿತನಾಗಿರುವ ಯಾವ ವ್ಯಕ್ತಿಯನ್ನೂ ಸಹ ನಾವು ಕೇಳಿಲ್ಲ.
ಏತಾವದೇವ ಪುರುಷೈಃ ಕಾರ್ಯಂ ಹೃದಯತೋಷಣಮ್ |
ನಯೇನಾಬಾಧದೃಷ್ಟೇನ ಯದುಪಕ್ರಮತೇ ಪರಾನ್ ॥3॥
ಪುರುಷರು ತಮ್ಮ ಮನಸ್ಸಿಗೆ ಸಂತೋಷದಾಯಕವಾದ ಕಾರ್ಯಮಾಡಬೇಕಷ್ಟೇ, ತನಗೆ ಪೀಡೆಯುಂಟಾಗುವವರೆಗೆ ವಿನಯವನ್ನು ಹೊಂದಿರುವುದು ಪೀಡೆಯುಂಟಾದಾಗ ಶತ್ರುಗಳಮೇಲೆ ಎರಗುವುದು ರಾಜನೀತಿ.
ವಿನಯಸ್ಯಾನಪಾಯಸ್ಯ ಸಂಯೋಗೇ ನ ಪರಾಕ್ರಮಃ |
ಸಂಶಯೋ ಜಾಯತೇ ಸಾಮ್ಯೇ ಸಾಮ್ಯಂ ತು ನ ಭವೇದ್ ದ್ವಯೋಃ ॥4॥
ತನಗೆ ಅಪಾಯ ಬರುವವರೆಗೂ ವಿನಯವನ್ನು ಹೊಂದಿರುವುದನ್ನು ಯಾರೂ (ಅಪರಾಕ್ರಮ) ಹೇಡಿತನವೆಂದು ಹೇಳುವುದಿಲ್ಲ. ಸಮರ್ಥನಾದವನು ವಿನಯವನ್ನು ತೋರಿಸಿದರೆ ಶತ್ರುವಿಗೂ ಮತ್ತು ಇವನಿಗೂ ಬಲದಲ್ಲಿ ಸಾಮ್ಯ ಇದೆಯೋ ಎಂದು ಸಂಶಯ ಉಂಟಾಗುತ್ತದೆ. ಆದರೆ ಶಕ್ತ ಮತ್ತು ಅಶಕ್ತ ಈ ಇಬ್ಬರಿಗೆ ಎಂದೂ ಬಲ ಸಾಮ್ಯವು ಇರುವುದಿಲ್ಲ.
ತೇ ವಯಂ ನಯಮಾಸ್ಥಾಯ ಶತ್ರುದೇಶಸಮೀಪಗಾಃ |
ಕಥಮಂತಂ ನ ಗಚ್ಛೇಮ ವೃಕ್ಷಸ್ಯೇವ ನದೀರಯಾಃ ॥5॥
ಅಂತಹ ನಾವು ಒಳ್ಳೆಯ ನೀತಿಯನ್ನು ಹೊಂದಿ ಶತ್ರುದೇಶವನ್ನು (ಶತ್ರುದೇಹವನ್ನು) ಸಮೀಪಿಸಿ ನದಿಯ ಪ್ರವಾಹವು ತೀರದ ವೃಕ್ಷವನ್ನು ಕಿತ್ತು ಒಗೆಯುವಂತೆ ಹೇಗೆ ನಮ್ಮ ಉದ್ದೇಶವನ್ನು ಸಾಸದೆ ಇರಲು ಸಾಧ್ಯ?
ಪರರಂಧ್ರೇ ಪರಾಕ್ರಾಂತಃ ಸ್ವರಂಧ್ರಾವರಣೇ ಸ್ಥಿತಃ |
ವ್ಯೂಢಾನೀಕಸ್ತು ಬಲವಾನುಪೇಯಾದ್ ಬಲಮುತ್ತಮಮ್ ॥6॥
ತನ್ನದೋಷವನ್ನು ಆಚ್ಛಾದನೆಮಾಡಿಕೊಂಡು ಪರರ ದೋಷವನ್ನು ತಿಳಿದು ಸೈನ್ಯವನ್ನು ಸೇರಿಸಿ ಪರಾಕ್ರಮವನ್ನು ಮಾಡುವ ಬಲಿಷ್ಠನಾದ ರಾಜನು ಉತ್ತಮವಾದ ಬಲವನ್ನು ಹೊಂದುತ್ತಾನೆ.
ಅನಭಿವ್ಯಕ್ತಸಂಬಂಧಾಃ ಪ್ರವಿಷ್ಟಾಃ ಶತ್ರುಸಂಸದಿ |
ಅನವದ್ಯಾನಸಂಬದ್ಧಾನ್ ದೃಷ್ಟ್ವಾ ಶತ್ರೂನ್ ಸಮೀಪತಃ |
ಶತ್ರುದೇಶಮಪಾಕ್ರಮ್ಯ ತಂ ಕಾಮಂ ಪ್ರಾಪ್ನುಯಾಮಹೇ ॥7॥
ನಾವು ಕ್ಷತ್ರಿಯರು ಎಂಬ ನಮ್ಮ ಸಂಬಂಧವನ್ನು ತಿಳಿಸದೆ ಶತ್ರುವಿನ ಸಭೆಯನ್ನು ಪ್ರವೇಶಿಸಿ, ಬ್ರಾಹ್ಮಣವೇಶವನ್ನು ಧರಿಸಿರುವುದರಿಂದ ನಮ್ಮಿಂದ ವಧೆಯರೂಪವಾದ ಅಪಾಯವಿಲ್ಲವೆಂದು ತಿಳಿಯುವ ಶತ್ರುವನ್ನು ಸಮೀಪಿಸಿ, ಅವನನ್ನು ಆ ದೇಶದಿಂದ ಹೊರಗೆ ಎಳೆದುತಂದು, ನಮ್ಮ ಇಚ್ಛೆಯನ್ನು ಪೂರ್ಣಮಾಡಿಕೊಳ್ಳುತ್ತೇವೆ.
ಏಕೋ ಹ್ಯೇವ ಶ್ರಿಯಂ ನಿತ್ಯಂ ಬಿಭರ್ತಿ ಭರತರ್ಷಭ |
ಅಂತರಾತ್ಮೇವ ಭೂತಾನಾಂ ತತ್ಕ್ಷಯೇ ಚ ಬಲಕ್ಷಯಃ ॥8॥
ಭರತರ್ಷಭನೇ! ಸರ್ವಜೀವಾಂತರ್ಯಾಮಿಯಾದ ಹರಿಯೊಬ್ಬನೇ ಲಕ್ಷ್ಮಿಯನ್ನು ಧರಿಸಿರುವಂತೆ, ಜರಾಸಂಧನೊಬ್ಬನೇ ಎಲ್ಲಾ ಸೈನ್ಯಸಂಪತ್ತನ್ನೂ ಧರಿಸಿ ಎಲ್ಲರಿಗೂ ಆಧಾರನಾಗಿದ್ದಾನೆ. ಜರಾಸಂಧನ ನಾಶವಾದರೆ ಎಲ್ಲಾ ಸೈನ್ಯದ ನಾಶವಾದಂತೆಯೇ ಆಗುತ್ತದೆ.

ಅಥ ಚೇತ್ ತಂ ನಿಹತ್ಯಾಜೌ ಶೇಷೇಣಾಪಿ ಸಮಾಹತಾಃ |
ಪ್ರಾಪ್ನುಯಾಮ ತತಃ ಸ್ವರ್ಗಂ ಜ್ಞಾತಿತ್ರಾಣಪರಾಯಣಾಃ ॥9॥
ಅಥವಾ ನಾವು ಅವನನ್ನು ಕೊಂದನಂತರ ಅವನ ಉಳಿದ ಸೈನ್ಯವು ನಮ್ಮ ಮೇಲೆ ಎರಗಿ ನಮ್ಮನ್ನು ಕೊಲ್ಲುವುದಾದರೆ, ನಾವು ಬಂಧುಗಳನ್ನು ರಕ್ಷಿಸುವುದರಲ್ಲೇ ಪರಾಯಣರಾಗಿ ಸ್ವರ್ಗವನ್ನು ಹೊಂದುವೆವು.
ಯುಷ್ಠಿರಃ
ಕೃಷ್ಣ ಕೋಽಯಂ ಜರಾಸಂಧಃ ಕಿಂವೀರ್ಯಃ ಕಿಂಪರಾಕ್ರಮಃ |
ಯತ್ ತ್ವಾಂ ಸ್ಪೃಷ್ಟ್ವಾಽಗ್ನಿಸದೃಶಂ ನ ದಗ್ಧಃ ಶಲಭೋ ಯಥಾ ॥10॥
ಕೃಷ್ಣ! ಈ ಜರಾಸಂಧನು ಯಾರು? ಅವನ ಬಲಪರಾಕ್ರಮಗಳು ಎಂತಹವು? ಅಗ್ನಿಸದೃಶನಾದ ನಿನ್ನನ್ನು ಮುಟ್ಟಿದರೂ ಪತಂಗದಂತೆ ಅವನು ಸುಟ್ಟುಹೋಗದಿರುವುದು ಆಶ್ಚರ್ಯವಷ್ಟೆ?
ಕೃಷ್ಣಃ
ಶೃಣು ರಾಜನ್ ಜರಾಸಂಧೋ ಯದ್ವೀರ್ಯೋ ಯತ್ಪರಾಕ್ರಮಃ |
ಯಥಾ ಹ್ಯುಪೇಕ್ಷಿತೋಽಸ್ಮಾಭಿರ್ಬಹುಶಃ ಕೃತಕಿಲ್ಬಿಷಃ ॥11॥
ರಾಜನೇ! ಜರಾಸಂಧನ ಬಲ ಎಂತಹದು ಅವನ ಪರಾಕ್ರಮ ಎಂತಹದು ಅವನು ಅನೇಕಬಾರಿ ಅಪಚಾರವನ್ನು ಮಾಡಿದರೂ ಹೇಗೆ ನಾನು ಅವನನ್ನು ಉಪೇಕ್ಷಿಸಿದೆ ಎಲ್ಲವನ್ನು ಹೇಳುತ್ತೇನೆ ಕೇಳು.
ಅಕ್ಷೋಹಿಣೀನಾಂ ತಿಸೃಣಾಮಾಸೀತ್ ಪರಮದರ್ಪಿತಃ |
ರಾಜಾ ಬೃಹದ್ರಥೋ ನಾಮ ಮಗಧಾಪತಿರ್ನೃಪ ॥12॥
ಮಗಧಾಪತಿಯಾದ ಬೃಹದ್ರಥನೆಂಬ ರಾಜನು ಮೂರು ಅಕ್ಷೋಹಿಣಿಸೈನ್ಯಕ್ಕೆ ಒಡಯನಾಗಿ ಪರಮದರ್ಪದಿಂದ ಕೂಡಿದ್ದನು.

ರೂಪವಾನ್ ವೀರ್ಯಸಂಪನ್ನಃ ಶ್ರೀಮಾನತುಳವಿಕ್ರಮಃ |
ಸ ರಾಜ್ಯಂ ಕಾರಯಾಮಾಸ ಮಗಧೇಷು ಗಿರಿವ್ರಜೇ ||13||
ಅವನು ರೂಪಸಂಪನ್ನನೂ ವೀರ್ಯಸಂಪನ್ನನೂ ಅಸದೃಶವಾದ ವಿಕ್ರಮ ಉಳ್ಳವನೂ ಕಾಂತಿಯುಕ್ತನೂ ಆಗಿ ಮಗಧದೇಶದಲ್ಲಿ ಗಿರಿವ್ರಜವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯವನ್ನು ಆಳುತ್ತಿದ್ದನು.
ನಿತ್ಯಂ ದೀಕ್ಷಾಕೃಶತನುಃ ಶತಕ್ರತುರಿವಾಪರಃ |
ತೇಜಸಾ ಸೂರ್ಯಸದೃಶಃ ಕ್ಷಮಯಾ ಪೃಥಿವೀಸಮಃ |
ಯಶ್ಯಾಂತಕಸಮಃ ಕೋಪೇ ಶ್ರಿಯಾ ವೈಶ್ರವಣೋಪಮಃ ||14||
ಅವನು ನೂರುಯಾಗಮಾಡಿದ ಇಂದ್ರನಂತೆ ಸತತವಾದ ಯಜ್ಞದೀಕ್ಷೆಯಿಂದ ಕೃಶವಾದ ಶರೀರಹೊಂದಿದವನಾಗಿ ತೇಜಸ್ಸಿನಿಂದ ಸೂರ್ಯಸದೃಶನೂ ಸಹನೆಯಿಂದ ಭೂಮಿಗೆ ಸದೃಶನೂ ಕೋಪದಿಂದ ಯಮನಿಗೆ ಸದೃಶನೂ ಸಂಪತ್ತಿನಿಂದ ಕುಬೇರನಿಗೆ ಸದೃಶನೂ ಆಗಿದ್ದನು.
ತಸ್ಯಾಭಿಜನಸಂಯುಕ್ತೈರ್ಗಣೈಶ್ಚ ಭರತರ್ಷಭ |
ವ್ಯಾಪ್ತೇಯಂ ಪೃಥಿವೀ ಸರ್ವಾ ಸೂರ್ಯಸ್ಯೇವ ಗಭಸ್ತಿಭಿಃ ||15||
ಭರತರ್ಷಭನೇ! ಶ್ರೇಷ್ಠಕುಲದಲ್ಲಿ ಪ್ರಸೂತರಾದ ಪುರುಷರಿಂದಕೂಡಿದ ಅವನ ಸೈನ್ಯವು ಸೂರ್ಯಕಿರಣಗಳು ಭೂಮಿಯನ್ನು ವ್ಯಾಪಿಸಿದಂತೆ ಸಮಗ್ರವಾದ ಭೂಮಿಯನ್ನೂ ವ್ಯಾಪಿಸಿದ್ದವು.
ಸ ಕಾಶಿರಾಜಸ್ಯ ಸುತೇ ಯಮಜೇ(ಸಮಾಜೇ) ಭರತರ್ಷಭ |
ಉಪಯೇಮೇ ಮಹಾವೀರ್ಯೋ ರೂಪದ್ರವಿಣಸಮ್ಮತೇ ||16||
ಭರತರ್ಷಭನೇ! ಮಹಾಪರಾಕ್ರಮಿಯಾದ ಅವನು ಸ್ವಯಂವರಸಮಾಜದಲ್ಲಿ ರೂಪದ್ರವಿಣಸಂಪತ್ತಿನಿಂದ ಕೂಡಿದ ಕಾಶಿರಾಜನ ಅವಳಿಮಕ್ಕಳನ್ನು ವಿವಾಹವಾದನು.
ತಯೋಶ್ಚಕಾರ ಸಮಯಂ ಮಿಥಃ ಸ ಪುರುಷರ್ಷಭ |
ನಾತಿವರ್ತಿಷ್ಯ ಇತ್ಯೇವಂ ಪತ್ನೀಭ್ಯಾಂ ಸನ್ನಿಧೌ ತದಾ ||17||
ಪುರುಷರ್ಷಭನೇ! ಅವನು ಆ ಇಬ್ಬರು ಪತ್ನಿಯರ ಸನ್ನಿಯಲ್ಲಿ ನಿಮ್ಮಿಬ್ಬರನ್ನು ಎಂದೂ ಮೀರಿ ನಡೆಯುವುದಿಲ್ಲ ಎಂದು ಪ್ರತಿಜ್ಞೆಯನ್ನು ಮಾಡಿದನು.
ಸ ತಾಭ್ಯಾಂ ಶುಶುಭೇ ರಾಜಾ ಪತ್ನೀಭ್ಯಾಂ ಮನುಜಾಪ |
ಪ್ರಿಯಾಭ್ಯಾಮನುರೂಪಾಭ್ಯಾಂ ಕರೇಣುಭ್ಯಾಮಿವ ದ್ವಿಪಃ ||18||
ಮನುಜಾಪನೇ! ಆ ರಾಜನು ಪ್ರಿಯರೂ ಅನುರೂಪರೂ ಆದ ಆ ಇಬ್ಬರು ಪತ್ನಿಯರ ಜೊತೆಯಲ್ಲಿ ಎರಡು ಚಿಕ್ಕ ಹೆಣ್ಣಾನೆಗಳಿಂದ ಕೂಡಿದ ಗಂಡಾನೆಯಂತೆ ಶೋಭಿಸಿದನು.
ತಯೋರ್ಮಧ್ಯಗತಶ್ಚಾಪಿ ರರಾಜ ವಸುಧಾಪಃ |
ಗಂಗಾಯಮುನಯೋರ್ಮಧ್ಯೇ ಮೂರ್ತಿಮಾನಿವ ಸಾಗರಃ ||19||
ಅವರಿಬ್ಬರ ಮಧ್ಯದಲ್ಲಿ ಆ ರಾಜನು ಗಂಗಾಯಮುನೆಯರ ಮಧ್ಯೆ ಶರೀರವನ್ನು ಧರಿಸಿ ನಿಂತ ಸಾಗರದಂತೆ ಶೋಭಿಸಿದನು.
ವಿಷಯೇಷು ನಿಮಗ್ನಸ್ಯ ತಸ್ಯ ಯೌವನಮತ್ಯಗಾತ್ |
ನಚ ವಂಶಕರಂ ಪುತ್ರಮಾಸಾದಯತಿ ಪಾರ್ಥಿವಃ ||20||
ವಿಷಯಭೋಗಗಳಲ್ಲಿ ನಿರತನಾದ ಅವನಿಗೆ ಯೌವನವು ಕಳೆದುಹೊಯಿತು. ಆದರೆ ರಾಜನು ವಂಶಕರನಾದ ಪುತ್ರನನ್ನು ಪಡೆಯಲಿಲ್ಲ.
ಮಂಗಲ್ಯೈರ್ಬಹುಭಿರ್ಹೋಮೈಃ ಪುತ್ರಕಾಮಾಭಿರಿಷ್ಟಿಭಿಃ |
ನಾಸಸಾದ ನೃಪಶ್ರೇಷ್ಠಃ ಪುತ್ರಂ ಕುಲವಿವರ್ಧನಮ್ |
ಸ ಭಾರ್ಯಾಭ್ಯಾಂ ಚ ಸಹಿತೋ ನಿರ್ವೇದಮಗಮದ್ ಭೃಶಮ್ ||
ಅನೇಕ ಮಂಗಳಕರವಾದ ಹೋಮಗಳನ್ನು ಮಾಡಿದರೂ ಪುತ್ರಕಾಮಾದಿ ಇಷ್ಟಿಗಳನ್ನು ಮಾಡಿದರೂ ಆ ಶ್ರೇಷ್ಠನಾದ ರಾಜನು ವಂಶವರ್ಧನನಾದ ಪುತ್ರನನ್ನು ಪಡೆಯಲಿಲ್ಲ. ಭಾರ್ಯೆಯರಿಂದ ಕೂಡಿದ ಅವನು ತೀವ್ರವಾದ ವೈರಾಗ್ಯವನ್ನು ಹೊಂದಿದನು.
ರಾಜ್ಯಂ ಚಾಪಿ ಪರಿತ್ಯಜ್ಯ ತಪೋವನಮಥಾಶ್ರಯತ್ |
ಸಹ ಪೌರೈಃ ಪ್ರಕೃತಿಭಿರ್ನೃಪಭಕ್ತ್ಯಾ ವಿಶಾಂಪತೇ ||22||
ರಾಜನೇ! ಅವನು ರಾಜ್ಯವನ್ನು ಪರಿತ್ಯಾಗಮಾಡಿ ತನ್ನ ಇಬ್ಬರು ಪತ್ನಿಯರಿಂದಲೂ ಕೆಲವು ಪೌರರಿಂದಲೂ ಮತ್ತು ರಾಜಭಕ್ತಿಯುಳ್ಳ ಕೆಲವು ಪ್ರಜೆಗಳಿಂದಲೂ ಸಹಿತನಾಗಿ ತಪೋವನಕ್ಕೆ ನಡೆದನು.
ಅಥ ಕಕ್ಷೀವತಃ ಪುತ್ರಂ ಗೌತಮಸ್ಯ ಮಹಾತ್ಮನಃ |
ಶುಶ್ರಾವ ತಪಸಿ ಶ್ರೇಷ್ಠಮುದಾರಂ ಚಂಡಕೌಶಿಕಮ್ ||23||
ಆನಂತರ ಮಹಾತ್ಮರಾದ ಗೌತಮರವಂಶದವರಾದ ಕಕ್ಷಿವಂತರ ಪುತ್ರರಾದ ಚಂಡಕೌಶಿಕ ಎಂಬ ಮುನಿಗಳು ತಪಸ್ಸಿನಲ್ಲಿ ಶ್ರೇಷ್ಠರಾದವರು ಮತ್ತು ಉದಾರವಾದ ಮನಸ್ಸುಳ್ಳವರು ಎಂಬ ವಾರ್ತೆಯನ್ನು ಕೇಳಿದನು.
ಯದೃಚ್ಛಯಾಽಽಗತಂ ತಂ ತು ವೃಕ್ಷಮೂಲಮುಪಾಶ್ರಿತಮ್ |
ಪತ್ನೀಭ್ಯಾಂ ಸಹಿತೋ ರಾಜಾ ಸರ್ವಯತ್ನೈರತೋಷಯತ್ ||24||
ಅನಂತರ ಅನಿರೀಕ್ಷಿತವಾಗಿ ಆ ಆಶ್ರಮಕ್ಕೆ ಆಗಮಿಸಿ ಒಂದು ವೃಕ್ಷಮೂಲದಲ್ಲಿ ಕುಳಿತಿದ್ದ ಚಂಡಕೌಶಿಕರನ್ನು ತನ್ನ ಪತ್ನಿಯ ಸಹಿತನಾದ ರಾಜನು ಎಲ್ಲ ರೀತಿಗಳಲ್ಲಿಯೂ ಸಂತೋಷಪಡಿಸಿದನು.

ಬೃಹದ್ರಥಂ ಚ ಸ ಋಷಿರ್ಯಥಾವತ್ ಪ್ರತ್ಯನಂದತ |
ಉಪವಿಷ್ಟಶ್ಚ ತೇನಾಥ ಅನುಜ್ಞಾತೋ ಮಹಾತ್ಮನಾ ॥25॥
ಆ ಋಷಿಯಾದರೂ ಬೃಹದ್ರಥನನ್ನು ಯಥಾಯೋಗ್ಯವಾಗಿ ಅಭಿನಂದಿಸಿದನು. ಮಹಾತ್ಮನಾದ ಆ ಋಷಿಯ ಅನುಜ್ಞೆಯನ್ನು ಪಡೆದು ಬೃಹದ್ರಥನು ಸಮೀಪದಲ್ಲಿ ಕುಳಿತುಕೊಂಡನು.
ತಮಪೃಚ್ಛತ್ ತದಾ ವಿಪ್ರಃ ಕಿಮಾಗಮನಮಿತ್ಯಥ |
ಪೌರೈರನುಗತಸ್ಯೇಹ ಪತ್ನೀಭ್ಯಾಂ ಸಹಿತಸ್ಯ ಚ ॥26॥
ಆಗ ಚಂಡಕೌಶಿಕನು ಪತ್ನಿ ಮತ್ತು ಪೌರರಿಂದ ಹಿಂಬಾಲಿಸಲ್ಪಟ್ಟು, ತಪೋವನವನ್ನು ಪ್ರವೇಶಿಸಲು ಕಾರಣವೇನೆಂದು ರಾಜನನ್ನು ಕೇಳಿದನು.
ತಮುವಾಚ ಮುನಿಂ ರಾಜಾ ಭಗವನ್ ನಾಸ್ತಿ ಮೇ ಸುತಃ |
ತಾದೃಶಸ್ಯ ಚ ರಾಜ್ಯೇನ ವೃದ್ಧತ್ವೇ ಕಿಂ ಪ್ರಯೋಜನಮ್ ॥27॥
ಆ ಋಷಿಯನ್ನು ಕುರಿತು ರಾಜನು ಪೂಜ್ಯರೇ ನನಗೆ ಮಕ್ಕಳಿಲ್ಲ. ಅಂತಹ ವೃದ್ಧನಾದ ನನಗೆ ರಾಜ್ಯದಿಂದ ಏನು ಪ್ರಯೋಜನ?
ಸೋಽಹಂ ತಪಶ್ಚರಿಷ್ಯಾಮಿ ಪತ್ನೀಭ್ಯಾಂ ಸಹಿತೋ ವನೇ |
ನಾಪ್ರಜಸ್ಯ ಮುನೇ ಕೀರ್ತಿಃ ಸ್ವರ್ಗಶ್ಚ ನ ಕ್ಷಯೋ ಭವೇತ್ |
ಏವಮುಕ್ತಸ್ಯ ರಾಜ್ಞಾ ತು ಮುನೇಃ ಕಾರುಣ್ಯಮಾಗತಮ್ ॥28॥
ಆದ್ದರಿಂದ ನಾನು ಪತ್ನಿಯರ ಜೊತೆಯಲ್ಲಿ ಕಾಡಿನಲ್ಲಿ ತಪಸ್ಸನ್ನು ಆಚರಿಸುತ್ತಿದ್ದೇನೆ. ಸಂತತಿ ಇಲ್ಲದ ರಾಜನಿಗೆ ಈ ಲೋಕದಲ್ಲಿ ಕೀರ್ತಿಯಾಗಲೀ ಸ್ವರ್ಗಲೋಕದ ವಾಸವಾಗಲೀ ದೊರಕುವುದಿಲ್ಲವಷ್ಟೇ? ಹೀಗೆ ರಾಜನು ಹೇಳಿದಾಗ ಆ ಋಷಿಗೆ ಅವನ ಮೇಲೆ ಬಹಳ ಕರುಣೆ ಉಂಟಾಯಿತು.
ಚಂಡಕೌಶಿಕಃ
ಪರಿತುಷ್ಟೋಽಸ್ಮಿ ತೇ ರಾಜನ್ ವರಂ ವರಯ ಸುವ್ರತ ॥29॥
ರಾಜನೇ! ನಿನ್ನ ವಿಷಯದಲ್ಲಿ ನಾನು ಸಂತೋಷವನ್ನು ಹೊಂದಿದ್ದೇನೆ. ಸುವ್ರತನೇ! ನಿನಗೆ ಬೇಕಾದ ವರವನ್ನು ಕೇಳು.
ಕೃಷ್ಣಃ
ತತಃ ಸಭಾರ್ಯಃ ಪ್ರಣತಸ್ತಮುವಾಚ ಬೃಹದ್ರಥಃ |
ಪುತ್ರದರ್ಶನನೈರಾಶ್ಯಾದ್ ಬಾಷ್ಪಗದ್ಗದಯಾ ಗಿರಾ ॥30॥
ಆಗ ಬೃಹದ್ರಥನು ತನ್ನ ಪತ್ನಿಯರೊಡನೆ ಆ ಋಷಿಗೆ ನಮಸ್ಕರಿಸಿ ಪುತ್ರದರ್ಶನವನ್ನು ಹೊಂದದ ನಿರಾಸೆಯಿಂದ ಬಾಷ್ಪಗದ್ಗದವಾದ ಮಾತುಗಳಿಂದ ಮಾತನಾಡಿದನು.
ಭಗವನ್ ರಾಜ್ಯಮುತ್ಸೃಜ್ಯ ಪ್ರಸ್ಥಿತಸ್ಯ ತಪೋವನಮ್ |
ಕಿಂ ವರೇಣಾಲ್ಪಭಾಗ್ಯಸ್ಯ ಕಿಂ ರಾಜ್ಯೇನಾಪ್ರಜಸ್ಯ ಮೇ ॥31॥
ಪೂಜ್ಯರೇ! ರಾಜ್ಯವನ್ನು ಪರಿತ್ಯಜಿಸಿ ತಪೋವನಕ್ಕೆ ಬಂದ ಅಲ್ಪಭಾಗ್ಯನಾದ ನನಗೆ ವರದಿಂದ ಏನು ಪ್ರಯೋಜನ? ಸಂತತಿ ಇಲ್ಲದ ನನಗೆ ರಾಜ್ಯದಿಂದಲಾದರೂ ಏನು ಪ್ರಯೋಜನ?
ಏತಚ್ಛ್ರುತ್ವಾ ಮುನಿರ್ಧ್ಯಾನಮಗಮತ್ ಕ್ಷುಭಿತೇಂದ್ರಿಯಃ |
ತಸ್ಯೈವ ಚಾಮ್ರವೃಕ್ಷಸ್ಯ ಛಾಯಾಯಾಂ ಸಮುಪಾವಿಶತ್ ॥32॥
ಇದನ್ನು ಕೇಳಿ ಮನಃಕ್ಷೋಭೆಗೆ ಒಳಗಾದ ಆ ಮುನಿಯು ಧ್ಯಾನಸಕ್ತನಾಗಿ ಅದೇ ಆಮ್ರವೃಕ್ಷದ ಛಾಯೆಯಲ್ಲಿ ಕುಳಿತುಕೊಂಡನು.
ತಸ್ಯೋಪವಿಷ್ಟಸ್ಯ ಮುನೇರುತ್ಸಂಗೇ ನಿಪಪಾತ ಹ |
ಅವಾತಮಶುಕಾದಷ್ಟಮೇಕಮಾಮ್ರಫಲಂ ಕಿಲ ॥33॥
ಹಾಗೆ ಕುಳಿತುಕೊಂಡ ಋಷಿಯ ತೊಡೆಯಮೇಲೆ ಗಾಳಿಯಿಲ್ಲದೆ ಯಾರಿಂದಲೂ ಹೊಡೆಯಲ್ಪಡದೆ ಒಂದು ಮಾವಿನ ಹಣ್ಣು ತಾನಾಗಿಯೇ ಬಿದ್ದಿತಷ್ಟೇ!
ತತ್ ಪ್ರಗೃಹ್ಯ ಮುನಿಶ್ರೇಷ್ಠೋ ಹೃದಯೇನಾಭಿಮಂತ್ರ್ಯ ಚ |
ರಾಜ್ಞೇ ದದಾವಪ್ರತಿಮಂ ಪುತ್ರಸಂಪ್ರಾಪ್ತಿಕಾರಕಮ್ ॥34॥
ಆ ಮುನಿಶ್ರೇಷ್ಠನು ಆ ಹಣ್ಣನ್ನು ತೆಗೆದುಕೊಂಡು ರಾಜನ ಮೇಲಿನ ಪ್ರೀತಿಯಿಂದ ಅದನ್ನು ಅಭಿಮಂತ್ರಿಸಿ ಪುತ್ರಪ್ರಾಪ್ತಿಗೆ ಕಾರಣವಾದ ಆ ಅಸದೃಶವಾದ ಫಲವನ್ನು ರಾಜನಿಗೆ ಕೊಟ್ಟನು.
ಉವಾಚ ಚ ಮಹಾಪ್ರಾಜ್ಞಸ್ತಂ ರಾಜಾನಂ ಮಹಾಮುನಿಃ |
ಗಚ್ಛ ರಾಜನ್ ಕೃತಾರ್ಥೋಽಸಿ ನಿವರ್ತಸ್ವ ಜನಾಧಿಪ ॥35॥
ಮಹಾಪ್ರಾಜ್ಞನಾದ ಆ ಋಷಿಶ್ರೇಷ್ಠನು ರಾಜನನ್ನು ಕುರಿತು ರಾಜನೇ! ನೀನು ಕೃತಾರ್ಥನಾಗಿದ್ದೀಯೆ ರಾಜ್ಯಕ್ಕೆ ಹಿಂದಿರುಗಿ ಹೋಗು ಎಂದು ಹೇಳಿದನು.
ಏಷ ತೇ ತನಯೋ ರಾಜನ್ ಮಾ ತಪ್ಸೀಸ್ತ್ವಂ ತಪೋ ವನೇ |
ಪ್ರಜಾಃ ಪಾಲಯ ಧರ್ಮೇಣ ಏಷ ಧರ್ಮೋ ಮಹೀಕ್ಷಿತಾಮ್ ॥36॥
ರಾಜನೇ! ಇದೋ ನೋಡು ಈ ನಿನ್ನ ಮಗನಿದ್ದಾನೆ. ನೀನು ಕಾಡಿನಲ್ಲಿ ತಪಸ್ಸನ್ನುಮಾಡಬೇಡ. ಧರ್ಮದಿಂದ ಪ್ರಜೆಗಳ ರಕ್ಷಣೆಯನ್ನು ಮಾಡು. ರಾಜರಿಗೆ ಅದೇ ಶ್ರೇಷ್ಠವಾದ ಧರ್ಮ.
ಯಜಸ್ವ ವಿವಿಧೈರ್ಯಜ್ಞೈರಿಂದ್ರಂ ತರ್ಪಯ ಚೇಂದುನಾ |
ಪುತ್ರಂ ರಾಜ್ಯೇ ಪ್ರತಿಷ್ಠಾಪ್ಯ ತತ ಆಶ್ರಮಮಾವ್ರಜ |

ಅಷ್ಟೌ ವರಾನ್ ಪ್ರಯಚ್ಛಾಮಿ ತವ ಪುತ್ರಸ್ಯ ಪಾರ್ಥಿವ ॥37॥
ಅನೇಕ ಯಾಗಗಳನ್ನುಮಾಡು. ಸೋಮರಸದಿಂದ ಇಂದ್ರನನ್ನು ಸಂತೋಷಪಡಿಸು. ಮಗನನ್ನು ರಾಜ್ಯದಲ್ಲಿ ಪ್ರತಿಷ್ಠಾಪಿಸಿ ಅನಂತರ ಆಶ್ರಮಕ್ಕೆ ಬಾ. ರಾಜನೇ! ನಿನ್ನ ಪುತ್ರನಿಗೆ ನಾನು ಎಂಟು ವರಗಳನ್ನು ಕೊಡುತ್ತೇನೆ.
ಬ್ರಹ್ಮಣ್ಯತಾಮಜೇಯತ್ವಂ ಯುದ್ಧೇಷು ಚ ತಥಾ ರತಿಮ್ |
ಪ್ರಿಯಾತಿಥೇಯತಾಂ ಚೈವ ದೀನಾನಾಮನ್ವವೇಕ್ಷಣಮ್ ॥38॥
ತಥಾ ಬಲಂ ಚ ಸುಮಹಲ್ಲೋಕೇ ಕೀರ್ತಿಂ ಚ ಶಾಶ್ವತೀಮ್ |
ಅನುರಾಗಂ ಪ್ರಜಾನಾಂ ಚ ದದೌ ತಸ್ಮೈ ಸ ಕೌಶಿಕಃ॥39॥
ಬ್ರಾಹ್ಮಣರಲ್ಲಿ ಭಕ್ತಿ ಯುದ್ಧದಲ್ಲಿ ಅಜೇಯತ್ವ ಯುದ್ಧರತಿ ಅತಿಥಿಪ್ರಿಯತ್ವ ದೀನರಕ್ಷಣೆ ಮಹಾಬಲ ಶಾಶ್ವತವಾದ ಕೀರ್ತಿ ಪ್ರಜೆಗಳ ಅನುರಾಗ ಈ ಎಂಟುವರಗಳನ್ನು ಕೌಶಿಕನು ಅವನಿಗೆ ಕೊಟ್ಟನು.
ಅನುಜ್ಞಾತಃ ಸ ಋಷಿಣಾ ಪತ್ನೀಭ್ಯಾಂ ಸಹಿತೋ ನೃಪಃ |
ಪೌರೈರನುಗತಶ್ಚಾಪಿ ವಿವೇಶ ಸ್ವಪುರಂ ಪುನಃ ॥40॥
ಆ ರಾಜನು ಋಷಿಯ ಅನುಮತಿಯನ್ನು ಪಡೆದು ಪತ್ನಿಯರ ಸಹಿತನಾಗಿ ಪೌರರಿಂದ ಹಿಂಬಾಲಿಸಲ್ಪಟ್ಟು ಪುನಃ ತನ್ನ ಪಟ್ಟಣವನ್ನು ಪ್ರವೇಶಿಸಿದನು.
ಯಥಾಸಮಯಮಾಜ್ಞಾಯ ತದಾ ಸ ನೃಪಸತ್ತಮಃ |
ದ್ವಾಭ್ಯಾಮೇಕಂ ಫಲಂ ಪ್ರಾದಾತ್ ಪತ್ನೀಭ್ಯಾಂ ಭರತರ್ಷಭ ॥41॥
ಭರತರ್ಷಭನೇ! ಆ ನೃಪಶ್ರೇಷ್ಠನು ಯೋಗ್ಯವಾದ ಸಮಯವನ್ನು ತಿಳಿದು. ತನ್ನ ಇಬ್ಬರು ಪತ್ನಿಯರಿಗೆ ಆ ಒಂದು ಫಲವನ್ನು ಕೊಟ್ಟನು.
ಮುನೇಶ್ಚ ಬಹುಮಾನೇನ ಕಾಲಸ್ಯ ಚ ವಿಪರ್ಯಯಾತ್ |
ತತಶ್ಚಾಮ್ರಂ ದ್ವಿಧಾ ಕೃತ್ವಾ ಭಕ್ಷಯಾಮಾಸತುಃ ಶುಭೇ ॥42॥
ಋಷಿಗಳ ಮಾತಿನ ಮೇಲಿನ ಗೌರವದಿಂದಲೂ ಕಾಲವಿಪರ್ಯಾಸದಿಂದಲೂ ಆ ಶುಭಾಂಗಿಯರು ಆ ಹಣ್ಣನ್ನು ಎರಡು ಭಾಗವನ್ನಾಗಿ ಮಾಡಿ ಸ್ವೀಕರಿಸಿದರು.
ಭಾವಿತ್ವಾದಪಿ ಚಾರ್ಥಸ್ಯ ಸತ್ಯವಾಕ್ಯಾತ್ ತಥಾ ಮುನೇಃ |
ತಯೋಃ ಸಮಭವದ್ ಗರ್ಭಃ ಫಲಪ್ರಾಶನಸಂಭವಃ ॥43॥
ದೈವಸಂಕಲ್ಪದಂತೆ ಮುಂದಿನಕಾರ್ಯವು ನಡೆಯಬೇಕಾದ ಕಾರಣದಿಂದ ಮತ್ತು ಋಷಿಯ ಸತ್ಯವಾಕ್ಯದ ಬಲದಿಂದ ಆ ಹಣ್ಣನ್ನು ಸ್ವೀಕರಿಸಿದ ಕಾರಣದಿಂದ ಆ ಇಬ್ಬರೂ ಗರ್ಭವನ್ನು ಧರಿಸಿದರು.
ದೃಷ್ಟ್ವಾ ನರಪತಿಃ ಶ್ರೀಮಾನ್ ಪರಾಂ ಮುದಮವಾಪ ಹ |
ಕಾಲೇ ತು ಸಮನುಪ್ರಾಪ್ತೇ ಯಥಾಸಮಯಮಾಗತೇ |
ಪ್ರಜಾಯೇತಾಮುಭೇ ರಾಜನ್ ಶರೀರಶಕಲಾವುಭೌ ॥44॥
ಅವರನ್ನು ನೋಡಿದ ಕಾಂತಿಯುಕ್ತನಾದ ರಾಜನು ಬಹಳ ಸಂತೋಷವನ್ನು ಹೊಂದಿದನು. ರಾಜನೇ! ಪ್ರಸವದ ಸಮಯವು ಪ್ರಾಪ್ತವಾದಗ ಅವರಿಬ್ಬರೂ ಶರೀರದ ಅರ್ಧ ಅರ್ಧಭಾಗಗಳನ್ನು ಪ್ರಸವಿಸಿದರು.
ಏಕಾಕ್ಷಿಬಾಹುಚರಣಾರ್ಧೋದರಮುಖಸಿಜೌ |
ದೃಷ್ಟ್ವಾ ಶರೀರಶಕಲೌ ದುಃಖೇನಾಪತತಾಂ ಸ್ತ್ರಿಯೌ ॥45॥
ಒಂದು ಕಣ್ಣು ಒಂದು ಬಾಹು ಒಂದು ಪಾದ ಅರ್ಧ ಉದರ ಅರ್ಧ ಮುಖ ಅರ್ಧ ಪೃಷ್ಠ ಇರುವ ಎರಡು ಭಾಗಗಳನ್ನು ನೋಡಿ ಅವರಿಬ್ಬರೂ ದುಃಖದಿಂದ ನೆಲಕ್ಕೆ ಉರುಳಿದರು.
ಉತ್ಪನ್ನೇ ಸಹಸಾ ತತ್ರ ತೇ ಭಗಿನ್ಯೌ ತದಾಽಬಲೇ |
ಸಜೀವೇ ಪ್ರಾಣಿಶಕಲೇ ತತ್ ಪ್ರಜಾತೇ ಸುದುಃಖಿತೇ ॥46॥
ಆ ಇಬ್ಬರು ಅಕ್ಕ ತಂಗಿಯರು ಹಾಗೆ ಹುಟ್ಟಿದ ಶರೀರಭಾಗಗಳು ಜೀವಸಹಿತವಾಗಿ ಇರುವುದನ್ನು ನೋಡಿ ಬಹಳ ದುಃಖಿತರಾದರು.
ತಯೋರ್ಧಾತ್ರ್ಯೌ ಸುಸಂವೀತೇ ಕೃತ್ವಾ ತೇ ಗರ್ಭಸಂಪ್ಲವೇ |
ನಿಷ್ಕ್ರಮ್ಯಾಂತಃಪುರದ್ವಾರಾತ್ ಸಮುತ್ಸೃಜ್ಯಾಶು ಜಗ್ಮತುಃ ॥47॥
ಅವರಿಬ್ಬರ ದಾದಿಯರು ಆ ಗರ್ಭದ ಭಾಗಗಳನ್ನು ಚನ್ನಾಗಿ ಬಟ್ಟೆಯಲ್ಲಿ ಸುತ್ತಿಕೊಂಡು ಅಂತಃಪುರದಿಂದ ಹೊರಗೆ ಬಂದು ಊರಿನ ಹೊರಗೆ ಅವುಗಳನ್ನು ಪರಿತ್ಯಾಗಮಾಡಿ ಹಿಂದಿರುಗಿದರು.
ದುಕೂಲಾಭ್ಯಾಂ ಸುಸಂಛನ್ನೇ ಪಾಂಡರಾಭ್ಯಾಮುಭೇ ತತಾ |
ಅಜ್ಞಾತೇ ಕಸ್ಯಚಿತ್ತ್ವೇವ ಜಹತುಸ್ತೇ ಚತುಷ್ಪಥೇ ॥48॥
ಅವರು ಅವೆರಡು ಗರ್ಭಭಾಗಗಳನ್ನು ಬಿಳಿಯ ವಸ್ತ್ರದಿಂದ ಚೆನ್ನಾಗಿ ಸುತ್ತಿ ಯಾರಿಗೂ ತಿಳಿಯದಂತೆ ನಾಲ್ಕು ಬೀದಿಗಳು ಸೇರುವ ಸ್ಥಳದಲ್ಲಿ ಇಟ್ಟು ಹಿಂದಿರುಗಿದರು.
ತತೋ ವಿವಿಶತುಸ್ತೇ ಚ ಪುನರಂತಃಪುರಂ ತದಾ |
ಕಥಯಾಮಾಸತುರುಭೇ ಪತ್ನೀಭ್ಯಾಂ ತೇ ಪೃಥಕ್ ಪೃಥಕ್ ॥49॥
ಅನಂತರ ಅವರಿಬ್ಬರೂ ಪುನಃ ಅಂತಃಪುರವನ್ನು ಪ್ರವೇಶಿಸಿ ರಾಜನ ಇಬ್ಬರು ಪತ್ನಿಯರಿಗೂ ತಾವು ಮಾಡಿದ ಕೆಲಸವನ್ನು ಬೇರೆ ಬೇರೆಯಾಗಿ ನಿರೂಪಿಸಿದರು.
ತೇ ಚತುಷ್ಪಥನಿಕ್ಷಿಪ್ತೇ ಜರಾ ನಾಮಾಥ ರಾಕ್ಷಸೀ |

ಜಗ್ರಾಹ ಮನುಜವ್ಯಾಘ್ರ ಮಾಂಸಶೋಣಿತಭೋಜನಾ ॥50॥
ಮನುಷ್ಯವ್ಯಾಘ್ರನೇ! ನಾಲ್ಕುಬೀದಿಗಳು ಸೇರುವ ಸ್ಥಳದಲ್ಲಿ ಇಟ್ಟ ಆ ಗರ್ಭಭಾಗಗಳನ್ನು ಮಾಂಸಶ್ರೋಣಿತ ಭಕ್ಷಳಾದ ಜರಾ ಎಂಬ ರಾಕ್ಷಸಿಯು ನೋಡಿ ಕೈಗೆ ತೆಗೆದುಕೊಂಡಳು.
ಕರ್ತುಕಾಮಾ ಸುಖವಹೇ ಶಕಲೇ ಪಾರ್ಥ ರಾಕ್ಷಸೀ |
ಸಂಯೋಜಯಾಮಾಸ ತದಾ ವಿಧಾನಬಲಚೋದಿತಾ ॥51॥
ಪಾರ್ಥನೇ! ಆ ರಾಕ್ಷಸಿಯು ಆ ಭಾಗಗಳಿಗೆ ಸುಖವನ್ನು ಉಂಟುಮಾಡಲು ಬಯಸಿ ವಿಬರಹದಿಂದ ಪ್ರೇರಿತಳಾಗಿ ಅವುಗಳನ್ನು ಪರಸ್ಪರವಾಗಿ ಸೇರಿಸಿದಳು.
ತೇ ಸಮಾನೀತಮಾತ್ರೇಣ ಶಕಲೇ ಭರತರ್ಷಭ |
ಏಕಮೂರ್ತಿಗತೇ ವೀರ ಕುಮಾರಃ ಸಮಪದ್ಯತ ॥52॥
ಭರತರ್ಷಭನೇ! ಆ ಭಾಗಗಳು ಜೋಡಿಸಿದ ತಕ್ಷಣವೇ ಒಂದೇ ಶರೀರವನ್ನು ಹೊಂದಿ ಕುಮಾರನ ರೂಪವನ್ನು ತಾಳಿದವು.
ತತಃ ಸಾ ರಾಕ್ಷಸೀ ರಾಜನ್ ವಿಸ್ಮಯೋತ್ಫುಲ್ಲಲೋಚನಾ |
ನ ಶಶಾಕ ಸಮುದ್ವರ್ತುಂ ವಜ್ರಸಾರಮಯಂ ಶಿಶುಮ್ ॥53॥
ರಾಜನೇ! ಆಗ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳ ಆ ರಾಕ್ಷಸಿಯು ವಜ್ರಸಾರದಂತಿದ್ದ ಆ ಶಿಶುವನ್ನು ಎತ್ತಲು ಸಮರ್ಥಳಾಗಲಿಲ್ಲ.
ಬಾಲಸ್ತಾಮ್ರತಲಾಂ ಮುಷ್ಟಿಂ ಕೃತ್ವಾಽಽಸ್ಯೇ ತು ನಿಧಾಯ ಸಃ |
ಪ್ರಾಕ್ರೋಶದತಿಸಂರಂಭಾತ್ ಸತೋಯ ಇವ ತೋಯದಃ ॥54॥
ಆ ಕುಮಾರನಾದರೋ ತನ್ನ ಕೆಂಪಾದ ಮುಷ್ಟಿಯನ್ನು ಬಾಯೊಳಗೆ ಇಟ್ಟುಕೊಂಡು ಬಹಳ ಸಿಟ್ಟಿನಿಂದ ನೀರನ್ನು ಹೊಂದಿದ ಮೇಘದ ಗರ್ಜನೆಯಂತೆ ಕಿರುಚಿದನು.
ತೇನ ಶಬ್ದೇನ ವಿತ್ರಸ್ತಃ ಸಹಸಾಽಂತಃಪುರೇ ಜನಃ |
ನಿರ್ಜಗಾಮ ಮಹಾರಾಜನ್ ರಾಜ್ಞಾ ಸಹ ಪರಂತಪ ॥55॥
ಮಹಾರಾಜನೇ! ಪರಂತಪನೇ! ಆ ಶಬ್ದದಿಂದ ನಡುಗಿದ ಅಂತಃಪುರದ ಜನರು ಇದ್ದಕ್ಕಿದಂತೆಯೇ ರಾಜನ ಜೊತೆಯಲ್ಲಿ ಹೊರಗೆ ಬಂದರು.
ತೇಽಬಲೇ ಚ ಪರಿಮ್ಲಾನೇ ಪಯಃಪೂರ್ಣಪಯೋಧರೇ |
ನಿಷಲೇ ಪುತ್ರಲಾಭಾಯ ಸಹಸೈವಾಭ್ಯಗಚ್ಛತಾಮ್ ॥56॥
ಸ್ತನಗಳಲ್ಲಿ ಪೂರ್ಣವಾಗಿ ಕ್ಷೀರವನ್ನು ತುಂಬಿಕೊಂಡು ಬಾಡಿದ ಮುಖವನ್ನು ಹೊಂದಿ ನಿಷಲವಾದ ಪುತ್ರಲಾಭವನ್ನು ಪಡೆದ ಆ ಇಬ್ಬರು ಪತ್ನಿಯರೂ ಆ ಕ್ಷಣವೇ ಹೊರಬಂದರು.
ತೇ ಚ ದೃಷ್ಟ್ವಾ ತಥಾಭೂತೇ ರಾಜ್ಞಸ್ತಸ್ಯೇಷ್ಟಸಂತತಿಮ್ |
ತಂ ಚ ಬಾಲಂ ಸುಬಲಿನಂ ಚಿಂತಯಾಮಾಸ ರಾಕ್ಷಸೀ ॥57॥
ಆ ರಾಕ್ಷಸಿಯು ಅಂತಹ ಪರಿಸ್ಥಿತಿಯಲ್ಲಿ ಇದ್ದ ಆ ಇಬ್ಬರು ಪತ್ನಿಯರನ್ನು ನೊಡಿ ರಾಜನಿಗೆ ಇಷ್ಟವಾದ ಸಂತತಿಯನ್ನು ಮತ್ತು ಆ ಬಾಲಕನ ಪರಮಬಲವನ್ನು ಗಮನಿಸಿ ಆಲೋಚಿಸಿದಳು.
ನಾರ್ಹಾಮಿ ವಿಷಯೇ ರಾಜ್ಞೋ ವಸಂತೀ ಪುತ್ರಗೃದ್ಧಿನಃ |
ಬಾಲಂ ಪುತ್ರಮುಪಾದಾತುಂ ಧಾರ್ಮಿಕಸ್ಯ ಮಹಾತ್ಮನಃ ॥58॥
ಮಗವನ್ನು ಬಯಸುವ ಮಹಾತ್ಮನೂ ಧಾರ್ಮಿಕನೂ ಆದ ರಾಜನ ರಾಜ್ಯದಲ್ಲಿ ವಾಸಿಸುವ ನಾನು ಈ ಮಗುವನ್ನು ತೆಗೆದುಕೊಂಡು ಹೋಗುವುದು ಯೋಗ್ಯವಲ್ಲ.
ಸಾ ತಂ ಬಾಲಮುಪಾದಾಯ ಮೇಘಲೇಖೇವ ಭಾಸ್ಕರಮ್ |
ಸಾ ಕೃತ್ವಾ ಮಾನುಷಂ ರೂಪಮುವಾಚ ಮನುಜಾಪಮ್ ॥59॥
ಅವಳು ಮೇಘ ಸಮೂಹವು ಭಾಸ್ಕರನನ್ನು ಧರಿಸಿದಂತೆ ಆ ಬಾಲಕನನ್ನು ಎತ್ತಿಕೊಂಡು ಸುಂದರವಾದ ಮುನುಷ್ಯರೂಪವನ್ನು ಧರಿಸಿ ರಾಜನ ಎದುರಿಗೆ ಬಂದು ಮಾತನಾಡಿದಳು.
ಬೃಹದ್ರಥ ಸುತಸ್ತೇಽಯಂ ಮದ್ದತ್ತಃ ಪ್ರತಿಗೃಹ್ಯತಾಮ್ |
ತವ ಪತ್ನೀದ್ವಯೇ ಜಾತೋ ದ್ವಿಜಾತಿವರದಾನತಃ |
ಧಾತ್ರೀಜನಪರಿತ್ಯಕ್ತೋ ಮಯಾಽಯಂ ಪರಿರಕ್ಷಿತಃ ॥60॥
ಬೃಹದ್ರಥನೇ! ನಾನು ಕೊಡುತ್ತಿರುವ ಈ ಮಗುವನ್ನು ನಿನ್ನ ಮಗನೆಂದು ಸ್ವೀಕರಿಸು. ಇವನು ಋಷಿಯ ವರದಾನದ ಮಹಿಮೆಯಿಂದ ನಿನ್ನ ಇಬ್ಬರು ಪತ್ನಿಯರಲ್ಲಿ ಹುಟ್ಟಿದವನು. ದಾದಿಯರಿಂದ ಪರಿತ್ಯಾಗಮಾಡಲ್ಪಟ್ಟ ಇವನನ್ನು ನಾನು ರಕ್ಷಿಸಿದ್ದೇನೆ.
ಕೃಷ್ಣಃ
ತತಸ್ತೇ ಭರತಶ್ರೇಷ್ಠ ಕಾಶಿರಾಜಸುತೇ ಉಭೇ |
ತಂ ಬಾಲಮಭಿಲಭ್ಯಾಶು ಪ್ರಸ್ರವೈರಭಿಷಿಂಚತಾಮ್ ॥61॥
ಭರತಶ್ರೇಷ್ಠನೇ ! ಅನಂತರ ಕಾಶಿರಾಜನ ಆ ಇಬ್ಬರು ಹೆಣ್ಣು ಮಕ್ಕಳು ಆ ಕುಮಾರನನ್ನು ಪಡೆದು ತಮ್ಮ ಕಣ್ಣೀರುಗಳಿಂದ ಅವನಿಗೆ ಅಭಿಷೇಕವನ್ನು ಮಾಡಿದರು.
ತತಃ ಸ ರಾಜಾ ಸಂಹೃಷ್ಟಃ ಸರ್ವಂ ತದುಪಲಭ್ಯ ವೈ |
ಅಪೃಚ್ಛನ್ನವಹೇಮಾಭಾಂ ರಾಕ್ಷಸೀಂ ತಾಮರಾಕ್ಷಸೀಮ್ ॥62॥
ಅನಂತರ ಇವೆಲ್ಲವನ್ನೂ ನೋಡಿ ಸಂತೋಷಗೊಂಡ ರಾಜನು ಸುವರ್ಣದ ಕಾಂತಿಯನ್ನು ಹೊಂದಿದ್ದ ರಾಕ್ಷಸಿಯಂತೆ ತೋರದಿರುವ

ಆ ರಾಕ್ಷಸಿಯನ್ನು ಕುರಿತು ಹೇಳಿದನು.
ಕಾ ತ್ವಂ ಕಮಲಗರ್ಭಾಭೇ ಮಮ ಪುತ್ರಪ್ರದಾಯಿನೀ |
ಕಾಮಂ ಪ್ರಬ್ರೂಹಿ ಕಲ್ಯಾಣಿ ದೇವತಾ ಪ್ರತಿಭಾಸಿ ಮೇ ॥63॥
ಕಮಲೋದರರ ಕಾಂತಿಯುಳ್ಳವಳೇ! ನನಗೆ ಪುತ್ರಪ್ರದಾನಮಾಡಿದ ನೀನು ಯಾರು? ಕಲ್ಯಾಣಿಯೇ! ನೀನು ನನಗೆ ದೇವತೆಯಂತೆ ಕಾಣುತ್ತಿಯೆ. ನೀನು ಯಾರು ಎಂದು ನಿಸ್ಸಂಕೋಚವಾಗಿ ಹೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನವಿಂಶತಿತಮೋಽಧ್ಯಾಯಃ ॥
ಮಂತ್ರಪರ್ವಣಿ ಏಕೋನವಿಂಶತಿತಮೋಽಧ್ಯಾಯಃ॥19॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****
ಇಪ್ಪತ್ತನೆಯ ಅಧ್ಯಾಯ
(ತನ್ನ ಸ್ವರೂಪವನ್ನು ತಿಳಿಸಿ ಜರೆಯ ಅಂತರ್ಧಾನ; ಜರಾಸಂಧನ ಅಭಿವೃದ್ಧಿ ಕಥನ.)
ರಾಕ್ಷಸೀಃ
ಜರಾ ನಾಮಾಸ್ಮಿ ಭದ್ರಂ ತೇ ರಾಕ್ಷಸೀ ಕಾಮರೂಪಿಣೀ |
ತವ ವೇಶ್ಮನಿ ರಾಜೇಂದ್ರ ಭಕ್ಷ್ಯೈರ್ಭೋಜ್ಯೈಃ ಸುಪೂಜಿತಾ ॥1॥
ರಾಜೇಂದ್ರನೇ! ನಿನಗೆ ಮಂಗಳವಾಗಲಿ; ನಾನು ಕಾಮರೂಪವುಳ್ಳ ಜರೆಯೆಂಬ ರಾಕ್ಷಸಿ. ನಿನ್ನಮನೆಯಲ್ಲಿ ನಾನು ಭಕ್ಷಭೋಜ್ಯಗಳಿಂದ ಚೆನ್ನಾಗಿ ಪೂಜಿಸಲ್ಪಟ್ಟಿದ್ದೇನೆ.
ಸಾಽಹಂ ಪ್ರತ್ಯುಪಕಾರಾರ್ಥಂ ಚಿಂತಯಂತ್ಯನಿಶಂ ನೃಪ |
ತವೇಮೇ ಪುತ್ರಶಕಲೇ ದೃಷ್ಟವತ್ಯಸ್ಮಿ ಧಾರ್ಮಿಕೀ ॥2॥
ರಾಜನೇ! ನಿನಗೆ ಪ್ರತ್ಯುಪಕಾರವನ್ನು ಮಾಡಬೇಕೆಂದು ಯಾವಾಗಲೂ ಚಿಂತಿಸುತ್ತಿದ್ದ ಧಾರ್ಮಿಕಳಾದ ನಾನು ನಿನ್ನ ಈ ಎರಡು ಪುತ್ರ ಭಾಗಗಳನ್ನು ನೋಡಿದೆನು.
ಸಂಶ್ಲೇಷಿತೇ ಮಯಾ ದೈವಾತ್ ಕುಮಾರಃ ಸಮಪದ್ಯತ |
ತವ ಭಾಗ್ಯೈರ್ಮಹಾಭಾಗ ಹೇತುಮಾತ್ರಂ ತ್ವಹಂ ತ್ವಿಹ ॥3॥
ನಾನು ಅವರೆಡು ಭಾಗಳನ್ನು ಜೋಡಿಸಿದಾಗ ದೈವೇಚ್ಛೆಯಂತೆ ಕುಮಾರನು ಉಂಟಾದನು. ಮಹಾನುಭಾವನೆ! ನಿನ್ನ ಭಾಗ್ಯದಿಂದಲೇ ಕುಮಾರನು ಜನಿಸಿದ್ದಾನೆ. ಈ ವಿಷಯದಲ್ಲಿ ನಾನು ನೆಪಮಾತ್ರ.
ಮೇರುಂ ವಾ ಖಾದಿತುಂ ಶಕ್ತಾ ಕಿಂ ಪುನಸ್ತವ ಬಾಲಕಮ್ |
ಗೃಹಸಂಪೂಜನಾತ್ ತುಷ್ಟ್ಯಾ ಮಯಾ ಪ್ರತ್ಯರ್ಪಿತಸ್ತವ ॥4॥
ನಾನು ಮೇರುವನ್ನು ಬೇಕಾದರೂ ತಿನ್ನಲು ಸಮರ್ಥಳಾಗಿದ್ದೇನೆ. ಇನ್ನು ನಿನ್ನ ಪುತ್ರನನ್ನು ತಿನ್ನುವುದು ಯಾವ ದೊಡ್ಡ ವಿಷಯ? ಆದರೆ ನಿನ್ನ ಮನೆಯಲ್ಲಿ ಪೂಜಿಸಲ್ಪಟ್ಟ ನಾನು ಆ ಕಾರಣದಿಂದ ಸಂತೋಷಗೊಂಡು ನಿನ್ನ ಮಗನನ್ನು ನಿನಗೆ ಒಪ್ಪಿಸುತ್ತಿದ್ದೇನೆ.
ತಸ್ಯ ಬಾಲಸ್ಯ ಯತ್ ಕೃತ್ಯಂ ತತ್ ಕುರುಷ್ವ ನರಾಪ |
ಮಮ ನಾಮ್ನಾ ಚ ಲೋಕೇಽಸ್ಮಿನ್ ಖ್ಯಾತ ಏಷ ಭವಿಷ್ಯತಿ ॥5॥
ನರಾಪನೇ! ಈ ಕುಮಾರನಿಗೆ ಮಾಡಬೇಕಾದ ಸಂಸ್ಕಾರಗಳನ್ನು ಮಾಡು ಇವನು ನನ್ನ ಹೆಸರಿಂದಲೇ ಲೋಕದಲ್ಲಿ ಖ್ಯಾತಿಯನ್ನು ಹೊಂದುವನು.
ವಾಸುದೇವಃ
ಏವಮುಕತ್ವ ಜರಾ ರಾಜನ್ ತತ್ರೈವಾಂತರಧೀಯತ |
ಸೋಽಪಿ ಗೃಹ್ಯ ಕುಮಾರಂ ತಂ ಪ್ರಾವಿಶತ್ ಸ್ವಪುರಂ ನೃಪಃ ॥6॥
ರಾಜನೇ! ಜರೆಯು ಹೀಗೆ ಮಾತನಾಡಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು. ರಾಜನಾದರೂ ಸಹ ಆ ಕುಮಾರನನ್ನು ತೆಗೆದುಕೊಂಡು ತನ್ನ ಪಟ್ಟಣವನ್ನು ಪ್ರವೇಶಿಸಿದನು.
ತಸ್ಯ ಬಾಲಸ್ಯ ಯತ್ ಕೃತ್ಯಂ ತಚ್ಚಕಾರ ನೃಪಸ್ತದಾ |
ಆಜ್ಞಾಪಯಚ್ಚ ರಾಕ್ಷಸ್ಯಾ ಮಗಧೇಷು ಮಹೋತ್ಸವಮ್ ॥7॥
ಆಗ ಆ ರಾಜನು ಆ ಬಾಲಕನಿಗೆ ಮಾಡಬೇಕಾದ ಎಲ್ಲಾ ಕಾರ್ಯಗಳನ್ನು ಮಾಡಿಸಿ, ಆ ರಾಕ್ಷಸಿಯ ಸಲುವಾಗಿ ಮಗಧದೇಶದಲ್ಲಿ ದೊಡ್ಡ ಉತ್ಸವವನ್ನು ಆಜ್ಞೆಮಾಡಿದನು.
ತಸ್ಯ ನಾಮಾಕರೋತ್ ತತ್ರ ಪ್ರಜಾಪತಿಸಮಃ ಪಿತಾ |
ಜರಯಾ ಸಂತೋ ಯಸ್ಮಾಜ್ಜರಾಸಂಧಸ್ತತೋಽಭವತ್ ॥8॥
ಪ್ರಜಾಪತಿಗೆ ಸಮನಾದ ತಂದೆಯಾದ ಬೃಹದ್ರಥನು ಕುಮಾರನಿಗೆ ನಾಮಕರಣವನ್ನು ಮಾಡಿದನು. ಜರೆಯಿಂದ ಸಂಸಲ್ಪಟ್ಟ ಕಾರಣದಿಂದ ಆ ಕುಮಾರನಿಗೆ ಜರಾಸಂಧನೆಂಬ ನಾಮವೇ ಆಯಿತು.
ಸೋಽವರ್ಧತ ಮಹಾತೇಜಾ ಮಗಧಾಪತೇಃ ಸುತಃ |
ಪ್ರಮಾಣಬಲಸಂಪನ್ನೋ ಹುತಾಹುತಿರಿವಾನಲಃ ॥9॥
ಮಗಧರಾಜನ ಆ ಕುಮಾರನು ಮಹಾಪರಾಕ್ರಮದಿಂದ ಕೂಡಿದವನಾಗಿ, ಔನ್ನತ್ಯ ಮತ್ತು ಬಲಗಳಿಂದ ಸಂಪನ್ನನಾಗಿ ಆಹುತಿಯನ್ನು ಸ್ವೀಕರಿಸಿದ ಅಗ್ನಿಯಂತೆ ಬೆಳೆದನು.
ಏವಂ ಸ ವವೃಧೇ ರಾಜನ್ ಕುಮಾರಃ ಪುಷ್ಕರೇಕ್ಷಣಃ |

ಕಾಲೇನ ಮಹತಾ ಚಾಪಿ ಯೌವನಸ್ಥೋ ಬಭೂವ ಹ ॥10॥
ರಾಜನ್! ಕಮಲನಯನನಾದ ಆ ಕುಮಾರನು ಹೀಗೆ ಬೆಳೆದು ಎಷ್ಟೋ ಸಮಯದ ನಂತರ ಯೌವನಸ್ಥನಾದನು.
ಕಸ್ಯಚಿತ್ತ್ವಥ ಕಾಲಸ್ಯ ಪುನರೇವ ಮಹಾತಪಾಃ।
ಮಗಧಾನುಪಚಕ್ರಾಮ ಭಗವಾಂಶ್ಚಂಡಕೌಶಿಕಃ ॥11॥
ಎಷ್ಟೋ ಸಮಯದ ನಂತರ ಮಹಾತಪಸ್ವಿಯಾದ ಪೂಜ್ಯನಾದ ಚಂಡಕೌಶಿಕನು ಪುನಃ ಮಗಧದೇಶಕ್ಕೆ ಬಂದನು.
ತಸ್ಯಾಗಮನಸಂಹೃಷ್ಟಃ ಸಾಮಾತ್ಯಃ ಸಪುರೋಹಿತಃ।
ಸಭಾರ್ಯಃ ಸಹ ಪುತ್ರೇಣ ನಿರ್ಜಗಾಮ ಬೃಹದ್ರಥಃ ॥12॥
ಅವನ ಆಗಮನದಿಂದ ಸಂತೋಷಗೊಂಡ ಬೃಹದ್ರಥನು ಅಮಾತ್ಯರು ಪುರೋಹಿತರು ಭಾರ್ಯೆಯರು ಮತ್ತು ಪುತ್ರನ ಜೊತೆಯಲ್ಲಿ ಅವನನ್ನು ಸ್ವೀಕರಿಸಲು ಪಟ್ಟಣದ ಹೊರಗೆ ಬಂದನು.
ಪಾದ್ಯಾರ್ಘ್ಯಾಚಮನೀಯೈಸ್ತಮರ್ಚಯಾಮಾಸ ಭಾರತ।
ಸ ನೃಪೋ ರಾಜ್ಯಸಹಿತಂ ಪುತ್ರಂ ಚಾಸ್ಮೈ ನ್ಯವೇದಯತ್ ॥13॥
ಭಾರತನೇ! ಆ ರಾಜನು ಪಾದ್ಯ ಅರ್ಘ್ಯ ಅಚಮನಗಳಿಂದ ಆ ಋಷಿಯನ್ನು ಸತ್ಕರಿಸಿ ತನ್ನ ರಾಜ್ಯವನ್ನೂ ಮತ್ತು ಪುತ್ರನನ್ನೂ ಅವನಿಗೆ ನಿವೇದಿಸಿದನು.
ಪ್ರತಿಗೃಹ್ಯ ಚ ತಾಂ ಪೂಜಾಂ ಪಾರ್ಥಿವಾದ್ ಭಗವಾನೃಷಿಃ।
ಉವಾಚ ಮಾಗಧಂ ತತ್ರ ಪ್ರಹೃಷ್ಟೇನಾಂತರಾತ್ಮನಾ ॥14॥
ಪೂಜ್ಯನಾದ ಆ ಋಷಿಯು ರಾಜನಿಂದ ಆ ಪೂಜೆಯನ್ನು ಸ್ವೀಕರಿಸಿ ಮನಸ್ಸಿನಲ್ಲಿ ಸಂತೋಷಗೊಂಡು ಆ ಮಗಧರಾಜನನ್ನು ಕುರಿತು ಮಾತನಾಡಿದನು.
ಚಂಡಕೌಶಿಕಃ
ಸರ್ವಮೇತನ್ಮಯಾ ರಾಜನ್ ವಿಜ್ಞಾತಂ ಜ್ಞಾನಚಕ್ಷುಷಾ।
ಪುತ್ರಸ್ತು ಶೃಣು ರಾಜೇಂದ್ರ ಯಾದೃಶೋ ವೈ ಭವಿಷ್ಯತಿ।
ಅಸ್ಯ ಪ್ರಭಾವಂ ಚ ಸತ್ತ್ವಂ ಚ ಬಲಮೂರ್ಜಿತಮೇವ ಚ ॥15॥
ರಾಜನೇ! ಇವೆಲ್ಲವನ್ನೂ ನಾನು ಜ್ಞಾನದೃಷ್ಟಿಯಿಂದಲೇ ತಿಳಿದಿದ್ದೇನೆ. ರಾಜೇಂದ್ರನೇ! ನಿನ್ನ ಮಗನು ಎಂತಹ ಪ್ರಭಾವ ಸತ್ವ ಮತ್ತು ಊರ್ಜಿತವಾದ ಬಲಗಳನ್ನು ಹೊಂದಿ ಯಾವ ರೀತಿ ಆಗುವನು ಎಂಬುದನ್ನು ಹೇಳುತ್ತೇನೆ ಕೇಳು.
ಏಷ ಶ್ರಿಯಾ ಸಮುದಿತಃ ಪುತ್ರಸ್ತವ ನ ಸಂಶಯಃ।
ಪ್ರಾಪಯಿಷ್ಯತಿ ತತ್ಸರ್ವಂ ವಿಕ್ರಮೇಣ ಸಮನ್ವಿತಃ ॥16॥
ನಿನ್ನ ಈ ಮಗನು ಸಂಪತ್ತಿನಿಂದ ಕೂಡಿದವನಾಗಿ ತನ್ನ ವಿಕ್ರಮದಿಂದಲೂ ಕೂಡಿದವನಾಗಿ ನಿಸ್ಸಂಶಯವಾಗಿ ಎಲ್ಲವನ್ನೂ ಸಾಸುತ್ತಾನೆ.
ಅಸ್ಯ ವೀರ್ಯವತೋ ವೀರ್ಯಂ ನಾನುಯಾಸ್ಯಂತಿ ಪಾರ್ಥಿವಾಃ।
ಪತತೋ ವೈನತೇಯಸ್ಯ ಗತಿಮನ್ಯೇ ಯಥಾ ಖಗಾಃ।
ವಿನಾಶಮುಪಯಾಸ್ಯಂತಿ ಯೇ ಚಾಸ್ಯ ಪರಿಪಂಥಿನಃ ॥17॥
ಹೇಗೆ ಆಕಾಶದಲ್ಲಿ ಹಾರುವ ಪಕ್ಷಿಗಳು ಗರುಡನನ್ನು ಅನುಸರಿಸಲಾರವೋ ಹಾಗೆ ಉಳಿದ ರಾಜರು ವೀರ್ಯವಂತನಾದ ಇವನ ಪರಾಕ್ರಮವನ್ನು ಅನುಕರಿಸಲಾರರು. ಯಾರು ಇವನಿಗೆ ವಿರೋಧವನ್ನು ಮಾಡವರೋ ಅವರೆಲ್ಲರೂ ವಿನಾಶವನ್ನು ಹೊಂದುವರು.
ದೇವೈರಪಿ ವಿಸೃಷ್ಟಾನಿ ಶಸತ್ರಣ್ಯಸ್ಯ ಮಹೀಪತೇ।
ನ ರುಜಂ ಜನಯಿಷ್ಯಂತಿ ಗಿರೇರಿವ ನದೀರಯಾಃ ॥18॥
ನದಿಯ ನೀರಿನ ವೇಗವು ಹೇಗೆ ಪರ್ವತವನ್ನು ಅಲುಗಾಡಿಸಲು ಸಾಧ್ಯವಿಲ್ಲವೋ ಹಾಗೆ ದೇವತೆಗಳು ಪ್ರಯೋಗಿಸಿದ ಶಸ್ತ್ರಗಳೂ ಸಹ ಇವನಿಗೆ ಪೀಡೆಯನ್ನು ಉಂಟುಮಾಡಲು ಅಸಮರ್ಥವಾಗುತ್ತವೆ.
ಸರ್ವಮೂರ್ಧಾವಸಿಕ್ತಾನಾಮೇಷ ಮೂರ್ಧ್ನಿ ಜ್ವಲಿಷ್ಯತಿ।
ಸರ್ವೇಷಾಂ ನಿಷ್ಪ್ರಭಕರೋ ಜ್ಯೋತಿಷಾಮಿವ ಭಾಸ್ಕರಃ ॥19॥
ಎಲ್ಲ ತೇಜಸ್ಸುಗಳನ್ನೂ ತನ್ನ ತೇಜಸ್ಸಿನಿಂದ ಮಂಕುಗೊಳಿಸುವ ಸೂರ್ಯನಂತೆ ಇವನು, ಮೂರ್ಧಾಭಿಷಿಕ್ತರಾದ ಎಲ್ಲಾ ರಾಜರ ತಲೆಯ ಮೇಲೆ ಕಾಲಿಟ್ಟು ಬೆಳಗುತ್ತಾನೆ.
ಏನಮಾಸಾದ್ಯ ರಾಜಾನಃ ಸಮೃದ್ಧಬಲವಾಹನಾಃ।
ವಿನಾಶಮುಪಯಾಸ್ಯಂತಿ ಶಲಭಾ ಇವ ಪಾವಕಾತ್॥20॥
ಸಮೃದ್ಧ ಸೈನ್ಯ ಮತ್ತು ವಾಹನಗಳುಳ್ಳ ರಾಜರು ಇವನನ್ನು ಎದುರಿಸಿ ಬೆಂಕಿಯನ್ನು ಎದುರಿಸುವ ಶಲಭದಂತೆ ನಾಶವನ್ನು ಹೊಂದುವರು.
ಏಷ ಶ್ರಿಯಂ ಸುಮುದಿತಾಂ ಸರ್ವರಾಜ್ಞಾಂ ಗ್ರಹೀಷ್ಯತಿ।
ವರ್ಷಾಸ್ವಿವೋದ್ವೃತಜಲಾ ನದೀರಿವ ನದೀಪತಿಃ ॥21॥
ವರ್ಷಾಕಾಲದಲ್ಲಿ ಮೇರೆ ಮೀರಿ ಹರಿಯುವ ನದಿಗಳ ಜಲವನ್ನು ನದೀಪತಿಯಾದ ಸಮುದ್ರನು ಸ್ವೀಕರಿಸಿದಂತೆ, ಇವನು ಎಲ್ಲಾ ರಾಜರ ಸಂವೃದ್ಧವಾದ ಸಂಪತ್ತನ್ನು ಸ್ವೀಕರಿಸುವನು.
ಏಷ ಧಾರಯಿತಾ ಸಮ್ಯಕ್ ಚಾತುರ್ವರ್ಣ್ಯಂ ಮಹಾಬಲಃ।
ಶುಭಾಂ ಶುಭವತೀಂ ಸೀತಾಂ ಸರ್ವಸಸ್ಯಧರಾಂ ಧರಾಮ್ ॥22॥

ಮಹಾಬಲನಾದ ಇವನು ಚಾತುರ್ವರ್ಣ್ಯವನ್ನು ಚೆನ್ನಾಗಿ ಪೋಷಿಸುತ್ತಾನೆ. ಶುಭವೂ ಪರಿಶುದ್ಧವೂ ಸರ್ವಸಸ್ಯಾಶ್ರಯವೂ ಆದ ಭೂಮಿಯನ್ನು ಧರಿಸುತ್ತಾನೆ.
ಅಸ್ಯಾಜ್ಞಾವಶಗಾಃ ಸರ್ವೇ ಭವಿಷ್ಯಂತಿ ನರಾಧಿಪಾಃ |
ಸರ್ವಭೂತಾತ್ಮಭೂತಸ್ಯ ವಾಯೋರಿವ ಶರೀರಿಣಃ ||23||
ಎಲ್ಲಾ ಜೀವರ ಅಂತರ್ಯಾಮಿಯಾದ ವಾಯುಜೀವರಿಗೆ ಎಲ್ಲಾ ಜೀವರೂ ವಶರಾದಂತೆ ಎಲ್ಲಾ ರಾಜರೂ ಇವನ ಅಜ್ಞೆಗೆ ವಶರಾಗುವರು.
ಏಷ ರುದ್ರಂ ಮಹಾದೇವಂ ತ್ರಿಪುರಾಂತಕರಂ ಹರಮ್ |
ಸರ್ವಲೋಕೇಷ್ವತಿಬಲಃ ಸ್ವಯಂ ದ್ರಕ್ಷ್ಯತಿ ಮಾಗಧಃ ||24||
ಸರ್ವಲೋಕಗಳಲ್ಲಿಯೂ ಅತ್ಯಂತ ಬಲಿಷ್ಠನಾದ ಈ ಮಗಧರಾಜನು ತ್ರಿಪುರಾಂತಕನಾದ ಮಹಾದೇವನಾದ ಪಾಪಹಾರಕನಾದ ರುದ್ರದೇವರನ್ನು ಸ್ವತಃ ನೋಡುವನು.
ಏವಂ ಬ್ರುವನ್ನೇವ ಮುನಿಃ ಸ್ವಕಾರ್ಯಾರ್ಥಂ ವಿಚಿಂತಯನ್ |
ವಿಸರ್ಜಯಾಮಾಸ ನೃಪಂ ಬೃಹದ್ರಥಮಥಾರಿಹನ್ ||25||
ಶತ್ರುಸಂಹಾರಕನಾದ ರಾಜನೇ! ಚಂಡಕೌಶಿಕಮುನಿಯು ಹೀಗೆ ಮಾತನಾಡುಕತ್ತಲೇ ತನ್ನ ಮುಂದಿನ ಕಾರ್ಯವನ್ನು ಚಿಂತಿಸುತ್ತಾ ರಾಜನನ್ನು ಬೀಳ್ಕೊಟ್ಟನು.
ಪ್ರವಿಶ್ಯ ನಗರೀಂ ಚೈವ ಜ್ಞಾತಿಸಂಬಂಧಿಭಿರ್ವೃತಃ |
ಅಭಿಷಿಚ್ಯ ಜರಾಸಂಧಂ ಮಗಧಾಪತಿಂ ತದಾ |
ಬೃಹದ್ರಥೋ ನರಪತಿಃ ಪರಾಂ ನಿರ್ವೃತಿಮಾಯಯೌ ||26||
ಮಗಧಾಪತಿಯಾದ ಬೃಹದ್ರಥನು ಪಟ್ಟಣವನ್ನು ಪ್ರವೇಶಿಸಿ ದಾಯಾದಿಗಳು ಮತ್ತು ಬಂಧುಗಳೊಂದಿಗೆ ಕೂಡಿಕೊಂಡು ಜರಾಸಂಧನಿಗೆ ಮಗಧ ರಾಜನನ್ನಾಗಿ ಪಟ್ಟಾಭಿಷೇಕವನ್ನು ಮಾಡಿ ಬಹಳ ಸಂತೋಷವನ್ನು ಹೊಂದಿದನು.
ಅಭಿಷಿಕ್ತೇ ಜರಾಸಂಧೇ ತದಾ ರಾಜಾ ಬೃಹದ್ರಥಃ |
ಪತ್ನೀದ್ವಯೇನಾನುಗತಸ್ತಪೋವನಮುಪಾಗಮತ್ ||27||
ಜರಾಸಂಧನು ಪಟ್ಟಾಭಿಷಿಕ್ತನಾಗುತ್ತಿರಲು ಬೃಹದ್ರಥರಾಜನು ತನ್ನ ಇಬ್ಬರು ಪತ್ನಿಯರ ಜೊತೆಯಲ್ಲಿ ತಪೋವನಕ್ಕೆ ಪ್ರಯಾಣ ಮಾಡಿದನು.
ತಪೋವನಸ್ಥೇ ಪಿತರಿ ಮಾತೃಭ್ಯಾಂ ಸಹ ಭಾರತ |
ಜರಾಸಂಧಸ್ತು ವೀರ್ಯೇಣ ಪಾರ್ಥಿವಾನಕರೋದ್ ವಶೇ ||28||
ಭಾರತನೇ! ತಂದೆಯಾದ ಬೃಹದ್ರಥನು ತಾಯಿಯರ ಜೊತೆಯಲ್ಲಿ ತಪೋವನದಲ್ಲಿರಲು ಜರಾಸಂಧನು ತನ್ನ ಪರಾಕ್ರಮದಿಂದ ಎಲ್ಲಾ ರಾಜರನೂ ವಶಪಡಿಸಿಕೊಂಡನು.
ಅಥ ದೀರ್ಘಸ್ಯ ಕಾಲಸ್ಯ ತಪೋವನಗತೋ ನೃಪಃ |
ಸಭಾರ್ಯಃ ಸ್ವರ್ಗಮಗಮತ್ ತಪಸ್ತಪ್ತ್ವಾ ಬೃಹದ್ರಥಃ ||29||
ತಪೋವನಕ್ಕೆ ಹೋದ ಬೃಹದ್ರಥರಾಜನು ಬಹುಕಾಲತಪಸ್ಸನ್ನು ಆಚರಿಸಿ ತನ್ನ ಪತ್ನಿಯರ ಜೊತೆಯಲ್ಲಿ ಸ್ವರ್ಗವನ್ನು ಸೇರಿದನು.
ಜರಾಸಂಧೋಽಪಿ ನೃಪತಿರ್ಯಥೋಕ್ತಂ ಕೌಶಿಕೇನ ತತ್ |
ವರಪ್ರದಾನಮಖಿಲಂ ಪ್ರಾಪ್ಯ ರಾಜ್ಯಮಕಾರಯತ್ ||30||
ಜರಾಸಂಧರಾಜನಾದರೋ ಚಂಡಕೌಶಿಕನು ಕೊಟ್ಟ ಎಲ್ಲಾ ವರಗಳನ್ನು ಪಡೆದು ರಾಜ್ಯಭಾರವನ್ನು ಮಾಡಿದನು.
ತಸ್ಯಾಸ್ತಾಂ ಹಂಸಡಿಭಕಾವಶಸ್ತ್ರನಿಧನಾವುಭೌ |
ಮಂತ್ರೇ ಮತಿಮತಾಂ ಶ್ರೇಷ್ಠೌ ಯುದ್ಧನೀತಿವಿಶಾರದೌ ||31||
ಅವನಿಗೆ ಯುದ್ಧನೀತಿವಿಶಾರದರಾದ ಶಸ್ತ್ರಗಳಿಂದ ಮರಣಹೊಂದದ ಮೇಧಾವಿಗಳಲ್ಲಿ ಶ್ರೇಷ್ಠರಾದ ಮಂತ್ರಾಲೋಚನೆಯಲ್ಲಿಯೂ ಶ್ರೇಷ್ಠರಾದ ಹಂಸ ಡಿಬಕರೆಂಬ ಇಬ್ಬರು ಮಂತ್ರಿಗಳದ್ದರು.
ಹತೇ ಚೈವ ಮಯಾ ಕಂಸೇ ಸಹಂಸಡಿಭಿಕೇ ತದಾ |
ಜರಾಸಂಧಸ್ಯ ದುಹಿತಾ ರೋದತೇ ಪಾರ್ಶ್ವತಃ ಪಿತುಃ ||32||
ನಾನು ಕಂಸನನ್ನು ಮತ್ತು ಹಂಸಡಿಬಕರನ್ನು ಸಂಹಾರ ಮಾಡಿದ ಮೇಲೆ ಜರಾಸಂಧನ ಮಗಳು ನಿತ್ಯವೂ ತಂದೆಯ ಸನಿಹದಲ್ಲಿ ರೋದಿಸಿದಳು.
ತತೋ ವೈರಂ ವಿನಿರ್ಬದ್ಧಂ ಮಮ ತಸ್ಯ ಚ ಭಾರತ ||33||
ಭಾರತನೇ! ಆ ಕಾರಣದಿಂದ ನನಗೂ ಮತ್ತು ಜರಾಸಂಧನಿಗೂ ವೈರ ಉಂಟಾಯಿತು.
ಭ್ರಾಮಯಿತ್ವಾ ಶತಗುಣಮೇಕಪಾತೇನ ಭಾರತ |
ಗದಾ ಕ್ಷಿಪ್ತಾ ಬಲವತಾ ಮಾಗಧೇನ ಗಿರಿವ್ರಜಾತ್ ||34||
ಭಾರತನೇ! ಬಲಿಷ್ಠನಾದ ಜರಾಸಂಧನು ತನ್ನ ರಾಜಧಾನಿಯಾದ ಗಿರಿವ್ರಜದಲ್ಲಿ ನಿಂತು ತನ್ನ ಗದೆಯನ್ನು ನೂರು ಬಾರಿ ತಿರುಗಿಸಿ ಒಂದೇ ಎಸೆತಕ್ಕೆ ನಮ್ಮ ಮೇಲೆ ಎಸೆದನು.
ತಿಷ್ಠತೋ ಮಧುರಾಯಾಂ ವೈ ಮಮ ಚಾದ್ಭುತಕರ್ಮಣಃ |
ಏಕೋನಯೋಜನಶತೇ ಸಾ ಪಪಾತ ಗದಾ ಶುಭಾ |
ನಹಿ ಯೋಧೈಸ್ತದಾ ತಸ್ಯ ಸಮ್ಯಗಧ್ವಾ ನಿವೇದಿತಃ ||35||

ಅದ್ಭುತ ಕರ್ಮನಾದ ನಾನು ಮಥುರೆಯಲ್ಲಿ ವಾಸಮಾಡುತ್ತಿರಲು ಆ ಶುಭವಾದ ಗದೆಯು ತೊಬ್ಬತ್ತೊಂಬತ್ತು ಯೋಜನಗಳು ಹಾರಿ ಬಂದು ಮಥುರೆಗೆ ಒಂದು ಯೋಜನ ದೂರದಲ್ಲಿ ಬಿದ್ದಿತು. ಯೋಧರು ಅವನಿಗೆ ಗಿರಿವ್ರಜದಿಂದ ಮಥುರೆಗೆ ಇರುವ ದೂರವನ್ನು ಸರಿಯಾಗಿ ತಿಳಿಸಿರಲಿಲ್ಲ. (ನಾರದರು ತಿಳಿಸಿರಲಿಲ್ಲ ಎಂಬುದು ಪ್ರಚಲಿತ ಕಥೆ).
ದೃಷ್ಟ್ವಾ ಪೌರೈಸ್ತದಾ ಸಮ್ಯಗ್ ಗದಾ ಚೈವ ನಿವೇದಿತಾ |
ಗದಾವಸಾನಂ ತತ್ ಖ್ಯಾತಂ ಮಧುರಾಯಾಃ ಸಮೀಪತಃ ॥36॥
ಆಗ ಪೌರರು ಸಮೀಪದಲ್ಲಿ ಬಿದ್ದ ಆ ಗದೆಯನ್ನು ನೋಡಿ ನನಗೆ ವಿಷಯವನ್ನು ತಿಳಿಸಿದರು. ಮಧುರೆಯ ಸಮೀಪದಲ್ಲಿ ಗದಾವಸಾನವೆಂಬ ಆ ಗದೆಯು ಬಿದ್ದ ಸ್ಥಳವು ಈಗಲೂ ಪ್ರಸಿದ್ಧವಾಗಿದೆ.
ಮಯಾ ತೌ ಕಥಿತೌ ರಾಜನ್ ಪೂರ್ವಮೇವ ಮಹಾಬಲೌ |
ತ್ರಯಸ್ತ್ರಯಾಣಾಂ ಲೋಕಾನಾಂ ಪರ್ಯಾಪ್ತಾ ಇತಿ ಮೇ ಮತಿಃ ॥37॥
ಮಹಾರಾಜನೇ! ಮಹಾಬಲಿಷ್ಠರಾದ ಹಂಸ ಡಿಬಕ ವೃತ್ತಾಂತವನ್ನು ನಿನಗೆ ಮೊದಲೇ ತಿಳಿಸಿದ್ದೇನೆ. ಈ ಮೂವರು ಸೇರಿ ಮೂರು ಲೋಕಗಳನ್ನು ಗೆಲ್ಲಬಲ್ಲರು ಎಂದು ನನ್ನ ಅಭಿಪ್ರಾಯ.
ಏವಮೇಷ ತದಾ ವೀರ ಬಲಿಭಿಃ ಕುಕುರಾಂಧಕೈಃ |
ವೃಷ್ಣಿಭಿಶ್ಚ ಮಹಾರಾಜ ನೀತಿಹೇತೋರುಪೇಕ್ಷಿತಃ ॥38॥
ಮಹಾರಾಜನೇ! ಮತ್ತು ವೀರನೇ! ಹೀಗೆ ತಮಗೆ ವಿರೋಧವನ್ನು ಮಾಡಿದರೂ ಕುಕುರರು, ಅಂಧಕರು, ಮತ್ತು ವೃಷ್ಣಿಗಳು ಪ್ರಬಲರು ವಿರೋಧಮಾಡಿದಾಗ ಆ ಸ್ಥಾನವನ್ನು ಬಿಟ್ಟು ಬೇರೆ ಸ್ಥಾನಕ್ಕೆ ಹೋಗಬೇಕು ಎಂಬ ನೀತಿಯ ಕಾರಣದಿಂದ ಜರಾಸಂಧನನ್ನು ಉಪೇಕ್ಷೆಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ವಿಂಶೋಽಧ್ಯಾಯಃ ॥
॥ ಮಂತ್ರಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿಯಿತು.
ಇಲ್ಲಿಗೆ ಮಂತ್ರಪರ್ವವು ಮುಗಿಯಿತು.
*****
2. ಜರಾಸಂಧಪರ್ವ
ಇಪ್ಪತ್ತೊಂದನೆಯ ಅಧ್ಯಾಯ
(ಜರಾಸಂಧನ ವಧೆಯನ್ನು ಉದ್ದೇಶಿಸಿ, ಕೃಷ್ಣ- ಭೀಮಾರ್ಜುನರಿಂದ ಮಗಧದೇಶಕ್ಕೆ ಗಮನ.)
ಶ್ರೀಭಗವಾನಃ
ಪತಿತೌ ಹಂಸಡಿಭಕೌ ಕಂಸಾಮಾತ್ಯೌ ನಿಪಾತಿತೌ |
ಜರಾಸಂಧಸ್ಯ ನಿಧನೇ ಕಾಲೋಽಯಂ ಸಮುಪಾಗತಃ ॥1॥
ದುರ್ಮಾರ್ಗಗಾಮಿಗಳಾದ ಕಂಸನ ಮಂತ್ರಿಗಳಾದ ಹಂಸ ಡಿಬಕರು ವಿನಾಶವನ್ನು ಹೊಂದಿದ್ದಾರೆ. ಜರಾಸಂಧನ ವಧೆಗೆ ಇದು ಯೋಗ್ಯವಾದ ಕಾಲವಾಗಿದೆ.
ನ ಸ ಶಕ್ಯೋ ರಣೇ ಜೇತುಂ ಸರ್ವೈರಪಿ ಸುರಾಸುರೈಃ |
ಬಾಹುಯುದ್ಧೇನ ಜೇತವ್ಯಃ ಸ ಇತ್ಯುಪಲಭಾಮಹೇ ॥2॥
ದೇವಾಸುರರೆಲ್ಲರೂ ಸೇರಿ ಯುದ್ಧದಲ್ಲಿ ಅವನನ್ನು ಗೆಲ್ಲಲಾರರು. ಆದ್ದರಿಂದ ಅವನನ್ನು ಬಾಹುಯುದ್ಧದಿಂದಲೇ ಗೆಲ್ಲಬೇಕೆಂದು ನನ್ನ ಅಭಿಪ್ರಾಯ.
ಮಯಿ ನೀತಿರ್ಬಲಂ ಭೀಮೇ ರಕ್ಷಿತಾ ಚಾವಯೋರ್ಜಯಃ |
ಸಾಧಯಿಷ್ಯಾಮ ತಂ ರಾಜನ್ ವಯಂ ತ್ರಯ ಇವಾಗ್ನಯಃ ॥3॥
ರಾಜನೇ! ನನ್ನಲ್ಲಿ ನೀತಿ ಇದೆ. ಭೀಮನಲ್ಲಿ ಬಲವಿದೆ. ನಮ್ಮಿಬ್ಬರನ್ನು ಅರ್ಜುನನು ರಕ್ಷಿಸುತ್ತಾನೆ. ನಾವು ಮೂರು ಜನರೂ ಸೇರಿ ಮೂರು ಅಗ್ನಿಗಳಂತೆ ಕಾರ್ಯವನ್ನು ಸಾಧಿಸುವೆವು.
ತ್ರಿಭಿರಾಸಾದಿತೋಽಸ್ಮಾಭಿಃ ವಿಜನೇ ಸ ನರಾಧಿಪಃ |
ನ ಸಂದೇಹೋ ಯಥಾ ಯುದ್ಧಮೇಕೇನಾಭ್ಯುಪಗಚ್ಛತಿ ॥4॥
ಏಕಾಂತದಲ್ಲಿ ನಾವು ಮೂವರು ಅವನನ್ನು ಸಂಧಿಸಿದರೆ ನಿಃಸಂದೇಹವಾಗಿ ಅವನು ನಮ್ಮಲ್ಲಿ ಒಬ್ಬರ ಜೊತೆಯಲ್ಲಿ ಯುದ್ಧವನ್ನು ಅಂಗೀಕರಿಸುತ್ತಾನೆ.
ಅವಮಾನಾಚ್ಚ ಲೋಕಸ್ಯ ವ್ಯಾಯಾಮಾಚ್ಚೈವ ಹರ್ಷಿತಃ |
ಭೀಮೇನ ಸಹ ಯುದ್ಧಾಯ ಧ್ರುವಮಭ್ಯುಪಯಾಸ್ಯತಿ ॥5॥
ಅರ್ಜುನನ್ನು ಆರಿಸಿದರೆ ಉಂಟಾಗಬಹುದಾದ ಅವಮಾನವನ್ನು ಗಮನಿಸಿ, ಭೀಮನನ್ನು ಆರಿಸಿದರೆ ಉಂಟಾಗಬಹುದಾದ ಔನ್ನತ್ಯವನ್ನು ಗಮನಿಸಿ ಸಂತುಷ್ಟನಾಗಿ ನಿಶ್ಚಯವಾಗಿಯೇ ಭೀಮನ ಜೊತೆಯಲ್ಲಿಯೇ ಯುದ್ಧವನ್ನು ವರಿಸುತ್ತಾನೆ.
ಅಯಂ ತಸ್ಯ ಮಹಾಬಾಹುಃ ಭೀಮಸೇನೋ ಮಹಾಬಲಃ |
ಲೋಕಸ್ಯ ಸಮುದೀರ್ಣಸ್ಯ ನಿಧನಾಯಾಂತಕೋ ಯಥಾ ॥6॥
ಕೊಬ್ಬಿದ ಲೋಕಕ್ಕೆ ಮರಣವನ್ನು ಉಂಟುಮಾಡಲು ಯಮನಂತೆ. ಮಹಾಬಾಹುವೂ ಮಹಾಬಲನೂ ಆದ ಭೀಮಸೇನನು ಅವನಿಗೆ ಸಾಟಿಯಾಗುತ್ತಾನೆ.

ಯದಿ ತೇ ಹೃದಯಂ ವೇತ್ತಿ ಯದಿ ತೇ ಪ್ರತ್ಯಯೋ ಮಯಿ |
ಭೀಮಸೇನಾರ್ಜುನೌ ಶೀಘ್ರಂ ನ್ಯಾಸಭೂತೌ ಪ್ರಯಚ್ಛ ಮೇ ॥7॥
ನಿನ್ನ ಮನಸ್ಸು ಒಪ್ಪಿದರೆ ನನ್ನ ಮೇಲೆ ನಿನಗೆ ನಂಬಿಕೆಯಿದ್ದರೆ ಭೀಮಸೇನ ಅರ್ಜುನರನ್ನು ಶೀಘ್ರವಾಗಿ ನನ್ನಲ್ಲಿ ನ್ಯಾಸರೂಪರಾಗಿ ನನ್ನ ಜೊತೆಯಲ್ಲಿ ಕಳುಹಿಸಿಕೊಡು.
ವೈಶಂಪಾಯನಃ
ಏವಮುಕ್ತೋ ಭಗವತಾ ಪ್ರತ್ಯುವಾಚ ಯುಧಿಷ್ಠಿರಃ |
ಭೀಮಪಾರ್ಥೌ ಸಮಾಲೋಕ್ಯ ಸಂಪ್ರಹೃಷ್ಟಮುಖೌ ಸ್ಥಿತೌ ॥8॥
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಧರ್ಮರಾಜನು ಸಂತೋಷದಿಂದ ಇರುವ ಭೀಮಾರ್ಜುನರ ಮುಖವನ್ನುನೋಡಿ ಉತ್ತರವನ್ನು ನೀಡಿದನು.
ಅಚ್ಯುತಾಚ್ಯುತ ಮಾ ಮೈವಂ ವ್ಯಾಹರಾಮಿತ್ರಕರ್ಶನ |
ಪಾಂಡವಾನಾಂ ಭವಾನ್ ನಾಥೋ ಭವಂತಂ ಚಾಶ್ರಿತಾ ವಯಮ್ ॥9॥
ಶತ್ರುಸಂಹಾರಕನಾದ ಕೃಷ್ಣನೇ! ಹೀಗೆ ಮಾತನಾಡಬೇಡ. ಪಾಂಡವರಿಗೆ ನೀನೇ ಒಡೆಯ. ನಾವು ನಿನ್ನನ್ನು ಆಶ್ರಯಿಸಿದ್ದೇವೆ.
ಯಥಾ ವದಸಿ ಗೋವಿಂದ ತಥಾ ತದುಪಪದ್ಯತೇ |
ನಹಿ ತ್ವದಗ್ರತಸ್ತೇಷಾಂ ಯೇಷಾಂ ಲಕ್ಷ್ಮೀಃ ಪರಾಙ್ಮುಖೀ ॥10॥
ಗೋವಿಂದನೇ! ನೀನು ಹೇಗೆ ಹೇಳುತ್ತಿಯೋ ಹಾಗೆಯೇ ಎಲ್ಲವೂ ನಡೆಯುತ್ತದೆ. ಯಾರಿಗೆ ಲಕ್ಷ್ಮೀಯು ವಿಮುಖಳಾಗುತ್ತಾಳೆಯೋ ಅವರು ನಿನ್ನ ಎದುರಿಗೆ ನಿಲ್ಲಲಾರರು.(ಯಾರು ನಿನ್ನೆದುರಿಗೆ ನಿಲ್ಲುತ್ತಾರೆಯೋ ಅವರಿಗೆ ಲಕ್ಷ್ಮೀಯು ವಿಮುಖಳಾಗುವಳು)
ನಿಹತಶ್ಚ ಜರಾಸಂಧೋ ಮೋಕ್ಷಿತಾಶ್ಚ ಮಹೀಕ್ಷಿತಃ |
ರಾಜಸೂಯಶ್ಚ ಮೇ ಲಬ್ಧೋ ನಿದೇಶೇ ತವ ತಿಷ್ಠತಃ ॥11॥
ನಿನ್ನ ಅಪ್ಪಣೆಯಲ್ಲಿ ನಾನು ಇರುವಾಗ ಜರಾಸಂಧನು ಹತನಾಗಿದ್ದಾನೆ. ರಾಜರು ಬಂಧನದಿಂದ ಬಿಡಿಸಲ್ಪಟ್ಟಿದ್ದಾರೆ. ರಾಜಸೂಯವು ನನ್ನಿಂದ ಪ್ರಾಪ್ತವಾಗಿದೆ ಎಂದೇ ಭಾವಿಸುತ್ತೇನೆ.
ಕ್ಷಿಪ್ರಕಾರಿನ್ ಯಥಾ ತ್ವೇತತ್ ಕಾರ್ಯಂ ಸಮುಪಪದ್ಯತೇ |
ಮಮ ಕಾರ್ಯಂ ಜಗತ್ಕಾರ್ಯಂ ತಥಾ ಕುರು ನರೋತ್ತಮ ॥12॥
ಶೀಘ್ರವಾಗಿ ಕಾರ್ಯವನ್ನು ಮಾಡುವ ಪುರುಷೋತ್ತಮನೇ! ಈ ಎಲ್ಲ ಕಾರ್ಯಗಳೂ ಹೇಗೆ ಕೈಗೂಡುತ್ತವೆಯೋ, ಹಾಗೆ ನನಗೆ ಕ್ಷೇಮವಾದ ಕಾರ್ಯವನ್ನು ಮತ್ತು ಜಗತ್ತಿಗೆ ಕ್ಷೇಮವಾದ ಕಾರ್ಯವನ್ನು ಮಾಡು.
ತ್ರಿಭಿರ್ಭವದ್ಭಿರ್ಹಿ ವಿನಾ ನಾಹಂ ಜೀವಿತುಮುತ್ಸಹೇ |
ಧರ್ಮಕಾಮಾರ್ಥರಹಿತೋ ರೋಗಾರ್ತ ಇವ ದುರ್ಗತಃ ॥13॥
ರೋಗಕ್ಕೆ ತುತ್ತಾಗಿ ಧರ್ಮಾರ್ಥಕಾಮಗಳಿಲ್ಲದೆ ದುಃಖದಿಂದ ಜೀವಿಸುವವನಂತೆ, ನೀವು ಮೂವರು ಇಲ್ಲದೆ ನಾನು ಬದುಕಿರಲಾರೆ.
ನ ಶೌರಿಣಾ ವಿನಾ ಪಾರ್ಥೋ ನ ಶೌರಿಃ ಪಾಂಡವಂ ವಿನಾ |
ನಾಜೇಯೋಽಸ್ತ್ಯನಯೋರ್ಲೋಕೇ ಕೃಷ್ಣಯೋರಿತಿ ಮೇ ಮತಿಃ ॥14॥
ಕೃಷ್ಣನನ್ನು ಬಿಟ್ಟು ಅರ್ಜುನನಿಲ್ಲ. ಅರ್ಜುನನ್ನು ಬಿಟ್ಟು ಕೃಷ್ಣನೂ ಇಲ್ಲ. ಈ ಇಬ್ಬರು ಕೃಷ್ಣರು ಜೊತೆಯಲ್ಲಿ ಸೇರಿದರೆ ಲೋಕದಲ್ಲಿ ಜಯಿಸಲಾಗದುದು ಯಾವುದೂ ಇಲ್ಲವೆಂದು ನನ್ನ ಅಭಿಪ್ರಾಯ.
ಅಯಂ ಚ ಬಲಿನಾಂ ಶ್ರೇಷ್ಠಃ ಶ್ರೀಮಾನಪಿ ವೃಕೋದರಃ |
ಯುವಾಭ್ಯಾಂ ಸಹಿತೋ ವೀರಃ ಕಿಂ ನ ಕುರ್ಯಾತ್ ಮಹಾಯಶಾಃ ॥15॥
ಈ ಕಾಂತಿಯುಕ್ತನಾದ ವೃಕೋದರನೂ ಸಹ ಬಲವುಳ್ಳವರಲ್ಲಿ ಬಹಳ ಶ್ರೇಷ್ಠನಾದವನು. ನಿಮ್ಮಿಬ್ಬರ ಜೊತೆಯಲ್ಲಿ ಸೇರಿದಾಗ ಮಹಾಕೀರ್ತಿವಂತನಾದ ಈ ವೀರನು ಏನನ್ನು ಸಾಧಿಸಲಾರ?
ಸುಪ್ರಣೀತಬಲೋ ಯೋ ಹಿ ಕುರುತೇ ಕಾರ್ಯಮುತ್ತಮಮ್ |
ಅಂಧಂ ಜಡಂ ಬಲಂ ಪ್ರಾಹುಃ ಪ್ರಣೀತಮವಿಚಕ್ಷಣೈಃ ॥16॥
ಯಾರು ತನ್ನ ಬಲವನ್ನು ಸರಿಯಾದ ರೀತಿಯಲ್ಲಿ ನಿಯೋಜಿಸುತ್ತಾನೆಯೋ ಅವನು ಶ್ರೇಷ್ಠವಾದ ಕಾರ್ಯವನ್ನು ಸಾಧಿಸುತ್ತಾನೆ. ಅವಿವೇಕಿಯು ಪ್ರಯೋಗಿಸಿದ ಬಲವನ್ನು ಕುರುಡು ಮತ್ತು ಕುಂಟು ಎನ್ನುತ್ತಾರೆ.
ಯತೋ ಹಿ ನಿಮ್ನಂ ಭವತಿ ನಯತೀಹ ತತೋ ಜಲಮ್ |
ಯತಶ್ಛಿದ್ರಂ ತತಶ್ಚಾಪಿ ನಯಂತಿ ವಿದುಷೋ ಬಲಮ್ ॥17॥
ಎಲ್ಲಿ ಹಳ್ಳವಿದೆಯೋ ಅಲ್ಲಿಗೆ ನೀರು ಕೊಚ್ಚಿಕೊಂಡು ಹೋಗುತ್ತದೆ. ಎಲ್ಲಿ ಶತ್ರುಗಳ ದೌರ್ಬಲ್ಯವಿದೆಯೋ ಅಲ್ಲಿಯೇ ವಿದ್ವಾಂಸರಾದವರು ಬಲವನ್ನು ಪ್ರಯೋಗಿಸುತ್ತಾರೆ.
ವಯಮಾಶ್ರಿತ್ಯ ಗೋವಿಂದಂ ಯತಾಮಃ ಕಾರ್ಯಸಿದ್ಧಯೇ |
ತಸ್ಮಾತ್ ನಯವಿಧಾನಜ್ಞಂ ಪುರುಷಂ ಲೋಕವಿಶ್ರುತಮ್ ॥18॥
ಏವಂ ಪ್ರಜ್ಞಾನಯಬಲಂ ಕ್ರಿಯೋಪಾಯವಿಶಾರದಮ್ |
ಪುರಸ್ಕುರ್ವಂತಿ ಕಾರ್ಯೇಷು ಕೃಷ್ಣ ಕಾರ್ಯಾರ್ಥಸಿದ್ಧಯೇ ॥19॥
ನಾವು ಗೋವಿಂದನನ್ನು ಆಶ್ರಯಿಸಿ ನಮ್ಮ ಕಾರ್ಯಸಿದ್ಧಿಗಾಗಿ ಪ್ರಯತ್ನ ಪಡುತ್ತೇವೆ. ಕೃಷ್ಣನೇ! ಆದ್ದರಿಂದ ನೀತಿವಿಧಾನವನ್ನು ತಿಳಿದವನೂ, ಲೋಕ ವಿಶ್ರುತವಾದವನೂ, ಪ್ರಜ್ಞೆ ಮತ್ತು ನೀತಿಗಳ ಬಲವನ್ನು ಹೊಂದಿದವನೂ, ಕ್ರಿಯೋಪಾಯಗಳಲ್ಲಿ ನಿಷ್ಣಾತನೂ ಆದ ಪುರುಷನನ್ನು ಮುಂದೆಮಾಡಿಕೊಂಡು ಕಾರ್ಯಗಳ ಸಿದ್ಧಿಗಾಗಿ ಪ್ರಯತ್ನಪಡುತ್ತಾರೆ.

ಏವಮೇವ ಯದುಶ್ರೇಷ್ಠ ಪಾರ್ಥಕಾರ್ಯಾರ್ಥಸಿದ್ಧಯೇ |
ಅರ್ಜುನಃ ಕೃಷ್ಣಮನ್ವೇತು ಭೀಮೋಽನ್ವೇತು ಧನಂಜಯಮ್ |
ನಯೋ ಜಯೋ ಬಲಂ ಚೈವ ವಿಕ್ರಮಾದ್ ವೃದ್ಧಿಮೇಷ್ಯತಿ ॥20॥
ಯದುಶ್ರೇಷ್ಠನೇ! ಆ ರೀತಿಯಲ್ಲಿ ಪಾಂಡವರಾದ ನಮ್ಮ ಕಾರ್ಯಸಿದ್ಧಿಗಾಗಿ ಅರ್ಜುನನು ಕೃಷ್ಣನನ್ನು ಹಿಂಬಾಲಿಸಲಿ ಭೀಮಸೇನನು ಅರ್ಜುನನ್ನು ಹಿಂಬಾಲಿಸಲಿ. ನೀತಿ ಜಯ ಮತ್ತು ಬಲಗಳನ್ನು ವಿಶಿಷ್ಟವಾದ ಕ್ರಮದಲ್ಲಿ ಪ್ರಯೋಗಿಸಿದರೆ ಬಲವು ಅಭಿವೃದ್ಧಿಯಾಗುವುದು.
ವೈಶಂಪಾಯನಃ
ಏವಮುಕ್ತಾಸ್ತತಃ ಸರ್ವೇ ಭ್ರಾತರೌ ವಿಪುಲೌಜಸೌ |
ವಾರ್ಷ್ಣೇಯಃ ಪಾಂಡವೇಯೌ ಚ ಪ್ರತಸ್ಥುರ್ಮಾಗಧಾನ್ ಪ್ರತಿ ॥
ಎಲ್ಲಾ ಸಹೋದರರು ಈ ಮಾತುಗಳನ್ನು ಕೇಳಿದ ಮೇಲೆ ವಿಪುಲ ಪರಾಕ್ರಮಿಗಳಾದ ಅಣ್ಣತಮ್ಮಂದಿರಾದ ಭೀಮಾರ್ಜುನರೂ ಮತ್ತು ವೃಷ್ಣಿಕುಲ ಪ್ರಸೂತನಾದ ಕೃಷ್ಣನೂ ಮಗಧ ದೇಶವನ್ನು ಕುರಿತು ಪ್ರಯಾಣ ಮಾಡಿದರು.
ವರ್ಚಸ್ವಿನಾಂ ಬ್ರಾಹ್ಮಣಾನಾಂ ಸ್ನಾತಕಾನಾಂ ಪರಿಚ್ಛದೈಃ |
ಆಚ್ಛಾದ್ಯ ಸುಹೃದಾಂ ವಾಕ್ಯೈರ್ಮನೋಜ್ಞೈರಭಿನಂದಿತಾಃ |
ಮಾಧವಃ ಪಾಂಡವೇಯೌ ಚ ಪ್ರತಸ್ಥುರ್ವ್ರತಧಾರಿಣಃ ॥22॥
ವಯಸ್ಸಾದ ಸ್ನಾತಕ ಬ್ರಾಹ್ಮಣರ ವೇಶದಿಂದ ತಮ್ಮ ನಿಜರೂಪವನ್ನು ಆಚ್ಛಾದನೆಮಾಡಿಕೊಂಡು, ಪುರಜನರ ಪ್ರೇಮಾಶೀರ್ವಚನಗಳಿಂದ ಅಭಿನಂದಿತರಾಗಿ ಕೃಷ್ಣನೂ ಮತ್ತು ಭೀಮಾರ್ಜುನರೂ ಸ್ನಾತಕ ವ್ರತಧಾರಿಗಳ ವೇಷವನ್ನು ಧರಿಸಿ ಹೊರಟರು.
ಅಮರ್ಷಾದಭಿತಪ್ತಾನಾಂ ಜ್ಞಾತ್ಯರ್ಥಂ ಮುಖ್ಯತೇಜಸಾಮ್ |
ರವಿಸೋಮಾಗ್ನಿವಪುಷಾಂ ಭೀಮಮಾಸೀತ್ ತದಾ ವಪುಃ ॥23॥
ತಮ್ಮ ಬಂಧುಗಳಾದ ಕ್ಷತ್ರಿಯರಿಗೆ ಮಾಡಿದ ಅವಮಾನದ ಕಾರಣದಿಂದ ಸಿಟ್ಟಿನಿಂದ ಉರಿಯುತ್ತಿರುವ ಶ್ರೇಷ್ಠವಾದ ತೇಜಸ್ಸುಳ್ಳ ಸೂರ್ಯ, ಚಂದ್ರ ಮತ್ತು ಅಗ್ನಿಗಳಂತೆ ಇರುವ ಆ ಮೂವರ ಶರೀರವು, ಆಗ ಭಯಂಕರವಾಗಿ ಕಾಣುತಿತ್ತು.
ಹತಂ ಮೇನೇ ಜರಾಸಂಧಂ ರಾಜಾ ಭೀಮಪುರೋಗಮೌ |
ಏಕಕಾರ್ಯೇ ಸಮುದ್ಯುಕ್ತೌ ದೃಷ್ಟ್ವಾ ಕೃಷ್ಣಧನಂಜಯೌ ॥24॥
ಭೀಮಸೇನನ್ನು ಮುಂದೆ ಮಾಡಿಕೊಂಡು ನಡೆಯುತ್ತಿರುವ ಮುಖ್ಯವಾದ ಕಾರ್ಯದಲ್ಲಿ ಸಮುದ್ಯುಕ್ತರಾದ ಕೃಷ್ಣಾರ್ಜುನರನ್ನು ನೋಡಿ ಧರ್ಮರಾಜನು ಜರಾಸಂಧನು ಹತನಾದನೆಂದೇ ತಿಳಿದನು.
ಈಶೌ ಹಿ ತೌ ಮಹಾತ್ಮಾನೌ ಸರ್ವಕಾರ್ಯಪ್ರವರ್ತಿನೌ |
ಧರ್ಮಾರ್ಥಕಾಮಮೋಕ್ಷಾಣಾಂ ಕಾರ್ಯಾಣಾಮಿವ ನಿಗ್ರಹೇ ॥25॥
ಸ್ತ್ರೀಭೋಗಾದಿ ಕಾರ್ಯಗಳನ್ನು ನಿಗ್ರಹಿಸಿ, ಕಾಮದಿಂದ ಬಿಡುಗಡೆಯನ್ನು ಪಡೆದ ಧರ್ಮ ಮತ್ತು ಅರ್ಥಗಳಂತೆ ಮಹಾತ್ಮರಾದ ಸರ್ವಕಾರ್ಯಗಳಲ್ಲಿಯೂ ಪ್ರವೃತ್ತರಾಗುವ ಅವರಿಬ್ಬರೂ ಸಮರ್ಥರಾದವರು.
ಕುರುಭ್ಯಃ ಪ್ರಸ್ಥಿತಾಸ್ತೇ ತು ಮಧ್ಯೇನ ಕುರುಜಾಂಗಲಮ್ |
ರಮ್ಯಂ ಪದ್ಮಸರೋ ಗತ್ವಾ ಕಾಲಕೂಟಮತೀತ್ಯ ಚ ॥26॥
ಸಂತೀರ್ಯ ಸರಯೂಂ ರಮ್ಯಾಂ ದೃಷ್ಟ್ವಾ ಪೂರ್ವಾಂಶ್ಚ ಕೋಸಲಾನ್ |
ಗಂಡಕೀಮನುರಾಗಾಂ ಚ ಸದಾನೀರಾಂ ತಥೈವ ಚ ॥27॥
ಏಕಪರ್ವತಕೇ ನದ್ಯಃ ಕ್ರಮೇಣಾತಿವ್ರಜಂತಿ ತೇ |
ಅತೀತ್ಯ ಮಿಥಿಲಾಂ ಜಗ್ಮುಃ ಪಶ್ಯಂತೋ ವಿಪುಲಾ ನದೀಃ ॥28॥
ಕುರುದೇಶದಿಂದ ಹೊರಟ ಅವರು ಕುರುಜಾಂಗಲವನ್ನು ಮಧ್ಯದಲ್ಲಿ ಮಾಡಿಕೊಂಡು ಮನೋಹರವಾದ ಪದ್ಮ ಸರೋವರವನ್ನು ತಲುಪಿ ಕಾಲಕೂಟಪರ್ವತವನ್ನು ದಾಟಿ ಮನೋಹರವಾದ ಸರಯೂ ನದಿಯನ್ನು ದಾಟಿ ಪೂರ್ವಕೋಸಲದೇಶವನ್ನು ದಾಟಿ ಏಕ ಪರ್ವತದಲ್ಲಿ ಕ್ರಮವಾಗಿ ಹರಿಯುವ ಗಂಡಕೀ ಅನುರಾಗ ಮತ್ತು ಸದಾನೀರಾ ನದಿಗಳನ್ನು ದಾಟಿ ಇನ್ನೂ ಅನೇಕ ನದಿಗಳನ್ನು ನೋಡುತ್ತಾ ಮಿಥಿಲಾಪಟ್ಟಣವನ್ನು ದಾಟಿದರು.
ಉತ್ತೀರ್ಯ ಗಂಗಾಂ ಶೋಣಾಂ ಚ ಸರ್ವೇ ತೇ ಪ್ರಾಙ್ಮುಖಾಸ್ತ್ರಯಃ|
ರಮ್ಯಂ ಜನಪದಂ ಸ್ಫೀತಂ ಮಾಗಧಂ ಜಗ್ಮುರಚ್ಯುತಾಃ ॥29॥
ಆ ಮೂವರೂ ಗಂಗೆಯನ್ನೂ ಶೋಣಾನದಿಯನ್ನೂ ದಾಟಿ ಪೂರ್ವಾಭಿಮುಖವಾಗಿ ಹೊರಟು ಉತ್ಸಹಾದಿಗುಣಗಳಿಂದ ತುಂಬಿದವರಾಗಿ ಮನೋಹರವಾದ ಮತ್ತು ಸಮೃದ್ಧವಾದ ಮಗಧದೇಶವನ್ನು ತಲುಪಿದರು.
ದೇಶಂ ಚ ಗೋಧನಾಕೀರ್ಣಂ ಮಧುಮಂತಂ ಶುಭದ್ರುಮಮ್ |
ಗೋರಥಂ ಗಿರಿಮಾರುಹ್ಯ ದದೃಶುರ್ಮಾಗಧಂ ಪುರಮ್ ॥30॥
ಗೋವುಗಳಿಂದ ತುಂಬಿದ ಐಶ್ವರ್ಯಯುಕ್ತವಾದ ಆ ದೇಶವನ್ನು ತಲುಪಿ, ಅವರು ಗೋರಥ ಎಂಬ ಪರ್ವತವನ್ನು ಹತ್ತಿ ಅನೇಕ ಪುಣ್ಯವೃಕ್ಷಗಳನ್ನೂ ಸುಖ ಸಮೃದ್ಧಿಗಳನ್ನೂ ಹೊಂದಿದ್ದ ಮಗಧದೇಶದರಾಜಧಾನಿಯಾದ ಗಿರಿವ್ರಜವನ್ನು ನೋಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕವಿಂಶೋಽನಧ್ಯಾಯಃ ॥
॥ ಜರಾಸಂಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು.

*****
മ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಸಮೇತ್ಯ ಮಾಗಧಾಂಸ್ತು ತೇ ಶಿವೋರುಲಿಂಗಮಿತ್ಯಲಂ |
ಸುಮಾಲ್ಯವಸ್ತ್ರಭೂಷಣೈಃ ಸಮರ್ಚಿತಂ ಗಿರಿಂ ಯಯುಃ ॥123॥
ಶ್ರೀಕೃಷ್ಣ ಭೀಮಾರ್ಜುನರು ಮಗಧ ದೇಶಕ್ಕೆ ಹೋಗಿ ಅಲ್ಲಿ ಶಿವನ ದೊಡ್ಡ ಲಿಂಗವೆಂದು ಒಳ್ಳೆಯ ಮಾಲೆ ವಸ್ತ್ರ ಅಲಂಕಾರಗಳಿಂದ ಬಹಳವಾಗಿ ಪೂಜೆಗೊಳ್ಳುತ್ತಿದ್ದ ಒಂದು ಬೆಟ್ಟದ ಶಿಖರದ ಬಳಿಗೆ ಹೋದರು.
ಸ್ವಶೀರ್ಷತೋಽಪಿ ಚಾದೃತಂ ಜರಾಸುತೇನ ತೇ ಗಿರಿಂ |
ನ್ಯಪಾತಯಂತ ಬಾಹುಭಿಸ್ತಮಸ್ಯ ಚೋತ್ತಮಾಂಗವತ್ ॥124॥
ಜರಾಸಂಧ ಯಾವ ಬೆಟ್ಟವನ್ನು ತನ್ನ ತಲೆಗಿಂತಲೂ ಹೆಚ್ಚಾಗಿ ಆದರಿಸುತ್ತಿದ್ದನೋ ಆ ಬೆಟ್ಟವನ್ನು ಮೂವರೂ ತಮ್ಮ ಬಾಹುಗಳಿಂದ ಹೊಡೆದು ಕೆಡವಿದರು. ಜರಾಸಂಧನ ತಲೆಯೇ ಉರುಳಿದಂತಾಯಿತು.
ಅದ್ವಾರತಸ್ತೇ ನಗರಂ ಪ್ರವಿಶ್ಯ
ಮಾಷಸ್ಯ ನಾಳೇನ ಕೃತಾಸ್ತ್ರಿಭೇರೀಃ |
ಪುಷ್ಟಿಪ್ರದಾ ಬಿಭಿದುಸ್ತಸ್ಯ ಕೀರ್ತಿ-
ಶಾಸೊತ್ರೇಪಮಾ ನ್ಯಕ್ಕೃತಮಾಗಧೇಶಾಃ ॥125॥
ಅವರು ಅದ್ವಾರದಿಂದ ನಗರವನ್ನು ಪ್ರವೇಶಿಸಿದರು. ಮಾಷಾಸುರನ ಕಂಠನಾಳದಿಂದ ಮಾಡಿದ ಭೇರಿಗಳು ಅಲ್ಲಿ ಜರಾಸಂಧನ ಕೀರ್ತಿಯನ್ನು ಹೊಗಳುವ ಶಾಸ್ತ್ರಗಳಂತಿದ್ದವು. ಧ್ವನಿಯಿಂದ ಜನರಿಗೆ ಪುಷ್ಟಿ ನೀಡುತ್ತಿದ್ದುವು. ಕೃಷ್ಣಭೀಮಾರ್ಜುನರು ಜರಾಸಂಧನನ್ನು ತೃಣೀಕರಿಸುತ್ತ ಆ ಭೇರಿಗಳನ್ನೂ ಒಡೆದರು.
ತಥಾಪಣೇಭ್ಯೋ ಬಹುಮಾಲ್ಯಗಂಧಾನ್
ಪ್ರಸಹ್ಯ ಸಂಗೃಹ್ಯ ಶುಭಾಂಶ್ಚ ದಧ್ರುಃ |
ಅದ್ವಾರತಸ್ತಸ್ಯ ಗೃಹಂ ಚ ಸಸ್ರು-
ರ್ಭೋರ್ಶಬ್ದತಸ್ತಂ ಚ ನೃಪಂ ಪ್ರಸಸ್ರುಃ ॥126॥
ಶ್ರೀಕೃಷ್ಣ ಭೀಮ ಅರ್ಜುನರು ಅಂಗಡಿಗಳಿಂದ ಒಳ್ಳೆಯ ಅನೇಕ ಹೂಮಾಲೆ ಮತ್ತು ಗಂಧಗಳನ್ನು ಬಲಾತ್ಕಾರವಾಗಿ ತೆಗೆದು ಧಾರಣ ಮಾಡಿದರು. ಅದ್ವಾರದಿಂದಲೆ ಜರಾಸಂಧನ ಅರಮನೆಯನ್ನು ಪ್ರವೇಶಿಸಿದರು. `ಎಲೋ ಜರಾಸಂಧ!' ಎಂದು ಕೂಗುತ್ತ ಅವನ ಬಳಿಗೆ ನಡೆದರು.
ತಾನ್ ವಿಪ್ರವೇಷಾನ್ ನಿ ನಿಶಾಮ್ಯ ರಾಜಾ
ಮಹಾಭುಜಾನ್ ಸ್ನಾತಕವೇಷಯುಕ್ತಾನ್ |
ದ್ವಿತೀಯವರ್ಣಾನ್ ಪ್ರವಿಚಿಂತ್ಯ ಬಾಹೂನ್
ಜ್ಯಾಕರ್ಕಶಾನ್ ವೀಕ್ಷ್ಯ ಬಭಾಷ ಏತಾನ್ ॥127॥
ಅವರು ಬ್ರಾಹ್ಮಣ ವೇಷದಲ್ಲಿದ್ದರು. ಅದರಲ್ಲಿಯೂ ಸ್ನಾತಕ ವೇಷಯುಕ್ತರಾಗಿದ್ದರು. ಆದರೆ ಮಹಾಬಾಹುಗಳು. ಬಾಹುಗಳು ಬಿಲ್ಲಿನ ಹೆದೆಯ ಚಿಹ್ನೆಯಿಂದ ಕೂಡಿದ್ದು ಕಠಿನವಾಗಿದ್ದುವು. ಅದನ್ನು ನೋಡಿ ಜರಾಸಂಧ ಅವರು ಕ್ಷತ್ರಿಯರೇ ಇರಬಹುದೆಂದು ಆಲೋಚಿಸಿ ಕೇಳಿದ.
ಕೇ ಷ್ಠಾಥ ಕಿಂಹೇತುತ ಆಗತಾಶ್ಚ
ಕುತಶ್ಚ ಮೇ ಪರ್ವತಲಿಂಗಭೇದನಂ |
ಕೃತಂ ಭವದ್ಭಿಃ ಕುತ ಏವ ದುರ್ನಯಾಃ
ಕೃತಾಸ್ತಥಾನ್ಯೇ ದ್ವಿಜವರ್ಯವೇಷೈಃ ॥128॥
`ಯಾರು ನೀವು? ಏಕೆ ಬಂದಿರಿ? ನನ್ನ ಪರ್ವತಾಕಾರದ ಶಿವಲಿಂಗವನ್ನು ಏಕೆ ಕೆಡವಿದಿರಿ? ಬ್ರಾಹ್ಮಣೋತ್ತಮರ ವೇಷ ಧರಿಸಿದ್ದೂ ಬೇರೆ ಅನ್ಯಾಯಾಚರಣೆಗಳನ್ನು ಏಕೆ ಮಾಡಿದಿರಿ?
ಇತಿ ಬ್ರುವಾಣಂ ಭಗವಾನುವಾಚ
ಕಾರ್ಯಂ ಹಿ ಶತ್ರೋರಖಿಲಂ ಪ್ರತೀಪಂ |
ಇತ್ಯುಕ್ತ ಊಚೇ ನ ಹಿ ವಿಪ್ರಶತ್ರು-
ರಹಂ ಕುತೋ ವೋ ಮಮ ಶತ್ರುತಾ ಭವೇತ್ ॥129॥
ಜರಾಸಂಧ ಹೀಗೆ ಕೇಳಿದಾಗ ಭಗವಾನ್ ಶ್ರೀಕೃಷ್ಣ ನುಡಿದ. `ಶತ್ರುವಿಗೆ ಎಲ್ಲ ರೀತಿಯಿಂದ ವಿರುದ್ಧಾಚರಣೆ ಮಾಡುವುದು ಯುಕ್ತವೆ'. ಅದನ್ನು ಕೇಳಿ ಜರಾಸಂಧ ನುಡಿದ. `ನಾನು ಬ್ರಾಹ್ಮಣರಿಗೆ ಶತ್ರುವಲ್ಲ. ನಿಮಗೆ ನನ್ನಲ್ಲಿ ಏಕೆ ಶತ್ರುತ್ವ?
ಇತ್ಯುಕ್ತವಾಕ್ಯಂ ನೃಪತಿಂ ಜಗಾದ
ಜನಾರ್ದನೋ ನೈವ ಹಿ ತಾದೃಶಾ ದ್ವಿಜಾಃ |
ವಯಂ ರಿಪುಸ್ತೇಽಸ್ಮಿ ಹಿ ವಾಸುದೇವ
ಇವೌ ಚ ಭೀಮಾರ್ಜುನನಾಮಧೇಯೌ ॥130॥
ಜರಾಸಂಧ ಹೀಗೆ ಹೇಳಿದಾಗ ಶ್ರೀಕೃಷ್ಣ ಹೇಳಿದ `ನಾವೇನೂ ಅಂಥ ಬ್ರಾಹ್ಮಣರು ಸರ್ವಥಾ ಅಲ್ಲ. ನಾನು ನಿನ್ನ ಶತ್ರು ವಾಸುದೇವ. ಇವರೂ ಭೀಮ ಅರ್ಜುನ ಎಂದು ಹೆಸರುಳ್ಳವರು.
ಯದ್ ಬಾಂಧವಾನ್ನಃ ಪಿಶಿತಾಶಿಧರ್ಮತೋ

ರೌದ್ರೇ ಮಖೇ ಕಲ್ಪಯಿತುಂ ಪಶುತ್ವೇ |
ಇಚ್ಛಸ್ಯರೇ ವೇದಪಥಂ ವಿಹಾಯ
ತಂ ತ್ವಾಂ ಬಲಾಚ್ಛಾಸ್ತುಮಿಹಾಗತಾ ವಯಂ ॥131॥
ಎಲೋ ದುಷ್ಟ, ನೀನು ವೇದಮಾರ್ಗವನ್ನು ತೊರೆದು ರಾಕ್ಷಸ ವೃತ್ತಿಯಿಂದ ನಮ್ಮ ಬಾಂಧವರನ್ನು ಭೈರವಯಾಗದಲ್ಲಿ ಬಲಿಪಶುವಾಗಿ ಮಾಡಲು ಬಯಸಿರುವಿ. ಅಂಥ ನಿನಗೆ ಬಲಾತ್ಕಾರವಾಗಿ ಶಾಸನ ಮಾಡಲು ನಾವು ಇಲ್ಲಿಗೆ ಬಂದಿದ್ದೇವೆ.
ವಿಮೋಕ್ಷಯಾಮಃ ಸ್ವಜನಾನ್ ಯದಿ ತ್ವಂ
ನ ಮೋಚಯಸ್ಯದ್ಯ ನಿಗೃಹ್ಯ ಚ ತ್ವಾಂ |
ಮುಂಚಾಥ ವಾ ತಾನಭಿಯಾಹಿ ವಾಽಸ್ಮಾನ್
ರಣಾಯ ಮರ್ತುಂ ಕೃತನಿಶ್ಚಯೋಽತ್ರ ॥132॥
ನೀನು ನಮ್ಮ ಬಾಂಧವರನ್ನು ಬಿಡುಗಡೆ ಮಾಡದಿದ್ದರೆ ನಿನ್ನನ್ನು ನಿಗ್ರಹಿಸಿ ಅವರನ್ನು ನಾವೆ ಬಿಡಿಸಿಕೊಳ್ಳುತ್ತೇವೆ. ಅದರಿಂದ ಅವರನ್ನು ಬಿಟ್ಟುಕೊಡು ಇಲ್ಲವೆ, ಸಾಯಲು ನಿಶ್ಚಯಮಾಡಿದ್ದರೆ ನಮ್ಮೊಡನೆ ಯುದ್ಧಕ್ಕೆ ಬಾ.
ಇತೀರಿತೋಽಸೌ ಮಗಧಾಧಿಪೋ ರುಷಾ
ಜಗಾದ ನಾಹಂ ಶಿವಯಾಗಯುಕ್ತಾನ್ |
ಮೋಕ್ಷ್ಯೇ ಪಶೂನ್ ಯುಗಪದ್ವಾಕ್ರಮೇಣ
ಯೋತ್ಸ್ಯೇ ಚ ವೋಽಥಾಪಿ ಚಮೂಸಹಾಯಾನ್ ॥133॥
ಶ್ರೀಕೃಷ್ಣ ಹೀಗೆ ಹೇಳಿದಾಗ ಜರಾಸಂಧ ಕೋಪದಿಂದ ನುಡಿದ. `ನಾನು ಭೈರವಯಾಗಕ್ಕೆ ಮೀಸಲಾಗಿಟ್ಟಿರುವ ಈ ಪಶುಗಳನ್ನು ಬಿಡಲಾರೆ. ನಿಮ್ಮ ಮೂವರೊಡನೆ ಏಕಕಾಲದಲ್ಲಾಗಲಿ, ಕ್ರಮವಾಗಿ ಒಬ್ಬೊಬ್ಬರೊಡನೆಯಾಗಲಿ, ಸೈನ್ಯ ಸಮೇತವಾಗಿಯಾಗಲಿ ಅಥವಾ ಏಕಾಂಗಿಯಾಗಲಿ ನಾನು ನಿಮ್ಮೊಡನೆ ಯುದ್ಧವನ್ನೇ ಮಾಡುವೆನು'.
ನಿರಾಯುಧಃ ಸಾಯುಧೋ ವಾ ಯುಷ್ಮದಿಷ್ಟಾಯುಧೇನ ವಾ |
ಏಕೋಽಪಿ ಸಕಲೈರ್ಯೋತ್ಸ್ಯೇ ಸಸೈನ್ಯೋ ವಾ ಸಸೈನಿಕಾನ್ ॥134॥
ನಿರಾಯುಧನಾಗಿಯೋ ಆಯುಧ ಸಹಿತನಾಗಿಯೋ ಅಥವಾ ನಿಮಗೆ ಇಷ್ಟವಾದ ಆಯುಧದಿಂದಲೋ ಒಬ್ಬನೇ ನಿಮ್ಮೆಲ್ಲರೊಡನೆ ಹೋರಾಡುವೆನು. ಅಥವಾ ಸೈನ್ಯ ಸಹಿತನಾಗಿ ಸೈನ್ಯ ಸಮೇತರಾದ ನಿಮ್ಮೊಡನೆ ಯುದ್ಧವನ್ನೂ ಮಾಡಲು ಸಿದ್ಧನಿದ್ದೇನೆ.
* * * *

ಇಪ್ಪತ್ತೆರಡನೆಯ ಅಧ್ಯಾಯ
(ಜರಾಸಂಧನ ಪುರದವರ್ಣನೆ, ಕೃಷ್ಣಮೊದಲಾದವರ ಪ್ರವೇಶಪ್ರಕಾರ. ಜರಾಸಂಧನ ಜೊತೆಯಲ್ಲಿ ಅವರ ವಿವಾದ, ಮತ್ತು ಭೀಮಸೇನನ ಯುದ್ಧೋದ್ಯಮ.)
ವಾಸುದೇವಃ
ಏಷ ಪಾರ್ಥ ಮಹಾಬಾಹೋ ಪಶುಮಾನ್ ನಿತ್ಯಮಂಬುಮಾನ್ |
ಅನಾಮಯಃ ಸುವೇಶ್ಮಾಢ್ಯೋ ನಿವೇಶೋ ಮಾಗಧಃ ಶುಭಃ ॥1॥
ಮಹಾಬಾಹುವಾದ ಪಾರ್ಥನೇ! ಇದು ಮಗಧದೇಶದ ಪಶುಗಳಿಂದಲೂ ಯಾವಗಲೂ ಉದಕದಿಂದಲೂ ಒಳ್ಳೆಯ ಮನೆಗಳಿಂದಲೂ ಕೂಡಿದ್ದು ಯಾವ ಅತಂಕವೂ ಇಲ್ಲದಿರುವ ಮಗಧರಾಜ್ಯದ ಶುಭವಾದ ಪಟ್ಟಣ.
ವೈಹಾರೋ ವಿಪುಲಃ ಶೈಲಃ ವಾರಾಹೋ ವಿಪುಳಸ್ತಥಾ |
ತಥಾ ವರ್ಷಗಿರಿಸ್ತಾತ ಶುಭಾಶ್ಚೈತ್ಯಕಪಂಚಮಾಃ ॥2॥
ವಿಸ್ತಾರವಾದ ವೈಹಾರ ವರ್ಪತ ವರಾಹಪರ್ವತ ವಿಪುಳಪರ್ವತ ವರ್ಷಗಿರಿ ಮತ್ತು ಚೈತ್ಯಕವೆಂಬ ಐದು ಶುಭಪರ್ವತಗಳಿವೆ.
ಏತೇ ಪಂಚ ಮಹಾಶೃಂಗಾಃ ಪರ್ವತಾಃ ಶೀತಲದ್ರುಮಾಃ |
ರಕ್ಷಂತಿ ಚಾಭಿಸಂಹತ್ಯ ಸಂಹತಾಶ್ಚ ಗಿರಿವ್ರಜಮ್ ॥3॥
ಈ ಪರ್ವತಗಳೆಲ್ಲವೂ ಮಹಾಶೃಂಗಗಳನ್ನು ಹೊಂದಿ ಶೀತಲವಾದ ವೃಕ್ಷಗಳ ಕಾಡಿನಿಂದ ಕೂಡಿವೆ. ಇವು ಒಂದಕ್ಕೊಂದು ಸೇರಿಕೊಂಡು ಈ ಗಿರಿವ್ರಜವನ್ನು ರಕ್ಷಿಸುತ್ತವೆ.
ಪುಷ್ಪವೇಷ್ಟಿತಶಾಖಾಗ್ರೈರ್ಗಂಧವದ್ಭಿರ್ಮನೋರಮೈಃ |
ನಿಗೂಢಾ ಇವ ಲೋಧ್ರಾಣಾಂ ವನೈಃ ಕಾಮಿಜನಪ್ರಿಯೈಃ ॥4॥
ಈ ಪರ್ವತಗಳ ಸುತ್ತಲೂ ಕಾಮಿಜನರಿಗೆ ಪ್ರಿಯವಾದ ಲೋಧ್ರುವನಗಳಿವೆ. ಅವುಗಳು ಮನೋಹರವಾದ ಗಂಧವನ್ನು ಬೀರುವ ತಮ್ಮ ಕೊಂಬೆಗಳಲ್ಲಿ ಮನೋಹರವಾದ ಗಂಧವನ್ನು ಬೀರುವ ಬಹಳ ಪುಷ್ಪಗಳನ್ನು ಹೊಂದಿವೆ.
ಯತ್ರ ದೀರ್ಘತಮಾ ನಾಮ ಋಷಿಃ ಪರಮಯಂತ್ರಿತಃ |
ಸಮುತ್ಪನ್ನಶ್ಚ ಶೂದ್ರಾಯಾಂ ಗೌತಮಃ ಸಂಶಿತವ್ರತಃ ॥5॥
ಇಲ್ಲಿ ಪರಮ ನಿಗ್ರಹೋಪೇತನಾದ ದೀರ್ಘತಮ ಎಂಬ ಗೌತಮವಂಶದ ಮಹಾವ್ರತಧರನಾದ ಋಷಿಯು ಒಬ್ಬ ಶೂದ್ರ ಸ್ತ್ರೀಯಲ್ಲಿ ಜನಿಸಿದನು (ಎಂದರೆ ಪುತ್ರರನ್ನು ಪಡೆದನು)
ಔಶೀನರ್ಯಾಮಜನಯತ್ ಪುತ್ರಾನ್ ಕಾಕ್ಷೀವದಾದಿಕಾನ್ |
ಗೌತಮಸ್ಯ ಕ್ಷಯಾದಸ್ಮಾದಥಾಸೀದತ್ರ ಸದ್ಮನಿ ॥6॥
ಅವನು ಉಶೀನರೀ ಎಂಬ ಆ ರಾಣಿಯಲ್ಲಿ ಕಾಕ್ಷೀವಾನ್ ಮೊದಲಾದ ಮಕ್ಕಳನ್ನು ಪಡೆದನು. ಈ ಗೌತಮಸ್ಥಾನದಿಂದ ಸ್ವಲ್ಪ

ದೂರದಲ್ಲಿರುವ ಈ ಮನೆಯಲ್ಲಿ  ವಾಸಿಸುತ್ತಿದ್ದನು.
ಭಜತೇ ಮಾಗಧಂ ವಂಶಂ ಸ ನೃಪಾಣಾಮನುಗ್ರಹಾತ್ |
ಅಂಗವಂಗಾದಯಶ್ಚೈವ ಭೂಮಿಪಾಃ ಸುಮಹಾಬಲಾಃ ॥7॥
ಗೌತಮಕ್ಷಯಮೇತ್ಯಾತ್ರ ರಮಂತೇ ಸ್ಮ ಸಹಾರ್ಜುನ |
ವನರಾಜೀಸ್ತು ಪಶ್ಯೇಮಾಃ ಪ್ರಿಯಾಲಾನಾಂ ಮನೋರಮಾಃ ॥8॥
ಮಗಧವಂಶದ ರಾಜರುಗಳಿಗೆ ಅನುಗ್ರಹಮಾಡುವ ದೃಷ್ಟಿಯಿಂದ ದೀರ್ಘತಮನು ಇಲ್ಲಿಯೇ ವಾಸವಾಗಿದ್ದನು. ಅರ್ಜುನನೇ! ಅಂಗ ವಂಗ ಮೊದಲಾದ ದೇಶದ  ಮಹಾಬಲಶಾಲಿಗಳಾದ ರಾಜರು ಈ ಗೌತಮಕ್ಷತ್ರಕ್ಕೆ ಬಂದು ವಿಹರಿಸುತ್ತಾರೆ. ಪ್ರಿಯಾಲವೃಕ್ಷಗಳ ಮನೋಹರವಾದ ಈ ಕಾನನದ ಪಂಕ್ತಿಗಳನ್ನು ನೋಡು.
ಲೋಧ್ರಾಣಾಂ ಚ ಶುಭಾಃ ಪಾರ್ಥ ರಾಜೀ ರಾಜೀವಲೋಚನ |
ಪುನ್ನಾಗಾನಾಂ ಶುಭಾಸ್ತತ್ರ ಗೌತಮೌಕಸ್ಸಮೀಪತಃ ॥9॥
ರಾಜೀವಲೋಚನನಾದ ಪಾರ್ಥನೇ! ಆ ಗೌತಮರ ನಿವಾಸದ ಸಮೀಪದಲ್ಲಿ ಲೋಧ್ರವೃಕ್ಷಗಳ ಶುಭವಾದ ಪಂಕ್ತಿಯು ಮತ್ತು ಪುನ್ನಾಗವೃಕ್ಷಗಳ ಶುಭವಾದ ಪಂಕ್ತಿಯು ಇದೆ.
ಅರ್ಬುದಃ ಶಕ್ರವಾಪೀ ಚ ಪನ್ನಗೌ ಶತ್ರುತಾಪನೌ |
ಸ್ವಸ್ತಿಕಸ್ಯಾಲಯಶ್ಚಾತ್ರ ಮಣಿನಾಗಸ್ಯ ಚೋತ್ತಮಃ ॥10॥
ಇಲ್ಲಿ ಶತ್ರುಪೀಡಕರಾದ ಅರ್ಬುದ ಮತ್ತು ಶಕ್ರವಾಪಿ ಎಂಬ ಎರಡು ಸರ್ಪಗಳ ಹಾಗೆಯೇ ಮಣಿನಾಗ ಮತ್ತು ಸ್ವಸ್ತಿಕ ಎಂಬ ಇನ್ನೆರಡು ಸರ್ಪಗಳ ಉತ್ತಮವಾದ ವಾಸಸ್ಥಾನವಿದೆ.
ಸ ಪಾರಿಹಾರ್ಯೋ ಮೇಧ್ಯಾನಾಂ ಮಾಗಧೋಽಯಂ ಮಣೇಃ ಕೃತೇ |
ಶೇಷಜಶ್ಚ ಮಣಿಶ್ಚೈವ ಕೃತವಂತಾವನುಗ್ರಹಮ್ ॥11॥
ಇಲ್ಲಿ ಚಿಂತಾಮಣಿಯು ಇರುವುದರಿಂದ ಮಗಧದೇಶವು ಪೂಜ್ಯರಾದ ಋಷಿಗಳಿಗೆ  ವಿಹಾರಸ್ಥಾನವಾಗಿದೆ. ಶೇಷನ ಪುತ್ರನು ಮತ್ತು ಚಿಂತಾಮಣಿಯು ಈ ದೇಶಕ್ಕೆ ಅನುಗ್ರಹವನ್ನು  ಮಾಡಿದ್ದಾರೆ.
ಪಾಂಡರೇ ವಿಪುಲೇ ಚೈವ ತಥಾ ವಾರಾಹಕೇಽಪಿ ಚ |
ಚೈತ್ಯಕೇ ಚ ಗಿರಿಶ್ರೇಷ್ಠೇ ಮಾತಂಗೇ ಚ ಶಿಲೋಚ್ಚಯೇ ॥12॥
ಏತೇಷು ಪರ್ವತೇಂದ್ರೇಷು ಕ್ರೀಡಂತ್ಯಪ್ಸರಸಸ್ತಥಾ |
ಯತೀನಾಮಾಶ್ರಮಾಶ್ಚೈವ ಮುನೀನಾಂ ಚ ಮಹಾತ್ಮನಾಮ್ ॥13॥
ವೃಷಭಸ್ಯ ತಮಾಲಸ್ಯ ಮಹಾವೀರ್ಯಸ್ಯ ವೈ ತಥಾ |
ಗಂಧರ್ವರಕ್ಷಸಾಂ ಚೈವ ನಾಗಾನಾಂ ಚ ತಥಾಽಽಲಯಾಃ ॥14॥
ಪಾಂಡರಪರ್ವತ ವಿಪುಳಪರ್ವತ ವರಾಹಪರ್ವತ ಚೈತ್ಯಕಪರ್ವತ ಮತ್ತು ಮಾಂತಗಪರ್ವತ ಈ ಶ್ರೇಷ್ಠಪರ್ವತಗಳಲ್ಲಿ  ಅಪ್ಸರೆಯರು ಬಂದು ವಿಹರಿಸುತ್ತಾರೆ. ಇಲ್ಲಿಯೇ ಯತಿಗಳ ಆಶ್ರಮಗಳು ಮತ್ತು ಮಹಾತ್ಮರಾದ ಋಷಿಗಳ ಆಶ್ರಮಗಳೂ ಇವೆ.  ಇಲ್ಲಿ ಮಹಾಪರಾಕ್ರಮಿಯಾದ ತಮಾಲವರ್ಣದ ವೃಷಭಾಸುರನ ಆಲಯವೂ ಗಂಧರ್ವರ ರಾಕ್ಷಸರ ಮತ್ತು ನಾಗಗಳ ಆಲಯಗಳೂ ಇವೆ.
ಕಕ್ಷೀವತಸ್ತಪೋವೀರ್ಯಾತ್ ತಪೋದಾ ಇತಿ ವಿಶ್ರುತಾಃ |
ಪುಣ್ಯತೀರ್ಥಾಶ್ಚ ತೇ ಸರ್ವೇ ನರಾಣಾಂ ಪುಣ್ಯದಾಯಿನಃ ॥15॥
ಕಕ್ಷೀವತರ ತಪಸ್ಸಿನ ಬಲದಿಂದ ತಪೋದ ಎಂದು ಪ್ರಖ್ಯಾತವಾದ ಅನೇಕ ಪುಣ್ಯತೀರ್ಥಗಳು ಇಲ್ಲಿವೆ.  ಅವುಗಳನ್ನು ಸೇವಿಸುವ ಮನುಷ್ಯರಿಗೆ ಪುಣ್ಯವನ್ನು ಉಂಟುಮಾಡಿಕೊಡುತ್ತವೆ.
ಅರ್ಥಸಿದ್ಧಿಂ ತ್ವನಪಗಾಂ ಜರಾಸಂಧೋ ಹಿ ಮನ್ಯತೇ |
ವಯಮಾಸಾದನೇ ತಸ್ಯ ದರ್ಪಮಸ್ಯಾಪಹನ್ಮಹಿ ॥16॥
ಜರಾಸಂಧನು ತನಗಿರುವ ಸಂಪತ್ತು ಎಂದೂ ತನ್ನನ್ನು ಬಿಟ್ಟು ಹೋಗುವುದಿಲ್ಲವೆಂದು ತಿಳಿದಿದ್ದಾನೆ. ನಾವು ಅವನ ಮನೆಯಲ್ಲಿಯೇ ಅವನ ಈ ದರ್ಪವನ್ನು ನಾಶಮಾಡೋಣ.
ವೈಶಂಪಾಯನಃ
ಏವಮುಕ್ತತ್ವ ತತಃ ಸರ್ವೇ ಭ್ರಾತರೌ ವಿಪುಲೌಜಸೌ |
ಕೃಷ್ಣಶ್ಚ ಪಾಂಡವೇಯೌ ಚ ಪ್ರತಸ್ಥುರ್ಮಾಗಧಂ ಪುರಮ್ ॥17॥
ಹೀಗೆ ಹೇಳಿ ವಿಪುಲಪರಾಕ್ರಮಿಗಳಾದ ಪಾಂಡುಪುತ್ರರಾದ ಅಣ್ಣತಮ್ಮಂದಿರಾದ ಭೀಮಾರ್ಜುನರು ಮತ್ತು ಕೃಷ್ಣನು ಮಾಗಧಪುರವಾದ ಗಿರವ್ರಜವನ್ನು ಪ್ರವೇಶಿಸಲು  ಉಪಕ್ರಮಿಸಿದರು.
ಹೃಷ್ಟಪುಷ್ಟಜನೋಪೇತಂ ಚಾತುರ್ವರ್ಣ್ಯಜನಾಕುಲಮ್ |
ಸ್ಫೀತೋತ್ಸವಮನಾಧೃಷ್ಯಮಾಸೇದುಸ್ತೇ ಗಿರಿವ್ರಜಮ್ ॥18॥
ಅವರು ಸಂತೋಷಗೊಂಡ ಪುಷ್ಟರಾದ ಜನರಿಂದ ಕೂಡಿದ ಚಾತುರ್ವರ್ಣ್ಯವನ್ನು ಅನುಸರಿಸುವ ಜನರಿಂದ ನಿಬಿಡವಾದ ಪರಿಶುದ್ಧವಾದ ಉತ್ಸವಗಳನ್ನು ಹೊಂದಿದ ಯಾರಿಂದಲೂ ಭೇದಿಸಲೂ ಅಸಾಧ್ಯವಾದ ಗಿರಿವ್ರಜವನ್ನು ತಲುಪಿದರು.
ಬಾರ್ಹದ್ರಥೈಃ ಪೂಜ್ಯಮಾನಂ ತಥಾ ನಗರವಾಸಿಭಿಃ |
ಯತ್ರ ಮಾಷಾದಮೃಷಮಾಸಸಾದ ಬೃಹದ್ರಥಃ |
ತೇ ಚ ದ್ವಾರಮನಾಸಾದ್ಯ ಪುರಸ್ಯ ಗಿರಿಮುಚ್ಛ್ರಿತಮ್ ॥19॥
ಅವರು ಪುರದ್ವಾರವನ್ನು ಸಮೀಪಿಸದೆ ಬೃಹದ್ರಥನ ವಂಶದವರಿಂದಲೂ ಮತ್ತು ನಗರವಾಸಿಗಳಿಂದಲೂ ಶಿವಲಿಂಗವೆಂದು

ಪೂಜಿಸಲ್ಪಡುವ ಎತ್ತರವಾದ ಪರ್ವತವನ್ನು ತಲುಪಿದರು.  ಅಲ್ಲಿ ಹಿಂದೆ ಬೃಹದ್ರಥನು ವೃಷಭರೂಪವನ್ನು ಧರಿಸಿದ ಮಾಷಾದನೆಂಬ ರಾಕ್ಷಸನನ್ನು ಸಂಧಿಸಿದ್ದನು.
ತಂ ಹತ್ವಾ ಮಾಷನಾಳಾಂಶ್ಚ ತಿಸ್ರೋ ಭೇರೀಶ್ಚಕಾರ ಹ |
ಆನಹ್ಯ ಚರ್ಮಣಾ ತೇನ ಸ್ಥಾಪಯಾಮಾಸ ವೈ ಪುರೇ |
ಯತ್ರ ತಾಃ ಪ್ರಾಣದನ್ ಭೇರ್ಯೋ ದಿವ್ಯಪುಷ್ಪಾಭಿಪೂಜಿತಾಃ     ॥20॥
ಅವನನ್ನು ಸಂಹರಿಸಿ  ಅವನ ಕಂಠ ಮತ್ತು ಶೃಂಗಗಳ ನಾಳಗಳನ್ನು  ಚರ್ಮದಿಂದ ಚನ್ನಾಗಿ ಕಟ್ಟಿ ಮೂರು ಭೇರಿಗಳನ್ನು ಮಾಡಿ ಆ ಪಟ್ಟಣದಲ್ಲಿ ಸ್ಥಾಪಿಸಿದ್ದನು. ದಿವ್ಯಪುಷ್ಪಗಳಿಂದ ಪೂಜಿತವಾದ ಆ ಭೇರಿಗಳು ದೊಡ್ಡದಾದ ಶಬ್ಧವನ್ನು ಮಾಡುತ್ತಿದ್ದವು. (ಕೃಷ್ಣ ಭೀಮಾರ್ಜುನರು ಆ ಭೇರಿಗಳನ್ನು ಒಡೆದರು.)
ಮಾಗಧಾನಾಂ ಸುರುಚಿರಂ ಚೈತ್ಯಂ ಕಾಂತಂ ಮಹಾದ್ರುಮಮ್ |
ಶಿರಸೀವ ಜಿಘಾಂಸಂತೋ ಜರಾಸಂಧಂ ಜಿಘಾಂಸವಃ         ॥21॥
ಮಗಧವಂಶದವರು ಬಹುಕಾಲದಿಂದ ಪೂಜಿಸಿಕೊಂಡು ಬಂದಿದ್ದ, ಒಂದು ಮನೋಹರವಾದ ಮಹಾದ್ರುಮವನ್ನು ಜರಾಸಂಧನನ್ನು ಸಂಹರಿಸುವ ಇಚ್ಛೆಯುಳ್ಳ ಅವರು ಅವನ ತಲೆಯ ಮೇಲೆ ಹೊಡೆದಂತೆ (ತಮ್ಮ ಬಾಹುಗಳಿಂದ) ಆ ವೃಕ್ಷಗಳನ್ನು ಕೆಡವಿದರು.
ಗಿರಿಂ ಸುವಿಪುಲಂ ಶೃಂಗಂ ಸುಮಹಾಂತಂ ಪುರಾತನಮ್ |
ಅರ್ಚಿತಂ ಮಾಲ್ಯದಾಮೈಶ್ಚ ಸತತಂ ಸುಪ್ರತಿಷ್ಠಿತಮ್          ॥22॥
ವಿಪುಲೈರ್ಬಾಹುಭಿರ್ವೀರಾಸ್ತೇಽಭಿಹತ್ಯಾಭ್ಯಪಾತಯನ್ |
ತತಸ್ತೇ ಮಾಗಧಂ ದ್ರಷ್ಟುಂ ಹೃಷ್ಟಾಃ ಪ್ರವಿವಿಶುಸ್ತದಾ         ॥23॥
ಅವರು ಪುರಾತನವಾದ ವಿಪುಲಶೃಂಗವುಳ್ಳ ಸತತವಾಗಿ ಮ್ಯಾದಾಮಗಳಿಂದ  ಪೂಜಿಸಲ್ಪಡುವ ಸುಪ್ರತಿಷ್ಠವಾದ ಪರ್ವತವನ್ನು ತಮ್ಮ ಭುಜಬಲದಿಂದ ಹೊಡೆದು ಕೆಡವಿದರು. ಅನಂತರ ಆ ವೀರರು  ಸಂತೋಷಗೊಂಡವರಾಗಿ ಜರಾಸಂಧನನ್ನು ನೋಡಲು ಪ್ರವೇಶಿಸಿದರು.
ದೃಷ್ಟ್ವಾ ತು ದುರ್ನಿಮಿತ್ತಂ ತಂ ಬ್ರಾಹ್ಮಣಾ ವೇದಪಾರಗಾಃ |
ಏತಸ್ಮಿನ್ನೇವ ಕಾಲೇ ತು ಜರಾಸಂಧಂ ಸಮರ್ಚಯನ್ |
ಪರ್ಯಗ್ನಿ ಕುರ್ವನ್ ನೃಪತಿಂ ದ್ವಿರದಸ್ಥಂ ಪುರೋಹಿತಾಃ       ॥24॥
ಗಿರಿಪಾತ ಮತ್ತು ವೃಕ್ಷಪಾತ ಮೊದಲಾದ ಅಪಶಕುನಗಳನ್ನು ನೋಡಿದ ವೇದ ಪಾರಂಗತರಾದ ಬ್ರಾಹ್ಮಣರು ಮತ್ತು ಪುರೋಹಿತರು ಜರಾಸಂಧನಿಗೆ ಮಂಗಳಾರತಿಗಳನ್ನು ಮಾಡಿ ಆನೆಯಮೇಲೆ ಅವನನ್ನು ಕೂಡಿಸಿ ಸತ್ಕರಿಸಿ ಶಾಂತಿಯನ್ನು ಮಾಡಿದರು.
ಸ್ನಾತಕವ್ರತಿನಸ್ತೇ ತು ಬಾಹುಶಸತ್ರ ನಿರಾಯುಧಾಃ |
ಯುಯುತ್ಸವಃ ಪ್ರವಿವಿಶುರ್ಜರಾಸಂಧೇನ ಭಾರತ  ॥25॥
ಭಾರತನೇ! ಸ್ನಾತಕವ್ರತವನ್ನು ಧರಿಸಿದ ಅವರು ನಿರಾಯುಧರಾಗಿ ತಮ್ಮ ಬಾಹುಗಳನ್ನೇ ಶಸ್ತ್ರಗಳಾನ್ನಾಗಿ ಹೊಂದಿ ಜರಾಸಂಧನ ಜೊತೆಯಲ್ಲಿ ಯುದ್ಧಮಾಡುವ ಉದ್ದೇಶದಿಂದ  ಅವನ ನಿವಾಸವನ್ನು ಪ್ರವೇಶಿಸಿದರು.
ಭಕ್ಷ್ಯಮಾಲ್ಯಾಪಣಾನಾಂ ಚ ದದೃಶುಃ ಶ್ರಿಯಮುತ್ತಮಾಮ್ |
ಸ್ಫೀತಾಂ ಸರ್ವಗುಣೋಪೇತಾಂ ಸರ್ವಕಾಮಸಮೃದ್ಧಿನೀಮ್    ॥26॥
ಅಲ್ಲಿಗೆ ಹೋಗುತ್ತಾ ದಾರಿಯಲ್ಲಿ ಸರ್ವಗುಣಯುಕ್ತವಾದ ಶುದ್ಧವಾದ ಭಕ್ಷ್ಯಗಳಿಂದಲೂ ಮಾಲೆಗಳಿಂದಲೂ ಕೂಡಿದ ಅಂಗಡಿಗಳ ಸಾಲಿನಿಂದ ಸೂಚಿಸಲ್ಪಟ್ಟ  ಸರ್ವವಿಧವಾದ  ಸಂಪತ್ತನ್ನು ನೋಡುತ್ತಾ ಮುಂದೆ ನಡೆದರು.
ತಾಂ ತು ದೃಷ್ಟ್ವಾ ಸಮೃದ್ಧಿಂ ತೇ ವೀಥ್ಯಾಂ ತಸ್ಯಾಂ ನರೋತ್ತಮಾಃ |
ರಾಜಮಾರ್ಗೇಣ ಗಚ್ಛಂತಃ ಕೃಷ್ಣಭೀಮಧನಂಜಯಾಃ         ॥27॥
ಗೃಹ್ಯ ಮಾಲ್ಯಾಪಣಾನ್ಮಾಲ್ಯಂ ಬಲಾದ್ ಬಲವತಾಂ ವರಾಃ |
ಕರ್ಪೂರಶೃಂಗಂ ಕೋಷ್ಠಂ ಚ ಸಫಲಂ ಚಾಂತರಾಪಣೇ        ॥28॥
ವೈಶ್ಯಾದ್ ಬಲಾದ್ ಗೃಹೀತ್ವಾ ತೇ ವಿಹೃತ್ಯ ಚ ಮಹಾಬಲಾಃ |
ವಿರಾಗವಸನಾಃ ಸರ್ವೇ ಸ್ರಗ್ವಿಣೋ ಮೃಷ್ಟಕುಂಡಲಾಃ         ॥29॥
ನಿವೇಶನಮಥಾಜಗ್ಮುರ್ಜರಾಸಂಧಸ್ಯ ಧೀಮತಃ |
ಗೋವಾಟಮಿವ ವೀಕ್ಷಂತಃ ಸಿಂಹಾ ಹೈಮವತಾ ಯಥಾ        ॥30॥
ಬೀದಿಗಳಲ್ಲಿ ಆ ಸಮೃದ್ಧಿಯನ್ನು ನೋಡಿದ ಪುರುಷಶ್ರೇಷ್ಠರಾದ ಕೃಷ್ಣಭೀಮಾರ್ಜುನರು ರಾಜಮಾರ್ಗದಲ್ಲಿ ನಡೆಯುತ್ತಾ ಪುಷ್ಪಗಳ ಅಂಗಡಿಗಳಿಂದ ಬಲಿಷ್ಠರಲ್ಲಿ ಶ್ರೇಷ್ಠರಾದ ಅವರು ಬಲತ್ಕಾರದಿಂದ  ಪುಷ್ಪಗಳನ್ನು ತೆಗೆದುಕೊಂಡು ಮತ್ತು ಇನ್ನೊಬ್ಬ ವೈಶ್ಯನ ಅಂಗಡಿಯ ಒಳಭಾಗದಿಂದ ಗೋರೋಚನ ಕೋಷ್ಠ ಮೊದಲಾದ ಸುಗಂಧದ್ರವ್ಯಗಳನ್ನು ಮತ್ತು ಫಲಗಳನ್ನು ಬಲಾತ್ಕಾರದಿಂದ ತೆಗೆದುಕೊಂಡು ವಿಹರಿಸುತ್ತಾ ಶುಭ್ರ ಶ್ವೇತ ವಸನವನ್ನು ಧರಿಸಿದವಾರಾಗಿ, ಪುಷ್ಪಮಾಲೆಗಳನ್ನೂ ಕರ್ಣಕುಂಡಲಗಳನ್ನೂ ಧರಿಸಿದವರಾಗಿ ಅವರೆಲ್ಲರೂ ಧೀಮಂತನಾದ ಜರಾಸಂಧನ ನಿವೇಶನವನ್ನು  ಹಿಮಾಲಯದ ಸಿಂಹಗಳು ಗೋಶಾಲೆಯನ್ನು ನೋಡುವಂತೆ ಸುತ್ತಲೂ ನೋಡುತ್ತಾ ಪ್ರವೇಶಿಸಿದರು.
ಶೈಲಸ್ತಂಭನಿಭಾಸ್ತೇಷಾಂ ಚಂದನಾಗುರುರೂಷಿತಾಃ |
ಅಶೋಭಂತ ಮಹಾರಾಜ ಬಾಹವಃ ಪರಿಘೋಪಮಾಃ          ॥31॥
ಮಹಾರಾಜನೇ! ಅವರ ಬಾಹುಗಳು ಪರ್ವತಸ್ತಂಭದ ಕಾಂತಿಯನ್ನು ಹೊಂದಿದ್ದ ಚಂದನ, ಅಗರು ಮೊದಲಾದ ಸುಗಂಧ

ದ್ರವ್ಯಗಳಿಂದ ಲೇಪಿಸಲ್ಪಟ್ಟ ಕಬ್ಬಿಣದ ಒನಕೆಗಳಂತೆ ಶೋಭಿಸುತ್ತಿದ್ದವು.
ತಾನ್ ದೃಷ್ಟ್ವಾ ದ್ವಿರದಪ್ರಖ್ಯಾನ್ ಸಾಲಸ್ಕಂಧಾನಿವೋದ್ಗತಾನ್ |
ವ್ಯೂಢೋರಸ್ಕಾನ್ ಮಾಗಧಾನಾಂ ವಿಸ್ಮಯಃ ಸಮಪದ್ಯತ ||32||
ಸಾಲಸ್ಕಂಧದಂತೆ ಎತ್ತರವಾಗಿದ್ದವ ವಿಸ್ತಾರವಾದ ವಕ್ಷಸ್ಥಲವನ್ನು ಹೊಂದಿದ್ದ ಗಜಕಾಂತಿಯನ್ನು ಹೊಂದಿದ್ದ ಅವರನ್ನು ನೋಡಿ ಮಗಧದೇಶದ ಜನರಿಗೆ ವಿಸ್ಮಯವು ಉಂಟಾಯಿತು.
ಅದ್ವಾರೇಣಾಭ್ಯವಸ್ಕಂದ್ಯ ವಿವಿಶುರ್ಮಾಗಧಾಲಯಮ್ |
ತೇ ತ್ರೀತ್ಯ ಜನಾಕೀರ್ಣಾಃ ಕಕ್ಷ್ಯಾಸ್ತಿಸ್ರೋ ನರರ್ಷಭಾಃ ||33||
ಅವರು ಅದ್ವಾರದಿಂದ ಜರಾಸಂಧನ ಅರಮನೆಯೊಳಗೆ ಜಾರಿ ಬಂದು ಜನ ನಿಬಿಡವಾದ ಮೂರು ಪ್ರಾಕಾರಗಳನ್ನು ದಾಟಿ ಜರಾಸಂಧನ ನಿವಾಸಸ್ಥಾನವನ್ನು ಪ್ರವೇಶಿಸಿದರು.
ಅದ್ವಾರೇಣೈವ ರಾಜಾನಮುಪತಸ್ಥುರ್ಮಹಾಬಲಾಃ |
ಭೋಶಬ್ದೇನೈವ ರಾಜಾನಮೂಚುಸ್ತೇ ತು ಮಹಾರಥಾಃ ||34||
ಮಹಾಬಲಿಷ್ಠರೂ ಮಹಾರಥರೂ ಆದ ಅವರು ಅಲ್ಲಿಯೂ ಸಹ ಅದ್ವಾರದಿಂದಲೇ ರಾಜನನ್ನು ಸಮೀಪಿಸಿ ಭೋ ಶಬ್ದದಿಂದ ರಾಜನನ್ನು ಸಂಬೋಧಿಸಿದರು.
ತಾನ್ ಪಾದ್ಯಮಧುಪರ್ಕಾರ್ಹಾನ್ ದೃಷ್ಟ್ವಾರ್ಹಾನ್ ಗೃಹಮಾಗತಾನ್ |
ಪ್ರತ್ಯುತ್ಥಾಯ ಜರಾಸಂಧ ಉಪತಸ್ಥೇ ಯಥಾವಿಧಿ ||35||
ಪಾದ್ಯ ಮಧುಪರ್ಕಗಳಿಗೆ ಯೋಗ್ಯರಾದ ಪೂಜಾರ್ಹರಾದ ಮನೆಗೆ ಬಂದ ಆ ಅತಿಥಿಗಳನ್ನು ನೋಡಿ ಜರಾಸಂಧನು ಮೇಲೆದ್ದು ವಿಧಿಪೂರ್ವಕವಾಗಿ ಅವರನ್ನು ಸಮೀಪಿಸಿದನು.
ಉವಾಚ ಚೈತಾನ್ ರಾಜಾಽಸೌ ಸ್ವಾಗತಂ ವೋಽಸ್ತ್ವಿತಿ ಪ್ರಭುಃ |
ತಸ್ಯ ಹ್ಯೇತದ್ ವ್ರತಂ ರಾಜನ್ ಬಭೂವ ಕಿಲ ವಿಶ್ರುತಮ್ ||36||
ಸ್ನಾತಕಾನ್ ಬ್ರಾಹ್ಮಣಾನ್ ರಾಜಾ ಶ್ರುತ್ವಾ ಸ ಸಮಿತಿಂಜಯಃ |
ಅಪ್ಯರ್ಧರಾತ್ರೇ ನೃಪತಿಃ ಪ್ರತ್ಯುದ್ಗಚ್ಛತಿ ಭಾರತ ||37||
ರಾಜನೂ ಪ್ರಭುವೂ ಆದ ಜರಾಸಂಧನು ಅವರನ್ನು ಕುರಿತು ನಿಮಗೆ ಸ್ವಾಗತ ಎಂದು ಹೇಳಿದನು. ರಾಜನೇ! ಅವನಿಗೆ ಪ್ರಖ್ಯಾತವಾದ ಈ ವ್ರತವಿದ್ದಿತು. ಭಾರತನೇ! ಯುದ್ಧದಲ್ಲಿ ಜಯಶೀಲನಾದ ಅವನು ಅರ್ಧರಾತ್ರಿಯಲ್ಲಿ ಸ್ನಾತಕಬ್ರಾಹ್ಮಣರು ತನ್ನ ಮನೆಗೆ ಬಂದರೂ ಆ ವಾರ್ತೆಯನ್ನು ಕೇಳಿ ಎದ್ದುಹೋಗಿ ಅವರನ್ನು ಸ್ವೀಕರಿಸುತ್ತಿದ್ದನು.
ತಾಂಸ್ತ್ವಪೂರ್ವೇಣ ವೇಷೇಣ ದೃಷ್ಟ್ವಾ ನೃಪತಿಸತ್ತಮಃ |
ಉಪತಸ್ಥೇ ಜರಾಸಂಧೋ ವಿಸ್ಮಿತಶ್ಚಾಭವತ್ ತದಾ ||38||
ನೃಪಶ್ರೇಷ್ಠನಾದ ಜರಾಸಂಧನು ವಿಚಿತ್ರವೇಷದಲ್ಲಿರುವ ಆ ಮೂವರನ್ನು ನೋಡಿ ಆಶ್ಚರ್ಯಚಕಿತನಾಗಿ ಅವರನ್ನು ಸಮೀಪಿಸಿದನು.
ತೇ ತು ದೃಷ್ಟ್ವೈವ ರಾಜಾನಂ ಜರಾಸಂಧಂ ನರರ್ಷಭಾಃ |
ಇದಮೂಚುರಮಿತ್ರಘ್ನಾಃ ಸರ್ವೇ ಭರತಸತ್ತಮ ||39||
ಸ್ವಸ್ತ್ಯಸ್ತು ಕುಶಲಂ ರಾಜನ್ನಿತ್ಯುಕ್ತ್ವಾ ತೇ ವ್ಯವಸ್ಥಿತಾಃ |
ತಂ ನೃಪಂ ಪುರುಷವ್ಯಾಘ್ರಾ ವಿಪ್ರೈಕ್ಷಂತ ಪರಸ್ಪರಮ್ ||40||
ಭರತ ಶ್ರೇಷ್ಠನೇ! ಶತ್ರುಸಂಹಾರಕರಾದ ಆ ನರಶ್ರೇಷ್ಠರಾದ ಅವರೆಲ್ಲರೂ ಜರಾಸಂಧನನ್ನು ನೋಡಿದ ತಕ್ಷಣವೇ ಹೀಗೆ ಹೇಳಿದರು. ರಾಜನೇ! ನಿನಗೆ ಮಂಗಳವಾಗಲಿ ಕುಶಲವಷ್ಟೇ ಎಂದು ಹೇಳಿ ನಿಂತರು. ರಾಜನೂ ಮತ್ತು ಆ ಪುರುಷವ್ಯಾಘ್ರರೂ ಒಬ್ಬರನ್ನೊಬ್ಬರು ನೋಡಿದರು.
ತಾನಬ್ರವೀಜ್ಜರಾಸಂಧಃ ತದಾ ಯಾದವಪಾಂಡವಾನ್ |
ಆಸ್ಯತಾಮಿತಿ ರಾಜೇಂದ್ರೋ ಬ್ರಾಹ್ಮಣಚ್ಛದ್ಮಸಂವೃತಾನ್ ||41||
ಆಗ ರಾಜೇಂದ್ರನಾದ ಜರಾಸಂಧನು ಬ್ರಾಹ್ಮಣವೇಷದಿಂದ ಛನ್ನರಾದ ಕೃಷ್ಣಪಾಂಡವರನ್ನು ಕುರಿತು ಆಸನವನ್ನು ಸ್ವೀಕರಿಸಿ ಎಂದು ಹೇಳಿದನು.
ಅಥೋಪವಿವಿಶುಃ ಸರ್ವೇ ತ್ರಯಸ್ತೇ ಪುರುಷರ್ಷಭಾಃ |
ಸಂಪ್ರದೀಪ್ತಾಸ್ತ್ರಯೋ ಲಕ್ಷ್ಮ್ಯಾ ಮಹಾಧ್ವರ ಇವಾಗ್ನಯಃ ||42||
ಅನಂತರ ದೊಡ್ಡಯಾಗದಲ್ಲಿ ತಮ್ಮ ಕಾಂತಿಯಿಂದ ಜ್ವಲಿಸುವ ಮೂರು ಅಗ್ನಿಗಳಂತೆ ಆ ಮೂವರು ಪುರುಷಶ್ರೇಷ್ಠರು ಆಸನಗಳಲ್ಲಿ ಕುಳಿತುಕೊಂಡರು.
ತಾನುವಾಚ ಜರಾಸಂಧಃ ಸತ್ಯಸಂಧೋ ನರಾಧಿಪಃ |
ವಿಗರ್ಹಮಾಣಃ ಕೌರವ್ಯ ವೇಷಗ್ರಹಣಕಾರಿಣಃ ||43||
ಕುರುಕುಲೋತ್ಪನ್ನನೇ! ಜರಾಸಂಧರಾಜನು ವೇಷವನ್ನು ಬದಲಾಯಿಸಿರುವ ಅವರನ್ನು ಮೂದಲಿಸುತ್ತಾ ಅವರನ್ನು ಕುರಿತು ಮಾತನಾಡಿದನು.
ನ ಸ್ನಾತಕವ್ರತಾ ವಿಪ್ರಾ ಬಹಿರ್ಮಾಲ್ಯಾನುಲೇಪನಾಃ |
ಭವಂತೀತಿ ನೃಲೋಕೇಽಸ್ಮಿನ್ ವಿದಿತಂ ಮಮ ಸರ್ವಶಃ ||44||
ಸ್ನಾತಕ ವ್ರತವನ್ನು ಧರಿಸಿದ ಬ್ರಾಹ್ಮಣರು ಪುಷ್ಪಮಾಲೆಗಳನ್ನು ಮತ್ತು ಸುಗಂಧದ್ರವ್ಯಗಳನ್ನು ಹೊಂದಿರುವುದಿಲ್ಲವೆಂದು ಮನುಷ್ಯಲೋಕದಲ್ಲಿ ಪ್ರಖ್ಯಾತವಾಗಿದೆ ಎಂದು ನಾನು ತಿಳಿದಿದ್ದೇನೆ.

ತೇ ಯೂಯಂ ಪುಷ್ಪವಂತಶ್ಚ ಭುಜೈರ್ಜ್ಯಾಘಾತಲಕ್ಷಣೈಃ |
ಬಿಭ್ರತಃ ಕ್ಷಾತ್ರಮೋಜಶ್ಚ ಬ್ರಾಹ್ಮಣ್ಯಂ ಪ್ರತಿಜಾನಥ ||45||
ನೀವು ಮಾತ್ರ ಪುಷ್ಪಮಾಲೆಗಳನ್ನು ಧರಿಸಿ ಬಿಲ್ಲಿನ ಹೆದೆಯಿಂದ ಜಡ್ಡುಕಟ್ಟಿದ ಭುಜಗಳಿಂದ ಶೋಭಿತರಾಗಿ ಕ್ಷತ್ರಿಯ ಪರಾಕ್ರಮವನ್ನು ಮೆರೆಸುತ್ತಾ ನಾವು ಬ್ರಾಹ್ಮಣರೆಂದು ಪ್ರತಿಜ್ಞೆಮಾಡುತ್ತಿದ್ದೀರಿ.
ಏವಂ ವಿರಾಗವಸನಾ ಬಾಹುಮಾಲ್ಯಾನುಲೇಪನಾಃ |
ಕ್ಷತ್ರಿಯಾ ಏವ ಲೋಕೇಽಸ್ಮಿನ್ ವಿದಿತಾ ಮಮ ಸರ್ವಶಃ |
ಸತ್ಯಂ ವದತ ಕೇ ಯೂಯಂ ಸತ್ಯಂ ರಾಜಸು ಶೋಭತೇ ||46||
ಹೀಗೆ ಶ್ವೇತವಸ್ತ್ರವನ್ನು ಧರಿಸಿ ಕರ್ಕಶವಾದ ಬಾಹುಗಳನ್ನು ಹೊಂದಿ ಪುಷ್ಪಮಾಲೆ ಮತ್ತು ಸುಗಂಧ ದ್ರವ್ಯಗಳನ್ನು ಧರಿಸಿದರು ಈ ಲೋಕದಲ್ಲಿ ಕ್ಷತ್ರಿಯರು ಮಾತ್ರ ಎಂದು ನಾನು ಚೆನ್ನಾಗಿ ತಿಳಿದಿದ್ದೇನೆ. ನೀವು ಯಾರು ಎಂದು ಸತ್ಯವಾಗಿ ಹೇಳಿ. ರಾಜರಿಗೆ ಸತ್ಯವಚನವು ಶೋಭಿಸುತ್ತದೆ.
ಚೈತ್ಯಕಂ ಚ ಗಿರೇಃ ಶೃಂಗಂ ಭಿತ್ತಾತ್ವ ಕಿಂ ಮಮ ಸದ್ಮನಿ |
ಅದ್ವಾರೇಣ ಪ್ರವಿಷ್ಟಾಃ ಸ್ಥ ನಿರ್ಭಯಾ ರಾಜಕಿಲ್ಬಿಷಾತ್ ||47||
ನನ್ನ ಪೂಜಾವೃಕ್ಷವನ್ನೂ ಗಿರಿಶೃಂಗವನ್ನೂ ಕೆಡವಿ ಆದ್ವಾರದಿಂದ ನನ್ನ ಗೃಹವನ್ನು ಪ್ರವೇಶಿಸಿ ರಾಜನಿಗೆ ಅಪಚಾರವನ್ನು ಮಾಡಿದರೂ ನೀವು ನಿರ್ಭಯರಾಗಿದ್ದೀರಿ.
ಕರ್ಮ ಚೈತದ್ ದ್ವಿಜಲಿಂಗಸ್ಯ ಕಿಂ ವಾಽನ್ಯತ್ ಪ್ರಸಮೀಕ್ಷಿತಮ್ |
ವರಧ್ವಂ ವಾಚಿ ವೀರ್ಯಂ ಹಿ ಬ್ರಾಹ್ಮಣಸ್ಯ ವಿಶೇಷತಃ ||48||
ಕ್ಷತ್ರಿಯ ಮತ್ತು ಬ್ರಾಹ್ಮಣ ಚಿಹ್ನೆಗಳನ್ನು ಧರಿಸಿರುವ ನೀವು ಅಂಗಡಿಗಳಿಂದ ಮಾಲೆ ಮತ್ತು ಸುಗಂಧಗಳನ್ನು ತೆಗೆದುಕೊಂಡಿದ್ದೀರಿ. ಇನ್ನೇನು ಮಾಡಲು ನಿಮಗೆ ಅಭಿಪ್ರಾಯವಿದೆ? ಆದರೂ ಬ್ರಾಹ್ಮಣರ ಚಲನವಲನಗಳನ್ನು ವಿಶೇಷವಾಗಿ ವಿಚಾರಮಾಡಬಾರದು. ನಿಮಗೆ ಬೇಕಾದ ವರವನ್ನು ಕೇಳಿ.
ಏವಂ ಮಾಂ ಸಮುಪಸ್ಥಾಯ ಕಸ್ಮಾದ್ವಾ ವಿಧಿನಾಽರ್ಹಣಾಮ್ |
ಪ್ರಣೀತಾಂ ನೋ ನ ಗೃಹ್ಣೀತ ಕಾರ್ಯಂ ಕಿಂ ಚಾಸ್ಮದಾಗಮೇ ||49||
ಈ ರೀತಿಯಲ್ಲಿ ನನ್ನನ್ನು ಸಮೀಪಿಸಿ ನಾನು ವಿಧಿಪೂರ್ವಕವಾಗಿ ಮಾಡಿದ ಸತ್ಕಾರ್ಯವನ್ನು ನೀವು ಏಕೆ ಸ್ವೀಕರಿಸುತ್ತಿಲ್ಲ? ನೀವು ನನ್ನ ಬಳಿಗೆ ಬರುವ ಉದ್ದೇಶನೇನು?
ಏವಮುಕ್ತಸ್ತತಃ ಕೃಷ್ಣಃ ಪ್ರತ್ಯುವಾಚ ಮಹಾಯಶಾಃ |
ಸ್ನಿಗ್ಧಗಂಭೀರಯಾ ವಾಚಾ ವಾಕ್ಯಂ ವಾಕ್ಯವಿಶಾರದಃ ||50||
ಜರಾಸಂಧನು ಹೀಗೆ ಮಾತನಾಡಿದಾಗ ಮಹಾಕೀರ್ತಿವಂತನೂ ವಾಕ್ಯವಿಶಾರದನೂ ಆದ ಕೃಷ್ಣನು ತನ್ನ ಮೇಘಗಂಭೀರವಾದ ವಾಣಿಯಿಂದ ಮಾತನಾಡಿದನು.
ಸ್ನಾತಕವ್ರತಿನಃ ಸಂತಿ ಬ್ರಾಹ್ಮಣಾಃ ಕ್ಷತ್ರಿಯಾ ವಿಶಃ |
ವಿಶೇಷನಿಯಮಾಶ್ಚೈಷಾಮವಿಶೇಷಾಶ್ಚ ಸಂತ್ಯುತ ||51||
ಬ್ರಾಹ್ಮಣರೂ ಕ್ಷತ್ರಿಯರೂ ಮತ್ತು ವೈಶ್ಯರೂ ಸ್ನಾತಕವ್ರತವನ್ನು ಧರಿಸುತ್ತಾರೆ. ಅವರುಗಳಿಗೆ ಕೆಲವು ಸಾಮಾನ್ಯನಿಯಮಗಳೂ ಕೆಲವು ವಿಶೇಷ ನಿಯಮಗಳೂ ಇರುತ್ತವೆ.
ವಿಶೇಷವಾಂಶ್ಚ ಸತತಂ ಕ್ಷತ್ರಿಯಃ ಶ್ರಿಯಮಿಚ್ಛತಿ |
ಪುಷ್ಪವತ್ಸು ಧ್ರುವಾ ಲಕ್ಷ್ಮೀಃ ಪುಷ್ಪವಂತಸ್ತತೋ ವಯಮ್ ||52||
ಕ್ಷತ್ರಿಯನಿಗೆ ವಿಶೇಷವೆಂದರೆ ಅವನು ಯಾವಾಗಲೂ ಸಂಪತ್ತನ್ನು ಬಯಸುವುದು. ಪುಷ್ಪವನ್ನು ಧರಿಸಿದ್ದವರಲ್ಲಿ ಸಂಪತ್ತು ಇರುತ್ತದೆ. ಆದ್ದರಿಂದ ನಾವು ಪುಷ್ಪವನ್ನು ಧರಿಸಿದ್ದೇವೆ.
ಕ್ಷತ್ರಿಯೋ ಬಾಹುವೀರ್ಯಸ್ತು ನ ತಥಾ ವಾಕ್ಯವೀರ್ಯವಾನ್ |
ಅಪ್ರಗಲ್ಭಂ ವಚಸ್ತಸ್ಯ ತಸ್ಮಾದ್ ಬಾರ್ಹದ್ರಥೇರಿತಮ್ ||53||
ಕ್ಷತ್ರಿಯನ ಪರಾಕ್ರಮ ಬಾಹುವಿನಲ್ಲಿ ಇರುವಂತೆ ಅವನ ವಾಕ್ಯದಲ್ಲಿ ಇಲ್ಲ. ಆದ್ದರಿಂದ ಜರಾಸಂಧನೇ! ನೀನು ಆಡಿದ ಮಾತುಗಳೆಲ್ಲವೂ ಅಪ್ರಗಲ್ಭವಾದವು.
ಸ್ವವೀರ್ಯಂ ಕ್ಷತ್ರಿಯಾಣಾಂ ಚ ಬಾಹ್ವೋರ್ಧಾತಾ ನ್ಯವೇಶಯತ್ |
ತನ್ನೋ ದ್ರಕ್ಷ್ಯಸಿ ಚೇದ್ ರಾಜನ್ ದ್ರಷ್ಟಾಸ್ಯದ್ಯ ನ ಸಂಶಯಃ ||54||
ಸೃಷ್ಟಿಕರ್ತನು ಕ್ಷತ್ರಿಯನನ್ನು ಸೃಷ್ಟಿಮಾಡಿ ತನ್ನ ತೇಜಸ್ಸನ್ನು ಅವನ ಬಾಹುಗಳಲ್ಲಿ ಇಟ್ಟನು. ರಾಜನೇ! ನೀನು ಅದನ್ನು ನೋಡಲು ಬಯಸುವಿಯಾದರೆ ನಿಸ್ಸಂಶಯವಾಗಿ ಅದನ್ನು ಈ ದಿನ ನೋಡುವಿ.
ಅದ್ವಾರೇಣ ರಿಪೋರ್ಗೇಹಂ ದ್ವಾರೇಣ ಸುಹೃದೋ ಗೃಹಮ್ |
ಪ್ರವಿಶಂತಿ ಸದಾ ಸಂತೋ ದ್ವಾರಂ ತೇ ವರ್ಜಿತಂ ತತಃ ||55||
ಸಜ್ಜನರಾದವರು ಪ್ರೀತಿಪಾತ್ರರ ಗೃಹವನ್ನು ದ್ವಾರದಿಂದಲೂ ಶತ್ರುವಿನ ಗೃಹವನ್ನು ಅದ್ವಾರದಿಂದಲೂ ಪ್ರವೇಶಿಸುತ್ತಾರೆ. ಆದ್ದರಿಂದ ನಾವು ನಿನ್ನ ದ್ವಾರವನ್ನು ಪರಿತ್ಯಜಿಸಿದ್ದೇವೆ.
ಕಾರ್ಯವಂತೋ ಗೃಹಾನೇತ್ಯ ಶತ್ರುತೋ ನಾರ್ಹಣಾಂ ವಯಮ್|
ಪ್ರತಿಗೃಹ್ಣೀಮ ತದ್ ವಿದ್ಧಿ ಏತನ್ನಃ ಶಾಶ್ವತಂ ವ್ರತಮ್ ||56||
ಒಂದು ಕಾರ್ಯದ ಉದ್ದೇಶದಿಂದ ಶತ್ರುಗೃಹಕ್ಕೆ ಬಂದ ನಾವು ಶತ್ರುವಿನ ಸತ್ಕಾರವನ್ನು ಸ್ವೀಕರಿಸಬಾರದು. ಆದ್ದರಿಂದ ನಿನ್ನ

ಸತ್ಕಾರವನ್ನು ನಾವು ಸ್ವೀಕರಿಸುತ್ತಿಲ್ಲ. ಇದನ್ನು ನಮ್ಮ ಶಾಶ್ವತವಾದ ವ್ರತವೆಂದು ತಿಳಿ.
ಜರಾಸಂಧಃ
ನ ಸ್ಮರೇಯಂ ಕದಾ ವೈರಂ ಕೃತಂ ಯುಷ್ಮಾಭಿರಿತ್ಯುತ |
ಚಿಂತಯಂಶ್ಚ ನ ಪಶ್ಯಾಮಿ ಭವತಾಂ ಪ್ರತಿ ವೈಕೃತಮ್ ॥57॥
ನಾನು ನಿಮ್ಮ ಜೊತೆಯಲ್ಲಿ ಯಾವಾಗ ವೈರವನ್ನು ಸಾಧಿಸಿದ್ದೇನೆ ಎಂದು ನನ್ನ ಸ್ಮರಣೆಗೆ ಬರುತ್ತಿಲ್ಲ. ಎಷ್ಟು ಆಲೋಚಿಸಿದರೂ ನಾನು ನಿಮಗೆ ಯಾವ ಅಪಕಾರವನ್ನು ಮಾಡಿರುವುದೂ ಕಂಡುಬರುವುದಿಲ್ಲ.
ವೈಕೃತೇ ಚಾಸತಿ ಕಥಂ ಮನ್ಯಧ್ವೇ ವಾ ಕೃತಾಗಸಮ್ |
ಅರಿವದ್ ಬ್ರೂತ ಯದ್ ವಿಪ್ರಾಃ ಸತಾಂ ಸಮಯ ಏಷ ಹಿ ॥58॥
ನಾನು ಅಪರಾಧವನ್ನು ಮಾಡದಿದ್ದರೂ ನನ್ನನ್ನು ಅಪರಾಧಿ ಎಂದು ತಿಳಿದು ನೀವು ಶತ್ರುಗಳಂತೆ ಮಾತನಾಡುತ್ತಿದ್ದೀರಿ ಬ್ರಾಹ್ಮಣರೇ ಸಜ್ಜನರ ನಿಯಮವು ಹೀಗಿರುವುದಷ್ಟೇ?
ಅರ್ಥಧರ್ಮೋಪಘಾತಾದ್ಧಿ ಮನಃ ಸಮುಪತಪ್ಯತೇ |
ಯೋಽನಾಗಸಿ ಪ್ರಸೃಜತಿ ಕ್ಷತ್ರಿಯೋ ವೀರ್ಯಮುತ್ಥಿತಃ ॥59॥
ಕ್ಷತ್ರಿಯನೇ ಆಗಲಿ ಇನ್ನೊಬ್ಬನೇ ಆಗಲಿ ಯಾರು ಅಪರಾಧಮಾಡಿದವನ ಮೇಲೆ ತನ್ನ ಪರಾಕ್ರಮವನ್ನು ತೊರಿಸುವುದಿಲ್ಲವೋ ನಿರಪರಾಧಿಯ ಮೇಲೆ ತನ್ನ ಪರಾಕ್ರಮವನ್ನು ತೋರುತ್ತಾನೆಯೋ ಅಂತಹ ಅರ್ಥ ಧರ್ಮಗಳನ್ನು ನಾಶಮಾಡುವ ಪುರುಷನಿಂದ ಮನಸ್ಸು ಸಂತಾಪಕ್ಕೆ ಒಳಗಾಗುತ್ತದೆ. (ಇದೇ ಸಜ್ಜನರ ನಿಯಮವಷ್ಟೇ.)
ಅತೋಽನ್ಯಥಾ ಚರನ್ ಲೋಕೇ ಧರ್ಮಜ್ಞಃ ಸ ಮಹಾರಥಃ |
ವೃಜಿನಾಂ ಗತಿಮಾಪ್ನೋತಿ ಶ್ರೇಯಸೋಽಭ್ಯುಪಹರಂತಿ ಚ ॥60॥
ಧರ್ಮಿಷ್ಠನೂ ಮಹಾವ್ರತವನ್ನು ಧರಿಸಿದನೂ ಆದ ಪುರುಷನು ತನಗೆ ವಿಹಿತವಾದ ರೀತಿಯನ್ನು ಬಿಟ್ಟು ಬೇರೆ ರೀತಿಯಲ್ಲಿ ಆಚರಣೆಯನ್ನು ಮಾಡಿದರೆ ಅವನು ತನ್ನ ಶ್ರೇಯಸ್ಸನ್ನು ಹಾಳುಮಾಡಿಕೊಳ್ಳುತ್ತಾನೆ. ಮತ್ತು ಪಾಪದ ಗತಿಯನ್ನು ಹೊಂದುತ್ತಾನೆ.
ತ್ರೈಲೋಕ್ಯೇ ಕ್ಷತ್ರಧರ್ಮಾದ್ಧಿ ಶ್ರೇಯಾಂಸಂ ಧರ್ಮಚಾರಿಣಮ್ |
ಅನಾಗಸಂ ಪ್ರಜಾನಂತಃ ಪ್ರಮಾದಾದಿವ ಜಲ್ಪಥ ॥61॥
ಮೂರು ಲೋಕಗಳಲ್ಲಿಯೂ ನಾನು ಧರ್ಮಶೀಲನೆಂದೂ ಕ್ಷತ್ರಿಯಧರ್ಮಾಚರಣೆಯಲ್ಲಿ ಬಹಳ ಶ್ರೇಷ್ಠನೆಂದೂ ಪ್ರಖ್ಯಾತವಾಗಿದೆ. ಅಂತಹ ನಾನು ನಿರಪರಾಧಿ ಎಂದು ತಿಳಿದಿದ್ದರೂ ನೀವು ಪ್ರಮಾದದಿಂದ ಬಾಯಿಗೆ ಬಂದಂತೆ ಮಾತನಾಡುತ್ತಿದ್ದೀರಿ.
ವಾಸುದೇವಃ
ಕುಲಕಾರ್ಯಂ ಮಹಾರಾಜ ಕಶ್ಚಿದೇಕಃ ಕುಲೋದ್ವಹಃ |
ವಹತೇ ತನ್ನಿಯೋಗಾದ್ವೈ ವಯಮಭ್ಯುತ್ಥಿತಾಸ್ತ್ರಯಃ ॥62॥
ಮಹಾರಾಜನೇ! ಒಂದು ಕುಲದ ಕಾರ್ಯವನ್ನು ಆ ಕುಲದ ಭಾರವನ್ನು ಧರಿಸಿದ ಒಬ್ಬನು ನೆರವೇರಿಸುತ್ತಾನೆ. ಆ ಕುಲದ ಆಜ್ಞೆಯಂತೆ ನಾವು ಮೂವರು ನಿನ್ನ ಬಳಿಗೆ ಬಂದಿದ್ದೇವೆ.
ತ್ವಯಾ ಚೋಪಹೃತಾ ರಾಜನ್ ಕ್ಷತ್ರಿಯಾ ಲೋಕವಾಸಿನಃ |
ತದಾಗಃ ಕ್ರೂರಮುತ್ಪಾದ್ಯ ಮನ್ಯಸೇ ಕಿನ್ನ್ವನಾಗಸಮ್ ॥63॥
ರಾಜನೇ! ನೀನು ಲೋಕದಲ್ಲಿರುವ ಎಲ್ಲ ಕ್ಷತ್ರಿಯರಿಗೂ ಉಪದ್ರವವನ್ನು ಕೊಟ್ಟು ಅವರನ್ನು ಅಪಹರಿಸಿದ್ದೀಯೆ ಇಂತಹ ಕ್ರೂರವಾದ ಅಪರಾಧವನ್ನು ಮಾಡಿದ ನೀನು ನಿನ್ನನ್ನು ಹೇಗೆ ನಿರಪರಾಧಿಯೆಂದು ತಿಳಿಯುತ್ತೀಯೆ?
ರಾಜಾ ರಾಜ್ಞಃ ಕಥಂ ಸಾಧೂನ್ ಹಿಂಸ್ಯಾನ್ನೃಪತಿಸತ್ತಮಃ |
ತಾನ್ ರಾಜ್ಞಃ ಸನ್ನಿಗೃಹ್ಯ ತ್ವಂ ರುದ್ರಾಯೋಪಜಿಹೀರ್ಷಸಿ ॥64॥
ಶ್ರೇಷ್ಠನಾದ ಒಬ್ಬ ರಾಜನು ಸಾಧುವಾದ ಇನ್ನೊಬ್ಬರಾಜನನ್ನು ಹೇಗೆ ಹಿಂಸಿಸಲು ಸಾಧ್ಯ? ನೀನು ಆ ರಾಜರನ್ನೆಲ್ಲಾ ಬಂಧನದಲ್ಲಿ ಇಟ್ಟು ಅವರನ್ನು ರುದ್ರನಿಗಾಗಿ ಬಲಿಕೊಡಲು ಬಯಸಿದ್ದೀಯೆ.
ಅಸ್ಮಾಂಸ್ತದೇನೋ ಗಚ್ಛೇತ ತ್ವಯಾ ಬಾರ್ಹದ್ರಥೇ ಕೃತಮ್ |
ವಯಂ ಹಿ ಶಕ್ತಾ ಧರ್ಮಸ್ಯ ರಕ್ಷಣೇ ದಂಡಧಾರಿಣಃ ॥65॥
ಜರಾಸಂಧನೇ! ನೀನು ಹಾಗೆ ಮಾಡುವುದೇ ಆದರೆ ಆ ಪಾಪಕ್ಕೆ ನಾವು ಬಾಗಿಗಳಾಗುತ್ತೇವೆ. ನಾವು ಅಪರಾಧವನ್ನು ಮಾಡಿದವರಿಗೆ ಶಿಕ್ಷೆಯನ್ನು ಕೊಟ್ಟು ಧರ್ಮವನ್ನು ರಕ್ಷಣೆಮಾಡಲು ಸಮರ್ಥರಾಗಿದ್ದೇವೆ.
ತಸ್ಮಾದದ್ಯೋಪಗಚ್ಛಾಮಸ್ತವ ಬಾರ್ಹದ್ರಥೇಽಂತಿಕಮ್ |
ಮನುಷ್ಯಾಣಾಂ ಸಮಾಲಂಭೋ ನಹಿ ದೃಷ್ಟಃ ಕದಾಚನ ॥66॥
ಆದ್ದರಿಂದ ಜರಾಸಂಧನೇ! ನಾವು ಈ ದಿನ ನಿನ್ನ ಸಮೀಪಕ್ಕೆ ಬಂದಿದ್ದೇವೆ. ಮನುಷ್ಯರನ್ನು ಹಿಂಸಿಸಿ ಯಾಗವನ್ನು ಮಾಡುವುದು ಯಾವ ಶಾಸ್ತ್ರದಲ್ಲಿಯೂ ಕಂಡು ಬಂದಿಲ್ಲ.
ಸ ಕಥಂ ಮಾನುಷೈರ್ದೇವಂ ಯಷ್ಟುಮಿಚ್ಛಸಿ ಶಂಕರಮ್ |
ಸವರ್ಣೋಽಪಿ ವಿವರ್ಣಾನಾಂ ಕಥಂ ಕುರ್ಯಾದ್ ವಿಹಿಂಸನಮ್ |
ಯೋ ನ ಸ್ಯಾತ್ ತ್ವಮಿವಾನಾರ್ಯೋ ಜರಾಸಂಧ ವೃಷಾಮತಿಃ ॥67॥
ಜರಾಸಂಧನೇ! ಯಾವನು ನಿನ್ನಂತೆ ದುರ್ಬುದ್ಧಿಯುಳ್ಳವನಾಗಿ ಅನಾರ್ಯನಾಗಿರುವನೋ, ಅವನನ್ನು ಬಿಟ್ಟು ಬ್ರಾಹ್ಮಣಾದಿ ವರ್ಣವುಳ್ಳವನು ವರ್ಣರಹಿತನಾದವನ ಹಿಂಸೆಯನ್ನು ಸಹ ಮಾಡಲು ಸಾಧ್ಯವಿಲ್ಲ.
ಯಸ್ಯಾಂ ಯಸ್ಯಾಮವಸ್ಥಾಯಾಂ ಯದ್ಯತ್ಕರ್ಮ ಕರೋತಿ ಯಃ |

ತಸ್ಯಾಂ ತಸ್ಯಾಮವಸ್ಥಾಯಾಂ ತತ್ತತ್ಫಲಮವಾಪ್ನುಯಾತ್ ॥68॥
ಯಾವ ಯಾವ ಅವಸ್ಥೆಯಲ್ಲಿ ಪುರುಷನು ಯಾವ ಯಾವ ಕರ್ಮವನ್ನು ಮಾಡುತ್ತಾನೆಯೋ ಅಯಾ ಅವಸ್ಥೆಗಳಲ್ಲಿ ಅದರ ಫಲವನ್ನು ಹೊಂದುತ್ತಾನೆ.
ತೇ ತ್ವಾಂ ಜ್ಞಾತಿಕ್ಷಯಕರಂ ವಯಂ ಮಾರ್ಗಾನುಸಾರಿಣಃ।
ಜ್ಞಾತಿಕ್ಷಯನಿವೃತ್ತ್ಯರ್ಥಂ ಪರೀಪ್ಸಾಮೋ ವಿಶೇಷತಃ ॥69॥
ಅಂತಹ ಸನ್ಮಾರ್ಗವರ್ತಿಗಳಾದ ನಾವು ನಮ್ಮ ಬಂಧುಗಳ ನಾಶವನ್ನು ಮಾಡಲು ಹೊರಟ ನಿನ್ನನ್ನು ಬಂಧುಗಳನಾಶದ ಪರಿಹಾರಕ್ಕಾಗಿ ವಿಶೇಷವಾಗಿ ಗಮನಿಸುತ್ತಿದ್ದೇವೆ.
ನಾಸ್ತಿ ಲೋಕೇ ಪುಮಾನನ್ಯಃ ಕ್ಷತ್ರಿಯೋಽಸ್ಮಾನತೀತ್ಯ ಚ।
ಮನ್ಯಸೇ ಸ ಚ ತೇ ರಾಜನ್ ಸುಮಹಾನ್ ಬುದ್ಧಿವಿಪ್ಲವಃ ॥70॥
ರಾಜನೇ! ಲೋಕದಲ್ಲಿ ನನಗಿಂತ ಉತ್ತಮನಾದ ಇನ್ನೊಬ್ಬ ಕ್ಷತ್ರಿಯನಿಲ್ಲವೆಂದು ತಿಳಿದಿದ್ದೀಯೆ. ಅದು ನಿನ್ನ ಮಹಾಭ್ರಾಂತಿ.
ಕೋ ಹಿ ಜಾನನ್ನಭಿಜನಮಾತ್ಮನಃ ಕ್ಷತ್ರಿಯೋ ನೃಪಃ।
ನಾವಿಶೇತ್ ಸ್ವರ್ಗಮತುಲಂ ರಣಾನಂತರಮವ್ಯಯಮ್ ॥71॥
ಯಾವ ಕ್ಷತ್ರಿಯ ರಾಜನು ತನ್ನ ಶ್ರೇಷ್ಠವಾದ ಕುಲವನ್ನು ತಿಳಿದವನಾಗಿ ಯುದ್ಧವನ್ನುಮಾಡಿ ಶಾಶ್ವತವಾದ ಸ್ವರ್ಗವನ್ನು ಪಡೆಯಲು ಹಿಂಜರಿಯುತ್ತಾನೆ.
ಸ್ವರ್ಗಂ ಹ್ಯೇವ ಸಮುದ್ದಿಶ್ಯ ರಣಯಜ್ಞೇಷು ದೀಕ್ಷಿತಾಃ।
ಜಯಂತೇ ಕ್ಷತ್ರಿಯಾ ಲೋಕಾಂಸ್ತಾನ್ ವಿದ್ಧಿ ಮಗಧೇಶ್ವರ ॥72॥
ಮಗಧರಾಜನೇ! ರಣಯಜ್ಞದಲ್ಲಿ ದೀಕ್ಷಿತರಾದ ಕ್ಷತ್ರಿಯರು ಸ್ವರ್ಗವನ್ನು ಉದ್ದೇಶಿಸಿ ಲೋಕಗಳನ್ನು ಜಯಿಸುತ್ತಾರೆ. ಅವರನ್ನೇ ನಿಜವಾದ ಕ್ಷತ್ರಿಯರೆಂದು ತಿಳಿ.
ಸ್ವರ್ಗಯೋನಿರ್ಜಯೋ ರಾಜನ್ ಸ್ವರ್ಗಯೋನಿರ್ಮಹದ್ಯಶಃ।
ಸ್ವರ್ಗಯೋನಿಸ್ತಪೋ ಯುದ್ಧೇ ಮಾರ್ಗಸ್ಸೋಽವ್ಯಭಿಚಾರವಾನ್ ॥73॥
ರಾಜನೇ! ಜಯವು ಸ್ವರ್ಗಕ್ಕೆ ಕಾರಣ. ಮಹಾಕೀರ್ತಿಯು ಸ್ವರ್ಗಕ್ಕೆ ಕಾರಣ. ಯುದ್ಧದಲ್ಲಿ ಶತ್ರುಗಳಿಗೆ ಸಂತಾಪವನ್ನು ಕೊಡುವುದು ಸ್ವರ್ಗಕ್ಕೆ ಕಾರಣ. ಇದು ಎಂದೂ ವ್ಯತ್ಯಾಸವಾಗದಿರುವ ಮಾರ್ಗ.
ಏಷ ಹ್ಯೈಂದ್ರೋ ವೈಜಯಿಕೋ ಗುಣೋ ನಿತ್ಯಂ ಸಮಾಹಿತಃ।
ಯೇನಾಸುರಾನ್ ಪರಾಜಿತ್ಯ ಜಗತ್ ಪಾತಿ ಶತಕ್ರತುಃ।
ಯಸ್ಯ ಸ್ಯಾತ್ ಸ್ವರ್ಗಮಾಸ್ಥಾಯ ನಿಗ್ರಹೀತುಂ ಯಥಾ ತವ ॥74॥
ಇದು ಇಂದ್ರನಲ್ಲಿ ನಿತ್ಯವಾಗಿರುವ ವಿಜಯಸಂಬಂಧಿಯಾದ ಗುಣ. ಆ ಗುಣದಿಂದ ಶತಕ್ರತುವು ಅಸುರರನ್ನು ಸೋಲಿಸಿ ಜಗತ್ತನ್ನು ಪಾಲಿಸುತ್ತಾನೆ. ನಿನಗೆ ಹೇಗೆ ಗಿರಿವ್ರಜದಲ್ಲಿ ಕುಳಿತು ಎಲ್ಲಾ ರಾಜರನ್ನೂ ನಿಗ್ರಹಮಾಡಬೇಕೆಂಬ ಮನಸ್ಸಿದೆಯೋ ಹಾಗೆಯೇ ಇಂದ್ರನಿಗೂ ಸಹ ಸ್ವರ್ಗದಲ್ಲಿ ಕುಳಿತು ನಿನ್ನಂತಹ ಅಸುರರನ್ನೆಲ್ಲಾ ನಿಗ್ರಹಮಾಡಬೇಕೆಂಬ ಮನಸ್ಸಿದೆ.
ಮಾಗಧೈರ್ವಿಪುಲೈಃ ಸೈನ್ಯೈರ್ಬಾಹುಲ್ಯಾದ್ ಬಲದರ್ಪಿತಃ।
ಮಾಽವಮಂಸ್ಥಾಃ ಪರಾನ್ ರಾಜನ್ ನಾಸ್ತಿ ವೀರ್ಯಂ ನರೇಶ್ವರ ॥75॥
ರಾಜನೇ! ವಿಪುಲವಾದ ಮಾಗಧಸೈನ್ಯದ ಬಲದಿಂದದರ್ಪಿತನಾಗಿ ಇನ್ನೊಬ್ಬರನ್ನು ಅವಮಾನಗೊಳಿಸಬೇಡ. ನರೇಶ್ವರನೇ! ಇನ್ನೊಬ್ಬರನ್ನು ಅವಮಾನಮಾಡುವಂತಹ ಪರಾಕ್ರಮವು ನಿನ್ನಲ್ಲಿ ಇಲ್ಲ.
ಸಮಂ ತೇಜಃ ಶ್ರಿಯಾ ಲೋಕೇ ಬಲಂ ಚ ಮನುಜರ್ಷಭ।
ಯಾವದೇವ ನ ಸಂಬುದ್ಧಂ ತಾವದ್ ದರ್ಪೋ ಭವೇತ್ತವ ॥76॥
ಮನುಜರ್ಷಭನೇ! ಎಲ್ಲಿಯವರೆಗೆ ನಿನ್ನ ಸಂಪತ್ತಿಗೂ ಪರಾಕ್ರಮಕ್ಕೂ ಸಮವಾದ ಬಲಪರಾಕ್ರಮಗಳನ್ನು ನೀನು ಲೋಕದಲ್ಲಿ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ನಿನಗೆ ದರ್ಪವಿರುತ್ತದೆ.
ವಿಷಹ್ಯಮೇತದಸ್ಮಾಕಮತೋ ರಾಜನ್ ಬ್ರವೀಮಿ ತೇ।
ಜಹಿ ತ್ವಂ ಸದೃಶೇಷ್ವೇವ ಮಾನಂ ದರ್ಪಂ ಚ ಮಾಗಧ।
ಮಾ ಗಮಃ ಸಸುತಾಮಾತ್ಯಃ ಸಬಲಶ್ಚ ಯಮಕ್ಷಯಮ್ ॥77॥
ಈ ದರ್ಪವು ನಮಗೆ ಸಹಿಸಲು ಅಸಾಧ್ಯವಾದುದು. ರಾಜನೇ ಆದ್ದರಿಂದ ಹೇಳುತ್ತಿದ್ದೇನೆ. ಮಗಧರಾಜನೇ! ನೀನು ಸಮಾನರಲ್ಲಿಯೇ ದರ್ಪವನ್ನೂ ಅಹಂಕಾರವನ್ನೂ ಮಾಡುವುದನ್ನು ತ್ಯಜಿಸು. ನಿನ್ನ ಪುತ್ರರು ಅಮಾತ್ಯರು ಮತ್ತು ಸೈನ್ಯದೊಂದಿಗೆ ಯಮಸದನಕ್ಕೆ ಹೋಗಬೇಡ.
ದಂಭೋದ್ಭವಃ ಕಾರ್ತವೀರ್ಯ ಉತ್ತರಶ್ಚ ಬೃಹದ್ರಥಃ।
ಶ್ರೇಯಸೋ ಹ್ಯವಮತ್ಯೇಹ ವಿನೇಶುಃ ಸಬಲಾ ನೃಪಾಃ ॥78॥
ದಂಭೋದ್ಭವ ಕಾರ್ತವೀರ್ಯ ಉತ್ತರ ಬೃಹದ್ರಥ ಮೊದಲಾದ ಪ್ರಬಲರಾದ ರಾಜರೆಲ್ಲರೂ ಶ್ರೇಷ್ಠರಾದವರನ್ನು ಅವಮಾನಮಾಡಿಯೇ ಈ ಲೋಕದಲ್ಲಿ ವಿನಾಶವನ್ನು ಹೊಂದಿದರು.
ಮುಮುಕ್ಷಮಾಣಾಸ್ತ್ವತ್ತಶ್ಚ ನ ವಯಂ ಬ್ರಾಹ್ಮಣಬ್ರುವಾಃ।
ಶೌರಿರಸ್ಮಿ ಹೃಷೀಕೇಶ ಇಮೌ ಭೀಮಧನಂಜಯೌ ॥79॥
ನೀನು ಸೆರೆಹಿಡಿದ ರಾಜರನ್ನು ನಿನ್ನಿಂದ ಬಿಡುಗಡೆಗೊಳಿಸಲು ಬಂದ ನಾವು ಬ್ರಾಹ್ಮಣರಲ್ಲ. ನಾನು ವಾಸುದೇವ ಹೃಷಿಕೇಶ ಇವರಿಬ್ಬರು ಭೀಮ ಮತ್ತು ಅರ್ಜುನರು.

ತ್ವಾಮಾಹ್ವಯಾಮಹೇ ರಾಜನ್ ಸ್ಥಿರೋ ಯುಧ್ಯಸ್ವ ಮಾಗಧ |
ಮುಂಚೇಮಾನ್ ನೃಪತೀನ್ ಸರ್ವಾನ್ ಮಾ ಗಮಸ್ತ್ವಂ ಯಮಕ್ಷಯಮ್ ||
ಮಗಧರಾಜನೇ! ನಿನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದೇವೆ. ಗಟ್ಟಿಯಾಗಿ ನಿಂತು ಯುದ್ಧಮಾಡು. ಇಲ್ಲದಿದ್ದರೆ ಈ ಎಲ್ಲಾ ರಾಜರನ್ನೂ ಬಿಡುಗಡೆಮಾಡು. ಯಮಪಟ್ಟಣಕ್ಕೆ ಹೋಗಬೇಡ.
ಏತಚ್ಛ್ರುತ್ವಾ ಜರಾಸಂಧಃ ಕ್ರುದ್ಧೋ ವಚನಮಬ್ರವೀತ್ |
ನಾಹಂ ಕಂಸಃ ಪ್ರಲಂಬೋ ವಾ ನ ಬಾಣೋ ನಚ ಮುಷ್ಟಿಕಃ |
ನರಕೋ ನೇಂದ್ರತಪನೋ ನ ಮುರೋ ನಾಪಿ ವಾನರಃ ||81||
ನ ಕಾಲಯವನೋ ವಾಽಪಿ ಯೇ ತ್ವಯಾ ನಿಹತಾ ಯುಧಿ |
ತ್ವಂ ತು ಗೋಪಕುಲೋತ್ಪನ್ನೋ ಜಾತಿಂ ವೈ ಪೂರ್ವಿಕಾಂ ಸ್ಮರ ||82||
ಇದನ್ನು ಕೇಳಿದ ಜರಾಸಂಧನು ಕ್ರುದ್ಧನಾಗಿ ಹೀಗೆ ಮಾತನಾಡಿದನು. ನಾನು ನಿನ್ನಿಂದ ಕೊಲ್ಲಲ್ಪಟ್ಟ ಕಂಸನಲ್ಲ ಪ್ರಲಂಬನಲ್ಲ ಬಾಣನಲ್ಲ ಮುಷ್ಟಿಕನಲ್ಲ ಇಂದ್ರನನ್ನೂ ಪೀಡಿಸಿದ ನರಕನಲ್ಲ. ಮುರನಲ್ಲ ವಾನರನಲ್ಲ ಕಾಲಯವನನೂ ಅಲ್ಲ. ನೀನು ಗೋಪಕುಲದಲ್ಲಿ ಹುಟ್ಟಿದವನು ನಿನ್ನ ಮೊದಲಿನ ಜಾತಿಯನ್ನು ಸ್ಮರಿಸಿಕೋ.
ಯೋಽಸ್ಮದ್ಭಯಾದಪಕ್ರಮ್ಯ ಸಾಗರಾನೂಪಮಾಶ್ರಿತಃ |
ಜನ್ಮಭೂಮಿಂ ಪರಿತ್ಯಜ್ಯ ಮಧುರಾಂ ಪ್ರಾಕೃತೋ ಯಥಾ ||83||
ನೀನು ಸಾಧಾರಣಮನುಷ್ಯನಂತೆ ನನ್ನ ಭಯದಿಂದ ಜನ್ಮಭೂಮಿಯಾದ ಮಧುರೆಯನ್ನು ಬಿಟ್ಟು ಹೋಗಿ ಸಮುದ್ರದ ಮಧ್ಯವನ್ನು ಸೇರಿಕೊಂಡಿದ್ದೀಯೆ.
ಸೋಽಧುನಾ ಕತ್ಥಸೇ ಶೌರೇ ಶರದೀವ ಯಥಾ ಘನಃ |
ಅದ್ಯಾನೃಣ್ಯಂ ಕರಿಷ್ಯಾಮಿ ಭೋಜರಾಜಸ್ಯ ಧೀಮತಃ |
ಜಾಮಾತುರೌಗ್ರಸೇನಸ್ಯ ತ್ವಾಂ ನಿಹತ್ಯ ಚ ಮಾಧವ ||84||
ಶೌರಿಯೇ! ಈಗ ನೀನು ಶರತ್ಕಾಲದ ಮೋಡದಂತೆ ವ್ಯರ್ಥವಾಗಿ ಬಡಬಡಿಸುತ್ತಿದ್ದೀಯೆ/ ಮಾಧವನೇ! ಈಗ ಮೇಧಾವಿಯಾದ ಉಗ್ರಸೇನನ ಮಗನಾದ ನನ್ನ ಅಳಿಯನಾದ ಕಂಸನ ಋಣವನ್ನು ನಿನ್ನನ್ನು ಕೊಂದು ತೀರಿಸುವೆನು.
ಆಕಾಂಕ್ಷಿತೋ ಮೇ ಸಂಗ್ರಾಮಃ ತ್ವಾಂ ಹಂತುಂ ಸಸುಹೃದ್ಗಣಮ್ |
ದಿಷ್ಟ್ಯಾ ಮೇ ಸಫಲೋ ಯತ್ನಃ ಕೃತೋ ದೇವೈಃ ಸವಾಸವೈಃ ||85||
ನಿನ್ನನ್ನು ನಿನ್ನ ವಿಶ್ವಾಸಿಗಳ ಜೊತೆಯಲ್ಲಿ ಕೊಲ್ಲುವುದಕ್ಕೆ ಈ ಯುದ್ಧವು ನನಗೆ ಬಹಳ ದಿನಗಳಿಂದ ಆಕಾಂಕ್ಷಿತವಾಗಿದ್ದಿತು. ಅದೃಷ್ಟವಶದಿಂದ ನನ್ನ ಪ್ರಯತ್ನವನ್ನು ಇಂದ್ರಾದಿ ದೇವತೆಗಳು ಸಫಲಗೊಳಿಸಿದ್ದಾರೆ.
ಕ್ಲೀಬಾವಿಮೌ ಚ ಗೋವಿಂದ ಭೀಮಸೇನಾರ್ಜುನಾವುಭೌ |
ಹಿಂಸ್ಯಾಮಿ ಯುಧಿ ವಿಕ್ರಮ್ಯ ಸಿಂಹಃ ಕ್ಷುದ್ರಮೃಗಾನಿವ ||86||
ಗೋವಿಂದನೇ! ಈ ಭೀಮಾರ್ಜುನರಿಬ್ಬರೂ ನಪುಂಸಕರು. ಸಿಂಹವು ಕ್ಷುದ್ರಮೃಗಗಳನ್ನು ಕೊಂದಂತೆನನ್ನ ಪರಾಕ್ರಮದಿಂದ ಯುದ್ಧದಲ್ಲಿ ಅವರನ್ನು ಕೊಲ್ಲುತ್ತೇನೆ.
ವೈಶಂಪಾಯನಃ
ತಸ್ಯ ರೋಷಾಭಿಭೂತಸ್ಯ ಜರಾಸಂಧಸ್ಯ ಗರ್ಜತಃ |
ಸರ್ವಭೂತಾನಿ ವಿತ್ರೇಸುರ್ಯೇ ತತ್ರಾಸನ್ ಸಮಾಗತಾಃ ||87||
ಹೀಗೆ ರೋಷಕ್ಕೆ ವಶನಾಗಿ ಗರ್ಜಿಸುವ ಜರಾಸಂಧನ ಮಾತುಗಳನ್ನು ಕೇಳಿ ಅಲ್ಲಿ ಸೇರಿದ್ದ ಎಲ್ಲರೂ ನಡುಗಿಹೋದರು.
ಶ್ರೀವಾಸುದೇವಃ
ಕಿಂ ಗರ್ಜಸಿ ಜರಾಸಂಧ ಕರ್ಮಣಾ ತಾನ್ ಸಮಾಚರ |
ಮಮ ನಿರ್ದೇಶಕರ್ತೃಭ್ಯಾಂ ಪಾಂಡವಾಭ್ಯಾಂ ನೃಪಾಧಮ ||88||
ನೃಪಾಧಮನೇ! ಜರಾಸಂಧನೇ! ಏಕೆ ಗರ್ಜಿಸುತ್ತಿದ್ದೀಯೆ? ನನ್ನ ಆದೇಶವನ್ನು ಪಾಲಿಸುವ ಈ ಇಬ್ಬರು ಪಾಂಡವರ ಜೊತೆಯಲ್ಲಿ ಯುದ್ಧಮಾಡಿ ನಿನ್ನ ಕರ್ಮದಿಂದ ಅದನ್ನು ಮಾಡಿ ತೋರಿಸು.
ಸಾಮಾತ್ಯಂ ಸಸುತಂ ತ್ವದ್ಯ ಘಾತಯಿಷ್ಯಾಮ್ಯಹಂ ರಣೇ |
ನ ಕಥಂಚನ ಜೀವನ್ ವೈ ಪ್ರವೇಕ್ಷ್ಯಸಿ ಪುರೋತ್ತಮಮ್ ||89||
ಈ ದಿನ ನಿನ್ನ ಮಕ್ಕಳ ಮತ್ತು ಅಮಾತ್ಯರ ಜೊತೆಯಲ್ಲಿ ನಿನ್ನನ್ನು ನಾನು ಯುದ್ಧದಲ್ಲಿ ಕೊಲ್ಲಿಸುವೆನು. ನೀನು ಇನ್ನೊಮ್ಮೆ ಜೀವಸಹಿತನಾಗಿ ನಿನ್ನ ಪಟ್ಟಣವನ್ನು ಪ್ರವೇಶಿಸುವುದಿಲ್ಲ.
ಜರಾಸಂಧಃ
ನಾಜಿತಂ ವೈ ನರಪತಿಮಹಮಾದದ್ಮಿ ಕಂಚನ |
ಜಿತಃ ಕಃ ಪ್ರತ್ಯವಸ್ಥಾತಾ ಕೋ ಮಯಾ ನ ಪರಾಜಿತಃ ||90||
ನಾನು ಎಂದೂ ಜಯಶೀಲನಲ್ಲದ ರಾಜನನ್ನು ನನ್ನ ಎದುರಾಳಿಯಾಗಿ ಸ್ವೀಕರಿಸುವುದಿಲ್ಲ. ಜಯಶೀಲನಾದ ನನ್ನ ಎದುರಿನಲ್ಲಿ ಪರಾಜಿತನಾಗದ ಯಾವನು ನಿಲ್ಲಲು ಸಾಧ್ಯ?
ಕ್ಷತ್ರಿಯಸ್ಯೈತದೇವಾಹುರ್ಧರ್ಮ್ಯಂ ಕೃಷ್ಣೋಪಜೀವನಮ್ |
ವಿಕ್ರಮ್ಯ ವಶಮಾನೀಯ ಕಾಮತೋ ಯತ್ ಸಮಾಚರೇತ್ ||91||
ಕೃಷ್ಣನೇ! ಕ್ಷತ್ರಿಯನಿಗೆ ತನ್ನ ಪರಾಕ್ರಮದಿಂದ ಬೇರೆಯವರನ್ನು ವಶಪಡಿಸಿಕೊಂಡು ಅವರ ಜೊತೆಯಲ್ಲಿ ತನ್ನ ಇಚ್ಛೆಯಂತೆ

ವ್ಯವಹರಿಸುವುದು ಶ್ರೇಷ್ಠವಾದ ಧರ್ಮಜೀವನವೆಂದು ತಿಳಿದವರು ಹೇಳುತ್ತಾರೆ.
ದೇವತಾರ್ಥಮುಪಾಹೃತ್ಯ ರಾಜ್ಞಃ ಕೃಷ್ಣ ಕಥಂ ಭಯಾತ್ |
ಅಹಮದ್ಯ ವಿಮುಂಚೇಯಂ ಕ್ಷತ್ರಧರ್ಮಮನುಸ್ಮರನ್ ॥92॥
ಕೃಷ್ಣನೇ! ನಾನು ದೇವಪೂಜೆಯ ಸಲುವಾಗಿ ಈ ರಾಜರನ್ನು ತೆಗೆದುಕೊಂಡು ಬಂದು ಕ್ಷತ್ರಿಯ ಧರ್ಮವನ್ನು ಅನುಸರಿಸುವ ನಾನು ನಿನ್ನ ಭಯದಿಂದ ಈದಿನ ಹೇಗೆ ಬಿಡುಗಡೆಗೊಳಿಸುತ್ತೇನೆ?
ಸೈನ್ಯಂ ಸೈನ್ಯೇನ ವ್ಯೂಢೇನ ಏಕ ಏಕೇನ ವಾ ಪುನಃ |
ದ್ವಾಭ್ಯಾಂ ತ್ರಿಭಿರ್ವಾ ಯೋತ್ಸ್ಯೇಽಹಂ ಯುಗಪತ್ ಪೃಥಗೇವ ವಾ ॥
ಸೈನ್ಯದ ಒಡಗೂಡಿ ಸೈನ್ಯದ ಜೊತೆಯಲ್ಲಿಯಾಗಲೀ ಅಥವಾ ನಾನೊಬ್ಬನೇ ನಿಮ್ಮಲ್ಲಿ ಒಬ್ಬರ ಜೊತೆಯಲ್ಲಾಗಲೀ ಇಬ್ಬರ ಜೊತೆಯಲ್ಲಾಗಲೀ ಅಥವಾ ಮೂವರ ಜೊತೆಯಲ್ಲಾಗಲೀ ಸಮಾನ ಕಾಲದಲ್ಲಿ ಅಥವಾ ಬೇರೆ ಬೇರೆಯಾಗಿ ಯುದ್ಧವನ್ನು ಮಾಡುವೆನು.
ವೈಶಂಪಾಯನಃ
ಏವಮುಕತ್ತ್ವ ಜರಾಸಂಧಃ ಸಹದೇವಾಭಿಷೇಚನಮ್ |
ಆಜ್ಞಾಪಯತ್ ತದಾ ರಾಜಾ ಯುಯುತ್ಸುರ್ಭೀಮಕರ್ಮಭಿಃ ॥94॥
ಜರಾಸಂಧರಾಜನು ಹೀಗೆ ಮಾತನಾಡಿ ತನ್ನ ಭಯಂಕರವಾದ ಕರ್ಮಗಳಿಂದ ಯುದ್ಧವನ್ನು ಮಾಡಲು ಬಯಸಿ, ಆಗ ಮಂತ್ರಿಗಳನ್ನು ಕರೆದು ಸಹದೇವನ ಪಟ್ಟಾಭಿಷೇಕವನ್ನು ಆದೇಶಿಸಿದನು.
ತೌ ತು ಸೇನಾಪತೀ ಕಾಲೇ ಸಸ್ಮಾರ ಭರತರ್ಷಭ |
ಕೌಶಿಕಂ ಚಿತ್ರಸೇನಂ ಚ ತಸ್ಮಿನ್ ಯುದ್ಧ ಉಪಸ್ಥಿತೇ ॥95॥
ಯಯೋಸ್ತು ನಾಮನೀ ಲೋಕೇ ಹಂಸೇತಿ ಡಿಭಿಕೇತಿ ಚ |
ಪೂರ್ವಂ ಸ್ತಃ ಕಥಿತೌ ಪುಂಭಿರ್ನೃಲೋಕೇ ಲೋಕಸತ್ಕೃತೌ ॥96॥
ಆ ಸಮಯದಲ್ಲಿ ಹಿಂದೆ ಲೋಕದಲ್ಲಿ ಹಂಸ ಮತ್ತು ಡಿಬಕನಾಮಗಳಿಂದ ವಿಖ್ಯಾತರಾಗಿದ್ದ ಆ ಇಬ್ಬರು ಸೇನಾಪತಿಗಳನ್ನು ನೆನೆದು ಯುದ್ಧವು ಉಪಸ್ಥಿತವಾಗಿರಲು ಇಂದಿನ ಸೇನಾಪತಿಗಳಾದ ಕೌಶಿಕ ಮತ್ತು ಚಿತ್ರಸೇನರನ್ನು ಸ್ಮರಿಸಿದನು.
ತಂ ತು ರಾಜನ್ ವಿಭುಃ ಶೌರೀ ರಾಜಾನಂ ಬಲಿನಾಂ ವರಮ್ |
ಕೃತ್ವಾ ಪುರುಷಶಾರ್ದೂಲಂ ಶಾರ್ದೂಲಸಮವಿಕ್ರಮಮ್ ॥97॥
ಸತ್ಯಸಂಧೋ ಜರಾಸಂಧಂ ಭುವಿ ಭೀಮಪರಾಕ್ರಮಮ್ |
ಭಾಗಮನ್ಯಸ್ಯ ನಿರ್ದಿಷ್ಟಂ ವಧ್ಯಂ ಮತ್ವಾ ತದಾಽಚ್ಯುತಃ ॥98॥
ನಾತ್ಮನಾಽತ್ಮವತಾಂ ಮುಖ್ಯ ಇಯೇಷ ಮಧುಸೂದನಃ |
ಬ್ರಾಹ್ಮಣಾಜ್ಞಾಂ ಪುರಸ್ಕೃತ್ಯ ಹಂತುಂ ಹಲಧರಾನುಜಃ ॥99॥
ರಾಜನೇ! ಶೌರಿಯಾದ ಕೃಷ್ಣನು ಬಲಿಷ್ಠರಲ್ಲಿ ಶ್ರೇಷ್ಠನೂ ಶಾರ್ದೂಲಸಮ ಪರಾಕ್ರಮ ಉಳ್ಳವನೂ ಸತ್ಯಸಂಧನೂ ಭಯಂಕರ ಪರಾಕ್ರಮ ಉಳ್ಳವನೂ ಆದ ಜರಾಸಂಧನನ್ನು ತನ್ನನ್ನು ಬಿಟ್ಟು ಇನ್ನೊಬ್ಬನ ಭಾಗವೆಂದು ತೀರ್ಮಾನಿಸಿ ಪ್ರಯತ್ನಶೀಲರಲ್ಲಿ ಅಗ್ರಗಣ್ಯನಾದ ಮಧುಸೂದನನು ಅವನನ್ನು ಕೊಲ್ಲಲು ಬಯಸಲಿಲ್ಲ. ಭೀಮನಿಂದಲೇ ಜರಾಸಂಧನ ವಧವಾಗಬೇಕೆಂಬ ಬ್ರಹ್ಮದೇವರ ಆಜ್ಞೆಗೆ ಬಹುಮಾನವನ್ನು ನೀಡಿದ ಬಲರಾಮನ ತಮ್ಮನಾದ ಕೃಷ್ಣನು (ಹಿಂದಿನ ಯಾವ ಯುದ್ಧಗಳಲ್ಲಿಯೂ ಸಹ) ಅವನನ್ನು ಕೊಲ್ಲಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ದ್ವಾವಿಂಶೋಽಧ್ಯಾಯಃ ॥
॥ ಜರಾಸಂಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಇತ್ಯುಕ್ತವಂತಮವದದಜಿತೋರುಬಲೋ ಹರಿಃ
ಏಹ್ಯೇಕಮೇಕೋ ವಾಸ್ಮಾಸು ಸಸೈನ್ಯೋ ವಾ ರಣೇ ನೃಪ ॥135॥
ಜರಾಸಂಧ ಹೀಗೆ ಹೇಳಿದಾಗ ಸರ್ವಶಕ್ತನಾದ ಅಜಿತನಾದ ಶ್ರೀಹರಿ ನುಡಿದ. `ನಮ್ಮಲ್ಲಿ ಯಾರಾದರೊಬ್ಬರೊಡನೆ ಹೋರಾಡಲು ನೀನು ಏಕಾಕಿಯಾಗಿ ಬಾ, ಇಲ್ಲವೆ, ಸೈನ್ಯ ಸಮೇತರಾದ ನಮ್ಮೊಡನೆ ಯುದ್ಧಕ್ಕೆ ಸೈನ್ಯ ಸಹಿತನಾಗಿಯಾದರೂ ಬಾ'.
ಯೇನ ಕಾಮಯಸೇ ಯೋದ್ಧುಂ ತಂ ನ ಆಸಾದಯ ದ್ರುತಂ |
ನಿರಾಯುಧಃ ಸಾಯುಧೋ ವಾ ತ್ವದಭೀಷ್ಟಾಯುಧೇನ ವಾ ॥136॥
ನೀನು ಯಾರೊಡನೆ ಹೋರಾಡಲು ಬಯಸುವಿಯೊ ಅವನನ್ನೇ ಆರಿಸಿಕೊಳ್ಳು. ನಿರಾಯುಧನಾಗಿಯೋ ಸಾಯುಧನಾಗಿಯೋ ನಿನಗಿಷ್ಟವಾದ ಆಯುಧ ಧರಿಸಿಯೋ ನೀನು ಬರಬಹುದು.
ಇತ್ಯಾಹ ಭಗವಾನ್ ಶತ್ರುಂ ಯಶೋ ಭೀಮೇ ವಿವರ್ಧಯನ್ |
ಘಾತಯಿತ್ವಾ ಸ್ವಶತ್ರುಂ ಚ ಭೀಮೇನಾನುಗ್ರಹಂ ಪರಂ ॥137॥
ಭೀಮಸ್ಯ ಕರ್ತುಮಿಚ್ಛಂಶ್ಚ ಭಕ್ತಿ ಜ್ಞಾನಾದಿವರ್ಧನಂ |
ತೃಣೀಕರ್ತುಂ ರಿಪುಂ ಚೈವ ನಿರಾಯುಧತಯಾಗಮತ್ ॥138॥

ಶ್ರೀಕೃಷ್ಣ ತನ್ನ ಶತ್ರುವನ್ನೂ ಭೀಮನಿಂದ ಕೊಲ್ಲಿಸಿ ಅವನಿಗೆ ಪರಮಾನುಗ್ರಹ ಮಾಡಲು ಮತ್ತು ಅವನ ಯಶಸ್ಸನ್ನೂ ಭಕ್ತಿಜ್ಞಾನಾದಿಗಳನ್ನೂ ಹೆಚ್ಚಿಸಲು ಬಯಸಿದ್ದರಿಂದ ಜರಾಸಂಧನಿಗೆ ಹೀಗೆ ಹೇಳಿದ. ಶತ್ರುವನ್ನು ತೃಣೀಕರಿಸಲೆಂದೇ ನಿರಾಯುಧನಾಗಿ ಅಲ್ಲಿಗೆ ಹೋಗಿದ್ದ.

ಕೃಷ್ಣಭೀಮಾರ್ಜುನಾಸ್ತೇನ ವಿಪ್ರವೇಷಾಶ್ಚ ತೇऽಭವನ್ |
ನಿರಾಯುಧಃ ಕ್ಷತ್ರವೇಷೋ ನೈವ ಯೋಗ್ಯಃ ಕಥಂಚನ ॥139॥

ಕ್ಷತ್ರಿಯ ವೇಷದಲ್ಲಿದ್ದು ನಿರಾಯುಧರಾಗಿರುವುದು ಯಾವರೀತಿಯಿಂದಲೂ ಯೋಗ್ಯವೆನಿಸುವುದಿಲ್ಲ. ಅದರಿಂದ ಕೃಷ್ಣ ಭೀಮ ಅರ್ಜುನರು ಬ್ರಾಹ್ಮಣವೇಷ ಧರಿಸಿ ಬಂದಿದ್ದರು.

ತತೋ ಜಗ್ಮುರ್ವಿಪ್ರವೇಷಾಸ್ತೃಣೀಕರ್ತುಂ ಹಿ ಮಾಗಧಂ |
ಮಾಗಧಸ್ಯ ಸಸೈನ್ಯಸ್ಯ ಸ್ವಗೃಹೇ ಸಂಸ್ಥಿತಸ್ಯ ಚ ॥140॥
ನಿರಾಯುಧೇನ ಭೀಮೇನ ಸಮಾಹ್ವಾನೇ ಕೃತೇऽಮಿತಂ |
ಧರ್ಮಂ ಯಶಶ್ಚ ಭೀಮಸ್ಯ ವರ್ಧಯಾಮಾಸ ಕೇಶವಃ ॥141॥

ಅದರಿಂದ ಅವರು ಬ್ರಾಹ್ಮಣ ವೇಷದಿಂದ, ಜರಾಸಂಧನನ್ನು ತೃಣೀಕರಿಸುವ ಉದ್ದೇಶದಿಂದಲೆ, ಹೋಗಿದ್ದರು. ಜರಾಸಂಧ ಸೈನ್ಯ ಸಮೇತನಾಗಿರುವಾಗ, ಮತ್ತು ತನ್ನ ಮನೆಯಲ್ಲಿಯೆ ಇರುವಾಗ ನಿರಾಯುಧನಾದ ಭೀಮ ಹೊರಗಿಂದ ಬಂದು ಯುದ್ಧಕ್ಕೆ ಆಹ್ವಾನ ಮಾಡಿದರೆ ಭೀಮನಿಗೆ ಅಮಿತವಾಗಿ ಪುಣ್ಯ ಮತ್ತು ಕೀರ್ತಿ ಹೆಚ್ಚುವುದು. ಹಾಗೆ ಹೆಚ್ಚುವಂತೆ ಮಾಡಿದ ಶ್ರೀಕೃಷ್ಣ.

ತೃತೀಯಮರ್ಜುನಂ ಚೈವ ಸಮಾದಾಯ ಯಯೌ ರಿಪುಂ |
ಹರಿಸ್ತಸ್ಮಾಚ್ಚ ಭೀಮಸ್ಯ ಮಹಾಧಿಕ್ಯಂ ಪ್ರಕಾಶಯನ್ ॥142॥
ಮುಖೇನ ಮಾಗಧಸ್ಯೈವ ವೃಣ್ವೇಕಂ ನ ಇತಿ ಬ್ರುವನ್ |
ವೃಣ್ವೇಕಮಸ್ಮಾಸ್ವಿತಿ ಸ ಪ್ರೋಕ್ತ ಆಹ ಜರಾಸುತಃ ॥143॥

ನಮ್ಮಲ್ಲಿ ಒಬ್ಬನನ್ನು ಆರಿಸಿಕೊಳ್ಳು ಎಂದು ಹೇಳಿ ಜರಾಸಂಧನ ಮುಖದಿಂದಲೇ ಅರ್ಜುನನಿಗಿಂತ ಭೀಮನಿಗೆ ಹೆಚ್ಚು ಶ್ರೇಷ್ಠತ್ವವನ್ನು ಹೇಳಿಸಿ ಬೆಳಕಿಗೆ ತರುವುದಕ್ಕಾಗಿ ಶ್ರೀಕೃಷ್ಣ ಮೂರನೆಯವನಾಗಿ ಅರ್ಜುನನನ್ನೂ ಕರೆದುಕೊಂಡು ಶತ್ರುವಿನ ಬಳಿಗೆ ಬಂದಿದ್ದ. ಅದರಿಂದ ನಮ್ಮಲ್ಲಿ ಒಬ್ಬನನ್ನು ಆರಿಸಿಕೊಳ್ಳೆಂದು ಕೃಷ್ಣ ಹೇಳಿದಾಗ ಜರಾಸಂಧ ನುಡಿದ.

ಕುರ್ಯಾಂ ನೈವಾರ್ಜುನೇನಾಹಮಬಲೇನೈವ ಸಂಗರಂ |
ಪಂಚಪಂಚಾಶದಬ್ದೋऽದ್ಯ ಹ್ಯಯಮೇವ ಚ ಬಾಲವತ್
ಅಬಲತ್ವಾದ್ ಯುವಾಪ್ಯೇಷ ಬಾಲ ಏವ ಮತೋ ಮಮ ॥144॥

`ನಾನು ಈ ದುರ್ಬಲನಾದ ಅರ್ಜುನನೊಡನೆ ಯುದ್ಧ ಮಾಡಲಾರೆ. ವಯಸ್ಸಿನಲ್ಲಿ ಐವತ್ತೈದರವನಾದರೂ ಬಲದಲ್ಲಿ ಇನ್ನೂ ಬಾಲಕನಂತಿದ್ದಾನೆ. ಏಕೆಂದರೆ ಯುವಕನಾಗಿದ್ದರೂ ದುರ್ಬಲನಾದ್ದರಿಂದ ದೃಷ್ಟಿಯಲ್ಲಿ ಈತ ಬಾಲಕನೆ'.

ಇತ್ಯುಕ್ತೋऽಪ್ಯರ್ಜುನೋ ನಾಹ ಕುರು ತರ್ಹಿ ಪರೀಕ್ಷಣಂ |
ಬಾಹುಭ್ಯಾಂ ಧನುಷಾ ವೇತಿ ಶಂಕಮಾನಃ ಪರಾಜಯಂ ॥145॥

ಜರಾಸಂಧ ಹೀಗೆ ಹೇಳುತ್ತಿದ್ದರೂ `ಹಾಗಾದರೆ ಬಾಹುಗಳಿಂದಾಗಲಿ ಬಿಲ್ಲಿನಿಂದಾಗಲಿ ಪರೀಕ್ಷೆ ಮಾದಿ ನೋಡು' ಎನ್ನಲಿಲ್ಲ ಅರ್ಜುನ. ಏಕೆಂದರೆ ಅವನು ತನಗೆ ಪರಾಜಯವಾದೀತೆಂದು ಶಂಕಿಸಿದ್ದ.

ಅತೋ ಭೀಮೋ ಬಲಾಧಿಕ್ಯಂ ಸುಪ್ರಸಿದ್ಧಮಭೂನ್ಮಹತ್ |
ಏತದರ್ಥಂ ಹಿ ಕೃಷ್ಣೇನ ಸಹಾನೀತಃ ಸ ಫಲ್ಗುನಃ ॥146॥

ಅದರಿಂದ ಭೀಮನಲ್ಲಿಯೆ ಬಲ ಬಹಳ ಹೆಚ್ಚೆಂಬುದು ಸುಪ್ರಸಿದ್ಧವಾಯಿತು. ಇದಕ್ಕಾಗಿಯೆ ಕೃಷ್ಣ ಅರ್ಜುನನನ್ನು ಜೊತೆಗೆ ಕರೆತಂದಿದ್ದ.

ಜಾನಾನ್ ಕೃಷ್ಣೇ ಬಲಂ ಘೋರಮವಿಷಹ್ಯಂ ಸ ಮಾಗಧಃ |
ಕುತ್ಸಯನ್ ಗೋಪ ಇತಿ ತಂ ಭಯಾನ್ನೈವಾಹ್ವಯತ್ಪ್ರಭುಂ ॥147॥

ಕೃಷ್ಣನಲ್ಲಿರುವ ಶಕ್ತಿ ಭಯಂಕರ, ಯಾರಿಗೂ ಇದಿರಿಸಲಾಗದಂಥದ್ದು ಎಂದು ತಿಳಿದಿದ್ದ ಜರಾಸಂಧ ತೋರಿಕೆಗೆ ಅವನನ್ನು ಗೋವಳನೆಂದು ತಿರಸ್ಕರಿಸಿದರೂ ವಸ್ತುತಃ ಭಯದಿಂದಲೆ ಯುದ್ಧಕ್ಕೆ ಕರೆದಿರಲಿಲ್ಲ.

ಆಹ್ವಯಾಮಾಸ ಭೀಮಂ ತು ಸ್ಯಾದ್ವಾ ಮೇ ಜೀವನಂ ತ್ವಿತಿ ॥148॥

ಭೀಮನೊಡನೆ ಯುದ್ಧ ಮಾಡಿದರೆ ಒಂದು ವೇಳೆ ತಾನು ಬದುಕಿ ಉಳಿಯಲೂ ಬಹುದೆಂಬ ಆಸೆಯಿಂದ ಭೀಮನನ್ನೇ ಯುದ್ಧಕ್ಕೆ ಕರೆದ, ಜರಾಸಂಧ.

ಹನಿಷ್ಯತ್ಯೇವ ಮಾಂ ಕೃಷ್ಣ ಇತ್ಯಾಸೀನ್ನೃಪತೇರ್ಭಯಂ |
ತಸ್ಮಾತ್ತಂ ನಾಹ್ವಯಾಮಾಸ ವಾಸುದೇವಂ ಸ ಮಾಗಧಃ ॥149॥

ಕೃಷ್ಣನೊಡನೆ ಯುದ್ಧ ಮಾಡಿದರೆ ಅವನು ತನ್ನನ್ನು ಕೊಲ್ಲುವುದು ನಿಶ್ಚಿತವೆಂದು ಜರಾಸಂಧನಿಗೆ ಭಯವಿದ್ದಿತು. ಅದರಿಂದ ಅವನು ಶ್ರೀಕೃಷ್ಣನನ್ನು ಯುದ್ಧಕ್ಕೆ ಕರೆಯಲಿಲ್ಲ.

ಅರ್ಜುನೇ ತು ಜಿತೇ ಕೃಷ್ಣಭೀಮೌ ಮಾಂ ನಿಹನಿಷ್ಯತಃ |
ತ್ರಯಾಣಾಂ ದುರ್ಬಲಾಹ್ವಾನಾನ್ನಶ್ಯೇತ್ಕೀರ್ತಿಶ್ಚ ಮೇ ಧ್ರುವಾ ॥150॥

ತಾನು ಅರ್ಜುನನನ್ನು ಗೆದ್ದರೂ ಅನಂತರ ಕೃಷ್ಣ ಭೀಮರು ತನ್ನನ್ನು ಕೊಲ್ಲುವರು ಮತ್ತು ಮೂವರೊಳಗೆ ದುರ್ಬಲನಾದ ಈತನನ್ನು ಯುದ್ಧಕ್ಕೆ ಕರೆದರೆ ನನ್ನ ಕೀರ್ತಿಯೂ ನಿಶ್ಚಿತವಾಗಿ ನಶಿಸುವುದು.

ಇತಿ ಮತ್ವಾऽಹ್ವಯಾಮಾಸ ಭೀಮಸೇನಂ ಸ ಮಾಗಧಃ |

ಕಥಂಚಿಜ್ಜೀವಿತಂ ವಾ ಸ್ಯಾನ್ನ ತು ನಶ್ಯತಿ ಮೇ ಯಶಃ ॥151॥
ಹೀಗೆ ಆಲೋಚಿಸಿ ಜರಾಸಂಧ ಭೀಮಸೇನನನ್ನೇ ಯುದ್ಧಕ್ಕೆ ಕರೆದ. `ನಾನು ಬದುಕಿ ಉಳಿಯಲಿ ಅಥವಾ ಅಳಿಯಲಿ, ಹೇಗಾದರೂ ನನ್ನ ಕೀರ್ತಿಗೆ ಕುಂದಿಲ್ಲ' ಎಂದು.
ಇತೀ ಸ್ವಭೀಮಂ ಪ್ರತಿಯೋಧನಾಯ
ಸಂಗೃಹ್ಯ ರಾಜಾ ಸ ಜರಾಸುತೋ ಬಲೀ |
ರಾಜ್ಯೇ ನಿಜಂ ಚಾSತ್ಮಜಮಭ್ಯಷಿಂಚತ್
ಪುರಾ ಖ್ಯಾತಂ ಪತ್ರತಾಪಖ್ಯರುದ್ರಂ ॥152॥
ಹೀಗೆ ಆಲೋಚಿಸಿ ಬಲಿಷ್ಠನಾದ ಜರಾಸಂಧ ತನ್ನೊಡನೆ ಯುದ್ಧ ಮಾಡಲು ಭೀಮನನ್ನು ಆರಿಸಿಕೊಂಡು ರಾಜ್ಯದಲ್ಲಿ ತನ್ನ ಮಗನನ್ನು ಕೂಡಿಸಿ ಅಭಿಷೇಕ ಮಾಡಿದ. ಅವನು ಹಿಂದೆ ಪತ್ರತಾಪನೆಂಬ ಪ್ರಸಿದ್ಧ ರುದ್ರ.
ಬಲಂ ಭೀಮೇ ಮನ್ಯಮಾನೋSಧಿಕಂ ತು
ಗದಾಶಿಕ್ಷಾಮಾತ್ಮನಿ ಚಾಧಿಕಾಂ ನೃಪಃ |
ಭೀತೋ ನಿಯುದ್ಧೇSಸ್ಯ ದದೌ ಗದಾಂ ಸ
ಭೀಮಾಯ ಚಾನ್ಯಾಂ ಸ್ವಯಮಗ್ರಹೀದ್ ಬಲೀ ॥153॥
ದೈಹಿಕ ಬಲ ಭೀಮನಲ್ಲಿ ಹೆಚ್ಚಿದ್ದರೂ ಗದಾಭ್ಯಾಸ ಕೌಶಲ ತನ್ನಲ್ಲಿಯೆ ಹೆಚ್ಚೆಂದು ಭಾವಿಸಿದ್ದ ಜರಾಸಂಧ ಮುಷ್ಟಿಯುದ್ಧಕ್ಕೆ ಹೆದರಿ ಭೀಮನಿಗೆ ಒಂದು ಗದೆಯನ್ನು ಕೊಟ್ಟು ತಾನೂ ಇನ್ನೊಂದು ಗದೆಯನ್ನೆತ್ತಿಕೊಂಡ.
ತದರ್ಥಮೇವಾಶು ಗದಾಂ ಪ್ರಗೃಹ್ಯ
ಭೀಮೋ ಯಯೌ ಮಾಗಧಸಂಯುತೋ ಬಹಿಃ |
ಪುರಾತ್ ಸಕೃಷ್ಣಾರ್ಜುನ ಏವ ತತ್ರ
ತ್ವಯಧ್ಯತಾಂ ಕೇಶವಪಾರ್ಥಯೋಃ ಪುರಃ ॥154॥
ಅದಕ್ಕೇ ಬಲಿಷ್ಠನಾದ ಭೀಮನೂ ಗದೆಯನ್ನು ಹಿಡಿದು ಬೇಗನೆ ಜರಾಸಂಧನೊಂದಿಗೆ ಕೃಷ್ಣಾರ್ಜುನ ಸಮೇತನಾಗಿ ನಗರದಿಂದ ಹೊರಗೆ ಹೋದ. ಅಲ್ಲಿ ಇಬ್ಬರೂ ಕೃಷ್ಣಾರ್ಜುನರ ಮುಂದೆ ಯುದ್ಧ ಮಾಡಿದರು.
ವಾಚಾSಜಯತ್ ತಂ ಪ್ರಥಮಂ ವೃಕೋದರಃ
ಶಿವಾಶ್ರಯಂ ವಿಷ್ಣುಗುಣಪ್ರಕಾಶಯಾ |
ತತೋ ಗದಾಭ್ಯಾಮಭಿಷೇತತುಸ್ತೌ
ವಿಚಿತ್ರಮಾರ್ಗಾನಪಿ ದರ್ಶಯಂತೌ ॥155॥
ಮೊದಲಿಗೆ ಭೀಮ ವಿಷ್ಣುಗುಣ ಪ್ರತಿಪಾದಕ ಶಾಸ್ತ್ರದಿಂದ ಶಿವಭಕ್ತನಾದ ಜರಾಸಂಧನನ್ನು ವಾದ ಯುದ್ಧದಲ್ಲಿ ಗೆದ್ದ. ಬಳಿಕ ಇಬ್ಬರೂ ಗದೆಗಳಿಂದ ನಾನಾ ವರಸೆಗಳನ್ನು ಪ್ರದರ್ಶಿಸುತ್ತ ಹೋರಾಡಿದರು.
ತಯೋರ್ಗದೇ ತೇSಶನಿಸನ್ನಿಕಾಶೇ
ಚೂರ್ಣೀಕೃತೇ ದೇಹಮಹಾದೃಢಿಮ್ನಾ |
ಅನ್ಯೋನ್ಯಯೋರ್ವಕ್ಷಸಿ ಪಾತಿತೇ ರುಷಾ
ಯಥಾSಶ್ಮನೋಃ ಪಾಂಸುಪಿಂಡೌ ಸುಮುಕ್ತೌ ॥156॥
ವಜ್ರಾಯುಧದಂತೆ ಕಠಿಣವಾದ ಗದೆಗಳನ್ನು ಅವರು ಕೋಪದಿಂದ ಪರಸ್ಪರ ಎದೆಗಳ ಮೇಲೆ ಎಸೆದಾಗ ಮೈಯ ಮಹಾ ಕಾಠಿನ್ಯದಿಂದ ಆ ಗದೆಗಳೇ ಕಲ್ಲು ಬಂಡೆಗಳ ಮೇಲೆ ಎಸೆದ ಮಣ್ಣಹೆಂಟೆಗಳಂತೆ ಪುಡಿಯಾದುವುದು.
ಸಂಚೂರ್ಣಿತಗದೌ ವೀರೌ ಮುಷ್ಟಿಭಿರ್ಜಘ್ನತುರ್ಮಿಥಃ |
ಬ್ರಹ್ಮಾಂಡಸ್ಫೋಟಸಂಕಾಶೈರ್ಯಥಾ ಕೇಶವಕೈಟಭೌ ॥157॥
ಗದೆಗಳು ಪುಡಿಯಾದಾಗ ಆ ವೀರರು ವಿಷ್ಣು ಕೈತಭರಂತೆ ಬ್ರಹ್ಮಾಂಡ ಸ್ಫೋಟಕಾರಿಗಳಂತಿರುವ ಮುಷ್ಟಿಗಳಿಂದ ಪರಸ್ಪರ ಹೊಡೆದರು.
ಚಚಾಲ ಪೃಥ್ವೀ ಗಿರಯಶ್ಚ ಚೂರ್ಣಿತಾಃ
ಕುಲಾಚಲಾಶ್ಚೇಲುರಲಂ ವಿಚುಕ್ಷುಭುಃ |
ಸಮಸ್ತವಾರಾಂಪತಯಃ ಸುರಾಸುರಾ
ವಿರಿಂಚಶರ್ವಾದಯ ಆಸದನ್ನಭಃ ॥158॥
ಆ ಮುಷ್ಟಿ ಯುದ್ಧದ ರಭಸಕ್ಕೆ ಭೂಮಿ ನಡುಗಿತು. ಬೆಟ್ಟಗಳು ಪುಡಿಯಾದುವು. ಕುಲಪರ್ವತಗಳೂ ಚಲಿಸಿದುವು. ಸಕಲ ಸಮುದ್ರಗಳೂ ಕ್ಷೋಭೆಗೊಂಡುವು. ಬ್ರಹ್ಮರುದ್ರಾದಿಗಳೂ ಸಕಲ ದೇವಾಸುರರೂ ಆಕಾಶದಲ್ಲಿ ನೆರೆದರು.
ಸುರಾಸ್ತು ಭೀಮಸ್ಯ ಜಯಾಭಿಕಾಂಕ್ಷಿಣ-
ಸ್ತಥಾಸುರದ್ಯಾ ಮಗಧಾಧಿಪಸ್ಯ |
ಪಶ್ಯಂತಿ ಸರ್ವೇ ಕ್ರಮಶೋ ಬಲಂ ಸ್ವಂ
ಸಮಾದದೇ ಮಾರುತನಂದನೋSಪಿ ॥159॥
ದೇವತೆಗಳು ಭೀಮನ ಜಯಾಕಾಂಕ್ಷಿಗಳು ಅಸುರರು ಮುಂತಾದವರು ಜರಾಸಂಧನ ಜಯಾಕಾಂಕ್ಷಿಗಳು. ಎಲ್ಲರೂ ಯುದ್ಧವನ್ನು ವೀಕ್ಷಿಸಿದರು. ಭೀಮ ತನ್ನ ಬಲವನ್ನು ಕ್ರಮವಾಗಿ ಆದಾನದಿಂದ ವ್ಯಕ್ತಮಾಡಿಕೊಳ್ಳತೊಡಗಿದ.
ಮಾನಯಿತ್ವಾ ವರಂ ಧಾತುರ್ದಿವಸಾನ್ ದಶ ಪಂಚ ಚ |
ವಾಸುದೇವಾಜ್ಞಯಾ ಭೀಮಃ ಶತ್ರುಂ ಹಂತುಂ ಮನೋ ದಧೇ ॥160॥

ಭೀಮ ಹದಿನೈದು ದಿನಗಳ ಕಾಲ ಯುದ್ಧಮಾಡಿ ಬ್ರಹ್ಮನ ವರಕ್ಕೆ ಮಾನ್ಯತೆ ನೀಡಿ ಕೃಷ್ಣನ ಆಜ್ಞೆಯಂತೆ ಶತ್ರುವನ್ನು ಕೊಲ್ಲಲು ಸಂಕಲ್ಪ ಮಾಡಿದ.
* * * *
ಇಪ್ಪತ್ತೂರನೆಯ ಅಧ್ಯಾಯ
(ಕೃಷ್ಣಜರಾಸಂಧರ ವೈರಕ್ಕೆ ನಿಮಿತ್ತ ಕಥನ ಮತ್ತು ಭೀಮಜರಾಸಂಧರ ಯುದ್ಧವರ್ಣನೆ.)
ಜನಮೇಜಯಃ
ಕಿಮರ್ಥಂ ವೈರಿಣಾವಾಸ್ತಾಮುಭೌ ತೌ ಕೃಷ್ಣಮಾಗಧೌ |
ಕಥಂ ಚ ನಿರ್ಜಿತಃ ಸಂಖ್ಯೇ ಜರಾಸಂಧೇನ ಮಾಧವಃ ||1||
ಕೃಷ್ಣ ಜರಾಸಂಧರು ಯಾವ ನಿಮಿತ್ತದಿಂದ ವೈರಿಗಳಾದರು? ಜರಾಸಂಧನು ಕೃಷ್ಣನನ್ನು ಹೇಗೆ ಯುದ್ಧದಲ್ಲಿ ಸೋಲಿಸಿದನು?
ಕಶ್ಚ ಕಂಸೋ ಮಾಗಧಸ್ಯ ಯಸ್ಯ ಹೇತೋಃ ಸ ವೈರವಾನ್ |
ಏತದಾಚಕ್ಷ್ವ ಮೇ ಸರ್ವಂ ವೈಶಂಪಾಯನ ತತ್ತ್ವತಃ ||2||
ಯಾರ ಸಲುವಾಗಿ ಕೃಷ್ಣನಿಗೂ ಜರಾಸಂಧನಿಗೂ ವೈರವುಂಟಾಯಿತೋ ಅಂತಹ ಕಂಸನಿಗೂ ಜರಾಸಂಧನಿಗೂ ಏನು ಸಂಬಂಧ? ವೈಶಂಪಾಯನರೇ! ಇದೆಲ್ಲವನ್ನೂ ನನಗೆ ಯಥಾರ್ಥವಾಗಿ ತಿಳಿಸು.
ವೈಶಂಪಾಯನಃ
ಯಾದವಾನಾಮನ್ವವಾಯೇ ವಸುದೇವೋ ಮಹಾಮತಿಃ |
ಉದಪದ್ಯತ ವಾರ್ಷ್ಣೇಯೋ ಹ್ಯುಗ್ರಸೇನಶ್ಚ ಮಂತ್ರವಿತ್ ||3||
ಯಾದವರ ಕುಲದ ಅವಾಂತರಕುಲವಾದ ವೃಷ್ಣಿಗಳ ಕುಲದಲ್ಲಿ ಮೇಧಾವಿಯಾದ ವಸುದೇವನೂ ಮಂತ್ರಜ್ಞನಾದ ಉಗ್ರಸೇನನೂ ಜನಿಸಿದರು.
ಉಗ್ರಸೇನಸ್ಯ ಕಂಸಸ್ತು ಬಭೂವ ಬಲವಾನ್ ಸುತಃ |
ಜ್ಯೇಷ್ಠೋ ಬಹೂನಾಂ ಕೌರವ್ಯ ಸರ್ವಶಸ್ತ್ರವಿಶಾರದಃ ||4||
ಉಗ್ರಸೇನನಿಗೆ ಕಂಸನೆಂಬ ಬಲಿಷ್ಠ ಮಗನು ಜನಿಸಿದನು. ಜನಮೇಜಯನೇ! ಅವನು ಉಳಿದ ಎಲ್ಲರಿಗಿಂತ ಉಗ್ರನಾದವನು ಮತ್ತು ಶಸ್ತ್ರಗಳಲ್ಲಿ ವಿಶಾರದನಾದವನು.
ಜರಾಸಂಧಸ್ಯ ದುಹಿತಾ ತಸ್ಯ ಭಾರ್ಯಾಽತಿವಿಶ್ರುತಾ |
ರಾಜ್ಯಶುಲ್ಕೇತಿ ದತ್ತಾ ಸಾ ಜರಾಸಂಧೇನ ಧೀಮತಾ ||5||
ಮೇಧಾವಿಯಾದ ಜರಾಸಂಧನು ತನ್ನ ಪ್ರಖ್ಯಾತಳಾದ ಮಗಳನ್ನು ಇವಳ ಪತಿಗೆ ರಾಜ್ಯವು ದೊರೆಯಬೇಕೆಂಬ ಶರತ್ತಿನೊಂದಿಗೆ ಕಂಸನಿಗೆ ಕೊಟ್ಟಿದ್ದನು.
ತದರ್ಥಮುಗ್ರಸೇನಸ್ಯ ಮಧುರಾಯಾಂ ಸುತಸ್ತದಾ |
ಅಭಿಷಿಕ್ತಸ್ತದಾಽಮಾತ್ಯೈಃ ಸರ್ವೈಸ್ತೀವ್ರಪರಾಕ್ರಮಃ ||6||
ಜರಾಸಂಧನಿಗೆ ಸಂತೋಷವನ್ನು ಉಂಟುಮಾಡುವ ಸಲುವಾಗಿ ಮಂತ್ರಿಗಳೆಲ್ಲರೂ ಸೇರಿ ಉಗ್ರಸೇನನ ಮಗನಾದ ಮಹಾಪರಾಕ್ರಮಶಾಲಿಯಾದ ಕಂಸನಿಗೆ ಮಧುರಾಪಟ್ಟಣದಲ್ಲಿ ಅಭಿಷೇಕವನ್ನು ಮಾಡಿದರು.
ಐಶ್ವರ್ಯಬಲಮತ್ತಸ್ತು ಸ ತದಾ ಬಲಮೋಹಿತಃ |
ನಿಗೃಹ್ಯ ಪಿತರಂ ಭುಂಕ್ತೇ ತದ್ರಾಜ್ಯಂ ಮಂತ್ರಿಭಿಃ ಸಹ ||7||
ಐಶ್ವರ್ಯಬಲದಿಂದ ಮತ್ತನೂ ಮೋಹಿತನೂ ಆದ ಕಂಸನು ತನ್ನ ತಂದೆಯಾದ ಉಗ್ರಸೇನನನ್ನು ಕಾರಾಗೃಹದಲ್ಲಿ ಇಟ್ಟು ಮಂತ್ರಿಗಳ ಜೊತೆಯಲ್ಲಿ ಆ ರಾಜ್ಯವನ್ನು ಭೋಗಿಸಿದನು.
ವಸುದೇವಸ್ಯ ತದ್ವಾಕ್ಯಂ ನ ಶೃಣೋತಿ ಸ ಮಂದಧೀಃ |
ಸ ತೇನ ಸಹ ತದ್ರಾಜ್ಯಂ ಧರ್ಮತಃ ಪರ್ಯಪಾಲಯತ್ ||8||
ಮಂದಮತಿಯಾದ ಕಂಸನು ತಂದೆಯಾದ ಉಗ್ರಸೇನನನ್ನು ಬಿಡುಗಡೆಮಾಡಬೇಕೆಂಬ ವಸುದೇವನ ಮಾತನ್ನು ಎಂದೂ ಕೇಳಲಿಲ್ಲ. ವಸುದೇವನ ಜೊತೆಯಲ್ಲಿ ಕಂಸನು ಮಧುರಾಪಟ್ಟಣವನ್ನು ಧರ್ಮದಿಂದ ಪಾಲಿಸಿದನು.
ಪ್ರೀತಿಮಾನ್ ಸ ತು ದೈತ್ಯೇಂದ್ರೋ ವಸುದೇವಸ್ಯ ದೇವಕೀಮ್ |
ಉವಾಹ ಭಾರ್ಯಾಂ ಸ ತದಾ ದುಹಿತಾ ದೇವಕಸ್ಯ ಯಾ ||9||
ವಸುದೇವನಲ್ಲಿ ಪ್ರೀತಿಯನ್ನು ಹೊಂದಿದ್ದ ದೈತ್ಯೇಂದ್ರನಾದ ಕಂಸನು ದೇವಕನ ಮಗಳಾದ ದೇವಕಿಯನ್ನು ವಸುದೇವನಿಗೆ ಕೊಟ್ಟು ವಿವಾಹಮಾಡಿದನು.
ತಸ್ಯಾಮುದ್ವಾಹ್ಯಮಾನಾಯಾಂ ರಥೇನ ಜನಮೇಜಯ |
ಉಪಾರುರೋಹ ವಾರ್ಷ್ಣೇಯಂ ಕಂಸೋ ಭೂಮಿಪತಿಸ್ತದಾ ||10||
ಜನಮೇಯನೇ! ಆ ವಿವಾಹಸಂದರ್ಭದಲ್ಲಿ ರಥದಲ್ಲಿ ದೇವಕಿಯನ್ನು ಕರೆದುಕೊಂಡು ಹೋಗುವಾಗ ವಸುದೇವನ ಅನಂತರ ರಾಜನಾದ ಕಂಸನು ಆ ರಥವನ್ನು ಏರಿದನು.
ತತೋಽಂತರಿಕ್ಷೇ ವಾಗಾಸೀದ್ ದೇವದೂತಸ್ಯ ಕಸ್ಯಚಿತ್ |
ವಸುದೇವಶ್ಚ ಶುಶ್ರಾವ ತಾಂ ವಾಚಂ ಪಾರ್ಥಿವಶ್ಚ ಸಃ ||11||
ಆಗ ಅಂತರಿಕ್ಷದಲ್ಲಿ ಯಾವನೋ ಒಬ್ಬ ದೇವದೂತನ ಮಾತು ಕೇಳಿಬಂದಿತು. ಆ ಮಾತನ್ನು ವಸುದೇವನೂ ಮತ್ತು ಕಂಸನೂ ಕೇಳಿದರು.

ಯಾಮೇತಾಂ ಹರ್ಷಮಾಣೋಽದ್ಯ ಕಂಸೋದ್ವಹಸಿ ದೇವಕೀಮ್ |
ಅಸ್ಯಾ ಯಶ್ಚಾಷ್ಟಮೋ ಗರ್ಭಃ ಸ ತೇ ಮೃತ್ಯುರ್ಭವಿಷ್ಯತಿ ॥12॥
ಕಂಸನೇ! ಯಾವ ದೇವಕಿಯನ್ನು ನೀನು ಈದಿನ ಸಂತೋಷದಿಂದ ರಥದಲ್ಲಿ ಕರೆದುಕೊಂಡು ಹೋಗುತ್ತಿದ್ದೀಯೊ ಅವಳ ಎಂಟನೆಯ ಗರ್ಭವು ನಿನಗೆ ಮೃತ್ಯುವಾಗುವುದು.
ಸೋಽವತೀರ್ಯ ತತೋ ರಾಜಾ ಖಡ್ಗಮುದ್ಧೃತ್ಯ ನಿರ್ಮಲಮ್ |
ಇಯೇಷ ತಸ್ಯಾ ಮೂರ್ಧಾನಂ ಛೇತ್ತುಂ ಪರಮದುರ್ಮತಿಃ ॥13॥
ಆಗ ರಾಜನಾದ ಪರಮದುರ್ಮತಿಯಾದ ಕಂಸನು ರಥದಿಂದ ಇಳಿದು ಒರೆಯಿಂದ ನಿರ್ಮಲವಾದ ಖಡ್ಗವನ್ನು ಹಿರಿದು ಅವಳ ಶಿರಸ್ಸನ್ನು ಕತ್ತರಿಸಲು ಬಯಸಿದನು.
ಸ ಸಾಂತ್ವಯನ್ ತದಾ ಕಂಸಂ ಹಸನ್ ಕ್ರೋಧವಶಾನುಗಮ್ |
ರಾಜನ್ನನುನಯಾಮಾಸ ವಸುದೇವೋ ಮಹಾಮತಿಃ ॥14॥
ರಾಜನೇ! ಮೇಧಾವಿಯಾದ ವಸುದೇವನು ನಗುತ್ತಾ ಕ್ರೋಧವಶನಾದ ಕಂಸನನ್ನು ಸಮಾದಾನಪಡಿಸುತ್ತಾ ಅವನಿಗೆ ಈ ಸಮಾಧಾನದ ಮಾತುಗಳನ್ನು ಆಡಿದನು.
ಅಹಿಂಸ್ಯಾಂ ಪ್ರಮದಾಮಾಹುಃ ಸರ್ವಧರ್ಮೇಷು ಪಾರ್ಥಿವ |
ಸ ಕಸ್ಮಾದಬಲಾಂ ನಾರೀಂ ಹಂತಾಸೀಮಾಮನಾಗಸೀಮ್ ॥15॥
ರಾಜನೇ! ಎಲ್ಲಾ ಧರ್ಮಶಾಸ್ತ್ರಗಳಲ್ಲಿಯೂ ಸ್ತ್ರೀಯನ್ನು ಕೊಲ್ಲಬಾರದು ಎಂದು ಹೇಳುತ್ತಾರೆ. ನೀನು ಏಕೆ ನಿರಪರಾಧಿಯಾದ ದುರ್ಬಲಳಾದ ಈ ನಾರಿಯನ್ನು ಕೊಲ್ಲಲು ಉದ್ಯುಕ್ತನಾಗಿರುವೆ?
ಯಚ್ಚ ತೇಽತ್ರ ಭಯಂ ರಾಜನ್ ಶಕ್ಯತೇ ಬಾಧಿತುಂ ಮಯಾ |
ಇಯಂ ಚ ಶಕ್ಯಾ ಪಾಲಯಿತುಮಯಶಸ್ಯಂ ಚ ರಕ್ಷಿತುಮ್ ॥16॥
ರಾಜನೇ! ಈ ವಿಷಯದಲ್ಲಿ ನಿನಗೆ ಏನು ಭಯವುಂಟಾಗಿದೆಯೋ ಅದನ್ನು ನಾನು ನಿವಾರಿಸಲು ಸಾಧ್ಯ. ಇವಳನ್ನು ರಕ್ಷಿಸಿ ನಿನಗೆ ಅಪಕೀರ್ತಿಯಾಗದಂತೆ ಮಾಡುವುದು ನನ್ನಿಂದಸಾಧ್ಯ.
ಅಸ್ಯಾಸ್ತ್ವಮಷ್ಟಮಂ ಗರ್ಭಂ ಜಾತಮಾತ್ರಂ ಮಹೀಪತೇ |
ವಿಧ್ವಂಸಯ ತದಾ ಪ್ರಾಪ್ತಮೇವಂ ಪರಿಹೃತಂ ಭವೇತ್ ॥17॥
ರಾಜನೇ! ಇವಳ ಎಂಟನೇ ಗರ್ಭವು ಜನಿಸಿದ ತಕ್ಷಣವೇ ನೀನು ನಾಶಮಾಡು. ಆಗ ನಿನಗೆ ಉಂಟಾಗಿರುವ ಭಯವು ಪರಿಹಾರವನ್ನು ಹೊಂದುತ್ತದೆ.
ಏವಂ ಸ ರಾಜಾ ಕಥಿತೋ ವಸುದೇವೇನ ಭಾರತ |
ತಸ್ಯ ತದ್ವಚನಂ ಚಕ್ರೇ ಶೂರಸೇನಪತಿಸ್ತದಾ ॥18॥
ಜನಮೇಜಯನೇ! ಹೀಗೆ ವಸುದೇವನಿಂದ ಹೇಳಲ್ಪಟ್ಟ, ಶೂರಸೇನಪತಿಯಾದ ಕಂಸನು ವಸುದೇವನ ಮಾತಿನಂತೆ ನಡೆದುಕೊಂಡನು.
ತತಸ್ತಸ್ಯಾಂ ಸಂಬಭೂವುಃ ಕುಮಾರಾಃ ಸೂರ್ಯವರ್ಚಸಃ |
ಜಾತಾನ್ಜಾತಾಂಸ್ತು ತಾನ್ ಸರ್ವಾನ್ ಜಘಾನ ಮಧುರೇಶ್ವರಃ|
ಅಥ ತಸ್ಯಾಂ ಸಮಭವದ್ ಬಲದೇವಸ್ತು ಸಪ್ತಮಃ ॥19॥
ಅನಂತರ ಅವಳಲ್ಲಿ ಸೂರ್ಯನ ಕಾಂತಿಯುಳ್ಳ ಕುಮಾರರು ಜನಿಸಿದರು. ಆ ಮಕ್ಕಳು ಹುಟ್ಟಿದಂತೆ ಮಧುರಾಪತಿಯಾದ ಕಂಸನು ಅವುಗಳನ್ನು ಸಂಹರಿಸಿದನು. ಅನಂತರ ಏಳನೆಯಬಾರಿಗೆ ದೇವಕಿಗೆ ಬಲರಾಮನ ಗರ್ಭವು ಉಂಟಾಯಿತು.
ಯಾಮ್ಯೇನ ಮಾಯಯಾ ತಂ ತು ಯಮೋ ರಾಜಾ ವಿಶಾಂಪತೇ |
ದೇವಕ್ಯಾ ಗರ್ಭಮತುಲಂ ರೋಹಿಣ್ಯಾ ಜಠರೇಽಕ್ಷಿಪತ್ ॥20॥
ರಾಜನೇ! ಸರ್ವನಿಯಾಮಕನಾದ ನಾರಾಯಣನು ಯಮದೂತರಿಗೂ ಪ್ರಭುವಾದ ದುರ್ಗಾದೇವಿಯ ಸಹಾಯದಿಂದ ದೇವಕಿಯ ಅಸದೃಶವಾದ ಗರ್ಭವನ್ನು ಅವಳ ಉದರದಿಂದ ಎಳೆದು ರೋಹಿಣಿಯ ಉದರದಲ್ಲಿ ಸ್ಥಾಪಿಸಿದನು.
ಆಕೃಷ್ಯ ಕರ್ಷಣಾತ್ ಸಮ್ಯಕ್ ಸಂಕರ್ಷಣ ಇತಿ ಸ್ಮೃತಃ |
ಬಲಶ್ರೇಷ್ಠತಯಾ ತಸ್ಯ ಬಲದೇವ ಇತಿ ಸ್ಮೃತಃ ॥21॥
ದೇವಕಿಯ ಉದರದಿಂದ ಬಲವಾಗಿ ಎಳೆಯಲ್ಪಟ್ಟುದದರಿಂದ ಅವನಿಗೆ ಸಂಕರ್ಷಣ ಎಂದು ಹೆಸರು. ಬಲಾಧಿಕನಾದುದರಿಂದ ಅವನಿಗೆ ಬಲರಾಮನೆಂದೂ ಹೆಸರು.
ಪುನಸ್ತಸ್ಯಾಂ ಸಮಭವದಷ್ಟಮೋ ಮಧುಸೂದನಃ |
ತಸ್ಯ ಗರ್ಭಸ್ಯ ರಕ್ಷಾಂ ತು ಚಕ್ರೇ ಸೋಽಭ್ಯಧಿಕಂ ನೃಪಃ ॥22॥
ಪುನಃ ದೇವಕಿಯ ಎಂಟನೆಯ ಗರ್ಭದಲ್ಲಿ ಮಧುಸೂದನನು ಸನ್ನಿಹಿತನಾದನು. ರಾಜನು ಆ ಗರ್ಭವನ್ನು (ತನಗೆ ಏನೂ ಅಪಾಯವಾಗಬಾರದು ಎಂಬ ಉದ್ದೇಶದಿಂದ) ಬಹಳ ಎಚ್ಚರಿಕೆಯಿಂದ ರಕ್ಷಿಸಿದನು.
ತತಃ ಕಾಲೇ ರಕ್ಷಣಾರ್ಥಂ ವಸುದೇವಸ್ಯ ಸಾತ್ವತಃ |
ಉಗ್ರಃ ಪ್ರಯುಕ್ತಃ ಕಂಸೇನ ಸಚಿವಃ ಕ್ರೂರಕರ್ಮಕೃತ್ ॥23॥
ಅನಂತರ ಪ್ರಸವಕಾಲವು ಸನ್ನಿಹಿಸುತ್ತಿದ್ದಂತೆ, ತನ್ನ ರಕ್ಷಣೆಗೋಸ್ಕರ ಕಂಸನು ವಸುದೇವ ಮತ್ತು ದೇವಕಿಯರನ್ನು ಗಮನಿಸುವುದಕ್ಕೆ ಕ್ರೂರಕರ್ಮಿಯಾದ ಉಗ್ರಸ್ವಭಾವದವನಾದ ಸಾತ್ವಕಕುಲಕ್ಕೆ ಸೇರಿದ ಒಬ್ಬ ಮಂತ್ರಿಯನ್ನು ನೇಮಿಸಿದನು.
ಜಾತಮಾತ್ರಂ ವಾಸುದೇವಮಪಕೃಷ್ಯ ಪಿತಾ ತತಃ |
ಉಪಜಹ್ರೇ ಪರಿಕ್ರೀತಾಂ ಸುತಾಂ ಗೋಪಸ್ಯ ಕಸ್ಯಚಿತ್ ॥24॥

ಎಂಟನೆಯ ಗರ್ಭವು ಜನಿಸಿದ ಕೂಡಲೇ ತಂದೆಯಾದ ವಸುದೇವನು ಅವನನ್ನು ಅಲ್ಲಿಂದ ಕರೆದುಕೊಂಡು ಹೋಗಿ ಯಮುನೆಯ ಆಚೆಯದಡದಲ್ಲಿ ಇದ್ದ ಒಬ್ಬ ಗೋಪನ ಮಗಳನ್ನು ಕೊಂಡು ಕೊಂಡವನಂತೆ ಬದಲಾಯಿಸಿ ತಂದು ದೇವಕಿಯ ಶಯನದಲ್ಲಿ ಇಟ್ಟನು.
ಮುಮುಕ್ಷಮಾಣಸ್ತಂ ಶಬ್ದಂ ದೇವದೂತಸ್ಯ ಪಾರ್ಥಿವಃ |
ಜಘಾನ ಕಂಸಸ್ತಾಂ ಕನ್ಯಾಂ ಪ್ರಹಸಂತೀ ಜಗಾಮ ಸಾ |
ಆರ್ಯೇತಿ ವಾಶತೀ ಶಬ್ದಂ ತಸ್ಮಾದಾರ್ಯೇತಿ ಕೀರ್ತಿತಾ ॥25॥
ದೇವದೂತನು ಇವಳ ಎಂಟನೆಯ ಗರ್ಭವು ನಿನ್ನನ್ನು ಕೊಲ್ಲುತ್ತದೆ ಎಂಬ ಮಾತಿನಿಂದ ಬಂದ ಭಯವನ್ನು ಪರಿಹಾರಮಾಡಿಕೊಳ್ಳುವುದಕ್ಕಾಗಿ ಕಂಸನು ಆ ಕನ್ಯೆಯನ್ನು ಕೊಲ್ಲುವ ಪ್ರಯತ್ನಮಾಡಿದನು. ಆ ಕನ್ಯೆಯು ನಗುತ್ತಾ ಆಕಾಶಮಾರ್ಗದಲ್ಲಿ ಹೊರಟುಹೋದಳು. ತನ್ನ ಕೈಯಿಂದ ಕಳಚಿಹೋದ ಆ ಕನ್ಯೆಯನ್ನು ನೋಡಿ ಕಂಸನು ಇವಳು ಶಿಶುವಲ್ಲ ಆರ್ಯೆ (ದೊಡ್ಡವಳು) ಎಂದು ಹೇಳಿದನು. ಆದ್ದರಿಂದ ಅವಳಿಗೆ ಆರ್ಯೆ ಎಂದೇ ಹೆಸರಾಯಿತು.
ಏವಂ ತಂ ವಂಚಯಿತ್ವಾ ಚ ರಾಜಾನಂ ಸ ಮಹಾಮತಿಃ |
ವಾಸುದೇವಂ ಮಹಾತ್ಮಾನಂ ವರ್ಧಯಾಮಾಸ ಗೋಕುಲೇ ॥26॥
ಹೀಗೆ ಮೇಧಾವಿಯಾದ ವಸುದೇವನು ಆ ಕಂಸನನ್ನು ವಂಚಿಸಿ ತನ್ನ ಮಗನಾದ ಮಹಾನುಭಾವನಾದ ವಾಸುದೇವನನ್ನು ಗೋಕುಲದಲ್ಲಿ ಬೆಳೆಸಿದನು.
ವಾಸುದೇವೋಽಪಿ ಗೋಷ್ಠೇಷು ವವೃಧೇಽಬ್ಜಮಿವಾಂಭಸಿ |
ಅಜ್ಞಾಯಮಾನಃ ಕಂಸೇನ ಗೂಢೋಽಗ್ನಿರಿವ ದಾರುಷು ॥27॥
ವಾಸುದೇವನಾದರೂ ನೀರಿನಲ್ಲಿ ಕಮಲವು ಬೆಳೆದಂತೆ ಕಂಸನಿಗೆ ಗೊತ್ತಾಗದಂತೆ ಕಟ್ಟಿಗೆಯಲ್ಲಿ ಇರುವ ಅಗ್ನಿಯಂತೆ ಗೂಢನಾಗಿ ಗೋಶಾಲೆಗಳಲ್ಲಿ ಬೆಳೆದನು.
ವಿಪ್ರಚಕ್ರೇ ತಥಾ ಸರ್ವಾನ್ ಪ್ರಬಲಾನ್ ಮಧುಸೂದನಃ |
ವರ್ಧಮಾನೋ ಮಹಾಬಾಹುಃ ತೇಜೋಬಲಸಮನ್ವಿತಃ ॥28॥
ಮಹಾಬಾಹುವೂ ತೇಜೋಬಲಸಮನ್ವಿತನೂ ಆದ ಮಧುಸೂದನನು ಬೆಳೆಯುತ್ತಾ ಎಲ್ಲಾ ಪ್ರಬಲ ವಿರೋಧಿಗಳನ್ನೂ ವಿನಾಶಗೊಳಿಸಿದನು.
ತತಸ್ತೇ ಕ್ಲಿಶ್ಯಮಾನಾಸ್ತು ಪುಂಡರೀಕಾಕ್ಷಮಚ್ಯುತಮ್ |
ಭಯೇನ ಕಾಮಾದಪರೇ ಗಣಶಃ ಪರ್ಯವಾರಯನ್ ॥29॥
ಆಗ ಗೋಕುಲವಾಸಿಗಳೆಲ್ಲರೂ ಕಂಸನ ದೂತರ ಕ್ಲೇಶಕ್ಕೆ ಒಳಗಾಗಿ ಭಯದಿಂದ ಕೆಲವರು ಕಾಮಕ್ಕೆ ಒಳಗಾಗಿ ಇನ್ನೂ ಕೆಲವರು ಗುಂಪುಗುಂಪುಗಳಾಗಿ ಪುಂಡರೀಕಾಕ್ಷನಾದ ಅಚ್ಯುತನನ್ನು ಆಶ್ರಯಿಸಿದರು.
ಸ ತು ಲಬ್ಧ್ವಾ ಬಲಂ ರಾಜನ್ನುಗ್ರಸೇನಸ್ಯ ಸಮ್ಮತಃ |
ವಸುದೇವಾತ್ಮಜಃ ಸರ್ವೈರ್ಭ್ರಾತೃಭಿಃ ಸಹಿತಂ ಪುನಃ॥30॥
ನಿರ್ಜಿತ್ಯ ಯುಧಿ ಭೋಜೇಂದ್ರಂ ಹತ್ವಾ ಕಂಸಂ ಮಹಾಬಲಃ |
ಅಭಿಷಿಂಚತ್ತತೋ ರಾಜ್ಯ ಉಗ್ರಸೇನಂ ವಿಶಾಂಪತೇ ॥31॥
ಹೀಗೆ ಬಲಿಷ್ಠನಾಗಿ ಬೆಳೆದ ಉಗ್ರಸೇನನಿಗೆ ಸಂಮ್ಮತನಾದ ವಸುದೇವನ ಸುತನಾದ ಕೃಷ್ಣನು ತನ್ನ ಅಣ್ಣನ ಜೊತೆಯಲ್ಲಿ ಹೋಗಿ ಭೋಜಪತಿಯಾದ ಕಂಸನನ್ನು ಯುದ್ಧದಲ್ಲಿ ಕೊಂದನು. ರಾಜನೇ! ಮಹಾಬಲನಾದ ಕೃಷ್ಣನು ಅನಂತರ ಉಗ್ರಸೇನನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು.
ತಚ್ಛ್ರುತ್ವಾ ಸ ಜರಾಸಂಧೋ ಮಾಧವೇನ ಹತಂ ಯುಧಿ |
ಶೂರಸೇನಾಧಿಪಂ ಚಕ್ರೇ ಕಂಸಪುತ್ರಂ ತದಾ ನೃಪ ॥32॥
ಜರಾಸಂಧನು ಮಾಧವನಿಂದ ತನ್ನ ಅಳಿಯನಾದ ಕಂಸನು ಯುದ್ಧದಲ್ಲಿ ಹತನಾದನೆಂಬ ವಾರ್ತೆಯನ್ನು ಕೇಳಿ ಕಂಸನ ಪುತ್ರನನ್ನು ಶೂರಸೇನರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದನು.
ಸ ಸೈನ್ಯಂ ಮಹದುತ್ಥಾಪ್ಯ ವಸುದೇವಂ ಪ್ರಗೃಹ್ಯ ಚ |
ಅಭ್ಯಷಿಂಚತ್ ಸುತಂ ತತ್ರ ಸುತಾಯಾ ಜನಮೇಜಯ ॥33॥
ಜನಮೇಜಯನೇ! ಜರಾಸಂಧನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದು ವಸುದೇವನನ್ನು ನಿಗ್ರಹಿಸಿ, ತನ್ನ ಮಗಳ ಮಗನನ್ನು ರಾಜ್ಯದಲ್ಲಿ ಕೂಡಿಸಿ ಅಭಿಷೇಕಮಾಡಿದನು.
ಉಗ್ರಸೇನಂ ಚ ವೃಷ್ಣೀಂಶ್ಚ ಮಹಾಬಲಸಮನ್ವಿತಃ |
ಸ ತತ್ರ ವಿಪ್ರಕುರುತೇ ಜರಾಸಂಧಃ ಪ್ರತಾಪವಾನ್ ॥34॥
ಅನಂತರ ಮಹಾಬಲಸಮನ್ವಿತನೂ ಪ್ರತಾಪಶಾಲಿಯೂ ಆದ ಜರಾಸಂಧನು ಉಗ್ರಸೇನನಿಗೂ ಉಳಿದ ವೃಷ್ಣಿಗಳಿಗೂ ಅಪಕಾರವನ್ನು ಮಾಡಿಕೊಂಡಿದ್ದಾನೆ.
ಏತದ್ವೈರಂ ಕೌರವೇಯ ಜರಾಸಂಧಸ್ಯ ಮಾಧವೇ |
ಆಶಾಸಿತಾರ್ಥೇ ರಾಜೇಂದ್ರ ಸಂರುರೋಧ ವಿನಿರ್ಜಿತಾನ್ ॥35॥
ಜನಮೇಜಯನೇ! ಇದು ಜರಾಸಂಧನಿಗೆ ಕೃಷ್ಣನಲ್ಲಿ ವೈರ ಉಂಟಾಗಲು ಕಾರಣ; ರಾಜೇಂದ್ರನೇ! ಜರಾಸಂಧನಾದರೋ ತನ್ನ ಅಭೀಷ್ಟವಾದ ಅರ್ಥವನ್ನು ಗಮನಿಸಿ ಯುದ್ಧದಲ್ಲಿ ಸೋತ ರಾಜರುಗಳನ್ನೆಲ್ಲಾ ಸೆರೆಯಲ್ಲಿಟ್ಟನು.
ಪಾರ್ಥಿವೈಸ್ತೈರ್ನೃಪತಿಭಿರ್ಯಕ್ಷ್ಯಮಾಣಃ ಸಮೃದ್ಧಿಮಾನ್ |

ದೇವಶ್ರೇಷ್ಠಂ ಮಹಾದೇವಂ ಕೃತ್ತಿವಾಸಂ ತ್ರಿಯಂಬಕಮ್ ॥36॥
ಸಮೃದ್ಧಿಯುಳ್ಳ ಅವನು ಸೆರೆಸಿಕ್ಕಿದ ಆ ರಾಜರುಗಳನ್ನು ಪಶುಗಳನ್ನಾಗಿ ಮಾಡಿ ದೇವೋತ್ತಮನೂ ಕೃತ್ತಿವಾಸನೂ ತ್ರಿನೇತ್ರನೂ ಆದ ಮಹಾದೇವನ್ನು ಕುರಿತು ಯಾಗವನ್ನು ಮಾಡಲು ಆಶಿಸಿದ್ದನು.
ಏತತ್ ಸರ್ವಂ ಯಥಾವೃತ್ತಂ ಕಥಿತಂ ಭರತರ್ಷಭ |
ಯಥಾ ತು ಸ ಹತೋ ರಾಜಾ ಭೀಮಸೇನೇನ ತಚ್ಛೃಣು ॥37॥
ಭರತರ್ಷಭನೇ! ಇದೆಲ್ಲವನ್ನೂ ಯಥಾವತ್ತಾಗಿ ತಿಳಿಸಿದ್ದೇನೆ. ಇನ್ನು ಭೀಮಸೇನನಿಂದ ಜರಾಸಂಧನು ಹೇಗೆ ಹತನಾದನು ಎಂದು ಹೇಳುತ್ತೇನೆ ಕೇಳು.
ತತಸ್ತಂ ನಿಶ್ಚಿತಾತ್ಮಾನಂ ಯುದ್ಧಾಯ ಯದುನಂದನಃ |
ಉವಾಚ ವಾಗ್ಮೀ ರಾಜಾನಂ ಜರಾಸಂಧಮಧೋಕ್ಷಜಃ ॥38॥
ಅನಂತರ ಯುದ್ಧವನ್ನೇ ಮಾಡುವುದಾಗಿ ನಿಶ್ಚಯಿಸಿದ ಜರಾಸಂಧರಾಜನನ್ನು  ಕುರಿತು, ವಾಗ್ಮಿಯಾದ ಯದುನಂದನನಾದ ಅಧೋಕ್ಷಜನು ಹೀಗೆ ಮಾತನಾಡಿದನು.
ತ್ರಯಾಣಾಂ ಕೇನ ತೇ ರಾಜನ್ ಯೋದ್ಧುಂ ಹಿ ತ್ವರತೇ ಮನಃ |
ಅಸ್ಮದನ್ಯತಮೋಽದ್ಯೇಹ ಸಜ್ಜೀಭವತು ಕೋ ಯುಧಿ ॥39॥
ರಾಜನೇ! ನಮ್ಮ ಮೂವರಲ್ಲಿ ಯಾರ ಜೊತೆಯಲ್ಲಿ ಯುದ್ಧಮಾಡಲು ನಿನ್ನ ಮನಸ್ಸು ಹಾತೊರೆಯುತ್ತಿದೆ? ನಮ್ಮ ಮೂವರಲ್ಲಿ ನಿನ್ನ ಜೊತೆಯಲ್ಲಿ ಯುದ್ಧ ಮಾಡಲು ಈ ದಿನ ಯಾರು ಸನ್ನಿಗ್ಧರಾಗಬೇಕು?
ವೈಶಂಪಾಯನಃ
ಏವಮುಕ್ತಸ್ತು ಕೃಷ್ಣೇನ ಯುದ್ಧಂ ವವ್ರೇ ಮಹಾದ್ಯುತಿಃ |
ಜರಾಸಂಧಸ್ತತೋ ರಾಜಾ ಭೀಮಸೇನೇನ ಮಾಗಧಃ ॥40॥
ಹೀಗೆ ಕೃಷ್ಣನಿಂದ ಹೇಳಲ್ಪಟ್ಟ ಮಹಾಪರಾಕ್ರಮಿಯಾದ ಮಗಧರಾಜನಾದ ಜರಾಸಂಧನು ಭೀಮಸೇನನ ಜೊತೆಯಲ್ಲಿ  ಯುದ್ಧವನ್ನು ವರಿಸಿದನು .
ನ ತ್ವಯಾ ಭೀರುಣಾ ಯೋತ್ಸ್ಯೇ ಯುಧಿ ವಿಕ್ಲವಚೇತಸಾ |
ಮಧುರಾಂ ಸ್ವಪುರೀಂ ತ್ಯಕ್ತ್ವಾ ಸಮುದ್ರಂ ಶರಣಂ ಗತಃ ॥51॥
ಕೃಷ್ಣ, ನೀನು ಭಯದಿಂದ ಕೂಡಿದ ಮನಸ್ಸುಳ್ಳವನಾಗಿ ಜನ್ಮಭೂಮಿಯಾದ ಮಧುರೆಯನ್ನು ಬಿಟ್ಟು ಸಮುದ್ರವನ್ನು ಆಶ್ರಯಿಸಿದ್ದೀಯೆ ಆದ್ದರಿಂದ  ಭೀರುವಾದ ನಿನ್ನ ಜೊತೆಯಲ್ಲಿ  ಯುದ್ಧವನ್ನುಮಾಡುವುದಿಲ್ಲ.
ಅಯಂ ತು ವಯಸಾಽತುಲ್ಯೋ ನಾತಿಸತ್ತ್ವೋ ನ ಮೇ ಸಮಃ |
ಅರ್ಜುನೋ ನೋ ಭವೇದ್ ಯೋದ್ಧಾ ಭೀಮಸ್ತುಲ್ಯಬಲೋ ಮಮ ॥
ಅರ್ಜುನನಾದರೋ ವಯಸ್ಸಿನಲ್ಲಿ ಚಿಕ್ಕವನು ಮತ್ತು ದುರ್ಬಲನಾದವನು. ಆದುದರಿಂದ  ಅವನು ನನಗೆ ಸಮಾನನಾದ ಎದುರಾಳಿಯಾಗುವುದಿಲ್ಲ. ಭೀಮಸೇನನು ಮಾತ್ರ ನನಗೆ ಸಮಾನವಾದ ಬಲವುಳ್ಳವನು.
ಇತ್ಯುಕ್ತ್ವಾ ಭೀಮಸೇನಾಯ ಪ್ರದಾಯ ಮಹತೀಂ ಗದಾಮ್ |
ದ್ವಿತೀಯಾಂ ಸ್ವಯಮಾದಾಯ ನಿರ್ಜಗಾಮ ಪುರಾದ್ ಬಹಿಃ ॥43॥
ಹೀಗೆ ಮಾತನಾಡಿ ಜರಾಸಂಧನು ಭೀಮಸೇನನಿಗೆ ಒಂದು ದೊಡ್ಡ ಗದೆಯನ್ನು ಕೊಟ್ಟು  ತಾನೂ ಇನ್ನೊಂದು ಗದೆಯನ್ನು ತೆದುಕೊಂಡು ಪಟ್ಟಣದಿಂದ ಹೊರಗೆ ಬಂದನು.
ಅರ್ಜುನಂ ವಾಸುದೇವಂ ಚ ವರ್ಜಯಾಮಾಸ ಮಾಗಧಃ |
ಮತ್ವಾ ದೇವಂ ಗೋಪ ಇತಿ ಬಾಲೋಽರ್ಜುನ ಇತಿ ಸ್ಮ ಹ ॥44॥
ಕೃಷ್ಣನನ್ನು ಗೋಪಾಲಕ ಎಂಬ ಕಾರಣದಿಂದಲೂ ಅರ್ಜುನನನ್ನು ಬಾಲಕ ಎಂಬ ಕಾರಣದಿಂದಲೂ ಜರಾಸಂಧನು ವರ್ಜಿಸಿದನೆಂಬುದು ಪ್ರಸಿದ್ಧವಾದುದು.
ಧಾರಯಂತಂ ಗದಾಂ ದೃಷ್ಟ್ವಾ ಬಲಂ ಶ್ರುತ್ವಾ ಚ ನಿರ್ವೃತಃ |
ಉಪತಸ್ಥೇ ಜರಾಸಂಧಂ ಯುಯುತ್ಸುಂ ವೈ ಪುರೋಹಿತಃ ॥45॥
ಗದೆಯನ್ನು ಧರಿಸಿದ ಜರಾಸಂಧನನ್ನು ಕಂಡು ಅವನ ಯುದ್ಧದ ಅಭಿಲಾಷೆಯನ್ನು ತಿಳಿದ ಅವನ ಪುರೋಹಿತನು ಅವನ ಬಲವನ್ನು ಕೇಳಿ ತೃಪ್ತಿಗೊಂಡು ಅವನ ಸಮೀಪಕ್ಕೆ ಬಂದನು.
ಕೃತಸ್ವಸ್ತ್ಯಯನೋ ರಾಜನ್ ಬ್ರಾಹ್ಮಣೇನ ಯಶಸ್ವಿನಾ |
ಸನ್ನಹ್ಯತ ಜರಾಸಂಧಃ ಕ್ಷತ್ರಧರ್ಮಮನುವ್ರತಃ ॥46॥
ರಾಜನೇ! ಯಶಸ್ವಿಯಾದ ಬ್ರಾಹ್ಮಣನಾದ ಪುರೋಹಿತನಿಂದ ಮಂಗಳಾಶೀರ್ವಾದವನ್ನು ಪಡೆದ ಜರಾಸಂಧನು ಕ್ಷತ್ರಿಯಧರ್ಮಕ್ಕೆ ಅನುಗುಣವಾಗಿ ಯುದ್ಧದ ಸಲಕರಣೆಗಳನ್ನು ಧರಿಸಿದನು.
ಅವಮುಚ್ಯ ಕಿರೀಟಂ ಸ ಕೇಶಾನ್ ಸಮನುಮೃಜ್ಯ ಚ |
ಉಪಾತಿಷ್ಠಜ್ಜರಾಸಂಧೋ ವೇಲಾತಿಗ ಇವಾರ್ಣವಃ ॥47॥
ಉವಾಚ ಚ ಮಹಾಬಾಹುರ್ಭೀಮಂ ಭೀಮಪರಾಕ್ರಮಮ್ |
ಭೀಮ ಯೋತ್ಸ್ಯೇ ತ್ವಯಾ ಸಾರ್ಧಂ ಶ್ರೇಯಸಾ ನಿರ್ಜಿತಂ ಪರಮ್ ॥
ಜರಾಸಂಧನು ಕಿರೀಟವನ್ನು ತೆಗೆದು ತಲೆಯಕೂದಲುಗಳನ್ನು ನೇವರಿಸಿ ದಡವನ್ನುಮೀರಿದ ಸಮುದ್ರದಂತೆ ಭೀಮಸೇನನ ಬಳಿಗೆ ಬಂದು ಮಹಾಬಾಹುವಾದ ಅವನು ಭೀಮಪರಾಕ್ರವುಳ್ಳ ಭೀಮನನ್ನು ಕುರಿತು ಹೀಗೆ ಮಾತನಾಡಿದನು. ಭೀಮಸೇನನೇ!  ನಿನ್ನ

ಜೊತೆಯಲ್ಲಿ ಯುದ್ಧಮಾಡುತ್ತೇನೆ. ಶ್ರೇಷ್ಠನಾದವನಿಂದ ಪರಾಜಯವನ್ನು ಹೊಂದುವುದು ಶ್ಲಾಘ್ಯವಾದುದು.
ಏವಮುಕತ್ವ ಜರಾಸಂಧೋ ಭೀಮಸೇನಮರಿಂದಮಃ |
ಪ್ರತ್ಯುದ್ಯಯೌ ಮಹಾತೇಜಾಃ ಶಕ್ರಂ ಬಲಿರಿವಾಸುರಃ ॥49॥
ಅರಿಂದಮನಾದ ಮಹಾತೇಜಸ್ವಿಯಾದ ಜರಾಸಂಧನು ಭೀಮಸೇನನನ್ನು ಕುರಿತು ಹೀಗೆ ಹೇಳಿ ಬಲಿಯು ಇಂದ್ರನ ಮೇಲೆ ಎರಗುವಂತೆ ಸನ್ನದ್ಧನಾದನು.
ತತಃ ಸಮ್ಮಂತ್ರ್ಯ ಕೃಷ್ಣೇನ ಕೃತಸ್ವಸ್ತ್ಯಯನೋ ಬಲೀ |
ಭೀಮಸೇನೋ ಜರಾಸಂಧಮಾಸಸಾದ ಯುಯುತ್ಸಯಾ ॥50॥
ಆಗ ಬಲಿಷ್ಠನಾದ ಭೀಮಸೇನನು ಕೃಷ್ಣನ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಕೃಷ್ಣನ ಅನುಗ್ರಹವನ್ನು ಪಡೆದು ಯುದ್ಧವನ್ನು ಮಾಡುವ ಇಚ್ಛೆಯಿಂದ ಜರಾಸಂಧನನ್ನು ಸಮೀಪಿಸಿದನು.
ತತಸ್ತೌ ನರಶಾರ್ದೂಲೌ ಬಾಹುಶಸೌತ್ರ ಸಮೀಯತುಃ |
ವೀರೌ ಪರಮಸಂಹೃಷ್ಟಾವನ್ಯೋನ್ಯಜಯಕಾಂಕ್ಷಿಣೌ ॥51॥
ಅನಂತರ ವೀರರೂ ಪರಮಸಂತುಷ್ಟರೂ ಪರಸ್ಪರ ಜಯವನ್ನು ಅಪೇಕ್ಷಿಸುವವರೂ ಬಾಹುಶಸ್ತ್ರರೂ ಆದ ಆ ಇಬ್ಬರು ನರಶ್ರೇಷ್ಠರು ಪರಸ್ಪರವಾಗಿ ಸೆಣಸಾಡಿದರು.
ಕರಗ್ರಹಣಪೂರ್ವಂ ತು ಕೃತ್ವಾ ಪಾದಾಭಿವಂದನಮ್ |
ಕಕ್ಷ್ಯೈಃ ಕಕ್ಷಾನ್ ವಿಧೂನ್ವಾನಾವಾಸ್ಫೋಟಂ ತತ್ರ ಚಕ್ರತುಃ ॥52॥
ಮೊದಲು ಕರಗ್ರಹಣವನ್ನು ಮಾಡಿ ಪಾದಾಭಿವಂದನೆಯನ್ನುಮಾಡಿ ತಮ್ಮ ಪಕ್ಕೆಗಳನ್ನು ಕೊಡವಿ ಅಲ್ಲಾಡಿಸಿ ಕೈಗಳಿಂದ ಚಪ್ಪಾಳೆಯನ್ನು ಹೊಡೆದರು.
ಸ್ಕಂಧೌ ದೋರ್ಭ್ಯಾಂ ಸಮಾಹತ್ಯ ಬಲಿನೌ ಚ ಮುಹುರ್ಮುಹುಃ |
ಅಂಗೈರಂಗಂ ಸಮಾಶ್ಲಿಷ್ಯ ಪುನರಾಸ್ಫೋಟನಂ ವಿಭೋ ॥53॥
ಬಲಿಷ್ಠರಾದ ಅವರಿಬ್ಬರು ತಮ್ಮ ತಮ್ಮ ಭುಜಗಳನ್ನು ತಮ್ಮ ತೋಳುಗಳಿಂದ ಮತ್ತೆ ಮತ್ತೆ ಹೊಡೆದು ತಮ್ಮ ಅಂಗಗಳಿಂದಲೇ ತಮ್ಮ ಅಂಗಗಳನ್ನು ಆಲಿಂಗಿಸಿ ಪುನಃ ತೊಡೆತಟ್ಟುವುದು ಮುಂತಾದ ಶಬ್ದಗಳನ್ನುಮಾಡಿದರು.
ಚಿತ್ರಹಸ್ತಾದಿಕಂ ಕೃತ್ವಾ ಕಕ್ಷಾಬಂಧಂ ಚ ಚಕ್ರತುಃ |
ಗಳಗಂಡಾಭಿಘಾತೇನ ಸಸ್ಫುಲಿಂಗೇನ ಚಾಶನಿಮ್ ॥54॥
ಬಾಹುಪಾಶಾದಿಕಂ ಕೃತ್ವಾ ಪಾದಾರೋಹಶಿರಾವುಭೌ |
ಉರೋಹಸ್ತಂ ತತಶ್ಚೈವ ಕರ್ಣಕುಂಭೌ ಪ್ರಯುಜ್ಯ ತೌ ॥55॥
ಕರಸಂಪೀಡನಂ ಕೃತ್ವಾ ಗರ್ಜಂತೌ ವಾರಣಾವಿವ |
ನರ್ದಂತೌ ಮೇಘಸಂಕಾಶೌ ಬಾಹುಪ್ರಹರಣಾವುಭೌ ॥56॥
ಅವರಿಬ್ಬರೂ ಹಸ್ತಗಳಲ್ಲಿ ಬೇರೆ ಬೇರೆ ಮುದ್ರೆಗಳನ್ನು ಮಾಡಿ ಕಕ್ಷಾಬಂಧಗಳನ್ನು ಮಾಡಿ ಗಳಪ್ರದೇಶವನ್ನು ಹೊಡೆಯುವದರಿಂದ ಬೆಂಕಿಯ ಕಿಡಿಗಳುಳ್ಳ ಸಿಡಿಲಿನ ಶಬ್ದವನ್ನು ಮಾಡಿ ಬಾಹುಪಾಶ ಪಾದರೋಹ ಪುರೋಹಸ್ತ ಕರ್ಣಕುಂಭ ಮೊದಲಾದ ಸಿದ್ಧತೆಗಳನ್ನು ಮಾಡಿದರು. ಮುಷ್ಟಿಯನ್ನು ಬಿಗಿಯಾಗಿ ಹಿಡಿದು ಆನೆಗಳಂತೆ ಗರ್ಜಿಸುತ್ತಾ ಬಾಹುಗಳನ್ನು ಚಾಚಿ ಅವರಿಬ್ಬರೂ ಮೇಘದಂತೆ ಗರ್ಜಿಸಿದರು.
ತಳೇನಾಹನ್ಯಮಾನೌ ತು ಅನ್ಯೋನ್ಯಂ ಸ್ತಬ್ಧವೀಕ್ಷಣೌ |
ಸಿಂಹಾವಿವ ಸುಸಂಕ್ರುದ್ಧಾವಾಕೃಷ್ಯಾಕೃಷ್ಯ ಯುಧ್ಯತಾಮ್ ॥57॥
ಅನಂತರ ಅವರಿಬ್ಬರೂ ರೆಪ್ಪೆಯನ್ನು ಮಿಟುಕಿಸದೆ ಒಬ್ಬರನ್ನೊಬ್ಬರು ನೋಡುತ್ತಾ ತಮ್ಮ ಹಸ್ತತಳದಿಂದ ಒಬ್ಬರನ್ನೊಬ್ಬರು ಹೊಡೆಯುತ್ತಾ ಕೋಪಗೊಂಡ ಸಿಂಹಗಳಂತೆ ಒಬ್ಬರನೊಬ್ಬರು ಎಳೆದಾಡುತ್ತಾ ಯುದ್ಧಮಾಡಿದರು.
ಅಂಗೇನಾಂಗಂ ಸಮಾಪೀಡ್ಯ ಬಾಹುಭ್ಯಾಂ ಭುಜಯೋರಪಿ |
ಆವೃತ್ಯ ಬಾಹುಭಿಶ್ಚಾಪಿ ಉದರಂ ಚ ಪ್ರಚಕ್ರತುಃ ॥58॥
ಉಭೌ ಕಟ್ಯಾಂ ಸುಪಾರ್ಶ್ವೇ ತು ಭಂಜಂತೌ ತು ಸುಶಿಕ್ಷಿತೌ |
ಅಧೋಹಸ್ತಂ ಸ್ವಕಂಠೇ ತೂರಸ್ಯೋಪರಿ ಚಾಕ್ಷಿಪನ್ ॥59॥
ಸರ್ವಾತಿಕ್ರಾಂತಮರ್ಯಾದಂ ಪೃಷ್ಠಭಂಗಂ ಚ ಚಕ್ರತುಃ |
ಸಂಪೂರ್ಣಮುಖ್ಯಾಂ ಬಾಹುಭ್ಯಾಂ ಕರ್ಣಕುಂಭಂ ಚ ಚಕ್ರತುಃ ॥60॥
ಅಂಗದಿಂದ ಅಂಗವನ್ನು ಪೀಡಿಸುತ್ತಾ ಬಾಹುಗಳಿಂದ ಭುಜಗಳಿಗೆ ಪಟ್ಟು ಹಾಕುತ್ತಾ ಪುನಃ ಬಾಹುಗಳಿಂದ ಉದರಬಂಧವನ್ನು ಮಾಡುತ್ತಾ ಈ ಯುದ್ಧವನ್ನು ಮಾಡಿದರು. ಸುಶಿಕ್ಷಿತರಾದ ಅವರಿಬ್ಬರೂ ಪರಸ್ಪರವಾಗಿ ಕಟಿಪ್ರದೇಶವನ್ನೂ ಪಾರ್ಶ್ವಪ್ರದೇಶಗಳನ್ನೂ ಮುರಿಯುವ ಪ್ರಯತ್ನಮಾಡುತ್ತಾ ಕಂಠದ ಕೆಳಗೂ ಮತ್ತು ವಕ್ಷಸ್ಥಳದ ಮೇಲೆಯೂ ಹಸ್ತವನ್ನಿಟ್ಟು ಯುದ್ಧವನ್ನು ಮಾಡಿದರು. ಎಲ್ಲಾ ಕುಸ್ತಿಗಳ ನಿಯಮಕ್ಕೆ ವಿರುದ್ಧವಾಗಿ ಪೃಷ್ಠಭಂಗವನ್ನು ಮಾಡಿ ತಮ್ಮ ಬಾಹುಗಳಿಂದ ಸಂಪೂರ್ಣವಾದ ಕರ್ಣಕುಂಭಗಳನ್ನು ಮಾಡಿದರು.
ತೃಣಪೀಡಾಂ ಯಥಾಕಾಮಂ ಪೂರ್ಣಯೋಗಂ ಸಮುಷ್ಟಿಕಮ್ |
ಏವಮಾದೀನಿ ಯುದ್ಧಾನಿ ಪ್ರಕುರ್ವಂತೌ ಪರಸ್ಪರಮ್ ॥61॥
ತಮ್ಮ ಮನಸ್ಸಿಗೆ ಬಂದಂತೆ ತೃಣಪೀಡಾ ಮುಷ್ಟಿಸಹಿತವಾದ ಪೂರ್ಣಯೋಗ ಮೊದಲಾದ ಕುಸ್ತಿಯ ಪಟ್ಟುಗಳನ್ನು ಹಾಕುತ್ತಾ ಪರಸ್ಪರವಾಗಿ ಸೆಣಸಾಡಿದರು.

ತಯೋರ್ಯುದ್ಧಂ ತತೋ ದ್ರಷ್ಟುಂ ಸಮೇತಾಃ ಪುರವಾಸಿನಃ |
ಬ್ರಾಹ್ಮಣಾ ವಣಿಜಶ್ಚೈವ ಕ್ಷತ್ರಿಯಾಶ್ಚ ಸಹಸ್ರಶಃ ||62||
ಅವರಿಬ್ಬರ ಯುದ್ಧವನ್ನು ನೋಡಲು ಪುರವಾಸಿಗಳು ಬ್ರಾಹ್ಮಣರು ಕ್ಷತ್ರಿಯರು ಮತ್ತು ವೈಶ್ಯರು ಅಲ್ಲಿಗೆ ಸಹಸ್ರಸಂಖ್ಯೆಯಲ್ಲಿ ಬಂದರು.

ಶೂದ್ರಾಶ್ಚ ನರಶಾರ್ದೂಲ ಸ್ತ್ರೀಯೋ ವೃದ್ಧಶ್ಚ ಸರ್ವಶ|
ನಿರಂತರ ಮಭೂತ್ ತತ್ರ ಜನೌಘೈರಭಿಸಂವೃತಂ ||64||
ಎಲೈನರಶಾರ್ದೂಲನೇ! ಶೂದ್ರರೂ ಸ್ತ್ರೀಯರು ಮತ್ತು ವೃದ್ಧರು ಎಲ್ಲ ಕಡೆಗಳಲ್ಲಿಯೂ ನೆರೆದರು. ಜನಸಮ್ಮರ್ದದಿಂದ ಕೂಡಿದ ಆ ಪ್ರದೇಶವು ಬಹಳ ನಿಬಿಡವಾಯಿತು.
ತಯೋರಥ ಭುಜಾಘಾತಾನ್ನಿಗ್ರಹಾವಗ್ರಹಾತ್ ತಥಾ |
ಆಸೀತ್ ಸುಭೀಮಸನ್ನಾದೋ ವಜ್ರಪರ್ವತಯೋರಿವ ||65||
ಅನಂತರ ಅವರಿಬ್ಬರ ಭುಜಾಘಾತಗಳಿಂದ ಮತ್ತು ಹಿಡಿಯುವುದು ಮತ್ತು ಬಿಡಿಸಿಕೊಳ್ಳುವುದರಿಂದ ಉಂಟಾದ ಸನ್ನಾದವು ವಜ್ರಾಯುಧ ಮತ್ತು ಪರ್ವತಗಳಿಗೆ ಸಂಘರ್ಷ ಉಂಟಾದಾಗ ಉಂಟಾಗುವ ಸಂನಾದದಂತೆ ಭಯಂಕರವಾಗಿ ಇದ್ದಿತು. ಬಾಹು ಯುದ್ಧದಲ್ಲಿ ಹೆದರಿ ಗದಾಯುದ್ಧ ಮಾಡಿದ ಎಂದು ತಾತ್ಪರ್ಯ ನಿರ್ಣಯದಲ್ಲಿದೆ.
ಉಭೌ ಪರಮಸಂಹೃಷ್ಟೌ ಬಲೇನ ಬಲಿನಾಂ ವರೌ |
ಅನ್ಯೋನ್ಯಂ ವೈ ಕರತಳೈರ್ಯೋಧಯಾಮಾಸತುರ್ಭೃಶಮ್ ||66||
ಬಲಿಷ್ಠರಲ್ಲಿ ಅಗ್ರಗಣ್ಯರಾದ ಅವರಿಬ್ಬರೂ ಪರಮ ಸಂತೋಷದಿಂದ ಕೂಡಿದವರಾಗಿ ತಮ್ಮ ಹಸ್ತ ತಳಗಳಿಂದ ಒಬ್ಬರನೊಬ್ಬರು ಚೆನ್ನಾಗಿ ಹೊಡೆದರು.
ಅನ್ಯೋನ್ಯಸ್ಯಾಂತರಂ ಪ್ರೇಪ್ಸೂ ಪರಸ್ಪರಜಯೈಷಿಣೌ |
ಶಿರೋಭಿರಿವ ತೌ ಮೇಷೌ ವೃಕ್ಷೈರಿವ ನಿಶಾಚರೌ |
ಪದ್ಭಿರಿವ ಶುಭಾವಶ್ವೌ ತುಂಡಾಭ್ಯಾಂ ತಿತ್ತಿರಾವಿವ ||67||
ತಲೆಯಿಂದ ಹೊಡೆದಾಡುವ ಟಗರುಗಳಂತೆ ಮರಗಳಿಂದ ಹೊಡೆದಾಡುವ ರಾಕ್ಷಸರಂತೆ ಪಾದಗಳಿಂದ ಹೊರಾಡುವ ಒಳ್ಳೆಯ ಕುದುರೆಗಳಂತೆ, ಕೊಕ್ಕುಗಳಿಂದ ಹೊಡೆದಾಡುವ ತಿತ್ತಿರಿಪಕ್ಷಿಗಳಂತೆ ಅವರಿಬ್ಬರೂ ಪರಸ್ಪರ ಜಯಾಕಾಂಕ್ಷಿಗಳಾಗಿ ಪರಸ್ಪರರಂಧ್ರವನ್ನು (ದುರ್ಬಲಾಂಶವನ್ನು) ಹಿಡಿಯುವ ಅಭಿಪ್ರಾಯ ಉಳ್ಳವರಾಗಿ ಯುದ್ಧವನ್ನು ಮಾಡಿದರು.
ತದ್ ಯುದ್ಧಮುತ್ಸಾರ್ಯ ಜನಂ ಭೀಮಮಾಸೀದುಪಹ್ವರೇ||
ಬಲಿನೋಃ ಸಂಯುಗೇ ರಾಜನ್ ವೃತ್ರವಾಸವಯೋರಿವ ||68||
ರಾಜನೇ! ಅಲ್ಲಿ ನೆರೆದ ಜನರು ವೃತ್ರವಾಸವರಿಗೆ ಯುದ್ಧವು ನಡೆಯುವಾಗ ದೂರಸರಿದಂತೆ ಬಲಿಷ್ಠರಾದ ಅವರಿಬ್ಬರಿಗೆ ಭಯಂಕರವಾದ ಯುದ್ಧವು ನಡೆಯುತ್ತಿರುವಾಗ ದೂರಸರಿದು ನಿಂತರು.
ಆಕರ್ಷಣಂ ಪ್ರಕರ್ಷಣಮುತ್ಕರ್ಷಣನಿಕರ್ಷಣೇ |
ವಿಕರ್ಷತಾಂ ತಥಾಽನ್ಯೋನ್ಯಂ ಜಾನುಭಿಶ್ಚ ನಿಜಘ್ನತುಃ ||69||
ಆಕರ್ಷಣ ಪ್ರಕರ್ಷಣ ಉತ್ಕರ್ಷಣ ನಿಕರ್ಷಣ ವಿಕರ್ಷಣ ಮೊದಲಾದ ಕುಸ್ತಿಯ ಪಟ್ಟುಗಳನ್ನು ಹಾಕಿ ಅವರು ಮಂಡಿಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ತತಃ ಶಬ್ದೇನ ಮಹತಾ ಭರ್ತ್ಸಯಂತೌ ಪರಸ್ಪರಮ್ |
ಪಾಷಾಣಸಂಘಾತನಿಭೈಃ ಪ್ರಹಾರೈರಭಿಜಘ್ನತುಃ ||70||
ಅನಂತರ ದೊಡ್ಡ ಶಬ್ದದಿಂದ ಪರಸ್ಪರವಾಗಿ ಮೂದಲಿಸುತ್ತಾ ಪಾಷಾಣಗಳ ಸಂಘರ್ಷದಂತಿರುವ ಪ್ರಹಾರಗಳಿಂದ ಒಬ್ಬರನ್ನೊಬ್ಬರು ಹೊಡೆದರು.
ತತೋ ಭೀಮಂ ಜರಾಸಂಧಃ ಜಘಾನೋರಸಿ ಮುಷ್ಟಿನಾ |
ಭೀಮೋಽಪಿ ತಂ ಜರಾಸಂಧಂ ವಕ್ಷಸ್ಯಭಿಜಘಾನ ಹ ||71||
ಆಗ ಜರಾಸಂಧನು ಭೀಮನಿಗೆ ಮುಷ್ಟಿಯಿಂದ ಎದೆಯಲ್ಲಿ ಹೊಡೆದನು. ಭೀಮನು ಸಹ ತಿರುಗಿಸಿ ತನ್ನ ಮುಷ್ಟಿಯಿಂದ ಜರಾಸಂಧನಿಗೆ ಎದೆಯಲ್ಲಿ ಹೊಡೆದನು.
ವ್ಯೂಢೋರಸ್ಕೌ ದೀರ್ಘಭುಜೌ ನಿಯುದ್ಧಕುಶಲಾವುಭೌ |
ಬಾಹುಭಿಃ ಸಮಸಜ್ಜೇತಾಮ್ ಆಯಸೈಃ ಪರಿಘೈರಿವ ||72||
ವಿಸ್ತಾರವಾದ ವಕ್ಷಸ್ಥಳವುಳ್ಳ ಧೀರ್ಘವಾದ ಭುಜವುಳ್ಳ ಕುಸ್ತಿಯಲ್ಲಿ ಕುಶಲರಾದ ಅವರಿಬ್ಬರು ಕಬ್ಬಿಣದ ಒನಕೆಯಂತಿರುವ ತಮ್ಮ ಬಾಹುಗಳಿಂದ ಒಬ್ಬರನ್ನೊಬ್ಬರು ಹಿಡಿದು ಎಳೆದಾಡಿದರು.
ಕಾರ್ತಿಕಸ್ಯ ತು ಮಾಸಸ್ಯ ಪ್ರವೃತ್ತಂ ಪ್ರಥಮೇಽಹನಿ |
ತದಾ ತದ್ಯುದ್ಧಮಭವದ್ ದಿನಾನಿ ದಶ ಪಂಚ ಚ ||73||
ಕಾರ್ತಿಕಮಾಸದ ಮೊದಲನೆಯ ದಿವಸ ಪ್ರಾರಂಭವಾದ ಅವರ ಯುದ್ಧವು ಹೀಗೆ ಹದಿನೈದು ದಿನಗಳಕಾಲ ಮುಂದುವರೆಯಿತು.
ಅನಾರತಂ ದಿವಾರಾತ್ರಮವಿಶ್ರಾಂತಮವರ್ತತ |
ಘೋರಂ ವಿಸ್ಮಾಪನತರಮಭೂತ್ ಪಂಚದಶೇಽಹನಿ ||74||
ಹದಿನೈದು ದಿನಗಳಕಾಲ ಹಗಲೂ ರಾತ್ರಿಯು ಒಂದುಕ್ಷಣವೂ ನಿಲ್ಲಿಸದೆ ಅವಿಶ್ರಾಂತವಾಗಿ ಯುದ್ಧವು ಜರುಗಿತು. ಹದಿನೈದನೆಯ ದಿವಸ ಒಂದು ಘೋರವಾದ ಮತ್ತು ಆಶ್ಚರ್ಯಕರವಾದ ಘಟನೆಯು ನಡೆಯಿತು.

ತದ್ ಯುದ್ಧಮಾಸೀಚ್ಚ ತಯೋಃ ಸಮವೇತಂ ಮಹಾತ್ಮನೋಃ |
ಚತುರ್ದಶ್ಯಾಂ ನಿಶಾಯಾಂ ತು ಸಂಸ್ಪೃಷ್ಟೋ ಮಾಗಧಃ ಕ್ಲಮೈಃ ॥75॥
ಮಹಾತ್ಮರಾದ ಅವರಿಬ್ಬರು ಹೀಗೆ ಸೆಣೆಸಿ ಯುದ್ಧಮಾಡುತ್ತಿರುವಾಗ ಹದಿನಾಲ್ಕನೆಯ ದಿನ ರಾತ್ರಿ ಜರಾಸಂಧನಿಗೆ ಶ್ರಮ ಉಂಟಾಯಿತು.
ಜರಾಸಂಧಂ ತದಾ ಕ್ಲಾಂತಂ ದೃಷ್ಟ್ವಾ ವಿದ್ವಾನ್ ಜನಾರ್ದನಃ |
ಉವಾಚ ಭೀಮಕರ್ಮಾಣಂ ಭೀಮಂ ಸಂಬೋಧಯನ್ನಿವ ॥76॥
ಜರಾಸಂಧನು ದಣಿಯುತ್ತಿರುವುದನ್ನು ನೋಡಿದ ಮೇಧಾವಿಯಾದ ಜನಾರ್ದನನು ಭಯಂಕರ ಕರ್ಮವನ್ನು ಮಾಡುವುದರಲ್ಲಿ ಸಮರ್ಥನಾದ ಭೀಮನನ್ನು ಎಚ್ಚರಿಸುವಂತೆ ಮಾತನಾಡಿದನು.
ಕ್ಲಾಂತಃ ಶತ್ರುರ್ಹಿ ಕೌಂತೇಯ ಶಕ್ಯಃ ಪೀಡಯಿತುಂ ಭೃಶಮ್ |
ಪೀಡ್ಯಮಾನೋ ಹಿ ಕಾರ್ತ್ಸ್ನ್ಯೇನ ಜಹ್ಯಾಜ್ಜೀವಿತಮಾತ್ಮನಃ ॥77॥
ಕೌಂತೇಯನೇ! ದಣಿದ ಶತ್ರುವನ್ನು ಚೆನ್ನಾಗಿ ಪೀಡಿಸುವುದು ಸುಲಭವಾಗುತ್ತದೆ. ಶತ್ರುವು ಹೀಗೆ ಚೆನ್ನಾಗಿ ಪೀಡಿಸಲ್ಪಟ್ಟರೆ ತನ್ನ ಜೀವಿತವನ್ನು ತೊರೆಯುತ್ತಾನೆ.
ತಸ್ಮಾತ್ ತ್ವಯೈವ ಕೌಂತೇಯ ಪೀಡನೀಯೋ ಜನಾಧಿಪಃ |
ಸಮವೇತೇನ ಯುಧ್ಯಸ್ವ ಬಾಹುಭ್ಯಾಂ ಭರತರ್ಷಭ ॥78॥
ಆದ್ದರಿಂದ ಭರತರ್ಷನೇ! ಕೌಂತೇಯನೇ! ಜರಾಸಂಧನನ್ನು ನೀನು ಈಗ ಚೆನ್ನಾಗಿ ಪೀಡಿಸಲೇ ಬೇಕು. ನೀನು ಅವನ ಜೊತೆಯಲ್ಲಿ ಬಾಹುಯುದ್ಧವನ್ನು ಮಾಡು.
ಏವಮುಕ್ತಃ ಸ ಕೃಷ್ಣೇನ ಪಾಂಡವಃ ಪರವೀರಹಾ |
ಜರಾಸಂಧಸ್ಯ ತದ್ರಂಧ್ರಂ ಜ್ಞಾತ್ವಾ ಚಕ್ರೇ ವಧೇ ಮತಿಮ್ ॥79॥
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಶತ್ರುವೀರಸಂಹಾರಕನಾದ ಪಾಂಡುಪುತ್ರನಾದ ಭೀಮಸೇನನು ಜರಾಸಂಧನ ಶ್ರಮರೂಪವಾದ ರಂಧ್ರವನ್ನು ಗಮನಿಸಿ ಅವನನ್ನು ಕೊಲ್ಲಲು ನಿರ್ಧರಿಸಿದನು.
ತತಸ್ತಮಜಿತಂ ಜೇತುಂ ಜರಾಸಂಧಂ ವೃಕೋದರಃ |
ಸಂರಂಭಾದ್ ಬಲಿನಾಂ ಮುಖ್ಯೋ ಜಗ್ರಾಹ ಕುರುನಂದನ ॥80॥
ಕುರುನಂದನನೇ! ಅನಂತರ ವೃಕೋದರನು ಇದುವರೆಗೆ ಅಜಿತನಾದ ಜರಾಸಂಧನನ್ನು ಜಯಿಸಲು ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮಸೇನನು ಸಿಟ್ಟಿನಿಂದ ಅವನನ್ನು ಬಲವಾಗಿ ಹಿಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥
॥ ಜರಾಸಂಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೂರನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಸ ಪ್ರಣಮ್ಯ ಹೃಷೀಕೇಶಂ ಹರ್ಷಾದಾಶ್ಲಿಷ್ಯ ಫಲ್ಗುನಂ |
ರಿಪುಂ ಜಗ್ರಾಹ ಮಕುಟೇ ವಾರಣಂ ಮೃಗರಾಡಿವ ॥161॥
ಭೀಮ ಸಂತೋಷದಿಂದ ಕೃಷ್ಣನನ್ನು ನಮಿಸಿ ಅರ್ಜುನನನ್ನು ಆಲಿಂಗಿಸಿ ಸಿಂಹ ಆನೆಯನ್ನು ಹೇಗೋ ಹಾಗೆ ಶತ್ರುವನ್ನು ತಲೆಯಲ್ಲಿ ಹಿಡಿದ.
ಪೃಷ್ಠೇಽಸ್ಯ ಜಾನುಮಾಧಾಯ ಕೂರ್ಮದೇಶಂ ಬಭಂಜ ಹ |
ಮೃತಿಕಾಲೇ ಪುನರ್ದೇಹಂ ವಿದದಾರ ಯಥಾ ಪುರಾ ॥162॥
ಭೀಮ ಜರಾಸಂಧನ ಬೆನ್ನಮೇಲೆ ಮೊಣಕಾಲಿಟ್ಟು ಸೊಂಟವನ್ನು ಮುರಿದ. ಹಿಂದೆ ಹುಟ್ಟಿದಾಗ ಹೇಗಿತ್ತೋ ಹಾಗೇ ಸಾಯುವಾಗ ಇರುವಂತೆ ಶರೀರವನ್ನು ಎರಡು ಭಾಗವಾಗಿ ಸೀಳಿದ.
ಮರ್ಮಣ್ಯೇವ ನ ಹಂತವ್ಯೋ ಮಯಾಯಮಿತಿ ಮಾರುತಿಃ |
ಸ್ವಪೌರುಷಪ್ರಕಾಶಾಯ ಬಭಂಜೈನಮಮರ್ಮಣಿ ॥163॥
ನಾನು ಈತನನ್ನು ಮರ್ಮಸ್ಥಳದಲ್ಲಿ ಹೊಡೆಯಬಾರದೆಂದು ಭೀಮ ತನ್ನ ಪೌರುಷವನ್ನು ಮೆರೆಸುವುದಕ್ಕಾಗಿ ಮರ್ಮವಲ್ಲದ ಸ್ಥಾನದಲ್ಲಿಯೆ ಅವನನ್ನು ಮುರಿದ.
ಭಜ್ಯಮಾನೇ ಶರೀರೇಽಸ್ಯ ಬ್ರಹ್ಮಾಂಡಸ್ಫೋಟಸನ್ನಿಭಃ |
ಬಭೂವ ರಾವೋ ಯೇನೈವ ತ್ರಸ್ತಮೇತಜ್ಜಗತ್ತ್ರಯಂ ॥164॥
ಜರಾಸಂಧನ ಶರೀರ ಮುರಿದಾಗ ಬ್ರಹ್ಮಾಂಡ ಸ್ಫೋಟಕದಂಥ ಶಬ್ದ ಉಂಟಾಯಿತು. ಅದರಿಂದ ಮೂಲೋಕ ನಡುಗಿತು.
ನಿಹತ್ಯ ಕೃಷ್ಣಸ್ಯ ರಿಪುಂ ಸ ಭೀಮಃ
ಸಮರ್ಪಯಾಮಾಸ ತದರ್ಚನಂ ಹರೇಃ |
ಕೃತ್ವಾಂ ಹಿ ಭೀಮೇನ ಸಮರ್ಚನಾಂ ತಾಂ
ಸಮಕ್ಷಮಾದಾತು ಮಿಹಾಗತೋ ಹ್ಯಜಃ ॥165॥
ಕೃಷ್ಣನ ಶತ್ರುವನ್ನು ಭೀಮ ಕೊಂದು ಆ ಆರಾಧನೆಯನ್ನು ಕೃಷ್ಣನಿಗೆ ಅರ್ಪಿಸಿದ. ಭೀಮ ಮಾಡುವ ಆ ಆರಾಧನೆಯನ್ನು ಪ್ರತ್ಯಕ್ಷ

ಸ್ವೀಕರಿಸುವುದಕ್ಕಾಗಿಯೇ ಅಲ್ಲಿಗೆ ಕೃಷ್ಣ ಬಂದಿದ್ದ.
ಸ್ವೀಕೃತ್ಯ ಪೂಜಾಂ ಚ ವೃಕೋದರಸ್ಯ
ದೃಢಂ ಸಮಾಶ್ಲಿಷ್ಯ ಚ ತಂ ಜನಾರ್ದನಃ |
ಪ್ರೀತೋ ನಿಶಾಂತಂ ಪುನರೇವ ಕೃಷ್ಣಂ
ನನಾಮ ಭೀಮಃ ಪ್ರಣತೋಽರ್ಜುನೇನ ॥166॥
ಭೀಮ ಮಾಡಿದ ಆ ಆರಾಧನೆಯನ್ನು ಶ್ರೀಕೃಷ್ಣ ಸ್ವೀಕರಿಸಿ ಅವನನ್ನು ಗಾಢವಾಗಿ ಆಲಿಂಗಿಸಿ ಬಲು ಸಂತುಷ್ಟನಾದ. ಅರ್ಜುನನೂ ಸಂತುಷ್ಟನಾಗಿ ಭೀಮನನ್ನು ನಮಿಸಿದ.. ಭೀಮ ಶ್ರೀಕೃಷ್ಣನನ್ನು ನಮಿಸಿದ.
ಜಗುಃ ಸುರಾಶ್ಚಾತಿತರಾಂ ಪ್ರಹೃಷ್ಟಾ
ಬ್ರಹ್ಮಾದಯೋ ದೀನತರಾಶ್ಚ ದೈತ್ಯಾಃ |
ಬಲಾದುಮೇಶಸ್ಯ ವರೇ ಪ್ರಭಗ್ನೇ
ವೃಕೋದರೇಣಾಚ್ಯುತಸಂಶ್ರಯೇಣ ॥167॥
ಶ್ರೀಕೃಷ್ಣನನ್ನಾಶ್ರಯಿಸಿದ್ದ ಭೀಮ ಹೀಗೆ ತನ್ನ ಬಲದಿಂದ ಶಿವನ ವರವನ್ನು ಭಂಗಗೊಳಿಸಿದಾಗ ಬ್ರಹ್ಮಾದಿ ದೇವತೆಗಳು ಬಹಳ ಸಂತುಷ್ಟರಾಗಿ ಹೋದರು. ದೈತ್ಯರು ಬಹಳ ದುಃಖಿತರಾದರು.
ಸುತೋ ಯಯೌ ಶರಣಂ ತಾನ್ ರಮೇಶ-
ಭೀಮಾರ್ಜುನಾನ್ ಸಹದೇವೋಽಸ್ಯ ಧೀಮಾನ್ |
ರಥಂ ಸ್ವಸಾರಂ ಚ ದದೌ ಸ ಮಾರುತೇ-
ರ್ನನಾಮ ಕೃಷ್ಣಂ ಪರಯೈವ ಭಕ್ತ್ಯಾ ॥168॥
ಜರಾಸಂಧನ ಮಗನಾದ ಸಹದೇವ ಬುದ್ಧಿಯುಳ್ಳವ. ಅವನು ಶ್ರೀಕೃಷ್ಣ ಭೀಮ ಅರ್ಜುನರನ್ನು ಮೊರೆಹೊಕ್ಕ. ಭೀಮನಿಗೆ ತನ್ನ ತಂಗಿಯನ್ನೂ ರಥವನ್ನೂ ಒಟ್ಟ. ಪರಮಭಕ್ತಿಯಿಂದ ಶ್ರೀಕೃಷ್ಣನನ್ನು ನಮಿಸಿದ.
ರಥೋ ಹ್ಯಸೌ ವಸುನಾ ವಾಸುದೇವಾತ್
ಶಕ್ರಾಂತರಾಪ್ತೋ ವಸುವಂಶಜತ್ವಾತ್ |
ಜರಾಸುತಸ್ಯಾಸ ವೃಕೋದರಸ್ತಂ
ಹರೇ ರಥಂ ಪ್ರಾರ್ಪಯಾಮಾಸ ತಸ್ಮೈ ॥169॥
ಈ ರಥ ಹಿಂದೆ ಶ್ರೀಹರಿ ದೇವೇಂದ್ರನ ಮೂಲಕ ವಸುಚಕ್ರವರ್ತಿಗೆ ನೀಡಿದ್ದ ರಥವಾಗಿತ್ತು. ಜರಾಸಂಧ ವಸುಚಕ್ರವರ್ತಿಯ ವಂಶದವನಾದ್ದರಿಂದ ಅವನ ವಶಕ್ಕೆ ಈ ರಥ ಬಂದಿತ್ತು. ಹರಿಯ ಈ ರಥವನ್ನು ಭೀಮ ಕೃಷ್ಣನಿಗೇ ಅರ್ಪಿಸಿದ.
ಕೃಷ್ಣೋಽಸ್ಮರದ್ ಗರುಡಂ ಸ ಧ್ವಜೇಽಭೂತ್
ರಥಂ ಕೃಷ್ಣೋಽಥಾರುಹತ್ ಪಾಂಡವಾಭ್ಯಾಂ |
ಭೀಮಃ ಕನ್ಯಾಂ ಸಹದೇವಸ್ಯ ಹೇತೋಃ
ಸಮಗ್ರಹೀದನುಜಸ್ಯಾತ್ಮನಃ ಸಃ ॥170॥
ಶ್ರೀಕೃಷ್ಣ ಗರುಡನನ್ನು ಸ್ಮರಿಸಿದ. ಒಡನೆ ಗರುಡ ಧ್ವಜದಲ್ಲಿ ಬಂದು ಕುಳಿತ. ಬಳಿಕ ಭೀಮಾರ್ಜುನರೊಡನೆ ಶ್ರೀಕೃಷ್ಣ ರಥವೇರಿದ. ಭೀಮ ಕನ್ಯೆಯನ್ನು ತಮ್ಮನಾದ ಸಹದೇವನಿಗಾಗಿ ಸ್ವೀಕರಿಸಿದ.
ನಕುಲಸ್ಯಾಽದಾನ್ಮದ್ರರಾಜೋ ಹಿ ಪೂರ್ವಂ
ಸ್ವೀಯಾಂ ಕನ್ಯಾಂ ಸಾ ತಥೈಷಾಪ್ಯುಷಾ ಹಿ |
ಏಕಾ ಪೂರ್ವಂ ತೇ ಅಶ್ವಿನೋಶ್ಚೈವ ಭಾರ್ಯಾ
ಯಯೌ ರೇಮಾತೇ ಯದುಷಾ ಅಶ್ವಿಭಾರ್ಯಾ ॥171॥
ನಕುಲನಿಗೆ ಪೂರ್ವದಲ್ಲಿಯೆ ಮದ್ರರಾಜ ತನ್ನ ಮಗಳನ್ನು ಮದುವೆ ಮಾಡಿಕೊಟ್ಟಿದ್ದ. ಅವಳೂ ಈ ಜರಾಸಂಧನ ಮಗಳೂ ಒಬ್ಬಳೇ, ಹಿಂದೆಯೂ ಅಶ್ವಿನೀ ದೇವತೆಗಳ ಹೆಂಡತಿಯಾಗಿದ್ದ ಉಷೆಯೆ. ಅವರಿಬ್ಬರೊಡನೆ ನಕುಲ ಸಹದೇವರು ರಮಿಸಿದರು. ಅನಿರುದ್ಧ ಪತ್ನಿ ಉಷೆ ಬೇರೆ. ಅಶ್ವಿನೀದೇವತೆಗಳ ಪತ್ನಿ ಉಷಃಕಾಲದ ಅಭಿಮಾನಿನಿ ಉಷಸ್.
ತತಃ ಕೃಷ್ಣಾಯಾಮಗ್ರಜಭ್ರಾತೃಭಾರ್ಯಾ
ವೃತ್ತಿಂ ಹಿ ತೌ ಚಕೃತುರ್ಮಾದ್ರಿಪುತ್ರೌ |
ಜರಾಸುತಸ್ಯಾತ್ಮಜಃ ಕೇಶವಾದೀನ್
ರತ್ನೈಃ ಸಮಭ್ಯರ್ಚ್ಯ ಯಯಾವನುಜ್ಞಯಾ ॥172॥
ಎರಡನೆ ವಿವಾಹವಾದ ಬಳಿಕ ನಕುಲ ಸಹದೇವರು ದ್ರೌಪದಿಯನ್ನು ಅತ್ತಿಗೆ ಎಂದು ಪೂಜ್ಯ ಭಾವನೆಯಿಂದಲೆ ಕಾಣಲು ತೊಡಗಿದರು. ಜರಾಸಂಧ ಪುತ್ರ ಸಹದೇವ ಶ್ರೀಕೃಷ್ಣ ಭೀಮಾರ್ಜುನರನ್ನು ರತ್ನಗಳಿಂದ ಸತ್ಕರಿಸಿ ಅನುಜ್ಞೆ ಪಡೆದು ತನ್ನ ಅರಮನೆಗೆ ತೆರಳಿದ.
ತದಾಜ್ಞಯಾ ಪಿತೃಕಾರ್ಯಾಣಿಕೃತ್ವಾ
ತದಾಜ್ಞಯೈವಾಮುಚತ್ ತಾನ್ ನೃಪಾಂಶ್ಚ |
ತೈಃ ಸಂಸ್ತುತಃ ಕೇಶವೋ ಭೀಮ ಪಾರ್ಥ-
ಯುಕ್ತೋ ಯಯೌ ಭಕ್ತಿನಮ್ರೈರ್ಯಥಾವತ್ ॥173॥
ಸಹದೇವ ಶ್ರೀಕೃಷ್ಣ ಭೀಮಾರ್ಜುನರ ಆಜ್ಞೆಯಿಂದ ಪಿತೃಕಾರ್ಯವನ್ನು ನಡೆಸಿ ಅವರ ಆಜ್ಞೆಯಿಂದಲೆ ರಾಜರುಗಳನ್ನು

ಬಂಧಮುಕ್ತರನ್ನಾಗಿ ಮಾಡಿದ. ಭಕ್ತಿ ನಮ್ರರಾದ ಆ ರಾಜರುಗಳಿಂದ ಶ್ರೀಕೃಷ್ಣ ಅವರ ಯೋಗ್ಯತಾನುಸಾರ ಸ್ತುತಿಸಲ್ಪಟ್ಟ ಭೀಮಾರ್ಜುನರಿಂದೊಡಗೂಡಿ ಹೊರಟ.

ಸಂಭಾವಿತಾಸ್ತೇ ಸಹದೇವೇನ ಸಮ್ಯಕ್
ಪ್ರಶಸ್ಯ ಕೃಷ್ಣಂ ಭೀಮಸೇನಂ ಚ ಸರ್ವೇ |
ಯಯುರ್ಗೃಹಾನ್ ಸ್ವಾನಪತತ್ಕೇಶವದ್ವಿಟ್
ಜರಾಸುತೋಽಂಧೇ ತಮಸಿ ಕ್ರಮೇಣ ॥174॥

ಸಹದೇವನಿಂದ ಸತ್ಕೃತರಾದ ಆ ರಾಜರೆಲ್ಲರೂ ಕೃಷ್ಣನನ್ನೂ ಭೀಮನನ್ನೂ ಚೆನ್ನಾಗಿ ಸ್ತುತಿಸಿ ತಮ್ಮ ಮನೆಗಳಿಗೆ ಹೊರಟು ಹೋದರು. ಕೃಷ್ಣದ್ವೇಷಿಯಾದ ಜರಾಸಂಧ ಅಸಿಪತ್ರಾದಿ ಅನೇಕ ನರಕಗಳನ್ನು ಅನುಭವಿಸಿ ಕ್ರಮವಾಗಿ ಅಂಧಂತಮಸ್ಸಿನಲ್ಲಿ ಬಿದ್ದ.

ಕೃಷ್ಣಶ್ಚ ಪಾರ್ಥೌ ಚ ತಥೈಕಯಾನಂ
ಸಮಾಸ್ಥಿತಾ ಧರ್ಮಜಮಭ್ಯಗಚ್ಛನ್ |
ತೇಷಾಂ ಶಂಖಧ್ವನಿಸಂಬೋಧಿತಾತ್ಮಾ
ರಾಜಾ ಪ್ರೀತಶ್ಚಾತಿತರಾಂ ಬಭೂವ ॥175॥

ಶ್ರೀಕೃಷ್ಣನೂ ಭೀಮಾರ್ಜುನರೂ ಒಂದೇ ರಥವನ್ನೇರಿ ಧರ್ಮರಾಜನ ಬಳಿಗೆ ಹೋದರು. ಅವರ ಶಂಖಧ್ವನಿಯಿಂದಲೆ ಅವರು ಗೆದ್ದು ಬಂದರೆಂದು ತಿಳಿದು ಧರ್ಮರಾಜ ಬಹಳ ಸಂತುಷ್ಟನಾದ.

* * * *

ಇಪ್ಪತ್ನಾಲ್ಕನೆಯ ಅಧ್ಯಾಯ
(ಜರಾಸಂಧವಧೆ)

ವೈಶಂಪಾಯನಃ
ಭೀಮಸೇನಸ್ತದಾ ಕೃಷ್ಣಮುವಾಚ ಯದುನಂದನಮ್ |
ಬುದ್ಧಿಮಾಸ್ಥಾಯ ವಿಪುಲಾಂ ಜರಾಸಂಧಜಿಘಾಂಸಯಾ ॥1॥

ಆಗ ಭೀಮಸೇನನು ವಿಪುಲವಾದ ಬುದ್ಧಿಯನ್ನು ಹೊಂದಿದವನಾಗಿ ಜರಾಸಂಧನನ್ನು ಕೊಲ್ಲುವ ಅಭಿಪ್ರಾಯದಿಂದ ಯದುನಂದನನಾದ ಕೃಷ್ಣನನ್ನು ಕುರಿತು ಮಾತನಾಡಿದನು.

ಅಯಂ ಪಾಪೋ ಮಯಾ ಕೃಷ್ಣ ಯುಕ್ತಃ ಸ್ಯಾನ್ನಾನುರೋಧಿತುಮ್ |
ಪ್ರಾಯೇಣ ಯದುಶಾರ್ದೂಲ ಬಾಂಧವಕ್ಷಯಕೃತ್ ತವ ॥2॥

ಕೃಷ್ಣನೇ! ಇವನು ಹೆಚ್ಚಾಗಿ ನಿನ್ನ ಬಾಂಧವರನ್ನು ಸಂಹಾರಮಾಡಿದವನು. ಯದುಶಾರ್ದೂಲನೇ! ನಾನು ಈ ಪಾಪಿಯನ್ನು ಅನುಸರಿಸಿ ಯುದ್ಧವನ್ನು ಮಾಡುವುದು ಸರಿಯಲ್ಲ.

ಏವಮುಕ್ತಸ್ತದಾ ಕೃಷ್ಣಃ ಪ್ರತ್ಯುವಾಚ ವೃಕೋದರಮ್ |
ತ್ವರಯಾ ಪುರುಷವ್ಯಾಘ್ರೋ ಜರಾಸಂಧವಧೇಪ್ಸಯಾ ॥3॥

ಈ ಮಾತುಗಳನ್ನು ಕೇಳಿದ ಪುರುಷವ್ಯಾಘ್ರನಾದ ಕೃಷ್ಣನು ಶೀಘ್ರವಾಗಿ ಜರಾಸಂಧನವಧೆಯನ್ನು ಸಾಧಿಸಬೇಕೆಂಬ ಇಚ್ಛೆಯಿಂದ ವೃಕೋದರನನ್ನು ಕುರಿತು ಮಾತನಾಡಿದನು.

ಯತ್ತೇ ದೈವಂ ಪರಂ ಸತ್ತ್ವಂ ಪಿತುಸ್ತೇ ಮಾತರಿಶ್ವನಃ |
ಬಲಂ ಭೀಮ ಜರಾಸಂಧೇ ದರ್ಶಯಸ್ವ ತದದ್ಯ ನಃ ॥4॥

ಭೀಮಸೇನನೇ! ನಿನ್ನ ತಂದೆಯಾದ ವಾಯುದೇವನ ದೈವಬಲವೇನಿದೆಯೋ ಅದನ್ನು ಈ ದಿನ ಜರಾಸಂಧನಲ್ಲಿ ತೋರಿಸು.

ತವೈಷ ವಧ್ಯೋ ದುರ್ಬುದ್ಧಿರ್ಜರಾಸಂಧೋ ಮಹಾಬಲಃ |
ಇತ್ಯಂತರಿಕ್ಷೇ ತ್ವಶ್ರೌಷಂ ಯದಾ ವಾಯುರಪೋಹ್ಯತೇ ॥5॥
ಗೋಮಂತೇ ಪರ್ವತಶ್ರೇಷ್ಠೇ ಯೇನೈವ ಪರಿಮೋಕ್ಷಿತಃ |
ಬಲದೇವಬಲಂ ಪ್ರಾಪ್ಯ ಕೋಽನ್ಯೋ ಜೀವೇತ ಮಾಗಧಾತ್ ॥6॥

ಮಹಾಬಲನಾದ ದುರ್ಬುದ್ಧಿಯಾದ ಜರಾಸಂಧನು ನಿನ್ನಿಂದಲೇ ಕೊಲ್ಲಲ್ಪಡಬೇಕು ಎಂಬ ಅಶರೀರವಾಣಿಯನ್ನು ವಾಯುವೇಗವು ಕಡಿಮೆಯಾದಾಗ ನಾನು ಅಂತರಿಕ್ಷದಲ್ಲಿ ಕೇಳುತ್ತಿದ್ದೇನೆ. ಆ ಅಶರೀರವಾಣಿಯಿಂದಲೇ ಗೋಮಂತಪರ್ವತದಲ್ಲಿ ಬಲರಾಮನಿಂದ ಜರಾಸಂಧನು ಬಿಡುಗಡೆಯನ್ನು ಹೊಂದಿದನು. ಇಲ್ಲದಿದ್ದರೆ ಜರಾಸಂಧನನ್ನು ಬಿಟ್ಟು ಬೇರೆ ಯಾರು ತಾನೆ ಬಲರಾಮನ ಬಲಕ್ಕೆ ವಶರಾಗಿ ಜೀವಿಸಲು ಸಾಧ್ಯ?

ತದಸ್ಯ ಮೃತ್ಯುರ್ವಿಹಿತಃ ತ್ವದೃತೇ ನ ಮಹಾಬಲ |
ವಾಯುಂ ಚಿಂತ್ಯ ಮಹಾಬಾಹೋ ಜಹೀಮಂ ಮಗಧಾಧಿಪಮ್ ॥7॥

ಮಹಾಬಲನೇ! ಇವನಿಗೆ ನಿನ್ನನ್ನು ಬಿಟ್ಟು ಬೇರೆಯಾರಿಂದಲೂ ಮರಣವು ವಿಹಿತವಾಗಿಲ್ಲ. ಮಹಾಬಾಹುವೇ ವಾಯುವನ್ನು ಚಿಂತಿಸಿ ಈ ಮಗಧಾಧಿಪನನ್ನು ಸಂಹರಿಸು.

ಏವಮುಕ್ತಸ್ತದಾ ಭೀಮೋ ಮನಸಾ ಚಿಂತ್ಯ ಮಾರುತಮ್ |
ಜನಾರ್ದನಂ ನಮಸ್ಯೈವ ಪರಿಷ್ವಜ್ಯ ಚ ಫಲ್ಗುನಮ್ ॥8॥

ಕೃಷ್ಣನಿಂದ ಈ ಮಾತುಗಳನ್ನು ಕೇಳಿದ ಭೀಮನು ಮನಸ್ಸಿನಲ್ಲಿ ವಾಯುದೇವನನ್ನು ಸ್ಮರಿಸಿ ಕೃಷ್ಣನನ್ನು ನಮಸ್ಕರಿಸಿ ಅರ್ಜುನನನ್ನು ಆಲಿಂಗಿಸಿದನು.

ಪ್ರಭಂಜನಬಲಾವಿಷ್ಟೋ ಜರಾಸಂಧಮರಿಂದಮಃ |
ಉತ್ಕ್ಷಿಪ್ಯಾಭ್ರಾಮಯದ್ ರಾಜನ್ ಬಲವಂತಂ ಮಹಾಬಲಃ ॥9॥
ರಾಜನೇ! ಅರಿಂದಮನಾದ ಮಹಾಬಲವುಳ್ಳ ಭೀಮಸೇನನು ವಾಯುದೇವನ ಬಲದಿಂದ ಕೂಡಿದವನಾಗಿ ಬಲಿಷ್ಠನಾದ ಜರಾಸಂಧನನ್ನು ಮೇಕ್ಕೆತ್ತಿ ತಿರುಗಿಸಿದನು.
ಭ್ರಾಮಯಿತ್ವಾ ಶತಗುಣಂ ಜಾನುಭ್ಯಾಂ ಭರತರ್ಷಭ |
ಬಭಂಜ ಪೃಷ್ಠೇ ಸಂಕ್ಷಿಪ್ಯ ನಿಷ್ಪಿಷ್ಯ ವಿನನಾದ ಚ ॥10॥
ಭರತರ್ಷಭನೇ! ನೂರುಸಲ ತಿರುಗಿಸಿ ಜರಾಸಂಧನನ್ನು ನೆಲಕ್ಕೆ ಅಪ್ಪಳಿಸಿ ಅವನ ಬೆನ್ನಿನ ಕೆಳಭಾಗದಲ್ಲಿ ಮಂಡಿಗಳನ್ನು ಇಟ್ಟು ಅವನನ್ನು ಹಿಮ್ಮುಖವಾಗಿ ಮುರಿದು ನಿಷ್ಪೇಷವನ್ನು ಮಾಡಿ (ಒರೆಸಿ) ಗರ್ಜಿಸಿದನು.
ಪ್ರಸ್ಫಾಲ್ಯ ಪಾದೌ ಭೂಮೌ ಚ ಜಾನುನಾಽಽಕ್ರಮ್ಯ ಸತ್ವರಃ |
ಸಂಧಿಂ ವಿಶ್ಲೇಷಯಾಮಾಸ ಸತಟಿದ್ಘನನಿಸ್ವನಮ್ |
ಮಧ್ಯೇ ವಿದಾರಯಾಮಾಸ ಕರ್ತವ್ಯಮುಪಶಸ್ಯ ಚ ॥11॥
ಭೂಮಿಯಮೇಲಿದ್ದ ಅವನ ಎರಡುಪಾದಗಳನ್ನು ಅಗಲಿಸಿ ಶೀಘ್ರವಾಗಿ ಮಂಡಿಯನ್ನು ಊರಿ ಅವನ ಸಂಧಿಗಳನ್ನು ಬಿಡಿಸಿ ಸಮೀಪದಲ್ಲಿ ಇದ್ದ ಕೃಷ್ಣಾರ್ಜುನರನ್ನು ಪ್ರಶಂಸೆಮಾಡಿ ಇದು ತನಗೆ ಯೋಗ್ಯವಾದ ಕರ್ಮವೆಂದು ತಿಳಿದು ಸಿಡಿಲಿನಿಂದ ಕೂಡಿದ ಮೋಡದ ಧ್ವನಿಯು ಬರುತ್ತಿರುವಂತೆ ಅವನನ್ನು ಮಧ್ಯದಲ್ಲಿ ಸೀಳಿಹಾಕಿದನು.
ತಸ್ಯ ನಿಷ್ಪಿಷ್ಯಮಾಣಸ್ಯ ಪಾಂಡವಸ್ಯ ಚ ಗರ್ಜತಃ |
ಅಭವತ್ ತುಮುಲೋ ನಾದಃ ಸರ್ವಪ್ರಾಣಿಭಯಂಕರಃ ॥12॥
ಗರ್ಜಿಸುವ ಪಾಂಡುಪುತ್ರನಾದ ಭೀಮಸೇನನಿಂದ ಒರೆಸಲ್ಪಡುವಾಗ ಉಂಟಾದ ಭೀಮ ಮತ್ತು ಜರಾಸಂಧರ ತುಮುಲವಾದ ನಾದವು ಎಲ್ಲಾ ಪ್ರಾಣಿಗಳಿಗೂ ಭಯವನ್ನು ಉಂಟುಮಾಡುವಂತಹದಾಗಿದ್ದಿತು.
ವಿತ್ರೇಸುರ್ಮಾಗಧಾಃ ಸರ್ವೇ ಸ್ತ್ರೀಣಾಂ ಗರ್ಭಾಶ್ಚ ಸುಸ್ರುವುಃ |
ಭೀಮಸೇನ ಜರಾಸಂಧರ ಮಹಾನಾದದಿಂದ ಮಗಧದೇಶದ ಪ್ರಜೆಗಳೆಲ್ಲರೂ ಹೆದರಿ ನಡುಗಿದರು. ಸ್ತ್ರೀಯರಿಗೆ ಗರ್ಭಸ್ರಾವವಾಯಿತು.
ಭೀಮಸೇನಸ್ಯ ನಾದೇನ ಜರಾಸಂಧಸ್ಯ ಚೈವ ಹ |
ಕಿನ್ನುಸ್ವಿದ್ಧಿಮವಾನ್ ಭಿನ್ನಃ ಕಿನ್ನುಸ್ವಿದ್ ದೀರ್ಯತೇ ಮಹೀ |
ಇತಿ ಸ್ಮ ಮಾಗಧಾ ಜಲ್ಪನ್ ಭೀಮಸೇನಸ್ಯ ಗರ್ಜನಾತ್ ॥13॥
ಭೀಮಸೇನನ ಗರ್ಜನೆಗಳನ್ನು ಕೇಳಿದ ಮಗಧದೇಶದ ಜನರು ಇದೇನು ಹಿಮಾಲಯದ ಪರ್ವತವು ಒಡೆಯುತ್ತಿದೆಯೋ ಅಥವಾ ಭೂಮಿಯು ಬಿರಿಯುತ್ತಿದೆಯೋ ಎಂದು ಮಾತನಾಡಿಕೊಂಡರು.
ತತೋ ರಾಜ್ಞಃ ಕುಲದ್ವಾರಿ ಪ್ರಸುಪ್ತಮಿವ ತಂ ನೃಪಮ್ |
ರಾತ್ರೌ ಪರಾಸುಮುತ್ಸೃಜ್ಯ ನಿಶ್ಚಕ್ರಮುರರಿಂದಮಾಃ ॥14॥
ಅನಂತರ ಜರಾಸಂಧನ ಸೀಳಿದ ಬಾಗಗಳನ್ನು ಜೋಡಿಸಿ ರಾತ್ರಿಯ ವೇಳೆಯಲ್ಲಿಯೇ ಮಲಗಿ ನಿದ್ರಿಸುತ್ತಿರುವವನ ರೀತಿಯಲ್ಲಿ ಮೃತನಾದ ಅವನ ದೇಹವನ್ನು ಅರಮನೆಯದ್ವಾರದಲ್ಲಿ ಸ್ಥಾಪಿಸಿ ಅರಿಂದಮರಾದ ಕೃಷ್ಣಭೀಮಾರ್ಜುನರು ಅಲ್ಲಿಂದ ಹೊರಟುಬಂದರು.
ಜರಾಸಂಧರಥಂ ಕೃಷ್ಣೋ ಯೋಜಯಿತ್ವಾ ಪತಾಕಿನಮ್ |
ಆರೋಪ್ಯ ಭ್ರಾತರೌ ರಾಜ್ಞೋ ಮೋಕ್ಷಯಾಮಾಸ ಬಾಂಧವಾನ್ ॥15॥
ಕೃಷ್ಣನು ಪತಾಕೆಯುಳ್ಳ ಜರಾಸಂಧನ ರಥವನ್ನು ಹೂಡಿ ಭೀಮಾರ್ಜುನರನ್ನು ಏರಿಸಿಕೊಂಡು ರಾಜರನ್ನು ಸೆರೆಯಿಟ್ಟಸ್ಥಾನಕ್ಕೆ ಬಂದು ತನ್ನ ಬಂಧುಗಳಾದ ಅವರನ್ನು ಸೆರೆಯಿಂದ ಬಿಡಿಸಿದನು.
ತೇ ವೈ ರತ್ನಭುಜಂ ಕೃಷ್ಣಂ ರತ್ನಾರ್ಹಂ ಚೈವ ಪಾರ್ಥಿವಮ್ |
ರಾಜಾನಶ್ಚಕ್ರುರಾಸಾದ್ಯ ಮೋಕ್ಷಿತಾ ಮಹತೋ ಭಯಾತ್ ॥16॥
ಮಹಾಭಯದಿಂದ ತಮ್ಮನ್ನು ರಕ್ಷಿಸಿದ ಮತ್ತು ರತ್ನದಂತಹ ತಮ್ಮ ಪ್ರಾಣವನ್ನು ರಕ್ಷಿಸಿದ ಕೃಷ್ಣನನ್ನು ಸಮೀಪಿಸಿ ಆ ರಾಜರು ಅವನನ್ನು ಮತ್ತು ಅರ್ಜುನನನ್ನು ತಮ್ಮ ರತ್ನಖಚಿತವಾದ ಕಿರೀಟಗಳಿಂದ ಘಟ್ಟಿತವಾದ ಪಾದಪೀಠವುಳ್ಳವನನ್ನಾಗಿ ಮಾಡಿದರು.
ಅಕ್ಷತಃ ಕ್ಷತ್ರಸಂಪನ್ನೋ ಜಿತಾರಿಃ ಸಹ ರಾಜಭಿಃ |
ರಥಮಾಸ್ಥಾಯ ತಂ ದಿವ್ಯಂ ನಿರ್ಜಗಾಮ ಗಿರಿವ್ರಜಾತ್ ॥17॥
ಕೃಷ್ಣನು ಶತ್ರುವನ್ನು ಗೆದ್ದು ತಾನು ಯಾವ ಗಾಯಕ್ಕೂ ಒಳಗಾಗದೆ ಕ್ಷತ್ರಿಯರಾಜರುಗಳ ಜೊತೆಯಲ್ಲಿ ಕೂಡಿಕೊಂಡು ಆ ದಿವ್ಯರಥವನ್ನು ಏರಿ ರಾಜಧಾನಿಯಾದ ಗಿರಿವ್ರಜದಿಂದ ಹೊರಗೆ ಬಂದನು.
ತಯೋಃ ಸೌಂದರ್ಯವಾನ್ ನಾಮ ವಿಧೇಯಃ ಕೃಷ್ಣಸಾರಥಿಃ |
ಅಭ್ಯಾಯಯಾವಭಿಮುಖೋ ದುರ್ಜಯಃ ಸರ್ವಧನ್ವಿಭಿಃ ॥18॥
ಭೀಮಾರ್ಜುನರಿಗೆ ವಿಧೇಯನಾದ ಯಾವ ಧನುರ್ಧಾರಿಗಳಿಂದಲೂ ಜಯಿಸಲು ಅಸಾಧ್ಯನಾದ ಸೌಂದರ್ಯವಾನ್ ಎಂಬ ಕೃಷ್ಣಸಾರಥಿಯು ಆಗ ಅವರಿಗೆ ಅಭಿಮುಖವಾಗಿ ಬಂದನು.
ಭೀಮಾರ್ಜುನಾಭ್ಯಾಂ ಯೋಧಾಭ್ಯಾಮಾಸ್ಥಿತಃ ಕೃಷ್ಣಸಾರಥಿಃ |
ಶುಶುಭೇ ರಥವರ್ಯೋಽಸೌ ದುರ್ಜಯಃ ಸರ್ವಧನ್ವಿಭಿಃ ॥19॥
ಭೀಮಾರ್ಜುನರಿಂದ ಅಧಿಷ್ಠಿಸಲ್ಪಟ್ಟ ಕೃಷ್ಣನನ್ನು ಸಾರಥಿಯಾಗಿ ಹೊಂದಿದ ಆ ಶ್ರೇಷ್ಠವಾದ ರಥವು ಎಲ್ಲಾ ಧರ್ನುಧಾರಿಗಳಿಗೂ ಅಜೇಯವಾಗಿ ಶೋಭಿಸಿತು.

ಶಕ್ರವಿಷ್ಣೂ ಹಿ ಸಂಗ್ರಾಮೇ ಚೇರತುಸ್ತಾರಕಾಮಯೇ |
ರಥೇನ ತೇನ ತಂ ಕೃಷ್ಣ ಉಪಾರುಹ್ಯೋಪಯಾತ್ ತದಾ ॥20॥
ಹಿಂದೆ ಶತ್ರುಗಳ ಕಣ್ಣಿಗೆ ನೋವನ್ನು ಉಂಟುಮಾಡುವ ದೇವಾಸುರ ಯುದ್ಧದಲ್ಲಿ ಇಂದ್ರ ಉಪೇಂದ್ರರು ಯಾವ ರಥವನ್ನು ಏರಿ ಯುದ್ಧಮಾಡಿದ್ದರೋ ಕೃಷ್ಣನು ಆ ರಥವನ್ನು ಏರಿ ಹೊರಗೆ ಬಂದನು.
ಏವಮೇತೌ ಮಹಾಬಾಹೂ ತದಾ ದುಷ್ಕರಕಾರಿಣೌ |
ಕೃಷ್ಣಪ್ರಣೀತಾವೇಕಸ್ಮಿನ್ ರಥೇ ಕೋ ದ್ರಷ್ಟುಮರ್ಹತಿ ॥21॥
ಇನ್ನೊಬ್ಬರಿಗೆ ದುಷ್ಕರವಾದ ಕರ್ಮವನ್ನು ಮಾಡುವ ಈ ಇಬ್ಬರು ಮಹಾಬಾಹುಗಳು ಕೃಷ್ಣನ ಜೊತೆಯಲ್ಲಿ ಒಂದು ರಥದಲ್ಲಿ ಹೀಗೆ ಕುಳಿರುವುದನ್ನು ಯಾರು ನೋಡಲು ಸಾಧ್ಯ?
ಇತ್ಯವೋಚನ್ ವ್ರಜಂತಂ ತಂ ಜರಾಸಂಧಪುರಾಲಯಾಃ |
ವಾಸುದೇವಂ ನರಶ್ರೇಷ್ಠಂ ಯುಕ್ತಂ ವಾಯುಜವೈರ್ಹಯೈಃ ॥22॥
ಪುರುಷೋತ್ತಮನಾದ ವಾಸುದೇವನು ವಾಯುವೇಗವುಳ್ಳ ಅಶ್ವಗಳನ್ನು ಹೂಡಿದ ರಥದಲ್ಲಿ ಕುಳಿತು ಹೋಗುತ್ತಿರುವಾಗ ಜರಾಸಂಧನ ಪಟ್ಟಣದ ಪ್ರಜೆಗಳು ಈ ರೀತಿ ಮಾತನಾಡಿಕೊಂಡರು.
ತಪ್ತಚಾಮೀಕರಾಭೇಣ ಕಿಂಕಿಣೀಜಾಲಮಾಲಿನಾ |
ಮೇಘನಿರ್ಘೋಷನಾದೇನ ಜೈತ್ರೇಣಾಮಿತ್ರಘಾತಿನಾ ॥23॥
ಯೇನ ಶಕ್ರೋ ದಾನವಾನಾಂ ಜಘಾನ ನವತೀರ್ನವ |
ತಂ ಪ್ರಾಪ್ಯ ಸಮಹೃಷ್ಯಂತ ರಥಂ ತೇ ಪುರುಷರ್ಷಭಾಃ ॥24॥
ಇಂದ್ರನು ತೊಂಬತ್ತೊಂಬತ್ತು ಜನ ದಾನವರನ್ನು ಯಾವ ರಥದಲ್ಲಿ ಕುಳಿತು ಸಂಹಾರಮಾಡಿದನೋ ಅಂತಹ ಸುವರ್ಣದಂತೆ ಶೋಭಿಸುವ ಸಣ್ಣಗಂಟೆಗಳ ಮಾಲೆಯನ್ನು ಹೊಂದಿರುವ ಮೇಘಗರ್ಜನೆಯ ನಾದವನ್ನು ಹೊಂದಿರುವ ಶತ್ರು ಸಂಹಾರಕವಾದ ಜಯಶೀಲವಾದ ರಥವನ್ನು ಹೊಂದಿ ಆ ಮೂವರು ಪುರುಷಶ್ರೇಷ್ಠರು ಸಂತೋಷವನ್ನು ಹೊಂದಿದರು.
ತತಃ ಕೃಷ್ಣಂ ಮಹಾಬಾಹುಂ ಭ್ರಾತೃಭ್ಯಾಂ ಸಹಿತಂ ತದಾ |
ರಥಸ್ಥಂ ಮಾಗಧಾ ದೃಷ್ಟ್ವಾ ಸಮಪದ್ಯಂತ ವಿಸ್ಮಿತಾಃ ॥25॥
ಆಗ ಮಹಾಬಾಹುವಾದ ಕೃಷ್ಣನು ಭೀಮಾರ್ಜುನರ ಜೊತೆಯಲ್ಲಿ ರಥದಲ್ಲಿ ಕುಳಿತಿರುವುದನ್ನು ನೋಡಿದ ಮಗಧದೇಶದ ಪ್ರಜೆಗಳು ವಿಸ್ಮಿತರಾದರು.
ಹಯೈರ್ದಿವ್ಯೈಃ ಸಮಾಯುಕ್ತೋ ರಥೋ ವಾಯುಸಮೋ ಜವೇ|
ಅಧಿಷ್ಠಿತಃ ಸ ಶುಶುಭೇ ಕೃಷ್ಣೇನಾತೀವ ಭಾರತ ॥26॥
ಭಾರತನೇ! ದಿವ್ಯವಾದ ಹಯಗಳಿಂದ ಯುಕ್ತವಾಗಿ ವೇಗದಲ್ಲಿ ವಾಯುಸಮವಾದ ಆ ರಥವು ಕೃಷ್ಣನಿಂದ ಅಧಿಷ್ಠಿತವಾಗಿ ಬಹಳ ಕಾಂತಿಯನ್ನು ಹೊಂದಿತು.
ಅಸಂಗೀ ದೇವವಿಹಿತಸ್ತಸ್ಮಿನ್ ರಥವರೇ ಧ್ವಜಃ |
ಸ ಯೋಜನದ್ವಯೇ ದೃಶ್ಯಃ ಶ್ರೀಮಾನಿಂದ್ರಾಯುಧಪ್ರಭಃ ॥27॥
ಆ ಶ್ರೇಷ್ಠರಥದಲ್ಲಿ ಇದ್ದ ದೇವವಿಹಿತವಾದ ಧ್ವಜವು ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಾಂತಿಯುಳ್ಳದ್ದಾಗಿ ಎಲ್ಲಿಯೂ ಸಿಕ್ಕಿಹಾಕಿಕೊಳ್ಳದೆ ಎರಡು ಯೋಜನದೂರದಿಂದ ಕಂಡು ಬರುತ್ತಿದ್ದಿತು.
ಚಿಂತಯಾಮಾಸ ಕೃಷ್ಣೋಽಥ ಗರುತ್ಮಂತಂ ಸ ಚಾಭ್ಯಯಾತ್ |
ಕ್ಷಣೇ ತಸ್ಮಿನ್ ಸ ತತ್ರಾಸೀಚ್ಚೈತ್ಯಯೂಪ ಇವೋಚ್ಛ್ರಿತಃ ॥28॥
ಆಗ ಕೃಷ್ಣನು ಗರುಡನನ್ನು ಸ್ಮರಿಸಿದನು. ಆ ಕ್ಷಣದಲ್ಲಿ ಗರುಡನು ಅಲ್ಲಿಗೆ ಬಂದು ಭೂಮಿಯಲ್ಲಿ ನೆಟ್ಟ ಯೂಪಸ್ತಂಭದಂತೆ ಉನ್ನತವಾಗಿ ನಿಂತನು.
ವ್ಯಾದಿತಾಸ್ಯೋ ಮಹಾನಾದೈಃ ಸಹ ಭೂತೈರ್ಧ್ವಜಾಲಯೈಃ |
ತಸ್ಮಿನ್ ರಥವರೇ ತಸ್ಥೌ ಗರುತ್ಮಾನ್ ಪನ್ನಗಾಶನಃ ॥29॥
ಸರ್ಪಭಕ್ಷನಾದ ಗರುಡನು ತನ್ನ ಬಾಯಿಯನ್ನು ದೊಡ್ಡದಾಗಿ ತೆರೆದು ದೊಡ್ಡನಾದವನ್ನು ಮಾಡುವ ಆ ಧ್ವಜನಿವಾಸಿಗಳಾದ ಭೂತಗಳ ಜೊತೆಯಲ್ಲಿ ಆ ಶ್ರೇಷ್ಠವಾದ ರಥದಲ್ಲಿ ನಿಂತನು.
ದುರ್ನಿರೀಕ್ಷ್ಯೋ ಹಿ ಭೂತಾನಾಂ ತೇಜಸಾಽಭ್ಯಧಿಕಂ ಬಭೌ |
ಆದಿತ್ಯ ಇವ ಮಧ್ಯಾಹ್ನೇ ಸಹಸ್ರಕಿರಣಾವೃತಃ ॥30॥
ಅವನು ಜನರು ನೋಡಲು ಅಸಾಧ್ಯವಾದ ಪ್ರಕಾಶದಿಂದ ಕೂಡಿದವನಾಗಿ ಮಧ್ಯಾಹ್ನದ ಸಮಯದಲ್ಲಿ ಸಹಸ್ರಕಿರಣಗಳಿಂದ ಕೂಡಿದ ಸೂರ್ಯನಂತೆ ಅಧಿಕಕಾಂತಿಯಿಂದ ಕಂಗೊಳಿಸಿದನು.
ನ ಸ ಸಜ್ಜತಿ ವೃಕ್ಷೇಷು ಶಸ್ತ್ರೈಶ್ಚಾಪಿ ನ ರಿಷ್ಯತಿ |
ದಿವ್ಯೋ ರಥವರೋ ರಾಜನ್ ದೃಶ್ಯತೇ ಚೈವ ಮಾನುಷೈಃ ॥31॥
ಈ ರಥವು ಮರಗಳಲ್ಲಿ ಸಿಲುಕಿಕೊಳ್ಳುವುದಿಲ್ಲ ಶಸ್ತ್ರಗಳಿಂದ ನಾಶಹೊಂದುವುದಿಲ್ಲ. ರಾಜನೇ ಈ ದಿವ್ಯವಾದ ರಥವು ಮನುಷ್ಯದೃಷ್ಟಿಗೂ ಗೋಚರವಾಗುತ್ತದೆ.
ತಮಾಸ್ಥಾಯ ರಥಂ ದಿವ್ಯಂ ಪರ್ಜನ್ಯಸಮನಿಃಸ್ವನಮ್ |
ನಿರ್ಯಯೌ ಪುಂಡರೀಕಾಕ್ಷಃ ಪಾಂಡವಾಭ್ಯಾಂ ಸಹಾಚ್ಯುತಃ ॥32॥
ಅಂತಹ ದಿವ್ಯವಾದ ಪರ್ಜನ್ಯನಿನಾದವುಳ್ಳ ರಥವನ್ನು ಏರಿ ಪುಂಡರೀಕಾಕ್ಷನಾದ ಕೃಷ್ಣನು ಭೀಮಾರ್ಜುನರ ಜೊತೆಯಲ್ಲಿ

ಹೊರಟನು.
ಯಂ ಲೇಭೇ ವಾಸವಾದ್ ರಾಜಾ ವಸುಸ್ತಸ್ಮಾದ್ ಬೃಹದ್ರಥಃ |
ಬೃಹದ್ರಥಾತ್ ಕ್ರಮೇಣೈವ ಪ್ರಾಪ್ತೋ ಬಾರ್ಹದ್ರಥೋ ರಥಮ್ ॥33॥
ಆ ರಥವು ಇಂದ್ರನಿಂದ ವಸುವಿಗೂ ವಸುವಿನಿಂದ ಬೃಹದ್ರಥನಿಗೂ ಬೃಹದ್ರಥನಿಂದ ಕ್ರಮವಾಗಿ ಜರಾಸಂಧನಿಗೂ ಬಂದಿದ್ದಿತು.
ಸ ನಿರ್ಯಾಯ ಮಹಾಬಾಹುಃ ಪುಂಡರೀಕೇಕ್ಷಣಸ್ತತಃ |
ಗಿರಿವ್ರಜಾದ್ ಬಹಿಸ್ತಸ್ಥೌ ಸಮದೇಶೇ ಮಹಾಯಶಾಃ ॥34॥
ಮಹಾಬಾಹುವೂ ಮಹಾಕೀರ್ತಿವಂತನೂ ಪುಂಡರೀಕಾಕ್ಷನೂ ಆದ ಕೃಷ್ಣನು ಗಿರಿವ್ರಜದಿಂದ ಹೊರಗೆ ಬಂದು ಒಂದು ಸಮತಳವಾದ ಪ್ರದೇಶದಲ್ಲಿ ನಿಂತನು.
ತತ್ರೈನಂ ನಾಗರಾಃ ಸರ್ವೇ ಸತ್ಕಾರೇಣಾಭ್ಯಯುಸ್ತದಾ |
ಬ್ರಾಹ್ಮಣಪ್ರಮುಖಾ ರಾಜನ್ ವಿಧಿದೃಷ್ಟೇನ ಕರ್ಮಣಾ ॥35॥
ರಾಜನೇ! ಅಲ್ಲಿ ನಗರವಾಸಿಗಳೆಲ್ಲರೂ ಪೂಜಾಸಾಮಗ್ರಿಗಳನ್ನು ಹಿಡಿದು ಬ್ರಾಹ್ಮಣರನ್ನು ಮುಂದೆಮಾಡಿಕೊಂಡು ವಿಧಿವತ್ತಾಗಿ ಕೃಷ್ಣನನ್ನು ಸತ್ಕರಿಸಲು ಬಂದರು.
ಬಂಧನಾದ್ ವಿಪ್ರಮುಕ್ತಾಶ್ಚ ರಾಜಾನೋ ಮಧುಸೂದನಮ್ |
ಪೂಜಯಾಮಾಸುರೂಚುಶ್ಚ ಸಾಂತ್ವಪೂರ್ವಮಿದಂ ವಚಃ ॥36॥
ಬಂಧನದಿಂದ ಬಿಡುಗಡೆಯಾದ ರಾಜರೆಲ್ಲರೂ ಮಧುಸೂದನನನ್ನು ಸತ್ಕರಿಸಿ ಸಮಾಧಾನದಿಂದ ಈ ಮಾತುಗಳನ್ನು ಆಡಿದರು.
ನೈತಚ್ಚಿತ್ರಂ ಮಹಾಬಾಹೋ ತ್ವಯಿ ದೇವಕಿನಂದನ |
ಭೀಮಾರ್ಜುನಬಲೋಪೇತೇ ಧರ್ಮಸ್ಯ ಪರಿಪಾಲನಮ್ ॥37॥
ದೇವಕಿನಂದನನಾದ ಮಹಾಬಾಹುವೇ! ಭೀಮಾರ್ಜುನರ ಬಲದಿಂದ ಕೂಡಿದ ನಿನಗೆ ಈ ಧರ್ಮದ ಪರಿಪಾಲನೆಯು ಆಶ್ಚರ್ಯವಲ್ಲ.
ಜರಾಸಂಧಹ್ರದೇ ಘೋರೇ ದುಃಖಪಂಕೇ ನಿಮಜ್ಜತಾಮ್ |
ರಾಜ್ಞಾಂ ಸಮಭ್ಯುದ್ಧರಣಂ ಯದಿದಂ ಕೃತಮದ್ಯ ವೈ ॥38॥
ಘೋರವಾದ ಜರಾಸಂಧನೆಂಬ ಮಡುವಿನಲ್ಲಿ, ದುಃಖವೆಂಬ ಕೆಸರಿನಲ್ಲಿ ಮುಳುಗುತ್ತಿದ್ದ ನಮ್ಮನ್ನು ಮೇಲಕ್ಕೆತ್ತಿ, ಈ ದಿನ ನೀನು ಮಾಡಿದ ಕರ್ಮವು ಆಶ್ಚರ್ಯವಲ್ಲ.
ರಾಜ್ಞಾಂ ಸಮವಸನ್ನಾನಾಂ ಗಿರಿದುರ್ಗೇ ಸುದಾರುಣೇ |
ದಿಷ್ಟ್ಯಾ ಮೋಕ್ಷಾದ್ ಯಶೋ ದೀಪ್ತಮಾಹೃತಂ ತೇ ನರೋತ್ತಮ ॥39॥
ಪುರುಷೋತ್ತಮನೇ! ಘೋರವಾದ ಗಿರಿದುರ್ಗದಲ್ಲಿ ಅವಸಾನ ಹೊಂದುತ್ತಿದ್ದ ರಾಜರುಗಳನ್ನು ದೈವಶವದಿಂದ ವಿಮೋಚನೆಗೊಳಿಸಿ ನೀನು ದೀಪ್ತವಾದ ಕೀರ್ತಿಯನ್ನು ಸಂಪಾದಿಸಿರುವೆ.
ಕಿಂ ಕುರ್ಮಃ ಪುರುಷವ್ಯಾಘ್ರ ಸಮಾಜ್ಞಾಪಯ ನಃ ಪ್ರಭೋ |
ಕೃತಮಿತ್ಯೇವ ತಜ್ಜ್ಞೇಯಂ ಯದ್ಯಪಿ ಸ್ಯಾತ್ ಸುದುಷ್ಕರಮ್ ॥40॥
ಪುರುಷವ್ಯಾಘ್ರನಾದ ಪ್ರಭುವೇ! ನಾವು ನಿನಗೆ ಏನು ಮಾಡೋಣವೆಂದು ಅಪ್ಪಣೆಯನ್ನು ಮಾಡು. ಅದು ಎಷ್ಟೇ ಕಷ್ಟವಾಗಿದ್ದರೂ ಅದನ್ನು ಮಾಡಿದೆವೆಂದೇ ತಿಳಿ.
ತಾನುವಾಚ ಹೃಷೀಕೇಶಃ ಸಮಾಶ್ವಾಸ್ಯ ಮಹಾಮನಾಃ |
ಯುಧಿಷ್ಠಿರೋ ರಾಜಸೂಯಂ ಕ್ರತುಮಾಹರ್ತುಮಿಚ್ಛತಿ ॥41॥
ತಸ್ಯ ಧರ್ಮಪ್ರವೃತ್ತಸ್ಯ ಪಾರ್ಥಿವತ್ವಂ ಚಿಕೀರ್ಷತಃ |
ಸರ್ವೈರ್ಭವದ್ಭಿರ್ಯಜ್ಞಾರ್ಥೇ ಸಾಹಾಯ್ಯಂ ದೀಯತಾಮಿತಿ ॥42॥
ಮಹಾಮನನಾದ ಹೃಷೀಕೇಶನು ಅವರನ್ನು ಸಮಾಧಾನಪಡಿಸುತ್ತಾ ಯುಧಿಷ್ಠಿರನು ರಾಜಸೂಯಯಾಗವನ್ನು ಮಾಡಲು ಇಚ್ಛಿಸುತ್ತಾನೆ. ಧರ್ಮಕಾರ್ಯದಲ್ಲಿ ಪ್ರವೃತ್ತನಾಗಿ ಸಾಮ್ರಾಟ್ ಪದವಿಯನ್ನು ಸಂಪಾದಿಸಲು ಬಯಸುವ ಅವನಿಗೆ ನೀವೆಲ್ಲರೂ ಆವನ ಯಜ್ಞದ ಸಲುವಾಗಿ ಸಹಾಯವನ್ನು ಮಾಡಿ ಎಂದು ಹೇಳಿದನು.
ತತಃ ಸುಪ್ರೀತಮನಸಸ್ತೇ ನೃಪಾ ಭರತರ್ಷಭ |
ತಂ ತಥೇತ್ಯಬ್ರುವನ್ ಸರ್ವೇ ಪ್ರತಿಜಜ್ಞುಶ್ಚ ತಾಂ ಗಿರಮ್ ॥43॥
ಭರತರ್ಷಭನೇ! ಆಗ ಸಂತೋಷಗೊಂಡ ಮನಸ್ಸುಳ್ಳ ಆ ರಾಜರೆಲ್ಲರೂ ಹಾಗೆಯೇ ಆಗಲಿ ಎಂದು ಸಹಾಯಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದರು.
ರತ್ನಭಾಜಂ ಚ ದಾಶಾರ್ಹಂ ಚಕ್ರುಸ್ತೇ ಪೃಥಿವೀಶ್ವರಾಃ |
ಕೃಚ್ಛ್ರಾಜ್ಜಗ್ರಾಹ ಗೋವಿಂದಸ್ತೇಷಾಂ ತದನುಕಂಪಯಾ ॥44॥
ಆ ರಾಜರೆಲ್ಲರೂ ದಾಶಾರ್ಹನಾದ ಕೃಷ್ಣನಿಗೆ ರತ್ನಗಳನ್ನು ತಂದು ಒಪ್ಪಿಸಿದರು. ಗೋವಿಂದನಾದರೋ ಅವರ ಮೇಲಿನ ಕರುಣೆಯಿಂದ ಬಹಳ ಕಷ್ಟದಿಂದ ಅವುಗಳನ್ನು ಸ್ವೀಕರಿಸಿದನು.
ಜರಾಸಂಧಾತ್ಮಜಶ್ಚೈವ ಸಹದೇವೋ ಮಹಾರಥಃ |
ನಿರ್ಯಯೌ ಸಜನಾಮಾತ್ಯಃ ಪುರಸ್ಕೃತ್ಯ ಪುರೋಹಿತಮ್ ॥45॥
ಜರಾಸಂಧನ ಪುತ್ರನಾದ ಮಹಾರಥನಾದ ಸಹದೇವನು ಪುರೋಹಿತರನ್ನು ಮುಂದೆಮಾಡಿ ಕೊಂಡು ತನ್ನ ಸ್ವಜನರನ್ನು ಅಮಾತ್ಯರನ್ನು ಕರೆದುಕೊಂಡು ಕೃಷ್ಣನಿದ್ದ ಸ್ಥಳಕ್ಕೆ ಬಂದನು.
ಸಚಿವೈಃ ಪ್ರಶ್ರಿತೋ ಭೂತ್ವಾ ಬಹುರತ್ನಪುರಸ್ಕೃತಃ |

ಸಹದೇವೋ ನೃಣಾಂ ದೇವಂ ವಾಸುದೇವಮುಪಾಶ್ರಿತಃ ॥46॥
ಸಚಿವರ ಜೊತೆಯಲ್ಲಿ ವಿನಯದಿಂದ ಬಂದು ಬಹುರತ್ನಗಳನ್ನು ಕೊಟ್ಟು ಸಹದೇವನು ಎಲ್ಲರಿಗೂ ದೇವನಾದ ವಾಸುದೇವನಿಗೆ ಶರಣಾಗತನಾದನು.
ಸಹದೇವಃ
ಯತ್ ಕೃತಂ ಪುರುಷವ್ಯಾಘ್ರ ಮಮ ಪಿತ್ರಾ ಜನಾರ್ದನ |
ತತ್ ತೇ ಹೃದಿ ಮಹಾಬಾಹೋ ನ ಕಾರ್ಯಂ ಪುರುಷೋತ್ತಮ ॥47॥
ಪುರುಷೋತ್ತಮನೇ! ಪುರುಷವ್ಯಾಘ್ರನೇ! ಮಹಾಬಾಹುವೇ! ಜನಾರ್ದನನೇ! ನನ್ನ ತಂದೆಯು ಮಾಡಿದ ಅಪಚಾರವನ್ನು ನೀನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡ.
ತ್ವಾಂ ಪ್ರಪನ್ನೋಽಸ್ಮಿ ಗೋವಿಂದ ಪ್ರಸಾದಂ ಕುರು ಮೇ ಪ್ರಭೋ|
ಪಿತುರಿಚ್ಛಾಮಿ ಸಂಸ್ಕಾರಂ ಕರ್ತುಂ ದೇವಕಿನಂದನ ॥48॥
ಗೋವಿಂದನೇ ! ಪ್ರಭುವೇ! ನಾನು ನಿನಗೆ ಶರಣಾಗತನಾಗಿದ್ದೇನೆ. ನನ್ನನ್ನು ಅನುಗ್ರಹಿಸು. ದೇವಕಿ ನಂದನನೇ! ನಾನು ನನ್ನ ತಂದೆಗೆ ಅಂತ್ಯಸಂಸ್ಕಾರವನ್ನುಮಾಡಲು ಬಯಸುತ್ತೇನೆ.
ತ್ವತ್ತೋಽಭ್ಯನುಜ್ಞಾಂ ಸಂಪ್ರಾಪ್ಯ ಭೀಮಸೇನಾತ್ ತಥಾರ್ಜುನಾತ್ |
ನಿರ್ಭಯೋ ವಿಚರಿಷ್ಯಾಮಿ ಯಥಾಕಾಮಂ ಯಥಾಸುಖಮ್ ॥49॥
ನಿನ್ನ ಅನುಮತಿಯನ್ನು ಪಡೆದು ಭೀಮಸೇನನ ಮತ್ತು ಅರ್ಜುನನ ಭಯವಿಲ್ಲದೆ ನಾನು ಸುಖವಾಗಿ ನನ್ನ ಮನಸ್ಸಿಗೆ ಬಂದಂತೆ ಜೀವಿಸುವೆನು.
ಏವಂ ವಿಜ್ಞಾಪ್ಯಮಾನಸ್ಯ ಸಹದೇವಸ್ಯ ಮಾರಿಷ |
ಪ್ರಹೃಷ್ಟೋ ದೇವಕೀಪುತ್ರಃ ಪಾಂಡವೌ ಚ ಮಹಾರಥೌ ॥50॥
ಕ್ರಿಯತಾಂ ಸಂಸ್ಕ್ರಿಯಾ ರಾಜನ್ ಪಿತುಸ್ತ ಇತಿ ಚಾಬ್ರುವನ್ |
ತಚ್ಛ್ರುತ್ವಾ ವಾಸುದೇವಸ್ಯ ಪಾರ್ಥಯೋಶ್ಚ ಸ ಮಾಗಧಃ ॥51॥
ಪ್ರವಿಶ್ಯ ನಗರಂ ತೂರ್ಣಂ ಸಹ ಮಂತ್ರಿಭಿರಪ್ಯುತ |
ಚಿತಾಂ ಚಂದನಕಾಷ್ಠೈಶ್ಚ ಕಾಳೈಶ್ಚ ಸರಳೈಸ್ತಥಾ ॥52॥
ಕಾಳಾಗುರುಸುಗಂಧ್ಯೈಶ್ಚ ತೈಲೈಶ್ಚ ವಿವಿಧೈರಪಿ |
ಘೃತಧಾರಾಕ್ಷತೈಶ್ಚೈವ ಸುಮನೋಭಿಶ್ಚ ಮಾಗಧಮ್ ॥53॥
ಸಮಂತಾದವಕೀರ್ಯೈತದದಹನ್ ಮಗಧಾಧಿಪಮ್ |
ಉದಕಂ ತಸ್ಯ ಚಕ್ರೇಽಥ ಸಹದೇವಃ ಸಹಾನುಜಃ ॥54॥
ರಾಜನೇ! ಸಹದೇವನು ಹೀಗೆ ನಿವೇದನೆ ಮಾಡಿಕೊಳ್ಳುತ್ತಿರಲು ಸಂತುಷ್ಟನಾದ ಶ್ರೀಕೃಷ್ಣನು ಮತ್ತು ಮಹಾರಥರಾದ ಪಾಂಡವರು ಸಹ ರಾಜನೇ! ನಿನ್ನ ತಂದೆಗೆ ಉತ್ತರಕ್ರಿಯೆಗಳನ್ನುಮಾಡು ಎಂದು ಹೇಳಿದರು. ಅದನ್ನು ಕೇಳಿದ ಮಗಧಾಧಿಪತಿಯಾದ ಸಹದೇವನು ಮಂತ್ರಿಗಳ ಜೊತೆಯಲ್ಲಿ ಶೀಘ್ರವಾಗಿ ನಗರವನ್ನು ಪ್ರವೇಶಿಸಿ ಚಂದನ ಕಾಷ್ಠಗಳಿಂದಲೂ, ಕಾಳಸರಳ ಕಾಷ್ಠಗಳಿಂದಲೂ, ಸುಗಂಧಯುಕ್ತವಾದ ಕಾಳಾಗರುಕಾಷ್ಠದಿಂದಲೂ ವಿವಿಧವಾದ ಸುಗುಂಧತೈಲಗಳಿಂದಲೂ ಘೃತಧಾರೆ ಮತ್ತು ಅಕ್ಷತೆ ಮತ್ತು ಪುಷ್ಪಗಳಿಂದಲೂ ಜರಾಸಂಧನದೇಹವನ್ನು ಮುಚ್ಚಿ ಅದನ್ನು ದಹನಮಾಡಿದನು. ಅನಂತರ ಆ ಸಹದೇವನು ತನ್ನ ಕರ್ಮನ ಜೊತೆಯಲ್ಲಿ ಉದಕಕ್ರಿಯೆಯನ್ನು ಮಾಡಿದನು.
ಕೃತ್ವಾ ಪಿತುಃ ಸ್ವರ್ಗಗತಿಂ ನಿರ್ಯಯೌ ಯತ್ರ ಕೇಶವಃ |
ಪಾಂಡವೌ ಚ ಮಹಾಭಾಗೌ ಭೀಮಸೇನಾರ್ಜುನಾವುಭೌ |
ಸ ಪ್ರಹ್ವಃ ಪ್ರಾಂಜಲಿರ್ಭೂತ್ವಾ ವ್ಯಜ್ಞಾಪಯತ ಮಾಧವಮ್ ॥55॥
ಸಹದೇವನು ತಂದೆಯ ಸ್ವರ್ಗಗತಿಗೆ ಬೇಕಾದ ಉತ್ತರಕ್ರಿಯೆಯನ್ನು ಮಾಡಿ ಎಲ್ಲಿ ಕೇಶವನೂ ಮತ್ತು ಮಹಾನುಭಾವರಾದ ಪಾಂಡುಪುತ್ರರಾದ ಭೀಮಾರ್ಜುನರೂ ಇದ್ದರೋ ಅಂತಹ ಸ್ಥಳಕ್ಕೆ ಬಂದು ವಿನಯದಿಂದ ಮಾಧವನಿಗೆ ಕೈಗಳನ್ನು ಮುಗಿದು ವಿಜ್ಞಾಪನೆಯನ್ನು ಮಾಡಿದನು.
ಇಮೇ ರತ್ನಾನಿ ಭೂರೀಣಿ ಗೋಜಾವಿಮಹಿಷಾದಯಃ |
ಹಸ್ತಿನೋಽಶ್ವಾಶ್ಚ ಗೋವಿಂದ ವಾಸಾಂಸಿ ವಿವಿಧಾನಿ ಚ ॥56॥
ನೀಯತಾಂ ಧರ್ಮರಾಜಾಯ ಯಥಾ ವಾ ಮನ್ಯತೇ ಭವಾನ್ ॥57॥
ಇವು ಶ್ರೇಷ್ಠವಾದ ರತ್ನಗಳು ಮತ್ತು ಗೋವು ಅಜ ಆವಿ ಮಹಿಷ ಗಜ ಮತ್ತು ಅಶ್ವಗಳು ಮತ್ತು ವಿವಿಧವಾದ ವಸ್ತ್ರಗಳು. ಗೋವಿಂದನೇ! ಇದನ್ನು ಧರ್ಮರಾಜನ ಸಲುವಾಗಿ ತೆಗೆದುಕೊಂಡುಹೋಗು ಅಥವಾ ನಿನಗೆ ಇಷ್ಟ ಬಂದಂತೆಮಾಡು .
ವೈಶಂಪಾಯನಃ
ಭಯಾರ್ತಾಯ ತದಾ ತಸ್ಮೈ ದತ್ವಾ ಕೃಷ್ಣೋಽಭಯಂ ತಥಾ |
ಅಭ್ಯಷಿಂಚತ ರಾಜಾನಂ ಸಹದೇವಂ ಜನಾರ್ದನಃ ॥58॥
ಕೃಷ್ಣನು ಆಗ ಭಯಾರ್ಥನಾದ ಅವನಿಗೆ ಅಭಯದಾನವನ್ನು ಮಾಡಿ ಅವನನ್ನು ಮಗಧಾಧಿಪತಿಯನ್ನಾಗಿ ಅಭಿಷೇಕವನ್ನು ಮಾಡಿದನು.
ಮಾಗಧಾನಾಂ ಮಹೀಪಾಲಂ ಜರಾಸಂಧಾತ್ಮಜಂ ತದಾ |
ಆದದೇಽಸ್ಯ ಮಹಾರ್ಹಾಣಿ ರತ್ನಾನಿ ಪುರುಷೋತ್ತಮಃ ॥59॥

ಪುರುಷೋತ್ತಮನು ಜರಾಸಂಧನ ಮಗನಾದ ಸಹದೇವನಿಗೆ ಮಗಧಾಧಿಪತಿಯನ್ನಾಗಿ ಅಭಿಷೇಕಮಾಡಿ; ಅವನು ಕೊಟ್ಟ ಬೆಲೆಬಾಳುವ ಪದಾರ್ಥಗಳನ್ನು ಸ್ವೀಕರಿಸಿದನು.
ಗತ್ವೈಕತ್ವಂ ಸ ಕೃಷ್ಣೇನ ಪಾರ್ಥಾಭ್ಯಾಂ ಚಾಪಿ ಸತ್ಕೃತಃ |
ವಿವೇಶ ಮತಿಮಾನ್ ರಾಜಾ ಪುನರ್ಬಾರ್ಹದ್ರಥಂ ಪುರಮ್ ॥60॥
ಸಹದೇವನಾದರೂ ಕೃಷ್ಣನ ಜೊತೆಯಲ್ಲಿ ಐಕಮತ್ಯವನ್ನು ಹೊಂದಿ ಭೀಮಾರ್ಜುನರಿಂದ ಸತ್ಕೃತನಾಗಿ ಮೇಧಾವಿಯಾದ ಅವನು ಪುನಃ ರಾಜಧಾನಿಯಾದ ಗಿರಿವ್ರಜವನ್ನು ಪ್ರವೇಶಿಸಿದನು.
ಪಾರ್ಥಾಭ್ಯಾಂ ಸಹಿತಃ ಕೃಷ್ಣಃ ಸರ್ವೈಶ್ಚ ವಸುಧಾಧಿಪೈಃ |
ಯಥಾವಯಃ ಸಮಾಗಮ್ಯ ವಿಸಸರ್ಜ ನರಾಧಿಪಾನ್ ॥61॥
ಪಾರ್ಥನಿಂದ ಒಡಗೂಡಿದ ಕೃಷ್ಣನು ಎಲ್ಲಾ ರಾಜರುಗಳ ಜೊತೆಯಲ್ಲಿಯೂ ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಸಮಾಗಮವನ್ನು ಹೊಂದಿ ಅವರನ್ನು ಕಳುಹಿಸಿಕೊಟ್ಟನು.
ವಿಸೃಜ್ಯ ಸರ್ವಾನ್ ನೃಪತೀನ್ ರಾಜಸೂಯೇ ಮಹಾತ್ಮಭಿಃ |
ಆಗಂತವ್ಯಂ ಭವದ್ಭಿಸ್ತು ಧರ್ಮರಾಜಪ್ರಿಯೇಪ್ಸುಭಿಃ ॥62॥
ಮಹಾತ್ಮರಾದ ನೀವೆಲ್ಲರೂ ಧರ್ಮರಾಜನಿಗೆ ಹಿತವನ್ನು ಬಯಸಿ ಅವನು ಮಾಡುವ ರಾಜಸೂಯಯಾಗಕ್ಕೆ ಬರಬೇಕು ಎಂದು ಹೇಳಿ ಕಳುಹಿಸಿಕೊಟ್ಟನು.
ಏವಮುಕ್ತಾ ಮಾಧವೇನ ಸರ್ವೇ ತೇ ವಸುಧಾಧಿಪಾಃ |
ಏವಮಸ್ತ್ವಿತಿ ಚಾಪ್ಯುಕ್ತ್ವಾ ಸಮೇತಾಃ ಪರಯಾ ಮುದಾ ॥63॥
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಆ ರಾಜರುಗಳೆಲ್ಲರೂ ಪರಮ ಸಂತೋಷದಿಂದ ಹಾಗೆಯೇ ಆಗಲಿ ಎಂದು ಒಟ್ಟಿಗೆ ಹೇಳಿದರು.
ಭೀಮಾರ್ಜುನಹೃಷೀಕೇಶಾಃ ಪ್ರಹೃಷ್ಟಾಃ ಪ್ರಯಯುಃ ಸಹ |
ರತ್ನಾನ್ಯಾದಾಯ ಭೂರೀಣಿ ಜ್ವಲಂತೋ ರಿಪುಸೂದನಾಃ ॥64॥
ಶತ್ರುಸೂದನರಾದ ಕೃಷ್ಣಭೀಮಾರ್ಜುನರು ಸಂತುಷ್ಟರಾಗಿ ಬಹಳ ರತ್ನಗಳನ್ನು ತೆಗೆದುಕೊಂಡು ಕಾಂತಿಯಿಂದ ಬೆಳಗುತ್ತಾ ಅಲ್ಲಿಂದ ಜೊತೆಯಲ್ಲಿ ಹೊರಟರು.
ಇಂದ್ರಪ್ರಸ್ಥಮಥಾಗಮ್ಯ ಭ್ರಾತೃಭ್ಯಾಂ ಸಹಿತೋಽಚ್ಯುತಃ |
ಸಮೇತ್ಯ ಧರ್ಮರಾಜಾನಂ ಪ್ರೀಯಮಾಣಮುಪಸ್ಥಿತಃ ॥65॥
ಭೀಮಾರ್ಜುನರಿಂದ ಸಹಿತನಾದ ಕೃಷ್ಣನು ಇಂದ್ರಪ್ರಸ್ಥವನ್ನು ತಲುಪಿ ಧರ್ಮರಾಜನನ್ನು ಸಂಧಿಸಿ ಸಂತೋಷದಿಂದ ಅವನ ಬಳಿ ನಿಂತನು.
ದಿಷ್ಟ್ಯಾ ಭೀಮೇನ ಬಲವಾನ್ ಜರಾಸಂಧೋ ನಿಪಾತಿತಃ |
ರಾಜಾನೋ ಮೋಕ್ಷಿತಾಶ್ಚೇಮೇ ಬಂಧನಾನ್ನೃಪಸತ್ತಮಾಃ ॥66॥
ದಿಷ್ಟ್ಯಾ ಕುಶಲಿನೌ ಚೇಮೌ ಭೀಮಸೇನಧನಂಜಯೌ |
ಪುನಃ ಸ್ವನಗರಂ ಪ್ರಾಪ್ತಾವಕ್ಷತಾವಿತಿ ಭಾರತ ॥67॥
ದೇವರದಯೆಯಿಂದ ಪ್ರಭಲನಾದ ಭೀಮಸೇನನು ಜರಾಸಂಧನನ್ನು ಸಂಹರಿಸಿದನು. ಈ ಎಲ್ಲಾ ರಾಜಶ್ರೇಷ್ಠರೂ ಬಂಧನದಿಂದ ಬಿಡುಗಡೆಯನ್ನು ಹೊಂದಿದರು. ದೇವರದಯೆಯಿಂದಲೇ ಭೀಮಾರ್ಜುನರು ಕುಶಲಿಗಳಾಗಿ ಯಾವ ಗಾಯವೂ ಇಲ್ಲದೆ ತಮ್ಮ ನಗರಕ್ಕೆ ಹಿಂದಿರುಗಿದ್ದಾರೆ.
ತತೋ ಯುಧಿಷ್ಠಿರಃ ಕೃಷ್ಣಂ ಪೂಜಯಿತ್ವಾ ಯಥಾರ್ಹತಃ |
ಭೀಮಸೇನಾರ್ಜುನೌ ಚೈವ ಪ್ರಹೃಷ್ಟಃ ಪರಿಷಸ್ವಜೇ ॥68॥
ಆಗ ಯುಧಿಷ್ಠಿರನು ಕೃಷ್ಣನನ್ನು ಯಥಾಯೋಗ್ಯವಾಗಿ ಪೂಜಿಸಿ ಸಂತೋಷದಿಂದ ಭೀಮಾರ್ಜುನರನ್ನು ಆಲಿಂಗಿಸಿಕೊಂಡನು.
ತತಃ ಕ್ಷೀಣೇ ಜರಾಸಂಧೇ ಭ್ರಾತೃಭಿರ್ವಿಹಿತಂ ಜಯಮ್ |
ಅಜಾತಶತ್ರುರಾಸಾದ್ಯ ಮುಮುದೇ ಭ್ರಾತೃಭಿಃ ಸಹ ॥69॥
ಜರಾಸಂಧನು ನಾಶವನ್ನು ಹೊಂದುತ್ತಿರಲು ಅಜಾತಶತ್ರುವಾದ ಯುಧಿಷ್ಠಿರನು ತನ್ನ ತಮ್ಮಂದಿರು ಸಂಪಾದಿಸಿಕೊಟ್ಟ ಜಯವನ್ನು ಹೊಂದಿದವನಾಗಿ ತಮ್ಮಂದಿರ ಜೊತೆಯಲ್ಲಿ ಸಂತೋಷದಿಂದ ಇದ್ದನು.
ಹೃಷ್ಟಶ್ಚ ಧರ್ಮರಾಡ್ವಾಕ್ಯಂ ಜನಾರ್ದನಮಭಾಷತ |
ತ್ವಾಂ ಪ್ರಾಪ್ಯ ಪುರುಷವ್ಯಾಘ್ರ ಭೀಮಸೇನೇನ ಪಾತಿತಃ |
ಮಾಗಧೋಽಸೌ ಬಲೋನ್ಮತ್ತೋ ಜರಾಸಂಧಃ ಪ್ರತಾಪವಾನ್ ॥70॥
ಸಂತೋಷಗೊಂಡ ಧರ್ಮರಾಜನು ಜನಾರ್ದನನನ್ನು ಕುರಿತು ಹೀಗೆ ಹೇಳಿದನು. ಪುರುಷವ್ಯಾಘ್ರನೇ! ನಿನ್ನ ಅನುಗ್ರಹದಿಂದ ಬಲೋನ್ಮತ್ತನೂ ಪ್ರತಾಪಶಾಲಿಯೂ ಆದ ಮಗಧರಾಜನಾದ ಜರಾಸಂಧನು ಭೀಮಸೇನನಿಂದ ಹತನಾಗಿದ್ದಾನೆ.
ರಾಜಸೂಯಂ ಕ್ರತುಶ್ರೇಷ್ಠಂ ಪ್ರಾಪ್ಸ್ಯಾಮಿ ವಿಗತಜ್ವರಃ |
ತ್ವದ್ಬುದ್ಧಿಬಲಮಾಶ್ರಿತ್ಯ ಭಾಗಾರ್ಹೋಽಸಿ ಜನಾರ್ದನ ॥71॥
ಜನಾರ್ದನನೇ! ನಿನ್ನ ಬುದ್ಧಿಬಲವನ್ನು ಅವಲಂಬಿಸಿ ನಾನು ಶ್ರೇಷ್ಠವಾದ ರಾಜಸೂಯಯಾಗವನ್ನು ನಿರಾತಂಕವಾಗಿಮಾಡುತ್ತೇನೆ. ನೀನು ಸಹ ಅದರ ಫಲಕ್ಕೆ ಭಾಗಿಯಾಗಿದ್ದೀಯೆ.
ಪೀತಂ ಪೃಥಿವ್ಯಾಂ ಕುಂಡೇನ ಯಶಸ್ತೇ ಪುರುಷೋತ್ತಮ |
ಜರಾಸಂಧವಧೇನೈವ ಪ್ರಾಪ್ತಾಸ್ತೇ ವಿಪುಲಾಃ ಶ್ರಿಯಃ |

ಏವಂ ಸಂಭಾಷ್ಯ ಕೌಂತೇಯಃ ಪ್ರಾದಾದ್ ರಥವರಂ ಪ್ರಭೋಃ ॥72॥
ಪುರುಷೋತ್ತಮನೇ! ನೀನು ಭೂಮಿ ಎಂಬ ಹೆಂಡದಿಂದಲೇ ಕೀರ್ತಿಯನ್ನು ಪಾನಮಾಡಿದ್ದೀಯೆ(ನಿನ್ನ ಕೀರ್ತಿಯು ಭೂಮಿಯಲ್ಲೆಲ್ಲಾ ಹರಡಿದೆ.) ಜರಾಸಂಧನವಧೆಯಿಂದ ವಿಪುಲವಾದ ಸಂಪತ್ತನ್ನು ಗಳಿಸಿದ್ದೀಯೆ. ಹೀಗೆ ಮಾತನಾಡಿ ಕೌಂತೇಯನಾದ ಧರ್ಮರಾಜನು ಆ ಶ್ರೇಷ್ಠವಾದ ರಥವನ್ನು ಪ್ರಭುವಾದ ಕೃಷ್ಣನಿಗೆ ಕೊಟ್ಟನು.
ಪ್ರತಿಗೃಹ್ಯ ತು ಗೋವಿಂದೋ ಜರಾಸಂಧಸ್ಯ ತಂ ರಥಮ್ |
ಪ್ರಹೃಷ್ಟಸ್ತಸ್ಯ ಮುಮುದೇ ಫಲ್ಗುನೇನ ಜನಾರ್ದನಃ |
ಪ್ರೀತಿಮಾನಭವದ್ ರಾಜನ್ ಧರ್ಮರಾಜಪುರಸ್ಕೃತಃ ॥73॥
ಗೋವಿಂದನು ಆ ಜರಾಸಂಧನ ರಥವನ್ನು ಸ್ವೀಕರಿಸಿ ಸಂತೋಷಗೊಂಡವನಾಗಿ ಅರ್ಜುನನ ಜೊತೆಯಲ್ಲಿ ಆನಂದಿಸಿದನು. ರಾಜನೇ! ಧರ್ಮರಾಜನಿಂದ ಪೂಜಿಸಲ್ಪಟ್ಟವನಾಗಿ ಜನಾರ್ದನನು ಸಂತೋಷಗೊಂಡನು.
ಯಯಾವಥ ಸಮಾಭಾಷ್ಯ ಪ್ರೇಮ್ಣಾ ರಾಜನ್ ನೃಪೈಃ ಸಹ |
ಸತ್ಕೃತ್ಯ ಪೂಜಯಿತ್ವಾ ಚ ವಿಸಸರ್ಜ ನರಾಧಿಪಾನ್ ॥74॥
ರಾಜನೇ! ಅನಂತರ ಎಲ್ಲ ರಾಜರುಗಳ ಜೊತೆಯಲ್ಲಿ ಪ್ರೇಮದಿಂದ ಸಂಭಾಷಣೆಯನ್ನು ಮಾಡಿ ಅವರನ್ನು ಸತ್ಕಾರಗಳಿಂದ ಪೂಜಿಸಿ ಬೀಳ್ಕೊಟ್ಟನು.
ಯುಧಿಷ್ಠಿರಾಭ್ಯನುಜ್ಞಾತಾಸ್ತೇ ನೃಪಾ ಹೃಷ್ಟಮಾನಸಾಃ |
ಜಗ್ಮುಃ ಸ್ವದೇಶಾಂಸ್ತ್ವರಿತಾ ಯಾನೈರುಚ್ಚಾವಚೈಸ್ತದಾ ॥75॥
ಯುಧಿಷ್ಠಿರನ ಅಪ್ಪಣೆಯನ್ನು ಪಡೆದ ಆ ರಾಜರೆಲ್ಲರೂ ಸಂತೋಷಗೊಂಡ ಮನಸ್ಸಿನಿಂದ ಉಚ್ಚಾವಚ ವಾಹನಗಳನ್ನು ಏರಿ ತಮ್ಮ ತಮ್ಮ ದೇಶಕ್ಕೆ ಹಿಂದಿರುಗಿದರು.
ಏವಂ ಸ ಪುರುಷವ್ಯಾಘ್ರೋ ಮಹಾಬುದ್ಧಿರ್ಜನಾರ್ದನಃ |
ಪಾಂಡವೈರ್ಘಾತಯಾಮಾಸ ಜರಾಸಂಧಮರಿಂ ತದಾ ॥76॥
ಪುರುಷವ್ಯಾಘ್ರನೂ ಮಹಾಮೇಧಾವಿಯೂ ಆದ ಜನಾರ್ದನನು ಈ ರೀತಿ ಪಾಂಡವರಿಂದ ತನ್ನ ಶತ್ರುವಾದ ಜರಾಸಂಧನನ್ನು ವಿನಾಶಗೊಳಿಸಿದನು.
ಘಾತಯಿತ್ವಾ ಜರಾಸಂಧಂ ಬುದ್ಧಿಪೂರ್ವಮರಿಂದಮಃ |
ಧರ್ಮರಾಜಮನುಜ್ಞಾಪ್ಯ ಪೃಥಾಂ ಕೃಷ್ಣಾಂ ಚ ಭಾರತ ॥77॥
ಸುಭದ್ರಾಂ ಭೀಮಸೇನಂ ಚ ಫಲ್ಗುನಂ ಚ ಯಮೌ ತಥಾ |
ಧೌಮ್ಯಂ ಭೀಮಮನುಜ್ಞಾಪ್ಯ ಪ್ರಯಯೌ ದ್ವಾರಕಾಂ ಪ್ರತಿ ॥78॥
ಭಾರತನೇ! ಅರಿಂದಮನಾದ ಕೃಷ್ಣನು ತನ್ನ ಬುದ್ಧಿಯ ಬಲದಿಂದ ಹೀಗೆ ಜರಾಸಂಧನನ್ನು ಸಂಹರಿಸಿ ಧರ್ಮರಾಜನ ಕುಂತಿಯ ದ್ರೌಪದಿಯ ಸುಭದ್ರೆಯ ಭೀಮಸೇನನ ಅರ್ಜುನನ ನಕುಲಸಹದೇವರ ಮತ್ತು ಧೌಮ್ಯರ ಅನುಮತಿಯನ್ನು ಪಡೆದು ಇನ್ನೊಮ್ಮೆ ಭೀಮನ ಅನುಮತಿಯನ್ನು ಪಡೆದು ದ್ವಾರಕಾಪಟ್ಟಣಕ್ಕೆ ಹೊರಟನು.
ಪಾಂಡವೈರನುಯಾಯದ್ಭಿರ್ಯುಧಿಷ್ಠಿರಪುರೋಗಮೈಃ |
ಹರ್ಷೇಣ ಮಹತಾ ಯುಕ್ತಃ ಪ್ರಾಪ್ಯ ಚಾನುತ್ತಮಂ ಯಶಃ |
ಜಗಾಮ ಹೃಷ್ಟಃ ಕೃಷ್ಣಸ್ತು ಪುನರ್ದ್ವಾರವತೀಂ ಪುರೀಮ್ ॥79॥
ಯುಧಿಷ್ಠಿರ ಮೊದಲಾದ ಪಾಂಡವರು ಅವನನ್ನು ಹಿಂಬಾಲಿಸುತ್ತಿರಲು ಶ್ರೇಷ್ಠವಾದ ಕೀರ್ತಿಯನ್ನು ಪಡೆದ ಕೃಷ್ಣನು ಮಹಾಸಂತೋಷದಿಂದ ಕೂಡಿದವನಾಗಿ ಪುನಃ ದ್ವಾರವತೀಪಟ್ಟಣವನ್ನು ಕುರಿತು ಪ್ರಯಾಣಮಾಡಿದನು.
ತೇನೈವ ರಥಮುಖ್ಯೇನ ತರುಣಾದಿತ್ಯವರ್ಚಸಾ |
ಧರ್ಮರಾಜನಿಸೃಷ್ಟೇನ ದಿವ್ಯೇನಾನಾದಯನ್ ದಿಶಃ ॥80॥
ಧರ್ಮರಾಜನು ಕೊಟ್ಟ ಬಾಲಸೂರ್ಯನಕಾಂತಿಯುಳ್ಳ, ಆ ದಿವ್ಯವಾದ ಶ್ರೇಷ್ಠರಥವನ್ನೇ ಏರಿ ದಿಕ್ಕುಗಳನ್ನು ಪ್ರತಿಧ್ವನಿಗೊಳಿಸುತ್ತಾ ಹೊರಟನು.
ತತೋ ಯುಧಿಷ್ಠಿರಮುಖಾಃ ಪಾಂಡವಾ ಭರತರ್ಷಭ |
ಪ್ರದಕ್ಷಿಣಂ ತದಾಽಕುರ್ವನ್ ಕೃಷ್ಣಮಕ್ಲಿಷ್ಟಕಾರಿಣಮ್ ॥81॥
ಭರತರ್ಷಭನೇ! ಆಗ ಯುಧಿಷ್ಠರನೇ ಮೊದಲಾದ ಪಾಂಡವರು ಅನಾಯಾಸವಾಗಿ ಎಲ್ಲವನ್ನೂಮಾಡುವ ಕೃಷ್ಣನಿಗೆ ಪ್ರದಕ್ಷಿಣೆಯನ್ನು ಮಾಡಿದರು.
ತತೋ ಗತೇ ಭಗವತಿ ಕೃಷ್ಣೇ ದೇವಕಿನಂದನೇ |
ಜಯಂ ಲಬ್ಧ್ವಾ ಸುವಿಪುಲಂ ರಾಜ್ಞಾಮಭಯದಾಸ್ತತಃ ॥82॥
ಸಂವರ್ಧಿತೌಜಸೋ ಭೂಯಃ ಕರ್ಮಣಾ ತೇನ ಭಾರತ |
ದ್ರೌಪದ್ಯಾಃ ಪಾಂಡವಾ ರಾಜನ್ ಪರಾಂ ಪ್ರೀತಿಮವರ್ಧಯನ್ ॥83॥
ಎಲೈ! ಭರತವಂಶದಲ್ಲಿ ಹುಟ್ಟಿದ ಜನಮೇಜಯರಾಜನೇ! ಭಗವಂತನಾದ ದೇವಕಿನಂದನನಾದ ಕೃಷ್ಣನು ಹೊರಟುಹೋಗುತ್ತಿರಲು, ವಿಪುಲವಾದ ಜಯವನ್ನು ಪಡೆದು ರಾಜರುಗಳಿಗೆ ಅಭಯವನ್ನು ಕೊಟ್ಟು, ಆ ಕರ್ಮದಿಂದ ತಮ್ಮ ಪರಾಕ್ರಮವನ್ನು ಇನ್ನೂ ಹೆಚ್ಚಿಸಿಕೊಂಡ ಪಾಂಡವರು ದ್ರೌಪದಿಯ ಜೊತೆಯಲ್ಲಿ ಸಂತೋಷದಿಂದ ಕಾಲವನ್ನು ಕಳೆದರು. ದ್ರೌಪದಿಗೂ ಅಧಿಕವಾದ ಸಂತೋಷವನ್ನು ನೀಡಿದರು.
ತಸ್ಮಿನ್ ಕಾಲೇ ತು ಸಂಪ್ರಾಪ್ತಂ ಧರ್ಮಕಾಮಾರ್ಥಸಂಯುತಮ್ |

ತದ್ರಾಜಾ ಧರ್ಮತಶ್ಚಕ್ರೇ ರಾಜ್ಯಂ ಪ್ರಾಪ್ಯ ಯುಧಿಷ್ಠಿರಃ ॥84॥
ಯುಧಿಷ್ಠಿರನು ರಾಜ್ಯವನ್ನು ಪಡೆದು ಆ ಕಾಲದಲ್ಲಿ ಮಾಡಲು ಯೋಗ್ಯವಾದ ಧರ್ಮ ಕಾಮಾರ್ಥಸಂಯುಕ್ತವಾದ ಕಾರ್ಯಗಳನ್ನು ಧರ್ಮದಿಂದ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ಚತುರ್ವಿಂಶೋಽಧ್ಯಾಯಃ ॥
॥ ಜರಾಸಂಧಪರ್ವಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
ಇಲ್ಲಿಗೆ ಜರಾಸಂಧಪರ್ವವು ಮುಗಿಯಿತು.
****
3. ದಿಗ್ವಿಜಯಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ದ್ವೈಪಾಯನೋಽಥ ಭಗವಾನಭಿಗಮ್ಯ ಪಾರ್ಥಾ-
ನಾಜ್ಞಾಪಯತ್ ಸಕಲಸಂಭೃತಿಸಾಧನಾಯ ।
ತಂ ರಾಜಸೂಯಸಹಿತಂ ಪರಮಾಶ್ವಮೇಧ-
ಯಜ್ಞಂ ಸಮಾದಿಶದನನ್ಯಕೃತಂ ವಿರಿಂಚಾತ್ ॥176॥
ಅಷ್ಟರಲ್ಲಿ ಭಗವಾನ್ ವ್ಯಾಸರು ಪಾಂಡವರ ಬಳಿಗೆ ಬಂದು ಯಾಗದ ಸಕಲ ಸಿದ್ಧತೆಗಳನ್ನು ಮಾಡಲು ಆಜ್ಞಾಪಿಸಿದರು. ಬ್ರಹ್ಮದೇವನು ಹೊರತು ಇನ್ನಾರೂ ಮಾಡದಿದ್ದ ರಾಜಸೂಯ ಸಹಿತವಾದ ಮಹಾಶ್ವಮೇಧ ಯಾಗವನ್ನು ನದೆಸಲು ಅಪ್ಪಣೆಯಿತ್ತರು.
ಕರ್ತಾ ಹಿ ತಸ್ಯ ಪರಮೇಷ್ಠಿಪದಂ ಪ್ರಯಾತಿ
ಯದ್ಯನ್ಯಸದ್ಗುಣವರ್ಯೈಃ ಪರಮೇಷ್ಠಿತುಲ್ಯಃ ।
ಭೀಮೇ ಮಖಸ್ಯ ಫಲಮತ್ಯಧಿಕಂ ನಿಧಾತುಂ
ವ್ಯಾಸಃ ಕ್ರತುಂ ತಮದಿಶದ್ ಗುರುರಬ್ಜಜಸ್ಯ ॥177॥
ಆ ಯಾಗ ಮಾಡುವವನು ಬ್ರಹ್ಮಪದವಿ ಹೊರತು ಬೇರೆ ಉತ್ತಮ ಗುಣಗಳಲ್ಲಿ ಬ್ರಹ್ಮನಿಗೆ ಸಮಾನನಾಗಿದ್ದರೆ ಬ್ರಹ್ಮಪದವಿಯನ್ನು ಪಡೆಯುತ್ತಾನೆ. ಭೀಮ ಬ್ರಹ್ಮನಿಗೆ ಸಮಾನನಾದ್ದರಿಂದ ಅವನಿಗೆ ಯಾಗದ ಪೂರ್ಣಫಲ ಸಿಗುವಂತೆ ಮಾಡಲು ಬ್ರಹ್ಮನಿಗೆ ಗುರುವಾದ ವ್ಯಾಸರು ಭೀಮನಿಗೆ ಯಾಗದ ದಿಗ್ವಿಜಯಕ್ಕೆ ಆದೇಶ ನೀಡಿದರು.
ಅಸಾಧಾರಣಹೇತುರ್ಯಃ ಕರ್ಮಣೋ ಯಸ್ಯ ಚೇತನಃ ।
ಸ ಏವ ತತ್ಫಲಂ ಪೂರ್ಣಂ ಭುಂಕ್ತೇಽನ್ಯೋಽಲ್ಪಮಿತಿ ಸ್ಥಿತಿಃ ॥178॥
ಯಾರು ಯಾವ ಕಾರ್ಯಕ್ಕೆ ಮುಖ್ಯಕಾರಣನೋ ಅವನು ಆ ಕರ್ಮದ ಪೂರ್ಣಫಲಕ್ಕೆ ಭಾಗಿಯಾಗುವನು. ಇತರರು ಯೋಗ್ಯತಾನುಸಾರ ಅಲ್ಪ ಫಲವನ್ನೇ ಪಡೆಯುವರು. ಇದು ಶಾಸ್ತ್ರನಿರ್ಣಯ.
ವಿನಾ ವಿಷ್ಣುಂ ನಿರ್ಣಯೋಽಯಂ ಸ ಹಿ ಕರ್ಮಫಲೋಜ್ಝಿತಃ ।
ಹೇತವೋಽಪಿ ಹಿ ಪಾಪಸ್ಯ ನ ಪ್ರಾಯಃ ಫಲಭಾಗಿನಃ ॥179॥
ದೇವಾಃ ಪುಣ್ಯಸ್ಯ ದೈತ್ಯಾಶ್ಚ ಮಾನುಷಾಸ್ತುದ್ವಿಭಾಗಿನಃ ।
ಅಸಾಧಾರಣಹೇತುಶ್ಚ ಭೀಮ ಏವ ಪ್ರಕೀರ್ತಿತಃ ॥180॥
ಯಜ್ಞಸ್ಯಾಸ್ಯ ಜರಾಸಂಧವಧಾತ್ ಕರ್ಣಜಯಾದಪಿ ।
ಜಯಾಚ್ಚ ಕೀಚಕಾದೀನಾಮನ್ಯೈರ್ಜೇತುಮಶಕ್ಯತಃ ॥181॥
ವಿಷ್ಣುವನ್ನು ಹೊರತುಪಡಿಸಿಯೆ ಈ ನಿರ್ಣಯ. ಏಕೆಂದರೆ ಅವನು ಎಲ್ಲ ಕರ್ಮಗಳಿಗೂ ಮುಖ್ಯಕಾರಣನೇ ಆಗಿದ್ದರೂ ಪೂರ್ಣಕಾಮನಾದ್ದರಿಂದ ಕರ್ಮಫಲವನ್ನು ಉಣ್ಣುವುದಿಲ್ಲ. ದೇವತೆಗಳು ಪಾಪಕರ್ಮಕ್ಕೆ ಮುಖ್ಯಕಾರಣರಾದರೂ ಸಾಮಾನ್ಯವಾಗಿ ಪಾಪಫಲಕ್ಕೆ ಭಾಗಿಗಳಾಗುವುದಿಲ್ಲ. ಹಾಗೇ ದೈತ್ಯರು ಪುಣ್ಯಕರ್ಮ ಮಾಡಿದರು ಸಾಮಾನ್ಯವಾಗಿ ಪುಣ್ಯಫಲಕ್ಕೆ ಭಾಗಿಗಳಾಗುವುದಿಲ್ಲ. ಮನುಷ್ಯರು ಪುಣ್ಯಪಾಪಗಳೆರಡರಲ್ಲಿಯೂ ಅಂಶಮಾತ್ರಕ್ಕೆ ಭಾಗಿಗಳೆನಿಸುತ್ತಾರೆ. ಈ ಯಾಗದಲ್ಲಿ ಜರಾಸಂಧ ವಧೆಯಿಂದಲೂ ಬೇರೆಯವರಿಗೆ ಗೆಲ್ಲಲು ಅಶಕ್ಯರಾದ ಕರ್ಣಕೀಚಕಾದಿಗಳನ್ನು ಗೆದ್ದುದರಿಂದಲೂ ಭೀಮನೆ ಮುಖ್ಯ ಕಾರಣನೆನಿಸಿದ್ದಾನೆ.
ದ್ವಿತೀಯಃ ಫಲ್ಗುನಶ್ಚೈವ ತೃತೀಯಸ್ತು ಯುಧಿಷ್ಠಿರಃ
ತಸ್ಮಾದ್ ಬ್ರಹ್ಮಪದಾವಾಪ್ತ್ಯೈ ವ್ಯಾಸೋ ಭೀಮಸ್ಯ ತಂ ಕ್ರತುಂ ।
ಅನನ್ಯಕೃತಮಾದಿಶ್ಯ ದಿಶಾಂ ವಿಜಯಮಾದಿಶತ್ ॥182॥
ಈ ಯಾಗ ನಡೆಯುವಲ್ಲಿ ಎರಡನೆ ಮುಖ್ಯಕಾರಣ ಅರ್ಜುನ, ಮೂರನೆಯವನು ಧರ್ಮರಾಜ. ಅದರಿಂದ ಭೀಮನಿಗೆ ಬ್ರಹ್ಮಪದವಿ ಪ್ರಾಪ್ತಿಗಾಗಿ ವ್ಯಾಸರು ಬೇರೆ ಯಾರೂ ಮಾಡದಿದ್ದ ಆ ಮಹಾಯಾಗವನ್ನು ನಡೆಸಲು ಭೀಮನಿಗೇ ಆದೇಶಿಸಿ ದಿಗ್ವಿಜಯಕ್ಕೆ ಅಪ್ಪಣೆ ನೀಡಿದರು.
ಅಥಾಬ್ರವೀದ್ ಧನಂಜಯೋ ಧನುರ್ಧ್ವಜೋ ರಥೋ ವರಃ।
ಮಮಾಸ್ತಿ ತದ್ದಿಶಾಂಜಯೋ ಮಮೈವ ವಾಂಛಿತಃ ಪ್ರಭೋ ॥183॥
ಆಗ ಅರ್ಜುನ `ಪ್ರಭು, ಉತ್ತಮವಾದ ಧನುಸ್ಸು ಧ್ವಜ ರಥವೆಲ್ಲವೂ ನನ್ನಲ್ಲಿ ಇದೆ. ಅದರಿಂದ ದಿಗ್ವಿಜಯ ಕಾರ್ಯವನ್ನು ಮುಖ್ಯವಾಗಿ ನನಗೇ ವಹಿಸಿಕೊಡಬೇಕು' ಎಂದ.
ಇತೀರಿತೋಽಖಿಲಪ್ರಭುರ್ಜಗಾದ ಸತ್ಯಮಸ್ತಿ ತೇ ।

ಸಮಸ್ತ ಸಾಧನೋನ್ನತಿರ್ಮಹಚ್ಚ ವೀರ್ಯಮಸ್ತಿ ತೇ ॥184॥
ತಥಾಪಿ ಕೀಚಕಾದಯೋ ವೃಕೋದರಾದೃತೇ ವಶಂ |
ನ ಯಾಂತಿ ನಾಪಿ ತೇ ವಶಂ ಪ್ರಯಾತಿ ಕರ್ಣ ಏವ ಚ ॥185॥
ಅರ್ಜುನ ಹೀಗೆ ಹೇಳಿದಾಗ ಸರ್ವಶಕ್ತರಾದ ವ್ಯಾಸರು ಹೇಳಿದರು. `ನಿನಗೆ ಸಕಲ ಸಾಧನ ಸಂಪತ್ತೂ ನಿಶ್ಚಯವಾಗಿ ಇದೆ. ಮಹತ್ತಾದ ಬಲವೂ ಇದೆ. ಆದರೂ ಕೀಚಕಾದಿಗಳು ಭೀಮನಿಗೆ ವಶರಾಗುವರು, ನಿನಗಲ್ಲ. ಕರ್ಣನೂ ನಿನಗೆ ವಶನಾಗುವುದಿಲ್ಲ.
ಬಲಾಧಿಕೋಽಸಿ ಕರ್ಣತಸ್ತಥಾಪಿ ನಾಮ್ಮತಃ ಕರಂ |
ದದಾತಿ ತೇ ಹ್ಯತಿಸ್ಪೃಧಾ ನ ವಧ್ಯ ಏಷ ತೇಽದ್ಯ ಚ ॥186॥
ನೀನು ಕರ್ಣನಿಗಿಂತ ಬಲದಲ್ಲಿ ಹೆಚ್ಚು. ಆದರೂ ಕರ್ಣ ಬದುಕಿರುವಷ್ಟು ಕಾಲ ನಿನ್ನಲ್ಲಿ ತೀವ್ರವಾದ ಸ್ಪರ್ಧೆ ಇರುವುದರಿಂದ ಕಪ್ಪ ಕೊಡುವುದಿಲ್ಲ. ಈಗ ನೀನು ಅವನನ್ನು ಕೊಲ್ಲುವುದೂ ಶಕ್ಯವಿಲ್ಲ.
ಸವರ್ಮಕುಂಡಲತ್ವತೋ ನ ವಧ್ಯ ಏಷ ಯತ್ ತ್ವಯಾ |
ತತೋ ವೃಕೋದರೋ ದಿಶಂ ಪ್ರಯಾತು ತೇ ಪಿತುಃ ಪ್ರಿಯಾಂ ॥187॥
ಕರ್ಣ ಈಗ ಕವಚಕುಂಡಲ ಯುಕ್ತನಾಗಿರುವುದರಿಂದ ನಿನಗೆ ವಧ್ಯನೆನಿಸುವುದಿಲ್ಲ. ಅದರಿಂದ ಭೀಮನೆ ಪೂರ್ವದಿಕ್ಕಿನ ವಿಜಯಕ್ಕೆ ಹೊರಡಲಿ.
ಜೀವಗ್ರಾಹಭಯಾತ್ ಕರ್ಣೋ ದದಾತಿ ಕರಮಂಜಸಾ |
ಭೀಮಾಯ ನಾತ್ರ ಸಂದೇಹೋ ಜಿತೋಽನೇನ ಚ ಸಂಯುಗೇ ॥188॥
ಈ ಹಿಂದೆ ಯುದ್ಧದಲ್ಲಿ ಭೀಮನಿಗೆ ಸೋತಿರುವ ಕರ್ಣ ಜೀವಂತವಾಗಿ ಸೆರೆ ಸಿಕ್ಕುವ ಭಯದಿಂದ ಭೀಮನಿಗೆ ಚೆನ್ನಾಗಿ ಕಪ್ಪ ನೀಡುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಅಜೇಯೌ ಶರ್ವವಚನಾತ್ ರಣೇ ಕೀಚಕಪೌಂಡ್ರಕೌ |
ವಶಂ ಪ್ರಯಾತೋ ಭೀಮಸ್ಯ ತಥಾವಧ್ಯೋಽಪಿ ಚೇದಿಪಃ ॥189॥
ರುದ್ರವರದಿಂದ ಯುದ್ಧದಲ್ಲಿ ಅಜೇಯರೆನಿಸಿದ ಕೀಚಕ ಪೌಂಡ್ರಕರೂ ಭೀಮನಿಗೆ ವಶರಾಗುವರು. ಅವಧ್ಯನಾದ ಶಿಶುಪಾಲನೂ ಅವನಿಗೆ ವಶನಾಗುವನು.
ಜೀವಗ್ರಾಹಭಯಂ ಹ್ಯೇಷಾಂ ಭೀಮಾನ್ಮಾಗಧಪಾತನಾತ್ |
ತಸ್ಮಾತ್ ಕರಂ ಪ್ರಯಚ್ಛಂತಿ ಜಿತಾ ವಾ ಪೂರ್ವಮೇವ ವಾ ॥190॥
ಭೀಮನಿಂದ ಜರಾಸಂಧ ಹತನಾದ್ದರಿಂದ ಇವರೆಲ್ಲರಿಗೂ ಜೀವಂತ ಸೆರೆ ಸಿಕ್ಕುವ ಭಯವಿದೆ. ಪರಾಜಿತರಾಗಿ ಅಥವಾ ಅದಕ್ಕೂ ಮೊದಲಿಗೇ ಅವರು ಕಪ್ಪ ಕೊಡುತ್ತಾರೆ.
ಪ್ರಯಾಹಿ ಚ ತ್ವಂ ಧನದಪ್ರಪಾಲಿತಾಂ
ದಿಶಂ ದ್ವೀಪಾನ್ ಸಪ್ತ ಚಾಶೇಷದಿಕ್ಷು |
ನಾಗಾಂಶ್ಚ ದೈತ್ಯಾಂಶ್ಚ ತಥಾಧರಸ್ಥಾನ್
ವಿಜಿತ್ಯ ಶೀಘ್ರಂ ಪುನರೇಹಿ ಚಾತ್ರ ॥191॥
ಅದರಿಂದ ಅರ್ಜುನ, ನೀನು ಭರತಖಂಡದಲ್ಲಿ ಉತ್ತರದಿಕ್ಕಿಗೆ ಹೋಗು. ಹೊರಗೆ ಎಲ್ಲ ದಿಕ್ಕುಗಳಲ್ಲಿ ಸಪ್ತದ್ವೀಪಗಳನ್ನೂ ಪಾತಾಳಗಳಲ್ಲಿರುವ ನಾಗರನ್ನೂ ದೈತ್ಯರನ್ನೂ ಗೆದ್ದು ಬೇಗನೆ ಹಿಂತಿರುಗಿ ಬಾ.
ರಥೋ ಹಿ ದಿವ್ಯೋಽಂಬರಗಸ್ತವಾಸ್ತಿ
ದಿವ್ಯಾನಿ ಚಾಸ್ತ್ರಾಣಿ ಧನುಶ್ಚ ದಿವ್ಯಂ |
ಯೇಽನ್ಯೇ ಚ ಬಾಣಪ್ರಮುಖಾ ಅಜೇಯಾಃ
ಶರ್ವಾಶ್ರಯಾಸ್ತಾನಪಿ ಭೀಮ ಏತು ॥192॥
ನಿನಗೆ ಅಂತರಿಕ್ಷದಲ್ಲಿ ಸಂಚರಿಸುವ ದಿವ್ಯರಥವಿದೆ. ದಿವ್ಯ ಅಸ್ತ್ರಗಳಿವೆ. ದಿವ್ಯ ಧನುಸ್ಸಿದೆ. ಇನ್ನು ಶಿವನನ್ನು ಆಶ್ರಯಿಸಿ ಅಜೇಯರಾಗಿರುವ ಬಾಣಾಸುರ ಮುಂತಾದವರನ್ನು ಕೂಡ ಭೀಮನೇ ಆಕ್ರಮಿಸಲಿ.
ತಥಾ ಸುರಾಶ್ಚಾಪಿ ಸಮಸ್ತಶೋಽಸ್ಯ
ಬಲಿಂ ಪ್ರಯಚ್ಛಂತಿ ಮದಾಜ್ಞಯೇತರೇ |
ದಿಶಂ ಪ್ರತೀಚೀಮಥ ದಕ್ಷಿಣಾಂ ಚ
ಯಾತಾಂ ಯವೌ ಕ್ರಮಶೋ ಹ್ಯಧ್ವರಾರ್ಥೇ ॥193॥
ಯಶಶ್ಚ ಧರ್ಮಶ್ಚ ತಯೋರಪಿ ಸ್ಯಾ-
ದಿತಿ ಸ್ಮ ಕೃಷ್ಣೇನ ಸುತೇನ ಕಾಳ್ಯಾಃ |
ಉಕ್ತೇ ಯಯುಸ್ತೇ ತಮಭಿಪ್ರಣಮ್ಯ
ದಿಶೋ ಯಥೋಕ್ತಾಃ ಪರಮೋರುಸದ್ಗುಣಾಃ ॥194॥
ಇತರ ಸಮಸ್ತ ದೇವತೆಗಳೂ ನನ್ನ ಪ್ರೇರಣೆಯಿಂದ ಭೀಮನಿಗೆ ಕಪ್ಪ ಕೊಡುತ್ತಾರೆ. ನಕುಲ ಸಹದೇವರು ಕ್ರಮವಾಗಿ ಪಶ್ಚಿಮ ದಕ್ಷಿಣ ದಿಕ್ಕುಗಳಿಗೆ ಯಾಗದ ದಿಗ್ವಿಜಯಕ್ಕೆ ಹೋಗಲಿ. ಏಕೆಂದರೆ ಯಾಗ ಮಾಡಿದ ಯಶಸ್ಸೂ ಪುಣ್ಯವೂ ಅವರಿಗೂ ಲಭಿಸಲಿ ಎಂದು ವೇದವ್ಯಾಸರು ಹೇಳಿದಾಗ ಉತ್ತಮವಾದ ಮಹಾಗುಣಗಳುಳ್ಳ ಪಾಂಡವರು ಅವರನ್ನು ನಮಿಸಿ ಆಯಾ ದಿಕ್ಕುಗಳಿಗೆ ಹೊರಟರು.
ವೃಕೋದರೋಽಜಯನ್ನೃಪಾನ್ ವಿರಾಟಮಾಸಸಾದ ಹ |
ಜಿತೇಽತ್ರ ಕೀಚಕೇ ರಣೇ ಸಮಾದದೇ ಕರಂ ತತಃ ॥195॥

ಭೀಮಸೇನ ರಾಜರನ್ನು ಗೆಲ್ಲುತ್ತ ವಿರಾಟರಾಜನಲ್ಲಿಗೂ ಬಂದ. ಅಲ್ಲಿ ಕೀಚಕ ಯುದ್ಧದಲ್ಲಿ ಸೋತಾಗ ಭೀಮ ಅವನಿಂದ ಕಪ್ಪ ತೆಗೆದುಕೊಂಡ.
ತತಃ ಕ್ರಮಾನ್ನೃಪಾನ್ ಜಿತ್ವಾ ಚೇದೀನಾಂ ವಿಷಯಂ ಗತಃ |
ಮಾತೃವಾಕ್ಯಾದ್ ಭಯಾಚ್ಚೈವ ಶಿಶುಪಾಲೇನ ಪೂಜಿತಃ ॥196॥
ಬಳಿಕ ಕ್ರಮೇಣ ರಾಜರನ್ನು ಗೆದ್ದು ಭೀಮ ಚೇದಿ ದೇಶಕ್ಕೆ ಹೋದ. ಅಲ್ಲಿ ತಾಯಿಯ ಉಪದೇಶದಿಂದಲೂ ಭೀಮನ ಭಯದಿಂದಲೂ ಶಿಶುಪಾಲ ಕಪ್ಪ ನೀಡಿ ಸತ್ಕರಿಸಿದ.
ಮಾತೃಷ್ವಸುರ್ಗೃಹೇ ಚೋಷ್ಯ ದಿವಸಾನ್ ಕತಿಚಿತ್ ಸುಖಂ |
ಕರಂ ಸುಮಹದಾದಾಯ ತತಃ ಪೂರ್ವಾಂ ದಿಶಂ ಯಯೌ ॥197॥
ಭೀಮ ಚಿಕ್ಕಮ್ಮನ ಮನೆಯಲ್ಲಿ ಕೆಲವು ದಿನ ಸುಖವಾಗಿದ್ದು ಕಪ್ಪವನ್ನು ತೆಗೆದುಕೊಂಡು ಅಲ್ಲಿಂದ ಪೂರ್ವದಿಕ್ಕಿಗೆ ಹೊರಟ.
ಕ್ರಮೇಣ ಸರ್ವಾನ್ನಿರ್ಜಿತ್ಯ ಪೌಂಡ್ರಕಂ ಚ ಮಹಾಬಲಂ |
ವಿರಥೀಕೃತ್ಯ ಕರ್ಣಂ ಚ ಕರಮಾದಾಯ ಸರ್ವತಃ ॥198॥
ಹಿಮವಚ್ಛಿಖರೇ ದೇವಾನ್ ಜಿತ್ವಾ ಶಕ್ರಪುರೋಗಮಾನ್ |
ಕ್ರೀಡಾರ್ಥಂ ಯುಧ್ಯತಸ್ತೇಭ್ಯಸ್ತುಷ್ಟೇಭ್ಯೋ ರತ್ನಸಂಚಯಮ್ ॥199॥
ಬಾಹುಯುದ್ಧೇನ ಶೇಷಂ ಚ ಗರುಡಂ ಚ ಮಹಾಬಲಂ |
ಕ್ರೀಡಮಾನೌ ವಿನಿರ್ಜಿತ್ಯ ಭೂಷಣಾನ್ಯಾಪ ತೋಷತಃ |
ತಾಭ್ಯಾಂ ಚ ದೃಢಮಾಶ್ಲಿಷ್ಟಃ ಸ್ನೇಹವಿಕ್ಲಿನ್ನಯಾ ಧಿಯಾ ॥200॥
ಭೀಮ ಪೂರ್ವದಿಕ್ಕಿನಲ್ಲಿ ಕ್ರಮದಿಂದ ಎಲ್ಲ ರಾಜರನ್ನೂ ಗೆದ್ದು ಮಹಾಬಲಿಷ್ಠನಾದ ಪೌಂಡ್ರಕ ವಾಸುದೇವನನ್ನೂ ಕರ್ಣನನ್ನೂ ವಿರಥನನ್ನಾಗಿ ಮಾಡಿ ಎಲ್ಲರಿಂದಲೂ ಕಪ್ಪ ತೆಗೆದುಕೊಂಡು ಹಿಮಾಲಯದ ಶಿಖರದಲ್ಲಿ ಇಂದ್ರಾದಿ ದೇವತೆಗಳನ್ನೂ ಗೆದ್ದು ಕ್ರೀಡೆಗಾಗಿ ಯುದ್ಧ ಮಾಡಿ ಸಂತುಷ್ಟರಾದ ಅವರಿಂದ ರತ್ನಗಳ ರಾಶಿಗಳನ್ನು ಪಡೆದ. ಮಹಾಬಲಿಷ್ಠರಾದ ಶೇಷ ಗರುಡರೂ ಬಾಹು ಯುದ್ಧದಿಂದ ಕ್ರೀಡೆ ಮಾಡಿದರು. ಆ ಕ್ರೀಡೆಯಲ್ಲಿ ಅವರನ್ನು ಗೆದ್ದು ಅವರಿಂದ ಸ್ನೇಹಾರ್ದ್ರ ಅಂತಃಕರಣದಿಂದ ಗಾಢವಾಗಿ ಆಲಿಂಗಿತನಾಗಿ ಸಂತೋಷದಿಂದ ಅವರು ನೀಡಿದ ಆಭರಣಗಳನ್ನು ಸ್ವೀಕರಿಸಿದ.
ಪೋಪ್ಲೂಯಮಾನಃ ಸ ತತೋಽಂಬುಧೌ ಬಲೀ
ಜಗಾಮ ಬಾಣಸ್ಯ ಪುರಂ ಹರಂ ಚ |
ರಣೇಽಜಯದ್ ವಾರಣರೂಪಮಾಸ್ಥಿತಂ
ಕ್ರೀಡಂತಮೇತೇನ ಚ ತೋಷಿತೋ ಹರಃ ॥201॥
ಬಳಿಕ ಬಲಿಷ್ಠನಾದ ಭೀಮ ಸಮುದ್ರದಲ್ಲಿ ಈಜಾಡಿ ಬಾಣದ ನಗರಕ್ಕೆ ಹೋಗಿ ಅಲ್ಲಿ ಯುದ್ಧದಲ್ಲಿ ಆನೆಯ ರೂಪವನ್ನು ತಳೆದು ಕ್ರೀಡೆಯಾಡಿದ ಶಿವನನ್ನು ಗೆದ್ದ. ಸಂತೋಷಗೊಳಿಸಿದ.
ಪೃಷ್ಟಶ್ಚ ಗಿರಿಶೇನಾಸೌ ವಿಸ್ತರಂ ದಿಗ್ಜಯಸ್ಯ ಚ |
ಸಿಂಹವ್ಯಾಘ್ರಾದಿರೂಪಾಶ್ಚ ಆತ್ಮನಾ ವಿಜಿತಾ ಯಥಾ |
ಗರುತ್ಮಚ್ಛೇಷಶಕ್ರಾದ್ಯಾ ದೇವಾಃ ಸರ್ವೇ ತದಬ್ರುವೀತ್ ॥202॥
ಶಿವ ಭೀಮನ ದಿಗ್ವಿಜಯ ವೃತ್ತಾಂತವನ್ನು ವಿಸ್ತಾರವಾಗಿ ಕೇಳಲು ಬಯಸಿದಾಗ ಸಿಂಹ ಹುಲಿ ಮುಂತಾದ ರೂಪದಿಂದ ಬಂದ ಗರುಡ ಶೇಷ ಇಂದ್ರಾದಿ ಸಕಲ ದೇವತೆಗಳೂ ತನ್ನಿಂದ ಹೇಗೆ ಪರಾಜಿತರಾದರೆಂಬುದನ್ನು ಅವನಿಗೆ ಬಣ್ಣಿಸಿ ಹೇಳಿದ.
ನಿಶಮ್ಯ ಶಂಕರೋಽಖಿಲಂ ಮಖಸ್ಯ ಚ ಪ್ರಸಾಧಕಂ |
ಹರಿಂ ತತೋ ಬಲೇಃ ಸುತಾದ್ ದದೌ ಚ ರತ್ನಸಂಚಯಂ ॥203॥
ಶಿವ ಎಲ್ಲವನ್ನೂ ಕೇಳಿ ಈ ಯಾಗವನ್ನು ಸ್ವತಃ ನಿಂತು ಮಾಡಿಸಿಕೊಳ್ಳುವವನು ಶ್ರೀಹರಿಯೆ ಎಂದು ತಿಳಿದು ಬಾಣಾಸುರನಿಂದ ರತ್ನ ಸಮೂಹವನ್ನು ಕೊಡಿಸಿದ.
ಸ ಬಾಣದೈತ್ಯತೋ ಮಹಚ್ಛಿವೇನ ದತ್ತಮುತ್ತಮಂ |
ಪ್ರಗೃಹ್ಯ ರತ್ನಸಂಚಯಂ ಸ್ವಕಂ ಪುರಂ ಸಮಾಯಯೌ ॥204॥
ಭೀಮ ಬಾಣಾಸುರನ ಮೂಲಕ ಶಿವನಿತ್ತ ಉತ್ತಮವಾದ ದೊಡ್ಡ ರತ್ನರಾಶಿಯನ್ನು ತೆಗೆದುಕೊಂಡು ತನ್ನ ಪಟ್ಟಣಕ್ಕೆ ಹಿಂತಿರುಗಿದ.
ಸ ವಿಪ್ರಯಾದವೇಶ್ವರಂ ದ್ವಿಧಾ ಸ್ಥಿತಂ ಜನಾರ್ದನಂ |
ಪುರೋ ನಿಧಾಯ ತದ್ ವಸು ಪ್ರಭೂತಮಾನಮತ್ ಸದಾ ॥205॥
ಒಡನೆ ಆ ಮಹಾಸಂಪತ್ತನ್ನು ಮುಂದೆ ಇಡುತ್ತ ವೇದವ್ಯಾಸ ಕೃಷ್ಣ ಎಂದು ಎರಡು ರೂಪಗಳಿಂದ ಇದ್ದ ಹರಿಯನ್ನು ನಮಿಸಿದ.
ಸೋಽಭಿವಂದ್ಯಾಗ್ರಜಂ ಚೈವ ಯಥಾವೃತ್ತಂ ನ್ಯವೇದಯತ್ |
ಆತ್ಮನಃ ಕೃಷ್ಣಯೋಃ ಸರ್ವಂ ಧರ್ಮರಾಜಾಗ್ರತೋ ಮುದಾ ॥206॥
ಯಥಾ ಜಿತಾಃ ಕೀಚಕಾದ್ಯಾ ಏಕಲವ್ಯಸಹಾಯವಾನ್ |
ಯಥಾ ಜಿತಃ ಪೌಂಡ್ರಕಶ್ಚ ಕರ್ಣಾದ್ಯಾಶ್ಚ ತಥಾಪರೇ ॥207॥
ಯಥಾ ಸಿಂಹಾದಿತನವಃ ಶೇಷಮೀಂದ್ರೇಂದ್ರಪೂರ್ವಕಾಃ |
ಯಥಾ ಗಜತನುಃ ಶರ್ವಸ್ತಚ್ಚ ಸರ್ವಮವರ್ಣಯತ್ ॥208॥
ಭೀಮ ಧರ್ಮರಾಜನನ್ನು ವಂದಿಸಿ ಅವನ ಸಮಕ್ಷಮದಲ್ಲಿ ವೇದವ್ಯಾಸ ಕೃಷ್ಣರಿಗೆ ತನ್ನ ಎಲ್ಲ ವೃತ್ತಾಂತವನ್ನೂ ಸಂತೋಷದಿಂದ ನಿವೇದಿಸಿದ. ಕೀಚಕ ಮುಂತಾದವರನ್ನೂ ಏಕಲವ್ಯ ಪೌಂಡ್ರಕರನ್ನೂ ಇತರ ಕರ್ಣಾದಿ ರಾಜರನ್ನೂ ಸಿಂಹಾದಿರೂಪದಿಂದ ಬಂದ

ಶೇಷಗರುಡ ಇಂದ್ರಾದಿ ದೇವತೆಗಳನ್ನೂ ಆನೆಯ ರೂಪದಿಂದ ಬಂದ ಶಿವನನ್ನೂ ತಾನು ಹೇಗೆ ಗೆದ್ದೆನೆಂಬುದೆಲ್ಲವನ್ನೂ ಯಥಾವತ್ತಾಗಿ ಬಣ್ಣಿಸಿದ.
ಸಂಭಾವಿತಶ್ಚ ಕೃಷ್ಣಾಭ್ಯಾಂ ರಾಜ್ಞಾ ಚ ಸುಮಹಾಬಲಃ |
ಆಜ್ಞಯಾ ವಾಸುದೇವಸ್ಯ ಯಜ್ಞಾಂಗಾನಿ ಸಮಾರ್ಜಯತ್ ॥209॥
ಮಹಾಬಲಿಷ್ಠನಾದ ಭೀಮ ವ್ಯಾಸಕೃಷ್ಣರಿಂದಲೂ ಧರ್ಮರಾಜನಿಂದಲೂ ಆದರಿಸಲ್ಪಟ್ಟು ಕೃಷ್ಣನ ಆಜ್ಞೆಯಿಂದ ಯಾಗಕ್ಕೆ ಅವಶ್ಯ ಬೇಕಾದುದನ್ನೆಲ್ಲ ಸಿದ್ಧಪಡಿಸಿದ.
ಊಚೇ ತಂ ಭಗವಾನ್ ವ್ಯಾಸೋ ಜಿತಂ ಸರ್ವಂ ತ್ವಯಾರಿಹನ್ |
ಜಯೇ ಸರ್ವಸ್ಯ ಯಜ್ಞೋಽಯಂ ಪೂರ್ಣೋ ಭವತಿ ನಾನ್ಯಥಾ ॥
ವಿರಿಂಚಃ ಸರ್ವಜಿತ್ ಪೂರ್ವಂ ದ್ವಿತೀಯಸ್ತ್ವಮಿಹಾಭವಃ |
ಇತ್ಯುಕ್ತ್ವೈನಂ ಸಮಾಶ್ಲಿಷ್ಯ ಯಜ್ಞಾಂಗಾನಿ ಸಮಾದಿಶತ್ ॥211॥
ಭಗವಾನ್ ವೇದವ್ಯಾಸರು ಭೀಮನನ್ನು ಆಲಿಂಗಿಸಿ ಹೇಳಿದರು `ಶತ್ರುನಾಶಕನೆ, ನೀನು ಎಲ್ಲವನ್ನೂ ಗೆದ್ದಿರುವೆ. ಎಲ್ಲರನ್ನು ಗೆದ್ದಾಗಲೆ ಈ ಯಾಗ ಪೂರ್ತಿ ಕೈಗೂಡುವುದು. ಇಲ್ಲದಿದ್ದರೆ ಇಲ್ಲ. ಹಿಂದೆ ಬ್ರಹ್ಮ ಎಲ್ಲರನ್ನೂ ಹೀಗೇ ಗೆದ್ದಿದ್ದ. ಅನಂತರ ಈ ರೀತಿ ಗೆದ್ದವನು ನೀನು ಎರಡನೆಯವನಾದೆ'. ಹೀಗೆ ಹೇಳಿ ಯಾಗ ಸಾಧನಗಳನ್ನು ಸಿದ್ಧಗೊಳಿಸಲು ಆದೇಶಿಸಿದರು.
* * * *
ಇಪ್ಪತ್ತೈದನೆಯ ಅಧ್ಯಾಯ
(ದಿಗ್ವಿಜಯದ ವ್ಯವಸ್ಥೆ ಮತ್ತು ಅರ್ಜುನನ ಉತ್ತರದಿಗ್ವಿಜಯ.)
ವೈಶಂಪಾಯನಃ
ಋಷೇಸ್ತದ್ವಚನಂ ಚಿಂತ್ಯ ನಿಶಶ್ವಾಸ ಯುಧಿಷ್ಠಿರಃ |
ಧರ್ಮಂ ಧರ್ಮಭೃತಾಂ ಶ್ರೇಷ್ಠಃ ಕರ್ತುಮಿಚ್ಛನ್ ಪರಂತಪಃ ॥1॥
ಪರಂತಪನೂ ಧರ್ಮಿಷ್ಠರಲ್ಲಿ ಶ್ರೇಷ್ಠನೂ ಆದ ಯುಧಿಷ್ಠಿರನು ನಾರದರ ಆ ಮಾತುಗಳನ್ನು ಸ್ಮರಿಸಿ ಧರ್ಮವನ್ನು ಮಾಡಲು ಬಯಸಿ ನಿಟ್ಟುಸಿರನ್ನು ಬಿಟ್ಟನು.
ತಸ್ಯೇಂಗಿತಜ್ಞೋ ಬೀಭತ್ಸುಃ ಸರ್ವಶಸ್ತ್ರಭೃತಾಂ ವರಃ |
ಸಂವಿವರ್ತಯಿಷುಃ ಕಾಮಂ ಪಾವಕಾತ್ ಪಾಕಶಾಸನಿಃ ॥2॥
ಪಾರ್ಥಃ ಪ್ರಾಪ್ಯ ಧನುಃಶ್ರೇಷ್ಠಮಕ್ಷಯ್ಯೌ ಚ ಮಹೇಷುಧೀ |
ರಥಂ ಧ್ವಜಂ ಸಭಾಂ ಚೈವ ಯುಧಿಷ್ಠಿರಮಭಾಷತ ॥3॥
ಸರ್ವ ಶಸ್ತ್ರದಾರಿಗಳಲ್ಲಿ ಶ್ರೇಷ್ಠನಾದ ಇಂದ್ರನ ಪುತ್ರನಾದ ಅರ್ಜುನನು ಅವನ ಸಂಕಲ್ಪವನ್ನು ತಿಳಿದವನಾಗಿ ಅವನ ಅಗ್ನಿಮುಖದಲ್ಲಿ ರಾಜಸೂಯಯಾಗವನ್ನು ಮಾಡುವ ಸಂಕಲ್ಪವನ್ನು ನೆರವೇರಿಸುವವನಾಗಿ ಗಾಂಡೀವ ಧನುಸ್ಸನ್ನೂ ಅಕ್ಷಯ ಬತ್ತಳಿಕೆಗಳನ್ನೂ ರಥ ಧ್ವಜ ಮತ್ತು ಸಭೆಗಳನ್ನೂ ಅಗ್ನಿಯಿಂದ ಸಂಪಾದಿಸಿದವನಾಗಿ ಧರ್ಮರಾಜನನ್ನು ಕುರಿತು ಮಾತನಾಡಿದನು.
ಧನುರಸ್ತ್ರಂ ಶರಾ ವೀರ್ಯಂ ಪಕ್ಷೋ ಭೂಮಿರ್ಯಶೋ ಬಲಮ್|
ಪ್ರಾಪ್ತಮೇತನ್ಮಯಾ ರಾಜನ್ ದುಷ್ಪ್ರಾಪಂ ಯದಭೀಪ್ಸಿತಮ್ ॥4॥
ರಾಜನೇ! ಇನ್ನೊಬ್ಬರು ಸಂಪಾದಿಸಲು ಅಸಾಧ್ಯವಾದ ಧನುಸ್ಸನ್ನೂ ಅಸ್ತ್ರಗಳನ್ನೂ ಪರಾಕ್ರಮವನ್ನೂ ಪಕ್ಷವನ್ನೂ ಭೂಮಿಯನ್ನೂ ಮತ್ತು ಕೀರ್ತಿಯನ್ನೂ ನಾನು ಸಂಪಾದಿಸಿದ್ದೇನೆ.
ತಸ್ಯ ಕೃತ್ಯಮಹಂ ಮನ್ಯೇ ಕೋಶಸ್ಯಾದ್ಯ ವಿವರ್ಧನಮ್ |
ಕರಮಾಹಾರಯಿಷ್ಯಾಮಿ ರಾಜಭ್ಯೋ ನೃಪಸತ್ತಮ ॥5॥
ಇವುಗಳ ಪ್ರಯೋಜನವು ಈದಿನ ನಮ್ಮ ಕೋಶವನ್ನು ಅಭಿವೃದ್ಧಿಗೊಳಿಸುವುದೆಂದು ತಿಳಿದಿದ್ದೇನೆ. ರಾಜಶ್ರೇಷ್ಠನೇ! ಉಳಿದ ರಾಜರು ನಿನಗೆ ಕಪ್ಪವನ್ನು ಕೊಡುವಂತೆ ಮಾಡುವೆನು.
ಏತಚ್ಛ್ರುತ್ವಾ ಕುರುಶ್ರೇಷ್ಠೋ ಧರ್ಮರಾಜಃ ಸಹಾನುಜಃ |
ಪ್ರಹೃಷ್ಟೋ ಮಂತ್ರಿಭಿಶ್ಚೈವ ವ್ಯಾಸಧೌಮ್ಯಾದಿಭಿಃ ಸಹ ॥6॥
ಇದನ್ನು ಕೇಳಿದ ತಮ್ಮಂದಿರಿಂದೊಡಗೂಡಿದ ಕುರುಶ್ರೇಷ್ಠನಾದ ಧರ್ಮರಾಜನು ವ್ಯಾಸ ಧೌಮ್ಯಾದಿಗಳ ಮತ್ತು ಮಂತ್ರಿಗಳ ಸನ್ನಿಧಿಯಲ್ಲಿ ಸಂತೋಷಗೊಂಡನು.
ತತೋ ವ್ಯಾಸೋ ಮಹಾಬುದ್ಧಿರುವಾಚೇದಂ ವಚೋಽರ್ಜುನಮ್|
ಸಾಧು ಸಾಧ್ವಿತಿ ಕೌಂತೇಯ ದಿಷ್ಟ್ಯಾ ತೇ ಬುದ್ಧಿರೀದೃಶೀ ॥7॥
ಆಗ ಮಹಾಮೇಧಾವಿಗಳಾದ ವ್ಯಾಸರು ಅರ್ಜುನನನ್ನು ಕುರಿತು ಕೌಂಂತೇಯನೇ ಒಳ್ಳೆಯ ಮಾತನ್ನಾಡಿದೆ. ದೇವರ ದಯೆಯಿಂದ ನಿನಗೆ ಇಂತಹ ಒಳ್ಳೆಯ ಬುದ್ಧಿಯು ಉಂಟಾಗಿದೆ ಎಂಬ ಮಾತನ್ನು ಆಡಿದರು.
ಪೃಥಿವೀಮಖಿಲಾಂ ಜೇತುಮ್ ಏಕೋಽಪ್ಯಭಿಮತೋ ಭವಾನ್|
ಧನ್ಯಃ ಪಾಂಡುರ್ಮಹೀಪಾಲೋ ಯಸ್ಯ ಪುತ್ರಸ್ತ್ವಮೀದೃಶಃ ॥8॥
ನೀನೊಬ್ಬನೇ ಸಮಗ್ರವಾದ ಭೂಮಿಯನ್ನು ಜಯಿಸಲೂ ಸಮರ್ಥನಾಗಿದ್ದೀಯೆ ನಿನ್ನಂತಹ ಪುತ್ರನನ್ನು ಪಡೆದ ಪಾಂಡುರಾಜನು ಧನ್ಯನಾದವನು.
ಸರ್ವಂ ಪ್ರಾಪ್ಸ್ಯತಿ ರಾಜೇಂದ್ರೋ ಧರ್ಮಪುತ್ರೋ ಯುಧಿಷ್ಠಿರಃ |
ತ್ವದ್ವೀರ್ಯೇಣ ಸ ಧರ್ಮಾತ್ಮಾ ಸಾರ್ವಭೌಮತ್ವಮೇಷ್ಯತಿ ॥9॥

ಧರ್ಮಪುತ್ರನಾದ ಧರ್ಮಾತ್ಮನಾದ ರಾಜೇಂದ್ರನಾದ ಯುಧಿಷ್ಠಿರನು ನಿನ್ನ ಪರಾಕ್ರಮದಿಂದ ಎಲ್ಲವನ್ನುಹೊಂದಿ ಸಾರ್ವಭೌಮನಾಗುತ್ತಾನೆ.
ತ್ವದ್ಬಾಹುಬಲಮಾಶ್ರಿತ್ಯ ರಾಜಸೂಯಮವಾಪ್ಸ್ಯತಿ |
ಸುನಯಾದ್ ವಾಸುದೇವಸ್ಯ ಭೀಮಾರ್ಜುನಬಲೇನ ಚ |
ಯಮಯೋಶ್ಚೈವ ವೀರ್ಯೇಣ ಸರ್ವಂ ಪ್ರಾಪ್ಸ್ಯತಿ ಧರ್ಮರಾಟ್ ||
ನಿನ್ನ ಬಾಹುಬಲವನ್ನು ಆಶ್ರಯಿಸಿ ರಾಜಸೂಯಯಾಗವನ್ನು ನೆರವೇರಿಸುವನು. ವಾಸುದೇವನ ಸುನೀತಿಯಿಂದಲೂ ಭೀಮಾರ್ಜುನರ ಬಲದಿಂದಲೂ ನಕುಲಸಹದೇವರ ಪರಾಕ್ರಮದಿಂದಲೂ ಧರ್ಮರಾಜನು ಎಲ್ಲವನ್ನೂ ಸಂಪಾದಿಸುತ್ತಾನೆ.
ತಸ್ಮಾದ್ ದಿಶಂ ದೇವಗುಪ್ತಾಮುದೀಚೀಂ ಗಚ್ಛ ಫಲ್ಗುನ |
ಶಕ್ತೋ ಭವಾನ್ ಸುರಾನ್ ಜಿತ್ವಾ ರತ್ನಾನ್ಯಾಹರ್ತುಮೋಜಸಾ ||11||
ಆದ್ದರಿಂದ ಅರ್ಜುನನೇ! ನೀನು ದೇವರಕ್ಷಿತವಾದ ಉತ್ತರದಿಕ್ಕಿಗೆ ಪ್ರಯಾಣಮಾಡು. ನೀನು ನಿನ್ನ ಪರಾಕ್ರಮದಿಂದ ದೇವತೆಗಳನ್ನೂ ಗೆದ್ದು ರತ್ನಗಳನ್ನು ತರಲು ಸಮರ್ಥನಾಗಿದ್ದೀಯೆ.
ಪ್ರಾಚೀಂ ಭೀಮೋ ಬಲಶ್ಲಾಘ್ಯಃ ಪ್ರಯಾತು ಭರತರ್ಷಭಃ |
ಯಾಮ್ಯಾಂ ತತ್ರ ದಿಶಂ ಯಾತು ಸಹದೇವೋ ಮಹಾರಥಃ ||12||
ತನ್ನ ಬಲದಿಂದ ಪ್ರಸಿದ್ಧನಾದ ಭರತರ್ಷಭನಾದ ಭೀಮನು ಪೂರ್ವದಿಕ್ಕಿಗೆ ಹೋಗಲಿ. ಮಹಾರಥನಾದ ಸಹದೇವನು ದಕ್ಷಿಣದಿಕ್ಕನ್ನು ಕುರಿತು ಪ್ರಯಾಣಮಾಡಲಿ.
ಪ್ರತೀಚೀಂ ನಕುಲೋ ಗಂತಾ ವರುಣೇನಾಭಿಪಾಲಿತಾಮ್ |
ಏಷಾ ಮೇ ನೈಷ್ಠಿಕೀ ಬುದ್ಧಿಃ ಕ್ರಿಯತಾಂ ಭರತರ್ಷಭಾಃ ||13||
ನಕುಲನು ವರುಣಪಾಲಿತವಾದ ಪಶ್ಚಿಮದಿಕ್ಕಿಗೆ ಪ್ರಯಾಣಮಾಡಲಿ. ಇದು ನನ್ನ ನಿಶ್ಚಿತವಾದ ಬುದ್ಧಿ. ಭರತ ಶ್ರೇಷ್ಠರೇ ಹೀಗೆ ಮಾಡಿ.
ಶ್ರುತ್ವಾ ವ್ಯಾಸವಚೋ ಹೃಷ್ಟಾಸ್ತಮೂಚುಃ ಪಾಂಡುನಂದನಾಃ |
ಏವಮಸ್ತು ಮುನಿಶ್ರೇಷ್ಠ ಯಥಾಽಽಜ್ಞಾಪಯಸಿ ಪ್ರಭೋ ||14||
ವ್ಯಾಸದೇವರ ಈ ಮಾತುಗಳನ್ನು ಕೇಳಿ ಹರ್ಷಗೊಂಡ ಪಾಂಡುನಂದನರು ಮುನಿಶ್ರೇಷ್ಠರೇ ಹಾಗೆಯೇ ಆಗಲಿ. ಪ್ರಭುಗಳೇ! ತಮ್ಮ ಆಜ್ಞೆಯಂತೆ ನಡೆಯುತ್ತೇವೆ ಎಂದು ಹೇಳಿದರು.
ವೈಶಂಪಾಯನಃ
ತೇಽಪ್ಯನುಜ್ಞಾಪ್ಯ ರಾಜಾನಂ ಸೈನ್ಯೇನ ಮಹತಾ ವೃತಾಃ |
ವಿಜಯಾಯ ಪ್ರಯಾತಾಸ್ತು ದಿಶಃ ಸರ್ವಾ ನರೋತ್ತಮಾಃ |
ತಿಥಾವಹನಿ ನಕ್ಷತ್ರೇ ಮುಹೂರ್ತೇ ಚ ತಥಾ ಶಿವೇ ||15||
ನರಶ್ರೇಷ್ಠರಾದ ಅವರೆಲ್ಲರೂ ಧರ್ಮರಾಜನ ಅನುಮತಿಯನ್ನು ಪಡೆದು ದೊಡ್ಡ ಸೈನ್ಯವನ್ನು ಹೊಂದಿದವರಾಗಿ ಶುಭ ನಕ್ಷತ್ರ ಮತ್ತು ತಿಥಿ ಮತ್ತು ಮಂಗಳವಾದ ಮುಹೂರ್ತದಲ್ಲಿ ವಿಜಯವನ್ನು ಉದ್ದೇಶಿಸಿ ಬೇರೆ ಬೇರೆ ದಿಕ್ಕುಗಳಿಗೆ ಹೊರಟರು.
ಪ್ರಹೃಷ್ಟೋ ಮುದಿತಶ್ಚಾಪಿ ಧರ್ಮರಾಜೋ ಯುಧಿಷ್ಠಿರಃ |
ಸ್ನಿಗ್ಧಗಂಭೀರನಾದಿನ್ಯಾ ತಂ ಗಿರಾ ಪ್ರತ್ಯಭಾಷತ ||16||
ಧರ್ಮರಾಜನಾದ ಯುಧಿಷ್ಠಿರನು ಹರ್ಷವನ್ನೂ ಮೋದವನ್ನೂ ಹೊಂದಿದವನಾಗಿ ಮೇಘ ಗಂಭೀರವಾದ ತನ್ನ ವಾಣಿಯಿಂದ ಅರ್ಜುನನನ್ನು ಕುರಿತು ಮಾನಾಡಿದನು.
ಸ್ವಸ್ತಿ ವಾಚ್ಯಾರ್ಹತೋ ವಿಪ್ರಾನ್ ಪ್ರಯಾಹಿ ಭರತರ್ಷಭ |
ದುರ್ಹೃದಾಮಪ್ರಹರ್ಷಾಯ ಸುಹೃದಾಂ ನಂದನಾಯ ಚ |
ವಿಜಯಸ್ತೇ ಧ್ರುವಃ ಪಾರ್ಥ ಪ್ರಿಯಂ ಕಾಮಮವಾಪ್ಸ್ಯಸಿ ||17||
ಭರತರ್ಷಭನೇ! ಬ್ರಾಹ್ಮಣರಿಂದ ಮಂಗಳ ಆಶೀರ್ವಾದವನ್ನು ಪಡೆದು ಪ್ರಯಾಣ ಮಾಡು. ನೀನು ಶತ್ರುಗಳ ದುಃಖಕ್ಕೂ ಹಿತೈಷಿಗಳ ಸಂತೋಷಕ್ಕೂ ಕಾರಣನಾಗು. ಅರ್ಜುನನೇ ನಿನಗೆ ನಿಶ್ಚಿತವಾಗಿಯೂ ವಿಜಯ ಉಂಟಾಗುತ್ತದೆ. ನಿನ್ನ ಎಲ್ಲಾ ಪ್ರಿಯಕಾಮಗಳನ್ನೂ ಹೊಂದುವಿ.
ಇತ್ಯುಕ್ತಃ ಪ್ರಯಯೌ ಪಾರ್ಥಃ ಸೈನ್ಯೇನ ಮಹತಾ ವೃತಃ |
ಅಗ್ನಿದತ್ತೇನ ದಿವ್ಯೇನ ರಥೇನಾದ್ಭುತಕರ್ಮಣಾ ||18||
ಹೀಗೆ ಹೇಳಲ್ಪಟ್ಟ ಅರ್ಜುನನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಅಗ್ನಿಯು ಕೊಟ್ಟ ಅದ್ಭುತಸಾಮರ್ಥ್ಯವುಳ್ಳ ರಥದಲ್ಲಿ ಪ್ರಯಾಣಮಾಡಿದನು.
ತಥೈವ ಭೀಮಸೇನೋಽಪಿ ಯಮೌ ಚ ಪುರುಷರ್ಷಭೌ |
ಸಸೈನ್ಯಾಃ ಪ್ರಯಯುಃ ಸರ್ವೇ ಧರ್ಮರಾಜಾಭಿಪೂಜಿತಾಃ ||19||
ಹಾಗೆಯೇ ಭೀಮಸೇನನೂ ಪುರುಷಶ್ರೇಷ್ಠರಾದ ನಕುಲಸಹದೇವರೂ ಧರ್ಮರಾಜನಿಂದ ಅಭಿನಂದಿಸಲ್ಪಟ್ಟು ಸೈನ್ಯಗಳನ್ನು ತೆಗೆದುಕೊಂಡು ಹೊರಟರು.
ದಿಶಂ ಧನಪತೇರಿಷ್ಟಾಂ ವ್ಯಜಯತ್ ಪಾಕಶಾಸನಿಃ |
ಭೀಮಸೇನಸ್ತಥಾ ಪ್ರಾಚೀಂ ಸಹದೇವಶ್ಚ ದಕ್ಷಿಣಾಮ್ ||20||
ಅರ್ಜುನನು ಕುಬೇರನಿಗೆ ಇಷ್ಟವಾದ ಉತ್ತರದಿಕ್ಕನ್ನು ಜಯಿಸಿದನು. ಹಾಗೆಯೇ ಭೀಮಸೇನನು ಪೂರ್ವದಿಕ್ಕನ್ನೂ ಮತ್ತು ಸಹದೇವನು ದಕ್ಷಿಣದಿಕ್ಕನ್ನೂ ಜಯಿಸಿದರು.

ಪ್ರತೀಚೀಂ ನಕುಲೋ ರಾಜನ್ ದಿಶಂ ವ್ಯಜಯದಸ್ತ್ರವಿತ್ |
ಖಾಂಡವಪ್ರಸ್ಥಮಧ್ಯಾಸ್ತೇ ಧರ್ಮರಾಜೋ ಯುಧಿಷ್ಠಿರಃ ॥21॥
ರಾಜನೇ! ಅಸ್ತ್ರಜ್ಞನಾದ ನಕುಲನು ಪಶ್ಚಿಮದಿಕ್ಕನ್ನು ಜಯಿಸಿದನು. ಧರ್ಮರಾಜನಾದ ಯುಧಿಷ್ಠಿರನು ಆಗ ಇಂದ್ರಪ್ರಸ್ಥದಲ್ಲಿ ವಾಸಿಸುತ್ತಿದ್ದನು.
ಜನಮೇಜಯಃ
ದಿಶಾಮಪಿ ಜಯಂ ಬ್ರಹ್ಮನ್ ವಿಸ್ತರೇಣ ವದಸ್ವ ಮೇ |
ನಹಿ ತೃಪ್ಯಾಮಿ ಭಗವನ್ ಪೂರ್ವೇಷಾಂ ಚರಿತಂ ಮಹತ್ ॥22॥
ಪೂಜ್ಯನೇ! ಈ ದಿಗ್ವಿಜಯವನ್ನು ನನಗೆ ವಿಸ್ತಾರವಾಗಿ ಹೇಳು. ಬ್ರಾಹ್ಮಣೋತ್ತಮನೇ! ನನ್ನ ಪೂರ್ವಜರ ಮಹಾಚರಿತ್ರೆಯನ್ನು ಎಷ್ಟು ಕೇಳಿದರೂ ತೃಪ್ತಿಯಾಗುವುದಿಲ್ಲ.
ವೈಶಂಪಾಯನಃ
ಧನಂಜಯಸ್ಯ ವಕ್ಷ್ಯಾಮಿ ವಿಜಯಂ ಪೂರ್ವಮೇವ ತೇ |
ಯುಗಪತ್ ಕುರುವೀರೈಸ್ತು ವಿಜಿತೇಯಂ ವಸುಂಧರಾ ॥23॥
ಧನಂಜಯನ ದಿಗ್ವಿಜಯವನ್ನು ಮೊದಲು ಹೇಳುವೆನು. ಈ ಕುರುಶ್ರೇಷ್ಠರಿಂದ ಸಮಗ್ರವಾದ ಭೂಮಿಯು ಸಮಾನಕಾಲದಲ್ಲಿ ಜಿತವಾಯಿತು.
ಅವಾಪ್ಯ ರಾಜಾ ರಾಜ್ಯಾರ್ಧಂ ಕುಂತೀಪುತ್ರೋ ಯುಧಿಷ್ಠಿರಃ |
ಮಹತ್ತ್ವೇ ರಾಜಶಬ್ದಸ್ಯ ಮನಶ್ಚಕ್ರೇ ಮಹಾಮನಾಃ ॥24॥
ಕುಂತಿಪುತ್ರನಾದ ಮಹಾಮನಸ್ಸುಳ್ಳ ಯುಧಿಷ್ಠಿರನು ಅರ್ಧರಾಜ್ಯವನ್ನು ಪಡೆದು ಮಹಾರಾಜನಾಗಲು (ಸಾರ್ವಭೌಮನೆನೆಸಿಕೊಳ್ಳಲು) ನಿರ್ಧರಿಸಿದನು.
ತದಾ ಕ್ಷಾತ್ರಂ ವಿದಿತ್ವಾಽಸ್ಯ ಪೃಥಿವೀವಿಜಯಂ ಪ್ರತಿ |
ಅಮರ್ಷಾತ್ ಪಾರ್ಥಿವೇಂದ್ರಾಸ್ತೇ ತಂ ಸಮೀಯುರ್ಯುಯುತ್ಸವಃ ॥25॥
ಆಗ ಪೃಥಿವೀ ವಿಜಯವನ್ನು ಕುರಿತು ಅರ್ಜುನನ ಸಂಕಲ್ಪವನ್ನು ತಿಳಿದ ರಾಜಶ್ರೇಷ್ಠರು ಸಿಟ್ಟಿನಿಂದ ಅವನ ಜೊತೆಯಲ್ಲಿ ಯುದ್ಧಕ್ಕೆ ಬಂದರು.
ತತ್ ಸಮೇತ್ಯ ಭುವಃ ಕ್ಷತ್ರಂ ರಥನಾಗಾಶ್ವಪತ್ತಿಮತ್ |
ಅಭ್ಯಯಾತ್ ಪಾಂಡವಂ ಜಿಷ್ಣುಂ ಮೋಘೀಕರ್ತುಂ ಜನಾಧಿಪ ॥26॥
ಜನಾಧಿಪನೇ! ಆಗ ಭೂಮಿಯ ಮೇಲಿದ್ದ ಕ್ಷತ್ರಿಯರು ತಮ್ಮ ರಥ ಗಜ ಪದಾತಿಗಳಿಂದ ಕೂಡಿದ ಸೈನ್ಯವನ್ನು ತೆಗೆದುಕೊಂಡು ಪಾಂಡುಪುತ್ರನಾದ ಅರ್ಜುನನಮೇಲೆ ಎರಗಿ ಅವರ ಸಂಕಲ್ಪವನ್ನು ವ್ಯರ್ಥಗೊಳಿಸುವ ಪ್ರಯತ್ನವನ್ನು ಮಾಡಿದರು.
ತತ್ ಪಾರ್ಥಃ ಪಾರ್ಥಿವಂ ಕ್ಷತ್ರಂ ಯುಯುತ್ಸುಃ ಪರಮಾಹವೇ |
ಪ್ರತ್ಯುದ್ಯಯೌ ಮಹಾಬಾಹುಃ ತರಸಾ ಪಾಕಶಾಸನಿಃ ॥27॥
ಪಾಕಶಾಸನಿಯೂ ಮಹಾಬಾಹುವೂದ ಅರ್ಜುನನು ಭೂಮಿಯ ಮೇಲೆ ಇದ್ದ ಆ ಕ್ಷತ್ರಿಯರ ಸಮೂಹದ ಜೊತೆಯಲ್ಲಿ ಯುದ್ಧವನ್ನುಮಾಡಲು ಬಯಸಿ ಶೀಘ್ರವಾಗಿ ಅವರನ್ನು ಎದುರಿಸಿದನು.
ತದ್ ಭಗ್ನಂ ಪಾರ್ಥಿವಂ ಕ್ಷತ್ರಂ ಪಾರ್ಥೇನಾಕ್ಲಿಷ್ಟಕರ್ಮಣಾ |
ವಾಯುನೇವ ಘನಾನೀಕಂ ಮೋಘೀಭೂತಂ ಯಯೌ ದಿಶಃ ॥28॥
ಅನಾಯಾಸವಾಗಿ ಯುದ್ಧಮಾಡುವ ಅರ್ಜುನನಿಂದ ಆ ಕ್ಷತ್ರಿಯಸಮೂಹವು ಭಗ್ನವಾಗಿ ತಮ್ಮ ಪ್ರಯತ್ನವನ್ನು ವ್ಯರ್ಥಮಾಡಿಕೊಂಡು ವಾಯುವೇಗಕ್ಕೆ ಸಿಕ್ಕಿದ ಮೇಘಸಮೂಹದಂತೆ ಎಲ್ಲಾ ದಿಕ್ಕುಗಳಲ್ಲಿಯೂ ಚದುರಿಹೊಯಿತು.
ತಜ್ಜಿತ್ವಾ ಪಾರ್ಥಿವಂ ಕ್ಷತ್ರಂ ಸಮರೇ ಪರವೀರಹಾ |
ಯಯೌ ತದಾ ವಶೀಕರ್ತುಮುದೀಚೀಂ ಪಾಂಡುನಂದನಃ ॥29॥
ಪರವೀರಮಾರಕನಾದ ಪಾಂಡುನಂದನನಾದ ಅರ್ಜುನನು ಹೀಗೆ ಆ ರಾಜರುಗಳನ್ನು ಯುದ್ಧದಲ್ಲಿ ಗೆದ್ದು ಅನಂತರ ಉತ್ತರ ದಿಕ್ಕನ್ನು ವಶಪಡಿಸಿಕೊಳ್ಳಲು ಪ್ರಯಾಣಮಾಡಿದನು.
ಪೂರ್ವಂ ಕುಣಿಂದವಿಷಯೇ ವಶೇ ಚಕ್ರೇ ಮಹೀಪತಿಮ್ |
ಧನಂಜಯೋ ಮಹಾಬಾಹುರ್ನಾತಿತೀವ್ರೇಣ ಕರ್ಮಣಾ |
ತೇನೈವ ಸಹಿತಃ ಪ್ರಾಯಾಜ್ಜಿಷ್ಣುಃ ಸಾಲ್ವಪುರಂ ಪ್ರತಿ ॥30॥
ಮೊದಲು ಕುಣಿಂದರಾಜ್ಯದಲ್ಲಿ ಮಹಾಬಾಹುವಾದ ಧನಂಜಯನು ಸುಲಭವಾಗಿ ಆ ರಾಜನನ್ನು ವಶಪಡಿಸಿಕೊಂಡು ಅವನಿಂದ ಸಹಿತನಾಗಿ ಸಾಲ್ವಪಟ್ಟಣಕ್ಕೆ ಪ್ರಯಾಣಮಾಡಿದನು.
ಸ ಸಾಲ್ವಪುರಮಾಸಾದ್ಯ ಸಾಲ್ವರಾಜಂ ಧನಂಜಯಃ |
ವಿಕ್ರಮೇಣೋಗ್ರಧನ್ವಾನಂ ವಶೇ ಚಕ್ರೇ ಮಹಾಮನಾಃ |
ತಂ ಪಾರ್ಥಃ ಸಹಸಾ ಜಿತ್ವಾ ದ್ಯುಮತ್ಸೇನಂ ಧನೇಶ್ವರಮ್ ॥31॥
ಸಾಲ್ವಪಟ್ಟಣವನ್ನು ತಲುಪಿದ ಮಹಾಮನಸ್ಸುಳ್ಳ ಧನಂಜಯನು ಉಗ್ರಧನುಸ್ಸುಳ್ಳ ಸಾಲ್ವರಾಜನನ್ನು ತನ್ನ ಪರಾಕ್ರಮದಿಂದ ಸೋಲಿಸಿ ವಶಪಡಿಸಿಕೊಂಡನು.
ಕೃತ್ವಾಽನುಸೈನಿಕಂ ಪ್ರಾಯಾತ್ ಕಟದೇಶಮರಿಂದಮಃ ॥32॥
ಪಾರ್ಥನ ಸಾಲ್ವರಾಜನಾದ ಧನಪತಿಯಾದ ದ್ಯುಮತ್ಸೇನನನ್ನು ತನ್ನ ಬಲದಿಂದ ಸೋಲಿಸಿ ಅವನು ತನ್ನ ಸೈನ್ಯವನ್ನು

ಹಿಂಬಾಲಿಸುವಂತೆಮಾಡಿ ಅನಂತರ ಕಟದೇಶವನ್ನು ಕುರಿತು ಪ್ರಯಾಣಮಾಡಿದನು.
ತತ್ರಾಪರಾಜಿತಂ ಜಿಷ್ಣುಃ ಸುನಾಭಂ ವಸುಧಾಧಿಪಮ್ |
ವಿಕ್ರಮೇಣ ವಶೇ ಕೃತ್ವಾ ಕೃತವಾನನುಸೈನಿಕಮ್ ॥33॥
ಅರ್ಜುನನು ಅಪರಾಜಿತನಾಗಿದ್ದಂತಹ ಸುನಾಭನೆಂಬ ರಾಜನನ್ನು ತನ್ನ ಪರಾಕ್ರಮದಿಂದ ವಶಪಡಿಸಿಕೊಂಡು ಅವನು ಸೈನ್ಯವು ತನ್ನ ಸೈನ್ಯವನ್ನು ಹಿಂಬಾಲಿಸುವಂತೆ ಮಾಡಿದನು.
ಸ ತೇನ ಸಹಿತೋ ರಾಜನ್ ಸವ್ಯಸಾಚೀ ಪರಂತಪಃ |
ಅನಂತಕಾಲಕುಟಿಕಾನ್ ಕುಣಿಂದಾಂಶ್ಚ ವಿಜಿತ್ಯ ಸಃ |
ಸುಮಂಡಲಂ ಪಾಪಜಿತಂ ಕೃತವಾನನುಸೈನಿಕಮ್ ॥34॥
ಅವನ ಜೊತೆಯಲ್ಲಿ ಅಲ್ಲಿಂದ ಹೊರಟ ಪರಂತಪನಾದ ಸವ್ಯಸಾಚಿಯಾದ ಅರ್ಜುನನು ಅನಂತ ಕಾಲಕುಟಿಕ ಮೊದಲಾದ ಕುಣಿಂದದೇಶದ ಎಲ್ಲಾ ಭಾಗಗಳನ್ನೂ ಗೆದ್ದು ಅಲ್ಲಿಯ ರಾಜರಾದ ಸುಮಂಡಲ ಮತ್ತು ಪಾಪಜಿತನನ್ನು ತನ್ನ ಸೈನ್ಯವನ್ನು ಹಿಂಬಾಲಿಸುವಂತೆ ಮಾಡಿದನು.
ವಿಜಿತ್ಯ ಶಾಕಲದ್ವೀಪಂ ಪ್ರತಿವಿಂಧ್ಯಂ ಚ ಪಾರ್ಥಿವಮ್ |
ಶಾಕಲದ್ವೀಪವಾಸಾಂಶ್ಚ ಸಪ್ತದ್ವೀಪೇ ಚ ಯೇ ನೃಪಾಃ |
ತಾನ್ ಸರ್ವಾನಜಯತ್ ಪಾರ್ಥೋ ಧರ್ಮರಾಜಪ್ರಿಯೇಪ್ಸಯಾ ॥
ಅರ್ಜುನನು ಶಾಕಲದ್ವೀಪವನ್ನು ಗೆದ್ದು ಅಲ್ಲಿಯ ರಾಜನಾದ ಪ್ರತಿವಿಂಧ್ಯನನ್ನು ಗೆದ್ದು ಧರ್ಮರಾಜನಿಗೆ ಪ್ರಿಯವನ್ನು ಉಂಟುಮಾಡುವ ಅಭಿಪ್ರಾಯದಿಂದ ಶಾಕಲದ್ವೀಪವಾಸಿಗಳೆಲ್ಲರನ್ನೂ ಮತ್ತು ದ್ವೀಪದಲ್ಲದ್ದ ಎಲ್ಲ ರಾಜರನ್ನೂ ಗೆದ್ದನು.
ಸ ತಾನಾಜೌ ಮಹೇಷ್ವಾಸೋ ನಿರ್ಜಿತ್ಯ ಪುರುಷರ್ಷಭ |
ತೈರೇವ ಸಹಿತಃ ಸರ್ವೈಃ ಪ್ರಾಗ್ಜ್ಯೋತಿಷಮುಪಾದ್ರವತ್ ॥36॥
ಪುರುಷರ್ಷಭನೇ! ಮಹಾಧನುರ್ಧಾರಿಯಾದ ಅರ್ಜುನನು ಅವರೆಲ್ಲರನ್ನೂ ಯುದ್ಧದಲ್ಲಿ ಸೋಲಿಸಿ ಅವರೆಲ್ಲರಿಂದಲೂ ಸಹಿತನಾಗಿ ಪ್ರಾಗ್ಜ್ಯೋತಿಷಪಟ್ಟಣಕ್ಕೆ ಹೊರಟನು.
ತತ್ರ ರಾಜಾ ಮಹಾನಾಸೀದ್ ಭಗದತ್ತೋ ವಿಶಾಂಪತೇ |
ತೇನೈವ ಸುಮಹದ್ ಯುದ್ಧಂ ಪಾಂಡವಸ್ಯ ಮಹಾತ್ಮನಃ ॥37॥
ಜನಮೇಜಯರಾಜನೇ! ಆ ಪಟ್ಟಣದಲ್ಲಿ ಭಗದತ್ತನೆಂಬ ಶ್ರೇಷ್ಠರಾಜನಿದ್ದನು ಮಹಾತ್ಮನಾದ ಪಾಂಡವನಿಗೂ ಮತ್ತು ಭಗದತ್ತನಿಗೂ ದೊಡ್ಡ ಯುದ್ಧವಾಯಿತು.
ಸ ಕಿರಾತೈಶ್ಚ ಚೀನೈಶ್ಚ ವೃತಃ ಪ್ರಾಗ್ಜ್ಯೋತಿಷೋಽಭವತ್ |
ಅನ್ಯೈಶ್ಚ ವಿವಿಧೈರ್ಯೋಧೈಃ ಸಾಗರಾನೂಪವಾಸಿಭಿಃ ॥38॥
ಪ್ರಾಗ್‌ಜ್ಯೋತಿಷಪತಿಯಾದ ಆ ಭಗದತ್ತನು ಕಿರಾತರಿಂದಲೂ ಚೀನರಿಂದಲೂ ಸಾಗರತೀರದಲ್ಲಿರುವ ಇನ್ನು ಅನೇಕ ಯೋಧರಿಂದಲೂ ಕೂಡಿದವನಾಗಿ ಯುದ್ಧವನ್ನು ಮಾಡಿದನು.
ತತಃ ಸ ದಿವಸಾನಷ್ಟೌ ಯೋಧಯಿತ್ವಾ ಧನಂಜಯಮ್ |
ಪ್ರಹಸನ್ನಬ್ರವೀದ್ ರಾಜನ್ ಸಂಗ್ರಾಮೇ ವಿಗತಜ್ವರಃ ॥39॥
ರಾಜನೇ! ಅವನು ಎಂಟು ದಿವಸಗಳಕಾಲ ಅರ್ಜುನನ ಜೊತೆಯಲ್ಲಿ ಯುದ್ಧವನ್ನುಮಾಡಿ ಯುದ್ಧದಲ್ಲಿ ನಿರುತ್ಸಾಹನಾಗಿ ಅರ್ಜುನನನ್ನು ಕುರಿತು ನಗುತ್ತಾ ಹೀಗೆ ಮಾತನಾಡಿದನು.
ಉಪಪನ್ನಂ ಮಹಾಬಾಹೋ ತ್ವಯ್ಯೇತತ್ ಪಾಂಡುನಂದನ |
ಪಾಕಶಾಸನದಾಯಾದೇ ವೀರ್ಯಮಾಹವಶೋಭಿನಿ ॥40॥
ಮಹಾಬಾಹುವಾದ ಪಾಕಶಾಸನಪುತ್ರನಾದ ಯುದ್ಧಕ್ಕೆ ಶೋಭೆಯನ್ನು ತರುವ ಪಾಂಡುನಂದನನಾದ ನಿನ್ನಲ್ಲಿ ಈ ಪರಾಕ್ರಮವು ಯುಕ್ತವೇ ಆಗಿದೆ.
ಅಹಂ ಸಖಾ ಸುರೇಂದ್ರಸ್ಯ ಶಕ್ರಾದನವಮೋ ರಣೇ |
ನಹಿ ಶಕ್ನೋಮಿ ತೇ ತಾತ ಸ್ಥಾತುಂ ಪ್ರಮುಖತೋ ಯುಧಿ ॥41॥
ಪ್ರೀತಿಪಾತ್ರನೇ! ನಾನು ದೇವೇಂದ್ರನ ಸ್ನೇಹಿತ. ಯುದ್ಧದಲ್ಲಿ ಅವನಿಗಿಂತ ಯಾವ ವಿಧದಲ್ಲಿಯೂ ಕಡಿಮೆಯಿಲ್ಲ. ಆದರೆ ನಿನ್ನ ಎದುರಿನಲ್ಲಿ ಯುದ್ಧದಲ್ಲಿ ನಿಲ್ಲಲು ನನಗೆ ಸಾಧ್ಯವಾಗುತ್ತಿಲ್ಲ.
ತುಷ್ಟೋಽಸ್ಮಿ ತವ ಶೌರ್ಯೇಣ ಬ್ರೂಹಿ ಕಿಂ ಕರವಾಣಿ ತೇ |
ಯದ್ವಕ್ಷ್ಯಸಿ ಮಹಾಬಾಹೋ ತತ್ ಕರಿಷ್ಯಾಮಿ ಪಾಂಡವ ॥42॥
ಮಹಾಬಾಹುವಾದ ಪಾಂಡವನೇ! ನಿನ್ನ ಪರಾಕ್ರಮಕ್ಕೆ ನಾನು ಮೆಚ್ಚಿದೆ. ನಿನಗೆ ಏನುಮಾಡಲಿ ಎಂದು ಹೇಳು. ನೀನು ಹೇಳಿದಂತೆ ಮಾಡುವೆನು.
ಅರ್ಜುನಃ
ಕುರೂಣಾಂ ಪ್ರವರೋ ರಾಜಾ ಧರ್ಮನಿತ್ಯೋ ಯುಧಿಷ್ಠಿರಃ |
ತಸ್ಯ ಪಾರ್ಥಿವತಾಮೀಪ್ಸೋಃ ಕರಸ್ತಸ್ಮೈ ಪ್ರದೀಯತಾಮ್ ॥43॥
ಕುರುಶ್ರೇಷ್ಠನಾದ ಧರ್ಮನಿತ್ಯನಾದ ಯುಧಿಷ್ಠಿರನು ಮಹಾರಾಜನಾಗಲು ಬಯಸಿ ರಾಜಸೂಯಯಾಗವನ್ನು ಮಾಡುತ್ತಿದ್ದಾನೆ. ಅವನಿಗೆ ಕಪ್ಪವನ್ನು ಒಪ್ಪಿಸು.
ಭವಾನ್ ಪಿತೃಸಖಾ ಚೈವ ಪ್ರೀಯಮಾಣೋ ಮಯಾ ಯುಧಿ |

ಅತೋ ನಾಜ್ಞಾಪಯಾಮಿ ತ್ವಾಂ ಪ್ರೀತಿಪೂರ್ವಂ ಪ್ರದೀಯತಾಮ್ ॥
ನೀನು ನನ್ನ ತಂದೆಯ ಸ್ನೇಹಿತ ಮತ್ತು ಯುದ್ಧದಲ್ಲಿ ನನ್ನ ವಿಷಯದಲ್ಲಿ ಸಂತೋಷಗೊಂಡಿರುವೆ. ಆದ್ದರಿಂದ ನಿನಗೆ ನಾನು ಅಜ್ಞೆಯನ್ನು ಮಾಡುವುದಿಲ್ಲ. ಪ್ರೀತಿಪೂರ್ವಕವಾಗಿ ನೀನಾಗಿಯೇ ಕೊಡು.
ಭಗದತ್ತಃ
ಕುಂತೀಸುತ ಯಥಾ ಮೇ ತ್ವಂ ತಥಾ ರಾಜಾ ಯುಧಿಷ್ಠಿರಃ |
ಸರ್ವಮೇತತ್ ಕರಿಷ್ಯಾಮಿ ಕಿಂ ಚಾನ್ಯತ್ ಕರವಾಣಿ ತೇ ॥45॥
ಕುಂತಿಪುತ್ರನಾದ ಅರ್ಜುನನೇ ! ನೀನು ಹೇಗೆ ನನಗೆ ಪ್ರಿಯನೋ ರಾಜನಾದ ಯುಧಿಷ್ಠಿರನೂ ಹಾಗೆಯೇ ಸರಿ. ನೀನು ಹೇಳಿದುದೆಲ್ಲವನ್ನೂ ಮಾಡುವೆನು. ಬೇರೆ ಏನು ಮಾಡಲಿ ಎಂದು ಹೇಳು.
ವೈಶಂಪಾಯನಃ
ಸ ತತ್ರ ಸತ್ಕೃತಸ್ತೇನ ಮಾಸಮುಷ್ಯ ಧನಂಜಯಃ |
ಉದಕ್ಪ್ರಾಚ್ಯಾಂ ವಿನಿರ್ಜಿತ್ಯ ಪ್ರಾಯಾದ್ ರಾಮಗಿರಿಂ ಪ್ರತಿ ॥46॥
ಧನಂಜಯನು ಅಲ್ಲಿ ಭಗದತ್ತನಿಂದ ಸತ್ಕರಿಸಲ್ಪಟ್ಟವನಾಗಿ ಒಂದುತಿಂಗಳ ಕಾಲ ವಾಸಮಾಡಿ ಈಶಾನ್ಯದಿಕ್ಕನ್ನು ಗೆದ್ದು ಅಲ್ಲಿಂದ ರಾಮಗಿರಿಗೆ ಹೊರಟನು.
ತತೋ ರಾಮಗಿರಿಂ ಜಿತ್ವಾ ತಥಾ ಭುವನಪರ್ವತಮ್ |
ಅನ್ಯಾನಪಿ ವಶೇ ಚಕ್ರೇ ತರಸಾ ಪಾಕಶಾಸನಿಃ ॥47॥
ಅನಂತರ ರಾಮಗಿರಿಯನ್ನು ಹಾಗೆಯೇ ಭುವನಪರ್ವತವನ್ನು ಗೆದ್ದು ಉಳಿದ ಭಾಗಗಳನ್ನು ಅರ್ಜುನನು ಶೀಘ್ರವಾಗಿ ವಶಪಡಿಸಿಕೊಂಡನು.
ಸ ವಿಜಿತ್ಯ ಮಹಾಬಾಹುಃ ಕುಂತೀಪುತ್ರೋ ಧನಂಜಯಃ |
ಪ್ರಯಯಾವುತ್ತರಾಂ ತಸ್ಮಾದ್ ದಿಶಂ ಧನದಪಾಲಿತಾಮ್ ॥48॥
ಮಹಾಬಾಹುವಾದ ಕುಂತೀಪುತ್ರನಾದ ಧನಂಜಯನು ಹೀಗೆ ಈಶ್ಯಾನ್ಯದಿಕ್ಕನ್ನು ಗೆದ್ದು ಅಲ್ಲಿಂದ ಕುಬೇರಪಾಲಿತವಾದ ಉತ್ತರದಿಕ್ಕನ್ನು ಕುರಿತು ಪ್ರಯಾಣಮಾಡಿದನು.
ಅಭ್ಯಂತರಂ ಚ ಕೌಂತೇಯಸ್ತಥೈವ ಚ ಬಹಿರ್ಗಿರಿಮ್ |
ತಥೋಪರಿಗಿರಿಂ ಚಾಪಿ ವಿಜಿಗ್ಯೇ ಪುರುಷರ್ಷಭಃ ॥49॥
ಪುರುಷಶ್ರೇಷ್ಠನಾದ ಕುಂತೀಪುತ್ರನಾದ ಅರ್ಜುನನು ಆ ಮಧ್ಯದಲ್ಲಿರುವ ಬಹಿರ್ಗಿರಿಯನ್ನು ಮತ್ತು ಉಪರಿಗಿರಿಯನ್ನು ಜಯಿಸಿದನು.
ವಿಜಿತ್ಯ ಯವನಾನ್ ಸರ್ವಾನ್ ಯೇ ಚ ತತ್ರ ನರಾಧಿಪಾಃ |
ತಾನ್ ವಶೇ ಸ್ಥಾಪಯಿತ್ವಾ ಸ ರತ್ನಾನ್ಯಾದಾಯ ಸರ್ವಶಃ ॥50॥
ತೈರೇವ ಸಹಿತಃ ಸರ್ವೈರನುಸಂಗಮ್ಯ ತಾನ್ ನೃಪಾನ್ |
ಕುಲೂತವಾಸಿನಂ ರಾಜನ್ ಬೃಹಂತಮುಪಜಗ್ಮಿವಾನ್ ॥51॥
ರಾಜನೇ! ಅರ್ಜುನನು ಅಲ್ಲಿ ವಾಸವಾಗಿದ್ದ ಯವನರಾಜರುಗಳನ್ನೆಲ್ಲಾ ಗೆದ್ದು ವಶಪಡಿಸಿಕೊಂಡು ಅವರೆಲ್ಲರಿಂದಲೂ ರತ್ನಗಳನ್ನು ತೆಗೆದುಕೊಂಡು ಆ ಎಲ್ಲರಿಂದಲೂ ಸಹಿತನಾಗಿ ಕುಲೂತವಾಸಿಯಾದ ಬೃಹಂತರಾಜನ ಕಡೆಗೆ ನಡೆದನು.
ವಾದಿತ್ರರಥನಾದೇನ ಹಯಹೇಷಾಸ್ವನೇನ ಚ |
ಕುಂಜರಾಣಾಂ ಚ ಶಬ್ದೇನ ಕಂಪಯನ್ನಿವ ಮೇದಿನೀಮ್ ॥52॥
ವಾದ್ಯಗಳ ಮತ್ತು ರಥಗಳ ನಾದದಿಂದಲೂ ಕುದುರೆಗಳ ಹೇಷಾಧ್ವನಿಗಳಿಂದಲೂ ಅನೆಗಳ ಬೃಂಹಿತೆಗಳಿಂದಲೂ ಭೂಮಿಯನ್ನು ನಡುಗಿಸುತ್ತಾ ಅವನು ಪ್ರಯಾಣಮಾಡಿದನು.
ತತೋ ಬೃಹಂತಸ್ತರುಣೋ ಬಲೇನ ಚತುರಂಗಿಣಾ |
ನಿಷ್ಕ್ರಮ್ಯ ನಗರಾದ್ ರಾಜನ್ನುಪತಸ್ಥೇ ಧನಂಜಯಮ್ ॥53॥
ಆಗ ತರುಣನಾದ ಬೃಹಂತನು ಚತುರಂಗಬಲಸಹಿತನಾಗಿ ನಗರದಿಂದ ಹೊರಗೆ ಬಂದು ಅರ್ಜುನನನ್ನು ಎದುರಿಸಿದನು.
ಸುಮಹಾನ್ ಸನ್ನಿಪಾತೋಽಭೂದ್ ಧನಂಜಯಬೃಹಂತಯೋಃ|
ನ ಶಶಾಕ ಬೃಹಂತಸ್ತು ಸೋಢುಂ ಪಾರ್ಥಸ್ಯ ವಿಕ್ರಮಮ್ ॥54॥
ಧನಂಜಯ ಮತ್ತು ಬೃಹಂತರಿಗೆ ಘೋರವಾದ ಸಂಘರ್ಷವುಂಟಾಯಿತು. ಬೃಹಂತನು ಅರ್ಜುನನ ವಿಕ್ರಮವನ್ನು ಸಹಿಸಿಕೊಳ್ಳಲು ಸಮರ್ಥನಾಗಲಿಲ್ಲ.
ಸೋಽವಿಷಹ್ಯತಮಂ ಜ್ಞಾತ್ವಾ ಕೌಂತೇಯಂ ಪರ್ವತೇಶ್ವರಃ |
ಉಪಾವರ್ತತ ದುರ್ಮೇಧಾ ಧನಾನ್ಯಾದಾಯ ಸರ್ವಶಃ ॥55॥
ದುರ್ಬುದ್ಧಿಯುಳ್ಳ ಪರ್ವತೇಶ್ವರನಾದ ಬೃಹಂತನು ಅರ್ಜುನನ ಜೊತೆಯಲ್ಲಿ ಯುದ್ಧಮಾಡಲು ಸಾಧ್ಯವಿಲ್ಲವೆಂದು ಭಾವಿಸಿ ಕಪ್ಪಕಾಣಿಕೆಗಳನ್ನು ತಂದು ಒಪ್ಪಿಸಿದನು.
ಸ ತದ್ರಾಜ್ಯಮವಸ್ಥಾಪ್ಯ ಕೌಲೂತಸಹಿತೋ ಯುವಾ |
ಸೇನಾಬಿಂದುಮಥೋ ರಾಜನ್ ರಾಜ್ಯಾದಾಶು ಸಮಾಕ್ಷಿಪತ್ ॥56॥
ತರುಣನಾದ ಅರ್ಜುನನು ಕುಲೂತ ರಾಜ್ಯವನ್ನು ಸಮಾದಾನದಲ್ಲಿ ಇಟ್ಟು ಆ ಬೃಹಂತನ ಸಹಿತನಾಗಿ ಬಂದು ಸೇನಾಬಿಂದುರಾಜನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದನು.
ಮೋದಾಪುರೇ ವಾಮದೇವಂ ಸುನಾಮಾನಮನಾಮಿನಮ್ |

ಕುಲೂತಾನುತ್ತರಾಂಶ್ಚೈವ ತಾಂಶ್ಚ ರಾಜ್ಞಃ ಸಮಾನಯತ್ ॥57॥
ಮೋದಾಪುರದಲ್ಲಿ ಯಾರಿಗೂ ಬಗ್ಗದಿರುವ ವಾಮದೇವ ಎಂಬ ಹೆಸರಿನ ರಾಜನನ್ನು ಹಾಗೆಯೇ ಉತ್ತರ ಕುಲೂತ ರಾಜರುಗಳನ್ನೂ ಗೆದ್ದನು.
ತತ್ರಸ್ಥೈಃ ಪುರುಷೈರೇವ ಧರ್ಮರಾಜಸ್ಯ ಶಾಸನಾತ್ |
ವ್ಯಜಯದ್ ಧನಂಜಯೋ ರಾಜನ್ ದೇಶಾನ್ ಪಂಚ ಪ್ರಧಾನತಃ ॥
ಧರ್ಮರಾಜನ ಶಾಸನಕ್ಕೆ ಅನುಗುಣವಾಗಿ ನಡೆದುಕೊಳ್ಳುವ ಅರ್ಜುನನು ಅಲ್ಲಿದ್ದ ಯೋಧರಿಂದಲೇ ಅದರ ಸಮೀಪದಲ್ಲಿದ್ದ ಐದು ಪ್ರಧಾನವಾದ ದೇಶಗಳನ್ನು ಗೆದ್ದನು.
ಸಮೀಪಸ್ಥಂ ಸಮಾಸಾದ್ಯ ಸೇನಾಬಿಂದೋಃ ಪುರಂ ಮಹತ್ |
ಬೇನ ಚತುರಂಗೇಣ ನಿವೇಶನಮಥಾಕರೋತ್ ॥59॥
ಸಮೀಪದಲ್ಲಿದ್ದ ಸೇನಾಬಿಂದುವಿನ ದೊಡ್ಡಪಟ್ಟಣವನ್ನು ತಲುಪಿ ಅಲ್ಲಿ ತನ್ನ ಚತುರಂಗ ಸೈನ್ಯದ ಜೊತೆಯಲ್ಲಿ ಬೀಡುಬಿಟ್ಟನು.
ಸ ತೈಃ ಪರಿವೃತಃ ಸರ್ವೈರ್ವಿಷ್ವಗಶ್ವಂ ನರಾಧಿಪಮ್ |
ಅಭ್ಯಗಚ್ಛನ್ಮಹಾಬಾಹುಃ ಪೌರವಂ ಪುರುಷರ್ಷಭಃ ॥60॥
ಅನಂತರ ಅವರೆಲ್ಲರಿಂದಲೂ ಕೂಡಿದವನಾಗಿ ಪುರುಷಶ್ರೇಷ್ಠನಾದ ಮಹಾಬಾಹುವಾದ ಅರ್ಜುನನು ಪೌರವವಂಶದ ರಾಜನಾದ ವಿಶ್ವಗಶ್ವನಮೇಲೆ ದಂಡೆತ್ತಿಹೊದನು.
ತಂ ವಿಜಿತ್ಯಾಹವೇ ಶೂರಂ ಪಾರ್ವತೀಯಂ ಮಹಾರಥಃ |
ಧ್ವಜಿನ್ಯಾಽಪ್ಯಜಯದ್ ರಾಜನ್ ಪುರಂ ಪೌರವರಕ್ಷಿತಮ್ ॥61॥
ರಾಜನೇ! ಮಹಾರಥನಾದ ಅರ್ಜುನನು  ಶೂರನಾದ ವಿಶ್ವಗಶ್ವನನ್ನು ಯುದ್ಧದಲ್ಲಿ ಸೋಲಿಸಿ ತನ್ನ ಸೈನ್ಯದಿಂದ ಅವನಿಂದ ರಕ್ಷಿತವಾದ ಪಟ್ಟಣವನ್ನೂ ಗೆದ್ದನು.
ಪೌರವಂ ಚ ವಿನಿರ್ಜಿತ್ಯ ಸೇನಾಬಿಂದುಂ ಚ ತತ್ಪುರೇ |
ನ್ಯಧಾಪಯದಮೇಯಾತ್ಮಾ ದಸ್ಯೂನಾಂ ಪತಿಮರ್ಜುನಃ ॥62॥
ಪೌರವರಾಜನಾದ  ಸೇನಬಿಂದುವನ್ನು ಗೆದ್ದು ಅಪರಿಮಿತಪ್ರಭಾವವುಳ್ಳ ಅರ್ಜುನನು  ಅವನನ್ನು  ಆ ಪಟ್ಟಣದಲ್ಲಿ ದಸ್ಯುಗಳಿಗೆ ಅಧಿಪತಿಯನ್ನಾಗಿ ಮಾಡಿದನು.
ತತಃ ಕಾಶ್ಮೀರಕಾನ್ ವೀರಾನ್ ಕ್ಷತ್ರಿಯಾನ್ ಕ್ಷತ್ರಿಯರ್ಷಭಃ |
ವ್ಯಜಯಲ್ಲೋಹಿತಂ ಚೈವ ಮಂಡಲೈರ್ದಶಭಿಃ ಸಹ ॥63॥
ಕ್ಷತ್ರಿಯಶ್ರೇಷ್ಠನಾದ ಅರ್ಜುನನು ಕಾಶ್ಮೀರದೇಶದ ಎಲ್ಲಾ ವೀರಕ್ಷತ್ರಿಯರನ್ನೂ ಮತ್ತು ಹತ್ತು ಮಂಡಲಗಳಿಂದ ಕೂಡಿದ ಲೋಹಿತದೇಶವನ್ನೂ ಗೆದ್ದನು.
ತತಸ್ತ್ರಿಗರ್ತಾನ್ ಕೌಂತೇಯೋ ದಾರ್ವಿಕಾನಥ ತಂಕಣಾನ್ |
ಕ್ಷತ್ರಿಯಾನ್ ಸುಬಹೂನ್ ರಾಜನ್ನುಪಾವರ್ತತ ಸರ್ವಶಃ ॥64॥
ಅನಂತರ ಅರ್ಜುನನು ತ್ರಿಗರ್ತರು ದಾರ್ವಿಕರು ತಂಕಣರು ಮೊದಲಾದ ಅನೇಕ ಕ್ಷತ್ರಿಯರ ಮೇಲೆ ದಂಡೆತ್ತಿ ಹೋದನು.
ಅಭಿಸಾರಂ ತಥಾ ರಮ್ಯಂ ವಿಜಿಗ್ಯೇ ಕುರುಸತ್ತಮಃ |
ಕರೂಶವಾಸಿನಂ ಚೈವ ರೋಚಮಾನಂ ರಣೇಽಜಯತ್ ॥65॥
ಕುರುಶ್ರೇಷ್ಠನಾದ ಅರ್ಜುನನು ಅಭಿಸಾರವನ್ನು ಗೆದ್ದು  ಅನಂತರ ಕುರೂಶದೇಶವಾಸಿಯಾದ ರೋಚಮಾನ ಎಂಬ ರಾಜನನ್ನು ಯುದ್ಧದಲ್ಲಿ ಗೆದ್ದನು.
ತತಃ ಸಿಂಹಪುರಂ ರಮ್ಯಂ ಚಿತ್ರಾಯುಧಸುರಕ್ಷಿತಮ್ |
ಪ್ರಾಮಥದ್ ಬಲಮಾಸ್ಥಾಯ ಪಾಕಶಾಸನಿರಾಹವೇ ॥66॥
ಅನಂತರ ಪಾಕಶಾಸನಿಯಾದ ಅರ್ಜುನನು ಚಿತ್ರಾಯುಧಯೆಂಬ ರಾಜನಿಂದ ರಕ್ಷಿತವಾದ ಸಿಂಹಪುರದ ಮೇಲೆ ದಂಡೆತ್ತಿಹೋಗಿ ತನ್ನ ಸೈನ್ಯದಿಂದ ಆ ದೇಶವನ್ನು ಸೋಲಿಸಿದನು.
ತತೋ ವಂಗಾಂಶ್ಚ ಚೋಳಾಂಶ್ಚ ಕಿರೀಟೀ ಪಾಂಡವರ್ಷಭಃ |
ಸಹಿತಃ ಸರ್ವಸೈನ್ಯೇನ ಪ್ರಾಮಥತ್ ಪೃಥುವಿಕ್ರಮಃ ॥67॥
ಅನಂತರ ಮಹಾಪರಾಕ್ರಮಿಯಾದ ಪಾಂಡವಶ್ರೇಷ್ಠನಾದ ಅರ್ಜುನನು ತನ್ನ ಎಲ್ಲಾ ಸೈನ್ಯವನ್ನೂ ತೆಗೆದುಕೊಂಡು ಹೋಗಿ ವಂಗರನ್ನು ಮತ್ತು ಚೋಳರನ್ನು ಸೋಲಿಸಿದನು.
ತತಃ ಪರಮಸಂಹೃಷ್ಟೋ ಬಾಹ್ಲೀಕಾನ್ ಸಮಿತಿಂಜಯಃ |
ಮಹತಾ ಪರಿಮರ್ದೇನ ವಶೇ ಚಕ್ರೇ ದುರಾಸದಾನ್ ॥68॥
ಅನಂತರ ಯುದ್ಧದಲ್ಲಿ ಜಯಶೀಲನಾದ ಅರ್ಜುನನು ಪರಮ ಸಂತೋಷದಿಂದ ಕೂಡಿದವನಾಗಿ ತಲುಪಲು ಅಸಾದ್ಯವಾದ ಬಾಹ್ಲೀಕದೇಶವನ್ನು ದೊಡ್ಡ ಯುದ್ಧದಿಂದ ವಶಪಡಿಸಿಕೊಂಡನು .
ತತಃ ಸಾರಬಲಂ ಗೃಹ್ಯ ಫಲ್ಗುನೋಽನ್ಯಾನ್ ವಿಸೃಜ್ಯ ಸಃ |
ದರದಾನ್ ಸಹ ಕಾಂಭೋಜೈರಜಯತ್ ಪಾಕಶಾಸನಿಃ |
ಯವನಾಂಶ್ಚ ಮಹಾರಾಜ ಶಕಾಂಶ್ಚ ವ್ಯಜಯದ್ ಯುಧಿ ॥69॥
ಅನಂತರ ಅರ್ಜುನನು ತನ್ನ ಸೈನ್ಯದ ಶ್ರೇಷ್ಠವಾದ ಭಾಗವನ್ನು ಮಾತ್ರ ಉಳಿಸಿಕೊಂಡು, ಉಳಿದ ಎಲ್ಲಾ ಸೈನ್ಯವನ್ನು ಕಳುಹಿಸಿಕೊಟ್ಟು ದರದರನ್ನೂ ಕಾಂಬೋಜರನ್ನೂ ಯವನರನ್ನೂ ಶಕರನ್ನೂ  ಯುದ್ಧದಲ್ಲಿ ಗೆದ್ದನು.

ಕಿರಾತಾನ್ ಸಹಯಾನ್ ಸರ್ವಾನ್ ಖರಾನ್ ಕಾಚಾನ್ ಸಬಭ್ರಿಕಾನ್ |
ಭೀರಾನುತ್ಪಾಸಿಕಾಂಶ್ಚೈವ ಮ್ಲೇಚ್ಛಾಂಶ್ಚಾನ್ಯಾನ್ ಸಹಸ್ರಶಃ |
ತಾನ್ ಸರ್ವಾನಜಯತ್ ಪಾರ್ಥೋ ಧರ್ಮರಾಜಪ್ರಿಯೇಪ್ಸಯಾ ॥70॥
ಅರ್ಜುನನು ಧರ್ಮರಾಜನಿಗೆ ಪ್ರಿಯವನ್ನು ಉಂಟುಮಾಡುವ ಸಲುವಾಗಿ ಕಿರಾತರು ಸಹಯರು ಖರರು ಕಾಚರು ಬಭ್ರಿಕರು ಭೀರರು ಉತ್ಪಾಸಿಕರು ಮತ್ತು ಸಹಸ್ರ ಸಂಖ್ಯೆಯ ಮ್ಲೇಚ್ಛರು ಇವರೆಲ್ಲರನ್ನೂ ಜಯಿಸಿದನು.
ಹಾಗೆಯೇ ಈಶಾನ್ಯದಿಕ್ಕನ್ನು ಆಶ್ರಯಿಸಿವಾಸಿಸುವ ಎಲ್ಲ ದಸ್ಯುಗಳನ್ನು ಕಾಡುಗಳಲ್ಲಿ ವಾಸಿಸುವ ಎಲ್ಲಾ ದಸ್ಯುಗಳನ್ನು ಸೋಲಿಸಿದನು.
ತತಃ ಪರಮಕಾಂಭೋಜಾನಿಷೀಕಾನುತ್ತರಾನಪಿ |
ಸಹಿತಾಂಸ್ತಾನ್ ಮಹಾರಾಜ ವ್ಯಜಯತ್ ಪಾಕಶಾಸನಿಃ ॥71॥
ಮಹಾರಾಜನೇ ಅನಂತರ ಪಾಕಶಾಸನಿಯಾದ ಅರ್ಜುನನು ಒಟ್ಟಿಗೆ ಯುದ್ಧಕ್ಕೆ ಬಂದ ಪರಮಕಾಂಭೋಜ ದೇಶವನ್ನೂ ಮತ್ತು ಉತ್ತರ ಇಷೀಕದೇಶವನ್ನೂ ಗೆದ್ದನು.
ಇಷೀಕೇಷು ತು ಸಂಗ್ರಾಮೋ ಬಭೂವ ಸುಭಯಂಕರಃ |
ತಾರಕಾಮಯಸಂಕಾಶಃ ಪರಮೈಷೀಕಪಾರ್ಥಯೋಃ ॥72॥
ಇಷೀಕದೇಶದಲ್ಲಿ ಅರ್ಜುನ ಮತ್ತು ಪರಮೈಷೀಕರಾಜನಿಗೆ ತಾರಕಾಮಯಸದೃಶವಾದ ಭಯಂಕರವಾದ ಯುದ್ಧವಾಯಿತು.
ಸ ವಿಜಿತ್ಯ ತಥಾ ರಾಜನ್ನಿಷೀಕಾನ್ ರಣಮೂರ್ಧನಿ |
ಶುಕೋದರಸಮಪ್ರಖ್ಯಾನ್ ಹಯಾನಷ್ಟೌ ಸಮಾನಯತ್ ॥73॥
ಮಯೂರಸದೃಶಾನನ್ಯಾನ್ ಉಭಯಾನೇವ ಚಾಪರಾನ್ |
ತತಃ ಸ ಜಿತ್ವಾ ಬೀಭತ್ಸುರ್ಭಾರತಂ ವರ್ಷಮುತ್ತಮಮ್ ॥74॥
ರಾಜನೇ! ಘೋರವಾದ ಯುದ್ಧದಲ್ಲಿ ಅವನು ಎಲ್ಲಾ ಇಷೀಕರನ್ನೂ ಗೆದ್ದು ಗಿಣಿಯ ಉದರದಬಣ್ಣವುಳ್ಳ ಎಂಟು ಕುದುರೆಗಳನ್ನೂ ನವಿಲಿನ ಬಣ್ಣವುಳ್ಳ ಬೇರೆ ಕುದುರೆಗಳನ್ನೂ ಎರಡೂ ಬಣ್ಣಗಳುಳ್ಳ ಇನ್ನೂ ಅನೇಕ ಕುದುರೆಗಳನ್ನೂ, ಸಂಪಾದಿಸಿದನು.
ಅನ್ಯಾನ್ ವೈ ದಿವ್ಯವರ್ಷಾಂಶ್ಚ ಜಿತವಾನ್ ಕುಲಪರ್ವತಾನ್ ॥75॥
ಅನಂತರ ಬೀಭತ್ಸುವು ಶ್ರೇಷ್ಠವಾದ ಭಾರತವರ್ಷವನ್ನೂ, ಗೆದ್ದು ಉಳಿದ ದಿವ್ಯವರ್ಷಗಳನ್ನು ಮತ್ತು ಕುಲಪರ್ವತಗಳನ್ನೂ ಗೆದ್ದನು.
ತಥಾ ನಿರ್ಜಿತ್ಯ ಸಂಗ್ರಾಮೇ ಹಿಮವಂತಂ ಸನಿಷ್ಕುಟಮ್ |
ಶ್ವೇತಂ ಪರ್ವತಮಾಸಾದ್ಯ ನ್ಯವಸತ್ ಪುರುಷರ್ಷಭಃ ॥76॥
ಹಾಗೆ ಯುದ್ಧದಲ್ಲಿ ಹಿಮಾಲಯವನ್ನು ನಿಷ್ಕುಟಪರ್ವತವನ್ನೂ ಗೆದ್ದು ಶ್ವೇತಪರ್ವತಕ್ಕೆ ಬಂದು ಪುರುಷಶ್ರೇಷ್ಠನಾದ ಅರ್ಜುನನು ಅಲ್ಲಿ ಸ್ವಲ್ಪ ಕಾಲವಾಸ ಮಾಡಿದನು.
ಜನಮೇಜಯಃ
ಕಥಂ ಸ ಜಿತವಾನ್ ಪಾರ್ಥೋ ದಿವ್ಯಾನ್ ವರ್ಷಾನ್ ಸಪರ್ವತಾನ್ |
ಆನುಪೂರ್ವೀಂ ಚ ಮೇ ಶಂಸ ನಾಮಭಿಃ ಸಹ ವೈ ದ್ವಿಜ ॥77॥
ಬ್ರಾಹ್ಮಣಶ್ರೇಷ್ಠರೇ! ಪಾರ್ಥನು ದಿವ್ಯವರ್ಷಗಳನ್ನೂ ಮತ್ತು ಪರ್ವತಗಳನ್ನೂ ಹೇಗೆ ಗೆದ್ದನು. ಅವುಗಳನ್ನು ಗೆದ್ದ ಕ್ರಮವನ್ನು ಮತ್ತು ವರ್ಷ ಪರ್ವತಗಳ ಹೆಸರುಗಳನ್ನು ನನಗೆ ತಿಳಿಸಿ.
ವೈಶಂಪಾಯನಃ
ಸ ಜಿತ್ವಾ ಭಾರತಂ ವರ್ಷಂ ಬಲಾದ್ ರಾಜನ್ ಧನಂಜಯಃ |
ದಸ್ಯೂಂಶ್ಚಾಪ್ಯಜಯತ್ ಸರ್ವಾನ್ ಕುಕ್ಷೌ ಹಿಮವತೋ ಬಲಾತ್ ॥78॥
ಜನಮೇಜಯನೇ! ಧನಂಜಯನು ತನ್ನಬಲದಿಂದ ಭಾರತವರ್ಷವನ್ನು ಗೆದ್ದು ಅನಂತರ ಹಿಮಾಲಯದ ಕುಕ್ಷಿಯನ್ನು ಆಶ್ರಯಿಸಿದ್ದ ಎಲ್ಲಾ ದಸ್ಯುಗಳನ್ನೂ ಪರಾಕ್ರಮದಿಂದ ಗೆದ್ದನು.
ಸ ವಿನಿರ್ಜಿತ್ಯ ಸಂಗ್ರಾಮೇ ಹಿಮವಂತಂ ಚ ನಿಷ್ಕ್ರಮನ್ |
ಶ್ವೇತಪರ್ವತಮಾಸಾದ್ಯ ನ್ಯವಸದ್ ಭರತರ್ಷಭಃ ॥79॥
ಭರತಶ್ರೇಷ್ಠನಾದ ಅವನು ಯುದ್ಧದಲ್ಲಿ ಹಿಮಾಲಯಪರ್ವತವನ್ನು ಗೆದ್ದು ಅಲ್ಲಿಂದ ಶ್ವೇತಪರ್ವತವನ್ನು ತಲುಪಿ ಅಲ್ಲಿ ಸ್ವಲ್ಪ ಸಮಯವಾಸಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ಪಂಚವಿಂಶೋऽಧ್ಯಾಯಃ ॥
॥ ದಿಗ್ವಿಜಯಪರ್ವಣಿ ಪ್ರಥಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.
*****
ಇಪ್ಪತ್ತಾರನೆಯ ಅಧ್ಯಾಯ
(ಅರ್ಜುನ ದಿಗ್ವಿಜಯ ಮತ್ತು ಪ್ರತಿನಿವೃತ್ತಿ )
ವೈಶಂಪಾಯನಃ
ಸ ಶ್ವೇತಪರ್ವತಂ ವೀರಃ ಸಮತಿಕ್ರಮ್ಯ ಭಾರತ |
ದೇಶಂ ಕಿಂಪುರುಷಾವಾಸಂ ರಾಮಭೃತ್ಯೇನ ರಕ್ಷಿತಮ್ ॥1॥

ಮಹತಾ ಸನ್ನಿಪಾತೇನ ಕ್ಷತ್ರಿಯಾಂತಕರೇಣ ಹ |
ಅಜಯತ್ ಪಾಂಡವಶ್ರೇಷ್ಠಃ ಕರೇ ಚೈವ ನ್ಯವೇಶಯತ್ ॥2॥
ಭಾರತನೇ! ವೀರವಾದ ಅರ್ಜುನನು ಶ್ವೇತಪರ್ವತವನ್ನು ದಾಟಿ ರಾಮಭೃತ್ಯನಾದ ಹನುಮಂತನಿಂದ ರಕ್ಷಿತವಾದ ಕಿಂಪುರುಷವರ್ಷಕ್ಕೆ ಹೋಗಿ ಕ್ಷತ್ರಿಯವಿನಾಶಕಾರಿಯಾದ ದೊಡ್ಡ ಸಂಘರ್ಷವನ್ನು ಮಾಡಿ ಆದೇಶವನ್ನು ಗೆದ್ದನು. ಪಾಂಡವಶ್ರೇಷ್ಠನಾದ ಅರ್ಜುನನು ಅವರಿಂದ ಕಪ್ಪಕಾಣಿಕೆಗಳನ್ನು ತೆಗೆದುಕೊಂಡನು. (ತಾತ್ಪರ್ಯನಿರ್ಣಯದಲ್ಲಿ ಭೀಮಸೇನನ ಉಲ್ಲೇಖವಿದೆ).
ತಂ ಜಿತ್ವಾ ಹಾಟಕಂ ನಾಮ ದೇಶಂ ಗುಹ್ಯಕರಕ್ಷಿತಮ್ |
ಪಾಕಶಾಸನಿರವ್ಯಗ್ರಃ ಸಸೈನ್ಯೋ ವಶಮಾನಯತ್ ॥3॥
ಪಾಕಶಾಸನಿಯಾದ ಅರ್ಜುನನು ಅನಂತರ ಗುಹ್ಯಕರಿಂದ ರಕ್ಷಿತವಾದ ಹಾಟಕ ಎಂಬ ದೇಶವನ್ನು ತನ್ನ ಸೈನ್ಯ ಸಹಿತನಾಗಿ ವಶಮಾಡಿಕೊಂಡನು.
ತಾಂಸ್ತು ಸಾಂತ್ವೇನ ನಿರ್ಜಿತ್ಯ ಮಾನಸಂ ಸರ ಉತ್ತಮಮ್ |
ಋಷಿಕುಲ್ಯಾಂಶ್ಚ ತಾನ್ ಸರ್ವಾನ್ ದದರ್ಶ ಕುರುನಂದನಃ ॥4॥
ಹಾಟಕ ದೇಶವಾಸಿಗಳನ್ನು ಸಮಾಧಾನದ ವಚನಗಳಿಂದಲೇ ಜಯಿಸಿ ಶ್ರೇಷ್ಠವಾದ ಮಾನಸ ಸರೋವರವನ್ನು ತಲುಪಿ ಅದರ ಸುತ್ತಲೂ ಇರುವ ಋಷಿಗಳ ಕುಲಕ್ಕೆ ಆಶ್ರಯವಾದ ಆಶ್ರಮಗಳನ್ನು ನೋಡಿದನು.
ಮಾನಸಂ ಸರ ಆಸಾದ್ಯ ಹಾಟಕಾನಭಿತಃ ಪ್ರಭುಃ |
ಗಂಧರ್ವರಕ್ಷಿತಂ ದೇಶಮಗಮತ್ ಪಾಂಡುನಂದನಃ ॥5॥
ಪಾಂಡುನಂದನನಾದ ಅರ್ಜುನನು ಮಾನಸಸರೋವರವನ್ನು ತಲುಪಿ ಅದರ ಸುತ್ತಲೂ ಇರುವ ಗಂಧರ್ವರಕ್ಷಿತವಾದ ಹಾಟಕಪ್ರದೇಶಗಳನ್ನು ತಲುಪಿದನು.
ತತ್ರ ತಿತ್ತಿರಿಕಲ್ಮಾಷಾನ್ ಸಮುದ್ರಾಕ್ಷಾನ್ ಹಯೋತ್ತಮಾನ್ |
ಲೇಭೇ ಸ ಕರಮತ್ಯಂತಂ ಗಂಧರ್ವನಗರಾತ್ ತದಾ |
ಹೇಮಕೂಟಮಥಾಸಾದ್ಯ ನ್ಯವಿಶತ್ ಫಲ್ಗುನಸ್ತಥಾ ॥6॥
ಫಲ್ಗುನನು ಅಲ್ಲಿ ತಿತ್ತಿರಿಪಕ್ಷಿಗಳಂತೆ ಬಿಳಿ ಮತ್ತು ಕಪ್ಪುಬಣ್ಣಗಳಿಂದ ಕೂಡಿದ ಕಣ್ಣಿನ ಸುತ್ತಲೂ ಮುದ್ರೆ ಇರುವ ಶ್ರೇಷ್ಠವಾದ ಅಶ್ವಗಳನ್ನು ಆ ಗಂಧರ್ವನಗರಿಯಿಂದ ಕಾಣಿಕೆಯಾಗಿ ಪಡೆದನು. ಅನಂತರ ಹೇಮಕೂಟಪರ್ವತವನ್ನು ತಲುಪಿ ಅಲ್ಲಿ ತಂಗಿದನು.
ತಂ ಹೇಮಕೂಟಂ ರಾಜೇಂದ್ರ ಸಮತಿಕ್ರಮ್ಯ ಪಾಂಡವಃ |
ಹರಿವರ್ಷಂ ವಿವೇಶಾಥ ಸೈನ್ಯೇನ ಮಹತಾ ವೃತಃ ॥7॥
ರಾಜೇಂದ್ರನೇ! ಆ ಪಾಂಡವನು ಹೇಮಕೂಟಪರ್ವತವನ್ನು ದಾಟಿ ದೊಡ್ಡ ಸೈನ್ಯದಿಂದ ಕೂಡಿದವನಾಗಿ ಹರಿವರ್ಷಖಂಡವನ್ನು ಪ್ರವೇಶಿಸಿದನು.
ತತ್ರ ಪಾರ್ಥೋ ದದರ್ಶಾಥ ಬಹೂಂಶ್ಚೈವ ಮನೋರಮಾನ್ |
ನಗರಾಂಶ್ಚ ನಗಾಂಶ್ಚೈವ ನದೀಶ್ಚ ವಿಮಲೋದಕಾಃ |
ಪುರುಷಾನ್ ದೇವಕಲ್ಪಾಂಶ್ಚ ನಾರೀಶ್ಚ ಪ್ರಿಯದರ್ಶನಾಃ ॥8॥
ಪಾರ್ಥನು ಅಲ್ಲಿ ಅನೇಕ ಮನೋಹರವಾದ ನಗರಗಳನ್ನೂ ಸ್ವಚ್ಛವಾದ ನೀರಿನ ಅನೇಕ ನದಿಗಳನ್ನೂ ದೇವತೆಗಳಂತಿದ್ದ ಪುರುಷರನ್ನೂ ಸುಂದರಿಯರಾದ ಸ್ತ್ರೀಯರನ್ನೂ ನೋಡಿದನು.
ತಾನ್ ಸರ್ವಾಂಸ್ತತ್ರ ದೃಷ್ಟ್ವಾಽಥ ಮುದಾ ಯುಕ್ತೋ ಧನಂಜಯಃ |
ವಶೇ ಚಕ್ರೇ ಚ ರತ್ನಾನಿ ಲೇಭೇ ಚ ಸುಬಹೂನಿ ಚ ॥9॥
ಅವರೆಲ್ಲರನ್ನು ನೋಡಿ ಹರ್ಷಗೊಂಡ ಅರ್ಜುನನು ಅವರನ್ನು ವಶಪಡಿಸಿಕೊಂಡು ಅವರಿಂದ ಬಹಳ ರತ್ನಗಳನ್ನು ಪಡೆದನು.
ಅಥ ರಾಜನ್ನತಿಕ್ರಮ್ಯ ನಿಷಧಂ ಶೈಲಮಾಯತಮ್ |
ವಿವೇಶ ಮಧ್ಯಮಂ ವರ್ಷಂ ಪಾರ್ಥೋ ದಿವ್ಯಮಿಳಾವೃತಮ್ ॥10॥
ರಾಜನೇ! ಅನಂತರ ಪಾರ್ಥನು ದೀರ್ಘವಾಗಿ ಹಬ್ಬಿರುವ ನಿಷಧಪರ್ವತವನ್ನು ದಾಟಿ ಮಧ್ಯಭಾಗದಲ್ಲಿರುವ ದಿವ್ಯವಾದ ಇಲಾವೃತವರ್ಷವನ್ನು ಪ್ರವೇಶಿಸಿದನು.
ತತ್ರ ದೇವೋಪಮಾನ್ ದಿವ್ಯಾನ್ ಪುರುಷಾನ್ ದೇವದರ್ಶನಾನ್ |
ಅದೃಷ್ಟಪೂರ್ವಾನ್ ಸುಭಗಾನ್ ಸ ದದರ್ಶ ಧನಂಜಯಃ ॥11॥
ಅಲ್ಲಿ ಧನಂಜಯನು ದೇವತೆಗಳಿಂತಿದ್ದ ದೇವತೆಗಳನ್ನು ನೋಡುವ ಸಾಮರ್ಥ್ಯವನ್ನು ಹೊಂದಿದ್ದ ಹಿಂದೆಂದೂ ನೋಡದಿದ್ದಂತಹ ಸುಂದರರಾದ ದಿವ್ಯಪುರುಷರನ್ನು ನೋಡಿದನು.
ಸದನಾನಿ ಚ ಶುಭ್ರಾಣಿ ನಾರೀಶ್ಚಾಪ್ಸರಸನ್ನಿಭಾಃ |
ದೃಷ್ಟ್ವಾ ತಾನಹರದ್ ರಮ್ಯಾನ್ ಸ ತೈಶ್ಚ ದದೃಶೇ ತದಾ ॥12॥
ಅರ್ಜುನನು ಅಲ್ಲಿ ಶುಭ್ರವಾದ ಮನೆಗಳನ್ನೂ ಅಪ್ಸರೆಯರಂತೆ ಕಂಗೊಳಿಸುವ ಸ್ತ್ರೀಯರನ್ನೂ ಮನೋಹರರಾದ ಪುರುಷರನ್ನೂ ನೋಡಿ ತಾನೂ ಸಹ ಅವರಿಂದ ನೋಡಲ್ಪಟ್ಟನು.
ಜಿತ್ವಾ ಚ ತಾನ್ ಮಹಾಭಾಗಾನ್ ಕರೇ ಚ ವಿನಿವೇಶ್ಯ ಸಃ |
ರತ್ನಾನ್ಯಾದಾಯ ದಿವ್ಯಾನಿ ಭೂಷಣೈರ್ವಸನೈಃ ಸಹ |
ಉದೀಚೀಮಥ ರಾಜೇಂದ್ರ ಯಯೌ ಪಾರ್ಥೋ ಮುದಾಽನ್ವಿತಃ ॥13॥

ರಾಜೇಂದ್ರನೇ! ಆ ಮಹಾನುಭಾವರನ್ನೂ ಗೆದ್ದು, ಅವರು ಕಪ್ಪಕಾಣಿಕೆಯನ್ನು ಕೊಡುವಂತೆಮಾಡಿ ಅವರಿಂದ ದಿವ್ಯವಾದ ರತ್ನಗಳನ್ನೂ ಭೂಷಣಗಳನ್ನೂ ಮತ್ತು ವಸ್ತ್ರಗಳನ್ನೂ ತೆಗೆದುಕೊಂಡು ಪಾರ್ಥನು ಸಂತೋಷದಿಂದ ಕೂಡಿದವನಾಗಿ ಉತ್ತರದಿಕ್ಕಿಗೆ ಪ್ರಯಾಣಮಾಡಿದನು.
ಸ ದದರ್ಶ ತತೋ ಮೇರುಂ ಶಿಖರಾಣಾಂ ಪ್ರಭುಂ ಮಹತ್ |
ತಂ ಕಾಂಚನಮಯಂ ದಿವ್ಯಂ ಚತುರ್ವರ್ಣಂ ದುರಾಸದಮ್ ॥14॥
ಅನಂತರ ಅವನು ಎಲ್ಲಾ ಪರ್ವತಗಳಿಗೆ ಒಡೆಯನಾದ ಸುವರ್ಣಮಯವಾದ ನಾಲ್ಕು ಬಣ್ಣಗಳಿಂದ ಕೂಡಿದ ತಲುಪಲು ಅಸಾಧ್ಯವಾದ ದಿವ್ಯವಾದ ಮೇರುಪರ್ವತವನ್ನು ನೋಡಿದನು.
ಆಯತಂ ಶತಸಾಹಸ್ರಂ ಯೋಜನಾನಾಂ ತು ಸುಸ್ಥಿರಮ್ |
ಜ್ವಲಂತಮಚಲಂ ಮೇರುಂ ತೇಜೋರಾಶಿಮನುತ್ತಮಮ್ ॥15॥
ನೂರು ಸಾವಿರ ಯೋಜನ ಎತ್ತರವಾಗಿ ಭೂಮಿಯಲ್ಲಿ ಸ್ಥಿರವಾಗಿನಿಂತಿದ್ದ ಶ್ರೇಷ್ಠವಾದ ತೇಜೋರಾಶಿಯಂತೆ ಆ ಮೇರುಪರ್ವತವು ಕಂಗೊಳಿಸುತ್ತಿತ್ತು.
ಆಕ್ಷಿಪಂತಂ ಪ್ರಭಾಂ ಭಾನೋಃ ಸ್ವಶೃಂಗೈಃ ಕಾಂಚನೋಜ್ಜ್ವಲೈಃ |
ಕಾಂಚನಾಭರಣಂ ದಿವ್ಯಂ ದೇವಗಂಧರ್ವಸೇವಿತಮ್ ॥16॥
ಕಾಂಚನಮಯವಾದ ತನ್ನ ಶೃಂಗಗಳಿಂದ ಸೂರ್ಯಪ್ರಕಾಶವನ್ನು ಪ್ರತಿಫಲಿಸುತ್ತಾ ಕಾಂಚನ ಆಭರಣಗಳನ್ನು ಹೊಂದಿದ ಆ ದಿವ್ಯವಾದ ಪರ್ವತವು ದೇವತೆಗಳಿಂದ ಮತ್ತು ಗಂಧರ್ವರಿಂದ ಸೇವಿತವಾಗಿದೆ.
ನಿತ್ಯಪುಷ್ಪಫಲೋಪೇತಂ ಸಿದ್ಧಚಾರಣಸೇವಿತಮ್ |
ಅಪ್ರಮೇಯಮನಾಧೃಷ್ಯಮಧರ್ಮಬಹುಲೈರ್ಜನೈಃ ॥17॥
ನಿತ್ಯವೂ ಫಲಪುಷ್ಪಗಳಿಂದ ತುಂಬಿದ ವೃಕ್ಷಗಳಿಂದ ಕೂಡಿದ್ದು ಸಿದ್ಧರಿಂದ ಮತ್ತು ಚಾರಣರಿಂದ ಸೇವಿಸಲ್ಪಟ್ಟ ಅದು ಅದರ ಸ್ವರೂಪವೇ ತಿಳಿಯಲು ಅಸಾಧ್ಯಾವಾದದ್ದಾಗಿ ಅಧರ್ಮಿಷ್ಠರಿಂದ ಎಂದೂ ಆಕ್ರಮಣಕ್ಕೆ ಒಳಗಾಗದೆ ಇದ್ದಿತು.
ವ್ಯಾಳೈರಾಚರಿತಂ ಘೋರೈರ್ದಿವ್ಯೌಷಧಿವಿದೀಪಿತಮ್ |
ಸ್ವರ್ಗಮಾವೃತ್ಯ ತಿಷ್ಠಂತಮುಚ್ಛ್ರಾಯೇಣ ಮಹಾಗಿರಿಮ್ ॥18॥
ಅದು ಘೋರವಾದ ವ್ಯಾಳಮೃಗಗಳ ಸಂಚಾರದಿಂದ ಕೂಡಿದ್ದು ದಿವ್ಯ ಔಷಧಿಗಳಿಂದ ಬೆಳಗುತ್ತಿದ್ದಿತು. ಆ ಮಹಾಪರ್ವತವು ತನ್ನ ಔನ್ನತ್ಯದಿಂದ ಸ್ವರ್ಗವನ್ನು ಮುಚ್ಚುವಂತೆ ಇದ್ದಿತು.
ಅಗಮ್ಯಂ ಮನಸಾಽಪ್ಯೇನಂ ನದೀವೃಕ್ಷಸಮನ್ವಿತಮ್ |
ನಾನಾವಿಹಗಸ್ಯಂಘೈಶ್ಚ ನಾದಿತಂ ಸುಮನೋಹರೈಃ ॥19॥
ಉಳಿದವರು ಮನಸ್ಸಿನಿಂದಲೂ ತಲುಪಲು ಅಸಾಧ್ಯವಾಗಿ ನದಿಗಳಿಂದ ಮತ್ತು ವೃಕ್ಷಗಳಿಂದ ಕೂಡಿದ್ದು ಅತ್ಯಂತ ಮನೋಹರವಾದ ನಾನಾಪಕ್ಷಿಗಳ ಸಮೂಹದ ನಾದದಿಂದಲೂ ಕೂಡಿದ್ದಿತು.
ತಂ ದೃಷ್ಟ್ವಾ ಫಲ್ಗುನೋ ಮೇರುಂ ಪ್ರೀತಿಮಾನಭವತ್ ತದಾ |
ಮೇರೋರಿಲಾವೃತಂ ವರ್ಷಂ ಸರ್ವತಃ ಪರಿಮಂಡಲಮ್ ॥20॥
ಫಲ್ಗುನನು ಆ ಮೇರುಪರ್ವತವನ್ನು ನೋಡಿ ಸಂತೋಷವನ್ನು ಹೊಂದಿದನು. ಮೇರುಪರ್ವತದ ಸುತ್ತಲೂ ಮಂಡಲಾಕಾರವಾಗಿ ಇಳಾವೃತವರ್ಷವು ಇದೆ.
ಮೇರೋಸ್ತು ದಕ್ಷಿಣೇ ಪಾರ್ಶ್ವೇ ಜಂಬೂರ್ನಾಮ ವನಸ್ಪತಿಃ |
ನಿತ್ಯಪುಷ್ಪಫಲೋಪೇತಃ ಸಿದ್ಧಚಾರಣಸೇವಿತಃ ॥21॥
ಮೇರುವಿನ ದಕ್ಷಿಣಪಾರ್ಶ್ವದಲ್ಲಿ ಜಂಬೂ ಎಂಬ ವನಸ್ಪತಿಯು ಯಾವಾಗಲೂ ಫಲ ಪುಷ್ಪಗಳಿಂದ ಕೂಡಿದ್ದು ಸಿದ್ಧಚಾರಣರಿಂದ ಸೇವಿತವಾಗಿದೆ.
ಆಸ್ವರ್ಗಮುಚ್ಛ್ರಿತಾ ರಾಜಂಸ್ತಸ್ಯ ಶಾಖಾ ವನಸ್ಪತೇಃ |
ಯಸ್ಯ ನಾಮ್ನಾ ತ್ವಿದಂ ದ್ವೀಪಂ ಜಂಬೂದ್ವೀಪಮಿತಿ ಶ್ರುತಮ್ |
ತಂ ಚ ಜಂಬೂಂ ದದರ್ಶಾಥ ಸವ್ಯಸಾಚೀ ಪರಂತಪಃ ॥22॥
ಜನಮೇಜಯರಾಜನೇ! ಆ ಜಂಬೂವೃಕ್ಷದ ಕೊಂಬೆಗಳು ಸ್ವರ್ಗದವರೆಗೂ ಔನ್ನತ್ಯವನ್ನು ಹೊಂದಿವೆ. ಆ ವೃಕ್ಷದ ಹೆಸರಿನಿಂದಲೇ ಈ ದ್ವೀಪಕ್ಕೆ ಜಂಬೂದ್ವೀಪ ಎಂದು ಹೆಸರು ಬಂದಿದೆ. ಪರಂತಪನೂ ಸೌವ್ಯಸಾಚಿಯೂ ಆದ ಅರ್ಜುನನು ಆ ಜಂಬೂವೃಕ್ಷವನ್ನು ನೋಡಿದನು.
ತೌ ದೃಷ್ಟ್ವಾಽಪ್ರತಿಮೌ ಲೋಕೇ ಜಂಬೂಂ ಮೇರುಂ ಚ ಸಂಸ್ಥಿತೌ|
ಪ್ರೀತಿಮಾನಭವದ್ ರಾಜನ್ ಸರ್ವತಃ ಸ ವಿಲೋಕಯನ್ ॥23॥
ರಾಜನೇ! ಅಸದೃಶವಾಗಿ ಬೆಳೆದು ನಿಂತಿದ್ದ ಆ ಜಂಬೂವೃಕ್ಷವನ್ನು ಮತ್ತು ಮೇರುಪರ್ವತವನ್ನು ನೋಡಿ ಸಂತೋಷಗೊಂಡ ಅರ್ಜುನನು ಪುನಃ ಅವುಗಳನ್ನು ಎಲ್ಲಾ ಕಡೆಗಳಿಲ್ಲಿಯೂ ಅವಲೋಕಿಸಿದನು.
ತತ್ರ ಲೇಭೇ ತತೋ ಜಿಷ್ಣುಃ ಸಿದ್ಧೈರ್ದಿವ್ಯೈಶ್ಚ ಚಾರಣೈಃ |
ರತ್ನಾನಿ ಬಹುಸಾಹಸ್ರಂ ವಸಞತ್ರಣ್ಯಾಭರಣಾನಿ ಚ ॥24॥
ಅಲ್ಲಿ ಅರ್ಜುನನು ದಿವ್ಯರಾದ ಸಿದ್ಧಚಾರಣರಿಂದ ಅನೇಕ ಸಹಸ್ರರತ್ನಗಳನ್ನು ವಸ್ತ್ರಗಳನ್ನು ಮತ್ತು ಆಭರಣಗಳನ್ನು ಪಡೆದನು.
ಅನ್ಯಾನಿ ಚ ಮಹಾರ್ಹಾಣಿ ತತ್ರ ಲಬ್ಧ್ವಾಽರ್ಜುನಸ್ತದಾ |
ಆಮಂತ್ರಯಿತ್ವಾ ತಾನ್ ಸರ್ವಾನ್ ಯಜ್ಞಮುದ್ದಿಶ್ಯ ವೈ ಗುರೋಃ |

ಬಹೂನ್ಯಾದಾಯ ರತ್ನಾನಿ ಗಮನಾಯೋಪಚಕ್ರಮೇ ॥25॥
ಅರ್ಜುನನು ಆಗ ಅಲ್ಲಿ ಉಳಿದ ಬೆಲೆಬಾಳುವ ಪದಾರ್ಥಗಳನ್ನು ಪಡೆದು, ಅವರೆಲ್ಲರನ್ನೂ ತನ್ನ ಅಣ್ಣನ ಯಜ್ಞಕ್ಕೆ ಬರಬೇಕೆಂದು ಆಹ್ವಾನಿಸಿ ಎಲ್ಲ ರತ್ನಗಳನ್ನೂ ತೆಗೆದುಕೊಂಡು ಅಲ್ಲಿಂದ ಹೊರಡಲು ಉಪಕ್ರಮಿಸಿದನು.
ಮೇರುಂ ಪ್ರದಕ್ಷಿಣಂ ಕೃತ್ವಾ ಪರ್ವತಪ್ರವರಂ ಪ್ರಭುಃ |
ಯಯೌ ಜಂಬೂನದೀತೀರೇ ನದೀಂ ಶ್ರೇಷ್ಠಾಂ ವಿಲೋಕಯನ್ ॥26॥
ಪ್ರಭುವಾದ ಅರ್ಜುನನು ಪರ್ವತಶ್ರೇಷ್ಠವಾದ ಮೇರುವಿಗೆ ಪ್ರದಕ್ಷಿಣೆಯನ್ನು ಮಾಡಿ ಶ್ರೇಷ್ಠವಾದ ಜಂಬೂನದಿಯನ್ನು ನೋಡುತ್ತಾ ಅದರ ತೀರದಲ್ಲಿಯೇ ನಡೆದನು.
ಸ ತಾಂ ಮನೋರಮಾಂ ದಿವ್ಯಾಂ ಜಂಬೂಸ್ವಾದುರಸಾವಹಾಮ್ |
ಹೈಮಪಕ್ಷಿಗಣೈರ್ಜುಷ್ಟಾಂ ಸೌವರ್ಣಜಲಜಾಕುಲಾಮ್ ॥27॥
ಆ ನದಿಯು ದಿವ್ಯವೂ ಮನೋರಮವೂ ಆಗಿದ್ದು ಜಂಬೂವೃಕ್ಷದ ಹಣ್ಣಿನ ಮಧುರರಸದ ಹೊಳೆಯಾಗಿ ಹರಿಯುತ್ತಿದ್ದಿತು. ಅದರಲ್ಲಿ ಸುವರ್ಣಮಯವಾದ ಪಕ್ಷಿಗಳ ಸಮೂಹವೂ ಸುವರ್ಣಮಯವಾದ ಕಮಲಗಳೂ ತುಂಬಿದ್ದವು.
ಹೈಮಪಂಕಾಂ ಹೈಮಜಲಾಂ ಶುಭಾಂ ಸೌವರ್ಣವಾಲುಕಾಮ್|
ಕ್ವಚಿತ್ ಸೌವರ್ಣಪದ್ಮೈಶ್ಚ ಸಂಕುಲಾಂ ಹೈಮಪುಷ್ಪಕೈಃ ॥28॥
ಆ ನದಿಯು ಸುವರ್ಣಮಯವಾದ ಕೆಸರಿನಿಂದಲೂ ಸುವರ್ಣವರ್ಣದ ನೀರಿನಿಂದಲೂ ಸುವರ್ಣಮಯವಾದ ಮರಳುಗಳಿಂದಲೂ ಸುವರ್ಣಮಯವಾದ ಪದ್ಮಗಳಿಂದಲೂ ಮತ್ತು ಸುವರ್ಣಮಯವಾದ ಪುಷ್ಪಗಳಿಂದಲೂ ಕೂಡಿ ಶುಭವಾಗಿದ್ದಿತು.
ಕ್ವಚಿತ್ ಸುಪುಷ್ಪಿತೈಃ ಕೀರ್ಣಾಂ ಸುವರ್ಣಕುಮುದೋತ್ಪಲೈಃ|
ಕ್ವಚಿತ್ ತೀರರುಹೈಃ ಕೀರ್ಣಾಂ ಹೈಮವೃಕ್ಷೈಃ ಸುಪುಷ್ಪಿತೈಃ ॥29॥
ಕೆಲವು ಪ್ರದೇಶದಲ್ಲಿ ಪೂರ್ಣವಾಗಿ ಅರಳಿದ ಸುವರ್ಣಮಯವಾದ ಕುಮುದ ಮತ್ತು ಉತ್ಪಲಗಳಿಂದ ಕೂಡಿದ್ದಿತು. ಇನ್ನು ಕೆಲವುಕಡೆ ತೀರದಲ್ಲಿ ಬೆಳೆದ ಪುಷ್ಪಭರಿತವಾದ ಸುವರ್ಣಮಯವಾದ ವೃಕ್ಷಗಳಿಂದ ನಿಬಿಡವಾಗಿದ್ದಿತು.
ತೀರ್ಥೈಶ್ಚ ರುಗ್ಮಸೋಪಾನೈಃ ಸರ್ವತಃ ಸಂಕುಲಾಂ ಶುಭಾಮ್ |
ವಿಮಲೈರ್ಮಣಿಜಾತೈಶ್ಚ ನೃತ್ತಗೀತರವೈರ್ಯುತಾಮ್ ॥30॥
ಆ ನದಿಯ ಸಮೀಪದಲ್ಲಿ ಎಲ್ಲಾಕಡೆಗಳಲ್ಲಿಯೂ ಸುವರ್ಣಮಯವಾದ ಸೋಪಾನಗಳನ್ನು ಹೊಂದಿದ್ದ ಶುಭಪ್ರದವಾದ ಅನೇಕ ತೀರ್ಥಗಳಿದ್ದವು. ಅವುಗಳು ವಿಮಲವಾದ ಮಣಿಸಮೂಹಗಳಿಂದಲೂ ನೃತ್ಯಗೀತ ಧ್ವನಿಗಳಿಂದಲೂ ತುಂಬಿದ್ದವು.
ದೀಪ್ತೈರ್ಹೈಮವಿತಾನೈಶ್ಚ ಸಮಂತಾಚ್ಛೋಭಿತಾಂ ಶುಭಾಮ್ |
ತಥಾವಿಧಾಂ ನದೀಂ ದೃಷ್ಟ್ವಾ ಪಾರ್ಥಸ್ತಾಂ ಪ್ರಶಶಂಸ ಹ ॥31॥
ಪ್ರಕಾಶಮಾನವಾದ ಸುವರ್ಣಮಯವಾದ ತೋರಣಗಳಿಂದ ಎಲ್ಲಾ ಕಡೆಗಳಲ್ಲಿಯೂ ಶೋಭಿಸುತ್ತಿದ್ದ ಅಂತಹ ಆಶುಭವಾದ ನದಿಯನ್ನು ನೋಡಿ ಪಾರ್ಥನು ಅದನ್ನು ಪ್ರಶಂಸಿಸಿದನು.
ಅದೃಷ್ಟಪೂರ್ವಾಂ ರಾಜೇಂದ್ರ ದೃಷ್ಟ್ವಾ ಹರ್ಷಮವಾಪ ಚ |
ದರ್ಶನೀಯಾನ್ ನದೀತೀರೇ ಪುರುಷಾನ್ ಸುಮನೋಹರಾನ್ ॥32॥
ತಾನ್ ನದೀಸಲಿಲಾಹಾರಾನ್ ಸದಾರಾನಮರೋಪಮಾನ್ |
ನಿತ್ಯಂ ಸುಖಮುದಾ ಯುಕ್ತಾನ್ ಸರ್ವಾಲಂಕಾರಶೋಭಿತಾನ್|
ತೇಭ್ಯೋ ಬಹೂನಿ ರತ್ನಾನಿ ತದಾ ಲೇಭೇ ಧನಂಜಯಃ ॥33॥
ರಾಜೇಂದ್ರನೇ! ಹಿಂದೆ ಎಂದೂ ನೋಡದಿದ್ದ ಆ ನದಿಯನ್ನು ನೋಡಿ ಅರ್ಜುನನು ಸಂತೋಷಗೊಂಡನು. ಆ ನದಿಯ ತೀರದಲ್ಲಿ ಬಹಳ ಮನೋಹರವಾದ ಸುಂದರರಾದ ದೇವತೆಗಳಂತೆ ಶೋಭಿಸುವ ತಮ್ಮ ತಮ್ಮ ಪತ್ನಿಯರಿಂದ ಕೂಡಿದ ಆ ನದಿಯನೀರನ್ನೇ ಅಹಾರವಾಗಿ ಉಪಯೋಗಿಸುವ ಸರ್ವಾಲಂಕಾರ ಶೋಭಿತರಾದ ವಿಷಯ- ಸುಖಗಳಿಂದಲೂ ಮತ್ತು ಮನಸ್ಸಿನ ಹರ್ಷಗಳಿಂದಲೂ ಯುಕ್ತರಾದ ಅನೇಕ ಪುರುಷರನ್ನು ನೋಡಿ ಅವರಿಂದ ಬಹಳ ರತ್ನಗಳನ್ನು ಸ್ವೀಕರಿಸಿದನು.
ದಿವ್ಯಂಜಾಂಬೂನದಂ ಹೈಮಭೂಷಣಾನಿ ಚ ಪೇಶಲಮ್ |
ಲಬ್ಧ್ವಾ ತಾನ್ ದುರ್ಲಭಾನ್ ಪಾರ್ಥಃ ಪ್ರತೀಚೀಂ ಪ್ರಯಯೌ ದಿಶಮ್ |
ನಾರೀಣಾಂ ರಕ್ಷಿತಂ ದೇಶಮಜಯಚ್ಚಾರ್ಜುನಸ್ತತಃ ॥34॥
ಪಾರ್ಥನು ಅವರಿಂದ ದಿವ್ಯವಾದ ಸುವರ್ಣವನ್ನೂ ಸುಂದರವಾದ ದುರ್ಲಭವಾದ ಸುವರ್ಣಮಯವಾದ ಆಭರಣಗಳನ್ನೂ ಪಡೆದು ಅಲ್ಲಿಂದ ಪಶ್ಚಿಮ ಹೊರಟನು. ಅನಂತರ ಅರ್ಜುನನು ನಾರಿಯರಿಂದ ರಕ್ಷಿತವಾದ (ನಾಗಗಳಿಂದ ರಕ್ಷಿತವಾದ) ಆ ದೇಶವನ್ನು ಜಯಿಸಿದನು.
ತತೋ ಗತ್ವಾ ಮಹಾರಾಜ ವಾರುಣೀಂ ಪಾಕಶಾಸನಿಃ |
ಗಂಧಮಾದನಮಾಸಾದ್ಯ ತತ್ರಸ್ಥಾನಜಯತ್ ಪ್ರಭುಃ ॥35॥
ಮಹಾರಾಜನೇ! ಅನಂತರ ಪಾಕಶಾಸನಿಯಾದ ಅರ್ಜುನನು ಇನ್ನೂ ಪಶ್ಚಿಮಕ್ಕೆ ಪ್ರಯಾಣಮಾಡಿ ಗಂಧಮಾಧನಪರ್ವತವನ್ನು ತಲುಪಿ ಅಲ್ಲಿದ್ದ ಪುರುಷರನ್ನು ಜಯಿಸಿದನು.
ತಂ ಗಂಧಮಾದನಂ ರಾಜನ್ನತಿಕ್ರಮ್ಯ ತತೋಽರ್ಜುನಃ |
ಕೇತುಮಾಲಂ ವಿವೇಶಾಥ ವರ್ಷಂ ರತ್ನಸಮನ್ವಿತಮ್ ॥36॥
ರಾಜನೇ ಪ್ರಭುವಾದ ಅರ್ಜುನನು ಅನಂತರ ಗಂಧಮಾಧನ ಪರ್ವತವನ್ನು ದಾಟಿ ಬಹುರತ್ನ ಸಮನ್ವಿತವಾದ ಕೇತುಮಾಲಪ್ರದೇಶವನ್ನು ಪ್ರವೇಶಿಸಿದನು.

ಸೇವಿತಂ ದೇವಕಲ್ಪೈಶ್ಚ ನಾರೀಭಿಃ ಪ್ರಿಯದರ್ಶನೈಃ |
ತಂ ಜಿತ್ವಾ ಚಾರ್ಜುನೋ ರಾಜನ್ ಕರೇಣ ವಿನಿವೇಶ್ಯ ಚ ॥37॥
ಆ ವರ್ಷವು ದೇವತೆಗಳಂತೆ ಇರುವ ಪುರುಷರಿಂದಲೂ ಮನೋಹರವಾದ ಸ್ತ್ರೀಯರಿಂದಲೂ ಕೂಡಿದ್ದಿತು. ರಾಜನೇ ಅರ್ಜುನನು ಆ ವರ್ಷವನ್ನು ಗೆದ್ದು ಅವರು ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿದನು.
ಆಹೃತ್ಯ ತತ್ರ ರತ್ನಾನಿ ದುರ್ಲಭಾನಿ ತಥಾಽರ್ಜುನಃ |
ಪುನಶ್ಚ ಪರಿವೃತ್ಯಾಥ ಮಧ್ಯಂ ದೇಶಮಿಳಾವೃತಮ್ ॥38॥
ಅರ್ಜುನನು ಅಲ್ಲಿ ದುರ್ಲಭವಾದ ರತ್ನಗಳನ್ನು ಪಡೆದು ಪುನಃ ಹಿಂದಿರುಗಿ ಬಂದು ಮಧ್ಯಭಾಗದಲ್ಲಿರುವ ಇಳಾವೃತ ಖಂಡಕ್ಕೆ ಬಂದನು.
ಗತ್ವಾ ಪ್ರಾಚೀಂ ದಿಶಂ ರಾಜನ್ ಸವ್ಯಸಾಚೀ ಪರಂತಪಃ |
ಮೇರುಮಂದರಯೋರ್ಮಧ್ಯೇ ಶೈಲೋದಾಮಭಿತೋ ನದೀಮ್ ॥39॥
ಯೇ ತೇ ಕೀಚಕವೇಣೂನಾಂ ಛಾಯಾಂ ರಮ್ಯಾಮುಪಾಸತೇ |
ಖಷಾನ್ ಝುಷಾಂಶ್ಚ ನದ್ಯೋತಾನ್ ಪ್ರಘಸಾನ್ ದೀರ್ಘವೇಣಿಕಾನ್ |
ಪಶುಪಾಂಶ್ಚ ಕುಣಿಂದಾಂಶ್ಚ ತಂಕಣಾನ್ ಪರತಂಕಣಾನ್ ॥40॥
ಏತಾನ್ ಸಮಸ್ತಾನ್ ಜಿತ್ವಾ ಸ ಕರೇ ಚ ವಿನಿವೇಶ್ಯ ಚ |
ರತ್ನಾನ್ಯಾದಾಯ ಸರ್ವೇಭ್ಯೋ ಮಾಲ್ಯವಂತಂ ತತೋ ಯಯೌ ॥41॥
ರಾಜನೇ! ಸವ್ಯಸಾಚಿಯೂ ಪರಂತಪನೂ ಆದ ಅರ್ಜುನನು ಅಲ್ಲಿಂದ ಪೂರ್ವದಿಕ್ಕಿಗೆ ಪ್ರಯಾಣಮಾಡಿ ಮೇರು ಮಂದರ ಪರ್ವತಗಳ ಮದ್ಯೆ ಇರುವ ಶೈಲೋದಾ ನದಿಯ ಸುತ್ತಲೂ ಇರುವ ಕೀಚಕ ಮತ್ತು ವೇಣುಗುಲ್ಮಗಳ ಸುಂದರವಾದ ಛಾಯೆಯಲ್ಲಿ ವಾಸಿಸುವ ಖಷರನ್ನು ಝುಷರನ್ನು ನದ್ಯೋತರನ್ನು ಪ್ರಘಸರನ್ನು ದೀರ್ಘವೈಣಿಕರನ್ನು ಪಶುಪರನ್ನು ಕುಣಿಂದರನ್ನು ತಕಂಣರನ್ನು ಪರತಂಕಣರನ್ನು ಎಲ್ಲರನ್ನೂ ಗೆದ್ದು ಅವರಿಂದ ಕಪ್ಪವನ್ನು ಪಡೆದು ಎಲ್ಲರೂ ಕೊಟ್ಟು ರತ್ನಗಳನ್ನು ಸ್ವೀಕರಿಸಿ ಅಲ್ಲಿಂದ ಮಾಲ್ಯವಾನ್ ಪರ್ವತದ ಕಡೆಗೆ ನಡೆದನು.
ತಂ ಮಾಲ್ಯವಂತಂ ಶೈಲೇಂದ್ರಂ ಸಮತಿಕ್ರಮ್ಯ ಪಾಂಡವಃ |
ಭದ್ರಾಶ್ವಂ ಪ್ರವಿವೇಶಾಥ ವರ್ಷಂ ಸ್ವರ್ಗೋಪಮಂ ಶುಭಮ್ ॥42॥
ಪಾಂಡುಪುತ್ರನಾದ ಅರ್ಜುನನು ಅನಂತರ ಆ ಮಾಲ್ಯವಾನ್ ಪರ್ವತವನ್ನು ದಾಟಿ ಸ್ವರ್ಗಕ್ಕೆ ಸದೃಶವಾದ ಶುಭವಾದ ಭದ್ರಾಶ್ವ ವರ್ಷವನ್ನು ಪ್ರವೇಶಿಸಿದನು.
ತತ್ರಾಮರೋಪಮಾನ್ ರಮ್ಯಾನ್ ಪುರುಷಾನ್ ಸುಖಸಂಯುತಾನ್ |
ಜಿತ್ವಾ ತಾನ್ ಸ್ವವಶೇ ಕೃತ್ವಾ ಕರೇ ಚ ವಿನಿವೇಶ್ಯ ಚ ॥43॥
ಆಹೃತ್ಯ ಸರ್ವರತ್ನಾನಿ ಅಸಂಖ್ಯಾನಿ ತತಸ್ತತಃ |
ನೀಲಂ ನಾಮ ಗಿರಿಂ ಗತ್ವಾ ತತ್ರಸ್ಥಾನಜಯತ್ ಪ್ರಭುಃ ॥44॥
ಅಲ್ಲಿ ದೇವತೆಗಳಂತೆ ಇದ್ದ ಸುಖಯುಕ್ತರಾದ ಸುಂದರಪುರುಷರನ್ನು ಗೆದ್ದು ತನ್ನ ವಶಪಡಿಸಿಕೊಂಡು ಅವರು ಕಪ್ಪಕಾಣಿಕೆಗಳನ್ನು ಕೊಡುವಂತೆಮಾಡಿ ಅವರುಕೊಟ್ಟ ಅಸಂಖ್ಯಾತವಾದ ಎಲ್ಲಾ ರತ್ನಗಳನ್ನೂ ಸ್ವೀಕರಿಸಿ ನೀಲಪರ್ವತಕ್ಕೆ ಹೋಗಿ ಅಲ್ಲಿದ್ದವರನ್ನು ಗೆದ್ದನು.
ತತೋ ಜಿಷ್ಣುರತಿಕ್ರಮ್ಯ ಪರ್ವತಂ ನೀಲಮಾಯತಮ್ |
ವಿವೇಶ ರಮ್ಯಕಂ ವರ್ಷಂ ಸಂಕೀರ್ಣಂ ಮಿಥುನೈಃ ಶುಭೈಃ ॥45॥
ಅನಂತರ ಅರ್ಜುನನು ದೀರ್ಘವಾಗಿದ್ದ ನೀಲಪರ್ವತನ್ನು ದಾಟಿ ಯಾವಾಗಲೂ ಸ್ತ್ರೀಪುರುಷರ ಜೋಡಿಯಿಂದ ನಿಬಿಡವಾದ ರಮ್ಯಕವರ್ಷವನ್ನು ಪ್ರವೇಶಿಸಿದನು.
ತಂ ದೇಶಮಥ ಜಿತ್ವಾ ಸ ಕರೇ ಚ ವಿನಿವೇಶ್ಯ ಚ |
ಅಜಯಚ್ಚಾಪಿ ಬೀಭತ್ಸುರ್ದೇಶಂ ಗುಹ್ಯಕರಕ್ಷಿತಮ್ ॥46॥
ಬೀಭತ್ಸುವು ಆ ದೇಶವನ್ನು ಗೆದ್ದು ಕಪ್ಪಕಾಣಿಕೆಗಳನ್ನು ಕೊಡುವಂತೆಮಾಡಿ ಅನಂತರ ಗುಹ್ಯಕರಕ್ಷಿತವಾದ ದೇಶವನ್ನು ಜಯಿಸಿದನು.
ತತ್ರ ಲೇಭೇ ಚ ರಾಜೇಂದ್ರ ಸೌವರ್ಣಾನ್ ಮೃಗಪಕ್ಷಿಣಃ |
ಅಗೃಹ್ಣಾದ್ ಯಜ್ಞಭೃತ್ಯರ್ಥಂ ರಮಣೀಯಾನ್ ಮನೋರಮಾನ್ ॥47॥
ರಾಜೇಂದ್ರನೇ! ಅಲ್ಲಿ ಅವನು ಸುವರ್ಣಮಯವಾದ ಮೃಗಗಳನ್ನು ಮತ್ತು ಪಕ್ಷಿಗಳನ್ನು ಪಡೆದನು. ಧರ್ಮರಾಜನ ಯಜ್ಞಶಾಲೆಯ ಸೌಂದರ್ಯವೃದ್ಧಿಗೆ ಕಾರಣವಾಗುತ್ತದೆ ಎಂಬ ಉದ್ದೇಶದಿಂದ ಸುಂದರವಾದ ಸುವರ್ಣಮಯ ಪ್ರತಿಮೆಗಳನ್ನು ತೆಗೆದುಕೊಂಡನು.
ಅನ್ಯಾಂಶ್ಚ ಲಬ್ಧ್ವಾ ರತ್ನಾನಿ ಪಾಂಡವೋಽಥ ಮಹಾಬಲಃ |
ಗಂಧರ್ವರಕ್ಷಿತಂ ದೇಶಮಜಯತ್ ಸಗಣಂ ತದಾ ॥48॥
ಮಹಾಬಲನಾದ ಪಾಂಡವನು ಬೇರೆ ರತ್ನಗಳನ್ನು ಪಡೆದು ಗಂಧರ್ವರ ಗಣಸಹಿತವಾದ ಗಂಧರ್ವರ ದೇಶವನ್ನು ಜಯಿಸಿದನು.
ತತ್ರ ರತ್ನಾನಿ ದಿವ್ಯಾನಿ ಲಬ್ಧ್ವಾ ರಾಜನ್ನಥಾರ್ಜುನಃ |
ಶ್ವೇತಪರ್ವತಮಾಸಾದ್ಯ ಜಿತ್ವಾ ಪರ್ವತವಾಸಿನಃ ॥49॥
ರಾಜನೇ! ಅಲ್ಲಿ ಅರ್ಜುನನು ದಿವ್ಯವಾದ ಅನೇಕ ರತ್ನಗಳನ್ನು ಪಡೆದು ಶ್ವೇತಪರ್ವತಕ್ಕೆ ಪುನಃ ತಿರುಗಿ ಬಂದು ಶ್ವೇತಪರ್ವತವಾಸಿಗಳನ್ನು ಜಯಿಸಿದನು.
ಸ ಶ್ವೇತಂ ಪರ್ವತಂ ರಾಜನ್ ಸಮತಿಕ್ರಮ್ಯ ಪಾಂಡವಃ |

ವರ್ಷಂ ಹಿರಣ್ಯಕಂ ನಾಮ ವಿವೇಶಾಥ ಮಹೀಪತೇ ॥50॥
ಮಹೀಪತಿಯೇ! ಪಾಂಡವನು ಶ್ವೇತಪರ್ವತವನ್ನು ದಾಟಿ ಹಿರಣ್ಯಕವೆಂಬ ವರ್ಷವನ್ನು ಪ್ರವೇಶಿಸಿದನು.
ಸ ತು ದೇಶೇಷು ರಮ್ಯೇಷು ಗಂತುಂ ತತ್ರೋಪಚಕ್ರಮೇ |
ಮಧ್ಯೇ ಪ್ರಾಸಾದವೃಂದೇಷು ನಕ್ಷತ್ರಾಣಾಂ ಶಶೀ ಯಥಾ ॥51॥
ಅವನು ಆ ವರ್ಷದಲ್ಲಿ ನಕ್ಷತ್ರಗಳ ಮಧ್ಯದಲ್ಲಿ ಚಲಿಸುವ ಚಂದ್ರನಂತೆ ಪ್ರಾಸಾದಸಮೂಹಗಳ ಮಧ್ಯೆ ನಡೆದಾಡಲು ಪ್ರಾರಂಭಿಸಿದನು.

ಮಹಾಪಥೇಷು ರಾಜೇಂದ್ರ ಸರ್ವತೋ ಯಾಂತಮರ್ಜುನಮ್|
ಪ್ರಾಸಾದವರಶೃಂಗಸ್ಥಾಃ ಪರಯಾ ವೀರ್ಯಶೋಭಯಾ |
ದದೃಶುಸ್ತಾಃ ಸ್ತ್ರಿಯಃ ಸರ್ವಾಃ ಪಾರ್ಥಮಾತ್ಮಯಶಸ್ಕರಮ್ ॥52॥
ರಾಜೇಂದ್ರನೇ! ಮಹಾಮಾರ್ಗಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಸಂಚರಿಸುವ ಶ್ರೇಷ್ಠವಾದ ಪರಾಕ್ರಮ ಮತ್ತು ಕಾಂತಿಯಿಂದ ಶೋಭಿಸುವ ಆತ್ಮಯಶಸ್ಕರನಾದ ಅರ್ಜುನನನ್ನು ಅಲ್ಲಿನ ಎಲ್ಲಾ ಸ್ತ್ರೀಯರು ತಮ್ಮ ಉಪ್ಪರಿಗೆಯ ಮೇಲಿನ ಶಿಖರಗಳನ್ನು ಏರಿ ನೋಡಿದರು.
ತಂ ಕಲಾಪಧರಂ ಶೂರಂ ಸರಥಂ ಸಾನುಗಂ ಪ್ರಭುಮ್ |
ಸವರ್ಮಂ ಸಕಿರೀಟಂ ವೈ ಸನ್ನದ್ಧಂ ಸಪರಿಚ್ಛದಮ್ ॥53॥
ಸುಕುಮಾರಂ ಮಹಾಸತ್ತ್ವಂ ತೇಜೋರಾಶಿಮನುತ್ತಮಮ್ |
ಶಕ್ರೋಪಮಮಮಿತ್ರಘ್ನಂ ಪರವಾರಣವಾರಣಮ್ |
ಪಶ್ಯಂತಃ ಸ್ತ್ರೀಗಣಾಸ್ತತ್ರ ಶಕ್ತಿಪಾಣಿಂ ಸ್ಮ ಮೇನಿರೇ ॥54॥
ರಥದಿಂದ ಯುಕ್ತನಾಗಿ ಅನುಚರರಿಂದ ಕೂಡಿ ಆಭರಣಗಳನ್ನೂ ಕವಚವನ್ನೂ ಮತ್ತು ಕೀರಿಟವನ್ನೂ ಧರಿಸಿ ಯುದ್ಧದ ಸಾಮಗ್ರಿಗಳಿಂದ ಸನ್ನಧ್ಧನಾಗಿ ಸಂಚರಿಸುವ ಮಹಾಸತ್ವಶಾಲಿಯೂ ಸುಕುಮಾರನೂ ಶ್ರೇಷ್ಠವಾದ ತೋಜೋರಾಶಿಯೂ ಶಕ್ರನಿಗೆ ಸದೃಶನಾದವನೂ ಶತ್ರು ಸಂಹಾರಕನೂ ಪರಸೈನ್ಯ ನಿವಾರಕನೂ ಆದ ಅರ್ಜುನನನ್ನು ನೋಡಿ ಅಲ್ಲಿಯ ಸ್ತ್ರೀಸಮೂಹವು ಅವನನ್ನು ಷಣ್ಮುಖನೆಂದು ತಿಳಿಯಿತು.
ಅಯಂ ಸ ಪುರುಷವ್ಯಾಘ್ರೋ ರಣೇಽದ್ಭುತಪರಾಕ್ರಮಃ |
ಯಸ್ಯ ಬಾಹುಬಲಂ ಪ್ರಾಪ್ಯ ನ ಭವಂತ್ಯಸುಹೃದ್ಗಣಾಃ ॥55॥
ಇತಿ ವಾಚೋ ಬ್ರುವಂತ್ಯಸ್ತಾಃ ಸ್ತ್ರಿಯಃ ಪ್ರೇಮ್ಣಾ ಧನಂಜಯಮ್|
ತುಷ್ಟುವುಃ ಪುಷ್ಪವೃಷ್ಟಿಂ ಚ ಸಸೃಜುಸ್ತಸ್ಯ ಮೂರ್ಧನಿ ॥56॥
ದೃಷ್ಟ್ವಾ ತೇ ತು ಮುದಾ ಯುಕ್ತಾಃ ಕೌತೂಹಲಸಮನ್ವಿತಾಃ |
ರತ್ನೈರ್ವಿಭೂಷಣೈಶ್ಚೈವ ಅಭ್ಯವರ್ಷಂಶ್ಚ ಪಾಂಡವಮ್ ॥57॥
ಇವನೇ ಯುದ್ಧದಲ್ಲಿ ಅದ್ಭುತಪರಾಕ್ರಮವುಳ್ಳ ಆ ಪುರುಷವ್ಯಾಘ್ರನಾದವನು ಇವನ ಬಾಹುಬಲವನ್ನು ಸೇರಿದ ಶತ್ರುಸಮೂಹಗಳು ನಾಶಹೊಂದುತ್ತವೆ ಎಂಬ ಪ್ರೇಮಪೂರಿತವಾದ ಮಾತುಗಳನ್ನು ಆಡುತ್ತಾ ಆ ಸ್ತ್ರೀಯರು ಅರ್ಜುನನ ತಲೆಯ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಅವರೆಲ್ಲರೂ ಪಾಂಡವನಾದ ಅರ್ಜುನನನ್ನು ನೋಡಿ ಕುತೂಹಲದಿಂದಲೂ ಮತ್ತು ಸಂತೋಷದಿಂದಲೂ ಕೂಡಿದವರಾಗಿ ಅವನ ಮೇಲೆ ರತ್ನ ಮತ್ತು ವಿಭೂಷಣಗಳ ಮಳೆಯನ್ನು ಕರೆದರು.
ಅಥ ಜಿತ್ವಾ ಸಮಸ್ತಾಂಸ್ತು ಕರೇ ಚ ವಿನಿವೇಶ್ಯ ಚ |
ಮಣಿಹೇಮಪ್ರವಾಲಾನಿ ರತ್ನಾನ್ಯಾಭರಣಾನಿ ಚ |
ಏತಾನಿ ಲಬ್ಧ್ವಾ ಪಾರ್ಥೋಽಪಿ ಶೃಂಗವಂತಂ ಗಿರಿಂ ಯಯೌ ॥58॥
ಅರ್ಜುನನು ಅವರೆಲ್ಲರನ್ನೂ ಗೆದ್ದು ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿ ರತ್ನಗಳು ಮತ್ತು ಸುವರ್ಣವನ್ನು ಮತ್ತು ಹವಳಗಳನ್ನು ಅನೇಕ ಮಣಿಮಯವಾದ ಆಭರಣಗಳನ್ನು ಪಡೆದು ಅಲ್ಲಿಂದ ಶೃಂಗವಾನ್ ಪರ್ವತಕ್ಕೆ ಹೊರಟನು.
ಶೃಂಗವಂತಂ ಚ ಕೌಂತೇಯಃ ಸಮತಿಕ್ರಮ್ಯ ಫಲ್ಗುನಃ |
ಉತ್ತರಂ ಕುರುವರ್ಷಂ ತು ಸಮಾಸಾದ್ಯ ಧನಂಜಯಃ ॥59॥
ವಿದ್ಯಾಧರಗಣಾಂಶ್ಚೈವ ಯಕ್ಷೇಂದ್ರಾಂಶ್ಚ ವಿನಿರ್ಜಯನ್ |
ತತ್ರ ಲೇಭೇ ಮಹಾಬಾಹುರ್ವಾಸೋ ದಿವ್ಯಮನುತ್ತಮಮ್ ॥60॥
ಕುಂತಿಯ ಪುತ್ರನಾದ ಅರ್ಜುನನು ಶೃಂಗವಂತ ಪರ್ವತವನ್ನು ದಾಟಿ ಉತ್ತರ ಕುರುವರ್ಷವನ್ನು ಸೇರಿ ಅಲ್ಲಿಂದ ವಿದ್ಯಾಧರರ ಸಮೂಹಗಳನ್ನು ಯಕ್ಷಪತಿಗಳನ್ನು ಗೆದ್ದು ಮಹಾಬಾಹುವಾದ ಅವನು ದಿವ್ಯವಾದ ಮತ್ತು ಶ್ರೇಷ್ಠವಾದ ಅನೇಕ ವಸ್ತ್ರಗಳನ್ನು ಪಡೆದನು.
ಕಿನ್ನರದ್ರುಮಪತ್ರಾಂಶ್ಚ ತತ್ರ ಕೃಷ್ಣಾಜಿನಾನ್ ಬಹೂನ್ |
ಯಾಜ್ಞೀಯಾಂಶ್ಚೈವ ಯಾನ್ ದಿವ್ಯಾಂಸ್ತಾನ್ ಸ ಲೇಭೇ ಧನಂಜಯಃ |
ಇಯೇಷ ಜೇತುಂ ತಂ ದೇಶಂ ಪಾಕಶಾಸನನಂದನಃ ॥61॥
ತತ ಏನಂ ಮಹಾವೀರ್ಯಂ ಮಹಾಕಾಯಾ ಮಹಾಬಲಾಃ |
ದ್ವಾರಪಾಲಾಃ ಸಮಾಸಾದ್ಯ ಧೃಷ್ಟಂ ವಚನಮಬ್ರುವೀತ್ ॥62॥
ಅಲ್ಲಿ ಅನೇಕ ಕೃಷ್ಣಾಜಿನಗಳನ್ನೂ ಕಿನ್ನರ ಮತ್ತು ದ್ರುಮಪತ್ರಗಳನ್ನೂ ಮತ್ತು ಯಜ್ಞಕ್ಕೆ ಉಪಯೋಗಿಯಾದ ಇನ್ನೂ ಅನೇಕ ದಿವ್ಯವಸ್ತುಗಳನ್ನೂ ಪಡೆದ ಇಂದ್ರನ ಪುತ್ರನಾದ ಅರ್ಜುನನು ಆ ದೇಶವನ್ನು ಗೆಲ್ಲಲು ಬಯಸಿದನು. ಆಗ ದೊಡ್ಡದೇಹವುಳ್ಳ

ಮಹಾಬಲವುಳ್ಳ ಅಲ್ಲಿನ ದ್ವಾರಪಾಲಕರು ಮಹಾಪರಾಕ್ರಮಿಯಾದ  ಈ ಅರ್ಜುನನ್ನು ಸಮೀಪಿಸಿ ಧೈರ್ಯದಿಂದ ಈ ಮಾತುಗಳನ್ನು ಹೇಳಿದರು.
ಪಾರ್ಥ ನೇದಂ ತ್ವಯಾ ಶಕ್ಯಂ ಪುರಂ ಜೇತುಂ ಕಥಂಚನ |
ಉಪಾವರ್ತಸ್ವ ಕಲ್ಯಾಣ ಪರ್ಯಾಪ್ತಮಿದಮಚ್ಯುತ ॥63॥
ಪಾರ್ಥನೇ! ನೀನು ಈ ಪಟ್ಟಣವನ್ನು ಜಯಿಸುವುದು ಸಾಧ್ಯವಿಲ್ಲ. ಕಲ್ಯಾಣ ಮೂರ್ತಿಯೇ ಹಿಂದಿರುಗು ನೀನು ಗೆದ್ದಷ್ಟು ಸಾಕು.
ಇದಂ ಪುರಂ ಯಃ ಪ್ರವಿಶೇದ್ ಧ್ರುವಂ ನ ಸ ಭವೇನ್ನರಃ |
ಪ್ರೀಯಾಮಹೇ ತ್ವಯಾ ವೀರ ಪರ್ಯಾಪ್ತೋ ವಿಜಯಸ್ತವ ॥64॥
ಈ ಪಟ್ಟಣವನ್ನು ಯಾವನು ಪ್ರವೇಶಿಸುತ್ತಾನೋ ಅಂತಹ ಮನುಷ್ಯನು ನಾಶವನ್ನು ಹೊಂದುತ್ತಾನೆ. ವೀರನೇ! ನಾವು ನಿನ್ನ ಮೇಲೆ ಸಂತೋಷಗೊಂಡಿದ್ದೇವೆ. ನೀನು ಸಂಪಾದಿಸಿರುವ ವಿಜಯವು ಸಾಕು.
ನಚಾಪಿ ಕಿಂಚಿಜ್ಜೇತವ್ಯಮರ್ಜುನಾತ್ರ ಪ್ರದೃಶ್ಯತೇ |
ಉತ್ತರಾಃ ಕುರವೋ ಹ್ಯೇತೇ ನಾತ್ರ ಯುದ್ಧಂ ಪ್ರವರ್ತತೇ ॥65॥
ಅರ್ಜುನನೇ ಅದೂ ಅಲ್ಲದೆ ಇಲ್ಲಿ ಗೆಲ್ಲಬೇಕಾದ ಯಾವ ವಸ್ತುವೂ ಕಾಣುವುದಿಲ್ಲ. ಇದು ಉತ್ತರ ಕುರುವರ್ಷ. ಇಲ್ಲಿ ಯುದ್ಧವು ನಡೆಯುವುದಿಲ್ಲ.
ಪ್ರವಿಷ್ಟೋಽಪಿ ಹಿ ಕೌಂತೇಯ ನೇಹ ದ್ರಕ್ಷ್ಯಸಿ ಕಿಂಚನ |
ನಹಿ ಮಾನುಷದೇಹೇನ ಶಕ್ಯಮತ್ರಾಭಿವೀಕ್ಷಿತುಮ್ ॥66॥
ಕೌಂತೇಯನೇ! ನೀನು ಈ ವರ್ಷವನ್ನು ಪ್ರವೇಶಮಾಡಿದರೂ ನಿನ್ನ ಕಣ್ಣಿಗೆ ಯಾರೂ ಕಾಣುವುದಿಲ್ಲ. ಇಲ್ಲಿ ಮನುಷ್ಯದೇಹವನ್ನು ಧರಿಸಿದವನ ಕಣ್ಣುಗಳಿಗೆ ಯಾವುದೂ ಕಾಣುವುದಿಲ್ಲ.
ಅಥೇಹ ಪುರುಷವ್ಯಾಘ್ರ ಕಿಂಚಿದನ್ಯಚ್ಚಿಕೀರ್ಷಸಿ |
ತದ್ಬ್ರವೀಸ್ವ ಕರಿಷ್ಯಾಮೋ ವಚನಾತ್ ತವ ಭಾರತ ॥67॥
ಪುರುಷವ್ಯಾಘ್ರನಾದ ಭಾರತನೇ! ನೀನು ಇನ್ನೇನನ್ನಾದರೂ ಮಾಡಬೇಕೆಂದು ಬಯಸಿದರೆ ಅದನ್ನು ಹೇಳು. ನಾವು ನಿನ್ನ ಮಾತಿನಂತೆ ಅದನ್ನು ಮಾಡುವೆವು.
ವೈಶಂಪಾಯನಃ
ತತಸ್ತಾನಬ್ರವೀದ್ ರಾಜನ್ ಪಾಂಡವಃ ಪಾಕಶಾಸನಿಃ ॥68॥
ರಾಜನೇ! ಆಗ ಇಂದ್ರಪುತ್ರನಾದ ಅರ್ಜುನನು ಅವರನ್ನು ಕುರಿತು ಹೇಳಿದನು. ಮೇಧಾವಿಯಾದ ಧರ್ಮರಾಜನನ್ನು ಸಾರ್ವಭೌಮನನ್ನಾಗಿ ಮಾಡಲು ಇಚ್ಛಿಸುತ್ತೇನೆ.
ಪಾರ್ಥಿವತ್ವಂ ಚಿಕೀರ್ಷಾಮಿ ಧರ್ಮರಾಜಸ್ಯ ಧೀಮತಃ |
ನ ಪ್ರವೇಕ್ಷ್ಯಾಮಿ ವೋ ದೇಶಂ ಯದ್ಯದೃಶ್ಯಾಃ ಸ್ಥ ಮಾನುಷೈಃ |
ಯುಧಿಷ್ಠಿರಾಯ ಯತ್ ಕಿಂಚಿತ್ ಕರಂ ಸಾಧು ಪ್ರದೀಯತಾಮ್ ॥69॥
ನೀವು ಮನುಷ್ಯದೃಷ್ಟಿಗೆ  ಗೋಚರವಾಗದೆ ಇರುವುದಾದರೆ ನಾನು ನಿಮ್ಮ ದೇಶವನ್ನು ಪ್ರವೇಶಿಸುವುದಿಲ್ಲ.  ಯುಧಿಷ್ಠಿರನ ಸಲುವಾಗಿ ಏನಾದರೂ ಒಳ್ಳೆಯ ವಸ್ತುವನ್ನು ಕಪ್ಪವಾಗಿ ಕೊಡಿ.
ತತೋ ದಿವ್ಯಾನಿ ವಸಾತ್ರಣಿ ದಿವ್ಯಾನ್ಯಾಭರಣಾನಿ ಚ |
ಯೋಗಾಜಿನಾನಿ ಶುಭ್ರಾಣಿ ತಸ್ಮೈ ತೇ ಪ್ರದದುಃ ಕರಮ್ ॥70॥
ಆಗ ಅವರು ಅರ್ಜುನನಿಗೆ ದಿವ್ಯವಾದ ವಸ್ತ್ರಗಳನ್ನೂ, ದಿವ್ಯವಾದ ಆಭರಣಗಳನ್ನೂ, ಶುಭ್ರವಾದ ಯೋಗಪಟ್ಟಿಕೆಗಳನ್ನೂ ಕಪ್ಪವಾಗಿ ಕೊಟ್ಟರು.
ಏವಂ ಸ ಪುರುಷವ್ಯಾಘ್ರೋ ವಿಜಿಗ್ಯೇ ದಿಶಮುತ್ತರಾಮ್ |
ಸಂಗ್ರಾಮಾನ್ ವಿವಿಧಾನ್ ಕೃತ್ವಾ ಕ್ಷತ್ರಿಯೈರ್ದಸ್ಯುಭಿಸ್ತಥಾ ॥71॥
ಸ ವಿನಿರ್ಜಿತ್ಯ ರಾಜ್ಞಸ್ತಾನ್ ಕರೇ ಚ ವಿನಿವೇಶ್ಯ ಚ |
ಧನಾನ್ಯಾದಾಯ ಸರ್ವೇಭ್ಯೋ ರತ್ನಾನಿ ವಿವಿಧಾನಿ ಚ ॥72॥
ಹಯಾಂಸ್ತಿತ್ತಿರಿಕಲ್ಮಾಷಾನ್ ಶುಕಪತ್ರನಿಭಾನಪಿ |
ಮಯೂರಸದೃಶಾನನ್ಯಾನ್ ಸರ್ವಾನನಿಲರಂಹಸಃ ॥73॥
ವೃತಃ ಸ ಮಹತಾ ರಾಜನ್ ಬಲೇನ ಚತುರಂಗಿಣಾ |
ಆಜಗಾಮ ಪುನರ್ನೀರಃ ಶಕ್ರಪ್ರಸ್ಥಂ ಪುರೋತ್ತಮಮ್ ॥74॥
ಹೀಗೆ ಪುರುಷವ್ಯಾಘ್ರನಾದ ಅರ್ಜುನನು ಕ್ಷತ್ರಿಯರ ಜೊತೆಯಲ್ಲಿಯೂ ದಸ್ಯುಗಳ ಜೊತೆಯಲ್ಲಿಯೂ ಅನೇಕ ಯುದ್ಧಗಳನ್ನು ಮಾಡಿ ಉತ್ತರದಿಕ್ಕನ್ನು ಗೆದ್ದನು. ಅರ್ಜುನನು ಆ ರಾಜರನ್ನೆಲ್ಲಾ ಜಯಿಸಿ ಅವರು ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಿ ಅವರೆಲ್ಲರಿಂದಲೂ ವಿವಿಧವಾದ ಧನವನ್ನು ರತ್ನಗಳನ್ನು ತಿತ್ತಿರಿಪಕ್ಷಿಯಂತೆ ಕೃಷ್ಣಪಾಂಡರವಾದ ಹಾಗೆಯೇ ಶುಕಪಕ್ಷದಂತೆ ವರ್ಣವುಳ್ಳಂತಹ ಮತ್ತು ನವಿಲಿನ ಬಣ್ಣವುಳ್ಳಂತಹ ವಾಯುವೇಗವುಳ್ಳಂತಹ ಅನೇಕ ಅಶ್ವಗಳನ್ನು ಪಡೆದು ಮಹಾಚತುರಂಗ ಬಲದಿಂದ ಯುಕ್ತನಾಗಿ ಪುನಃ ವೀರನಾದ  ಅವನು ಶ್ರೇಷ್ಠವಾದ ಇಂದ್ರಪ್ರಸ್ಥಪಟ್ಟಣಕ್ಕೆ ಹಿಂದುರುಗಿದನು.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಷ್ಠಿವಿಂಶೋಽಧ್ಯಾಯಃ ॥
॥ ದಿಗ್ವಿಜಯಪರ್ವಣಿ ದ್ವಿತೀಯೋಽಧ್ಯಾಯಃ॥2॥
ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು.

*****

ಇಪ್ಪತ್ತೇಳನೆಯ ಅಧ್ಯಾಯ
(ಪೂರ್ವದಿಗ್ವಿಜಯವನ್ನುಮಾಡಿ ಭೀಮಸೇನನ ಪ್ರತಿನಿವೃತ್ತಿ )
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ಭೀಮಸೇನೋಽಪಿ ವೀರ್ಯವಾನ್ |
ಧರ್ಮರಾಜಮನುಜ್ಞಾಪ್ಯ ಯಯೌ ಪ್ರಾಚೀಂ ದಿಶಂ ಪ್ರತಿ ॥1॥
ಇದೇ ಸಮಯದಲ್ಲಿ ಪರಾಕ್ರಮಶಾಲಿಯಾದ ಭೀಮಸೇನನು ಸಹ ಧರ್ಮರಾಜನ ಅಪ್ಪಣೆಯನ್ನು ಪಡೆದು ಪೂರ್ವದಿಕ್ಕಿಗೆ ಹೊರಟನು.

ಮಹತಾ ಬಲಚಕ್ರೇಣ ಪರರಾಷ್ಟ್ರವಿಮರ್ದಿನಾ |
ವೃತೋ ಭರತಶಾರ್ದೂಲ ದ್ವಿಷಚ್ಛೋಕವಿವರ್ಧನಃ ॥2॥
ಭರತಶಾರ್ದೂಲನೇ! ಶತ್ರುಶೋಕವಿವರ್ಧನನಾದ ಅವನು ಶತ್ರುರಾಷ್ಟ್ರವನ್ನು ಸದೆಬಡಿಯುವ ದೊಡ್ಡಸೈನ್ಯದಿಂದ ಯುಕ್ತನಾಗಿ ಹೊರಟನು.
ಸ ಗತ್ವಾ ನರಶಾರ್ದೂಲ ಪಾಂಚಾಲಾನಾಂ ಪುರಂ ಮಹತ್ |
ಪಾಂಚಾಲಾನ್ ವಿವಿಧೋಪಾಯೈಃ ಸಾಂತ್ವಯಾಮಾಸ ಪಾಂಡವಃ |
ಕಿಂಚಿತ್ ಕರಂ ಸಮಾದಾಯ ವಿದೇಹಾನಾಂ ಪುರಂ ಯಯೌ ॥3॥
ನರಶಾರ್ದೂಲನೇ!ಪಾಂಡುಪುತ್ರನಾದ ಭೀಮಸೇನನು ಪಾಂಚಾಲರ ರಾಜಧಾನಿಯನ್ನು ತಲುಪಿ ಪಾಂಚಾಲರನ್ನು ಅನೇಕ ವಿಧವಾದ ಉಪಾಯಗಳಿಂದ ಸಮಾಧಾನಪಡಿಸಿ ಸ್ವಲ್ಪ ಕಪ್ಪವನ್ನು ಸ್ವೀಕರಿಸಿ ವಿದೇಹರಾಜನ ಪಟ್ಟಣಕ್ಕೆ ಹೊದನು.
ತತಃ ಸ ಕಂಟಕೀಂ ವೀರೋ ವಿದೇಹಾಂಶ್ಚ ನರರ್ಷಭಃ |
ವಿಜಿತ್ಯಾಲ್ಪೇನ ಕಾಲೇನ ದಶಾರ್ಣಾನಜಯತ್ ಪ್ರಭುಃ ॥4॥
ಪುರುಷಶ್ರೇಷ್ಠನೂ ಪ್ರಭುವೂ ಆದ ವೀರನಾದ ಭೀಮಸೇನನು ಕಂಟಕೀದೇಶವನ್ನೂ ವಿದೇಹ ದೇಶವನ್ನೂ ಗೆದ್ದು ಅಲ್ಪಕಾಲದಲ್ಲಿಯೇ ದಶಾರ್ಣ ದೇಶವನ್ನು ಗೆದ್ದನು.
ತತ್ರ ದಾಶಾರ್ಣಕೋ ರಾಜಾ ಸುಧರ್ಮಾ ರೋಮಹರ್ಷಣಃ |
ಅದ್ಭುತಂ ಕರ್ಮ ಭೀಮೇನ ಯುಧಿ ಚಕ್ರೇ ನಿರಾಯುಧಮ್ ॥5॥
ದಶಾರ್ಣದೇಶದ ರಾಜನಾದ ಸುಧರ್ಮನು ಭೀಮಸೇನನ ಜೊತೆಯಲ್ಲಿ ರೋಮಾಂಚಕಾರಿಯಾದ, ಅದ್ಭುತವಾದ ಯುದ್ಧವನ್ನುಮಾಡಿ, ಭೀಮಸೇನನ್ನು ನಿರಾಯುಧನನ್ನಾಗಿ ಮಾಡಿದನು.
ಭೀಮಸೇನಸ್ತು ತದ್ ದೃಷ್ಟ್ವಾ ತಸ್ಯ ಕರ್ಮ ಪರಂತಪಃ |
ಅಧಿಸೇನಾಪತಿಂ ಚಕ್ರೇ ಸುಧರ್ಮಾಣಂ ಮಹಾಬಲಮ್ ॥6॥
ಪರಂತಪನಾದ ಮಹಾಬಲನಾದ ಭೀಮಸೇನನಾದರೋ ಅವನ ಅದ್ಭುತಕರ್ಮವನ್ನು ನೋಡಿ ಸುಧರ್ಮನನ್ನು ತನ್ನ ಸೇನಾಧಿಪತಿಯನ್ನಾಗಿ ಮಾಡಿಕೊಂಡನು.
ತತಃ ಪ್ರಾಚೀಂ ದಿಶಂ ಭೀಮೋ ಯಯೌ ಭೀಮಪರಾಕ್ರಮಃ |
ಬಲೇನ ಮಹತಾ ರಾಜನ್ ಕಂಪಯನ್ನಿವ ಮೇದಿನೀಮ್ ॥7॥
ರಾಜನೇ! ಭಯಂಕರಪರಾಕ್ರಮವುಳ್ಳ ಭೀಮಸೇನನು ದೊಡ್ಡಸೈನ್ಯದಿಂದ ಕೂಡಿದವನಾಗಿ ಭೂಮಿಯನ್ನು ನಡುಗಿಸುವಂತೆ ಅಲ್ಲಿಂದ ಪೂರ್ವದಿಕ್ಕಿಗೆ ಪ್ರಯಾಣಮಾಡಿದನು.
ಸೋಽಶ್ವಮೇಧೇಶ್ವರಂ ರಾಜನ್ ರೋಚಮಾನಂ ಸಹಾನುಗಮ್|
ಜಿಗಾಯ ಸ ತದಾ ವೀರೋ ಬಲೇನ ಬಲಿನಾಂ ವರಃ ॥8॥
ರಾಜನೇ! ಬಲಿಷ್ಠರಲ್ಲಿ ಶ್ರೇಷ್ಠನಾದ ವೀರನಾದ ಭೀಮಸೇನನು ಅಲ್ಲಿ ಅಶ್ವಮೇಧಯಾಗವನ್ನು ಮಾಡಿದ್ದ ರೋಚಮಾನ ಎಂಬ ರಾಜನನ್ನೂ ಅವನ ತಮ್ಮನನ್ನೂ ತನ್ನ ಸೈನ್ಯದಿಂದ ಸೋಲಿಸಿದನು.
ಸ ತಂ ನಿರ್ಜಿತ್ಯ ಕೌಂತೇಯೋ ನಾತಿತೀವ್ರೇಣ ಕರ್ಮಣಾ |
ಪೂರ್ವದೇಶಂ ಮಹಾವೀರ್ಯೋ ವಿಜಿಗ್ಯೇ ಕುರುನಂದನಃ ॥9॥
ಕುಂತಿಯ ಮಗನಾದ ಮಹಾವೀರ್ಯನಾದ ಕುರುನಂದನನಾದ ಭೀಮನು ಬಹಳ ಆಯಾಸವಿಲ್ಲದ ಯುದ್ಧವನ್ನು ಮಾಡಿ ಅವನನ್ನು ಗೆದ್ದು ಪುನಃ ಅಲ್ಲಿಂದ ಪೂರ್ವದೇಶಗಳನ್ನು ಗೆದ್ದನು.
ತತೋ ದಕ್ಷಿಣಮಾಸಾದ್ಯ ಪುಲಿಂದನಗರಂ ಪ್ರತಿ |
ಸುಕುಮಾರಂ ಕರೇ ಚಕ್ರೇ ಸುಮಿತ್ರಂ ಚ ನರಾಧಿಪಮ್ ॥10॥
ಅಲ್ಲಿಂದ ದಕ್ಷಿಣದಿಕ್ಕಿಗೆ ಪುಲಿಂದನಗರಕ್ಕೆ ಬಂದು ಸುಕಮಾರ ಮತ್ತು ಸುಮಿತ್ರ ಎಂಬ ರಾಜರನ್ನು ವಶಪಡಿಸಿಕೊಂಡು ಕಪ್ಪವನ್ನು ಕೊಡುವಂತೆ ಮಾಡಿದನು.
ತತಃ ಸ ಧರ್ಮರಾಜಸ್ಯ ಶಾಸನಾತ್ ಕುರುನಂದನಃ |
ಶಿಶುಪಾಲಂ ಮಹಾವೀರ್ಯಮಭ್ಯಯಾಜ್ಜನಮೇಜಯ ॥11॥
ಜನಮೇಜಯನೇ! ಅನಂತರ ಕುರುನಂದನನಾದ ಅವನ ಧರ್ಮರಾಜನ ಶಾಸನದಂತೆ ಮಹಾಬಲಶಾಲಿಯಾದ ಶಿಶುಪಾಲನ ಕಡೆಗೆ ಹೊರಟನು.

ಚೇದಿರಾಜೋಽಪಿ ತಚ್ಛ್ರುತ್ವಾ ಪಾಂಡವಸ್ಯ ಚಿಕೀರ್ಷಿತಮ್ |
ಉಪನಿಷ್ಕ್ರಮ್ಯ ನಗರಾತ್ ಪ್ರತ್ಯಗೃಹ್ಣಾತ್ ಪರಂತಪಃ ॥12॥
ಪರಂತಪನಾದ ಚೇದಿರಾಜನಾದ ಶಿಶುಪಾಲನೂ ಸಹ ಪಾಂಡವನ ಅಭಿಪ್ರಾಯವನ್ನು ತಿಳಿದು ನಗರದಿಂದ ಹೊರಗೆ ಬಂದು ಆದರದಿಂದ ಸ್ವೀಕರಿಸಿದನು.
ತೌ ಸಮೇತ್ಯ ಮಹಾರಾಜ ಕುರುಚೇದಿವೃಷಾವುಭೌ |
ಉಭಯೋರಾತ್ಮಕುಲಯೋಃ ಕೌಶಲಂ ಪರ್ಯಪೃಚ್ಛತಾಮ್ ॥13॥
ಮಹಾರಾಜನೇ! ಕುರುಶ್ರೇಷ್ಠನು ಮತ್ತು ಚೇದಿಶ್ರೇಷ್ಠನು ಆದ ಅವರಿಬ್ಬರು ಪರಸ್ಪರ ಸಂಧಿಸಿ ಪರಸ್ಪರವಾಗಿ ತಮ್ಮ ಕುಲಗಳ ಕುಶಲಪ್ರಶ್ನೆಯನ್ನು ಮಾಡಿದರು.
ತತೋ ನಿವೇದ್ಯ ತದ್ರಾಜ್ಯಂ ಚೇದಿರಾಜೋ ವಿಶಾಂಪತೇ |
ಉವಾಚ ಭೀಮಂ ಪ್ರಹಸನ್ ಕಿಮಿದಂ ಕುರುಷೇಽನಘ ॥14॥
ರಾಜನೇ! ಅನಂತರ ಚೇದಿರಾಜನು ತನ್ನ ರಾಜ್ಯವನ್ನು ಭೀಮಸೇನನಿಗೆ ನಿವೇದಿಸಿ ನಗುತ್ತಾ ಗುಣವಂತನೇ ಏನುಮಾಡಲು ಹೊರಟಿರುವೆ ಎಂದು ಕೇಳಿದನು.
ತಸ್ಯ ಭೀಮಸ್ತದಾಚಖ್ಯೌ ಧರ್ಮರಾಜಚಿಕೀರ್ಷಿತಮ್ |
ಸ ಚ ತತ್ ಪ್ರತಿಗೃಹ್ಯೈವ ತಥಾ ಚಕ್ರೇ ನರಾಧಿಪಃ ॥15॥
ಆಗ ಭೀಮಸೇನನು ಧರ್ಮರಾಜನ ಸಂಕಲ್ಪವನ್ನು ತಿಳಿಸಲು ಶಿಶುಪಾಲನು ಅದನ್ನು ಸ್ವೀಕರಿಸಿ ಅದರಂತೆಯೇ ನಡೆದುಕೊಂಡನು.
ತತ್ರ ಭೀಮಸ್ತದಾ ರಾಜನ್ನುಷಿತ್ವಾ ತ್ರಿದಶ ಕ್ಷಪಾಃ |
ಸತ್ಕೃತಃ ಶಿಶುಪಾಲೇನ ಯಯೌ ಸಬಲವಾಹನಃ |
ತತಃ ಕುಣಿಂದವಿಷಯೇ ಶ್ರೇಣಿಮಂತಮಥಾಜಯತ್ ॥16॥
ರಾಜನೇ! ಆಗ ಭೀಮನು ಒಂದು ತಿಂಗಳ ಕಾಲ ಚೇದಿರಾಜ್ಯದಲ್ಲಿದ್ದು ಶಿಶುಪಾಲನಿಂದ ಸತ್ಕರಿಸಲ್ಪಟ್ಟ ಅನಂತರ ಬಲವಾಹನಸಮೇತನಾಗಿ ಅಲ್ಲಿಂದ ಹೊರಟು ಕುಣಿಂದದೇಶದಲ್ಲಿ ಶ್ರೇಣಿಮಂತನೆಂಬ ರಾಜನನ್ನು ಜಯಿಸಿದನು.
ಕೋಸಲಾಧಿಪತಿಂ ಚೈವ ಬೃಹದ್ಬಲಮರಿಂದಮಮ್ |
ಅಯೋಧ್ಯಾಯಾಂ ಮಹೀಪಾಲಂ ದೀರ್ಘಪ್ರಜ್ಞಂ ಮಹಾಬಲಮ್ |
ಅಜಯತ್ ಪಾಂಡವಶ್ರೇಷ್ಠಃ ಸತತಂ ಭೂರಿದಕ್ಷಿಣಮ್ ॥17॥
ಪಾಂಡವಶ್ರೇಷ್ಠನಾದ ಭೀಮಸೇನನು ಕೋಸಲಾಧಿಪತಿಯಾದ ಶತ್ರುದಮನನಾದ ಬೃಹದ್ಬಲನನ್ನೂ ಅಯೋದ್ಯಯಲ್ಲಿ ಮಹಾಬಲಿಷ್ಠನಾಗಿ ಸತತವಾಗಿ ದಕ್ಷಿಣೆಯನ್ನು ದಾನಮಾಡುತ್ತಾ ರಾಜನಾಗಿದ್ದ ದೀರ್ಘಪ್ರಜ್ಞನನ್ನೂ ಜಯಿಸಿದನು.
ಗೋಪಾಲಂ ಚೈವ ಕೌಂತೇಯೋ ಹ್ಯಂತಪಾಲಂ ತಥೋತ್ತಮಮ್ |
ಮಲ್ಲಾನಾಮಧಿಪಂ ಚೈವ ಪಾರ್ಥಿವಂ ಚಾಜಯತ್ ಪ್ರಭುಃ ॥18॥
ಪ್ರಭುವಾದ ಕೌಂತೆಯನಾದ ಭೀಮಸೇನನು ಗೋಪಾಲನನ್ನೂ ಶ್ರೇಷ್ಠನಾದ ಅವರ ಅಂತಪಾಲನನ್ನೂ ಮಲ್ಲರ ಅಧಿಪತಿಯಾಗಿದ್ದ ರಾಜನನ್ನೂ ಜಯಿಸಿದನು.
ತತೋ ಹಿಮವತಃ ಪಾರ್ಶ್ವೇ ದೇಶಾನ್ ಬಹುವಿಧಾನ್ ಬಹೂನ್ |
ಸರ್ವಾನಲ್ಪೇನ ಯತ್ನೇನ ವಶೇ ಚಕ್ರೇ ಬಲಾದ್ ಬಲೀ ॥19॥
ಬಲಿಷ್ಠನಾದ ಭೀಮಸೇನನು ಅನಂತರ ಹಿಮಾಲಯದ ಪಾರ್ಶ್ವದಲ್ಲಿ ಇರುವ ಅನೇಕ ದೇಶಗಳೆಲ್ಲವನ್ನೂ ಅಲ್ಪ ಪ್ರಯತ್ನದಿಂದಲೇ ವಶಪಡಿಸಿಕೊಂಡನು.
ಏವಂ ಬಹುವಿಧಾನ್ ದೇಶಾನ್ ವಿಜಿತ್ಯ ಪುರುಷರ್ಷಭಃ |
ಕುಂತಲಾನಭಿತೋ ಜಿಗ್ಯೇ ಕುಕ್ಷಿಮಂತಂ ಚ ಪರ್ವತಮ್ ॥20॥
ಪುರುಷರ್ಷಭನಾದ ಭೀಮಸೇನನು ಹೀಗೆ ಅನೇಕ ದೇಶಗಳನ್ನೂ ಗೆದ್ದು ಕುಂತಳದೇಶಕ್ಕೆ ಬಂದು ಆ ದೇಶವನ್ನೂ ಮತ್ತು ಅಲ್ಲಿದ್ದ ಕುಕ್ಷಿಮಂತ ಪರ್ವತವನ್ನೂ ಜಯಿಸಿದನು.
ಪಾಂಡವಃ ಸುಮಹಾವೀರ್ಯೋ ಬಲೇನ ಬಲಿನಾಂ ವರಃ |
ಕಾಶಿರಾಜಂ ಸಮೇಯಾಯ ಸುಬಂಧುಮನಿವರ್ತಿನಮ್ |
ವಶೇ ಚಕ್ರೇ ಮಹಾಬಾಹುರ್ಭೀಮೋ ಭೀಮಪರಾಕ್ರಮಃ ॥21॥
ಮಹಾವೀರ್ಯಶಾಲಿಯಾದ ಬಲಿಷ್ಠರಲ್ಲಿ ಶ್ರೇಷ್ಠನಾದ ಪಾಂಡುಪುತ್ರನಾದ ಭೀಮಸೇನನು ತನ್ನ ಸೈನ್ಯದ ಜೊತೆಯಲ್ಲಿ ಯುದ್ಧದಲ್ಲಿ ಹಿಮ್ಮೆಟ್ಟದ ಕಾಶಿರಾಜನಾದ ಸುಬಂಧುವನ್ನು ಎದುರಿಸಿದನು. ಭಯಂಕರ ಬಲವುಳ್ಳ ಮಹಾಬಾಹುವಾದ ಭೀಮನು ಅವನನ್ನು ವಶಪಡಿಸಿಕೊಂಡನು.
ತತಃ ಸುಪಾರ್ಶ್ವಮಭಿತಸ್ತಥಾ ರಾಜಪತಿಂ ಕ್ರಥಮ್ |
ಯುಧ್ಯಮಾನಂ ಬಲಾತ್ ಸಂಖ್ಯೇ ವಿಜಿಗ್ಯೇ ಪಾಂಡವರ್ಷಭಃ ॥22॥
ಅನಂತರ ಪಾಂಡವಶ್ರೇಷ್ಠನಾದ ಭೀಮಸೇನನು ಸುಪಾರ್ಶ್ವನನ್ನೂ ಸುತ್ತಮುತ್ತಲಿನ ರಾಜರನ್ನೂ ಕ್ರಥನನ್ನೂ ಯುದ್ಧದಲ್ಲಿ ತನ್ನ ಬಲದಿಂದ ಜಯಿಸಿದನು.
ತತಃ ಕಾಶಿಪತೀನ್ ಮತ್ಸ್ಯಾನ್ ಮಾಲವಾನಿಹ ಪಾಂಡವಃ |
ಅನವದ್ಯಾಂ ಗಯಾಂ ಚೈವ ಪಶುಭೂಮಿಂ ಚ ಸರ್ವಶಃ ॥23॥
ನಿರ್ಜಿತ್ಯ ಚ ಮಹಾಬಾಹುರಟವೀಶಂ ಚ ಪರ್ವತಮ್ |

ಗೋಪತೇಯಾಂಶ್ಚ ನಿರ್ಜಿತ್ಯ ಪ್ರಯಯಾವುತ್ತರಾಮುಖಃ |
ವತ್ಸಭೂಮಿಂ ಚ ಕೌಂತೇಯೋ ವಿಜಿಗ್ಯೇ ಬಲವಾನ್ ಬಲಾನ್ ॥24॥
ಅನಂತರ ಆ ಪಾಂಡವನು ಕಾಶಿರಾಜರುಗಳನ್ನೂ ಮತ್ಸ್ಯದೇಶವನ್ನೂ ಮಾಳವದೇಶವನ್ನೂ ಪರಿಶುದ್ಧವಾದ ಗಯಾಕ್ಷೇತ್ರವನ್ನೂ ಮತ್ತು ಪಶುಭೂಮಿಯನ್ನೂ ಗೆದ್ದು ಮಹಾಬಾಹುವಾದ ಅವನು ಅಟವೀಶನನ್ನೂ ಪರ್ವತನನ್ನೂ ಗೋಪತಿಯನ್ನೂ ಗೆದ್ದು ಅಲ್ಲಿಂದ ಉತ್ತರಾಭಿಮುಖವಾಗಿ ಹೊರಟನು. ಬಲಿಷ್ಠನಾದ ಕೌಂತೇಯನು ತನ್ನ ಸಾಮರ್ಥ್ಯದಿಂದ ವತ್ಸದೇಶವನ್ನು ಗೆದ್ದನು.
ಗರ್ಗಾಣಾಮಧಿಪಂ ಚೈವ ನಿಷಾದಾಧಿಪತಿಂ ತಥಾ |
ವಿಜಿಗ್ಯೇ ಭೂಮಿಪಾಲಾಂಶ್ಚ ಮಣಿಮತ್ಪ್ರಮುಖಾನ್ ಬಹೂನ್ ॥25॥
ಹಾಗೆಯೇ ಗರ್ಗದೇಶದ ಅಧಿಪತಿಯನ್ನೂ ನಿಶಾದಾಧಿಪತಿಯನ್ನೂ ಮಣಿಮಂತ ಮೊದಲಾದ ಅನೇಕ ಪ್ರಮುಖರಾಜರುಗಳನ್ನೂ ಗೆದ್ದನು.
ತತೋ ದಕ್ಷಿಣಮದ್ರಾಂಶ್ಚ ಭೋಜವಂತಂ ಚ ಪಾಂಡವಃ |
ತರಸೈವಾಜಯದ್ ಭೀಮೋ ನಾತಿತೀವ್ರೇಣ ಕರ್ಮಣಾ ॥26॥
ಅನಂತರ ಪಾಂಡುಪುತ್ರನಾದ ಭೀಮಸೇನನು ದಕ್ಷಿಣ ಮದ್ರದೇಶವನ್ನು ಮತ್ತು ಭೋಜವಂತನನ್ನು ಅಲ್ಪ ಪ್ರಯತ್ನದಿಂದಲೇ ಶೀಘ್ರವಾಗಿ ಜಯಿಸಿದನು.
ಶರ್ಮಕಾನ್ ಧರ್ಮಕಾಂಶ್ಚೈವ ಸಾಂತ್ವೇನೈವಾಜಯತ್ ಪ್ರಭುಃ |
ವೈದೇಹಂ ಚಾಪಿ ರಾಜಾನಂ ಜನಕಂ ಜಗತೀಪತಿಮ್ |
ವಿಜಿಗ್ಯೇ ಪುರುಷವ್ಯಾಘ್ರೋ ನಾತಿತೀವ್ರೇಣ ಕರ್ಮಣಾ ॥27॥
ಪ್ರಭುವಾದ ಭೀಮಸೇನನು ಶರ್ಮಕರನ್ನೂ ಧರ್ಮಕನ್ನೂ ಮೃದುವಚನಗಳಿಂದಲೇ ಗೆದ್ದು ಜಗತೀಪತಿಯಾದ ವಿದೇಹರಾಜನಾದ ಜನಕರಾಜನನ್ನು ಪುರುಷವ್ಯಾಘ್ರನಾದ ಅವನು ಮೃದುವಾದ ವಚನದಿಂದಲೇ ಗೆದ್ದನು.
ವೈದೇಹಸ್ಥಸ್ತು ಕೌಂತೇಯ ಇಂದ್ರಪರ್ವತಮಂತಿಕಾತ್ |
ಕಿರಾತಾಧಿಪತೀನ್ ಸಪ್ತ ವ್ಯಜಯತ್ ತತ್ರ ಪಾಂಡವಃ ॥28॥
ವಿದೇಹನಗರದಲ್ಲಿ ಇದ್ದ ಕೌಂತೇಯನಾದ ಪಾಂಡವನು ಇಂದ್ರಪರ್ವತದಲ್ಲಿದ್ದ ಸಮೀಪದಲ್ಲಿದ್ದ ಏಳುಮಂದಿ ಕಿರಾತಾಧಿಪತಿಗಳನ್ನು ಜಯಿಸಿದನು.
ತತಃ ಸುಹ್ಮಾನ್ ಪ್ರಸುಹ್ಮಾಂಶ್ಚ ಸಮಕ್ಷಾಂಶ್ಚಾಪಿ ವೀರ್ಯವಾನ್ |
ವಿಜಿತ್ಯ ಯುಧಿ ಕೌಂತೇಯೋ ಮಾಗಧಾನುಪಯಾದ್ ಬಲೀ ॥29॥
ಅನಂತರ ಬಲಿಷ್ಠನಾದ ಕುಂತೀಸುತನಾದ ಬುದ್ಧಿಶಾಲಿಯಾದ ಪರಾಕ್ರಮಶಾಲಿಯಾದ ಭೀಮಸೇನನು ಸುಹ್ಮದೇಶವನ್ನೂ ಪ್ರಸುಹ್ಮದೇಶವನ್ನೂ ಸಮಕ್ಷದೇಶವನ್ನೂ ಗೆದ್ದು ಮಗಧದೇಶದ ಕಡೆಗೆ ಹೊರಟನು.
ದಂಡಂ ಚ ದಂಡಧಾರಂ ಚ ವಿಜಿತ್ಯ ಪೃಥಿವೀಪತಿಃ |
ತೈರೇವ ಸಹಿತಃ ಸರ್ವೈರ್ಗಿರಿವ್ರಜಮುಪಾದ್ರವತ್ ॥30॥
ಪೃಥಿವೀಪತಿಯಾದ ಭೀಮನು ದಂಡನನ್ನೂ ದಂಡಧಾರನನ್ನೂ ಗೆದ್ದು ಅವರೆಲ್ಲರಿಂದಲೂ ಸಹಿತನಾಗಿ ಮಗಧದೇಶದ ರಾಜಧಾನಿಯಾದ ಗಿರಿವ್ರಜವನ್ನು ತಲುಪಿಸದನು.
ಜಾರಾಸಂಧಿಂ ಸಾಂತ್ವಯಿತ್ವಾ ಕರೇ ಚ ವಿನಿವೇಶ್ಯ ಹ |
ತೈರೇವ ಸಹಿತಃ ಪಾರ್ಥಃ ಕರ್ಣಮಭ್ಯದ್ರವದ್ ಬಲೀ ॥31॥
ಪಾರ್ಥನು ಜರಾಸಂಧನ ಮಗನಾದ ಸಹದೇವನನ್ನು ಸಮಾದಾನಪಡಿಸಿ ಅವನು ಕಪ್ಪಕಾಣಿಕೆಗಳನ್ನು ಕೊಡುವಂತೆಮಾಡಿ ಅವರಿಂದ ಸಹಿತನಾಗಿ ಕರ್ಣನಮೇಲೆ ದಂಡೆತ್ತಿಹೋದನು.
ಸ ಕಂಪಯನ್ನಿವ ಮಹೀಂ ಬಲೇನ ಚತುರಂಗಿಣಾ |
ಯುಯುಧೇ ಪಾಂಡವಶ್ರೇಷ್ಠಃ ಕರ್ಣೇನಾಮಿತ್ರಕರ್ಶಿನಾ ॥32॥
ಪಾಂಡವಶ್ರೇಷ್ಠನಾದ ಭೀಮನು ತನ್ನ ಚತುರಂಗಸೈನ್ಯದಿಂದ ಭೂಮಿಯನ್ನು ನಡುಗಿಸುವವನಂತೆ ಶತ್ರುಪೀಡಕನಾದ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸ ಕರ್ಣಂ ಯುಧಿ ನಿರ್ಜಿತ್ಯ ವಶೇ ಕೃತ್ವಾ ಚ ಭಾರತ |
ತತೋ ವಿಜಿಗ್ಯೇ ಬಲವಾನ್ ರಾಜ್ಞಃ ಪರ್ವತವಾಸಿನಃ ॥33॥
ಭಾರತನೇ! ಬಲಿಷ್ಠನಾದ ಅವನು ಯುದ್ಧದಲ್ಲಿ ಕರ್ಣನನ್ನು ಗೆದ್ದು ಅವನನ್ನು ವಶಪಡಿಸಿಕೊಂಡು ಅನಂತರ ಪರ್ವತವಾಸಿಗಳಾದ ರಾಜರುಗಳನ್ನು ಜಯಿಸಿದನು.
ಅಥ ಮೋದಂ ಗಿರಿಪತಿಂ ರಾಜಾನಂ ಚ ಮಹೌಜಸಮ್ |
ಪಾಂಡವೋ ಬಾಹುವೀರ್ಯೇಣ ನಿಜಘಾನ ಮಹಾಮೃಧೇ |
ತತಃ ಪುಂಡ್ರಾಧಿಪಂ ವೀರಂ ವಾಸುದೇವಾಖ್ಯಮಾಯಯೌ ॥34॥
ಅನಂತರ ಗಿರಿಪತಿಯಾದ ಮೋದನನ್ನೂ ಮಹೌಜಸರಾಜನನ್ನೂ ಪಾಂಡವನು ತನ್ನ ಭುಜಬಲ ಪರಾಕ್ರಮದಿಂದಲೇ ದೊಡ್ಡ ಯುದ್ಧದಲ್ಲಿ ಸಂಹರಿಸಿದನು. ಅಲ್ಲಿಂದ ಪೌಂಡ್ರಕವಾಸುದೇವನೆಂಬ ವೀರನಪಟ್ಟಣಕ್ಕೆ ಬಂದು.
ಇದಾನೀಂ ವೃಷ್ಣಿವೀರೇಣ ನ ಯೋತ್ಸ್ಯಾಮೀತಿ ಪೌಂಡ್ರಕಃ |
ಕೃಷ್ಣಸ್ಯ ಭುಜಸಂತ್ರಾಸಾತ್ ಕರಮಾಶು ದದೌ ನೃಪಃ ॥35॥
ಪೌಂಡ್ರಕವಾಸುದೇವನಾದರೋ ಈಗ ನಾನು ವೃಷ್ಣಿವೀರನ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲವೆಂದು ನಿಶ್ಚಯಿಸಿ ಕೃಷ್ಣನ

ಭುಜಬಲಕ್ಕೆ ಹೆದರಿ ಬೇಗ ಕಪ್ಪಕಾಣಿಕೆಗಳನ್ನು ಕೊಟ್ಟನು.
ಕೌಶಿಕಂ ಕಚ್ಛನಿಲಯಂ ರಾಜಾನಂ ಚ ಮಹೌಜಸಮ್ |
ಉಭೌ ಬಲವೃತೌ ವೀರಾವುಭೌ ಭೀಮಪರಾಕ್ರಮೌ |
ನಿರ್ಜಿತ್ಯಾಜೌ ಮಹಾವೀರ್ಯಂ ವಂಗರಾಜಮುಪಾದ್ರವತ್ ॥36॥
ಸಮುದ್ರತೀರನಿವಾಸಿಯಾದ ಕೌಶಿಕ ಮತ್ತು ಮಹೌಜಸ ರಾಜ ಇವರಿಬ್ಬರೂ ಸೈನ್ಯದಿಂದ ಕೂಡಿದವರು ವೀರರು ಮತ್ತು ಮಹಾಪರಾಕ್ರಮಶಾಲಿಗಳು. ಮಹಾಬಲಶಾಲಿಯಾದ ಭೀಮನು ಅವರಿಬ್ಬರನ್ನೂ ಯುದ್ಧದಲ್ಲಿ ಗೆದ್ದು ವಂಗದೇಶದ ಕಡೆಗೆ ಬಂದನು.
ಸಮುದ್ರಸೇನಂ ನಿರ್ಜಿತ್ಯ ಚಂದ್ರಸೇನಂ ಚ ಪಾರ್ಥಿವಮ್ |
ತಾಮ್ರಲಿಪ್ತಂ ಚ ರಾಜಾನಂ ಕಾಚಂ ವಂಗಾಧಿಪಂ ತಥಾ ॥37॥
ಅಂಗಾನಾಮಧಿಪಂ ಚೈವ ಯೇ ಚ ಸಾಗರವಾಸಿನಃ |
ಸರ್ವಾನ್ ಮ್ಲೇಚ್ಛಗಣಾಂಶ್ಚೈವ ವಿಜಿಗ್ಯೇ ಭರತರ್ಷಭಃ ॥38॥
ಭರತರ್ಷಭನಾದ ಭೀಮನು ಸಮುದ್ರಸೇನನನ್ನೂ ಮತ್ತು ಚಂದ್ರಸೇನರಾಜನನ್ನೂ ತಾಮ್ರಲಿಪ್ತ ಎಂಬ ರಾಜನನ್ನೂ ಕಾಚನೆಂಬ ವಂಗಾಧಿಪತಿಯಾದ ರಾಜನನ್ನೂ ಅಂಗದೇಶದ ರಾಜನನ್ನೂ ಸಾಗರ ಸಮೀಪದಲ್ಲಿ ವಾಸಿಸುವ ಮ್ಲೇಚ್ಛರ ಎಲ್ಲಾ ಗಣಗಳನ್ನೂ ಗೆದ್ದನು.
ಏವಂ ಬಹುವಿಧಾನ್ ದೇಶಾನ್ ವಿಜಿತ್ಯ ಪವನಾತ್ಮಜಃ |
ವಸೂಂಸ್ತೇಭ್ಯ ಉಪಾದಾಯ ಲೌಹಿತ್ಯಮಗಮದ್ ವಶೀ ॥39॥
ಪವನಸೂನುವಾದ ಭರತರ್ಷಭನಾದ ಭೀಮಸೇನನು ಹೀಗೆ ಬಹುವಿಧದೇಶಗಳನ್ನು ಗೆದ್ದು ಆ ದೇಶಗಳಿಂದ ಧನವನ್ನು ಸಂಗ್ರಹಿಸಿ ಲೌಹಿತ್ಯದೇಶಕ್ಕೆ ಬಂದನು.
ಸ ಸರ್ವಾನ್ ಮ್ಲೇಚ್ಛನೃಪತೀನ್ ಸಾಗರಾನೂಪವಾಸಿನಃ |
ಕರಮಾಹಾರಯಾಮಾಸ ರತ್ನಾನಿ ವಿವಿಧಾನಿ ಚ ॥40॥
ಅವನು ಸಾಗರತೀರದಲ್ಲಿ ವಾಸಿಸುವ ಎಲ್ಲಾ ಮ್ಲೇಚ್ಛರಾಜರು ವಿವಿಧ ರತ್ನರೂಪವಾದ ಕಪ್ಪವನ್ನು ಕೊಡುವಂತೆ ಮಾಡಿ ಅದನ್ನು ಸ್ವೀಕರಿಸಿದನು.
ಚಂದನಾಗುರುವಸ್ತ್ರಾಣಿ ಮಣಿಮುಕ್ತಮನುತ್ತಮಮ್ |
ಕಾಂಚನಂ ರಜತಂ ವಸ್ತ್ರಂ ವಿದ್ರುಮಂ ಚ ಮಹಾಧನಮ್ ॥41॥
ಚಂದನ ಅಗುರು ವಸ್ತ್ರಗಳು ಮಣಿಗಳು ಶ್ರೇಷ್ಠವಾದ ಮುತ್ತುಗಳು ಸುವರ್ಣ ರಜತ ವಜ್ರಗಳು ಹವಳಗಳು, ಮತ್ತು ಬಹಳ ಧನ (ಇವೆಲ್ಲವನ್ನು ಕಪ್ಪವಾಗಿ ಸ್ವೀಕರಿಸಿದನು.)
ಸ ಕೋಟಿಶತಸಂಖ್ಯೇನ ಧನೇನ ಮಹತಾ ವೃತಃ |
ಅಭ್ಯವರ್ಷದಮೇಯಾತ್ಮಾ ಧನವರ್ಷೇಣ ಪಾಂಡವಃ ॥42॥
ಪಾಂಡವನಾದ ಭೀಮಸೇನನು ಶತಕೋಟಿಧನದ ದೊಡ್ಡ ಸಂಚಯದಿಂದ ಯುಕ್ತನಾಗಿ ಅಪರಿಮೇಯ ಪ್ರಭಾವನಾದ ಅವನು ಧನವರ್ಷವನ್ನು ಸುರಿಸಿದನು.
ಇಂದ್ರಪ್ರಸ್ಥಮಥಾಗಮ್ಯ ಭೀಮೋ ಭೀಮಪರಾಕ್ರಮಃ |
ನಿವೇದಯಾಮಾಸ ತದಾ ಧರ್ಮರಾಜಾಯ ತದ್ಧನಮ್ ॥43॥
ಭೀಮಪರಾಕ್ರಮನಾದ ಭೀಮನು ಅನಂತರ ಇಂದ್ರಪ್ರಸ್ಥವನ್ನು ತಲುಪಿ ಧರ್ಮರಾಜನಿಗೆ ಆ ಎಲ್ಲಾ ಸಂಪತ್ತನ್ನೂ ನಿವೇದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ದಿಗ್ವಿಜಯಪರ್ವಣಿ ತೃತೀಯೋಽಧ್ಯಾಯಃ ॥|
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ತದೈವಾನ್ಯೇ ದಿಶೋ ಜಿತ್ವಾ ಸಮೀಯುಸ್ತಸ್ಯ ಯೋಽನುಜಾಃ |
ಸಹದೇವೋ ದಕ್ಷಿಣಾಶಾಂ ಜಿತ್ವಾ ರತ್ನಾನ್ಯುಪಾಹರತ್ ॥212॥
ಅಷ್ಟರಲ್ಲಿ ಬೇರೆ ದಿಕ್ಕುಗಳನ್ನು ಗೆದ್ದು ಯುಧಿಷ್ಠಿರನ ಇತರ ತಮ್ಮಂದಿರೂ ಬಂದರು. ಸಹದೇವ ದಕ್ಷಿಣ ದಿಕ್ಕನ್ನು ಗೆದ್ದು ರತ್ನಗಳನ್ನು ತಂದ.
ತತ್ರ ರುಗ್ಮೀ ನ ಯುಯುಧೇ ಸಹದೇವೇನ ವೀರ್ಯವಾನ್ ॥213॥
ಜಿತಃ ಕೃಷ್ಣೇನ ಪೂರ್ವಂ ಯಃ ಶರ್ವಾದಾಪ ಧನುರ್ವರಂ |
ತಪಸಾ ತೋಷಿತಾತ್ ಕೃಷ್ಣಾದನ್ಯಾನೇವಾಮುಖಾಖಿಲಾನ್ ॥214॥
ವಿಜೇಷ್ಯಸಿ ಯದಾ ಕೃಷ್ಣವಿರೋಧಸ್ತೇ ತದಾ ಧನುಃ |
ಮಾಮೇಷ್ಯತೀತಿ ತೇನೋಕ್ತೋ ನ ವ್ಯರುಧ್ಯತ ಕೇಶವೇ ॥215॥
ಸ್ವಸುಃ ಸ್ನೇಹಾಚ್ಚ ಕೃಷ್ಣಸ್ಯ ಯಜ್ಞಕಾರಯಿತೃತ್ವತಃ |
ಭೀಮಾರ್ಜುನಬಲಾಚ್ಚೈವ ಮಾದ್ರೇಯಾಯ ದದೌ ಕರಂ ॥216॥

ದಕ್ಷಿಣದಲ್ಲಿ ವೀರ್ಯಶಾಲಿಯಾದ ರುಕ್ಮಿ ಸಹದೇವನೊಡನೆ ಯುದ್ಧ ಮಾಡಲಿಲ್ಲ. ಏಕೆಂದರೆ ಹಿಂದೆ ರುಕ್ಮಿಣೀ ಸ್ವಯಂವರ ಕಾಲದಲ್ಲಿ ಕೃಷ್ಣನಿಂದ ಪರಾಜಿತನಾದ ಆತ ಶಿವನನ್ನು ತಪಸ್ಸಿನಿಂದ ಒಲಿಸಿಕೊಂಡು ಉತ್ತಮ ಧನುಸ್ಸನ್ನು ಪಡೆದ. ಆದರೆ `ಈ ಧನುಸ್ಸಿನಿಂದ ಕೃಷ್ಣನನ್ನು ಹೊರತು ಬೇರೆ ಎಲ್ಲರನ್ನೂ ಗೆಲ್ಲುವಿ. ಕೃಷ್ಣನೊಡನೆ ವಿರೋಧ ಮಾಡಿದರೆ ಧನುಸ್ಸು ನನ್ನ ಬಳಿಗೇ ಹಿಂತಿರುಗಿ ಬರುವುದು' ಎಂದು ಶಿವ ಹೇಳಿದ್ದ. ಅದರಿಂದಲೂ ತಂಗಿಯಾದ ರುಕ್ಮಿಣಿಯ ಮೇಲೆ ಪ್ರೀತಿಯಿಂದಲೂ ರುಕ್ಮಿ ಕೃಷ್ಣನಲ್ಲಿ ವಿರೋಧ ಮಾಡುತ್ತಿರಲಿಲ್ಲ. ಈಗ ಕೃಷ್ಣನೆ ಸ್ವತಃ ನಿಂತು ಯಾಗವನ್ನು ಮಾಡಿಸುತ್ತಿದ್ದುದರಿಂದ ಮತ್ತು ಭೀಮಾರ್ಜುನರ ಬಲದಿಂದ ರುಕ್ಮಿ ಸಹದೇವನಿಗೆ ಕಪ್ಪ ಕೊಡಬೇಕಾಯಿತು.

ಜಿಗ್ಯೇ ಬಲೇನಾನ್ಯನೃಪಾನ್ ಸಹದೇವಃ ಪ್ರತಾಪವಾನ್ ॥217॥

ಪ್ರತಾಪಶಾಲಿಯಾದ ಸಹದೇವ ಬೇರೆ ರಾಜರನ್ನು ಸ್ವಸಾಮರ್ಥ್ಯದಿಂದಲೇ ಗೆದ್ದ.

ತಥಾ ಸ್ಮೃತಂ ಸಮಾಗತಂ ಘಟೋತ್ಕಚಂ ವಿಭೀಷಣೇ |
ಸಮಾದಿಶದ್ ಯಯೌ ಚ ಸೋಽಪಿ ಸೋದದಾನ್ಮಹಾಕರಮ್ ॥218॥

ಸ್ಮರಿಸಿದೊಡನೆ ಬಂದ ಘಟೋತ್ಕಚನನ್ನು ಸಹದೇವ ವಿಭೀಷಣನ ಬಳಿಗೆ ಕಳುಹಿಸಿದ. ಒಡನೆ ಅವನು ಅಲ್ಲಿಗೆ ಹೋದ. ವಿಭೀಷಣ ಅವನಿಗೆ ಬಹಳ ಕಪ್ಪವನ್ನು ಕೊಟ್ಟ.

ಪುರಾ ಹಿ ರಾಘವೋದಿತಂ ತದಸ್ಯ ಸೋಽಖಿಲಂ ತದಾ |
ವಿಚಾರ್ಯ ಕೇಶವಂ ಚ ತಂ ಬಲಂ ಚ ಭೀಮಪಾರ್ಥಯೋಃ |
ದಿವೌಕಸಶ್ಚ ಪಾಂಡವಾನವೇತ್ಯ ಸೋಽದದಾತ್ ಕರಂ ॥219॥

ಘಟೋತ್ಕಚ ಬಂದಾಗ ವಿಭೀಷಣ ಹಿಂದೆ ಅವನಿಗೆ ಶ್ರೀರಾಮ ಹೇಳಿದ್ದನ್ನೆಲ್ಲ ನೆನೆಸಿಕೊಂಡ. ಶ್ರೀಕೃಷ್ಣ ಶ್ರೀರಾಮನೇ ಎಂಬುದನ್ನು ಆಲೋಚಿಸಿ, ಭೀಮಾರ್ಜುನರ ಬಲವನ್ನೂ ಆಲೋಚಿಸಿ ಪಾಂಡವರನ್ನು ದೇವತೆಗಳೆಂದೂ ತಿಳಿದು ಕಪ್ಪಕೊಟ್ಟ.

ಮಹೌಘರತ್ನಸಂಚಯಂ ಸ ಆಪ್ಯ ಭೀಮಸೇನಜಃ |
ಯಯೌ ಚ ಮಾದ್ರಿನಂದನಂ ಸ ಚಾಯಯೌ ಸ್ವಕಂ ಪುರಂ ॥220॥

ಘಟೋತ್ಕಚ ವಿಭೀಷಣನಿಂದ ಮಹೌಘ ರತ್ನರಾಶಿಯನ್ನು ತೆಗೆದುಕೊಂಡು ಸಹದೇವನ ಬಳಿಗೆ ಬಂದ. ಬಳಿಕ ಸಹದೇವ ತನ್ನ ಪಟ್ಟಣಕ್ಕೆ ಹಿಂದಿರುಗಿದ.

ನಕುಲಃ ಪಶ್ಚಿಮಾಶಾಯಾಂ ವಿಜಿಗ್ಯೇಽಖಿಲಭೂಭೃತಃ |
ಕರಮಾಪ ಚ ವೀರೋಽಸೌ ಸೌಹಾರ್ದಾದೇವ ಮಾತುಲಾತ್ |
ಆಯಯೌ ಚ ಮಹಾರತ್ನಸಂಚಯೇನ ಸ್ವಕಂ ಪುರಂ ॥221॥

ವೀರನಾದ ನಕುಲ ಪಶ್ಚಿಮ ದಿಕ್ಕಿನಲ್ಲಿ ಎಲ್ಲ ರಾಜರನ್ನೂ ಗೆದ್ದ. ಪ್ರೀತಿಯಿಂದಲೆ ತನ್ನ ಸೋದರಮಾವನಾದ ಶಲ್ಯನಿಂದಲೂ ಕಪ್ಪವನ್ನು ಪಡೆದ. ಮಹಾರತ್ನರಾಶಿ ಸಮೇತನಾಗಿ ತನ್ನ ಪಟ್ಟಣಕ್ಕೆ ಹಿಂತಿರುಗಿದ.

ಅರ್ಜುನಃ ಕಪಿವರೋಚ್ಛ್ರಿತಧ್ವಜಂ
　　ಸ್ಯಂದನಂ ಸಮಧಿರುಹ್ಯ ಗಾಂಡಿವೀ |
ಯಾತ ಏವ ದಿಶಮುತ್ತರಾಂ ಯದಾ
　　ಪಾರ್ವತೀಯಕನೃಪಾಃ ಸಮಾಯಯುಃ ॥222॥

ಅರ್ಜುನ ಕಪಿಶ್ರೇಷ್ಠನಾದ ಹನುಮಂತನಿಂದ ಯುಕ್ತವಾದ ಉನ್ನತಧ್ವಜವುಳ್ಳ ರಥವೇರಿ ಗಾಂಡೀವಧರಿಸಿ ಉತ್ತರ ದಿಕ್ಕಿಗೆ ಹೋದಾಗ ಪರ್ವತವಾಸಿಗಳಾದ ಕ್ಷುದ್ರ ರಾಜರು ಅವನನ್ನು ತಡೆದರು.

ತ್ರೈಗರ್ತಾಃ ಪಾರ್ವತೇಯಾಶ್ಚ ಸಹಿತಾಃ ಪಾಂಡುನಂದನಂ |
ಅಭ್ಯೇತ್ಯ ಯೋಧಯಾಮಾಸುರ್ಜಾನಂತಸ್ತಚ್ಚಿಕೀರ್ಷಿತಂ ॥223॥

ತ್ರಿಗರ್ತದೇಶದ ರಾಜನಿಂದ ಕೂಡಿದ ಪರ್ವತ ರಾಜ್ಯಗಳ ನಾಯಕರು ಅರ್ಜುನನ ಬಳಿಗೆ ಬಂದು ಅವನ ಉದ್ದೇಶವನ್ನರಿತು ಯುದ್ಧಮಾಡಿದರು.

ತಾನ್ವಿಜಿತ್ಯ ಯುಗಪತ್ ಸ ಪಾಂಡವಃ
　　ಸಂಜಯನ್ ಕ್ರಮಶ ಏವ ತಾಂ ದಿಶಂ |
ಪ್ರಾವ್ರಜಚ್ಚ ಭಗದತ್ತಮೂರ್ಜಿತಂ
　　ತೇನ ಚಾಸ್ಯ ಸಮಭೂನ್ಮಹಾರಣಃ ॥224॥

ಅವರೆಲ್ಲರನ್ನೂ ಒಮ್ಮೆಗೇ ಪರಾಭವಗೊಳಿಸಿ ಅರ್ಜುನ ಕ್ರಮವಾಗಿ ಆ ಉತ್ತರದಿಕ್ಕನ್ನು ಗೆದ್ದು ಬಲಿಷ್ಠನಾದ ಭಗದತ್ತನಲ್ಲಿಗೆ ಹೋದ. ಅವನೊಂದಿಗೆ ದೊಡ್ಡ ಯುದ್ಧ ನಡೆಯಿತು.

ಸೋಽಭಿಯುಧ್ಯ ಸಗಜೋ ದಿನಾಷ್ಟಕಂ
　　ಶ್ರಾಂತ ಆಹ ಪುರುಹೂತನಂದನಂ |
ಬ್ರೂಹಿ ತೇ ಸಮರಕಾರಣಂ ತ್ವಿತಿ
　　ಪ್ರಾಹ ದೇಹಿ ಕರಮಿತ್ಯಥಾರ್ಜುನಃ ॥225॥

ಭಗದತ್ತ ಸುಪ್ರತೀಕವೆಂಬ ಆನೆಯನ್ನೇರಿ ಬಂದು ಎಂಟು ದಿನಗಳ ಕಾಲ ಯುದ್ಧ ಮಾಡಿ ಆಯಾಸಗೊಂಡು ಅರ್ಜುನನಿಗೆ ಹೇಳಿದ `ನಿನ್ನ ಯುದ್ಧಕ್ಕೆ ಕಾರಣವೇನು ಹೇಳು' ಅರ್ಜುನನೆಂದ `ಕಪ್ಪ ಕೊಡು'.

ಸೋಽಪ್ಯದಾತ್ ಕರಮಮುಷ್ಯ ವಾಸವೋ
　　ಮದ್ಗುರುಸ್ತವ ಪಿತೇತಿ ಸಾದರಂ |

ನೈವ ಜೇತುಮಿಹ ಶಕ್ಷ್ಯಸಿ ತ್ವಮಿ-
ತ್ಯಾವದದ್ವರಿವರಾಸ್ತ್ರತೇಜಸಾ ॥226॥
`ನಿನ್ನ ತಂದೆ ಇಂದ್ರ ನನಗೆ ಗುರು' ಎನ್ನುತ್ತ ಭಗದತ್ತ ಆದರಪೂರ್ವಕವಾಗಿ ಅರ್ಜುನನಿಗೆ ಕಪ್ಪವನ್ನಿತ್ತ. ಆದರೆ `ನನ್ನಲ್ಲಿರುವ ವೈಷ್ಣವಾಸ್ತ್ರ ತೇಜಸ್ಸಿನಿಂದ ನೀನು ನನ್ನನ್ನು ಗೆಲ್ಲಲು ಸಾಧ್ಯವಿಲ್ಲ' ಎಂದ.
ಸ್ನೇಹಪೂರ್ವಂ ಪ್ರದತ್ತೇ ತು ಕರೇ ನೈವಾಹ ಚೋತ್ತರಂ |
ಅರ್ಜುನೋ ವ್ಯರ್ಥಕಲಹಮನಿಚ್ಛನ್ ಸ್ನೇಹಯಂತ್ರಿತಃ ॥227॥
ಸ್ನೇಹಪೂರ್ವಕವಾಗಿ ಅವನು ಕಪ್ಪವನ್ನು ಕೊಟ್ಟಾದ ಬಳಿಕ ಅರ್ಜುನ ಏನೂ ಉತ್ತರ ಕೊಡಲಿಲ್ಲ. ಸ್ನೇಹಕ್ಕೆ ಕಟ್ಟುಬಿದ್ದು ವ್ಯರ್ಥಕಲಹವನ್ನು ಬಯಸದೆ ಸುಮ್ಮನಾದ.
ಪಾರ್ಥೋ ಜಿತ್ವಾಽಷ್ಟವರ್ಷಾಣಿ ಷಡ್ ದ್ವೀಪಾನಪರಾನಪಿ |
ಅಜಯಚ್ಚತುರ್ದಿಶಮಪಿ ಸರ್ವಶಃ ಶಸ್ತ್ರತೇಜಸಾ ॥228॥
ಅರ್ಜುನ ಎಂಟು ವರ್ಷಗಳನ್ನೂ ಆರು ದ್ವೀಪಗಳನ್ನೂ ವಶಪಡಿಸಿಕೊಂಡು ಸಕಲಶಸತ್ರಸ್ತ್ರ ತೇಜಸ್ಸಿನಿಂದ ನಾಲ್ಕೂ ದಿಕ್ಕುಗಳನ್ನು ಗೆದ್ದ.
ಪಾತಾಳಸಪ್ತಕಂ ಗತ್ವಾ ಜಿತ್ವಾ ದೈತೇಯದಾನವಾನ್ |
ಬಲೇಶ್ಚ ವಿಷ್ಣುವಚನಾತ್ ಕರಂ ಜಗ್ರಾಹ ಸಾಮತಃ ॥229॥
ಅರ್ಜುನ ಏಳು ಪಾತಾಳಗಳನ್ನು ಹೊಕ್ಕು ದೈತ್ಯದಾನವರನ್ನು ಗೆದ್ದು ಶ್ರೀಹರಿಯ ಆಜ್ಞೆಯಂತೆ ಬಲಿಯಿಂದ ಕಪ್ಪವನ್ನು ಸಾಮದಿಂದಲೆ ತೆಗೆದುಕೊಂಡ.
ಜಿತ್ವಾ ಚ ವಾಸುಕಿಂ ಭೂರಿರತ್ನಮಾದಾಯ ಸತ್ವರಃ |
ಆಜಗಾಮ ಪುರಂ ಸ್ವೀಯಂ ವೀರೋ ವತ್ಸರಮಾತ್ರತಃ ॥230॥
ವಾಸುಕಿಯನ್ನೂ ಗೆದ್ದು ಬಹಳ ರತ್ನವನ್ನು ತೆಗೆದುಕೊಂಡು ಬೇಗನೇ ಒಂದೇ ವರ್ಷದಲ್ಲಿ ವೀರನಾದ ಅರ್ಜುನ ತನ್ನ ಪಟ್ಟಣಕ್ಕೆ ಹಿಂತಿರುಗಿ ಬಂದ.
ಸುವರ್ಣರತ್ನಗಿರಯಶ್ಚತುರ್ಭಿಸ್ತೈಃ ಸಮಾರ್ಜಿತಾಃ |
ಚತ್ವಾರೋ ಯೋಜನಾನಾಂ ಹಿ ದಶತ್ರಿಂಶಚ್ಛತಂ ತಥಾ ॥231॥
ಚತುಃಶತಂ ಚ ಕ್ರಮಶ ಉಚ್ಛ್ರಿತಾ ದಿಗ್ಜಯಾರ್ಜಿತಾಃ |
ಪ್ರತೀಚ್ಯಾದ್ಯಪಸವ್ಯೇನ ಕ್ರಮಾದ್‌ದಿಗ್ಭ್ಯಃ ಸಮಾರ್ಜಿತಾಃ ॥232॥
ಬಂಗಾರ ರತ್ನಗಳ ನಾಲ್ಕು ಬೆಟ್ಟಗಳನ್ನೆ ನಕುಲ ಸಹದೇವ ಭೀಮ ಅರ್ಜುನರು ನಾಲ್ವರು ಸಂಪಾದಿಸಿದರು. ಪಶ್ಚಿಮದಿಂದ ತೊಡಗಿ ಅಪ್ರದಕ್ಷಿಣವಾಗಿ ನಾಲ್ಕು ದಿಕ್ಕುಗಳಿಂದ ಅವರು ದಿಗ್ವಿಜಯದಲ್ಲಿ ಸಂಪಾದಿಸಿದ ರತ್ನಪರ್ವತಗಳು ಕ್ರಮವಾಗಿ ಹತ್ತು ಮೂವತ್ತು ನೂರು ಮತ್ತು ನಾನ್ನೂರು ಯೋಜನ ವಿಸ್ತಾರವಾಗಿದ್ದುವು.
ವಿಶ್ವಕರ್ಮಕೃತತ್ವಾತ್‌ತು ಪುರಸ್ಯಾಲ್ಪೇಽಪಿ ಚ ಸ್ಥಲೇ |
ಅಂತರ್ಗತಾಸ್ತೇ ಗಿರಯಸ್ತದದ್ಭುತಮಿವಾಭವತ್ ॥233॥
ಇಂದ್ರಪ್ರಸ್ಥದಲ್ಲಿ ಇರುವ ಸ್ಥಳಾವಕಾಶ ಅಲ್ಪವಾಗಿದ್ದರೂ ಆ ನಗರ ವಿಶ್ವಕರ್ಮ ನಿರ್ಮಿತವಾದ್ದರಿಂದ ಆ ಎಲ್ಲ ರತ್ನಪರ್ವತಗಳೂ ನಗರದೊಳಗೆ ಇರಲು ಶಕ್ಯವಾಯಿತು. ಇದೊಂದು ನೋಡುವವರಿಗೆ ಬಹಳ ಅದ್ಭುತವಾಗಿತ್ತು.
* * * *
ಇಪ್ಪತ್ತೆಂಟನೆಯ ಅಧ್ಯಾಯ
(ಸಹದೇವನ ದಕ್ಷಿಣ ದಿಗ್ವಿಜಯ. ಮಾಹಿಷ್ಮತಿ ನಗರದಲ್ಲಿ ಅಗ್ನಿಸ್ತುತಿ. ಘಟೋತ್ಕಚನ ಮೂಲಕ ವಿಭೀಷಣನಿಂದ ಕರದಾನ.)
ವೈಶಂಪಾಯನಃ
ತಥೈವ ಸಹದೇವೋಽಪಿ ಧರ್ಮರಾಜೇನ ಪೂಜಿತಃ |
ಮಹತ್ಯಾ ಸೇನಯಾ ಸಾರ್ಧಂ ಪ್ರಯಯೌ ದಕ್ಷಿಣಾಂ ದಿಶಮ್ ॥1॥
ಹಾಗೆಯೇ ಸಹದೇವನು ಸಹ ಧರ್ಮರಾಜನಿಂದ ಸತ್ಕೃತನಾಗಿ ದೊಡ್ಡ ಸೈನ್ಯವನ್ನು ತೆಗೆದುಕೊಂಡು ದಕ್ಷಿಣಾಭಿಮುಖವಾಗಿ ಹೊರಟನು.
ಸ ಶೂರಸೇನಾನ್ ಕಾತ್ಸ್ನ್ಯೇನ ಪೂರ್ವಮೇವಾಜಯತ್ ಪ್ರಭುಃ|
ಮತ್ಸ್ಯರಾಜಂ ಚ ಕೌರವ್ಯೋ ವಶೇ ಚಕ್ರೇ ಬಲಾದ್ ಬಲೀ ॥2॥
ಬಲಿಷ್ಠನೂ ಪ್ರಭುವೂ ಆದ ಅವನು ಮೊದಲೇ ಶೂರಸೇನದೇಶವನ್ನೆಲ್ಲಾ ಸಮಗ್ರವಾಗಿ ಗೆದ್ದನು. ಜನಮೇಜಯನೇ! ಹಾಗೆಯೇ ಮತ್ಸ್ಯರಾಜನನ್ನು ವಶಪಡಿಸಿಕೊಂಡನು.
ಅಧಿರಾಜಂ ಚ ರಾಜಾನಂ ದಂತವಕ್ರಂ ಮಹಾಹವೇ |
ಜಿಗಾಯ ನರಕಂ ಚೈವ ಸ್ವಾರಾಜ್ಯೇ ಸನ್ನ್ಯವೇಶಯತ್ ॥3॥
ಹಾಗೆಯೇ ರಾಜನಾದ ಅಧಿರಾಜನನ್ನೂ ದಂತವಕ್ರನನ್ನೂ ಮತ್ತು ನರಕಾಸುರನನ್ನೂ ದೊಡ್ಡಯುದ್ಧದಲ್ಲಿ ಗೆದ್ದು ಧರ್ಮರಾಜನ ಸಾರ್ವಭೌಮತ್ವವನ್ನು ಅಂಗೀಕರಿಸುವಂತೆ ಮಾಡಿದನು.
ಸುಕುಮಾರಂ ವಶೇ ಚಕ್ರೇ ಸುಮಿತ್ರಂ ಚ ನರಾಧಿಪಮ್ |
ತಥೈವಾಪರಮತ್ಸ್ಯಾಂಶ್ಚ ವ್ಯಜಯತ್ ಸ ಪಟಚ್ಚರಾನ್ ॥4॥
ಸುಕುಮಾರನೆಂಬ ರಾಜನನ್ನೂ ಸುಮಿತ್ರನೆಂಬ ರಾಜನನ್ನೂ ಅಪರಮತ್ಸ್ಯರಾಜನನ್ನೂ ಮತ್ತು ಪಟಚ್ಚರರನ್ನೂ ಗೆದ್ದನು.

ನಿಷಾದಭೂಮಿಂ ಗೋಶೃಂಗಂ ಪರ್ವತಪ್ರವರಂ ತಥಾ |
ತರಸಾ ವ್ಯಜಯದ್ ಧೀಮಾನ್ ಶ್ರೇಣಿಮಂತಂ ಚ ಪಾರ್ಥಿವಮ್ ॥
ಮೇಧಾವಿಯಾದ ಅವನು ನಿಷಾದಭೂಮಿಯನ್ನೂ ಪರ್ವತಶ್ರೇಷ್ಠವಾದ ಗೋಶೃಂಗವನ್ನೂ ಶೀಘ್ರವಾಗಿ ಗೆದ್ದು
ಶ್ರೇಣಿಮಂತರಾಜನನ್ನೂ ಜಯಿಸಿದನು.
ನವರಾಷ್ಟ್ರಂ ವಿನಿರ್ಜಿತ್ಯ ಕುಂತಿಭೋಜಮುಪಾದ್ರವತ್ |
ಪ್ರೀತಿಪೂರ್ವಂ ಚ ತಸ್ಯಾಸೌ ಪ್ರತಿಜಗ್ರಾಹ ಶಾಸನಮ್ ॥6॥
ನವರಾಷ್ಟ್ರವನ್ನು ಗೆದ್ದು ಕುಂತಿಭೋಜನ ಕಡೆಗೆ ಧಾವಿಸಿದನು. ಕುಂತಿಭೋಜನು ಪ್ರೀತಿಯಿಂದ ಅವನ ಅಜ್ಞೆಯನ್ನು ಸ್ವೀಕರಿಸಿದನು.
ತತಶ್ಚರ್ಮಣ್ವತೀತೀರೇ ಜಂಭಕಸ್ಯಾತ್ಮಜಂ ನೃಪಮ್ |
ದದರ್ಶ ವಾಸುದೇವೇನ ಶೇಷಿತಂ ಪೂರ್ವವೈರಿಣಾ ॥7॥
ಅನಂತರ ಚರ್ಮಣ್ವತೀತೀರದಲ್ಲಿ ಪೂರ್ವಶತ್ರುವಾದ ವಾಸುದೇವನಿಂದ ಉಳಿಸಲ್ಪಟ್ಟ ಜಂಭಕನ ಪುತ್ರನಾದ ರಾಜನನ್ನು
ನೋಡಿದನು.
ಚಕ್ರೇ ಸ ತೇನ ಸಂಗ್ರಾಮಂ ಸಹ ಭೋಜೇನ ಭಾರತ |
ಸ ತಮಾಜೌ ವಿನಿರ್ಜಿತ್ಯ ದಕ್ಷಿಣಾಭಿಮುಖೋ ಯಯೌ ॥8॥
ಭಾರತನೇ ! ಅವನು ಆ ಭೋಜರಾಜನ ಜೊತೆಯಲ್ಲಿ ಯುದ್ಧವನ್ನುಮಾಡಿ ಅವನನ್ನು ಜಯಿಸಿ ಅಲ್ಲಿಂದ ದಕ್ಷಿಣಾಭಿಮುಖವಾಗಿ
ಹೊರಟನು.
ಮೋಕಾನ್ ಪರಮಮೋಕಾಂಶ್ಚ ವ್ಯಜಯತ್ ಸ ಪುನಃ ಪುನಃ |
ಕರಾಂಸ್ತೇಭ್ಯ ಉಪಾದಾಯ ರತ್ನಾನಿ ವಿವಿಧಾನಿ ಚ |
ತತಸ್ತೈರೇವ ಸಹಿತೋ ನರ್ಮದಾಮಭಿತೋ ಯಯೌ ॥9॥
ಅವನು ಮೋಕರನ್ನೂ ಮತ್ತು ಪರಮಮೋಕರನ್ನೂ ಗೆದ್ದು ಅವರು ಪುನಃ ಪುನಃ ವಿವಿಧ ರತ್ನರೂಪವಾದ ಕಪ್ಪವನ್ನು ಕೊಡುವಂತೆ
ಮಾಡಿ ಅವರಿಂದ ಸಹಿತನಾಗಿ ನರ್ಮದಾ ನದಿಯ ಬಳಿಗೆ ಹೋದನು.
ವಿಂದಾನುವಿಂದಾವಾವಂತ್ಯೌ ಸೈನ್ಯೇನ ಮಹತಾ ವೃತೌ |
ಜಿಗಾಯ ಸಮರೇ ವೀರಾವಾಶ್ವಿನೇಯಃ ಪ್ರತಾಪವಾನ್ ॥10॥
ಪ್ರತಾಪಶಾಲಿಯಾದ ಅಶ್ವಿನೀ ಪುತ್ರನಾದ ಸಹದೇವನು ದೊಡ್ಡ ಸೈನ್ಯದಿಂದಕೂಡಿದ್ದ ಅವಂತಿ ದೇಶದ ವಿಂದಾನುವಿಂದರನ್ನು
ಯುದ್ಧದಲ್ಲಿ ಜಯಿಸಿದನು.
ತತೋ ರತ್ನಾನ್ಯುಪಾದಾಯ ಪುರಂ ಭೋಜಕಟಂ ಯಯೌ |
ತತ್ರ ಯುದ್ಧಮಭೂತ್ ತಾತ ದಿವಸದ್ವಯಮಚ್ಯುತ ॥11॥
ಅಲ್ಲಿಂದ ರತ್ನಗಳನ್ನು ತೆಗೆದುಕೊಂಡು ಭೋಜಕಟಪಟ್ಟಣಕ್ಕೆ ಬಂದನು. ಪ್ರೀತಿಪಾತ್ರನೇ! ಸದ್ಗುಣಗಳಿಂದ ರಹಿತನಾಗದವನೇ, ಅಲ್ಲಿ
ಎರಡು ದಿನಗಳಕಾಲ ಯುದ್ಧವುನಡೆಯಿತು.
ವಿನಿರ್ಜಿತ್ಯ ದುರಾಧರ್ಷಂ ಭೀಷ್ಮಕಂ ಮಾದ್ರಿನಂದನಃ |
ಕೋಸಲಾಧಿಪತಿಂ ಚೈವ ತಥಾ ವೇಣ್ಣಾಕಟಾಧಿಪಮ್ ॥12॥
ಕ್ರಾಂತಕಾಂಶ್ಚ ರಣೇ ಜಿತ್ವಾ ತಥಾ ಪ್ರಾಕೋಟಕಾನ್ ನೃಪಾನ್ |
ಬಾಲಕೇಯಾನ್ ವಶೇ ಕೃತ್ವಾ ತಥಾ ಹೈರಂಬಕಾನಪಿ ॥13॥
ಮಾದ್ರಿನಂದನನಾದ ಸಹದೇವನು ಸೋಲಿಸಲು ಅಸಾಧ್ಯನಾದ ಭೀಷ್ಮಕನನ್ನು ಸೋಲಿಸಿ ಹಾಗೆಯೇ ಕೋಸಲಾಧಿಪತಿಯನ್ನೂ
ವೇಣ್ವಾತಟಾಧಿಪತಿಯನ್ನೂ ಕ್ರಾಂತಕರನ್ನೂ ಪ್ರಾಕೋಟಕರಾಜರನ್ನೂ ಬಾಲಕೇಯರನ್ನೂ ಹೈರಂಬಕರನ್ನೂ ಯುದ್ಧದಲ್ಲಿ ಗೆದ್ದು
ವಶಪಡಿಸಿಕೊಂಡನು.
ಸ್ವರೂಪಂ ಚ ವಿನಿರ್ಜಿತ್ಯ ಧರ್ಮಗ್ರಾಮಾನ್ ಸಕೌಸಲಾನ್ |
ತೈತ್ತಿರಾನರ್ಧಪಾಂಶ್ಚೈವ ಶಂಬರಾಂಶ್ಚ ಸಹಸ್ರಶಃ |
ತಾಂಶ್ಚೈವಾಟವಿಕಾನ್ ಸರ್ವಾನಜಯತ್ ಪಾಂಡುನಂದನಃ ॥14॥
ಸ್ವರೂಪರಾಜನನ್ನು ಗೆದ್ದು ಕೋಸಲದೇಶವನ್ನು ಧರ್ಮಗ್ರಾಮಗಳನ್ನೂ ಗೆದ್ದು ತೈತ್ತಿರರನ್ನೂ ಅರ್ಧಪರನ್ನೂ ಮತ್ತು ಸಹಸ್ರ
ಸಂಖ್ಯೆಯಲ್ಲಿ ಶಂಬರರನ್ನೂ ಗೆದ್ದು ಪಾಂಡುನಂದನನಾದ ಸಹದೇವನು ಎಲ್ಲಾ ಅರಣ್ಯವಾಸಿರಾಜರುಗಳನ್ನೂ ಗೆದ್ದನು.
ಕಾರಂಡಮೇಯಂ ಚ ನೃಪಂ ತಥಾ ಚಕ್ರಪುರೇಽಜಯತ್ |
ಪುಳಿಂದಾಂಶ್ಚ ರಣೇ ಜಿತ್ವಾ ಯಯೌ ದಕ್ಷಿಣತಃ ಪುನಃ ॥15॥
ಹಾಗೆಯೇ ಚಕ್ರಪುರದಲ್ಲಿ ಕಾರಂಡಮೇಯ ಎಂಬ ರಾಜನನ್ನೂ ಮತ್ತು ಯುದ್ಧದಲ್ಲಿ ಪುಳಿಂದರಾಜರುಗಳನ್ನೂ ಗೆದ್ದು ಪುನಃ
ದಕ್ಷಿಣಾಭಿಮುಖವಾಗಿ ಹೊರಟನು.
ತತಸ್ತು ಪತ್ತನಂ ಪ್ರಾಪ್ಯ ಸಹದೇವಃ ಪ್ರತಾಪವಾನ್ |
ಯಯುಧೇ ಚ ದ್ರುಮೇಂದ್ರೇಣ ದಿವಸಂ ನಕುಲಾನುಜಃ |
ತಂ ಚ ಜಿತ್ವಾ ಮಹಾಬಾಹುಂ ಪ್ರಯಯೌ ದಕ್ಷಿಣಾಂ ದಿಶಮ್ ॥16॥
ಅನಂತರ ಪತ್ತನ ಎಂಬ ರಾಜ್ಯಕ್ಕೆ ಹೋಗಿ ಪ್ರತಾಪಶಾಲಿಯಾದ ನಕುಲಾನುಜನಾದ ಸಹದೇವನು ಅಲ್ಲಿಯ ರಾಜನಾದ ದ್ರುಮೇಂದ್ರನ
ಜೊತೆಯಲ್ಲಿ ಒಂದು ದಿವಸ ಯುದ್ಧವನ್ನುಮಾಡಿ ಆ ಮಹಾಬಾಹುವನ್ನು ಜಯಿಸಿ ಪುನಃ ದಕ್ಷಿಣಾಭಿಮುಖವಾಗಿ ಹೊರಟನು.
ಗುಹಾಮಾಸಾದಯದ್ ರಾಜನ್ ಕಿಷ್ಕಿಂಧಾಂ ಲೋಕವಿಶ್ರುತಾಮ್ |

ಪುರಾ ವಾನರರಾಜೇನ ಸುಗ್ರೀವೇಣಾಭಿಪಾಲಿತಾಮ್ ॥17॥
ರಾಜನೇ! ಅಲ್ಲಿಂದ ಲೋಕವಿಶ್ರುತವಾದ ಹಿಂದೆ ವಾನರರಾಜನಾದ ಸುಗ್ರೀವನಿಂದ ಪಾಲಿಸಲ್ಪಟ್ಟ ಕಿಷ್ಕಿಂಧಾಗುಹೆಯನ್ನು ಸಮೀಪಿಸಿದನು.
ತತಃ ಕೋಸಲರಾಜಸ್ಯ ರಾಮಸ್ಯೈವಾನುಗೇನ ಚ |
ಸುಗ್ರೀವೇಣಾಭಿಗುಪ್ತಾಂ ತಾಂ ಪ್ರವಿಷ್ಟಸ್ತಮಥಾಹ್ವಯತ್ ॥18॥
ಅಲ್ಲಿ ಕೋಸಲರಾಜನಾದ ರಾಮನ ಅನುಚರನಾದ ಸುಗ್ರೀವನಿಂದ ರಕ್ಷಿತವಾದ ಆ ಗುಹಾಪಟ್ಟಣವನ್ನು ಪ್ರವೇಶಿಸಿ ಯುದ್ಧಕ್ಕೆ ಆಹ್ವಾನಿಸಿದನು.
ತತ್ರ ವಾನರರಾಜಾಭ್ಯಾಂ ಸುಷೇಣವಸುಷೇಣಯೋಃ |
ಯುಯುಧೇ ದಿವಸಾನ್ ಸಪ್ತ ನಚ ತೌ ವಿಮುಖೀಕೃತೌ ॥19॥
ತತಸ್ತುತೋಷ ಸುಗ್ರೀವಃ ಕೋಸಲಾಧಿಪತೇಃ ಸಖಾ |
ತತಸ್ತುಷ್ಟೌ ಮಹಾತ್ಮಾನೌ ಸಹದೇವಾಯ ವಾನರೌ |
ಊಚತುಶ್ಚೈವ ಸಂಹೃಷ್ಟೌ ಪ್ರೀತಿಪೂರ್ವಮಿದಂ ವಚಃ ॥20॥
ಸಹದೇವನು ಆಗ ಕಿಷ್ಕಿಂಧಾಪಟ್ಟಣವನ್ನು ಪಾಲಿಸುವ ವಾನರರಾಜರಾದ ಸುಷೇಣ ಮತ್ತು ವಸುಷೇಣರ ಜೊತೆಯಲ್ಲಿ ಏಳು ದಿವಸಗಳ ಕಾಲ ಯುದ್ಧಮಾಡಿದರು. ಅವರಿಬ್ಬರೂ ವಿಮುಖರಾಗಲಿಲ್ಲ. ಆಗ ಕೋಸಲಾಧಿಪತಿಯಾದ ರಾಮನ ಸಖನಾದ ಸುಗ್ರೀವನು ಸಂತೋಷಗೊಂಡನು. ಆಗ ಮಹಾನುಭಾವರಾದ ಸುಷೇಣ, ವಸುಷೇಣರು ಪರಮ ಸಂತೋಷದಿಂದ ಸಹದೇವನನ್ನು ಕುರಿತು ಪ್ರೀತಿ ಪೂರ್ವಕವಾಗಿ ಈ ಮಾತುಗಳನ್ನು ಆಡಿದರು.
ಗಚ್ಛ ಪಾಂಡವಶಾರ್ದೂಲ ಕೃಷ್ಣಸ್ಯಾನುಮತೇ ಸ್ಥಿತಃ |
ಧರ್ಮರಾಜಃ ಪ್ರಿಯೋ ಯಸ್ಮಾದ್ ವಿಷ್ಣೋರಮಿತತೇಜಸಃ ॥21॥
ಸರ್ವಮೇತಚ್ಛ್ರುತಂ ರಾಜನ್ ಪಾರಂಪರ್ಯೇಣ ಪಾಂಡವ |
ಗಚ್ಛ ಪಾಂಡವಶಾರ್ದೂಲ ರತ್ನಾನ್ಯಾದಾಯ ಸರ್ವಶಃ |
ಅವಿಘ್ನಮಸ್ತು ಯಜ್ಞಾಯ ಧರ್ಮರಾಜಸ್ಯ ಧೀಮತಃ ॥22॥
ಎಲೈ ಪಾಂಡವಶಾರ್ದೂಲನೇ, ಕೃಷ್ಣನ ವಶವರ್ತಿಯಾದ ಪಾಂಡವಶಾರ್ದೂಲನಾದ ಧರ್ಮರಾಜನು ಅಮಿತಪರಾಕ್ರಮಿಯಾದ ವಿಷ್ಣುವಿಗೆ ಅತಿಪ್ರಿಯನಾದವನು. ಪಾಂಡವನೇ! ನಾವು ಈ ಎಲ್ಲ ವಿಷಯಗಳನ್ನು ಪರಂಪರೆಯಿಂದ ತಿಳಿದಿದ್ದೇವೆ. ಪಾಂಡವ ಶಾರ್ದೂಲನೇ! ಈ ಎಲ್ಲಾ ರತ್ನಗಳನ್ನೂ ತೆಗೆದುಕೊಂಡು ನೀನು ಹೊರಡು. ಮೇಧಾವಿಯಾದ ಧರ್ಮರಾಜನ ಯಜ್ಞವು ನಿರ್ವಿಘ್ನವಾಗಿ ನಡೆಯಲಿ.
ಇತ್ಯುಕ್ತತ್ವ ವಾನರೌ ತೌ ತು ದದತುರ್ಧನಮಕ್ಷಯಮ್ |
ತತೋ ರತ್ನಾನ್ಯುಪಾದಾಯ ಪುರೀಂ ಮಾಹಿಷ್ಮತೀಂ ಯಯೌ ॥23॥
ಹೀಗೆ ಹೇಳಿ ಅ ಇಬ್ಬರು ವಾನರರು ಅಕ್ಷಯವಾದ ಧನವನ್ನು ಕೊಟ್ಟರು. ಅಲ್ಲಿಂದ ರತ್ನಗಳನ್ನು ತೆಗೆದುಕೊಂಡು ಸಹದೇವನು ಮಾಹಿಷ್ಮತೀಪಟ್ಟಣಕ್ಕೆ ಬಂದನು.
ತತ್ರ ನೀಲೇನ ರಾಜ್ಞಾ ಸ ಯುದ್ಧಂ ಚಕ್ರೇ ನರಾಧಿಪಃ |
ಪಾಂಡವಃ ಪರವೀರಘ್ನಃ ಸಹದೇವಃ ಪ್ರತಾಪವಾನ್ ॥24॥
ತತೋಽಸ್ಯ ಸುಮಹದ್ ಯುದ್ಧಮಾಸೀಲ್ಲೋಕಭಯಂಕರಮ್ |
ಸೈನ್ಯಕ್ಷಯಕರಂ ಚೈವ ಪ್ರಾಣಾನಾಂ ಸಂಶಯಾವಹಮ್ |
ಚಕ್ರೇ ತಸ್ಯ ಚ ಸಾಹಾಯ್ಯಂ ಭಗವಾನ್ ಹವ್ಯವಾಹನಃ ॥25॥
ನರಾಧಿಪನೂ ಪರವೀರಘಾತಕನೂ ಪ್ರತಾಪಶಾಲಿಯೂ ಪಾಂಡುಪುತ್ರನೂ ಆದ ಸಹದೇವನು ನೀಲರಾಜನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಆಗ ಸೈನ್ಯನಾಶಕ್ಕೆ ಕಾರಣವಾದ ಪ್ರಾಣಸಂಶಯವನ್ನು ಉಂಟುಮಾಡುವ ಲೋಕಭಯಂಕರವಾದ ಘೋರವಾದ ಯುದ್ಧವಾಯಿತು. ಆ ಯುದ್ಧದಲ್ಲಿ ಭಗವಂತನಾದ ಅಗ್ನಿಯು ನೀಲನಿಗೆ ಸಹಾಯವನ್ನು ಮಾಡಿದನು.
ತತೋ ರಥಾ ಹಯಾ ನಾಗಾಃ ಪುರುಷಾಃ ಕವಚಾನಿ ಚ |
ಪ್ರದೀಪ್ತಾನಿ ವ್ಯದೃಶ್ಯಂತ ಸಹದೇವಬಲೇ ತಥಾ ॥26॥
ಆಗ ಸಹದೇವನ ಸೈನ್ಯದಲ್ಲಿ ರಥಗಳು ಅಶ್ವಗಳು ಗಜಗಳು ಪದಾತಿಗಳು ಮತ್ತು ಕವಚಗಳು ಎಲ್ಲವೂ ಬೆಂಕಿಯಿಂದ ಹತ್ತಿಕೊಂಡು ಉರಿಯುತ್ತಿದ್ದುದು ಕಾಣಬಂದಿತು.
ತತಃ ಸುಸಂಭ್ರಾಂತಮನಾ ಬಭೂವ ಕುರುನಂದನಃ |
ನೋತ್ತರಂ ಪ್ರತಿಪತ್ತುಂ ಚ ಶಕ್ತೋಽಭೂಜ್ಜನಮೇಜಯ ॥27॥
ಜನಮೇಜಯನೇ! ಕುರುನಂದನನಾದ ಸಹದೇವನು ಆಗ ಸಂಭ್ರಾಂತವಾದ ಮನಸ್ಸುಳ್ಳವನಾಗಿ ಯಾವ ಪರಿಹಾರವನ್ನೂ ಯೋಚಿಸಲು ಸಮರ್ಥನಾಗಲಿಲ್ಲ.
ಜನಮೇಜಯಃ
ಕಿಮರ್ಥಂ ಭಗವಾನಗ್ನಿಃ ಪ್ರತ್ಯಮಿತ್ರೋಽಭವದ್ ಯುಧಿ |
ಸಹದೇವಸ್ಯ ಯಜ್ಞಾರ್ಥಂ ಘಟಮಾನಸ್ಯ ವೈ ದ್ವಿಜ ॥28॥
ಬ್ರಾಹ್ಮಣಶ್ರೇಷ್ಠರೇ! ಪೂಜ್ಯನಾದ ಅಗ್ನಿಯು ಯಾವಕಾರಣದಿಂದ ಯಜ್ಞಾರ್ಥವಾಗಿ ಯುದ್ಧದಲ್ಲಿ ಪ್ರಯತ್ನ ಪಡುತ್ತಿರುವ ಸಹದೇವನಿಗೆ ಶತ್ರುವಾದನು?

ವೈಶಂಪಾಯನಃ
ತತ್ರ ಮಾಹಿಷ್ಮತೀವಾಸೋ ಭಗವಾನ್ ಹವ್ಯವಾಹನಃ |
ಶ್ರೂಯತೇ ನಿಗೃಹೀತೋ ವೈ ಪುರಸ್ತಾತ್ ಪಾರದಾರಿಕಃ |
ನೀಲಸ್ಯ ರಾಜ್ಞಃ ಪೂರ್ವೇಷಾಂ ಉಪನೀತಶ್ಚ ಸೋಽಭವತ್ ॥29॥
ಮಾಹಿಷ್ಮತೀನಗರದಲ್ಲಿ ಪೂಜ್ಯನಾದ ಅಗ್ನಿಯು ವಾಸವಾಗಿದ್ದಾನೆ. ಹಿಂದೆ ಪಾಣಿಗ್ರಹಣಕ್ಕೆ ಸಾಕ್ಷಿಯಾಗಿದ್ದ ಅಗ್ನಿಯು ಪರಪತ್ನಿಯ ಅಭಿಮರ್ಷವನ್ನು ಮಾಡಿದ ಆ ದೇಶದ ರಾಜನನ್ನು ನಿಗ್ರಹಿಸಿದನು. ಅನಂತರ ನೀಲರಾಜನ ಪೂರ್ವಜರು ಅಗ್ನಿಯನ್ನು ಸ್ತೋತ್ರಮಾಡಿ ಅವನನ್ನು ಪ್ರಸನ್ನೀಕರಿಸಿ ಕೊಂಡರು.
ತತೋ ಬ್ರಾಹ್ಮಣರೂಪೇಣ ಚರಮಾಣೋ ಯದೃಚ್ಛಯಾ |
ತಂ ತು ರಾಜಾ ಯಥಾಶಾಸ್ತ್ರಮಶಾಸದ್ಧಾರ್ಮಿಕಸ್ತದಾ ॥30॥
ಆಗ ಅಗ್ನಿಯು ಬ್ರಾಹ್ಮಣರೂಪದಿಂದ ಮಾಹಿಷ್ಮತೀನಗರಕ್ಕೆ ಯದೃಚ್ಛೆಯಿಂದ ಬಂದು ಸರ್ವಭಕ್ಷಕನಾಗಿದ್ದನು. ಧಾರ್ಮಿಕನಾದ ರಾಜನು ಈ ಬ್ರಾಹ್ಮಣನು ಸರ್ವಭಕ್ಷಕನೆಂದು ತಿಳಿದು ಅವನಿಗೆ ಶಿಕ್ಷೆಯನ್ನು ನೀಡಿದನು.
ಪ್ರಜಜ್ವಾಲ ತತಃ ಕೋಪಾದ್ ಭಗವಾನ್ ಹವ್ಯವಾಹನಃ |
ತಂ ದೃಷ್ಟ್ವಾ ವಿಸ್ಮಿತೋ ರಾಜಾ ಜಗಾಮ ಶಿರಸಾ ಕವಿಮ್ |
ಚಕ್ರೇ ಪ್ರಸಾದಂ ಚ ತದಾ ತಸ್ಯ ರಾಜ್ಞೋ ವಿಭಾವಸುಃ ॥31॥
ಆಗ ಪೂಜ್ಯನಾದ ಅಗ್ನಿಯು ಕೋಪದಿಂದ(ತನ್ನ ನಿಜರೂಪದಿಂದ) ಪ್ರಜ್ವಲಿಸಿದನು. ಅವನನ್ನು ನೋಡಿ ವಿಸ್ಮಿತನಾದ ರಾಜನು ಅವನಿಗೆ ಶರಣಾಗತನಾದನು. ಆಗ ಅಗ್ನಿಯು ಆ ರಾಜನಿಗೆ ಪ್ರಸನ್ನನಾದನು.
ವರೇಣ ಚ್ಛಂದಯಾಮಾಸ ತಂ ನೃಪಂ ಸ್ವಿಷ್ಟಕೃತ್ ತದಾ |
ಅಭಯಂ ವೈ ಸ ಜಗ್ರಾಹ ಪರಸೈನ್ಯಾನ್ಮಹೀಪತಿಃ ॥32॥
ಭಕ್ತರ ಇಷ್ಟವನ್ನು ಪೂರೈಸುವ ಪೂಜ್ಯನಾದ ಅಗ್ನಿಯು ರಾಜನನ್ನು ಕುರಿತು ಬೇಕಾದ ವರವನ್ನು ಕೇಳು ಎಂದು ಸೂಚಿಸಿದನು. ಆಗ ಆ ರಾಜನು ಪರಸೈನ್ಯಗಳಿಂದ ಅಭಯವನ್ನು ವರವನ್ನಾಗಿ ಬೇಡಿದನು.
ತದಾಪ್ರಭೃತಿ ಯೇ ಕೇಚಿದಜ್ಞಾನಾತ್ ತಾಂ ಪುರೀಂ ನೃಪಾಃ |
ಜಿಗೀಷಂತಿ ಬಲಾದ್ ರಾಜಂಸ್ತೇ ದಹ್ಯಂತೇ ಸ್ಮ ವಹ್ನಿನಾ ॥33॥
ಆಗಿನಿಂದ ಪ್ರಾರಂಭಿಸಿ ಯಾರಾದರೂ ಅಜ್ಞಾನದಿಂದ ಮಾಹಿಷ್ಮತೀನಗರವನ್ನು ಪ್ರವೇಶಿಸಿ ತಮ್ಮ ಬಲದಿಂದ ಗೆಲ್ಲಲು ಬಯಸಿದರೆ ಅಗ್ನಿಯು ಅವರನ್ನು ದಹಿಸುತ್ತಾನೆ.
ತಸ್ಯಾಂ ಪುರ್ಯಾಂ ತದಾ ಚೈವ ಮಾಹಿಷ್ಮತ್ಯಾಂ ಕುರೂದ್ವಹ |
ಬಭೂವುರನತಿಗ್ರಾಹ್ಯಾ ಯೋಷಿತಶ್ಛಂದತಃ ಕಿಲ ॥34॥
ಕುರೂದ್ವಹನೇ! ಆ ಮಾಹಿಷ್ಮತೀಪಟ್ಟಣದಲ್ಲಿ ಆಗಿನಿಂದಲೂ ಸ್ತ್ರೀಯರು ಯಾರ ಇಚ್ಛೆಗೂ ಒಳಗಾಗಿ ಬಲಾತ್ಕರಕ್ಕೆ ಒಳಗಾಗುವುದಿಲ್ಲವಷ್ಟೇ?
ಏವಮಗ್ನಿರ್ವರಂ ಪ್ರಾದಾತ್ ಸ್ತ್ರೀಣಾಮಪ್ರತಿವಾರಣೇ |
ಸ್ವೈರಿಣ್ಯಸ್ತತ್ರ ನಾರ್ಯೋ ಹಿ ಯಥೇಷ್ಟಂ ಪ್ರಚರಂತ್ಯುತ ॥35॥
ಹೀಗೆ ಅಗ್ನಿಯು ಸ್ತ್ರೀಯರಿಗೆ ಇನ್ನೊಬ್ಬರು ನಿವಾರಿಸಲಾಗದ ವರವನ್ನು ದಯಪಾಲಿಸಿದನು. ಅಲ್ಲಿನ ಸ್ತ್ರೀಯರು ತಮ್ಮ ಪತಿಗಳಿಂದಲೇ ಪ್ರೇರಿತರಾಗಿ ಯಾರ ಭಯವೂ ಇಲ್ಲದೆ ನಗರದಲ್ಲಿ ಸಂಚರಿಸುತ್ತಾರೆ.
ವರ್ಜಯಂತಿ ಚ ರಾಜಾನಸ್ತದ್ರಾಷ್ಟ್ರಂ ಪುರುಷರ್ಷಭ |
ಭಯಾದಗ್ನೇರ್ಮಹಾರಾಜ ತದಾಪ್ರಭೃತಿ ಸರ್ವದಾ ॥36॥
ಮಹಾರಾಜನೇ! ಪುರುಷಶ್ರೇಷ್ಠನೇ! ಆದ್ದರಿಂದ ಯಾವಾಗಲೂ ಅಗ್ನಿಯ ಭಯದಿಂದ ರಾಜರು ಆ ರಾಷ್ಟ್ರವನ್ನು ವರ್ಜಿಸುತ್ತಾರೆ.
ಸಹದೇವಸ್ತು ಧರ್ಮಾತ್ಮಾ ಸೈನ್ಯಂ ದೃಷ್ಟ್ವಾ ಭಯಾರ್ದಿತಮ್ |
ಪ್ರದೀಪ್ತಮಗ್ನಿನಾ ರಾಜನ್ ನಾಕಂಪತ ಯಥಾ ಗಿರಿಃ |
ಉಪಸ್ಪೃಶ್ಯ ಶುಚಿರ್ಭೂತ್ವಾ ಸೋಽಬ್ರವೀತ್ ಪಾವಕಂ ತದಾ ॥37॥
ಧರ್ಮಾತ್ಮನಾದ ಸಹದೇವನು ತನ್ನ ಸೈನ್ಯವು ಭಯದಿಂದ ಪೀಡಿತವಾಗಿ ಅಗ್ನಿಯಿಂದ ಜ್ವಲಿಸುತ್ತಿರುವುದನ್ನು ಕಂಡರೂ ಪರ್ವತದಂತೆ ಸ್ವಲ್ಪವೂ ಅಲುಗಾಡಲಿಲ್ಲ. ಅವನು ಕೈಕಾಲುಗಳನ್ನು ತೊಳೆದು ಶುಚಿಯಾಗಿ ಅಗ್ನಿಯನ್ನು ಕುರಿತು ಹೀಗೆ ಮಾತನಾಡಿದನು.
ತ್ವದರ್ಥೋಽಯಂ ಸಮಾರಂಭಃ ಕೃಷ್ಣವರ್ತ್ಮನ್ ನಮೋಽಸ್ತು ತೇ|
ಮುಖಂ ತ್ವಮಸಿ ದೇವಾನಾಂ ಯಜ್ಞಸ್ತ್ವಮಸಿ ಪಾವಕ ॥38॥
ಕೃಷ್ಣವರ್ತ್ಮನೇ! ನಿನಗೆ ನಮಸ್ಕಾರ. ನಿನ್ನ ಸಲುವಾಗಿ ಈ ಪ್ರಯತ್ನವು ನಡೆದಿದೆ. ನೀನು ದೇವತೆಗಳ ಮುಖ ಎಂದು ಕರೆಸಿಕೊಳ್ಳುತ್ತೀಯೆ. ಪಾವಕನೇ ನೀನೇ ಯಜ್ಞನೆಂದು ಕರೆಸಿಕೊಳ್ಳುತ್ತೀಯೆ.
ಪಾವನಾತ್ ಪಾವಕಶ್ಚಾಸಿ ವಹನಾದ್ ಹವ್ಯವಾಹನಃ |
ವೇದಾಸ್ತ್ವದರ್ಥಂ ಜಾತಾಶ್ಚ ಜಾತವೇದಾಸ್ತತೋ ಹ್ಯಸಿ ॥39॥
ಪವಿತ್ರೀಕರಿಸುವುದರಿಂದ ನಿನಗೆ ಪಾವಕನೆಂದು ಹೆಸರು. ಹವಿಸ್ಸನ್ನು ಕೊಂಡೊಯ್ಯುವುದರಿಂದ ನಿನಗೆ ಹವ್ಯವಾಹನನೆಂದು ಹೆಸರು. ನಿನ್ನ ಸಲುವಾಗಿ ಜನಿಸಿದವರೆಲ್ಲರನ್ನು ನೀನು ತಿಳಿದಿರುವ ಕಾರಣದಿಂದ ನಿನ್ನನ್ನು ಜಾತವೇದ ಎಂದು ಕರೆಯುತ್ತಾರೆ.
ಚಿತ್ರಭಾನುಃ ಸುರೇಶಶ್ಚ ಅನಲಸ್ತ್ವಂ ವಿಭಾವಸೋ |

ಸ್ವರ್ಗದ್ವಾರಸ್ಪೃಶಶ್ಚಾಸಿ ಹುತಾಶೋ ಜ್ವಲನಃ ಶಿಖೀ ॥40॥
ವಿಚಿತ್ರ ಕಿರಣಗಳನ್ನು ಹೊಂದಿರುವುದರಿಂದ ನೀನು ಚಿತ್ರಭಾನು ನೀನು ಸುರೇಶ ನಿನ್ನನ್ನು ಅನಲನೆಂದೂ ವಿಭಾವಸು ಎಂದೂ ಕರೆಯುತ್ತಾರೆ. ನೀನು ಸ್ವರ್ಗದ್ವಾರದಲ್ಲಿ ಸ್ಥಿತನಾಗಿದ್ದೀಯೆ. ನೀನು ಹುತಾಶನೂ ಜ್ವಲನನೂ ಶಿಖಿಯೂ ಹೌದು.
ವೈಶ್ವಾನರಸ್ತ್ವಂ ಪಿಂಗೇಶೋ ಭೂರಿತೇಜಾಃ ಪ್ಲವಂಗಮಃ |
ಕುಮಾರಗರ್ಭೋ ಭಗವಾನ್ ರುಗ್ಮಗರ್ಭೋ ಹಿರಣ್ಯಕೃತ್ ॥41॥
ನೀನು ವೈಶ್ವಾನರ ಪಿಂಗೇಶ ಬಹುಪರಾಕ್ರಮಿ ಪ್ಲವಂಗಮ ಕುಮಾರಗರ್ಭ ಪೂಜ್ಯನಾದವನು ರುಗ್ಮಗರ್ಭನಾದವನು ಮತ್ತು ಸುವರ್ಣವನ್ನು ಮಾಡುವವನು.
ಅಗ್ನಿರ್ದದಾತು ಮೇ ತೇಜೋ ವಾಯುಃ ಪ್ರಾಣಂ ದದಾತು ಮೇ |
ಪೃಥಿವೀ ಬಲಮಾದದ್ಯಾಚ್ಛಿವಂ ಚಾಪೋ ದಿಶಂತು ಮೇ ॥42॥
ಅಗ್ನಿಯು ನನಗೆ ತೇಜಸ್ಸನ್ನು ಕೊಡಲಿ ವಾಯುವು ನನಗೆ ಪ್ರಾಣವನ್ನು ಕೊಡಲಿ. ಭೂಮಿಯು ನನಗೆ ಬಲವನ್ನು ಕೊಡಲಿ, ಜಲವು ನನಗೆ ಮಂಗಳವನ್ನು ಕೊಡಲಿ.
ಅಭ್ಯಾಗಚ್ಛ ಮಹಾಸತ್ತ್ವ ಜಾತವೇದಃ ಸುರೇಶ್ವರ |
ದೇವಾನಾಂ ಮುಖಮಗ್ನೇ ತ್ವಂ ಸತ್ಯೇನ ಚ ಪುನೀಹಿ ಮಾಮ್ ॥43॥
ಮಹಾಸತ್ವನಾದ ಜಾತವೇದನಾದ ಸುರೇಶ್ವರನಾದ ಅಗ್ನಿಯೇ ನನ್ನ ಎದುರಿಗೆ ಬಾ. ನೀನು ದೇವತೆಗಳ ಮುಖವಾಗಿದ್ದೀಯೆ. ಈ ಸತ್ಯವಚನದಿಂದ ನನ್ನನ್ನು ಪವಿತ್ರೀಕರಿಸು.
ಋಷಿಭಿರ್ಬ್ರಾಹ್ಮಣೈಶ್ಚೈವ ದೈವತೈರಸುರೈರಪಿ |
ನಿತ್ಯಂ ಸುಕೃತಯಜ್ಞೇಷು ಸತ್ಯೇನ ಚ ಪುನೀಹಿ ಮಾಮ್ ॥44॥
ಋಷಿಗಳಿಂದಲೂ ಬ್ರಾಹ್ಮಣರಿಂದಲೂ ದೇವತೆಗಳಿಂದಲೂ ಅಸುರರಿಂದಲೂ ಯಾವಾಗಲೂ ಯಜ್ಞಗಳಲ್ಲಿ ಪೂಜಿತನಾದವನೇ, ಈ ಸತ್ಯವಚನದಿಂದ ನನ್ನನ್ನು ಪವಿತ್ರೀಕರಿಸು.
ಧೂಮಕೇತುಃ ಶಿಖೀ ಚ ತ್ವಂ ಪಾಪಹಾಽನಿಲಸಂಭವಃ |
ಸರ್ವಪ್ರಾಣಿಷು ನಿತ್ಯಸ್ಥಃ ಸತ್ಯೇನ ಚ ಪುನೀಹಿ ಮಾಮ್ ॥45॥
ನೀನು ಧೂಮಕೇತು ಶಿಖೀ ಪಾಪಪರಿಹಾರಕನಾದವನು ವಾಯುಸಂಭೂತನಾದವನು ಎಲ್ಲಾ ಪ್ರಾಣಿಗಳಲ್ಲಿಯೂ ನಿತ್ಯದಲ್ಲಿಯೂ ಇರುವವನು. ಈ ಸತ್ಯವಚನದಿಂದ ನನ್ನನ್ನು ಪವಿತ್ರೀಕರಿಸು.
ಏವಂ ಸ್ತುತೋಽಸಿ ಭಗವನ್ ಪ್ರೀತೇನ ಶುಚಿನಾ ಮಯಾ |
ತುಷ್ಟಿಂ ಪುಷ್ಟಿಂ ಧೃತಿಂ ಚೈವ ಪ್ರೀತಿಂ ಚಾಗ್ನೇ ಪ್ರಯಚ್ಛ ಮೇ |
ಯಜ್ಞವಿಘ್ನಮಿಮಂ ಕರ್ತುಂ ನಾರ್ಹಸಿ ತ್ವಂ ಹುತಾಶನ ॥46॥
ಪೂಜ್ಯನಾದ ಅಗ್ನಿಯೇ ನಾನು ವಿಶ್ವಾಸದಿಂದ ಶುಚಿಯಾಗಿ ನಿನ್ನನ್ನು ಹೀಗೆ ಸ್ತೋತ್ರಮಾಡಿದ್ದೇನೆ. ಅಗ್ನಿಯೇ ನನಗೆ ತುಷ್ಟಿಯನ್ನು ಪುಷ್ಟಿಯನ್ನು ಧೈರ್ಯವನ್ನು ಮತ್ತು ಪ್ರೀತಿಯನ್ನು ದಯಪಾಲಿಸು. ಹುತಾಶನನೇ! ನೀನು ಹೀಗೆ ಯಜ್ಞವಿಘ್ನವನ್ನು ಮಾಡಬಾರದು.
ವೈಶಂಪಾಯನಃ
ಏವಮುಕ್ತ್ವಾ ತು ಮಾದ್ರೇಯಃ ಕುಶೈರಾಸ್ತೀರ್ಯ ಮೇದಿನೀಮ್ |
ವಿಧಿವತ್ ಪುರುಷವ್ಯಾಘ್ರಃ ಪಾವಕಂ ಪ್ರತ್ಯುಪಾವಿಶತ್ ॥47॥
ಪ್ರಮುಖೇ ಸರ್ವಸೈನ್ಯಸ್ಯ ಭಯೋದ್ವಿಗ್ನಸ್ಯ ಭಾರತ |
ನಚೈನಮತ್ಯಗಾದಗ್ನಿರ್ವೇಲಾಮಿವ ಮಹೋದಧಿಃ ॥48॥
ಹೀಗೆ ಹೇಳಿ ಮಾದ್ರೀಸುತನಾದ ಪುರುಷವ್ಯಾಘ್ರನಾದ ಸಹದೇವನು ಭೂಮಿಯ ಮೇಲೆ ದರ್ಭೆಗಳನ್ನು ಹರಡಿ ವಿಧಿಪೂರ್ವಕವಾಗಿ ಅಗ್ನಿಗೆ ಅಭಿಮುಖವಾಗಿ ಭಯೋದ್ವಿಗ್ನವಾದ ಎಲ್ಲಾ ಸೈನ್ಯದ ಎದುರಿನಲ್ಲಿ ಕುಳಿತು ಕೊಂಡನು. ಭಾರತನೇ! ಆಗ ಸಮುದ್ರವು ದಡವನ್ನು ಮೀರದೇ ಇದ್ದಂತೆ ಅಗ್ನಿಯು ಸಹದೇವನನ್ನು ದಾಟಿ ಮುಂದೆ ಹೋಗಲಿಲ್ಲ.
ತಮಭ್ಯೇತ್ಯ ಶನೈರಗ್ನಿರುವಾಚ ಕುರುನಂದನಮ್ |
ಸಹದೇವಂ ನೃಣಾಂ ದೇವಂ ಸಾಂತ್ವಪೂರ್ವಮಿದಂ ವಚಃ ॥49॥
ಅಗ್ನಿಯು ಕುರುನಂದನನಾದ ನರದೇವನಾದ ಸಹದೇವನನ್ನು ಮೆಲ್ಲನೆ ಸಮೀಪಿಸಿ ಸಮಾಧಾನ ಪೂರ್ವಕವಾಗಿ ಈ ಮಾತನ್ನು ಆಡಿದನು.
ಉತ್ತಿಷ್ಠೋತ್ತಿಷ್ಠ ಕೌರವ್ಯ ಜಿಜ್ಞಾಸೇಯಂ ಕೃತಾ ಮಯಾ |
ವೇದ್ಮಿ ಸರ್ವಮಭಿಪ್ರಾಯಂ ತವ ಧರ್ಮಸುತಸ್ಯ ವೈ ॥50॥
ಕೌರವ್ಯನೇ! ಏಳು ಏಳು. ನಾನು ಕೇವಲ ಪರೀಕ್ಷೆಯನ್ನು ಮಾಡಿದೆ ನಿನ್ನನ್ನೂ ಧರ್ಮರಾಜನ ಎಲ್ಲಾ ಅಭಿಪ್ರಾಯವನ್ನೂ ನಾನು ತಿಳಿದಿದ್ದೇನೆ.
ಮಯಾ ತು ರಕ್ಷಿತವ್ಯೇಯಂ ಪುರೀ ಭರತಸತ್ತಮ |
ಯಾವದ್ ರಾಜ್ಞೋಽಸ್ಯ ನೀಲಸ್ಯ ಕುಲೇ ವಂಶಧರಾ ಇಹ |
ಈಪ್ಸಿತಂ ತೇ ಕರಿಷ್ಯಾಮಿ ಮನಸಸ್ತವ ಪಾಂಡವ ॥51॥
ಭರತಸತ್ತಮನೇ! ನೀಲರಾಜನ ವಂಶಧರರು ಇರುವವರೆಗೆ ನಾನು ಈ ಪಟ್ಟಣವನ್ನು ರಕ್ಷಿಸಬೇಕಾಗಿದೆ. ಪಾಂಡವನೇ! ನಿನ್ನ ಮನಸ್ಸಿಗೆ ಇಷ್ಟವಾದುದನ್ನು ನಾನು ನೆರವೇರಿಸುವೆನು.
ತತ ಉತ್ಥಾಯ ಹೃಷ್ಟಾತ್ಮಾ ಪ್ರಾಂಜಲಿಃ ಶಿರಸಾ ನತಃ |

ಪೂಜಯಾಮಾಸ ಮಾದ್ರೇಯಃ ಪಾವಕಂ ಪುರುಷರ್ಷ ॥52॥
ಪುರುಷರ್ಷಭನೇ! ಆಗ ಮಾದ್ರಿಯ ಪುತ್ರನಾದ ಸಹದೇವನು ಸಂತೋಷದಿಂದ ಎದ್ದು ಕೈಗಳನ್ನು ಮುಗಿದು ತಲೆಯನ್ನು ತಗ್ಗಿಸಿ ಅಗ್ನಿಗೆ ಪೂಜೆಯನ್ನು ಸಲ್ಲಿಸಿದನು.
ಪಾವಕೇ ವಿನಿವೃತ್ತೇ ತು ನೀಲೋ ರಾಜಾಽಭ್ಯಯಾತ್ ತದಾ |
ಪಾವಕಸ್ಯಾಜ್ಞಯಾ ಚೈನಮರ್ಚಯಾಮಾಸ ಪಾರ್ಥಿವಃ ॥53॥
ಅಗ್ನಿಯ ವಿನಿವೃತ್ತನಾದ ಮೇಲೆ ಅಗ್ನಿಯ ಆಜ್ಞೆಯಂತೆ ನೀಲರಾಜನು ಬಂದು ನರವ್ಯಾಘ್ರನಾದ ಯೋಧಪತಿಯಾದ ಸಹದೇವನನ್ನು ಸತ್ಕಾರದಿಂದ ಅರ್ಚಿಸಿದನು.
ಮಾದ್ರೀಸುತಸ್ತತಃ ಪ್ರಾಯಾದ್ ವಿಜಯೀ ದಕ್ಷಿಣಾಂ ದಿಶಮ್ ॥54॥
ಮಾದ್ರಿಸುತನಾದ ಸಹದೇವನು ಅವನ ಸತ್ಕಾರವನ್ನು ಸ್ವೀಕರಿಸಿ ಅವನು ಕಪ್ಪವನ್ನು ಕೊಡುವಂತೆಮಾಡಿ ವಿಜಯಶಾಲಿಯಾಗಿ ಅಲ್ಲಿಂದ ದಕ್ಷಿಣಾಭಿಮುಖವಾಗಿ ಹೊರಟನು.
ತ್ರೈಪುರಂ ಸ ವಶೇ ಕೃತ್ವಾ ರಾಜಾನಮಮಿತೌಜಸಮ್ |
ನಿಜಗ್ರಾಹ ಮಹಾಬಾಹುಸ್ತರಸಾ ಪೌರವೇಶ್ವರಮ್ ॥55॥
ಮಹಾಬಾಹುವಾದ ಅವನು ತ್ರಿಪುರವನ್ನು ತನ್ನ ವಶಕ್ಕೆ ತೆಗೆದುಕೊಂಡು ಅದರ ರಾಜನಾದ ಪೌರವೇಶ್ವರನಾದ ಅಮಿತೌಜನನ್ನು ನಿಗ್ರಹಿಸಿದನು.
ಆಹುತಿಂ ಕೈಶಿಕಾಚಾರ್ಯಂ ಯತ್ನೇನ ಮಹತಾ ತತಃ |
ವಶೇ ಚಕ್ರೇ ಮಹಾಬಾಹುಃ ಸುರಾಷ್ಟ್ರಾಧಿಪತಿಂ ತದಾ ॥56॥
ಮಹಾಬಾಹುವಾದ ಅವನು ಅನಂತರ ಸುರಾಷ್ಟ್ರಾಧಿಪತಿಯಾದ ಕೈಶಿಕಾಚಾರ್ಯನಾದ ಆಹುತಿ ಎಂಬ ರಾಜನನ್ನು ವಶಪಡಿಸಿಕೊಂಡನು.
ಸುರಾಷ್ಟ್ರವಿಷಯಸ್ಥಃ ಸನ್ ಪ್ರೇಷಯಾಮಾಸ ರುಗ್ಮಿಣೇ |
ರಾಜ್ಞೇ ಭೋಜಕಟಸ್ಥಾಯ ಮಹಾಮಾತ್ರಾಯ ಧೀಮತೇ |
ಭೀಷ್ಮಕಾಯ ಸ ಧರ್ಮಾತ್ಮಾ ಸಾಕ್ಷಾದಿಂದ್ರಸಖಾಯ ವೈ ॥57॥
ಧಮಾತ್ಮನಾದ ಸಹದೇವನು ಸುರಾಷ್ಟ್ರರಾಜ್ಯದಲ್ಲಿಯೇ ಇದ್ದವನಾಗಿ ಭೋಜಕಟದಲ್ಲಿ ವಾಸಿಸುತ್ತಿದ್ದ ರುಗ್ಮಿಗೂ ಮತ್ತು ಮೇಧಾವಿಯಾದ ಮಹಾವ್ರತನಾದ ಇಂದ್ರಸಖನಾದ ಭೀಷ್ಮಕನಿಗೂ ಸಹ ದೂತರನ್ನು ಕಳುಹಿಸಿದನು.
ಸ ಚಾಸ್ಯ ಸಸುತೋ ರಾಜಾ ಪ್ರತಿಜಗ್ರಾಹ ಶಾಸನಮ್ |
ಪ್ರೀತಿಪೂರ್ವಂ ಮಹಾಬಾಹುರ್ವಾಸುದೇವಮವೇಕ್ಷ್ಯ ಚ |
ತತಃ ಸ ರತ್ನಾನ್ಯಾದಾಯ ಪುನಃ ಪ್ರಾಯಾದ್ ಯುಧಾಂ ಪತಿಃ ॥58॥
ಭೀಷ್ಮಕನಾದರೋ ಪ್ರೀತಿಪೂರ್ವಕವಾಗಿ ಕೃಷ್ಣನ ಮೇಲಿನ ಗೌರವದಿಂದ ಅವನ ಶಾಸನವನ್ನು ಸ್ವೀಕರಿಸಿ ಮಹಾಬಾಹುವಾದ ಅವನು ಕಪ್ಪವನ್ನು ಒಪ್ಪಿಸಿದನು. ಯುಧಾಂಪತಿಯಾದ ಸಹದೇವನು ಆ ರತ್ನಗಳನ್ನು ತೆಗೆದುಕೊಂಡು ಅಲ್ಲಿಂದ ಪುನಃ ಹೊರಟನು.
ತತಃ ಶೂರ್ಪಾರಕರಂ ಚೈವ ಗಣಂ ಚೋಪಕೃತಾಹ್ವಯಮ್ |
ವಶೇ ಚಕ್ರೇ ಮಹಾತೇಜಾ ದಂಡಕಾಂಶ್ಚ ಮಹಾಬಲಃ ॥59॥
ಅನಂತರ ಮಹಾತೇಜಸ್ವಿಯೂ ಮಹಾಬಲನೂ ಆದ ಸಹದೇವನು ಶೂರ್ಪಾಕರವನ್ನೂ ಮತ್ತು ಉಪಕೃತ ಎಂಬ ಹೆಸರಿನ ದೇಶವನ್ನೂ ಮತ್ತು ದಂಡಕಾರಣ್ಯವನ್ನೂ ವಶಪಡಿಸಿಕೊಂಡನು.
ಸಾಗರದ್ವೀಪವಾಸಾಂಶ್ಚ ನೃಪತೀನ್ ಮ್ಲೇಚ್ಛಯೋನಿಜಾನ್ |
ನಿಷಾದಾನ್ ಪುರುಷಾದಾಂಶ್ಚ ಕರ್ಣಪ್ರಾವರಣಾನಪಿ ॥60॥
ಸಾಗರದ್ವೀಪವಾಸಿಗಳಾದ ರಾಜರನ್ನೂ ಮ್ಲೇಚ್ಛರಾಜರನ್ನೂ ನಿಷಾದರನ್ನೂ ನರಭಕ್ಷಕನಾದ ರಾಕ್ಷಸರನ್ನೂ ಕರ್ಣಪ್ರಾವರಣರನ್ನೂ ವಶಪಡಿಸಿಕೊಂಡನು.
ಯೇ ಚ ಕಾಲಮುಖಾ ನಾಮ ನರರಾಕ್ಷಸಯೋನಯಃ |
ಕೃತ್ಸ್ನಂ ಕೋಲ್ಲಗಿರಿಂ ಚೈವ ಮುರಚೀಪತ್ತನಂ ತಥಾ ॥61॥
ದ್ವೀಪಂ ತಾಮ್ರಾಹ್ವಯಂ ಚೈವ ಪರ್ವತಂ ರಾಮಕಂ ತಥಾ |
ತಿಮಿಂಗಿಲಂ ಚ ಸ ನೃಪಂ ವಶೇ ಚಕ್ರೇ ಮಹಾಮತಿಃ ॥62॥
ಕಾಳಮುಖವೆಂಬ ಮನುಷ್ಯರಾಕ್ಷಸಯೋನಿಯಲ್ಲಿ ಹುಟ್ಟಿದವರನ್ನೂ ಸಮಗ್ರವಾದ ಕೊಲ್ಲಪರ್ವತವನ್ನೂ ಹಾಗೆಯೇ ಮುರಚೀಪಟ್ಟಣವನ್ನೂ ತಾಮ್ರದ್ವೀಪವನ್ನೂ ರಾಮಕಪರ್ವತವನ್ನೂ ತಿಮಿಂಗಿಲನೆಂಬ ರಾಜನನ್ನೂ ಮಹಾಮತಿಯಾದ ಸಹದೇವನು ವಶಪಡಿಸಿಕೊಂಡನು.
ಏಕಪಾದಾಂಶ್ಚ ಪುರುಷಾಂಸ್ತಥಾ ಚೈವೋಷ್ಟ್ರಕಂಟಕಾನ್ |
ನಗರೀಂ ಸಂಜಯಂತೀಂ ಚ ಪಿಂಡಕಂ ಕರಹಾಟಕಮ್ ॥63॥
ಉದರೇ ವದನಂ ಯೇಷಾಂ ತಾಂಶ್ಚಾಶು ವಶಮಾನಯತ್ |
ದೂತೈರೇವ ವಶೇ ಚಕ್ರೇ ಕರದಾಂಶ್ಚೈವ ಕಾರಯತ್ ॥64॥
ಏಕಪಾದರಾದ ಪುರುಷರನ್ನೂ ಉಷ್ಟ್ರಕಂಟಕರನ್ನೂ ಸಂಜಯಂತೀ ನಗರವನ್ನೂ ಪಿಂಡಕ ಮತ್ತು ಕರಹಾಟಕ ನಗರಗಳನ್ನೂ ಉದರದಲ್ಲಿಯೇ ವದನವುಳ್ಳ (ಅಮಿತಭಕ್ಷರಾದ) ಪುರುಷರನ್ನೂ ತನ್ನ ದೂತರಿಂದಲೇ ವಶಪಡಿಸಿಕೊಂಡು ಅವರು ಕಪ್ಪವನ್ನು ಕೊಡುವಂತೆ ಮಾಡಿದನು.

ಭೃಗುಕಚ್ಛಾಂತತೋ ಧೀಮಾನ್ ದಂಡೇನಾಮಿತ್ರಕರ್ಶನಃ |
ಬರ್ಬರಾನ್ ವಾಶರಾನನ್ಯಾನ್ ದ್ವೀಪವಾಸಾನ್ ವಶೇ ವಶೀ ॥65॥
ಸಹ್ಯಾದ್ರಿಪರ್ವತ ದಕ್ಷಿಣಶೃಂಗದ ಸಮುದ್ರತೀರದಲ್ಲಿರುವ ಬರ್ಬರರನ್ನೂ ವಾಶರರನ್ನೂ ಉಳಿದ ದ್ವೀಪವಾಸಿಗಳನ್ನೂ ಸಮರ್ಥನೂ ಮೇಧಾವಿಯೂ ಶತ್ರುಕರ್ಶನನೂ ಆದ ಸಹದೇವನು ದಂಡೋಪಾಯದಿಂದ ವಶಕ್ಕೆ ತೆಗದುಕೊಂಡನು.
ಕೂಲಕಾನ್ ದರದಾಂಶ್ಚಾನ್ಯಾನ್ ಸಿಂಧೂರಾನ್ ವನವಾಸಿನಃ |
ಅಶ್ಮಕಾನ್ ಮೂಲಕಾಂಶ್ಚೈವ ವಿದರ್ಭಾಂಶ್ಚ ಮಹಾಬಲಾನ್ |
ದೂತೈರೇವ ವಶಂ ಚಕ್ರೇ ಕರೇ ಚ ವಿನಿವೇಶ್ಯ ಸಃ ॥66॥
ಅವನು ಕೂಲಕರನ್ನೂ ದರದರನ್ನೂ ಸಿಂಧೂರರನ್ನೂ ವನವಾಸಿಗಳನ್ನೂ ಅಶ್ಮಕರನ್ನೂ ಮೂಲಕರನ್ನೂ ಮಹಾಬಲಿಷ್ಠರಾದ ವಿದರ್ಭರನ್ನೂ ತನ್ನ ದೂತರಿಂದಲೇ ವಶಪಡಿಸಿಕೊಂಡು ಕಪ್ಪವನ್ನು ಕೊಡುವಂತೆ ಮಾಡಿದನು.
ಪಾಂಡ್ಯಾಂಶ್ಚ ದ್ರಮಿಳಾಂಶ್ಚೈವ ಚೋಳಾಂಶ್ಚ ಸಹ ಕೇರಳೈಃ |
ಸಿಂಹಲದ್ವೀಪಗಾನನ್ಯಾನ್ ದೂತೈಶ್ಚಕ್ರೇ ಮಹಾಬಲಾನ್ ॥67॥
ಪಾಂಡ್ಯರನ್ನು ದ್ರಮಿಳರನ್ನು ಜೋಳರನ್ನು ಕೇರಳರನ್ನು ಮತ್ತು ಮಹಾಬಲಿಷ್ಠರಾದ ಸಿಂಹಳ ದ್ವೀಪವಾಸಿಗಳನ್ನು ತನ್ನ ದೂತರಿಂದಲೇ ವಶಕ್ಕೆ ತೆಗೆದುಕೊಂಡನು.
ತತಃ ಕುಸ್ಮೃತಿನೀತಿಜ್ಞಾನ್ ದಕ್ಷಿಣಾಪಥವಾಸಿನಃ |
ಅಜಯತ್ ಸಂಯುಗೇ ತತ್ರ ಧರ್ಮಮಾರ್ಗೇಣ ಪಾಂಡವಃ ॥68॥
ಅನಂತರ ಕುಮಾರ್ಗಿಗಳಾದ ದುಷ್ಟನೀತಿಯನ್ನು ಅನುಸರಿಸುವ ದಕ್ಷಿಣಾಪಥವಾಸಿಗಳಾದ ರಾಜರುಗಳನ್ನು, ಪಾಂಡವನು ಯುದ್ಧದಲ್ಲಿ ಧರ್ಮಮಾರ್ಗದಿಂದಲೇ ಜಯಿಸಿದನು.
ಸರ್ವಸ್ವಂ ಕರಮಾದಾಯ ತೈರೇವ ಸಹಿತೋ ನೃಪಃ |
ಉತ್ತರಂ ತೀರಮಾಸಾದ್ಯ ಸಾಗರಸ್ಯೋರ್ಮಿಮಾಲಿನಃ ॥69॥
ಆಂಧ್ರಾಂಸ್ತಾಳವನಾನೋಢ್ರಾನ್ ಕಳಿಂಗಾನವಿಕಾಂಸ್ತಥಾ |
ಅಪರಂ ರೋಚಮಾನಂ ಚ ಯತಮಾನಂ ಪುರೋತ್ತಮೇ |
ದೂತೈರೇವ ವಶಂ ಚಕ್ರೇ ಕರಾರ್ಥೇ ತಾನಕಾರಯತ್ ॥70॥
ಸಹದೇವರಾಜನು ಅವರಿಂದ ಸರ್ವಸ್ವಕರವನ್ನು ತೆಗೆದುಕೊಂಡು ಅವರಿಂದ ಸಹಿತನಾಗಿ ಊರ್ಮಿಮಾಲೆಗಳುಳ್ಳ ಸಾಗರದ ಉತ್ತರದ ತೀರಕ್ಕೆ ಬಂದು ಆಂಧ್ರರನ್ನೂ ತಾಳವರನ್ನೂ ಓಡ್ರರನ್ನೂ ಕಳಿಂಗರನ್ನೂ ಅವಿಕರನ್ನೂ ವಶಪಡಿಸಿಕೊಂಡನು. ಅಲ್ಲದೆ ಶ್ರೇಷ್ಠವಾದ ಪಟ್ಟಣದಲ್ಲಿ ಪ್ರಯತ್ನಶೀಲನಾಗಿದ್ದ ರೋಚಮಾನ ಎಂಬ ರಾಜನನ್ನು ದೂತರಿಂದಲೇ ವಶಪಡಿಸಿಕೊಂಡು ಅವರೆಲ್ಲರೂ ಕಪ್ಪವನ್ನು ಕೊಡುವಂತೆ ಮಾಡಿದನು.
ಕಾನನದ್ವೀಪಕಾಂಶ್ಚೈವ ತರಸಾ ಜಿತ್ಯ ಚಾಹವೇ |
ತಾಮ್ರಪರ್ಣೀಂ ತತೋ ಗತ್ವಾ ಕನ್ಯಾತೀರ್ಥಮಥಾಪಿ ವಾ |
ದಕ್ಷಿಣಾಂ ಚ ದಿಶಂ ಸರ್ವಾಂ ವಿಜಿಗ್ಯೇ ಕುರುನಂದನಃ ॥71॥
ಅನಂತರ ಕುರುನಂದನನಾದ ಸಹದೇವನು ಕಾನನದ್ವೀಪವಾಸಿಗಳನ್ನು ಯುದ್ಧದಲ್ಲಿ ಶೀಘ್ರವಾಗಿ ಗೆದ್ದು ಅಲ್ಲಿಂದ ತಾಮ್ರಪರ್ಣಿನದಿಯ ಸಮೀಪಕ್ಕೂ ಕನ್ಯಾತೀರ್ಥಕ್ಕೂ ಪ್ರಯಾಣಮಾಡಿ ಸಮಗ್ರವಾದ ದಕ್ಷಿಣದಿಕ್ಕನ್ನು ಗೆದ್ದನು.
ಸಹದೇವಸ್ತತೋ ರಾಜನ್ ಮಂತ್ರಿಭಿಃ ಸಹ ತತ್ರ ವೈ |
ಸಂಪ್ರಧಾರ್ಯ ಮಹಾಬಾಹುಃ ಸಚಿವೈರ್ಬುದ್ಧಿಮತ್ತರೈಃ |
ಚಿಂತಯಾಮಾಸ ಕೌರವ್ಯೋ ಭ್ರಾತುಃ ಪುತ್ರಂ ಘಟೋತ್ಕಚಮ್ ॥72॥
ರಾಜನೇ! ಅನಂತರ ಮಹಾಬಾಹುವಾದ ಸಹದೇವನು ಮೇಧಾವಿಗಳಾದ ತನ್ನ ಮಂತ್ರಿಗಳ ಜೊತೆಯಲ್ಲಿ ಅಲ್ಲಿ ಮಂತ್ರಾಲೋಚನೆಯನ್ನುಮಾಡಿ ಮುಂದೇನು ಮಾಡಬೇಕೆಂದು ನಿರ್ಧರಿಸಿ ತನ್ನ ಅಣ್ಣನ ಮಗನಾದ ಘಟೋತ್ಕಚನನ್ನು ಸ್ಮರಿಸಿದನು.
ತತಶ್ಚಿಂತಿತಮಾತ್ರಸ್ತು ರಾಕ್ಷಸಃ ಪ್ರತ್ಯದೃಶ್ಯತ |
ಅತಿದೀರ್ಘೋ ಮಹಾಬಾಹುಃ ಸರ್ವಾಭರಣಭೂಷಿತಃ ॥73॥
ಸಹದೇವನು ಸ್ಮರಣೆಮಾಡಿದ ಕೂಡಲೇ ಅತಿ ದೀರ್ಘನೂ ಮಹಾಬಾಹುವೂ ಸರ್ವಾಭರಣಭೂಷಿತನೂ ಆದ ಘಟೋತ್ಕಚನು ಪ್ರತ್ಯಕ್ಷನಾದನು.
ಅಭಿವಾದ್ಯ ತತೋ ರಾಜನ್ ಸಹದೇವಂ ಘಟೋತ್ಕಚಃ |
ಪ್ರಹ್ವಃ ಕೃತಾಂಜಲಿಸ್ತಸ್ಥೌ ಕಿಂ ಕಾರ್ಯಮಿತಿ ಚಾಬ್ರವೀತ್ ॥74॥
ರಾಜನೇ! ಘಟೋತ್ಕಚನು ಸಹದೇವನಿಗೆ ನಮಸ್ಕಾರವನ್ನು ಮಾಡಿ ವಿನಯದಿಂದ ಬಾಗಿ ಕೈಗಳನ್ನು ಮುಗಿದು ನಿಂತು ಏನುಮಾಡಲಿ ಎಂದು ಕೇಳಿದನು.
ತಂ ಮೇರುಶಿಖರಾಕಾರಮಾಗತಂ ಪಾಂಡುನಂದನಃ |
ಪ್ರೇಷಯಾಮಾಸ ಹೈಡಿಂಬಂ ಪೌಲಸ್ತ್ಯಾಯ ಮಹಾತ್ಮನೇ |
ವಿಭೀಷಣಾಯ ಧರ್ಮಾತ್ಮಾ ಪ್ರೀತಿಪೂರ್ವಮರಿಂದಮಃ ॥75॥
ಪಾಂಡುನಂದನನಾದ ಧರ್ಮಾತ್ಮನೂ ಅರಿಂದಮನೂ ಆದ ಸಹದೇವನು ಮೇರುಪರ್ವತದಂತೆ ಎತ್ತರವಾಗಿ ಬಂದು ನಿಂತಿದ್ದ ಹಿಡಿಂಬಿಯ ಮಗನಾದ ಘಟೋತ್ಕಚನನ್ನು ಮಹಾತ್ಮನಾದ ಪೌಲಸ್ತ್ಯವಂಶಧರನಾದ ವಿಭೀಷಣನ ಬಳಿಗೆ ಪ್ರೀತಿಪೂರ್ವಕವಾಗಿ ಕಳುಹಿಸಿದನು.

ಸ ಚಾಸ್ಯ ಪ್ರತಿಜಗ್ರಾಹ ಶಾಸನಂ ಪ್ರೀತಿಪೂರ್ವಕಮ್ |
ತಚ್ಚ ಕಾಲಧೃತಂ ಜ್ಞಾತ್ವಾ ನಾವಮನ್ಯತ ಬುದ್ಧಿಮಾನ್ ॥76॥
ವಿಭೀಷಣನಾದರೋ ಪ್ರೀತಿಪೂರ್ವಕವಾಗಿ ರಾಜಶಾಸನವನ್ನು ಸ್ವೀಕರಿಸದನು. ಮೇಧಾವಿಯಾದ ಅವನು ಬಹುಕಾಲದಿಂದ ತಾನು ಮಾಡಬೇಕೆಂದು ಯೋಚಿಸಿದ್ದ ವಿಷಯವಿದು ಎಂದು ಚಿಂತಿಸಿ ಘಟೋತ್ಕಚನಿಗೆ ಅವಮಾನವನ್ನು ಮಾಡಲಿಲ್ಲ.
ತತಃ ಸಂಪ್ರೇಷಯಾಮಾಸ ರತ್ನಾನಿ ವಿವಿಧಾನಿ ಚ |
ಚಂದನಾನಿ ಚ ದಿವ್ಯಾನಿ ತಥಾ ಕಾಲಾಗರೂಣಿ ಚ |
ವಾಸಾಂಸಿ ಚ ಮಹಾರ್ಹಾಣಿ ಮಣೀಂಶ್ಚ ಸುಮಹಾಧನಾನ್ ॥77॥
ಅನಂತರ ವಿವಿಧವಾದ ರತ್ನಗಳನ್ನೂ ದಿವ್ಯವಾದ ಚಂದನಗಳನ್ನೂ ಕಾಲಾಗರುಗಳನ್ನೂ ಬೆಲೆಬಾಳುವ ವಸ್ತ್ರಗಳನ್ನೂ ಅನರ್ಘ್ಯವಾದ ಮಣಿಗಳನ್ನೂ ಕಳುಹಿಸಿಕೊಟ್ಟನು.
ಜನಮೇಜಯಃ
ಇಚ್ಛಾಮ್ಯಾಗಮನಂ ಶ್ರೋತುಂ ಹೈಡಿಂಬಸ್ಯ ದ್ವಿಜೋತ್ತಮ |
ಲಂಕಾಯಾಂ ಚ ಗತಿಂ ಬ್ರಹ್ಮನ್ ಪೌಲಸ್ತ್ಯಸ್ಯ ಚ ದರ್ಶನಮ್ |
ಕಾವೇರೀದರ್ಶನಂ ಚೈವ ಹ್ಯಾನುಪೂರ್ವ್ಯಾದ್ ವದಸ್ವ ಮೇ ॥78॥
ದ್ವಿಜಶ್ರೇಷ್ಠನೇ! ಹಿಡಿಂಬೆಯ ಮಗನಾದ ಘಟೋತ್ಕಚನು ಬಂದ ರೀತಿಯನ್ನೂ ಲಂಕೆಯಲ್ಲಿ ಅವನ ಸಂಚಾರವನ್ನೂ ವಿಭೀಷಣನ ದರ್ಶನವನ್ನೂ ನಾನು ಕೇಳಬಯಸುತ್ತೇನೆ. ಬ್ರಾಹ್ಮಣ ಶ್ರೇಷ್ಠನೇ! ಕಾವೇರೀ ದರ್ಶನವನ್ನು ನನಗೆ ಕ್ರಮವಾಗಿ ತಿಳಿಸು.
ವೈಶಂಪಾಯನಃ
ಶೃಣು ರಾಜನ್ ಪುರಾವೃತ್ತಂ ಸಹದೇವಸ್ಯ ಸಾಹಸಮ್ |
ಕಾನನದ್ವೀಪಗಾಂಶ್ಚೈವ ತರಸಾ ಜಿತ್ಯ ಆಹವೇ |
ದಕ್ಷಿಣಾಂ ಚ ದಿಶಂ ಜಿತ್ವಾ ಚೋಳಸ್ಯ ವಿಷಯಂ ಯಯೌ ॥79॥
ರಾಜನೇ! ಸಹದೇವನು ಹಿಂದೆ ಮಾಡಿದ ಸಾಹಸವನ್ನು ಕೇಳು. ಕಾನನವಾಸಿಗಳನ್ನೂ ದ್ವೀಪವಾಸಿಗಳನ್ನೂ ತನ್ನ ವೇಗದಿಂದ ಯುದ್ಧದಲ್ಲಿ ಗೆದ್ದು ದಕ್ಷಿಣದಿಕ್ಕನ್ನೆಲ್ಲಾ ಗೆದ್ದು ಸಹದೇವನು ಚೋಳರಾಜ್ಯವನ್ನೂ ಪ್ರವೇಶಿಸಿದನು.
ದದರ್ಶ ಪುಣ್ಯತೋಯಾಂ ವೈ ಕಾವೇರೀಂ ಸರಿತಾಂ ವರಾಮ್ |
ನಾನಾಪಕ್ಷಿಗಣೈರ್ಜುಷ್ಟಾಂ ತಾಪಸೈರುಪಶೋಭಿತಾಮ್ ॥80॥
ಅಲ್ಲಿ ಪುಣ್ಯಜಲವನ್ನು ಹೊಂದಿದ್ದ, ತಪಸ್ವಿಗಳಿಂದ ಅಲಂಕೃತವಾದ, ನಾನಾಪಕ್ಷಿಗಣಗಳಿಂದ ಸೇವಿತವಾದ ಶ್ರೇಷ್ಠನದಿಯಾದ ಕಾವೇರಿಯನ್ನು ನೋಡಿದನು.
ಸಾಲಲೋಧ್ರಾರ್ಜುನೈರ್ಬಿಲ್ವೈರ್ಜಂಬೂಶಾಲ್ಮಲಿಕಿಂಶುಕೈಃ |
ಕೀಚಕೈಃ ಕುಶಕಾಶೈಶ್ಚ ಪಕ್ಷ್ಮಕೈರುಪಶೋಭಿತಾಮ್ ॥81॥
ಅದು ಸಾಲ ಲೋಧ್ರ ಅರ್ಜುನ ಬಿಲ್ವ ಜಂಬೂ ಶಾಲ್ಮಲ ಕಿಂಶುಕ ಕೀಚಕ ಕುಶಕಾಶಗಳು ಪಕ್ಷ್ಮಕ ಮೊದಲಾದ ತೀರವೃಕ್ಷಗಳಿಂದ ಶೋಭಿಸುತ್ತಿದ್ದಿತು.
ಅಚ್ಛೈರ್ಜಲೈಃ ಶೋಣನಿಭಾಂ ಪಾವನಾದ್ ಗಂಗಯಾ ಸಮಾಮ್ |
ಕದಂಭೈಃ ಸಪ್ತಪರ್ಣೈಶ್ಚ ಕಾಶ್ಮರ್ಯಾಮಲಕೈರ್ವೃತಾಮ್ ॥82॥
ಸ್ವಚ್ಛ ಜಲಗಳಿಂದ ಕೆಳಗಿನ ಮರಳಿನಿಂದ ಕೆಂಪಾಗಿ ಕಾಣುತ್ತಿದ್ದಂತಹ, ಪಾವಿತ್ರ್ಯದಲ್ಲಿ ಗಂಗೆಗೆ ಸಮನಾದ ಕಂದಬ ಸಪ್ತಪರ್ಣ ಕಾಶ್ಮರಿ ಆಮಲಕ ಮೊದಲಾದ ತೀರವೃಕ್ಷಗಳಿಂದ ಶೋಭಿತವಾದ (ನದಿಯನ್ನು ನೋಡಿದನು.)
ನ್ಯಗ್ರೋಧೈಶ್ಚ ಮಹಾಶಾಖೈಃ ಪ್ಲಕ್ಷೈರೌದುಂಬರೈರಪಿ |
ಶಮೀಪಲಾಶವೃಕ್ಷೈಶ್ಚ ಅಶ್ವತ್ಥೈಃ ಖದಿರೈರ್ವೃತಾಮ್ ॥83॥
ಅ ನದಿಯು ದೊಡ್ಡ ಶಾಖೆಗಳುಳ್ಳ ನಗ್ರೋಧ (ಆಲ) ಪ್ಲಕ್ಷ ಔದುಂಬರ (ಅತ್ತಿ) ಶಮಿ ಪಲಾಶ. ಅಶ್ವತ್ಥ ಖದಿರ ಮೊದಲಾದ ವೃಕ್ಷಗಳಿಂದಲೂ ಅಲಂಕೃತವಾಗಿದ್ದಿತು.
ಬದರೀಭಿಶ್ಚ ಸಂಪನ್ನಾಮಶ್ವಕರ್ಣೈಶ್ಚ ಶೋಭಿತಾಮ್ |
ಕರಂಜತಿಂತ್ರಿಣೀಕೈಶ್ಚ ತಾಳವ್ರಾತೈರಲಂಕೃತಾಮ್ ॥84॥
ಅದು ಬದರೀವೃಕ್ಷಗಳಿಂದ ಸಂಪನ್ನವಾಗಿ ಅಶ್ವಕರ್ಣವೃಕ್ಷಗಳಿಂದ ಶೋಭಿತವಾಗಿ ಕರಂಜ ತಿಂತ್ರಿಣಿ ಮತ್ತು ತಾಳ ವೃಕ್ಷಗಳ ಸಮೂಹದಿಂದ ಅಲಂಕೃತವಾಗಿ ಇದ್ದಿತು.
ಶಿರೀಷೈಃ ಕುಟಜೈರ್ನಿಂಬೈರ್ಮಧೂಕೈಃ ಕ್ಷೀರಕೈರ್ವೃತಾಮ್ |
ಪುನ್ನಾಗೈರ್ವಕುಲೈಃ ಕುಂದೈರ್ಶ್ಚಂಪಕೈಃ ಸರ್ವತೋ ವೃತಾಮ್ ॥85॥
ಶಿರೀಷ ಕುಟಜ ನಿಂಬ ಮಧೂಕ ಕ್ಷೀರಕ ಪುನ್ನಾಗ ಬಕುಲ ಕುಂದ ಚಂಪಕ ಮೊದಲಾದ ವೃಕ್ಷಗಳಿಂದ ಎಲ್ಲ ಕಡೆಯಲ್ಲಿಯೂ ಪರಿವೃತವಾಗಿದ್ದಿತು.
ಪ್ರಿಯಂಗ್ವಶೋಕತಿಲಕೈರತಿಮುಕ್ತೈಶ್ಚ ಶೋಭಿತಾಮ್ |
ಅಸನೈಃ ಕರ್ಣಿಕಾರೈಶ್ಚ ನಾಗವೃಕ್ಷೈರಲಂಕೃತಾಮ್ ॥86॥
ಪ್ರೀಯಂಗು ಅಶೋಕ ತಿಲಕ ಅತಿಮುಕ್ತ ಅಸನ ಕರ್ಣಿಕಾರ ಮತ್ತು ನಾಗವೃಕ್ಷಗಳಿಂದ ಅಲಂಕೃತವಾಗಿ ಶೋಭಿತವಾಗಿದ್ದಿತು.
ಕೇತಕೀಭಿಃ ಕುರಬಕೈರ್ಜಾತಿಯೂಥಿಕಕಂದಲೈಃ |
ಅಂಕೋಲೈಃ ಕರವೀರೈಶ್ಚ ಪುನ್ನಾಗೈಃ ಪಾಟಲೈರ್ವೃತಾಮ್ ॥87॥

ಕೇತಕಿ ಕುರಬಕ ಜಾತಿ ಯೂಥಿಕ ಕಂದಲ ಅಂಕೋಲ ಕರವೀರ ಪುನ್ನಾಗ ಪಾಟಲ ಮೊದಲಾದ ಪುಷ್ಪವೃಕ್ಷಗಳಿಂದ ಅಲಂಕೃತವಾಗಿದ್ದಿತು.
ಕ್ರಮುಕೈರ್ನಾಳಿಕೇರೈಶ್ಚ ಪನಸಾಮ್ರೈಶ್ಚ ಶೋಭಿತಾಮ್ |
ಚೂತೈಃ ಪುಂಡ್ರಕಪತ್ರೈಶ್ಚ ಕದಳ್ಯಾಢಕಸಂವೃತಾಮ್ ॥88॥
ಅಡಿಕೆ ತೆಂಗು ಹಲಸು ಮಾವು ಪುಂಡ್ರಕಪತ್ರ ಕದಳಿ ಆಡಕ ಮೊದಲಾದ ವನಸ್ಪತಿಗಳಿಂದ ಶೋಭಿತವಾಗಿದ್ದಿತು.
ನೀಪೈಶ್ಚ ವೇತಸೈಃ ಕೀರ್ಣಾಂ ನಾಳಕುಂದಕುಶೈರ್ವೃತಾಮ್ |
ಏವಂ ಬಹುವಿಧೈರ್ವೃಕ್ಷೈರ್ದಿವ್ಯೈರನ್ಯೈಶ್ಚ ಶೋಭಿತಾಮ್ ॥89॥
ನೀಪ ವೇತಸ (ಬೆತ್ತ) ನಾಳ ಕುಂದ ಕುಶ ಮೊದಲಾದ ಬಹುವಿಧವಾದ ಮತ್ತು ಇನ್ನೂ ಅನೇಕ ಬಗೆಯಾದ ದಿವ್ಯ ವೃಕ್ಷಗಳಿಂದ ಶೋಭಿತವಾಗಿದ್ದಿತು.
ಹಂಸಕಾರಂಡವೈಃ ಕೀರ್ಣಾಂ ಕುರರೈಃ ಸಾರಸೈಃ ಶುಕೈಃ |
ಚಕ್ರವಾಕಗಣೈರ್ಜುಷ್ಟಾಂ ಪ್ಲವೈಶ್ಚ ಜಲವಾಸಿಭಿಃ ॥90॥
ಸಮುದ್ರಕಾಕೈಃ ಕ್ರೌಂಚೈಶ್ಚ ನಾದಿತಾಂ ಜಲಕುಕ್ಕುಟೈಃ |
ಏವಂ ಖಗೈಶ್ಚ ಬಹುಭಿಃ ಸಂಘುಷ್ಟಾಂ ಜಲಚಾರಿಭಿಃ ॥91॥
ಹಂಸ ಕಾರಂಡವ ಮೊದಲಾದ ಪಕ್ಷಿಗಳಿಂದ ತುಂಬಿ ಕುರರ ಸಾರಸ ಶುಕ ಚಕ್ರವಾಕ ಮೊದಲಾದ ಪಕ್ಷಿಗಳ ಮಧುರಸ್ವರದಿಂದ ತುಂಬಿದ್ದಿತು. ಜಲದಲ್ಲಿಯೇ ಇರುವ ದೋಣಿಗಳಿಂದಲೂ ತುಂಬಿದ್ದಿತು. ಸಮುದ್ರಕಾಕಗಳಿಂದಲೂ, ಕ್ರೌಂಚಪಕ್ಷಿಗಳಿಂದಲೂ, ಜಲಕುಕ್ಕುಟಪಕ್ಷಿಗಳಿಂದಲೂ ಉಂಟಾದ ನಾದದಿಂದ ತುಂಬಿದ್ದಿತು. ಹೀಗೆ ಬಹುವಿಧವಾದ ಜಲಪಕ್ಷಿಗಳ ಮಧುರನಾದದಿಂದ ಪೂರ್ಣವಾಗಿದ್ದಿತು.
ಆಶ್ರಮೈರ್ಬಹುಭಿಃ ಸಕ್ತಾಂ ಚೈತ್ಯವೃಕ್ಷೈಶ್ಚ ಶೋಭಿತಾಮ್ |
ಸೇವಿತಾಂ ಬ್ರಾಹ್ಮಣೈಃ ಶುಭ್ರೈರ್ವೇದವೇದಾಂಗಪಾರಗೈಃ ॥92॥
ನದಿಯತೀರದಲ್ಲಿ ಇದ್ದ ಅನೇಕ ಆಶ್ರಮಗಳಿಂದ ಸಂಲಗ್ನವಾಗಿ ಪೂಜಾವೃಕ್ಷಗಳಿಂದ ಶೋಭಿತವಾಗಿ ವೇದ ವೇದಾಂಗ ಪಾರಂಗತರಾದ ಶುದ್ಧರಾದ ಬ್ರಾಹ್ಮಣರಿಂದ ಸೇವಿತವಾಗಿದ್ದಿತು.
ಕ್ವಚಿತ್ ತೀರರುಹೈರ್ವೃಕ್ಷೈರ್ಮಾಲಾಭಿರಿವ ಶೋಭಿತಾಮ್ |
ಪುಷ್ಪಗುಲ್ಮಲತೋಪೇತಾಮಂಗನಾಮಿವ ಭೂಷಣೈಃ ॥93॥
ಕೆಲವುಕಡೆ ತೀರದಲ್ಲಿ ಬೆಳೆದ ವೃಕ್ಷಗಳು ಒಂದು ಮಾಲೆಯಂತೆ ನದಿಗೆ ಶೋಭೆಯನ್ನು ತರುತ್ತಿದ್ದವು. ಪುಷ್ಪಗಳು ಗುಲ್ಮಗಳು ಮತ್ತು ಲತೆಗಳಿಂದ ಸಂವೃತವಾಗಿ ಕಾವೇರಿಯು ಭೂಷಣಗಳಿಂದ ಅಲಂಕೃತವಾದ ವನಿತೆಯಂತೆ ತೋರುತ್ತಿದ್ದಿತು.
ಕ್ವಚಿತ್ ಸುಪುಷ್ಪಿತೈರ್ವೃಕ್ಷೈಃ ಕ್ವಚಿತ್ ಸೌಗಂಧಿಕೋತ್ಪಲೈಃ |
ನಾನಾಪುಷ್ಪರಜೋಧ್ವಸ್ತಾಂ ಪ್ರಮದಾಮಿವ ಭೂಷಿತಾಮ್ ॥94॥
ಕೆಲವೊಮ್ಮೆ ಪುಷ್ಪಭರಿತವೃಕ್ಷಗಳಿಂದಲೂ ಕೆಲವು ಕಡೆ ಸೌಗಂಧಿಕ ಮತ್ತು ಉತ್ಪಲಪುಷ್ಪಗಳಿಂದಲೂ ಕೆಲವು ಕಡೆ ಪುಷ್ಪದ ಕೇಸರಗಳಿಂದಲೂ ತುಂಬಿದ ಆ ನದಿಯು ಅಲಂಕೃತಳಾದ ವನಿತೆಯಂತೆ ತೋರುತ್ತಿದ್ದಿತು.
ರಮಣೀಯಾಂ ತಥಾ ಹೃದ್ಯಾಂ ವಿಹೃತಾಮಪ್ಸರೋಗಣೈಃ |
ಮೃಷ್ಟತೀರ್ಥಾಮಕಲುಷಾಂ ಪ್ರಾಣಿನಾಂ ಜೀವನೀಂ ಶುಭಾಮ್ ॥95॥
ಕಹ್ಲಾರಕುಮುದೈಃ ಫುಲ್ಲೈಃ ಕಮಲೈರುಪಶೋಭಿತಾಮ್ |
ಅಪಾರಾಂ ಸ್ವಾದುತೋಯಾಂ ವೈ ಪುಳಿನದ್ವೀಪಶೋಭಿತಾಮ್ ॥96॥
ಕಾವೇರೀಂ ತಾದೃಶೀಂ ದೃಷ್ಟ್ವಾ ಪ್ರೀತಿಮಾನ್ ಪಾಂಡವೋಽಬ್ರವೀತ್ |
ಅಸ್ಮದ್ರಾಷ್ಟ್ರೇ ಯಥಾ ಗಂಗಾ ಕಾವೇರೀ ಚ ತಥಾ ಇಹ ॥97॥
ಅಪ್ಸರೆಯರ ಗಣದಿಂದ ವಿಹರಿಸಲ್ಪಟ್ಟಿದಾಗಿ ಅದು ಕಣ್ಣಿಗೆ ರಮಣೀಯವಾಗಿಯೂ ಮನಸ್ಸಿಗೆ ಅಹ್ಲಾದಕರವಾಗಿಯೂ ಇದ್ದಿತು. ಹೊಳೆಯುವ ಪರಿಶುದ್ಧವಾದ ಅದರ ಜಲವು ಪ್ರಾಣಿಗಳಿಗೆ ಜೀವನಪ್ರದವಾಗಿದ್ದಿತು. ಅಲ್ಲದೆ ಅರಳಿದ ಕಲ್ಹಾರ ಕುಮುದ ಕಮಲ ಪುಷ್ಪಗಳಿಂದ ಶೋಭಿತವಾಗಿದ್ದಿತು. ಪಾರವೇ ಕಾಣದಿರುವ ಮಧುರವಾದ ಜಲವನ್ನುಳ್ಳ ಮಧ್ಯ ಮಧ್ಯೆ ಮರಳಿನ ಸಣ್ಣ ದ್ವೀಪಗಳಿಂದ ಶೋಭಿಸುವ ಅಂತಹ ಕಾವೇರಿಯನ್ನು ನೋಡಿ ಸಂತೋಷಗೊಂಡ ಪಾಂಡುಪುತ್ರನಾದ ಸಹದೇವನು ನಮ್ಮ ರಾಷ್ಟ್ರದಲ್ಲಿ ಹೇಗೆ ಗಂಗೆಯೋ ಇಲ್ಲಿ ಕಾವೇರಿಯು ಹಾಗೆ ಎಂದು ಹೇಳಿದನು.
ಸಹದೇವಸ್ತು ತಾಂ ತೀರ್ತ್ವಾ ನದೀಮನುಚರೈಃ ಸಹ |
ದಕ್ಷಿಣಂ ತೀರಮಾಸಾದ್ಯ ಗಮನಾಯೋಪಚಕ್ರಮೇ ॥98॥
ಸಹದೇವನು ತನ್ನ ಅನುಚರರ ಜೊತೆಯಲ್ಲಿ ಕಾವೇರಿಯನ್ನು ದಾಟಿ ದಕ್ಷಿಣತೀರವನ್ನು ತಲುಪಿ ಮುಂದೆ ಹೊರಡಲು ಉದ್ಯುಕ್ತನಾದನು.
ಆಗತಂ ಪಾಂಡವಂ ತತ್ರ ಶ್ರುತ್ವಾ ವಿಷಯವಾಸಿನಃ |
ದರ್ಶನಾರ್ಥಂ ಯಯುಸ್ತೇ ತು ಕೌತೂಹಲಸಮನ್ವಿತಾಃ ॥99॥
ದ್ರುಮಿಳಾಃ ಪುರುಷಾ ರಾಜನ್ ಸ್ತ್ರಿಯಶ್ಚ ಪ್ರಿಯದರ್ಶನಾಃ |
ಗತ್ವಾ ಪಾಂಡುಸುತಂ ತತ್ರ ದದೃಶುಸ್ತೇ ಮುದಾಽನ್ವಿತಾಃ ॥100॥
ಪಾಂಡವನು ಆಗಮಿಸಿದುದನ್ನು ಕೇಳಿ ಆ ನಗರವಾಸಿಗಳಾದ ದ್ರುಮಿಳರು ಕುತೂಹಲದಿಂದ ಕೂಡಿದವರಾಗಿ ಪುರುಷರು ಮತ್ತು ಸುಂದರಿಯರಾದ ಸ್ತ್ರೀಯರು ಅವನನ್ನು ನೋಡುವ ಸಲುವಾಗಿ ಬಂದು ಪಾಂಡುಸುತನನ್ನು ನೋಡಿ ಸಂತೋಷದಿಂದ

ಭರಿತರಾದರು.
ಸುಕುಮಾರಂ ವಿಶಾಲಾಕ್ಷಂ ವ್ರಜಂತಂ ತ್ರಿದಶೋಪಮಮ್ |
ದರ್ಶನೀಯತಮಂ ಲೋಕೇ ನೇತ್ರೈರನಿಮಿಷೈರಿವ ||101||
ಆಶ್ಚರ್ಯಭೂತಂ ದದೃಶುರ್ದ್ರಮಿಳಾಸ್ತೇ ಸಮಾಗತಾಃ |
ಮಹಾಸೇನೋಪಮಂ ದೃಷ್ಟ್ವಾ ಪೂಜಾಂ ಚಕ್ರುಶ್ಚ ತಸ್ಯ ವೈ ||102||
ಸುಕುಮಾರನೂ ವಿಶಾಲನೇತ್ರನೂ ದೇವತೆಗಳಂತೆ ಮನೋಹರನೂ ಆಶ್ಚರ್ಯಭೂತನೂ ಷಣ್ಮುಖನಿಗೆ ಸದೃಶನಾಗಿರುವವನೂ ಆದ ಸಂಚರಿಸುತ್ತಿರುವ ಅವನನ್ನು ರೆಪ್ಪೆಯನ್ನು ಮುಚ್ಚದ ಕಣ್ಣುಗಳಿಂದ ನೋಡಿ ಅವನಿಗೆ ಸತ್ಕಾರವನ್ನು ಮಾಡಿದರು.
ರತ್ನೈಶ್ಚ ವಿವಿಧೈರಿಷ್ಟೈರ್ಭೋಗೈರನ್ಯೈಶ್ಚ ಸಮ್ಮತೈಃ |
ಗೀತಮಂಗಲಯುಕ್ತಾಭಿಃ ಸ್ತುವಂತೋ ನಕುಲಾನುಜಮ್ ||103||
ವಿವಿಧವಾದ ರತ್ನಗಳಿಂದಲೂ ಅವನಿಗೆ ಇಷ್ಟವಾದ ಭೋಗಗಳಿಂದಲೂ ಮತ್ತು ಅವನಿಗೆ ಪ್ರೀಯವಾದ ವಸ್ತುಗಳಿಂದಲೂ ಮಂಗಳಗೀತಸ್ತೋತ್ರಗಳಿಂದಲೂ ನಕುಲನ ತಮ್ಮನಾದ ಸಹದೇವವನ್ನು ಸತ್ಕರಿಸಿದರು.
ಸಹದೇವಸ್ತು ತಾನ್ ದೃಷ್ಟ್ವಾ ದ್ರಮಿಳಾನಾಗತಾನ್ ಮುದಾ |
ವಿಸೃಜ್ಯ ತಾನ್ ಮಹಾರಾಜ ಪ್ರಸ್ಥಿತೋ ದಕ್ಷಿಣಾಂ ದಿಶಮ್ ||104||
ಮಹಾರಾಜನೇ! ಸಹದೇವನಾದರೂ ತನ್ನನ್ನು ನೋಡಲು ಬಂದ ಆ ದ್ರಮಿಳರನ್ನು ಸಂತೋಷಗೊಂಡು ಅವರನ್ನು ಕಳುಹಿಸಿಕೊಟ್ಟು ದಕ್ಷಿಣಾಭಿಮುಖವಾಗಿ ಹೊರಟನು.
ದೂತೇನ ತರಸಾ ಚೋಳಂ ವಿಜಿತ್ಯ ದ್ರಮಿಳೇಶ್ವರಮ್ |
ತತೋ ರತ್ನಾನ್ಯುಪಾದಾಯ ಪಾಂಡ್ಯಸ್ಯ ವಿಷಯಂ ಯಯೌ ||105||
ತನ್ನ ದೂತನಿಂದ ದ್ರಮಿಳೇಶ್ವರನಾದ ಚೋಳರಾಜನನ್ನು ಗೆದ್ದು ಅವನಿಂದ ಬಹಳ ರತ್ನವನ್ನು ಸ್ವೀಕರಿಸಿ ಪಾಂಡ್ಯದೇಶಕ್ಕೆ ಹೋದನು.
ದರ್ಶನೇ ಸಹದೇವಸ್ಯ ನಚ ತೃಪ್ತಾ ನರಾಃ ಪರೇ |
ಗಚ್ಛಂತಮನುಗಚ್ಛಂತಃ ಪ್ರೀತ್ಯಾ ಕೌತೂಹಲಾನ್ವಿತಾಃ ||106||
ಸಹದೇವನ ದರ್ಶನದಿಂದ ತೃಪ್ತಿಯನ್ನು ಹೊಂದದ ಉಳಿದ ಮನುಷ್ಯರು ಕೂತೂಹಲದಿಂದ ಸಮನ್ವಿತರಾಗಿ ಅವನು ಹೋದಂತೆ ಸಂತೋಷದಿಂದ ಅವನ್ನು ಹಿಂಬಾಲಿಸಿದರು.
ತತೋ ಮಾದ್ರೀಸುತೋ ರಾಜನ್ ಮೃಗವ್ರಾತಾನ್ ವ್ಯಲೋಕಯತ್ |
ಗಜಾನ್ ವನಚರಾನನ್ಯಾನ್ ವ್ಯಾಘ್ರಾನ್ ಕೃಷ್ಣಮೃಗಾನ್ ಬಹೂನ್ ||107||
ರಾಜನೇ! ಅನಂತರ ಮಾದ್ರೀಸುತನು ಜಿಂಕೆಗಳ ಹಿಂಡನ್ನೂ ಗಜಗಳನ್ನೂ ಬೇರೆ ವನಚರಪ್ರಾಣಿಗಳನ್ನು ವ್ಯಾಘ್ರಗಳನ್ನೂ ಮತ್ತು ಅನೇಕ ಕೃಷ್ಣಮೃಗಗಳನ್ನೂ ನೋಡಿದನು.
ಶುಕಾನ್ ಮಯೂರಾನ್ ದೃಷ್ಟ್ವಾ ತು ಗೃಧ್ರಾನಾರಣ್ಯಕುಕ್ಕುಟಾನ್ |
ತತೋ ದೇಶಂ ಸಮಾಸಾದ್ಯ ಶ್ವಶುರಸ್ಯ ಮಹೀಪತೇಃ ||108||
ಪ್ರೇಷಯಾಮಾಸ ಮಾದ್ರೇಯೋ ದೂತಾನ್ ಪಾಂಡ್ಯಾಯ ವೈ ತದಾ |
ಪ್ರತಿಜಗ್ರಾಹ ತಸ್ಯಾಜ್ಞಾಂ ಸಂಪ್ರೀತ್ಯಾ ಮಲಯಧ್ವಜಃ ||109||
ಹದ್ದುಗಳನ್ನೂ ಅರಣ್ಯ ಕುಕ್ಕುಟಗಳನ್ನೂ ಹಾಗೆಯೇ ಗೃಧ್ರಗಳನ್ನೂ ಮತ್ತು ನವಿಲುಗಳನ್ನೂ ನೋಡಿ ಅಲ್ಲಿಂದ ಅರ್ಜುನನ ಮಾವನಾದ ರಾಜನ ದೇಶವನ್ನು ತಲುಪಿ ಆ ಪಾಂಡ್ಯರಾಜನ ಬಳಿಗೆ ತನ್ನ ದೂತರನ್ನು ಕಳುಹಿಸಿದನು. ಮಾದ್ರೀಪುತ್ರನಾದ ಸಹದೇವನ ಆಜ್ಞೆಯನ್ನು ಮಲಯಧ್ವಜರಾಜನು ಸಂತೋಷದಿಂದ ಸ್ವೀಕರಿಸಿದನು.
ಭಾರ್ಯಾ ರೂಪವತೀ ಜಿಷ್ಣೋಃ ಪಾಂಡ್ಯಸ್ಯ ತನಯಾ ಶುಭಾ |
ಚಿತ್ರಾಂಗದೇತಿ ವಿಖ್ಯಾತಾ ದ್ರಮಿಳಾ ಯೋಷಿತಾಂ ವರಾ ||110||
ಆಗತಂ ಸಹದೇವಂ ತು ಸಾ ಶ್ರುತ್ವಾಽಂತಃಪುರೇ ಪಿತುಃ |
ಪ್ರೇಷಯಾಮಾಸ ಸಂಪ್ರೀತ್ಯಾ ಪೂಜಾಂ ರತ್ನಾನಿ ವೈ ಬಹು ||111||
ಅರ್ಜುನನ ಪತ್ನಿಯಾದ ಪಾಂಡ್ಯರಾಜನ ತನಯಳಾದ ಸುಂದರಿಯಾದ ವನಿತೆಯರಲ್ಲಿ ಶ್ರೇಷ್ಠಳಾದ ದ್ರಮಿಳದೇಶದಲ್ಲಿ ಪ್ರಖ್ಯಾತಳಾದ ಅರ್ಜುನ ಭಾರ್ಯೆಯಾದ ಚಿತ್ರಾಂಗದೆಯು ಸಹದೇವನು ಬಂದಿದ್ದಾನೆ ಎಂಬ ವಾರ್ತೆಯನ್ನು ತಂದೆಯ ಅಂತಃಪುರದಲ್ಲಿ ಕೇಳಿ ಸಂತೋಷದಿಂದ ಅವನಿಗೆ ಪೂಜಾಸಾಮಗ್ರಿಗಳನ್ನು ಮತ್ತು ಅನೇಕ ರತ್ನಗಳನ್ನು ಕಳುಹಿಸಿಕೊಟ್ಟಳು.
ಪಾಂಡ್ಯೋಽಪಿ ಬಹುರತ್ನಾನಿ ದೂತೈಃ ಸಹ ಮುಮೋಚ ಹ |
ಮಣಿಮುಕ್ತಾಪ್ರವಾಳಾಂಶ್ಚ ಶಂಖಶುಕ್ತಿಯುತಾನ್ ಬಹೂನ್ ||112||
ಪಾಂಡ್ಯರಾಜನೂ ಸಹ ತನ್ನ ದೂತರ ಮೂಲಕ ಅನೇಕ ರತ್ನಗಳನ್ನೂ ಮಣಿ ಮುತ್ತು ಮತ್ತು ಹವಳಗಳನ್ನೂ ಅನೇಕ ಶಂಖಶುಕ್ತಿಗಳನ್ನೂ ಕಳುಹಿಸಿಕೊಟ್ಟನು.
ತಾಂ ದೃಷ್ಟ್ವಾ ಪ್ರೀತಿಮಾನ್ ಪೂಜಾಂ ಪಾಂಡವೋಽಥ ಮುದಾ ನೃಪ |
ಭ್ರಾತುಃ ಪುತ್ರೇ ಬಹೂನ್ ರತ್ನಾನದದಾದ್ ಬಭ್ರುವಾಹನೇ ||113||
ರಾಜನೇ! ಆ ಸತ್ಕಾರವನ್ನು ಸ್ವೀಕರಿಸಿ ಸಹದೇವನು ಸಂತೋಷದಿಂದ ಕೂಡಿದವನಾಗಿ ತನ್ನ ಅಣ್ಣನ ಮಗನಾದ ಬಭ್ರುವಾಹನನಿಗೆ ಅನೇಕ ರತ್ನಗಳನ್ನು ಕೊಟ್ಟನು.
ಪಾಂಡ್ಯಂ ದ್ರಮಿಳರಾಜಾನಂ ಶ್ವಶುರಂ ಮಲಯಧ್ವಜಮ್ |

ಸ ದೂತೈಸ್ತಂ ವಶೇ ಕೃತ್ವಾ ಮಣಲೂರೇಶ್ವರಂ ತದಾ ॥114॥
ದ್ರಮಿಳದೇಶದ ಪಾಂಡ್ಯವಂಶದವನಾದ ರಾಜನೂ ಅರ್ಜುನನ ಮಾವನೂ ಆದ ಮಲಯಧ್ವಜನನ್ನು ಹೀಗೆ ತನ್ನ ದೂತರ ಮೂಲಕವೇ ವಶಪಡಿಸಿಕೊಂಡು ಮಣಲೂರಪುರಕ್ಕೆ ಹೊದನು.
ತತೋ ರತ್ನಾನ್ಯುಪಾದಾಯ ದ್ರಮಿಳೈರಾವೃತೋ ಯಯೌ |
ಅಗಸ್ತ್ಯಸ್ಯಾಲಯಂ ದಿವ್ಯಂ ದೇವಲೋಕಸಮಂ ಗಿರಿಮ್ ॥115॥
ಅಲ್ಲಿಯೂ ಅನೇಕ ರತ್ನಗಳನ್ನು ಪಡೆದು ದ್ರಮಿಳರಿಂದ ಪರಿವೃತನಾಗಿ ದೇವಲೋಕಸಮವಾದ ದಿವ್ಯವಾದ ಅಗಸ್ತ್ಯರಿಗೆ ಆಶ್ರಯವಾದ ಮಲಯಪರ್ವತವನ್ನು ತಲುಪಿದನು.
ಸ ತಂ ಪ್ರದಕ್ಷಿಣಂ ಕೃತ್ವಾ ಮಲಯಂ ಭರತರ್ಷಭ |
ಲಂಘಯಿತ್ವಾ ತು ಮಾದ್ರೇಯಸ್ತಾಮ್ರಪರ್ಣೀಂ ನದೀಂ ಶುಭಾಮ್ ॥
ಪ್ರಸನ್ನಸಲಿಲಾಂ ದಿವ್ಯಾಂ ಸುಶೀತಾಂ ಚಂದನೋದ್ವಹಾಮ್ |
ಸಮುದ್ರತೀರಮಾಸಾದ್ಯ ನ್ಯವಿಶತ್ ಪಾಂಡುನಂದನಃ ॥117॥
ಭರತರ್ಷಭನೇ! ಮಾದ್ರಿಯ ಸುತನಾದ ಸಹದೇವನು ಮಲಯಪರ್ವತಕ್ಕೆ ಪ್ರದಕ್ಷಣೆಯನ್ನುಮಾಡಿ ಅದನ್ನು ದಾಟಿ, ಪವಿತ್ರವಾದ ಶುದ್ಧವಾದ ನೀರನ್ನು ಹೊಂದಿದ್ದ ದಿವ್ಯಶೀತಲವಾಗಿದ್ದ ಶ್ರೀಗಂಧದ ಸುಗಂಧವನ್ನು ಹೊಂದಿದ್ದ ತಾಮ್ರಪರ್ಣಿ ನದಿಯನ್ನು ನೋಡಿ ಅಲ್ಲಿಂದ ಸಮುದ್ರತೀರಕ್ಕೆ ಬಂದು ಪಾಂಡುನಂದನನಾದ ಅವನು ಅಲ್ಲಿ ತಂಗಿದನು.
ಸಹದೇವಸ್ತತೋ ರಾಜನ್ ಮಂತ್ರಿಭಿಃ ಸಹ ಭಾರತ |
ಸಂಪ್ರಧಾರ್ಯ ಮಹಾಬಾಹುಃ ಸಚಿವೈರ್ಬುದ್ಧಿಮತ್ತರೈಃ ॥118॥
ಅನುನಾಯ್ಯ ಸ ತಾನ್ ರಾಜನ್ ಸಹದೇವಸ್ತ್ವರಾನ್ವಿತಃ |
ಚಿಂತಯಾಮಾಸ ರಾಜೇಂದ್ರ ಭ್ರಾತುಃ ಪುತ್ರಂ ಘಟೋತ್ಕಚಮ್ ॥119॥
ಭಾರತವಂಶದ ರಾಜನೇ! ಅನಂತ ಮಹಾಬಾಹುವಾದ ಸಹದೇವನು ಮೇಧಾವಿಗಳಾದ ಸಚಿವರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿದನು. ಅವರನ್ನು ಒಪ್ಪಿಸಿ ಕಾರ್ಯನಿಶ್ಚಯವನ್ನುಮಾಡಿ ತ್ವರೆಯಿಂದ ಕೂಡಿದವನಾಗಿ ತನ್ನ ಅಣ್ಣನ ಮಗನಾದ ಘಟೋತ್ಕಚನನ್ನು ಚಿಂತಿಸಿದನು.
ತತಶ್ಚಿಂತಿತಮಾತ್ರೇ ತು ರಾಕ್ಷಸಃ ಪ್ರತ್ಯದೃಶ್ಯತ |
ಅತಿದೀರ್ಘೋ ಮಹಾಕಾಯಃ ಸರ್ವಾಭರಣಭೂಷಿತಃ ॥120॥
ನೀಲಜೀಮೂತಸಂಕಾಶಃ ತಪ್ತಕಾಂಚನಕುಂಡಲಃ |
ವಿಚಿತ್ರಹಾರಕೇಯೂರಃ ಕಿಂಕಿಣೀಮಣಿಭೂಷಿತಃ ॥121॥
ಹೇಮಮಾಲೀ ಮಹಾದಂಷ್ಟ್ರಃ ಕಿರೀಟೀ ಕುಕ್ಷಿಬಂಧನಃ |
ತಾಮ್ರಕೇಶೋ ಹರಿಶ್ಮಶ್ರುರ್ಭೀಮಾಂಗಃ ಕನಕಾಂಗದಃ ॥122॥
ರಕ್ತಚಂದನದಿಗ್ಧಾಂಗಃ ಸೂಕ್ಷ್ಮಾಂಬರಧರೋ ಬಲೀ |
ಜವೇನ ಸ ಯಯೌ ತತ್ರ ಚಾಲಯನ್ನಿವ ಮೇದಿನೀಮ್ ॥123॥
ಅವನು ಚಿಂತಿಸಿದ ತಕ್ಷಣವೇ ಅತಿದೀರ್ಘನೂ ಮಹಾಕಾಯನೂ ಸರ್ವಾಭರಣಗಳಿಂದಲೂ ಭೂಷಿತನೂ ಆದ ಘಟೋತ್ಕಚರಾಕ್ಷಸನು ಪ್ರತ್ಯಕ್ಷನಾದನು. ಅವನು ನೀಲಮೇಘವರ್ಣವುಳ್ಳವನೂ ತಪ್ತಸುವರ್ಣಕಾಂತಿಯುಳ್ಳ ಕುಂಡಲವುಳ್ಳವನೂ ವಿಚಿತ್ರಹಾರ ಕೇಯೂರಗಳಿಂದಲೂ ಸಣ್ಣ ಘಂಟಾಮಣಿಗಳಿಂದಲೂ ಭೂಷಿತನಾದವನೂ ಹೇಮಮಾಲೆಯನ್ನು ಧರಿಸಿದನೂ ದೊಡ್ಡ ಕೋರೆದಾಡೆಗಳನ್ನು ಹೊಂದಿದವನೂ ಕಿರೀಟವನ್ನು ಮತ್ತು ಮೇಖಲೆಯನ್ನು ಧರಿಸಿದವನೂ ತಾಮ್ರಕೇಶನೂ ಹರಿಶ್ಮಶ್ರುವೂ ಭಯಂಕರವಾದ ಅಂಗವುಳ್ಳವನೂ ಸುವರ್ಣದ ಅಂಗದವನ್ನು ಧರಿಸಿದವನೂ ರಕ್ತಚಂದನನಿಂದ ಲೇಪಿತನಾದವನೂ ಸೂಕ್ಷ್ಮಾಂಬರಧಾರಿಯೂ ಬಲೋಪೇತನಾಗಿ ತನ್ನ ವೇಗದಿಂದ ಭೂಮಿಯನ್ನು ನಡುಗಿಸುವಂತೆ ಆ ಸ್ಥಳಕ್ಕೆ ಬಂದನು.
ತತೋ ದೃಷ್ಟ್ವಾ ಜನಾ ರಾಜನ್ ಆಯಾಂತಂ ಪರ್ವತೋಪಮಮ್ |
ಭಯಾದ್ವಿ ದುದ್ರುವುಃ ಸರ್ವೇ ಸಿಂಹಾತ್ ಕ್ಷುದ್ರಮೃಗಾ ಯಥಾ |
ಆಸಸಾದ ಚ ಮಾದ್ರೇಯಂ ಪುಲಸ್ತ್ಯಂ ರಾವಣೋ ಯಥಾ ॥124॥
ರಾಜನೇ! ಆಗ ಪರ್ವತಸದೃಶನಾಗಿ ಬರುತ್ತಿರುವ ಅವನನ್ನು ನೋಡಿ ಎಲ್ಲ ಜನರೂ ಸಿಂಹಕ್ಕೆ ಹೆದರಿದ ಕ್ಷುದ್ರಮೃಗಗಳಂತೆ ಓಡಿಹೋದರು. ಅವನು ಪುಲಸ್ತ್ಯರ ಬಳಿಗೆ ರಾವಣನು ಬಂದಂತೆ ಸಹದೇವನನ್ನು ಸಮೀಪಿಸಿದನು.
ಅಭಿವಾದ್ಯ ತತೋ ರಾಜನ್ ಸಹದೇವಂ ಘಟೋತ್ಕಚಃ |
ಪ್ರಹ್ವಃ ಕೃತಾಂಜಲಿಸ್ತಸ್ಥೌ ಕಿಂ ಕಾರ್ಯಮಿತಿ ಚಾಬ್ರವೀತ್ ॥125॥
ರಾಜನೇ! ಅನಂತರ ಘಟೋತ್ಕಚನು ಸಹದೇವನಿಗೆ ನಮಸ್ಕರಿಸಿ ವಿನಯದಿಂದ ಬಾಗಿ ಕೈಗಳನ್ನು ಮುಗಿದುನಿಂತು ಏನು ಕಾರ್ಯ ಎಂದು ಕೇಳಿದನು.
ತಂ ಮೇರುಶಿಖರಾಕಾರಮಾಗತಂ ಪಾಂಡುನಂದನಃ |
ಸಂಪರಿಷ್ವಜ್ಯ ಬಾಹುಭ್ಯಾಂ ಮೂರ್ಧ್ನ್ಯುಪಾಘ್ರಾಯ ಚಾಸಕೃತ್ |
ಪೂಜಯಿತ್ವಾ ಸಹಾಮಾತ್ಯಃ ಪ್ರೀತೋ ವಾಕ್ಯಮುವಾಚ ಹ ॥126॥
ಮೇರುಶಿಖರದಂತೆ ಉನ್ನತವಾಗಿದ್ದ ಆಗಮಿಸಿದ ಆ ಘಟೋತ್ಕಚನನ್ನು ಪಾಂಡುನಂದನನಾದ ಸಹದೇವನು ಬಾಹುಗಳಿಂದ ಆಲಿಂಗಿಸಿ ಶಿರಸ್ಸಿನಲ್ಲಿ ಅನೇಕ ಬಾರಿ ಆಘ್ರಾಣಿಸಿ ಅಮಾತ್ಯರ ಜೊತೆಯಲ್ಲಿ ಅವನನ್ನು ಸತ್ಕರಿಸಿ ಸಂತೋಷದಿಂದ ಅವನನ್ನು ಕುರಿತು ಹೇಳಿದನು.

ಗಚ್ಛ ಲಂಕಾಂ ಪುರೀಂ ವತ್ಸ ಕಾರಯನ್ ಮಮ ಶಾಸನಾತ್ |
ತತ್ರ ದೃಷ್ಟ್ವಾ ಮಹಾತ್ಮಾನಂ ರಾಕ್ಷಸೇಂದ್ರಂ ವಿಭೀಷಣಮ್ ॥127॥
ರತ್ನಾನಿ ರಾಜಸೂಯಾರ್ಥಂ ವಿವಿಧಾನಿ ಬಹೂನಿ ಚ |
ಉಪಾದಾಯ ಚ ಸರ್ವಾಣಿ ಪ್ರತ್ಯಾಗಚ್ಛ ಮಹಾಬಲ ॥128॥
ಮಹಾಬಲನಾದ ವತ್ಸನೇ! ನನ್ನ ಅಪ್ಪಣೆಯಂತೆ ಕಪ್ಪದ ಸಲುವಾಗಿ ಲಂಕಾಪಟ್ಟಣಕ್ಕೆ ಹೋಗಿ ಮಹಾತ್ಮನಾದ ರಾಕ್ಷಸೇಂದ್ರನಾದ ವಿಭೀಷಣನನ್ನು ನೋಡಿ ರಾಜಸೂಯಯಾಗಕ್ಕಾಗಿ ಬಹುವಿಧವಾದ ಅನೇಕ ರತ್ನಗಳನ್ನೆಲ್ಲಾ ತೆಗೆದುಕೊಂಡು ಬೇಗ ಹಿಂದಿರುಗು.
ಪಾಂಡವೇನೈವಮುಕ್ತಸ್ತು ಮುದಾ ಯುಕ್ತೋ ಘಟೋತ್ಕಚಃ |
ತಥೇತ್ಯುಕತ್ವ ಮಹಾರಾಜ ಪ್ರತಸ್ಥೇ ದಕ್ಷಿಣಾಂ ದಿಶಮ್ ॥129॥
ಮಹಾರಾಜನೇ! ಸಹದೇವನಿಂದ ಹೀಗೆ ಹೇಳಲ್ಪಟ್ಟ ಘಟೋತ್ಕಚನು ಹಾಗೆಯೇ ಆಗಲಿ ಎಂದು ಹೇಳಿ ದಕ್ಷಿಣದಿಕ್ಕನ್ನು ಕುರಿತು ಹೋದನು.
ಯಯೌ ಪ್ರದಕ್ಷಿಣಂ ಕೃತ್ವಾ ಸಹದೇವಂ ಘಟೋತ್ಕಚಃ |
ಲಂಕಾಮಭಿಮುಖೋ ರಾಜನ್ ಸಮುದ್ರಮವಲೋಕಯತ್ ॥130॥
ಕೂರ್ಮಗ್ರಾಹಝಷಾಕೀರ್ಣಂ ನಕ್ರೈರ್ಮೀನೈಸ್ತಥಾಽಕುಲಮ್ |
ಶುಕ್ತಿವ್ರಾತೈಃ ಸಮಾಕೀರ್ಣಂ ಶಂಖಾನಾಂ ನಿಚಯಾಕುಲಮ್ ॥131॥
ರಾಜನೇ! ಘಟೋತ್ಕಚನು ಸಹದೇವನಿಗೆ ಪ್ರದಕ್ಷಣೆಯನ್ನು ಮಾಡಿ ಲಂಕೆಗೆ ಅಭಿಮುಖವಾಗಿ ಹೊರಟು ಆನೆ ತಿಮಿಂಗಲ ಮತ್ತು ಮೀನುಗಳಿಂದ ನಿಬಿಡವಾಗಿ ತುಂಬಿದ್ದ, ಶುಕ್ತಿಸಮೂಹಗಳಿಂದಲೂ ಶಂಖಗಳ ಸಮೂಹದಿಂದಲೂ ತುಂಬಿಕೊಂಡಿದ್ದ ಆ ಸಮುದ್ರವನ್ನು ಅವಲೋಕಿಸಿದನು.
ಸ ದೃಷ್ಟ್ವಾ ರಾಮಸೇತುಂ ಚ ಚಿಂತಯನ್ ರಾಮವಿಕ್ರಮಮ್ |
ಪ್ರಣಮ್ಯ ತಮತಿಕ್ರಮ್ಯ ಯಾಮ್ಯಾಂ ವೇಲಾಮಲೋಕಯತ್ |
ದದರ್ಶ ಲಂಕಾಂ ರಾಜೇಂದ್ರ ನಾಕಪೃಷ್ಠೋಪಮಾಂ ಶುಭಾಮ್ ॥132॥
ರಾಜೇಂದ್ರನೇ! ರಾಮಸೇತುವನ್ನು ನೋಡಿ ರಾಮನ ಪರಾಕ್ರಮವನ್ನು ಸ್ಮರಿಸುತ್ತಾ ಆ ಸೇತುವಿಗೆ ನಮಸ್ಕರಿಸಿ ಅದನ್ನು ದಾಟಿ ದಕ್ಷಿಣದಿಕ್ಕಿನ ಕಡೆಯಲ್ಲಿ ನೋಡಿ ಸ್ವರ್ಗದಂತೆ ಶುಭವಾಗಿದ್ದ ಲಂಕಾಪಟ್ಟಣವನ್ನು ನೋಡಿದನು.
ಪ್ರಾಕಾರೇಣಾವೃತಾಂ ರಮ್ಯಾಂ ಶುಭದ್ವಾರೈಶ್ಚ ಶೋಭಿತಾಮ್ |
ಪ್ರಾಸಾದೈರ್ಬಹುಸಾಹಸ್ರೈಃ ಶ್ವೇತರಕ್ತೈಶ್ಚ ಸಂಕುಲಾಮ್ ॥133॥
ತಾಪನೀಯಗವಾಕ್ಷೈಶ್ಚ ಮುಕ್ತಾಜಾಲಾಂತರೇಣ ಚ |
ಹೈಮರಾಜತಜಾಲೇನ ದಾಂತಜಾಲೈಶ್ಚ ಶೋಭಿತಾಮ್ ॥134॥
ಹರ್ಮ್ಯಗೋಪುರಸಂಬಾಧಾಂ ರುಗ್ಮತೋರಣಸಂಕುಲಾಮ್ |
ದಿವ್ಯದುಂದುಭಿನಿರ್ಹ್ರಾದಾಮುದ್ಯಾನವನಶೋಭಿತಾಮ್ ॥135॥
ಸರ್ವಕಾಲಫಲೈರ್ವೃಕ್ಷೈಃ ಪುಷ್ಪಿತೈರುಪಶೋಭಿತಾಮ್ |
ಪುಷ್ಪಗಂಧೈಶ್ಚ ಸಂಕೀರ್ಣಾಂ ರಮಣೀಯಮಹಾಪಥಾಮ್ ॥136॥
ನಾನಾರತ್ನೈಶ್ಚ ಸಂಪೂರ್ಣಾಮಿಂದ್ರಸ್ಯೇವಾಮರಾವತೀಮ್ |
ವಿವೇಶ ಸ ಪುರೀಂ ಲಂಕಾಂ ರಾಕ್ಷಸೈಶ್ಚ ನಿಷೇವಿತಾಮ್ ॥137॥
ಕೋಟೆಯ ಗೋಡೆಗಳಿಂದ ಆವೃತವಾಗಿದ್ದಂತಹ ಶುಭದ್ವಾರಗಳಿಂದ ಕೂಡಿದ್ದಂತಹ ಮನೋಹರವಾಗಿದ್ದಂತಹ ಬಿಳಿಯ ಮತ್ತು ಕೆಂಪು ಬಣ್ಣಗಳಿಂದ ಕೂಡಿದ್ದ, ಸಹಸ್ರಾರು ಪ್ರಾಸಾದಗಳಿಂದ ನಿಬಿಡವಾಗಿದ್ದಂತಹ, ಸೂರ್ಯನ ಪ್ರಕಾಶವನ್ನು ಒಳಗೆ ಬಿಡುವ ಗವಾಕ್ಷಿಗಳಿಂದಲೂ ಮುತ್ತಿನ ಗೊಂಚಲುಗಳಿಂದಲೂ ಚಿನ್ನ ಬೆಳ್ಳಿಸರಪಳಿಗಳಿಂದಲೂ ದಂತದ ಸರಪಳಿಗಳಿಂದಲೂ ಶೋಭಿತವಾದ ಮನೆಗಳನ್ನುಳ್ಳ, ಪ್ರಾಸಾದಗಳು ಮತ್ತು ಗೋಪುರಗಳಿಂದ ನಿಬಿಡವಾಂದತಹ ಚಿನ್ನದ ತೋರಣಗಳಿಂದ ನಿಬಿಡವಾದಂತಹ ದಿವ್ಯದುಂದುಭಿ ನಾದದಿಂದ ಕೂಡಿದಂತಹ ಎಲ್ಲ ಕಾಲಗಳಲ್ಲಿಯೂ ಫಲಪುಷ್ಪಗಳನ್ನು ಕೊಡುವ ವೃಕ್ಷಗಳನ್ನುಳ್ಳ ಉದ್ಯಾನವನಗಳಿಂದ ಶೋಭಿತವಾದಂತಹ ದಿವ್ಯಸೌರಭದಿಂದ ಕೂಡಿದಂತಹ ಸುಂದರವಾದ ಮಹಾಮಾರ್ಗಗಳನ್ನು ಹೊಂದಿದ್ದಂತಹ ಅನೇಕ ರತ್ನಗಳಿಂದ ಪೂರ್ಣವಾದಂತಹ ಇಂದ್ರನ ಅಮರಾವತಿಯಂತಿದ್ದಂತಹ ರಾಕ್ಷಸರಿಂದ ಸೇವಿತವಾದ ಆ ಲಂಕಾಪಟ್ಟಣವನ್ನು ಪ್ರವೇಶಿಸಿದನು.
ದದರ್ಶ ರಾಕ್ಷಸವ್ರಾತಾನ್ ಶೂಲಪ್ರಾಸಧರಾನ್ ಬಹೂನ್ |
ನಾನಾವೇಷಧರಾನ್ ರೂಕ್ಷಾನ್ ನಾರೀಶ್ಚ ಪ್ರಿಯದರ್ಶನಾಃ ॥138॥
ದಿವ್ಯಮಾಲ್ಯಾಂಬರಧರಾ ದಿವ್ಯಾಭರಣಭೂಷಿತಾಃ |
ಮದರಕ್ತಾಂತನಯನಾಃ ಪೀನಶ್ರೋಣಿಪಯೋಧರಾಃ ॥139॥
ಅವನು ಶೂಲಪ್ರಾಸಗಳನ್ನು ಧರಿಸಿದ ನಾನಾವಿಧವಾದ ವೇಶಗಳನ್ನು ಧರಿಸಿದ ಕ್ರೂರರಾದ ರಾಕ್ಷಸ ಸಮೂಹಗಳನ್ನು ದಿವ್ಯಮಾಲ್ಯಾಂಭರಗಳನ್ನೂ ಧರಿಸಿದ ದಿವ್ಯಭರಣಭೂಷಿತರಾದ ಮಧದಿಂದ ಕೆಂಪಾದ ಕಣ್ಣಂಚುಳ್ಳವರಾದ ಪೀನ ನಿತಂಬ ಮತ್ತು ಪಯೋಧರಗಳನ್ನು ಹೊಂದಿದ ಸುಂದರಿಯರಾದ ಸ್ತ್ರೀಯರನ್ನೂ ನೋಡಿದನು.
ಭೈಮಸೇನಿಂ ತತೋ ದೃಷ್ಟ್ವಾ ಹೃಷ್ಟಾಸ್ತೇ ವಿಸ್ಮಯಂ ಗತಾಃ |
ಆಸಸಾದ ಗೃಹಂ ರಾಜ್ಞಾ ಇಂದ್ರಸ್ಯ ಸದನೋಪಮಮ್ |
ಸ ದ್ವಾರಪಾಲಮಾಸಾದ್ಯ ವಾಕ್ಯಮೇತದುವಾಚ ಹ ॥140॥

ಭೀಮಸೇನನ ಪುತ್ರನಾದ ಘಟೋತ್ಕಚನನ್ನು ನೋಡಿದ ಅವರೆಲ್ಲರೂ ಸಂತೋಷದಿಂದಲೂ ವಿಸ್ಮಯದಿಂದಲೂ ಕೂಡಿದವರಾದರು. ಅವನು ಇಂದ್ರನ ಅರಮನೆಯಂತಿದ್ದ ರಾಜನ ಅರಮನೆಯನ್ನು ತಲುಪಿ ದ್ವಾರಪಾಲಕನನ್ನು ಸಮೀಪಿಸಿ ಈ ಮಾತನ್ನು ಆಡಿದನು.

ಕುರೂಣಾಮೃಷಭೋ ರಾಜಾ ಪಾಂಡುರ್ನಾಮ ಮಹಾಬಲಃ |
ಕನೀಯಾಂಸ್ತಸ್ಯ ದಾಯಾದಃ ಸಹದೇವ ಇತಿ ಶ್ರುತಃ ||141||
ತೇನಾಹಂ ಪ್ರೇಷಿತೋ ದೂತಃ ಕರಾರ್ಥಂ ಕೌರವಸ್ಯ ಚ |
ದ್ರಷ್ಟುಮಿಚ್ಛಾಮಿ ರಾಜೇಂದ್ರಂ ತ್ವಂ ಕ್ಷಿಪ್ರಂ ಮಾಂ ನಿವೇದಯ ||142||

ಕುರುಶ್ರೇಷ್ಠನಾದ ಪಾಂಡು ಎಂಬ ಮಹಾಬಲಿಷ್ಠನಾದ ರಾಜನಿದ್ದನು. ಅವನ ಕಿರಿಯಮಗನು ಸಹದೇವನೆಂದು ಪ್ರಸಿದ್ಧನಾಗಿದ್ದಾನೆ. ಧರ್ಮರಾಜನಸಲುವಾಗಿ ಕಪ್ಪವನ್ನು ತರಲು ಅವನು ನನ್ನನ್ನು ದೂತನನ್ನಾಗಿ ಕಳುಹಿಸಿದ್ದಾನೆ. ನಾನು ರಾಜೇಂದ್ರನನ್ನು ನೋಡಲು ಬಯಸುತ್ತೇನೆ. ನೀನು ಶೀಘ್ರವಾಗಿ ನನ್ನನ್ನು ರಾಜನಿಗೆ ನಿವೇದಿಸು.

ತಸ್ಯ ತದ್ವಚನಂ ಶ್ರುತ್ವಾ ದ್ವಾರಪಾಲೋ ಮಹೀಪತೇಃ |
ತಥೇತ್ಯುಕತ್ವ ವಿವೇಶಾಥ ಭವನಂ ಸ ನಿವೇದಕಃ |
ಸಾಂಜಲಿಃ ಸ ಸಮಾಚಷ್ಟ ಸರ್ವಾಂ ದೂತಗಿರಂ ತದಾ ||143||

ಅವನ ಮಾತನ್ನು ಕೇಳಿ ರಾಜನ ದ್ವಾರಪಾಲಕನು ಹಾಗೆಯೇ ಆಗಲಿ ಎಂದು ಹೇಳಿ ರಾಜಭವನದ ಒಳಗೆ ಪ್ರವೇಶಿಸಿ ನಿವೇದನಕಾರ್ಯವನ್ನು ಮಾಡುವ ಅವನು ಕೈಗಳನ್ನು ಮಗಿದು ಆ ದೂತವಾಕ್ಯಗಳನ್ನೆಲ್ಲಾ ಹೇಳಿದನು.

ದ್ವಾರಪಾಲವಚಃ ಶ್ರುತ್ವಾ ರಾಕ್ಷಸೇಂದ್ರೋ ವಿಭೀಷಣಃ |
ಉವಾಚ ವಾಕ್ಯಂ ಧರ್ಮಾತ್ಮಾ ಸಮೀಪಂ ಮೇ ಪ್ರವೇಶ್ಯತಾಮ್ ||

ದ್ವಾರಪಾಲಕನ ಮಾತನ್ನು ಕೇಳಿದ ಧರ್ಮಾತ್ಮನಾದ ರಾಕ್ಷಸೇಂದ್ರನಾದ ವಿಭೀಷಣನು ನನ್ನ ಬಳಿಗೆ ಅವನನ್ನು ಪ್ರವೇಶಿಸು ಎಂಬ ಮಾತನ್ನು ಹೇಳಿದನು.

ಏವಮುಕ್ತಸ್ತು ರಾಜ್ಞಾ ಸ ಧರ್ಮಜ್ಞೇನ ಮಹಾತ್ಮನಾ |
ಅಥ ನಿಷ್ಕ್ರಮ್ಯ ಸಂಭ್ರಾಂತೋ ದ್ವಾಃಸ್ಥೋ ಹೈಡಿಂಬಮಬ್ರವೀತ್ ||145||

ಧರ್ಮಜ್ಞನೂ ಮಹಾತ್ಮನೂ ಆದ ವಿಭೀಷಣನಿಂದ ಹೀಗೆ ಹೇಳಲ್ಪಟ್ಟ ದ್ವಾರಪಾಲಕನು ಹೊರಗೆ ಬಂದು ಸಂಭ್ರಾಂತನಾಗಿ ಘಟೋತ್ಕಚನನ್ನು ಕುರಿತು ಹೇಳಿದನು.

ಏಹಿ ದೂತ ನೃಪಂ ದ್ರಷ್ಟುಂ ಕ್ಷಿಪ್ರಂ ಪ್ರವಿಶ ಚ ಸ್ವಯಮ್ |
ದ್ವಾರಪಾಲವಚಃ ಶ್ರುತ್ವಾ ಪ್ರವಿವೇಶ ಘಟೋತ್ಕಚಃ |
ಸ ಪ್ರವಿಶ್ಯ ದದರ್ಶಾಥ ರಾಕ್ಷಸೇಂದ್ರಸ್ಯ ಮಂದಿರಮ್ ||146||

ದೂತನೇ ರಾಜನನ್ನು ನೋಡಲು ಬೇಗ ಬಾ. ನೀನೇ ಬೇಗ ಪ್ರವೇಶಮಾಡು. ದ್ವಾರಪಾಲಕನ ಈ ಮಾತನ್ನು ಕೇಳಿದ ಘಟೋತ್ಕಚನು ರಾಕ್ಷಸೇಂದ್ರನ ಮಂದಿರವನ್ನು ಪ್ರವೇಶಿಸಿ ಅದರ ವೈಭವವನ್ನು ನೋಡಿದನು.

ತತಃ ಕೈಲಾಸಸಂಕಾಶಂ ತಪ್ತಕಾಂಚನತೋರಣಮ್ |
ಪ್ರಾಕಾರೇಣ ಪರಿಕ್ಷಿಪ್ತಂ ಗೋಪುರೈಶ್ಚಾಪಿ ಶೋಭಿತಮ್ |
ಹರ್ಮ್ಯಪ್ರಾಸಾದಸಂಬಾಧಂ ನಾನಾರತ್ನಸಮನ್ವಿತಮ್ ||147||
ಕಾಂಚನೈಸ್ತಾಪನೀಯೈಶ್ಚ ಸ್ಫಾಟಿಕೈ ರಾಜತೈರಪಿ |
ವಜ್ರವೈಡೂರ್ಯಗರ್ಭೈಶ್ಚ ಸ್ತಂಭೈರ್ದೃಷ್ಟಿಮನೋಹರೈಃ ||148||
ನಾನಾಧ್ವಜಪತಾಕಾಭಿಃ ಸುವರ್ಣಾಭಿಶ್ಚ ಚಿತ್ರಿತಮ್ |
ಚಿತ್ರಮಾಲ್ಯಾವೃತಂ ರಮ್ಯಂ ತಪ್ತಕಾಂಚನವೇದಿಕಮ್ ||149||

ಆಗ ಕೈಲಾಸದಂತಿದ್ದ ತಪ್ತಸುವರ್ಣತೋರಣಗಳಿಂದ ಕೂಡಿದ್ದ ಎತ್ತರವಾದ ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟ, ಗೋಪುರಗಳಿಂದ ಶೋಭಿತವಾದ, ನಾನಾರತ್ನದಸಮನ್ವಿತವಾದ ಹರ್ಮ್ಯಪ್ರಾಸಾದಗಳಿಂದಲೂ ನಿಬಿಡವಾದ ಸುವರ್ಣಮಯವಾದ ಸ್ಫಟಿಕಮಯವಾದ ಮತ್ತು ರಜತಮಯವಾದ ಕಿಟಕಿಗಳನ್ನು ಹೊಂದಿದ್ದ, ವಜ್ರವೈಡೂರ್ಯಗಳನ್ನು ಮೆಟ್ಟಿದ ನಯನಮನೋಹರವಾದ ಸ್ತಂಭಗಳಿಂದ ಕೂಡಿದ ಸುವರ್ಣಮಯವಾದ ಅನೇಕ ಧ್ವಜಪತಾಕೆಗಳಿಂದ ವಿಚಿತ್ರವಾಗಿದ್ದ ಚಿತ್ರವಾದ ಮಾಲೆಗಳಿಂದ ಅಲಂಕೃತವಾಗಿದ್ದಂತಹ ಮನೋಹರವಾಗಿದ್ದಂತಹ, ಪುಟವಿಟ್ಟ ಚಿನ್ನದ ವೇದಿಕೆಯನ್ನು ಹೊಂದಿದ್ದಂತಹ (ಆ ಅರಮನೆಯ ವೈಭವವನ್ನು ನೋಡಿದನು)

ತಾನ್ ದೃಷ್ಟ್ವಾ ತತ್ರ ಸರ್ವಾನ್ ಸ ಭೈಮಸೇನಿರ್ಮನೋರಮಾನ್ |
ಪ್ರವಿಶನ್ನೇವ ಹೈಡಿಂಬಃ ಶುಶ್ರಾವ ಮುರಜಸ್ವನಮ್ ||150||
ತಂತ್ರೀಗೀತಸಮಾಕೀರ್ಣಂ ಸಮತಾಳಮಿತಾಕ್ಷರಮ್ |
ದಿವ್ಯದುಂದುಭಿನಿರ್ಹ್ರಾದಂ ವಾದಿತ್ರಶತಸಂಕುಲಮ್ |
ಸ ಶ್ರುತ್ವಾ ಮಧುರಂ ಶಬ್ದಂ ಪ್ರೀತಿಮಾನಭವತ್ ತದಾ ||151||

ಭೀಮಸೇನನ ಮಗನಾದ ಅವನು ಮನೋಹರವಾದ ಆ ಎಲ್ಲ ವಸ್ತುಗಳನ್ನು ನೋಡುತ್ತಾ ಒಳಗೆ ಪ್ರವೇಶಿಸುತ್ತಿದ್ದಂತೆಯೇ ಮುರಜವಾದ್ಯದ ಮಧುರವಾದ ಸ್ವರವನ್ನು ಕೇಳಿದನು. ತಂತಿಗೀತೆಗಳಿಂದ ಕೂಡಿದಂತಹ, ಸಮತಾಳದಿಂದಲೂ ಮಿತಾಕ್ಷಗಳಿಂದಲೂ ಕೂಡಿದ ಮುರುಜಸ್ವರವನ್ನು ದಿವ್ಯದುಂದುಂಭಿನಾದವನ್ನೂ ನೂರಾರು ವಾದ್ಯಗಳ ಶಬ್ದಗಳ ಮಧುರ ಸಂಕುಲವನ್ನೂ ಕೇಳಿದ ಅವನು ಸಂತೋಷವನ್ನು ಹೊಂದಿದನು.

ತತೋ ವಿಗಾಹ್ಯ ಹೈಡಿಂಬೋ ಬಹುಕಕ್ಷ್ಯಾಂ ಮನೋರಮಾಮ್|

ಸ ದದರ್ಶ ಮಹಾತ್ಮಾನಂ ದ್ವಾಃಸ್ಥೇನ ಭರತರ್ಷಭ ॥152॥
ತಂ ವಿಭೀಷಣಮಾಸೀನಂ ಕಾಂಚನೇ ಪರಮಾಸನೇ |
ದಿವ್ಯೇ ಭಾಸ್ಕರಸಂಕಾಶೇ ಮುಕ್ತಾಮಣಿವಿಭೂಷಿತೇ ॥153॥
ಭರತರ್ಷಭನೇ! ಅನಂತರ ಹಿಡಿಂಬೆಯ ಮಗನಾದ ಘಟೋತ್ಕಚನು ಮನೋಹರವಾದ ಅನೇಕ ಮಜಲುಗಳನ್ನು ದಾಟಿ ದ್ವಾರಪಾಲಕನ ಸಹಾಯದಿಂದ ದಿವ್ಯವಾದ ಸೂರ್ಯನಂತೆ ಹೊಳೆಯುವ ಮುಕ್ತಾಮಣಿಗಳಿಂದ ಅಲಂಕೃತವಾದ ಸುವರ್ಣಮಯವಾದ ಶ್ರೇಷ್ಠವಾದ ಆಸನದಲ್ಲಿ ಕುಳಿತಿದ್ದಂತಹ ಮಹಾತ್ಮನಾದ ವಿಭೀಷಣನನ್ನು ನೋಡಿದನು.
ದಿವ್ಯಾಭರಣಚಿತ್ರಾಂಗಂ ದಿವ್ಯರೂಪಧರಂ ವಿಭುಮ್ |
ದಿವ್ಯಮಾಲ್ಯಾಂಬರಧರಂ ದಿವ್ಯಗಂಧೋಕ್ಷಿತಂ ಶುಭಮ್ ॥154॥
ವಿಭ್ರಾಜಮಾನಂ ವಪುಷಾ ಸೂರ್ಯವೈಶ್ವಾನರಪ್ರಭಮ್ |
ಉಪೋಪವಿಷ್ಟಂ ಸಚಿವೈರ್ದೇವೈರಿವ ಶತಕ್ರತುಮ್ ॥155॥
ಯಕ್ಷೈರ್ಮಹಾರಥೈರ್ದಿವ್ಯೈರ್ನಾರೀಭಿಃ ಪ್ರಿಯದರ್ಶನೈಃ |
ಗೀತೈರ್ಮಂಗಳಯುಕ್ತಾಭಿಃ ಪೂಜ್ಯಮಾನಂ ಯಥಾವಿಧಿ ॥156॥
ಚಾಮರೇ ವ್ಯಜನೇ ಚಾಗ್ರ್ಯೇ ಹೇಮದಂಡೇ ಮಹಾಧನೇ |
ಗೃಹೀತೇ ವರನಾರೀಭ್ಯಾಂ ಧೂಯಮಾನೇ ಚ ಮೂರ್ಧನಿ ॥157॥
ಅರ್ಚಿಷ್ಮಂತಂ ಶ್ರಿಯಾ ಜುಷ್ಟಂ ಕುಬೇರವರುಣೋಪಮಮ್ |
ಧರ್ಮೇ ಚೈವ ಸ್ಥಿತಂ ನಿತ್ಯಮದ್ಭುತಂ ರಾಕ್ಷಸೇಶ್ವರಮ್ ॥158॥
ರಾಮಮಿಕ್ಷ್ವಾಕುನಾಥಂ ವೈ ಸ್ಮರಂತಂ ಮನಸಾ ಸದಾ |
ಪ್ರಹ್ವಸ್ತಸ್ಥೌ ಮಹಾವೀರ್ಯಃ ಶಕ್ರಂ ಚಿತ್ರರಥೋ ಯಥಾ ॥159॥
ದಿವ್ಯಾಭರಣಗಳಿಂದ ಭೂಷಿತವಾದ ಅಂಗವುಳ್ಳವನೂ ದಿವ್ಯರೂಪವನ್ನು ಧರಿಸಿದನೂ ವಿಭುವೂ ದಿವ್ಯಮಾಲೆಗಳನ್ನು ಮತ್ತು ದಿವ್ಯವಸ್ತ್ರಗಳನ್ನು ಧರಿಸಿದವನೂ ದಿವ್ಯಗಂಧದಿಂದ ಲೇಪಿತನೂ ಶುಭನೂ ಶರೀರದಿಂದ ಹೊಳೆಯುತ್ತಾ ಸೂರ್ಯಾಗ್ನಿಗಳ ಕಾಂತಿಯುಳ್ಳವನೂ ದೇವತೆಗಳಿಂದ ಕೂಡಿದ ಇಂದ್ರನಂತೆ ಸಮೀಪದಲ್ಲಿ ಕುಳಿತ ಸಚಿವರನ್ನು ಉಳ್ಳವನೂ ಮಹಾರಥರಾದ ದಿವ್ಯಯಕ್ಷರಿಂದಲೂ ಸುಂದರಿಯರಾದ ಮಂಗಳಗೀತಯುಕ್ತರಾದ ನಾರಿಯರಿಂದಲೂ ವಿಧಿವತ್ತಾಗಿ ಪೂಜಿಸಲ್ಪಡುವವನೂ ಶ್ರೇಷ್ಠವಾದ ನಾರಿಯರಿಬ್ಬರಿಂದ ಹೇಮದಂಡವುಳ್ಳ ಬೆಲೆಬಾಳುವ ಶ್ರೇಷ್ಠವಾದ ವ್ಯಜನ ಮತ್ತು ಚಾಮರಗಳಿಂದ ತಲೆಯಮೇಲೆ ಬೀಸಲ್ಪಡುವವನೂ ಸಂಪತ್ತಿನಿಂದ ಕೂಡಿದವನೂ, ಕಾಂತಿಮಂತನೂ, ಕುಬೇರ ಮತ್ತು ವರುಣನಿಗೆ ಸದೃಶನಾದವನೂ ಯಾವಾಗಲೂ ಧರ್ಮದಲ್ಲಿ ನಿರತನಾದವನೂ, ರಾಕ್ಷಸೇಶ್ವರನೂ, ಇಕ್ಷ್ವಾಕುವಂಶನಾಥನಾದ ರಾಮನನ್ನು ಮನಸ್ಸಿನಲ್ಲಿ ಯಾವಾಗಲೂ ಸ್ಮರಿಸುವವನೂ ಆದ ವಿಭೀಷಣನನ್ನು ನೋಡಿ ಮಹಾಪರಾಕ್ರಮಿಯಾದ ಘಟೋತ್ಕಚನು ಇಂದ್ರನ ಬಳಿ ಚಿತ್ರರಥನು ನಿಂತಂತೆ ವಿನಯದಿಂದ ಬಾಗಿನಿಂತನು.
ತಂ ದೂತಮಾಗತಂ ದೃಷ್ಟ್ವಾ ರಾಕ್ಷಸೇಂದ್ರೋ ವಿಭೀಷಣಃ |
ಪೂಜಯಿತ್ವಾ ಯಥಾನ್ಯಾಯಂ ಸಾಂತ್ವಪೂರ್ವಂ ವಚೋಽಬ್ರವೀತ್ ॥
ರಾಕ್ಷಸೇಂದ್ರನಾದ ವಿಭೀಷಣನು ದೂತನಾಗಿ ಬಂದ ಅವನನ್ನು ನೋಡಿ ವಿಧಿವತ್ತಾಗಿ ಸತ್ಕರಿಸಿ ಸಮಾಧಾನದಿಂದ ಈ ಮಾತುಗಳನ್ನು ಆಡಿದನು.
ಕಸ್ಯ ವಂಶೇ ನು ಸಂಜಾತಃ ಕರಮಿಚ್ಛನ್ ಮಹೀಪತಿಃ |
ತಸ್ಯಾನುಜಾನ್ ಸಮಸ್ತಾಂಶ್ಚ ಪುರಂ ದೇಶಂ ಚ ತಸ್ಯ ವೈ ॥161॥
ತ್ವಾಂ ಚ ಕಾರ್ಯಂ ಚ ತತ್ ಸರ್ವಂ ಶ್ರೋತುಮಿಚ್ಛಾಮಿ ತತ್ತ್ವತಃ |
ವಿಸ್ತರೇಣ ಮಮ ಬ್ರೂಹಿ ಸರ್ವಾನೇತಾನ್ ಪೃಥಕ್ ಪೃಥಕ್ ॥162॥
ಕಪ್ಪವನ್ನು ಬಯಸುವ ರಾಜನು ಯಾವ ವಂಶದಲ್ಲಿ ಜನಿಸಿದವನು? ಅವನ ಎಲ್ಲಾ ಸಹೋದರರನ್ನೂ ರಾಜಧಾನಿಯನ್ನೂ ಮತ್ತು ದೇಶವನ್ನೂ ಮತ್ತು ನೀನು ಯಾರು ಎಂಬುದನ್ನೂ ಯಾವ ಕಾರ್ಯಕ್ಕಾಗಿ ಇಲ್ಲಿಗೆ ಬಂದಿದ್ದೀಯೆ ಎಂಬುದನ್ನೂ ನಾನು ಯಥಾರ್ಥವಾಗಿ ಕೇಳಲು ಬಯಸುತ್ತೇನೆ. ಈ ಎಲ್ಲ ವಿಷಯಗಳನ್ನೂ ನನಗೆ ಬೇರೆ ಬೇರೆಯಾಗಿ ಹೇಳು.
ಏವಮುಕ್ತಸ್ತು ಹೈಡಿಂಬಃ ಪೌಲಸ್ತ್ಯೇನ ಮಹಾತ್ಮನಾ |
ಕೃತಾಂಜಲಿರುವಾಚಾಥ ಸಾಂತ್ವಯನ್ ರಾಕ್ಷಸಾಧಿಪಮ್ ॥163॥
ಹಿಡಿಂಬೆಯ ಮಗನಾದ ಘಟೋತ್ಕಚನು ಪೌಲಸ್ತ್ಯಕುಲ ಸಂಜಾತನಾದ ಮಹಾತ್ಮನಾದ ವಿಭೀಷಣನಿಂದ ಹೇಳಲ್ಪಟ್ಟವನಾಗಿ ಕೈಗಳನ್ನು ಮುಗಿದು ರಾಕ್ಷಸೇಶ್ವರನನ್ನು ಕುರಿತು ಸಮಾಧಾನಪಡಿಸುತ್ತಾ ಈ ಮಾತುಗಳನ್ನು ಆಡಿದನು.
ಸೋಮಸ್ಯ ವಂಶೇ ರಾಜಾಽಽಸೀತ್ ಪಾಂಡುರ್ನಾಮ ಮಹಾರಥಃ |
ಪಾಂಡೋಃ ಪುತ್ರಾಸ್ತು ಪಂಚಾಸನ್ ಶಕ್ರತುಲ್ಯಪರಾಕ್ರಮಾಃ ॥164॥
ಚಂದ್ರವಂಶದಲ್ಲಿ ಮಹಾರಥನಾದ ಪಾಂಡುವೆಂಬ ರಾಜನಿದ್ದನು ಅವನಿಗೆ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಐವರು ಪುತ್ರರಿದ್ದರು.
ತೇಷಾಂ ಜ್ಯೇಷ್ಠಸ್ತು ನಾಮ್ನಾಽಭೂದ್ ಧರ್ಮಪುತ್ರ ಇತಿ ಶ್ರುತಃ |
ಅಜಾತಶತ್ರುರ್ಧರ್ಮಾತ್ಮಾ ಧರ್ಮೋ ವಿಗ್ರಹವಾನಿವ ॥165॥
ಅವರಲ್ಲಿ ಹಿರಿಯವನಾದ ಯುಧಿಷ್ಠಿರನು ಧರ್ಮಪುತ್ರನೆಂದು ಪ್ರಖ್ಯಾತನಾದನು. ಅವನು ಧರ್ಮಾತ್ಮನು ಅಜಾತಶತ್ರುವು ಧರ್ಮವೇ ಶರೀರವನ್ನು ಧರಿಸಿದಂತೆ ಇದ್ದವನು.

ತತೋ ಯುಧಿಷ್ಠಿರೋ ರಾಜಾ ಪ್ರಾಪ್ಯ ರಾಜ್ಯಮಪಾಲಯತ್ |
ಗಂಗಾಯಾ ದಕ್ಷಿಣೇ ತೀರೇ ನಗರೇ ನಾಗಸಾಹ್ವಯೇ ||166||
ಆಗ ಯುಧಿಷ್ಠಿರರಾಜನು ರಾಜ್ಯವನ್ನು ಪಡೆದು ಗಂಗಾನದಿಯ ದಕ್ಷಿಣ ತೀರದಲ್ಲಿ ಹಸ್ತಿನಪುರದಲ್ಲಿ ರಾಜ್ಯವಾಳುತ್ತಿದ್ದನು.
ತದ್ದತ್ವಾ ಧೃತರಾಷ್ಟ್ರಾಯ ಶಕ್ರಪ್ರಸ್ಥಂ ಯಯೌ ತದಾ |
ಭ್ರಾತೃಭಿಃ ಸಹ ರಾಜೇಂದ್ರ ಶಕ್ರಪ್ರಸ್ಥೇ ಪ್ರಮೋದತೇ ||167||
ಅವನು ಆ ರಾಜ್ಯವನ್ನು ಧೃತರಾಷ್ಟ್ರನಿಗೆ ಕೊಟ್ಟು ಇಂದ್ರಪ್ರಸ್ಥಕ್ಕೆ ಹೊದನು. ರಾಜೇಂದ್ರನೇ! ಈಗ ಅವನು ಇಂದ್ರ ಪ್ರಸ್ಥದಲ್ಲಿಯೇ ಸುಖದಿಂದ ಇದ್ದಾನೆ.
ಗಂಗಾಯಮುನಯೋರ್ಮಧ್ಯೇ ತಾವುಭೌ ನಗರೋತ್ತಮೌ |
ನಿತ್ಯಂ ಧರ್ಮೇ ಸ್ಥಿತೋ ರಾಜಾ ಶಕ್ರಪ್ರಸ್ಥೇ ಪ್ರಶಾಸತಿ ||168||
ಆ ಎರಡು ನಗರಗಳು ಗಂಗಾಯಮುನಾನದಿಗಳ ಮಧ್ಯದಲ್ಲಿ ಇವೆ. ಯಾವಾಗಲೂ ಧರ್ಮವನ್ನೇ ಅನುಸರಿಸುವ ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿ ರಾಜ್ಯವಾಳುತ್ತಿದ್ದಾನೆ.
ತಸ್ಯಾನುಜೋ ಮಹಾಬಾಹುರ್ಭೀಮಸೇನ ಇತಿ ಶ್ರುತಃ |
ಮಹಾತೇಜಾ ಮಹಾವೀರ್ಯಃ ಶಕ್ರತುಲ್ಯಪರಾಕ್ರಮಃ ||169||
ಮಹಾಬಾಹುವಾದ ಅವನ ತಮ್ಮನಿಗೆ ಭೀಮಸೇನ ಎಂದು ಹೆಸರು ಅವನು ಮಹಾತೇಜಸ್ವಿಯು ಮಹಾಬಲವುಳ್ಳವನೂ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನೂ ಆಗಿದ್ದಾನೆ.
ದಶನಾಗಸಹಸ್ರಾಣಾಂ ಬಲೇ ತುಲ್ಯಃ ಸ ಪಾಂಡವಃ |
ತಸ್ಯಾನುಜೋಽರ್ಜುನೋ ನಾಮ ಮಹಾವೀರ್ಯಪರಾಕ್ರಮಃ ||170||
ಪಾಂಡುಪುತ್ರನಾದ ಅವನು ಬಲದಲ್ಲಿ ಹತ್ತುಸಹಸ್ರ ಆನೆಗಳಿಗೆ ಸಮನಾಗಿದ್ದಾನೆ. ಅವನಿಗೆ ಅರ್ಜುನನೆಂಬ ಮಹಾವೀರ್ಯಪರಾಕ್ರಮಗಳುಳ್ಳ ತಮ್ಮನಿದ್ದಾನೆ.
ಸುಕುಮಾರೋ ಮಹಾಸತ್ವತ್ವೋ ಲೋಕೇ ವೀರ್ಯೇಣ ವಿಶ್ರುತಃ |
ಕಾರ್ತವೀರ್ಯಸಮೋ ವೀರ್ಯೇ ಸಾಗರಪ್ರತಿಮೋ ಬಲೇ ||171||
ಅವನು ಸುಕುಮಾರನೂ ಮಹಾಸತ್ವಸಂಪನ್ನನೂ ಪರಾಕ್ರಮದಿಂದ ಲೋಕದಲ್ಲಿ ಪ್ರಸಿದ್ಧನೂ ಆಗಿದ್ದಾನೆ. ಅವನು ವಿಕ್ರಮದಲ್ಲಿ ಕಾರ್ತವೀರ್ಯನಿಗೆ ಸಮನೂ ಬಲದಲ್ಲಿ ಸಮುದ್ರಕ್ಕೆ ಸದೃಶನೂ ಆಗಿದ್ದಾನೆ.
ಜಾಮದಗ್ನ್ಯಸಮೋ ಹ್ಯಸ್ತ್ರೇ ಸಂಖ್ಯೇ ರಾಮಸಮೋಽರ್ಜುನಃ |
ರೂಪೇ ಶಕ್ರಸಮಃ ಪಾರ್ಥಸ್ತೇಜಸಾ ಭಾಸ್ಕರೋಪಮಃ ||172||
ಕುಂತಿಯ ಮಗನಾದ ಅರ್ಜುನನು ಅಸ್ತ್ರದಲ್ಲಿ ಪರಶುರಾಮನಿಗೆ ಯುದ್ಧದಲ್ಲಿ ರಾಮನಿಗೆ ಸಮನು. ರೂಪದಲ್ಲಿ ಇಂದ್ರನಿಗೆ ಸಮನು. ತೇಜಸ್ಸಿನಲ್ಲಿ ಭಾಸ್ಕರನಿಗೆ ಸಮನಾಗಿದ್ದಾನೆ.
ದೇವದಾನವಗಂಧರ್ವೈಃ ಪಿಶಾಚೋರಗರಾಕ್ಷಸೈಃ |
ಮಾನುಷೈಶ್ಚ ಸಮಸ್ತೈಶ್ಚ ಅಜೇಯಃ ಫಲ್ಗುನೋ ರಣೇ ||173||
ಅರ್ಜುನನು ದೇವದಾನವಗಂಧರ್ವರಿಂದಲೂ ಪಿಶಾಚಸರ್ಪ- ರಾಕ್ಷಸರಿಂದಲೂ ಸಮಸ್ತರಾದ ಮನುಷ್ಯರಿಂದಲೂ ಯುದ್ಧದಲ್ಲಿ ಅಜೇಯನಾಗಿದ್ದಾನೆ.
ತೇನ ತತ್ ಖಾಂಡವಂ ದಾವಂ ತರ್ಪಿತಂ ಜಾತವೇದಸೇ |
ಸಹಸಾ ತರ್ಪಯಿತ್ವಾ ತಂ ಶಕ್ರಂ ದೇವಗಣೈಃ ಸಹ |
ಲಬ್ಧಾನ್ಯಸ್ತ್ರಾಣಿ ದಿವ್ಯಾನಿ ತರ್ಪಯಿತ್ವಾ ಹುತಾಶನಮ್ ||174||
ಅವನು ಖಾಂಡವವನವನ್ನು ಅಗ್ನಿಗೆ ಕೊಟ್ಟು ಅಗ್ನಿಯನ್ನು ತೃಪ್ತಿಪಡಿಸಿದ್ದಾನೆ. ಅವನು ತನ್ನ ಬಲದಿಂದ ದೇವತೆಗಳ ಸಮೂಹದಿಂದ ಕೂಡಿದ ಇಂದ್ರನನ್ನು ಸಂತೋಷಪಡಿಸಿ ಅಗ್ನಿಯನ್ನು ಸಂತೋಷಪಡಿಸಿ, ದಿವ್ಯವಾದ ಅಸ್ತ್ರಗಳನ್ನು ಪಡೆದಿದ್ದಾನೆ.
ತೇನ ಲಬ್ಧಾ ಮಹಾರಾಜ ದುರ್ಲಭಾ ದೈವತೈರಪಿ |
ವಾಸುದೇವಸ್ಯ ಭಗಿನೀ ಸುಭದ್ರಾ ನಾಮ ವಿಶ್ರುತಾ ||175||
ಮಹಾರಾಜನೇ! ಅವನು ಪಡೆಯಲು ಅಸಾಧ್ಯವಾದ ವಾಸುದೇವನ ತಂಗಿಯಾದ ಸುಭದ್ರೆಯೆಂದು ಪ್ರಖ್ಯಾತಳಾದ ಸುಂದರಿಯನ್ನು ಪತ್ನಿಯನ್ನಾಗಿ ಪಡೆದಿದ್ದಾನೆ.
ಅರ್ಜುನಸ್ಯಾನುಜೋ ರಾಜನ್ ನಕುಲೇತಿ ಚ ವಿಶ್ರುತಃ |
ದರ್ಶನೀಯತಮೋ ಲೋಕೇ ಮೂರ್ತಿಮಾನಿವ ಮನ್ಮಥಃ ||176||
ರಾಜನೇ! ಅರ್ಜುನನ ತಮ್ಮನು ನಕುಲನೆಂದು ಪ್ರಖ್ಯಾತನಾಗಿದ್ದಾನೆ. ಅವನು ನೋಡಲು ಅತ್ಯಂತ ಸುಂದರ ಶರೀರವನ್ನು ಧರಿಸಿದ ಮನ್ಮಥನಂತೆ ಇದ್ದಾನೆ.
ತಸ್ಯಾನುಜೋ ಮಹಾತೇಜಾಃ ಸಹದೇವ ಇತಿ ಶ್ರುತಃ |
ತೇನಾಹಂ ಪ್ರೇಷಿತೋ ರಾಜನ್ ಸಹದೇವೇನ ಮಾರಿಷ ||177||
ಮಹಾತೇಜಸ್ವಿಯಾದ ಅವನ ತಮ್ಮನು ಸಹದೇವನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದಾನೆ. ರಾಜನೇ! ನಾನು ಆ ಸಹದೇವನಿಂದ ಕಳುಹಿಸಲ್ಪಟ್ಟಿದ್ದೇನೆ.
ಅಹಂ ಘಟೋತ್ಕಚೋ ನಾಮ ಭೀಮಸೇನಸುತೋ ಬಲೀ |
ಮಮ ಮಾತಾ ಮಹಾಭಾಗಾ ಹಿಡಿಂಬಾ ನಾಮ ರಾಕ್ಷಸೀ |

ಪಾರ್ಥಾನಾಮುಪಕಾರಾರ್ಥಂ ಚರಾಮಿ ಪೃಥಿವೀಮಹಮ್ ॥178॥
ನಾನು ಭೀಮಸೇನನ ಮಗನಾದ ಬಲಶಾಲಿಯಾದ ಘಟೋತ್ಕಚನೆಂಬುವನು. ನನ್ನ ತಾಯಿಯು ಮಹಾನುಭಾವಳಾದ ಹಿಡಿಂಬೆ ಎಂಬ ರಾಕ್ಷಸಿ. ಪಾಂಡವರಿಗೆ ಉಪಕಾರವನ್ನು ಮಾಡಲು ನಾನು ಭೂಮಿಯಮೇಲೆ ಸಂಚರಿಸುತ್ತಿದ್ದೇನೆ.
ಆಸೀತ್ ಪೃಥಿವ್ಯಾಃ ಸರ್ವಸ್ಯಾ ಮಹೀಪಾಲೋ ಯುಧಿಷ್ಠಿರಃ |
ರಾಜಸೂಯಂ ಕ್ರತುಶ್ರೇಷ್ಠಮಾಹರ್ತುಮುಪಚಕ್ರಮೇ ॥179॥
ಸಂದಿದೇಶ ಚ ಸ ಭ್ರಾತೄನ್ ಕರಾರ್ಥಂ ಸರ್ವತೋದಿಶಮ್ |
ಉದೀಚೀಮರ್ಜುನಸ್ತೂರ್ಣಂ ಕರಾರ್ಥಂ ಸಮುಪಾಯಯೌ ॥180॥
ಯುಧಿಷ್ಠಿರರಾಜನು ಎಲ್ಲಾ ಭೂಮಿಗೂ ಒಡೆಯನಾಗಿದ್ದನು. ಅವನು ಶ್ರೇಷ್ಠವಾದ ರಾಜಸೂಯಯಾಗವನ್ನು ಮಾಡಲು ಬಯಸಿ ತನ್ನ ತಮ್ಮಂದಿರನ್ನು ಕಪ್ಪಕಾಣಿಕೆಯ ಸಲುವಾಗಿ ಎಲ್ಲ ದಿಕ್ಕುಗಳಿಗೂ ಕಳುಹಿಸಿದ್ದಾನೆ. ಅರ್ಜುನನು ಕರಾರ್ಥವಾಗಿ ಉತ್ತರದಿಕ್ಕಿಗೆ ಜಾಗ್ರತೆಯಾಗಿ ಹೋಗಿದ್ದಾನೆ.
ಗತ್ವಾ ಶತಸಹಸ್ರಾಣಿ ಯೋಜನಾನಿ ಮಹಾಬಲಃ |
ಜಿತ್ವಾ ಸರ್ವಾನ್ ನೃಪಾನ್ ಯುದ್ಧೇ ಹತ್ವಾ ಚ ತರಸಾ ವಶೀ ॥181॥
ಸ್ವರ್ಗದ್ವಾರಮುಪಾಗಮ್ಯ ರತ್ನಾನ್ಯಾದಾಯ ವೈ ಭೃಶಮ್ |
ಅಶ್ವಾಂಶ್ಚ ವಿವಿಧಾನ್ ದಿವ್ಯಾನ್ ಸರ್ವಮಾದಾಯ ಫಲ್ಗುನಃ |
ಧನಂ ಬಹುವಿಧಂ ರಾಜನ್ ಧರ್ಮಪುತ್ರಾಯ ವೈ ದದೌ ॥182॥
ಮಹಾಬಲನಾದ ಅವನು ನೂರುಸಾವಿರ ಯೋಜನಗಳನ್ನು ಪ್ರಯಾಣಮಾಡಿ ರಾಜರುಗಳನ್ನು ಯುದ್ಧದಲ್ಲಿ ಗೆದ್ದು, ಕೆಲವರನ್ನು ಕೊಂದು ಎಲ್ಲರನ್ನೂ ತನ್ನ ವಶಮಾಡಿಕೊಂಡು ಸ್ವರ್ಗದ್ವಾರಕ್ಕೆ ಹೋಗಿ ರತ್ನಗಳನ್ನೂ ದಿವ್ಯವಾದ ವಿವಿಧ ವಿಧವಾದ ಅಶ್ವಗಳನ್ನೂ ಮತ್ತು ಉಳಿದ ವಸ್ತುಗಳನ್ನೂ ತೆಗೆದುಕೊಂಡು ಬಂದು ಆ ಬಹುವಿಧವಾದ ಧನವನ್ನು ಯುಧಿಷ್ಠಿರನಿಗೆ ಕೊಟ್ಟಿದ್ದಾನೆ.
ಭೀಮಸೇನೋ ಹಿ ರಾಜೇಂದ್ರ ಜಿತ್ವಾ ಪ್ರಾಚೀಂ ದಿಶಂ ಬಲಾತ್|
ವಶೇ ಕೃತ್ವಾ ಮಹೀಪಾಲಾನ್ ಪಾಂಡವಾಯ ಧನಂ ದದೌ |
ದಿಶಂ ಪ್ರತೀಚೀಂ ನಕುಲಃ ಕರಾರ್ಥಂ ಪ್ರಯಯೌ ತದಾ ॥183॥
ರಾಜೇಂದ್ರನೇ! ಭೀಮಸೇನನು ತನ್ನ ಬಲದಿಂದ ಪೂರ್ವದಿಕ್ಕನ್ನು ಗೆದ್ದು ಎಲ್ಲ ರಾಜರುಗಳನ್ನೂ ವಶಪಡಿಸಿಕೊಂಡು ಧರ್ಮರಾಜನಿಗೆ ಧನವನ್ನು ತಂದು ಕೊಟ್ಟಿದ್ದಾನೆ. ನಕುಲನು ಕಪ್ಪದ ಸಲುವಾಗಿ ಆಗ ಪಶ್ಚಿಮದಿಕ್ಕಿಗೆ ಪ್ರಯಾಣಮಾಡಿದ್ದಾನೆ.
ಸಹದೇವೋ ದಿಶಂ ಯಾಮ್ಯಾಂ ಜಿತ್ವಾ ಸರ್ವಾನ್ ಮಹೀಕ್ಷಿತಃ |
ಮಾಂ ಸಂದಿದೇಶ ರಾಜೇಂದ್ರ ಕರಾರ್ಥಮಿಹ ಸತ್ಕೃತಃ ॥184॥
ರಾಜೇಂದ್ರನೇ! ಸತ್ಕೃತನಾದ ಸಹದೇವನು ದಕ್ಷಿಣದಿಕ್ಕನ್ನೂ ಅಲ್ಲಿನ ಎಲ್ಲಾ ರಾಜರುಗಳನ್ನೂ ಗೆದ್ದು ನನ್ನನ್ನು ಇಲ್ಲಿ ನಿನ್ನಬಳಿಗೆ ಕಪ್ಪವನ್ನು ತರುವ ಸಲುವಾಗಿ ಕಳುಹಿಸಿದ್ದಾನೆ.
ಪಾರ್ಥಾನಾಂ ಚರಿತಂ ತುಭ್ಯಂ ಸಂಕ್ಷೇಪಾತ್ ಸಮುದಾಹೃತಮ್|
ತಮವೇಕ್ಷ್ಯ ಮಹಾರಾಜ ಧರ್ಮರಾಜಂ ಯುಧಿಷ್ಠಿರಮ್ ॥185॥
ಪಾವಕಂ ರಾಜಸೂಯಂ ಚ ಭಗವಂತಂ ಹರಿಂ ಪ್ರಭುಮ್ |
ಏತಾನವೇಕ್ಷ್ಯ ಧರ್ಮಜ್ಞ ಕರಂ ತ್ವಂ ದಾತುಮರ್ಹಸಿ ॥186॥
ಮಹಾರಾಜನೇ! ನಿನಗೆ ಪೃಥೆಯಮಕ್ಕಳಾದ ಪಾಂಡವರ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಧರ್ಮಜ್ಞನೇ! ಅದನ್ನು ಗಮನಿಸಿ ಧರ್ಮರಾಜನಾದ ಯುಧಿಷ್ಠರನನ್ನು ಗಮನಿಸಿ ಅಗ್ನಿಯನ್ನೂ, ರಾಜಸೂಯಯಾಗವನ್ನೂ ಭಗವಂತನಾದ ಪ್ರಭುವಾದ ಹರಿಯನ್ನೂ ಗಮನಿಸಿ ನೀನು ಕಪ್ಪವನ್ನು ಕೊಡಬೇಕೆಂದು ಬಯಸುತ್ತೇನೆ.
ವೈಶಂಪಾಯನಃ
ತೇನ ತದ್ ಭಾಷಿತಂ ಶ್ರುತ್ವಾ ರಾಕ್ಷಸೇಂದ್ರೋ ವಿಭೀಷಣಃ |
ಪ್ರೀತಿಮಾನಭವದ್ ರಾಜನ್ ಧರ್ಮಾತ್ಮಾ ಸಚಿವೈಃ ಸಹ ॥187॥
ರಾಜನೇ! ಘಟೋತ್ಕಚನ ಆ ಮಾತುಗಳನ್ನು ಕೇಳಿದ ಧರ್ಮಾತ್ಮನಾದ ರಾಕ್ಷಸೇಂದ್ರನಾದ ವಿಭೀಷಣನು ಸಚಿವರ ಜೊತೆಯಲ್ಲಿ ಸಂತೋಷವನ್ನು ಹೊಂದಿದನು.
ಸ ಚಾಸ್ಯ ಪ್ರತಿಜಗ್ರಾಹ ಶಾಸನಂ ಪ್ರೀತಿಪೂರ್ವಕಮ್ |
ತಚ್ಚ ಕಾಲಕೃತಂ ಧೀಮಾನ್ ಇತ್ಯಮನ್ಯತ ಸ ಪ್ರಭುಃ ॥188॥
ಮೇಧಾವಿಯೂ ಪ್ರಭುವೂ ಆದ ಅವನು ಘಟೋತ್ಕಚನ ಈ ಶಾಸನವನ್ನು ಪ್ರೀತಿಪೂರ್ವಕವಾಗಿ ಸ್ವೀಕರಿಸಿ ಅದು ಅಂಗೀಕೃತವಾಯಿತೆಂದೇ ಭಾವಿಸಿದನು.
ತಸ್ಮೈ ದದೌ ವಿಚಿತ್ರಾಣಿ ಕಂಬಲಾನಿ ಕುಥಾನಿ ಚ |
ದಾಂತಕಾಂಚನಪರ್ಯಂಕಾನ್ ಮಣಿಹೇಮವಿಚಿತ್ರಿತಾನ್ ॥189॥
ಭೂಷಣಾನಿ ವಿಚಿತ್ರಾಣಿ ಮಹಾರ್ಹಾಣಿ ಬಹೂನಿ ಚ |
ಪ್ರವಾಳಾನಿ ಚ ಮುಕ್ತಾನಿ ಮಣೀಂಶ್ಚ ವಿವಿಧಾನ್ ಬಹೂನ್ ॥190॥
ಕಾಂಚನಾನಿ ಚ ಭಾಂಡಾನಿ ಕಲಶಾಂಶ್ಚ ಘಟಾಂಸ್ತಥಾ |
ಕಟಾಹಾನ್ಯಪಿ ಚಿತ್ರಾಣಿ ದ್ರೋಣ್ಯಶ್ಚೈವ ಸಹಸ್ರಶಃ ॥191॥
ಅವನಿಗೆ ವಿಚಿತ್ರವಾದ ಕಂಬಳಿಗಳನ್ನೂ ಜಮಖಾನಗಳನ್ನೂ ದಂತದಿಂದ ಮಾಡಿದ ಮತ್ತು ಸುವರ್ಣದಿಂದ ಮಾಡಿದ ಮಣಿಗಳಿಂದ

ಖಚಿತವಾದ ಮಂಚಗಳನ್ನೂ ಬೆಳೆಬಾಳುವ ಬಹುವಿಧವಾದ ವಿಚಿತ್ರವಾದ ಆಭರಣಗಳನ್ನು ಹವಳಗಳನ್ನು ಮುತ್ತುಗಳನ್ನೂ ಬಹುವಿಧವಾದ ಅನೇಕ ರತ್ನಗಳನ್ನೂ ಚಿನ್ನದ ಪಾತ್ರೆಗಳನ್ನೂ ಕಲಶಗಳನ್ನೂ ಕೊಡಗಳನ್ನೂ ವಿಚಿತ್ರವಾದ ಹಂಡೆಗಳನ್ನೂ ಸಹಸ್ರಸಂಖ್ಯೆಯಲ್ಲಿ ಕೊಪ್ಪರಿಗೆಗಳನ್ನೂ ಕೊಟ್ಟನು.
ರಾಜತಾನಿ ಚ ಭಾಂಡಾನಿ ಚಿತ್ರಾಣಿ ಚ ಬಹೂನಿ ಚ |
ಶಸತ್ರಣಿ ರುಗ್ಮಚಿತ್ರಾಣಿ ಮಣಿಮುಕ್ತೈರ್ವಿಚಿತ್ರಿತಾನ್ |
ಯಜ್ಞಸ್ಯ ತೋರಣಾನ್ ಯುಕ್ತಾನ್ ದದೌ ತಾಳಾಂಶ್ಚತುರ್ದಶ ॥192॥
ವಿಚಿತ್ರವಾದ ಅನೇಕ ರಜತಮಯ ಪಾತ್ರೆಗಳನ್ನೂ ಚಿನ್ನದಿಂದ ಅಲೃಕೃತವಾಗಿದ್ದ ಅನೇಕ ಶಸ್ತ್ರಗಳನ್ನೂ ಮಣಿಗಳಿಂದಲೂ ಮುತ್ತಿನಿಂದಲೂ ಖಚಿತವಾದ್ದ ಯಜ್ಞದ ತೋರಣಗಳನ್ನೂ ಜೋಡಿಸಿದ ಹದಿನಾಲ್ಕು ತಾಳಗಳನ್ನೂ ಕೊಟ್ಟನು.
ಚಂದನಾನಿ ಚ ಮುಖ್ಯಾನಿ ರುಗ್ಮರತ್ನಾನ್ಯನೇಕಶಃ |
ವಾಸಾಂಸಿ ಚ ಮಹಾರ್ಹಾಣಿ ಕಂಬಳಾನಿ ಬಹೂನ್ಯಪಿ ॥193॥
ಅನ್ಯಾಂಶ್ಚ ವಿವಿಧಾನ್ ರಾಜನ್ ರತ್ನಾನಿ ಚ ಬಹೂನಿ ಚ |
ಸ ದದೌ ಸಹದೇವಾಯ ತದಾ ರಾಜಾ ವಿಭೀಷಣಃ ॥194॥
ಸುವರ್ಣಮಯವಾದ ಕಮಲಪುಷ್ಪಗಳನ್ನೂ ಮಣಿಭೂಷಿತವಾದ ಪಲ್ಲಕ್ಕಿಗಳನ್ನೂ ಬೆಲೆಬಾಳುವ ಕಿರೀಟಗಳನ್ನೂ ಸುವರ್ಣದ ಕುಂಡಲಗಳನ್ನೂ ಅನೇಕ ಸುವರ್ಣಮಯವಾದ ಪುಷ್ಪಗಳನ್ನೂ ಸುವರ್ಣಮಯವಾದ ಅನೇಕ ಹಾರಗಳನ್ನೂ ಚಂದ್ರನಂತಿರುವ ನೂರು ಆವೃತ್ತವುಳ್ಳ ವಿಚಿತ್ರವಾದ ಶಂಖಗಳನ್ನೂ ಚಂದನ ಮೊದಲಾದ ಸುಗಂಧ ದ್ರವ್ಯಗಳನ್ನೂ ಅನೇಕ ಸುವರ್ಣ ಮತ್ತು ರತ್ನಗಳನ್ನೂ ಬೆಲೆಬಾಳುವ ವಸ್ತ್ರಗಳನ್ನೂ ಅನೇಕ ಕಂಬಳಿಗಳನ್ನೂ ಇನ್ನೂ ಅನೇಕ ವಿಧವಾದ ಬಹಳವಾದ ರತ್ನಗಳನ್ನೂ ಆಗ ರಾಜನಾದ ವಿಭೀಷಣನು ಸಹದೇವನಿಗೆ ಕೊಟ್ಟನು.
ವಿಭೀಷಣಂ ಚ ರಾಜಾನಮಭಿವಾದ್ಯ ಕೃತಾಂಜಲಿಃ |
ಪ್ರದಕ್ಷಿಣಂ ಪರೀತ್ಯೈವ ನಿರ್ಜಗಾಮ ಘಟೋತ್ಕಚಃ ॥195॥
ಘಟೋತ್ಕಚನು ರಾಜನಾದ ವಿಭೀಷಣನಿಗೆ ಪ್ರದಕ್ಷಿಣೆಮಾಡಿ ಕೈಮುಗಿದು ನಮಸ್ಕಾರವನ್ನುಮಾಡಿ ಅಲ್ಲಿಂದ ಹೊರಟುಬಂದನು.
ತಾನಿ ಸರ್ವಾಣಿ ರತ್ನಾನಿ ಅಷ್ಟಾಶೀತಿರ್ನಿಶಾಚರಾಃ |
ಆಜಹ್ರುಃ ಸಮುದಾ ರಾಜನ್ ಹೈಡಿಂಬೇನ ತದಾ ಸಹ |
ರತ್ನಾನ್ಯಾದಾಯ ಸರ್ವಾಣಿ ಪ್ರತಸ್ಥೇ ಸ ಘಟೋತ್ಕಚಃ ॥196॥
ಆ ರಾಜನೇ! ಆ ರತ್ನಗಳೆಲ್ಲವನ್ನೂ, ಘಟೋತ್ಕಚನ ಜೊತೆಯಲ್ಲಿ ಎಂಬತ್ತೆಂಟು ಮಂದಿ ರಾಕ್ಷಸರು ತೆಗೆದುಕೊಂಡು ಬಂದರು. ಘಟೋತ್ಕಚನು ಅವರೆಲ್ಲರಿಂದಲೂ ಆ ಸಂಪತ್ತನ್ನು ಹೊರಿಸಿಕೊಂಡು ಅಲ್ಲಿಂದ ಹೊರಟನು.
ತತೋ ರತ್ನಾನ್ಯುಪಾದಾಯ ಹೈಡಿಂಬೋ ರಾಕ್ಷಸೈಃಸಹ |
ಜಗಾಮ ತೂರ್ಣಂ ಲಂಕಾಯಾಃ ಸಹದೇವಪದಂ ಪ್ರತಿ |
ಆಸೇದುಃ ಪಾಂಡವಂ ಸರ್ವೇ ಲಂಘಯಿತ್ವಾ ಮಹೋದಧಿಮ್ ॥197॥
ಅನಂತರ ಘಟೋತ್ಕಚನು ರಾಕ್ಷಸರ ಜೊತೆಯಲ್ಲಿ ಆ ರತ್ನಗಳನ್ನು ತೆಗೆದುಕೊಂಡು ಲಂಕೆಯಿಂದ ಶೀಘ್ರವಾಗಿ ಹೊರಟು ಸಹದೇವನಿದ್ದ ಸ್ಥಾನಕ್ಕೆ ಬಂದನು. ಅವರೆಲ್ಲರೂ ಸಮುದ್ರವನ್ನು ದಾಟಿ ಪಾಂಡವನ ಸಮೀಪಕ್ಕೆ ಬಂದರು.
ಸಹದೇವೋ ದದರ್ಶಾಥ ರತ್ನಾಹಾರಾನ್ ನಿಶಾಚರಾನ್ |
ಆಗತಾನ್ ಭೀಮಸಂಕಾಶಾನ್ ಹೈಡಿಂಬಂ ಚ ತಥಾ ನೃಪ ॥198॥
ರಾಜನೇ! ಆಗ ಸಹದೇವನು ರತ್ನವನ್ನು ಹೊತ್ತು ಕೊಂಡು ಬರುತ್ತಿರುವ ಭಯಂಕರರಾದ ರಾಕ್ಷಸರನ್ನೂ ಮತ್ತು ಅವರ ಜೊತೆಯಲ್ಲಿ ಹಾಗೆಯೇ ಬರುತ್ತಿರುವ ಘಟೋತ್ಕಚನನ್ನೂ ನೋಡಿದನು.
ದ್ರುಮಿಳಾ ನೈರ್ಋತಾನ್ ದೃಷ್ಟ್ವಾ ದುದ್ರುವುಸ್ತೇ ಭಯಾನ್ವಿತಾಃ |
ಭೈಮಸೇನಿಸ್ತತೋ ಗತ್ವಾ ಮಾದ್ರೇಯಂ ಪ್ರಾಂಜಲಿಃ ಸ್ಥಿತಃ ॥199॥
ಜೊತೆಯಲ್ಲಿಯೇ ಇದ್ದ ದ್ರುಮಿಳರು ಆ ರಾಕ್ಷಸರನ್ನು ನೋಡಿ ಭಯದಿಂದ ಕೂಡಿದವರಾಗಿ ಓಡಿಹೋದರು. ಭೀಮಸೇನನ ಪುತ್ರನಾದ ಘಟೋತ್ಕಚನು ಮಾದ್ರಿಯ ಸುತನಾದ ಸಹದೇವನ ಬಳಿಗೆ ಬಂದು ಕೈಗಳನ್ನು ಮುಗಿದು ನಿಂತನು.
ಪ್ರೀತಿಮಾನಭವದ್ ದೃಷ್ಟ್ವಾ ರತ್ನೌಘಂ ತಂ ಚ ಪಾಂಡವಃ |
ತಂ ಪರಿಷ್ವಜ್ಯ ಪಾಣಿಭ್ಯಾಂ ದೃಷ್ಟ್ವಾ ತಾನ್ ಪ್ರೀತಿಮಾನಭೂತ್ ॥200॥
ಪಾಂಡುಪುತ್ರನಾದ ಸಹದೇವನು ಆ ರತ್ನದ ರಾಶಿಯನ್ನು ನೋಡಿ ಸಂತೋಷಗೊಂಡನು. ಘಟೋತ್ಕಚನನ್ನು ತನ್ನ ಬಾಹುಗಳಿಂದ ಆಲಿಂಗಿಸಿ ಆ ರಾಕ್ಷಸರೆಲ್ಲರನ್ನೂ ನೋಡಿ ಸಂತುಷ್ಟನಾದನು.
ವಿಸೃಜ್ಯ ದ್ರುಮಿಳಾನ್ ಸರ್ವಾನ್ ಗಮನಾಯೋಪಚಕ್ರಮೇ |
ನ್ಯವರ್ತತ ತತೋ ಧೀಮಾನ್ ಸಹದೇವೋ ನರಾಧಿಪಃ ॥201॥
ಆ ದ್ರುಮಿಳರೆಲ್ಲರನ್ನೂ ಬೀಳ್ಕೊಟ್ಟು ಅಲ್ಲಿಂದ ಹೊರಡಲು ಸಂಕಲ್ಪಸಿದನು. ಅನಂತರ ಮೇಧಾವಿಯೂ ನರಾಧಿಪನೂ ಆದ ಸಹದೇವನು ಅಲ್ಲಿಂದ ಹಿಂದಿರುಗಿದನು.
ಏವಂ ವಿಜಿತ್ಯ ತರಸಾ ಸಾಂತ್ವೇನ ವಿಜಯೇನ ಚ |
ಕರದಾನ್ ಪಾರ್ಥಿವಾನ್ ಕೃತ್ವಾ ಪ್ರತ್ಯಾಗಚ್ಛದರಿಂದಮಃ ॥202॥
ಹೀಗೆ ಶೀಘ್ರವಾಗಿ ಸಮಾಧಾನದ ಮಾತುಗಳಿಂದಲೂ ಮತ್ತು ಯುದ್ಧದಿಂದಲೂ ರಾಜರನ್ನು ಗೆದ್ದು ಅವರು ಕಪ್ಪಕಾಣಿಕೆಗಳನ್ನು ಕೊಡುವಂತೆಮಾಡಿ ಅರಿಂದಮನಾದ ಸಹದೇವನು ಹಿಂದಿರುಗಿದನು.

ರತ್ನಸಾರಮುಪಾದಾಯ ಯಯೌ ಸಹ ನಿಶಾಚರೈಃ |
ಇಂದ್ರಪ್ರಸ್ಥಂ ವಿವೇಶಾಥ ಕಂಪಯನ್ನಿವ ಮೇದಿನೀಮ್ ॥203॥
ಆ ರತ್ನದರಾಶಿಯನ್ನು ತೆಗೆದುಕೊಂಡು ನಿಶಾಚರರ ಜೊತೆಯಲ್ಲಿ ಭೂಮಿಯನ್ನು ನಡುಗಿಸುವವನಂತೆ ಪ್ರಯಾಣಮಾಡಿ ಇಂದ್ರಪ್ರಸ್ಥವನ್ನು ತಲುಸಿದನು.
ದೃಷ್ಟ್ವಾ ಯುಧಿಷ್ಠಿರಂ ರಾಜನ್ ಸಹದೇವಃ ಕೃತಾಂಜಲಿಃ |
ಪ್ರಹ್ವೋಽಭಿವಾದ್ಯ ತಸ್ಥೌ ಸ ಪೂಜಿತಶ್ಚೈವ ತೇನ ವೈ ॥204॥
ರಾಜೇಂದ್ರನೇ! ಸಹದೇವನು ಯುಧಿಷ್ಠಿರನನ್ನು ನೋಡಿ ಕೈಗಳನ್ನು ಮುಗಿದು ವಿನಯದಿಂದ ನಮಸ್ಕರಿಸಿ ನಿಂತು ಯುಧಿಷ್ಠಿರನಿಂದ ಸತ್ಕರಿಸಲ್ಪಟ್ಟನು.
ಲಂಕಾಪ್ರಾಪ್ತಾನ್ ಧನೌಘಾಂಶ್ಚ ದೃಷ್ಟ್ವಾ ತಾನ್ ದುರ್ಲಭಾನ್ ಬಹೂನ್ |
ಪ್ರೀತಿಮಾನಭವದ್ ರಾಜಾ ವಿಸ್ಮಯಂ ಪರಮಂ ಯಯೌ ॥205॥
ಲಂಕೆಯಿಂದ ಬಂದ ದುರ್ಲಭವಾದ ಆ ಧನರಾಶಿಯನ್ನು ನೋಡಿದ ಯುಧಿಷ್ಠಿರನು ಸಂತೋಷದಿಂದಲೂ ಮತ್ತು ಪರಮಾಶ್ಚರ್ಯದಿಂದಲೂ ಕೂಡಿದವನಾದನು.
ಧರ್ಮರಾಜಾಯ ತತ್ ಸರ್ವಂ ನಿವೇದ್ಯ ಭರತರ್ಷಭ |
ಕೋಟೀಸಹಸ್ರಮಧಿಕಂ ಹಿರಣ್ಯಸ್ಯ ಮಹಾತ್ಮನೇ ॥206॥
ವಿಚಿತ್ರಾಂಶ್ಚ ಮಣೀಂಶ್ಚೈವ ಗೋಜಾವಿಮಹಿಷಾಂಸ್ತಥಾ |
ಕೃತಕರ್ಮಾ ಸುಖಂ ರಾಜನ್ನುವಾಸ ಜನಮೇಜಯ ॥207॥
ಭರತರ್ಷಭನಾದ ಜನಮೇಜಯರಾಜನೇ! ಮಹಾತ್ಮನಾದ ಧರ್ಮರಾಜನಿಗೆ ಒಂದು ಸಹಸ್ರ ಕೋಟಿಗಿಂತಲೂ ಅಧಿಕವಾದ ಆ ಎಲ್ಲಾ ಧನರಾಶಿಯನ್ನೂ ಅರ್ಪಿಸಿ ವಿಚಿತ್ರವಾದ ಮಣಿಗಳನ್ನೂ, ಗೋವು ಅಜ ಆವಿ ಮಹಿಷ ಸುವರ್ಣ ಮೊದಲಾದವುಗಳನ್ನೂ ಅರ್ಪಿಸಿ ಕೃತಕೃತ್ಯನಾಗಿ ಸುಖದಿಂದ ವಾಸಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ಸಭಾಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ದಿಗ್ವಿಜಯಪರ್ವಣಿ ಚತುರ್ಥೋಽಧ್ಯಾಯಃ॥3॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು.
*****

ಇಪ್ಪತ್ತೊಂಭತ್ತನೆಯ ಅಧ್ಯಾಯ
(ನಕುಲನ ಪಶ್ಚಿಮ ದಿಗ್ವಿಜಯ)
ವೈಶಂಪಾಯನಃ
ನಕುಲಸ್ಯ ತು ವಕ್ಷ್ಯಾಮಿ ಕರ್ಮಾಣಿ ವಿಜಯಂ ತಥಾ |
ವಾಸುದೇವಜಿತಾಮಾಶಾಂ ಯಥಾಽಸಾವಜಯತ್ ಪ್ರಭುಃ ॥1॥
ರಾಜನೇ! ನಾನು ನಕುಲನ ದಿಗ್ವಿಜಯವನ್ನೂ ಅವನ ಸಾಹಸಕರ್ಮಗಳನ್ನೂ ಪ್ರಭುವಾದ ಅವನು ಕೃಷ್ಣನಿಂದ ಜಯಿಸಲ್ಪಟ್ಟ ಪಶ್ಚಿಮ ದಿಕ್ಕನ್ನೂ ಹೇಗೆ ಜಯಿಸಿದನು ಎಂಬುದನ್ನೂ ಹೇಳುವೆನು.
ನಿರ್ಯಾಯ ಖಾಂಡವಪ್ರಸ್ಥಾತ್ ಪ್ರತೀಚೀಂ ದಿಶಮಚ್ಯುತಃ |
ಉದ್ದಿಶ್ಯ ಮತಿಮಾನ್ ಪ್ರಾಯಾನ್ಮಹತ್ಯಾ ಸೇನಯಾ ಸಹ ॥2॥
ಉತ್ಸಾಹಾದಿಗುಣದಿಂದ ರಹಿತನಾಗದ ಮೇಧಾವಿಯಾದ, ನಕುಲನು ದಿಗ್ವಿಜಯವನ್ನು ಉದ್ದೇಶಿಸಿ ದೊಡ್ಡ ಸೈನ್ಯದ ಜೊತೆಯಲ್ಲಿ ಇಂದ್ರಪ್ರಸ್ಥದಿಂದ ಪಶ್ಚಿಮಾಭಿಮುಖವಾಗಿ ಹೊರಟನು.
ಸಿಂಹನಾದೇನ ಮಹತಾ ಯೌಧಾನಾಂ ಗರ್ಜಿತೇನ ಚ |
ರಥನೇಮಿನಿನಾದೇನ ಕಂಪಯನ್ ವಸುಧಾಮಿಮಾಮ್ ॥3॥
ದೊಡ್ಡ ಸಿಂಹನಾದಗಳಿಂದಲೂ ಸೈನಿಕರ ಗರ್ಜನೆಗಳಿಂದಲೂ ರಥಚಕ್ರದ ನಿನಾದಗಳಿಂದಲೂ ಈ ಭೂಮಿಯನ್ನು ನಡುಗಿಸುತ್ತಾ ಹೊರಟನು.
ತತೋ ಬಹುಧನಂ ರಮ್ಯಂ ಗವಾಶ್ವಬಹುಧಾನ್ಯವತ್ |
ಕಾರ್ತಿಕೇಯಸ್ಯ ದಯಿತಂ ರೋಹೀತಕಮುಪಾದ್ರವತ್ ॥4॥
ಅಲ್ಲಿಂದ ಷಣ್ಮುಖನಿಗೆ ಪ್ರಿಯನಾದ ಧನಪೂರ್ಣವಾದ ಗೋವುಗಳು ಮತ್ತು ಅಶ್ವಗಳು ಬಹುಧಾನ್ಯದಿಂದ ತುಂಬಿದ್ದ ರೋಹೀತಕಪರ್ವತಕ್ಕೆ ಹೋದನು.
ತತ್ರ ಯುದ್ಧಂ ಮಹದ್ ದತ್ತಂ ಶೂರೈರ್ಮತ್ತಮಯೂರಕೈಃ |
ಮರುಭೂಮಿಂ ಸ ಕಾರ್ತ್ಸ್ನ್ಯೇನ ತಥೈವ ಬಹುಧಾನ್ಯಕಮ್ ॥5॥
ಶೈರೀಷಕಂ ಚ ಹೈಮಂ ಚ ವಶೇ ಚಕ್ರೇ ಮಹಾದ್ಯುತಿಃ |
ಲಿಲಿಂಧ್ರಾನ್ ವಟಧಾನಾಂಶ್ಚ ದೂತೈರೇವ ಜಿಗಾಯ ಸಃ ॥6॥
ಅಲ್ಲಿದ್ದ ಶೂರರಾದ ಮತ್ತಮಯೂರಕರು ಅವನಿಗೆ ದೊಡ್ಡ ಯುದ್ಧವನ್ನು ಕೊಟ್ಟರು. ಹಾಗೆಯೇ ಮಹಾಕಾಂತಿಯುಕ್ತನಾದ ಅವನು, ಮುಂದೆ ನಡೆದು ಸಮಗ್ರವಾದ ಮರುಭೂಮಿಯನ್ನೂ ಬಹುಧಾನ್ಯ ದೇಶವನ್ನೂ ಶೈರೀಷಕ ಮತ್ತು ಹೈಮದೇಶಗಳನ್ನೂ

ವಶಪಡಿಸಿಕೊಂಡನು. ಲಿಲಿಂಧ್ರುರನ್ನೂ ಮತ್ತು ವಟಧಾನರನ್ನೂ ತನ್ನ ದೂತರಿಂದಲೇ ಜಯಿಸಿದನು.
ಶಿಬೀಂಸ್ತ್ರಿಗರ್ತಾನಂಬಷ್ಠಾನ್ ಮಾಳವಾನ್ ಪಂಚ ಕರ್ಪಟಾನ್|
ತಥಾ ಮಧ್ಯನಿಕಾಯಾಂಶ್ಚ ಔಪಾವೃತಗಣಾನಥ ॥7॥
ಅನಂತರ ಶಿಬಿಗಳನ್ನೂ ತ್ರಿಗರ್ತರನ್ನೂ ಅಂಬಷ್ಠರನ್ನೂ ಮಾಳವರನ್ನೂ ಪಂಚಕರ್ಪಟರನ್ನೂ ಮಧ್ಯನಿಕಾಯರನ್ನೂ ಔಪಾವೃತಗಣಗಳನ್ನೂ ಜಯಿಸಿದನು.
ಪುನಶ್ಚ ಪರಿವೃತ್ಯಾಥ ಪುಷ್ಕರಾರಣ್ಯವಾಸಿನಃ |
ಗಣಾನುತ್ಸವಸಂಕೇತಾನ್ ಅಜಯತ್ ಪಾಂಡವರ್ಷಭಃ ॥8॥
ಪುನಃ ಆ ಪಾಂಡವ ಶ್ರೇಷ್ಠನು ಹಿಂದಿರುಗಿ ಪುಷ್ಕರಾರಣ್ಯವಾಸಿಗಳಾದ ಉತ್ಸವ ಎಂಬ ಹೆಸರಿನ ಗಣಗಳನ್ನು ಜಯಿಸಿದನು.
ಸಿಂಧುಕೂಲಾಶ್ರಿತಾ ಯೇ ಚ ಗ್ರಾಮಣೀಯಾ ಮಹಾಬಲಾಃ |
ಶೂದ್ರಾಭೀರಗಣಾಶ್ಚೈವ ಯೇ ಚಾಶ್ರಿತ್ಯ ಸರಸ್ವತೀಮ್ ॥9॥
ವರ್ತಯಂತಿ ಚ ಯೇ ಮತ್ಸ್ಯೈರ್ಯೇ ಚ ಪರ್ವತವಾಸಿನಃ |
ಕೃತ್ಸ್ನಂ ಪಂಚನದಂ ಚೈವ ಮಿತ್ರಭೋಗಂ ತಥೈವ ಚ ॥10॥
ತಥಾ ಸಿಂಹನದಂ ಚೈವ ತಥೈವಾಪರಪತ್ತನಾನ್ |
ದೂತೈರೇವ ವಶಂ ಚಕ್ರೇ ನಕುಲಃ ಕುಲನಂದನಃ ॥11॥
ಸಿಂಧೂ ನದಿಯತೀರದಲ್ಲಿ ಇದ್ದ ಮಹಾಬಲರಾದ ಪಾಳೆಯಗಾರರನ್ನೂ, ಸರಸ್ವತೀ ದಡದಲ್ಲಿ ಇದ್ದ ಶೂದ್ರರ ಮತ್ತು ಬೇಡರ ಗಣಗಳನ್ನೂ ಪರ್ವತವಾಸಿಗಳಾಗಿದ್ದ ಮತ್ಸ್ಯಾಹಾರರಾದ ಗಣಗಳನ್ನೂ ಸಮಗ್ರವಾದ ಪಂಚನದ ಸ್ಥಾನವನ್ನೂ ಹಾಗೆಯೇ ಮಿತ್ರಭೋಗವನ್ನೂ ಸಿಂಹನದವನ್ನೂ ಮತ್ತು ಅಪರ ಪಟ್ಟಣಗಳನ್ನೂ ಕುಲನಂದನನಾದ ನಕುಲನು ತನ್ನ ದೂತರಿಂದಲೇ ವಶಪಡಿಸಿ ಕೊಂಡನು.
ಉತ್ತರಜ್ಯೋತಿಷಾಂಶ್ಚೈವ ತಥಾ ವೃಂದಾರಕಂ ಪುರಮ್ |
ದ್ವಾರಪಾಲಂ ಚ ತರಸಾ ವಶೇ ಚಕ್ರೇ ಮಹಾದ್ಯುತಿಃ ॥12॥
ಮಹಾದ್ಯುತಿಯಾದ ನಕುಲನು ಉತ್ತರಜ್ಯೋತಿಷವನ್ನೂ ಹಾಗೆಯೇ ವೃಂದಾರಕ ಪಟ್ಟಣವನ್ನೂ ದ್ವಾರಪಾಲಪಟ್ಟಣವನ್ನೂ ಶೀಘ್ರವಾಗಿ ವಶಪಡಿಸಿಕೊಂಡನು.
ರಾಮಠಾನ್ ಹಾರಹೂಣಾಂಶ್ಚ ಪ್ರತೀಚ್ಯಾಶ್ಚೈವ ಯೇ ನೃಪಾಃ |
ತಾನ್ ಸರ್ವಾನ್ ಸ ವಶೇ ಚಕ್ರೇ ನಕುಲಃ ಪಾಂಡವರ್ಷಭಃ ॥13॥
ಪಾಂಡವಶ್ರೇಷ್ಠನಾದ ನಕುಲನು ರಾಮಠರನ್ನೂ ಹಾರಹೂಣರನ್ನೂ ಪಶ್ಚಿಮದಿಕ್ಕಿನ ಉಳಿದೆಲ್ಲಾ ರಾಜರುಗಳನ್ನೂ ವಶಪಡಿಸಿಕೊಂಡನು.
ಅರಣಂ ಚೈವ ರೋಮಂ ಚ ಯವನಾನಾಂ ಪುರಾಣಿ ಚ |
ಲಂಬನಾದೇಶಜಾಂಶ್ಚೈವ ಬಂಧಕಾಂಶ್ಚ ನರೋತ್ತಮ |
ದೂತೈರೇವ ವಶಂ ಚಕ್ರೇ ಕರಂ ಚೈನಾನದಾಪಯತ್ ॥14॥
ನರೋತ್ತಮನೇ! ಯವನರ ಪಟ್ಟಣಗಳಾದ ಅರಣ ಮತ್ತು ರೋಮಗಳನ್ನೂ ಲಂಬರನ್ನೂ ಮತ್ತು ಆದೇಶದ ಜನರನ್ನೂ ಮತ್ತು ಬಂಧಕರನ್ನೂ ತನ್ನ ದೂತರಿಂದಲೇ ವಶಪಡಿಸಿಕೊಂಡು ಅವರು ಕಪ್ಪವನ್ನು ಕೊಡುವಂತೆ ಮಾಡಿದನು.
ತತ್ರಸ್ಥಃ ಪ್ರೇಷಯಾಮಾಸ ವಾಸುದೇವಾಯ ಚಾಭಿಭೂಃ |
ಸ ಚಾಸ್ಯ ಯಾದವೈಃ ಸಾರ್ಧಂ ಪ್ರತಿಜಗ್ರಾಹ ಶಾಸನಮ್ ॥15॥
ಶತ್ರುಗಳನ್ನು ಪರಾಭವಗೊಳಿಸುವ ಅವನು ಅಲ್ಲಿಂದಲೇ ವಾಸುದೇವನಿಗೆ ದೂತರನ್ನು ಕಳುಹಿಸಿದನು. ಕೃಷ್ಣನಾದರೋ ಯಾದವರ ಜೊತೆಯಲ್ಲಿ ನಕುಲನಶಾಸನವನ್ನು ಸ್ವೀಕರಿಸಿದನು.
ತತಃ ಶಾಕಲಮಭ್ಯೇತ್ಯ ಮದ್ರಾಣಾಂ ಪುಟಭೇದನಮ್ |
ಮಾತುಲಂ ಪ್ರೀತಿಪೂರ್ವೇಣ ಶಲ್ಯಂ ಚಕ್ರೇ ವಶೇ ವಶೀ ॥16॥
ಅನಂತರ ಮದ್ರದೇಶದ ರಾಜಧಾನಿಯಾದ ಶಾಕಲಪಟ್ಟಣಕ್ಕೆ ಬಂದು ಸೋದರಮಾವನಾದ ಶಲ್ಯನನ್ನು ಪ್ರೀತಿಯಿಂದಲೇ ವಶಪಡಿಸಿಕೊಂಡನು.
ಸ ತೇನ ಸತ್ಕೃತೋ ರಾಜ್ಞಾ ಸತ್ಕಾರಾಹೋರ್ ವಿಶಾಂಪತೇ |
ರತ್ನಾನಿ ಭೂರೀಣ್ಯಾದಾಯ ಸಂಪ್ರತಸ್ಥೇ ಯುಧಾಂ ಪತಿಃ ॥17॥
ರಾಜನೇ! ಸತ್ಕಾರಕ್ಕೆ ಅರ್ಹನೂ ಮತ್ತೆ ಯುಧಾಂಪತಿಯೂ ಆದ ನಕುಲನು ಶಲ್ಯರಾಜನಿಂದ ಸತ್ಕರಿಸಲ್ಪಟ್ಟು ಅವನಿಂದ ಬಹಳ ರತ್ನಗಳನ್ನು ತೆಗೆದುಕೊಂಡು ಅಲ್ಲಿಂದ ಹೊರಟನು.
ತತಃ ಸಾಗರಕುಕ್ಷಿಸ್ಥಾನ್ ಮ್ಲೇಚ್ಛಾನ್ ಪರಮದಾರುಣಾನ್ |
ಪಲ್ಲವಾನ್ ಬರ್ಬರಾಂಶ್ಚೈವ ತಾನ್ ಸರ್ವಾನನಯದ್ ವಶಮ್ ॥18॥
ಅನಂತರ ಸಾಗರದ ಮದ್ಯವನ್ನು ಆಶ್ರಯಿಸಿದ ಮಹಾಕ್ರೂರರಾದ ಮ್ಲೇಚ್ಛರನ್ನೂ ಪಲ್ಲವರನ್ನೂ ಬರ್ಬರರನ್ನೂ ವಶಪಡಿಸಿಕೊಂಡನು.
ತತ್ರ ರತ್ನಾನ್ಯುಪಾದಾಯ ವಶೇ ಕೃತ್ವಾ ಚ ಪಾರ್ಥಿವಾನ್ |
ನ್ಯವರ್ತತ ಕುರುಶ್ರೇಷ್ಠೋ ನಕುಲಶ್ಚಿತ್ರಮಾರ್ಗವಿತ್ ॥19॥
ಕುರುಶ್ರೇಷ್ಠರಾದ ನಕುಲನು ಅಲ್ಲಿ ರಾಜರುಗಳನ್ನು ವಶಪಡಿಸಿಕೊಂಡು ರತ್ನಗಳನ್ನು ತೆಗೆದುಕೊಂಡು ಅನೇಕ ಮಾರ್ಗಗಳನ್ನು

ತಿಳಿದವನಾಗಿ ಹಿಂದಿರುಗಿದನು.
ಕಳಭಾನಾಂ ಸಹಸ್ರಾಣಿ ಕೋಶಂ ತಸ್ಯ ಮಹಾತ್ಮನಃ |
ಊಹುರ್ದಶ ಮಹಾರಾಜ ಕೃಚ್ಛ್ರಾದಿವ ಮಹಾಧನಮ್ ॥20॥
ಮಹಾರಾಜನೇ! ಮಹಾತ್ಮನಾದ ಅವನು ಸಂಪಾದಿಸಿದ ಮಹಾಧನರೂಪವಾದ ಕೋಶವನ್ನು ಹತ್ತು ಸಹಸ್ರ ಆನೆಗಳು ಕಷ್ಟಪಟ್ಟು ಹೊತ್ತವು.
ಇಂದ್ರಪ್ರಸ್ಥಗತಂ ವೀರಮಭ್ಯಗಚ್ಛದ್ ಯುಧಿಷ್ಠಿರಮ್ |
ಹೃಷ್ಟೋ ಮಾದ್ರೀಸುತಃ ಶ್ರೀಮಾನ್ ಧನಂ ತ್ವಸ್ಯ ನ್ಯವೇದಯತ್ ॥21॥
ವೀರನಾದ ಅವನು ಇಂದ್ರಪ್ರಸ್ಥವನ್ನು ಸೇರುವವೇಳೆಗೆ ಯುಧಿಷ್ಠಿರನು ಎದುರಿಗೆ ಬಂದು ಅವನನ್ನು ಸ್ವೀಕರಿಸಿದನು. ಕಾಂತಿಯುಕ್ತನಾದ ಮಾದ್ರೀಸುತನಾದ ನಕುಲನು ಸಂತೋಷದಿಂದ ಎಲ್ಲಾ ಧನವನ್ನೂ ಅವನಿಗೆ ನಿವೇದಿಸಿದನು.
ಏವಂ ಪ್ರತೀಚೀಂ ನಕುಲೋ ದಿಶಂ ವರುಣಪಾಲಿತಾಮ್ |
ಅಜಯದ್ ವಾಸುದೇವೇನ ನಿರ್ಜಿತಾಂ ಭರತರ್ಷಭ ॥22॥
ಭರತಶ್ರೇಷ್ಠನೇ! ಹೀಗೆ ನಕುಲನು ವರುಣನಿಂದ ರಕ್ಷಿತವಾದ ಕೃಷ್ಣನಿಂದ ಜಯಿಸಲ್ಪಟ್ಟ ಪಶ್ಚಿಮದಿಕ್ಕನ್ನು ಜಯಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
॥ ದಿಗ್ವಿಜಯಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
ಇಲ್ಲಿಗೆ ದಿಗ್ವಿಜಯ ಪರ್ವವು ಮುಗಿಯಿತು.
* * * *

## 4. ರಾಜಸೂಯ ಪರ್ವ

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ವಿಶ್ವಕರ್ಮಕೃತತ್ವಾತ್ತು ಪುರಸ್ಯಾಲ್ಪೇಽಪಿ ಚ ಸ್ಥಲೇ |
ಅಂತರ್ಗತಾಸ್ತೇ ಗಿರಯಸ್ತದದ್ಭುತಮಿವಾಭವತ್ ॥233॥
ಇಂದ್ರಪ್ರಸ್ಥದಲ್ಲಿ ಇರುವ ಸ್ಥಳಾವಕಾಶ ಅಲ್ಪವಾಗಿದ್ದರೂ ಆ ನಗರ ವಿಶ್ವಕರ್ಮ ನಿರ್ಮಿತವಾದ್ದರಿಂದ ಆ ಎಲ್ಲ ರತ್ನಪರ್ವತಗಳೂ ನಗರದೊಳಗೆ ಇರಲು ಶಕ್ಯವಾಯಿತು. ಇದೊಂದು ನೋಡುವವರಿಗೆ ಬಹಳ ಅದ್ಭುತವಾಗಿತ್ತು.
ತತೋ ಯಜ್ಞಃ ಪ್ರವವೃತೇ ಕೃಷ್ಣದ್ವೈಪಾಯನೇರಿತಃ |
ಋತ್ವಿಜೋ ಮುನಯೋಽತ್ರಾಸನ್ ಸರ್ವವಿದ್ಯಾಸು ನಿಷ್ಠಿತಾಃ ॥234॥
ಬಳಿಕ ವೇದವ್ಯಾಸರ ನೇತೃತ್ವದಲ್ಲಿ ಯಾಗ ಪ್ರಾರಂಭವಾಯಿತು. ಸರ್ವ ವಿದ್ಯಾ ನಿಷ್ಣಾತರಾದ ಮುನಿಗಳು ಈ ಯಾಗದಲ್ಲಿ ಋತ್ವಿಜರಾದರು.
ದ್ವೈಪಾಯನೋಕ್ತವಿಧಿನಾ ದೀಕ್ಷಿತಂ ಚಕ್ರಿರೇ ನೃಪಂ
ಜ್ಯೇಷ್ಠತ್ವಾದ್ ಯಾಜಮಾನಂ ತು ಪ್ರಣಿಧಾಯ ಯುಧಿಷ್ಠಿರೇ ॥235॥
ಭೀಮಾರ್ಜುನಾದಯಃ ಸರ್ವೇ ಸಹ ತೇನ ಸಮಾಸಿರೇ |
ಬ್ರಹ್ಮಾಣೀಪದಯೋಗ್ಯತ್ವಾತ್ ಕೃಷ್ಣೈಕಾ ಯಜ್ಞಪತ್ನ್ಯಭೂತ್ ॥236॥
ಪದಯೋಗ್ಯತಯಾ ನಾನ್ಯಾಃ ಪತ್ನ್ಯಸ್ತೇಷಾಂ ಸಹಾಽಸಿರೇ |
ಆಜ್ಞಯೈವ ಜಗದ್ಧಾತುರ್ವ್ಯಾಸಸ್ಯಾನಂತತೇಜಸಃ ॥237॥
ಋತ್ವಿಜರು ವೇದವ್ಯಾಸರ ಆದೇಶದಂತೆ ಧರ್ಮರಾಜನನ್ನು ಯಜ್ಞದಲ್ಲಿ ದೀಕ್ಷಿತನನ್ನಾಗಿ ಮಾಡಿದರು. ಭೀಮಾರ್ಜುನಾದಿಗಳೆಲ್ಲರೂ ಯಜಮಾನತ್ವವನ್ನು ಜ್ಯೇಷ್ಠನಾದ ಪ್ರಯುಕ್ತ ಧರ್ಮರಾಜನಲ್ಲಿ ಇರಿಸಿ ತಾವು ಅವನೊಡನೆ ಕುಳಿತರು. ಸರಸ್ವತೀಪದವಿಗೆ ಯೋಗ್ಯಳಾದ್ದರಿಂದ ದ್ರೌಪದಿಯೊಬ್ಬಳೆ ಯಜಮಾನ ಪತ್ನಿಯಾಗಿ ಕುಳಿತಳು. ಪಾಂಡವರ ಬೇರೆ ಪತ್ನಿಯರು ಸರಸ್ವತೀಪದವಿಗೆ ಯೋಗ್ಯರಲ್ಲವಾದ್ದರಿಂದ ಅನಂತಶಕ್ತಿಉಳ್ಳ ಲೋಕಧಾರಕರಾದ ವೇದವ್ಯಾಸರ ಆಜ್ಞೆಯಂತೆ ಪಾಂಡವರ ಜೊತೆಗೆ ಕುಳಿತುಕೊಳ್ಳಲಿಲ್ಲ.

ಸ್ಥಲಮಪ್ಯತ್ರ ಸರ್ವಂ ಹಿ ರತ್ನಹೇಮಮಯಂ ತ್ವಭೂತ್ |
ಕಿಮು ಪಾತ್ರಾದಿಕಂ ಸರ್ವಂ ಶಿಬಿರಾಣಿ ಚ ಸರ್ವಶಃ ॥238॥
ಯಾಗಶಾಲೆಯಲ್ಲಿ ಎಲ್ಲ ಸ್ಥಳವೂ ಸುವರ್ಣರತ್ನಮಯವಾಗಿತ್ತು. ಯಜ್ಞಪಾತ್ರೆಗಳು ಮುಂತಾದವೂ ವಾಸಸ್ಥಳಗಳೂ ಸುವರ್ಣರತ್ನಮಯವೆಂದು ಬೇರೇನು ಹೇಳಬೇಕು?
ಆಹೂತಂ ದಿಗ್ಜಯೇ ಪಾರ್ಥೈಸ್ತದಾ ಲೋಕದ್ವಿಸಪ್ತಕಂ |
ಸರ್ವಮತ್ರಾಗಮದ್ ಬ್ರಹ್ಮಶರ್ವಶಕ್ರಾದಿಪೂರ್ವಕಂ ॥239॥
ದಿಗ್ವಿಜಯ ಕಾಲದಲ್ಲಿ ಭೀಮಾದಿಗಳು ಹದಿನಾಲ್ಕು ಲೋಕಗಳನ್ನೂ ಆಹ್ವಾನಿಸಿದ್ದರು. ಅದರಿಂದ ಬ್ರಹ್ಮರುದ್ರ ಇಂದ್ರ ಮುಂತಾಗಿ ಎಲ್ಲರೂ ಯಾಗಕ್ಕೆ ಬಂದರು.
ಭೀಷ್ಮೋ ದ್ರೋಣಶ್ಚ ವಿದುರೋ ಧೃತರಾಷ್ಟ್ರಃ ಸಹಾತ್ಮಜಃ |
ಸಸ್ತ್ರೀಕಾ ಆಯಯುಸ್ತತ್ರ ಬಾಹ್ಲೀಕಶ್ಚ ಸಹಾತ್ಮಜಃ ॥240॥
ಭೀಷ್ಮ ದ್ರೋಣ ವಿದುರ ಧೃತರಾಷ್ಟ್ರ, ಅವನ ಮಕ್ಕಳು, ಹೆಂಡಂದಿರು, ಬಾಹ್ಲೀಕ ಅವನ ಮಕ್ಕಳು ಎಲ್ಲರೂ ಅಲ್ಲಿಗೆ ಬಂದರು.
ತಥೈವ ಯಾದವಾಃ ಸರ್ವೇ ಬಲಭದ್ರಪುರೋಗಮಾಃ |

ರುಗ್ಮಿಣೀಸತ್ಯಭಾಮಾದ್ಯಾ ಮಹಿಷ್ಯಃ ಕೇಶವಸ್ಯ ಚ ॥241॥
ಬಲರಾಮ ಮುಂತಾದ ಎಲ್ಲ ಯಾದವರೂ ಬಂದರು. ರುಕ್ಮಿಣೀ ಸತ್ಯಭಾಮೆ ಮುಂತಾದ ಕೃಷ್ಣನ ಮಹಿಷಿಯರೂ ಬಂದರು.

ಮೂವತ್ತನೆಯ ಅಧ್ಯಾಯ
(ಕೃಷ್ಣನ ಅನುಮತಿಯನ್ನು ಪಡೆದು ಧರ್ಮರಾಜನಿಂದ ರಾಜಸೂಯಯಜ್ಞದ ಸಿದ್ಧತೆಗಳು.)
ವೈಶಂಪಾಯನಃ
ರಕ್ಷಣಾದ್ಧರ್ಮರಾಜಸ್ಯ ಸತ್ಯಸ್ಯ ಪರಿಪಾಲನಾತ್ |
ಶತ್ರೂಣಾಂ ಕ್ಷಪಣಾಚ್ಚೈವ ಸ್ವಕರ್ಮನಿರತಾಃ ಪ್ರಜಾಃ ॥1॥
ಧರ್ಮರಾಜನ ಪ್ರಜಾರಕ್ಷಣೆಯಿಂದಲೂ ಸತ್ಯಪರಿಪಾಲನೆಯಿಂದಲೂ ಮತ್ತು ಶತ್ರುನಾಶದಿಂದಲೂ ಎಲ್ಲ ಪ್ರಜೆಗಳೂ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾದರು.
ಬಲೀನಾಂ ಸಮ್ಯಗಾದಾನಾದ್ ಧರ್ಮತಶ್ಚಾನುಶಾಸನಾತ್ |
ನಿಕಾಮವರ್ಷೀ ಪರ್ಜನ್ಯಃ ಸ್ಫೀತೋ ಜನಪದೋಽಭವತ್ ॥2॥
ಸರಿಯಾಗಿ ತೆರಿಗೆಗಳನ್ನು ತೆಗೆದು ಕೊಳ್ಳುವುದರಿಂದಲೂ ಧರ್ಮದಿಂದ ರಾಜ್ಯವಾಳುವುದರಿಂದಲೂ ಪರ್ಜನ್ಯನು ಬೇಕಾದಷ್ಟು ಮಳೆಯನ್ನು ಸುರಿಸಿದನು. ದೇಶವೆಲ್ಲವೂ ಸಮೃದ್ಧವಾಯಿತು.
ಸರ್ವಾರಂಭಾಃ ಸಂಪ್ರವೃತ್ತಾ ನೀರುಜೋ ನಿರುಪದ್ರವಾಃ |
ಸ್ವಾದುಸಸ್ಯಾ ಚ ಪೃಥಿವೀ ಬಹುಪುಷ್ಪಫಲಾ ದ್ರುಮಾಃ ॥3॥
ಎಲ್ಲ ಉಪಕ್ರಮಗಳೂ ಚೆನ್ನಾಗಿ ನಡೆದು ಫಲಗಾಮಿಗಳಾದವು. ಪ್ರಜೆಗಳು ರೋಗಗಳಿಂದ ಮತ್ತು ಉಪದ್ರವಗಳಿಂದ ರಹಿತರಾದರು ಭೂಮಿಯಲ್ಲಿ ರುಚಿಕರವಾದ ಧಾನ್ಯಗಳು ಬೆಳೆದವು. ವೃಕ್ಷಗಳು ಫಲಪುಷ್ಪಭರಿತವಾದವು.
ಬ್ರಾಹ್ಮಣಾ ಯಜ್ಞಸಂತಾನಾಃ ಕೃಷಿಗೋರಕ್ಷಣಂ ವಣಿಕ್ |
ವಿಶೇಷೋತ್ಸವಮೇವ್ಯೈತತ್ ಸಂಜಜ್ಞೇ ರಾಜಕರ್ಮಣಾ ॥4॥
ಧರ್ಮರಾಜನ ಆಜ್ಞೆಯಂತೆ ಬ್ರಾಹ್ಮಣರು ಯಜ್ಞವಿಸ್ತಾರಗಳಲ್ಲಿ ತೊಡಗಿದರು. ವೈಶ್ಯರು ಕೃಷಿ ಮತ್ತು ಗೋರಕ್ಷಣೆಯಲ್ಲಿ ತೊಡಗಿದರು. ಅಲ್ಲಿ ರಾಜನ ಪ್ರಭಾವದಿಂದ ವಿಶೇಷ ಉತ್ಸವವೇ ಉಂಟಾಯಿತು.
ದಸ್ಯುಭ್ಯೋ ವಂಚಕೇಭ್ಯೋ ವಾ ಪ್ರತಿರೋಧಾತ್ ಪರಸ್ಪರಮ್ |
ರಾಜವಲ್ಲಭತಶ್ಚೈವ ಶ್ರೂಯತೇ ನ ಮೃಷಾ ಗಿರಃ ॥5॥
ಕಳ್ಳರಿಂದಾಗಲೀ ಅಥವಾ ವಂಚಕರಿಂದಲಾಗಲೀ ಅಥವಾ ಪ್ರಜೆಗಳ ಪರಸ್ಪರ ವಿರೋಧದಿಂದಲಾಗಲೀ ಅಥವಾ ರಾಜನ ಸಮೀಪ ಬಂಧುಗಳಿಂದಲಾಗಲೀ ಸುಳ್ಳುಮಾತುಗಳು ಕೇಳಿ ಬರುತ್ತಿರಲಿಲ್ಲ.
ಅವರ್ಷಂ ಚಾತಿವರ್ಷಂ ಚ ವ್ಯಾಧಿಪಾವಕಮೂರ್ಛನಮ್ |
ಸರ್ವಮೇತತ್ ತದಾ ನಾಸೀದ್ ಧರ್ಮನಿತ್ಯೇ ಯುಧಿಷ್ಠಿರೇ ॥6॥
ಯುಧಿಷ್ಠಿರನು ಯಾವಾಗಲೂ ಧರ್ಮನಿಷ್ಠನಾಗಿರಲು ಅವೃಷ್ಟಿಯಾಗಲೀ ಅತಿವೃಷ್ಟಿಯಾಗಲೀ ರೋಗಾಗ್ನಿಗಳ ಭಯವಾಗಲೀ ಯಾವುದೂ ಇರಲಿಲ್ಲ.
ಮನಸ್ತುಷ್ಟಿಂ ಪರಾಂ ಗಚ್ಛೇದ್ ಇತ್ಯೇವಂ ಮನಸಾ ನರಾಃ |
ಸರ್ವಾತ್ಮನಾ ಪ್ರಿಯಾಣ್ಯೇವ ಕರ್ತುಂ ಸಮುಪಚಕ್ರಮುಃ ॥7॥
ಧರ್ಮರಾಜನ ಮನಸ್ಸಿಗೆ ಸಂತೋಷವಾಗಲಿ ಎಂಬ ಅಭಿಪ್ರಾಯದಿಂದ ಎಲ್ಲಾ ರೀತಿಯಿಂದಲೂ ಪ್ರಜೆಗಳು ಅವನಿಗೆ ಪ್ರಿಯವಾದುದನ್ನೇ ಉಪಕ್ರಮಿಸಿದರು.
ಧರ್ಮ್ಯೈರ್ಧನಾಗಮೈಸ್ತಸ್ಯ ವವೃಧೇ ನಿಚಯೋ ಮಹಾನ್ |
ಕರ್ತುಂ ಯಸ್ಯ ನ ಶಕ್ಯೇತ ಕ್ಷಯೋ ವರ್ಷಶತೈರಪಿ ॥8॥
ಧರ್ಮಮೂಲವಾದ ಅವನ ಧನಾಗಮವು ನೂರುವರ್ಷಗಳಲ್ಲಿಯೂ ವ್ಯಯಮಾಡಲು ಸಾಧ್ಯವಿಲ್ಲದಂತೆ ದೊಡ್ಡರಾಶಿಯಾಗಿ ಬೆಳೆಯಿತು.
ಕೋಶಸ್ಯ ಸ ಪರೀಮಾಣಂ ಗೋಷ್ಠಸ್ಯ ಚ ಮಹೀಪತಿಃ |
ವಿಜ್ಞಾಯ ರಾಜನ್ ಕೌಂತೇಯೋ ಯಜ್ಞಾಯೈವ ಮನೋ ದಧೇ ॥9॥
ಮಹೀಪತಿಯು ತನ್ನ ಕೋಶದ ಮತ್ತು ಗೋಶಾಲೆಯ ಪರಿಮಾಣವನ್ನು ತಿಳಿದವನಾಗಿ ಕೌಂತೇಯನಾದ ಅವನು ಯಜ್ಞವನ್ನು ಮಾಡುವುದೆಂದೇ ನಿರ್ಧರಿಸಿದನು.
ಸುಹೃದಶ್ಚೈವ ತಂ ಸರ್ವೇ ಪೃಥಕ್ಚ ಸಹ ಚಾಬ್ರುವನ್ |
ಯಜ್ಞಕಾಲಸ್ತವ ವಿಭೋ ಕ್ರಿಯತಾಮತ್ರ ಸಾಂಪ್ರತಮ್ ॥10॥
ಅವನ ಎಲ್ಲಾ ಹಿತೈಷಿಗಳೂ ಒಟ್ಟಾಗಿ ಮತ್ತು ಬೇರೆಯಾಗಿ ವಿಭುವೇ! ಇದು ನಿನಗೆ ಯಜ್ಞವನ್ನುಮಾಡುವ ಕಾಲ. ಅದಕ್ಕೆ ಯೋಗ್ಯವಾದುದನ್ನು ಮಾಡು ಎಂದು ಹೇಳಿದರು.
ಅಥೈವಂ ಬ್ರುವತಾಮೇವ ತೇಷಾಮಭ್ಯಾಯಯೌ ಹರಿಃ |
ಋಷಿಃ ಪುರಾಣೋ ವೇದಾತ್ಮಾ ದೃಶ್ಯಶ್ಚಾತ್ಮನಿ ಜಾನತಾಮ್ ॥11॥
ಅವರು ಹೀಗೆ ಹೇಳುತ್ತಿದ್ದಂತೆ ಪುರಾಣಋಷಿಗಳೂ ವೇದದಲ್ಲಿಯೇ ಮನಸ್ಸುಳ್ಳವರೂ ಆತ್ಮಜ್ಞಾನಿಗಳಿಗೆ ಮಾತ್ರ ಗೋಚರಿಸುವವರೂ,

ಆದ ವೇದವ್ಯಾಸರು ಅಲ್ಲಿಗೆ ಬಂದರು.
ಜಗತಸ್ತಸ್ಥುಷಾಂ ಶ್ರೇಷ್ಠಃ ಪ್ರಭವಶ್ಚಾಪ್ಯಯಶ್ಚ ಹ |
ಭೂತಭವ್ಯಭವನ್ನಾಥಃ ಕೇಶವಃ ಕೇಶಿಸೂದನಃ ॥12॥
ಪ್ರಾಕಾರಃ ಸರ್ವವೃಷ್ಣೀನಾಮಾಪತ್ಸ್ವಭಯದೋ ಗಿರಿಃ |
ಬಲಾಧಿಕಾರೇ ನಿಕ್ಷಿಪ್ಯ ಸಮ್ಯಾನ್ಯಾನಕದುಂದುಭಿಮ್ ॥13॥
ಉಚ್ಚಾವಚಮುಪಾದಾಯ ಧರ್ಮರಾಜಾಯ ಮಾಧವಃ |
ಧನೌಘಂ ಪುರುಷವ್ಯಾಘ್ರೋ ಬಲೇನ ಮಹತಾ ವೃತಃ ॥14॥
ತಂ ಧನೌಘಮಪರ್ಯಂತಂ ರತ್ನಸಾಗರಮಕ್ಷಯಮ್ |
ಪೂರ್ಣಮಾಪೂರಯಂಸ್ತೇಷಾಂ ದ್ವಿಷಚ್ಛೋಕಾವಹೋಽಭವತ್ |
ನಾದಯನ್ ರಥಘೋಷೇಣ ಪ್ರವಿವೇಶ ಪುರೋತ್ತಮಮ್ ॥15॥
ಸ್ಥಾವರಜಂಗಮಜಗತ್ತಿನಲ್ಲಿ ಶ್ರೇಷ್ಠನಾದ, ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ, ಭೂತಭವಿಷ್ಯತ್ವರ್ತಮಾನ ಸಮಯಗಳಲ್ಲಿ ಇರುವ ಎಲ್ಲಾ ಜೀವರಿಗೂ ಒಡೆಯನಾದ ಎಲ್ಲಾ ವೃಷ್ಣಿಗಳಿಗೂ ಕೋಟೆಯಂತೆ ರಕ್ಷಕನಾದ, ಭಕ್ತರ ಆಪತ್ಕಾಲದಲ್ಲಿ ಪರ್ವತದಂತೆ ಅಭಯವನ್ನು ಕೊಡುವ ಕೇಶಿಸೂದನನಾದ ಕೇಶವನು ದ್ವಾರಕೆಯ ರಕ್ಷಣೆಯನ್ನೂ ಸೈನ್ಯದ ಅಧಿಕಾರವನ್ನೂ ಸತ್ಕರಿಸಿಲ್ಪಟ್ಟ ವಸುದೇವನಿಗೆ ಒಪ್ಪಿಸಿ ಶ್ರೇಷ್ಠವಾದ ಪದಾರ್ಥಗಳನ್ನು ತೆಗೆದುಕೊಂಡು ದೊಡ್ಡಸೈನ್ಯವನ್ನೂ ಧರ್ಮರಾಜನಿಗಾಗಿ ಧನರಾಶಿಯನ್ನೂ ತೆಗೆದುಕೊಂಡು ಹೊರಟು, ಪುರುಷವ್ಯಾಘ್ರನಾದ ಮಾಧವನು ಪಾಂಡವರಿಗೆ ಮೊದಲೇ ಪೂರ್ಣವಾಗಿದ್ದ ಅಕ್ಷಯವಾದ ರತ್ನಸಾಗರವನ್ನೂ ಮೇರೆಯೇ ಇಲ್ಲದ ಧನರಾಶಿಯನ್ನೂ ಇನ್ನೂ ಪೂರ್ಣಗೊಳಿಸುವವನಾಗಿ ಶತ್ರುಗಳ ಶೋಕವನ್ನು ಹೆಚ್ಚಿಸುವವನಾಗಿ ತನ್ನ ರಥಘೋಷದಿಂದ ದೊಡ್ಡ ನಾದವನ್ನು ಉಂಟುಮಾಡುತ್ತಾ, ಶ್ರೇಷ್ಠ ಪಟ್ಟಣವಾದ ಇಂದ್ರಪ್ರಸ್ಥವನ್ನು ಪ್ರವೇಶಿಸಿದನು.
ಅಸೂರ್ಯಮಿವ ಸೂರ್ಯೇಣ ನಿವಾತಮಿವ ವಾಯುನಾ |
ಕೃಷ್ಣೇನ ಸಮುಪೇತೇನ ಜಹೃಷೇ ಭಾರತಂ ಪುರಮ್ ॥16॥
ಸೂರ್ಯನಿಲ್ಲದಿದ್ದಾಗ ಸೂರ್ಯನು ಉದಯಿಸಿದಂತೆ, ವಾಯುವೇ ಇಲ್ಲದಿದ್ದಾಗ ತಂಗಾಳಿಯು ಬೀಸಿದಂತೆ, ಕೃಷ್ಣನ ಆಗಮನದಿಂದ ಆ ಭಾರತಪಟ್ಟಣವು ಸಂತೋಷಗೊಂಡಿತು.
ತಂ ಮುದಾಽಭಿಸಮಾಗಮ್ಯ ಸತ್ಕೃತ್ಯ ಚ ಯಥಾವಿಧಿ |
ಸ ಪೃಷ್ಟ್ವಾ ಕುಶಲಂ ಚೈವ ಸುಖಾಸೀನಂ ಯುಧಿಷ್ಠಿರಃ ॥17॥
ಧೌಮ್ಯದ್ವೈಪಾಯನಮುಖ್ಯೈಃ ಋತ್ವಿಗ್ಭಿಃ ಪುರುಷರ್ಷಭಃ |
ಭೀಮಾರ್ಜುನಯಮೈಶ್ಚಾಪಿ ಸಹಿತಃ ಕೃಷ್ಣಮಬ್ರುವೀತ್ ॥18॥
ಯುಧಿಷ್ಠರನು ಕೃಷ್ಣನನ್ನು ಸಂತೋಷದಿಂದ ಎದುರುಗೊಂಡು ವಿಧಿಪೂರ್ವಕವಾಗಿ ಸತ್ಕರಿಸಿ, ಕುಶಲ ಪ್ರಶ್ನೆಯನ್ನುಮಾಡಿ ಅನಂತರ ಅವನು ಸುಖವಾಗಿ ಕುಳಿತಿರುವಾಗ ಪುರುಷಶ್ರೇಷ್ಠನಾದ ಧರ್ಮರಾಜನು ಧೌಮ್ಯ ದ್ವೈಪಾಯನ ಮೊದಲಾದ ಋತ್ವಿಕ್‌ಗಳಿಂದಲೂ ಭೀಮಾರ್ಜುನ ನಕುಲ ಸಹದೇವರಿಂದಲೂ ಕೂಡಿದವನಾಗಿ ಕೃಷ್ಣನನ್ನು ಕುರಿತು ಹೇಳಿದನು.
ತ್ವತ್ಕೃತೇ ಪೃಥಿವೀ ಸರ್ವಾ ಮದ್ವಶೇ ಕೃಷ್ಣ ವರ್ತತೇ |
ಧನಂ ಚ ಬಹು ವಾರ್ಷ್ಣೇಯ ತ್ವತ್ಪ್ರಸಾದಾದುಪಾರ್ಜಿತಮ್ ॥19॥
ಕೃಷ್ಣನೇ! ನಿನ್ನ ನಿಮಿತ್ತದಿಂದಾಗಿ ಸಮಗ್ರವಾದ ಭೂಮಿಯು ನನ್ನ ವಶವಾಗಿದೆ. ವಾರ್ಷ್ಣೇಯನೇ! ನಿನ್ನ ಅನುಗ್ರಹದಿಂದಲೇ ಈ ಮಹಾಧನವು ಸಂಪಾದಿಸಲ್ಪಟ್ಟಿದೆ.
ಸೋಽಹಮಿಚ್ಛಾಮಿ ತತ್ ಸರ್ವಂ ವಿಧಿವದ್ ದೇವಕೀಸುತ |
ಉಪಯೋಕ್ತುಂ ದ್ವಿಜಾಗ್ರ್ಯೇಷು ಹವ್ಯವಾಹೇ ಚ ಮಾಧವ ॥20॥
ದೇವಕೀಸುತನಾದ ಮಾಧವನೇ! ನಾನು ಇದೆಲ್ಲವನ್ನೂ ವಿಧಿವತ್ತಾಗಿ ಬ್ರಾಹ್ಮಣರಲ್ಲಿ ಮತ್ತು ಅಗ್ನಿಯಲ್ಲಿ ವಿನಿಯೋಗಿಸಲು ಬಯಸುತ್ತೇನೆ.
ತದಹಂ ಯಷ್ಟುಮಿಚ್ಛಾಮಿ ದಾಶಾರ್ಹ ಸಹಿತಸ್ತ್ವಯಾ |
ಅನುಜೈಶ್ಚ ಮಹಾಬಾಹೋ ತ್ವಮನುಜ್ಞಾತುಮರ್ಹಸಿ ॥21॥
ಆ ಕಾರಣದಿಂದ ದಾಶಾರ್ಹನೇ! ಮಹಾಬಾಹುವೇ! ನಾನು ನಿನ್ನಿಂದಲೂ ಮತ್ತು ತಮ್ಮಂದಿರಿಂದಲೂ ಸಹಿತನಾಗಿ ಯಜ್ಞವನ್ನು ಮಾಡಲು ಬಯಸುತ್ತೇನೆ. ನೀನು ಅನುಮತಿಯನ್ನು ಕೊಡಬೇಕು.
ಸ ದೀಕ್ಷಾಪಯ ಗೋವಿಂದ ತ್ವಮಾತ್ಮಾನಂ ಮಹಾಭುಜ |
ತ್ವಯೀಷ್ಟವತಿ ದಾಶಾರ್ಹ ವಿಪಾಪ್ಮಾ ಭವಿತಾ ಹ್ಯಹಮ್ ॥22॥
ಮಹಾಭುಜನಾದ ಗೋವಿಂದನೇ! ನನಗೆ ನೀನು ಯಜ್ಞದೀಕ್ಷೆಯನ್ನು ಕೊಡು ದಾಶರ್ಹಾನೇ! ನೀನು ಯಜ್ಞದೀಕ್ಷೆಯನ್ನು ಕೊಟ್ಟರೆ ನಾನು ಪಾಪರಹಿತನಾಗಿ ಪರಿಶುದ್ಧನಾಗುವೆನು.(ಅಥವಾ ನೀನೇ ಯಜ್ಞವನ್ನುಮಾಡು. ನೀನು ಯಜ್ಞವನ್ನು ಮಾಡಿದರೂ ನನ್ನ ಪಾಪವು ಪರಿಹಾರವಾಗುತ್ತದೆ.)
ತ್ವಂ ಮಾಮಭ್ಯನುಜಾನೀಹಿ ಸಹೈಭಿರನುಜೈರ್ವಿಭೋ |
ಅನುಜ್ಞಾತಸ್ತ್ವಯಾ ಕೃಷ್ಣ ಪ್ರಾಪ್ನುಯಾಂ ಕ್ರತುಮುತ್ತಮಮ್ ॥23॥
ವಿಭುವೇ! ನೀನು ನನಗೂ ಮತ್ತು ತನ್ನ ತಮ್ಮಂದಿರಿಗೂ ಅನುಮತಿಯನ್ನು ಕೊಡು. ಕೃಷ್ಣನೇ! ನಿನ್ನ ಅನುಮತಿಯಿಂದ ನಾನು ಶ್ರೇಷ್ಠವಾದ ಯಜ್ಞವನ್ನು ಆಚರಿಸುತ್ತೇನೆ.

ತಂ ಕೃಷ್ಣಃ ಪ್ರತ್ಯುವಾಚೇದಂ ಬಹೂಕ್ತ್ವಾ ಗುಣವಿಸ್ತರಮ್ |
ತ್ವಮೇವ ರಾಜಶಾರ್ದೂಲ ಸಮ್ರಾಡರ್ಹೋ ಮಹಾಕ್ರತುಮ್ |
ಸಂಪ್ರಾಪ್ನುಹಿ ತ್ವಯಾ ಪ್ರಾಪ್ತೇ ಕೃತಕೃತ್ಯಾಸ್ತತೋ ವಯಮ್ ॥24॥
ಆಗ ಕೃಷ್ಣನು ಅವನನ್ನು ಕುರಿತು ಅವನ ವಿಸ್ತಾರವಾದ ಗುಣಗಳನ್ನು ಬಹಳವಾಗಿ ವರ್ಣಿಸಿದನು. ರಾಜಶಾರ್ದೂಲನೇ! ಸಮ್ರಾಟ್ ಪದವಿಗೆ ಅರ್ಹನಾದ ನೀನೇ ಈ ದೊಡ್ಡಯಾಗವನ್ನು ಮಾಡು. ನೀನು ಯಾಗವನ್ನು ಮಾಡಿದರೆ ನಾವೆಲ್ಲರೂ ಧನ್ಯರಾಗುತ್ತೇವೆ.
ಯಜಸ್ವಾಭೀಪ್ಸಿತಂ ಯಜ್ಞಂ ಮಯಿ ಶ್ರೇಯಸ್ಯವಸ್ಥಿತೇ |
ನಿಯುಂಕ್ಷ್ವ ಚಾಪಿ ಮಾಂ ಕೃತ್ಯೇ ಸರ್ವಂ ಕರ್ತಾಸ್ಮಿ ತೇ ವಚಃ ॥25॥
ನಾನು ನಿನ್ನ ಶ್ರೇಯಶ್ಚಿಂತಕನಾಗಿ ಇರುತ್ತಿರಲು ನಿನಗೆ ಅಭೀಷ್ಟವಾದ ಯಜ್ಞವನ್ನು ಮಾಡು. ನಾನು ಮಾಡಬೇಕಾದ ಕೆಲಸವನ್ನು ಹೇಳು. ನಿನ್ನ ಮಾತಿನಂತೆ ಎಲ್ಲವನ್ನೂ ಮಾಡುವೆನು.
ಯುಧಿಷ್ಠಿರಃ
ಸಫಲಃ ಕೃಷ್ಣ ಸಂಕಲ್ಪಃ ಸಿದ್ಧಿಶ್ಚ ನಿಯತಾ ಮಮ |
ಯನ್ಮಮ ತ್ವಂ ಹೃಷೀಕೇಶ ಯಥೇಪ್ಸಿತಮವಸ್ಥಿತಃ ॥26॥
ಕೃಷ್ಣನೇ! ಹೃಷೀಕೇಶನೇ! ನೀನು ನನಗೆ ಇಷ್ಟವಾದಂತೆ ನನ್ನ ಬಳಿಯಲ್ಲಿರುವಾಗ ನನ್ನ ಸಂಕಲ್ಪವು ಸಫಲವಾಗಿದೆ. ನನಗೆ ನಿಶ್ಚಿತವಾಗಿ ಸಿದ್ಧಿಯು ದೊರೆಯುತ್ತದೆ.
ವೈಶಂಪಾಯನಃ
ಅನುಜ್ಞಾತಸ್ತು ಕೃಷ್ಣೇನ ಪಾಂಡವೋ ಭ್ರಾತೃಭಿಃ ಸಹ |
ಈಜಿತುಂ ರಾಜಸೂಯಾಯ ಸಾಧನಾನ್ಯುಪಚಕ್ರಮೇ ॥27॥
ತಮ್ಮಂದಿರ ಜೊತೆಯಲ್ಲಿ ಕೃಷ್ಣನಿಂದ ಅನುಜ್ಞೆಯನ್ನು ಪಡೆದ ಪಾಂಡವನಾದ ಧರ್ಮರಾಜನು, ಯಜ್ಞವನ್ನು ಮಾಡಲು ರಾಜಸೂಯದ ಸಾಮಾಗ್ರಿಗಳನ್ನು ಸಂಪಾದಿಸಿಲು ಉಪಕ್ರಮಿಸಿದನು.
ತತ ಆಜ್ಞಾಪಯಾಮಾಸ ಪಾಂಡವೋಽರಿನಿಬರ್ಹಣಃ |
ಸಹದೇವಂ ಯುಧಾಂ ಶ್ರೇಷ್ಠಂ ಮಂತ್ರಿಣಶ್ಚೈವ ಸರ್ವಶಃ ॥28॥
ಆಗ ಶತ್ರುಸೂದನನಾದ ಧರ್ಮರಾಜನು ಯುದ್ಧದಲ್ಲಿ ಶ್ರೇಷ್ಠನಾದ ಸಹದೇವನಿಗೂ ಮತ್ತು ಎಲ್ಲಾ ಮಂತ್ರಿಗಳಗೂ ಆಜ್ಞೆಯನ್ನು ಮಾಡಿದನು.
ಅಸ್ಮಿನ್ ಕ್ರತೌ ಯಥೋಕ್ತಾನಿ ಯಜ್ಞಾಂಗಾನಿ ದ್ವಿಜಾತಿಭಿಃ |
ತಥೋಪಕರಣಂ ಸರ್ವಂ ಮಂಗಲಾನಿ ಚ ಸರ್ವಶಃ ॥29॥
ಅಧಿಯಜ್ಞಾರ್ಥಸಂಭಾರಾನ್ ಧೌಮ್ಯೋಕ್ತಾನ್ ಕ್ಷಿಪ್ರಮೇವ ಹಿ |
ಸಮಾನಯಂತು ಪುರುಷಾ ಯಥಾಯೋಗಂ ಯಥಾಕ್ರಮಮ್ ॥30॥
ಈ ಯಜ್ಞದಲ್ಲಿ ಬ್ರಾಹ್ಮಣರು ಹೇಳಿದಂತೆ ಯಜ್ಞಸಾಧನಗಳನ್ನೂ ಎಲ್ಲಾ ಉಪಕರಣಗಳನ್ನೂ, ಮಂಗಳ ದ್ರವ್ಯಗಳನ್ನೂ ದೊಡ್ಡಯಜ್ಞಕ್ಕೆ ಬೇಕಾದ ಧೌಮ್ಯರು ಹೇಳಿದ ಎಲ್ಲಾ ಸಂಭಾರಗಳನ್ನೂ ಶೀಘ್ರವಾಗಿ ಕ್ರಮದಿಂದ ಎಲ್ಲಾ ಪುರುಷರು ಅವರವರಿಗೆ ಸಾಧ್ಯವಾದುದನ್ನು ತರಲಿ.
ಇಂದ್ರಸೇನೋ ವಿಶೋಕಶ್ಚ ರುಗ್ಮಶ್ಚಾರ್ಜುನಸಾರಥಿಃ |
ಶಮೀಕೋ ಧ್ವಜಸೇನಶ್ಚ ಪಂಚ ಸಾರಥಿಪುಂಗವಾಃ |
ಅನ್ನಾದ್ಯಾಹರಣೇ ಯುಕ್ತಾಃ ಸಂತು ಮತ್ಪ್ರಿಯಕಾಮ್ಯಯಾ ॥31॥
ನಮ್ಮ ಸಾರಥಿಪುಂಗವರಾದ ಇಂದ್ರಸೇನ (ಯುಧಿಷ್ಠಿರನ ಸಾರಥಿ) ವಿಶೋಕ (ಭೀಮನ ಸಾರಥಿ) ಅರ್ಜುನನ ಸಾರಥಿಯಾದ ರುಗ್ಮ ಶಮೀಕ( ನಕುಲನ ಸಾರಥಿ) ಮತ್ತು ಧ್ವಜಸೇನರು (ಸಹದೇವನಸಾರಥಿ) ನನಗೆ ಪ್ರಿಯವನ್ನು ಉಂಟುಮಾಡುವುದಕ್ಕಾಗಿ ಬ್ರಾಹ್ಮಣರಿಗೆ ಭೋಜನ ಪದಾರ್ಥಗಳನ್ನು ತರಲು ನಿಯುಕ್ತರಾಗಲಿ.
ಸರ್ವೇ ಪೇಯಾಂಶ್ಚ ಭಕ್ಷ್ಯಾಂಶ್ಚ ರಸಂ ಗಂಧಸಮನ್ವಿತಾನ್ |
ಮನೋಹರಾನ್ ಪ್ರೀತಿಕರಾನ್ ದ್ವಿಜಾನಾಂ ಕುರುಸತ್ತಮ ॥32॥
ಕುರುಶ್ರೇಷ್ಠನೇ! ಇದನ್ನು ಕೇಳಿದ ಆ ಸಾರಥಿಪುಂಗವರು ನಾವೆಲ್ಲರೂ ಬ್ರಾಹ್ಮಣರಿಗೆ ಪೇಯಗಳನ್ನೂ, ಭಕ್ಷ್ಯಗಳನ್ನೂ, ಸುಗಂಧಯುಕ್ತವಾದ ರಸಗಳನ್ನೂ, ಮನೋಹರವಾದ ಮತ್ತು ಸಂತೋಷಕರವಾದ ಉಳಿದ ವಸ್ತುಗಳನ್ನೂ, ತರಲು ಸಿದ್ಧರಾಗಿದ್ದೇವೆ ಎಂದು ಹೇಳಿದರು.
ತದ್ವಾಕ್ಯಸಮಕಾಲಂ ತು ಸರ್ವಂ ಕೃತಮವೇದಯತ್ |
ಸಹದೇವೋ ಯುಧಾಂ ಶ್ರೇಷ್ಠೋ ಧರ್ಮರಾಜೇ ಮಹಾತ್ಮನೇ ॥33॥
ಧರ್ಮರಾಜನು ಅಜ್ಞೆಯನ್ನು ಮಾಡಿದ ಸ್ವಲ್ಪ ಸಮಯದಲ್ಲಿಯೇ ಯುದ್ಧದಲ್ಲಿ ಶ್ರೇಷ್ಠನಾದ ಸಹದೇವನು ಮಹಾತ್ಮನಾದ ಧರ್ಮರಾಜನಿಗೆ ಎಲ್ಲವನ್ನು ಮಾಡಿದ್ದಾಗಿದೆ ಎಂದು ಹೇಳಿದನು.
ತತೋ ದ್ವೈಪಾಯನೋ ರಾಜನ್ ಋತ್ವಿಜಃ ಸಮುಪಾನಯತ್ |
ವೇದಾನಿವ ಮಹಾಭಾಗಾನ್ ಸಾಕ್ಷಾನ್ಮೂರ್ತಿಮತೋ ದ್ವಿಜಾನ್ ॥34॥
ರಾಜನೇ! ಅನಂತರ ವೇದವ್ಯಾಸರು ವೇದಗಳೇ ಶರೀರವನ್ನು ಧರಿಸಿ ಬಂದಂತಿದ್ದ ಮಹಾನುಭಾವರಾದ ಬ್ರಾಹ್ಮಣರನ್ನು ಋತ್ವಿಕ್‌ಗಳಾಗಿ ಕರೆದುಕೊಂಡು ಬಂದರು.
ಮೂರ್ತಿಮಾನ್ ಸಾಮವೇದೋಽಥ ವೇದವೇದಾಂಗಪಾರಗಃ |

ಧನಂಜಯಾನಾಮೃಷಭಃ ಸುಸಾಮಾ ಸಾಮಗೋಽಭವತ್ ॥35॥
ಯಾಜಕರಲ್ಲಿ ಶ್ರೇಷ್ಠನಾದ ವೇದವೇದಾಂಗ ಪಾರಂಗತನಾದ ಸಾಮವೇದವೇ ಶರೀರವನ್ನು ಧರಿಸಿದಂತಿದ್ದ ಸುಸಾಮ ಎಂಬ ಋಷಿಯು ಸಾಮಗನಾದನು.
ಯಾಜ್ಞವಲ್ಕ್ಯೋ ಬಭೂವಾಸ್ಯ ಬ್ರಹ್ಮಿಷ್ಠೋಽಧ್ವರ್ಯುಸತ್ತಮಃ |
ಪೈಲೋ ಹೋತಾ ವಸೋಃ ಪುತ್ರೋ ರೈಭ್ಯೋ ಬ್ರಹ್ಮಾಽಥ ಸತ್ತಮಃ ॥36॥
ಏತೇಷಾಂ ಶಿಷ್ಯವರ್ಗಾಶ್ಚ ಪುತ್ರಾಶ್ಚ ಭರತರ್ಷಭ |
ಬಭೂವುರ್ಋತ್ವಿಜಃ ಸರ್ವೇ ವೇದವೇದಾಂಗಪಾರಗಾಃ ॥37॥
ಬ್ರಹ್ಮಿಷ್ಠರಾದ ಯಾಜ್ಞವಲ್ಕ್ಯರು ಯಜ್ಞದಲ್ಲಿ ಶ್ರೇಷ್ಠರಾದ ಅಧ್ವರ್ಯುಗಳಾದರು. ಪೈಲರು ಹೋತೃಗಳಾದರು. ವಸುಪುತ್ರರಾದ ಶ್ರೇಷ್ಠತಮರಾದ ರೈಭ್ಯರು ಬ್ರಹ್ಮ ಋತ್ವಿಕ್‌ಗಳಾದರು. ಭರತರ್ಷಭನೇ! ವೇದವೇದಾಂಗಪಾರಂಗತರಾದ ಈ ಋಷಿಗಳ ಶಿಷ್ಯರು ಮತ್ತು ಪುತ್ರರೆಲ್ಲರೂ ಋತ್ವಿಕ್‌ಗಳು ಆದರು.
ಸ್ವಯಂ ಚ ಭಗವಾನ್ ವ್ಯಾಸಃ ಶಿಷ್ಯೈಃ ಸರ್ವೈಃ ಪುರಸ್ಕೃತಃ |
ಕೃಷ್ಣದ್ವೈಪಾಯನೋ ರಾಜನ್ ಸಾದಸ್ಯಮಕರೋತ್ ಪ್ರಭುಃ ॥38॥
ರಾಜನೇ! ಕೃಷ್ಣದ್ವೈಪಾಯನರಾದ ಪ್ರಭುಗಳಾದ ವೇದವ್ಯಾಸದೇವರು ತಾವೇ ಎಲ್ಲ ಶಿಷ್ಯರಿಂದಲೂ ಕೂಡಿಕೊಂಡು ಸದಸ್ಯಪದವಿಯನ್ನು ನಿರ್ವಹಿಸಿದರು.
ತೇ ಪೂಜಯಿತ್ವಾ ಪುಣ್ಯಾಹಮೀರಯಿತ್ವಾ ಮಹಾವ್ರತಾಃ |
ಶಾಸ್ತ್ರೋಕ್ತಂ ಮಾಪಯಾಮಾಸುಃ ತದ್ದೇವಯಜನಂ ಮಹತ್ ॥39॥
ಆ ಮಹಾವ್ರತರೆಲ್ಲರೂ ಆರಂಭದ ಪೂಜೆಯನ್ನು ಮಾಡಿ ಪುಣ್ಯಾಹವಾಚನವನ್ನು ಮಾಡಿ ಶಾಸ್ತ್ರೋಕ್ತರೀತಿಯಲ್ಲಿ ದೊಡ್ಡ ಯಜ್ಞಭೂಮಿಯನ್ನು ಅಳೆಸಿದರು.
ತತಶ್ಚಕ್ರುರನಾಜ್ಞಾತಾಃ ಶರಣಾನ್ಯಥ ಶಿಲ್ಪಿನಃ |
ರತ್ನವಂತಿ ವಿಶಾಲಾನಿ ವೇಶ್ಮಾನೀವ ದಿವೌಕಸಾಮ್ ॥40॥
ಅನಂತರ ಶಿಲ್ಪಿಗಳು ರಾಜನ ಆಜ್ಞೆಯನ್ನು ಕೇಳದೇ, ತಾವೇ ದೇವತೆಗಳ ಮನೆಗಳಂತಿದ್ದ ವಿಶಾಲವಾದ ರತ್ನಭರಿತವಾದ ಮನೆಗಳನ್ನು ನಿರ್ಮಾಣಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರಿಂಶೋಽಧ್ಯಾಯಃ ॥
॥ ರಾಜಸೂಯಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿಯಿತು.
*****

ಮೂವತ್ತೊಂದನೆಯ ಅಧ್ಯಾಯ
(ಎಲ್ಲರ ಆಗಮನ; ಅಧಿಕಾರವ್ಯವಸ್ಥೆ; ಮತ್ತು ಯಾಗಾನುಷ್ಠಾನ.)
ವೈಶಂಪಾಯನಃ
ತತ ಆಜ್ಞಾಪಯಾಮಾಸ ಸ ರಾಜಾ ರಾಜಸತ್ತಮಃ
ಸಹದೇವಂ ತದಾ ಸದ್ಯೋ ಮಂತ್ರಿಣಃ ಕುರುಸತ್ತಮ ॥1॥
ಕುರುಶ್ರೇಷ್ಠನೇ! ಅನಂತರ ರಾಜಶ್ರೇಷ್ಠನಾದ ಆ ಧರ್ಮರಾಜನು ತಕ್ಷಣದಲ್ಲಿಯೇ ಸಹದೇವನಿಗೂ ಮತ್ತು ಮಂತ್ರಿಗಳಿಗೂ ಅಜ್ಞೆಯನ್ನು ಮಾಡಿದನು.
ಆಮಂತ್ರಣಾರ್ಥಂ ದೂತಾಂಶ್ಚ ಪ್ರೇಷಯಸ್ವಾಶುಗಾನ್ ದ್ರುತಮ್ |
ಉಪಶ್ರುತ್ಯ ವಚೋ ರಾಜ್ಞಃ ಸ ದೂತಾನ್ ಪ್ರಾಹಿಣೋತ್ ತದಾ ॥2॥
ಎಲ್ಲರನ್ನು ಆಹ್ವಾನಮಾಡುವುದಕ್ಕೋಸ್ಕರ ಶೀಘ್ರವಾಗಿಹೋಗುವ ದೂತರನ್ನು ಬೇಗೆ ಕಳುಹಿಸು ಹೀಗೆ ಹೇಳಿದ ಧರ್ಮರಾಜನ ಮಾತನ್ನು ಕೇಳಿ ಸಹದೇವನು ದೂತರನ್ನು ಕಳುಹಿಸಿದನು.
ಆಮಂತ್ರಯಧ್ವಂ ರಾಷ್ಟ್ರೇಷು ಬ್ರಾಹ್ಮಣಾನ್ ಭೂಮಿಪಾನಪಿ |
ವಿಶಶ್ಚ ಮಾನ್ಯಾನ್ ಶೂದ್ರಾಂಶ್ಚ ಸರ್ವಾನಾನಯತೇತಿ ಚ ॥3॥
ಬೇರೆ ಬೇರೆ ರಾಷ್ಟ್ರಗಳಲ್ಲಿರುವ ಬ್ರಾಹ್ಮಣರನ್ನೂ ರಾಜರನ್ನೂ ವೈಶ್ಯರನ್ನೂ ಮಾನ್ಯರಾದ ಶೂದ್ರರನ್ನೂ ಎಲ್ಲರನ್ನೂ ಆಹ್ವಾನಿಸಿ ಕರೆದುಕೊಂಡು ಬನ್ನಿ. (ಎಂದೂ ಧರ್ಮರಾಜನು ಆಜ್ಞೆಮಾಡಿದನು.)
ತೇ ಸರ್ವಾನ್ ಪೃಥಿವೀಪಾಲಾನ್ ಪಾಂಡವೇಯಸ್ಯ ಶಾಸನಾತ್|
ಆಮಂತ್ರಯಾಂಬಭೂವುಸ್ತೇ ಪ್ರೇಷಯಾಮಾಸ ಚಾಪರಾನ್ ॥4॥
ಆ ದೂತರೆಲ್ಲರೂ ಪಾಂಡುಪುತ್ರನಾದ ಧರ್ಮರಾಜನ ಶಾಸನದಂತೆ ಎಲ್ಲರನ್ನೂ ಆಹ್ವಾನಿಸಲು. ಸಹದೇವನು ಬೇರೆ ದೂತರನ್ನು ಬೇರೆ ಬೇರೆ ಕಡೆಗೆ ಕಳುಹಿಸಿದನು.
ದೂತಾಶ್ಚ ವಾಹನೈರ್ಜಗ್ಮೂ ರಾಷ್ಟ್ರಾಣಿ ಸುಬಹೂನ್ಯಪಿ |
ತತೋ ಯುಧಿಷ್ಠಿರೋ ರಾಜಾ ಪ್ರೇಷಯಾಮಾಸ ಪಾಂಡವಮ್ ||5॥
ನಕುಲಂ ಹಸ್ತಿನಪುರಂ ಭೀಷ್ಮಾಯ ಭರತರ್ಷಭ |
ಬಾಹ್ಲಿಕಾಯ ಸಪುತ್ರಾಯ ಭೂರಿಶ್ರವಸಕರ್ಣಯೋಃ |

ಭ್ರಾತೄಣಾಂ ಚೈವ ಸರ್ವೇಷಾಂ ಯೇಽನುರಕ್ತಾ ಯುಧಿಷ್ಠಿರೇ ॥6॥
ಭರತರ್ಷಭನೇ! ದೂತರೆಲ್ಲರೂ ವಾಹನಗಳಲ್ಲಿ ಅನೇಕ ರಾಷ್ಟ್ರಗಳಿಗೆ ಹೋದರು. ಅನಂತರ ಧರ್ಮರಾಜನು ಭೀಷ್ಮ, ಪುತ್ರಸಹಿತನಾದ ಬಾಹ್ಲಿಕ ಭೂರಿಶ್ರವಸ್ಸು, ಕರ್ಣ, ತನ್ನ ಎಲ್ಲಾ ಸೋದರರು ಮತ್ತು ತನ್ನಲ್ಲಿ ಅನುರಕ್ತರಾದವರು ಇವರುಗಳನ್ನು ಆಹ್ವಾನಮಾಡಲು ಪಾಂಡುಪುತ್ರನಾದ ನಕುಲನನ್ನು ಹಸ್ತಿನಪುರಕ್ಕೆ ಕಳುಹಿಸಿದನು.
ಸ ಗತ್ವಾ ಹಸ್ತಿನಪುರಂ ನಕುಲಃ ಸಮಿತಿಂಜಯಃ॥
ಭೀಷ್ಮಮಾಮಂತ್ರಯಾಮಾಸ ಧೃತರಾಷ್ಟ್ರಂ ಚ ಪಾಂಡವಃ ॥7॥
ಪಾಂಡು ಪುತ್ರನಾದ ಸಮಿಂತಿಜಯನಾದ (ಯುದ್ಧದಲ್ಲಿ ಜಯಶೀಲನಾದ) ಆ ನಕುಲನು ಹಸ್ತಿನಪುರಕ್ಕೆ ಹೋಗಿ ಭೀಷ್ಮರನ್ನು ಮತ್ತು ಧೃತರಾಷ್ಟ್ರನನ್ನು ಆಮಂತ್ರಿಸಿದನು.
ತತಸ್ತೇ ತು ಯಥಾಕಾಲಂ ಕುಂತೀಪುತ್ರಂ ಯುಧಿಷ್ಠಿರಮ್ |
ದೀಕ್ಷಯಾಂಚಕ್ರಿರೇ ವಿಪ್ರಾ ರಾಜಸೂಯಾಯ ಭಾರತ ॥8॥
ಭಾರತನೇ! ಅನಂತರ ಬ್ರಾಹ್ಮಣರೆಲ್ಲರೂ ಯೋಗ್ಯಕಾಲದಲ್ಲಿ ಕುಂತೀ ಪುತ್ರನಾದ ಯುಧಿಷ್ಠಿರನಿಗೆ ರಾಜಸೂಯಯಾಗದ ದೀಕ್ಷೆಯನ್ನು ಮಾಡಿದರು.
ಜ್ಯೇಷ್ಠೇ ಮೂಲೇ ಅಮಾವಾಸ್ಯಾಂ ಮಹಾಜನಸಮಾವೃತಃ |
ರೌರವಾಜಿನಸಂವೀತೋ ನವನೀತಾಕ್ತದೇಹವಾನ್ ॥9॥
ದೀಕ್ಷಿತಃ ಸ ತು ಧರ್ಮಾತ್ಮಾ ಧರ್ಮರಾಜೋ ಯುಧಿಷ್ಠಿರಃ |
ಜಗಾಮ ಯಜ್ಞಾಯತನಂ ವೃತೋ ವಿಪ್ರೈಃ ಸಹಸ್ರಶಃ ॥10॥
ಜ್ಯೇಷ್ಠಮಾಸದಲ್ಲಿ ಅಮಾವಾಸ್ಯೆಯಂದು ಮೂಲಾನಕ್ಷತ್ರದಲ್ಲಿ ಮಹಾಜನಗಳಿಂದ ಪರಿವೃತನಾಗಿ ಕೃಷ್ಣಾಜಿನವನ್ನು ಧರಿಸಿ ನವನೀತದಿಂದ ಲೇಪಿಸಲ್ಪಟ್ಟ ಶರೀರವುಳ್ಳವನಾದ ಧರ್ಮಾತ್ಮನಾದ ಯುಧಿಷ್ಠಿರನು ದೀಕ್ಷಿತನಾಗಿ ಸಹಸ್ರಾರು ವಿಪ್ರರಿಂದ ಪರಿವೃತನಾಗಿ ಯಜ್ಞಶಾಲೆಗೆ ಹೋದನು.
ಭ್ರಾತೃಭಿರ್ಜ್ಞಾತಿಭಿಶ್ಚೈವ ಸುಹೃದ್ಭಿಃ ಸಚಿವೈಸ್ತಥಾ |
ಕ್ಷತ್ರಿಯೈಶ್ಚ ಮನುಷ್ಯೈಶ್ಚ ನಾನಾದೇಶಸಮಾಗತೈಃ |
ಅಮಾತ್ಯೈಶ್ಚ ನೃಪಶ್ರೇಷ್ಠೋ ಧರ್ಮೋ ವಿಗ್ರಹವಾನಿವ ॥11॥
ತಮ್ಮಂದಿರಿಂದಲೂ ದಾಯಾದಿಗಳಿಂದಲೂ ಹಿತೈಷಿಗಳಿಂದಲೂ ಸಚಿವರಿಂದಲೂ ಕ್ಷತ್ರಿಯರಿಂದಲೂ, ಮನುಷ್ಯರಿಂದಲೂ, ನಾನಾದೇಶಗಳಿಂದ ಬಂದ ಅಮಾತ್ಯರಿಂದಲೂ, ಕೂಡಿದವನಾಗಿ ನೃಪಶ್ರೇಷ್ಠನಾದ ಧರ್ಮರಾಜನು ಧರ್ಮವೇ ಮೈವೆತ್ತಂತೆ ಯಜ್ಞಶಾಲೆಯನ್ನು ಪ್ರವೇಶಿಸಿದನು.
ಆಜಗ್ಮುರ್ಬ್ರಾಹ್ಮಣಾಸ್ತತ್ರ ವಿಷಯೇಭ್ಯಸ್ತತಸ್ತತಃ |
ಸರ್ವವಿದ್ಯಾಸು ನಿಷ್ಣಾತಾ ವೇದವೇದಾಂಗಪಾರಗಾಃ ॥12॥
ಅಲ್ಲಿಗೆ ಬೇರೆ ಬೇರೆ ದೇಶಗಳಿಂದ ಎಲ್ಲ ವಿದ್ಯೆಗಳಲ್ಲಿಯೂ ನಿಷ್ಣಾತರಾದ ವೇದವೇದಾಂಗ ಪಾರಂಗತರಾದ ಬ್ರಾಹ್ಮಣರು ಬಂದರು.
ತೇಷಾಮಾವಸಥಾಂಶ್ಚಕ್ರುರ್ಧರ್ಮರಾಜಸ್ಯ ಶಾಸನಾತ್ |
ಬಹ್ವನ್ನಾನ್ ವ್ಯಂಜನೈರ್ಯುಕ್ತಾನ್ ಸಗಣಾನಾಂ ಪೃಥಕ್ ಪೃಥಕ್ |
ಸರ್ವರ್ತುಗುಣಸಂಪನ್ನಾನ್ ಶಿಲ್ಪಿನೋಽಥ ಸಹಸ್ರಶಃ ॥13॥
ಧರ್ಮರಾಜನ ಶಾಸನದಂತೆ ಗೃಹನಿರ್ಮಾಣಶಿಲ್ಪಿಗಳು ಅವರೆಲ್ಲರಿಗೂ ಮತ್ತು ಅವರ ಪರಿವಾರಗಳಿಗೂ ಎಲ್ಲ ಋತುಗಳ ಗುಣಗಳಿಂದ ಕೂಡಿದಂತಹ ಅನ್ನ ಮತ್ತು ವ್ಯಂಜನಗಳಿಂದ ತುಂಬಿದಂತಹ ಬಿಡಾರಗಳನ್ನು ಸಹಸ್ರ ಸಂಖ್ಯೆಯಲ್ಲಿ ನಿರ್ಮಾಣಮಾಡಿದರು.
ತೇಷು ತೇ ನ್ಯವಸನ್ ರಾಜನ್ ಬ್ರಾಹ್ಮಣಾ ಭೃಶಸತ್ಕೃತಾಃ |
ಕಥಯಂತಃ ಕಥಾ ಬಹ್ವೀಃ ಪಶ್ಯಂತೋ ನಟನರ್ತಕಾನ್ ॥14॥
ರಾಜನೇ! ಅತ್ಯಂತ ಸತ್ಕೃತರಾದ ಆ ಬ್ರಾಹ್ಮಣರು ಆ ಬಿಡಾರಗಳಲ್ಲಿ ಅನೇಕ ಕಥೆಗಳನ್ನು ಹೇಳುತ್ತಾ ನಟ ನರ್ತಕರನ್ನು ನೋಡುತ್ತಾ ವಾಸಮಾಡಿದರು.
ಭುಂಜತಾಂ ಚಾಥ ವಿಪ್ರಾಣಾಂ ದದತಾಂ ಚ ಮಹಾತ್ಮನಾಮ್ |
ಅನಿಶಂ ಶ್ರೂಯತೇ ಚಾತ್ರ ಮುದಿತಾನಾಂ ಮಹಾಸ್ವನಃ ॥15॥
ಭೋಜನವನ್ನು ಮಾಡುವ ವಿಪ್ರರ ಮತ್ತು ದಾನವನ್ನು ಕೊಡುವ ಮಹಾತ್ಮರಾದ ಕ್ಷತ್ರಿಯರು ಸಂತೋಷಯುಕ್ತನಾದ ಮಹಾಸ್ವನವು ಅಲ್ಲಿ ಸತತವಾಗಿ ಕೇಳಿಬರುತ್ತಿತ್ತು.
ದೀಯತಾಂ ದೀಯತಾಮೇಷಾಂ ಭುಜ್ಯತಾಂ ಭುಜ್ಯತಾಮಿತಿ |
ಏವಂಪ್ರಕಾರಾಃ ಸಂಜಲ್ಪಾಃ ಶ್ರೂಯಂತೇ ಸ್ಮಾತ್ರ ನಿತ್ಯಶಃ ॥16॥
ಇವರಿಗೆ ದಾನವನ್ನು ಕೊಡಿ. ಅವರಿಗೆ ದಾನವನ್ನು ಕೊಡಿ, ಭೋಜನವನ್ನು ಮಾಡಿ, ಭೋಜನವನ್ನು ಮಾಡಿ ಎಂಬ ಈ ರೀತಿಯಾದ ಮಾತುಗಳು ಅಲ್ಲಿ ಯಾವಾಗಲೂ ಕೇಳಿ ಬರುತ್ತಿತ್ತು.
ಗವಾಯುತಸಹಸ್ರಾಣಿ ಶಯನಾನಾಂ ಶತಾನಿ ಚ |
ರುಗ್ಮಸ್ಯ ಯೋಷಿತಾಂ ಚೈವ ಧರ್ಮರಾಜಃ ಪೃಥಗ್ ದದೌ ॥17॥
ಧರ್ಮರಾಜನು ಅವರಿಗೆಲ್ಲಾ ಒಂದು ಕೋಟಿ ಗೋವುಗಳನ್ನೂ ನೂರಾರು ಶಯನಗಳನ್ನೂ, ಸುವರ್ಣ ಮತ್ತು ದಾಸಿಯರನ್ನೂ ಬೇರೆ ಬೇರೆಯಾಗಿ ಕೊಟ್ಟನು.
ಪ್ರಾವರ್ತತೈವಂ ಯಜ್ಞಃ ಸ ಪಾಂಡವಸ್ಯ ಮಹಾತ್ಮನಃ |

ಪೃಥಿವ್ಯಾಮೇಕವೀರಸ್ಯ ಶಕ್ರಸ್ಯೇವ ತ್ರಿವಿಷ್ಟಪೇ ॥19॥
ಸ್ವರ್ಗದಲ್ಲಿ ಇಂದ್ರನ ಯಾಗದಂತೆ ಪೃಥಿವಿಯಲ್ಲಿ ಮುಖ್ಯವೀರನಾದ ಮಾಹಾತ್ಮನಾದ ಪಾಂಡವನ ಯಜ್ಞವು ಈ ರೀತಿ ಜರುಗಿತು.
ತತ ಆಮಂತ್ರಿತಾ ರಾಜನ್ ರಾಜಾನಃ ಸತ್ಕೃತಾಸ್ತದಾ |
ಪುರೇಭ್ಯಃ ಪ್ರಯಯುಃ ಸ್ವೇಭ್ಯೋ ವಿಮಾನೇಭ್ಯ ಇವಾಮರಾಃ ॥19॥
ರಾಜನೇ! ಸತ್ಕರಿಸಿ, ಆಮಂತ್ರಿಸಲ್ಪಟ್ಟ ಎಲ್ಲಾ ರಾಜರೂ ಆಗ ತಮ್ಮ ತಮ್ಮ ಪಟ್ಟಣಗಳಿಂದ ವಿಮಾನಗಳಲ್ಲಿ ದೇವತೆಗಳು ಬಂದಂತೆ ಅಲ್ಲಿಗೆ ಬಂದರು.
ತೇ ವೈ ದಿಗ್ಭ್ಯಃ ಸಮಾಪೇತುಃ ಪಾರ್ಥಿವಾಸ್ತತ್ರ ಭಾರತ |
ಸಮಾದಾಯ ಮಹಾರ್ಹಾಣಿ ರತ್ನಾನಿ ವಿವಿಧಾನಿ ಚ ॥20॥
ಭಾರತನೇ! ಆ ರಾಜರು ಬೆಲೆಬಾಳುವ ವಿವಿಧವಾದ ರತ್ನಗಳನ್ನು ತೆಗೆದು ಕೊಂಡು ಬೇರೆ ಬೇರೆ ದಿಕ್ಕುಗಳಿಂದ ಅಲ್ಲಿಗೆ ಆಗಮಿಸಿದರು.
ತಚ್ಛ್ರುತ್ವಾ ಧರ್ಮರಾಜಸ್ಯ ಯಜ್ಞಂ ಯಜ್ಞವಿದಸ್ತದಾ |
ರಾಜಾನಃ ಶತಶಸ್ತುಷ್ಟೈರ್ಮನೋಭಿರ್ಭರತರ್ಷಭ ॥21॥
ಬಹು ವಿತ್ತಂ ಸಮಾದಾಯ ವಿವಿಧಾಃ ಪಾರ್ಥಿವಾ ಯಯುಃ |
ದ್ರಷ್ಟುಕಾಮಾಃ ಸಭಾಂ ಚೈವ ಧರ್ಮರಾಜಂ ಚ ಪಾಂಡವಮ್ ॥22॥
ಭರತರ್ಷಭನೇ! ಧರ್ಮರಾಜನ ಯಜ್ಞದ ವಿಷಯವನ್ನು ಕೇಳಿ ಯಜ್ಞದ ಮಹತ್ವವನ್ನು ತಿಳಿದ ರಾಜರು, ನೂರಾರು ಸಂಖ್ಯೆಯಲ್ಲಿ ಸಂತುಷ್ಟವಾದ ಮನಸ್ಸಿಂದ ಕೂಡಿದವರಾಗಿ, ವಿಧವಿಧವಾದ ಬಹುಧನವನ್ನು ತೆಗೆದುಕೊಂಡು, ಪಾಂಡವನಾದ ಧರ್ಮರಾಜನ ಸಭೆಯನ್ನೂ ಮತ್ತು ಧರ್ಮರಾಜನನ್ನೂ ನೋಡುವ ಉದ್ದೇಶದಿಂದ ಸಹ ಅಲ್ಲಿಗೆ ಬಂದರು.
ನಕುಲೋ ಹಸ್ತಿನಪುರಂ ಗತ್ವಾ ಪರಪುರಂಜಯಃ |
ಪ್ರಯತಃ ಪ್ರಾಂಜಲಿರ್ಭೂತ್ವಾ ಭಾರತಾನಾನಯತ್ ತದಾ ॥23॥
ಪರಪುರಂಜಯನಾದ ವಿನೀತನಾದ ನಕುಲನು ಹಸ್ತಿನಪುರಕ್ಕೆ ಹೋಗಿ ಕೈಗಳನ್ನು ಮುಗಿದು ಎಲ್ಲಾ ಭರತವಂಶದವರನ್ನು ಕರೆದುಕೊಂಡು ಬಂದನು.
ಭೀಷ್ಮಂ ಚ ಧೃತರಾಷ್ಟ್ರಂ ಚ ವಿದುರಂ ಚ ಮಹಾಮತಿಃ |
ದುರ್ಯೋಧನಪುರೋಗಾಂಶ್ಚ ಭ್ರಾತೄನ್ ಸರ್ವಾನಥಾನಯತ್ ॥24॥
ಮಹಾಮತಿಯಾದ ನಕುಲನು ಭೀಷ್ಮನನ್ನು ಧೃತರಾಷ್ಟ್ರನನ್ನು ವಿದುರನನ್ನು ದುಯೋಧನನೇ ಮೊದಲಾದ ಎಲ್ಲಾ ಸಹೋದರರನ್ನು ಕರೆದುಕೊಂಡು ಬಂದನು.
ಸತ್ಕೃತ್ಯಾಮಂತ್ರಿತಾಃ ಸರ್ವೇ ಕೃಪದ್ರೋಣಮುಖಾ ನೃಪಾಃ |
ಪುರೇಭ್ಯಃ ಪ್ರಯಯುಃ ಸರ್ವೇ ಯಜ್ಞಂ ಬ್ರಹ್ಮಪುರಸ್ಸರಾಃ ॥25॥
ಸತ್ಕರಿಸಿ, ಆಮಂತ್ರಿಸಲ್ಪಟ್ಟ ರಾಜರೆಲ್ಲರೂ ಬ್ರಾಹ್ಮಣರನ್ನು ಮುಂದೆಮಾಡಿಕೊಂಡು ತಮ್ಮ ತಮ್ಮ ಪಟ್ಟಣಗಳಿಂದ ಯಜ್ಞಕ್ಕೆ ಬಂದರು. ಕೃಪ ದ್ರೋಣ ಮೊದಲಾದವರೂ ಯಜ್ಞಕ್ಕೆ ಬಂದರು.
ಗಾಂಧಾರರಾಜಃ ಶಕುನಿಃ ಸುಬಲಶ್ಚ ಮಹಾಬಲಃ |
ಅಚಲೋ ವೃಷಕಶ್ಚೈವ ಕರ್ಣಶ್ಚ ದದತಾಂ ವರಃ ॥26॥
ಋತಃ ಶಲ್ಯೋ ಮದ್ರರಾಜೋ ಬಾಹ್ಲಿಕಶ್ಚ ಮಹಾಬಲಃ |
ಸೋಮದತ್ತೋಽಥ ಕೌರವ್ಯೋ ಭೂರಿರ್ಭೂರಿಶ್ರವಾಃ ಶಲಃ ॥27॥
ಅಶ್ವತ್ಥಾಮಾ ಕೃಪೋ ದ್ರೋಣಃ ಸೈಂಧವಶ್ಚ ಜಯದ್ರಥಃ |
ಯಜ್ಞಸೇನಃ ಸಪುತ್ರಶ್ಚ ಸಾಲ್ವಶ್ಚ ವಸುಧಾಧಿಪಃ ॥28॥
ಪ್ರಾಗ್ಜ್ಯೋತಿಷಶ್ಚ ನೃಪತಿರ್ಭಗದತ್ತೋ ಮಹಾಯಶಾಃ |
ಸಹ ಸರ್ವೈಸ್ತಥಾ ಮ್ಲೇಚ್ಛೈಃ ಸಾಗರಾನೂಪವಾಸಿಭಿಃ ॥29॥
ಪಾರ್ವತೀಯಾಶ್ಚ ರಾಜಾನೋ ರಾಜಾ ಚೈವ ಬೃಹದ್ಬಲಃ |
ಪೌಂಡ್ರಕೋ ವಾಸುದೇವಶ್ಚ ವಂಗಃ ಕಾಲಿಂಗಕಸ್ತಥಾ ॥30॥
ಆಕರ್ಷಾಃ ಕುಂತಲಾಶ್ಚೈವ ವಾನಪ್ರಸ್ಥಾ ವೃಕಾಸ್ತಥಾ |
ದ್ರಾಮಿಳಾಃ ಸಿಂಹಳಾಃ ಪಾಂಡ್ಯಾ ರಾಜಾ ಕಾಶ್ಮೀರಕಸ್ತಥಾ ॥31॥
ಕುಂತಿಭೋಜೋ ಮಹಾತೇಜಾಃ ಸುಭ್ರೂಶ್ಚ ಸುಮಹಾಬಲಃ |
ಬಾಹ್ಲಿಕಾಶ್ಚಾಪರೇ ಶೂರಾ ರಾಜಾನಃ ಸರ್ವ ಏವ ಹಿ ॥32॥
ವಿರಾಟಃ ಸಹ ಪುತ್ರಾಭ್ಯಾಂ ಪಾಂಚಾಲಾಶ್ಚ ಮಹಾರಥಾಃ |
ರಾಜಾನೋ ರಾಜಪುತ್ರಾಶ್ಚ ನಾನಾಜನಪದೇಶ್ವರಾಃ ॥33॥
ಶಿಶುಪಾಲೋ ಮಹಾವೀರ್ಯಃ ಸಹ ಪುತ್ರೇಣ ಭಾರತ |
ಆಗಚ್ಛತ್ ಪಾಂಡವೇಯಸ್ಯ ಯಜ್ಞಂ ಸಂಗ್ರಾಮದುರ್ಮದಃ ॥34॥
ಗಾಂಧಾರರಾಜನಾದ ಶಕುನಿ, ಮಹಾಬಲನಾದ ಅವನ ತಂದೆಯಾದ ಸುಬಲ, ಅಚಲ, ವೃಷಕ, ದಾನಶೂರನಾದ ಕರ್ಣ, ಋತ, ಮದ್ರರಾಜನಾದ ಶಲ್ಯ, ಮಹಾಬಲನಾದ ಬಾಹ್ಲಿಕ, ಕೌರವ ವಂಶಕ್ಕೆ ಸೇರಿದ ಸೋಮದತ್ತ, ಭೂರಿ ಭೂರಿಶ್ರವ ಮತ್ತು ಶಲ, ಅಶ್ವತ್ಥಾಮ ಕೃಪಾ ದ್ರೋಣ ಸಿಂಧುದೇಶದ ಅಧಿಪತಿಯಾದ ಜಯದ್ರಥ, ಪುತ್ರನಿಂದ ಕೂಡಿದ ಯಜ್ಞಸೇನ, ಸಾಲ್ವರಾಜ, ಮಹಾಯಶಸ್ವಿಯಾದ ಪ್ರಾಗ್ಜ್ಯೋತಿಷ ಪಟ್ಟಣದ ರಾಜನಾದ ಭಗದತ್ತ, ಸಮುದ್ರತೀರಲ್ಲಿ ವಾಸಿಸುವ ಮ್ಲೇಚ್ಛರಿಂದ ಕೂಡಿದ ಪರ್ವತದೇಶದ ಎಲ್ಲಾ

ರಾಜರುಗಳು, ಬೃಹದ್ಬಲರಾಜ, ಪೌಂಡ್ರಕವಾಸುದೇವ, ವಂಗ, ಕಳಿಂಗಾಧಿಪತಿಗಳು, ಆಕರ್ಷರು, ಕುಂತಳರು, ವಾನಪ್ರಸ್ಥರು, ವೃಕದೇಶನಿವಾಸಿಗಳು . ದ್ರಾವಿಡರು, ಸಿಂಹಳರು, ಪಾಂಡ್ಯರು, ಕಾಶ್ಮೀರರಾಜ, ಮಹಾತೇಜಸ್ವಿಯಾದ ಕುಂತಿಭೋಜ, ಬಲಶಾಲಿಯಾದ ಸುಭ್ರು, ಬಾಹ್ಲಿಕದೇಶದ ಶೂರರಾದ ಬೇರೆ ರಾಜರುಗಳು ತನ್ನ ಇಬ್ಬರು ಮಕ್ಕಳಿಂದ ಕೂಡಿದ ವಿರಾಟ ಮಹಾರಥರಾದ ಪಾಂಚಾಲರಾಜರು ಬೇರೆ ಬೇರೆ ದೇಶಗಳ ರಾಜರು ಮತ್ತು ರಾಜಪುತ್ರರು ಪುತ್ರನಿಂದ ಒಡಗೂಡಿದ ಮಹಾಬಲಶಾಲಿಯಾದ ಯುದ್ಧ ದುರ್ಮದನಾದ ಶಿಶುಪಾಲ ಇವರೆಲ್ಲರೂ ಪಾಂಡುಪುತ್ರನಾದ ಧರ್ಮರಾಜನ ಯಜ್ಞಕ್ಕೆ ಬಂದರು.

ರಾಮಶ್ಚೈವಾನಿರುದ್ಧಶ್ಚ ಬಭ್ರುಶ್ಚ ಸಹಸಾರಣಃ |
ಗದಪ್ರದ್ಯುಮ್ನಸಾಂಬಾಶ್ಚ ಚಾರುದೇಷ್ಣಶ್ಚ ವೀರ್ಯವಾನ್ ॥35॥
ಉನ್ಮುಖೋ ವಿಪೃಥುಶ್ಚೈವ ವೀರಃ ಪ್ರಾದ್ಯುಮ್ನಿರೇವ ಚ |
ವೃಷ್ಣಯೋ ನಿಖಿಲಾಶ್ಚಾನ್ಯೇ ಸಮಾಜಗ್ಮುರ್ಮಹಾರಥಾಃ ॥36॥

ಬಲರಾಮ ಅನಿರುದ್ಧ ಬಭ್ರು ಸಾರಣ ಗದ ಪ್ರದ್ಯುಮ್ನ ಸಾಂಬ ಪರಾಕ್ರಮಿಯಾದ ಚಾರುದೇಷ್ಣ ಉನ್ಮುಖ ವೀರನಾದ ವಿಪೃಥು, ಪ್ರದ್ಯುಮ್ನನ ಮಗನಾದ ಅನಿರುದ್ಧ ಈ ಎಲ್ಲಾ ಮಹಾರಥರೂ ಮತ್ತು ಉಳಿದ ವೃಷ್ಣಿಗಳೂ ಯಜ್ಞಕ್ಕೆ ಬಂದರು.

ಏತೇ ಚಾನ್ಯೇ ಚ ಬಹವೋ ರಾಜಾನೋ ಮಧ್ಯದೇಶಜಾಃ |
ಆಜಗ್ಮುಃ ಪಾಂಡುಪುತ್ರಸ್ಯ ರಾಜಸೂಯಂ ಮಹಾಕ್ರತುಮ್ ॥37॥

ಇವರು ಮತ್ತು ಮಧ್ಯದೇಶದ ಇನ್ನು ಅನೇಕರಾಜರು ಪಾಂಡುಪುತ್ರನ ಮಹಾಯಜ್ಞವನ್ನು ನೋಡಲು ಅಲ್ಲಿಗೆ ಬಂದರು.

ದದುಸ್ತೇಷಾಮಾವಸಥಾನ್ ಧರ್ಮರಾಜಸ್ಯ ಶಾಸನಾತ್ |
ಬಹುಕಕ್ಷ್ಯಾನ್ವಿತಾನ್ ರಾಜ್ಞಾಂ ದೀರ್ಘಿಕಾವೃಕ್ಷಶೋಭಿತಾನ್ ॥38॥

ಧರ್ಮರಾಜನ ಶಾಸನದಂತೆ ಅವರೆಲ್ಲರಿಗೂ ಅನೇಕ ಕಕ್ಷೆಗಳಿಂದ ಕೂಡಿದ್ದ ಬಾವಿಗಳಿಂದ ಮತ್ತು ವೃಕ್ಷಗಳಿಂದ ಕೂಡಿದ್ದ ಶೋಭಿತವಾದ ಬಿಡಾರಗಳನ್ನು ಕೊಟ್ಟರು.

ತಥಾ ಧರ್ಮಾತ್ಮಜಸ್ತೇಷಾಂ ಚಕ್ರೇ ಪೂಜಾಮನುತ್ತಮಾಮ್ |
ಸತ್ಕೃತಾಶ್ಚ ಮಹೀಪಾಲಾಃ ಸುಖಮೂಷುರ್ನರಾಧಿಪಾಃ ॥39॥

ಆಗ ಧರ್ಮಾತ್ಮಜನಾದ ಯುಧಿಷ್ಠರನು ಅವರೆಲ್ಲರಿಗೂ ಶ್ರೇಷ್ಠವಾದ ಸತ್ಕಾರವನ್ನು ಮಾಡಿದನು. ಸತ್ಕೃತರಾದ ರಾಜರೆಲ್ಲರೂ ಅಲ್ಲಿ ಸುಖವಾಗಿ ವಾಸಮಾಡಿದರು.

ಕೈಲಾಸಶಿಖರಪ್ರಖ್ಯೈರ್ನಭಃಸ್ಥಲವಿಲೇಖಿಭಿಃ |
ಸರ್ವತಃ ಸಂವೃತೈರ್ನದ್ಧೈಃ ಪ್ರಾಕಾರೈಃ ಸುಕೃತೈಃ ಸಿತೈಃ ॥40॥
ಸುವರ್ಣಜಾಲವಿತತೈರ್ಮಣಿಕುಟ್ಟಿಮಭೂಷಿತೈಃ |
ಸುಖಾರೋಹಣಸೋಪಾನೈರ್ಮಹಾಸನಪರಿಚ್ಛದೈಃ ॥41॥
ಸ್ರಗ್ದಾಮಭಿರವಚ್ಛನ್ನೈರಗರೂತ್ತಮಧೂಪಿತೈಃ |
ಹಂಸವರ್ಣೈಃ ಸುಬಹುಭಿರಾಯೋಜನಸುದರ್ಶನೈಃ ॥42॥
ಅಸಂಬಾಧಸುಖದ್ವಾರೈಃ ಶಯನಾಸನಶೋಭಿತೈಃ |
ಬಹುಧಾತುಪಿನದ್ಧಾಂಗೈರ್ಹಿಮವಚ್ಛಿಖರೈರಿವ ॥43॥

ಕೈಲಾಸ ಶಿಖರದಂತಿರುವ ನಭೋದೇಶವನ್ನೂ ಕೊರೆಯುವಂತೆ ತೋರುವ, ಎಲ್ಲಾ ಕಡೆಗಳಲ್ಲಿಯೂ ಮುಚ್ಚಲ್ಪಟ್ಟ ಚೆನ್ನಾಗಿ ಕಟ್ಟಿದ ಬಿಳಿಯ ಪ್ರಾಕಾರಗಳಿಂದ ಕೂಡಿದ, ಚಿನ್ನದ ಸರಪಳಿಗಳನ್ನು ತೂಗುಹಾಕಿದ ಮಣಿಮಯವಾದ ಜಗುಲಿಗಳಿಂದ ಭೂಷಿತವಾದ, ಸುಖವಾಗಿ ಹತ್ತಲು ಸಾಧ್ಯವಾದ ಮೆಟ್ಟಲುಗಳಿಂದ ಕೂಡಿದ, ಶ್ರೇಷ್ಠವಾದ ಆಸನ ಮತ್ತು ಉಪಕರಣಗಳಿಂದ ಕೂಡಿದ, ಹೂವಿನ ಮಾಲೆಗಳಿಂದ ಅಲಂಕರಿಸಲ್ಪಟ್ಟ, ಸುಗಂಧದ್ರವ್ಯಗಳಿಂದ ಭೂಷಿತವಾದ, ಹಂಸದಂತೆ ಬಿಳಿಯವರ್ಣದಿಂದ ಕೂಡಿದ, ಒಂದು ಯೋಜನದೂರದಿಂದಲೂ ಎದ್ದು ಕಾಣುವ ವಿಸ್ತಾರವಾದ ಮುಂಬಾಗಿಲುಗಳಿಂದ ಕೂಡಿದ, ಪೀಠ ಮತ್ತು ಮಂಚಗಳಿಂದ ಶೋಭಿತವಾದ, ಅನೇಕ ರತ್ನಗಳಿಂದ ಗೋಡೆಗಳಲ್ಲಿ ಖಚಿತವಾದಂತಹ ಹಿಮಾಲಯದ ಶಿಖರದಂತೆತೋರುವ ಬಿಡಾರಗಳಲ್ಲಿ ಅವರೆಲ್ಲರೂ ವಾಸಿಸಿದರು.

ವಿಶ್ರಾಂತೈಸ್ತೈಸ್ತತಃ ಸರ್ವೈರ್ಭೂಮಿಪೈರ್ಭೂರಿದಕ್ಷಿಣೈಃ |
ವೃತಂ ಸಹಸ್ರೈರ್ಬಹುಭಿರ್ಧರ್ಮರಾಜೋ ಯುಧಿಷ್ಠಿರಃ ॥44॥

ಭೂರಿದಕ್ಷಿಣೆಯನ್ನು ಕೊಡುವ ಆ ಭೂಮಿಪಾಲರೆಲ್ಲರೂ ವಿಶ್ರಾಂತಿಯನ್ನು ಪಡೆದ ಮೇಲೆ ಧರ್ಮರಾಜನಾದ ಯುಧಿಷ್ಠಿರನು ಅಂತಹ ಸಹಸ್ರಾರು ರಾಜರಿಂದ ಪರಿವೃತನಾದನು.

ತತ್ ಸದಃ ಪಾರ್ಥಿವೈಃ ಕೀರ್ಣಂ ಬ್ರಾಹ್ಮಣೈಶ್ಚ ಮಹಾತ್ಮಭಿಃ |
ಭ್ರಾಜತೇ ಸ್ಮ ಮಹಾರಾಜ ನಾಕಪೃಷ್ಠಮಿವಾಮರೈಃ॥45॥

ಮಹಾರಾಜನೇ ರಾಜರುಗಳಿಂದಲೂ ಮಹಾತ್ಮರಾದ ಬ್ರಾಹ್ಮಣರಿಂದಲೂ ನಿಬಿಡವಾಗಿ ತುಂಬಿದ ಆ ಯಜ್ಞಶಾಲೆಯು ದೇವತೆಗಳಿಂದ ನಿಬಿಡವಾಗಿ ತುಂಬಿದ ಸ್ವರ್ಗದಂತೆ ಶೋಭಿಸುತ್ತಿತ್ತು.

ತತಸ್ತ್ವಾಜ್ಞಾಪಯಾಮಾಸ ಪಾಂಡವೋಽರಿನಿಬರ್ಹಣಃ |
ಸಹದೇವಂ ಕುರುಶ್ರೇಷ್ಠಂ ಮಂತ್ರಿಣಶ್ಚೈವ ಸರ್ವಶಃ॥46॥

ಆಗ ಶತ್ರುನಿಷೂದನನಾದ ಪಾಂಡವನಾದ ಧರ್ಮರಾಜನು ಕುರುಶ್ರೇಷ್ಠನಾದ ಸಹದೇವನನ್ನೂ, ರಾಜರನ್ನೂ ಮತ್ತು ಎಲ್ಲಾ ಮಂತ್ರಿಗಳನ್ನೂ ಕುರಿತು ಆಜ್ಞೆಯನ್ನು ಮಾಡಿದನು.

ಅಸ್ಮಿನ್ ಕ್ರತೌ ಯಥೋಕ್ತಾನಿ ಯಜ್ಞಾಂಗಾನಿ ದ್ವಿಜಾತಿಭಿಃ |

ಅಭಿಸಂಜ್ಞಾಂಶ್ಚ ಸಂಭಾರಾನ್ ಧೌಮ್ಯೋಕ್ತಾನ್ ಭರತರ್ಷಭ |
ಸರ್ವಮಾನಯ ತಾನ್ ಕ್ಷಿಪ್ರಂ ಸಹದೇವ ಯಥಾತಥಮ್ ॥47॥
ಭರತರ್ಷಭನಾದ ಸಹದೇವನೇ! ಈ ಯಜ್ಞದಲ್ಲಿ ಬ್ರಾಹ್ಮಣರು ಹೇಳಿದಂತಹ ಯಜ್ಞಾಂಗಗಳನ್ನೂ ಧೌಮ್ಯರು ಹೇಳಿದಂತಹ ಬೇರೆ ಬೇರೆ ಹೆಸರುಗಳುಳ್ಳ ಅನೇಕ ಉಪಯುಕ್ತಪದಾರ್ಥಗಳನ್ನೂ ಸರಿಯಾಗಿ ಬೇಗ ಬೇಗ ತೆಗೆದುಕೊಂಡು ಬಾ.
ಇಂದ್ರಸೇನೋ ವಿಶೋಕಶ್ಚ ರುಕ್ಮಶ್ಚಾರ್ಜುನಸಾರಥಿಃ |
ಶಮೀಕೋ ಧ್ವಜಸೇನಶ್ಚ ಪಂಚಸಾರಥಿಪುಂಗವಾಃ |
ಅನ್ನಾದ್ಯೇ ವ್ಯಾಪೃತಾಃ ಸಂತು ಸಹದೇವ ತವಾಜ್ಞಯಾ ॥48॥
ಉಪಾರ್ಜಿತಾನ್ ಸರ್ವಕಾಮಾನ್ ರಸಗಂಧಸಮನ್ವಿತಾನ್ |
ಮನೋಹರಾನ್ ಪ್ರೀತಿಕರಾನ್ ಅನ್ನಾದ್ಯಾಂಶ್ಚ ಸುಸಂಸ್ಕೃತಾನ್ ॥49॥
ಸಹದೇವನೇ ನಿನ್ನ ಆಜ್ಞೆಯಂತೆ ಇಂದ್ರಸೇನ ವಿಶೋಕ ಅರ್ಜುನಸಾರಥಿಯಾದ ರುಗ್ಮ ಶಮೀಕ ಧ್ವಜಸೇನ ಈ ಐದು ಜನ ಸಾರಥಿಶ್ರೇಷ್ಠರು ಬ್ರಾಹ್ಮಣರಿಗೆ ಅನ್ನಾದಿಗಳನ್ನು ಒದಗಿಸುವುದರಲ್ಲಿ ಉದ್ಯುಕ್ತರಾಗಲಿ. ಹಾಗೆಯೇ ಇಲ್ಲಿ ಉಪಾರ್ಜಿತವಾದ ಅವರಿಗೆ ಬೇಕಾದ ಮನೋಹರವೂ ಮತ್ತು ಪ್ರೀತಿಕರವೂ ಆದ ಎಲ್ಲ ವಸ್ತುಗಳನ್ನೂ ರಸಗಂಧಸಮನ್ವಿತವಾದ ಸುಸಂಕೃತವಾದ ಅನ್ನಾದಿಗಳನ್ನೂ ಕೊಡುವುದರಲ್ಲಿ ಅವರು ಉದ್ಯುಕ್ತರಾಗಲಿ.
ಪಿತಾಮಹಂ ಗುರುಂ ಚಾಥ ಪ್ರತ್ಯುದ್ಗಮ್ಯ ಯುಧಿಷ್ಠಿರಃ |
ಅಭಿವಾದ್ಯೋಪಸಂಗೃಹ್ಯ ವಾಕ್ಯಮೇತದುವಾಚ ಹ ॥50॥
ಯುಧಿಷ್ಠಿರನು ಭೀಷ್ಮರಿಗೂ ಮತ್ತು ದ್ರೋಣಾಚಾರ್ಯರಿಗೂ ಅಭಿಮುಖವಾಗಿ ನಿಂತು ಅವರಿಗೆ ನಮಸ್ಕರಿಸಿ ಅವರನ್ನು ಸ್ವಾಗತಿಸಿ ಈ ಮಾತನ್ನು ಹೇಳಿದನು.
ಭೀಷ್ಮೋ ದ್ರೌಣಿಃ ಕೃಪೋ ದ್ರೋಣೋ ದುರ್ಯೋಧನವಿವಿಂಶತೀ|
ಅಸ್ಮಿನ್ ಯಜ್ಞೇ ಭವಂತೋ ಮಾಮನುಗೃಹ್ಣಂತು ಸರ್ವಶಃ ॥51॥
ಭೀಷ್ಮ ಅಶ್ವತ್ಥಾಮ ಕೃಪ ದ್ರೋಣ ದುರ್ಯೋಧನ ವಿವಿಶಂತಿ ಮೊದಲಾದ ನೀವೆಲ್ಲರೂ ಈ ಯಜ್ಞದಲ್ಲಿ ನನ್ನನ್ನು ಸರ್ವವಿಧದಲ್ಲಿಯೂ ಅನುಗ್ರಹಿಸಬೇಕು.
ಇದಂ ವಃ ಸ್ವಮಹಂ ಚೈವ ಯದಿಹಾಸ್ತಿ ಧನಂ ಮಮ |
ಪ್ರೀಣಯಂತು ಭವಂತೋ ಮಾಂ ಯಥೇಷ್ಟಮನಿಯಂತ್ರಿತಾಃ ॥52॥
ಈ ಎಲ್ಲಾ ನನ್ನ ಸಂಪತ್ತು ನಿಮ್ಮದು. ನನಗಿರುವ ಧನವೆಲ್ಲವೂ ನಿಮ್ಮದು. ನಾನು ಸಹ ನಿಮಗೆ ಸೇರಿದವನು. ಇವುಗಳನ್ನು ಯಾವ ಸಂಕೋಚವೂ ಇಲ್ಲದೆ ಉಪಯೋಗಿಸಿ ನೀವೆಲ್ಲರೂ ನನ್ನನ್ನು ಅನುಗ್ರಹಿಸಿ.
ಏವಮುಕತ್ವ ಸ ತಾನ್ ರಾಜಾ ದೀಕ್ಷಿತಃ ಪಾಂಡವಾಗ್ರಜಃ |
ನ್ಯಯೋಜಯದ್ ಯಥಾಯೋಗಮಧಿಕಾರೇಷ್ವನಂತರಮ್ ॥53॥
ದೀಕ್ಷಿತನಾದ ಪಾಂಡವರಲ್ಲಿ ಅಗ್ರಜನಾದ ಧರ್ಮರಾಜನು ಅವರನ್ನು ಕುರಿತು ಹೀಗೆ ಹೇಳಿ ಅನಂತರ ಉಳಿದವರಿಗೆ ಅವರವರಿಗೆ ಯೋಗ್ಯವಾದ ಅಧಿಕಾರವನ್ನು ಹಂಚಿದನು.
ಭಕ್ಷ್ಯಭೋಜ್ಯಾಧಿಕಾರೇಷು ಯುಯುತ್ಸುಂ ಸಮಯೋಜಯತ್ |
ಪಾದ್ಯಾರೋಪಣಕಾರ್ಯೇ ಚ ಉಚ್ಛಿಷ್ಟಾಪನಯೇ ಪುನಃ |
ಸಾತ್ಯಕಿಂ ಭೀಮಸೇನಂ ಚ ಮಹಾನಸವಿಚಾರಣೇ ॥54॥
ಭಕ್ಷ್ಯಬೋಜ್ಯಗಳ ಮೇಲ್ವಿಚಾರಣೆಗೆ ಯುಯುತ್ಸುವನ್ನು ನೇಮಿಸಿದನು. ಪಂಕ್ತಿಗಳಲ್ಲಿ ಕೂಡಿಸುವುದಕ್ಕೆ ಮತ್ತು ಊಟಮಾಡಿದ ಪಾತ್ರೆಗಳನ್ನು ತೆಗೆಯುವುದಕ್ಕೆ ಸಾತ್ಯಕಿಯನ್ನು ನೇಮಿಸಿದನು. ಭೀಮಸೇನನಿಗೆ ಪಾಕಶಾಲೆಯ ಮೇಲ್ವಿಚಾರಣೆಯನ್ನು ವಹಿಸಿದನು.
ಭೋಜನಾವೇಕ್ಷಣೇ ಚೈವ ದುಶ್ಶಾಸನಮಯೋಜಯತ್ |
ಪ್ರತಿಗ್ರಹೇ ಬ್ರಾಹ್ಮಣಾನಾಮಶ್ವತ್ಥಾಮಾನಮುಕ್ತವಾನ್ ॥55॥
ಬ್ರಾಹ್ಮಣರ ಮತ್ತು ಉಳಿದವರ ಭೋಜನದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ದುಶ್ಯಾಸನನನ್ನು ನೇಮಿಸಿದನು. ಬಂದ ಬ್ರಾಹ್ಮಣರನ್ನು ಸ್ವೀಕರಿಸಲು ಅಶ್ವತ್ಥಾಮನಿಗೆ ಹೇಳಿದನು.
ರಾಜ್ಞಾಂ ತು ಪ್ರತಿಪೂಜಾರ್ಥಂ ಸಂಜಯಂ ಸ ನ್ಯಯೋಜಯತ್ |
ಕೃತಾಕೃತಪರಿಜ್ಞಾನೇ ಭೀಷ್ಮದ್ರೋಣೌ ಮಹಾಮತೀ ॥56॥
ರಾಜರ ಸತ್ಕಾರಕ್ಕಾಗಿ ಸಂಜಯನನ್ನು ನೇಮಿಸಿದನು. ಕೃತಾಕೃತಕಾರ್ಯಗಳ ಮೇಲ್ವಿಚಾರಣೆಯನ್ನು ಮೇಧಾವಿಗಳಾದ ಭೀಷ್ಮ ದ್ರೋಣರಿಗೆ ಒಪ್ಪಿಸಿದನು.
ಹಿರಣ್ಯಸ್ಯ ಸುವರ್ಣಸ್ಯ ರತ್ನಾನಾಂ ಚಾನ್ವವೇಕ್ಷಣೇ |
ದಕ್ಷಿಣಾನಾಂ ಚ ವೈ ದಾನೇ ಕೃಪಂ ರಾಜಾ ನ್ಯಯೋಜಯತ್ |
ತಥಾನ್ಯಾನ್ ಪುರುಷವ್ಯಾಘ್ರಾಂಸ್ತಸ್ಮಿಂಸ್ತಸ್ಮಿನ್ ನ್ಯಯೋಜಯತ್ ॥57॥
ಸುವರ್ಣಗಳು ರತ್ನಗಳು ಮತ್ತು ದಕ್ಷಿಣೆಗಳ ದಾನದಲ್ಲಿ ಕೃಪಾಚಾರ್ಯರನ್ನು ನೇಮಿಸಿದನು. ಹಾಗೆಯೇ ಬೇರೆ ಬೇರೆ ಪುರುಷಶ್ರೇಷ್ಠರನ್ನು ಅವರವರಿಗೆ ಯೋಗ್ಯವಾದ ಕಾರ್ಯಗಳಲ್ಲಿ ನಿಯೋಜಿಸಿದರು.
ಬಾಹ್ಲೀಕೋ ಧೃತರಾಷ್ಟ್ರಶ್ಚ ಸೋಮದತ್ತೋ ಜಯದ್ರಥಃ |
ನಕುಲೇನ ಸಮಾಹೂತಾಃ ಸ್ವಾಮಿವತ್ ತತ್ರ ಮೇನಿರೇ ॥58॥
ಬಾಹ್ಲಿಕ ಧೃತರಾಷ್ಟ್ರ ಸೋಮದತ್ತ ಜಯದ್ರಥ ಇವರು ನಕುಲನಿಂದ ಆಹ್ವಾನಿಸಲ್ಪಟ್ಟವರಾಗಿ ಅಲ್ಲಿ ತಮ್ಮನ್ನು ಒಡೆಯರಂತೆ

ತಿಳಿದರು.
ಕ್ಷತ್ತಾ ಸೂಕ್ಷ್ಮವ್ಯಯಂ ಚಕ್ರೇ ಘೃತಾದಿ ಮಧುರಾದಿಕಮ್ |
ಚರಣಕ್ಷಾಳನೇ ಕೃಷ್ಣೋ ಬ್ರಾಹ್ಮಣಾನಾಂ ಸ್ವಯಂ ಹ್ಯಭೂತ್ |
ದುರ್ಯೋಧನಸ್ತ್ವರ್ಹಣಾನಿ ಪ್ರತಿಜಗ್ರಾಹ ಸರ್ವಶಃ ||59||
ವಿದುರನು ಸೂಕ್ಷ್ಮವ್ಯಯದ ಮೇಲ್ವಿಚಾರಣೆಯನ್ನೂ ಘೃತಶರ್ಕರಾದಿಮೇಲ್ವಿಚಾರಣೆಯನ್ನೂ ನೋಡಿಕೊಂಡನು. ಕೃಷ್ಣನು ತಾನಾಗಿಯೇ ಬ್ರಾಹ್ಮಣರ ಪಾದಪ್ರಕ್ಷಾಲನೆಯ ಕಾರ್ಯವನ್ನು ವಹಿಸಿಕೊಂಡನು. ದುರ್ಯೋಧನನಾದರೂ ಬರುತ್ತಿದ್ದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿವುದರಲ್ಲಿ ನಿರತನಾದನು.
ಸರ್ವಲೋಕಾಃ ಸಮಾವೃತ್ತಾಃ ಪ್ರಹೃಷ್ಟಾಸ್ತತ್ರ ಭಾರತ |
ದ್ರಷ್ಟುಕಾಮಾಃ ಸಭಾಂ ಚೈವ ಧರ್ಮರಾಜಂ ಚ ಪಾಂಡವಮ್ ||60||
ಭಾರತನೇ! ಎಲ್ಲ ಜನರೂ ಅಲ್ಲಿಗೆ ಸಭೆಯನ್ನೂ ಮತ್ತು ಧರ್ಮರಾಜನನ್ನೂ ನೋಡಲು ಬಂದು ಸೇರಿದರು.
ನ ಕಶ್ಚಿದವಹತ್ ತತ್ರ ಸಹಸ್ರಾವರಮರ್ಹಣಮ್ |
ರತ್ನೈಶ್ಚ ಬಹುಭಿಸ್ತತ್ರ ಧರ್ಮರಾಜಮವರ್ಧಯನ್ ||61||
ಯಜ್ಞಕ್ಕೆ ಬಂದ ಯಾವ ಕ್ಷತ್ರಿಯರೂ ಒಂದು ಸಹಸ್ರಕ್ಕಿಂತ ಕಡಿಮೆಯಾದ ಕಾಣಿಕೆಯನ್ನು ತರಲಿಲ್ಲ. ಅವರು ತಮ್ಮ ರತ್ನಗಳಿಂದ ಧರ್ಮರಾಜನನ್ನು ಅಭಿವೃದ್ಧಿಪಡಿಸಿದರು.
ಕಥಂ ತು ಮಮ ಕೌರವ್ಯೋ ರತ್ನದಾನೈಃ ಸಮಾಪ್ನುಯಾತ್ |
ಯಜ್ಞಮಿತ್ಯೇವ ರಾಜಾನಃ ಸ್ಪರ್ಧಮಾನಾಃ ದದುರ್ಧನಮ್ ||62||
ನಾನು ಕೊಡುವ ರತ್ನದಾನವು ಧರ್ಮರಾಜನಿಗೆ ಯಜ್ಞವನ್ನು ಮುಗಿಸಲು ಹೇಗೆ ಸಾಕಾಗುತ್ತದೆ ಎಂದು ಯೋಚಿಸಿ ರಾಜರು ಪರಸ್ಪರ ಸ್ಪರ್ದೆಯಿಂದ ಹೆಚ್ಚು ಧನವನ್ನು ತಂದು ಕೊಟ್ಟರು.
ಭವನೈಃ ಸವಿಮಾನಾಗ್ರೈಃ ಸೋದರ್ಕೈರ್ಬಹುಸಂವೃತೈಃ |
ಲೋಕ್ಯೈ ರಾಜವಿಮಾನೈಶ್ಚ ಬ್ರಾಹ್ಮಣಾವಸಥೈಃ ಸಹ ||63||
ಕೃತೈರಾವಸಥೈರ್ದಿವ್ಯೈರ್ವಿಮಾನಪ್ರತಿಮೈಸ್ತಥಾ |
ವಿಚಿತ್ರೈ ರತ್ನವದ್ಭಿಶ್ಚ ಋದ್ಧ್ಯಾ ಪರಮಯಾ ಯುತೈಃ ||64||
ರಾಜಭಿಶ್ಚ ಸಮಾವೃತ್ತೈರತೀವಶ್ರೀಸಮೃದ್ಧಿಭಿಃ |
ಅಶೋಭತ ತದಾ ರಾಜನ್ ಯಜ್ಞವಾಟೋ ಮಹಾತ್ಮನಃ ||65||
ರಾಜನೇ ಆ ಮಹಾತ್ಮನಾದ ಧರ್ಮರಾಜನ ಯಜ್ಞದ ವೇದಿಕೆ ಅನೇಕ ಉಪ್ಪರಿಗೆಗಳನ್ನು ಹೊಂದಿದ್ದ ಎಲ್ಲಾ ಕಡೆಗಳಿಂದಲೂ ನೀರಿನ ಸೌಕರ್ಯವನ್ನು ಹೊಂದಿದ್ದ ಮತ್ತು ಬ್ರಾಹ್ಮಣ ನಿವಾಸಗಳಿಂದಲೂ, ದಿವ್ಯವಾದ ವಿಮಾನಗಳಂತೆ ರಚಿಸಲ್ಪಟ್ಟ ವಿಚಿತ್ರವಾದ ರತ್ನಗಳಿಂದ ಕೂಡಿದ ಪರಮಸಮೃದ್ಧಿಯಿಂದ ಯುತವಾದ ವಿಶ್ರಾಂತಿ ಸ್ಥಾನಗಳಿಂದಲೂ, ವಿಚಿತ್ರವಾದ ರತ್ನಗಳಿಂದಕೂಡಿದ ಪರಮ ಸಮೃದ್ಧಿಗಳಿಂದಲೂ, ಅತ್ಯಂತ ಸಮೃದ್ಧಿಯನ್ನು ಹೊಂದಿದ ಅಲ್ಲಿಗೆ ಬಂದ ರಾಜರುಗಳಿಂದಲೂ, ಬಹಳವಾಗಿ ಶೋಭಿಸುತ್ತಿತ್ತು.
ಋದ್ಧ್ಯಾ ಚ ವರುಣಂ ದೇವಂ ಸ್ಪರ್ಧಮಾನೋ ಯುಧಿಷ್ಠಿರಃ |
ಷಡಗ್ನಿನಾऽಥ ಯಜ್ಞೇನ ಸೋऽಯಜದ್ ದಕ್ಷಿಣಾವತಾ |
ಸರ್ವಾನ್ ಜನಾನ್ ಸರ್ವಕಾಮೈಃ ಸಮೃದ್ಧೈಃ ಸಮತರ್ಪಯತ್ ||66||
ತನ್ನ ಸಮೃದ್ಧಿಯಿಂದ ವರುಣನ ಜೊತೆಯಲ್ಲಿ ಸ್ಪರ್ಧಿಸುವಂತೆ ತೋರುತ್ತಿದ್ದ ಧರ್ಮರಾಜನು ಗಾರ್ಹಪತ್ಯ ಅಹವನೀಯ ದಕ್ಷಿಣಾಗ್ನಿ ಸಭ್ಯ ಆವಸಥ್ಯ ಮತ್ತು ವೈವಾಹಿಕ ಈ ಆರು ಅಗ್ನಿಗಳನ್ನು ಸ್ಥಾಪಿಸಿ ಭೂರಿದಕ್ಷಿಣೆಯನ್ನು ಕೊಟ್ಟು ಯಾಗವನ್ನು ಮಾಡಿದನು. ಯಜ್ಞಕ್ಕೆ ಬಂದ ಎಲ್ಲರನ್ನೂ ಅವರ ಎಲ್ಲಾ ಕಾಮನೆಗಳನ್ನೂ ಸಮೃದ್ಧವಾಗಿ ಪೂರ್ಣಗೊಳಿಸಿ ಅವರನ್ನು ತೃಪ್ತಿಪಡಿಸಿದನು.
ಅನ್ನವಾನ್ ಬಹುಭಕ್ಷ್ಯಶ್ಚ ಭುಕ್ತವಜ್ಜನಸಂವೃತಃ |
ರತ್ನೋಪಹಾರಕರ್ಮಣ್ಯೋ ಬಭೂವ ಸ ಮಹಾನೃಪಃ ||67||
ಆ ಯಜ್ಞವು ಶ್ರೇಷ್ಠವಾದ ಅನ್ನದಿಂದಲೂ ಬಹುಭಕ್ಷ್ಯಗಳಿಂದಲೂ ಮತ್ತು ಭೋಜನಮಾಡಿ ಸಂತುಷ್ಟರಾದ ಜನರಿಂದಲೂ ತುಂಬಿದ್ದಿತು. ಮಹಾರಾಜನಾದ ಯುಧಿಷ್ಠಿರನು ರತ್ನಗಳನ್ನು ದಾನಕೊಡುವ ಕರ್ಮದಲ್ಲಿಯೇ ನಿರತನಾಗಿದ್ದನು.
ಇಧ್ಮಾಜ್ಯಸೋಮಾಹುತಿಭಿಃ ಮಂತ್ರಾಕ್ಷರಸಮನ್ವಿತೈಃ |
ತಸ್ಮಿನ್ ಹಿ ತತೃಪುರ್ದೇವಾಸ್ತತೇ ಯಜ್ಞೇ ಮಹರ್ಷಿಭಿಃ ||68||
ಮಂತ್ರಸಹಿತವಾದ ಇಧ್ಮ (ಕಟ್ಟಿಗೆ) ಆಜ್ಯ ಮತ್ತು ಸೋಮರಸದ ಆಹುತಿಗಳಿಂದ ಮಹರ್ಷಿಗಳು ವಿಸ್ತಾರವಾಗಿಮಾಡಿದ ಆ ಯಜ್ಞದಲ್ಲಿ ದೇವತೆಗಳು ತೃಪ್ತಿಯನ್ನು ಹೊಂದಿದರು.
ಯಥಾ ದ
ೇವಾಸ್ತಥಾ ವಿಪ್ರಾ ದಕ್ಷಿಣಾಭಿರ್ಮಹಾಧನೈಃ |
ತತೃಪುಃ ಸರ್ವವರ್ಣಾಶ್ಚ ತಸ್ಮಿನ್ ಯಜ್ಞೇ ಮುದಾನ್ವಿತಾಃ ||69||
ದೇವತೆಗಳು ಆಹುತಿಯಿಂದ ತೃಪ್ತಿಹೊಂದಿದಂತೆ ಬ್ರಾಹ್ಮಣರು ದಕ್ಷಿಣೆಯ ರೂಪದಿಂದ ಬಂದ ಮಹಾಧನಗಳಿಂದ ತೃಪ್ತಿಹೊಂದಿದರು. ಆ ಯಜ್ಞದಲ್ಲಿ ಎಲ್ಲಾ ವರ್ಣದವರೂ ತೃಪ್ತಿಯನ್ನುಹೊಂದಿ ಸಂತೋಷದಿಂದ ಕೂಡಿದವರಾದರು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕತ್ರಿಂಶೋಧ್ಯಾಯಃ ||
|| ರಾಜಸೂಯಪರ್ವಣಿ ಸಮಾಪ್ತಮ್ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.

ಇಲ್ಲಿಗೆ ರಾಜಸೂಯಪರ್ವವು ಮುಗಿಯಿತು.
*****
5. ಅರ್ಘಾಭಿಹರಣ ಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ತತ್ರ ಸರ್ವಜಗದೇಕಸಂಗಮೇ
ತತ್ತ್ವನಿರ್ಣಯಕಥಾ ಬಭೂವಿರೇ |
ಪ್ರಾಶ್ನಿಕೋಽತ್ರ ಪರಿಪೂರ್ಣಚಿದ್ಘನೋ
ವ್ಯಾಸ ಏವ ಭಗವಾನ್ ಬಭೂವ ಹ ॥242॥
ಎಲ್ಲ ಲೋಕದ ಜನರೂ ಒಂದೆಡೆ ಸೇರಿದ್ದ ಆ ಯಾಗಶಾಲೆಯಲ್ಲಿ ತತ್ವನಿರ್ಣಯಕ್ಕಾಗಿ ವಿಚಾರಗೋಷ್ಠಿಗಳು ನಡೆದವು. ಆ ಗೋಷ್ಠಿಗಳಲ್ಲಿ ಪರಿಪೂರ್ಣ ಚಿದಾನಂದ ಸ್ವರೂಪರಾದ ಭಗವಾನ್ ವ್ಯಾಸರೆ ಪ್ರಾಶ್ನಿಕರಾಗಿದ್ದರು.
ತತ್ತ್ವನಿರ್ಣಯಕಥಾಸು ನಿರ್ಣಯೋ
ವಾಸುದೇವಗುಣವಿಸ್ತರೋಽಭವತ್ |
ನಾಸ್ತಿ ತತ್ಸದೃಶ ಉತ್ತಮಃ ಕುತಃ
ಪಾರ ಏಷ ನ ತತೋಽನ್ಯ ಇತ್ಯಪಿ ॥243॥
ತತ್ವನಿರ್ಣಯಕ್ಕಾಗಿ ನಡೆದ ಗೋಷ್ಠಿಗಳಲ್ಲಿ ಶ್ರೀಹರಿಯ ಗುಣಪೂರ್ಣತ್ವದ ಬಗ್ಗೆ ನಿರ್ಣಯವಾಯಿತು- `ಹರಿಗೆ ಸಮಾನನೆ ಇಲ್ಲ, ಇನ್ನು ಉತ್ತಮನೆಲ್ಲಿ? ತಾರತಮ್ಯದಲ್ಲಿ ಕೊನೆಯವನು ಅವನೇ ಹೊರತು ಇನ್ನೊಬ್ಬನಿಲ್ಲ' ಎಂದು.
ಬಾದರಾಯಣಭೃಗೂತ್ತರಾಮಯೋಃ
ಶೃಣ್ವತೋಃ ಪರಮನಿರ್ಣಯೇ ಕೃತೇ |
ಮೋದಮಾನಜನತಾಸಮಾಗಮೇಽ-
ಪೃಚ್ಛದತ್ರ ನೃಪತಿರ್ಯತವ್ರತಂ ॥244॥
ವೇದವ್ಯಾಸ ಪರಶುರಾಮರು ಕೇಳುತ್ತಿದ್ದಂತೆ ಪರತತ್ವ ನಿರ್ಣಯ ನಡೆದಾಗ ಸಂತುಷ್ಟರಾದ ಜನರ ಗೋಷ್ಠಿಯಲ್ಲಿ ಧರ್ಮರಾಜ ಭೀಷ್ಮನನ್ನು ಕೇಳಿದ.
ಜಾನಮಾನೋಽಪಿ ನೃಪತಿಃ ಸರ್ವಪೂಜ್ಯತಮಂ ಹರಿಂ |
ಸಂಶಯಂ ಭೂಭೃತಾಂ ಭೇತ್ತುಂ ಭೀಷ್ಮಂ ಪಪ್ರಚ್ಛ ಧರ್ಮವಿತ್ ॥245॥
ಧರ್ಮರಾಜ ಕೃಷ್ಣನನ್ನು ಸರ್ವೋತ್ತಮ ಪೂಜ್ಯನೆನಿಸಿದ ಶ್ರೀಹರಿಯೆ ಎಂದು ತಿಳಿದಿದ್ದರೂ ರಾಜರ ಸಂಶಯವನ್ನು ಕಳೆವ ಉದ್ದೇಶದಿಂದ ಭೀಷ್ಮನಲ್ಲಿ ಪ್ರಶ್ನೆಗೈದ.
ನಾಸ್ತಿ ನಾರಾಯಣಸಮಮಿತಿ ವಾದೇನ ನಿರ್ಣಯೇ |
ಕೃತೇ ಬ್ರಹ್ಮಾದಿಭಿರಪಿ ಕೃಷ್ಣಂ ಮರ್ತ್ಯಂ ಹಿ ಮೇನಿರೇ ॥246॥
ನೃಪಾಸ್ತಸ್ಮಾದಯಂ ಕೃಷ್ಣೋ ನಾರಾಯಣ ಇತಿ ಸ್ಮ ಹ |
ಸಮ್ಯಗ್ ಜ್ಞಾಪಯಿತುಂ ಧರ್ಮಸೂನುರ್ಭೀಷ್ಮಮಪೃಚ್ಛತ ॥247॥
ಏಕೆಂದರೆ ನಾರಾಯಣನಿಗೆ ಸಮರಿಲ್ಲ ಎಂದು ಬ್ರಹ್ಮಾದಿಗಳು ವಾದದಿಂದ ನಿರ್ಣಯ ಮಾಡಿದ್ದರೂ ರಾಜರು ಇನ್ನೂ ಕೃಷ್ಣನನ್ನು ಮನುಷ್ಯನೆಂದೇ ತಿಳಿದಿದ್ದರು. ಅದರಿಂದ ಕೃಷ್ಣ ನಾರಾಯಣನೇ ಎಂದು ಅವರಿಗೆ ಚೆನ್ನಾಗಿ ಮನವರಿಕೆ ಮಾಡಿಸಲು ಧರ್ಮರಾಜ ಭೀಷ್ಮನನ್ನು ಪ್ರಶ್ನಿಸಿದ.
ಬ್ರಹ್ಮಾದಯಃಸುರಾ ಯಸ್ಮಾದ್ ದೃಶ್ಯಂತೇ ಮರ್ತ್ಯವನ್ನೃಭಿಃ |
ನ ಚೈವಾತಿತರಾಭ್ಯಾಸೋ ನೃಣಾಮಸ್ತಿ ಮುನಿಷ್ವಪಿ ॥248॥
ಬ್ರಹ್ಮಾದಿ ದೇವತೆಗಳು ಅಲ್ಲಿಗೆ ಮನುಷ್ಯವೇಷದಿಂದ ಬಂದಿದ್ದರಿಂದ ಮನುಷ್ಯರಿಗೆ ಮನುಷ್ಯರಂತೆಯೆ ಕಂಡರು. ಸದಾ ಅರಣ್ಯಗಳಲ್ಲಿ ಇರುವ ಮುನಿಗಳಲ್ಲಿಯೂ, ಅವರು ಹೆಚ್ಚು ಪರಿಚಿತರಾಗದ್ದರಿಂದ, ಮನುಷ್ಯರಿಗೆ ವಿಶ್ವಾಸವಿರಲಿಲ್ಲ.
ಸರ್ವಶಾಸ್ತ್ರವಿದಂ ಭೀಷ್ಮಂ ಜಾನಂತ್ಯೇತೇ ನೃಪಾ ಅಪಿ |
ತಸ್ಮಾದ್ ಭೀಷ್ಮಮಪೃಚ್ಛತ್ ಸ ಕುಲವೃದ್ಧತ್ವತಸ್ತಥಾ ॥249॥
ಭೀಷ್ಮ ಸರ್ವಶಾಸ್ತ್ರಗಳನ್ನು ಬಲ್ಲವನೆಂದು ಈ ರಾಜರೂ ತಿಳಿದಿದ್ದಾರೆ. ಅವನು ಮನೆತನದಲ್ಲಿ ಅತ್ಯಂತ ಹಿರಿಯನೂ ಆದ್ದರಿಂದ ಧರ್ಮರಾಜ ಅವನನ್ನೇ ಕೇಳಿದ.
ಪಿತಾಮಹಾಗ್ರ್ಯಪೂಜಾರ್ಹಃ ಕೋಽತ್ರ ಲೋಕಸಮಾಗಮೇ |
ಬ್ರಹ್ಮಶರ್ವಾದಯಶ್ಚಾತ್ರ ಸಂತಿ ರಾಜಾನ ಏವ ಚ ॥250॥
ತಾತ, ಎಲ್ಲ ಜನರೂ ಸೇರಿರುವ ಈ ಯಜ್ಞಮಂಟಪದಲ್ಲಿ ಅಗ್ರಪೂಜೆಗೆ ಅರ್ಹನು ಯಾರು? ಬ್ರಹ್ಮರುದ್ರಾದಿಗಳೂ ಇಲ್ಲಿ ಇದ್ದಾರೆ, ರಾಜರುಗಳೂ ಇದ್ದಾರೆ.
ಇತಿ ಪೃಷ್ಟೋಽಬ್ರವೀದ್ ಭೀಷ್ಮಃ ಕೃಷ್ಣಂ ಪೂಜ್ಯತಮಂ ಪ್ರಭುಂ ॥251॥
ಧರ್ಮರಾಜ ಹೀಗೆ ಕೇಳಿದಾಗ ಭೀಷ್ಮನೆಂದ, `ಪ್ರಭು ಶ್ರೀಕೃಷ್ಣನೆ ಪರಮಪೂಜ್ಯ'.
ಯದ್ಯಪ್ಯೇಕಸ್ತ್ರಿಧಾ ವಿಷ್ಣುರ್ವಸಿಷ್ಠಭೃಗುವೃಷ್ಣಿಷು |
ಪ್ರಾದುರ್ಭೂತಸ್ತಥಾಪ್ಯೇತೇ ನೃಪಾ ಹಿ ವ್ಯಾಸರಾಮಯೋಃ |
ವಿಪ್ರತ್ವಾನ್ನ ವಿರುಧ್ಯಂತೇ ತತ ಏವ ಚ ಯುಕ್ತತಾಂ ॥252॥

ಮನ್ಯಂತೇ ನ ವಿರೋಧಶ್ಚ ತೇಷಾಂ ತತ್ರ ಹಿ ತಾದೃಶಃ ॥253॥
ಒಬ್ಬನೆ ವಿಷ್ಣು ವಸಿಷ್ಠ ಭೃಗು ಮತ್ತು ವೃಷ್ಣಿ ಕುಲಗಳಲ್ಲಿ ವ್ಯಾಸ ಪರಶುರಾಮ ಕೃಷ್ಣ ಎಂದು ಮೂರು ರೂಪಗಳಿಂದ ಅವತರಿಸಿದ್ದಾನೆ. ಆದರೂ ರಾಜರು ವ್ಯಾಸ ಪರಶುರಾಮರನ್ನು ಅವರು ಬ್ರಾಹ್ಮಣರಾದ್ದರಿಂದ ವಿರೋಧಿಸುವುದಿಲ್ಲ. ಬ್ರಾಹ್ಮಣರಾದ್ದರಿಂದಲೆ ಅಗ್ರಪೂಜೆಗೆ ಅರ್ಹತೆಯನ್ನು ಒಪ್ಪುತ್ತಾರೆ. ಕೃಷ್ಣನಲ್ಲಿರುವಂತೆ ವ್ಯಾಸ ಪರಶುರಾಮರಲ್ಲಿ ಅವರಿಗೆ ವೈರವೂ ಇರುವುದಿಲ್ಲ.
ಅವಿವಾದೇ ಪ್ರಸಿದ್ಧಿಶ್ಚ ನೈವಾಸ್ಯ ಭವಿತಾ ಕ್ವಚಿತ್ |
ತಸ್ಮಾತ್ ಕೃಷ್ಣಾಯ ದಾತವ್ಯಮಿತಿ ಭೀಷ್ಮೇಣ ಚಿಂತಿತಂ ॥254॥
ವಿವಾದ ಉಂಟಾಗದಿದ್ದರೆ ಕೃಷ್ಣ ನಾರಾಯಣನೆನ್ನುವುದರ ಪ್ರಸಿದ್ಧಿ ಎಂದೂ ಉಂಟಾಗಲಾರದು. ಅದರಿಂದ ಕೃಷ್ಣನಿಗೇ ಅಗ್ರಪೂಜೆ ನೀಡಬೇಕೆಂದು ಭೀಷ್ಮ ಆಲೋಚಿಸಿದ.
ಕೃಷ್ಣಾಯ ದತ್ತೇ ರಾಜಾನೋ ವಿವಾದಂ ಕುರ್ಯುರಂಜಸಾ |
ವಿವಾದೇನ ಚ ಕೀರ್ತಿಃ ಸ್ಯಾದ್ ವಾಸುದೇವಸ್ಯ ವಿಸ್ತೃತಾ |
ತತಃ ಕೃಷ್ಣಾಯಾಗ್ರಪೂಜಾ ದತ್ತಾ ಪಾರ್ಥೈರ್ಜಗತ್ಪುರಃ ॥255॥
ಶ್ರೀಕೃಷ್ಣನಿಗೆ ಅಗ್ರಪೂಜೆ ನೀಡಿದರೆ ರಾಜರು ಬಹಳ ಆಗ್ರಹದಿಂದ ವಿವಾದವೆಬ್ಬಿಸುತ್ತಾರೆ. ವಿವಾದದಿಂದ ಕೃಷ್ಣನ ಕೀರ್ತಿ ಹರಡುತ್ತದೆ, ಎಂದು ಭೀಷ್ಮ ಆಲೋಚಿಸಿದ. ಹೀಗೆ ವಿವಾದ ಉಂಟಾಗಲೆಂದೇ ಪಾಂಡವರೂ ಎಲ್ಲರ ಮುಂದೆ ಕೃಷ್ಣನಿಗೆ ಅಗ್ರಪೂಜೆ ನೀಡಿದರು.
ವ್ಯಾಸಭಾರ್ಗವಯೋಃ ಸಾಕ್ಷಾತ್ ತದೈಕ್ಯಾತ್ ತದನಂತರಂ |
ಅಗ್ರ್ಯಾಂ ಪೂಜಾಂ ದದುಶ್ಚಾನ್ಯಾನ್ ಯಥಾಯೋಗ್ಯಮಪೂಜಯನ್ ॥
ಶ್ರೀಕೃಷ್ಣನಿಗೆ ಪೂಜೆ ನೀಡಿದ ಬಳಿಕ ವ್ಯಾಸ ಪರಶುರಾಮರಿಗೆ ಕೃಷ್ಣನಿಂದ ಸಾಕ್ಷಾತ್ ಅಭೇದವಿರುವುದರಿಂದ ಅಗ್ರಪೂಜೆ ನೀಡಿದರು. ಬಳಿಕ ಉಳಿದವರನ್ನು ಅವರ ಯೋಗ್ಯತೆಗೆ ಅನುಗುಣವಾಗಿ ಪೂಜಿಸಿದರು.
* * * *
ಮೂವತ್ತೆರಡನೆಯ ಅಧ್ಯಾಯ
(ಅಭಿಷೇಕಾರ್ಥವಾಗಿ ಬ್ರಾಹ್ಮಣರ ನಾರದರ ರಾಜರ ಆಗಮನ. ನಾರದರಿಂದ ಪೂರ್ವವೃಂತ್ತಾಂತದ ಸ್ಮರಣೆ.)
ವೈಶಂಪಾಯನಃ
ತತೋಽಭಿಷೇಚನೀಯೇಽಹ್ನಿ ಬ್ರಾಹ್ಮಣಾ ರಾಜಭಿಃ ಸಹ |
ಅಂತರ್ವೇದಿಂ ಪ್ರವಿವಿಶುಃ ಸದಸ್ಯಾರ್ಥಂ ಮಹರ್ಷಯಃ ॥1॥
ಅನಂತರ ದಿಕ್ಷಾಭಿಷೇಕದಿವಸದಲ್ಲಿ ಬ್ರಾಹ್ಮಣರು ಮತ್ತು ರಾಜರುಗಳು ಕೂಡಿಕೊಂಡು, ಯಜ್ಞಭೂಮಿಯಲ್ಲಿ ಬ್ರಾಹ್ಮಣರು ಕುಳಿತುಕೊಳ್ಳಲು ಕಲ್ಪಿಸಿದ ಅಲಂಕೃತವಾದ ಸ್ಥಾನವನ್ನು (ಅಂತರ್ವೇದಿಯನ್ನು) ಪ್ರವೇಶಿಸಿದರು. ಮಹರ್ಷಿಗಳು ಸಹ ಸದಸತ್ವವನ್ನು ವಹಿಸಿಕೊಳ್ಳಲು ಅಂತರ್ವೇದಿಯನ್ನು ಪ್ರವೇಶಿಸಿದರು.
ನಾರದಪ್ರಮುಖಾಸ್ತಸ್ಯಾಮಂತರ್ವೇದಿಂ ಮಹಾತ್ಮನಃ |
ಸಮಾಸೀನಾಃ ಶುಶುಭಿರೇ ತತ್ರ ರಾಜರ್ಷಿಭಿಃ ಸಹ ॥2॥
ಮಹಾತ್ಮನಾದ ಯುಧಿಷ್ಠಿರನ ಅಂತರ್ವೇದಿಯನ್ನು ಪ್ರವೇಶಿಸಿ ನಾರದ ಮೊದಲಾದವರು ರಾಜರ್ಷಿಗಳ ಜೊತೆಯಲ್ಲಿ ಕುಳಿತುಕೊಂಡು ಅಲ್ಲಿ ಶೋಭಿಸಿದರು.
ಸಮೇತಾ ಬ್ರಹ್ಮಭವನೇ ದೇವೈರ್ದೇವರ್ಷಯೋ ಯಥಾ |
ಕರ್ಮಾಂತರಮುಪಾಸಂತೋ ಜಜಲ್ಪುರಮಿತೌಜಸಃ ॥3॥
ಬ್ರಹ್ಮಸದನದಲ್ಲಿ ದೇವತೆಗಳ ಜೊತೆಯಲ್ಲಿ ದೇವರ್ಷಿಗಳು ಸೇರಿದಂತೆ ಎಲ್ಲರೂ ಅಲ್ಲಿ ಸೇರಿ, ಯಜ್ಞಾಂಗವಾದ ಬೇರೆ ಬೇರೆ ಕರ್ಮಗಳನ್ನು ಆಚರಿಸುವುದನ್ನು ನೋಡುತ್ತಾ ಅಮಿತತೇಜಸ್ವಿಗಳಾದ ಅವರು ಪರಸ್ಪರವಾಗಿ ಮಾತನಾಡಿದರು.
ಏವಮೇತನ್ನ ಚಾಪ್ಯೇವಮೇವಂ ಚೈತನ್ನ ಚಾನ್ಯಥಾ |
ಇತ್ಯೂಚುರ್ಬಹವಸ್ತತ್ರ ವಿತಂಡಾನಾಃ ಪರಸ್ಪರಮ್ ॥4॥
ಅಲ್ಲಿದ್ದ ಅನೇಕರು ಇದು ಹೀಗೆ ಬೇರೆ ರೀತಿಯಲ್ಲ, ಇದು ಈ ರೀತಿ ಇನ್ನೊಂದು ರೀತಿಯಲ್ಲ ಎಂದು ಪರಸ್ಪರವಾಗಿ ವಿತಂಡವಾದವನ್ನು ಮಾಡುತ್ತಾ ಕುಳಿತಿದ್ದರು.
ಕೃಶಾನರ್ಥಾಂಸ್ತಥಾ ಕೇಚಿದಕೃಶಾಂಸ್ತತ್ರ ಕುರ್ವತೇ |
ಅಕೃಶಾಂಶ್ಚ ಕೃಶಾನ್ ಚಕ್ರುರ್ಹೇತುಭಿಃ ಶಾಸ್ತ್ರನಿಶ್ಚಿತೈಃ ॥5॥
ಕೆಲವರು ದುರ್ಬಲವಾದ ಅರ್ಥಗಳನ್ನು ಶಾಸ್ತ್ರಸಿದ್ಧಹೇತುಗಳಿಂದ ಪುಷ್ಟೀಕರಿಸುತ್ತಿದ್ದರು. ಇನ್ನೂ ಕೆಲವರು ಪ್ರಬಲವಾದ ಅರ್ಥಗಳನ್ನು ಕೂಡ ಅದೇ ರೀತಿಯಲ್ಲಿ ದುರ್ಬಲಗೊಳಿಸುತ್ತಿದ್ದರು.
ತತ್ರ ಮೇಧಾವಿನಃ ಕೇಚಿದರ್ಥಮನ್ಯೈಃ ಪ್ರಪೂಜಿತಮ್ |
ವಿಚಿಕ್ಷಿಪುರ್ಯಥಾ ಶ್ಯೇನಾ ನಭೋಗತಮಿವಾಮಿಷಮ್ ॥6॥
ಸಾ ವೇದಿರ್ವೇದಸಂಪನ್ನೈರ್ಮಹರ್ಷಿದ್ವಿಜಪಾರ್ಥಿವೈಃ |
ಆಬಭಾಸೇ ಸಮಾಕೀರ್ಣಾ ನಕ್ಷತ್ರೈರ್ದ್ಯೌರಿವಾಮಲಾ ॥8॥
ನ ತಸ್ಯಾಃ ಸನ್ನಿಧೌ ಶೂದ್ರಃ ಕಶ್ಚಿದಾಸನ್ನ ಚಾವ್ರತಃ |
ಅಂತರ್ವೇದ್ಯಾ ಮಹಾರಾಜ ಧರ್ಮರಾಜನಿವೇಶನೇ ॥9॥
ಅಲ್ಲಿ ಮೇಧಾವಿಗಳಾದ ಕೆಲವರು ಆಕಾಶದಲ್ಲಿ ಹದ್ದುಗಳು ಮಾಂಸವನ್ನು ಹಾರಿಸಿದಂತೆ, ಬೇರೆಯವರು ಸಮರ್ಥಿಸಿದ ಅರ್ಥಗಳನ್ನು ನಿರಾಕರಿಸುತ್ತಿದ್ದರು. ವೇದವೇದಾಂಗಗಳಲ್ಲಿ ಪಾರಂಗತರಾದ ಮಹಾವ್ರತಧಾರಿಗಳಾದ ಇನ್ನು ಕೆಲವರು. ಧರ್ಮಾರ್ಥಸಂಯುಕ್ತವಾದ

ಕಥೆಗಳನ್ನು ಹೇಳುತ್ತಾ ಸಂತೋಷಪಟ್ಟರು. ಮಹಾರಾಜನೇ, ಧರ್ಮರಾಜನು ಕುಳಿತುಕೊಳ್ಳುವ ಅಂತರ್ವೇದಿಯ ಸಮೀಪದಲ್ಲಿ ಒಬ್ಬ ಶೂದ್ರನಾಗಲೀ ಅಥವಾ ವ್ರತ ಮಾಡದವನಾಗಲೀ ಇರಲಿಲ್ಲ.
ತಾಂ ತು ಲಕ್ಷ್ಮೀವತೋ ಲಕ್ಷ್ಮೀಂ ಯಥಾಯಜ್ಞವಿಧಾನಜಾಮ್ |
ತುತೋಷ ನಾರದಃ ಪಶ್ಯನ್ ಧರ್ಮರಾಜಸ್ಯ ಧೀಮತಃ ॥10॥
ಯಜ್ಞಕ್ಕೆ ವಿಧಾನ ಮಾಡಿದ ರೀತಿಯಲ್ಲಿ ನಿರ್ಮಿಸಲ್ಪಟ್ಟ ಕಂಗೊಳಿಸುತ್ತಿರುವ, ಆ ಮೇಧಾವಿಯಾದ, ಶ್ರೀಮಂತನಾದ, ಧರ್ಮರಾಜನ ಸಂಪತ್ತನ್ನು ನೋಡಿದ ನಾರದರು ಸಂತೋಷಪಟ್ಟರು.
ಅಥ ಚಿಂತಾಂ ಸಮಾಪೇದೇ ಸ ಮುನಿರ್ಮನುಜಾಧಿಪ |
ನಾರದಸ್ತು ತದಾ ಪಶ್ಯನ್ ಸರ್ವಕ್ಷತ್ರಸಮಾಗಮಮ್॥11॥
ಮನುಜಾಧಿಪನೇ! ಆಗ ಎಲ್ಲಾ ಕ್ಷತ್ರಿಯರ ಸಮುದಾಯವನ್ನು ನೋಡಿದ ನಾರದರು, ಧ್ಯಾನವಶರಾದರು.
ಸಸ್ಮಾರ ಚ ಪುರಾವೃತ್ತಾಂ ಕಥಾಂ ತಾಂ ಭರತರ್ಷಭ |
ಅಂಶಾವತರಣೇ ಯೋಽಽಸೌ ಬ್ರಹ್ಮಣೋ ಭವನೇಭವತ್ ॥12॥
ಭರತರ್ಷಭನೇ! ಹಿಂದೆ ಅಂಶಾವತರಣ ಕಾಲದಲ್ಲಿ ಬ್ರಹ್ಮಸದನದಲ್ಲಿ ನಡೆದ ಘಟನೆಗಳನ್ನು ಅವರು ಸ್ಮರಿಸಿದರು.
ದೇವಾನಾಂ ಸಂಭವಂ ತಂ ತು ವಿಜ್ಞಾಯ ಕುರುನಂದನ |
ನಾರದಃ ಪುಂಡರೀಕಾಕ್ಷಂ ಸಸ್ಮಾರ ಮನಸಾ ಹರಿಮ್ ॥13॥
ಕುರುನಂದನನೇ! ಆ ದೇವತೆಗಳ ಉತ್ಪತ್ತಿಯನ್ನು ತಿಳಿದ ನಾರದರು. ಮನಸ್ಸಿನಲ್ಲಿಯೇ ಪುಂಡರೀಕಾಕ್ಷನಾದ ಹರಿಯನ್ನು ಸ್ಮರಿಸಿದರು.
ಸಾಕ್ಷಾತ್ ಸ ವಿಬುಧಾರಿಘ್ನಃ ಕ್ಷಿತೌ ನಾರಾಯಣೋ ವಿಭುಃ |
ಪ್ರತಿಜ್ಞಾಂ ಪಾಲಯನ್ ಧೀಮಾನ್ ಜಾತಃ ಪರಪುರಂಜಯಃ ॥14॥
ದೇವತೆಗಳ ಶತ್ರುಗಳಾದ ಅಸುರರನ್ನು ಸಂಹಾರಮಾಡುವ ಪ್ರಭುವಾದ ಮೇಧಾವಿಯೂ ಪರಪುರಂಜಯನೂ ಆದ ನಾರಾಯಣನು ತನ್ನ ಪ್ರತಿಜ್ಞೆಯನ್ನು ಪಾಲಿಸುವವನಾಗಿ ಸಾಕ್ಷಾತ್ ತಾನೇ ಭೂಮಿಯಲ್ಲಿ ಅವತರಿಸಿದ್ದಾನೆ.
ಸಂದಿದೇಶ ಪುರಾ ಯೋಽಸೌ ವಿಬುಧಾನ್ ಭೂತಕೃತ್ ಸ್ವಯಮ್ |
ಅನ್ಯೋನ್ಯಮಭಿನಿಘ್ನಂತಃ ಪುನರ್ಲೋಕಾನವಾಪ್ಸ್ಯಥ ॥15॥
ಯಾವ ಸೃಷ್ಟಿಕರ್ತನಾದ ದೇವನು ಹಿಂದೆ ದೇವತೆಗಳನ್ನು ಕುರಿತು ನೀವು ಭೂಮಿಯಲ್ಲಿ ಅವತಾರಮಾಡಿ ಪರಸ್ಪರ ಸಂಹರಿಸಿಕೊಂಡು ಪುನಃ ನಿಮ್ಮ ನಿಮ್ಮ ಸ್ಥಾನಗಳಿಗೆ ಹಿಂದಿರುಗಿ ಎಂದು ಸಂದೇಶವನ್ನು ಕೊಟ್ಟಿದ್ದನೋ. ಅವನನ್ನು ಸ್ಮರಿಸಿದರು.
ಇತಿ ನಾರಾಯಣಃ ಶಂಭುರ್ಭಗವಾನ್ ಜಗತಃ ಪ್ರಭುಃ |
ಆದಿಶ್ಯ ವಿಬುಧಾನ್ ಸರ್ವಾನಜಾಯತ ಯದೋಃ ಕುಲೇ ॥16॥
ಸುಖನಿಧಿಯೂ ಜಗತ್‌ಪ್ರಭುವೂ ಐಶ್ವರ್ಯಸಂಪನ್ನನೂ ಆದ ನಾರಾಯಣನು ಎಲ್ಲಾ ದೇವತೆಗಳಿಗೆ ಹೀಗೆ ಆದೇಶವನ್ನು ನೀಡಿ ತಾನೂ ಸ್ವತಃ ಯದುಕುಲದಲ್ಲಿ ಜನಿಸಿದನು.
ಕ್ಷಿತಾವಂಧಕವೃಷ್ಣೀನಾಂ ವಂಶೇ ವಂಶಭೃತಾಂ ವರಃ |
ಪರಯಾ ಶುಶುಭೇ ಲಕ್ಷ್ಮ್ಯಾ ನಕ್ಷತ್ರಾಣಾಮಿವೋಡುರಾಟ್ ॥17॥
ವಂಶವರ್ಧನರಲ್ಲಿ ಶ್ರೇಷ್ಠನಾದ ಹರಿಯು ಭೂಮಿಯಲ್ಲಿ ಅಂಧಕವೃಷ್ಣಿಗಳ ವಂಶದಲ್ಲಿ ಅವತರಿಸಿ ತನ್ನ ಶ್ರೇಷ್ಠವಾದ ಕಾಂತಿಯಿಂದ ನಕ್ಷತ್ರಗಳ ಮಧ್ಯದಲ್ಲಿ ಇರುವ ಚಂದ್ರನಂತೆ ಶೋಭಿಸಿದನು.
ಯಸ್ಯ ಬಾಹುಬಲಂ ಸರ್ವೇ ಸುರಾಃ ಸೇಂದ್ರಾ ಉಪಾಸತೇ |
ಸೋಯಂ ಮಾನುಷರೂಪೇಣ ಹರಿರಾಸ್ತೇ ಜನಾರ್ದನಃ ॥18॥
ಇಂದ್ರಾದಿ ಎಲ್ಲಾ ದೇವತೆಗಳೂ ಯಾರ ಬಾಹುಬಲವನ್ನು ಆಶ್ರಯಿಸಿರುತ್ತಾರೋ ಅಂತಹ ಜನಾರ್ದನನಾದ ಹರಿಯು ಮನುಷ್ಯರೂಪದಲ್ಲಿ ಇದ್ದಾನೆ.
ಅಹೋ ಬತ ಮಹದ್ಭೂತಂ ಸ್ವಯಂಭೂರ್ಯದಿದಂ ಸ್ವಯಮ್ |
ಆದಾಸ್ಯತಿ ಪುನಃ ಕ್ಷತ್ರಮೇವಂಬಲಸಮನ್ವಿತಮ್ ॥19॥
ಇದು ಎಷ್ಟು ಆಶ್ಚರ್ಯ! ಎಲ್ಲರನ್ನೂ ಸೃಷ್ಟಿಸುವ ತಾನು ಸೃಷ್ಟಿಸಲ್ಪಡದಿರುವ ಹರಿಯು ಇಂತಹ ಬಲಸಂಪನ್ನವಾದ ಕ್ಷತ್ರಿಯ ಕುಲವನ್ನು ಪುನಃ ಸಂಹಾರಮಾಡುತ್ತಾನೆ.
ಇತ್ಯೇವಂ ನಾರದಶ್ಚಿಂತಾಂ ಚಿಂತಯಾಮಾಸ ಧರ್ಮವಿತ್ |
ಹರಿಂ ನಾರಾಯಣಂ ಜ್ಞಾತ್ವಾ ಯಜ್ಞೈರಿಜ್ಯಂ ತಮೀಶ್ವರಮ್ ॥20॥
ತಸ್ಮಿನ್ ಧರ್ಮವಿದಾಂ ಶ್ರೇಷ್ಠೋ ಧರ್ಮರಾಜಸ್ಯ ಧೀಮತಃ |
ಮಹಾಧ್ವರೇ ಮಹಾಬಾಹುಃ ತಸ್ಥೌ ಸ ಬಹುಮಾನತಃ ॥21॥
ಹೀಗೆ ಮೇಧಾವಿಯಾದ ಧರ್ಮರಾಜನ ಮಹಾಯಜ್ಞದ ಸಂದರ್ಭದಲ್ಲಿ ಧರ್ಮವನ್ನು ತಿಳಿದ ಮಹಾಬಾಹುವಾದ ನಾರದರು ಎಲ್ಲ ಯಜ್ಞಗಳಿಂದಲೂ ಪೂಜಿಸಲ್ಪಡುವವನಾದ ಪ್ರಭುವಾದ ನಾರಾಯಣನಾದ ಹರಿಯನ್ನು ಧ್ಯಾನಮಾಡುತ್ತಾ ಬಹುಮಾನದಿಂದ ಅಲ್ಲಿ ಕುಳಿತರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಾತ್ರಿಂಶೋಧ್ಯಾಯಃ॥
॥ಅರ್ಘಾಭಿಹರಣಪರ್ವಣಿ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.
*****

ಮೂವತ್ಮೂರನೆಯ ಅಧ್ಯಾಯ
(ಕೃಷ್ಣನ ಆಗಮನ, ಭೀಷ್ಮರ ಆಜ್ಞೆಯಂತೆ ಸಹದೇವನಿಂದ ಕೃಷ್ಣನಿಗೆ ಅಗ್ರಪೂಜೆ ಶಿಶುಪಾಲನ ನಿಂದೆ.)
ವೈಶಂಪಾಯನಃ
ತತಃ ಸಮುದಿತಾ ಮುಖ್ಯೈರ್ಗುಣೈರ್ಗುಣವತಾಂ ವರಾಃ |
ಬಹವೋ ಭಾವಿತಾತ್ಮಾನಃ ಪೃಥಕ್ ಪೃಥಗರಿಂದಮ ॥1॥
ಆತ್ಮಕೃತ್ಯಮಿತಿ ಜ್ಞಾತ್ವಾ ಪಾಂಚಾಲಾಸ್ತತ್ರ ಸರ್ವಶಃ |
ಸಮೀಯುರ್ವೃಷ್ಣಯಶ್ಚೈವ ತದಾನೀಂ ಕಾರ್ಯಕಾರಿಣಃ ॥2॥
ಅರಿಂದಮನೇ! ಅನಂತರ ಗುಣವಂತರಲ್ಲಿ ಶ್ರೇಷ್ಠರಾದ, ಶ್ರೇಷ್ಠವಾದ ಗುಣಗಳಿಂದಕೂಡಿದ, ಪರಿಶುದ್ಧವಾದ ಮನಸ್ಸುಳ್ಳ ಅನೇಕರಾಜರೂ ಪಾಂಚಾಲರೂ ವೃಷ್ಣಿಗಳೂ ಇದು ತಮ್ಮ ಕಾರ್ಯವೆಂದು ತಿಳಿದುಕೊಂಡು ಧರ್ಮರಾಜನ ಕಾರ್ಯದಲ್ಲಿ ನೆರವಾಗುವ ಸಲುವಾಗಿ ಬೇರೆ ಬೇರೆಯಾಗಿ ಅಲ್ಲಿಗೆ ಬಂದು ಸೇರಿದರು.
ಸದಾರಾಃ ಸಜನಾಮಾತ್ಯಾ ವಹಂತೋ ರತ್ನಸಂಚಯಾನ್ |
ವಿಕೃಷ್ಟತ್ವಾಚ್ಚ ದೇಶಸ್ಯ ಗುರುಭಾರತಯೈವ ತೇ |
ಯಯುಃ ಪ್ರಮುದಿತಾಃ ಪಶ್ಚಾದ್ ರಾಜಭಿರ್ನ ಸಮಂ ಯಯುಃ ॥3॥
ತಮ್ಮ ಪತ್ನಿಯರಿಂದಲೂ ಬಂಧುಗಳಿಂದಲೂ ಮತ್ತು ಅಮಾತ್ಯರಿಂದಲೂ ಕೂಡಿಕೊಂಡು ರತ್ನದ ಭಾರಗಳನ್ನು ಹೊತ್ತುಕೊಂಡು ಯಜ್ಞದ ಭೂಶೋಧನೆಯ ಸಲುವಾಗಿ ಭೂಮಿಯನ್ನು ಉತ್ತಿದ್ದ ಕಾರಣದಿಂದ ಮತ್ತು ಆ ಭೂ ಪ್ರದೇಶವು ಅಲ್ಪವಾದ ಕಾರಣದಿಂದ ಮತ್ತು ದೊಡ್ಡ ಭಾರವನ್ನು ಹೊತ್ತಿದ್ದ ಕಾರಣದಿಂದಲೂ ಸಹ ಎಲ್ಲ ರಾಜರು ಜೊತೆಯಲ್ಲಿ ಸಮವಾಗಿ ಬರದೆ ವಿಲಂಬದಿಂದ ಸಂತೋಷದಿಂದ ಒಬ್ಬೊಬ್ಬರಾಗಿ ಬಂದರು.
ಭಗವಾನ್ ಸರ್ವಭೂತಾನಾಂ ಭಾಸ್ಯನ್ನಮಿತತೇಜಸಾ |
ವಿಶನ್ನಂತರ್ಯಜ್ಞಭೂಮಿಂ ಸಿತಸ್ಯಾವರಜೋ ವಿಭುಃ ॥4॥
ತೇಜೋರಾಶಿಮೃಷಿಂ ದೃಶ್ಯಮದೃಶ್ಯಮವಿಜಾನತಾಮ್ |
ವಯೋತಿಗಾನಾಂ ವೃದ್ಧಾನಾಂ ಮಾರ್ಗಮಾವೃತ್ಯ ತಿಷ್ಠತಾಮ್ ॥5॥
ಜಗತಸ್ತಸ್ಥುಷಶ್ಚೈವ ಪ್ರಭವಾಪ್ಯಯಮಚ್ಯುತಮ್ |
ಅನಂತಮಂತಂ ಶತ್ರೂಣಾಮಮಿತ್ರಗಣಮರ್ದನಮ್ ॥6॥
ಪ್ರಭವಂ ಸರ್ವಭೂತಾನಾಮಾಪತ್ಸ್ವಾಶ್ರಯಮಚ್ಯುತಮ್ |
ಭವಿಷ್ಯಂ ಭಾವನಂ ಭೂತಂ ದ್ವಾರವತ್ಯಾಮರಿಂದಮಮ್ ॥7॥
ಋಜುಂ ಚಕ್ರಾಯುಧಂ ಶೌರಿಮಮಿತ್ರಗಣಮರ್ದನಮ್ |
ಬಲಾಧಿಕಾರಂ ನಿಕ್ಷಿಪ್ಯ ಸಮ್ಯಾನ್ಯಾನಕದುಂದುಭಿಮ್ ॥8॥
ಬಲಶೇಷಂ ಸಮುದಿತಂ ಪರಿಗೃಹ್ಯ ಸಮಂತತಃ |
ಸಂಪ್ರಾಯಾದ್ ಯಾದವಶ್ರೇಷ್ಠೋ ಯಜಮಾನೇ ಯುಧಿಷ್ಠಿರೇ ॥9॥
ಉಚ್ಚಾವಚಮುಪಾದಾಯ ಧರ್ಮರಾಜಾಯ ಮಾಧವಃ |
ಧನೌಘಂ ಪುರತಃ ಕೃತ್ವಾ ಖಾಂಡವಪ್ರಸ್ಥಮಾಯಯೌ ॥10॥
ಅರಿಂದಮನಾದ ಜನಮೇಜಯನೇ! ಯಾದವಶ್ರೇಷ್ಠನಾದ ಮಾಧವನು ಆನಕದುಂದುಬಿಯನ್ನು (ವಸುದೇವನನ್ನು) ಸೇನಾ ನಾಯಕನನ್ನಾಗಿಮಾಡಿ ದ್ವಾರಾವತಿಯಲ್ಲಿ ಇರಿಸಿ ಧರ್ಮರಾಜನಿಗೆ ಅರ್ಪಿಸಬೇಕಾದ ಉಚ್ಚಾವಚರತ್ನರಾಶಿಯನ್ನು ಮುಂದೆಮಾಡಿಕೊಂಡು ಯಜ್ಞದ ಆರಂಭಕ್ಕಿಂತ ಮುಂಚೆಯೇ ಖಾಂಡವಪ್ರಸ್ಥಕ್ಕೆ ಬಂದನು. ಋಜುವೂ ಶಾಂತನೂ ಚಕ್ರಾಯುಧನು ಶೌರಿಯೂ ಸ್ಥಾವರಜಂಗಮಾತ್ಮಕವಾದ ಜಗತ್ತಿಗೆಜನ್ಮ ಸಂಹಾರದಾಯಕನೂ ಚತುರ್ವಿಧನಾಶರಹಿತನೂ ದೇಶಕಾಲಗುಣಗಳಿಂದ ಅನಂತನೂ ಶತ್ರುಸಂಹಾರಕನೂ ಆದ್ದರಿಂದಲೇ ಶತ್ರುಗಳ ಸಮೂಹವನ್ನು ಮರ್ದಿಸುವವನೂ ಎಲ್ಲ ಜೀವರಿಗೂ ಸೃಷ್ಟಿ ಕರ್ತನಾದವನೂ ಎಂದೂ ತಪ್ಪದಂತೆ ಆಪತ್ತುಗಳಲ್ಲಿ ರಕ್ಷಿಸುವವನೂ ಮುಂದೆ ಬುದ್ಧಾದಿ ಅವತಾರಗಳಿಂದ ಅವತರಿಸುವವನೂ ಈಗ ಕೃಷ್ಣಾದಿರೂಪದಿಂದ ಅವತರಿಸಿರುವವನೂ ಹಿಂದೆ ಮತ್ಸ್ಯಾದಿರೂಪದಿಂದ ಅವತರಿಸಿದವನೂ ತೇಜೋರಾಶಿಯೂ ಸರ್ವಜ್ಞನೂ ದರ್ಶನಾಯೋಗ್ಯನೂ ಆದ ಈ ಕೃಷ್ಣನನ್ನು ಈಗ ದೃಶ್ಯನಾದ ಕಾರಣದಿಂದ ಪ್ರಾಕೃತಜನರಂತೆ ತಿಳಿಯುವ ಹೆಚ್ಚು ವಯಸ್ಸಾದ ವೃದ್ಧರನ್ನೂ ಆ ಕಾರಣದಿಂದಲೇ ದಾರಿಯನ್ನೂ ಬಿಡದೆ ನಿಂತಿರುವ ಸಜ್ಜನರನ್ನೂ ದಾಟಿ ಯುಧಿಷ್ಠಿರನು ಯಾಗವನ್ನು ಮಾಡುತ್ತಿರಲು, ದ್ವಾರಾವತಿಯಲ್ಲಿ ಶತ್ರುಸಂಹಾರಕವಾದ ಉಳಿದ ಸೈನ್ಯವನ್ನು ತೆಗೆದುಕೊಂಡು ನೇರವಾಗಿ ಯಜ್ಞಸಭೆಯನ್ನು ಬಿಟ್ಟು ಅಂತರ್ವೇದಿಯ ಕಡೆಗೆ ನಡೆದು ಬಂದನು.
ತತ್ರ ಯಜ್ಞಾಗತಾನ್ ಸರ್ವಾನ್ ಚೈದ್ಯವಕ್ರಪುರೋಗಮಾನ್ |
ಭೂಮಿಪಾಲಗಣಾನ್ ಸರ್ವಾನ್ ಸಪ್ರಭಾನಿವ ತೋಯದಾನ್ ॥11॥
ಮೇಘಕಾಯಾನ್ ನಿಃಶ್ವಸತೋ ಯೂಥಪಾನಿವ ಯೂಥಪಃ |
ಬಲಿನಃ ಸಿಂಹಸಂಕಾಶಾನ್ ಮಹೀಮಾವೃತ್ಯ ತಿಷ್ಠತಃ ॥12॥
ತತೋ ರತ್ನೌಘಸಂಬಾಧಂ ರಾಜಸಾಗರಮವ್ಯಯಮ್ |
ನಾದಯನ್ ರಥಘೋಷೇಣಾಭ್ಯುಪಾಯಾನ್ಮಧುಸೂದನಃ ॥13॥
ಅಲ್ಲಿ ಯಜ್ಞದ ಸಲುವಾಗಿ ಆಗಮಿಸಿದ ಶಿಶುಪಾಲದಂತವಕ್ರ ಮೊದಲಾದ ಮಿಂಚಿನಿಂದ ಕೂಡಿದ ಮೋಡದಂತಿರುವ ಬೃಹತ್‌ಶರೀರರಾದ ಮಹಾಗಜಗಳಂತೆ ಧೀರ್ಘವಾದ ನಿಟ್ಟುಸಿರನ್ನು ಬಿಡುತ್ತಿರುವ ಬಲಿಷ್ಠರೂ ಸಿಂಹನಿಭರೂ ಭೂಮಿಯನ್ನು

ಆಕ್ರಮಿಸಿ ಕುಳಿತವರೂ ಆದ ಎಲ್ಲಾ ರಾಜರ ಸಮೂಹವನ್ನು ತನ್ನ ರಥಘೋಷದಿಂದ ಎಚ್ಚರಿಸುತ್ತಾ ಮಧುಸೂದನನು ಸಭೆಯ ಮಧ್ಯಕ್ಕೆ ಬಂದನು.
ಅಸೂರ್ಯಮಿವ ಸೂರ್ಯೇಣ ನಿವಾತಮಿವ ವಾಯುನಾ।
ಕೃಷ್ಣೇನ ಸಮವೇತೇನ ಜಹರ್ಷೇ ಭಾರತಂ ಪುರಮ್ ॥14॥
ಕೃಷ್ಣನು ಸಭೆಗೆ ಬರುತ್ತಿರಲು ಆ ಭಾರತದ ಪಟ್ಟಣವು ಸೂರ್ಯನಿಲ್ಲದ ಆಕಾಶವು ಸೂರ್ಯನು ಬಂದಂತೆ ವಾಯುವಿಲ್ಲದ ವಾತಾವರಣವು ವಾಯುವು ಬಂದಂತೆ ಸಂತೋಷದಿಂದ ಕೂಡಿತು.
ಬ್ರಾಹ್ಮಣಕ್ಷತ್ರಿಯಾಣಾಂ ಹಿ ಪೂಜಾರ್ಥಂ ಹ್ಯರ್ಥಧರ್ಮವಿತ್।
ಸಹದೇವೋ ವಿಶೇಷಜ್ಞೋ ಮಾದ್ರೀಪುತ್ರಃ ಕೃತೋಽಭವತ್ ॥15॥
ಧರ್ಮಾರ್ಥಗಳನ್ನು ತಿಳಿದ ವಿಶೇಷಜ್ಞಾನಿಯಾದ ಮಾದ್ರೀಪುತ್ರನಾದ ಸಹದೇವನು ಆಗಮಿಸಿದ ಬ್ರಾಹ್ಮಣರ ಮತ್ತು ಕ್ಷತ್ರಿಯರ ಪೂಜಾರ್ಥವಾಗಿ ನಿಯಮಿಸಲ್ಪಟ್ಟಿದ್ದನು.
ಸ ದೃಷ್ಟ್ವಾ ವಿಷ್ಣುಮಾಯಾಂತಂ ಪ್ರತಿಪೂಜ್ಯಾಮಿತೌಜಸಮ್।
ಯಥಾರ್ಹಂ ಕೇಶವೇ ವೃತ್ತಿಂ ಪ್ರತ್ಯಪದ್ಯತ ಪಾಂಡವಃ ॥16॥
ಪಾಂಡುಪುತ್ರನಾದ ಸಹದೇವನು ಅಮಿತಪರಾಕ್ರಮಿಯಾದ ವಿಷ್ಣುವು ಬರುತ್ತಿರುವುದನ್ನು ನೋಡಿ ಕೇಶವನಲ್ಲಿ ಯಥಾಯೋಗ್ಯವಾದ ವೃತ್ತಿಯನ್ನು ಹೊಂದಿದವನಾಗಿ ಅವನನ್ನು ಪೂಜಿಸಿ ಅವನ ಸಮೀಪದಲ್ಲಿ ನಿಂತನು.
ಜ್ಯೈಷ್ಠ್ಯಕಾನಿಷ್ಠ್ಯಸಂಯೋಗಂ ಸಂಪ್ರಧಾರ್ಯ ಗುಣಾಗುಣೈಃ।
ಆರಿರಾಧಯಿಷುರ್ಧರ್ಮಃ ಪೂಜಯಿತ್ವಾ ದ್ವಿಜೋತ್ತಮಾನ್।
ಮಹದಾದಿತ್ಯಸಂಕಾಶಮಾಸನಂ ಚ ಜಗತ್ಪತೇಃ ॥17॥
ಅವರವರ ಗುಣದೋಷಗಳಿಂದ ಯಾರು ಹಿರಿಯರು ಮತ್ತು ಯಾರು ಕಿರಿಯರು ಎಂದು ನಿಶ್ಚಯಿಸಿ ಅದಕ್ಕೆ ಅನುಗುಣವಾಗಿ ದ್ವಿಜಶ್ರೇಷ್ಠರನ್ನು ಆರಾಧಿಸಲು ಸಂಕಲ್ಪಿಸಿದ್ದ ಧರ್ಮರಾಜನು ಕೃಷ್ಣನನ್ನು ಪೂಜಿಸಿ ಸೂರ್ಯನಂತೆ ಬೆಳಗುತ್ತಿರುವ ಶ್ರೇಷ್ಠವಾದ ಆಸನವನ್ನು ಜಗತ್ಪತಿಗೆ ಕೊಟ್ಟನು.
ತತೋ ಭೀಷ್ಮೋಽಬ್ರವೀದ್ ರಾಜನ್ ಧರ್ಮರಾಜಂ ಯುಧಿಷ್ಠಿರಮ್।
ಕ್ರಿಯತಾಮರ್ಹಣಂ ರಾಜ್ಞಾಂ ಯಥಾರ್ಹಮಿಹ ಭಾರತ ॥18॥
ರಾಜನೇ! ಅನಂತರ ಭೀಷ್ಮನು ಧರ್ಮರಾಜನಾದ ಯುಧಿಷ್ಠಿರನನ್ನು ಕುರಿತು ಆಗಮಿಸಿರುವ ರಾಜರಿಗೆ ಅವರ ಯೋಗ್ಯತೆಗೆ ಅನುಗುಣವಾಗಿ ಪೂಜೆಯನ್ನು ಸಲ್ಲಿಸು ಎಂದು ಹೇಳಿದನು.
ಆಚಾರ್ಯಮೃತ್ವಿಜಂ ಚೈವ ಸಂಯುಕ್ತಂ ತು ಯುಧಿಷ್ಠಿರ।
ಸ್ನಾತಕಂ ಚ ಪ್ರಿಯಂ ಚಾಹುಃ ಷಡರ್ಘಾರ್ಹಾನ್ ನೃಪಂ ತಥಾ ॥19॥
ಯುಧಿಷ್ಠಿರನೇ! ಆಚಾರ್ಯ ಋತ್ವಿಕ್, ಆ ಕಾಲದಲ್ಲಿ ಬಂದ ಅತಿಥಿ, ಸ್ನಾತಕ ಪ್ರೀತಿಪಾತ್ರ ಮತ್ತು ರಾಜ ಈ ಆರುಜನರು ಅಗ್ರಪೂಜೆಗೆ ಯೋಗ್ಯರಾದವರು ಎಂದು ಹೇಳುತ್ತಾರೆ.
ಏತಾನರ್ಹಾನಧಿಗತಾನ್ ಬಹು ಸಂವತ್ಸರೋಷಿತಾನ್।
ತ ಇಮೇ ಕಾಲಪೂಗಸ್ಯ ಮಹತೋಸ್ಮಾನುಪಾಗತಾಃ ॥20॥
ಏಷಾಮೇಕೈಕಶೋ ರಾಜನ್ನರ್ಘ್ಯಮಾನೀಯತಾಮಿತಿ।
ಅಥ ಚೈಷಾಂ ವರಿಷ್ಠೋ ಯಸ್ತಸ್ಯಾರ್ಘ್ಯಮುಪಕಲ್ಪ್ಯತಾಮ್ ॥21॥
ಇಲ್ಲಿ ಬಂದಿರುವರೆಲ್ಲರೂ ಬಹಳ ವೃದ್ಧರಾದವರು ಮತ್ತು ಪೂಜಾರ್ಹರಾದವರು, ಅವರನ್ನು ಪೂಜಿಸು. ಇವರೆಲ್ಲರೂ ಬಹಳ ಕಾಲವಾದಮೇಲೆ ನಮ್ಮ ರಾಜ್ಯಕ್ಕೆ ಬಂದಿದ್ದಾರೆ. ಇವರಲ್ಲಿ ಪ್ರತಿಯೊಬ್ಬರಿಗೂ ಅರ್ಘ್ಯಾದಿಗಳನ್ನು ಕೊಡು ಮತ್ತು ಆಗಮಿಸಿರುವರಲ್ಲಿ ಯಾರು ಅತ್ಯಂತಶ್ರೇಷ್ಠರೋ ಅವರಿಗೆ ಮೊದಲು ಅರ್ಘ್ಯಾದಿಗಳನ್ನು ಕೊಡು.
ಯುಧಿಷ್ಠಿರಃ
ಕಸ್ಮೈ ಭವಾನ್ ಮನ್ಯತೇಽರ್ಘ್ಯಮೇಕಸ್ಮೈ ಕುರುನಂದನ।
ಆನೀಯಮಾನಂ ಯುಕ್ತಂ ಚ ತನ್ಮೇ ಬ್ರೂಹಿ ಪಿತಾಮಹ ॥22॥
ಕುರುನಂದನನೇ! ಪಿತಾಮಹನೇ! ನಾನು ಯಾರಿಗೆ ಮೊದಲು ಅರ್ಘ್ಯಾದಿಗಳನ್ನು ಕೊಟ್ಟರೆ ಅದು ಯುಕ್ತವಾಗುತ್ತದೆ ಎಂದು ನೀನು ಭಾವಿಸುತ್ತಿಯೋ ಅವರನ್ನು ಸೂಚಿಸು.
ವೈಶಂಪಾಯನಃ
ತತೋ ಭೀಷ್ಮಃ ಶಾಂತನವೋ ಬುದ್ಧ್ಯಾ ನಿಶ್ಚಿತ್ಯ ಭಾರತ।
ವಾರ್ಷ್ಣೇಯಂ ಮನ್ಯತೇ ಕೃಷ್ಣಮರ್ಹಣೀಯಮರಿಂದಮ ॥23॥
ಭಾರತನೇ! ಅರಿಂದಮನೇ! ಆಗ ಶಂತನುವಿನ ಮಗನಾದ ಭೀಷ್ಮರು ತನ್ನ ಬುದ್ಧಿಯಿಂದ ನಿಶ್ಚಯಿಸಿ ವೃಷ್ಣಿಕುಲೋತ್ಪನ್ನನಾದ ಕೃಷ್ಣನನ್ನು ಅಗ್ರಪೂಜೆಗೆ ಅರ್ಹನೆಂದು ಭಾವಿಸಿದನು.
ಭೀಷ್ಮಃ
ಏಷ ಹ್ಯೇಷಾಂ ಸಮೇತಾನಾಂ ತೇಜೋಬಲಪರಾಕ್ರಮೈಃ।
ಮಧ್ಯೇ ತಪನ್ನಿವಾಭಾತಿ ಜ್ಯೋತಿಷಾಂ ರವಿರಂಶುಮಾನ್ ॥24॥
ತೇಜೋಬಲಪರಾಕ್ರಮವುಳ್ಳ ಇಲ್ಲಿಗೆ ಆಗಮಿಸಿದ ಎಲ್ಲರ ಮಧ್ಯೆ ಈ ಕೃಷ್ಣನು ಜ್ಯೋತಿರ್ಗಣಗಳ ಮಧ್ಯೆ ತನ್ನ ಕಿರಣಗಳಿಂದ ಪ್ರಕಾಶಿಸುತ್ತಿರುವ ಸೂರ್ಯನಂತೆ ಪ್ರಕಾಶಿಸುತ್ತಿದ್ದಾನೆ.

ಅಸೂರ್ಯಮಿವ ಸೂರ್ಯೇಣ ನಿವಾತಮಿವ ವಾಯುನಾ |
ಭಾಸಿತಂ ಹ್ಲಾದಿತಂ ಚೈವ ಕೃಷ್ಣೇನೇದಂ ಸದೋ ಹಿ ನಃ ॥25॥
ಕೃಷ್ಣನು ಬಂದ ತಕ್ಷಣ ಈ ನಮ್ಮ ಸಭೆಯು ಸೂರ್ಯನಿಲ್ಲದ ಲೋಕವು ಸೂರ್ಯನು ಬಂದಂತೆ ವಾಯುವಿಲ್ಲದ ಲೋಕವು ವಾಯುವು ಬಂದಂತೆ ಪ್ರಕಾಶವನ್ನು ಮತ್ತು ಸಂತೋಷವನ್ನು ಪಡೆದಿದೆ.
ವೈಶಂಪಾಯನಃ
ತಸ್ಮೈ ಭೀಷ್ಮಾಭ್ಯನುಜ್ಞಾತಃ ಸಹದೇವಃ ಪ್ರತಾಪವಾನ್ |
ಉಪಜಹ್ರೇ ಚ ವಿಧಿವದ್ ವಾರ್ಷ್ಣೇಯಾಯಾರ್ಘ್ಯಮುತ್ತಮಮ್ ॥26॥
ಆಗ ಪ್ರತಾಪಶಾಲಿಯಾದ ಸಹದೇವನು ಭೀಷ್ಮನ ಅನುಜ್ಞೆಯನ್ನು ಪಡೆದು ವೃಷ್ಣಿಕುಲಸಮುದ್ಭೂತನಾದ ಕೃಷ್ಣನಿಗೆ ವಿಧಿಪೂರ್ವಕವಾಗಿ ಶ್ರೇಷ್ಠವಾದ ಅರ್ಘ್ಯವನ್ನು ಅರ್ಪಿಸಿದನು.
ಗಾಮರ್ಘ್ಯಂ ಮಧುಪರ್ಕಂ ಚ ಹ್ಯಾನೀಯೋಪಾಹರತ್ ತದಾ |
ಚರಣಾವಸ್ಪೃಶನ್ನಾಮ್ನಾ ಸಹದೇವೋ ವಿಶಾಂಪತೇ ॥27॥
ಎಲೈ ರಾಜನೇ! ತನ್ನ ಹೆಸರನ್ನು ಹೇಳಿ ಕೃಷ್ಣನ ಪಾದಗಳನ್ನು ಸ್ಪರ್ಶಮಾಡಿ ಸಹದೇವನು ಗೋದಾನವನ್ನು ಮಾಡಿ ಅರ್ಘ್ಯವನ್ನೂ ಮಧುಪರ್ಕವನ್ನೂ ಸಮರ್ಪಿಸಿದನು.
ಕೇಶವಶ್ಚಾಪ್ಯುಪಾಘ್ರಾಯ ಮೂರ್ಧ್ನಿ ಶಾಸ್ತ್ರವಿದಾಂ ವರಃ |
ಸಹದೇವಮಥೋವಾಚ ಕಚ್ಚಿದ್ವಃ ಕುಶಲಂ ಗೃಹೇ ॥28॥
ಶಾಸ್ತ್ರವನ್ನು ತಿಳಿದವರಲ್ಲಿ ಶ್ರೇಷ್ಠನಾದ ಕೃಷ್ಣನೂ ಸಹ ಸಹದೇವನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ಮನೆಯಲ್ಲಿ ಎಲ್ಲರೂ ಕ್ಷೇಮವೇ ಎಂದು ಸಹದೇವನನ್ನು ಪ್ರಶ್ನಿಸಿದನು.
ತಾಂ ದೃಷ್ಟ್ವಾ ಕ್ಷತ್ರಿಯಾಃ ಸರ್ವೇ ಪೂಜಾಂ ಕೃಷ್ಣಸ್ಯ ಭೂಯಸೀಮ್ |
ಸಂಪ್ರೇಕ್ಷ್ಯಾನ್ಯೋನ್ಯಮಾಸೀನಾ ಹೃದಯೈಸ್ತಾಮಧಾರಯನ್ ॥29॥
ಆಗ ಅಲ್ಲಿ ಕುಳಿತಿದ್ದ ಕ್ಷತ್ರಿಯರು ಕೃಷ್ಣನಿಗೆ ಸಮರ್ಪಿಸಲ್ಪಟ್ಟ ಆ ಪೂಜೆಯನ್ನು ಗಮನಿಸಿ ಒಬ್ಬರ ಮುಖವನ್ನು ಇನ್ನೊಬ್ಬರು ನೋಡುತ್ತಾ ತಮ್ಮ ಮನಸ್ಸಿನಲ್ಲಿಯೇ ತಮ್ಮ ಭಾವನೆಗಳನ್ನು ಧರಿಸಿದರು.
ಪ್ರತಿಜಗ್ರಾಹ ತಾಂ ಕೃಷ್ಣಃ ಶಾಸ್ತ್ರದೃಷ್ಟೇನ ಕರ್ಮಣಾ |
ಶಿಶುಪಾಲಸ್ತು ತಾಂ ಪೂಜಾಂ ವಾಸುದೇವೇ ನ ಚಕ್ಷಮೇ ॥30॥
ಕೃಷ್ಣನು ಶಾಸ್ತ್ರದೃಷ್ಟಿವಿಯಿಂದ ಮಾಡಿದ ಆ ಪೂಜೆಯನ್ನು ಸ್ವೀಕರಿಸಿದನು. ಆದರೆ ವಾಸುದೇವನಿಗೆ ಮಾಡಿದ ಆ ಪೂಜೆಯನ್ನು ನೋಡಿ ಶಿಶುಪಾಲನು ಸಹಿಸಲಿಲ್ಲ.
ಉಪಾಲಭ್ಯ ಸ ಭೀಷ್ಮಂ ಚ ಧರ್ಮರಾಜಂ ಚ ಸಂಸದಿ |
ಅವಾಕ್ಷಿಪದ್ ವಾಸುದೇವಂ ಚೇದಿರಾಜೋ ಮಹಾಬಲಃ ॥31॥
ಮಹಾಬಲನಾದ ಚೇದಿರಾಜನು ಭೀಷ್ಮರನ್ನೂ ಧರ್ಮರಾಜನನ್ನೂ ಸಭೆಯಲ್ಲಿ ನಿಂದಿಸಿ ವಾಸುದೇವನನ್ನೂ ನಿಂದಿಸಿದನು.
ತೇಷಾಮಾಕಾರಭಾವಜ್ಞಃ ಸಹದೇವೋ ನ ಚಕ್ಷಮೇ |
ಮಾನಿನಾಂ ಬಲಿನಾಂ ರಾಜ್ಞಾಂ ಪುರಃ ಸಂದರ್ಶಿತೇ ಪದೇ |
ಪುಷ್ಪವೃಷ್ಟಿರ್ಮಹತ್ಯಾಸೀತ್ ಸಹದೇವಸ್ಯ ಮೂರ್ಧನಿ ॥32॥
ಅಲ್ಲಿ ನೆರದ ಅನೇಕರಾಜರ ಇಂಗಿತವನ್ನು ತಿಳಿದ ಸಹದೇವನು ಅದನ್ನು ನೋಡಿ ಸಹಿಸಲಿಲ್ಲ. ಧರ್ಮಿಷ್ಠರಾದ ಮತ್ತು ಬಲಿಷ್ಠರಾದ ಅಂತಹ ರಾಜರು ಎದುರಿನಲ್ಲಿ ಸಹದೇವನು ತನ್ನ ಪಾದವನ್ನು ತೋರಿಸುತ್ತಿರಲು ಅವನ ತಲೆಯಮೇಲೆ ದೊಡ್ಡ ಪುಷ್ಪವೃಷ್ಟಿಯುಂಟಾಯಿತು.
ಜನ್ಮಪ್ರಭೃತಿ ವೃಷ್ಣೀನಾಂ ಸುನೀಥಃ ಶತ್ರುರಬ್ರವೀತ್ |
ಪ್ರಷ್ಟಾ ವಿಯೋನಿಜೋ ರಾಜಾ ಪ್ರತಿವಕ್ತಾ ನದೀಸುತಃ ॥33॥
ಪ್ರತಿಗ್ರಹೀತಾ ಗೋಪಾಲಃ ಪ್ರದಾತಾ ಚ ವಿಯೋನಿಜಃ |
ಸದಸ್ಯಾ ಮೂಕವತ್ ಸರ್ವೇ ಆಸತೇಽತ್ರ ಕಿಮುಚ್ಯತೇ ॥34॥
ಹುಟ್ಟಿದಾಗಿನಿಂದಲೂ ವೃಷ್ಣಿಗಳಿಗೆ ಶತ್ರುವಾಗಿದ್ದ ಶಿಶುಪಾಲನು ಹೀಗೆ ಮಾತನಾಡಿದನು. ಪ್ರಶ್ನೆಯನ್ನು ಮಾಡುತ್ತಿರುವವನು ವಿಯೋನಿಯಲ್ಲಿ ಹುಟ್ಟಿದ ರಾಜ, ಅದಕ್ಕೆ ಉತ್ತರವನ್ನು ಕೊಡುವವನು ನದಿಯ ಪುತ್ರ, ಪೂಜೆಯನ್ನು ಸ್ವೀಕರಿಸುವವನು ದನವನ್ನು ಕಾಯುವವನು, ಪೂಜೆಯನ್ನು ಮಾಡುವವನು ಇನ್ನೊಬ್ಬ ವಿಯೋನಿಜನಾದವನು. ಎಲ್ಲಾ ಸದಸ್ಯರೂ ಮೂಕರಂತೆ ಕುಳಿತ್ತಿದ್ದಾರೆ. ಇಲ್ಲಿ ಏನು ಹೇಳಲಿ?
ಅತಿ ಪಶ್ಯಸಿ ವಾ ಸರ್ವಾನ್ ನವಾ ಪಶ್ಯಸಿ ಪಾಂಡವ |
ಸತ್ಸ್ವೇವಾನ್ಯೇಷು ಪೂಜ್ಯೇಷು ಕೃಷ್ಣಂ ನಾರ್ಚಿತುಮರ್ಹಸಿ ॥35॥
ಪಾಂಡವನೇ! ಕೃಷ್ಣನು ಎಲ್ಲರನ್ನು ಮೀರಿ ಇದ್ದಾನೆಂದು ಕಾಣುತ್ತಿದ್ದಿಯಾ? ಅಥವಾ ಉಳಿದವರು ನಿನಗೆ ಕಾಣುವುದೇ ಇಲ್ಲವೆ? ಪೂಜಾಯೋಗ್ಯರಾದ ಉಳಿದವರು ಇರುವಾಗ ನೀನು ಕೃಷ್ಣನನ್ನು ಪೂಜಿಸಬಾರದು.
ಏತೇ ಚೈವೋಭಯೇ ತಾತ ಕಾರ್ಯಸ್ಯ ತು ವಿನಾಶಕೇ |
ಅತಿದೃಷ್ಟಿರದೃಷ್ಟಿರ್ವಾ ತಯೋಃ ಕಿಂ ತ್ವಂ ಸಮಾಸ್ಥಿತಃ ॥36॥
ಪ್ರೀತಿಪಾತ್ರನೇ! ಅತಿದೃಷ್ಟಿ ಮತ್ತು ಅದೃಷ್ಟಿ ಇವೆರಡೂ ಕಾರ್ಯವಿಘಾತಕವಾದವುಗಳು ಅವುಗಳಲ್ಲಿ ನೀನು ಯಾವುದನ್ನು ಅವಲಂಬಿಸಿದ್ದೀಯೆ?

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ
ತ್ರಯಸಿತ್ರಂಶೋಧ್ಯಾಯಃ ॥
॥ಅರ್ಘಾಭಿಹರಣಪರ್ವಣಿ ದ್ವಿತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ಮೂರನೆಯ ಅಧ್ಯಾಯವು ಮುಗಿಯಿತು.
* * * *

ಮೂವತ್ನಾಲ್ಕನೆಯ ಅಧ್ಯಾಯ
(ಶಿಶುಪಾಲನಿಂದ ಕೃಷ್ಣನ ನಿಂದೆ ಮತ್ತು ಸಭಾತ್ಯಾಗ)
ಶಿಶುಪಾಲಃ
ನಾಯಮರ್ಹತಿ ವಾರ್ಷ್ಣೇಯಸ್ತಿಷ್ಠತ್ಸ್ವಿಹ ಮಹಾತ್ಮಸು |
ಮಹೀಪತಿಷು ಕೌರವ್ಯ ರಾಜವತ್ ಪಾರ್ಥಿವಾರ್ಹಣಮ್ ॥1॥
ಕೌರವ್ಯನೇ! ಇಲ್ಲಿ ಅನೇಕ ಮಹಾತ್ಮರಾದ ರಾಜರು ಇರುವಾಗ ರಾಜನಿಗೆ ಯೋಗ್ಯವಾದ ಅಗ್ರಪೂಜೆಗೆ ಈ ಕೃಷ್ಣನು ಅರ್ಹನಾಗುವುದಿಲ್ಲ.
ನಾಯಂ ಯುಕ್ತಃ ಸಮಾಚಾರಃ ಪಾಂಡವೇಷು ಮಹಾತ್ಮಸು |
ಯತ್ ಕಾಮಾದ್ ದೇವಕೀಪುತ್ರಂ ಪಾಂಡವಾರ್ಚಿತುಮರ್ಹಸಿ ॥2॥
ಪಾಂಡವನೇ! ನೀನು ಮನಸ್ಸಿಗೆ ಬಂದಂತೆ ದೇವಕೀಪುತ್ರನನ್ನು ಪೂಜಿಸಿದುದು ಮಹಾತ್ಮರಾದ ಪಾಂಡವರಿಗೆ ಯೋಗ್ಯವಾದ ಆಚರಣೆಯಲ್ಲ.
ಬಾಲಾ ಯೂಯಂ ನ ಜಾನೀಧ್ವಂ ಧರ್ಮಸೂಕ್ಷ್ಮಂ ಹಿ ಪಾಂಡವಾಃ |ಅಯಂ ತ್ವತ್ರ ತ್ವತಿಕ್ರಾಂತ ಆಪಗೇಯೋಽಲ್ಪದರ್ಶನಃ ॥3॥
ಪಾಂಡವರೇ! ನೀವು ಬಾಲಕರು. ನಿಮಗೆ ಧರ್ಮಸೂಕ್ಷ್ಮವು ತಿಳಿಯುವುದಿಲ್ಲ. ಇಲ್ಲಿ ಸೂಕ್ಷ್ಮಧರ್ಮವು ಅತಿಕ್ರಾಂತವಾಗಿದೆ. ಗಂಗಾಸುತನಾದ ಭೀಷ್ಮನು ಅಲ್ಪ ಜ್ಞಾನವುಳ್ಳವನು.
ತ್ವಾದೃಶೇ ಧರ್ಮಯುಕ್ತೇ ಹಿ ಕುರ್ವಾಣಃ ಪ್ರಿಯಕಾಮ್ಯಯಾ |
ಭವತ್ಯಭ್ಯಧಿ ಕಂ ಭೀಷ್ಮ ಲೋಕೇಷ್ವವಮತಃ ಸತಾಮ್ ॥4॥
ಧರ್ಮಯುಕ್ತನಾದ ನಿನ್ನಂತಹವನಿಂದ ತನ್ನ ಪ್ರಿಯದ ಕಾಮನೆಯಿಂದ ಭೀಷ್ಮನು ಈ ಕಾರ್ಯವನ್ನು ಮಾಡಿಸುತ್ತಿದ್ದಾನೆ. ಎಲೈ ಭೀಷ್ಮನೇ ಲೋಕದಲ್ಲಿ ಸಜ್ಜನರಿಂದ ಅವಮಾನಕ್ಕೆ ಒಳಗಾದ ಕೃಷ್ಣನನ್ನು ಯಾರಿಗಿಂತ ಶ್ರೇಷ್ಠನೆಂದು ನೀನು ಭಾವಿಸುತ್ತೀಯೆ?
ಕಥಂ ಹ್ಯರಾಜಾ ದಾಶಾರ್ಹೋ ಮಧ್ಯೇ ಸರ್ವಮಹೀಕ್ಷಿತಾಮ್ |
ಅರ್ಹಣಾಮರ್ಹತಿ ತಥಾ ಯಥಾ ಯುಷ್ಮಾಭಿರರ್ಚಿತಃ ॥5॥
ಸರ್ವರಾಜರ ಮಧ್ಯದಲ್ಲಿ ರಾಜನಲ್ಲದ ದಾಶಾರ್ಹನು ನೀವು ಮಾಡಿದಂತೆ ಮಾಡಿದ ಪೂಜೆಯನ್ನು ಸ್ವೀಕರಿಸಲು ಹೇಗೆ ಅರ್ಹನಾಗುತ್ತಾನೆ?
ಅಥವಾ ಮನ್ಯಸೇ ಕೃಷ್ಣಂ ಸ್ಥವಿಷ್ಠಂ ಭರತರ್ಷಭ |
ವಸುದೇವೇ ಸ್ಥಿತೇ ವೃದ್ಧೇ ಕಥಮರ್ಹತಿ ತತ್ಸುತಃ ॥6॥
ಭರತರ್ಷಭನೇ! ಅಥವಾ ನೀನು ಕೃಷ್ಣನನ್ನು ವೃದ್ಧನೆಂದು ತಿಳಿಯುವುದಾದರೆ ಅವನ ತಂದೆಯಾದ ವೃದ್ಧನಾದ ವಸುದೇವನು ಇರುವಾಗ ಮಗನಾದ ಕೃಷ್ಣನು ಹೇಗೆ ಪೂಜೆಗೆ ಅರ್ಹನಾಗುತ್ತಾನೆ?
ದ್ರುಪದೇ ತಿಷ್ಠತಿ ಕಥಂ ಮಾಧವೋಽರ್ಹತಿ ಪೂಜನಮ್ ॥7॥
ಅಥವಾ ವಸುದೇವನೂ ಕೂಡ ತನ್ನ ಸುತನು ಎಂಬ ಕಾರಣದಿಂದ ಈ ಪೂಜೆಯನ್ನು ಅನುಮೋದಿಸಿಬಹುದು. ಆದರೆ ದ್ರುಪದನಿರುವಾಗ ಮಾಧವನು ಹೇಗೆ ಪೂಜೆಗೆ ಅರ್ಹನಾಗುತ್ತಾನೆ.
ಆಚಾರ್ಯಂ ಮನ್ಯಸೇ ಕೃಷ್ಣಮಥವಾ ಕುರುಪುಂಗವ |
ದ್ರೋಣೇ ತಿಷ್ಠತಿ ವಾರ್ಷ್ಣೇಯಂ ಕಸ್ಮಾದರ್ಚಿತವಾನಸಿ ॥8॥
ಕುರುಪುಂಗವನೇ! ಅಥವಾ ನೀನು ಕೃಷ್ಣನನ್ನು ಆಚಾರ್ಯನೆಂದು ಭಾವಿಸುವುದಾದರೆ ದ್ರೋಣರು ಇರುವಾಗ ವಾರ್ಷ್ಣೇಯನನ್ನು ಏಕೆ ಅರ್ಚಿಸಿದೆ?
ಋತ್ವಿಜಂ ಮನ್ಯಸೇ ಕೃಷ್ಣಮಥವಾ ಕುರುಪುಂಗವ |
ದ್ವೈಪಾಯನೇ ಸ್ಥಿತೇ ವಿಪ್ರೇ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥9॥
ಅಥವಾ ನೀನು ಕೃಷ್ಣನನ್ನು ಋತ್ವಿಜನೆಂದು ಭಾವಿಸಿದರೆ ಎಲೈ ಕುರುಪುಂಗವನೇ! ಬ್ರಾಹ್ಮಣರಾದ ವೇದವ್ಯಾಸರು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?
ಭೀಷ್ಮೇ ಶಾಂತನವೇ ರಾಜನ್ ಸ್ಥಿತೇ ಪುರುಷಸತ್ತಮೇ |
ಸ್ವಚ್ಛಂದಮೃತ್ಯುಕೇ ತಸ್ಮಿನ್ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥10॥
ರಾಜನೇ! ಪುರುಷಶ್ರೇಷ್ಠನೇ! ಸ್ವಚ್ಛಂದಮೃತ್ಯುವೂ ಶಂತನು ಪುತ್ರನೂ ಆದ ಭೀಷ್ಮನು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?
ಅಯಂ ತತ್ರ ವ್ಯತಿಕ್ರಾಂತಃ ಕರ್ಮಣಾ ಚಾಲ್ಪದರ್ಶನಃ |
ತಾದೃಶೋಽಧರ್ಮಯುಕ್ತೋ ಹಿ ಕುರ್ವತಾ ಪ್ರಿಯಕಾಮ್ಯಯಾ |
ಕೃಪೇ ಚ ಭರತಾಚಾರ್ಯೇ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥11॥
ಸೂಕ್ಷ್ಮವಾದ ಧರ್ಮವು ಇಲ್ಲಿ ಮೀರಲ್ಪಟ್ಟಿದೆ. ನೀನು ಅಲ್ಪದರ್ಶನನಾದವನು. ನೀನು ಕೃಷ್ಣನಿಗೆ ಪ್ರೀತಿಯನ್ನು

ಉಂಟುಮಾಡುವುದಕ್ಕಾಗಿ ಕೃಷ್ಣನಿಗೆ ಪೂಜೆಯನ್ನು ಮಾಡಿದರೆ ಅದು ಅಧರ್ಮವಾಗುತ್ತದೆ. ಭಾರತಾಚಾರ್ಯರಾದ ಕೃಪರು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಅಶ್ವತ್ಥಾಮ್ನಿ ಸ್ಥಿತೇ ವೀರೇ ಸರ್ವಶಸ್ತ್ರವಿಶಾರದೇ |
ಕಥಂ ಕೃಷ್ಣಸ್ತ್ವಯಾ ರಾಜನ್ನರ್ಚಿತೋ ಯದುನಂದನಃ |
ದ್ರುಮೇ ಕಿಂಪುರುಷಾಚಾರ್ಯೇ ಸ್ಥಿತೇ ಕೃಷ್ಣೋಽರ್ಚಿತಃ ಕಥಮ್ ॥12॥

ಸರ್ವಶಸ್ತ್ರವಿಶಾರದರಾದ ವೀರರಾದ ಅಶ್ವತ್ಥಾಮರು ಇರುವಾಗ ಎಲೈ ರಾಜನೇ! ಯದುನಂದನನಾದ ಕೃಷ್ಣನನ್ನು ನೀನು ಹೇಗೆ ಅರ್ಚಿಸಿದೆ? ಕಿಂಪುರುಷಾಚಾರ್ಯರಾದ ದ್ರುಮರು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಅಸ್ಮಿನ್ ಪಾರ್ಥಾದನವಮೇ ಧನುರ್ವೇದೇ ಪರಾಕ್ರಮೇ |
ಏಕಲವ್ಯೇ ಸ್ಥಿತೇ ರಾಜನ್ ಕಥಂ ಕೃಷ್ಣಸ್ತ್ವಯಾಽರ್ಚಿತಃ ॥13॥

ರಾಜನೇ! ಅರ್ಜುನನಿಗಿಂತ ಧರ್ನುವೇದದಲ್ಲಾಗಲೀ ಪರಾಕ್ರಮದಲ್ಲಲಾಗಲೀ ನ್ಯೂನನಲ್ಲದ ಈ ಏಕಲವ್ಯನು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಭಗದತ್ತೇ ಮಹಾವೀರ್ಯೇ ಜಯತ್ಸೇನೇ ಚ ಮಾಗಧೇ |
ಕಾಳಿಂಗೇ ಚ ಸ್ಥಿತೇ ರಾಜನ್ ಕಥಂ ಕೃಷ್ಣಸ್ತ್ವಯಾಽರ್ಚಿತಃ ॥14॥

ಮಹಾವೀರ್ಯನಾದ ಭಗದತ್ತನೂ ಮಗಧಾಧಿಪತಿಯಾದ ಜಯತ್ಸೇನನೂ ಕಳಿಂಗರಾಜನೂ ಇರುವಾಗ ಎಲೈ ರಾಜನೇ! ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಪೂರ್ವದೇಶಾಧಿಪೇ ವೀರೇ ಕೋಸಲೇಂದ್ರೇ ಬೃಹದ್ಬಲೇ |
ವಿರಾಟೇ ಚ ಸ್ಥಿತೇ ವೀರೇ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥15॥

ಪೂರ್ವದೇಶಾಧಿಪನೂ ವೀರನೂ ಕೋಸಲೇಂದ್ರನೂ ಆದ ಬೃಹದ್ಬಲನೂ ವೀರನಾದ ವಿರಾಟನೂ ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ದರದೇ ಚ ಮಹಾವೀರ್ಯೇ ಕಥಂ ಕೃಷ್ಣೋಽರ್ಚಿತಸ್ತ್ವಯಾ
ಭೀಷ್ಮಕೇ ಚ ದುರಾಧರ್ಷೇ ಪಾಂಡ್ಯೇ ಚ ಕೃತಧನ್ವನಿ |
ನೃಪೇ ಚ ರುಗ್ಮಿಣಿ ಶ್ರೇಷ್ಠೇ ದಂತವಕ್ರೇ ಚ ಪಾರ್ಥಿವೇ
ಶಲ್ಯೇ ಮದ್ರಾಧಿಪೇ ಚೈವ ಕಥಂ ಕೃಷ್ಣಸ್ತ್ವಯಾಽರ್ಚಿತಃ ॥16॥

ಮಹಾಪರಾಕ್ರಮಿಯಾದ ದರದನು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ? ದುರಾಧರ್ಷನನಾದ ಭೀಷ್ಮಕನೂ ಧರ್ನುವಿದ್ಯೆಪಾರಂಗತನಾದ ಪಾಂಡ್ಯರಾಜನೂ ಶ್ರೇಷ್ಠನಾದ ರುಗ್ಮಿಯೂ ದಂತವಕ್ರನೂ ಮದ್ರಾಧಿಪತಿಯಾದ ಶಲ್ಯನೂ ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಸುರಾಷ್ಟ್ರಾಧಿಪತೌ ವೀರೇ ಮಾಳವೇ ಚ ಸ್ಥಿತೇ ನೃಪೇ |
ಕೃತಕ್ಷಣೇ ಚ ವೈದೇಹೇ ಸ್ಥಿತೇ ಕೃಷ್ಣೋಽರ್ಚಿತಃ ಕಥಮ್ ॥17॥

ವೀರನಾದ ಸುರಾಷ್ಟ್ರಾಧಿಪತಿಯೂ ಮಾಳವಾಧಿಪತಿಯೂ ಇರುವಾಗ ವಿದೇಹಾಧಿಪತಿಯೂ ಅವಸರವನ್ನು ಪಡೆದು ಬಂದಿರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಅಯಂ ಚ ಸರ್ವರಾಜ್ಞಾಂ ಯೋ ಬಲಶ್ಲಾಘೀ ಮಹಾರಥಃ |
ಜಾಮದಗ್ನ್ಯಸ್ಯ ದಯಿತಃ ಶಿಷ್ಯೋ ವಿಪ್ರಸ್ಯ ಭಾರತ ॥18॥
ಯೇನಾತ್ಮಬಲಮಾಶ್ರಿತ್ಯ ಜರಾಸಂಧೋ ಯುಧಾ ಜಿತಃ |
ತಂ ಕರ್ಣಂ ಸಮತಿಕ್ರಮ್ಯ ಕಥಂ ಕೃಷ್ಣಸ್ತ್ವಯಾಽರ್ಚಿತಃ ॥19॥

ಈ ಕರ್ಣನಾದರೂ ಮಹಾರಥನು. ತನ್ನ ಬಲವನ್ನು ಎಲ್ಲಾ ರಾಜರುಗಳ ಎದುರಿನಲ್ಲಿ ಶ್ಲಾಘಿಸುವವನು. ಎಲೈ ಭಾರತನೇ ಬ್ರಾಹ್ಮಣರಾದ ಪರಶುರಾಮರಿಗೆ ಪ್ರಿಯಶಿಷ್ಯನಾದವನು. ಅವನು ತನ್ನ ಸ್ವಂತಬಲದಿಂದ ಜರಾಸಂಧನನ್ನು ಯುದ್ಧದಲ್ಲಿ ಜಯಿಸಿದವನು. ಅಂತಹ ಕರ್ಣನನ್ನು ಮೀರಿ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ವಿಂದಾನುವಿಂದಾವಾವಂತ್ಯೌ ಕಾಂಭೋಜಶ್ಚ ಸುದಕ್ಷಿಣಃ |
ಸ್ಥಿತೇ ಸಾಲ್ವೇ ಚ ರಾಜೇಂದ್ರೇ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥20॥

ಅವಂತಿದೇಶದ ವೀರರಾದ ವಿಂದಾನುವಿಂದರೂ ಕಾಂಬೋಜಾಧಿಪತಿಯಾದ ಸುದಕ್ಷಣನೂ ರಾಜೇಂದ್ರನಾದ ಸಾಲ್ವನೂ ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಅಸ್ಮಿನ್ ಪಾರ್ಥಸಖೇ ರಾಜನ್ ಗಂಧರ್ವಾಣಾಂ ಮಹೀಪತೌ |
ಸ್ಥಿತೇ ಚಿತ್ರರಥೇ ವೀರೇ ಕಥಂ ಕೃಷ್ಣಸ್ತ್ವಯಾಽರ್ಚಿತಃ ॥21॥

ರಾಜನೇ! ಅರ್ಜುನನ ಸಖನಾದ ಗಂಧರ್ವಾಧಿಪತಿಯಾದ ವೀರನಾದ ಚಿತ್ರರಥನು ಇರುವಾಗ ನೀನು ಹೇಗೆ ಕೃಷ್ಣನನ್ನು ಅರ್ಚಿಸಿದೆ?

ಬಾಹ್ಲೀಕಂ ಸ್ಥವಿರಂ ವೀರಂ ಕೌರವಾಣಾಂ ಮಹಾರಥಮ್ |
ಸೌಮದತ್ತಿಂ ಮಹಾವೀರಂ ಸೋಮದತ್ತಂ ಮಹಾರಥಮ್ ॥22॥
ಶಕುನಿಂ ಸೌಬಲಂ ಚೈವ ಸಿಂಧುರಾಜಂ ಮಹಾರಥಮ್ |
ಏತಾನವಮತಾನ್ ಕೃತ್ವಾ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥23॥

ಅತ್ಯಂತ ವೃದ್ಧನಾದ ಕುರುವಂಶದಲ್ಲಿ ಜನಿಸಿದ ಬಾಹ್ಲೀಕರಾಜ ಮಹಾವೀರನಾದ, ಸೋಮದತ್ತನಮಗನಾದ ಭೂರಿಶ್ರವ, ಮಹಾರಥನಾದ ಸೋಮದತ್ತಸಿಂಧುರಾಜನಾದ ಸುಬಲ ಪುತ್ರನಾದ ಮಹಾರಥನಾದ ಶಕುನಿ, ಇವರೆಲ್ಲರಿಗೂ ಅವಮಾನವನ್ನು

ಮಾಡಿ ನೀನು ಕೃಷ್ಣನನ್ನು ಹೇಗೆ ಅರ್ಚಿಸಿದೆ?
ನೈವ ಋತ್ವಿಙ್ ನ ಚಾಚಾರ್ಯೋ ನ ರಾಜಾ ಮಧುಸೂದನಃ |
ಅರ್ಚಿತಸ್ತ್ವತ್ ಕುರುಶ್ರೇಷ್ಠ ಕಿಮನ್ಯತ್ ಪ್ರಿಯಕಾಮ್ಯಯಾ ॥24॥
ಮಧುಸೂಧನನು ಋತ್ವಿಜನಲ್ಲ ಆಚಾರ್ಯನಲ್ಲ ರಾಜನೂ ಅಲ್ಲ. ಕುರುಶ್ರೇಷ್ಠನೇ! ನಿನಗೆ ಪ್ರಿಯನೆಂಬ ಒಂದು ಕಾರಣವನ್ನು ಬಿಟ್ಟು ಬೇರೆಯಾವ ಕಾರಣವೂ ಇಲ್ಲದೆ ಅವನು ನಿನ್ನಿಂದ ಅರ್ಚಿಸಲ್ಪಟ್ಟಿದ್ದಾನೆ.
ಅಥವಾಽಪ್ಯರ್ಚನೀಯೋಽಯಂ ಯುಷ್ಮಾಭಿರ್ವೃಷ್ಣಿಪುಂಗವಃ |
ಕಿಂ ರಾಜಭಿರಿಹಾನೀತ್ಯೈರವಮಾನಾಯ ಭಾರತ ॥25॥
ಭಾರತನೇ! ಅಥವಾ ನೀನು ಈ ವೃಷ್ಣಿಪುಂಗವನನ್ನು ಪೂಜಿಸಬೇಕೆಂಬ ಅಭಿಪ್ರಾಯವನ್ನು ಹೊಂದಿದ್ದರೆ ಎಲ್ಲಾ ರಾಜರುಗಳನ್ನೂ ಇಲ್ಲಿಗೆ ಕರೆದು ಅವರಿಗೆ ಅವಮಾನವನ್ನು ಮಾಡುವ ಅವಶ್ಯಕತೆ ಏನಿದ್ದಿತು?
ವಯಂ ತು ನ ಭಯಾದಸ್ಯ ಕೌಂತೇಯಸ್ಯ ಮಹಾತ್ಮನಃ |
ಪ್ರಯಚ್ಛಾಮ ಕರಾನ್ ಸರ್ವೇ ನ ಲೋಭಾನ್ನ ಚ ಸಾಂತ್ವನಾತ್ ॥26॥
ನಾವು ಈ ಮಹಾತ್ಮನಾದ ಕೌಂತೇಯನಾದ ಧರ್ಮರಾಜನ ಹೆದರಿಕೆಯಿಂದಲಾಗಲಿ ಅಥವಾ ಸಮಾಧಾನದ ಮಾತುಗಳಿಂದಲಾಗಲೀ ಚಿಕ್ಕಮ್ಮನ ಮಗ ಎಂಬ ಕಾರಣದಿಂದಲಾಗಲೀ ಇವನಿಗೆ (ಕೃಷ್ಣನಿಗೆ) ಪೂಜೆಯನ್ನಾಗಲೀ ಕಪ್ಪವನ್ನಾಗಲೀ ಕೊಡುವುದಿಲ್ಲ.
ಅಸ್ಯ ಧರ್ಮಪ್ರಧಾನಸ್ಯ ಪಾರ್ಥಿವತ್ವಂ ಚಿಕೀರ್ಷತಃ |
ಕರಾನಸ್ಮೈ ಪ್ರಯಚ್ಛಾಮಃ ಸೋಯಮಸ್ಮಾನ್ ನ ಮನ್ಯತೇ ॥27॥
ಧರ್ಮಪ್ರದಾನನಾದ ಯುಧಿಷ್ಠಿರನು ಸಮ್ರಾಟ್ ಆಗಬೇಕೆಂದು ಬಯಸಿ ಯಜ್ಞವನ್ನು ಮಾಡಬಯಸಿದನೆಂದು ನಾವು ಅವನಿಗೆ ಕಪ್ಪವನ್ನು ಕೊಟ್ಟಿದ್ದೇವೆ. ಅವನು ಮಾತ್ರ ನಮಗೆ ಹೀಗೆ ಅವಮಾನವನ್ನು ಮಾಡುತ್ತಿದ್ದಾನೆ.
ಕಿಮನ್ಯದವಮಾನಾದ್ಧಿ ಯದಯಂ ರಾಜಸಂಸದಿ |
ಅಪ್ರಾಪ್ತಲಕ್ಷಣಂ ಕೃಷ್ಣಮರ್ಘ್ಯೇಣಾರ್ಚಿತವಾನಸಿ ॥28॥
ಇದು ಅವಮಾನವಲ್ಲದೆ ಇನ್ನೇನು? ಏಕೆಂದರೆ ರಾಜರ ಸಭೆಯಲ್ಲಿ ಈ ಧರ್ಮರಾಜನು ಯಾವ ಲಕ್ಷಣವೂ ಇಲ್ಲದ ಕೃಷ್ಣನನ್ನು ಅರ್ಘ್ಯದಿಂದ ಪೂಜಿಸಿದ್ದಾನೆ.
ಅಕಸ್ಮಾದ್ ಧರ್ಮಪುತ್ರಸ್ಯ ಧರ್ಮಾತ್ಮೇತಿ ಯಶೋ ಗತಮ್ |
ಕೋ ಹಿ ಧರ್ಮಚ್ಯುತೇ ಪೂಜಾಮೇವಂವೃತ್ತೇ ಪ್ರಯೋಜಯೇತ್ ॥29॥
ಈ ದಿನ ಧರ್ಮರಾಜನ ಧರ್ಮಾತ್ಮ ಎಂಬ ಕೀರ್ತಿಯು ಇದ್ದಕ್ಕಿದಂತೆ ಹೊರಟುಹೋಯಿತು. ಯಾವನು ಧರ್ಮಚ್ಯುತನಾದ ಇಂತಹ ನಡತೆಯನ್ನು ಹೊಂದಿದ ಕೃಷ್ಣನಿಗೆ ಈ ರೀತಿಯಲ್ಲಿ ಪೂಜೆಯನ್ನು ಮಾಡುತ್ತಾನೇ?
ಯೋಽಯಂ ವೃಷ್ಣಿಕುಲೇ ಜಾತೋ ರಾಜಾನಂ ಹತವಾನ್ ಪುರಾ |
ಜರಾಸಂಧಂ ಮಹಾತ್ಮಾನಮನ್ಯಾಯೇನ ದುರಾತ್ಮವಾನ್ ॥30॥
ವೃಷ್ಣಿಕುಲದಲ್ಲಿ ಜನಿಸಿದ ಇವನು ಹಿಂದೆ ರಾಜನಾದ ಕಂಸನನ್ನು ಕೊಂದನು. ದುರಾತ್ಮನಾದ ಇವನು ಮಹಾತ್ಮನಾದ ಜರಾಸಂಧನನ್ನು ಅನ್ಯಾಯದಿಂದ ಸಂಹಾರಮಾಡಿದನು.
ಅದ್ಯ ಧರ್ಮಾತ್ಮತಾ ಚೈವ ವ್ಯಪಕೃಷ್ಟಾ ಯುಧಿಷ್ಠಿರಾತ್ |
ಕೃಪಣತ್ವಂ ನಿವಿಷ್ಟಂ ಚ ಕೃಷ್ಣೇಽರ್ಘ್ಯಸ್ಯ ನಿವೇದನಾತ್ ॥31॥
ಈ ದಿನ ಯುಧಿಷ್ಠಿರನ ಧರ್ಮಾತ್ಮತೆಯು ಹೊರಟುಹೋಯಿತು. ಕೃಷ್ಣನಿಗೆ ಅರ್ಘ್ಯವನ್ನು ಕೊಟ್ಟುದದರಿಂದ ಅವನಿಗೆ ಕಾರ್ಪಣ್ಯವು ಉಂಟಾಗಿದೆ.
ಯದಿ ಭೀತಾಶ್ಚ ಕೌಂತೇಯಾಃ ಕೃಪಣಾಶ್ಚ ತಪಸ್ವಿನಃ |
ರಾಜ್ಞಾಂ ಹಿ ಮಧ್ಯೇ ಪೂಜಾಂ ತೇ ಕೃತವಂತೋ ಹಿ ಭೂಯಸೀಂ |
ನನು ತ್ವಯಾ ನಿಬೋದ್ಧವ್ಯಂ ಯಾಂ ಪೂಜಾಂ ಮಾಧವಾರ್ಹಸಿ ॥33॥
ಕೌಂತೇಯರು ಭೀತರೂ ಕೃಪಣರೂ ಶೋಚನೀಯರೂ ಆಗಿದ್ದಾರೆ. ರಾಜರುಗಳ ಮಧ್ಯದಲ್ಲಿ ಇಂತಹ ಶ್ರೇಷ್ಠವಾದ ಪೂಜೆಯನ್ನು ಏಕೆ ಮಾಡಬೇಕಾಗಿದ್ದಿತು? ಮಾಧವನೇ! ನಿನಗೆ ಎಂತಹ ಪೂಜೆಯು ಯೋಗ್ಯವೆಂದು ನೀನಾಗಿಯೇ ತಿಳಿಯಬೇಕಾಗಿದ್ದಿತಷ್ಟೇ?
ಅಥವಾ ಕೃಪಣೈರೇತಾಮುಪನೀತಾಂ ಜನಾರ್ದನ |
ಪೂಜಾಮನರ್ಹಃ ಕಸ್ಮಾತ್ ತ್ವ ಮಭ್ಯನುಜ್ಞಾತವಾನಸಿ ॥34॥
ಅಥವಾ ಜನಾರ್ದನನೇ! ಇವರು ಕಾರ್ಪಣ್ಯದಿಂದ ಮಾಡಿದ ಪೂಜೆಯನ್ನು ಪೂಜೆಗೆ ಅನರ್ಹನಾದ ನೀನು ಏಕೆ ಸ್ವೀಕರಿಸಿದೆ?
ಅಯುಕ್ತಾಮಾತ್ಮನಃ ಪೂಜಾಂ ತ್ವಂ ಪುನರ್ಬಹುಮನ್ಯಸೇ |
ಹವಿಷಃ ಪ್ರಾಪ್ಯ ವಿಷ್ಯಂದಂ ಪ್ರಾಶಿತುಂ ಶ್ವೇವ ನಿರ್ಜನೇ ॥35॥
ಪಾತ್ರೆಯಿಂದ ಚೆಲ್ಲಿದ ಹವಿಸ್ಸನ್ನು ನಿರ್ಜನವಾದ ಪ್ರದೇಶದಲ್ಲಿ ನಾಯಿಯು ಸ್ವೀಕರಿಸುವಂತೆ ನಿನಗೆ ಅಯೋಗ್ಯವಾದ ಈ ಪೂಜೆಯನ್ನು ನೀನು ಬಹುಮಾನದಿಂದ ಸ್ವೀಕರಿಸಿದ್ದೀಯೆ.
ನ ತ್ವಯಂ ಪಾರ್ಥಿವೇಂದ್ರಾಣಾಮವಮಾನ್ಯ ಪ್ರಯುಜ್ಯತೇ |
ತ್ವಾಮೇವ ಕುರವೋ ವ್ಯಕ್ತಂ ಪ್ರಲಂಭಂತೇ ಜನಾರ್ದನ ॥36॥
ಜನಾರ್ದನನೇ! ರಾಜರನ್ನು ಅವಮಾನಗೊಳಿಸಿ ನಿನಗೆ ಪಾಂಡವರು ಈ ಪೂಜೆಯನ್ನು ಮಾಡುತ್ತಿದ್ದಾರೆ. ಎಂದು ತಿಳಿಯಬೇಡ. ಕುರುಗಳು ಪೂಜೆಯನ್ನು ಮಾಡಿ ನಿನಗೇ ಅವಮಾನವನ್ನು ಮಾಡಿದ್ದಾರೆ.
ಕ್ಲೀಬೇ ದಾರಕ್ರಿಯಾ ಯಾ ಸ್ಯಾದಂಧೇ ವಾ ರೂಪದರ್ಶನಮ್ |

ಅರಾಜ್ಞೋ ರಾಜವತ್ ಪೂಜಾ ತಥಾ ತೇ ಮಧುಸೂದನ ॥37॥
ಎಲೈ ಮಧುಸೂದನನೇ! ರಾಜನಲ್ಲದ ನಿನಗೆ ರಾಜನಂತೆ ಸಲ್ಲಿಸಿದ ಈ ಪೂಜೆಯು ನಪುಂಸಕನ ವಿವಾಹವಿದ್ದಂತೆ ಮತ್ತು ಕುರುಡನರೂಪದರ್ಶನವಿದ್ದಂತೆ.
ದೃಷ್ಟೋ ಯುಧಿಷ್ಠಿರೋ ರಾಜಾ ದೃಷ್ಟೋ ಭೀಷ್ಮಶ್ಚ ಯಾದೃಶಃ |
ವಾಸುದೇವೋಽಪ್ಯಯಂ ದೃಷ್ಟಃ ಸರ್ವಮೇತದ್ ಯಥಾತಥಮ್॥38॥
ನಾವು ರಾಜನಾದ ಯುಧಿಷ್ಠಿರನನ್ನು ನೋಡಿದ್ದೇವೆ. ಭೀಷ್ಮನು ಎಂತಹವನೆಂದು ನೋಡಿದ್ದೇವೆ. ಈ ವಾಸುದೇವನನ್ನೂ ನೋಡಿದ್ದೇವೆ. ಎಲ್ಲವೂ ಸರಿಯಾಗಿಯೇ ಇದೆ!
ವೈಶಂಪಾಯನಃ
ಇತ್ಯುಕ್ತ್ವಾ ಶಿಶುಪಾಲಸ್ತಾನುತ್ಥಾಯ ಪರಮಾಸನಾತ್ |
ನಿರ್ಯಯೌ ಸದಸಸ್ತಸ್ಮಾತ್ ಸಹಿತೋ ರಾಜಭಿಸ್ತದಾ ॥39॥
ಶಿಶುಪಾಲನು ಅವರೆಲ್ಲರನ್ನೂ ಕುರಿತು ಹೀಗೆ ಹೇಳಿ ತನ್ನ ಶ್ರೇಷ್ಠವಾದ ಆಸನದಿಂದ ಎದ್ದು ರಾಜರ ಜೊತೆಯಲ್ಲಿ ಆ ಸಭೆಯಿಂದ ಹೊರಗೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
॥ಅರ್ಘಾಭಿಹರಣಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
* * * *

ಮೂವತ್ತೈದನೆಯ ಅಧ್ಯಾಯ
(ಶಿಶುಪಾಲನನ್ನು ಸಮಾಧಾನಪಡಿಸುವ ಯುಧಿಷ್ಠಿರನನ್ನು ತಡೆದು ಭೀಷ್ಮರಿಂದ ಕೃಷ್ಣನ ಮಹಿಮೆಯ ಕಥನ ಮತ್ತು ಸಹದೇವನ ವೀರವಚನದ ಪ್ರಶಂಸೆ.)
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ಶಿಶುಪಾಲಮುಪಾದ್ರವತ್ |
ಉವಾಚ ಚೈನಂ ಮಧುರಂ ಸಾಂತ್ವಪೂರ್ವಮಿದಂ ವಚಃ ॥1॥
ಅನಂತರ ರಾಜನಾದ ಯುಧಿಷ್ಠಿರನು ಶಿಶುಪಾಲನಬಳಿಗೆ ಓಡಿಹೋಗಿ ಅವನನ್ನು ಕುರಿತು ಸಮಾಧಾನದಪೂರ್ವಕವಾದ ಈ ಮಧುರವಚನಗಳನ್ನು ಆಡಿದನು.
ನೇದಂ ಯುಕ್ತಂ ಮಹೀಪಾಲ ಯಾದೃಶಂ ವೈ ತ್ವಮುಕ್ತವಾನ್ |
ಅಧರ್ಮಶ್ಚ ಪರೋ ರಾಜನ್ ಪಾರುಷ್ಯಂ ಚ ನಿರರ್ಥಕಮ್ ॥2॥
ರಾಜನೇ! ನೀನು ಆಡಿದ ಮಾತುಗಳು ಯುಕ್ತವಾದುದಲ್ಲ. ರಾಜನೇ! ಇದರಿಂದ ಅಧರ್ಮವು ಉಂಟಾಗುತ್ತದೆ. ಮತ್ತು ವ್ಯರ್ಥವಾದ ವಿರೋಧವು ಉಂಟಾಗುತ್ತದೆ.
ನಹಿ ಧರ್ಮಂ ಪರಂ ಜಾತು ನಾವಬುದ್ಧ್ಯೇತ ಪಾರ್ಥಿವಃ |
ಭೀಷ್ಮಂ ಶಾಂತನವಂ ತ್ವೇನಂ ಮಾವಮಂಸ್ಥಾ ಅತೋಽನ್ಯಥಾ ॥3॥
ರಾಜವಂಶದಲ್ಲಿ ಜನಿಸಿದ ಭೀಷ್ಮರು ಎಂದೂ ಧರ್ಮಜ್ಞಾನಶೂನ್ಯರಲ್ಲ. ಶಂತನುವಿನ ಪುತ್ರರಾದ ಭೀಷ್ಮರನ್ನು ಹೀಗೆ ಎಂದೂ ಅವಮಾನ ಮಾಡಬೇಡ.
ಯಮಂ ಚೈನಾನ್ ಮಹೀಪಾಲಾಂಸ್ತ್ವತ್ತೋ ವೃದ್ಧತಮಾನ್ ಬಹೂನ್ |
ಮೃಷ್ಯಂತೇ ಚಾರ್ಹಣಾಂ ಕೃಷ್ಣೇ ತದ್ವತ್ ತ್ವಂ ಕರ್ತುಮರ್ಹಸಿ ॥4॥
ಒಂದು ಪಕ್ಷ ಅವಮಾನಮಾಡಿದರೆ ಭೀಷ್ಮನು ಯಮನಂತೆ ಆಗುತ್ತಾನೆ. ನಿನಗಿಂತ ಹಿರಿಯರಾದ ಈ ಎಲ್ಲಾ ಅನೇಕ ರಾಜರುಗಳು ಕೃಷ್ಣನಿಗೆ ಮಾಡಿದ ಅಗ್ರಪೂಜೆಯನ್ನು ಮನ್ನಿಸುತ್ತಿದ್ದಾರೆ. ನೀನೂ ಸಹ ಹಾಗೆಯೇ ಮಾಡಬೇಕು.
ವೇದ ತತ್ತ್ವೇನ ಕೃಷ್ಣಂ ಹಿ ಭೀಷ್ಮಶ್ಚೇದಿಪತೇ ಭೃಶಮ್ |
ನ ಹ್ಯೇನಂ ತ್ವಂ ತಥಾ ವೇತ್ಥ ಯಥೈನಂ ವೇದ ಕೌರವಃ ॥5॥
ಚೇದಿರಾಜನೇ! ಭೀಷ್ಮರು ಕೃಷ್ಣನನ್ನು ಚೆನ್ನಾಗಿ ಯಥಾವತ್ತಾಗಿ ತಿಳಿದಿದ್ದಾರೆ. ಕೌರವರಾದ ಅವರು ಕೃಷ್ಣನನ್ನು ತಿಳಿದಿರುವಂತೆ ನೀನು ತಿಳಿದಿಲ್ಲ.
ಭೀಷ್ಮಃ
ನ ಚಾಸ್ಯಾನುನಯೋ ದೇಯೋ ನಾಯಮರ್ಹತಿ ಸಾಂತ್ವನಮ್ |
ಲೋಕವೃದ್ಧತಮೇ ಕೃಷ್ಣೇ ಯೋಽರ್ಹಣಾಂ ನಾನುಮನ್ಯತೇ ॥6॥
ಇವನಿಗೆ ಸಮಾಧಾನದ ಮಾತುಗಳನ್ನು ಆಡಬಾರದು. ಲೋಕದಲ್ಲಿ ಶ್ರೇಷ್ಠತಮನಾದ ಕೃಷ್ಣನ ಪೂಜೆಯನ್ನು ಯಾವ ಇವನು ಸಮ್ಮತಿಸುವುದಿಲ್ಲವೋ, ಅಂತಹ ಇವನು ಸಾಂತ್ವನದ ನುಡಿಗಳಿಗೆ ಅರ್ಹನಲ್ಲ.
ಕ್ಷತ್ರಿಯಃ ಕ್ಷತ್ರಿಯಂ ಜಿತ್ವಾ ರಣೇ ರಣಕೃತಾಂ ವರಃ |
ಯೋ ಮುಂಚತಿ ವಶೇ ಕೃತ್ವಾ ಗುರುರ್ಭವತಿ ತಸ್ಯ ಸಃ ॥7॥
ಯುದ್ಧಮಾಡುವುದರಲ್ಲಿ ಶ್ರೇಷ್ಠನಾದ ಕ್ಷತ್ರಿಯನು ಇನ್ನೊಬ್ಬ ಕ್ಷತ್ರಿಯನನ್ನು ಯುದ್ಧದಲ್ಲಿ ಜಯಿಸಿ ವಶಪಡಿಸಿಕೊಂಡು ಅವನನ್ನು ಬಿಡುಗಡೆಮಾಡಿದರೆ ಗೆದ್ದ ಕ್ಷತ್ರಿಯನು ಇನ್ನೊಬ್ಬನಿಗೆ ಗುರುವಾಗುತ್ತಾನೆ.

ಅಸ್ಯಾಂ ಹಿ ಸಮಿತೌ ರಾಜ್ಞಾಮೇಕಮಪ್ಯಜಿತಂ ಯುಧಿ |
ನ ಪಶ್ಯಾಮಿ ಮಹೀಪಾಲಂ ಕೃಷ್ಣೇನಾಕ್ಲಿಷ್ಟಕರ್ಮಣಾ ॥8॥
ಈ ದೊಡ್ಡ ಸಭೆಯಲ್ಲಿ ಅನಾಯಾಸವಾಗಿ ಯುದ್ಧಮಾಡುವ ಕೃಷ್ಣನ ಜೊತೆಯಲ್ಲಿ ಯುದ್ಧಮಾಡಿ ಪರಾಭವವನ್ನು ಹೊಂದದಿರುವ ಒಬ್ಬ ರಾಜನನ್ನೂ ನಾನು ಕಾಣುತ್ತಿಲ್ಲ.
ನಹಿ ಕೇವಲಮಸ್ಮಾಕಮರ್ಚಿತವ್ಯೋ ಜನಾರ್ದನಃ |
ತ್ರಯಾಣಾಮಪಿ ಲೋಕಾನಾಮರ್ಚನೀಯೋ ಹಿ ಚಾಚ್ಯುತಃ ॥9॥
ಜನಾರ್ದನನನ್ನು ಕೇವಲ ನಾವು ಮಾತ್ರ ಅರ್ಚನೆಮಾಡುವುದಷ್ಟೇ ಅಲ್ಲ. ಅಚ್ಯುತನಾದ ಅವನು ಮೂರುಲೋಕದಲ್ಲಿಯೂ ಅರ್ಚನೀಯನಾದವನು.
ಕೃಷ್ಣೇನ ವಿಜಿತಾ ಯುದ್ಧೇ ಬಹವಃ ಕ್ಷತ್ರಿಯರ್ಷಭಾಃ |
ಜಗತ್ ಸರ್ವಂ ಚ ವಾರ್ಷ್ಣೇಯೇ ನಿಖಿಲೇನ ಪ್ರತಿಷ್ಠಿತಮ್ ॥10॥
ಯುದ್ಧದಲ್ಲಿ ಅನೇಕ ಕ್ಷತ್ರಿಯಶ್ರೇಷ್ಠರು ಕೃಷ್ಣನಿಂದ ನಿರ್ಜಿತರಾಗಿದ್ದಾರೆ. ಎಲ್ಲ ಜಗತ್ತೂ ಸಹ ಸಮಗ್ರವಾಗಿ ಕೃಷ್ಣನನ್ನು ಆಧರಿಸಿದೆ.
ತಸ್ಮಾತ್ ಸತ್ಸ್ವಪಿ ವೃದ್ಧೇಷು ಕೃಷ್ಣಮರ್ಚಾಮ ನೇತರಾನ್ |
ಏವಂ ವಕ್ತುಂ ನ ಚಾರ್ಹಸ್ತ್ವಂ ಮಾ ಭೂತ್ ತೇ ಬುದ್ಧಿರೀದೃಶೀ ॥11॥
ಆದ್ದರಿಂದ ಬೇರೆ ವೃದ್ಧರು ಇದ್ದರೂ ಕೃಷ್ಣನನ್ನೇ ಪೂಜಿಸುತ್ತೇವೆ. ಬೇರೆಯರನ್ನಲ್ಲ. ಆದ್ದರಿಂದ ಧರ್ಮರಾಜನೇ ನೀನು ಶಿಶುಪಾಲನನ್ನು ಕುರಿತು ಹೀಗೆ ಮಾತನಾಡುವುದು ಯೋಗ್ಯವಲ್ಲ. ನಿನಗೆ ಇಂತಹ ಬುದ್ಧಿಯು ಬರದಿರಲಿ.
ಜ್ಞಾನವೃದ್ಧಾ ಮಯಾ ರಾಜನ್ ಬಹವಃ ಪರ್ಯುಪಾಸಿತಾಃ |
ಯಸ್ಯ ರಾಜನ್ ಪ್ರಭಾವಜ್ಞಾಃ ಪುರಾ ಸರ್ವೇ ಚ ರಕ್ಷಿತಾಃ ॥12॥
ತೇಷಾಂ ಕಥಯತಾಂ ಶೌರೇರಹಂ ಗುಣವತೋ ಗುಣಾನ್ |
ಸಮಾಗತಾನಾಮಶ್ರೌಷಂ ಬಹೂನ್ ಬಹುಮತಾನ್ ಸತಾಮ್ ॥13॥
ರಾಜನೇ! ನಾನು ಜ್ಞಾನವೃದ್ಧರಾದ ಅನೇಕ ಮಹಾತ್ಮರ ಸೇವೆಯನ್ನು ಮಾಡಿದ್ದೇನೆ. ಅವರೆಲ್ಲರೂ ಹಿಂದೆ ಕೃಷ್ಣನಿಂದ ರಕ್ಷಿತರಾಗಿ ಅವನ ಪ್ರಭಾವವನ್ನು ತಿಳಿದವರು. ಅವರ ಮಾತುಗಳಿಂದ ಗುಣವಂತನಾದ ಕೃಷ್ಣನ ಸಜ್ಜನರಿಂದ ಪ್ರಶಂಸಿಸಲ್ಪಟ್ಟ ಅನೇಕ ಗುಣಗಳನ್ನು ಅನೇಕ ಬಾರಿ ಕೇಳಿದ್ದೇನೆ.
ಕರ್ಮಾಣ್ಯಪಿ ಚ ಯಾನ್ಯಸ್ಯ ಜನ್ಮಪ್ರಭೃತಿ ಧೀಮತಃ |
ಬಹೂನಿ ಕಥ್ಯಮಾನಾನಿ ನರೈರ್ಭೂಯಃ ಶ್ರುತಾನಿ ಮೇ ॥14॥
ಮೇಧಾವಿಯಾದ ಕೃಷ್ಣನು ಜನ್ಮದಿಂದ ಆರಂಭಿಸಿ ಅವನು ಮಾಡಿದ ಅನೇಕ ಅದ್ಭುತಕಾರ್ಯಗಳನ್ನು ಅನೇಕ ನರರು ವರ್ಣಿಸುವುದನ್ನು ಸಹ ಕೇಳಿದ್ದೇನೆ.
ನ ಕೇವಲಂ ವಯಂ ಕಾಮಾತ್ ಚೇದಿರಾಜ ಜನಾರ್ದನಮ್ |
ನ ಸಂಬಂಧಂ ಪುರಸ್ಕೃತ್ಯ ಕೃತಾರ್ಥಂ ವಾ ಕಥಂಚನ ॥15॥
ಅರ್ಚಾಮಹೇಽರ್ಚಿತಂ ಸದ್ಭಿರ್ಭುವಿ ಭೂತಸುಖಾವಹಮ್ |
ಯಶಃ ಶೌರ್ಯಂ ಬಲಂ ಚಾಸ್ಯ ವಿಜ್ಞಾಯಾರ್ಚಾಂ ಪ್ರಯುಂಜ್ಮಹೇ ॥
ಚೇದಿರಾಜನೇ! ನಾವು ಕೇವಲ ನಮ್ಮ ಇಚ್ಛೆಯಿಂದ ಜನಾರ್ದನನನ್ನು ಪೂಜಿಸುತ್ತಿಲ್ಲ. ಅಥವಾ ನಮ್ಮ ಸಂಬಂಧದಿಂದಾಗಲೀ ಅಥವಾ ಅವನಿಂದ ಪ್ರಯೋಜನವನ್ನು ಪಡೆಯುವ ಸಲುವಾಗಿಯಾಗಲೀ ಪೂಜಿಸುತ್ತಿಲ್ಲ. ಭೂಮಿಯಲ್ಲಿ ಎಲ್ಲರಿಗೂ ಸುಖವನ್ನು ಕೊಡುವ ಅವನು ಸಜ್ಜನರಿಂದ ಅರ್ಚಿತನಾಗಿದ್ದಾನೆ ಎಂಬ ಕಾರಣದಿಂದ ನಾವು ಪೂಜಿಸುತ್ತಿದ್ದೇವೆ. ಅವನ ಕೀರ್ತಿಯನ್ನು ಶೌರ್ಯವನ್ನು, ಬಲವನ್ನು ಚೆನ್ನಾಗಿ ತಿಳಿದು ಅವನಿಗೆ ಪೂಜೆಯನ್ನು ಸಲ್ಲಿಸುತ್ತಿದ್ದೇವೆ.
ನಹಿ ಕಶ್ಚಿದಿಹಾಸ್ಮಾಭಿಃ ಬಾಲೋಽಪ್ಯಪರೀಕ್ಷಿತಃ |
ಗುಣೈರನ್ಯಾನತಿಕ್ರಮ್ಯ ಹರಿರರ್ಚ್ಯತಮೋ ಮತಃ ॥17॥
ನಾವು ಈ ಸಭೆಗೆ ಬಂದವರಲ್ಲಿ ಒಬ್ಬ ಬಾಲಕನನ್ನೂ ಕೂಡ ಪರೀಕ್ಷಿಸದೇ ಬಿಟ್ಟಿಲ್ಲ. ಹರಿಯು ತನ್ನ ಗುಣಗಳಿಂದ ಎಲ್ಲರನ್ನೂ ಮೀರಿದವನು. ಆದ್ದರಿಂದ ಅವನು ಪೂಜ್ಯತಮನಾದವನು ಎಂದು ನನ್ನ ಅಭಿಪ್ರಾಯ.
ಜ್ಞಾನವೃದ್ಧೋ ದ್ವಿಜಾತೀನಾಂ ಕ್ಷತ್ರಿಯಾಣಾಂ ಬಲಾಧಿಕಃ |
ವೈಶ್ಯಾನಾಂ ಧಾನ್ಯಧನವಾನ್ ಶೂದ್ರಾಣಾಮೇವ ಜನ್ಮತಃ ॥18॥
ಬ್ರಾಹ್ಮಣರಲ್ಲಿ ಜ್ಞಾನವೃದ್ಧನಾದವನು ಕ್ಷತ್ರಿಯರಲ್ಲಿ ಬಲಾಧಿಕನಾದವನು ವೈಶ್ಯರಲ್ಲಿ ಧನಧಾನ್ಯ ಸಂವೃದ್ಧಿಯುಳ್ಳವನು ಮತ್ತು ಶೂದ್ರರಲ್ಲಿ ಜನ್ಮದಿಂದ ಹಿರಿಯನಾದವನು ಸಹ ಪೂಜೆಗೆ ಅರ್ಹರಾಗುತ್ತಾರೆ.
ಯುಜ್ಯೇತೇ ತೌ ಚ ಕೃಷ್ಣೇ ವೈ ಹೇತೂ ದ್ವಾವಪಿ ಸಮ್ಮತೌ |
ವೇದವೇದಾಂಗವಿಜ್ಞಾನಂ ಬಲಂ ಚಾಸ್ಯಾಮಿತಂ ತಥಾ |
ನೃಣಾಂ ಹಿ ಲೋಕೇ ಕಶ್ಚಾಸ್ತಿ ವಿಶಿಷ್ಟಃ ಕೇಶವಾದೃತೇ ॥19॥
ಕೃಷ್ಣನಲ್ಲಿ ಪೂಜೆಗೆ ನಿಮಿತ್ತವಾದ ಜ್ಞಾನ ಬಲಗಳೆರಡೂ ಸಂಮತವಾಗಿವೆ. ಅವನ ವೇದವೇದಾಂಗ ವಿಜ್ಞಾನವೂ ಅವನಿಗಿರುವ ಅಪ್ರತಿಮವಾದ ಬಲವೂ ಪ್ರಸಿದ್ಧವಾಗಿದೆ. ಈ ಮನುಷ್ಯಲೋಕದಲ್ಲಿ ಕೇಶವನಿಗಿಂತ ಮಿಗಿಲಾದವನು ಯಾವನು ಇದ್ದಾನೆ?
ದಾನಂ ದಾಕ್ಷ್ಯಂ ಶ್ರುತಂ ಶೌರ್ಯಂ ಹ್ರೀಃ ಕೀರ್ತಿರ್ಬುದ್ಧಿರುತ್ತಮಾ|
ಸನ್ನತಿಃ ಶ್ರೀರ್ಧೃತಿಃ ಪುಷ್ಟಿಃ ತುಷ್ಟಿಶ್ಚ ನಿಯತಾಽಚ್ಯುತೇ ॥20॥
ಅಚ್ಯುತನಲ್ಲಿ ದಾನ ದಕ್ಷತೆ ವಿದ್ಯಾ ಶೌರ್ಯ ಲಜ್ಜೆ ಕೀರ್ತಿ ಶ್ರೇಷ್ಠವಾದ ಬುದ್ಧಿ ವಿನಯ ಸಂಪತ್ತು ಧೈರ್ಯ ಪುಷ್ಟಿ ಮತ್ತು ತುಷ್ಟಿಗಳು

ಯಾವಾಗಲೂ ಇವೆ.
ತಮಿಮಂ ಸರ್ವಸಂಪನ್ನಮಾಚಾರ್ಯಂ ಪಿತರಂ ಗುರುಮ್ |
ಅರ್ಚ್ಯಮಚ್ಯುತಮರ್ಚಾಮಃ ಸರ್ವೇ ಸಮ್ಮಂತುಮರ್ಹಥ ॥21॥
ಎಲ್ಲ ಸದ್ಗುಣಗಳಿಂದ ಸಂಪನ್ನನಾದ ತಂದೆಯಾದ ಗುರುವಾದ ಅರ್ಚನೀಯನಾದ ಈ ಅಚ್ಯುತನನ್ನು ನಾವು ಪೂಜಿಸುತ್ತೇವೆ. ನೀವೆಲ್ಲರೂ ಸಮ್ಮತಿಯನ್ನು ನೀಡಬೇಕು.
ಋತ್ವಿಗ್ ಗುರುಸ್ತಥಾಚಾರ್ಯಃ ಸ್ನಾತಕೋ ನೃಪತಿಃ ಪ್ರಿಯಃ |
ಸರ್ವಮೇತದ್‌ಹೃಷೀಕೇಶಃ ತಸ್ಮಾದಭ್ಯರ್ಚಿತೋಽಚ್ಯುತಃ ॥22॥
ಅಚ್ಯುತನು ಋತ್ವಿಕ್ ಗುರು ಆಚಾರ್ಯ ಸ್ನಾತಕ ರಾಜ ಪ್ರಿಯ ಎಲ್ಲವೂ ಆಗಿದ್ದಾನೆ. ಆದ್ದರಿಂದ ನಮ್ಮಿಂದ ಪೂಜಿಸಲ್ಪಟ್ಟಿದ್ದಾನೆ.
ಕೃಷ್ಣ ಏವ ಹಿ ಲೋಕಾನಾಮುತ್ಪತ್ತಿರಪಿ ಚಾಪ್ಯಯಃ |
ಕೃಷ್ಣಸ್ಯ ಹಿ ಕೃತೇ ಭೂತಮಿದಂ ವಿಶ್ವಂ ಸಮರ್ಪಿತಮ್ ॥23॥
ಕೃಷ್ಣನೇ ಎಲ್ಲ ಲೋಕಗಳಿಗೂ ಸೃಷ್ಟಿಸಂಹಾರಕರ್ತನೆಂದು ಪ್ರಸಿದ್ಧವಾಗಿದೆ. ಈ ಸಮಗ್ರವಾದ ಚರಾಚರವಾದ ವಿಶ್ವವು ಕೃಷ್ಣನ ಸಲುವಾಗಿ ಇದೆ.
ಏಷ ಪ್ರಕೃತಿರವ್ಯಕ್ತಃ ಕರ್ತಾ ಚೈವ ಸನಾತನಃ |
ಪರಶ್ಚ ಸರ್ವಭೂತೇಭ್ಯಃ ತಸ್ಮಾದರ್ಚ್ಯತಮೋಽಚ್ಯುತಃ ॥24॥
ಇವನೇ ಪ್ರಕೃತಿ ಎನಿಸಿಕೊಳ್ಳುವವನು. ಅವ್ಯಕ್ತನೆನಿಸಿಕೊಳ್ಳುವವನು. ವೇದಪ್ರತಿಪಾದ್ಯನಾದವನು. ಜಗತ್ಕರ್ತೃವಾದವನು. ಎಲ್ಲ ಜೀವರಿಗಿಂತ ಶ್ರೇಷ್ಠನಾದವನು. ಆದ್ದರಿಂದ ಈ ಅಚ್ಯುತನು ಪೂಜ್ಯತಮನಾಗಿದ್ದಾನೆ.
ಭೂಮಿರ್ಮನೋ ಮಹಾನ್ ವಾಯುಃ ತೇಜೋಽಂಭಃ ಖಂ ಮಹೀ ಚ ಯಾ |
ಚತುರ್ವಿಧಂ ಚ ಯದ್ ಭೂತಂ ಸರ್ವಂ ಕೃಷ್ಣೇ ಪ್ರತಿಷ್ಠಿತಮ್ |
ಆದಿತ್ಯಶ್ಚಂದ್ರಮಾಶ್ಚೈವ ಸರ್ವಂ ಕೃಷ್ಣೇ ಪ್ರತಿಷ್ಠಿತಮ್ ॥25॥
ಬುದ್ಧಿ ಮನಸ್ಸು ಮಹತತ್ತ್ವ ವಾಯು ತೇಜಸ್ಸು ಜಲ ಆಕಾಶ ಭೂಮಿ ಮತ್ತು ನಾಲ್ಕು ವಿಧವಾದ ಪ್ರಾಣಿಗಳು ಎಲ್ಲವೂ ಕೃಷ್ಣನಲ್ಲಿ ಪ್ರತಿಷ್ಠಿತವಾಗಿವೆ. ಸೂರ್ಯ ಚಂದ್ರಮೊದಲಾದ ಎಲ್ಲ ಜ್ಯೋತಿಗಳೂ ಕೃಷ್ಣನಲ್ಲಿ ಪ್ರತಿಷ್ಠಿತವಾಗಿವೆ.
ರಾಜಾ ಮುಖಂ ಮನುಷ್ಯಾಣಾಂ ನದೀನಾಂ ಸಾಗರೋ ಮುಖಮ್ |
ನಕ್ಷತ್ರಾಣಾಂ ಮುಖಂ ಚಂದ್ರ ಆದಿತ್ಯಸ್ತಪತಾಂ ಮುಖಮ್ |
ಪರ್ವತಾನಾಂ ಮುಖಂ ಮೇರು ರ್ಗರುಡಃ ಪತತಾಂ ಮುಖಮ್ ॥
ಮನುಷ್ಯರಲ್ಲಿ ರಾಜನು ಶ್ರೇಷ್ಠನಾದವನು ಜಲಾಶ್ರಯಗಳಲ್ಲಿ ಸಾಗರವು ಶ್ರೇಷ್ಠವಾದುದು. ನಕ್ಷತ್ರಗಳಲ್ಲಿ ಚಂದ್ರನು ಶ್ರೇಷ್ಠನಾದವನು. ಬೆಳಗುವ ವಸ್ತುಗಳಲ್ಲಿ ಸೂರ್ಯನು ಶ್ರೇಷ್ಠನಾದವನು. ಪರ್ವತಗಳಲ್ಲಿ ಮೇರುವು ಶ್ರೇಷ್ಠವಾದದು. ಪಕ್ಷಿಗಳಲ್ಲಿ ಗರುಡನು ಶ್ರೇಷ್ಠನಾದವನು.
ಊರ್ಧ್ವಂ ತಿರ್ಯಗಧಶ್ಚೆವ ಯಾವತೀ ಜಗತೋ ಗತಿಃ |
ಸದೇವಕೇಷು ಲೋಕೇಷು ಭಗವಾನ್ ಕೇಶವೋ ಮುಖಮ್ ॥29॥
ಮೇಲ್ಮುಖವಾಗಿ ಕೆಳಮುಖವಾಗಿ ಮತ್ತು ಅಕ್ಕ ಪಕ್ಕಗಳಲ್ಲಿ ಎಷ್ಟು ಗಮ್ಯಸ್ಥಾನಗಳಿವೆಯೋ ಅಂತಹ ದೇವತೆಗಳಿಂದ ಸಹಿತನಾದ ಎಲ್ಲಾ ಲೋಕಗಳಿಗಿಂತಲೂ ಭಗವಂತನಾದ ಕೇಶವನು ಶ್ರೇಷ್ಠನಾದವನು.
ಅಯಂ ತು ಪುರುಷೋ ಬಾಲಃ ಶಿಶುಪಾಲೋ ನ ಬುಧ್ಯತೇ |
ಸರ್ವತ್ರ ಸರ್ವದಾ ಕೃಷ್ಣಂ ತಸ್ಮಾದೇವಂ ಪ್ರಭಾಷತೇ ॥30॥
ಈ ಶಿಶುಪಾಲನು ಬಾಲಕ. ಆದ್ದರಿಂದ ಯಾವಾಗಲೂ ಎಲ್ಲ ಕಡೆಯಲ್ಲಿಯೂ ಇರುವ ಕೃಷ್ಣನ ಮಹಿಮೆಯನ್ನು ತಿಳಿಯದೆ ಹೀಗೆ ಮಾತನಾಡುತ್ತಿದ್ದಾನೆ.
ಯೋ ಹಿ ಧರ್ಮಾನ್ ವಿಚಿನುಯಾದುತ್ಕೃಷ್ಟಂ ಮತಿಮಾನ್ ನರಃ |
ಸವೈ ಪಶ್ಯೇದ್ ಯಥಾ ಧರ್ಮಂ ನ ತಥಾ ಚೇದಿರಾಡಯಮ್ ॥31॥
ವಿವೇಕಿಯಾದ ಮನುಷ್ಯನು ಉತ್ಕೃಷ್ಟವಾದ ಧರ್ಮವನ್ನು ಹುಡುಕುತ್ತಾ ಹೇಗೆ ಆ ಧರ್ಮಗಳನ್ನು ಗಮನಿಸುತ್ತಾನೆಯೋ ಹಾಗೆ ಚೇದಿರಾಜನಾದ ಶಿಶುಪಾಲನು ಗಮನಿಸುತ್ತಿಲ್ಲ.
ಸವೃದ್ಧ ಬಾಲೇಷ್ವಥವಾ ಪಾರ್ಥಿವೇಷು ಮಹತ್ಸು ವಾ |
ಕೋ ನಾರ್ಹಂ ಮನ್ಯತೇ ಕೃಷ್ಣಂ ಕೋ ವಾಪ್ಯೇನಂ ನ ಪೂಜಯೇತ್ ॥32॥
ವೃದ್ಧರೂ ಬಾಲರೂ ಮಹಾತ್ಮರೂ ಆದ ಅನೇಕ ರಾಜರು ಇರುವ ಈ ಸಭೆಯಲ್ಲಿ ಯಾವನು ಕೃಷ್ಣನನ್ನು ಪೂಜಾರ್ಹನೆಂದು ಭಾವಿಸುವುದಿಲ್ಲ? ಯಾವನು ಇವನನ್ನು ಪೂಜಿಸುವುದಿಲ್ಲ?
ಅಥೇಮಾಂ ದುಷ್ಕೃತಾಂ ಪೂಜಾಂ ಶಿಶುಪಾಲೋ ವ್ಯವಸ್ಯತಿ |
ದುಷ್ಕೃತಾನಾಂ ಯಥಾನ್ಯಾಯಂ ತಥಾಽಯಂ ಕರ್ತುಮರ್ಹತಿ ॥33॥
ಒಂದು ಪಕ್ಷ ಶಿಶುಪಾಲನು ನಾವು ಮಾಡಿದ ಪೂಜೆಯನ್ನು ದುಷ್ಕರ್ಮವೆಂದು ಭಾವಿಸಿದರೆ ದುಷ್ಕರ್ಮವನ್ನು ಮಾಡಿದವರಲ್ಲಿ ರಾಜನು ಹೇಗೆ ನಡೆದುಕೊಳ್ಳುತ್ತಾನೆಯೋ ಅದರಂತೆ ನಡೆದುಕೊಳ್ಳಲಿ.
ವೈಶಂಪಾಯನಃ
ಏವಮುಕ್ತೇ ತು ಗಾಂಗೇಯೇ ಶಿಶುಪಾಲಶ್ಚುಕೋಪ ಹ |
ಕ್ರುದ್ಧಂ ಸುನೀಥಂ ದೃಷ್ಟ್ವಾಽಥ ಸಹದೇವೋಽಬ್ರುವೀತ್ ತದಾ ॥34॥

ಭೀಷ್ಮರು ಹೀಗೆ ಹೇಳುತ್ತಿರಲು ಶಿಶುಪಾಲನು ಕೋಪಗೊಂಡನು. ಕೋಪಗೊಂಡ ಶಿಶುಪಾಲನನ್ನು ನೋಡಿ ಸಹದೇವನು ಆಗ ಹೀಗೆ ಮಾತನಾಡಿದನು.
ನೀತಿಪೂರ್ವಮಿದಂ ಸರ್ವಂ ಚೇದಿರಾಜ ಮಯಾ ಕೃತಮ್ |
ನ ಮೇ ವಿಮತಿರಸ್ತೀಹ ಕಾರಣಂ ಚಾತ್ರ ಮೇ ಶೃಣು ||35||
ಚೇದಿರಾಜನೇ! ನಾನು ಇದೆಲ್ಲವನ್ನೂ ನ್ಯಾಯದಿಂದಲೇ ಮಾಡಿದ್ದೇನೆ. ಈ ವಿಷಯದಲ್ಲಿ ವಿವಾದವಿಲ್ಲ. ಇದಕ್ಕೆ ಕಾರಣವನ್ನು ಕೇಳು.
ಸ ಪಾರ್ಥಿವಾನಾಂ ಸರ್ವೇಷಾಂ ಗುರುಃ ಕೃಷ್ಣೋ ಬಲೇನ ವೈ |
ತಸ್ಮಾದಭ್ಯರ್ಚಿತೋಽರ್ಘ್ಯಾರ್ಹಃ ಸರ್ವೇ ಸಮ್ಮಂತುಮರ್ಹಥ ||36||
ಕೃಷ್ಣನು ತನ್ನ ಬಲದಿಂದ ಎಲ್ಲ ರಾಜರುಗಳಿಗೆ ಗುರುವಾಗಿದ್ದಾನೆ. ಪೂಜಾರ್ಹನಾದ ಅವನು ಆ ಕಾರಣದಿಂದ ನಮ್ಮಿಂದ ಪೂಜಿಸಲ್ಪಟ್ಟಿದ್ದಾನೆ. ನೀವೆಲ್ಲರೂ ಸಮ್ಮತಿಸಬೇಕು.
ಯೋ ವಾ ನ ಸಹತೇ ರಾಜ್ಞಾಂ ಕಶ್ಚಿತ್ ಸಬಲವಾಹನಃ |
ಕ್ಷಿಪ್ರಂ ಯುದ್ಧಾಯ ನಿರ್ಯಾತು ಶಕ್ತಶ್ಚೇತ್ ಸಮಯೋ ಯುಧಿ ||37||
ರಾಜರ ಮಧ್ಯೆ ಯಾವನು ಈ ಪೂಜೆಯನ್ನು ಸಹಿಸುವುದಿಲ್ಲವೋ ಅಂತಹವನು ಶಕ್ತಿಯಿದ್ದರೆ ತನ್ನ ಸೈನ್ಯವನ್ನು ಮತ್ತು ವಾಹನವನ್ನು ತೆಗೆದುಕೊಂಡು ಬೇಗ ಯುದ್ಧಕ್ಕೆ ಬರಲಿ ಇದು ನನ್ನ ಶರತ್ತು ಆಗಿದೆ.
ತಸ್ಯ ಮೂರ್ಧ್ನಿ ಸುಸನ್ನ್ಯಸ್ತಂ ರಾಜ್ಞಃ ಸವ್ಯಂ ಪದಂ ಮಯಾ |
ಏವಮುಕ್ತೋ ಮಯಾ ಹೇತುರುತ್ತರಂ ಪ್ರಬ್ರವೀತು ಮೇ ||38||
ಅಂತಹ ರಾಜನ ತಲೆಯಮೇಲೆ ನನ್ನ ಈ ಎಡಗಾಲನ್ನು ಚೆನ್ನಾಗಿ ಇಟ್ಟಿದ್ದೇನೆ. ಕೃಷ್ಣನನ್ನು ಪೂಜೆಮಾಡಲು ನಾನು ನಿಮಿತ್ತವನ್ನು ಹೇಳಿದ್ದಾಗಿದೆ. ಉತ್ತರವನ್ನು ಕೊಡುವವರು ನನಗೆ ಉತ್ತರವನ್ನು ಕೊಡಬಹುದು.
ವೈಶಂಪಾಯನಃ
ತತೋ ನ ವ್ಯಾಜಹಾರೈಷಾಂ ಕಶ್ಚಿದ್ ಬುದ್ಧಿಮತಾಂ ಸತಾಮ್ |
ಮಾನಿನಾಂ ಬಲಿನಾಂ ರಾಜ್ಞಾಂ ಮಧ್ಯೇ ಸಂದರ್ಶಿತೇ ಪದೇ ||39||
ಬಲಿಷ್ಠರೂ ಆತ್ಮಾಭಿಮಾನಿಗಳೂ ಮೇಧಾವಿಗಳೂ ಸಜ್ಜನರೂ ಆದ ರಾಜರುಗಳ ಮಧ್ಯದಲ್ಲಿ ಸಹದೇವನು ತನ್ನ ಪಾದವನ್ನು ತೋರಿಸುತ್ತಿರಲು ಅವರಲ್ಲಿ ಒಬ್ಬನೂ ಸಹ ಮಾತನಾಡಲಿಲ್ಲ.
ಏವಮುಕ್ತೇ ಸುನೀಥಸ್ಯ ಸಹದೇವೇನ ಕೇಶವೇ |
ಸ್ವಭಾವರಕ್ತೇ ನಯನೇ ಕೋಪಾದ್ ರಕ್ತತರೀಕೃತೇ ||40||
ಕೇಶವನ ವಿಷಯದಲ್ಲಿ ಸಹದೇವನು ಹೀಗೆ ಮಾತನಾಡುತ್ತಿದ್ದಾಗ ಸ್ವಭಾವದಿಂದಲೇ ಕೆಂಪಾಗಿದ್ದ ಶಿಶುಪಾಲನ ಕಣ್ಣುಗಳು ಕೋಪದಿಂದ ಮತ್ತಷ್ಟು ಕೆಂಪಾದವು.
ತಸ್ಯ ಕೋಪಂ ಸಮುದ್ಭೂತಂ ಜ್ಞಾತ್ವಾ ಭೀಷ್ಮಃ ಪ್ರತಾಪವಾನ್ |
ಆಚಚಕ್ಷೇ ಪುನಸ್ತಸ್ಮೈ ಕೃಷ್ಣಸ್ಯೈವೋತ್ತಮಾನ್ ಗುಣಾನ್ ||41||
ಅವನಿಗೆ ಕೋಪವು ಉಂಟಾದುದನ್ನು ನೋಡಿ ಪ್ರತಾಪಶಾಲಿಗಳಾದ ಭೀಷ್ಮರು ಪುನಃ ಅವನನ್ನು ಕುರಿತು ಕೃಷ್ಣನ ಶ್ರೇಷ್ಠವಾದ ಗುಣಗಳನ್ನು ಹೇಳಿದರು.
ಸ ಸುನೀಥಂ ಸಮಾಮಂತ್ರ್ಯ ತಾಂಶ್ಚ ಸರ್ವಾನ್ ಮಹೀಕ್ಷಿತಃ |
ಉವಾಚ ವದತಾಂ ಶ್ರೇಷ್ಠ ಇದಂ ಮತಿಮತಾಂ ವರಃ ||42||
ಮೇಧಾವಿಗಳಲ್ಲಿ ಶ್ರೇಷ್ಠರಾದ ಮತ್ತು ಮಾತನಾಡುವವರಲ್ಲಿ ಶ್ರೇಷ್ಠರಾದ ಆ ಭೀಷ್ಮರು ಶಿಶುಪಾಲನನ್ನೂ ಮತ್ತು ಎಲ್ಲಾ ರಾಜರನ್ನೂ ಸಮೀಪಕ್ಕೆ ಕರೆದು ಹೀಗೆ ಮಾತನಾಡಿದರು.
ಸಹದೇವೇನ ರಾಜಾನೋ ಯದುಕ್ತಂ ಕೇಶವಂ ಪ್ರತಿ |
ತತ್ ತಥೇತಿ ವಿಜಾನೀಧ್ವಂ ಭೂಯಶ್ಚಾತ್ರ ನಿಬೋಧತ ||43||
ಎಲೈ ರಾಜರೇ! ಸಹದೇವನು ಕೃಷ್ಣನ ವಿಷಯದಲ್ಲಿ ಏನು ಹೇಳಿದ್ದಾನೆಯೋ ಅದೆಲ್ಲವೂ ಸತ್ಯವೆಂದೇ ತಿಳಿಯಿರಿ. ಅಷ್ಟೇ ಅಲ್ಲ ಕೃಷ್ಣನ ವಿಷಯದಲ್ಲಿ ಇನ್ನೂ ಹೆಚ್ಚಾಗಿ ತಿಳಿಯ ಬೇಕಾದುದಿದೆ. ಅದನ್ನು ತಿಳಿಯಿರಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚತ್ರಿಂಶೋಽಧ್ಯಾಯಃ ||
|| ಅರ್ಘಾಭಿಹರಣಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಮೂವತ್ತೈದನೆಯ ಅಧ್ಯಾಯವು ಮುಗಿಯಿತು.
*****
ಮೂವತ್ತಾರನೆಯ ಅಧ್ಯಾಯ
(ಯುಧಿಷ್ಠಿರನಿಂದ ಪ್ರಾರ್ಥಿತರಾದ ಭೀಷ್ಮರಿಂದ ಕೃಷ್ಣನ ಸೃಷ್ಟ್ಯಾದಿಮಹಿಮೆಯ ವರ್ಣನೆ.)
ವೈಶಂಪಾಯನಃ
ತದಾ ಭೀಷ್ಮಸ್ಯ ತಚ್ಛ್ರುತ್ವಾ ವಚಃ ಕಾಲೇ ಯುಧಿಷ್ಠಿರಃ |
ಉವಾಚ ಮತಿಮಾನ್ ಭೀಷ್ಮಂ ತತಃ ಕೌರವನಂದನಃ ||1||
ಕೌರವನಂದನನಾದ ಮೇಧಾವಿಯಾದ ಯುಧಿಷ್ಠಿರನು ಆಗ ಭೀಷ್ಮರ ಆ ಮಾತುಗಳನ್ನು ಕೇಳಿ ಭೀಷ್ಮರನ್ನು ಕುರಿತು ಮಾತನಾಡಿದನು.
ವಿಸ್ತರೇಣಾಸ್ಯ ದೇವಸ್ಯ ಕರ್ಮಾಣೀಚ್ಛಾಮಿ ಸರ್ವಶಃ |

ಶ್ರೋತುಂ ಭಗವತಸ್ತಾನಿ ಪ್ರಬ್ರುವೀಹಿ ಪಿತಾಮಹ ॥2॥
ಪಿತಾಮಹನೇ! ನಾನು ಈ ದೇವನ ಎಲ್ಲಾ ಕರ್ಮಗಳನ್ನು ವಿಸ್ತಾರವಾಗಿ ಕೇಳಲು ಇಚ್ಛಿಸುತ್ತೇನೆ. ಭಗವಂತನ ಆ ಎಲ್ಲಾ ಮಹಿಮೆಗಳನ್ನೂ ನನಗೆ ಚೆನ್ನಾಗಿ ಹೇಳಿ.
ಕರ್ಮಣಾಮಾನುಪೂರ್ವೀಂ ಚ ಪ್ರಾದುರ್ಭಾವಾಶ್ಚ ಯೇ ವಿಭೋಃ |
ಯಥಾ ಚ ಪ್ರಕೃತಿಃ ಕೃಷ್ಣೇ ತನ್ಮೇ ಬ್ರೂಹಿ ಪಿತಾಮಹ ॥3॥
ಪಿತಾಮಹನೇ! ಪ್ರಭುವಾದ ಕೃಷ್ಣನ ಕರ್ಮಗಳ ಪೌರ್ವಪರ್ಯವನ್ನೂ ಪ್ರಾದುರ್ಭಾವಗಳನ್ನೂ ಮತ್ತು ಕೃಷ್ಣನ ಸ್ವಭಾವವನ್ನೂ ನನಗೆ ತಿಳಿಸಿ.
ಏವಮುಕ್ತಸ್ತದಾ ಭೀಷ್ಮಃ ಪ್ರೋವಾಚ ಪುರುಷರ್ಷಭ |
ಯುಧಿಷ್ಠಿರಮಮಿತ್ರಘ್ನಂ ತಸ್ಮಿನ್ ಕ್ಷತ್ರಸಮಾಗಮೇ ॥4॥
ಪುರುಷಶ್ರೇಷ್ಠನೇ! ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ಭೀಷ್ಮರು ಆ ಕ್ಷತ್ರಿಯಸಮೂಹದಲ್ಲಿ ಶತ್ರುಸಂಹಾರಕನಾದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿದರು.
ಸಮಕ್ಷಂ ವಾಸುದೇವಸ್ಯ ದೇವಸ್ಯೇವ ಶತಕ್ರತೋಃ |
ಕರ್ಮಾಣ್ಯಸುಕರಾಣ್ಯನ್ಯೈರಾಚಚಕ್ಷೇ ಜನಾಧಿಪ ॥5॥
ಎಲೈ ಜನಾಧಿಪನೇ! ಇಂದ್ರದೇವನ ಎದುರಿನಲ್ಲಿ ಹೇಳಿದಂತೆ ವಾಸುದೇವನ ಎದುರಿನಲ್ಲಿ ಇನ್ನೊಬ್ಬರಿಂದ ಮಾಡಲು ಅಸಾಧ್ಯವಾದ ಕೃಷ್ಣನ ಕರ್ಮಗಳನ್ನು(ಭೀಷ್ಮರು) ನಿರೂಪಿಸಿದರು.
ಶೃಣ್ವತಾಂ ಪಾರ್ಥಿವಾನಾಂ ಚ ಧರ್ಮರಾಜಸ್ಯ ಚಾಂತಿಕೇ |
ಇದಂ ಮತಿಮತಾಂ ಶ್ರೇಷ್ಠಃ ಕೃಷ್ಣಂ ಪ್ರತಿ ವಿಶಾಂಪತೇ ॥6॥
ಎಲೈ ರಾಜನೇ! ಧರ್ಮರಾಜನ ಸಮೀಪದಲ್ಲಿ ಇನ್ನೂ ಅನೇಕ ರಾಜರು ಕೇಳುತ್ತಿರಲು ಮೇಧಾವಿಗಳಲ್ಲಿ ಶ್ರೇಷ್ಠರಾದ ಭೀಷ್ಮರು ಕೃಷ್ಣನ ವಿಷಯದಲ್ಲಿ ಹೀಗೆ ಮಾತನಾಡಿದರು.
ಸಾಮ್ನೈವಾಮಂತ್ರ್ಯ ರಾಜೇಂದ್ರಂ ಚೇದಿರಾಜಮರಿಂದಮಮ್ |
ಭೀಮಕರ್ಮಾ ತತೋ ಭೀಷ್ಮೋ ಭೂಯಃ ಸ ಇದಮಬ್ರವೀತ್ |
ಕುರೂಣಾಮಪಿ ರಾಜಾನಂ ಯುಧಿಷ್ಠಿರಮುವಾಚ ಹ ॥7॥
ಶತ್ರುಸಂಹಾರಕನಾದ ರಾಜೇಂದ್ರನಾದ ಚೇದಿರಾಜನಾದ ಶಿಶುಪಾಲನನ್ನು ಒಳ್ಳೆಯ ಮಾತುಗಳಿಂದಲೇ ಆಮಂತ್ರಿಸಿ ಕುರುರಾಜನಾದ ಯುಧಿಷ್ಠಿರನನ್ನು ಆಮಂತ್ರಿಸಿ ಉಗ್ರಕರ್ಮಗಳನ್ನು ಮಾಡಿದ್ದ ಭೀಷ್ಮರು ಪುನಃ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿದರು.
ವರ್ತಮಾನಾಮತೀತಾಂ ಚ ಶೃಣು ರಾಜನ್ ಯುಧಿಷ್ಠಿರ |
ಈಶ್ವರಸ್ಯೋತ್ತಮಸ್ಯೈನಾಂ ಕರ್ಮಣಾಂ ಗಹನಾಂ ಗತಿಮ್ ॥8॥
ಯುಧಿಷ್ಠರನೇ! ರಾಜನೇ! ಸರ್ವೋತ್ತಮನಾದ ಈಶ್ವರನ ಅತೀತವಾದ ಮತ್ತು ವರ್ತಮಾನವಾದ ಕರ್ಮಗಳ ಈ ಗಹನವಾದ ಗತಿಯನ್ನು ಕೇಳು.
ಅವ್ಯಕ್ತೋ ವ್ಯಕ್ತಲಿಂಗಸ್ಥೋ ಯ ಏಷ ಭಗವಾನ್ ಪ್ರಭುಃ |
ಪುರಾ ನಾರಾಯಣೋ ದೇವಃ ಸ್ವಯಂಭೂಃ ಪ್ರಪಿತಾಮಹಃ |
ಸಹಸ್ರಶೀರ್ಷಃ ಪುರುಷೋ ಧ್ರುವೋಽವ್ಯಕ್ತಃ ಸನಾತನಃ ॥9॥
ಭಗವಂತನಾದ ಈ ಪ್ರಭುವು ಸ್ವತಃ ಅವ್ಯಕ್ತನಾದವನು. ಆದರೆ ಅವನನ್ನು ಅನುಮಾನ ಮುದ್ರೆಯಿಂದ ತಿಳಿಸಿಕೊಡುವ ಹೇತುಗಳು ವ್ಯಕ್ತವಾಗಿದೆ. ಇವನು ಹಿಂದೆ ಜಗತ್ತಿಗೆ ಪ್ರಪಿತಾಮಹನಾದ ಸ್ವಯಂಭುವಾದ ದೇವನಾದ ನಾರಾಯಣ. ಸಹಸ್ರ ಶಿರಸ್ಸುಳ್ಳವನು ಪುರುಷನಾಮಕನಾದವನು ಶಾಶ್ವತನಾದವನು ಅವ್ಯಕ್ತ ಮತ್ತು ವೇದ ಪ್ರತಿಪಾದ್ಯನಾದವನು.
ಸಹಸ್ರಾಕ್ಷಃ ಸಹಸ್ರಾಸ್ಯಃ ಸಹಸ್ರಚರಣೋ ವಿಭುಃ |
ಸಹಸ್ರಬಾಹುಃ ಸಾಹಸ್ರೋ ದೇವೋ ನಾಮಸಹಸ್ರವಾನ್ ॥10॥
ಸಹಸ್ರಕಣ್ಣುಳ್ಳವನೂ ಸಹಸ್ರಮುಖವುಳ್ಳವನೂ ಸಹಸ್ರಪಾದವುಳ್ಳವನೂ ವ್ಯಾಪ್ತನಾದವನೂ ಸಹಸ್ರಬಾಹುಗಳುಳ್ಳವನೂ ಸಹಸ್ರರೂಪಗಳುಳ್ಳವನೂ ಸಹಸ್ರನಾಮಗಳುಳ್ಳವನೂ ಆದ ದೇವನು.
ಸಹಸ್ರಮುಕುಟೋ ದೇವೋ ವಿಶ್ವರೂಪೋ ಮಹಾದ್ಯುತಿಃ |
ಅನೇಕವರ್ಣೋ ದೇವಾದಿರವ್ಯಕ್ತಾದ್ ವೈ ಪರೇ ಸ್ಥಿತಃ ॥11॥
ಸಹಸ್ರಕಿರೀಟಗಳುಳ್ಳವನು ವಿಶ್ವರೂಪವುಳ್ಳವನು ಮಹಾಕಾಂತಿಯುಳ್ಳವನು ಅನೇಕ ವರ್ಣವುಳ್ಳವನು ಎಲ್ಲಾದೇವತೆಗಳಿಗೂ ಆದಿಯಾದವನು ಅವ್ಯಕ್ತತ್ವಾಭಿಮಾನಿಯಾದ ಲಕ್ಷ್ಮೀದೇವಿಗಿಂತಲೂ ಶ್ರೇಷ್ಠನಾದ ಪ್ರಭುವು.
ಅಸೃಜತ್ ಸಲಿಲಂ ಪೂರ್ವಂ ಸ ಚ ನಾರಾಯಣಃ ಪ್ರಭುಃ |
ತತಃ ಸ ಭಗವಾಂಸ್ತೋಯೇ ಬ್ರಹ್ಮಾಣಮಸೃಜತ್ ಸ್ವಯಮ್ ॥12॥
ಆ ಪ್ರಭುವಾದ ನಾರಾಯಣನು ಮೊದಲು ಜಲವನ್ನು ಸೃಷ್ಟಿಮಾಡಿದನು. ಅನಂತರ ಆ ಭಗವಂತನು ತಾನೇ ಆ ಜಲದಲ್ಲಿ ಬ್ರಹ್ಮನನ್ನು ಸೃಷ್ಟಿಮಾಡಿದನು.
ಬ್ರಹ್ಮಾ ಚತುರ್ಮುಖೋ ಲೋಕಾನ್ ಸರ್ವಾಂಸ್ತಾನಸೃಜತ್ ಸ್ವಯಮ್ |
ಆದಿಕಾಲೇ ಪುರಾ ಹ್ಯೇವಂ ಸರ್ವಲೋಕಸ್ಯ ಚೋದ್ಭವಃ ॥13॥
ಚತುರ್ಮುಖನಾದ ಬ್ರಹ್ಮನು ಸ್ವತಃ ಸರ್ವಲೋಕಗಳನ್ನು ಸೃಜಿಸಿದನು. ಆದಿಕಾಲದಲ್ಲಿ ಹೀಗಿಯೇ ಎಲ್ಲಾ ಲೋಕಗಳ ಉದ್ಭವವಾಯಿತು.

ಪುರಾಥ ಪ್ರಳಯೇ ಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ |
ಬ್ರಹ್ಮಾದಿಷು ಪ್ರಲೀನೇಷು ನಷ್ಟೇ ಲೋಕೇ ಚರಾಚರೇ ||14||
ಆಭೂತಸಂಪ್ಲವೇ ಪ್ರಾಪ್ತೇ ಪ್ರಲೀನೇ ಪ್ರಕೃತೌ ಮಹಾನ್ |
ಏಕಸ್ತಿಷ್ಠತಿ ಸರ್ವಾತ್ಮಾ ಸ ತು ನಾರಾಯಣಃ ಪ್ರಭುಃ |
ನಾರಾಯಣಸ್ಯ ಚಾಂಗಾನಿ ಸರ್ವದೈವಾನಿ ಭಾರತ ||15||
ಹಿಂದೆ ಪ್ರಳಯವು ಪ್ರಾಪ್ತವಾದಾಗ ಸ್ಥಾವರಜಂಗಮಗಳು ನಷ್ಟವಾದಾಗ ಚರಾಚರವಾದ ಜಗತ್ತು ನಷ್ಟವಾದಾಗ ಬ್ರಹ್ಮಾದಿದೇವತೆಗಳು ನಷ್ಟವಾದಾಗ ಆ ಪ್ರಳಯಕಾಲದಲ್ಲಿ ಮಹತ್ತತ್ತ್ವವು ಪ್ರಕೃತಿಯಲ್ಲಿ ಲಯವನ್ನು ಹೊಂದಿದಾಗ ಸರ್ವಸ್ವಾಮಿಯಾದ ನಾರಾಯಣನೊಬ್ಬನೇ ಇದ್ದನು. ಭಾರತನೇ! ಎಲ್ಲಾ ದೇವತೆಗಳು ನಾರಾಯಣನ ಅಂಗದಿಂದ ಉತ್ಪನ್ನರಾದವರು.
ಶಿರಸ್ತಸ್ಯ ದಿವಂ ರಾಜನ್ ನಾಭಿಃ ಖಂ ಚರಣೌ ಮಹೀ |
ಅಶ್ವಿನೌ ಕರ್ಣಯೋರ್ದೇವೌ ಚಕ್ಷುಷೀ ಶಶಿಭಾಸ್ಕರೌ ||16||
ರಾಜನೇ! ದ್ಯುಲೋಕವು ಅವನ ಶಿರಸ್ಸು. ಅಂತರಿಕ್ಷವು ಅವನ ನಾಭಿ. ಭೂಮಿಯು ಅವನ ಪಾದಗಳು. ಅಶ್ವಿನಿದೇವತೆಗಳು ಎರಡು ಕರ್ಣಗಳಲ್ಲಿದ್ದಾರೆ. ಸೂರ್ಯ ಚಂದ್ರರು ಎರಡು ಕಣ್ಣುಗಳಲ್ಲಿ ಇದ್ದಾರೆ.
ಇಂದ್ರವೈಶ್ವಾನರೌ ದೇವೌ ಮುಖಂ ತಸ್ಯ ಮಹಾತ್ಮನಃ |
ಅನ್ಯಾನಿ ಸರ್ವದೈವಾನಿ ತಸ್ಯಾಂಗಾನಿ ಮಹಾತ್ಮನಃ |
ಸರ್ವಂ ವ್ಯಾಪ್ಯ ಹರಿಸ್ತಸ್ಥೌ ಸೂತ್ರೇ ಮಣಿಗಣಾ ಇವ ||17||
ದೇವತೆಗಳಾದ ಇಂದ್ರಾಗ್ನಿಗಳು ಆ ಮಹಾತ್ಮನ ಮುಖ. ಇನ್ನು ಉಳಿದ ಎಲ್ಲಾ ದೇವತೆಗಳು ಆ ಮಹಾತ್ಮನ ಅಂಗಗಳು. ಹರಿಯು ಸೂತ್ರವು ಮಣಿಗಣಗಳನ್ನು ವ್ಯಾಪಿಸಿ ಇರುವಂತೆ ಎಲ್ಲವನ್ನೂ ವ್ಯಾಪಿಸಿದ್ದಾನೆ.
ಆಭೂತಸಂಪ್ಲವಾಂತೇಽಯಂ ದೃಷ್ಟ್ವಾ ಸರ್ವಂ ತಮೋನ್ವಿತಮ್ |
ನಾರಾಯಣೋ ಮಹಾಯೋಗೀ ಸರ್ವಜ್ಞಃ ಪರಮಾತ್ಮವಾನ್ |
ಬ್ರಹ್ಮಭೂತಸ್ತದಾತ್ಮಾನಂ ಬ್ರಹ್ಮಾಣಮಸೃಜತ್ ಸ್ವಯಮ್ ||18||
ಪ್ರಳಯಕಾಲದ ಕೊನೆಯಲ್ಲಿ ಎಲ್ಲವೂ ತಮಸ್ಸಿನಿಂದ ಆವೃತವಾಗಿದ್ದನ್ನು ನೋಡಿ ಸರ್ವಜ್ಞನೂ ಮಹಾಯೋಗಿಯೂ ಶ್ರೇಷ್ಠವಾದ ಮನಸ್ಸುಳ್ಳವನೂ ಆದ ನಾರಾಯಣನು ವೇದಗಳಿಂದ ಅಭಿವ್ಯಕ್ತನಾಗಿ ವೇದಪ್ರವರ್ತಕರಾದ ಬ್ರಹ್ಮದೇವರನ್ನು ತಾನೇ ಸೃಷ್ಟಿಸಿದನು.
ಸೋಧ್ಯಕ್ಷಃ ಸರ್ವಭೂತಾನಾಂ ಪ್ರಭೂತಃ ಪ್ರಭವೋಽಚ್ಯುತಃ |
ಸನತ್ಕುಮಾರಂ ರುದ್ರಂ ಚ ಸಪ್ತರ್ಷೀಂಶ್ಚ ತಪೋಧನಾನ್ |
ಪೂರ್ವಮೇವಾಸೃಜದ್ ಬ್ರಹ್ಮಾ ತತೋ ಲೋಕಾನ್ ಪ್ರಜಾಸ್ತಥಾ ||19||
ಮಹಾಮಹಿಮನೂ ಶ್ರೇಷ್ಠವಾದ ಜನ್ಮವುಳ್ಳವನೂ ಸದ್ಗುಣಗಳಿಂದ ಚ್ಯುತನಾಗದವನೂ ಆದ ಸರ್ವಾಧ್ಯಕ್ಷನಾದ ಚತುರ್ಮುಖಬ್ರಹ್ಮನು ಸನತ್ಕುಮಾರನನ್ನು ರುದ್ರನನ್ನು ತಪೋಧನರಾದ ಸಪ್ತ ಋಷಿಗಳನ್ನು ಮೊದಲೇ ಸೃಷ್ಟಿಸಿದನು. ಅನಂತರ ಬ್ರಹ್ಮನು ಲೋಕಗಳನ್ನೂ ಪ್ರಜೆಗಳನ್ನೂ ಸೃಷ್ಟಿಸಿದನು.
ತೇನ ತದ್ ವ್ಯಸೃಜತ್ ತತ್ರ ಪ್ರಾಪ್ತೇ ಕಾಲೇ ಯುಧಿಷ್ಠಿರ |
ತೇಭ್ಯೋಽಭವನ್ಮಹಾತ್ಮಭ್ಯೋ ಬಹುಧಾ ಬ್ರಹ್ಮ ಶಾಶ್ವತಮ್ ||20||
ಯುಧಿಷ್ಠಿರನೇ! ಪರಮಾತ್ಮನು ಬ್ರಹ್ಮನನ್ನು ನಿಮಿತ್ತಮಾಡಿಕೊಂಡು ರುದ್ರಾದಿದೇವತಾವೃಂದವನ್ನು ಆ ಯೋಗ್ಯವಾದ ಕಾಲದಲ್ಲಿ ಸೃಷ್ಟಿಸಿದನು. ಆ ಮಹಾತ್ಮರಿಂದ ವೇದವು ಅನೇಕ ರೀತಿಯಲ್ಲಿ ಪ್ರತಿಷ್ಠಿತವಾಯಿತು.
ಲೋಕಾನಾಂ ಬಹುಕೋಟ್ಯಶ್ಚ ಸಮತೀತಾಸ್ತು ಭಾರತ |
ಆಭೂತಸಂಪ್ಲವಾಶ್ಚೈವ ಬಹುಕೋಟ್ಯೋಽಪಚಕ್ರಮುಃ ||21||
ಭಾರತನೇ! ಅನೇಕ ಕೋಟಿಲೋಕಗಳು ಹಿಂದೆ ಆಗಿಹೋದವು. ಬಹುಕೋಟಿಪ್ರಳಯಗಳೂ ಹಿಂದೆ ಆಗಿಹೋದವು.
ಮನ್ವಂತರಂ ಯುಗಾ ರಾಜನ್ ಸಕಲ್ಪಾ ಭೂತಸಂಪ್ಲವಾಃ|
ಚಕ್ರವತ್ ಪರಿವರ್ತಂತೇ ಸರ್ವಂ ವಿಷ್ಣುಮಯಂ ಜಗತ್ ||22||
ಎಲೈ ರಾಜನೇ! ಮನ್ವಂತರಗಳು ಯುಗಗಳು ದೈನಂದಿನ ಕಲ್ಪಗಳು ಬ್ರಹ್ಮಕಲ್ಪಗಳು ಮತ್ತು ಪ್ರಳಯಗಳು ಚಕ್ರದಂತೆ ತಿರುಗುತ್ತವೆ. ಎಲ್ಲವೂ ವಿಷ್ಣುವಿಗೆ ಅಧೀನವಾಗಿವೆ.
ಸೃಷ್ಟ್ವಾ ಚತುರ್ಮುಖಂ ದೇವಂ ದೇವೋ ನಾರಾಯಣಃ ಪ್ರಭುಃ|
ಸ ಲೋಕಾನಾಂ ಹಿತಾರ್ಥಾಯ ಕ್ಷೀರೋದೇ ವಸತಿ ಪ್ರಭುಃ ||23||
ಪ್ರಭುವಾದ ನಾರಾಯಣದೇವನು ಚತುರ್ಮುಖದೇವನನ್ನು ಸೃಷ್ಟಿಮಾಡಿ ಲೋಕದ ಹಿತಕ್ಕೋಸ್ಕರವಾಗಿ ಕ್ಷೀರಸಾಗರದಲ್ಲಿ ವಾಸಮಾಡುತ್ತಾನೆ.
ಬ್ರಹ್ಮಾ ತು ಸರ್ವದೇವಾನಾಂ ಲೋಕಸ್ಯ ಚ ಪಿತಾಮಹಃ |
ತತೋ ನಾರಾಯಣೋ ದೇವಃ ಸರ್ವಸ್ಯ ಪ್ರಪಿತಾಮಹಃ ||24||
ಚತುರ್ಮುಖಬ್ರಹ್ಮನು ಎಲ್ಲ ಲೋಕಗಳಿಗೂ ಎಲ್ಲಾ ದೇವತೆಗಳಿಗೂ ಪಿತಾಮಹನಾದವನು. ಆದ್ದರಿಂದ ದೇವನಾದ ನಾರಾಯಣನು ಎಲ್ಲರಿಗೂ ಪ್ರಪಿತಾಮಹನಾದವನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ||
|| ಅರ್ಘಾಭಿಹರಣಪರ್ವಣಿ ಪಂಚಮೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ

ಮೂವತ್ತಾರನೆಯ ಅಧ್ಯಾಯವು ಮುಗಿಯಿತು.
*****
ಮೂವತ್ತೇಳನೆಯ ಅಧ್ಯಾಯ
(ಭೀಷ್ಮರಿಂದ ವಿಷ್ಣುವಿನ ಸೃಷ್ಟಿಯ ಮತ್ತು ಮಧುಕೈಟಭರ ವಧೆಯ ವರ್ಣನೆ)
ಭೀಷ್ಮಃ
ಅವ್ಯಕ್ತೋ ವ್ಯಕ್ತಲಿಂಗಸ್ಥೋ ಯ ಏಷ ಭಗವಾನ್ ಪ್ರಭುಃ |
ನರನಾರಾಯಣಶ್ಚಕ್ರೇ ಪ್ರಭವಾಪ್ಯಯಸಂಹಿತಃ ||1||
ಸ್ವತಃ ಅವ್ಯಕ್ತನೂ ವ್ಯಕ್ತವಾದ ಲಿಂಗಗಳನ್ನು ಹೊಂದಿದವನೂ ಆದ ಪ್ರಭುವಾದ ಭಗವಂತನಾದ ಈ ನರ ನಾರಾಯಣನು ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುತ್ತಾನೆ.
ಏಷ ನಾರಾಯಣೋ ಭೂತ್ವಾ ಹರಿರಾಸೀದ್ ಯುಧಿಷ್ಠಿರ |
ಬ್ರಹ್ಮಾ ಚ ಶಕ್ರಃ ಸೂರ್ಯಶ್ಚ ಧರ್ಮಶ್ಚೈವ ಸನಾತನಃ ||2||
ಎಲೈ ಯುಧಿಷ್ಠಿರನೇ! ಶ್ರೀಹರಿಯು ಮೊದಲು ನಾರಾಯಣನೆನಿಸಿಕೊಂಡು ಅನಂತರ ಬ್ರಹ್ಮ ಇಂದ್ರ ಸೂರ್ಯ ಧರ್ಮ ಮೊದಲಾದ ರೂಪಗಳನ್ನು ಧರಿಸುತ್ತಾನೆ.
ಬಹುಶಃ ಸರ್ವಭೂತಾತ್ಮಾ ಪ್ರಾದುರ್ಭವತಿ ಕಾರ್ಯತಃ |
ಪ್ರಾದುರ್ಭಾವಾಂಸ್ತು ವಕ್ಷ್ಯಾಮಿ ದಿವ್ಯಾನ್ ದೇವಗಣೈರ್ಯುತಾನ್ ||3||
ಇವನು ವೇದಪ್ರತಿಪಾದ್ಯನಾದವನು. (ಬ್ರಹ್ಮೇಂದ್ರಾದಿದೇವತೆಗಳಲ್ಲಿ ಬ್ರಹ್ಮೇಂದ್ರಾದಿರೂಪಗಳಿಂದ ಇದ್ದು) ಇವನು ಬಹುರೂಪಗಳನ್ನು ಧರಿಸಿದವನಾಗಿರುತ್ತಾನೆ. ಸರ್ವಭೂತಸ್ವಾಮಿಯಾದ ಇವನು ಬೇರೆ ಬೇರೆ ಕಾರ್ಯಗಳ ಸಲುವಾಗಿ ಅನೇಕಬಾರಿ ಪ್ರಾದುರ್ಭವಿಸುತ್ತಾನೆ. ಅವನ ದಿವ್ಯವಾದ ದೇವತಾಗಣಗಳಿಂದ ಕೂಡಿದ ಪ್ರಾದುರ್ಭಾವಗಳನ್ನು ಹೇಳುವೆನು.
ಪೂರ್ಣೇ ಯುಗಸಹಸ್ರೇಥ ದೇವದೇವೋ ಜಗತ್ಪತಿಃ |
ಬ್ರಹ್ಮಾಣಂ ಕಪಿಲಂ ಚೈವ ಪಾರಶ್ರೇಷ್ಠೀ ತಥೈವ ಚ ||4||
ದೇವಾನ್ ಸಪ್ತ ಋಷೀಂಶ್ಚವ ಶಂಕರಂ ಚ ಮಹಾಯಶಾಃ |
ಸನತ್ಕುಮಾರಂ ಭಗವಾನ್ ಮನುಂ ಚೈವ ಪ್ರಜಾಪತಿಮ್ |
ಪುರಾ ಚಕ್ರೇಽಥ ದೇವಾದಿಃ ಪ್ರದೀಪ್ತಾಗ್ನಿಸಮಪ್ರಭಃ ||5||
ಸಹಸ್ರಯುಗಗಳು ಪೂರ್ಣವಾದಮೇಲೆ ದೇವದೇವನೂ ಜಗತ್ಪತಿಯೂ ಮುಕ್ತರಿಗೆ ಒಡಯನೂ ಆದ ಇವನು ವಾಯುದೇವರನ್ನೂ ಬ್ರಹ್ಮದೇವರನ್ನೂ ಸೃಷ್ಟಿಸಿದನು. ಹಾಗೆಯೇ ಮಹಾಕೀರ್ತಿವಂತನಾದ ಭಗವಂತನಾದ ಇವನು ದೇವತೆಗಳನ್ನೂ ಸಪ್ತ ಋಷಿಗಳನ್ನೂ ಶಂಕರನನ್ನೂ ಸನತ್ಕುಮಾರರನ್ನೂ ಮತ್ತು ಪ್ರಜಾಪತಿಗಳನ್ನೂ ಸೃಷ್ಟಿಸಿದನು. ಜ್ವಲಿಸುವ ಅಗ್ನಿಯ ಪ್ರಭೆಯುಳ್ಳ, ದೇವತೆಗಳಿಗೂ ಸೃಷ್ಟಿಕರ್ತನಾದ, ಇವನು ಹಿಂದೆ ಹೀಗೆ ಮಾಡಿದನು.
ಯೇನ ಚಾರ್ಣವಮಧ್ಯಸ್ಥೌ ನಷ್ಟೇ ಸ್ಥಾವರಜಂಗಮೇ |
ನಷ್ಟದೇವಾಸುರನರೇ ಪ್ರಣಷ್ಟೋರಗರಾಕ್ಷಸೇ ||6||
ಯೋದ್ಧುಕಾಮೌ ಸುದುರ್ಧರ್ಷೌ ಭ್ರಾತರೌ ಮಧುಕೈಟಭೌ |
ಹತೌ ಭಗವತಾ ತೇನ ತಯೋರ್ದತ್ತ್ವಾ ವರಂ ಪರಮ್ ||7||
ಸ್ಥಾವರಜಂಗಮಗಳು ದೇವಾಸುರರು ಉರಗರಾಕ್ಷಸರು ನಷ್ಟವಾಗಿರುವ ಪ್ರಳಯಕಾಲದ ಕೊನೆಯಲ್ಲಿ ಪ್ರಳಯೋದಕದ ಮಧ್ಯದಲ್ಲಿ ಇದ್ದು ಮಹಾಬಲಶಾಲಿಗಳಾದ ಯುದ್ಧಾಕಾಂಕ್ಷಿಗಳಾದ ಅಣ್ಣ ತಮ್ಮಂದಿರಾದ ಮಧುಕೈಟಭರು ಈ ಭಗವಂತನಿಂದ ಅವರಿಗೆ ವರವನ್ನು ಕೊಟ್ಟು ಕೊಲ್ಲಲ್ಪಟ್ಟರು.
ಭೂಮಿಂ ಬದ್ಧ್ವಾ ತು ತೌ ಪೂರ್ವಂ ಮೃನ್ಮಯೌ ದ್ವೌ ಮಹಾಸುರೌ |
ಕರ್ಣಸ್ರೋತೋದ್ಭವೌ ತೌ ತು ವಿಷ್ಣೋಸ್ತಸ್ಯ ಮಹಾತ್ಮನಃ ||8||
ಮಹಾರ್ಣವೇ ಪ್ರಸ್ವಪತಃ ಶೈಲರಾಜಸಮೌ ಸ್ಥಿತೌ |
ತೌ ವಿವೇಶ ಸ್ವಯಂ ವಾಯುರ್ಬ್ರಹ್ಮಣಾ ಸಾಧು ಚೋದಿತಃ ||9||
ಮಹಾತ್ಮನಾದ ವಿಷ್ಣುವಿನ ಕರ್ಣವಿವರಗಳಿಂದ ಜನಿಸಿದ ಅವರಿಬ್ಬರೂ ಅಸುರರು ಅಶ್ಮಸಾರಮಯವಾದ ಶರೀರವುಳ್ಳವರಾಗಿ ಭೂಮಿಯನ್ನು ತಮ್ಮ ಕೈಗಳಲ್ಲಿ ಬಂಧಿಸಿ ಮಹಾರ್ಣವದಲ್ಲಿ ಮಲಗಿ ನಿದ್ರಿಸಿದರು. ಅವರಿಬ್ಬರೂ ಪರ್ವತ ಪ್ರತಿಪಮರಾಗಿದ್ದರು. ಬ್ರಹ್ಮದೇವರಿಂದ ಪ್ರೇರಿಸಲ್ಪಟ್ಟ ವಾಯುದೇವರು ಅವರಿಬ್ಬರನ್ನು ಪ್ರವೇಶಿಸಿದರು.
ತೌ ದಿವಂ ಛಾದಯಿತ್ವಾ ತು ವವೃಧಾತೇ ಮಹಾಸುರೌ |
ವಾಯುಪ್ರಾಣೌ ತು ತೌ ದೃಷ್ಟ್ವಾ ಬ್ರಹ್ಮಾ ಪರಿಮೃಶನ್ ಶನೈಃ |
ಏಕಂ ಮೃದುತರಂ ವೇತ್ತಿ ಕಠಿನಂ ವೇತ್ತಿ ಚಾಪರಮ್ ||10||
ಆ ಇಬ್ಬರು ಮಹಾಸುರರು ದ್ಯುಲೋಕವನ್ನು ಆವರಿಸಿಕೊಂಡು ಬೆಳೆದರು. ವಾಯುದೇವರ ಬಲದಿಂದ ಬಲಿಷ್ಠರಾಗಿದ್ದ ಅವರಿಬ್ಬರನ್ನು ಪರಾಮರ್ಶೆಮಾಡಿ ಬ್ರಹ್ಮದೇವರು ಅವರಲ್ಲಿ ಒಬ್ಬನನ್ನು ಮೃದುವೆಂದೂ ಇನ್ನೊಬ್ಬನನ್ನು ಕಠಿಣವೆಂದೂ ತಿಳಿಸಿದರು.
ನಾಮನೀ ತು ತಯೋಶ್ಚಕ್ರೇ ಸ ವಿಭುಃ ಸಲಿಲೋದ್ಭವಃ |
ಮೃದುಸ್ತ್ವಯಂ ಮಧುರ್ನಾಮ ಕಠಿನಃ ಕೈಟಭಸ್ತ್ವಯಮ್ |
ತೌ ದೈತ್ಯೌ ಕೃತನಾಮಾನೌ ಚೇರತುರ್ಬಲಗರ್ವಿತೌ ||11||

ಸಲಿಲದಿಂದ ಉದ್ಭವಿಸಿದ ಪ್ರಭುಗಳಾದ ಬ್ರಹ್ಮದೇವರು ಅವರಿಗೆ ನಾಮಕರಣಗಳನ್ನು ಮಾಡಿದರು. ಮೃದುವಾದವನಿಗೆ ಮಧು ಎಂದೂ ಕಠಿಣನಾದವನಿಗೆ ಕೈಟಭನೆಂದೂ ನಾಮಕರಣಮಾಡಿದರು. ನಾಮಕರಣವನ್ನು ಮಾಡಿಕೊಂಡ ಆ ದೈತ್ಯರು ತಮ್ಮ ಬಲದಿಂದ ಗರ್ವಿಷ್ಠರಾಗಿ ಎಲ್ಲ ಕಡೆಗಳಲ್ಲಿಯೂ ತಿರುಗಾಡಿದರು.
ತೌ ಪುರಾಥ ದಿವಂ ಸರ್ವಾಂ ಪ್ರಾಪ್ತೌ ರಾಜನ್ ಮಹಾಸುರೌ |
ಪ್ರಶಾಸ್ಯಾಥ ದಿವಂ ಸರ್ವಾಂ ಚೇರತುರ್ಮಧುಕೈಟಭೌ ॥12॥
ಎಲೈ ರಾಜನೇ! ಆ ಇಬ್ಬರೂ ಮಹಾ ಅಸುರರು ಮೊದಲು ದ್ಯುಲೋಕಕ್ಕೆ ಬಂದು ದ್ಯುಲೋಕವನ್ನು ತಮ್ಮ ವಶಕ್ಕೆ ತೆಗೆದುಕೊಂಡು ದ್ಯುಲೋಕದಲ್ಲಿ ಎಲ್ಲಾ ಕಡೆಯಲ್ಲಿಯೂ ಸಂಚರಿಸಿದರು.
ಸರ್ವಮೇಕಾರ್ಣವಂ ಲೋಕಂ ಯೋದ್ಧುಕಾಮೌ ಸುನಿರ್ಭಯೌ |
ತೌ ಗತಾವಸುರೌ ದೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ |
ಏಕಾರ್ಣವಾಂಬುನಿಚಯೇ ತತ್ರೈವಾಂತರಧೀಯತ ॥13॥
ಎಲ್ಲವೂ ಏಕಾರ್ಣವವಾದ ಲೋಕವನ್ನು ನೋಡಿ ಸುನಿರ್ಭಯರೂ ಯುದ್ಧಕಾಂಕ್ಷಿಗಳೂ ಅಸುರರೂ ಆದ ಆ ಮಧುಕೈಟಭರು ತನ್ನ ಬಳಿಗೆ ಬಂದಿದ್ದನ್ನು ಗಮನಿಸಿ ಸರ್ವಲೋಕಪಿತಾಮಹರಾದ ಬ್ರಹ್ಮದೇವರು ಏಕಾರ್ಣವವಾದ ಜಲಸಮೂಹದಲ್ಲಿ (ಅಲ್ಲಿಯೇ( ಅಂತರ್ಧಾನವನ್ನು ಹೊಂದಿದರು.
ಸ ಪದ್ಮೇ ಪದ್ಮನಾಭಸ್ಯ ನಾಭಿದೇಶಾತ್ ಸಮುತ್ಥಿತೇ |
ಆಸೀದಾದೌ ಸ್ವಯಂಜನ್ಮ ತತ್ಪಂಕಜಮಪಂಕಜಮ್ |
ಪೂಜಯಾಮಾಸ ವಸತಿಂ ಬ್ರಹ್ಮಾ ಲೋಕಪಿತಾಮಹಃ ॥14॥
ಆ ಬ್ರಹ್ಮದೇವರು ಮೊದಲು ಪದ್ಮನಾಭನ ನಾಭಿದೇಶದಿಂದ ಕೆಸರಿಲ್ಲದೆ ಹುಟ್ಟಿದ ಕಮಲದಲ್ಲಿ ಸ್ವತಃ ಜನ್ಮವನ್ನು ಪಡೆದು ಸರ್ವಲೋಕ ಪಿತಾಮಹರಾದ ಬ್ರಹ್ಮದೇವರು ತಮ್ಮ ವಾಸಸ್ಥಾನವಾದ ಆ ಪದ್ಮವನ್ನು ಪೂಜಿಸಿದರು.
ತಾವುಭೌ ಜಲಗರ್ಭಸ್ಥೌ ನಾರಾಯಣಚತುರ್ಮುಖೌ |
ಬಹೂನ್ ವರ್ಷಾಯುತಾನಪ್ಸು ಶಯಾನೌ ನ ಚಕಂಪತುಃ ॥15॥
ನಾರಾಯಣದೇವರು ಮತ್ತು ಬ್ರಹ್ಮದೇವರು ಜಲಗರ್ಭದಲ್ಲಿ ಇದ್ದವರಾಗಿ ಅನೇಕ ಸಹಸ್ರಾರು ವರ್ಷಗಳ ಕಾಲ ಅಲುಗಾಡದೆ ಮಲಗಿದ್ದರು.
ಅಥ ದೀರ್ಘಸ್ಯ ಕಾಲಸ್ಯ ತಾವುಭೌ ಮಧುಕೈಟಭೌ |
ಆಜಗ್ಮತುಸ್ತದುದ್ದೇಶಂ ಯತ್ರ ಬ್ರಹ್ಮಾ ವ್ಯವಸ್ಥಿತಃ ॥16॥
ಅನಂತರ ಬಹುಕಾಲದ ಮೇಲೆ ಆ ಇಬ್ಬರು ಮಧುಕೈಟಭರು ಎಲ್ಲಿ ಬ್ರಹ್ಮದೇವರು ಇದ್ದರೋ ಆ ಪ್ರದೇಶಕ್ಕೆ ಬಂದರು.
ತೌ ದೃಷ್ಟ್ವಾ ಲೋಕನಾಥಸ್ತು ರೋಷಾತ್ ಸಂರಕ್ತಲೋಚನಃ |
ಉತ್ಪಪಾತಾಶು ಶಯನಾತ್ ಪದ್ಮನಾಭೋ ಮಹಾದ್ಯುತಿಃ ॥17॥
ಲೋಕನಾಥನಾದ ಮಹಾದ್ಯುತಿಯಾದ ಪದ್ಮನಾಭನು ಅವರಿಬ್ಬರನ್ನು ನೋಡಿ ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ತನ್ನ ಶಯನದಿಂದ ಮೇಲೆದ್ದನು.
ತದ್ಯುದ್ಧಮಭವದ್ ಘೋರಂ ತಯೋಸ್ತಸ್ಯ ಚ ವೈ ತದಾ |
ಏಕಾರ್ಣವೇ ತದಾ ಘೋರೇ ತ್ರೈಲೋಕ್ಯೇ ಜಲತಾಂ ಗತೇ ॥18॥
ಆಗ ಮೂರು ಲೋಕಗಳು ಜಲಮಯವಾಗಿ ಘೋರವಾದ ಏಕಾರ್ಣವವು ಎಲ್ಲ ಕಡೆಗಳಲ್ಲಿ ವ್ಯಾಪಿಸಿರಲು ಮಧುಕೈಟಭರಿಗೂ ಮತ್ತು ಪದ್ಮನಾಭನಿಗೂ ಘೋರವಾದ ಯುದ್ಧವಾಯಿತು.
ತದಾಭೂತ್ ತುಮುಲಂ ಯುದ್ಧಂ ವರ್ಷಸಂಘಾನ್ ಸಹಸ್ರಶಃ |
ಯೌ ಚ ತಾವಸುರೌ ಯುದ್ಧೇ ತದಾ ಶ್ರಮಮವಾಪತುಃ ॥19॥
ಅನೇಕಸಹಸ್ರವರ್ಷಗಳಕಾಲ ತುಮುಲವಾದ ಯುದ್ಧವು ನಡೆಯಿತು. ಆಗ ಆ ಅಸುರರು ಯುದ್ಧದಲ್ಲಿ ಶ್ರಮವನ್ನು ಹೊಂದಿದರು.
ಅಥ ದೀರ್ಘಸ್ಯ ಕಾಲಸ್ಯ ತೌ ದೈತ್ಯೌ ಯುದ್ಧದುರ್ಮದೌ |
ಊಚತುಃ ಪ್ರೀತಮನಸೌ ದೇವಂ ನಾರಾಯಣಂ ಪ್ರಭುಮ್ ॥20॥
ಬಹುಕಾಲದ ನಂತರ ಯುದ್ಧದುರ್ಮದರಾದ ಆ ದೈತ್ಯರು ಮನಃಸಂತೋಷದಿಂದ ಪ್ರಭುವಾದ ನಾರಾಯಣನನ್ನು ಕುರಿತು ಹೀಗೆ ಹೇಳಿದರು.
ಪ್ರೀತೌ ಸ್ವಸ್ತವ ಯುದ್ಧೇನ ಶ್ಲಾಘ್ಯಸ್ತ್ವಂ ಮೃತ್ಯುರಾವಯೋಃ |
ಆವಾಂ ಜಹಿ ನ ಯತ್ರೋರ್ವೀ ಸಲಿಲೇನ ಪರಿಪ್ಲುತಾ ॥21॥
ನಾವು ನಿನ್ನ ಯುದ್ಧದಿಂದ ಸಂತುಷ್ಟರಾಗಿದ್ದೇವೆ. ಶ್ಲಾಘ್ಯನಾದ ನೀನು ನಮ್ಮಿಬ್ಬರಿಗೆ ಮೃತ್ಯುವಾಗಿದ್ದೀಯೆ. ಎಲ್ಲಿ ನಮ್ಮ ಮರಣಭೂಮಿಯು ಜಲದಿಂದ ಆವೃತವಾಗಿದೆಯೋ ಅಲ್ಲಿ ನಮ್ಮನ್ನು ಸಂಹರಿಸು.
ಹತೌ ಚ ತವ ಪುತ್ರತ್ವಂ ಪ್ರಾಪ್ನುಯಾವ ಸುರೋತ್ತಮ |
ಯೋ ಹ್ಯಾವಾಂ ಯುಧಿ ನಿರ್ಜೇತಾ ತಸ್ಯಾವಾಂ ವಿಹಿತೌ ಸುತೌ ॥22॥
ಸುರೋತ್ತಮನೇ! ನಿನ್ನಿಂದ ಹತರಾದಮೇಲೆ ನಾವು ನಿನ್ನ ಪುತ್ರರಾಗುತ್ತೇವೆ. ಯಾರು ನಮ್ಮನ್ನು ಯುದ್ಧದಲ್ಲಿ ಗೆಲ್ಲುತ್ತಾನೆಯೋ ಅವನಿಗೆ ನಾವು ಮಕ್ಕಳಾಗುತ್ತೇವೆ ಎಂಬ ವರವು ನಮಗಿದೆ. (ಮಧುಕೈಟಭರಿಬ್ಬರಲ್ಲೂ ವಾಯುದೇವರ ಅಂಶಗಳಿವೆ. ಮಧುಕೈಟಭರು ಹತರಾದಮೇಲೆ ಅವರಲ್ಲಿ ಆವಿಷ್ಟರಾದ ವಾಯುದೇವರು ಪರಮಾತ್ಮನ ಪುತ್ರರಾಗಿ ಅನೇಕ ರೂಪಗಳಿಂದ ಜನಿಸುತ್ತಾರೆ.)
ತಯೋಃ ಸ ವಚನಂ ಶ್ರುತ್ವಾ ತದಾ ನಾರಾಯಣಃ ಪ್ರಭುಃ |

ತೌ ಪ್ರಗೃಹ್ಯ ಮೃಧೇ ದೈತ್ಯೌ ದೋರ್ಭ್ಯಾಂ ತೌ ಸಮಪೀಡಯತ್ ॥23॥
ಆಗ ಪ್ರಭುವಾದ ನಾರಾಯಣನು ಅವರ ಮಾತನ್ನು ಕೇಳಿ ಯುದ್ಧದಲ್ಲಿ ಅವರನ್ನು ಹಿಡಿದು ತನ್ನ ಬಾಹುಗಳಿಂದ ಪೀಡಿಸಿದನು.
ಊರುಭ್ಯಾಂ ನಿಧನಂ ಚಕ್ರೇ ತಾವುಭೌ ಮಧುಕೈಟಭೌ |
ತೌ ಹತೌ ಚಾಪ್ಲುತೌ ತೋಯೇ ವಪುರ್ಭ್ಯಾಮೇಕತಾಂ ಗತೌ |
ಮೇದೋ ಮುಮುಚತುರ್ದೈತ್ಯೌ ಮಜ್ಜಮಾನೌ ಜಲೋರ್ಮಿಭಿಃ ॥24॥
ತನ್ನ ತೊಡೆಗಳಿಂದ ಅವರನ್ನು ಪೀಡಿಸಿ ನಾರಾಯಣನು ಮಧುಕೈಟಭರನ್ನು ಸಂಹರಿಸಿದನು. ಸಂಹರಿಸಿದಮೇಲೆ ಜಲದಲ್ಲಿ ಮುಳುಗಿಸಲ್ಪಟ್ಟ ಅವರ ದೇಹಗಳು ಒಂದಕ್ಕೊಂದು ಸೇರಿಕೊಂಡು ಮೇದಸ್ಸನ್ನು ಸ್ರವಿಸಿದವು. ಆ ಮೇದಸ್ಸು ನೀರಿನ ಅಲೆಗಳಿಂದ ಎಲ್ಲ ಕಡೆಗಳಲ್ಲಿಯೂ ಹರಡಿತು.
ಮೇದಸಾ ತಜ್ಜಲಂ ವ್ಯಾಪ್ತಂ ತಾಭ್ಯಾಮಂತರ್ದಧೇ ತದಾ |
ನಾರಾಯಣಶ್ಚ ಭಗವಾನ್ ಅಸೃಜದ್ ವಿವಿಧಾಃ ಪ್ರಜಾಃ ॥25॥
ಅವರಿಬ್ಬರ ಮೇಧಸ್ಸಿನಿಂದ ಆ ಜಲವು ಎಲ್ಲ ಕಡೆಯಲ್ಲಿ ವ್ಯಾಪಿಸಲ್ಪಟ್ಟಿತು. ಅನಂತರ ಪ್ರಭುವಾದ ನಾರಾಯಣನು ಅಲ್ಲಿ ಅಂರ್ತದಾನವನ್ನುಹೊಂದಿ ವಿವಿಧರಾದ ಪ್ರಜೆಗಳನ್ನು ಸೃಷ್ಟಿಸಿದನು.
ದೈತ್ಯಯೋರ್ಮೇದಸಾ ಛನ್ನಾ ಜಜ್ಞೇ ರಾಜನ್ ವಸುಂಧರಾ |
ತದಾಪ್ರಭೃತಿ ಕೌಂತೇಯ ಮೇದಿನೀತಿ ಸ್ಮೃತಾ ಮಹೀ |
ಪ್ರಭಾವಾತ್ ಪದ್ಮನಾಭಸ್ಯ ಶಾಶ್ವತೀ ಚ ಕೃತಾ ನೃಣಾಮ್ ॥26॥
ರಾಜನೇ! ಭೂಮಿಯು ಆ ಇಬ್ಬರು ದೈತ್ಯರ ಮೇದಸ್ಸಿನಿಂದ ಆವರಿಸಿಲ್ಪಟ್ಟಿತು. ಆ ಕಾರಣದಿಂದ ಆ ದಿನದಿಂದ ಭೂಮಿಗೆ ಮೇದಿನಿ ಎಂದು ಹೆಸರು. ಕೌಂತೇಯನೇ ಪದ್ಮನಾಭನ ಪ್ರಭಾವದಿಂದ ಆ ಭೂಮಿಯು ಎಲ್ಲ ಮನುಷ್ಯರು ವಾಸಿಸುವುದಕ್ಕಾಗಿ ಶಾಶ್ವತವಾಗಿ ಮಾಡಲ್ಪಟ್ಟಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿಯಿತು.
* * * *

ಮೂವತ್ತೆಂಟನೆಯ ಅಧ್ಯಾಯ
(ಭೀಷ್ಮರಿಂದ ವರಾಹ ನರಸಿಂಹಾವತಾರಗಳ ವರ್ಣನೆ.)

ಭೀಷ್ಮಃ
ಪ್ರಾದುರ್ಭಾವಸಹಸ್ರಾಣಿ ಸಮತೀತಾನ್ಯನೇಕಶಃ |
ಯಥಾಶಕ್ತಿ ತು ವಕ್ಷ್ಯಾಮಿ ಶೃಣು ತಾನ್ ಕುರುನಂದನ ॥1॥
ಎಲೈ ಕುರುನಂದನನೇ! ಈ ಕೃಷ್ಣನಿಗೆ ಅನೇಕಸಹಸ್ರ ಅವತಾರಗಳು ಕಳೆದುಹೋಗಿದೆ. ನನ್ನ ಶಕ್ತಿಯಿದ್ದಷ್ಟು ಹೇಳುವೆನು. ನೀನು ಅವುಗಳನ್ನು ಕೇಳು.
ಪುರಾ ಕಮಲನಾಭಸ್ಯ ಸ್ವಪತಃ ಸಾಗರಾಂಭಸಿ |
ಪುಷ್ಕರೇ ಯತ್ರ ಸಂಭೂತಾ ದೇವಾ ಋಷಿಗಣೈಃ ಸಹ ॥2॥
ಹಿಂದೆ ಪ್ರಳಯೋದಕದಲ್ಲಿ ಮಲಗಿದ ಪದ್ಮನಾಭನ ಉದರದಿಂದ ಜನಿಸಿದ ಕಮಲದಲ್ಲಿ ದೇವತೆಗಳು ಮತ್ತು ಋಷಿಗಳು ಜನಿಸಿದರು.
ಏಷ ಪೌಷ್ಕರಿಕೋ ನಾಮ ಪ್ರಾದುರ್ಭಾವಃ ಪ್ರಕೀರ್ತಿತಃ |
ಪುರಾಣಃ ಕಥ್ಯತೇ ಯತ್ರ ದೇವೈಃ ಶ್ರುತಿಸಮಾಹಿತಃ ॥3॥
ಈ ಪದ್ಮನಾಭ ಪ್ರಾದುರ್ಭಾವವನ್ನು ಪುಷ್ಪರಸಂಬಂಧಿ ಪ್ರಾರ್ದುಭಾವ ಎಂದು ಕರೆಯುತ್ತಾರೆ. ಇದು ಬಹಳ ಪ್ರಾಚೀನವಾದುದು ಮತ್ತು ದೇವತೆಗಳಿಂದಲೂ ಶ್ರುತಿಗಳಿಂದಲೂ ಹೇಳಲ್ಪಟ್ಟಿದುದು.
ವಾರಾಹಸ್ತು ಶ್ರುತಿಮುಖಃ ಪ್ರಾದುರ್ಭಾವೋ ಮಹಾತ್ಮನಃ |
ಯತ್ರ ವಿಷ್ಣುಃ ಸುರಶ್ರೇಷ್ಠೋ ವಾರಾಹಂ ರೂಪಮಾಸ್ಥಿತಃ |
ಉಜ್ಜಹಾರ ಮಹೀಂ ತೋಯಾತ್ ಸಶೈಲವನಕಾನನಾಮ್ ॥4॥
ವರಾಹಾವತಾರವು ಆ ಮಹಾತ್ಮನ ಶ್ರುತಿಮುಖವಾದ ಪ್ರಾರ್ದುಭಾವ. ಆ ದೇವೋತ್ತಮನಾದ ವಿಷ್ಣುವು ವರಾಹ ಅವತಾರವನ್ನು ತೆಗೆದುಕೊಂಡು ಪರ್ವತಕಾನನಗಳಿಂದ ಕೂಡಿದ ಈ ಭೂಮಿಯನ್ನು ನೀರಿನಿಂದ ಮೇಲಕ್ಕೆ ಎತ್ತಿದನು.
ವೇದಸ್ಕಂಧೋ ಯೂಪದಂಷ್ಟ್ರಃ ಕ್ರತುದಂತಶ್ಚಿತೀಮುಖಃ |
ಅಗ್ನಿಜಿಹ್ವೋ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ॥5॥
ಅಹೋರಾತ್ರೇಕ್ಷಣೋ ದಿವ್ಯೋ ವೇದಾಂಗಃ ಶ್ರುತಿಭೂಷಣಃ |
ಆಜ್ಯನಾಸಃ ಸ್ರುವತುಂಡಃ ಸಾಮಘೋಷಸ್ವನೋ ಮಹಾನ್ ॥6॥
ಧರ್ಮಸತ್ಯಮಯಃ ಶ್ರೀಮಾನ್ ಕರ್ಮವಿಕ್ರಮಸತ್ಕೃತಃ |
ಪ್ರಾಯಶ್ಚಿತ್ತನಖೋ ಧೀರಃ ಪಶುಜಾನುರ್ಮಹಾವೃಷಃ ॥7॥
ಔದ್ಗಾತ್ರಹೋಮಲಿಂಗೋಽಸೌ ಪಶುಬೀಜಮಹೌಷಧಿಃ |
ಬಾಹ್ಯಾಂತರಾತ್ಮಾ ಮಂತ್ರಾಸ್ಥಿವಿಕೃತಃ ಸೌಮ್ಯದರ್ಶನಃ ॥8॥
ವೇದಿಸ್ಕಂಧೋ ಹವಿರ್ಗಂಧೋ ಹವ್ಯಕವ್ಯಾದಿವೇಗವಾನ್ |

ಪ್ರಾಗ್ವಂಶಕಾಯೋ ದ್ಯುತಿಮಾನ್ ನಾನಾದೀಕ್ಷಾಭಿರಾಚಿತಃ ॥9॥
ದಕ್ಷಿಣಾಹೃದಯೋ ಯೋಗೀ ಮಹಾಸತ್ರಮಯೋ ಮಹಾನ್ |
ಉಪಾಕರ್ಮೋಷ್ಠರುಚಕಃ ಪ್ರವರ್ಗ್ಯಾವರ್ತಭೂಷಣಃ |
ಜಾಯಾಪತ್ನೀಸಹಾಯೋ ವೈ ಮಣಿಶೃಂಗ ಇವೋಚ್ಛ್ರಿತಃ ॥10॥
ಆ ವರಾಹ ಅವತಾರವು ವೇದಸ್ಕಂದ ಉಳ್ಳದ್ದು. ಯೂಪದಂಷ್ಟ್ರವನ್ನು ಹೊಂದಿದ್ದಾಗಿಯೂ ದಂತದಲ್ಲಿ ಕ್ರತುವನ್ನು ಹೊಂದಿದ್ದಾಗಿಯೂ ಮುಖದಲ್ಲಿ ಚಿತಿಯನ್ನು ಹೊಂದಿದ್ದಾಗಿಯೂ ಜಿಹ್ವೆಯಲ್ಲಿ ಅಗ್ನಿಯನ್ನು ಹೊಂದಿದ್ದಾಗಿಯೂ ರೋಮಗಳಲ್ಲಿ ದರ್ಭೆಗಳನ್ನು ಹೊಂದಿದ್ದಾಗಿಯೂ ಶಿರಸ್ಸಿನಲ್ಲ ಮಹಾತಪಸ್ವಿಯಾದ ಬ್ರಹ್ಮನನ್ನು ಹೊಂದಿದ್ದಾಗಿಯೂ ಕಣ್ಣುಗಳಲ್ಲಿ ಅಹೋರಾತ್ರಗಳನ್ನು ಹೊಂದಿದ್ದಾಗಿಯೂ, ದಿವ್ಯವಾಗಿದ್ದಾಗಿಯೂ ವೇದಾಂಗಗಳನ್ನೂ ಕರ್ಣ ಭೂಷಣಗಳುಳ್ಳದ್ದಾಗಿಯೂ ನಾಸಿಕೆಯಲ್ಲಿ ಆಜ್ಯವನ್ನು ಉಳ್ಳದ್ದಾಗಿಯೂ ತುಂಡದಲ್ಲಿ ಸ್ರುವವನ್ನು ಉಳ್ಳದ್ದಾಗಿಯೂ ತನ್ನ ಧ್ವನಿಯಲ್ಲಿ ಸಾಮಘೋಷವುಳ್ಳದ್ದಾಗಿಯೂ ಧರ್ಮಸತ್ಯಾತ್ಮಕವಾಗಿಯೂ ಸಂಪದ್ಯುಕ್ತವಾಗಿಯೂ ಕರ್ಮವಿಕ್ರಮ ಸಂಯುಕ್ತವಾಗಿಯೂ ಸಖಗಳಲ್ಲಿ ಪ್ರಾಯಶ್ಚಿತ್ತವನ್ನು ಉಳ್ಳದ್ದಾಗಿಯೂ ಜಾನುಗಳಲ್ಲಿ ಪಶುಗಳನ್ನು ಉಳ್ಳದ್ದಾಗಿಯೂ ಸರ್ವೋತ್ತಮವಾಗಿಯೂ ಇದ್ದಿತು. ಆ ವರಾಹನು ಔದ್ಗಾತ್ರಹೋಮಲಿಂಗಗಳಿಂದಲೂ ಪಶುರೂಪವಾದ ಬೀಜಮಹೌಷಧಿಗಳನ್ನು ಹೊಂದಿದ್ದಾಗಿಯೂ ಅಂತರ್ಬಹಿರ್ವ್ಯಾಪ್ತವಾಗಿಯೂ ಅಸ್ಥಿವಿಕಾರಗಳಲ್ಲಿ ಮಂತ್ರಗಳನ್ನು ಹೊಂದಿದ್ದಾಗಿಯೂ ಸೌಮ್ಯದರ್ಶನವುಳ್ಳದ್ದಾಗಿಯೂ ಸ್ಕಂಧದಲ್ಲಿ ವೇದಿಯನ್ನು ಉಳ್ಳದ್ದಾಗಿಯೂ ಗಂಧದಲ್ಲಿ ಹವಿಸ್ಸನ್ನು ಉಳ್ಳದ್ದಾಗಿಯೂ ಹವ್ಯಕವ್ಯಾದಿವೇಗವನ್ನು ಉಳ್ಳದ್ದಾಗಿಯೂ ದೇಹದಲ್ಲಿ ಪ್ರಾಗ್ವಂಶವನ್ನೂ ಕಾಂತಿಯನ್ನೂ ಮತ್ತು ನಾನಾ ದೀಕ್ಷೆಗಳನ್ನೂ ಉಳ್ಳದ್ದಾಗಿಯೂ ಹೃದಯದಲ್ಲಿ ದಕ್ಷಿಣೆಯನ್ನು ಉಳ್ಳದ್ದಾಗಿಯೂ ಮಹಾಸತ್ರಮಯವಾದ ಮಹಾಕೃತಿಯನ್ನು ಉಳ್ಳದ್ದಾಗಿಯೂ ಓಷ್ಠಕಾಂತಿಯಲ್ಲಿ ಉಪಾಕರ್ಮವನ್ನು ಉಳ್ಳದ್ದಾಗಿಯೂ ನಾಭಿಯಲ್ಲಿ ಪ್ರವರ್ಗವನ್ನು ಉಳ್ಳದ್ದಾಗಿಯೂ ಪತ್ನಿಯಾದ ಧರಾಸಹಿತನಾಗಿ ಮಣಿಶೃಂಗದಂತೆ ಎತ್ತರವಾಗಿದ್ದಿತು. (ಯಜ್ಞವರಾಹನ ಆಯಾ ಅಂಗಗಳಿಂದ ಯಜ್ಞಾಂಗಗಳಿಗೆ ಅಭಿಮಾನಿಗಳಾದ ಆಯಾ ದೇವತೆಗಳು ಮತ್ತು ಆಯಾ ಯಜ್ಞಾಂಗಗಳು ಜನಿಸಿದವು ಎಂದು ತಾತ್ಪರ್ಯ.)
ಏವಂ ಯಜ್ಞವರಾಹೋ ವೈ ಭೂತ್ವಾ ವಿಷ್ಣುಃ ಸನಾತನಃ |
ಮಹೀಂ ಸಾಗರಪರ್ಯಂತಾಂ ಸಶೈಲವನಕಾನನಾಮ್ ॥11॥
ಏಕಾರ್ಣವಜಲೇ ಭ್ರಷ್ಟಾಮೇಕಾರ್ಣವಗತಃ ಪ್ರಭುಃ |
ಮಜ್ಜಿತಾಂ ಸಲಿಲೇ ತಸ್ಮಿನ್ ಸ್ವದೇವೀಂ ದಯಿತಾಂ ತದಾ |
ಉಜ್ಜಹಾರ ವಿಷಾಣೇನ ಮಾರ್ಕಂಡೇಯಸ್ಯ ಪಶ್ಯತಃ ॥12॥
ಹೀಗೆ ಸನಾತನನಾದ ವಿಷ್ಣುವು ಯಜ್ಞವರಾಹನಾಗಿ ಏಕಾರ್ಣವದಲ್ಲಿ ದಿಕ್ಕುತಪ್ಪಿದ ವನಪರ್ವತಸಹಿತವಾದ ಸಾಗರಪರ್ಯಂತವಾದ ಈ ಭೂಮಿಯನ್ನು ಎತ್ತಿದನು. ಪ್ರಭುವಾದ ನಾರಾಯಣನು ತನ್ನ ಪತ್ನಿಯಾದ ಪ್ರಿಯಳಾದ ನೀರಿನಲ್ಲಿ ಮುಳುಗಿಹೋದ ಭೂದೇವಿಯನ್ನು ಮಾರ್ಕಂಡೇಯರು ನೋಡುತ್ತಿರುವಂತೆಯೇ ತನ್ನ ವಿಷಾಣದಿಂದ (ಕೋರೆದಾಡೆ) ಮೇಲಕ್ಕೆತ್ತಿದನು.
ಶೃಂಗೇಣೇಮಾಂ ಸಮುದ್ಧೃತ್ಯ ಲೋಕಾನಾಂ ಹಿತಕಾಮ್ಯಯಾ |
ಸಹಸ್ರಶೀರ್ಷೋ ದೇವೋ ಹಿ ನಿರ್ಮಮೇ ಜಗತೀಂ ಪ್ರಭುಃ ॥13॥
ಪ್ರಭುವಾದ ಸಹಸ್ರಶೀರ್ಷನಾದ ಆ ದೇವನು ತನ್ನ ಶೃಂಗದಿಂದ ಭೂಮಿಯನ್ನು ಮೇಲಕ್ಕೆತ್ತಿ ಲೋಕಗಳಿಗೆ ಹಿತವನ್ನು ಉಂಟುಮಾಡುವ ದೃಷ್ಟಿಯಿಂದ ಜಗತ್ತನ್ನು ನಿರ್ಮಾಣಮಾಡಿದನು.
ಏವಂ ಯಜ್ಞವರಾಹೇಣ ಭೂತಭವ್ಯಭವಾತ್ಮನಾ |
ಉದ್ಧೃತಾ ಪೃಥಿವೀ ದೇವೀ ಸಾಗರಾಂಬುಧರಾ ಪುರಾ |
ನಿಹತಾ ದಾನವಾಃ ಸರ್ವೇ ದೇವದೇವೇನ ವಿಷ್ಣುನಾ ॥14॥
ಹೀಗೆ ಭೂತಭವ್ಯಭವತ್ಪ್ರಭುವಾದ ಯಜ್ಞವರಾಹನು ಹಿಂದೆ ಸಾಗರಪರ್ಯಂತವಾದ ಭೂಮಿಯನ್ನು ಮೇಲಕ್ಕೆತ್ತಿ ದೇವದೇವನಾದ ಅವನು ಎಲ್ಲ ದಾನವರನ್ನೂ ಸಂಹರಿಸಿದನು.
ವಾರಾಹಃ ಕಥಿತೋ ಹ್ಯೇಷ ನಾರಸಿಂಹಮಥೋ ಶೃಣು |
ಯತ್ರ ಭೂತ್ವಾ ಮೃಗೇಂದ್ರೇಣ ಹಿರಣ್ಯಕಶಿಪುರ್ಹತಃ ॥15॥
ಈ ವರಾಹಾವತಾರವನ್ನು ಹೇಳಿದೆನು. ಇನ್ನು ನರಸಿಂಹಾವತಾರವನ್ನು ಕೇಳು. ಅಲ್ಲಿ ವಿಷ್ಣುವು ಮೃಗೇಂದ್ರರೂಪವನ್ನು ಧರಿಸಿ ಹಿರಣ್ಯಕಶ್ಯಪುವನ್ನು ಸಂಹರಿಸಿದನು.
ದೈತ್ಯೇಂದ್ರೋ ಬಲವಾನ್ ರಾಜನ್ ಸುರಾರಿರ್ಬಲಗರ್ವಿತಃ |
ಹಿರಣ್ಯಕಶಿಪುರ್ನಾಮ ಆಸೀತ್ ತ್ರೈಲೋಕ್ಯಕಂಟಕಃ ॥16॥
ಎಲೈ ರಾಜನೇ! ದೇವತೆಗಳಿಗೆ ಶತ್ರುವಾದ ತ್ರಿಲೋಕಕಂಟಕನಾದ ಬಲಿಷ್ಠನಾದ ಮತ್ತು ಬಲಗರ್ವಿತನಾದ ಹಿರಣ್ಯಕಶ್ಯಪು ಎಂಬ ದೈತ್ಯೇಂದ್ರನು ಇದ್ದನು.
ದೈತ್ಯಾನಾಮಾದಿಪುರುಷೋ ವೀರ್ಯೇಣಾಪ್ರತಿಮೋ ಬಲೀ |
ಪ್ರವಿಶ್ಯ ಸ ವನಂ ರಾಜನ್ ಚಕಾರ ತಪ ಉತ್ತಮಮ್ ॥17॥
ಅವನು ದೈತ್ಯರಿಗೆ ಮೂಲಪುರುಷನಾದವನು. ಬಲಪರಾಕ್ರಮದಲ್ಲಿ ಅಸದೃಶನಾದವನು. ರಾಜನೇ! ಅವನು ವನಕ್ಕೆ ಹೋಗಿ ಶ್ರೇಷ್ಠವಾದ ತಪಸ್ಸನ್ನು ಆಚರಿಸಿದನು.
ದಶವರ್ಷಸಹಸ್ರಾಣಿ ಶತಾನಿ ದಶ ಪಂಚ ಚ |
ಜಪೋಪವಾಸೈಸ್ತಸ್ಯಾಸೀತ್ ಸ್ಥಾಣುರ್ಮೌನವ್ರತೋಽಭವತ್ ॥18॥

ಹನ್ನೊಂದು ಸಾವಿರದ ಐನೂರು ವರ್ಷಗಳ ಕಾಲ  ಅವನ ತಪಸ್ಸು ಜಪ ಉಪವಾಸಗಳಿಂದ ಕಳೆಯಿತು. ಅವನು ಮರದಬುಡದಂತೆ ಮೌನವ್ರತವನ್ನು ಧರಿಸಿದ್ದನು.
ತತೋ ದಮಶಮಾಭ್ಯಾಂ ಚ ಬ್ರಹ್ಮಚರ್ಯೇಣ ಚಾನಘ |
ಬ್ರಹ್ಮಾ ಪ್ರೀತಮನಾಸ್ತಸ್ಯ ತಪಸಾ ನಿಯಮೇನ ಚ   ॥19॥
ಆಗ ಎಲೈ ನಿರ್ದೋಷನಾದ ರಾಜನೇ! ಅವನ ಬ್ರಹ್ಮಚರ್ಯದಿಂದಲೂ ಶಮದಮಾದಿಗಳಿಂದಲೂ ತಪಸ್ಸು ಮತ್ತು ನಿಯಮಗಳಿಂದಲೂ ಬ್ರಹ್ಮದೇವರು ಅವನಿಗೆ ಪ್ರಸನ್ನರಾದರು.
ತತಃ ಸ್ವಯಂಭೂರ್ಭಗವಾನ್ ಸ್ವಯಮಾಗಮ್ಯ ಭೂಪತೇ |
ವಿಮಾನೇನಾರ್ಕವರ್ಣೇನ ಹಂಸಯುಕ್ತೇನ ಭಾಸ್ವತಾ   ॥20॥
ಆದಿತ್ಯೈರ್ವಸುಭಿಃ ಸಾಧ್ಯೈರ್ಮರುದ್ಭಿರ್ದೈವತೈಃ ಸಹ |
ರುದ್ರೈರ್ವಿಶ್ವಸಹಾಯೈಶ್ಚ ಯಕ್ಷರಾಕ್ಷಸಕಿನ್ನರೈಃ   ॥21॥
ದಿಶಾಭಿರ್ವಿದಿಶಾಭಿಶ್ಚ ನದೀಭಿಃ ಸಾಗರೈಃ ಸಹ |
ನಕ್ಷತ್ರೈಶ್ಚ ಮೂಹೂರ್ತೈಶ್ಚ ಖೇಚರೈಶ್ಚಾಪರೈರ್ಗ್ರಹೈಃ   ॥22॥
ದೇವರ್ಷಿಭಿಸ್ತಪೋಯುಕ್ತೈಃ ಸಿದ್ಧೈಃ ಸಪ್ತರ್ಷಿಭಿಸ್ತಥಾ |
ರಾಜರ್ಷಿಭಿಃ ಪುಣ್ಯತಮೈರ್ಗಂಧರ್ವೈರಪ್ಸರೋಗಣೈಃ   ॥23॥
ಚರಾಚರಗುರುಃ ಶ್ರೀಮಾನ್ ವೃತಃ ಸರ್ವೈಃ ಸುರೈಸ್ತಥಾ |
ಬ್ರಹ್ಮಾ ಬ್ರಹ್ಮವಿದಾಂ ಶ್ರೇಷ್ಠೋ ದೈತ್ಯಮಾಗಮ್ಯ ಚಾಬ್ರವೀತ್   ॥24॥
ಎಲೈರಾಜನೇ! ಅನಂತರ ಸಾಕ್ಷಾತ್ ದೇವರಿಂದ ಜನಿಸಿದ ಪೂಜ್ಯರಾದ ಬ್ರಹ್ಮದೇವರ ಹಂಸಯುಕ್ತವಾದ ಶುಭ್ರವಾದ ಸೂರ್ಯವರ್ಣವನ್ನು ಹೊಂದಿದ್ದ ವಿಮಾನದಲ್ಲಿ ಆದಿತ್ಯರಿಂದಲೂ ವಸುಗಳಿಂದಲೂ  ಸಾಧ್ಯರಿಂದಲೂ ಮರುತ್‌ಗಳಿಂದಲೂ ರುದ್ರರಿಂದಲೂ ವಿಶ್ವೇದೇವತೆಗಳಿಂದಲೂ ಯಕ್ಷರಾಕ್ಷಸಕಿನ್ನರರಿಂದಲೂ ದಿಗ್‌ದೇವತೆಗಳಿಂದಲೂ ವಿದಿಗ್‌ದೇವತೆಗಳಿಂದಲೂ ನದಿಗಳಿಂದಲೂ ಸಾಗರಗಳಿಂದಲೂ  ನಕ್ಷತ್ರಗಳಿಂದಲೂ ಮೂಹೂರ್ತಗಳಿಂದಲೂ ಖೇಚರರಿಂದಲೂ ಉಳಿದ ಗ್ರಹಗಳಿಂದಲೂ, ತಪೋಯುಕ್ತರಾದ ದೇವರ್ಷಿಗಳಿಂದಲೂ ಪುಣ್ಯತಮ ರಾಜರ್ಷಿಗಳಿಂದಲೂ ಅಪ್ಸರೋಗಣಗಳಿಂದಲೂ ಮತ್ತು ಉಳಿದ ಎಲ್ಲಾ ದೇವತೆಗಳಿಂದಲೂ ಯುಕ್ತರಾಗಿ ಚರಾಚರಗುರುವೂ ಸಂಪತ್ತುದ್ಯುಕ್ತರೂ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೂ ಆದ ಅವರು ಆ ದೈತ್ಯನ ಸಮೀಪಕ್ಕೆ  ಬಂದು ಹೀಗೆ ಮಾತನಾಡಿದರು.
ಪ್ರೀತೋಽಸ್ಮಿ ತವ ಭಕ್ತಸ್ಯ ತಪಸಾಽನೇನ ಸುವ್ರತ |
ವರಂ ವರಯ ಭದ್ರಂ ತೇ ಯಥೇಷ್ಟಂ ಕಾಮಮಾಪ್ನುಹಿ   ॥25॥
ಎಲೈ ಸುವ್ರತನೇ! ಭಕ್ತನಾದ ನಿನ್ನ ತಪಸ್ಸಿಗೆ ನಾನು ಮೆಚ್ಚಿದ್ದೇನೆ. ನಿನಗೆ ಮಂಗಳವಾಗಲಿ ಬೇಕಾದ ವರವನ್ನು ಕೇಳು. ನನ್ನಿಂದ ಬೇಕಾದ ಕಾಮವನ್ನು ಪಡೆ.
ನ ದೇವಾಸುರಗಂಧರ್ವಾ ನ ಯಕ್ಷೋರಗರಾಕ್ಷಸಾಃ |
ನ ಮಾನುಷಾಃ ಪಿಶಾಚಾಶ್ಚ ಹನ್ಯುರ್ಮಾಂ ದೇವಸತ್ತಮ   ॥26॥
ಋಷಯೋ ವಾ ನ ಮಾಂ ಶಾಪೈಃ ಕ್ರುದ್ಧಾ  ಲೋಕಪಿತಾಮಹ |
ಶಪೇಯುಸ್ತಪಸಾ ಯುಕ್ತಾ ವರ ಏಷ ವೃತೋ ಮಯಾ   ॥27॥
ನ ಶಸ್ತ್ರೇಣ ನಚಾಸ್ತ್ರೇಣ ಗಿರಿಣಾ ಪಾದಪೇನ ವಾ |
ನ ಶುಷ್ಕೇಣ ನ ಚಾರ್ದ್ರೇಣ ಸ್ಯಾನ್ನ ವಾಽನ್ಯೇನ ಮೇ ವಧಃ   ॥28॥
ನಾಕಾಶೇ ವಾ ನವಾ ಭೂಮೌ ರಾತ್ರೌ ವಾ ದಿವಸೇಪಿ ವಾ |
ನಾಂತರ್ವಾ ನ ಬಹಿರ್ವಾಪಿ ಸ್ಯಾದ್ ವಧೋ ಮೇ ಪಿತಾಮಹ   ॥29॥
ಪಶುಭಿರ್ವಾ ಮೃಗೈರ್ನ ಸ್ಯಾತ್ ಪಕ್ಷಿಭಿರ್ವಾ ಸರೀಸೃಪೈಃ |
ದದಾಸಿ ಚೇದ್ ವರಾನೇತಾನ್ ದೇವದೇವ ವೃಣೋಮ್ಯಹಮ್   ॥30॥
ಎಲೈ ದೇವಶ್ರೇಷ್ಠನೇ! ದೇವಾಸುರಗಂಧರ್ವರಾಗಲೀ ಯಕ್ಷರಾಕ್ಷಸಸರ್ಪಗಳಾಗಲೀ ಮನುಷ್ಯಪಿಶಾಚಗಳಾಗಲೀ ನನ್ನನ್ನು ಕೊಲ್ಲಬಾರದು. ಲೋಕಪಿತಾಮಹನೇ! ಕ್ರುದ್ಧರಾದ ತಪೋಯುಕ್ತರಾದ ಋಷಿಗಳು ನನಗೆ ಶಾಪವನ್ನು ಕೊಡಬಾರದು. ಇದು ನಾನು ಬೇಡುವ ವ್ರತ. ಅಸ್ತ್ರದಿಂದಲಾಗಲೀ ಶಸ್ತ್ರದಿಂದಲಾಗಲೀ ಪರ್ವತದಿಂದಲಾಗಲೀ ವೃಕ್ಷದಿಂದಲಾಗಲೀ ನನಗೆ ಮರಣವು ಉಂಟಾಗಬಾರದು. ಆಕಾಶದಲ್ಲಿಯಾಗಲೀ ಭೂಮಿಯಲ್ಲಿಯಾಗಲೀ ರಾತ್ರಿಯಲ್ಲಾಗಲೀ ಹಗಲಿನಲ್ಲಾಯಾಗಲೀ ಒಳಗಾಗಲೀ ಹೊರಗಾಗಲೀ ನನಗೆ ಮರಣವು ಉಂಟಾಗಬಾರದು. ಎಲೈ ಪಿತಾಮಹನೇ! ಪಶುಗಳಿಂದಲಾಗಲೀ ಮೃಗಗಳಿಂದಲಾಗಲೀ ಪಕ್ಷಿಗಳಿಂದಲಾಗಲೀ ಸರ್ಪಗಳಿಂದಲಾಗಲೀ ನನಗೆ ಮೃತ್ಯು ಉಂಟಾಗಬಾರದು.  ದೇವದೇವನೆ ನೀನು ನನಗೆ ವರವನ್ನು ಕೊಡುವುದಾದರೆ ನಾನು ಈ ವರಗಳನ್ನು ಬೇಡುತ್ತೇನೆ.
ಬ್ರಹ್ಮಾ
ಏತೇ ದಿವ್ಯಾ ವರಾಸ್ತಾತ ಮಯಾ ದತ್ತಾಸ್ತವಾದ್ಭುತಾಃ |
ಸರ್ವಕಾಮವರಾಂಸ್ತಾತ ಪ್ರಾಪ್ಸ್ಯಸೇ ತ್ವಂ ನ ಸಂಶಯಃ   ॥31॥
ಪ್ರೀತಿಪಾತ್ರನೇ! ಈ ಅದ್ಭುತವಾದ ಮತ್ತು ದಿವ್ಯವಾದ ವರಗಳನ್ನು ನಾನು ನಿನಗೆ ಕೊಟ್ಟಿದ್ದೇನೆ. ನೀನು ಎಲ್ಲಾ ಭೋಗಗಳನ್ನು ಅನುಭವಿಸುವಿ. ಇದರಲ್ಲಿ ಸಂಶಯವಿಲ್ಲ.
ಏವಮುಕತ್ತ್ವ ಸ ಭಗವಾನ್ ಜಗಾಮಾಕಾಶಮೇವ ಹ |

ರರಾಜ ಬ್ರಹ್ಮಲೋಕಸ್ಥೋ ಬ್ರಹ್ಮರ್ಷಿಗಣಸೇವಿತಃ ॥32॥
ಹೀಗೆ ಹೇಳಿ ಆ ಪೂಜ್ಯರಾದ ಬ್ರಹ್ಮದೇವರು ಆಕಾಶಮಾರ್ಗದಿಂದ ಪ್ರಯಾಣಮಾಡಿ ಬ್ರಹ್ಮರ್ಷಿಗಣ ಸೇವಿತರಾಗಿ ಬ್ರಹ್ಮಲೋಕದಲ್ಲಿ ವಿರಾಜಿಸಿದರು.
ತತೋ ದೇವಾಶ್ಚ ನಾಗಾಶ್ಚ ಗಂಧರ್ವಾ ಮುನಯಸ್ತಥಾ |
ವರಪ್ರದಾನಂ ಶ್ರುತ್ವೈವ ತೇ ಬ್ರಹ್ಮಾಣಮುಪಸ್ಥಿತಾಃ ॥33॥
ಅನಂತರ ದೇವತೆಗಳೂ ನಾಗಗಳೂ ಗಂಧರ್ವರೂ ಋಷಿಗಳೂ ಆ ವರಪ್ರದಾನವನ್ನು ಕೇಳಿ ಬ್ರಹ್ಮದೇವರ ಸಮೀಪಕ್ಕೆ ಹೋದರು.
ದೇವಾಃ
ವರೇಣಾನೇನ ಭಗವನ್ ಬಾಧಿಷ್ಯತಿ ಚ ನೋಽಸುರಃ |
ತತ್ ಪ್ರಸೀದಸ್ವ ಭಗವನ್ ವಧೋಽಸ್ಯ ಪ್ರವಿಚಿಂತ್ಯತಾಮ್ ॥34॥
ಪೂಜ್ಯರೇ! ಈ ವರದಿಂದ ಆ ಅಸುರನು ನಮ್ಮೆಲ್ಲರನ್ನೂ ಬಾಧಿಸುತ್ತಾನೆ. ಪೂಜ್ಯರೇ! ನಮ್ಮ ಮೇಲೆ ಪ್ರಸನ್ನರಾಗಿ ಅವನ ವಧೋಪಾಯವನ್ನು ಚಿಂತಿಸಿ.
ಭೀಷ್ಮ
ಭಗವಾನ್ ಸರ್ವಭೂತಾನಾಂ ಸ್ವಯಂಭೂರಾದಿಕೃದ್ ವಿಭುಃ |
ಸ್ರಷ್ಟಾ ಚ ಹವ್ಯಕವ್ಯಾನಾಮವ್ಯಕ್ತಪ್ರಕೃತಿರ್ಧ್ರುವಮ್ ॥35॥
ತತೋ ಲೋಕಹಿತಂ ವಾಕ್ಯಂ ಶ್ರುತ್ವಾ ದೇವಃ ಪ್ರಜಾಪತಿಃ |
ಪ್ರೋವಾಚ ಭಗವಾನ್ ವಾಕ್ಯಂ ಸರ್ವದೇವಗಣಾಂಸ್ತದಾ ॥36॥
ಪೂಜ್ಯನೂ ಎಲ್ಲಾ ಪ್ರಾಣಿಗಳ ಸೃಷ್ಟಿಕರ್ತನೂ ಪರಮಾತ್ಮನಿಂದ ಜನಿಸಿದವನೂ. ಹವ್ಯಕವ್ಯಾದಿಗಳನ್ನು ಸೃಷ್ಟಿಸುವವನೂ ಅವ್ಯಕ್ತದಿಂದ ಜನಿಸಿದವನೂ ಶಾಶ್ವತನೂ ಪ್ರಜಾಪತಿಯೂ ಆದ ಬ್ರಹ್ಮನು ಲೋಕಹಿತಕರವಾದ ಈ ವಾಕ್ಯವನ್ನು ಕೇಳಿ ಎಲ್ಲಾ ದೇವಗಣಗಳನ್ನು ಕುರಿತು ಹೀಗೆ ಮಾತನಾಡಿದನು.
ಅವಶ್ಯಂ ತ್ರಿದಶಾಸ್ತೇನ ಪ್ರಾಪ್ತವ್ಯಂ ತಪಸಃ ಫಮ್ |
ತಪಸೋಽಂತೇಸ್ಯ ಭಗವಾನ್ ವಧಂ ಕೃಷ್ಣಃ ಕರಿಷ್ಯತಿ ॥37॥
ಎಲೈ ದೇವತೆಗಳೇ! ಹಿರಣ್ಯಕಶ್ಯಪುವು ಅವಶ್ಯವಾಗಿ ತನ್ನ ತಪಸ್ಸಿನ ಫಲವನ್ನು ಪಡೆಯಲೇಬೇಕು. ಅವನ ತಪಸ್ಸಿನ ಫಲವು ಮುಗಿದ ಮೇಲೆ ಭಗವಂತನಾದ ಕೃಷ್ಣನು ಅವನನ್ನು ಸಂಹರಿಸುವನು.
ಏತಚ್ಛ್ರುತ್ವಾ ಸುರಾಃ ಸರ್ವೇ ಬ್ರಹ್ಮಣಾ ತಸ್ಯ ವೈ ವಧಮ್ |
ಸ್ವಾನಿ ಸ್ಥಾನಾನಿ ದಿವ್ಯಾನಿ ಜಗ್ಮುಸ್ತೇ ವೈ ಮುದಾನ್ವಿತಾಃ ॥38॥
ಎಲ್ಲ ದೇವತೆಗಳೂ ಬ್ರಹ್ಮದೇವರಿಂದ ಅವನ ವಧೆಯ ವಿಷಯದಲ್ಲಿ ಈ ಮಾತನ್ನು ಕೇಳಿ ಸಂತೋಷಗೊಂಡವರಾಗಿ ತಮ್ಮ ತಮ್ಮ ದಿವ್ಯಸ್ಥಾನಗಳನ್ನು ಕುರಿತು ಪ್ರಯಾಣ ಮಾಡಿದರು.
ಲಬ್ಧಮಾತ್ರೇ ವರೇ ಚಾಪಿ ಸರ್ವಾಃ ಸೋಽಬಾಧತ ಪ್ರಜಾಃ |
ಹಿರಣ್ಯಕಶಿಪುರ್ದೈತ್ಯೋ ವರದಾನೇನ ದರ್ಪಿತಃ ॥39॥
ವರವನ್ನು ಪಡೆದ ಕೂಡಲೇ ವರದಾನದಿಂದ ದರ್ಪವನ್ನು ಹೊಂದಿದ ದೈತ್ಯನಾದ ಹಿರಣ್ಯಕಶ್ಯಪುವು. ಎಲ್ಲಾ ಪ್ರಜೆಗಳನ್ನೂ ಬಾಧಿಸಿದನು.
ರಾಜ್ಯಂ ಚಕಾರ ದೈತ್ಯೇಂದ್ರೋ ದೈತ್ಯಸಂಘೈಃ ಸಮಾವೃತಃ |
ಸಪ್ತ ದ್ವೀಪಾನ್ ವಶೇ ಚಕ್ರೇ ಲೋಕಾನ್ ಲೋಕಾಂತರಾನ್ ಬಲಾತ್ ॥40॥
ದಿವ್ಯಭೋಗಾನ್ ಸಮಸ್ತಾನ್ ವೈ ಲೋಕೇ ಸರ್ವಾನವಾಪ ಸಃ |
ದೇವಾಸ್ತ್ರಿಭುವನಸ್ಥಾಂಸ್ತು ಪರಾಜಿತ್ಯ ಮಹಾಸುರಃ ॥41॥
ದೈತ್ಯೇಂದ್ರನಾದ ಅವನು ದೈತ್ಯಸಮೂಹಗಳಿಂದ ಯುಕ್ತನಾಗಿ ರಾಜ್ಯವನ್ನು ನಡೆಸಿದನು. ಏಳು ದ್ವೀಪಗಳನ್ನು ಲೋಕಗಳನ್ನು ಮತ್ತು ಲೋಕಾಂತರಗಳನ್ನು ತನ್ನ ಬಲದಿಂದ ವಶಪಡಿಸಿಕೊಂಡನು. ಮಹಾಸುರನಾದ ಅವನು ಮೂರು ಲೋಕಗಳಲ್ಲಿದ್ದ ದೇವತೆಗಳನ್ನು ಪರಾಭವಗೊಳಿಸಿ ದಿವ್ಯವಾದ ಎಲ್ಲಾ ಭೋಗಗಳನ್ನು ಪಡೆದನು.
ತ್ರೈಲೋಕ್ಯಂ ವಶಮಾನೀಯ ಸ್ವರ್ಗೇ ವಸತಿ ದಾನವಃ |
ಯದಾ ವರಮದೋನ್ಮತ್ತೋ ನ್ಯವಸದ್ ದಾನವೋ ದಿವಿ ॥42॥
ಮೂರು ಲೋಕಗಳನ್ನು ವಶಪಡಿಸಿಕೊಂಡು ಆ ದಾನವನು ಸ್ವರ್ಗಲೋಕದಲ್ಲಿ ವಾಸಮಾಡಿದನು. ಹೀಗೆ ವರದಿಂದ ಮದೋನ್ಮತ್ತನಾದ ಕಾರಣ ಆ ದಾನವನು ಸ್ವರ್ಗಲೋಕದಲ್ಲಿ (ಇಂದ್ರನ ಅರಮನೆಯಲ್ಲಿ)ವಾಸಮಾಡಿದನು.
ಅಥ ಲೋಕಾನ್ ಸಮಸ್ತಾಂಶ್ಚ ವಿಜಿತ್ಯ ಸ ಮಹಾಬಲಃ |
ಭವೇಯಮಹಮೇವೇಂದ್ರಃ ಸೋಮೋಗ್ನಿರ್ಮಾರುತೋ ರವಿಃ ॥43॥
ಸಲಿಲಂ ಚಾಂತರಿಕ್ಷಂ ಚ ನಕ್ಷತ್ರಾಣಿ ದಿಶೋ ದಶ |
ಅಹಂ ಕ್ರೋಧಶ್ಚ ಕಾಮಶ್ಚ ವರುಣೋ ವಸವೋ ಯಮಃ ॥44॥
ಧನದಶ್ಚ ಧನಾಧ್ಯಕ್ಷೋ ಯಕ್ಷಃ ಕಿಂಪುರುಷಾಧಿಪಃ |
ಏತೇ ಭವೇಯಮಿತ್ಯುಕ್ತ್ವಾ ಸ್ವಯಂ ಭೂತ್ವಾ ಬಲಾನ್ವಿತಃ |
ತೇಷಾಂ ಗೃಹೀತ್ವಾ ಸ್ಥಾನಾನಿ ತೇಷಾಂ ಕಾರ್ಯಾಣ್ಯವಾಪ ಸಃ ॥45॥
ಅನಂತರ ಮಹಾಬಲನಾದ ಅವನು ಎಲ್ಲಾ ಲೋಕಗಳನ್ನೂ ಗೆದ್ದು ನಾನೇ ಇಂದ್ರನಾಗುತ್ತೇನೆ. ಚಂದ್ರನಾಗುತ್ತೇನೆ. ಅಗ್ನಿ ಮಾರುತ

ರವಿ ಜಲ ಅಂತರಿಕ್ಷ ನಕ್ಷತ್ರ ದಿಕ್ಕುಗಳು ಎಲ್ಲವೂ ಆಗುತ್ತೇನೆ. ಕ್ರೋಧ ಕಾಮ ವರುಣ ವಸುಗಳು ಯಮ ಧನಾಧ್ಯಕ್ಷನಾದ ಕುಬೇರ ಕಿಂಪುರುಷಾಧಿಪತಿಯಾದ ಯಕ್ಷ ಎಲ್ಲವೂ ನಾನೇ ಆಗುತ್ತೇನೆ ಎಂದು ತನ್ನ ತಪೋಬಲದಿಂದ ಎಲ್ಲಾ ಪದವಿಯನ್ನೂ ಆಕ್ರಮಿಸಿ, ಆ ದೇವತೆಗಳ ಸ್ಥಾನವನ್ನು ಕಸಿದುಕೊಂಡು ಅವರೆಲ್ಲರ ಕಾರ್ಯಸಾಮರ್ಥ್ಯವನ್ನು ತಾನೇ ಹೊಂದಿದನು.
ಏವಮಾದೀನಿ ಕರ್ಮಾಣಿ ಕೃತ್ವಾ ದೈತ್ಯಪತಿರ್ಬಲೀ |
ಆಶ್ರಮೇಷು ಮಹಾಭಾಗಾನ್ ಮುನೀನ್ ವೈ ಸಂಶಿತವ್ರತಾನ್ ॥46॥
ಸತ್ಯಧರ್ಮಪರಾನ್ ದಾಂತಾನ್ ಪುರಾ ಧರ್ಷಿತವಾನ್ ಸ್ಮ ಸಃ |
ಯಜ್ಞೀಯಾನ್ ಕೃತವಾನ್ ದೈತ್ಯಾನ್ ನಯಜ್ಞೀಯಾಶ್ಚ ದೇವತಾಃ ॥47॥
ಬಲಿಷ್ಠನಾದ ದೈತ್ಯಾಧಿಪತಿಯಾದ ಅವನು ಇಂತಹ ಕರ್ಮಗಳನ್ನೆಲ್ಲಾ ಮಾಡಿ ತಪೋವನದಲ್ಲಿ ಇದ್ದ ವ್ರತಧಾರಿಗಳಾದ ಸತ್ಯಧರ್ಮಪರಾಯಣರಾದ ಶ್ರಮದಮಾದಿಸಂಪನ್ನರಾದ ಮಹಾನುಭಾವರನ್ನು ಅವಮಾನಗೊಳಿಸಿದನು. ದೈತ್ಯರನ್ನು ಯಜ್ಞಭಾಗಾರ್ಹರನ್ನಾಗಿ ಮಾಡಿ ದೇವತೆಗಳನ್ನು ಯಜ್ಞಭಾಗದಿಂದ ಚ್ಯುತಿಗೊಳಿಸಿದನು.
ಯತ್ರ ಯತ್ರ ಸುರಾ ಜಗ್ಮುಃ ತತ್ರ ತತ್ರ ವ್ರಜತ್ಯುತ |
ಸ್ಥಾನಾನಿ ದೇವತಾನಾಂ ತು ಹೃತ್ವಾ ರಾಜ್ಯಮಪಾಲಯತ್ ॥48॥
ದೇವತೆಗಳು ಎಲೆಲ್ಲಿ ಹೋಗುತ್ತಾರೆಯೋ ಅಲ್ಲೆಲ್ಲಾ ಅವರನ್ನು ಹಿಂಬಾಲಿಸಿ ಅವರ ಸ್ಥಾನಗಳನ್ನು ಕಿತ್ತುಕೊಂಡು ರಾಜ್ಯವನ್ನು ಆಳಿದನು.
ಪಂಚಕೋಟ್ಯಶ್ಚ ವರ್ಷಾಣಿ ನಿಯುತಾನ್ಯೇಕಷಷ್ಟಿ ಚ |
ಷಷ್ಟಿಶ್ಚೈವ ಸಹಸ್ರಾಣಾಂ ಜಗ್ಮುಸ್ತಸ್ಯ ದುರಾತ್ಮನಃ |
ಏತದ್ವರ್ಷಂ ಸ ದೈತ್ಯೇಂದ್ರೋ ಭೋಗೈಶ್ವರ್ಯಮವಾಪ ಹ ॥49॥
ಆ ದೈತ್ಯೇಂದ್ರನು ಐದುಕೋಟಿ ಅರವತ್ತೊಂದುಲಕ್ಷ ಅರವತ್ತುಸಾವಿರ ವರ್ಷಗಳ ಕಾಲದವರೆಗೆ ಹೀಗೆ ದುರಾತ್ಮನಾಗಿ ಎಲ್ಲಾ ಭೋಗೈಶ್ವರ್ಯವನ್ನೂ ಹೊಂದಿದನು.
ತೇನಾತಿಬಾಧ್ಯಮಾನಾಸ್ತೇ ದೈತ್ಯೇಂದ್ರೇಣ ಬಲೀಯಸಾ |
ಬ್ರಹ್ಮಲೋಕಂ ಸುರಾ ಜಗ್ಮುಃ ಸರ್ವೇ ಶಕ್ರಪುರೋಗಮಾಃ |
ಪಿತಾಮಹಂ ಸಮಾಸಾದ್ಯ ಖಿನ್ನಾಃ ಪ್ರಾಂಜಲಯೋಽಬ್ರುವನ್ ॥50॥
ಹೀಗೆ ಪ್ರಭುಲನಾದ ಆ ದೈತ್ಯೇಂದ್ರನಿಂದ ಬಹಳ ಪೀಡೆಗೆ ಒಳಗಾದ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವರನ್ನು ಸಮೀಪಿಸಿ ಕೈಗಳನ್ನು ಮುಗಿದು ಖೇದದಿಂದ ಈ ಮಾತುಗಳನ್ನು ಆಡಿದರು.
ಭಗವನ್ ಭೂತಭವ್ಯೇಶ ತ್ರಾಯಸ್ವ ನ ಇಹಾಗತಾನ್ |
ಭಯಂ ದಿತಿಸುತಾದ್ ಘೋರಂ ಭವತ್ಯದ್ಯ ದಿವಾನಿಶಮ್ ॥51॥
ಪೂಜ್ಯನಾದ ಭೂತ ಭವ್ಯ ಪ್ರಭುವಾದ ಬ್ರಹ್ಮನೇ ಇಲ್ಲಿಗೆ ಬಂದಿರುವ ನಮ್ಮನ್ನು ರಕ್ಷಿಸು. ನಮಗೆ ದಿತಿಯಮಗನಾದ ಹಿರಣ್ಯಪಶ್ಯಿಪುವಿನಿಂದ ಹಗಲೂ ರಾತ್ರಿಯೂ ಘೋರವಾದ ಭಯವುಂಟಾಗಿದೆ.
ಭಗವನ್ ಸರ್ವಭೂತಾನಾಂ ಸ್ವಯಂಭೂರಾದಿಕೃದ್ ವಿಭುಃ |
ಸ್ರಷ್ಟಾ ತ್ವಂ ಹವ್ಯಕವ್ಯಾನಾಮವ್ಯಕ್ತಃ ಪ್ರಕೃತಿರ್ಧ್ರುವಃ ॥52॥
ಪೂಜ್ಯನೇ! ನೀನು ಪರಮಾತ್ಮನಿಂದ ಜನಿಸಿದವನು. ಸೃಷ್ಟಿಯನ್ನು ಮಾಡುವವನು. ಸಾಮರ್ಥ್ಯವಿಶೇಷವನ್ನು ಹೊಂದಿರುವವನು. ಹವ್ಯಕವ್ಯಗಳನ್ನು ಸೃಷ್ಟಿಮಾಡುವವನು. ನೀನು ಅವ್ಯಕ್ತನಾದವನು. ಮೂಲಕಾರಣನಾದವನು. ಮತ್ತು ಶಾಶ್ವತನಾದವನು.
ಬ್ರಹ್ಮಾ
ಶ್ರೂಯತಾಂ ಪರಮಂ ದೈವಂ ದುರ್ವಿಜ್ಞೇಯಂ ಮಯಾಪಿ ಚ |
ನಾರಾಯಣಸ್ತು ಪುರುಷೋ ವಿಶ್ವರೂಪೋ ಮಹಾದ್ಯುತಿಃ ॥53॥
ಎಲ್ಲರೂ ನನ್ನ ಮಾತನ್ನು ಕೇಳಿ. ವಿಶ್ವರೂಪನಾದ ಮಹಾದ್ಯುತಿಯನ್ನು ಹೊಂದಿದ ಮಹಾಪುರುಷನಾದ ದೇವನಾದ ನಾರಾಯಣನು ನನಗೂ ತಿಳಿಯಲು ಅಸಾಧ್ಯನಾದವನು.
ಅವ್ಯಕ್ತಃ ಸರ್ವಭೂತಾನಾಮಚಿಂತ್ಯೋ ವಿಭುರವ್ಯಯಃ |
ಮಮಾಪಿ ಸ ತು ಯುಷ್ಮಾಕಂ ವ್ಯಸನೇ ಪರಮಾ ಗತಿಃ ॥54॥
ಅವನು ಎಲ್ಲಾ ಜೀವರಿಗೂ ಅವ್ಯಕ್ತವಾದ ಸ್ವಭಾವವುಳ್ಳವನು. ಅಚಿಂತ್ಯನಾದವನು. ವ್ಯಾಪ್ತನಾದವನು. ನಾಶರಹಿತನಾದವನು, ನಿಮಗೆ ಹೇಗೋ, ಹಾಗೆಯೇ ಎಲ್ಲಾ ರೀತಿಯವ್ಯಸನಗಳಲ್ಲಿ ನನಗೂ ಸಹ ಅವನೇ ಪರಮಗತಿಯಾದವನು.
ನಾರಾಯಣಃ ಪರೋಽವ್ಯಕ್ತಾದ್ ಅಹಮವ್ಯಕ್ತಸಂಭವಃ |
ಮತ್ತೋ ಜಜ್ಞುಃ ಪ್ರಜಾ ಲೋಕಾಃ ಸರ್ವೇ ದೇವಾಸುರಾಶ್ಚ ತೇ ॥55॥
ನಾರಾಯಣನು ಪ್ರಕೃತಿಗಿಂತ ಉತ್ತಮನಾದವನು. ನಾನು ಪ್ರಕೃತಿಯಿಂದ ಜನಿಸಿದವನು. ನನ್ನಿಂದ ಎಲ್ಲಾ ಪ್ರಜೆಗಳೂ ಲೋಕಗಳೂ ದೇವತೆಗಳೂ ಮತ್ತು ಆ ಅಸುರರೂ ಜನಿಸಿದ್ದಾರೆ.
ದೇವಾ ಯಥಾಹಂ ಯುಷ್ಮಾಕಂ ತಥಾ ನಾರಾಯಣೋ ಮಮ |
ಪಿತಾಮಹೋಽಹಂ ಸರ್ವಸ್ಯ ಸ ವಿಷ್ಣುಃ ಪ್ರಪಿತಾಮಹಃ ॥56॥
ದೇವತೆಗಳೇ! ನಾನು ನಿಮಗೆ ಹೇಗೋ ನನಗೆ ನಾರಾಯಣನು ಹಾಗೆ ಇದ್ದಾನೆ. ನಾನು ಎಲ್ಲ ಜಗತ್ತಿಗೆ ಪಿತಾಮಹ. ಆ ನಾರಾಯಣನು ಪ್ರಪಿತಾಮಹ.
ನಿಶ್ಚಯಂ ವಿಬುಧಾ ದೈತ್ಯಂ ವಿಷ್ಣುಸ್ತಂ ಸಂಹರಿಷ್ಯತಿ |

ತಸ್ಯ ನಾಸ್ತಿ ನಶಕ್ಯಂ ಚ ತಸ್ಮಾದ್ ವ್ರಜತ ಮಾಚಿರಮ್ ॥57॥
ಎಲೈ ವಿಬುಧರೇ! ನಿಶ್ಚಯವಾಗಿ ವಿಷ್ಣುವು ಆ ದೈತ್ಯನನ್ನು ಸಂಹರಿಸುವನು. ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಆದ್ದರಿಂದ ಶೀಘ್ರವಾಗಿ ನಿಮ್ಮ ಸ್ಥಾನಗಳಿಗೆ ಹಿಂದಿರುಗಿ.
ಭೀಷ್ಮಃ
ಪಿತಾಮಹವಚಃ ಶ್ರುತ್ವಾ ಸರ್ವೇ ತೇ ಭರತರ್ಷಭ |
ವಿಬುಧಾ ಬ್ರಹ್ಮಣಾ ಸಾರ್ಧಂ ಜಗ್ಮುಃ ಕ್ಷೀರೋದಧಿಂ ಪ್ರತಿ ॥58॥
ಆದಿತ್ಯಾ ಮರುತಃ ಸಾಧ್ಯಾ ವಿಶ್ವೇ ಚ ವಸವಸ್ತದಾ |
ರುದ್ರಾ ಮಹರ್ಷಯಶ್ಚೈವ ಅಶ್ವಿನೌ ಚ ಸುರೂಪಿಣೌ ॥59॥
ಅನ್ಯೇ ಚ ದಿವ್ಯಾ ಯೇ ರಾಜನ್ ತೇ ಸರ್ವೇ ಸಗಣಾಃ ಸುರಾಃ |
ಚತುರ್ಮುಖಂ ಪುರಸ್ಕೃತ್ಯ ಶ್ವೇತದ್ವೀಪಮುಪಾಗತಾಃ ॥60॥
ಭರತರ್ಷಭನೇ! ಬ್ರಹ್ಮದೇವರಮಾತನ್ನು ಕೇಳಿ ಆ ಎಲ್ಲಾದೇವತೆಗಳು ಬ್ರಹ್ಮದೇವರ ಜೊತೆಯಲ್ಲಿ ಕ್ಷೀರಸಮುದ್ರಕ್ಕೆ ಹೋದರು. ಆದಿತ್ಯರು ಮರುತ್ಗಳು ಸಾಧ್ಯರು ವಿಶ್ವೇದೇವತೆಗಳು ವಸುಗಳು ರುದ್ರರು ರೂಪವಂತರಾದ ಅಶ್ವಿನಿದೇವತೆಗಳು ಮಹರ್ಷಿಗಳು ಉಳಿದ ಎಲ್ಲ ತಮ್ಮ ತಮ್ಮ ಗಣಗಳಿಂದ ಕೂಡಿದ ದಿವ್ಯಚೇತನರು ಚತುರ್ಮುಖನನ್ನು ಮುಂದೆಮಾಡಿಕೊಂಡು ಶ್ವೇತದ್ವೀಪವನ್ನು ತಲುಪಿದರು.
ಗತ್ವಾ ಕ್ಷೀರಸಮುದ್ರೇ ತಂ ಶಾಶ್ವತಂ ಪರಮಾಂ ಗತಿಮ್ |
ಅನಂತಶಯನಂ ದೇವಮನಂತಾದಿತ್ಯತೇಜಸಮ್ |
ಶರಣ್ಯಂ ತ್ರಿದಶಾ ವಿಷ್ಣುಮುಪತಸ್ಥುಃ ಸನಾತನಮ್ ॥61॥
ಅವರೆಲ್ಲರೂ ಕ್ಷೀರಸಮುದ್ರಕ್ಕೆ ಹೋಗಿ ಅಲ್ಲಿ ಶೇಷನ ಮೇಲೆ ಪವಡಿಸಿರುವ ಅನಂತರ ಸೂರ್ಯತೇಜಸ್ಸುಳ್ಳ ಶಾಶ್ವತನಾದ ಪರಮಾಶ್ರಯನಾದ ಶರಣ್ಯನಾದ ದೇವನಾದ ವೇದಪ್ರತಿಪಾದ್ಯನಾದ ವಿಷ್ಣುವನ್ನು ಎಲ್ಲಾ ದೇವತೆಗಳು ಸ್ತೋತ್ರಮಾಡಿದರು.
ದೇವಂ ಬ್ರಹ್ಮಮಯಂ ಯಜ್ಞಂ ಬ್ರಹ್ಮೇಂದ್ರೇಶಂ ಮಹಾಬಲಮ್ |
ಭೂತಂ ಭವ್ಯಂ ಭವಿಷ್ಯಂ ಚ ಪ್ರಭುಂ ಲೋಕನಮಸ್ಕೃತಮ್ |
ನಾರಾಯಣಂ ವಿಭುಂ ದೇವಂ ಶರಣ್ಯಂ ಶರಣಂ ಗತಾಃ ॥62॥
ವೇದಪ್ರತಿಪಾದ್ಯನಾದ ಯಜ್ಞನೆಂದು ಕರೆಸಿಕೊಳ್ಳಲ್ಪಡುವ, ಬ್ರಹ್ಮೇಂದ್ರಾದಿಗಳಿಗೆ ಒಡೆಯನಾದ, ಮಹಾಬಲವನ್ನು ಹೊಂದಿದ, ಭೂತ ಭವ್ಯ ಭವಿಷತ್ಕಾಲಗಳಲ್ಲಿ ಇರುವ, ಲೋಕಸಮಸ್ಕೃತನಾದ ಪ್ರಭುವಾದ ವಿಭುವಾದ ನಾರಾಯಣನಿಗೆ ಎಲ್ಲಾ ದೇವತೆಗಳೂ ಶರಣಾದರು.
ದೇವಾಃ
ತ್ರಾಯಸ್ವ ನೋಽದ್ಯ ದೇವೇಶ ಹಿರಣ್ಯಕಶಿಪೋರ್ವಧಾತ್ |
ತ್ವಂ ಹಿ ನಃ ಪರಮೋ ಧಾತಾ ಬ್ರಹ್ಮಾದೀನಾಂ ಸುರೋತ್ತಮ ॥63॥
ದೇವೇಶನೇ! ಹಿರಣ್ಯಕಶ್ಯಪುವಿನ ಸಂಹಾರವನ್ನು ಮಾಡಿ, ಈ ದಿನ ನಮ್ಮೆಲ್ಲರನ್ನೂ ರಕ್ಷಿಸು. ಸುರೋತ್ತಮನೇ! ನೀನೇ ಬ್ರಹ್ಮಾದಿಗಳಾದ ನಮ್ಮೆಲ್ಲರನ್ನೂ ನಮ್ಮ ನಮ್ಮ ಸ್ಥಾನದಲ್ಲಿ ಇಟ್ಟು ಪೊಷಿಸುವವನು.
ಪ್ರೋತ್ಫುಲ್ಲಾಂಬುಜಪತ್ರಾಕ್ಷ ಶತ್ರುಪಕ್ಷಭಯಂಕರ |
ಕ್ಷಯಾಯ ದಿತಿವಂಶಸ್ಯ ಶರಣ್ಯಸ್ತ್ವಂ ಭವಿಷ್ಯಸಿ ॥64॥
ಅರಳಿದ ಕಮಲದದಳದಂತೆ ಕಣ್ಣುಳ್ಳವನೇ! ಶತ್ರುಪಕ್ಷ ಭಯಂಕರನೇ! ದಿತಿವಂಶದ ನಾಶವನ್ನು ಉದ್ದೇಶಿಸಿ ಬಂದಿರುವ ನಮಗೆ ನೀನು ಶರಣ್ಯನಾಗಬೇಕು.
ಭೀಷ್ಮಃ
ತದ್ ದೇವಾನಾಂ ವಚಃ ಶ್ರುತ್ವಾ ತದಾ ವಿಷ್ಣುಃ ಶುಚಿಶ್ರವಾಃ |
ಅದೃಶ್ಯಃ ಸರ್ವಭೂತಾನಾಂ ವಕ್ತುಮೇವೋಪಚಕ್ರಮೇ ॥65॥
ದೇವತೆಗಳ ಆ ವಚನಗಳನ್ನು ಕೇಳಿ ಶುಚಿಶ್ರವನಾದ ಆ ವಿಷ್ಣುವು ಆಗ ಅದೃಶ್ಯನಾಗಿಯೇ ಮಾತನಾಡಲು ಉಪಕ್ರಮಿಸಿದನು.
ಭಯಂ ತ್ಯಜಧ್ವಮಮರಾ ಅಭಯಂ ವೋ ದದಾಮ್ಯಹಮ್ |
ತಥೈವ ತ್ರಿದಿವಂ ದೇವಾಃ ಪ್ರತಿಪದ್ಯತ ಮಾಚಿರಮ್ ॥66॥
ಏಷೋಹಂ ಸಗಣಂ ದೈತ್ಯಂ ವರದಾನೇನ ದರ್ಪಿತಮ್ |
ಅವಧ್ಯಮಮರೇಂದ್ರಾಣಾಂ ದಾನವೇಂದ್ರಂ ನಿಹನ್ಮ್ಯಹಮ್ ॥67॥
ದೇವತೆಗಳೇ ಭಯವನ್ನು ತ್ಯಜಿಸಿ. ನಾನು ಅಭಯವನ್ನು ನೀಡುತ್ತಿದ್ದೇನೆ. ನೀವು ಹಾಗೆಯೇ ಶೀಘ್ರವಾಗಿ ಸ್ವರ್ಗಲೋಕಕ್ಕೆ ಹಿಂದಿರುಗಿ. ನಾನು ವರದಾನದಿಂದ ದರ್ಪಿಷ್ಠನಾಗಿರುವ ದೇವತೆಗಳಿಂದ ಅವಧ್ಯನಾದ ದೈತ್ಯೇಂದ್ರನಾದ ಆ ಹಿರಣ್ಯಕಶ್ಯಪುವನ್ನು ಅವನ ಪರಿವಾರದ ಜೊತೆಯಲ್ಲಿ ಸಂಹರಿಸುತ್ತೇನೆ.
ಬ್ರಹ್ಮಾ
ಭಗವನ್ ಭೂತಭವ್ಯೇಶ ಖಿನ್ನಾ ಹ್ಯೇತೇ ಭೃಶಂ ಸುರಾಃ |
ತಸ್ಮಾತ್ತ್ವಂ ಜಹಿ ದೈತ್ಯೇಂದ್ರಂ ಕ್ಷಿಪ್ರಂ ಕಾಲೋಸ್ಯ ಮಾಚಿರಮ್ ॥68॥
ಭೂತಭವ್ಯೇಶನಾದ ಭಗವಂತನೇ! ಈ ದೇವತೆಗಳೆಲ್ಲರೂ ಬಹಳ ಖಿನ್ನರಾಗಿದ್ದಾರೆ. ಆದ್ದರಿಂದ ತಡಮಾಡದೆ ನೀನು ಆ ದೈತ್ಯೇಂದ್ರನನ್ನು ಬೇಗ ಸಂಹರಿಸು.

ಶ್ರೀವಿಷ್ಣುಃ
ಕ್ಷಿಪ್ರಮೇವ ಕರಿಷ್ಯಾಮಿ ತ್ವರಯಾ ದೈತ್ಯನಾಶನಮ್ |
ತಸ್ಮಾತ್ ತ್ವಂ ವಿಬುಧಾಶ್ಚೈವ ಪ್ರತಿಪದ್ಯತ ವೈ ದಿವಮ್ ॥69॥
ನಾನು ಆ ದೈತ್ಯನ ನಾಶವನ್ನು ಶೀಘ್ರವಾಗಿಯೇ ಮಾಡುವೆನು. ಆದ್ದರಿಂದ ನೀನೂ ಎಲ್ಲಾ ದೇವತೆಗಳೂ ನಿಮ್ಮ ನಿಮ್ಮ ಲೋಕಗಳಿಗೆ ಹಿಂದಿರುಗಿ.
ಭೀಷ್ಮಃ
ಏವಮುಕತ್ವ ಸ ಭಗವಾನ್ ವಿಸೃಜ್ಯ ತ್ರಿದಿವೇಶ್ವರಾನ್ |
ನರಸ್ಯಾರ್ಧತನುಂ ಕೃತ್ವಾ ಸಿಂಹಸ್ಯಾರ್ಧತನುಂ ತಥಾ ॥70॥
ನಾರಸಿಂಹೇನ ವಪುಷಾ ಪಾಣಿಂ ನಿಷ್ಪಿಷ್ಯ ಪಾಣಿನಾ |
ಭೀಮರೂಪೋ ಮಹಾತೇಜೋ ವ್ಯಾದಿತಾಸ್ಯ ಇವಾಂತಕಃ |
ಹಿರಣ್ಯಕಶಿಪುಂ ರಾಜನ್ ಜಗಾಮ ಹರಿರೀಶ್ವರಃ ॥71॥
ಎಲೈ ರಾಜನೇ! ಆ ಭಗವಂತನು ಹೀಗೆ ಹೇಳಿ ದೇವತೆಗಳನ್ನು ಕಳುಹಿಸಿಕೊಟ್ಟು ಸಿಂಹದಂತಿರುವ ಅರ್ದಶರೀರವನ್ನೂ ಮನುಷ್ಯನಂತಿರುವ ಅರ್ಧಶರೀರವನ್ನೂ ಸ್ವೀಕರಿಸಿ ನರಸಿಂಹರೂಪವನ್ನು ಧರಿಸಿ ಕೈಯಿಂದ ಕೈಯನ್ನು ಉಜ್ಜುತ್ತಾ ಭಯಂಕರರೂಪ ಉಳ್ಳವನೂ ಮಹಾತೇಜಸ್ಸುಳ್ಳವನೂ, ಯಮನಂತೆ ಬಾಯಿಯನ್ನು ತೆರೆದವನೂ ಆಗಿ ಈಶ್ವರನಾದ ಹರಿಯು ಹಿರಣ್ಯಕಶ್ಯಿಪುವಿನ ಸಮೀಪಕ್ಕೆ ಬಂದನು.
ದೈತ್ಯಾಃ ಸಮಾಗತಂ ದೃಷ್ಟ್ವಾ ನಾರಸಿಂಹಂ ಮಹಾಬಲಮ್ |
ವವರ್ಷುಃ ಶಸ್ತ್ರವರ್ಷಾಂಶ್ಚ ಸುಸಂಕ್ರುದ್ಧಾಸ್ತದಾ ಹರಿಮ್ ॥72॥
ಸಮಾಗತನಾದ ಮಹಾಬಲನಾದ ನರಸಿಂಹನನ್ನು ನೋಡಿ ದೈತ್ಯರು ಬಹಳ ಕೋಪವುಳ್ಳವರಾಗಿ ಅವನ ಮೇಲೆ ಶಸ್ತ್ರಗಳ ಮಳೆಯನ್ನು ಕರೆದರು.
ತೈಃ ಸೃಷ್ಟಾನ್ ಸರ್ವಶಸತ್ರಣಿ ಭಕ್ಷಯಾಮಾಸ ವೈ ಹರಿಃ |
ಜಘಾನ ಚ ರಣೇ ದೈತ್ಯಾನ್ ಸಹಸ್ರಾಣಿ ಬಹೂನ್ಯಪಿ ॥73॥
ಹರಿಯು ಅವರು ಪ್ರಯೋಗಿಸದ ಬಾಣಗಳನ್ನು ಮತ್ತು ಶಸ್ತ್ರಗಳನ್ನು ನುಂಗಿಬಿಟ್ಟನು. ಯುದ್ಧದಲ್ಲಿ ಅನೇಕ ಸಹಸ್ರದೈತ್ಯರನ್ನು ಸಂಹರಿಸಿದನು.
ತಾನ್ ನಿಹತ್ಯೈವ ದೈತೇಯಾನ್ ಸರ್ವಾನ್ ಕ್ರುದ್ಧಾನ್ ಮಹಾಬಲಾನ್ |
ಅಭ್ಯಧಾವತ್ ಸುಸಂಕ್ರುದ್ಧೋ ದೈತ್ಯೇಂದ್ರಂ ಬಲಗರ್ವಿತಮ್ ॥74॥
ಆ ಮಹಾಬಲಿಷ್ಠರಾದ ಕ್ರುದ್ಧರಾದ ಎಲ್ಲಾ ದೈತ್ಯರನ್ನೂ ಸಂಹರಿಸಿ ತಾನೂ ಹೆಚ್ಚು ಕೋಪವುಳ್ಳವನಾಗಿ ಬಲಗರ್ವಿತನಾದ ದೈತ್ಯೇಂದ್ರನಾದ ಹಿರಣ್ಯಕಶ್ಯಿಪುನ ಕಡೆಗೆ ಧಾವಿಸಿದನು.
ಜೀಮೂತಘನಸಂಕಾಶೋ ಜೀಮೂತಘನನಿಸ್ವನಃ |
ಜೀಮೂತ ಇವ ದೀಪ್ತಾಕ್ಷೋ ಜೀಮೂತ ಇವ ವೇಗವಾನ್ |
ದೇವಾರಿರ್ದಿತಿಜೋ ದುಷ್ಟೋ ನೃಸಿಂಹಂ ಸಮುಪಾದ್ರವತ್ ॥75॥
ಘನವಾದ ಮೇಘದ ಕಾಂತಿಯನ್ನು ಹೊಂದಿದ್ದಂತಹ ಮೇಘಗಂಭೀರನಾದವುಳ್ಳ ಮೇಘದಂತೆ ದೀಪ್ತವಾದಂತಹ ಕಣ್ಣುಳ್ಳ, ಮೇಘದಂತೆ ವರ್ಣವುಳ್ಳ ದೇವಶತ್ರುವಾದ ದುಷ್ಟನಾದ ದಿತಿಪುತ್ರನಾದ ಹಿರಣ್ಯಕಶ್ಯಿಪುವು ನರಸಿಂಹನ ಕಡೆಗೆ ಧಾವಿಸಿದನು.
ದೈತ್ಯಂ ಸೋತಿಬಲಂ ದೃಪ್ತಂ ಸಮಶಾರ್ದೂಲವಿಕ್ರಮಃ |
ದೃಪ್ತೈರ್ದೈತ್ಯಗಣೈರ್ಗುಪ್ತಂ ಖರೈರ್ನಖಮುಖೈರುತ ॥76॥
ಶಾರ್ದೂಲವಿಕ್ರಮವುಳ್ಳ ನರಸಿಂಹನು ಅತಿಬಲಿಷ್ಠನಾದ ದರ್ಪದಿಂದ ಕೂಡಿದ ದೈತ್ಯರಿಂದ ರಕ್ಷಿತನಾದ ದೈತ್ಯರಿಂದಲೂ ನಖಾದಿ ಅನೇಕ ಆಯುಧಗಳಿಂದಲೂ ರಕ್ಷಿತನಾದ ದರ್ಪದಿಂದಕೂಡಿದ ದೈತ್ಯನಕಡೆಗೆ ಧಾವಿಸಿದನು.
ತತಃ ಕೃತ್ವಾ ತು ಯುದ್ಧಂ ವೈ ತೇನ ದೈತ್ಯೇನ ವೈ ಹರಿಃ |
ಸಂಧ್ಯಾಕಾಲೇ ಮಹಾತೇಜಾ ಭವನಾಂತೇ ತ್ವರಾನ್ವಿತಃ ॥77॥
ಊರೌ ನಿಧಾಯ ದೈತ್ಯೇಂದ್ರಂ ನಿರ್ಬಿಭೇದ ನಖೈಸ್ತದಾ |
ಮಹಾಬಲಂ ಮಹಾವೀರ್ಯಂ ವರದಾನೇನ ದರ್ಪಿತಮ್ |
ದೈತ್ಯಶ್ರೇಷ್ಠಂ ಸುರಶ್ರೇಷ್ಠೋ ಜಘಾನ ತರಸಾ ಹರಿಃ ॥78॥
ಅನಂತರ ಆ ಹರಿಯು ಆ ದೈತ್ಯನ ಜೊತೆಯಲ್ಲಿ ಯುದ್ಧವನ್ನು ಮಾಡಿ ಸಾಯಂಕಾಲವಾಗುತ್ತಿರಲು ಮಹಾತೇಜಸ್ವಿಯಾದ ಅವನು ತ್ವರೆಯಿಂದ ಕೂಡಿದವನಾಗಿ ಮನೆಯಕೊನೆಭಾಗದಲ್ಲಿ (ಹೊಸ್ತಿಲಿನ ಮೇಲೆ) ಕುಳಿತು ತನ್ನ ತೊಡೆಯಮೇಲೆ ದೈತ್ಯೇಂದ್ರನನ್ನು ಹಾಕಿಕೊಂಡು ತನ್ನ ಉಗುರುಗಳಿಂದ ಅವನನ್ನು ಸೀಳಿಹಾಕಿದನು. ಸುರಶ್ರೇಷ್ಠನಾದ ಹರಿಯು ವರದಾನದಿಂದ ದರ್ಪಿತನಾದ ಮಹಾಬಲವೀರ್ಯಗಳುಳ್ಳ ದೈತ್ಯಶ್ರೇಷ್ಠನನ್ನು ಸಂಹರಿಸಿದನು.
ಹಿರಣ್ಯಕಶಿಪುಂ ಹತ್ವಾ ಸರ್ವದೈತ್ಯಾಂಶ್ಚ ವೈ ತದಾ |
ವಿಬುಧಾನಾಂ ಪ್ರಜಾನಾಂ ಚ ಹಿತಂ ಕೃತ್ವಾ ಮಹಾದ್ಯುತಿಃ |
ಪ್ರಮುಮೋದ ಹರಿರ್ದೇವಃ ಸ್ಥಾಪ್ಯ ಧರ್ಮಂ ತದಾ ಭುವಿ ॥79॥
ಹರಿಯು ಆಗ ಹಿರಣ್ಯಕಶ್ಯಪುವನ್ನು ಸಂಹರಿಸಿ ಉಳಿದ ಎಲ್ಲಾ ದೈತ್ಯರನ್ನೂ ಸಂಹರಿಸಿ ದೇವತೆಗಳಿಗೂ ಮತ್ತು ಉಳಿದ ಪ್ರಜೆಗಳಿಗೂ ಹಿತವನ್ನು ಮಾಡಿ ಮಹಾದ್ಯುತಿಯುಳ್ಳ ದೇವನಾದ ಅವನು ಭೂಮಿಯಲ್ಲಿ ಧರ್ಮವನ್ನು ಸ್ಥಾಪಿಸಿ ಆನಂದಿಸಿದನು.

ಏಷ ತೇ ನಾರಸಿಂಹೋತ್ರ ಕಥಿತಃ ಪಾಂಡುನಂದನ |
ಶೃಣು ತ್ವಂ ವಾಮನಂ ನಾಮ ಪ್ರಾದುರ್ಭಾವಂ ಮಹಾತ್ಮನಃ ॥80॥
ಪಾಂಡುನಂದನನೇ! ಇದು ನಾನು ನಿನಗೆ ಹೇಳಿದ ನರಸಿಂಹದೇವರ ಕಥೆ. ಮಹಾತ್ಮನಾದ ಅವನ ವಾಮನ ಅವತಾರವನ್ನು ಹೇಳುತ್ತೇನೆ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂಂ ಸಭಾಪರ್ವಣಿ ಅಷ್ಟತ್ರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಸಪ್ತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು.
*****
ಮೂವತ್ತೊಂಭತ್ತನೆಯ ಅಧ್ಯಾಯ
(ವಾಮನಾವತಾರ ಕಥನ)
ಭೀಷ್ಮಃ
ಪುರಾ ತ್ರೇತಾಯುಗೇ ರಾಜನ್ ಬಲಿರ್ವೈರೋಚನೋಽಭವತ್ |
ದೈತ್ಯಾನಾಂ ಪಾರ್ಥಿವೋ ವೀರೋ ಬಲೇನಾಪ್ರತಿಮೋ ಬಲೀ ॥1॥
ರಾಜನೇ! ಹಿಂದೆ ತ್ರೇತಾಯುಗದಲ್ಲಿ ವಿರೋಚನನ ಮಗನಾದ ಬಲಿಯು ಬಲದಲ್ಲಿ ಅಪ್ರತಿಮನಾಗಿ ದೈತ್ಯರಿಗೆ ಅಧಿಪತಿಯಾಗಿ ಭೂಮಿಯಲ್ಲಿ ಇದ್ದನು.
ತದಾ ಬಲಿರ್ಮಹಾರಾಜ ದೈತ್ಯಸ್ಸಂಘೈಃ ಸಮಾವೃತಃ |
ವಿಜಿತ್ಯ ತರಸಾ ಶಕ್ರಮಿಂದ್ರಸ್ಥಾನಮವಾಪ ಸಃ ॥2॥
ಎಲೈ ಮಹಾರಾಜನೇ! ಆಗ ದೈತ್ಯಸಮೂಹದಿಂದ ಆವೃತನಾದ ಬಲಿಯು ತನ್ನ ಸಾಮರ್ಥ್ಯದಿಂದ ಇಂದ್ರನನ್ನು ಸೋಲಿಸಿ ಇಂದ್ರನಸ್ಥಾನವನ್ನು ಆಕ್ರಮಿಸಿದನು.
ತೇನ ವಿತ್ರಾಸಿತಾ ದೇವಾ ಬಲಿನಾಽಽಖಂಡಲಾದಯಃ |
ಬ್ರಹ್ಮಾಣಂ ವೈ ಪುರಸ್ಕೃತ್ಯ ಗತ್ವಾ ಕ್ಷೀರೋದಧಿಂ ತದಾ ॥3॥
ಆ ಬಲಿಗೆ ಹೆದರಿದ ಇಂದ್ರಾದಿದೇವತೆಗಳು ಬ್ರಹ್ಮದೇವರನ್ನು ಮುಂದೆಮಾಡಿಕೊಂಡು ಕ್ಷೀರಸಮುದ್ರಕ್ಕೆ ಹೋದರು.
ತುಷ್ಟುವುಃ ಸಹಿತಾಃ ಸರ್ವೇ ದೇವಂ ನಾರಾಯಣಂ ಪ್ರಭುಮ್ |
ಸ ತೇಷಾಂ ದರ್ಶನಂ ಚಕ್ರೇ ವಿಬುಧಾನಾಂ ಹರಿಃ ಸ್ತುತಃ ॥4॥
ಅವರೆಲ್ಲರೂ ಒಟ್ಟುಗೂಡಿ ಪ್ರಭುವಾದ ದೇವನಾದ ನಾರಾಯಣನನ್ನು ಸ್ತೋತ್ರಮಾಡಿದರು. ಸ್ತೋತ್ರಮಾಡಲ್ಪಟ್ಟ ಹರಿಯು ಆ ದೇವತೆಗಳಿಗೆ ತನ್ನ ದರ್ಶನವನ್ನು ನೀಡಿದನು.
ಪ್ರಸಾದಜಂ ಹ್ಯಸ್ಯ ವಿಭೋರದಿತ್ಯಾಂ ಜನ್ಮ ಉಚ್ಯತೇ |
ಅದಿತೇರಪಿ ಪುತ್ರತ್ವಮೇತ್ಯ ಯಾದವನಂದನಃ |
ಏಷ ವಿಷ್ಣುರಿತಿ ಖ್ಯಾತ ಇಂದ್ರಾದವರಜೋಭವತ್ ॥5॥
ದೇವತೆಗಳ ಮೇಲಿನ ಅವನ ಅನುಗ್ರಹದ ಕಾರ್ಯವೇ ಅದಿತಿಯಲ್ಲಿ ಅವನ ಅವತಾರ ಎಂದು ಹೇಳಲಾಗುತ್ತದೆ. ಈ ಯಾದವನಂದನನಾದ ಕೃಷ್ಣನು ವಿಷ್ಣು ಎಂಬ ನಾಮದಿಂದ ಪ್ರಸಿದ್ಧನಾಗಿ ಅದಿತಿಯ ಪುತ್ರನಾಗಿ ಜನಿಸಿ ಇಂದ್ರನ ತಮ್ಮನಾದನು.
ತಸ್ಮಿನ್ನೇವ ಚ ಕಾಲೇ ತು ದೈತ್ಯೇಂದ್ರೋ ವೀರ್ಯವಾನ್ ಬಲಿಃ |
ಅಶ್ವಮೇಧಂ ಕ್ರತುಶ್ರೇಷ್ಠಮಾಹರ್ತುಮುಪಚಕ್ರಮೇ ॥6॥
ಅದೇ ಕಾಲದಲ್ಲಿಯೇ ದೈತ್ಯೇಂದ್ರನೂ ಪರಾಕ್ರಮಶಾಲಿಯೂ ಆದ ಬಲಿಯು ಶ್ರೇಷ್ಠವಾದ ಅಶ್ವಮೇಧಯಾಗವನ್ನು ಮಾಡಲು ಉಪಕ್ರಮಿಸಿದನು.
ವರ್ತಮಾನೇ ತದಾ ಯಜ್ಞೇ ದೈತ್ಯೇಂದ್ರಸ್ಯ ಯುಧಿಷ್ಠಿರ |
ಸ ವಿಷ್ಣುರ್ವಾಮನೋ ಭೂತ್ವಾ ಪ್ರಚ್ಛನ್ನೋ ಬ್ರಹ್ಮವೇಷಧೃಕ್ ॥7॥
ಮುಂಡೋ ಯಜ್ಞೋಪವೀತೀ ಚ ಕೃಷ್ಣಾಜಿನಧರಃ ಶಿಖೀ |
ಪಾಲಾಶದಂಡಂ ಸಂಗೃಹ್ಯ ವಾಮನೋಽದ್ಭುತದರ್ಶನಃ ॥8॥
ಪ್ರವಿಶ್ಯ ಸ ಬಲೇರ್ಯಜ್ಞೇ ವರ್ತಮಾನೇ ತು ದಕ್ಷಿಣಾಮ್ |
ದೇಹೀತ್ಯುವಾಚ ದೈತ್ಯೇಂದ್ರಂ ವಿಕ್ರಮಾಂಸ್ತ್ರೀಣಿ ವೈ ಮಮ ॥9॥
ಯುಧಿಷ್ಠಿರನೇ! ದೈತ್ಯೇಂದ್ರನಾದ ಬಲಿಯ ಯಜ್ಞವು ನಡೆಯುತ್ತಿರುವಾಗ ವಿಷ್ಣುವು ಬ್ರಾಹ್ಮಣವೇಶದಿಂದ ಪ್ರಚ್ಛನ್ನನಾಗಿ ವಾಮನನಾಗಿ ಯಜ್ಞೋಪವೀತವನ್ನು ಧರಿಸಿ ಶಿಖೆಯನ್ನು ಧರಿಸಿದವನಾಗಿ ಕೈಯಲ್ಲಿ ಕುಲಾಶದಂಡವನ್ನು ಹಿಡಿದು ಅದ್ಭುತಸೌಂದರ್ಯವನ್ನು ಧರಿಸಿದವನಾಗಿ ಬಲಿಯ ಯಜ್ಞವು ನಡೆಯುತ್ತಿರುವ ಯಜ್ಞಶಾಲೆಯನ್ನು ಪ್ರವೇಶಿಸಿ ದಕ್ಷಿಣಾರೂಪವಾಗಿ ಈ ನನ್ನ ಹೆಜ್ಜೆಯಿಂದ ಅಳೆದ ಮೂರು ಹೆಜ್ಜೆ ಭೂಮಿಯನ್ನು ನನಗೆ ಕೊಡು ಎಂದು ಕೇಳಿದನು.
ದೀಯತಾಂ ತ್ರಿಪದೀಮಾತ್ರಮಿತ್ಯಯಾಚನ್ಮಹಾಸುರಮ್ |
ಸ ತಥೇತಿ ಪ್ರತಿಶ್ರುತ್ಯ ಪ್ರದದೌ ವಿಷ್ಣವೇ ತದಾ ॥10॥
ನನಗೆ ಮೂರು ಹೆಜ್ಜೆ ಭೂಮಿಯನ್ನು ಮಾತ್ರ ಕೊಡು ಎಂದು ವಾಮನನು ಆ ಮಹಾಸುರನನ್ನು ಕೇಳಿದನು. ಬಲಿಯು ಕೊಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿ ವಿಷ್ಣುವಿಗೆ ಕೊಟ್ಟನು.
ತತೋ ಲಬ್ಧ್ವಾ ಹರಿರ್ಭೂಮಿಂ ಜೃಂಭಯಾಮಾಸ ವೈ ಭೃಶಮ್|

ಸ ಶಿಶುಃ ಸದಿವಂ ಖಂ ಚ ಪೃಥಿವೀಂ ಚ ವಿಶಾಂಪತೇ ॥11॥
ಹರಿಯು ಬಲಿಯಿಂದ ಭೂಮಿದಾನದ ವಾಗ್ದಾನವನ್ನು ಪಡೆದು ತನ್ನ ದೇಹವನ್ನು ಜೃಂಭಿಸಿದನು. (ದೊಡ್ಡಪರಿಮಾಣವುಳ್ಳದ್ದಾಗಿ ಮಾಡಿದನು.) ಎಲೈ ರಾಜನೇ! ಶಿಶುವಾದ  ಅವನು ಪರರನ್ನು ಪರಾಭವಗೊಳಿಸುವವನು ಆದ ಅವನು ಭೂಮಿಯನ್ನೂ ಸ್ವರ್ಗಲೋಕಸಹಿತವಾದ ಆಕಾಶವನ್ನೂ ಈ ಎಲ್ಲವನ್ನೂ ಮೂರು ಹೆಜ್ಜೆಗಳಿಂದ ಆಕ್ರಮಿಸಿದನು.
ತ್ರಿಭಿರ್ವಿಕ್ರಮಣೈರೇತತ್ ಸರ್ವಮಾಕ್ರಮತಾಭಿಭೂಃ |
ಬಲೇರ್ಬಲವತೋ ಯಜ್ಞೇ ಬಲಿನಾ ವಿಷ್ಣುನಾ ಪುರಾ |
ವಿಕ್ರಮೈಸ್ತ್ರಿಭಿರಕ್ಷೋಭ್ಯಾಃ ಕ್ಷೋಭಿತಾಸ್ತೇ ಮಹಾಸುರಾಃ ॥12॥
ಬಲಿಷ್ಠನಾದ ಬಲಿಯ ಯಜ್ಞದಲ್ಲಿ ಹಿಂದೆ ಬಲಿಷ್ಠನಾದ ವಿಷ್ಣುನಿಂದ ಮೂರು ಹೆಜ್ಜೆ ಭೂಮಿಯದಾನದ ನೆಪದಿಂದ ಅಕ್ಷೋಭ್ಯರಾದ ಆ ಮಹಾಸುರರೆಲ್ಲರೂ ಕ್ಷೋಭೆಗೊಂಡರು.
ವಿಪ್ರಚಿತ್ತಿಮುಖಾಃ ಕ್ರುದ್ಧಾಃ ಸರ್ವಸಂಘಾ ಮಹಾಸುರಾಃ |
ನಾನಾವಕತ್ರ ಮಹಾಕಾಯಾ ನಾನಾವೇಷಧರಾ ನೃಪ ॥13॥
ನಾನಾಪ್ರಹರಣಾ ರೌದ್ರಾ ನಾನಾಮಾಲ್ಯಾನುಲೇಪನಾಃ |
ಸ್ವಾನ್ಯಾಯುಧಾನಿ ಸಂಗೃಹ್ಯ ಪ್ರದೀಪ್ತಾ ಇವ ತೇಜಸಾ |
ಕ್ರಮಮಾಣಂ ಹರಿಂ ತತ್ರ ಉಪಾವರ್ತಂತ ಭಾರತ ॥14॥
ಎಲೈ ಭಾರತನೇ! ಅನೇಕಮುಖಗಳನ್ನು ಹೊಂದಿದ್ದ ಮಹಾಶರೀರಗಳನ್ನು ಹೊಂದಿದ್ದ ನಾನಾವೇಷಗಳನ್ನು ಧರಿಸಿದ್ದ ನಾನಾಮಾಲ್ಯಗಳನ್ನೂ ಅನುಲೇಪಗಳನ್ನೂ ಧರಿಸಿದ್ದ ವಿಪ್ರಚಿತ್ತಿ ಮೊದಲಾದ  ಎಲ್ಲಾ ಮಹಾಸುರರ ಸಂಘಗಳೂ ಕೋಪಗೊಂಡು ನಾನಾ ಆಯುಧಗಳನ್ನು ಧರಿಸಿದವರಾಗಿ ತಮ್ಮ ತಮ್ಮ ಆಯುಧಗಳನ್ನು ಹಿಡಿದವರಾಗಿ ತೇಜಸ್ಸಿನಿಂದ ಬೆಳಗುತ್ತಾ ಮೂರು ಹೆಜ್ಜೆ ಭೂಮಿಯನ್ನು ಅಳೆಯುತ್ತಿರುವ ಹರಿಯನ್ನು ಸಮೀಪಿಸಿದರು.
ಪ್ರಮಥ್ಯ ಸರ್ವಾನ್ ದೈತೇಯಾನ್ ಪಾದಹಸ್ತತಳೈಸ್ತು ತಾನ್ |
ರೂಪಂ ಕೃತ್ವಾ ಮಹಾಭೀಮಂ ಜಹಾರಾಶು ಸ ಮೇದಿನೀಮ್ ॥15॥
ವಾಮನನಾದರೋ ಮಹಾಭಯಂಕರವಾದ ದೊಡ್ಡರೂಪವನ್ನು ತೆಗೆದುಕೊಂಡು ತನ್ನ ಪಾದದಿಂದಲೂ ಹಸ್ತತಳದಿಂದಲೂ ಆ ದೈತ್ಯರೆಲ್ಲರನ್ನೂ ಪರಾಭವಗೊಳಿಸಿ ಶೀಘ್ರವಾಗಿ ಭೂಮಿಯನ್ನು ಅಪಹರಿಸಿದನು.
ಸಂಪ್ರಾಪ್ಯ ದಿವಮಾಕಾಶಮಾದಿತ್ಯಸದನೇ ಸ್ಥಿತಃ |
ಅತ್ಯರೋಚತ ಭೂತಾತ್ಮಾ ಭಾಸ್ಕರಂ ಸ್ವೇನ ತೇಜಸಾ ॥16॥
ಬೃಹತ್ಶರೀರವನ್ನುತೆಗೆದುಕೊಂಡ ಅವನು ಆಕಾಶದಲ್ಲಿ ಸ್ವರ್ಗಲೋಕದವರೆಗೂ ವೃದ್ಧಿಯನ್ನು ಹೊಂದಿ ಸೂರ್ಯನ ಸದನದಲ್ಲಿ ಇರುವವನಾಗಿ ಭೂತಾತ್ಮನಾದ ಅವನು ತನ್ನ  ತೇಜಸ್ಸಿನಿಂದ ಸೂರ್ಯನನ್ನು ಮೀರಿಸಿದನು.
ಪ್ರಕಾಶಯನ್ ದಿಶಃ ಸರ್ವಾಃ ಪ್ರದಿಶಶ್ಚ ಮಹಾಯಶಾಃ |
ಶುಶುಭೇ ಸ ಮಹಾಬಾಹುಃ ಸರ್ವಲೋಕಾನ್ ಪ್ರಕಾಶಯನ್ ॥17॥
ಮಹಾಬಾಹುವು ಮಹಾ ಕೀರ್ತಿವಂತನಾದ ಅವನು ತನ್ನ ತೇಜಸ್ಸಿನಿಂದ ಎಲ್ಲಾ ದಿಕ್ಕುಗಳನ್ನು ಮತ್ತು ಎಲ್ಲಾ ಲೋಕಗಳನ್ನು ಬೆಳಗುತ್ತಾ ಶೋಭಿಸಿದನು.
ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯೌ ಸ್ತನಾಂತರೌ |
ನಭಃ ಪ್ರಕ್ರಮಮಾಣಸ್ಯ ನಾಭ್ಯಾಂ ಕಿಲ ತದಾ ಸ್ಥಿತೌ ॥18॥
ಹೀಗೆ ಭೂಮಿಯನ್ನು ಅಳೆಯುತ್ತಿರುವ ತ್ರಿವಿಕ್ರಮನಾದ ವಾಮನನಿಗೆ  ಚಂದ್ರಸೂರ್ಯರು ಸ್ತನಗಳ ಮಧ್ಯದಲ್ಲಿ ಕಾಣಿಸುತ್ತಿದ್ದರು. ಕ್ರಮಿಸುವ ಅವನ ನಾಭಿಯಲ್ಲಿ ಆಗ ಅಂತರಿಕ್ಷಲೋಕವು ಕಾಣುತ್ತಿತ್ತು.
ಸುವರಾಕ್ರಮಮಾಣಸ್ಯ ಜಾನುಭ್ಯಾಂ ತೌ ವ್ಯವಸ್ಥಿತೌ |
ವಿಷ್ಣೋರಮಿತವೀರ್ಯಸ್ಯ ವದಂತ್ಯೇವಂ ದ್ವಿಜಾತಯಃ ॥19॥
ಹೀಗೆ ಆಕ್ರಮಿಸುತ್ತಿದ್ದ ಅವನ ಜಾನುಗಳಲ್ಲಿ ಸುವರ್ಲೋಕವು ಆಶ್ರಿತವಾಗಿದ್ದಿತು. ಬ್ರಾಹ್ಮಣರು ಅಮಿತ ವೀರ್ಯನಾದ ವಿಷ್ಣುವಿನ ಇಂತಹ ಪರಾಕ್ರಮವನ್ನು ಹೀಗೆ  ಹೇಳುತ್ತಾರೆ.
ಅಥಾಸಾದ್ಯ ಕಪಾಲಂ ಸ ಅಂಡಸ್ಯ ತು ಯುಧಿಷ್ಠಿರ |
ತಚ್ಛಿದ್ರಾತ್ ಸ್ಯಂದಿನೀ ತಸ್ಯ ಪಾದಾದ್ ಭ್ರಷ್ಟಾ ತು ನಿಮ್ನಗಾ |
ಸಸಾರ ಸಾಗರಂ ಸಾऽऽಶು ಪಾವನೀ ಸಾಗರಂಗಮಾ ॥20॥
ಯುಧಿಷ್ಠಿರನೇ! ಅನಂತರ ಅವನು ಬ್ರಹ್ಮಾಂಡದ ಕಪಾಲದವರೆಗೂ ತಲುಪಿ ಅಲ್ಲಿ ತನ್ನ ಅಂಗುಷ್ಠನಖದಿಂದ ಉಂಟಾದ ಛಿದ್ರದಿಂದ ಗಂಗೆಯನ್ನು ಹರಿಸಿದನು. ಅವಳು ಪವಿತ್ರಳಾಗಿ ಬೇಗ ಹರಿದು ಸಾಗರವನ್ನು ಸೇರಿದಳು.
ಜಹಾರ ಮೇದಿನೀಂ ಸರ್ವಾನ್ ಹತ್ವಾ ದಾನವಪುಂಗವಾನ್ |
ಆಸುರೀಂ ಶ್ರಿಯಮಾಹೃತ್ಯ ತ್ರೀನ್ ಲೋಕಾನ್ ಸ ಜನಾರ್ದನಃ |
ಸಪುತ್ರದಾರಾನಸುರಾನ್ ಪಾತಾಳೇ ಸಂನ್ಯಪಾತಯನ್ ॥21॥
ಎಲ್ಲಾ ದಾನವಪುಂಗವರನ್ನೂ ಸಂಹರಿಸಿ ಭೂಮಿಯನ್ನೂ ಅವರ ಆಸುರೀಸಂಪತ್ತನ್ನೂ ಮತ್ತು ಮೂರು ಲೋಕಗಳನ್ನೂ ಅವರಿಂದ ಅಪಹರಿಸಿ ಜನಾರ್ದನನು ಪತ್ನಿ ಪುತ್ರಸಹಿತರಾದ ಆ ಅಸುರರನ್ನು ಪಾತಾಳಲೋಕದಲ್ಲಿ ಕೆಡವಿದನು.
ನಮುಚಿಃ ಶಂಬರಶ್ಚೈವ ಪ್ರಹ್ಲಾದಶ್ಚ ಮಹಾಮನಾಃ |
ಪಾದವಾತಾಭಿನಿರ್ಧೂತಾಃ ಪಾತಾಳೇ ವಿನಿಪಾತಿತಾಃ ॥22॥

ನಮುಚಿ ಶಂಬರ ಧೈರ್ಯಶಾಲಿಯಾದ ಪ್ರಹ್ಲಾದ ಇವರು ವಾಮನನ (ತ್ರಿವಿಕ್ರಮನ)ಪಾದಾವಾಯುವಿನ ವೇಗದಿಂದ ಪಾತಾಳಲೋಕದಲ್ಲಿ ಬೀಳಿಸಲ್ಪಟ್ಟರು.
ಮಹಾಭೂತಾನಿ ಭೂತಾತ್ಮಾ ಸವಿಶೇಷಾಣಿ ವೈ ಹರಿಃ |
ಕಾಲಂ ಚ ಸಕಲಂ ರಾಜನ್ ಗಾತ್ರಭೂತಾನ್ಯದರ್ಶಯತ್ ॥23॥
ಸರ್ವಭೂತಾತ್ಮನಾದ ಹರಿಯು ಶಬ್ದಾದಿವಿಶೇಷಗುಣಯುಕ್ತವಾದ ಪಂಚಮಹಾಭೂತಗಳನ್ನೂ ಸಕಲವಾದ ಕಾಲವನ್ನೂ ತನ್ನ ದೇಹದಲ್ಲಿ ತೋರಿಸಿದನು.
ತಸ್ಯ ಗಾತ್ರೇ ಜಗತ್ ಸರ್ವಮಾನೀತಮಿವ ದೃಶ್ಯತೇ |
ನ ಕಿಂಚಿದಸ್ತಿ ಲೋಕೇಷು ಯದನಾತ್ತಂ ಮಹಾತ್ಮನಾ ॥24॥
ಅವನ ಶರೀರದಲ್ಲಿ ಜಗತ್ತೆಲ್ಲವೂ ತಂದು ಸ್ಥಾಪಿಸಲ್ಪಟ್ಟಂತೆ ತೋರುತಿತ್ತು. ಆ ಮಹಾತ್ಮನ ದೇಹದಲ್ಲಿ ವಸ್ತುವು ಇಲ್ಲದಿರುವ ಜಗತ್ತಿನಲ್ಲಿ ಯಾವುದೂ ಇರಲಿಲ್ಲ.
ತದ್ಧಿ ರೂಪಮುಪೇಂದ್ರಸ್ಯ ದೇವದಾನವಮಾನವಾಃ |
ದೃಷ್ಟ್ವಾ ಸಂಮುಮುಹುಃ ಸರ್ವೇ ವಿಷ್ಣುತೇಜೋಽಭಿಪೀಡಿತಾಃ ॥25॥
ಬಲಿರ್ಬದ್ಧೋಽಭಿಮಾನೀ ಚ ಯಜ್ಞವಾಟೇ ಮಹಾತ್ಮನಾ |
ವೈರೋಚನಕುಲಂ ಸರ್ವಂ ಪಾತಾಳೇ ವಿನಿವೇಶಿತಮ್ ॥26॥
ಉಪೇಂದ್ರನ ಆ ರೂಪವನ್ನು ನೋಡಿ ವಿಷ್ಣುತೇಜಸ್ಸಿನಿಂದ ಪರಾಭೂತರಾಗಿ ದೇವದಾನವಮಾನವರೆಲ್ಲರೂ ಮೋಹಕ್ಕೆ ಒಳಗಾದರು. ಯಜಮಾನನಾದ ಬಲಿಯು ಯಜ್ಞಶಾಲೆಯಲ್ಲಿ ಮಹಾತ್ಮನಾದ ಹರಿಯಿಂದ ಬಂಧಿಸಲ್ಪಟ್ಟನು. ವೈರೋಚನನ ಕುಲವೆಲ್ಲವೂ ಪಾತಾಳಲೋಕದಲ್ಲಿ ಸ್ಥಾಪಿಸಲ್ಪಟ್ಟಿತು.
ಏವಂವಿಧಾನಿ ಕರ್ಮಾಣಿ ಕೃತ್ವಾ ಗರುಡವಾಹನಃ |
ನ ವಿಸ್ಮಯಮುಪಾಗಚ್ಛತ್ ಪಾರಮೇಷ್ಠ್ಯೇನ ತೇಜಸಾ ॥27॥
ಗರುಡವಾಹನನಾದ ಹರಿಯು ಇಂತಹ ಅದ್ಭುತಕರ್ಮಗಳನ್ನು ಮಾಡಿದರೂ ತನ್ನ ಐಶ್ವರ್ಯದಿಂದಲಾಗಲೀ ಪರಾಕ್ರಮದಿಂದಲಾಗಲೀ ವಿಸ್ಮಯವನ್ನು ಹೊಂದಲಿಲ್ಲ. (ಅಹಂಕಾರವನ್ನು ಹೊಂದಲಿಲ್ಲ)
ಸ ಸರ್ವಮಮರೈಶ್ವರ್ಯಂ ಸಂಪ್ರದಾಯ ಶಚೀಪತೇಃ |
ತ್ರೈಲೋಕ್ಯಂ ಚ ದದೌ ಶಕ್ರೇ ವಿಷ್ಣುರ್ದಾನವಸೂದನಃ ॥28॥
ದಾನವಶತ್ರುವಾದ ವಿಷ್ಣುವು ಬಲಿಯು ಅಪಹರಿಸಿದ್ದ ದೇವತೆಗಳ ಐಶ್ವರ್ಯವೆಲ್ಲವನ್ನೂ ಮತ್ತು ತ್ರಿಲೋಕಾಧಿ ಪತ್ಯವನ್ನೂ ಪುನಃ ಶಚೀಪತಿಯಾದ ಶಕ್ರನಿಗೆ ಕೊಟ್ಟನು.
ಏಷ ತೇ ವಾಮನೋ ನಾಮ ಪ್ರಾದುರ್ಭಾವೋ ಮಹಾತ್ಮನಃ |
ವೇದವಿದ್ಭಿರ್ದ್ವಿಜೈರೇತತ್ ಕಥ್ಯತೇ ವೈಷ್ಣವಂ ಯಶಃ |
ಮಾನುಷೇಷು ಯಥಾ ವಿಷ್ಣುಃ ಪ್ರಾದುರ್ಭೂತಸ್ತಥಾ ಶೃಣು ॥29॥
ಇದು ಆ ಮಹಾತ್ಮನ ವಾಮನಾವತಾರದ ಕಥೆ. ವೇದಜ್ಞರಾದ ಬ್ರಾಹ್ಮಣರು ಈ ವೈಷ್ಣವ ಮಹಿಮೆಯನ್ನು ಕೊಂಡಾಡುತ್ತಾರೆ. ಮನುಷ್ಯಲೋಕದಲ್ಲಿ ವಿಷ್ಣುವು ಅವತಾರಮಾಡಿದ ರೀತಿಯ ಕಥೆಯನ್ನು ಹೇಳುತ್ತೇನೆ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಅಷ್ಟಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****

ನಲವತ್ತನೆಯ ಅಧ್ಯಾಯ
(ದತ್ತಾತ್ರೇಯ ಅವತಾರ ಕಥನ.)
ಭೀಷ್ಮಃ
ವಿಷ್ಣೋಃ ಪುನರ್ಮಹಾರಾಜ ಪ್ರಾದುರ್ಭಾವೋ ಮಹಾತ್ಮನಃ |
ದತ್ತಾತ್ರೇಯ ಇತಿ ಖ್ಯಾತ ಋಷಿರಾಸೀನ್ಮಹಾಯಶಾಃ ॥1॥
ಮಹಾರಾಜನೇ! ವಿಷ್ಣುವಿನ ಇನ್ನೊಂದು ಪ್ರಾದುರ್ಭಾವ ದತ್ತಾತ್ರೇಯನೆಂಬುದು. ಹೀಗೆ ಅವನು ಮಹಾಕೀರ್ತಿವಂತನಾದ ಋಷಿಯಾಗಿ ಪ್ರಖ್ಯಾತನಾಗಿದ್ದಾನೆ.
ತೇನ ನಷ್ಟೇಷು ವೇದೇಷು ಕ್ರಿಯಾಸು ಚ ಮಖೇಷು ಚ |
ಚಾತುರ್ವರ್ಣ್ಯೇ ಚ ಸಂಕೀರ್ಣೇ ಧರ್ಮೇ ಶಿಥಿಲತಾಂ ಗತೇ ॥2॥
ಅಭಿವರ್ತತಿ ಚಾಧರ್ಮೇ ಸತ್ಯೇ ನಷ್ಟೇ ಸ್ಥಿತೇಽನೃತೇ |
ಪ್ರಜಾಸು ಕ್ಷೀಯಮಾಣಾಸು ಧರ್ಮೇ ಚಾಕುಲತಾಂ ಗತೇ ॥3॥
ಸಯಜ್ಞಾಃ ಸಕ್ರಿಯಾ ವೇದಾಃ ಪ್ರತ್ಯಾನೀತಾ ಹಿ ತೇನ ವೈ |
ಚಾತುರ್ವರ್ಣ್ಯಮಸಂಕೀರ್ಣಂ ಕೃತಂ ತೇನ ಮಹಾತ್ಮನಾ ॥4॥
ಲೋಕದಲ್ಲಿ ವೇದಗಳು ನಷ್ಟವಾಗಿ ಸತ್ಕರ್ಮಗಳೂ ಯಜ್ಞಗಳೂ ನಷ್ಟವಾಗಿ ಚಾತುರ್ವರ್ಣ್ಯವ್ಯವಸ್ಥೆಯು ಕಲುಷಿತಗೊಂಡು ಧರ್ಮವು ಶೈಥಿಲ್ಯವನ್ನು ಹೊಂದುತ್ತಿರಲು ಅಧರ್ಮವು ಅಭಿವೃದ್ಧಿಯನ್ನು ಹೊಂದುತ್ತಿರಲು ಸತ್ಯವು ನಷ್ಟವಾಗಿರಲು ಅನ್ಯತವು

ಬೇರೂರಿರಲು ಪ್ರಜೆಗಳು ನಾಶವನ್ನು ಹೊಂದುತ್ತಿರಲು ಧರ್ಮವು ವ್ಯಾಕುಲವಾಗಲು ದತ್ತಾತ್ರೇಯನು ಯಜ್ಞಗಳನ್ನೂ ಸತ್ಕರ್ಮಗಳನ್ನೂ  ವೇದಗಳನ್ನೂ ಚಾತುರ್ವರ್ಣ್ಯ- ವ್ಯವಸ್ಥೆಗಳನ್ನು ಮರಳಿತಂದು ಆ ಮಹಾತ್ಮನಾದವನು ಧರ್ಮವು ಅಸಂಕೀರ್ಣವಾಗಿರುವಂತೆ ಮಾಡಿದನು.

ಸ ಏಷ ವೈ ಯದಾ ಪ್ರಾದಾದ್ ಹೈಹಯಾಧಿಪತೇರ್ವರಮ್ |
ತಂ ಹೈಹಯಾನಾಮಧಿಪಸ್ತ್ವರ್ಜುನೋಽಭಿಪ್ರಸಾದಯತ್ ॥5॥

ಅಂತಹ ಇವನು ಹೈಹಯಾಧಿಪತಿಯಾದ ಅರ್ಜುನನಿಗೆ ವರನನ್ನು ಕೊಟ್ಟಾಗ ಆ ಅಧಿಪತಿಯಾದ ಅರ್ಜುನನು ಅವನನ್ನು ಪ್ರಸನ್ನೀಕರಿಸಿಕೊಂಡನು.

ವನೇ ಪರ್ಯಚರತ್ ಸಮ್ಯಕ್ ಶಿಶ್ರೂಷುರನಸೂಯಕಃ |
ನಿರ್ಮಮೋ ನಿರಹಂಕಾರೋ ದೀರ್ಘಕಾಲಮತೋಷಯತ್ ॥6॥

ತಪೋವನದಲ್ಲಿ ಅಸೂಯೆಯನ್ನು ತೊರೆದು ಮಮತೆ ಮತ್ತು ಅಹಂಕಾರವನ್ನು ತೊರೆದು ಬಹುಕಾಲದವರೆಗೆ ದತ್ತಾತ್ರೇಯನ ಸೇವೆಯನ್ನು ಮಾಡಿ ಅವನನ್ನು ಸಂತೋಷಪಡಿಸಿದನು.

ಆರಾಧ್ಯ ದತ್ತಾತ್ರೇಯಂ ತಮಗೃಹ್ಣಾತ್ ಸ ವರಾನಿಮಾನ್ |
ಆಪ್ತಾದಾಪ್ತತರಾನ್ ವಿಪ್ರಾದ್ ವಿದ್ವಾನ್ ವಿದ್ವನ್ನಿಷೇವಿತಾತ್ ॥7॥

ಮೇಧಾವಿಯಾದ ಅವನು ದತ್ತಾತ್ರೇಯನ ಆರಾಧನೆಯನ್ನು ಮಾಡಿ ಆಪ್ತರಿಗಿಂತಲೂ ಆಪ್ತನಾದ ಬ್ರಾಹ್ಮಣರೂಪದಲ್ಲಿರುವ ಜ್ಞಾನಿಗಳಿಂದ ಸೇವಿತನಾದ ಅವನಿಂದ ಈ ವರಗಳನ್ನು ಪಡೆದನು.

ಋತೇಽಮರತ್ವಂ ವಿಪ್ರೇಣ ದತ್ತಾತ್ರೇಯೇಣ ಧೀಮತಾ |
ವರೈಶ್ಚತುರ್ಭಿಃ ಪ್ರವೃತ ಇಮಾಂಸ್ತತ್ರಾಭ್ಯನಂದತ ॥8॥

ಮೇಧಾವಿಯಾದ ವಿಪ್ರನಾದ ದತ್ತಾತ್ರೇಯನು ಅಮರತ್ವವನ್ನು ಬಿಟ್ಟು ಬೇರೆ ಯಾವುದಾದರೂ ನಾಲ್ಕು ವರಗಳನ್ನು ಕೇಳು ಎಂದು ಹೇಳಿದಾಗ ಅರ್ಜುನನು ಈ ನಾಲ್ಕು ವರಗಳನ್ನು  ಅಭಿನಂದಿಸಿ ಕೇಳಿದನು.

ಶ್ರೀಮಾನ್ ಮನಸ್ವೀ ಬಲವಾನ್ ಸತ್ಯವಾಗನಸೂಯಕಃ |
ಸಹಸ್ರಬಾಹುರ್ಭೂಯಾಸಮೇಷ ಮೇ ಪ್ರಥಮೋ ವರಃ ॥9॥

ನಾನು ಕಾಂತಿಯುಕ್ತನೂ ಧೈರ್ಯಶಾಲಿಯೂ ಬಲಿಷ್ಠನೂ ಸತ್ಯವಚನನೂ ಅಸೂಯಾರಹಿತನೂ ಸಹಸ್ರಬಾಹುವುಳ್ಳವನೂ ಆಗಬೇಕು. ಇದು ನನ್ನ ಮೊದಲನೆಯ ವರ.

ಜರಾಯುಜಾಂಡಜಂ ಸರ್ವಂ ಸರ್ವಂ ಚೈವ ಚರಾಚರಮ್ |
ಪ್ರಶಾಸ್ತುಮಿಚ್ಛೇ ಧರ್ಮೇಣ ದ್ವಿತೀಯಸ್ತ್ವೇಷ ಮೇ ವರಃ ॥10॥

ನಾನು ಎಲ್ಲಾ ಜರಾಯುಜ ಮತ್ತು ಅಂಡಜಗಳನ್ನೂ ಎಲ್ಲಾ ಚರಾಚರಪ್ರಾಣಿಗಳನ್ನೂ ಧರ್ಮದಿಂದ ಆಳಲು ಇಚ್ಛಿಸುತ್ತೇನೆ. ಇದು ನನ್ನ ಎರಡನೆಯ ವರ.

ಪಿತೄನ್ ದೇವಾನೃಷೀನ್ ವಿಪ್ರಾನ್ ಯಜೇಯಂ ವಿಪುಲೈರ್ಮಖೈಃ |
ಅಮಿತ್ರಾನ್ ನಿಶಿತೈರ್ಬಾಣೈರ್ಘಾತಯೇಯಂ ರಣಾಜಿರೇ |
ದತ್ತಾತ್ರೇಯೇಹ ಭಗವನ್ ತೃತೀಯೋ ವರ ಏಷ ಮೇ ॥11॥

ನಾನು ಪಿತೃಗಳನ್ನೂ ದೇವತೆಗಳನ್ನೂ ಋಷಿಗಳನ್ನೂ ಬ್ರಾಹ್ಮಣರನ್ನೂ ವಿಸ್ತಾರವಾದ ಯಜ್ಞಗಳಿಂದ ಯಾಗಮಾಡಿ ಸಂತೋಷಪಡಿಸಬೇಕು. ಯುದ್ಧದಲ್ಲಿ ಶತ್ರುಗಳನ್ನು ನಿಶಿತವಾದ ಬಾಣಗಳಿಂದ ಸಂಹರಿಸಬೇಕು. ಪೂಜ್ಯನಾದ ದತ್ತಾತ್ರೇಯನೇ! ಇದು ನನ್ನ ಮೂರನೆಯ ವರ.

ಯಸ್ಯ ನಾಸೀನ್ನ ಭವಿತಾ ನ ಚಾಸ್ತಿ ಸದೃಶಃ ಪುಮಾನ್ |
ಇಹ ವಾ ದಿವಿ ವಾ ಲೋಕೇ ಸ ಮೇ ಹಂತಾ ಭವೇದಿತಿ ॥12॥

ಈ ಲೋಕದಲ್ಲಿಯಾಗಲೀ ದೇವಲೋಕದಲ್ಲಿಯಾಗಲೀ ಯಾವನಿಗೆ ಸಮಾನನಾದ ಪುರುಷನು ಹಿಂದೆ ಇರಲಿಲ್ಲವೋ ಈಗ ಇಲ್ಲವೋ ಮುಂದೆ ಬರುವುದಿಲ್ಲವೋ ಅಂತಹವನು ನನಗೆ ಹಂತಕನಾಗಬೇಕು.

ಸೋಽರ್ಜುನಃ ಕೃತವೀರ್ಯಸ್ಯ ವರಃ ಪುತ್ರೋಽಭವದ್ ಭುವಿ |
ಸ ಸಹಸ್ರಂ ಸಹಸ್ರಾಣಾಂ ಮಾಹಿಷ್ಮತ್ಯಾಮವರ್ಧತ ॥13॥

ಆ ಅರ್ಜುನನು ಭೂಮಿಯಲ್ಲಿ ಕೃತವೀರ್ಯನ ಶ್ರೇಷ್ಠ ಮಗನಾಗಿ ಜನಿಸಿದ್ದನು. ಅವನು ಮಾಹಿಷ್ಮತಿಯಲ್ಲಿ ಒಂದು ಲಕ್ಷ ವರ್ಷಗಳಕಾಲ ಹೀಗೆ ಅಭಿವೃದ್ಧಿಯನ್ನು ಪಡೆದು ಜೀವಿಸಿದನು.

ಪೃಥಿವೀಮಖಿಲಾಂ ಜಿತ್ವಾ ದ್ವೀಪಾಂಶ್ಚಾಪಿ ಸಮುದ್ರಿಣಃ |
ನಭಸೀವ ಜ್ವಲನ್ ಸೂರ್ಯಃ ಪುಣ್ಯೈಃ ಕರ್ಮಭಿರರ್ಜುನಃ ॥14॥

ಭೂಮಿಯೆಲ್ಲವನ್ನೂ ಗೆದ್ದು ಸಮುದ್ರದ ಎಲ್ಲಾ ದ್ವೀಪಗಳನ್ನೂ ಗೆದ್ದು ಸೂರ್ಯನು ಆಕಾಶದಲ್ಲಿ ಹೊಳೆಯುವಂತೆ ತನ್ನ ಪುಣ್ಯಕರ್ಮಗಳಿಂದ ಅರ್ಜುನನು ಶೋಭಿಸಿದನು.

ಇಂದ್ರದ್ವೀಪಂ ಕಶೇರುಂ ಚ ತಾಮ್ರಪರ್ಣೀಂ ಗಭಸ್ತಿಮತ್ |
ಗಾಂಧರ್ವಂ ವಾರುಣಂ ದ್ವೀಪಂ ಸೌಮ್ಯಮಾಕ್ಷಮಿತಿ ಪ್ರಭುಃ |
ಪೂರ್ವೈರಜಿತಪೂರ್ವಾಂಶ್ಚ ದ್ವೀಪಾನಜಯದರ್ಜುನಃ ॥15॥

ಇಂದ್ರದ್ವೀಪ ಕಶೇರು ತಾಮ್ರಪರ್ಣಿ ಗಭಸ್ತಿಮತ್ ಗಾಂಧರ್ವದ್ವೀಪ ವಾರುಣದ್ವೀಪ ಸೌಮ್ಯದ್ವೀಪ ಅಕ್ಷದ್ವೀಪಗಳನ್ನು ಅವನುಗೆದ್ದು ಹಿಂದೆ ಯಾರೂ ಗೆಲ್ಲದಿದ್ದ ಎಲ್ಲಾ ದ್ವೀಪಗಳನ್ನೂ ಜಯಿಸಿದನು.

ಸೌವರ್ಣಂ ಸರ್ವಮಪ್ಯಾಸೀದ್ ವಿಮಾನವರಮುತ್ತಮಮ್ |
ಚತುರ್ಧಾ ವ್ಯಭಜದ್ ರಾಷ್ಟ್ರಂ ತದ್ ವಿಭಜ್ಯಾನ್ವಪಾಲಯತ್ ॥17॥
ಅವನ ಅನೇಕ ಅಂತಸ್ತಿನ ಅರಮನೆಯು ಎಲ್ಲವೂ ಸುವರ್ಣಮಯವಾಗಿದ್ದಿತು. ಅವನು ತನ್ನ ರಾಷ್ಟ್ರವನ್ನು ನಾಲ್ಕು ಭಾಗಗಳಾನ್ನಾಗಿಮಾಡಿ ಅದನ್ನು ರಕ್ಷಿಸಿದನು.
ಏಕಾಂಶೇನಾಭರತ್ ಸೇನಾಮೇಕಾಂಶೇನಾವಸದ್ ಗೃಹಾನ್ |
ಯಸ್ತು ತಸ್ಯ ತೃತೀಯೋಽಭೂದ್ ರಾಜಾಽಸೀಜ್ಜನಸಂಗ್ರಹೇ |
ಆಪ್ತಃ ಪರಮಕಲ್ಯಾಣಃ ತೇನ ಯಜ್ಞಾನಕಲ್ಪಯತ್ ॥18॥
(ಅವನು ತಾನೂ ನಾಲ್ಕು ಶರೀರಗಳನ್ನು ತೆಗೆದುಕೊಂಡನು) ಒಂದು ಅಂಶದಿಂದ ಸೈನ್ಯವನ್ನು ಪೋಷಿಸಿದನು. ಇನ್ನೊಂದು ಅಂಶದಿಂದ ಮನೆಯಲ್ಲಿ ವಾಸಿಸುತ್ತಿದ್ದನು. ಮೂರನೆಯ ಅಂಶದಿಂದ ಅವನು ಜನಸಮುದಾಯಕ್ಕೆ ರಾಜನಾಗಿ ಮೆರೆದು ಪರಮ ಶುಭಗಳನ್ನು ಮೆರೆದು ಯಜ್ಞಗಳನ್ನು ಆಚರಿಸುತ್ತಿದ್ದನು.
ಯೇ ದಸ್ಯವೋ ಗ್ರಾಮಚರಾ ಅರಣ್ಯೇ ಚ ವಸಂತಿ ಯೇ |
ಚತುರ್ಥೇನ ಚ ಸೋಽಂಶೇನ ತಾನ್ ಸರ್ವಾನ್ ಪ್ರತ್ಯಷೇಧಯತ್ ॥19॥
ಗ್ರಾಮದಲ್ಲಿ ಮತ್ತು ಅರಣ್ಯದಲ್ಲಿ ವಾಸಿಸುವ ದಸ್ಯುಗಳೆಲ್ಲರನ್ನೂ ತನ್ನ ನಾಲ್ಕನೆಯ ಅಂಶದಿಂದ ನಿಗ್ರಹಿಸಿದನು.
ಸರ್ವೇಭ್ಯಶ್ಚಾಂತವಾಸಿಭ್ಯಃ ಕಾರ್ತವೀರ್ಯೋಹರದ್ ಬಲಿಮ್ |
ದ್ವಾರಾಣಿ ನಾಪಿಧೀಯಂತ ಪುರೇಷು ನಗರೇಷು ಚ ॥20॥
ಎಲ್ಲಾ ಸಾಮಂತರಿಂದಲೂ ಕಾರ್ತವೀರ್ಯನು ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತಿದ್ದನು. ಅವನ ರಾಜಧಾನಿಯಲ್ಲಾಗಲೀ ಉಳಿದನಗರಗಳಲ್ಲಾಗಲೀ ಯಾರೂ ರಾತ್ರಿಯ ವೇಳೆಯಲ್ಲಿ ಬಾಗಿಲನ್ನು ಮುಚ್ಚುತ್ತಿರಲಿಲ್ಲ.
ಸ ಏವ ರಾಷ್ಟ್ರಪಾಲೋಽಭೂತ್ ಸ್ತ್ರೀಪಾಲೋಽಭವದರ್ಜುನಃ|
ಸ ಏವಾಸೀದಜಾಪಾಲಃ ಸ ಗೋಪಾಲೋ ವಿಶಾಂಪತೇ ॥21॥
ಎಲೈ ರಾಜನೇ! ಅರ್ಜುನನು ತಾನೇ ರಾಷ್ಟ್ರಪಾಲನಾಗಿದ್ದನು. ಸ್ತ್ರೀಪಾಲನಾಗಿದ್ದನು. ಗೋಪಾಲನಾಗಿದ್ದನು. ಆಡು ಮತ್ತು ಕುರಿಗಳನ್ನು ಪಾಲಿಸುವವನಾಗಿದ್ದನು.
ಸ ಸ್ಮಾರಣ್ಯೇ ಮನುಷ್ಯಾಣಾಂ ರಾಜಾ ಕ್ಷೇತ್ರಾಣಿ ರಕ್ಷತಿ |
ಇದಂ ತು ಕಾರ್ತವೀರ್ಯಸ್ಯ ಬಭೂವಾಸದೃಶಂ ಜನೈಃ ॥22॥
ಅವನು ತಾನೇ ಕಾಡಿನಲ್ಲಿ ಮನುಷ್ಯರ ಹೊಲಗಳನ್ನು ರಕ್ಷಿಸುತ್ತಿದ್ದನು. ಈ ಮುಂದೆ ಹೇಳುವ ವಿಷಯವು ಜನರಿಂದ ಎಂದೂ ಕೇಳಲ್ಪಡದ ಕಾರ್ತವೀರ್ಯನ ಮಹಾಮಹಿಮೆಯಾಗಿದ್ದಿತು.
ನ ಪೂರ್ವೇ ನಾಪರೇ ತಸ್ಯ ಗಮಿಷ್ಯಂತಿ ಗತಿಂ ನೃಪಾಃ |
ಯದರ್ಣವೇ ಪ್ರಯಾತಸ್ಯ ವಸ್ತ್ರಂ ನ ಪರಿಷಿಚ್ಯತೇ ॥23॥
ಹಿಂದಿನ ಯಾವ ರಾಜರಾಗಲೀ ಮುಂದೆ ಬರುವ ಯಾವ ರಾಜರಾಗಲೀ ಕಾರ್ತವೀರ್ಯಾರ್ಜುನನ ಈ ಮಹಿಮೆಯನ್ನು ಪಡೆಯುವುದಿಲ್ಲ. ಅವನು ಸಮುದ್ರದಲ್ಲಿ ನಡೆದುಹೊದರೆ ಅವನ ವಸ್ತ್ರವು ಒದ್ದೆಯಾಗುತ್ತಿರಲಿಲ್ಲ.
ಶತಂ ವರ್ಷಸಹಸ್ರಾಣಾಮನುಶಿಷ್ಯಾರ್ಜುನೋ ಮಹೀಮ್ |
ದತ್ತಾತ್ರೇಯಪ್ರಸಾದೇನ ಏವಂ ರಾಜ್ಯಂ ಚಕಾರ ಸಃ ॥24॥
ದತ್ತಾತ್ರೇಯನ ಅನುಗ್ರಹದಿಂದ ಅರ್ಜುನನು ಭೂಮಿಯನ್ನು ಒಂದು ಲಕ್ಷವರ್ಷಗಳ ಕಾಲ ಶಾಸಿಸಿ ರಾಜ್ಯವನ್ನು ಆಳಿದನು
ಏವಂ ಬಹೂನಿ ಕರ್ಮಾಣಿ ಚಕ್ರೇ ಲೋಕಹಿತಾಯ ಸಃ |
ದತ್ತಾತ್ರೇಯ ಇತಿ ಖ್ಯಾತಃ ಪ್ರಾದುರ್ಭಾವೋ ಹ್ಯಯಂ ಹರೇಃ
ಕಥಿತೋ ಭರತಶ್ರೇಷ್ಠ ಶೃಣು ಭೂಯೋ ಮಹಾತ್ಮನಃ ॥25॥
ದತ್ತಾತ್ರೇಯನೆಂದು ಪ್ರಸಿದ್ಧನಾದ ಈ ಹರಿಯ ಅವತಾರವು ಹೀಗೆ ಲೋಕಹಿತವಾದ ಅನೇಕ ಕರ್ಮವನ್ನು ಮಾಡಿತು. ಭರತಶ್ರೇಷ್ಠನೇ! ನಾನು ನಿನಗೆ ಅದನ್ನು ಹೇಳಿದ್ದೇನೆ. ಆ ಮಹಾತ್ಮನ ಮುಂದಿನ ಅವತಾರಗಳನ್ನು ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ನವಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತನೆಯ ಅಧ್ಯಾಯವು ಮುಗಿಯಿತು.
*****

ನಲವತ್ತೊಂದನೆಯ ಅಧ್ಯಾಯ
(ಪರಶುರಾಮಾವತಾರ ಕಥನ)
ಭೀಷ್ಮಃ
ಯಥಾ ಭೃಗುಕುಲೇ ಜನ್ಮ ಯದರ್ಥಂ ಚ ಮಹಾತ್ಮನಃ |
ಜಾಮದಗ್ನ್ಯ ಇತಿ ಖ್ಯಾತಃ ಪ್ರಾದುರ್ಭಾವಸ್ತು ವೈಷ್ಣವಃ ॥1॥
ಮಹಾತ್ಮನಾದ ವಿಷ್ಣುವಿನ ಜಾಮದಗ್ನ್ಯ ಅಥವಾ ಪರಶುರಾಮನೆಂದು ಪ್ರಸಿದ್ಧನಾದ ಅವತಾರವು ಭೃಗುಕುಲದಲ್ಲಿ ಹೇಗೆ ಮತ್ತು ಏತಕ್ಕೆ ಆಯಿತು ಎಂದು ಹೇಳುತ್ತೇನೆ ಕೇಳು.
ಜಮದಗ್ನಿಸುತೋ ರಾಜನ್ ರಾಮೋ ನಾಮ ಸ ವೀರ್ಯವಾನ್ |

ತಂ ಕಾರ್ತವೀರ್ಯಂ ರಾಜಾನಂ ಹೇಹಯಾನಾಮರಿಂದಮಮ್ |
ರಥಸ್ಥಂ ಪಾರ್ಥಿವಂ ರಾಮಃ ಪಾತಯಿತ್ವಾಽವಧೀದ್ ರಣೇ ॥2॥
ರಾಜನೇ! ಜಮದಗ್ನಿಗಳ ಮಗನಾದ ಪರಾಕ್ರಮಶಾಲಿಯಾದ ರಾಮ ಎಂಬ ಹೆಸರಿನ ವಿಷ್ಣುವಿನ ಅವತಾರವಾಯಿತು. ರಾಮನು ಹೇಹಯ ಕುಲದ ಅಧಿಪತಿಯಾದ ಶತ್ರುಸೂದನನಾದ ಕಾರ್ತವೀರ್ಯನ ಮಗನಾದ ಅರ್ಜುನನನ್ನು ರಥದಿಂದ ಕೆಳಕ್ಕೆ ಉರುಳಿಸಿ ಯುದ್ಧದಲ್ಲಿ ಸಂಹಾರ ಮಾಡಿದನು.
ಹೇಹಯಾಂತಕರೋ ರಾಜನ್ ಸ ರಾಮೋ ಬಲಿನಾಂ ವರಃ |
ಕಾರ್ತವೀರ್ಯೋಽ ಮಹಾವೀರ್ಯೋಽ ಬಲೇನಾಪ್ರತಿಮಸ್ತಥಾ |
ರಾಮೇಣ ಜಾಮದಗ್ನ್ಯೇನ ಹತೋ ವಿಷಮಮಾಚರನ್ ॥3॥
ರಾಜನೇ! ಹೇಹಯರಾಜನಾದ ಅರ್ಜುನನನ್ನು ವಿನಾಶಮಾಡಿದ ರಾಮನು ಬಲಿಷ್ಠರಲ್ಲಿ ಶ್ರೇಷ್ಠನಾದವನು. ಕೃತವೀರ್ಯನ ಮಗನಾದ ಮಹಾಪರಾಕ್ರಮಿಯಾದ ಬಲದಿಂದ ಅಸದೃಶನಾದ ಅರ್ಜುನನೂ ಸಹ ವಿರೋಧವನ್ನು ಮಾಡಿ ರಾಮನಿಂದ ಹತನಾದನು.
ಜಂಭಸ್ಯ ಯಜ್ಞಹಂತಾ ಸ ಋತ್ವಿಜಂ ಚೈವ ಸಂಸ್ತರೇ |
ಜಂಭಸ್ಯ ಮೂರ್ಧ್ನಿ ಭೇತ್ತಾ ಚ ಹಂತಾ ಚ ಶತದುಂದುಭೇಃ ॥4॥
ಸ ಏಷ ಕೃಷ್ಣೋ ಗೋವಿಂದೋ ಜಾತೋ ಭೃಗುಷು ವೀರ್ಯವಾನ್ |
ಸಹಸ್ರಬಾಹುಮುದ್ಧರ್ತುಂ ಸಹಸ್ರಜಿತಮಾಹವೇ ॥5॥
ಜಂಭಾಸುರನ ಯಜ್ಞವನ್ನು ಮತ್ತು ಋತ್ವಿಕ್‌ಗಳನ್ನು ಯಜ್ಞಶಾಲೆಯಲ್ಲಿ ನಾಶಮಾಡಿದವನೂ, ಜಂಭಾಸುರನ ಶಿರಸ್ಸನ್ನು ಸೀಳಿದವನೂ ಶತದುಂದುಭಿ ಎಂಬ ಅಸುರನನ್ನು ಸಂಹಾರಮಾಡಿದವನೂ ಆದ, ಈ ಗೋವಿಂದನಾದ ಕೃಷ್ಣನೇ ಪರಾಕ್ರಮಶಾಲಿಯಾಗಿ ಭೃಗುಕುಲದಲ್ಲಿ ಅವತಾರ ಮಾಡಿ ಯುದ್ಧದಲ್ಲಿ ಸಹಸ್ರ ಬಾರಿ ಜಯಶಾಲಿಯಾದ ಸಹಸ್ರ ಬಾಹುವಾದ ಅರ್ಜುನನನ್ನು ಉನ್ಮೂಲನಮಾಡಿದನು.
ಕ್ಷತ್ರಿಯಾಣಾಂ ಚತುಷ್ಷಷ್ಟಿಮಯುತಾನಾಂ ಮಹಾಯಶಾಃ |
ಸರಸ್ವತ್ಯಾಂ ಸಮೇತಾನಿ ಏಷ ವೈ ಧನುಷಾಽರ್ದಯತ್ ॥6॥
ಮಹಾಕೀರ್ತಿಶಾಲಿಯಾದ ಶ್ರೀಕೃಷ್ಣನು ಅರವತ್ತುನಾಲ್ಕು ದಶಸಹಸ್ರ ಕ್ಷತ್ರಿಯರನ್ನು ಸರಸ್ವತೀ ನದಿಯದಡದಲ್ಲಿ ಎದುರಿಸಿ ತನ್ನ ಧನುಸ್ಸಿನಿಂದ ಸಂಹರಿಸಿದನು.
ಬ್ರಹ್ಮದ್ವಿಷಾಂ ವಧೇ ತಸ್ಮಿನ್ ಸಹಸ್ರಾಣಿ ಚತುರ್ದಶ |
ಪುನರ್ಜಗ್ರಾಹ ಶೂರಾಣಾಮಂತಂ ಚಕ್ರೇ ನರರ್ಷಭಃ ॥7॥
ಪುರುಷಶ್ರೇಷ್ಠನಾದ ಕೃಷ್ಣನು ಬ್ರಹ್ಮದ್ವೇಷಿಗಳನ್ನು ವಧೆ ಮಾಡುವ ಆ ಸಂದರ್ಭದಲ್ಲಿ ಪುನಃ ಹದಿನಾಲ್ಕು ಸಾವಿರ ಶೂರರ ಜೊತೆಯಲ್ಲಿ ಸಂಗ್ರಾಮವನ್ನು ಮಾಡಿ ಆವರನ್ನು ನಾಶಮಾಡಿದನು.
ತತೋ ದಂಷ್ಟ್ರಾಃ ಸಹಸ್ರಸ್ಯ ಭಂಕ್ತ್ವಾ ಪೂರ್ವಮರಿಂದಮಃ |
ಸಹಸ್ರಂ ಮುಸಲೇನಾಹನ್ ಸಹಸ್ರಮುದಕೃಂತತ ॥8॥
ಅನಂತರ ಪುನಃ ಅರಿಂದಮನಾದ ಕೃಷ್ಣನು ಮೊದಲು ಸಹಸ್ರ ಸಂಖ್ಯೆಯ ಶೂರರ ಹಲ್ಲುಗಳನ್ನು ಮುರಿದು ಮುಸಲದಿಂದ ಸಹಸ್ರರನ್ನು ಘಾತಿಸಿ ಸಹಸ್ರರನ್ನು ಸಂಹರಿಸಿದನು.
ಚತುರ್ದಶ ಸಹಸ್ರಾಣಿ ಕಣಧೂಮಮಪಾಯಯತ್ |
ಶಿಷ್ಟಾನ್ ಬ್ರಹ್ಮದ್ವಿಷೋ ಜಿತ್ವಾ ತತೋಽಸ್ನಾಯತ ಭಾರ್ಗವಃ ॥9॥
ಪರಶುರಾಮನು ಇನ್ನು ಉಳಿದ್ದ ಹದಿನಾಲ್ಕು ಸಹಸ್ರ ಸಂಖ್ಯೆಯ ಬ್ರಹ್ಮದ್ವೇಷಿಗಳನ್ನು ಗೆದ್ದು ಅವರಿಗೆ ಸುಡುಮಣ್ಣನ್ನು ತಿನ್ನಿಸಿ ಅನಂತರ ಸ್ನಾನವನ್ನು ಮಾಡಿದನು.
ರಾಮ ರಾಮೇತ್ಯಭಿಕ್ರುಷ್ಟೈರ್ಬ್ರಾಹ್ಮಣೈಃ ಕ್ಷತ್ರಿಯಾರ್ದಿತೈಃ |
ನ್ಯಘ್ನದ್ ದಶಸಹಸ್ರಾಣಿ ರಾಮಃ ಪರಶುನಾಽಭಿಭೂಃ ॥10॥
ಕ್ಷತ್ರಿಯಪೀಡೆಗೆ ಒಳಗಾದ ಬ್ರಾಹ್ಮಣರಿಂದ ರಾಮ ರಾಮ ಎಂದು ಕರೆಯಲ್ಪಟ್ಟವನಾಗಿ ಶತ್ರುಪರಾಭವಕಾರಕನಾದ ರಾಮನು ತನ್ನ ಪರಶುವಿನಿಂದ ಹತ್ತು ಸಹಸ್ರ ಕ್ಷತ್ರಿಯರನ್ನು ಸಂಹರಿಸಿದನು.
ನ ಹ್ಯಮೃಷ್ಯತ ತಾಂ ವಾಚಮಾರ್ತೈರ್ಭೃಶಮುದೀರಿತಾಮ್ |
ಭೃಗೋ ರಾಮಾಭಿಧಾವೇತಿ ಯದಾಕ್ರಂದನ್ ದ್ವಿಜಾತಯಃ ॥11॥
ಭಾರ್ಗಕುಲೋತ್ಪನ್ನನಾದ ರಾಮನೇ! ನಮ್ಮ ಸಹಾಯಕ್ಕಾಗಿ ಓಡಿ ಬಾ. ಎಂಬ ಆರ್ತರಾದವರ ಆಕ್ರಂದನದ ಮಾತುಗಳನ್ನು ಕೇಳಿ ಅದನ್ನು ಅವನು ಎಂದೂ ಸಹಿಸುತ್ತಿರಲಿಲ್ಲ.
ಕಾಶ್ಮೀರಾನ್ ದರದಾನ್ ಕುಂತೀನ್ ಕ್ಷುದ್ರಕಾನ್ ಮಾಳವಾನ್ಶಕಾನ್ |
ಚೇದಿಕಾಶಿಕರೂಶಾಂಶ್ಚ ಋಷಿಕಾನ್ ಕ್ರಥಕೈಶಿಕಾನ್ ॥12॥
ಅಂಗಾನ್ ವಂಗಾನ್ ಕಳಿಂಗಾಂಶ್ಚ ಮಾಗಧಾನ್ ಕಾಶಿಕೋಸಲಾನ್
ರಾತ್ರಾಯಣಾನ್ ವೀತಿಹೋತ್ರಾನ್ ಕಿರಾತಾನ್ ಮಾರ್ತಿಕಾವತಾನ್ ॥
ಏತಾನನ್ಯಾಂಶ್ಚ ರಾಜನ್ಯಾನ್ ದೇಶೇ ದೇಶೇ ಸಹಸ್ರಶಃ |
ನಿಕೃತ್ಯ ನಿಶಿತೈರ್ಬಾಣೈಃ ಸಂಪ್ರದಾಯ ವಿವಸ್ವತೇ ॥14॥
ಕೀರ್ಣಾ ಕ್ಷತ್ರಿಯಕೋಟೀಭಿರ್ಮೇರುಮಂದರಭೂಷಣಾ |
ತ್ರಿಃ ಸಪ್ತಕೃತ್ವಃ ಪೃಥಿವೀ ತೇನ ನಿಃಕ್ಷತ್ರಿಯಾ ಕೃತಾ ॥15॥

ಕಾಶ್ಮೀರರೂ ದರದರೂ ಕುಂತಿಗಳೂ ಕ್ಷುದ್ರಕರೂ ಮಾಳವರೂ ಶಕರೂ ಚೇದಿಗಳೂ ಕಾಶಿಗಳೂ ಕರೂಷರೂ ಋಷಿಕರೂ ಕ್ರಥಕೈಶಿಕರೂ ಅಂಗರೂ ವಂಗರೂ ಕಳಿಂಗರೂ ಮಾಗಧರೂ ಕಾಶಿಕೋಸಲರೂ ರಾತ್ರಾಯಣರೂ ವೀತಿಹೋತ್ರರೂ ಕಿರಾತರೂ ಮಗಧದೇಶದವರೂ ಇವರನ್ನೂ ಮತ್ತು ಬೇರೆ ದೇಶದ ಸಹಸ್ರಾರು ರಾಜರುಗಳನ್ನು ಹರಿತವಾದ ಬಾಣಗಳಿಂದ ಸಂಹರಿಸಿ ಯಮನಿಗೆ ಅರ್ಪಿಸಿದನು. ಮೇರುಮಂದರಭೂಷಿತವಾದ ಕೋಟಿಕೋಟಿ ಕ್ಷತ್ರಿಯರಿಂದ ತುಂಬಿದ್ದ ಭೂಮಿಯನ್ನು ಇಪ್ಪತ್ತೊಂದು ಬಾರಿ ಭೂ ಪ್ರದಕ್ಷಿಣೆಯನ್ನು ಮಾಡಿ ಕ್ಷತ್ರಿಯರು ಇಲ್ಲದಂತೆ ಮಾಡಿದನು.
ಕೃತ್ವಾ ನಿಃಕ್ಷತ್ರಿಯಾಂ ಚೈವ ಭಾರ್ಗವಃ ಸ ಮಹಾಯಶಾಃ |
ಇಂದ್ರಗೋಪಕವರ್ಣಸ್ಯ ಜೀವಂಜೀವನಿಭಸ್ಯ ಚ ॥16॥
ಪೂರಯಿತ್ವಾ ಚ ಸರಿತಃ ಕ್ಷತಜಸ್ಯ ಸರಾಂಸಿ ಚ |
ಸರ್ವಾನಷ್ಟಾದಶ ದ್ವೀಪಾನ್ ವಶಮಾನೀಯ ಭಾರ್ಗವಃ ॥17॥
ಸೋಽಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ |
ಇಷ್ಟ್ವಾ ಸಾಗರಪರ್ಯಂತಾಂ ಕಾಶ್ಯಪಾಯ ಮಹೀಂ ದದೌ |
ತಸ್ಯಾಗ್ರೇಣಾನುಪರ್ಯೇತಿ ಭೂಮಿಂ ಕೃತ್ವಾ ವಿಪಾಂಸುಲಾಮ್ ॥18॥
ಮಹಾಕೀರ್ತಿವಂತನಾದ ಭಾರ್ಗವರಾಮನು ಕ್ಷತ್ರಿಯ ಕುಲವನ್ನು ಸಂಹರಿಸಿ ನದಿಗಳನ್ನು ಮತ್ತು ಸರೋವರಗಳನ್ನು ಇಂದ್ರಗೋಪದಂತೆ ಅಥವಾ ಚಕೋರದಂತೆ ಕೆಂಪಾದ ರಕ್ತಗಳಿಂದ ತುಂಬಿ ಭಾರ್ಗವನು ಹದಿನೆಂಟು ದ್ವೀಪಗಳನ್ನು ವಶಪಡಿಸಿಕೊಂಡು ಸಹಸ್ರಅಶ್ವಮೇಧ- ಯಾಗಗಳನ್ನೂ ನೂರು ವಾಜಪೇಯಯಾಗಗಳನ್ನೂ ಆಚರಿಸಿ ಸಾಗರ ಪರ್ಯಂತ ಭೂಮಿಯನ್ನು ದುಷ್ಟ ಜನರಿಂದ ರಹಿತವನ್ನಾಗಿ ಮಾಡಿ, ಅನಂತರ ಯಜ್ಞ ದಕ್ಷಿಣೆಯಾಗಿ ಆ ಭೂಮಿಯನ್ನು ಕಾಶ್ಯಪರಿಗೆ ಕೊಟ್ಟನು.
ತತಃ ಕಾಲಕೃತಾಂ ಸತ್ಯಾಂ ಭಾರ್ಗವಸ್ಯ ಮಹಾತ್ಮನಃ |
ಗಾಥಾಮಪ್ಯತ್ರ ಗಾಯಂತಿ ಯೇ ಪುರಾಣವಿದೋ ಜನಾಃ ॥20॥
ಆ ಕಾರಣದಿಂದ ಪುರಾಣವನ್ನು ತಿಳಿದ ಜನರು ಎಲ್ಲಾ ಕಾಲದಲ್ಲಿಯೂ ಶಾಶ್ವತವಾಗಿ ನಿಲ್ಲುವ ಮಹಾತ್ಮನಾದ ಭಾರ್ಗವನ ಗಾಥೆಯನ್ನು ಹಾಡುತ್ತಾರೆ.
ವೇದಿಮಷ್ಟಾದಶೋತ್ಸಂಧಾಂ ಹಿರಣ್ಯಸ್ಯಾತಿಪೌರುಷೀಮ್ |
ರಾಮೇಣ ಜಾಮದಗ್ನ್ಯೇನ ಪ್ರತಿಜಗ್ರಾಹ ಕಾಶ್ಯಪಃ ॥21॥
ಸಪ್ತ ದ್ವೀಪಗಳೂ ಸಪ್ತ ಸಮುದ್ರಗಳೂ ಮೇರುಪರ್ವತ ಕಾಂಚನಭೂಮಿ ವಜ್ರಲೇಪ ಲೋಕಾಲೋಕಪರ್ವತ ಹೀಗೆ ಹದಿನೆಂಟು ಉತ್ಕೃಷ್ಟವಾದ ಸಂಧಿಗಳನ್ನು ಹೊಂದಿರುವ ಅಲಂಕೃತವಾದ ಭೂಮಿಯನ್ನು ಜಮದಗ್ನಿಯ ಸುತನಾದ ರಾಮನಿಂದ ಕಾಶ್ಯಪರು ಸ್ವೀಕರಿಸಿದರು.
ಏವಮಿಷ್ಟ್ವಾ ಮಹಾಬಾಹುಃ ಕ್ರತುಭಿರ್ಭೂರಿದಕ್ಷಿಣೈಃ |
ಅನ್ಯದ್ವರ್ಷಶತಂ ರಾಮಃ ಸೌಭಂ ಸಾಲ್ವಮಯೋಧಯತ್ ॥22॥
ಮಹಾಬಾಹುವಾದ ರಾಮನು ಭೂರಿದಕ್ಷಣೆಯುಳ್ಳ ಅನೇಕ ಯಾಗಗಳನ್ನು ಆಚರಿಸಿ ಇನ್ನೂ ನೂರು ವರ್ಷಗಳ ಕಾಲ ಸೌಭ ಪತಿಯಾದ ಸಾಲ್ವನ ಜೊತೆಯಲ್ಲಿ ಯುದ್ಧಮಾಡಿದನು.
ತತಃ ಸ ಭೃಗುಶಾರ್ದೂಲಸ್ತಂ ಸೌಭಂ ಯೋಧಯನ್ ಪ್ರಭುಃ |
ಸುಬಂಧುರಂ ರಥಂ ರಾಜನ್ನಾಸ್ಥಾಯ ಭರತರ್ಷಭ |
ನಗ್ನಿಕಾನಾಂ ಕುಮಾರೀಣಾಂ ಗಾಯಂತೀನಾಮುಪಾಶೃಣೋತ್ ॥23॥
ಭರತರ್ಷಭನೇ! ಸುಂದರವಾದ ರಥವನ್ನು ಏರಿ ಸೌಭನ (ಸಾಲ್ವನ) ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದ ಪ್ರಭುವಾದ ಭೃಗುಶಾರ್ದೂಲನಾದ ರಾಮನು ಚಿಕ್ಕ ಕನೆಯಯರ ಗಾಯನವನ್ನು ಕೇಳಿದನು.
ರಾಮ ರಾಮ ಮಹಾಬಾಹೋ ಭೃಗೂಣಾಂ ಕೀರ್ತಿವರ್ಧನ |
ತ್ಯಜ ಶಸತ್ರಣಿ ಸರ್ವಾಣಿ ನ ತ್ವಂ ಸೌಭಂ ವಧಿಷ್ಯಸಿ ॥24॥
ಭೃಗುವಂಶದ ಕೀರ್ತಿವರ್ಧನನಾದ ಮಹಾಬಾಹುವಾದ ಎಲೈ ರಾಮನೇ! ನಿನ್ನ ಎಲ್ಲಾ ಶಸ್ತ್ರಗಳನ್ನೂ ತ್ಯಜಿಸು ನೀನು ಸೌಭನನ್ನು ಕೊಲ್ಲುವವನಲ್ಲ.
ಚಕ್ರಹಸ್ತೋ ಗದಾಪಾಣಿರ್ದೀನಾನಾಮಭಯಂಕರಃ |
ಯುಧಿ ಪ್ರದ್ಯುಮ್ನಸಾಂಬಾಭ್ಯಾಂ ಕೃಷ್ಣಃ ಸೌಭಂ ವಧಿಷ್ಯತಿ ॥25॥
ಚಕ್ರಧರನೂ ಗದಾಪಾಣಿಯೂ ದೀನರಿಗೆ ಅಭಯಂಕರನೂ ಆದ ಕೃಷ್ಣನು ಪ್ರದ್ಯುಮ್ನ ಸಾಂಬರ ಜೊತೆಯಲ್ಲಿ ಯುದ್ಧದಲ್ಲಿ ಸೌಭನನ್ನು ಸಂಹರಿಸುವನು.
ತಚ್ಛ್ರುತ್ವಾ ಪುರುಷವ್ಯಾಘ್ರಸ್ತತ ಏವ ವನಂ ಯಯೌ |
ನ್ಯಸ್ಯ ಸರ್ವಾಣಿ ಶಸತ್ರಣಿ ಕಾಲಾಕಾಂಕ್ಷೀ ಮಹಾಯಶಾಃ ॥26॥
ಆ ಗಾಯನವನ್ನು ಕೇಳಿದ ಕೀರ್ತಿವಂತನಾದ ಪುರುಷವ್ಯಾಘ್ರನಾದ ರಾಮನು ಎಲ್ಲಾ ಶಸ್ತ್ರಗಳನ್ನೂ ಎಸೆದು ಕಾಲವನ್ನು ನೀರಿಕ್ಷಿಸುತ್ತಾ ತಪೋವನಕ್ಕೆ ನಡೆದನು.
ರಥಂ ಸರ್ವಾಯುಧಂ ಚೈವ ಶರಾನ್ ಪರಶುಮೇವ ಚ |
ಧನೂಂಷ್ಯಪ್ಸು ಪ್ರತಿಷ್ಠಾಪ್ಯ ರಾಜಂಸ್ತೇಪೇ ಪರಂತಪಃ ॥27॥
ರಾಜನೇ! ಪರಂತಪನಾದ ಪರಶುರಾಮನು ತನ್ನ ರಥವನ್ನೂ ಎಲ್ಲಾ ಆಯುಧಗಳನ್ನೂ ಬಾಣಗಳನ್ನೂ ಪರುಶುವನ್ನೂ ಧನುಸ್ಸುಗಳನ್ನೂ ನೀರಿನಲ್ಲಿ ಮುಳುಗಿಸಿ ತಪಸ್ಸನ್ನು ಮಾಡಿದನು.

ಹ್ರಿಯಂ ಪ್ರಜ್ಞಾಂ ಶ್ರಿಯಂ ಕೀರ್ತಿಂ ಲಕ್ಷ್ಮೀಂ ಚಾಮಿತ್ರಕರ್ಶನಃ|
ಪಂಚಾಧಿಷ್ಠಾಯ ಧರ್ಮಾತ್ಮಾ ತಂ ರಥಂ ವಿಸಸರ್ಜ ಹ ॥28॥
ಶತ್ರುಕರ್ಶನನಾದ ಮತ್ತು ಧರ್ಮಾತ್ಮನಾದ ರಾಮನು ಲಜ್ಜೆಯನ್ನೂ ಪ್ರಜ್ಞೆಯನ್ನೂ ಕಾಂತಿಯನ್ನೂ ಕೀರ್ತಿಯನ್ನೂ ಮತ್ತು ಲಕ್ಷ್ಮಿಯನ್ನೂ ಆಶ್ರಯಿಸಿ ರಥವನ್ನು ವಿಸರ್ಜನೆ ಮಾಡಿದನು.
ಆದಿಕಾಲೇ ಪ್ರವೃತ್ತಂ ಹಿ ವಿಭಜನ್ ಕಾಲಮೀಶ್ವರಃ|
ನಾಹಂಸೀಚ್ಛ್ರದ್ದಯಾ ಸೌಭಂ ನ ಹ್ಯಶಕ್ತೋ ಮಹಾಯಶಾಃ ॥29॥
ಈಶ್ವರನಾದ ಅವನು ಸ್ವಲ್ಪ ಸಮಯದವರೆಗೆ ತಪಸ್ಸು ಮೊದಲಾದ ಸತ್ಕರ್ಮಗಳನ್ನು ವಿಶೇಷವಾಗಿ ಆಚರಿಸಿದನು. ಕನ್ಯೆಯರಮಾತಿನ ಮೇಲಿನ ಶ್ರದ್ಧೆಯಿಂದ ಸೌಭನನ್ನು ಸಂಹರಿಸಲಿಲ್ಲ. ಮಹಾಕೀರ್ತಿಶಾಲಿಯಾದ ಅವನು ಸೌಭನನ್ನು ಸಂಹರಿಸಲು ಅಶಕ್ತನೇನೂ ಅಲ್ಲ.

ಜಾಮದಗ್ನ್ಯ ಇತಿ ಖ್ಯಾತೋ ಯಸ್ತ್ವಸೌ ಭಗವಾನೃಷಿಃ|
ಸೋಽಸ್ಯ ಭಾಗಸ್ತಪಸ್ತೇಪೇ ಭಾರ್ಗವೋ ಲೋಕವಿಶ್ರುತಃ ॥30॥
ಜಾಮದಗ್ನ್ಯ ಎಂಬ ಹೆಸರಿನಿಂದ ಪ್ರಸಿದ್ಧನಾದ ಭಗವಂತನಾದ ಋಷಿಯು ಈ ಕೃಷ್ಣನ ಸ್ವರೂಪಭೂತವಾದ ಅಂಶ. ಲೋಕ ವಿಶ್ರುತನಾದ ಭಾರ್ಗವರಾಮನು ತಪಸ್ಸನ್ನು ಆಚರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ದಶಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
*****
ನಲವತ್ತೆರಡನೆಯ ಅಧ್ಯಾಯ
(ರಾಮಾವತಾರ ಕಥನ)
ಭೀಷ್ಮಃ
ಶೃಣು ರಾಜಂಸ್ತಥಾ ವಿಷ್ಣೋಃ ಪ್ರಾದುರ್ಭಾವಂ ಮಹಾತ್ಮನಃ|
ಚತುರ್ವಿಂಶೇ ಯುಗೇ ಚಾಪಿ ಮಾರ್ಕಂಡೇಯಪುರಸ್ಸರಃ ॥1॥
ತಿಥೌ ನಾವಮಿಕೇ ಜಜ್ಞೇ ತಥಾ ದಶರಥಾದಪಿ|
ಕೃತ್ವಾತ್ಮಾನಂ ಮಹಾಬಾಹುಶ್ಚತುರ್ಧಾ ವಿಷ್ಣುರವ್ಯಯಃ ॥2॥
ರಾಜನೇ! ಮಹಾತ್ಮನಾದ ವಿಷ್ಣುವಿನ ಪ್ರಾರ್ದುಭಾವವನ್ನು ಕೇಳು. ಇಪ್ಪತ್ತನಾಲ್ಕನೆಯ ಯುಗದಲ್ಲಿ ಮಾರ್ಕಂಡೇಯರ ಎದುರಿನಲ್ಲಿ ನವಮಿ ತಿಥಿಯಂದು ಮಹಾಬಾಹುವೂ ಶಾಶ್ವತನೂ ಆದ ವಿಷ್ಣುವು ನಾಲ್ಕುರೂಪಗಳನ್ನು ಧರಿಸಿದವನಾಗಿ ದಶರಥನಿಂದ ಜನಿಸಿದನು. ಸನಾತನನಾದ ವಿಷ್ಣುವು ದಶರಥನನ್ನೂ ಅನುಗ್ರಹವನ್ನೂ ಮಾಡುವುದಕ್ಕಾಗಿ ರಾಕ್ಷಸರ ನಾಶಕ್ಕಾಗಿ ಮತ್ತು ದೇವಕಾರ್ಯದ ಸಲುವಾಗಿ ಅಲ್ಲಿ ಅವತಾರಮಾಡಿದನು.
ಲೋಕೇ ರಾಮ ಇತಿ ಖ್ಯಾತಃ ತೇಜಸಾ ಭಾಸ್ಕರೋಪಮಃ|
ಪ್ರಸಾದನಾರ್ಥಂ ಲೋಕಸ್ಯ ವಿಷ್ಣುಸ್ತಸ್ಯ ಸನಾತನಃ|
ಕರ್ಮಾರ್ಥಮೇವ ಕೌಂತೇಯ ಜಜ್ಞೇ ತತ್ರ ಮಹಾಯಶಾಃ ॥3॥
ಎಲೈ ಕೌಂತೇಯನೇ! ಅವನು ಲೋಕದಲ್ಲಿ ರಾಮನೆಂಬ ಹೆಸರಿನಿಂದ ಪ್ರಖ್ಯಾತನಾಗಿ ತೇಜಸ್ಸಿನಲ್ಲಿ ಸೂರ್ಯನಿಗೆ ಸದೃಶನಾಗಿದ್ದನು. ಲೋಕಕ್ಕೆ ಸಂತೋಷವನ್ನು ಕೊಡುವ ಸಲುವಾಗಿ ಮತ್ತು ದೇವಕಾರ್ಯದ ಸಲುವಾಗಿ ಸನಾತನನಾದ ಕೀರ್ತಿಶಾಲಿಯಾದ ವಿಷ್ಣುವು ರಾಮನಾಗಿ ಅವತರಿಸಿದನು.
ತಮಪ್ಯಾಹುರ್ಮನುಷ್ಯೇಂದ್ರಂ ಸರ್ವಭೂತಪತೇಸ್ತನುಮ್|
ಯಜ್ಞವಿಘ್ನಂ ತದಾ ಕೃತ್ವಾ ವಿಶ್ವಾಮಿತ್ರಸ್ಯ ಭಾರತ|
ಸುಬಾಹುರ್ನಿಹತಸ್ತೇನ ಮಾರೀಚಸ್ತಾಡಿತೋ ಭೃಶಮ್ ॥4॥
ಮನುಷ್ಯೇಂದ್ರನಾದ ಅವನನ್ನೂ ಸಹ ಸರ್ವಜೀವೇಶ್ವರನಾದ ವಿಷ್ಣುವಿನ ಸ್ವರೂಪಾಂಶವೆಂದೇ ಹೇಳುತ್ತಾರೆ. ಎಲೈ ಭಾರತನೇ! ಆಗ ವಿಶ್ವಾಮಿತ್ರರ ಯಜ್ಞಕ್ಕೆ ವಿಘ್ನವನ್ನು ಮಾಡಿ ಸುಬಾಹುವು ಅವನಿಂದ ಹತನಾದನು. ಮಾರೀಚನು ಅವನ ಬಾಣಗಳ ಹೊಡೆತಕ್ಕೆ ಸಿಲುಕಿದನು.
ತಸ್ಮೈ ದತ್ತಾನಿ ಶಸತ್ರಣಿ ವಿಶ್ವಾಮಿತ್ರೇಣ ಧೀಮತಾ|
ವಧಾರ್ಥಂ ದೇವಶತ್ರೂಣಾಂ ದುರ್ವಾರಾಣಿ ಸುರೈರಪಿ ॥5॥
ಮೇಧಾವಿಗಳಾದ ವಿಶ್ವಾಮಿತ್ರರು ದೇವಶತ್ರುಗಳನ್ನು ಸಂಹರಿಸುವ ಸಲುವಾಗಿ ದೇವತೆಗಳೂ ಪರಿಹಾರಮಾಡಲು ಸಾಧ್ಯವಿಲ್ಲದಂತಹ ಶಸ್ತ್ರಗಳನ್ನು ಅವನಿಗೆ ಕೊಟ್ಟರು.
ವರ್ತಮಾನೇ ತದಾ ಯಜ್ಞೇ ಜನಕಸ್ಯ ಮಹಾತ್ಮನಃ|
ಭಗ್ನಂ ಮಾಹೇಶ್ವರಂ ಚಾಪಂ ಕ್ರೀಡತಾ ಲೀಲಯಾ ಪರಮ್ ॥6॥
ಮಹಾತ್ಮನಾದ ಜನಕನ ಯಜ್ಞವು ನಡೆಯುತ್ತಿರಲು ರಾಮನು ಕೇವಲ ಲೀಲೆಯಿಂದ ಆಟವಾಡುತ್ತಾ ಶಿವಧನುಸ್ಸನ್ನು ಮುರಿದನು.
ಕಸ್ಯಚಿತ್ತ್ವಥ ಕಾಲಸ್ಯ ಪಿತ್ರಾ ತತ್ರಾಭಿಚೋದಿತಃ|
ಕೈಕೇಯ್ಯಾಃ ಪ್ರಿಯಮನ್ವಿಚ್ಛನ್ ವನಮಭ್ಯವಪದ್ಯತ ॥7॥
ಸ್ವಲ್ಪ ಸಮಯದ ನಂತರ ಕೈಕೇಯಿಯ ಹಿತವನ್ನು ಬಯಿಸಿದ ತಂದೆಯಿಂದ ಪ್ರೇರಿಸಲ್ಪಟ್ಟವನಾಗಿ ವನವನ್ನು ಪ್ರವೇಶಿಸಿದನು.

ಯಃ ಸಮಾಃ ಸರ್ವಧರ್ಮಜ್ಞಃ ಚತುರ್ದಶ ವನೇ ವಸನ್ |
ಲಕ್ಷ್ಮಣಾನುಚರೋ ರಾಮಃ ಸರ್ವಭೂತಹಿತೇ ರತಃ |
ಚತುರ್ದಶ ವನೇ ತಪಶ್ಚಕ್ರೇ ತಪೋ ವರ್ಷಾಣಿ ಭಾರತ ॥8॥
ಎಲೈ ಭಾರತನೇ! ಸರ್ವಧರ್ಮಜ್ಞನಾದ ಅವನು ಹದಿನಾಲ್ಕು ವರ್ಷಗಳಕಾಲ ಲಕ್ಷ್ಮಣನಿಂದ ಹಿಂಬಾಲಿಸಲ್ಪಟ್ಟು ಸರ್ವಭೂತಹಿತರತನಾಗಿ ವನದಲ್ಲಿ ಸಂಚರಿಸುತ್ತಾ ತಪಸ್ಸನ್ನು ಆಚರಿಸಿದನು.
ರೂಪಿಣೀ ಯಸ್ಯ ಪಾರ್ಶ್ವಸ್ಥಾ ಸೀತೇತ್ಯಭಿಹಿತಾ ಜನೈಃ |
ಪೂರ್ವೋಚಿತತ್ವಾತ್ ಸಾ ಲಕ್ಷ್ಮೀರ್ಭರ್ತಾರಮನುಶೋಚತೀ |
ಜನಸ್ಥಾನೇ ವಸನ್ ಕಾರ್ಯಂ ತ್ರಿದಶಾನಾಂ ಚಕಾರ ಸಃ ॥9॥
ಸೌಂದರ್ಯವತಿಯಾದ ಅವನ ಪಾರ್ಶ್ವದಲ್ಲಿ ಜನರಿಂದ ಸೀತಾ ಎಂಬ ನಾಮದಿಂದ ಅಭಿವಿಖ್ಯಾತಳಾದ ಅನಾದಿಕಾಲದಿಂದಲೂ ಅವನಿಗೆ ಯೋಗ್ಯಳಾದ ಪತ್ನಿಯಾದ ಲಕ್ಷ್ಮಿಯು ತನ್ನ ಪತಿಯನ್ನು ಹಿಂಬಾಲಿಸಿ ಕಲ್ಲು ಮುಳ್ಳುಗಳ ಮೇಲೆ ನಡೆದು ಶೋಕವನ್ನು ಪ್ರದರ್ಶಿಸಿದಳು. ರಾಮನು ಜನಸ್ಥಾನದಲ್ಲಿ ವಾಸಮಾಡುತ್ತಾ ದೇವತೆಗಳ ಕಾರ್ಯವನ್ನು ಮಾಡಿದನು.
ಮಾರೀಚಂ ದೂಷಣಂ ಹತ್ವಾ ಖರಂ ತ್ರಿಶಿರಸಂ ತಥಾ |
ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಮ್ |
ಜಘಾನ ರಾಮೋ ಧರ್ಮಾತ್ಮಾ ಪ್ರಜಾನಾಂ ಹಿತಕಾಮ್ಯಯಾ ॥10॥
ಧರ್ಮಾತ್ಮನಾದ ರಾಮನು ಪ್ರಜೆಗಳ ಹಿತವನ್ನು ಬಯಸಿ ಮಾರೀಚನನ್ನೂ ದೂಷಣನನ್ನೂ ಖರನನ್ನೂ ತ್ರಿಶಿರಸನನ್ನೂ ಸಂಹರಿಸಿ ಹದಿನಾಲ್ಕು ಸಹಸ್ರ ಸಂಖ್ಯೆಯಲ್ಲಿದ್ದ ಉಗ್ರಕರ್ಮಿಗಳಾದ ರಾಕ್ಷಸರನ್ನು ಸಂಹರಿಸಿದನು.
ವಿರಾಧಂ ಚ ಕಬಂಧಂ ಚ ರಾಕ್ಷಸೌ ಘೋರದರ್ಶನೌ |
ಜಘಾನ ಚ ತದಾ ರಾಮೋ ಗಂಧರ್ವೌ ಶಾಪವಿಕ್ಷತೌ ॥11॥
ಆಗ ರಾಮನು ಶಾಪಕ್ಕೆ ಒಳಗಾಗಿ ರಾಕ್ಷಸಯೋನಿಯಲ್ಲಿ ಜನಿಸಿ ಭಯಂಕರ ಆಕೃತಿಯನ್ನು ಹೊಂದಿದ್ದ ವಿರಾಧ ಮತ್ತು ಕಬಂಧ ಎಂಬ ಇಬ್ಬರು ಗಂಧರ್ವರನ್ನು ಸಂಹರಿಸಿದನು.
ಸ ರಾವಣಸ್ಯ ಭಗಿನೀಂ ನಾಸಾಚ್ಛೇದಮಕಾರಯತ್ |
ಭಾರ್ಯಾವಿಯೋಗಂ ತಂ ಪ್ರಾಪ್ಯ ಮೃಗಯನ್ ವಿಚರದ್ ವನಮ್ ॥12॥
ಅವನು ರಾವಣನ ತಂಗಿಗೆ ಲಕ್ಷ್ಮಣನಿಂದ ನಾಸಾಭೇದವನ್ನು ಮಾಡಿಸಿದನು. ಅನಂತರ ಭಾರ್ಯೆಯ ವಿಯೋಗವನ್ನು ಹೊಂದಿ ಸೀತೆಯನ್ನು ಹುಡುಕುತ್ತಾ ವನದಲ್ಲಿ ಸಂಚರಿಸಿದನು.
ತತಸ್ತಮೃಶ್ಯಮೂಕಂ ಸ ಗತ್ವಾ ಪಂಪಾಮತೀತ್ಯ ಚ |
ಸುಗ್ರೀವಂ ಮಾರುತಿಂ ದೃಷ್ಟ್ವಾ ಚಕ್ರೇ ಮೈತ್ರೀಂ ತಯೋಃ ಸ ವೈ ॥13॥
ಅನಂತರ ಅವನು ಪ್ರಸಿದ್ಧವಾದ ಋಷ್ಯಮೂಕ ಪರ್ವತಕ್ಕೆ ಹೋಗಿ ಪಂಪಾಸರೋವರವನ್ನು ದಾಟಿ ಸುಗ್ರೀವನನ್ನು ಮತ್ತು ಹನುಮಂತನನ್ನು ನೋಡಿ ಅವರ ಜೊತೆಯಲ್ಲಿ ಸ್ನೇಹವನ್ನು ಮಾಡಿದನು.
ಅಥ ಗತ್ವಾ ಸ ಕಿಷ್ಕಿಂಧಾಂ ಸುಗ್ರೀವೇಣ ತದಾ ಸಹ |
ನಿಹತ್ಯ ವಾಲಿನಂ ಯುದ್ಧೇ ವಾನರೇಂದ್ರಂ ಮಹಾಬಲಮ್ |
ಅಭ್ಯಷಿಂಚತ್ ತದಾ ರಾಮಃ ಸುಗ್ರೀವಂ ವಾನರೇಶ್ವರಮ್ ॥14॥
ರಾಮನು ಅನಂತರ ಸುಗ್ರಿವನ ಜೊತೆಯಲ್ಲಿ ಕಿಷ್ಕಿಂಧಕ್ಕೆ ಹೋಗಿ ವಾನರೇಂದ್ರನೂ, ಮಹಾಬಲನೂ ಆದ ವಾಲಿಯನ್ನು ಯುದ್ಧದಲ್ಲಿ ಕೊಂದು ಸುಗ್ರೀವನನ್ನು ವಾನರಾಧಿಪತಿಯಾಗಿ ಅಭಿಷೇಕ ಮಾಡಿದನು.
ತತಃ ಸ ವೀರ್ಯವಾನ್ ರಾಜನ್ ತ್ವರಯಾ ವೈ ಸಮುತ್ಸುಕಃ |
ವಿಚಿತ್ಯ ವಾಯುಪುತ್ರೇಣ ಲಂಕಾದೇಶಂ ನಿವೇದಿತಮ್ ॥15॥
ಸೇತುಂ ಬದ್ಧ್ವಾ ಸಮುದ್ರಸ್ಯ ವಾನರೈಃ ಸಹಿತಸ್ತದಾ |
ಸೀತಾಯಾಃ ಪದಮನ್ವಿಚ್ಛನ್ ರಾಮೋ ಲಂಕಾಂ ವಿವೇಶ ಹ ॥16॥
ರಾಜನೇ! ಅನಂತರ ಪರಾಕ್ರಮಶಾಲಿಯಾದ ರಾಮನು ತ್ವರೆಯಿಂದಲೂ ಔತ್ಸುಕ್ಯದಿಂದಲೂ ಕೂಡಿದವನಾಗಿ ವಾಯುಪುತ್ರನಾದ ಹನುಮಂತನಿಂದ ಹುಡುಕಿ ನಿವೇದಿಸಿಲ್ಪಟ್ಟ ಲಂಕಾದೇಶವನ್ನು ಕುರಿತು ಪ್ರಯಾಣವನ್ನು ಮಾಡಲು ವಾನರರ ಸಹಾಯದಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಸೀತೆಯ ಸ್ಥಾನವನ್ನು ಹುಡುಕುತ್ತಾ ಲಂಕೆಯನ್ನು ಪ್ರವೇಶಿಸಿದನು.
ದೇವೋರಗಗಣಾನಾಂ ಹಿ ಯಕ್ಷರಾಕ್ಷಸಪಕ್ಷಿಣಾಮ್ |
ತತ್ರಾವಧ್ಯಂ ರಾಕ್ಷಸೇಂದ್ರಂ ರಾವಣಂ ಯುಧಿ ದುರ್ಜಯಮ್ ॥17॥
ಗುಪ್ತಂ ರಾಕ್ಷಸಕೋಟೀಭಿರ್ಭಿನ್ನಾಂಜನಚಯೋಪಮಮ್ |
ದುರ್ನಿರೀಕ್ಷ್ಯಂ ಸುರಗಣೈರ್ವರದಾನೇನ ದರ್ಪಿತಮ್ |
ಜಘಾನ ಸಚಿವೈಃ ಸಾರ್ಧಂ ಸಾನ್ವಯಂ ರಾವಣಂ ರಣೇ ॥18॥
ದೇವೋರಗಸಮೂಹಗಳಿಂದಲೂ ಯಕ್ಷರಾಕ್ಷಸಪಕ್ಷಿಗಳಿಂದಲೂ ಅವಧ್ಯನಾದಂತಹ, ಯುದ್ಧದಲ್ಲಿ ದುರ್ಜಯನಾದಂತಹ, ಕೋಟಿರಾಕ್ಷಸರಿಂದ ಗುಪ್ತನಾಗಿದ್ದಂತಹ, ಕಾಡಿಗೆಯಂತಹ ಕಪ್ಪು ಬಣ್ಣದಿಂದ ಕೂಡಿದ್ದಂತಹ, ನೋಡಲು ಅಸಾಧ್ಯವಾದಂತಹ, ದೇವತೆಗಳ ವರದಿಂದ ದರ್ಪಿಷ್ಠನಾದಂತಹ, ರಾವಣನನ್ನು ಅವನ ಸಚಿವರ ಮತ್ತು ವಂಶದವರ ಜೊತೆಯಲ್ಲಿ ಯುದ್ಧದಲ್ಲಿ ಸಂಹರಿಸಿದನು.
ತ್ರೈಲೋಕ್ಯಕಂಟಕಂ ವೀರಂ ಮಹಾಕಾಯಂ ಮಹಾಬಲಮ್ |

ರಾವಣಂ ಸಗಣಂ ಹತ್ವಾ ರಾಮೋ ಭೂತಪತಿಃ ಪುರಾ ॥19॥
ಲಂಕಾಯಾಂ ತಂ ಮಹಾತ್ಮಾನಂ ರಾಕ್ಷಸೇಂದ್ರಂ ವಿಭೀಷಣಮ್ |
ಅಭಿಷಿಚ್ಯ ಚ ತತ್ರೈವ ಅಮರತ್ವಂ ದದೌ ತದಾ ॥20॥
ತ್ರೈಲೋಕ್ಯಕಂಟಕನೂ ಮಹಾಕಾಯನೂ ಮಹಾಬಲನೂ ವೀರನೂ ಆದ ರಾವಣನನ್ನು ಭೂತಪತಿಯಾದ ರಾಮನು ಅವನ ಪರಿವಾರದಸಹಿತವಾಗಿ ಸಂಹರಿಸಿ ಲಂಕೆಯಲ್ಲಿ ಮಹಾತ್ಮನಾದ ರಾಕ್ಷಸೇಂದ್ರನಾದ ವಿಭೀಷಣನಿಗೆ ಅಬಿಷೇಕವನ್ನು ಮಾಡಿ ಆಗ ಅವನಿಗೆ ಅಮರತ್ವವನ್ನು ಕೊಟ್ಟನು.
ಆರುಹ್ಯ ಪುಷ್ಪಕಂ ರಾಮಃ ಸೀತಾಮಾದಾಯ ಪಾಂಡವ |
ಸಬಲಃ ಸ್ವಪುರಂ ಗತ್ವಾ ಧರ್ಮರಾಜ್ಯಮಪಾಲಯತ್ ॥21॥
ಎಲೈ ಪಾಂಡವನೇ! ರಾಮನು ಸೀತೆಯನ್ನು ಕರೆದುಕೊಂಡು ಪುಷ್ಪಕ ವಿಮಾನವನ್ನು ಏರಿ ತನ್ನ ಸೈನ್ಯದೊಂದಿಗೆ ತನ್ನ ಪಟ್ಟಣವಾದ ಅಯೋದ್ಯಗೆ ಹಿಂತಿರುಗಿ ಧರ್ಮದಿಂದ ರಾಜ್ಯವನ್ನು ಪಾಲಿಸಿದನು.
ದಾನವೋ ಲವಣೋ ನಾಮ ಮಧೋಃ ಪುತ್ರೋ ಮಹಾಬಲಃ |
ಶತ್ರುಘ್ನೇನ ಹತೋ ರಾಜನ್ ತತೋ ರಾಮಸ್ಯ ಶಾಸನಾತ್ ॥22॥
ರಾಜನೇ! ರಾಮನ ಶಾಸನದಂತೆ ಮಧುವಿನ ಮಗನಾದ ಮಹಾಬಲನಾದ ಲವಣಾಸುರನು ಶತ್ರುಘ್ನನಿಂದ ಕೊಲ್ಲಲ್ಪಟ್ಟನು.
ಏವಂ ಬಹೂನಿ ಕರ್ಮಾಣಿ ಕೃತ್ವಾ ಲೋಕಹಿತಾಯ ಸಃ |
ರಾಜ್ಯಂ ಚಕಾರ ವಿಧಿವದ್ ರಾಮೋ ಧರ್ಮಭೃತಾಂ ವರಃ ॥23॥
ಹೀಗೆ ಲೋಕಹಿತಕ್ಕಾಗಿ ಅನೇಕವಿಧವಾದ ಕರ್ಮಗಳನ್ನು ಮಾಡಿ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ರಾಮನು ವಿಧಿ ಪೂರ್ವಕವಾಗಿ ರಾಜ್ಯವನ್ನು ಆಳಿದನು.
ದಶಾಶ್ವಮೇಧಾನಾಜಹ್ರೇ ಜಾರುಧ್ಯಾಂ ಸ ನಿರರ್ಗಲಾನ್ ॥24॥
ಸರಯೂತೀರವಾದ ಜಾರುಧಿ ಎಂಬ ಪ್ರದೇಶದಲ್ಲಿ ನಿರಾತಂಕವಾದ ಹತ್ತು ಅಶ್ವಮೇಧಯಾಗಗಳನ್ನು ಮಾಡಿದನು.
ನಾಶ್ರೂಯನ್ತಾಶುಭಾ ವಾಚೋ ನಾತ್ಯಯಃ ಪ್ರಾಣಿನಾಂ ತದಾ |
ನ ವಿತ್ತಜಂ ಭಯಂ ಚಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥25॥
ರಾಮನು ರಾಜ್ಯವನ್ನು ಆಳುತ್ತಿರುವಾಗ ಕೆಟ್ಟ ಮಾತುಗಳು ಎಲ್ಲಿಯೂ ಕೇಳಿ ಬರುತ್ತಿರಲಿಲ್ಲ. ಅನಾವಶ್ಯಕವಾಗಿ ಪ್ರಾಣಿಗಳ ಸಂಹಾರವಾಗುತ್ತಿರಲಿಲ್ಲ. ಯಾರಿಗೂ ಧನ ನಿಮಿತ್ತವಾದ ಭಯವು ಇರಲಿಲ್ಲ.
ಪ್ರಾಣಿನಾಂ ಚ ಭಯಂ ನಾಸೀತ್ ಜಲಾನಲವಿಧಾನಜಮ್ |
ಪರ್ಯದೇವನ್ ನ ವಿಧವಾ ನಾಭಾರ್ಯಃ ಕಶ್ಚನಾಭವತ್ |
ಸರ್ವಮಾಸೀತ್ ತದಾ ತೃಪ್ತಂ ರಾಮೇ ರಾಜ್ಯಂ ಪ್ರಶಾಸತಿ ॥26॥
ರಾಮನು ರಾಜ್ಯವನ್ನು ಆಳುತ್ತಿರುವಾಗ ಪ್ರಾಣಿಗಳಿಗೆ ಭಯವಾಗಲೀ ಜಲಭಯವಾಗಲೀ ಅಥವಾ ಅಗ್ನಿಭಯವಾಗಲೀ ಇರಲಿಲ್ಲ. ದೇವರಿಲ್ಲದ ಮನೆಯೂ ಇರಲಿಲ್ಲ. ಪ್ರಲಾಪಮಾಡುವಂತಹ ವಿಧವೆಯರು ಇರಲಿಲ್ಲ. ಪತ್ನಿಹೀನರಾದವರೂ ಇರಲಿಲ್ಲ. ಎಲ್ಲರೂ ತೃಪ್ತರಾಗಿದ್ದರು.
ನ ಸಂಕರಕರಾ ವರ್ಣಾ ನಾಕೃಷ್ಟಾಕರಕೋ ಜನಃ |
ನ ಚ ಸ್ಮ ವೃದ್ಧಾ ಬಾಲಾನಾಂ ಪ್ರೇತಕಾರ್ಯಾಣಿ ಕುರ್ವತೇ ॥27॥
ವರ್ಣಸಂಕರವನ್ನು ಮಾಡುವವರು ಇರಲಿಲ್ಲ. ವ್ಯವಸಾಯವನ್ನು ಮಾಡದಿದ್ದವನಿಂದ ಧಾನ್ಯವನ್ನು ಸಂಗ್ರಹಿಸುವವರು ಇರಲಿಲ್ಲ. ವೃದ್ಧರಾದವರು ತಮಗಿಂತ ಚಿಕ್ಕವರಿಗೆ ಪ್ರೇತಕಾರ್ಯಗಳನ್ನು ಮಾಡುತ್ತಿರಲಿಲ್ಲ.
ವಿಶಃ ಪರ್ಯಚರನ್ ಕ್ಷತ್ರಂ ಕ್ಷತ್ರಂ ನಾಪೀಡಯದ್ ದ್ವಿಜಃ |
ನರಾ ನಾತ್ಯಚರನ್ ಭಾರ್ಯಾ ಭಾರ್ಯಾ ನಾತ್ಯಚರನ್ ಪತೀನ್ |
ನಾಸೀದಪಕೃಷಿರ್ಯೋಗೇ ರಾಮೇ ರಾಜ್ಯಂ ಪ್ರಶಾಸತಿ ॥28॥
ರಾಮನು ರಾಜ್ಯವನ್ನು ಆಳುತ್ತಿರುವಾಗ ವೈಶ್ಯರು ಕ್ಷತ್ರಿಯರ ಸೇವೆಯನ್ನು ಮಾಡುತ್ತಿದ್ದರು. ಕ್ಷತ್ರಿಯರು ಬ್ರಾಹ್ಮಣರನ್ನು ಪೀಡಿಸುತ್ತಿರಲಿಲ್ಲ. ಪುರುಷರು ತಮ್ಮ ಪತ್ನಿಯರನ್ನು ಮೀರಿ ನಡೆಯುತ್ತಿರಲಿಲ್ಲ. ಸ್ತ್ರೀಯರೂ ಸಹ ತಮ್ಮ ಪತಿಗಳನ್ನು ಮೀರಿ ನಡೆಯುತ್ತಿರಲಿಲ್ಲ. ಯೋಗಾಭ್ಯಾಸರಲ್ಲಿ ನಿರತರಾಗದವರು ಇರಲಿಲ್ಲ.
ಆಸನ್ ವರ್ಷಸಹಸ್ರಾಣಿ ತಥಾ ಪುತ್ರಸಹಸ್ರಿಣಃ |
ಅರೋಗಾಃ ಪ್ರಾಣಿನಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ ॥29॥
ರಾಮನು ರಾಜ್ಯವನ್ನು ಆಳುತ್ತಿರಲು ಎಲ್ಲರೂ ಸಹಸ್ರವರ್ಷ ಬದುಕಿರುತ್ತಿದ್ದರು. ಸಹಸ್ರ ಪುತ್ರರನ್ನು ಹೊಂದಿ ಎಲ್ಲರೂ ರೋಗರಹಿತರಾಗಿ ಇರುತ್ತಿದ್ದರು. ಪ್ರಾಣಿಗಳೂ ರೋಗರಹಿತವಾಗಿದ್ದವು.
ಋಷೀಣಾಂ ದೇವತಾನಾಂ ಚ ಮನುಷ್ಯಾಣಾಂ ತಥೈವ ಚ |
ಪೃಥಿವ್ಯಾಂ ಸಹವಾಸೋಽಭೂದ್ ರಾಮೇ ರಾಜ್ಯಂ ಪ್ರಶಾಸತಿ ॥30॥
ರಾಮನು ರಾಜ್ಯವಾಳುತ್ತಿರಲು ಭೂಲೋಕದಲ್ಲಿ ಋಷಿಗಳಿಗೆ ದೇವತೆಗಳಿಗೆ ಮತ್ತು ಮನುಷ್ಯರಿಗೆ ಒಟ್ಟಿಗೆ ವಾಸವು ಉಂಟಾಯಿತು.
ಸರ್ವೇ ಹ್ಯಾಸಂಸ್ತೃಪ್ತರೂಪಾಸ್ತದಾ ತಸ್ಮಿನ್ ವಿಶಾಂಪತೇ |
ಧರ್ಮೇಣ ಪೃಥಿವೀಂ ಸರ್ವಾಮನುಶಾಸತಿ ಭೂಮಿಪೇ ॥31॥
ಎಲೈ ರಾಜನೇ! ಭೂಪಾಲನಾದ ರಾಮನು ಧರ್ಮದಿಂದ ಭೂಮಿಯನ್ನು ಆಳುತ್ತಿರಲು ಎಲ್ಲರೂ ತೃಪ್ತರಾಗಿದ್ದರು.
ತತಸ್ತಪಶ್ಚಾಭವತಾಂ ಧರ್ಮೋ ಧರ್ಮಭೃತಾಂ ವರ |

ಪೃಥಿವ್ಯಾಂ ಧಾರ್ಮಿಕೇ ತಸ್ಮಿನ್ ರಾಮೇ ರಾಜ್ಯಂ ಪ್ರಶಾಸತಿ ॥32॥
ಎಲೈ ರಾಜನೇ! ಧರ್ಮಿಷ್ಠರಲ್ಲಿ ಶ್ರೇಷ್ಠನಾದವನೇ! ಧಾರ್ಮಿಕನಾದ ಆ ರಾಮನು ರಾಜ್ಯವನ್ನು ಆಳುತ್ತಿರಲು ತಪಸ್ಸು ಮತ್ತು ಧರ್ಮಗಳು ಭೂಮಿಯಲ್ಲಿ ಅಭಿವೃದ್ಧಿಯನ್ನು ಹೊಂದಿದವು.
ನಾಧರ್ಮಿಷ್ಠೋ ನರಃ ಕಶ್ಚಿದ್ ಬಭೂವ ಪ್ರಾಣಿನಾಂ ಕ್ವಚಿತ್ |
ಪ್ರಾಣಾಪಾನೌ ಸಮೌ ಹ್ಯಾಸ್ತಾಂ ರಾಮೇ ರಾಜ್ಯಂ ಪ್ರಶಾಸತಿ ॥33॥
ರಾಮನು ರಾಜ್ಯವನ್ನು ಆಳುತ್ತಿರಲು ಅಧರ್ಮಿಷ್ಠನಾದ ಮನುಷ್ಯನು ಒಬ್ಬನೂ ಒರಲಿಲ್ಲ. ಪ್ರಾಣಿಗಳಿಗೂ ಪ್ರಾಣಾಪಾನಗಳು ಸಮವಾಗಿ ಸಂಚರಿಸುತ್ತಿದ್ದವು.
ಗಾಥಾಮಪ್ಯತ್ರ ಗಾಯಂತಿ ಯೇ ಪುರಾಣವಿದೋ ಜನಾಃ |
ಶ್ಯಾಮೋ ಯುವಾ ಲೋಹಿತಾಕ್ಷೋ ಮಾತಂಗಾನಾಮಿವರ್ಷಭಃ |
ಆಜಾನುಬಾಹುಃ ಸುಮುಖಃ ಸಿಂಹಸ್ಕಂಧೋ ಮಹಾಬಲಃ ॥34॥
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ |
ರಾಜ್ಯಂ ಭೋಗಂ ಚ ಸಂಪ್ರಾಪ್ಯ ಶಶಾಸ ಪೃಥಿವೀಮಿಮಾಮ್ ॥35॥
ಪುರಾಣವನ್ನು ತಿಳಿದ ಜನರು ಈ ವಿಷಯದಲ್ಲಿ ಒಂದು ಗೀತೆಯನ್ನು ಹಾಡುತ್ತಾರೆ. ಶ್ಯಾಮನೂ ಯುವಕನೂ ಲೋಹಿತಾಕ್ಷನೂ ಗಜೇಂದ್ರಗಮನನೂ ಅಜಾನುಬಾಹುವೂ ಸುಂದರ ಮುಖವುಳ್ಳವನೂ ಸಿಂಹಸ್ಕಂಧನೂ ಮಹಾಬಲನೂ ಆದ ರಾಮನು ರಾಜ್ಯವನ್ನೂ ಭೋಗವನ್ನೂ ಪಡೆದು ಹನ್ನೊಂದು ಸಾವಿರ ವರ್ಷಗಳಕಾಲ ಈ ಭೂಮಿಯನ್ನು ಆಳಿದನು. ( ಎಂಬ ಗೀತೆಯನ್ನು ಹಾಡುತ್ತಾರೆ.)
ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ |
ರಾಮಭೂತಂ ಜಗದಭೂತ್ ರಾಮೇ ರಾಜ್ಯಂ ಪ್ರಶಾಸತಿ ॥36॥
ಪ್ರಜೆಗಳ ಎಲ್ಲಾ ಕಥೆಗಳು ರಾಮ ರಾಮ ರಾಮ ಎಂದೇ ಇರುತ್ತಿದ್ದವು. ರಾಮನು ರಾಜ್ಯವಾಳುತ್ತಿರುವಾಗ ಜಗತ್ತೆಲ್ಲವೂ ರಾಮ ಮಯವಾಯಿತು.
ಋಗ್ಯಜುಸ್ಸಾಮಹೀನಾಶ್ಚ ನ ತದಾಽಽಸನ್ ದ್ವಿಜಾತಯಃ |
ಉಷಿತ್ವಾ ದಂಡಕೇ ಕಾರ್ಯಂ ತ್ರಿದಶಾನಾಂ ಚಕಾರ ಸಃ ॥37॥
ಆಗ ಋಗ್ವೇದಸಾಮವೇದಹೀನರಾದ ಬ್ರಾಹ್ಮಣರು ಯಾರೂ ಇರಲಿಲ್ಲ. ರಾಮನು ದಂಡಕಾರಣ್ಯದಲ್ಲಿ ವಾಸಿಸಿ ದೇವತೆಗಳ ಕಾರ್ಯವನ್ನು ಎಸಗಿದನು.
ಪೂರ್ವಾಪಕಾರಿಣಂ ಸಂಖ್ಯೇ ಪೌಲಸ್ತ್ಯಂ ಮನುಜರ್ಷಭಃ |
ದೇವಗಂಧರ್ವನಾಗಾನಾಮರಿಂ ಸ ನಿಜಘಾನ ಹ |
ಸತ್ವವಾನ್ ಗುಣಸಂಪನ್ನೋ ದೀಪ್ಯಮಾನಃ ಸ್ವತೇಜಸಾ ॥38॥
ಸತ್ವಶಾಲಿಯೂ ಗುಣಸಂಪನ್ನನೂ ತನ್ನ ತೇಜಸ್ಸಿನಿಂದ ಬೆಳಗುವವನೂ ಮನುಜರ್ಷಭನೂ ಆದ ರಾಮನು ದೇವಗಂಧರ್ವನಾಗಗಳ ಶತ್ರುವಾಗಿದ್ದ ತನಗೆ ಮೊದಲು ಅಪಕಾರವನ್ನು ಮಾಡಿದ್ದಂತಹ ಪೌಲಸ್ತ್ಯನಾದ ರಾವಣನನ್ನು ಯುದ್ಧದಲ್ಲಿ ಸಂಹರಿಸಿದನು.
ಏವಮೇವ ಮಹಾಬಾಹುರಿಕ್ಷ್ವಾಕುಕುಲವರ್ಧನಃ |
ರಾವಣಂ ಸಗಣಂ ಹತ್ವಾ ದಿವಮಾಕ್ರಮತಾಭಿಭೂಃ |
ಇತಿ ದಾಶರಥೇಃ ಖ್ಯಾತಃ ಪ್ರಾದುರ್ಭಾವೋ ಮಹಾತ್ಮನಃ ॥39॥
ಹೀಗೆ ಇಕ್ಷ್ವಾಕು ಕುಲವರ್ಧನನಾದ ಮಹಾಬಾಹುವಾದ ರಾಮನು ಪರಿವಾರಹಿತನಾದ ರಾವಣನನ್ನು ಸಂಹರಿಸಿ ತನ್ನ ಲೋಕಕ್ಕೆ ಹೊರಟು ಹೋದನು. ಇದು ಮಹಾತ್ಮನಾದ ದಶರಥನಮಗನಾದ ರಾಮನ ಅವತಾರದ ಕಥೆ.
ತತಃ ಕೃಷ್ಣೋ ಮಹಾಬಾಹುರ್ಭೀತಾನಾಮಭಯಂಕರಃ |
ಅಷ್ಟಾವಿಂಶೇ ಯುಗೇ ರಾಜಞ್ ಜಜ್ಞೇ ಶ್ರೀವತ್ಸಲಕ್ಷಣಃ ॥40॥
ಎಲೈ ರಾಜನೇ! ಅನಂತರ ಭೀತರಿಗೆ ಅಭಯವನ್ನು ಕೊಡುವ ಮಹಾಬಾಹುವಾದ ಕೃಷ್ಣನು ಇಪ್ಪತ್ತೆಂಟನೆಯ ಯುಗದಲ್ಲಿ ಶ್ರೀವತ್ಸಾದಿ ಚಿನ್ಹೆಯನ್ನು ಧರಿಸಿ ಅವತರಿಸಿದನು.
ಪೇಶಲಶ್ಚ ವದಾನ್ಯಶ್ಚ ಲೋಕೇ ಬಹುಮತೋ ನೃಷು |
ಸ್ಮೃತಿಮಾನ್ ದೇಶಕಾಲಜ್ಞಃ ಶಂಖಚಕ್ರಗದಾಸಿಧೃತ್ ॥41॥
ವಾಸುದೇವ ಇತಿ ಖ್ಯಾತೋ ಲೋಕಾನಾಂ ಹಿತಕೃತ್ ಸದಾ |
ವೃಷ್ಣೀನಾಂ ಚ ಕುಲೇ ಜಾತೋ ಭೂಮೇಃ ಪ್ರಿಯಚಿಕೀರ್ಷಯಾ ॥42॥
ಸುಂದರನೂ ಉದಾರನೂ ಲೋಕದಲ್ಲಿ ನರರಿಂದ ಬಹುಮಾನಿಸಲ್ಪಟ್ಟವನೂ ವಿದ್ಯೆಯುಳ್ಳವನೂ ದೇಶಕಾಲಗಳನ್ನು ತಿಳಿದವನೂ ಶಂಖಚಕ್ರಗದಾಖಡ್ಗಗಳನ್ನು ಧರಿಸಿದವನೂ ಆದ ಅವನು. ಲೋಕಕ್ಕೆ ಹಿತವನ್ನು ಮಾಡುವ ಸಲುವಾಗಿ ಮತ್ತು ಭೂಮಿಗೆ ಹಿತವನ್ನು ಮಾಡುವ ಸಲುವಾಗಿ ವೃಷ್ಣಿಗಳ ಕುಲದಲ್ಲಿ ಜನಿಸಿ ವಾಸುದೇವ ಎಂಬ ಹೆಸರಿನಿಂದ ಪ್ರಖ್ಯಾತನಾದನು.
ಸ ನೃಣಾಮಭಯಂ ದಾತಾ ಮಧುಹೇತಿ ಸ ವಿಶ್ರುತಃ |
ಸಶಕ್ರೋಽರ್ಜುನರಾಮಾಭ್ಯಾಂ ಕೀಲಸ್ಥಾನಾನ್ಯಸೂದಯತ್ ॥43॥
ಮನುಷ್ಯರಿಗೆ ಅಭಯವನ್ನು ಕೊಡುವ ಮಧುಸೂದನನೆಂದು ಪ್ರಖ್ಯಾತನಾದ ಅವನು ಇಂದ್ರನ ಜೊತೆಯಲ್ಲಿ ಕೂಡಿಕೊಂಡು ಅರ್ಜುನ ಮತ್ತು ಬಲರಾಮರ ಜೊತೆಯಲ್ಲಿ ಮುಖ್ಯವಾದ ಅಧರ್ಮಸ್ಥಾನರಾದ ಅಸುರರನ್ನು ಸಂಹರಿಸಿದನು.
ಕಂಸಾದೀನ್ ನಿಜಘಾನಾಜೌ ದೈತ್ಯಾನ್ ಮಾನುಷವಿಗ್ರಹಾನ್ |

ಅಯಂ ಲೋಕಹಿತಾರ್ಥಾಯ ಪ್ರಾದುರ್ಭಾವೋ ಮಹಾತ್ಮನಃ ॥44॥
ಮನುಷ್ಯ ವೇಷವನ್ನು ಧರಿಸಿದ್ದ ಕಂಸಾದಿ ದೈತ್ಯರನ್ನು ಯುದ್ಧದಲ್ಲಿ ಸಂಹರಿಸಿದನು. ಇದು ಲೋಕಹಿತಕ್ಕಾಗಿ ಮಾಡಿದ ಆ ಮಹಾತ್ಮನ ಅವತಾರ.
ಕಲ್ಕೀ ವಿಷ್ಣುಯಶೋನಾಮ್ನೋ ಭೂಯಶ್ಚೋತ್ಪತ್ಸ್ಯತೇ ಹರಿಃ |
ಕಲೇರ್ಯುಗಾಂತೇ ಸಂಪ್ರಾಪ್ತೇ ಧರ್ಮೇ ಶಿಥಿಲತಾಂ ಗತೇ ॥45॥
ಕಲಿಯುಗದ ಕೊನೆಯಲ್ಲಿ ಧರ್ಮವು ಶೈಥಿಲ್ಯವನ್ನು ಹೊಂದಿರಲು ಹರಿಯು ಕಲ್ಕಿನಾಮಕನಾಗಿ ವಿಷ್ಣುಯಶಸ್ಸೆಂಬ ಬ್ರಾಹ್ಮಣನ ಮನೆಯಲ್ಲಿ ಮುಂದೆ ಅವತರಿಸುವನು.
ಪಾಷಂಡಿನಾಂ ಗಣಂ ಸರ್ವಂ ವಧಾರ್ಥಂ ಭರತರ್ಷಭ |
ಧರ್ಮಸ್ಯ ಚ ವಿವೃದ್ಧ್ಯರ್ಥಂ ವಿಪ್ರಾಣಾಂ ಹಿತಕಾಮ್ಯಯಾ ॥46॥
ಭರತ ಶ್ರೇಷ್ಠನೇ! ಪಾಷಂಡಿಗಣಗಳ ಸಂಹಾರಕ್ಕಾಗಿ ಧರ್ಮದ ಅಭಿವೃದ್ಧಿಗಾಗಿ ಮತ್ತು ಬ್ರಾಹ್ಮಣರಿಗೆ ಹಿತವನ್ನು ಮಾಡುವುದಕ್ಕಾಗಿ ಅವನು ಅವತರಿಸುವನು.
ಏತೇ ಚಾನ್ಯೇ ಚ ಬಹವೋ ದಿವ್ಯಾ ದೇವಗಣೈರ್ಯುತಾಃ |
ಪ್ರಾದುರ್ಭಾವಾಃ ಪುರಾಣೇಷು ಗೀಯಂತೇ ಬ್ರಹ್ಮವಾದಿಭಿಃ ॥47॥
ಇವೂ ಮತ್ತು ಇನ್ನೂ ಅನೇಕ ದೇವಗಣಗಳಿಂದ ಸಹಿತವಾದ ದಿವ್ಯವಾದ ಅವತಾರಗಳೂ ಬ್ರಹ್ಮವಾದಿಗಳಿಂದ ಪುರಾಣಗಳಲ್ಲಿ ಗಾನಮಾಡಲ್ಪಡುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಿಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಏಕಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿಯಿತು.
*****
ನಲವತ್ಮೂರನೆಯ ಅಧ್ಯಾಯ
(ಕೃಷ್ಣಾವತಾರಕ್ಕಾಗಿ ಭೂದೇವಿಯ ಪ್ರಾರ್ಥನೆ)
ವೈಶಂಪಾಯನಃ
ಏವಮುಕ್ತೋಥ ಕೌಂತೇಯಃ ತತಃ ಕೌರವನಂದನ |
ಆಬಭಾಷೇ ಪುನರ್ಭೀಷ್ಮಂ ಧರ್ಮರಾಜೋ ಯುಧಿಷ್ಠಿರಃ ॥1॥
ಕೌರವನಂದನನೇ! ಭೀಷ್ಮರಿಂದ ಹೀಗೆ ಹೇಳಲ್ಪಟ್ಟ ಧರ್ಮರಾಜನು ಪುನಃ ಭೀಷ್ಮರನ್ನು ಕುರಿತು ಮಾತನಾಡಿದನು.
ಭೂಯ ಏವ ಮನುಷ್ಯೇಂದ್ರ ಉಪೇಂದ್ರಸ್ಯ ಯಶಸ್ವಿನಃ |
ಜನ್ಮ ವೃಷ್ಣಿಷು ವಿಜ್ಞಾತುಮಿಚ್ಛಾಮಿ ವದತಾಂ ವರ ॥2॥
ಮನುಷ್ಯಶ್ರೇಷ್ಠನೇ! ಮಾತನಾಡುವವರಲ್ಲಿ ಶ್ರೇಷ್ಠನೇ! ಕೀರ್ತಿಶಾಲಿಯಾದ ಉಪೇಂದ್ರನು ವೃಷ್ಣಿಕುಲದಲ್ಲಿ ಅವತಾರಮಾಡಿದ ಕಥೆಯನ್ನು ಪುನಃ ಕೇಳಲು ಬಯಸುತ್ತೇನೆ.
ಯಥೈವ ಭಗವಾನ್ ಜಾತಃ ಕ್ಷಿತಾವಿಹ ಜನಾರ್ದನಃ |
ಮಾಧವೇಷು ಮಹಾಬುದ್ಧಿಸ್ತನ್ಮೇ ಬ್ರೂಹಿ ಪಿತಾಮಹ ॥3॥
ಪಿತಾಮಹನೇ! ಭಗವಂತನಾದ ಮಹಾಮೇಧಾವಿಯಾದ ಜನಾರ್ದನನು ಈ ಭೂಮಿಯಲ್ಲಿ ಮಧುಕುಲದಲ್ಲಿ ಹೇಗೆ ಅವತರಿಸಿದನೆಂದು ನನಗೆ ಹೇಳು.
ಯದರ್ಥಂ ಚ ಮಹಾತೇಜಾ ಗಾಸ್ತು ಗೋವೃಷಭೇಕ್ಷಣಃ |
ರರಕ್ಷ ಕಂಸಸ್ಯ ವಧಾಲ್ಲೋಕಾನಾಮಭಿರಕ್ಷಿತಾ ॥4॥
ವೃಷಭೇಕ್ಷಣನಾದ, ಕಂಸನ ವಧೆಯನ್ನು ಮಾಡಿ ಲೋಕಗಳನ್ನು ರಕ್ಷಿಸಿದವನೂ ಮಹಾತೇಜಸ್ವಿಯೂ ಆದ ಅವನು ಗೋವುಗಳನ್ನು ಏಕೆ ರಕ್ಷಣೆಮಾಡಿದನು?
ಕ್ರೀಡತಾ ಚೈವ ಯದ್ಬಾಲ್ಯೇ ಗೋವಿಂದೇನ ವಿಚೇಷ್ಟಿತಮ್ |
ತದಾ ಮತಿಮತಾಂ ಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ॥5॥
ಪಿತಾಮಹನೇ! ಮೇಧಾವಿಗಳಲ್ಲಿ ಶ್ರೇಷ್ಠನಾದವನೇ! ಗೋವಿಂದನು ಬಾಲಕ್ರೀಡೆಗಳನ್ನು ಆಡುತ್ತಾ ಮಾಡಿದ ಕಾರ್ಯಗಳನ್ನು ನನಗೆ ಹೇಳು.
ಏವಮುಕ್ತಸ್ತತೋ ಭೀಷ್ಮಃ ಕೇಶವಸ್ಯ ಮಹಾತ್ಮನಃ |
ಮಾಧವೇಷು ಯಥಾ ಜನ್ಮ ಕಥಯಾಮಾಸ ವೀರ್ಯವಾನ್ ॥6॥
ಹೀಗೆ ಕೇಳಲ್ಪಟ್ಟ ಪರಾಕ್ರಮಶಾಲಿಯಾದ ಭೀಷ್ಮನು ಮಹಾತ್ಮನಾದ ಕೇಶವನು ಮಧುಕುಲದಲ್ಲಿ ಹೇಗೆ ಅವತರಿಸಿದನೆಂದು ಹೇಳಿದನು.
ಭೀಷ್ಮಃ
ಹಂತ ತೇ ಕಥಯಿಷ್ಯಾಮಿ ಯುಧಿಷ್ಠಿರ ಯಥಾತಥಮ್ |
ಯತೋ ನಾರಾಯಣಸ್ಯೇಹ ಜನ್ಮ ವೃಷ್ಣಿಷು ಕೌರವ ॥7॥
ಯುಧಿಷ್ಠಿರನೇ! ಕೌರವನೇ! ನಾರಾಯಣನು ವೃಷ್ಣಿಕುಲದಲ್ಲಿ ಹೇಗೆ ಅವತಾರಮಾಡಿದನೆಂದು ಸಂತೋಷದಿಂದ ಯಥಾರ್ಥವಾಗಿ ಹೇಳುವೆನು.

ಪುರಾ ಲೋಕೇ ಮಹಾರಾಜ ವರ್ತಮಾನೇ ಕೃತೇ ಯುಗೇ |
ಆಸೀತ್ ತ್ರೈಲೋಕ್ಯವಿಖ್ಯಾತಃ ಸಂಗ್ರಾಮಸ್ತಾರಕಾಮಯಃ ॥8॥
ಮಹಾರಾಜನೇ! ಹಿಂದೆ ಕೃತಯುಗದಲ್ಲಿ ಮೂರು ಲೋಕಗಳಿಲ್ಲಿಯೂ ಪ್ರಖ್ಯಾತವಾದ ತಾರಕಾಮಯವಾದ ದೇವಾಸುರ ಸಂಗ್ರಾಮವು ನಡೆಯಿತು.
ವಿರೋಚನೋ ಮಯಸ್ತಾರೋ ವರಾಹಃ ಶ್ವೇತ ಏವ ಚ |
ಲಂಬಃ ಕಿಶೋರಃ ಸ್ವರ್ಭಾನುರರಿಷ್ಟೋಽಥ ಕ್ಷರಶ್ಚ ವೈ ॥9॥
ಏತೇ ಚಾನ್ಯೇ ಚ ಬಹವೋ ದೈತ್ಯಸಂಘಾಃ ಸಹಸ್ರಶಃ |
ನಾನಾಶಸ್ತ್ರಧರಾ ರಾಜನ್ ನಾನಾಭೂಷಣವಾಹನಾಃ |
ದೇವತಾನಾಮಭಿಮುಖಾಃ ತಸ್ಥುರ್ದೈತೇಯದಾನವಾಃ ॥10॥
ಎಲೈ ರಾಜನೇ! ವಿರೋಚನ ಮಯ ತಾರ ವರಾಹ ಶ್ವೇತ ಲಂಭ ಕಿಶೋರ ರಾಹು ಅರಿಷ್ಟ ಕ್ಷರ ಇವರೇ ಮೊದಲಾದ ದೈತ್ಯಸಮೂಹಗಳು ಸಹಸ್ರಸಂಖ್ಯೆಯಲ್ಲಿ ನಾನಾಭೂಷಣಗಳಿಂದ ಭೂಷಿತರಾಗಿ ನಾನಾವಾಹನಗಳನ್ನು ಸ್ವೀಕರಿಸಿ ನಾನಾ ಶಸ್ತ್ರಗಳನ್ನು ಹಿಡಿದು ದೇವತೆಗಳಿಗೆ ಅಭಿಮುಖವಾಗಿ ಯುದ್ಧದಲ್ಲಿ ನಿಂತರು.
ದೇವಾಸ್ತು ಯುಧ್ಯಮಾನಾಸ್ತೇ ದಾನವಾನಭಿಯೂ ರಣೇ |
ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿಶ್ವೇ ಮರುದ್ಗಣಾಃ |
ಇಂದ್ರೋ ಯಮಶ್ಚ ಚಂದ್ರಶ್ಚ ವರುಣೋಽಥ ಧನೇಶ್ವರಃ ॥11॥
ಅಶ್ವಿನೌ ಚ ಮಹಾವೀರ್ಯೌ ಯೇ ಚಾನ್ಯೇ ದೇವತಾಗಣಾಃ |
ಚಕ್ರುರ್ಯುದ್ಧಂ ಮಹಾಘೋರಂ ದಾನವೈಶ್ಚ ಯಥಾಬಲಮ್ ॥12॥
ದೇವತೆಗಳು ದಾನವರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಅವರು ದಾನವರಿಗೆ ಅಭಿಮುಖವಾಗಿ ಆಕ್ರಮಿಸಿದರು. ಆದಿತ್ಯರು ವಸುಗಳು ರುದ್ರರು ಸಾಧರು ವಿಶ್ವೇದೇವತೆಗಳು ಮರುದ್ಗಣಗಳು ಇಂದ್ರ ಯಮ ಚಂದ್ರ ವರುಣ ಕುಬೇರ ಪರಾಕ್ರಮಶಾಲಿಗಳಾದ ಅಶ್ವಿನೀ ದೇವತೆಗಳು ಮತ್ತು ಉಳಿದ ದೇವತಾಗಣಗಳೂ ಸಹ ದಾನವರ ಜೊತೆಯಲ್ಲಿ ತಮ್ಮ ತಮ್ಮ ಶಕ್ತಿಗೆ ಅನುಗುಣವಾಗಿ ಘೋರವಾದ ಯುದ್ಧವನ್ನು ಮಾಡಿದವು.
ಯುಧ್ಯಮಾನಾಃ ಸಮೀಯುಶ್ಚ ದೇವಾ ದೈತೇಯದಾನವೈಃ |
ತದ್ಯುದ್ಧಮಭವದ್ ಘೋರಂ ದೇವದಾನವಸಂಕುಲಮ್ ॥13॥
ದೇವತೆಗಳು ಮತ್ತು ದೈತ್ಯದಾನವರು ಯುದ್ಧವನ್ನು ಮಾಡುತ್ತಾ ಪರಸ್ಪರ ಸಂಧಿಸಿದರು. ದೇವದಾನವ ಕ್ಷಯಕ್ಕೆ ಕಾರಣವಾದ ಘೋರವಾದ ಆ ಯುದ್ಧವು ನಡೆಯಿತು.
ತಾಭ್ಯಾಂ ಬಲಾಭ್ಯಾಂ ಸಂಜಜ್ಞೇ ತುಮುಲೋ ವಿಗ್ರಹಸ್ತದಾ |
ತೀಕ್ಷ್ಣೈಃ ಶಸ್ತ್ರೈಃ ಕಿರಂತೋಽಥ ಅಭ್ಯಯುರ್ದೇವದಾನವಾಃ ॥14॥
ಆ ಎರಡು ಸೈನ್ಯಗಳ ನಡುವೆ ಆಗ ಘೋರವಾದ ಯುದ್ಧವು ನಡೆಯಿತು. ದೇವತೆಗಳು ಮತ್ತು ದಾನವರು ತೀಕ್ಷ್ಣವಾದ ಆಯುಧಗಳನ್ನು ಪ್ರಯೋಗಿಸುತ್ತಾ ಒಬ್ಬರ ಮೇಲೆ ಒಬ್ಬರು ಮುಂದುವರೆದರು.
ಘ್ನಂತಿ ದೇವಾನ್ ಸಗಂಧರ್ವಾನ್ ಸಯಕ್ಷೋರಗಚಾರಣಾನ್ |
ದುದ್ರುವುಃ ಸಂಪರಿಶ್ರಾಂತಾಃ ಕ್ಷೀಣಪ್ರಹರಣಾ ರಣೇ ॥15॥
ದಾನವರು ದೇವತೆಗಳನ್ನೂ ಗಂಧರ್ವರನ್ನೂ ಯಕ್ಷರನ್ನೂ ಚಾರಣರನ್ನೂ ಸಂಹರಿಸುತ್ತಿರಲು ಯುದ್ಧದಲ್ಲಿ ತಮ್ಮ ಆಯುಧಗಳನ್ನೆಲ್ಲಾ ಬರಿದುಮಾಡಿಕೊಂಡು ದಣಿದ ದೇವತೆಗಳು ಓಡಿ ಹೋದರು.
ತೇ ವಧ್ಯಮಾನಾ ದೈತೇಯೈರ್ದೇವಸಂಘಾಸ್ತದಾ ರಣೇ |
ತ್ರಾತಾರಂ ಮನಸಾ ಜಗ್ಮುರ್ದೇವಂ ನಾರಾಯಣಂ ಪ್ರಭುಮ್ ॥16॥
ದೈತ್ಯದಾನವರಿಂದ ಯುದ್ಧದಲ್ಲಿ ಹೀಗೆ ಪ್ರಹಾರಗಳಿಗೆ ಸಿಕ್ಕಿದ ದೇವತೆಗಳು ಸ್ವಾಮಿಯಾದ ದೇವನಾದ ನಾರಾಯಣನನ್ನು ರಕ್ಷಣೆಗಾಗಿ ಮನಸ್ಸಿನಲ್ಲಿ ಸ್ಮರಿಸಿದರು.
ಏತಸ್ಮಿನ್ನಂತರೇ ತತ್ರ ಜಗಾಮ ಹರಿರೀಶ್ವರಃ |
ದೀಪಯನ್ ಜ್ಯೋತಿಷಾ ಭೂಮಿಂ ಶಂಖಚಕ್ರಗದಾಧರಃ ॥17॥
ಈ ಮಧ್ಯದಲ್ಲಿ ಪ್ರಭುವಾದ ಶಂಖಚಕ್ರಗದಾಧರನಾದ ಸರ್ವೇಶ್ವರನಾದ ಹರಿಯು ತನ್ನ ಕಾಂತಿಯಿಂದ ಭೂಮಿಯನ್ನು ಬೆಳಗುತ್ತಾ ಅಲ್ಲಿಗೆ ಬಂದನು.
ತಮಾಗತಂ ಸುಪರ್ಣಸ್ಥಂ ವಿಷ್ಣುಂ ಲೋಕನಮಸ್ಕೃತಮ್ |
ದೃಷ್ಟ್ವಾ ಮುದಾ ಯುತಾಃ ಸರ್ವೇ ಭಯಂ ತ್ಯಜ್ಯ ರಣೇ ಸುರಾಃ|
ಚಕ್ರುರ್ಯುದ್ಧಂ ಪುನಃ ಸರ್ವೇ ದೇವಾ ದೈತೇಯದಾನವೈಃ ॥18॥
ಲೋಕನಮಸ್ಕೃತನಾದ ವಿಷ್ಣುವು ಗರುಡಾರೂಢನಾಗಿ ಅಲ್ಲಿಗೆ ಬಂದುದನ್ನು ನೋಡಿದ ದೇವತೆಗಳು ಸಂತೋಷದಿಂದ ಯುಕ್ತರಾಗಿ ಎಲ್ಲರೂ ಭಯವನ್ನು ಪರಿತ್ಯಾಗ ಮಾಡಿ ದೈತ್ಯದಾನವರ ಜೊತೆಯಲ್ಲಿ ಪುನಃ ಯುದ್ಧವನ್ನು ಮಾಡಿದರು.
ತದ್ಯುದ್ಧಮಭವದ್ ಘೋರಮಚಿಂತ್ಯಂ ರೋಮಹರ್ಷಣಮ್ |
ಜಘ್ನುರ್ದೈತ್ಯಾನ್ ರಣೇ ದೇವಾಃ ಸರ್ವೇ ಶಕ್ರಪುರೋಗಮಾಃ |
ತೇ ವಧ್ಯಮಾನಾ ವಿಬುಧೈರ್ದುದ್ರುವುರ್ದೈತ್ಯದಾನವಾಃ ॥19॥
ಆ ಯುದ್ಧವು ಅಚಿಂತ್ಯವೂ ಮತ್ತು ರೋಮಾಂಚಕಾರಿಯೂ ಮತ್ತು ಘೋರವೂ ಆಗಿದ್ದಿತು. ಇಂದ್ರನೇ ಮೊದಲಾದ ಎಲ್ಲಾ

ದೇವತೆಗಳೂ ಯುದ್ಧದಲ್ಲಿ ದೈತ್ಯರನ್ನು ಸಂಹರಿಸಿದರು ದೇವತೆಗಳ ಪ್ರಹಾರಕ್ಕೆ ಒಳಗಾದ ದೈತ್ಯದಾನವರು ಯುದ್ಧ ಭೂಮಿಯಿಂದ ಓಡಿ ಹೋದರು.
ವಿದ್ರುತಾನ್ ದಾನವಾನ್ ದೃಷ್ಟ್ವಾ ತದಾ ಭಾರತ ಸಂಯುಗೇ |
ಕಾಲನೇಮಿರಿತಿ ಖ್ಯಾತೋ ದಾನವಃ ಪ್ರತ್ಯದೃಶ್ಯತ ॥20॥
ಎಲೈ ಭಾರತನೇ! ಯುದ್ಧದಲ್ಲಿ ದಾನವರು ಪಲಾಯನ ಮಾಡುತ್ತಿರುವುದನ್ನು ನೋಡಿದ ಕಾಲನೇಮಿಯೆಂಬ ದಾನವನು ಆಗ ದೇವತೆಗಳ ಎದುರಿಗೆ ಕಾಣಿಸಿಕೊಂಡನು.
ಶತಪ್ರಹರಣೋ ಘೋರಃ ಶತಬಾಹುಃ ಶತಾನನಃ |
ಶತಶೀರ್ಷಃ ಸ್ಥಿತಃ ಶ್ರೀಮಾನ್ ಶತಶೃಂಗ ಇವಾಚಲಃ ॥21॥
ನೂರು ಶಿರಸ್ಸುಗಳನ್ನುಳ್ಳ ನೂರು ಮುಖಗಳನ್ನುಳ್ಳ ನೂರು ಬಾಹುಗಳಲ್ಲಿ ನೂರು ಆಯುಧಗಳನ್ನು ಧರಿಸಿದ ಘೋರನಾದ ಕಾಂತಿಯುಕ್ತನಾದ ಅವನು ನೂರು ಶಿಖರವುಳ್ಳ ಪರ್ವತದಂತೆ ಬಂದು ನಿಂತನು.
ಭಾಸ್ಕರಾಕಾರಮಕುಟಃ ಶಿಂಜಿತಾಭರಣಾಂಗದಃ |
ಧೂಮ್ರಕೇಶೋ ಹರಿಶ್ಮಶ್ರುರ್ನಿರ್ದಷ್ಟೋಷ್ಠಪುಟಾನನಃ ॥22॥
ತ್ರೈಲೋಕ್ಯಾಂತರವಿಸ್ತಾರೀ ಧಾರಯನ್ ವಿಪುಲಂ ವಪುಃ |
ತರ್ಜಯನ್ ವೈ ರಣೇ ದೇವಾನ್ ಛಾದಯನ್ ವೈ ದಿಶೋ ದಶ|
ಅಭ್ಯಧಾವತ್ ಸುಸಂಕ್ರುದ್ಧೋ ವ್ಯಾದಿತಾಸ್ಯ ಇವಾಂತಕಃ ॥23॥
ಸೂರ್ಯನಂತೆ ಹೊಳೆಯುವ ಕಿರೀಟವನ್ನು ಧರಿಸಿ ಆಭರಣಗಳ ಮತ್ತು ಅಂಗದಗಳ ಶಿಂಜನ ಧ್ವನಿಯಿಂದ ಯುಕ್ತನಾಗಿ ಧೂಮ್ರಕೇಶನೂ ಹರಿತವರ್ಣದ ಶ್ಮಶ್ರುವು ಆದ ಅವನು ಹಲ್ಲುಳ್ಳವನೂ ಮುಡಿಗಳನ್ನು ಕಚ್ಚಿ ಮೂರು ಲೋಕಮಧ್ಯದಲ್ಲಿ ವ್ಯಾಪಿಸಿದ ವಿಸ್ತಾರವಾದ ದೇಹವನ್ನು ಧರಿಸಿ ಯುದ್ಧದಲ್ಲಿ ದೇವತೆಗಳನ್ನು ಹೆದರಿಸುತ್ತಾ, ಹತ್ತು ದಿಕ್ಕುಗಳನ್ನು ಆವರಿಸಿ ಬಾಯಿಯನ್ನು ತೆರೆದುಕೊಂಡು ಬಂದ ಯಮನಂತೆ ಬಹಳ ಸಿಟ್ಟಿನಿಂದ ದೇವತೆಗಳ ಕಡೆಗೆ ಧಾವಿಸಿದನು.
ತತ್ರ ಶಸ್ತ್ರಪ್ರತಾಪೈಶ್ಚ ದೇವಾನ್ ಧರ್ಷಿತವಾನ್ ರಣೇ |
ಅಥಾಭ್ಯಯುಃ ಸುರಾನ್ ಸರ್ವಾನ್ ಪುನಸ್ತೇ ದೈತ್ಯದಾನವಾಃ |
ಆಪೀಡಯನ್ ರಣೇ ಕ್ರುದ್ಧಾಸ್ತತೋ ದೇವಾನ್ ಯುಧಿಷ್ಠಿರ ॥24॥
ಎಲೈ ಯುಧಿಷ್ಠಿರನೇ! ಅವನು ಯುದ್ಧದಲ್ಲಿ ತನ್ನ ಶಸ್ತ್ರ ಪ್ರಭಾವದಿಂದ ದೇವತೆಗಳನ್ನು ಪರಾಭವಗೊಳಿಸಿದನು. ಆಗ ಮೊದಲು ಓಡಿ ಹೋಗಿದ್ದ ದೈತ್ಯ ದಾನವರೆಲ್ಲರೂ ಪುನಃ ಹಿಂತಿರುಗಿ ಬಂದು ಯುದ್ಧದಲ್ಲಿ ಎಲ್ಲ ದೇವತೆಗಳನ್ನೂ ಪೀಡಿಸಲು ಪ್ರಾರಂಭಿಸಿದರು.
ತೇ ವಧ್ಯಮಾನಾ ವಿಬುಧಾಃ ಸಮರೇ ಕಾಲನೇಮಿನಾ |
ದೈತ್ಯೈಶ್ಚೈವ ಮಹಾರಾಜ ದುದ್ರುವುಃ ಸಹಿತಾ ದಿಶಃ ॥25॥
ಮಹಾರಾಜನೇ! ಕಾಲನೇಮಿಯಿಂದಲೂ ಉಳಿದ ದೈತ್ಯರಿಂದಲೂ ಯುದ್ಧದಲ್ಲಿ ಪೀಡಿಸಲ್ಪಟ್ಟ ದೇವತೆಗಳೆಲ್ಲರೂ ದಿಕ್ಕು ದಿಕ್ಕುಗಳಿಗೆ ಓಡಿ ಹೋದರು.
ವಿದ್ರುತಾನ್ ವಿಬುಧಾನ್ ದೃಷ್ಟ್ವಾ ಕಾಲನೇಮಿರ್ಮಹಾಸುರಃ |
ಇಂದ್ರಂ ಯಮಂ ಚ ವರುಣಂ ವಾಯುಂ ಚ ಧನದಂ ರವಿಮ್ |
ಏತಾಂಶ್ಚಾನ್ಯಾನ್ ಬಲಾಜ್ಜಿತ್ವಾ ತೇಷಾಂ ಕಾರ್ಯಾಣ್ಯವಾಪ ಸಃ ॥26॥
ದೇವತೆಗಳು ಓಡಿ ಹೋಗುತ್ತಿರುವುದನ್ನು ನೋಡಿದ ಮಹಾಸುರನಾದ ಕಾಲನೇಮಿಯು ಇಂದ್ರ ಯಮ ವರುಣ ವಾಯು ಕುಬೇರ ಸೂರ್ಯ ಇವರನ್ನೂ ಮತ್ತು ಉಳಿದ ದೇವತೆಗಳನ್ನೂ ತನ್ನ ಬಲದಿಂದ ಗೆದ್ದು ಅವರ ಕಾರ್ಯಗಳನ್ನೂ ಮಹಿಮೆಗಳನ್ನೂ ಪಡೆದನು.
ತಾನ್ ಸರ್ವಾಂಸ್ತರಸಾ ಜಿತ್ವಾ ಕಾಲನೇಮಿರ್ಮಹಾಸುರಃ |
ದದರ್ಶ ಸಮರೇ ವಿಷ್ಣುಂ ಸುಪರ್ಣಸ್ಥಂ ಮಹಾದ್ಯುತಿಮ್ ॥27॥
ಮಹಾಸುರನಾದ ಕಾಲನೇಮಿಯು ಅವರೆಲ್ಲರನ್ನೂ ಶೀಘ್ರವಾಗಿ ಜಯಿಸಿ ಗರುಡಾರೂಢನಾದ ಮಹಾ ಕಾಂತಿಯುಕ್ತನಾದ ವಿಷ್ಣುವನ್ನು ಯುದ್ಧದಲ್ಲಿ ನೋಡಿದನು.
ತಂ ದೃಷ್ಟ್ವಾ ಕ್ರೋಧತಾಮ್ರಾಕ್ಷಃ ತರ್ಜಯನ್ನಭ್ಯಯಾತ್ ತದಾ |
ಸ ಬಾಹುಶತಮುದ್ಯಮ್ಯ ಸರ್ವಾಸ್ತ್ರಗ್ರಹಣಂ ರಣೇ |
ರೋಷಾದ್ ಭಾರತ ದೈತ್ಯೇಂದ್ರೋ ವಿಷ್ಣೋರುರಸಿ ಪಾತಯತ್ ॥28॥
ಭಾರತನೇ! ಅವನನ್ನು ನೋಡಿ ಕೆಂಪಾದಕಣ್ಣುಳ್ಳ ಕಾಲನೇಮಿಯು ಅವನನ್ನು ಹೆದರಿಸುತ್ತಾ ಎದುರಿಗೆ ಬಂದು ಎಲ್ಲಾ ಅಸ್ತ್ರಗಳನ್ನೂ ಧರಿಸಿದ್ದ ತನ್ನ ನೂರು ಬಾಹುಗಳನ್ನೂ ಎತ್ತಿ ರೋಷದಿಂದ ಎದೆಯಲ್ಲಿ ಹೊಡೆದನು.
ದೈತ್ಯಾಶ್ಚ ದಾನವಾಶ್ಚೈವ ಸರ್ವೇ ಮಯಪುರೋಗಮಾಃ |
ಸ್ವಾನ್ಯಾಯುಧಾನಿ ಸಂಗೃಹ್ಯ ಸರ್ವೇ ವಿಷ್ಣುಮುಪಾದ್ರವನ್ ॥29॥
ಮಯನೇ ಮೊದಲಾದ ಎಲ್ಲಾ ದೈತ್ಯರೂ ಮತ್ತು ದಾನವರೂ ತಮ್ಮ ತಮ್ಮ ಆಯುಧಗಳನ್ನು ತೆಗೆದುಕೊಂಡು ವಿಷ್ಣುವಿನ ಕಡೆಗೆ ಧಾವಿಸಿ ಬಂದರು.
ಸ ತಾಡ್ಯಮಾನೋಽತಿಬಲೈರ್ದೈತ್ಯೈಃ ಸರ್ವಾಯುಧೋದ್ಯತೈಃ |
ನ ಚಚಾಲ ಹರಿರ್ಯುದ್ಧೇ ಕಂಪ್ಯಮಾನ ಇವಾಚಲಃ ॥30॥
ಎಲ್ಲಾ ಆಯುಧಗಳನ್ನು ಹಿಡಿದ ಅತಿ ಬಲಿಷ್ಠರಾದ ದೈತ್ಯರಿಂದ ಯುದ್ಧದಲ್ಲಿ ಪ್ರಹಾರಗಳಿಗೆ ಒಳಗಾದ ವಿಷ್ಣುವು ಅಲುಗಾಡಿಸಲು

ಪ್ರಯತ್ನಿಸಿದ ಪರ್ವತದಂತೆ ಅಲುಗಾಡದೆ ನಿಂತನು.
ಪುನರುದ್ಯಮ್ಯ ಸಂಕ್ರುದ್ಧಃ ಕಾಲನೇಮಿರ್ದೃಢಾಂ ಗದಾಮ್ |
ಜಘಾನ ಸಂಯುಗೇ ರಾಜಂಸ್ತಂ ವಿಷ್ಣುಂ ಗರುಡಂ ಚ ವೈ ॥31॥
ರಾಜನೇ! ಕೋಪಗೊಂಡ ಕಾಲನೇಮಿಯು ಪುನಃ ದೃಢವಾದ ಗದೆಯನ್ನು ಎತ್ತಿ ವಿಷ್ಣುವನ್ನು ಮತ್ತು ಗರುಡನನ್ನು ಸಹ ಅದರಿಂದ ಹೊಡೆದನು.
ಸ ದೃಷ್ಟ್ವಾ ಗರುಡಂ ಶ್ರಾಂತಂ ಚಕ್ರಮುದ್ಯಮ್ಯ ವೈ ಹರಿಃ |
ಶತಂ ಶಿರಾಂಸಿ ಬಾಹೂಂಶ್ಚ ಸೋಽಚ್ಛಿನತ್ ಕಾಲನೇಮಿನಃ |
ಜಘಾನಾನ್ಯಾಂಶ್ಚ ತಾನ್ ಸರ್ವಾನ್ ಸಮರೇ ದೈತ್ಯದಾನವಾನ್ ॥32॥
ಗರುಡನು ದಣಿದುದನ್ನು ನೋಡಿ ಹರಿಯು ತನ್ನ ಸುದರ್ಶನ ಚಕ್ರದಿಂದ ಕಾಲನೇಮಿಯ ನೂರು ಶಿರಸ್ಸುಗಳನ್ನೂ ಬಾಹುಗಳನ್ನೂ ಕತ್ತರಿಸಿ ಯುದ್ಧದಲ್ಲಿ ಉಳಿದೆಲ್ಲಾ ದೈತ್ಯದಾನವರನ್ನೂ ಸಂಹರಿಸಿದನು.
ತಸ್ಮಿನ್ ರಾಜನ್ ರಣೇ ದೈತ್ಯಾಃ ತ್ರಯ ಏವ ವಿನಿಃಸೃತಾಃ |
ವಿರೋಚನೋ ಮಯಶ್ಚೈವ ಸ್ವರ್ಭಾನುಶ್ಚ ಮಹಾಸುರಾಃ ॥33॥
ರಾಜನೇ! ಆ ಯುದ್ಧದಲ್ಲಿ ಮಹಾಸುರರಾದ ವಿರೋಚನ ಮಯ ಮತ್ತು ರಾಹು ಈ ಮೂವರು ಮಾತ್ರ ಉಳಿದು ಹೊರಗೆ ಬಂದರು.
ಸರ್ವಾನಶೇಷಾನ್ ಹತ್ವಾ ತು ವಿಷ್ಣುರ್ವೈ ದೈತ್ಯದಾನವಾನ್ |
ವಿಬುಧಾನಾಮೃಷೀಣಾಂ ಚ ಸ್ವಂಸ್ವಂ ಸ್ಥಾನಾನಿ ವೈ ದದೌ ॥34॥
ವಿಷ್ಣುವು ಎಲ್ಲಾ ದೈತ್ಯದಾನವರನ್ನೂ ನಿಶ್ಶೇಷವಾಗಿ ಸಂಹರಿಸಿ ದೇವತೆಗಳಿಗೂ ಮತ್ತು ಋಷಿಗಳಿಗೂ ಅವರವರ ಸ್ಥಾನಗಳನ್ನು ಕೊಟ್ಟನು.
ದತ್ತ್ವಾ ಸುರಾಣಾಂ ಸುಪ್ರೀತಿಂ ಪ್ರಾಪ್ಯ ಸರ್ವಾಣಿ ಭಾರತ |
ಜಗಾಮ ಬ್ರಹ್ಮಣಾ ಸಾರ್ಧಂ ಬ್ರಹ್ಮಲೋಕಂ ತದಾ ಹರಿಃ ॥35॥
ಎಲೈ ಭಾರತನೇ! ಸ್ಥಾನಗಳನ್ನು ಕೊಟ್ಟ ದೇವತೆಗಳ ಪ್ರೀತಿಯನ್ನು ಪಡೆದು ಎಲ್ಲರನ್ನೂ ಅವರವರ ಸ್ಥಾನಗಳಿಗೆ ತಲುಪಿಸಿ ಹರಿಯು ಆಗ ಬ್ರಹ್ಮದೇವರ ಜೊತೆಯಲ್ಲಿ ಬ್ರಹ್ಮ ಲೋಕಕ್ಕೆ ಹೋದನು.
ಬ್ರಹ್ಮಲೋಕಂ ಪ್ರವಿಶ್ಯಾಥ ಯತ್ರ ನಾರಾಯಣಃ ಪ್ರಭುಃ |
ಪೌರಾಣಂ ಬ್ರಹ್ಮಸದನಂ ದಿವ್ಯಂ ನಾರಾಯಾಣಾಶ್ರಯಮ್ ॥36॥
ಸ ಪ್ರವಿಶ್ಯ ತದಾ ದೇವಃ ಸ್ತೂಯಮಾನೋ ಮಹರ್ಷಿಭಿಃ |
ಸಹಸ್ರಶೀರ್ಷೋ ಭೂತ್ವಾ ವೈ ಶಯನಾಯೋಪಚಕ್ರಮೇ ॥37॥
ಪ್ರಭುವಾದ ನಾರಾಯಣನು ಅನಂತರ ಬ್ರಹ್ಮಲೋಕವನ್ನು ಪ್ರವೇಶಿಸಿ ಪ್ರಾಚೀನವಾದ ದಿವ್ಯವಾದ ನಾರಾಯಣಾಶ್ರಯವಾದ ಬ್ರಹ್ಮಸದನವನ್ನು ಪ್ರವೇಶಿಸಿ ಮಹರ್ಷಿಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಸಹಸ್ರಶೀರ್ಷಗಳನ್ನು ಧರಿಸಿ ಶಯನವನ್ನು ಮಾಡಲು ಉಪಕ್ರಮಿಸಿದನು.
ಆದಿದೇವಃ ಪುರಾಣಾತ್ಮಾ ನಿದ್ರಾವಶಮುಪಾಗತಃ |
ಶೇತೇ ಸುಖಂ ಸದಾ ವಿಷ್ಣುರ್ಮೋಹಯನ್ ಜಗದವ್ಯಯಃ ॥38॥
ಆದಿದೇವನೂ ಪುರಾಣಪುರುಷನೂ ಅವ್ಯಯನೂ ಆದ ವಿಷ್ಣುನಿದ್ರಾವಶನಾಗಿ ಸುಖದಿಂದ ಅಲ್ಲಿ ಮಲಗಿ ಜಗತ್ತನ್ನು ಮೋಹಿಸಿದನು.
ಜಗ್ಮುಸ್ತಸ್ಯಾಥ ವರ್ಷಾಣಿ ಶಯಾನಸ್ಯ ಮಹಾತ್ಮನಃ |
ಷಟ್ತ್ರಿಂಶಚ್ಛತಸಾಹಸ್ರಂ ಮಾನುಷೇಣೇಹ ಸಂಖ್ಯಯಾ |
ಜಗ್ಮುಃ ಕೃತಯುಗತ್ರೇತಾ ದ್ವಾಪರಾಂತೇ ಬುಬೋಧ ಸಃ ॥39॥
ಆ ಮಹಾತ್ಮನು ಅಲ್ಲಿ ಹಾಗೆ ಮಲಗಿರಲು ಮನುಷ್ಯಮಾನದಿಂದ ಮುನ್ನೂರ ಅರವತ್ತು ಶತಸಹಸ್ರವರ್ಷಗಳು ಕಳೆದವು. ಕೃತಯುಗ ಮತ್ತು ತ್ರೇತಾಯುಗಗಳು ಕಳೆದು ದ್ವಾಪರಯುಗದ ಕೊನೆಯಲ್ಲಿ ಅವನು ಎಚ್ಚರಗೊಂಡನು.
ಬ್ರಹ್ಮಾದಿಭಿಃ ಸುರೈಶ್ಚಾಪಿ ಸ್ತೂಯಮಾನೋ ಮಹರ್ಷಿಭಿಃ |
ಉತ್ಪತ್ಯ ಶಯನಾದ್ ವಿಷ್ಣುರ್ಬ್ರಹ್ಮಣಾ ವಿಬುಧೈಃ ಸಹ |
ದೇವಾನಾಂ ಚ ಹಿತಾರ್ಥಾಯ ಯಯೌ ದೇವಸಭಾಂ ಪ್ರತಿ ॥40॥
ಬ್ರಹ್ಮಾದಿದೇವತೆಗಳಿಂದಲೂ ಮಹರ್ಷಿಗಳಿಂದಲೂ ಸ್ತೋತ್ರಮಾಡಲ್ಪಟ್ಟ ವಿಷ್ಣುವು ತನ್ನ ಶಯನದಿಂದ ಮೇಲೆದ್ದು ದೇವತೆಗಳ ಹಿತಕ್ಕೋಸ್ಕರವಾಗಿಯೇ ಬ್ರಹ್ಮದೇವರು ಮತ್ತು ದೇವತೆಗಳಿಂದ ಕೂಡಿಕೊಂಡು ದೇವಸಭೆಯ ಕಡೆಗೆ ಹೊರಟನು.
ಮೇರೋಃ ಶಿಖರವಿನ್ಯಸ್ತಾಂ ಜ್ವಲಂತೀಂ ತಾಂ ಸಭಾಂ ಶುಭಾಂ |
ವಿವಿಶುಸ್ತಾಂ ಸುರಾಃ ಸರ್ವೇ ಬ್ರಹ್ಮಣಾ ಸಹ ಭಾರತ ॥41॥
ಎಲೈ ಭಾರತನೇ! ಮೇರುವಿನ ಶಿಖರದಲ್ಲಿರುವ ಪ್ರಕಾಶಮಾನವಾದ ಪವಿತ್ರವಾದ ಆ ಸಭೆಯನ್ನು ಎಲ್ಲಾ ದೇವತೆಗಳೂ ಬ್ರಹ್ಮದೇವರ ಜೊತೆಯಲ್ಲಿ ಪ್ರವೇಶಿಸಿದರು.
ಜಗ್ಮುಸ್ತತ್ರ ನಿಷೇದುಸ್ತೇ ಸಾ ನಿಶ್ಶಬ್ದಮಭೂತ್ ತದಾ |
ತತ್ರ ಭೂಮಿರುವಾಚಾಥ ಖೇದಾತ್ ಕರುಣಭಾಷಿಣೇ ॥42॥
ಎಲ್ಲರೂ ಹೋಗಿ ಅಲ್ಲಿ ಕುಳಿತುಕೊಳ್ಳುತ್ತಿರಲು ಆಗ ಆ ಸ್ಥಳವು ನಿಶ್ಶಬ್ದವಾಯಿತು. ಅನಂತರ ಭೂಮಿಯು ದುಃಖದಿಂದ ಕರುಣಾಜನಕವಾದ ಮಾತುಗಳನ್ನು ಆಡಿದಳು.
ರಾಜ್ಞಾಂ ಬಲೈರ್ಬಲವತಾಂ ಖಿನ್ನಾಸ್ಮಿ ಭೃಶಪೀಡಿತಾ |

ನಿತ್ಯಂ ಭಾರಪರಿಶ್ರಾಂತಾ ದುಃಖಾಜ್ಜೀವಾಮಿ ವೈ ಸುರಾಃ ॥43॥
ಎಲೈ ದೇವತೆಗಳೇ! ಬಲಿಷ್ಠರಾದ ರಾಜರ ಸೈನ್ಯಗಳಿಂದ ಬಹಳ ಪೀಡಿತಳಾಗಿ ಖಿನ್ನಳಾಗಿದ್ದೇನೆ. ಅವರ ಭಾರದಿಂದ ನಿತ್ಯವೂ ದಣಿದು ದುಃಖದಿಂದ ಜೀವಿಸುತ್ತಿದ್ದೇನೆ.
ಪುರೇ ಪುರೇ ಚ ನೃಪತಿಃ ಕೋಟಿಸಂಖ್ಯೈರ್ಗಣೈರ್ವೃತಃ |
ರಾಷ್ಟ್ರೇ ರಾಷ್ಟ್ರೇ ಚ ಶತಶೋ ಗ್ರಾಮಾಃ ಕುಲಸಹಸ್ರಿಣಃ ॥44॥
ಒಂದೊಂದು ಪಟ್ಟಣದಲ್ಲಿಯೂ ಪ್ರತಿಯೊಬ್ಬರಾಜನೂ ಕೋಟಿಸಂಖ್ಯೆ ಸೈನ್ಯವನ್ನು ಹೊಂದಿದ್ದಾನೆ. ಒಂದೊಂದು ರಾಷ್ಟ್ರದಲ್ಲಿಯೂ ನೂರಾರು ಗ್ರಾಮಗಳಿವೆ ಒಂದೊಂದು ಗ್ರಾಮದಲ್ಲಿಯೂ ಸಹಸ್ರಾರು ಕುಲಗಳಿವೆ.
ಭೂಮಿಪಾನಾಂ ಸಹಸ್ರೈಶ್ಚ ತೇಷಾಂ ಚ ಬಲಿನಾಂ ಬಲೈಃ |
ಗ್ರಾಮಾಯುತೈಶ್ಚ ರಾಷ್ಟ್ರೈಶ್ಚಾಪ್ಯಹಂ ನಿರ್ವಿವರೀಕೃತಾ |
ಕೇಚಿದ್ ದೈತ್ಯೇಷು ಚೋತ್ಪನ್ನಾ ಕೇಚಿದ್ ರಾಕ್ಷಸಯೋನಿಷು ॥45॥
ಸಹಸ್ರಾರು ರಾಜರುಗಳಿಂದಲೂ ಬಲಿಷ್ಠರಾದ ಅವರ ಸೈನ್ಯಗಳಿಂದಲೂ ಹತ್ತಾರು ಸಹಸ್ರ ಸಂಖ್ಯೆಯಲ್ಲಿರುವ ಗ್ರಾಮಗಳಿಂದಲೂ ಮತ್ತು ರಾಷ್ಟ್ರಗಳಿಂದಲೂ ನಾನು ನಿಬಿಡವಾಗಿ ತುಂಬಿ ಹೋಗಿದ್ದೇನೆ. ಕೆಲವರು ದೈತ್ಯಕುಲದಲ್ಲಿಯೂ ಇನ್ನೂ ಕೆಲವರು ರಾಕ್ಷಸಕುಲಗಳಲ್ಲಿಯೂ ಜನಿಸಿದ್ದಾರೆ.
ದೈತ್ಯೈಶ್ಚ ಬಾಧ್ಯಮಾನಾಸ್ತಾಃ ಪ್ರಜಾ ನಿತ್ಯಂ ದುರಾತ್ಮಭಿಃ |
ತಸ್ಮಾದ್ಧಾರಯಿತುಂ ಶಕ್ತ್ಯಾ ನ ಶಕ್ಷ್ಯಾಮಿ ಜನಾನಹಮ್ ॥46॥
ಪ್ರಜೆಗಳು ದುರಾತ್ಮರಾದ ಅಂತಹ ದೈತ್ಯರಿಂದಲೂ ರಾಕ್ಷಸರಿಂದಲೂ ಪೀಡಿಸಲ್ಪಡುತ್ತಿದ್ದಾರೆ. ಆದ್ದರಿಂದ ನಾನು ನನ್ನ ಸಾಮರ್ಥ್ಯದಿಂದ ಇಷ್ಟು ಜನರನ್ನು ಧರಿಸಲು ಸಾಧ್ಯವಾಗುತ್ತಿಲ್ಲ.
ಭೀಷ್ಮಃ
ಭೂಮೇಸ್ತದ್ವಚನಂ ಶ್ರುತ್ವಾ ದೇವೋ ನಾರಾಯಣಸ್ತದಾ |
ವ್ಯಾದಿಶ್ಯ ತಾನ್ ಸುರಾನ್ ಸರ್ವಾನ್ ಕ್ಷಿತೌ ವಸ್ತುಂ ಮನೋ ದಧೇ ॥47॥
ಭೂಮಿಯು ಆ ವಚನವನ್ನು ಕೇಳಿದ ದೇವನಾದ ನಾರಾಯಣನು ಆಗ ಎಲ್ಲಾ ದೇವತೆಗಳಿಗೂ ಆದೇಶವನ್ನು ನೀಡಿ ತಾನೂ ಭೂಮಿಯಲ್ಲಿ ಅವತರಿಸಲು ನಿರ್ಧರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರಿಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ದ್ವಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯವು ಮುಗಿಯಿತು.
* * * *

## ನಲವತ್ನಾಲ್ಕನೆಯ ಅಧ್ಯಾಯ
(ವಿಷ್ಣುವಿನಿಂದ ಭೂಮಿಯಲ್ಲಿ ಅವತಾರಮಾಡಲು ದೇವತೆಗಳಿಗೆ ಪ್ರೇರಣೆ)
ಭೀಷ್ಮಃ
ಯಚ್ಚಕ್ರೇ ಭಗವಾನ್ ವಿಷ್ಣುರ್ವಸುದೇವಕುಲೋದ್ವಹಃ |
ತತ್ ತೇಽಹಂ ನೃಪ ವಕ್ಷ್ಯಾಮಿ ಶೃಣು ಸರ್ವಮಶೇಷತಃ |
ವಾಸುದೇವಸ್ಯ ಮಾಹಾತ್ಮ್ಯಂ ಚರಿತಂ ಚ ಮಹಾದ್ಯುತೇಃ ॥1॥
ಎಲೈ ರಾಜನೇ! ವಸುದೇವಕುಲೋದ್ವಹನಾದ ಭಗವಂತನಾದ ವಿಷ್ಣುವು ಮಾಡುದುದೆಲ್ಲವನ್ನೂ ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು. ಮಹಾದ್ಯುತಿಯಾದ ವಾಸುದೇವನ ಮಹಿಮೆಯನ್ನೂ ಅವನ ಚರಿತ್ರೆಯನ್ನೂ ಕೇಳು.
ಹಿತಾರ್ಥಂ ಸುರಮರ್ತ್ಯಾನಾಂ ಲೋಕಾನಾಂ ಹಿ ಹಿತಾಯ ಚ |
ಯದಾ ದಿವಿ ವಿಭುಸ್ತಾತ ನ ರೇಮೇ ಭಗವಾನಸೌ ॥2॥
ತತೋ ವ್ಯಾದಿಶ್ಯ ಭೂತಾನಿ ಭುವಿ ಭೌಮಸುಖಾವಹಃ |
ನಿಗ್ರಹಾರ್ಥಾಯ ದೈತ್ಯಾನಾಂ ಚೋದಯಾಮಾಸ ವೈ ತದಾ ॥3॥
ಮರುತಶ್ಚ ವಸೂಂಶ್ಚೈವ ಸೂರ್ಯಾಚಂದ್ರಮಸಾವುಭೌ |
ಗಂಧರ್ವಾಪ್ಸರಸಶ್ಚೈವ ರುದ್ರಾದಿತ್ಯಾಂಸ್ತಥಾಽಶ್ವಿನೌ ॥4॥
ದೇವತೆಗಳ ಮತ್ತು ಮನುಷ್ಯರ ಮತ್ತು ಲೋಕದ ಹಿತದ ಸಲುವಾಗಿ ಸ್ವರ್ಗದಲ್ಲಿದ್ದು ಸಮಾಧಾನಗೊಳ್ಳದ ಈ ವಿಭುವಾದ ಭಗವಂತನು ಭೂಮಿಯಲ್ಲಿ ಎಲ್ಲರ ಸುಖವನ್ನು ಉಂಟುಮಾಡುವುದಕ್ಕಾಗಿ ಮತ್ತು ದೈತ್ಯರ ನಿಗ್ರಹಕ್ಕಾಗಿ ಮರುತ್ತುಗಳು ವಸುಗಳು ಸೂರ್ಯಚಂದ್ರರು ಗಂದರ್ವರು ಅಪ್ಸರೆಯರು ರುದ್ರರು ಆದಿತ್ಯರು ಅಶ್ವಿನಿಗಳು ಮೊದಲಾದ ಎಲ್ಲಾ ದೇವತೆಗಳಿಗೂ ಆದೇಶವನ್ನು ನೀಡಿದನು.
ಜಾಯಧ್ವಂ ಮಾನುಷೇ ಲೋಕೇ ಸರ್ವಲೋಕಮಹೇಶ್ವರಾಃ |
ಜಂಗಮಾನಿ ವಿಶಾಲಾಕ್ಷೋ ಹ್ಯಾತ್ಮಾನಂ ಹ್ಯಾತ್ಮನಾಽಸೃಜತ್ ॥5॥
ಸರ್ವಲೋಕ ಮಹೇಶ್ವರನಾದ ನೀವು ಮನುಷ್ಯಲೋಕದಲ್ಲಿ ಜಂಗಮ ಯೋನಿಗಳಲ್ಲಿ ಅವತಾರವನ್ನು ಮಾಡಿ ಎಂದು ಹೇಳಿ ವಿಶಾಲಾಕ್ಷನಾದ ಅವನು ತನ್ನನ್ನೇ ತಾನು ಮನುಷ್ಯಲೋಕದಲ್ಲಿ ಸೃಷ್ಟಿಸಿಕೊಂಡನು.
ಜಾಯತಾಮಿತಿ ಗೋವಿಂದಃ ತಿರ್ಯಗ್ಯೋನಿಗತೈರಪಿ |

ತಾನಿ ಸರ್ವಾಣಿ ಸರ್ವಜ್ಞಃ ಸೋಽಜಾಯತ ಯದೋಃ ಕ್ಷಯೇ |
ಆಜ್ಞಾಪಯಿತ್ವಾ ರತ್ಯರ್ಥಮಜಾಯತ ಯದೋಃ ಕುಲೇ ||6||
ಗೋವಿಂದನು ನೀವು ತಿರ್ಯಗ್ಯೋನಿಗಳಲ್ಲಿ ಸಹ ಅವತಾರಮಾಡಿ ಎಂದು ಅವರೆಲ್ಲರಿಗೂ ಆದೇಶವನ್ನು ನೀಡಿ ಸರ್ವಜ್ಞನಾದ ಅವನು ತನ್ನಲ್ಲಿಯೇ ತಾನು ವಿಹಾರಮಾಡಲು ಯದುಕುಲದಲ್ಲಿ ಜನಿಸಿದನು.
ಆತ್ಮಾನಮಾತ್ಮನಾ ತಾತ ಕೃತ್ವಾ ಬಹುವಿಧಂ ಹರಿಃ |
ರತ್ಯರ್ಥಮಿಹ ಗಾಸ್ತಾಸ್ತು ರರಕ್ಷ ಪುರುಷೋತ್ತಮಃ ||7||
ಪುರುಷೋತ್ತಮನಾದ ಹರಿಯಾದ ಅವನು ತನ್ನನ್ನೇ ತಾನು ಅನೇಕ ರೂಪಗಳಿಂದ ಸೃಷ್ಟಿಸಿಕೊಂಡು ಸ್ವರಮಣನಾದ ಅವನು ಲೀಲೆಯಿಂದ ವಿಹಾರವನ್ನು ಮಾಡುತ್ತಾ ಇಲ್ಲಿ ಗೋವುಗಳನ್ನು ರಕ್ಷಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುಶ್ಚತ್ವಾರಿಂಶೋಧ್ಯಾಯಃ ||
|| ಅರ್ಘಾಭಿಹರಣಪರ್ವಣಿ ತ್ರಯೋದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ನಲವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
*****
ನಲವತ್ತೈದನೆಯ ಅಧ್ಯಾಯ
(ಕೃಷ್ಣಾವತಾರ ಮತ್ತು ಕೃಷ್ಣ ಬಲರಾಮರ ಬಾಲಲೀಲೆಗಳು)
ಭೀಷ್ಮಃ
ಅಜಾತಶತ್ರೋ ಜಾತಸ್ತು ಯಥೇಷ್ಟಂ ಭುವಿ ಭಾರತ |
ಕಥ್ಯಮಾನಂ ಮಯಾ ತಾತ ನಿಬೋಧ ಭರತರ್ಷಭ ||1||
ಭರತರ್ಷಭನಾದ ಪ್ರೀತಿಪಾತ್ರನೇ! ಎಲೈ ಅಜಾತಶತ್ರುವೇ! ತನ್ನ ಇಚ್ಛೆಯಿಂದ ಭೂಮಿಯಲ್ಲಿ ಅವತರಿಸಿದ ಹರಿಯ ಲೀಲೆಗಳನ್ನು ಹೇಳುತ್ತೇನೆ ಕೇಳು.
ಸಾಗರಃ ಸಮಕಂಪಂತ ಮುದಾ ಚೇಲುಶ್ಚ ಪರ್ವತಾಃ |
ಜಜ್ವಲುಶ್ಚಾಗ್ನಯಃ ಶಾಂತಾ ಜಾಯಮಾನೇ ಮಹಾತ್ಮನಿ ||2||
ಮಹಾತ್ಮನಾದ ಅವನು ಅವತರಿಸಿದಾಗ ಸಂತೋಷದಿಂದ ಸಮುದ್ರಗಳು ಉಕ್ಕಿದವು. ಪರ್ವತಗಳು ಚಲಿಸಿದವು. ಶಾಂತವಾದ ಅಗ್ನಿಗಳು ಉರಿಯಲು ಆರಂಭಿಸಿದವು.
ಶಿವಾಃ ಸಂಪ್ರವವುರ್ವಾತಾಃ ಪ್ರಶಾಂತಮಭವದ್ ರಜಃ |
ಜ್ಯೋತೀಂಷಿ ಸಂಪ್ರಕಾಶಂತೇ ಜಾಯಮಾನೇ ಜನಾರ್ದನೇ ||3||
ಸುಖಸ್ಪರ್ಶವುಳ್ಳ ವಾಯುವು ಎಲ್ಲ ಕಡೆಗಳಲ್ಲಿಯೂ ಬೀಸಿತು. ಧೂಳು ಅಡಗಿತು. ಜನಾರ್ದನನು ಅವತರಿಸಿದಾಗ ಜ್ಯೋತಿರ್ಗಣಗಳೆಲ್ಲವೂ ಪ್ರಕಾಶಿಸಿದವು.
ದೇವದುಂದುಭಯಶ್ಚಾಪಿ ಸಸ್ವನುರ್ಭೃಶಮಂಬರೇ |
ಅಭ್ಯವರ್ಷಂಸ್ತದಾಽಽಗಮ್ಯ ದೇವತಾಃ ಪುಷ್ಪವೃಷ್ಟಿಭಿಃ ||4||
ಆಕಾಶದಲ್ಲಿ ದೇವದುಂದುಭಿಗಳು ಬಹಳವಾಗಿ ಮೊಳಗಿದವು. ಆಗ ದೇವತೆಗಳು ಬಂದು ಪುಷ್ಪವೃಷ್ಟಿಯನ್ನು ಕರೆದರು.
ಗೀರ್ಭಿರ್ಮಂಗಳಯುಕ್ತಾಭಿರಸ್ತುವನ್ ಮಧುಸೂದನಮ್ |
ಉಪತಸ್ಥುಸ್ತದಾ ಪ್ರೀತಾಃ ಪ್ರಾದುರ್ಭಾವೇ ಮಹರ್ಷಯಃ ||5||
ದೇವತೆಗಳು ಮಂಗಳಯುಕ್ತವಾದ ವಾಣಿಯಿಂದ ಮಧುಸೂದನನನ್ನು ಸ್ತೋತ್ರಮಾಡಿದರು. ಮಹರ್ಷಿಗಳೂ ಸಹ ಕೃಷ್ಣಾವತಾರ ಕಾಲದಲ್ಲಿ ಸಂತೋಷದಿಂದ ಅವನನ್ನು ಸ್ತೋತ್ರಮಾಡಿದರು.
ತತಸ್ತಾನಭಿಸಂಪ್ರೇಕ್ಷ್ಯ ನಾರದಪ್ರಮುಖಾನೃಷೀನ್ |
ಉಪಾವೃತ್ಯಾನುಜಗ್ಮುರ್ಗಾಂ ಗಂಧರ್ವಾಪ್ಸರಸಾಂ ಗಣಾಃ ||6||
ಆಗ ನಾರದ ಮೊದಲಾದ ಋಷಿಗಳನ್ನು ನೋಡಿ ಗಂಧರ್ವ ಮತ್ತು ಅಪ್ಸರೆಯರ ಗಣಗಳು ಅವರನ್ನು ಹಿಂಬಾಲಿಸಿ ಭೂಮಿಗೆ ಬಂದವು.
ಉಪತಸ್ಥೇ ಚ ಗೋವಿಂದಂ ಸಹಸ್ರಾಕ್ಷಃ ಶಚೀಪತಿಃ |
ಅಭ್ಯಭಾಷತ ತೇಜಸ್ವೀ ಮಹರ್ಷೀನ್ ಪೂಜಯಂಸ್ತದಾ ||7||
ಸಹಸ್ರಾಕ್ಷನಾದ ಶಚೀಪತಿಯು ಗೋವಿಂದನನ್ನು ಸ್ತೋತ್ರಮಾಡಿ ತೇಜಸ್ವಿಯಾದ ಅವನು ಮಹರ್ಷಿಗಳನ್ನು ಗೌರವಿಸಿ ಮಾತನಾಡಿದನು.
ಕೃತ್ವಾ ತು ದೇವಕಾರ್ಯಾಣಿ ಕೃತ್ವಾ ಲೋಕಹಿತಾನಿ ಚ |
ಸ್ವಲೋಕಂ ಲೋಕಕೃದ್ ದೇವಃ ಪುನರ್ಗಚ್ಛತಿ ತೇಜಸಾ ||8||
ಸೃಷ್ಟಿಕರ್ತನಾದ ದೇವನು ದೇವಕಾರ್ಯಗಳನ್ನು ಮತ್ತು ಲೋಕಹಿತವಾದ ಕಾರ್ಯಗಳನ್ನು ತನ್ನ ಸಾಮರ್ಥ್ಯದಿಂದ ನೆರವೇರಿಸಿ ಪುನಃ ತನ್ನ ಲೋಕಕ್ಕೆ ಹಿಂದಿರುಗುತ್ತಾನೆ.
ಭೀಷ್ಮಃ
ಇತ್ಯುಕತ್ವ ಋಷಿಭಿಃ ಸಾರ್ಧಂ ಜಗಾಮ ತ್ರಿದಿವಂ ಪುನಃ |
ಅಭ್ಯನುಜ್ಞಾಯ ತಾನ್ ಸರ್ವಾನ್ ಛಾದಯನ್ ಪ್ರಕೃತಿಂ ಪರಾಮ್ ||9||
ಇಂದ್ರನು ಹೀಗೆ ಹೇಳಿ ತನ್ನ ನಿಜರೂಪವನ್ನು ಮರೆಸಿಕೊಂಡು ಅವರೆಲ್ಲರ ಅನುಜ್ಞೆಯನ್ನು ಪಡೆದು ಋಷಿಗಳ ಜೊತೆಯಲ್ಲಿ ಪುನಃ

ಸ್ವರ್ಗಕ್ಕೆ ಹೋದನು.
ವಸುದೇವಸ್ತತೋ ಜಾತಂ ಬಾಲಮಾದಿತ್ಯಸನ್ನಿಭಮ್ |
ನಂದಗೋಪಕುಲೇ ರಾಜನ್ ಭಯಾತ್ ಪ್ರಚ್ಛಾದಯದ್ಧರಿಮ್ |
ನಂದಗೋಪಕುಲೇ ಕೃಷ್ಣ ಉವಾಸ ಬಹುಲಾಃ ಸಮಾಃ ||10||
ಅನಂತರ ವಸುದೇವನು ಆಗತಾನೆ ಜನಿಸಿದ ಸೂರ್ಯತೇಜಸ್ಸುಳ್ಳ ತನ್ನ ಮಗನನ್ನು ಕಂಸನ ಭಯದಿಂದ ನಂದಗೋಪಕುಲಕ್ಕೆ ಕರೆದುಕೊಂಡು ಹೋಗಿ ಆಚ್ಛಾದಿಸಿದನು. ಎಲೈ ರಾಜನೇ! ಕೃಷ್ಣನು ನಂದಗೋಪ ಕುಲದಲ್ಲಿ ಅನೇಕ ವರ್ಷಗಳ ಕಾಲ ವಾಸಮಾಡಿದನು.
ತತಃ ಕದಾಚಿತ್ ಸುಪ್ತಂ ತಂ ಶಕಟಸ್ಯ ತ್ವಧಃ ಶಿಶುಮ್ |
ಯಶೋದಾ ಸಂಪರಿತ್ಯಜ್ಯ ಜಗಾಮ ಯಮುನಾಂ ನದೀಮ್ ||11||
ಅನಂತರ ಒಮ್ಮೆ ಯಶೋದೆಯು ಮಲಗಿ ನಿದ್ರಿಸುತ್ತಿದ್ದ ಶಿಶುವನ್ನು ಒಂದು ಗಾಡಿಯ ಕೆಳಗೆ ಮಲಗಿಸಿ ಯಮುನಾ ನದಿಗೆ ಹೋದಳು.
ಶಿಶುಲೀಲಾಂ ತತಃ ಕುರ್ವನ್ ಸ್ವಹಸ್ತಚರಣೌ ಕ್ಷಿಪನ್ |
ರುರೋದ ಮಧುರಂ ಕೃಷ್ಣಃ ಪಾದಮೂರ್ಧ್ವಂ ಪ್ರಸಾರಯನ್ ||12||
ಆಗ ಕೃಷ್ಣನು ಶಿಶುಲೀಲೆಯನ್ನು ಮಾಡುತ್ತಾ ಹಸ್ತ ಮತ್ತು ಚರಣಗಳನ್ನು ಮೇಕ್ಕೆ ಚಾಚುತ್ತಾ ತನ್ನ ಪಾದವನ್ನು ಮೇಲ್ಮುಖವಾಗಿ ನೀಡಿ ಮಧುರವಾಗಿ ರೋದಿಸಿದನು.
ಪಾದಾಂಗುಷ್ಠೇನ ಶಕಟಂ ತಾಡಯನ್ನಥ ಕೇಶವಃ |
ತತ್ರಾಥೈಕೇನ ಪಾದೇನ ಪಾತಯಿತ್ವಾ ತಥಾ ಶಿಶುಃ |
ನ್ಯುಬ್ಜಃ ಪಯೋಧರಾಕಾಂಕ್ಷೀ ಚಕಾರ ಚ ರುರೋದ ಚ | ||13||
ಕೇಶವನು ಚಾಚಿದ ತನ್ನ ಪಾದದ ಅಂಗುಷ್ಠದಿಂದ ಶಕಟವನ್ನು ಒದ್ದು ಉರುಳಿಸಿ ಬೋರಲಾಗಿ ಬಿದ್ದು ಸ್ತನ್ಯಾಕಾಂಕ್ಷಿಯಾಗಿ ಅಳಲು ತೊಡಗಿದನು.
ಪಾತಿತಂ ಶಕಟಂ ದೃಷ್ಟ್ವಾ ಭಿನ್ನಭಾಂಡಘಟೀಘಟಮ್ |
ಜನಾಸ್ತೇ ಶಿಶುನಾ ತೇನ ವಿಸ್ಮಯಂ ಪರಮಂ ಯಯುಃ |
ಪ್ರತ್ಯಕ್ಷಂ ಶೂರಸೇನಾನ್ಯಂ ದೃಶ್ಯತೇ ಮಹದದ್ಭುತಮ್ | ||14||
ಗಾಡಿಯಲ್ಲಿ ಇದ್ದ ಪಾತ್ರೆಗಳ ಜೊತೆಯಲ್ಲಿ ಮುರಿದು ಬಿದ್ದ ಶಕಟವನ್ನು ನೋಡಿ ಜನರು ಶಿಶುವಿನ ಆ ಕರ್ಮದಿಂದ ಪರಮಾಶ್ಚರ್ಯವನ್ನು ಹೊಂದಿದರು. ಶೂರಸೇನಾನಿಯಾದ ಕಂಸನ ದೈತ್ಯಪ್ರೇಷಣರೂಪವಾದ ದುಷ್ಕರ್ಮವು ಪ್ರತ್ಯಕ್ಷವಾಗಿ ಕಾಣುತಿತ್ತು.
ಶಯಾನೇನ ಹತಃ ಪಕ್ಷೀ ಶಿಶುನಾ ತಿಗ್ಮತೇಜಸಾ |
ಪೂತನಾ ಚಾಪಿ ನಿಹತಾ ಮಹಾಕಾಯಾ ಮಹಾಸ್ತನೀ ||15||
ಕಂಸನ ಪಕ್ಷವನ್ನು ಆಶ್ರಯಿಸಿದ ಬಕಾಸುರನು ಕ್ರೂರಪರಾಕ್ರಮವುಳ್ಳ ಶಿಶುವಿನಿಂದ ಸಂಹರಿಸಲ್ಪಟ್ಟನು. ದೊಡ್ಡ ದೇಹವನ್ನೂ ದೊಡ್ಡ ಸ್ತನಗಳನ್ನೂ ಹೊಂದಿದ್ದ ಪೂತನಿಯೂ ಕೃಷ್ಣನಿಂದ ಕೊಲ್ಲಲ್ಪಟ್ಟಳು.
ತತಃ ಕಾಲೇ ಮಹಾರಾಜ ಸಂಸಕ್ತೌ ರಾಮಕೇಶವೌ |
ಕೃಷ್ಣಃ ಸಂಕರ್ಷಣಶ್ಚೋಭೌ ರಿಂಗಿಣೌ ಸಮಪದ್ಯತಾಮ್ ||16||
ಮಹಾರಾಜನೇ! ಅನಂತರ ಸ್ವಲ್ಪ ಸಮಯದಲ್ಲಿ ಕೃಷ್ಣ ಬಲರಾಮರಿಬ್ಬರೂ ಒಬ್ಬರ ಜೊತೆಯಲ್ಲಿ ಒಬ್ಬರು ಕೂಡಿಕೊಂಡು ಅಂಬೆಗಾಲಿಡಲು ಪ್ರಾರಂಭಿಸಿದರು.
ಅನ್ಯೋನ್ಯಕಿರಣಗ್ರಸ್ತೌ ಚಂದ್ರಸೂರ್ಯಾವಿವಾಂಬರೇ |
ವಿಸರ್ಪತಾಂ ಚ ಸರ್ವತ್ರ ಸರ್ವಭೋಗಭುಜೌ ತದಾ ||17||
ಅವರಿಬ್ಬರೂ ಆಕಾಶದಲ್ಲಿ ಪರಸ್ಪರವಾಗಿ ತಮ್ಮ ಕಿರಣಗಳಿಂದ ಗ್ರಸ್ತರಾದ ಚಂದ್ರ ಸೂರ್ಯರಂತೆ ಎಲ್ಲ ಕಡೆಯಲ್ಲಿಯೂ ಹರಿದಾಡುತ್ತಾ ಸರ್ವ ಭೋಗಗಳನ್ನೂ ಭೋಗಿಸಿದರು.
ರೇಜತುಃ ಪಾಂಸುದಿಗ್ಧಾಂಗೌ ರಾಮಕೃಷ್ಣೌ ತದಾ ನೃಪ |
ಕ್ವಚಿಚ್ಚ ಜಾನುಭಿರ್ಘೃಷ್ಟೌ ಕ್ರೀಡಮಾನೌ ಕ್ವಚಿದ್ವನೇ |
ಪಿಬಂತೌ ದಧಿಕುಲ್ಯಾಶ್ಚ ಮಥ್ಯಮಾನೇ ಚ ಭಾರತ ||18||
ಎಲೈ ರಾಜನೇ! ರಾಮಕೃಷ್ಣರು ಆಗ ಮೈಯಲ್ಲಾ ಧೂಳಿನಿಂದ ಆವೃತವಾಗಿ ಶೋಭಿಸಿದರು. ಒಮ್ಮೊಮ್ಮೆ ಮಂಡಿಗಳ ಮೇಲೆ ನಿಂತು ಬಿಡಾರದ ಸಮೀಪದ ವನದಲ್ಲಿ ಆಡುತ್ತಿದ್ದರು. ಎಲೈ ಭಾರತನೇ! ಮೊಸರನ್ನು ಕಡೆಯುವಾಗ ಬಹಳವಾದ ಮೊಸರನ್ನು ಕುಡಿಯುತ್ತಿದ್ದರು.
ತತ್ರಾಥ ಬಾಲೋ ಗೋವಿಂದೋ ನವನೀತಂ ತದಾ ಕ್ಷಯಮ್ |
ಗ್ರಸಮಾನಸ್ತು ತತ್ರಾಯಂ ಗೋಪೀಭಿರ್ದದೃಶೇ ತದಾ |
ದಾಮ್ನಾಥೋಲೂಖಲೇ ಕೃಷ್ಣೋ ಗೋಪಸ್ತ್ರೀಭಿಶ್ಚ ಬಂಧಿತಃ ||19||
ಆಗ ಒಮ್ಮೆ ಮನೆಯಲ್ಲಿ ನವನೀತವನ್ನು ಕದಿಯುತ್ತಿದ್ದ ಗೋವಿಂದನು ಗೋಪಿಯರಿಂದ ನೋಡಲ್ಪಟ್ಟನು. ಆಗ ಗೋಪಸ್ತ್ರೀಯರು ಅವನನ್ನು ಹಗ್ಗದಿಂದ ಒಂದು ಒರಳಿಗೆ ಕಟ್ಟಿಹಾಕಿದರು.
ತದಾಽಥ ಶಿಶುನಾ ತೇನ ಕರ್ಷತ್ಯೈವಾರ್ಜುನಾವುಭೌ |
ಸಮೂಲವಿಟಪೌ ಭಗ್ನೌ ತದದ್ಭುತಮಿವಾಭವತ್ ||20||

ಆಗ ಶಿಶುವಾದ ಕೃಷ್ಣನು ಒರಳನ್ನು ಎಳೆಯುತ್ತಾ ಮುಂದೆಸಾಗಿ ಅಕ್ಕ ಪಕ್ಕದಲ್ಲಿ ಬೆಳೆದಿದ್ದ ಎರಡು ಮಹಾ ಅರ್ಜುನ ವೃಕ್ಷಗಳನ್ನು ಬೇರುಸಹಿತವಾಗಿ ಬೀಳಿಸಿದನು. ಆ ದೃಶ್ಯವು ಅದ್ಭುತವಾಗಿದ್ದಿತು.
ತತಸ್ತೌ ಬಾಲ್ಯಮುತ್ತೀರ್ಣೌ ಕೃಷ್ಣಸಂಕರ್ಷಣಾವುಭೌ |
ತಸ್ಮಿನ್ನೇವ ವ್ರಜಸ್ಥಾನೇ ಸಪ್ತವರ್ಷೌ ಬಭೂವತುಃ ॥21॥
ಅನಂತರ ಕೃಷ್ಣ ಬಲರಾಮರು ಬಾಲ್ಯವನ್ನು ಕಳೆದು ಏಳು ವರ್ಷದವರಾಗಿ ಅದೇ ನಂದಗೋಕುಲಸ್ಥಾನದಲ್ಲಿ ಆಡುತ್ತಿದ್ದರು.
ನೀಲಪೀತಾಂಬರಧರೌ ಪೀತಶ್ವೇತಾನುಲೇಪನೌ |
ಬಭೂವತುರ್ವತ್ಸಪಾಲೌ ಕಾಕಪಕ್ಷಧರಾವುಭೌ ॥22॥
ಕೃಷ್ಣನು ಪೀತಾಂಬರವನ್ನೂ ಬಲರಾಮನು ನೀಲಾಂಬರವನ್ನೂ ಧರಿಸಿದವರಾಗಿ ಹಳದಿಯ ಮತ್ತು ಬಿಳಿಯ ಲೇಪನವನ್ನು ಉಳ್ಳವರಾಗಿ ಇಬ್ಬರೂ ತಲೆಯ ಕೂದಲುಗಳನ್ನು ಬಾಚಿಕೊಂಡು ವತ್ಸಪಾಲಕರಾದರು.
ಪಣವಾದ್ಯಂ ಶ್ರುತಿಸುಖಂ ವಾದಯಂತೌ ವರಾನನೌ |
ಶುಶುಭಾತೇ ವನಗತೌ ದ್ವಿಶೀರ್ಷಾವಿವ ಪನ್ನಗೌ ॥23॥
ಸುಂದರವಾದ ಮುಖವುಳ್ಳ ಅವರಿಬ್ಬರೂ ಕಾಡಿನಲ್ಲಿ ಪಣವಾದಿ ವಾದ್ಯಗಳನ್ನು ಮಧುರವಾಗಿ ಬಾರಿಸುತ್ತಾ ಎರಡು ಶಿರಸ್ಸುಳ್ಳ ಸರ್ಪಗಳಂತೆ ಕಂಗೊಳಿಸಿದರು.
ಮಯೂರಾಂಗಜಕರ್ಣೌ ತೌ ಪಲ್ಲವಾಪೀಡಧಾರಿಣೌ |
ವನಮಾಲಾಪರಿಕ್ಷಿಪ್ತೌ ಸಾಲಪೋತಾವಿವೋದ್ಗತೌ ॥24॥
ಕಿವಿಗಳಲ್ಲಿ ನವಿಲುಗರಿಗಳನ್ನು ಇಟ್ಟು ಕೊಂಡು ಚಿಗುರುಗಳನ್ನು ಉಷ್ಣೀಷದಂತೆ (ರುಮಾಲಿನಂತೆ) ಧರಿಸಿಕೊಂಡು ವನಮಾಲೆಯನ್ನು ಧರಿಸಿ ಇಬ್ಬರೂ ಎಳೆಯ ಸಾಲ ವೃಕ್ಷಗಳಂತೆ ಎದ್ದು ಶೋಭಿಸುತ್ತಿದ್ದರು.
ಅರವಿಂದಕೃತಾಪೀಡೌ ರಜ್ಜುಯಜ್ಞೋಪವೀತಿನೌ |
ಸಶಿಕ್ಯತುಂಬುರುಕರೌ ವೀರೌ ಗೋಪವೇಣುಪ್ರವಾದಕೌ ॥25॥
ಅರವಿಂದ ಪುಷ್ಪಗಳನ್ನು ತಲೆಯಲ್ಲಿ ಧರಿಸಿ ಹಗ್ಗದಿಂದಮಾಡಿದ ಯಜ್ಞೋಪವೀತಧಾರಿಗಳಾಗಿ ಕೈಯಲ್ಲಿ ನೆಲುವುಗಳನ್ನು ಮತ್ತು ದಾರುವಾದ್ಯವಿಶೇಷವಾದ ತುಂಬುರುವನ್ನು ಧರಿಸಿ ಗೋಪಾಲಕರು ನುಡಿಸುವ ಕೊಳಲನ್ನು ನುಡಿಸುತ್ತಿದ್ದರು.
ಕ್ವಚಿದ್‌ಹಸಂತಾವನ್ಯೋನ್ಯಂ ಕ್ರೀಡಮಾನೌ ಕ್ವಚಿದ್ವನೇ |
ಪರ್ಣಶಯ್ಯಾಸು ಸಂಸುಪ್ತೌ ಕ್ವಚಿನ್ನಿದ್ರಾಂತರೈಷಿಣೌ ॥26॥
ಒಮ್ಮೊಮ್ಮೆ ಪರಸ್ಪರವಾಗಿ ನಗುತ್ತಾ ಒಮ್ಮೊಮ್ಮೆ ಕಾಡಿನಲ್ಲಿ ಕ್ರೀಡೆಯಾಡುತ್ತಾ ಎಲೆಗಳಿಂದ ಮಾಡಿದ ಹಾಸಿಗೆಯಲ್ಲಿ ಮಲಗಿ ಒಮ್ಮೊಮ್ಮೆ ನಿದ್ರೆಯನ್ನು ಬಯಸುತ್ತಿದ್ದರು.
ತೌ ವತ್ಸಾನ್ ಪಾಲಯಂತೌ ಹಿ ಶೋಭಯಂತೌ ಮಹದ್ವನಮ್ |
ಚುಂಬಯಂತೌ ರಮೇತೇ ಸ್ಮ ರಾಜನ್ನೇವಂ ತದಾ ಶುಭೌ ॥27॥
ರಾಜನೇ! ಅವರಿಬ್ಬರೂ ಆ ದೊಡ್ಡ ವನವನ್ನು ಶೋಭಿಸುತ್ತಾ ಕರುಗಳವನ್ನು ರಕ್ಷಿಸುತ್ತಾ ಪರಸ್ಪರವಾಗಿ ಚುಂಬಿಸುತ್ತಾ ಸಂತೋಷಪಟ್ಟರು.
ತತೋ ಬೃಂದಾವನಂ ಗತ್ವಾ ವಸುದೇವಸುತಾವುಭೌ |
ಗೋಕುಲಂ ತತ್ರ ಕೌಂತೇಯ ಚಾರಯಂತೌ ವಿಜಹ್ರತುಃ ॥28॥
ಕೌಂತೇಯನೇ! ಅನಂತರ ವಸುದೇವನ ಮಕ್ಕಳಾದ ಅವರಿಬ್ಬರೂ ವೃಂದಾವನಕ್ಕೆ ಹೋಗಿ ಅಲ್ಲಿ ಗೋವುಗಳನ್ನು ರಕ್ಷಿಸುತ್ತಾ ವಿಹಾರವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಚತುರ್ದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿಯಿತು.
*****
ನಲವತ್ತಾರನೆಯ ಅಧ್ಯಾಯ
(ಕಾಲಿಯ ದಮನ, ಕಂಸಾದಿ ಹನನ)
ಭೀಷ್ಮಃ
ತತಃ ಕದಾಚಿದ್ ಗೋವಿಂದೋ ಜ್ಯೇಷ್ಠಂ ಸಂಕರ್ಷಣಂ ವಿನಾ |
ಚಚಾರ ತದ್ವನಂ ರಮ್ಯಂ ಸಸುರೂಪೋ ವರಾನನಃ ॥1॥
ಅನಂತರ ಒಮ್ಮೆ ಸುರೂಪವುಳ್ಳ ಸುಂದರಮುಖವುಳ್ಳ ಗೋವಿಂದನು ಅಣ್ಣನಾದ ಸಂಕರ್ಷಣನನ್ನು ಬಿಟ್ಟು ರಮ್ಯವಾದ ಕಾಡಿನಲ್ಲಿ ಸಂಚರಿಸಿದನು.
ಕಾಕಪಕ್ಷಧರಃ ಶ್ರೀಮಾನ್ ಶ್ಯಾಮಃ ಪದ್ಮನಿಭೇಕ್ಷಣಃ |
ಶ್ರೀವತ್ಸೇನೋರಸಾ ಯುಕ್ತಃ ಶಶಾಂಕ ಇವ ಲಕ್ಷ್ಮಣಾ ॥2॥
ರಜ್ಜುಯಜ್ಞೋಪವೀತೀ ಸ ಪೀತಾಂಬರಧರೋ ಯುವಾ |
ಶ್ವೇತಚಂದನದಿಗ್ಧಾಂಗೋ ನೀಲಕುಂಚಿತಮೂರ್ಧಜಃ ॥3॥
ರಾಜತಾ ಬರ್ಹಿಪತ್ರೇಣ ಮಂದಮಾರುತಕಂಪಿನಾ |
ಕ್ವಚಿದ್ಗಾಯನ್ ಕ್ವಚಿತ್ ಕ್ರೀಡನ್ ಕ್ವಚಿನ್ನೃತ್ಯನ್ ಕ್ವಚಿದ್ಧಸನ್ ॥4॥

ಗೋಪವೇಷಃ ಸುಮಧುರಂ ಗಾಯನ್ ವೇಣುಂ ಚ ವಾದಯನ್ |
ಪ್ರಹ್ಲಾದನಾರ್ಥಂ ಚ ಗವಾಂ ಕ್ವಚಿದ್ ವನಗತೋ ಯುವಾ ॥5॥
ಗೋಕುಲೇ ಮೇಘಕಾಲೇ ತು ಚಚಾರ ದ್ಯುತಿಮಾನ್ ಪ್ರಭುಃ |
ಬಹುರಮ್ಯೇಷು ದೇಶೇಷು ವನಸ್ಯ ವನರಾಜಿಷು ॥6॥
ತಲೆಯ ಮೇಲಿನ ಕೂದಲುಗಳನ್ನು ಬಾಚಿ ಕಾಂತಿಯುಕ್ತನಾದ ಶ್ಯಾಮವರ್ಣೋಪೇತನಾದ ಪದ್ಮನೇತ್ರನಾದ ಅವನು ಶ್ರೀವತ್ಸದಿಂದ ಕೂಡಿದವನಾಗಿ ಚಿನ್ಹೆಯುಳ್ಳ ಚಂದ್ರನಂತೆ ಶೋಭಿಸಿದನು. ದಾರದಿಂದ ಮಾಡಿದ ಯಜ್ಞೋಪವೀತವನ್ನು ಧರಿಸಿ ಪೀತಾಂಬರಧಾರಿಯಾಗಿ ಶ್ವೇತ ಚಂದನವನ್ನು ಲೇಪಿಸಿಕೊಂಡವನಾಗಿ ಕಪ್ಪಾದ ಗುಂಗುರು ಕೂದಲುಗಳನ್ನು ಹೊಂದಿದ್ದ ಅವನು ಮಂದಮಾರುತಕ್ಕೆ ಅಲುಗಾಡುವ ನವಿಲುಗರಿಯಿಂದ ಶೋಭಿಸುತ್ತಾ, ಒಮ್ಮೆ ಹಾಡುತ್ತಾ ಒಮ್ಮೆ ಆಡುತ್ತಾ ಒಮ್ಮೆ ಕುಣಿಯುತ್ತಾ ಒಮ್ಮೆ ನಗುತ್ತಾ ಗೋಪವೇಷವನ್ನು ಧರಿಸಿ ಸುಮಧುರವಾಗಿ ಗಾನಮಾಡುತ್ತಾ ವೇಣುವನ್ನು ವಾದನಮಾಡುತ್ತಾ ಗೋವುಗಳನ್ನು ಸಂತೋಷಗೊಳಿಸುತ್ತಾ, (ಹೀಗೆಲ್ಲಾ ಮಾಡುತ್ತಾ ) ವನಗತನಾಗಿ ಮಳೆಗಾಲದಲ್ಲಿ ಕಾಂತಿಯುಕ್ತನಾದ ಆ ಪ್ರಭುವು ಸುಂದರವಾದ ವನ ರಾಜಿಗಳಲ್ಲಿ ಗೋವುಗಳ ಮಧ್ಯದಲ್ಲಿ ಸಂಚರಿಸಿದನು.
ತಾಸು ಕೃಷ್ಣೋ ಮುದಾ ಯುಕ್ತಃ ಕ್ರೀಡಯನ್ ಭರತರ್ಷಭ |
ಸ ಕದಾಚಿದ್ ವನೇ ತಸ್ಮಿನ್ ಗೋಭಿಃ ಸಹ ಪರಿವ್ರಜನ್ ॥7॥
ಭಾಂಡೀರಂ ನಾಮ ದೃಷ್ಟ್ವಾಽಥ ನ್ಯಗ್ರೋಧಂ ಕೇಶವೋ ಮಹಾನ್|
ತಚ್ಛಾಯಾಯಾಂ ನಿವಾಸಾಯ ಮತಿಂ ಚಕ್ರೇ ತದಾ ಪ್ರಭುಃ ॥8॥
ಎಲೈ ಭರತರ್ಷಭನೇ! ಕೃಷ್ಣನು ಸಂತೋಷದಿಂದ ಅಂತಹ ವನರಾಜಿಗಳಲ್ಲಿ ನಲಿಯುತ್ತಾ ಇತ್ತ ಒಮ್ಮೆ ಗೋವುಗಳ ಜೊತೆಯಲ್ಲಿ ಮುಂದೆ ಸಾಗುತ್ತಾ ಭಾಂಡೀರವೆಂಬ ಒಂದು ದೊಡ್ಡ ವಟವೃಕ್ಷವನ್ನು ನೋಡಿ ಅದರ ನೆರಳಿನಲ್ಲಿ ವಾಸಮಾಡಲು ಇಚ್ಛಿಸಿದನು.
ಸ ತತ್ರ ವಯಸಾ ತುಲ್ಯೈರ್ವತ್ಸಪಾಲೈಸ್ತದಾಽನಘ |
ರೇಮೇ ಸ ದಿವಸಾನ್ ಕೃಷ್ಣಃ ಪುರಾ ಸ್ವರ್ಗಪುರೇ ಯಥಾ ॥9॥
ಎಲೈ ಅನಘನೇ! ಅಲ್ಲಿ ಕೃಷ್ಣನು ತನ್ನ ಸಮಾನ ವಯಸ್ಸಿನ ವತ್ಸಪಾಲಕರ ಜೊತೆಯಲ್ಲಿ ಕೂಡಿ ಹಗಲಿನ ಸಮಯದಲ್ಲಿ ಅನೇಕ ದಿವಸಗಳ ಕಾಲ ಸ್ವರ್ಗದಲ್ಲಿ ಆನಂದಿಸುವಂತೆ ಆನಂದಿಸಿದನು.
ತಂ ಕ್ರೀಡಮಾನಂ ಗೋಪಾಲಾಃ ಕೃಷ್ಣಂ ಭಾಂಡೀರವಾಸಿನಃ |
ರಮಯಂತಿ ಸ್ಮ ಬಹವೋ ಮಾನ್ಯೈಃ ಕ್ರೀಡನಕೈಸ್ತದಾ ॥10॥
ಹೀಗೆ ಆಟವಾಡುತ್ತಿದ್ದ ಕೃಷ್ಣನಿಗೆ ಭಾಂಡೀರವಾಸಿಗಳಾದ ಉಳಿದ ಗೋಪಾಲರೆಲ್ಲರೂ ಆನೇಕ ಶ್ರೇಷ್ಠವಾದ ಕ್ರೀಡಾಸಾಮಗ್ರಿಗಳನ್ನು ತಂದುಕೊಟ್ಟು ಸಂತೋಷಪಡಿಸಿದರು.
ಅನ್ಯೇ ಸ್ಮ ಪರಿಗಾಯಂತಿ ಗೋಪಾ ಮುದಿತಮಾನಸಾಃ |
ಗೋಪಾಲಾಃ ಕೃಷ್ಣಮೇವಾನ್ಯೇ ಗಾಯಂತಿ ಸ್ಮ ವನಪ್ರಿಯಾಃ ॥11॥
ಇನ್ನು ಕೆಲವು ಗೋಪಾಲಕರು ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಗಾನಮಾಡುತ್ತಿದ್ದರು. ವನಪ್ರಿಯರಾದ ಇನ್ನು ಕೆಲವು ಗೋಪಾಲಕರು ಕೃಷ್ಣನನ್ನೇ ಗಾನಮಾಡುತ್ತಿದ್ದರು.
ತೇಷಾಂ ಸಂಗಾಯತಾಮೇವ ವಾದಯಾಮಾಸ ಕೇಶವಃ |
ಪುನರ್ವಾದ್ಯಾಂತರೇ ವೇಣುಂ ತುಂಬವೀಣಾಂ ಚ ತತ್ರ ವೈ |
ಏವಂ ಕ್ರೀಡಾಂತನಿರತೈರ್ಗೋಪಾಲೈರ್ವಿಜಹಾರ ಸಃ ॥12॥
ಅವರು ಹೀಗೆ ಗಾನಮಾಡುತ್ತಿರಲು ಕೃಷ್ಣನು ಆ ಗಾನಕ್ಕೆ ಅನುಕೂಲವಾಗಿ ಬೇರೆ ಬೇರೆ ವಾದ್ಯಗಳನ್ನೂ ವೇಣುವನ್ನೂ ಸೋರೆಯ ಬುರುಡೆಯಿಂದ ಮಾಡಿದ ವೀಣೆಯನ್ನೂ ನುಡಿಸಿದನು. ಹೀಗೆ ಕ್ರೀಡಾನಿರತರಾದ ಗೋಪಾಲಕರ ಜೊತೆಯಲ್ಲಿ ಅವನು ವಿಹರಿಸಿದನು.

ತೇನ ಬಾಲೇನ ಕೌಂತೇಯ ಕೃತಂ ಲೋಕಹಿತಂ ತದಾ |
ಪಶ್ಯತಾಂ ಸರ್ವಭೂತಾನಾಂ ವಾಸುದೇವೇನ ಭಾರತ ॥13॥
ಎಲೈ ಕೌಂತೇಯನೇ! ಭಾರೆನೇ! ಹೀಗೆ ಆಟವಾಡುತ್ತಿದ್ದ ಕೃಷ್ಣನು ಎಲ್ಲರ ಎದುರಿನಲ್ಲಿ ಲೋಕಹಿತವಾದ ಒಂದು ಕಾರ್ಯವನ್ನು ಮಾಡಿದನು.
ಹ್ರದೇ ನೀಪವನೇ ತಾತ ಕ್ರೀಡಿತಂ ನಾಗಮೂರ್ಧನಿ |
ಶಾಸಯಿತ್ವಾ ತು ಕಾಲೀಯಂ ಸರ್ವಲೋಕಸ್ಯ ಪಶ್ಯತಃ |
ವಿಜಹಾರ ತತಃ ಕೃಷ್ಣೋ ಬಲದೇವಸಹಾಯವಾನ್ ॥14॥
ಯಮುನಾ ನದಿಯ ತೀರದ ನೀಪವನದ ಸಮೀಪದಲ್ಲಿ ಯಮುನೆಯ ಹ್ರದದಲ್ಲಿ ಕಾಲಿಯ ಸರ್ಪನ ಜೊತೆ ಆಟವಾಡಿ ಎಲ್ಲರ ಕಣ್ಣೆದುರಿಗೆ ಅವನನ್ನು ಶಿಕ್ಷಿಸಿದನು. ಅನಂತರ ಕೃಷ್ಣನು ಬಲದೇವನ ಜೊತೆಯಲ್ಲಿ ವಿಹರಿಸಿದನು.
ಧೇನುಕೋ ದಾರುಣೋ ದೈತ್ಯೋ ರಾಜನ್ ರಾಸಭವಿಗ್ರಹಃ |
ತದಾ ತಾಳವನೇ ರಾಜನ್ ಬಲದೇವೇನ ವೈ ಹತಃ ॥15॥
ಎಲೈ ರಾಜನೇ! ಅನಂತರ ರಾಸಭದೇಹವನ್ನು ಧರಿಸಿದ ಧೇನುಕನೆಂಬ ಘೋರನಾದ ರಾಕ್ಷಸನು ಬಲದೇವನಿಂದ ತಾಳವನದಲ್ಲಿ ಸಂಹರಿಸಲ್ಪಟ್ಟನು.
ತತಃ ಕೃಷ್ಣೋ ಮಹಾತೇಜಾಸ್ತದಾ ಗತ್ವಾ ತು ಗೋವ್ರಜಮ್ |
ಗಿರಿಯಜ್ಞಂ ತಮೇವೈಷ ಪ್ರಕೃತಂ ಗೋಪದಾರಕೈಃ |

ಬುಭುಜೇ ಪಾಯಸಂ ಶೌರಿರೀಶ್ವರಃ ಸರ್ವಭೂತಕೃತ್ ॥16॥
ಅನಂತರ ಮಹಾತೇಜಸ್ವಿಯಾದ ಕೃಷ್ಣನು ಗೋವ್ರಜಕ್ಕೆ ಹೋಗಿ ಗೋಪದಾರಕರು ಪ್ರವರ್ತಿಸಿದ ಗಿರಿಯಜ್ಞವನ್ನು ಮಾಡಿ ಶೌರಿಯಾ ಈಶ್ವರನೂ ಸರ್ವಭೂತ ಕರ್ತನೂ ಆದ ಅವನು ಪಾಯಸವನ್ನು ಊಟಮಾಡಿದನು.
ತಂ ನತ್ವಾ ಗೋಪಕಾಃ ಸರ್ವೇ ಕೃಷ್ಣಮೇವ ಸಮರ್ಚಯನ್ |
ಪೂಜ್ಯಮಾನಸ್ತತೋ ಗೋಪೈರ್ದಿವ್ಯಂ ವಪುರಧಾರಯತ್ ॥17॥
ಗೋಪಾಲಕರೆಲ್ಲರೂ ಕೃಷ್ಣನನ್ನು ನಮಸ್ಕರಿಸಿ ಅವನಿಗೆ ಅರ್ಚನೆಯನ್ನು ಸಲ್ಲಿಸಿದರು. ಗೋಪಾಲಕರಿಂದ ಪೂಜಿಸಲ್ಪಟ್ಟ ಕೃಷ್ಣನು ಅನಂತರ ದಿವ್ಯದೇಹವನ್ನು ಧರಿಸಿದನು.
ಧೃತೋ ಗೋವರ್ಧನೋ ನಾಮ ಸಪ್ತಾಹಂ ವರ್ಷತೋ ಮಹಾನ್|
ಶಿಶುನಾ ವಾಸುದೇವೇನ ಗವಾರ್ಥಮರಿಮರ್ದನ ॥18॥
ಎಲೈ ಶತ್ರು ಮರ್ದನನೇ! ಇಂದ್ರನು ಮಳೆಯನ್ನು ಸುರಿಸಿದಾಗ ಶಿಶುವಾದ ವಾಸುದೇವನು ಗೋವರ್ಧನವೆಂಬ ಮಹಾಪರ್ವತವನ್ನು ಏಳು ದಿನಗಳ ಕಾಲ ಎತ್ತಿ ಹಿಡಿದನು.
ಕ್ರೀಡಮಾನಸ್ತದಾ ಕೃಷ್ಣಃ ಕೃತವಾನ್ ಕರ್ಮ ದುಷ್ಕರಮ್ |
ತದದ್ಭುತಮಿವಾತ್ರಾಸೀತ್ ಸರ್ವಲೋಕಸ್ಯ ಭಾರತ ॥19॥
ಆಗ ಕೃಷ್ಣನು ಲೀಲೆಯಿಂದಲೇ ಅನಾಯಾಸವಾಗಿ ಆ ದುಷ್ಕರಕರ್ಮವನ್ನು ಮಾಡಿದನು. ಭಾರತನೇ ಎಲ್ಲರ ಕಣ್ಣೆದುರಿಗೆ ಮಾಡಿದ ಆ ಅಸಾಧಾರಣಕರ್ಮವು ಅದ್ಭುತವಾಗಿದ್ದಿತು.
ದೇವದೇವಃ ಕ್ಷಿತಿಂ ಗತ್ವಾ ಕೃಷ್ಣಂ ದೃಷ್ಟ್ವಾ ಮುದಾನ್ವಿತಃ |
ಗೋವಿಂದ ಇತಿ ತಂ ಹ್ಯುಕತ್ವ ಅಭಿಷಿಂಚಿತ್ ಪುರಂದರಃ |
ಇತ್ಯುಕತ್ವಽಽಶ್ಲಿಷ್ಯ ಗೋವಿಂದಂ ಪುರುಹೂತೋಽಭ್ಯಯಾದ್ದಿವಮ್ ॥
ದೇವದೇವನಾದ ಇಂದ್ರನು ಭೂಮಿಗೆ ಬಂದು ಕೃಷ್ಣನನ್ನು ನೋಡಿ ಸಂತೋಷದಿಂದ ಗೋವಿಂದನೆಂದು ನಾಮಕರಣವನ್ನು ಮಾಡಿ ಅವನಿಗೆ ಅಭಿಷೇಕವನ್ನು ಮಾಡಿ, ಗೋವಿಂದನೆಂದು ಅವನನ್ನು ಕರೆದು ಆಲಿಂಗಿಸಿ ಸ್ವರ್ಗಕ್ಕೆ ಹಿಂದಿರುಗಿದನು.
ಅಥಾರಿಷ್ಟ ಇತಿ ಖ್ಯಾತಂ ದೈತ್ಯಂ ವೃಷಭವಿಗ್ರಹಮ್ |
ಜಘಾನ ತರಸಾ ಕೃಷ್ಣಃ ಪಶೂನಾಂ ಹಿತಕಾಮ್ಯಯಾ ॥21॥
ಅನಂತರ ಪಶುಗಳಿಗೆ ಹಿತವನ್ನುಮಾಡುವ ಇಚ್ಛೆಯುಳ್ಳವನಾಗಿ ಕೃಷ್ಣನು ವೃಷಭರೂಪವನ್ನು ಧರಿಸಿದ ಅರಿಷ್ಟ ಎಂಬ ದೈತ್ಯನನ್ನು ತನ್ನ ಸಾಮರ್ಥ್ಯದಿಂದ ಸಂಹರಿಸಿದನು.
ಕೇಶಿಂ ನಾಮ ತತೋ ರಾಜನ್ ದೈತೇಯಂ ಹಯವಿಗ್ರಹಮ್ |
ತಥಾ ವನಗತಂ ಪಾರ್ಥ ಗಜಾಯುತಬಲಂ ಹಯಮ್ ॥22॥
ಪ್ರಹಿತಂ ಭೋಜಪುತ್ರೇಣ ಜಘಾನ ಮಧುಸೂದನಃ |
ಕಂಸಮಲ್ಲಂ ಚ ಚಾಣೂರಂ ನಿಜಘಾನ ಮಹಾಸುರಮ್ ॥23॥
ಎಲೈ ರಾಜನೇ! ಅನಂತರ ಕುದುರೆಯ ರೂಪವನ್ನು ಧರಿಸಿದ ಹತ್ತು ಸಾವಿರ ಆನೆಯ ಬಲವುಳ್ಳ ಭೋಜಪುತ್ರನಾದ ಕಂಸನಿಂದ ಕಾಡಿಗೆ ಕಳುಹಿಸಲ್ಪಟ್ಟ ಕೇಶಿಯೆಂಬ ದೈತ್ಯನನ್ನು ಮಧುಸೂದನನು ಸಂಹರಿಸಿದನು. ಕಂಸನ ಮಲ್ಲನಾದ ಚಾಣೂರನೆಂಬ ಮಹಾಸುರನನ್ನು ಸಂಹರಿಸಿದನು.
ಸುದಾಮಾನಮಮಿತ್ರಘ್ನಂ ಸರ್ವಸೈನ್ಯಪುರಸ್ಕೃತಮ್ |
ಮೃಗರೂಪೇಣ ಗೋವಿಂದಸಕತ್ರಸಯಾಮಾಸ ಭಾರತ ॥24॥
ಎಲೈ ಭಾರತನೇ! ಸರ್ವಸೈನ್ಯ ಪುರಸ್ಕೃತನಾದ ಸುದಾಮ ಎಂಬ ಶತ್ರುಸಂಹಾರಕನಾದ ಕಂಸನ ಭೃತ್ಯನನ್ನು ಗೋವಿಂದನು ಸಿಂಹದ ರೂಪವನ್ನು ಧರಿಸಿ ಪೀಡಿಸಿದನು.
ಬಲದೇವೇನ ಚಾಯತ್ತಃ ಸಮಾಜೇ ಮುಷ್ಟಿಕೋ ಹತಃ |
ತ್ರಾಸಿತಶ್ಚ ತದಾ ಕಂಸಃ ಸ ಹಿ ಕೃಷ್ಣೇನ ಭಾರತ ॥25॥
ಧನುರುತ್ಸವ ಸಂದರ್ಭದಲ್ಲಿ ಬಲದೇವನ ಜೊತೆಯಲ್ಲಿ ಸೆಣಸಿದ ಮುಷ್ಟಿಕನು ಬಲದೇವನಿಂದ ಹತನಾದನು. ಎಲೈ ಭಾರತನೇ! ಆಗ ಕೃಷ್ಣನಿಂದ ಕಂಸನು ಮಹಾಭಯಕ್ಕೆ ಒಳಗಾದನು.
ಐರಾವತಂ ಯುಯುತ್ಸಂತಂ ಮಾತಂಗಾನಾಮಿವರ್ಷಭಮ್ |
ಕೃಷ್ಣಃ ಕುವಲಯಾಪೀಡಂ ಹತವಾಂಸ್ತಸ್ಯ ಪಶ್ಯತಃ ॥26॥
ಐರಾವತದಂತೆ ಗಜರಾಜನಂತಿದ್ದ ತನ್ನನ್ನು ಕೊಲ್ಲಲು ಬಂದ ಕುವಲಯಾಪೀಡ ಎಂಬ ಗಜವನ್ನು ಕಂಸನ ಕಣ್ಣೆದುರಿಗೇ ಸಂಹರಿಸಿದನು.
ಹತ್ವಾ ಕಂಸಮಮಿತ್ರಘ್ನಃ ಸರ್ವೇಷಾಂ ಪಶ್ಯತಾಂ ತದಾ |
ಅಭಿಷಿಚ್ಯೋಗ್ರಸೇನಂ ತಂ ಪಿತ್ರೋಃ ಪಾದಾನವಂದತ ॥27॥
ಎಲ್ಲರ ಕಣ್ಣೆದುರಿನಲ್ಲಿ ಅಮಿತ್ರಘ್ನನಾದ ಕೃಷ್ಣನು ಕಂಸನನ್ನು ಸಂಹರಿಸಿ ಉಗ್ರಸೇನನಿಗೆ ಪಟ್ಟವನ್ನು ಕಟ್ಟಿ ದೇವಕಿ ವಸುದೇವರ ಪಾದಗಳಿಗೆ ನಮಸ್ಕರಿಸಿದನು.
ಏವಮಾದೀನಿ ಕರ್ಮಾಣಿ ಕೃತವಾನ್ ವೈ ಜನಾರ್ದನಃ |
ಉವಾಸ ಕತಿಚಿತ್ ತತ್ರ ದಿನಾನಿ ಸಹಲಾಯುಧಃ ॥29॥
ಜನಾರ್ದನನು ಇವೇ ಮೊದಲಾದ ಕರ್ಮಗಳನ್ನು ಮಾಡುತ್ತಾ ಬಲರಾಮನ ಜೊತೆಯಲ್ಲಿ ಕೆಲವು ಸಮಯದವರೆಗೆ ಅಲ್ಲಿ

ವಾಸಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಟ್ಚತ್ವಾರಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಪಂಚದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತಾರನೆಯ ಅಧ್ಯಾಯವು ಮುಗಿಯಿತು.
* * * *
ನಲವತ್ತೇಳನೆಯ ಅಧ್ಯಾಯ
(ಕೃಷ್ಣ ಬಲರಾಮರ ವಿದ್ಯಾಭ್ಯಾಸ ಗುರುದಕ್ಷಿಣೆ ಮತ್ತು
ಪುನಃ ಕಂಸವಧೆಯ ಕಥನ)
ಭೀಷ್ಮಃ
ತತಸ್ತೌ ಜಗ್ಮತುಸ್ತಾತ ಗುರುಂ ಸಾಂದೀಪಿನಿಂ ಪುನಃ |
ಗುರುಶುಶ್ರೂಷಯಾ ಯುಕ್ತೌ ಧರ್ಮಜ್ಞೌ ಧರ್ಮಚಾರಿಣೌ ॥1॥
ಪ್ರೀತಿಪಾತ್ರನೇ! ಅನಂತರ ಅವರು ಧರ್ಮಜ್ಞರಾದ ಸಾಂದೀಪಿನಿ ಗುರುಗಳ ಬಳಿಗೆ ಹೋಗಿ ಗುರುಶುಶ್ರೂಷೆಯನ್ನು ಮಾಡುತ್ತಾ ಧರ್ಮಚಾರಿಗಳಾದರು.
ವ್ರತಮುಗ್ರಂ ಮಹಾತ್ಮಾನೌ ವಿಚರಂತಾವವಂತಿಷು |
ಅಹೋರಾತ್ರೈಶ್ಚತುಷ್ಷಷ್ಟ್ಯಾ ಷಡಂಗಂ ವೇದಮಾಪತುಃ ॥2|
ಮಹಾತ್ಮರಾದ ಅವರಿಬ್ಬರೂ ಅವಂತಿದೇಶದಲ್ಲಿ ಉಗ್ರವಾದ ವ್ರತವನ್ನು ಆಚರಿಸುತ್ತಾ ಅರವತ್ತನಾಲ್ಕು ಅಹೋರಾತ್ರಿಗಳಲ್ಲಿ ಷಡಂಗಸಹಿತವಾದ ವೇದವನ್ನು ಅಧ್ಯಯನ ಮಾಡಿದರು.
ಲೇಖ್ಯಂ ಚ ಗಣಿತಂ ಚೋಭೌ ಪ್ರಾಪ್ನುತಾಂ ಯದುನಂದನೌ |
ಗಾಂಧರ್ವವೇದಂ ಚಿತ್ರಂ ಚ ಸಕಲಂ ಸಮವಾಪತುಃ ॥3॥
ಯದುನಂದನರಾದ ಅವರಿಬ್ಬರೂ ಬರವಣಿಗೆಯನ್ನೂ ಗಣಿತವನ್ನೂ ಸಂಗೀತವಿದ್ಯೆಯನ್ನೂ ಚಿತ್ರಕಲೆಯನ್ನೂ ಜೊತೆಯಲ್ಲಿಯೇ ಕಲಿತರು.
ಹಸ್ತಿಶಿಕ್ಷಾಶ್ವಶಿಕ್ಷಾಂ ಚ ದ್ವಾದಶಾಹೇನ ಚಾಪತುಃ |
ತಾವುಭೌ ಜಗ್ಮತುರ್ವೀರೌ ಗುರುಂ ಸಾಂದೀಪಿನಿಂ ಪುನಃ |
ಧನುರ್ವೇದಚಿಕೀರ್ಷಾರ್ಥಂ ಸರ್ವಜ್ಞೌ ಧರ್ಮಚಾರಿಣೌ ॥4॥
ಹಸ್ತಶಿಕ್ಷಾ ಗಜಶಿಕ್ಷಾ ವಿದ್ಯೆಯನ್ನೂ ಅಶ್ವಶಿಕ್ಷಾ ವಿದ್ಯೆಯನ್ನೂ ಕಲಿತು ಪುನಃ ಸರ್ವಜ್ಞರಾದ ಧರ್ಮಚಾರಿಗಳಾದ ಅವರು ಗುರುಗಳಾದ ಸಾಂದೀಪಿನಿಗಳ ಬಳಿಗೆ ಧನುರ್ವಿದ್ಯೆಯನ್ನು ಕಲಿಯಲು ಬಂದರು.
ತಾವಿಷ್ವಸ್ತ್ರವರಾಚಾರ್ಯಮಭಿಗಮ್ಯ ಪ್ರಣಮ್ಯ ಚ |
ತೇನ ತೌ ಸತ್ಕೃತೌ ರಾಜನ್ ವಿಚರಂತಾವವಂತಿಷು ॥5॥
ಪಂಚಾಶದ್ಭಿರಹೋರಾತ್ರೈರ್ದಶಾಂಗಂ ಸುಪ್ರತಿಷ್ಠಿತಮ್ |
ಸರಹಸ್ಯಂ ಧನುರ್ವೇದಂ ಸಕಲಂ ತಾವವಾಪ್ನುತಾಮ್ ॥6॥
ಅವರಿಬ್ಬರೂ ಧನುರ್ವೇದ ಪರಮಾಚಾರ್ಯರಾದ ಸಾಂದೀಪಿನಿಗಳನ್ನು ಸಮೀಪಿಸಿ ನಮಸ್ಕರಿಸಿದರು. ರಾಜನೇ! ಅವರಿಂದ ಸತ್ಕೃತರಾದ ಅವರಿಬ್ಬರೂ ಅವಂತಿದೇಶದಲ್ಲಿ ಸಂಚರಿಸುತ್ತಾ ಐವತ್ತು ದಿನಗಳಲ್ಲಿ ದಶಾಂಗಗಳಿಂದ ಕೂಡಿದ ಸುಪ್ರತಿಷ್ಠಿತವಾದ ರಹಸ್ಯ ಸಹಿತವಾದ ಸಕಲವಾದ ಧನುರ್ವೇದವನ್ನು ಕಲಿತರು.
ದೃಷ್ಟ್ವಾ ಕೃತಾರ್ಥೌ ವಿಪ್ರೇಂದ್ರೋ ಗುರ್ವರ್ಥೇ ತಾವಚೋದಯತ್ |
ಅಯಾಚತಾರ್ಥಂ ಗೋವಿಂದಂ ತತಃ ಸಾಂದೀಪಿನಿರ್ವಿಭುಮ್ ॥7॥
ವಿಪ್ರೇಂದ್ರರಾದ ಸಾಂದೀಪಿನಿಗಳು ಕೃತಾರ್ಥರಾದ ಅವರನ್ನು ನೋಡಿ ಗುರುದಕ್ಷಿಣೆಯ ಸಲುವಾಗಿ ಅವರನ್ನು ಕೇಳಿದರು. ಆಗ ಸಾಂದೀಪಿನಿಗಳು ಪ್ರಭುವಾದ ಗೋವಿಂದನನ್ನು ತಮಗೆ ಅಭಿಮತವಾದ ಅರ್ಥವನ್ನು ಯಾಚಿಸಿದರು.
ಮಮ ಪುತ್ರಃ ಸಮುದ್ರೇಸ್ಮಿಂಸ್ತಿಮಿನಾ ಚಾಪವಾಹಿತಃ |
ಪುತ್ರಮಾನಯ ಭದ್ರಂ ತೇ ಭಕ್ಷಿತಂ ತಿಮಿನಾ ಮಮ ॥8॥
ನಿನಗೆ ಮಂಗಳವಾಗಲಿ, ನನ್ನ ಪುತ್ರನು ಈ ಸಮುದ್ರದಲ್ಲಿ ಒಂದು ತಿಮಿಂಗಿಲದಿಂದ ಅಪಹರಿಸಿ ಭಕ್ಷಿಸಲ್ಪಟ್ಟನು. ಅವನನ್ನು ತಂದುಕೊಡು.
ಭೀಷ್ಮಃ
ಆರ್ತಾಯ ಗುರವೇ ತತ್ರ ಪ್ರತಿಶುಶ್ರಾವ ದುಷ್ಕರಮ್ |
ಅಶಕ್ಯಂ ಸರ್ವಭೂತೇಷು ಕರ್ತುಮನ್ಯೇನ ಕೇನಚಿತ್ ॥9॥
ಗೋವಿಂದನು ಆರ್ತರಾದ ಗುರುಗಳಿಗೆ ಬೇರೆ ಯಾವ ವ್ಯಕ್ತಿಯೂ ಮಾಡಲು ಅಸಾಧ್ಯವಾದ ದುಷ್ಕರವಾದ ಕರ್ಮವನ್ನು ಮಾಡುವ ವಾಗ್ದಾನವನ್ನು ಮಾಡಿದನು.
ಯಶ್ಚ ಸಾಂದೀಪಿನೇಃ ಪುತ್ರಂ ಜಘಾನ ಭರತರ್ಷಭ |
ಸೋಽಸುರಃ ಸಮರೇ ತಾಭ್ಯಾಂ ಸಮುದ್ರೇ ವಿನಿಪಾತಿತಃ ॥10॥
ಎಲೈ ಭರತರ್ಷಭನೇ! ಯಾವ ಅಸುರನು ಸಾಂದೀಪಿನಿಯ ಪುತ್ರನನ್ನು ಕೊಂದಿದ್ದನೋ ಅವನನ್ನು ಅವರಿಬ್ಬರೂ ಸಮುದ್ರದಲ್ಲಿ ಸೋಲಿಸಿ ಸಂಹರಿಸಿದರು.

ತತಃ ಸಾಂದೀಪಿನೇಃ ಪುತ್ರಃ ಪ್ರಸಾದಾದಮಿತೌಜಸಃ |
ದೀರ್ಘಕಾಲಂ ಕೃತಃ ಪ್ರೇತಂ ಪುನರಾಸೀಚ್ಛರೀರವಾನ್ ॥11॥
ಆಗ ಅಮಿತಪರಾಕ್ರಮಿಯಾದ ಕೃಷ್ಣನ ಅನುಗ್ರಹದಿಂದ ದೀರ್ಘಕಾಲದ ಹಿಂದೆ ಮೃತನಾಗಿದ್ದ ಸಾಂದೀಪಿನಿಗಳ ಪುತ್ರನು ಪುನಃ ಶರೀರವನ್ನು ಧರಿಸಿ ಬಂದನು.
ತದಶಕ್ಯಮಚಿಂತ್ಯಂ ಚ ದೃಷ್ಟ್ವಾ ಸುಮಹದದ್ಭುತಮ್ |
ಸರ್ವೇಷಾಮೇವ ಭೂತಾನಾಂ ವಿಸ್ಮಯಃ ಸಮಜಾಯತ ॥12॥
ಇಂತಹ ಅಸಾಧ್ಯವಾದ, ಯೋಚನೆಯನ್ನೂ ಮಾಡಲು ಶಕ್ಯವಲ್ಲದ, ಮಹಾ ಅದ್ಭುತವಾದ ಕರ್ಮವನ್ನು ನೋಡಿದ ಎಲ್ಲರಿಗೂ ವಿಸ್ಮಯ ಉಂಟಾಯಿತು.
ಐಶ್ವರ್ಯಾಣಿ ಚ ಸರ್ವಾಣಿ ಗವಾಶ್ವಂ ಚ ಧನಾನಿ ಚ |
ಸರ್ವಂ ತದುಪಜಹ್ರಾತೇ ಗುರವೇ ರಾಮಕೇಶವೌ |
ತತಸ್ತಂ ಪುತ್ರಮಾದಾಯ ದದೌ ಚ ಗುರವೇ ಪ್ರಭುಃ ॥13॥
ಬಲರಾಮಕೇಶವರು ಸಮಗ್ರವಾದ ಐಶ್ವರ್ಯವನ್ನೂ ಗೋಸಂಪತ್ತು ಮತ್ತು ಅಶ್ವಸಂಪತ್ತುಗಳನ್ನೂ ತೆಗೆದುಕೊಂಡು ಗುರುಪುತ್ರನನ್ನು ಕರೆದುಕೊಂಡು ಬಂದು ಗುರುಗಳಿಗೆ ಒಪ್ಪಿಸಿದರು.
ತಂ ದೃಷ್ಟ್ವಾ ಪುತ್ರಮಾಯಾಂತಂ ಸಾಂದೀಪಿನಿಪುರೇ ಜನಾಃ |
ಅಶಕ್ಯಮೇತತ್ ಸರ್ವೇಷಾಮಚಿಂತ್ಯಮಿತಿ ಮೇನಿರೇ ॥16॥
ಗದಾಪರಿಘಯುದ್ಧೇ ಚ ಸರ್ವಾಸ್ತ್ರೇಷು ಚ ಕೇಶವಃ |
ಪರಮಾಂ ಮುಖ್ಯತಾಂ ಪ್ರಾಪ್ತಃ ಸರ್ವಲೋಕೇಷು ವಿಶ್ರುತಃ ॥17॥
ಅವನನ್ನು ನೋಡಿದ ಅವಂತಿಪುರದ ಜನರು ಇದು ಯಾರಿಗೂ ಸಾಧ್ಯವಾಗದಿರುವುದು ಮತ್ತು ನಂಬಲೂ ಅಶಕ್ಯವಾದಂತಹುದು ಎಂದು ತಿಳಿದರು. ಕೇಶವನು ಗದಾಯುದ್ಧ ಪರಿಘಯುದ್ಧಗಳಲ್ಲಿಯೂ ಸರ್ವಾಸ್ತ್ರಗಳಲ್ಲಿಯೂ ಪರಮ ಶ್ರೇಷ್ಠತೆಯನ್ನು ಹೊಂದಿ ಸರ್ವಲೋಕಗಳಲ್ಲಿಯೂ ವಿಶ್ರುತನಾದನು.
ತತಃ ಕದಾಚಿತ್ ಕೌಂತೇಯ ರಾಮಕೃಷ್ಣೌ ವನಂ ಗತೌ |
ಚಾರಯಂತೌ ಪ್ರವೃದ್ಧಾನಿ ಗೋಧನಾನಿ ಶುಭಾನನೌ ॥18॥
ವಿಹರಂತೌ ಮುದಾ ಯುಕ್ತೌ ವೀಕ್ಷಮಾಣೌ ವನಾನಿ ಚ |
ಕ್ಷ್ವೇಳಯಂತೌ ಪ್ರಗಾಯಂತೌ ವಿಚಿನ್ವಂತೌ ಚ ಪಾದಪಾನ್ ॥19॥
ನಾಮಭಿರ್ವ್ಯಾಹರಂತೌ ಚ ವತ್ಸಾನ್ ಗಾಶ್ಚ ಪರಂತಪೌ |
ಚೇರತುರ್ಲೋಕಸಿದ್ಧಾಭಿಃ ಕ್ರೀಡಾಭಿರಪರಾಜಿತೌ ॥20॥
ಎಲೈ ಕೌಂತೇಯನೇ! ಒಮ್ಮೆ ಸುಂದರರಾದ ರಾಮಕೃಷ್ಣರು ಪ್ರವೃದ್ಧವಾದ ಗೋಸಂಪತ್ತನ್ನು ಕರೆದುಕೊಂಡು ಮೇಯಿಸುತ್ತಾ ವನಕ್ಕೆ ಹೋದರು. ಸಂತೋಷದಿಂದ ಕೂಡಿದ ಅವರು ವನದ ಸೌಂದರ್ಯವನ್ನು ವೀಕ್ಷಿಸುತ್ತಾ ಮೃಗಗಳ ಗರ್ಜನೆಯನ್ನು ಮಾಡುತ್ತಾ ಗಾನವನ್ನು ಮಾಡುತ್ತಾ ವೃಕ್ಷಗಳನ್ನು ಹುಡುಕುತ್ತಾ ಹಸುಗಳನ್ನು ಮತ್ತು ಕರುಗಳನ್ನು ಅವುಗಳ ಹೆಸರಿನಿಂದ ಕರೆಯುತ್ತಾ ಪರಂತಪರೂ ಅಪರಾಜಿತರೂ ಆದ ಅವರು ಲೋಕಸಿದ್ಧವಾದ ಕ್ರೀಡೆಗಳನ್ನು ಮಾಡುತ್ತಾ ಸಂಚರಿಸಿದರು.( ಕೃಷ್ಣದೇವರ ಬಾಲಲೀಲೆಗಳಿಗೆ ಮನಸೋತ ಭೀಷ್ಮರು ಪುನಃ ಹಿಂದಿನ ಕಥೆಯನ್ನು ಮೆಲುಕುಹಾಕಿ ನಿರೂಪಿಸುತ್ತಾರೆ ಎಂದು ಲಕ್ಷಾಲಂಕಾರಕಾರರು ಇಲ್ಲಿ ತಿಳಿಸಿದ್ದಾರೆ.)
ತೌ ದೇವೌ ಮಾನುಷೀಂ ದೀಕ್ಷಾಂ ವಹಂತೌ ಸುರಪೂಜಿತೌ |
ತಜ್ಜಾತಿಗುಣಯುಕ್ತಾಭಿಃ ಕ್ರೀಡಾಭಿಶ್ಚೇರತುರ್ವನಮ್ |
ಏವಂ ಬಾಲ್ಯೇಽಪಿ ಗೋಪಾಲ್ಯೈಃ ಕ್ರೀಡಾಭಿಸ್ತೌ ವಿಜಹ್ರತುಃ ॥21॥
ಮನುಷ್ಯವೇಷವನ್ನು ಧರಿಸಿದ ದೇವತೆಗಳಿಂದ ಪೂಜಿತರಾದ ಆ ಇಬ್ಬರ ದೇವಶ್ರೇಷ್ಠರು ಮನುಷ್ಯಜಾತಿಗೆ ಯೋಗ್ಯವಾದ ಕ್ರೀಡೆಗಳಿಂದ ಮತ್ತು ಗುಣಗಳಿಂದ ಕಾಡಿನಲ್ಲಿ ಸಂಚರಿಸಿದರು. ಹೀಗೆ ಬಾಲ್ಯದಲ್ಲಿಯೂ ಅವರಿಬ್ಬರೂ ಗೋಪಾಲಕರ ಜೊತೆಯಲ್ಲಿ ಕ್ರೀಡೆಗಳನ್ನು ಆಡುತ್ತಾ ವಿಹರಿಸಿದರು.
ಕಶ್ಚ ನಾರಾಯಣಾದನ್ಯಃ ಸರ್ವರತ್ನವಿಭೂಷಿತಮ್ |
ರಥಮಾದಿತ್ಯಸಂಕಾಶಮಾತಿಷ್ಠೇನ ಶಚೀಪತೇಃ ॥22॥
ಧರ್ಮರಾಜನೇ! ನಾರಾಯಣನಲ್ಲದೆ ಬೇರೆ ಯಾರು ಸರ್ವರತ್ನವಿಭೂಷಿತವಾದ ಸೂರ್ಯಪ್ರಕಾಶವನ್ನು ಹೊಂದಿರುವ ಇಂದ್ರನ ರಥವನ್ನು ಏರುತ್ತಾನೆ?
ಕಸ್ಯ ಚಾಪ್ರತಿಮೋ ಯಂತಾ ವಜ್ರಪಾಣೇಃ ಪ್ರಿಯಃ ಸಖಾ |
ಮಾತಲಿಃ ಸಂಗೃಹೀತೀ ಸ್ಯಾದನ್ಯತ್ರ ಪುರುಷೋತ್ತಮಾತ್ ॥23॥
ಪುರುಷೋತ್ತಮನನ್ನು ಬಿಟ್ಟು ಬೇರೆ ಯಾರಿಗೆ ವಜ್ರಪಾಣಿಯಾದ ಇಂದ್ರನ ಪ್ರಿಯಸಖನೂ ಸಾರಥಿಯೂ ಅಸದೃಶನೂ ಆದ ಮಾತಲಿಯು ರಶ್ಮಿಗಳನ್ನು ಹಿಡಿಯುತ್ತಾನೆ?
ಭೋಜರಾಜತನೂಜೋಽಪಿ ಕಂಸಸ್ತಾತ ಯುಧಿಷ್ಠಿರ |
ಅಸ್ತ್ರಜ್ಞಾನೇ ಬಲೇ ವೀರ್ಯೇ ಕಾರ್ತವೀರ್ಯಸಮೋಽಭವತ್ ॥24॥
ಎಲೈ ಯುಧಿಷ್ಠಿರನೇ! ಭೋಜರಾಜನ ಮಗನಾದ ಕಂಸನೂ ಸಹ ಅಸ್ತ್ರಜ್ಞಾನದಲ್ಲಿಯೂ ಬಲದಲ್ಲಿಯೂ ಪರಾಕ್ರಮದಲ್ಲಿಯೂ ಕಾರ್ತವೀರ್ಯನಿಗೆ ಸಮನಾಗಿದ್ದನು.

ತಸ್ಯ ಭೋಜಪತೇಃ ಪುತ್ರಾದ್ ಭೋಜರಾಜನ್ಯವರ್ಧನಾತ್ |
ಉದ್ವಿಜಂತೇ ಸ್ಮ ರಾಜಾನಃ ಸುಪರ್ಣಾದಿವ ಪನ್ನಗಾಃ ||25||
ಭೋಜಕುಲವರ್ಧನನಾದ ಭೋಜರಾಜನ ಪುತ್ರನಾದ ಆ ಕಂಸನಿಗೆ ಉಳಿದ ರಾಜರು ಸರ್ಪಗಳು ಗರುಡನಿಗೆ ಹೆದರುವಂತೆ ಹೆದರಿ ನಡುಗುತ್ತಿದ್ದರು.
ಚಿತ್ರಕಾರ್ಮುಕನಿಸ್ತ್ರಿಂಶವಿಮಲಪ್ರಾಸಯೋಧಿನಃ |
ಶತಂ ಶತಸಹಸ್ರಾಣಿ ಪದಾತೀನಾಂ ತು ಭಾರತ ||26||
ಅಷ್ಟೌ ಶತಸಹಸ್ರಾಣಿ ಶೂರಾಣಾಮನಿವರ್ತಿನಾಮ್ |
ಅಭವನ್ ಭೋಜರಾಜಸ್ಯ ಜಾಂಬೂನದಮಯಧ್ವಜಾಃ ||27||
ಎಲೈ ಭಾರತನೇ! ಕಂಸನಿಗೆ ವಿಚಿತ್ರವಾದ ಖಡ್ಗ ವಿಮಲವಾದ ಪ್ರಾಸಗಳಿಂದ ಹೋರಾಡುವ ಒಂದು ಕೋಟಿ ಪದಾತಿಗಳಿದ್ದರು. ಭೋಜರಾಜನಿಗೆ ಯುದ್ಧದಿಂದ ಹಿಮ್ಮೆಟ್ಟದಿರುವ ಶೂರರಾದ ಎಂಟುನೂರುಸಹಸ್ರ ಸೈನಿಕರು ಸುವರ್ಣಮಯವಾದ ಧ್ವಜವುಳ್ಳವರಾಗಿದ್ದರು.
ಸ್ಫುರತ್ಕಾಂಚನಕಕ್ಷ್ಯಾಸ್ತು ಗಜಾಸ್ತಸ್ಯ ಯುಧಿಷ್ಠಿರ |
ತಾವಂತ್ಯೇವ ಸಹಸ್ರಾಣಿ ಗಜಾನಾಮನಿವರ್ತಿನಾಮ್ ||28||
ಎಲೈ ಯುಧಿಷ್ಠಿರನೇ! ಹೊಳೆಯುವ ಚಿನ್ನದ ಕಕ್ಷೆಗಳನ್ನು ಉಳ್ಳ ಯುದ್ಧದಿಂದ ಹಿಮ್ಮೆಟ್ಟದಿರುವ ಗಜಗಳು ಅವನ ಬಳಿ ಎಂಟುನೂರುಸಹಸ್ರ ಸಂಖ್ಯೆಯಲ್ಲಿ ಇದ್ದವು.
ತೇ ಚ ಪರ್ವತಸಂಕಾಶಾಃ ಚಿತ್ರಧ್ವಜಪತಾಕಿನಃ |
ಬಭೂವುರ್ಭೋಜರಾಜಸ್ಯ ನಿತ್ಯಂ ಪ್ರಮುದಿತಾ ಗಜಾಃ ||29||
ಆ ಭೋಜರಾಜನ ಗಜಗಳೆಲ್ಲವೂ ಪರ್ವತದಂತೆ ಎತ್ತರವಾಗಿದ್ದು ಚಿತ್ರಧ್ವಜಪತಾಕೆಗಳಿಂದ ಕೂಡಿದ್ದು ಯಾವಾಗಲೂ ಸಂತೋಷದಿಂದಿದ್ದವು.
ಸ್ವಲಂಕೃತಾನಾಂ ಶೀಘ್ರಾಣಾಂ ಕರೇಣೂನಾಂ ಯುಧಿಷ್ಠಿರ |
ಅಭವದ್ ಭೋಜರಾಜಸ್ಯ ದ್ವಿಸ್ತಾವದ್ಧಿ ಮಹದ್ಬಲಮ್ ||30||
ಎಲೈ ಯುಧಿಷ್ಠಿರನೇ! ಭೋಜರಾಜನ ಬಳಿ ಆ ಆನೆಗಳ ಎರಡರಷ್ಟು ಅಲಂಕೃತವಾದ ಶೀಘ್ರಗಾಮಿಗಳಾದ ಮರಿ ಆನೆಗಳ ದೊಡ್ಡ ಬಲವಿದ್ದಿತು.
ಷೋಡಶಾಶ್ವಸಹಸ್ರಾಣಿ ಕಿಂಶುಕಾಭಾನಿ ತಸ್ಯ ವೈ |
ಅಪರಸ್ತು ಮಹಾವ್ಯೂಹಃ ಕಿಶೋರಾಣಾಂ ಯುಧಿಷ್ಠಿರ |
ಆರೋಹವರಸಂಪನ್ನೋ ದುರ್ಧರ್ಷಃ ಕೇನಚಿದ್ ಬಲಾತ್ ||31||
ಯುಧಿಷ್ಠಿರನೇ! ಅವನ ಬಳಿ ಮುತ್ತುಗದಂತೆ ಕೆಂಪು ಬಣ್ಣವುಳ್ಳ ಹದಿನಾರು ಸಾವಿರ ಅಶ್ವಗಳು ಇದ್ದವು. ಅದಲ್ಲದೆ ಇನ್ನೂ ಚಿಕ್ಕ ವಯಸ್ಸಿನ ಒಳ್ಳೆಯ ಜೀನುಗಳನ್ನು ಹೊಂದಿದ್ದ ಯಾರಿಗೂ ಜಗ್ಗದಂತಹ ಚಿಕ್ಕ ವಯಸ್ಸಿನ ಅಶ್ವಗಳ ಮಹಾಯೂಥಗಳೂ ಇದ್ದವು.
ಸ ಚ ಷೋಡಶಸಾಹಸ್ರಃ ಕಂಸಭ್ರಾತೃಪುರಸ್ಸರಃ |
ಸುನಾಮಾ ಸದೃಶಸ್ತೇನ ಸ ಕಂಸಂ ಪರ್ಯಪಾಲಯತ್ ||32||
ಇನ್ನೊಂದು ಹದಿನಾರು ಸಾವಿರ ಕುದುರೆಗಳ ದಂಡು ಕಂಸನ ತಮ್ಮನನ್ನು ನಾಯಕನನ್ನಾಗಿ ಹೊಂದಿ ಅವನಿಗೆ ಸದೃಶವಾಗಿದ್ದು ಒಳ್ಳೆಯ ಹೆಸರನ್ನು ಹೊಂದಿ ಕಂಸನನ್ನು ರಕ್ಷಿಸುತ್ತಿದ್ದವು.
ಯ ಆಸನ್ ಸರ್ವವರ್ಣಾಸ್ತು ಹಯಾಸ್ತಸ್ಯ ಯುಧಿಷ್ಠಿರ |
ಸಗಣೋ ಮಿಶ್ರಕೋ ನಾಮ ಷಷ್ಟಿಸಾಹಸ್ರ ಉಚ್ಯತೇ ||33||
ಎಲೈ ಯುಧಿಷ್ಠಿರನೇ! ಬೇರೆ ಬೇರೆ ಬಣ್ಣಗಳ ಕುದುರೆಗಳ ಮಿಶ್ರಕವೆಂಬ ಗಣದಲ್ಲಿ ಅರವತ್ತು ಸಾವಿರ ಕುದುರೆಗಳು ಇದ್ದವು.
ಕಂಸರೋಷಮಹಾವೇಗಾಂ ಧ್ವಜಾನೂಪಮಹಾದ್ರುಮಾಮ್ |
ಮತ್ತದ್ವಿಪಮಹಾಗ್ರಾಹಾಂ ವೈವಸ್ವತವಶಾನುಗಾಮ್ ||34||
ಶಸ್ತ್ರಜಾಲಮಹಾಫೇನಾಂ ಸಾದಿವೇಗಮಹಾಜಲಾಮ್ |
ಗದಾಪರಿಘಪಾಠೀನಾಂ ನಾನಾಕವಚಶೈವಲಾಮ್ ||35||
ರಥನಾಗಮಹಾವರ್ತಾಂ ನಾನಾರುಧಿರಕರ್ದಮಾಮ್ |
ಚಿತ್ರಕಾರ್ಮುಕಕಲ್ಲೋಲಾಂ ರಥಾಶ್ವಕಲಿಲಹ್ರದಾಮ್ ||36||
ಮಹಾಮೃಧನದೀಂ ಘೋರಾಂ ಯೋಧಾವರ್ತನನಿಸ್ವನಾಮ್ |
ಕೋನ್ಯೋ ನಾರಾಯಣಾದೇಕಃ ಕಂಸಹಂತಾ ಯುಧಿಷ್ಠಿರ ||37||
ಎಲೈ ಯುಧಿಷ್ಠಿರನೇ! ಕಂಸನ ರೋಷವೆಂಬ ಮಹಾವೇಗದಿಂದ ಕೂಡಿದ, ಧ್ವಜಗಳೆಂಬ ತೀರವೃಕ್ಷಗಳಿಂದ ಕೂಡಿದ, ಮದ್ದಾನೆಗಳೆಂಬ ಮಹಾ ತಿಮಿಂಗಿಲಗಳಿಂದ ಕೂಡಿದ, ವೈವಸ್ವತನಾದ ಯಮನನ್ನು ಅನುಸರಿಸುವ ಹೊಳೆಯುವ ಶಸ್ತ್ರಗಳೆಂಬ ದೊಡ್ಡ ನೊರೆಯನ್ನು ಹೊಂದಿದ, ಪದಾತಿಗಳ ವೇಗವೆಂಬ ಜಲವನ್ನು ಹೊಂದಿದ, ಗದಾ ಪರಿಘಗಳೆಂಬ ಮೀನುಗಳನ್ನು ಹೊಂದಿದ, ನಾನಾ ಕವಚಗಳೆಂಬ ಪಾಚಿಯನ್ನು ಹೊಂದಿದ, ರಥ ಗಜಗಳೆಂಬ ಮಹಾ ಸುಳಿಗಳನ್ನು ಹೊಂದಿದ, ನಾನಾ ಬಗೆಯ ರಕ್ತವೆಂಬ ಕೆಸರನ್ನು ಹೊಂದಿದ, ವಿಚಿತ್ರ ಧನುಸ್ಸು ಎಂಬ ಅಲೆಯನ್ನು ಹೊಂದಿದ, ರಥಾಶ್ವಗಳೆಂಬ ತುಂಬಿದ ಮಡುಗಳನ್ನು ಹೊಂದಿದ, ಯೋಧರೆಂಬ ಸುಳಿಗಳನ್ನು ಹೊಂದಿದ್ದ, ಘೋರವಾಗಿ ಭೋರ್ಗರೆಯುವ ಮಹಾಯುದ್ಧವೆಂಬ ಆ ನದಿಯಲ್ಲಿ ನಾರಾಯಣನಲ್ಲದೆ ಇನ್ನೊಬ್ಬನು ಯಾವನು ತಾನೆ ಕಂಸನನ್ನು ಕೊಲ್ಲುವವನು?

ಏಷ ಶಕ್ರರಥೇ ತಿಷ್ಠನ್ ತಾನ್ಯನೀಕಾನಿ ಭಾರತ |
ವ್ಯಧಮದ್ ಭೋಜಪುತ್ರಸ್ಯ ಮಹಾಭ್ರಾಣೀವ ಮಾರುತಃ ॥38॥
ಭಾರತನೇ! ಈ ಕೃಷ್ಣನು ಇಂದ್ರನ ರಥದಲ್ಲಿ ಕುಳಿತು ಬಿರುಗಾಳಿಯು ಮೋಡವನ್ನು ಚದುರಿಸುವಂತೆ ಭೋಜಪುತ್ರನ ಆ ಎಲ್ಲಾ ಸೈನ್ಯವನ್ನು ನಾಶಮಾಡಿದನು.
ತಂ ಸಭಾಸ್ಥಂ ಸಹಾಮಾತ್ಯಂ ಕಂಸಂ ಹತ್ವಾ ಸಹಾನ್ವಯಮ್ |
ಮಾನಯಾಮಾಸ ದಾಶಾರ್ಹೋ ದೇವಕೀಂ ಸಸುಹೃದ್ಗಣಾಮ್ ॥39॥
ಸಭೆಯಲ್ಲಿ ಅಮಾತ್ಯರ ಜೊತೆಯಲ್ಲಿ ಕುಳಿತಿದ್ದ ಆ ಕಂಸನನ್ನು ಅವನ ಪರಿವಾರ ಸಹಿತವಾಗಿ ಸಂಹರಿಸಿ ದಾಶಾರ್ಹನಾದ ಕೃಷ್ಣನು ದೇವಕಿಯನ್ನೂ ತನ್ನ ಬಂಧು ಜನರನ್ನೂ ಗೌರವಿಸಿದನು.
ಯಶೋದಾಂ ರೋಹಿಣೀಂ ಚೈವ ಅಭಿವಾದ್ಯ ಪುನಃ ಪುನಃ |
ಉಗ್ರಸೇನಂ ಚ ರಾಜಾನಮ್ ಅಭಿಷಿಚ್ಯ ಜನಾರ್ದನಃ |
ಅರ್ಚಿತೋ ಯದುಮುಖ್ಯೈಸ್ತು ಭಗವಾನ್ ವಾಸವಾನುಜಃ ॥40॥
ಯಶೋದೆ ಮತ್ತು ರೋಹಿಣಿಯರಿಗೆ ಪುನಃ ಪುನಃ ನಮಸ್ಕಾರವನ್ನು ಮಾಡಿ ಜನಾರ್ದನನು ಉಗ್ರಸೇನನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಇಂದ್ರನ ತಮ್ಮನಾದ ಉಪೇಂದ್ರನಾದ ಭಗವಂತನಾದ ಕೃಷ್ಣನು ಯಾದವಶ್ರೇಷ್ಠರಿಂದ ಅರ್ಚಿಸಲ್ಪಟ್ಟನು.
ತತಃ ಪಾರ್ಥಿವಮಾಯಾಂತಂ ಸಹಿತಂ ಸರ್ವರಾಜಭಿಃ |
ಸರಸ್ವತ್ಯಾಂ ಜರಾಸಂಧಮಜಯತ್ ಪುರುಷೋತ್ತಮಃ ॥41॥
ಅನಂತರ ಪುರುಷೋತ್ತಮನಾದ ಕೃಷ್ಣನು ಎಲ್ಲ ರಾಜರುಗಳ ಜೊತೆಯಲ್ಲಿ ದಂಡೆತ್ತಿ ಜರಾಸಂಧನನ್ನು ಸರಸ್ವತೀನದಿಯ ತೀರದಲ್ಲಿ ಸೋಲಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತಚತ್ವಾರಿಂಶೋಧ್ಯಾಯಃ ॥
॥ಅರ್ಘಾಭಿಹರಣಪರ್ವಣಿ ಷಷ್ಠಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯವು ಮುಗಿಯಿತು.
*****

ನಲವತ್ತೆಂಟನೆಯ ಅಧ್ಯಾಯ.
(ನರಕಾಸುರನ ಸಂಹಾರ. ದ್ವಾರಕೆಗೆ ಇಂದ್ರನ ಆಗಮನ)
ಭೀಷ್ಮಃ
ಶೂರಸೇನಪುರಂ ತ್ಯಕ್ತತ್ವ ಸರ್ವಯಾದವನಂದನಃ |
ದ್ವಾರಕಾಂ ಭಗವಾನ್ ಕೃಷ್ಣಃ ಸಮಪದ್ಯತ ಕೇಶವಃ ॥1॥
ಸರ್ವಯಾದವನಂದನನಾದ ಕೇಶವನು ಮಧುರಾಪಟ್ಟಣವನ್ನು ಬಿಟ್ಟು ದ್ವಾರಕಾಪಟ್ಟಣವನ್ನು ಬಂದು ಸೇರಿದನು.
ಪ್ರತ್ಯಪದ್ಯತ ಯಾನಾನಿ ರತ್ನಾನಿ ಚ ಬಹೂನಿ ಚ |
ಯಥಾರ್ಹಂ ಪುಂಡರೀಕಾಕ್ಷೋ ನೈರೃತಾನ್ ಪ್ರತ್ಯಪಾದಯನ್ ॥2॥
ಪುಂಡರೀಕಾಕ್ಷನಾದ ಭಗವಂತನಾದ ಕೃಷ್ಣನು ಅನೇಕ ಯಾನಗಳನ್ನು ರತ್ನಗಳನ್ನೂ ತೆಗೆದುಕೊಂಡು ಯಥಾಯೋಗ್ಯವಾಗಿ ನೈಋತರಿಂದ ಅವುಗಳನ್ನು ಹೊರಿಸಿ ದ್ವಾರಕೆಗೆ ಕಳುಹಿಸಿದನು.
ತತ್ರ ವಿಘ್ನಂ ಚರಂತಿ ಸ್ಮ ದೈತೇಯಾಃ ಸಹ ದಾನವೈಃ |
ತಾನ್ ಜಘಾನ ಮಹಾಬಾಹುರ್ವರದೃಪ್ತಾನ್ ಮಹಾಸುರಾನ್ ॥3॥
ಆಗ ದೈತೇಯರು ಮತ್ತು ದಾನವರು ಅದಕ್ಕೆ ವಿಘ್ನವನ್ನು ಮಾಡಿದರು. ಮಹಾಬಾಹುವಾದ ಕೃಷ್ಣನು, ವರದಿಂದ ಗರ್ವಿಷ್ಠರಾದ ಆ ಮಹಾಸುರರನ್ನು ಸಂಹರಿಸಿದನು.
ಸ ವಿಘ್ನಮಕರೋತ್ ತತ್ರ ನರಕೋ ನಾಮ ನೈರೃತಃ |
ತ್ರಾಸನಃ ಸುರಸಂಘಾನಾಂ ವಿದಿತೋ ನಃ ಪ್ರಭಾವತಃ ॥4॥
ಆಗ ದೇವತಾಗಣಕ್ಕೆ ಉದ್ವೇಗವನ್ನು ಉಂಟುಮಾಡುವ ನರಕಾಸುರನು ಸಹ ವಿಘ್ನವನ್ನು ಮಾಡಿದನು. ಅವನ ಪ್ರಭಾವವು ನಮಗೆ ತಿಳಿದೇ ಇದೆ.
ಸ ಭೂಮ್ಯಾಂ ಮೂರ್ಧ್ನಿಲಿಂಗಸ್ಥಃ ಸರ್ವದೇವಾಸುರಾಂತಕಃ |
ಮಾನುಷಾಣಾಮೃಷೀಣಾಂ ಚ ಪ್ರತೀಪಮಕರೋತ್ ತದಾ ॥5॥
ಸರ್ವದೇವಾಸುರಾಂತಕನಾದ ಅವನು ತನ್ನ ತಲೆಯ ಮೇಲೆ ಲಿಂಗವನ್ನು ಧರಿಸಿ ಭೂಮಿಯಲ್ಲಿದ್ದ ಮನುಷ್ಯರಿಗೂ ಮತ್ತು ಋಷಿಗಳಿಗೂ ಅಪಕಾರವನ್ನು ಮಾಡಿದನು.
ತ್ವಷ್ಟುರ್ದುಹಿತರಂ ಭೌಮಃ ಕಶೇರುಮಗಮತ್ ತದಾ |
ಗಜರೂಪೇಣ ಜಗ್ರಾಹ ರುಚಿರಾಂಗೀಂ ಚತುರ್ದಶೀಮ್ ॥6॥
ಭೂಮಿಯ ಪುತ್ರನಾದ ಅವನು ತ್ವಷ್ಟ್ರುವಿನ ಮಗಳಾದ ಸುಂದರಿಯಾದ ಹದಿನಾಲ್ಕು ವರ್ಷ ವಯಸ್ಸಿನ ಕಶೇರುವನ್ನು ಗಜ ರೂಪವನ್ನು ಧರಿಸಿ ಹೋಗಿ ಅವಳನ್ನು ಹಿಡಿದು ಕೊಂಡನು.
ಪ್ರಮಥ್ಯ ಚ ಜಹಾರೈತಾಂ ಹೃತ್ವಾ ಚ ನರಕೋಽಬ್ರವೀತ್ |

ನಷ್ಟಶೋಕಭಯಾಬಾಧಃ ಪ್ರಾಗ್ಜ್ಯೋತಿಷಗತಸ್ತದಾ ॥7॥
ತನ್ನ ಬಲದಿಂದ ಅವಳನ್ನು ಅಪಹರಿಸಿ ಶೋಕ ಭಯ ಪೀಡೆಗಳಿಂದ ರಹಿತನಾದ ಅವನು ಪ್ರಾಗ್ಜ್ಯೋತಿಷಪಟ್ಟಣಕ್ಕೆ ಬಂದು ಅವಳನ್ನು ಕುರಿತು ಹೀಗೆ ಹೇಳಿದನು.
ಯಾನಿ ದೇವಮನುಷ್ಯೇಷು ರತ್ನಾನಿ ವಿವಿಧಾನಿ ಚ |
ಬಿಭರ್ತಿ ಚ ಮಹೀ ಕೃತ್ಸ್ನಾ ಸಾಗರೇಷು ಚ ಯದ್ ವಸು ॥8॥
ಅದ್ಯಪ್ರಭೃತಿ ತದ್ ದೇವಿ ಸಹಿತಾಃ ಸರ್ವನೈರೃತಾಃ |
ತವೈವೋಪಹರಿಷ್ಯಂತಿ ದೈತ್ಯಾಶ್ಚ ಸಹ ದಾನವೈಃ ॥9॥
ದೇವತೆಗಳಲ್ಲಿ ಮತ್ತು ಮನುಷ್ಯರಲ್ಲಿ ಎಷ್ಟೆಷ್ಟು ವಿಧವಾದ ರತ್ನಗಳಿವೆಯೋ ಭೂಮಿ ಮತ್ತು ಸಾಗರಗಳು ಎಷ್ಟು ರತ್ನಗಳನ್ನು ಹೊತ್ತಿವೆಯೋ ಎಲೌ ದೇವಿಯೇ! ಈ ದಿನದಿಂದ ಪ್ರಾರಂಭಿಸಿ ಅವೆಲ್ಲವನ್ನೂ ಎಲ್ಲಾ ನೈರೃತರೂ ದೈತ್ಯರೂ ಮತ್ತು ದಾನವರೂ ನಿನಗೆ ತಂದು ಒಪ್ಪಿಸುತ್ತಾರೆ.
ಭೀಷ್ಮಃ
ಏವಮುತ್ತಮರತ್ನಾನಿ ಬಹೂನಿ ವಿವಿಧಾನಿ ಚ |
ಸ ಜಹಾರ ತದಾ ಭೌಮಃ ಸ್ತ್ರೀರತ್ನಾನಿ ಚ ಭಾರತ |
ಗಂಧರ್ವಾಣಾಂ ಚ ಯಾಃ ಕನ್ಯಾ ಜಹಾರ ನರಕೋ ಬಲಾತ್ ॥10॥
ಹೀಗೆ ಅನೇಕ ವಿಧವಾದ ಉತ್ತಮರತ್ನಗಳನ್ನೂ ಸ್ತ್ರೀರತ್ನಗಳನ್ನೂ ಆ ನರಕಾಸುರನು ಅಪಹರಿಸಿದನು. ಎಲೈ ಭಾರತನೇ! ನರಕಾಸುರನು ಗಂದರ್ವರ ಕನೆಯಯರನ್ನೂ ತನ್ನ ಸಾಮರ್ಥ್ಯದಿಂದ ಅಪಹರಿಸಿದನು.
ಯಾಶ್ಚ ದೇವಮನುಷ್ಯಾಣಾಂ ಸಪ್ತ(ಸರ್ವೇ) ಚಾಪ್ಸರಸಾಂ ಗಣಾಃ |
ಚತುರ್ದಶಸಹಸ್ರಾಣಿ ಚೈಕವಿಂಶಚ್ಛತಾನಿ ಚ |
ಏಕವೇಣೀಧರಾಃ ಸರ್ವಾಃ ಸತಾಂ ಮಾರ್ಗಮನುವ್ರತಾಃ ॥11॥
ತಾಸಾಮಂತಃಪುರಂ ಭೌಮೋಽಕಾರಯನ್ಮಣಿಪರ್ವತೇ |
ಔದಕಾಯಾಮದೀನಾತ್ಮಾ ಮುರಸ್ಯ ವಿಷಯಂ ಪ್ರತಿ ॥12॥
ದೇವತೆಗಳ ಮನುಷ್ಯರ ಮತ್ತು ಅಪ್ಸರೆಯರ ಏಳು ಗಣಗಳಿಗೆ ಸೇರಿದ ಹದಿನಾರು ಸಾವಿರ ನೂರು ಮಂದಿ ಸಜ್ಜನರ ಮಾರ್ಗವನ್ನು ಅನುಸರಿಸಿದ ಏಕವೇಣೀಧರರಾದ ಕನ್ಯೆಯರನ್ನು ಅಪಹರಿಸಿ ಅವರಿಗೆ ಮುರನ ರಾಜ್ಯದ ಬಳಿ ಉದಕದಿಂದ ಅವೃತವಾದ ಮಣಿಪರ್ವತದಲ್ಲಿ ನರಕಾಸುರನು ಅಂತಃಪುರವನ್ನು ಕಲ್ಪಿಸಿದನು.
ತಾಶ್ಚ ಪ್ರಾಗ್ಜ್ಯೋತಿಷೋ ರಾಜಾ ಮುರಸ್ಯ ದಶ ಚಾತ್ಮಜಾಃ |
ನೈರೃತಾಶ್ಚ ಯಥಾ ಮುಖ್ಯಾ ಬೋಧಯಂತ ಉಪಾಸತೇ ॥13॥
ಪ್ರಾಗ್ಜ್ಯೋತಿಷ ರಾಜನಾದ ನರಕನೂ ಮುರನ ಹತ್ತು ಮಂದಿ ಮಕ್ಕಳೂ ನೈರೃತರಲ್ಲಿ ಪ್ರಧಾನರಾದವರೂ ಅವರಿಗೆ ನರಕನ ವಶವಾಗುವಂತೆ ಬುದ್ಧಿಯನ್ನು ಹೇಳುತ್ತಾ ಅವರ ಸಮೀಪದಲ್ಲಿ ಇದ್ದರು.
ಸ ಏಷ ತಪಸಶ್ಚಾರೇ ವರದೃಪ್ತೋ ಮಹಾಸುರಃ |
ಅದಿತಿಂ ಧರ್ಷಯಾಮಾಸ ಕುಂಡಲಾರ್ಥಂ ಯುಧಿಷ್ಠಿರ ॥14॥
ಎಲೈ ಯುಧಿಷ್ಠಿರನೇ! ಆ ಮಹಾಸುರನು ತನ್ನ ತಪಸ್ಸಿನ ಅವಸಾನದಲ್ಲಿ ವರದಿಂದ ದೃಪ್ತನಾಗಿ ಕುಂಡಲಗಳ ಸಲುವಾಗಿ ಅದಿತಿದೇವಿಯನ್ನು ಅವಮಾನ ಗೊಳಿಸಿದನು.
ನ ಚಾಸುರಗಣೈಃ ಸರ್ವೈಃ ಸಹಿತೈಃ ಕರ್ಮ ತತ್ ಪುರಾ |
ಕೃತಪೂರ್ವಂ ಮಹಾಘೋರಂ ಯದಕಾರ್ಷೀನ್ಮಹಾಸುರಃ ॥15॥
ಮಹಾಸುರನಾದ ಅವನು ಹಿಂದೆ ಸಮಸ್ತ ಅಸುರರು ಸೇರಿ ಮಾಡದಂತಹ ಮಹಾಘೋರವಾದ ಕರ್ಮವನ್ನು ಎಸಗಿದನು.
ಯಂ ಮಹೀ ಸುಷುವೇ ದೇವೀ ಯಸ್ಯ ಪ್ರಾಗ್ಜ್ಯೋತಿಷಂ ಪುರಮ್ |
ವಿಷಯಾಂತಪಾಲಾಶ್ಚತ್ವಾರೋ ಯಸ್ಯಾಸನ್ ಯುದ್ಧದುರ್ಮದಾಃ ॥16॥
ಭೂದೇವಿಯ ಮಗನಾಗಿ ಜನಿಸಿದ ಅವನ ಪಟ್ಟಣವು ಪ್ರಾಗ್ಜ್ಯೋತಿಷವಾಗಿದ್ದಿತು. ಅವನ ರಾಜ್ಯಕ್ಕೆ ಯುದ್ಧ ದುರ್ಮದರಾದ ನಾಲ್ವರು ಅಂತಪಾಲರಿದ್ದರು.
ಆದೇವಯಾನಮಾವೃತ್ಯ ಪಂಥಾನಂ ಪರ್ಯವಸ್ಥಿತಾಃ |
ತ್ರಾಸನಾಃ ಸರ್ವಭೂತಾನಾಂ ವಿರೂಪೈ ರಾಕ್ಷಸೈಃ ಸಹ ॥17॥
ಅವರು ದೇವವಿಮಾನಪರ್ಯಂತವಾದ ಮಾರ್ಗವನ್ನು ಆಕ್ರಮಿಸಿ, ವಿರೂಪರಾದ ರಾಕ್ಷಸರ ಜೊತೆಯಲ್ಲಿ ಎಲ್ಲರಿಗೂ ಭಯವನ್ನು ಉಂಟುಮಾಡುತ್ತಾ ಪ್ರತಿಷ್ಠಿತರಾಗಿದ್ದರು.
ಹಯಗ್ರೀವೋ ನಿಸುಂಭಶ್ಚ ಘೋರಃ ಪಂಚಜನಸ್ತಥಾ |
ಮುರಃ ಪುತ್ರಸಹಸ್ರೈಶ್ಚ ವರದೃಪ್ತೋ ಮಹಾಸುರಃ ॥18॥
ಹಯಗ್ರೀವ ನಿಸುಂಭ ಘೋರನಾದ ಪಂಚಜನ ಮತ್ತು ವರದರ್ಪಿತನಾದ ಸಹಸ್ರ ಪುತ್ರರಿಂದ ಕೂಡಿದ ಮಹಾಸುರನಾದ ಮುರ ಇವರು ಅವನ ನಾಲ್ವರು ಅಂತಪಾಲರು.
ತದ್ವಧಾರ್ಥಂ ಮಹಾಬಾಹುರೇಷ ಚಕ್ರಗದಾಸಿಧೃತ್ |
ಜಾತೋ ವೃಷ್ಣಿಷು ದೇವಕ್ಯಾಂ ವಸುದೇವಾತ್ ಜನಾರ್ದನಃ ॥19॥
ಮಹಾಬಾಹುವಾದ ಚಕ್ರಗದಾಖಡ್ಗಧಾರಿಯಾದ ಜನಾರ್ದನನು ನರಕಾಸುರನ ವಧೆಯ ಸಲುವಾಗಿ ವೃಷ್ಣಿಕುಲದಲ್ಲಿ ವಸುದೇವನಿಂದ

ದೇವಕಿಯಲ್ಲಿ ಅವತರಿಸಿದನು.
ತಸ್ಯಾಸ್ಯ ಪುರುಷೇಂದ್ರಸ್ಯ ಲೋಕಪ್ರಥಿತತೇಜಸಃ |
ನಿವಾಸೋ ದ್ವಾರಕಾ ತಾತ ವಿದಿತೋ ವಃ ಪ್ರಧಾನತಃ ||20||
ಅಂತಹ ಲೋಕವಿಖ್ಯಾತಪರಾಕ್ರಮವುಳ್ಳ ಪುರುಷಶ್ರೇಷ್ಠನಾದ ಈ ಕೃಷ್ಣನ ನಿವಾಸವು ದ್ವಾರಕಾಪಟ್ಟಣವೆಂದು ನಿಮಗೆ ಪ್ರಧಾನವಾಗಿ ತಿಳಿದಿದೆ.
ಅತೀವ ಹಿ ಪುರೀ ರಮ್ಯಾ ದ್ವಾರಕಾ ವಾಸವಕ್ಷಯಾತ್ |
ಅತಿವೈರಾಜ್ಯಮಪ್ಯದ್ಧಾ ಪ್ರತ್ಯಕ್ಷಂ ತೇ ಯುಧಿಷ್ಠಿರ ||21||
ಎಲೈ ಯುಧಿಷ್ಠಿರನೇ! ದ್ವಾರಕೆಯು ಇಂದ್ರನ ಅಮರಾವತಿಗಿಂತಲೂ ಅಥವಾ ಪಾತಾಳ ಲೋಕಕ್ಕಿಂತಲೂ ಬಹಳ ಸುಂದರವಾಗಿದೆ ಎಂಬ ವಿಷಯವು ನಿನಗೆ ಪ್ರತ್ಯಕ್ಷವಾಗಿ ತಿಳಿದಿದೆ.
ತಸ್ಮಿನ್ ದೇವಪುರಪ್ರಖ್ಯೇ ಸಾ ಸಭಾ ವೃಷ್ಣಿಸಂಶ್ರಯಾ |
ಸುಧರ್ಮೇತ್ಯಭಿವಿಖ್ಯಾತಾ ಯೋಜನಾಯತವಿಸ್ತೃತಾ ||22||
ದೇವಪುರಿಯಂತಿರುವ ಆ ಪಟ್ಟಣದಲ್ಲಿ ವೃಷ್ಣಿಗಳಿಗೆ ಆಶ್ರಯವಾದ ಒಂದು ಯೋಜನ ಉದ್ದ ಮತ್ತು ಆಗಲವನ್ನು ಹೊಂದಿರುವ ಸುಧರ್ಮಾ ಎಂದು ಪ್ರಖ್ಯಾತವಾದ ಸಭೆಯಿದೆ.
ತತ್ರ ವೃಷ್ಣ್ಯಂಧಕಾಃ ಸರ್ವೇ ರಾಮಕೃಷ್ಣಪುರೋಗಮಾಃ |
ಲೋಕಯಾತ್ರಾಮಿಮಾಂ ಕೃತ್ಸ್ನಾಂ ಪರಿರಕ್ಷಂತ ಆಸತೇ ||23||
ಅಲ್ಲಿ ರಾಮಕೃಷ್ಣರನ್ನು ಮುಂದೆ ಮಾಡಿಕೊಂಡು ವೃಷ್ಣ್ಯಂಧಕರೆಲ್ಲರೂ ಈ ಸಮಗ್ರವಾದ ಲೋಕವನ್ನು ರಕ್ಷಣೆ ಮಾಡುತ್ತಾ ಇರುತ್ತಾರೆ.
ತತ್ರಾಸೀನೇಷು ಸರ್ವೇಷು ಕದಾಚಿದ್ ಭರತರ್ಷಭ |
ದಿವ್ಯಗಂಧಾ ವವುರ್ವಾತಾಃ ಕುಸುಮಾನಾಂ ಚ ವೃಷ್ಟಯಃ ||24||
ಎಲೈ ಭಾರತಶ್ರೇಷ್ಠನೇ! ಒಮ್ಮೆ ಎಲ್ಲರೂ ಅಲ್ಲಿ ಕುಳಿತಿರುವಾಗ ದಿವ್ಯಗಂಧವುಳ್ಳ ವಾಯುವು ಬೀಸಿತು. ಮತ್ತು ಪುಷ್ಪ ವೃಷ್ಟಿಯಾಯಿತು.
ತತಃ ಸೂರ್ಯಸಹಸ್ರಾಭಸ್ತೇಜೋರಾಶಿರ್ಮಹಾದ್ಭುತಃ |
ಮುಹೂರ್ತಮಂತರಿಕ್ಷೇಭೂತ್ ತತೋ ಭೂಮೌ ಪ್ರತಿಷ್ಠಿತಃ ||25||
ಅನಂತರ ಸಹಸ್ರಸೂರ್ಯಕಾಂತಿಯುಳ್ಳ ತೇಜೋರಾಶಿಯಂತಿದ್ದ ಮಹಾದ್ಭುತನಾದ ಪುರುಷನು ಒಂದು ಮುಹೂರ್ತಕಾಲ ಅಂತರಿಕ್ಷದಲ್ಲಿ ಇದ್ದು ಅನಂತರ ಭೂಮಿಗೆ ಇಳಿದನು.
ಮಧ್ಯೇ ತು ತೇಜಸಸ್ತಸ್ಯ ಪಾಂಡರಂ ಗಜಮಾಸ್ಥಿತಃ |
ವೃತೋ ದೇವಗಣೈಃ ಸರ್ವೈರ್ವಾಸವಃ ಪ್ರತ್ಯದೃಶ್ಯತ||26||
ಆ ತೇಜೋರಾಶಿಯ ಮಧ್ಯೆ ಪಾಂಡುವರ್ಣದ ಗಜವನ್ನು ಏರಿದ್ದ ಎಲ್ಲಾ ದೇವತೆಗಣಗಳಿಂದ ಸುತ್ತುವರಿಯಲ್ಪಟ್ಟ ಇಂದ್ರನು ಪ್ರತ್ಯಕ್ಷನಾದನು.
ರಾಮಕೃಷ್ಣೌ ಚ ರಾಜಾ ಚ ವೃಷ್ಣ್ಯಂಧಕಗಣೈಃ ಸಹ |
ಉತ್ಥಾಯ ಸಹಸಾ ತಸ್ಮೈ ನಮಸ್ಕಾರಮಕುರ್ವತ ||27||
ರಾಮಕೃಷ್ಣರೂ ಮತ್ತು ಉಗ್ರಸೇನನೂ ವೃಷ್ಣ್ಯಂಧಕರ ಸಮೂಹದ ಜೊತೆಯಲ್ಲಿ ತಕ್ಷಣ ಎದ್ದು ಅವನಿಗೆ ನಮಸ್ಕಾರವನ್ನು ಮಾಡಿದರು.
ಸೋಽವತೀರ್ಯ ಗಜಾತ್ ತೂರ್ಣಂ ಪರಿಷ್ವಜ್ಯ ಜನಾರ್ದನಮ್ |
ಸಸ್ವಜೇ ಬಲದೇವಂ ಚ ರಾಜಾನಂ ಚ ತಥಾಽಽಹುಕಮ್ ||28||
ಅವನು ಬೇಗ ಆನೆಯಿಂದ ಕೆಳಗಿಳಿದು ಜನಾರ್ದನನನ್ನು ಬಲದೇವನನ್ನು ಮತ್ತು ಆಹುಕರಾಜನನ್ನು ಆಲಿಂಗಿಸಿದನು.
ವಸುದೇವೋದ್ಧವೌ ಚೈವ ವಿಕದ್ರುಂ ಚ ಮಹಾಮತಿಮ್ |
ಪ್ರದ್ಯುಮ್ನಸಾಂಬನಿಶಠಾನನಿರುದ್ಧಂ ಸಸಾತ್ಯಕಿಮ್ ||29||
ಗದಂ ಸಾರಣಮಕ್ರೂರಂ ಭಾನೂಲ್ಕಮವಿಡೂರಥಾನ್ |
ಕೃತವರ್ಮಂ ಚಾರುದೇಷ್ಣಂ ದಾಶಾರ್ಹಾಣಾಂ ಪುರೋಗಮಾನ್ ||30||
ಪರಿಷ್ಯಜ್ಯ ಚ ದೃಷ್ಟ್ವಾ ಚ ಭಗವಾನ್ ಪಾಕಶಾಸನಃ |
ಪ್ರಗೃಹ್ಯ ಪೂಜಾಂ ತೈರ್ದತ್ತಾಮುವಾಚಾವನತಾನನಃ ||31||
ಪೂಜ್ಯನಾದ ಪಾಕಶಾಸನನಾದ ಇಂದ್ರನು ವಸುದೇವ ಉದ್ಧವರನ್ನೂ ಮಹಾಮತಿಯಾದ ವಿಕದ್ರುವನ್ನೂ ಪ್ರದ್ಯುಮ್ನ ಸಾಂಬ ನಿಶಠ ಅನಿರುದ್ಧ ಮತ್ತು ಸಾತ್ಯಕಿಗಳನ್ನೂ ಮತ್ತು ಇನ್ನೂ ಅನೇಕ ದಾಶಾರ್ಹಪ್ರ ಮುಖರನ್ನೂ ನೋಡಿ ಅವರನ್ನು ಆಲಿಂಗಿಸಿ ಅವರಿಂದ ಸತ್ಕಾರವನ್ನು ಸ್ವೀಕರಿಸಿ ಅವರು ಕೊಟ್ಟ ಆಸನದಲ್ಲಿ ಕುಳಿತು ತಲೆಯನ್ನು ತಗ್ಗಿಸಿ ಮಾತನಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟಾಚತ್ವಾರಿಂಶೋಧ್ಯಾಯಃ ||
|| ಅರ್ಘಾಭಿಹರಣಪರ್ವಣಿ ಸಪ್ತದಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯವು ಮುಗಿಯಿತು.
* * * *

ನಲವತ್ತೊಂಭತ್ತನೆಯ ಅಧ್ಯಾಯ
(ಇಂದ್ರನಪ್ರಾರ್ಥನೆಯಂತೆ ನರಕಾಸುರನ ವಧೆ)
ಇಂದ್ರಃ
ಅದಿತ್ಯಾ ಚೋದಿತಃ ಕೃಷ್ಣ ತವ ಮಾತ್ರಾऽಹಮಾಗತಃ |
ಕುಂಡಲೇऽಪಹೃತೇ ತಾತ ಭೌಮೇನ ನರಕೇಣ ಚ ॥1॥
ಕೃಷ್ಣನೇ! ನಿನ್ನ ತಾಯಿಯಾದ ಅದಿತಿಯಿಂದ ಪ್ರೇರಿಸಲ್ಪಟ್ಟವನಾಗಿ ನಾನು ಇಲ್ಲಿಗೆ ಬಂದಿದ್ದೇನೆ. ಪ್ರೀತಿಪಾತ್ರನೇ! ಭೂಮಿಯ ಪುತ್ರನಾದ ನರಕಾಸುರನು ಅದಿತಿಯ ಕುಂಡಲಗಳನ್ನು ಅಪಹರಿಸಿದ್ದಾನೆ.
ಭೀಷ್ಮಃ
ತಮುವಾಚ ಮಹಾಬಾಹುಃ ಪ್ರೀಯಮಾಣೋ ಜನಾರ್ದನಃ |
ನಿಹತ್ಯ ನರಕಂ ಭೌಮಮಾಹರಿಷ್ಯಾಮಿ ಕುಂಡಲೇ ॥2॥
ಮಹಾಬಾಹುವಾದ ಜನಾರ್ದನನು ಸಂತೋಷದಿಂದ ಅವನನ್ನು ಕುರಿತು ಮಾತನಾಡಿದನು. ಭೂಮಿಸುತನಾದ ನರಕಾಸುರನನ್ನು ಸಂಹರಿಸಿ ಕುಂಡಲಗಳನ್ನು ಹಿಂದೆ ತರುವೆನು.
ಏವಮುಕ್ತ್ವಾ ತು ಗೋವಿಂದೋ ರಾಮಮೇವಾಭ್ಯಭಾಷತ |
ಪ್ರದ್ಯುಮ್ನಮನಿರುದ್ಧಂ ಚ ಸಾಂಬಂ ಚಾಪ್ರತಿಮಂ ಬಲೇ ॥3॥
ಏತಾಂಶ್ಚೋಕ್ತ್ವಾ ತದಾ ತತ್ರ ವಾಸುದೇವೋ ಮಹಾಯಶಾಃ |
ಅಥಾರುಹ್ಯ ಸುಪರ್ಣಂ ವೈ ಶಂಕಚಕ್ರಗದಾಸಿಧೃತ್ |
ಯಯೌ ತದಾ ಹೃಷೀಕೇಶೋ ದೇವಾನಾಂ ಹಿತಕಾಮ್ಯಯಾ ॥4॥
ಗೋವಿಂದನು ಅವನನ್ನು ಕುರಿತು ಹೀಗೆ ಹೇಳಿ ಬಲರಾಮನನ್ನು ಕುರಿತು ಪ್ರದ್ಯುಮ್ನ ಅನಿರುದ್ಧ ಮತ್ತು ಸಾಂಬ ಅಪ್ರತಿಮ ಬಲವುಳ್ಳವರಾಗಿದ್ದಾರೆ ಎಂದು (ತನ್ನ ಅನುಪಸ್ಥಿತಿಯಲ್ಲಿ ರಕ್ಷಣೆಗೆ ಸಮರ್ಥರೆಂದು) ಅವರನ್ನು ಹೇಳಿ, ಮಹಾಕೀರ್ತಿಶಾಲಿಯಾದ ಹೃಷೀಕೇಶನಾದ ವಾಸುದೇವನು ಶಂಖ ಚಕ್ರ ಗದಾ ಖಡ್ಗಗಳನ್ನು ಧರಿಸಿ ಗರುಡನನ್ನೇರಿ ದೇವತೆಗಳಿಗೆ ಹಿತವನ್ನು ಉಂಟುಮಾಡುವ ಸಲುವಾಗಿ ಅಲ್ಲಿಂದ ಹೊರಟನು.
ತಂ ಪ್ರಯಾಂತಮಮಿತ್ರಘ್ನಂ ದೇವಾಃ ಸಹಪುರಂದರಾಃ |
ಪೃಷ್ಠತೋऽನುಯಯುಃ ಪ್ರೀತಾಃ ಸ್ತುವಂತೋ ವಿಷ್ಣುಮಚ್ಯುತಮ್ ॥5॥
ಇಂದ್ರಾದಿದೇವತೆಗಳು ಹಾಗೆ ಹೊರಟ ಶತ್ರುಸಂಹಾರಕನಾದ ಕೃಷ್ಣನನ್ನು ಹಿಂದಿನಿಂದ ಹಿಂಬಾಲಿಸಿ ಅಚ್ಯುತನಾದ ವಿಷ್ಣುವನ್ನು ಸಂತೋಷದಿಂದ ಸೊತ್ರೀತ್ರಮಾಡಿದರು.
ಉಗ್ರಾನ್ ರಕ್ಷೋಗಣಾನ್ ತತ್ರ ನರಕಸ್ಯ ಮಹಾಸುರಾನ್ |
ಕ್ಷುರಾಂತಾನ್ ಮೌರವಾನ್ ಪಾಶಾನ್ ಷಟ್ಸಹಸ್ರಾನ್ ದದರ್ಶ ಸಃ ॥6॥
ನರಕಾಸುರನ ಅನುಯಾಯಿಗಳಾದ ಘೋರರಾದ ರಾಕ್ಷಸಸಮೂಹವನ್ನೂ ಅಸುರರ ಸಮೂಹವನ್ನೂ ಕೃಷ್ಣನು ಕತ್ತಿಯ ಅಲುಗಿನಂತೆ ಹರಿತವಾದ ಆರು ಸಾವಿರ ಪಾಶಗಳನ್ನು ನೋಡಿದನು.
ಸಂಛಿದ್ಯ ಪಾಶಾಂಸ್ತ್ವಸ್ತ್ರೇಣ ಮುರಂ ಹತ್ವಾ ಸಹಾನ್ವಯಮ್ |
ಶಿಲಾಸಂಘಾನತಿಕ್ರಮ್ಯ ನಿಸುಂಭಮವಪೋಥಯತ್ ॥7॥
ತನ್ನ ಅಸ್ತ್ರದಿಂದ ಆ ಪಾಶಗಳನ್ನು ಛೇದಿಸಿ ಮುರನನ್ನೂ ಅವನ ಅನುಯಾಯಿಗಳನ್ನೂ ಸಂಹರಿಸಿ ಶಿಲಾ ಸಮೂಹಗಳನ್ನು ದಾಟಿ ನಿಸುಂಭನನ್ನು ಸಂಹರಿಸಿದನು.
ಯಃ ಸಹಸ್ರಸಮಾಸ್ತ್ವೇಕಃ ಸರ್ವಾನ್ ದೇವಾನಯೋಧಯತ್ |
ತಂ ಜಘಾನ ಮಹಾವೀರ್ಯಂ ಹಯಗ್ರೀವಂ ಮಹಾಬಲಮ್ ॥8॥
ಯಾವ ಹಯಗ್ರೀವಾಸುರನು ಎಲ್ಲಾ ದೇವತೆಗಳ ಜೊತೆಯಲ್ಲಿ ಒಬ್ಬನೇ ಸಹಸ್ರವರ್ಷಗಳವರೆಗೆ ಯುದ್ಧವನ್ನು ಮಾಡಿದ್ದನೋ ಅಂತಹ ಮಹಾಬಲಿಷ್ಠನೂ ಮಹಾಪರಾಕ್ರಮಿಯೂ ಆದ ಅವನನ್ನು ಸಂಹರಿಸಿದನು.
ಅಪಾರತೇಜಾ ದುರ್ಧರ್ಷಃ ಸರ್ವಯಾದವನಂದನಃ |
ಮಧ್ಯೇ ಲೋಹಿತಗಂಗಾಯಾಂ ಭಗವಾನ್ ದೇವಕೀಸುತಃ ॥9॥
ಔದಕಾಯಾಂ ವಿರೂಪಾಕ್ಷಂ ಜಘಾನ ಮಧುಸೂದನಃ |
ಪಂಚಪಂಚಜನಾನ್ ಘೋರಾನ್ ನರಕಸ್ಯ ಮಹಾಸುರಾನ್ ॥10॥
ಅಪಾರತೇಜಸ್ಸುಳ್ಳವನೂ ದುರ್ಧರ್ಷನೂ ಸರ್ವಯಾದವನಂದನನೂ ದೇವಕೀಸುತನೂ ಆದ ಭಗವಂತನಾದ ಮಧುಸೂದನನು ಲೋಹಿತ ಗಂಗೆಯ ಮಧ್ಯದಲ್ಲಿ ಇರುವ ಪಟ್ಟಣದಲ್ಲಿ ವಿರೂಪಾಕ್ಷನನ್ನು ಸಂಹರಿಸಿ ನರಕಾಸುರನ ಬೆಂಬಲಿಗರಾದ ಪಂಚಜನರೆಂಬ ಐವರು ಮಹಾಸುರರನ್ನು ಸಂಹರಿಸಿದನು.
ತತಃ ಪ್ರಾಗ್ಜ್ಯೋತಿಷಂ ನಾಮ ದೀಪ್ಯಮಾನಮಿವ ಶ್ರಿಯಾ |
ಪುರಮಾಸಾದಯಾಮಾಸ ತತ್ರ ಯುದ್ಧಮವರ್ತತ ॥11॥
ಅನಂತರ ಕಾಂತಿಯಿಂದ ಕಂಗೊಳಿಸುತ್ತಿರುವ ಪ್ರಾಗ್ಜ್ಯೋತಿಷ ಪುರವನ್ನು ಪ್ರವೇಶಿಸಿದನು. ಅಲ್ಲಿ ಯುದ್ಧವು ಮುಂದುವರೆಯಿತು.
ಮಹದ್ ದೈವಾಸುರಂ ಯುದ್ಧಂ ಯದ್ ವೃತ್ತಂ ಭರತರ್ಷಭ |
ಯುದ್ಧಂ ತತ್ ಸ್ಯಾತ್ ಸಮಂ ತೇನ ಲೋಕವಿಸ್ಮಯಕಾರಕಮ್ ॥12॥
ಭರತರ್ಷಭನೇ! ಅಲ್ಲಿ ಯಾವ ಯುದ್ಧವು ನಡೆಯಿತೋ ಅದು ಹಿಂದೆ ದೇವಾಸುರರ ಮಧ್ಯೆನಡೆದ ಲೋಕ ವಿಸ್ಮಯಕಾರಕವಾದ

ಯುದ್ಧಕ್ಕೆ ಸಮವಾಗಿದ್ದಿತು.
ಚಕ್ರಲಾಂಗಲಸಂಭಿನ್ನಾಃ ಶಕ್ತಿಖಡ್ಗಹತಾಸ್ತದಾ |
ವಿನೇಶುರ್ದಾನವಾಸ್ತತ್ರ ಸಮಾಸಾದ್ಯ ಜನಾರ್ದನಮ್ ॥13॥
ಅಲ್ಲಿ ಜನಾರ್ದನನನ್ನು ಎದುರಿಸಿದ ದಾನವರು ಚಕ್ರಲಾಂಗಲಗಳಿಂದ ಛಿನ್ನರಾಗಿ ಶಕ್ತಿಖಡ್ಗಗಳಿಂದ ಹತರಾಗಿ ನಾಶವನ್ನು ಹೊಂದಿದರು.
ಅಷ್ಟೌ ಶತಸಹಸ್ರಾಣಿ ದಾನವಾನಾಂ ಪರಂತಪ |
ನಿಹತ್ಯ ಪುರುಷವ್ಯಾಘ್ರಃ ಪಾತಾಳವಿವರಂ ಯಯೌ ॥14॥
ಪರಂತಪನೇ! ಪುರುಷಶ್ರೇಷ್ಠರಾದ ಕೃಷ್ಣನು ಎಂಟು ಲಕ್ಷದಾನವರನ್ನು ಸಂಹರಿಸಿ ಅಲ್ಲಿಂದ ಪಾತಾಳವಿವರಕ್ಕೆ ಹೋದನು.
ತ್ರಾಸನಂ ಸುರಸಂಘಾನಾಂ ನರಕಂ ಪುರುಷೋತ್ತಮಃ |
ಯೋಧಯತ್ಯತಿತೇಜಸ್ವೀ ಮಧುವನ್ಮಧುಸೂದನಃ ॥15॥
ಪುರುಷೋತ್ತಮನಾದ ಅತಿತೇಜಸ್ವಿಯಾದ ಮಧುಸೂದನನು ಸರ್ವದೇವ ಸಮೂಹಕ್ಕೂ ಭಯವನ್ನು ಉಂಟುಮಾಡಿದ್ದ ನರಕಾಸುರನ ಜೊತೆಯಲ್ಲಿ ಮಗುವಿನ ಜೊತೆಯಲ್ಲಿ ಯುದ್ಧಮಾಡಿದಂತೆ ಅನಾಯಾಸವಾಗಿ ಯುದ್ಧಮಾಡಿದನು.
ತದ್ಯುದ್ಧಮಭವದ್ ಘೋರಂ ತೇನ ಭೌಮೇನ ಭಾರತ |
ಕುಂಡಲಾರ್ಥೇ ಸುರೇಶಸ್ಯ ನರಕೇಣ ಮಹಾತ್ಮನಃ ॥16॥
ಎಲೈ ಭಾರತನೇ! ಕುಂಡಲಗಳ ಸಲುವಾಗಿ ಮಹಾತ್ಮನಾದ ದೇವೇಶನಾದ ಕೃಷ್ಣನಿಗೂ ಭೂಮಿಪುತ್ರನಾದ ನರಕನಿಗೂ ಘೋರವಾದ ಯುದ್ಧವು ಉಂಟಾಯಿತು.
ಮುಹೂರ್ತಂ ಲಾಳಯಿತ್ವಾಽಥ ನರಕಂ ಮಧುಸೂದನಃ |
ಪ್ರವೃತ್ತಚಕ್ರಂ ಚಕ್ರೇಣ ಪ್ರಮಮಾಥ ಬಲಾದ್ ಬಲೀ ॥17॥
ಅಭಿವೃದ್ಧಿಹೊಂದಿದ ಸೈನ್ಯದಿಂದ ಕೂಡಿದ ನರಕನ ಜೊತೆಯಲ್ಲಿ ಬಲಿಷ್ಠನಾದ ಮಧುಸೂದನನು ಒಂದು ಮುಹೂರ್ತಕಾಲ ಆಟವಾಡಿ ಅನಂತರ ಸುದರ್ಶನ ಚಕ್ರದಿಂದ ಅವನನ್ನು ಸಂಹರಿಸಿದನು.
ಚಕ್ರಪ್ರಮಥಿತಂ ತಸ್ಯ ಪಪಾತ ಸಹಸಾ ಭುವಿ |
ಉತ್ತಮಾಂಗಂ ಹತಾಂಗಸ್ಯ ವೃತ್ರೇ ವಜ್ರಹತೇ ಯಥಾ ॥18॥
ಚಕ್ರದಿಂದ ಕತ್ತರಿಸ್ಪಟ್ಟ ಅವನ ತಲೆಯು ವಜ್ರಾಯುಧದಿಂದ ವೃತ್ರನು ಹತನಾದಾಗ ವೃತ್ರನ ತಲೆಯು ಭೂಮಿಯ ಮೇಲೆ ಬಿದ್ದಂತೆ, ತಕ್ಷಣದಲ್ಲಿ ಭೂಮಿಯ ಮೇಲೆ ಬಿದ್ದಿತು.
ಭೂಮಿಸ್ತು ಪತಿತಂ ದೃಷ್ಟ್ವಾ ಸುತಂ ಪ್ರಾದಾಚ್ಚ ಕುಂಡಲೇ |
ಪ್ರದಾಯ ಚ ಮಹಾಬಾಹುಮಿದಂ ವಚನಮಬ್ರವೀತ್ ॥19॥
ಭೂಮಿಯಾದರೋ ನರಕಾಸುರನು ಸಂಹೃತನಾದುದನ್ನು ನೋಡಿ ಕೃಷ್ಣನಿಗೆ ಅವನ ಮಗನಾದ ಭಗದತ್ತನನ್ನೂ ಮತ್ತು ಕರ್ಣಕುಂಡಲಗಳನ್ನೂ ಒಪ್ಪಿಸಿ ಆ ಮಹಾಬಾಹುವನ್ನು ಕುರಿತು ಹೀಗೆ ಮಾತನಾಡಿದಳು.
ಭೂಮಿಃ
ಸೃಷ್ಟಸ್ತ್ವಯೈವ ಮಧುಮನ್ ತ್ವಯೈವ ನಿಹತಃ ಸುತಃ |
ಯಥೇಚ್ಛಸಿ ತಥಾ ಕ್ರೀಡನ್ ಪ್ರಜಾಸ್ತಸ್ಯಾನುಪಾಯ ॥20॥
ಎಲೈ ಮಧುಕುಲಧಾರಿಯೇ! ನರಕಾಸುರನನ್ನು ನೀನೇ ಸೃಷ್ಟಿಸಿದ್ದಿ. ಈಗ ನೀನೇ ಸಂಹಾರ ಮಾಡಿದ್ದೀಯೆ. ನಿನಗೆ ಇಚ್ಛೆ ಬಂದಂತೆ ಲೀಲೆಯನ್ನುಮಾಡುತ್ತಾ ಅವನ ಮಕ್ಕಳನ್ನು ರಕ್ಷಿಸು.
ಶ್ರೀವಾಸುದೇವಃ
ದೇವಾನಾಂ ಚ ಮುನೀನಾಂ ಚ ಪಿತೄಣಾಂ ಚ ಮಹಾತ್ಮನಾಮ್ |
ಉದ್ವೇಜನೀಯೋ ಭೂತಾನಾಂ ಬ್ರಹ್ಮದ್ವಿಟ್ ಪುರುಷಾಧಮಃ ॥21॥
ನರಕಾಸುರನು ಬ್ರಹ್ಮದ್ವೇಷಿಯೂ ಪುರುಷಾಧಮನೂ ಆಗಿ ದೇವತೆಗಳಿಗೂ ಮಹಾತ್ಮರಾದ ಋಷಿಗಳಿಗೂ ಪಿತೃಗಳಿಗೂ ಮತ್ತು ಎಲ್ಲಾ ಪ್ರಾಣಿಗಳಿಗೂ ಹೆದರಿಕೆಯನ್ನು ಉಂಟುಮಾಡಿದ್ದನು.
ಲೋಕದ್ವಿಷ್ಟಃ ಸುತಸ್ತುಭ್ಯಂ ದೇವಾರಿರ್ಲೋಕಕಂಟಕಃ |
ಸರ್ವಲೋಕನಮಸ್ಕಾರ್ಯಾಮದಿತಿಂ ಬಾಧಯದ್ ಬಲೀ |
ಕುಂಡಲೇ ದರ್ಪಸಂಪೂರ್ಣಃ ತತೋ ಮೇ ನಿಹತಃ ಸುತಃ ॥22॥
ಎಲ್ಲಾ ಲೋಕದ್ವೇಷಕ್ಕೆ ಪಾತ್ರನಾದ ನಿನ್ನ ಪುತ್ರನು ದೇವತೆಗಳ ಶತ್ರುವೂ ಲೋಕಕಂಟಕನೂ ಆಗಿದ್ದನು. ಸರ್ವಲೋಕದಿಂದ ನಮಸ್ಕರಾರ್ಹಳಾದ ಅದಿತಿಯನ್ನು ತನ್ನ ಬಲದಿಂದ ಪೀಡಿಸಿ ದರ್ಪದಿಂದ ಅವಳ ಕುಂಡಲಗಳನ್ನು ಅಪಹರಿಸಿದನು. ಆದ್ದರಿಂದ ನಾನು ಅವನನ್ನು ಸಂಹರಿಸಿದೆ.
ನೈವ ಮನ್ಯುಸ್ತ್ವಯಾ ಕಾರ್ಯೋ ಯತ್ ಕೃತಂ ಮಯಿ ಭಾಮಿನಿ |
ಮತ್ಪ್ರಭಾವಾಚ್ಚ ತೇ ಪುತ್ರೋ ಲಬ್ಧವಾನ್ ಗತಿಮುತ್ತಮಾಮ್ |
ತಸ್ಮಾದ್ ಗಚ್ಛ ಮಹಾಭಾಗೇ ಭಾರಾವತರಣಂ ಕೃತಮ್ ॥23॥
ಭಾಮಿನಿಯೇ! ನಾನು ಮಾಡಿದ ಕಾರ್ಯದಿಂದ ನನ್ನ ಮೇಲೆ ಕೋಪಗೊಳ್ಳಬೇಡ. ನನ್ನ ಪ್ರಭಾವದಿಂದ ನಿನ್ನ ಪುತ್ರನು ಉತ್ತಮಗತಿಯನ್ನು ಪಡೆದಿದ್ದಾನೆ. ಮಹಾನುಭಾವಳೇ! ನೀನು ಇಲ್ಲಿಂದ ಹೋಗು ನಾನು ಭೂಭಾರವನ್ನು ಇಳಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನ ಪಂಚಾಶೋಧ್ಯಾಯಃ॥

॥ ಅರ್ಘಾಭಿಹರಣಪರ್ವಣಿ ಅಷ್ಟಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****
ಐವತ್ತನೆಯ ಅಧ್ಯಾಯ
(ಪ್ರಾಗ್ಜ್ಯೋತಿಷ ಪುರದಲ್ಲಿ ಇದ್ದ ರತ್ನಾದಿಗಳನ್ನು ಸಂಗ್ರಹಿಸಿ ಸ್ವರ್ಗದಲ್ಲಿ ಅದಿತಿಗೆ ಕುಂಡಲಗಳನ್ನು ಕೊಟ್ಟು ಕೃಷ್ಣನ ದ್ವಾರಕಾ ಪ್ರಾಪ್ತಿ)
ಭೀಷ್ಮಃ
ನಿಹತ್ಯ ನರಕಂ ಭೌಮಂ ವಾಸವೇನ ಪುರಸ್ಕೃತಃ |
ಸಹಿತೋ ಲೋಕಪಾಲೈಶ್ಚ ದದರ್ಶ ನರಕಾಲಯಮ್ ॥1॥
ಇಂದ್ರನಿಂದ ಪೂಜಿಸಿಲ್ಪಟ್ಟ ಕೃಷ್ಣನು ಭೂಮಿಯ ಪುತ್ರನಾದ ನರಕಾಸುರನನ್ನು ಸಂಹರಿಸಿ ಲೋಕಪಾಲಕರ ಜೊತೆಯಲ್ಲಿ ಕೂಡಿದವನಾಗಿ ನರಕಾಸುರನ ಮನೆಯಲ್ಲಿ ನೋಡಿದನು.
ಅಥಾಸ್ಯ ಗೃಹಮಾಸಾದ್ಯ ನರಕಸ್ಯ ಮಹಾತ್ಮನಃ |
ದದರ್ಶ ಧನಮಕ್ಷಯ್ಯಂ ರತ್ನಾನಿ ವಿವಿಧಾನಿ ಚ ॥2॥
ಆಗ ಮಹಾತ್ಮನಾದ ನರಕಾಸುರನ ಮನೆಯನ್ನು ಸೇರಿ ಅಲ್ಲಿ ಅಕ್ಷಯವಾದ ಧನವನ್ನೂ ವಿವಿಧ ರತ್ನಗಳನ್ನೂ ನೋಡಿದನು.
ಮಣಿಮುಕ್ತಾಪ್ರವಾಳಾನಿ ವೈಡೂರ್ಯವಿಕೃತಾನಿ ಚ |
ವಿಸ್ತಾರಕಲ್ಪಾರ್ಕಮಣೀನ್ ವಿಮಲಸ್ಫಾಟಿಕಾನಪಿ ॥3॥
ಜಾಂಬೂನದಮಯಾನ್ಯೇವ ಶಾತಕುಂಭಮಯಾನಿ ಚ |
ಪ್ರದೀಪ್ತಜ್ವಲನಾಭಾನಿ ಶೀತರಶ್ಮಿಪ್ರಭಾಣಿ ಚ |
ಹಿರಣ್ಯವರ್ಣಂ ರುಚಿರಂ ಶ್ವೇತಮಭ್ಯಂತರಂ ಗೃಹಮ್ ॥4॥
ಮಣಿಮುಕ್ತಪ್ರವಾಳವನ್ನೂ ವೈಡೂರ್ಯವಿಕಾರಗಳನ್ನೂ ವಿಸ್ತಾರವಾದ ಸೂರ್ಯಕಾಂತಿಮಣಿಗಳನ್ನೂ ವಿಮಲಸ್ಫಟಿಕಗಳನ್ನೂ ಸುವರ್ಣಮಯವಾದ ಮಣಿಗಳನ್ನೂ ಜ್ವಲಿಸುವ ಅಗ್ನಿವರ್ಣದ ಮಣಿಗಳನ್ನೂ ಶೀತರಶ್ಮಿ ಮತ್ತು ಕಾಂತಿಯನ್ನೂ ಹೊಂದಿದ್ದ ಮಣಿಗಳನ್ನೂ ಹಿರಣ್ಯವರ್ಣದಿಂದ ಕೂಡಿದ್ದ ಶ್ವೇತವಾದ ಸುಂದರವಾದ ಅಂತರ ಗೃಹವನ್ನೂ ನೋಡಿದನು.
ಯದಕ್ಷಯಂ ಗೃಹೇ ದೃಷ್ಟಂ ನರಕಸ್ಯ ಧನಂ ಬಹು |
ನಹಿ ರಾಜ್ಞಃ ಕುಬೇರಸ್ಯ ತಾವದ್ಧನಸಮುಚ್ಛ್ರಯಮ್ |
ದೃಷ್ಟಪೂರ್ವಂ ಪುರೇ ಸಾಕ್ಷಾನ್ಮಹೇಂದ್ರಸದನೇಷ್ವಪಿ ॥5॥
ನರಕಾಸುರನ ಗೃಹದಲ್ಲಿ ಎಂತಹ ಬಹುವಾದ ಅಕ್ಷಯವಾದ ಧನವಿದ್ದಿತೋ ಅಂತಹ ಧನರಾಶಿಯನ್ನು ಕುಬೇರನ ಮನೆಯಲ್ಲಿಯೂ ನೊಡಲು ಸಾಧ್ಯವಿರಲಿಲ್ಲ. ಅಥವಾ ಸ್ವರ್ಗದಲ್ಲೇ ಆಗಲೀ ಮಹೇಂದ್ರನ ಭವನದಲ್ಲಿಯಾಗಲೀ ಹಿಂದೆ ಯಾರೂ ಅಂತಹ ಧನರಾಶಿಯನ್ನು ನೋಡಿರಲಿಲ್ಲ.
ಹತೇ ಭೌಮೇ ನಿಸುಂಭೇ ಚ ವಾಸವಃ ಸಗಣೋಽಬ್ರವೀತ್ |
ದಾಶಾರ್ಹಪತಿಮಾಸೀನಮಾಹೃತ್ಯ ಮಣಿಕುಂಡಲೇ ॥6॥
ನರಕ ಮತ್ತು ನಿಸುಂಭರು ಹತರಾಗುತ್ತಿರಲು ಇಂದ್ರನು ತನ್ನ ಪರಿವಾರಸಹಿತನಾಗಿ ದಾಶಾರ್ಹಪತಿಯಾದ ಕೃಷ್ಣನ ಬಳಿಗೆ ಬಂದು ಮಣಿಕುಂಡಲಗಳನ್ನು ಸಮರ್ಪಿಸಿ ಮಾತನಾಡಿದನು.
ಹೇಮಸೂತ್ರಾ ಮಹಾಕಕ್ಷ್ಯಾಃ ತೋಮರೈರ್ವೀರ್ಯಶಾಲಿನಃ |
ಭೀಮರೂಪಾಶ್ಚ ಮಾತಂಗಾಃ ಪ್ರವಾಳವಿಕೃತಾಃ ಕುಥಾಃ ॥7॥
ವಿಮಲಾನಿ ಪತಾಕಾನಿ ವಾಸಾಂಸಿ ವಿವಿಧಾನಿ ಚ |
ತೇ ಚ ವಿಂಶತಿಸಾಹಸ್ರಾ ದ್ವಿಸ್ತಾವತ್ಯಃ ಕರೇಣವಃ ॥8॥
ಅಷ್ಟೌ ಶತಸಹಸ್ರಾಣಿ ದೇಶಜಾಶ್ಚೋತ್ತಮಾ ಹಯಾಃ |
ಗೋಭಿಶ್ಚ ವಿಕೃತೈರ್ಯಾನ್ಯೈಃ ಕಾಮಂ ತವ ಜನಾರ್ದನ ॥9॥
ಹೇಮಸೂತ್ರಗಳನ್ನೂ ಮಹಾಕಕ್ಷೆಗಳನ್ನೂ ತೋಮರಗಳನ್ನೂ ಧರಿಸಿದ ಭಯಂಕರವಾದ ಆಕಾರವುಳ್ಳ ಹವಳದಿಂದಮಾಡಿದ ರತ್ನಗಂಬಳಿಗಳನ್ನುಳ್ಳ ಪರಾಕ್ರಮಶಾಲಿಗಳಾದ ಗಜಗಳು, ವಿಮಲವಾದ ಪತಾಕೆಗಳು, ವಿಧವಿಧವಾದ ವಸ್ತ್ರಗಳು, ಇವುಗಳನ್ನು ಹೊಂದಿದ ಇಪ್ಪತ್ತು ಸಾವಿರ ಆನೆಗಳು ಅವುಗಳ ಎರಡರಷ್ಟು ಮರಿಯಾನೆಗಳು, ಒಳ್ಳೆಯ ದೇಶದಲ್ಲಿ, ಜನಿಸಿದ ಉತ್ತಮವಾದ ಎಂಟುಲಕ್ಷ ಅಶ್ವಗಳು, ಯಾನವನ್ನು ಹೊರಲು ಸಮರ್ಥವಾದ ಬಲಿಷ್ಠವಾದ ಅನೇಕ ವೃಷಭಗಳು ಜನಾರ್ದನನೇ! ಎಲ್ಲವೂ ನಿನಗೆ ಸೇರಿದವು.
ಆವಿಕಾನಿ ಚ ಸೂಕ್ಷ್ಮಾಣಿ ಶಯನಾವಸಥಾನಿ ಚ |
ಕಾಮವ್ಯಾಹಾರಿಣಶ್ಚಾಪಿ ಪಕ್ಷಿಣಃ ಪ್ರಿಯದರ್ಶನಾತ್ ॥10॥
ಚಂದನಾಗರುಮುಖ್ಯಾನಿ ಯಾನಾನಿ ವಿವಿಧಾನಿ ಚ |
ತಚ್ಚ ತೇ ಪ್ರಾಪಯಿಷ್ಯಾಮಿ ವೃಷ್ಣ್ಯಾವಾಸಮರಿಂದಮ ॥11॥
ಎಲೈ ಅರಿಂದಮನೇ! ಸೂಕ್ಷ್ಮವಾದ ಕಂಬಳಿಗಳು ಶಯನಗಳು ಆಸನಗಳು, ಪ್ರೀತಿಪಾತ್ರರು ಬಂದ ತಕ್ಷಣ ಒಳ್ಳೆಯ ಮಾತುಗಳನ್ನು ಆಡುವ ಪಕ್ಷಿಗಳು, ಚಂದನ ಅಗರು ಮೊದಲಾದ ಸುಗಂಧ ದ್ರವ್ಯಗಳು ವಿವಿಧ ಯಾನಗಳು ಈ ಎಲ್ಲವನ್ನೂ ನಾನು ನಿನ್ನ ದ್ವಾರಕಾ ಪಟ್ಟಣಕ್ಕೆ ತಲುಪಿಸುತ್ತೇನೆ.

ವಸು ಯತ್ ತ್ರಿಷು ಲೋಕೇಷು ಧರ್ಮೇಣೈವಾರ್ಜಿತಂ ಮಯಾ |
ದೇವಗಂಧರ್ವರತ್ನಾನಿ ದೈತೇಯಾಸುರಜಾನಿ ಚ |
ಯಾನಿ ಸಂತೀಹ ರತ್ನಾನಿ ನರಕಸ್ಯ ನಿವೇಶನೇ ॥12॥
ಮೂರು ಲೋಕಗಳಲ್ಲಿ ನಾನು ಧರ್ಮದಿಂದ ಸಂಪಾದಿಸಿದ ಯಾವ ಸಂಪತ್ತಿದೆಯೋ ಮತ್ತು ಎಷ್ಟು ದೇವಗಂದರ್ವರತ್ನಗಳಿವೆಯೋ ದೈತೇಯಾಸುರರಿಗೆ ಸಂಬಂಧಿಸಿದ ರತ್ನಗಳಿವೆಯೋ ಮತ್ತು ನರಕಾಸುರನ ಮನೆಯಲ್ಲಿ ಯಾವ ರತ್ನಗಳಿವೆಯೋ ಅವೆಲ್ಲವನ್ನೂ ನಿನಗೆ ತಲುಪಿಸುತ್ತೇನೆ.
ಭೀಷ್ಮಃ
ಏತತ್ ತು ಗರುಡೇ ಸರ್ವಂ ಕ್ಷಿಪ್ರಮಾರೋಪ್ಯ ವಾಸವಃ |
ದಾಶಾರ್ಹಪತಿನಾ ಸಾರ್ಧಮುಪಾಯಾನ್ಮಣಿಪರ್ವತಮ್ ॥13॥
ಇವೆಲ್ಲವನ್ನೂ ಶೀಘ್ರವಾಗಿ ಗರುಡನ ಮೇಲೆ ಏರಿಸಿ ಇಂದ್ರನು ದಾಶಾರ್ಹಪತಿಯಾದ ಕೃಷ್ಣನ ಜೊತೆಯಲ್ಲಿ ಮಣಿಪರ್ವತದ ಸಮೀಪಕ್ಕೆ ಬಂದನು.
ತತ್ರ ಪುಣ್ಯಾ ವವುರ್ವಾತಾಃ ಪ್ರಭಾಶ್ಚಿತ್ರಾಃ ಸಮುಜ್ಜ್ವಲಾಃ |
ಪ್ರೇಕ್ಷತಾಂ ಸುರಸಂಘಾನಾಂ ವಿಸ್ಮಯಃ ಸಮಪದ್ಯತ ॥14॥
ಅಲ್ಲಿ ಪುಣ್ಯವಾದ ವಾಯುವು ಸಂಚರಿಸುತ್ತಿತ್ತು. ಉಜ್ವಲವಾದ ವಿಚಿತ್ರವಾದ ಪ್ರಭೆಯು ಇದ್ದಿತು. ಅದನ್ನು ನೋಡಿದ ದೇವತೆಗಳ ಸಮೂಹಕ್ಕೆ ವಿಸ್ಮಯ ಉಂಟಾಯಿತು.
ತ್ರಿದಶಾ ಋಷಯಶ್ಚೈವ ಚಂದ್ರಾದಿತ್ಯೌ ಯಥಾ ದಿವಿ |
ಪ್ರಭಯಾ ತಸ್ಯ ಶೈಲಸ್ಯ ನಿರ್ವಿಶೇಷಮಿವಾಭವತ್ ॥15॥
ಚಂದ್ರಾದಿತ್ಯರ ಪ್ರಭೆಯಿಂದ ಸ್ವರ್ಗಲೋಕದಲ್ಲಿ ದೇವತೆಗಳು ಮತ್ತು ಋಷಿಗಳು ಹೀಗೆ ಕಂಗೊಳಿಸುತ್ತಾರೆಯೋ ಅದರಂತೆ ಆ ಮಣಿ ಪರ್ವತದ ಪ್ರಭೆಯು ಭೂಮಿಯಲ್ಲಿ ಚಂದ್ರಸೂರ್ಯರ ಪ್ರಭೆಗೆ ಸಮಾನವಾಗಿದ್ದಿತು.
ಅನುಜ್ಞಾತಸ್ತು ರಾಮೇಣ ಕೇಶವೋ ವಾಸವೇನ ಚ |
ಪ್ರೀಯಮಾಣೋ ಮಹಾಬಾಹುರ್ವಿವೇಶ ಮಣಿಪರ್ವತಮ್ ॥16॥
ಬಲರಾಮನಿಂದಲೂ ಇಂದ್ರನಿಂದಲೂ ಅನುಜ್ಞಾತನಾದ ಮಹಾಬಾಹುವಾದ ಕೇಶವನು ಸಂತೋಷದಿಂದ ಮಣಿಪರ್ವತವನ್ನು ಪ್ರವೇಶಿಸಿದನು.
ತತ್ರ ವೈಡೂರ್ಯವರ್ಣಾನಿ ದದರ್ಶ ಮಧುಸೂದನಃ |
ಗಂಧರ್ವಾಸುರನಾಗಾನಾಂ ಪ್ರಿಯಾ ದುಹಿತರಸ್ತದಾ ॥17॥
ಮಧುಸೂದನನು ಅಲ್ಲಿ ವೈಡೂರ್ಯವರ್ಣೋಪೇತರಾದ ಗಂಧರ್ವಾಸುರನಾಗರ ಪ್ರಿಯ ಪುತ್ರಿಯರನ್ನು ನೋಡಿದನು.
ತ್ರಿವಿಷ್ಟಪಸಮೇ ದೇಶೇ ತಿಷ್ಠಂತಮಪರಾಜಿತಮ್ |
ಪರಿವವ್ರುರ್ಮಹಾಬಾಹುಮೇಕವೇಣೀಧರಾಃ ಸ್ತ್ರಿಯಃ ॥18॥
ಏಕವೇಣೀಧರರಾದ ಆ ಸ್ತ್ರೀಯರೆಲ್ಲರೂ ಸ್ವರ್ಗಕ್ಕೆ ಸದೃಶವಾದ ದೇಶದಲ್ಲಿ ನಿಂತಿದ್ದ ಅಪರಾಜಿತನಾದ ಮಹಾಬಾಹುವಾದ ಕೃಷ್ಣನನ್ನು ಸುತ್ತುವರಿದರು.
ಸರ್ವಾಃ ಕಾಷಾಯವಾಸಿನ್ಯಃ ಸರ್ವಾಶ್ಚ ನಿಯತೇಂದ್ರಿಯಾಃ |
ವ್ರತಸಂತಾಪಜಃ ಶೋಕೋ ನಾತ್ರ ಕಾಂಜಿದಪೀಡಯತ್ ॥19॥
ಅವರೆಲ್ಲರೂ ಕಾಷಾಯ ವಸ್ತ್ರಗಳನ್ನು ಧರಿಸಿ ಇಂದ್ರಿಯ ನಿಯಮಗಳನ್ನು ಪಾಲಿಸುವವರಾಗಿದ್ದರು. ಅವರಲ್ಲಿ ಯಾರಿಗೂ ವ್ರತದ ತಾಪದಿಂದ ಉಂಟಾದ ಶೋಕವು ಇರಲಿಲ್ಲ.
ಅರಜಾಂಸಿ ಚ ವಾಸಾಂಸಿ ಬಿಭ್ರತ್ಯಃ ಕೌಶಿಕಾನ್ಯಪಿ |
ಸಮೇತ್ಯ ಯದುಸಿಂಹಸ್ಯ ಚಕ್ರುರ್ಧಾರಾಂಜಲಿಂ ಸ್ತ್ರಿಯಃ ॥20॥
ಶುಭ್ರವಾದ ರೇಷ್ಮೆವಸ್ತ್ರಗಳನ್ನು ಧರಿಸಿದ ಆ ಸ್ತ್ರೀಯರು ಯದುಸಿಂಹನಾದ ಕೃಷ್ಣನ ಬಳಿಗೆ ಬಂದು ಆನಂದಾಶ್ರುಪೂರ್ವಕವಾಗಿ ಅವನಿಗೆ ಕೈಗಳನ್ನು ಮುಗಿದರು.
ಊಚುಶ್ಚೈನಂ ಹೃಷೀಕೇಶಂ ಸರ್ವಾಸ್ತಾಃ ಕಮಲೇಕ್ಷಣಾಃ |
ನಾರದೇನ ಸಮಾಖ್ಯಾತಮಸ್ಮಾಕಂ ಪುರುಷೋತ್ತಮ |
ಆಗಮಿಷ್ಯತಿ ಗೋವಿಂದಃ ಸುರಕಾರ್ಯಾರ್ಥಸಿದ್ಧಯೇ ॥21॥
ಸೋಽಸುರಂ ನರಕಂ ಹತ್ವಾ ನಿಸುಂಭಂ ಮುರಮೇವ ಚ |
ಭೌಮಂ ಚ ಸಪರೀವಾರಂ ಹಯಗ್ರೀವಂ ಚ ದಾನವಮ್ |
ತಥಾ ಪಂಚಜನಂ ಚೈವ ಪ್ರಾಪ್ಸ್ಯತೇ ಧನಮಕ್ಷಯಮ್ ॥22॥
ಸೋಽಚಿರೇಣೈವ ಕಾಲೇನ ಯುಷ್ಮದ್ಭರ್ತಾ ಭವಿಷ್ಯತಿ |
ಏವಮುಕ್ತ್ವಾಗಮದ್ ಧೀಮಾನ್ ದೇವರ್ಷಿರ್ನಾರದಸ್ತದಾ ॥23॥
ಆ ಎಲ್ಲಾ ಕಮಲನೇತ್ರೆಯರು ಹೃಷೀಕೇಶವನನ್ನು ಕುರಿತು ಹೀಗೆ ಮಾತನಾಡಿದರು. ಪುರುಷೋತ್ತಮನೇ! ನಮಗೆ ನಾರದರು ಹೀಗೆ ಹೇಳಿದ್ದಾರೆ. ದೇವತಾಕಾರ್ಯಸಿದ್ಧಿಗಾಗಿ ಗೋವಿಂದನು ಇಲ್ಲಿಗೆ ಬರುವನು ಅವನು ನರಕಾಸುರನನ್ನೂ ನಿಸುಂಭನನ್ನೂ ಮುರನನ್ನೂ ನರಕಾಸುರನ ಪರಿವಾರವನ್ನೂ ಹಯಗ್ರೀವಾಸುರನನ್ನೂ ಪಂಚಜನನನ್ನೂ ಸಂಹರಿಸಿ ಅಕ್ಷಯವಾದ ಧನವನ್ನು ಪಡೆದು ನಿಮ್ಮ ಪತಿಯಾಗುವನು. ಹೀಗೆ ಮೇಧಾವಿಗಳಾದ ದೇವರ್ಷಿಗಳಾದ ನಾರದರು ನಮಗೆ ಹೇಳಿ ಹೊರಟು ಹೋದರು.

ತ್ವಾಂ ಚಿಂತಯಾನಾಃ ಸತತಂ ತಪೋ ಘೋರಮುಪಾಸ್ಮಹೇ |
ಕಾಲೇಽತೀತೇ ಮಹಾಬಾಹುಂ ಕದಾ ದ್ರಕ್ಷ್ಯಾಮ ಮಾಧವಮ್ ॥24॥
ನಾವು ಕಾಲವು ಕಳೆದು ಹೋಗುತ್ತಿರಲು ಮಹಾಬಾಹುವಾದ ಮಾಧವನನ್ನು ಯಾವಾಗ ನೋಡುವೆವು ಎಂದು ಚಿಂತಿಸುತ್ತಾ ನಾವು ಯಾವಾಗಲೂ ಘೋರವಾದ ತಪಸ್ಸನ್ನು ಆಚರಿಸುತ್ತಿದ್ದೇವೆ.
ಇತ್ಯೇವಂ ಹೃದಿ ಸಂಕಲ್ಪಂ ಕೃತ್ವಾ ಪುರುಷಸತ್ತಮ |
ತಪಶ್ಚರಾಮ ಸತತಂ ರಕ್ಷ್ಯಮಾಣಾ ಹಿ ದಾನವೈಃ ॥25॥
ಪುರುಷ ಶ್ರೇಷ್ಠನೇ! ನಮ್ಮ ಮನಸ್ಸಿನಲ್ಲಿ ಹೀಗೆ ಸಂಕಲ್ಪವನ್ನು ಮಾಡಿ ದಾನವರಿಂದ ರಕ್ಷಿಸಲ್ಪಟ್ಟು ಯಾವಾಗಲೂ ಹೀಗೆ ತಪಸ್ಸನ್ನು ಆಚರಿಸುತ್ತಿದ್ದೇವೆ.
ತತೋಽಸ್ಮತ್ಪ್ರಿಯಕಾಮಾರ್ಥಂ ಭಗವಾನ್ ಮಾರುತಃ ಸ್ವಯಮ್ |
ಯಥೋಕ್ತಂ ನಾರದೇನಾಥ ನಚಿರಾತ್ ತದ್ ಭವಿಷ್ಯತಿ ॥26॥
ಅನಂತರ ನಮಗೆ ಹಿತವನ್ನು ಉಂಟುಮಾಡುವ ಸಲುವಾಗಿ ವಾಯುದೇವರೂ ಸಹ ಸ್ವತಃ ಬಂದು ನಾರದರು ಏನು ಹೇಳಿದರೋ ಅದು ಶೀಘ್ರವಾಗಿಯೇ ನೆರವೇರುವುದು ಎಂದು ಹೇಳಿದರು.
ತಾಸಾಂ ಪರಮನಾರೀಣಾಮೃಷಭಾಕ್ಷಂ ಪುರಸ್ಕೃತಮ್ |
ದದೃಶುರ್ದೇವಗಂಧರ್ವಾ ಗೃಷ್ಟೀನಾಮಿವ ಗೋಪತಿಮ್ ॥27॥
ಸಣ್ಣ ಪ್ರಾಯದ ಹಸುಗಳ ಮುಂದೆ ವೃಷಭವು ನಿಂತಂತೆ ಆ ಸುಂದರಿಯರ ಮುಂದೆ ವೃಷಭಾಕ್ಷನಾದ ಕೃಷ್ಣನು ನಿಂತಿರುವುದನ್ನು ದೇವ ಗಂಧರ್ವರು ನೋಡಿದರು.
ತಸ್ಯ ಚಂದ್ರೋಪಮಂ ವಕ್ತ್ರಮುದೀಕ್ಷ್ಯ ಮುದಿತೇಂದ್ರಿಯಾಃ |
ಸಂಪ್ರಹೃಷ್ಟಾ ಮಹಾಬಾಹುಮಿದಂ ವಚನಮಬ್ರುವನ್ ॥28॥
ಅವನ ಚಂದ್ರಸದೃಶವಾದ ಮುಖವನ್ನು ನೋಡಿ ಸಂತೋಷಗೊಂಡ ಆ ಕನ್ಯೆಯರು ಆ ಮಹಾಬಾಹುವನ್ನು ಕುರಿತು ಸಂತೋಷದಿಂದ ಈ ಮಾತುಗಳನ್ನು ಆಡಿದರು.
ಸತ್ಯಂ ಬತ ಪುರಾ ವಾಯುರಿದಮಸ್ಮಾನಿಹಾಬ್ರವೀತ್ |
ಸರ್ವಭೂತಕೃತಜ್ಞಶ್ಚ ಮಹರ್ಷಿರಪಿ ನಾರದಃ ॥29॥
ನಮಗೆ ಈ ಸ್ಥಳದಲ್ಲಿ ಹಿಂದೆ ವಾಯುದೇವರು ಏನು ಹೇಳಿದರೋ ಸರ್ವ ಪ್ರಾಣಿಗಳಿಗೆ ಉಪಕಾರಕರಾದ ಮಹರ್ಷಿಗಳಾದ ನಾರದರು ಏನು ಹೇಳಿದರೋ ಎಲ್ಲವೂ ಸತ್ಯವಷ್ಟೇ?
ವಿಷ್ಣುರ್ನಾರಾಯಣೋ ದೇವಃ ಶಂಖಚಕ್ರಗದಾಸಿಧೃತ್ |
ಸ ಭೌಮಂ ನರಕಂ ಹತ್ವಾ ಭರ್ತಾ ವೋ ಭವಿತಾ ತ್ವಿಹ ॥30॥
ಶಂಖ ಚಕ್ರ ಗದಾ ಖಡ್ಗಧಾರಿಯಾದ ದೇವನಾದ ನಾರಾಯಣನಾದ ವಿಷ್ಣುವು ಭೂಮಿಯ ಪುತ್ರನಾದ ನರಕನನ್ನು ಸಂಹರಿಸಿ ನಿಮಗೆ ಪತಿಯಾಗುವನು.
ದಿಷ್ಟ್ಯಾ ತಸ್ಯರ್ಷಿಮುಖ್ಯಸ್ಯ ನಾರದಸ್ಯ ಮಹಾತ್ಮನಃ |
ವಚನಾದೇವ ಸತ್ಯಂ ನೋ ಭರ್ತಾ ಭವಿತುಮರ್ಹತಿ ॥31॥
ನಮ್ಮ ಪುಣ್ಯದಿಂದ ಆ ಮಹಾತ್ಮರಾದ ಋಷಿಶ್ರೇಷ್ಠರಾದ ನಾರದರ ವಚನದಂತೆ ಸತ್ಯವಾಗಿ ನೀನು ನಮಗೆ ಪತಿಯಾಗಬೇಕು.
ಯತ್ ಪ್ರಿಯಂ ಬತ ಪಶ್ಯಾಮ ವಕ್ತ್ರಂ ಚಂದ್ರೋಪಮಂ ತು ತೇ |
ದರ್ಶನೇನ ಕೃತಾರ್ಥಾಃ ಸ್ಮೋ ವಯಮದ್ಯ ಮಹಾತ್ಮನಃ ॥32॥
ಮಹಾತ್ಮನಾದ ನಿನ್ನ ಸುಂದರವಾದ ಮುಖವನ್ನು ನೋಡುವುದರಿಂದಲೇ ನಾವು ಈ ದಿನ ಕೃತಾರ್ಥರಾಗಿದ್ದೇವೆ.
ಭೀಷ್ಮಃ
ಉವಾಚ ಸ ಯದುಶ್ರೇಷ್ಠಃ ಸರ್ವಾಸ್ತಾ ಜಾತಮನ್ಮಥಾಃ |
ಯಥಾ ಬ್ರೂತ ವಿಶಾಲಾಕ್ಷ್ಯಸ್ತತ್ ಸರ್ವಂ ವೋ ಭವಿಷ್ಯತಿ ॥33॥
ಆಗ ಯದುಶ್ರೇಷ್ಠನಾದ ಕೃಷ್ಣನು ಕಾಮಾವಿಷ್ಟರಾದ ಅವರೆಲ್ಲರನ್ನೂ ಕುರಿತು ವಿಶಾಲಾಕ್ಷಿಯರೇ ನೀವು ಏನು ಹೇಳುತ್ತಿದ್ದೀರೋ ಹಾಗೆಯೇ ಎಲ್ಲವೂ ಆಗುವುದು ಎಂದು ಹೇಳಿದನು.
ತಾನಿ ಸರ್ವಾಣಿ ರತ್ನಾನಿ ಗಮಯಿತ್ವಾಽಥ ಕಿಂಕರೈಃ |
ಸ್ತ್ರಿಯಶ್ಚ ಗಮಯಿತ್ವಾಽಥ ದೇವರ್ಷಿನೃಪಕನ್ಯಕಾಃ ॥34॥
ಕೃಷ್ಣನು ಅಲ್ಲಿದ್ದ ಎಲ್ಲಾ ರತ್ನಗಳನ್ನೂ ಕಿಂಕರರ ಮೂಲಕ ಕಳುಹಿಸಿಕೊಟ್ಟು ದೇವರ್ಷಿನೃಪಕನ್ಯೆಯರನ್ನೂ ಸಹ ಪಲ್ಲಕ್ಕಿಗಳಲ್ಲಿ ಕಳುಹಿಸಿಕೊಟ್ಟನು.
ವೈನತೇಯಭುಜೇ ಕೃಷ್ಣೋ ಮಣಿಪರ್ವತಮುತ್ತಮಮ್ |
ಕ್ಷಿಪ್ರಮಾರೋಪಯಾಂಚಕ್ರೇ ಭಗವಾನ್ ದೇವಕೀಸುತಃ ॥35॥
ಅನಂತರ ದೇವಕೀಸುತನಾದ ಭಗವಂತನಾದ ಕೃಷ್ಣನು ಶ್ರೇಷ್ಠವಾದ ಮಣಿ ಪರ್ವತವನ್ನು ಗರುಡನ ಹೆಗಲಿನ ಮೇಲೆ ಬೇಗ ಏರಿಸಿದನು.
ಸಪಕ್ಷಿಗಣಮಾತಂಗಂ ಸವ್ಯಾಳಮೃಗಪನ್ನಗಮ್ |
ಶಾಖಾಮೃಗಗಣೈರ್ಜುಷ್ಟಂ ಸಪ್ರಸ್ತರಶಿಲಾತಳಮ್ ॥36॥
ನ್ಯಂಕುಭಿಶ್ಚ ವರಾಹೈಶ್ಚ ರುರುಭಿಶ್ಚ ನಿಷೇವಿತಮ್ |

ಸಪ್ರಪಾತಮಹಾಸಾನುಂ ವಿಚಿತ್ರಶಿಖಿಸಂಕುಲಮ್ ॥37॥
ತಂ ಮಹೇಂದ್ರಾನುಜಃ ಶೌರಿಃ ಚಕಾರ ಗರುಡೋಪರಿ।
ಪಶ್ಯತಾಂ ಸರ್ವಭೂತಾನಾಮುತ್ಪಾಟ್ಯ ಮಣಿಪರ್ವತಮ್ ॥38॥
ಪಕ್ಷಿಗಣಗಳಿಂದಲೂ ಗಜಗಳಿಂದಲೂ ಸಹಿತವಾಗಿದ್ದ, ರುರುಮೃಗ ಮತ್ತು ಸರ್ಪಗಳಿಂದ ಸಹಿತವಾಗಿದ್ದ, ಕಪಿಗಳಿಂದ ಸಮೂಹದಿಂದ ಸಹಿತವಾಗಿದ್ದಂತಹ, ದೊಡ್ಡ ದೊಡ್ಡ ಶಿಲಾತಳಗಳಿಂದ ಕೂಡಿದ್ದಂತಹ, ಕೃಷ್ಣಸಾರ ಮೃಗಗಳು ವರಾಹಗಳು ಮತ್ತು ರುರು ಮೃಗಗಳಿಂದ ಸೇವಿತವಾದಂತಹ, ವಿಚಿತ್ರವಾದ ನವಿಲುಗಳಿಂದ ನಿಬಿಡವಾಗಿದ್ದಂತಹ, ಜಲಪಾತದಿಂದ ಕೂಡಿದ್ದಂತಹ, ಆ ಮಹಾ ಶೃಂಗವನ್ನು ಎಲ್ಲರೂ ನೋಡುತ್ತಿರುವಂತೆಯೇ ವಾಸವಾನುಜನಾದ ಶೌರಿಯಾದ ಕೃಷ್ಣನು ಕಿತ್ತು ಗರುಡನ ಮೇಲೆ ಮಣಿಪರ್ವತವನ್ನು ಏರಿಸಿದನು.
ಉಪೇಂದ್ರಂ ಬಲದೇವಂ ಚ ವಾಸವಂ ಚ ಮಹಾಬಲಮ್।
ತಂ ಚ ರತ್ನೌಘಮತುಳಂ ಪರ್ವತಂ ಚ ಮಹಾಬಲಃ।
ವರುಣಸ್ಯಾಮೃತಂ ದಿವ್ಯಂ ಛತ್ರಂ ಚಂದ್ರೋಪಮಂ ಶುಭಮ್ ॥39॥
ಮಹಾಬಲನಾದ ಗರುಡನು ಮಹಾಬಲನಾದ ಕೃಷ್ಣನನ್ನೂ ಮಹಾಬಲನಾದ ಬಲರಾಮನನ್ನೂ ಆ ಅಸದೃಶವಾದ ರತ್ನರಾಶಿಯನ್ನೂ ಮಣಿಪರ್ವತವನ್ನೂ ಚಂದ್ರನಂತೆ ಶುಭ್ರವರ್ಣದಿಂದ ಕೂಡಿದ ದಿವ್ಯವಾದ ವರುಣನ ಅಮೃತ ಸ್ರಾವಿಯಾದ ಛತ್ರವನ್ನೂ ತನ್ನ ಹೆಗಲಿನ ಮೇಲೆ ಧರಿಸಿದನು.
ಸ್ವಪಕ್ಷಬಲವಿಕ್ಷೇಪೈರ್ಮಹಾದ್ರಿಶಿಖರೋಪಮೈಃ।
ದಿಕ್ಷು ಸರ್ವಾಸು ಸಂರಾವಂ ಸ ಚಕ್ರೇ ಗರುಡೋ ವಹನ್ ॥40॥
ಅವರೆಲ್ಲರನ್ನೂ ಹೊತ್ತುಕೊಂಡು ಹೋಗುತ್ತಾ ಗರುಡನು ದೊಡ್ಡ ಪರ್ವತದ ಶಿಖರಗಳಿಂತಿದ್ದ ತನ್ನ ರೆಕ್ಕೆಗಳ ಬಲಿಷ್ಠವಾದ ವಿಕ್ಷೇಪಗಳಿಂದ ಎಲ್ಲಾ ದಿಕ್ಕುಗಳಲ್ಲಿಯೂ ದೊಡ್ಡದಾದ ಶಬ್ದವನ್ನು ಉಂಟುಮಾಡುತ್ತಾ ಹೊರಟನು.
ಆರುಹನ್ ಪರ್ವತಾಗ್ರಾಣಿ ಪಾದಪಾಂಶ್ಚ ಸಮುತ್ಕ್ಷಿಪನ್।
ಸಂಜಹಾರ ಮಹಾಭ್ರಾಣಿ ವೈಶ್ವಾನರಪಥಂ ಗತಃ ॥41॥
ಅವನು ಪರ್ವತ ಶಿಖರಗಳನ್ನು ಹತ್ತುತ್ತಾ ತನ್ನ ವೇಗದಿಂದ ವೃಕ್ಷಗಳನ್ನು ಉರುಳಿಸುತ್ತಾ ಮಹಾ ಮೇಘಗಳನ್ನು ಚದುರಿಸುತ್ತಾ ವೈಶ್ವಾನರ ಮಾರ್ಗವನ್ನು ತಲುಪಿದನು.
ಗ್ರಹನಕ್ಷತ್ರತಾರಾಣಾಂ ಸಪ್ತರ್ಷಿಗಣತೇಜಸಾಮ್।
ಪ್ರಭಾಜಾಲಮತಿಕ್ರಮ್ಯ ಚಂದ್ರಸೂರ್ಯಪಥಂ ಗತಃ ॥42॥
ಗ್ರಹ ನಕ್ಷತ್ರ ತಾರೆಗಳನ್ನು ದಾಟಿ ತೋಜೋಮಯವಾದ ಸಪ್ತರ್ಷಿಗಳನ್ನು ದಾಟಿ ಪ್ರಭಾಜಾಲಗಳನ್ನು ದಾಟಿ ಸೂರ್ಯ ಚಂದ್ರ ಪಥವನ್ನು ಸೇರಿದನು.
ಮೇರೋಃ ಶಿಖರಮಾಸಾದ್ಯ ಮಧ್ಯಮಂ ಮಧುಸೂದನಃ।
ದೇವಸ್ಥಾನಾನಿ ಸರ್ವಾಣಿ ದದರ್ಶ ಭರತರ್ಷಭ ॥43॥
ಎಲೈ ಭರತಶ್ರೇಷ್ಠನೇ! ಆಗ ಮಧುಸೂದನನು ಮೇರುಪರ್ವತದ ಶಿಖರವನ್ನು ತಲುಪಿ ಅದರ ಮಧ್ಯಭಾಗದಲ್ಲಿದ್ದ ಎಲ್ಲಾ ದೇವತಾ ನಿಲಯಗಳನ್ನೂ ನೋಡಿದನು.
ವಿಶ್ವೇಷಾಂ ಮರುತಾಂ ಚೈವ ಸಾಧ್ಯಾನಾಂ ಚ ಯುಧಿಷ್ಠಿರ।
ಭ್ರಾಜಮಾನಾನ್ಯತಿಕ್ರಮ್ಯ ಅಶ್ವಿನೋಶ್ಚ ಪರಂತಪ ॥44॥
ಪ್ರಾಪ್ಯ ಪುಣ್ಯತಮಂ ಸ್ಥಾನಂ ದೇವಲೋಕಮರಿಂದಮಃ।
ಶಕ್ರಸದ್ಮ ಸಮಾಸಾದ್ಯ ಚಾವರುಹ್ಯ ಜನಾರ್ದನಃ ॥45॥
ಸೋಭಿವಾದ್ಯಾದಿತೇಃ ಪಾದಾವರ್ಚಿತಃ ಸರ್ವದೈವತೈಃ।
ಬ್ರಹ್ಮದಕ್ಷಪುರೋಗೈಶ್ಚ ಪ್ರಜಾಪತಿಭಿರೇವ ಚ ॥46॥
ಅದಿತೇಃ ಕುಂಡಲೇ ದಿವ್ಯೇ ದದಾವಥ ತದಾ ವಿಭುಃ।
ರತ್ನಾನಿ ಚ ಪರಾರ್ಘ್ಯಾಣಿ ರಾಮೇಣ ಸಹ ಕೇಶವಃ ॥47॥
ಎಲೈ ಯುಧಿಷ್ಠಿರನೇ! ಪರಂತಪನೇ! ವಿಶ್ವೇದೇವತೆಗಳ ಮರುತ್‌ಗಳ ಸಾಧ್ಯರ ಅಶ್ವಿನಿಗಳ ಪ್ರಕಾಶಮಾನವಾದ ಸ್ಥಾನಗಳನ್ನು ಅತಿಕ್ರಮಿಸಿ ಪುಣ್ಯತಮವಾದ ಪ್ರದೇಶಗಳ ದೇವಲೋಕಗಳನ್ನು ತಲುಪಿ ಅಲ್ಲಿ ಅರಿಂದಮನಾದ ಕೃಷ್ಣನು ಇಂದ್ರನ ಮನೆಯನ್ನು ತಲುಪಿ ಗರುಡನಿಂದ ಇಳಿದು ಎಲ್ಲಾ ದೇವತೆಗಳ ಜೊತೆಯಲ್ಲಿಯೂ ಬ್ರಹ್ಮ ದಕ್ಷಪ್ರಜಾಪತಿ ಮೊದಲಾದವರ ಜೊತೆಯಲ್ಲಿಯೂ ಅದಿತಿಗೆ ನಮಸ್ಕರಿಸಿ ವಿಭುವಾದ ಅವನು ಆಗ ಅದಿತಿಗೆ ದಿವ್ಯವಾದ ಕುಂಡಲಗಳನ್ನು ಕೊಟ್ಟನು. ಬಲರಾಮನ ಜೊತೆಯಲ್ಲಿ ಕೇಶವನು ಅನರ್ಘ್ಯವಾದ ರತ್ನಗಳನ್ನು ಅದಿತಿಗೆ ಕೊಟ್ಟನು.
ಪ್ರತಿಗೃಹ್ಯ ಚ ತತ್ ಸರ್ವಮದಿತಿರ್ವಾಸವಾನುಜಮ್।
ಪೂಜಯಾಮಾಸ ದಾಶಾರ್ಹಂ ರಾಮಂ ಚ ವಿಗತಜ್ವರಾ ॥48॥
ಅದಿತಿಯು ಅವೆಲ್ಲವನ್ನೂ ಸ್ವೀಕರಿಸಿ ಮನಸ್ಸಿನ ಶೋಕವನ್ನು ತೊರೆದು ವಾಸವಾನುಜನಾದ ದಾಶಾರ್ಹನಾದ ಕೃಷ್ಣನನ್ನು ಮತ್ತು ರಾಮನನ್ನು ಸತ್ಕರಿಸಿದಳು.
ಶಚೀ ಮಹೇಂದ್ರಮಹಿಷೀ ಕೃಷ್ಣಸ್ಯ ಮಹಿಷೀಂ ತದಾ।
ಸತ್ಯಭಾಮಾಂ ತು ಸಂಗೃಹ್ಯ ಅದಿತ್ಯೈ ವೈ ನ್ಯವೇದಯತ್ ॥49॥
ಮಹೇಂದ್ರನ ರಾಣಿಯಾದ ಶಚೀದೇವಿಯು ಕೃಷ್ಣನ ರಾಣಿಯಾದ ಸತ್ಯಭಾಮೆಯನ್ನು ಕರೆದುಕೊಂಡು ಹೋಗಿ ಅದಿತಿಗೆ

ನಿವೇದಿಸಿದಳು.
ಸಾ ತಸ್ಯಾಃ ಸತ್ಯಭಾಮಾಯಾಃ ಕೃಷ್ಣಪ್ರಿಯಚಿಕೀರ್ಷಯಾ |
ವರಂ ಪ್ರಾದಾದ್ ದೇವಮಾತಾ ಸತ್ಯಾಯೈ ವಿಗತಜ್ವರಾ ||50||
ಕೃಷ್ಣನಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ದೇವಮಾತೆಯಾದ ಅದಿತಿಯು ಮನಸ್ಸಿನ ದುಗುಡಗಳನ್ನು ತೊರೆದು ಸತ್ಯಭಾಮೆಗೆ ವರವನ್ನು ನೀಡಿದಳು.
ಜರಾಂ ನ ಯಾಸ್ಯಸಿ ಶುಭೇ ಯಾವದ್ವೈ ಕೃಷ್ಣಮಾನುಷಮ್ |
ಸರ್ವಗಂಧಗುಣೋಪೇತಾ ಭವಿಷ್ಯಸಿ ವರಾನನೇ ||51||
ಶೋಭನಳಾದವಳೇ! ಕೃಷ್ಣನು ಭೂಮಿಯಲ್ಲಿರುವವರೆಗೆ ನೀನು ಮುಪ್ಪನ್ನು ಹೊಂದುವುದಿಲ್ಲ. ಸುಂದರಮುಖಿಯೇ, ನೀನು ಶ್ರೇಷ್ಠವಾದ ಗಂಧಗಳಿಂದ ಕೂಡಿರುವಳಾಗುತ್ತೀಯೆ.
ಭೀಷ್ಮಃ
ವಿಹೃತ್ಯ ಸತ್ಯಭಾಮಾ ವೈ ಪೌಲೋಮ್ಯಾ ಚ ಸುಮಧ್ಯಮಾ |
ಶಚ್ಯಾ ಚ ಸಮನುಜ್ಞಾತಾ ಯಯೌ ಕೃಷ್ಣನಿವೇಶನಮ್ ||52||
ಸುಂದರಿಯಾದ ಸತ್ಯಭಾಮೆಯು ಶಚೀದೇವಿಯ ಜೊತೆಯಲ್ಲಿ ವಿಹರಿಸಿ ಶಚಿಯ ಅನುಮತಿಯನ್ನು ಪಡೆದು ಕೃಷ್ಣನ ಮಂದಿರಕ್ಕೆ ಹಿಂದಿರುಗಿದಳು.
ಸಂಪೂಜ್ಯಮಾನಸ್ತ್ರಿದಶೈರ್ಮಹರ್ಷಿಗಣಸೇವಿತಃ |
ದ್ವಾರಕಾಂ ಪ್ರಯಯೌ ಕೃಷ್ಣೋ ದೇವಲೋಕಾದರಿಂದಮಃ ||53||
ಅರಿಂದಮನಾದ ಕೃಷ್ಣನು ದೇವತೆಗಳಿಂದ ಪೂಜಿತನಾಗಿ ಮಹರ್ಷಿಗಣ ಸೇವಿತನಾಗಿ ದೇವಲೋಕದಿಂದ ಹೊರಟು ಪುನಃ ದ್ವಾರಕೆಗೆ ಬಂದನು.
ಸೋಽವಪದ್ಯ ಮಹಾಬಾಹುರ್ದೀರ್ಘಮಧ್ವಾನಮಚ್ಯುತಃ |
ವರ್ಧಮಾನಪುರದ್ವಾರಮಾಸಸಾದ ಪುರೋತ್ತಮಮ್ ||54||
ಮಹಾಬಾಹುವಾದ ಅಚ್ಯುತನು ದೀರ್ಘವಾದ ಮಾರ್ಗವನ್ನು ಕ್ರಮಿಸಿ ಪುರಶ್ರೇಷ್ಠವಾದ ದ್ವಾರಕಾ ಪಟ್ಟಣದ ವರ್ಧಮಾನಪುರ ದ್ವಾರವನ್ನು (ಕೋಟೆಯ ಹೆಬ್ಬಾಗಿಲನ್ನು) ತಲುಪಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚಾಶೋಧ್ಯಾಯಃ ||
|| ಅರ್ಘಾಭಿಹರಣಪರ್ವಣಿ ಏಕೋನವಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತನೆಯ ಅಧ್ಯಾಯವು ಮುಗಿಯಿತು.

ಐವತ್ತೊಂದನೆಯ ಅಧ್ಯಾಯ
(ದ್ವಾರಕೆಯಲ್ಲಿ ರುಗ್ಮಿಣ್ಯಾದಿಗಳ ಪ್ರಾಸಾದಗಳ ವರ್ಣನೆ)
ಭೀಷ್ಮಃ
ತಾಂ ಪುರೀಂ ದ್ವಾರಕಾಂ ದೃಷ್ಟ್ವಾ ವಿಭುರ್ನಾರಾಯಣೋ ಹರಿಃ |
ಹೃಷ್ಟಃ ಸರ್ವಾರ್ಥಸಂಪನ್ನಃ ಪ್ರವೇಷ್ಟುಮುಪಚಕ್ರಮೇ ||1||
ವಿಭುವಾದ ನಾರಾಯಣನಾದ ಹರಿಯು ಸರ್ವ ಸಂಪದ್ಯುಕ್ತವಾದ ಆ ದ್ವಾರಕ ಪಟ್ಟಣವನ್ನು ನೋಡಿ ಸಂತೋಷದಿಂದ ಪ್ರವೇಶಿಸಲು ಉದ್ಯುಕ್ತನಾದನು.
ಸೋಽಪಶ್ಯದ್ ವೃಕ್ಷಷಂಡಾಂಶ್ಚ ರಮ್ಯಾನಾರಾಮಜಾನ್ ಬಹೂನ್ |
ಸಮಂತತೋ ದ್ವಾರವತ್ಯಾಂ ನಾನಾಪುಷ್ಪಫಲಾಶ್ರಿತಾನ್ ||2||
ಅವನು ದ್ವಾರಾವತಿಯ ಸುತ್ತಲೂ ಸುಂದರವಾದ ಉದ್ಯಾನಗಳಲ್ಲಿ ಬೆಳೆದಿರುವ ಫಲಪುಷ್ಪಭರಿತವಾದ ಅನೇಕ ವೃಕ್ಷಗಳನ್ನು ನೋಡಿದನು.
ಅರ್ಕಚಂದ್ರಪ್ರತೀಕಾಶೈರ್ಮೇರುಕೂಟನಿಭೈರ್ಗೃಹೈಃ |
ದ್ವಾರಕಾಮಾಚಿತಾಂ ರಮ್ಯೈಃ ಸುಕೃತಾಂ ವಿಶ್ವಕರ್ಮಣಾ ||3||
ಪದ್ಮಷಂಡಾಕುಲಾಭಿಶ್ಚ ಹಂಸಸೇವಿತವಾರಿಭಿಃ |
ಗಂಗಾಸಿಂಧುಪ್ರಕಾಶಾಭಿಃ ಪರಿಖಾಭಿರಲಂಕೃತಾಮ್ ||4||
ಪ್ರಾಕಾರೇಣಾಭ್ರವರ್ಣೇನ ಪಾಂಡರೇಣ ವಿರಾಜಿತಾ |
ದಿವೋ ನ್ಮೂರ್ಧ್ನಿ ನಿವಿಷ್ಟೇನ ದ್ಯೌರಿವಾಭ್ರಪರಿಚ್ಛದಾ ||5||
ನಂದನಪ್ರತಿಮೈಶ್ಚಾಪಿ ಮಿಶ್ರಕಪ್ರತಿಮೈರ್ವನೈಃ |
ತತ್ರಾಸೌ ವಿಹಿತಾ ಸಾಕ್ಷಾನ್ನಗರೀ ವಿಶ್ವಕರ್ಮಣಾ ||6||
ಕಾಂಚನೈರ್ಮಣಿಸೋಪಾನೈರುಪೇತಾ ಜನಹರ್ಷಿಣೀ |
ಗೀತಘೋಷಮಹಾಘೋಷೈಃ ಪ್ರಾಸಾದಗೃಹಚತ್ವರೈಃ ||7||
ವಿಶ್ವಕರ್ಮನಿಂದ ರಚಿಸಲ್ಪಟ್ಟ ಸೂರ್ಯಚಂದ್ರರ ಪ್ರಕಾಶವುಳ್ಳ, ಮೇರು ಶೃಂಗಗಳಂತೆ ಶೋಭಿಸುತ್ತಿರುವ ಗೃಹಗಳಿಂದ ಸುಂದರವಾಗಿ ಪೂರ್ಣವಾಗಿ ತುಂಬಲ್ಪಟ್ಟ, ಆ ದ್ವಾರಕಾಪಟ್ಟಣವನ್ನು ಪದ್ಮ ರಥಗಳಿಂದ ತುಂಬಿದ ಹಂಸ ಸೇವಿತವಾದ ಜಲವುಳ್ಳ ಗಂಗೆಯಂತೆ ಸಿಂಧುವಿನಂತೆ ಶೋಭಿಸುವ, ಕಂದರಗಳಿಂದ ಅಲಂಕೃತವಾದಂತಹ ಶ್ವೇತವರ್ಣದ ಮೋಡದಂತೆ ಪ್ರಕಾಶಿಸುವ ಕೋಟೆಯ

ಗೋಡೆಯಿಂದ ಕೂಡಿದಂತಹ, ತನ್ನ ಮೇಲೆ ಇರುವ ಬಿಳಿಯ ಮೋಡದಿಂದ ಸ್ವರ್ಗಲೋಕದ ಮೇಲಿಟ್ಟ ಬಿಳಿಯ ಮೋಡದ ಹೊದಿಕೆಯಂತಹದನ್ನುಳ್ಳ, ನಂದನವನದಂತಿರುವ ಅನೇಕ ವೃಕ್ಷಗಳ ಸಮೂಹದಿಂದ ಸುತ್ತುವರಿಯಲ್ಪಟ್ಟ, ಸುವರ್ಣಮಯವಾದ ಮತ್ತು ಮಣಿಮಯವಾದ ಸೋಪಾನಗಳಿಂದ ಕೂಡಿದಂತಹ, ಪ್ರಾಸಾದಗಳು ಗೃಹಗಳು ಮತ್ತು ಚತ್ವರಗಳಿಂದ ಕೂಡಿದಂತಹ ಸಂಗೀತಘೋಷದಿಂದಲೂ ವಾದ್ಯಘೋಷದಿಂದಲೂ ಕೂಡಿದ್ದಂತಹ ಸಕಲಜನ- ಮನೋಹರ್ಷದಾಯಕವಾದ ಆ ನಗರಿಯು ವಿಶ್ವಕರ್ಮನಿಂದ ಅಲ್ಲಿ ನಿರ್ಮಿಸಲ್ಪಟ್ಟಿದ್ದಿತು.

ತಸ್ಮಿನ್ ಪುರವರಶ್ರೇಷ್ಠೇ ದಾಶಾರ್ಹಾಣಾಂ ಯಶಸ್ವಿನಾಮ್ |
ವೇಶ್ಮಾನಿ ಜಹೃಷೇ ದೃಷ್ಟ್ವಾ ಭಗವಾನ್ ಪಾಕಶಾಸನಃ ॥8॥

ಪೂಜ್ಯನಾದ ಇಂದ್ರನೂ ಸಹ ಆ ಶ್ರೇಷ್ಠವಾದ ಪಟ್ಟಣದಲ್ಲಿ ಇದ್ದ ಕೀರ್ತಿಶಾಲಿಗಳಾದ ದಾಶಾರ್ಹರ ಗೃಹಗಳನ್ನು ನೋಡಿ ಸಂತೋಷಪಟ್ಟನು.

ಸಮುಚ್ಛ್ರಿತಪತಾಕಾನಿ ಪರಿಪ್ಲವನಿಭಾನಿ ಚ |
ಕಾಂಚನಾಗ್ರಾಣಿ ಭಾಸ್ವಂತಿ ಮೇರುಕೂಟನಿಭಾನಿ ಚ ॥9॥

ಆ ಗೃಹಗಳು ಉನ್ನತವಾದ ಮೋಡದಂತೆ ಶೋಭಿಸುವ ಪತಾಕೆಗಳಿಂದಲೂ ಮೇರುಕೂಟದಂತೆ ಶೋಭಿಸುವ ಎತ್ತರವಾದ ಭಾಗಗಳಿಂದಲೂ ಪ್ರಕಾಶಮಾನವಾಗಿದ್ದವು.

ಸುಧಾಪಾಂಡರಶೃಂಗೈಶ್ಚ ಶಾತಕುಂಭಪರಿಚ್ಛದೈಃ |
ರತ್ನಸಾನುಗುಹಾಶೃಂಗೈಃ ಸರ್ವರತ್ನವಿಭೂಷಿತೈಃ ॥10॥
ಸಹರ್ಮ್ಯೈಃ ಸಾರ್ಧಚಂದ್ರೈಶ್ಚ ಸನಿರ್ಯೂಹೈಃ ಸದಂತುರೈಃ |
ಸಯಂತ್ರಗೃಹಸಂಬಾಧೈಃ ಸಧಾತುಭಿರಿವಾದ್ರಿಭಿಃ ॥11॥
ಮಣಿಕಾಂಚನಭೌಮೈಶ್ಚ ಸುಧಾಮೃಷ್ಟತಳೈಸ್ತಥಾ |
ಜಾಂಬೂನದಮಯೈರ್ದ್ವಾರೈರ್ವೈಡೂರ್ಯವಿಕೃತಾರ್ಗಳೈಃ ॥12॥
ಸರ್ವರ್ತುಸುಖಸಂಸ್ಪರ್ಶೈರ್ಮಹಾರ್ಧನಪರಿಚ್ಛದೈಃ |
ರಮ್ಯಮಾನಗೃಹಶೃಂಗೈರ್ವಿಚಿತ್ರೈರಿವ ಪರ್ವತೈಃ ॥13॥
ಪಂಚವರ್ಣಸುವರ್ಣೈಶ್ಚ ಪುಷ್ಪವೃಷ್ಟಿಸಮಪ್ರಭೈಃ |
ತುಲ್ಯಪರ್ಜನ್ಯನಿರ್ಘೋಷೈರ್ನಾನಾವರ್ಣೈರಿವಾಂಬುದೈಃ ॥14॥
ಮಹೇಂದ್ರಶಿಖರಪ್ರಖ್ಯೈರ್ವಿಹಿತೈರ್ವಿಶ್ವಕರ್ಮಣಾ |
ಆಲಿಖದ್ಭಿರಿವಾಕಾಶಮತಿಚಂದ್ರಾರ್ಕಭಾಸ್ವರೈಃ ॥15॥

ಅಮೃತದಂತೆ ಬಿಳಿಯಾದ ಶೃಂಗಗಳಿಂದಲೂ, ಸುವರ್ಣಮಯವಾದ ಛಾವಣಿಗಳಿಂದಲೂ, ರತ್ನ ಶಿಖರ ಮತ್ತು ಗುಹಾ, ಶೃಂಗಗಳಿಂದಲೂ, ಸರ್ವರತ್ನಗಳಿಂದ ವಿಭೂಷಿತವಾಗಿದ್ದಂತಹ ಅರ್ಧಚಂದ್ರಾಕಾರವಾಗಿ ನಿರ್ಮಿಸಿದ ಅನೇಕ ಅಂತಸ್ತಿನ ಗೃಹಗಳಿಂದಲೂ, ಧೂಪದ ಹೊಗೆಗಳಿಂದಲೂ, ಉನ್ನತವಾದ ಗಜಗಳಿಂದಕೂಡಿದ ಧಾತುವಿಶ್ರಿತವಾದ ಪರ್ವತಗಳಂತೆ ಶೋಭಿಸುವ ಯಂತ್ರಸಹಿತವಾದ ನಿಬಿಡವಾದ ಗೃಹಗಳಿಂದಲೂ, ಮಣಿಗಳು ಸುವರ್ಣ ಮತ್ತು ಭೂಮಿಯ ರತ್ನಗಳಿಂದ ಚೆನ್ನಾಗಿ ಸಾರಿಸಿದ ತಳಪ್ರದೇಶಗಳಿಂದಲೂ, ಸುವರ್ಣಮಯವಾದ ದ್ವಾರಗಳಿಂದಲೂ, ವೈಡೂರ್ಯದಿಂದ ಮಾಡಿದ ಅರ್ಗಲಗಳಿಂದಲೂ, ಎಲ್ಲಾ ಋತುಗಳಲ್ಲಿಯೂ ಸುಖಸ್ಪರ್ಶವನ್ನು ಕೊಡುವ ಅನರ್ಘ್ಯವಾದ ಪರಿಚ್ಛದ ಸಾಮಗ್ರಿಗಳಿಂದಲೂ, ವಿಚಿತ್ರವಾದ ಪರ್ವತಗಳಂತೆ ಕಾಣುವ ಸುಂದರವಾದ ಗೃಹಶೃಂಗಗಳಿಂದಲೂ, ಪುಷ್ಪವೃಷ್ಟಿಗೆ ಸಮಾನವಾದ ಪ್ರಭೆಯುಳ್ಳ ಪಂಚವರ್ಣದ ಸುವರ್ಣಗಳಿಂದಲೂ, ಪರ್ಜನ್ಯ ಘೋಷದಿಂದ ಕೂಡಿದ ನಾನಾವರ್ಣಗಳಿಂದ ಕೂಡಿದ ಮೇಘಗಳಂತೆ ಶೋಭಿಸುವ, ವಿಶ್ವಕರ್ಮನಿರ್ಮಿತವಾದ, ಮಹೇಂದ್ರ ಪರ್ವತದ ಶಿಖರದಂತಿರುವ ಆಕಾಶವನ್ನೇ, ಮುಟ್ಟುವಂತೆ ತೋರುವ, ಸೂರ್ಯ ಚಂದ್ರ ಸಮಾನಕಾಂತಿಯುಳ್ಳ ಗೃಹಗಳಿಂದ, ಆ ಪಟ್ಟಣವು ಪೂರ್ಣವಾಗಿದ್ದಿತು.

ತೈರ್ದಾಶಾರ್ಹಮಹಾಭಾಗೈರ್ಬಭಾಸೇ ಭವನಂ ಹ್ರದೈಃ |
ಚಂಡನಾಗಾಕುಲೈರ್ಘೋರೈರ್ಹ್ರದೈರ್ಭೋಗವತೀ ಯಥಾ ॥16॥

ಮಹಾನುಭಾವರಾದ ದಾಶಾರ್ಹರ ಆ ಭವನಗಳಿಗೆ ಸಮೀಪದಲ್ಲಿ ಇದ್ದ ಸರೋವರಗಳು ಅನೇಕ ಸರ್ಪಗಳಿಂದ ತುಂಬಿದ್ದು ಸರ್ಪಗಳಿಂದ ತುಂಬಿದ್ದ ಘೋರವಾದ ಭೋಗವತಿಪಟ್ಟಣದಂತೆ ಇದ್ದಿತು.

ಕೃಷ್ಣಧ್ವಜೋಪವಾಹ್ಯೈಶ್ಚ ದಾಶಾರ್ಹಾಯುಧರೋಹಿತೈಃ |
ವೃಷ್ಣಿಮತ್ತಮಯೂರೈಶ್ಚ ಸ್ತ್ರೀಸಹಸ್ರಪ್ರಜಾಕುಲೈಃ ॥17॥
ವಾಸುದೇವೇಂದ್ರಪರ್ಜನ್ಯೈರ್ಗೃಹಮೇಧೈರಲಂಕೃತಾ |
ದದೃಶೇ ದ್ವಾರಕಾऽತೀವ ಮೇಘೈರ್ದ್ಯೌರಿವ ಸಂವೃತಾ ॥18॥

ಕೃಷ್ಣನೆಂಬ ಉನ್ನತ ಧ್ವಜವನ್ನು ಹೊತ್ತ ಆನೆಗಳಿಂದಲೂ, ದಾಶಾರ್ಹರೆಂಬ ಆಯುಧಧಾರಿಗಳಾದ ಅಶ್ವಗಳಿಂದಲೂ, ವೃಷ್ಣಿಗಳೆಂಬ ಮತ್ತಮಯೂರಗಳಿಂದಲೂ ಸ್ತ್ರೀಸಹಸ್ರಪ್ರಜೆಗಳಿಂದಲೂ, ವಾಸುದೇವ ಇಂದ್ರ ಪರ್ಜನ್ಯರ ಅಲಂಕೃತವಾದ ಗೃಹ ವಸ್ತುಗಳಿಂದಲೂ, ಆ ದ್ವಾರಕಾ ಪಟ್ಟಣವು ಮೇಘಗಳಿಂದ ಆಚ್ಛಾದಿತವಾದ ಆಕಾಶದಂತೆ ಶೋಭಿಸಿತು.

ಸಾಕ್ಷಾದ್ಭಗವತೋ ವೇಶ್ಮ ವಿಹಿತಂ ವಿಶ್ವಕರ್ಮಣಾ |
ದದೃಶುರ್ದೇವದೇವಸ್ಯ ಚತುರ್ಯೋಜನಮಾಯತಮ್ ॥19॥

ವಿಶ್ವಕರ್ಮನಿಂದ ಸಾಕ್ಷಾತ್ ನಿರ್ಮಿಸಲ್ಪಟ್ಟ ಚತುರ್ಯೋಜನ ವಿಸ್ತಾರವಾದ ದೇವದೇವನಾದ ಭಗವಂತನ ಗೃಹವನ್ನು ಅಲ್ಲಿ ನೋಡಿದರು.

ತಾವದೇವ ಚ ವಿಸ್ತೀರ್ಣಮಪ್ರಮೇಯಂ ಮಹಾಧನೈಃ |
ಪ್ರಾಸಾದವರಸಂಪನ್ನಂ ಯುಕ್ತಂ ಜಗತಿಪರ್ವತೈಃ ॥20॥
ಯಂ ಚಕಾರ ಮಹಾಬಾಹುಸ್ತ್ವಷ್ಟಾ ವಾಸವಚೋದಿತಃ |
ಪ್ರಾಸಾದಂ ಹೇಮನಾಭಸ್ಯ ಸರ್ವತೋ ಯೋಜನಾಯತಮ್ ॥21॥
ಮೇರೋರಿವ ಗಿರೇಃ ಶೃಂಗಮುಚ್ಛ್ರಿತಂ ಕಾಂಚನಾಯುತಮ್ |
ರುಗ್ಮಿಣ್ಯಾಃ ಪ್ರವರೋ ವಾಸೋ ನಿರ್ಮಿತಃ ಸುಮಹಾತ್ಮನಾ ॥22॥
ಸತ್ಯಭಾಮಾ ಪುನರ್ವೇಶ್ಮ ಸದಾ ವಸತಿ ಪಾಂಡರಮ್ |
ವಿಚಿತ್ರಮಣಿಸೋಪಾನಂ ಯಂ ವಿದುಃ ಶೀತವಾನಿತಿ ॥23॥
ವಿಮಲಾದಿತ್ಯವರ್ಣಾಭಿಃ ಪತಾಕಾಭಿರಲಂಕೃತಮ್ |
ವ್ಯಕ್ತಬದ್ಧಂ ವನೋದ್ದೇಶೈಃ ಚತುರ್ದಿಶಿ ಮಹಾಧ್ವಜಮ್ ॥24॥
ಅಷ್ಟೇ ವಿಸ್ತಾರವಾದ, ಮಹಾಧನಗಳಿಂದ ಕೂಡಿ ತಿಳಿಯಲು ಅಸಾಧ್ಯವಾದ, ಮಣಿಮಯಪರ್ವತಗಳಿಂದ ಯುಕ್ತವಾದ ಅನೇಕ ಪ್ರಾಸಾದಗಳಿಂದ ಕೂಡಿದ, ಯಾವ ಪ್ರಾಸಾದವನ್ನು ಇಂದ್ರನ ಅಪ್ಪಣೆಯಂತೆ ಮಹಾಬಾಹುವಾದ ತ್ವಷ್ಟ್ರುವು ತಾನೇ ನಿರ್ಮಿಸಿದನೋ, ಅಂತಹ ಪದ್ಮನಾಭನ ಮನೆಯ ಸುತ್ತಲೂ ಸುವರ್ಣಮಯವಾದ ಮೇರು(ಸಮೀಪದಲ್ಲಿ) ಪರ್ವತದಂತೆ ಉನ್ನತವಾದ ಸುವರ್ಣಮಯವಾದ ರುಗ್ಮಿಣಿಯ ಶ್ರೇಷ್ಠವಾದ ವಾಸಸ್ಥಾನವು ಅದೇ ಮಹಾತ್ಮನಿಂದ ನಿರ್ಮಿಸಲ್ಪಟ್ಟಿತು. ಸತ್ಯಭಾಮೆಯಾದರೂ ಶೀತವಾನ್ ಎಂಬ ಹೆಸರಿನಿಂದ ಪ್ರಖ್ಯಾತವಾದ ಶ್ವೇತವರ್ಣದಿಂದ ಕೂಡಿದ, ವಿಚಿತ್ರಮಣಿಮಯವಾದ ಸೋಪಾನವನ್ನು ಹೊಂದಿದ, ಸ್ವಚ್ಛವಾದ ಸೂರ್ಯನ ವರ್ಣಗಳಂತೆ ಶೋಭಿಸುವ ಪತಾಕೆಗಳಿಂದ ಅಲಂಕೃತವಾದ, ನಾಲ್ಕು ದಿಕ್ಕುಗಳಲ್ಲಿಯೂ ಸ್ಪಷ್ಟವಾದ ವನಗಳಿಂದ ಕೂಡಿರುವ, ಮಹಾಧ್ವಜವುಳ್ಳ ಗೃಹದಲ್ಲಿ ವಾಸಿಸುತ್ತಾಳೆ.
ಸ ಚ ಪ್ರಾಸಾದಮುಖ್ಯೋಽತ್ರ ಜಾಂಬವತ್ಯಾ ವಿಭೂಷಿತಃ |
ಪ್ರಭಯಾ ಭೂಷಣೈಶ್ಚಿತ್ರೈಃ ತ್ರೈಲೋಕ್ಯಮಿವ ಭಾಸಯನ್ ॥25॥
ಜಾಂಬವತಿಯ ಶ್ರೇಷ್ಠವಾದ ಪ್ರಾಸಾದವು ಪ್ರಭೆಯಿಂದಲೂ ವಿಚಿತ್ರವಾದ ಭೂಷಣಗಳಿಂದಲೂ ವಿಭೂಷಿತವಾಗಿ ಮೂರು ಲೋಕಗಳನ್ನೂ ಪ್ರಕಾಶಿಸುವಂತೆ ಹೊಳೆಯುತ್ತಿದ್ದಿತು.
ಯಸ್ತು ಪಾಂಡರವರ್ಣಾಭಸ್ತಯೋರಂತರಮಾಶ್ರಿತಃ |
ವಿಶ್ವಕರ್ಮಾಕರೋದೇನಂ ಕೈಲಾಸಶಿಖರೋಪಮಮ್ ॥26॥
ಜಾಂಬೂನದಪ್ರದೀಪ್ತಾಗ್ರಃ ಪ್ರದೀಪ್ತಜ್ವಲನೋಪಮಃ |
ಸಾಗರಪ್ರತಿಮೋಽತಿಷ್ಠನ್ಮೇರುರಿತ್ಯಭಿವಿಶ್ರುತಃ ॥27॥
ತಸ್ಮಿನ್ ಗಾಂಧಾರರಾಜಸ್ಯ ದುಹಿತಾ ಕುಲಪಾವನೀ |
ಸುಕೇಶೀ ನಾಮ ವಿಖ್ಯಾತಾ ಕೇಶವೇನ ನಿವೇಶಿತಾ ॥28॥
ಅವೆರಡರ ಮಧ್ಯದಲ್ಲಿರುವ, ಕೈಲಾಸಶಿಖರದಂತಿರುವ, ಶ್ವೇತವರ್ಣದಿಂದ ಕೂಡಿದ, ಸುವರ್ಣಮಯವಾದ ಅಗ್ರಭಾಗವನ್ನು ಹೊಂದಿರುವ, ಜ್ವಲಿಸುವ ಅಗ್ನಿಯ ಕಾಂತಿಯನ್ನು ಹೊಂದಿರುವ, ಸಾಗರದಂತೆ ವಿಸ್ತಾರವಾದ ಮೇರು, ಎಂಬ ಹೆಸರಿನಿಂದ ಪ್ರಖ್ಯಾತವಾದ, ವಿಶ್ವಕರ್ಮನಿಂದ ರಚಿತವಾದ ಗೃಹವು ಯಾವುದು ಇದೆಯೋ ಅದರಲ್ಲಿ ಕೇಶವನು ಕುಲಪಾವನೆಯಾದ ಗಂಧಾರರಾಜನ ಮಗಳಾದ ಸುಕೇಶೀ ಎಂಬ ಹೆಸರಿನಿಂದ ಪ್ರಖ್ಯಾತಳಾದ ತನ್ನ ಪತ್ನಿಯನ್ನು ಇರಿಸಿದ್ದನು.
ಪದ್ಮಕೂಟ ಇತಿ ಖ್ಯಾತಃ ಪದ್ಮವರ್ಣೋ ಮಹಾಪ್ರಭಃ |
ಸುಪ್ರಭಾಯಾ ಮಹಾಬಾಹೋ ಆವಾಸಃ ಪರಮೋಚ್ಛ್ರಿತಃ ॥29॥
ಎಲೈ ಮಹಾಬಾಹುವೇ! ಪದ್ಮಕಾಂತಿಯನ್ನುಳ್ಳ ಮಹಾಪ್ರಭೆಯನ್ನುಳ್ಳ ಅತ್ಯಂತ ಎತ್ತರವಾದ ಪದ್ಮಕೂಟ ಎಂಬ ಹೆಸರಿನ ಗೃಹವು ಸುಪ್ರಭೆಯ ಆವಾಸಸ್ಥಾನವಾಗಿದ್ದಿತು.
ಯಸ್ತು ಪಾಂಡರವರ್ಣಾಭಸ್ತಯೋರಂತರಮಾಶ್ರಿತಃ |
ಯಸ್ತು ಸೂರ್ಯಪ್ರಭೋ ನಾಮ ಪ್ರಾಸಾದವರ ಉಚ್ಯತೇ |
ಲಕ್ಷಣಾಯಾಃ ಕುರುಶ್ರೇಷ್ಠ ಸ ದತ್ತಃ ಶಾರ್ಙ್ಗಧನ್ವನಾ ॥30॥
ಕುರುಶ್ರೇಷ್ಠನೇ! ಅವೆರಡರ ಮಧ್ಯದಲ್ಲಿರುವ ಶ್ವೇತವರ್ಣದಿಂದ ಕೂಡಿದ ಸೂರ್ಯಪ್ರಭಾ ಎಂಬ ಹೆಸರಿನ ಶ್ರೇಷ್ಠವಾದ ಪ್ರಾಸಾದವು ಶಾರ್ಙ್ಗಧಾರಿಯಾದ ಕೃಷ್ಣನಿಂದ ಲಕ್ಷಣೆಗೆ ಕೊಡಲ್ಪಟ್ಟಿತು.
ವೈಡೂರ್ಯವರವರ್ಣಾಭಃ ಪ್ರಾಸಾದೋ ಹರಿತಪ್ರಭಃ |
ಸೇತುಜಾಲಾಭಿರತ್ರೈವ ತತ್ರೈವ ಚ ನಿವೇಶಿತಾ ॥31॥
ಯಂ ವಿದುಃ ಸರ್ವಭೂತಾನಿ ಹರಿರಿತ್ಯೇವ ಭಾರತ |
ಸ ವಾಸೋ ಮಿತ್ರವಿಂದಾಯಾ ದೇವರ್ಷಿಗಣಪೂಜಿತಃ |
ಮಹಿಷ್ಯಾ ವಾಸುದೇವಸ್ಯ ಭೂಷಣಂ ಸರ್ವವೇಶ್ಮನಾಮ್ ॥32॥
ಶ್ರೇಷ್ಠವಾದ ವೈಡೂರ್ಯದ ಕಾಂತಿಯನ್ನು ಹೊಂದಿ ಹರಿತವರ್ಣೋಪೇತವಾಗಿದ್ದ, ಶ್ವೇತವರ್ಣದ ಜಾಲಕಗಳಿಂದ ಸುತ್ತಲೂ ಪೂರ್ಣವಾಗಿದ್ದಾಗಿ ಹರಿ ಎಂಬ ಹೆಸರಿನಿಂದ ಪ್ರಖ್ಯಾತವಾದ, ದೇವರ್ಷಿಪೂಜಿತವಾದ ವಾಸಸ್ಥಾನವನ್ನು ಮಿತ್ರವಿಂದೆಯ ಗೃಹವೆಂದು ಹೇಳುತ್ತಾರೆ. ವಾಸುದೇವನ ಮಹಿಷಿಯಾದ ಮಿತ್ರವಿಂದೆಯ ಆ ಗೃಹವು ಎಲ್ಲಾ ಗೃಹಗಳಿಗೂ ಭೂಷಣಪ್ರಾಯವಾಗಿದೆ.
ಯಸ್ತು ಪ್ರಾಸಾದಮುಖ್ಯೋಽತ್ರ ವಿಹಿತಃ ಸರ್ವಶಿಲ್ಪಿಭಿಃ |
ಅತೀವ ರಮ್ಯಃ ಸೋಽಪ್ಯತ್ರ ಪ್ರಹಸನ್ನಿವ ತಿಷ್ಠತಿ ॥33॥

ಸುದತ್ತಾಯಾಃ ಸುವಾಸಸ್ತು ಪೂಜಿತಃ ಸರ್ವಶಿಲ್ಪಿಭಿಃ |
ಮಹಿಷ್ಯಾ ವಾಸುದೇವಸ್ಯ ಕೇತುಮಾನಿತಿ ವಿಶ್ರುತಃ ॥34॥
ಎಲ್ಲಾ ಶಿಲ್ಪಿಗಳಿಂದಲೂ ನಿರ್ಮಿಸಲ್ಪಟ್ಟ ಅತ್ಯಂತ ಸುಂದರವಾದ ಮಂದಹಾಸವನ್ನು ಬೀರುತ್ತಿರುವಂತೆ ಕಾಣುವ ಶ್ರೇಷ್ಠವಾದ ಪ್ರಾಸಾದವು ಕೇತುಮಾನ್ ಎಂಬ ಹೆಸರಿನಿಂದ ವಿಖ್ಯಾತವಾಗಿದ್ದಾಗಿ ಸರ್ವ ಶಿಲ್ಪಿಗಳಿಂದ ಪೂಜಿತವಾಗಿದ್ದಾಗಿ ವಾಸುದೇವನ ಮಹಿಷಿಯಾದ ಸುದತ್ತೆಯ ಅವಾಸಸ್ಥಾನವಾಗಿದೆ.
ಪ್ರಾಸಾದೋ ವಿರಜೋ ನಾಮ ವಿರಜಸ್ಕೋ ಮಹಾತ್ಮನಃ |
ಉಪಸ್ಥಾನಗೃಹಂ ತಾತ ಕೇಶವಸ್ಯ ಮಹಾತ್ಮನಃ ॥35॥
ಯಸ್ತು ಪ್ರಾಸಾದಮುಖ್ಯೋಽತ್ರ ಯಂ ತ್ವಷ್ಟಾ ವ್ಯದಧಾತ್ ಸ್ವಯಂ |
ಯೋಜನಾಯತವಿಷ್ಕಂಭಂ ಸರ್ವರತ್ನಮಯಂ ವಿಭೋಃ ॥36॥
ತೇಷಾಂ ತು ವಿಹಿತಾಃ ಸರ್ವೇ ರುಗ್ಮದಂಡಾಃ ಪತಾಕಿನಃ |
ಸದನೇ ವಾಸುದೇವಸ್ಯ ಮಾರ್ಗಸಂಜನನಾ ಧ್ವಜಾಃ |
ಘಂಟಾಜಾಲಾನಿ ತತ್ರೈವ ಸರ್ವೇಷಾಂ ಚ ನಿವೇಶಿತಾಃ ॥37॥
ಪ್ರೀತಿಪಾತ್ರನೇ! ವಿರಜಾ ಎಂಬ ಆ ಶ್ರೇಷ್ಠವಾದ ಪ್ರಾಸಾದವನ್ನು ತ್ವಷ್ಟ್ರುವು ಒಂದು ಯೋಜನ ವಿಸ್ತಾರ ಉಳ್ಳದ್ದನ್ನಾಗಿ ಮಾಡಿ ಪ್ರಭುವಿನ ಸಲುವಾಗಿ ಸರ್ವ ರತ್ನ ಮಯವನ್ನಾಗಿ ಮಾಡಿ ತಾನೇ ನಿರ್ಮಿಸಿದನು. ಅದು ಕೃಷ್ಣನ ಪೂಜಾಗೃಹ. ಆ ಎಲ್ಲಾ ಪ್ರಾಸಾದಗಳಲ್ಲಿಯೂ ರುಗ್ಮದಂಡಗಳು ಮತ್ತು ಪತಾಕೆಗಳು ಇದ್ದು ವಾಸುದೇವನ ಗೃಹದ ಮೇಲೆ ಮಾರ್ಗ ಸೂಚಿಯಂತಿರುವ ಧ್ವಜಗಳು ಇವೆ. ಆ ಎಲ್ಲಾ ಪ್ರಾಸಾದಗಳಲ್ಲಿಯೂ ಅನೇಕಾನೇಕ ಘಂಟೆಗಳು ಇಡಲ್ಪಟ್ಟಿವೆ.
ಆಹೃತ್ಯ ಯದುಸಿಂಹೇನ ವೈಜಯಂತೋಽಚಲೋ ಮಹಾನ್ ॥38॥
ಯದುಸಿಂಹನಾದ ಕೃಷ್ಣನು ದೊಡ್ಡದಾದ ವೈಜಯಂತ ಪರ್ವತವನ್ನು ತಂದು ಅಲ್ಲಿ ಇರಿಸಿದ್ದಾನೆ.
ಹಂಸಕೂಟಸ್ಯ ಯಚ್ಛೃಂಗಂ ಇಂದ್ರದ್ಯುಮ್ನಸರೋ ಮಹತ್ |
ಷಷ್ಟಿತಾಳಸಮುತ್ಸೇಧಮರ್ಧಯೋಜನವಿಸ್ತೃತಮ್ ॥39॥
ಸಕಿನ್ನರಮಹಾನಾದಂ ತದಪ್ಯಮಿತತೇಜಸಃ |
ಪಶ್ಯತಾಂ ಸರ್ವಭೂತಾನಾಂ ತ್ರಿಷು ಲೋಕೇಷು ವಿಶ್ರುತಮ್ ॥40॥
ಹಂಸಕೂಡ ಪರ್ವತದ ಅರವತ್ತು ತಾಳ ಎತ್ತರ ಮತ್ತು ಅರ್ಧಯೋಜನ ವಿಸ್ತಾರವಾದ ಶೃಂಗವನ್ನೂ, ಅದರ ಜೊತೆಯಲ್ಲಿರುವ ಕಿನ್ನರರ ಮಹಾನಾದದಿಂದ ತುಂಬಿದ ಇಂದ್ರದ್ಯುಮ್ನ ಸರೋವರವನ್ನೂ ತಂದು ಅಲ್ಲಿ ಸ್ಥಾಪಿಸಿದ್ದಾನೆ. ಮೂರು ಲೋಕದಲ್ಲೂ ವಿಶ್ರುತವಾದ ಅವುಗಳನ್ನು ನೋಡುವ ಜನರಿಗೆ ಅವು ಸಂತೋಷವನ್ನು ಉಂಟುಮಾಡುತ್ತವೆ.
ಆದಿತ್ಯಪಥಗಂ ಯತ್ ತನ್ಮೇರೋಃ ಶಿಖರಮುತ್ತಮಮ್ |
ಜಾಂಬೂನದಮಯಂ ದಿವ್ಯಂ ತ್ರಿಷು ಲೋಕೇಷು ವಿಶ್ರುತಮ್ ॥41॥
ತದಪ್ಯುತ್ಪಾಟ್ಯ ಕೃಷ್ಣೇನ ಸ್ವಂ ನಿವೇಶನಮಾಹೃತಮ್ |
ಭ್ರಾಜಮಾನಂ ಪುರಾ ತತ್ರ ಸರ್ವೌಷಧಿವಿದೀಪಿತಮ್ ॥42॥
ಅದಿತ್ಯಮಾರ್ಗದಲ್ಲಿರುವ ಸುವರ್ಣಮಯವಾದ ದಿವ್ಯವಾದ ಮೂರು ಲೋಕದಲ್ಲೂ ಪ್ರಸಿದ್ಧವಾದ ಮೇರುಪರ್ವತದ ಶಿಖರವನ್ನು ಕಿತ್ತು ಕೃಷ್ಣನು ತನ್ನ ನಿವೇಶನದ ಬಳಿ ಸ್ಥಾಪಿಸಿದ್ದಾನೆ. ಅದು ಮೊದಲು ಮೇರುಪರ್ವತದಲ್ಲಿ ಸರ್ವ ಔಷದಿಗಳಿಂದಲೂ ಪ್ರಕಾಶಮಾನವಾಗಿ ಶೋಭಿಸುತ್ತಿದ್ದಿತು.
ಯಮಿಂದ್ರಭವನಾಚ್ಛೌರಿರಾಜಹಾರ ಪರಂತಪಃ |
ಪಾರಿಜಾತಃ ಸ ತತ್ರೈವ ಕೇಶವೇನ ನಿವೇಶಿತಃ ॥43॥
ಪರಂತಪನಾದ ಶೌರಿಯು ಇಂದ್ರಭವನದಿಂದ ಯಾವ ಪಾರಿಜಾತವೃಕ್ಷವನ್ನು ತಂದನೋ ಅದೂ ಸಹ ಅಲ್ಲಿಯೇ ಇಡಲ್ಪಟ್ಟಿದ್ದಿತು.
ಪಂಚಹಸ್ತಶತೈರ್ಜುಷ್ಟೋ ವಿಮಾನೈಶ್ಚ ಹಿರಣ್ಮಯೈಃ |
ವಿಹಿತಾ ವಾಸುದೇವೇನ ಬ್ರಹ್ಮಸ್ಥಲಮಹಾದ್ರುಮಾಃ॥44॥
ವಾಸುದೇವನು ಐನೂರು ಹಸ್ತ ವಿಸ್ತಾರವಾದ ಸುವರ್ಣಮಯವಾದ ವಿಮಾನಗಳಿಂದ ಶೋಭಿಸುವ ಬ್ರಹ್ಮಸ್ಥಳ ಮಹಾದ್ರುಮಗಳನ್ನು ಅಲ್ಲಿ ಇರಿಸಿದ್ದಾನೆ.
ಸಾಲತಾಲಾಶ್ವಕರ್ಣಾಶ್ಚ ಶತಶಾಖಾಶ್ಚ ರೋಹಿಣಾಃ |
ಭಲ್ಲಾತಕಕಪಿತ್ಥಾಶ್ಚ ಇಂದ್ರವೃಕ್ಷಾಶ್ಚ ಚಂಪಕಾಃ |
ಖರ್ಜೂರಾಮ್ರಾತಕಾಶ್ಚೈವ ಸಮಂತಾತ್ ಪರಿರೋಪಿತಾಃ ॥45॥
ಸಾಲ ತಾಲ ಅಶ್ವಕರ್ಣ ಶತಶಾಖವುಳ್ಳ ವಟವೃಕ್ಷಗಳು. ಭಲ್ಲಾತಕ ಕಪಿತ್ಥ ಇಂದ್ರವೃಕ್ಷ ಚಂಪಕ ಖರ್ಜೂರ ಆಮ್ರಾತಕ ಈ ಎಲ್ಲಾ ವೃಕ್ಷಗಳು ಸುತ್ತಲೂ ನೆಡಲ್ಪಟ್ಟಿವೆ.
ಪದ್ಮಾಕುಲಜಲೋಪೇತಾ ರಕ್ತಸೌಗಂಧಿಕೋತ್ಪಲಾಃ |
ಮಣಿಮೌಕ್ತಾತ್ಮವಾಲೂಕಾಃ ಪುಷ್ಕರಿಣ್ಯಃ ಸರಾಂಸಿ ಚ ॥46॥
ಅಲ್ಲಿನ ಸರೋವರಗಳೆಲ್ಲವೂ ಪದ್ಮಗಳಿಂದ ಅಲುಗಾಡುವ ನೀರಿನಿಂದ ಕೂಡಿದ್ದು ರಕ್ತಸೌಂಗಧಿಕ ಮತ್ತು ಉತ್ಪಲಗಳಿಂದ ಕೂಡಿದ್ದು ಮಣಿಮಯವಾದ ಮತ್ತು ಮುಕ್ತಮಯವಾದ ಮರಳುಗಳನ್ನು ಹೊಂದಿರುವವುಗಳಾಗಿವೆ.
ಯೇ ಚ ಹೈಮವತಾ ವೃಕ್ಷಾ ಯೇ ಚ ನಂದನಜಾಸ್ತಥಾ |
ಆಹೃತ್ಯ ಯದುಸಿಂಹೇನ ತೇಪಿ ತತ್ರ ನಿವೇಶಿತಾಃ ॥47॥

ಯದುಸಿಂಹನಾದ ಕೃಷ್ಣನು ಹಿಮಾಲಯಪರ್ವತದ ವೃಕ್ಷಗಳನ್ನೂ ನಂದನವನದ ವೃಕ್ಷಗಳನ್ನೂ ತಂದು ಅಲ್ಲಿ ನೆಟ್ಟಿದ್ದಾನೆ.
ರಕ್ತಪೀತಾರುಣಪ್ರಖ್ಯಾಃ ಸಿತಪುಷ್ಪಾಶ್ಚ ಪಾದಪಾಃ |
ಸರ್ವರ್ತುಫಲಪೂರ್ಣಾಸ್ತೇ ತೇನ ಕಾನನಸಿಂಧುಷು ||48||
ಸಹಸ್ರಪತ್ರಪದ್ಮಾಕ್ಷಾ ಮಂದಾರಾಶ್ಚ ಸಹಸ್ರಶಃ |
ಅಶೋಕಾಃ ಕರ್ಣಿಕಾರಾಶ್ಚ ತಿಲಕಾ ನಾಗಮಲ್ಲಿಕಾಃ ||49||
ಕುರವಾ ನಾಗಪುಷ್ಪಾಶ್ಚ ಚಂಪಕಾಸ್ತೃಣಗುಲ್ಮಕಾಃ |
ಸಪ್ತಪರ್ಣಾಃ ಕದಂಬಾಶ್ಚ ನೀಪಾಃ ಕುರವಕಾಸ್ತಥಾ ||50||
ಕೇತಕಾಃ ಕೇಸರಾಶ್ಚೈವ ಹಿಂತಾಳತಳತಾಳಕಾಃ |
ತಾಳಾಃ ಪ್ರಿಯಂಗುವಕುಳಾಃ ಪಿಂಡಿಕಾ ಬೀಜಪೂರಕಾಃ ||51||
ದ್ರಾಕ್ಷಾಮಲಕಖರ್ಜೂರಾ ಮೃದ್ವೀಕಾ ಜಂಬುಕಾಸ್ತಥಾ |
ಆಮ್ರಾಃ ಪನಸವೃಕ್ಷಾಶ್ಚ ಅಂಕೋಲಾಸ್ತಿಲತಿಂದುಕಾಃ ||52||
ಲಿಕುಚಾಮ್ರಾತಕಾಶ್ಚೈವ ಕ್ಷೀರಿಕಾ ಕಂಟಕೀ ತಥಾ |
ನಾಲಿಕೇರೇಂಗುದಾಶ್ಚೈವ ಉಕೆಂತ್ರೇಶಕವನಾನಿ ಚ |
ವನಾನಿ ಚ ಕದಲ್ಯಾಶ್ಚ ಜಾತಿಮಲ್ಲಿಕಪಾಟಲಾಃ ||53||
ಭಾಲ್ಲಾತಕಕಪಿತ್ಥಾಶ್ಚ ತೈತಿಲಾ ಬಂಧುಜೀವಿಕಾಃ |
ಪ್ರಿಯಂಗ್ವಶೋಕಕಾಶ್ಮರ್ಯಃ ಪ್ರಾಚೀನಾಶ್ಚೈವ ಸರ್ವಶಃ ||54||
ಪ್ರಿಯಂಗುಬದರೀಭಿಶ್ಚ ಯವೈಃ ಸ್ಪಂದನಚಂದನ್ಯೈಃ |
ಶಮೀಬಿಲ್ವಪಲಾಶೈಶ್ಚ ಪಾಟಲಾವಟಪಿಪ್ಪಲೈಃ | ||55||
ಉದುಂಬರೈಶ್ಚ ದ್ವಿದಲೈಃ ಪಾಲಾಂಗೈಃ ಪಾರಿಭದ್ರಕೈಃ |
ಇಂದ್ರವೃಕ್ಷಾರ್ಜುನೈಶ್ಚೈವ ಭಲ್ಲರೈರಶ್ವಸಾಹ್ವಯೈಃ ||56||
ಸರ್ಜೈಸ್ತಾಂಬೂಲವಲ್ಲೀಭಿರ್ಲವಂಗೈಃ ಕ್ರಮುಕೈಸ್ತಥಾ |
ವಂಶೈಶ್ಚ ವಿವಿಧೈಸ್ತತ್ರ ಸಮಂತಾತ್ ಪರಿರೋಪಿತೈಃ ||57||
ಯೇ ಚ ನಂದನಜಾ ವೃಕ್ಷಾ ಯೇ ಚ ಚೈತ್ರರಥೇ ವನೇ |
ಸರ್ವೇ ತೇ ಯದುನಾಥೇನ ಸಮಂತಾತ್ ಪರಿರೋಪಿತಾಃ ||58||
ಕೆಂಪು ಬಿಳಿ ಮತ್ತು ಅರುಣ ಬಣ್ಣಗಳಿಂದ ಕೂಡಿದ ಬಿಳಿಯ ಪುಷ್ಪಗಳಿಂದಲೂ ಎಲ್ಲಾ ಋತುಗಳಲ್ಲಿ ಬಿಡುವ ಫಲಗಳಿಂದಲೂ ಪೂರ್ಣವಾದ, ಕಾನನದಲ್ಲಿಯೂ ಮತ್ತು ನದೀತೀರಗಳಲ್ಲಿಯೂ ಬೆಳೆಯುವ, ಮರಗಳು ಸಹಸ್ರಪತ್ರ, ಪದ್ಮಾಕ್ಷ ಸಹಸ್ರಾರು ಮಂದಾರವೃಕ್ಷಗಳು ಅಶೋಕ ಕರ್ಣಿಕಾರ ತಿಲಕ ನಾಗಮಲ್ಲಿಕಾ ಕುರವ ನಾಗಪುಷ್ಪ ಚಂಪಕ ತೃಣಗುಲ್ಮಕ ಸಪ್ತವರ್ಣ ಕದಂಬ ನೀಪ ಕುರವಕ ಕೇತನ ಕೇಸರ ಹಿಂತಾಳ ತಳತಾಳ ತಾಳ ಪ್ರಿಯಂಗು ಬಕುಳಾ ಪಿಂಡಿಕಾ ಬೀಜಪೂರಕ ದ್ರಾಕ್ಷಾ ಆಮಲಕ ಖರ್ಜೂರ ಮೃದ್ವೀಕ ಜಂಬುಕ, ಆಮ್ರ ಪನಸ ಅಂಕೋಲ ತಿಲತಿಂದುಕ ಲಿಕುಚ ಆಮ್ರಾತಕ ಕ್ಷೀರಿಕ ಕಂಟಲಿ ನಾರೀಕೇಲ ಇಂಬುದ ಉತ್ಕ್ರೋಶಕ ಇವುಗಳಿಂದ ಕೂಡಿದ ಅನೇಕ ಒಳ್ಳೆಯ ವನಗಳು ಅಲ್ಲಿವೆ. ಜಾತಿ ಮಲ್ಲಿಕಾ ಪಾಟಲ ಮೊದಲಾದ ಪುಷ್ಪ ವೃಕ್ಷಗಳು ಭಲ್ಲಾತಕ ಕಪಿತ್ಥ ತೈತಿ ಬಂಧುಜೀವಿಕಾ ಪ್ರಿಯಂಗು ಅಶೋಕ ಕಾಶ್ಮರ್ಯ ಈ ಎಲ್ಲಾ ವೃಕ್ಷಗಳೂ ಬದರಿ ಯವ ಚಂದನ ಸ್ಪಂದನ ಶಮೀ ಬಿಲ್ವ ಪಲಾಶ ಪಾಟಲ ವಟ ಪಿಪ್ಪಲ ಉದುಂಬರ ದ್ವಿದಳ ಪಾಲಾಂಗ ಪಾರಿಭದ್ರಕ ಇಂದ್ರವೃಕ್ಷ ಅರ್ಜುನ ಭಲ್ಲರ ಅಶ್ವವೃಕ್ಷ ಸರ್ಜ ತಾಂಬೂಲಲತೆಗಳು, ಲವಂಗ ಅಡಿಕೆಮರಗಳು ಬಿದಿರು ದ್ವಿದ ಈ ಮರಗಳು ಎಲ್ಲಾ ಕಡೆಯಲ್ಲಿಯೂ ನೆಡಲ್ಪಟ್ಟ ಆ ಪಟ್ಟಣವು ಪೂರ್ಣವಾಗಿದೆ. ನಂದನವನದ ವೃಕ್ಷಗಳೂ ಚೈತ್ರರಥದ ವನದ ವೃಕ್ಷಗಳೂ ಕೃಷ್ಣನಿಂದ ತಂದು ಅಲ್ಲಿ ನೆಡಲ್ಪಟ್ಟಿವೆ.
ಕುಮುದೋತ್ಪಲಪೂರ್ಣಾಶ್ಚ ವಾಪ್ಯಃ ಕೂಪಾಃ ಸಹಸ್ರಶಃ |
ಸಮಾಕುಲಮಹಾವಾಪ್ಯಃ ಪೀತಲೋಹಿತಾವಾಲುಕಾಃ ||59||
ಅಲ್ಲಿ ಸಹಸ್ರಾರು ಸಂಖ್ಯೆಯಲ್ಲಿರುವ ವಾಪಿಗಳು ಮತ್ತು ಕೂಪಗಳು ಕುಮುದ ಮತ್ತು ಉತ್ಪಲ ಪುಷ್ಪಗಳಿಂದ ಪೂರ್ಣವಾಗಿದೆ. ಅಲ್ಲಿ ಅನೇಕ ಮಹಾವಾಪಿಗಳು ಇವೆ. ಅವು ಹಳದಿಯ ಮತ್ತು ಕೆಂಪು ಮರಳುಗಳಿಂದ ಕೂಡಿವೆ.
ತಸ್ಮಿನ್ ಗೃಹವನೇ ನದ್ಯಃ ಪ್ರಸನ್ನಸಲಿಲಾಶಯಾಃ |
ಫುಲ್ಲೋತ್ಪಲಜಲೋಪೇತಾ ನಾನಾದ್ರುಮಸಮಾಕುಲಾಃ ||60||
ಗೃಹಕ್ಕೆ ಸೇರಿದ ಆ ವನಗಳಲ್ಲಿ ಪ್ರಸನ್ನವಾದ ಸಲಿಲವಿರುವ ನದಿಗಳು ಅರಳಿದ ಉತ್ಪಲದ ಸುಗಂಧದ ಜಲವನ್ನು ಹೊತ್ತು ನಾನಾ ದ್ರುಮಗಳಿಂದ ನಿಬಿಡವಾದ ಪ್ರದೇಶಗಳಲ್ಲಿ ಹರಿಯುತ್ತವೆ.
ತಸ್ಮಿನ್ ಗೃಹವರೇ ನದ್ಯೋ ಮಣಿಶರ್ಕರವಾಲುಕಾಃ |
ಮತ್ತಬರ್ಹಿಣಸಂಘಾಶ್ಚ ಕೋಕಿಲಾಶ್ಚ ಮದೋದ್ವಹಾಃ |
ಬಭೂವುಃ ಪರಮೋಪೇತಾಃ ಸರ್ವೇ ಜಗತಿಪರ್ವತಾಃ ||61||
ಆ ಶ್ರೇಷ್ಠವಾದ ಮನೆಗಳಲ್ಲಿ ಹರಿಯುವ ನದಿಗಳಲ್ಲಿ ಮಣಿಮಯವಾದ ಸಣ್ಣ ಮರಳುಗಳ ತೀರಗಳಿವೆ. ಅಲ್ಲಿ ಮತ್ತಮಯೂರಗಳ ಸಮೂಹಗಳು ಮದಿಸಿದ ಕೋಗಿಲೆಗಳು ಸಂತೋಷದಿಂದ ಕೂಡಿವೆ. ಅಲ್ಲಿ ಮಣಿಮಯವಾದ ಸಣ್ಣ ಸಣ್ಣ ಪರ್ವತಗಳೂ ಇವೆ.
ತತ್ರೈವ ಗಜಯೂಥಾನಿ ತತ್ರ ಗೋಮಹಿಷಾಸ್ತಥಾ |
ನಿವಾಸಾಶ್ಚ ಕೃತಾಸ್ತತ್ರ ವರಾಹಮೃಗಪಕ್ಷಿಣಾಮ್ ||62||
ಅಲ್ಲಿ ಗಜಯೂಥಗಳೂ ಗೋಮಹಿಷಗಳೂ ಇವೆ. ವರಾಹಮೃಗಪಕ್ಷಿಗಳಿಗೆ ಅಲ್ಲಿ ವಾಸಸ್ಥಾನವನ್ನು ಕಲ್ಪಿಸಲಾಗಿದೆ.

ವಿಶ್ವಕರ್ಮಕೃತಃ ಶೈಲಃ ಪ್ರಾಕಾರಸ್ತಸ್ಯ ವೇಶ್ಮನಃ |
ವ್ಯಕ್ತಕಿಷ್ಕುಶತೋದ್ವ್ಯಾಮಃ ಸುಧಾಕರಸಮಪ್ರಭಃ ||63||
ಆ ವಾಸುದೇವನ ಗೃಹಕ್ಕೆ ವಿಶ್ವಕರ್ಮನು ನಿರ್ಮಿಸಿದ ಪ್ರಾಕಾರವು ನೂರು ಕಿಷ್ಕುಗಳಷ್ಟು ವಿಸ್ತಾರವಾಗಿದ್ದು ಚಂದ್ರನ ಕಾಂತಿಯನ್ನು ಹೊಂದಿದೆ.
ತೇನ ತೇ ಚ ಮಹಾಶೈಲಾಃ ಸರಿತಶ್ಚ ಸರಾಂಸಿ ಚ |
ಪರಿಕ್ಷಿಪ್ತಾನಿ ಹರ್ಮ್ಯಸ್ಯ ವನಾನ್ಯುಪವನಾನಿ ಚ ||64||
ಆ ಗೃಹಗಳ ಸುತ್ತಲೂ ಮಹಾಶೈಲಗಳು ಸರಿತ್ತುಗಳು ಸರೋವರಗಳು ವನಗಳು ಮತ್ತು ಉಪವನಗಳು ಕೃಷ್ಣನಿಂದ ನಿವಿಷ್ಟವಾಗಿವೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕಪಂಚಾಶೋಽಧ್ಯಾಯಃ ||
||ಅರ್ಘಾಭಿಹರಣಪರ್ವಣಿ ವಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯವು ಮುಗಿಯಿತು.
*****

ಐವತ್ತೆರಡನೆಯ ಅಧ್ಯಾಯ
(ಕೃಷ್ಣನ ದ್ವಾರಕಾಪ್ರವೇಶ)
ಭೀಷ್ಮಃ
ಏವಂ ತಚ್ಛಿಲ್ಪಿವರ್ಯೇಣ ವಿಹಿತಂ ವಿಶ್ವಕರ್ಮಣಾ |
ಪ್ರವಿಶನ್ನೇವ ಗೋವಿಂದೋ ದದರ್ಶ ಪರಿತೋ ಮುಹುಃ ||1||
ಗೋವಿಂದನು ದ್ವಾರಕೆಯನ್ನು ಪ್ರವೇಶಿಸುತ್ತಲೇ ಶಿಲ್ಪಿವರ್ಯನಾದ ವಿಶ್ವಕರ್ಮನಿಂದ ನಿರ್ಮಿತವಾದ ಆ ಪಟ್ಟಣದ ಕಡೆಗೆ ಸುತ್ತಲೂ ದೃಷ್ಟಿಯನ್ನು ಹರಿಸಿದನು.
ಮುಮುದೇ ವಿಶ್ವಕರ್ಮಾಣಂ ಪ್ರಾಂಜಲಿಂ ಪ್ರಣತಾನನಮ್ |
ಇಂದ್ರಃ ಸಹಾಮರೈಃ ಶ್ರೀಮಾನ್ ತತ್ರ ತತ್ರ ವಿಲೋಕಯನ್ ||2||
ಇಂದ್ರನು ಅಮರರ ಜೊತೆಯಲ್ಲಿ ಅಲ್ಲಲ್ಲಿ ನೋಡುತ್ತಾ ಕೈಗಳನ್ನು ಮಗಿದು ತಲೆಯನ್ನು ತಗ್ಗಿಸಿ ನಿಂತಿದ್ದ ವಿಶ್ವಕರ್ಮನನ್ನು ನೋಡಿ ಆನಂದಿಸಿದನು.
ಏವಮಾಲೋಕಯಾಂಚಕ್ರುರ್ದ್ವಾರಕಾಮೃಷಭಾಸ್ತ್ರಯಃ |
ಉಪೇಂದ್ರಬಲದೇವೌ ಚ ವಾಸವಶ್ಚ ಮಹಾಯಶಾಃ||3||
ಹೀಗೆ ಮಹಾಕೀರ್ತಿಶಾಲಿಗಳಾದ ಮತ್ತು ಶ್ರೇಷ್ಠರಾದ ಕೃಷ್ಣ ಬಲರಾಮ ಮತ್ತು ಇಂದ್ರರು ದ್ವಾರಕಾ ಪಟ್ಟಣವನ್ನು ಆಲೋಕಿಸಿದರು.
ತತಸ್ತಂ ಪಾಂಡರಂ ಶೌರಿರ್ಮೂರ್ಧ್ನಿ ತಿಷ್ಠನ್ ಗರುತ್ಮತಃ |
ಪ್ರೀತಃ ಶಂಖಮುಪಾಧ್ಮಾಸೀದ್ ವಿದ್ವಿಷಾಂ ರೋಮಹರ್ಷಣಮ್ ||4||
ಅನಂತರ ಶೌರಿಯು ಗರುಡನ ಹೆಗಲಿನ ಮೇಲೆಯೇ ಕುಳಿತು ಶತ್ರುಗಳಿಗೆ ರೋಮಾಂಚನಕಾರಿಯಾದ ತನ್ನ ಪಾಂಡರವಾದ ಶಂಖವನ್ನು ಸಂತೋಷದಿಂದ ಊದಿದನು.
ತಸ್ಯ ಶಂಖಸ್ಯ ಶಬ್ದೇನ ಸಾಗರಶ್ಚುಕ್ಷುಭೇ ಭೃಶಮ್ |
ರರಾಸ ಚ ನಭಃ ಸರ್ವಂ ತಚ್ಚಿತ್ರಮಭವತ್ ತದಾ ||5||
ಆ ಶಂಖದ ನಾದದಿಂದ ಸಾಗರವು ಉಕ್ಕೇರಿತು. ಆಕಾಶವು ನಲಿಯಿತು. ಅದೆಲ್ಲವೂ ಆಶ್ಚರ್ಯಕರವಾಗಿದ್ದಿತು.
ಪಾಂಚಜನ್ಯಸ್ಯ ನಿರ್ಘೋಷಂ ನಿಶಮ್ಯ ಕುಕುರಾಂಧಕಾಃ |
ವಿಶೋಕಾಃ ಸಮಪದ್ಯಂತ ಗರುಡಸ್ಯ ಚ ದರ್ಶನಾತ್ ||6||
ಕುಕುರಾಂಧಕರು ಗರುಡನ ದರ್ಶನದಿಂದಲೂ ಮತ್ತು ಪಾಂಚಜನ್ಯದ ಘೋಷದಿಂದಲೂ ಶೋಕರಹಿತರಾದರು.
ಶಂಖಚಕ್ರಗದಾಪಾಣಿಂ ಸುಪರ್ಣಸ್ಯೋಪರಿ ಸ್ಥಿತಮ್ |
ದೃಷ್ಟ್ವಾ ಜಹೃಷಿರೇ ಭೌಮಾ ಭಾಸ್ಕರೋದಯತೇಜಸಮ್ ||7||
ಅವರು ಭೂಮಿಯಲ್ಲಿ ನಿಂತು ಜನರು ಉದಯಿಸುವ ಸೂರ್ಯನನ್ನು ನೋಡಿ ಸಂತೋಷಪಡುವಂತೆ ಕಾಂತಿಯುಳ್ಳ ಶಂಖಚಕ್ರಗದಾಪಾಣಿಯಾದ ಗರುಡಾರೂಢನಾದ ಕೃಷ್ಣನನ್ನು ನೋಡಿ ಸಂತೋಷಪಟ್ಟರು.
ತತಸ್ತೂರ್ಯಪ್ರಣಾದಶ್ಚ ಭೇರೀಣಾಂ ಚ ಮಹಾಸ್ವನಃ |
ಸಿಂಹನಾದಶ್ಚ ಸಂಜಜ್ಞೇ ಸರ್ವೇಷಾಂ ಪುರವಾಸಿನಾಮ್ ||8||
ಅನಂತರ ಎಲ್ಲಾ ಪುರವಾಸಿಗಳೂ ತುರ್ಯನಾದಗಳನ್ನೂ ಭೇರಿಯ ಸ್ವನಗಳನ್ನೂ ಮತ್ತು ಸಿಂಹನಾದಗಳನ್ನೂ ಮಾಡಿದರು.
ತತಸ್ತೇ ಸರ್ವದಾಶಾರ್ಹಾಃ ಸರ್ವೇ ಚ ಕುಕುರಾಂಧಕಾಃ |
ಪ್ರೀಯಮಾಣಾಃ ಸಮಾಜಗ್ಮುರಾಲೋಕ್ಯ ಮಧುಸೂದನಮ್ ||10||
ಅನಂತರ ಮಧುಸೂದನನನ್ನು ನೋಡಿ ಎಲ್ಲಾ ದಾಶಾರ್ಹರೂ ಎಲ್ಲಾ ಕುಕುರಾಂಧಕರೂ ಸಂತೋಷದಿಂದ ಅವನ ಕಡೆಗೆ ಬಂದರು.
ವಸುದೇವಂ ಪುರಸ್ಕೃತ್ಯ ವೇಣುಶಂಖರವೈಃ ಸಹ |
ಉಗ್ರಸೇನೋ ಯಯೌ ರಾಜಾ ವಾಸುದೇವನಿವೇಶನಾತ್ ||11||
ಉಗ್ರಸೇನಮಹಾರಾಜನೂ ವಸುದೇವನನ್ನು ಮುಂದೆಮಾಡಿಕೊಂಡು ವೇಣುಶಂಖನಾದಗಳಿಂದ ಕೂಡಿದವನಾಗಿ ವಾಸುದೇವನ ಗೃಹವನ್ನು ಕುರಿತು ಹೊರಟನು.

ಆನಂದಿತಂ ಪರ್ಯಚರನ್ ಸ್ವೇಷು ವೇಶ್ಮಸು ದೇವಕೀ |
ರೋಹಿಣೀ ಚ ಯಯೌ ದೇಶಮಾಹುಕಸ್ಯ ಚ ಯಾಃ ಸ್ತ್ರಿಯಃ ॥12॥
ದೇವಕಿಯು ಆನಂದಪೂರ್ಣನಾಗಿದ್ದ ಕೃಷ್ಣನನ್ನು ತನ್ನ ಮನೆಯಲ್ಲಿ ಪರಿಚರಿಸಿದಳು. ರೋಹಿಣಿಯು ಮತ್ತು ಆಹುಕನ ಉಳಿದ ಸ್ತ್ರೀಯರು ಆ ದೇಶಕ್ಕೆ ಪ್ರಾಪ್ತರಾಗಿ ಬಂದರು.
ಹತಾ ಬ್ರಹ್ಮದ್ವಿಷಃ ಸರ್ವೇ ಜಯಂತ್ಯಂಧಕವೃಷ್ಣಯಃ |
ಏವಮುಕ್ತಃ ಸಹ ಸ್ತ್ರೀಭಿರಕ್ಷತೈರ್ಮಧುಸೂದನಃ ॥13॥
ಬ್ರಹ್ಮದ್ವೇಷಿಗಳೆಲ್ಲರೂ ಹತರಾದರು ಅಂಧಕವೃಷ್ಣಿಗಳು ಉತ್ಕೃಷ್ಟರಾಗಿದ್ದಾರೆ ಎಂದು ಹೇಳುತ್ತಾ ಸ್ತ್ರೀಯರು ಮಧುಸೂದನನ ತಲೆಯ ಮೇಲೆ ಅಕ್ಷತೆಯನ್ನು ಹಾಕಿದರು.
ತತಃ ಶೌರಿಃ ಸುಪರ್ಣೇನ ಸ್ವಂ ನಿವೇಶನಮಭ್ಯಯಾತ್ |
ಚಕಾರಾಥ ಯಥೋದ್ದೇಶಮೀಶ್ವರೋ ಮಣಿಪರ್ವತಮ್ ॥14॥
ಅನಂತರ ಶೌರಿಯು ಗರುಡಾರೂಢನಾಗಿಯೇ ತನ್ನ ನಿವೇಶನಕ್ಕೆ ಹೋಗಿ ಆ ಮಣಿ ಪರ್ವತವನ್ನು ಯೋಗ್ಯವಾದ ಸ್ಥಳದಲ್ಲಿ ಸ್ಥಾಪಿಸಿದನು.
ತತೋ ಧನಾನಿ ರತ್ನಾನಿ ಸತ್ಯಾಂ ಚ ಮಧುಸೂದನಃ |
ನಿಧಾಯ ಪುಂಡರೀಕಾಕ್ಷಃ ಪಿತುರ್ದರ್ಶನಲಾಲಸಃ ॥15॥
ತತಃ ಸಾಂದೀಪಿನಂ ಪೂರ್ವಂ ಬ್ರಹ್ಮಾಚಾರ್ಯಂ ಚ ಭಾರತ |
ವವಂದೇ ಪೃಥುತಾಮ್ರಾಕ್ಷಃ ಪ್ರೀಯಮಾಣೋ ಮಹಾಮನಾಃ ॥16॥
ಅನಂತರ ಪುಂಡರೀಕಾಕ್ಷನಾದ ಮಧುಸೂದನನು ಧನವನ್ನೂ ರತ್ನಗಳನ್ನೂ ಸತ್ಯಭಾಮೆಯನ್ನೂ ಯೋಗ್ಯಸ್ಥಾನದಲ್ಲಿ ಇರಿಸಿ ತಂದೆಯನ್ನು ನೋಡುವ ಲಾಲಸೆಯಿಂದ ಹೊರಟನು. ಭಾರತನೇ! ಆಗ ಮೊದಲು ವಿಪ್ರಾಚಾರ್ಯರಾದ ಸಾಂದೀಪಿನಿಗಳಿಗೆ ಮಹಾಮನಸ್ಸುಳ್ಳವನೂ ವಿಶಾಲಾಕ್ಷನೂ ಆದ ಅವನು ಸಂತೋಷದಿಂದ ನಮಸ್ಕರಿಸಿದನು.
ತಥಾಶ್ರುಪರಿಪೂರ್ಣಾಕ್ಷಮಾನಂದಾಗತಚೇತಸಾ |
ವವಂದೇ ಸಹ ರಾಮೇಣ ಪಿತರಂ ವಾಸವಾನುಜಃ ॥17॥
ಹಾಗೆಯೇ ಆನಂದದಿಂದ ನೀರು ತುಂಬಿದ ಕಣ್ಣುಳ್ಳ ತನ್ನ ತಂದೆಯನ್ನು ವಾಸವಾನುಜನಾದ ಕೃಷ್ಣನು ಬಲರಾಮನ ಜೊತೆಯಲ್ಲಿ ನಮಸ್ಕರಿಸಿದನು.
ಯಥಾಶ್ರೇಷ್ಠಮುಪಾಗಮ್ಯ ಸಾತ್ವತಾನ್ ಯದುನಂದನಃ |
ಸರ್ವೇಷಾಂ ನಾಮ ಜಗ್ರಾಹ ದಾಶಾರ್ಹಾಣಾಂ ಮಧುಕ್ಷಯಃ ॥18॥
ಅನಂತರ ಯದುನಂದನನಾದ ಮಧುಸೂದನನು ಎಲ್ಲಾ ಸಾತ್ವತರನ್ನು ಅವರ ಶ್ರೇಷ್ಠತೆಗೆ ಅನುಗುಣವಾಗಿ ಸಂಧಿಸಿ ಎಲ್ಲರ ಹೆಸರನ್ನೂ ಹೇಳಿದನು.
ತತಃ ಸರ್ವಾಣಿ ವಿತ್ತಾನಿ ಸರ್ವರತ್ನಮಯಾನಿ ಚ |
ವ್ಯಭಜತ್ ತಾನಿ ತೇಭ್ಯೋಥ ಸರ್ವೇಭ್ಯೋ ಯದುನಂದನಃ ॥19॥
ಅನಂತರ ಯದುನಂದನನಾದ ಕೃಷ್ಣನು ತಾನು ತಂದ ಎಲ್ಲ ಧನವನ್ನು ಎಲ್ಲಾ ರತ್ನಗಳನ್ನೂ ಅವರೆಲ್ಲರಿಗೂ ಹಂಚಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಿಪಂಚಾಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಏಕವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯವು ಇಲ್ಲಿಗೆ ಮುಗಿಯಿತು.
*****

ಐವತ್ಮೂರನೆಯ ಅಧ್ಯಾಯ
(ಎಲ್ಲರ ಅನುಮತಿಯನ್ನು ಪಡೆದು ದ್ವಾರಕೆಯಿಂದ ಇಂದ್ರನ ನಿರ್ಗಮನ)
ಭೀಷ್ಮಃ
ಸಾ ಕೇಶವಮಹಾಮಾತ್ರೈರ್ಮಹೇಂದ್ರಪ್ರಮುಖೈಃ ಸಭಾ |
ಶುಶುಭೇ ವೃಷ್ಣಿಶಾರ್ದೂಲೈಃ ಸಿಂಹೈರಿವ ಗಿರೇರ್ಗುಹಾ ॥1॥
ಕೇಶವನ ಮಹಾಮಾತ್ರರಿಂದಲೂ ಮಹೇಂದ್ರ ಮೊದಲಾದವರಿಂದಲೂ ವೃಷ್ಣಿಶಾರ್ದೂಲರಿಂದಲೂ ತುಂಬಿದ ಆ ಸಭೆಯು ಸಿಂಹಗಳಿಂದ ತುಂಬಿದ ಪರ್ವತದ ಗುಹೆಯಂತೆ ಶೋಭಿಸಿತು.
ಅಥಾಸನಗತಾನ್ ಸರ್ವಾನುವಾಚ ವಿಬುಧಾಧಿಪಃ |
ಶುಭಯಾ ಹರ್ಷಯನ್ ವಾಚಾ ಮಹೇಂದ್ರಸ್ತಾನ್ ಮಹಾಯಶಾಃ |
ಕುಕುರಾಂಧಕಮುಖ್ಯಾಂಶ್ಚ ತಂ ಚ ರಾಜಾನಮಾಹುಕಮ್ ॥2॥
ಅನಂತರ ದೇವಾಧಿಪತಿಯಾದ ಮಹಾಕೀರ್ತಿಶಾಲಿಯಾದ ಇಂದ್ರನು ತನ್ನ ಶುಭವಾದ ಮಾತಿನಿಂದ ಎಲ್ಲರನ್ನೂ ಸಂತೋಷಪಡಿಸುತ್ತಾ ಆಸನಗಳನ್ನು ಅಲಂಕರಿಸಿದ್ದ ಕುಕುರರು ಅಂಧಕಶ್ರೇಷ್ಠರು ಆಹುಕರಾಜ ಮೊದಲಾದ ಎಲ್ಲರನ್ನೂ ಕುರಿತು ಮಾತನಾಡಿದನು.
ಯದರ್ಥಂ ಜನ್ಮ ಕೃಷ್ಣಸ್ಯ ಮಾನುಷೇಷು ಮಹಾತ್ಮನಃ |
ಯತ್ ಕೃತಂ ವಾಸುದೇವೇನ ತದ್ ವಕ್ಷ್ಯಾಮಿ ಸಮಾಸತಃ ॥3॥

ಮಹಾತ್ಮನಾದ ವಾಸುದೇವನು ಮನುಷ್ಯಲೋಕದಲ್ಲಿ ಅವತಾರವನ್ನು ಮಾಡುವುದಕ್ಕೆ ಕಾರಣವನ್ನೂ ಮನುಷ್ಯಲೋಕದಲ್ಲಿ ಅವನು ಮಾಡಿದ ಮಹಾ ಕಾರ್ಯವನ್ನೂ ಸಂಕ್ಷೇಪವಾಗಿ ಹೇಳುವೆನು.
ಅಯಂ ಶತಸಹಸ್ರಾಣಿ ದಾನವಾನಾಮರಿಂದಮಃ ।
ನಿಹತ್ಯ ಪುಂಡರೀಕಾಕ್ಷಃ ಪಾತಾಳವಿವರಂ ಯಯೌ ॥4॥
ಅರಿಂದಮನಾದ  ಪುಂಡರೀಕಾಕ್ಷನಾದ ಈ ಕೃಷ್ಣನು ಒಂದುಲಕ್ಷ ದಾನವರನ್ನು ಸಂಹರಿಸಿ ಪಾತಾಳಲೋಕಕ್ಕೆ ಹೋದನು.
ಯತ್ತ್ಯೈರಧಿಗತಂ ಪೂರ್ವೈಃ ಪ್ರಹ್ಲಾದಬಲಿಶಂಬರೈಃ ।
ತದಿದಂ ಶೌರಿಣಾ ವಿತ್ತಂ ಪ್ರಾಪಿತಂ ಭವತಾಮಿಹ   ॥5॥
ಹಿಂದೆ ಪ್ರಹ್ಲಾದ ಬಲಿ ಶಂಬರರಿಂದ ಯಾವ ಸಂಪತ್ತು ಪ್ರಾಪ್ತವಾಗಿದ್ದಿತೋ ಆ ಸಂಪತ್ತನ್ನು ಶೌರಿಯು ಇಲ್ಲಿ ನಿಮಗೆ ತಲುಪಿಸಿದ್ದಾನೆ.
ಸಪಾಶಂ ಮುರಮಾಕ್ರಮ್ಯ ಪಾಂಜಜನ್ಯಂ ತು ಧೀಮತಾ ।
ಶಿಲಾಸಂಘಾನತಿಕ್ರಮ್ಯ ನಿಸುಂಭಃ ಸಗಣೋ ಹತಃ  ॥6॥
ಮೇಧಾವಿಯಾದ ಕೃಷ್ಣನು ಪಂಚಜನಪುತ್ರನಾದ ಮುರನನ್ನೂ ಅವನ ಪಾಶಗಳನ್ನು ಅರೆಕ್ರಮಿಸಿ ಶಿಲಾಸಮೂಹವನ್ನು ದಾಟಿ ಪರಿವಾರಸಹಿತನಾದ ನಿಸುಂಭನನ್ನೂ ಸಂಹಾರಮಾಡಿದನು.
ಹಯಗ್ರೀವಶ್ಚ ವಿಕ್ರಾಂತೋ ದಾನವೋ ನಿಹತೋ ಬಲೀ ।
ಮಥಿತಶ್ಚ ಮೃಧೇ ಭೌಮಃ ಕುಂಡಲೇ ಚಾಹೃತೇ ಪುನಃ ।
ಪ್ರಾಪ್ತಂ ಚ ದಿವಿ ದೇವೇಷು ಕೇಶವೇನ ಮಹದ್ಯಶಃ  ॥7॥
ಬಲಿಷ್ಠನಾದ ವಿಕ್ರಮಶಾಲಿಯಾದ ಹಯಗ್ರೀವದಾನವನನ್ನು ಸಂಹಾರ ಮಾಡಿದನು. ಯುದ್ಧದಲ್ಲಿ ನರಕಾಸುರನನ್ನು ಸಂಹರಿಸಿ ಅದಿತಿಯ ಕುಂಡಲಗಳನ್ನು ಹಿಂದಕ್ಕೆ ತಂದು ಕೇಶವನು ಸ್ವರ್ಗಲೋಕದಲ್ಲಿ  ದೇವತೆಗಳ ದೃಷ್ಟಿಯಿಂದಲೂ ಮಹಾ ಕೀರ್ತಿಯನ್ನು ಪಡೆದಿದ್ದಾನೆ.
ವೀತಶೋಕಭಯಾಬಾಧಾಃ ಕೃಷ್ಣಬಾಹುಬಲಾಶ್ರಯಾಃ ।
ಯಜಂತು ವಿವಿಧೈಃ ಸೋಮೈರ್ಮಖೈರಂಧಕವೃಷ್ಣಯಃ          ॥8॥
ಅಂಧಕವೃಷ್ಣಿಗಳಾದ ನೀವು ಕೃಷ್ಣನ ಬಾಹುಬಲವನ್ನು ಆಶ್ರಯಿಸಿ ಎಲ್ಲಾ ಶೋಕ ಭಯ ಮತ್ತು ಪೀಡೆಗಳನ್ನು ತೊರೆದು ಅನೇಕ ಸೋಮಯಜ್ಞಗಳನ್ನು ಆಚರಿಸಿ,
ಪುನರ್ಬಾಣವಧೇ ಶೌರಿಮಾದಿತ್ಯಾ ವಸುಭಿಃ ಸಹ ।
ಮನುಷ್ಯಾಽಭಿಗಮಿಷ್ಯಂತಿ ಸಾಧ್ಯಾಶ್ಚ ಮಧುಸೂದನಮ್        ॥9॥
ಶೌರಿಯಾದ ಮಧುಸೂದನನು ಮುಂದೆ ಬಾಣಾಸುರನನ್ನು ಸಂಹಾರಮಾಡುವಾಗ ನನ್ನನ್ನು ಮುಂದೆ ಮಾಡಿಕೊಂಡು  ಆದಿತ್ಯರು ವಸುಗಳು ಸಾಧ್ಯರು ಎಲ್ಲರೂ ಭೂಮಿಗೆ ಬರುವರು.
ಭೀಷ್ಮಃ
ಏವಮುಕತ್ವ ತತಃ ಸರ್ವಾನಾಮಂತ್ರ್ಯ ಕುಕುರಾಂಧಕಾನ್ ।
ಸಸ್ವಜೇ ರಾಮಕೃಷ್ಣೌ ಚ ವಸುದೇವಂ ಚ ವಾಸವಃ  ॥10॥
ಇಂದ್ರನು ಹೀಗೆ ಹೇಳಿ ಕುಕುರಾಂಧಕರೆಲ್ಲರ ಅನುಮತಿಯನ್ನು ಪಡೆದು ರಾಮಕೃಷ್ಣರನ್ನೂ ವಸುದೇವನನ್ನೂ ಆಲಿಂಗಿಸಿದನು.
ಪ್ರದ್ಯುಮ್ನಸಾಂಬನಿಶಠಾನ್ ಅನಿರುದ್ಧಂ ಚ ಸಾರಣಮ್ ।
ಬಭ್ರುಂ ಝಿಲ್ಲಿಂ ಗದಂ ಭಾನುಂ ಚಾರುದೇಷ್ಣಂ ಚ ವೃತ್ರಹಾ     ॥11॥
ಸತ್ಕೃತ್ಯ ಸಾರಣಾಕ್ರೂರೌ ಪುನರಾಭಾಷ್ಯ ಸಾತ್ಯಕಿಮ್ ।
ಸಸ್ವಜೇ ವೃಷ್ಣಿರಾಜಾನಮಾಹುಕಂ ಕುಕುರಾಧಿಪಮ್             ॥12॥
ಪ್ರದ್ಯುಮ್ನ ಸಾಂಬ ನಿಶಠರನ್ನೂ ಅನಿರುದ್ಧ ಸಾರಣರನ್ನೂ ಬಭ್ರು ಝಿಲ್ಲಿ ಗದಾ ಭಾನು ಚಾರುದೇಷ್ಣ ಇವರುಗಳನ್ನೂ ಸತ್ಕರಿಸಿ ಇಂದ್ರನು ಸಾರಣಾಕ್ರೂರರ ಜೊತೆಯಲ್ಲಿ  ಮತ್ತು ಸಾತ್ಯಕಿಯ ಜೊತೆಯಲ್ಲಿ ಪುನಃ ಮಾತನಾಡಿ ಕುಕುರಾಧಿಪತಿಯಾದ ವೃಷ್ಣಿರಾಜನಾದ  ಆಹುಕನನ್ನು ಆಲಿಂಗಿಸಿದನು.
ಭೋಜಂ ಚ ಕೃತವರ್ಮಾಣಮನ್ಯಾಂಶ್ಚಾಂಧಕವೃಷ್ಣಿಷು ।
ಆಮಂತ್ರ್ಯ ದೇವಪ್ರವರೋ ವಾಸವೋ ವಾಸವಾನುಜಮ್          ॥13॥
ತತಃ ಶ್ವೇತಾಚಲಪ್ರಖ್ಯಂ ಗಜಮೈರಾವತಂ ಪ್ರಭುಃ ।
ಪಶ್ಯತಾಂ ಸರ್ವಭೂತಾನಾಮಾರುರೋಹ ಶಚೀಪತಿಃ             ॥14॥
ದೇವಶ್ರೇಷ್ಠನಾದ ಇಂದ್ರನು  ಭೋಜವಂಶಕ್ಕೆ ಸೇರಿದ ಕೃತವರ್ಮನನ್ನೂ ಉಳಿದ ಅಂಧಕ ವೃಷ್ಣಿಗಳನ್ನೂ ಕೃಷ್ಣನನ್ನೂ ಪ್ರಾರ್ಥಿಸಿ ಅವರ ಅನುಮತಿಯನ್ನು ಪಡೆದು ಎಲ್ಲ ಜನರೂ ನೋಡುತ್ತಿರುವಂತೆ ಶಚೀಪತಿಯಾದ  ಪ್ರಭುವಾದ ಅವನು ಶ್ವೇತಪರ್ವತದಂತೆ ಇದ್ದ ಐರಾವತ ಗಜವನ್ನು ಏರಿದನು.
ಪೃಥಿವೀಂ ಚಾಂತರಿಕ್ಷಂ ಚ ದಿವಂ ಚ ವರವಾರಣಮ್ ।
ಮುಖಾಡಂಬರನಿರ್ಘೋಷೈಃ ಪೂರಯಂತಮಿವಾಸಕೃತ್          ॥15॥
ಹೈಮಯಂತ್ರಮಹಾಕಕ್ಷ್ಯಂ ಹಿರಣ್ಮಯವಿಷಾಣಿನಮ್ ।
ಮನೋಹರಕುಥಾಸ್ತೀರ್ಣಂ ಸರ್ವರತ್ನವಿಭೂಷಿತಮ್              ॥16॥
ಅನೇಕಶತರತ್ನಾಭಿಃ ಪತಾಕಾಭಿರಲಙ್ಕೃತಮ್ ।
ನಿತ್ಯಸ್ರುತಮದಸ್ರಾವಂ ಕ್ಷರಂತಮಿವ ತೋಯದಮ್                ॥17॥

ದಿಶಾಗಜಂ ಮಹಾಮಾತ್ರಂ ಕಾಂಚನಸ್ರಜಮಾಸ್ಥಿತಃ |
ಪ್ರಬಭೌ ಮಂದರಾಗ್ರಸ್ಥಃ ಪ್ರತಪನ್ ಭಾನುಮಾನಿವ ॥18॥
ತನ್ನ ಮುಖದ ನಿರ್ಘೋಷಗಳಿಂದ ಭೂಮಿಯನ್ನೂ ಅಂತರಿಕ್ಷವನ್ನೂ ಸ್ವರ್ಗವನ್ನೂ ಪುನಃ ಪುನಃ ತುಂಬುತ್ತಿದ್ದಂತಹ, ಹೇಮ ಯಂತ್ರಗಳಿಂದಲೂ ಮಹಾ ಕಕ್ಷೆಗಳಿಂದಲೂ ಕೂಡಿದ್ದಂತಹ, ಹಿರಣ್ಮಯವಾದ ದಂತಗಳನ್ನು ಹೊಂದಿದ್ದಂತಹ, ಸುಂದರವಾದ ರತ್ನಗಂಬಳಿಯ ಆಸನವುಳ್ಳ, ಸರ್ವರತ್ನ ವಿಭೂಷಿತವಾದ, ನೂರಾರು ರತ್ನಗಳಿರುವ ಪತಾಕೆಗಳಿಂದ ಅಲಂಕೃತವಾದಂತಹ, ಮಳೆಯನ್ನು ಸುರಿಸುವ ಮೋಡದಂತೆ ಯಾವಾಗಲೂ ಮದಜಲವನ್ನು ಸುರಿಸುವ, ಸುವರ್ಣಮಾಲೆಗಳನ್ನು ಧರಿಸಿ ಮಹಾಮಾತ್ರದಿಂದ ಕೂಡಿದ, ಶ್ರೇಷ್ಠವಾದ ಆ ದಿಗ್ಗಜವನ್ನು ಏರಿ ಇಂದ್ರನು ಮಂದರ ಪರ್ವತದ ಶಿಖರದಲ್ಲಿ ಪ್ರಕಾಶಿಸುವ ಸೂರ್ಯನಂತೆ ಶೋಭಿಸಿದನು.
ತತೋ ವಜ್ರಮಯಂ ಭೀಮಂ ಪ್ರಗೃಹ್ಯ ಪರಮಾಂಕುಶಮ್ |
ಯಯೌ ಬಲವತಾ ಸಾರ್ಧಂ ಪಾವಕೇನ ಶಚೀಪತಿಃ ॥19॥
ಅನಂತರ ಶಚೀಪತಿಯು ವಜ್ರಮಯವಾದ ಭಯಂಕರವಾದ ಶ್ರೇಷ್ಠವಾದ ಅಂಕುಶವನ್ನು ಹಿಡಿದು ಬಲಿಷ್ಠನಾದ ಅಗ್ನಿಯ ಜೊತೆಯಲ್ಲಿ ಅಲ್ಲಿಂದ ಹೊರಟನು.
ತಂ ಕರೇಣುಗಜವ್ರಾತೈರ್ವಿಮಾನೈಶ್ಚ ಮರುದ್ಗಣಾಃ |
ಪೃಷ್ಠತೋಽನುಯಯುಃ ಪ್ರೀತಾಃ ಕುಬೇರವರುಣಗ್ರಹಾಃ ॥20॥
ಮರುದ್ಗಣಗಳು ಕುಬೇರ ವರುಣ ಮತ್ತು ಉಳಿದ ಗ್ರಹಗಳು ಕರೇಣುಗಳ ಸಮೂಹವನ್ನು ಏರಿ ಗಜಗಳ ಸಮೂಹವನ್ನು ಏರಿ ವಿಮಾನಗಳನ್ನು ಏರಿ ಸಂತೋಷದಿಂದ ಅವನ ಹಿಂದೆ ಹೊರಟರು.
ಸ ವಾಯುಪಥಮಾಸ್ಥಾಯ ವೈಶ್ವಾನರಪಥಂ ಗತಃ |
ಪ್ರಾಪ್ಯ ಸೂರ್ಯಪಥಂ ದೇವಸ್ತತ್ರೈವಾಂತರಧೀಯತ ॥21॥
ಇಂದ್ರನು ವಾಯುಪಥವನ್ನು ಸೇರಿ ಅಲ್ಲಿಂದ ಅಗ್ನಿಪಥವನ್ನು ತಲುಪಿ ಅಲ್ಲಿಂದ ಸೂರ್ಯಪಥವನ್ನು ಸೇರಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ಮೂರನೆಯ ಅಧ್ಯಾಯವು ಮುಗಿಯಿತು.
*****
ಐವತ್ನಾಲ್ಕನೆಯ ಅಧ್ಯಾಯ
(ತಾಯಿಯರಿಗೆ ನಮಸ್ಕರಿಸಿ ಕೃಷ್ಣನ ಸ್ವಗೃಹಪ್ರವೇಶ)
ಭೀಷ್ಮಃ
ತತಃ ಸರ್ವದಶಾರ್ಹಾಣಾಮಾಹುಕಸ್ಯ ಚ ಯಾಃ ಸ್ತ್ರಿಯಃ |
ನಂದಗೋಪಸ್ಯ ಮಹಿಷೀ ಯಶೋದಾ ಲೋಕವಿಶ್ರುತಾ ॥1॥
ರೇವತೀ ಚ ಮಹಾಭಾಗಾ ರುಗ್ಮಿಣೀ ಚ ಪತಿವ್ರತಾ |
ಸತ್ಯಾ ಜಾಂಬವತೀ ಚೋಭೇ ಗಾಂಧಾರೀ ಶಿಶುಮಾಪಿ ಯಾ ॥2॥
ವಿಶೋಕಾ ಲಕ್ಷಣಾ ಚಾಪಿ ಸುಮಿತ್ರಾ ಕೇತುಮಾ ತಥಾ |
ವಾಸುದೇವಮಹಿಷ್ಯೋಽನ್ಯಾಃ ಶ್ರಿಯಾ ಸಾರ್ಧಂ ಯಯುಸ್ತದಾ ॥3॥
ಅನಂತರ ಎಲ್ಲಾ ದಾಶಾರ್ಹ ಸ್ತ್ರೀಯರು, ಆ ಕುಲಪತ್ನಿಯರು, ನಂದಗೋಪನ ಪತ್ನಿಯಾದ ಲೋಕ ವಿಖ್ಯಾತೆಯಾದ ಯಶೋದೆ ಮತ್ತು ಮಹಾನುಭಾವಳಾದ ರೇವತಿಯು, ಪತಿವ್ರತೆಯಾದ ರುಗ್ಮಿಣಿ ಸತ್ಯಭಾಮೆ ಜಾಂಬುವತಿಯರು, ಗಾಂಧಾರಿ ಶಿಶುಮೆಯರು, ವಿಶೋಕಾ ಲಕ್ಷಣಾ ಸುಮಿತ್ರಾ ಕೇತುಮಾ ಮೊದಲಾದ ಉಳಿದ ಕೃಷ್ಣ ಪತ್ನಿಯರು, ಕೃಷ್ಣನಿದ್ದ ಕಡೆಗೆ ಬಂದರು. (ಈ ಗಾಂಧಾರಿಯು ಧೃತರಾಷ್ಟ್ರನ ಪತ್ನಿಯಲ್ಲ. ಗಾಂಧಾರದೇಶದ ಇನ್ನೊಬ್ಬ ಕನ್ಯೆ)
ವಿಭೂತಿಂ ದ್ರಷ್ಟುಮನಸಃ ಕೇಶವಸ್ಯ ಮಹಾತ್ಮನಃ |
ಪ್ರೀಯಮಾಣಾಃ ಸಭಾಂ ಜಗ್ಮುರಾಲೋಕಯಿತುಮಚ್ಯುತಮ್ ॥4॥
ಮಹಾತ್ಮನಾದ ಕೇಶವನ ಐಶ್ವರ್ಯವನ್ನು ನೋಡುವ ಮನಸ್ಸುಳ್ಳವರಾಗಿ ಸಂತೋಷದಿಂದ ಕೃಷ್ಣನನ್ನು ನೋಡುವ ಸಲುವಾಗಿ ಎಲ್ಲರೂ ಸಭೆಗೆ ಬಂದರು.
ದೇವಕೀ ಸಪ್ತದೇವೀನಾಂ ರೋಹಿಣೀ ಚ ಪುರಸ್ಕೃತಾ |
ದದೃಶುರ್ದೇವಮಾಸೀನಂ ಕೃಷ್ಣಂ ಹಲಭೃತಾ ಸಹ ॥5॥
ವಸುದೇವನ ಪತ್ನಿಯರಾದ ಸಪ್ತದೇವಿಯರು ದೇವಕಿಯನ್ನು ರೋಹಿಣಿಯನ್ನು ಮುಂದೆ ಮಾಡಿಕೊಂಡು ಬಲರಾಮನ ಜೊತೆಯಲ್ಲಿ ಕುಳಿತಿದ್ದ ಕೃಷ್ಣನನ್ನು ನೋಡಿದರು.
ತೌ ತು ಪೂರ್ವಮತಿಕ್ರಮ್ಯ ರೋಹಿಣೀಮಭಿವಾದ್ಯ ಚ |
ಅಭಿವಾದಯತಾಂ ದೇವೌ ದೇವಕೀಂ ರಾಮಕೇಶವೌ ॥6॥
ಬಲರಾಮಕೇಶವರು ಎದ್ದು ರೋಹಿಣಿಯನ್ನು ಮೊದಲು ಅಭಿವಂದಿಸಿ ಅನಂತರ ದೇವಕಿಗೆ ನಮಸ್ಕರಿಸಿದರು.
ರೋಹಿಣೀಂ ಸಪ್ತದೇವೀನಾಂ ಯಥಾಶ್ರೇಷ್ಠಂ ಚ ಮಾತರಃ |
ವವಂದೇ ಸಹ ರಾಮೇಣ ಭಗವಾನ್ ವಾಸವಾನುಜಃ ॥7॥

ತನ್ನ ತಾಯಂದಿರಾದ ರೋಹಿಣಿ ಮೊದಲಾದ ಸಪ್ತದೇವಿಯರನ್ನು ಅವರ ಜ್ಯೇಷ್ಠತೆಗೆ ಅನುಗುಣವಾಗಿ ಬಲರಾಮನ ಜೊತೆಯಲ್ಲಿ ವಾಸವಾನುಜನಾದ ಕೃಷ್ಣನು ನಮಸ್ಕರಿಸಿದನು.
ಅಥಾಸನವರಂ ಪ್ರಾಪ್ಯ ವೃಷ್ಣಿದಾರಪುರಸ್ಕೃತಾ |
ಉಭಾವಂಕಗತೌ ಚಕ್ರೇ ದೇವಕೀ ರಾಮಕೇಶವೌ ॥8॥
ಅನಂತರ ವೃಷ್ಣಿಸ್ತ್ರೀಯರನ್ನು ಮುಂದೆಮಾಡಿಕೊಂಡು ದೇವಕಿಯು ಶ್ರೇಷ್ಠವಾದ ಆಸನದಲ್ಲಿ ಕುಳಿತು ಕೃಷ್ಣಬಲರಾಮರನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು.
ಸಾ ತಾಭ್ಯಾಮೃಷಭಾಕ್ಷಾಭ್ಯಾಂ ಪುತ್ರಾಭ್ಯಾಂ ಶುಶುಭೇಽಧಿಕಮ್ |
ದೇವಕೀ ದೇವಮಾತೇವ ಮಿತ್ರೇಣ ವರುಣೇನ ಚ ॥9॥
ಅವರಿಬ್ಬರನ್ನೂ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡ ದೇವಕಿಯು ಮಿತ್ರ ವರುಣರನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡ ದೇವಮಾತೆಯಾದ ಅದಿತಿಯಂತೆ ಅಧಿಕವಾಗಿ ಶೋಭಿಸಿದಳು.
ತತಃ ಪ್ರಾಪ್ತಾ ಯಶೋದಾಯಾ ದುಹಿತಾ ವೈ ಕ್ಷಣೇನ ಹಿ |
ಜಾಜ್ವಲ್ಯಮಾನಾ ವಪುಷಾ ಪ್ರಭಯಾಽತೀವ ಭಾರತ ॥10॥
ಏಕಾನಂಗೇತಿ ಯಾಮಾಹುಃ ಕನ್ಯಾಂ ತಾಂ ಕಾಮರೂಪಿಣೀಮ್ |
ಯತ್ಕೃತೇ ಸಗಣಂ ಕಂಸಂ ಜಘಾನ ಪುರುಷೋತ್ತಮಃ ॥11॥
ಎಲೈ ಭಾರತನೇ! ಅನಂತರ ಆ ಕ್ಷಣದಲ್ಲಿ ಯಶೋದೆಯ ಪುತ್ರಿಯು ಪ್ರಕಾಶಮಾನವಾದ ತನ್ನ ದೇಹ ಕಾಂತಿಯಿಂದ ಬಹಳವಾಗಿ ಕಂಗೊಳಿಸುತ್ತಾ, ಅಲ್ಲಿಗೆ ಬಂದಳು ಯಾರ ಸಲುವಾಗಿ ಪುರುಷೋತ್ತಮನಾದ ಕೃಷ್ಣನು ಕಂಸನನ್ನು ಅವನ ಪರಿವಾರದ ಸಹಿತವಾಗಿ ಸಂಹರಿಸಿದನೋ ಅಂತಹ ಕಾಮರೂಪಿಣಿಯಾದ ಏಕಾನಂಗಾ ಎಂಬ ಹೆಸರಿನಿಂದ ಕರೆಸಿಕೊಳ್ಳುವ ಯಶೋದೆಯ ಪುತ್ರಿಯು ಅಲ್ಲಿಗೆ ಬಂದಳು.
ತತಃ ಸ ಭಗವಾನ್ ರಾಮಸ್ತಾಮುಪಾಕ್ರಮ್ಯ ಭಾಮಿನೀಮ್ |
ಮೂರ್ಧ್ನ್ಯುಪಾಘ್ರಾಯ ಸವ್ಯೇನ ಪರಿಜಗ್ರಾಹ ಪಾಣಿನಾ ॥12॥
ಆಗ ಪೂಜ್ಯನಾದ ಬಲರಾಮನು ಅವಳ ಸಮೀಪಕ್ಕೆ ಹೋಗಿ ಅವಳನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ಅವಳ ಬಲಬಾಗದಲ್ಲಿ ನಿಂತು ತನ್ನ ಎಡಗೈಯಿಂದ ಅವಳ ಕೈಯನ್ನು ಹಿಡಿದುಕೊಂಡನು.
ತಾಂ ಚ ತತ್ರೋಪಚಂಕ್ರಮ್ಯ ಪ್ರಿಯಾಮಿವ ಸಖೀಂ ಸಮಾಮ್ |
ದಕ್ಷಿಣೇನ ಕರಾಗ್ರೇಣ ಪರಿಜಗ್ರಾಹ ಮಾಧವಃ ॥13॥
ಮಾಧವನೂ ಸಹ ತನಗೆ ಸಮಾನಳಾದ ಪ್ರಿಯಳಾದ ಸ್ನೇಹಿತೆಯಂತಿದ್ದ ಅವಳ ಬಳಿಗೆ ಹೋಗಿ ಅವಳ ಎಡಬಾಗದಲ್ಲಿ ನಿಂತು ತನ್ನ ಶ್ರೇಷ್ಠವಾದ ದಕ್ಷಿಣ ಕರದಿಂದ ಅವಳನ್ನು ಹಿಡಿದುಕೊಂಡನು.
ದದೃಶುಸ್ತಾಂ ಸಭಾಮಧ್ಯೇ ಭಗಿನೀಂ ರಾಮಕೃಷ್ಣಯೋಃ |
ರುಗ್ಮಪದ್ಮಶಯಾಂ ಪದ್ಮಾಂ ಶ್ರೀಮಿವೋತ್ತಮನಾಗಯೋಃ ॥14॥
ಸಭಾಮಧ್ಯದಲ್ಲಿ ರಾಮಕೃಷ್ಣರ ಮಧ್ಯದಲ್ಲಿ ಇದ್ದ ಅವರ ತಂಗಿಯನ್ನು ಎರಡು ಗಜಗಳ ಮಧ್ಯದಲ್ಲಿ ಸುವರ್ಣಮಯವಾದ ಪದ್ಮದಲ್ಲಿರುವ ಲಕ್ಷ್ಮಿಯಂತೆ ಕಂಗೊಳಿಸುವುದನ್ನು ಎಲ್ಲರೂ ನೋಡಿದರು.
ಅಥಾಕ್ಷತಮಹಾವೃಷ್ಟ್ಯಾ ಲಾಜಪುಷ್ಪಘೃತೈರಪಿ |
ವೃಷ್ಣಯೋಽವಾಕಿರನ್ ಪ್ರೀತಾಃ ಸಂಕರ್ಷಣಜನಾರ್ದನೌ ॥15॥
ಅನಂತರ ಎಲ್ಲಾ ವೃಷ್ಣಿಗಳು ಸಂಕರ್ಷಣ ಮತ್ತು ಜನಾರ್ದನನ ತಲೆಯಮೇಲೆ ಸಂತೋಷದಿಂದ ಲಾಜ ಪುಷ್ಪ ಮತ್ತು ಘೃತಗಳ ಮಹಾವೃಷ್ಟಿಯನ್ನು ಕರೆದರು.
ಸಬಾಲಾಃ ಸಹವೃದ್ಧಾಶ್ಚ ಯೇ ಜ್ಞಾತಿಕುಲಬಾಂಧವಾಃ |
ಉಪೋಪವಿವಿಶುಃ ಪ್ರೀತಾ ವೃಷ್ಣಯೋ ಮಧುಸೂದನಮ್ ॥16॥
ಬಾಲಕರು ಮತ್ತು ವೃದ್ಧರಿಂದ ಸಹಿತರಾದ ದಾಯಾದಿಗಳು ಮತ್ತು ಕುಲಬಾಂಧವರಾದ ವೃಷ್ಣಿಗಳೆಲ್ಲರೂ ಸಂತೋಷದಿಂದ ಮಧುಸೂದನನ ಸಮೀಪದಲ್ಲಿ ಕುಳಿತರು.
ಪೂಜ್ಯಮಾನೋ ಮಹಾಬಾಹುಃ ಪೌರಾಣಾಂ ರತಿವರ್ಧನಃ |
ವಿವೇಶ ಪುರುಷವ್ಯಾಘ್ರಃ ಸ್ವವೇಶ್ಮ ಮಧುಸೂದನಃ ॥17॥
ಎಲ್ಲರಿಂದಲೂ ಪೂಜಿಸಲ್ಪಟ್ಟ ಪೌರರ ಸಂತೋಷವರ್ಧಕನಾದ ಮಹಾಬಾಹುವಾದ ಪುರುಷವ್ಯಾಘ್ರನಾದ ಮಧುಸೂದನನು ಅನಂತರ ತನ್ನ ಮನೆಯನ್ನು ಪ್ರವೇಶಿಸಿದನು.
ರುಗ್ಮಿಣ್ಯಾ ಸಹಿತೋ ದೇವ್ಯಾ ಪ್ರಮುಮೋದ ಸುಖೀ ಸುಖಮ್ |
ಅನಂತರಂ ಚ ಸತ್ಯಾಯಾ ಜಾಂಬವತ್ಯಾಶ್ಚ ಭಾರತ ॥18॥
ಎಲೈ ಭಾರತನೇ! ರುಗ್ಮಿಣಿಯಿಂದ ಸಹಿತನಾಗಿ ಸುಖಪೂರ್ಣನಾದ ಅವನು ಆನಂದಿಸಿದನು. ಆನಂತರ ಸತ್ಯಭಾಮೆಯ ಜೊತೆಯಲ್ಲಿಯೂ ಜಾಂಬವಂತಿಯ ಜೊತೆಯಲ್ಲಿಯೂ ಸಂತೋಷಪಟ್ಟನು.
ಸರ್ವಾಸಾಂ ಚ ಯದುಶ್ರೇಷ್ಠಃ ಸರ್ವಕಾಲವಿಹಾರವಾನ್ |
ಜಗಾಮ ಚ ಹೃಷೀಕೇಶೋ ರುಗ್ಮಿಣ್ಯಾಃ ಸ ನಿವೇಶನಮ್ ॥19॥
ತನ್ನ ಎಲ್ಲಾ ಪತ್ನಿಯರಿಗೂ ಎಲ್ಲಾ ಕಾಲದಲ್ಲಿಯೂ ಸಂತೋಷವನ್ನು ಕೊಡುವ ಯದುಶ್ರೇಷ್ಠನಾದ ಹೃಷಿಕೇಶನು ಎಲ್ಲರನ್ನೂ ಸಂತೋಷಪಡಿಸಿ ರುಗ್ಮಿಣಿಯ ಗೃಹಕ್ಕೆ ಬಂದನು.

ಏಷ ತಾತ ಮಹಾಬಾಹೋ ವಿಜಯಃ ಶಾರ್ಙ್ಗಧನ್ವನಃ |
ಏತದರ್ಥಂ ಚ ಜನ್ಮಾಹುರ್ಮಾನುಷೇಷು ಮಹಾತ್ಮನಃ ||20||
ಪ್ರೀತಿಪಾತ್ರನಾದ ಮಹಾಬಾಹುವೇ! ಇದು ಶಾರ್ಙ್ಗಧಾರಿಯಾದ ಕೃಷ್ಣನ ವಿಜಯ. ಮಹಾತ್ಮನಾದ ಅವನು ಈ ಕಾರ್ಯಗಳಿಗಾಗಿ ಮನುಷ್ಯಲೋಕದಲ್ಲಿ ಅವತಾರ ಮಾಡಿರುವನೆಂದು ಜ್ಞಾನಿಗಳು ಹೇಳುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುಃಪಂಚಾಶೋಧ್ಯಾಯಃ ||
|| ಅರ್ಘಾಭಿಹರಣಪರ್ವಣಿ ತ್ರಯೋವಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಐವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
*****
ಐವತ್ತೈದನೆಯ ಅಧ್ಯಾಯ
(ಬಾಣನನ್ನು ಯುದ್ಧದಲ್ಲಿ ಸೋಲಿಸಿ ಅನಿರುದ್ಧನನ್ನು ಬಿಡಿಸಿ ಕೃಷ್ಣನ ಪ್ರತಿನಿವೃತ್ತಿ)
ಭೀಷ್ಮಃ
ದ್ವಾರಕಾಯಾಂ ತತಃ ಕೃಷ್ಣಃ ಸ್ವದಾರೇಷು ದಿವಾನಿಶಮ್ |
ಸುಖಂ ಲಬ್ಧ್ವಾ ಮಹಾರಾಜ ಪ್ರಮುಮೋದ ಮಹಾಯಶಾಃ ||1||
ಅನಂತರ ಮಹಾಕೀರ್ತಿಶಾಲಿಯಾದ ಕೃಷ್ಣನು ದ್ವಾರಕೆಯಲ್ಲಿ ತನ್ನ ಪತ್ನಿಯರ ಜೊತೆಯಲ್ಲಿ ಹಗಲೂ ರಾತ್ರಿಯೂ ಸುಖವನ್ನು ಪಡೆದು ಆನಂದಿಸಿದನು.
ಪೌತ್ರಸ್ಯ ಕಾರಣಾಚ್ಚಕ್ರೇ ವಿಬುಧಾನಾಂ ಪ್ರಿಯಂ ತದಾ |
ಸವಾಸವೈಃ ಸುರೈಃ ಸರ್ವೈರ್ದುಸ್ತರಂ ಭರತರ್ಷಭ ||2||
ಭರತರ್ಷಭನೇ! ತನ್ನ ಪೌತ್ರನ ಕಾರಣದಿಂದಾಗಿ ಇಂದ್ರಾದಿ ದೇವತೆಗಳಿಂದ ಮಾಡಲು ಅಸಾಧ್ಯವಾದ ದೇವತೆಗಳಿಗೆ ಪ್ರಿಯವಾದ ಒಂದು ಕಾರ್ಯವನ್ನು ಮಾಡಿದನು.
ಬಾಣೋ ನಾಮಾಭವದ್ ರಾಜಾ ಬಲೇರ್ಜ್ಯೇಷ್ಠಸುತೋ ಬಲೀ |
ವೀರ್ಯವಾನ್ ಭರತಶ್ರೇಷ್ಠ ಸ ಚ ಬಾಹುಸಹಸ್ರವಾನ್ ||3||
ಎಲೈ ಭರತಶ್ರೇಷ್ಠನೇ! ಬಲಿಯ ಜ್ಯೇಷ್ಠಸುತನಾದ ಬಾಣನೆಂಬ ರಾಜನಿದ್ದನು. ಅವನು ಬಲಿಷ್ಠನೂ ಪರಾಕ್ರಮಶಾಲಿಯೂ ಸಹಸ್ರ ಬಾಹುಗಳನ್ನು ಹೊಂದಿದವನೂ ಆಗಿದ್ದನು.
ತತಸ್ತೇಪೇ ತಪಸ್ತೀವ್ರಂ ಸತ್ಯೇನ ಮನಸಾ ನೃಪ |
ರುದ್ರಮಾರಾಧಯಾಮಾಸ ಸ ಚ ಬಾಣಃ ಸಮಾ ಬಹು |
ತಸ್ಮೈ ಬಹುವರಾ ದತ್ತಾಃ ಶಂಕರೇಣ ಮಹಾತ್ಮನಾ ||4||
ಎಲೈ ರಾಜನೇ! ಅವನು ಶುದ್ಧವಾದ ಮನಸ್ಸಿನಿಂದ ತೀವ್ರವಾದ ತಪಸ್ಸನ್ನು ಬಹುವರ್ಷಗಳವರೆಗೆ ಆಚರಿಸಿ ರುದ್ರನನ್ನು ಸಂತೋಷಪಡಿಸಿದನು. ಮಹಾತ್ಮನಾದ ಶಂಕರನು ಬಾಣನಿಗೆ ಅನೇಕ ವರಗಳನ್ನು ದಯಪಾಲಿಸಿದನು.
ತಾಂಶ್ಚ ಲಬ್ಧ್ವಾ ವರಾನ್ ಬಾಣೋ ದುರ್ಲಭಾನಸುರೋ ಭುವಿ |
ಸ ಶೋಣಿತಪುರೇ ರಾಜ್ಯಂ ಚಕಾರಾಪ್ರತಿಮೋ ಬಲೀ |
ತ್ರಾಸಿತಾಶ್ಚ ಸುರಾಃ ಸರ್ವೇ ತೇನ ಬಾಣೇನ ಪಾಂಡವ ||5||
ಬಾಣಾಸುರನು ಭೂಮಿಯಲ್ಲಿ ದುರ್ಲಭವಾದ ಆ ವರಗಳನ್ನು ಪಡೆದು ಬಲಿಷ್ಠನೂ ಅಸದೃಶನೂ ಆಗಿ ಶೋಣಿತಪುರವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯವನ್ನು ಆಳಿದನು. ಎಲೈ ಪಾಂಡವನೇ! ಆ ಬಾಣನು ಎಲ್ಲಾ ದೇವತೆಗಳಿಗೂ ಹೆದರಿಕೆಯನ್ನು ಉಂಟುಮಾಡಿದನು.
ವಿಜಿತ್ಯ ವಿಬುಧಾನ್ ಸರ್ವಾನ್ ಸೇಂದ್ರಾನ್ ಬಾಣಃ ಸಮಾ ಬಹು |
ಅಶಾಸತ ಮಹದ್ರಾಜ್ಯಂ ಕುಬೇರ ಇವ ಭಾರತ ||6||
ಎಲೈ ಭಾರತನೇ! ಆ ಬಾಣನು ಇಂದ್ರನೇ ಮೊದಲಾದ ಎಲ್ಲಾ ದೇವತೆಗಳನ್ನೂ ಗೆದ್ದು ಅನೇಕ ವರ್ಷಗಳ ಕಾಲ ಕುಬೇರನಂತೆ ದೊಡ್ಡ ರಾಜ್ಯವನ್ನು ಆಳಿದನು.
ತತೋ ರಾಜನ್ನುಷಾ ನಾಮ ಬಾಣಸ್ಯ ದುಹಿತಾ ತಥಾ |
ರೂಪೇಣಾಪ್ರತಿಮಾ ಲೋಕೇ ಮೇನಕಾಯಾಃ ಸುತಾ ಯಥಾ ||7||
ಎಲೈ ರಾಜನೇ! ಆ ಬಾಣನಿಗೆ ಮೇನಕೆಯ ಮಗಳಾದ ಪಾರ್ವತಿಯಂತೆ ಸುಂದರಿಯಾದ ರೂಪದಲ್ಲಿ ಅಸದೃಶಳಾದ ಉಷಾ ಎಂಬ ಹೆಸರಿನ ಒಬ್ಬ ಮಗಳಿದ್ದಳು.
ಅಥೋಪಾಯೇನ ಕೌಂತೇಯ ಅನಿರುದ್ಧೋ ಮಹಾದ್ಯುತಿಃ |
ಪ್ರಾದ್ಯುಮ್ನಿಸ್ತಾಮುಷಾಂ ಪ್ರಾಪ್ಯ ಪ್ರಚ್ಛನ್ನಃ ಪ್ರಮುಮೋದ ಹ ||8||
ಎಲೈ ಕೌಂತೇಯನೇ! ಪ್ರದ್ಯುಮ್ನನ ಮಗನಾದ ಅನಿರುದ್ಧನು ಹೇಗೋ ಉಪಾಯದಿಂದ ಆ ಉಷೆಯನ್ನು ಪಡೆದು ಯಾರಿಗೂ ತಿಳಿಯದಂತೆ ಅವಳ ಜೊತೆಯಲ್ಲಿ ಸಂತೋಷದಿಂದ ಇದ್ದನು.
ಏತಸ್ಮಿನ್ನೇವ ಕಾಲೇ ತು ನಾರದೋ ಮುನಿಪುಂಗವಃ |
ದ್ವಾರಕಾಂ ಪ್ರಾಪ್ಯ ಕೌಂತೇಯ ಕೃಷ್ಣಂ ದೃಷ್ಟ್ವಾ ವಚೋಽಬ್ರವೀತ್ ||
ಆ ಕಾಲಕ್ಕೆ ಸರಿಯಾಗಿ ಮುನಿಶ್ರೇಷ್ಠರಾದ ನಾರದರು ದ್ವಾರಕೆಗೆ ಬಂದು ಕೃಷ್ಣನನ್ನು ನೋಡಿ ಈ ಮಾತುಗಳನ್ನು ಹೇಳಿದರು.

ಕೃಷ್ಣ ಕೃಷ್ಣ ಮಹಾಬಾಹೋ ಯದೂನಾಂ ಕೀರ್ತಿವರ್ಧನ |
ತ್ವತ್ಪೌತ್ರೋ ಬಾಧ್ಯಮಾನೋಽಥ ಬಾಣೇನಾಮಿತತೇಜಸಾ |
ಕೃಚ್ಛ್ರಂ ಪ್ರಾಪ್ತೋಽನಿರುದ್ಧೋ ವೈ ಶೇತೇ ಕನ್ಯಾಪುರೇ ಸದಾ ॥10॥
ಮಹಾಬಾಹುವಾದ ಯದುವಂಶಕೀರ್ತಿವರ್ಧನನಾದ ಎಲೈ ಕೃಷ್ಣನೇ! ನಿನ್ನ ಪೌತ್ರನು ಅಮಿತ ಪರಾಕ್ರಮಿಯಾದ ಬಾಣನಿಂದ ಪೀಡೆಗೆ ಒಳಗಾಗಿ ಕಷ್ಟವನ್ನು ಹೊಂದಿದವನಾಗಿ ಕನ್ಯಾಂತಃಪುರದಲ್ಲಿ ಸದಾ ವಾಸಮಾಡುತ್ತಿದ್ದಾನೆ.
ಭೀಷ್ಮಃ
ಏತದುಕ್ತ್ವಾ ಸುರಾರ್ಷಿರ್ವೈ ಬಾಣಸ್ಯಾಥ ಪುರಂ ಯಯೌ |
ನಾರದಸ್ಯ ವಚಃ ಶ್ರುತ್ವಾ ತತೋ ರಾಜನ್ ಜನಾರ್ದನಃ ॥11॥
ಆಹೂಯ ಬಲದೇವಂ ವೈ ಪ್ರದ್ಯುಮ್ನಂ ಚ ಮಹಾದ್ಯುತಿಃ |
ಆರುರೋಹ ಗರುತ್ಮಂತಂ ತಾಭ್ಯಾಂ ಸಹ ಜನಾರ್ದನಃ ॥12॥
ಸುರ ಋಷಿಗಳಾದ ನಾರದರು ಹೀಗೆ ಹೇಳಿ ಅನಂತರ ಬಾಣನ ಪುರಕ್ಕೆ ಹೊರಟರು. ನಾರದರ ಮಾತನ್ನು ಕೇಳಿ ಜನಾರ್ದನನು ಬಲದೇವನನ್ನೂ ಪ್ರದ್ಯುಮ್ನನನ್ನೂ ಕರೆದು ಮಹಾಕಾಂತಿಯುಕ್ತನಾದ ಅವನು ಅವರಿಬ್ಬರ ಜೊತೆಯಲ್ಲಿ ಗರುಡನನ್ನು ಏರಿದನು.
ತತಃ ಸುಪರ್ಣಮಾರುಹ್ಯ ತ್ರಯಸ್ತೇ ಪುರುಷರ್ಷಭಾಃ |
ಜಗ್ಮುಃ ಕ್ರುದ್ಧಾ ಮಹಾವೀರ್ಯಾ ಬಾಣಸ್ಯ ನಗರಂ ಪ್ರತಿ ॥13॥
ಅನಂತರ ಪುರುಷಶ್ರೇಷ್ಠರಾದ ಮಹಾಪರಾಕ್ರಮಿಗಳಾದ ಕ್ರುದ್ಧರಾದ ಆ ಮೂವರೂ ಸಹ ಗರುಡನನ್ನು ಏರಿ ಬಾಣಾಸುರನ ನಗರದ ಕಡೆಗೆ ಹೊರಟರು.
ಅಥಾಸಾದ್ಯ ಮಹಾರಾಜ ತತ್ಪುರೀಂ ದದೃಶುಶ್ಚ ತೇ |
ತಾಮ್ರಪ್ರಾಕಾರಸಂವೀತಾಂ ರೂಪ್ಯದ್ವಾರೈಶ್ಚ ಶೋಭಿತಾಮ್ ॥14॥
ಹೇಮಪ್ರಾಸಾದಸಂಬಾಧಾಂ ಮುಕ್ತಾಮಣಿವಿಚಿತ್ರಿತಾಮ್ |
ಉದ್ಯಾನವನಸಂಪನ್ನಾಂ ನೃತ್ತಗೀತೈಶ್ಚ ಶೋಭಿತಾಮ್ ॥15॥
ಎಲೈ ಮಹಾರಾಜನೇ! ಅನಂತರ ಬಾಣನ ಪುರವನ್ನು ತಲುಪಿ ಅವರು ತಾಮ್ರದ ಪ್ರಾಕಾರದಿಂದ ಗುಪ್ತವಾಗಿದ್ದಂತಹ ರಜತದ್ವಾರಗಳಿಂದ ಶೋಭಿತವಾಗಿದ್ದಂತಹ ಸುವರ್ಣಾಲಂಕೃತವಾಗಿದ್ದಂತಹ ಮತ್ತು ಮುಕ್ತಾಮಣಿಗಳಿಂದ ವಿಭೂಷಿತವಾದ ಪ್ರಾಸಾದಗಳಿಂದ ನಿಬಿಡವಾಗಿದ್ದಂತಹ ಉದ್ಯಾನವನಗಳಿಂದ ಸಂಪನ್ನವಾಗಿ ನೃತ್ಯಗೀತೆಗಳಿಂದ ಶೋಭಿಸುತ್ತಿದ್ದಂತಹ ಆ ಪಟ್ಟಣವನ್ನು ನೋಡಿದರು.
ತಾಂ ಪುರೀಂ ಸ್ವರ್ಗಸಂಕಾಶಾಂ ಹೃಷ್ಟಪುಷ್ಟಜನಾಕುಲಾಮ್ |
ದೃಷ್ಟ್ವಾ ಮುದಾ ಯುತಾಂ ಹೈಮಾಂ ವಿಸ್ಮಯಂ ಪರಮಂ ಯಯುಃ ॥
ಅವರು ಸ್ವರ್ಗದಂತೆ ಶೋಭಿಸುತ್ತಿರುವ ಹೃಷ್ಟಪುಷ್ಟಜನಾಕೀರ್ಣವಾದ ಸಂತೋಷದಿಂದ ತುಂಬಿದ ಸ್ವರ್ಣಮಯವಾದ ಆ ಪಟ್ಟಣವನ್ನು ನೋಡಿ ಪರಮಾಶ್ಚರ್ಯವನ್ನು ಹೊಂದಿದರು.
ತಸ್ಯ ಬಾಣಪುರಸ್ಯಾಸನ್ ದ್ವಾರಸ್ಥಾ ದೇವತಾಃ ಸದಾ |
ಮಹೇಶ್ವರೋ ಗುಹಶ್ಚೈವ ಭದ್ರಕಾಳೀ ಚ ಪಾವಕಃ |
ಏತಾ ವೈ ದೇವತಾ ರಾಜನ್ ರರಕ್ಷುಸ್ತಾಂ ಪುರೀಂ ಸದಾ ॥17॥
ಆ ಬಾಣನ ಪಟ್ಟಣದಲ್ಲಿ ದ್ವಾರಪಾಲಕರಾಗಿ ರುದ್ರ ಷಣ್ಮುಖ ಭದ್ರಕಾಳೀ ಮತ್ತು ಅಗ್ನಿ ಈ ದೇವತೆಗಳು ಯಾವಾಗಲೂ ಇರುತ್ತಿದ್ದರು. ರಾಜನೇ! ಈ ದೇವತೆಗಳು ಯಾವಾಗಲೂ ಅವನ ಪಟ್ಟಣವನ್ನು ರಕ್ಷಿಸುತ್ತಿದ್ದರು.
ಅಥ ಕೃಷ್ಣೋ ಬಲಾಜ್ಜಿತ್ವಾ ದ್ವಾರಪಾಲಾನ್ ಯುಧಿಷ್ಠಿರ |
ಸ ಸಂಕ್ರುದ್ಧೋ ಮಹಾತೇಜಾಃ ಶಂಖಚಕ್ರಗದಾಸಿಧೃಕ್ |
ಆಸಸಾದೋತ್ತರದ್ವಾರಂ ಶಂಕರೇಣಾಭಿರಕ್ಷಿತಮ್ ॥18॥
ಎಲೈ ಯುಧಿಷ್ಠಿರನೇ! ಅನಂತರ ಶಂಖ ಚಕ್ರ ಗದಾ ಖಡ್ಗಧಾರಿಯಾದ ಕೃಷ್ಣನು ತನ್ನ ಬಲದಿಂದ ಷಣ್ಮುಖ ಭದ್ರಕಾಳಿ ಮತ್ತು ಅಗ್ನಿಗಳನ್ನು ಗೆದ್ದು ಮಹಾತೇಜಸ್ವಿಯಾದ ಅವನು ಕ್ರೋಧದಿಂದ ಕೂಡಿದವನಾಗಿ ಶಂಕರನಿಂದ ರಕ್ಷಿತವಾದ ಉತ್ತರ ದ್ವಾರವನ್ನು ತಲುಪಿದನು.
ತತ್ರ ತಸ್ಥೌ ಮಹಾತೇಜಾಃ ಶೂಲಪಾಣಿರ್ಮಹೇಶ್ವರಃ |
ಪಿನಾಕಂ ಸಶರಂ ಗೃಹ್ಯ ಬಾಣಸ್ಯ ಹಿತಕಾಮ್ಯಯಾ |
ಜ್ಞಾತ್ವಾ ತಮಾಗತಂ ಕೃಷ್ಣಂ ವ್ಯಾದಿತಾಸ್ಯಮಿವಾಂತಕಮ್ ॥19॥
ಬಾಯಿತೆಗೆದ ಮೃತ್ಯುವಿನಂತೆ ಕೃಷ್ಣನು ಸಮಾಗತನಾದುದನ್ನು ತಿಳಿದು ಮಹಾತೇಜಸ್ವಿಯಾದ ಶೂಲಪಾಣಿಯಾದ ಶಂಕರನು ಬಾಣನಿಗೆ ಹಿತವನ್ನು ಉಂಟುಮಾಡುವ ಇಚ್ಛೆಯಿಂದ ಪಿನಾಕವನ್ನೂ ಮತ್ತು ಬಾಣವನ್ನೂ ಕೈಯಲ್ಲಿ ಹಿಡಿದು ನಿಂತನು.
ತತಸ್ತೌ ಚಕ್ರತುರ್ಯುದ್ಧಂ ವಾಸುದೇವಮಹೇಶ್ವರೌ |
ತದ್ಯುದ್ಧಮಭವದ್ ಘೋರಮಚಿಂತ್ಯಂ ರೋಮಹರ್ಷಣಮ್ ॥20॥
ಆಗ ಕೃಷ್ಣ ಮತ್ತು ಮಹೇಶ್ವರರು ಯುದ್ಧವನ್ನು ಮಾಡಿದರು. ಆ ಯುದ್ಧವು ಅಚಿಂತ್ಯವೂ ಘೋರವೂ ಮತ್ತು ರೋಮಾಂಚನಕಾರಿಯೂ ಆಗಿದ್ದಿತು.
ಅನ್ಯೋನ್ಯಂ ತೌ ತತಕ್ಷಾತೇ ಅನ್ಯೋನ್ಯಜಯಕಾಂಕ್ಷಿಣೌ|
ದಿವ್ಯಾನ್ಯಸ್ತ್ರಾಣಿ ತೌ ದೇವೌ ಕ್ರುದ್ಧೌ ಮುಮುಚತುಸ್ತದಾ ॥21॥

ಪರಸ್ಪರಜಯಾಕಾಂಕ್ಷಿಗಳಾದ ಅವರು ಪರಸ್ಪರವಾಗಿ ಘಾತಿಸಿದರು. ಆ ಇಬ್ಬರು ದೇವತೆಗಳೂ ಕೋಪದಿಂದ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು.
ತತಃ ಕೃಷ್ಣೋ ರಣಂ ಕೃತ್ವಾ ಮುಹೂರ್ತಂ ಶೂಲಪಾಣಿನಾ |
ವಿಜಿತ್ಯ ತಂ ಮಹಾದೇವಂ ತತೋ ಯುದ್ಧೇ ಜನಾರ್ದನಃ |
ಅನ್ಯಾಂಶ್ಚ ಜಿತ್ವಾ ದ್ವಾರಸ್ಥಾನ್ ಪ್ರವಿವೇಶ ಪುರೋತ್ತಮಮ್ ॥22॥
ಆಗ ಕೃಷ್ಣನು ಒಂದು ಮುಹೂರ್ತಕಾಲ ಶೂಲಪಾಣಿಯ ಜೊತೆಯಲ್ಲಿ ಯುದ್ಧವನ್ನು ಮಾಡಿ ಮಹಾದೇವನನ್ನು ಯುದ್ಧದಲ್ಲಿ ಗೆದ್ದು ಉಳಿದ ದ್ವಾರಪಾಲಕರನ್ನೂ ಗೆದ್ದು ಪಟ್ಟಣವನ್ನು ಪ್ರವೇಶಿಸಿದನು.
ಪ್ರವಿಶ್ಯ ಬಾಣಮಾಸಾದ್ಯ ಸ ತತ್ರಾಥ ಜನಾರ್ದನಃ |
ಚಕ್ರೇ ಯುದ್ಧಂ ಮಹಾಕ್ರುದ್ಧಸ್ತೇನ ಬಾಣೇನ ಪಾಂಡವ ॥23॥
ಎಲೈ ಪಾಂಡವನೇ! ಜನಾರ್ದನನು ಪಟ್ಟಣವನ್ನು ಪ್ರವೇಶಿಸಿ ಬಾಣಸುರನನ್ನು ಸಮೀಪಿಸಿ ಮಹಾಕ್ರೋಧದಿಂದ ಕೂಡಿದವನಾಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಬಾಣೋಽಪಿ ಸರ್ವಶಸತ್ರಣಿ ಶಿತಾನಿ ಭರತರ್ಷಭ |
ಸುಸಂಕ್ರುದ್ಧಸ್ತದಾ ಯುದ್ಧೇ ಪಾತಯಾಮಾಸ ಕೇಶವೇ ॥24॥
ಭರತರ್ಷಭನೇ! ಬಾಣನೂ ಸಹ ಬಹಳ ಕೋಪಗೊಂಡವನಾಗಿ ಯುದ್ಧದಲ್ಲಿ ಎಲ್ಲಾ ನಿಶಿತವಾದ ಅಸ್ತ್ರಗಳನ್ನೂ ಕೃಷ್ಣನ ಮೇಲೆ ಪ್ರಯೋಗಿಸಿದನು.
ಪುನರುದ್ಯಮ್ಯ ಶಸತ್ರಣಾಂ ಸಹಸ್ರಂ ಸರ್ವಬಾಹುಭಿಃ |
ಮುಮೋಚ ಬಾಣಃ ಸಂಕ್ರುದ್ಧಃ ಕೃಷ್ಣಂ ಪ್ರತಿ ರಣಾಜಿರೇ ॥25॥
ಬಾಣನು ಪುನಃ ಮಹಾಪ್ರಯತ್ನವನ್ನು ಮಾಡಿ ತನ್ನ ಸಹಸ್ರಬಾಹುಗಳಲ್ಲಿ ಸಹಸ್ರ ಶಸ್ತ್ರಗಳನ್ನು ಹಿಡಿದು ಯುದ್ಧದಲ್ಲಿ ಕೋಪದಿಂದ ಕೃಷ್ಣನ ಮೇಲೆ ಅವುಗಳನ್ನು ಪ್ರಯೋಗಿಸಿದನು.
ತತಃ ಕೃಷ್ಣಸ್ತು ಸಂಛಾದ್ಯ ತಾನಿ ಸರ್ವಾಣಿ ಭಾರತ |
ಕೃತ್ವಾ ಮುಹೂರ್ತಂ ಬಾಣೇನ ಯುದ್ಧಂ ರಾಜನ್ನಧೋಕ್ಷಜಃ ॥26॥
ಚಕ್ರಮುದ್ಯಮ್ಯ ರೋಷಾದ್ ವೈ ದಿವ್ಯಂ ಶಸೊತ್ರೇತ್ತಮಂ ತತಃ |
ಸಹಸ್ರಬಾಹೂಂಶ್ಚಿಚ್ಛೇದ ಬಾಣಸ್ಯಾಮಿತತೇಜಸಃ ॥27॥
ಎಲೈ ಭಾರತನೇ! ಆಗ ಕೃಷ್ಣನು ಆ ಎಲ್ಲಾ ಶಸ್ತ್ರಗಳನ್ನು ಛೇದಿಸಿ ಒಂದು ಮುಹೂರ್ತಕಾಲ ಬಾಣನ ಜೊತೆಯಲ್ಲಿ ಯುದ್ಧವನ್ನುಮಾಡಿ ಅನಂತರ ರೋಷದಿಂದ ಶ್ರೇಷ್ಠವಾದ ತನ್ನ ದಿವ್ಯವಾದ ಚಕ್ರವನ್ನು ಎತ್ತಿ ಅಮಿತಪರಾಕ್ರಮಿಯಾದ ಬಾಣನ ಸಹಸ್ರ ಬಾಹುಗಳನ್ನು ಅದರಿಂದ ಕತ್ತರಿಸಿದನು.
ತತೋ ಬಾಣೋ ಮಹಾರಾಜ ಕೃಷ್ಣೇನ ಭೃಶಪೀಡಿತಃ |
ಛಿನ್ನಬಾಹುಃ ಪಪಾತಾಶು ವಿಶಾಖ ಇವ ಪಾದಪಃ ॥28॥
ಮಹಾರಾಜನೇ! ಆಗ ಬಾಣನು ಕೃಷ್ಣನಿಂದ ಬಹಳ ಪೀಡಿತನಾಗಿ ಎಲ್ಲಾ ಬಾಹುಗಳನ್ನೂ ಕಳೆದುಕೊಂಡು ಕೊಂಬೆಗಳೇ ಇಲ್ಲದ ವೃಕ್ಷದಂತೆ ಭೂಮಿಯ ಮೇಲೆ ಬಿದ್ದನು.
ಸ ಪಾತಯಿತ್ವಾ ಬಾಲೇಯಂ ಬಾಣಂ ಕೃಷ್ಣಸ್ತ್ವರಾನ್ವಿತಃ |
ಪ್ರಾದ್ಯುಮ್ನಿಂ ಮೋಕ್ಷಯಾಮಾಸ ಕ್ಷಿಪ್ರಂ ಕಾರಾಗೃಹೇ ತದಾ ॥29॥
ಕೃಷ್ಣನು ಯುದ್ಧದಲ್ಲಿ ಬಲಿಯ ಮಗನಾದ ಬಾಣನನ್ನು ಕೆಡವಿ ತ್ವರೆಯಿಂದ ಕೂಡಿ ಕಾರಾಗೃಹಕ್ಕೆ ಹೋಗಿ ಶೀಘ್ರವಾಗಿ ಪ್ರದ್ಯುಮ್ನನ ಮಗನಾದ ಅನಿರುದ್ಧನನ್ನು ಬಿಡಿಸಿದನು.
ಮೋಕ್ಷಯಿತ್ವಾಽಥ ಗೋವಿಂದಃ ಪ್ರಾದ್ಯುಮ್ನಿಂ ಸಹ ಭಾರ್ಯಯಾ |
ಬಾಣಸ್ಯ ಸರ್ವರತ್ನಾನಿ ಅಸಂಖ್ಯಾನಿ ಜಹಾರ ಸಃ ॥30॥
ಗೋವಿಂದನು ಅನಿರುದ್ಧನನ್ನು ಅವನ ಪತ್ನಿಯ ಜೊತೆಯಲ್ಲಿ ಬಿಡುಗಡೆಮಾಡಿ ಬಾಣನ ಅಸಂಖ್ಯ ರತ್ನಗಳನ್ನು ತೆಗೆದುಕೊಂಡನು.
ಗೋಧನಾನಿ ಚ ಸರ್ವಸ್ವಂ ಸ ಬಾಣಸ್ಯಾಲಯೇ ಬಲಾತ್ |
ಜಹಾರ ಚ ಹೃಷೀಕೇಶೋ ಯದೂನಾಂ ಕುಲವರ್ಧನಃ ॥31॥
ಯದುಗಳ ಕುಲವರ್ಧನನಾದ ಹೃಷೀಕೇಶನು ಬಾಣನ ಮನೆಯಲ್ಲಿರುವ ಗೋಧನವನ್ನೂ ಸರ್ವಸಂಪತ್ತನ್ನೂ ತನ್ನ ಸಾಮರ್ಥ್ಯದಿಂದ ತೆಗೆದುಕೊಂಡನು.
ತತಃ ಸ ಸರ್ವರತ್ನಾನಿ ಚಾಹೃತ್ಯ ಮಧುಸೂದನಃ |
ಕ್ಷಿಪ್ರಮಾರೋಪಯಾಂಚಕ್ರೇ ಸರ್ವಸ್ವಂ ಗರುಡೋಪರಿ ॥32॥
ಅನಂತರ ಮಧುಸೂದನನು ಬಾಣನ ಸರ್ವ ಸಂಪತ್ತನ್ನೂ ತೆಗೆದುಕೊಂಡು ಶೀಘ್ರವಾಗಿ ಅವೆಲ್ಲವನ್ನೂ ಗರುಡನ ಮೇಲೆ ಏರಿಸಿದನು.
ತ್ವರಯಾಽಥ ಸ ಕೌಂತೇಯ ಬಲದೇವಂ ಮಹಾಬಲಮ್ |
ಪ್ರಾದ್ಯುಮ್ನಿಂ ಚ ಮಹಾವೀರ್ಯಮನಿರುದ್ಧಂ ಮಹಾದ್ಯುತಿಮ್ |
ಉಷಾಂ ಚ ಸುದತೀಂ ರಾಜನ್ ಭೃತ್ಯದಾಸೀಗಣೈಃ ಸಹ ॥33॥
ಸರ್ವಾನೇತಾನ್ ಸಮಾರೋಪ್ಯ ಗರುಡೋಪರಿ ವೀರ್ಯವಾನ್ |
ಮುದಾ ಯುಕ್ತೋ ಮಹಾತೇಜಾಃ ಪೀತಾಂಬರಧರೋ ಬಲೀ ॥34॥
ದಿವ್ಯಾಭರಣಚಿತ್ರಾಂಗಃ ಶಂಖಚಕ್ರಗದಾಸಿಧೃಕ್ |

ಆರುರೋಹ ಗರುತ್ಮಂತ ಮುದಯಂ ಭಾಸ್ಕರೋ ಯಥಾ ॥35॥
ಕೌಂತೇಯನೇ! ಅನಂತರ ಪೀತಾಂಬರಧಾರಿಯಾದ ಬಲಿಷ್ಠನಾದ ಮಹಾತೇಜಸ್ವಿಯಾದ ಪರಾಕ್ರಮಶಾಲಿಯಾದ ಕೃಷ್ಣನು ದಿವ್ಯಾಭರಣಗಳಿಂದ ಅಲಂಕೃತನಾಗಿ ಶಂಖ ಚಕ್ರ ಗದಾ ಖಡ್ಗಧಾರಿಯಾಗಿ ಮಹಾಬಲನಾದ ಬಲರಾಮನನ್ನೂ ಮಹಾಪರಾಕ್ರಮಿಯಾದ ಮಹಾಕಾಂತಿವಂತನಾದ ಪ್ರದ್ಯುಮ್ನನ ಮಗನಾದ ಆನಿರುದ್ಧನನ್ನೂ ಸುಂದರಿಯಾದ ಉಷೆಯನ್ನೂ ಅವಳ ದಾಸದಾಸಿಗಣವೆಲ್ಲವನ್ನೂ ಗರುಡನ ಮೇಲೆ ಏರಿಸಿ ತಾನೂ ಸಹ ಭಾಸ್ಕರನು ಉದಯಗಿರಿಯನ್ನು ಏರಿದಂತೆ ಗರುಡನ ಮೇಲೆ ಏರಿದನು.
ಅಥಾರುಹ್ಯ ಸುಪರ್ಣಂ ಸ ಪ್ರಯಯೌ ದ್ವಾರಕಾಂ ಪ್ರತಿ |
ಪ್ರವಿಶ್ಯ ಸ್ವಪುರಂ ಕೃಷ್ಣೋ ಯಾದವೈಃ ಸಹಿತಸ್ತತಃ |
ಪ್ರಮುಮೋದ ತದಾ ರಾಜನ್ ಸ್ವರ್ಗಸ್ಥೋ ವಾಸವೋ ಯಥಾ ॥36॥
ಕೃಷ್ಣನು ಗರುಡನನ್ನು ಏರಿ ದ್ವಾರಕೆಯನ್ನು ಕುರಿತು ಹೊರಟು ದ್ವಾರಕೆಯನ್ನು ಪ್ರವೇಶಿಸಿ ಎಲ್ಲಾ ಯಾದವರಿಂದಲೂ ಸಹಿತನಾಗಿ ಸ್ವರ್ಗದಲ್ಲಿ ಇರುವ ಇಂದ್ರನಂತೆ ಆನಂದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚಪಂಚಾಶೋಽಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತೈದನೆಯ ಅಧ್ಯಾಯವು ಮುಗಿಯಿತು.
****

ಐವತ್ತಾರನೆಯ ಅಧ್ಯಾಯ
(ಭೀಷ್ಮರಿಂದ ಕೃಷ್ಣನ ವಿಜಯವನ್ನು ಹೇಳಿ ಉಪಸಂಹಾರ)
ಭೀಷ್ಮಃ
ಸೂದಿತಾ ಮೌರವಾಃ ಪಾಶಾ ನಿಸುಂಭನರಕೌ ಹತೌ |
ಕೃತಕ್ಷೇಮಃ ಪುನಃ ಪಂಥಾಃ ಪುರಂ ಪ್ರಾಗ್ಜ್ಯೋತಿಷಂ ಪ್ರತಿ ॥1॥
ಮೌರವಪಾಶಗಳು ಕೃಷ್ಣನಿಂದ ನಾಶಮಾಡಲ್ಪಟ್ಟವು. ನಿಸುಂಭ ಮತ್ತು ನರಕರು ಸಂಹಾರಮಾಡಲ್ಪಟ್ಟರು. ಪ್ರಾಗ್ಜ್ಯೋತಿಷಪಟ್ಟಣದ ಮಾರ್ಗವು ಕ್ಷೇಮವಾಗಿ ಮಾಡಲ್ಪಟ್ಟಿತು.
ಶೌರಿಣಾ ಪೃಥಿವೀಪಾಲಾಃ ತ್ರಾಸಿತಾ ಭರತರ್ಷಭ |
ಧನುಷಶ್ಚ ಪ್ರಣಾದೇನ ಪಾಂಚಜನ್ಯಸ್ವನೇನ ಚ ॥2॥
ಎಲೈ ಭರತಶ್ರೇಷ್ಠನೇ! ಕೃಷ್ಣನ ಧನುಸ್ಸಿನ ಠೇಂಕಾರದಿಂದಲೂ ಮತ್ತು ಪಾಂಚಜನ್ಯದ ನಾದದಿಂದಲೂ ರಾಜರು ಹೆದರಿಹೋದರು.
ಮೇಘಪ್ರಖ್ಯೈರನೀಕೈಶ್ಚ ದಾಕ್ಷಿಣಾತ್ಯಾಭಿಸಂವೃತಮ್ |
ರುಗ್ಮಿಣಂ ತ್ರಾಸಯಾಮಾಸ ಕೇಶವೋ ಭರತರ್ಷಭ ॥3॥
ಎಲೈ ಭರತರ್ಷಭನೇ! ಮೇಘ ಸದೃಶವಾದ ದಾಕ್ಷಿಣಾತ್ಯ ಸೈನ್ಯಗಳಿಂದ ಕೂಡಿದ ರುಗ್ಮಿಯನ್ನು ಕೇಶವನು ಹೆದರಿ ನಡುಗುವಂತೆ ಮಾಡಿದನು.
ತತಃ ಪರ್ಜನ್ಯಘೋಷೇಣ ರಥೇನಾದಿತ್ಯವರ್ಚಸಾ |
ಉವಾಹ ಮಹಿಷೀಂ ಭೋಜ್ಯಾಮೇಷ ಚಕ್ರಗದಾಧರಃ ॥4॥
ಅನಂತರ ಚಕ್ರಗದಾಧರನಾದ ಇವನು ಪರ್ಜನ್ಯಘೋಷವಿದ್ದ ಆದಿತ್ಯಕಾಂತಿಯಿದ್ದ ರಥದಲ್ಲಿ ಸಾಗಿ ಭೋಜಕುಲ ರಾಜಕುಮಾರಿಯಾದ ರುಗ್ಮಿಣಿಯನ್ನು ವಿವಾಹವಾದನು.
ಆರಥ್ಯಾಮಾಹೃತಕ್ರೋಧಃ ಶಿಶುಪಾಲಶ್ಚ ನಿರ್ಜಿತಃ |
ವಕ್ರಶ್ಚ ಸಹ ಶೈಬ್ಯೇನ ಶತಧನ್ವಾ ಚ ಕ್ಷತ್ರಿಯಃ ॥5॥
ರಾಜಮಾರ್ಗದಲ್ಲಿ ಕ್ರೋಧಗೊಂಡವನಾಗಿ ಶಿಶುಪಾಲನನ್ನು ಸೋಲಿಸಿದನು. ದಂತವಕ್ರನೂ ಶೈಬ್ಯನೂ ಕ್ಷತ್ರಿಯನಾದ ಶತಧನ್ವನೂ ಅವನಿಂದ ನಿರ್ಜಿತರಾದರು.
ಇಂದ್ರದ್ಯುಮ್ನೋ ಹತಃ ಕೋಪಾದ್ ಯವನಶ್ಚ ಕಶೇರುಮಾನ್ |
ಹತಃ ಸೌಭಪತಿಶ್ಚೈಷ ಸಾಲ್ವಶ್ಚ ಕೃತಧನ್ವಿನಾ ॥6॥
ಅವನ ಕೋಪದಿಂದ ಇಂದ್ರದ್ಯುಮ್ನನು ಹತನಾದನು. ಯವನ ಕಶೇರುಮಾನ್ ಅವರೂ ಸಹ ಹತರಾದರು. ಸೌಭಪತಿಯಾದ ಸಾಲ್ವನೂ ಧನುರ್ವಿದ್ಯಾ ಪಾರಂಗತನಾದ ಕೃಷ್ಣನಿಂದ ಕೊಲ್ಲಲ್ಪಟ್ಟನು.
ಪರ್ವತಾನಾಂ ಸಹಸ್ರಂ ಚ ಚಕ್ರೇಣ ಪುರುಷೋತ್ತಮಃ |
ವಿಭಜ್ಯ ಪುಂಡರೀಕಾಕ್ಷೋ ದ್ಯುಮತ್ಸೇನಮಯೋಧಯತ್ ॥7॥
ಪುರುಷೋತ್ತಮನಾದ ಇವನು ತನ್ನ ಚಕ್ರದಿಂದ ಸಹಸ್ರಪರ್ವತಗಳನ್ನು ಸೀಳಿ ದ್ಯುಮತ್ಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿ ಸೋಲಿಸಿದನು.
ಮಹೇಂದ್ರಶಿಖರೇ ಚೈವ ನಿಮೇಷಾಂತರಚಾರಿಣೌ |
ಜಗ್ರಾಹ ಭರತಶ್ರೇಷ್ಠ ರಾವಣಸ್ಯಾಭಿತಶ್ಚರೌ ॥8॥
ಎಲೈ ಭರತಶ್ರೇಷ್ಠನೇ! ಪುಂಡರೀಕಾಕ್ಷನಾದ ಇವನು ಮಹೇಂದ್ರ ಪರ್ವತದಲ್ಲಿ ಕಣ್ಣುರೆಪ್ಪೆ ಮುಚ್ಚಿ ಬಿಡುವುದರಲ್ಲಿ ಬಹಳ ದೂರ ಹೋಗುವ ಮೈಂದ ವಿವಿದರೆಂಬ ವಾನರರನ್ನು ಸೋಲಿಸಿದನು.

ಇರಾವತ್ಯಾಮುಭೌ ವೀರಾವಗ್ನಿಸೂರ್ಯಸಮೌ ಬಲೇ |
ಗೋಪತಿಸ್ತಾಳಕೇತುಶ್ಚ ನಿಹತೌ ಶಾರ್ಙ್ಗಧನ್ವನಾ ||9||
ಶಾರ್ಙ್ಗಧಾರಿಯಾದ ಇವನು ಇರಾವತಿಯ ಸಮೀಪದಲ್ಲಿ ಅಗ್ನಿಸೂರ್ಯಸಮಾನ ಬಲವುಳ್ಳ ವೀರರಾದ ಗೋಪತಿ ಮತ್ತು ತಾಳಕೇತು ರಾಜರನ್ನು ಸಂಹರಿಸಿದನು.
ಅಕ್ಷಪ್ರಪತನೇ ಚೈವ ನೇಮಿಹಂಸಪದೇಷು ಚ |
ಉಭೌ ತಾವಪಿ ಕೃಷ್ಣೇನ ಸ್ವರಾಷ್ಟ್ರೇ ವಿನಿಪಾತಿತೌ ||10||
ಅಕ್ಷಪ್ರಪತನದೇಶದಲ್ಲಿಯೂ ನೇಮಿಹಂಸದೇಶದಲ್ಲಿಯೂ ಇದ್ದ ರಾಜರು ಅವರ ರಾಜ್ಯದಲ್ಲಿಯೇ ಕೃಷ್ಣನಿಂದ ಸಂಹರಿಸಲ್ಪಟ್ಟರು.
ದಗ್ಧಾ ವಾರಾಣಸೀ ತಾತ ಕೇಶವೇನ ಮಹಾತ್ಮನಾ |
ಸಾನುಬಂಧಃ ಸರಾಷ್ಟ್ರಶ್ಚ ಕಾಶೀನಾಮೃಷಭೋ ಹತಃ ||11||
ಪ್ರೀತಿಪಾತ್ರನೇ! ವಾರಾಣಸಿಯು ಮಹಾತ್ಮನಾದ ಕೃಷ್ಣನ ಚಕ್ರದಿಂದ ದಗ್ಧವಾಯಿತು. ಕಾಶಿಯ ರಾಜನು ತನ್ನ ರಾಷ್ಟ್ರ ಮತ್ತು ಪರಿವಾರದೊಂದಿಗೆ ಹತನಾದನು.
ಪ್ರಾಗ್ಜ್ಯೋತಿಷಪುರಂ ಶ್ರೇಷ್ಠಮಸುರೈರ್ಬಹುಭಿರ್ವೃತಮ್ |
ಪ್ರಾಪ್ಯ ಲೋಹಿತಕೂಟಾನಿ ಕೃಷ್ಣೇನ ವರುಣೋ ಜಿತಃ |
ಅಜೇಯೋ ದುಷ್ಪ್ರಧರ್ಷಶ್ಚ ಲೋಕಪಾಲೋ ಮಹಾದ್ಯುತಿಃ ||12||
ಅನೇಕ ಅಸುರರಿಂದ ಆವೃತವಾದ ಪ್ರಾಗ್ಜ್ಯೋತಿಷಪಟ್ಟಣಕ್ಕೆ ಹೋಗಿ ಸುವರ್ಣಮಯವಾದ ಗಿರಿ ಶೃಂಗಗಳನ್ನು ತಲುಪಿ ಕೃಷ್ಣನು ದುಷ್ಪ್ರಧರ್ಷನೂ ಲೋಕಪಾಲನೂ ಅಜೇಯನೂ ಮಹಾದ್ಯುತಿಯೂದ ವರುಣನನ್ನು ಸೋಲಿಸಿದನು.
ಇಂದ್ರದ್ವೀಪೋ ಮಹೇಂದ್ರೇಣ ಗುಪ್ತೋ ಮಘವತಾ ಸ್ವಯಮ್ |
ಪಾರಿಜಾತೋ ಹೃತಃ ಪಾರ್ಥ ಕೇಶವೇನ ಮಹಾತ್ಮನಾ ||13||
ಇಂದ್ರನಿಂದ ಗುಪ್ತವಾದ ಇಂದ್ರದ್ವೀಪರಾಜನನ್ನು ಸೋಲಿಸಿದನು. ಮಹಾತ್ಮನಾದ ಕೇಶವನು ಇಂದ್ರನ ವನದಿಂದ ಪಾರಿಜಾತನನ್ನು ಅಪಹರಿಸಿದನು.
ಪಾಂಡ್ಯಂ ಪೌಂಡ್ರ್ಯಂ ಚ ಮಾತ್ಸ್ಯಂ ಚ ಕಳಿಂಗಂ ಚ ಜನಾರ್ದನಃ |
ಜಘಾನ ಸಹಿತಾನ್ ಸರ್ವಾನಂಗರಾಜಂ ಚ ಮಾಧವಃ ||14||
ಜನಾರ್ದನನು ಪಾಂಡ್ಯ ಪೌಂಡ್ರ ಮತ್ಸ್ಯಕಳಿಂಗ ದೇಶದ ರಾಜರುಗಳನ್ನು ಸಂಹರಿಸಿದನು. ಮಾಧವನು ಎಲ್ಲರೂ ಜೊತೆಯಲ್ಲಿ ಯುದ್ಧಕ್ಕೆ ಬಂದಾಗ ಅಂಗರಾಜನನ್ನು ಸಂಹರಿಸಿದನು.
ಏಷ ಚೈಕಶತಂ ಹತ್ವಾ ರಥೇನ ಕ್ಷತ್ರಪುಂಗವಾನ್ |
ಗಾಂಧಾರೀಮವಹತ್ ಕೃಷ್ಣೋ ಮಹಿಷೀಂ ಯಾದವರ್ಷಭಃ ||15||
ಈ ಯಾದವರ್ಷಭನು ನೂರೊಂದು ಜನ ಕ್ಷತ್ರಿಯಶ್ರೇಷ್ಠರನ್ನು ಏಕ ರಥದಲ್ಲಿ ಯುದ್ಧಮಾಡಿ ಸೋಲಿಸಿ ಗಾಂಧಾರದೇಶದ ರಾಜಕುಮಾರಿಯಾದ ಗಾಂಧಾರಿಯನ್ನು ವಿವಾಹವಾದನು.
ಏಷ ಗಾಂಡೀವಧನ್ವಾನಂ ಕ್ರೀಡಾರ್ಥಂ ಮಧುಸೂದನಃ |
ಜಿಗಾಯ ಭರತಶ್ರೇಷ್ಠ ಕುಂತ್ಯಾಶ್ಚ ಪ್ರಮುಖೇ ವಿಭುಃ ||16||
ಎಲೈ ಭರತಶ್ರೇಷ್ಠನೇ! ಮಧುಸೂದನನು ಕ್ರೀಡಾರ್ಥವಾಗಿ ಕುಂತಿಯ ಎದುರಿನಲ್ಲಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅರ್ಜುನನನ್ನು ಸೋಲಿಸಿದನು.
ದ್ರೋಣಂ ದ್ರೌಣಿಂ ಕೃಪಂ ಕರ್ಣಂ ಭೀಮಸೇನಂ ಸುಯೋಧನಮ್|
ವಕ್ರಾನುಯಾನೇ ಸಹಿತಾನ್ ಜಿಗಾಯ ಭರತರ್ಷಭ ||17||
ಎಲೈ ಭರತರ್ಷಭನೇ! ದ್ರೋಣ ಅಶ್ವತ್ಥಾಮ ಕೃಪ ಕರ್ಣ ಭೀಮಸೇನ ಸುಯೋಧನ ಎಲ್ಲರೂ ರೈವತ ಪರ್ವತದಲ್ಲಿ ತಮ್ಮ ತಮ್ಮ ರಥದಲ್ಲಿ ವಕ್ರಗತಿಗಳಲ್ಲಿ ತನ್ನ ಜೊತೆ ಯುದ್ಧಕ್ಕೆ ಬಂದಾಗ ಅವರೆಲ್ಲರನ್ನೂ ಸೋಲಿಸಿದನು.
ಬಭ್ರೋಶ್ಚ ಪ್ರಿಯಮನ್ವಿಚ್ಛನ್ನೇಷ ಚಕ್ರಗದಾಧರಃ |
ವೇಣುದಾರಿವೃತಾಂ ಭಾರ್ಯಾಂ ಪ್ರಮಮಾಥ ಯುಧಿಷ್ಠಿರ ||18||
ಎಲೈ ಯುಧಿಷ್ಠರನೇ! ಚಕ್ರಗದಾಧರನಾದ ಇವನು ಬಭ್ರು ಎಂಬ ಯಾದವನಿಗೆ ಪ್ರಿಯವನ್ನು ಉಂಟುಮಾಡಲು ವೇಣಿದಾರಿ ಎಂಬ ಕ್ಷತ್ರಿಯನಿಗೆ ಕೊಡಬೇಕೆಂದು ಸಂಕಲ್ಪಿಸಿದ್ದ ಕನ್ಯೆಯನ್ನು ಅಪಹರಿಸಿದನು.
ಪರ್ಯಾಪ್ತಾಂ ಪೃಥಿವೀಂ ಸರ್ವಾಂ ಸಾಶ್ವಾಂ ಸರಥಕುಂಜರಾಮ್ |
ವೇಣುದಾರಿವಶೇ ಯುಕ್ತಾಂ ಜಿಗಾಯ ಮಧುಸೂದನಃ ||19||
ಮಧುಸೂದನನಾದ ಇವನು ವೇಣುದಾರಿಯ ವಶದಲ್ಲಿದ್ದ ಸಮಗ್ರವಾದ ಭೂಮಿಯನನ್ನು ಅಶ್ವರಥಕುಂಜರಗಳನ್ನೂ ಗೆದ್ದನು.
ಅವಾಪ್ಯ ತಪಸಾ ವೀರ್ಯಂ ಬಲಮೋಜಶ್ಚ ಭಾರತ |
ತ್ರಾಸಿತಾಃ ಸಗಣಾಃ ಸರ್ವೇ ಬಾಣೇನ ವಿಬುಧಾಧಿಪಾಃ ||20||
ಭಾರತನೇ! ಬಾಣನು ತಪಸ್ಸಿನ ಬಲದಿಂದ ಶೌರ್ಯಬಲ ಸಹನ ಶಕ್ತಿಗಳನ್ನು ಪಡೆದು ಎಲ್ಲಾ ದೇವಾಧಿಪರಿಗೂ ಅವರ ಪರಿವಾರಕ್ಕೂ ಭಯವನ್ನು ಉಂಟುಮಾಡಿದ್ದನು.
ವಜ್ರಾಶನಿಗದಾಪಾಶೈಃ ತ್ರಾಸಯದ್ಭಿರನೇಕಶಃ |
ತಸ್ಯ ನಾಸೀದ್ ರಣೇ ಮೃತ್ಯುರ್ದೇವೈರಪಿ ಸವಾಸವೈಃ ||21||
ಇಂದ್ರ ಮೊದಲಾದವರು ತಮ್ಮ ವಜ್ರಾಯುಧ ಅಶನಿ ಗದಾ ಪಾಶ ಮೊದಲಾದ ಆಯುಧಗಳಿಂದ ಹೆದರಿಸಿದರೂ ಅವನಿಗೆ

ಯುದ್ಧದಲ್ಲಿ ಯಾರಿಂದಲೂ ಮೃತ್ಯುವು ಇರಲಿಲ್ಲ.
ಸೋಽಭಿಭೂತಶ್ಚ ಕೃಷ್ಣೇನ ನಿಹತಶ್ಚ ಮಹಾತ್ಮನಾ |
ಛಿತ್ತ್ವಾ ಬಾಹುಸಹಸ್ರಂ ತದ್ ಗೋವಿಂದೇನ ಮಹಾತ್ಮನಾ ||22||
ಅಂತಹ ಬಾಣನನ್ನು ಮಹಾತ್ಮನಾದ ಕೃಷ್ಣನು ಅವನ ಸಹಸ್ರಬಾಹುಗಳನ್ನು ಕತ್ತರಿಸಿ ಅವನನ್ನು ಸೋಲಿಸಿದನು.
ಏಷ ಕ್ರೀಡನ್ ಮಹಾಬಾಹುಃ ಕಂಸಂ ಚ ಮಧುಸೂದನಃ |
ಪೈಠಕಂ ಚಾತಿಲೋಮಾನಂ ನಿಜಘಾನ ಜನಾರ್ದನಃ ||23||
ಈ ಮಹಾಬಾಹುವಾದ ಜನಾರ್ದನನಾದ ಮಧುಸೂದನನು ಲೀಲೆಯಿಂದಲೇ ಕಂಸನನ್ನೂ ಪೈಠಕನನ್ನೂ ಅತಿಲೋಮನನ್ನೂ ಸಂಹರಿಸಿದನು.
ಜಂಭಮೈರಾವತಂ ಚೈವ ವಿರೂಪಂ ಚ ಮಹಾಯಶಾಃ |
ಜಘಾನ ಭರತಶ್ರೇಷ್ಠ ಶಂಬರಂ ಚಾರಿಮರ್ದನಮ್ ||24||
ಎಲೈ ಭರತಶ್ರೇಷ್ಠನೇ! ಮಹಾಕೀರ್ತಿಶಾಲಿಯಾದ ಇವನು ಜಂಭನನ್ನು ಐರಾವತನನ್ನು ವಿರೂಪನನ್ನು ಮತ್ತು ಶತ್ರು ಮರ್ದನನಾದ ಶಂಬರನನ್ನು ಸಂಹರಿಸಿದನು.
ಏಷ ಭೋಗವತೀಂ ಗತ್ವಾ ವಾಸುಕಿಂ ಭರತರ್ಷಭ |
ನಿರ್ಜಿತ್ಯ ಪುಂಡರೀಕಾಕ್ಷೋ ರೌಹಿಣೇಯಮಮೋಚಯತ್ ||25||
ಭರತರ್ಷಭನೇ! ಪುಂಡರೀಕಾಕ್ಷನಾದ ಇವನು ನಾಗಲೋಕವಾದ ಭೋಗವತಿಗೆ ಹೋಗಿ ವಾಸುಕಿಯನ್ನು ಜಯಿಸಿ ರೋಹಿಣಿಯ ಪುತ್ರನನ್ನು ಬಿಡಿಸಿಕೊಂಡು ಬಂದನು.
ಏವಂ ಬಹೂನಿ ಕರ್ಮಾಣಿ ಶಿಶುರೇವ ಜನಾರ್ದನಃ |
ಕೃತವಾನ್ ಪುಂಡರೀಕಾಕ್ಷಃ ಸಂಕರ್ಷಣಸಹಾಯವಾನ್ ||26||
ಹೀಗೆ ಪುಂಡರೀಕಾಕ್ಷನಾದ ಜನಾರ್ದನನು ಸಂಕರ್ಷಣನ ಜೊತೆಯಲ್ಲಿ ಶಿಶುವಾಗಿದ್ದಾಗಲೇ ಅನೇಕ ಅದ್ಭುತಕರ್ಮಗಳನ್ನು ಮಾಡಿದನು.
ಏವಮೇಷೋಽಸುರಾಣಾಂ ಚ ಸುರಾಣಾಮಪಿ ಸರ್ವಶಃ |
ಭಯಾಭಯಕರಃ ಕೃಷ್ಣಃ ಸರ್ವಲೋಕೇಶ್ವರಃ ಪ್ರಭುಃ ||27||
ಹೀಗೆ ಅಸುರರಿಗೆ ಭಯವನ್ನೂ ಸುರರಿಗೆ ಅಭಯವನನ್ನೂ ಕೊಡುವ ಈ ಕೃಷ್ಣನು ಸರ್ವಲೋಕೇಶ್ವರನಾದ ಪ್ರಭುವು.
ಏವಮೇವ ಮಹಾಬಾಹುಃ ಶಾಸ್ತಾ ಸರ್ವದುರಾತ್ಮನಾಮ್ |
ಕೃತ್ವಾ ದೇವಾರ್ಥಮಮಿತಂ ಸ್ವಸ್ಥಾನಂ ಪ್ರತಿಪತ್ಸ್ಯತೇ ||28||
ಮಹಾಬಾಹುವಾದ ಇವನು ಇದೇ ರೀತಿಯಲ್ಲಿ ಎಲ್ಲಾ ದುಷ್ಟರನ್ನು ಶಿಕ್ಷಿಸುತ್ತಾನೆ. ಅಪಾರವಾದ ದೇವಕಾರ್ಯವನ್ನು ಸಾಧಿಸಿ ಪುನಃ ಸ್ವಸ್ಥಾನವನ್ನು ಹೋಗಿ ಸೇರುವನು.
ಏಷ ಭೋಗವತೀಂ ಪುಣ್ಯಾಂ ಋಷಿಕಾಂತಾಂ ಮಹಾಯಶಾಃ |
ದ್ವಾರಕಾಮಾತ್ಮಸಾತ್ ಕೃತ್ವಾ ಸಾಗರಂ ಗಮಯಿಷ್ಯತಿ ||29||
ಮಹಾಕೀರ್ತಿಶಾಲಿಯಾದ ಇವನು ಋಷೀಕದವರೆಗೂ ಹಬ್ಬಿರುವ ಸಮಸ್ತ ಭೋಗಸಂಪನ್ನವಾದ ದ್ವಾರಕೆಯನ್ನು ತನ್ನ ವಶಕ್ಕೆ ತೆಗೆದುಕೊಂಡು ಸಮುದ್ರವನ್ನು ದೂರಕ್ಕೆ ತಳ್ಳುವನು.
ಬಹುರಮ್ಯವತೀಂ ಪುಣ್ಯಾಂ ಚೈತ್ಯಯೂಪವತೀಂ ಶುಭಾಮ್ |
ದ್ವಾರಕಾಂ ವರುಣಾವಾಸಂ ಪ್ರವೇಕ್ಷ್ಯತಿ ಸಕಾನನಾಮ್ ||30||
ಅನೇಕ ರತ್ನಗಳಿಂದ ಕೂಡಿರುವ ಪವಿತ್ರವಾದ ಚೈತ್ಯಯೂಪಗಳಿಂದ ಅಂಕಿತವಾದ ಮಂಗಳಪ್ರದವಾದ ವರುಣನ ಆವಾಸವಾದ ಕಾನನಗಳಿಂದ ಕೂಡಿರುವ ದ್ವಾರಕೆಯನ್ನು ಪ್ರವೇಶಿಸುವನು.
ತಾಂ ಸೂರ್ಯಸದನಪ್ರಖ್ಯಾಂ ಮನೋಜ್ಞಾಂ ಶಾರ್ಙ್ಗಧನ್ವನಾ |
ವಿಸೃಷ್ಟಾಂ ವಾಸುದೇವೇನ ಸಾಗರಃ ಪ್ಲಾವಯಿಷ್ಯತಿ ||31||
ಸೂರ್ಯನ ಅರಮನೆಯಂತೆ ಇರುವ ಮನೋಹರವಾದ ಆ ಪಟ್ಟಣವನ್ನು ವಾಸುದೇವನು ತ್ಯಜಿಸಿದ ಮೇಲೆ ಸಾಗರವು ಅದನ್ನು ಕೊಚ್ಚಿ ಹಾಕುತ್ತದೆ.
ಸುರಾಸುರಮನುಷ್ಯೇಷು ನಾಭೂನ್ನ ಭವಿತಾ ಕ್ವಚಿತ್ |
ಯಸ್ತಾಮಧ್ಯವಸದ್ ರಾಜಾ ಅನ್ಯತ್ರ ಮಧುಸೂದನಾತ್ ||32||
ಮಧುಸೂದನನೊಬ್ಬನನ್ನು ಬಿಟ್ಟು ಆ ದ್ವಾರಕೆಯಲ್ಲಿ ವಾಸಮಾಡಿದವರು ಸುರಾಸುರಮನುಷ್ಯರಲ್ಲಿ ಹಿಂದೆ ಯಾರೂ ಇರಲಿಲ್ಲ. ಮತ್ತೆ ಮುಂದೆ ಯಾರೂ ಬರುವುದಿಲ್ಲ.
ಭ್ರಾಜಮಾನಾಸ್ತು ಬಹವೋ ವೃಷ್ಣ್ಯಂಧಕಮಹಾರಥಾಃ |
ತಜ್ಜುಷ್ಟಂ ಪ್ರತಿಪತ್ಸ್ಯಂತೇ ನಾಕಪೃಷ್ಠಂ ಗತಾಸವಃ ||33||
ಪ್ರಕಾಶಮಾನರಾದ ಅನೇಕ ವೃಷ್ಣ್ಯಂಧಕಮಹಾರಥರು ದೇಹತ್ಯಾಗವನ್ನು ಮಾಡಿದ ಮೇಲೆ ಕೃಷ್ಣನಿಂದ ಸೇವಿಸಲ್ಪಟ್ಟ ಸ್ವರ್ಗವನ್ನು ಪಡೆಯುವರು.
ಏವಮೇಷ ದಶಾರ್ಹಾಣಾಂ ವಿಧಾಯ ವಿಧಿನಾ ವಿಧಿಮ್ |
ವಿಷ್ಣುರ್ನಾರಾಯಣಃ ಸೋಮಃ ಸೂರ್ಯಶ್ಚ ಸವಿತಾ ಸ್ವಯಮ್ ||34||
ವಿಷ್ಣುವೂ ನಾರಾಯಣನೂ ಆದ ಇವನು ಹೀಗೆ ಎಲ್ಲಾ ದಾಶಾರ್ಹರಿಗೂ ವಿಧಿಪೂರ್ವಕವಾಗಿ ಸಮಸ್ತ ಸೌಕರ್ಯಗಳನ್ನು ಮಾಡಿ

ಸೋಮನೂ ಸೂರ್ಯನೂ ಸವಿತೃವೂ ತಾನೇ ಆದನು. (ಸೋಮ ಸೂರ್ಯಾದಿನಾಮಕನಾಗಿ ತಾನೇ ಅವರವರ ವ್ಯಾಪಾರಗಳನ್ನು ಮಾಡಿ ಅವರಿಂದ ಮಾಡಿಸುವನು.)
ಅಪ್ರಮೇಯೋಽನಿಯೋಜ್ಯಶ್ಚ ತತ್ರ (ಸ್ವಯಂ) ಕಾಮಗಮೋ ವಶೀ |
ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ ॥35॥
ಇವನ ಮಹಿಮೆಯನ್ನು ಯಾರೂ ತಿಳಿಯಲು ಸಾಧ್ಯವಿಲ್ಲ. ಇವನು ಯಾರಿಗೂ ವಶನಾಗುವವನಲ್ಲ ಇವನು ತನ್ನ ಇಚ್ಛೆಬಂದ ಕಡೆಗೆ ಹೋಗುವವನು. ಸರ್ವವನ್ನೂ ತನ್ನ ಅಧೀನದಲ್ಲಿ ಇಟ್ಟುಕೊಳ್ಳುವವನು. ಅಂತಹ ಭಗವಂತನಾದ ಇವನು ಮಕ್ಕಳು ಆಟದ ಸಾಮಾನುಗಳ ಜೊತೆಯಲ್ಲಿ ಆಡುವಂತೆ ಜೀವರ ಜೊತೆಯಲ್ಲಿ ಆಟವಾಡುತ್ತಾನೆ.
ನೈಷ ಗರ್ಭತ್ವಮಾಪೇದೇ ನ ಯೋನ್ಯಾಮಾವಸತ್ ಪ್ರಭುಃ |
ಆತ್ಮನಸ್ತೇಜಸಾ ಕೃಷ್ಣಃ ಸರ್ವೇಷಾಂ ಕುರುತೇ ಗತಿಮ್ ॥35॥
ಇವನು ಗರ್ಭವಾಸವನ್ನು ಅನುಭವಿಸಲಿಲ್ಲ. ಪ್ರಭುವಾದ ಇವನು ಯೋನಿಯ ಮೂಲಕ ಹೊರಗೆ ಬರಲಿಲ್ಲ. ಕೃಷ್ಣನು ತನ್ನ ಸಾಮರ್ಥ್ಯದಿಂದಲೇ ಎಲ್ಲರಿಗೂ ಗತಿಯನ್ನು ನೀಡುತ್ತಾನೆ.
ಯಥಾ ಬುದ್ಬುದ ಉತ್ಥಾಯ ತತ್ರೈವ ಪ್ರವಿಲೀಯತೇ |
ಚರಾಚರಾಣಿ ಭೂತಾನಿ ತಥಾ ನಾರಾಯಣೇ ಸದಾ ॥36॥
ಹೇಗೆ ನೀರಿನಲ್ಲಿ ಬುದ್ಬುದವು ಉಂಟಾಗಿ ಅಲ್ಲಿಯೇ ಲಯವುವನ್ನು ಹೊಂದುತ್ತದೆಯೋ ಅದರಂತೆ ಚರಾಚರವಾದ ಸರ್ವಭೂತಗಳು ನಾರಾಯಣನಿಂದ ಉತ್ಪತ್ತಿಯನ್ನು ಹೊಂದಿ ಅಲ್ಲಿಯೇ ಲಯವನ್ನು ಹೊಂದುತ್ತವೆ.
ನ ಪ್ರಮಾತುಂ ಮಹಾಬಾಹುಃ ಶಕ್ಯೋಽಯಂ ಮಧುಸೂದನಃ |
ಪರೋ ಹಿ ಪರಮಸ್ತಸ್ಮಾದ್ ವಿಶ್ವರೂಪಾನ್ನ ವಿದ್ಯತೇ ॥37॥
ಎಲೈ ಭಾರತನೇ! ಮಹಾಬಾಹುವಾದ ಕೇಶವನನ್ನು (ಮಧುಸೂದನನನ್ನು) ಯಾರೂ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಅವನು ಸರ್ವೋತ್ತಮೋತ್ತಮನಾದವನು. ವಿಶ್ವರೂಪಿಯಾದ ಅವನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಟ್‌ಪಂಚಾಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಪಂಚವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತಾರನೆಯ ಅಧ್ಯಾಯವು ಮುಗಿಯಿತು.
****
ಐವತ್ತೇಳನೆಯ ಅಧ್ಯಾಯ
(ಸಹದೇವನಿಂದ ಕೃಷ್ಣನಿಗೆ ಅಗ್ರಪೂಜೆಯ ಸಮರ್ಥನೆ.
ವೀರವಚನ. ಶಿಶುಪಾಲನ ಕ್ರೋಧ)
ವೈಶಂಪಾಯನಃ
ಏವಮುಕತ್ವ ತತೋ ಭೀಷ್ಮೋ ವಿರರಾಮ ಮಹಾಯಶಾಃ |
ವ್ಯಾಜಹಾರೋತ್ತರಂ ತತ್ರ ಸಹದೇವೋಽರ್ಥ ತತ್ತ್ವವಿತ್ ॥1॥
ಮಹಾಕೀರ್ತಿವಂತರಾದ ಭೀಷ್ಮರು ಇಷ್ಟು ಮಾತುಗಳನ್ನಾಡಿ ವೌನವನ್ನು ಧರಿಸಿದರು. ಆಗ ಅಲ್ಲಿ ಅರ್ಥತತ್ವಜ್ಞಾನವುಳ್ಳ ಸಹದೇವನು ಉತ್ತರವನ್ನು ಕೊಟ್ಟನು.
ಕೇಶವಂ ಕೇಶಿಹಂತಾರಮಪ್ರಮೇಯಮರಿಂದಮಮ್ |
ಸರ್ವಲೋಕೇಶ್ವರಂ ಕೃಷ್ಣಂ ವಿಜ್ಞಾಯ ಪುರುಷೋತ್ತಮಮ್ ॥2॥
ತಮಿಮಂ ಸರ್ವಸಂಪನ್ನಮಾಚಾರ್ಯಂ ಪಿತರಂ ಗುರುಮ್ |
ಅರ್ಚ್ಯಮರ್ಚಿತಮಸ್ಮಾಭಿಃ ಸರ್ವೇ ಸಮ್ಮಂತುಮರ್ಹಥ ॥3॥
ಕೃಷ್ಣನು ನಾರಾಯಣನೆಂದೂ ಕೇಶಿಸಂಹಾರಕನೆಂದೂ ಅಪ್ರಮೇಯನೆಂದೂ ಅರಿಂದಮನೆಂದೂ ಪುರುಷೋತ್ತಮನೆಂದೂ ಸರ್ವಲೋಕೇಶ್ವರನೆಂದೂ ತಿಳಿದು ಸರ್ವಗುಣಸಂಪನ್ನನಾದ ಆಚಾರ್ಯನೂ ಪಿತೃವೂ ಗುರುವೂ ಅರ್ಚ್ಯತಮನೂ ಆದ ಇವನನ್ನು ನಾವು ಪೂಜಿಸಿದ್ದೇವೆ. ನೀವೆಲ್ಲರೂ ಇದಕ್ಕೆ ಸಮ್ಮತಿಯನ್ನು ನೀಡಿ.
ಯೋ ವಾ ನ ಸಹತೇ ರಾಜ್ಞಾಂ ಕಶ್ಚಿತ್ ಸಬಲವಾಹನಃ |
ಕ್ಷಿಪ್ರಂ ಯುದ್ಧಾಯ ನಿರ್ಯಾತು ಶಕ್ತಶ್ಚೇದತ್ರ ಮೇ ಯುಧಿ ॥4॥
ಯಾವರಾಜನು ಇದನ್ನು ಸಹಿಸುವುದಿಲ್ಲವೋ ಅವನು ಶಕ್ತಿಯಿದ್ದವನಾದರೆ ತನ್ನ ಬಲವಾಹನಗಳ ಸಹಿತವಾಗಿ ತಕ್ಷಣ ನನ್ನ ಜೊತೆ ಯುದ್ಧಕ್ಕೆ ಬರಲಿ.
ಪೂಜ್ಯಮಾನಂ ಮಯಾ ಯೋ ವಃ ಕೃಷ್ಣಂ ನ ಸಹತೇ ನೃಪಾಃ |
ತಸ್ಯ ಮೂರ್ಧ್ನಿ ಸುಸನ್ನ್ಯಸ್ತಂ ರಾಜ್ಞಃ ಸವ್ಯಂ ಪದಂ ಮಯಾ |
ಏವಮುಕ್ತೇ ಮಯಾ ಸಮ್ಯಗ್ ಉತ್ತರಂ ಪ್ರಬ್ರವೀತು ಸಃ ॥5॥
ಎಲೈ ರಾಜರೇ! ನಾನು ಕೃಷ್ಣನಿಗೆ ಪೂಜೆಮಾಡಿದುದನ್ನು ನಿಮ್ಮಲ್ಲಿ ಯಾವನು ಸಹಿಸುವುದ್ದಿಲವೋ ಆ ರಾಜನ ತಲೆಯ ಮೇಲೆ ನನ್ನ ಎಡಗಾಲನ್ನು ಭದ್ರವಾಗಿ ಊರಿದ್ದೇನೆ. ನಾನು ಹೀಗೆ ಹೇಳಿದ ಮೇಲೆ ಅವನು ಉತ್ತರವನ್ನು ನೀಡಲಿ.
ವೈಶಂಪಾಯನಃ
ತತೋ ನ ವ್ಯಾಜಹಾರೈಷಾಂ ಕಶ್ಚಿದ್ ಬುದ್ಧಿಮತಾಂ ಸತಾಮ್ |
ಮಾನಿನಾಂ ಬಲಿನಾಂ ರಾಜ್ಞಾಂ ಮಧ್ಯೇ ಸಂದರ್ಶಿತೇ ಪದೇ ॥6॥

ಹೀಗೆ ಆತ್ಮಾಭಿಮಾನಿಗಳೂ ಬಲಿಷ್ಠರೂ ಆದ ರಾಜರ ಮಧ್ಯದಲ್ಲಿ ಸಹದೇವನು ತನ್ನ ಪಾದವನ್ನು ತೋರಿಸುತ್ತಿರಲು ವಿವೇಕಿಗಳೂ ಮತ್ತು ಸಜ್ಜನರೂ ಆದ ರಾಜರ ಮಧ್ಯದಲ್ಲಿ ಯಾವನೂ ಮಾತನಾಡಲಿಲ್ಲ.
ತತೋಽಪತತ್ ಪುಷ್ಪವೃಷ್ಟಿಃ ಸಹದೇವಸ್ಯ ಮೂರ್ಧನಿ |
ಅದೃಶ್ಯದೇಹಾ ವಾಚಶ್ಚ ಸಾಧುಸಾಧ್ವಿತಿ ಚಾಬ್ರುವನ್ ॥7॥
ಆಗ ಸಹದೇವನ ಶಿರಸ್ಸಿನ ಮೇಲೆ ಪುಷ್ಪವೃಷ್ಟಿಯುಂಟಾಯಿತು. ಅಶರೀರವಾಣಿಯು ಸಾಧು ಸಾಧು ಎಂದು ಅವನನ್ನು ಪ್ರಶಂಸೆಮಾಡಿತು.
ಆವಿಧ್ಯದಜಿನಂ ಹೃಷ್ಟೋ ಭವಿಷ್ಯದ್ಭೂತಜಲ್ಪಕಃ |
ಸರ್ವಸಂಶಯನಿರ್ಮೋಕ್ತಾ ನಾರದಃ ಸರ್ವಧರ್ಮವಿತ್ ॥8॥
ಭೂತ ಭವಿಷ್ಯತ್‌ಗಳನ್ನು ಹೇಳುವ ಸರ್ವಸಂಶಯಗಳನ್ನು ಛೇದನೆಮಾಡುವ ಸರ್ವಧರ್ಮಗಳನ್ನು ತಿಳಿದ ನಾರದರು ಸಂತೋಷದಿಂದ ತಮ್ಮ ಕೃಷ್ಣಾಜಿನವನ್ನು ಕೊಡವುತ್ತಾ ಕುಣಿದಾಡಿದರು.
ಉವಾಚಾಖಿಲಭೂತಾನಾಂ ಮಧ್ಯೇ ಸ್ಪಷ್ಟತರಂ ವಚಃ |
ಕೃಷ್ಣಂ ಕಮಲಪತ್ರಾಕ್ಷಂ ನಾರ್ಚಯಿಷ್ಯಂತಿ ಯೇ ನರಾಃ |
ಜೀವನ್ಮೃತಾಸ್ತು ತೇ ಜ್ಞೇಯಾ ನ ಸಂಭಾಷ್ಯಾಃ ಕದಾಚನ ॥9॥
ಎಲ್ಲಾ ರಾಜರುಗಳ ಮಧ್ಯದಲ್ಲಿ ಅತ್ಯಂತ ಸ್ಪಷ್ಟವಾದ ಮಾತುಗಳನ್ನು ಆಡಿದರು. ಯಾವ ಮನುಷ್ಯರು ಕಮಲ ಪತ್ರಾಕ್ಷನಾದ ಕೃಷ್ಣನನ್ನು ಪೂಜಿಸುವುದಿಲ್ಲವೋ ಅವರನ್ನು ಜೀವನ್ಮೃತನೆಂದು ತಿಳಿಯಬೇಕು. ಅವನ ಜೊತೆಯಲ್ಲಿ ಎಂದೂ ಸಂಭಾಷಣೆಯನ್ನು ಮಾಡಬಾರದು.
ವೈಶಂಪಾಯನಃ
ತತ್ರಾಹೂತಾಗತಾಃ ಸರ್ವೇ ಸುನೀಥಪ್ರಮುಖಾ ನೃಪಾಃ |
ಪ್ರತ್ಯದೃಶ್ಯಂತ ಸಂಕ್ರುದ್ಧಾ ವಿವರ್ಣಾಃ ಕ್ರೋಧಮೂರ್ಚ್ಛಿತಾಃ ॥10॥
ಅಲ್ಲಿಗೆ ಆಹ್ವಾನಿಸಲ್ಪಟ್ಟು ಆಗಮಿಸಿದ್ದ ಶಿಶುಪಾಲ ಮೊದಲಾದ ರಾಜರೆಲ್ಲರೂ ಕೋಪದಿಂದ ಮೂರ್ಚ್ಛಿತರಾಗಿ ಮುಖದ ಕಾಂತಿಯನ್ನು ಕಳೆದುಕೊಂಡು ತೋರಿದರು.
ಯುಧಿಷ್ಠಿರಾಭಿಷೇಕಂ ಚ ಕೃಷ್ಣೇ ಪೂಜಾಂ ಚ ತಾದೃಶೀಮ್ |
ವ್ಯಬ್ರುವಂಸ್ತತ್ರ ರಾಜಾನೋ ನಿರ್ವೇದಾದಾತ್ಮನಿಶ್ಚಯಾತ್ ॥11॥
ಕೆಲವುರಾಜರು ತಮ್ಮ ನಿಶ್ಚಯದಂತೆ ಯುಧಿಷ್ಠಿರನ ಯಜ್ಞಾಭಿಷೇಕವನ್ನೂ ಕೃಷ್ಣನಿಗೆಮಾಡಿದ ಅಂತಹ ಅಗ್ರಪೂಜೆಯನ್ನೂ ನಿಂದಿಸಿದರು.
ಸುಹೃದ್ಭಿರ್ವಾರ್ಯಮಾಣಾನಾಂ ತೇಷಾಂ ಹಿ ವಪುರಾಬಭೌ |
ಆಮಿಷಾದಪಕೃಷ್ಟಾನಾಂ ಸಿಂಹಾನಾಮಿವ ಗರ್ಜ್ಜತಾಮ್ ॥12॥
ಅವರ ವಿಶ್ವಾಸಪಾತ್ರರು ಬೇಡವೆಂದು ನಿಷೇಧಮಾಡುತ್ತಿದ್ದರೂ ಅವರು ಹಿಂದೆ ಸರಿಯದೆ ಅವರ ದೇಹಗಳು ಮಾಂಸದಿಂದ ಹಿಂದಕ್ಕೆ ಎಳೆದ ಕಾರಣದಿಂದ ಗರ್ಜಿಸುವ ಸಿಂಹಗಳಂತೆ ತೋರಿದವು.
ತಂ ಬಲೌಘಮಪರ್ಯಂತಂ ರಾಜಸಾಗರಮವ್ಯಯಮ್ |
ಕುರ್ವಾಣಂ ಸಮಯಂ ಕೃಷ್ಣೋ ಯುದ್ಧಾಯ ಬುಬುಧೇ ತದಾ ॥13॥
ಆ ರಾಜಸಾಗರವು ಅಪರ್ಯಂತವಾದ ಸೈನ್ಯದಿಂದಕೂಡಿದ್ದಾಗಿ ಯುದ್ಧಕ್ಕೆ ಸನ್ನದ್ಧವಾಗುತ್ತಿದೆ ಎಂದು ಕೃಷ್ಣನು ತಿಳಿದನು.
ಪೂಜಯಿತ್ವಾ ತು ಪೂಜಾರ್ಹಂ ಬ್ರಹ್ಮಕ್ಷತ್ರಂ ವಿಶೇಷತಃ |
ಸಹದೇವೋ ವಿಶೇಷಜ್ಞಃ ಸಮಾಪಯತ ಕರ್ಮ ತತ್ ॥14॥
ಸಹದೇವನು ಪೂಜಾರ್ಹರಾದ ಬ್ರಾಹ್ಮಣರನ್ನೂ ಮತ್ತು ಕ್ಷತ್ರಿಯರನ್ನೂ ಅವರವರ ಯೋಗ್ಯತೆಯಂತೆ ಪೂಜಿಸಿ ಆ ಪೂಜಾಕರ್ಮವನ್ನು ಸಮಾಪ್ತಿಗೊಳಿಸಿದನು.
ತಸ್ಮಿನ್ನಭ್ಯರ್ಚಿತೇ ಕೃಷ್ಣೇ ಸುನೀಥಃ ಶತ್ರುಸೂದನಃ |
ಅತಿತಾಮ್ರೇಕ್ಷಣಃ ಕ್ರೋಧಾದುವಾಚ ಮನುಜಾಧಿಪಾನ್ ॥15॥
ಅವನು ಕೃಷ್ಣನನ್ನು ಪೂಜಿಸುತ್ತಿರಲು ಶಸ್ತ್ರುಸೂದನನಾದ ಶಿಶುಪಾಲನು ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ರಾಜರನ್ನು ಕುರಿತು ಮಾತನಾಡಿದನು.
ಹಿತಃ ಸೇನಾಪತಿರ್ವೋಽಹಂ ಮರ್ಷಯಧ್ವಂ ಕಿಮೀದೃಶಮ್ |
ಯುಧಿ ತಿಷ್ಠಾಮ ಸನ್ನಹ್ಯ ಸಮೇತಾನ್ ವೃಷ್ಣಿಪಾಂಡವಾನ್ ॥16॥
ನಾನು ನಿಮ್ಮೆಲ್ಲರಿಗೆ ಸೇನಾಪತಿಯಾಗಿದ್ದೇನೆ. ಇಂತಹ ಕರ್ಮವನ್ನು ನೀವು ಹೇಗೆ ಸಹಿಸುತ್ತಿದ್ದೀರಿ? ನಾವೆಲ್ಲರೂ ಯುದ್ಧದಲ್ಲಿ ಸನ್ನದ್ಧರಾಗಿ ವೃಷ್ಣಿಗಳನ್ನೂ ಮತ್ತು ಪಾಂಡವರನ್ನೂ ಒಟ್ಟಿಗೆ ಎದುರಿಸೋಣ.
ವೈಶಂಪಾಯನಃ
ತದಾ ಸರ್ವಾನ್ ಸಮುತ್ಸಾದ್ಯ ನೃಪತೀಂಶ್ಚೇದಿಪುಂಗವಃ |
ಯಜ್ಞೋಪಘಾತಂ ಪಾರ್ಥಾನಾಮಮನ್ತ್ರಯತ ರಾಜಭಿಃ ॥17॥
ಆಗ ಚೇದಿರಾಜನಾದ ಶಿಶುಪಾಲನು ಎಲ್ಲರಾಜರನ್ನು ಹೀಗೆ ಭರ್ತ್ಸನೆಯನ್ನು ಮಾಡಿ, ಆ ರಾಜರ ಜೊತೆಯಲ್ಲಿ ಯುಧಿಷ್ಠಿರನ ಯಾಗಕ್ಕೆ ವಿಘ್ನವನ್ನು ಉಂಟುಮಾಡುವ ವಿಷಯದಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತಪಂಚಾಶೋಧ್ಯಾಯಃ ॥

॥ ಅರ್ಘಾಭಿಹರಣಪರ್ವಣಿ ಷಡ್ ವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತೇಳನೆಯ ಅಧ್ಯಾಯವು ಮುಗಿಯಿತು.
****

ಐವತ್ತೆಂಟನೆಯ ಅಧ್ಯಾಯ
(ಧರ್ಮರಾಜನ ಭಯದ ವಚನಗಳು ಮತ್ತು ಭೀಷ್ಮರ ಸಮಾಧಾನ)
ವೈಶಂಪಾಯನಃ
ತತಃ ಸಾಗರಸಂಕಾಶಂ ದೃಷ್ಟ್ವಾ ನೃಪತಿಸಾಗರಮ್ |
ರೋಷಾತ್ ಪ್ರಚಲಿತಂ ಸರ್ವಮಿದಮಾಹ ಯುಧಿಷ್ಠಿರಃ ॥1॥
ಭೀಷ್ಮಂ ಮತಿಮತಾಂ ಶ್ರೇಷ್ಠಂ ವೃದ್ಧಂ ಕುರುಪಿತಾಮಹಮ್ |
ಪ್ರಜಾಪತಿಂ ಬೃಹತ್ತೇಜಾಃ ಶತಕ್ರತುರಿವಾರಿಹನ್ ॥2॥
ಎಲೈ ಶತ್ರುಸೂದನನೇ! ಆಗ ಸಾಗರದಂತೆ ಇದ್ದ ಆ ರಾಜಸಾಗರವೆಲ್ಲವೂ ರೋಷದಿಂದ ಪ್ರಚಲಿತವಾದುದನ್ನು ನೋಡಿ ಯುಧಿಷ್ಠಿರನು ಕುರುಪಿತಾಮಹನಾದ ಮೇಧಾವಿಗಳಲ್ಲಿ ಶ್ರೇಷ್ಠನಾದ ಭೀಷ್ಮನನ್ನು ಕುರಿತು ಮಹಾ ಪರಾಕ್ರಮಿಯಾದ ಇಂದ್ರನು ಬ್ರಹ್ಮನನ್ನು ಕೇಳುವಂತೆ ಈ ಮಾತುಗಳನ್ನು ಆಡಿದನು.
ಅಸೌ ರೋಷಾತ್ ಪ್ರಚಲಿತೋ ಮಹಾನ್ ನೃಪತಿಸಾಗರಃ |
ಅತ್ರ ಯತ್ ಪ್ರತಿವಕ್ತವ್ಯಂ ತನ್ಮೇ ಬ್ರೂಹಿ ಪಿತಾಮಹ ॥3॥
ಪಿತಾಮಹನೇ! ಈ ನೃಪಸಾಗರವು ರೋಷದಿಂದ ಪ್ರಚಲಿತವಾಗಿದೆ. ಈಗ ನಾನು ಏನುಮಾಡಬೇಕೆಂದು ಹೇಳು.
ಯಜ್ಞಸ್ಯ ಚ ನ ವಿಘ್ನಃ ಸ್ಯಾತ್ ಪ್ರಜಾನಾಂ ಚ ಹಿತಂ ಭವೇತ್ |
ಯಥಾ ಸರ್ವತ್ರ ತತ್ಸರ್ವಂ ಬ್ರೂಹಿ ಮಹ್ಯಂ ಪಿತಾಮಹ ॥4॥
ಪಿತಾಮಹನೇ! ಯಜ್ಞಕ್ಕೆ ವಿಘ್ನವು ಬರಬಾರದು ಪ್ರಜೆಗಳಿಗೂ ಹಿತ ಉಂಟಾಗಬೇಕು. ಏನುಮಾಡಿದರೆ ಹಾಗಾಗುತ್ತದೆ ಎಂದು ನನಗೆ ಹೇಳು.
ವೈಶಂಪಾಯನಃ
ಇತ್ಯುಕ್ತವತಿ ಧರ್ಮಿಷ್ಠೇ ಧರ್ಮರಾಜೇ ಯುಧಿಷ್ಠಿರೇ |
ಉವಾಚೇದಂ ವಚಸ್ತದಾ ಭೀಷ್ಮಃ ಕುರುಪಿತಾಮಹಃ॥5॥
ಧರ್ಮಿಷ್ಠನಾದ ಯುಧಿಷ್ಠಿರನು ಹೀಗೆ ಮಾತನಾಡುತ್ತಿರಲು ಕುರುಪಿತಾಮಹರಾದ ಭೀಷ್ಮರು ಹೀಗೆ ಮಾತನಾಡಿದರು.
ಮಾ ಭೈಸ್ತ್ವಂ ಕುರುಶಾರ್ದೂಲ ಶ್ವಾ ಸಿಂಹಂ ಹಂತುಮರ್ಹತಿ |
ಶಿವಃ ಪಂಥಾಸ್ತು ಭೀಮೋಽತ್ರ ಮಯಾ ಪೂರ್ವತರಂ ವೃತಃ ॥6॥
ಕುರುಶಾರ್ದೂಲನೇ! ನೀನು ಭಯಪಡಬೇಡ. ನಾಯಿಯು ಸಿಂಹವನ್ನು ಕೊಲ್ಲಲು ಇಚ್ಛಿಸುತ್ತಿದೆ. ಈ ಮಾರ್ಗವು ಮಂಗಳಕರವಾಗಲಿ. ನಾನು ಈ ಭಯಂಕರವಾದ ಮಾರ್ಗವನ್ನು ಮೊದಲೇ ಆರಿಸಿದ್ದೇನೆ.
ಪ್ರಸುಪ್ತೇ ಹಿ ಯಥಾ ಸಿಂಹೇ ಶ್ವಾನಸ್ತಾತ ಸಮಾಗತಾಃ |
ಭಷೇಯುಃ ಸಹಿತಾಃ ಸರ್ವೇ ತಥೈವ ವಸುಧಾಧಿಪಾಃ ॥7॥
ಎಲೈ ಪ್ರೀತಿಪಾತ್ರನೇ! ಸಿಂಹವು ಮಲಗಿರುವಾಗ ನಾಯಿಗಳು ಸಮೀಪಕ್ಕೆ ಬಂದು ಎಲ್ಲವೂ ಒಟ್ಟಾಗಿ ಹೇಗೆ ಬೊಗುಳುತ್ತವೆಯೋ ಹಾಗೆ ಈ ಎಲ್ಲಾ ರಾಜರೂ ನಡೆದುಕೊಳ್ಳುತ್ತಿದ್ದಾರೆ.
ವೃಷ್ಣಿಸಿಂಹಸ್ಯ ಸುಪ್ತಸ್ಯ ತಥೇಮೇಽಭಿಮುಖಾಃ ಸ್ಥಿತಾಃ |
ಭಷಂತೇ ಮೃಗಸಂಕಾಶಾ ಶ್ವಾನಃ ಸಿಂಹಸ್ಯ ಸನ್ನಿಧೌ ॥8॥
ನಿದ್ರಿಸುತ್ತಿರುವ ವೃಷ್ಣಿಸಿಂಹನ ಎದುರಿಗೆ ಮೃಗಗಳಿಂತಿರುವ ಈ ಎಲ್ಲಾ ರಾಜರೂ ನಿಂತು ಸಿಂಹದ ಸನ್ನಿಧಿಯಲ್ಲಿ ನಾಯಿಗಳಂತೆ ಬೊಗುಳುತ್ತಿದ್ದಾರೆ.
ನ ಹಿ ಸಂಬುಧ್ಯತೇಯಾವತ್ ಸುಪ್ತಃ ಸಿಂಹ ಇವಾಚ್ಯುತಃ |
ತದಿದಂ ಜ್ಞಾತಪೂರ್ವಂ ಹಿ ತವ ಸಂಸ್ತೋತುಮಿಚ್ಛತಃ ॥9॥
ಸಿಂಹದಂತಿರುವ ಅಚ್ಯುತನು ಎಲ್ಲಿಯವರೆಗೆ ಎಚ್ಚರಗೊಳ್ಳುವುದಿಲ್ಲವೋ ಅಲ್ಲಿಯವರೆಗೆ ಬೊಗುಳುತ್ತಾರೆ. ನೀನು ಸ್ತೋತ್ರಮಾಡಲು ಬಯಸಿದಾಗಲೇ ನನಗೆ ಈ ವಿಷಯವು ತಿಳಿದಿದ್ದಿತು.
ತೇನ ಸಿಂಹೀಕರೋತ್ಯೇಷ ಅಸಿಂಹಶ್ಚೇದಿಪುಂಗವಃ |
ಪಾರ್ಥಿವಾನ್ ಪಾರ್ಥಿವಾಧ್ಯಕ್ಷಃ ಶಿಶುಪಾಲೋಽಲ್ಪಚೇತನಃ |
ಸರ್ವಾನ್ ಸರ್ವಾತ್ಮನಾ ತಾತ ನೇತುಕಾಮೋ ಯಮಕ್ಷಯಮ್ ॥10॥
ಈ ಚೇದಿರಾಜನು ಅಲ್ಪಬುದ್ಧಿಯುಳ್ಳವನು ಪಾರ್ಥಿವಾಧ್ಯಕ್ಷನಾದ ಇವನು ಸಿಂಹಗಳಲ್ಲದ ಈ ರಾಜರನ್ನು ಸಿಂಹವನ್ನಾಗಿ ಮಾಡಲು ಹೊರಟಿದ್ದಾನೆ. ಪ್ರೀತಿಪಾತ್ರನೇ! ಇವನು ನಿಶ್ಚಯವಾಗಿ ಎಲ್ಲರನ್ನೂ ಯಮಲೋಕಕ್ಕೆ ಕರೆದುಕೊಂಡು ಹೋಗಲು ಬಯಸಿದ್ದಾನೆ.
ನೂನಮೇತತ್ ಸಮಾದಾತುಂ ಪುನರಿಚ್ಛತ್ಯಧೋಕ್ಷಜಃ |
ಯದತ್ರ ಶಿಶುಪಾಲಸ್ಥಂ ತೇಜಸ್ತಿಷ್ಠತಿ ಭಾರತ ॥11॥
ಎಲೈ ಭಾರತನೇ! ನಿಶ್ಚಿತವಾಗಿ ಅಧೋಕ್ಷಜನು ಶಿಶುಪಾಲನಲ್ಲಿ ಇದ್ದ ತನ್ನ ತೇಜಸ್ಸನ್ನು ಹಿಂದಕ್ಕೆ ತೆಗೆದುಕೊಳ್ಳಲು ಇಚ್ಛಿಸುತ್ತಾನೆ.
ವಿಪ್ಲುತಾ ಚಾಸ್ಯ ಭದ್ರಂ ತೇ ಬುದ್ಧಿರ್ಬುದ್ಧಿಮತಾಂ ವರ |

ಚೇದಿರಾಜಸ್ಯ ಕೌಂತೇಯ ಸರ್ವೇಷಾಂ ಚ ಮಹೀಕ್ಷಿತಾಮ್ ॥12॥
ಕೌಂತೇಯನೇ! ಈ ಚೇದಿರಾಜನ ಬುದ್ಧಿಯೂ ಮತ್ತು ಈ ಎಲ್ಲಾ ರಾಜರ ಬುದ್ಧಿಯು ವಿಪ್ಲವವನ್ನು ಹೊಂದಿದೆಯಷ್ಟೇ ಮೇಧಾವಿಗಳಲ್ಲಿ ಶ್ರೇಷ್ಠನಾದವನೇ! ನಿನಗೆ ಮಂಗಳವಾಗಲಿ.
ಆದಾತುಂ ಪುಂಡರೀಕಾಕ್ಷ ಏಷ ಇಚ್ಛತಿ ಯಂ ಯದಾ |
ತಸ್ಯ ವಿಪ್ಲವತೇ ಬುದ್ಧಿರೇವಂ ಚೇದಿಪತೇರ್ಯಥಾ ॥13॥
ಈ ಪುಂಡರೀಕಾಕ್ಷನು ಯಾವಾಗ ಯಾರನ್ನು ಹಿಂದೆತೆಗೆದುಕೊಳ್ಳಲು ಬಯಸುತ್ತಾನೆಯೋ ಆಗ ಅವನ ಬುದ್ಧಿಯು ಶಿಶುಪಾಲನ ಬುದ್ಧಿಯಂತೆ ವಿಪ್ಲವಕ್ಕೆ ಒಳಗಾಗುತ್ತದೆ.
ಚತುರ್ವಿಧಾನಾಂ ಭೂತಾನಾಂ ತ್ರಿಷು ಲೋಕೇಷು ಮಾಧವಃ |
ಪ್ರಭವಶ್ಚೈವ ಭೂತಾನಾಂ ನಿಧನಂ ಚ ಯುಧಿಷ್ಠಿರ ॥14॥
ಎಲೈ ಯುಧಿಷ್ಠರನೇ! ಮೂರು ಲೋಕಗಳಿಲ್ಲಿರುವ ನಾಲ್ಕು ವಿಧವಾದ ಪ್ರಾಣಿಗಳಿಗೂ ಕೃಷ್ಣನು ಉತ್ಪತ್ತಿ ಕರ್ತ ಮತ್ತು ಸಂಹಾರ ಕರ್ತನಾಗಿದ್ದಾನೆ.
ವೈಶಂಪಾಯನಃ
ಇತಿ ತಸ್ಯ ವಚಃ ಶ್ರುತ್ವಾ ತಥಾ ಚೇದಿಪತಿರ್ನೃಪಃ |
ಭೀಷ್ಮಂ ರೂಕ್ಷಾಕ್ಷರಾ ವಾಚಃ ಶ್ರಾವಯಾಮಾಸ ಭಾರತ ॥15॥
ಎಲೈ ಭಾರತನೇ! ಚೇದಿಪತಿಯಾದ ಶಿಶುಪಾಲನು ಹೀಗೆ ಭೀಷ್ಮನ ಮಾತುಗಳನ್ನು ಕೇಳಿ ಭೀಷ್ಮನನ್ನು ಕುರಿತು ಕ್ರೂರವಾದ ಮಾತುಗಳನ್ನು ಆಡಲು ಪ್ರಾರಂಭಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
॥ ಅರ್ಘಾಭಿಹರಣಪರ್ವಣಿ ಸಪ್ತವಿಂಶೋಧ್ಯಾಯಃ ॥
॥ ಅರ್ಘಾಭಿಹರಣಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯವು ಮುಗಿಯಿತು.
ಇಲ್ಲಿಗೆ ಅರ್ಘಾಭಿಹರಣಪರ್ವವು ಮುಗಿಯಿತು.
****
6. ಶಿಶುಪಾಲವಧಪರ್ವ
ಐವತ್ತೊಂಭತ್ತನೆಯ ಅಧ್ಯಾಯ
(ಶಿಶುಪಾಲನಿಂದ ಪರಿಹಾಸಪೂರ್ವಕವಾಗಿ ಭೀಷ್ಮರ ನಿಂದೆ)
ಶಿಶುಪಾಲಃ
ವಿಭೀಷಿಕಾಭಿರ್ಬಹ್ವೀಭಿರ್ಭೀಷಯನ್ ಭೀಷ್ಮ ಪಾರ್ಥಿವಾನ್ |
ನ ಹ್ಯಪತ್ರಪಸೇ ಕಸ್ಮಾದ್ ವೃದ್ಧಃ ಸನ್ ಕುಲಪಾಂಸನಃ ॥1॥
ಭೀಷ್ಮನೇ! ವೃದ್ಧನು ಕುಲನಾಶಕನೂ ಆದ ನೀನು ಬಹಳ ಬೆದರಿಕೆಯಮಾತಿನಿಂದ ಎಲ್ಲ ರಾಜರನ್ನು ಹೆದರಿಸುತ್ತಾ ಏಕೆ ನಾಚಿಕೆಗೊಳ್ಳುವುದಿಲ್ಲ?
ಯುಕ್ತಮೇತತ್ ತೃತೀಯಾಯಾಂ ಪ್ರಕೃತೌ ತಿಷ್ಠತಾ ತ್ವಯಾ |
ವಕ್ತುಂ ವಚನಸಂಪನ್ನಸ್ತ್ವಂ ಹಿ ಸರ್ವಕುರೂತ್ತಮಃ ॥2॥
ವಾರ್ಧಕ್ಯದಲ್ಲಿ ಇರುವ ನಿನಗೆ ಹೀಗೆ ಮಾತನಾಡುವುದು ಯುಕ್ತವಾಗಿಯೇ ಇದೆ. ನೀನು ವಚನ ಸಂಪನ್ನನಾದವನು ಮತ್ತು ಸರ್ವಕುರುಗಳಲ್ಲಿ ಶ್ರೇಷ್ಠನಾದವನು
ನಾವಿ ನೌರಿವ ಸಂಬದ್ಧಾ ಯಥಾಽಂಧೋ ವಾಽಧಮನ್ವಿಯಾತ್ |
ತಥಾಭೂತಾ ಹಿ ಕೌರವ್ಯಾ ಭೀಷ್ಮ ಏಷಾಂ ತ್ವಮಗ್ರಣೀಃ ॥3॥
ಎಲೈ ಭೀಷ್ಮನೇ! ಯಾವ ಕೌರವರಿಗೆ ನೀನು ನಾಯಕನಾಗಿದ್ದಿಯೋ ಅಂತಹ ಕೌರವರ ಸ್ಥಿತಿ ಹಡಗಿನೊಳಗೆ ಇಟ್ಟ ಹಡಗಿನಂತೆ ಅಥವಾ ಅಂಧನನ್ನು ಹಿಂಬಾಲಿಸಿದ ಅಂಧನಂತೆ.
ಅಪಿ ವೃದ್ಧಸ್ಯ ಮೂರ್ಖಸ್ಯ ಕೇಶವಂ ಸ್ತೋತುಮಿಚ್ಛತಃ |
ಕಥಂ ಭೀಷ್ಮ ನ ತೇ ಜಿಹ್ವಾ ಶತಧಾ ವಿಪ್ರಶೀರ್ಯತೇ ॥4॥
ವೃದ್ಧನೂ ಮೂರ್ಖನೂ ಆದ ನಿನಗೆ ಕೃಷ್ಣನನ್ನು ಸ್ತೋತ್ರಮಾಡಲು ಬಯಸಿದಾಗ ನಿನ್ನ ನಾಲಿಗೆಯು ಏಕೆ ನೂರು ಸೀಳುಗಳಾಗಿ ಬಿರಿದು ಹೋಗುವುದಿಲ್ಲ!
ಯತ್ರ ಕುತ್ಸಾ ಪ್ರಯೋಕ್ತವ್ಯಾ ಭೀಷ್ಮ ಬಾಲೇತರೇ ನರೇ |
ತಮಿಮಂ ಜ್ಞಾನವೃದ್ಧಃ ಸನ್ ಗೋಪಂ ಸಂಸ್ತೋತುಮಿಚ್ಛಸಿ ॥5॥
ಭೀಷ್ಮನೇ! ಬಾಲ್ಯವನ್ನು ದಾಟಿದ ಯಾವ ಪುರುಷನ ಬಗ್ಗೆ ನಿಂದಾವಚನಗಳನ್ನು ಪ್ರಯೋಗಿಸಬೇಕೋ ಅಂತಹ ಈ ಗೋಪಾಲಕನನ್ನು ಜ್ಞಾನವೃದ್ಧನಾದ ನೀನು ಸ್ತೋತ್ರಮಾಡಲು ಬಯಸುತ್ತೀಯೆ!
ಪೂತನಾಘಾತಪೂರ್ವಾಣಿ ಕರ್ಮಾಣ್ಯಸ್ಯ ವಿಶೇಷತಃ |
ತ್ವಯಾ ಪ್ರಶಂಸತಾಽಸ್ಮಾಕಂ ಭೂಯಃ ಸಂಚಲಿತಂ ಮನಃ ॥6॥
ಇವನ ಪೂತನಾ ಹನನಾದಿಕರ್ಮಗಳನ್ನು ವಿಶೇಷವಾಗಿ ನೀನು ಪ್ರಶಂಸೆಮಾಡುವಾಗ ನನ್ನ ಮನಸ್ಸಿಗೆ ಬಹಳ ಕ್ಲೇಶ ಉಂಟಾಯಿತು!
ಯದ್ಯನೇನ ಹತೋ ಬಾಲ್ಯೇ ಶಕುನಿಶ್ಚಿತ್ರಮತ್ರ ಕಿಮ್ |

ತೌ ಚಾಶ್ವವೃಷಭೌ ಭೀಷ್ಮ ಯೌ ನ ಯುದ್ಧವಿಶಾರದೌ ॥7॥
ಇವನು ಬಾಲ್ಯದಲ್ಲಿ ಒಂದು ಪಕ್ಷಿಯನ್ನು ಕೊಂದಿದ್ದರೆ ಅದರಲ್ಲಿ ಆಶ್ಚರ್ಯವೇನು? ಅಥವಾ ಯುದ್ಧ ವಿಶಾರದರಲ್ಲದ ಅಶ್ವವನ್ನೂ ವೃಷಭವನ್ನೂ ಕೊಂದರೆ ಎಲೈ ಭೀಷ್ಮನೇ! ಅದರಲ್ಲಿ ಆಶ್ಚರ್ಯವೇನು?
ಚೇತನಾರಹಿತಂ ಕಾಷ್ಠಂ ಯದ್ಯನೇನ ವಿನಾಶಿತಮ್ |
ಪಾದೇನ ಶಕಟಂ ಭೀಷ್ಮ ತತ್ರ ಕಿಂ ಕೃತಮದ್ಭುತಮ್ ॥8॥
ಭೀಷ್ಮನೇ! ಜಡವಾದ ಕಾಷ್ಠವನ್ನು ಪಾದದಿಂದ ಶಕಟವನ್ನು ದೂರ ಚಿಮ್ಮಿದರೆ ಅದರಲ್ಲಿ ಏನು ಅದ್ಭುತವನ್ನು ಮಾಡಿದಂತಾಯಿತು?
ಅರ್ಕಪ್ರಮಾಣೌ ತೌ ವೃಕ್ಷೌ ಯದ್ಯನೇನ ನಿಪಾತಿತೌ |
ನಾಗಶ್ಚ ಪಾತಿತೋಽನೇನ ತತ್ರ ಕಿಂ ವಿಸ್ಮಿತಂ ಜಗತ್ ॥9॥
ಎಕ್ಕದ ಗಿಡದಷ್ಟು ಎತ್ತರವಾಗಿರುವ ಎರಡು ಮರಗಳು ಇವನಿಂದ ಬೀಳಿಸಲ್ಪಟ್ಟರೆ ಅಥವಾ ಆನೆಯು ಇವನಿಂದ ಬೀಳಿಸಲ್ಪಟ್ಟರೆ ಅದಕ್ಕೆ ಜಗತ್ತು ಏಕೆ ವಿಸ್ಮಯವನ್ನು ಹೊಂದಬೇಕು?
ವಲ್ಮೀಕಮಾತ್ರಂ ಸಪ್ತಾಹಂ ಧಾರಿತೋ ಯದ್ಯನೇನ ಸಃ |
ತತೋ ಗೋವರ್ಧನೋ ಭೀಷ್ಮ ನನು ತೇ ವಿಸ್ಮಿತಂ ಮನಃ ॥10॥
ಎಲೈ ಭೀಷ್ಮನೇ! ಒಂದು ಹುತ್ತದಷ್ಟು ಎತ್ತರವಾದ ಗೋವರ್ಧನ ಪರ್ವತವನ್ನು ಇವನು ಏಳು ದಿನಗಳ ಕಾಲ ಎತ್ತಿ ಹಿಡಿದರೆ ನಿನ್ನ ಮನಸ್ಸಿಗೆ ಬಹಳ ವಿಸ್ಮಯವಾಯಿತಷ್ಟೇ?
ಭುಕ್ತಮೇತೇನ ಬಹ್ವನ್ನಂ ಕ್ರೀಡಿತಂ ನಾಗಮೂರ್ಧನಿ |
ಇತಿ ತೇ ಭೀಷ್ಮ ಶೃಣ್ವಂತಃ ಪರಂ ವೈ ವಿಸ್ಮಯಂ ಗತಾಃ |
ಮತಿಮಂತೋ ನ ಶಂಸಂತಿ ಸಜ್ಜನಾ ಧರ್ಮಿಣಃ ಸದಾ ॥11॥
ಇವನು ಬಹಳ ಅನ್ನವನ್ನು ಭುಂಜಿಸಿದ್ದಾನೆ. ಸರ್ಪದ ತಲೆಯ ಮೇಲೆ ಆಡಿದ್ದಾನೆ ಎಂಬ ನಿನ್ನ ಮಾತನ್ನು ಕೇಳಿ ಎಲ್ಲೈ ಭೀಷ್ಮನೇ! ಎಲ್ಲರಿಗೂ ಬಹಳ ವಿಸ್ಮಯವಾಯಿತು. ಧರ್ಮಶೀಲರಾದ ಸಜ್ಜನರು ಬಹಳ ಅನ್ನವನ್ನು ಭುಂಜಿಸುವವನನ್ನು ಎಂದೂ ಪ್ರಶಂಸೆಮಾಡುವುದಿಲ್ಲವಷ್ಟೇ?
ಯದನ್ನೇನ ಚ ಧರ್ಮಜ್ಞ ಭುಕ್ತಮನ್ನಂ ಬಲೀಯಸಾ |
ಸ ಚಾನೇನ ಹತಃ ಕಂಸಃ ಕಿಂ ಪಾಪಮಧಿಕಂ ತತಃ ॥12॥
ಅದೂ ಅಲ್ಲದೆ ಎಲೈ ಧರ್ಮಜ್ಞನೇ! ಯಾವ ಕಂಸನ ಅನ್ನವನ್ನು ಇವನು ತಿಂದು ಜೀವಿಸಿದನೋ ಬಲಿಷ್ಠನಾದ ಇವನು ಅಂತಹ ಕಂಸನನ್ನೇ ಕೊಂದನು. ಅದಕ್ಕಿಂತ ಹೆಚ್ಚಿನ ಪಾಪವು ಏನಿದೆ?
ನ ತೇ ಶ್ರುತಮಿದಂ ಭೀಷ್ಮ ಪುರಾ ಕಥಯತಾಂ ಸತಾಮ್ |
ಯದ್ ವಕ್ಷ್ಯೇ ತ್ವಾಮಧರ್ಮಜ್ಞಂ ವಾಕ್ಯಂ ಕುರುಕುಲಾಧಮ ॥13॥
ಸ್ತ್ರೀಷು ಗೋಷು ನ ಚಾಸತ್ರಾಣಿ ಪಾತಯೇದ್ ಬ್ರಾಹ್ಮಣೇಷು ಚ |
ಯಸ್ಯ ಚಾನ್ನಾನಿ ಭುಂಜೀತ ಯಶ್ಚ ಸ್ಯಾಚ್ಛರಣಂ ಗತಃ ॥14॥
ಇತಿ ಸಂತೋಽನುಶಂಸಂತಿ ಸಜ್ಜನಾ ಧರ್ಮಿಣಃ ಸದಾ |
ಭೀಷ್ಮ ಯತ್ ಕಥಿತಂ ಸರ್ವಂ ವಿತಥಂ ತ್ವಯಿ ದೃಶ್ಯತೇ ॥15॥
ಭೀಷ್ಮನೇ ಹಿಂದೆ ಸಜ್ಜನರ ಬಾಯಿಯಿಂದ ನೀನು ಈ ಮಾತುಗಳನ್ನು ಕೇಳಿಲ್ಲವೆ? ಕುರುಕುಲಾಧಮನೇ! ಅಧರ್ಮಜ್ಞನಾದ ನಿನ್ನನ್ನು ಕುರಿತು ನಾನು ಹೇಳುವ ಮಾತುಗಳನ್ನು ಕೇಳು. ಸ್ತ್ರೀಯರ ಮೇಲೂ ಗೋವುಗಳ ಮೇಲೂ ಬ್ರಾಹ್ಮಣರ ಮೇಲೂ ಅಸ್ತ್ರವನ್ನು ಪ್ರಯೋಗಿಸಬಾರದು. ಯಾರ ಅನ್ನವನ್ನು ತಿಂದು ಜೀವಿಸುತ್ತಾನೆಯೋ ಮತ್ತು ಯಾವನು ಆಶ್ರಯದಾತ- ನಾಗಿದ್ದಾನೆಯೋ ಅವನ ಮೇಲೂ ಅಸ್ತ್ರ ಪ್ರಯೋಗವನ್ನು ಮಾಡಬಾರದು. ಹೀಗೆ ಧರ್ಮಿಷ್ಠರಾದ ಸಜ್ಜನರು ಯಾವಾಗಲೂ ಅನುಶಾಸನವನ್ನು ಮಾಡುತ್ತಾರೆ. ಭೀಷ್ಮನೇ! ನೀನು ಹೇಳುವುದೆಲ್ಲವೂ ನಿನ್ನಲ್ಲಿ ಸುಳ್ಳಾಗಿಯೇ ತೋರುತ್ತಿವೆ.
ಜ್ಞಾನವೃದ್ಧಂ ಚ ವೃದ್ಧಂ ಚ ಭೂಯಾಂಸಂ ಕೇಶವಂ ಮಮ |
ಅಜಾನತ ಇವಾಖ್ಯಾಸಿ ತ್ವಂ ಸ್ತುವನ್ ಕುರುಸತ್ತಮಃ ॥16॥
ಕುರುಸತ್ತಮನಾದ ನೀನು ನಾನು ತಿಳಿಯದ ವ್ಯಕ್ತಿಯಂತೆ ಕೃಷ್ಣನನ್ನು ಸ್ತೋತ್ರಮಾಡುತ್ತಾ ಅವನನ್ನು ಜ್ಞಾನ ವೃದ್ಧನೆಂದೂ ಶ್ರೇಷ್ಠಗುಣವುಳ್ಳವನೆಂದೂ ಹೇಳುತ್ತಿದ್ದೀಯೆ!
ಗೋಘ್ನಃ ಸ್ತ್ರೀಘ್ನಶ್ಚ ಸನ್ ಭೀಷ್ಮ ಕಥಂ ಸಂಸ್ತವಮರ್ಹತಿ |
ಅಸೌ ಮತಿಮತಾಂ ಶ್ರೇಷ್ಠೋ ಯ ಏಷ ಜಗತಃ ಪತಿಃ ॥17॥
ಎಲೈ ಭೀಷ್ಮನೇ! ಗೋಹತ್ಯವನ್ನು ಮಾಡಿದವನು ಮತ್ತು ಸ್ತ್ರೀ ಹತ್ಯವನ್ನು ಮಾಡಿದವನು ಹೇಗೆ ಸ್ತೋತ್ರಕ್ಕೆ ಯೋಗ್ಯನಾಗುತ್ತಾನೆ? ಇವನು ಮೇಧಾವಿಗಳಲ್ಲಿ ಶ್ರೇಷ್ಠನಾದವನು ಮತ್ತು ಜಗತ್ತಿಗೆ ಪ್ರಭುವಾದವನು!
ಆತ್ಮಾನಮಾತ್ಮನಾऽऽಧಾತುಂ ಯದಿ ಶಕ್ತೋ ಜನಾರ್ದನಃ |
ಅಕಾಮಯಂತಂ ತಂ ಸಾಧು ಕಥಂ ಸಾಧ್ವಿತಿ ಪಶ್ಯಸಿ ॥18॥
ಜನಾರ್ದನನು ತನ್ನ ಮನಸ್ಸನ್ನು ತಾನೇ ಸಮಾದಾನ ಮಾಡಿಕೊಳ್ಳಲು ಇಚ್ಛಿಸದೆ ದುಷ್ಕರ್ಮಗಳನ್ನೇ ಮಾಡುವವನನ್ನು ನೀನು ಹೇಗೆ ಸಜ್ಜನ ಎಂದು ನೋಡುತ್ತೀಯೆ?
ನ ಗಾಥಾ ಗಾಥಿನಂ ಶಾಸ್ತಿ ಪರತೀತಿ ನ ಕಾರಣಮ್ |
ಪ್ರಕೃತಿಂ ಯಾಂತಿ ಭೂತಾನಿ ಕುಳಿಂಗಶಕುನಿರ್ಯಥಾ ॥19॥

ಹಾಡುವ ಗೀತೆಗಳು ಹಾಡುವವನಿಗೆ ಶಿಕ್ಷೆಯನ್ನು ಕೊಡುವುದಿಲ್ಲ. ಪ್ರಶಂಸಾತ್ಮಕವಾದ ಗೀತೆಯನ್ನು ಹಾಡುತ್ತಾನೆ ಎಂಬ ಕಾರಣದಿಂದ ಸ್ತೋತ್ರಮಾಡಲ್ಪಟ್ಟ ವ್ಯಕ್ತಿಯಲ್ಲಿ ಗುಣವೂ ಬರುವುದಿಲ್ಲ. ಎಲ್ಲಾ ಪುರುಷರೂ ಕುಳಿಂಗ ಪಕ್ಷಿಯಂತೆ ಅವರವರ ಸ್ವಭಾವವನ್ನೇ ಅನುಸರಿಸುತ್ತಾರೆ. ಸ್ತೋತ್ರದಿಂದ ಶ್ರೇಷ್ಠರೂ ಆಗುವುದಿಲ್ಲ. ನಿಂದೆಯಿಂದ ನೀಚರೂ ಆಗುವುದಿಲ್ಲ.
ನೂನಂ ಪ್ರಕೃತಿರಪ್ಯೇಷಾ ಜಘನ್ಯಾ ನಾತ್ರ ಸಂಶಯಃ |
ಅಥ ಪಾಪೀಯಸೀ ಚೈಷಾಂ ಪಾಂಡವಾನಾಮಪೀಷ್ಯತೇ |
ಯೇಷಾಮರ್ಚ್ಯತಮಃ ಕೃಷ್ಣಃ ತ್ವಂ ಚ ಯೇಷಾಂ ಪ್ರದರ್ಶಕಃ ॥20॥
ನಿಶ್ಚಯವಾಗಿ ಈ ನಿನ್ನ ಪ್ರಕೃತಿಯು (ಸ್ವಭಾವವು) ಅತ್ಯಂತ ನೀಚವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಅದೂ ಅಲ್ಲದೆ ಪಾಂಡವರಿಗೆ ಕೃಷ್ಣನು ಅತ್ಯಂತ ಪೂಜ್ಯನೂ ಮತ್ತು ನೀನು ಮಾರ್ಗದರ್ಶಕನೂ ಆಗಿದ್ದೀರಿ ಅಂತಹ ಪಾಂಡವರ ಪ್ರಕೃತಿಯೂ ಸಹ ಅತ್ಯಂತ ಪಾಪಿಷ್ಠವಾಗಿದೆ ಎಂದು ತೋರುತ್ತಿದೆ!
ಧರ್ಮ್ಯವಾನಿತ್ಯಧರ್ಮಜ್ಞಂ ಪಠತೀತಿ ನ ಕಾರಣಮ್ |
ಕೋ ಹಿ ಧರ್ಮಿಣಮಾತ್ಮಾನಂ ಜಾನನ್ ಜ್ಞಾನವತಾಂ ವರಃ |
ಕುರ್ಯಾದ್ ಯಥಾ ತ್ವಯಾ ಭೀಷ್ಮ ಕೃತಂ ಧರ್ಮಮವೇಕ್ಷತಾ ॥21॥
ಅಧರ್ಮಜ್ಞನನ್ನು ಧರ್ಮಿಷ್ಠ ಎಂದು ಹೊಗಳಿದರೆ ಅವನು ಆ ಕಾರಣದಿಂದ ಧರ್ಮಿಷ್ಠನಾಗುವುದಿಲ್ಲ. ಎಲ್ಯೆ ಭೀಷ್ಮನೇ! ತನ್ನನ್ನು ಧರ್ಮಿಷ್ಠನೆಂದು ಜ್ಞಾನಿಗಳಲ್ಲಿ ಶ್ರೇಷ್ಠನೆಂದು ತಿಳಿದ ಧರ್ಮದೃಷ್ಟಿ ಇದ್ದಯಾವನು ನೀನು ಮಾಡಿದಂತೆ ಮಾಡಲು ಸಾಧ್ಯ?
ಅನ್ಯಕಾಮಾ ಹಿ ಧರ್ಮಜ್ಞ ಕನ್ಯಕಾ ಪ್ರಾಜ್ಞಮಾನಿನಾ |
ಗೃಹೀತಪಾಣಿರ್ಧರ್ಮೇಣ ರಾಜ್ಞಾ ಸಾಲ್ವೇನ ಧೀಮತಾ |
ಅಂಬಾ ನಾಮಾಥ ಭದ್ರಂ ತೇ ಕಥಂ ಚಾಪಹೃತಾ ತ್ವಯಾ ॥22॥
ಎಲ್ಯೆ ಧರ್ಮಜ್ಞನೇ! ಮೇಧಾವಿಯಾದ ಸಾಲ್ವನಿಂದ ಧರ್ಮದಿಂದ ಪಾಣಿಗ್ರಹಣಮಾಡಿಕೊಳ್ಳಲ್ಪಟ್ಟ ಸಾಲ್ವನ ಮೇಲೆ ಪ್ರೀತಿಯನ್ನು ಹೊಂದಿದ್ದ ಅಂಬಾ ಎಂಬ ಕನ್ಯೆಯನ್ನು ಪ್ರಾಜ್ಞಮಾನಿಯಾದ ನೀನು ಹೇಗೆ ಅಪಹರಿಸಿದೆ? ನಿನಗೆ ಮಂಗಳವಾಗಲಿ!
ಯಾಂ ತ್ವಯಾಽಪಹೃತಾಂ ಭೀಷ್ಮ ಕನ್ಯಾಂ ನೇಷಿತವಾನ್ ನೃಪಃ |
ಭ್ರಾತಾ ವಿಚಿತ್ರವೀರ್ಯಸ್ತೇ ಸತಾಂ ಧರ್ಮಮನುಸ್ಮರನ್ ॥23॥
ಎಲ್ಯೆ ಭೀಷ್ಮನೇ! ನಿನ್ನ ತಮ್ಮನಾದ ವಿಚಿತ್ರವೀರ್ಯನು ಸಜ್ಜನರ ಧರ್ಮವನ್ನು ಅನುಸರಿಸುತ್ತಾ ನೀನು ಅಪಹರಿಸಿದ ಕನ್ಯೆಯನ್ನು ವಿವಾಹಮಾಡಿಕೊಳ್ಳಲು ಬಯಸಲಿಲ್ಲ.
ದಾರೇಷು ಯಸ್ಯ ಚಾನ್ಯೇನ ಮಿಷತಃ ಪ್ರಾಜ್ಞಮಾನಿನಃ |
ಉತ್ಪಾದಿತಾನ್ಯಪತ್ಯಾನಿ ಸಜ್ಜನಾಚರಿತೇ ಪಥಿ ॥24॥
ನಿನ್ನನ್ನು ಪ್ರಾಜ್ಞನೆಂದು ತಿಳಿದುಕೊಂಡಿರುವ ನಿನ್ನ ಕಣ್ಣೆದುರಿಗೆ ನಿನ್ನ ತಮ್ಮನ ಪತ್ನಿಯರಲ್ಲಿ ಬೇರೆಯವರಿಂದ ಸಜ್ಜನರು ಆಚರಿಸುವ ಮಾರ್ಗದಿಂದ ಪುತ್ರರು ಉತ್ಪಾದಿಸಲ್ಪಟ್ಟರು!
ಕೋ ಹಿ ಧರ್ಮೋಽಸ್ತಿ ತೇ ಭೀಷ್ಮ ಬ್ರಹ್ಮಚರ್ಯಮಿದಂ ವೃಥಾ |
ಯದ್ ಧಾರಯಸಿ ಮೋಹಾತ್ತ್ವಂ ಕ್ಲೀಬತ್ವಾಚ್ಚ ನ ಸಂಶಯಃ ॥25॥
ಭೀಷ್ಮ! ನಿನ್ನಲ್ಲಿ ಯಾವ ಧರ್ಮವಿದೆ? ನಿನ್ನ ಬ್ರಹ್ಮಚರ್ಯವು ವ್ಯಾರ್ಥವಾದುದು. ನೀನು ನಪುಂಸಕನಾದ ಕಾರಣದಿಂದಲೂ ಬ್ರಹ್ಮಚರ್ಯವನ್ನು ಧರಿಸಿದ್ದೀಯೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ನ ತ್ವಹಂ ತವ ಧರ್ಮಜ್ಞ ಪಶ್ಯಾಮಿ ವಿನಯಂ ಕ್ವಚಿತ್ |
ನಹಿ ತೇ ಸೇವಿತಾ ವೃದ್ಧಾ ಯ ಏವಂ ಧರ್ಮಮಬ್ರುವೀತ್ ॥26॥
ಇಷ್ಟಂ ದತ್ತಮಧೀತಂ ಚ ಯಜ್ಞಾಶ್ಚ ಬಹುದಕ್ಷಿಣಾಃ |
ಸರ್ವಮೇತದಪತ್ಯಸ್ಯ ಕಲಾಂ ನಾರ್ಹತಿ ಷೋಡಶೀಮ್ ॥27॥
ಎಲ್ಯೆ ಧರ್ಮಜ್ಞನೇ! ನಾನು ನಿನ್ನಲ್ಲಿ ಯಾವ ವಿಶೇಷವಾದ ನೀತಿಯನ್ನೂ(ಶಿಕ್ಷಣವನ್ನೂ) ಕಾಣುತ್ತಿಲ್ಲ. ಹೀಗೆ ಧರ್ಮವನ್ನು ನುಡಿಯುವ ನೀನು ಯಾವ ವೃದ್ಧರನ್ನೂ ಸೇವಿಸಿಲ್ಲ ಎಂಬುದು ಸ್ಪಷ್ಟವಾಗಿದೆ. ತಟಾಕಾದಿ ನಿರ್ಮಾಣಗಳು, ದಾನಾದಿಗಳು ಅಧ್ಯಯನಗಳು ಬಹುದಕ್ಷಿಣೆಯುಳ್ಳ ಯಜ್ಞಗಳು ಇವೆಲ್ಲವೂ ಒಬ್ಬ ಪುತ್ರನ ಹದಿನಾರನೆ ಒಂದು ಭಾಗದಷ್ಟು ಫಲವನ್ನು ಕೊಡಲಾರವು.
ವ್ರತೋಪವಾಸೈರ್ಬಹುಭಿಃ ಕೃತಂ ಭವತಿ ಭೀಷ್ಮ ಯತ್ |
ಸರ್ವಂ ತದನಪತ್ಯಸ್ಯ ಮೋಘಂ ಭವತಿ ನಿಶ್ಚಯಃ ॥28॥
ಎಲ್ಯೆ ಭೀಷ್ಮನೇ! ಅನೇಕ ವ್ರತ ಉಪವಾಸಗಳಿಂದ ಮಾಡಿದ ತಪಸ್ಸೆಲ್ಲವೂ ಮಕ್ಕಳಿಲ್ಲದೆ ಇದ್ದರೆ ವ್ಯರ್ಥವಾಗುವುದು ಎಂಬ ವಿಷಯದಲ್ಲಿ ಸಂಶಯವಿಲ್ಲ.
ಸೋಽನಪತ್ಯಶ್ಚ ವೃದ್ಧಶ್ಚ ಮಿಥ್ಯಾಧರ್ಮಾನುಶಾಸನಾತ್ |
ಹಂಸವತ್ ತ್ವಮಪೀದಾನೀಂ ಜ್ಞಾತಿಭ್ಯೋ ಹ್ಯಾಪ್ನುಯಾ ಭಯಮ್ ॥
ಅಂತಹ ಪುತ್ರಹೀನನಾದ ವೃದ್ಧನಾದ ಮಿಥ್ಯಾಧರ್ಮವನ್ನು ಉಪದೇಶಿಸುವ ನೀನು ನಿನ್ನ ರಾಗಾದಿಗಳಿಂದ ಹಂಸದಂತೆ ಭಯಕ್ಕೆ ಒಳಗಾಗುತ್ತೀಯೆ.
ಏವಂ ಹಿ ಕಥಯಂತ್ಯನ್ಯೇ ನರಾ ಧರ್ಮವಿದಃ ಪುರಾ |
ಭೀಷ್ಮ ಯತ್ ತದಹಂ ಸಮ್ಯಗ್ ವಕ್ಷ್ಯಾಮಿ ಭವತೇ ಶೃಣು ॥30॥
ಧರ್ಮವನ್ನು ತಿಳಿದ ಪುರಾಣವಕ್ತ್ಯಗಳಾದ ಜನರು ಇಂತಹ ಒಂದು ಕಥೆಯನ್ನು ಹೇಳುತ್ತಾರೆ. ಎಲ್ಯೆ ಭೀಷ್ಮನೇ! ಅದನ್ನು ನಾನು ನಿನಗೆ

ಹೇಳುತ್ತೇನೆ. ಸರಿಯಾಗಿ ಕೇಳು.
ವೃದ್ಧಃ ಕಿಲ ಸಮುದ್ರಾಂತೇ ಕಶ್ಚಿದ್ಧಂಸೋಽಭವತ್ ಪುರಾ |
ಧರ್ಮವಾಗನ್ಯಥಾವೃತ್ತಃ ಪಕ್ಷಿಣಸ್ತ್ವನುಶಾಸ್ತಿ ಚ ॥31॥
ಸಮುದ್ರತೀರದಲ್ಲಿ ಹಿಂದೆ ಒಂದು ವೃದ್ಧವಾದ ಹಂಸವಿದ್ದಿತು. ಅದು ಧರ್ಮವನ್ನು ಉಪದೇಶಮಾಡುತ್ತಿತ್ತು. ಆದರೆ ಧರ್ಮವನ್ನು ಆಚರಿಸುತ್ತಿರಲಿಲ್ಲ. ಉಳಿದ ಪಕ್ಷಿಗಳಿಗೆ ಧರ್ಮದ ಉಪದೇಶವನ್ನು ಮಾತ್ರ ಮಾಡುತ್ತಿತ್ತು.
ಧರ್ಮಂ ಚರತ ಮಾಧರ್ಮಮಿತಿ ತಸ್ಯ ವಚಃ ಕಿಲ |
ಪಕ್ಷಿಣಃ ಶುಶ್ರುವುರ್ಭೀಷ್ಮ ಸತತಂ ಧರ್ಮವಾದಿನಃ ॥33॥
ಧರ್ಮವನ್ನುಮಾಡಿ ಅಧರ್ಮವನ್ನು ಬಿಡಿ ಎಂಬುದು ಆ ಹಂಸದ ಮಾತಾಗಿತ್ತು. ಎಲೈ ಭೀಷ್ಮನೇ! ಧರ್ಮವಾದಿಗಳಾದ ಉಳಿದ ಪಕ್ಷಿಗಳೆಲ್ಲವೂ ಆ ಹಂಸದ ಮಾತನ್ನು ಸತತವಾಗಿ ಕೇಳಿದವು.
ಹಂಸಸ್ಯ ತದ್ವಚಃ ಶ್ರುತ್ವಾ ಮುದಿತಾಃ ಸರ್ವಪಕ್ಷಿಣಃ |
ಊಚುಶ್ಚೈನಂ ಖಗಾ ಹಂಸಂ ಪರಿವಾರ್ಯ ಚ ಸರ್ವಶಃ ॥34॥
ಹಂಸದ ಆ ಮಾತನ್ನು ಕೇಳಿ ಸಂತೋಷಗೊಂಡ ಎಲ್ಲಾ ಪಕ್ಷಿಗಳು ಆ ಹಂಸವನ್ನು ಸುತ್ತುವರಿದು ಅದನ್ನು ಕುರಿತು ಹೇಳಿದವು.
ಕಥಯಸ್ವ ಭವಾನ್ ಧರ್ಮಂ ಪಕ್ಷಿಣಾಂ ತತ್ ಸಮಾಸತಃ |
ಕೋ ಹಿ ನಾಮ ದ್ವಿಜಶ್ರೇಷ್ಠ ಬ್ರೂಹಿ ನೋ ಧರ್ಮ ಉತ್ತಮಃ ॥35॥
ಪಕ್ಷಿಗಳಿಗೆ ಯಾವುದು ಧರ್ಮ ಎಂಬುದನ್ನು ಸಂಕ್ಷೇಪವಾಗಿ ಹೇಳು. ಎಲೈ ಪಕ್ಷಿಶ್ರೇಷ್ಠನೇ! ಆ ಧರ್ಮಗಳಲ್ಲಿ ನಮಗೆ ಉತ್ತಮವಾದುದು ಯಾವುದು ಎಂದು ಹೇಳು.
ಹಂಸಃ
ಪ್ರಜಾಸ್ವಹಿಂಸಾ ಧರ್ಮೋ ವೈ ಹಿಂಸಾಽಧರ್ಮಃ ಖಗಪ್ರಜಾಃ |
ಏತದೇವಾನುಬೋದ್ಧವ್ಯಂ ಧರ್ಮಾಧರ್ಮಃ ಸಮಾಸತಃ ॥36॥
ಎಲೈ ಪ್ರಜೆಗಳೇ! ಅಹಿಂಸೆಯೇ ಧರ್ಮ. ಎಲೈ ಪಕ್ಷಿಪ್ರಜೆಗಳೇ! ಹಿಂಸೆಯು ನಿಶ್ಚಯವಾಗಿ ಅಧರ್ಮ. ಇದು ಸಂಕ್ಷೇಪವಾಗಿ ಧರ್ಮಾಧರ್ಮಗಳ ಸಾರವೆಂದು ತಿಳಿಯಬೇಕು.
ಶಿಶುಪಾಲಃ
ವೃದ್ಧಹಂಸವಚಃ ಶ್ರುತ್ವಾ ಪಕ್ಷಿಣಸ್ತೇ ಸುಸಂಹಿತಾಃ |
ಊಚುಶ್ಚ ಧರ್ಮಲುಬ್ಧಾಸ್ತೇ ಸ್ಮಯಮಾನಾ ಇವಾಂಡಜಾಃ ॥37॥
ವೃದ್ಧ ಹಂಸದ ಮಾತುಗಳನ್ನು ಕೇಳಿ ಧರ್ಮಕಾಮವುಳ್ಳ ಆ ಪಕ್ಷಿಗಳೆಲ್ಲವೂ ಒಟ್ಟಿಗೆ ಸೇರಿ ನಗುತ್ತಾ ಮಾತನಾಡಿದವು.
ಧರ್ಮಂ ಯಃ ಕುರುತೇ ನಿತ್ಯಂ ಲೋಕೇ ಧೀರತರೋಽಂಡಜಃ |
ಸ ಯತ್ರ ಗಚ್ಛೇದ್ಧರ್ಮಾತ್ಮಾ ತನ್ನೋ ಬ್ರೂಹೀಹ ತತ್ತ್ವತಃ ॥38॥
ಯಾವ ಪಕ್ಷಿಯು ನಿತ್ಯವೂ ಲೋಕದಲ್ಲಿ ಧರ್ಮವನ್ನು ಆಚರಿಸುತ್ತದೆಯೋ ಧರ್ಮಾತ್ಮನಾದ ಆ ಪಕ್ಷಿಯು ಎಲ್ಲಿಗೆ ಹೋಗುತ್ತಾರೆ ಎಂಬುದನ್ನು ಯಥಾರ್ಥವಾಗಿ ಹೇಳು.
ಹಂಸಃ
ಧರ್ಮಂ ಯಃ ಕುರುತೇ ನಿತ್ಯಂ ಲೋಕೇ ಸದ್ವೃತ್ತಿಮಾಸ್ಥಿತಃ |
ಸ ಗಚ್ಛೇತ್ ಸ್ವರ್ಗಲೋಕಾಂಸ್ತು ತಥಾ ವೈ ನಿಯತಂ ಖಗಾಃ ॥39॥
ಎಲೈ ಪಕ್ಷಿಗಳೇ! ಯಾರು ಲೋಕದಲ್ಲಿ ಸದ್ವೃತ್ತಿಯನ್ನು ಅಶ್ರಯಿಸಿ ಧರ್ಮವನ್ನೇ ಆಚರಿಸುತ್ತಾರೋ ಅವರು ನಿಶ್ಚಯವಾಗಿ ಸ್ವರ್ಗಲೋಕವನ್ನು ಹೊಂದುತ್ತಾರೆ.
ಪಕ್ಷಿಣಃ
ಜ್ಞಾತ್ವಾ ಹಿ ಧರ್ಮಾಧರ್ಮೌ ತೌ ನಿತ್ಯಂ ಲೋಕೇ ದ್ವಿಜೋತ್ತಮ |
ದುರ್ಲಭಂ ಸ್ವರ್ಗಲೋಕಂ ತು ತಂ ಕಸ್ಮಾತ್ ತ್ವಂ ನ ಗಚ್ಛಸಿ ॥40॥
ಎಲೈ ಪಕ್ಷಿಶ್ರೇಷ್ಠನೇ! ಯಾವಾಗಲೂ ಧರ್ಮಾಧರ್ಮಗಳನ್ನು ಚನ್ನಾಗಿ ತಿಳಿದ ನೀನು ದುರ್ಲಭವಾದ ಸ್ವರ್ಗಲೋಕಕ್ಕೆ ಏಕೆ ಹೋಗುತ್ತಿಲ್ಲ?
ಹಂಸಃ
ಬಾಲಾ ಯೂಯಂ ನ ಜಾನೀಧ್ವಂ ಧರ್ಮಸೂಕ್ಷ್ಮಂ ವಿಹಂಗಮಾಃ |
ಧರ್ಮಂ ಯಃ ಕುರುತೇ ಲೋಕೇ ಸತತಂ ಶುಭಬುದ್ಧಿಮಾನ್ |
ಸ ಚಾಯುಷೋಽಂತೇ ಸ್ವಂ ದೇಹಂ ತ್ಯಕ್ತ್ವಾ ಸ್ವರ್ಗಂ ತು ಗಚ್ಛತಿ ॥41॥
ಎಲೈ ಪಕ್ಷಿಗಳೇ! ನೀವೆಲ್ಲರೂ ಬಾಲರು, ಧರ್ಮಸೂಕ್ಷ್ಮವನ್ನು ತಿಳಿಯುವುದಿಲ್ಲ. ಸದ್ಬುದ್ಧಿಯುಳ್ಳ ಯಾವನು ಸತತವಾಗಿ ಲೋಕದಲ್ಲಿ ಧರ್ಮವನ್ನು ಆಚರಿಸುತ್ತಾನೆಯೋ ಅವನು ಆಯುಸ್ಸು ಮುಗಿದ ಮೇಲೆ ತನ್ನ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋಗುತ್ತಾನೆ.
ತಥಾಽಹಮಪಿ ಚ ತ್ಯಕ್ತ್ವಾ ಕಾಲೇ ದೇಹಂ ಮಮ ದ್ವಿಜಾಃ |
ಸ್ವರ್ಗಲೋಕಂ ಗಮಿಷ್ಯಾಮಿ ಇಯಂ ಧರ್ಮಸ್ಯ ವೈ ಗತಿಃ ॥42॥
ಎಲೈ ಪಕ್ಷಿಗಳೇ! ಹಾಗೆ ನಾನೂ ಸಹ ಯೋಗ್ಯವಾದ ಕಾಲದಲ್ಲಿ ನನ್ನ ದೇಹವನ್ನು ತ್ಯಜಿಸಿ ಸ್ವರ್ಗಕ್ಕೆ ಹೋಗುವೆನು. ಇದು ಧರ್ಮದ ನಿಶ್ಚಿತವಾದ ಗತಿ.
ಏವಂ ಧರ್ಮಕಥಾಂ ಚಕ್ರೇ ಸ ಹಂಸಃ ಪಕ್ಷಿಣಾಂ ಭೃಶಮ್ |

ಪಕ್ಷಿಣಃ ಶುಶ್ರುವುರ್ಭೀಷ್ಮ ಸತತಂ ಧರ್ಮಮೇವ ತೇ ॥43॥
ಎಲೈ ಭೀಷ್ಮನೇ! ಆ ಹಂಸವು ಪಕ್ಷಿಗಳ ಎದುರಿನಲ್ಲಿ ಹೀಗೆ ಧರ್ಮದ ಕಥೆಯನ್ನು ಬಹಳವಾಗಿ ಹೇಳಿತು ಆ ಪಕ್ಷಿಗಳೆಲ್ಲವೂ ಸತತವಾಗಿ ಆ ಧರ್ಮವನ್ನು ಕೇಳಿದವು.
ಆಜಹ್ರುಸ್ತತ್ರ ತೇ ಭಕ್ಷ್ಯಂ ಸಮುದ್ರಜಲಚಾರಿಣಃ |
ಅಂಡಜಾ ಭೀಷ್ಮ ತಸ್ಯಾಂತೇ ಧರ್ಮಸ್ಥೋಽಯಮಿತಿ ಸ್ಥಿತಾಃ ॥44॥
ಎಲೈ ಭೀಷ್ಮನೇ! ಸಮುದ್ರಜಲಚಾರಿಗಳಾದ ಆ ಪಕ್ಷಿಗಳೆಲ್ಲವೂ ಆ ಹಂಸಕ್ಕೆ ಭಕ್ಷ್ಯವನ್ನು ತಂದು ಕೊಟ್ಟವು. ಎಲ್ಲಾ ಪಕ್ಷಿಗಳೂ ಇವನು ಧರ್ಮಿಷ್ಠನು ಎಂದು ತಿಳಿದು ಆ ಹಂಸದ ಬಳಿಯಲ್ಲಿ ಇದ್ದವು.
ತಸ್ಯ ಚೈವ ಸಮಭ್ಯಾಶೇ ನಿಕ್ಷಿಪ್ಯಾಂಡಾನಿ ಸರ್ವಶಃ |
ಸಮುದ್ರಾಂಭಸಿ ಮೋದಂತೇ ಚರಂತೋ ಭೀಷ್ಮ ಪಕ್ಷಿಣಃ ॥45॥
ಎಲೈ ಭೀಷ್ಮನೇ! ಉಳಿದ ಪಕ್ಷಿಗಳು ಆ ವೃದ್ಧ ಹಂಸದ ಬಳಿಯಲ್ಲಿ ತಮ್ಮೆಲ್ಲರ ಮೊಟ್ಟೆಗಳನ್ನು ಇಟ್ಟು ಸಮುದ್ರತೀರದಲ್ಲಿ ಸಂಚರಿಸುತ್ತಾ ಸಂತೋಷದಿಂದ ಇದ್ದವು.
ತೇಷಾಮಂಡಾನಿ ಸರ್ವೇಷಾಂ ಭಕ್ಷಯಾಮಾಸ ಪಾಪಕೃತ್ |
ಸ ಹಂಸಃ ಸಂಪ್ರಮತ್ತಾನಾಮಪ್ರಮತ್ತಃ ಸ್ವಕರ್ಮಣಿ ॥46॥
ಪಾಪಿಷ್ಠವಾದ ಆ ವೃದ್ಧ ಹಂಸವು ಉಳಿದೆಲ್ಲಾ ಪಕ್ಷಿಗಳ ಮೊಟ್ಟೆಗಳನ್ನು ತಿಂದು ಬಿಟ್ಟಿತು. ಉಳಿದೆಲ್ಲಾ ಪಕ್ಷಿಗಳು ಪ್ರಮಾದಕ್ಕೆ ಒಳಗಾಗಿರಲು ವೃದ್ಧಹಂಸವು ತನ್ನ ಸ್ವಾರ್ಥದ ಬಗ್ಗೆ ಪ್ರಮಾದವನ್ನು ಹೊಂದದೆ ಎಲ್ಲಾ ಮೊಟ್ಟೆಗಳನ್ನು ಭಕ್ಷಿಸಿತು.
ತತಃ ಪ್ರಕ್ಷೀಯಮಾಣೇಷು ತೇಷ್ವಂಡೇಷ್ವಂಡಜೋಽಪರಃ |
ಅಶಂಕತ ಮಹಾಪ್ರಾಜ್ಞಃ ತಂ ಕದಾಚಿದ್ ದದರ್ಶ ಸಃ ॥47॥
ಅನಂತರ ತಮ್ಮ ಮೊಟ್ಟೆಗಳು ಕ್ರಮೇಣ ಕ್ಷೀಣವಾಗುತ್ತಿರಲು ಮಹಾಮೇಧಾವಿಯಾದ ಇನ್ನೊಂದು ಪಕ್ಷಿಯು ವೃದ್ಧಹಂಸದ ಮೇಲೆ ಶಂಕೆಯನ್ನು ಮಾಡುತ್ತಾ ಒಮ್ಮೆ ಅದರ ದುಷ್ಕರ್ಮವನ್ನು ನೋಡಿತು.
ತತಶ್ಚ ಕಥಯಾಮಾಸ ದೃಷ್ಟ್ವಾ ಹಂಸಸ್ಯ ಕಿಲ್ಬಿಷಮ್ |
ತೇಷಾಂ ಪರಮದುಃಖಾರ್ತಃ ಸ ಪಕ್ಷೀ ಸರ್ವಪಕ್ಷಿಣಾಮ್ ॥48॥
ಪರಮದುಃಖಾರ್ತವಾದ ಆ ಹಕ್ಕಿಯು ಉಳಿದ ಎಲ್ಲಾ ಪಕ್ಷಿಗಳನ್ನು ಕುರಿತು ತಾನು ನೋಡಿದ ವೃದ್ಧಹಂಸದ ದುಷ್ಕರ್ಮವನ್ನು ತಿಳಿಸಿತು.
ತತಃ ಪ್ರತ್ಯಕ್ಷತೋ ದೃಷ್ಟ್ವಾ ಪಕ್ಷಿಣಸ್ತೇ ಸಮಾಗತಾಃ |
ನಿಜಘ್ನುಸ್ತಂ ತದಾ ಹಂಸಂ ಮಿಥ್ಯಾವೃತ್ತಂ ಕುರೂದ್ವಹ ॥49॥
ಎಲೈ ಕುರೂದ್ವಹನೇ ಆಗ ಉಳಿದ ಪಕ್ಷಿಗಳೆಲ್ಲವೂ ಬಂದು ವೃದ್ಧ ಹಂಸದ ದುಷ್ಕರ್ಮವನ್ನು ಪ್ರತ್ಯಕ್ಷವಾಗಿ ನೋಡಿ ಮಿಥ್ಯಾಚಾರವುಳ್ಳ ಆ ಹಂಸವನ್ನು ಕೊಂದುಬಿಟ್ಟವು.
ತೇ ತ್ವಾಂ ಹಂಸಸಧರ್ಮಾಣಂ ಸಮೀಪೇ ವಸುಧಾಧಿಪಾಃ |
ನಿಹನ್ಯುರ್ಭೀಷ್ಮ ಸಂಕ್ರುದ್ಧಾಃ ಪಕ್ಷಿಣಸ್ತಮಿವಾಂಡಜಮ್ ॥50॥
ಎಲೈ ಭೀಷ್ಮನೇ! ವೃದ್ಧ ಹಂಸನನ್ನು ಉಳಿದ ಹಂಸಗಳು ಕೊಂದಂತೆ ಆ ಹಂಸಕ್ಕೆ ಸಮಾನವಾದ ಧರ್ಮವನ್ನು ಹೊಂದಿರುವ ನಿನ್ನನ್ನು ಸಮೀಪದಲ್ಲಿರುವ ರಾಜರೆಲ್ಲರೂ ಸೇರಿ ಕೊಲ್ಲುವರು.
ಗಾಥಾಮಪ್ಯತ್ರ ಗಾಯಂತಿ ಯೇ ಪುರಾಣವಿದೋ ಜನಾಃ |
ಭೀಷ್ಮ ಯಾಂ ತಾಂ ಚ ತೇ ಸಮ್ಯಕ್ ಕಥಯಿಷ್ಯಾಮಿ ಭಾರತ ॥51॥
ಅಂತರಾತ್ಮನಿ ಹೃದ್ಯಶ್ಚ ರೋಷೀ ಪತ್ರರಥೋ ಮುಖೇ |
ಅಂಡಭಕ್ಷಣಕರ್ಮೈತತ್ ತವ ವಾಚಮತೀಯತೇ ॥52॥
ಎಲೈ ಭೀಷ್ಮನೇ! ಪುರಾಣವನ್ನು ತಿಳಿದ ಜನರು ಈ ವಿಷಯದಲ್ಲಿ ಒಂದು ಗಾದೆಯನ್ನು ಹಾಡುತ್ತಾರೆ. ಎಲೈ ಭಾರತನೇ! ನಾನು ನಿನಗೆ ಅದನ್ನು ಹೇಳುವೆನು. ಸರಿಯಾಗಿ ಕೇಳು, ಹೃದಯದಲ್ಲಿ ರೋಷ ಮುಖದಲ್ಲಿ ಮುಗುಳ್ನಗೆ ಮೊಟ್ಟೆಗಳನ್ನು ತಿನ್ನುವ ಈ ನಿನ್ನ ಕರ್ಮವು ಮಾತುಗಳನ್ನು ಮೀರಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಐವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
****
ಅರವತ್ತನೆಯ ಅಧ್ಯಾಯ
(ಶಿಶುಪಾಲನ ವಾಕ್ಯವನ್ನು ಕೇಳಿ ಭೀಮನ ಕೋಪ.
ಭೀಷ್ಮನಿಂದ ಭೀಮನ ಸಾಂತ್ವನ)
ಶಿಶುಪಾಲಃ
ತ್ವಾಮಹಂ ಹಂಸಧರ್ಮಾಣಂ ಯೇ ಚಾನ್ಯೇ ವಸುಧಾಧಿಪಾಃ |
ನಿಹನ್ಮ ಭೀಷ್ಮ ಸಂಕ್ರುದ್ಧಾಃ ಪಕ್ಷಿಣಸ್ತಮಿವಾಂಡಜಮ್ ॥1॥
ಎಲೈ ಭೀಷ,ಮನೇ! ಆ ಹಂಸದ ಸಮಾನ ಧರ್ಮವುಳ್ಳ ನಿನ್ನನ್ನು ಉಳಿದ ಪಕ್ಷಿಗಳು ಆ ಹಂಸವನ್ನು ಕೊಂದಂತೆ ನಾನೂ ಮತ್ತು ಎಲ್ಲಾ ರಾಜರೂ ಕ್ರುದ್ಧರಾಗಿ ಕೊಲ್ಲುವೆವು.

ಕೇಶವೇನ ಕೃತಂ ಯತ್ತಜ್ಜರಾಸಂಧವಧೇ ತದಾ |
ಭೀಮಸೇನಾರ್ಜುನಾಭ್ಯಾಂ ಚ ಕಸ್ತತ್ ಸಾಧ್ವಿತಿ ಪಶ್ಯತಿ ॥2॥
ಜರಾಸಂಧವಧೆಯ ಸಂದರ್ಭದಲ್ಲಿ ಭೀಮಾರ್ಜುನರ ಜೊತೆಯಲ್ಲಿ ಕೇಶವನು ಮಾಡಿದ ಕಾರ್ಯವನ್ನು ಯಾರು ಸಾಧುಕಾರ್ಯ ಎಂದು ಹೇಳುತ್ತಾರೆ?
ಅದ್ವಾರೇಣ ಪ್ರವಿಷ್ಟೇನ ಚ್ಛದ್ಮನಾ ಬ್ರಹ್ಮವಾದಿನಾ |
ದೃಷ್ಟಃ ಪ್ರಭಾವಃ ಕೃಷ್ಣೇನ ಜರಾಸಂಧಸ್ಯ ಧೀಮತಃ ॥3॥
ಅದ್ವಾರದಿಂದ ಪ್ರವೇಶಿಸಿ ಬ್ರಾಹ್ಮಣರ ಛದ್ಮವೇಷವನ್ನು ಧರಿಸಿ (ಕೇಶವನು ಆ ಕಾರ್ಯವನ್ನು ಮಾಡಿದನು.) ಮೇಧಾವಿಯಾದ ಜರಾಸಂಧನ ಪ್ರಭಾವವು ಕೃಷ್ಣನಿಗೆ ತಿಳಿದೇ ಇದ್ದಿತು.
ಯೇನ ಧರ್ಮಾತ್ಮನಾಽಽತ್ಮಾನಂ ಬ್ರಾಹ್ಮಣ್ಯಮಭಿಜಾನತಾ |
ಇಷಿತಂ ಪಾದ್ಯಮಗ್ರೇ ತದ್ ದಾತುಮಸ್ಮೈ ದುರಾತ್ಮನೇ ॥4॥
ತನನ್ನು ಬ್ರಾಹ್ಮಣಪ್ರಿಯನೆಂದು ತಿಳಿದಿದ್ದ ಧರ್ಮತ್ಮನಾದ ಜರಾಸಂಧನು ಬ್ರಾಹ್ಮಣವೇಷದಲ್ಲಿ ಹೋದ ಈ ದುರಾತ್ಮನಿಗೆ ಪಾದ್ಯವನ್ನು ಕೊಡಲು ಇಚ್ಛಿಸಿದನು.
ಭುಜ್ಯತಾಮಿತಿ ತೇನೋಕ್ತಾಃ ಕೃಷ್ಣಭೀಮಧನಂಜಯಾಃ |
ಜರಾಸಂಧೇನ ಕೌರವ್ಯ ಕೃಷ್ಣೇನ ವಿಕೃತಂ ಕೃತಮ್ |
ಸ ಚಾಯಂ ಜಗತಃ ಕರ್ತಾ ಯಥೈನಂ ಭೀಷ್ಮ ಮನ್ಯಸೇ ॥5॥
ಭೋಜನವನ್ನು ಮಾಡಿ ಎಂದು ಜರಾಸಂಧನಿಂದ ಕೃಷ್ಣ ಭೀಮ ಧನಂಜಯರು ಹೇಳಲ್ಪಟ್ಟರು. ಎಲೈ ಕೌರವ್ಯನೇ! ಕೃಷ್ಣನು ಅವೆಲ್ಲವನ್ನೂ ನಿರಾಕರಿಸಿದನು. ಎಲೈ ಭೀಷ್ಮನೇ! ನೀನು ತಿಳಿದಂತೆ ಅಂತಹ ಇವನು ಜಗತ್ತಿಗೆ ಕರ್ತ!
ಸ ಕಸ್ಮಾತ್ ಬ್ರಾಹ್ಮಣಂ ಸಮ್ಯಗ್ ಆತ್ಮಾನಮವಗಚ್ಛತಿ ॥6॥
ಅವನು ಏಕೆ ತನ್ನನ್ನು ಬ್ರಾಹ್ಮಣನೆಂದು ತಿಳಿಯುತ್ತಾನೆ?
ಸ ಮೇ ಬಹುಮತೋ ರಾಜಾ ಜರಾಸಂಧೋ ಮಹಾಬಲಃ |
ಯೋಽನೇನ ಯುದ್ಧಂ ನೇಯೇಷ ಗೋಪಾಲ ಇತಿ ಸಂಯುಗೇ ॥7॥
ಆ ಮಹಾಮಹಿಮನಾದ ಜರಾಸಂಧನು ನನ್ನ ಗೌರವಕ್ಕೆ ಪಾತ್ರನಾದವನು. ಅವನು ಇವನು ಗೋಪಾಲನು ಎಂಬ ಕಾರಣದಿಂದ ಇವನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಲಿಲ್ಲ.
ಇದಂ ಚಾಶ್ಚರ್ಯಭೂತಂ ಮೇ ಯದಿಮೇ ಪಾಂಡವಾಸ್ತ್ವಯಾ |
ಅಪಕೃಷ್ಟಾಃ ಸತಾಂ ಮಾರ್ಗಾನ್ಮನ್ಯಂತೇ ತಚ್ಚ ಸಾಧ್ವಿತಿ ॥8॥
ಈ ಪಾಂಡವರು ನಿನ್ನಿಂದ ಧರ್ಮಮಾರ್ಗದಿಂದ ಚ್ಯುತರಾಗಿ ಅದನ್ನು ಸಾಧುಮಾರ್ಗವೆಂದು ತಿಳಿದು ಕೊಂಡಿದ್ದಾರೆ ಎಂಬುದು ನನಗೆ ಪರಮಾಶ್ಚರ್ಯಕರವಾದುದು.
ಅಥವಾ ನೈತದಾಶ್ಚರ್ಯಂ ಯೇಷಾಂ ತ್ವಮಸಿ ಭಾರತ |
ಸ್ತ್ರೀಸಧರ್ಮಾಽಪವಿದ್ಧಶ್ಚ ಸರ್ವಾರ್ಥಾನಾಂ ಪ್ರದರ್ಶಕಃ ॥9॥
ಅಥವಾ ಭಾರತನೇ! ಸ್ತ್ರೀಸಮಾನ ಧರ್ಮನಾದವನೂ ಎಲ್ಲರಿಂದಲೂ ತಿರಸ್ಕರಿಸಲ್ಪಟ್ಟವದ್ದ ಆದ ನೀನು ಯಾರಿಗೆ ಸರ್ವವಿಷಯಗಳಲ್ಲಿ ಮಾರ್ಗದರ್ಶಕನಾಗಿದ್ದೀಯೋ ಅಂತಹ ಪಾಂಡವರ ವಿಷಯದಲ್ಲಿ ಇದು ಆಶ್ಚರ್ಯವೇನಲ್ಲ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ರೂಕ್ಷಾದ್ ರೂಕ್ಷತರಂ ಬಹು |
ಚುಕೋಪ ಬಲಿನಾಂ ಶ್ರೇಷ್ಠೋ ಭೀಮಸೇನಃ ಪ್ರತಾಪವಾನ್ ॥10॥
ಅವನ ಅತ್ಯುಗ್ರವಾದ ಇಂತಹ ಮಾತುಗಳನ್ನು ಕೇಳಿ ಬಲಿಷ್ಠನಾದ ಪ್ರತಾಪಶಾಲಿಯಾದ ಭೀಮಸೇನನು ಕೋಪಗೊಂಡನು.
ತಸ್ಯ ಪದ್ಮಪ್ರತೀಕಾಶೇ ಸ್ವಭಾವಾಯತವಿಸ್ತೃತೇ |
ಭೂಯಃ ಕೋಪಾತ್ ಸುಸಂರಕ್ತೇ ಸಂಬಭೂವತುರಕ್ಷಿಣೀ ॥11॥
ಅವನ ಪದ್ಮದಂತಹ ಮುಖದಲ್ಲಿ ಸ್ವಾಭಾವಿಕವಾಗಿಯೇ ವಿಸ್ತಾರವಾದ ಅವನ ಕಣ್ಣುಗಳು ಕೋಪದಿಂದ ಇನ್ನೂ ಹೆಚ್ಚಾಗಿ ಕೆಂಪಾದವು.
ತ್ರಿಶಿಖಾಂ ಭ್ರುಕುಟೀಂ ಚಾಸ್ಯ ದದೃಶುಃ ಸರ್ವಪಾರ್ಥಿವಾಃ |
ಲಲಾಟಸ್ಥಾಂ ತ್ರಿಕೂಟಸ್ಥಾಂ ಗಂಗಾಂ ತ್ರಿಪಥಗಾಮಿವ ॥12॥
ಅವನು ಸಿಟ್ಟಿನಿಂದ ಹುಬ್ಬನ್ನು ಮೂರು ಗಂಟುಕಟ್ಟಿದ್ದನ್ನು ಎಲ್ಲಾ ರಾಜರೂ ನೋಡಿದರು. ಅವನ ಹಣೆಯಲ್ಲಿದ್ದ ಆ ಮೂರು ಗಂಟುಗಳ ಒಂದು ಸಮೂಹವು ಮೂರು ಮಾರ್ಗಗಳಲ್ಲಿ ಹರಿಯುವ ಗಂಗೆಯನ್ನು ಹೋಲುತಿತ್ತು.
ದಂತಾನ್ ಸಂದಶತಸ್ತಸ್ಯ ಕೋಪಾದ್ ದದೃಶುರಾನನಮ್ |
ಯುಗಾಂತೇ ಸರ್ವಭೂತಾನಿ ಕಾಲಸ್ಯೇವ ದಿಧಕ್ಷತಃ ॥13॥
ಕೋಪದಿಂದ ಹಲ್ಲುಗಳನ್ನು ಕಡಿಯುತ್ತಿದ್ದ ಅವನನ್ನು ಮತ್ತು ಅವನ ಮುಖವನ್ನು ಎಲ್ಲಾ ರಾಜರೂ ಯುಗಾಂತರದಲ್ಲಿ ಎಲ್ಲಾ ಪ್ರಾಣಿಗಳನ್ನು ಸುಡುವ ಯಮನಿಗೆ ಸಮಾನವಾಗಿ ನೋಡಿದರು.
ಉತ್ಪತಂತಂ ತು ವೇಗೇನ ಜಗ್ರಾಹೈನಂ ಮನಸ್ವಿನಮ್ |
ಭೀಷ್ಮ ಏವ ಮಹಾಬಾಹುರ್ಮಹಾಸೇನಮಿವೇಶ್ವರಃ ॥14॥
ತನ್ನ ಸ್ಥಳದಿಂದ ಶಿಶುಪಾಲನ ಕಡೆಗೆ ಹಾರುತ್ತಿದ್ದ ಧೈರ್ಯಶಾಲಿಯಾದ ಭೀಮಸೇನನನ್ನು ಮಹಾಬಾಹುವಾದ ಭೀಷ್ಮನೇ

ಷಣ್ಮುಖನನ್ನು ಈಶ್ವರನು ತಡೆದಂತೆ ತಡೆದು ಹಿಡಿದುಕೊಂಡನು.
ತಸ್ಯ ಭೀಮಸ್ಯ ಭೀಷ್ಮೇಣ ವಾರ್ಯಮಾಣಸ್ಯ ಭಾರತ |
ಗುರೋರ್ಬಹುವಿಧೈರ್ವಾಕ್ಯೈಃ ಕ್ರೋಧಃ ಪ್ರಶಮನಂ ಯಯೌ ॥15॥
ಎಲೈ ಭಾರತನೇ! ಭೀಷ್ಮರು ಭೀಮನನ್ನು ಹಾಗೆ ತಡೆದು ಬಹುವಿಧವಾದ ಸಮಾಧಾನದ ವಾರ್ತೆಗಳನ್ನು ಹೇಳುತ್ತಿರಲು ಹಿರಿಯರಾದ ಅವರ ಮಾತಿನಿಂದ ಭೀಮನ ಕೋಪವು ಅಡಗಿತು.
ನಾತಿಚಕ್ರಾಮ ಭೀಷ್ಮಸ್ಯ ಸ ಹಿ ವಾಕ್ಯಮರಿಂದಮಃ |
ಸಮುದ್ಧೂತೋ ಘನಾಪಾಯೇ ವೇಲಾಮಿವ ಮಹೋದಧಿಃ ॥16॥
ಮಳೆಗಾಲದಲ್ಲಿ ಉದ್ಧಟವಾಗಿದ್ದ ಸಮುದ್ರವು, ಮಳೆಗಾಲ ಮುಗಿದ ಮೇಲೆ ದಡವನ್ನು ದಾಟದೆ ಹಿಂದೆ ಸರಿಯುವಂತೆ, ಅರಿಂದಮನಾದ ಭೀಮನು ಭೀಷ್ಮರ ಮಾತುಗಳನ್ನು ಮೀರದೆ ಹಿಂದೆ ಸರಿದನು.
ಶಿಶುಪಾಲಸ್ತು ಸಂಕ್ರುದ್ಧೇ ಭೀಮಸೇನೇ ಪರಂತಪೇ |
ನಾಕಂಪತ ಮಹಾವೀರ್ಯ್ಯಃ ಪೌರುಷೇ ಮತಿಮಾಸ್ಥಿತಃ ॥17॥
ಪರಂತಪನಾದ ಭೀಮಸೇನನು ಹೀಗೆ ಕೋಪಗೊಳ್ಳುತ್ತಿರಲು ಮಹಾಪರಾಕ್ರಮಿಯಾದ ಶಿಶುಪಾಲನೂ ಸಹ ಪುರುಷಪ್ರಯತ್ನದಲ್ಲೇ ನಿಶ್ಚಯವುಳ್ಳವನಾಗಿ ಅಲುಗಾಡಲಿಲ್ಲ.
ಉತ್ಪತನ್ತಾತ್ಮವೇಗೇನ ಪುನಃ ಪುನರರಿಂದಮಃ |
ನ ಸ ತಂ ಚಿಂತಯಾಮಾಸ ಸಿಂಹಃ ಕ್ಷುದ್ರಮೃಗಂ ಯಥಾ |
ಪ್ರಹಸಂಶ್ಚಾಬ್ರವೀದ್ ವಾಕ್ಯಂ ಚೇದಿರಾಜಃ ಪ್ರತಾಪವಾನ್ ॥18॥
ಅರಿಂದಮನಾದ ಶಿಶುಪಾಲನು ಮತ್ತೆ ಮತ್ತೆ ತನ್ನ ಆಸನದಿಂದ ಮೇಲೆ ನೆಗೆಯುತ್ತಾ ಸಿಂಹವು ಕ್ಷುದ್ರಮೃಗವನ್ನು ಹೇಗೆ ಪರಿಗಣಿಸುವುದಿಲ್ಲವೋ ಹಾಗೆ ಭೀಮಸೇನನನ್ನು ಪರಿಗಣಿಸಲಿಲ್ಲ. ಅಷ್ಟೇ ಅಲ್ಲದೆ ಪ್ರತಾಪಶಾಲಿಯಾದ ಶಿಶುಪಾಲನು ನಗುತ್ತಾ ಮಾತನಾಡಿದನು.
ಭೀಮಸೇನಮುವಾಚೇದಂ ಭೀಷ್ಮೋ ಮತಿಮತಾಂ ವರಃ |
ನೈಷಾ ಚೇದಿಪತೇರ್ಬುದ್ಧಿರ್ಯಯಾ ತ್ವಾಹ್ವಯತೇಚ್ಯುತಮ್ |
ಭೀಮಸೇನ ಮಹಾಬಾಹೋ ಕೃಷ್ಣಸ್ಯೈವ ವಿನಿಶ್ಚಯಃ ॥19॥
ಮೇಧಾವಿಗಳಲ್ಲಿ ಶ್ರೇಷ್ಠನಾದ ಭೀಷ್ಮನು ಭೀಮಸೇನನನ್ನು ಕುರಿತು ಮಾತನಾಡಿದನು. ಮಹಾಬಾಹುವಾದ ಭೀಮಸೇನನೇ! ಬಲದಿಂದ ಚ್ಯುತನಾಗದ ನಿನ್ನನ್ನು ಕರೆಯುತ್ತಿರುವ ಈ ಶಿಶುಪಾಲನ ಯೋಚನೆಯು ಸರಿಯಾಗಿಲ್ಲ. ಅವನು ಕೃಷ್ಣನಿಂದಲೇ ವಧ್ಯನಾಗುವನೆಂದು ನಿಶ್ಚಯವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ದ್ವಿತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಅರವತ್ತನೆಯ ಅಧ್ಯಾಯವು ಮುಗಿಯಿತು.
* * * *

ಅರವತ್ತೊಂದನೆಯ ಅಧ್ಯಾಯ
(ಶಿಶುಪಾಲನು ಭೀಮಸೇನನನ್ನು ಆಹ್ವಾನಿಸಲು ಭೀಷ್ಮರಿಂದ ಕಾರಣ ನಿರೂಪಣೆ)
ಭೀಷ್ಮಃ
ಚೇದಿರಾಜಕುಲೇ ಜಾತಃ ತ್ರ್ಯಕ್ಷ ಏಷ ಚತುರ್ಭುಜಃ |
ರಾಸಭಾರಾವಸದೃಶಂ ರುರಾವ ಚ ನನಾದ ಚ ॥1॥
ಚೇದಿರಾಜಕುಲದಲ್ಲಿ ಹುಟ್ಟಿದ ಇವನು ಮೂರು ಕಣ್ಣುಗಳಿಂದಲೂ ನಾಲ್ಕು ಭುಜಗಳಿಂದ ಕೂಡಿದವನಾಗಿದ್ದು ಹುಟ್ಟಿದ ಕೂಡಲೇ ಕತ್ತೆಯಂತೆ ಘೋರವಾಗಿ ಕೂಗಿದನು.
ತೇನ ಶಬ್ದೇನ ವಿತ್ರಸ್ತೌ ಪಿತರೌ ಸಹಬಾಂಧವೌ |
ವೈಕೃತಂ ತಚ್ಚ ತೌ ದೃಷ್ಟ್ವಾ ತ್ಯಾಗಾಯಾಕುರುತಾಂ ಮತಿಮ್ ॥2॥
ಆ ಶಬ್ದದಿಂದ ಹೆದರಿ ತಂದೆತಾಯಿಗಳೂ ಮತ್ತು ಎಲ್ಲಾ ಬಂಧುಗಳೂ ಅವನ ದೇಹದ ವಿಕಾರವನ್ನು ನೋಡಿ ಅವನನ್ನು ಪರಿತ್ಯಾಗಮಾಡಲು ನಿರ್ಧರಿಸಿದರು.
ತತಃ ಸಭಾರ್ಯಂ ತು ನೃಪಂ ಸಾಮಾತ್ಯಂ ಸಪುರೋಹಿತಮ್ |
ಚಿಂತಾಸಮ್ಮೂಢಹೃದಯಂ ವಾಗುವಾಚಾಶರೀರಿಣೀ ॥3॥
ಆಗ ಪುರೋಹಿತರು ಅಮಾತ್ಯರು ಮತ್ತು ಪತ್ನಿಯ ಜೊತೆಯಲ್ಲಿ ಚಿಂತಾಕ್ರಾಂತನಾಗಿ ಕುಳಿತು ಮೂಢಹೃದಯನಾಗಿದ್ದ ರಾಜನನ್ನು ಕುರಿತು ಅಶರೀರವಾಣಿಯಾಯಿತು.
ಏಷ ತೇ ನೃಪತೇ ಪುತ್ರಃ ಶ್ರೀಮಾನ್ ಜಾತೋ ಮಹಾಬಲಃ |
ತಸ್ಮಾದಸ್ಮಾನ್ನ ಭೇತವ್ಯಮವ್ಯಗ್ರಂ ಪಾಲ್ಯತಾಂ ಶಿಶುಃ ॥4॥
ಎಲೈ ರಾಜನೇ! ಈ ನಿನ್ನ ಮಗನು ಮಹಾಬಲಿಷ್ಠನೂ ಕಾಂತಿಯುಕ್ತನೂ ಆಗಿ ಜನಿಸಿದ್ದಾನೆ. ಇವನಿಂದ ಹೆದರಬೇಕಾದ ಅಗತ್ಯವಿಲ್ಲ ಎಚ್ಚರಿಕೆಯಿಂದ ಈ ಮಗುವನ್ನು ಪಾಲಿಸು.
ನ ಚೈವೈತಸ್ಯ ಮೃತ್ಯುಸ್ತ್ವಂ ನ ಕಾಲಃ ಪ್ರತ್ಯುಪಸ್ಥಿತಃ |

ಏತಸ್ಯ ಮೃತ್ಯುರುತ್ಪನ್ನಃ ಶಸ್ತ್ರೇಣೈನಂ ವಧಿಷ್ಯತಿ ॥5॥
ನೀನು ಇವನಿಗೆ ಮೃತ್ಯುವಲ್ಲ. ಇವನ ಮೃತ್ಯುಕಾಲವು ಈಗ ಸಮೀಪಿಸಿಲ್ಲ. ಇವನಿಗೆ ಮೃತ್ಯುವು ಬೇರೆಕಡೆಯಲ್ಲಿ ಉತ್ಪನ್ನನಾಗಿದ್ದಾನೆ. ಅವನು ಇವನನ್ನು ಶಸ್ತ್ರದಿಂದ ಸಂಹರಿಸುವನು.
ತಚ್ಛ್ರುತ್ವೋದಾಹೃತಂ ವಾಕ್ಯಂ ಭೂತೇನಾಂತರ್ಹಿತೇನ ಸಾ |
ಪುತ್ರಸ್ನೇಹಾಭಿಸಂತಪ್ತಾ ಜನನೀ ವಾಕ್ಯಮಬ್ರವೀತ್ ॥6॥
ಯೇನೇದಮೀರಿತಂ ವಾಕ್ಯಂ ಮಮೇಮಂ ತನಯಂ ಪ್ರತಿ |
ಪ್ರಾಂಜಲಿಸ್ತಂ ನಮಸ್ಯಾಮಿ ಬ್ರವೀತು ಸ ಪುನರ್ವಚಃ ॥7॥
ಮಹದ್ಬಲಂ ಮಹದ್ಭೂತಮಿತ್ಯುಕತ್ವ ಪುನರುತ್ತರಮ್ |
ಶ್ರೋತುಮಿಚ್ಛಾಮಿ ತತ್ತ್ವೇನ ಕೋಽಸ್ಯ ಮೃತ್ಯುರ್ಭವಿಷ್ಯತಿ ॥8॥
ಆ ವಾಕ್ಯವನ್ನು ಕೇಳಿದ ಪುತ್ರಸ್ನೇಹಾಭಿತಪ್ತಳಾದ ತಾಯಿಯು ಅದೃಶ್ಯವಾದ ಆ ಭೂತವನ್ನು ಕುರಿತು ಯಾವ ಭೂತವು ನನ್ನ ಮಗನ ವಿಷಯದಲ್ಲಿ ಈ ರೀತಿಯಲ್ಲಿ ಮಾತನಾಡಿತೋ ಅದನ್ನು ಮಹಾಬಲಿಷ್ಠವೆಂದು ಮಹಾ ಭೂತವೆಂದು ಹೇಳಿ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡುತ್ತೇನೆ. ಇವನಿಗೆ ಯಾರು ಮೃತ್ಯುವೆಂದು ಯಥಾರ್ಥವಾಗಿ ತಿಳಿಯಲು ಬಯಸುತ್ತೇನೆ. ಆ ಭೂತವು ಪುನಃ ಮಾತನಾಡಿ ಇದಕ್ಕೆ ಉತ್ತರವನ್ನು ಹೇಳಲಿ.
ತತಸ್ತೈಃ ಖೇಚರೈಃ ಪೃಷ್ಟೈರುತ್ತರಂ ಸಮುದಾಹೃತಮ್ |
ಯೇನೋತ್ಸಂಗಗೃಹೀತಸ್ಯ ಭುಜಾವಭ್ಯಧಿಕಾವುಭೌ |
ಭವಿಷ್ಯತಸ್ತು ಸಂಭಗ್ನೌ ಸೋಽಸ್ಯ ಮೃತ್ಯುರ್ಭವಿಷ್ಯತಿ ॥9॥
ಆಗ ಹೀಗೆ ಕೇಳಲ್ಪಟ್ಟ ಆ ಖೇಚರದಿಂದ ಹೀಗೆ ಉತ್ತರವು ಹೇಳಲ್ಪಟ್ಟಿತು. ಈ ಶಿಶುವನ್ನು ಯಾರ ತೊಡೆಯ ಮೇಲೆ ಹಾಕಿದಾಗ ಅವನ ಅಧಿಕವಾದ ಎರಡು ಭುಜಗಳು ಬಿದ್ದು ಹೋಗುತ್ತವೆಯೋ ಅವನು ಈ ಶಿಶುವಿನ ಮೃತ್ಯುವಾಗುವನು.
ಯಸ್ಯೋತ್ಸಂಗಗೃಹೀತಸ್ಯ ತಥೈವಾಕ್ಷಿ ಲಲಾಟಜಮ್ |
ನಿಮಜ್ಜಿಷ್ಯತಿ ಸಂಸ್ಪೃಷ್ಟೇ ಸೋಽಸ್ಯ ಮೃತ್ಯುರ್ಭವಿಷ್ಯತಿ ॥10॥
ಹಾಗೆಯೇ ಯಾರ ತೊಡಯ ಮೇಲೆ ಹಾಕಿದಾಗ ಹಣೆಯಲ್ಲಿರುವ ಇವನ ಕಣ್ಣು ಅವನ ಸ್ಪರ್ಶಮಾಡಿದ ತಕ್ಷಣ ಮುಳುಗಿ ಹೋಗುವುದೋ ಅವನು ಈ ಶಿಶುವಿನ ಮೃತ್ಯುವಾಗುವನು.
ತ್ರ್ಯಕ್ಷಂ ಚತುರ್ಭುಜಂ ಶ್ರುತ್ವಾ ಏತಚ್ಚ ಸಮುದಾಹೃತಮ್ |
ಧರಣ್ಯಾಂ ಪಾರ್ಥಿವಾಃ ಸರ್ವೇ ತತ್ರಾಜಗ್ಮುರ್ದಿದೃಕ್ಷವಃ ॥11॥
ಶಿಶುವು ಮೂರು ಕಣ್ಣುಗಳು ಮತ್ತು ನಾಲ್ಕು ಭುಜಗಳಿಂದ ಕೂಡಿದೆ ಎಂದು ಕೇಳಿದ ಭೂಮಿಯಲ್ಲಿದ್ದ ಎಲ್ಲ ರಾಜರೂ ಮಗುವನ್ನು ನೋಡಲು ಬಯಸಿ ಅಲ್ಲಿಗೆ ಬಂದರು.
ತಾನ್ ಪೂಜಯಿತ್ವಾ ಸಂಪ್ರಾಪ್ತಾನ್ ಯಥಾರ್ಹಂ ಸ ಮಹೀಪತಿಃ |
ಏಕೈಕಸ್ಯ ನೃಪಸ್ಯಾಂಕೇ ಪುತ್ರಮಾರೋಪಯತ್ ತತಃ ॥12॥
ಆ ರಾಜನು ಬಂದವರನ್ನು ಯಥಾ ಯೋಗ್ಯವಾಗಿ ಪೂಜಿಸಿ ಪ್ರತಿಯೊಬ್ಬರ ತೊಡೆಯ ಮೇಲೆ ಆ ಶಿಶುವನ್ನು ಇಟ್ಟನು.
ಏವಂ ರಾಜಸಹಸ್ರಾಣಾಂ ಪೃಥಗೇನಂ ಯಥಾಕ್ರಮಮ್ |
ಶಿಶುರಂಕೇ ಸಮಾರೂಢೋ ನ ತತ್ ಪ್ರಾಪ ನಿದರ್ಶನಮ್ ॥13॥
ಹೀಗೆ ಸಹಸ್ರಾರು ರಾಜರ ತೊಡೆಯ ಮೇಲೆ ಕ್ರಮವಾಗಿ ಬೇರೆ ಬೇರೆಯಾಗಿ ಮಗುವನ್ನು ಇಟ್ಟಾಗಲೂ ಆ ಭೂತವು ಹೇಳಿದಂತೆ ಏನೂ ಆಗಲಿಲ್ಲ.
ಏತದೇವ ತು ಸಂಶ್ರುತ್ಯ ದ್ವಾರವತ್ಯಾಂ ಮಹಾಲೌ |
ತತಶ್ಚೇದಿಪುರಂ ಪ್ರಾಪ್ತೌ ಸಂಕರ್ಷಣಜನಾರ್ದನೌ |
ಯಾದವೌ ಯಾದವೀಂ ದ್ರಷ್ಟುಂ ಸ್ವಸಾರಂ ತಾಂ ಪಿತುಸ್ತತಃ ॥14॥
ಈ ವಾರ್ತೆಯನ್ನು ಕೇಳಿ ದ್ವಾರಾವತಿಯಲ್ಲಿದ್ದ ಮಹಾಬಲಿಷ್ಠರಾದ ಕೃಷ್ಣ ಬಲರಾಮರು ತಮ್ಮ ಸೊದರತ್ತೆಯಾದ ಆ ಯಾದವಿಯನ್ನು ನೋಡುವ ದೃಷ್ಟಿಯಿಂದ ಚೇದಿಪುರಕ್ಕೆ ಬಂದರು.
ತೌ ದಾಮಘೋಷಂ ರಾಜಾನಮಭಿವಾದ್ಯ ಯಥಾಕ್ರಮಮ್ |
ಅಭಿವಾದ್ಯ ಯಥಾನ್ಯಾಯಂ ಯಥಾಶ್ರೈಷ್ಠ್ಯಂ ನೃಪಾಂಶ್ಚ ತಾನ್ |
ಕುಶಲಾನಾಮಯಂ ಪೃಷ್ಟ್ವಾ ನಿಷಣ್ಣೌ ರಾಮಕೇಶವೌ ॥15॥
ಅವರು ದಾಮಘೋಷರಾಜನಿಗೆ ನಮಸ್ಕರಿಸಿ ಉಳಿದ ರಾಜರುಗಳಿಗೂ ಅವರ ಶ್ರೇಷ್ಠತೆಯ ಕ್ರಮದಲ್ಲಿ ನಮಸ್ಕರಿಸಿ ಕುಶಲ ಪ್ರಶ್ನೆಯನ್ನು ಮಾಡಿ ಕುಳಿತು ಕೊಂಡರು. (ದಮಘೋಷನೇ ದಾಮಘೋಷನೆಂದು ಹೇಳಲ್ಪಡುತ್ತಾನೆ)
ಅಭ್ಯರ್ಚಿತೌ ತದಾ ವೀರೌ ಪ್ರೀತ್ಯಾ ಚಾಭ್ಯಧಿಕಂ ತತಃ |
ಪುತ್ರಂ ದಾಮೋದರೋತ್ಸಂಗೇ ದೇವೀ ಸನ್ನ್ಯದಧಾತ್ ಸ್ವಯಮ್ ॥16॥
ವೀರರಾದ ರಾಮಕೇಶವರು ಆಗ ಪ್ರೀತಿಯಿಂದ ಸತ್ಕರಿಸಲ್ಪಟ್ಟರು. ದಾಮಘೋಷ ಪತ್ನಿಯು ತಾನೇ ಶಿಶುವನ್ನು ಕೃಷ್ಣನ ತೊಡೆಯ ಮೇಲೆ ಇಟ್ಟಳು.
ನ್ಯಸ್ತಮಾತ್ರಸ್ಯ ತಸ್ಯಾಂಕೇ ಭುಜಾವಭ್ಯಧಿಕೌ ತದಾ |
ಪೇತತುಸ್ತಚ್ಚ ನಯನಂ ನಿಮಮಜ್ಜ ಲಲಾಟಜಮ್ ॥17॥
ತೊಡೆಯ ಮೇಲೆ ಮಗುವನ್ನು ಇಟ್ಟ ತಕ್ಷಣವೇ ಮಗುವಿನ ಅಧಿಕ ಭುಜಗಳು ಉದುರಿ ಹೋದವು ಮತ್ತು ಹಣೆಯಲ್ಲಿದ್ದ ಕಣ್ಣೂ ಸಹ

ಇಂಗಿಹೋಯಿತು.
ತದ್ ದೃಷ್ಟ್ವಾ ವ್ಯಥಿತಾ ತ್ರಸ್ತಾ ವರಂ ಕೃಷ್ಣಮಯಾಚತ |
ದದಸ್ವ ಮೇ ವರಂ ಕೃಷ್ಣ ಭಯಾರ್ತಾಯೈ ಮಹಾಭುಜ |
ತ್ವಂ ಹ್ಯಾರ್ತಾನಾಂ ಸಮಾಶ್ವಾಸೋ ಭೀತಾನಾಮಭಯಂಕರಃ ॥18॥
ಅದನ್ನು ನೋಡಿ ಭಯಗ್ರಸ್ತಳಾದ ಅವಳು ಕೃಷ್ಣನನ್ನು ವರವನ್ನು ಯಾಚಿಸಿದಳು ಮಹಾಭುಜನಾದ ಕೃಷ್ಣನೇ ನೀನು ಆರ್ತರನ್ನು ಸಮಾಧಾನ ಮಾಡುವವನು. ಭೀತರಿಗೆ ಅಭಯವನ್ನು ಕೊಡುವವನು ಭಯಾರ್ತಳಾದ ನನಗೆ ವರವನ್ನು ಕೊಡು.
ಏವಮುಕ್ತಸ್ತತಃ ಕೃಷ್ಣಃ ಸೋಽಬ್ರವೀದ್ ಯದುನಂದನಃ |
ಮಾಭೈಸ್ತ್ವಂ ದೇವಿ ಧರ್ಮಜ್ಞೇ ನ ಮತ್ತೋಽಸ್ತಿ ಭಯಂ ತವ ॥19॥
ಅವಳು ಹೀಗೆ ಹೇಳಿದಾಗ ಯದುನಂದನನಾದ ಕೃಷ್ಣನು ಅವಳನ್ನು ಕುರಿತು ಧರ್ಮಜ್ಞೆಯಾದ ದೇವಿಯೇ ಹೆದರಬೇಡ. ನನ್ನಿಂದ ನಿನಗೆ ಭಯವಿಲ್ಲ ಎಂದು ಹೇಳಿದನು.
ಕ್ಷಮಸ್ವ ಶಿಶುಪಾಲಸ್ಯ ಅಪರಾಧಂ ಮಹಾಭುಜ |
ಇತ್ಯುಕ್ತಃ ಪುಂಡರೀಕಾಕ್ಷಃ ಪ್ರತ್ಯುವಾಚ ಮಹಾಬಲಃ ॥20॥
ಮಹಾಭುಜನೇ! ಈ ಶಿಶುಪಾಲನ ಅಪರಾಧಗಳನ್ನು ಕ್ಷಮಿಸು ಎಂದು ಹೇಳಿದಾಗ ಮಹಾಬಲನಾದ ಪುಂಡರೀಕಾಕ್ಷನು ಉತ್ತರವನ್ನು ಕೊಟ್ಟನು.
ಅಪರಾಧಶತಂ ಕ್ಷಾಮ್ಯಂ ಸ ಮಯಾ ಹ್ಯಸ್ಯ ಪಿತೃಷ್ವಸಃ |
ಪುತ್ರಸ್ಯ ತೇ ವಧಾರ್ಹಾಣಾಂ ಮಾ ತ್ವಂ ಶೋಕೇ ಮನಃ ಕೃಥಾಃ ॥21॥
ಸೋದರತ್ತೆಯೇ! ನಾನು ವಧೆಗೆ ಯೋಗ್ಯವಾದ ನಿನ್ನ ಮಗನ ನೂರು ಅಪರಾಧಗಳನ್ನು ಕ್ಷಮಿಸುವೆನು. ನೀನು ಮನಸ್ಸಿನಲ್ಲಿ ದುಃಖವನ್ನು ಮಾಡಬೇಡ.
ಭೀಷ್ಮಃ
ಏವಮೇತತ್ ಪುರಾವೃತ್ತಂ ಶಿಶಾವಸ್ಮಿನ್ ವೃಕೋದರ |
ಸ ಜಾನನ್ನಾತ್ಮನೋ ಮೃತ್ಯುಂ ಕೃಷ್ಣಂ ಯದುಮುಖಾವಹಮ್ |
ತೇನ ತ್ವಾಮಾಹ್ವಯಚ್ಚೈದ್ಯೋ ಗೋವಿಂದವರದರ್ಪಿತಃ ॥22॥
ಭೀಮಸೇನನೇ! ಇವನು ಶಿಶುವಾಗಿದ್ದಾಗ ಈ ಘಟನೆಯು ನಡೆಯಿತು. ಯದುಕುಲ ಸುಖಾವಹನನಾದ ಕೃಷ್ಣನು ತನ್ನ ಮೃತ್ಯುವೆಂದು ತಿಳಿದಿರುವ ಇವನು ಕೃಷ್ಣನ ವರದಿಂದ ದರ್ಪಿತನಾಗಿ ನಿನ್ನನ್ನು ಆಹ್ವಾನಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ತೃತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ತೊಂದನೆಯ ಅಧ್ಯಾಯವು ಮುಗಿಯಿತು.
* * * *

ಅರವತ್ತೆರಡನೆಯ ಅಧ್ಯಾಯ
(ಶಿಶುಪಾಲನಿಂದ ಭೀಷ್ಮನಿಂದೆ. ಭೀಷ್ಮರ ಪ್ರತ್ಯುತ್ತರ)
ಭೀಷ್ಮಃ
ನೈಷಾ ಚೇದಿಪತೇರ್ಬುದ್ಧಿರ್ಯಥಾ ತ್ವಾಽಹ್ವಯತೇಽಚ್ಯುತಮ್ |
ನೂನಮೇಷ ಜಗತ್ಕರ್ತುಃ ಕೃಷ್ಣಸ್ಯೈವ ವಿನಿಶ್ಚಯಃ ॥1॥
ಎಲೈ ಭೀಮನೇ! ಬಲದಿಂದ ಚ್ಯುತನಾಗದ ನಿನ್ನನ್ನು ಶಿಶುಪಾಲನು ಅಹ್ವಾನಿಸುತ್ತಿರುವ ಅವನ ಬುದ್ಧಿಯು ಸರಿಯಾದುದಲ್ಲ. ಅವನು ಜಗತ್ ಸ್ವಾಮಿಯಾದ ಕೃಷ್ಣನ ಭಾಗವೆಂದು ನಿಶ್ಚಯವಾಗಿದೆ.
ಕೋ ಹಿ ಮಾಂ ಭೀಮಸೇನಾನ್ಯಃ ಕ್ಷೇಪ್ತುಮರ್ಹತಿ ಪಾರ್ಥಿವಃ |
ಕ್ಷಿತಾವೇವಂ ಪರೀತಾತ್ಮಾ ಯಥಾಽಯಂ ಕುಲಪಾಂಸನಃ ॥2॥
ಏಷ ಹ್ಯಸ್ಯ ಮಹಾಬಾಹುಃ ತೇಜೋಂಶಶ್ಚ ಹರೇರ್ಧ್ರುವಮ್ |
ತಮೇವ ಪುನರಾದಾತುಂ ಕುರುತೇಽತ್ರ ಮತಿಂ ಹರಿಃ ॥3॥
ಭೀಮಸೇನನೇ! ಭೂಮಿಯಲ್ಲಿ ಈ ಕುಲಪಾಂಸನನಂತೆ ಮೃತ್ಯುಗ್ರಸ್ತವಾದ ಒಬ್ಬ ವ್ಯಕ್ತಿಯನ್ನು ಬಿಟ್ಟು ಬೇರೆ ಯಾವ ರಾಜನು ನನ್ನನ್ನು ಹೀಗೆ ನಿಂದಸಲು ಸಾಧ್ಯ? ಈ ಮಹಾಬಾಹುವಾದ ಶಿಶುಪಾಲನು ನಿಶ್ಚಯವಾಗಿ ಹರಿಯ ತೋಜೋಂಶದಿಂದ ಯುಕ್ತನಾದವನು. ಹರಿಯು ಅವನಲ್ಲಿರುವ ತನ್ನ ಅಂಶವನ್ನು ಪುನಃ ಹಿಂದೆ ತೆಗೆದುಕೊಳ್ಳಲು ಮನಸ್ಸುಮಾಡಿದ್ದಾನೆ.
ತೇನೈವಂ ಕುರುಶಾರ್ದೂಲ ಶಾರ್ದೂಲ ಇವ ಚೇದಿರಾಟ್ |
ಗರ್ಜತ್ಯತೀವ ದುರ್ಬುದ್ಧಿಃ ಸರ್ವಾನಸ್ಮಾನಚಿಂತಯನ್ ॥4॥
ಕುರುಶಾರ್ದೂಲನೇ! ಆ ಕಾರಣದಿಂದ ಈ ಚೇದಿರಾಜನಾದ ಶಿಶುಪಾಲನು ದುರ್ಬುದ್ಧಿಯುಳ್ಳವನಾಗಿ ನಮ್ಮಲ್ಲಿ ಯಾರನ್ನೂ ಪರಿಗಣಿಸದೆ ಹುಲಿಯಂತೆ ಗರ್ಜಿಸುತ್ತಿದ್ದಾನೆ.
ವೈಶಂಪಾಯನಃ
ತತೋ ನ ಮಮೃಷೇ ಚೈದ್ಯಃ ತದ್ ಭೀಷ್ಮವಚನಂ ಪುನಃ |

ಉವಾಚೈನಂ ಸುಸಂಕ್ರುದ್ಧಃ ಸ ಭೀಷ್ಮಂ ಪುನರುತ್ತರಮ್ ॥5॥
ಆಗ ಆ ಭೀಷ್ಮರ ವಚನಗಳನ್ನು ಕೇಳಿ ಶಿಶುಪಾಲನು ಸಹಿಸಲಿಲ್ಲ. ಸುಸಂಕ್ರುದ್ಧನಾಗಿ ಭೀಷ್ಮರನ್ನು ಕುರಿತು ಪುನಃ ಉತ್ತರವನ್ನು ನೀಡಿದನು.
ದ್ವಿಷತಾಂ ನೋಽಸ್ತು ಭೀಷ್ಮೈಷಃ ಪ್ರಭಾವಃ ಕೇಶವಸ್ಯ ಯಃ |
ಅಸ್ಯ ಸ್ತವಂ ಚ ವಕ್ತಾ ತ್ವಂ ವಂದಿವತ್ ಸತತೋತ್ಥಿತಃ ॥6॥
ಭೀಷ್ಮನೇ ನೀನು ಕೃಷ್ಣನಿಗೆ ಹೊಗಳುವ ಮಹಿಮೆಯೆಲ್ಲವೂ ಅವನ ದ್ವೇಷಿಗಳಾದ ನಮಗೆ ಸಲ್ಲಬೇಕಾದುದು. ನೀನು ಬಂದಿಯಂತೆ ಯಾವಾಗಲೂ ಅವನ ಸ್ತೋತ್ರವನ್ನು ಮಾಡಿತ್ತಿದ್ದೀಯೆ.
ಸಂಸ್ತವಾಯ ಮನೋ ಭೀಷ್ಮ ಪರೇಷಾಂ ರಮತೇ ಸದಾ |
ಯದೀಮಾನ್ ಸ್ತೌಷಿ ರಾಜ್ಞಸ್ತ್ವಮಿಮಂ ಹಿತ್ವಾ ಜನಾರ್ದನಮ್ ॥7॥
ಭೀಷ್ಮನೇ! ನಿನ್ನ ಮನಸ್ಸು ಯಾವಾಗಲೂ ಇನ್ನೊಬ್ಬರನ್ನು ಸ್ತೋತ್ರಮಾಡಲು ಹಾತೊರೆಯುವುದಾದರೆ ಜನಾರ್ದನನನ್ನು ಬಿಟ್ಟು ಈ ರಾಜರುಗಳನ್ನು ಸ್ತೋತ್ರಮಾಡು.
ವರದಂ ಸ್ತುಹಿ ಬಾಹ್ಲೀಕಮಿಮಂ ಪಾರ್ಥಿವಸತ್ತಮಮ್ |
ಜಾಯಮಾನೇನ ಯೇನೇಯಮಭವದ್ ದಾರಿತಾ ಮಹೀ ॥8॥
ಪಾರ್ಥಿವಶ್ರೇಷ್ಠನಾದ ವರಪ್ರದನಾದ ಈ ಬಾಹ್ಲೀಕರಾಜನನ್ನು ಸ್ತೋತ್ರಮಾಡು. ಇವನು ಹುಟ್ಟಿದಾಗ ಭೂಮಿಯು ಬಿರಿದು ಹೋಯಿತು.
ಸರ್ವಾಂಗವಿಷಯಾಧ್ಯಕ್ಷಂ ಸಹಸ್ರಾಕ್ಷಸಮಂ ಬಲೇ |
ಸ್ತುಹಿ ಕರ್ಣಮಿಮಂ ಭೀಷ್ಮ ಮಹಾಚಾಪವಿಕರ್ಷಣಮ್ ॥9॥
ಸಮಗ್ರವಾದ ಅಂಗರಾಜ್ಯಕ್ಕೆ ಅಧಿಪತಿಯಾದ ಬಲದಲ್ಲಿ ಇಂದ್ರನಿಗೆ ಸಮನಾದ ಮಹಾಧನುರ್ಧಾರಿಯಾದ ಈ ಕರ್ಣನನ್ನು ಸ್ತೋತ್ರಮಾಡು.
ಯಸ್ಯ ತೇ ಕುಂಡಲೇ ದಿವ್ಯೇ ಸಹಜೇ ಚ ದದೌ ತದಾ |
ಕವಚಂ ಸಹಜಂ ಚಾಂಗೇ ಬಾಲಾರ್ಕಸದೃಶಪ್ರಭಮ್ ॥10॥
ಎಲೈ ಭೀಷ್ಮನೇ! ಅವನು ತನ್ನ ದಿವ್ಯವಾದ ಸಹಜವಾದ ಕುಂಡಲಗಳನ್ನು ಬಾಲಸೂರ್ಯನಂತೆ ಹೊಳೆಯುವ ತನ್ನ ದೇಹದಲ್ಲಿ ಚರ್ಮದಂತೆ ಸಹಜವಾಗಿದ್ದ ಕವಚವನ್ನು ಸಹ ದಾನಮಾಡಿದನಷ್ಟೇ?
ದ್ರೋಣಂ ದ್ರೌಣಿಂ ಚ ಸಾಧು ತ್ವಂ ಪಿತಾಪುತ್ರೌ ಮಹಾರಥೌ |
ಸ್ತುಹಿ ಸ್ತುತ್ಯಾವಿಮೌ ಭೀಷ್ಮ ಸತತಂ ದ್ವಿಜಸತ್ತಮೌ ॥11॥
ಭೀಷ್ಮನೇ! ಮಹಾರಥರಾದ ದ್ವಿಜಶ್ರೇಷ್ಠರಾದ ಸ್ತೋತ್ರಕ್ಕೆ ಅರ್ಹರಾದ ತಂದೆ ಮಕ್ಕಳಾದ ದ್ರೋಣ ಮತ್ತು ಅಶ್ವತ್ಥಾಮರನ್ನು ಚೆನ್ನಾಗಿ ಸ್ತೋತ್ರಮಾಡು.
ಯಯೋರನ್ಯತರೋ ಭೀಷ್ಮ ಸಂಕ್ರುದ್ಧಃ ಸಚರಾಚರಾಮ್ |
ಇಮಾಂ ವಸುಮತೀಂ ಕುರ್ಯಾನ್ನಿಶ್ಶೇಷಾಮಿತಿ ಮೇ ಮತಿಃ ॥12॥
ಎಲೈ ಭೀಷ್ಮನೇ ಅವರಲ್ಲಿ ಒಬ್ಬನೂ ಸಹ ಕ್ರುದ್ಧನಾದರೆ ಚರಾಚರವಾದ ಈ ಭೂಮಿಯನ್ನು ನಿಶ್ಶೇಷವಾಗಿ ಮಾಡುತ್ತಾನೆಂದು ನನ್ನ ನಿಶ್ಚಯ.
ದ್ರೋಣಸ್ಯ ಹಿ ಸಮಂ ಯುದ್ಧೇ ನ ಪಶ್ಯಾಮಿ ಧನುರ್ಧರಮ್ |
ಪೃಥಿವ್ಯಾಂ ಸಾಗರಾಂತಾಯಾಂ ಯೋ ವೈ ಪ್ರೀತಿಕರೋ ಭವೇತ್ ॥
ದ್ರೋಣರಿಗೆ ಸಮರಾದ ಸಂತೋಷವನ್ನು ಉಂಟುಮಾಡುವ ಧನುರ್ಧಾರಿಗಳು ಸಾಗರಾಂತವಾದ ಪೃಥಿವಿಯಲ್ಲಿ ಯಾರೂ ನನಗೆ ಕಾಣುವುದಿಲ್ಲ.
ದುರ್ಯೋಧನಂ ಚ ರಾಜೇಂದ್ರಮತಿಕ್ರಮ್ಯ ಮಹಾಭುಜಮ್ |
ಜಯದ್ರಥಂ ಚ ರಾಜಾನಂ ಕೃತಾಸ್ತ್ರಂ ದೃಢಧನ್ವಿನಮ್ ॥14॥
ದ್ರುಮಂ ಕಿಂಪುರುಷಾಚಾರ್ಯಂ ಲೋಕೇ ಪ್ರಥಿತವಿಕ್ರಮಮ್ |
ಅತಿಕ್ರಮ್ಯ ಮಹಾವೀರ್ಯಂ ಮಾಧವಂ ಕಿಂ ಪ್ರಶಂಸಸಿ ॥15॥
ಎಲೈ ಭೀಷ್ಮನೇ! ನೀನು ಮಹಾಭುಜನಾದ ರಾಜೇಂದ್ರನಾದ ದುರ್ಯೋಧನನನ್ನು ಅತಿಕ್ರಮಿಸಿ, ಅಸ್ತ್ರಜ್ಞನೂ ಶ್ರೇಷ್ಠ ಧನುರ್ಧಾರಿಯೂ ಆದ ಜಯದ್ರಥನನ್ನು ಆಕ್ರಮಿಸಿ, ಲೋಕದಲ್ಲಿ ಪ್ರಖ್ಯಾತವಾದ ಪರಾಕ್ರಮವುಳ್ಳ ಕಿಂಪುರುಷಾಚಾರ್ಯನಾದ ದ್ರುಮನನ್ನು ಅತಿಕ್ರಮಿಸಿ, ಮಾಧವನನ್ನು ಮಹಾಶೌರ್ಯವುಳ್ಳವನೆಂದು ಏಕೆ ಪ್ರಸಂಶಿಸುತ್ತಿದ್ದೀಯೇ?
ವೃದ್ಧಂ ಚ ಭಾರತಾಚಾರ್ಯಂ ಕೃಪಂ ವೈ ಶಾರದಂ ಶುಭಮ್ |
ಅತಿಕ್ರಮ್ಯ ಮಹಾವೀರ್ಯಂ ಕಿಂ ಪ್ರಶಂಸಸಿ ಮಾಧವಮ್ ॥16॥
ವಿಶಾರದರಾದ ಮಂಗಳಸ್ವರೂಪರಾದ ಭಾರತಾಚಾರ್ಯರಾದ ಮಹಾಪರಾಕ್ರಮಿಗಳಾದ ಕೃಪರನ್ನು ಅತಿಕ್ರಮಿಸಿ, ಏಕೆ ಮಾಧವನನ್ನು ಪ್ರಶಂಸಿಸುತ್ತಿದ್ದೀಯೆ?
ಭೀಷ್ಮಕಂ ಚ ಮಹಾವೀರ್ಯಂ ದಂತವಕ್ರಂ ಚ ಭೂಮಿಪಮ್ |
ಅತಿಕ್ರಮ್ಯ ಮಹಾವೀರ್ಯಂ ಕಿಂ ಪ್ರಶಂಸಸಿ ಮಾಧವಮ್ ॥17॥
ಮಹಾಪರಾಕ್ರಮಿಯಾದ ಭೀಷ್ಮಕನನ್ನೂ ದಂತವಕ್ರ ರಾಜನನ್ನೂ ಮೀರಿ ಕೃಷ್ಣನನ್ನು ಮಹಾಪರಾಕ್ರಮಿ ಎಂದು ಏಕೆ ಪ್ರಶಂಸಿಸುತ್ತಿದ್ದೀಯೆ?

ಭಗದತ್ತಂ ಯೂಪಕೇತುಂ ಜಯತ್ಸೇನಂ ಚ ಮಾಗಧಮ್ |
ಶಲ್ಯಪ್ರಭೃತಿಕಾನ್ ಹಿ ತ್ವಂ ನ ಸ್ತೌಷಿ ವಸುಧಾಧಿಪಾನ್ ॥18॥
ನೀನು ಭಗದತ್ತ ಯೂಪಕೇತು ಮಗಧರಾಜನಾದ ಜಯತ್ಸೇನ ಶಲ್ಯ ಮೊದಲಾದ ರಾಜರುಗಳನ್ನು ಸ್ತೋತ್ರಮಾಡುವುದಿಲ್ಲ!
ಸ್ತವಾಯ ಯದಿ ತೇ ಬುದ್ಧಿರ್ವರ್ತತೇ ಭೀಷ್ಮ ಸರ್ವದಾ |
ಕಿಂ ಹ್ಯಶಕ್ಯಂ ತ್ವಯಾ ಕರ್ತುಂ ಯದ್ವೃದ್ಧಾನಾಂ ಮಯಾ ನೃಪ ॥19॥
ಎಲೈ ಭೀಷ್ಮನೇ! ನಿನಗೆ ಇನ್ನೊಬ್ಬರನ್ನು ಸ್ತೋತ್ರಮಾಡುವ ಬುದ್ಧಿಯಿದ್ದರೆ ನಾನು ಏನು ಮಾಡಲು ಸಾಧ್ಯ? ನೀನು ವೃದ್ಧರಿಗೆ ಮಾಡಿದ ಅವಮಾನವಾದ ರೂಪಕಾರ್ಯವನ್ನು ನಾನು ಎಂದೂ ಮಾಡಲಾರೆ.
ಪುರಾ ಕಥಯತಾಂ ನೂನಂ ನ ಶ್ರುತಂ ಧರ್ಮವಾದಿನಾಮ್ |
ಆತ್ಮನಿಂದಾಽಽತ್ಮಪೂಜಾ ಚ ಪರನಿಂದಾ ಪರಸ್ತವಃ |
ಅನಾಚರಿತಮಾರ್ಯಾಣಾಮಿತಿ ತೇ ಭೀಷ್ಮ ನ ಶ್ರುತಮ್ ॥20॥
ಭೀಷ್ಮನೇ! ಧರ್ಮಿಷ್ಠರು ಆಡುವ ಮಾತುಗಳನ್ನು ನೀನು ಹಿಂದೆ ಕೇಳಲಿಲ್ಲವೆಂದು ಭಾವಿಸುತ್ತೇನೆ. ಆತ್ಮನಿಂದೆ ಆತ್ಮಪೂಜೆ ಪರನಿಂದೆ ಮತ್ತು ಪರಸ್ತೋತ್ರ ಇದನ್ನು ಉತ್ತಮ ಗುಣವುಳ್ಳವರು ಮಾಡಬಾರದು ಎಂಬ ಮಾತನ್ನು ನೀನು ಕೇಳಲಿಲ್ಲ!
ಇತಿಸತ್ವಮಿಮಂ ಶಶ್ವದ್ ಗೋಪಂ ಸಂಸ್ತೋತುಮಿಚ್ಛಸಿ |
ಕೇಶವಂ ತಚ್ಚ ತೇ ಭೀಷ್ಮ ನ ಕಿಂಚಿದಪಿ ಮನ್ಯಸೇ ॥21॥
ಭೀಷ್ಮನೇ ಇಂತಹ ಗುಣವುಳ್ಳ ಗೋಪಾಲನಾದ ಕೃಷ್ಣನನ್ನು ನೀನು ಯಾವಾಗಲೂ ಸ್ತೋತ್ರಮಾಡಲು ಇಚ್ಛಿಸುತ್ತೀಯೆ ಆದರಿಂದ ನಿನ್ನ ಮನಸ್ಸಿಗೆ ಏನೂ ಬೇಸರವಾಗುವುದಿಲ್ಲ.
ಕಥಂ ಭೋಜಸ್ಯ ಪುರುಷೇ ವತ್ಸಪಾಲೇ ದುರಾತ್ಮನಿ |
ಸಮಾವೇಶಯತೇ ಸರ್ವಂ ಜಗತ್ ಕಥನಕಾಮ್ಯಯಾ ॥22॥
ನೀನು ಭೋಜರಾಜನ ರಾಜ್ಯದಲ್ಲಿ ಒಬ್ಬ ಸಾಮಾನ್ಯಪುರುಷನಾದ ದುರಾತ್ಮನಾದ ಕೇವಲ ವತ್ಸಪಾಲನಾದ ಅವನನ್ನು ಸ್ತೋತ್ರಮಾಡಬೇಕು ಎಂಬ ಇಚ್ಛೆಯಿಂದ ಸಮಸ್ತ ಜಗತ್ತು ಅವನನ್ನು ಆದರಿಸಿದೆ ಎಂದು ಹೇಗೆ ಹೇಳುತ್ತೀಯೇ?
ನ ಚೈಷಾಂ ನ ಚ ತೇ ಭಕ್ತಿಃ ಪ್ರಕೃತಿಂ ಯಾತಿ ಭಾರತ |
ತೇನೈವಂ ವಂದಿವತ್ ಸ್ತೌಷಿ ಶ್ರುತಮನ್ಯೇನ ನಶ್ರುತಮ್ ॥23॥
ಎಲೈ ಭಾರತನೇ! ನೀನು ಕೃಷ್ಣನಲ್ಲಿ ಮಾಡುವ ಸ್ತೋತ್ರವಾಗಲಿ ಅಥವಾ ಪಾಂಡವರು ಕೃಷ್ಣನಲ್ಲಿ ಮಾಡುವ ಭಕ್ತಿಯಾಗಲೀ ಯಾವುದೂ ವಸ್ತುಸ್ಥಿತಿಗೆ ಅನುಗುಣವಾಗಿಲ್ಲ. ನೀನು ಅವನಲ್ಲಿ ಹೇಳುವ ಗುಣಗಳು ನಿನ್ನಿಂದ ಮಾತ್ರ ಶ್ರುತವಾಗಿದೆ. ಬೇರೆ ಯಾರಿಂದಲೂ ಶ್ರುತವಾಗಿಲ್ಲ.
ನ ಗಾಥಾ ಗಾಥಿನಂ ಶಾಸ್ತಿ ಬಹು ಚೇದಪಿ ಗಾಯತಿ |
ಪ್ರಕೃತಿಂ ಯಾಂತಿ ಭೂತಾನಿ ಕುಳಿಂಗಶಕುನಿರ್ಯಥಾ ॥24॥
ಸ್ತೋತ್ರ ಗೀತೆಗಳು ಸ್ತೋತ್ರಮಾಡುವವನನ್ನಾಗಲೀ ಅಥವಾ ಸ್ತೋತ್ರಕ್ಕೆ ವಿಷಯವಾದವನನ್ನಾಗಲೀ ಶಿಕ್ಷೆಯನ್ನು ಮಾಡುವುದಿಲ್ಲ. ಎಂದರೆ ಉಚ್ಚನನ್ನಾಗಿ ಅಥವಾ ನೀಚನನ್ನಾಗಿ ಮಾಡುವುದಿಲ್ಲ. ಎಲ್ಲರೂ ಕುಳಿಂಗಪಕ್ಷಿಯಂತೆ ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಇರುತ್ತಾರೆ.
ಕುಳಿಂಗಶಕುನಿರ್ನಾಮ ಪಾರ್ಶ್ವೇ ಹಿಮವತಃ ಪರೇ |
ಭೀಷ್ಮ ತಸ್ಯಾಸ್ಸದಾ ವಾಚಃ ಶ್ರೂಯಂತೇಽರ್ಥವಿಗರ್ಹಿತಾಃ ॥25॥
ಎಲೈ ಭೀಷ್ಮನೇ! ಹಿಮಾಲಯದ ಪಾರ್ಶ್ವದಲ್ಲಿ ಒಂದು ಕುಳಿಂಗಪಕ್ಷಿ ಇದ್ದಿತು. ಅದು ಯಾವಾಗಲೂ ಅರ್ಥಹೀನವಾದ ಮಾತುಗಳನ್ನು ಆಡುತ್ತಿದ್ದಿತು.
ಮಾ ಸಾಹಸಮಿತೀದಂ ಸಾ ಸತತಂ ವದತೇ ಕಿಲ |
ಸಾಹಸಂ ಚಾತ್ಮನಾ ಭೀಮ ಕುರ್ವತೀ ನಾವಬುಧ್ಯತೇ ॥26॥
ಸಾಹಸಕಾರ್ಯವನ್ನು ಮಾಡಬೇಡಿ ಎಂದು ಅದು ಯಾವಾಗಲೂ ಹೇಳುತ್ತಿತ್ತು. ಭೀಷ್ಮನೇ! ತಾನು ಮಾತ್ರ ಅದು ಯಾವಾಗಲೂ ಸಾಹಸ ಕಾರ್ಯವನ್ನು (ಸಾಹಸ ಕಾರ್ಯ ಎಂದರೆ ಪರಿಣಾಮವನ್ನು ಆಲೋಚಿಸದೆ ತಕ್ಷಣದಲ್ಲಿ ಮಾಡುವ ಒಂದು ಬುದ್ಧಿಶೂನ್ಯವಾದ ದುಷ್ಪರಿಣಾಮವನ್ನು ಮಾಡುವ ಕಾರ್ಯ)ಯಾವಾಗಲೂ ಮಾಡುತ್ತಾ ತಾನು ಮಾಡುವ ಸಾಹಸಕಾರ್ಯವನ್ನು ತಾನೇ ತಿಳಿಯುತ್ತಿರಲಿಲ್ಲ.
ಸಾ ಹಿ ಮಾಂಸಾರ್ಗಳಂ ಭೀಷ್ಮ ಮುಖಾತ್ ಸಿಂಹಸ್ಯ ಖಾದತಃ |
ದಂತಾಂತರವಿಲಗ್ನಂ ಯತ್ ತದಾದತ್ತೇಽಲ್ಪಚೇತನಾ |
ಇಚ್ಛತಃ ಸಾ ಹಿ ಸಿಂಹಸ್ಯ ಭೀಷ್ಮ ಜೀವತ್ಯಸಂಶಯಮ್ ॥27॥
ಭೀಷ್ಮನೇ! ಅದು ಸಿಂಹವು ತಿನ್ನುವ ಮಾಂಸದ ಮುದ್ದೆಯನ್ನು ಅದರ ದಂತದ ಮಧ್ಯದಿಂದ ಮಂದ ಬುದ್ಧಿಯಿಂದ ಕಿತ್ತುಕೊಂಡು ತಿನ್ನಲು ಪ್ರಯತ್ನಿಸುತ್ತಿತ್ತು. ಭೀಷ್ಮನೇ! ಸಿಂಹವು ಬಯಸಿದರೆ ಒಂದು ಕ್ಷಣದಲ್ಲಿ ಆ ಪಕ್ಷಿಯು ನಿಸ್ಸಂಶಯವಾಗಿ ಇರುವುದಿಲ್ಲವಷ್ಟೇ!
ತದ್ವತ್ ತ್ವಮಪ್ಯಧರ್ಮಜ್ಞ ಸದಾ ವಾಚಃ ಪ್ರಭಾಷಸೇ |
ಇಚ್ಛತಾಂ ಪಾರ್ಥಿವೇಂದ್ರಾಣಾಂ ಭೀಷ್ಮ ಜೀವಸ್ಯಸಂಶಯಃ |
ಲೋಕವಿದ್ವಿಷ್ಟಕರ್ಮಾ ಹಿ ನಾನ್ಯೋಽಸ್ತಿ ಭವತಃ ಸಮಃ ॥28॥
ಭೀಷ್ಮನೇ! ಅಧರ್ಮಜ್ಞನಾದ ನೀನು ಆ ಕುಳಿಂದ ಪಕ್ಷಿಯಂತೆ ಮಾತನಾಡುತ್ತಿದ್ದೀಯೆ. ನೀನು ಬದುಕಿರಲಿ ಎಂಬ ಇಚ್ಛೆಯಿಂದ, ರಾಜರಾದ ನಾವು ಸುಮ್ಮನಿರುವ ಕಾರಣದಿಂದ ನೀನು ಬದುಕಿದ್ದೀಯೆ ಈ ವಿಷಯದಲ್ಲಿ ಸಂಶಯವಿಲ್ಲ. ಎಲ್ಲರ ದ್ವೇಷಕ್ಕೆ ಒಳಗಾಗುವ

ಕರ್ಮವನ್ನು ಮಾಡುವವನು ನಿನ್ನಿಂತಹವನು ಇನ್ನೊಬ್ಬನಿಲ್ಲ.
ವೈಶಂಪಾಯನಃ
ಇತಿ ಚೇದಿಪತೇಃ ಶ್ರುತ್ವಾ ಭೀಷ್ಮೋಽಸ್ಯ ಕಟುಕಂ ವಚಃ |
ಉವಾಚ ವಚನಂ ಧೀಮಾನ್ ಚೇದಿರಾಜಸ್ಯ ಶೃಣ್ವತಃ ॥29॥
ಭೀಷ್ಮರು ಹೀಗೆ ಶಿಶುಪಾಲನ ಕಟುಮಾತುಗಳನ್ನು ಕೇಳಿ ಮೇಧಾವಿಯಾದ ಅವರು ಶಿಶುಪಾಲನು ಕೇಳುವಂತೆ ಮಾತನಾಡಿದರು.
ಇಚ್ಛತಾಂ ಕಿಲ ನಾಮಾಹಂ ಜೀವಾಮ್ಯೇಷಾಂ ಮಹೀಕ್ಷಿತಾಮ್ |
ಯೋಽಹಂ ನ ಗಣಯಾಮ್ಯೇತಾನ್ ತೃಣವತ್ ಸರ್ವಪಾರ್ಥಿವಾನ್ ॥30॥
ನಿಮ್ಮಂತಹ ರಾಜರ ಇಚ್ಛೆಯಿಂದ ನಾನು ಬದುಕಿದ್ದೇನಷ್ಟೇ! ನಾನು ರಾಜರಾದ ನಿಮ್ಮೆಲ್ಲರನ್ನು ಒಂದು ಹುಲ್ಲು ಕಡ್ಡಿಗೂ ಸಮನಾಗಿ ಎಣಿಸುವುದಿಲ್ಲ.
ಏವಮುಕ್ತೇ ತು ಭೀಷ್ಮೇಣ ತತಃ ಸಂಚುಕ್ರುಶುರ್ನೃಪಾಃ |
ಕೇಚಿಜ್ಜಹೃಷಿರೇ ತತ್ರ ಕೇಚಿದ್ ಭೀಷ್ಮಂ ಜಗರ್ಹಿರೇ |
ಕೇಚಿದೂಚುರ್ಮಹೇಷ್ವಾಸಾಃ ಶ್ರುತ್ವಾ ಭೀಷ್ಮಸ್ಯ ತದ್ವಚಃ ॥31॥
ಭೀಷ್ಮನು ಹೀಗೆ ಹೇಳುತ್ತಿರಲು ಕೆಲವು ರಾಜರು ಕಿರುಚಿದರು. ಅವರಲ್ಲಿ ಕೆಲವರು ಸಂತೋಷಪಟ್ಟರು. ಇನ್ನು ಕೆಲವರು ಭೀಷ್ಮನನ್ನು ನಿಂದಿಸಿದರು. ಇನ್ನು ಕೆಲವು ಧನುರ್ಧಾರಿಗಳಾದ ರಾಜರು ಭೀಷ್ಮರ ಮಾತನ್ನು ಕೇಳಿ ಹೀಗೆ ಮಾತನಾಡಿದರು.
ಪಾಪೋಽವಲಿಪ್ತೋ ವೃದ್ಧಶ್ಚ ನಾಯಂ ಭೀಷ್ಮೋಽರ್ಹತಿ ಕ್ಷಮಾಂ |
ಹನ್ಯತಾಂ ದುರ್ಮತಿರ್ಭೀಷ್ಮಃ ಪಶುವತ್ ಸಾಧ್ವಸಂ ನೃಪೈಃ |
ಸಮೇತ್ಯ ಸರ್ವೈಃ ಪಾಪಾತ್ಮಾ ದಹ್ಯತಾಂ ಚಾಸ್ತ್ರವಹ್ನಿನಾ ॥32॥
ಪಾಪಿಯೂ ಗರ್ವಿಷ್ಠನೂ ವೃದ್ಧನೂ ಆದ ಈ ಭೀಷ್ಮನು ಎಂದೂ ನಮ್ಮ ಕ್ಷಮೆಗೆ ಅರ್ಹನಲ್ಲ. ಈ ದುರ್ಮತಿಯಾದ ಭೀಷ್ಮನನ್ನು ಪಶುವಿನಂತೆ ಎಲ್ಲ ರಾಜರು ಸೇರಿ ಕೊಂದು ಬಿಡಿ ಅಥವಾ ಎಲ್ಲರಾಜರೂ ತಮ್ಮ ಅಸ್ತ್ರಾಗ್ನಿಯಿಂದ ಪಾಪಾತ್ಮನಾದ ಈ ಭೀಷ್ಮನನ್ನು ಸುಟ್ಟುಬಿಡಲಿ.
ಇತಿ ತೇಷಾಂ ವಚಃ ಶ್ರುತ್ವಾ ವೃದ್ಧಃ ಕುರುಪಿತಾಮಹಃ |
ಉವಾಚ ಮತಿಮಾನ್ ಭೀಷ್ಮಃ ತಾನೇವಂ ವಸುಧಾಧಿಪಾನ್ ॥33॥
ಹೀಗೆ ಅವರು ಆಡಿದ ಮಾತುಗಳನ್ನು ಕೇಳಿದ ಕುರುಪಿತಾಮಹನಾದ ಮೇಧಾವಿಗಳೂದ ಭೀಷ್ಮರು ಆ ರಾಜರನ್ನು ಕುರಿತು ಹೀಗೆ ಮಾತನಾಡಿದರು.
ಉಕ್ತಸ್ಯೋಕ್ತಸ್ಯ ಚೈವಾಂತಂ ನಾಹಂ ಸಮುಪಲಕ್ಷಯೇ |
ಯತ್ತು ವಕ್ಷ್ಯಾಮಿ ತತ್ ಸರ್ವಂ ಶೃಣುಧ್ವಂ ವಸುಧಾಧಿಪಾಃ ॥34॥
ನಿಮ್ಮಲ್ಲಿ ಒಬ್ಬರೂ ಏನನ್ನು ಮಾತಾಡಿದರೂ ಅದನ್ನು ಪರ್ಯವಸಾನ ಮಾಡುವಸಾಮರ್ಥ್ಯವನ್ನು ನಾನು ಯಾರಲ್ಲೂ ಕಾಣುತ್ತಿಲ್ಲ. ಆದರೆ ಎಲೈ ರಾಜರೇ! ನಾನು ಹೇಳುವ ಮಾತನ್ನು ನೀವೆಲ್ಲರೂ ಕೇಳಿ.
ಪಶುವದ್ ಘಾತನಂ ವಾ ಮೇ ದಹನಂ ವಾ ಶರಾಗ್ನಿನಾ |
ಕ್ರಿಯತಾಂ ಮೂರ್ಧ್ನಿ ವೋ ನ್ಯಸ್ತಂ ಮಯೇದಂ ಸಕಲಂ ಪದಮ್ ॥
ನೀವು ನನ್ನನ್ನು ಪಶುವಿನಂತಾದರೂ ಕೊಲ್ಲಿ ಅಥವಾ ಬಾಣಾಗ್ನಿಯಿಂದಲಾದರೂ ದಹಿಸಿ. ನಾನು ಮಾತ್ರ ನಿಮ್ಮೆಲ್ಲರ ತಲೆಯ ಮೇಲೆ ಈ ನನ್ನ ಪಾದಗಳನ್ನು ಇಟ್ಟಿದ್ದೇನೆ.
ಏಷ ತಿಷ್ಠತಿ ಗೋವಿಂದಃ ಪೂಜಿತೋಸ್ಮಾಭಿರೀಶ್ವರಃ |
ಯಸ್ಯ ಚ ತ್ವರತೇ ಬುದ್ಧಿರ್ಮರಣಾಯ ತು ವೋ ನೃಪಾಃ ॥36॥
ಕೃಷ್ಣ ಆಹ್ವಯತಾಮದ್ಯ ಯುದ್ಧೇ ಚಕ್ರಗದಾಧರಃ |
ಯಾದವಸ್ಯೈವ ದೇವಸ್ಯ ದೇಹಂ ವಿಶತು ಪಾತಿತಃ ॥37॥
ಪ್ರಭುವಾದ ಈ ಕೃಷ್ಣನನ್ನು ನಾವು ಪೂಜಿಸಿದ್ದೇವೆ. ನಿಮ್ಮಲ್ಲಿ ಯಾವ ರಾಜರಿಗೆ ಬೇಗ ಮರಣವನ್ನು ಹೊಂದಲು ತವಕವಿದೆಯೋ ಅಂತಹವರು ಚಕ್ರಗದಾಧರನಾದ ಕೃಷ್ಣನನ್ನು ಆಹ್ವಾನಿಸಿ. ಅವನಿಂದ ಹೊಡೆದು ಉರುಳಿಸಲ್ಪಟ್ಟು ಯಾದವ ಕೃಷ್ಣನಾದ ಆ ದೇವ ದೇಹವನ್ನೇ ಪ್ರವೇಶಿಸುತ್ತಾನೆ. (ಪ್ರವೇಶಿಸಲಿ)
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಿಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ಚತುರ್ಥೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ತೆರಡನೆಯ ಅಧ್ಯಾಯವು ಮುಗಿಯಿತು.
* * * *
ಅರವತ್ಮೂರನೆಯ ಅಧ್ಯಾಯ
(ಶಿಶುಪಾಲನಿಂದ ಕೃಷ್ಣನ ನಿಂದೆ, ಶಿಶುಪಾಲನನ್ನು ಕೊಲ್ಲಲು ಕೃಷ್ಣನ ನಿರ್ಧಾರ)
ವೈಶಂಪಾಯನಃ
ವಚಃ ಶ್ರುತ್ವೈವ ಭೀಷ್ಮಸ್ಯ ಚೇದಿರಾಡುರುವಿಕ್ರಮಃ |
ಯುಯುತ್ಸುರ್ವಾಸುದೇವೇನ ವಾಸುದೇವಮುವಾಚ ಹ ॥1॥
ಭೀಷ್ಮನ ಮಾತುಗಳನ್ನು ಕೇಳಿದ ಮಹಾವರಾಕ್ರಮಶಾಲಿಯಾದ ಶಿಶುಪಾಲನು ಕೃಷ್ಣನ ಜೊತೆಯಲ್ಲಿ ಯುದ್ಧಮಾಡಲು ಬಯಸಿ

ಕೃಷ್ಣನನ್ನು ಕುರಿತು ಮಾತನಾಡಿದನು.
ಆಹ್ವಯೇ ತ್ವಾಂ ರಣಾಯ್ಯೆಹಿ ಮಯಾ ಸಹ ಜನಾರ್ದನ |
ಯಾವದದ್ಯ ನಿಹನ್ಮಿ ತ್ವಾಂ ಸಹಿತಂ ಸರ್ವಪಾಂಡವೈಃ ॥2॥
ಸ ಚ ಭೀಷ್ಮೋಽಪಿ ಮೇ ವಧ್ಯಃ ಪಾಂಡವಾಃ ಸರ್ವರಾಜಭಿಃ |
ನೃಪತೀನ್ ಸಮತಿಕ್ರಮ್ಯ ಯೈರರಾಜಾ ತ್ವಮರ್ಚಿತಃ ॥3॥
ಜನಾರ್ದನನೇ ನನ್ನ ಜೊತೆಯಲ್ಲಿ ಯುದ್ಧಕ್ಕೆ ನಿನ್ನನ್ನು ಆಹ್ವಾನಿಸುತ್ತಿದ್ದೇನೆ. ಯುದ್ಧಕ್ಕೆ ಬಾ. ಈ ದಿನ ನಿನ್ನನ್ನು ಕೊಲ್ಲುತ್ತೇನೆ. ಆ ಭೀಷ್ಮನು ಸಹ ನನಗೆ ವಧ್ಯನಾದವನೇ. ಯಾವ ಪಾಂಡವರು ಎಲ್ಲಾ ರಾಜರನ್ನೂ ಅತಿಕ್ರಮಿಸಿ ನಿನ್ನನ್ನು ಪೂಜಿಸಿದರೋ ಆ ಪಾಂಡವರೂ ಸಹ ಎಲ್ಲಾ ರಾಜರಿಂದ ಕೊಲ್ಲಲ್ಪಡಬೇಕು.
ಯೇ ತ್ವಾಂ ಗೋಪಮರಾಜಾನಂ ಬಾಲ್ಯಾದರ್ಚಂತಿ ದುರ್ಮತಿಮ್|
ಅನರ್ಹಮರ್ಹವತ್ ಕೃಷ್ಣ ವಧ್ಯಾಸ್ತ ಇತಿ ಮೇ ಮತಿಃ ॥4॥
ಕೃಷ್ಣನೇ! ಯಾರು ದುರ್ಮತಿಯಾದ, ಗೋಪಾಲಕನಾದ, ರಾಜನಲ್ಲದ, ಸ್ತೋತ್ರಕ್ಕೆ ಅನರ್ಹನಾದ ನಿನ್ನನ್ನು ಸ್ತೋತ್ರಕ್ಕೆ ಅರ್ಹನಾದವನಂತೆ ಬಾಲ್ಯದಿಂದಲೂ ಅರ್ಚಿಸುತ್ತಿದ್ದಾರೆಯೋ ಅಂತಹ ಪಾಂಡವರು ವಧೆಗೆ ಅರ್ಹರಾದವರು ಎಂದು ನನ್ನ ಅಭಿಪ್ರಾಯ.
ಇತ್ಯುಕ್ತ್ವಾ ರಾಜಶಾರ್ದೂಲಃ ಶಾರ್ದೂಲ ಇವ ನಾದಯನ್ |
ಪಶ್ಯತಾಂ ಭೂಮಿಪಾಲಾನಾಂ ಶಿಶುಪಾಲಃ ಪ್ರತಾಪವಾನ್ ॥5॥
ಸ ರಣಾಯ್ಯೆವ ಸಂಕ್ರುದ್ಧಃ ಸನ್ನದ್ಧಃ ಸರ್ವರಾಜಭಿಃ |
ಸುನೀಥಃ ಪ್ರಯಯೌ ಕ್ಷಿಪ್ರಂ ಪಾರ್ಥಯಜ್ಞಜಿಘಾಂಸಯಾ ॥6॥
ಹೀಗೆ ಹೇಳಿ ಪ್ರತಾಪಶಾಲಿಯಾದ ರಾಜಶ್ರೇಷ್ಠನಾದ ಶಿಶುಪಾಲನು ಎಲ್ಲಾ ರಾಜರೂ ನೋಡುತ್ತಿರುವಂತೆ ಹುಲಿಯಂತೆ ಗರ್ಜಿಸುತ್ತಾ ಅನೇಕ ರಾಜರುಗಳ ಜೊತೆಯಲ್ಲಿ ಸೇರಿ ಕ್ರೋಧದಿಂದ ಯುದ್ಧಕ್ಕೆ ಸಿದ್ಧನಾಗಿ ಧರ್ಮರಾಜನ ಯಜ್ಞವನ್ನು ನಾಶಮಾಡುವ ಉದ್ದೇಶದಿಂದ ಶೀಘ್ರವಾಗಿ ಯುದ್ಧಕ್ಕೆ ಹೊರಟನು.
ತತಶ್ಚಕ್ರಗದಾಪಾಣಿಃ ಕೇಶವಃ ಕೇಶಿಹಾ ಹರಿಃ |
ಸಧ್ವಜಂ ರಥಮಾಸ್ಥಾಯ ಯುದ್ಧಾಯ ಸಮುಪಸ್ಥಿತಃ ॥7॥
ಆಗ ಕೇಶಿಸೂದನನಾದ ಕೇಶವನಾದ ಹರಿಯು ಚಕ್ರಗದಾಪಾಣಿಯಾಗಿ ಧ್ವಜವುಳ್ಳ ತನ್ನ ರಥವನ್ನು ಏರಿ ಯುದ್ಧಕ್ಕೆ ಸಿದ್ಧನಾದನು.
ಸ ರಥಸ್ಯ ಸ್ವನೇನೈವ ಕೋಪಿತಾನ್ ಸರ್ವಪಾರ್ಥಿವಾನ್ |
ಆಸಸಾದ ರಥೇ ಕೃಷ್ಣಃ ಸಜ್ಜಿತೈಕರಥೇ ಸ್ಥಿತಃ ॥8॥
ತನ್ನ ರಥದ ಘೋಷದಿಂದಲೇ ಸಿಟ್ಟುಗೊಂಡು ಎಲ್ಲಾ ರಾಜರ ಸಮೀಪಕ್ಕೆ ಕೃಷ್ಣನು ಸುಸಜ್ಜಿತವಾದ ಒಂದೇ ರಥದಲ್ಲಿ ಕುಳಿತು ಮುಂದೆ ಹೋದನು.
ತತಃ ಪುಷ್ಕರಪತ್ರಾಕ್ಷಂ ಗರುಡಧ್ವಜಮಚ್ಯುತಮ್ |
ದಿವಾಕರಮಿವೋದ್ಯಂತಂ ದದೃಶುಃ ಸರ್ವಪಾರ್ಥಿವಾಃ ॥9॥
ಆಗ ಕಮಲನಯನನೂ ಗರುಡಧ್ವಜನೂ ಆದ ಅಚ್ಯುತನು ಉದಯಿಸುವ ಸೂರ್ಯನಂತೆ ಶೋಭಿಸುವುದನ್ನು ಎಲ್ಲಾ ರಾಜರೂ ನೋಡಿದರು.
ದೃಷ್ಟ್ವಾ ಕೃಷ್ಣಮಥಾಯಾಂತಂ ಪ್ರತಪಂತಮಿವೌಜಸಾ |
ಸ್ಥಿತಂ ಪುಷ್ಪರಥೇ ದಿವ್ಯೇ ಪುಷ್ಪಕೇತುಮಿವಾಪರಮ್ |
ಯಥಾರ್ಹಂ ಕೇಶವೇ ವೃತ್ತಿಮವಶಾಃ ಪ್ರತಿಪೇದಿರೇ ॥10॥
ಪುಷ್ಪರಥದಲ್ಲಿ ಕುಳಿತ ಮನ್ಮಥನಂತೆ ತನ್ನ ಪರಾಕ್ರಮದಿಂದ ಬೆಳಗುತ್ತಾ ಸಮೀಪಿಸುತ್ತಿರುವ ಕೃಷ್ಣನನ್ನು ನೋಡಿ ರಾಜರು ಅವರವರ ಯೋಗ್ಯತೆಗೆ ತಕ್ಕಂತೆ ಮನೋಭಾವವನ್ನು ಹೊಂದಿದರು.
ತಾನುವಾಚ ಮಹಾಬಾಹುರ್ಮಹಾಸುರನಿಬರ್ಹಣಃ |
ವೃಷ್ಣಿವೀರಸ್ತದಾ ರಾಜನ್ ಸಾಂತ್ವಯನ್ ಪರವೀರಹಾ ॥11॥
ಎಲೈ ರಾಜನೇ! ಮಹಾಸುರವಿನಾಶಕನೂ ಪರವೀರವಿನಾಶಕನೂ ಆದ ಆ ವೃಷ್ಣಿವೀರನು ಆ ರಾಜರುಗಳನ್ನು ಸಮಾಧಾನ ಪಡಿಸುತ್ತಾ ಅವರನ್ನು ಕುರಿತು ಮಾತನಾಡಿದನು.
ಅಪೇತ ಸಬಲಾಃ ಸರ್ವ ಆಶ್ವಸ್ತಾ ಮಮ ಶಾಸನಾತ್ |
ಅದುಷ್ಟಾನ್ ದೂಷಯೇತ್ ಪಾಪ ಏಷ ವೈ ಸರ್ವಪಾರ್ಥಿವಾನ್ ॥12॥
ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ನನ್ನ ಶಾಸನದಂತೆ ರಾಜರೆಲ್ಲರೂ ನಿಮ್ಮ ಸೈನ್ಯದೊಂದಿಗೆ ದೂರ ಸರಿಯಿರಿ. ಈ ಪಾಪಿಯು ಸಜ್ಜನರಾದ ಎಲ್ಲಾ ರಾಜರನ್ನೂ ದೂಷಿಸುವವನು.
ಏಷ ನಃ ಶತ್ರುರತ್ಯಂತಮೇಷ ವೃಷ್ಣಿವಿಮರ್ದನಃ |
ಸಾತ್ವತಾನಾಂ ನೃಶಂಸಾತ್ಮಾ ವೈರಂ ಚರತಿ ಶಾಶ್ವತಮ್ ॥13॥
ಇವನು ನಮಗೆ ಮಹಾಶತ್ರು. ಇವನು ವೃಷ್ಣಿಕುಲವನ್ನು ಹಿಂಸಿಸಿದವನು. ಕ್ರೂರ ಸ್ವಭಾವದವನಾಗಿ ಸಾತ್ವತರ ಮೇಲೆ ಯಾವಾಗಲೂ ವೈರವನ್ನು ಸಾಧಿಸುತ್ತಾನೆ.
ಪ್ರಾಗ್ಜ್ಯೋತಿಷಪುರಂ ಯಾತಾನಸ್ಮಾನ್ ಜ್ಞಾತ್ವಾ ನೃಶಂಸಕೃತ್ |
ಅದಹದ್ ದ್ವಾರಕಾಮೇಷ ಸ್ವಸ್ರೀಯಃ ಸನ್ ನರಾಧಿಪಾಃ ॥14॥

ಎಲೈ ರಾಜರೇ! ನನ್ನ ತಂದೆಯ ತಂಗಿಯ ಮಗನಾದ ಈ ಕ್ರೂರಕರ್ಮಿಯು ನಾನು ಪ್ರಾಗ್ಜ್ಯೋತಿಷಪಟ್ಟಣಕ್ಕೆಹೋದುದನ್ನು ತಿಳಿದು ದ್ವಾರಕೆಗೆ ಬಂದು ದ್ವಾರಕಾ ಪಟ್ಟಣಕ್ಕೆ ಬೆಂಕಿಯನ್ನು ಹಚ್ಚಿದನು.

ಕ್ರೀಡತೋ ಭೋಜರಾಜನ್ಯಾನ್ ಏಷ ರೈವತಕೇ ಗಿರೌ |

ಗತ್ವಾ ಹತ್ವಾ ಚ ಬಧ್ವಾ ಚ ಸ್ವಪುರಂ ತಾನಥಾನಯತ್ ॥15॥

ಅಶ್ವಮೇಧೇ ಹಯಂ ಮೇಧ್ಯಮುತ್ಸೃಷ್ಟಂ ರಕ್ಷಿಭಿರ್ವೃತಮ್ |

ಅಪಾಹರತ್ ಪಾಪಬುದ್ಧಿಃ ಪಿತುರ್ಯಜ್ಞಜಿಘಾಂಸಯಾ ॥16॥

ಇವನು ರೈವತಕಪರ್ವತದಲ್ಲಿ ವಿಹಾರಮಾಡುತ್ತಿದ್ದ ಭೋಜರಾಜ ಕುಲದ ಸಮೀಪಕ್ಕೆ ಹೋಗಿ ಅವರಲ್ಲಿ ಕೆಲವರನ್ನು ಕೊಂದು ಇನ್ನು ಕೆಲವರನ್ನು ಬಂಧಿಸಿ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋದನು. ನನ್ನ ತಂದೆಯು ಅಶ್ವಮೇಧಯಾಗವನ್ನು ಅಶ್ವವನ್ನು ಬಿಟ್ಟಿರಲು ಈ ಪಾಪಬುದ್ಧಿಯು ರಕ್ಷಕರಿಂದ ರಕ್ಷಿಸಲ್ಪಟ್ಟ ಆ ಕುದುರೆಯನ್ನು ನನ್ನ ತಂದೆಯ ಯಜ್ಞಕ್ಕೆ ವಿಘ್ನವನ್ನು ಉಂಟುಮಾಡುವ ಉದ್ದೇಶದಿಂದ ಅಪಹರಿಸಿದನು.

ಸೌವೀರಾತ್ ಪ್ರತಿಪತ್ತೌ ಚ ಬಭ್ರೋರೇಷ ಯಶಸ್ವಿನಃ |

ಭಾರ್ಯಾಮಪಾಹರತ್ ಪಾಪಾಮಕಾಮಾಂ ಧರ್ಮತೋ ಗತಾಮ್ ॥17॥

ಸೌವೀರ ದೇಶದಿಂದ ದ್ವಾರಕೆಗೆ ನಾನು ಹಿಂತಿರುಗುವಷ್ಟರಲ್ಲಿ ಇವನು ಬಭ್ರು ಎಂಬ ಕೀರ್ತಿಶಾಲಿಯಾದ ಯಾದವನನ್ನು ಧರ್ಮದಿಂದ ವರಿಸಿದ್ದಂತಹ ಅವನ ಭಾರ್ಯೆಯನ್ನು ಅವಳಿಗೆ ಇಚ್ಛೆ ಇಲ್ಲದಿದ್ದರೂ ಅಪಹರಿಸಿದನು.

ಏಷ ಮಾಯಾಪ್ರತಿಚ್ಛನ್ನಃ ಕರೂಶಾರ್ಥೇ ತಪಸ್ವಿನೀಮ್ |

ಜಹಾರ ಭಾರ್ಯಾಂ ವೈಶಾಲೀಂ ಮಾತುಲಸ್ಯ ನೃಶಂಸಕೃತ್ ॥18॥

ಕ್ರೂರ ಕರ್ಮಿಯಾದ ಇವನು ಮಾಯಾವೇಷವನ್ನು ಧರಿಸಿ ದಂತವಕ್ರನ ಸಲುವಾಗಿ ವಿಶಾಲರಾಜನ ಮಗಳಾದ ವೈಶಾಲಿಯನ್ನು ವಸುದೇವನಿಗೆ ಅಪಕಾರವನ್ನು ಮಾಡಿ ಅಪಹರಿಸಿದನು.

ವೃಷ್ಣಿದಾರಾನ್ ವಿಲುಪ್ಯೈಷ ಹತ್ವಾ ಚ ಕುಕುರಾಂಧಕಾನ್ |

ಪಾಪಬುದ್ಧಿರುಪಾತಿಷ್ಠತ್ ಸ ಪ್ರವಿಶ್ಯ ಸಸಂಭ್ರಮಮ್ ॥19॥

ಈ ಪಾಪಬುದ್ಧಿಯು ವೃಷ್ಣಿಗಳ ಭಾರ್ಯೆಯರನ್ನು ಚೆಲ್ಲಾಪಿಲ್ಲಿಗೊಳಿಸಿ ಕುಕುರಾಂಧಕರನ್ನು ಸಂಹರಿಸಿ ಸಂಭ್ರಮದಿಂದ ದ್ವಾರಕೆಗೆ ಪ್ರವೇಶಿಸಿ ಅಲ್ಲಿಯೇ ಇದ್ದನು.

ವಿಶಾಲರಾಜ್ಞೋ ದುಹಿತಾಂ ಮಮ ಪಿತ್ರಾ ವೃತಾಂ ಸತೀಮ್ |

ಅನೇನ ಕೃತ್ವಾ ಸಂಧಾನಂ ಕರೂಶೇನ ಜಿಹೀರ್ಷಯಾ ॥20॥

ವಿಶಾಲರಾಜನ ಮಗಳಾದ ವೈಶಾಲಿಯು ನನ್ನ ತಂದೆಗೆ ವಾಗ್ದತ್ತಳಾಗಿದ್ದಳು. ಈ ಶಿಶುಪಾಲನು ದಂತವಕ್ರನ ಸಲುವಾಗಿ ವಿಶಾಲರಾಜನ ಜೊತೆಯಲ್ಲಿ ಸಂಧಾನವನ್ನು ಮಾಡಿಕೊಂಡು ಅವಳನ್ನು ಅಪಹರಿಸಿದನು.

ಜರಾಸಂಧಂ ಸಮಾಶ್ರಿತ್ಯ ಕೃತವಾನ್ ವಿಪ್ರಿಯಾಣಿ ಮೇ |

ತಾನಿ ಸರ್ವಾಣಿ ಸಂಖ್ಯಾತುಂ ನ ಶಕ್ನೋಮಿ ಧರಾಧಿಪಾಃ ॥21॥

ಎಲೈ ರಾಜರೇ! ಇವನು ಜರಾಸಂಧನನ್ನು ಆಶ್ರಯಿಸಿ ನನಗೆ ಅನೇಕ ವಿರೋಧಗಳನ್ನು ಮಾಡಿದನು. ಅವೆಲ್ಲವನ್ನೂ ನಾನು ಎಣಿಸಿ ಮುಗಿಸಲು ಸಾಧ್ಯವಿಲ್ಲ.

ಏವಮೇತದಪರ್ಯಂತಮೇಷ ವೃಷ್ಣಿಷು ಕಿಲ್ಬಿಷಮ್ |

ಅಸ್ಮಾಕಮಯಮಾರಂಭಾಂಶ್ಚಕಾರ ಪರಮಾನೃಜುಃ ॥22॥

ಹೀಗೆ ಇವನು ವೃಷ್ಣಿಗಳಿಗೆ ಕೊನೆಯೇ ಇಲ್ಲದಷ್ಟು ಕೇಡನ್ನು ಬಗೆದಿದ್ದಾನೆ. ಪರಮ ವಕ್ರನಾದ ಇವನು ನಮಗೆ ವಿರೋಧಮಾಡುವ ಸಲುವಾಗಿ ಅನೇಕ ಪ್ರಯತ್ನಗಳನ್ನು ಮಾಡಿದ್ದಾನೆ.

ಶತಂ ಕ್ಷಂತವ್ಯಮಸ್ಮಾಭಿರ್ವಧಾಹರ್ಹಾಣಾಂ ಕಿಲಾಗಸಾಮ್ |

ಬದ್ಧೋಽಸ್ಮಿ ಸಮಯೈರ್ಘೋರೈರ್ಮಾತುಲೇಯೋಽಸ್ಯ ಸಂಗರೇ ॥23॥

ಇವನು ಮಾಡಿದ ವಧಾರ್ಹವಾದ ಅಪರಾಧಗಳಲ್ಲಿ ನೂರು ಅಪರಾಧಗಳನ್ನು ನಾನು ಕ್ಷಮಿಸಬೇಕಾಗಿದೆ. ಈ ಸಂಗ್ರಾಮದಲ್ಲಿ ಅವನ ಸೋದರಮಾವನಾದ ನಾನು ಅವನ ತಾಯಿಗೆ ಕೊಟ್ಟ ಘೋರವಾದ ವಾಗ್ದಾನಗಳಿಂದ ಬದ್ಧನಾಗಿದ್ದೇನೆ.

ತತ್ ತಥಾ ಶತಮಸ್ಮಾಕಂ ಕ್ಷಾಂತಂ ಕ್ಷಯಕರಂ ಮಯಾ |

ದ್ವೌ ತು ಮೇ ವಧಕಾಲೇಽಸ್ಮಿನ್ ನ ಕ್ಷಂತವ್ಯೌ ಕಥಂಚನ ॥24॥

ಹಾಗೆಯೇ ನಾನು ಇವನ ನೂರು ಅಪರಾಧಗಳನ್ನು ಕ್ಷಮಿಸಿದ್ದೇನೆ. ಆದರೆ ಅವನ ವಧಕಾಲವು ಸಂಪ್ರಾಪ್ತವಾಗಿರುವ ಈ ಕಾಲದಲ್ಲಿ ಅವನ ಎರಡು ಅಪರಾಧಗಳನ್ನು ಯಾವ ರೀತಿಯಲ್ಲಿಯೂ ಕ್ಷಮಿಸುವುದಿಲ್ಲ.

ಯಜ್ಞವಿಘ್ನಕರಂ ಹನ್ಯಾಂ ಪಾಂಡವಾನಾಂ ಚ ದುರ್ಹೃದಮ್ |

ಇತಿ ಮೇ ವರ್ತತೇ ಭಾವಸ್ತಮತೀಯಾಂ ಕಥಂ ನ್ವಹಮ್ ॥25॥

ಯಜ್ಞಕ್ಕೆ ವಿಘ್ನವನ್ನು ಮಾಡಿದವನನ್ನು ಕೊಲ್ಲುವೆನು. ಪಾಂಡವರಿಗೆ ವಿಪ್ರಿಯವನ್ನು ಬಯಸಿದವರನ್ನು ಕೊಲ್ಲುವೆನು. ಎಂದು ನನ್ನ ಎರಡು ಪ್ರತಿಜ್ಞೆಗಳಿವೆ. ನಾನು ಆ ಪ್ರತಿಜ್ಞೆಗಳನ್ನು ಹೇಗೆ ಮೀರಲಿ?

ಪಿತೃಷ್ವಸುಃ ಕೃತೇ ದುಃಖಂ ಸುಮಹನ್ಮರ್ಷಯಾಮ್ಯಹಮ್ |

ದಿಷ್ಟ್ಯಾ ತ್ವಿದಂ ಸರ್ವರಾಜ್ಞಾಂ ಸನ್ನಿಧಾವದ್ಯ ವರ್ತತೇ ॥26॥

ನನ್ನ ಸೋದರತ್ತೆಯ ಸಲುವಾಗಿ ನಾನು ಇವನಿಂದ ಉಂಟಾದ ಇಷ್ಟು ದೊಡ್ಡ ದುಃಖಗಳನ್ನು ಸಹಿಸಿದ್ದೇನೆ. ಅದೃಷ್ಟವಶದಿಂದ ಈ ದಿನ ನಡೆಯುತ್ತಿರುವ ಘಟನೆಯಲ್ಲವೂ ಎಲ್ಲಾ ರಾಜರ ಸನ್ನಿಧಿಯಲ್ಲೇ ನಡೆದಿದೆ.

ಪಶ್ಯಂತಿ ಹಿ ಭವಂತೋಸ್ಯ ಮಯ್ಯತೀವ ವ್ಯತಿಕ್ರಮಮ್ |
ಕೃತಾನಿ ತು ಪರೋಕ್ಷಂ ಮೇ ಯಾನಿ ತಾನಿ ನಿಬೋಧತ ||27||
ನೀವೆಲ್ಲರೂ ನನಗೆ ಇವನು ಹೇಗೆ ಅವಮಾನವನ್ನು ಮಾಡುತ್ತಿದ್ದಾನೆ ಎಂಬುದನ್ನು ಸ್ವತಃ ನೋಡುತ್ತಿದ್ದೀರಿ. ನನಗೆ ಪರೋಕ್ಷವಾಗಿ ಮಾಡಿದ ಅವಮಾನಗಳನ್ನು ತಿಳಿಯಿರಿ.
ಇಮಂ ತ್ವದ್ಯ ನ ಶಕ್ಷ್ಯಾಮಿ ಕ್ಷಂತುಮಸ್ಯ ವ್ಯತಿಕ್ರಮಮ್ |
ಅವಲೇಪಾದ್ ವಧಾರ್ಹಸ್ಯ ಸಮಗ್ರೇ ರಾಜಮಂಡಲೇ ||28||
ಈ ದಿನ ಮಾತ್ರ ನಾನು ಸಮಗ್ರವಾದ ರಾಜಮಂಡಲದಲ್ಲಿ ವಧಾರ್ಹನಾಗಿ ಗರ್ವಿಷ್ಠನಾದ ಇವನು ಮಾಡಿದ ಅಪಚಾರವನ್ನು ಕ್ಷಮಿಸಲು ಸಾಧ್ಯವಾಗುವುದಿಲ್ಲ.
ರುಗ್ಮಿಣ್ಯಾಮಸ್ಯ ಮೂಢಸ್ಯ ಪ್ರಾರ್ಥನಾಽಽಸೀನ್ಮುಮೂರ್ಷತಃ |
ನ ಚೈನಾಂ ಪ್ರಾಪ್ತವಾನ್ ಮೂಢಃ ಶೂದ್ರೋ ವೇದಶ್ರುತಿಂ ಯಥಾ ||29||
ಮರಣವನ್ನು ಬಯಸಿದ ಈ ಮೂಢನು ರುಗ್ಮಿಣಿಯನ್ನು ಆಶಿಸುತ್ತಿದ್ದನು. ಆದರೆ ಶೂದ್ರನು ವೇದ ಶ್ರುತಿಯನ್ನು ಹೊಂದದಿರುವಂತೆ ಇವನು ಅವಳನ್ನು ಹೊಂದಲಿಲ್ಲ.
ವೈಶಂಪಾಯನಃ
ಏವಮಾದಿ ತತಃ ಸರ್ವೇ ವಿಸ್ತರೇಣ ನರಾಧಿಪಾಃ |
ಗರ್ಹಣಂ ಶಿಶುಪಾಲಸ್ಯ ವಾಸುದೇವೇನ ವಿಶ್ರುತಾಃ |
ವಾಸುದೇವವಚಃ ಶ್ರುತ್ವಾ ಚೇದಿರಾಜಮಗರ್ಹಯನ್ ||31||
ಆಗ ಎಲ್ಲಾ ನರಾಧಿಪರೂ ಕೃಷ್ಣನು ಎಲ್ಲಾ ರೀತಿಯಲ್ಲಿ ಮಾಡಿದ ಶಿಶುಪಾಲನ ದೋಷಾವಿಷ್ಕಾರವನ್ನು ಕೇಳಿ ಶಿಶುಪಾಲನನ್ನು ನಿಂದಿಸಿದರು.
ತಸ್ಯ ತದ್ವಚನಂ ಶ್ರುತ್ವಾ ಶಿಶುಪಾಲಃ ಪ್ರತಾಪವಾನ್ |
ಜಹಾಸ ಸ್ವನವದ್ಧಾಸಂ ಸಂಪ್ರಹಸ್ಯೇನಮೂಚಿವಾನ್ ||32||
ಕೃಷ್ಣನ ಆ ವಚನಗಳನ್ನು ಕೇಳಿ ಪ್ರತಾಪಶಾಲಿಯಾದ ಶಿಶುಪಾಲನು ಗಟ್ಟಿಯಾಗಿ ವಿಕಟಾಟ್ಟಹಾಸದಿಂದ ನಕ್ಕು ಅವನನ್ನು ಕುರಿತು ಹೇಳಿದನು.
ಮತ್ಪೂರ್ವಾಂ ರುಗ್ಮಿಣೀಂ ಕೃಷ್ಣ ಸಂಸತ್ಸು ಪರಿಕೀರ್ತಯನ್ |
ವಿಶೇಷತಃ ಪಾರ್ಥಿವೇಷು ವ್ರೀಡಾಂ ನ ಕುರುಷೇ ಕಥಮ್ ||33||
ಕೃಷ್ಣನೇ! ಸಭೆಯಲ್ಲಿ ಅದರಲ್ಲೂ ರಾಜರಿರುವ ಸಭೆಯಲ್ಲಿ ರುಗ್ಮಿಣಿಗೆ ನನ್ನ ಸಂಬಂಧವನ್ನು ಹೇಳುತ್ತಿರುವ ನಿನಗೆ ಏಕೆ ನಾಚಿಕೆಯಾಗುವುದಿಲ್ಲ?
ಮನ್ಯಮಾನೋ ಹಿ ಕಃ ಸತ್ಸು ಪುರುಷಃ ಪರಿಕೀರ್ತಯೇತ್ |
ಅನ್ಯಪೂರ್ವಾಂ ಸ್ತ್ರಿಯಂ ಜಾತು ತ್ವದನ್ಯೋ ಮಧುಸೂದನ ||34||
ಮಧುಸೂದನನೇ! ತನ್ನನ್ನು ಆತ್ಮಾಭಿಮಾನಿ ಎಂದು ತಿಳಿದ ಯಾವ ಸತ್‌ಪುರುಷನು ಸಭೆಯಲ್ಲಿ ತನ್ನ ಭಾರ್ಯೆಗೆ ಇನ್ನೊಬ್ಬನ ಸಂಬಂಧವನ್ನು ಉಲ್ಲೇಖಿಸುತ್ತಾನೆ?
ಕ್ಷಮ ವಾ ಯದಿ ತೇ ಶ್ರದ್ಧಾ ಮಾ ವಾ ಕೃಷ್ಣ ಮಮ ಕ್ಷಮ |
ಕ್ರುದ್ಧಾದ್ ವಾಽಪಿ ಪ್ರಸನ್ನಾದ್ ವಾ ಕಿಂ ಮೇ ತ್ವತ್ತೋ ಭವಿಷ್ಯತಿ ||35||
ಕೃಷ್ಣನೇ! ನೀನು ಬೇಕಾದರೆ ನನ್ನನ್ನು ಕ್ಷಮಿಸು ಇಲ್ಲದಿದ್ದರೆ ಬಿಡು. ನಿನ್ನ ಕೋಪದಿಂದಲಾಗಲೀ ಅಥವಾ ನಿನ್ನ ಪ್ರಸನ್ನತೆಯಿಂದಲಾಗಲೀ ನನಗೆ ಏನೂ ಆಗುವುದಿಲ್ಲ.
ತಥಾ ಬ್ರುವತ ಏವಾಸ್ಯ ಭಗವಾನ್ ಮಧುಸೂದನಃ |
ಮನಸಾಽಚಿಂತಯಚ್ಚಕ್ರಂ ದೈತ್ಯಸೈನ್ಯನಿಷೂದನಮ್ ||36||
ಶಿಶುಪಾಲನು ಹಾಗೆ ಹೇಳುತ್ತಿರುವಂತೆಯೇ ಭಗವಂತನಾದ ಮಧುಸೂದನನು ದೈತ್ಯ ಸೈನ್ಯಸಂಹಾರಕನಾದ ತನ್ನ ಚಕ್ರವನ್ನು ಮನಸ್ಸಿನಲ್ಲಿ ಸ್ಮರಿಸಿದನು.
ಏತಸ್ಮಿನ್ನೇವ ಕಾಲೇ ತು ಚಕ್ರೇ ಹಸ್ತಗತೇ ಸತಿ |
ಉವಾಚ ಭಗವಾನುಚ್ಚೈರ್ವಾಕ್ಯಂ ವಾಕ್ಯವಿಶಾರದಃ ||37||
ಆ ಕಾಲದಲ್ಲಿ ಚಕ್ರವು ತನ್ನ ಹಸ್ತಗತವಾಗುತ್ತಿರಲು ವಾಕ್ಯವಿಶಾರದನಾದ ಕೃಷ್ಣನು ಸಭೆಯಲ್ಲಿ ಗಟ್ಟಿಯಾಗಿ ಮಾತನಾಡಿದನು.
ಶೃಣ್ವಂತು ಮೇ ಮಹೀಪಾಲಾ ಯೇನೈತನ್ನಿಂದಿತಂ ಮಯಾ |
ಅಪರಾಧಶತಂ ಕ್ಷಮ್ಯಂ ಮಾತುಲಸ್ಯೈವ ಯಾಚತೇ ||38||
ಎಲ್ಲಾ ಮಹಿಪಾಲರೂ ನನ್ನ ಮಾತನ್ನು ಕೇಳಿ. ನಾನು ಯಾಚಿಸುವ ನನ್ನ ಸೋದರಮಾವನ ಸಲುವಾಗಿ ಇವನು ಮಾಡಿದ ನೂರು ಅಪರಾಧಗಳನ್ನು ಮತ್ತು ನಿಂದನೆಗಳನ್ನು ಕ್ಷಮಿಸಿದ್ದೇನೆ.
ದತ್ತಂ ಮಯಾ ಯಾಚಿತಾನಿ ತಾನಿ ಪೂರ್ಣಾನಿ ಪಾರ್ಥಿವಾಃ |
ಅಧುನಾ ತಂ ವಧಿಷ್ಯಾಮಿ ಪಶ್ಯತಾಂ ವೋ ಮಹೀಕ್ಷಿತಾಮ್ ||39||
ಎಲೈ ರಾಜರೇ! ಅವನು ಕೇಳಿದ ನೂರು ವರಗಳು ಇಂದಿಗೆ ಪೂರ್ಣವಾದವು. ಈ ದಿನ ರಾಜರಾದ ನೀವೆಲ್ಲರೂ ನೋಡುತ್ತಿರುವಂತೆಯೇ ಅವನನ್ನು ಸಂಹರಿಸುವೆನು.
ವಾಸುದೇವವಚಃ ಶ್ರುತ್ವಾ ಪ್ರಾದ್ರವನ್ ಸರ್ವಪಾರ್ಥಿವಾಃ |

ವಿಹಾಯ ಪರಮಕ್ರುದ್ಧಂ ಚೇದಿರಾಜಂ ಚಮೂಮುಖೇ ॥40॥
ಕೃಷ್ಣನ ಮಾತುಗಳನ್ನು ಕೇಳಿ ಎಲ್ಲಾ ರಾಜರೂ ಪರಮಕ್ರುದ್ಧನಾದ ಶಿಶುಪಾಲನೋಬ್ಬನನ್ನೇ ಸೈನ್ಯ ಮುಖದಲ್ಲಿ ಬಿಟ್ಟು ಓಡಿ ಹೋದರು.
ಸ ತಾಂಸ್ತು ಪ್ರದ್ರುತಾನ್ ಸರ್ವಾನ್ ಸಂವೀಕ್ಷ್ಯ ವಸುಧಾಧಿಪಾನ್।
ತದಾ ತದ್ವೃಷ್ಣಿವೀರೇಣ ತ್ರಾಸಿತಾನುರುವಿಕ್ರಮಾನ್ ॥41॥
ಕೃಷ್ಣತೇಜೋಹತಾನ್ ಸರ್ವಾನ್ ಸಮೀಕ್ಷ್ಯ ವಸುಧಾಧಿಪಾನ್।
ಶಿಶುಪಾಲೋ ರಥೇನೈಕಃ ಪ್ರತ್ಯುಪಾಯಾತ್ ಸ ಕೇಶವಮ್ ॥42॥
ಶಿಶುಪಾಲನು ಪರಾಕ್ರಮಶಾಲಿಗಳಾದ ಎಲ್ಲಾ ರಾಜರುಗಳು ಈ ವೀರನಾದ ಕೃಷ್ಣನಿಗೆ ಹೆದರಿ ಓಡಿಹೋಗುವುದನ್ನು ನೋಡಿ ಆ ಎಲ್ಲಾ ರಾಜರೂ ಕೃಷ್ಣನ ಪರಾಕ್ರಮದಿಂದ ನಷ್ಟರಾಗಿದ್ದಾರೆ ಎಂದು ಗಮನಿಸಿ, ತಾನೇ ಒಂದು ರಥವನ್ನು ಏರಿ ಯುದ್ಧವನ್ನು ಮಾಡಲು ಕೃಷ್ಣನನ್ನು ಸಮೀಪಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರಿಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ಪಂಚಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ಮೂರನೆಯ ಅಧ್ಯಾಯವು ಮುಗಿಯಿತು.
*****
ಅರವತ್ನಾಲ್ಕನೆಯ ಅಧ್ಯಾಯ
(ಶಿಶುಪಾಲನಿಗೆ ಉಂಟಾದ ಅಪಶಕುನಗಳು ಮತ್ತು ನಾರದರಿಂದ ವಿಸ್ತಾರವಾದ ಅಪಶಕುನಗಳ ಕಥನ)
ವೈಶಂಪಾಯನಃ
ತತೋ ಯುದ್ಧಾಯ ಸನ್ನದ್ಧಂ ಚೇದಿರಾಜಂ ಯುಧಿಷ್ಠಿರಃ।
ದೃಷ್ಟ್ವಾ ಮತಿಮತಾಂ ಶ್ರೇಷ್ಠ ನಾರದಂ ಸಮುವಾಚ ಹ ॥1॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನಾದವನೇ! ಯುಧಿಷ್ಠಿರನು ಯುದ್ಧಕ್ಕೆ ಸಿದ್ಧನಾದ ಶಿಶುಪಾಲನನ್ನು ನೋಡಿ ನಾರದರನ್ನು ಕುರಿತು ಮಾತನಾಡಿದನು.
ಅಂತರಿಕ್ಷೇ ಚ ಭೂಮೌ ಚ ನ ತೇಸ್ತ್ಯವಿದಿತಂ ಕ್ವಚಿತ್।
ಯಾನಿ ರಾಜವಿನಾಶಾಯ ಭೌಮಾನಿ ಚ ಖಗಾನಿ ಚ ॥2॥
ನಿಮಿತ್ತಾನೀಹ ಜಾಯಂತೇ ಉತ್ಪಾತಾಶ್ಚ ಪೃಥಗ್ವಿಧಾಃ।
ಏತದಿಚ್ಛಾಮಿ ಕಾರ್ತ್ಸ್ನ್ಯೇನ ಶ್ರೋತುಂ ತ್ವತ್ತೋ ಮಹಾಮುನೇ ॥3॥
ಎಲೈ ಮಹರ್ಷಿಯೇ! ಅಂತರಿಕ್ಷದಲ್ಲೇ ಆಗಲಿ ಭೂಮಿಯಲ್ಲೇ ಆಗಲಿ ನಿಮಗೆ ತಿಳಿಯದುದು ಯಾವುದೂ ಇಲ್ಲ. ರಾಜನ ವಿನಾಶವನ್ನು ಸೂಚಿಸುವ ಅನೇಕ ವಿಧವಾದ ಯಾವ ಯಾವ ಉತ್ಪಾತಗಳು ಭೂಮಿಯಲ್ಲಿಯೂ ಮತ್ತು ಅಂತರಿಕ್ಷದಲ್ಲೂ ಉಂಟಾಗುತ್ತವೆಯೋ ಅವುಗಳ ವಿಸ್ತಾರವನ್ನು ನಾನು ಕೇಳಲು ಬಯಸುತ್ತೇನೆ.
ಇತ್ಯೇವಂ ಮತಿಮಾನ್ ವಿಪ್ರಃ ಕುರುರಾಜಸ್ಯ ಧೀಮತಃ।
ಪೃಚ್ಛತಃ ಸರ್ವಮವ್ಯಗ್ರಮಾಚಚಕ್ಷೇ ಮಹಾಯಶಾಃ ॥4॥
ಹೀಗೆ ಮೇಧಾವಿಯಾದ ಮಹಾಕೀರ್ತಿಶಾಲಿಯಾದ ಕುರುರಾಜನೂ ಆದ ಯುಧಿಷ್ಠಿರನು ಪ್ರಶ್ನೆಯನ್ನು ಮಾಡಿದಾಗ ಮೇಧಾವಿಗಳಾದ ಮಹಕೀರ್ತಿಶಾಲಿಗಳಾದ ನಾರದರು ಎಲ್ಲವನ್ನೂ ಸಾವಧಾನವಾಗಿ ಹೇಳಿದರು.
ಪರಾಕ್ರಮಂ ಚ ಮಾರ್ಗಂ ಚ ಸನ್ನಿಪಾತಂ ಸಮುಚ್ಛ್ರಯಮ್।
ಆರೋಹಣಂ ಕುರುಶ್ರೇಷ್ಠ ಅನ್ಯೋನ್ಯಪ್ರತಿಸರ್ಪಣಮ್ ॥5॥
ರಶ್ಮೀನಾಂ ವ್ಯತಿಸಂಸರ್ಗಂ ವ್ಯಾಯಾಮಂ ಚೈವ ಪೀಡನಮ್।
ದರ್ಶನಾದರ್ಶನಾನಾಂ ಚೈವಾದರ್ಶನಂ ದರ್ಶನಂ ತಥಾ ॥6॥
ಹಾನಿಂ ವೃದ್ಧಿಂ ಚ ಹ್ರಾಸಂ ಚ ವರ್ಣಸ್ಥಾನಂ ಬಲಾಬಲಮ್।
ಸರ್ವಮೇತತ್ ಪರೀಕ್ಷೇತ ಗ್ರಹಾಣಾಂ ಗ್ರಹಕೋವಿದಃ ॥7॥
ಭೌಮಾಃ ಪೂರ್ವಂ ಪ್ರವರ್ತಂತೇ ಖೇಚರಾಶ್ಚ ತತಃ ಪರಮ್।
ಉತ್ಪಾದ್ಯಂತೇ ಚ ಲೋಕೇಸ್ಮಿನ್ನುತ್ಪಾತಾ ದೇವನಿರ್ಮಿತಾಃ ॥8॥
ಎಲೈ ಕುರುಶ್ರೇಷ್ಠನೇ! ಗ್ರಹಕೋವಿದನಾದವನು ಇವುಗಳನ್ನೆಲ್ಲಾ ಗಮನಿಸಬೇಕು. ಒಂದು ಗ್ರಹದ ದೆಸೆಯು ಮುಗಿಯದಿರುವಾಗಲೇ ಇನ್ನೊಂದು ಗ್ರಹದದೆಸೆಯ ಆರಂಭ, ಋಜುಗತಿ ಮತ್ತು ವಕ್ರಗತಿಗಳು, ಒಂದೇ ರಾಶಿಯಲ್ಲಿ ಐದಾರು ಗ್ರಹಗಳು ಸೇರುವುದು, ಕೇಂದ್ರ ತ್ರಿಕೋಣಸ್ಥಾನಗಳು, ನೀಚಸ್ಥಾನದಿಂದ ಉಚ್ಚಸ್ಥಾನಕ್ಕೆ ಏರುವುದು, ಗ್ರಹಯುದ್ಧ, ಒಂದೇ ರಾಶಿಯಲ್ಲಿ ನೀಚೋಚ್ಚಗ್ರಹಗಳ ಮೇಳನ, ವಿಲಂಬದಿಂದ ಫಲವನ್ನು ಕೊಡುವುದು, ತಕ್ಷಣದಲ್ಲೇ ದುಷ್ಫಲವನ್ನು ಕೊಡುವುದು, ಕಣ್ಣಿಗೆ ಕಾಣಬೇಕಾದ ಬೃಹಸ್ಪತ್ಯಾದಿಗಳ ಮೌಢ್ಯ, ಕಣ್ಣಿಗೆ ಕಾಣದಿರುವ ರಾಹು ಮೊದಲಾದ ಗ್ರಹಗಳ ದರ್ಶನ, (ಗ್ರಹಣ ಸಮಯದಲ್ಲಿ ಹಾನಿರೂಪವಾದ ಫಲವನ್ನು ಕೊಡುವುದು.) ವೃದ್ಧಿರೂಪವಾದ ಫಲವನ್ನು ಕೊಡುವುದು, ಅಲ್ಪ ಫಲವನ್ನು ಕೊಡುವುದು, ಬೃಹಸ್ಪತಿಯ ಉನ್ನತಿಯಿಂದ ಬ್ರಾಹ್ಮಣರ ಉನ್ನತಿ, ಅಂಗಾರಕನ ಸುಸ್ಥಿತಿಯಿಂದ ಕ್ಷತ್ರಿಯರ ಸುಸ್ಥಿತಿ, ಶನ್ಯಾದಿ ಗ್ರಹಗಳ ಒಳ್ಳೆಯ ಸ್ಥಿತಿಯಿಂದ ವೈಶ್ಯ ಶೂದ್ರರಿಗೆ ಒಳ್ಳೆಯ ಫಲ, ಉಪರಾಗಗಳು ಶ್ವೇತವರ್ಣದಿಂದ ಕೂಡಿದ್ದರೆ ಬ್ರಾಹ್ಮಣರಿಗೆ ಫಲ, ರಕ್ತವರ್ಣದಿಂದ ಕೂಡಿದ್ದರೆ ಕ್ಷತ್ರಿಯರಿಗೆ ಫಲ, ಹಳದಿಯ ಬಣ್ಣದಿಂದ ಕೂಡಿದ್ದರೆ ವೈಶ್ಯರಿಗೆ ಫಲ, ಕೆಂಪು ಬಣ್ಣದಿಂದ ಕೂಡಿದ್ದರೆ ಶೂದ್ರಾದಿಗಳಿಗೆ ಫಲ, ಕೆಲವು ಗ್ರಹಗಳಿಗೆ ಶ್ವೇತವರ್ಣದ ಪುಷ್ಪ

ವಸ್ತ್ರಗಳು, ಕೆಲವು ಗ್ರಹಗಳಿಗೆ ರಕ್ತವರ್ಣದ ವಸ್ತು ಪುಷ್ಪಾದಿಗಳು, ಕೆಲವು ಗ್ರಹಗಳಿಗೆ ಪೀತವರ್ಣದ ವಸ್ತು ಪುಷ್ಪಗಳು, ಕೆಲವು ಗ್ರಹಗಳಿಗೆ ಕಪ್ಪುಬಣ್ಣ ಪುಷ್ಪಾದಿಗಳು,(ಇವೆಲ್ಲವೂ ವರ್ಣಸ್ಥಾನಗಳೆಂದು ಕರೆಯಲ್ಪಡುತ್ತವೆ.) ಗ್ರಹಗಳ ಪ್ರಾಬಲ್ಯ ಮತ್ತು ದೌರ್ಬಲ್ಯ (ಇವುಗಳೆಲ್ಲವನ್ನೂ ಗ್ರಹಕೋವಿದನು ವಿಚಾರ ಮಾಡಬೇಕು.)ಭೂಮಿಯಲ್ಲಿನ ಅಪಶಕುನಗಳು ಮೊದಲು ಉಂಟಾಗುತ್ತವೆ. ಅನಂತರ ಅಂತರಿಕ್ಷದಲ್ಲಿ ಅಪಶಕುನಗಳು ಉಂಟಾಗುತ್ತವೆ. ದೇವನಿರ್ಮಿತವಾದ ಈ ಅಪಶಕುನಗಳು ಲೋಕದಲ್ಲಿ ಇದ್ದಕ್ಕಿದ್ದಂತೆ ಉಂಟಾಗುವುದರಿಂದ ಅವುಗಳಿಗೆಲ್ಲಾ ಉತ್ಪಾತಗಳು ಎಂದು ಹೆಸರು.

ಯದಾ ತು ಸರ್ವಭೂತಾನಾಂ ಛಾಯಾ ನ ಪರಿವರ್ತತೇ |
ಅಪರಾಹ್ಣ ಗತೇ ಸೂರ್ಯೇ ತತ್ ಪರಾಭವಲಕ್ಷಣಮ್ ॥9॥

ಸೂರ್ಯನು ಅಪರಾಹ್ನದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ತಿರುಗಿದಾಗ ಎಲ್ಲಾ ಪ್ರಾಣಿಗಳ ಛಾಯೆಯೂ ತಿರುಗದಿದ್ದರೆ ಅದನ್ನು ಪರಾಭವದ ಸೂಚನೆಯೆಂದು ತಿಳಿಯಬೇಕು.

ಅಚ್ಛಾಯೇ ವಿಮಲಚ್ಛಾಯಾ ಪ್ರತಿಚ್ಛಾಯಾ ಚ ದೃಶ್ಯತೇ |
ಯತ್ರ ಚೈತ್ಯಕವೃಕ್ಷಾಣಾಂ ತತ್ರ ವಿದ್ಯಾನ್ಮಹದ್ಭಯಮ್ ॥10॥

ದೇವಾಲಯದ ವೃಕ್ಷಗಳಲ್ಲಿ ಅಯೋಗ್ಯ ಸ್ಥಳದಲ್ಲಿ ಸ್ವಚ್ಛ ಛಾಯೆಯು ಅಥವಾ ವೃಕ್ಷದ ಛಾಯೆಯನ್ನು ಬಿಟ್ಟು ಸೂರ್ಯಾದಿಗಳ ಛಾಯೆಯು ಎಲ್ಲಿ ಕಾಣುತ್ತದೆಯೋ ಅಲ್ಲಿ ಮಹಾ ಭಯವು ಉಂಟಾಗುವುದು.

ಶೀರ್ಣಪರ್ಣಪ್ರವಾಳಾಶ್ಚ ಶುಷ್ಕಪರ್ಣಾಶ್ಚ ಚೈತ್ಯಗಾಃ |
ಅಪಭ್ರಷ್ಟಪ್ರವಾಳಾಶ್ಚ ತತ್ರ ಭಾವಂ ವಿನಿರ್ದಿಶೇತ್ ॥11॥
ಸ್ನಿಗ್ಧಪತ್ರಪ್ರವಾಳಾಶ್ಚ ದೃಶ್ಯಂತೇ ಯತ್ರ ಚೈತ್ಯಗಾಃ |
ಹ್ರೀಯಮಾಣಾಶ್ಚ ವೃಕ್ಷಾಶ್ಚ ಭಾವಸ್ತತ್ರ ನ ಸಂಶಯಃ ॥12॥

ಎಲ್ಲಿ ದೇವಾಲಯದ ವೃಕ್ಷದಲ್ಲಿ ಉದುರಿದ ಎಲೆಗಳು ಚಿಗುರುಗಳಂತೆ ಇರುತ್ತವೆಯೋ, ಮರದಲ್ಲಿ ಇರುವ ಎಲೆಗಳು ಚಿಗುರಿನ ಲಕ್ಷಣವನ್ನು ಕಳೆದುಕೊಂಡು ಒಣಗಿದ ಎಲೆಗಳಂತೆ ಕಾಣುತ್ತವೆಯೋ, ಅದನ್ನು ಉತ್ಪಾತವೆಂದು ತಿಳಿಯಬೇಕು.ಎಲ್ಲಿ ಒಣಗುತ್ತಿರುವ ದೇವಾಲಯದ ವೃಕ್ಷಗಳಲ್ಲಿ ಇದ್ದಕ್ಕಿದ್ದಂತೆಯೇ ಚಿಗುರು ಮತ್ತು ಎಲೆಗಳು ಕಂಡು ಬರುತ್ತವೆಯೋ, ಕ್ಷಯವನ್ನು ಹೊಂದುತ್ತಿರುವ ಅಂತಹ ವೃಕ್ಷಗಳಲ್ಲಿಯೂ ಎಲ್ಲಿ ಚಿಗುರು ಮತ್ತು ಎಲೆಗಳು ಬರುತ್ತವೆಯೋ ಅಲ್ಲಿಯೂ ಸಹ ಅಪಶಕುನ ಎಂದು ನಿಸ್ಸಂಶಯವಾಗಿ ತಿಳಿಯ ಬೇಕು.

ಪುಷ್ಪೇ ಪುಷ್ಪಂ ಪ್ರಜಾಯೇತ ಫಲೇ ವಾ ಫಲಮಾಶ್ರಿತಮ್ |
ರಾಜಾ ವಾ ರಾಜಪುತ್ರೋ ವಾ ಮರಣಾಯೋಪಪದ್ಯತೇ ॥13॥

ಪುಷ್ಪದಲ್ಲಿ ಇನ್ನೊಂದು ಪುಷ್ಪವು ಉಂಟಾದರೆ ಅಥವಾ ಫಲದಲ್ಲಿ ಇನ್ನೊಂದು ಫಲವು ಆಶ್ರಿತವಾಗಿದ್ದರೆ, ರಾಜನಾಗಲೀ ಅಥವಾ ಪುತ್ರನಾಗಲೀ ಮರಣವನ್ನು ಹೊಂದುವನು.

ಪ್ರಾವೃಟ್ಛರದಿ ಹೇಮಂತೇ ವಸಂತೇ ವಾಪಿ ಸರ್ವಶಃ |
ಅಕಾಲಜಂ ಪುಷ್ಪಫಲಂ ರಾಷ್ಟ್ರಕ್ಷೋಭಂ ವಿನಿರ್ದಿಶೇತ್ ॥14॥

ಮಳೆಗಾಲದಲ್ಲಿಯಾಗಲೀ ಶರತ್ಕಾಲದಲ್ಲಿಯಾಗಲೀ ಹೇಮಂತ ಅಥವಾ ವಸಂತಕಾಲದಲ್ಲಿಯಾಗಲೀ ಎಲ್ಲಾ ವೃಕ್ಷಗಳಲ್ಲಿಯೂ ಅಕಾಲಿಕ ಪುಷ್ಪಗಳು ತೋರಿ ಬಂದರೆ ಆಗ ರಾಷ್ಟ್ರ ಕ್ಷೋಭೆಯನ್ನು ಹೇಳಬೇಕು.

ವನಸ್ಪತಿಃ ಪೂಜ್ಯಮಾನಃ ಪೂಜಿತೋಽಪೂಜಿತೋಪಿ ವಾ |
ಯದಾ ಭಜ್ಯೇತ ವಾತೇನ ಭಿದ್ಯತೇಽಶನಿತೋಪಿ ವಾ ॥15॥
ಅಗ್ನಿವಾಯುಭಯಂ ವಿದ್ಯಾತ್ ಶ್ರೇಷ್ಠೋ ವಾತ್ರ ವಿನಶ್ಯತಿ |
ದಿಶಃ ಸರ್ವಾಶ್ಚ ದೀಪ್ಯಂತೇ ಜಾಯಂತೇ ರಾಜವಿಭ್ರಮಾಃ ॥16॥

ಪೂಜಿಸಲ್ಪಡುವ ಅಥವಾ ಪೂಜಿಸಬೇಕೆಂದು ಸಂಕಲ್ಪಿಸಲ್ಪಟ್ಟ, ದೇವಾಲಯದ ವೃಕ್ಷವು ಬಿರುಗಾಳಿಯಿಂದಾಗಲೀ ಅಥವಾ ಸಿಡಿಲಿನಿಂದಲಾಗಲೀ ಬಿದ್ದರೆ ಅಥವಾ ಮುರಿದರೆ ಆಗ ಅಗ್ನಿ ಅಥವಾ ವಾಯುವಿನ ಭಯವು ಉಂಟಾಗುತ್ತದೆ ಎಂದು ತಿಳಿಯಬೇಕು. ಅಥವಾ ಅಲ್ಲಿ ಶ್ರೇಷ್ಠನಾದವನು ಒಬ್ಬನು ಮರಣವನ್ನು ಹೊಂದುವನು ಎಲ್ಲಾ ದಿಕ್ಕುಗಳು ಉರಿಯುವಂತೆ ತೋರಿದರೆ ಅಲ್ಲಿ ರಾಜವಿಭ್ರಮವು ಉಂಟಾಗುತ್ತದೆ.

ಛಿದ್ಯಮಾನೋ ಯದಾ ವೃಕ್ಷೋ ವಿನದೇಚ್ಚಾಪಿ ಪಾತಿತಃ |
ಸಹ ರಾಷ್ಟ್ರಂ ಚ ಪತಿತಂ ನ ತಂ ವೃಕ್ಷಂ ನಿಪಾತಯೇತ್ ॥17॥
ಅಥೈನಂ ಛೇದಯೇತ್ ಕಶ್ಚಿತ್ ಪ್ರತಿರುದ್ಧಂ ವನಸ್ಪತಿಮ್ |
ಛೇತ್ತಾ ಭೇತ್ತಾ ಪತಿಶ್ಚೈವ ಕ್ಷಿಪ್ರಮೇವ ವಿನಶ್ಯತಿ ॥18॥

ಕಡಿಯಲ್ಪಡುತ್ತಿರುವ ವೃಕ್ಷವು ದೊಡ್ಡ ಶಬ್ದವನ್ನು ಮಾಡುತ್ತಿದ್ದರೆ ಅಥವಾ ಕಡಿದ ಮೇಲೆ ವೃಕ್ಷವು ಶಬ್ದವನ್ನು ಮಾಡುವುದಿದ್ದರೆ ಅಲ್ಲಿ ರಾಷ್ಟ್ರವೇ ಪತನವನ್ನು ಹೊಂದುತ್ತದೆ. ಬೀಳುತ್ತಾ ಅದು ಇನ್ನೊಂದು ಮರವನ್ನಾಗಲಿ ಶಿಲೆಯನ್ನಾಗಲಿ ಆಶ್ರಯಿಸಿ ಹಾಗೆಯೇ ವಾಲಿಕೊಂಡಿದ್ದರೆ ಅದನ್ನು ಕಡಿಯ ಬಾರದು. ಅದನ್ನು ಕಡಿದರೆ ಅಥವಾ ಸೀಳಿದರೆ ಆ ವೃಕ್ಷದ ಸ್ವಾಮಿಯೂ, ವೃಕ್ಷವನ್ನು ಕಡಿಯುವವನೂ ತಕ್ಷಣದಲ್ಲಿಯೇ ನಾಶವನ್ನು ಹೊಂದುವನು.

ದೇವತಾನಾಂ ಚ ಪತನಂ ಮಂಡಪಾನಾಂ ಚ ಕೃಂತನಮ್|
ಅಚಲಾನಾಂ ಚ ಕಮ್ಪಶ್ಚ ತತ್ ಪರಾಭವಕ್ಷಣಮ್ ॥19॥

ಉತ್ಸವದಲ್ಲಿ ತೆಗೆದುಕೊಂಡು ಹೋಗುತ್ತಿರುವ ದೇವತಾ ಪ್ರತಿಮೆಗಳ ಪತನವಾದರೆ ಮಂಟಪಗಳನ್ನು ಬೀಳಿಸಿದರೆ ಅಥವಾ ಪ್ರತಿಷ್ಠಿತವಾದ ದೇವತಾ ಪ್ರತಿಮೆಗಳು ಅಲ್ಲಾಡಿದರೆ ಅದನ್ನು ಪರಾಭವ ಸೂಚನೆ ಎಂದು ತಿಳಿಯಬೇಕು.

ನಿಶಿ ಚೇಂದ್ರಧನುರ್ದೃಷ್ಟ್ವಂ ತತೋಪಿ ಚ ಮಹದ್ಭಯಮ್ |
ತದ್ದ್ರಷ್ಟುರೇವ ಭೀತಿಃ ಸ್ಯಾನ್ನಾನ್ಯೇಷಾಂ ಭರತರ್ಷಭ |
ರಾತ್ರಾವಿಂದ್ರಧನುರ್ದೃಷ್ಟ್ವಾ ತದ್ರಾಷ್ಟ್ರಂ ಪರಿವರ್ಜಯೇತ್ ॥20॥
ರಾತ್ರಿಯ ವೇಳೆಯಲ್ಲಿ ಕಾಮನ ಬಿಲ್ಲನ್ನು ನೋಡಿದರೂ ಮಹಾಭಯವು ಇದೆ ಎಂದು ತಿಳಿಯಬೇಕು. ಭರತಶ್ರೇಷ್ಠನೇ! ಈ ಅಪಶಕುನದ ಫಲವು ಅದನ್ನು ನೋಡುವವನಿಗೆ ಮಾತ್ರ ಆಗುತ್ತದೆ. ಇನ್ನೊಬ್ಬರಿಗೆ ಆಗುವುದಿಲ್ಲ. ರಾತ್ರಿಯಲ್ಲಿ ಕಾಮನಬಿಲ್ಲನ್ನು ನೋಡಿದರೆ ಆ ರಾಷ್ಟ್ರವನ್ನು ಪರಿತ್ಯಾಗಮಾಡಬೇಕು.
ದೇವತಾ ಯತ್ರ ನೃತ್ಯಂತಿ ನದಂತಿ ಚ ಹಸಂತಿ ಚ |
ಉನ್ಮೀಲಂತಿ ನಿಮೀಲಂತಿ ರಾಷ್ಟ್ರಕ್ಷೋಭಂ ವಿನಿರ್ದಿಶೇತ್ ॥21॥
ದೇವಾಲಯದಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಪ್ರತಿಮೆಗಳು ನರ್ತನವನ್ನು ಮಾಡಿದರೆ ಗರ್ಜನೆಯನ್ನು ಮಾಡಿದರೆ ದೊಡ್ಡದಾಗಿ ನಕ್ಕರೆ ಕಣ್ಣಿನ ರೆಪ್ಪೆಗಳನ್ನು ಮುಚ್ಚಿದರೆ ಅಥವಾ ತೆಗೆದರೆ ರಾಷ್ಟ್ರಕ್ಷೋಭೆಯು ಉಂಟಾಗುವುದೆಂದು ತಿಳಿಯಬೇಕು.
ಶಿಲಾ ಯತ್ರ ಪ್ರಸಿಂಚಿಂತಿ ಸ್ನೇಹಾಂಶ್ಚೋದಕಸಂಭವಾನ್ |
ಅನ್ಯದ್ ವಾರಿಭಯಂ ಕಿಂಚಿತ್ ತದ್ ಭಯಸ್ಯ ನಿದರ್ಶನಮ್ ॥22॥
ಮ್ರಿಯತೇ ವಾ ಮಹಾಮಾತ್ರೋ ರಾಜಾ ಸಪರಿವಾರಕಃ |
ಪುರಸ್ಯ ವಾ ಭವೇದ್ ವ್ಯಾಧೀ ರಾಷ್ಟ್ರೇ ದೇಶೇ ಚ ವಿಭ್ರಮಃ ॥23॥
ಎಲ್ಲಿ ಶಿಲೆಗಳು ಉದಕದಂತಹ ಅಂಟಾದ ದ್ರವವನ್ನು ಸ್ರವಿಸುತ್ತವೆಯೋ ಅಥವಾ ಭಯವನ್ನು ಉಂಟುಮಾಡುವ ಕೆಂಪಾದ ನೊರೆಗಳನ್ನು ಸುರಿಸುತ್ತವೆಯೋ ಅಲ್ಲಿಯೂ ಸದ್ಯದಲ್ಲಿಯೇ ಭಯವನ್ನು ಹೇಳಬೇಕು. ಆಗ ರಾಜನು ತನ್ನ ಪರಿವಾರದಿಂದ ಮೃತನಾಗುವನು. ಅಥವಾ ಮಹಾಮಾತ್ರನು ಮೃತನಾಗುವನು. ರಾಜಧಾನಿಯಲ್ಲಿ ವ್ಯಾಧಿಯು ಉಂಟಾಗುವುದು. ರಾಷ್ಟ್ರದಲ್ಲಿಯೂ ಮತ್ತು ದೇಶದಲ್ಲಿಯೂ ವಿಭ್ರಮವು ಉಂಟಾಗುವುದು.
ದೇವತಾನಾಂ ಯದಾऽऽವಾಸೇ ರಾಜ್ಞಾಂ ವಾ ಯತ್ರ ವೇಶ್ಮನಿ |
ಭಾಂಡಾಗಾರಾಯುಧಾಗಾರೇ ನಿವಿಶೇತ ಯದಾ ಮಧು ॥24॥
ಸರ್ವಂ ತದ್ ದಾಹಯೇತ್ ಸ್ಥಾನಂ ಹನ್ಯಮಾನಂ ಬಲೀಯಸಾ |
ಆಗಂತುಕಂ ಭಯಂ ತತ್ರ ಭವೇದಿತ್ಯೇವ ನಿರ್ದಿಶೇತ್ ॥25॥
ದೇವಾಲಯದಲ್ಲಿಯಾಗಲಿ ಅಥವಾ ಅರಮನೆಯಲ್ಲಿಯಾಗಲಿ ಆಯುಧಗಾರದಲ್ಲಿ ಅಥವಾ ಪಾತ್ರೆಗಳನ್ನು ಇಡುವ ಸ್ಥಳದಲ್ಲಿ ಜೇನುಗೂಡು ಕಟ್ಟಿದರೆ ಆ ದೇಶವು ಬಲಿಷ್ಠನಾದ ರಾಜನ ಆಕ್ರಮಣಕ್ಕೆ ಒಳಗಾಗಿ ಆ ಪ್ರದೇಶವೆಲ್ಲವನ್ನು ಸುಟ್ಟು ಬಿಡುತ್ತದೆ. ಅಲ್ಲಿ ಆಗಂತುಕವಾದ ಭಯವಿದೆ ಎಂದು ತಿಳಿಯಬೇಕು.
ಪಾದಪಶ್ಚೈವ ಯೋ ಯತ್ರ ರಕ್ತಂ ಸ್ರವತಿ ಶೋಣಿತಮ್ |
ದಂತಾಗ್ರಾತ್ ಕುಂಜರೋ ವಾಪಿ ಶೃಂಗಾದ್ವಾ ವೃಷಭಸ್ತಥಾ ॥26॥
ಪಾದಪಾದ್ ರಾಷ್ಟ್ರವಿಭ್ರಂಶಃ ಕುಂಜರಾದ್ ರಾಜವಿಭ್ರಮಃ |
ಗೋಬ್ರಾಹ್ಮಣವಿನಾಶಃ ಸ್ಯಾದ್ ವೃಷಭಸ್ಯೇತಿ ನಿರ್ದಿಶೇತ್ ॥27॥
ಎಲ್ಲಿ ವೃಕ್ಷಗಳು ರಕ್ತದಂತೆ ಕೆಂಪಾದ ದ್ರವವನ್ನು ಸ್ರವಿಸುತ್ತವೆಯೋ ಅಥವಾ ಆನೆಗಳು ತಮ್ಮ ದಂತಾಗ್ರದಿಂದ ಅಥವಾ ವೃಷಭಗಳು ತಮ್ಮ ಕೊಂಬಿನ ತುದಿಯಿಂದ ಅಂತಹ ದ್ರವವನ್ನು ಸ್ರವಿಸುತ್ತವೆಯೋ ಅಲ್ಲಿ ವೃಕ್ಷಗಳ ಸ್ರಾವದಿಂದ ರಾಷ್ಟ್ರ ವಿಭ್ರನೂಂಶವನ್ನು ಗಜಗಳ ಸ್ರಾವದಿಂದ ರಾಜನ ವಿಭ್ರಶಮವನ್ನೂ(ಉನ್ಮಾದವನ್ನೂ) ವೃಷಭಸ್ರಾವದಿಂದ ಗೋಬ್ರಾಹ್ಮಣವಿನಾಶವನ್ನೂ ನಿರ್ದೇಶಮಾಡಬೇಕು.
ಛತ್ರಂ ನರಪತೇರ್ಯಸ್ಯ ನಿಪತೇತ್ ಪೃಥಿವೀತಳೇ |
ಸರಾಷ್ಟ್ರೋ ನೃಪತೀ ರಾಜನ್ ಕ್ಷಿಪ್ರಮೇವ ವಿನಶ್ಯತಿ ॥28॥
ಎಲೈ! ರಾಜನೇ! ಎಲ್ಲಿ ಮೆರವಣಿಗೆಯಲ್ಲಿ ಹೋಗುತ್ತಿರುವ ರಾಜನ ಛತ್ರವು ಭೂಮಿಯಲ್ಲಿ ಬೀಳುತ್ತದೆಯೋ ಅಲ್ಲಿ ಆ ರಾಷ್ಟ್ರವು ಮತ್ತು ರಾಜನು ತಕ್ಷಣದಲ್ಲಿಯೇ ನಾಶವನ್ನು ಹೊಂದುವರು ಎಂದು ತಿಳಿಯಬೇಕು.
ದೇವಾಗಾರೇಷು ವಾ ಯತ್ರ ರಾಜ್ಞೋ ವಾ ಯತ್ರ ವೇಶ್ಮನಿ |
ವಿಕೃತಂ ಯದಿ ದೃಶ್ಯೇತ ನಾಗಾವಾಸೇಷು ವಾ ಪುನಃ ॥29॥
ತಸ್ಯ ದೇಶಸ್ಯ ಪೀಡಾ ಸ್ಯಾದ್ ರಾಜ್ಞೋ ಜನಪದಸ್ಯ ವಾ |
ಅನಾವೃಷ್ಟಿಭಯಂ ಘೋರಂ ದುರ್ಭಿಕ್ಷಮಿತಿ ನಿರ್ದಿಶೇತ್ ॥30॥
ದೇವಾಲಯಗಳಲ್ಲಾಗಲೀ ಅರಮನೆಗಳಲ್ಲಾಗಲೀ ಅಥವಾ ನಾಗವನಗಳಲ್ಲಾಗಲೀ ರಾವಣಹಸ್ತಾಕಾರದ ಒಂದು ದೊಡ್ಡ ಮಣ್ಣಿನ ವಿಕಾರವು ಉದ್ಭವವಾದರೆ ಆ ದೇಶಕ್ಕಾಗಲೀ ರಾಜನಿಗಾಗಲೀ ಅಥವಾ ಜನಪದಕ್ಕೆ ಆಗಲೀ ಪೀಡೆಯು ಉಂಟಾಗುತ್ತದೆ. ಅಲ್ಲಿ ಅನಾವೃಷ್ಟಿಯೂ ಘೋರವಾದ ದುರ್ಭಿಕ್ಷೆಯೂ ಉಂಟಾಗುವುದೆಂದು ತಿಳಿಯಬೇಕು.
ಬಾಹುಭಂಗೀ ಚ ದೇವಾನಾಂ ಗೃಹಸ್ಥಾನಾಂ ಭಯಂ ಭವೇತ್ |
ಭಗ್ನೇ ಪ್ರಹರಣೇ ವಿದ್ಯಾತ್ ಸೇನಾಪತಿವಿನಾಶನಮ್ ॥31॥
ದೇವಾಲಯದ ಪ್ರತಿಮೆಗಳ ಬಾಹುಭಂಗವಾದರೆ ಗೃಹಸ್ಥರಿಗೆ ಭಯವನ್ನು ಹೇಳಬೇಕು. ದೇವಾಲಯದ ಪ್ರತಿಮೆಗಳ ಆಯುಧಗಳ ಭಂಗವಾದರೆ ಸೇನಾಪತಿಯ ವಿನಾಶವನ್ನು ತಿಳಿಯಬೇಕು.
ಆಗಂತುಕಾ ತು ಪ್ರತಿಮಾ ಸ್ಥಾನಂ ಯತ್ರ ನ ವಿಂದತಿ |
ಅಭ್ಯಂತರೇಣ ಷಣ್ಮಾಸಾದ್ ರಾಜಾ ತ್ಯಜತಿ ತತ್ಪುರಮ್ ॥32॥

ರಾಜಧಾನಿಗೆ ಹೊಸದಾಗಿ ಬಂದ ದೇವತಾಪ್ರತಿಮೆಯು ಆರು ತಿಂಗಳ ಒಳಗೆ ಪ್ರತಿಷ್ಠೆಗೆ ಯೋಗ್ಯವಾದ ಒಂದುಸ್ಥಾನವನ್ನು ಪಡೆಯದಿದ್ದರೆ ರಾಜನು ರಾಜಧಾನಿಯನ್ನು ತ್ಯಜಿಸಬೇಕು ಎಂದು ತಿಳಿಯಬೇಕು.
ವಿದೀರ್ಯತೇ ಮಹೀ ಯತ್ರ ವಿನದತ್ಯಪಿ ಪಾರ್ಥಿವ |
ತತ್ರ ರಾಜಾ ಚ ಭೃತ್ಯಾಶ್ಚ ತಚ್ಚ ರಾಷ್ಟ್ರಂ ವಿನಶ್ಯತಿ ॥33॥
ಎಲೈ ರಾಜನೇ! ಎಲ್ಲಿ ಭೂಮಿಯು ಬಿರಿಯುತ್ತದೆಯೋ ಅಥವಾ ಗುಡುಗುತ್ತದೆಯೋ ಅಲ್ಲಿ ರಾಜನೂ ರಾಜಭೃತ್ಯರೂ ಮತ್ತು ರಾಷ್ಟ್ರವೂ ವಿನಾಶವನ್ನು ಹೊಂದುತ್ತವೆಯೆಂದು ತಿಳಿಯಬೇಕು.
ಶ್ರೇಣೀಪದಾನ್ ವಾ ಸರ್ಪಾನ್ ವಾ ಡುಂಡುಭಾನಥ ದೀಪಕಾನ್ |
ಮಂಡೂಕೋ ಗ್ರಸತೇ ಯತ್ರ ತತ್ರ ರಾಜಾ ವಿನಶ್ಯತಿ ॥34॥
ಕಪ್ಪೆಯು ಝರಿಗಳನ್ನಾಗಲೀ ಸರ್ಪಗಳನ್ನಾಗಲೀ ಅಥವಾ ವಿಷರಹಿತವಾದ ಸಣ್ಣ ಸರ್ಪಗಳನ್ನಾಗಲೀ ಅಥವಾ ದೀಪದ ಹುಳುಗಳನ್ನಾಗಲೀ ನುಂಗಿದರೆ ಅಲ್ಲಿ ರಾಜನು ವಿನಾಶವನ್ನು ಹೊಂದುವನು.
ಅಭಿನ್ನಂ ವಾಪ್ಯಪಕ್ವಂ ವಾ ಯತ್ರಾನ್ನಮುಪಚೀಯತೇ |
ಜೀವಂತೇ ವಾ ಮ್ರಿಯಂತೇ ವಾ ತದನ್ನಂ ನೋಪಭುಂಜತೇ ॥35॥
ಅಡಿಗೆಯನ್ನು ಮಾಡಲು ಪಾತ್ರೆಯಲ್ಲಿ ಹಾಕಿದ ಅಕ್ಕಿಯು ಪಕ್ವವಾಗದೆ ಹಾಗೆಯೇ ಉಕ್ಕಿದರೆ ಅಥವಾ ಪಕ್ವವಾಗದೆ ಕೈಯಲ್ಲಿ ಮುಟ್ಟಿದಾಗ ಹಿಟ್ಟಾದರೆ ಆ ಅನ್ನವನ್ನು ಉಪಯೋಗಿಸಬಾರದು. (ಇದನ್ನು ಒಂದು ಪರಾಭವ ಲಕ್ಷಣವೆಂದು ತಿಳಿಯಬೇಕು.)
ಉದಪಾನೇ ಚ ಯತ್ರಾಪೋ ವಿವರ್ಧಂತೇ ಯುಧಿಷ್ಠಿರ |
ಸ್ಥಾವರೇಷು ಪ್ರವರ್ತಂತೇ ನಿರ್ಗಚ್ಛೇಯುಃ ಪುನಸ್ತತಃ ॥36॥
ಯುಧಿಷ್ಠಿರನೇ! ಭಾವಿಯಲ್ಲಿರುವ ನೀರು ಉಕ್ಕಿ ಬಂದು ಭೂಮಿಯಲ್ಲಿ ಹರಿದರೆ ಅದನ್ನು ಪರಾಭವಲಕ್ಷಣವೆಂದು ತಿಳಿಯಬೇಕು.
ಅಪಾದಂ ವಾ ತ್ರಿಪಾದಂ ವಾ ದ್ವಿಶೀರ್ಷಂ ವಾ ಚತುರ್ಭುಜಮ್ |
ಸ್ತ್ರಿಯೋ ಯತ್ರ ಪ್ರಸೂಯಂತೇ ಬ್ರೂಯಾತ್ ತತ್ರ ಪರಾಭವಮ್ ॥
ಎಲ್ಲಿ ಸ್ತ್ರೀಯರು ಪಾದಗಳೇ ಇಲ್ಲದಿರುವ ಅಥವಾ ಮೂರುಪಾದಗಳುಳ್ಳ ಅಥವಾ ನಾಲ್ಕು ಮೂರು ಪಾದಗಳುಳ್ಳ ಅಥವಾ ಎರಡು ತಲೆಗಳುಳ್ಳ ಅಥವಾ ನಾಲ್ಕು ಬಾಹುಗಳುಳ್ಳ ಶಿಶುಗಳನ್ನು ಪ್ರಸವಿಸುತ್ತಾರೋ ಅಲ್ಲಿಯೂ ಪರಾಭವವನ್ನು ಹೇಳಬೇಕು.
ಹಸ್ತಿನೀ ಮಹಿಷೀ ಗೌರ್ವಾ ಖರೋಷ್ಟ್ರಮಥ ಸೂಕರಃ |
ಈದೃಶಾನಿ ಪ್ರಸೂಯಂತೇ ವಿದ್ಯಾತ್ ತತ್ರ ಪರಾಭವಮ್ ॥38॥
ಆನೆಯಾಗಲೀ ಎಮ್ಮೆಯಾಗಲೀ ಹಸುವಾಗಲೀ ಕತ್ತೆಯಾಗಲೀ ಒಂಟೆಯಾಗಲೀ ಅಥವಾ ಹಂದಿಯಾಗಲೀ ಇಂತಹ ಮರಿಗಳನ್ನು ಹಾಕಿದರೆ ಆಗಲೂ ಪರಾಭವವೆಂದು ತಿಳಿಯಬೇಕು.
ಅಜೈಡಕಾಃ ಸ್ತ್ರಿಯೋ ಗಾವೋ ವಯಾಂಸ್ಯನ್ಯೇ ಚ ಯೋನಯಃ |
ವಿಕೃತಾನಿ ಪ್ರಜಾಯಂತೇ ಯತ್ರ ತತ್ರ ಪರಾಭವಃ ॥39॥
ಆಡುಗಳು ಕುರಿಗಳು ಸ್ತ್ರೀಯರು ಗೋವುಗಳು ಪಕ್ಷಿಗಳು ಮತ್ತು ಉಳಿದ ಪ್ರಾಣಿಗಳು ಇಂತಹ ವಿಕೃತವಾದ ಮರಿಗಳಿಗೆ ಜನ್ಮವನ್ನಿತ್ತರೆ ಅಲ್ಲಿ ಪರಾಭವವನ್ನು ತಿಳಿಯಬೇಕು.
ನದೀ ಯತ್ರ ಪ್ರತಿಸ್ರೋತಾ ಆವಹೇತ್ ಕಲುಷೋದಕಮ್ |
ದಿಶಶ್ಚ ನ ಪ್ರಕಾಶಂತೇ ತತ್ ಪರಾಭವಕ್ಷಣಮ್ ॥40॥|
ಹರಿಯುವ ನದಿಯಲ್ಲಿ ಪ್ರವಾಹಕ್ಕೆ ಎದುರಾಗಿ ಒಂದು ಕೆಟ್ಟ ನೀರಿನ ಪ್ರವಾಹವು ಉಂಟಾದರೆ ಮತ್ತು ದಿಕ್ಕುಗಳೆಲ್ಲವೂ ಮಂಕಾದರೆ ಅದನ್ನು ಪರಾಭವ ಎಂದು ತಿಳಿಯಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುಃಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ಷಷ್ಠೋಧ್ಯಾಯಃ ॥
ಅರವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
*****

ಅರವತ್ತೈದನೆಯ ಅಧ್ಯಾಯ
(ನಾರದರಿಂದ ಕೃಷ್ಣನು ಸೃಷ್ಟಿಸಿದ ದುರ್ನಿಮಿತ್ತಗಳ ಪ್ರದರ್ಶನ)
ನಾರದಃ
ಏತಾನಿ ಚ ನಿಮಿತ್ತಾನಿ ಯಾನಿ ಚಾನ್ಯಾನಿ ಭಾರತ |
ಕೇಶವಾದ್ ದೇವಕಿಪುತ್ರಾಜ್ಜಾಯಂತೇ ವೈ ಖಗಾನಿ ಚ ॥1॥
ಎಲೈ ಭಾರತನೇ! ಇಂತಹ ದುರ್ನಿಮಿತ್ತಗಳು ಭೂಮಿಯಲ್ಲಿ ಮತ್ತು ಅಂತರಿಕ್ಷದಲ್ಲಿ ದೇವಕೀ ಪುತ್ರನಾದ ಕೇಶವನಿಂದ ಸೃಷ್ಟಿಸಲ್ಪಡುತ್ತವೆ.
ಚಂದ್ರಾದಿತ್ಯೌ ಗ್ರಹಾಶ್ಚೈವ ನಕ್ಷತ್ರಾಣಿ ಚ ಭಾರತ |
ವಾಯುರಗ್ನಿಸ್ತಥೈವಾಪಃ ಪೃಥಿವೀ ಚ ಜನಾರ್ದನಾತ್ ॥2॥
ಭಾರತನೇ! ಚಂದ್ರಸೂರ್ಯರು ಗ್ರಹಗಳು ನಕ್ಷತ್ರಗಳು ವಾಯು ಅಗ್ನಿ ಜಲ ಪೃಥಿವೀ ಇವೆಲ್ಲವೂ ಜನಾರ್ದನನಿಂದ ಉಂಟಾಗುತ್ತವೆ.
ಯಸ್ಯ ದೇಶಸ್ಯ ಹಾನಿಂ ವಾ ವೃದ್ಧಿಂ ವಾ ಕರ್ತುಮಿಚ್ಛತಿ |
ತಸ್ಮಿನ್ ದೇಶೇ ನಿಮಿತ್ತಾನಿ ತಾನಿ ತಾನಿ ಕರೋತ್ಯಯಮ್ ॥3॥

ಇವನು ಯಾವ ದೇಶಕ್ಕೆ ಹಾನಿಯನ್ನಾಗಲೀ ಅಥವಾ ವೃದ್ಧಿಯನ್ನಾಗಲೀ ಉಂಟುಮಾಡಲು ಬಯಸುತ್ತಾನೆಯೋ ಆ ದೇಶದಲ್ಲಿ ಅಂತಹ ನಿಮಿತ್ತಗಳನ್ನು ಸೃಷ್ಟಿಮಾಡುತ್ತಾನೆ.
ಯೋಽಸೌ ಚೇದಿಪತೇಸ್ತಾತ ವಿನಾಶಃ ಸಮುಪಸ್ಥಿತಃ |
ನಿವೇದಯತಿ ಗೋವಿಂದಸ್ತದುಪಾಯೈರ್ನ ಸಂಶಯಃ ॥4॥
ಪ್ರೀತಿಪಾತ್ರನೇ! ಚೇದಿಪತಿಯಾದ ಶಿಶುಪಾಲನ ಮರಣವು ಸನ್ನಿಹಿತವಾಗಿದೆ. ಅದನ್ನು ಗೋವಿಂದನು ಅನೇಕ ಉಪಾಯಗಳಿಂ ಸೂಚನೆ ಮಾಡಿದ್ದಾನೆ. ಇದರಲ್ಲಿ ಸಂಶಯವಿಲ್ಲ.
ಇಯಂ ಪ್ರಚಲಿತಾ ಭೂಮಿರಶಿವಂ ವಾಂತಿ ಮಾರುತಾಃ |
ರಾಹುಶ್ಚಾಭ್ಯಪತತ್ ಸೋಮಮಪರ್ವಣಿ ವಿಶಾಂಪತೇ ॥5॥
ಸನಿರ್ಘಾತಾಃ ಪತಂತ್ಯುಲ್ಕಾಸ್ತಮಃ ಸಂಜಾಯತೇ ಭೃಶಮ್ |
ಚೇದಿರಾಜವಿನಾಶಾಯ ಹರಿರೇಷ ವಿಜೃಂಭತೇ ॥6॥
ಭೂಮಿಯು ನಡುಗುತ್ತಿದೆ. ವಾಯುವು ಅಮಂಗಳವಾಗಿ ಬೀಸುತ್ತಿದೆ. ರಾಜನೇ! ರಾಹುವು ಚಂದ್ರನನ್ನು ಪರ್ವಕಾಲದವಲ್ಲದಿದ್ದರೂ ಹಿಡಿಯುತ್ತಿದ್ದಾನೆ. ಮಹಾಶಬ್ದದೊಡನೆ ಉಲ್ಕಾಪಾತಗಳು ಸಂಭವಿಸುತ್ತಿವೆ. ಎಲ್ಲಾ ಕಡೆಗಳಲ್ಲಿಯೂ ಕತ್ತಲು ಹಬ್ಬುತ್ತಿದೆ. ಶಿಶುಪಾಲನ ವಿನಾಶಕ್ಕೋಸ್ಕರ ಹರಿಯೇ ಹೀಗೆ ವಿಜೃಂಭಿಸುತ್ತಿದ್ದಾನೆ.
ವೈಶಂಪಾಯನಃ
ಏವಮುಕತ್ವ ತು ಭಗವಾನ್ ನಾರದೋ ವಿರರಾಮ ಹ ॥7॥
ಹೀಗೆ ಹೇಳಿ ಪೂಜ್ಯರಾದ ನಾರದರು ಸುಮ್ಮನಾದರು.
ಸಭಾಯಾಂ ಪುರುಷಸಿಂಹಾಭ್ಯಾಂ ತಸ್ಮಿನ್ ಯುದ್ಧೇ ಉಪಸ್ಥಿತೇ |
ದದೃಶುರ್ಭೂಮಿಪಾಲಾಸ್ತೇ ಘೋರಾನುತ್ಪಾತಕಾನ್ ಬಹೂನ್ ॥8॥
ಪುರುಷ ಸಿಂಹನಾದ ಶಿಶುಪಾಲ ಮತ್ತು ಕೃಷ್ಣರಿಗೆ ಘೋರವಾದ ಯುದ್ಧವು ಸನ್ನಿಹಿತವಾಗುತ್ತಿರಲು ಸಭೆಯಲ್ಲಿದ್ದ ರಾಜರು ಅನೇಕ ಘೋರವಾದ ದುರ್ನಿಮಿತ್ತವನ್ನು ನೋಡಿದರು.
ತತ್ರ ತೈರ್ದೃಶ್ಯಮಾನಾನಾಂ ದಿಕ್ಷು ಸರ್ವಾಸು ಭಾರತ |
ಅಶ್ರೂಯಂತ ತದಾ ರಾಜನ್ ಶಿವಾನಾಮಶಿವಾ ಗಿರಃ ॥9॥
ಎಲೈ ಭಾರತನೇ! ಅವರು ಎಲ್ಲಾ ದಿಕ್ಕುಗಳಲ್ಲಿಯೂ ಇಂತಹ ಅಪಶಕುನವನ್ನು ನೋಡುತ್ತಿರುವಂತೆಯೇ ನರಿಗಳ ಅಮಂಗಳವಾದ ರೋದನ ಧ್ವನಿಯು ಕೇಳಿ ಬಂದಿತು.
ರರಾಸ ಚ ಮಹೀ ಕೃತ್ಸ್ನಾ ಸವೃಕ್ಷಪುರಪರ್ವತಾ |
ಅಪರ್ವಣಿ ಚ ಮಧ್ಯಾಹ್ನೇ ಸೂರ್ಯಂ ಸ್ವರ್ಭಾನುರಗ್ರಸತ್ ॥10॥
ಕಾನನಪಟ್ಟಣ ಮತ್ತು ಪರ್ವತಗಳಿಂದ ಕೂಡಿದ ಸಮಗ್ರವಾದ ಭೂಮಿಯು ಹೆದರಿ ಹೋಯಿತು. ಪರ್ವಕಾಲವಲ್ಲದೆ (ಅಮವಾಸ್ಯೆಯಲ್ಲದೆ) ಮಧ್ಯಾಹ್ನದ ಸಮಯದಲ್ಲಿ ರಾಹುವು ಸೂರ್ಯನನ್ನು ಹಿಡಿದನು.
ಧ್ವಜಾಗ್ರೇ ಚೇದಿರಾಜಸ್ಯ ಸರ್ವರತ್ನಪರಿಷ್ಕೃತೇ |
ಅಪತತ್ ಖಾಚ್ಚ್ಯುತೋ ಗೃಧ್ರಸ್ತೀಕ್ಷ್ಣತುಂಡಃ ಪರಂತಪ ॥11॥
ಪರಂತಪನೇ! ಚೇದಿರಾಜನ ಸರ್ವರತ್ನ ವಿಭೂಷಿತವಾದ ಧ್ವಜದ ಮೇಲು ಭಾಗದಲ್ಲಿ ತೀಕ್ಷ್ಣವಾದ ಕೊಕ್ಕುಳ್ಳ ಒಂದು ಹದ್ದು ಅಂತರಿಕ್ಷದಿಂದ ಎರಗಿತು.
ಆರಣ್ಯೈಃ ಸಹ ಸಂಹೃಷ್ಟಾ ಗ್ರಾಮ್ಯಾಶ್ಚ ಮೃಗಪಕ್ಷಿಣಃ |
ಚುಕ್ರುಶುರ್ಭೈರವಂ ತತ್ರ ತಸ್ಮಿನ್ ಯುದ್ಧೇ ಉಪಸ್ಥಿತೇ ॥12॥
ಆ ಯುದ್ಧವು ಉಪಸ್ಥಿತವಾಗುತ್ತಿರಲು ಸಂತೋಷಗೊಂಡ ಕಾಡುಮೃಗಗಳು ಮತ್ತು ಗ್ರಾಮವಾಸಿಗಳಾದ ಮೃಗಪಕ್ಷಿಗಳು ಭೈರವನಾದವನ್ನು ಮಾಡಿದವು.
ಏವಮಾದೀನಿ ಘೋರಾಣಿ ಭೌಮಾನಿ ಚ ಖಗಾನಿ ಚ |
ಔತ್ಪಾತಿಕಾನ್ಯಾದೃಶ್ಯಂತ ಸಂಕ್ರುದ್ಧೇ ಶಾರ್ಙ್ಗಧನ್ವನಿ ॥13॥
ಶಾರ್ಙ್ಗಧಾರಿಯಾದ ಕೃಷ್ಣನು ಕೋಪಗೋಳ್ಳುತ್ತಿರಲು ಭೂಮಿಯಲ್ಲೂ ಮತ್ತು ಅಂತರಿಕ್ಷದಲ್ಲೂ ಇಂತಹ ಘೋರವಾದ ಅಪಶಕುನಗಳು ಕಂಡು ಬಂದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ಸಪ್ತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ತೈದನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಅಗ್ರ್ಯೋಪಹಾರಮುಪಯಾಪಿತ ಏವ ಕೃಷ್ಣೇ
ಕೋಪಾದನಿಂದದಮುಮಾಶು ಚ ಚೇದಿರಾಜಃ |
ಶ್ರುತ್ವೈವ ತತ್ ಪವನಜೋಽಭಿಯಯೌ ನೃಪಂ ತಂ
ಹಂತುಂ ಜಗದ್ಗುರುವಿನಿಂದಕಮುದ್ಧಮನ್ಯುಃ ॥257॥

ಶ್ರೀಕೃಷ್ಣನಿಗೆ ಅಗ್ರಪೂಜೆ ಮಾಡಿದೊಡನೆ ಶಿಶುಪಾಲ ಕೋಪದಿಂದ ಅವನನ್ನು ನಿಂದಿಸಿದ. ಅದನ್ನು ಕೇಳಿದೊಡನೆ ಭೀಮ ಬಹಳ ಕುಪಿತನಾಗಿ ಜಗದ್ಗುರು ನಿಂದಕನಾದ ಆ ರಾಜನನ್ನು ಕೊಲ್ಲಲು ಹೊರಟ.

ದೂರೇಽಪಿ ಕೇಶವವಿನಿಂದನಕಾರಿಜಿಹ್ವಾ-
ಮುಚ್ಛೇತ್ಸ್ಯ ಇತ್ಯುರುತರಾಸ್ಯ ಸದಾ ಪ್ರತಿಜ್ಞಾ |
ಭೀಮಸ್ಯ ತಂ ತು ಜಗೃಹೇ ಸರಿದಾತ್ಮಜೋಽಥ
ಸಂಪ್ರೋಚ್ಯ ಕೇಶವವಚೋ ನಿಜಯೋರ್ವಧಾಯ ॥258॥

ಪರೋಕ್ಷದಲ್ಲಿಯಾದರೂ ಕೂಡ ಕೇಶವನನ್ನು ನಿಂದಿಸುವ ನಾಲಿಗೆಯನ್ನು ಕತ್ತರಿಸುವೆನೆಂಬುದು ಸದಾ ಭೀಮನ ಮಹಾಪ್ರತಿಜ್ಞೆ. ಆದರೆ ಶ್ರೀಹರಿ ತನ್ನವರ ವಧೆಗೆ ಕೊಟ್ಟ ಮಾತನ್ನು ಹೇಳಿ ಭೀಷ್ಮ ಭೀಮನನ್ನು ತಡೆದ.

ಮಯ್ಯೈವ ವಧ್ಯಾಮಿತಿ ತಾವಾಹ ಯತ್ ಕೇಶವಃ ಪುರಾ |
ತಚ್ಛ್ರುತ್ವಾ ಭೀಮಸೇನೋಽಪಿ ಸ್ಥಿತೋ ಭೀಷ್ಮಕರಗ್ರಹಾತ್ ॥259॥

`ಮೂರು ಜನ್ಮಗಳಲ್ಲಿಯೂ ನನ್ನಿಂದಲೆ ನೀವು ಹತರಾಗುವಿರೆಂದು ಶ್ರೀಹರಿ ಹಿಂದೆಯೆ ಅವರಿಗೆ ವರ ನೀಡಿದ್ದ' ಎಂದು ಭೀಷ್ಮ ಹೇಳಿದುದ್ದನ್ನು ಕೇಳಿ ಭೀಮ, ಶತ್ರುಗಳಿಗೆ ಭಯಂಕರನಾಗಿದ್ದರೂ, ಭೀಷ್ಮ ತನ್ನ ಕೈಹಿಡಿದು ತಡೆದನೆಂದು, ತಡೆದು ನಿಂತ.

ಜಾನನ್ನಪಿ ಹರೇರಿಷ್ಟಂ ಸ್ವಕರ್ತವ್ಯತಯೋತ್ಥಿತಃ |
ಭೀಮ ಏತಾವದುಚಿತಮಿತಿ ಮತ್ವಾ ಸ್ಥಿತಃ ಪುನಃ ॥260॥

ಶ್ರೀಹರಿಯ ಸಂಕಲ್ಪವನ್ನು ಭೀಮ ತಿಳಿದವನೇ ಆಗಿದ್ದರೂ ತನ್ನ ಕರ್ತವ್ಯವೆಂದು ಎದ್ದಿದ್ದ. ಬಳಿಕ ಇಷ್ಟು ಸಾಕೆಂದುಕೊಂಡು ಸುಮ್ಮನಾದ.

ದೇವಸಂಘಭವಿನಾಂ ಮಹಾನಭೂತ್
ಈಕ್ಷ್ಯ ತೋಷ ಇಹ ಕೇಶವೇಽಧಿಕಾಂ |
ಅರ್ಚನಾಂ ಯ ಇಹ ಮಾನುಷೋ ಜನೋ
ಮಧ್ಯ ಏವ ಸ ತು ಸಂಸ್ಥಿತೋಽಭವತ್ ॥261॥
ಆಸುರಾ ಇಹ ಸುಯೋಧನಾದಯ-
ಸ್ತತ್ರ ತೇ ವಿಮನಸೋ ಬಭೂವಿರೇ |
ದುರ್ವಚೋಭಿರಧಿಕಂ ಚ ಚೇದಿಪಃ
ಕೃಷ್ಣಮಾರ್ಚ್ಛದುರುಸದ್ಗುಣಾರ್ಣವಂ ॥262॥

ಶ್ರೀಕೃಷ್ಣನಿಗೆ ಹೆಚ್ಚಿನ ಸತ್ಕಾರ ನಡೆದುದನ್ನು ಕಂಡು ದೈವೀಪ್ರಕೃತಿಯ ಉತ್ತಮ ಚೇತನರಿಗೆ ಮಹಾ ಆನಂದವಾಯಿತು. ಮನುಷ್ಯ ಸ್ವಭಾವದ ಜನರು ತಟಸ್ಥರಾಗಿದ್ದರು. ಆಸುರ ಸ್ವಭಾವದ ದುರ್ಯೋಧನಾದಿಗಳು ಮನಸ್ಸಿನಲ್ಲಿ ಕೊರಗಿದರು. ಶಿಶುಪಾಲ ಮಹಾಸದ್ಗುಣಗಳ ಸಾಗರನಾದ ಶ್ರೀಕೃಷ್ಣನಲ್ಲಿ ಕೆಟ್ಟ ಮಾತುಗಳಿಂದ ಬಹಳ ದೋಷಾರೋಪಣಗೈದ.

ಸಮಾಹ್ವಯಚ್ಚ ಕೇಶವಂ ಯುಧೇ ತಮಾಶು ಕೇಶವಃ |
ನಿವಾರ್ಯ ತಸ್ಯ ಸಾಯಕಾನ್ ಜಘಾನ ಚಾರಿಣಾ ಪ್ರಭುಃ ॥263॥

ಶಿಶುಪಾಲ ಶ್ರೀಕೃಷ್ಣನನ್ನು ಯುದ್ಧಕ್ಕೆ ಕರೆದ. ಸರ್ವಶಕ್ತನಾದ ಕೃಷ್ಣ ಅವನ ಬಾಣಗಳನ್ನು ತಡೆದು ಸುದರ್ಶನ ಚಕ್ರದಿಂದ ಅವನನ್ನು ತರಿದ.

ನಿಕೃತ್ಯಮಾನಕಂಧರಃ ಸ ಭಕ್ತಿಮಾನಭೂದ್ಧರೌ |
ತಮಾಶ್ರಿತಶ್ಚ ಯೋಽಸುರೋ ಮಹಾತಮಃ ಪ್ರಪೇದಿವಾನ್ ॥264॥
ಜಯಃ ಪ್ರವಿಶ್ಯ ಕೇಶವಂ ಪುನಶ್ಚ ಪಾರ್ಷದೋಽಭವತ್ |
ಅಸೌ ಚ ಪಾಂಡವಕ್ರತುಃ ಪ್ರವರ್ತಿತೋ ಯಥೋದಿತಃ ॥265॥

ಶಿರಶ್ಛೇದವಾಗುತ್ತಿದ್ದಂತೆ ಶಿಶುಪಾಲ ಕೃಷ್ಣನಲ್ಲಿ ಭಕ್ತಿ ಭರಿತನಾದ. ಅವನಲ್ಲಿ ಸೇರಿಕೊಂಡಿದ್ದ ಅಸುರ ಮಹಾತಮಸ್ಸನ್ನು ಹೊಂದಿದ. ಜಯ ಕೃಷ್ಣನನ್ನು ಪ್ರವೇಶಿಸಿ ಕೃಷ್ಣ ಪರಂಧಾಮಕ್ಕೆ ತೆರಳಿದಾಗ ಅಲ್ಲಿ ದ್ವಾರಪಾಲಕನಾದ. ಪಾಂಡವರು ಯಾಗವನ್ನು ವಿಧ್ಯುಕ್ತವಾಗಿ ಮುಂದುವರಿಸಿದರು.

* * * *

ಅರವತ್ತಾರನೆಯ ಅಧ್ಯಾಯ

(ಕೃಷ್ಣ ಮತ್ತು ಶಿಶುಪಾಲರ ಯುದ್ಧ, ಶಿಶುಪಾಲವಧೆ)

ವೈಶಂಪಾಯನಃ

ಮಹದ್ ವಿಷ್ಫಾರಯನ್ ರಾಜಾ ತತಶ್ಚೇದಿಪತಿರ್ಧನುಃ |
ಅಭಿಯಾಸ್ಯನ್ ಹೃಷೀಕೇಶಮುವಾಚ ಮಧುಸೂದನಮ್ ॥1॥

ಅನಂತರ ಚೇದಿಪತಿಯಾದ ಶಿಶುಪಾಲರಾಜನು ದೊಡ್ಡ ಧನುಸ್ಸನ್ನು ಬಗ್ಗಿಸುತ್ತಾ ಮಧುಸೂದನನ ಕಡೆಗೆ ಧಾವಿಸುತ್ತಾ ಹೃಷಿಕೇಶನನ್ನು ಕುರಿತು ಹೇಳಿದನು.

ಏಕಸ್ತ್ವಮಸಿ ಮೇ ಶತ್ರುಸ್ತತ್ ತ್ವಾಂ ಹತ್ವಾಽದ್ಯ ಮಾಧವ |
ತತಃ ಸಾಗರಪರ್ಯಂತಾಂ ಪಾಲಯಿಷ್ಯಾಮಿ ಮೇದಿನೀಮ್ ॥2॥

ಮಾಧವನೇ! ನೀನು ನನಗೆ ಮುಖ್ಯವಾದ ಶತ್ರು. ಈ ದಿನ ನಿನ್ನನ್ನು ಕೊಂದು ಸಾಗರ ಪರ್ಯಂತ ಭೂಮಿಯನ್ನು ಆಳುವೆನು.

ದ್ವೈರಥಂ ಕಾಂಕ್ಷಿತಂ ಯನ್ಮೇ ತದಿದಂ ಪರ್ಯುಪಸ್ಥಿತಮ್ |

ಚಿರಸ್ಯ ಬತ ಮೇ ದಿಷ್ಟ್ಯಾ ವಾಸುದೇವ ಸಹ ತ್ವಯಾ |
ಅದ್ಯ ತ್ವಾಂ ನಿಹನಿಷ್ಯೇಽಹಂ ಭೀಷ್ಮಂ ಚ ಸಹ ಪಾಂಡವೈಃ ॥3॥
ಬಹಳ ದಿನದಿಂದ ಬಯಸಿದ ದ್ವಂದ್ವಯುದ್ಧವು ನಿನ್ನ ಜೊತೆಯಲ್ಲಿ ಈ ದಿನ ಪ್ರಾಪ್ತವಾಯಿತು. ಇದು ನನ್ನ ಸುಯೋಗ. ಈ ದಿನ ನಾನು ನಿನ್ನನ್ನೂ ಭೀಷ್ಮನನ್ನೂ ಮತ್ತು ಪಾಂಡವರನ್ನೂ ಕೊಲ್ಲುವೆನು.
ಏವಮುಕ್ತ್ವಾ ಸ ತಂ ಬಾಣೈರ್ನಿಶಿತೈರಾತ್ತತೇಜನೈಃ |
ವಿವ್ಯಾಧ ಯುಧಿ ತೀಕ್ಷ್ಣಾಗ್ರೈಶ್ಚೇದಿರಾಡ್ ಯದುಪುಂಗವಮ್ ॥4॥
ಹೀಗೆ ಹೇಳಿ ಶಿಶುಪಾಲನು ಸಾಣೆಹಿಡಿದು ಹರಿತಮಾಡಿದ ಬಾಣಗಳಿಂದ ಯುದ್ಧದಲ್ಲಿ ಯದುಪುಂಗವನನ್ನು ಪೀಡಿಸಿದನು.
ಕಂಕಪತ್ರಚ್ಛದಾ ಬಾಣಾಃ ಚೇದಿರಾಜಧನುಶ್ಚ್ಯುತಾಃ |
ವಿವಿಶುಸ್ತೇ ತದಾ ಕೃಷ್ಣಂ ಭುಜಂಗಾ ಇವ ಪರ್ವತಮ್ ॥5॥
ಚೇದಿರಾಜನ ಬಿಲ್ಲಿನಿಂದ ಹೊರಟ ಕಂಕಪತ್ರವುಳ್ಳ ಬಾಣಗಳು ಸರ್ಪಗಳು ಪರ್ವತವನ್ನು ಪ್ರವೇಶಿಸುವಂತೆ ಕೃಷ್ಣನ ದೇಹವನ್ನು ಪ್ರವೇಶಿಸಿದವು.
ನಾದದಾನಸ್ಯ ಚೈದ್ಯಸ್ಯ ಶರಾನಭ್ಯಸ್ಯತೋಽಪಿ ವಾ |
ದದೃಶುಸ್ತೇ ವಿವರಂ ಕೇಚಿದ್ ಗತಿಂ ವಾಯೋರಿವಾಂಬರೇ ॥6॥
ಅವರಲ್ಲಿ ಯಾರೂ ಶಿಶುಪಾಲನು ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವುದಕ್ಕೂ ಧನುಸ್ಸಿನಿಂದ ಬಾಣವನ್ನು ಬಿಡುವುದಕ್ಕೂ ಮಧ್ಯೆ ಆಕಾಶದಲ್ಲಿ ವಾಯುವಿನ ಗತಿಯು ಹೇಗೆ ಕಾಣುವುದಿಲ್ಲವೋ ಹಾಗೆ ಅಂತರವನ್ನೇ ಕಾಣಲಿಲ್ಲ.
ಚೇದಿರಾಜಮಹಾಮೇಘಃ ಶರಜಾಲಾಂಬುಮಾಂಸ್ತದಾ |
ಅಭ್ಯವರ್ಷದ್ ಹೃಷೀಕೇಶಂ ಪಯೋದ ಇವ ಪರ್ವತಮ್ ॥7॥
ಮೇಘವು ಪರ್ವತದ ಮೇಲೆ ಮಳೆಗರೆದಂತೆ ಶರಜಾಲವೆಂಬ ನೀರಿನಿಂದ ಕೂಡಿದ್ದ ಶಿಶುಪಾಲನೆಂಬ ಮಹಾ ಮೇಘವು ಹೃಷಿಕೇಶನ ಮೇಲೆ ಬಾಣದ ಮಳೆಯನ್ನು ಸುರಿಸಿತು.
ತತಃ ಶಾರ್ಙ್ಗಮಮಿತ್ರಘ್ನಂ ಕೃತ್ವಾ ಸಶರಮಚ್ಯುತಃ |
ಆಬಭಾಷೇ ಮಹಾಬಾಹುಃ ಸುನೀಥಂ ಪರವೀರಹಾ ॥8॥
ಆಗ ಪರವೀರನಾಶಕನಾದ ಮಹಾಬಾಹುವಾದ ಅಚ್ಯುತನು ಶತ್ರುನಾಶಕವಾದ ತನ್ನ ಶಾರ್ಙ್ಗಧನುಸ್ಸಿಗೆ ಬಾಣವನ್ನು ಹೂಡಿ ಶಿಶುಪಾಲನನ್ನು ಕುರಿತು ಮಾತನಾಡಿದನು.
ಅಯಂ ತ್ವಾಂ ಮಾಮಕೋ ಬಾಣಃ ಚೇದಿರಾಜಂ ಮಹಾಸುರಮ್ |
ಭೇತ್ತುಮರ್ಹತಿ ವೇಗೇನ ಮಹಾಶನಿರಿವಾಚಲಮ್ ॥9॥
ಈ ನನ್ನ ಬಾಣವು ಮಹಾಸುರನು ಚೇದಿರಾಜನೂ ಆದ ನಿನ್ನನ್ನು ದೊಡ್ಡಸಿಡಿಲು ಪರ್ವತವನ್ನು ಭೇದಿಸಿದಂತೆ ತನ್ನ ವೇಗದಿಂದ ಭೇದಿಸುತ್ತದೆ.
ವೈಶಂಪಾಯನಃ
ಏವಂ ಬ್ರುವತಿ ಗೋವಿಂದೇ ತತಶ್ಚೇದಿಪತಿಃ ಪುನಃ |
ಮುಮೋಚ ನಿಶಿತಾನನ್ಯಾನ್ ಕೃಷ್ಣಂ ಪ್ರತಿ ಶರಾನ್ ಬಹೂನ್ ॥10॥
ಗೋವಿಂದನು ಹೀಗೆ ಹೇಳುತ್ತಿರಲು ಚೇದಿಪತಿಯಾದ ಶಿಶುಪಾಲನು ಪುನಃ ಕೃಷ್ಣನ ಮೇಲೆ ಹರಿತವಾದ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ಅಥ ಬಾಣಾರ್ದಿತಃ ಕೃಷ್ಣಃ ಶಾರ್ಙ್ಗಮಾಯಮ್ಯ ದೀಪ್ತಿಮಾನ್ |
ಮುಮೋಚ ನಿಶಿತಾನ್ ಬಾಣಾನ್ ಶತಶೋಽಥ ಸಹಸ್ರಶಃ ॥11॥
ಆಗ ಬಾಣದ ಪೀಡೆಗೆ ಒಳಗಾದ ಕಾಂತಿವಂತನಾದ ಕೃಷ್ಣನು ಶಾರ್ಙ್ಗಧನುಸ್ಸನ್ನು ಬಗ್ಗಿಸಿ ನೂರದ ಸಾವಿರದ ಸಂಖ್ಯೆಯಲ್ಲಿ ಹರಿತವಾದ ಬಾಣಗಳನ್ನು ಪ್ರಯೋಗಿಸಿದನು.
ತಾನ್ ಶರಾಂಸ್ತು ಸ ಚಿಚ್ಛೇದ ಶರವರ್ಷೇಣ ಚೇದಿರಾಟ್ |
ಷಡ್ಭಿಶ್ಚಾನ್ಯೈಸ್ತಥಾ ಬಾಣೈರ್ಯುಯುಧೇ ಚೇದಿಪುಂಗವಃ ॥12॥
ಚೇದಿರಾಜನು ಆ ಶರವರ್ಷವನ್ನು ತನ್ನ ಬಾಣಗಳಿಂದ ತತ್ತರಿಸಿದನು. ಚೇದಿಪುಂಗವನಾದ ಅವನು ಪುನಃ ಆರು ಬಾಣಗಳನ್ನು ತೆಗೆದುಕೊಂಡು ಕೃಷ್ಣನ ಜೊತೆಯಲ್ಲಿ ಯುದ್ಧಮಾಡಿದನು.
ತತೋಽಸ್ತ್ರಂ ಸಹಸಾ ಕೃಷ್ಣಃ ಪ್ರಮುಮೋಚ ಜಗತ್ಪತಿಃ |
ಅಸ್ತ್ರೇಣೈವ ಮಹಾವೀರ್ಯೋ ನಾಶಯಾಮಾಸ ಚೇದಿರಾಟ್ ॥13॥
ಅನಂತರ ಜಗತ್ಪತಿಯಾದ ಕೃಷ್ಣನು ಇದ್ದಕ್ಕಿದ್ದಂತೆಯೇ ಅಸ್ತ್ರಪ್ರಯೋಗವನ್ನು ಮಾಡಿದನು. ಮಹಾವರಾಕ್ರಮಶಾಲಿಯಾದ ಶಿಶುಪಾಲನು ಸಹ ಅಸ್ತ್ರದಿಂದಲೇ ಅದನ್ನು ಉಪಶಮ ಗೊಳಿಸಿದನು.
ತತಃ ಶತಸಹಸ್ರೇಣ ಶರಾಣಾಂ ನತಪರ್ವಣಾಮ್ |
ಸರ್ವತಃ ಸಮವಾಕೀರ್ಯ ಶೌರಿಂ ದಾಮೋದರಂ ತದಾ ॥14॥
ನನಾದ ಬಲವಾನ್ ಕ್ರುದ್ಧಃ ಶಿಶುಪಾಲಃ ಪ್ರತಾಪವಾನ್ |
ಇದಂ ಚೋವಾಚ ಸಂಕ್ರುದ್ಧಃ ಕೇಶವಂ ಪರವೀರಹಾ ॥15॥
ಅದ್ಯ ತೇ ಮಾಮಕಾ ಬಾಣಾ ನೇಷ್ಯಂತಿ ತವ ಸಂಯುಗೇ |
ಹತ್ವಾ ತ್ವಾಂ ಸಸುತಾಮಾತ್ಯಂ ಪಾಂಡವಾಂಶ್ಚ ತಪಸ್ವಿನಃ ॥16॥

ಅನಂತರ ಬಾಗಿದ ತುದಿಗಳುಳ್ಳ ಒಂದು ಲಕ್ಷಬಾಣಗಳಿಂದ ಶಿಶುಪಾಲನು ದಾಮೊದರನನ್ನು ಪೀಡಿಸಿ ಪ್ರತಾಪಶಾಲಿಯೂ ಕ್ರುದ್ಧನೂ ಬಲಿಷ್ಠನೂ ಆದ ಅವನು ಮಹಾನಾದವನ್ನು ಮಾಡಿದನು. ಬಹಳ ಕೋಪಕ್ಕೆ ಒಳಗಾಗಿ ಪರವೀರ ಘಾತಕನಾದ ಅವನು ಕೇಶವನನ್ನು ಕುರಿತು ಹೀಗೆ ಮಾತನಾಡಿದನು. ಈ ದಿನ ನನ್ನ ಬಾಣಗಳು ಪುತ್ರಾ ಮಾತ್ಯರಿಂದ ಕೂಡಿದ ನಿನ್ನನ್ನು ಮತ್ತು ಶೋಚನೀಯರಾದ ಪಾಂಡವರನ್ನು ಯುದ್ಧದಲ್ಲಿ ಕೊಂದು ಯಮಲೋಕಕ್ಕೆ ಕಳುಹಿಸುತ್ತದೆ.
ಆನೃಣ್ಯಮದ್ಯ ಯಾಸ್ಯಾಮಿ ಜರಾಸಂಧಸ್ಯ ಧೀಮತಃ |
ಕಂಸಸ್ಯ ಕೇಶಿನಶ್ಚೈವ ನರಕಸ್ಯ ತಥೈವ ಚ ॥17॥
ಈ ದಿನ ನಾನು ಮೇಧಾವಿಯಾದ ಜರಾಸಂಧನ ಕಂಸನ ಕೇಶಿಯ ಮತ್ತು ನರಕಾಸುರನ ಋಣವನ್ನು ತೀರಿಸುವೆನು.
ಇತ್ಯುಕತ್ವ ಕ್ರೋಧತಾಮ್ರಾಕ್ಷಃ ಶಿಶುಪಾಲೋ ಜನಾರ್ದನಮ್ |
ಅದೃಶ್ಯಃ ಶರವರ್ಷೇಣ ಸರ್ವತಃ ಸಮವಾಕಿರತ್ ॥18॥
ಹೀಗೆ ಹೇಳಿ ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಆ ಶಿಶುಪಾಲನು ಅದೃಶ್ಯನಾಗಿ ಕೃಷ್ಣನ ಮೇಲೆ ಎಲ್ಲ ದಿಕ್ಕುಗಳಲ್ಲಿಯೂ ಬಾಣಗಳ ಮಳೆಯನ್ನು ಕರೆದನು.
ತತೋಽಸ್ತ್ರೇಣೈವ ಭಗವಾನಕೃಂತತ ಶರಾನ್ ಬಹೂನ್ |
ನಿಷ್ಕೃತ್ಯ ಚ ಶರಾನ್ ಸರ್ವಾನಂತರ್ಧಾಮಥ ಚಕ್ರತುಃ |
ಅಂತರ್ಧಾನಗತೌ ವೀರೌ ಶುಶುಭಾತೇ ಮಹಾಬಲೌ ॥19॥
ಆಗ ಭಗವಂತನಾದ ಕೃಷ್ಣನು ತನ್ನ ಅಸ್ತ್ರದಿಂದಲೇ ಬಾಣಗಳನ್ನು ನಾಶಮಾಡಿದನು. ಪರಸ್ಪರ ಬಾಣಗಳನ್ನು ನಾಶಮಾಡಿದ ಮೇಲೆ ಮಹಾಬಲಿಷ್ಠರಾದ ಆ ಇಬ್ಬರು ವೀರರು ಅಂತರ್ಧಾನವನ್ನು ಹೊಂದಿ ಶೋಭಿಸಿದರು.
ಸಾಧುಸಾಧ್ವಿತಿ ಭೂತಾನಿ ಪೂಜಯಾಮಾಸುರಂಬರೇ |
ನ ದೃಷ್ಟಪೂರ್ವಮಸ್ಮಾಭಿರ್ಯುದ್ಧಮೇತಾದೃಶಂ ಪುರಾ ॥20॥
ಅಂತರಿಕ್ಷದಲ್ಲಿ ಇದ್ದ ಭೂತಗಳು ಸಾಧು ಸಾಧು ಎಂದು ಹೇಳುತ್ತಾ ಇಬ್ಬರನ್ನೂ ಪ್ರಶಂಸಿಸಿದರು. ಇಂತಹ ಯುದ್ಧವನ್ನು ನಾವು ಹಿಂದೆ ನೋಡಲಿಲ್ಲ ಎಂದು ಹೇಳಿದರು.
ತತಃ ಕೃಷ್ಣಂ ಜಘಾನಾಶು ಶಿಶುಪಾಲೋ ಮಹಾಬಲಃ |
ಕೃಷ್ಣೋಽಪಿ ಬಾಣೈರ್ವಿವ್ಯಾಧ ಪಂಚಭಿರ್ಯುಧಿ ದುರ್ಮದಮ್ |
ತತಃ ಸುನೀಥಃ ಸಪ್ತತ್ಯಾ ನಾರಾಚೈರರ್ದಯದ್ ಬಲೀ ॥21॥
ಅನಂತರ ಮಹಾಬಲನಾದ ಶಿಶುಪಾಲನು ಕೃಷ್ಣನನ್ನು ಬಾಣಗಳಿಂದ ಹೊಡೆದನು. ಕೃಷ್ಣನೂ ಸಹ ಯುದ್ಧದಲ್ಲಿ ದುರ್ಮದವನ್ನು ಹೊಂದಿದ್ದ ಶಿಶುಪಾಲನಿಗೆ ಐದು ಬಾಣಗಳನ್ನು ಪ್ರಯೋಗಮಾಡಿ ಅವನನ್ನು ಪೀಡಿಸಿದನು. ಅನಂತರ ಬಲಿಷ್ಠನಾದ ಶಿಶುಪಾಲನು ಎಪ್ಪತ್ತು ಬಾಣಗಳನ್ನು ಒಟ್ಟಿಗೆ ಪ್ರಯೋಗಿಸಿದನು.
ತತೋಽತಿವಿದ್ಧಃ ಕೃಷ್ಣೇನ ಸುನೀಥಃ ಕ್ರೋಧಮೂರ್ಚ್ಛಿತಃ |
ವಿವ್ಯಾಧ ನಿಶಿತೈರ್ಬಾಣೈರ್ವಾಸುದೇವಂ ಸ್ತನಾಂತರೇ |
ಪುನಃ ಕೃಷ್ಣಃ ತ್ರಿಭಿರ್ವಿದ್ಧ್ವಾ ನನಾದಾವಸರೇ ನೃಪ ॥22॥
ಅನಂತ ಕೃಷ್ಣನಿಂದ ಬಹಳವಾದ ಪ್ರಹಾರವನ್ನು ತಿಂದ ಶಿಶುಪಾಲನು ಕ್ರೋಧ ಮೂರ್ಛಿತನಾಗಿ ಕೃಷ್ಣನನ್ನು ಸ್ತನಗಳ ಮಧ್ಯದಲ್ಲಿ ಬಾಣಪ್ರಯೋಗವನ್ನು ಮಾಡಿ ಪೀಡಿಸಿದನು. ಎಲೈ ರಾಜನೇ! ಕೃಷ್ಣನು ಪುನಃ ಮೂರು ಬಾಣಗಳಿಂದ ಶಿಶುಪಾಲನನ್ನು ಪೀಡಿಸಿ ಆಟ್ಟಹಾಸವನ್ನು ಮಾಡಿದನು.
ತತೋತಿದಾರುಣಂ ಯುದ್ಧಂ ಸಹಸಾ ಚಕ್ರತುಃ ಶರೈಃ |
ತೌ ನಖೈರಿವ ಶಾರ್ದೂಲೌ ದಂತೈರಿವ ಗಜೋತ್ತಮೌ ॥23॥
ದಂಷ್ಟ್ರಾಭಿರಿವ ಪಂಚಾಸ್ಯೌ ತುಂಡಕೈರಿವ ಕುಕ್ಕುಟೌ |
ದಾರಯೇತಾಂ ಶರೈಸ್ತೀಕ್ಷ್ಣೈರನ್ಯೋನ್ಯಂ ಯುಧಿ ತಾವುಭೌ |
ತತೋ ಮುಮುಚತುಃ ಕ್ರುದ್ಧೌ ಶರವರ್ಷಮನುತ್ತಮಮ್ ॥24॥
ಅನಂತರ ಅವರಿಬ್ಬರೂ ಶಾರ್ದೂಲಗಳು ನಖದಿಂದ ಹೋರಾಡಿ ದಂತೆ ಶ್ರೇಷ್ಠವಾದ ಗಜಗಳು ದಂತಗಳಿಂದ ಯುದ್ಧಹೂಡಿದಂತೆ, ಎರಡು ಸಿಂಹಗಳು ಕೋರೆದಾಡೆಗಳಿಂದ ಯುದ್ಧಮಾಡಿದಂತೆ, ಕೋಳಿಗಳು ಕೊಕ್ಕಿನಿಂದ ಯುದ್ಧಮಾಡಿದಂತೆ, ಪರಸ್ಪರವಾಗಿ ಇದ್ದಕ್ಕಿದ್ದಂತಯೇ ಅತಿ ಘೋರವಾದ ಯುದ್ಧವನ್ನು ಮಾಡಿದರು. ಹೀಗೆ ಪರಸ್ಪರವಾಗಿ ಒಬ್ಬರನೊಬ್ಬರು ಘಾಸಿಗೊಳಿಸಿ ಅನಂತರ ಇಬ್ಬರೂ ತಮ್ಮ ಪ್ರತಿಪಕ್ಷದ ಮೇಲೆ ಶ್ರೇಷ್ಠವಾದ ಬಾಣದ ಮಳೆಯನ್ನು ಕರೆದರು.
ಶರೈರೇವ ಶತಂ ಜಿತ್ವಾ ಮಹಾಸುರಸುರೋತ್ತಮೌ |
ಚಕ್ರಾತೇಸ್ತ್ರಮಯಂ ಯುದ್ಧಂ ಘೋರಂ ತದತಿಮಾನುಷಮ್ ॥25॥
ಆಗ್ನೇಯಮಸ್ತ್ರಂ ಮುಮುಚೇ ಶಿಶುಪಾಲಃ ಪ್ರತಾಪವಾನ್ |
ವಾರುಣೇನಾಸ್ತ್ರಯೋಗೇನ ನಾಶಯಾಮಾಸ ಕೇಶವಃ ॥26॥
ಮಹಾಸುರನಾದ ಶಿಶುಪಾಲನು ಮತ್ತು ಸುರೋತ್ತಮನಾದ ಕೃಷ್ಣನು ಒಬ್ಬರ ಬಾಣಗಳನ್ನು ಇನ್ನೊಬ್ಬರು ಬಾಣಗಳಿಂದ ಕತ್ತರಿಸುತ್ತಲೇ ಅತಿಮಾನುಷವಾದ ಘೋರವಾದ ಅಸ್ತ್ರ ಯುದ್ಧವನ್ನು ಮಾಡಿದರು. ಶಿಶುಪಾಲನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಕೇಶವನು ವಾರುಣಾಸ್ತ್ರವನ್ನು ಪ್ರಯೋಗಿಸಿ ಅದನ್ನು ನಾಶಗೊಳಿಸಿದನು.
ಕೌಬೇರಮಸ್ತ್ರಂ ಸಹಸಾ ಚೇದಿರಾಟ್ ಪ್ರಮುಮೋಚ ಹ |
ಕೌಬೇರೇಣೈವ ಚಾಸ್ತ್ರೇಣ ನಾಶಯತ್ ಜಗತಃ ಪ್ರಭುಃ ॥26॥

ತಕ್ಷಣ ಶಿಶುಪಾಲನು ಕುಬೇರಾಸ್ತ್ರವನ್ನು ಪ್ರಯೋಗಿಸಿದನು. ಜಗತ್ಪತಿಯಾದ ಕೃಷ್ಣನು ಕುಬೇರಾಸ್ತ್ರದಿಂದಲೇ ಅದನ್ನು ನಾಶಮಾಡಿದನು.
ಯಾಮ್ಯಮಸ್ತ್ರಂ ಮಹಾಕ್ರುದ್ಧೋ ಮುಮುಚೇ ಕಾಲಮೋಹಿತಃ |
ಯಾಮ್ಯೇನೈವಾಸ್ತ್ರಯೋಗೇನ ಯಾಮ್ಯಮಸ್ತ್ರಂ ವ್ಯನಾಶಯತ್ ॥27॥
ಬಹಳ ಕೋಪಗೊಂಡ ಶಿಶುಪಾಲನು ಕಾಲಮೋಹಿತನಾಗಿ ಯಮಾಸ್ತ್ರವನ್ನು ಪ್ರಯೋಗಮಾಡಿದನು. ಕೃಷ್ಣನು ಯಮಾಸ್ತ್ರಪ್ರಯೋಗದಿಂದಲೇ ಅದನ್ನು ನಾಶಗೊಳಿಸಿದನು.
ಗಾಂಧರ್ವೇಣ ಚ ಗಾಂಧರ್ವಂ ಮಾನವಂ ಮಾನವೇನ ಚ |
ವಾಯವ್ಯೇನ ಚ ವಾಯವ್ಯಂ ರೌದ್ರಂ ರೌದ್ರೇಣ ಚಾಭಿಭೂಃ ॥28॥
ಐಂದ್ರಮೈಂದ್ರೇಣ ಭಗವಾನ್ ವೈಷ್ಣವೇನ ಚ ವೈಷ್ಣವಮ್ |
ಏವಮಸಕತ್ರಣಿ ಕುರ್ವಾಣೌ ಯುಯುಧಾತೇ ಮಹಾರಥೌ ॥29॥
ಗಾಂಧರ್ವಾಸ್ತ್ರದಿಂದ ಗಾಂಧರ್ವಾಸ್ತ್ರವನ್ನೂ ಮಾನವಾಸ್ತ್ರದಿಂದ ಮಾನವಾಸ್ತ್ರವನ್ನೂ ವಾಯವ್ಯಾಸ್ತ್ರದಿಂದ ವಾಯವ್ಯಾಸ್ತ್ರವನ್ನೂ ಪಾಶುಪತಾಸ್ತ್ರದಿಂದ ಪಾಶುಪತಾಸ್ತ್ರವನ್ನೂ ಇಂದ್ರಾಸ್ತ್ರದಿಂದ ಇಂದ್ರಾಸ್ತ್ರವನ್ನೂ ವೈಷ್ಣವಾಸ್ತ್ರದಿಂದ ವೈಷ್ಣವಾಸ್ತ್ರವನ್ನೂ ಹೀಗೆ ಮಹಾರಥರಾದ ಅವರು ಪರಸ್ಪರವಾಗಿ ಅಸ್ತ್ರಗಳನ್ನು ಪ್ರಯೋಗಿಸುತ್ತಾ ಯುದ್ಧವನ್ನುಮಾಡಿದರು.
ತತೋ ಮಾಯಾಂ ವಿಕುರ್ವಾಣೋ ದಮಘೋಷಸುತೋ ಬಲೀ |
ಗದಾಮುಸಲವರ್ಷಂ ಚ ಶಕ್ತಿತೋಮರಸಾಯಕಾನ್ ॥30॥
ಪರಶ್ವಥಮುಸುಂಡೀಶ್ಚ ಪಾತಯಾಮಾಸ ಚೇದಿರಾಟ್ |
ಅಮೋಘಾಸ್ತ್ರೇಣ ಭಗವಾನ್ ನಾಶಯಾಮಾಸ ಕೇಶವಃ ॥31॥
ಅನಂತರ ದಮಘೋಷಸುತನಾದ ಬಲಿಷ್ಠನಾದ ಶಿಶುಪಾಲನು ಮಾಯಾಯುದ್ಧವನ್ನುಮಾಡಿ ಕೃಷ್ಣನ ಮೇಲೆ ಗದಾಮುಸಲಗಳ ಮಳೆಯನ್ನೂ ಶಕ್ತಿ ತೋಮರ ಮತ್ತು ಬಾಣಗಳನ್ನೂ ಪರಶು ಮತ್ತು ಮುಸುಂಡಿಗಳನ್ನೂ ಬೀಳಿಸಿದನು. ಭಗವಂತನಾದ ಕೇಶವನು ಅಮೋಘಾಸ್ತ್ರದಿಂದ ಅವೆಲ್ಲವನ್ನೂ ನಾಶಮಾಡಿದನು.
ಶಿಲಾವರ್ಷಂ ಮಹಾಘೋರಂ ಪಾತಯಾಮಾಸ ಕೇಶವೇ |
ವಜ್ರಾಸ್ತ್ರೇಣಾಭಿಸಂಕ್ರುದ್ಧಃ ಚೂರ್ಣಮೇವಾಕರೋತ್ ಪ್ರಭುಃ ॥32॥
ಶಿಶುಪಾಲನು ಮಹಾಘೋರವಾದ ಶಿಲಾವಸ್ತ್ರವನ್ನು ಕೇಶವನ ಮೇಲೆ ಪ್ರಯೋಗಿಸಿದನು. ಅವನಿಗಿಂತ ಹೆಚ್ಚು ಕೋಪಗೊಂಡ ಪ್ರಭುವಾದ ಕೃಷ್ಣನು ವಜ್ರಾಸ್ತ್ರದಿಂದ ಅದನ್ನು ಪುಡಿ ಪುಡಿಮಾಡಿದನು.
ಜಲವರ್ಷಂ ತತೋ ಘೋರಂ ವ್ಯಸೃಜಚ್ಚೇದಿಪುಂಗವಃ |
ವಾಯವ್ಯಾಸ್ತ್ರೇಣ ಭಗವಾನ್ ವ್ಯಾಕ್ಷಿಪಚ್ಛತಶೋ ಹರಿಃ ॥33॥
ಅನಂತರ ಚೇದಿಪುಂಗವನಾದ ಶಿಶುಪಾಲನು ವಾರುಣಾಸ್ತ್ರದಿಂದ ಘೋರವಾದ ಜಲವರ್ಷವನ್ನು ಸೃಷ್ಟಿಸಿದನು. ಭಗವಂತನಾದ ಹರಿಯು ವಾಯವ್ಯಾಸ್ತ್ರದಿಂದ ಅದನ್ನು ಸಾವಿರಾರು ಕಣಗಳನ್ನಾಗಿ ಹಾರಿಸಿಬಿಟ್ಟನು.
ನಿಹತ್ಯ ಸರ್ವಮಾಯಾಂ ವೈ ಸುನೀಥಸ್ಯ ಜನಾರ್ದನಃ |
ಸ ಮುಹೂರ್ತಂ ಚಕಾರಾಶು ದ್ವಂದ್ವಯುದ್ಧಂ ಮಹಾರಥಃ ॥34॥
ಮಹಾರಥನಾದ ಜನಾರ್ದನನು ಶಿಶುಪಾಲನ ಎಲ್ಲಾ ಮಾಯೆಗಳನ್ನೂ ಸಂಹರಿಸಿ ಒಂದು ಮುಹೂರ್ತಕಾಲ ಅವನ ಜೊತೆಯಲ್ಲಿ ದ್ವಂದ್ವ ಯುದ್ಧವನ್ನು ಮಾಡಿದನು.
ಬಾಣಯುದ್ಧಂ ಚ ಕುರ್ವಾಣೋ ಭತ್ಸಯಾಮಾಸ ಚೇದಿರಾಟ್ |
ದಮಘೋಷಸುತೋ ಧೃಷ್ಟಮುವಾಚ ಮಧುಪುಂಗವಮ್ ॥35॥
ಅನಂತರ ದಮಘೋಷಸುತನಾದ ಚೇದಿರಾಜನಾದ ಶಿಶುಪಾಲನು ಪುನಃ ಬಾಣಯುದ್ಧವನ್ನು ಮಾಡುತ್ತಾ ಮಧುಪುಂಗವನಾದ ಕೃಷ್ಣನನ್ನು ಉದ್ಧತವಾದ ವಾಕ್ಯದಿಂದ ಹೀಯಾಳಿಸಿದನು.
ಅದ್ಯ ಕೃಷ್ಣಮಕೃಷ್ಣಂ ಹಿ ಕುರ್ವಂತು ಮಮ ಸಾಯಕಾಃ |
ಇತ್ಯೇವಮುಕತ್ವದುಷ್ಟಾತ್ಮಾ ಶರವರ್ಷಂ ಜನಾರ್ದನೇ |
ಮುಮೋಚ ಪುರುಷವ್ಯಾಘ್ರೋ ಘೋರಮಾಸ್ಥಾಯ ತದ್ವಪುಃ ॥36॥
ಈ ದಿನ ನನ್ನ ಬಾಣಗಳು ಕೃಷ್ಣನನ್ನು ಅಕೃಷ್ಣನನ್ನಾಗಿ ಮಾಡಲಿ (ಇಲ್ಲದಿರುವಂತೆ ಮಾಡಲಿ) ಹೀಗೆ ಹೇಳಿ ದುಷ್ಟನೂ ಪುರುಷವ್ಯಾಘ್ರನೂ ಆದ ಶಿಶುಪಾಲನು ಘೋರವಾದ ದೇಹವನ್ನು ತೆಗೆದುಕೊಂಡು ಕೃಷ್ಣನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ಶರಸಂಕೃತ್ತಗಾತ್ರಸ್ತು ಕ್ಷಣೇನ ಯದುಪುಂಗವಃ |
ರುಧಿರಂ ಪರಿಸುಸ್ರಾವ ಸೋಽತೀವ ಪುರುಷೋತ್ತಮಃ ॥37॥
ಯದುಪುಂಗವನಾದರೂ ಬಾಣಗಳಿಂದ ಗಾಯಹೊಂಡ ಶರೀರವುಳ್ಳವನಾಗಿ ಪುರುಷೋತ್ತಮನಾದ ಅವನು ತನ್ನ ಅವಯವಗಳಿಂದ ಬಹಳ ರಕ್ತವನ್ನು ಸುರಿಸಿದನು.
ನ ಯಂತಾ ನ ರಥೋ ವಾಪಿ ನ ಚಾಶ್ವಾಃ ಪವನೋಪಮಾಃ |
ದೃಶ್ಯಂತೇ ಶರಸಂಛನ್ನಾ ಆವಿಗ್ನಮಭವಜ್ಜಗತ್ |
ಕೇಶವಂ ತದವಸ್ಥಂ ತು ದೃಷ್ಟ್ವಾ ಭೂತಾನಿ ಚುಕ್ರುಶುಃ ॥38॥
ಕೇಶವನ ರಥವಾಗಲೀ ಸಾರಥಿಯಾಗಲೀ ವಾಯುವೇಗವುಳ್ಳ ಅಶ್ವಗಳಾಗಲೀ ಎಲ್ಲವೂ ಬಾಣಗಳ ಮಳೆಯಲ್ಲಿ ಮುಳುಗಿಹೋಗಿ

ಯಾವುದೂ ಕಾಣುತ್ತಿರಲಿಲ್ಲ. ಜಗತ್ತೆಲ್ಲವೂ ಉದ್ವೇಗಕ್ಕೆ ಒಳಗಾಯಿತು. ಕೇಶವನು ಅಂತಹ ಅವಸ್ಥೆಯನ್ನು ಹೊಂದಿದುದನ್ನು ನೋಡಿ ಎಲ್ಲ ಭೂತಗಳು ಕಿರುಚಿದವು.
ದಾರುಕಸ್ತು ತದಾ ಪ್ರಾಹ ಕೇಶವಂ ಪರವೀರಹಾ |
ನೇದೃಶೋ ದೃಷ್ಟಪೂರ್ವೋ ಹಿ ಸಂಗ್ರಾಮೋ ಯಾದೃಶೋ ಮಯಾ ॥39॥
ಪರವೀರನಾಶಕನಾದ ದಾರುಕನು ಆಗ ಕೇಶವನನ್ನು ಕುರಿತು ಇದಕ್ಕೆ ಸದೃಶವಾದ ಯುದ್ಧವನ್ನು ನಾನು ಹಿಂದೆ ಎಂದೂ ನೋಡಿರಲಿಲ್ಲ ಎಂದು ಹೇಳಿದನು.
ಸ್ಥಾತವ್ಯಮಿತಿ ತಿಷ್ಠಾಮಿ ತ್ವತ್ಪ್ರಸಾದೇನ ಮಾಧವ |
ಅನ್ಯಥಾ ನ ಚ ಮೇ ಪ್ರಾಣಾ ಧಾರಯೇಯುರ್ಜನಾರ್ದನ ॥40॥
ಮಾಧವನೇ! ನಾನು ಇಲ್ಲಿ ಇರಬೇಕು ಎಂಬ ಸಂಕಲ್ಪದಿಂದ ಮಾತ್ರ ನಿನ್ನ ಅನುಗ್ರಹದಿಂದ ಇದ್ದೇನೆ. ಜನಾರ್ದನನೇ! ಇಲ್ಲದಿದ್ದರೆ ಈ ವೇಳೆಗಾಗಲ ನನ್ನ ಪ್ರಾಣಗಳು ಉಳಿಯುತ್ತಿರಲಿಲ್ಲ.
ಇತಿ ಸಂಚಿಂತ್ಯಗೋವಿಂದ ಕ್ಷಿಪ್ರಮೇವ ವಧಂ ಕುರು |
ಏವಮುಕ್ತಸ್ತು ಸೂತೇನ ಕೇಶವೋ ವಾಕ್ಯಮಬ್ರವೀತ್ ॥41॥
ಗೋವಿಂದನೇ! ಇದನ್ನು ಯೋಚಿಸಿ ಶೀಘ್ರವಾಗಿ ಅವನ ವಧೆಯನ್ನು ಮಾಡು ಹೀಗೆ ಸೂತನಿಂದ ಹೇಳಲ್ಪಟ್ಟವನಾಗಿ ಕೇಶವನು ಮಾತನಾಡಿದನು.
ಏಷ ಹ್ಯತಿಬಲೋ ದೈತ್ಯೋ ಹಿರಣ್ಯಕಶಿಪುಃ ಪುರಾ |
ರಿಪುಃ ಸುರಾಣಾಂ ದೈತೇಯೋ ವರದಾನೇನ ಗರ್ವಿತಃ ॥42॥
ಇವನು ಹಿಂದೆ ದಿತಿಯ ಮಗನಾಗಿ ಹಿರಣ್ಯಕಶಿವು ಎಂಬ ಹೆಸರಿನಿಂದ ಅತ್ಯಂತ ಬಲಿಷ್ಠನಾಗಿದ್ದನು. ವರದಾನದಿಂದ ದರ್ಪಿತನಾಗಿದ್ದ ಈ ದಿತಿಪುತ್ರನು ದೇವತೆಗಳಿಗೆ ಶತ್ರುವಾದನು.
ಅಥಾಸೀದ್ ರಾವಣೋ ನಾಮ ರಕ್ಷೇಂದ್ರೋ ಹ್ಯೇಷ ವೀರ್ಯವಾನ್ |
ಗಿರೀಶವರವೀರ್ಯೇಣ ಬಲಂ ನಾಗಣಯನ್ಮಮ ॥43॥
ಅನಂತರ ಇವನೇ ಅತಿ ಪರಾಕ್ರಮಶಾಲಿಯಾದ ರಾಕ್ಷಸೇಂದ್ರನಾದ ರಾವಣನಾದನು. ಆಗ ರುದ್ರದೇವರ ವರದ ಬಲದಿಂದ ಅವನು ನನ್ನ ಸಾಮರ್ಥ್ಯವನ್ನು ಏಣಿಸಲೇ ಇಲ್ಲ.
ಅಸ್ಯಾಹಂ ಮೃತ್ಯುರ್ಭವಿತಾ ಕಾಲೇ ಕಾಲೇ ದುರಾತ್ಮನಃ |
ನ ಭೇತವ್ಯಂ ತ್ವಯಾ ಸೂತ ನೈಷು ಚಿನ್ಮಯಿ ತಸ್ಥಿರೇ ॥44॥
ಈ ದುರಾತ್ಮನಿಗೆ ನಾನು ಕಾಲಕಾಲಕ್ಕೆ ಮೃತ್ಯುವಾಗುವೆನು. ಸೂತನೇ ಹೆದರಬೇಡ ಯಾವ ಬಾಣಗಳೂ ನನ್ನನ್ನು ಪ್ರವೇಶಿಸಿಲ್ಲ. (ಅಸುರಜನಮೋನಾರ್ಥವಾಗಿ ಮಾತ್ರ ಶರವಿದ್ಧ ನಂತೆ ತೋರಿಸಿಕೊಂಡು ರಕ್ತವನ್ನು ಸುರಿಸಿದ್ದೇನೆ.)
ಇತ್ಯೇವಮುಕತ್ತ್ವ ಭಗವಾನ್ ನನರ್ದ ಗರುಡಧ್ವಜಃ |
ಪಾಂಚಜನ್ಯಂ ಮಹಾಶಂಖಂ ಪೂರಯಾಮಾಸ ಕೇಶವಃ ॥45॥
ಹೀಗೆ ಗರುಡಧ್ವಜನಾದ ಕೇಶವನು ಸಿಂಹನಾದವನ್ನು ಮಾಡಿ ತನ್ನ ಪಾಂಚಜನ್ಯ ಮಹಾ ಶಂಖವನ್ನು ಊದಿದನು.
ಸಮ್ಮೋಹಯಿತ್ವಾ ಭಗವಾನಥ ಚಕ್ರಂ ಸಮಾದದೇ |
ಚಿಚ್ಛೇದ ಚ ಸುನೀಥಸ್ಯ ಶಿರಶ್ಚೈದ್ಯಸ್ಯ ಪಶ್ಯತಃ |
ಸ ಪಪಾತ ಮಹಾಬಾಹುರ್ವಜ್ರಾಹತ ಇವಾಚಲಃ ॥46॥
ಭಗವಂತನು ಶಿಶುಪಾಲನಿಗೆ ಸಮ್ಮೋಹವನ್ನು ಉಂಟುಮಾಡಿ ತನ್ನ ಕೈಗೆ ಚಕ್ರವನ್ನು ತೆಗೆದುಕೊಂಡು ಶಿಶುಪಾಲನ ತಲೆಯನ್ನು ಕತ್ತರಿಸಿದನು. ಶಿಶುಪಾಲನು ವಜ್ರದಿಂದ ಭೇದಿಸಲ್ಪಟ್ಟ ಪರ್ವತದಂತೆ ಭೂಮಿಗೆ ಬಿದ್ದನು.
ತತಶ್ಚೇದಿಪತೇರ್ದೇಹಾತ್ ತೇಜೋಗ್ರ್ಯಂ ದದೃಶುರ್ನೃಪಾಃ |
ಉತ್ಪತಂತಂ ತದಾ ರಾಜನ್ ಸುವೋಂತಾದಿವ ಭಾಸ್ಕರಮ್ ॥47॥
ಎಲೈ ರಾಜನೇ! ಆಗ ರಾಜರು ಶಿಶುಪಾಲನ ದೇಹದಿಂದ ಹೊರಟ ಶ್ರೇಷ್ಠವಾದ ಜ್ಯೋತಿಯನ್ನು ಸ್ವರ್ಗದಿಂದ ಉದಯಿಸುವ ಸೂರ್ಯನು ಮೇಲೇರುವಂತೆ ಶಿಶುಪಾಲನ ದೇಹದಿಂದ ಹೊರಬಂದುದನ್ನು ನೋಡಿದರು.
ತತಃ ಕಮಲಪತ್ರಾಕ್ಷಂ ಕೃಷ್ಣಂ ಲೋಕನಮಸ್ಕೃತಮ್ |
ಉಪಾವರ್ತ್ತತ ತತ್ತೇಜೋ ವಿವೇಶ ಚ ಜನಾಧಿಪ ॥48॥
ಜನಾಧಿಪನೇ! ಅನಂತರ ಆ ತೇಜಸ್ಸು ಲೋಕನಮಸ್ಕೃತನಾದ ಕಮಲನಯನನಾದ ಕೃಷ್ಣನ ಬಳಿಗೆ ಬಂದು ಪ್ರವೇಶಿಸಿತು.
ತದದ್ಭುತಂ ಚ ದದೃಶುಃ ಸರ್ವ ಏವ ಮಹೀಕ್ಷಿತಃ |
ಯದ್ ವಿವೇಶ ಮಹಾಬಾಹುಂ ತತ್ ತೇಜಃ ಪುರುಷೋತ್ತಮಮ್ ॥
ಆ ತೇಜಸ್ಸು ಮಹಾಬಾಹುವಾದ ಪುರುಷೋತ್ತಮನನ್ನು ಪ್ರವೇಶಿಸಿದ ಅದ್ಭುತ ದೃಶ್ಯವನ್ನು ಎಲ್ಲಾ ರಾಜರೂ ನೋಡಿದರು.
ಅನಭ್ರಂ ಚ ವವರ್ಷ ದ್ಯೌಃ ಪಪಾತ ಜ್ವಲಿತಾಽಶನಿಃ |
ಕೃಷ್ಣೇನ ನಿಹತೇ ಚೈದ್ಯೇ ಚಚಾಲ ಚ ವಸುಂಧರಾ ॥50॥
ತತಃ ಸರ್ವೇ ಮಹೀಪಾಲಾ ನಾಬ್ರುವಂಸ್ತತ್ರ ಕಿಂಚನ |
ತದಾ ಸಂಕ್ರುದ್ಧಮನಸಃ ಪ್ರೇಕ್ಷಮಾಣಾಃ ಪರಸ್ಪರಮ್ ॥51॥
ಕೃಷ್ಣನು ಶಿಶುಪಾಲನನ್ನು ಸಂಹರಿಸುತ್ತಿರಲು ಆಕಾಶದಲ್ಲಿ ಮೋಡವಿಲ್ಲದೆ ಮಳೆಯು ಉಂಟಾಯಿತು. ಉರಿಯುತ್ತಿರುವ ಸಿಡಿಲುಗಳು ಮೂಡಿ ಬಂದವು. ಭೂಮಿಯೂ ಸಹ ನಡುಗಿತು. ಆಗ ಆ ರಾಜರೆಲ್ಲರೂ ಕೋಪಗೊಂಡ ಮನಸ್ಸುಳ್ಳವರಾಗಿ ಒಬ್ಬರನ್ನೊಬ್ಬರು

ನೋಡುತ್ತಾ ಏನೂ ಮಾತನಾಡದೆ ನಿಂತರು.
ಹಸ್ತೈರ್ಹಸ್ತಾಗ್ರಮಪರೇ ಪ್ರತ್ಯಪಿಂಕ್ಷನ್ನಮರ್ಷಣಾಃ |
ಅಪರೇ ದಶನೈರೋಷ್ಠಂ ದದಂಶುಃ ಕ್ರೋಧಮೂರ್ಚ್ಛಿತಾಃ ॥52॥
ಕ್ರೋಧಗೊಂಡ ಇನ್ನು ಕೆಲವರು ತಮ್ಮ ಕೈಗಳಿಂದ ಕೈಗಳನ್ನು ಹೊಸಕಿದರು. ಇನ್ನು ಕೆಲವರು ಕ್ರೋಧ ಮೂರ್ಚ್ಛಿತರಾಗಿ ಹಲ್ಲುಗಳಿಂದ ತಮ್ಮ ತುಟಿಗಳನ್ನು ಕಡಿದರು.
ರಹಸ್ತು ಕೇಚಿದ್ ವಾರ್ಷ್ಣೇಯಂ ಪ್ರಶಶಂಸುರ್ಮಹಾರಥಾಃ |
ಕೇಚಿದೇವ ತು ಸಂಕ್ರುದ್ಧಾ ಮಧ್ಯಸ್ಥಾಸ್ತ್ವಪರೇಽಭವನ್ ॥53॥
ಇನ್ನು ಕೆಲವು ಮಹಾರಥರು ರಹಸ್ಯವಾಗಿಯೇ ಕೃಷ್ಣನನ್ನು ಸ್ತೋತ್ರಮಾಡಿದರು. ಕೆಲವರು ಮಾತ್ರ ಕೋಪಗೊಂಡರು. ಇನ್ನು ಕೆಲವು ಮಂದಿ ತಟಸ್ಥರಾಗಿದ್ದರು.
ಯೇ ದೇವಗಂಧರ್ವಗಣಾ ರಾಜಾನೋ ಭುವಿ ವಿಶ್ರುತಾಃ |
ತೇ ಪ್ರಣಾಮಂ ಹೃಷೀಕೇಶೇ ಪ್ರಕುರ್ವಂತಿ ಮಹಾತ್ಮನಿ ॥54॥
ದೇವಗಂಧರ್ವಗಣಗಳಿಂದ ಬಂದು ಭೂಮಿಯಲ್ಲಿ ಪ್ರಖ್ಯಾತರಾದ ರಾಜರೆಲ್ಲರೂ ಮಹಾತ್ಮನಾದ ಹೃಷಿಕೇಶನಿಗೆ ಪ್ರಣಾಮವನ್ನು ಮಾಡಿದರು.
ಯೇ ತ್ವಾಸುರಗಣಾಃ ಪಕ್ಷಾಃ ಸಂಭೂತಾಃ ಕ್ಷತ್ರಿಯಾ ಇಹ |
ತೇ ನಿಂದಂತಿ ಹೃಷೀಕೇಶಂ ದುರಾತ್ಮಾನೋ ಗತಾಯುಷಃ ॥55॥
ಯಾವ ಕ್ಷತ್ರಿಯರು ಅಸುರರ ಗಣದಿಂದ ಬಂದು ಅಸುರರ ಪಕ್ಷವನ್ನು ಹಿಡಿದಿದ್ದರೋ ಮುಮೂರ್ಷುಗಳಾದ ಆ ದುರಾತ್ಮರು ಹೃಷೀಕೇಶನನ್ನು ನಿಂದಿಸಿದರು.
ಪ್ರಜಾಪತಿಗಣಾ ಯೇ ತು ಮಧ್ಯಸ್ಥಾಶ್ಚ ಮಹಾತ್ಮನಾಮ್ |
ಬ್ರಹ್ಮರ್ಷಯಶ್ಚ ಸಿದ್ಧಾಶ್ಚ ಗಂಧರ್ವೋರಗಚಾರಣಾಃ |
ತೇ ವೈ ಸ್ತುವಂತಿ ಗೋವಿಂದಂ ಸ್ತೋತ್ರೈಶ್ಚ ಗುಣಸಂಯುತೈಃ ॥56॥
ಬ್ರಹ್ಮ ಮೊದಲಾದ ಪ್ರಜಾಪತಿಗಳ ಸಮೂಹವು ಮಹಾತ್ಮನಾದ ಕೃಷ್ಣನ ವಿಷಯದಲ್ಲಿ ಮಧ್ಯಸ್ಥರಾಗಿದ್ದರು. ಬ್ರಹ್ಮರ್ಷಿಗಳು ಸಿದ್ಧರು ಗಂಧರ್ವೋರಗ ಚಾರಣರು ಗೋವಿಂದನನ್ನು ಗುಣಯುಕ್ತವಾದ ಸ್ತೋತ್ರಗಳಿಂದ ಸ್ತೋತ್ರಮಾಡಿದರು.
ಪರಸ್ಪರಂ ಚ ನೃತ್ಯಂತಿ ಗೀತೇನ ವಿವಿಧೇನ ಚ |
ಉಪತಿಷ್ಠಂತಿ ಗೋವಿಂದಂ ಪ್ರೀತಿಯುಕ್ತಾ ಮಹಾತ್ಮನಿ ॥57॥
ಮಹಾತ್ಮನಾದ ಗೋವಿಂದನಲ್ಲಿ ಪ್ರೀತಿಯುಳ್ಳವರಾಗಿ ಅನೇಕ ಗೀತೆಗಳನ್ನು ಹಾಡುತ್ತಾ ನೃತ್ಯವನ್ನು ಮಾಡುತ್ತಾ ಕೃಷ್ಣನನ್ನು ಸ್ತೋತ್ರಮಾಡಿದರು.
ಪ್ರಹೃಷ್ಟಾಃ ಕೇಶವಂ ಜಗ್ಮುಃ ಪ್ರಶಶಂಸುರ್ಮಹರ್ಷಯಃ |
ಬ್ರಾಹ್ಮಣಾಶ್ಚಾಪಿ ಸುಪ್ರೀತಾಃ ಪಾರ್ಥಿವಾಶ್ಚ ಮಹಾಬಲಾಃ ॥58॥
ಸಂತೋಷಗೊಂಡ ಮಹರ್ಷಿಗಳು ಕೃಷ್ಣನ ಬಳಿಗೆ ಹೋಗಿ ಸ್ತೋತ್ರಮಾಡಿದರು. ಸುಪ್ರೀತರಾದ ಬ್ರಾಹ್ಮಣರು ಮಹಾಬಲರಾದ ಅನೇಕ ರಾಜರೂ ಸಹ ಹಾಗೆಯೇ ಮಾಡಿದರು.
ಪಾಂಡವಸ್ತ್ವಬ್ರವೀದ್ ಭ್ರಾತೄನ್ ಸಂಸ್ಕಾರೇಣ ಮಹೀಪತಿಮ್ |
ದಮಘೋಷಾತ್ಮಜಂ ಶೂರಂ ಸಂಸ್ಕಾರಯತ ಮಾಚಿರಮ್ ॥59॥
ಪಾಂಡು ಪುತ್ರನಾದ ಧರ್ಮರಾಜನು ತಮ್ಮಂದಿರನ್ನು ಕುರಿತು ದಮಘೋಷನಾದ ಶಿಶುಪಾಲನಿಗೆ ಬೇಗ ಅಂತ್ಯ ಸಂಸ್ಕಾರವನ್ನು ಮಾಡಿ ಎಂದು ಹೇಳಿದನು.
ಕುರುರಾಜವಚಃ ಶ್ರುತ್ವಾ ಭ್ರಾತರಸ್ತೇ ತ್ವರಾನ್ವಿತಾಃ |
ತಥಾ ತತ್ ಕೃತವಂತಸ್ತೇ ಭ್ರಾತುರ್ವೈ ಶಾಸನಂ ತದಾ ॥60॥
ಕುರುರಾಜನಾದ ಧರ್ಮರಾಜನ ಮಾತನ್ನು ಕೇಳಿದ ಆ ತಮ್ಮಂದಿರು ತ್ವರೆಯಿಂದ ಕೂಡಿದವರಾಗಿ ತಮ್ಮ ಅಣ್ಣನ ಶಾಸನವನ್ನು ನೆರವೇರಿಸಿದರು.
ಚೇದೀನಾಮಾಧಿಪತ್ಯೇ ಚ ಪುತ್ರಮಸ್ಯ ಮಹೀಪತೇಃ |
ಅಭ್ಯಷಿಂಚತ್ ತದಾ ಪಾರ್ಥಃ ಸಹಿತೈರ್ವಸುಧಾಧಿಪೈಃ ॥61॥
ಕುಂತಿಯ ಪುತ್ರನಾದ ಯುಧಿಷ್ಠಿರನು ಆಗ ಉಳಿದ ರಾಜರುಗಳ ಜೊತೆಯಲ್ಲಿ ಸೇರಿಕೊಂಡು ಶಿಶುಪಾಲನ ಪುತ್ರನಿಗೆ ಚೇದಿರಾಜ್ಯದಲ್ಲಿ ಪಟ್ಟಭಿಷೇಕವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಟ್‌ಪಂಚಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ಅಷ್ಟಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ತಾರನೆಯ ಅಧ್ಯಾಯವು ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಸುವರ್ಣರತ್ನಭಾರಕಾನ್ ಬಹೂನ್‌ನೃಪಾ ಉಪಾನಯನ್ |

ಉಪಾಯನೇ ಸುಯೋಧನಂ ನೃಪೋಽದಿಶದ್ ಗೃಹೇಽಸ್ಯ ಚ ॥266॥
ಕಪ್ಪಕಾಣಿಕೆಯಾಗಿ ಬಹಳ ಸುವರ್ಣರತ್ನಗಳ ಭಾರಗಳನ್ನು ರಾಜರು ತಂದಿತ್ತರು. ಅವುಗಳನ್ನು ತೆಗೆದಿಟ್ಟುಕೊಳ್ಳುವ ಕಾರ್ಯದಲ್ಲಿ ದುರ್ಯೋಧನನನ್ನು ಧರ್ಮರಾಜ ನೇಮಿಸಿದ್ದ.
ಅಭೋಜಯಂಸ್ತಥಾ ದ್ವಿಜಾನ್ ಯಥೇಷ್ಟಭಕ್ಷ್ಯಭೋಜ್ಯಕೈಃ।
ಸುವರ್ಣರತ್ನಭಾರಕಾನ್ ಬಹೂಂಶ್ಚ ದಕ್ಷಿಣಾ ದದುಃ ॥267॥
ಬ್ರಾಹ್ಮಣರಿಗೆ ಯಥೇಚ್ಛ ಭಕ್ಷ್ಯಭೋಜ್ಯಗಳನ್ನು ಪಾಂಡವರು ಉಣಬಡಿಸಿದರು. ಸುವರ್ಣರತ್ನಗಳ ಬಹುಭಾರಗಳನ್ನು ದಕ್ಷಿಣೆಯಾಗಿ ನೀಡಿದರು.
ಯದಿಷ್ಟಮಾಸ ಯಸ್ಯ ಚ ಪ್ರದತ್ತಮೇವ ಪಾಂಡವೈಃ।
ಸಮಸ್ತಮತ್ರ ಸರ್ವಶೋಽಥ ಸಸ್ನುರುದ್ಭೃತಾ ಮುದಾ ॥268॥
ಯಾರಿಗೆ ಏನು ಬೇಕು ಅದೆಲ್ಲವನ್ನೂ ಪಾಂಡವರು ನೀಡಿದರು. ಯಾಗದ ಕೊನೆಯಲ್ಲಿ ಎಲ್ಲರೂ ಆನಂದತುಂದಿಲರಾಗಿ ಅವಭೃಥಸ್ನಾನ ಮಾಡಿದರು.
ನದತ್ಸುರೋರುದುಂದುಭಿಪ್ರಗೀತದೇವಗಾಯಕಾಃ।
ಪ್ರನೃತ್ತದಿವ್ಯಯೋಷಿತಃ ಸುರಾಪಗಾಂ ವ್ಯಗಾಹಯನ್ ॥269॥
ಗಂಧರ್ವರು ದೊಡ್ಡ ದೇವದುಂದುಭಿ ನಾದಗಳೊಂದಿಗೆ ಉತ್ಕೃಷ್ಟವಾದ ಗಾನ ಮಾಡಿದರು. ಅಪ್ಸರೆಯರು ಉತ್ಕೃಷ್ಟ ನಾಟ್ಯ ಮಾಡಿದರು. ಹೀಗೆ ವೈಭವದಿಂದ ಪಾಂಡವರು ಗಂಗಾನದಿಯಲ್ಲಿ ಇಳಿದು ಅವಗಾಹನ ಸ್ನಾನ ಮಾಡಿದರು.
ಸಮಸ್ತರಾಜಸಂಯುತಾ ವಿಗಾಹ್ಯ ಜಾಹ್ನವೀಜಲೇ।
ಪುರಂ ಯಯುಃ ಪುನಶ್ಚ ತೇ ಸುಸದ್ಮ ಚಾಗಮನ್ ಸುರಾಃ ॥270॥
ಪಾಂಡವರು ಎಲ್ಲ ರಾಜರೊಂದಿಗೆ ಗಂಗಾಜಲದಲ್ಲಿ ಮುಳುಗಿ ಸ್ನಾನಮಾಡಿ ತಿರುಗಿ ತಮ್ಮ ಪಟ್ಟಣಕ್ಕೆ ತೆರಳಿದರು. ದೇವತೆಗಳೂ ತಮ್ಮ ಲೋಕಗಳಿಗೆ ಹಿಂತಿರುಗಿದರು.
*****
ಅರವತ್ತೇಳನೆಯ ಅಧ್ಯಾಯ
(ರಾಜಸೂಯಯಾಗದ ವಿಸ್ತಾರವಾದ ವರ್ಣನೆ)
ವೈಶಂಪಾಯನಃ
ತತಃ ಪ್ರವವೃತೇ ಯಜ್ಞೋ ಧರ್ಮರಾಜಸ್ಯ ಧೀಮತಃ।
ಶಾಂತವಿಘ್ನಾರ್ಹಣಕ್ಷೋಭೋ ಮಹರ್ಷಿಗಣಸಂಕುಲಃ ॥1॥
ಯಜ್ಞವಿಘ್ನರೂಪವಾಗಿ ಶಿಶುಪಾಲನಿಗೆ ಉಂಟಾದ ಕ್ಷೋಭೆಯು ಶಾಂತವಾದನಂತರ ಮಹರ್ಷಿಗಣ ನಿಬಿಡವಾದ ಮೇಧಾವಿಯಾದ ಧರ್ಮರಾಜನ ಯಜ್ಞವು ನಡೆಯಿತು.
ತಸ್ಮಿನ್ ಯಜ್ಞೇ ಪ್ರವೃತ್ತೇ ತು ವಾಗೀಶಾ ಹೇತುವಾದಿನಃ।
ಹೇತುವಾದಾನ್ ಬಹೂನ್ ಪ್ರಾಹುಃ ಪರಸ್ಪರಜಿಗೀಷವಃ ॥2॥
ಆ ಯಜ್ಞವು ನಡೆಯುತ್ತಿರಲು ವಿಧ್ಯಾಧೀಶರಾದ ತರ್ಕಶಾಸ್ತ್ರ ಕುಶಲರಾದ ಅನೇಕ ವಿದ್ವಾಂಸರು ಪರಸ್ಪರ ಗೆಲ್ಲುವ ಆಸೆಯಿಂದ ಅನೇಕ ತರ್ಕವಾದಗಳನ್ನು ಮಂಡಿಸಿದರು.
ದದೃಶುಸ್ತಂ ನೃಪತಯೋ ಯಜ್ಞಸ್ಯ ವಿಧಿಮುತ್ತಮಮ್।
ಉಪೇಂದ್ರಸ್ಯೇವ ವಿಹಿತಂ ಸಹದೇವೇನ ಭಾರತ ॥3॥
ಎಲೈ ರಾಜನೇ! ದೇವತೆಗಳಿಂದ ಸಹಿತನಾದ ಇಂದ್ರನು ಉಪೇಂದ್ರನ ಯಾಗಕ್ಕೆ ನೆರವೇರಿಸಿದ ವಿಧಿಗಳಂತೆ ಸಹದೇವನು ಮಾಡಿದ ಆ ಯಜ್ಞದ ಶ್ರೇಷ್ಠವಾದ ವಿಧಿಗಳನ್ನು ರಾಜರೆಲ್ಲರೂ ನೋಡಿದರು.
ದದೃಶುಸ್ತೋರಣಾನ್ಯತ್ರ ಹೇಮತಾಳಮಯಾನಿ ಚ।
ದೀಪ್ತಭಾಸ್ಕರತುಲ್ಯಾನಿ ಪ್ರದೀಪ್ತಾನೀವ ತೇಜಸಾ।
ಸ ಯಜ್ಞಸ್ತೋರಣೈಸ್ತೈಶ್ಚ ಗೃಹೈರ್ದ್ಯೌರಿವ ಸಂಬಭೌ ॥4॥
ಹೇಮತಾಳಮಯವಾದ ತೋರಣಗಳು ಪ್ರಕಾಶಿಸುವ ಸೂರ್ಯನಂತೆ ತಮ್ಮ ತೇಜಸ್ಸಿನಿಂದ ಬೆಳಗುತ್ತಿದ್ದುದನ್ನು ಎಲ್ಲರೂ ನೋಡಿದರು. ಆಕಾಶವು ಗ್ರಹಗಳಿಂದ ಶೋಭಿಸುವಂತೆ ಅಂತಹ ತೋರಣಗಳಿಂದ ಆ ಯಜ್ಞವು ಶೋಭಿಸಿತು.
ಶಯ್ಯಾಸನವಿಹಾರಾಂಶ್ಚ ಸುಬಹೂನ್ ರತ್ನಸಂಯುತಾನ್।
ಘಟಾನ್ ಪಾತ್ರೀಕಟಾಹಾಂಶ್ಚ ಕಲಶಾಂಶ್ಚ ಸಮಂತತಃ।
ನ ತೇ ಕಿಂಚಿದಸೌವರ್ಣಮಪಶ್ಯಂಸ್ತತ್ರ ಪಾರ್ಥಿವಾಃ ॥5॥
ಶಯ್ಯಾಸನಗಳು ಅನೇಕ ವಿಹಾರ ಪದಾರ್ಥಗಳು ರತ್ನಸಂಯುತವಾದ ಘಟಗಳು ಪಾತ್ರೆಗಳು ಕಡಾಯಿಗಳು ಹೀಗೆ ಎಲ್ಲಾ ಕಡೆಗಳಲ್ಲಿಯೂ ರಾಜರು ಸುವರ್ಣಮಯವಲ್ಲದ ಒಂದು ವಸ್ತುವನ್ನೂ ಅಲ್ಲಿ ಕಾಣಲಿಲ್ಲ.
ತದ್ಯಜ್ಞೇ ನ್ಯವಸನ್ ರಾಜನ್ ಬ್ರಾಹ್ಮಣಾ ಭೃಶಸತ್ಕೃತಾಃ।
ಕಥಯಂತಃ ಕಥಾಂ ಬಹ್ವೀಂ ಪಶ್ಯಂತೋ ನಟನರ್ತಕಾನ್ ॥6॥
ರಾಜನೇ! ಆ ಯಜ್ಞದಲ್ಲಿ ಬಹಳ ಸತ್ಕೃತರಾದ ಬ್ರಾಹ್ಮಣರು ಅನೇಕ ಕಥೆಗಳನ್ನು ಹೇಳುತ್ತಾ ನಟನರ್ತಕರನ್ನು ನೋಡುತ್ತಾ ವಾಸಮಾಡಿದರು.
ಭುಂಜತಾಂ ಚೈವ ವಿಪ್ರಾಣಾಂ ಸ್ವಾದು ಭೋಜ್ಯಂ ಪೃಥಗ್ವಿಧಮ್।

ಅನಿಶಂ ಶ್ರೂಯತೇ ತತ್ರ ಮುದಿತಾನಾಂ ಮಹಾಸ್ವನಃ ॥7॥
ಅಲ್ಲಿ ರುಚಿಕರವಾದ ಅನೇಕ ವಿಧವಾದ ಪದಾರ್ಥಗಳನ್ನು ಯಾವಾಗಲೂ ಭುಂಜಿಸುವ ಬ್ರಾಹ್ಮಣರ ಸಂತೋಷದ ಶಬ್ದವು ಯಾವಾಗಲೂ ಕೇಳಿ ಬರುತ್ತಿತ್ತು.
ದೀಯತಾಂ ದೀಯತಾಮೇಷಾಂ ಭುಜ್ಯತಾಂ ಭುಜ್ಯತಾಮಿತಿ।
ಏವಂಪ್ರಕಾರಾಃ ಸಂಜಲ್ಪಾಃ ಶ್ರೂಯಂತೇ ಸ್ಮಾತ್ರ ನಿತ್ಯಶಃ ॥8॥
ಓದನಾನಾಂ ವಿಕಾರಾಣಿ ಸ್ವಾದೂನಿ ವಿವಿಧಾನಿ ಚ।
ಭೋಜನಾನಿ ಚ ಭಕ್ಷ್ಯಾಣಿ ಪೇಯಾನಿ ಮಧುರಾಣಿ ಚ।
ದದುರ್ದ್ವಿಜಾನಾಂ ಸತತಂ ರಾಜಪ್ರೇಷ್ಯಾ ಮಹಾಧ್ವರೇ ॥9॥
ಇವರಿಗೆ ದಾನವನ್ನು ಮಾಡಿ ಇವರಿಗೆ ದಾನಮಾಡಿ ಇವರಿಗೆ ಭೋಜನವನ್ನು ಕೊಡಿ ಇವರಿಗೆ ಭೋಜನವನ್ನು ಕೊಡಿ ಎಂಬ ಈ ಪ್ರಕಾರವಾದ ಮಾತುಗಳು ಅಲ್ಲಿ ಯಾವಾಗಲೂ ಕೇಳಿಬರುತ್ತಿದ್ದವು. ಆ ಮಹಾಯಜ್ಞದಲ್ಲಿ ರಾಜಸೇವಕರು ಬ್ರಾಹ್ಮಣರಿಗೆ ವಿಧವಿಧವಾದ ರುಚಿಕರವಾದ ಅನ್ನದ ವಿಕಾರಗಳನ್ನೂ ಭಕ್ಷ್ಯ ಭೋಜ್ಯಗಳನ್ನೂ ಮಧುರವಾದ ಪೇಯಗಳನ್ನೂ ಸತತವಾಗಿ ನೀಡಿದರು.
ಪೂರ್ಣೇ ಶತಸಹಸ್ರೇ ತು ವಿಪ್ರಾಣಾಂ ಭುಂಜತಾಂ ತದಾ।
ಸ್ಥಾಪಿತಾ ತತ್ರ ಸಂಜ್ಞಾಽಭೂಚ್ಛಂಖೋಧ್ಮಾಯತ ನಿತ್ಯಶಃ ॥10॥
ಒಂದು ಲಕ್ಷ ಬ್ರಾಹ್ಮಣರ ಭೋಜನವಾದ ಸಂಕೇತಕ್ಕಾಗಿ ಸ್ಥಾಪಿಸಲ್ಪಟ್ಟ ಶಂಖದ ನಾದವು ಯಾವಾಗಲೂ ಕೇಳಿಬರುತಿತ್ತು.
ಮುಹುರ್ಮುಹುಃ ಪ್ರಣಾದಸ್ತು ತಸ್ಯ ಶಂಖಸ್ಯ ಭಾರತ।
ಉತ್ತಮಂ ಶಂಖಶಬ್ದಂ ತಂ ಶ್ರುತ್ವಾ ವಿಸ್ಮಯಮಾಗಮನ್ ॥11॥
ಎಲೈ ಭಾರತನೇ! ಮತ್ತೆ ಮತ್ತೆ ಕೇಳಿ ಬರುತ್ತಿದ್ದ ಶಂಖದ ಆ ಶಬ್ದವನ್ನು ಕೇಳಿ ಎಲ್ಲರೂ ವಿಸ್ಮಯ ಗೊಂಡರು.
ಏವಂ ಪ್ರವೃತ್ತೇ ಯಜ್ಞೇ ತು ತುಷ್ಟಪುಷ್ಟಜನಾಯುತೇ।
ಅನ್ನಸ್ಯ ಬಹುಶೋ ರಾಜನ್ನುತ್ಸೇಧಾಃ ಪರ್ವತೋಪಮಾಃ।
ದಧಿಕುಲ್ಯಾಶ್ಚ ದದೃಶುಃ ಸರ್ಪಿಷಶ್ಚ ಹ್ರದಾನ್ ಜನಾಃ ॥12॥
ಎಲೈ ರಾಜನೇ! ಸಂತುಷ್ಟರಾದ ಮತ್ತು ಪುಷ್ಟರಾದ ಜನಗಳಿಂದ ಪೂರ್ಣವಾದ ಆ ಯಜ್ಞವು ಹೀಗೆ ನಡೆಯುತ್ತಿರಲು ಜನರು ಅನ್ನದ ಪರ್ವತೋಪಮವಾದ ದೊಡ್ಡ ದೊಡ್ಡ ರಾಶಿಗಳನ್ನೂ ಮೊಸರಿನ ಸರೋವರಗಳನ್ನೂ ಘೃತದ ಸರೋವರಗಳನ್ನೂ ನೋಡಿದರು.
ಜಂಬೂದ್ವೀಪಶ್ಚ ಸಕಲೋ ನಾನಾಜನಸಮನ್ವಿತಃ।
ರಾಜನ್ನದೃಶ್ಯತೈಕಸ್ಥೋ ರಾಜ್ಞಸ್ತಸ್ಮಿನ್ ಮಹಾಕ್ರತೌ ॥13॥
ಎಲೈ ರಾಜನೇ! ಆ ರಾಜನ ಮಹಾಯಜ್ಞದಲ್ಲಿ ಅನೇಕ ಜನರಿಂದ ಕೂಡಿದ ಸಮಗ್ರವಾದ ಜಂಬೂದ್ವೀಪವೇ ಅಲ್ಲಿ ಬಂದು ಇರುವಂತೆ ಕಾಣುತ್ತಿತ್ತು.
ತತ್ರ ರಾಜಸಹಸ್ರಾಣಿ ಪುರುಷಾಣಾಂ ತತಸ್ತತಃ।
ಗೃಹೀತ್ವಾ ಧನಮಾಜಗ್ಮುಃ ತಸ್ಯ ರಾಜ್ಞೋ ಮಹಾಕ್ರತೌ ॥14॥
ಆ ರಾಜನ ಮಹಾಯಾಗದಲ್ಲಿ ಸಹಸ್ರಾರು ರಾಜರು ತಮ್ಮ ಪುರುಷರಿಂದ ಧನವನ್ನು ತೆಗೆದುಕೊಂಡು ಅನೇಕ ಕಡೆಗಳಿಂದ ಅಲ್ಲಿಗೆ ಬಂದರು.
ರಾಜಾನಃ ಸ್ರಗ್ವಿಣಸ್ತತ್ರ ಸುಮೃಷ್ಟಮಣಿಕುಂಡಲಾಃ।
ತಾನ್ ಪರ್ಯವೇವಿಷನ್ ವಿಪ್ರಾನ್ ಶತಶೋಽಥ ಸಹಸ್ರಶಃ ॥15॥
ಮಾಲೆಗಳನ್ನು ಧರಿಸಿದ ಕರ್ಣಕುಂಡಲಾದಿ ಸುವರ್ಣಾಭರಣಗಳನ್ನು ಧರಿಸಿದ ರಾಜರು ನೂರು ಸಂಖ್ಯೆಯಲ್ಲಿ ಅಥವಾ ಸಾವಿರ ಸಂಖ್ಯೆಯಲ್ಲಿ ನೆರೆದ ಬ್ರಾಹ್ಮಣರಿಗೆ ಭೋಜನವನ್ನು ಬಡಿಸುತ್ತಿದ್ದರು.
ವಿವಿಧಾನ್ಯನ್ನಪಾನಾನಿ ಲೇಹ್ಯಾನಿ ವಿವಿಧಾನಿ ಚ।
ತೇಷಾಂ ನೃಪೋಪಭೋಗ್ಯಾನಿ ಬ್ರಾಹ್ಮಣಾನಾಂ ದದುಃ ಸ್ಮ ತೇ ॥16॥
ಅವರು ಬ್ರಾಹ್ಮಣರಿಗೆ ರಾಜೋಪಭೋಗ್ಯವಾದ ಅನ್ನ ಪಾನಗಳನ್ನೂ ವಿವಿಧವಾದ ಲೇಹ್ಯ ಪದಾರ್ಥಗಳನ್ನೂ ಕೊಡುತ್ತಿದ್ದರು.
ನಾನಾವಿಧಾನಿ ಭಕ್ಷ್ಯಾಣಿ ಸ್ವಾದುಪುಷ್ಪಫಲಾನಿ ಚ।
ಗುಡಾನಿ ಸ್ವಾದುಕ್ಷೌದ್ರಾಣಿ ದದುಸ್ತೇ ಬ್ರಾಹ್ಮಣೇಷ್ವಿಹ ॥17॥
ಅವರು ಬ್ರಾಹ್ಮಣರಿಗೆ ನಾನಾ ವಿಧವಾದ ಭಕ್ಷ್ಯಗಳನ್ನೂ ಮಧುರವಾದ ಪುಷ್ಪ ಫಲಗಳನ್ನೂ ಗುಡ ಶರ್ಕರ ಮತ್ತು ಮಧುಗಳನ್ನು ಕೊಡುತ್ತಿದ್ದರು.
ಏತಾನಿ ಸತತಂ ಭುಕ್ತ್ವಾ ತಸ್ಮಿನ್ ಯಜ್ಞೇ ದ್ವಿಜಾತಯಃ।
ಪರಾಂ ಪ್ರೀತಿಂ ಯಯುಃ ಸರ್ವೇ ಮೋದಮಾನಾಸ್ತದಾ ಭೃಶಮ್ ॥
ಆ ಬ್ರಾಹ್ಮಣರೆಲ್ಲರೂ ಆ ಯಜ್ಞದಲ್ಲಿ ಸತತವಾಗಿ ಹೀಗೆ ಭೋಜನವನ್ನು ಮಾಡಿ ಬಹಳ ಸಂತೋಷಪಡುತ್ತಾ ಧರ್ಮರಾಜನ ಮೇಲೆ ಬಹಳ ಪ್ರೀತಿಯನ್ನು ಹೊಂದಿದರು.
ಏವಂ ಸಮುದಿತಂ ಸರ್ವಂ ಬಹುಶೋಭಾಸಮನ್ವಿತಮ್।
ಯಜ್ಞವಾಟಂ ನೃಪಾ ದೃಷ್ಟ್ವಾ ವಿಸ್ಮಯಂ ಪರಮಂ ಯಯುಃ ॥19॥
ಹೀಗೆ ಅನೇಕ ಶೋಭೆಗಳಿಂದ ಯುಕ್ತವಾದ ಸಮುದ್ರಿಕ್ತವಾದ ಆ ಯಜ್ಞಶಾಲೆಯನ್ನು ನೋಡಿದ ರಾಜರು ಪರಮ ವಿಸ್ಮಯವನ್ನು ಹೊಂದಿದರು.

ಋತ್ವಿಜಶ್ಚ ಯಥಾಶಾಸ್ತ್ರಂ ರಾಜಸೂಯಂ ಮಹಾಕ್ರತುಮ್ |
ಪಾಂಡವಸ್ಯ ಯಥಾಕಾಲಂ ಜುಹುವುಃ ಸರ್ವಯಾಜಕಾಃ |
ಪರ್ಯಪೃಚ್ಛಂಶ್ಚ ಧರ್ಮಜ್ಞಾ ವಿಧಿವಚ್ಛಾಸ್ತ್ರಶಿಕ್ಷಿತಾಃ ॥20॥
ಎಲ್ಲಾ ಯಾಗಗಳ ವಿಧಾನವನ್ನು ತಿಳಿದ ಋತ್ವಿಜರು ಪಾಂಡವನ ರಾಜಸೂಯಮಹಾಯಾಗವನ್ನು ಕಾಲಕ್ಕೆ ಅನುಗುಣವಾಗಿ ಮತ್ತು ಶಾಸ್ತ್ರಕ್ಕೆ ಅನುಗುಣವಾಗಿ ನೆರವೇರಿಸಿದರು. ವಿಧಿವತ್ತಾಗಿ ಶಾಸ್ತ್ರಕ್ಕೆ ಅನುಗುಣವಾಗಿ ಧರ್ಮಜ್ಞರು ಅಲ್ಲಿ ಪ್ರಶ್ನೆಗಳನ್ನು ಕೇಳಿ ಉತ್ತರವನ್ನು ಪಡೆಯುತ್ತಿದ್ದರು.
ವ್ಯಾಸಧೌಮ್ಯಾದಯಃ ಸರ್ವೇ ವಿಧಿವತ್ ಷೋಡಶರ್ತ್ವಿಜಃ |
ಸ್ವಸ್ವಕರ್ಮಾಣಿ ಚಕ್ರುಸ್ತೇ ಪಾಂಡವಸ್ಯ ಮಹಾಕ್ರತೌ ॥21॥
ವ್ಯಾಸ ಧೌಮ್ಯ ಮೊದಲಾದ ಹದಿನಾರು ಜನ ಋತ್ವಿಜರೆಲ್ಲರೂ ಪಾಂಡವನ ಮಹಾ ಯಾಗದಲ್ಲಿ ತಮ್ಮ ತಮ್ಮ ಕರ್ಮಗಳನ್ನು ವಿಧಿವತ್ತಾಗಿ ಮಾಡಿದರು.
ನಾಷಡಂಗವಿದತ್ರಾಸೀತ್ ಸದಸ್ಯೋ ನಾಬಹುಶ್ರುತಃ |
ನಾವ್ರತೋ ನಾನುಪಾಧ್ಯಾಯೋ ನ ಪಾಪೋ ನಾಕ್ಷಮೋ ದ್ವಿಜಃ ॥22॥
ಅಲ್ಲಿ ನೆರೆದ ಸದಸ್ಯರಲ್ಲಿ ಷಡಂಗಜ್ಞಾನವಿಲ್ಲದವರಾಗಲೀ ಬಹುಶ್ರುತರಲ್ಲದವರಾಗಲೀ ವ್ರತವನ್ನು ಧರಿಸದವರಾಗಲೀ ಉಪಾದ್ಯಾಯರಾಗದವರಾಗಲೀ ಪಾಪಿಗಳಾಗಲೀ ಸಹನೆಯಿಲ್ಲದ ಬ್ರಾಹ್ಮಣರಾಗಲೀ ಯಾರೂ ಇರಲಿಲ್ಲ.
ನ ತತ್ರ ಕೃಪಣಃ ಕಶ್ಚಿದ್ ದರಿದ್ರೋ ನ ಬಭೂವ ಹ |
ಕ್ಷುಧಿತೋ ದುಃಖಿತೋ ವಾಪಿ ಪ್ರಾಕೃತೋ ವಾಪಿ ಮಾನುಷಃ ॥23॥
ಆಲ್ಲಿ ದರಿದ್ರನಾಗಲೀ ಕೃಪಣನಾಗಲಿ ಕ್ಷುದ್ರನಾಗಲೀ ದುಃಖಿತನಾಗಲೀ ಅಥವಾ ಒಬ್ಬ ಸಾಮಾನ್ಯಪುರುಷನಾಗಲೀ ಇರಲಿಲ್ಲ.
ಸಂಸ್ತರೇ ಕುಶಲಾಶ್ಚಾಪಿ ಸರ್ವಕರ್ಮಾಣಿ ಯಾಜಕಾಃ |
ದಿವಸೇ ದಿವಸೇ ಚಕ್ರುರ್ಯಥಾಶಾಸ್ತ್ರಾರ್ಥಚಕ್ಷುಷಃ ॥24॥
ಪುರೋಹಿತರು ಯಾಗ ಕರ್ಮಗಳಲ್ಲಿ ಕುಶಲರಾಗಿ ಶಾಸ್ತ್ರದಲ್ಲಿ ಹೇಳಿದ ವಿಧಾನವನ್ನು ಕರ್ಮಗಳನ್ನು ಅನುಸರಿಸಿ ಮಾಡಿದರು.
ಬ್ರಾಹ್ಮಣಾ ವೇದಶಾಸ್ತ್ರಜ್ಞಾಃ ಕಥಾಶ್ಚಕ್ರುಶ್ಚ ಸುವ್ರತಾಃ |
ರೇಮಿರೇ ಚ ಕಥಾಂತೇ ತು ಭುಕತ್ವ ಪೀತ್ವಾ ಯಥೇಷ್ಟತಃ ॥25॥
ಸುವ್ರತರಾದ ವೇದಶಾಸ್ತ್ರಜ್ಞರಾದ ಬ್ರಾಹ್ಮಣರು ಒಳ್ಳೆಯ ವಾದಗಳನ್ನು ಮಾಡಿ ಅನಂತರ ಯಥೇಷ್ಟವಾಗಿ ಭೋಜನವನ್ನೂ ಪಾನವನ್ನೂ ಮಾಡಿ ಸಂತೋಷ ಪಟ್ಟರು.
ಸಾ ವೇದಿರ್ವೇದಸಂಪನ್ನೈರ್ದೇವದ್ವಿಜಮಹರ್ಷಿಭಿಃ |
ಆಬಭಾಸೇ ತದಾ ಕೀರ್ಣಾ ನಕ್ಷತ್ರೈರ್ದ್ಯೌರಿವಾಮಲಾ ॥26॥
ವೇದಸಂಪನ್ನರಾದ ದೇವತೆಗಳಿಂದಲೂ ಬ್ರಾಹ್ಮಣರಿಂದಲೂ ಮಹರ್ಷಿಗಳಿಂದಲೂ ನಿಬಿಡವಾಗಿ ತುಂಬಿದ ಆ ವೇದಿಕೆಯು ಅಂತರಿಕ್ಷವು ನಕ್ಷತ್ರಗಳಿಂದ ಶೋಭಿಸಿದಂತೆ ಬಹುವಾಗಿ ಶೋಭಿಸುತ್ತಿದ್ದಿತು.
ತತೋ ವೈ ಹೇಮಯೂಪಾಂಶ್ಚ ಸರ್ವರತ್ನಸಮಾಚಿತಾನ್ |
ಶೋಭಾರ್ಥಂ ಕಾರಯಾಮಾಸ ಸಹದೇವೋ ಮಹಾಮತಿಃ ॥27॥
ಅಲ್ಲಿ ಮಹಾಮೇಧಾವಿಯಾದ ಸಹದೇವನು ಸೌಂದರ್ಯವನ್ನು ಹೆಚ್ಚಿಸುವ ಸಲುವಾಗಿ ರತ್ನಗಳನ್ನು ಮೆಟ್ಟಿದ ಸುವರ್ಣಮಯವಾದ ಯೂಪಗಳನ್ನು ಮಾಡಿಸಿದನು.
ದದೃಶುಸ್ತೋರಣಾನ್ಯತ್ರ ಹೇಮತಾಳಮಯಾನಿ ಚ |
ಸ ಯಜ್ಞಸ್ತೋರಣೈಸ್ತೈಶ್ಚ ಗೃಹೈರ್ದ್ಯೌರಿವ ಸಂಬಭೌ ॥28॥
ಅಲ್ಲಿ ಜನರು ಹೇಮತಾಳಮಯವಾದ ತೋರಣಗಳನ್ನು ನೋಡಿದನು. ಆಕಾಶವು ಗ್ರಹಗಳಿಂದ ಶೋಭಿಸುವಂತೆ ಆ ಯಜ್ಞಶಾಲೆಯು ಅಂತಹ ತೋರಣಗಳಿಂದ ಶೋಭಿಸಿತು.
ತಾಳಾನಾಂ ತೋರಣೈರ್ಹೈರ್ಮ್ಯೈರ್ದಾಂತೈರಿವ ದಿಶಾಗಜೈಃ |
ದಿಕ್ಷು ಸರ್ವಾಸು ವಿನ್ಯಸ್ತೈಃ ತೇಜೋಭಿರ್ಭಾಸ್ಕರೈರ್ಯಥಾ |
ಸಕಿರೀಟೈರ್ನೃಪೈಶ್ಚೈವ ಶುಶುಭೇ ತತ್ ಸದಸ್ತದಾ ॥29॥
ದೈವೈರನ್ಯೈಶ್ಚ ಯಕ್ಷೈಶ್ಚ ಉರಗೈರ್ದಿವ್ಯಮಾನುಷೈಃ |
ವಿದ್ಯಾಧರಗಣೈಃ ಕೀರ್ಣೈಃ ಪಾಂಡವಸ್ಯ ಮಹಾತ್ಮನಃ ॥30॥
ಆ ಯಜ್ಞಸಭೆಯು ದಿಗ್ಗಜಗಳ ದಂತದಿಂದ ಮಾಡಿರುವಂತೆ ತೋರುವ ಸುವರ್ಣ ಮಯವಾದ ತಾಳ ತೋರಣಗಳಿಂದಲೂ ಎಲ್ಲಾ ಕಡೆಗಳಲ್ಲಿಯೂ ಇಡಲ್ಪಟ್ಟ ಸೂರ್ಯನಂತೆ ಪ್ರಕಾಶಿಸುವ ಸುವರ್ಣಮಯವಾದ ತಾಳ ಸುವರ್ಣಗಳಿಂದಲೂ, ಕಿರೀಟಗಳನ್ನು ಧರಿಸಿದ ರಾಜರಿಂದಲೂ ಶೋಭಿಸಿತು. ಮಹಾತ್ಮನಾದ ಪಾಂಡವನ ಆ ಸಭೆಯು ನಿಬಿಡವಾಗಿ ತುಂಬಿದ ದೇವತೆಗಳಿಂದಲೂ ಯಕ್ಷರಿಂದಲೂ ಉರಗಗಳಿಂದಲೂ ದಿವ್ಯಮನುಷ್ಯರಿಂದಲೂ ಮತ್ತು ವಿಧ್ಯಾಧರ ಗಣಗಳಿಂದಲೂ ಕೂಡಿದುದಾಗಿ ಶೋಭಿಸಿತು.
ಸ ರಾಜಸೂಯಃ ಶುಶುಭೇ ಧರ್ಮರಾಜಸ್ಯ ಧೀಮತಃ |
ಗಂಧರ್ವಗಣಸಂಕೀರ್ಣಃ ಶೋಭಿತೋಽಪ್ಸರಸಾಂ ಗಣೈಃ |
ಸ ಕಿಂಪುರುಷಗೀತೈಶ್ಚ ಕಿನ್ನರೈರುಪಶೋಭಿತಃ ॥31॥
ಗಂಧರ್ವಗಣಗಳಿಂದ ನಿಬಿಡವಾಗಿ ತುಂಬಿದ, ಅಪ್ಸರೆಯರ ಗಣಗಳಿಂದಲೂ ನಿಬಿಡವಾಗಿ ಶೋಭಿತವಾದ, ಕಿನ್ನರರಿಂದಲೂ ಶೋಭಿತವಾದಂತಹ, ಕಿಂಪುರುಷಗಾನದಿಂದಲೂ ಶೋಭಿತವಾದ, ಮೇಧಾವಿಯಾದ ಆ ಧರ್ಮರಾಜನ ರಾಜಸೂಯಯಾಗವು

ಬಹಳ ಶೋಭಿಸಿತು.
ನಾರದಶ್ಚ ಜಗೌ ತತ್ರ ತುಂಬುರುಶ್ಚ ಮಹಾದ್ಯುತಿಃ |
ವಿಶ್ವಾವಸುಶ್ಚಿತ್ರಸೇನಸ್ತಥಾನ್ಯೇ ಗೀತಕೋವಿದಾಃ |
ರಮಯಂತಿ ಸ್ಮ ತಾನ್ ಸರ್ವಾನ್ ಯಜ್ಞಕರ್ಮಾಂತರೇಷ್ವಥ ॥32॥
ಅಲ್ಲಿ ನಾರದರು ಮಹಾದ್ಯುತಿಗಳಾದ ತುಂಬುರರು ಸಹ ಗಾನವನ್ನು ಮಾಡಿದರು. ವಿಶ್ವಾವಸು ಚಿತ್ರಸೇನ ಮೊದಲಾದ ಗಾನವಿಶಾರರಾದವರೆಲ್ಲರೂ ಯಜ್ಞಕರ್ಮಗಳ ಮಧ್ಯದಲ್ಲಿ ಅಲ್ಲಿ ನೆರೆದ ಎಲ್ಲರನ್ನೂ ತಮ್ಮ ಸಂಗೀತದಿಂದ ಸಂತೋಷ ಪಡಿಸುತ್ತಿದ್ದರು.
ತತ್ರ ಚಾಪ್ಸರಸಃ ಸರ್ವಾಃ ಸುಂದರ್ಯಃ ಪ್ರಿಯದರ್ಶನಾಃ |
ನನೃತುಶ್ಚ ಜಗುಶ್ಚಾತ್ರ ನಿತ್ಯಂ ಕರ್ಮಾಂತರೇಷ್ವಥ ॥33॥
ಅಲ್ಲಿ ಸುಂದರಿಯರೂ ಮನೋಹರರೂ ಆದ ಎಲ್ಲಾ ಅಪ್ಸರೆಯರು ಕರ್ಮಗಳ ಮಧ್ಯದಲ್ಲಿ ಯಾವಾಗಲೂ ಗಾನವನ್ನೂ ಮತ್ತು ನರ್ತನವನ್ನೂ ಮಾಡುತ್ತಿದ್ದರು.
ಇತಿಹಾಸಪುರಾಣಾನಿ ಆಖ್ಯಾನಾನಿ ಚ ಸರ್ವಶಃ |
ಊಚುರ್ವೈ ಶಬ್ದಶಾಸ್ತ್ರಜ್ಞಾ ನಿತ್ಯಂ ಕರ್ಮಾಂತರೇಷು ತೇ ॥34॥
ಶಬ್ದಶಾಸ್ತ್ರವನ್ನು ತಿಳಿದ ಬ್ರಾಹ್ಮಣರು ಕರ್ಮಗಳ ಮಧ್ಯದಲ್ಲಿ ಅಲ್ಲಿ ಯಾವಾಗಲೂ ಇತಿಹಾಸಪುರಾಣಗಳನ್ನೂ ಶ್ರೇಷ್ಠವಾದ ಕತೆಗಳನ್ನೂ ಹೇಳುತ್ತಿದ್ದರು.
ಭೇರ್ಯಶ್ಚ ಮುರಜಾಶ್ಚೈವ ಮಡ್ಡುಕಾ ಗೋಮುಖಾಶ್ಚ ಯೇ |
ಶೃಂಗವರ್ಣಾಂಬುಜಾಶ್ಚೈವ ಶ್ರೂಯಂತೇ ಸ್ಮ ಸಹಸ್ರಶಃ ॥35॥
ಭೇರಿ ಮುರಜ ಮಡ್ಡುಕ ಗೋಮುಖ ಶೃಂಗವರ್ಣ ಶಂಖ ಮೊದಲಾದ ಸಹಸ್ರಾರು ವಾದ್ಯ ವಿಶೇಷಗಳಿಂದ ಶಬ್ದವು ಸತತವಾಗಿ ಕೇಳಿಬರುತ್ತಿತ್ತು.
ಲೋಕೇಸ್ಮಿನ್ ಸರ್ವವಿಪ್ರಾಶ್ಚ ವೈಶ್ಯಾಃ ಶೂದ್ರಾಶ್ಚ ಸರ್ವಶಃ |
ಸರ್ವೇ ಮ್ಲೇಚ್ಛಾಃ ಸರ್ವವರ್ಣಾ ಆದಿಮಧ್ಯಾಂತಜಾಸ್ತಥಾ ॥36॥
ಈ ಲೋಕದಲ್ಲಿ ಇದ್ದ ಎಲ್ಲಾ ಬ್ರಾಹ್ಮಣರು ವೈಶ್ಯರು ಶೂದ್ರರು ಮ್ಲೇಚ್ಛರು ಸರ್ವವರ್ಣದವರು ಅಂತ್ಯಜರು ಮಧ್ಯಜರು ಆದಿವರ್ಣದಿಂದ ಉತ್ಪನ್ನವಾದವರು ಎಲ್ಲರೂ ಅಲ್ಲಿ ಸೇರಿದ್ದರು.
ನಾನಾದೇಶ ಸಮುತ್ಥೈಶ್ಚ ನಾನಾಜಾತಿಭಿರಾಗತೈಃ |
ಪರ್ಯಾಪ್ತ ಇವ ಲೋಕೋಽಯಂ ಯುಧಿಷ್ಠಿರನಿವೇಶನೇ ॥37॥
ಅನೇಕ ದೇಶಗಳಿಂದ ಬಂದ ಅನೇಕ ಜಾತಿಗಳ ಆ ಜನರಿಂದ ಯುಧಿಷ್ಠಿರನ ನಿವೇಶನವು ತುಂಬಿ ಹೋದಂತೆ ಆಯಿತು.
ಭೀಷ್ಮದ್ರೋಣಾದಯಃ ಸರ್ವೇ ಕುರವಃ ಸಸುಯೋಧನಾಃ |
ವೃಷ್ಣಯಶ್ಚ ಸಮಗ್ರಾಶ್ಚ ಪಾಂಚಾಲಾಶ್ಚಾಪಿ ಸರ್ವಶಃ |
ಯಜ್ಞೇಽಸ್ಮಿನ್ ಸರ್ವಕರ್ಮಾಣಿ ಚಕ್ರುರ್ದಾಸಾ ಇವ ಕ್ರತೌ ॥38॥
ಈ ಯಜ್ಞದಲ್ಲಿ ಭೀಷ್ಮ ದ್ರೋಣಾದಿಗಳು ಸುಯೋಧನಸಹಿತರಾದ ಎಲ್ಲಾ ಕುರುಗಳು ಎಲ್ಲಾ ವೃಷ್ಣಿಗಳು ಎಲ್ಲಾ ಪಾಂಚಾಲರು ಸಹ ದಾಸರಂತೆ ಎಲ್ಲಾ ಕರ್ಮಗಳನ್ನೂ ಮಾಡಿದರು.
ಏವಂ ಪ್ರವೃತ್ತೋ ಯಜ್ಞೋಽಸೌ ಧರ್ಮರಾಜಸ್ಯ ಧೀಮತಃ |
ಶುಶುಭೇ ಚ ಮಹಾಬಾಹೋ ಸೋಮಸ್ಯೇವ ಕ್ರತುರ್ಯಥಾ ॥39॥
ಎಲೈ ಮಹಾಬಾಹುವೇ! ಹೀಗೆ ಪ್ರವೃತ್ತವಾದ ಮೇಧಾವಿಯಾದ ಧರ್ಮರಾಜನ ಈ ಯಜ್ಞವು ಚಂದ್ರನ ಯಜ್ಞದಂತೆ ಬಹಳವಾಗಿ ಶೋಭಿಸಿತು.
ವಸತ್ರಣಿ ಕಂಬಳಾಂಶ್ಚೈವ ಪ್ರಾವಾರಾಂಶ್ಚೈವ ಸರ್ವಶಃ |
ನಿಷ್ಕಹೇಮಜಭಾಂಡಾನಿ ಭೂಷಣಾನಿ ಚ ಸರ್ವಶಃ |
ಪ್ರದದೌ ತತ್ರ ವಿಪ್ರಾಣಾಂ ಧರ್ಮರಾಜೋ ಯುಧಿಷ್ಠಿರಃ ॥40॥
ಧರ್ಮರಾಜನಾದ ಯುಧಿಷ್ಠಿರನು ಬ್ರಾಹ್ಮಣರಿಗೆ ವಸ್ತ್ರಗಳನ್ನು ಕಂಬಳಿಗಳನ್ನು ಉತ್ತರೀಯಗಳನ್ನು, ನಿಷ್ಕಗಳನ್ನು, ಸುವರ್ಣಪಾತ್ರೆಗಳನ್ನು ಮತ್ತು ಅನೇಕ ಭೂಷಣಗಳನ್ನು ದಾನಮಾಡಿದನು.
ಯಾನಿ ತತ್ರ ಮಹೀಪಾಲೈರ್ಲಬ್ಧವಾನ್ ಸ ಧನಾನಿ ಚ |
ತಾನಿ ರತ್ನಾನಿ ಸರ್ವಾಣಿ ವಿಪ್ರಾಣಾಂ ಪ್ರದದೌ ತದಾ ॥41॥
ಅವನು ರಾಜರಿಂದ ಎಷ್ಟು ಧನವನ್ನು ಪಡೆದಿದ್ದನೋ ಆ ಎಲ್ಲಾ ರತ್ನಗಳನ್ನೂ ಆ ಕಾಲದಲ್ಲಿ ವಿಪ್ರರಿಗೆ ದಾನವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವಣಿ ನವಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯವು ಮುಗಿಯಿತು.
*****
ಅರವತ್ತೆಂಟನೆಯಅಧ್ಯಾಯ
(ರಾಜಸೂಯ ಸಮಾಪ್ತಿ. ಕೆಲವರನ್ನು ಬಿಟ್ಟು ಉಳಿದವರೆಲ್ಲರಿಂದ ತಮ್ಮ ತಮ್ಮ ಪಟ್ಟಣಕ್ಕೆ ಪ್ರಯಾಣ.)
ವೈಶಂಪಾಯನಃ

ತತಃ ಸ ಕುರುರಾಜಸ್ಯ ತದಾ ಸರ್ವಸಮೃದ್ಧಿಮಾನ್ |
ಯಜ್ಞಃ ಪ್ರೀತಿಕರೋ ರಾಜನ್ ಸಂಬಭೌ ವಿಪುಳೋತ್ಸವಃ ॥1॥
ಎಲೈ ರಾಜನೇ! ಅನಂತರ ಸರ್ವಸಮೃದ್ಧಿಯಿಂದ ಕೂಡಿದ ವಿಪುಲವಾದ ಉತ್ಸವದಿಂದ ಕೂಡಿದ ಸಂತೋಷಕರವಾದ ಕುರುರಾಜನಾದ ಆ ಧರ್ಮರಾಜನ ಯಾಗವು ಸಂಪನ್ನವಾಯಿತು.
ಶಾಂತವಿಘ್ನಸಮಾರಂಭಃ ಪ್ರಭೂತಧನಧಾನ್ಯವಾನ್ |
ಅನ್ನವಾಂಶ್ಚಾಪಿ ನಿರ್ವೃತ್ತಃ ಕೇಶವೇನಾಭಿರಕ್ಷಿತಃ ॥2॥
ಕೇಶವನಿಂದ ಅಭಿರಕ್ಷಿತವಾದ ಆ ಯಾಗವು ಉಂಟಾದ ವಿಘ್ನಗಳನ್ನು ಪರಿಹಾರಮಾಡಿಕೊಂಡು ಪ್ರಭೂತವಾದ ಧನಧಾನ್ಯವುಳ್ಳದ್ದಾಗಿ ಪ್ರಭೂತವಾದ ಅನ್ನದಾನವನ್ನು ಉಳ್ಳದ್ದಾಗಿ ಸಂಪನ್ನವಾಯಿತು.
ತಸ್ಯ ಯಜ್ಞಂ ಮಹಾಬಾಹುರಾಸಮಾಪ್ತೇರ್ಜನಾರ್ದನಃ |
ರರಕ್ಷ ಭಗವಾನ್ ಶೌರಿಃ ಶಂಖಚಕ್ರಗದಾಧರಃ |
ಸಮಾಪಯಾಮಾಸ ತದಾ ರಾಜಸೂಯಂ ಯಥಾವಿಧಿ ॥3॥
ಶಂಖಚಕ್ರಗದಾಧರನಾದ ಭಗವಂತನಾದ ಮಹಾಬಾಹುವಾದ ಶೌರಿಯು ಆ ಯಜ್ಞವನ್ನು ಕೊನೆಯವರೆಗೂ ರಕ್ಷಣೆಮಾಡಿದನು. ಜನಾರ್ದನನು ಕೊನೆಗೆ ವಿಧಿವತ್ತಾಗಿ ಆ ರಾಜಸೂಯಯಾಗವನ್ನು ಸಮಾಪ್ತಿಗೊಳಿಸಿದನು.
ಕೋಟೀಃ ಸಹಸ್ರಂ ಪ್ರದದೌ ಬ್ರಾಹ್ಮಣಾನಾಂ ಮಹಾತ್ಮನಾಮ್ |
ನ ಕರಿಷ್ಯತಿ ತಂ ಲೋಕೇ ಕಶ್ಚಿದನ್ಯೋ ಮಹೀಪತಿಃ |
ಯಾಚಕಾಃ ಸರ್ವಕಾಮೈಶ್ಚ ಸತತಂ ತತ್ರಪುರ್ಧನೈಃ ॥4॥
ಧರ್ಮರಾಜನು ಮಹಾತ್ಮರಾದ ಬ್ರಾಹ್ಮಣರಿಗೆ ಸಹಸ್ರಕೋಟಿ ಧನವನ್ನು ದಾನಮಾಡಿದನು ಅಂತಹ ಯಾಗವನ್ನು ಲೋಕದಲ್ಲಿ ಇನ್ನೊಬ್ಬ ಯಾವ ರಾಜನೂ ಮಾಡುವುದಿಲ್ಲ. ಯಾಚಕರೆಲ್ಲರೂ ಧನಗಳಿಂದಲೂ ಮತ್ತು ಎಲ್ಲಾ ಕಾಮಗಳಿಂದಲೂ ಯಾವಾಗಲೂ ತೃಪ್ತರಾದರು.
ತತಶ್ಚಾವಭೃಥಸ್ನಾತಃ ಸ ರಾಜಾ ಪಾಂಡುನಂದನಃ |
ವ್ಯಾಸಂ ಧೌಮ್ಯಂ ಚ ನಿಯತೋ ನಾರದಂ ಚ ಮಹಾಮುನಿಮ್ ॥
ಸುಮಂತುಂ ಜೈಮಿನಿಂ ಪೈಲಂ ವೈಶಂಪಾಯನಮೇವ ಚ |
ಯಾಜ್ಞವಲ್ಕ್ಯಂ ಕಠಂ ಚೈವ ಕಲಾಪಂ ಚ ಮಹೌಜಸಮ್ |
ಸರ್ವಾಂಶ್ಚ ವಿಪ್ರಪ್ರವರಾನ್ ಪೂಜಯಾಮಾಸ ಸತ್ಕೃತಾನ್ ॥6॥
ಅನಂತರ ಪಾಂಡುನಂದನನಾದ ಆ ರಾಜನು ಆವಭೃತಸ್ನಾನವನ್ನು ಮಾಡಿ ನಿಯಮ ಬದ್ಧನಾಗಿ ವ್ಯಾಸರು ಧೌಮ್ಯರು ಮಹರ್ಷಿಗಳಾದ ನಾರದರು ಸುಮಂತು ಜೈಮಿನಿ ಪೈಲ ವೈಶಂಪಾಯನ ಯಾಜ್ಞವಲ್ಕ್ಯ ಕಠ ಮಹಾತೇಜಸ್ವಿಯಾದ ಕಲಾಪ ಮತ್ತು ಎಲ್ಲಾ ಜೇಷ್ಠ ಬ್ರಾಹ್ಮಣರನ್ನೂ ಸತ್ಕರಿಸಿ ಪೂಜಿಸಿದನು.
ಯುಧಿಷ್ಠಿರಃ
ಭೀಮಪ್ರಭಾವಾತ್ ಪ್ರಾಪ್ತೋಽಯಂ ರಾಜಸೂಯೋ ಮಹಾಕ್ರತುಃ|
ಜನಾರ್ದನಪ್ರಭಾವಾಚ್ಚ ಸಂಪೂರ್ಣೋ ಮೇ ಮನೋರಥಃ ॥7॥
ಈ ರಾಜಸೂಯಮಹಾಯಾಗವು ಭೀಮಸೇನನ ಮಹಾಸಾಮರ್ಥ್ಯದಿಂದಲೂ ಕೃಷ್ಣನ ಪ್ರಭಾವದಿಂದಲೂ ಪೂರ್ಣಗೊಂಡು ನನ್ನ ಮನೋರಥವು ಪೂರ್ಣವಾಯಿತು.
ವೈಶಂಪಾಯನಃ
ಅಥ ಯಜ್ಞಂ ಸಮಾಪ್ಯಾಂತೇ ಪೂಜಯಾಮಾಸ ಮಾಧವಮ್ |
ಬಲದೇವಂ ಚ ದೇವೇಶಂ ಭೀಷ್ಮಾದ್ಯಾಂಶ್ಚ ಕುರೂತ್ತಮಾನ್ ॥8॥
ಅನಂತರ ಯಜ್ಞವನ್ನು ಸಮಾಪ್ತಿಗೊಳಿಸಿ ಮಾಧವನನ್ನೂ ದೇವೇಶನಾದ ಬಲರಾಮನನ್ನೂ ಕುರೂತ್ತಮನಾದ ಭೀಷ್ಮನನ್ನೂ ಪೂಜಿಸಿದನು.
ತತಸ್ತ್ವವಭೃಥಸ್ನಾತಂ ಧರ್ಮರಾಜಂ ಯುಧಿಷ್ಠಿರಮ್ |
ಸಮಸ್ತಂ ಪಾರ್ಥಿವಂ ಕ್ಷತ್ರಮುಪಗಮ್ಯೇದಮಬ್ರವೀತ್ ॥9॥
ಆಗ ಅವಭೃಥಸ್ನಾನವನ್ನು ಮಾಡಿದ ಧರ್ಮರಾಜನಾದ ಯುಧಿಷ್ಠಿರನ ಬಳಿಗೆ ಭೂಮಿಯ ಮೇಲೆ ಇರುವ ಸಮಸ್ಥ ಕ್ಷತ್ರಿಯ ಸಮೂಹವು ಬಂದು ಹೀಗೆ ಹೇಳಿತು.
ದಿಷ್ಟ್ಯಾ ವರ್ಧಸಿ ಧರ್ಮಜ್ಞ ಸಾಮ್ರಾಜ್ಯಂ ಪ್ರಾಪ್ತವಾನ್ ವಿಭೋ |
ಆಜಮೀಢಾಜಮೀಢಾನಾಂ ಯಶಃ ಸಂವರ್ಧಿತಂ ತ್ವಯಾ |
ಕರ್ಮಣೈತೇನ ರಾಜೇಂದ್ರ ಧರ್ಮಶ್ಚ ಸುಮಹಾನ್ ವೃತಃ ॥10॥
ಧರ್ಮಜ್ಞನೇ! ದೇವರದಯೆಯಿಂದ ನೀನು ಅಭಿವೃದ್ಧಿಯನ್ನು ಹೊಂದಿದ್ದೀಯೆ ವಿಭುವೇ! ನೀನು ಚಕ್ರವರ್ತಿ ಪದವಿಯನ್ನು ಪಡೆದಿದ್ದೀಯೆ, ಎಲೈ ಅಜಮೀಢನೇ! ನಿನ್ನಿಂದ ಅಜಮೀಢವಂಶದ ಯಶಸ್ಸು ವಿಸ್ತಾರವಾಯಿತು. ರಾಜೇಂದ್ರನೇ! ಈ ಕರ್ಮದಿಂದ ಮಹಾ ಧರ್ಮವನ್ನು ಸಂಪಾಸಿದ್ದೀಯೆ.
ಆಪೃಚ್ಛಾಮೋ ನರವ್ಯಾಘ್ರ ಸರ್ವಕಾಮೈಶ್ಚ ಪೂಜಿತಾಃ |
ಸ್ವರಾಷ್ಟ್ರಾಣಿ ಗಮಿಷ್ಯಾಮಸ್ತದನುಜ್ಞಾತುಮರ್ಹಸಿ ॥11॥
ನರವ್ಯಾಘ್ರನೇ! ನಾವು ಎಲ್ಲಾ ಕಾಮಗಳಿಂದಲೂ ಪೂಜಿಸಲ್ಪಟ್ಟಿದ್ದೇವೆ. ನಿನ್ನ ಅನುಮತಿಯನ್ನು ಕೇಳುತ್ತಿದ್ದೇವೆ. ನಮ್ಮ ನಮ್ಮ

ರಾಷ್ಟ್ರಗಳಿಗೆ ಹೋಗುವೆವು. ಅದಕ್ಕೆ ನೀನು ಅನುಮತಿಯನ್ನು ಕೊಡಬೇಕು.
ವೈಶಂಪಾಯನಃ
ಶ್ರುತ್ವಾ ತು ವಚನಂ ರಾಜ್ಞಾಂ ಧರ್ಮರಾಜೋ ಯುಧಿಷ್ಠಿರಃ|
ಯಥಾರ್ಹಂ ಪೂಜ್ಯ ನೃಪತೀನ್ ಭ್ರಾತೄನ್ ಸರ್ವಾನುವಾಚ ಹ ॥12॥
ರಾಜರ ಮಾತುಗಳನ್ನು ಕೇಳಿದ ಧರ್ಮರಾಜನಾದ ಯುಧಿಷ್ಠಿರನು ಯಥಾಯೋಗ್ಯವಾಗಿ ರಾಜರನ್ನೆಲ್ಲಾ ಸತ್ಕರಿಸಿ ತಮ್ಮ ತಮ್ಮಂದಿರನ್ನು ಕುರಿತು ಹೇಳಿದನು.
ರಾಜಾನಃ ಸರ್ವ ಏವೈತೇ ಪ್ರೀತ್ಯಾಽಸ್ಮಾನ್ ಸಮುಪಾಗತಾಃ|
ಪ್ರಸ್ಥಿತಾಃ ಸ್ವಾನಿ ರಾಷ್ಟ್ರಾಣಿ ಮಾಮಾಪೃಚ್ಛ್ಯ ಪರಂತಪಾಃ
ತೇಽನುವ್ರಜತ ಭದ್ರಂ ವೋ ವಿಷಯಾಂತಂ ನೃಪೋತ್ತಮಾನ್ ॥13॥
ನಮ್ಮ ಮೇಲೆ ಪ್ರೀತಿಯಿಂದ ಬಂದ ಈ ರಾಜರೆಲ್ಲರೂ ನನ್ನ ಅನುಮತಿಯನ್ನು ಪಡೆದು ತಮ್ಮ ತಮ್ಮ ರಾಷ್ಟ್ರಗಳಿಗೆ ಹೊರಟಿದ್ದಾರೆ. ಎಲೈ ಪರಂತಪರೇ! ನಿಮಗೆ ಮಂಗಳವಾಗಲಿ. ನಮ್ಮ ರಾಜಧಾನಿಯು ಮುಗಿಯುವರೆಗೂ ಈ ರಾಜ ಶ್ರೇಷ್ಠರನ್ನು ಹಿಂಬಾಲಿಸಿ ಹೋಗಿ.
ಭ್ರಾತುರ್ವಚನಮಾಜ್ಞಾಯ ಪಾಂಡವಾ ಧರ್ಮಚಾರಿಣಃ|
ಯಥಾರ್ಹಂ ನೃಪಮುಖ್ಯಾಂಶ್ಚ ತದೈಕೈಕಮನುವ್ರಜನ್ ॥14॥
ಅಣ್ಣನ ಮಾತನ್ನು ಕೇಳಿದ ಧರ್ಮಚಾರಿಗಳಾದ ಪಾಂಡವರೆಲ್ಲರೂ ರಾಜರುಗಳಲ್ಲಿ ಮುಖ್ಯರಾದವರನ್ನು ಯಥಾಯೋಗ್ಯವಾಗಿ ಒಬ್ಬೊಬ್ಬರನ್ನು ಒಬ್ಬೊಬ್ಬರು ಅನುಸರಿಸಿ ನಡೆದರು.
ಧನಂಜಯೋ ಜಯತ್ಸೇನಂ ಸಹಾಮಾತ್ಯಂ ಸಬಾಂಧವಮ್|
ಧೃತರಾಷ್ಟ್ರಂ ಚ ಭೀಷ್ಮಂ ಚ ವಿದುರಂ ಚ ಮಹಾಮತಿಮ್ ॥15॥
ಅಮಾತ್ಯರಿಂದಲೂ ಮತ್ತು ಬಂಧುಗಳಿಂದಲೂ ಸಹಿತನಾದ ಜಯತ್ಸೇನ ಧೃತರಾಷ್ಟ್ರ ಭೀಮ ಮಹಾಮತಿಯಾದ ವಿದುರ ಇವರ ಹಿಂದೆ ಧನಂಜಯನು ಹೋದನು.
ಸಂಜಯಂ ಚ ಮಹಾತ್ಮಾನಂ ಭೀಮಸೇನಃ ಪ್ರತಾಪವಾನ್|
ದ್ರೋಣಂ ದ್ರೋಣಾಯನಿಂ ಚೈವ ಸಾಮಾತ್ಯಂ ಸಸುಹೃದ್ಗಣಮ್ ॥16॥
ಪ್ರತಾಪಶಾಲಿಯಾದ ಭೀಮಸೇನನು ಮಹಾತ್ಮನಾದ ಸಂಜಯ, ದ್ರೋಣ, ಮಂತ್ರಿಗಳಿಂದಲೂ ಸುಹೃದ್ಗಣದಿಂದಲೂ ಕೂಡಿದ ಅಶ್ವತ್ಥಾಮ ಇವರನ್ನು ಹಿಂಬಾಲಿಸಿದನು.
ಕೃಪಂ ಚ ಬಾಹ್ಲಿಕಂ ಚೈವ ಸಹದೇವೋ ಮಹಾಮತಿಃ|
ಶಲ್ಯಂ ಚ ಸಸುತಂ ವೀರಂ ಸಾತ್ಯಕಿಃ ಪರವೀರಹಾ ॥17॥
ಮಹಾಮತಿಯಾದ ಸಹದೇವನು ಕೃಪ ಮತ್ತು ಬಾಹ್ಲಿಕರ ಹಿಂದೆ ನಡೆದನು. ಪರವೀರನಾಶಕನಾದ ಸಾತ್ಯಕಿಯು ವೀರನಾದ ಶಲ್ಯನನ್ನು ಮತ್ತು ಅವನ ಮಕ್ಕಳನ್ನು ಹಿಂಬಾಲಿಸಿದನು.
ಭಗದತ್ತಂ ಚ ರಾಜಾನಂ ಕೌಸಲಂ ಚ ಬೃಹದ್ಬಲಮ್|
ವಿರಾಟಂ ಚಾನ್ವಯಾತ್ ತೂರ್ಣಂ ಧೃಷ್ಟದ್ಯುಮ್ನಃ ಪ್ರತಾಪವಾನ್ ॥18॥
ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನು ಭಗದತ್ತರಾಜನನ್ನು ಕೋಸಲರಾಜನಾದ ಬೃಹದ್ಬಲನನ್ನು ಮತ್ತು ವಿರಾಟರಾಜನನ್ನು ಶೀಘ್ರವಾಗಿ ಹಿಂಬಾಲಿಸಿದನು.
ದಾಕ್ಷಿಣಾತ್ಯಾಂಶ್ಚ ಸರ್ವಾಂಶ್ಚ ಹೈಡಿಂಬಃ ಸಮನುವ್ರಜತ್|
ದ್ರೌಪದೇಯಾಃ ಸಸೌಭದ್ರಾಃ ಪಾರ್ವತೇಯಾನ್ ಮಹೀಪತೀನ್ ॥19॥
ಹಿಡಿಂಬೆಯ ಮಗನಾದ ಘಟೋತ್ಕಚನು ದಕ್ಷಿಣದೇಶದ ಎಲ್ಲಾ ರಾಜರನ್ನು ಹಿಂಬಾಲಿಸಿದನು. ಅಭಿಮನ್ಯು ಮತ್ತು ದ್ರೌಪದಿಯ ಮಕ್ಕಳಾದ ಪಂಚಪಾಂಡವರು ಪರ್ವತದೇಶದ ರಾಜರನ್ನು ಹಿಂಬಾಲಿಸಿದರು.
ಅನ್ವಗಚ್ಛಂಸ್ತಥೈವಾನ್ಯಾನ್ ಪಾರ್ಥಿವಾನ್ ಕುರವೋಽಪರೇ|
ಏವಂ ನೃಪಾಃ ಪೂಜಿತಾಸ್ತೇ ಜಗ್ಮುರ್ವಿಪ್ರಾಶ್ಚ ಸರ್ವಶಃ ॥20॥
ಉಳಿದ ಕುರುಗಳು ಹಿಂದೆ ನಡೆದರು ಹೀಗೆ ಎಲ್ಲಾ ರಾಜರು ಮತ್ತು ಬ್ರಾಹ್ಮಣರು ಪೂಜಿಸಲ್ಪಟ್ಟು ತಮ್ಮ ತಮ್ಮ ಸ್ಥಾನಗಳಿಗೆ ಹೊರಟರು.
ಗತೇಷು ಪಾರ್ಥಿವೇಂದ್ರೇಷು ಸರ್ವೇಷು ಭರತರ್ಷಭ|
ಯುಧಿಷ್ಠಿರಃ ಸಹಾಮಾತ್ಯಃ ಪ್ರವಿವೇಶ ಪುರೋತ್ತಮಮ್ ॥21॥
ಎಲೈ ಭರತರ್ಷಭನೇ! ಎಲ್ಲಾ ರಾಜಶ್ರೇಷ್ಠರು ಅಲ್ಲಿಂದ ಹೊರಟ ಮೇಲೆ ಯುಧಿಷ್ಠಿರನು ತನ್ನ ಮಂತ್ರಿಗಳ ಜೊತೆಯಲ್ಲಿ ಶ್ರೇಷ್ಠವಾದ ತನ್ನ ಪಟ್ಟಣವನ್ನು ಪ್ರವೇಶಿಸಿದನು.
ಕೃತಾರ್ಥಂ ಪಾಂಡವಂ ದೃಷ್ಟ್ವಾ ಸಿಂಹಾಸನಗತಂ ನೃಪಮ್|
ರೋಚಮಾನಂ ಮಹೇಂದ್ರಾಭಂ ವಾಸುದೇವೋಽಬ್ರವೀದ್ ಬಲೀ ॥22॥
ಕೃತಾರ್ಥನಾಗಿ ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತು ಮಹೇಂದ್ರನಂತೆ ಕಂಗೊಳಿಸುತ್ತಿರುವ ಧರ್ಮರಾಜನನ್ನು ಕುರಿತು ಬಲಿಷ್ಠನಾದ ವಾಸುದೇವನು ಹೀಗೆ ಮಾತನಾಡಿದನು.
ಆಪೃಚ್ಛೇ ತ್ವಾಂ ಗಮಿಷ್ಯಾಮಿ ದ್ವಾರಕಾಂ ಕುರುನಂದನ|
ರಾಜಸೂಯಂ ಕ್ರತುಶ್ರೇಷ್ಠಂ ದಿಷ್ಟ್ಯಾ ತ್ವಂ ಪ್ರಾಪ್ತವಾನಸಿ ॥23॥
ಎಲೈ ಕುರುನಂದನನೇ! ನಾನು ನಿನ್ನ ಅನುಮತಿಯನ್ನು ಪಡೆದು ದ್ವಾರಕೆಗೆ ಹೋಗುವೆನು. ನೀನು ದೇವರ ದಯೆಯಿಂದ ಶ್ರೇಷ್ಠವಾದ ರಾಜಸೂಯಯಾಗವನ್ನು ಆಚರಿಸಿದ್ದೀಯೆ.

ತಮುವಾಚೈವಮುಕ್ತಸ್ತು ಧರ್ಮರಾಣ್ಮಧುಸೂದನಮ್ |
ತವ ಪ್ರಸಾದಾದ್ ಗೋವಿಂದ ಪ್ರಾಪ್ತವಾನಸ್ಮಿ ವೈ ಕ್ರತುಮ್ ॥24॥
ಸಮಸ್ತಂ ಪಾರ್ಥಿವಂ ಕ್ಷತ್ರಂ ತ್ವತ್ಪ್ರಸಾದಾದ್ ವಶಾನುಗಮ್ |
ಉಪಾದಾಯ ಬಲಿಂ ಮುಖ್ಯಂ ಮಾಮೇವಂ ಸಮುಪಸ್ಥಿತಮ್ ॥25॥
ಹೀಗೆ ಹೇಳಲ್ಪಟ್ಟ ಧರ್ಮರಾಜನು ಮಧುಸೂದನನನ್ನು ಕುರಿತು ಹೀಗೆ ಹೇಳಿದನು. ಗೋವಿಂದನೇ ನಿನ್ನ ಅನುಗ್ರಹದಿಂದಲೇ ನಾನು ಈ ಯಾಗವನ್ನು ನೆರವೇರಿಸಿದ್ದೇನೆ. ನಿನ್ನ ಅನುಗ್ರಹದಿಂದಲೇ ಸಮಸ್ತವಾದ ಕ್ಷತ್ರಿಯ ಕುಲವು ಶ್ರೇಷ್ಠವಾದ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ನನ್ನ ಸಮೀಪಕ್ಕೆ ಬಂದು ನನಗೆ ಅಧೀನವಾಗಿದೆ.
ತೇ ವಯಂ ತ್ವಾಮೃತೇ ವೀರ ನ ರಂಸ್ಯಾಮಃ ಕಥಂಚನ |
ಅವಶ್ಯಂ ಚಾಪಿ ಗಂತವ್ಯಾ ತ್ವಯಾ ದ್ವಾರವತೀ ಪುರೀ ॥26॥
ಎಲೈ ವೀರನೇ! ಅಂತಹ ನಾವು ನೀನಿಲ್ಲದೆ ಎಂದೂ ಸಂತೋಷದಿಂದ ಇರುವುದಿಲ್ಲ. ಆದರೆ ನೀನೂ ಸಹ ಅವಶ್ಯವಾಗಿ ದ್ವಾರವತಿಗೆ ಹೋಗಲೇ ಬೇಕು.
ಏವಮುಕ್ತಸ್ತು ಗೋವಿಂದೋ ಯುಧಿಷ್ಠಿರಸಹಾಯವಾನ್ |
ಅಭಿಗಮ್ಯಾಬ್ರವೀತ್ ಪ್ರೀತಃ ಪೃಥಾಂ ಪೃಥುಯಶಾ ಭುವಿ ॥27॥
ಧರ್ಮರಾಜನು ಹೀಗೆ ಹೇಳುತ್ತಿರಲು ಭೂಮಿಯಲ್ಲಿ ಅಪಾರವಾದ ಕೀರ್ತಿಯನ್ನು ಹೊಂದಿದ್ದ ಗೋವಿಂದನು ಧರ್ಮರಾಜನ ಜೊತೆಯಲ್ಲಿ ಕುಂತಿಯ ಸಮೀಪಕ್ಕೆ ಹೋಗಿ ಹೀಗೆ ಮಾತನಾಡಿದನು.
ಸ್ವಾರಾಜ್ಯಂ ಸಮನುಪ್ರಾಪ್ತಃ ಪುತ್ರಸ್ತೇಽದ್ಯ ಪಿತೃಷ್ವಸಃ |
ಸಿದ್ಧಾರ್ಥಾ ವಸುಮಂತಶ್ಚ ಸಾ ತ್ವಂ ಪ್ರೀತಿಮವಾಪ್ನುಹಿ |
ಅನುಜ್ಞಾತಸ್ತ್ವಯಾ ಚಾಹಂ ದ್ವಾರಕಾಂ ಗಂತುಮುತ್ಸಹೇ ॥28॥
ಎಲೌ ಸೋದರತ್ತೆಯೇ! ಈ ದಿನ ನಿನ್ನ ಮಗನು ಚಕ್ರವರ್ತಿಯ ಪದವಿಯನ್ನು ಪಡೆದಿದ್ದಾನೆ. ನಿನ್ನ ಮಕ್ಕಳೆಲ್ಲರೂ ಕೃತಕೃತ್ಯರೂ ಶ್ರೀಮಂತರೂ ಆಗಿದ್ದಾರೆ. ನೀನು ಸಂತೋಷವನ್ನು ಹೊಂದು. ನಿನ್ನ ಅನುಮತಿಯನ್ನು ಪಡೆದು ನಾನು ದ್ವಾರಕೆಗೆ ಹೋಗಲು ಬಯಸುತ್ತೇನೆ.
ಏವಮುಕಶತ್ವ ತತಃ ಶೌರಿರ್ಭಗಿನೀಂ ವೈ ಪಿತುಸ್ತದಾ |
ಸುಭದ್ರಾಂ ದ್ರೌಪದೀಂ ಚೈವ ಸಭಾಜಯತ ಕೇಶವಃ ॥29॥
ಹೀಗೆ ಹೇಳಿ ಶೌರಿಯಾದ ಕೇಶವನು ತನ್ನ ಸೊದರತ್ತೆಯಾದ ಕುಂತಿಯನ್ನೂ ಸುಭದ್ರೆಯನ್ನೂ ಮತ್ತು ದ್ರೌಪದಿಯನ್ನು ಸತ್ಕರಿಸಿದನು.
ನಿಷ್ಕ್ರಮ್ಯಾಂತಃಪುರಾಚ್ಚೈವ ಯುಧಿಷ್ಠಿರಸಹಾಯವಾನ್ |
ಸ್ನಾತಶ್ಚ ಕೃತಜಪ್ಯಶ್ಚ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಸಃ |
ಯೋಜಯಿತ್ವಾ ಮಹಾಬಾಹುರ್ದಾರುಕಃ ಪ್ರತ್ಯುಪಸ್ಥಿತಃ ॥30॥
ಯುಧಿಷ್ಠಿರನ ಜೊತೆಯಲ್ಲಿ ಅಂತಃಪುರದಿಂದ ಹೊರಗೆ ಬಂದು ಸ್ನಾನವನ್ನು ಮಾಡಿ ಜಪವನ್ನು ಮುಗಿಸಿ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಪಡೆಯುವಷ್ಟರಲ್ಲಿ ಮಹಾಬಾಹುವಾದ ದಾರುಕನು ರಥವನ್ನು ಹೂಡಿ ಸಿದ್ಧನಾದನು.
ಉಪಸ್ಥಿತಂ ರಥಂ ದೃಷ್ಟ್ವಾ ತಾರ್ಕ್ಷ್ಯಪ್ರವರಕೇತನಮ್ |
ಯುಧಿಷ್ಠಿರಕಿರೀಟಿಭ್ಯಾಂ ದತ್ತಹಸ್ತೋ ಯಯೌ ರಥಮ್ ॥31॥
ಗರಡಧ್ವಜವುಳ್ಳ ರಥವು ಸನ್ನದ್ಧವಾಗಿರುವುದನ್ನು ನೋಡಿದ ಕೃಷ್ಣನು ಧರ್ಮರಾಜ ಮತ್ತು ಅರ್ಜುನರಿಂದ ಹಸ್ತಲಾಘವವನ್ನು ಪಡೆದು ರಥದ ಸಮೀಪಕ್ಕೆ ಬಂದನು.
ಪ್ರದಕ್ಷಿಣಮುಪಾವೃತ್ಯ ಸಮಾರುಹ್ಯ ಮಹಾಮನಾಃ |
ದಾರುಕಸ್ಯ ಕರಂ ಗೃಹ್ಯ ತತೋಽಚ್ಚತಳಮಾವಿಶತ್ ॥32॥
ಮಹಾಮನನಾದ ಅವನು ರಥಕ್ಕೆ ಪ್ರದಕ್ಷಿಣೆಯನ್ನು ಮಾಡಿ ದಾರುಕನ ಕೈಯನ್ನು ಹಿಡಿದು ರಥವನ್ನು ಏರಿ ಅಲ್ಲಿ ಉನ್ನತಸ್ಥಾನದಲ್ಲಿ ಕುಳಿತನು.
ಪ್ರತಸ್ಥೇ ಪುಂಡರೀಕಾಕ್ಷಸ್ತತೋ ದ್ವಾರವತೀಂ ಪುರೀಮ್ |
ಸಾತ್ಯಕಿಃ ಕೃತವರ್ಮಾ ಚ ರಥಮಾರುಹ್ಯ ಸತ್ವರೌ |
ವೀಜಯಾಮಾಸುತಸ್ತತ್ರ ಚಾಮರಾಭ್ಯಾಂ ಹರಿಂ ತಥಾ ॥33॥
ಅನಂತರ ಪುಂಡರೀಕಾಕ್ಷನು ದ್ವಾರವತಿಗೆ ಹೊರಟನು. ಸಾತ್ಯಕಿ ಮತ್ತು ಕೃತವರ್ಮರು ಬೇಗ ರಥವನ್ನು ಏರಿ ಇಂದ್ರನಿಗೆ ಬೀಸಿದಂತೆ ಎರಡು ಕಡೆಗಳಿಂದಲೂ ಚಾಮರವನ್ನು ಬೀಸಿದರು.
ಬಲದೇವಶ್ಚ ದೇವೇಶೋ ಯಾದವಾಶ್ಚ ಸಹಸ್ರಶಃ |
ಪ್ರಯಯೂ ರಾಜವತ್ ಸರ್ವೇ ಧರ್ಮಪುತ್ರೇಣ ಪೂಜಿತಾಃ ॥34॥
ದೇವೇಶನಾದ ಬಲರಾಮನು ಮತ್ತು ಸಹಸ್ರಾರು ಯಾದವರು ರಾಜರಂತೆ ಎಲ್ಲರೂ ಧರ್ಮರಾಜನಿಂದ ಪೂಜಿಸಲ್ಪಟ್ಟು ಅಲ್ಲಿಂದ ಹೊರಟರು.
ತತಃ ಸಸಂಭ್ರಮಂ ರಾಜಾ ಹಿತ್ವಾ ಸೌವರ್ಣಮಾಸನಮ್ |
ತತಃ ಪದ್ಭ್ಯಾಮನುಪ್ರಾಪ್ತೋ ಧರ್ಮಪುತ್ರೋ ಯುಧಿಷ್ಠಿರಃ |
ಭ್ರಾತೃಭಿಃ ಸಹಿತಃ ಶ್ರೀಮಾನ್ ವಾಸುದೇವಂ ಮಹಾಬಲಮ್ ॥35॥
ಆಗ ಕಾಂತಿಯುಕ್ತನಾದ ಧರ್ಮಪುತ್ರನಾದ ಧರ್ಮರಾಜನು ತನ್ನ ಸುವರ್ಣಾಸನವನ್ನು ಮತ್ತು ಉಳಿದ ವೈಭವಗಳನ್ನು ಬೇಗ ಬಿಟ್ಟು

ತಮ್ಮಂದಿರ ಜೊತೆಯಲ್ಲಿ ಕಾಲ್ನಡಿಗೆಯಲ್ಲೇ ಮಹಾಬಲನಾದ ವಾಸುದೇವನನ್ನು ಹಿಂಬಾಲಿಸಿದನು.
ತತೋ ಮುಹೂರ್ತಂ ಸಂಗೃಹ್ಯ ಸ್ಯಂದನಪ್ರವರಂ ಹರಿಃ |
ಅಬ್ರವೀತ್ ಪುಂಡರೀಕಾಕ್ಷಃ ಕುಂತೀಪುತ್ರಂ ಯುಧಿಷ್ಠಿರಮ್ ॥36॥
ಆಗ ಪುಂಡರೀಕಾಕ್ಷನಾದ ಹರಿಯು ಒಂದು ಮುಹೂರ್ತಕಾಲ ರಥವನ್ನು ನಿಲ್ಲಿಸಿ ಕುಂತಿ ಪುತ್ರನಾದ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿದನು.
ಅಪ್ರಮತ್ತಃ ಸ್ಥಿತೋ ನಿತ್ಯಂ ಪ್ರಜಾಃ ಪಾಹಿ ಮಹಾಮತೇ |
ಪರ್ಜನ್ಯಮಿವ ಭೂತಾನಿ ಮಹಾದ್ರುಮಮಿವಾಂಡಜಾಃ |
ಬಾಂಧವಾಸ್ತ್ವೋಪಜೀವಂತು ಸಹಸ್ರಾಕ್ಷಮಿವಾಮರಾಃ ॥37॥
ಮಹಾಮತಿಯೇ! ಯಾವಾಗಲೂ ಎಚ್ಚರಿಕೆಯಿಂದಿದ್ದು ಪ್ರಜೆಗಳನ್ನು ರಕ್ಷಿಸು. ಎಲ್ಲಾ ಜೀವರು ಪರ್ಜನ್ಯನನ್ನು ಆಶ್ರಯಿಸಿದಂತೆ ಪಕ್ಷಿಗಳು ಮಹಾವೃಕ್ಷವನ್ನು ಆಶ್ರಯಿಸಿದಂತೆ ದೇವತೆಗಳು ಇಂದ್ರನನ್ನು ಆಶ್ರಯಿಸಿದಂತೆ ನಿನ್ನ ಎಲ್ಲಾ ಬಂಧುಗಳು ನಿನ್ನನ್ನು ಆಶ್ರಯಿಸಲಿ.
ವೈಶಂಪಾಯನಃ
ಕೃತ್ವಾ ಪರಸ್ಪರೇಣೈವಂ ಸಂವಿದಂ ಕೃಷ್ಣಪಾಂಡವೌ |
ಅನ್ಯೋನ್ಯಂ ಸಮನುಜ್ಞಾಪ್ಯ ಜಗ್ಮತುಃ ಸ್ವಗೃಹಾನ್ ಪ್ರತಿ ॥38॥
ಹೀಗೆ ಪರಸ್ಪರವಾಗಿ ಸಂಭಾಷಣೆಯನ್ನು ಮಾಡಿ ಕೃಷ್ಣ ಮತ್ತು ಧರ್ಮರಾಜರು ಪರಸ್ಪರ ಅನುಮತಿಯನ್ನು ಪಡೆದು ತಮ್ಮ ತಮ್ಮ ಮನೆಗಳಿಗೆ ಹೊರಟರು.
ಪುನರ್ದ್ವಾರವತೀಂ ಕೃಷ್ಣಃ ಸಾತ್ವತಪ್ರವರೋ ನೃಪ |
ಯುಧಿಷ್ಠಿರೋ ಮಹಾರಾಜಃ ಪ್ರವಿವೇಶ ಪುರಂ ಸ್ವಕಮ್ ॥39॥
ಎಲೈ ರಾಜನೇ! ಸಾತ್ವತಪ್ರವರನಾದ ಕೃಷ್ಣನು ಪುನಃ ದ್ವಾರಾವತಿಗೆ ಹೊರಟನು. ಯುಧಿಷ್ಠಿರಮಹಾರಾಜನು ತನ್ನ ಪಟ್ಟಣವನ್ನು ಪ್ರವೇಶಿಸಿದನು.
ದುರ್ಯೋಧನೋ ಮಹಾರಾಜ ಶಕುನಿಶ್ಚಾಪಿ ಸೌಬಲಃ |
ಸೂತಪುತ್ರಶ್ಚ ರಾಧೇಯಃ ಸಹ ದುಶ್ಶಾಸನಾದಿಭಿಃ ॥40॥
ಸರ್ವಕಾಮಗುಣೋಪೇತೈರರ್ಚ್ಯಮಾನಾಸ್ತು ಭಾರತ |
ಸಭಾಯಾಂ ರಮಣೀಯಾಯಾಮವಸಂಸ್ತತ್ರ ಪಾಂಡವೈಃ ॥41॥
ಮಹಾರಾಜನೇ! ದುರ್ಯೋಧನ ಸುಬಲಪುತ್ರನಾದ ಶಕುನಿ ಸೂತಪುತ್ರನಾದ ಕರ್ಣ ಇವರು ದುಶ್ಶಾಸನಾದಿಗಳ ಜೊತೆಯಲ್ಲಿ ಧರ್ಮರಾಜನಿಂದ ಎಲ್ಲಾ ರೀತಿಯಲ್ಲಿಯೂ ಪೂಜಿಸಲ್ಪಟ್ಟು ಆ ರಮಣೀಯವಾದ ಸಭೆಯಲ್ಲಿ ಪಾಂಡವರ ಜೊತೆಯಲ್ಲಿ ಸ್ವಲ್ಪಕಾಲ ವಾಸವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟಷಷ್ಟಿತಮೋಧ್ಯಾಯಃ ॥
॥ ಶಿಶುಪಾಲವಧಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ತೆಂಟನೆಯ ಅಧ್ಯಾಯವು ಮುಗಿಯಿತು.
ಇಲ್ಲಿಗೆ ಶಿಶುಪಾಲವಧಪರ್ವವು ಮುಗಿಯಿತು.
*****
7. ದ್ಯೂತಪರ್ವ
ಅರವತ್ತೊಂಭತ್ತನೆಯ ಅಧ್ಯಾಯ
(ವ್ಯಾಸರ ಮುಖದಿಂದ ಅಪಶಕುನಗಳ ಫಲವನ್ನು ಕೇಳಿದ ಧರ್ಮರಾಜನ ಸಂಕಲ್ಪ.)
ವೈಶಂಪಾಯನಃ
ಅನುಸಂಸಾದ್ಯ ನೃಪತೀನ್ ಪಾಂಡವಾಃ ಪಾಂಡವಾಗ್ರಜಮ್ |
ಅನುಜಗ್ಮುರ್ಮಹೇಷ್ವಾಸಾ ಧರ್ಮರಾಜಂ ಯುಧಿಷ್ಠಿರಮ್ ॥1॥
ರಾಜರನ್ನು ಕಳುಹಿಸಿಕೊಟ್ಟು ಮಹಾಧನುರ್ಧಾರಿಗಳಾದ ಪಾಂಡವರು ತಮ್ಮ ಅಣ್ಣನಾದ ಧರ್ಮರಾಜನಾದ ಯುಧಿಷ್ಠಿರನನ್ನು ಹಿಂಬಾಲಿಸಿದರು.
ಸೋಽನುಮೇನೇ ಮಹಾಬಾಹುರ್ಭ್ರಾತೄಂಶ್ಚ ಸುಹೃದಸ್ತಥಾ |
ಶಿಷ್ಯೈಃ ಪರಿವೃತೋ ವ್ಯಾಸಃ ಪುರಸ್ತಾತ್ ಸಮಪದ್ಯತ ॥2॥
ಮಹಾಬಾಹುವಾದ ಧರ್ಮನು ತಮ್ಮಂದಿರನ್ನೂ ಮತ್ತು ಸ್ನೇಹಿತರನ್ನೂ ಅನುಮೋದಿಸಿದನು. ಅಷ್ಟರಲ್ಲಿ ಶಿಷ್ಯರಿ/ಂದ ಪರಿವೃತರಾದ ವ್ಯಾಸರು ಎದುರಿಗೆ ಬಂದರು.
ಸೋಭ್ಯುತ್ಥಾಯಾಸನಾತ್ ತೂರ್ಣಂ ಭ್ರಾತೃಭಿಃ ಪರಿವಾರಿತಃ |
ಪಾದ್ಯೇನಾಸನದಾನೇನ ಪಿತಾಮಹಮಪೂಜಯತ್ ॥3॥
ಸಹೋದರರಿಂದ ಸುತ್ತುವರಿಯಲ್ಪಟ್ಟ ಅವನು ಬೇಗ ತನ್ನ ಆಸನದಿಂದ ಎದ್ದು ಪಾದ್ಯವನ್ನೂ ಆಸನವನ್ನೂ ಕೊಟ್ಟು ಪಿತಾಮಹರನ್ನು ಪೂಜಿಸಿದನು.
ಅಥೋಪವಿಶ್ಯ ಭಗವಾನ್ ಕಾಂಚನೇ ಪರಮಾಸನೇ |

ಆಸ್ಯತಾಮಿತಿ ಚೋವಾಚ ಧರ್ಮರಾಜಂ ಯುಧಿಷ್ಠಿರಮ್ ॥4॥
ಅನಂತರ ಪೂಜ್ಯರಾದ ವ್ಯಾಸರು ಸುವರ್ಣಮಯವಾದ ಶ್ರೇಷ್ಠವಾದ ಆಸನದಲ್ಲಿ ಕುಳಿತು ಧರ್ಮರಾಜನನ್ನು ಉದ್ದೇಶಿಸಿ ಪ್ರೀತಿಪೂರ್ವಕವಾಗಿ ಹೇಳಿದರು.
ಅಥೋಪವಿಷ್ಟಂ ರಾಜಾನಂ ಭ್ರಾತೃಭಿಃ ಪರಿವಾರಿತಮ್ ।
ಉವಾಚ ಭಗವಾನ್ ವ್ಯಾಸಸ್ತತ್ರದ್ವಾಕ್ಯವಿಶಾರದಃ ॥5॥
ಅನಂತರ ವಾಕ್ಯವಿಶಾರದರಾದ ವ್ಯಾಸರು ತಮ್ಮಂದಿರ ಜೊತೆಯಲ್ಲಿ ಕುಳಿತಿದ್ದ ಧರ್ಮರಾಜನನ್ನು ಕುರಿತು ಹೀಗೆ ಮಾತನಾಡಿದರು.
ಕೌಂತೇಯ ವರ್ಧಸೇ ದಿಷ್ಟ್ಯಾ ಸಾಮ್ರಾಜ್ಯಂ ಪ್ರಾಪ್ಯ ದುರ್ಲಭಮ್ ।
ಪಾಲಿತಾಃ ಕುರವಃ ಸರ್ವೇ ತ್ವಯಾ ಕುರುಕುಲೋದ್ವಹ ।
ಆಪೃಚ್ಛೇ ತ್ವಾಂ ಗಮಿಷ್ಯಾಮಿ ಪೂಜಿತೋಸ್ಮಿ ವಿಶಾಂಪತೇ ॥6॥
ಕೌಂತೇಯನೇ! ದೇವರ ದಯೆಯಿಂದ ದುರ್ಲಭವಾದ ಸಾಮ್ರಾಜ್ಯವನ್ನು ಪಡೆದು ನೀನು ಅಭಿವೃದ್ಧಿಯನ್ನು ಹೊಂದಿದ್ದೀಯೆ ಕುರುಕುಲೋದ್ಭವನೇ! ನಿನ್ನಿಂದ ಎಲ್ಲಾ ಕುರುಗಳೂ ರಕ್ಷಿಸಲ್ಪಟ್ಟಿದ್ದಾರೆ. ರಾಜನೇ! ನೀನು ನನಗೆ ಪೂಜೆಯನ್ನು ಸಲ್ಲಿಸಿದ್ದೀಯೆ. ಹೊರಡಲು ನಿನ್ನ ಸಮ್ಮತಿಯನ್ನು ಕೇಳುತ್ತಿದ್ದೇನೆ.
ಏವಮುಕ್ತಸ್ತು ಕೃಷ್ಣೇನ ಧರ್ಮರಾಜೋ ಯುಧಿಷ್ಠಿರಃ ।
ಅಭಿವಾದ್ಯೋಪಸಂಗೃಹ್ಯ ಪಿತಾಮಹಮಥಾಬ್ರವೀತ್ ॥7॥
ಹೀಗೆ ವ್ಯಾಸರಿಂದ ಹೇಳಲ್ಪಟ್ಟ ಧರ್ಮರಾಜನಾದ ಯುಧಿಷ್ಠಿರನು ಅವರಿಗೆ ನಮಸ್ಕರಿಸಿ ಸಮೀಪಕ್ಕೆ ಬಂದು ಪಿತಾಮಹರಾದ ಅವರನ್ನು ಕುರಿತು ಮಾತನಾಡಿದನು.
ಸಂಶಯೋ ದ್ವಿಪದಾಂ ಶ್ರೇಷ್ಠ ಮಮೋತ್ಪನ್ನಃ ಸುದುರ್ವಚಃ ।
ತಸ್ಯೇಹ ನಾನ್ಯೋ ವಕ್ತಾಸ್ತಿ ತ್ವಾಮೃತೇ ದ್ವಿಜಪುಂಗವ ॥8॥
ಜ್ಞಾನಿಶ್ರೇಷ್ಠರಾದ ವ್ಯಾಸರೇ! ನನಗೆ ಉತ್ತರಕೊಡಲು ದುಸ್ಸಾಧ್ಯವಾದ ಒಂದು ಸಂಶಯವು ಉಂಟಾಗಿದೆ. ದ್ವಿಜಪುಂಗವರೇ! ನಿಮ್ಮನ್ನು ಬಿಟ್ಟು ಅದಕ್ಕೆ ಪರಿಹಾರವನ್ನು ಹೇಳುವವರು ಯಾರೂ ಇಲ್ಲ.
ಉತ್ಪಾತಾಂಸ್ತ್ರಿವಿಧಾನಾಹ ನಾರದೋ ಭಗವಾನೃಷಿಃ ।
ದಿವ್ಯಾಂಶ್ಚೈವಾಂತರಿಕ್ಷಾಂಶ್ಚ ಪಾರ್ಥಿವಾಂಶ್ಚ ಪಿತಾಮಹ ॥9॥
ಪಿತಾಮಹರೇ! ಪೂಜ್ಯರಾದ ನಾರದಋಷಿಗಳು ದಿವ್ಯ ಆಂತರಿಕ್ಷ ಮತ್ತು ಪಾರ್ಥಿವ ಎಂಬ ಮೂರು ವಿಧವಾದ ಉತ್ಪಾತಗಳನ್ನು ಹೇಳಿದರು.
ಸುಮಹಚ್ಚ ಫಲಂ ತೇಷಾಂ ಭವಿತೇತಿ ನ ಸಂಶಯಃ ।
ಅಪಿ ಚೈದ್ಯಸ್ಯ ಪತನಾಚ್ಛಾಂತಮೌತ್ಪಾತಿಕಂ ಭವೇತ್ ॥10॥
ರಾಜ್ಞಸ್ತದ್ವಚನಂ ಶ್ರುತ್ವಾ ಪರಾಶರಸುತಃ ಪ್ರಭುಃ ।
ಕೃಷ್ಣದ್ವೈಪಾಯನೋ ವ್ಯಾಸ ಇದಂ ವಚನಮಬ್ರವೀತ್ ॥11॥
ಅವುಗಳಿಗೆ ನಿಸ್ಸಂಶಯವಾಗಿ ಮಹಾಫಲವು ಉಂಟಾಗುವುದೆಂದು ತಿಳಿಸಿದರು. ಉಂಟಾದ ಅಪಶಕುನಗಳೆಲ್ಲವೂ ಶಿಶುಪಾಲನ ವಧೆಯಿಂದ ಶಾಂತವಾಗಿವೆಯಷ್ಟೇ? ರಾಜನೇ! ಆ ಮಾತುಗಳನ್ನು ಕೇಳಿದ ಪರಾಶರರ ಪುತ್ರರಾದ ಕೃಷ್ಣ ದ್ವೈಪಾಯನರಾದ ವ್ಯಾಸರು ಈ ಮಾತುಗಳನ್ನು ಆಡಿದರು.
ಚತುರ್ದಶ ಸಮಾ ರಾಜನ್ನುತ್ಪಾತಾನಾಂ ಮಹತ್ ಫಲಮ್ ।
ಸರ್ವಕ್ಷತ್ರವಿನಾಶಾಯ ಭವಿಷ್ಯತಿ ವಿಶಾಂಪತೇ ॥12॥
ಎಲೈ ರಾಜನೇ! ಈ ಉತ್ಪಾತಗಳ ಫಲವು ಹದಿನಾಲ್ಕು ವರ್ಷಗಳ ಕಾಲ ಉಂಟಾಗುತ್ತದೆ. ಅದರಿಂದ ಸರ್ವಕ್ಷತ್ರಿಯರ ವಿನಾಶವು ಉಂಟಾಗುತ್ತದೆ.
ತ್ವಾಮೇವ ಕಾರಣಂ ಕೃತ್ವಾ ಕಾಲೇನ ಭರತರ್ಷಭ ।
ಸಮೇತಂ ಪಾರ್ಥಿವಂ ಕ್ಷತ್ರಂ ಕ್ಷಯಂ ಯಾಸ್ಯತಿ ಪಾಂಡವ ।
ದುರ್ಯೋಧನಾಪರಾಧೇನ ಭೀಮಾರ್ಜುನಬಲೇನ ಚ ॥13॥
ಎಲೈ ಭರತಶ್ರೇಷ್ಠನಾದ ಪಾಂಡವನೇ! ನಿನ್ನನ್ನೇ ನಿಮಿತ್ತವಾಗಿ ಮಾಡಿಕೊಂಡು ಎಲ್ಲಾ ಕ್ಷತ್ರಿಯರೂ ಒಟ್ಟಿಗೆ ಸೇರಿ ದುರ್ಯೋಧನನ ಅಪರಾಧದಿಂದಲೂ ಭೀಮಾರ್ಜುನರ ಬಲದಿಂದ ನಾಶವನ್ನು ಹೊಂದುವರು.
ಸ್ವಪ್ನಂ ದ್ರಕ್ಷ್ಯಸಿ ರಾಜೇಂದ್ರ ತಸ್ಮಿನ್ ಕಾಲ ಉಪಸ್ಥಿತೇ ।
ತತ್ ತೇಹಂ ಸಂಪ್ರವಕ್ಷ್ಯಾಮಿ ತನ್ನಿಬೋಧ ಯುಧಿಷ್ಠಿರ ॥14॥
ಯುಧಿಷ್ಠಿರನೇ! ಆ ಕಾಲವು ಪ್ರಾಪ್ತವಾದಾಗ ನೀನು ಒಂದು ಸ್ವಪ್ನವನ್ನು ನೋಡುವಿ. ನಾನು ಅದನ್ನು ನಿನಗೆ ಹೇಳುವೆನು.
ಯದಾ ದ್ರಕ್ಷ್ಯಸಿ ರಾಜೇಂದ್ರ ಕ್ಷಪಾಂತೇ ಗೋವೃಷಧ್ವಜಮ್ ।
ನೀಲಕಂಠಂ ಭವಂ ಸ್ಥಾಣುಂ ತ್ರಿಪುರಾಂತಕರಂ ಹರಮ್ ॥15॥
ಉಗ್ರಂ ರುದ್ರಂ ಪಶುಪತಿಂ ಮಹಾದೇವಮುಮಾಪತಿಮ್ ।
ಶಿವಂ ಶರ್ವಂ ಭವಂ ಶೂಲಿಂ ಪಿನಾಕಿಂ ಕೃತ್ತಿವಾಸಸಮ್ ॥16॥
ಕೈಲಾಸಕೂಟಪ್ರತಿಮೇ ವೃಷಭೇ ನಿಷ್ಠಿತಂ ಶಿವಮ್ ।
ನಿರೀಕ್ಷಮಾಣಂ ಸತತಂ ಪಿತೃರಾಜಾಶ್ರಿತಾಂ ದಿಶಮ್ ॥17॥
ಯದ್ಯೈವಮೀದೃಶಂ ಸ್ವಪ್ನಂ ದೃಷ್ಟ್ವಾ ಹ್ಯಸಿ ವಿಶಾಂಪತೇ ।

ಮಾ ಚ ತೇಭೂದ್ ವ್ಯಥಾ ರಾಜನ್ ಕಾಲೋ ಹಿ ದುರತಿಕ್ರಮಃ ॥18॥
ರಾಜೇಂದ್ರನೇ! ಬೆಳಗಿನ ಜಾವದ ವೇಳೆಯಲ್ಲಿ ಸ್ವಪ್ನದಲ್ಲಿ ನೀಲಕಂಠನೂ ಭವನೂ ಸ್ಥಾಣುವೂ ತ್ರಿಪುರಸಂಹಾರಕನೂ ಹರನೂ ಉಗ್ರನೂ ರುದ್ರನೂ ಪಶುಪತಿಯೂ ಮಹಾದೇವನೂ ಶಿವನೂ ಶರ್ವನೂ ಭವನೂ ಶೂಲಿಯೂ ಪಿನಾಕಿಯೂ ಕೃತ್ತಿವಾಸನೂ ಕೈಲಾಸವಾಸಿಯೂ ಆದ ಉಮಾಪತಿಯು ದಕ್ಷಿಣದಿಕ್ಕನ್ನು ನೋಡುತ್ತಾ ಪ್ರಯಾಣಮಾಡುವುದನ್ನು ಕಾಣುತ್ತೀಯೆ ರಾಜನೇ! ನೀನು ಯಾವಾಗ ಇಂತಹ ಸ್ವಪ್ನವನ್ನು ನೋಡುವೆಯೋ ಆಗ ಮನಸ್ಸಿನಲ್ಲಿ ವ್ಯಥೆಪಡಬೇಡ. ರಾಜನೇ ಕಾಲವನ್ನು ಯಾರೂ ಮೀರಲಾರರಷ್ಟೇ.
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಕೈಲಾಸಂ ಪರ್ವತಂ ಪ್ರತಿ |
ಅಪ್ರಮತ್ತಃ ಸ್ಥಿತೋ ದಾಂತಃ ಪೃಥಿವೀಂ ಪರಿಪಾಲಯ ॥19॥
ನಿನಗೆ ಮಂಗಳವಾಗಲೀ. ನಾನು ಕೈಲಾಸಪರ್ವತಕ್ಕೆ ಹೋಗುವೆನು. ಇಂದ್ರಿಯ ನಿಗ್ರಹವುಳ್ಳವನಾಗಿ ಎಚ್ಚರಿಕೆಯಿಂದ ಭೂಮಿಯನ್ನು ರಕ್ಷಿಸು.
ಏವಮುಕತ್ವ ತು ಭಗವಾನ್ ಕೈಲಾಸಂ ಪರ್ವತಂ ಯಯೌ |
ಕೃಷ್ಣದ್ವೈಪಾಯನೋ ವ್ಯಾಸಃ ಸಹ ಶಿಷ್ಯೈಃ ಸಹಾನುಗಃ ॥20॥
ಹೀಗೆ ಹೇಳಿ ಪೂಜ್ಯರಾದ ಕೃಷ್ಣದ್ವೈಪಾಯನರಾದ ವ್ಯಾಸರು ಶಿಷ್ಯರ ಮತ್ತು ಅನುಚರರ ಜೊತೆಯಲ್ಲಿ ಕೈಲಾಸ ಪರ್ವತಕ್ಕೆ ಹೋದರು.
ಗತೇ ಪಿತಾಮಹೇ ರಾಜಾ ಚಿಂತಾಶೋಕಸಮನ್ವಿತಃ |
ನಿಃಶ್ವಸನ್ನುಷ್ಣಮಸಕೃತ್ ತಮೇವಾರ್ಥಂ ವ್ಯಚಿಂತಯತ್ ॥21॥
ಪಿತಾಮಹರಾದ ವ್ಯಾಸರು ಹೊರಟುಹೋದಮೇಲೆ ರಾಜನು ಚಿಂತಾಶೋಕಸಮನ್ವಿತನಾಗಿ ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ ಅದೇ ವಿಷಯವನ್ನು ಚಿಂತಿಸಿದನು.
ಕಥಂ ನು ದೈವಂ ಶಕ್ಯೇತ ಪೌರುಷೇಣ ಪ್ರಬಾಧಿತುಮ್ |
ಅವಶ್ಯಮೇವ ಭವಿತಾ ಯದುಕ್ತಂ ಪರಮರ್ಷಿಣಾ ॥22॥
ಪುರುಷ ಪ್ರಯತ್ನದಿಂದ ದೈವನಿಯಮವನ್ನು ಬಾಧಿಸಲು ಹೇಗೆ ಸಾಧ್ಯ? ಪರಮರ್ಷಿಗಳಾದ ವ್ಯಾಸರು ಏನು ಹೇಳಿದರೋ ಅವೆಲ್ಲವೂ ಅವಶ್ಯವಾಗಿ ನಡೆದೇ ತೀರುತ್ತವೆ.
ತತೋಽಬ್ರವೀನ್ಮಹಾತೇಜಾಃ ಸರ್ವಾನ್ ಭ್ರಾತೄನ್ ಯುಧಿಷ್ಠಿರಃ |
ಶ್ರುತಂ ವೈ ಪುರುಷವ್ಯಾಘ್ರಾ ಯಥಾ ದ್ವೈಪಾಯನೋಬ್ರವೀತ್ ॥23॥
ಅನಂತರ ಮಹಾತೇಜಸ್ವಿಯಾದ ಯುಧಿಷ್ಠಿರನು ತನ್ನ ಎಲ್ಲಾ ತಮ್ಮಂದಿರನ್ನೂ ಕುರಿತು ಪುರುಷವ್ಯಾಘ್ರರೇ! ದ್ವೈಪಾಯನರು ಹೇಳಿದ ಮಾತುಗಳನ್ನು ನೀವೆಲ್ಲರೂ ಕೇಳಿದ್ದೀರಷ್ಟೇ ಎಂದು ಹೇಳಿದನು.
ತಸ್ಯ ತದ್ವಚನಂ ಶ್ರುತ್ವಾ ಮರಣೇ ನಿಶ್ಚಿತಾ ಮತಿಃ |
ಸರ್ವಕ್ಷತ್ರಸ್ಯ ನಿಧನೇ ಯದ್ಯಹಂ ಹೇತುರೀಪ್ಸಿತಃ ॥24॥
ಕಾಲೇನ ನಿರ್ಮಿತಸ್ತಾತಾಃ ಕೋ ಮಮಾರ್ಥೋಸ್ತಿ ಜೀವತಃ |
ಏವಂ ಬ್ರುವಂತಂ ರಾಜಾನಂ ಫಲ್ಗುನಃ ಪ್ರತ್ಯಭಾಷತ ॥25॥
ಅವರ ಆ ಮಾತನ್ನು ಕೇಳಿ ನನಗೆ ಮರಣವನ್ನು ಹೊಂದಬೇಕು ಎಂಬ ನಿಶ್ಚಯ ಉಂಟಾಯಿತು. ಎಲ್ಲಾ ಕ್ಷತ್ರಿಯ ವಿನಾಶಕ್ಕೆ ನಾನು ಕಾರಣನೆಂದು ದೈವನಿಯತಿ ಇದ್ದರೆ, ನಾನು ಬದುಕಿರುವುದರಲ್ಲಿ ಏನು ಪ್ರಯೋಜನ? ಹೀಗೆ ರಾಜನು ಮಾತನಾಡುತ್ತಿರಲು ಅರ್ಜುನನು ಉತ್ತರವನ್ನು ನೀಡಿದನು.
ಮಾ ರಾಜನ್ ಕಶ್ಮಲಂ ಘೋರಂ ಪ್ರವಿಶೇದ್ ಬುದ್ಧಿನಾಶನಮ್ |
ಸಂಪ್ರಧಾರ್ಯ ಮಹಾರಾಜ ಯತ್ ಕ್ಷಮಂ ತತ್ ಸಮಾಚರ ॥26॥
ರಾಜನೇ! ಘೋರವಾದ ವಿವೇಕವನ್ನು ನಾಶಮಾಡುವ ಬುದ್ಧಿಯ ಕಾಲುಷ್ಯವನ್ನು ಹೊಂದಬೇಡ. ಮಹಾರಾಜನೇ! ಈ ಸಂದರ್ಭದಲ್ಲಿ ಏನುಮಾಡುವುದು ಸೂಕ್ತವೆಂದು ನಿರ್ಧರಿಸಿ ಅದರಂತೆ ಮಾಡು.
ತತೋಬ್ರವೀತ್ ಸತ್ಯಧೃತಿರ್ಭ್ರಾತೄನ್ ಸರ್ವಾನ್ ಯುಧಿಷ್ಠಿರಃ |
ದ್ವೈಪಾಯನಸ್ಯ ವಚನಂ ತತ್ರೈವ ಸಮಚಿಂತಯನ್ ॥27॥
ಆಗ ಸತ್ಯವಂತನೂ ಧೈರ್ಯಶಾಲಿಯೂ ಆದ ಯುಧಿಷ್ಠಿರನು ದ್ವೈಪಾಯನರ ಮಾತುಗಳನ್ನೇ ಸ್ಮರಿಸುತ್ತಾ ತನ್ನ ಎಲ್ಲಾ ತಮ್ಮಂದಿರನ್ನು ಕುರಿತು ಹೇಳಿದನು.
ಅದ್ಯಪ್ರಭೃತಿ ಭದ್ರಂ ವಃ ಪ್ರತಿಜ್ಞಾಂ ಮೇ ನಿಬೋಧತ |
ಚತುರ್ದಶಸಮಾಸ್ತಾತಾಃ ಕೋ ಮಮಾರ್ಥೋಽಸ್ತಿ ಜೀವತಃ ॥28॥
ನಿಮಗೆಲ್ಲರಿಗೂ ಮಂಗಳವಾಗಲಿ ಇಂದಿನಿಂದ ನನ್ನ ಪ್ರತಿಜ್ಞೆಯನ್ನು ನೀವು ಗಮನದಲ್ಲಿ ಇಡಿ. ಇನ್ನು ಹದಿನಾಲ್ಕು ವರ್ಷ ನಾನು ಬದುಕಿರುವುದರಲ್ಲಿ ಏನು ಪ್ರಯೋಜನವಿದೆ?
ನ ಪ್ರವಕ್ಷ್ಯಾಮಿ ಪರುಷಾನ್ ಭಾತೄನನ್ಯಾಂಶ್ಚ ಪಾರ್ಥಿವಾನ್ |
ಸ್ಥಿತೋ ನಿದೇಶೇ ಜ್ಞಾತೀನಾಂ ಯೋಕ್ಷ್ಯೇ ತತ್ಸಮುದಾಹರನ್ ॥29॥
ತಮ್ಮಂದಿರಿಗಾಗಲೀ ಅಥವಾ ಬೇರೆ ರಾಜರಿಗಾಗಲೀ ನಾನು ಯಾವ ಒರಟಾದ ಮಾತನ್ನೂ ಆಡುವುದಿಲ್ಲ. ಬಾಂಧವರ ನಿದೇಶವನ್ನು ಪಾಲಿಸುತ್ತಾ ಅವರು ಹೇಳಿದಂತೆ ನಡೆದು ಕೊಳ್ಳುವೆನು.
ಏವಂ ಮೇ ವರ್ತಮಾನಸ್ಯ ಸ್ವಕೀಯೇಷ್ವಿತರೇಷು ಚ |
ಭೇದೋ ನ ಭವಿತಾ ಲೋಕೇ ಭೇದಮೂಲೋ ಹಿ ವಿಗ್ರಹಃ ॥30॥

ನಾನು ಸ್ವಕೀಯರ ವಿಷಯದಲ್ಲೂ ಮತ್ತು ಇತರರ ವಿಷಯದಲ್ಲೂ ಹೀಗೆ ನಡೆದುಕೊಂಡರೆ ವಿರೋಧವು ಉಂಟಾಗುವುದಿಲ್ಲ. ಲೋಕದಲ್ಲಿ ವಿರೋಧವೇ ಕಲಹಕ್ಕೆ ಮೂಲವಾಗಿದೆ.
ವಿಗ್ರಹಂ ದೂರತೋ ರಕ್ಷನ್ ಪ್ರಿಯಾಣ್ಯೇವ ಸಮಾಚರನ್ |
ವಾಚ್ಯತಾಂ ನ ಗಮಿಷ್ಯಾಮಿ ಲೋಕೇಷು ಮನುಜರ್ಷಭಾಃ ॥31॥
ಎಲೈ ಮನುಜಶ್ರೇಷ್ಠರೇ! ನಾನು ವಿರೋಧವನ್ನು ದೂರದಲ್ಲಿಯೇ ಪರಿಹರಿಸಿ ಎಲ್ಲರಿಗೂ ಪ್ರಿಯವನ್ನೇ ಆಚರಿಸುತ್ತಾ ಎಂದೂ ನಿಂದನೀಯನಾಗುವುದಿಲ್ಲ.
ಭ್ರಾತುರ್ಜ್ಯೇಷ್ಠಸ್ಯ ವಚನಂ ಪಾಂಡವಾಃ ಸನ್ನಿಶಮ್ಯ ತತ್ |
ತಮೇವ ಸಮವರ್ತಂತ ಧರ್ಮರಾಜಹಿತೇ ರತಾಃ ॥32॥
ಅಣ್ಣನ ಮಾತುಗಳನ್ನು ಕೇಳಿದ ಪಾಂಡವರು ಧರ್ಮರಾಜನ ಹಿತದಲ್ಲಿ ರತರಾಗಿ ಅವನ ಮಾತಿನಂತೆಯೇ ನಡೆದು ಕೊಂಡರು.
ಸಂಸತ್ಸು ಸಮಯಂ ಕೃತ್ವಾ ಧರ್ಮರಾಡ್ ಭ್ರಾತೃಭಿಃ ಸಹ |
ಪಿತೄಂಸ್ತರ್ಪ್ಯ ಯಥಾನ್ಯಾಯಂ ದೇವತಾಶ್ಚ ವಿಶಾಂಪತೇ ॥33॥
ವೈಶಂಪಾಯನಃ
ಕೃತಮಂಗಲಕಲ್ಯಾಣೋ ಭ್ರಾತೃಭಿಃ ಪರಿವಾರಿತಃ |
ಗತೇಷು ಕ್ಷತ್ರಿಯೇಂದ್ರೇಷು ಸರ್ವೇಷು ಭರತರ್ಷಭ |
ಯುಧಿಷ್ಠಿರಃ ಸಹಾಮಾತ್ಯಃ ಪ್ರವಿವೇಶ ಪುರೋತ್ತಮಮ್ ॥34॥
ಎಲೈ ರಾಜನೇ! ಧರ್ಮರಾಜನು ಸಭೆಯಲ್ಲಿ ತಮ್ಮಂದಿರ ಜೊತೆಯಲ್ಲಿ ಹೀಗೆ ಪ್ರತಿಜ್ಞೆಯನ್ನುಮಾಡಿ ವಿಧಿಪೂರ್ವಕವಾಗಿ ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನು ಕೊಟ್ಟು ಯಥೋಚಿತವಾದ ಮಂಗಳಗಳನ್ನು ಆಚರಿಸಿಕೊಂಡು ತಮ್ಮಂದಿರಿಂದಲೂ ಆಮಾತ್ಯರಿಂದಲೂ ಪರಿವೃತನಾಗಿ ಎಲ್ಲಾ ಕ್ಷತ್ರಿಯರು ಹೊರಟು ಹೋದಮೇಲೆ ತನ್ನ ಪಟ್ಟಣಕ್ಕೆ ಹಿಂತಿರುಗಿದನು.
ದುರ್ಯೋಧನೋ ಮಹಾರಾಜ ಶಕುನಿಶ್ಚಾಪಿ ಸೌಬಲಃ |
ಸಭಾಯಾಂ ರಮಣೀಯಾಯಾಂ ತತ್ರೈವಾಸ್ತಾಂ ನರಾಧಿಪ ॥35॥
ಎಲೈ ಮಹಾರಾಜನೇ! ದುರ್ಯೋಧನನೂ ಸುಬಲ ಪುತ್ರನಾದ ಶಕುನಿಯೂ ಆ ಮನೋಹರವಾದ ಸಭೆಯಲ್ಲಿ ಅಲ್ಲಿಯೇ ಇದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ
ಅರವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಗತೇಷು ಸರ್ವರಾಜಸು ಸ್ವಕಾಂ ಪುರಂ ಸ್ವಕೇಷು ಚ |
ಸಭೀಷ್ಮಕೇಷು ಸರ್ವಶಃ ಸಹಾಂಬಿಕೇಯಕೇಷು ಚ ॥271॥
ವಿಚಿತ್ರರತ್ನನಿರ್ಮಿತೇ ರವಿಪ್ರಭೇ ಸಭಾತಳೇ |
ಸಕೇಶವೋ ವರಾಸನೇ ವಿವೇಶ ಧರ್ಮನಂದನಃ ॥272॥
ಎಲ್ಲ ರಾಜರು ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದಾಗ ಭೀಷ್ಮ ಧೃತರಾಷ್ಟ್ರರೊಂದಿಗೆ ತಮ್ಮವರೆಲ್ಲರೂ ಹಸ್ತಿನಾವತಿಗೆ ಹೊರಟು ಹೋದಾಗ ಧರ್ಮರಾಜ ವಿಚಿತ್ರರತ್ನ ನಿರ್ಮಿತವಾದ ಸೂರ್ಯನಂತೆ ಬೆಳಗುವ ಸಭಾಂಗಣದಲ್ಲಿ ಕೃಷ್ಣನೊಂದಿಗೆ ಕುಳಿತ.
ತಥೈವ ರುಗ್ಮಿಣೀಮುಖಾಃ ಪರಿಗ್ರಹಾ ರಮೇಶಿತುಃ |
ತಥೈವ ಭೀಮಫಲ್ಗುನಾವುಪಾವಿಶನ್ ಹರೇರುಪ ॥273॥
ಸಹೈವ ವಾಯುಸೂನುನಾ ತಥೈವ ಪಾರ್ಷತಾತ್ಮಜಾ |
ಉಪೈವ ರುಗ್ಮಿಣೀಂ ಶುಭಾ ತಥೈವ ಸತ್ಯಭಾಮಿನೀಂ ॥274॥
ರುಕ್ಮಿಣಿ ಮೊದಲಾದ ಕೃಷ್ಣಪತ್ನಿಯರೂ ಭೀಮಾರ್ಜುನರೂ ಕೃಷ್ಣ ಸಮೀಪದಲ್ಲಿ ಕುಳಿತರು. ಭೀಮನೊಂದಿಗೆ ದ್ರೌಪದಿ ರುಕ್ಮಿಣೀಸತ್ಯಭಾಮೆಯರ ಸಮೀಪದಲ್ಲಿ ಕುಳಿತಳು.
ಯಮೌ ಚ ಪಾರ್ಷತಾದಯೋ ಧನಂಜಯಾಂತಿಕೇಽವಿಶನ್ |
ತಥೈವ ರಾಮಸಾತ್ಯಕೀ ಸಮೀಪ ಏವ ಭೂಭೃತಃ ॥275॥
ಸಮಾಸತಾಂ ತು ಸಾ ಸಭಾ ವ್ಯರೋಚತಾಧಿಕಂ ತದಾ |
ಯಥಾ ಸಭಾ ಸ್ವಯಂಭುವಃ ಸಮಾಸ್ಥಿತಾ ಚ ವಿಷ್ಣುನಾ ॥276॥
ನಕುಲ ಸಹದೇವರೂ ಧೃಷ್ಟದ್ಯುಮ್ನಾದಿಗಳೂ ಅರ್ಜುನನ ಬಳಿಯಲ್ಲಿ ಕುಳಿತರು. ಬಲರಾಮ ಸಾತ್ಯಕಿಗಳು ಧರ್ಮರಾಜನ ಬಳಿ ಕುಳಿತರು. ಆ ಸಭೆ ವಿಷ್ಣುವಿನಿಂದ ಅಲಂಕೃತವಾದ ಬ್ರಹ್ಮನ ಸಭೆಯಂತೆ ಬಹಳ ಶೋಭಿಸಿತು.
ವಿಚಿತ್ರಹೇಮಮಾಲಿನಃ ಶುಭಾಂಬರಾಶ್ಚ ತೇಽಧಿಕಂ |
ಸ್ಫುರತ್ಕಿರೀಟಕುಂಡಲಾ ವಿರೇಜುರತ್ರ ತೇ ನೃಪಾಃ ॥277॥
ಶುಭವಸ್ತ್ರಗಳನ್ನು ಉಟ್ಟು ಹೊಳೆವ ಕಿರೀಟ ಕುಂಡಲಗಳನ್ನೂ ವಿಚಿತ್ರ ಸುವರ್ಣ ಮಾಲೆಗಳನ್ನೂ ಧರಿಸಿದ್ದ ರಾಜರು ಅಲ್ಲಿ ಶೋಭಿಸಿದರು.
ವಿಶೇಷತೋ ಜನಾರ್ದನಃ ಸಭಾರ್ಯಕೋ ಜಗತ್ಪ್ರಭುಃ |

ಯಥಾ ದಿವೌಕಸಾಂ ಸದಸ್ಯನಂತಸದ್ಗುಣಾರ್ಣವಃ ॥278॥
ದೇವತೆಗಳ ಸಭೆಯಲ್ಲಿ ಅನಂತ ಸದ್ಗುಣ ಸಮುದ್ರನಾದ ಜಗದೊಡೆಯನಾದ ವಿಷ್ಣುವಿನಂತೆ ಈ ಸಭೆಯಲ್ಲಿ ವಿಶೇಷವಾಗಿ ಶ್ರೀಕೃಷ್ಣ ಸಪತ್ನೀಕನಾಗಿ ಶೋಭಿಸಿದ.
ಉಪಾಸಿರೇ ಚ ತಾನ್ ನೃಪಾಃ ಸಮಸ್ತಶಃ ಸುಹೃದ್ಗಣಾಃ |
ತದಾ ಜಗಾಮ ಖಡ್ಗಭೃತ್ ಸಹಾನುಜಃ ಸುಯೋಧನಃ ॥279॥
ಎಲ್ಲ ರಾಜರೂ ಸ್ನೇಹಿತರ ಸಮೂಹಗಳೂ ಕೃಷ್ಣನನ್ನು ಆರಾಧಿಸಿದರು. ಅದೇ ಕಾಲದಲ್ಲಿ ಅಲ್ಲಿಗೆ ಖಡ್ಗಧಾರಿಯಾದ ದುರ್ಯೋಧನ ತಮ್ಮನೊಂದಿಗೆ ಬಂದ.
ದ್ವಾರಂ ಸಭಾಯಾ ಹರಿನೀಲರಶ್ಮಿ-
ವ್ಯೂಢಂ ನ ಜಾನನ್ ಸ ವಿಹಾಯ ಭಿತ್ತಿಂ |
ಅಭ್ಯಂತರಾಣಾಂ ದೃಶಿ ನೋ ವಿಘಾತಿನೀಂ
ಸಂ ಸ್ಫಾಟಿಕಾಮಾಶು ದೃಢಂ ಚುಚುಂಬೇ ॥280॥
ಸಭಾಂಗಣ ದ್ವಾರ ಇಂದ್ರ ನೀಲಮಣಿ ಪ್ರಕಾಶದಿಂದ ಆಚ್ಛಾದಿತವಾಗಿದ್ದುದರಿಂದ ತಿಳಿಯದೆ ಅದನ್ನು ಬಿಟ್ಟು ಒಳಗಿರುವವರು ಹೊರಗೆ ಕಾಣುವಂತೆ ಪಾರದರ್ಶಕನಾಗಿದ್ದ ಸ್ಫಟಿಕದ ಗೋಡೆಗೆ ಗಟ್ಟಿಯಾಗಿ ಮುಖವನ್ನು ತಾಗಿಸಿಕೊಂಡ.
ಪ್ರವೇಶಯೇತಾಂ ಚ ಯಮೌ ತಮಾಶು
ಸಭಾಂ ಭುಜೌ ಗೃಹ್ಯ ನೃಪೋಪದಿಷ್ಟೌ |
ತತ್ರೋಪವಿಶ್ಯ ಕ್ಷಣಮನ್ಯತೋಽಗಾ-
ದಮೃಷ್ಯಮಾಣಃ ಶ್ರಿಯಮೇಷು ದಿವ್ಯಾಂ ॥281॥
ಧರ್ಮರಾಜನ ಆಜ್ಞೆಯಂತೆ ನಕುಲ ಸಹದೇವರು ಬೇಗನೆ ಬಂದು ದುರ್ಯೋಧನನ ಕೈಗಳನ್ನು ಹಿಡಿದು `ಇದು ಬಾಗಿಲು, ಇದು ಬಾಗಿಲು' ಎಂದು ಹೇಳುತ್ತ ಸಭಾಂಗಣದೊಳಗೆ ಕರೆತಂದು ಕುಳ್ಳಿರಿಸಿದರು. ಅಲ್ಲಿ ಆತ ಒಂದು ಕ್ಷಣ ಕುಳಿತು ಪಾಂಡವರಲ್ಲಿರುವ ಆ ದಿವ್ಯ ಸಂಪತ್ತನ್ನು ನೋಡಿ ಸಹಿಸಲಾಗದೆ ಬೇರೆ ಕಡೆಗೆ ನಡೆದ.
ತತೇಂದ್ರನೀಲಭುವಿ ರತ್ನಮಯಾನಿ ದೃಷ್ಟ್ವಾ
ಪದ್ಮಾನಿ ನೀರಮನಸಾ ಜಗೃಹೇ ಸ್ವವಸ್ತ್ರಂ |
ರತ್ನೋರುದೀಧಿತಿನಿಗೂಢಜಲಂ ಸ್ಥಲಂ ಚ
ಮತ್ವಾ ಪಪಾತ ಸಹಿತೋಽವರಜೈರ್ಜಲೌ ॥282॥
ದುರ್ಯೋಧನ ಅಲ್ಲಿ ಇಂದ್ರ ನೀಲಮಣಿಯ ನೆಲದಲ್ಲಿ ರತ್ನಮಯವಾದ ಪದ್ಮಗಳನ್ನು ಕಂಡು ನೀರೆಂಬ ಭ್ರಾಂತಿಯಿಂದ ಉಟ್ಟಬಟ್ಟೆಯನ್ನು ಮೇಲೆತ್ತಿಕೊಂಡ. ರತ್ನಗಳ ಮಹಾಪ್ರಕಾಶದಿಂದ ಆಚ್ಛಾದಿತವಾದ ನೀರನ್ನು ನೆಲವೆಂದು ಭ್ರಮಿಸಿ ತಮ್ಮಂದಿರೊಂದಿಗೆ ಆಳವಾದ ಆ ನೀರಲ್ಲಿ ಬಿದ್ದ.
ತಂ ಪ್ರಾಹಸದ್ ಭಗವತಾ ಕ್ಷಿತಿಭಾರನಾಶ-
ಹೇತೋಃ ಸುಸೂಚಿತ ಉರುಸ್ವರತೋಽತ್ರ ಭೀಮಃ |
ಪಾಂಚಾಲರಾಜಸುತಯಾ ಚ ಸಮಂ ತಥಾನ್ಯೈಃ
ಸ್ತ್ರೀಯೈಸ್ತಥಾನು ಜಹಸುರ್ಭಗವನ್ಮಹಿಷ್ಯಃ ॥283॥
ಭೂ ಭಾರ ನಾಶಕ್ಕಾಗಿ ಭಗವಾನ್ ಶ್ರೀಕೃಷ್ಣ ನಗಲು ಸನ್ನೆ ಮಾಡಿದ್ದನು ತಿಳಿದ ಭೀಮ ದೊಡ್ಡ ಧ್ವನಿಯಿಂದ ನಕ್ಕುಬಿಟ್ಟ. ಜೊತೆಗೆ ದ್ರೌಪದಿಯೂ ನಕ್ಕಳು. ಧೃಷ್ಟದ್ಯುಮ್ನ ಮುಂತಾದ ಇತರ ಬಂಧುಗಳೂ ಕೃಷ್ಣನ ಪತ್ನಿಯರೂ ನಕ್ಕರು.
ಮಂದಸ್ಮಿತೇನ ವಿಲಸದ್ವದನೇಂದುಬಿಂಬೋ
ನಾರಾಯಣಸ್ತು ಮುಖವೀಕ್ಷ್ಯ ಮರುತ್ಸುತಸ್ಯ |
ನೋವಾಚ ಕಿಂಚಿದಥ ಧರ್ಮಸುತೋ ನಿವಾರ್ಯ
ಪ್ರಾಸ್ಥಾಪಯದ್ ವಸನಮಾಲ್ಯವಿಲೇಪನಾನಿ ॥284॥
ಹೊಳೆಯುವ ಚಂದ್ರನಂಥ ಮುಖವುಳ್ಳ ಶ್ರೀಕೃಷ್ಣ ಮುಗುಳು ನಗುನಗುತ್ತ ಭೀಮ ಮುಖ ನೋಡಿದ. ಏನೂ ಹೇಳಲಿಲ್ಲ. ಧರ್ಮರಾಜ ಎಲ್ಲರನ್ನೂ ತಡೆದ, ನಗಬೇಡಿರಿ ಎಂದ. ದುರ್ಯೋಧನ ಮುಂತಾದವರಿಗೆ ಬಟ್ಟೆ ಹೂಮಾಲೆ ಗಂಧಗಳನ್ನು ಕಳಿಸಿಕೊಟ್ಟ.
ಕೃಷ್ಣಾವೃಕೋದರಗತಂ ಬಹಳಂ ನಿಧಾಯ
ಕ್ರೋಧಂ ಯಯೌ ಸಶಕುನಿರ್ಧೃತರಾಷ್ಟ್ರಪುತ್ರಃ |
ಸಂವ್ರೀಳಿತೋ ನೃಪತಿದತ್ತವರಾಂಬರಾದೀನ್
ನ್ಯಕೃತ್ಯ ಮಾರ್ಗಗತ ಆಹ ಸ ಮಾತುಲಂ ಸ್ವಂ ॥285॥
ದುರ್ಯೋಧನ ಶಕುನಿಗಳು ನಾಚಿ ಧರ್ಮರಾಜ ಕಳಿಸಿಕೊಟ್ಟ ಒಳ್ಳೆಯ ಬಟ್ಟೆ ಮುಂತಾದುವನ್ನು ತಿರಸ್ಕರಿಸಿ ದ್ರೌಪದೀಭೀಮರ ಬಗ್ಗೆ ಹೆಚ್ಚಿನ ಕ್ರೋಧವನ್ನು ಮನಸ್ಸಿನಲ್ಲಿಟ್ಟುಕೊಂಡು ಹಸ್ತಿನಾವತಿಗೆ ಹೊರಟು ಹೋದರು. ದಾರಿಯಲ್ಲಿ ದುರ್ಯೋಧನ ಶಕುನಿಗೆ ಹೇಳಿದ.
ಯೌ ಮಾಮಹಸತಾಂ ಕೃಷ್ಣಾಭೀಮೌ ಕೃಷ್ಣಸ್ಯ ಸನ್ನಿಧೌ |
ತಯೋರಕೃತ್ವಾ ಸಂತಾಪಂ ನಾಹಂ ಜೀವಿತುಮುತ್ಸಹೇ ॥286॥
`ಕೃಷ್ಣನ ಇದಿರಿನಲ್ಲಿ ದ್ರೌಪದಿ ಭೀಮರು ನನ್ನನ್ನು ನೋಡಿ ಹಾಸ್ಯ ಮಾಡಿದರು. ಅವರಿಗೆ ಸಂತಾಪ ಉಂಟುಮಾಡದೆ ನಾನು ಬದುಕಿರಲಾರೆ'.
ಯದಿ ಮೇ ಶಕ್ತಿರತ್ರ ಸ್ಯಾದ್ ಘಾತಯೇಯಂ ವೃಕೋದರಂ |

ಅಗ್ರಪೂಜಾಂ ಚ ಕೃಷ್ಣಸ್ಯ ವಿಲುಂಪೇಯಂ ನ ಸಂಶಯಃ ॥287॥
ನನಗೆ ಶಕ್ತಿ ಇರುತ್ತಿದ್ದರೆ ಆಗಲೆ ಭೀಮನನ್ನು ಕೊಲ್ಲುತ್ತಿದ್ದೆ. ಕೃಷ್ಣನಿಗೆ ಅಗ್ರಪೂಜೆಯಾಗುವುದನ್ನೂ ತಪ್ಪಿಸುತ್ತಿದ್ದೆ. ಇದರಲ್ಲಿ ಸಂಶಯವಿಲ್ಲ.
ಈದೃಶಂ ಪಾಂಡವೈಶ್ವರ್ಯಂ ದೃಷ್ಟ್ವಾ ಕೋ ನಾಮ ಜೀವಿತಂ |
ಇಚ್ಛೇತ ಕರದಾ ಯೇಷಾಂ ವೈಶ್ಯವತ್ ಸರ್ವಭೂಮಿಪಾಃ ॥288॥
ಪಾಂಡವರಿಗೆ ಎಲ್ಲ ರಾಜರೂ ವೈಶ್ಯರಂತೆ ಕರ ನೀಡುತ್ತಿದ್ದಾರೆ. ಅವರ ಈ ಐಶ್ವರ್ಯವನ್ನು ಕಂಡು ಯಾರು ತಾನೆ ಬದುಕಿರಲು ಬಯಸಿಯಾನು?
ಇತ್ಯುಕ್ತಃ ಶಕುನಿರ್ವೈರಂ ದೃಢೀಕರ್ತುಂ ವಚೋಽಬ್ರವೀತ್ |
ಕಿಂ ತೇ ವೈರೇಣ ರಾಜೇಂದ್ರ ಬಲಿಭಿರ್ಭ್ರಾತೃಭಿಃ ಪುನಃ ॥289॥
ದುರ್ಯೋಧನ ಹೀಗೆ ಹೇಳಿದಾಗ ಶಕುನಿ ಅವನ ದ್ವೇಷಭಾವನೆಯನ್ನು ಇನ್ನಷ್ಟು ದೃಢಪಡಿಸಲು ಹೇಳಿದ- `ಮಹಾರಾಜ, ನಿನ್ನ ಸೋದರರು ಬಲಶಾಲಿಗಳು. ಅವರೊಡನೆ ವೈರ ಮಾಡಿ ಏನು ಪ್ರಯೋಜನ?'
ಅನುಜೀವಸ್ವ ತಾನ್ ವೀರಾನ್ ಗುಣಜ್ಯೇಷ್ಠಾನ್ ಬಲಾಧಿಕಾನ್ |
ಇತೀರಿತೋಽತಿಸಂವೃದ್ಧಕೋಪ ಆಹ ಸುಯೋಧನಃ ॥290॥
ಪಾಂಡವರು ಗುಣದಲ್ಲಿಯೂ ಮೇಲು ಬಲದಲ್ಲಿಯೂ ಮೇಲು. ವೀರರಾದ ಅವರನ್ನು ಅನುಸರಿಸಿ ಬದುಕಿರು' ಶಕುನಿ ಹೀಗೆ ಹೇಳಿದಾಗ ದುರ್ಯೋಧನ ಅತಿಯಾಗಿ ಕೆರಳಿದ. ಕೋಪದಿಂದ ನುಡಿದ.
ಯದಿ ತೇಷಾಂ ತದೈಶ್ವರ್ಯಂ ನ ಮಾಂ ಗಚ್ಛೇದಶೇಷತಃ |
ಸರ್ವಥಾ ನೈವ ಜೀವೇಯಮಿತಿ ಸತ್ಯಂ ಬ್ರವೀಮಿ ತೇ ॥291॥
`ಪಾಂಡವರ ಆ ಸಂಪತ್ತು ಪೂರ್ತಿಯಾಗಿ ನನ್ನ ವಶಕ್ಕೆ ಬಾರದಿದ್ದಲ್ಲಿ ನಾನು ಸರ್ವಥಾ ಬದುಕಿರಲಾರೆ. ನಾನು ನಿನಗೆ ನಿಜವನ್ನೇ ಹೇಳುತ್ತಿದ್ದೇನೆ'.
ನ ಚ ಬಾಹುಬಲಾಚ್ಛಕ್ಯ ಆದಾತುಂ ತಾಂ ಶ್ರಿಯಂ ಕ್ವಚಿತ್ |
ನೇಂದ್ರೋಽಪಿ ಸಮರೇ ಶಕ್ತಸ್ತಾನ್ ಜೇತುಂ ಕಿಮು ಮಾನುಷಾಃ ॥
`ಬಾಹುಬಲದಿಂದ ಆ ಸಂಪತ್ತನ್ನು ಕಸಿಯಲು ಎಂದೂ ಶಕ್ಯವಿಲ್ಲ. ಇಂದ್ರನೂ ಯುದ್ಧದಲ್ಲಿ ಅವರನ್ನು ಗೆಲ್ಲಲಾರ. ಇನ್ನು ಮನುಷ್ಯರ ಬಗ್ಗೆ ಏನು ಹೇಳಬೇಕು?'
ಇತೀರಿತಃ ಪಾಪತಮ ಆಹ ಗಾಂಧಾರಕೋ ನೃಪಃ |
ಪಾಪಾನಾಮಖಿಲಾನಾಂ ಚ ಪ್ರಧಾನಂ ಚಕ್ರವರ್ತಿನಾಂ ॥293॥
ದುರ್ಯೋಧನ ಹೀಗೆ ಹೇಳಿದಾಗ ಪಾಪಿ ಚಕ್ರವರ್ತಿಗಳೆಲ್ಲರಲ್ಲಿ ಮುಖ್ಯನಾದ ಆ ದುರ್ಯೋಧನನಿಗೆ ಮಹಾಪಾಪಿಯಾದ ಗಾಂಧಾರರಾಜ ಶಕುನಿ ನುಡಿದ.
ಯಾಂತಾಂ ಶ್ರಿಯಂ ಪ್ರದೀಪ್ತಾಂ ತ್ವಂ ಪಾಂಡವೇಷು ಪ್ರಪಶ್ಯಸಿ |
ತಾಮಕ್ಲೇಶತ ಆದಾಸ್ಯೇ ಕ್ರೀಡನ್ನಕ್ಷೈಸ್ತ್ವದಂತಿಕೇ ॥294॥
`ಯಾವ ಯಾವ ಸಂಪತ್ತು ಪಾಂಡವರಲ್ಲಿ ಬೆಳಗುವುದನ್ನು ನೀನು ಕಾಣುತ್ತಿರುವೆಯೋ ಅದನ್ನು ನಾನು ಕ್ಲೇಶವಿಲ್ಲದೆ ಜೂಜಾಡುತ್ತಲೇ ನಿನ್ನ ಬಳಿಗೆ ಸೆಳೆದು ತರುವೆನು'.
ಇತೀರಿತಃ ಪ್ರಸನ್ನಧೀಃ ಸುಯೋಧನೋ ಬಭೂವ ಹ |
ಪ್ರಜಗ್ಮತುಶ್ಚ ತಾವುಭೌ ವಿಚಿತ್ರವೀರ್ಯಜಂ ನೃಪಂ ॥295॥
ಶಕುನಿ ಹೀಗೆ ಹೇಳಿದಾಗ ದುರ್ಯೋಧನನ ಮನಸ್ಸು ಪ್ರಸನ್ನವಾಯಿತು. ಅವರಿಬ್ಬರೂ ರಾಜಾ ಧೃತರಾಷ್ಟ್ರನ ಬಳಿಗೆ ಹೋದರು.
* * * *
ಎಪ್ಪತ್ತನೆಯ ಅಧ್ಯಾಯ
(ಸಭೆಯಲ್ಲಿ ದುರ್ಯೋಧನ ಹೊಂದಿದ ದುರವಸ್ಥೆ, ದ್ರೌಪದಿ ಮೊದಲಾದವರ ಹಾಸ್ಯ, ದುರ್ಯೋಧನನ ಅಸೂಯೆ ಮತ್ತು ಶಕುನಿಯ ದುರ್ಮಂತ್ರಣ.)
ವೈಶಂಪಾಯನಃ
ವಸನ್ ದುರ್ಯೋಧನಸ್ತಸ್ಯಾಂ ಸಭಾಯಾಂ ಭರತರ್ಷಭ |
ಶನೈರ್ದದರ್ಶ ತಾಂ ಸರ್ವಾಂ ಸಭಾಂ ಶಕುನಿನಾ ಸಹ ॥1॥
ಭರತರ್ಷಭನೇ! ದುರ್ಯೋಧನನು ಆ ಸಭೆಯಲ್ಲಿ ವಾಸಮಾಡುತ್ತಾ ಶಕುನಿಯ ಜೊತೆಯಲ್ಲಿ ನಿಧಾನವಾಗಿ ಆ ಸಭೆಯನ್ನೆಲ್ಲಾ ನೋಡಿದನು.
ತಸ್ಯಾಂ ದಿವ್ಯಾನಭಿಪ್ರಾಯಾನ್ ದದರ್ಶ ಕುರುನಂದನಃ |
ಅದೃಷ್ಟಪೂರ್ವಾ ಯೇ ತೇನ ನಗರೇ ನಾಗಸಾಹ್ವಯೇ ॥2॥
ಕುರುನಂದನನಾದ ಅವನು ಹಸ್ತಿನಾವತಿಯಲ್ಲಿ ನೋಡದಿದ್ದ ದಿವ್ಯವಾದ ಸನ್ನಿವೇಶಗಳನ್ನು ಆ ಸಭೆಯಲ್ಲಿ ನೋಡಿದನು.
ಸ ಕದಾಚಿತ್ ಸಭಾಮಧ್ಯೇ ಧಾರ್ತರಾಷ್ಟ್ರೋ ಮಹೀಪತಿಃ |
ಸ್ಫಾಟಿಕಂ ಸ್ಥಲಮಾಸಾದ್ಯ ಜಲಮಿತ್ಯಭಿಶಂಕಯಾ ॥3॥
ಸ್ವವಸ್ತ್ರೋತ್ಕರ್ಷಣಂ ರಾಜನ್ ಕೃತವಾನ್ ಬುದ್ಧಿಮೋಹಿತಃ |
ದುರ್ಮನಾ ವಿಮುಖಶ್ಚಾಪಿ ಪರಿಚಕ್ರಾಮ ತಾಂ ಸಭಾಮ್ ॥4॥

ಒಮ್ಮೆ ಆ ಸಭಾಮಧ್ಯದಲ್ಲಿ ರಾಜನಾದ ದುರ್ಯೋಧನನು ಸ್ಪಟಿಕಮಯವಾದ ಭೂಮಿಯನ್ನು ನೋಡಿ ಜಲವೆಂದು ತಿಳಿದು ಬುದ್ಧಿ ಮೋಹಿತನಾಗಿ ತನ್ನ ವಸ್ತ್ರಗಳನ್ನು ಮೇಲೆತ್ತಿ ಕೊಂಡನು. ರಾಜನೇ! ಅವನು ಬೇಸರಗೊಂಡು ಹಾಗೆಯೇ ಅವಮಾನಗೊಂಡು ಆ ಸಭೆಯಲ್ಲಿ ಪುನಃ ತಿರುಗಾಡಿದನು.
ತತ್ರ ಸ್ಫಾಟಿಕತೋಯಾಂ ವೈ ಸ್ಫಾಟಿಕಾಂಬುಜಶೋಭಿತಾಮ್ |
ವಾಪೀಂ ಮತ್ವಾ ಸ್ಥಲಮಿತಿ ಸವಾಸಾಃ ಪ್ರಾಪತಜ್ಜಲೇ ॥5॥
ಅಲ್ಲಿ ಸ್ಪಟಿಕದಂತೆ ಶುದ್ಧವಾದ ಜಲವುಳ್ಳ ಮತ್ತು ಸ್ಪಟಿಕಮಯವಾದ ಕಮಲಗಳಿಂದ ಶೋಭಿತವಾದ ಭಾವಿಯನ್ನು ನೆಲವೆಂದು ತಿಳಿದು ವಸ್ತ್ರ ಸಹಿತನಾಗಿ ನೀರಿನಲ್ಲಿ ಬಿದ್ದನು.
ಜಲೇ ನಿಪತಿತಂ ದೃಷ್ಟ್ವಾ ಕಿಂಕರಾ ಜಹಸುರ್ಭೃಶಮ್ |
ತಸ್ಯ ಚಾನ್ಯಾನಿ ವಾಸಾಂಸಿ ಪ್ರದದೂ ರಾಜಶಾಸನಾತ್ ॥6॥
ನೀರಿನಲ್ಲಿ ಬಿದ್ದ ಅವನನ್ನು ನೋಡಿ ಧರ್ಮರಾಜನ ಕಿಂಕರರು ಗಟ್ಟಿಯಾಗಿ ನಕ್ಕರು. ಮತ್ತು ರಾಜಶಾಸನದಂತೆ ಅವನಿಗೆ ಬೇರೆ ವಸ್ತ್ರಗಳನ್ನು ತಂದು ಕೊಟ್ಟರು.
ತಂ ವೈ ತಥಾಗತಂ ತತ್ರ ದ್ರೌಪದೀ ಭೀಮ ಏವ ಚ |
ಅರ್ಜುನಶ್ಚ ಯಮೌ ಸರ್ವೇ ದೃಷ್ಟ್ವಾ ಚ ಪ್ರಾಹಸಂಸ್ತದಾ ॥7॥
ಆ ಅವಸ್ಥೆಯಲ್ಲಿದ್ದ ಅವನನ್ನು ನೋಡಿ ಆಗ ದ್ರೌಪದಿಯೂ ಭೀಮಸೇನನೂ ಅರ್ಜುನನೂ ಮತ್ತು ನಕುಲ ಸಹದೇವರು ಎಲ್ಲರೂ ನಕ್ಕರು.
ನಾಮರ್ಷಯತ್ ತತಸ್ತೇಷಾಮಪಹಾಸಮಮರ್ಷಣಃ |
ಆಕಾರಂ ರಕ್ಷಮಾಣಸ್ತು ನ ಸ ತಾನ್ ಸಮುದೈಕ್ಷತ ॥8॥
ಕ್ರೋಧಶೀಲನಾದ ದುರ್ಯೋಧನನು ಅವರು ಮಾಡಿದ ಅಪಹಾಸವನ್ನು ಸಹಿಸಲಿಲ್ಲ. ತನ್ನ ಅಸಮಾಧಾನವನ್ನು ತೋರಗೊಡದೆ ಅವನು ಆವರ ಕಡೆಗೆ ನೋಡದೆ ಮುಂದೆ ನಡೆದನು.
ಪುನರ್ವಸನಮುತ್ಕ್ಷಿಪ್ಯ ಪ್ರತರಿಷ್ಯನ್ನಿವ ಸ್ಥಲಮ್ |
ಆರುರೋಹ ತತಃ ಸರ್ವೇ ಜಹಸುಶ್ಚ ಪುನರ್ಜನಾಃ ॥9॥
ಪುನಃ ವಸ್ತ್ರವನ್ನು ಮೇಲೆತ್ತಿಕೊಂಡು ನೀರನ್ನು ದಾಟುವವಂತೆ ನೆಲವನ್ನು ಹತ್ತಿದನು. ಅದನ್ನು ನೋಡಿ ಪುನಃ ಎಲ್ಲರೂ ನಕ್ಕರು.
ದ್ವಾರಂ ಚ ಪಿಹಿತಾಕಾರಂ ಸ್ಫಾಟಿಕಂ ಪ್ರೇಕ್ಷ್ಯ ಭೂಮಿಪಃ |
ಪ್ರವಿಶನ್ನಾಹತೋ ಮೂರ್ಧ್ನಿ ವ್ಯಾಘೂರ್ಣಿತ ಇವ ಸ್ಥಿತಃ ॥10॥
ರಾಜನಾದ ಅವನು ಸ್ಪಟಿಕಮಯವಾದ ಮುಚ್ಚಿದ ಬಾಗಿಲನ್ನು (ತೆರೆದಿದೆ ಎಂದು ತಿಳಿದು ಪ್ರವೇಶಿಸುತ್ತಾ) ತಲೆಯಿಂದ ಡಿಕ್ಕಿಯನ್ನು ಹೊಡೆದು ಅಲ್ಲೋಲ ಕಲ್ಲೋಲವಾಗಿ ನಿಂತನು.
ತದ್ ವೃತ್ತಮಪರಂ ದ್ವಾರಂ ಸ್ಫಾಟಿಕೋರುಕವಾಟಕಮ್ |
ವಿಘಟ್ಟಯನ್ ಕರಾಭ್ಯಾಂ ತು ನಿಷ್ಕ್ರಮ್ಯಾಗ್ರೇ ಪಪಾತ ಹ ॥11॥
ಸ್ಪಟಿಕ ಕವಾಟವಿದ್ದ ಇನ್ನೊಂದು ವೃತ್ತಾಕಾರದ ದ್ವಾರವನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ತಳ್ಳುತ್ತಾ ಹೊರಗೆ ಬಂದು ಮುಂದೆ ಬಿದ್ದನು.
ದ್ವಾರಂ ಚ ವಿಕೃತಾಕಾರಂ ಲಲಾಟೇನ ಸಮಾಹನತ್ |
ಸಂವೃತಂ ಚೇತಿ ಮನ್ವಾನೋ ದ್ವಾರದೇಶಾದಪಾಗಮತ್ ॥12॥
ಮುಚ್ಚಿರುವಂತೆ ಕಾಣದಿದ್ದ ಬಾಗಿಲನ್ನು ಪ್ರವೇಶಿಸಲು ಹೋಗಿ ಹಣೆಯಿಂದ ಗಟ್ಟಿಸಿದನು. ಬಾಗಿಲು ಮುಚ್ಚಿದೆ ಎಂದು ಇನ್ನೊಂದೆಡೆ ದ್ವಾರದೇಶದಿಂದ ಹೊರಗೆ ಬಿದ್ದನು.
ಏವಂ ಪ್ರಲಂಭಾನ್ ವಿವಿಧಾನ್ ಪ್ರಾಪ್ಯ ತತ್ರ ವಿಶಾಂಪತೇ |
ಪಾಂಡವೈರನನುಜ್ಞಾತಸ್ತತೋ ದುರ್ಯೋಧನೋ ನೃಪಃ ॥13॥
ಅಪ್ರಹೃಷ್ಟೇನ ಮನಸಾ ರಾಜಸೂಯೇ ಮಹಾಕ್ರತೌ |
ಪ್ರೇಕ್ಷ್ಯ ತಾಮಭ್ಯುದ್ಯತಾಮೃದ್ಧಿಂ ಜಗಾಮ ಗಜಸಾಹ್ವಯಮ್ ॥14॥
ಎಲೈ ರಾಜನೇ! ಹೀಗೆ ರಾಜನಾದ ದುರ್ಯೋಧನನು ಆ ಸಭೆಯಲ್ಲಿ ಅನೇಕ ವಂಚನೆಗಳಿಗೆ ತುತ್ತಾಗಿ ಪಾಂಡವರ ಅನುಮತಿಯನ್ನು ಪಡೆಯದೆಯೇ ಸಂತೋಷಗೊಳ್ಳದ ಮನಸ್ಸಿನಿಂದ ರಾಜಸೂಯ ಮಹಾಯಾಗದಲ್ಲಿ ಅವರ ಅದ್ಭುತವಾದ ಸಮೃದ್ಧಿಯನ್ನು ನೋಡುತ್ತಾ ಹಸ್ತಿನಾವತಿಗೆ ಹೊರಟನು.
ನತುಷ್ಟೋ ಧರ್ಮರಾಜಸ್ಯ ಯಜ್ಞಮಾಸಾದ್ಯ ತಂ ತದಾ |
ಜಗಾಮ ಸ್ವಗೃಹಂ ತ್ವನ್ಯದ್ ಋತೇ ದುರ್ಯೋಧನಸ್ತದಾ ॥15॥
ಆಗ ದುರ್ಯೋಧನನು ಯಜ್ಞಕ್ಕೆ ಬಂದು ಸಂತೋಷಗೋಳ್ಳದೆ ಹಿಂದಿರುಗುತ್ತಾ ತನ್ನ ಸ್ವಗೃಹಕ್ಕೆ ಹೋಗುವುದನ್ನು ಬಿಟ್ಟು ಇನ್ನೊಂದು ಮನೆಗೆ ಹೋದನು.
ದೃಷ್ಟ್ವಾ ಯಜ್ಞವಿಭೂತಿಂ ತಾಂ ಪಾಂಡವಾನಾಂ ಮಹಸ್ವಿನಾಮ್ |
ಪಾಂಡವಶ್ರೀಪ್ರತಪ್ತಸ್ಯ ಧ್ಯಾನಮ್ಲಾನಸ್ಯ ಗಚ್ಛತಃ |
ದುರ್ಯೋಧನಸ್ಯ ನೃಪತೇ ಪಾಪಾ ಮತಿರಜಾಯತ॥16॥
ಎಲೈ ರಾಜನೇ! ತೇಜಸ್ವಿಗಳಾದ ಪಾಂಡವರ ಯಜ್ಞದ ವೈಭವವನ್ನು ನೋಡಿ ಪಾಂಡವರ ಐಶ್ವರ್ಯವನ್ನು ನೋಡಿ ಪ್ರತಪ್ತನಾಗಿ ಅದನ್ನೇ ಯೋಚಿಸುತ್ತಾ ಬಾಡಿದ ಮುಖವುಳ್ಳ ದುರ್ಯೋಧನನಿಗೆ ದುಷ್ಟ ಬುದ್ಧಿಯುಂಟಾಯಿತು.

ಪಾರ್ಥಾನ್ ಸುಮನಸೋ ದೃಷ್ಟ್ವಾ ಪಾರ್ಥಿವಾಂಶ್ಚ ವಶಾನುಗಾನ್ |
ಕೃತ್ಸ್ನಂ ಚಾಪಿ ಹಿತಂ ಲೋಕಮಾಕುಮಾರಂ ಕುರೂದ್ವಹ |
ದುರ್ಯೋಧನಃ ಪಾಪಬುದ್ಧಿಃ ಪರ್ಯತಪ್ಯತ ಮನ್ಯುನಾ ॥17॥
ಎಲೈ ಕುರೂದ್ವಹನೇ! ಸಂತೋಷಗೊಂಡ ಪಾಂಡವರಿಗೆ ಎಲ್ಲಾ ರಾಜರೂ ವಶರಾಗಿರುವುದನ್ನೂ ಬಾಲರಿಂದ ಹಿಡಿದು ಎಲ್ಲಾ ಜನರೂ ಅವರಿಗೆ ಹಿತರಾಗಿರುವುದನ್ನೂ ನೋಡಿದ ಪಾಪಬುದ್ಧಿಯುಳ್ಳ ದುರ್ಯೋಧನನು ಸಿಟ್ಟಿನಿಂದ ಪರಿತಪಿಸಿದನು.
ಸ ತು ಗಚ್ಛನ್ನನೇಕಾಗ್ರಃ ಸಭಾಮೇವಾನುಚಿಂತಯನ್ |
ಶ್ರಿಯಂ ಚ ತಾಮನುಪಮಾಂ ಧರ್ಮರಾಜಸ್ಯ ಧೀಮತಃ ॥18॥
ಪ್ರಮತ್ತೋ ಧೃತರಾಷ್ಟ್ರಸ್ಯ ಪುತ್ರೋ ದುರ್ಯೋಧನಸ್ತದಾ |
ನಾಭ್ಯಭಾಷತ್ ಸುಬಲಜಂ ಭಾಷ್ಯಮಾಣಃ ಪುನಃ ಪುನಃ ॥19॥
ಏಕಾಗ್ರತೆಯಿಲ್ಲದ ಮನಸ್ಸಿನಿಂದ ಆ ಸಭೆಯನ್ನೇ ಯೋಚಿಸಿ ಹೋಗುತ್ತಾ ಮೇಧಾವಿಯಾದ ಧರ್ಮರಾಜನ ಅಸದೃಶವಾದ ಸಂಪತ್ತನ್ನು ಚಿಂತಿಸುತ್ತಾ ಧೃತರಾಷ್ಟ್ರನ ಪುತ್ರನಾದ ಪ್ರಮತ್ತನಾದ ದುರ್ಯೋಧನನು ಆಗ ಶಕುನಿಯು ಪುನಃ ಪುನಃ ಎಷ್ಟು ಬಾರಿ ಮಾತನಾಡಿದರೂ ಮಾತನಾಡಸಿಲಿಲ್ಲ.
ತಂ ತು ದುರ್ಮನಸಂ ದೃಷ್ಟ್ವಾ ಶಕುನಿಃ ಪ್ರತ್ಯಭಾಷತ |
ದುರ್ಯೋಧನ ಕುತೋಮೂಲಂ ನಿಃಶ್ವಸನ್ನಿವ ಗಚ್ಛಸಿ ॥20॥
ಅವನು ಮನಃಖೇದದಿಂದ ಕೂಡಿರುವುದನ್ನು ನೋಡಿದ ಶಕುನಿಯು ದುರ್ಯೋಧನನೇ! ಏನು ಕಾರಣದಿಂದ ನೀನು ನಿಟ್ಟುಸಿರನ್ನು ಬಿಡುವವನಂತೆ ನಡೆಯುತ್ತಿದ್ದೀಯೆ ಎಂದು ಕೇಳಿದನು.
ದುರ್ಯೋಧನಃ
ದೃಷ್ಟ್ವೇಮಾಂ ಪೃಥಿವೀಂ ಸರ್ವಾಂ ಯುಧಿಷ್ಠಿರವಶೇ ಸ್ಥಿತಾಮ್ |
ಜಿತಾಮಸ್ತ್ರಪ್ರತಾಪೇನ ಶ್ವೇತಾಶ್ವಸ್ಯ ಮಹಾತ್ಮನಃ ॥21॥
ತಂ ಚ ಯಜ್ಞಂ ತಥಾರೂಪಂ ದೃಷ್ಟ್ವಾ ಪಾರ್ಥಸ್ಯ ಮಾತುಲ |
ಯಥಾ ಶಕ್ರಸ್ಯ ದೇವಾನಾಮೀಶ್ವರಸ್ಯ ತಥಾವಿಧಮ್ ॥22॥
ಅಮರ್ಷೇಣ ಸುಸಂಪೂರ್ಣೋ ದಹ್ಯಮಾನೋ ದಿವಾನಿಶಮ್ |
ಶುಷ್ಯತೇ ಹೃದಯಂ ಮೇಽದ್ಯ ಗ್ರೀಷ್ಮೇ ತೋಯಮಿವಾಲ್ಪಕಮ್ ॥23॥
ಸೋದರಮಾವನೇ! ಶ್ವೇತಾಶ್ವನಾದ ಮಹಾತ್ಮನಾದ ಅರ್ಜುನನ ಅಸ್ತ್ರಪ್ರತಾಪದಿಂದ ಸಮಸ್ತವಾದ ಪೃಥಿವಿಯು ಜಿತವಾಗಿ ಯುಧಿಷ್ಠಿರನ ವಶವಾಗಿರುವುದನ್ನು ನೋಡಿ, ಧರ್ಮರಾಜನ ಯಜ್ಞವು ದೇವತೆಗಳ ಒಡೆಯನಾದ ಇಂದ್ರನ ಯಜ್ಞದಂತೆ ಆ ರೀತಿಯಲ್ಲಿ ಇದ್ದುದನ್ನು ನೋಡಿ, ಕ್ರೋಧ ಮತ್ತು ಅಸಮಾಧಾನಗಳಿಂದ ಪೂರ್ಣವಾಗಿ ತುಂಬಿ ಹಗಲೂ ರಾತ್ರಿಯೂ ಬೆಯ್ಯುತ್ತಿದ್ದೇನೆ. ಈ ದಿನ ನನ್ನ ಮನಸ್ಸು ಗ್ರೀಷ್ಮಕಾಲದಲ್ಲಿ ಅಲ್ಪವಾದ ನೀರು ಒಣಗಿ ಹೋಗುವಂತೆ ಒಣಗುತ್ತಿದೆ.
ಪಶ್ಯ ಸಾತ್ವತಮುಖ್ಯೇನ ಶಿಶುಪಾಲೋ ನಿಪಾತಿತಃ |
ನ ಚ ತತ್ರ ಪುಮಾನಾಸೀತ್ ಕಶ್ಚಿತ್ ತಸ್ಯ ಪದಾನುಗಃ ॥24॥
ಕ್ಷಾಂತಂ ತತೋಽಪರಾಧಂ ನ ಕ್ಷೋಭಿತಂ ಕರ್ತುಮರ್ಹಸಿ |
ವಾಸುದೇವೇನ ತತ್ ಕರ್ಮ ಯಥಾಽಯುಕ್ತಂ ತಥಾಕೃತಮ್ |
ಸಿದ್ಧಿಂ ಚ ಪಾಂಡವೇಯಾನಾಂ ಪ್ರಭಾವೇಣ ಮಹಾತ್ಮನಾಮ್ ॥25॥
ತಥಾ ಹಿ ರತ್ನಾನ್ಯಾದಾಯ ವಿವಿಧಾನಿ ನರಾಧಿಪಾಃ |
ಉಪಾತಿಷ್ಠಂತ ಕೌಂತೇಯಂ ವೈಶ್ಯಾ ಇವ ಕರಪ್ರದಾಃ ॥26॥
ನೋಡು ಸಾತ್ವತಶ್ರೇಷ್ಠನಾದ ಕೃಷ್ಣನಿಂದ ಶಿಶುಪಾಲನು ಉರುಳಿಸಲ್ಪಟ್ಟನು. ಶಿಶುಪಾಲನಿಗೆ ಬೆಂಬಲವನ್ನು ಕೊಡುವ ಒಬ್ಬ ವ್ಯಕ್ತಿಯೂ ಅಲ್ಲಿ ಇರಲಿಲ್ಲ. ಶಿಶುಪಾಲವಧೆಯ ರೂಪವಾದ ಅಪರಾಧವನ್ನು ಎಂದೂ ನೀನು ಕ್ಷಮಿಸಬಾರದು. ಕೃಷ್ಣನು ಅಂತಹ ಅಯುಕ್ತವಾದ ಕರ್ಮವನ್ನು ಮಾಡಿದನು. ಮಹಾತ್ಮರಾದ ಪಾಂಡವರ ಪ್ರಭಾವದಿಂದ ಉಂಟಾದ ಸಿದ್ಧಿಯನ್ನು ಸಹ ಸಹಿಸಬಾರದು. ರಾಜರು ಕರವನ್ನು ಕೊಡುವ ವೈಶ್ಯರಂತೆ ವಿವಿಧ ರತ್ನಗಳನ್ನು ತೆಗೆದುಕೊಂಡು ಬಂದು ಧರ್ಮರಾಜನನ್ನು ಸಮೀಪಿಸಿ ಅರ್ಪಿಸಿದರು.
ತಂ ತಥಾ ಜ್ವಲಿತಾಂ ದೃಷ್ಟ್ವಾ ಶ್ರಿಯಂ ಮಾತುಲ ಪಾಂಡವೇ |
ಅಮರ್ಷವಶಮಾಪನ್ನೋ ದಹ್ಯೇಯಮತಥೋಚಿತಃ ॥27॥
ಸೋದರಮಾವನೇ! ಪಾಂಡವರ ಅಂತಹ ಉಜ್ವಲವಾದ ಸಂಪತ್ತನ್ನುನೋಡಿ ಕ್ರೋಧದಿಂದ ಕೂಡಿದವನಾಗಿ ತಡೆಯಲಾಗದೆ ನಾನು ಬೆಂದು ಹೋಗುತ್ತಿದ್ದೇನೆ.
ಏವಂ ಸ ನಿಶ್ಚಯಂ ಕೃತ್ವಾ ತತೋ ವಚನಮಬ್ರವೀತ್ |
ಪುನರ್ಗಾಂಧಾರನೃಪತಿಂ ದಹ್ಯಮಾನ ಇವಾಗ್ನಿನಾ ॥28॥
ಅವನು ಹೀಗೆ ನಿಶ್ಚಯವನ್ನು ಮಾಡಿ ಬೆಂಕಿಯಲ್ಲಿ ಬೆಂದು ಹೋಗುತ್ತಿರುವವನಂತೆ ಗಾಂಧಾರರಾಜನಾದ ಶಕುನಿಯನ್ನು ಕುರಿತು (ಹೀಗೆ) ಮಾತನಾಡಿದನು.
ಸೋಽಹಮಗ್ನಿಂ ಪ್ರವೇಕ್ಷ್ಯಾಮಿ ಭಕ್ಷಯಿಷ್ಯಾಮಿ ವಾ ವಿಷಮ್ |
ಅಪೋ ವಾಽಪಿ ಪ್ರವೇಕ್ಷ್ಯಾಮಿ ನಹಿ ಶಕ್ಷ್ಯಾಮಿ ಜೀವಿತುಮ್ ॥29॥
ಅಂತಹ ನಾನು ಅಗ್ನಿಪ್ರವೇಶವನ್ನು ಮಾಡುವೆನು. ಅಥವಾ ವಿಷವನ್ನು ಭಕ್ಷಿಸುವೆನು. ನೀರನ್ನಾದರೂ ಪ್ರವೇಶಿಸುವೆನು. ನಾನು ಬದುಕಿರಲಾರೆ.

ಕೋ ಹಿ ನಾಮ ಪುಮಾನ್ ಲೋಕೇ ಮರ್ಷಯಿಷ್ಯತಿ ಸತ್ತ್ವವಾನ್ |
ಸಪತ್ನಾನ್ ಋದ್ಧ್ಯತೋ ದೃಷ್ಟ್ವಾ ಹಾನಿಮಾತ್ಮನ ಏವ ಚ ||30||
ಆತ್ಮಾಭಿಮಾನಿಯಾದ ಯಾವನು ಲೋಕದಲ್ಲಿ ಶತ್ರುಗಳ ಸಂಪತ್ತನ್ನೂ ತನ್ನ ಪಕ್ಷದ ಹಾನಿಯನ್ನೂ ನೋಡಿ ಸಹಿಸುವನು?
ಸೋಽಹಂ ನಾಸ್ಮಿ ನ ನಾಪ್ಯಸ್ಮಿ ನ ಸ್ತ್ರೀ ನಚ ಪುಮಾನಪಿ |
ಯೋಽಹಂ ತಾಂ ಮರ್ಷಯಾಮ್ಯದ್ಯ ಶ್ರಿಯಂ ತಸ್ಮಿನ್ನಶಕ್ತಿತಃ ||33||
ಯಾವ ನಾನು ಅಸಾಮರ್ಥ್ಯದಿಂದ ಆ ಸಂಪತ್ತನ್ನು ನೋಡಿ ಸಹಿಸಿಕೊಂಡಿದ್ದೇನೆಯೋ ಅಂತಹ ನಾನು ಬದುಕಿಯೂ ಇಲ್ಲ. ಸತ್ತೂ ಇಲ್ಲ. ಸ್ತ್ರೀಯೂ ಅಲ್ಲ. ಪುರುಷನೂ ಅಲ್ಲ.
ಈಶ್ವರತ್ವಂ ಪೃಥಿವ್ಯಾಶ್ಚ ವಸುಮತ್ತಾಂ ಚ ತಾದೃಶೀಮ್ |
ಯಜ್ಞಂ ಚ ತಾದೃಶಂ ದೃಷ್ಟ್ವಾ ಮಾದೃಶಃ ಕೋ ನ ಸಂಜ್ವರೇತ್ ||34||
ಅಶಕ್ತಶ್ಚೈಕ ಏವಾಹಂ ತಾಮಾಹರ್ತುಂ ತತಃ ಶ್ರಿಯಮ್ |
ಸಹಾಯಾಂಶ್ಚ ನ ಪಶ್ಯಾಮಿ ತೇನ ಮೃತ್ಯುಂ ವಿಚಿಂತಯೇ ||35||
ಭೂಮಿಯ ಒಡೆತನವನ್ನು ಅಂತಹ ಧನ ಸಮೃದ್ಧಿಯನ್ನು ಅಂತಹ ಯಜ್ಞವನ್ನು ನೋಡಿ ನನ್ನಂತಹ ಯಾವನು ತಾನೆ ಸಂತಾಪಕ್ಕೆ ಒಳಗಾಗುವುದಿಲ್ಲ? ಆ ಸಂಪತ್ತನ್ನು ವಶಪಡಿಸಿಕೊಳ್ಳಲು ನಾನು ಒಬ್ಬನೇ ಅಸಮರ್ಥನಾಗಿದ್ದೇನೆ. ನನಗೆ ಸಹಾಯಮಾಡುವ ಯಾರನ್ನೂ ಕಾಣುತ್ತಿಲ್ಲ. ಆ ಕಾರಣದಿಂದ ಮರಣವನ್ನು ಕುರಿತು ಚಿಂತಿಸುತ್ತಿದ್ದೇನೆ.
ದೈವಮೇವ ಪರಂ ಮನ್ಯೇ ಪೌರುಷಂ ತು ನಿರರ್ಥಕಮ್ |
ದೃಷ್ಟ್ವಾ ಕುಂತೀಸುತೇ ಶುಭ್ರಾಂ ಶ್ರಿಯಂ ತಾಮಾಹೃತಾಂ ನಯಾತ್ ||
ಕುಂತೀಸುತನಾದ ಧರ್ಮರಾಜನಿಗೆ ಹಾಗೆ ಶುದ್ಧ ನೀತಿಯಿಂದ ಬಂದು ಸೇರಿದ ಶುಭ್ರವಾದ ಸಂಪತ್ತನ್ನು ನೋಡಿ ದೈವವೇ ಪ್ರಬಲವೆಂದು ತಿಳಿಯುತ್ತೇನೆ. ಪುರುಷ ಪ್ರಯತ್ನವು ನಿರರ್ಥಕವಾದುದು.
ಕೃತೋ ಯತ್ನೋ ಮಯಾ ಪೂರ್ವಂ ವಿನಾಶೇ ತಸ್ಯ ಸೌಬಲ |
ತಚ್ಚ ಸರ್ವಂ ವೃಥಾ ಜಾತಂ ಸ ಚ ವೃದ್ಧೋ ಮಹಾಬಲಃ ||37||
ಶಕುನಿಯೇ! ನಾನು ಅವನ ವಿನಾಶಕ್ಕಾಗಿ ಹಿಂದೆ ಅನೇಕ ಪ್ರಯತ್ನಗಳನ್ನು ಮಾಡಿದೆ ಅವೆಲ್ಲವೂ ವ್ಯರ್ಥವಾಯಿತು. ಅವನಾದರೂ ಮಹಾಬಲಿಷ್ಠನಾಗಿ ಬೆಳೆದನು.
ತೇನ ದೈವಂ ಪರಂ ಮನ್ಯೇ ಪೌರುಷಂ ತು ನಿರರ್ಥಕಮ್ |
ಧಾರ್ತರಾಷ್ಟ್ರಾ ಹಿ ಹೀಯಂತೇ ವರ್ಧಂತೇ ಪಾಪಿಪಾಂಡವಾಃ ||38||
ಆದ್ದರಿಂದ ನಾನು ದೈವವೇ ಪ್ರಬಲವೆಂದು ತಿಳಿಯುತ್ತೇನೆ. ಪೌರುಷವು ನಿರರ್ಥಕವಾದುದು. ಧೃತರಾಷ್ಟ್ರನ ಮಕ್ಕಳು ಅವನತಿಯನ್ನು ಹೊಂದುತ್ತಿದ್ದಾರೆ. ಪಾಪಿಗಳಾದ ಪಾಂಡವರು ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ.
ಸೋಽಹಂ ಶ್ರಿಯಂ ಚ ತಾಂ ದೃಷ್ಟ್ವಾ ಸಭಾಂ ಚೈವ ತಥಾವಿಧಾಮ್ |
ರಕ್ಷಿಭಿಶ್ಚಾಪಹಾಸಂ ತಂ ಪರಿತಪ್ಯೇ ಯಥಾಽಗ್ನಿನಾ ||39||
ಅಂತಹ ನಾನು ಆ ಸಂಪತ್ತನ್ನೂ ಅಂತಹ ಸಭೆಯನ್ನೂ ಸೇವಕರಿಂದ ಆದ ಅಪಹಾಸವನ್ನೂ ನೋಡಿ ಅಗ್ನಿಯಲ್ಲಿ ಸಿಕ್ಕಿದಂತೆ ಪರಿತಪಿಸುತ್ತಿದ್ದೇನೆ.
ಸ ಮಾಮಭ್ಯನುಜಾನೀಹಿ ಮಾತುಲಾದ್ಯ ಸುದುಃಖಿತಮ್ |
ಅಮರ್ಷವಶಮಾಪನ್ನಂ ಧೃತರಾಷ್ಟ್ರೇ ನಿವೇದಯ ||40||
ಸೋದರಮಾವನೇ! ದುಃಖಿತನಾದ ನನಗೆ ಅನುಮತಿಯನ್ನು ಕೊಡು. ಧೃತರಾಷ್ಟ್ರನಿಗೆ ನಾನು ಅಮರ್ಷವಶನಾಗಿದ್ದೇನೆ ಎಂದು ತಿಳಿಸು.
ಶಕುನಿಃ
ದುರ್ಯೋಧನ ನ ತೇಽಮರ್ಷಃ ಕಾರ್ಯಃ ಪ್ರತಿ ಯುಧಿಷ್ಠಿರಮ್ |
ಭಾಗಧೇಯಾನಿ ಹಿ ಸ್ವಾನಿ ಪಾಂಡವಾಃ ಸಮುಪಾಶ್ನುತೇ ||41||
ದುರ್ಯೋಧನನೇ! ನೀನು ಯುಧಿಷ್ಠಿರನ ವಿಷಯದಲ್ಲಿ ಕ್ರೋಧವನ್ನು ಮಾಡಬಾರದು. ಪಾಂಡವರು ತಮ್ಮ ಅದೃಷ್ಟದಿಂದ ಉಂಟಾದ ಫಲವನ್ನು ತಾವು ಅನುಭವಿಸುತ್ತಾರೆ.
ತಥಾಽಪ್ಯುಪಾಯೈರ್ಬಹುಭಿಃ ಸಮಾರಬ್ಧಾಸ್ತ್ವಯಾಽಸಕೃತ್ |
ವಿಮುಕ್ತಾಶ್ಚ ನರವ್ಯಾಘ್ರಾ ಭಾಗಧೇಯಪುರಸ್ಕೃತಾಃ ||42||
ಆದರೂ ನೀನು ಉಪಾಯಗಳನ್ನು ಅನೇಕ ಬಾರಿ ಮಾಡಿದೆ. ಆ ನರವ್ಯಾಘ್ರರು ಅದೃಷ್ಟಬಲದಿಂದ ಅವೆಲ್ಲದರಿಂದಲೂ ಮುಕ್ತರಾದರು.
ತೈರ್ಲಬ್ಧಾ ದ್ರೌಪದೀ ಭಾರ್ಯಾ ದ್ರುಪದಶ್ಚ ಸುತೈಃ ಸಹ |
ಸಹಾಯಾಃ ಪೃಥಿವೀಪಾಲಾ ವಾಸುದೇವಶ್ಚ ವೀರ್ಯವಾನ್ ||43||
ಅವರು ಭಾರ್ಯೆಯಾಗಿ ದ್ರೌಪದಿಯನ್ನು ಮತ್ತು ಸಹಾಯಕರಾಗಿ ಪುತ್ರರಿಂದ ಸಹಿತನಾದ ದ್ರುಪದರಾಜನನ್ನೂ ಮತ್ತು ಎಲ್ಲಾ ರಾಜರನ್ನೂ ಮತ್ತು ಪರಾಕ್ರಮಶಾಲಿಯಾದ ಕೃಷ್ಣನನ್ನೂ ಪಡೆದರು.
ಅಜಿತಃ ಸೋಽಪಿ ಸರ್ವೈರ್ಹಿ ಸದೇವಾಸುರಮಾನುಷೈಃ |
ತತ್ತೇಜಸಾ ಪ್ರವೃದ್ಧೋಽಸೌ ತತ್ರ ಕಾ ಪರಿದೇವನಾ ||44||
ಆ ಕೃಷ್ಣನಾದರೂ ಯಾವ ದೇವತೆಗಳಿಂದಲಾಗಲೀ ಅಸುರರಿಂದಲಾಗಲೀ ಮನುಷ್ಯರಿಂದ ಆಗಲೀ ಅಜೇಯ ನಾದವನು. ಕೃಷ್ಣನ ತೇಜಸ್ಸಿನಿಂದ ಧರ್ಮರಾಜನು ಅಭಿವೃದ್ಧಿಯನ್ನು ಹೊಂದಿದ್ದಾನೆ. ಅದಕ್ಕೆ ನೀನೇಕೆ ಗೋಳಾಡುತ್ತಿದ್ದೀಯೆ?

ಲಬ್ಧಶ್ಚ ತೈರ್ಹಿ ಭೂಯೋಽರ್ಥಃ ಪಿತ್ರ್ಯೋಂಶಃ ಪೃಥಿವೀಪತೇ |
ವಿವೃದ್ಧಸ್ತೇಜಸಾ ತೇಷಾಂ ತತ್ರ ಕಾ ಪರಿದೇವನಾ ॥45॥
ಎಲೈ ರಾಜನೇ! ಅವರು ತಮ್ಮ ಪಿತ್ರಾರ್ಜಿತವಾದ ಶ್ರೇಷ್ಠವಾದ ಭಾಗವನ್ನು ಪಡೆದು ತಮ್ಮ ಪರಾಕ್ರಮದಿಂದ ಅದನ್ನು ಅಭಿವೃದ್ಧಿಪಡಿಸಿದರು. ಅದಕ್ಕೆ ನೀನೇಕೆ ಶೋಕಪಡುತ್ತೀಯೆ?
ಧನಂಜಯೇನ ಗಾಂಡೀವಮಕ್ಷಯ್ಯೌ ಚ ಮಹೇಷುಧೀ |
ಲಬ್ಧಾನ್ಯಸ್ತ್ರಾಣಿ ದಿವ್ಯಾನಿ ತರ್ಪಯಿತ್ವಾ ಹುತಾಶನಮ್ ॥46॥
ಅರ್ಜುನನು ಅಗ್ನಿಯನ್ನು ಸಂತೋಷಪಡಿಸಿ ಗಾಂಡೀವಧನುಸ್ಸನ್ನೂ ಅಕ್ಷಯ ಬತ್ತಳಿಕೆಗಳನ್ನೂ ದಿವ್ಯವಾದ ಅಸ್ತ್ರಗಳನ್ನು ಪಡೆದನು.
ತೇನ ಕಾರ್ಮುಕಮುಖ್ಯೇನ ಬಾಹುವೀರ್ಯೇಣ ಚಾತ್ಮನಃ |
ಕೃತಾ ವಶೇ ಮಹೀಪಾಲಾಸ್ತತ್ರ ಕಾ ಪರಿದೇವನಾ ॥47॥
ಅರ್ಜುನನು ತನ್ನ ಬಾಹುವೀರ್ಯದಿಂದಲೂ ಆ ಗಾಂಡೀವ ಧನುಸ್ಸಿನ ಪ್ರಭಾವದಿಂದಲೂ ಎಲ್ಲಾ ರಾಜರನ್ನೂ ಜಯಿಸಿ ವಶದಲ್ಲಿ ಇಟ್ಟುಕೊಂಡನು. ಅದಕ್ಕೆ ನಿನ್ನ ಶೋಕವೇಕೆ?
ಅಯಂ ದಾಹಾನ್ಮಯಂ ನಾಮ ಮೋಕ್ಷಯಿತ್ವಾ ಚ ದಾನವಮ್ |
ಸಭಾಂ ತಾಂ ಕಾರಯಾಮಾಸ ಸವ್ಯಸಾಚೀ ಪರಂತಪಃ ॥48॥
ಪರಂತಪನಾದ ಧನಂಜಯನು ದಾನವನಾದ ಮಯನನ್ನು ಖಾಂಡವ ದಹನದಿಂದ ಮುಕ್ತಗೊಳಿಸಿ ಅವನಿಂದ ಆ ದಿವ್ಯವಾದ ಸಭೆಯನ್ನು ನಿರ್ಮಿಸಿದನು.
ತೇನೈವ ಚ ಮಯೇನೋಕ್ತಾಃ ಕಿಂಕರಾ ನಾಮ ರಾಕ್ಷಸಾಃ |
ವಹಂತಿ ತಾಂ ಸಭಾಂ ಭೀಮಾಸ್ತತ್ರ ಕಾ ಪರಿದೇವನಾ ॥49॥
ಆ ಮಯನ ಆಜ್ಞೆಯನ್ನು ಧರಿಸಿದ ಕಿಂಕರನಾಮಕರಾದ ಭಯಂಕರರಾದ ರಾಕ್ಷಸರು ಆ ಸಭೆಯನ್ನು ಹೊತ್ತು ಕೊಂಡಿರುತ್ತಾರೆ.(ನಿರ್ವಹಿಸುತ್ತಾರೆ) ಅದಕ್ಕೆ ನೀನೇಕೆ ಗೋಳಾಡುತ್ತಿದ್ದೀಯೆ.
ಯಚ್ಚಾಸಹಾಯತಾಂ ರಾಜನ್ನುಕ್ತವಾನಸಿ ಭಾರತ |
ತನ್ಮಿಥ್ಯಾ ಭ್ರಾತರೋ ಹೀಮೇ ಸಹಾಯಾಸ್ತೇ ಮಹಾರಥಾಃ ॥50॥
ಎಲೈ ರಾಜನೇ! ನನಗೆ ಯಾರೂ ಸಹಾಯಕರಿಲ್ಲ ಎಂದು ನೀನು ಆಡಿದ ಮಾತು ಸುಳ್ಳಾದುದು. ಮಹಾರಥರಾದ ನಿನ್ನ ತಮ್ಮಂದಿರೆಲ್ಲಾ ನಿನ್ನ ಸಹಾಯಕ್ಕೆ ಇದ್ದಾರೆ.
ದ್ರೋಣಸ್ತವ ಮಹೇಷ್ವಾಸಃ ಸಹ ಪುತ್ರೇಣ ವೀರ್ಯವಾನ್ |
ಸೂತಪುತ್ರಸ್ತು ರಾಧೇಯೋ ದೃಢಂ ಮಿತ್ರಂ ಮಹಾರಥಃ ॥51॥
ಮಹಾಧನುರ್ವಿದ್ಯೆಯನ್ನು ಬಲ್ಲ ಪರಾಕ್ರಮಶಾಲಿಯಾದ ದ್ರೋಣರು ತಮ್ಮ ಪುತ್ರರಾದ ಅಶ್ವತ್ಥಾಮರ ಜೊತೆಯಲ್ಲಿ ನಿನ್ನ ಸಹಾಯಕ್ಕೆ ಇದ್ದಾರೆ. ಮಹಾರಥನಾದ ಸೂತಪುತ್ರನಾದ ಕರ್ಣನು ನಿನಗೆ ಪ್ರಬಲನಾದ ಮಿತ್ರನಾಗಿದ್ದಾನೆ.
ಸ ಏಕಃ ಸಮರೇ ಸರ್ವಾನ್ ಪಾಂಡವಾನ್ ಸಹಸೋಮಕಾನ್ |
ವಿಜೇಷ್ಯತಿ ಮಹಾಬಾಹೋ ಕಿಂ ಸಹಾಯ್ಯೈಃ ಕರಿಷ್ಯಸಿ ॥52॥
ಮಹಾಬಾಹುವೇ! ಅವನೊಬ್ಬನೇ ಎಲ್ಲಾ ಪಾಂಡವರನ್ನೂ ಸೋಮಕರನ್ನೂ ಗೆಲ್ಲುವನು. ನಿನಗೆ ಬೇರೆ ಸಹಾಯಕರಿಂದ ಏನಾಗಬೇಕಾಗಿದೆ?
ಭೀಷ್ಮಶ್ಚ ಪುರುಷವ್ಯಾಘ್ರೋ ಗೌತಮಶ್ಚ ಮಹಾರಥಃ |
ಜಯದ್ರಥಶ್ಚ ಬಲವಾನ್ ಕೃತಾಸ್ತ್ರೋ ದೃಢವಿಕ್ರಮಃ ॥53॥
ಅಹಂ ಚ ಸಹ ಸೋದರ್ಯೈಃ ಸೌಮದತ್ತಿಶ್ಚ ಕೌರವ |
ಏತೈಸ್ತ್ವಂ ಸಹಿತಃ ಸರ್ವೈರ್ಜಯ ಸರ್ವಾಂ ವಸುಂಧರಾಮ್ ॥54॥
ಪುರುಷಶ್ರೇಷ್ಠರಾದ ಭೀಷ್ಮರು, ಮಹಾರಥರಾದ ಕೃಪರು, ಬಲಿಷ್ಠನೂ ಅಸ್ತ್ರಪರಿಣತನೂ ಪರಾಕ್ರಮಶಾಲಿಯೂ ಆದ ಜಯದ್ರಥ, ನಾನು ಮತ್ತು ನನ್ನ ಸಹೋದರರು, ಸೋಮದತ್ತನ ಮಗನಾದ ಭೂರಿಶ್ರವ, ಇವರೆಲ್ಲರಿಂದಲೂ ಸಹಿತನಾಗಿ ನೀನು ಸಮಸ್ತವಾದ ಪೃಥಿವಿಯನ್ನು ಗೆಲ್ಲು.
ತ್ವಯಾ ಚ ಸಹಿತೋ ರಾಜನ್ನೇತೈಶ್ಚಾನ್ಯೈರ್ಮಹಾರಥೈಃ |
ಏಕಾಹ್ನಾಽಹಂ ವಿಜೇಷ್ಯಾಮಿ ಯದಿ ತ್ವಮನುಮನ್ಯಸೇ ॥55॥
ರಾಜನೇ! ನೀನು ಅನುಮತಿಯನ್ನು ಕೊಟ್ಟರೆ ನಿನ್ನಿಂದ ಮತ್ತು ಈ ಮಹಾರಥರಿಂದ ಸಹಿತನಾದ ನಾನು ಒಂದು ದಿನದಲ್ಲಿ ಸಮಗ್ರವಾದ ಭೂಮಿಯನ್ನು ಗೆಲ್ಲುವೆನು.
ಏತೇಷು ವಿಜಿತೇಷ್ವದ್ಯ ಭವಿಷ್ಯತಿ ಮಹೀ ತವ |
ಸರ್ವೇ ಚ ಪೃಥಿವೀಪಾಲಾಃ ಸಭಾ ಸಾ ಚ ಮಹಾಧನಾ ॥56॥
ಈ ಪಾಂಡವರನ್ನು ಗೆದ್ದರೆ ಭೂಮಿಯು ನಿನ್ನದಾಗುವುದು. ಎಲ್ಲಾ ರಾಜರೂ ಅನರ್ಘ್ಯವಾದ ಆ ಸಭೆಯೂ ಸಹ ನಿನ್ನದಾಗುವುದು.
ಧನಂಜಯೋ ವಾಸುದೇವೋ ಭೀಮಸೇನೋ ಯುಧಿಷ್ಠಿರಃ |
ನಕುಲಃ ಸಹದೇವಶ್ಚ ದ್ರುಪದಶ್ಚ ಸಹಾತ್ಮಜೈಃ ॥57॥
ನೈತೇ ಯುಧಿ ಬಲಾಜ್ಜೇತುಂ ಶಕ್ಯಾಃ ಸುರಗಣೈರಪಿ |
ಮಹಾರಥಾ ಮಹೇಷ್ವಾಸಾಃ ಕೃತಾಸ್ತ್ರಾ ಯುಧಿ ದುರ್ಮದಾಃ ॥58॥
ಅರ್ಜುನ ವಾಸುದೇವ ಭೀಮಸೇನ ಯುಧಿಷ್ಠಿರ ನಕುಲ ಸಹದೇವ ದ್ರುಪದ ದ್ರುಪದನ ಮಕ್ಕಳು ಇವರನ್ನು ದೇವತೆಗಳೂ ಸಹ

ಯುದ್ಧದಲ್ಲಿ ತಮ್ಮ ಬಲದಿಂದ ಗೆಲ್ಲಲು ಸಾಧ್ಯವಿಲ್ಲ. ಇವರೆಲ್ಲರೂ ಮಹಾರಥರು ಮತ್ತು ಮಹಾಧನುಸ್ಸನ್ನು ಹೊಂದಿದವರು. ಅಸ್ತ್ರಜ್ಞಾನವುಳ್ಳವರು ಮತ್ತು ಯುದ್ಧದುರ್ಮದರಾದವರು.
ಅಹಂ ತು ತದ್ ವಿಜಾನಾಮಿ ವಿಜೇತುಂ ಯೇನ ಶಕ್ಯತೇ |
ಯುಧಿಷ್ಠಿರಂ ತು ರಾಜೇಂದ್ರಂ ತನ್ನಿಬೋಧ ಜನೇಶ್ವರ ॥59॥
ರಾಜೇಂದ್ರನೇ! ಯುಧಿಷ್ಠಿರನನ್ನು ಯಾವ ಉಪಾಯದಿಂದ ಗೆಲ್ಲಬಹುದೆಂದು ನಾನು ತಿಳಿದಿದ್ದೇನೆ. ನೀನು ಅದನ್ನು ಕೇಳು.
ದುರ್ಯೋಧನಃ
ಅಪ್ರಹಾರೇಣ ಶತ್ರೂಣಾಮ್ ಅನ್ಯೇಷಾಂ ಚ ಮಹೀಕ್ಷಿತಾಮ್ |
ಯಥಾ ಶಕ್ಷ್ಯಸಿ ತಂ ಜೇತುಂ ತನ್ಮಮಾಚಕ್ಷ್ವ ಮಾತುಲ ॥60॥
ಸೋದರಮಾವನೇ! ಶತ್ರುಗಳ ಮೇಲೆ ಪ್ರಹಾರವನ್ನು ಮಾಡದೆ ಅಥವಾ ಉಳಿದ ರಾಜರ ಮೇಲೆ ಪ್ರಹಾರವನ್ನು ಮಾಡದೆ ಹೇಗೆ ಧರ್ಮರಾಜನನ್ನು ಗೆಲ್ಲುವಿ ಎಂದು ನನಗೆ ಹೇಳು.
ಶಕುನಿಃ
ದ್ಯೂತಪ್ರಿಯಶ್ಚ ಕೌಂತೇಯೋ ನ ಚ ಜಾನಾತಿ ದೇವಿತುಮ್ |
ಸಮಾಹೂತಶ್ಚ ಕೌಂತೇಯೋ ನ ಶಕ್ಷ್ಯತಿ ನಿವರ್ತಿತುಮ್ ॥61॥
ಕೌಂತೇಯನಾದ ಧರ್ಮರಾಜನು ದ್ಯೂತ ಪ್ರಿಯ. ಆದರೆ ಅವನಿಗೆ ಪಗಡೆಯಾಡಲು ಬರುವುದಿಲ್ಲ. ನಾವು ಆವನನ್ನು ಆಹ್ವಾನಮಾಡಿದರೆ ಅವನು ಅದನ್ನು ನಿರಾಕರಿಸಲು ಸಾಧ್ಯವಿಲ್ಲ.
ದೇವನೇ ಕುಶಲಶ್ಚಾಹಂ ನ ಮೇಽಸ್ತಿ ಸದೃಶೋ ಭುವಿ |
ತ್ರಿಷು ಲೋಕೇಷು ಕೌಂತೇಯಂ ತಂ ತ್ವಂ ದ್ಯೂತೇ ಸಮಾಹ್ವಯ ॥62॥
ನಾನು ಪಗಡೆಯಾಡುವುದರಲ್ಲಿ ಕುಶಲನಾದವನು. ಭೂಮಿಯಲ್ಲಿಯೇ ಆಗಲೀ ಅಥವಾ ಮೂರು ಲೋಕಗಳಲ್ಲಾಗಲೀ ನನಗೆ ಸಮಾನರಾದವರು ಯಾರೂ ಇಲ್ಲ. ನೀನು ಆ ಧರ್ಮರಾಜನನ್ನು ದ್ಯೂತಕ್ಕಾಗಿ ಆಹ್ವಾನಿಸು.
ಅನಕ್ಷಕುಶಲಾದ್ರಾಜ್ಯಮಾದಾಸ್ಯಾಮಿ ನ ಸಂಶಯಃ |
ರಾಜ್ಯಂ ಶ್ರಿಯಂ ಸಭಾಂ ದೀಪ್ತಾಂ ತ್ವದರ್ಥಂ ಪುರುಷರ್ಷಭ ॥63॥
ಪುರುಷ ಶ್ರೇಷ್ಠನೇ! ಅಕ್ಷ ಕುಶಲನಲ್ಲದ ಅವನಿಂದ ನಾನು ರಾಜ್ಯವನ್ನೂ ಸಂಪತ್ತನ್ನೂ ಬೆಳಗುತ್ತಿರುವ ಆ ಸಭೆಯನ್ನೂ ನಿನ್ನ ಸಲುವಾಗಿ ಅಪಹರಿಸುವೆನು. ಇದರಲ್ಲಿ ಸಂಶಯವಿಲ್ಲ.
ಇದಂ ಹಿ ಸರ್ವಂ ರಾಜ್ಞೇ ತ್ವಂ ದುರ್ಯೋಧನ ನಿವೇದಯ |
ಅನುಜ್ಞಾತಶ್ಚ ತೇ ಪಿತ್ರಾ ವಿಜೇಷ್ಯಾಮಿ ನ ಸಂಶಯಃ ॥64॥
ದುಯೋಧನನೇ ಇವೆಲ್ಲವನ್ನೂ ನೀನು ರಾಜನಾದ ಧೃತರಾಷ್ಟ್ರನಿಗೆ ತಿಳಿಸು. ನಿನ್ನ ತಂದೆಯಿಂದ ಅನುಮತಿಯ ದೊರಕಿದರೆ ನಾನು ನಿಸ್ಸಂಶಯವಾಗಿ ಗೆಲ್ಲುವೆನು.
ದುರ್ಯೋಧನಃ
ತ್ವಮೇವ ಧೃತರಾಷ್ಟ್ರಾಯ ಕುರುಮುಖ್ಯಾಯ ಮಾತುಲ |
ನಿವೇದಯ ಯಥಾಕಾಮಂ ನಾಹಂ ಶಕ್ಷ್ಯಾಮಿ ಶಂಸಿತುಮ್ ॥65॥
ಸೋದರಮಾವನೇ! ಕುರುಪ್ರಧಾನನಾದ ಧೃತರಾಷ್ಟ್ರನಿಗೆ ನಿನ್ನ ಮನಸ್ಸಿಗೆ ತೋರಿದಂತೆ ನೀನೇ ಹೇಳು. ನಾನು ಅವನಿಗೆ ಹೇಳಲಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ದ್ವಿತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಧೃತರಾಷ್ಟ್ರಮಥೋವಾಚ ದ್ವಾಪರಾಂಶೋಽತಿಪಾಪಕೃತ್ |
ನಾಸ್ತಿಕ್ಯರೂಪಃ ಶಕುನಿರ್ವಿವರ್ಣಂ ಹರಿಣಂ ಕೃಶಂ ॥296॥
ದುರ್ಯೋಧನಂ ತು ತಚ್ಛ್ರುತ್ವಾ ಕುತ ಇತ್ಯಾಹ ದುರ್ಮನಾಃ |
ಅಬ್ರೂತಾಂ ತೌ ನೃಪಾಯಾಶು ದ್ವಾಭ್ಯಾಂ ಯನ್ಮಂತ್ರಿತಂ ಪಥಿ ॥297॥
`ದುರ್ಯೋಧನ ಸೊರಗಿದ್ದಾನೆ. ಮೊದಲಿನ ಮೈಕಾಂತಿ ಇಲ್ಲದೆ ಬಿಳಚಿಕೊಂಡಿದ್ದಾನೆ' ಎಂದು ಮುಂತಾಗಿ ಧೃತರಾಷ್ಟ್ರನ ಮುಂದೆ ಬಣ್ಣಿಸಿದ. ದ್ವಾಪರ ಎಂಬ ಅಸುರನ ಅಂಶ, ನಾಸ್ತಿಕ್ಯ ಬುದ್ಧಿಗೆ ಅಭಿಮಾನಿ, ಮಹಾಪಾಪಕಾರಿಯಾದ ಶಕುನಿ. ಇದನ್ನು ಕೇಳಿ ಧೃತರಾಷ್ಟ್ರ ದುಃಖಿತನಾಗಿ `ಏಕೆ?' ಎಂದ. ಆಗ ದುರ್ಯೋಧನ ಶಕುನಿ ಇಬ್ಬರು ತಾವು ದಾರಿಯಲ್ಲಿ ಬರುವಾಗ ಮಾತನಾಡಿಕೊಂಡಿದ್ದನ್ನು ಬೇಗನೆ ಹೇಳಿದರು.
ಶ್ರುತ್ವೈವ ತನ್ನೇತ್ಯವದತ್ ಸ ಭೂಪತಿ-
ರ್ವಿರೋಧಿ ಧರ್ಮಸ್ಯ ವಿನಾಶಕಾರಣಂ |
ಕುಮಂತ್ರಿತಂ ವೋ ನ ಮಮೈತದಿಷ್ಟಂ
ಸ್ವಬಾಹುವೀರ್ಯಾಪ್ತ ಮಹಾಶ್ರಿಯೋ ಹಿ ತೇ ॥298॥
ಅದನ್ನು ಕೇಳಿದೊಡನೆ ಧೃತರಾಷ್ಟ್ರ `ಪಗಡೆಯಾಟ ಬೇಡ' ಎಂದ. `ಅದು ಧರ್ಮ ವಿರೋಧಿ. ನಮ್ಮ ವಿನಾಶಕ್ಕೆ ಕಾರಣ. ಅದರಿಂದ ನಿಮ್ಮ ಈ ಕೆಟ್ಟ ಆಲೋಚನೆ ನನಗೆ ಇಷ್ಟವಾಗುವುದಿಲ್ಲ. ಪಾಂಡವರು ತಮ್ಮ ಬಾಹುಬಲದಿಂದ ಆ ಮಹಾಸಂಪತ್ತನ್ನು ಗಳಿಸಿದ್ದಾರೆ.

ತ್ವಯಾಽಪಿ ನಿರ್ಜಿತ್ಯ ದಿಶೋ ಮಖಾಗ್ರ್ಯೈಃ
ಕಾರ್ಯಾಃ ಸ್ಪೃಧೋ ಮಾ ಗುಣವತ್ತಮೈಸ್ತೈಃ |
ವಿಶೇಷತೋ ಭ್ರಾತೃಭಿರಗ್ರ್ಯಪೌರುಷೈ-
ರಿತ್ಯುಕ್ತ ಆಹಾಶು ಸುಯೋಧನಸ್ತಂ ॥299॥
`ನೀನೂ ದಿಗ್ವಿಜಯಮಾಡಿ ಒಳ್ಳೆಯ ಯಜ್ಞಗಳನ್ನು ಮಾಡಬೇಕು ಹೊರತು ಒಳ್ಳೆಯ ಗುಣವಂತರೊಡನೆ, ಅದರಲ್ಲಿಯೂ ವಿಶೇಷವಾಗಿ ಉತ್ತಮ ಪೌರುಷಶಾಲಿಗಳಾದ ಸೋದರರೊಡನೆ ಮತ್ಸರಿಸಬಾರದು' ಹೀಗೆ ಧೃತರಾಷ್ಟ್ರ ಹೇಳಿದಾಗ ದುರ್ಯೋಧನ ನುಡಿದ.
ಯದಿ ಶ್ರಿಯಂ ಪಾಂಡವಾನಾಂ ನಾಕ್ಷೈರಾಚ್ಛೇತ್ತುಮಿಚ್ಛಸಿ |
ಮೃತಮೇವಾದ್ಯ ಮಾಂ ವಿದ್ಧಿ ಪಾಂಡವೈಸ್ತ್ವಂ ಸುಖೀ ಭವ ॥300॥
ಪಾಂಡವರ ಸಂಪತ್ತನ್ನು ಜೂಜಾಟದಿಂದ ಅಪಹರಿಸಲು ನೀನು ಒಪ್ಪಿಗೆ ಕೊಡದಿದ್ದರೆ ನಾನಿಂದು ಸತ್ತೆನೆಂದೇ ತಿಳಿ. ನೀನು ಪಾಂಡವರೊಂದಿಗೇ ಸುಖದಿಂದಿರು.
ಯದಿ ಮಜ್ಜೀವಿತಾರ್ಥೀ ತ್ವಮಾನಯಾಶ್ವಿಹ ಪಾಂಡವಾನ್ |
ಸಭಾರ್ಯಾನ್ ದೇವನಾಯೈವ ನ ಚಾಧರ್ಮೋಽತ್ರ ಕಶ್ಚನ ॥301॥
ನಾನು ಬದುಕಿರಬೇಕೆಂದು ನೀನು ಬಯಸುವಿಯಾದರೆ ಪಾಂಡವರನ್ನು ಪತ್ನೀ ಸಮೇತ ಜೂಜಾಟಕ್ಕೆ ಇಲ್ಲಿಗೆ ಕರೆಸಿಕೊಳ್ಳು. ಇದರಲ್ಲಿ ಯಾವ ಅಧರ್ಮವೂ ಇಲ್ಲ.
ವೇದಾನುಜೀವಿನೋ ವಿಪ್ರಾಃ ಕ್ಷತ್ರಿಯಾಃ ಶಸ್ತ್ರಜೀವಿನಃ |
ತ್ರುಟ್ಯತೇ ಯೇನ ಶತ್ರುಶ್ಚ ತಚ್ಛಸ್ತ್ರಂ ನೈವ ಚೇತರತ್ ॥302॥
ಬ್ರಾಹ್ಮಣರು ವೇದಗಳಿಂದ ಜೀವಿಸುವಂತೆ ಕ್ಷತ್ರಿಯರು ಶಸ್ತ್ರಗಳಿಂದ ಜೀವಿಸುವವರು. ಯಾವುದರಿಂದ ಶತ್ರುನಾಶ ಹೊಂದುವನೋ ಅದು ಶಸ್ತ್ರ ಹೊರತು ಇನ್ನೇನೂ ಅಲ್ಲ.
ಅತಃ ಸ್ವಧರ್ಮ ಏವಾಯಂ ತವಾಪಿ ಸ್ಯಾತ್ ಫಲಂ ಮಹತ್ |
ಇತ್ಯುಕ್ತೋ ಮಾ ಫಲಂ ಮೇಽಸ್ತು ತವೈವಾಸಿತ್ವತಿ ಸೋಽಬ್ರವೀತ್ ॥
ಅದರಿಂದ ನಮಗೆ ಇದು ಸ್ವಧರ್ಮವೆ. ನಿನಗೂ ಇದರಿಂದ ಮಹತ್ತಾದ ಫಲ ದೊರಕುವುದು'. ಹೀಗೆ ದುರ್ಯೋಧನ ಹೇಳಿದಾಗ `ಫಲ ನಿನಗೇ ಇರಲಿ ನನಗೆ ಬೇಡ' ಎಂದ ಧೃತರಾಷ್ಟ್ರ.
ಏವಂ ಬ್ರುವನ್ನಪಿ ನೃಪ ಆವಿಷ್ಟಃ ಕಲಿನಾ ಸ್ವಯಂ |
ಪುತ್ರಸ್ನೇಹಾಚ್ಚ ವಿದುರಮಾದಿಶತ್ ಪಾಂಡವಾನ್ ಪ್ರತಿ ॥304॥
ಧೃತರಾಷ್ಟ್ರ ಹೀಗೆ ಹೇಳುತ್ತಿದ್ದರೂ ಸ್ವಯಂ ಕಲಿಯಿಂದ ಆವಿಷ್ಟನಾಗಿದ್ದುದರಿಂದ ಪುತ್ರಮೋಹದಿಂದ ವಿದುರನನ್ನು ಪಾಂಡವರ ಬಳಿಗೆ ಹೋಗಲು ಆಜ್ಞಾಪಿಸಿದ.
ಆವಿವೇಶ ಕಲಿಸ್ತಂ ಹಿ ಯದಾ ಪುತ್ರತ್ವಸಿದ್ಧಯೇ |
ಅಂಶೇನ ತತ ಆರಭ್ಯ ನೈವಾಸ್ಮಾದಪಜಗ್ಮಿವಾನ್ ॥305॥
ಕಲಿ ಧೃತರಾಷ್ಟ್ರನ ಮಗನಾಗಿ ಜನಿಸುವುದಕ್ಕಾಗಿ ಎಂದು ಅವನನ್ನು ಪ್ರವೇಶಿಸಿದನೋ ಅಂದಿನಿಂದ ಆರಂಭಿಸಿ ಒಂದಂಶದಿಂದ ಸದಾ ಅವನಲ್ಲಿ ಇದ್ದ. ಅವನಿಂದ ದೂರ ಹೋಗಲಿಲ್ಲ.
ಯಾವತ್ಪುರಂ ಪರಿತ್ಯಜ್ಯ ವನಮೇವ ವಿವೇಶ ಹ |
ತದಂತರಾ ತತಸ್ತಸ್ಯ ಪಾಪಯುಕ್ತಂ ಮನೋಽಭವತ್ ॥306॥
ಅದರಿಂದಲೆ ಮುಂದೆ ಹಸ್ತಿನಾವತಿಯನ್ನು ತೊರೆದು ಕಾಡಿಗೆ ಹೋಗುವವರೆಗೂ ಧೃತರಾಷ್ಟ್ರನ ಮನಸ್ಸು ಪಾಪಯುಕ್ತವೆ ಆಗಿತ್ತು.
* * * *

ಎಪ್ಪತ್ತೊಂದನೆಯ ಅಧ್ಯಾಯ
(ಧೃತರಾಷ್ಟ್ರನ ಸಮೀಪದಲ್ಲಿ ದುರ್ಯೋಧನನಿಂದ ತನ್ನ ಅಸಮಾಧಾನದ ವರ್ಣನೆ.)
ವೈಶಂಪಾಯನಃ
ಅನುಭೂಯ ಸ ತಂ ರಾಜ್ಞೋ ರಾಜಸೂಯಂ ಸುದುರ್ಮತಿಃ |
ಯುಧಿಷ್ಠಿರಸ್ಯ ಶಕುನಿರ್ದುರ್ಯೋಧನಸುಸಂಹಿತಃ ॥1॥
ವಿವೇಶ ಹಸ್ತಿನಪುರಂ ದುರ್ಯೋಧನಮತೇನ ಸಃ |
ಬಾಢಮಿತ್ಯೇವ ಶಕುನಿರ್ದೃಢಂ ಹೃದಿ ಚಕಾರ ಹ ॥2॥
ಅತ್ಯಂತ ದುಷ್ಟಬುದ್ಧಿಯುಳ್ಳ ಶಕುನಿಯು ಧರ್ಮರಾಜನ ಆ ರಾಜಸೂಯಯಾಗವನ್ನು ಅನುಭವಿಸಿ ದುರ್ಯೋಧನನ ಜೊತೆಯಲ್ಲಿ ಒಂದುಗೂಡಿದವನಾಗಿ ದುರ್ಯೋಧನನ ಅಭಿಪ್ರಾಯದಂತೆ ಹಿಂದೆ ಸೂಚಿಸಿದಂತೆಯೇ ಮಾಡಬೇಕೆಂದು ಮನಸ್ಸಿನಲ್ಲಿ ದೃಢವಾಗಿ ನಿಶ್ಚಯಿಸಿ ಹಸ್ತಿನಪುರವನ್ನು ಪ್ರವೇಶಿಸಿದನು.
ಅಸ್ವಸ್ಥತಾಂ ಚ ತಾಂ ದೃಷ್ಟ್ವಾ ಧಾರ್ತರಾಷ್ಟ್ರಸ್ಯ ಪಾಪಕೃತ್ |
ಪಾಪಃ ಪಾಪಾತ್ಮನಾ ತೇನ ಸಮೇತ್ಯ ಪೃಥಿವೀಕ್ಷಿತಾ ॥3॥
ಭಾರತಾನಾಂ ಚ ದುಷ್ಟಾತ್ಮಾ ಕ್ಷಯಾಯ ಹಿ ನೃಪಕ್ಷಯಮ್ |
ಪ್ರಿಯಕೃನ್ಮತಮಾಜ್ಞಾಯ ಪೂರ್ವಂ ದುರ್ಯೋಧನಸ್ಯ ತತ್ ॥4॥
ವೈಶಸಂ ಸರ್ವಲೋಕಸ್ಯ ಹೃದಿ ಕೃತ್ವಾ ಸುದುರ್ಮತಿಃ |
ದೈವೇನ ವಿಧಿನಾ ಚೈವ ಚೋದಿತಃ ಕ್ರೂರಕರ್ಮಕೃತ್ ॥5॥

ಗಾಂಧಾರರಾಜಃ ಶಕುನಿರ್ಧೃತರಾಷ್ಟ್ರಂ ಜನೇಶ್ವರಮ್ |
ಉಪಗಮ್ಯ ಮಹಾತ್ಮಾನಂ ಶಕುನಿರ್ವಾಕ್ಯಮಬ್ರವೀತ್ ॥6॥
ಪಾಪಕಾರಿಯಾದ ಅವನು ದುರ್ಯೋಧನನ ಅಸಮಾಧಾನವನ್ನು ಗಮನಿಸಿ ಪಾಪಬುದ್ಧಿಯುಳ್ಳ ಅವನ ಜೊತೆಯಲ್ಲಿ ಒಂದಾಗಿ ಭರತವರ್ಷದ ನಾಶಕ್ಕೋಸ್ಕರ ರಾಜರನ್ನು ಸಂಹರಿಸುವುದು ದುರ್ಯೋಧನನಿಗೆ ಪ್ರಿಯವೆಂದು ತಿಳಿದು ದುಷ್ಟಾತ್ಮನೂ ಸುದುರ್ಮತಿಯೂ ಆದ ಅವನು ಸರ್ವಲೋಕದ ಪೀಡೆಯನ್ನು ಮನಸ್ಸಿನಲ್ಲಿ ಸಂಕಲ್ಪಿಸಿ ಜೊತೆಗೆ ವಿಧಿಯಿಂದಲೂ ಪ್ರೇರಿಸಲ್ಪಟ್ಟು ಕ್ರೂರಕರ್ಮಕಾರಕನಾದ ಗಾಂಧಾರರಾಜನಾದ ಶಕುನಿಯು ಮಹಾತ್ಮನಾದ ಧೃತರಾಷ್ಟ್ರರಾಜನನ್ನು ಸಮೀಪಿಸಿ ಹೀಗೆ ಮಾತನಾಡಿದನು.
ದುರ್ಯೋಧನೋ ಮಹಾರಾಜ ವಿವರ್ಣೋ ಹರಿಣಃ ಕೃಶಃ |
ದೀನಶ್ಚಿಂತಾಪರಶ್ಚೈವ ತಂ ವಿದ್ಧಿ ಭರತರ್ಷಭ ॥7॥
ಮಹಾರಾಜನೇ! ದುರ್ಯೋಧನನು ವರ್ಣಹೀನನಾಗಿ ಹರಿಣನೂ ಕೃಶನೂ ಆಗಿದ್ದಾನೆ. ಭರತಶ್ರೇಷ್ಠನೇ! ಅವನು ದೈನ್ಯದಿಂದ ಕೂಡಿ ಚಿಂತಾಕ್ರಾಂತನಾಗಿದ್ದಾನೆ ಎಂದು ತಿಳಿ.
ನ ವೈ ಪರೀಕ್ಷಸೇ ಸಮ್ಯಗಸ್ಯ ತ್ವಂ ರಾಜಸತ್ತಮ |
ಜ್ಯೇಷ್ಠಪುತ್ರಸ್ಯ ತೇ ಶೋಕಂ ಕಿಮರ್ಥಂ ನಾವಬುಧ್ಯಸೇ ॥8॥
ರಾಜಶ್ರೇಷ್ಠನೇ! ನೀನು ಅವನನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ. ನಿನ್ನ ಜೇಷ್ಠಪುತ್ರನ ಶೋಕವನ್ನು ನೀನು ಏಕೆ ಗಮನಿಸುತ್ತಿಲ್ಲ?
ವೈಶಂಪಾಯನಃ
ಏವಮುಕ್ತಃ ಶಕುನಿನಾ ಧೃತರಾಷ್ಟ್ರೋ ಜನೇಶ್ವರಃ |
ದುರ್ಯೋಧನಂ ಸಮಾಹೂಯ ಇದಂ ವಚನಮಬ್ರವೀತ್ ॥9॥
ಹೀಗೆ ಶಕುನಿಯಿಂದ ಹೇಳಲ್ಪಟ್ಟ ಧೃತರಾಷ್ಟ್ರನು ದುರ್ಯೋಧನನನ್ನು ಕರೆದು ಹೀಗೆ ಮಾತನಾಡಿದನು.
ದುರ್ಯೋಧನ ಕುತೋಮೂಲಂ ಭೃಶಮಾರ್ತೋಽಸಿ ಪುತ್ರಕ |
ಶ್ರೋತವ್ಯಶ್ಚೇನ್ಮಯಾ ಸೋಽರ್ಥೋ ಬ್ರೂಹಿ ಮೇ ಕುರುನಂದನ ॥10॥
ಪ್ರಿಯಪುತ್ರನಾದ ದುರ್ಯೋಧನನೇ! ನಿನ್ನ ಮಹಾದುಃಖಕ್ಕೆ ಏನು ಕಾರಣ? ಕುರುನಂದನನೇ! ನಾನು ಕೇಳಬಹುದಾದರೆ ಆ ವಿಷಯವನ್ನು ನನಗೆ ಹೇಳು.
ಅಯಂ ತ್ವಾಂ ಶಕುನಿಃ ಪ್ರಾಹ ವಿವರ್ಣಂ ಹರಿಣಂ ಕೃಶಮ್ |
ಚಿಂತಯಂಶ್ಚ ನ ಪಶ್ಯಾಮಿ ಶೋಕಸ್ಯ ತವ ಸಂಭವಮ್ ॥11॥
ಈ ಶಕುನಿಯು ನನಗೆ ನೀನು ವಿವರ್ಣನೂ ಹರಿಣನೂ ಕೃಶನೂ ಆಗಿದ್ದೀಯೆ ಎಂದು ಹೇಳುತ್ತಾನೆ. ಎಷ್ಟು ಯೋಚನೆ ಮಾಡಿದರೂ ನನಗೆ ನಿನ್ನ ಶೋಕಕ್ಕೆ ಕಾರಣವು ತಿಳಿಯುತ್ತಿಲ್ಲ.
ಐಶ್ವರ್ಯಂ ಹಿ ಮಯಾ ಪುತ್ರ ತ್ವಯಿ ಸರ್ವಂ ಸಮಾಹಿತಮ್ |
ಭ್ರಾತರಃ ಸುಹೃದಶ್ಚೈವ ನಾಚರಂತಿ ತವಾಪ್ರಿಯಮ್ ॥12॥
ಪುತ್ರನೇ! ನನ್ನ ಸಮಗ್ರ ಐಶ್ವರ್ಯವನ್ನು ನಿನ್ನಲ್ಲಿಯೇ ಸ್ಥಾಪಿಸಿದ್ದೇನೆ. ನಿನ್ನ ತಮ್ಮಂದಿರಾಗಲೀ ಅಥವಾ ಬಾಂಧವರಾಗಲೀ ಯಾರೂ ನಿನಗೆ ಅಪ್ರಿಯವನ್ನು ಮಾಡುತ್ತಿಲ್ಲ.
ತ್ವದ್ವತ್ತಂ ಚೈವ ಭುಂಜಾವೋ ಗಾಂಧಾರೀ ಚಾಹಮೇವ ಚ |
ಆಚ್ಛಾದಯಸಿ ಚಾವಾರಾನಶ್ನಾಸಿ ಪಿಶಿತೌದನಮ್ |
ಆಜಾನೇಯಾ ವಹಂತಿ ತ್ವಾಂ ಕಸ್ಮಾಚ್ಛೋಚಸಿ ಪುತ್ರಕ ॥13॥
ನೀನು ಕೊಟ್ಟ ಅನ್ನವನ್ನೇ ಗಾಂಧಾರಿಯು ಮತ್ತು ನಾನು ಭುಂಜಿಸುತ್ತೇವೆ. ಶ್ರೇಷ್ಠವಾದ ಬಟ್ಟೆಗಳನ್ನು ಹಾಕಿಕೊಳ್ಳುತ್ತೀಯೆ ನಿತ್ಯವೂ ಮಾಂಸಾನ್ನವನ್ನು ಭುಂಜಿಸುತ್ತೆಯೆ ಒಳ್ಳೆಯ ಜಾತಿಯ ಕುದುರೆಗಳು ನಿನ್ನನ್ನು ಕೊಂಡೊಯ್ಯುತ್ತವೆ. ಮಗನೇ ಏಕೆ ಶೋಕಪಡುತ್ತೀಯೆ?

ಶಯನಾನಿ ಮಹಾರ್ಹಾಣಿ ಯೋಷಿತಶ್ಚ ಮನೋಹರಾಃ |
ಗುಣವಂತಿ ಚ ವೇಶ್ಮಾನಿ ವಿಹಾರಾಶ್ಚ ಯಥಾಸುಖಮ್ ॥14॥
ದೇವಾನಾಮಿವ ತೇ ಸರ್ವಂ ವಾಚಿ ಬದ್ಧಮಸಂಶಯಮ್ |
ಸ ದೀನ ಇವ ದುರ್ಧರ್ಷ ಕಸ್ಮಾಚ್ಛೋಚಸಿ ಪುತ್ರಕ ॥15॥
ಬಹಳ ಬೆಲೆಬಾಳುವ ಶಯನಗಳನ್ನು ಹೊಂದಿದ್ದೀಯೆ. ನಿನ್ನ ಪತ್ನಿಯರು ಸುಂದರಿಯರಿದ್ದಾರೆ. ನಿನ್ನ ಗೃಹಗಳು ಮತ್ತು ವಿಹಾರಸ್ಥಾನಗಳು ಒಳ್ಳೆಯಗುಣಗಳಿಂದ ಸುಖಪ್ರದವಾಗಿದೆ. ದೇವತೆಗಳಂತೆ ಎಲ್ಲವೂ ನಿನಗೆ ಇದೆ. ಎಲ್ಲವೂ ನಿನಗೆ ಅಧೀನವಾಗಿದೆ. ಪುತ್ರನೇ ದುರ್ಧರ್ಷನಾದ ನೀನು ದೀನನಂತೆ ಏಕೆ ಶೋಕಪಡುತ್ತಿರುವೆ?
ಮಾತ್ರಾ ಪಿತ್ರಾ ಚ ಪುತ್ರಸ್ಯ ಯದ್ವೈ ಕಾರ್ಯಂ ಪರಂ ಸ್ಮೃತಮ್ |
ಪ್ರಾಪ್ತಸ್ತ್ವಮಸಿ ತತ್ ತಾತ ನಿಖಿಲಾಂ ನಃ ಕುಲಶ್ರಿಯಮ್ ॥16॥
ಪ್ರೀತಿಪಾತ್ರನೇ! ತಂದೆ ಮತ್ತು ತಾಯಿಯರು ಮಗನಿಗೆ ಏನು ಮಾಡಬೇಕೆಂದು ಹೇಳುತ್ತಾರೋ ಅವೆಲ್ಲವನ್ನೂ ನೀನು ಪಡೆದಿದ್ದೀಯೆ. ನಮ್ಮ ಕುಲದ ಸಮಗ್ರವಾದ ಸಂಪತ್ತನ್ನು ನೀನು ಪಡೆದಿದ್ದೀಯೆ.
ಉಪಸ್ಥಿತಃ ಸರ್ವಕಾಮೈಃ ತ್ರಿದಿವೇ ವಾಸವೋ ಯಥಾ |
ವಿವಿಧೈರನ್ನಪಾನೈಶ್ಚ ಪ್ರವರೈಃ ಕಿಂ ನು ಶೋಚಸಿ ॥17॥
ಸ್ವರ್ಗದಲ್ಲಿ ಇಂದ್ರನಂತೆ ಎಲ್ಲ ಕಾಮಗಳಿಂದಲೂ ನೀನು ಪೂರ್ಣನಾಗಿದ್ದೀಯೆ ಶ್ರೇಷ್ಠವಾದ ವಿಧವಿಧವಾದ ಅನ್ನ ಪಾನಗಳನ್ನು

ಹೊಂದಿದ್ದೀಯೆ. ಏಕೆ ಶೋಕಪಡುತ್ತೀಯೆ?
ಅಧೀತಾಃ ಕೃತವಾನ್ ವಿದ್ಯಾಃ ಪ್ರಿಯೋ ಮೇ ಲಾಳಿತೋ ಗೃಹೇ |
ಹಲಾಯುಧಾತ್ ಕೃಪಾದ್ ದ್ರೋಣಾದಸ್ತ್ರವಿದ್ಯಾಮಧೀತವಾನ್ |
ಭ್ರಾತುರ್ಜ್ಯೇಷ್ಠಃ ಸ್ಥಿತೋ ರಾಜ್ಯೇ ಕಿನ್ನು ಶೋಚಸಿ ಪುತ್ರಕ ॥18॥
ವಿದ್ಯೆಗಳನ್ನು ಅಧ್ಯಯನಮಾಡಿದ್ದೀಯೆ. ನೈಮಿತ್ತಿಕಕರ್ಮಗಳನ್ನು ಸಹ ಮಾಡಿದ್ದೀಯೆ. ನನ್ನ ಪ್ರೀತಿಪಾತ್ರನಾದ ನೀನು ಮನೆಯಲ್ಲಿ ನನ್ನಿಂದ ಲಾಲಿಸಲ್ಪಟ್ಟಿದ್ದೀಯೆ. ಬಲರಾಮನಿಂದಲೂ ಕೃಪರಿಂದಲೂ ದ್ರೋಣರಿಂದಲೂ ಅಸ್ತ್ರವಿದ್ಯೆಯನ್ನು ಸಂಪಾದಿಸಿದ್ದೀಯೆ. ನನ್ನ ಎಲ್ಲಾ ಪುತ್ರರಿಗೆ ಹಿರಿಯನಾಗಿ ನನ್ನ ರಾಜ್ಯದಲ್ಲಿ ಪ್ರತಿಷ್ಠಿತನಾಗಿದ್ದೀಯೆ. ಪುತ್ರನೇ! ಏಕೆ ಶೋಕವನ್ನು ಪಡುತ್ತೀಯೆ?
ಪೃಥಗ್ಜನೈರಲಭ್ಯಂ ಯದಶನಾಚ್ಛಾದನಂ ಬಹು |
ಪ್ರಭುಸ್ತ್ವಂ ಭುಂಜಸೇ ಪುತ್ರ ಸಂಸ್ತುತಃ ಸೂತಮಾಗಧೈಃ ॥19॥
ಪುತ್ರನೇ! ಸಾಮಾನ್ಯ ಜನರಿಗೆ ಅಲಭ್ಯವಾದ ಅನೇಕ ವಿಧವಾದ ಭೋಜನಾಚ್ಛಾದನಾದಿಗಳನ್ನು ಪ್ರಭುವಾದ ನೀನು ಅನುಭವಿಸುತ್ತಿರುವೆ. ಸೂತ ಮಾಗಧರಿಂದ ಸ್ತೋತ್ರಮಾಡಲ್ಪಡುತ್ತಿರುವೆ.
ತಸ್ಯ ತೇ ವಿದಿತಪ್ರಜ್ಞ ಶೋಕಮೂಲಮಿದಂ ಕಥಮ್ |
ಲೋಕೇಽಸ್ಮಿನ್ ಜ್ಯೇಷ್ಠಭಾಕ್ ಕೋ ಯಸ್ತನ್ಮಮಾಚಕ್ಷ್ವ ಪುತ್ರಕ ॥20॥
ಎಲೈ ವಿದಿತಪ್ರಜನೇ! (ಮೇಧಾವಿಯೇ) ಅಂತಹ ನಿನಗೆ ಶೋಕಕ್ಕೆ ಕಾರಣವೇನು? ಪುತ್ರನೇ! ಈ ಲೋಕದಲ್ಲಿ ನಿನಗಿಂತ ಸುಖವಾಗಿರದವನು ಯಾರಿದ್ದಾನೆ? ಅದನ್ನು ನನಗೆ ಹೇಳು.
ತಸ್ಯ ತದ್ವಚನಂ ಶ್ರುತ್ವಾ ಮಂದಃ ಕ್ರೋಧವಶಾನುಗಃ |
ಪಿತರಂ ಪ್ರತ್ಯುವಾಚೇದಂ ಸ್ವಮತಿಂ ಸಂಪ್ರಕಾಶಯನ್ ॥21॥
ಅವನ ಮಾತುಗಳನ್ನು ಕೇಳಿ ಮಂದನೂ ಕ್ರೋಧವಶನೂ ಆದ ದುರ್ಯೋಧನನು ತನ್ನ ಬುದ್ಧಿಯನ್ನು ತೋರಿಸಿಕೊಳ್ಳುತ್ತಾ ತಂದೆಯನ್ನು ಕುರಿತು ಹೀಗೆ ಉತ್ತರವನ್ನು ಕೊಟ್ಟನು.
ಅಶ್ನಾಮ್ಯಾಚ್ಛಾದಯೇ ಚಾಹಂ ಯಥಾ ಕಾಪುರುಷಸ್ತಥಾ |
ಅಮರ್ಷಂ ಧಾರಯೇ ಚೋಗ್ರಂ ತಿತಿಕ್ಷನ್ ಕಾಲಪರ್ಯಯಮ್ ॥22॥
ಹೌದು. ನಾನು ಒಬ್ಬ ದರಿದ್ರನಂತೆ ಭೋಜನವನ್ನುಮಾಡಿ ವಸ್ತ್ರಗಳನ್ನು ಧರಿಸುತ್ತಿದ್ದೇನೆ. ನನ್ನ ಉಗ್ರವಾದ ಕೋಪವನ್ನು ಒಳಗೆ ಧರಿಸಿದ್ದೇನೆ. ಕಾಲದ ವಿಪರ್ಯಾಸವನ್ನು ನೋಡಿ ಅದನ್ನು ಸಹಿಸಿಕೊಂಡಿದ್ದೇನೆ.
ಅಮರ್ಷಣಃ ಸ್ವಾಂ ಪ್ರಕೃತಿಮಭಿಭೂಯ ಚರೇದ್ಧಿತಮ್ |
ಕ್ಲೇಶಾನ್ಮುಮುಕ್ಷುಃ ಪರಜಾತ್ ಸ ವೈ ಪುರುಷ ಉಚ್ಯತೇ ॥23॥
ಯಾವನು ಕ್ರೋದಕ್ಕೆ ಒಳಗಾಗುವನೋ ಅವನು ತನ್ನ ಸ್ವಭಾವವನ್ನು ಮುಚ್ಚಿಕೊಂಡು ತನ್ನ ಹಿತವನ್ನು ಸಂಪಾದಿಸಿ ಇನ್ನೊಬ್ಬರಿಂದ ಉಂಟಾದ ಕ್ಲೇಶದಿಂದ ಮುಕ್ತನಾದರೆ ಅವನನ್ನು ನಿಜವಾದ ಪುರುಷನೆಂದು ಕರೆಯುತ್ತಾರೆ.
ಸಂತೋಷೋ ವೈ ಶ್ರಿಯಂ ಹಂತಿ ಅಭಿಮಾನಶ್ಚ ಭಾರತ |
ಅನುಕ್ರೋಶಃ ಶ್ರಿಯಂ ಹಂತಿ ಸಂತೋಷಶ್ಚಾಪಿ ತಾವುಭೌ |
ಅನುತ್ಥಾನಭಯೇ ಚೋಭೇ ತೈರ್ವೃತೋ ನಾಶ್ನುತೇ ಮಹತ್ ॥24॥
ಭಾರತನೇ! ಇದ್ದದ್ದರಲ್ಲೇ ತೃಪ್ತಿಪಡುವುದು ಐಶ್ವರ್ಯವನ್ನು ನಾಶಮಾಡುತ್ತದೆ. ಪುಣ್ಯಕರ್ಮದ ಶ್ರದ್ಧೆಯೂ ಐಶ್ವರ್ಯವನ್ನು ನಾಶಮಾಡುತ್ತದೆ. ಸರ್ವಪ್ರಾಣಿದಯೆಯೂ ಐಶ್ವರ್ಯವನ್ನು ನಾಶಮಾಡುತ್ತದೆ. ಸಂತೋಷ (ತೃಪ್ತಿ) ಅಭಿಮಾನ ದಯೆ ಅನುತ್ಸಾಹ ಮತ್ತು ಭಯ ಈ ಐದರಿಂದ ಯುಕ್ತನಾದವನು ಮಹಾಧನವನ್ನು ಸಾಧಿಸುವುದಿಲ್ಲ.
ನ ಮಾಮವ್ಯೈಹಿ ತಾಂ ಭೂತಾಂ ಶ್ರಿಯಂ ದೃಷ್ಟ್ವಾ ಯುಧಿಷ್ಠಿರೇ |
ಜ್ವಲಂತೀಮಿವ ರಾಜೇಂದ್ರ ವಿವರ್ಣಕರಣೀಂ ಮಮ ॥25॥
ರಾಜೇಂದ್ರನೇ! ಯುಧಿಷ್ಠಿರನಲ್ಲಿರುವ ಪ್ರಭೂತವಾದ ಜ್ವಲಂತವಾದ ನನ್ನ ವಿವರ್ಣಕ್ಕೆ ಕಾರಣವಾದ ಆ ಸಂಪತ್ತನ್ನು ನೋಡಿದ ಮೇಲೆ ನನ್ನ ಐಶ್ವರ್ಯವು ಅದರ ಮುಂದೆ ಏನೂ ಅಲ್ಲ ಎಂದು ತಿಳಿ.
ಸಪತ್ನಾನೃದ್ಧ್ಯತೋಽಸ್ಮಾಂಶ್ಚ ಹೀಯಮಾನಾನ್ ನಿಶಾಮ್ಯ ಕಿಮ್ |
ಅದೃಶ್ಯಮಪಿ ಕೌಂತೇಯೇ ನಾಹಂ ಪಶ್ಯಾಮಿ ವರ್ಧತೀಮ್ |
ತಸ್ಮಾದಹಂ ವಿವರ್ಣಶ್ಚ ದೀನಶ್ಚ ಹರಿಣಃ ಕೃಶಃ ॥26॥
ಶತ್ರುಗಳು ವೃದ್ಧಿಯನ್ನು ಹೊಂದುತ್ತಿರುವುದನ್ನೂ ನಾವು ಕ್ಷಯವನ್ನು ಹೊಂದುತ್ತಿರುವುದನ್ನೂ ನೋಡಿ ಧರ್ಮರಾಜನಲ್ಲಿ ನಿತ್ಯವೂ ಅಭಿವೃದ್ಧಿಯನ್ನು ಹೊಂದುತ್ತಿರುವ ಕಣ್ಣಿನಿಂದ ನೋಡಲು ಅಸಾಧ್ಯವಾದ ಆ ಸಂಪತ್ತನ್ನು ನೋಡಿ ನನ್ನ ಐಶ್ವರ್ಯವು ನನ್ನ ಕಣ್ಣಿಗೆ ಕಾಣಿಸುತ್ತಿಲ್ಲ. (ಇನ್ನು ಭೋಗಿಸುವುದು ಎಲ್ಲಿಯ ಮಾತು?) ಆದ್ದರಿಂದ ದೀನನೂ ವಿವರ್ಣನೂ ಹರಿಣನೂ ಕೃಶನೂ ಆಗಿದ್ದೇನೆ.
ಅಷ್ಟಾಶೀತಿಸಹಸ್ರಾಣಿ ಸ್ನಾತಕಾ ಗೃಹಮೇಧಿನಃ |
ತ್ರಿಂಶದ್ದಾಸೀಕ ಏಕೈಕೋ ಯಾನ್ ಬಿಭರ್ತಿ ಯುಧಿಷ್ಠಿರಃ ॥27॥
ಎಂಬತ್ತೆಂಟು ಸಾವಿರ ಸ್ನಾತಕರು ಯುಧಿಷ್ಠಿರನ ಮನೆಯಲ್ಲಿ ಇದ್ದಾರೆ. ಅವರಲ್ಲಿ ಒಬ್ಬೊಬ್ಬರಿಗೂ ಮೂವತ್ತು ದಾಸಿಯರಿದ್ದಾರೆ. ಅವರನ್ನು ಯುಧಿಷ್ಠಿರನು ಪೋಷಿಸುತ್ತಾನೆ.
ದಶಾನ್ಯಾನಿ ಸಹಸ್ರಾಣಿ ನಿತ್ಯಂ ತತ್ರಾನ್ನಮುತ್ತಮಮ್ |
ಭುಂಜತೇ ರುಗ್ಮಪಾತ್ರೀಭಿರ್ಯುಧಿಷ್ಠಿರನಿವೇಶನೇ ॥28॥
ಇನ್ನೂ ಹತ್ತು ಸಹಸ್ರ ಸ್ನಾತಕರು ಅಲ್ಲಿ ಯುಧಿಷ್ಠಿರನ ಮನೆಯಲ್ಲಿ ನಿತ್ಯವೂ ಸುವರ್ಣಮಯವಾದ ಪಾತ್ರೆಗಳಲ್ಲಿ ಶ್ರೇಷ್ಠವಾದ

ಭೋಜನವನ್ನು ಮಾಡುತ್ತಾರೆ.
ಶತ್ರೋರ್ವೃದ್ಧಿವಿಶೇಷೇಣ ವಿರೂಪೋಽನ್ನವಿವರ್ಜಿತಃ|
ಕದಳೀಪತ್ರವರ್ಣಾನಿ ಕೃಷ್ಣಶ್ಯಾಮಾರುಣಾನಿ ಚ|
ಕಾಂಭೋಜಃ ಪ್ರಾಹಿಣೋತ್ ತಸ್ಮೈ ಪರಾರ್ಘ್ಯಾನಪಿ ಕಂಬಳಾನ್ ॥29॥
ಶತ್ರುವಿನ ವಿಶೇಷವಾದ ಸಮೃದ್ಧಿಯನ್ನು ನೋಡಿ ನಾನು ಅನ್ನವನ್ನು ತ್ಯಜಿಸಿ ನನ್ನ ಆಕಾರವನ್ನು ಕಳೆದುಕೊಂಡಿದ್ದೇನೆ. ಕಾಂಭೋಜರಾಜನು ಅವನಿಗೆ ಬಾಳೆಯ ಎಲೆಯ ವರ್ಣದ ಮತ್ತು ಕೃಷ್ಣ ಶ್ಯಾಮವರ್ಣದ ಬೆಲೆಬಾಳುವ ಅನೇಕ ಕಂಬಳಿಗಳನ್ನು ಕಳುಹಿಸಿದನು.
ಗಜಯೋಷಿದ್ಗವಾಶ್ವಾನಾಂ ಸಹಸ್ರಾಣಿ ಚತುರ್ದಶ|
ತ್ರಿಶತಂ ಚೋಷ್ಟ್ರವಾಮೀನಾಂ ಸಹಸ್ರಾಣಿ ವಹಂತ್ಯುತ ॥30॥
ಏವಂ ಸರ್ವಾಣಿ ರತ್ನಾನಿ ಪೃಥಿವ್ಯಾಂ ಸರ್ವಪಾರ್ಥಿವಾಃ|
ಪ್ರಯಚ್ಛಂತಿ ಮಹಾರಾಜ ಕುಂತೀಪುತ್ರಸ್ಯ ಸರ್ವತಃ ॥31॥
ಯುಧಿಷ್ಠಿರನ ರತ್ನಗಳನ್ನು ಹದಿನಾಲ್ಕು ಸಾವಿರ ಹೆಣ್ಣಾನೆಗಳು ಗೋವುಗಳು ಅಶ್ವಗಳು ಮತ್ತು ಮೂರುಸಹಸ್ರ ಒಂಟೆಗಳು ಹೊರುತ್ತವೆ. ಮಹಾರಾಜನೇ! ಹೀಗೆ ಭೂಮಿಯಲ್ಲಿರುವ ರತ್ನವೆಲ್ಲವನ್ನೂ ಎಲ್ಲಾ ರಾಜರೂ ಎಲ್ಲಾ ಕಡೆಗಳಿಂದ ತಂದು ಕುಂತೀ ಪುತ್ರನಿಗೆ ಒಪ್ಪಿಸುತ್ತಾರೆ.
ನ ಕ್ವಚಿದ್ಧಿ ಮಯಾ ದೃಷ್ಟಸ್ತಾದೃಶೋ ನೈವ ಚ ಶ್ರುತಃ|
ಯಾವದ್ಧನಾಗಮೋ ಯಜ್ಞೇ ಪಾಂಡುಪುತ್ರಸ್ಯ ಧೀಮತಃ ॥32॥
ಮೇಧಾವಿಯಾದ ಧರ್ಮರಾಜನ ಯಜ್ಞದಲ್ಲಿ ಎಷ್ಟುಯ ಧನವು ಪ್ರಾಪ್ತವಾಯಿತೋ ಅಂತಹದನ್ನು ನಾನು ಹಿಂದೆ ನೋಡಲೂ ಇಲ್ಲ ಅಥವಾ ಕೇಳಲೂ ಇಲ್ಲ.
ಅಪರ್ಯಂತಂ ಧನೌಘಂ ತಂ ದೃಷ್ಟ್ವಾ ಶತ್ರೋರಹಂ ನೃಪ|
ಶಮಂ ನೈವಾಧಿಗಚ್ಛಾಮಿ ಚಿಂತಯಾನೋ ದಿವಾನಿಶಮ್ ॥33॥
ಬ್ರಾಹ್ಮಣಾ ವಾಟಧಾನಾಶ್ಚ ಗೋಮಂತಃ ಶತಸಂಘಶಃ|
ತ್ರೈವರ್ಣಾಃ ಬಲಿಮಾದಾಯ ದ್ವಾರಿ ತಿಷ್ಠಂತಿ ವಾರಿತಾಃ ॥34॥
ಶತ್ರುವಿನ ಎಲ್ಲೆಯೇ ಇಲ್ಲದ ಆ ಧನರಾಶಿಯನ್ನು ನೋಡಿದಮೇಲೆ ಎಲೈ ರಾಜನೇ! ಅದನ್ನೇ ಹಗಲೂ ರಾತ್ರಿಯೂ ಚಿಂತಿಸುತ್ತಾ ನನ್ನ ಮನಸ್ಸಿಗೆ ಸಮಾಧಾನವೇ ದೊರೆಯುತ್ತಿಲ್ಲ. ಬ್ರಾಹ್ಮಣರು, ಪುಷ್ಪವಾಟಗಳಿಂದ ಧನವನ್ನು ಗಳಿಸಿದವರು ಗೋಸಂಪತ್ತನ್ನು ಉಳ್ಳವರು, ಮೂರು ವರ್ಣಗಳಿಗೆ ಸೇರಿದವರು, (ತ್ರಿಗರ್ತದೇಶಕ್ಕೆ ಸೇರಿದವರು) ಕಪ್ಪ ಕಾಣಿಕೆಗಳನ್ನು ಹಿಡಿದುಕೊಂಡು ಅವನ ದ್ವಾರದಲ್ಲಿ ದ್ವಾರಪಾಲಕರಿಂದ ತಡೆಯಲ್ಪಟ್ಟು ನಿಂತಿದ್ದಾರೆ.
ಕಮಂಡಲೂನುಪಾದಾಯ ಜಾತರೂಪಮಯಾನ್ ಶುಭಾನ್|
ತ್ರೈಖರ್ವಾಃ ಪ್ರತಿಪಾದ್ಯಾಸ್ಮೈಲೇಭಿರೇಽಥ ಪ್ರವೇಶನಮ್ ॥35॥
ತ್ರಿಖರ್ವದೇಶದವರು ಸುವರ್ಣಮಯವಾದ ಕಮಂಡಲುಗಳನ್ನು ತೆಗೆದುಕೊಂಡು ಬಂದು ಅವನಿಗೆ ನಿವೇದಿಸಿ ಅನಂತರ ಪ್ರವೇಶವನ್ನು ಪಡೆದರು.
ಯನ್ನೈವ ಮಧು ಶಕ್ರಾಯ ಪ್ರಾಪಯಂತ್ಯಮರಸ್ತ್ರಿಯಃ|
ತದಸ್ಮೈ ಕಾಮಮಾಹರ್ಷನ್ ವಾರುಣೀರಸಮುತ್ತಮಮ್ ॥36॥
ದೇವತಾಸ್ತ್ರೀಯರು ಇಂದ್ರನಿಗೆ ಯಾವ ಮಧುವನ್ನು ತೆಗೆದುಕೊಂಡು ಹೋಗಲು ಸಾಧ್ಯವಿಲ್ಲವೋ ಅಂತಹ ಉತ್ತಮವಾದ ವಾರುಣಿ ರಸರೂಪವಾದ ಮಧುವನ್ನು ಧರ್ಮರಾಜನಿಗೆ ತೆಗೆದುಕೊಂಡು ಹೋಗುತ್ತಾರೆ.
ರುಗ್ಮಸ್ಯ ತು ಸಹಸ್ರಂ ಚ ಕಲಶಂ ರತ್ನಭೂಷಿತಮ್|
ದೃಷ್ಟ್ವಾಽಥ ಮೇ ಮನಸ್ತಾತ ಜ್ವರರೂಪಮಿವಾಭವತ್ ॥37॥
ಪ್ರೀತಿಪಾತ್ರನೇ! ರತ್ನವಿಭೂಷಿತವಾದ ಸುವರ್ಣಮಯವಾದ ಸಹಸ್ರ ಕಲಶಗಳನ್ನು ನೋಡಿ ನನ್ನ ಮನಸ್ಸಿಗೆ ಜ್ವರ ಬಂದಂತೆ ಆಗಿದೆ.
ಗೃಹೀತ್ವಾ ಕಲಶಾನ್ ಯಾಂತಿ ಸಮುದ್ರೌ ಪೂರ್ವದಕ್ಷಿಣೌ|
ತಥೈವ ಪಶ್ಚಿಮಂ ಯಾಂತಿ ಗೃಹೀತ್ವಾ ಭರತರ್ಷಭ ॥38॥
ಜಲಾರ್ಥಂ ತತ್ರ ರಾಜೇಂದ್ರ ಘಟಾನಾದಾಯ ರಾಕ್ಷಸಾಃ|
ದಿಶೋ ಯಯುರ್ಜಲಾರ್ಥಂ ತೇ ವರ್ಜಯಿತ್ವೋತ್ತರಾಂ ದಿಶಮ್ ॥
ಭರತರ್ಷಭನೇ! ಆ ಕಲಶಗಳನ್ನು ತೆಗೆದುಕೊಂಡು ರಾಕ್ಷಸರು ಪೂರ್ವ ದಕ್ಷಿಣ ಮತ್ತು ಪಶ್ಚಿಮ ಸಮುದ್ರಗಳಿಗೆ ನೀರನ್ನು ತರಲು ಹೋಗುತ್ತಾರೆ. ರಾಜೇಂದ್ರನೇ! ಅವರು ಉತ್ತರದಿಕ್ಕನ್ನು ಬಿಟ್ಟು ಉಳಿದ ಎಲ್ಲಾ ದಿಕ್ಕುಗಳಿಗೂ ನೀರನ್ನು ತರಲು ಹೋಗುತ್ತಾರೆ.
ಉತ್ತರಂ ತು ನ ಗಚ್ಛಂತಿ ವಿನಾ ತಾತ ಪತತ್ರಿಭಿಃ|
ತತ್ರ ಗತ್ವಾಽರ್ಜುನೋ ದಂಡಮಾಜಹಾರಾಮಿತಂ ಧನಮ್ ॥40॥
ಪಕ್ಷಿಗಳನ್ನು ಬಿಟ್ಟು ಇನ್ನು ಯಾರೂ ಉತ್ತರದಿಕ್ಕಿಗೆ ಮಾತ್ರ ಹೋಗುವುದಿಲ್ಲ. ಆದರೆ ಅರ್ಜುನನು ಮಾತ್ರ ಅಲ್ಲಿಗೂ ಹೋಗಿ ಅಪಾರವಾದ ಧನವನ್ನು ಕಾಣಿಕೆಯಾಗಿ ತೆಗೆದುಕೊಂಡು ಬಂದನು.
ಕೃತಾಂ ಬೈಂದುಸರೈ ರತ್ನೈರ್ಮಯೇನ ಸ್ಫಾಟಿಕಚ್ಛದಾಮ್|
ಅಪಶ್ಯಂ ನಲಿನೀಂ ಪೂರ್ಣಾಮುದಕಸ್ಯೇವ ಭಾರತ ॥41॥
ಭಾರತನೇ! ಮಯನು ಬಿಂದುಸರೋವರದ ರತ್ನಗಳಿಂದ ನಿರ್ಮಿಸಿದ ಸ್ಪಟಿಕದ ಹೊದಿಕೆಯುಳ್ಳ ನೀರಿನಿಂದ ತುಂಬಿರುವ

ಸರೋವರದಂತೆ  ಕಾಣುವ ಪ್ರದೇಶವನ್ನು ನಾನು ನೋಡಿದೆನು.
ಉತ್ಕರ್ಷಂತಂ ಚ ವೈ ವಾಸ ಪ್ರಾಹಸನ್ಮಾಂ ವೃಕೋದರಃ |
ಕಿಂಕರಾಶ್ಚ ಸಭಾಪಾಲಾ ಜಹಸುರ್ಭರತರ್ಷಭ ॥42॥
ಎಲೈ ಭರತರ್ಷಭನೇ! ನಾನು ನನ್ನ ವಸ್ತ್ರವನ್ನು ಎತ್ತಿಹಿಡಿದುದನ್ನು ನೋಡಿ ಭೀಮಸೇನನೂ ಕಿಂಕರರು ಮತ್ತು ಸಭಾಪಾಲರೂ ನನ್ನನ್ನು ಹಾಸ್ಯಮಾಡಿದರು.
ಪಿತ್ರೋರರ್ಥೇ ವಿಶೇಷೇಣ ಪ್ರಾವೃಣ್ವಂ ತತ್ರ ಜೀವಿತಮ್ |
ತತ್ರ ಸ್ಮ ಯದಿ ಶಕ್ತಃ ಸ್ಯಾಂ ಘಾತಯೇಯಂ ವೃಕೋದರಮ್ |
ಸಪತ್ನೇನಾಪಹಾಸೋ ಹಿ ಸ ಮಾಂ ದಹತಿ ಭಾರತ ॥43॥
ತಂದೆ ತಾಯಿಗಳ ಸಲುವಾಗಿ ನಾನು ಅಲ್ಲಿ ನನ್ನ ಜೀವವನ್ನು ಹಿಡಿದುಕೊಂಡೆ. ನನಗೆ ಶಕ್ತಿಯಿದ್ದರೆ ಆಗಲೇ ಭೀಮಸೇನನನು ಕೊಲ್ಲುತ್ತಿದ್ದೆ. ಎಲೈ ಭಾರತನೇ! ಶತ್ರುವು ಮಾಡಿದ ಅಪಹಾಸವು ನನ್ನನ್ನು ಸುಡುತ್ತಿದೆ.
ತತ್ರ ಸ್ಫಾಟಿಕತೋಯಾಂ ಹಿ ಸ್ಫಾಟಿಕಾಂಬುಜಶೋಭಿತಾಮ್ |
ಸಭಾಂ ಪುಷ್ಕರಿಣೀಂ ಮತ್ವಾ ಪತಿತೋಽಸ್ಮಿ ನರಾಧಿಪ ॥44॥
ಅಲ್ಲಿ ಸ್ಫಟಿಕದಂತೆ ಶುದ್ಧ ನೀರುಳ್ಳ ಸ್ಫಟಿಕದ ವರ್ಣದ ಶುದ್ಧವಾದ ಕಮಲಗಳಿಂದ ಶೋಭಿಸುವ ಪುಷ್ಕರಿಣಿಯನ್ನು  ನೆಲವೆಂದು ತಿಳಿದು ಅದರೊಳಗೆ ಬಿದ್ದೆನು.
ತತ್ರ ಮಾಮಹಸದ್ ಭೀಮಃ ಸಹ ಪಾರ್ಥೇನ ಸಸ್ವರಮ್ |
ದ್ರೌಪದೀ ಚ ಸಹ ಸ್ತ್ರೀಭಿಃ ಪಾತಯಂತೀ ಮನೋ ಮಮ ॥45॥
ಎಲೈ ರಾಜನೇ! ಅಲ್ಲಿ ಭೀಮ ಮತ್ತು ಅರ್ಜುನರು ನನ್ನನ್ನು ನೋಡಿ ಗಟ್ಟಿಯಾಗಿ ನಕ್ಕರು. ದ್ರೌಪದಿಯೂ ಸಹ ಉಳಿದ ಸ್ತ್ರೀಯರ ಜೊತೆಯಲ್ಲಿ ನನ್ನ ಮನಸ್ಸನ್ನು ಭೇದಿಸುವಂತೆ ನಕ್ಕಳು.
ಕ್ಲಿನ್ನವಸ್ತ್ರಸ್ಯ ಚ ತೇ ಕಿಂಕರಾ ರಾಜಚೋದಿತಾಃ |
ದದುರ್ವಾಸಾಂಸಿ ಮೇಽನ್ಯಾನಿ ತಚ್ಚ ದುಃಖತರಂ ಮಮ ॥46॥
ಎಲ್ಲ ವಸ್ತ್ರಗಳು ಒದ್ದೆಯಾದ ನನಗೆ ಧರ್ಮರಾಜನಿಂದ ಪ್ರೇರಿತರಾದ ಸೇವಕರು ಬೇರೆ ವಸ್ತ್ರಗಳನ್ನು ತಂದುಕೊಟ್ಟರು. ಅದೂ ನನಗೆ ಅತ್ಯಂತ ದುಃಖದಾಯಕವಾಗಿದೆ.
ಅಸ್ತಂಭಾ ಇವ ತಿಷ್ಠಂತಿ ಸ್ತಂಭಾಃ ಶತಸಹಸ್ರಶಃ |
ಸೋಽಹಂ ತತ್ರಾಹತೋ ರಾಜನ್ ಸ್ಫಟಿಕಾಭ್ಯಂತರೇ ವಿಭೋ ॥47॥
ಎಲೈ ರಾಜನೇ! ಆ ಸಭೆಯಲ್ಲಿ ನೂರಾರು ಸಾವಿರಾರು ಸ್ತಂಭಗಳು ಇದ್ದರೂ ಸ್ಥಂಭಗಳೇ ಇಲ್ಲದಂತೆ ಕಾಣುತ್ತವೆ.  ವಿಭುವೇ! ನಾನು ಅಲ್ಲಿ ಸ್ಫಟಿಕಮಯವಾದ ಮಧ್ಯಪ್ರದೇಶದಲ್ಲಿ ತಲೆಯನ್ನು ಗಟ್ಟಿಸಿಕೊಂಡೆ.
ಅದ್ವಾರೇಣ ವಿನಿರ್ಗಚ್ಛನ್ ದ್ವಾರಸಂಸ್ಥಾನರೂಪಿಣಾ |
ಅಭಿಹತ್ಯ ಶಿಲಾಂ ಭೂಯೋ ಲಲಾಟೇನಾಸ್ಮಿ ವಿಕ್ಷತಃ ॥48॥
ದ್ವಾರವು ಇಲ್ಲದಿರುವ ಕಡೆಯಲ್ಲಿ ದ್ವಾರದಂತೆ ತೋರುತ್ತಿರುವ ಆಕಾರವನ್ನು ಗಮನಿಸಿ ಹೊರಗೆ ಬರಲು ಇಚ್ಛಿಸಿ ಆ ಶಿಲೆಗೆ ಡಿಕ್ಕಿಯನ್ನು ಹೊಡೆದು ಹಣೆಯಲ್ಲಿ ಗಾಯಗೊಂಡೆನು.
ಆಮೃಶನ್ನಿವ ತಾಂ ದೃಷ್ಟ್ವಾ ಮಾರ್ಗಾಂತರಮುಪಾವಿಶಮ್ |
ಸ್ತ್ರಿಯಶ್ಚ ತತ್ರ ಮಾಂ ದೃಷ್ಟ್ವಾ ಜಹಸುಸ್ತಾದೃಶಂ ನೃಪ ॥49॥
ಮಾರ್ಗವನ್ನು ಹುಡುಕುವವಂತೆ ಹಸ್ತಗಳಿಂದ ಪ್ರಯತ್ನಪಡುತ್ತಾ ನಾನು ಭಿತ್ತಿಯ ಇನ್ನೊಂದು ಭಾಗದಲ್ಲಿ ಬಿದ್ದೆನು. ಎಲೈ ರಾಜನೇ! ಅಂತಹ ನನ್ನನ್ನು ನೋಡಿ ಸ್ತ್ರೀಯರು ನಕ್ಕರು.
ಇದಂ ದ್ವಾರಮಿದಂ ರಾಜನ್ ನ ದ್ವಾರಮಿತಿ ಮಾಂ ಪ್ರತಿ |
ಅಗ್ರತಃ ಪ್ರಹಸನ್ ವಾಕ್ಯಂ ಬಭಾಷೇ ಸ ವೃಕೋದರಃ |
ಸರ್ವಂ ಹಾಸಕರಂ ತೇಷಾಂ ಸದಸ್ಯಾನಾಂ ನರರ್ಷಭ ॥50॥
ಭೀಮಸೇನನು ನನ್ನ ಸಮೀಪಕ್ಕೆ ಬಂದು ಮುಂದೆ ನಿಂತು ನಗುತ್ತಾ ರಾಜನೇ! ಇದು ದ್ವಾರ ಇದು ದ್ವಾರವಲ್ಲ ಎಂದು ಹೇಳಿದನು. ನರಶ್ರೇಷ್ಠನೇ! ನಾನು ಅಲ್ಲಿ ಮಾಡುದುದೆಲ್ಲವೂ ಸದಸ್ಯರಿಗೆ ಹಾಸ್ಯದ ವಿಷಯವಾಗಿದ್ದಿತು.
ನ ಶ್ರುತಾನಿ ನ ದೃಷ್ಟಾನಿ ಯಾನಿ ರತ್ನಾನಿ ಮೇ ಕ್ವಚಿತ್ |
ತಾನಿ ಮೇ ತತ್ರ ದೃಷ್ಟಾನಿ ತೇನ ತಪ್ತೋಽಸ್ಮಿ ದುಃಖಿತಃ ॥51॥
ನಾನು ಯಾವ ರತ್ನಗಳನ್ನು ನೋಡಿಲ್ಲವೋ ಅಥವಾ ಕೇಳಿಲ್ಲವೋ ಅಂತಹ ರತ್ನಗಳನ್ನೆಲ್ಲಾ ಅಲ್ಲಿ ನೋಡಿದೆ. ಅದರಿಂದ ತಾಪವುಳ್ಳವನೂ ದುಃಖಿತನೂ ಆಗಿದ್ದೇನೆ.
ಹುತಾಶನಂ ಪ್ರವೇಕ್ಷ್ಯಾಮಿ ಪ್ರವಿಶೇ ವಾ ಮಹೋದಧಿಮ್ |
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥52॥
ನಾನು ಅಗ್ನಿಪ್ರವೇಶವನ್ನು ಮಾಡುವೆನು. ಅಥವಾ ಸಮುದ್ರವನ್ನಾದರೂ ಪ್ರವೇಶಮಾಡುವೆನು. ಮರ್ಯಾದೆಯಿಂದ ಇದ್ದವನಿಗೆ ಅಪಕೀರ್ತಿ ಉಂಟಾದರೆ ಅದು ಮರಣಕ್ಕಿಂತಲೂ ಹೆಚ್ಚು ಬಾಧಿಸುತ್ತದೆ.
ಇದಂ ಚಾದ್ಭುತಮತ್ರಾಸೀತ್ ತನ್ಮೇ ಕಥಯತಃ ಶೃಣು |
ಪೂರ್ಣೇ ಶತಸಹಸ್ರೇ ತು ವಿಪ್ರಾಣಾಂ ಭುಂಜತಾಂ ಸದಾ |
ಸ್ಥಾಪಿತಾ ತತ್ರ ಸಂಜ್ಞಾಽಭೂತ್ ಶಂಖೋಽಧ್ಮಾಯತ ನಿತ್ಯಶಃ ॥53॥

ಅಲ್ಲಿ ಇನ್ನೊಂದು ಅದ್ಭುತವಾದ ಘಟನೆಯು ನಡೆಯಿತು. ಅದನ್ನು ಹೇಳುತ್ತೇನೆ ಕೇಳು. ಒಂದು ಲಕ್ಷ ಬ್ರಾಹ್ಮಣರ ಭೋಜನವಾದ ಮೇಲೆ ಅದನ್ನು ಸೂಚಿಸಲು ಸ್ಥಾಪಿತವಾದ ಶಂಖವು ಯಾವಾಗಲೂ ನಾದವನ್ನು ಮಾಡುತ್ತಿತ್ತು.
ಮುಹುರ್ಮುಹುಃ ಪ್ರಣದತಸ್ತಸ್ಯ ಶಂಖಸ್ಯ ನಿಸ್ವನಃ |
ಅನಿಶಂ ಶ್ರೂಯತೇ ತತ್ರ ತತೋ ರೋಮಾಣಿ ಮೇಽಹೃಷನ್ ॥54॥
ಮತ್ತೆ ಮತ್ತೆ ಹೀಗೆ ನಾದವನ್ನು ಮಾಡುವ ಆ ಶಂಖಧ್ವನಿಯು ಅಲ್ಲಿ ಯಾವಾಗಲೂ ಕೇಳಿ ಬರುತ್ತಿತ್ತು. ಅದರಿಂದ ನನಗೆ ರೋಮಾಂಚನವಾಯಿತು.
ಪಾರ್ಥಿವೈರ್ಬಹುಭಿಃ ಕೀರ್ಣಮುಪಸ್ಥಾನಂ ದಿದೃಕ್ಷುಭಿಃ |
ಸರ್ವರತ್ನಾನ್ಯುಪಾದಾಯ ಮಹಾರ್ಹಾಣಿ ಜನೇಶ್ವರ ॥55॥
ಎಲೈರಾಜನೇ! ಧರ್ಮರಾಜನ ಉಪಸ್ಥಾನದ ಸಮಯದಲ್ಲಿ ಅನೇಕ ರಾಜರು ಬೆಲೆಬಾಳುವ ಎಲ್ಲಾ ರತ್ನಗಳನ್ನೂ ತೆಗೆದುಕೊಂಡು ಬಂದು ಅದನ್ನು ನೋಡುತ್ತಿದ್ದರು.
ಯಜ್ಞೇ ತಸ್ಯ ಮಹಾಭಾಗ ಪಾಂಡವೇಯಸ್ಯ ಧೀಮತಃ |
ವೈಶ್ಯಾ ಇವ ಮಹೀಪಾಲಾ ದ್ವಿಜಾತಿಪರಿವೇಷಕಾಃ ॥56॥
ಎಲೈ ಮಹಾನುಭಾವನಾದ ರಾಜನೇ! ಪಾಂಡುಪುತ್ರನಾದ ಧರ್ಮರಾಜನ ಯಜ್ಞದಲ್ಲಿ ರಾಜರು ವೈಶ್ಯರಂತೆ ಬ್ರಾಹ್ಮಣರಿಗೆ ಭೋಜನವನ್ನು ಬಡಿಸುತ್ತಿದ್ದರು.
ನ ಸಾ ಶ್ರೀರ್ದೇವರಾಜಸ್ಯ ಯಮಸ್ಯ ವರುಣಸ್ಯ ವಾ |
ಗುಹ್ಯಕಾಧಿಪತೇರ್ವಾಽಪಿ ಸ್ವಯಂ ವಿಷ್ಣೋರಪಿ ಪ್ರಭೋ |
ರಾಕ್ಷಸಾಧಿಪತೇರ್ವಾಽಪಿ ಯಾ ಶ್ರೀ ರಾಜನ್ ಯುಧಿಷ್ಠಿರೇ ॥57॥
ರಾಜನೇ! ಧರ್ಮರಾಜನಲ್ಲಿ ಯಾವ ಸಂಪತ್ತು ಇದೆಯೋ ಅಂತಹ ಸಂಪತ್ತು ಇಂದ್ರನಿಗೂ ಇಲ್ಲ. ಯಮನಿಗೂ ಇಲ್ಲ ವರುಣನಿಗೂ ಇಲ್ಲ ಗುಹ್ಯಕಾಧಿಪತಿಯಾದ ಕುಬೇರನಿಗೂ ಇಲ್ಲ. ಸ್ವಯಂ ವಿಷ್ಣುವಿಗೂ ಇಲ್ಲ. ರಾಕ್ಷಸಾಧಿಪತಿಯಾದ ರಾವಣನಿಗೂ ಇಲ್ಲ.
ತಾಂ ದೃಷ್ಟ್ವಾ ಪಾಂಡುಪುತ್ರಸ್ಯ ಶ್ರಿಯಂ ಪರಮಿಕಾಮಹಮ್ |
ಶಾಂತಿಂ ನ ಪರಿಗಚ್ಛಾಮಿ ದಹ್ಯಮಾನೇನ ಚೇತಸಾ ॥58॥
ಪಾಂಡುಪುತ್ರನ ಆ ಸರ್ವೋತ್ತಮವಾದ ಸಂಪತ್ತನ್ನು ನೋಡಿ ಮನಸ್ಸು ಉರಿಯುತ್ತಿದೆ. ನನಗೆ ಶಾಂತಿಯು ದೊರಕುತ್ತಿಲ್ಲ.
ಅಪ್ರಾಪ್ಯ ಪಾಂಡವೈಶ್ವರ್ಯಂ ಶಮೋ ಮಮ ನ ವಿದ್ಯತೇ |
ಅಧನ್ಯಾನ್ ಪಾತಯೇ ಬಾಣೈಃ ಶಯಿಷ್ಯೇ ವಾ ಹತಃ ಪರೈಃ ॥49॥
ಆ ಪಾಂಡವೈಶ್ಯರ್ಯವನ್ನು ಸಂಪಾದಿಸದೆ ನನ್ನ ಮನಸ್ಸಿಗೆ ಸಮಾದಾನವಾಗುವುದಿಲ್ಲ. ಆ ಅಧನ್ಯರಾದ ಅವರನ್ನು ನನ್ನ ಬಾಣಗಳಿಂದ ಹೊಡೆದು ಉರುಳಿಸುತ್ತೇನೆ. ಅಥವಾ ಅವರಿಂದ ಕೊಲ್ಲಲ್ಪಟ್ಟು ಭೂಮಿಯ ಮೇಲೆ ಮಲಗುತ್ತೇನೆ.
ಅತಾದೃಶಸ್ಯ ಮೇ ಕಿಂ ನು ಜೀವಿತೇನ ಪರಂತಪ |
ವರ್ಧಂತೇ ಪಾಂಡವಾ ರಾಜನ್ ವಯಂ ಹಿ ಸ್ಥಿತವೃದ್ಧಯಃ ॥60॥
ಪರಂತಪನೇ! ಹಾಗೆ ಮಾಡದಿದ್ದರೆ ನಾನು ಬದುಕಿ ಏನು ಫಲ? ರಾಜನೇ! ಪಾಂಡವರು ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ. ನಮ್ಮ ಅಭಿವೃದ್ಧಿಯು ಸ್ಥಗಿತವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ತೃತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ನ್ಯವಾರಯತ್ ತಂ ವಿದುರೋ ಮಹತ್ ತೇ
ಪಾಪಂ ಕುಲಸ್ಯಾಪಿ ವಿನಾಶಕೋಽಯಂ |
ಸಮುದ್ಯಮೋ ನಾತ್ರ ವಿಚಾರ್ಯಮಸ್ತಿ
ಕೃಥಾ ನ ತಸ್ಮಾದಯಶಶ್ಚ ತೇ ಸ್ಯಾತ್ ॥307॥
ವಿದುರ ಧೃತರಾಷ್ಟ್ರನನ್ನು ತಡೆಯಲು ಯತ್ನಿಸಿದ- `ನಿನಗೆ ಇದರಿಂದ ಮಹಾಪಾಪ ಬರುವುದು. ಕುಲಕ್ಕೂ ನಾಶಕವಾದ ಯತ್ನ ಇದು. ಇದರಲ್ಲಿ ವಿಚಾರ ಮಾಡಬೇಕಾದುದು ಏನೂ ಇಲ್ಲ. ಅದರಿಂದ ಮಾಡಲೇಬೇಡ. ನಿನಗೆ ಅಪಕೀರ್ತಿಯೂ ಬರುವುದು'.
ಇತಿ ಬ್ರುವಾಣಂ ಕಲಹೋಽತ್ರ ನ ಸ್ಯಾ-
ನ್ನಿವಾರಯಾಮೋ ವಯಮೇವ ಯಸ್ಮಾತ್ |
ದ್ರಷ್ಟುಂ ಸುತಾನ್ ಕ್ರೀಡತ ಏಕಸಂಸ್ಥಾ-
ನಿಚ್ಛಾಮಿ ಪಾರ್ಥಾಂಶ್ಚ ಸುಯೋಧನಾದೀನ್ ॥308॥
ವಿದುರ ಹೀಗೆ ಹೇಳಿದಾಗ ಧೃತರಾಷ್ಟ್ರನೆಂದ. `ಜೂಜಿನಲ್ಲಿ ಕಲಹವಾಗದು. ನಾವೇ ತಡೆಯುತ್ತೇವೆ. ಪಾಂಡವರೂ ದುರ್ಯೋಧನಾದಿಗಳೂ ನಮ್ಮ ಮಕ್ಕಳು. ಅವರು ಒಂದೆಡೆ ಕುಳಿತು ಆಟವಾಡುವುದನ್ನು ನಾನು ನೋಡಲು ಬಯಸುತ್ತೇನೆ.
ಅತಃ ಕ್ಷಿಪ್ರಮುಪಾನೇಯಾಃ ಪಾರ್ಥಾ ಇತಿ ಬಲೋದಿತಃ |
ಯಯೌ ಸ ವಿದುರಃ ಪಾರ್ಥಾನ್ ದ್ವಾರಕಾಂ ಕೇಶವೇ ಗತೇ ॥309॥

ಅದರಿಂದ ಬೇಗನೆ ಪಾಂಡವರನ್ನು ಇಲ್ಲಿಗೆ ಕರೆದು ತಾ ಎಂದು ಧೃತರಾಷ್ಟ್ರ ಬಲವಾಗಿ ಹೇಳಿದಾಗ ವಿದುರ ಪಾಂಡವರ ಬಳಿಗೆ ನಡೆದ.
ಆಗ ಶ್ರೀಕೃಷ್ಣ ಇಂದ್ರಪ್ರಸ್ಥದಲ್ಲಿ ಇರಲಿಲ್ಲ, ದ್ವಾರಕೆಗೆ ಹೋಗಿದ್ದ.
* * * *
ಎಪ್ಪತ್ತೆರಡನೆಯ ಅಧ್ಯಾಯ
(ದುರ್ಯೋಧನನಿಂದ ವಶೀಕೃತನಾದ ಧೃತರಾಷ್ಟ್ರನಿಂದ  ಧರ್ಮರಾಜನನ್ನು ಕರೆತರಲು ವಿದುರನ ಪ್ರೇಷಣೆ.)
ಶಕುನಿಃ
ಯಾಮೇತಾಮುತ್ತಮಾಂ ಲಕ್ಷ್ಮೀಂ ದೃಷ್ಟವಾನಸಿ ಪಾಂಡವೇ |
ತಸ್ಯಾಃ ಪ್ರಾಪ್ತಾವುಪಾಯಂ ಮೇ ಶೃಣು ಸತ್ಯಪರಾಕ್ರಮ ॥1॥
ಸತ್ಯಪರಾಕ್ರಮನಾದ ದುರ್ಯೋಧನನೇ! ಧರ್ಮರಾಜನ ಯಾವ ಉತ್ತಮವಾದ ಸಂಪತ್ತನ್ನು ನೋಡಿದ್ದೀಯೊ ಅದರ ಪ್ರಾಪ್ತಿಗೆ
ಉಪಾಯವನ್ನು ಹೇಳುತ್ತೇನೆ ಕೇಳು.
ಅಹಮಕ್ಷೇಷ್ವಭಿಜ್ಞೋ ಹಿ ಪೃಥಿವ್ಯಾಮಪಿ ಭಾರತ |
ಹೃದಯಜ್ಞಃ ಪಣಜ್ಞಶ್ಚ ವಿಶೇಷಜ್ಞಶ್ಚ ದೇವನೇ ॥2॥
ಎಲೈ ಭಾರತನೇ! ನಾನು ಪಗಡೆಯಾಟದಲ್ಲಿ ನಿಷ್ಣಾತನಾದವನೆಂದು ಭೂಮಿಯಲ್ಲೇ ಪ್ರಸಿದ್ಧನಾದವನು. ನಾನು ಆಟದ
ಹೃದಯವನ್ನೂ  ಪಣಕ್ಕಿಡುವ ರೀತಿಯನ್ನೂ, ಆಡುವ ಕ್ರಮವನ್ನೂ ವಿಶೇಷವಾಗಿ ತಿಳಿದಿದ್ದೇನೆ.
ದ್ಯೂತಪ್ರಿಯಶ್ಚ ಕೌಂತೇಯೋ ನ ಚ ಜಾನಾತಿ ದೇವಿತುಮ್ |
ಆಹೂತಶ್ಚೈಷ್ಯತಿ ವ್ಯಕ್ತಂ ದೀವ್ಯಾವೇತ್ಯಾಹ್ವಯ ಸ್ವಯಮ್ ॥3॥
ಧರ್ಮರಾಜನು ದ್ಯೂತಪ್ರಿಯ. ಆದರೆ ಅವನಿಗೆ ಪಗಡೆಯಾಡಲು ಬರುವುದಿಲ್ಲ. ಅವನನ್ನು ಆಹ್ವಾನಿಸಿದರೆ ಅವನು ನಿಶ್ಚಿತವಾಗಿ
ಬರುತ್ತಾನೆ. ಆಡೋಣ ಎಂದು ಹೇಳಿ ನೀನೇ ಅವನನ್ನು ಆಹ್ವಾನಿಸು.
ಏವಮುಕ್ತಃ ಶಕುನಿನಾ ರಾಜಾ ದುರ್ಯೋಧನಸ್ತದಾ |
ಧೃತರಾಷ್ಟ್ರಂ ನರವ್ಯಾಘ್ರಮಪದಾಂತರಮಬ್ರವೀತ್ ॥4॥
ಶಕುನಿಯಿಂದ ಹೀಗೆ ಹೇಳಲ್ಪಟ್ಟ ರಾಜನಾದ ದುರ್ಯೋಧನನು ಆಗ ನರವ್ಯಾಘ್ರನಾದ ಧೃತರಾಷ್ಟ್ರನನ್ನು ಕುರಿತು ಅವನಿಗೆ
ಮಾತನಾಡಲು ಅವಕಾಶವನ್ನು ನೀಡದೆ ಹೀಗೆ ಮಾತನಾಡಿದನು.
ಅಯಮುತ್ಸಹತೇ ರಾಜನ್ ಶ್ರಿಯಮಾಹರ್ತುಮಕ್ಷವಿತ್ |
ದ್ಯೂತೇನ ಪಾಂಡುಪುತ್ರಸ್ಯ ತದನುಜ್ಞಾತುಮರ್ಹಸಿ ॥5॥
ರಾಜನೇ! ಅಕ್ಷಜ್ಞನಾದ ಇವನು  ದ್ಯೂತದಲ್ಲಿ ಪಾಂಡುಪುತ್ರನಾದ ಧರ್ಮರಾಜನ ಸಂಪತ್ತನ್ನು ದೋಚಿಕೊಳ್ಳುವ ಉತ್ಸಾಹದಲ್ಲಿ
ಇದ್ದಾನೆ. ಅದಕ್ಕೆ ಅನುಮತಿಯನ್ನು ಕೊಡು.
ಧೃತರಾಷ್ಟ್ರಃ
ಕ್ಷತ್ತಾ ಮಂತ್ರೀ ಮಹಾಪ್ರಾಜ್ಞಃ ಸ್ಥಿತೋ ಯಸ್ಯಾಸ್ಮಿ ಶಾಸನೇ |
ತೇನ ಸಂಗಮ್ಯ ವೇತ್ಸ್ಯಾಮಿ ಕಾರ್ಯಾಕಾರ್ಯವಿನಿಶ್ಚಯಮ್ ॥6॥
ಮಹಾಪ್ರಾಜ್ಞನಾದ ವಿದುರನು ನನಗೆ ಮಂತ್ರಿಯಾಗಿದ್ದಾನೆ. ನಾನು ಯಾವಾಗಲೂ ಅವನ ಶಾಸನದಲ್ಲಿಯೇ ಇದ್ದೇನೆ. ನಾನು ಅವನ
ಜೊತೆಯಲ್ಲಿ ಮಾತನಾಡಿ ಕಾರ್ಯಾಕಾರ್ಯನಿರ್ಣಯವನ್ನು ತಿಳಿಯುವೆನು.
ಸ ಹಿ ಧರ್ಮಂ ಪುರಸ್ಕೃತ್ಯ ದೀರ್ಘದರ್ಶೀ ಪರಂ ಹಿತಮ್ |
ಉಭಯೋಃ ಪಕ್ಷಯೋಃ ಪಥ್ಯಂ ವಕ್ಷ್ಯತ್ಯರ್ಥವಿನಿಶ್ಚಯಮ್ ॥7॥
ದೀರ್ಘದರ್ಶಿಯಾದ ಅವನು ಧರ್ಮವನ್ನು ಮುಂದೆಮಾಡಿಕೊಂಡು ಎರಡೂ ಪಕ್ಷಗಳಿಗೆ ಹಿತವಾಗುವ ಮತ್ತು ಪಥ್ಯವಾದ ಅರ್ಥ
ನಿಶ್ಚಯವನ್ನು ಹೇಳುವನು.
ಅಥವಾ ವಾಸುದೇವಂ ವಾ ಭೀಷ್ಮಂ ವಾ ಕಾರ್ಯನಿಶ್ಚಯೇ |
ಆಹೂಯ ಮಂತ್ರಣಂ ಕುರ್ಯಾಂ ಕಥಂ ವ್ಯವಸಿತಂ ತವ ॥8॥
ಅಥವಾ ಕೃಷ್ಣನನ್ನಾಗಲೀ ಭೀಷ್ಮನನ್ನಾಗಲೀ ಕರೆದು ಕಾರ್ಯಾಕಾರ್ಯ ವಿಷಯದಲ್ಲಿ ಮಂತ್ರಾಲೋಚನೆಯನ್ನು  ಮಾಡುವೆನು.
ಇದರಲ್ಲಿ ನಿನ್ನ ಅಭಿಪ್ರಾಯವು ಹೇಗಿದೆ?
ದುರ್ಯೋಧನಃ
ನಿವರ್ತಯಿಷ್ಯತಿ ತ್ವಾಽಸೌ ಯದಿ ಕ್ಷತ್ತಾ ಸಮೇಷ್ಯತಿ |
ನಿವೃತ್ತೇ ತ್ವಯಿ ರಾಜೇಂದ್ರ ಮರಿಷ್ಯಾಮಿ ನ ಸಂಶಯಃ ॥9॥
ರಾಜೇಂದ್ರನೇ! ವಿದುರನು ಬಂದರೆ ನಿನ್ನನ್ನು ಈ ಪ್ರಯತ್ನದಿಂದ ಹಿಂದಿರುಗಿಸುವನು. ನೀನು ಹಿಮ್ಮೆಟ್ಟಿದರೆ ನಾನು ನಿಸ್ಸಂಶಯವಾಗಿ
ಮರಣವನ್ನು ಹೊಂದುವೆನು.
ಸ ತ್ವಂ ಮಯಿ ಮೃತೇ ರಾಜನ್ ವಿದುರೇಣ ಸುಖೀ ಭವ |
ಭೋಕ್ಷ್ಯಸೇ ಪೃಥಿವೀಂ ಕೃತ್ಸ್ನಾಂ ಕಿಂ ಮಯಾ ತ್ವಂ ಕರಿಷ್ಯಸಿ ॥10॥
ರಾಜನೇ! ನಾನು ಮೃತನಾದ ಮೇಲೆ ನೀನು ವಿದುರನ ಜೊತೆಯಲ್ಲಿ ಸುಖವಾಗಿರು. ಸಮಗ್ರ ಭೂಮಿಯನ್ನು
ಭೋಗಿಸಿಕೊಂಡಿರಬಹುದು. ನಿನಗೆ ನನ್ನಿಂದ ಏನು ಪ್ರಯೋಜನ?
ವೈಶಂಪಾಯನಃ
ಆರ್ತವಾಕ್ಯಂ ತು ತತ್ ತಸ್ಯ ಪ್ರಣಯೋಕ್ತಂ ನಿಶಮ್ಯ ಸಃ |

ದುರ್ಯೋಧನಸ್ಯ ಶಾಂತ್ಯರ್ಥಂ ಧೃತರಾಷ್ಟ್ರೋಽನ್ವಶಾತ್ ತದಾ ॥11॥
ಪ್ರೀತಿಯಿಂದ ಹೇಳಿದ ದುರ್ಯೋಧನನ ಅರ್ತವಾಕ್ಯವನ್ನು ಕೇಳಿ ಧೃತರಾಷ್ಟ್ರನು ಅವನನ್ನು ಉಪಶಮನಗೊಳಿಸುವ ಸಲುವಾಗಿ ಹೀಗೆ ಶಾಸನವನ್ನು ಮಾಡಿದನು.
ಸ್ಥೂಣಾಸಹಸ್ರೈರ್ಬೃಹತೀಂ ಶತದ್ವಾರಾಂ ಸಭಾಂ ಮಮ |
ಮನೋಹರಾಂ ದರ್ಶನೀಯಾಮಾಶು ಕುರ್ವಂತು ಶಿಲ್ಪಿನಃ ॥12॥
ನನ್ನ ಶಿಲ್ಪಿಗಳು ನನ್ನ ಸಲುವಾಗಿ ಸಹಸ್ರ ಸ್ಥಂಭಗಳನ್ನು ಹೊಂದಿದ ಶತದ್ವಾರಗಳನ್ನು ಹೊಂದಿದ ಸುಂದರವಾದ ದೊಡ್ಡದಾದ ಸಭೆಯನ್ನು ಬೇಗೆ ನಿರ್ಮಾಣಮಾಡಲಿ.
ತತಃ ಸಂಸ್ತೀರ್ಯ ರತ್ನೈಸ್ತಾಮಕ್ಷಾನ್ ಸಂಸ್ಥಾಪ್ಯ ಸರ್ವಶಃ|
ಸಂಸ್ಕೃತಾಂ ಸುಪ್ರವೇಶಾಂ ಚ ನಿವೇದಯತ ಮಾ ಚಿರಮ್ ॥13॥
ಅನಂತರ ಆ ಸಭೆಯನ್ನು ಎಲ್ಲ ಕಡೆಯಲ್ಲಿಯೂ ರತ್ನಗಳಿಂದ ಅಲಂಕರಿಸಿ ಎಲ್ಲಾ ಕಡೆಯೂ ಪಗಡೆಯ ಆಟಕ್ಕೆ ಅನುವುಮಾಡಿ ಸಭೆಯು ಸುಂಸ್ಕೃತವಾಗಿದೆ ಮತ್ತು ಸುಸಜ್ಜಿತವಾಗಿದೆ ಎಂದು ನನಗೆ ನಿವೇದಿಸಿ. ತಡಮಾಡಬೇಡಿ.
ವೈಶಂಪಾಯನಃ
ದುರ್ಯೋಧನಸ್ಯ ಶಾಂತ್ಯರ್ಥಮಿತಿ ನಿಶ್ಚಿತ್ಯ ಭೂಮಿಪಃ |
ಧೃತರಾಷ್ಟ್ರೋ ಮಹಾರಾಜ ಪ್ರಾಹಿಣೋದ್ ವಿದುರಾಯ ವೈ ॥14॥
ರಾಜನಾದ ಧೃತರಾಷ್ಟ್ರನು ದುರ್ಯೋಧನನ ಶಾಂತ್ಯರ್ಥವಾಗಿ ಹೀಗೆ ನಿಶ್ಚಯವನ್ನು ಮಾಡಿ ವಿದುರನನ್ನು ಕರೆತರಲು ದೂತರನ್ನು ಕಳುಹಿಸಿದನು.
ಅಪೃಷ್ಟ್ವಾ ವಿದುರಂ ಹ್ಯಸ್ಯ ನಾಸೀತ್ ಕಶ್ಚಿದ್ ವಿನಿರ್ಣಯಃ |
ದ್ಯೂತೇ ದೋಷಾಂಶ್ಚ ಜಾನನ್ ಸ ಪುತ್ರಸ್ನೇಹಾದಕೃಷ್ಯತ ॥15॥
ವಿದುರನನ್ನು ಕೇಳದೆ ಅವನು ಯಾವ ನಿರ್ಧಾರವನ್ನು ತೆಗೆದುಕೊಳ್ಳುತ್ತಿರಲಿಲ್ಲ. ದ್ಯೂತದ ದೋಷಗಳನ್ನು ತಿಳಿದವನಾಗಿದ್ದರೂ ಪುತ್ರಸ್ನೇಹದಿಂದ ಅವನು ಆಕೃಷ್ಟನಾದನು.
ತಚ್ಛ್ರುತ್ವಾ ವಿದುರೋ ಧೀಮಾನ್ ಕಲಿದ್ವಾರಮುಪಸ್ಥಿತಮ್ |
ವಿನಾಶಮುಖಮುತ್ಪನ್ನಂ ಧೃತರಾಷ್ಟ್ರಮುಪಾದ್ರವತ್ ॥16॥
ಅದನ್ನು ಕೇಳಿದ ಮೇಧಾವಿಯಾದ ವಿದುರನು ಕಲಹದ್ವಾರವು ಉಪಸ್ಥಿತವಾಗಿದೆ ಎಂದೂ ವಿನಾಶದ ದ್ವಾರವು ಸನ್ನಿಹಿತವಾಗಿದೆ ಎಂದೂ ತಿಳಿದು ಶೀಘ್ರವಾಗಿ ಧೃತರಾಷ್ಟ್ರನಿದ್ದ ಕಡೆಗೆ ಬಂದನು.
ಸೋಽಭಿಗಮ್ಯ ಮಹಾತ್ಮಾನಂ ಭ್ರಾತಾ ಭ್ರಾತರಮಗ್ರಜಮ್ |
ಮೂರ್ಧ್ನಾ ಪ್ರಣಮ್ಯ ಚರಣಾವಿದಂ ವಚನಮಬ್ರವೀತ್ ॥17॥
ತಮ್ಮನಾದ ಅವನು ಬೇಗ ಬಂದು ಮಹಾತ್ಮನಾದ ಅಣ್ಣನ ಪಾದಗಳಿಗೆ ಶಿರಸಾ ನಮಸ್ಕರಿಸಿ ಈ ಮಾತನ್ನು ಆಡಿದನು.
ನಾಭಿನಂದಾಮಿ ತೇ ರಾಜನ್ ವ್ಯವಸಾಯಮಿಮಂ ಪ್ರಭೋ |
ದ್ಯೂತಹೇತೋರ್ಹಿ ತೇ ಭೇದಃ ಸುತಾನಾಂ ಭವತಿ ಧ್ರುವಮ್ |
ಪುತ್ರೈರ್ಭೇದೋ ಯಥಾ ನ ಸ್ಯಾದ್ ದ್ಯೂತಹೇತೋಸ್ತಥಾ ಕುರು ॥18॥
ರಾಜನೇ! ನಿನ್ನ ಈ ನಿಶ್ಚಯವನ್ನು ನಾನು ಅನುಮೋದಿಸುವುದಿಲ್ಲ ಪ್ರಭುವೇ! ದ್ಯೂತದ ನಿಮಿತ್ತದಿಂದಾಗಿ ಪುತ್ರರಿಗೆ ಅವಶ್ಯವಾಗಿ ವಿರೋಧವು ಉಂಟಾಗುತ್ತದೆ. ದ್ಯೂತದ ನಿಮಿತ್ತದಿಂದಾಗಿ ಮಕ್ಕಳಲ್ಲಿ ವಿರೋಧವು ಉಂಟಾಗದಂತೆ ಏನಾನ್ನಾದರೂ ಮಾಡು.
ಧೃತರಾಷ್ಟ್ರಃ
ಕ್ಷತ್ತಃ ಪುತ್ರೇಷು ಪುತ್ರೈರ್ಮೇ ಕಲಹೋ ನ ಭವಿಷ್ಯತಿ |
ಏವಂ ದೇವಾಃ ಪ್ರಸಾದಂ ನಃ ಕರಿಷ್ಯಂತಿ ನ ಸಂಶಯಃ ॥19॥
ವಿದುರನೇ! ಪಾಂಡುವಿನ ಪುತ್ರರಿಗೂ ಮತ್ತು ನನ್ನ ಪುತ್ರರಿಗೂ ಕಲಹವು ಉಂಟಾಗುವುದಿಲ್ಲ. ಹೀಗೆ ದೇವತೆಗಳು ಅನುಗ್ರಹಿಸುವರು. ಇದರಲ್ಲಿ ಸಂಶಯವಿಲ್ಲ.
ಮಯಿ ಸನ್ನಿಹಿತೇ ಚೈವ ಭೀಷ್ಮೇ ಚ ಪುರುಷರ್ಷಭೇ |
ಅನಯೋ ವಾ ಶುಭಂ ವಾಪಿ ಹಿತಂ ವಾಽಪ್ಯಥವಾಽಹಿತಮ್ |
ಪ್ರವರ್ತತಾಂ ಸುಹೃದ್ದ್ಯೂತಂ ದಿಷ್ಟಮೇತದಸಂಶಯಮ್ ॥20॥
ನಾನು ಮತ್ತು ಪುರುಷರ್ಷಭನಾದ ಭೀಷ್ಮನು ಅಲ್ಲಿ ಸನ್ನಿಹಿತರಾಗಿರುವಾಗ (ವಿರೋಧವು ಉಂಟಾಗುವುದಿಲ್ಲ). ಅದು ನ್ಯಾಯವಾಗಲಿ ಅಥವಾ ಅನ್ಯಾಯವಾಗಲಿ ಹಿತವಾಗಲಿ ಅಥವಾ ಅಹಿತವಾಗಲಿ ಶುಭವಾಗಲಿ ಅಥವಾ ಅಶುಭವಾಗಲಿ ಸುಹೃದ್ದ್ಯೂತವು ಜರುಗಲಿ. ಇದು ದೈವ ನಿಯತವಾದದ್ದು ಎಂಬುದರಲ್ಲಿ ಸಂಶಯವಿಲ್ಲ.
ಗಚ್ಛ ತ್ವಂ ರಥಮಾಸ್ಥಾಯ ಹಯೈರ್ವಾತಸಮೈರ್ಜವೇ |
ಖಾಂಡವಪ್ರಸ್ಥಮದ್ಯೈವ ಯುಧಿಷ್ಠಿರಮಿಹಾನಯ ॥21॥
ನೀನು ವಾಯುವೇಗವನ್ನು ಹೊಂದಿದ ಅಶ್ವಗಳನ್ನು ಹೂಡಿದ ರಥದಲ್ಲಿ ಕುಳಿತು ಖಾಂಡವಪ್ರಸ್ಥಕ್ಕೆ ಹೋಗಿ ಧರ್ಮರಾಜನನ್ನು ಈ ದಿನವೇ ಇಲ್ಲಿಗೆ ಕರೆದುಕೊಂಡು ಬಾ.
ನ ವಾರ್ಯೋ ವ್ಯವಸಾಯೋ ಮೇ ವಿದುರೈತದ್ ಬ್ರವೀಮಿ ತೇ |
ದೈವಮತ್ರ ಪರಂ ಮನ್ಯೇ ಯೇನೈತದುಪಪದ್ಯತೇ ॥22॥
ವಿದುರನೇ! ನನ್ನ ನಿಶ್ಚಯವನ್ನು ನೀನು ನಿವಾರಿಸಕೂಡದು. ಇದನ್ನು ನಾನು ನಿನಗೆ ಹೇಳುತ್ತಿದ್ದೇನೆ. ದೈವವೇ ಇಲ್ಲಿ ಪ್ರಬಲವೆಂದು

ಭಾವಿಸುತ್ತೇನೆ. ದೈವೇಚ್ಛೆಯಿಂದಲೇ ಈ ಕಾರ್ಯವು ಜರುಗುತ್ತಿದೆ.
ವೈಶಂಪಾಯನಃ
ಇತ್ಯುಕ್ತೋ ವಿದುರೋ ಧೀಮಾನ್ ನೈತದಸ್ತೀತಿ ಚಿಂತಯನ್ |
ಆಪಗೇಯೇ ಮಹಾಪ್ರಾಜ್ಞೇ ಸರ್ವಮೇತನ್ನಿವೇದಯತ್ ॥23॥
ಹೀಗೆ ಹೇಳಲ್ಪಟ್ಟ ಮೇಧಾವಿಯಾದ ವಿದುರನು ಇದು ಸರಿಯಲ್ಲ ಎಂದು ಯೋಚಿಸುತ್ತಾ ಮಹಾಪ್ರಾಜ್ಞರಾದ ಭೀಷ್ಮರಿಗೆ ಈ ಎಲ್ಲಾ ವಿಷಯಗಳನ್ನೂ ನಿವೇದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಿಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು.
*****
ಎಪ್ಪತ್ಮೂರನೆಯ ಅಧ್ಯಾಯ
(ಏಕಾಂತದಲ್ಲಿ ತನ್ನನ್ನು ಸಮಾಧಾನ ಮಾಡಲು ಹೊರಟ ಧೃತರಾಷ್ಟ್ರನಿಗೆ ದುರ್ಯೋಧನನಿಂದ ತನಗೆ ಆದ ಅವಮಾನದ ವರ್ಣನೆ.)
ಜನಮೇಜಯಃ
ಕಥಂ ಸಮಭವದ್ ದ್ಯೂತಂ ಭ್ರಾತೄಣಾಂ ತನ್ಮಹಾತ್ಯಯಮ್ |
ಯತ್ರ ತದ್ ವ್ಯಸನಂ ಪ್ರಾಪ್ತಂ ಪಾಂಡವೈರ್ಮೇ ಪಿತಾಮಹೈಃ ॥1॥
ನನ್ನ ಪಿತಾಮಹರಾದ ಪಾಂಡವರು ವ್ಯಸನವನ್ನು ಹೊಂದಿದಂತಹ ಧರ್ಮದ ಮಹದತಿಕ್ರಮವಾದ ಅಣ್ಣ ತಮ್ಮಂದಿರ ಆ ದ್ಯೂತವು ಹೇಗೆ ಸಂಭವಿಸಿತು?
ಯೇ ಚ ತತ್ರ ಸಭಾಸ್ತಾರಾ ರಾಜಾನೋ ಬ್ರಹ್ಮವಿತ್ತಮ |
ಕೇ ಚೈನಮನುಮೋದಂತೇ ಕೇ ಚೈನಂ ಪ್ರತ್ಯಷೇಧಯನ್ ॥2॥
ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ವೈಶಂಪಾಯನರೇ ! ಅಲ್ಲಿ ಯಾವ ರಾಜರು ಸಭ್ಯರಾಗಿದ್ದರು? ದ್ಯೂತವನ್ನು ಅನುಮೋದಿಸಿದವರು ಯಾರು? ದ್ಯೂತವನ್ನು ಪ್ರತಿಷೇಧಿಸಿದವರು ಯಾರು?
ವಿಸ್ತರೇಣೈತದಿಚ್ಛಾಮಿ ಕಥ್ಯಮಾನಂ ತ್ವಯಾ ದ್ವಿಜ |
ಮೂಲಂ ಹ್ಯೇತದ್ ವಿನಾಶಸ್ಯ ಪೃಥಿವ್ಯಾಂ ದ್ವಿಜಸತ್ತಮ ॥3॥
ಬ್ರಾಹ್ಮಣ ಶ್ರೇಷ್ಠರೇ! ಇದನ್ನು ವಿಸ್ತಾರವಾಗಿ ನಿಮ್ಮ ಮುಖದಿಂದ ಕೇಳಲು ಬಯಸುತ್ತೇನೆ. ಭೂಮಿಯಲ್ಲಿ ಈ ದ್ಯೂತವೇ ವಿನಾಶಕ್ಕೆ ಮೂಲವಾಯಿತಷ್ಟೇ?
ಸೂತಃ
ಏವಮುಕ್ತಸ್ತು ರಾಜ್ಞಾ ಸ ವ್ಯಾಸಶಿಷ್ಯೋ ಮಹಾಮುನಿಃ |
ಆಚಚಕ್ಷೇ ಯಥಾವೃತ್ತಂ ತತ್ ಸರ್ವಂ ಸರ್ವವೇದವಿತ್ ॥4॥
ಜನಮೇಜಯನೇ! ಹೀಗೆ ಹೇಳಲ್ಪಟ್ಟ ಮಹಾಮುನಿಗಳೂ ಸರ್ವ ವೇದವನ್ನು ತಿಳಿದವರೂ. ವ್ಯಾಸಶಿಷ್ಯರೂ ಆದ ವೈಶಂಪಾಯನರು ನಡೆದುದೆಲ್ಲವನ್ನು ವಿಸ್ತಾರವಾಗಿ ತಿಳಿಸಿದರು.
ವೈಶಂಪಾಯನಃ
ಶೃಣು ಮೇ ವಿಸ್ತರೇಣೇಮಾಂ ಕಥಾಂ ಭರತಸತ್ತಮ |
ಭೂಯ ಏವ ಮಹಾರಾಜ ಯದಿ ತೇ ಶ್ರವಣೇ ಮತಿಃ ॥5॥
ಭರತಶ್ರೇಷ್ಠನಾದ ಮಹಾರಾಜನೇ! ನಿನಗೆ ಕೇಳುವ ಆಸೆಯಿದ್ದರೆ ನಾನು ಹೇಳುವ ವಿಸ್ತಾರವಾದ ಈ ಕಥೆಯನ್ನು ಇನ್ನೊಮ್ಮೆ ಕೇಳು.
ವಿದುರಸ್ಯ ಮತಂ ಜ್ಞಾತ್ವಾ ಧೃತರಾಷ್ಟ್ರೋಽಂಬಿಕಾಸುತಃ |
ದುರ್ಯೋಧನಮಿದಂ ವಾಕ್ಯಮುವಾಚ ವಿಜನೇ ಪುನಃ ॥6॥
ವಿದುರನ ಅಭಿಪ್ರಾಯವನ್ನು ತಿಳಿದ ಅಂಬಿಕಾಪುತ್ರನಾದ ಧೃತರಾಷ್ಟ್ರನು ದುರ್ಯೋಧನನನ್ನು ಏಕಾಂತದಲ್ಲಿ ಕರೆದು ಪುನಃ ಈ ಮಾತುಗಳನ್ನು ಆಡಿದನು.
ಅಲಂ ದ್ಯೂತೇನ ಗಾಂಧಾರೇ ವಿದುರೋ ನ ಪ್ರಶಂಸತಿ |
ನ ಹ್ಯಸೌ ಸುಮಹಾಬುದ್ಧಿರಹಿತಂ ನೋ ವದಿಷ್ಯತಿ ॥7॥
ಗಾಂಧಾರಿಯ ಪುತ್ರನೇ! ದ್ಯೂತವನ್ನು ನಿಲ್ಲಿಸು. ವಿದುರನು ದ್ಯೂತವನ್ನು ಪ್ರಶಂಸಿಸುವುದಿಲ್ಲ. ಮಹಾಮೇಧಾವಿಯಾದ ಇವನು ನಮಗೆ ಎಂದೂ ಅಹಿತವನ್ನು ಹೇಳುವುದಿಲ್ಲ.
ಹಿತಂ ಹಿ ವಿದುರಂ ಮನ್ಯೇ ವಿದುರೋ ಯತ್ ಪ್ರಭಾಷತೇ |
ಕ್ರಿಯತಾಂ ಪುತ್ರ ತತ್ ಸರ್ವಮೇತನ್ಮನ್ಯೇ ಹಿತಂ ತವ ॥8॥
ಪುತ್ರನೇ ವಿದುರನು ಯಾವಾಗಲೂ ನಮಗೆ ಹಿತನಾದವನು ಎಂದು ತಿಳಿದಿದ್ದೇನೆ. ವಿದುರನು ಹೇಗೆ ಹೇಳುತ್ತಾನೋ ಅದರಂತೆ ಮಾಡು. ಅದೆಲ್ಲವೂ ನಿನಗೂ ಹಿತವಾಗುತ್ತದೆ.
ದೇವರ್ಷಿರ್ವಾಸವಗುರುರ್ದೇವರಾಜಾಯ ಧೀಮತೇ |
ಯತ್ ಪ್ರಾಹ ಶಾಸ್ತ್ರಂ ಸುಮಹದ್ ಬೃಹಸ್ಪತಿರುದಾರಧೀಃ |
ತದ್ ವೇದ ವಿದುರಃ ಕೃತ್ಸ್ನಂ ಸರಹಸ್ಯಂ ಮಹಾಕವಿಃ ॥9॥
ದೇವರ್ಷಿಗಳೂ ಇಂದ್ರನ ಗುರುಗಳೂ ಉದಾರಬುದ್ಧಿಯುಳ್ಳವರೂ ಆದ ಬೃಹಸ್ಪತ್ಯಾಚಾರ್ಯರು. ಮೇಧಾವಿಯಾದ ದೇವರಾಜನಿಗೆ

ಯಾವ ವಿಸ್ತಾರವಾದ  ನೀತಿಶಾಸ್ತ್ರವನ್ನು  ಹೇಳಿದ್ದಾರೋ ಮಹಾಕವಿಯಾದ ವಿದುರನು ಆ ಎಲ್ಲಾ ಶಾಸ್ತ್ರವನ್ನೂ ಅದರ ರಹಸ್ಯ ತತ್ವಗಳೊಡನೆ ತಿಳಿದಿದ್ದಾನೆ.
ಸ್ಥಿತೋಽಸ್ಮಿ ವಚನೇ ತಸ್ಯ ಸದಾಽಹಮಪಿ ಪುತ್ರಕ |
ವಿದುರಶ್ಚಾಪಿ ಮೇಧಾವೀ ಕುರೂಣಾಂ ಪ್ರವರೋ ಮತಃ |
ಉದ್ಧವೋ ವಾ ಮಹಾಬುದ್ಧಿರ್ವೃಷ್ಣೀನಾಮರ್ಚಿತಃ ಕವಿಃ       ॥10॥
ಪುತ್ರನೇ! ನಾನು ಯಾವಾಗಲೂ ಅವನ ಮಾತಿನಂತೆ ನಡೆದುಕೊಂಡಿದ್ದೇನೆ. ವಿದುರನಾದರೂ ಮೇಧಾವಿಯಾದವನು ಮತ್ತು ಕುರುಗಳಲ್ಲಿ ಶ್ರೇಷ್ಠನಾದವನು ಎಂದು ನನ್ನ ಅಭಿಪ್ರಾಯ. ಅವನು ವೃಷ್ಣಿಗಳಲ್ಲಿ ಅರ್ಚಿತನಾದ ಜ್ಞಾನಿಯಾದ ಉದ್ಧವನಂತೆ ಮಹಾ ಮೇಧಾವಿಯಾದವನು.
ದ್ಯೂತೇನ ತದಲಂ ಪುತ್ರ ದ್ಯೂತೇ ಭೇದೋ ಹಿ ದೃಶ್ಯತೇ |
ಭೇದೇ ವಿನಾಶೋ ರಾಜ್ಯಸ್ಯ ತತ್ ಪುತ್ರ ಪರಿವರ್ಜಯ              ॥11॥
ಪುತ್ರನೇ! ಆದ್ದರಿಂದ ದ್ಯೂತವನ್ನು ನಿಲ್ಲಿಸು. ದ್ಯೂತದಲ್ಲಿ ವಿರೋಧವು ಎದ್ದು ಕಾಣಿಸುತ್ತದೆ. ವಿರೋಧ ಉಂಟಾದರೆ ರಾಜ್ಯದ ವಿನಾಶವು ಉಂಟಾಗುತ್ತದೆ. ಆದ್ದರಿಂದ ಪುತ್ರನೇ ದ್ಯೂತವನ್ನು ವರ್ಜಿಸು.
ಪಿತ್ರಾ ಮಯಾ ಚ ಪುತ್ರಸ್ಯ ಯದ್ದೇಯ ಕಾರ್ಯಂ ಪರಂ ಸ್ಮೃತಮ್ |
ಪಾಪ್ತಸ್ತ್ವಮಸಿ ತತ್ ತಾತ ಪಿತೃಪೈತಾಮಹಂ ಪದಮ್          ॥12॥
ಪುತ್ರನಾದವನಿಗೆ ತಂದೆಯಾದವನು ಏನೇನು ಮಾಡಬೇಕೆಂದು ಹೇಳಿದ್ದಾರೋ ಅಂತಹದ್ದನ್ನೆಲ್ಲಾ ನೀನು ನನ್ನಿಂದ ಪಡೆದಿದ್ದೀಯೆ ಪುತ್ರನೇ! ಪಿತೃ ಪಿತಾಮಹರ ಸ್ಥಾನವನ್ನು ಪಡೆದಿದ್ದೀಯೆ.
ಅಧೀತವಾನ್ ಕೃತೀ ಶಾಸ್ತ್ರೇ ಲಾಳಿತಃ ಸತತಂ ಗೃಹೇ |
ಭ್ರಾತೃಜ್ಯೇಷ್ಠಃ ಸ್ಥಿತೋ ರಾಜ್ಯೇ ವಿದ್ಯತೇ ಕಿನ್ನ್ವಶೋಭನಮ್     ॥13॥
ವಿದ್ಯೆಗಳನ್ನು ಕಲಿತಿದ್ದೀಯೆ. ಶಾಸ್ತ್ರಗಳಲ್ಲಿ ನಿಪುಣನಾಗಿದ್ದೀಯೆ.  ಯಾವಾಗಲೂ ಮನೆಯಲ್ಲಿ ಪ್ರೀತಿಯಿಂದ ಲಾಲನೆ ಮಾಡಲ್ಪಟ್ಟಿದ್ದೀಯೆ. ನೂರು ಜನ ಅಣ್ಣ ತಮ್ಮಂದಿರಲ್ಲಿ ಜ್ಯೇಷ್ಠನಾಗಿದ್ದೀಯೆ. ರಾಜ್ಯವನ್ನು ಅನುಭವಿಸುತ್ತಿದ್ದೀಯೆ. ನಿನಗೆ ಯಾವ ಕೊರತೆಯಿದೆ?
ಪೃಥಗ್ಜನೈರತುಲ್ಯಂ ಹಿ ಭೋಜನಾಚ್ಛಾದನಂ ಪರಮ್ |
ತ್ವಂ ಪ್ರಾಪ್ತೋಽಸಿ ಮಹಾಬಾಹೋ ಕಸ್ಮಾಚ್ಛೋಚಸಿ ಪುತ್ರಕ       ॥14॥
ಮಹಾಬಾಹುವೇ! ಸಾಮಾನ್ಯ ಜನರಿಗೆ ಅಲಭ್ಯವಾದ ಅಶನ ವಸನಗಳನ್ನು ನೀನು ಹೊಂದಿದ್ದೀಯೆ. ಪುತ್ರನೇ! ಏಕೆ ಶೋಕಪಡುತ್ತಿದ್ದೀಯೆ?
ಸ್ಫೀತಂ ರಾಷ್ಟ್ರಂ ಮಹಾಬಾಹೋ ಪಿತೃಪೈತಾಮಹಂ ಮಹತ್ |
ನಿತ್ಯಮಾಜ್ಞಾಪಯನ್ ಶಾಸ್ಸಿ ದಿವಿ ದೇವೇಶ್ವರೋ ಯಥಾ          ॥15॥
ಮಹಾಬಾಹುವೇ! ಪಿತೃಪಿತಾಮಹರಿಂದ ಬಂದ ದೊಡ್ಡದಾದ ಮತ್ತು ಪರಿಶುದ್ಧವಾದ ರಾಷ್ಟ್ರವನ್ನು ನಿತ್ಯವೂ ಆಜ್ಞೆಯನ್ನು ಮಾಡುತ್ತಾ ಇಂದ್ರನು ಸ್ವರ್ಗವನ್ನು ಆಳಿದಂತೆ ಆಳುತ್ತಿದ್ದೀಯೆ.
ಯಾದೃಶಂ ಚ ತವೈಶ್ವರ್ಯಂ ತದನ್ಯೇಷಾಂ ಸುದುರ್ಲಭಮ್ |
ಯೇ ಚೋಪಭೋಗಾಸ್ತೇ ತಾತ ಮಯಾ ತೇ ಪರಿಕೀರ್ತಿತಾಃ        ॥16॥
ಪ್ರೀತಿಪಾತ್ರನೇ! ನಾನು ನಿನಗೆ ಹೇಳಿದ ನಿನ್ನ ಭೋಗಗಳು ಮತ್ತು ನಿನ್ನ ಐಶ್ವರ್ಯವು ಸಹ ಉಳಿದವರಿಗೆ ಸುದುರ್ಲಭವಾದವು.
ತಸ್ಯ ತೇ ವಿದಿತಪ್ರಜ್ಞ ಶೋಕಮೂಲಮಿದಂ ಕಥಮ್ |
ಸಮುತ್ಥಿತಂ ದುಃಖತರಂ ತನ್ಮೇ ಶಂಸಿತುಮರ್ಹಸಿ   ॥17॥
ಮೇಧಾವಿಯೇ! ಅಂತಹ ನಿನಗೆ ಈ ಶೋಕಕ್ಕೆ ಕಾರಣವಾದ ದುಃಖತರವಾದ ನಿಮಿತ್ತವು ಹೇಗೆ ಉಂಟಾಯಿತು? ಎಂದು ನನಗೆ ಹೇಳು.
ದುರ್ಯೋಧನಃ
ಅಶ್ನಾಮ್ಯಾಚ್ಛಾದಯಾಮೀತಿ ಪ್ರಪಶ್ಯನ್ ಹೀನಪೌರುಷಃ |
ನಾಮರ್ಷಂ ಕುರುತೇ ಯಸ್ತು ಪುರುಷಃ ಸೋಽಧಮಃ ಸ್ಮೃತಃ      ॥18॥
ಯಾವ ಪುರುಷನು ನಾನು ಊಟಮಾಡುತ್ತಿದ್ದೇನೆ ವಸ್ತ್ರಗಳನ್ನು ಧರಿಸಿದ್ದೇನೆ ಎಂದು ತಿಳಿದು ಕ್ರೋಧವನ್ನು ಮಾಡುವುದಿಲ್ಲವೋ ಅವನು ಅಧಮನೆಂದು ಹೇಳುತ್ತಾರೆ.
ನ ಮಾಂ ಪ್ರೀಣಾತಿ ಪೃಥಿವೀ ರಾಜನ್ ಸಾಧಾರಣೀ ವಿಭೋ |
ಜ್ವಲಂತೀಮಿವ ಕೌಂತೇಯೇ ಶ್ರಿಯಂ ದೃಷ್ಟ್ವಾ ಮಹಾತ್ಮನಿ       ॥19॥
ಎಲೈ ರಾಜನೇ! ಮಹಾತ್ಮನಾದ ಕೌಂತೇಯನಲ್ಲಿ ಬೆಳಗುತ್ತಿರುವ ಸಂಪತ್ತನ್ನು ನೋಡಿದ ಮೇಲೆ ನನಗೆ  ಸಾಧಾರಣವಾದ ಭೂಮಿಯಾಗಲೀ ಅಥವಾ ನನ್ನ ಸಾಧಾರಣವಾದ ಸಂಪತ್ತಾಗಲೀ ಸಂತೋಷವನ್ನು ಕೊಡುತ್ತಿಲ್ಲ.
ಸರ್ವಾಂ ತು ಪೃಥಿವೀಂ ದೃಷ್ಟ್ವಾ ಯುಧಿಷ್ಠಿರವಶಾನುಗಾಮ್ |
ಸ್ಥಿರೋಽಸ್ಮಿ ಯೋಽಹಂ ಜೀವಾಮಿ ದುಃಖಾದೇತದ್ ಬ್ರವೀಮಿ ತೇ ॥
ಎಲ್ಲಾ ಭೂಮಿಯೂ ಯುಧಿಷ್ಠಿರನ ವಶವಾದದ್ದನ್ನು ನೋಡಿದ  ಮೇಲೆಯೂ ನಾನು ಬದುಕಿದ್ದೇನೆ. ನನ್ನ ಹೃದಯವು ಅಷ್ಟು ಗಟ್ಟಿಯೆಂದು ತಿಳಿ. ನಾನು ದುಃಖದಿಂದ ಈ ಮಾತನ್ನು ಆಡುತ್ತಿದ್ದೇನೆ.
ಅಪಜೀವಾ ಇವಾಭಾಂತಿ ನಿಘ್ನಾಃ ಕಿಂಕರಕಾ ಸ್ತಥಾ |
ಕಾರಸ್ಕರಾ ಲೋಹಜಂಘಾ ಯುಧಿಷ್ಠಿರನಿವೇಶನೇ   ॥21॥

ಯುಧಿಷ್ಠಿರ ಮನೆಯಲ್ಲಿ ಕಿಂಕರನಾಮಕರಾದ ಸೇವಕರು ದಣಿವಿಲ್ಲದೆ ಕೈಯಿಂದ ಕೆಲಸಗಳನ್ನೂ ಪಾದಗಳಿಂದ ನಡಿಗೆಯನ್ನು ಮಾಡುತ್ತಾ ಜೀವವಿಲ್ಲದವರಂತೆ ದಣಿವೇ ಇಲ್ಲದೆ ದುಡಿಯುತ್ತಿದ್ದಾರೆ.
ಹಿಮವತ್ಸಾಗರಾನೂಪಾಃ ಸರ್ವರತ್ನಾಕರಾಸ್ತಥಾ |
ಅಂತ್ಯಾಃ ಸರ್ವೇ ಪರ್ಯುದಸ್ತಾ ಯುಧಿಷ್ಠಿರನಿವೇಶನೇ ॥22॥
ಹಿಮಾಲಯದ ತಪ್ಪಲಿನಲ್ಲಿಯೂ ಸಮುದ್ರತೀರದಲ್ಲಿಯೂ ಇರುವ ಚೋರಾದಿ ಗಣಗಳು ಹಾಗೆಯೇ ಭೂಮಿಯ ತುದಿಯಲ್ಲಿ ಮೂಲೆಯಲ್ಲಿರುವ ಚೋರಾದಿ ಜನರೂ ಸಹ ಧರ್ಮರಾಜನ ಮನೆಯಲ್ಲಿ ಸೇವಕರಾಗಿ ದುಡಿಯುತ್ತಿದ್ದಾರೆ.
ಜ್ಯೇಷ್ಠೋಽಹಮಿತಿ ಮಾಂ ಮತ್ವಾ ಶ್ರೇಷ್ಠಶ್ಚಾಪಿ ವಿಶಾಂಪತೇ |
ಯುಧಿಷ್ಠಿರೇಣ ಸತ್ಕೃತ್ಯ ಯುಕ್ತೋ ರತ್ನಪರಿಗ್ರಹೇ ॥23॥
ರಾಜನೇ! ಯುಧಿಷ್ಠಿರನು ನನ್ನನ್ನು ವಯಸ್ಸಿನಲ್ಲಿ ಜ್ಯೇಷ್ಠನೆಂದೂ ಗುಣದಿಂದ ಶ್ರೇಷ್ಠನೆಂದೂ ತಿಳಿದು ಸತ್ಕರಿಸಿ ರಾಜರಿಂದ ಬರುವ ರತ್ನ ಮೊದಲಾದ ಐಶ್ವರ್ಯವನ್ನು ಸ್ವೀಕರಿಸಲು ನನ್ನನ್ನು ನಿಯಮಿಸಿದನು.
ನ ಮೇ ಹಸ್ತಃ ಸಮಭವದ್ ವಸು ತತ್ ಪ್ರತಿಗೃಹ್ಣತಃ |
ಪ್ರಾತಿಷ್ಠಂತ ಮಯಿ ಶ್ರಾಂತೇ ಗೃಹ್ಯ ದೂರಾಹೃತಂ ವಸು ॥24॥
ರಾಜರು ತಂದ ರತ್ನಗಳನ್ನು ಸ್ವೀಕರಿಸಲು ನನಗೆ ಎರಡು ಕೈಗಳು ಸಾಕಾಗಲಿಲ್ಲ. ನಾನು ದಣಿದರೂ ಸಹ ದೂರದಿಂದ ತಂದ ಆ ರತ್ನಗಳ ಪರಿಗ್ರಹವು ನಿಲ್ಲಲೇ ಇಲ್ಲ.
ಉಪಸ್ಥಿತಾನಾಂ ರತ್ನಾನಾಂ ಶ್ರೇಷ್ಠಾನಾಂ ರತ್ನಹಾರಿಣಾಮ್ |
ಪಾರಂ ತತ್ರ ನ ಪಶ್ಯಾಮಿ ನಾಪರಂ ತತ್ರ ಭಾರತ ॥25॥
ಎಲೈ ಭಾರತನೇ! ರತ್ನಗಳಿಗಾಗಲೀ ಆ ರತ್ನಗಳನ್ನು ತಂದ ರಾಜರುಗಳಿಗಾಗಲೀ ನಾನು ಆದಿಯನ್ನಾಗಲೀ ಅಥವಾ ಅಂತ್ಯವನ್ನಾಗಲೀ ಕಾಣಲಿಲ್ಲ.
ಕೃತಾಂ ಬಿಂದುಸರೋರತ್ನೈರ್ಮಯೇನ ಸ್ಫಾಟಿಕಪ್ರಭಾಮ್ |
ಅಪಶ್ಯಂ ನಲಿನೀಂ ಪೂರ್ಣಾಮುದಕಸ್ಯೇವ ಭಾರತ ॥26॥
ಎಲೈ ! ಭಾರತನೇ! ಮಯನು ಬಿಂದು ಸರೋವರದ ಸಮೀಪದಲ್ಲಿ ಇದ್ದ ವೃಷಪರ್ವದ ಸಭೆಯ ರತ್ನಗಳಿಂದ ಸ್ಫಟಿಕ ಪ್ರಭೆಯುಳ್ಳ ನೀರಿನಿಂದ ತುಂಬಿರುವಂತೆ ತೋರುತ್ತಿರುವಂತೆ ನಿರ್ಮಿಸಿದ ಒಂದು ಸರೋವರವನ್ನು ನೋಡಿದೆನು.
ಉತ್ಕರ್ಷಂತಂ ಚ ವೈ ವಾಸಃ ಪ್ರಾಹಸನ್ಮಾಂ ವೃಕೋದರಃ |
ಕಿಂಕರಾಶ್ಚ ಸಭಾಪಾಲಾ ಜಹಸುರ್ಭರತರ್ಷಭ ॥27॥
ನಾನು ವಸ್ತ್ರವನ್ನು ಮೇಲಕ್ಕೆತ್ತಿ ನಡೆಯುತ್ತಿದ್ದಂತೆ ಎಲೈ ಭರತರ್ಷಭನೇ! ಭೀಮಸೇನನೂ ಸಭಾಪಾಲಕರಾದ ಕಿಂಕರರೂ ಗಟ್ಟಿಯಾಗಿ ನಕ್ಕರು.
ಶತ್ರೋ ರತ್ನವಿಶೇಷೇಣ ವಿಮೂಢಂ ರತ್ನವರ್ಜಿತಮ್ |
ಮಮ್ಯಷೇ ಯದಿ ಶಕ್ತಸ್ತಂ ಘಾತಯೇಯಂ ವೃಕೋದರಮ್ |
ಸಪತ್ನೇನಾವಹಾಸೋ ಹಿ ಸ ಮಾಂ ದಹತಿ ಭಾರತ ॥28॥
ಶತ್ರುವಿನ ರತ್ನವಿಶೇಷಗಳಿಂದ ಮೋಹಕ್ಕೆ ಒಳಗಾಗಿ ಸ್ವತಃ ಅಂತಹ ರತ್ನಗಳನ್ನು ಹೊಂದದೆ ಇರುವ ನನ್ನನ್ನು ನೋಡಿ ನೀನು ಸಹಿಸುವುದಾದರೆ ನಾನು ಬಲಿಷ್ಠನಾದ ಕಾರಣ ಭೀಮಸೇನನನ್ನು ಸಂಹರಿಸುವೆನು.
ತತ್ರ ಸ್ಫಾಟಿಕತೋಯಾಂ ಹಿ ಸ್ಫಾಟಿಕಾಂಬುಜಶೋಭಿತಾಮ್ |
ಸಭಾಂ ಪುಷ್ಕಾರಿಣೀಂ ಮತ್ವಾ ಪತಿತೋಽಸ್ಮಿ ನರಾಧಿಪ ॥29॥
ಎಲೈ ಭಾರತನೇ! ಶತ್ರುವಿನ ಅಪಹಾಸವು ನನ್ನನ್ನು ಸುಡುತ್ತಿದೆ. ರಾಜನೇ! ಅಲ್ಲಿ ಸ್ಫಟಿಕದಂತೆ ಜಲವನ್ನುಳ್ಳ ಸ್ಫಟಿಕದಂತಹ ಶೋಭಿತವಾದ ಸರೋವರವನ್ನು ನೆಲವೆಂದು ತಿಳಿದು ನಾನು ಅದರಲ್ಲಿ ಬಿದ್ದೆನು.
ಪುನಶ್ಚ ತಾದೃಶೀಮೇವ ವಾಪೀಂ ಜಲಜಶಾಲಿನೀಮ್ |
ಮತ್ವಾ ಶಿಲಾಸಭಾಂ ತೋಯೇ ಪತಿತೋಽಸ್ಮಿ ನರಾಧಿಪ ॥30॥
ಪುನಃ ಅಂತಹದೇ ಇನ್ನೊಂದು ಕಮಲಗಳಿರುವ ಭಾವಿಯನ್ನು ಶಿಲೆಯ ಸಭೆಯೆಂದು(ನೆಲವೆಂದು) ತಿಳಿದು ಪುನಃ ನೀರಿನಲ್ಲಿ ಬಿದ್ದೆನು.
ತತ್ರ ಮಾಂ ಪ್ರಾಹಸತ್ ಕೃಷ್ಣಃ ಪಾರ್ಥೇನ ಸಹ ಸಸ್ವರಮ್ |
ದ್ರೌಪದೀ ಚ ಸಹ ಸ್ತ್ರೀಭಿಃ ಪೀಡಯಂತೀ ಮನೋ ಮಮ ॥31॥
ಆಗ ಕೃಷ್ಣನು ಅರ್ಜುನನ ಜೊತೆಯಲ್ಲಿ ನನ್ನನ್ನು ನೋಡಿ ಗಟ್ಟಿಯಾಗಿ ನಕ್ಕನು. ದ್ರೌಪದಿಯೂ ಸಹ ಉಳಿದ ಸ್ತ್ರೀಯರ ಜೊತೆಯಲ್ಲಿ ನನ್ನ ಮನಸ್ಸಿಗೆ ಪೀಡೆಯುಂಟಾಗುವಂತೆ ನಕ್ಕಳು.
ಕ್ಲಿನ್ನವಸ್ತ್ರಸ್ಯ ಚ ಜಲೇ ಕಿಂಕರಾ ರಾಜಚೋದಿತಾಃ |
ದದುರ್ವಾಸಾಂಸಿ ಚಾನ್ಯಾನಿ ತಚ್ಚ ದುಃಖತರಂ ಮಮ ॥32॥
ಬಟ್ಟೆಗಳೆಲ್ಲವೂ ಒದ್ದೆಯಾದ ನನಗೆ ರಾಜಪ್ರೇರಿತರಾದ ಕಿಂಕರರು ಬೇರೆ ವಸ್ತ್ರಗಳನ್ನು ತಂದು ಕೊಟ್ಟರು. ಅದು ನನಗೆ ಅತ್ಯಂತ ದುಃಖಕರವಾಗಿದೆ.
ಪ್ರಲಂಭಂ ಚ ಶೃಣುಷ್ವಾನ್ಯದ್ ಗದತೋ ಮೇ ನರಾಧಿಪ |
ಅದ್ವಾರೇಣ ವಿನಿರ್ಗಚ್ಛನ್ ದ್ವಾರಸಂಸ್ಥಾನರೂಪಿಣಾ |
ಅಭಿಹತ್ಯ ಶಿಲಾಂ ಭೂಯೋ ಲಲಾಟೇ ಚಾಸ್ಮಿ ತಾಡಿತಃ ॥33॥
ಎಲೈ ರಾಜನೇ! ನಾನು ಅಲ್ಲಿ ಅನುಭವಿಸಿದ ಇನ್ನೊಂದು ವಂಚನೆಯನ್ನು ಹೇಳುವೆನು ಕೇಳು. ದ್ವಾರದಂತೆ ಕಾಣುತ್ತಿದ್ದ ದ್ವಾರವಲ್ಲದ

ಒಂದು ಪ್ರದೇಶದಿಂದ ಹೊರಗೆ ಹೋಗಲು ಪ್ರಯತ್ನಿಸಿ ನಾನು ತಲೆಯಿಂದ ಶಿಲೆಯನ್ನು ಘಟ್ಟಿಸಿ ಹಣೆಯಲ್ಲಿ ಗಾಯಗೊಂಡೆನು.
ಇದಂ ದ್ವಾರಮಿದಂ ರಾಜನ್ ನ ದ್ವಾರಮಿತಿ ಮಾಂ ಪ್ರತಿ |
ಅಗ್ರತಃ ಪ್ರಹಸನ್ ವಾಕ್ಯಂ ಬಭಾಷೇ ಸ ವೃಕೋದರಃ ॥34॥
ಭೀಮಸೇನನು ನನ್ನ ಮುಂದೆ ಬಂದು ರಾಜನೇ! ಇದು ಬಾಗಿಲು ಇದು ಬಾಗಿಲಲ್ಲ. ಎಂದು ನನ್ನನ್ನು ಹಾಸ್ಯಮಾಡುತ್ತಾ ನನಗೆ ಹೇಳಿದನು.
ತತ್ರ ಮಾಂ ಯಮಜೌ ದೂರಾದಾಲೋಕ್ಯ ಲಲಿತೌ ಕಿಲ |
ಸಹಿತಾವನುಗಂತಾರೌ ಬಾಹುಭಿಃ ಪ್ರತ್ಯಗೃಹ್ಣತಾಮ್ ॥35॥
ಅದನ್ನು ದೂರದಿಂದಲೇ ನೋಡಿದ ಲಲಿತರಾದ (ಮನೋಹರರಾದ) ನಕುಲಸಹದೇವರು ಅವನನ್ನು ಹಿಂಬಾಲಿಸಿ ಬಂದು ನನ್ನ ಬಾಹುಗಳನ್ನು ಹಿಡಿದುಕೊಂಡು ನಡೆಸಿದರು.
ಉವಾಚ ಸಹದೇವೋ ಮಾಂ ತತ್ರ ವಿಸ್ಮಾಪಯನ್ನಿವ |
ಇದಂ ದ್ವಾರಮಿತೋ ರಾಜನ್ ನಿರ್ಗಚ್ಛೇತಿ ಪುನಃ ಪುನಃ |
ನ ಶ್ರುತಾನಿ ನ ದೃಷ್ಟಾನಿ ತೇನ ತಪ್ತೋಽಸ್ಮಿ ದುಃಖಿತಃ ॥36॥
ಸಹದೇವನು ನನಗೆ ಆಶ್ಚರ್ಯವಾಗುವರೀತಿಯಲ್ಲಿ ರಾಜನೇ! ಇದು ಬಾಗಿಲು ಇದರಿಂದ ಹೊರಗೆ ಹೋಗು ಎಂದು ಮತ್ತೆ ಮತ್ತೆ ಹೇಳಿದನು. ನಾನು ಅವಮಾನಿತನಾಗಿ ಅವರ ಮಾತುಗಳನ್ನು ಕೇಳಲೂ ಇಲ್ಲ. ಅವರ ಮುಖಗಳನ್ನು ನೊಡಲೂ ಇಲ್ಲ. ಆ ಕಾರಣದಿಂದ ನಾನು ದುಃಖತಪ್ತನಾಗಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರಿಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಪಂಚಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ಮೂರನೆಯ ಅಧ್ಯಾಯವು ಮುಗಿಯಿತು.
*****

ಎಪ್ಪತ್ನಾಲ್ಕನೆಯ ಅಧ್ಯಾಯ.
(ಧೃತರಾಷ್ಟ್ರನ ಮುಂದೆ ದುರ್ಯೋಧನನಿಂದ ತಾನು ನೋಡಿದ ಯುಧಿಷ್ಠಿರನ ಯಾಗದ ವೈಭವದ ವರ್ಣನೆ.)
ದುರ್ಯೋಧನಃ
ಹುತಾಶನಂ ಪ್ರವೇಕ್ಷ್ಯಾಮಿ ಪ್ರವಿಶೇ ವಾ ಮಹೋದಧಿಮ್ |
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥1॥
ನಾನು ಅಗ್ನಿ ಪ್ರವೇಶಮಾಡುವೆನು ಇಲ್ಲದಿದ್ದರೆ ಸಮುದ್ರವನ್ನಾದರೂ ಪ್ರವೇಶಮಾಡುವೆನು. ಮರ್ಯಾದೆಯಿಂದ ಇದ್ದವರಿಗೆ ಅಪಕೀರ್ತಿಯುಂಟಾದರೆ ಅದು ಮರಣಕ್ಕಿಂತಲೂ ನಿಕೃಷ್ಟವಾಗಿದೆ.
ಯನ್ಮಯಾ ಪಾಂಡವಾನಾಂ ತು ದೃಷ್ಟಂ ತಚ್ಛೃಣು ಭಾರತ |
ಆಹೃತಂ ಭೂಮಿಪಾಲೇಭ್ಯೋ ವಸು ಮುಖ್ಯಂ ತತಸ್ತತಃ ॥2॥
ಎಲೈ ಭಾರತನೇ! ನಾನು ರಾಜರು ಆಯಾ ದೇಶಗಳಿಂದ ಪಾಂಡವನ ಯಜ್ಞಕ್ಕಾಗಿ ತಂದ ನಾನು ನೋಡಿದ ಶ್ರೇಷ್ಠವಾದ ಧನವನ್ನು ಹೇಳುತ್ತೇನೆ ಕೇಳು.
ನಿರ್ವಿದ್ಯೇ ದೃಢಮಾತ್ಮಾನಂ ದೃಷ್ಟ್ವಾಽಹಂ ತದರೇರ್ಧನಮ್ |
ಫಲತೋ ಭೂಮಿತೋ ವಾಽಪಿ ಪ್ರತಿಪದ್ಯಸ್ವ ಭಾರತ ॥3॥
ಎಲೈ ಭಾರತನೇ! ಆ ಶತ್ರುವಿನ ಸಂಪತ್ತನ್ನು ನೋಡಿ ನಾನು ನನ್ನ ಬಗ್ಗೆ ಧೃಢವಾದ ವೈರಾಗ್ಯವನ್ನು ಹೊಂದಿದ್ದೇನೆ. ಆ ಸಂಪತ್ತಿನ ಫಲದಿಂದಲಾಗಲೀ ಅಥವಾ ಸಂಪತ್ತಿನ ಕಾರಣದಿಂದಲಾಗಲೀ ನಾನು ಅವರಿಗೆ ಸಮಾನನಲ್ಲವೆಂದು ನೀನು ತಿಳಿ.
ಔರ್ಣಾಂಶ್ಚೈಲಾನ್ ವಾರ್ಷದಂಶಾನ್ ಜಾತರೂಪಪರಿಷ್ಕೃತಾನ್ |
ಪ್ರಾವಾರಾಜಿನಮುಖ್ಯಾಂಶ್ಚ ಕಾಂಭೋಜಃ ಪ್ರದದೌ ವಸು ॥4॥
ಕಾಂಭೋಜರಾಜನು ಉಣ್ಣೆಯ ವಸ್ತ್ರಗಳನ್ನೂ ಸುವರ್ಣದಿಂದ ಅಲಂಕೃತವಾದ ವ್ಯಾಘ್ರನಖ ಚರ್ಮಗಳನ್ನೂ ಹೊದೆಯುವ ಶಾಲುಗಳನ್ನೂ ಮತ್ತು ಕೃಷ್ಣಾಜಿನಗಳನ್ನೂ ಮುಕ್ತವಾಗಿ ಕೊಟ್ಟನು.
ಅಶ್ವಾಂಸ್ತಿತ್ತಿರಿಕಲ್ಮಾಷಾನ್ ತ್ರಿದಶಾನ್ ಶುಕನಾಸಿಕಾನ್ |
ಉಷ್ಟ್ರವಾಮೀಂಸ್ತ್ರಿಗರ್ತಾಶ್ಚ ಪುಷ್ಟಾನ್ ಪೀಲುಶಮೀಂಗುದೈಃ ॥5॥
ತಿತ್ತಿರಿಕಲ್ಮಾಷ ವರ್ಣೋಪೇತವಾದ, ಪೀಲು ಮತ್ತು ಶಮೀ ಮತ್ತು ಇಂಗುದ ವೃಕ್ಷಗಳಿಂದ ಪೋಷಿಸಲ್ಪಟ್ಟ, ಗಿಣಿಯಂತೆ ಕೆಂಪಾದ ಮೂಗುಳ್ಳ, ಮುವತ್ತು ಅಶ್ವಗಳನ್ನು ಮತ್ತು ಪುಷ್ಟವಾದ ಒಂಟೆಗಳನ್ನು ತ್ರಿಗರ್ತಾಧಿಪತಿಯು ಕೊಟ್ಟನು.
ಗೋಪಾನಸೇನ ಸಹಿತಾಂತದಾದಾಯ ಚ ಷಟ್‌ಪದಮ್ |
ವಸಾತಯೋನ್ಯದೂಷ್ಯಾಶ್ಚ ದ್ವಾರಿ ತಸ್ಯಾವತಸ್ಥಿರೇ ॥6॥
ಗೋಪಾಲಕರು ಉಪಯೋಗಿಸುವ ಬಂಡಿಗಳಲ್ಲಿ ಎಲ್ಲರೂ ಒಟ್ಟುಗೂಡಿ ಜೇನುತುಪ್ಪದ ಗಡಿಗೆಗಳನ್ನು ಅನೇಕರು ತಂದು ಅವನ ದ್ವಾರದಲ್ಲಿ ನಿಂತರು.
ಕಮಂಡಲೂನುಪಾದಾಯ ಜಾತರೂಪಮಯಾನ್‌ಶುಭಾನ್ |
ರತ್ನಾನಿ ಚ ಪ್ರವಾಳಾಂಶ್ಚ ಸುವರ್ಣಂ ಚೈವ ಕೇವಲಮ್ ॥7॥
ಪ್ರೀಯಮಾಣಃ ಪ್ರಸನ್ನಾತ್ಮಾ ಸ್ವಯಂ ಸ್ವಜನಸಂವೃತಃ |

ತ್ರೈಖರ್ವೋ ರಥಮುಖ್ಯಾಂಶ್ಚ ಪಾಂಡವಾಯ ನ್ಯವೇದಯತ್ ॥8॥
ತ್ರಿಖರ್ವದೇಶದ ರಾಜನು ಸುವರ್ಣಮಯವಾದ ಶುಭ್ರವಾದ ಕಮಂಡಲುಗಳನ್ನೂ ರತ್ನಗಳನ್ನೂ ಹವಳಗಳನ್ನೂ ಶುದ್ಧವಾದ ಸುವರ್ಣವನ್ನೂ ಅನೇಕ ಶ್ರೇಷ್ಠವಾದ ರಥಗಳನ್ನೂ ತಾನೆ ಸ್ವಜನ ಸಹಿತವಾಗಿ ತೆಗೆದು ಕೊಂಡು ಬಂದು ಸಂತೋಷದಿಂದ ಪಾಂಡವನಿಗೆ ಕೊಟ್ಟನು.
ಯಶ್ಚ ಸ ದ್ವಿಜಮುಖ್ಯೇನ ರಾಜ್ಞಃ ಶಂಖೋ ನಿವೇದಿತಃ |
ಪ್ರೀತ್ಯಾ ದತ್ತಃ ಕುಣಿಂದೇನ ಧರ್ಮರಾಜಾಯ ಧೀಮತೇ ॥9॥
ಕುಣಿಂದನು ಒಬ್ಬ ಬ್ರಾಹ್ಮಣನ ಮೂಲಕ ಮೇಧಾವಿಯಾದ ಧರ್ಮರಾಜನಿಗೆ ಸಂತೋಷದಿಂದ ಒಂದು ಶಂಖವನ್ನು ಕೊಟ್ಟನು.
ತಂ ಸರ್ವೇ ಭ್ರಾತರೋ ಭ್ರಾತ್ರೇ ದದುಃ ಶಂಖಂ ಕಿರೀಟಿನೇ |
ತಂ ಪ್ರತ್ಯಗೃಹ್ಣಾದ್ಬೀಭತ್ಸುಸ್ತೋಯಜಂ ಹೇಮಮಾಲಿನಮ್ ॥10॥
ಚಿತಂ ನಿಷ್ಕಸಹಸ್ರೇಣ ಭ್ರಾಜಮಾನಂ ಸ್ವತೇಜಸಾ |
ರುಚಿರಂ ದರ್ಶನೀಯಂ ಚ ಭೂಷಿತಂ ವಿಶ್ವಕರ್ಮಣಾ ॥11॥
ಎಲ್ಲಾ ಸಹೋದರರೂ ಸೇರಿ ಅದನ್ನು ಅರ್ಜುನನಿಗೆ ಕೊಟ್ಟರು. ಹೇಮ ಮಾಲೆಯನ್ನು ಧರಿಸಿದ ನಿಷ್ಕ ಸಹಸ್ರದಿಂದ ಅಲಂಕೃತವಾದ ತೇಜಸ್ಸಿನಿಂದ ಬೆಳಗುತ್ತಿರುವ ಮನೋಹರವಾದ, ವಿಶ್ವಕರ್ಮನಿಂದ ಅಲಂಕೃತವಾದ, ತೇಜಸ್ಸಿನಿಂದ ಬೆಳಗುತ್ತಿರುವ ಆ ಜಲಜವಾದ ಶಂಖವನ್ನು ಅರ್ಜುನನು ಸ್ವೀಕರಿಸಿದನು.
ಅಧಾರಯಚ್ಚ ಧರ್ಮಶ್ಚ ತಂ ನಮಸ್ಯ ಪುನಃ ಪುನಃ |
ಯೋಽನ್ನದಾನೇ ನದತಿ ಸ ನನಾದಾಧಿಕಂ ತದಾ |
ಪ್ರಣಾದಾದ್ ಭೂಮಿಪಾಸ್ತಸ್ಯ ಪೇತುರ್ಹೀನಾಃ ಸ್ವತೇಜಸಾ ॥12॥
ಧರ್ಮರಾಜನು ಆ ಬ್ರಾಹ್ಮಣನಿಗೆ ಪುನಃ ಪುನಃ ನಮಸ್ಕರಿಸಿ ಅದನ್ನು ಧರಿಸಿದನು. ಅನ್ನದಾನದ ಸಮಯದಲ್ಲಿ ಘೋಷವನ್ನು ಮಾಡುವ ಆ ಶಂಖವು ಆ ಕಾಲದಲ್ಲಿ ಅತ್ಯಧಿಕವಾಗಿ ಘೋಷವನ್ನು ಮಾಡಿತು. ಆ ಶಂಖಧ್ವನಿಯನ್ನು ಕೇಳಿ ರಾಜರು ತೇಜೋಹೀನರಾಗಿ ಭೂಮಿಯ ಮೇಲೆ ಬಿದ್ದರು.
ಧೃಷ್ಟದ್ಯುಮ್ನಃ ಪಾಂಡವಾಶ್ಚ ಸಾತ್ಯಕಿಃ ಕೇಶವೋಽಷ್ಟಮಃ |
ಸತ್ತ್ವಸ್ಥಾಃ ಶೌರ್ಯಸಂಪನ್ನಾ ಅನ್ಯೋನ್ಯಪ್ರಿಯಕಾರಿಣಃ |
ವಿಸಂಜ್ಞಾನ್ ಭೂಮಿಪಾನ್ ದೃಷ್ಟ್ವಾ ಮಾಂ ಚ ತೇ ಪ್ರಾಹಸಂಸ್ತದಾ ॥13॥
ಧೈರ್ಯಶಾಲಿಗಳಾದ ಮತ್ತು ಶೌರ್ಯಸಂಪನ್ನರಾದ ಪರಸ್ಪರವಾಗಿ ಹಿತವನ್ನು ಮಾಡುವ ದೃಷ್ಟದ್ಯುಮ್ನ ಪಾಂಡವರು ಸಾತ್ಯಕಿ ಮತ್ತು ಕೃಷ್ಣ ಈ ಎಂಟು ಜನರೂ ರಾಜರನ್ನು ಮತ್ತು ನನ್ನನ್ನು ನೋಡಿ ಅಪಹಾಸವನ್ನು ಮಾಡಿದರು.
ತತಃ ಪ್ರಹೃಷ್ಟೋ ಬೀಭತ್ಸುರದದಾದ್ಧೇಮಶೃಂಗಿಣಃ |
ಶತಾನ್ಯನಡುಹಾಂ ಪಂಚ ದ್ವಿಜಮುಖ್ಯಾಯ ಭಾರತ ॥14॥
ಎಲೈ ಭಾರತನೇ! ಆಗ ಸಂತೋಷಗೊಂಡ ಅರ್ಜುನನು ಶಂಖವನ್ನು ತಂದ ದ್ವಿಜಶ್ರೇಷ್ಠನಿಗೆ ಹೇಮಶೃಂಗಗಳಿಂದ ಕೂಡಿದ ಐದುನೂರು ವೃಷಭಗಳನ್ನು ಕೊಟ್ಟನು.
ಸುಮುಖೇನ ಬಲಿರ್ಮುಖ್ಯಃ ಪ್ರೇಷಿತೋಽಜಾತಶತ್ರವೇ |
ಕುಣಿಂದೇನ ಹಿರಣ್ಯಂ ಚ ವಾಸಾಂಸಿ ವಿವಿಧಾನಿ ಚ ॥15॥
ಕುಣಿಂದಾಧಿಪತಿಯಾದ ಸುಮುಖನು ಸುವರ್ಣಮಯವಾದ ವಿವಿಧವಾದ ವಸ್ತ್ರಗಳು ಮೊದಲಾದ ಶ್ರೇಷ್ಠವಾದ ಬಲಿಯನ್ನು ಅಜಾತ ಶತ್ರುವಿಗೆ ಕಳುಹಿಸಿದನು.
ಕಾಶ್ಮೀರರಾಜೋ ಮಾರ್ದ್ವೀಕಂ ಶುಂಡಂ ಚ ರಸವನ್ಮಧು |
ಬಲಿಂ ಚ ಕೃತ್ಸ್ನಮಾದಾಯ ಪಾಂಡವಾಯಾಭ್ಯುಪಾಹರತ್ ॥16॥
ಕಾಶ್ಮೀರರಾಜನು ಪಾನಯೋಗ್ಯವಾದ ಮಧುರವಾದ ಮಧುರೂಪವಾದ ಬಹಳ ಪ್ರಮಾಣದ ಬಲಿಯನ್ನು ತೆಗೆದುಕೊಂಡು ಬಂದು ಪಾಂಡವನಿಗೆ ಸಮರ್ಪಿಸಿದನು.
ಯವನಾ ಹಯಾನುಪಾದಾಯ ಪಾರ್ವತೇಯಾನ್ ಮನೋಜವಾನ್ |
ಆಸನಾನಿ ಮಹಾರ್ಹಾಣಿ ಕಂಬಳಾಂಶ್ಚ ಮಹಾಧನಾನ್ ॥17॥
ನವಾನ್ ವಿಚಿತ್ರಾನ್ ಸೂಕ್ಷ್ಮಾಂಶ್ಚ ಪರಾರ್ಘ್ಯಾನ್ ಸುಪ್ರದರ್ಶನಾನ್ |
ಅನ್ಯಚ್ಚ ವಿವಿಧಂ ರತ್ನಂ ದ್ವಾರಮೇತ್ಯಾವತಸ್ಥಿರೇ ॥18॥
ಶ್ರುತಾಯುರಪಿ ಕಾಳಿಂಗೋ ಮಣಿರತ್ನಮನುತ್ತಮಮ್ |
ಅಂಗಃ ಸ್ತ್ರಿಯೋ ದರ್ಶನೀಯಾ ಜಾತರೂಪವಿಭೂಷಿತಾಃ ॥19॥
ಯವನರು ಪರ್ವತ ಪ್ರದೇಶದಲ್ಲಿ ಜನಿಸಿದ ಮನೋಜವವುಳ್ಳ ಅಶ್ವಗಳನ್ನೂ ಬೆಲೆಬಾಳುವ ಕಂಬಳಿಗಳನ್ನೂ ಮತ್ತು ಆಸನಗಳನ್ನು ಹೊಸದಾದ ವಿಚಿತ್ರವಾದ ಇನ್ನೊಬ್ಬರು ಅಪೇಕ್ಷಿಸುವ ನೋಡಲು ಸುಂದರವಾಗಿರುವ ಇನ್ನೂ ಅನೇಕ ವಸ್ತ್ರಗಳನ್ನೂ ಮತ್ತು ವಿಧವಿಧವಾದ ರತ್ನಗಳನ್ನೂ ಹಿಡಿದು ಧರ್ಮರಾಜನ ಬಾಗಿಲಿನಲ್ಲಿ ನಿಂತಿದ್ದರು. ಕಳಿಂಗ ದೇಶಾಧಿಪತಿಯಾದ ಸುಪ್ರದರ್ಶನನೂ ಶ್ರೇಷ್ಠವಾದ ಮಣಿರತ್ನಗಳನ್ನು ಕೊಟ್ಟನು. ಅಂಗರಾಜನು ಸುವರ್ಣಾಲಂಕೃತರಾದ ಸುಂದರಿಯಾದ ಅನೇಕ ಸ್ತ್ರೀಯರನ್ನು ಕೊಟ್ಟನು.
ವಂಗೋ ಜಾಂಬೂನದಮಯಾನ್ ಪರ್ಯಂಕಾನ್ ಶತಶೋ ನೃಪ|
ದಕ್ಷಿಣಾತ್ ಸಾಗರಾಭ್ಯಾಶಾತ್ ಪ್ರವಾಳಂ ಚ ಪರಂ ಗತಮ್ ॥20॥
ಔದಕಾನಿ ಸ ರತ್ನಾನಿ ಬಲಿಂ ಚಾದಾಯ ಭಾರತ |

ಅನ್ಯೇಭ್ಯೋ ಭೂಮಿಪಾಲೇಭ್ಯಃ ಪಾಂಡವಾಯ ನ್ಯವೇದಯತ್ ॥21॥
ಎಲೈ ರಾಜನೇ! ವಂಗರಾಜನು ಸುವರ್ಣಮಯವಾದ ನೂರಾರು ಪರ್ಯಂಕಗಳನ್ನೂ ದಕ್ಷಿಣಸಾಗರದಿಂದ ತಂದ ಚೆನ್ನಾಗಿ ಸಾಣೆಹಿಡಿದ ಅನೇಕ ಹವಳಗಳನ್ನೂ ಮತ್ತು ನೀರಿನಲ್ಲಿ ಜನಿಸಿದ ಅನೇಕ ರತ್ನರೂಪವಾದ ಬಲಿಯನ್ನೂ ತೆಗೆದುಕೊಂಡು ಬಂದು ಪಾಂಡವನಿಗೆ ಸಮರ್ಪಿಸಿದನು. ಬೇರೆ ರಾಜರಿಂದ ತಾನು ಸಂಗ್ರಹಿಸಿದ ರತ್ನವನ್ನೂ ಪಾಂಡವನಿಗೆ ಸಮರ್ಪಿಸಿದನು.
ದಾರ್ದುರಂ ಚಂದನಂ ಮುಖ್ಯಂ ಭಾರಂ ಷಣ್ಣವತಿಂ ಧ್ರುವಮ್ |
ಪಾಂಡವಾಯ ದದೌ ಪಾಂಡ್ಯಃ ಶಂಖಾಂಸ್ತಾವತ ಏವ ಚ ॥22॥
ಪಾಂಡ್ಯರಾಜನು ಸುಗಂಧಮಯವಾದ ಶ್ರೇಷ್ಠವಾದ ಗಂಧದ ತೊಂಬತ್ತಾರು ಭಾರಗಳನ್ನು(ಮಣಗಳನ್ನು) ಮತ್ತು ಅಷ್ಟೇ ಶಂಖಗಳನ್ನು ಪಾಂಡವನಿಗೆ ಕೊಟ್ಟನು.
ಚಂದನಾಗರು ಚಾನಂತಂ ಮುಕ್ತಾವೈಡೂರ್ಯಚಿತ್ರಕಾಃ |
ಚೋಳಶ್ಚ ಕೇರಳಶ್ಚೋಭೌ ದದತುಃ ಪಾಂಡವಾಯ ವೈ ॥23॥
ಚೋಳ ಮತ್ತು ಕೇರಳಾಧಿಪತಿಗಳು ಅಪರಿಮಿತವಾದ ಚಂದನ ಅಗರುಗಳನ್ನೂ ಮತ್ತು ವಿಚಿತ್ರವಾದ ವೈಡೂರ್ಯಾದಿಗಳನ್ನೂ ಪಾಂಡವನಿಗೆ ಕೊಟ್ಟರು.
ಅಶ್ಮಕೋ ಹೇಮಶೃಂಗೀಶ್ಚ ದೋಗ್ಧ್ರೀರ್ಹೇಮವಿಭೂಷಿತಾಃ |
ಸವತ್ಸಾಃ ಕುಂಭದೋಹಾಶ್ಚ ಗಾಃ ಸಹಸ್ರಾಣ್ಯದಾದ್ ದಶ ॥24॥
ಅಶ್ಮಕನು ಹೇಮ ಶೃಂಗದಿಂದ ಕೂಡಿದ ಸುವರ್ಣಾಲಂಕೃತವಾದ ಒಂದು ಗಡಿಗೆಯಷ್ಟು ಹಾಲನ್ನು ಕರೆಯುವ ಹತ್ತು ಸಹಸ್ರ ಗೋವುಗಳನ್ನು ವಸ್ತ್ರ ಸಹಿತವಾಗಿ ಕೊಟ್ಟನು.
ಸೈಂಧವಾನಾಂ ಸಹಸ್ರಾಣಿ ಹಯಾನಾಂ ಪಂಚವಿಂಶತಿಮ್ |
ಅದದಾತ್ ಸೈಂಧವೋ ರಾಜಾ ಹೇಮಮಾಲ್ಯೈರಲಂಕೃತಾನ್ ॥25॥
ಸೈಂಧವ ರಾಜನು ಸುವರ್ಣಮಾಲೆಗಳಿಂದ ಅಲಂಕೃತವಾದ ಇಪ್ಪತ್ತೈದು ಸಾವಿರ ಅಶ್ವಗಳನ್ನು ಕೊಟ್ಟನು.
ಸೌವೀರೋ ಹಸ್ತಿಭಿರ್ಯುಕ್ತಾನ್ ರಥಾನ್ ಷಟ್‌ತ್ರಿಶತಾವರಾನ್ |
ಜಾತರೂಪಪರಿಷ್ಕಾರಾನ್ ಮಣಿರತ್ನವಿಭೂಷಿತಾನ್ ॥26॥
ಮಧ್ಯಂದಿನಾರ್ಕಪ್ರತಿಮಾನ್ ತೇಜಸಾ ಜ್ವಲಿತಾನಿವ |
ದಾಸಾನಾಮಯುತಂ ಚಾಪಿ ಪಾಂಡವಾಯ ನ್ಯವೇದಯತ್ ॥27॥
ಸೌವೀರ ರಾಜನು ಸುವರ್ಣಗಳಿಂದಲೂ ಮಣಿರತ್ನಗಳಿಂದಲೂ ವಿಭೂಷಿತವಾದ, ತೇಜಸ್ಸಿನಿಂದ ಮಧ್ಯಂದಿನದ ಸೂರ್ಯನಂತೆ ಹೊಳೆಯುವ, ಗಜಗಳಿಂದ ಯುಕ್ತವಾದ, ಒಂದುಸಾವಿರದ ಎಂಟುನೂರಕ್ಕಿಂತಲೂ ಹೆಚ್ಚು ಸಂಖ್ಯೆಯ ರಥಗಳನ್ನು ಮತ್ತು ಹತ್ತು ಸಹಸ್ರ ದಾಸರನ್ನು ಪಾಂಡವನಿಗೆ ನಿವೇದಿಸಿದನು.
ಅವಂತಿರಾಜೋ ರತ್ನಾನಿ ವಿವಿಧಾನಿ ಸಹಸ್ರಶಃ |
ಹಾರಾಂಗದಾಂಶ್ಚ ಮುಖ್ಯಾನ್ ವೈ ವಿವಿಧಂ ಚ ವಿಭೂಷಣಮ್ ॥28॥
ದಾಸೀನಾಮಯುತಂ ಚೈವ ಬಲಿಮಾದಾಯ ಭಾರತ |
ಸಭಾದ್ವಾರಿ ನರಶ್ರೇಷ್ಠ ದಿದೃಕ್ಷುರವತಿಷ್ಠತೇ ॥29॥
ಎಲೈ ಭಾರತನೇ! ಅವಂತಿರಾಜನು ವಿಧವಿಧವಾದ ಸಹಸ್ರ ರತ್ನಗಳನ್ನೂ ಶ್ರೇಷ್ಠವಾದ ಹಾರಾಂಗದಗಳನ್ನೂ ಮತ್ತು ಬೇರೆ ಹಾರಗಳನ್ನೂ ಹತ್ತು ಸಹಸ್ರ ದಾಸಿಯರನ್ನೂ ಕಪ್ಪವಾಗಿ ತೆಗೆದುಕೊಂಡು ಬಂದು ಸಭೆಯ ಬಾಗಿಲಿನಲ್ಲಿ ಧರ್ಮರಾಜನನ್ನು ನೋಡಲು ಕಾದು ನಿಂತಿದ್ದಾನೆ.
ವಸತ್ರಾಣಿ ಮುಖ್ಯಾನ್ಯಾದಾಯ ಶೂರಸೇನೋ ನರರ್ಷಭ |
ಬಲಿಂ ಚ ಕೃತ್ಸ್ನಮಾದಾಯ ಪಾಂಡವಾಯ ನ್ಯವೇದಯತ್ ॥30॥
ಎಲೈ ರಾಜನೇ! ಶೂರಸೇನನು ಶ್ರೇಷ್ಠವಾದ ವಸ್ತ್ರಗಳನ್ನು ಮತ್ತು ಸಮಗ್ರವಾದ ಕಾಣಿಕೆಯನ್ನು ತೆಗೆದುಕೊಂಡು ಬಂದು ಪಾಂಡವನಿಗೆ ಅರ್ಪಿಸಿದನು.
ಕಾಶಿರಾಜೇನ ಹೃಷ್ಟೇನ ಬಲೀ ರಾಜ್ಞೋ ನಿವೇದಿತಃ |
ಅಶೀತಿಂ ಗೋಸಹಸ್ರಾಣಾಂ ಶತಾನ್ಯಷ್ಟೌ ಚ ದಂತಿನಾಮ್ ॥31॥
ಅಯುತಂ ಚ ನದೀಜಾನಾಂ ಹಯಾನಾಂ ಹೇಮಮಾಲಿನಾಮ್ |
ವಿವಿಧಾನಿ ಚ ರತ್ನಾನಿ ಕಾಶಿರಾಜೋ ಬಲಿಂ ದದೌ ॥32॥
ಕಾಶಿರಾಜನು ಸಂತೋಷದಿಂದ ಧರ್ಮರಾಜನಿಗೆ ಎಂಬತ್ತು ಸಾವಿರ ಗೋವುಗಳನ್ನೂ ಎಂಟುನೂರು ಗಜಗಳನ್ನೂ ಹೇಮಮಾಲೆಯಿಂದ ಅಲಂಕರಿಸಿದ ನದೀತೀರದಲ್ಲಿ ಬೆಳೆದ ಹತ್ತು ಸಹಸ್ರ ಅಶ್ವಗಳನ್ನೂ ಮತ್ತು ಅನೇಕ ವಿಧವಾದ ರತ್ನಗಳನ್ನೂ ಬಲಿಯಾಗಿ ಕೊಟ್ಟನು.
ಕೃತಕ್ಷಣಶ್ಚ ವೈದೇಹಃ ಕೌಸಲಶ್ಚ ಬೃಹದ್ಬಲಃ |
ದದತುರ್ವಾಜಿಮುಖ್ಯಾಂಶ್ಚ ಸಹಸ್ರಾಣಿ ಚತುರ್ದಶ ॥33॥
ಶೈಬ್ಯೋ ವಸಾದಿಭಿಃ ಸಾರ್ಧಂ ತ್ರಿಗರ್ತೋ ಮಾಲವೈಃ ಸಹ |
ತಸ್ಮೈ ರತ್ನಾನಿ ದದತುರೇಕೈಕೋ ಭೂಮಿಪೋಽಮಿತಮ್ ॥34॥
ವಿದೇಹರಾಜನೂ ಮತ್ತು ಕೋಸಲರಾಜನಾದ ಬೃಹದ್ಬಲನೂ ಸಹ ಸಮಯವನ್ನು ಸಂಪಾದಿಸಿ ಹದಿನಾಲ್ಕು ಸಾವಿರ ಶ್ರೇಷ್ಠವಾದ ಅಶ್ವಗಳನ್ನು ಕೊಟ್ಟರು. ಶೈಬ್ಯನು ವಸಾದಿಗಳಿಂದ ಸಹಿತನಾಗಿ ಹಾಗೆಯೇ ತ್ರಿಗರ್ತರಾಜನು ಮಾಳವರಿಂದ ಸಹಿತನಾಗಿ ಒಬ್ಬೊಬ್ಬ

ರಾಜನೂ ಧರ್ಮರಾಜನಿಗೆ ಅಮಿತವಾದ ರತ್ನಗಳನ್ನು ಕೊಟ್ಟನು.
ಹಾರಾಂಶ್ಚ ಮುಕ್ತಾನ್ ಮುಖ್ಯಾಂಶ್ಚ ವಿವಿಧಂ ಚ ವಿಭೂಷಣಮ್ |
ಶತಂ ದಾಸೀಸಹಸ್ರಾಣಿ ಕಾರ್ಪಾಸಿಕನಿವಾಸಿನಾಮ್ ॥35॥
ಶ್ಯಾಮಾಸ್ತನ್ವೀರ್ದೀರ್ಘಕೇಶೀರ್ಹೇಮಾಭರಣಭೂಷಿತಾಃ |
ಬಲಿಂ ಚ ಕೃತ್ಸ್ನಮಾದಾಯ ಭಾರುಕಚ್ಛೋ ನರರ್ಷಭ |
ಶತಾನ್ ವಿಪ್ರೋತ್ತಮಾರ್ಹಾಂಶ್ಚ ಕಂಬಳಪ್ರವರಾನ್ ದದೌ ॥36॥
ಎಲೈ ರಾಜನೇ! ಭಾರಕನು ಹಾರವನ್ನೂ ಶ್ರೇಷ್ಠವಾದ ಮುತ್ತುಗಳನ್ನೂ ವಿವಿಧವಾದ ಆಭರಣಗಳನ್ನೂ ಕಾರ್ಪಾಸಿಕನಿವಾಸಿಗಳಾದ ತರುಣವಯಸ್ಸಿನಲ್ಲಿರುವ ಕೃಶಾಂಗಿಯರೂ ದೀರ್ಘಕೇಶಿಯರೂ ಸುವಾರ್ಣಾಭರಣ ಭೂಷಿತರೂ ಆದ ಒಂದು ಲಕ್ಷ ದಾಸಿಯರನ್ನೂ ಬ್ರಾಹ್ಮಣ ಶ್ರೇಷ್ಠರಿಗೆ ಯೋಗ್ಯವಾದ ನೂರು ಕಂಬಳಿಗಳನ್ನೂ ಉತ್ತರೀಯಗಳನ್ನೂ ಕೊಟ್ಟನು.
ತೇ ಸರ್ವೇ ಪಾಂಡುಪುತ್ರಾಯ ದ್ವಾರ್ಯತಿಷ್ಠನ್ ದಿದೃಕ್ಷವಃ |
ಉಪಾಯನಂ ಯದಾ ದದ್ಯುಸ್ತದಾ ದ್ವಾರಮಲಪ್ಸ್ಯತ ॥37॥
ಅವರೆಲ್ಲರೂ ಧರ್ಮರಾಜನನ್ನು ನೋಡಲು ಬಯಸಿ ಆವನ ಬಾಗಿಲಿನಲ್ಲಿ ನಿಂತಿರುತ್ತಿದ್ದರು. ಕಾಣಿಕೆಯನ್ನು ಕೊಡುವ ಸರದಿ ಬಂದಾಗ ಅವರಿಗೆ ಪ್ರವೇಶವು ದೊರೆಯುತ್ತಿತ್ತು.
ಇಂದ್ರವೃಷ್ಟ್ಯರ್ವರ್ತಯಂತಿ ಧಾನ್ಯೈರ್ನಾದ್ಯಮುಖೈಸ್ತು ಯೇ |
ಸಮುದ್ರನಿಷ್ಕುಟಾಜ್ಞಾತಾಃ ಪರಸಿಂಧುನಿವಾಸಿನಃ ॥38॥
ತೇ ವೈ ದ್ರುಮಾಃ ಪಾರದಾಶ್ಚ ಶಕಾಃ ಕೈರಾತಕೈಃ ಸಹ |
ಬಲಿಂ ವಿವಿಧಮಾದಾಯ ರತ್ನಾನಿ ವಿವಿಧಾನಿ ಚ ॥39॥
ಅಜಾವಿಕಂ ಗೋಹಿರಣ್ಯಂ ಖರೋಷ್ಟ್ರಂ ಫಲಜಂ ಮಧು |
ಕಂಬಳಾನ್ ವಿವಿಧಾಂಶ್ಚೈವ ದ್ವಾರಿ ತಿಷ್ಠಂತಿ ವಾರಿತಾಃ ॥40॥
ಇಂದ್ರನು ಸುರಿಸಿದ ಮಳೆಯಿಂದಲೇ ಬೆಳೆದ ಧಾನ್ಯಗಳಿಂದಲೇ ಜೀವಿಸುವ, ನದಿ ತಟಾಕ ಮೊದಲಾದವುಗಳ ಸಮೀಪದಲ್ಲಿ ಜೀವಿಸುವ, ಸಿಂಧುವಿನ ಆಚೆಯ ದಡದಲ್ಲಿ ಜೀವಿಸುವ, ಸಮುದ್ರ ತೀರದಲ್ಲಿ ವಾಸಿಸುವ ದ್ರುಮರು ಪಾರದರು ಶಕರು ಕೈರಾತಕರು ಸಹ ವಿವಿಧವಾದ ಬಲಿಯನ್ನು ಆಡುಗಳು ಕುರಿಗಳು ಗೋವು ಹಿರಣ್ಯ ಕತ್ತೆಗಳು ಒಂಟೆಗಳು ಫಲದಿಂದ ಉಂಟಾದಮಧು ವಿಧವಿಧವಾದ ಕಂಬಳಿಗಳು ಇಂತಹ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಬಂದು ಧರ್ಮರಾಜನ ಬಾಗಿಲಿನಲ್ಲಿ ತಡೆಯಲ್ಪಟ್ಟು ನಿಂತಿದ್ದಾರೆ.
ಪ್ರಾಗ್ಜ್ಯೋತಿಷಪತಿಃ ಶೂರೋ ಮ್ಲೇಚ್ಛಾನಾಮಧಿಪೋ ವಶೀ |
ಯವನೈಃ ಸಹಿತೋ ರಾಜಾ ಭಗದತ್ತೋ ಮಹಾಬಲಃ ॥41॥
ಆಜಾನೇಯಾನ್ ಹಯಾನ್ ಶೀಘ್ರಾನಾದಾಯಾನಿಲರಂಹಸಃ |
ಬಲಿಂ ಚ ಕೃತ್ಸ್ನಮಾದಾಯ ದ್ವಾರಿ ತಿಷ್ಠತಿ ವಾರಿತಃ ॥42॥
ಪ್ರಾಗ್ಜ್ಯೋತಿಷ ಪತಿಯಾದ ಮ್ಲೇಚ್ಛರ ಅಧಿಪತಿಯಾದ ಪ್ರಬಲನಾದ ಭಗದತ್ತನು ಯವನರ ಜೊತೆಯಲ್ಲಿ ಕೂಡಿದವನಾಗಿ ಶೀಘ್ರಗಾಮಿಯಾದ ವಾಯುವೇಗವುಳ್ಳ ಒಳ್ಳೆಯ ಅಶ್ವರೂಪವಾದ ಬಲಿಯನ್ನು ಇನ್ನೂ ಬಹುಬಗೆಯ ಬಲಿಗಳನ್ನೂ ತೆಗೆದುಕೊಂಡು ಬಂದು ಧರ್ಮರಾಜನ ಬಾಗಿಲಿನಲ್ಲಿ ತಡೆಯಲ್ಪಟ್ಟು ನಿಂತಿದ್ದಾನೆ.
ಅಶ್ಮಸಾರಮಯಂ ಭಾಂಡಂ ಶುಭ್ರದಂತತನೂನಸಃ |
ಪ್ರಾಗ್ಜ್ಯೋತಿಷಾಧಿಪೋ ದತ್ತತ್ವ ಭಗದತ್ತೋಽವ್ರಜತ್ ತದಾ ॥43॥
ಪ್ರಾಗ್ಜ್ಯೋತಿಷ ಪತಿಯಾದ ಭಗದತ್ತನು. ಕಲ್ಲಿನಂತೆ ಗಟ್ಟಿಯಾಗಿರುವ ಅನೇಕ ಪಾತ್ರೆಗಳನ್ನೂ ಶುಭ್ರವಾದ ದಂತ ದೇಹ ಮತ್ತು ಸೊಂಡಿಲುಗಳನ್ನು ಹೊಂದಿದ ಅನೇಕ ಗಜಗಳನ್ನೂ ಕೊಟ್ಟು ಹೊರಟು ಹೋದನು.
ದ್ವ್ಯಕ್ಷಾಂಸ್ತ್ರ್ಯಕ್ಷಾಂಲ್ಲಲಾಟಾಕ್ಷಾನ್ ನಾನಾದಿಗ್ಭ್ಯಃಸಮಾಗತಾನ್ |
ಔಷ್ಣೀಷನಿಚಯಾಂಶ್ಚೈವ ಬಾಹುಕಾನ್ ಪುರುಷಾದಕಾನ್ ॥44॥
ಏಕಪಾದಾಂಶ್ಚ ತತ್ರಾಹಮಪಶ್ಯಂ ದ್ವಾರಿ ವಾರಿತಾನ್ |
ಬಲ್ಯರ್ಥಂ ಚ ದದುಸ್ತಸ್ಯ ನಾನಾರೂಪಮನೇಕಶಃ ॥45॥
ಎರಡುಕಣ್ಣುಳ್ಳವರನ್ನೂ ಮೂರುಕಣ್ಣುಳ್ಳವರನ್ನೂ ಹಣೆಯಲ್ಲಿ ಕಣ್ಣುಳ್ಳವರನ್ನೂ ನಾನಾ ದೇಶದಿಂದ ಬರುವ ರುಮಾಲುಗಳ ರಾಶಿಯನ್ನೂ ಬಾಹುಕರನ್ನು ರಾಕ್ಷಸರನ್ನೂ ಒಂದು ಸಣ್ಣ ಸ್ಥಳದಲ್ಲಿ ನಾಲ್ಕು ಪಾದಗಳನ್ನು ಇಡುವಂತೆ ಸುರಕ್ಷಿತರಾದವರನ್ನೂ ಧರ್ಮರಾಜನ ಬಾಗಿಲಲ್ಲಿ ನಿಂತಿದ್ದನ್ನು ನೋಡಿದೆನು. ಅವರೆಲ್ಲರೂ ಧರ್ಮರಾಜನಿಗೆ ನಾನಾ ವಿಧವಾದ ಬಲಿಯನ್ನು ಸಮರ್ಪಿಸಿದರು.
ಕೃಷ್ಣಗ್ರೀವಾನ್ ಮಹಾಕಾಯಾನ್ ರಾಸಭಾನ್ ಭರಧಾರಿಣಃ |
ಆಜಹ್ರುರ್ದಶಸಾಹಸ್ರಾನ್ ವಿನೀತಾನ್ ದಿಕ್ಷು ವಿಶ್ರುತಾನ್ |
ಪ್ರಮಾಣರಾಗಸಂಪನ್ನಾನ್ ಸಿಂಧುತೀರಸಮುದ್ಭವಾನ್ ॥46॥
ಇಂದ್ರಗೋಪಕಸಂಕಾಶಾನ್ ಶುಕವರ್ಣಾನ್ ಮನೋಜವಾನ್ |
ತಥೈವೇಂದ್ರಾಯುಧನಿಭಾನ್ ಸಂಧ್ಯಾಭ್ರಸದೃಶಾನಪಿ ॥47॥
ಅನೇಕವರ್ಣಾನಾರಣ್ಯಾನ್ ಗೃಹೀತ್ವಾಽಶ್ವಾನ್ ಮನೋರಮಾನ್ |
ಜಾತರೂಪಮನರ್ಘ್ಯಂ ಚ ದದುಸ್ತಸ್ಯೈಕಪಾದಕಾಃ ॥48॥
ಏಕಪಾದಕರು (ಸುಶಿಕ್ಷಿತ ಜನರು) ಶುಭವಾದ ಕತ್ತುಳ್ಳ ದೊಡ್ಡದಾದ ಶರೀರವುಳ್ಳ ಬಾರವನ್ನು ಹೊರಲು ಸಮರ್ಥವಾದ ಪಳಗಿಸಲ್ಪಟ್ಟ

ಪ್ರಸಿದ್ಧವಾದ ಯೋಗ್ಯವಾದ ಎತ್ತರ ಮತ್ತು ಬಣ್ಣಗಳಿಂದ ಕೂಡಿದ ಸಿಂಧುನದಿಯ ತೀರದಲ್ಲಿ ಹುಟ್ಟಿದ ಹತ್ತು ಸಹಸ್ರ ರಾಸಭಗಳನ್ನೂ ಮತ್ತು ಇಂದ್ರಗೋಪದಂತೆ ಕೆಂಪಾದ, ಗಿಣಿಯಂತೆ ಹಸಿರುಬಣ್ಣದ, ಕಾಮನ ಬಿಲ್ಲಿನಂತೆ ಅನೇಕ ಬಣ್ಣಗಳಿಂದ ಕೂಡಿದ ಸಂಧ್ಯಾಕಾಲದ ಮೋಡದಂತೆ ಅರುಣ ಬಣ್ಣದಿಂದ ಕೂಡಿದ ಮನೋಜವವುಳ್ಳ ಅನೇಕ ಅರಣ್ಯ ಪ್ರಾಣಿಗಳನ್ನೂ ತೆಗೆದು ಕೊಂಡು ಬಂದು ಅನೇಕ ಸುಂದರವಾದ ಅಶ್ವಗಳನ್ನೂ ಅರಣ್ಯ ಪ್ರಾಣಿಗಳನ್ನೂ ಅನರ್ಘ್ಯವಾದ ಸುವರ್ಣಗಳನ್ನೂ ಅವನಿಗೆ ಕಾಣಿಕೆಯಾಗಿ ಕೊಟ್ಟರು.

ವನಾನ್ ಹೂಣಾನ್ ಶಕಾನೌಭ್ರಾನ್ ಪರ್ವತಾಂತರವಾಸಿನಃ |
ವಾರ್ಷ್ಣೇಯಾನ್ ಹಾರಹೂಣಾಂಶ್ಚ ಕಕ್ಷಾನ್ ಹೈಮವತಸ್ತಥಾ ॥49॥
ನ ಪಾರಯಾಮ್ಯಭಿಗತಾನ್ ವಿವಿಧಾನ್ ದ್ವಾರಿ ವಾರಿತಾನ್ |
ಬಲ್ಯರ್ಥಂ ದದತಸ್ತಸ್ಯ ನಾನಾರೂಪಮನೇಕಶಃ ॥50॥

ಹೂಣರು ಶಕರು ಔಭ್ರರು ಪರ್ವತದ ಮಧ್ಯದಲ್ಲಿ ವಾಸಿಸುವರು ವಾರ್ಷ್ಣೇಯರು ಹಾರಹೂಣರು ಕಕ್ಷರು ಹಿಮಾಲಯವಾಸಿಗಳು ಹೀಗೆ ನಾನಾ ದೇಶಗಳಿಂದ ಕಪ್ಪಕಾಣಿಕೆಗಳನ್ನು ಕೊಡಲು ಬಂದ ಧರ್ಮರಾಜನ ಬಾಗಿಲಿನಲ್ಲಿ ನಿಂತಿದ್ದ ಅನೇಕ ವಿಧವಾದ ಜನರನ್ನು ನಾನು ಎಣಿಸಲು ಸಾಧ್ಯವಾಗಲಿಲ್ಲ.

ಸಿಂಹಳಶ್ಚ ತತೋ ರಾಜಾ ಪರಿಗೃಹ್ಯ ಧನಂ ಬಹು |
ಗೋಶೀರ್ಷಕಂ ಪದ್ಮಕಂ ಚ ಹರಿಂ ಶ್ಯಾಮಂ ಚ ಚಂದನಮ್ |
ಭಾರಾಣಾಂ ಶತಮೇಕಂ ತು ದ್ವಾರಿ ತಿಷ್ಠತಿ ವಾರಿತಃ | ॥51॥

ಸಿಂಹಳರಾಜನು ಅಪರಿಮಿತವಾದ ಧನವನ್ನು ಗೋಶೀರ್ಷಕ ಪದ್ಮಕ ಹರಿ ಶ್ಯಾಮ ಎಂಬ ಚಂದನ ವಿಶೇಷಗಳ ನೂರೊಂದು ಭಾರವನ್ನು ತೆಗೆದುಕೊಂಡು ಧರ್ಮರಾಜನ ಬಾಗಿಲಿನಲ್ಲಿ ತಡೆಯಲ್ಪಟ್ಟು ನಿಂತಿದ್ದಾನೆ.

ಯೇ ನಗ್ನವಿಷಯಾ ರಾಜನ್ ಬರ್ಬರೇಯಾಶ್ಚ ವಿಶ್ರುತಾಃ |
ಶತಂ ದಾಸೀಸಹಸ್ರಾಣಾಂ ಕಂಬಳಾಂಶ್ಚ ಸಹಸ್ರಶಃ |
ಪರಿಗೃಹ್ಯ ಮಹಾರಾಜ ದ್ವಾರಿ ತಿಷ್ಠಂತಿ ವಾರಿತಾಃ ॥52॥

ಎಲೈ ಮಹಾರಾಜನೇ! ನಗ್ನದೇಶದ ನಿವಾಸಿಗಳಾದ ಬರ್ಬರೇಯರೆಂದು ಪ್ರಖ್ಯಾತರಾದವರು ಒಂದು ಲಕ್ಷದಾಸಿಯರನ್ನೂ ಸಹಸ್ರಾರು ಕಂಬಳಿಗಳನ್ನೂ ತೆಗೆದುಕೊಂಡು ಬಂದು ಧರ್ಮರಾಜನ ಬಾಗಿಲಿನಲ್ಲಿ ಬಂದು ತಡೆಯಲ್ಪಟ್ಟು ನಿಂತಿದ್ದಾರೆ.

ಪೌಂಡ್ರಾಶ್ಚ ತಾಮ್ರಲಿಪ್ತಶ್ಚ ಯಥಾಕಾಮಕೃತೋ ನೃಪಾಃ |
ಕಾಲೇಯಕಂ ಚ ರೂಪ್ಯಂ ಚ ಪರಿಗೃಹ್ಯ ಪರಿಚ್ಛದಾನ್ ॥53॥
ಅಗರೂನ್ ಸ್ಫಾಟಿಕಾಂಶ್ಚೈವ ದಾಂತಾನ್ ಜಾತಿಫಾಲಾನಿ ಚ |
ತಕಲಾಂಶ್ಚ ಲವಂಗಾಂಶ್ಚ ಕರ್ಪೂರಾಂಶ್ಚ ಮಹಾಬಲಾಃ ॥54॥
ಅನ್ಯಾಂಶ್ಚ ವಿವಿಧಾನ್ ದ್ರವ್ಯಾನ್ ಪರಿಗೃಹ್ಯೋಪಸಂಸ್ಥಿತಾಃ |
ಏತೇ ಸರ್ವೇ ಮಹಾತ್ಮಾನೋ ದ್ವಾರಿ ತಿಷ್ಠಂತಿ ವಾರಿತಾಃ ॥55॥

ಪೌಂಡ್ರರು ತಾಮ್ರಲಿಪ್ತರು ಮೊದಲಾದ ರಾಜರು ಕಾಶ್ಮೀರ ದೇಶದಲ್ಲಿ ಉದ್ಭವವಾದ ಕೇಸರಿಯನ್ನು ರಜತವನ್ನು ಹೊದೆಯುವ ವಸ್ತ್ರಗಳನ್ನು ಅಗರುಗಳನ್ನು ಸ್ಫಟಿಕ ಮಣಿಗಳನ್ನು ಗಜದಂತಗಳನ್ನು ಜಾಜಿ ಕಾಯಿ ತಕ್ಕೋಲ, ಲವಂಗ ಕರ್ಪೂರ ಮೊದಲಾದ ಎಲ್ಲಾ ದ್ರವ್ಯಗಳನ್ನೂ ತೆಗೆದುಕೊಂಡು ಬಂದು ಮಹಾಬಲರಾದ ಆ ಮಹಾತ್ಮರಾದ ಅವರೆಲ್ಲರೂ ಧರ್ಮರಾಜನ ಬಾಗಿಲಲ್ಲಿ ತಡೆಯಲ್ಪಟ್ಟು ನಿಂತಿದ್ದಾರೆ.

ಶೈಲೇಯಶ್ಚ ತತೋ ರಾಜಾ ವಸಶತ್ರಣಿ ಪರಿಗೃಹ್ಯ ಸಃ |
ದ್ವಾರಿ ತಿಷ್ಠನ್ ಮಹಾರಾಜ ದ್ವಾರಪಾಲೈರ್ನಿವಾರಿತಃ ॥56॥

ಎಲೈ ಮಹಾರಾಜನೇ! ಅನಂತರ ಶೈಲೇಯ ರಾಜನು ವಸ್ತ್ರಗಳನ್ನು ತೆಗೆದುಕೊಂಡು ಬಂದು ಅವನ ದ್ವಾರದಲ್ಲಿ ನಿಂತು ತಡೆಯಲ್ಪಟ್ಟಿದ್ದಾನೆ.

ಚೀನಾನ್ ಹೂಣಾನ್ ಖಷಾನ್ ಕಾಚಾನ್ ಪರ್ವತಾಂತರವಾಸಿನಃ|
ಹಾರಿಷುರ್ದಶಸಾಹಸ್ರಾನ್ ವಿನೀತಾನ್ ದೀರ್ಘದರ್ಶನಾನ್ ॥57॥
ಉಷ್ಣೀಷಕಂ ಕರಂ ಚೈವ ಕಿಟ್ಟಜಂ ಪಟ್ಟಜಂ ತಥಾ |
ಪ್ರಮಾಣರಾಗಸ್ಪರ್ಶಾಢ್ಯಂ ವಾಹಿಚೀನಸಮುದ್ಭವಮ್ |
ರಸಾನ್ ಗಂಧಾನ್ ಪ್ರಶಂಸನ್ ಸ ತತೋ ದ್ವಾರಮಲಭ್ಯತ ॥58॥

ಚೀನರು ಹೂಣರು ಖಷರು ಕಾಚರು ಪರ್ವತಾಂತರವಾಸಿಗಳು ಇವರ ಅಧಿಪತಿಯಾದ ಹಾರಿಷು ಎಂಬ ರಾಜನು ಹತ್ತು ಸಹಸ್ರ ವಿನೀತರಾದ ಸೇವಕರನ್ನು ಲೋಹಮಯವಾದ ಮತ್ತು ತಂತುಮಯವಾದ ಅನೇಕ ರುಮಾಲುಗಳನ್ನು ಒಳ್ಳೆಯ ಬಣ್ಣ ಸ್ಪರ್ಶ ಮತ್ತು ಪ್ರಮಾಣಗಳಿಂದ ಕೂಡಿ ತಯಾರಿಸಲ್ಪಟ್ಟ ಅನೇಕ ರಸಗಳನ್ನು ಗಂಧಗಳನ್ನು ಕೀರ್ತಿಸುತ್ತಾ ಪ್ರವೇಶವನ್ನು ಪಡೆದನು.

ಖರ್ವಟಾಸ್ತೋಮರಾಶ್ಚೈವ ಶೂರಾ ವರ್ಧನಕಾಸ್ತಥಾ |
ಚೇಲಾನ್ ಬಹುವಿಧಾನ್ ಗೃಹ್ಯ ದ್ವಾರಿ ತಿಷ್ಠಂತಿ ವಾರಿತಾಃ ॥59॥
ಪ್ರಾಕ್ಕೋಟಾ ನಾಟಕೇಯಾಶ್ಚ ನಂದೀನಾಗರಕಾಸ್ತಥಾ |
ನಾಪಿತಾಸ್ತ್ರೈಪುರಾಶ್ಚೈವ ಪಂಚಗೇಯಾಃ ಸಹೋರುಜಾಃ ॥60॥
ತಥಾ ಚಾಟವಿಕಾಃ ಸರ್ವೇ ನಾನಾದ್ರವ್ಯಪರಿಚ್ಛದಾನ್ |
ಪರಿಗೃಹ್ಯ ಮಹಾರಾಜ ದ್ವಾರಿ ತಿಷ್ಠಂತಿ ವಾರಿತಾಃ ॥61॥

ಎಲೈ ಮಹಾರಾಜನೇ! ಖರ್ವಟರು ತೋಮರರು ಶೂರರು ಮತ್ತು ವರ್ಧನಕರೂ ಸಹ ಬಹುವಿಧವಾದ ವಸ್ತ್ರಗಳನ್ನು ತೆಗೆದುಕೊಂಡು ಅವನ ಬಾಗಿಲಿನಲ್ಲಿ ನಿಂತಿದ್ದಾರೆ. ಪ್ರಾಕ್ಕೋಟರು ನಾಟಕೇಯರು ನಂದಿನಾಗರವಾಸಿಗಳು ನಾಪಿತರು ತ್ರಿಪುರವಾಸಿಗಳು ಪಂಚಗೇಯರು ಊರುಜರು ಆಟವಿಕರು ಮೊದಲಾದ ಎಲ್ಲರೂ ನಾನಾ ದ್ರವ್ಯಗಳನ್ನು ತೆಗೆದುಕೊಂಡು ಅವನ ಬಾಗಿಲಿನಲ್ಲಿ ನಿಂತಿದ್ದಾರೆ.
ಮಹಾಬಲಾ ದೂರಗಮಾ ರೋಮಕಾಃ ಶೃಂಗಿಣೋ ನರಾಃ |
ಬಲಾದ್ದೂರಗಮಾನ್ ರಾಜನ್ ಗಣಿತಂ ಚಾರ್ಬುದಂ ಮಯಾ ॥
ಕಿಟ್ಟೀಕೃತಂ ಸುವರ್ಣಂ ಚ ಪದ್ಮಕಿಂಜಲ್ಕಸನ್ನಿಭಮ್ |
ಶಿತಾನ್ ದೀರ್ಘಾನಸೀನನ್ಯಾನ್ ಯಷ್ಟಿಶಕ್ತಿಪರಶ್ವಧಾನ್ ॥63॥
ಶ್ಲಕ್ಷ್ಣಂ ವಸ್ತ್ರಮಕಾರ್ಪಾಸಮಾವಿಕಂ ಹ್ಯೇಣಕಾಜಿನಮ್ |
ಬಲಿಮೇತಂ ಸಮಾದಾಯ ದ್ವಾರಿ ತಿಷ್ಠಂತಿ ವಾರಿತಾಃ ॥64॥
ಮಹಾಬಲರಾದ ದೂರನಡೆಯುವ ಸಾಮರ್ಥ್ಯವನ್ನು ಹೊಂದಿದ ರೋಮಕರು ಮತ್ತು ಶೃಂಗಿಗಳು ಎನಿಸಿಕೊಂಡ ನರರು - ದೂರದಿಂದ ಬಂದ ಅವರನ್ನು ನಾನು ಒಂದು ಅರ್ಬುದ ಸಂಖ್ಯೆಯಲ್ಲಿ ಎಣಿಸಿದೆ- ಪದ್ಮಕೇಸರ ಬಣ್ಣದ ಸುವರ್ಣದ ಗಟ್ಟಿಗಳನ್ನು ಹರಿತವಾದ ಮತ್ತು ದೀರ್ಘವಾದ ಕತ್ತಿಗಳನ್ನು ಯಷ್ಟಿ, ಶಕ್ತಿ, ಪರಶ್ವಧ ಮೊದಲಾದ ಆಯುಧಗಳನ್ನು ಹತ್ತಿಯದಲ್ಲದ ಆವಿಕ ಮೊದಲಾದ ಸೂಕ್ಷ್ಮ ವಸ್ತ್ರಗಳನ್ನು ಕೃಷ್ಣಾಜಿನಗಳನ್ನು ಬಲಿಯಾಗಿ ತೆಗೆದುಕೊಂಡು ಬಂದು ಧರ್ಮರಾಜನ ಬಾಗಿಲಲ್ಲಿ ತಡೆಯಲ್ಪಟ್ಟು ನಿಂತಿದ್ದಾರೆ.
ಆಸನಾನಿ ಮಹಾರ್ಹಾಣಿ ಯಾನಾನಿ ಶಯನಾನಿ ಚ |
ಮಣಿಕಾಂಚನಚಿತ್ರಾಣಿ ಗಜದಂತಮಯಾನಿ ಚ ॥65॥
ರಥಾಂಶ್ಚ ವಿವಿಧಾಕಾರಾನ್ ಜಾಂಬೂನದಪರಿಷ್ಕೃತಾನ್ |
ಹಯೈರ್ವಿನೀತೈಃ ಸಂಪನ್ನಾನ್ ವೈಯಾಘ್ರಪರಿವಾರಿತಾನ್ ॥66॥
ವಿಚಿತ್ರಾನ್ ಸಪರಿಸ್ತೋಮಾನ್ ಚಾಪಾನಿ ವಿವಿಧಾನಿ ಚ |
ನಾರಾಚಾನರ್ಧನಾರಾಚಾನ್ ಶಸ್ತ್ರಣಿ ವಿವಿಧಾನಿ ಚ ॥67॥
ಏತದ್ ಗೃಹ್ಯ ಮಹದ್ ದ್ರವ್ಯಂ ಪೂರ್ವದೇಶಾಧಿಪೋ ನೃಪಃ |
ಪ್ರವಿಷ್ಟೋ ಯಜ್ಞಸದನಂ ಪಾಂಡವಸ್ಯ ಯಶಸ್ವಿನಃ ॥68॥
ಜತುಚೇಲಾನ್ ದ್ವಿಸಾಹಸ್ರಂ ದುಕೂಲಾನ್ಯಯುತಾನಿ ಚ |
ಕಾಂಸ್ಯಾನಿ ಚೈವ ಭಾಂಡಾನಿ ಮಹಾರ್ಹಾಣಿ ಕುಥಾನಿ ಚ |
ಏತಾನ್ಯನ್ಯಾನಿ ರತ್ನಾನಿ ದದೌ ಪಾರ್ಥಸ್ಯ ವೈ ಮುದಾ ॥69॥
ಪೂರ್ವದೇಶಾಧಿಪತಿಯಾದ ರಾಜನು ಬೆಲೆಬಾಳುವ ಆಸನಗಳನ್ನೂ ಯಾನಗಳನ್ನೂ ಶಯನಗಳನ್ನೂ ಮಣಿಕಾಂಚನಗಳಿಂದಲೂ ಗಜ ದಂತಗಳಿಂದಲೂ ಭೂಷಿತವಾದ, ವಿವಿಧಾಕಾರವಾದ ಸುವರ್ಣಾಭರಣಗಳಿಂದ ಭೂಷಿತವಾದ ವಿನೀತವಾದ ವ್ಯಾಘ್ರಚರ್ಮವನ್ನು ಧರಿಸಿದ ಅಶ್ವಗಳಿಂದ ಹೂಡಲ್ಪಟ್ಟ ಸುವರ್ಣಮಯವಾದ ರಥಗಳನ್ನೂ, ವಿಚಿತ್ರವಾದ ಪರಿಸ್ತೋಮಗಳನ್ನೂ ವಿವಿಧವಾದ ಧನುಸ್ಸುಗಳನ್ನೂ ಬಾಣಗಳನ್ನೂ ಅರ್ಧಬಾಣಗಳನ್ನೂ ಅನೇಕ ವಿಧವಾದ ಶಸ್ತ್ರಗಳನ್ನೂ ಜೊತೆಯಲ್ಲಿ ಬಹಳ ದ್ರವ್ಯವನ್ನೂ ತೆಗೆದುಕೊಂಡು ಬಂದು ಪಾಂಡವನಾದ ಕೀರ್ತಿಶಾಲಿಯಾದ ಧರ್ಮರಾಜನ ಯಜ್ಞ ಶಾಲೆಯನ್ನು ಪ್ರವೇಶಿಸಿದನು. ಅವನು ಲಾಕ್ಷಾರಸದಿಂದ ಚಿತ್ರಿತವಾಗಿದ್ದ ಎರಡು ಸಹಸ್ರ ವಸ್ತ್ರಗಳನ್ನೂ ಬೆಲೆಬಾಳುವ ಹತ್ತು ಸಾವಿರದುಕೂಲಗಳನ್ನೂ ಕಂಚಿನ ಪಾತ್ರೆಗಳನ್ನೂ ಬೆಲೆಬಾಳುವ ರತ್ನಗಂಬಳಿಗಳನ್ನೂ ಮತ್ತು ಇನ್ನೂ ವಿಧವಿಧವಾದ ರತ್ನಗಳನ್ನೂ ಧರ್ಮರಾಜನಿಗೆ ಸಂತೋಷದಿಂದ ಕೊಟ್ಟನು.
ಅನ್ಯಾನ್ ಬಹುವಿಧಾನ್ ರಾಜನ್ ನರಾಃಸಾಗರಮಾಶ್ರಿತಾಃ |
ರತ್ನಂ ಬಹುವಿಧಂ ಗೃಹ್ಯ ದದುಸ್ತೇ ಪಾಂಡವಾಯ ತು ॥70॥
ಎಲೈ ರಾಜನೇ! ಸಾಗರ ಸಮೀಪದಲ್ಲಿರುವ ಮನುಷ್ಯರು ಇನ್ನೂ ಅನೇಕ ವಿಧವಾದ ರತ್ನಗಳನ್ನು ತೆಗೆದುಕೊಂಡು ಬಂದು ಧರ್ಮರಾಜನಿಗೆ ಕೊಟ್ಟರು.
ಮಾಳವಶ್ಚ ತತೋ ರಾಜನ್ ರತ್ನಾನಿ ವಿವಿಧಾನಿ ಚ |
ಗೋಧೂಮಾನಾಂ ಚ ರಾಜೇಂದ್ರ ದ್ರೋಣಾನಾಂ ಕೋಟಿಸಮ್ಮಿತಮ್ ॥
ಅನ್ಯಾಂಶ್ಚ ವಿವಿಧಾನ್ ಧಾನ್ಯಾನ್ ಪರಿಗೃಹ್ಯ ಮಹಾಬಲಃ |
ಪಾಂಡವಾಯ ದದೌ ಪ್ರೀತ್ಯಾ ಪ್ರವಿವೇಶ ಮಹಾಧ್ವರಮ್ ॥72॥
ರಾಜನೇ! ಅನಂತರ ಮಾಳವಾಧಿಪತಿಯು ವಿವಿಧವಾದ ರತ್ನಗಳನ್ನು ಮತ್ತು ಒಂದು ಕೋಟಿ ಖಂಡುಗ ಪ್ರಮಾಣದ ಗೋಧಿಯನ್ನು ಇನ್ನೂ ವಿವಿಧವಾದ ಧಾನ್ಯಗಳನ್ನೂ ತೆಗೆದುಕೊಂಡು ಬಂದು ಮಹಾಬಲನಾದ ಅವನು ಧರ್ಮರಾಜನ ಯಜ್ಞವನ್ನು ಪ್ರವೇಶಿಸಿ ಅವನಿಗೆ ಪ್ರೀತಿಯಿಂದ ಕೊಟ್ಟನು.
ನಾನಾರತ್ನಾನ್ ಬಹೂನ್ ಗೃಹ್ಯ ಸುರಾಷ್ಟ್ರಾಧಿಪತಿರ್ನೃಪಃ |
ತೈಲಕುಂಭಾನ್ ಮಹಾರಾಜ ದ್ರೋಣಾನಾಮಯುತಾನಿ ಚ ॥73॥
ಗುಡಾನಿ ಚ ಸಿತಾನ್ ಸ್ವಾದೂನ್ ಸಹಸ್ರಶಕಟೈರ್ನೃಪಃ |
ಏತಾನಿ ಸರ್ವಾಣ್ಯಾದಾಯ ದದೌ ಕುಂತೀಸುತಾಯ ಸಃ ॥74॥
ಎಲೈ ಮಹಾರಾಜನೇ! ಸುರಾಷ್ಟ್ರಾಧಿಪತಿಯು ಅನೇಕ ರಥಗಳನ್ನು ತೆಗೆದುಕೊಂಡು ಬಂದು ಹತ್ತು ಸಾವಿರ ದ್ರೋಣ ಪ್ರಮಾಣದ ತೈಲಕುಂಭಗಳನ್ನೂ ಶ್ವೇತವರ್ಣದ ಮಧುರವಾದ ಗುಡವನ್ನೂ ಸಹಸ್ರ ಶಕಟಗಳಲ್ಲಿ ಶ್ವೇತವರ್ಣದ ಮತ್ತು ಮಧುರವಾದ

ಗುಡವನ್ನೂ (ಸಕ್ಕರೆಯನೂ) ತೆಗೆದುಕೊಂಡು ಬಂದು ಕುಂತೀಪುತ್ರನಾದ ಯುಧಿಷ್ಠಿರನಿಗೆ ಕೊಟ್ಟನು.
ಅನ್ಯೇ ಚ ಪಾರ್ಥಿವಾ ರಾಜನ್ ನಾನಾದೇಶಸಮಾಗತಾಃ |
ರತ್ನಾನಿ ವಿವಿಧಾನ್ ಗೃಹ್ಯ ದದುಸ್ತೇ ಕೌರವಾಯ ತು ॥75॥
ಎಲೈ ರಾಜನೇ! ಬೇರೆ ಬೇರೆ ದೇಶಗಳಿಂದ ಬಂದ ಇನ್ನೂ ಅನೇಕ ದೇಶದ ರಾಜರು ಅನೇಕ ವಿಧವಾದ ರತ್ನಗಳನ್ನು ಧರ್ಮರಾಜನಿಗೆ ಕೊಟ್ಟರು.
ಜಂಬೂದ್ವೀಪೇ ಸಮಸ್ತೇ ತು ಸರಾಷ್ಟ್ರವನಪರ್ವತೇ |
ಕರಂ ತು ನ ಪ್ರಯಚ್ಛೇದ್ ಯೋ ನಾಸ್ತಿ ಪಾರ್ಥಸ್ಯ ಪಾರ್ಥಿವಃ ॥76॥
ರಾಷ್ಟ್ರಗಳು ವನಗಳು ಪರ್ವತಗಳು ಇರುವ ಸಮಸ್ತವಾದ ಜಂಬೂದ್ವೀಪದಲ್ಲಿ ಧರ್ಮರಾಜನಿಗೆ ಕರವನ್ನು ಕೊಡದಿದ್ದ ಒಬ್ಬ ರಾಜನೂ ಇರಲಿಲ್ಲ.
ನರಃ ಸಪ್ತಸು ವರ್ಷೇಷು ತದ್ಯಜ್ಞೇ ನಾಸ್ತಿ ನಾಗತಃ |
ಕ್ರತುರ್ನಾನಾಗುಣೈಃ ಕೀರ್ಣೋ ಬಭೌ ಶಕ್ರಸದೋ ಯಥಾ ॥77॥
ಜಂಬೂದ್ವೀಪದ ಸಪ್ತವರ್ಷಗಳಿಂದ ಆ ಯಜ್ಞಕ್ಕೆ ಬರದಿದ್ದ ಒಬ್ಬ ವ್ಯಕ್ತಿಯೂ ಇರಲಿಲ್ಲ. ಅನೇಕ ಗುಣಗಳಿಂದ ಕೂಡಿದ ಆ ಯಜ್ಞಶಾಲೆಯು ಇಂದ್ರ ಸದನದಂತೆ ಶೋಭಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುಃಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಷಷ್ಠೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
*****
ಎಪ್ಪತ್ತೈದನೆಯ ಅಧ್ಯಾಯ
(ಪುನಃ ಅಸೂಯೆಯಿಂದ ದುರ್ಯೋಧನನಿಂದ ಯಜ್ಞವೈಭವದ ವರ್ಣನೆ)
ದುರ್ಯೋಧನಃ
ಇಮಾಂಶ್ಚ ದೇಯಾನ್ ವಿವಿಧಾನ್ ನಿಬೋಧ ಮಮ ಪಾರ್ಥಿವ |
ಯಜ್ಞಾರ್ಥೇ ರಾಜಭಿರ್ದತ್ತಾನ್ ಮಹತೋ ಧನಸಂಚಯಾನ್ ॥1॥
ಎಲೈ ರಾಜನೇ! ಯಜ್ಞದ ಸಲುವಾಗಿ ರಾಜರು ಕೊಡಲು ತಂದಿದ್ದ ಈ ವಿವಿಧವಾದ ಮಹಾಧನರಾಶಿಗಳನ್ನು ತಿಳಿ.
ಮೇರುಮಂದರಯೋರ್ಮಧ್ಯೇ ಶೈಲೋದಾಮಭಿತೋ ನದೀಮ್ |
ಯೇ ತೇ ಕೀಚಕವೇಣೂನಾಂ ಛಾಯಾಂ ರಮ್ಯಾಮುಪಾಸತೇ ॥2॥
ಖಷಾಃ ಶಕಾಃ ಶತಜ್ಯೋತ್ಸ್ನಾಃ ಪ್ರವಾಸಾ ದೀರ್ಘವೇಣಿಕಾಃ |
ಪಶುಪಾಶ್ಚ ಕುಣಿಂದಾಶ್ಚ ತಂಕಣಾಃ ಪರತಂಕಣಾಃ ॥3॥
ತೇ ವೈ ಪಿಪೀಲಿಕಾ ನಾಮ ಪುರಾ ದತ್ತಂ ಪಿಪೀಲಿಕೈಃ |
ಜಾತರೂಪಮಯಂ ದ್ರೋಣಮಹಾರ್ಷುಃ ಪುಂಜಶೋ ನೃಪಾಃ ॥4॥
ಮೇರುಮಂದರಪರ್ವತಗಳ ಮಧ್ಯದಲ್ಲಿರುವ ಶೈಲೋದಾನದಿಯ ತೀರದಲ್ಲಿರುವ ಕೀಚಕ ವೇಣುಗಳಚ್ಛಾಯೆಯಲ್ಲಿ ವಾಸಿಸುವ ಖಷರು ಶಕರು ಶತಜ್ಯೋತ್ಸ್ನರು ಪ್ರವಾಸರು ದೀರ್ಘವೇಣಿಕರು ಪಶುಪರು ಕುಣಿಂದರು ತಂಕಣರು ಪರತಂಕಣರು ಇವರೆಲ್ಲರೂ ಪಿಪೀಲಕರು ಎಂದು ಕರೆಯಲ್ಪಡುತ್ತಾರೆ. ಈ ರಾಜರುಗಳು ಖಂಡುಗಗಟ್ಟಲೆ ಚಿನ್ನವನ್ನು ಹಿಂಡು ಹಿಂಡಾಗಿ ತಂದರು.
ಕೃಷ್ಣಾಭಾಂಶ್ಚಮರಾಂಶ್ಚೈವ ಶ್ಲಕ್ಷ್ಣಾನನ್ಯಾನ್ ಶಶಿಪ್ರಭಾನ್ |
ಹಿಮವತ್ಪುಷ್ಪಜಂ ಚೈವ ಸ್ವಾದು ಕ್ಷೌದ್ರರಸಂ ಬಹು ॥5॥
ಉತ್ತರೇಭ್ಯಃ ಕುರುಭ್ಯಶ್ಚ ವ್ಯೂಢಂ ಮಾಲ್ಯಂ ಮಹಾಂಬುಭಿಃ |
ಉತ್ತರಾದಪಿ ಕೈಲಾಸಾದ್ ಓಷಧೀಶ್ಚ ಮಹಾಬಲಾಃ ॥6॥
ಪಾರ್ವತೇಯಾ ಬಲೀಂಶ್ಚಾನ್ಯಾನಾಹೃತ್ಯ ಪ್ರಣತಾಃ ಸ್ಥಿತಾಃ |
ಅಜಾತಶತ್ರವೇ ರಾಜನ್ ದ್ವಾರಿ ತಿಷ್ಠಂತಿ ವಾರಿತಾಃ ॥7॥
ಪರ್ವತ ಪ್ರದೇಶದ ರಾಜರು ಕೃಷ್ಣ ಚಮರೀ ಮೃಗಗಳನ್ನು ಚಂದ್ರನಂತೆ ಶ್ವೇತವರ್ಣದಿಂದ ಕೂಡಿದ ನಯವಾದ ಇನ್ನೂ ಅನೇಕ ಚಮರೀಮೃಗಗಳನ್ನು ಹಿಮಾಲಯದ ಪುಷ್ಪಗಳಿಂದ ಉಂಟಾದ ಸುಮಧುರವಾದ ಮಧುಗಳನ್ನು ಉತ್ತರ ಕುರು ಪ್ರದೇಶದಲ್ಲಿ ಕಟ್ಟಿದ ಅನೇಕ ಪುಷ್ಪಮಾಲೆಗಳನ್ನು ಉತ್ತರ ಕೈಲಾಸದಲ್ಲಿ ಬೆಳೆದ ಅನೇಕ ಓಷದಿಗಳನ್ನು ಮತ್ತು ಇನ್ನೂ ಅನೇಕ ಕಪ್ಪಕಾಣಿಕೆಗಳನ್ನು ಮಹಾಬಲರಾದ ಅವರು ಅಜಾತಶತ್ರುವಿಗಾಗಿ ತಂದು ಅವನ ಬಾಗಿಲಿನಲ್ಲಿ ದ್ವಾರಪಾಲಕರಿಂದ ತಡೆಯಲ್ಪಟ್ಟು ನಮಸ್ಕರಿಸಿ ನಿಂತಿದ್ದರು.
ಯೇ ಪರಾಂತನಿವಾಸಾಶ್ಚ ಸೂರ್ಯೋದಯಗಿರೇರನು |
ವಾರಿಷೇಣಸಮುದ್ರಾಂತೇ ಲೌಹಿತ್ಯಮಭಿತಶ್ಚ ಯೇ ॥8॥
ಫಲಮೂಲಾಶನಾ ಯೇ ಚ ಕಿರಾತಾಶ್ಚರ್ಮವರ್ಮಿಣಃ |
ಚಂದನಾಗರುಮುಖ್ಯಾನಿ ಮಹಾರ್ಹಾನ್ ಕಂಬಳಾಂಸ್ತಥಾ ॥9॥
ಚರ್ಮರತ್ನಸುವರ್ಣಾನಿ ಗಂಧಾನುಚ್ಚಾವಚಾನಿ ಚ |
ಕೈರಾತಕನಾಮಯುತಂ ದಾಸೀನಾಂ ಚ ವಿಶಾಂಪತೇ ॥10॥
ಆಹೃತ್ಯ ರಮಣೀಯಾರ್ಥಾನ್ ದೂರಜಾನ್ ಮೃಗಪಕ್ಷಿಣಃ |

ನಿಚಿತಂ ಪರ್ವತೇಭ್ಯಶ್ಚ ಸುವರ್ಣಂ ಭೂರಿವರ್ಚಸಮ್ ॥11॥
ಬಲಿಂ ಚ ಕೃತ್ಸ್ನಮಾದಾಯ ದ್ವಾರಿ ತಿಷ್ಠಂತಿ ವಾರಿತಾಃ |
ಕ್ರೂರಶಸತ್ರಃ ಕ್ರೂರದೃಶಸ್ತಾನಪಶ್ಯಮಹಂ ತದಾ ॥12॥
ಸೂರ್ಯೋದಯ ಪರ್ವತದ ಸಮೀಪದಲ್ಲಿ ಕೊನೆಯಭಾಗದಲ್ಲಿ ನಿವಾಸಿಸುವಂತಹ ವಾರಿಶೇಣ ಸಮುದ್ರದ ಸಮೀಪದಲ್ಲಿ ನಿವಾಸಿಸುವ ಕೆಂಪು ಸಮುದ್ರದ ಬಳಿಯಲ್ಲಿ ನಿವಾಸಿಸುವ ಫಲಮೂಲಭಕ್ಷಕರಾದ ಕಿರಾತರು ಚರ್ಮಕವಚನವನ್ನು ಧರಿಸಿದವರು ಸಹ ಚಂದನ ಅಗರು ಮುಂತಾದ ಸುಗಂಧವಸ್ತುಗಳನ್ನೂ ಬೆಲೆ ಬಾಳುವ ಕಂಬಳಿಗಳನ್ನೂ ಚರ್ಮ ರತ್ನ ಮತ್ತು ಸುವರ್ಣಗಳನ್ನೂ ನಾನಾ ವಿಧವಾದ ಸುಗಂಧದ್ರವ್ಯಗಳನ್ನೂ ಹತ್ತುಸಾವಿರ ಕಿರಾತಸ್ತ್ರೀ ದಾಸಿಯರನ್ನೂ ಮತ್ತು ದೂರ ದೇಶದ ರಮಣೀಯವಾದ ಮೃಗ ಪಕ್ಷಿಗಳನ್ನೂ ಪರ್ವತಗಳಿಂದ ಆರಿಸಿದ ಬಹಳವಾಗಿ ಪ್ರಕಾಶಿಸುವ ಸುವರ್ಣವನ್ನೂ ಸಮಗ್ರವಾದ ಬಲಿಯನ್ನಾಗಿ ತೆಗೆದುಕೊಂಡು ಬಂದು ಧರ್ಮರಾಜನ ಬಾಗಿಲಲ್ಲಿ ದ್ವಾರಪಾಲಕರಿಂದ ತಡೆಯಲ್ಪಟ್ಟು ನಿಂತಿದ್ದಾರೆ. ಕ್ರೂರ ಶಸ್ತ್ರಗಳನ್ನು ಧರಿಸಿದವರೂ ಮತ್ತು ನೋಡಲು ಕ್ರೂರರೂ ಆದ ಅವರನ್ನು ನಾನು ಆಗ ನೋಡಿದೆನು.
ಕಾಂಭೋಜಾ ದರದಾ ದಾರ್ವ್ಯಾಃ ಶೂರಾ ಭೈಮಕಶಾಸ್ತಥಾ |
ಔದುಂಬರಾ ದುರ್ವಿಭಾಗಾಃ ಪೌರವಾಃ ಸಹ ಬಾಹ್ಲಿಕೈಃ ॥13॥
ಕಾಶ್ಮೀರಾಃ ಕುಂದಳಾಶ್ಚೈವ ಗೌರಕಾ ಹಂಸಕಾಸ್ತಥಾ |
ಶೈಬ್ಯಾಸ್ತ್ರಿಗರ್ತಾ ಯೌಧೇಯಾ ರಾಜನ್ಯಾ ಮದ್ರಕೈಃ ಸಹ ॥14॥
ವಸಾತಯಃ ಸಮೌಲೇಯಾಃ ಸಹ ಕ್ಷುದ್ರಕಮಾಳವೈಃ |
ಶೌಂಡಿಕಾಶ್ಚೋದರಾಶ್ಚೈವ ಸಾಲ್ವಾಶ್ಚೈವ ವಿಶಾಂಪತೇ ॥15॥
ಅಂಗಾ ವಂಗಾಃಕಳಿಂಗಾಶ್ಚ ಅನವದ್ಯಾ ಗಯ್ಯೆಃ ಸಹ |
ಸ್ವಜಾತೀಯಾಃ ಶ್ರೇಣಿಮಂತಃ ಶ್ರೇಯಾಂಸಃ ಶಸ್ತ್ರಧಾರಿಣಃ |
ಆಹಾರ್ಷುಃ ಕ್ಷತ್ರಿಯಾ ವಿತ್ತಂ ಶತಶೋಽಜಾತಶತ್ರವೇ ॥16॥
ಕಾಂಬೋಜರು ದರದರು ದಾರ್ವ್ಯರು ಶೂರರು ಭೈಮರು ಕಷರು ಔದುಂಬರರು ದುರ್ವಿಭಾಗರು ಪೌರವರು ಬಾಹ್ಲೀಕರು ಕಾಶ್ಮೀರರು ಕುಂದಳರು ಗೌರಕರು ಹಂಸಕರು ಶೈಬರು ತ್ರಿಗರ್ತರು ಯೌಧೇಯರು ಮದ್ರಕರು ವಸಾತಿಗಳು ಮಾಲೇಯರು ಕ್ಷುದ್ರಕಮಾಳವರು ಶೌಂಡಿಕರು ಔದರರು ಸಾಲ್ವರು ಅಂಗರು ವಂಗರು ಕಳಿಂಗರು ಗಯರು ಈ ಎಲ್ಲಾ ಶ್ರೇಷ್ಠರಾದ ಕ್ಷತ್ರಿಯರು ಶಸ್ತ್ರಗಳನ್ನು ಧರಿಸಿ ತಮ್ಮ ಜಾತಿಯವರ ಜೊತೆಯಲ್ಲಿ ಸಾಲನ್ನು ಹಿಡಿದು ನೂರರ ಗಟ್ಟಲೆಯಲ್ಲಿ ಅಜಾತಶತ್ರುವಿಗೆ ಧನವನ್ನು ತಂದರು.
ವಂಗಾಃ ಕಳಿಂಗಪತಯಃ ತಾಮ್ರಲಿಪ್ತಾಶ್ಚ ಪುಂಡ್ರಕಾಃ |
ದುಕೂಲಂ ಕೌಶಿಕಂ ಚೈವ ಪತ್ರೋರ್ಣಂ ಚೈವ ಭಾರತ ॥17॥
ಔಪವೃತಾ ನೃಪಾಸ್ತಸ್ಯ ದದುಃ ಪ್ರೀತ್ಯಾಽನು ಚಾಗಮನ್ |
ಪ್ರೋಚ್ಯಂತೇ ತತ್ರ ಹಿ ದ್ವಾಃಸ್ಥೈ ರ್ಬಲಿಮಾದಾಯ ವಿಷ್ಠಿತಾಃ ॥18॥
ವಂಗರು ಕಳಿಂಗರಾಜರು ತಾಮ್ರಲಿಪ್ತರು ಪುಂಡ್ರಕರು ದುಕೂಲರು ಕೌಶಿಕರು ಮೊದಲಾದವರು ಒಳ್ಳೆಯ ರೇಷ್ಮೆವಸ್ತ್ರಗಳನ್ನು ತಂದರು. ಎಲೈ ಭಾರತನೇ! ಔಪವೃತರಾಜರು ಅವನ ಮೇಲಿನ ಪ್ರೀತಿಯಿಂದ ಬಂದು ಅವನಿಗೆ ಕಪ್ಪವನ್ನು ಕೊಟ್ಟರು. ಬಲಿಯನ್ನು ತಂದು ನಿಂತಿರುವ ರಾಜರನ್ನು ದ್ವಾರಪಾಲಕರು ಧರ್ಮರಾಜನಿಗೆ ನಿವೇದಿಸುತ್ತಿದ್ದರು.
ಈಷಾದಂತಾನ್ ಹೇಮಕಕ್ಷ್ಯಾನ್ ಪದ್ಮವರ್ಣಾನ್ ಕುಥಾಸ್ತೃತಾನ್ |
ಪರ್ವತಪ್ರತಿಮಾನ್ ಜಾತಾನಭಿತಃ ಕಂಬುಕಿಂಕರಾನ್ ॥19॥
ಕ್ಷಮಾವತಃ ಕುಲೀನಾಂಶ್ಚ ಕುಂಜರಾನ್ ಸಪರಿಚ್ಛದಾನ್ |
ದತ್ತ್ವೈಕೈಕಂ ಚ ದಶಕಂ ದ್ವಾರೇಭ್ಯಃಪ್ರವಿಶಂತಿ ತೇ ॥20॥
ಬಾಣದಷ್ಟು ಉದ್ದವಾದ ದಂತವನ್ನು ಉಳ್ಳ ಸುವರ್ಣ ಕಕ್ಷಗಳಿಂದ ಅಲಂಕೃತವಾದ ಪದ್ಮವರ್ಣದಿಂದ ಕೂಡಿರುವ ಬೆನ್ನಿನ ಮೇಲೆ ರತ್ನಗಂಬಳಿಯನ್ನು ಹಾಸಿರುವ ಪರ್ವತ ಸದೃಶವಾದ ಸುತ್ತಲೂ ಕಂಬು (ಶಂಖ)ವನ್ನು ಹಿಡಿದ ಕಿಂಕರರನ್ನು ಹೊಂದಿದ ಪಳಗಿದ ಕುಲೀನವಾದ ಆನೆಗಳನ್ನು ಅದರ ಸಲಕರಣೆಗಳೊಂದಿಗೆ ಅವರಲ್ಲಿ ಒಬ್ಬೊಬ್ಬನೂ ಹತ್ತು ಆನೆಗಳನ್ನು ಕೊಟ್ಟು ದ್ವಾರದಿಂದ ಒಳಗೆ ಹೋಗುತ್ತಾರೆ.
ವೈದೇಹಕಾಶ್ಚ ಪುಂಡ್ರಾಶ್ಚ ಗೌಲೇಯಾಸ್ತಾಮ್ರಲಿಪ್ತಕಾಃ |
ಮರುಕಾಃ ಕಾಶಿಕಾ ದರ್ದಾ ಭೌಮೇಯಾ ನಟನಾಟಕಾಃ ॥21॥
ಕರ್ಣಾಟಾಃ ಕಾಂಸ್ಯಕುಟ್ಟಾಶ್ಚ ಪದ್ಮಜಾಲಾಃ ಸುತೀವರಾಃ |
ದಾಕ್ಷಿಣಾತ್ಯಾಃ ಪುಳಿಂದಾಶ್ಚ ಶಂಬರಾಃ ಕಂಗಣಾಃ ಖಷಾಃ ॥23॥
ಬರ್ಬರಾ ಯವನಾಶ್ಚೈವ ಗರ್ಗರಾಭೀರಕಾಸ್ತಥಾ |
ಪಲ್ಲವಾಃ ಶಕಕಾರೂಹಾಃ ತುಂಬರಾಃ ಕಾಶಿಕಾಸ್ತಥಾ ॥24॥
ಏತೇ ಚಾನ್ಯೇ ಚ ಬಹವೋ ಗಣಾ ದಿಗ್ಭ್ಯಃ ಸಮಾಗತಾಃ |
ಅನ್ಯೈಶ್ಚೋಪಹೃತಾನ್ಯತ್ರ ರತ್ನಾನಿ ಹಿ ಮಹಾತ್ಮಭಿಃ ॥25॥
ವೈದೇಹಕರು ಪುಂಡ್ರರು ಗೌಲೇಯರು ತಾಮ್ರಲಿಪ್ತರು ಕಾಶಿಕರು ದರ್ದರು ಭೌಮೇಯರು ನಟನಾಟಕರು ಕರ್ಣಾಟರು ಕಾಂಸ್ಯಕುಟ್ಟರು ಪದ್ಮಜಾಲರು ಸುತೀವರರು ದಾಕ್ಷಿಣಾತ್ಯರು ಪುಳಿಂದರು ಶಂಬರರು ಕಂಗಣರು ಖಷರು ಬರ್ಬರರು ಯವನರು ಗರ್ಗರರು ಆಭೀರಕರು - ಇವರೆಲ್ಲರೂ ಗಣಗಳಲ್ಲಿ ನಾನಾ ದಿಕ್ಕುಗಳಿಂದ ಬಂದರು ಇವರೂ ಮತ್ತು ಇನ್ನೂ ಅನೇಕ ಮಹಾತ್ಮರೂ ಅಲ್ಲಿಗೆ ಅನೇಕ ರತ್ನಗಳನ್ನು ತಂದರು.

ಸಮುದ್ರಸಾರವೈಡೂರ್ಯಾನ್ ಮುಕ್ತಾಃ ಶಂಖಾಂಸ್ತಥೈವ ಚ |
ಶುಭಾವರ್ತಾನ್ ಶುಭಾಃ ಶುಕ್ತೀಃ ಸಿಂಹಳಾಃ ಸಮುಪಾಹರನ್ ॥26॥
ಸಿಂಹಳರಾಜರು ಸಮುದ್ರದ ಶ್ರೇಷ್ಠವಾದ ವಸ್ತುಗಳನ್ನು ವೈಡೂರ್ಯಗಳನ್ನು ಮುತ್ತುಗಳನ್ನು ಒಳ್ಳೆಯ ಆವರ್ತಗಳನ್ನು ಹೊಂದಿದ್ದ ಶಂಖಗಳನ್ನು ಒಳ್ಳೆಯ ಶುಕ್ತಿಗಳನ್ನು ಕಾಣಿಕೆಯಾಗಿ ತಂದರು.
ಸಂಭೃತಾನ್ ಮಣಿಚೀರೈಶ್ಚ ಶ್ಯಾಮಾಂಸ್ತಾಮ್ರಾಂತಲೋಚನಾನ್ |
ರಾಜನ್ ಚಿತ್ರರಥೋ ನಾಮ ಗಂಧರ್ವೋ ವಾಸವಾನುಗಃ |
ಶತಾನಿ ಚತ್ವಾರ್ಯದದಾದ್ ಹಯಾನಾಂ ವಾತರಂಹಸಾಮ್ ॥27॥
ಎಲೈ ರಾಜನೇ! ಚಿತ್ರರಥನೆಂಬ ಇಂದ್ರಸೇವಕನಾದ ಗಂಧರ್ವನು ಚೆನ್ನಾಗಿ ಪೋಷಿಸಲ್ಪಟ್ಟ ಮಣಿಯ ವಸ್ತ್ರಗಳಿಂದ ಅಲಂಕರಿಸಲ್ಪಟ್ಟ ಶ್ಯಾಮವರ್ಣದ ಕೆಂಪಾದ ಕಣ್ಣಂಚುಗಳನ್ನು ಉಳ್ಳ ವಾಯುವೇಗವನ್ನು ಹೊಂದಿದ ನಾಲ್ಕು ನೂರು ಅಶ್ವಗಳನ್ನು ಕೊಟ್ಟನು.
ತುಂಬುರುಸ್ತು ಮುದಾದತ್ತ ಗಂಧರ್ವೋ ವಾಜಿನಾಂ ಶತಮ್ |
ಆಮ್ರಪತ್ರಸವರ್ಣಾನಾಮದದಾದ್ಧೇಮಮಾಲಿನಾಮ್ ॥28॥
ತುಂಬುರುವಾದರೋ ಸಂತೋಷದಿಂದ ಮಾವಿನ ಎಲೆಗಳ ವರ್ಣವನ್ನು ಹೊಂದಿದ್ದ ಸುವರ್ಣಮಾಲೆಗಳನ್ನು ಧರಿಸಿದ್ದ ನೂರು ಅಶ್ವಗಳನ್ನು ಕೊಟ್ಟನು.
ಕುಣಿಂದರಾಜಃ ಕೌರವ್ಯ ಅಂಶುಕಾನಾಂ ವಿಶಾಂಪತೇ |
ಅದದಾತ್ ರಾಜರತ್ನಾನಾಂ ಶತಾನಿ ಚ ಬಹೂನಿ ಚ ॥29॥
ಎಲೈ ರಾಜನೇ! ಕುಣಿಂದ ರಾಜನು ಅನೇಕ ವಸ್ತ್ರಗಳನ್ನೂ ನೂರಾರು ರಾಜರತ್ನಗಳನ್ನೂ ಕೊಟ್ಟನು.
ವಿರಾಟೇನ ತು ಮತ್ಸ್ಯೇನ ಬಲಿರ್ಮುಖ್ಯೋ ನಿವೇದಿತಃ |
ಕುಂಜರಾಣಾಂ ಸಹಸ್ರೇ ದ್ವೇ ಮತ್ತಾನಾಂ ಸಮುಪಾಹೃತೇ ॥30॥
ಮತ್ಸ್ಯಾದಿ ಪತಿಯಾದ ವಿರಾಟನು ಮದಿಸಿದ ಎರಡು ಸಹಸ್ರ ಆನೆಗಳ ಶ್ರೇಷ್ಠವಾದ ಕಾಣಿಕೆಯನ್ನು ಕೊಟ್ಟನು.
ವಸುರಾಷ್ಟ್ರಾದ್ವಸುದಾನೋ ರಾಜಾ ಷಟ್‌ತ್ರಿಂಶತಂ ಗಜಾನ್ |
ಅಶ್ವಾನಾಂ ಚ ಸಹಸ್ರೇದ್ವೇ ಹ್ಯದಾತ್ ಕಾಂಚನಮಾಲಿನಾಮ್ ॥31॥
ಜವಸತ್ವೋಪಪನ್ನಾನಾಂ ವಯಸ್ಸ್ಥಾನಾಂ ನರಾಧಿಪ |
ಬಲಿಂ ಚ ಕೃತ್ಸ್ನಮಾದಾಯ ಪಾಂಡವಾಯ ನ್ಯವೇದಯತ್ ॥32॥
ವಸುರಾಷ್ಟ್ರಾಧಿಪತಿಯಾದ ವಸುದಾನನು ಮೂವತ್ತಾರು ಗಜಗಳನ್ನು ಮತ್ತು ಬಲ ಮತ್ತು ವೇಗಗಳನ್ನು ಹೊಂದಿದ ತರುಣ ವಯಸ್ಸಿನ ಕಾಂಚನ ಮಾಲೆಯನ್ನು ಧರಿಸಿದ ಎರಡು ಸಹಸ್ರ ಅಶ್ವಗಳನ್ನು ಸಮಗ್ರವಾಗಿ ಕಾಣಿಕೆಯಾಗಿ ತಂದು ಪಾಂಡವನಿಗೆ ಅರ್ಪಿಸಿದನು.
ಯಜ್ಞಸೇನೇನ ದಾಸೀನಾಂ ಸಹಸ್ರಾಣಿ ಚತುರ್ದಶ |
ದಾಸಾನಾಮಯುತಂ ಚಾಪಿ ಸದಾರಾಣಾಂ ವಿಶಾಂಪತೇ ॥33॥
ಗಜಯುಕ್ತಾ ಮಹಾರಾಜ ರಥಾಃ ಷಡ್ವಿಂಶತಿಸ್ತಥಾ |
ರಾಜ್ಯಂ ಚ ಕೃತ್ಸ್ನಂ ಪಾರ್ಥೇಭ್ಯೋ ಯಜ್ಞಾರ್ಥಂ ವೈ ನಿವೇದಿತಮ್ ॥
ಎಲೈ ಮಹಾರಾಜನೇ! ದ್ರೌಪದಿಯ ತಂದೆಯಾದ ಯಜ್ಞಸೇನನು ಹದಿನಾಲ್ಕು ಸಹಸ್ರ ದಾಸಿಯರನ್ನು ಭಾರ್ಯೆಯರಿಂದ ಒಡಗೂಡಿದ ಹತ್ತು ಸಹಸ್ರ ದಾಸರನ್ನು ಗಜಯುಕ್ತವಾದ ಇಪ್ಪತ್ತಾರು ರಥಗಳನ್ನು ಮತ್ತು ತನ್ನ ಸಮಗ್ರವಾದ ರಾಜ್ಯವನ್ನು ಸಹ ಯಜ್ಞಾರ್ಥವಾಗಿ ಪಾಂಡವರಿಗೆ ನಿವೇದಿಸಿದನು.
ಪಂಚವಿಂಶತಿಸಾಹಸ್ರಮಶ್ವಾನಾಂ ಹೇಮಮಾಲಿನಾಮ್ |
ಬಾಹ್ಲೀಕಃ ಪ್ರದದೌ ರಾಜನ್ ಪಾಂಡವಾಯ ಮಹಾತ್ಮನೇ ॥35॥
ಹಯಯುಕ್ತಾನ್ ಮಹಾರಾಜ ರಥಾನ್ ಷಡ್ವಿಂಶತಿಂ ಗಜಾನ್ |
ರಾಜ್ಯಂ ಚ ಕೃತ್ಸ್ನಂ ಪಾರ್ಥೇಭ್ಯೋ ಯಜ್ಞಾರ್ಥಂ ವೈ ನಿವೇದಿತಮ್ ॥
ಎಲೈ ರಾಜನೇ! ಬಾಹ್ಲೀಕ ರಾಜನು ಮಹಾತ್ಮನಾದ ಧರ್ಮರಾಜನಿಗೆ ಹೇಮಮಾಲೆಯನ್ನು ಧರಿಸಿದ ಇಪ್ಪತ್ತೈದು ಸಾವಿರ ಅಶ್ವಗಳನ್ನು ಅಶ್ವಯುಕ್ತವಾದ ಅನೇಕ ರಥಗಳನ್ನು ಇಪ್ಪತ್ತಾರು ಸಾವಿರ ಗಜಗಳನ್ನು ಮತ್ತು ಸಮಗ್ರವಾದ ರಾಜ್ಯವನ್ನು ಯಜ್ಞಾರ್ಥವಾಗಿ ಪಾಂಡವರಿಗೆ ನಿವೇದಿಸಿದನು.
ವಾಸುದೇವೋಪಿ ವಾರ್ಷ್ಣೇಯೋ ಮಾನಂ ಕುರ್ವನ್ ಕಿರೀಟಿನಃ |
ಅದದಾದ್ ದ್ವಿಪಮುಖ್ಯಾನಾಂ ಸಹಸ್ರಾಣಿ ಚತುರ್ದ್ದಶ ॥37॥
ವೃಷ್ಣಿಕುಲ ಸಮುದ್ಭೂತನಾದ ಕೃಷ್ಣನೂ ಸಹ ಅರ್ಜುನನಿಗೆ ಸತ್ಕಾರವನ್ನು ಮಾಡುವವನಾಗಿ ಹದಿನಾಲ್ಕು ಸಾವಿರ ಶ್ರೇಷ್ಠವಾದ ಆನೆಗಳನ್ನು ಕೊಟ್ಟನು.
ಆತ್ಮಾ ಹಿ ಪಾರ್ಥಃ ಕೃಷ್ಣಸ್ಯ ಕೃಷ್ಣೋ ಹ್ಯಾತ್ಮಾ ಕಿರೀಟಿನಃ |
ಯದ್ ಬ್ರೂಯಾದರ್ಜುನಂ ಕೃಷ್ಣಃ ಸರ್ವಂ ಕುರ್ಯಾದಸಂಶಯಮ್ ॥
ಕೃಷ್ಣನ ಆತ್ಮ ಅರ್ಜುನ ಮತ್ತು ಅರ್ಜುನನ ಆತ್ಮ ಕೃಷ್ಣನೆಂದು ಪ್ರಸಿದ್ಧವಷ್ಟೇ. ಕೃಷ್ಣನು ಅರ್ಜುನನಿಗೆ ಏನು ಹೇಳುತ್ತಾನೋ ಅದೆಲ್ಲವನ್ನೂ ಅರ್ಜುನನು ನಿಸ್ಸಂಶಯವಾಗಿ ಮಾಡುವನು.
ಕೃಷ್ಣೋ ಧನಂಜಯಸ್ಯಾರ್ಥೇ ಸರ್ವಲೋಕಾನಪಿ ತ್ಯಜೇತ್ |
ತಥೈವ ಪಾರ್ಥಃ ಕೃಷ್ಣಾರ್ಥೇ ಪ್ರಾಣಾನಪಿ ಪರಿತ್ಯಜೇತ್ ॥39॥

ಕೃಷ್ಣನು ಅರ್ಜುನನ ಸಲುವಾಗಿ ಎಲ್ಲಾ ಲೋಕಗಳನ್ನು ತ್ಯಜಿಸಿಯಾನು. ಹಾಗೆಯೇ ಅರ್ಜುನನೂ ಸಹ ಕೃಷ್ಣನಿಗೋಸ್ಕರ ತನ್ನ ಪ್ರಾಣಗಳನ್ನಾದರೂ ಬಿಟ್ಟಾನು.
ಅಂತರಾತ್ಮಾ ಮಹಾರಾಜ ತಸ್ಮಾದ್ಯನ್ಮೇ ನ ಶಾಮ್ಯತಿ |
ಅಶ್ವೇನೇವ ಯುಗಂ ನದ್ಧಂ ವಿಪರೀತಂ ಹಿ ದೃಶ್ಯತೇ ||40||
ಎಲೈ ಮಹಾರಾಜನೇ! ಆದ್ದರಿಂದ ನನ್ನ ಅಂತರಾತ್ಮವು ಶಾಂತಿಯನ್ನು ಹೊಂದುತ್ತಿಲ್ಲ. ನೊಗಕ್ಕೆ ವಿಪರೀತವಾಗಿ ಕಟ್ಟಿದ ಅಶ್ವದಂತೆ ನನ್ನ ಮತ್ತು ಧರ್ಮರಾಜನ ಸಂಪತ್ತು ವಿರುದ್ಧವಾಗಿದೆ.
ಗುಣಹೀನತರಾಶ್ಚಾಪಿ ಯುಷ್ಮಾಭಿರ್ಭರತರ್ಷಭ |
ಕನೀಯಾಂಸೋಭಿವರ್ಧಂತೇ ಜ್ಯೇಷ್ಠಪುತ್ರೋಽವಸೀದತಿ ||41||
ಎಲೈ ಭರತಶ್ರೇಷ್ಠನೇ! ನಿಮ್ಮ ಸಹಾಯದಿಂದ ಅತ್ಯಂತ ಗುಣಹೀನರಾದ ಚಿಕ್ಕವರಾದ ಪಾಂಡವರು ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ. ಜ್ಯೇಷ್ಠ ಪುತ್ರನು ಕ್ಷಯವನ್ನು ಹೊಂದುತ್ತಿದ್ದಾನೆ.
ಯಜ್ಞೇ ಚ ಕಾರಣಂ ಭಕ್ತ್ಯಾ ಕುಂತೀಪುತ್ರಸ್ಯ ಧೀಮತಃ |
ಸರ್ವೇ ಸುಬಲಸಂಪನ್ನಾಃ ಕ್ಷತ್ರಿಯಾ ಮಾನಗರ್ವಿತಾಃ ||42||
ಯಜ್ಞೇ ಕರಪ್ರದಾಸ್ತಸ್ಯ ಯೇ ಚ ಮ್ಲೇಚ್ಛೇಷು ಭೂಮಿಪಾಃ |
ಅತೀವ ತೇ ಪ್ರಮುದಿತಾಃ ಪಾಂಡುಪುತ್ರಾ ಮಹಾರಥಾಃ ||43||
ಮೇಧಾವಿಯಾದ ಧರ್ಮರಾಜನ ಯಜ್ಞಕ್ಕೆ ಮುಖ್ಯವಾದ ಕಾರಣವೆಂದರೆ ಮಾನಗರ್ವಿತವಾದವರೂ ಬಲಸಂಪನ್ನರೂ ಆದ ಕ್ಷತ್ರಿಯರೆಲ್ಲರೂ ಅವನ ಮೇಲಿನ ಭಕ್ತಿಯಿಂದ ಅವನಿಗೆ ಕಪ್ಪವನ್ನು ಒಪ್ಪಿಸುತ್ತಿದ್ದಾರೆ. ಮ್ಲೇಚ್ಛರಾಜರೂ ಸಹ ಅವನಿಗೆ ಕಾಣಿಕೆಯನ್ನು ಕೊಡುತ್ತಿದ್ದಾರೆ. ಆ ಕಾರಣದಿಂದ ಮಹಾರಥರಾದ ಆ ಪಾಂಡು ಪುತ್ರರು ಬಹಳ ಸಂತೋಷದಲ್ಲಿ ಇದ್ದಾರೆ.
ಅತ್ಯರ್ಥಂ ಬ್ರಾಹ್ಮಣಾಶ್ಚೈವ ಕ್ಷತ್ರಿಯಾ ಯುಧಿ ನಿರ್ಜಿತಾಃ |
ಉಪಕರ್ತುಂ ವಿಶಶ್ಚೈವ ಶೂದ್ರಾಃ ಶುಶ್ರೂಷವೋಽಪಿ ಚ ||44||
ಪ್ರೀತ್ಯಾ ಚ ಬಹುಮಾನಾಚ್ಚ ಅಭ್ಯಾಗಚ್ಛನ್ ಯುಧಿಷ್ಠಿರಮ್ |
ಸರ್ವೇ ಮ್ಲೇಚ್ಛಾಃ ಸರ್ವವರ್ಣಾ ಆದಿಮಧ್ಯಾಂತಜಾಸ್ತಥಾ ||45||
ಬ್ರಾಹ್ಮಣರು ಮತ್ತು ಯುದ್ಧದಲ್ಲಿ ಪರಾಜಿತ ಕ್ಷತ್ರಿಯರು ಮತ್ತು ವೈಶ್ಯರು ಶೂದ್ರರೂ ಸಹ ಧರ್ಮರಾಜನಿಗೆ ಉಪಕಾರವನ್ನು ಮಾಡಲು ಅವರ ಮೇಲಿನ ಪ್ರೀತಿಯಿಂದಲೂ ಬಹುಮಾನದಿಂದಲೂ ಅವನ ಬಳಿಗೆ ಬಂದಿದ್ದಾರೆ. ಎಲ್ಲಾ ಮ್ಲೇಚ್ಛರು ಎಲ್ಲಾ ವರ್ಣದವರು ಆದಿ ಮಧ್ಯಾಂತ ಜನ್ಮದವರು ಸಹ ಅವನ ಬಳಿಗೆ ಬಂದಿದ್ದಾರೆ.
ನಾನಾದೇಶಸಮುತ್ಥೈಶ್ಚ ನಾನಾಜಾತಿಭಿರಾಗತೈಃ |
ಪರ್ಯಾಪ್ತ ಇವ ಲೋಕೋಽಯಂ ಯುಧಿಷ್ಠಿರನಿವೇಶನೇ ||46||
ನಾನಾ ದೇಶದಲ್ಲಿ ಜನಿಸಿದ ನಾನಾ ಜಾತಿಯ ಜನಗಳಿಂದ ತುಂಬಿದ ಧರ್ಮರಾಜನ ಮನೆಯು ತುಂಬಿ ಹೋದ ಲೋಕದಂತೆ ಕಾಣುತ್ತಿದೆ.
ಉಚ್ಚಾವಚಾನ್ ಮಹಾನ್ ಮಹ್ಯಂ ರಾಜಭಿಃ ಪ್ರೇಷಿತಾನ್ ಬಹೂನ್ | ಶತ್ರೂಣಾಂ ಪಶ್ಯತೋ ದುಃಖಾನ್ಮುಮೂರ್ಷಾ ಮೇದ್ಯ ಜಾಯತೇ ||
ರಾಜರುಗಳಿಂದ ವಿಹಿತವಾದ ಅನೇಕ ವಿಧವಾದ ಉಚ್ಚಾವಚವಾದ ಶತ್ರುಗಳ ಉತ್ಸವವನ್ನು ನೋಡುತ್ತಿರುವ ನನಗೆ ದುಃಖದಿಂದ ಈ ದಿನ ಮರಣದ ಇಚ್ಛೆಯು ಉಂಟಾಗಿದೆ.
ಭೃತ್ಯಾಸ್ತು ಯೇ ಪಾಂಡವಾನಾಂ ತಾಂಸ್ತೇ ವಕ್ಷ್ಯಾಮಿ ಭಾರತ |
ಯೇಷಾಂ ಮಾಂಸಂ ಚ ಪಕ್ವಂ ಚ ಸಂವಿಧತ್ತೇ ಯುಧಿಷ್ಠಿರಃ ||48||
ಅಯುತಂ ತ್ರೀಣಿ ಪದ್ಮಾನಿ ಗಜಾರೋಹಾಃ ಸಸಾದಿನಃ |
ರಥಾನಾಮರ್ಬುದಂ ಚೈವ ಪಾದಾತಾ ಬಹವಸ್ತಥಾ ||49||
ಎಲೈ ಭಾರತನೇ! ಪಾಂಡವರ ಸೇವಕರು ಯಾರಿದ್ದಾರೋ ಅವರನ್ನು ತಿಳಿಸುವೆನು. ಅವರಿಗೆ ಅಮ ಮತ್ತು ಪಕ್ವಮಾಂಸದ ಮೇಲ್ವಿಚಾರಣೆಯನ್ನು ಸ್ವತಃ ಯುಧಿಷ್ಠಿರನೇ ನೋಡಿಕೊಳ್ಳುತ್ತಾನೆ. ಗಜಾರೋಹಿಗಳು ಅಶ್ವಾರೋಹಿಗಳು ಸೇರಿ ಮೂರು ಪದ್ಮಗಳ ಮೇಲೆ ಹತ್ತು ಸಹಸ್ರ ಸಂಖ್ಯೆಯಲ್ಲಿದ್ದಾರೆ. ಒಂದು ಅರ್ಬುದ ರಥಗಳಿವೆ. ಅನೇಕ ಪದಾತಿ ಜನರಿದ್ದಾರೆ.
ಪ್ರಣೀಯಾಮಾಣ ಆರಂಭಃ ಪಚ್ಯಮಾನಸ್ತಥೈವ ಚ |
ವಿಸೃಜ್ಯಮಾನಶ್ಚಾನ್ಯತ್ರ ಪುಣ್ಯಾಹಸ್ವನ ಏವ ಚ ||50||
ಒಂದು ಕಡೆ ಕಾರ್ಯ ಉಪಕ್ರಮವಾಗಿರುತ್ತದೆ. ಇನ್ನೊಂದೆಡೆ ಪಾಕವು ನಡೆಯುತ್ತಿರುತ್ತದೆ. ಇನ್ನೊಂದು ಕಡೆ ಪಾಕವು ಬಡಿಸಲ್ಪಡುತ್ತಿರುತ್ತದೆ. ಮತ್ತೊಂದು ಕಡೆ ಪುಣ್ಯಾಹ ಶಬ್ದವು ಕೇಳಿ ಬರುತ್ತದೆ.
ನಾಭುಕ್ತವಂತಂ ನಾಹೃಷ್ಟಂ ನಾಸುಭಿಕ್ಷಂ ಕಥಂಚನ |
ಅಪಶ್ಯಂ ಸರ್ವವರ್ಣಾನಾಂ ಯುಧಿಷ್ಠಿರಮಹಾಧ್ವರೇ ||51||
ಯುಧಿಷ್ಠಿರ ಮಹಾಯಾಗದಲ್ಲಿ ಭೋಜನವನ್ನು ಮಾಡದವನಾಗಲೀ ಸಂತೋಷ ವಿಲ್ಲದವನಾಗಲೀ ಸುಭಕ್ಷವಿಲ್ಲದವನಾಗಲೀ ಯಾವ ವರ್ಣಗಳಲ್ಲಿಯೂ ಒಬ್ಬನೂ ಇರಲಿಲ್ಲ.
ಅಷ್ಟಾಶೀತಿಸಹಸ್ರಾಣಿ ಸ್ನಾತಕಾ ಗೃಹಮೇಧಿನಃ |
ತ್ರಿಂಶದ್ದಾಸೀಕ ಏಕೈಕೋ ಯಾನ್ ಬಿಭರ್ತಿ ಯುಧಿಷ್ಠಿರಃ |
ಪರಿತುಷ್ಟಾಶ್ಚ ತೇ ಸರ್ವೇ ತಸ್ಯಾಶಂಸನ್ನರಿಕ್ಷಯಮ್ ||52||

ಎಂಬತ್ತೆಂಟು ಸಹಸ್ರ ಸ್ನಾತಕರು ಅವನ ಮನೆಯಲ್ಲಿ ವಾಸಮಾಡುತ್ತಾರೆ. ಒಬ್ಬೊಬ್ಬರಿಗೂ ಮೂವತ್ತು ದಾಸಿಯರಿದ್ದಾರೆ. ಧರ್ಮರಾಜನು ಅವರೆಲ್ಲರನ್ನೂ ಪೋಷಿಸುತ್ತಾನೆ. ಸಂತುಷ್ಟರಾದ ಅವರೆಲ್ಲರೂ ಅವನಿಗೆ ಶತ್ರುಕ್ಷಯದ ಆಶೀರ್ವಾದವನ್ನು ಮಾಡುತ್ತಾರೆ.
ದಶಾನ್ಯಾನಿ ಸಹಸ್ರಾಣಿ ಯತೀನಾಮೂರ್ಧ್ವರೇತಸಾಮ್ |
ಭುಂಜತೇ ರುಗ್ಮಪಾತ್ರೇಷು ಯುಧಿಷ್ಠಿರನಿವೇಶನೇ ॥53॥
ಅದಲ್ಲದೆ ಇನ್ನೂ ಹತ್ತು ಸಹಸ್ರ ಊರ್ಧ್ವರೇತಸ್ಕರಾದ ಯತಿಗಳು ಸುವರ್ಣ ಪಾತ್ರೆಗಳಲ್ಲಿ ಯುಧಿಷ್ಠಿರನ ಮನೆಯಲ್ಲಿ ನಿತ್ಯವೂ ಭೋಜನವನ್ನು ಮಾಡುತ್ತಾರೆ.
ಭುಕ್ತಾಭುಕ್ತಕೃತಂ ನೈವ ಸರ್ವಮಾಕುಬ್ಜವಾಮನಾನ್ |
ಅಭುಕತ್ತ್ವ ಯಾಜ್ಞಸೇನೀ ತು ಪ್ರತ್ಯವೈಕ್ಷದ್ ವಿಶಾಂಪತೇ ॥54॥
ಕುಬ್ಜರು (ಕಾಲು ಮಾತ್ರ ಹ್ರಸ್ವವಾಗಿರುವವರು) ವಾಮನರು (ದೇಹವೆಲ್ಲವೂ ಹ್ರಸ್ವವಾಗಿರುವವರು,) ಕುಬ್ಜರು ಮತ್ತು ವಾಮನರನ್ನು ಹಿಡಿದು ಅಲ್ಲಿ ಯಾರೂ ಭೋಜನವನ್ನು ಮಾಡದವರು ಇರಲಿಲ್ಲ. ಎಲ್ಲರೂ ಭೋಜನವನ್ನು ಮಾಡಿಯೇ ಇರುತ್ತಿದ್ದರು. ಎಲೈ ರಾಜನೇ! ಯಾಜ್ಞಸೇನಿಯಾದ ದ್ರೌಪದಿಯು ಎಲ್ಲರ ಭೋಜನವಾಗುವವರೆಗೆ ತಾನು ಭೋಜನವನ್ನು ಮಾಡದೆ ಎಲ್ಲರ ಮೇಲ್ವಿಚಾರಣೆಯನ್ನು ಮಾಡುತ್ತಿದ್ದಳು.
ದ್ವೌ ಕರಂ ನ ಪ್ರಯಚ್ಛೇತಾಂ ಕುಂತೀಪುತ್ರಾಯ ಭಾರತ |
ವೈವಾಹಿಕೇನ ಪಾಂಚಾಲಾಃ ಸಖ್ಯೇನಾಂಧಕವೃಷ್ಣಯಃ ॥55॥
ಎಲೈ ಭಾರತನೇ! ವಿವಾಹ ಸಂಬಂಧದ ಕಾರಣದಿಂದ ಪಾಂಚಾಲರು ಮತ್ತು ಸ್ನೇಹದ ಕಾರಣದಿಂದಾಗಿ ಅಂಧಕವೃಷ್ಣಿಗಳು ಇವರಿಬ್ಬರೂ ಕುಂತೀ ಪುತ್ರನಾದ ಧರ್ಮರಾಜನಿಗೆ ಕಪ್ಪವನ್ನು ಕೊಡಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಸಪ್ತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.
*****
ಎಪ್ಪತ್ತಾರನೆಯ ಅಧ್ಯಾಯ
(ಪುನಃ ಅಸೂಯಾಪರನಾದ ದುರ್ಯೋಧನನಿಂದ ಯುಧಿಷ್ಠಿರನ ವೈಭವದ ವರ್ಣನೆ.)
ದುರ್ಯೋಧನಃ
ಆರ್ಯಾಸ್ತು ಯೇ ವೈ ರಾಜಾನಃ ಸತ್ಯಸಂಧಾ ಮಹಾವ್ರತಾಃ |
ಪರ್ಯಾಪ್ತವಿದ್ಯಾ ವಕ್ತಾರೋ ಹ್ಯಧ್ವರಾವಭೃಥಾಪ್ಲುತಾಃ ॥1॥
ಪ್ರೀತಿಮಂತೋ ಮಹಾತ್ಮಾನೋ ಧರ್ಮಾತ್ಮಾನೋ ಯಶಸ್ವಿನಃ |
ಮೂರ್ಧಾವಸಿಕ್ತಾಸ್ತೇ ಚೈನಂ ರಾಜಾನಃ ಪರ್ಯುಪಾಸತೇ ॥2॥
ಆರ್ಯರಾದ ಸತ್ಯಸಂಧರಾದ ಮಹಾವ್ರತರಾದ ವಿದ್ಯಾಪಾರಂಗತರಾದ ವಾಗ್ಮಿಗಳಾದ ಯಾಗವನ್ನು ಆಚರಿಸಿ, ಅವಭೃಥಸ್ನಾನವನ್ನು ಮಾಡಿದ ಕೀರ್ತಿವಂತರೂ ಧರ್ಮಾತ್ಮರೂ ಮಹಾತ್ಮರೂ ಆದ ಮೂರ್ಧಾಭಿಷಿಕ್ತರಾದ ರಾಜರು ಸಂತೋಷದಿಂದ ಧರ್ಮರಾಜನ ಸೇವೆಯನ್ನು ಮಾಡುತ್ತಾರೆ.
ದಕ್ಷಿಣಾರ್ಥಂ ಸಮಾನೀತಾ ರಾಜಭಿಃ ಕಾಂಸ್ಯದೋಹನಾಃ |
ಅರಣ್ಯೇ ಬಹುಸಾಹಸ್ರಾ ಅಪಶ್ಯಂ ತತ್ರತತ್ರ ಗಾಃ ॥3॥
ರಾಜರು ದಕ್ಷಿಣೆಯನ್ನು ಕೊಡಲು ಕಂಚಿನ ಪಾತ್ರೆಗಳ ಜೊತೆಯಲ್ಲಿ ತಂದ ಅನೇಕ ಸಹಸ್ರ ಗೋವುಗಳನ್ನು ನಾನು ಅರಣ್ಯದಲ್ಲಿ ಅಲ್ಲಲ್ಲಿ ನೋಡಿದೆನು.
ಆಜಹ್ರುಸ್ತಸ್ಯ ಸತ್ಕೃತ್ಯ ಸ್ವಯಮುದ್ಯಮ್ಯ ಭಾರತ |
ಅಭಿಷೇಕಾರ್ಥಮವ್ಯಗ್ರಾ ಭಾಂಡಮುಚ್ಚಾವಚಂ ನೃಪಾಃ ॥4॥
ಎಲೈ ಭಾರತನೇ! ಅವನ ಅಭಿಷೇಕಾರ್ಥವಾಗಿ ಎಚ್ಚರಿಕೆಯಿಂದ ಕೂಡಿದ ರಾಜರು ಅವನನ್ನು ಸತ್ಕರಿಸಿ ಚಿಕ್ಕ ಮತ್ತು ದೊಡ್ಡ ಪಾತ್ರೆಗಳನ್ನು ಸ್ವತಃ ಹೊತ್ತುತಂದರು.
ಬಾಹ್ಲೀಕೋ ರಥಮಾಹಾರ್ಷೀಜ್ಜಾಂಬೂನದಪರಿಷ್ಕೃತಮ್ |
ಸುದಕ್ಷಿಣಸ್ತು ಯುಯುಜೇ ಶ್ವೇತೈಃ ಕಾಂಭೋಜಜೈರ್ಹಯೈಃ ॥5॥
ಬಾಹ್ಲೀಕನು ಸುವರ್ಣದಿಂದ ಅಲಂಕೃತವಾದ ರಥವನ್ನು ತಂದನು. ಸುದಕ್ಷಿಣನು ಕಾಂಬೋಜದೇಶದ ಶ್ವೇತವರ್ಣದ ಹಯಗಳನ್ನು ಆ ರಥಕ್ಕೆ ಹೂಡಿದನು.
ಸುನೀಥಃ ಪ್ರೀತಿಮಾಂಸ್ತಸ್ಯ ಅನುಕರ್ಷಂ ಮಹಾಬಲಃ |
ಧ್ವಜಂ ಚೇದಿಪತಿಃ ಕ್ಷಿಪ್ರಮಹಾರ್ಷೀತ್ ಸ್ವಯಮುದ್ಯತಮ್ ॥6॥
ಮಹಾಬಲನಾದ ಚೇದಿಪತಿಯಾದ ಸುನೀಥನು ಧರ್ಮರಾಜನ ಮೇಲಿನ ಪ್ರೀತಿಯಿಂದ ಅವನ ಧ್ವಜದ ಅನುಕರ್ಷವನ್ನೂ ಸ್ವತಃ ಉದ್ಯುಕ್ತನಾಗಿ ರಥದ ಧ್ವಜವನ್ನೂ ಬೇಗ ತಂದನು.
ದಾಕ್ಷಿಣಾತ್ಯಃ ಸನ್ನಹನಂ ಸ್ರಗುಷ್ಣೀಷೇ ತು ಮಾಗಧಃ |
ವಸುದಾನೋ ಮಹೇಷ್ವಾಸೋ ಗಜೇಂದ್ರಂ ಷಷ್ಟಿಹಾಯನಮ್ ॥7॥
ಮಾತ್ಸ್ಯಃ ಕಕ್ಷ್ಯಾಂಸ್ತಥಾ ಚಿತ್ರಾನೇಕಲವ್ಯ ಉಪಾನಹೌ |

ಆವಂತೇಯಾಸ್ತ್ವಭಿಷೇಕಾರ್ಥಮಪೋ ಬಹುವಿಧಾಸ್ತಥಾ ॥8॥
ದಕ್ಷಿಣದೇಶದ ರಾಜನು ರೇಶ್ಮೆಗಳನ್ನೂ ಮಗಧರಾಜನು ರುಮಾಲು ಮತ್ತು ಪುಷ್ಪಮಾಲೆಗಳನ್ನೂ, ಮಹಾಧನುಸ್ಸನ್ನು ಹೊಂದಿದ ವಸುದಾನನು ಅರವತ್ತು ವರ್ಷ ಪ್ರಾಯದ ಗಜೇಂದ್ರನನ್ನೂ ಮತ್ಯರಾಜನು ಆ ಗಜೇಂದ್ರನ ವಿಚಿತ್ರವಾದ ಅನೇಕ ಕಕ್ಷ್ಯಗಳನ್ನೂ ಏಕಲವ್ಯನು ಪಾದರಕ್ಷೆಗಳನ್ನೂ ಅವಂತಿರಾಜರು ಅಭಿಷೇಕದ ಸಲುವಾಗಿ ಅನೇಕ ವಿಧವಾದ ಜಲಗಳನ್ನೂ ತಂದರು.
ಚೇಕಿತಾನ ಉಪಾಸಂಗಂ ಧನುಃ ಕಾಶ್ಯ ಉಪಾಹರತ್ |
ಅಸಿಂ ತು ಸತ್ಸರುಂ ಶಲ್ಯಃ ಶೈಕ್ಯಂ ಕಾಂಚನಭೂಷಿತಮ್ ॥9॥
ಚೇಕಿತಾನನು ಬತ್ತಳಿಕೆಯನ್ನೂ ಕಾಶಿರಾಜನು ಧನುಸ್ಸನ್ನೂ ಶಲ್ಯನು ಒಳ್ಳೆಯ ಹಿಡಿಯಿಂದ ಕೂಡಿದ ಖಡ್ಗವನ್ನೂ ಮತ್ತು ಸುವರ್ಣದಿಂದ ಭೂಷಿತವಾದ ನೆಲುವುಗಳನ್ನು ತಂದರು.
ಅನುಜಗ್ಮುರ್ಮಹಾತ್ಮಾನಮ್ ಋತ್ವಿಜೋ ಭೂರಿದಕ್ಷಿಣಮ್ |
ಮಹೇಂದ್ರಮಿವ ದೇವೇಂದ್ರಂ ದಿವಿ ಸಪ್ತರ್ಷಯೋ ಯಥಾ ॥10॥
ಸ್ವರ್ಗದಲ್ಲಿ ಸಪ್ತಋಷಿಗಳು ಅತುಲೈಶ್ವರ್ಯವುಳ್ಳ ಇಂದ್ರನನ್ನು ಹಿಂಬಾಲಿಸುವಂತೆ ಭೂರಿದಕ್ಷಿಣೆಯನ್ನು ಕೊಡುವ ಮಹಾತ್ಮನಾದ ಧರ್ಮರಾಜನನ್ನು ಋತ್ವಿಜರು ಹಿಂಬಾಲಿಸಿದರು.
ಅಧಾರಯಚ್ಛತ್ರಮಸ್ಯ ಸಾತ್ಯಕಿಃ ಸತ್ಯವಿಕ್ರಮಃ |
ಧನಂಜಯಶ್ಚ ವ್ಯಜನೇ ಭೀಮಸೇನಶ್ಚ ಪಾಂಡವಃ |
ಚಾಮರೇ ಚಾಪಿ ಶುದ್ಧೇ ದ್ವೇ ಯಮೌ ಜಗೃಹತುಸ್ತದಾ ॥11॥
ಸತ್ಯವಿಕ್ರಮನಾದ ಸಾತ್ಯಕಿಯು ಅವನಿಗೆ ಛತ್ರವನ್ನು ಹಿಡಿದನು. ಪಾಂಡುಪುತ್ರರಾದ ಅರ್ಜುನ ಮತ್ತು ಭೀಮಸೇನರು ಅವನಿಗೆ ವ್ಯಜನವನ್ನು ಬೀಸಿದರು. ನಕುಲಸಹದೇವರು ಶುದ್ಧವಾದ ಎರಡು ಚಾಮರಗಳನ್ನು ಕೈಯ್ಯಲ್ಲಿ ತೆಗೆದುಕೊಂಡರು.
ಉಪಾಗೃಹ್ಣಾದ್ಯದಿಂದ್ರಾಯ ಪುರಾ ಕಲ್ಪೇ ಪ್ರಜಾಪತಿಃ |
ತದಸ್ಮೈಶಂಖಮಾಹಾರ್ಷೀದ್ ವರುಣಃ ಕಲಶೋದಧಿಃ ॥12॥
ಸಪ್ತನಿಷ್ಕಸಹಸ್ರೇಣ ಸುಕೃತಂ ವಿಶ್ವಕರ್ಮಣಾ |
ತೇನಾಭಿಷಿಕ್ತಃ ಕೃಷ್ಣೇನ ತತ್ರ ಮೇ ಕಶ್ಮಲೋಭವತ್ ॥13॥
ಹಿಂದಿನ ಕಲ್ಪದಲ್ಲಿ ಬ್ರಹ್ಮದೇವರು ಇಂದ್ರನಿಗೋಸ್ಕರವಾಗಿ ಯಾವ ಶಂಖವನ್ನು ಸ್ವೀಕರಿಸಿದ್ದರೋ ಆ ಶಂಖವನ್ನು ಕ್ಷೀರಸಮುದ್ರದ ಅಭಿಮಾನಿಯಾದ ವರುಣನು ಧರ್ಮರಾಜನಿಗೆ ತಂದುಕೊಟ್ಟನು. ವಿಶ್ವಕರ್ಮನು ಏಳು ಸಹಸ್ರ ನಿಷ್ಕಗಳಿಂದ ಚೆನ್ನಾಗಿ ಅಲಂಕರಿಸಿದ್ದ ಆ ಶಂಖದಿಂದ ಕೃಷ್ಣನು ಧರ್ಮರಾಜನಿಗೆ ಅಭಿಷೇಕವನ್ನು ಮಾಡಿದನು. ಆಗ ನನ್ನ ಮನಸ್ಸಿಗೆ ವಿಷಾದ ಉಂಟಾಯಿತು.
ಜಲಾರ್ಥಂ ತತ್ರ ರಾಜೇಂದ್ರ ಘಟಾನಾದಾಯ ರಾಕ್ಷಸಾಃ |
ಗಚ್ಛಂತಿ ಪೂರ್ವಾದಪರಂ ಸಮುದ್ರಂ ಚಾಪಿ ದಕ್ಷಿಣಮ್ |
ಉತ್ತರಂ ತು ನ ಗಚ್ಛಂತಿ ವಿನಾ ತಾತ ಪತತ್ರಿಭಿಃ ॥14॥
ರಾಜೇಂದ್ರನೇ! ಅಭಿಷೇಕ ಜಲದ ಸಲುವಾಗಿ ರಾಕ್ಷಸರು ಘಟಗಳನ್ನು ತೆಗೆದುಕೊಂಡು ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರಕ್ಕೆ ಮತ್ತು ದಕ್ಷಿಣ ಸಮುದ್ರಕ್ಕೂ ಹೋಗುತ್ತಿದ್ದರು. ತಂದೆಯೇ! ಪಕ್ಷಿಗಳನ್ನು ಬಿಟ್ಟು ಬೇರೆ ಯಾರೂ ಉತ್ತರ ದಿಕ್ಕಿಗೆ ಹೋಗುವುದಿಲ್ಲ.
ತತ್ರ ಸ್ಮ ದಧ್ಮುಃ ಶತಶಃ ಶಂಖಾನ್ ಮಂಗಳ್ಯಕಾರಣಾತ್ |
ಪ್ರಾಣದಂತ ಸಮಾಧ್ಮಾತಾಸ್ತತೋ ರೋಮಾಣಿ ಮೇಽಹೃಷನ್ |
ಪ್ರಣಮ್ಯ ಭೂಮಿಪಾಲಾಶ್ಚ ಪೇತುರ್ಹೀನಾಃ ಸ್ವತೇಜಸಾ ॥15॥
ಅಲ್ಲಿ ಮಂಗಳದ ಸಲುವಾಗಿ ನೂರಾರು ಶಂಖಗಳನ್ನು ಊದಿದರು. ಹಾಗೆ ಊದಲ್ಪಟ್ಟ ಶಂಖಗಳು ದೊಡ್ಡ ನಾದವನ್ನು ಮಾಡಿದವು. ಆ ನಾದದಿಂದ ಉಂಟಾದ ಭಯದಿಂದ ನನಗೆ ರೋಮಾಂಚನವಾಯಿತು. ಆ ನಾದವನ್ನು ಕೇಳಿ ತೇಜೋಹೀನರಾದ ರಾಜರು ಭೂಮಿಯ ಮೇಲೆ ಬಿದ್ದರು.
ಧೃಷ್ಟದ್ಯುಮ್ನಃ ಪಾಂಡವಾಶ್ಚ ಸಾತ್ಯಕಿಃ ಕೇಶವೋಷ್ಟಮಃ |
ಸತ್ವಸ್ಥಾಃ ಶೌರ್ಯಸಂಪನ್ನಾ ಹ್ಯನ್ಯೋನ್ಯಂ ಪ್ರಿಯಕಾರಿಣಃ |
ವಿಸಂಜ್ಞಾನ್ ಭೂಮಿಪಾನ್ ದೃಷ್ಟ್ವಾ ಮಾಂ ಸ್ಮ ತೇ ಪ್ರಾಹಸಂಸ್ತದಾ ॥
ಪರಸ್ಪರ ಪ್ರಿಯವನ್ನು ಮಾಡುವ ಧೈರ್ಯ ಶೌರ್ಯಸಂಪನ್ನರಾದ ಧೃಷ್ಟದ್ಯುಮ್ನ ಪಂಚಪಾಂಡವರು ಸಾತ್ಯಕಿ ಮತ್ತು ಕೇಶವ ಇವರು ಸಂಜ್ಞಾಹೀನರಾದ ರಾಜರನ್ನು ಮತ್ತು ನನ್ನನ್ನು ನೋಡಿ ಆಗ ಅಪಹಾಸವನ್ನು ಮಾಡಿದರು.
ತತಃ ಪ್ರಹೃಷ್ಟೋ ಬೀಭತ್ಸುಃ ಪ್ರಾದಾದ್ಧೇಮವಿಷಾಣಿನಾಮ್ |
ಶತಾನ್ಯನಡುಹಾಂ ಪಂಚ ದ್ವಿಜಮುಖ್ಯೇಷು ಭಾರತ ॥17॥
ಆಗ ಸಂತೋಷಗೊಂಡ ಅರ್ಜುನನು ಬ್ರಾಹ್ಮಣರಿಗೆ ಸುವರ್ಣದಿಂದ ಭೂಷಿತವಾದ ಶೃಂಗಗಳುಳ್ಳ ಐದುನೂರು ವೃಷಭಗಳನ್ನು ಕೊಟ್ಟನು.
ನ ಚೈವಂ ವೀರ್ಯವಾನಾಸೀದ್ ಯೌವನಾಶ್ವೋ ಮನುರ್ನ ಚ |
ನ ಚ ರಾಜಾ ಪೃಥುರ್ವೈನ್ಯೋ ನ ಚಾಪ್ಯಾಸೀದ್ ಭಗೀರಥಃ ॥18॥
ಯಥಾತಿಮಾತ್ರಂ ಕೌಂತೇಯಃ ಶ್ರಿಯಾ ಪರಮಯಾ ಯುತಃ |
ರಾಜಸೂಯಮವಾಪ್ಯೈವಂ ಹರಿಶ್ಚಂದ್ರ ಇವ ಪ್ರಭುಃ ॥19॥
ಹೇಗೆ ಕುಂತಿಯ ಪುತ್ರನಾದ ಧರ್ಮರಾಜನು ರಾಜಸೂಯಯಾಗವನ್ನು ಮಾಡಿ ಪ್ರಭುವಾದ ಹರಿಶ್ಚಂದ್ರನಂತೆ ಕಾಂತಿಯುಕ್ತನಾದನೋ

ಹಾಗೆ ಯೌವನಾಶ್ವನ ಪುತ್ರನಾದ ಮಾಂಧಾತೃವಾಗಲೀ ಅಥವಾ ಮನುವಾಗಲೀ ಅಥವಾ ವೇನನ ಮಗನಾದ ಪೃಥುಚಕ್ರವರ್ತಿಯಾಗಲೀ ಅಥವಾ ಭಗೀರಥನಾಗಲೀ ಕಾಂತಿ ಮತ್ತು ಶೌರ್ಯ ಸಂಪನ್ನರಾಗಿರಲಿಲ್ಲ.
ಏತಾಂ ದೃಷ್ಟ್ವಾ ಶ್ರಿಯಂ ಪಾರ್ಥೇ ಹರಿಶ್ಚಂದ್ರೇ ಯಥಾ ವಿಭೋ (ಪುರಾ)|
ಕಥಂ ನು ಜೀವಿತಂ ಶ್ರೇಯೋ ಮಮ ಪಶ್ಯಸಿ ಭಾರತ ॥20॥
ಅಶ್ವೇನೇವ ಯುಗಂ ನದ್ಧಂ ವಿಪರ್ಯಸ್ತಂ ನರಾಧಿಪ |
ಕನೀಯಾಂಸೋಭಿವರ್ಧಂತೇ ಜ್ಯೇಷ್ಠಾ ಹೀಯಂತಿ ಭಾರತ ॥21॥
ಹಿಂದೆ ಹರಿಶ್ಚಂದ್ರನಿಗೆ ಇದ್ದ ವೈಭವದಂತೆ ಇರುವ ಧರ್ಮರಾಜನ ಸಂಪತ್ತನ್ನು ನೋಡಿ ಎಲೈ ಭಾರತನೇ! ನಾನು ಬದುಕಿರುವುದು ಒಳ್ಳೆಯದು ಎಂದು ನೀನು ಹೇಗೆ ಯೋಚಿಸುತ್ತಿಯೆ? ರಾಜನೇ! ನೊಗಕ್ಕೆ ಅಶ್ವಗಳನ್ನು ಹಿಂದೆ ಮುಂದಾಗಿ ಕಟ್ಟಿದಂತಾಯಿತು. ಭಾರತನೇ! ಚಿಕ್ಕವರು ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ. ಜ್ಯೇಷ್ಠರಾದವರು ಕ್ಷಯವನ್ನು ಹೊಂದುತ್ತಿದ್ದಾರೆ.
ಏವಂ ದೃಷ್ಟ್ವಾ ನಾಭಿವಿಂದಾಮಿ ಶರ್ಮ
ಪರಾಕ್ಷಮಾಣಃ ಕುರುರಾಜಮುಖ್ಯ |
ತೇನಾಹಮೇವಂ ಕೃಶತಾಂ ಗತಶ್ಚ
ವಿವರ್ಣತಾಂ ಚೈವ ಸಶೋಕತಾಂ ಚ ॥22॥
ಕುರುರಾಜ ಶ್ರೇಷ್ಠನೇ! ಈ ಸಂಪತ್ತನ್ನು ನಾನು ನೋಡಿ ಸಹಿಸಲು ಸಾಧ್ಯವಿಲ್ಲದ ಕಾರಣದಿಂದ ನನ್ನ ಮನಸ್ಸಿಗೆ ಶಾಂತಿಯು ದೊರೆಯುತ್ತಿಲ್ಲ. ಆದ್ದರಿಂದ ನಾನು ಕೃಶನೂ ವಿವರ್ಣನೂ ಮತ್ತು ಶೋಕಯುಕ್ತನೂ ಆಗಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಟ್‌ಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಅಷ್ಟಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯವು ಮುಗಿಯಿತು.
ಎಪ್ಪತ್ತೇಳನೆಯ ಅಧ್ಯಾಯ
(ಧೃತರಾಷ್ಟ್ರನಿಂದ ದುರ್ಯೋಧನನಿಗೆ ಶಾಂತಿಯ ಉಪದೇಶ, ಅವನಿಂದ ನಿರಾಕರಣೆ.)
ಧೃತರಾಷ್ಟ್ರಃ
ತ್ವಂ ಜ್ಯೇಷ್ಠೋ ಜ್ಯೇಷ್ಠತನಯಃ ಪುತ್ರ ಮಾ ಪಾಂಡವಾನ್ ದ್ವಿಷಃ |
ದ್ವೇಷಾದಸುಖಮಾದತ್ತೇ ಯಥೈವ ನಿಧನಂ ತಥಾ ॥1॥
ಪುತ್ರನೇ! ನೀನು ಜ್ಯೇಷ್ಠನಾದವನು ಮತ್ತು ಜ್ಯೇಷ್ಠಪುತ್ರನಾದವನು. ಪಾಂಡವರನ್ನು ದ್ವೇಷಿಸ ಬೇಡ. ದ್ವೇಷಮಾಡುವುದರಿಂದ ಮರಣದಂತಹ ದುಃಖವನ್ನೇ ಹೊಂದುತ್ತಾರೆ.
ವ್ಯುಪ್ತಂ ನಶ್ಚ ಸಮಾನಾರ್ಥಂ ತುಲ್ಯಮಿತ್ರಂ ಯುಧಿಷ್ಠಿರಮ್ |
ಅದ್ವಿಷಂತಂ ಕಥಂ ದ್ವಿಷ್ಯಾತ್ ತ್ವಾದೃಶೋ ಭರತರ್ಷಭ ॥2॥
ನಾವೇ ಧರ್ಮರಾಜನನ್ನು ಇಂದ್ರಪ್ರಸ್ಥದಲ್ಲಿ ಸ್ಥಾಪಿಸಿದ್ದೇವೆ. ನಮಗೂ ಮತ್ತು ಅವನಿಗೂ ಸಮಾನವಾದ ಉದ್ದೇಶಗಳು ಮತ್ತು ಸಮಾನರಾದ ಮಿತ್ರರು ಇದ್ದಾರೆ. ಭರತರ್ಷಭನೇ! ದ್ವೇಷಮಾಡದಿರುವ ಅವನನ್ನು ನಿನ್ನಂತಹವನು ಹೇಗೆ ದ್ವೇಷಮಾಡಲು ಸಾಧ್ಯ?
ತುಲ್ಯಾಭಿಜನವೀರ್ಯಶ್ಚ ಕಥಂ ಭ್ರಾತುಃ ಶ್ರಿಯಂ ನೃಪ |
ಪುತ್ರ ಕಾಮಯಸೇ ಮೋಹಾನ್ಮೈವಂ ಭೂಃ ಶಾಮ್ಯ ಸಾಧ್ವಿಹ ॥3॥
ಎಲೈ ರಾಜನೇ! ಸಮಾನವಾದ ಶ್ರೇಷ್ಠವಂಶ ಮತ್ತು ಪರಾಕ್ರಮ ಉಳ್ಳ ನೀನು ನಿನ್ನ ಅಣ್ಣನ ಸಂಪತ್ತನ್ನು ಹೇಗೆ ಬಯಸುತ್ತಿಯೆ? ಪುತ್ರನೇ! ಮೋಹದಿಂದ ಹೀಗೆ ಮಾಡಬೇಡ. ಈ ವಿಷಯದಲ್ಲಿ ಮನಸ್ಸಿಗೆ ಶಾಂತಿಯನ್ನು ತಂದು ಕೋ.
ಅಥ ಯಜ್ಞವಿಭೂತಿಂ ತಾಂ ಕಾಂಕ್ಷಸೇ ಭರತರ್ಷಭ |
ಋತ್ವಿಜಸ್ತವ ತನ್ವಂತು ಸಪ್ತತಂತುಂ ಮಹಾಧ್ವರಮ್ ॥4॥
ಭರತರ್ಷಭನೇ! ಅವನ ಯಜ್ಞವೈಭವವನ್ನು ನೀನು ಬಯಸುವುದಾದರೆ ಋತ್ವಿಜರು ನಿನ್ನ ಸಲುವಾಗಿಯೂ ದೊಡ್ಡ ಯಜ್ಞವನ್ನು ಆಚರಿಸಲಿ.
ಆಹರಿಷ್ಯಂತಿ ರಾಜಾನಸ್ತವಾಪಿ ವಿಪುಲಂ ಧನಮ್ |
ಪ್ರೀತ್ಯಾ ಚ ಬಹುಮಾನಾಚ್ಚ ರತ್ನಾನ್ಯಾಭರಣಾನಿ ಚ ॥5॥
ರಾಜರು ಪ್ರೀತಿಯಿಂದಲೂ ಗೌರವದಿಂದಲೂ ವಿಪುಲವಾದ ಧನವನ್ನೂ ರತ್ನಗಳನ್ನೂ ಮತ್ತು ಆಭರಣಗಳನ್ನೂ ನಿನಗೂ ತಂದು ಒಪ್ಪಿಸುತ್ತಾರೆ.
ಮಹೀ ಕಾಮದುಘಾ ಚಾಪಿ ವೀರಪತ್ನೀ ತು ಸೋಚ್ಯತೇ |
ತಥಾ ವೀರಸ್ಯಾಶ್ರಿತಾಂ ತು ಅನುಮೇಹೀಂ ಕಳತ್ರವತ್ |
ತವಾಪ್ಯಸ್ತಿ ಹಿ ಚೇದ್ವೀರ್ಯಂ ಭೋಕ್ಷ್ಯಸೇ ಹಿ ಮಹೀಮಿಮಾಮ್ ॥6॥
ಭೂಮಿಯನ್ನು ಬಯಸಿದುದನ್ನು ಕೊಡುವ ಧೇನುವೆಂದು ವೀರಪತ್ನಿಯೆಂದು ಕರೆಯುತ್ತಾರೆ. ಹಾಗೆ ನಿನ್ನನ್ನು ಆಶ್ರಯಿಸಿರುವ ಭೂಮಿಯನ್ನು ಪತ್ನಿಯಂತೆ ಇಷ್ಟವಾದ ಫಲವನ್ನು ಕೊಡುವವಳಾಗಿ ಮಾಡು. ನಿನಗೂ ಪರಾಕ್ರಮವಿದ್ದರೆ ಈ ಭೂಮಿಯನ್ನು ಭೋಗಿಸುತ್ತೀಯೆ.
ಅನರ್ಥಚರಿತಂ ತಾತ ಪರಸ್ವಹರಣಂ ಭೃಶಮ್ |
ಉಭಯೋರ್ಲೋಕಯೋರ್ದುಃಖಂ ಸುಹೃದಾಮವಮಾನನಮ್ ॥7॥
ಪ್ರೀತಿಪಾತ್ರನೇ! ಇನ್ನೊಬ್ಬರ ಸಂಪತ್ತನ್ನು ಹರಣಮಾಡುವುದು ದೊಡ್ಡ ಅನರ್ಥಕ್ಕೆ ಕಾರಣ. ಉಭಯ ಲೋಕಗಳಲ್ಲಿ ದುಃಖವನ್ನೂ

ಬಂಧುಮಿತ್ರರಿಂದ ಅವಮಾನವನ್ನೂ ತಂದು ಕೊಡುತ್ತದೆ.
ಸುಸಂತುಷ್ಟಃ ಸ್ವಕರ್ಮಸ್ಥೋ ಯಃ ಸ ವೈ ಸುಖಮೇಧತೇ |
ಅಧ್ಯಾನಂ ಚ ಪರಾರ್ಥೇಷು ನಿತ್ಯೋದ್ಯೋಗಃ ಸ್ವಕರ್ಮಸು |
ಉದ್ಯಮೋ ರಕ್ಷಣೇ ಸ್ವೇಷಾಮೇತದ್ ವಿಭವಲಕ್ಷಣಮ್ ॥8॥
ತೃಪ್ತಿಯಿಂದ ತನ್ನ ಕಾರ್ಯವನ್ನು ತಾನು ಮಾಡಿಕೊಂಡು ಇರುವವನು ಸುಖವನ್ನು ಪಡೆಯುತ್ತಾನೆ. ಇನ್ನೊಬ್ಬರ ಸಂಪತ್ತನ್ನು ಚಿಂತಿಸದಿರುವುದು, ತನ್ನ ಕಾರ್ಯಗಳಲ್ಲಿ ಯಾವಾಗಲೂ ಯುಕ್ತನಾಗಿರುವುದು, ತನ್ನವರನ್ನು ರಕ್ಷಣೆಮಾಡುವುದರಲ್ಲಿ ಪ್ರಯತ್ನ ಶೀಲನಾಗಿರುವುದು, ಇದು ವೈಭವದ ಚಿಹ್ನೆ.
ನಿರ್ವರ್ತಿಷ್ವವ್ಯಥೋ ದಕ್ಷೋ ನಿತ್ಯಮುತ್ಥಾನವಾನ್ ಯತಃ |
ಅಪ್ರಮತ್ತೋ ವಿನೀತಾತ್ಮಾ ನಿತ್ಯಂ ಭದ್ರಾಣಿ ಪಶ್ಯತಿ ॥9॥
ಚೆನ್ನಾಗಿರುವವರನ್ನು ನೋಡಿ ವ್ಯಥೆಯನ್ನು ಪಡದೆ ದಕ್ಷನಾಗಿದ್ದು ನಿತ್ಯವೂ ಉತ್ಸಾಹಶೀಲನಾಗಿದ್ದು ದಕ್ಷನೂ ಎಚ್ಚರಿಕೆಯಿಂದ ಇರುವವನೂ ವಿನಯ ಶೀಲನೂ ಆದ ವ್ಯಕ್ತಿಯು ಯಾವಾಗಲೂ ಒಳ್ಳೆಯದನ್ನೇ ಕಾಣುತ್ತಾನೆ.
ಅಂತರ್ವೇದ್ಯಾಂ ದದದ್ ವಿತ್ತಂ ಕಾಮಾನನುಭವ ಪ್ರಿಯಾನ್ |
ಕ್ರೀಡನ್ ಸ್ತ್ರೀಭಿಃ ನಿರಾತಂಕಃ ಪ್ರಶಾಮ್ಯ ಭರತರ್ಷಭ ॥10॥
ಭರತರ್ಷಭನೇ! ಅಂತರ್ವೇದಿಯಲ್ಲಿ ಬಹಳ ವಿತ್ತವನ್ನು ದಾನಮಾಡುತ್ತಾ ಇಷ್ಟವಾದ ಕಾಮಗಳನ್ನು ಭೋಗಿಸುತ್ತಾ ಪತ್ನಿಯರ ಜೊತೆಯಲ್ಲಿ ನಿರಾತಂಕವಾಗಿ ಸುಖವಾಗಿ ಸುಖಿಸುತ್ತಾ ಶಾಂತಿಯನ್ನು ಹೊಂದು.
ದುರ್ಯೋಧನಃ
ತ್ವಂ ರಾಜನ್ ವೈ ಮೋಹಯಸಿ ಮಾಂ ನಾವಿ ನೌರಿವ ಸಂಗತಾ |
ಸ್ವಾರ್ಥೇ ಕಿಂ ನಾವಧಾನಂ ತೇ ಉತಾಹೋ ದ್ವೇಷ್ಟಿ ಮಾಂ ಭವಾನ್ ॥
ರಾಜನೇ! ಹಡಗಿನಲ್ಲಿ ಇಟ್ಟ ಹಡಗಿನಂತೆ ನೀನು ನನ್ನನ್ನು ಮೋಹಕ್ಕೆ ವಶಪಡಿಸುತ್ತಿದ್ದೀಯೆ. ನಿನಗೆ ನಿನ್ನ ಒಳಿತಿನ ಮೇಲೆ ದೃಷ್ಟಿಯೆ ಇಲ್ಲವೋ ಅಥವಾ ನೀನು ನನ್ನನ್ನು ದ್ವೇಷಿಸುತ್ತೀಯೋ?
ನ ಸಂತೀಮೇ ಧಾರ್ತರಾಷ್ಟ್ರಾ ಯೇಷಾಂ ತ್ವಮನುಶಾಸಿತಾ |
ಭವಿಷ್ಯದರ್ಥಮಾಖ್ಯಾಹಿ ತದಾತ್ವಂ ಕೃತ್ಯಮಾತ್ಮನಃ ॥12॥
ನಿನ್ನನ್ನು ನಾಯಕನನ್ನಾಗಿ ಹೊಂದಿದ ನಿನ್ನ ಮಕ್ಕಳು ಇಲ್ಲವೆಂದೇ ತಿಳಿ. ಈಗ ನಾವು ಮಾಡಬೇಕಾದ ಕಾರ್ಯವನ್ನು ಹೇಳುವ ಸಮಯದಲ್ಲಿ ನೀನು ಮುಂದೆ ಉಂಟಾಗಬೇಕಾದ ಯಾವುದೋ ಫಲವನ್ನು ಹೇಳುತ್ತಿದ್ದೀಯೆ.
ಪರಪ್ರಣೇಯೋಽಗ್ರಣೀಶ್ಚ ಯಶ್ಚ ಮಾರ್ಗಾತ್ ಪ್ರಮುಹ್ಯತಿ |
ಪಂಥಾನಮನುಗಚ್ಛೇಯುಃ ಕಥಂ ತಸ್ಯ ಪದಾನುಗಾಃ ॥13॥
ನಾಯಕನಾದವನು ಇನ್ನೊಬ್ಬನನ್ನು ಅವಲಂಬಿಸಿ ಇನ್ನೊಬ್ಬನಿಂದ ಮಾರ್ಗ ವಿಷಯದಲ್ಲಿ ಸಂಶಯವನ್ನು ಹೊಂದಿದರೆ ಅವನ ಹಿಂಬಾಲಕರು ಅವನ ಮಾರ್ಗವನ್ನು ಹೇಗೆ ಅನುಸರಿಸಿಬೇಕು?
ರಾಜನ್ ಪರಹಿತಪ್ರಜ್ಞೋ ವೃದ್ಧಸೇವೀ ಜಿತೇಂದ್ರಿಯಃ |
ಪ್ರತಿಪನ್ನಾನ್ ಸ್ವಕಾರ್ಯೇಷು ಸಮ್ಮೋಹಯಸಿ ನೋ ಭೃಶಮ್ ॥14॥
ರಾಜನೇ! ಜಿತೇಂದ್ರಿಯನೂ ಬುದ್ಧಿಜೀವಿಯೂ ಆದ ಹಿರಿಯರ ಸೇವೆಯನ್ನು ಮಾಡಿದ ನೀನು ಇನ್ನೊಬ್ಬರ ಹಿತವನ್ನೇ ಚಿಂತಿಸುತ್ತಾ ನಮ್ಮ ಕಾರ್ಯದಲ್ಲಿ ತೊಡಗಿರುವ ನಮಗೆ ದೊಡ್ಡ ಭ್ರಾಂತಿಯನ್ನು ಉಂಟುಮಾಡುತ್ತಿದ್ದೀಯೆ.
ಲೋಕವೃತ್ತಾದ್ ರಾಜವೃತ್ತಮನ್ಯದಾಹ ಬೃಹಸ್ಪತಿಃ |
ತಸ್ಮಾದ್ ರಾಜ್ಞಾಽಪ್ರಮತ್ತೇನ ಸ್ವಾರ್ಥಶ್ಚಿಂತ್ಯೋಽಪ್ರಮಾದತಃ ॥15॥
ಲೋಕದ ನಡೆತೆಗಿಂತ ರಾಜನ ನಡತೆಯು ಭಿನ್ನವಾದುದೆಂದು ಬೃಹಸ್ಪತಿಯು ಹೇಳಿದ್ದಾನೆ. ಆದ್ದರಿಂದ ಜಾಗರೂಕನಾದ ರಾಜನು ಮೋಹಕ್ಕೆ ಒಳಗಾಗದೆ ತನ್ನ ಸ್ವಾರ್ಥವನ್ನು ಚಿಂತಿಸಬೇಕು.
ಕ್ಷತ್ರಿಯಸ್ಯ ಮಹಾರಾಜ ಯಾ ವೃತ್ತಿಃ ಸುಸಮಾಹಿತಾ |
ಸ ವೈ ಧರ್ಮೋಸ್ತ್ವಧರ್ಮೋಽ ವಾ ಸ್ವಧರ್ಮೋ ಭರತರ್ಷಭ ॥16॥
ಭರತರ್ಷಭನೇ! ಮಹಾರಾಜನೇ! ಕ್ಷತ್ರಿಯನಿಗೆ ಯಾವ ವೃತ್ತಿಯು ವಿಹಿತವಾಗಿದೆಯೋ ಆ ವೃತ್ತಿಯು ಧರ್ಮವಾಗಿರಲೀ ಅಥವಾ ಅಧರ್ಮವಾಗಿರಲಿ ಏನಾದರೂ ಅದು ಸ್ವಧರ್ಮವೇ ಸರಿ.
ಪ್ರಕಾಲಯೇದ್ ದಿಶಃ ಸರ್ವಾಃ ಪ್ರತೋದೇನೇವ ಸಾರಥಿಃ |
ಪ್ರತ್ಯಮಿತ್ರ ಶ್ರಿಯಂ ದೀಪ್ತಾಂ ಬುಭೂಷುರ್ಭರತರ್ಷಭ ॥17॥
ಭರತರ್ಷಭನೇ! ತನ್ನ ಏಳಿಗೆಯನ್ನು ಬಯಸುವ ರಾಜನು ಚಾವಟಿಯನ್ನು ಹಿಡಿದ ಸಾರಥಿಯು ಎಲ್ಲಾ ದಿಕ್ಕುಗಳನ್ನು ತಡಕಾಡುವಂತೆ ಜ್ವಲಿಸುತ್ತಿರುವ ಶತ್ರುವಿನ ಸಂಪತ್ತನ್ನು ತಡಕಾಡಬೇಕು.
ಪ್ರಚ್ಛನ್ನೋ ವಾ ಪ್ರಕಾಶೋ ವಾ ಯೋ ಯೋಗೋ ರಿಪುಬಾಧನಃ |
ತದ್ವೈ ಶಸ್ತ್ರಂ ಶಸ್ತ್ರವಿದಾಂ ನ ಶಸ್ತ್ರಂ ಭೇದನಂ ಸ್ಮೃತಮ್ ॥18॥
ಶಾಸ್ತ್ರವನ್ನು ತಿಳಿದವರು ಪ್ರಕಾಶವಾಗಿ ಅಥವಾ ರಹಸ್ಯವಾಗಿ ಶತ್ರುವನ್ನು ಬಾಧಿಸುವ ಉಪಾಯವನ್ನೇ ಶಸ್ತ್ರವೆಂದು ಹೇಳುತ್ತಾರೆ. ಶಸ್ತ್ರವೆಂದರೆ ಭೇದಿಸುವ ಸಾಧನ ಎಂದು ಮಾತ್ರ ಅರ್ಥವಲ್ಲ.
ಅಸಂತೋಷಃಶ್ರಿಯೋ ಮೂಲಂ ತಸ್ಮಾತ್ ತಂ ಕಾಮಯಾಮ್ಯಹಮ್|
ಸಮುಚ್ಛ್ರಯೇ ಯೋ ಯತತೇ ಸ ರಾಜನ್ ಪರಮೋ ನಯೀ ॥19॥

ರಾಜನಿಗೆ ಅತೃಪ್ತಿಯು ಐಶ್ವರ್ಯಕ್ಕೆ ಕಾರಣ. ಆದ್ದರಿಂದ ಆ ಅತೃಪ್ತಿಯನ್ನು ನಾನು ಬಯಸುತ್ತೇನೆ. ಯಾವ ರಾಜನು ತನ್ನ ಏಳಿಗೆಗಾಗಿ ಶ್ರಮಿಸುತ್ತಾನೋ ಅವನು ಶ್ರೇಷ್ಠವಾದ ನೀತಿಯನ್ನು ಅನುಸರಿಸಿದವನು.
ಮಮತ್ವಂ ಚ ನ ಕರ್ತವ್ಯಮೈಶ್ವರ್ಯೇ ವಾ ಧನೇಷು ವಾ |
ಪೂರ್ವಾವಾಪ್ತಂ ಹರತ್ಯನ್ಯೋ ರಾಜಧರ್ಮಂ ಹಿ ತಂ ವಿದುಃ ॥20॥
ಸಂಪಾದಿಸಿದ ಧನದಲ್ಲಿಯಾಗಲೀ ಐಶ್ವರ್ಯದಲ್ಲಾಗಲೀ ಇದು ನನ್ನದು ಎಂದು ಸಮಾಧಾನವನ್ನು ಹೊಂದಬಾರದು. ಮೊದಲು ಸಂಪಾದಿಸಿದ ಧನವನ್ನು ಇನ್ನೊಬ್ಬ ರಾಜನು ಅಪಹರಿಸುತ್ತಾನೆ. ಇದನ್ನು ರಾಜ ಧರ್ಮವೆಂದು ಕರೆಯುತ್ತಾರೆ.
ಅದ್ರೋಹಂ ಸಮಯಂ ಕೃತ್ವಾ ಚಿಚ್ಛೇದ ನಮುಚೇಃ ಶಿರಃ |
ಶಕ್ರೇಣ ವಿಹಿತಾ ತಾತ ರಿಪೌ ವೃತ್ತಿಃ ಸನಾತನೀ ॥21॥
ದ್ರೋಹಮಾಡುವುದಿಲ್ಲವೆಂದು ಮಾತುಕೊಟ್ಟ ಇಂದ್ರನು ನಮುಚಿಯ ಶಿರಸ್ಸನ್ನು ಕತ್ತರಿಸಿದನು. ತಂದೆಯೇ ಶತ್ರುವಿನ ವಿಷಯದಲ್ಲಿ ಸನಾತನವಾದ ವೃತ್ತಿಯನ್ನು ಇಂದ್ರನು ತೋರಿಸಿಕೊಟ್ಟಿದ್ದಾನೆ.
ದ್ವಾವೇತೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ |
ರಾಜಾನಂ ಚಾಪ್ಯಯೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥22॥
ಯುದ್ಧಮಾಡದಿರುವ ರಾಜ ಮತ್ತು ಪ್ರವಾಸಮಾಡದಿರುವ ಬ್ರಾಹ್ಮಣ ಇವರಿಬ್ಬರನ್ನೂ ಭೂಮಿಯು ಸರ್ಪವು ಮೂಷಿಕಗಳನ್ನು ನುಂಗುವಂತೆ ನುಂಗಿ ನಾಶಮಾಡುತ್ತದೆ.
ನ ರಾಜಾ ಕುರುತೇ ಯುದ್ಧಂ ಸತ್ಯೋಪಾಯೈರ್ನರಾಧಿಪ |
ಅಸೂಯಾಂ ಕುರುತೇ ವಿಪ್ರಃ ಕುಲಂ ರಾಷ್ಟ್ರಂ ವಿನಾಶಿತಾ ॥23॥
ಎಲೈ ರಾಜನೇ! ಯಾವ ರಾಜನು ಸತ್ಯವಾದ ಉಪಾಯಗಳಿಂದ ಯುದ್ಧವನ್ನು ಮಾಡುವುದಿಲ್ಲವೋ ಅವನು ಬಂಧುಸಹಿತವಾದ ತನ್ನ ರಾಷ್ಟ್ರವನ್ನೂ ಯಾವ ಬ್ರಾಹ್ಮಣನು ಅಸೂಯೆಯನ್ನು ಮಾಡುತ್ತಾನೋ ಅವನು ತನ್ನ ಕುಲವನ್ನೂ ನಾಶಮಾಡುತ್ತಾರೆ.
ಸಂತುಷ್ಟಾ ಭೂಮಿಪಾ ನೇಶುರಸಂತುಷ್ಟಾ ದ್ವಿಜಾತಯಃ |
ಕೇವಲಂ ತೇನ ಚಾತ್ಮಾನಂ ವಂಶಂ ರಾಷ್ಟ್ರಂ ಸಬಂಧುಕಮ್ ॥24॥
ಸಂತುಷ್ಟರಾದ ರಾಜರು ನಾಶವನ್ನು ಹೊಂದಿದರು. ಅಸಂತುಷ್ಟರಾದ ಬ್ರಾಹ್ಮಣರು ನಾಶವನ್ನು ಹೊಂದಿದರು. ಆದ್ದರಿಂದ ಆ ನಾಶದಿಂದ ಬ್ರಾಹ್ಮಣನೂ, ಮತ್ತು ರಾಜನೂ ತನ್ನ ವಂಶವನ್ನೂ ಬಂಧುಸಹಿತವಾದ ತನ್ನ ರಾಷ್ಟ್ರವನ್ನೂ ನಾಶಮಾಡುತ್ತಾರೆ.
ನಾಸ್ತಿ ವೈ ಜಾತಿತಃ ಶತ್ರುಃ ಪುರುಷಸ್ಯ ವಿಶಾಂಪತೇ |
ಯೇನ ಸಾಧಾರಣೀ ವೃತ್ತಿಃ ಸ ಶತ್ರುರ್ನೇತರೋ ಜನಃ ॥25॥
ರಾಜನೇ! ಮನುಷ್ಯನಿಗೆ ಸ್ವಾಭಾವಿಕವಾದ ಶತ್ರುವೆಂಬುವನು ಇಲ್ಲ. ಯಾರ ಜೊತೆಯಲ್ಲಿ ಸಾಧಾರಣವಾದ ವೃತ್ತಿಯನ್ನು ಹೊಂದಿರುತ್ತಾನೆಯೊ ಅವನೇ ಶತ್ರು. ಇನ್ನೊಬ್ಬನು ಶತ್ರುವಲ್ಲ.
ಶತ್ರುಪಕ್ಷಂ ಸಮೃಧ್ಯಂತಂ ಯೋ ಮೋಹಾತ್ ಸಮುಪೇಕ್ಷತೇ |
ಆಪ್ಯಾಯಿತಾ ಇವ ವ್ಯಾಧಿಸ್ತಸ್ಯ ಮೂಲಂ ಛಿನತ್ತಿ ಸಃ ॥26॥
ಸಂವೃದ್ಧಿಯನ್ನು ಹೊಂದುತ್ತಿರುವ ಶತ್ರುಪಕ್ಷವನ್ನು ಯಾವನು ತನ್ನ ಮೋಹದಿಂದ ಉಪೇಕ್ಷೆಮಾಡುತ್ತಾನೆಯೋ ಬಲಿತ ರೋಗದಂತೆ ಅವನು ತನ್ನ ಮೂಲವನ್ನೇ ನಾಶಮಾಡುತ್ತಾನೆ.
ಸಮಿತ್ರಃ ಸೂಕ್ಷ್ಮವೃತ್ತಿರ್ಹಿ ರಾಜಾನಮಪರಾಕ್ರಮಮ್ |
ಅಲ್ಪೋಽಪಿ ಹ್ಯರಿರತ್ಯಂತಂ ವರ್ಧಮಾನಪರಾಕ್ರಮಃ |
ವಲ್ಮೀಕೋ ಮೂಲಜ ಇವ ಗ್ರಸತೇ ವೃಕ್ಷಮಂತಿಕಾತ್ ॥27॥
ಮಿತ್ರರಿಂದ ಒಡಗೂಡಿ ಸೂಕ್ಷ್ಮ ವೃತ್ತಿಯನ್ನು ಅನುಸರಿಸುವ ಅಭಿವೃದ್ಧಿಯನ್ನು ಹೊಂದುತ್ತಿರುವ ಪರಾಕ್ರಮವನ್ನು ಹೊಂದಿರುವ ಅಲ್ಪನಾದ ಶತ್ರುವೂ ಸಹ ಪರಾಕ್ರಮಹೀನನಾದ ರಾಜನನ್ನು ವೃಕ್ಷದ ಮೂಲದಲ್ಲಿ ಬೆಳೆದ ಹುತ್ತದಂತೆ ಸಮೀಪದಿಂದಲೇ ನಾಶಮಾಡುತ್ತಾನೆ.
ಆಜಮೀಢ ರಿಪೋರ್ಲಕ್ಷ್ಮೀರ್ಮಾ ತೇ ರೋಚಿಷ್ಟ ಭಾರತ |
ಏಷ ಭಾರಃ ಸತ್ವವತಾಮರೇಃ ಶಿರಸಿ ತಿಷ್ಠತಾಮ್ ॥28॥
ಎಲೈ ಆಜಮೀಢನೇ! ನಿನಗೆ ಶತ್ರುಗಳ ಸಂಪತ್ತು ಇಷ್ಟವಾಗದಿರಲಿ. ಧೈರ್ಯ ಮತ್ತು ಪರಾಕ್ರಮಶಾಲಿಗಳಿಗೆ ಶತ್ರುಗಳ ತಲೆ ಮೇಲೆ ಕಾಲಿಡುವುದೇ ಅವರ ಜವಾಬ್ದಾರಿ.
ಜನ್ಮವೃದ್ಧಿಮಿವಾರ್ಯಾಣಾಂ ಯೋ ವೃದ್ಧಿಮಭಿಕಾಂಕ್ಷತೇ |
ಏಧತೇ ಜ್ಞಾತಿಷು ಸ ವೈ ಸದ್ಯೋವೃದ್ಧಿರ್ಹಿ ವಿಕ್ರಮಃ ॥29॥
ಯಾವನು ಸತ್ಕುಲಪ್ರಸೂತತ್ವವನ್ನು ಬಯಸಿದಂತೆ ಕಾರ್ಯದ ಅಭಿವೃದ್ಧಿಯನ್ನು ಬಯಸುತ್ತಾನೋ ಅವನೇ ತನ್ನ ಬಂಧುಗಳಲ್ಲಿ ಮೇಲೇರುತ್ತಾನೆ. ವಿಕ್ರಮವು ತಕ್ಷಣದಲ್ಲಿಯೇ ಸಮೃದ್ಧಿಯನ್ನು ಕೊಡುತ್ತದೆ.
ಸಂಪ್ರಾಪ್ಯ ಪಾಂಡವೈಶ್ವರ್ಯಂ ಸಂಶಯೋ ಮೇ ಭವಿಷ್ಯತಿ |
ಅವಾಪ್ಸ್ಯೇ ವಾ ಶ್ರಿಯಂ ತಾಂ ಹಿ ಶಯಿಷ್ಯೇ ವಾ ಹತೋ ಯುಧಿ ॥
ಪಾಂಡವೈಶ್ವರ್ಯವನ್ನು ನಾನು ಪಡೆದರೆ ಸಂಶಯ ಉಂಟಾಗಬಹುದು. ನಾನು ಅವರ ಸಂಪತ್ತನ್ನು ಪಡೆಯುವೆನು. ಇಲ್ಲವೆ ಅವರಿಂದ ಹತರಾಗಿ ಭೂಮಿಯ ಮೇಲೆ ಮಲಗುವೆನು.
ಅನಾವೃತ್ತಸ್ಯ ಕಿಂ ಮೇದ್ಯ ಜೀವಿತೇನ ವಿಶಾಂಪತೇ |
ವರ್ಧಂತೇ ಪಾಂಡವಾ ನಿತ್ಯಂ ವಯಂ ತು ಸ್ಥಿತವೃದ್ಧಯಃ ॥31॥

ರಾಜನೇ! ಧರ್ಮರಾಜನ ಐಶ್ವರ್ಯವನ್ನು ನಾನು ಆಕರ್ಷಣೆಯನ್ನು ಮಾಡದಿದ್ದರೆ ನಾನು ಬದುಕಿ ಏನು ಪ್ರಯೋಜನ? ಪಾಂಡವರು ನಿತ್ಯವೂ ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ. ನಮ್ಮ ವೃದ್ಧಿಯಾದರೋ ಸ್ಥಗಿತವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತಸಪ್ತತಿಮತೋಧ್ಯಾಯಃ ॥
॥ ದ್ಯೂತಪರ್ವಣಿ ನವಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು.
*****

ಎಪ್ಪತ್ತೆಂಟನೆಯ ಅಧ್ಯಾಯ
(ಶಕುನಿಯಿಂದ ದುರ್ಯೋಧನನ ಉತ್ತೇಜನ, ಧೃತರಾಷ್ಟ್ರನ ಸಮ್ಮತಿ. ಮತ್ತು ವಿದುರನ ಪ್ರೇಷಣೆ.)
ಶಕುನಿಃ
ಯಾಂ ತ್ವಮೇತಾಂ ಶ್ರಿಯಂ ದೃಷ್ಟ್ವಾ ಪಾಂಡುಪುತ್ರೇ ಯುಧಿಷ್ಠಿರೇ |
ತಪ್ಯಸೇ ತಾಂ ಹರಿಷ್ಯಾಮಿ ದ್ಯೂತೇನಾಹೂಯತಾಂ ಪರಮ್ ॥1॥
ಪಾಂಡುಪುತ್ರನಾದ ಧರ್ಮರಾಜನಲ್ಲಿ ಯಾವ ಈ ಸಂಪತ್ತನ್ನು ನೋಡಿ ನೀನು ಪರಿತಪಿಸುತ್ತಿದ್ದಿಯೋ ಆ ಸಂಪತ್ತನ್ನು ನಾನು ಹರಣಮಾಡುವೆನು. ಆದರೆ ನೀನು ದ್ಯೂತದ ಸಲುವಾಗಿ ಅವನನ್ನು ಕೇವಲ ಆಹ್ವಾನಿಸು.
ಅಗತ್ವಾ ಸಂಶಯಮಹಮಯುದ್ಧ್ವಾ ಚ ಚಮೂಮುಖೇ |
ಅಕ್ಷಾನ್ ಕ್ಷಿಪನ್ನಕ್ಷತಸ್ಸಾನ್ ವಿದ್ವಾನವಿದುಷೋ ಜಯೇ ॥2॥
ನಾನು ಯಾವ ಸಂಶಯವನ್ನೂ ಹೊಂದದೆ ಸೈನ್ಯದ ಅಗ್ರಭಾಗದಲ್ಲಿ ಯುದ್ಧವನ್ನು ಮಾಡದೆ ದಾಳಗಳನ್ನು ಉರುಳಿಸುತ್ತಾ ಗಾಯಗೊಳ್ಳದೆ ಅನಭಿಜ್ಞರಾದ ಅವರನ್ನು ಅಕ್ಷಹೃದಯವನ್ನು ತಿಳಿದ ನಾನು ಜಯಿಸುತ್ತೇನೆ.
ಗ್ಲಹಂ ಧನೂಂಷಿ ಮೇ ವಿದ್ಧಿ ಶರಾನಕ್ಷಾಂಶ್ಚ ಭಾರತ |
ಅಕ್ಷಾಣಾಂ ಹೃದಯಂ ಮೇ ಜ್ಯಾಂ ರಥಂ ವಿದ್ಧಿ ಸಮಾಸ್ತರಮ್ ॥3॥
ಎಲೈ ಭಾರತನೇ! ಪಣವನ್ನು ನನ್ನ ಧನುಸ್ಸೆಂದು ತಿಳಿ. ದಾಳಗಳು ನನ್ನ ಬಾಣಗಳು. ಅಕ್ಷಹೃದಯವು, ನನ್ನ ಜ್ಯಾ ಬಂಧನ. ಪಗಡೆಯ ಹಾಸನ್ನು ನನ್ನ ರಥವೆಂದು ತಿಳಿ.
ದುರ್ಯೋಧನಃ
ಅಯಮುತ್ಸಹತೇ ರಾಜನ್ ಶ್ರಿಯಮಾಹರ್ತುಮಕ್ಷವಿತ್ |
ದ್ಯೂತೇನ ಪಾಂಡುಪುತ್ರೇಭ್ಯಸ್ತತ್ ತುಭ್ಯಂ ತಾತ ರೋಚತಾಮ್ ॥4॥
ರಾಜನೇ! ಅಕ್ಷಜ್ಞನಾದ ಇವನು ದ್ಯೂತವನ್ನು ಆಡಿ ಪಾಂಡುಪುತ್ರರಿಂದ ಆ ಸಂಪತ್ತನ್ನು ಆಕರ್ಷಿಸಲು ಉತ್ಸಾಹವನ್ನು ಹೊಂದಿದ್ದಾನೆ. ತಂದೆಯೇ ಅದನ್ನು ನೀನು ಅನುಮೋದಿಸು.
ಧೃತರಾಷ್ಟ್ರಃ
ಸ್ಥಿತೋಸ್ಮಿ ಶಾಸನೇ ಭ್ರಾತುರ್ವಿದುರಸ್ಯ ಮಹಾಮತೇಃ |
ತೇನ ಸಂಗಮ್ಯ ವೇತ್ಸ್ಯಾಮಿ ಮಂತ್ರಸ್ಯಾಸ್ಯ ವಿನಿಶ್ಚಯಮ್ ॥5॥
ನಾನು ಮೇಧಾವಿಯಾದ ತಮ್ಮನಾದ ವಿದುರನ ಶಾಸನದಲ್ಲಿಯೇ ಯಾವಾಗಲೂ ಇದ್ದೇನೆ. ಅವನನ್ನು ಸಂಧಿಸಿ ಈ ಮಂತ್ರಾಲೋಚನೆಯ ಫಲವನ್ನು ತಿಳಿಯುವೆನು.
ದುರ್ಯೋಧನಃ
ಕೃಷ್ಣಾದಭ್ಯಧಿಕಃ ಸೋಽಪಿ ಬುದ್ಧ್ಯಾ ಕ್ಷತ್ತಾ ವಿಶಾಂಪತೇ |
ಕೇವಲಂ ಧರ್ಮಮೇವಾಹ ನ ತದ್ ವಿಜಯಸಾಧನಮ್ ॥6॥
ರಾಜನೇ! ಅವನು ಬುದ್ಧಿಯಲ್ಲಿ ಕೃಷ್ಣನಿಗಿಂತ ಶ್ರೇಷ್ಠನಾದವನು. ಆದರೆ ಕೇವಲ ಧರ್ಮವನ್ನು ಹೇಳುತ್ತಾನೆ. ಅದು ಜಯಕ್ಕೆ ಸಾಧನವಲ್ಲ.
ಜಯಶ್ಚ ಧರ್ಮತಪನಸ್ತಥೈವ ಭರತರ್ಷಭ |
ತಸ್ಮಾದ್ ವಿನಯತೋ ಜೇತಾ ತಾವುಭೌ ನ ವಿರೋಧಿನೌ ॥7॥
ಯುದ್ಧದಲ್ಲಿ ಜಯವು ಅಹಿಂಸೆಯೆಂಬ ಧರ್ಮವನ್ನು ಪೀಡಿಸುತ್ತದೆ. ಅದರಂತೆ ಅಹಿಂಸಾರೂಪವಾದ ಧರ್ಮವು ಯುದ್ಧದಲ್ಲಿ ಜಯವನ್ನು ಪೀಡಿಸುತ್ತದೆ. ಅವೆರಡೂ ಪರಸ್ಪರ ವಿರೋಧಿಗಳು. ಆದ್ದರಿಂದ ವಿಶೇಷವಾದ ರೀತಿಯಿಂದ ಪ್ರವೃತ್ತವಾದವನು ವಿರೋಧಿಗಳಾದ ಅವೆರಡನ್ನು ಜಯಿಸುವನು. (ದ್ಯೂತದಿಂದ ಜಯವನ್ನು ಸಂಪಾದಿಸಿದರೆ ಹಿಂಸೆಯಿಲ್ಲವಾದ್ದರಿಂದ ಅಹಿಂಸೆಯ ಪೀಡೆಯೂ ಆಗುವುದಿಲ್ಲ. ಮತ್ತು ಪಾಂಡವರ ಸಂಪತ್ತಿನ ಆಕರ್ಷಣೆ ಎಂಬ ಜಯವೂ ಉಂಟಾಗುತ್ತದೆ.)
ನಿಹನಿಷ್ಯತಿ ತೇ ಬುದ್ಧಿಂ ವಿದುರೋ ಮುಕ್ತಸಂಶಯಃ |
ಪಾಂಡವಾನಾಂ ಹಿತೇ ಯುಕ್ತೋ ನ ತಥಾ ಮಮ ಕೌರವ ॥8॥
ಸಂಶಯರಹಿತನಾದ ವಿದುರನು ನಿನ್ನ ಬುದ್ಧಿಯನ್ನು ಹಾಳುಮಾಡುವನು. ಕೌರವನೇ! ಅವನು ಪಾಂಡವರ ಹಿತದಲ್ಲಿ ಆಸಕ್ತನಾಗಿರುವಂತೆ ನನ್ನ ಹಿತದಲ್ಲಿ ಆಸಕ್ತನಾಗಿಲ್ಲ.
ನಾರಭೇತ್ ಪರಸಾಮರ್ಥ್ಯಾತ್ ಪುರುಷಃ ಕಾರ್ಯಮಾತ್ಮನಃ |
ಮತಿಸಾಮ್ಯಂ ದ್ವಯೋರ್ನಾಸ್ತಿ ಕಾರ್ಯೇಷು ಕುರುನಂದನ ॥9॥
ಕುರುನಂದನನೇ! ಮನುಷ್ಯನು ಇನ್ನೊಬ್ಬನ ಬಲದಿಂದ ಎಂದೂ ತನ್ನ ಕಾರ್ಯವನ್ನು ಆರಂಭಿಸಬಾರದು. ಯವುದೇ ಕಾರ್ಯದಲ್ಲಿ

ಇಬ್ಬರಿಗೆ ಒಂದೇ ವಿಧವಾದ ಬುದ್ಧಿಯು ಇರುವುದಿಲ್ಲ.
ಭಯಂ ಪರಿಹರನ್ ಮತ್ತ ಆತ್ಮಾನಂ ಪರಿಪಾಲಯನ್ |
ವರ್ಷಾಸು ಕ್ಲಿನ್ನವಟವತ್ ತಿಷ್ಠನ್ ನೈವಾವಸೀದತಿ ||10||
ದುರ್ಯೋಧನನು ಕೆಟ್ಟವನು ಧೃತರಾಷ್ಟ್ರನು ಏನುಮಾಡುತ್ತಾನೆ ಎಂದು ನನ್ನಿಂದ ಉಂಟಾಗುವ ಭಯವನ್ನು ಪರಿಹರಿಸಿಕೊಂಡು ನಿನ್ನನ್ನು ರಕ್ಷಣೆಮಾಡಿಕೊಂಡು ಮಳೆಗಾಲದಲ್ಲಿ ತೊಯ್ದುಹೋದ ವಟವೃಕ್ಷದಂತೆ ಇದ್ದರೆ ನಿನಗೆ ಯಾವ ನಾಶವೂ ಉಂಟಾವುದಿಲ್ಲ.
ನ ವ್ಯಾಧಯೋ ನಾಪಿ ಯಮಃ ಶ್ರೇಯಃಪ್ರಾಪ್ತಿಂ ಪ್ರತೀಕ್ಷತೇ |
ಯಾವದೇವ ಭವೇತ್ ಕಲ್ಯಸ್ತಾವಚ್ಛ್ರೇಯಃ ಸಮಾಚರೇತ್ ||11||
ವ್ಯಾಧಿಗಳಾಗಲೀ ಅಥವಾ ಮೃತ್ಯುವಾಗಲೀ ಶ್ರೇಯಸ್ಸಿನ ಪ್ರಾಪ್ತಿಗಾಗಿ ಕಾಯುವುದಿಲ್ಲ. ಮನುಷ್ಯನು ಎಲ್ಲಿಯವರೆಗೆ ಸಮರ್ಥನಾಗಿರುತ್ತಾನೆಯೋ ಅಷ್ಟರೊಳಗೆ ತನ್ನ ಶ್ರೇಯಸ್ಸನ್ನು ಸಾಧಿಸಿಕೊಳ್ಳಬೇಕು.
ಧೃತರಾಷ್ಟ್ರಃ
ಸರ್ವಥಾ ಪುತ್ರ ಬಲಿಭಿರ್ವಿಗ್ರಹಸ್ತೈರ್ನ ರೋಚತೇ |
ವೈರಂ ವಿಕೋಶಂ ಸೃಜತಿ ತದ್ವೈ ಶಸ್ತ್ರಮನಾಯಸಮ್ ||12||
ಪುತ್ರನೇ! ಬಲಿಷ್ಠರಾದ ಪಾಂಡವರ ಜೊತೆಯಲ್ಲಿ ವಿರೋಧವನ್ನು ನಾನು ಸರ್ವಥಾ ಇಷ್ಟಪಡುವುದಿಲ್ಲ. ವೈರವು ಬೊಕ್ಕಸವನ್ನು ಬರಿದುಮಾಡುತ್ತದೆ. ಅದು ಕಬ್ಬಿಣದಿಂದ ಮಾಡಲ್ಪಡದ ಶಸ್ತ್ರ.
ಅನರ್ಥಮರ್ಥಂ ಮನ್ಯಸೇ ರಾಜಪುತ್ರ
ಸಂಗ್ರಂಥಿತಂ ಕಲಹಂ ಚಾಪಿ ಘೋರಮ್ |
ತದ್ವೈ ಪ್ರವೃತ್ತಂ ತು ಯಥಾಕಥಂಚಿತ್
ವಿಮೋಕ್ಷಯೇಚ್ಚಾಪ್ಯಸಿಸಾಯಕಾಂಶ್ಚ ||13||
ರಾಜಪುತ್ರನೇ! ಅನರ್ಥವನ್ನು ಅರ್ಥವೆಂದು ಭಾವಿಸುತ್ತಿದ್ದೀಯೆ ಘೋರವಾದ ಕಲಹವನ್ನು ಗಂಟುಹಾಕಿದ್ದೀಯೆ. ಯಾವುದಾದರೂ ರೀತಿಯಲ್ಲಿ ದ್ಯೂತವು ಪ್ರವೃತ್ತವಾದರೆ ಅದು ಖಡ್ಗಗಳನ್ನು ಮತ್ತು ಬಾಣಗಳನ್ನು ಪ್ರಯೋಗಿಸುವಂತೆ ಮಾಡುತ್ತದೆ.
ದುರ್ಯೋಧನಃ
ದ್ಯೂತೇ ಪುರಾಣೈರ್ವ್ಯವಹಾರಃ ಪ್ರಣೀತಃ
ತತ್ರಾತ್ಯಯೋ ನಾಸ್ತಿ ನ ಸಂಪ್ರಹಾರಃ |
ತದ್ ರೋಚತಾಂ ತೇ ಶಕುನೇರ್ವಾಕ್ಯಮದ್ಯ
ಸಭಾಂ ಕ್ಷಿಪ್ರಂ ತ್ವಮಿಹಾಜ್ಞಾಪಯಸ್ವ ||14||
ಪ್ರಾಚೀನರು ದ್ಯೂತದಿಂದ ವ್ಯವಹರಿಸುವುದನ್ನು ಅಂಗೀಕರಿಸಿದ್ದಾರೆ. ಅಲ್ಲಿ ಧರ್ಮದ ಅತಿಕ್ರಮವು ಇಲ್ಲ. ಶಸ್ತ್ರ ಪ್ರಹಾರಗಳೂ ಇಲ್ಲ. ಆದ್ದರಿಂದ ಈ ದಿನ ಶಕುನಿಯ ಮಾತನ್ನು ಒಪ್ಪಿ ಬೇಗ ಸಭೆಯನ್ನು ನಿರ್ಮಾಣಮಾಡಲು ನೀನು ಆದೇಶವನ್ನು ಕೊಡು.
ಸ್ವರ್ಗದ್ವಾರಂ ದೀವ್ಯತಾಂ ನೋಽವಶಿಷ್ಟಂ
ತದ್ವರ್ತಿನಾಂ ಚಾಪಿ ತಥೈವ ಯುಕ್ತಮ್ |
ಭವೇದೇವಂ ಹ್ಯಾತ್ಮನಾ ತುಲ್ಯಮೇವ
ದುರೋದರಂ ಪಾಂಡವೈಸ್ತ್ವಂ ಕುರುಷ್ವ ||15||
ದ್ಯೂತವನ್ನು ಆಡುವ ನಮಗೆ ಸ್ವರ್ಗದ್ವಾರವು ಮಾತ್ರ ಉಳಿದಿದೆ. ನಮ್ಮ ಸಮೀಪದಲ್ಲಿ ಇರುವವರಿಗೂ ಹಾಗೆಯೇ ಆಗುತ್ತದೆ. ನಮಗೆ ಸಮಾನವಾದ ಶ್ರೇಯಸ್ಸೇ ಅವರಿಗೂ ಉಂಟಾಗುತ್ತದೆ. ಆದ್ದರಿಂದ ಪಾಂಡವರ ಜೊತೆಯಲ್ಲಿ ದ್ಯೂತಕ್ಕೆ ಆದೇಶವನ್ನು ನೀಡು.
ಧೃತರಾಷ್ಟ್ರಃ
ವಾಕ್ಯಂ ನ ಮೇ ರೋಚತೇ ಯತ್ ತ್ವಯೋಕ್ತಂ
ಯತ್ ತೇ ಪ್ರಿಯಂ ಕ್ರಿಯತಾಂ ತನ್ನರೇಂದ್ರ |
ಪಶ್ಚಾತ್ ತ್ವಂ ತಪ್ಯಸೇ ಚಾತಿಕ್ರಮ್ಯ
ವಾಕ್ಯಂ ನ ಹೀದೃಶಂಭಾವಿ ಚಾದ್ಯ ಪ್ರಯುಕ್ತಮ್ ||16||
ನೀನು ಹೇಳಿದ ಯಾವ ಮಾತೂ ನನಗೆ ಹಿಡಿಸುವುದಿಲ್ಲ. ನರೇಂದ್ರನೇ! ನಿನಗೆ ಹೇಗೆ ಇಷ್ಟವೋ ಹಾಗೆ ಮಾಡು. ನೀನು ನನ್ನ ಮಾತನ್ನು ಮೀರಿ ಪಶ್ಚಾತ್ತಾಪಪಡುತ್ತೀಯೆ. ಈ ದಿನ ನೀನು ಆಡಿದ ಮಾತುಗಳು ಹೀಗೆ ಇರಬಾರದಾಗಿದ್ದಿತು.
ದೃಷ್ಟಂ ಹ್ಯೇತದ್ ವಿದುರೇಣೈವ ಸರ್ವಂ
ವಿಪಶ್ಚಿತಾ ಬುದ್ಧಿವಿದ್ಯಾನುಗೇನ |
ತದೇವೈತದಯಶಸ್ಯಾಭ್ಯುಪೈತಿ
ಮಹದ್ ಭಯಂ ಕ್ಷತ್ರಿಯಬೀಜಘಾತಿ ||17||
ಇವೆಲ್ಲವನ್ನೂ ಜ್ಞಾನಿಯೂ ಬುದ್ಧಿ ವಿದ್ಯಾವಿಶಾರದನೂ ಆದ ವಿದುರನು ಗಮನಿಸಿದ್ದಾನೆ. ಎಲೈ ಕೀರ್ತಿನಾಶಕನೇ! ಕ್ಷತ್ರಿಯ ವಂಶನಾಶಕವಾದ ಈ ಮಹಾಭಯವು ಈಗಲೇ ಉಪಸ್ಥಿತವಾಗಿದೆ.
ವೈಶಂಪಾಯನಃ
ಇತ್ಯೇವಮುಕತ್ವ ಧೃತರಾಷ್ಟ್ರೋ ಮನೀಷೀ
ದೈವಂ ಮತ್ವಾ ಪರಮಂ ದುಸ್ತರಂ ಚ |
ಶಶಾಸೋಚ್ಚೈಃ ಪುರುಷಾನ್ ಪುತ್ರವಾಕ್ಯೇ

ಸ್ಥಿತೋ ರಾಜಾ ದೈವಸಮ್ಮೂಢಚೇತಾಃ ॥18॥
ವಿವೇಕಿಯಾದ ಧೃತರಾಷ್ಟ್ರನು ಹೀಗೆ ಮಾತನಾಡಿ ದೈವವು ಪ್ರಬಲವೆಂದೂ ದುಸ್ತರವೆಂದೂ ತಿಳಿದು ಪುತ್ರವಾಕ್ಯವನ್ನು ಸ್ವೀಕರಿಸಿ ದುರದೃಷ್ಟದಿಂದ ಸಂಮೋಹಕ್ಕೆ ಒಳಗಾದ ಮನಸ್ಸುಳ್ಳವನಾಗಿ ತನ್ನ ಸೇವಕರನ್ನು ಕುರಿತು ಉಚ್ಚಸ್ವರದಿಂದ ಶಾಸನವನ್ನು ಮಾಡಿದನು.
ಸಹಸ್ರಸ್ಥೂಣಾಂ ಹೇಮವೈಡೂರ್ಯಚಿತ್ರಾಂ
ಶತದ್ವಾರಾಂ ಸ್ಫಾಟಿಕತೋರಣಾಗ್ರ್ಯಾಮ್ |
ಸಭಾಮಗ್ರ್ಯಾಂ ಕ್ರೋಶಮಾತ್ರಾಯತಾಂ ಮೇ
ಏತದ್ವಿಸ್ತಾರಾಮಾಶು ಕುರ್ವಂತು ಯುಕ್ತಾಃ ॥19॥
ಸಹಸ್ರಸ್ತಂಭಗಳಿರುವ ಸ್ವರ್ಣವೈಡೂರ್ಯದಿಂದ ಅಲಂಕೃತವಾದ ನೂರುದ್ವಾರಗಳಿರುವ ಶ್ರೇಷ್ಠವಾದ ಸ್ಫಟಿಕ ತೋರಣಗಳನ್ನು ಹೊಂದಿರುವ ಒಂದು ಕ್ರೋಶವಿಸ್ತಾರವಾದ ಶ್ರೇಷ್ಠವಾದ ಸಭೆಯನ್ನು ನನ್ನ ಸಲುವಾಗಿ ನನ್ನ ಅಧೀನರಾದ ನೀವು ಬೇಗೆ ನಿರ್ಮಿಸಿ.
ಶ್ರುತ್ವಾ ತಸ್ಯ ತ್ವರಿತಾ ನಿರ್ವಿಶಂಕಾಃ
ಪ್ರಾಜ್ಞಾಃ ತಸ್ಯ ತ್ವರಿತಾ ನಿರ್ವಿಶಂಕಾಃ |
ಪ್ರಾಜ್ಞಾ ದಕ್ಷಾಸ್ತಾಂ ತಥಾ ಚಕ್ರುರಾಜ್ಞಾಮ್ |
ಸರ್ವದ್ರವ್ಯಾಣ್ಯುಪಜಹ್ರುಃ ಸಭಾಯಾಃ
ಸಹಸ್ರಶಃ ಶಿಲ್ಪಿನಶ್ಚಾಪಿ ಯುಕ್ತಾಃ ॥20॥
ಅವನ ಅಜ್ಞೆಯನ್ನು ಕೇಳಿ ಅವನ ಅಧೀನರಾದ ಶಿಲ್ಪಿಗಳು ಯಾವ ಶಂಕೆಯೂ ಇಲ್ಲದೆ ಅಧಿನರಾದ ಪ್ರಾಜ್ಞರೂ ದಕ್ಷರೂ ಆದ ಸಭೆಗೆ ಬೇಕಾದ ಎಲ್ಲಾ ದ್ರವ್ಯಗಳನ್ನೂ ತಂದು ಸಹಸ್ರಾರು ಶಿಲ್ಪಿಗಳನ್ನು ನಿಯೋಜಿಸಿ ಅವನ ಆಜ್ಞೆಯನ್ನು ಶೀಘ್ರವಾಗಿ ನೆರವೇರಿಸಿದರು.
ಕಾಲೇನಾಲ್ಪೇನಾಥ ನಿಷ್ಠಾಂ ಗತಾಂ ತಾಂ
ಸಭಾಂ ರಮ್ಯಾಂ ಬಹುರತ್ನಾಂ ವಿಚಿತ್ರಾಮ್ |
ಚಿತ್ರೈರ್ಹೈಮೈರಾಸನೈರಭ್ಯುಪೇತಾಮ್
ಆಚಖ್ಯುಸ್ತೇ ತಸ್ಯ ರಾಜ್ಞಃ ಪ್ರತೀತಾಃ ॥21॥
ಅವರು ಅಲ್ಪ ಕಾಲದಲ್ಲಿಯೇ ಪೂರ್ಣಗೊಂಡ ಆ ಸುಂದರವಾದ ಬಹುರತ್ನಚಿತ್ರಿತವಾದ ವಿಚಿತ್ರವಾದ ಸುವರ್ಣ ಆಸನಗಳಿಂದ ಕೂಡಿದ ಆ ಸಭೆಯನ್ನು ನಿರ್ಮಿಸಿ ರಾಜನ ಬಳಿಗೆ ಬಂದು ಸಂತೋಷದಿಂದ ಅದನ್ನು ನಿವೇದಿಸಿದರು.
ತತೋ ವಿದ್ವಾನ್ ವಿದುರಂ ಮಂತ್ರಿಮುಖ್ಯಮ್
ಉವಾಚೇದಂ ಧೃತರಾಷ್ಟ್ರೋ ನರೇಂದ್ರಃ |
ಯುಧಿಷ್ಠಿರಂ ರಾಜಪುತ್ರಂ ಹಿ ಗತ್ವಾ
ಮದ್ವಾಕ್ಯೇನ ಕ್ಷಿಪ್ರಮಿಹಾನಯಸ್ವ ॥22॥
ಅನಂತರ ವಿದ್ವಾಂಸನಾದ ಧೃತರಾಷ್ಟ್ರರಾಜನು ಮಂತ್ರಿಶ್ರೇಷ್ಠನಾದ ವಿದುರನನ್ನು ಕರೆದು ನನ್ನ ಆದೇಶದಂತೆ ರಾಜಪುತ್ರನಾದ ಯುಧಿಷ್ಠಿರನ ಬಳಿಗೆ ಹೋಗಿ ಶೀಘ್ರವಾಗಿ ಅವನನ್ನು ಇಲ್ಲಿಗೆ ಕರೆದುಕೊಂಡು ಬಾ ಎಂದು ಹೇಳಿದನು.
ಸಭೇಯಂ ಮೇ ಬಹುರತ್ನಾ ವಿಚಿತ್ರಾ |
ಶಯ್ಯಾಸನೈರುಪಪನ್ನಾ ಮಹಾರ್ಹೈಃ |
ಸಾ ದೃಶ್ಯತಾಂ ಭ್ರಾತೃಭಿಃ ಸಾರ್ಧಮೇತ್ಯ
ಸುಹೃದ್ದ್ಯೂತಂ ವರ್ತತಾಮತ್ರ ಚೈತ್ಯ ॥23॥
ಈ ನನ್ನ ಸಭೆಯು ಅನೇಕ ರತ್ನಗಳಿಂದ ಚಿತ್ರಿತವಾಗಿದೆ. ಬೆಲೆಬಾಳುವ ಶಯ್ಯಾಸನಗಳಿಂದ ಕೂಡಿದೆ. ತಮ್ಮಂದಿರ ಜೊತೆಯಲ್ಲಿ ಬಂದು ಆ ಸಭೆಯನ್ನು ನೋಡು ಇಲ್ಲಿಗೆ ಬಂದ ಮೇಲೆ ಸುಹೃದ್‌ದ್ಯೂತವು ಜರುಗಲಿ.
ವೈಶಂಪಾಯನಃ
ಮತಮಾಜ್ಞಾಯ ಪುತ್ರಸ್ಯ ಧೃತರಾಷ್ಟ್ರಃ ಪ್ರತಾಪವಾನ್ |
ಮತ್ವಾ ಚ ದುಸ್ತರಂ ದೈವಮೇತದ್ರಾಜಾ ಚಕಾರ ಹ ॥24॥
ಪ್ರತಾಪಶಾಲಿಯಾದ ಧೃತರಾಷ್ಟ್ರನು ಮಗನ ಅಭಿಪ್ರಾಯವನ್ನು ತಿಳಿದು ದೈವವು ದುಸ್ತರವೆಂದು ತಿಳಿದು,ಹೀಗೆ ಮಾಡಿದನು.
ಅಗ್ರಜೇನ ತಥೋಕ್ತಸ್ತು ವಿದುರೋ ವಿದುಷಾಂ ವರಃ |
ನಾಭ್ಯನಂದದ್ ವಚೋ ಭ್ರಾತುರ್ವಚನಂ ಚೇದಮಬ್ರವೀತ್ ॥25॥
ಅಣ್ಣನಿಂದ ಹೀಗೆ ಹೇಳಲ್ಪಟ್ಟ ಜ್ಞಾನಿಗಳಲ್ಲಿ ಶ್ರೇಷ್ಠನಾದ ವಿದುರನು ಅಣ್ಣನ ಮಾತನ್ನು ಕೇಳಿ ಸ್ವಲ್ಪವೂ ಸಂತೋಷಪಡದೆ ಹೀಗೆ ಮಾತನಾಡಿದನು.
ನಾಭಿನಂದಾಮಿ ನೃಪತೇ ಪ್ರೇಷಣಂ ತೇ
ಮೈವಂ ಕೃಥಾಃ ಕುಲನಾಶಾದ್ ಬಿಭೇಮಿ |
ಪುತ್ರೈರ್ಭಿನ್ನೈಃ ಕಲಹಸ್ತೇ ಧ್ರುವಂ ಸ್ಯಾತ್
ಏವಂ ಶಂಕೇ ದ್ಯೂತಕೃತೇ ನರೇಂದ್ರ ॥26॥
ರಾಜನೇ! ನೀನು ನನ್ನನ್ನು ಕಳುಹಿಸುತ್ತಿರುವುದನ್ನು ನಾನು ಇಷ್ಟಪಡುವುದಿಲ್ಲ. ನೀನು ಹೀಗೆ ಮಾಡಬೇಡ. ನಾನು ಕುಲನಾಶವು ಉಂಟಾಗುವುದೆಂದು ಹೆದರುತ್ತೇನೆ. ನರೇಂದ್ರನೇ! ದ್ಯೂತದ ನಿಮಿತ್ತದಿಂದ ವಿರೋಧ ಉಂಟಾದರೆ ನಿನ್ನ ಪುತ್ರರಲ್ಲಿ ನಿಶ್ಚಿತವಾಗಿ ಕಲಹವು ಉಂಟಾಗುತ್ತದೆ ಎಂದು ನಾನು ಶಂಕಿಸುತ್ತೇನೆ.

ಧೃತರಾಷ್ಟ್ರಃ
ನೈವ ಕ್ಷತ್ತಃ ಕಲಹಸ್ತಸ್ಯ ವೈ ಮೇ
ನ ಚೇದ್ ದೈವಂ ಪ್ರತಿಲೋಮಂ ಭವಿಷ್ಯತ್ |
ಧಾತ್ರಾ ತು ದಿಷ್ಟಸ್ಯ ವಶೇ ಕಿಲೇದಂ
ಸರ್ವಂ ಜಗಚ್ಚೇಷ್ಟತೇ ನ ಸ್ವತಂತ್ರಮ್ ॥27॥
ವಿದುರನೇ! ದೈವವು ಪ್ರತಿಕೂಲವಾಗಿಲ್ಲದಿದ್ದರೆ ನನಗೂ ಮತ್ತು ಧರ್ಮರಾಜನಿಗೂ ಕಲಹವು ಉಂಟಾಗುವುದಿಲ್ಲ, ವಿಧಿಯ ವಶದಲ್ಲಿ ಎಲ್ಲಾ ಜಗತ್ತು ನಡೆಯುವುದಷ್ಟೇ? ಯಾರೂ ಸ್ವತಂತ್ರರಲ್ಲ.
ತದದ್ಯ ವಿದುರ ಪ್ರಾಪ್ಯ ರಾಜಾನಂ ಮಮ ಶಾಸನಾತ್ |
ಕ್ಷಿಪ್ರಮಾನಯ ದುರ್ಧರ್ಷಂ ಕುಂತೀಪುತ್ರಂ ಯುಧಿಷ್ಠಿರಮ್ ॥28॥
ವಿದುರನೇ! ಆದ್ದರಿಂದ ನನ್ನ ಆಜ್ಞೆಯಂತೆ ನೀನು ರಾಜನಾದ ಕುಂತೀ ಪುತ್ರನಾದ ಯುಧಿಷ್ಠಿರನ ಬಳಿಗೆ ಹೋಗಿ ಬಲಾತ್ಕರಿಸಲು ಅಶಕ್ಯನಾದ ಅವನನ್ನು ಶೀಘ್ರವಾಗಿ ಇಲ್ಲಿಗೆ ಕರೆದು ಕೊಂಡು ಬಾ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟಸಪ್ತತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ದಶಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು.
*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ವಿದುರಸ್ತು ತತೋ ಗತ್ವಾ ಧರ್ಮರಾಜಮಥಾಹ್ವಯತ್ |
ಭ್ರಾತೃಭಿರ್ವಾರ್ಯಮಾಣೋಽಪಿ ಕೃಷ್ಣಯಾ ಚ ಸ ಧರ್ಮರಾಟ್ ॥316॥
ಸಾರ್ಧಂ ಮಾತ್ರಾ ಭ್ರಾತೃಭಿಶ್ಚ ಕೃಷ್ಣಯಾ ಚ ಯಯೌ ದ್ರುತಂ ॥317॥
ಬಳಿಕ ವಿದುರ ಹೋಗಿ ಧರ್ಮರಾಜನನ್ನು ಕರೆದ. ಸೋದರರೂ ದ್ರೌಪದಿಯೂ ಬೇಡವೆಂದು ತಡೆದರೂ ಧರ್ಮರಾಜ ತಮ್ಮಂದಿರೊಡಗೂಡಿ ದ್ರೌಪದೀ ಸಹಿತನಾಗಿ ಬೇಗನೆ ಹಸ್ತಿನಾವತಿಗೆ ತೆರಳಿದ.
ಜ್ಯೇಷ್ಠಾಜ್ಞಯೈವ ವಿದುರ ಆಹ್ವಯನ್ನಪಿ ಧರ್ಮಜಂ |
ನಾಗಂತವ್ಯಮಿತಿ ಪ್ರಾಹ ದೋಷಾನುಕಕ್ಷತ್ವಕ್ಷಜಾನ್‌ಬಹೂನ್ ॥318॥
ಹಿರಿಯನಾದ ಧೃತರಾಷ್ಟ್ರನ ಅಪ್ಪಣೆಯಂತೆ ವಿದುರ ಧರ್ಮರಾಜನನ್ನು ಜೂಜಿಗೆ ಬರಹೇಳಿದರೂ ಜೂಜಿನಲ್ಲಿ ಬಹಳ ಅನರ್ಥ ಉಂಟೆಂದು ಹೇಳುತ್ತ ಬರಬೇಡವೆಂದೂ ಉಪದೇಶಿಸಿದ.
ಇತೀಹ ದೋಷಸಂಚಯಸ್ತಥಾ ಚ ತೇ ಪಿತುರ್ವಚಃ |
ಸಮೀಕ್ಷ್ಯ ತದ್‌ದ್ವಯಂ ಸ್ವಯಂ ಕುರುಷ್ವ ಕಾರ್ಯಮಾತ್ಮನಃ ॥319॥
`ಹೀಗೆ ಜೂಜಿನಲ್ಲಿ ಅನರ್ಥಗಳು ಬಹಳ ಇವೆ. ಆದರೂ ಬರಲೇಬೇಕೆಂದು ದೊಡ್ಡಪ್ಪನ ಆಜ್ಞೆಯೂ ಇದೆ. ಇವೆರಡನ್ನೂ ನೀನು ಸ್ವತಃ ಚೆನ್ನಾಗಿ ಆಲೋಚಿಸಿ ನಿನಗೆ ಯೋಗ್ಯವಾದ ಕಾರ್ಯದಲ್ಲಿ ಪ್ರವೃತ್ತಿ ಮಾಡು'.
ಇತೀರಿತೋಽಪಿ ಪಾಂಡವೋ ಯಯೌ ಕಲಿಪ್ರವೇಶಿತಃ |
ವಿಚಿತ್ರವೀರ್ಯಜಂ ಚ ತಂ ಸಮಾಸದತ್ ಸಸೈನಿಕಃ॥320॥
ವಿದುರ ಹೀಗೆ ಹೇಳಿದರೂ ಧರ್ಮರಾಜ ಕಲ್ಯಾವೇಶದಿಂದ ಸೈನ್ಯ ಸಮೇತನಾಗಿ ಧೃತರಾಷ್ಟ್ರನ ಬಳಿಗೆ ಬಂದ.
ಕಲ್ಯಾವೇಶಾನ್ನೃಪತಿಃ ಪ್ರತಿಜಜ್ಞೇ ಪೂರ್ವಮೇವ ಧರ್ಮಾತ್ಮಾ |
ಆಹೂತೋ ದ್ಯೂತರಣಾನ್ನಿವರ್ತೇಯಂ ನೈವ ವಾರಿತೋಽಪೀತಿ॥321॥
ಕಲ್ಯಾವೇಶದಿಂದ ಧರ್ಮಾತ್ಮನಾದ ಧರ್ಮರಾಜ ಹಿಂದೆ ಪ್ರತಿಜ್ಞೆ ಮಾಡಿದ್ದ, `ಜೂಜಿನ ಯುದ್ಧಕ್ಕೆ ಕರೆದರೆ ಯಾರು ತಡೆದರೂ ನಾನು ಹಿಮ್ಮೆಟ್ಟುವುದಿಲ್ಲ' ಎಂದು.
ತೇನಾಽಯಾತ್ ಸ್ವಸುಹೃದ್ಭಿ-
ರ್ನಿರ್ವಾರ್ಯಮಾಣೋ ನಾಗಪುರಮಾಶು |
ನ ಹಿ ಧರ್ಮೋ ದ್ಯೂತಕೃತೋ
ವಿಶೇಷತಃ ಕ್ಷತ್ರಿಯಸ್ಯ ಲೋಕಗುರೋಃ ॥322॥
`ಜೂಜಾಡುವವನಿಗೆ ಯಾವ ಧರ್ಮವೂ ಇರುವುದಿಲ್ಲ. ವಿಶೇಷವಾಗಿ ಲೋಕಕ್ಕೆ ಧರ್ಮಾಚಾರವನ್ನು ತೋರಿಸಿಕೊಡುವ ಕ್ಷತ್ರಿಯನಿಗೆ ಜೂಜು ಸರ್ವಥಾ ಧರ್ಮವಲ್ಲ' ಎಂದು ಬಂಧುಮಿತ್ರರು ತಡೆಯುತ್ತಿದ್ದರೂ ಧರ್ಮರಾಜ ಹಸ್ತಿನಾಪುರಕ್ಕೆ ಆಗಮಿಸಿದ.
ವೈಚಿತ್ರವೀರ್ಯತನಯೇ ತು ಪಾಂಡುಪುತ್ರಾಃ
ಸಂಭಾವಿತಾಸ್ತಮುಪ ಚ ನ್ಯವಿಶನ್ ನಿಶಾಂ ತಾಮ್ |
ಪ್ರಾತಶ್ಚ ಭೀಷ್ಮಮುಖರಾಃ ಸಕಲಾಶ್ಚ ಭೂಪಾ
ಆಸೇದುರಾಶು ಚ ಸಭಾಂ ಸಹ ಪಾಂಡುಪುತ್ರೈಃ ॥323॥
ಧೃತರಾಷ್ಟ್ರನಿಂದ ಆದರಿಸಲ್ಪಟ್ಟ ಪಾಂಡವರು ಅಂದು ರಾತ್ರಿ ಅವನ ಬಳಿ ವಾಸ ಮಾಡಿದರು. ಬೆಳಿಗ್ಗೆ ಅವರೂ, ಜೊತೆಗೆ ಭೀಷ್ಮಾದಿಗಳೂ ಎಲ್ಲ ರಾಜರೂ ಸಭಾಂಗಣವನ್ನು ಹೊಕ್ಕರು.
ವೈಚಿತ್ರವೀರ್ಯನೃಪತಿರ್ವಿದುರಾನ್ವಿತೋಽಸ್ಯ

ಗಾಂಧಾರರಾಜಸಹಿತಾಸ್ತನಯಾಃ ಸಕರ್ಣಾಃ |
ಪ್ರಾಪ್ತಾಃ ಸಭಾತಳಮಥಾಹ್ವಯದತ್ರ ಧರ್ಮ-
ರಾಜಂ ಸುತಃ ಸುಬಲಕಸ್ಯ ಸ ದೇವನಾಯ ||324||
ರಾಜಾ ಧೃತರಾಷ್ಟ್ರ ವಿದುರ ಸಮೇತನಾಗಿ ಸಭಾಂಗಣಕ್ಕೆ ಬಂದ. ಕೌರವರೂ ಶಕುನಿ ಸಮೇತರಾಗಿ ಕರ್ಣನೊಂದಿಗೆ ಬಂದರು. ಶಕುನಿ ಧರ್ಮರಾಜನನ್ನು ಪಗಡೆಯಾಟಕ್ಕೆ ಕರೆದ.
ಸರ್ವಾಂಶ್ಚ ತತ್ರ ಕಲಿರಾವಿಶದೇವ ಭೀಮ
ಪೂರ್ವಾನ್ವಿನೈವ ಚತುರಃ ಸಪೃಥಾಂ ಚ ಕೃಷ್ಣಾಂ |
ಕ್ಷತ್ತಾರಮೇವ ಚ ತತೋ ಹಿ ಭೀಷ್ಮಮುಖ್ಯೈ-
ಸ್ತೇ ವಾರಿತಾಃ ಕುಲವಿನಾಶನಕರ್ಮವೃತ್ತಾಃ ||325||
ಅಲ್ಲಿ ಭೀಮ ಮುಂತಾದ ನಾಲ್ವರು ಪಾಂಡವರು ಕುಂತಿ ದ್ರೌಪದಿ ವಿದುರ ಹೀಗೆ ಏಳು ಮಂದಿಯನ್ನು ಹೊರತು ಇನ್ನೆಲ್ಲರನ್ನೂ ಕಲಿಯೆ ಪ್ರವೇಶಿಸಿದ್ದ. ಅದರಿಂದ ಕುಲನಾಶಕವಾದ ಕೃತ್ಯಕ್ಕೆ ಹೊರಟಿದ್ದ ಅವರನ್ನು ಭೀಷ್ಮ ಮುಂತಾದವರು ಯಾರೂ ತಡೆಯಲಿಲ್ಲ.
* * * *
ಎಪ್ಪತ್ತೊಂಭತ್ತನೆಯ ಅಧ್ಯಾಯ
(ಪರಿವಾರಸಹಿತನಾದ ಯುಧಿಷ್ಠಿರನಿಂದ ಹಸ್ತಿನಾಪುರಗಮನ ಮತ್ತು ಅಲ್ಲಿ ವಿಶ್ರಾಂತಿ.)
ವೈಶಂಪಾಯನಃ
ತತಃ ಪ್ರಾಯಾದ್ ವಿದುರೋಽಶ್ವೈರುದಾರೈ-
ರ್ಮಹಾಜವೈರ್ಬಲಿಭಿಃ ಸಾಧುದಾಂತೈಃ |
ಬಲಾನ್ನಿಯುಕ್ತೋ ಧೃತರಾಷ್ಟ್ರೇಣ ರಾಜ್ಞಾ
ಮನೀಷಿಣಾಂ ಪಾಂಡವಾನಾಂ ಸಕಾಶಮ್ ||1||
ಅನಂತರ ವಿದುರನು ರಾಜನಾದ ಧೃತರಾಷ್ಟ್ರನ ಅಜ್ಞೆಗೆ ಬಲಾತ್ಕಾರದಿಂದ ಒಳಗಾದವನಾಗಿ ರಾಜನಾದ ಶ್ರೇಷ್ಠವಾದ ಮನೋಜವವನ್ನುಳ್ಳ ಬಲಿಷ್ಠವಾದ ಪಳಗಿದ ಒಳ್ಳೆಯ ಕುದುರೆಗಳಿಂದ ಹೂಡಿದ ರಥದಿಂದ ವಿವೇಕಿಗಳಾದ ಪಾಂಡವರ ಸಮೀಪಕ್ಕೆ ಹೋದನು.
ಸೋಽಭಿಪತ್ಯ ತದಧ್ವಾನಮಾಸಾದ್ಯ ನೃಪತೇಃ ಪುರಮ್ |
ಪ್ರವಿವೇಶ ಮಹಾಬುದ್ಧಿಃ ಪೂಜ್ಯಮಾನೋ ದ್ವಿಜಾತಿಭಿಃ ||2||
ಮಹಾಬುದ್ಧಿಯಾದ ಅವನು ದೀರ್ಘವಾದ ಮಾರ್ಗವನ್ನು ದಾಟಿ ರಾಜಧಾನಿಯಾದ ಇಂದ್ರಪ್ರಸ್ಥವನ್ನು ತಲುಪಿ ಬ್ರಾಹ್ಮಣರಿಂದ ಪೂಜಿಸಲ್ಪಟ್ಟು ಪಟ್ಟಣವನ್ನು ಪ್ರವೇಶಿಸಿದನು.
ಸ ರಾಜಗೃಹಮಾಸಾದ್ಯ ಕುಬೇರಭವನೋಪಮಮ್ |
ಅಭ್ಯಾಗಚ್ಛತ ಧರ್ಮಾತ್ಮಾ ಧರ್ಮರಾಜಂ ಯುಧಿಷ್ಠಿರಮ್ ||3||
ಧರ್ಮಾತ್ಮನಾದ ಅವನು ಕುಬೇರಭವನದಂತಿದ್ದ ಧರ್ಮರಾಜನ ಅರಮನೆಯನ್ನು ತಲುಪಿ ಧರ್ಮರಾಜನಾದ ಯುಧಿಷ್ಠಿರನನ್ನು ಸಂಧಿಸಿದನು.
ತಂ ವೈ ರಾಜಾ ಸತ್ಯಧೃತಿರ್ಮಹಾತ್ಮಾ
ಹ್ಯಜಾತಶತ್ರುರ್ವಿದುರಂ ಯಥಾವತ್ |
ಪೂಜಾಪೂರ್ವಂ ಪ್ರತಿಗೃಹ್ಯಾಜಮೀಢಃ
ತತೋಪೃಚ್ಛದ್ ಧೃತರಾಷ್ಟ್ರಂ ಸಪುತ್ರಮ್ ||4||
ಸತ್ಯಧೃತಿಯಾದ ಮಹಾತ್ಮನಾದ ಆಜಾತಶತ್ರುವಾದ ಆಜಮೀಢನಾದ ಧರ್ಮರಾಜನಾದರೋ ವಿದುರನನ್ನು ವಿಧಿಪೂರ್ವಕವಾಗಿ ಸ್ವೀಕರಿಸಿ ಧೃತರಾಷ್ಟ್ರನ ಮತ್ತು ಅವನ ಮಕ್ಕಳ ಕುಶಲಪ್ರಶ್ನೆಯನ್ನು ಮಾಡಿದನು.
ವಿಜ್ಞಾಯತೇ ತೇ ಮನಸೋಽಪ್ರಹರ್ಷಃ
ಕಚ್ಚಿತ್ ಕ್ಷತ್ತಃ ಕುಶಲೇನಾಗತೋಽಸ್ತಿ
ಕಚ್ಚಿತ್ ಪುತ್ರಾಃ ಸ್ಥವಿರಸ್ಯಾನುಲೋಮಾ
ವಶಾನುಗಾಶ್ಚಾಪಿ ವಿಶೋಽಪಿ ಕಚ್ಚಿತ್ ||5||
ವಿದುರನೇ! ನಿನ್ನ ಮನಸ್ಸಿನ ಅಸಮಾಧಾನವು ಎದ್ದು ಕಾಣುತ್ತಿದೆ. ಕ್ಷೇಮದ ವಾರ್ತೆಯಿಂದ ಬಂದಿದ್ದೀಯಷ್ಟೆ? ವೃದ್ಧನಾದ ಧೃತರಾಷ್ಟ್ರನಿಗೆ ಅವನ ಮಕ್ಕಳು ಅನುಕೂಲವಾಗಿದ್ದಾರಷ್ಟೆ? ಮತ್ತು ಪ್ರಜೆಗಳು ಸಹ ಅವನ ವಶವರ್ತಿಗಳಾಗಿರುವರಷ್ಟೆ?
ವಿದುರಃ
ರಾಜಾ ಮಹಾತ್ಮಾ ಕುಶಲೀ ಸಪುತ್ರ
ಆಸ್ತೇ ವೃತೋ ಜ್ಞಾತಿಭಿರಿಂದ್ರಕಲ್ಪೈಃ |
ಪ್ರೀತೋ ರಾಜನ್ ಪುತ್ರಗಣೈರ್ವಿನೀತೈ-
ರ್ವಿಶೋಕ ಏವಾತ್ಮರತಿರ್ದೃಢಾತ್ಮಾ ||6||
ಮಹಾತ್ಮನಾದ ರಾಜನು ತನ್ನ ಮಕ್ಕಳ ಜೊತೆಯಲ್ಲಿ ಕ್ಷೇಮದಿಂದಿದ್ದಾನೆ. ಇಂದ್ರನಿಗೆ ಸಮಾನರಾದ ತನ್ನ ದಾಯಾದಿಗಳಿಂದ ಪರಿವೃತನಾಗಿದ್ದಾನೆ. ರಾಜನೇ! ಅವನು ವಿನೀತರಾದ ಪುತ್ರಗಣದಿಂದ ಸಂತುಷ್ಟನಾಗಿ ಶೋಕ ರಹಿತನಾಗಿ ಆತ್ಮರತಿಯುಳ್ಳವನಾಗಿ ದೃಢವಾದ ಮನಸ್ಸುಳ್ಳವನಾಗಿ ಇದ್ದಾನೆ.

ಇದಂ ತು ತ್ವಾಂ ಕುರುರಾಜೋ ಹ್ಯುವಾಚ
ಪೂರ್ವಂ ಪೃಷ್ಟ್ವಾ ಕುಶಲಂ ಚಾವ್ಯಯಂ ಚ |
ಯೇಯಂ ಸಭಾ ತ್ವತ್ಸಭಾತುಲ್ಯರೂಪಾ
ಭ್ರಾತೄಣಾಂ ತೇ ದೃಶ್ಯತಾಮೇತ್ಯ ಪುತ್ರ ॥7॥
ಕುರುರಾಜನು ನಿನ್ನ ಯೋಗಕ್ಷೇಮವನ್ನು ಕೇಳಿ ಅನಂತರ ಈ ವಿಷಯವನ್ನು ನಿನಗೆ ಹೇಳಲು ತಿಳಿಸಿದ್ದಾನೆ. ಪುತ್ರನೇ! ನಿನ್ನ ತಮ್ಮಂದಿರು ನಿನ್ನ ಸಭೆಯಂತೆಯೇ ನಿರ್ಮಿಸಿರುವ ಈ ಸಭೆಯನ್ನು ಬಂದು ನೋಡು.
ಸಮಾಗಮ್ಯ ಭ್ರಾತೃಭಿಃ ಪಾರ್ಥ
ತಸ್ಯಾಂಸುಹೃದ್ದ್ಯೂತಂ ಕ್ರಿಯತಾಮತ್ರ ರಾಜನ್ |
ಪ್ರೀಯಾಮಹೇ ಭವತಃ ಸಂಗಮೇನ
ಸಮಾಗತಾಃ ಕುರವಶ್ಚಾಪಿ ಸರ್ವೇ ॥8॥
ರಾಜನೇ! ಕುಂತೀಸುತನೇ! ನಿನ್ನ ತಮ್ಮಂದಿರ ಜೊತೆಯಲ್ಲಿ ಸಭೆಗೆ ಬಂದು ಅಲ್ಲಿ ಸುಹೃದ್ದ್ಯೂತವನ್ನು ಆಡುವವನಾಗು. ನಿನ್ನ ಸಮಾಗಮದಿಂದಲೇ ನಾವು ಸಂತೋಷ ಪಡುತ್ತೇವೆ. ಅದೂ ಅಲ್ಲದೆ ಕುರುಗಳೆಲ್ಲರೂ ಒಟ್ಟಿಗೆ ಸೇರಿದಂತಾಗುತ್ತದೆ.
ದುರೋದರಾ ವಿಹಿತಾ ಯೇ ತು ತತ್ರ
ಮಹಾತ್ಮನಾ ಧೃತರಾಷ್ಟ್ರೇಣ ರಾಜ್ಞಾ |
ತಾನ್ ದ್ರಕ್ಷ್ಯಸೇ ಕಿತವಾನ್ ಸನ್ನಿವಿಷ್ಟಾನ್
ಇತ್ಯಾಗತೋಽಹಂ ನೃಪತೇ ತಾನ್ ಜುಷಸ್ವ ॥9॥
ಮಹಾತ್ಮನಾದ ಧೃತರಾಷ್ಟ್ರರಾಜನು ಅಲ್ಲಿ ದ್ಯೂತದ ಸಲಕರಣೆಗಳನ್ನು ಏನು ಸಿದ್ಧಗೊಳಿಸಿದ್ದಾನೆಯೋ ಅವುಗಳನ್ನು ಮತ್ತು ದ್ಯೂತವನ್ನು ಆಡಲು ಸೇರಿರುವ ಪುರುಷರನ್ನು ನೀನು ಅಲ್ಲಿ ನೋಡುವಿ ಎಂದು ನಾನು ಬಂದಿದ್ದೇನೆ. ಎಲೈ ರಾಜನೇ! ಇದನ್ನು ಅಂಗೀಕರಿಸು.
ಯುಧಿಷ್ಠಿರಃ
ದ್ಯೂತೇ ಕ್ಷತ್ತಃ ಕಲಹೋ ವಿದ್ಯತೇ ನಃ
ಕೋ ವೈ ದ್ಯೂತಂ ರೋಚತೇ ಬುಧ್ಯಮಾನಃ |
ಕಿಂ ವಾ ಭವಾನ್ ಮನ್ಯತೇ ಯುಕ್ತರೂಪಂ
ಭವದ್ವಾಕ್ಯೇ ಸರ್ವ ಏವ ಸ್ಥಿತಾಃ ಸ್ಮಃ ॥10॥
ಎಲೈ ವಿದುರನೇ! ದ್ಯೂತದಿಂದ ನಮ್ಮಲ್ಲಿ ಕಲಹವು ಉಂಟಾಗುತ್ತದೆ. ವಿವೇಕಿಯಾದ ಯಾವನು ತಾನೆ ದ್ಯೂತವನ್ನು ಬಯಸುತ್ತಾನೆ? ಇಂತಹ ಸಂದರ್ಭದಲ್ಲಿ ನೀನು ಏನನ್ನು ಹಿತವೆಂದು ಬಾವಿಸುತ್ತೀಯೆಎಂದು ಹೇಳು. ನಾವೆಲ್ಲರೂ ನಿನ್ನ ಮಾತಿಗೆ ಬದ್ಧರಾಗಿದ್ದೇವೆ.
ವಿದುರಃ
ಜಾನಾಮ್ಯಹಂ ದ್ಯೂತಮನರ್ಥಮೂಲಂ
ಕೃತಶ್ಚ ಯತ್ನೋಽಸ್ಯ ಮಯಾ ನಿವಾರಣೇ |
ರಾಜಾ ಚ ಮಾಂ ಪ್ರಾಹಿಣೋತ್ ತ್ವತ್ಸಕಾಶಂ
ಶ್ರುತ್ವಾ ವಿದ್ವನ್ ಶ್ರೇಯ ಇಹಾಚರಸ್ವ ॥11॥
ಎಲೈ ಮೇಧಾವಿಯೇ! ದ್ಯೂತವು ಅನರ್ಥಮೂಲವೆಂದು ನಾನು ತಿಳಿದಿದ್ದೇನೆ. ಅದನ್ನು ನಿವಾರಿಸಲು ನಾನು ಸಾಕಷ್ಟು ಪ್ರಯತ್ನವನ್ನು ಮಾಡಿದೆ. ಆದರೆ ರಾಜನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ. ಇನ್ನು ನೀನು ಯಾವುದು ಒಳ್ಳೆಯದೋ ಅದನ್ನು ಆಚರಿಸು.
ಯುಧಿಷ್ಠಿರಃ
ಕೇ ತತ್ರಾ ವೈ ಕಿತವಾ ದೀವ್ಯಮಾನಾ
ವಿನಾ ರಾಜ್ಞೋ ಧೃತರಾಷ್ಟ್ರಸ್ಯ ಪುತ್ರೈಃ |
ಪೃಚ್ಛಾಮಿ ತ್ವಾಂ ವಿದುರ ಬ್ರೂಹಿ ನಸ್ತಾನ್
ಯೈರ್ದೀವ್ಯಾಮಃ ಶತಶಃ ಸನ್ನಿಪತ್ಯ ॥12॥
ಅಲ್ಲಿ ಧೃತರಾಷ್ಟ್ರನ ಮಕ್ಕಳಲ್ಲದೆ ದ್ಯೂತವನ್ನು ಆಡುವವರು ಬೇರೆ ಯಾರಿದ್ದಾರೆ? ಎಲೈ ವಿದುರನೇ! ನಾನು ನಿನ್ನನ್ನು ಕೇಳುತ್ತಿದ್ದೇನೆ. ನಾವು ನೂರರ ಸಂಖ್ಯೆಯಲ್ಲಿರುವ ಯಾವ ಆಟಗಾರರಿಗೆ ಎದುರಾಗಿ ದ್ಯೂತವನ್ನು ಆಡಬೇಕು ಎಂದು ಹೇಳು.
ವಿದುರಃ
ಗಾಂಧಾರರಾಜಃ ಶಕುನಿರ್ವಿಶಾಂಪತೇ
ರಾಜಾ ತು ದೇವೀ ಕೃತಹಸ್ತೋ ಮತಾಕ್ಷಃ |
ವಿವಿಂಶತಿಶ್ಚಿತ್ರಸೇನಶ್ಚ ರಾಜಾ
ಸತ್ಯವ್ರತಃ ಪುರುಮಿತ್ರೋ ಜಯಶ್ಚ ॥13॥
ಎಲೈ ರಾಜನೇ! ಗಾಂಧಾರರಾಜನಾದ ಶಕುನಿಯು ಅಕ್ಷಹೃದಯವನ್ನು ಬಲ್ಲವನು. ಅವನೊಬ್ಬ ಆಡುವವನು. ಅಲ್ಲದೆ ವಿವಿಂಶತಿ ಚಿತ್ರಸೇನ ಸತ್ಯವ್ರತ ಪುರುಮಿತ್ರಜಯ ಇವರುಗಳೂ ಆಡುತ್ತಾರೆ.
ಯುಧಿಷ್ಠಿರಃ
ಮಹಾಮಾಯಾಃ ಕಿತವಾಃ ಸನ್ನಿವಿಷ್ಟಾ
ಮಹೋಪಧಾ ದೇವಿತಾರೋಽತ್ರ ಸಂತಿ |

ಧಾತ್ರಾ ತು ದಿಷ್ಟಸ್ಯ ವಶೇ ಕಿಲೇದಂ
ನ ದೇವನಂ ಕಿತವೈರದ್ಯ ತೈರ್ಮೇ ॥14॥
ಮಹಾಕಪಟಿಗಳಾದ ಆಟಗಾರರು ಸೇರಿದ್ದಾರೆ. ಒಳ್ಳೆಯ ಮೋಸದಿಂದ ಅವರು ಆಟಗಳನ್ನು ಆಡುವರು. ಇದೆಲ್ಲವೂ ವಿಧಿಯ ಇಚ್ಛೆಯಂತೆ ನಡೆಯುತ್ತದೆಯಷ್ಟೇ? ಅಂತಹ ಆಟಗಾರರ ಜೊತೆಯಲ್ಲಿ ನಾನು ದ್ಯೂತವನ್ನು ಆಡುವುದಿಲ್ಲ.
ನಾಹಂ ರಾಜ್ಞೋ ಧೃತರಾಷ್ಟ್ರಸ್ಯ ಶಾಸನಾ-
ನ್ನಾಗಂತುಮಿಚ್ಛಾಮಿ ಕವೇ ದುರೋದರಮ್ ।
ಇಷ್ಟೋ ಹಿ ಪುತ್ರಸ್ಯ ಪಿತಾ ಸದೈವ
ತದಸ್ಮಿ ಕರ್ತಾ ವಿದುರಾತ್ಥ ಮಾಂ ಯಥಾ ॥15॥
ಎಲೈ ಜ್ಞಾನಿಯೇ! ರಾಜನಾದ ಧೃತರಾಷ್ಟ್ರನ ಶಾಸನದ ಮೇರೆಗೆ ನಾನು ದ್ಯೂತಕ್ಕೆ ಬರದಿರಲು ಇಚ್ಛಿಸುವುದಿಲ್ಲ. ತಂದೆಗೆ ಮಗನಾದವನು ಯಾವಾಗಲೂ ಇಷ್ಟನಾಗಿಯೇ ಇರುತ್ತಾನೆ. ಆದ್ದರಿಂದ ನೀನು ಹೇಗೆ ಹೇಳಿದೆಯೋ ಅದರಂತೆ ನಡೆದು ಕೊಳ್ಳುತ್ತೇನೆ.
ನ ಚಾಕಾಮಃ ಶಕುನಿನಾ ದೇವಿತಾಽಹಂ
ನ ಹ್ಯಾತ್ಮನಾ ಧೃಷ್ಣುರಾಹ್ವಯಿತಾ ಸಭಾಯಾಮ್ ।
ಆಹೂತೋಽಹಂ ನ ನಿವರ್ತೇ ಕದಾಚಿತ್
ತಥಾ ಹೀದಂ ಶಾಶ್ವತಂ ವೈ ವ್ರತಂ ಮೇ ॥16॥
ಧೈರ್ಯಶಾಲಿಯಾದ ಶಕುನಿಯು ಸಭೆಯಲ್ಲಿ ನನ್ನನ್ನು ಆಹ್ವಾನಮಾಡದಿದ್ದರೆ ನಾನು ಇಚ್ಛೆಯಿಲ್ಲದೆ ಶಕುನಿಯ ಜೊತೆಯಲ್ಲಿ ದ್ಯೂತವನ್ನು ಆಡುವುದಿಲ್ಲ. ಆಹ್ವಾನಮಾಡಿದರೆ ಮಾತ್ರ ನಾನು ದ್ಯೂತದಿಂದ ಎಂದೂ ನಿವೃತ್ತನಾಗುವುದಿಲ್ಲ.
ವೈಶಂಪಾಯನಃ
ಏವಮುಕತ್ವ ವಿದುರಂ ಧರ್ಮರಾಜಃ
ಪ್ರಾಯಾಣಿಕಂ ಸರ್ವಮಾಜ್ಞಾಪ್ಯ ತೂರ್ಣಮ್ ।
ಪ್ರಾಯಾಚ್ಛ್ವೋಭೂತೇ ಸಗಣಃ ಸಾನುಯಾತ್ರಃ
ಸಹ ಸ್ತ್ರೀಭಿರ್ದ್ರೌಪದೀಮಾದಿಕೃತ್ವಾ ॥17॥
ಧರ್ಮರಾಜನು ವಿದುರನನ್ನು ಕುರಿತು ಹೀಗೆ ಮಾತನಾಡಿ ಪ್ರಯಾಣದ ಸಿದ್ಧತೆಗೆ ಶೀಘ್ರವಾಗಿ ಆದೇಶವನ್ನು ನೀಡಿ ಮರುದಿನ ತನ್ನ ಗಣಗಳು ಮತ್ತು ಪರಿವಾರದಿಂದ ಸಹಿತನಾಗಿ ದ್ರೌಪದಿಯನ್ನು ಮುಂದಿಟ್ಟುಕೊಂಡು ಸ್ತ್ರೀಯರ ಸಮೂಹದಿಂದಲೂ ಕೂಡಿದವನಾಗಿ ಹಸ್ತಿನಾವತಿಗೆ ಹೊರಟನು.
ದೈವಂ ತು ಪ್ರಜ್ಞಾಂ ಮುಷ್ಣಾತಿ ತೇಜಶ್ಚಕ್ಷುರಿವಾಪತತ್ ।
ಧಾತುಶ್ಚ ವಶಮನ್ವೇತಿ ಪಾಶೈರಿವ ನರಃ ಸಿತಃ ॥18॥
ಕಣ್ಣಿಗೆ ಹೊಡೆಯುವ ತೇಜಸ್ಸು ದೃಷ್ಟಿಯನ್ನು ಕಳೆಯುವಂತೆ ದೈವವು ವಿವೇಕವನ್ನು ನಾಶಮಾಡುತ್ತದೆ. ಮನುಷ್ಯನು ಹಗ್ಗಗಳಿಂದ ಪೋಣಿಸಲ್ಪಟ್ಟ ಪಶುವಿನಂತೆ ವಿಧಿಯ ವಶನಾಗುತ್ತಾನೆ.
ಇತ್ಯುಕತ್ವ ಪ್ರಯಯೌ ರಾಜಾ ಸಹ ಕ್ಷತಶತ್ರ ಯುಧಿಷ್ಠಿರಃ ।
ಅಮೃಷ್ಯಮಾಣಸ್ತತ್ಪಾರ್ಥಃ ಸಮಾಹ್ವಾನಮರಿಂದಮಃ ॥19॥
ಅರಿಂದಮನಾದ ಯುಧಿಷ್ಠಿರನು ಆ ಆಹ್ವಾನವನ್ನು ನಿರಾಕರಿಸಲಾಗದೆ ವಿದುರನ ಜೊತೆಯಲ್ಲಿ ಹೊರಟನು.
ಬಾಹ್ಲೀಕೇನ ರಥಂ ಯತ್ತಮಾಸ್ಥಾಯ ಪರವೀರಹಾ ।
ಪರಿಚ್ಛಿನ್ನೋ ಯಯೌ ಪಾರ್ಥೋ ಭ್ರಾತೃಭಿಃ ಸಹಬಾಂಧವಃ ॥20॥
ಪರವೀರಘಾತಕನಾದ ಧರ್ಮರಾಜನು ಬಾಹ್ಲೀಕನು ಕೊಟ್ಟಿದ್ದ ರಥವನ್ನು ಏರಿ ಪರಿಮಿತ ಪರಿವಾರದೊಂದಿಗೆ ತಮ್ಮಂದಿರ ಮತ್ತು ಬಾಂಧವರ ಜೊತೆಯಲ್ಲಿ ಹೊರಟನು.
ರಾಜಶ್ರಿಯಾ ದೀಪ್ಯಮಾನೋ ಯಯೌ ಬ್ರಹ್ಮಪುರಸ್ಸರಃ ।
ಸಂದಿದೇಶ ತತಃ ಪ್ರೇಷ್ಯಾನ್ ನಾಗಾಹ್ವಯಗತಿಂ ನೃಪ ।
ತತಸ್ತೇ ನೃಪಶಾರ್ದೂಲಾಃ ಚಕ್ರುರ್ವೈ ನೃಪಶಾಸನಮ್ ॥21॥
ರಾಜ ವೈಭವದಿಂದ ಬೆಳಗುತ್ತಾ ಬ್ರಾಹ್ಮಣರನ್ನು ಮುಂದೆಮಾಡಿಕೊಂಡು ಅವನು ಹೊರಟನು. ದಾರಿಯಲ್ಲಿ ತನ್ನ ಸೇವಕರಿಗೆ ಹಸ್ತಿನಾವತಿಯ ಮಾರ್ಗವನ್ನು ಹೇಳಿದನು. ಅನಂತರ ಆ ನೃಪಶಾರ್ದೂಲರು ರಾಜಶಾಸನವನ್ನು ಅನುಸರಿಸಿದರು.
ತತೋ ರಾಜಾ ಮಹಾತೇಜಾಃ ಸಧೌಮ್ಯಃ ಸಪರಿಚ್ಛದಃ ।
ಬ್ರಾಹ್ಮಣೈಃ ಸ್ವಸ್ತಿ ವಾಚ್ಯೈವ ನಿರ್ಯಯೌ ಮಂದಿರಾದ್ ಬಹಿಃ ॥22॥
ಆಗ ಮಹಾ ತೇಜಸ್ವಿಯಾದ ಧರ್ಮರಾಜನು ಧೌಮ್ಯರು ಮತ್ತು ಪರಿವಾರದೊಂದಿಗೆ ಒಡಗೂಡಿ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ತನ್ನ ಮಂದಿರದಿಂದ ಹೊರಗೆ ಬಂದನು.
ಬ್ರಾಹ್ಮಣೇಭ್ಯೋ ಧನಂ ದತತ್ವ ಗತ್ಯರ್ಥಂ ಸ ಯಥಾವಿಧಿ ।
ಅನ್ಯೇಭ್ಯಃಸತು ದತತ್ವಽರ್ಥಂ ಗಂತುಂ ತತ್ರೋಪಚಕ್ರಮೇ ॥23॥
ಪ್ರಯಾಣದ ಸಮಯದಲ್ಲಿ ಪ್ರಯಾಣಕ್ಕೋಸ್ಕರ ವಿಧಿವತ್ತಾಗಿ ಬ್ರಾಹ್ಮಣರಿಗೆ ಧನವನ್ನು ಕೊಟ್ಟು ಬೇರೆಯರಿಗೂ ಧನವನ್ನು ಕೊಟ್ಟು ಹೊರಡಲು ಪ್ರಾರಂಭಿಸಿದನು.
ಸರ್ವಲಕ್ಷಣಸಂಪನ್ನಂ ರಾಜಾರ್ಹಂ ಸಪರಿಚ್ಛದಮ್ ।
ತಮಾರುಹ್ಯ ಮಹಾರಾಜೋ ಗಜೇಂದ್ರಂ ಷಷ್ಟಿಹಾಯನಮ್ ॥24॥

ನಿಷಸಾದ ಗಜಸ್ಕಂಧೇ ಕಾಂಚನೇ ಪರಮಾಸನೇ |
ಹಾರೀ ಕಿರೀಟೀ ಹೇಮಾಭಃ ಸರ್ವಾಭರಣಭೂಷಿತಃ ||25||
ಮಹಾರಾಜನಾದ ಧರ್ಮರಾಜನು ಎಲ್ಲ ಲಕ್ಷಣಗಳಿಂದ ಕೂಡಿದ್ದ ರಾಜಯೋಗ್ಯವಾದ ಎಲ್ಲಾ ಸಲಕರಣೆಗಳಿಂದ ಕೂಡಿದ್ದ ಅರವತ್ತು ವರ್ಷವಯಸ್ಸಿನ ಶ್ರೇಷ್ಠವಾದ ಆನೆಯನ್ನು ಏರಿ ಗಜಸ್ಕಂಧದಲ್ಲಿ ಸುವರ್ಣಮಯವಾದ ಆಸನದಲ್ಲಿ ಕುಳಿತು ಕೊಂಡನು. ಅವನು ಹಾರಕಿರಿಟಗಳನ್ನು ಧರಿಸಿ ಸರ್ವಾಭರಣಭೂಷಿತವಾಗಿ ಸುವರ್ಣದಂತೆ ಶೋಭಿಸುತ್ತಿದ್ದನು.
ರರಾಜ ರಾಜನ್ ಪಾರ್ಥೋ ವೈ ಪರಯಾ ನೃಪಶೋಭಯಾ |
ರುಗ್ಮವೇದಿಗತಃ ಪ್ರಾಜ್ಯೋ ಜ್ವಲನ್ನಿವ ಹುತಾಶನಃ ||26||
ರಾಜನೇ! ಉನ್ನತವಾದ ರಾಜಕಾಂತಿಯಿಂದ ಕಂಗೊಳಿಸುತ್ತಿದ್ದ ಅವನು ಸುವರ್ಣಮಯವಾದ ವೇದಿಕೆಯಲ್ಲಿ ಶ್ರೇಷ್ಠವಾದ ಅಗ್ನಿಯಂತೆ ಶೋಭಿಸಿದನು.
ತತೋ ಜಗಾಮ ರಾಜಾ ಸ ಪ್ರಹೃಷ್ಟನರವಾಹನಃ |
ರಥಘೋಷೇಣ ಮಹತಾ ಪೂರಯನ್ ವೈ ನಭಸ್ಸ್ಥಲಮ್ ||27||
ಸಂಸ್ತೂಯಮಾನಃ ಸ್ತುತಿಭಿಃ ಸೂತಮಾಗಧವಂದಿಭಿಃ |
ಸ್ವೇನ ಸೈನ್ಯೇನ ಸಂವೀತೋ ಯಥಾಽಽದಿತ್ಯಃ ಸ್ವರಶ್ಮಿಭಿಃ ||28||
ಅನಂತರ ರಾಜನು ಸಂತೋಷಗೊಂಡ ನರರಿಂದಲೂ ಮತ್ತು ವಾಹನಗಳಿಂದಲೂ ಯುಕ್ತನಾಗಿ ದೊಡ್ಡ ರಥಘೋಷದಿಂದ ಆಕಾಶವನ್ನೇ ತುಂಬುತ್ತಾ ತನ್ನ ರಶ್ಮಿಗಳಿಂದ ಪರಿವೃತವಾದ ಸೂರ್ಯನಂತೆ ತನ್ನ ಸೈನ್ಯದಿಂದ ಪರಿವೃತನಾಗಿ ಸೂತಮಾಗಧ ಬಂದಿಗಳಿಂದ ಸ್ತೋತ್ರಗಳಿಂದ ಪ್ರಸಂಶಿಸಲ್ಪಡುತ್ತಾ ಅಲ್ಲಿಂದ ಹೊರಟನು.
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ಬಭೌ ಯುಧಿಷ್ಠಿರೋ ರಾಜಾ ಪೌರ್ಣಮಾಸ್ಯಾಮಿವೋಡುರಾಟ್ ||29||
ಉಭಯೋಃ ಪಕ್ಷಯೋಶ್ಚೈವ ಗಜಾಶ್ವೈಃ ಕುರುನಂದನಃ |
ಚಾಮರೈರ್ಹೇಮದಂಡೈಶ್ಚ ಧೂಯಮಾನಃ ಸಮಂತತಃ ||30||
ತನ್ನ ತಲೆಯ ಮೇಲೆ ಹಿಡಿದ ಶ್ವೇತಛತ್ರದಿಂದ ರಾಜನು ಪೂರ್ಣಿಮೆಯ ಚಂದ್ರನಂತೆ ಬೆಳಗಿದನು. ಅವನ ಎರಡು ಪಕ್ಕಗಳಲ್ಲಿ ಗಜಗಳ ಮೇಲೆ ಮತ್ತು ಅಶ್ವಗಳ ಮೇಲೆ ಕುಳಿತವರು ಅವನಿಗೆ ಹೇಮದಂಡವುಳ್ಳ ಚಾಮರಗಳಿಂದ ಗಾಳಿಯನ್ನು ಬೀಸುತ್ತಿದ್ದರು.
ಧೃತರಾಷ್ಟ್ರೇಣ ಚಾಹೂತಃ ಕಾಲಸ್ಯ ಸಮಯೇನ ಚ |
ಸ ಹಸ್ತಿನಪುರಂ ಗತ್ವಾ ಧೃತರಾಷ್ಟ್ರಗೃಹಂ ಯಯೌ |
ಸಮಿಯಾಯ ಚ ಧರ್ಮಾತ್ಮಾ ಧೃತರಾಷ್ಟ್ರೇಣ ಪಾಂಡವಃ ||31||
ಧೃತರಾಷ್ಟ್ರನ ಆಹ್ವಾನದಿಂದಲೂ ಮತ್ತು ಕಾಲದ ನಿಯಮದಿಂದಲೂ ಅವನು ಹಸ್ತಿನಪುರವನ್ನು ತಲುಪಿ ಧೃತರಾಷ್ಟ್ರನ ಮನೆಯನ್ನು ತಲುಪಿ ಧರ್ಮಾತ್ಮನಾದ ಅವನು ಧೃತರಾಷ್ಟ್ರನನ್ನು ಸಂಧಿಸಿದನು.
ತತೋ ದ್ರೋಣೇನ ಭೀಷ್ಮೇಣ ಕರ್ಣೇನ ಚ ಕೃಪೇಣ ಚ |
ಸಮಿಯಾಯ ಯಥಾನ್ಯಾಯಂ ದ್ರೌಣಿನಾ ಚ ವಿಭುಃ ಸಹ ||32||
ಅನಂತರ ದ್ರೋಣ ಭೀಷ್ಮ ಕೃಪ ಅಶ್ವತ್ಥಾಮ ಇವರುಗಳ ಜೊತೆಯಲ್ಲಿ ವಿಧಿವತ್ತಾಗಿ ಸಮಾಗಮವನ್ನು ಹೊಂದಿದನು.
ಸಮೇತ್ಯ ಚ ಮಹಾಬಾಹುಃ ಸೋಮದತ್ತೇನ ಚೈವ ಹಿ |
ದುರ್ಯೋಧನೇನ ಸಭ್ರಾತ್ರಾ ಸೌಬಲೇನ ಚ ವೀರ್ಯವಾನ್ ||33||
ಯೇ ಚಾನ್ಯೇ ತತ್ರ ರಾಜಾನಃ ಪೂರ್ವಮೇವ ಸಮಾಗತಾಃ |
ದುಶ್ಶಾಸನೇನ ಕೌಂತೇಯಃ ಸರ್ವೈರ್ಭ್ರಾತೃಭಿರೇವ ಚ ||34||
ಮಹಾಬಾಹುವೂ ಪರಾಕ್ರಮಶಾಲಿಯೂ ಆದ ಅವನು ಸೋಮದತ್ತನ ಜೊತೆಯಲ್ಲಿಯೂ ಭ್ರಾತೃಸಹಿತನಾದ ದುರ್ಯೋಧನನ ಜೊತೆಯಲ್ಲಿಯೂ ಶಕುನಿಯ ಜೊತೆಯಲ್ಲಿಯೂ ಸಮಾಗಮವನ್ನು ಹೊಂದಿ ಅಲ್ಲಿ ಬಂದಿದ್ದ ಉಳಿದ ರಾಜರುಗಳ ಜೊತೆಯಲ್ಲಿಯೂ ದುಶ್ಶಾಸನನ ಎಲ್ಲಾ ತಮ್ಮಂದಿರ ಜೊತೆಯಲ್ಲಿಯೂ ಸಮಾಗಮವನ್ನು ಹೊಂದಿದನು.
ಜಯದ್ರಥೇನ ಹಿ ತಥಾ ಕುರುಭಿಶ್ಚಾಪಿ ಸರ್ವಶಃ |
ಸಮೇತ್ಯ ಕುರುಭಿಃ ಸರ್ವೈರ್ಯಥಾನ್ಯಾಯಮರಿಂದಮಃ ||35||
ತತಃ ಸರ್ವೈರ್ಮಹಾಬಾಹುರ್ಭ್ರಾತೃಭಿಃ ಪರಿವಾರಿತಃ |
ಪ್ರವಿವೇಶ ಗೃಹಂ ರಾಜ್ಞೋ ಧೃತರಾಷ್ಟ್ರಸ್ಯ ಸಮ್ಮತಮ್ ||36||
ಜಯದ್ರಥನ ಜೊತೆಯಲ್ಲಿಯೂ ಎಲ್ಲಾ ಕುರುಗಳ ಜೊತೆಯಲ್ಲಿಯೂ ಅರಿಂದಮನಾದ ರಾಜನು ವಿಧಿವತ್ತಾಗಿ ಸಮಾಗಮವನ್ನು ಹೊಂದಿ. ಆ ಮಹಾಬಾಹುವು ತಮ್ಮಂದಿರಿಂದ ಪರಿವಾರಿತನಾಗಿ ಧೃತರಾಷ್ಟ್ರರಾಜನ ಸಂಮತವಾದ ಗೃಹವನ್ನು ಪ್ರವೇಶಿಸಿದನು.
ದದರ್ಶ ತತ್ರ ಗಾಂಧಾರೀಂ ದೇವೀಂ ಪತಿಮನುವ್ರತಾಮ್ |
ಸ್ನುಷಾಭಿಃ ಸಂವೃತಾಂ ಶಶ್ವತ್ ತಾರಾಭಿರಿವ ರೋಹಿಣೀಮ್ ||37||
ಅವನು ಅಲ್ಲಿ ನಕ್ಷತ್ರಗಳಿಂದ ಸುತ್ತುವರೆಯಲ್ಪಟ್ಟ ರೋಹಿಣಿಯಂತೆ ತನ್ನ ಸೊಸೆಯರಿಂದ ಪರಿವೃತಳಾದ ಪತಿವ್ರತೆಯಾದ ಗಾಂಧಾರಿದೇವಿಯನ್ನು ನೋಡಿದನು.
ಅಭಿವಾದ್ಯ ಚ ಗಾಂಧಾರೀಂ ತಯಾ ಚಾಪ್ಯಭಿನಂದಿತಃ |
ದದರ್ಶ ಪಿತರಂ ವೃದ್ಧಂ ಪ್ರಜ್ಞಾಚಕ್ಷುಷಮೀಶ್ವರಮ್ ||38||
ಅವನು ಗಾಂಧಾರಿಗೆ ನಮಸ್ಕರಿಸಿ ಅವಳಿಂದ ಆಶೀರ್ವಾದವನ್ನು ಪಡೆದು ಅನಂತರ ಪ್ರಾಜ್ಞಚಕ್ಷುಸ್ಸನ್ನು ಹೊಂದಿದ್ದ ವೃದ್ಧನಾದ

ಪ್ರಭುವಾದ ತಂದೆಯಾದ ಧೃತರಾಷ್ಟ್ರನನ್ನು ನೋಡಿದನು.
ರಾಜ್ಞಾ ಮೂರ್ಧನ್ಯುಪಾಘ್ರಾತಾಸ್ತೇ ಚ ಕೌರವನಂದನಾಃ |
ಚತ್ವಾರಃ ಪಾಂಡವಾ ರಾಜನ್ ಭೀಮಸೇನಪುರೋಗಮಾಃ ॥39॥
ಧೃತರಾಷ್ಟ್ರರಾಜನು ಭೀಮಸೇನ ಮೊದಲಾದ ಕೌರವನಂದನರಾದ ನಾಲ್ಕು ಜನ ಪಾಂಡವರನ್ನು ಶಿರಸ್ಸಿನಲ್ಲಿ ಆಘ್ರಾಣಿಸಿದನು.
ತತೋ ಹರ್ಷಃ ಸಮಭವತ್ ಕೌರವಾಣಾಂ ವಿಶಾಂಪತೇ |
ತಾನ್ ದೃಷ್ಟ್ವಾ ಪುರುಷವ್ಯಾಘ್ರಾನ್ ಪಾಂಡವಾನ್ ಪ್ರಿಯದರ್ಶನಾನ್ ॥
ಎಲೈ ರಾಜನೇ! ಆಗ ಪುರುಷವ್ಯಾಘ್ರರಾದ ಪ್ರಿಯದರ್ಶನರಾದ ಪಾಂಡವರನ್ನು ನೋಡಿ ಕೌರವರಿಗೆ ಸಂತೋಷವಾಯಿತು.
ವಿವಿಶುಸ್ತೇಽಭ್ಯನುಜ್ಞಾತಾ ರತ್ನವಂತೋ ಗೃಹಾನಥ |
ವಿವಿಶುಸ್ತಾ ಉಪಾಯಾತಾ ದ್ರೌಪದೀಪ್ರಮುಖಾಃ ಸ್ತ್ರಿಯಃ ॥41॥
ಅವರು ಧೃತರಾಷ್ಟ್ರನ ಅನುಮತಿಯನ್ನು ಪಡೆದು ರತ್ನಗಳಿಂದ ಶೋಭಿಸುತ್ತಿದ್ದ ಗೃಹಗಳನ್ನು ಪ್ರವೇಶಿಸಿದನು. ಅವರ ಜೊತೆಯಲ್ಲಿ ಬಂದ ದ್ರೌಪದಿ ಮೊದಲಾದ ಸ್ತ್ರೀಯರೂ ಆ ಗೃಹಗಳನ್ನು ಪ್ರವೇಶಿಸಿದರು.
ಯಾಜ್ಞಸೇನ್ಯಾಃ ಪರಾಂ ವೃದ್ಧಿಂ ದೃಷ್ಟ್ವಾ ಪ್ರಜ್ವಲಿತಾಮಿವ |
ಸ್ನುಷಾಸ್ತಾ ಧೃತರಾಷ್ಟ್ರಸ್ಯ ನಾತಿಪ್ರಮನಸೋಽಭವನ್ ॥42॥
ದ್ರೌಪದಿಯ ಬೆಳಗುತ್ತಿದ್ದಂತಹ ಪರಮವೈಭವವನ್ನು ನೋಡಿದ ಧೃತರಾಷ್ಟ್ರನ ಸೊಸೆಯರು ಮನಸ್ಸಿನಲ್ಲಿ ಬಹಳ ಸಂತೋಷವನ್ನು ಹೊಂದಲಿಲ್ಲ.
ತತಸ್ತೇ ಪುರುಷವ್ಯಾಘ್ರಾ ಗತ್ವಾ ಸ್ತ್ರೀಭಿಶ್ಚ ಸಂವಿದಮ್ |
ಕೃತ್ವಾ ವ್ಯಾಯಾಮಪೂರ್ವಾಣಿ ಕೃತ್ಯಾನಿ ಪ್ರತಿಕರ್ಮ ಚ ॥43॥
ತತಃ ಕೃತಾಹ್ನಿಕಾಃ ಸರ್ವೇ ದಿವ್ಯಚಂದನರೂಷಿತಾಃ |
ಕಲ್ಯಾಣಮನಸಃ ಸರ್ವೇ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಚ ॥44॥
ಮನೋಜ್ಞಮಶನಂ ಭುಕ್ತ್ವಾ ವಿವಿಶುಃ ಶಯನಾನ್ಯಥ |
ಉಪಗೀಯಮಾನಾ ನಾರೀಭಿರಸ್ವಪನ್ ಕುರುನಂದನಾಃ ॥45॥
ಅನಂತರ ಆ ಪುರುಷವ್ಯಾಘ್ರರು ಮುಂದೆ ಹೋಗಿ ಕೌರವರ ಸ್ತ್ರೀಯರ ಜೊತೆಯಲ್ಲಿ ಮಾತನಾಡಿ ವ್ಯಾಯಾಮ ಮೊದಲಾದ ದೈನಂದಿನಕರ್ಮಗಳನ್ನು ಮಾಡಿ ಅಹ್ನಿಕವನ್ನು ಮಾಡಿ ದಿವ್ಯಚಂದನವನ್ನು ಲೇಪಿಸಿಕೊಂಡು ಸಂತೋಷವುಳ್ಳ ಮನಸ್ಸಿನಿಂದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಒಳ್ಳೆಯ ಭೋಜನವನ್ನು ಮಾಡಿ ಶಯನಗಳನ್ನು ಪ್ರವೇಶಿಸಿದರು.
ಜಗಾಮ ತೇಷಾಂ ಸಾ ರಾತ್ರಿಃ ಪುಣ್ಯಾ ರತಿವಿಹಾರಿಣಾಮ್ |
ಸ್ತೂಯಮಾನಾಶ್ಚ ವಿಶ್ರಾಂತಾಃ ಕಾಲೇ ನಿದ್ರಾಮಥಾತ್ಯಜನ್ ॥46॥
ಸುಖೋಷಿತಾಸ್ತಾಂ ರಜನೀಂ ಪ್ರಾತಃ ಸರ್ವೇ ಕೃತಾಹ್ನಿಕಾಃ |
ಸಭಾಂ ರಮ್ಯಾಂ ಪ್ರವಿವಿಶುಃ ಕಿತವೈರಭಿಸಂವೃತಾಮ್ ॥47॥
ಆ ಮಂಗಳವಾದ ರಾತ್ರಿಯು ಅವರಿಗೆ ರತಿವಿಹಾರದಿಂದ ಕಳೆಯಿತು. ಪ್ರಾತಃಕಾಲದ ವೇಳೆಗೆ ವಿಶ್ರಾಂತಿಯನ್ನು ಪಡೆದು ಸೂತ ಮೊದಲಾದವರಿಂದ ಸ್ತೋತ್ರಮಾಡಲ್ಪಟ್ಟು ಅವರು ಎಚ್ಚರಗೊಂಡರು. ಎಲ್ಲರೂ ಆ ರಾತ್ರಿಯನ್ನು ಸುಖವಾಗಿ ಕಳೆದು ಪ್ರಾತಃಕಾಲದಲ್ಲಿ ಅಹ್ನಿಕಗಳನ್ನು ಮಾಡಿ ದ್ಯೂತವನ್ನು ಆಡುವವರಿಂದ ತುಂಬಿದ್ದ ಆ ರಮ್ಯವಾದ ಸಭೆಯನ್ನು ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನಾಶೀತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಏಕಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಭೀಮಾದಿಭಿಃ ಸ ವಿದುರೇಣ ಚ ವಾರ್ಯಮಾಣೋ
ದ್ಯೂತೇ ನಿಧಾಯ ಪಣಮಪ್ಯಖಿಲಂ ಸ್ವವಿತ್ತಂ |
ಗಾಂಧಾರಕೇಣ ವಿದಿತಾಕ್ಷಹೃದಾ ಜಿತೋ ದ್ರಾಕ್
ಪಾಂಡೋಃ ಸುತೋಽಥ ನಕುಲಂ ನ್ಯದಧಾತ್ ಪಣಾಯ ॥
ಭೀಮ ಮುಂತಾದವರೂ ವಿದುರನೂ ತಡೆಯುತ್ತಿದ್ದರೂ ಧರ್ಮರಾಜ ತನ್ನೆಲ್ಲ ಸಂಪತ್ತನ್ನೂ ಜೂಜಿನಲ್ಲಿ ಪಣವಿಟ್ಟು ಜೂಜಿನ ಮರ್ಮಜ್ಞನಾದ ಶಕುನಿಯಿಂದ ಬೇಗನೆ ಪರಾಜಿತನಾದ. ಬಳಿಕ ನಕುಲನನ್ನು ಪಣಕ್ಕಿಟ್ಟ.
* * * *
ಎಂಭತ್ತನೆಯ ಅಧ್ಯಾಯ
(ಶಕುನಿ ಮತ್ತು ಯುಧಿಷ್ಠಿರ ಸಂವಾದ. ದ್ಯೂತ ನಿರ್ಧಾರ ಮತ್ತು ಉಪಕ್ರಮ)
ವೈಶಂಪಾಯನಃ
ವೀರಾಃ ಪ್ರವಿಶ್ಯ ತಾಂ ಪಾರ್ಥಾ ಯುಧಿಷ್ಠಿರಪುರೋಗಮಾಃ |
ಸಮೇತ್ಯ ಪಾರ್ಥಿವಾನ್ ಸರ್ವಾನ್ ಯಥಾರ್ಹಮಭಿಪೂಜ್ಯ ಚ ॥1॥
ಯಥಾವಯಃ ಸಮೀಯಾನಾ ಉಪವಿಷ್ಟಾ ಯಥಾರ್ಹತಃ |
ಆಸನೇಷು ವಿಚಿತ್ರೇಷು ಸ್ವಚ್ಛಾಸ್ತರಣವತ್ಸು ಚ ॥2॥

ವೀರರಾದ ಯುಧಿಷ್ಠಿರ ಮೊದಲಾದ ಪಾಂಡವರು ಸಭೆಯನ್ನು ಪ್ರವೇಶಿಸಿ ಎಲ್ಲಾ ರಾಜರ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಅವರವರ ಯೋಗ್ಯತೆಗೆ ಅನುಗುಣವಾಗಿ ಪೂಜಿಸಿ ತಮ್ಮ ಯೋಗ್ಯತೆಗೆ ಅನುಗುಣವಾಗಿ ವಿಧವಿಧವಾದ ವಿಚಿತ್ರವಾದ ಸ್ವಚ್ಛವಾದ ಆಸ್ತರಣಗಳನ್ನು ಹೊಂದಿದ್ದ ಆಸನದಲ್ಲಿ ಕುಳಿತು ಕೊಂಡರು.

ಅಥ ತೇಷು ಪ್ರವಿಷ್ಟೇಷು ಸರ್ವೇಷು ಚ ನೃಪೇಷು ಚ |
ಶಕುನಿಃ ಸೌಬಲಸ್ತತ್ರ ಯುಧಿಷ್ಠಿರಮಭಾಷತ ॥3॥
ಉಪಸ್ತೀರ್ಣಾ ಸಭಾ ರಾಜನ್ ವಯಂ ಚೈವ ಕೃತಕ್ಷಣಾಃ |
ಅಕ್ಷಾನುಪ್ತತ್ವ ದೇವನಸ್ಯ ಸಮಯೋಽಸ್ತು ಯುಧಿಷ್ಠಿರ ॥4॥

ಅನಂತರ ಎಲ್ಲಾ ರಾಜರೂ ಕುಳಿತುಕೊಂಡ ಮೇಲೆ ಸುಬಲಪುತ್ರನಾದ ಶಕುನಿಯು ಯುಧಿಷ್ಠಿರನನ್ನು ಕುರಿತು ಹೀಗೆ ಮಾತಮಾಡಿದನು. ರಾಜನೇ! ಸಭೆಯಲ್ಲಿ ಪಗಡೆ ಹಾಸನ್ನು ಹಾಸಿದೆ ನಾವೂ ಸಹ ದಾಳಗಳನ್ನು ಉರುಳಿಸಿ ಆಡಲು ಸಿದ್ಧರಾಗಿದ್ದೇವೆ. ದ್ಯೂತದ ವಿಷಯದಲ್ಲಿ ಮೊದಲು ನಿಬಂಧನೆಯುಂಟಾಗಲಿ.

ಯುಧಿಷ್ಠಿರಃ

ನಿಕೃತ್ಯಾ ದೇವನಂ ಪಾಪಂ ನ ಕ್ಷಾತ್ರೋಽತ್ರ ಪರಾಕ್ರಮಃ |
ನ ಚ ನೀತಿರ್ಧ್ರುವಂ ರಾಜನ್ ಕಿಂ ತ್ವಂ ದ್ಯೂತಂ ಪ್ರಶಂಸಸಿ ॥5॥
ನಚ ಮಾಯಾಂ ಪ್ರಶಂಸಂತಿ ಕೃತಿನಃ ಕಿತವಸ್ಯ ಹ |
ಶಕುನೇ ಮೈವ ನೋ ಜೈಷೀರಮಾರ್ಗೇಣ ನೃಶಂಸವತ್ ॥6॥

ಎಲೈ ರಾಜನೇ! ದ್ಯೂತವು ಒಂದು ಮೋಸದ ಪಾಪದ ಕ್ರಿಯೆ. ಇಲ್ಲಿ ಕ್ಷತ್ರಿಯರ ಪರಾಕ್ರಮಕ್ಕೆ ಅವಕಾಶವಿಲ್ಲ. ಇಲ್ಲಿ ಧ್ರುವವಾದ ನೀತಿಯು ಒಂದಿಲ್ಲ. ನೀನು ಏಕೆ ದ್ಯೂತವನ್ನು ಪ್ರಸಂಶಿಸುತ್ತಿದ್ದೀಯೆ? ವಿವೇಕಿಗಳಾದವರು ಆಟಗಾರರ ಮೋಸಗಳನ್ನು (ಮೋಸದ ಆಟಗಳನ್ನು) ಪ್ರಶಂಸಿಸುವುದಿಲ್ಲ. ಎಲೈ ಶಕುನಿಯೇ! ಕ್ರೌರ್ಯದಿಂದ ಕೂಡಿದವನಾಗಿ ನೀನು ನಮ್ಮನ್ನು ಅಮಾರ್ಗದಿಂದ ಗೆಲ್ಲುವುದು ಬೇಡ.

ಶಕುನಿಃ

ಯೋಽನ್ವೇತಿ ಸಂಖ್ಯಾಂ ನಿಕೃತೌ ವಿಧಿಜ್ಞಃ
    ಚೇಷ್ಟಾಸ್ವಖಿನ್ನಃ ಕಿತವೋಽಕ್ಷಜಾಸು |
ಮಹಾಮತಿರ್ಯೋಽನುಜಾನಾತಿ ದ್ಯೂತಂ
    ಸ ವೈ ಸರ್ವಂ ಸಹತೇ ಪ್ರಕ್ರಿಯಾಸು ॥7॥

ಯಾವ ಆಟಗಾರನು ಬಿದ್ದಗರಗಳನ್ನು ಹಿಂಬಾಲಿಸುತ್ತಾನೆಯೋ ನಿಕೃತಿಯ ವಿಧಿಗಳನ್ನು ತಿಳಿದು ಪಗಡೆಯ ಕಾಯಿಗಳ ನಡಿಗೆಯಲ್ಲಿ ಛದ್ಮರಹಿತನಾಗಿರುತ್ತಾನೆಯೋ ಅಂತಹ ಮೇಧಾವಿಯಾದವನು ದ್ಯೂತವನ್ನು ಅನುಮೋದಿಸುತ್ತಾನೆ. ಅವನು ಉಳಿದ ಎಲ್ಲಾ ಕಾರ್ಯಗಳಲ್ಲಿಯೂ ಸಮರ್ಥನಾಗಿರುತ್ತಾನೆ.

ಅಕ್ಷಗ್ರಹಃ ಸೋಽಭಿಭವೇತ್ ಪರಂ ತು
    ತೇನೈವ ಕಾಲೋ ಭವತೀದಮಾತ್ಥ |
ದೀವ್ಯಾವಹೇ ಪಾರ್ಥಿವ ಮಾ ವಿಶಂಕಾಂ
    ಕುರುಷ್ವ ಪಾಣಂ ಚಿರಂ ಚ ಮಾ ಕೃಥಾಃ ॥8॥

ಅಕ್ಷಗ್ರಹವು ಒಬ್ಬನನ್ನು ಪರಾಭವಗೊಳಿಸುತ್ತದೆ. ಅವನ ದುಃಖಕಾಲವು ಇನ್ನೊಬ್ಬನಿಗೆ ವಿಹಾರದ ಕಾಲವಾಗುತ್ತದೆ. ಅಮಾರ್ಗದಿಂದ ನಮ್ಮನ್ನು ಗೆಲ್ಲಬೇಡ ಎಂದು ನೀನೇ ಹೇಳಿದ್ದೀಯೆ. ಎಲೈ ರಾಜನೇ! ನಾವಿಬ್ಬರೂ ಆಟವಾಡೋಣ ಶಂಕಿಸಬೇಡ. ನಿನ್ನ ಪಣವನ್ನು ಹೇಳು. ವಿಲಂಬ ಮಾಡಬೇಡ.

ಯುಧಿಷ್ಠಿರಃ

ಏವಮಾಹಾಯಮಸಿತೋ ದೇವಲೋ ಮುನಿಸತ್ತಮಃ |
ಇಮಾನಿ ಶೋಕದ್ವಾರಾಣಿ ಯೋ ವೈ ಸಂಚರತೇ ಸದಾ ॥9॥
ಇದಂ ವೈ ದೇವನಂ ಪಾಪಂ ಮಾಯಯಾ ಕಿತವೈಃಸಹ |
ಧರ್ಮೇಣ ತು ಜಯೋ ಯುದ್ಧೇ ತತ್ ಪರಂ ನ ತು ದೇವನಮ್ ॥
ನಾರ್ಯಾ ಮ್ಲೇಚ್ಛಂತಿ ಭಾಷಾಭಿರ್ಮಾಯಯಾ ನ ಚರಂತ್ಯುತ |
ಅಜಿಹ್ಮಮಶಠಂ ಯುದ್ಧಮೇತತ್ ಸತ್ಪುರುಷವ್ರತಮ್ ॥11॥

ಋಷಿಶ್ರೇಷ್ಠರಾದ ಅಸಿತರು ಮತ್ತು ದೇವಲರು ಹೀಗೆ ಹೇಳಿದ್ದಾರೆ. ಅಕ್ಷಕಿತವರ ಜೊತೆಯಲ್ಲಿ ಆಟವನ್ನು ಆಡುವುದು ಒಂದು ಪಾಪದ ಕಾರ್ಯ. ಅದರಲ್ಲಿಯೂ ಮೋಸದಿಂದ ಆಡುವುದು ಇನ್ನೂ ಪಾಪಕರವಾದುದು. ಯಾರು ಅದರಲ್ಲಿಯೇ ಆಸಕ್ತನಾಗಿರುತ್ತಾನೆಯೊ ಅವನು ಈ ಶೋಕದ್ವಾರಗಳನ್ನು ಹೊಂದುತ್ತಾನೆ. ಯುದ್ಧದಲ್ಲಿ ಜಯವು ಮಾತ್ರ ಪುಣ್ಯಪ್ರದವಾದುದು. ಆದ್ದರಿಂದ ಅಕ್ಷಕ್ರೀಡೆಯು ಎಂದೂ ಶ್ರೇಷ್ಠವಲ್ಲ. ಆರ್ಯರು ಮ್ಲೇಚ್ಛಭಾಷೆಗಳಿಂದ ವ್ಯವಹರಿಸುವುದಿಲ್ಲ. ಕಪಟದಿಂದ ಏನನ್ನೂ ಆಚರಿಸವುದಿಲ್ಲ. (ಅಕ್ಷಕ್ರೀಡೆಯಲ್ಲಿ ರತರಾದವರು ಎದುರಾಳಿಗೆ ತಿಳಿಯದ ಭಾಷೆಯಲ್ಲಿ ಮಾತನಾಡಿಕೊಂಡು ಮೋಸದ ನಡೆಗಳನ್ನು ನಡೆಸುತ್ತಾರೆ.) ಯುದ್ಧವಾದರೋ ಕುಟಿಲತೆಯಿಂದ ಮತ್ತು ಮೋಸದಿಂದ ದೂರವಾದುದು. ಅದು ಸತ್ಪುರುಷರ ವ್ರತ.

ಶಕ್ತಿತೋ ಬ್ರಾಹ್ಮಣಾರ್ಥಾಯ ಶಿಕ್ಷಿತುಂ ಪ್ರಯತಾಮಹೇ |
ತದ್ವೈ ವಿದ್ವಾನ್ ಮಾऽತಿದೇವೀರ್ಮಾ ಜೈಷೀಃ ಶಕುನೇ ಪರಮ್ ॥12॥

ನಮ್ಮ ಶಕ್ತಿಯಿದ್ದಷ್ಟು ಬ್ರಾಹ್ಮಣರನ್ನು ರಕ್ಷಿಸಲು ಮತ್ತು ದುಷ್ಟರನ್ನು ಶಿಕ್ಷಿಸಲು ನಾವು ಪ್ರಯತ್ನ ಪಡುತ್ತೇವೆ. ಅದನ್ನು ತಿಳಿದ ಎಲೈ

ಶಕುನಿಯೇ! ನಮ್ಮನ್ನು ಮೀರಿ ಆಟವಾಡಿ ನಮ್ಮನ್ನು ಗೆಲ್ಲಬೇಡ.
ನಾಹಂ ನಿಕೃತ್ಯಾ ಕಾಮೇಯಂ ಸುಖಾನ್ಯುತ ಧನಾನಿ ವಾ |
ಕಿಂ ತವಾಸ್ಯಾದ್ಯ ನಿಕೃತೇರ್ವಿತ್ತಮೇತೇನ ಯುಜ್ಯತೇ ||13||
ನಾನು ಮೋಸದಿಂದ ಸುಖವನ್ನಾಗಲೀ ಧನವನ್ನಾಗಲೀ ಬಯಸುವುದಿಲ್ಲ. ಶಕುನಿಯೇ ನೀನು ಈ ದಿನ ಮೋಸದಿಂದ ಸಂಪಾದಿಸಿದ ಧನವು ದುರ್ಯೋಧನನಲ್ಲಿ ಶಾಶ್ವತವಾಗಿ ಇರುವುದೆಂದು ತಿಳಿದಿದ್ದೀಯಾ?
ಶಕುನಿಃ
ಶ್ರೋತ್ರಿಯೋಽಶ್ರೋತ್ರಿಯಸುತಂ ನಿಕೃತ್ಯೈವ ಯುಧಿಷ್ಠಿರ |
ವಿದ್ವಾನವಿದುಷೋಽಭ್ಯೇತಿ ನಾಹುಸ್ತಾಂ ನಿಕೃತಿಂ ಜನಾಃ ||14||
ಯುಧಿಷ್ಠಿರನೇ! ವೇದಜ್ಞಾನವುಳ್ಳ ಶ್ರೋತ್ರಿಯನು ಶ್ರೋತ್ರಿಯನಲ್ಲದವನ ಮಗನನ್ನು ಗೆಲ್ಲುತ್ತಾನೆ. ವಿದ್ವಾಂಸನಾದವನು ವಿದ್ವಾಂಸನಲ್ಲದವನನ್ನು ಗೆಲ್ಲುತ್ತಾನೆ. ಅದನ್ನು ಲೋಕದಲ್ಲಿ ನಿಕೃತಿ(ಮೋಸ) ಎಂದು ಹೇಳುವುದಿಲ್ಲ. (ಶ್ರೋತ್ರಿಯನಾದವನು ಅಶ್ರೋತ್ರಿಯಮಗನನ್ನು ಮೋಸದಿಂದ ಗೆದ್ದರೆ ಮಾತ್ರ ಅದನ್ನು ಮೋಸವೆಂದು ಹೇಳುತ್ತಾರೆ. ವಿಷಯವನ್ನು ತಿಳಿದವನನ್ನು ಯಾವರೀತಿಯಿಂದ ಗೆದ್ದರೂ ಅದು ಮೋಸವೆನಿಸುವುದಿಲ್ಲ.)
ಅಕ್ಷೈರ್ಹಿ ಶಿಕ್ಷಿತೋಽಭ್ಯೇತಿ ನಿಕೃತ್ಯೈವ ಯುಧಿಷ್ಠಿರ |
ಅಕೃತಾಸ್ತ್ರಂ ಕೃತಾಸ್ತ್ರಶ್ಚ ದುರ್ಬಲಂ ಬಲವತ್ತರಃ ||15||
ಯುಧಿಷ್ಠಿರನೇ! ಅಕ್ಷದಲ್ಲಿ ಶಿಕ್ಷಿತನಾದವನು ಶಿಕ್ಷಿತನಲ್ಲದ ಇನ್ನೊಬ್ಬನನ್ನು ಎದುರಿಸುವುದು ನಿಕೃತಿಯಿಂದಲೇ. ಶಸ್ತ್ರವಿದ್ಯೆಯನ್ನು ಬಲ್ಲವನು ಶಸ್ತ್ರವಿದ್ಯೆಯನ್ನು ತಿಳಿಯದವನ ಮೇಲೆ ಜಯವನ್ನು ಸಾಧಿಸುವುದು ಬಲಿಷ್ಠನಾದವನು ದುರ್ಬಲನಾದವನ ಮೇಲೆ ಜಯವನ್ನು ಸಾಧಿಸುವುದು ಸಹ ಒಂದು ರೀತಿ ನಿಕೃತಿಯಿಂದಲೇ. (ಅಂತಹ ನಿಕೃತಿಯು ದೋಷವಲ್ಲ.)
ಶಕುನಿಃ
ಏವಂ ತ್ವಂ ಮಾಮಿಹಾಭ್ಯೇತ್ಯ ನಿಕೃತಿಂ ಯದಿ ಮನ್ಯಸೇ |
ದೇವನಾದ್ ವಿನಿವರ್ತಸ್ವ ಯದಿ ತೇ ವಿದ್ಯತೇ ಭಯಮ್ ||16||
ಹಾಗೆ ನೀನು ನನ್ನ ಬಳಿಗೆ ಬಂದು ನನ್ನ ಆಟವು ನಿಕೃತಿ (ಮೋಸ) ಎಂದು ತಿಳಿಯುವುದಾದರೆ, ನಿನಗೆ ಭಯವಿರುವ ಕಾರಣ ನೀನು ಆಟದಿಂದ ನಿವೃತ್ತನಾಗು.
ಯುಧಿಷ್ಠಿರಃ
ಆಹೂತೋ ನ ನಿವರ್ತೇಯಮಿತಿ ಮೇ ವ್ರತಮಾಹಿತಮ್ |
ವಿಧಿಶ್ಚ ಬಲವಾನ್ ರಾಜನ್ ದಿಷ್ಟಸ್ಯಾಸ್ಮಿ ವಶೇ ಸ್ಥಿತಃ ||17||
ಅಸ್ಮಿನ್ ಸಮಾಗಮೇ ಕೇನ ದೇವನಂ ನೌ ಭವಿಷ್ಯತಿ |
ಪ್ರತಿಪಾಣಶ್ಚ ಕೋ ನ್ಯಸ್ತಸ್ತತೋ ದ್ಯೂತಂ ಪ್ರವರ್ತತಾಮ್ ||18||
ದ್ಯೂತಕ್ಕೆ ಕರೆದಾಗ ನಾನು ನಿವೃತ್ತನಾಗುವುದಿಲ್ಲ ಎಂಬುವುದು ನನ್ನ ವ್ರತ. ರಾಜನೇ! ವಿಧಿಯು ಪ್ರಬಲವಾದುದು ಮತ್ತು ನಾನು ಅದರ ಶದಲ್ಲಿ ಇದ್ದೇನೆ. ಈ ಸಮಾಗಮದಲ್ಲಿ ನಮ್ಮಿಬ್ಬರಲ್ಲಿ ಯಾವ ಪಣದಿಂದ ಅಕ್ಷ ಕ್ರೀಡೆಯು ಉಂಟಾಗುವುದು? ನೀನು ಪಣಕ್ಕೆ ಪ್ರತಿಯಾಗಿ ಏನನ್ನು ಇಡುತ್ತಿದ್ದೀಯೆ ಎಂದು ಹೇಳು. ಅನಂತರ ದ್ಯೂತವು ಜರುಗಲಿ.
ದುರ್ಯೋಧನಃ
ಅಹಂ ದಾತಾಸ್ಮಿ ರತ್ನಾನಾಂ ಧನಾನಾಂ ಚ ವಿಶಾಂಪತೇ |
ಮದರ್ಥೇ ದೇವಿತಾ ಚಾಯಂ ಶಕುನಿರ್ಮಾತುಲೋ ಮಮ ||19||
ರಾಜನೇ! ನಾನು ರತ್ನಗಳನ್ನು ಮತ್ತು ಧನಗಳನ್ನು ಕೊಡುವೆನು. ನನ್ನ ಸೊದರಮಾವನಾದ ಶಕುನಿಯು ನನ್ನ ಪರವಾಗಿ ಆಡುವನು.
ಯುಧಿಷ್ಠಿರಃ
ಅನ್ಯೇನಾನ್ಯಸ್ಯ ವಿಷಮಂ ದೇವನಂ ಪ್ರತಿಭಾತಿ ಮೇ |
ಏತದ್ವಿದ್ವಾನುಪಾದತ್ಸ್ವ ಕಾಮಮೇವಂ ಪ್ರವರ್ತತಾಮ್ ||20||
ಒಬ್ಬನ ಪರವಾಗಿ ಮತ್ತೊಬ್ಬನು ಆಡುವುದು ವಿಷಮವಾದ ಆಟವೆಂದು ನನಗೆ ತೋರುತ್ತದೆ. ಇದನ್ನು ತಿಳಿದ ನೀನು ಪಣವನ್ನು ಹೇಳು. ಹಾಗೆಯೇ ಆಟವು ಮುಂದುವರೆಯಲಿ.
ವೈಶಂಪಾಯನಃ
ಪ್ರವರ್ತಮಾನೇ ದ್ಯೂತೇ ತು ರಾಜಾನಂ ಸರ್ವಪಾರ್ಥಿವಾಃ |
ಧೃತರಾಷ್ಟ್ರಂ ಪುರಸ್ಕೃತ್ಯ ವಿವಿಶುಸ್ತಾಂ ಸಭಾಂ ತತಃ ||21||
ಭೀಷ್ಮೋ ದ್ರೋಣಃ ಕೃಪಶ್ಚೈವ ವಿದುರಶ್ಚ ಮಹಾಮತಿಃ |
ನಾತೀವ ಪ್ರೀತಮನಸಸ್ತೇನ್ವವರ್ತಂತ ಭಾರತ ||22||
ದ್ಯೂತವು ಪ್ರವೃತ್ತವಾಗುತ್ತಿರಲು ಎಲ್ಲ ರಾಜರು ಧೃತರಾಷ್ಟ್ರನನ್ನು ಮುಂದೆಮಾಡಿಕೊಂಡು ಆ ಸಭೆಗೆ ಬಂದರು. ಎಲೈ ಭಾರತನೇ! ಭೀಷ್ಮ ದ್ರೋಣ ಕೃಪ ಮೇಧಾವಿಯಾದ ವಿದುರ ಇವರೆಲ್ಲರೂ ಬಹಳ ಸಂತೋಷವಿಲ್ಲದ ಮನಸ್ಸಿನಿಂದ ಧೃತರಾಷ್ಟ್ರನನ್ನು ಹಿಂಬಾಲಿಸಿದರು.
ತೇ ದ್ವಂದ್ವಶಃ ಪೃಥಕ್ ಚೈವ ಸಿಂಹಸ್ಕಂಧಾ ಮಹೌಜಸಃ |
ಸಿಂಹಾಸನಾನಿ ಭೂರೀಣಿ ವಿಚಿತ್ರಾಣಿ ಚ ಭೇಜಿರೇ ||23||
ಸಿಂಹಸ್ಕಂಧವುಳ್ಳ ಮಹಾಪರಾಕ್ರಮಿಗಳಾದ ಅವರು ಒಬ್ಬಬ್ಬರಾಗಿಯೂ ಇಬ್ಬಿಬ್ಬರಾಗಿಯೂ ಬಂದು ವಿಚಿತ್ರವಾದ ದೊಡ್ಡ

ಸಂಹಾಸನಗಳನ್ನು ಏರಿ ಕುಳಿತರು.
ಶುಶುಭೇ ಸಾ ಸಭಾ ರಾಜನ್ ರಾಜಭಿಸ್ತೈಃ ಸಮಾಗತೈಃ |
ದೇವೈರಿವ ಮಹಾಭಾಗೈಃ ಸಮುದೀರ್ಣಂ ತ್ರಿವಿಷ್ಟಪಮ್ ||24||
ಎಲೈ ರಾಜನೇ! ಅಲ್ಲಿಗೆ ಸಮಾಗತರಾದ ರಾಜರಿಂದಸಭೆಯು ಮಹಾನುಭಾವರಾದ ದೇವತೆಗಳಿಂದ ತುಂಬಿದ ಸ್ವರ್ಗದಂತೆ ಶೋಭಿಸಿತು.

ಸರ್ವೇ ವೇದವಿದಃ ಶೂರಾಃ ಸರ್ವೇ ಭಾಸ್ವರಮೂರ್ತಯಃ |
ಪ್ರಾವರ್ತತ ಮಹಾರಾಜ ಸುಹೃದ್ದ್ಯೂತಮನಂತರಮ್ ||25||
ಎಲ್ಲರೂ ವೇದಜ್ಞರು ಶೂರರು ಮತ್ತು ಕಾಂತಿಯುಕ್ತವಾದ ಶರೀರವುಳ್ಳವರು. ಮಹಾರಾಜನೇ ಅನಂತರ ಸೌಹಾರ್ದದ ದ್ಯೂತವು ಜರುಗಿತು.
ಯುಧಿಷ್ಠಿರಃ
ಅಯಂ ಬಹುಧನೋ ರಾಜನ್ ಸಾಗರಾವರ್ತಸನ್ನಿಭಃ |
ಮಣಿಹಾರೋತ್ತಮಃ ಶ್ರೀಮಾನ್ ಕನಕೋತ್ತಮಭೂಷಣಃ ||26||
ಏತದ್ರಾಜಧನಂ ಮಹ್ಯಂ ಪ್ರತಿಪಾಣೋಽತ್ರ ಕಸ್ತವ |
ಯೇನ ಮಾಂ ತ್ವಂ ಮಹಾರಾಜ ಧನೇನ ಪ್ರತಿದೀವ್ಯಸೇ |
ಭವತ್ವೇಷ ಕ್ರಮಸ್ತಾವಜ್ಜಯಾಮ್ಯೇನಂ ದುರೋದರಮ್ ||27||
ರಾಜನೇ! ಬಹು ಬೆಲೆಬಾಳುವ ಉತ್ತಮವಾದ ಸುವರ್ಣ- ಭೂಷಣಗಳಿಂದ ಕೂಡಿದ ಸಾಗರದ ಸುಳಿಯನ್ನು ಹೋಲುವ ಮಣಿಮಯವಾದ ಶ್ರೇಷ್ಠವಾದ ಕಾಂತಿಯುಕ್ತವಾದ ಹಾರವಾದ ಈ ರಾಜಧನವನ್ನು ನಾನು ಪಣವಾಗಿ ಇಡುತ್ತಿದ್ದೇನೆ. ಮಹಾರಾಜನೇ! ನೀನು ನನಗೆ ಎದುರಾಗಿ ಆಟವಾಡಲು ನಿನ್ನ ಪ್ರತಿಪಣವೇನು? ಈ ಕ್ರಮದಲ್ಲಿಯೇ ಪಂದ್ಯವು ಮುಂದೆ ಹೋಗಲಿ. ನಾನು ಈ ಆಟವನ್ನು ಗೆಲ್ಲುತ್ತೇನೆ.
ದುರ್ಯೋಧನಃ
ಸಂತಿ ಮೇ ಮಣಯಶ್ಚೈವ ಧನಾನಿ ವಿವಿಧಾನಿ ಚ |
ಮತ್ಸರಶ್ಚ ನ ಮೇಽರ್ಥೇಷು ಜಯಾಮ್ಯೈತದ್ ದುರೋದರಮ್ ||28||
ತನ್ನಲ್ಲಿ ಮಣಿಗಳೂ ವಿವಿಧವಾದ ಧನಗಳೂ ಇದೆ. ನನಗೆ ಐಶ್ವರ್ಯದಲ್ಲಿ ಮಾತ್ಸ್ಯರ್ಯವಿಲ್ಲ. ಈ ಆಟವನ್ನು ನಾವು ಗೆಲ್ಲುತ್ತೇವೆ.
ವೈಶಂಪಾಯನಃ
ಏತಚ್ಛ್ರುತ್ವಾ ತು ಶಕುನಿಃ ನಿಕೃತಿಂ ತಾಮುಪಾಶ್ರಿತಃ |
ತತೋ ಜಗ್ರಾಹ ಶಕುನಿಸ್ತಾನಕ್ಷಾನಕ್ಷತತ್ತ್ವವಿತ್ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ||29||
ಇದನ್ನು ಕೇಳಿದ ಶಕುನಿಯು ಮೋಸವನ್ನು ಆಶ್ರಯಿಸಿ ಅಕ್ಷತತ್ವವನ್ನು ತಿಳಿದ ಅವನು ಅಕ್ಷಗಳನ್ನು ಹಿಡಿದು ಉರುಳಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಶೀತಿತಮೋಧ್ಯಾಯಃ ||
|| ದ್ಯೂತಪರ್ವಣಿ ದ್ವಾದಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತನೆಯ ಅಧ್ಯಾಯವು ಮುಗಿಯಿತು.
*****
ಎಂಭತ್ತೊಂದನೆಯ ಅಧ್ಯಾಯ
(ದ್ಯೂತದಲ್ಲಿ ಧರ್ಮರಾಜನ ಪರಾಭವಸರಣಿ)
ಯುಧಿಷ್ಠಿರಃ
ತ್ವತ್ತಃ ಕೈತವಕೇನೈವ ಯಜ್ಜಿತೋಽಸ್ಮಿ ದುರೋದರಮ್ |
ಶಕುನೇ ಹಂತ ದೀವ್ಯಾವೋ ಗ್ಲಹಮಾನೌ ಸಹಸ್ರಶಃ ||1||
ಶಕುನಿಯೇ! ಮೋಸವನ್ನು ಆಶ್ರಯಿಸಿದ ನಿನ್ನಿಂದ ನಾನು ಆಟದಲ್ಲಿ ನಿನಗೆ ಸೋತಿರುವ ಕಾರಣ ಸಹಸ್ರಾರು ಸಂಖ್ಯೆಯಲ್ಲಿ ಪಣವನ್ನು ಇಟ್ಟು ಪುನಃ ದ್ಯೂತವನ್ನು ಆಡೋಣ.
ಇಮೇ ನಿಷ್ಕಸಹಸ್ರಸ್ಯ ಕುಂಭಿನೋ ಭರಿತಾಯುತಮ್ |
ಕೋಶೋ ಹಿರಣ್ಯಮಕ್ಷಯ್ಯಂ ಜಾತರೂಪಮನೇಕಶಃ |
ಏತದ್ ರಾಜಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ||2||
ಇವು ಅಯುತಾಯುತದ್ರವ್ಯಪೂರ್ಣವಾದ ಸುವರ್ಣದ ಹಂಡೆಗಳು. ಇದು ನನ್ನ ರಾಜಧನ. ಇದನ್ನು ಪಣವಾಗಿಟ್ಟು ನಿನ್ನ ಜೊತೆ ಆಡುತ್ತೇನೆ.
ವೈಶಂಪಾಯನಃ
ಇತ್ಯುಕ್ತಃ ಶಕುನಿಃ ಪ್ರಾಹ ಜಿತಮಿತ್ಯೇವ ತಂ ನೃಪಮ್ |
ಕೌರವಾಣಾಂ ಕುಲಕರಂ ಶ್ರೇಷ್ಠಂ ಪಾಂಡವಮಚ್ಯುತಮ್ ||3||
ಹೀಗೆ ಹೇಳಲ್ಪಟ್ಟ ಶಕುನಿಯು ಕೌರವಕುಲವರ್ಧನನಾದ, ತನ್ನ ಗುಣಗಳಿಂದ ಎಂದೂ ಚ್ಯುತನಾಗದ ಶ್ರೇಷ್ಠನಾದ ಧರ್ಮರಾಜನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.

ಯುಧಿಷ್ಠಿರಃ
ಅಯಂ ಸಹಸ್ರಸಮಿತೋ ವೈಯಾಘ್ರಃ ಸುಪ್ರವರ್ತಿತಃ |
ಸುಚಕ್ರೋಪಸ್ಕರಃ ಶ್ರೀಮಾನ್ ಕಿಂಕಿಣೀಜಾಲಮಂಡಿತಃ ॥4॥
ಸಂಹ್ರಾದನೋ ರಾಜರಥೋ ಯ ಇಹಾಸ್ಮಾನುಪಾವಹತ್ |
ಜೈತ್ರೋ ರಥವರಃ ಪುಣ್ಯೋ ಮೇಘಸಾಗರನಿಸ್ವನಃ ॥5॥
ಅಷ್ಟೌ ಯಂ ಕುಲಸಂಪನ್ನಾಃ ಸದಶ್ವಾ ರಾಷ್ಟ್ರಸಮ್ಮತಾಃ |
ವಹಂತಿ ನೈಷಾ ಮುಚ್ಯೇತ ಪದಾದ್ ಭೂಮಿಮುಪಸ್ಪೃಶನ್ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥6॥
ಇದು ಸಹಸ್ರ ರಥಗಳಿಗೆ ಸಮವಾದ ವ್ಯಾಘ್ರಚರ್ಮಗಳಿಂದ ಅಲಂಕೃತವಾದ ಸರಾಗವಾಗಿ ಚಲಿಸುವ ಒಳ್ಳೆಯ ಚಕ್ರಗಳನ್ನೂ ಕಿಂಕಿಣಿಯ ಮಾಲೆಗಳನ್ನೂ ಹೊಂದಿರುವ ಇಲ್ಲಿಗೆ ನಮ್ಮನ್ನು ಕರೆದು ಕೊಂಡುಬಂದ ರಾಜರಥ. ಇದು ಸಂತೋಷದಾಯಕವಾದ ಜಯಶೀಲವಾದ ಪವಿತ್ರವಾದ ಮೇಘ ಮತ್ತು ಸಾಗರದಂತೆ ಘೋಷವುಳ್ಳ ಶ್ರೇಷ್ಠವಾದ ರಥ. ಶ್ರೇಷ್ಠವಾದ ರಾಷ್ಟ್ರಸಂಮತವಾದ ಕುಲೀನವಾದ ಎಂಟು ಅಶ್ವಗಳು ಈ ರಥವನ್ನು ಎಳೆಯುತ್ತವೆ. ಈ ಅಶ್ವಗಳು ಎಂದೂ ರಣಭೂಮಿಯನ್ನು ತ್ಯಜಿಸಿ ಪಲಾಯನವನ್ನು ಮಾಡುವುದಿಲ್ಲ. ರಾಜನೇ! ಇದು ನನ್ನ ಧನ. ಇದನ್ನು ಪಣವಾಗಿಟ್ಟು ನಿನ್ನ ಜೊತೆ ಆಡುತ್ತೇನೆ.
ವೈಶಂಪಾಯನಃ
ತಮೇವಂವಾದಿನಂ ಪಾರ್ಥಂ ಪ್ರಹಸನ್ನಿವ ಸೌಬಲಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥7॥
ಹೀಗೆ ಮಾತನಾಡಿದ ಧರ್ಮರಾಜನನ್ನು ಕುರಿತು ಸೌಬಲನು ನಗುತ್ತಾ ಶಕುನಿಯು ನಾನು ಗೆದ್ದೆ ಎಂದೇ ಹೇಳಿದನು.
ಯುಧಿಷ್ಠಿರಃ
ಸಹಸ್ರಸಂಖ್ಯಾ ನಾಗಾ ಮೇ ಮತ್ತಾಸ್ತಿಷ್ಠಂತಿ ಸೌಬಲ |
ಹೇಮಕಕ್ಷ್ಯಾಃ ಕೃತಾಪೀಡಾಃ ಪದ್ಮಿನೋ ಹೇಮಮಾಲಿನಃ ॥8॥
ಸುದಂತಾ ರಾಜವಹನಾಃ ಸರ್ವಶಸ್ತ್ರಸಹಾ ಯುಧಿ |
ಶುಭ್ರದಂತಾ ಮಹಾಕಾಯಾಃ ಸರ್ವೇ ಚೇಷ್ಟಕರೇಣವಃ ॥9॥
ಸರ್ವೇ ಚ ಪುರಭೇತ್ತಾರೋ ನವಮೇಘನಿಭಾ ಗಜಾಃ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥10॥
ಶಕುನಿಯೇ! ನನ್ನಲ್ಲಿ ಒಂದು ಸಹಸ್ರ ಮದಿಸಿದ ಗಜಗಳಿವೆ. ಅವೆಲ್ಲವೂ ಸುವರ್ಣಕಕ್ಷೆಯಿಂದಲೂ ಮೂರ್ಧಾಭರಣದಿಂದಲೂ ಸುವರ್ಣಮಾಲೆಗಳಿಂದಲೂ ಅಲಂಕೃತವಾಗಿವೆ. ಒಳ್ಳೆಯ ದಂತಗಳನ್ನು ಹೊಂದಿರುವ ಅವು ಯುದ್ಧದಲ್ಲಿ ಎಲ್ಲಾ ಶಸ್ತ್ರಗಳನ್ನೂ ಸಹಿಸುವ ಸಾಮರ್ಥ್ಯವನ್ನು ಹೊಂದಿವೆ. ಎಲ್ಲವೂ ರಾಜರನ್ನೂ ಹೊತ್ತುಕೊಂಡು ಹೋಗುವಂತಹವು. ಶ್ವೇತವರ್ಣದ ದಂತಗಳನ್ನು ಹೊಂದಿರುವಂತಹವು. ಮಹಾಶರೀರವುಳ್ಳವು ಮತ್ತು ``ಕರೇಣ'' (ಚಿಕ್ಕಹೆಣ್ಣಾನೆ)ಗಳಿಗೆ ಪ್ರಿಯವಾದವು. ಹೊಸದಾದ ಮೇಘದ ಕಾಂತಿಯುಳ್ಳವು ಎಲ್ಲವೂ ಶತ್ರುಪುರವನ್ನು ಭೇದಿಸುವಂತಹವು. ಎಲೈ ರಾಜನೇ! ಇದು ನನ್ನ ಪಣ ಧನ. ಇದರಿಂದ ನಾನು ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ತಮೇವಂವಾದಿನಂ ಪಾರ್ಥಂ ಪ್ರಹಸನ್ನಿವ ಸೌಬಲಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥11॥
ಹೀಗೆ ಮಾತನಾಡಿದ ಧರ್ಮರಾಜನನ್ನು ಕುರಿತು ಸುಬಲಪುತ್ರನಾದ ಶಕುನಿಯು ನಾನು ಗೆದ್ದೆ ಎಂದೇ ಹೇಳಿದನು.
ಯುಧಿಷ್ಠಿರಃ
ಶತಂ ದಾಸೀಸಹಸ್ರಾಣಿ ತರುಣ್ಯೋ ಹೇಮಭೂಷಣಾಃ |
ಕಂಬುಕೇಯೂರಹಾರಿಣ್ಯೋ ನಿಷ್ಕಕಂಠ್ಯಃ ಸ್ವಲಂಕೃತಾಃ ॥12॥
ಮಹಾರ್ಹಮಾಲ್ಯಾಭರಣಾಃ ಸುವಸ್ತ್ರಾಶ್ಚಂದನೋಕ್ಷಿತಾಃ |
ಮಣಿಹೇಮ ಚ ಬಿಭ್ರತ್ಯಃ ಸರ್ವಾ ವೈ ಸೂಕ್ಷ್ಮವಾಸಸಃ ॥13॥
ಅನುಸೇವಾಂ ಚರಂತೀಮಾಃ ಕುಶಲಾ ನೃತ್ತಸಾಮಸು |
ಸ್ನಾತಕಾನಾಮಮಾತ್ಯಾನಾಂ ರಾಜ್ಞಾಂ ಚ ಮಮ ಶಾಸನಾತ್ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥14॥
ಈ ಒಂದು ಲಕ್ಷದಾಸಿಯರು ತರುಣಿಯರೂ ಸುವರ್ಣಭೂಷಿತರಾದವರೂ ಕಂಚುಕವನ್ನೂ ಕೇಯೂರವನ್ನು ಹಾರಗಳನ್ನೂ ಕಂಠಾಭರಣಗಳನ್ನೂ ಧರಿಸಿ ಅಲಂಕೃತರಾದವರು. ಒಳ್ಳೆಯ ಬೆಲೆಬಾಳುವ ಮಾಲೆಗಳನ್ನು ಮತ್ತು ಆಭರಣಗಳನ್ನು ಧರಿಸಿದರು. ಒಳ್ಳೆಯ ವಸ್ತ್ರಗಳನ್ನು ಧರಿಸಿ ಚಂದನವನ್ನು ಲೇಪಿಸಿದವರು. ರತ್ನಖಚಿತವಾದ ಸುವರ್ಣಾಭರಣವನ್ನು ಧರಿಸಿ ಸೂಕ್ಷ್ಮವಾದ ವಸ್ತ್ರಗಳನ್ನು ಧರಿಸಿದವರು. ಎಲ್ಲರೂ ಸೇವೆಮಾಡುವುದರಲ್ಲಿ ಕುಶಲರು. ಆಷ್ಟೇ ಅಲ್ಲದೆ ಬ್ರಾಹ್ಮಣರ ಮಂತ್ರಿಗಳ ಅಥವಾ ನನ್ನ ಶಾಸನದಂತೆ ನೃತ್ಯಗಾನಗಳನ್ನು ಮಾಡುವವರು. ರಾಜನೇ! ಇದನ್ನು ಪಣವಾಗಿಟ್ಟು ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮುವಾಚ ಹ ॥15॥

ಇದನ್ನು ಕೇಳಿದ ಶಕುನಿಯು ಮೊದಲೇ ನಿಶ್ಚಯಿಸಿ ಮೋಸವನ್ನು ಆಶ್ರಯಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದೇ ಹೇಳಿದನು.
ಯುಧಿಷ್ಠಿರಃ
ಏತಾವಂತ್ಯೇವ ದಾಸಾನಾಂ ಸಹಸ್ರಾಣ್ಯುತ ಸಂತಿ ಮೇ |
ಪ್ರದಕ್ಷಿಣಾನುಲೋಮಾಶ್ಚ ಪ್ರಾವಾರವಸನಾಃ ಸದಾ ॥16॥
ಪ್ರಾಜ್ಞಾ ಮೇಧಾವಿನೋ ದಕ್ಷಾ ಯುವಾನೋ ಮೃಷ್ಟಕುಂಡಲಾಃ |
ಪಾತ್ರಹಸ್ತಾ ದಿವಾರಾತ್ರಮತಿಥೀನ್ ಭೋಜಯಂತಿ ಯೇ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥17॥
ನನಗೆ ಇಷ್ಟೇ ಸಹಸ್ರ ಸಂಖ್ಯೆಯ ದಾಸರಿದ್ದಾರೆ. ಎಲ್ಲರೂ ಪ್ರದಕ್ಷಿಣಾಕಾರದ ಸುಳಿಗಳನ್ನೂ ಒಳ್ಳೆಯ ವಸ್ತ್ರಗಳನ್ನು ಧರಿಸಿದವರೂ ಪ್ರಾಜ್ಞರೂ ಮೇಧಾವಿಗಳೂ ದಕ್ಷರೂ ಹೊಳೆಯುವ ಕರ್ಣಕುಂಡಲಗಳನ್ನು ಧರಿಸಿದವರು ಇವರು ಹಗಲು ಮತ್ತು ರಾತ್ರಿ ಕೈಯಲ್ಲಿ ಪಾತ್ರೆಗಳನ್ನು ಹಿಡಿದು ಅತಿಥಿಗಳಿಗೆ ಬಡಿಸುತ್ತಾರೆ. ರಾಜನೇ! ಇದು ನನ್ನ ಧನ. ಇದನ್ನು ಪಣವಾಗಿಟ್ಟು ನಿನ್ನ ಜೊತೆಯಲ್ಲಿ ಆಡುವೆನು.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥18॥
ಇದನ್ನು ಕೇಳಿದ ಶಕುನಿಯು ಮೊದಲೇ ನಿಶ್ಚಯಿಸಿ ಮೋಸವನ್ನು ಅವಲಂಬಿಸಿ ಧರ್ಮರಾಜನನ್ನು ಕುರಿತು ನಾನು ಗೆದ್ದಿದ್ದೇನೆ ಎಂದೇ ಹೇಳಿದನು.
ಯುಧಿಷ್ಠಿರಃ
ರಥಾಸ್ತಾವಂತ ಏವೈತೇ ಹೇಮಭಾಂಡಾಃ ಪತಾಕಿನಃ |
ಹಯೈರ್ವಿನೀತೈಃ ಸಂಪನ್ನಾ ರಥಿಭಿಶ್ಚಿತ್ರಯೋಧಿಭಿಃ ॥19॥
ಏಕೈಕೋ ಯತ್ರ ಲಭತೇ ಸಹಸ್ರಪರಮಾಂ ಭೃತಿಮ್ |
ಯುಧ್ಯತೋಽಯುಧ್ಯತೋ ವಾಽಪಿ ವೇತನಂ ಮಾಸಕಲ್ಪಿತಮ್ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥20॥
ಇವು ಸುವರ್ಣಉಪಕರಣಗಳಿಂದಲೂ ಪತಾಕೆಗಳಿಂದಲೂ ಕೂಡಿದ ಅಷ್ಟೇ ಸಂಖ್ಯೆಯ (ಒಂದು ಲಕ್ಷ) ರಥಗಳು ಚೆನ್ನಾಗಿ ಶಿಕ್ಷಿಸಲ್ಪಟ್ಟ ಅಶ್ವಗಳಿಂದಲೂ ವಿಶಿಷ್ಟವಾಗಿ ಯುದ್ಧವನ್ನು ಮಾಡಬಲ್ಲ ರಥಿಕರಿಂದಲೂ ಕೂಡಿರುವಂತಹವು. ಒಬ್ಬೊಬ್ಬ ರಥಿಕನೂ ಯುದ್ಧಮಾಡಲಿ ಯುದ್ಧಮಾಡದೇ ಇರಲಿ ಒಂದು ತಿಂಗಳಿಗೆ ಒಂದು ಸಹಸ್ರ ನಿಷ್ಕಗಳಿಗೆ ಕಡಿಮೆಯಿಲ್ಲದ ಸುವರ್ಣವನ್ನು ವೇತನವಾಗಿ ಪಡೆಯುತ್ತಾನೆ. ರಾಜನೇ! ಇದು ನನ್ನ ಪಣಧನ ಇದರಿಂದ ನಾನು ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಇತ್ಯೇವಮುಕ್ತಃ ಪಾರ್ಥೇನ ಕೃತವೈರೋ ದುರಾತ್ಮವಾನ್ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥21॥
ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ದುಷ್ಟನೂ ದ್ವೇಷಿಯೂ ಆದ ಶಕುನಿಯು ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಯುಧಿಷ್ಠಿರಃ
ಅಶ್ವಾಂಸ್ತಿತ್ತಿರಿಕಲ್ಮಾಷಾನ್ ಗಾಂಧರ್ವಾನ್ ಹೇಮಮಾಲಿನಃ |
ದದೌ ಚಿತ್ರರಥಸ್ತುಷ್ಟೋ ಯಾಂಸ್ತಾನ್ ಗಾಂಡೀವಧನ್ವನೇ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥22॥
ತಿತ್ತಿರಿ ಪಕ್ಷಿಗಳಂತೆ ಕೆಂಪು-ಕಪ್ಪುವರ್ಣೋಪೇತವಾದ ಹೇಮಮಾಲೆಯನ್ನು ಧರಿಸಿದ ಇವು ಗಂಧರ್ವರ ಅಶ್ವಗಳು. ಇವುಗಳನ್ನು ಚಿತ್ರರಥಗಂಧರ್ವನು ಸಂತೋಷದಿಂದ ಅರ್ಜುನನಿಗೆ ಕೊಟ್ಟನು. ರಾಜನೇ! ಇದು ನನ್ನ ಪಣಧನ. ಇದರಿಂದ ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಭಾಷತ ॥23॥
ಇದನ್ನು ಕೇಳಿ ಮೊದಲೇ ನಿಶ್ಚಯಿಸಿದ್ದ ಶಕುನಿಯು ಮೋಸವನ್ನು ಆಶ್ರಯಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಯುಧಿಷ್ಠಿರಃ
ರಥಾನಾಂ ಶಕಟಾನಾಂ ಚ ಯಾನಾನಾಂ ಚಾಯುತಾನಿ ಮೇ |
ಯುಕ್ತಾನ್ಯೇವ ಹಿ ತಿಷ್ಠಂತಿ ವಾಹೈರುಚ್ಚಾವಚೈರ್ಹಯೈಃ ॥24॥
ಏವಂ ವರ್ಣಸ್ಯ ವರ್ಣಸ್ಯ ಸಮುಚ್ಚಯಸಹಸ್ರಶಃ |
ತಥಾ ಸಮುದಿತಾ ವೀರಾಃ ಸರ್ವೇ ವೀರಪರಾಕ್ರಮಾಃ |
ಕ್ಷೀರಂ ಪಿಬಂತಸ್ತಿಷ್ಠಂತಿ ಭುಂಜಾನಾಃ ಶಾಲಿತಂಡುಲಾನ್ ॥25॥
ಷಷ್ಟಿಸ್ತಾನಿ ಸಹಸ್ರಾಣಿ ಸರ್ವೇ ಪೃಥುಲವಕ್ಷಸಃ |

ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥26॥
ನನ್ನ ಬಳಿಯಲ್ಲಿ ಹತ್ತಾರು ಸಾವಿರ ರಥಗಳು ಗಾಡಿಗಳು ಮತ್ತು ಬೇರೆ ವಾಹನಗಳೂ ಇವೆ. ಯಾವಾಗಲೂ ಶ್ರೇಷ್ಠವಾದ ಮತ್ತು ಅಸಾಧಾರಣವಾದ ಅಶ್ವಗಳಿಂದ ಹೂಡಲ್ಪಟ್ಟಿರುತ್ತವೆ. ಒಂದೊಂದು, ಒಂದೊಂದು ಬಣ್ಣದ ಅಶ್ವಗಳನ್ನು ಹೊಂದಿರುವ ವಾಹನಗಳ ಒಂದೊಂದು ಗುಂಪಿನಲ್ಲಿಯೂ ಸಹಸ್ರಾರು ವಾಹನಗಳಿವೆ. (ಹಾಗೆಯೇ ಕ್ಷತ್ರಿಯರು ವೈಶ್ಯರು ಮತ್ತು ಶೂದ್ರರು ಇಂತಹ ರಥಿಕರನ್ನು ಮತ್ತು ಸಾರಥಿಗಳನ್ನು ಹೊಂದಿದ ಬೇರೆ ಬೇರೆ ಗುಂಪುಗಳು ಸಹಸ್ರ ಸಂಖ್ಯೆಯಲ್ಲಿವೆ) ಆ ವೀರರೆಲ್ಲರೂ ಪರಾಕ್ರಮಶಾಲಿಗಳಾದವರು. ಅವರೆಲ್ಲರೂ ಶಾಲ್ಯೋದನವನ್ನು ಭುಂಜಿಸಿ ಕ್ಷೀರಪಾನಮಾಡುವವರು. ವಿಸ್ತಾರವಾದ ವಕ್ಷಸ್ಥಳವುಳ್ಳ ಅಂತಹ ವೀರರು ಅರವತ್ತು ಸಾವಿರ ಜನರಿದ್ದಾರೆ. ಇದು ನನ್ನ ರಾಜಧನ. ರಾಜನೇ! ಅದರಿಂದ ನಿನ್ನ ಜೊತೆಯಲ್ಲಿ ಆಟವಾಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ ।
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥26॥
ಇದನ್ನು ಕೇಳಿದ ಶಕುನಿಯು ಮೊದಲೇ ಮನಸ್ಸಿನಲ್ಲಿ ನಿರ್ಧರಿಸಿ ಮೋಸವನ್ನು ಆಶ್ರಯಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದಳು.
ಯುಧಿಷ್ಠಿರಃ
ತಾಮ್ರಲೋಹೈಃ ಪರಿವೃತಾ ನಿಧಯೋ ಮೇ ಚತುಶ್ಶತಮ್ ।
ಪಂಚದ್ರೌಣಿಕ ಏಕೈಕಃ ಸುವರ್ಣಸ್ಯಾಹತಸ್ಯ ವೈ ।
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥27॥
ತಾಮ್ರದ ಹಂಡೆಗಳಲ್ಲಿ ತುಂಬಲ್ಪಟ್ಟ ನನ್ನ ನಾಲ್ಕುನೂರು ನಿಧಿಗಳಿವೆ ಒಂದೊಂದರಲ್ಲಿಯೂ ಪಂಚದ್ರೋಣ (ಖಂಡುಗ)ಪರಿಮಿತವಾದ ಶುದ್ಧವಾದ ಸುವರ್ಣಗಳಿದೆ. ರಾಜನೇ! ಇದು ನನ್ನ ಪಣಧನ. ಅದರಿಂದ ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ ।
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಭಾಷತ ॥28॥
ಇದನ್ನು ಕೇಳಿದ ಶಕುನಿಯು ಮೊದಲೇ ನಿರ್ಧರಿಸಿ ಮೋಸವನ್ನು ಅವಲಂಬಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕಾಶೀತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ತ್ರಯೋದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತೊಂದನೆಯ ಅಧ್ಯಾಯವು ಮುಗಿಯಿತು.
*****
ಎಂಭತ್ತೆರಡನೆಯ ಅಧ್ಯಾಯ
(ವಿದುರನಿಂದ ಧೃತರಾಷ್ಟ್ರನನ್ನು ಕುರಿತು ದುರ್ಯೋಧನನನ್ನು ನಿಂದಿಸಿ ದ್ಯೂತವನ್ನು ನಿಲ್ಲಿಸುವಂತೆ ಒತ್ತಾಯ.)
ವೈಶಂಪಾಯನಃ
ಏವಂ ಪ್ರವೃತ್ತೇ ದ್ಯೂತೇ ತು ಘೋರೇ ಸರ್ವಾಪಹಾರಿಣಿ ।
ಸರ್ವಸಂಶಯನಿರ್ಮೋಕ್ತಾ ವಿದುರೋ ವಾಕ್ಯಮಬ್ರವೀತ್ ॥1॥
ಹೀಗೆ ವಸರ್ವಾಪಹಾರಕವಾದ ಘೋರವಾದ ದ್ಯೂತವು ನಡೆಯುತ್ತಿರಲು ಸರ್ವಸಂಶಯಪರಿಹಾರಕನಾದ ವಿದುರನು ಧೃತರಾಷ್ಟ್ರನನ್ನು ಕುರಿತು ಮಾತನಾಡಿದನು.
ಮಹಾರಾಜ ವಿಜಾನೀಹಿ ಯತ್ ತ್ವಾಂ ವಕ್ಷ್ಯಾಮಿ ತಚ್ಛೃಣು ।
ಮುಮೂರ್ಷೋರೌಷಧಮಿವ ನ ರೋಚೇತ ವಚೋ ಮಮ ॥2॥
ಮಹಾರಾಜನೇ! ನಾನು ಏನು ಹೇಳುವೆನೋ ಅದನ್ನು ಕೇಳಿ ತಿಳಿದುಕೋ. ಮರಣವು ಸನ್ನಿಹಿತವಾದ ಮನುಷ್ಯನಿಗೆ ಔಷಧವು ಹಿಡಿಸದಿರುವಂತೆ ನನ್ನ ಮಾತು ನಿನಗೆ ಹಿಡಿಸದೇ ಇರಬಹುದು.
ಯೋ ವೈ ಪುರಾ ಜಾತಮಾತ್ರೋ ರುರಾವ
ಗೋಮಾಯುವದ್ ವಿಸ್ವರಂ ಪಾಪಚೇತಾಃ ।
ದುರ್ಯೋಧನೋ ಭಾರತಾನಾಂ ಕುಲಘ್ನಃ
ಸೋಽಯಂ ಯುಕ್ತೋ ಭವಿತಾ ಕಾಲಹೇತುಃ ॥3॥
ಈ ದುರ್ಯೋಧನನು ಹುಟ್ಟಿದ ತಕ್ಷಣವೇ ನರಿಯಂತೆ ಅಪಸ್ವರದಂತೆ ಕಿರುಚಿದನು. ಇವನು ಪಾಪಬುದ್ಧಿಯುಳ್ಳವನು. ಮತ್ತು ಕುಲನಾಶಕನಾದವನು. ಇವನು ಸರ್ವರ ಮರಣಕ್ಕೆ ಕಾರಣನಾಗುವನು.
ಗೃಹೇ ವಸಂತಂ ಗೋಮಾಯುಂ ತ್ವಂ ವೈ ಮಂದೋ ನ ಬುಧ್ಯಸೇ ।
ದುರ್ಯೋಧನಸ್ವರೂಪೇಣ ಶೃಣು ಕಾಮ್ಯಾಂ ಗಿರಂ ಮಮ ॥4॥
ಮಂದಬುದ್ಧಿಯುಳ್ಳ ನೀನು ದುರ್ಯೋಧನನ ಆಕಾರವನ್ನು ತಳೆದು ಮನೆಯಲ್ಲಿರುವ ಈ ನರಿಯನ್ನು ತಿಳಿಯುತ್ತಿಲ್ಲ. ನೀನು ಬಯಸಬೇಕಾದಂತಹ ನನ್ನ ಮಾತುಗಳನ್ನು ಕೇಳು.
ಮಧು ವೈ ಮಾಧ್ವಿಕೋ ಲಬ್ಧ್ವಾ ಪ್ರಪಾತಂ ನಾವಬುಧ್ಯತೇ ।
ಆರುಹ್ಯ ತೇನ ಸಜ್ಜೇತ ಪತನಂ ವಾಽಧಿಗಚ್ಛತಿ ॥5॥

ಮಧುವನ್ನು ನೋಡಿದ ಮಧುಕಾರನು ತಾನು ಬೀಳುವುದನ್ನು ಗಮನಿಸುವುದಿಲ್ಲ. ಅವನು ಅಗ್ರಭಾಗದಲ್ಲಿ (ಮಧುವಿರುವ) ವೃಕ್ಷವನ್ನು ಏರಿ ಮಧುವನ್ನು ಪಡೆಯುತ್ತಾನೆ. ಅಥವಾ ಕೆಳಗೆ ಬೀಳುತ್ತಾನೆ.

ಸೋಽಯಂ ಮತ್ತೋ ದೇವನೇನ ಮಧುವನ್ನ ಪರೀಕ್ಷತೇ |
ಪ್ರಪಾತಂ ಬುಧ್ಯತೇ ನೈವ ವೈರಂ ಕೃತ್ವಾ ಮಹಾರಥೈಃ |
ವಿದಿತಂ ಮೇ ಮಹಾರಾಜ ಸ್ವೇ ಪರೇ ವಾಽಸಮಂಜಸಮ್ ||6||

ಈ ದ್ಯೂತದಿಂದ ಮತ್ತನಾದ ದುರ್ಯೋಧನನು ಮಧುಕಾರನಂತೆ ಬುದ್ಧಿಶೂನ್ಯನಾಗಿದ್ದಾನೆ. ಮಹಾರಥರಾದ ಪಾಂಡವರ ಜೊತೆಯಲ್ಲಿ ವೈರವನ್ನು ಮಾಡಿ ತನ್ನ ಅಧಃಪಾತವನ್ನು ಗಮನಿಸುತ್ತಿಲ್ಲ. ಮಹಾರಾಜನೇ! ಇವನು ತನ್ನವರ ವಿಷಯದಲ್ಲಿಯೂ ಪರರಾದ ಪಾಂಡವರ ವಿಷಯದಲ್ಲಿಯೂ ಅಸಮಂಜಸನಾದವನು ಎಂದು  ನಾನು ತಿಳಿದಿದ್ದೇನೆ.

ಅಂಧಕಾ ಯಾದವಾ ಭೋಜಾಃ ಸಮೇತಾಃ ಕಂಸಮತ್ಯಜನ್ |
ನಿಯೋಗಾಚ್ಚ ಹತೇ ತಸ್ಮಿನ್ ಕೃಷ್ಣೇನಾಮಿತ್ರಘಾತಿನಾ |
ಏವಂ ತೇ ಜ್ಞಾತಯಃ ಸರ್ವೇ ಮೋದಮಾನಾಃ ಶತಂ ಸಮಾಃ ||7||

ಅಂಧಕರು ಯಾದವರು ಭೋಜರು ಎಲ್ಲರೂ ಸೇರಿ ಕಂಸನನ್ನು ತ್ಯಜಿಸಿದರು. ಅವರ ಪ್ರಾರ್ಥನೆಯಂತೆ ಶತ್ರು ಸಂಹಾರಕನಾದ ಕೃಷ್ಣನಿಂದ ಅವನು ಹತನಾದ ಮೇಲೆ ಎಲ್ಲಾ ಸಂಬಂಧಿಬಾಂಧವರು ಸಂತೋಷದಿಂದ ನೂರು ಕಾಲ ಒಟ್ಟಿಗೆ ಇದ್ದಾರೆ.

ತ್ವನ್ನಿಯುಕ್ತಃ ಸವ್ಯಾಸಾಚೀ ನಿಗೃಹ್ಣಾತು ಸುಯೋಧನಮ್ |
ನಿಗ್ರಹಾದಸ್ಯ ಪಾಪಸ್ಯ ಮೋದಂತಾಂ ಕುರವಃ ಸುಖಮ್ ||8||

ನಿನ್ನ ಅಪ್ಪಣೆಯಂತೆ ಅರ್ಜುನನು ಸುಯೋಧನನನ್ನು ನಿಗ್ರಹಿಸಲಿ. ಈ ಪಾಪಿಯನ್ನು ನಿಗ್ರಹಿಸಿದ ಮೇಲೆ ಕುರುಗಳು ಸಂತೋಷದಿಂದ ಇರಲಿ.

ಕಾಕೇನೇಮಾಂಶ್ಚಿತ್ರಬರ್ಹಾನ್ ಶಾರ್ದೂಲಾನ್ ಕ್ರೋಷ್ಟುಕೇನ ಚ |
ಕ್ರೀಣೀಷ್ವ  ಪಾಂಡವಾನ್ ರಾಜನ್ ಮಾ ಮಜ್ಜೀಃ ಶೋಕಸಾಗರೇ ||

ಮಹಾರಾಜನೇ! ಕಾಗೆಯಿಂದ ನವಿಲುಗಳನ್ನು ಕೊಂಡುಕೊಂಡಂತೆ ನರಿಗಳನ್ನು ಕೊಟ್ಟು ವ್ಯಾಘ್ರಗಳನ್ನು ಕೊಂಡುಕೊಂಡಂತೆ ಪಾಂಡವರನ್ನು ಕೊಂಡುಕೋ. ಶೋಕ ಸಾಗರದಲ್ಲಿ ಮುಳುಗ ಬೇಡ.

ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ |
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ||10||

ಕುಲದ ಸಲುವಾಗಿ ಒಬ್ಬ ಪುರುಷನನ್ನು ತ್ಯಜಿಸಬೇಕು. ಗ್ರಾಮದ ಸಲುವಾಗಿ ಒಂದು ಕುಲವನ್ನು ತ್ಯಜಿಸಬೇಕು. ರಾಷ್ಟ್ರದ ಸಲುವಾಗಿ ಒಂದು ಗ್ರಾಮವನ್ನು ತ್ಯಜಿಸಬೇಕು. ತನ್ನ ಸಲುವಾಗಿ ಪೃಥ್ವಿಯನ್ನೇ ತ್ಯಜಿಸಬೇಕು.

ಸರ್ವಜ್ಞಃ ಸರ್ವಭಾಷೀ ಚ ಸರ್ವಶತ್ರುಭಯಂಕರಃ |
ಇತಿ ಸ್ಮ ಭಾಷತೇ ಕಾವ್ಯೋ ಜಂಭತ್ಯಾಗೇ ಮಹಾಸುರಾನ್ ||11||

ಹೀಗೆ ಸರ್ವಜ್ಞರೂ ಸರ್ವಭಾಷಾವಿಶಾರದರೂ ಸರ್ವಶತ್ರುಭಯಂಕರರೂ ಆದ ಶುಕ್ರಾಚಾರ್ಯರು ಜಂಭಾಸುರನನ್ನು ತ್ಯಾಗಮಾಡುವ ವಿಷಯದಲ್ಲಿ ಮಹಾಸುರರನ್ನು ಕುರಿತು ಹೇಳಿದರು.

ಹಿರಣ್ಯಷ್ಠೀವಿನಃ ಕಾಂಶ್ಚಿತ್ ಪಕ್ಷಿಣೋ ವನಗೋಚರಾನ್ |
ಗೃಹೇ ಕಿಲ ಕೃತಾವಾಸಾನ್ ಲೋಭಾದ್ ರಾಜನ್ನಪೀಡಯತ್ ||12||

ಎಲೈ ರಾಜನೇ! ಸುವರ್ಣವನ್ನು ಉದ್ಗಿರಣಮಾಡುವ ಕಾಡಿನ ಕೆಲವು ಪಕ್ಷಿಗಳನ್ನು ಮನೆಯಲ್ಲಿ ಸಾಕಿ ಒಬ್ಬ ರಾಜನು ಲೋಭದಿಂದ ಅವುಗಳನ್ನು ಕೊಂದು ಬಿಟ್ಟನು.

ಸದೋಪಭುಗ್ನೋ ಭೋಗಾತ್ಮಾ ಹಿರಣ್ಯಾರ್ಥೀ ತಪನ್ ಪುನಃ |
ಆಯತಿಂ ಚ ದದತ್ತ್ವಂ ಚ ಉಭೇ ಸದ್ಯೋ ವ್ಯನಾಶಯತ್ ||13||

ಯಾವಾಗಲೂ ವಕ್ರಸ್ವಭಾವದವನೂ ಸುವರ್ಣಲೋಭಿಯೂ ಭೋಗದಲ್ಲಿಯೇ ಆಸಕ್ತನಾದವನೂ ಆದ ಅವನು ಅನಂತರ ಪಶ್ಚತ್ತಾಪಪಟ್ಟು ತನಗೆ ಬರುತ್ತಿದ್ದ ಸುವರ್ಣವನ್ನೂ ತಾನು ದಾನಮಾಡುವ ಅವಕಾಶವನ್ನೂ ತಕ್ಷಣದಲ್ಲಿಯೇ ಕಳೆದು ಕೊಂಡನು.

ತಥಾ ತ್ವಕಾಮಃ ಪಾಂಡೂನಾಂ ಮಾ ದ್ರುಹೀ ಭರತರ್ಷಭ |
ಮೋಹಾತ್ಮಾ ತಪ್ಸ್ಯಸೇ ಪಶ್ಚಾತ್ ಪಕ್ಷಿಹಾ ಪುರುಷೋ ಯಥಾ |
ಏತೇನ ತವ ನಾಶಃ ಸ್ಯಾದ್ ಬಡಿಶಾಚ್ಚಫರೋ ಯಥಾ ||14||

ಹಾಗೆ ನೀನು ಸಹ ಪರರ ವಿತ್ತದಲ್ಲಿ ಆಸೆಯನ್ನು ಬಿಡು. ಭರತರ್ಷಭನೇ! ಪಾಂಡವರಿಗೆ ದ್ರೋಹವನ್ನು ಮಾಡಬೇಡ. ಮೋಹದಿಂದ ದ್ರೋಹವನ್ನು ಮಾಡಿದರೆ ಪಕ್ಷಿಗಳನ್ನು ಕೊಂದ ಆ ಪುರುಷನಂತೆ ನೀನು ಪಶ್ಚಾತ್ತಾಪವನ್ನು ಪಡಬೇಕಾಗುತ್ತದೆ. ಬಡಿಶ (ಮೀನನ್ನು ಹಿಡಿಯುವ ಸಾಧನ)ದಿಂದ  ಮೀನು ನಾಶವನ್ನು ಹೊಂದುವಂತೆ ಈ ದ್ಯೂತದಿಂದ ನೀನು ನಾಶವನ್ನು ಹೊಂದುವಿ.

ಜಾತಂ ಜಾತಂ ಪಾಂಡವೇಭ್ಯಃ ಪುಷ್ಪಮಾದತ್ಸ್ವ ಭಾರತ |
ಮಾಲಾಕಾರ ಇವಾರಾಮೇ ಸ್ನೇಹಂ ಕುರ್ವನ್ ಪುನಃ ಪುನಃ ||15||

ಎಲೈ ಭಾರತನೇ! ಮಾಲೆಯನ್ನು ಕಟ್ಟುವ ಪುರುಷನು ತೋಟದಲ್ಲಿ ಪ್ರತಿಯೊಂದು ಗಿಡದಿಂದ ಬಂದ ಪುಷ್ಪಗಳನ್ನು ತೆಗೆದು ಕೊಳ್ಳುವಂತೆ, ಪಾಂಡವರಿಂದ ಉಂಟಾದ ಪುಷ್ಪಗಳಂತಹ ಸತ್ಫಲಗಳನ್ನು ನೀನು ಮತ್ತೆ ಮತ್ತೆ ಸ್ವೀಕರಿಸು.

ವೃಕ್ಷಾನಂಗಾರಕಾರೀವ ಮಾ ಚ ಧಾಕ್ಷೀಃ ಸಮೂಲಕಾನ್ |
ಮಾ ಗಮಃ ಸಸುತಾಮಾತ್ಯಃ ಸಬಲಶ್ಚ ಪರಾಭವಮ್ ||16||

ಇದ್ದಿಲನ್ನು ಮಾಡುವವನು ಮರಗಳನ್ನು ಮೂಲಸಹಿತವಾಗಿ ಸುಟ್ಟಂತೆ ನೀನು ವರ್ತಿಸಬೇಡ. ನಿನ್ನ ಮಕ್ಕಳು ಆಮಾತ್ಯರು ಮತ್ತು

ಸೈನ್ಯದ ಜೊತೆಯಲ್ಲಿ ನೀನು ಪರಾಭವವನ್ನು ಹೊಂದಬೇಡ.
ಸಮವೇತಾನ್ ಹಿ ಕಃ ಪಾರ್ಥಾನ್ ಪ್ರತಿಯುಧ್ಯೇತ ಭಾರತ |
ಮರುದ್ಭಿಃ ಸಹಿತೋ ರಾಜನ್ನಪಿ ಸಾಕ್ಷಾನ್ಮರುತ್ಪತಿಃ |
ಯುಧಿ ಜೇತುಮಶಕ್ತೋ ಹಿ ಪಾಂಡವಾನ್ ಪುರುಷೋತ್ತಮಾನ್ ||17||
ಎಲೈ ಭಾರತನೇ ಪಾಂಡವರು ಒಟ್ಟುಗೂಡಿದರೆ ಅವರನ್ನು ಯಾವನು ಯುದ್ಧದಲ್ಲಿ ಎದುರಿಸುತ್ತಾನೆ? ರಾಜನೇ! ಪುರುಷಶ್ರೇಷ್ಠರಾದ ಪಾಂಡವರನ್ನು ಮರುದ್ಗಣದಿಂದ ಸಹಿತನಾದ ಇಂದ್ರನೂ ಯುದ್ಧದಲ್ಲಿ ಗೆಲ್ಲಲು ಸಮರ್ಥನಾಗುವುದಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವ್ಯಶೀತಿತಮೋಧ್ಯಾಯಃ ||
|| ದ್ಯೂತಪರ್ವಣಿ ಚತುರ್ದಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತೆರಡನೆಯ ಅಧ್ಯಾಯವು ಮುಗಿಯಿತು.
*****
ಎಂಭತ್ಮೂರನೆಯ ಅಧ್ಯಾಯ
(ಪುನಃ ವಿದುರನಿಂದ ಭಾವಿ ವಿನಾಶವನ್ನು ಹೇಳಿ, ದ್ಯೂತದಿಂದ ಹಿಂದಿರುಗಿಸುವ ಪ್ರಯತ್ನ)
ವಿದುರಃ
ದ್ಯೂತಂ ಮೂಲಂ ಕಲಹಸ್ಯಾತಿಘೋರಂ
ಭೇದೋಽಯಂ ಮಹತೇ ವೈ ರಣಾಯ |
ಯದಾಸ್ಥಿತೋಽಯಂ ಧೃತರಾಷ್ಟ್ರಸ್ಯ ಪುತ್ರೋ
ದುರ್ಯೋಧನಃ ಸೃಜತೇ ವೈರಮುಗ್ರಮ್ ||1||
ಈ ದ್ಯೂತವು ಅತಿಘೋರವಾದ ವಿರೋಧಕ್ಕೆ ಕಾರಣವಾಗುತ್ತದೆ. ಆ ವಿರೋಧವು ದೊಡ್ಡ ಯುದ್ಧಕ್ಕೆ ಕಾರಣವಾಗುತ್ತದೆ. ಧೃತರಾಷ್ಟ್ರಪುತ್ರನಾದ ದುರ್ಯೋಧನನು ಈ ದ್ಯೂತವನ್ನು ಆಶ್ರಯಿಸಿದವನಾಗಿ ಘೋರವಾದ ವೈರವನ್ನು ಸೃಷ್ಟಿಮಾಡುತ್ತಿದ್ದಾನೆ.
ಜ್ಞಾತಾಃ ಪ್ರಿಯಾಃ ಶಾಂತನವಾ ಭೈಮಸೇನಾಃ ಸಬಾಹ್ಲಿಕಾಃ |
ದುರ್ಯೋಧನಾಪರಾಧೇನ ಕೃಚ್ಛ್ರಂ ಪ್ರಾಪ್ಸ್ಯಂತಿ ಸರ್ವಶಃ ||2||
ದುರ್ಯೋಧನನ ಅಪರಾಧದಿಂದ ಕಾಂಬೋಜಕುದುರೆಗಳನ್ನು ಮತ್ತು ಭಯಂಕರವಾದ ಸೈನ್ಯವನ್ನು ಹೊಂದಿರುವ ಶಂತನು ವಂಶಕ್ಕೆ ಸೇರಿದ ಪ್ರಿಯರಾದ ಎಲ್ಲಾ ದಾಯಾದಿಗಳು ಬಹಳ ಕಷ್ಟಕ್ಕೆ ಸಿಲುಕುವರು.
ದುರ್ಯೋಧನೋ ಮದೇನೈವ ಕ್ಷೇಮಂ ರಾಷ್ಟ್ರಾದಪೋಹತಿ |
ವಿಷಾಣಂ ಗೌರಿವ ಮದಾತ್ ಸ್ವಯಮಾರುಜತೇ ಬಲಾತ್ ||3||
ಮದಿಸಿದ ವೃಷಭವು ತನ್ನ ಬಲದಿಂದ ತಾನೇ ತನ್ನ ಕೊಂಬನ್ನು ಘಾಸಿಮಾಡಿಕೊಂಡಂತೆ ದುರ್ಯೋಧನನು ತನ್ನ ಬಲದಿಂದ ತನ್ನ ರಾಷ್ಟ್ರವನ್ನೇ ಕ್ಷೇಮದಿಂದ ಹೊರಗೆ ತಳ್ಳುತ್ತಿದ್ದಾನೆ.
ಯಶ್ಚಿತ್ತಮನ್ವೇತಿ ಪರಸ್ಯ ರಾಜನ್
ವೀರಃ ಕವಿಃ ಸ್ವಾಮವಮತ್ಯ ದೃಷ್ಟಿಮ್ |
ನಾವಂ ಸಮುದ್ರೇ ಇವ ಬಾಲನೇತ್ರೀಮ್
ಆರುಹ್ಯ ಘೋರೇ ವ್ಯಸನೇ ನಿಮಜ್ಜೇತ್ ||4||
ರಾಜನೇ! ವಿವೇಕಿಯಾದ ವೀರನಾದ ಯಾವನು ತನ್ನ ಆಲೋಚನೆಗೆ ಬೆಲೆಕೊಡದೆ ಇನ್ನೊಬ್ಬರ ಮಾತನ್ನೂ ಮನಸ್ಸನ್ನೂ ಅನುಸರಿಸುತ್ತಾನೆಯೋ ಅವನು ಸಮುದ್ರದಲ್ಲಿ ಒಬ್ಬ ಬಾಲಕನು ನಾಯಕನಾಗಿರುವ ನಾವೆಯನ್ನು ಹತ್ತಿ ವ್ಯಸನದಲ್ಲಿ ಮುಳುಗುತ್ತಾನೆ.
ದುರ್ಯೋಧನೋ ಗ್ಲಹತೇ ಪಾಂಡವೇನ
ಸಂಪ್ರೀಯಸೇ ತ್ವಂ ಜಯತೀತಿ ತಂ ಚ |
ಅನಂತರಂ ಜಾಯತೇ ಸಂಪ್ರಹಾರೋ
ಯತೋ ವಿನಾಶಃ ಸಮುಪೈತಿ ಪುಂಸಾಮ್ ||5||
ದುರ್ಯೋಧನನು ಧರ್ಮರಾಜನ ಜೊತೆಯಲ್ಲಿ ಪಣವನ್ನಿಟ್ಟು ಆಡುತ್ತಿದ್ದಾನೆ. ದುರ್ಯೋಧನನು ಜಯಿಸುತ್ತಿದ್ದಾನೆಂದು ನೀನು ಸಂತೋಷದಿಂದ ಕೂಡಿದ್ದೀಯೆ. ಅನಂತರ ದೊಡ್ಡ ಕಲಹವು ಉಂಟಾಗುತ್ತದೆ. ಆದರಿಂದ ಎಲ್ಲಾ ಪುರುಷರ ವಿನಾಶವು ಉಂಟಾಗುತ್ತದೆ.
ಆಕರ್ಷತೇ ವಾಕ್ಯಬಲಪ್ರಣೀತೋ
ಹೃದಿ ಪ್ರೌಢೋ ಮಂತ್ರಪದಃ ಸಮಾಧಿಃ |
ಯುಧಿಷ್ಠಿರೇಣ ಸಕಲಸ್ತವಾಸ್ತು
ಸುಖಪ್ರದಃ ಸುಚಿರಂ ತೇ ಸುಧನ್ವಾ ||6||
ಯುಧಿಷ್ಠಿರನ ವಾಕ್ಯಬಲದಿಂದ ಉಂಟಾದ ಮುಂದಿನಕಾರ್ಯಗಳ ಆಲೋಚನೆಯ ವಿಷಯವಾದ (ಸ್ಥಾನವಾದ) ನಿನ್ನ ಪುತ್ರನ ಧನ ಪ್ರಾಪ್ತಿಯಿಂದ ಉಂಟಾದ ಅವನ (ದುರ್ಯೋಧನನ) ಮೌನವು ನಿನ್ನ ಮನಸ್ಸನ್ನು ಆಕರ್ಷಿಸಿ ಒಪ್ಪುವಂತೆ ಮಾಡುತ್ತಿದೆ. ಅದು ನಿನಗೆ ಬಹಳ ಕಾಲ ಸುಖವನ್ನು ಕೊಡಲಿ. (ಸ್ವಲ್ಪ ಸಮಯ ಆ ದ್ರವ್ಯದಿಂದ ಸುಖವನ್ನು ಅನುಭವಿಸು. ಮುಂದಿನ ಫಲಗಳನ್ನು ನೀನೇ ಅನುಭವಿಸುತ್ತೀಯೆ.)
ಪ್ರಾತಿಪೀಯಃ ಶಾಂತನವಶ್ಚ ಭೀಷ್ಮೋ

ದ್ರೋಣಶ್ಚ ಶೃಣ್ವಂತು ವಚೋ ಮಮೇದಮ್ |
ವೈಶ್ವಾನರಂ ಪ್ರಜ್ವಲಿತಂ ಸುಘೋರಂ
ಕೋ ಯುದ್ಧೇನ ಪ್ರಶಮಯಿತೋತ್ಪತಂತಮ್ ॥7॥
ಪ್ರತೀಪನ ಮಗನಾದ ಬಾಹ್ಲೀಕನೂ ಶಂತನುವಿನ ಮಗನಾದ ಭೀಷ್ಮನೂ ದ್ರೋಣರು ಎಲ್ಲರೂ ಈ ನನ್ನ ಮಾತನ್ನು ಕೇಳಿ, ಉಗ್ರವಾಗಿ ಪ್ರಜ್ವಲಿಸಿ ಮೇಲೆ ಬರುತ್ತಿರುವ ಅಗ್ನಿಯನ್ನು ಯಾವನು ಯುದ್ಧದಿಂದ ಶಾಂತಗೊಳಿಸುವನು?
ಯದಾ ಮನ್ಯುಂ ಪಾಂಡವೋಽಜಾತಶತ್ರು-
ರ್ನ ಸಂಯಚ್ಛೇದಕ್ಷಮಯಾಽಭಿಭೂತಃ |
ವೃಕೋದರಃ ಸವ್ಯಸಾಚೀ ಯಮೌ ಚ
ಕೋಽತ್ರ ಸ್ಯಾತಾ ತುಮುಲೇ ವೈ ತದಾನೀಮ್ ॥8॥
ಇದುವರೆಗೆ ಕ್ಷಮೆಯಿಂದ ಇರುವ ಅಜಾತಶತ್ರುವಾದ ಧರ್ಮರಾಜನು ಕ್ಷಮೆಯನ್ನು ಕಳೆದುಕೊಂಡು ಉಂಟಾದ ತನ್ನ ಕೋಪವನ್ನು ಯಾವಾಗ ಶಾಂತಗೊಳಿಸುವುದಿಲ್ಲವೋ ಭೀಮಸೇನ ಅರ್ಜುನ ನಕುಲ ಸಹದೇವರೂ ಸಹ ಯಾವಾಗ ತಮ್ಮ ಕೋಪವನ್ನು ಶಾಂತಗೊಳಿಸುವುದಲ್ಲವೋ ಆಗ ಉಂಟಾಗುವ ಘೋರವಾದ ಯುದ್ಧದಲ್ಲಿ ಅವರೆದುರಿಗೆ ಯಾರು ನಿಲ್ಲುವರು?
ಮಹಾರಾಜ ಪ್ರಭವಸ್ತ್ವಂ ಧನಾನಾಂ
ಪುರಾ ದ್ಯೂತಂ ಮನಸಾ ಯಾವದಿಚ್ಛೇಃ |
ಬಹು ವಿತ್ತಂ ಪಾಂಡವಾಂಶ್ಚೇಜ್ಜಯಸ್ತ್ವಂ
ಕಿಂ ಚಿದ್ ವಃ ಸ್ಯಾದ್ ವಸು ವಿಂದೇತ ಪಾರ್ಥಾನ್ ॥9॥
ಮಹಾರಾಜನೇ! ದ್ಯೂತಕ್ಕಿಂತ ಮೊದಲು ನಿನ್ನ ಇಚ್ಛೆ ಇದ್ದಷ್ಟು ಧನವನ್ನು ನೀನು ಸಂಪಾದಿಸಿದ್ದೀಯೆ. ದ್ಯೂತದಲ್ಲಿ ಪಾಂಡವರನ್ನು ಜಯಿಸಿ ನೀನು ಬಹು ವಿತ್ತವನ್ನು ಜಯಿಸಿದರೆ ನಿನ್ನ ಬಳಿ ಮೊದಲಿದ್ದ ಸಂಪತ್ತೆಲ್ಲಾ ಪಾಂಡವರನ್ನೇ ಹೋಗಿ ಸೇರುತ್ತದೆ.
ಜಾನೀಮಹೇ ದೇವನಂ ಸೌಬಲಸ್ಯ
ವೇದ ದ್ಯೂತೇ ನಿಕೃತಿಂ ಪಾರ್ವತೀಯಃ |
ಯತಃ ಪ್ರಾಪ್ತಃ ಶಕುನಿಸ್ತತ್ರ ಯಾತು
ಮಾಯಾಯೋಧೀ ಭಾರತ ಪಾರ್ವತೀಯಃ ॥10॥
ಶಕುನಿಯು ಆಟವಾಡುವ ರೀತಿಯು ನಮಗೆ ತಿಳಿದಿದೆ. ಪರ್ವತ ಪ್ರದೇಶದಿಂದ ಬಂದ ಅವನು ದ್ಯೂತದಲ್ಲಿ ಮೋಸಮಾಡುವ ರೀತಿಯನ್ನು ಚೆನ್ನಾಗಿ ತಿಳಿದಿದ್ದಾನೆ. ಭಾರತನೇ! ಮಾಯಾಯೋಧಿಯಾದ ಈ ಶಕುನಿಯು ಎಲ್ಲಿಂದ ಬಂದನೋ ಅಲ್ಲಿಗೇ ಹೊರಟು ಹೋಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರ್ಯಶೀತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಪಂಚದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ಮೂರನೆಯ ಅಧ್ಯಾಯವು ಮುಗಿಯಿತು.
*****
ಎಂಭತ್ನಾಲ್ಕನೆಯ ಅಧ್ಯಾಯ
(ದುರ್ಯೋಧನನಿಂದ ವಿದುರನ ನಿಂದೆ. ಆದರೂ ವಿದುರನ ಹಿತೋಪದೇಶ)
ದುರ್ಯೋಧನಃ
ಪರೇಷಾಮೇವ ಯಶಸಾಂ ಶ್ಲಾಘಸೇ ತ್ವಂ
ಯದಾ ಚ್ಛನ್ನಃ ಕುತ್ಸಯನ್ ಧಾರ್ತರಾಷ್ಟ್ರಾನ್ |
ಜಾನೀಮಹೇ ವಿದುರ ವಿಪ್ರಿಯಸ್ತ್ವಂ
ಬಾಲಾನಿವಾಸ್ಮಾನವಮನ್ಯಸೇ ತ್ವಮ್ ॥1॥
ವಿದುರನೇ! ನೀನು ಯಾವಾಗಲೂ ಶತ್ರುಗಳ ಯಶಸ್ಸನ್ನೇ ಶ್ಲಾಘಿಸುತ್ತಿದ್ದೀಯೆ. ಪ್ರಚ್ಛನ್ನವಾಗಿ ಪಾಂಡವರ ಮೇಲೆ ಪ್ರೀತಿಯನ್ನು ಹೊಂದಿ ಧೃತರಾಷ್ಟ್ರನ ಮಕ್ಕಳಾದ ನಮ್ಮನ್ನು ನಿಂದಿಸುತ್ತಿದ್ದೀಯೆ. ನೀನು ನಮಗೆ ವಿಪ್ರಿಯನಾದವನೆಂದು ನಾವು ತಿಳಿದಿದ್ದೇವೆ. ನಮ್ಮನ್ನು ನೀನು ಮಕ್ಕಳನ್ನು ಅವಮಾನಮಾಡುವಂತೆ ಅವಮಾನ ಮಾಡುತ್ತಿದ್ದೀಯೆ.
ಸ ವಿಜ್ಞೇಯಃ ಪುರುಷೋಽನ್ಯತ್ರಕಾಮೋ
ನಿಂದಾಪ್ರಶಂಸೇ ಹಿ ತಥಾ ಯುನಕ್ತಿ |
ಜಿಹ್ವಾ ಮನೋ ಹೃದಯಂ ನಿರ್ಣಿನಕ್ತಿ
ಜ್ಯಾಯೋ ನಿರೀಹಂ ಮನಸಃ ಪ್ರಾತಿಕೂಲ್ಯಮ್ ॥2॥
ಹೀಗೆ ಯಾವನು ನಿಂದೆಪ್ರಶಂಸೆಗಳನ್ನು ಮಾಡುತ್ತಾನೆಯೋ ಅವನು ಇನ್ನೊಂದು ಕಡೆಯಲ್ಲಿ ಪಕ್ಷಪಾತ ಉಳ್ಳವನೆಂದು ತಿಳಿಯ ಬೇಕು. ಎಲೈ ವಿದುರನೇ! ನಿನ್ನ ಜಿಹ್ವೆಯು ನಿನ್ನ ಮನಸ್ಸಿನ ಅಭಿಪ್ರಾಯಕ್ಕಿಂತಲೂ ಭಿನ್ನವಾಗಿದೆ. ನಮ್ಮ ಬಗ್ಗೆ ನಿನ್ನ ಮನಸ್ಸಿನಲ್ಲಿರುವ ದೊಡ್ಡದಾದ ಪ್ರಾತಿಕೂಲ್ಯವು ನಿಷ್ಫಲವಾದುದು.
ಉತ್ಸಂಗೇ ಚ ವ್ಯಾಲ ಇವಾಧೃತೋಽಸಿ
ಮಾರ್ಜಾರವತ್ ಪೋಷಕಂ ಚಾಭಿಹಂಸಿ |
ಭರ್ತೃಘ್ನಂ ತ್ವಾಂ ನ ಹಿ ಪಾಪೀಯಮಾಹುಃ
ತಸ್ಮಾತ್ ಕ್ಷತ್ತಃ ಕಿಂ ನ ಬಿಭೇಷಿ ಪಾಪಾತ್ ॥3॥

ತೊಡೆಯ ಮೇಲೆ ಸರ್ಪವನ್ನು ಧರಿಸಿದಂತೆ ನೀನು ನಮ್ಮಿಂದ ಧರಿಸಲ್ಪಟ್ಟಿದ್ದೀಯೆ. ಬೆಕ್ಕಿನಂತೆ ಪೋಷಕನನ್ನೇ ಹಿಂಸುತ್ತಿದ್ದೀಯೆ ಭರ್ತೃಘ್ನನಾದ ನಿನಗಿಂತಲೂ ಪಾಪಿಯಾದವನು ಇನ್ನೊಬ್ಬನಿಲ್ಲ. ವಿದುರನೇ ನಿನಗೆ ಪಾಪದ ಹೆದರಿಕೆಯಿಲ್ಲವೆ?

ಜಿತ್ವಾ ಶತ್ರೂನ್ ಫಲಮಾಪ್ತಂ ಮಹನ್ನೋ
ಮಾಽಸ್ಮಾನ್ ಕ್ಷತ್ತಃ ಪರುಷಾಣೀಹ ವೋಚಃ |
ದ್ವಿಷದ್ಭಿಸ್ತ್ವಂ ಸಂಪ್ರಯೋಗಾಭಿನಂದೀ
ಮುಹುರ್ದ್ವೇಷಂ ಯಾಸಿ ನಃ ಸಂಪ್ರಮೋಹಾತ್ ॥4॥

ನಾವು ಶತ್ರುಗಳನ್ನು ಗೆದ್ದು ಮಹಾಫಲವನ್ನು ಸಂಪಾದಿಸಿದ್ದೇವೆ.ಎಲೈ ವಿದುರನೇ! ನಮ್ಮನ್ನು ಕುರಿತು ಒರಟಾದ ಮಾತುಗಳನ್ನು ಆಡಬೇಡ. ನೀನು ನಮ್ಮ ಶತ್ರುಗಳ ಜೊತೆಯಲ್ಲಿ ಸಮಾಗಮವನ್ನು ಅಭಿನಂದಿಸುವವನು. ನಮಗೆ ಬುದ್ಧಿಮೋಹವನ್ನು ಉಂಟುಮಾಡಿ ಪುನಃ ನೀನು ಪಾಪವನ್ನು ಗಳಿಸುತ್ತಿದ್ದೀಯೆ.

ಅಮಿತ್ರತಾಂ ಯಾತಿ ನರೋಽಕ್ಷಮಂ ಬ್ರುವನ್
ನಿಗೂಹತೇ ಗುಹ್ಯಮಮಿತ್ರಸಂಭವೇ |
ತದಾಶ್ರಿತಾಪತ್ರಪ ಕಿಂನು ಬಾಧಸೇ
ಯದಿಚ್ಛಸಿ ತ್ವಂ ತದಿಹಾಪಭಾಷಸೇ ॥5॥

ಅಸಹನೀಯವಾದುದನ್ನು ಹೇಳುವ ಮನುಷ್ಯನು ಶತ್ರುವಾಗುತ್ತಾನೆ. ಶತ್ರುಗಳ ವಿಷಯದಲ್ಲಿ ರಹಸ್ಯವಾದುದನ್ನು ನೀನು ಮುಚ್ಚಿಡುತ್ತಿದ್ದೀಯೆ. ಶತ್ರುಗಳನ್ನು ಆಶ್ರಯಿಸಿದ ನಾಚಿಕೆಯಿಲ್ಲದ ಎಲೈ ವಿದುರನೇ! ನೀನು ನಮಗೆ ಯಾವ ಬಾಧೆಯನ್ನು ಮಾಡುತ್ತೀಯೆ? ನಿನ್ನ ಮನಸ್ಸಿಗೆ ಬಂದಂತೆ ನಿಂದನೆಯನ್ನ್ನು ಮಾಡುತ್ತಿದ್ದೀಯೆ. (ನಿಂದನೆಯನ್ನು ಬಿಟ್ಟು ಬೇರೆ ಯಾವ ರೀತಿಯ ಬಾಧೆಯನ್ನೂ ನೀನು ಮಾಡಲಾರೆ.)

ಮಾ ನೋಽವಮಂಸ್ಥಾ ವಿದ್ಮ ಮನಸ್ತವೇದಂ
ಶಿಕ್ಷಸ್ವ ಬುದ್ಧಿಂ ಸ್ಥವಿರಾಣಾಂ ಸಕಾಶಾತ್ |
ಯಶೋ ರಕ್ಷಸ್ವ ವಿದುರ ಸಂಪ್ರಣೀತಂ
ಮಾ ವ್ಯಾಪೃತಃ ಪರಕಾರ್ಯೇಷು ಭೂಸ್ತ್ವಮ್ ॥6॥

ವಿದುರನೇ! ನಮ್ಮನ್ನು ಅವಮಾನಗೊಳಿಸಬೇಡ. ಈ ನಿನ್ನ ಮನಸ್ಸು ಹೇಗಿದೆ ಎಂದು ತಿಳಿದಿದ್ದೇವೆ. ಹಿರಿಯರ ಸಮೀಪಕ್ಕೆ ಹೋಗಿ ಒಳ್ಳೆಯ ಬುದ್ಧಿಯನ್ನು ಕಲಿ. ವಿದುರನೇ! ಸಂಪಾದಿಸಿರುವ ಕೀರ್ತಿಯನ್ನು ರಕ್ಷಿಸಿಕೋ. ಶತ್ರು ಕಾರ್ಯಗಳಲ್ಲಿ ಆಸಕ್ತನಾಗಿರಬೇಡ.

ಅಹಂ ಕರ್ತೇತಿ ವಿದುರ ಮಾಽತಿಮಂಸ್ಥಾ
ಮಾ ನೋ ನಿತ್ಯಂ ಪರುಷಾಣೀಹ ವೋಚಃ |
ನ ತ್ವಾಂ ಪೃಚ್ಛಾಮಿ ವಿದುರ ಮತಿಂ ಮೇ
ಸ್ವಸ್ತ್ಯಸ್ತು ಕ್ಷತ್ತರ್ಮಾ ತಿತಿಕ್ಷುಂ ಕ್ಷಿಣು ತ್ವಮ್ ॥7॥

ವಿದುರನೇ! ನಾನೇ ಎಲ್ಲವನ್ನು ಮಾಡುವವನು ಎಂದು ತಿಳಿದು ನೀನು ಗರ್ವಪಡಬೇಡ. ಮತ್ತು ನಿತ್ಯವೂ ನಮ್ಮನ್ನು ಕುರಿತು ಉಗ್ರವಾದ ಮಾತನ್ನು ಆಡಬೇಡ. ವಿದುರನೇ! ನನಗೆ ಯಾವುದು ಹಿತವೆಂದು ನಾನು ನಿನ್ನನ್ನೇನೂ ಕೇಳುತ್ತಿಲ್ಲ. ನಿನಗೆ ಮಂಗಳವಾಗಲಿ. ನನ್ನ ಸಹನೆಯ ಗುಣವನ್ನು ನಾಶಮಾಡಬೇಡ.

ವಿದುರಃ

ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ
ಗರ್ಭೇ ಶಯಾನಂ ಪುರುಷಂ ಶಾಸ್ತಿ ಶಾಸ್ತಾ |
ತೇನಾನುಶಿಷ್ಟಃ ಪ್ರವಣಾದಿವಾಂಭೋ
ಯಥಾ ನಿಯುಕ್ತೋಽಸ್ಮಿ ತಥಾ ಚರಾಮಿ ॥8॥

ಈ ಜಗತ್ತಿಗೆ ಒಬ್ಬನೇ ಶಾಸಕನಿದ್ದಾನೆ. ಎರಡನೆಯ ಶಾಸಕನು ಯಾರೂ ಇಲ್ಲ. ಆ ಶಾಸಕನು ಗರ್ಭದಲ್ಲಿರುವ ಶಿಶುವನ್ನು ಶಾಸನಮಾಡುತ್ತಾನೆ. ಎತ್ತರ ಸ್ಥಳದಿಂದ ತಗ್ಗಿನ ಸ್ಥಳಕ್ಕೆ ನೀರುಹರಿದಂತೆ ಶಾಸಕನಾದ ಆ ಭಗವಂತನು ನನ್ನನ್ನು ಹೇಗೆ ಪ್ರೇರಿಸುತ್ತಾನೋ ಹಾಗೆಯೇ ಮಾಡುತ್ತೇನೆ.

ಭಿನತ್ತಿ ಶಿರಸಾ ಶೈಲಂ ಮಹೀಂ ಭೇದಯತೇ ಚ ಯಃ |
ಸ ಏವ ತಸ್ಯ ಕುರುತೇ ಕಾರ್ಯಾಣಾಮನುಶಾಸನಮ್ ॥9॥

ಯಾವನು ತನ್ನ ತಲೆಯಿಂದ ಪರ್ವತವನ್ನು ಭೇದಿಸಿಸುತ್ತಾನೋ ಅಥವಾ ಭೂಮಿಯನ್ನು ಭೇದಿಸುತ್ತಾನೋ ಅವನು ಮಾಡುವ ಕಾರ್ಯಗಳನ್ನು ಸಹ ಆ ಭಗವಂತನೇ ಶಾಸನಮಾಡುತ್ತಾನೆ.

ಯೋ ಬಾಲ್ಯಾದನುಶಾಸ್ತೀಹ ಸೋಽಮಿತ್ರಂ ತಸ್ಯ ವಿಂದತಿ |
ಯಃ ಸತಾಮನುವೃತ್ತಂ ತು ಸಮುಪೇಕ್ಷತ್ಯಪಂಡಿತಃ ॥10॥

ಯಾರು ಭೃತ್ಯ ಬಲದಿಂದ (ತನ್ನ ಬಲದಿಂದ) ಅನುಶಾಸನ- ಮಾಡುತ್ತಾರೆಯೋ ಅಂತಹವರು ಶತ್ರುಗಳನ್ನು ಸಂಪಾದನೆ ಮಾಡುತ್ತಾರೆ. ಸಜ್ಜನರ ನಡತೆಯನ್ನು ಅವಿವೇಕಿಯಾದವನು ಉಪೇಕ್ಷೆಮಾಡುತ್ತಾನೆ.

ಆದೀಪ್ಯ ಯಃ ಪ್ರದೀಪ್ತಾಗ್ನಿಂ ಸತ್ವರಂ ನಾಭಿಧಾವತಿ |
ತಸ್ಮಾಚ್ಚ ನ ಸ ವಿಂದೇತ ಶಿಷ್ಟಂ ಕಿಂಚನ ಭಾರತ ॥11॥

ಎಲೈ ಭಾರತನೇ! ಯಾರು ಬೆಂಕಿಯನ್ನು ಹೊತ್ತಿಸಿ ಬೇಗ ದೂರ ಓಡಿ ಹೋಗುವುದಿಲ್ಲವೊ ಅವನ ಯಾವ ಪದಾರ್ಥವೂ ಉಳಿಯದೆ ಇರುವುದರಿಂದ ಯಾವ ಪದಾರ್ಥವನ್ನೂ ಹೊಂದುವುದಿಲ್ಲ.

ದುರ್ಯೋಧನಃ
ನ ವಾಸಯೇತ್ ಪಾರವರ್ಗ್ಯಂ ದ್ವಿಷಂತಂ
ವಿಶೇಷತಃ ಕ್ಷತ್ತರಹಿತಂ ಮನುಷ್ಯಮ್
ಯತ್ರೇಚ್ಛಸಿ ತ್ವಂ ವಿದುರ ತತ್ರ ಗಚ್ಛ
ಸುಸಾಂತ್ವಿತಾಽಪಿ ಹ್ಯಸತೀ ಸ್ತ್ರೀ ಜಹಾತಿ ॥12॥
ಶತ್ರುವರ್ಗಕ್ಕೆ ಸೇರಿದ ದ್ವೇಷವನ್ನು ಮಾಡುವ ಅಹಿತನಾದ ಮನುಷ್ಯನನ್ನು ವಿಶೇಷವಾಗಿ ತನ್ನ ಮನೆಯಲ್ಲಿ ಇಟ್ಟುಕೊಳ್ಳಬಾರದು ವಿದುರನೇ! ನಿನಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೊರಟು ಹೋಗು. ಕೆಟ್ಟ ಹೆಂಡತಿಯಾದವಳು ಎಷ್ಟು ಸಮಾಧಾನಮಾಡಿದರೂ ಪತಿಯನ್ನು ಬಿಟ್ಟು ಹೊರಟು ಹೋಗುತ್ತಾಳೆ.
ವಿದುರಃ
ಏತಾವತಾ ಯೇ ಪುರುಷಂ ಸಂತ್ಯಜಂತಿ
ತೇಷಾಂ ಸಖ್ಯ ಮಂತಂ ಪ್ರಬ್ರುವೀಹಿ |
ರಾಜ್ಞಾಂ ಹಿ ಚಿತ್ತಾನಿ ಪರಿಪ್ಲುತಾನಿ
ಸಾಂತ್ವಂ ದತ್ವಾ ಮುಸಲೈರ್ಘಾತಯಂತಿ ॥13॥
ಇಷ್ಟೇ ಕಾರಣದಿಂದ ಯಾರು ಪುರುಷನನ್ನು ತ್ಯಜಿಸುತ್ತಾರೆಯೋ ಅವರ ಸ್ನೇಹವು ಅಂತವುಳ್ಳದ್ದು ಎಂದು ತಿಳಿ. ರಾಜರ ಮನಸ್ಸು ಬಹಳ ಚಂಚಲವಾದುದು. ಸಮಾಧಾನದ ಮಾತುಗಳನ್ನು ಆಡುತ್ತಾ ಅವರು ಮುಸಲಗಳಿಂದ ಕೊಲ್ಲುತ್ತಾರೆ.
ಅಬಾಲಂ ಮಾಂ ಮನ್ಯಸೇ ರಾಜಪುತ್ರ
ಬಾಲೋಽಯಮಿತ್ಯೇವ ಸುಮಂದಬುದ್ಧೇ |
ಯಃ ಸೌಹೃದೇ ಪುರುಷಂ ಸ್ಥಾಪಯಿತ್ವಾ
ಪಶ್ಚಾದೇನಂ ದೂಷಯತೇ ಸ ಬಾಲಃ ॥14॥
ಎಲೈ ಸುಮಂದಬುದ್ಧಿಯಾದ ರಾಜಕುಮಾರನೇ! ಬಾಲಕನಲ್ಲದ ನನ್ನನ್ನು ಬಾಲಕನೆಂದು ತಿಳಿಯುತ್ತಿದ್ದೀಯೆ. ಯಾರು ಒಬ್ಬ ಮನುಷ್ಯನನ್ನು ತನ್ನ ಸುಹೃತ್‌ಸ್ಥಾನದಲ್ಲಿ ಇಟ್ಟು ಅನಂತರ ದೂಷಿಸುತ್ತಾನೆಯೋ ಅವನೇ ಬಾಲಕನಾದವನು.
ನ ಶ್ರೇಯಸೇ ನೀಯತೇ ಮಂದಬುದ್ಧಿಃ
ಸ್ತ್ರೀ ಶ್ರೋತ್ರಿಯಸ್ಯೇವ ಗೃಹೇ ಪ್ರದುಷ್ಟಾ |
ಧ್ರುವಂ ನ ರೋಚೇದ್ ಭರತರ್ಷಭಾಯ
ಪತಿಃ ಕುಮಾರ್ಯಾ ಇವ ಷಷ್ಟಿವರ್ಷಃ ॥15॥
ದುಷ್ಟಳಾದ ಸ್ತ್ರೀಯು ಶ್ರೋತ್ರಿಯನ ಮನೆಯಲ್ಲಿ ಹೊಂದಿಕೊಳ್ಳದೆ ಇರುವಂತೆ ಮಂದಬುದ್ಧಿಯ ಪುರುಷನು ಶ್ರೇಯಸ್ಸಿನ ದಾರಿಯಲ್ಲಿ ನಡೆಯುವುದಿಲ್ಲ. ಕುಮಾರಿಯಾದವಳಿಗೆ ಅರವತ್ತು ವರ್ಷದ ಪತಿಯು ಹೇಗೆ ರುಚಿಸುವುದಿಲ್ಲವೊ ಹಾಗೆಯೇ ಭರತರ್ಷಭನಾದ ನಿನಗೆ(ಅಥವಾ ಧೃತರಾಷ್ಟ್ರನಿಗೆ) ನನ್ನ ಮಾತುಗಳು ರುಚಿಸುವುದಿಲ್ಲ.
ಅನುಪ್ರಿಯಂ ಚೇದನುಕಾಂಕ್ಷಸೇ ತ್ವಂ
ಸರ್ವೇಷು ಕಾರ್ಯೇಷು ಹಿತಾಹಿತೇಷು |
ಸ್ತ್ರಿಯಶ್ಚ ರಾಜನ್ ಜಡಪಂಗಕಾಂಶ್ಚ
ಪೃಚ್ಛಸ್ವ ತಾಂಸ್ತಾದೃಶಾಂಶ್ಚೈವ ಮೂಢಾನ್ ॥16॥
ರಾಜನೇ! ನಿನ್ನ ಎಲ್ಲಾ ಕಾರ್ಯಗಳಲ್ಲಿಯೂ ಪ್ರಿಯವನ್ನೇ ಮಾತನಾಡುವವನನ್ನು ನೀನು ಮಂತ್ರಿಯಾಗಿ ಅಥವಾ ಆಪ್ತನಾಗಿ ಬಯಸುವುದಾದರೆ ಸ್ತ್ರೀಯರನ್ನೂ ಜಡರನ್ನೂ ಪಂಗುಗಳನ್ನೂ ಮತ್ತು ಅಂತಹ ಮೂಢರನ್ನೂ ಕೇಳು.
ಲಭ್ಯಸ್ತೇ ಖಲು ಪಾಪೀಯಾನ್ ನರೋಽನುಪ್ರಿಯವಾಗಿಹ |
ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥17॥
ನೀನು ಮಾಡುವ ಒಳ್ಳೆಯ ಅಥವಾ ಕೆಟ್ಟ ಕೆಲಸಗಳಲ್ಲಿ ನಿನ್ನನ್ನು ಕುರಿತು ಪ್ರಿಯವನ್ನೇ ಮಾತನಾಡುವ ಪಾಪಿಷ್ಠನಾದ ಪುರುಷನು ನಿನಗೆ ದೊರಕುತ್ತಾನೆ. ಆದರೆ ಅಪ್ರಿಯವಾದರೂ ಹಿತವಾದ ವಿಷಯವನ್ನು ಹೇಳುವವನೂ ಮತ್ತು ಕೇಳುವವನೂ ದುರ್ಲಭರು.
ಯಸ್ತು ಧರ್ಮಂ ಪರಾಮೃಶ್ಯ ಹಿತ್ವಾ ಭರ್ತುಃ ಪ್ರಿಯಾಪ್ರಿಯೇ |
ಅಪ್ರಿಯಾಣ್ಯಾಹ ಪಥ್ಯಾನಿ ತೇನ ರಾಜಾ ಸಹಾಯವಾನ್ ॥18॥
ಯಾವನು ಸ್ವಾಮಿಯ ಇಷ್ಟಾನಿಷ್ಟಗಳನ್ನು ಬಿಟ್ಟು ಧರ್ಮವನ್ನೇ ವಿಮರ್ಶೆಮಾಡಿ ಸ್ವಾಮಿಗೆ ಹಿತವಾದುದನ್ನೇ ಹೇಳುತ್ತಾನೆಯೋ ಅವನಿಂದಲೇ ರಾಜನು ಸಹಾಯವುಳ್ಳವನಾಗುತ್ತಾನೆ.
ನಾಪ್ರಿಯಃ ಸಾಧುರ್ಭವತಿ ನ ಮೇಧಾವೀ ನ ಪಂಡಿತಃ |
ಪ್ರಿಯೇಷ್ವೇತಾನಿ ದೃಶ್ಯಂತೇ ಯಾವದ್ದ್ವೇಷೋಽಥ ಭಾರತ ॥19॥
ಎಲೈ ಭಾರತನೇ! ಅಪ್ರಿಯವಾಗಿ ಮಾತನಾಡುವವನು (ಅಂತಹವನ ದೃಷ್ಟಿಯಲ್ಲಿ) ಸಾಧುವಾಗುವುದಿಲ್ಲ.ಮೇಧಾವಿಯೂ ಆಗುವುದಿಲ್ಲ. ಪಂಡಿತನೂ ಆಗುವುದಿಲ್ಲ. ಯಾರು ಪ್ರಿಯವಾಗಿ ಮಾತನಾಡುತ್ತಾನೆಯೋ ಅವನಲ್ಲಿ ಈ ಗುಣಗಳನ್ನು ಕಾಣುತ್ತಾನೆ. ಅದು ಅವರಲ್ಲಿ ದ್ವೇಷವು ಉಂಟಾಗುವವರೆಗೆ ಮಾತ್ರ.
ಅವ್ಯಾಧಿಕಂ ಕಟುಕಂ ತೀಕ್ಷ್ಣಮುಷ್ಣಂ
ಯಥೌಷಧಂ ಪರುಷಂ ಪೂತಿಗಂಧಿ |
ಸತಾಂ ಪೇಯಂ ಯನ್ನ ಪಿಬಂತ್ಯಸಂತೋ

ಮನ್ಯುಂ ಮಹಾರಾಜ ಪರಂ ಪ್ರಶಾಮ್ಯ ॥20॥
ಮಹಾರಾಜನೇ! ಕ್ರೋಧ ಎಂಬುದು ಕಟುವಾದ ತೀಕ್ಷ್ಣವಾದ ಕೆಟ್ಟವಾಸನೆಯಿರುವ ಉಗ್ರವಾದ ಔಷಧಿಯಿದ್ದಂತೆ. ಆದರೆ ವ್ಯಾಧಿಯನ್ನು ಪರಿಹರಿಸುವಂತಹದು. ಸಜ್ಜನರು ಮಾತ್ರ ಈ ಕ್ರೋಧವನ್ನು ಕುಡಿಯುತ್ತಾರೆ. ದುಷ್ಟರು ಎಂದೂ ಕುಡಿಯುವುದಿಲ್ಲ. ಮಹಾರಾಜನೇ! ಶಾಂತಿಯನ್ನು ಹೊಂದು.
ವೈಚಿತ್ರವೀರ್ಯಸ್ಯ ಯಶೋ ಧನಂ ಚ
ವಾಂಛಾಮ್ಯಹಂ ಸಹಪುತ್ರಸ್ಯ ಶಶ್ವತ್ |
ಯಥಾ ತಥಾ ವಾಸ್ತು ಮನಶ್ಚ ವೋಸ್ತು
ಮಮಾಪಿ ಚ ಸ್ವಸ್ತಿ ದಿಶಂತು ವಿಪ್ರಾಃ ॥21॥
ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ಸಂಪತ್ತನ್ನು ಕೀರ್ತಿಯನ್ನು ಮತ್ತು ಪುತ್ರಸಂಪತ್ತನ್ನು ನಾನು ಯಾವಾಗಲೂ ಬಯಸುತ್ತೇನೆ. ಏನು ನಡೆಯುತ್ತದೆಯೋ ಅದೆಲ್ಲವೂ ನಡೆಯಲಿ. ನಿನಗೆ ಒಳ್ಳೆಯ ಮನಸ್ಸು ಉಂಟಾಗಲಿ. ಬ್ರಾಹ್ಮಣರ ಆಶೀರ್ವಾದದಿಂದ ನನಗೂ ಮಂಗಳವಾಗಲಿ.
ಆಶೀವಿಷಾನ್ ನೇತ್ರವಿಷಾನ್ ಕೋಪಯೇನ್ನ ತು ಪಂಡಿತಃ |
ಏವಂ ತೇಽಹಂ ವದಾಮೀದಮಪ್ರಿಯಂ ಕುರುನಂದನ ॥22॥
ಎಲೈ ಕುರುನಂದನನೇ! ಆಶೀವಿಷವಾದ ಸರ್ಪಗಳನ್ನು ನೇತ್ರದಲ್ಲಿಯೇ ಕೋಪವೆಂಬ ವಿಷವನ್ನು ಕಾರುವಂತಿರುವ ಶೂರರನ್ನು ವಿವೇಕಿಯಾದವನು ಎಂದೂ ಕೋಪಗೊಳಿಸಬಾರದು. ನಿನಗೆ ಅಪ್ರಿಯವಾದರೂ ನಾನು ನಿನಗೆ ಹೀಗೆ ಈ ವಿಷಯವನ್ನು ಹೇಳುತ್ತಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಚತುರಶೀತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಷೋಡಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ತಸ್ಮಿನ್ ಜಿತೇಽಥ ಸಹದೇವಮಥಾರ್ಜುನಂ ಚ
ಭೀಮಂ ಚ ಸೋಮಕಸುತಾಂ ಸ್ವಮಪಿ ಕ್ರಮೇಣ |
ರಾಜಾ ನಿಧಾಯ ವಿಜಿತೋಽಥ ಸುಯೋಧನಃ ಸ್ವಂ
ಸೂತಂ ದಿದೇಶ ಪೃಷತಾತ್ಮಜಪುತ್ರಿಕಾಯಾಃ ॥327॥
ಧರ್ಮರಾಜ ನಕುಲನನ್ನು ಸೋತಾಗ ಸಹದೇವನನ್ನೂ ಪಣಕ್ಕಿಟ್ಟು ಸೋತ. ಬಳಿಕ ಅರ್ಜುನನನ್ನೂ ಭೀಮನನ್ನೂ ದ್ರೌಪದಿಯನ್ನೂ ತನ್ನನ್ನೂ ಕ್ರಮವಾಗಿ ಪಣಕ್ಕಿಟ್ಟು ಸೋತ. ಆಗ ದುರ್ಯೋಧನ ತನ್ನ ಸಾರಥಿಯಾದ ಪ್ರಾತಿಕಾಮಿಯನ್ನು ದ್ರೌಪದಿಯ ಬಳಿಗೆ ಕಳಿಸಿದ.
* * * *
ಎಂಭತ್ತೈದನೆಯ ಅಧ್ಯಾಯ
(ತಮ್ಮಂದಿರನ್ನು ದ್ರೌಪದಿಯನ್ನು ಮತ್ತು ತನ್ನನ್ನೂ ಪಣಕ್ಕಿಟ್ಟು ಯುಧಿಷ್ಠಿರನ ಪರಾಜಯ.)
ಶಕುನಿಃ
ಬಹು ವಿತ್ತಂ ಪರಾಜೈಷೀಃ ಪಾಂಡವಾನಾಂ ಯುಧಿಷ್ಠಿರ |
ಆಚಕ್ಷ್ವ ವಿತ್ತಂ ಕೌಂತೇಯ ಯದಿ ತೇಽಸ್ತ್ಯಪರಾಜಿತಮ್ ॥1॥
ಯುಧಿಷ್ಠಿರನೇ! ಪಾಂಡವರ ಬಹುಧನವನ್ನು ಕಳೆದಿದ್ದೀಯೆ. ಕೌಂತೇಯನೇ! ಪರಾಜಿತವಲ್ಲದ ಧನವೇನಾದರೂ ಇದ್ದರೆ ಅದನ್ನು ಹೇಳು.
ಯುಧಿಷ್ಠಿರಃ
ಮಮ ವಿತ್ತಮಸಂಖ್ಯೇಯಂ ಯದಹಂ ವೇದ್ಮಿ ಸೌಬಲ |
ಅಥ ತ್ವಂ ಶಕುನೇ ಕಸ್ಮಾದ್ ವಿತ್ತಂ ಸಮನುಪೃಚ್ಛಸಿ ॥2॥
ಸುಬಲಪುತ್ರನಾದ ಶಕುನಿಯೇ ನನ್ನ ಬಳಿ ಇರುವ ವಿತ್ತವು ಅಸಂಖ್ಯೇಯವಾದುದು. ಅದನ್ನು ನಾನು ತಿಳಿದಿದ್ದೇನೆ. ನೀನೇಕೆ ಅದನ್ನು ಪ್ರಶ್ನೆಮಾಡುತ್ತಿದ್ದೀಯೆ?
ಅಯುತಂ ಪ್ರಯುತಂ ಚೈವ ನಿಖರ್ವಂ ಖರ್ವಮರ್ಬುದಮ್ |
ಪ್ರಖರ್ವಂ ಚ ನಿಖರ್ವಂಚ ಸಮುದ್ರಂ ಚಾತ್ರ ಸೌಬಲ |
ಏತನ್ಮಮ ಧನಂ ರಾಜನ್ ತೇನ ದೀವ್ಯಾಮ್ಯಹಂ ತ್ವಯಾ ॥3॥
ಸೌಬಲನೇ! ಅಯುತವಾಗಲೀ ಪ್ರಯುತವಾಗಲೀ ಖರ್ವವಾಗಲೀ ನಿಖರ್ವವಾಗಲೀ ಅರ್ಬುದವಾಗಲೀ ಪ್ರಖರ್ವವಾಗಲೀ ಸಮುದ್ರವಾಗಲೀ ಎಲ್ಲ ಧನವೂ ನನ್ನ ಬಳಿಯಿದೆ. ರಾಜನೇ! ಅದರಿಂದ ನಿನ್ನ ಜೊತೆಯಲ್ಲಿ ನಾನು ಆಟವಾಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥4॥
ಇದನ್ನು ಕೇಳಿ ಮನಸ್ಸಿನಲ್ಲೇ ನಿರ್ಧರಿಸಿ ಮೋಸವನ್ನು ಅವಲಂಬಿಸಿ ಶಕುನಿಯು ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.

ಯುಧಿಷ್ಠಿರಃ
ಗವಾಶ್ವಂ ಬಹುಧೇನೂಕಮಸಂಖ್ಯೇಯಮಜಾವಿಕಮ್ |
ಯತ್ಕಿಂಚಿದನುವರ್ಣಾಂ ಚ ಪ್ರಾಕ್ ಸಿದ್ಧಮಪಿ ಸೌಬಲ |
ಏತನ್ಮಮ ಧನಂ ರಾಜನ್ ತೇನ ದೀವ್ಯಾಮ್ಯಹಂ ತ್ವಯಾ ॥5॥
ಅನೇಕ ಕರೆಯುವ ಹಸುಗಳನ್ನು ಹೊಂದಿರುವ ಗೋವುಗಳ ಮತ್ತು ಅಶ್ವಗಳ ಸಮೂಹ. ಅಸಂಖ್ಯೇಯವಾದ ಆಡು ಮತ್ತು ಕುರಿಗಳ ಸಮೂಹ. ಅವುಗಳ ವರ್ಣಗಳಿಗೆ ಸಮವಾಗಿ ಮೊದಲೇ ಬೇರ್ಪಡಿಸಿದ ಬೇರೆ ಬೇರೆ ಗುಂಪುಗಳು. ರಾಜನಾದ ಶಕುನಿಯೇ ಇದು ನನ್ನ ಧನ. ಅದರಿಂದ ನಾನು ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥6॥
ಇದನ್ನು ಕೇಳಿ ಮನಸ್ಸಿನಲ್ಲೇ ನಿರ್ಧರಿಸಿ ಶಕುನಿಯು ಯುಧಿಷ್ಠರನನ್ನು ಕುರಿತು ನಾನು ಗೆದಿದ್ದೇನೆ ಎಂದು ಹೇಳಿದನು.
ಯುಧಿಷ್ಠಿರಃ
ಪುರಂ ಜನಪದೋ ಭೂಮಿರಬ್ರಾಹ್ಮಣಧನೈಃ ಸಹ |
ಅಬ್ರಾಹ್ಮಣಾಶ್ಚ ಪುರುಷಾ ರಾಜನ್ ಶಿಷ್ಟಂ ಧನಂ ಮಮ ॥7॥
ರಾಜನೇ! ನನ್ನ ರಾಜಧಾನಿ, ರಾಜ್ಯ, ಭೂಮಿ, ಬ್ರಾಹ್ಮಣರದ್ದಲ್ಲದ ಧನ, ಬ್ರಾಹ್ಮಣರಲ್ಲದ ಪುರುಷರು. ಇದು ನನಗೆ ಉಳಿದಿರುವ ಧನ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಸ್ಥಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥8॥
ಇದನ್ನು ಕೇಳಿ ಮನಸ್ಸಿನಲ್ಲೇ ನಿರ್ಧರಿಸಿ ಮೋಸವನ್ನು ಅವಲಂಬಿಸಿ ಶಕುನಿಯು ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಯುಧಿಷ್ಠಿರಃ
ರಾಜಪುತ್ರಾ ಇಮೇ ರಾಜನ್ ಶೋಭಂತೇ ಯೈರ್ವಿಭೂಷಿತಾಃ |
ಕುಂಡಲಾನಿ ಚ ನಿಷ್ಕಾಶ್ಚ ಸರ್ವಶಶ್ಚಾಂಗಭೂಷಣಾಃ ॥9॥
ವಾಸಾಂಸಿ ಚ ವಿಚಿತ್ರಾಣಿ ಸರ್ವಮನ್ಯದ್ ವಿನಾಯುಧೈಃ |
ಏತದ್ ರಾಜನ್ ಧನಂ ಮಹ್ಯಂ ತೇನ ದೀವ್ಯಾಮ್ಯಹಂ ತ್ವಯಾ ॥10॥
ಎಲೈ ರಾಜನೇ! ಈ ರಾಜ ಪುತ್ರರು ಮತ್ತು ಇವರು ಧರಿಸಿರುವ ಕುಂಡಲಗಳೂ ನಿಷ್ಕಗಳೂ ಅಂಗಭೂಷಣಗಳೂ ವಿಚಿತ್ರವಾದ ವಸ್ತ್ರಗಳೂ ಮತ್ತು ಆಯುಧವನ್ನು ಬಿಟ್ಟು ಉಳಿದೆಲ್ಲವೂ ನನ್ನ ಧನ. ಅದರಿಂದ ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥11॥
ಇದನ್ನು ಕೇಳಿ ಮನಸ್ಸಿನಲ್ಲೇ ನಿರ್ಧರಿಸಿ ಮೋಸವನ್ನು ಅವಲಂಬಿಸಿ ಶಕುನಿಯು ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಯುಧಿಷ್ಠಿರಃ
ಶ್ಯಾಮೋ ಯುವಾ ಲೋಹಿತಾಕ್ಷಃ ಸಿಂಹಸ್ಕಂಧೋ ಮಹಾಭುಜಃ |
ನಕುಲೋ ಗ್ಲಹ ಏವೈಕ ಏತದ್ವೈ ಮದ್ಗತಂ ಧನಮ್ ॥12॥
ಶ್ಯಾಮವರ್ಣದವನೂ ಲೋಹಿತಾಕ್ಷನೂ ಸಿಂಹಸ್ಕಂಧನೂ ಮಹಾಭುಜವುಳ್ಳವನೂ ಯುವಕನೂ ಆದ ನಕುಲನೊಬ್ಬನೇ ನನ್ನ ಪಣ. ಇದು ನನ್ನಲ್ಲಿರುವ ಧನ.
ಶಕುನಿಃ
ಪ್ರಿಯಸ್ತೇ ನಕುಲೋ ರಾಜನ್ ರಾಜಪುತ್ರೋ ಯುಧಿಷ್ಠಿರ |
ಅಸ್ಮಾಕಂ ಧನತಾಂ ಪ್ರಾಪ್ತೋ ಭೂಯಸ್ತ್ವಂ ಕೇನ ದೀವ್ಯಸೇ ॥13॥
ರಾಜನಾದ ಯುಧಿಷ್ಠಿರನೇ! ರಾಜಪುತ್ರನಾದ ನಕುಲನು ನಿನಗೆ ಪ್ರಿಯನಾದವನು ಅವನು ನಮಗೆ ಧನವಾಗುತ್ತಾನೆ. ಪುನಃ ನೀನು ಯಾವುದನ್ನು ಪಣಕ್ಕಿಟ್ಟು ಆಡುತ್ತೀಯೆ?
ವೈಶಂಪಾಯನಃ
ಏವಮುಕ್ತತ್ವಾಽಥ ಶಕುನಿಸ್ತಾನಕ್ಷಾನ್ ಪ್ರತ್ಯಪದ್ಯತ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥14॥
ಹೀಗೆ ಹೇಳಿ ಶಕುನಿಯು ಕೈಗಳಲ್ಲಿ ದಾಳಗಳನ್ನು ತೆಗೆದುಕೊಂಡನು. ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಯುಧಿಷ್ಠಿರಃ
ಅಯಂ ಧರ್ಮಾನ್ ಸಹದೇವೋಽನುಶಾಸ್ತಿ
ಲೋಕೇ ಹ್ಯಸ್ಮಿನ್ ಪಂಡಿತಾಖ್ಯಾಂ ಗತಶ್ಚ |
ಅನರ್ಹತಾ ರಾಜಪುತ್ರೇಣ ತೇನ

ತ್ವಯಾ ದೀವ್ಯಾಮ್ಯಪ್ರಿಯವತ್ ಪ್ರಿಯೇಣ ॥15॥
ಸಹದೇವನು ಎಲ್ಲಾ ಧರ್ಮಗಳನ್ನೂ ಅನುಶಾಸನಮಾಡುವವನು. ಈ ಲೋಕದಲ್ಲಿ ಪಂಡಿತನೆಂಬ ಹೆಸರನ್ನು ಸಂಪಾದಿಸಿದ್ದಾನೆ. ಪಣಕ್ಕಿಡಲು ಯೋಗ್ಯನಲ್ಲದ ಪ್ರಿಯನಾದ ಅವನನ್ನು ಅಪ್ರಿಯನೆಂಬಂತೆ ಪಣಕ್ಕಿಟ್ಟು ನಿನ್ನ ಜೊತೆಯಲ್ಲಿ ಆಡುತ್ತೇನೆ.
ಶಕುನಿಃ
ಮಾದ್ರೀಪುತ್ರೌ ಪ್ರಿಯೌ ರಾಜನ್ ತವೇಮೌ ವಿಜಿತೌ ಮಯಾ |
ಬಲೀಯಾಂಸೌ ತು ತೌ ಮನ್ಯೇ ಭೀಮಸೇನಧನಂಜಯೌ ॥16॥
ರಾಜನೇ! ನಿನಗೆ ಪ್ರಿಯರಾದ ಈ ಇಬ್ಬರು ಮಾದ್ರೀ ಪುತ್ರರನ್ನು ನಾನು ಗೆದ್ದಿದ್ದೇನೆ. ಆದರೆ ಭೀಮಾರ್ಜುನರು ಇವರಿಗಿಂತಲೂ ಅಧಿಕವಾದ ಬಲವುಳ್ಳವರೆಂದು ನಾನು ಭಾವಿಸಿದ್ದೇನೆ.
ಯುಧಿಷ್ಠಿರಃ
ಅಧರ್ಮಂ ಚರಸೇ ಮೂಢ ಯೋ ನಾವೇಕ್ಷಸಿ ವೈ ನಯಮ್ |
ಯೋ ನಃ ಸುಮನಸಾಂ ತ್ವಂ ಚ ಭೇದಂ ಕರ್ತುಮಿಹೇಚ್ಛಸಿ ॥17॥
ಮೂಢನೇ! ನೀನು ನೀತಿಯನ್ನು ಮೀರಿ ಅಧರ್ಮವನ್ನು ಆಚರಿಸುತ್ತಿದ್ದೀಯೆ.ಏಕೆಂದರೆ ಸೌಮನಸ್ಯವುಳ್ಳ ನಮ್ಮಲ್ಲಿ ನೀನು ವಿರೋಧವನ್ನು ಹುಟ್ಟುಹಾಕಲು ಇಚ್ಛೆಪಡುತ್ತಿದ್ದೀಯೆ.
ಶಕುನಿಃ
ಗರ್ತೇ ಮತ್ತಃ ಪ್ರಪತತಿ ಪ್ರಮತ್ತಃ ಸ್ಥಾಣುಮೃಚ್ಛತಿ |
ಜ್ಯೇಷ್ಠೋ ರಾಜನ್ ವರಿಷ್ಠೋಽಸಿ ನಮಸ್ತೇ ಭರತರ್ಷಭ ॥18॥
ಮತ್ತನಾದವನು ಹಳ್ಳದಲ್ಲಿ ಬೀಳುತ್ತಾನೆ. ಪ್ರಮತ್ತನಾದನು ಮರಕ್ಕೆ ಡಿಕ್ಕಿಹೊಡೆಯುತ್ತಾನೆ. ಭರತ ಶ್ರೇಷ್ಠನಾದ ರಾಜನೇ! ನೀನು ಜ್ಯೇಷ್ಠನೂ ಶ್ರೇಷ್ಠನೂ ಆಗಿದ್ದೀಯೆ. ನಿನಗೆ ನಮಸ್ಕಾರ.
ಸ್ವಪ್ನೇಽಪಿ ತಾನಿ ಪಶ್ಯಂತಿ ಜಾಗ್ರತೋಪಿ ಯುಧಿಷ್ಠಿರ |
ಕಿತವಾಶ್ಚಾಪಿ ದೀವ್ಯಂತಃ ಪ್ರಲಪಂತ್ಯುತ್ಕಟಾ ಇವ ॥19॥
ಯುಧಿಷ್ಠಿರನೇ! ಪಣವನ್ನು ಇಟ್ಟು ಆಡುವವರು ಜಾಗ್ರದವಸ್ಥೆಯಲ್ಲಿ ಏನನ್ನು ನೋಡುತ್ತಾರೆಯೋ, ಅದನ್ನು ಸ್ವಪ್ನದಲ್ಲಿಯೂ ನೋಡುತ್ತಾರೆ. ದ್ಯೂತವನ್ನು ಆಡುವವರು ಉತ್ಕಟವಾಗಿ ಪ್ರಲಾಪವನ್ನು ಮಾಡುತ್ತಾರೆ.
ಯುಧಿಷ್ಠಿರಃ
ಯೋ ನಃ ಸೇಂ ನೌರಿವ ಪಾರನೇತಾ |
ಜೇತಾಽರೀಣಾಂ ರಾಜಪುತ್ರಸ್ತರಸ್ವೀ |
ಅನರ್ಹತಾ ಲೋಕವೀರೇಣ ತೇನ
ದೀವ್ಯಾಮ್ಯಹಂ ಶಕುನೇ ಫಲ್ಗುನೇನ ॥20॥
ಎಲೈ ಶಕುನಿಯೇ ! ಯಾವನು ನಮ್ಮನ್ನು ನೌಕೆಯು ಆಚೆಯ ದಡವನ್ನು ಸೇರಿಸುವಂತೆ ಯುದ್ಧದಲ್ಲಿ ಪಾರುಮಾಡುತ್ತಾನೆಯೋ ವೇಗಶಾಲಿಯಾಗಿ ಶತ್ರುಗಳನ್ನು ಗೆಲ್ಲುತ್ತಾನೆಯೋ ಲೋಕವೀರನಾದ ಪಣಕ್ಕಿಡಲು ಯೋಗ್ಯನಲ್ಲದ ರಾಜಪುತ್ರನಾದ ಅಂತಹ ಅರ್ಜುನನನ್ನು ಪಣಕ್ಕಿಟ್ಟು ನಾನು ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಸ್ಥಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥21॥
ಇದನ್ನು ಕೇಳಿದ ಶಕುನಿಯು ಮನಸ್ಸಿನಲ್ಲಿಯೇ ನಿಶ್ಚಯಿಸಿ ಮೋಸವನ್ನು ಅವಲಂಬಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಶಕುನಿಃ
ಅಯಂ ಮಯಾ ಪಾಂಡವಾನಾಂ ಧನುರ್ಧರಃ
ಪರಾಜಿತಃ ಪಾಂಡವಃ ಸವ್ಯಸಾಚೀ |
ಭೀಮೇನ ರಾಜನ್ ದಯಿತೇನ ದೀವ್ಯ
ಯೋ ಜೇತವ್ಯಃ ಪಾಂಡವ ತೇಽವಶಿಷ್ಟಃ ॥22॥
ಎಲೈ ರಾಜನೇ! ಪಾಂಡುಪುತ್ರನಾದ ಪಾಂಡವರಲ್ಲಿ ಶ್ರೇಷ್ಠಧನುರ್ಧಾರಿಯಾದ ಅರ್ಜುನನ್ನು ಗೆದ್ದಿದ್ದೇನೆ. ರಾಜನೇ! ನಿನಗೆ ಪ್ರಿಯನಾದ ಭೀಮನನ್ನು ಪಣಕ್ಕೆ ಇಡು. ಪಾಂಡವನೇ! ಅವನು ಉಳಿದಿದ್ದಾನೆ. ಅವನನ್ನು ನಾನು ಮುಖ್ಯವಾಗಿ ಜಯಿಸಬೇಕಾಗಿದೆ.
ಯುಧಿಷ್ಠಿರಃ
ಸೇನಾಂ ನೇತಾ ಸಂಯುಗಾರ್ಥಂ ಪ್ರಣೇತಾ
ಯಥಾ ವಜ್ರೀ ದಾನವಶತ್ರುರೇಕಃ |
ತಿರ್ಯಕ್‌ಪ್ರೇಕ್ಷೀ ಸಂಗತಭ್ರೂರ್ಮಹಾತ್ಮಾ
ಸಿಂಹಸ್ಕಂಧೋ ಯಶ್ಚ ಸದಾತ್ಯಮರ್ಷೀ ॥23॥
ಬಲೇನ ತುಲ್ಯೋ ಯಸ್ಯ ಪುಮಾನ್ ನ ವಿದ್ಯತೇ
ಗದಾಭೃತಾಮಗ್ರ್ಯ ಇಹಾರಿಮರ್ದನಃ |
ಅನರ್ಹತಾ ರಾಜಪುತ್ರೇಣ ತೇನ

ದೀವ್ಯಾಮ್ಯಹಂ ಭೀಮಸೇನೇನ ರಾಜನ್ ॥24॥
ಎಲೈ ರಾಜನೇ! ಇಂದ್ರನು ದಾನವರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಸೇನೆಯನ್ನು ನಡೆಸಿದಂತೆ ಯಾವನು ನಮ್ಮ ಸೇನೆಯನ್ನು ಯುದ್ಧದಲ್ಲಿ ನಡೆಸುತ್ತಾನೆಯೋ ಶತ್ರುಗಳನ್ನು ಒರೆನೋಟದಿಂದಲೇ ನೋಡುತ್ತಾನೆಯೋ ಕೂಡಿರುವ ಹುಬ್ಬುಳ್ಳವನೂ ಸಿಂಹಸ್ಕಂದನೂ ಯಾವಾಗಲೂ ಶತ್ರುಗಳ ಮೇಲೆ ಕ್ರೋಧವನ್ನು ಹೊಂದಿರುವವನೂ ಆದ ಮತ್ತು ಯಾವನ ಬಲಕ್ಕೆ ಸಮಾನವಾದ ಬಲವು ಎಲ್ಲಿಯೂ ಯಾವ ಲೋಕದಲ್ಲಿಯೂ ಇಲ್ಲವೋ ಯಾವನು ಗದಾಧಾರಿಗಳಲ್ಲಿ ಅಗ್ರಗಣ್ಯನೋ ಶತ್ರುಸಂಹಾರಕನೋ ಅಂತಹ ಮಹಾತ್ಮನಾದ ಪಣಕ್ಕಿಡಲು ಯೋಗ್ಯನಲ್ಲದ ರಾಜಪುತ್ರನಾದ ಭೀಮಸೇನನನ್ನು ಪಟಕ್ಕಿಟ್ಟು ನಿನ್ನ ಜೊತೆಯಲ್ಲಿ ಆಡುವೆನು.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥25॥
ಇದನ್ನು ಕೇಳಿ ಮನಸ್ಸಿನಲ್ಲಿಯೇ ನಿಶ್ಚಯಿಸಿ ಮೋಸವನ್ನು ಅವಲಂಬಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಶಕುನಿಃ
ಬಹು ವಿತ್ತಂ ಪರಾಜೈಷೀರ್ಭ್ರಾತೃಂಶ್ಚ ಸಹಯದ್ವಿಪಾನ್ |
ಆಚಕ್ಷ್ವ ವಿತ್ತಂ ಕೌಂತೇಯ ಯದಿ ತೇಽಸ್ತ್ಯಪರಾಜಿತಮ್ ॥26॥
ಕೌಂತೇಯನೇ! ನೀನು ಬಹಳ ಧನವನ್ನೂ ಗಜಾಶ್ವಗಳನ್ನೂ ತಮ್ಮಂದಿರನ್ನೂ ಕಳೆದು ಕೊಂಡ್ಡಿದ್ದೀಯೆ! ನೀನು ಕಳೆದುಕೊಳ್ಳದಿರುವ ಬೇರೆ ಯಾವುದಾದರೂ ವಿತ್ತವಿದ್ದರೆ ಹೇಳು.
ಯುಧಿಷ್ಠಿರಃ
ಅಹಂ ವಿಶಿಷ್ಟಃ ಸರ್ವೇಷಾಂ ಭ್ರಾತೃಣಾಂ ದಯಿತಸ್ತಥಾ |
ಕುರ್ಯಾಮಸ್ತೇ ಜಿತಾಃ ಕರ್ಮ ಸ್ವಯಮಾತ್ಮನ್ಯುಪಗ್ರಹೇ ॥27॥
ನಾನು ಪಾಂಡವರಲ್ಲಿ ವಿಶಿಷ್ಟನಾದವನು. ಎಲ್ಲಾ ತಮ್ಮಂದಿರಿಗೂ ಪ್ರೀತಿಪಾತ್ರನಾದವನು. ನಾನು ನನ್ನನ್ನೇ ಪಣವಾಗಿ ಒಡ್ಡುತ್ತಿದ್ದೇನೆ. ನಾನು ಜಿತನಾದರೆ ನಾವೆಲ್ಲರೂ ನಿನ್ನ ಕಿಂಕರರಾಗಿ ಕರ್ಮವನ್ನು ಮಾಡುತ್ತೇವೆ.
ವೈಶಂಪಾಯನಃ
ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಸ್ಥಿತಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥28॥
ಇದನ್ನು ಕೇಳಿ ಮನಸ್ಸಿನಲ್ಲಿಯೇ ನಿಶ್ಚಯವನ್ನು ಮಾಡಿ ಮೋಸವನ್ನು ಅವಲಂಬಿಸಿ ಯುಧಿಷ್ಠಿರನನ್ನು ಕುರಿತು ಶಕುನಿಯು ನಾನು ಗೆದ್ದಿದ್ದೇನೆ ಎಂದು ಹೇಳಿದನು.
ಶಕುನಿಃ
ಏತತ್ ಪಾಪಿಷ್ಠಮಕರೋರ್ಯದಾತ್ಮಾನಂ ಪರಾಜಯಃ |
ಶಿಷ್ಟೇ ಸತಿ ಧನೇ ರಾಜನ್ ಪಾಪ ಆತ್ಮಪರಾಜಯಃ ॥29॥
ರಾಜನೇ! ನಿನ್ನನ್ನೇ ನೀನು ಸೋತು ಪಾಪಿಷ್ಠವಾದ ಕೆಲಸವನ್ನು ಮಾಡಿದ್ದೀಯೆ. ನಿನ್ನ ಧನವು ಇನ್ನೂ ಇರುವಾಗ ನಿನ್ನನ್ನೇ ನೀನು ಸೋಲುವುದು ಪಾಪಕರವಾದುದು.
ವೈಶಂಪಾಯನಃ
ಏವಮುಕತತ್ವ ಮತಾಕ್ಷಸ್ತಾನ್ ಗ್ಲಹೇ ಸರ್ವಾನವಸ್ಥಿತಾನ್ |
ಅಪಾಜಯಲ್ಲೋಕವೀರಾನ್ ಮಹಾರಾಜ ಪೃಥಕ್ ಪೃಥಕ್ ॥30॥
ಎಲೈ ಮಹಾರಾಜನೇ! ಹೀಗೆ ಹೇಳಿ ಅಕ್ಷಹೃದಯವನ್ನು ತಿಳಿದ ಆ ಶಕುನಿಯು ಆ ಸಭೆಯಲ್ಲಿ ಉಪಸ್ಥಿತರಾದ ಎಲ್ಲಾ ಲೋಕವೀರರನ್ನೂ ಪ್ರತ್ಯೇಕವಾಗಿ ಪಣಗಳಲ್ಲಿ ಗೆದ್ದನು.
ಶಕುನಿಃ
ಅತೀವ ತೇ ಪ್ರಿಯಾ ದೇವೀ ಗ್ಲಹ ಏಕೋಪರಾಜಿತಃ |
ಪಣಸ್ವ ಕೃಷ್ಣಾಂ ಪಾಂಚಾಲೀಂ ತಥಾಽಽತ್ಮಾನಂ ಪುನರ್ಜಯ ॥31॥
ನಿನಗೆ ಅತ್ಯಂತ ಪ್ರಿಯಳಾದವಳು ದ್ರೌಪದಿ, ಅವಳೊಬ್ಬಳು ಅಪರಾಜಿತಳಾಗಿ ಉಳಿದಿದ್ದಾಳೆ. ಪಾಂಚಾಲಿಯನ್ನು ಪಣವಾಗಿಟ್ಟು ಆಡು. ಹಾಗೆ ಮತ್ತೆ ನಿನ್ನನ್ನು ನೀನು ಜಯಿಸು.
ಯುಧಿಷ್ಠಿರಃ
ನೈವ ಹ್ರಸ್ವಾ ನ ಮಹತೀ ನ ಕೃಶಾ ನಚ ರೋಹಿಣೀ |
ಸಾ ರಾಗರಕ್ತವಸನಾ ತಯಾ ದೀವ್ಯಾಮ್ಯಹಂ ತ್ವಯಾ |
ಶಾರದೋತ್ಪಲಪತ್ರಾಕ್ಷ್ಯಾ ಶಾರದೋತ್ಪಲಗಂಧಯಾ ॥32॥
ತಥೈವ ಸ್ಯಾದಾನೃಶಂಸ್ಯಂ ತಥಾ ಸ್ಯೂ ರೂಪಸಂಪದಃ |
ತಥಾ ಸ್ಯಾತ್ ಪುಣ್ಯಸಂಪತ್ತ್ಯಾ ಯಾಮಿಚ್ಛೇತ್ ಪುರುಷಃ ಸ್ತ್ರಿಯಮ್ ॥
ಯಾದೃಶೀಂ ಧರ್ಮ್ಮಕಾಮಾರ್ಥಸಿದ್ಧಿಮಿಚ್ಛೇನ್ನರಃ ಸ್ತ್ರಿಯಮ್ |
ಚರಮಂ ಸಂಸ್ವಪತಿ ಯಾ ಪ್ರಥಮಂ ಪ್ರತಿಬುಧ್ಯತೇ |
ಆಗೋಪಾಲಾವಿಪಾಲೇಭ್ಯಃ ಸರ್ವಂ ವೇದ ಕೃತಾಕೃತಮ್ ॥34॥

ಆಭಾತಿ ಪದ್ಮವದ್ ವಕ್ತ್ರಂ ಸಸ್ವೇದಾ ಮಲ್ಲಿಕೇವ ಚ |
ವೇದಿಮಧ್ಯಾ ದೀರ್ಘಕೇಶೀ ತಾಮ್ರಾಕ್ಷೀ ನಾತಿರೋಮಶಾ ||35||
ತಥೈವಂವಿಧಯಾ ರಾಜನ್ ಪಾಂಚಾಲ್ಯಾಽಹಂ ಸುಮಧ್ಯಯಾ |
ಗ್ಲಹಂ ದೀವ್ಯಾಮಿ ಚಾರ್ವಂಗ್ಯಾ ದ್ರೌಪದ್ಯಾ ಹಂತ ಸೌಬಲ ||36||
ಎಲೈ ಸೌಬಲನೇ! ಯಾವ ದ್ರೌಪದಿಯು ಎತ್ತರವೂ ಅಲ್ಲ ತಗ್ಗೂ ಅಲ್ಲ ಕೃಶಳೂ ಅಲ್ಲ ಸ್ಥೂಲಳೂ ಅಲ್ಲವೋ ಅಂತಹ ಯಾವಾಗಲೂ ರಕ್ತವಸ್ತ್ರವನ್ನು ಧರಿಸಿದ ಅವಳನ್ನು ಪಣವಾಗಿಟ್ಟು ನಿನ್ನ ಜೊತೆಯಲ್ಲಿ ಆಡುತ್ತೇನೆ. ಶರತ್ಕಾಲದ ಉತ್ಪಲದಂತೆ ಕಣ್ಣುಳ್ಳವಳು ಶರತ್ಕಾಲದ ಉತ್ಪಲದಂತೆ ಸುಗಂಧವುಳ್ಳವಳು ಆದ ಅವಳ ರೂಪಸಂಪತ್ತು ಹೇಗಿದೆಯೋ ಅದರಂತೆ ಸೌಮ್ಯಭಾವವುಳ್ಳವಳು. ಮನುಷ್ಯನು ಧರ್ಮಕಾಮಾರ್ಥಗಳನ್ನು ಸಾಧಿಸಲು ಎಂತಹ ಸ್ತ್ರೀಯನ್ನು ಬಯಸುತ್ತಾನೆಯೋ ಅಂತಹ ಗುಣಗಳಿಂದಲೂ ಅಂತಹ ಪುಣ್ಯಸಂಪತ್ತಿನಿಂದಲೂ ಕೂಡಿದವಳು ಯಾವಳು ಪತಿಯು ಮಲಗಿದನಂತರ ಮಲಗಿ ಪತಿಯು ಏಳುವುದಕ್ಕಿಂತ ಮುಂಚೆಯೇ ಏಳುತ್ತಾಳೆಯೋ, ದನವನ್ನು ಕಾಯುವವರು ಮತ್ತು ಕುರಿಯನ್ನು ಕಾಯುವವರಿಂದ ಹಿಡಿದು ರಾಜ್ಯದಲ್ಲಿರುವ ಎಲ್ಲರೂ ಮಾಡಿದ, ಮಾಡದಿದ್ದ ಕಾರ್ಯಗಳನ್ನು ತಿಳಿದಿರುತ್ತಾಳೆಯೋ, ಮಗುಳ್ನಗೆಯಿಂದ ಕೂಡಿದ ಯಾವಳ ಮುಖವು ಪದ್ಮದಂತೆ ಮಲ್ಲಿಗೆಯಂತೆ ಶೋಭಿಸುತ್ತದೆಯೋ ಕೃಶಮದ್ಯಳಾದವಳೂ ದೀರ್ಘಕೇಶ ಉಳ್ಳವಳೂ (ಕೆಂಪಾದ ಕಣ್ಣುಳ್ಳವಳೂ) ಮೈಮೇಲೆ ಕೂದಲಿಲ್ಲದವಳೂ ಅಂತಹ ಚಾರ್ವಂಗಿಯೂ ಆದ ದ್ರೌಪದಿಯನ್ನು ಪಣವಾಗಿಟ್ಟು ನಿನ್ನ ಜೊತೆಯಲ್ಲಿ ಆಡುತ್ತೇನೆ.
ವೈಶಂಪಾಯನಃ
ಏವಮುಕ್ತೇ ತು ವಚನೇ ಧರ್ಮರಾಜೇನ ಭಾರತ |
ಧಿಗ್ಧಿಗಿತ್ಯೇವ ವೃದ್ಧಾನಾಂ ಸಭ್ಯಾನಾಂ ನಿಃಸೃತಾ ಗಿರಃ ||37||
ಭಾರತನೇ! ಧರ್ಮರಾಜನು ಹೀಗೆ ಹೇಳುತ್ತಿರಲು ಸಭೆಯಲ್ಲಿ ಎಲ್ಲರ ಕಡೆಯಿಂದಲೂ ಧಿಕ್ಕಾರ ಧಿಕ್ಕಾರ ಎಂಬ ವೃದ್ಧರ ಮಾತುಗಳು ಕೇಳಿ ಬಂದವು.
ಚುಕ್ಷುಭೇ ಸಾ ಸಭಾ ರಾಜನ್ ರಾಜ್ಞಾಂ ಸಂಜಜ್ಞಿರೇ ಕಥಾಃ |
ಭೀಷ್ಮದ್ರೋಣಕೃಪಾದೀನಾಂ ಖೇದಶ್ಚ ಸಮಜಾಯತ ||38||
ರಾಜನೇ! ಆ ಸಭೆಯಲ್ಲಿ ಕ್ಷೋಭೆಯುಂಟಾಯಿತು. ರಾಜರು ಪರಸ್ಪರವಾಗಿ ಮಾತನಾಡಲು ಪ್ರಾರಂಭಿಸಿದರು. ಭೀಷ್ಮ ದ್ರೋಣ ಕೃಪ ಮೊದಲಾದವರಿಗೆ ಖೇದ ಉಂಟಾಯಿತು.
ಶಿರೋ ಗೃಹೀತ್ವಾ ವಿದುರೋ ಗತಸತ್ವ ಇವಾಭವತ್ |
ಆಸ್ತೇ ಧ್ಯಾಯನ್ನಧೋವಕೊತ್ರೋ ನಿಃಶ್ವಸನ್ನಿವ ಪನ್ನಗಃ ||39||
ವಿದುರನು ತಲೆಯ ಮೇಲೆ ಕೈಗಳನ್ನು ಇಟ್ಟುಕೊಂಡು ಮೃತನಂತೆ ಕುಳಿತನು. ಮುಖವನ್ನು ಕೆಳಗೆಮಾಡಿ ಸರ್ಪದಂತೆ ನಿಟ್ಟುಸಿರನ್ನು ಬಿಡುತ್ತಾ ಚಿಂತಿಸುತ್ತಾ ಕುಳಿತನು.
ಧೃತರಾಷ್ಟ್ರಸ್ತು ಸಂಹೃಷ್ಟಃ ಪರ್ಯಪೃಚ್ಛತ್ ಪುನಃ ಪುನಃ |
ಕಿಂ ಜಿತಂ ಕಿಂ ಜಿತಮಿತಿ ವ್ಯಾಕಾರಂ ನಾಭ್ಯರಕ್ಷತ ||40||
ಧೃತರಾಷ್ಟ್ರನು ಮಾತ್ರ ಸಂತೋಷದಿಂದ ಕೂಡಿದವನಾಗಿ ಮತ್ತೆ ಮತ್ತೆ ಏನನ್ನು ಗೆದ್ದನು ಏನನ್ನು ಗೆದ್ದನು ಎಂದು ಕೇಳಿದನು. ಪಾಂಡವರಿಗೆ ವಿರುದ್ಧವಾದ ತನ್ನ ಹೃದಯದ ಅಭಿಪ್ರಾಯವನ್ನು ಅವನು ಮುಚ್ಚಿಕೊಳ್ಳಲು ಸಾಧ್ಯವಾಗಲಿಲ್ಲ.
ಜಹರ್ಷ ಕರ್ಣೋಽತಿಭೃಶಂ ಸಹ ದುಶ್ಶಾಸನಾದಿಭಿಃ |
ಇತರೇಷಾಂ ತು ಸಭ್ಯಾನಾಂ ನೇತ್ರೇಭ್ಯಃ ಪ್ರಾಪತಜ್ಜಲಮ್ ||41||
ಕರ್ಣನು ದುಶ್ಶಾಸನ ಮೊದಲಾದವರಿಂದ ಒಡಗೂಡಿ ಬಹಳವಾಗಿ ಸಂತೋಷಪಟ್ಟನು. ಉಳಿದ ಸಭ್ಯರ ಕಣ್ಣುಗಳಿಂದ ನೀರು ಉರುಳಿತು.
ಸೌಬಲಸ್ತ್ವವಿಚಾರ್ಯೈವ ಜಿತಕಾಶೀ ಮದೋತ್ಕಟಃ |
ಜಿತಮಿತ್ಯೇವ ತಾನಕ್ಷಾನ್ ಪುನರೇವಾನ್ವಪದ್ಯತ ||42||
ಶಕುನಿಯಾದರೂ ಏನೂ ವಿಚಾರಮಾಡದೆ ಗೆದ್ದವನಂತೆ ಮದೋತ್ಕಟನಾಗಿ ನಾನು ಗೆದ್ದಿದ್ದೇನೆ ಎಂದು ಹೇಳುತ್ತಲೇ ದಾಳಗಳನ್ನು ಕೈಗೆ ತೆಗೆದುಕೊಂಡನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚಶೀತಿತಮೋಧ್ಯಾಯಃ ||
|| ದ್ಯೂತಪರ್ವಣಿ ಸಪ್ತದಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತೈದನೆಯ ಅಧ್ಯಾಯವು ಮುಗಿಯಿತು.
*****

ಎಂಭತ್ತಾರನೆಯ ಅಧ್ಯಾಯ
(ದುರ್ಯೋಧನನಿಂದ ದ್ರೌಪದಿಯನ್ನು ಕರೆತರಲು ಆದೇಶ. ವಿದುರನ ಕಟೂಕ್ತಿ)
ದುರ್ಯೋಧನಃ
ಏಹಿ ಕ್ಷತ್ತರ್ದ್ರೌಪದೀಮಾನಯಸ್ವ
ಪ್ರಿಯಾಂ ಭಾರ್ಯಾಂ ಸಮ್ಮತಾಂ ಪಾಂಡವಾನಾಮ್ |
ಸಮ್ಮಾರ್ಜತಾಂ ವೇಶ್ಮ ಪರೈತು ಶೀಘ್ರಮ್
ಆನಂದೋ ನಃ ಸಹ ದಾಸೀಭಿರಸ್ತು ||1||

ಎಲೈ ಸೂತನೇ! ಇಲ್ಲಿ ಬಾ. ಪಾಂಡವರಿಗೆ ಸಂಮತಳಾದ ಅವರ ಪ್ರಿಯಪತ್ನಿಯಾದ ದ್ರೌಪದಿಯನ್ನು ಇಲ್ಲಿಗೆ ಕರೆದುಕೊಂಡು ಬಾ. ಅವಳು ಬೇಗ ಹೊರಟು ಬಂದು ನನ್ನ ಮನೆಯನ್ನು ಶುದ್ಧಮಾಡಲಿ. ನಮಗೂ ಮತ್ತು ನಮ್ಮ ದಾಸಿಯರಿಗೂ ಆನಂದ ಉಂಟಾಗಲಿ.
ವಿದುರಃ
ದುರ್ವಿಭಾವ್ಯಂ ಭವತಿ ತ್ವಾದೃಶೇನ
ನ ಮಂದ ಸಂಬುಧ್ಯಸಿ ಪಾಪಬದ್ಧಮ್ |
ಪ್ರಪಾತೇ ತ್ವಂ ಲಂಬಮಾನೋ ನ ವೇತ್ಸಿ
ವ್ಯಾಘ್ರಂ ಮೃಗಃ ಕೋಪಯಸೇ ಹಿ ಬಾಲ್ಯಾತ್ ||2||
ಎಲೈ ಮಂದನೇ! ವಿಧಿಯ ವ್ಯಾಪಾರವು ನಿನ್ನಿಂದ ತಿಳಿಯಲು ಅಸಾಧ್ಯವಾದುದು. ಪಾಪಬದ್ಧನಾದ ನೀನು ಎಂದೂ ಎಚ್ಚೆತ್ತು ಕೊಳ್ಳುವುದಿಲ್ಲ. ಪ್ರಪಾತದಲ್ಲಿ ಜೋಲಾಡುತ್ತಿರುವ ನೀನು ಅದನ್ನು ತಿಳಿಯುತ್ತಿಲ್ಲ. ಅವಿವೇಕತನದಿಂದ ಜಿಂಕೆಯು ವ್ಯಾಘ್ರಕ್ಕೆ ಸಿಟ್ಟು ಬರುವಂತೆ ಮಾಡುತ್ತಿದೆ.
ಆಶೀವಿಷಾಗ್ನಿಶ್ವಸಿತಾನ್ ಪೂರ್ಣಕೋಪಾನ್ ಮಹಾವಿಷಾನ್ |
ಮಾ ಕೋಪಿಷ್ಠಾಃ ಸುಮಂದಾತ್ಮನ್ ಮಾ ಗಮಸ್ತ್ವಂ ಯಮಕ್ಷಯಮ್ ||3||
ಆಶೀವಿಷ ಸರ್ಪಗಳಂತೆ, ಜ್ವಲಿಸುವ ಆಗ್ನಿಯ ಶಬ್ದದಂತೆ ಉಸಿರಾಡುತ್ತಿರುವ, ಮಹಾ ವಿಷವುಳ್ಳವರೂ ಕೋಪದಿಂದ ಪೂರ್ಣವುಳ್ಳವರೂ ಆದ ಪಾಂಡವರನ್ನು ಕೋಪಗೊಳ್ಳುವಂತೆಮಾಡಿ ನೀನು ಯಮಲೋಕಕ್ಕೆ ಹೋಗಬೇಡ.
ನ ಹಿ ದಾಸೀತ್ವಮಾಪನ್ನಾ ಕೃಷ್ಣಾ ಭವತಿ ಧರ್ಮತಃ |
ಅನೀಶೇನ ಹಿ ರಾಜ್ಞೈಷಾ ಪಣೇ ನ್ಯಸ್ತೇತಿ ಮೇ ಮತಿಃ ||4||
ದ್ರೌಪದಿಯು ಧರ್ಮದ ದೃಷ್ಟಿಯಿಂದ ನೋಡಿದಾಗ ಎಂದೂ ದಾಸಿಯಾಗುವುದಿಲ್ಲ. ಅಸ್ವತಂತ್ರನಾದ ರಾಜನು ಅವಳನ್ನು ಪಣಕ್ಕೆ ಒಡ್ಡಿದ್ದಾನೆ ಎಂದು ನನ್ನ ಅಭಿಪ್ರಾಯ.
ಅಯಂ ಧತ್ತೇ ವೇಣುರಿವಾತ್ಮಘಾತೀ
ಫಲಂ ರಾಜಾ ಧೃತರಾಷ್ಟ್ರಃ ಸಪುತ್ರಃ |
ದ್ಯೂತಂ ಹಿ ವೈರಾಯ ಮಹಾಭಯಾಯ
ಪಕ್ವಂ ನ ಬುಧ್ಯತ್ಯಯಮಂತಕಾಲಮ್ ||5||
ಪುತ್ರರಿಂದ ಸಹಿತನಾದ ಈ ಧೃತರಾಷ್ಟ್ರರಾಜನು ಬಿದುರುಮೆಳೆಯು ತನ್ನ ಆತ್ಮಘಾತಕವಾದ ಫಲವನ್ನು ಧರಿಸಿದಂತೆ ಮಹಾಭಯಕಾರಿಯೂ ಮತ್ತು ವೈರಕ್ಕೆ ಕಾರಣವೂ ಆದ ದ್ಯೂತವನ್ನು ಧರಿಸಿದ್ದಾನೆ. ತನ್ನ ಅಂತಕಾಲವು ಪಕ್ವವಾಗಿ ಪ್ರಾಪ್ತವಾಗಿದೆ ಎಂಬುದನ್ನು ತಿಳಿಯುತ್ತಿಲ್ಲ.
ನಾರುಂತುದಃ ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ |
ಯಥಾಸ್ಯ ವಾಚಾ ಪರ ಉದ್ವಿಜೇತ
ನ ತಾಂ ವದೇದ್ ರುಶತೀಂ ಪಾಪಲೋಕ್ಯಾಮ್ ||6||
ಇನ್ನೊಬ್ಬರ ಮರ್ಮವನ್ನು ಭೇದಿಸುವ ಮಾತನ್ನು ಆಡಬಾರದು. ಕ್ರೂರವಾದ ಮಾತನ್ನು ಆಡಬಾರದು. ಹೀನನಾದ ಮನುಷ್ಯನಿಂದ ಯಾವುದೇ (ಶ್ರೇಷ್ಠವಾದ ) ವಸ್ತುವನ್ನು ಸ್ವೀಕರಿಸಬಾರದು. ಯಾವ ಮಾತು ಇನ್ನೊಬ್ಬರಿಗೆ ಉದ್ವೇಗವನ್ನು ಉಂಟುಮಾಡುವುದೋ ಅಂತಹ ಪಾಪಿಷ್ಠ ಜನರು ಮಾತನಾಡುವಂತಹ ಉಗ್ರವಾದ ಮಾತುಗಳನ್ನು ಆಡಬಾರದು.
ಸಮುಚ್ಚರಂತ್ಯತಿವಾದಾ ಹಿ ವಕ್ತ್ರಾದ್
ಯೈರಾಹತಃ ಶೋಚತಿ ರಾತ್ರ್ಯಹಾನಿ |
ಪರಸ್ಯ ವಾ ಮರ್ಮಸು ಯೇ ಪತಂತಿ
ತಾನ್ ಪಂಡಿತೋ ನಾವಸೃಜೇತ್ ಪರೇಷು ||7||
ನಿಂದನೆಯ ಮಾತುಗಳು ಮುಖದಿಂದ ಹೊರ ಹೊಮ್ಮುತ್ತವೆ. ಅದರಿಂದ ತಾಡಿತನಾದವನು ಹಗಲೂ ರಾತ್ರಿಯೂ ದುಃಖಪಡುತ್ತಾನೆ. ಯಾವ ಮಾತುಗಳು ಇನ್ನೊಬ್ಬರ ಮರ್ಮಗಳನ್ನು ಭೇದಿಸುತ್ತವೆಯೋ ವಿವೇಕಿಯಾದವನು ಅಂತಹ ಮಾತುಗಳನ್ನು ಆಡಬಾರದು.
ಅಜೋ ಹಿ ಶಸ್ತ್ರಮಖನತ್ ಕಿಲೈಕಂ
ಶಸ್ತ್ರೇ ವಿಪನ್ನೇ ಪದ್ಭಿರಪಾಸ್ಯ ಭೂಮಿಮ್ |
ನಿಕೃಂತನಂ ಸ್ವಸ್ಯ ಕಂಠಸ್ಯ ಘೋರಂ
ತದ್ವದ್ವೈರಂ ಮಾ ಖನೀಃ ಪಾಂಡುಪುತ್ರೈಃ ||8||
ಪರಮಾತ್ಮನು ಶಸ್ತ್ರವನ್ನು ತ್ಯಜಿಸಿ ಅದನ್ನು ಭೂಮಿಯಲ್ಲಿ ನೆಟ್ಟನು. ಶಸ್ತ್ರವು ಯಾವುದಾದರೂ ವಿಪತ್ತಿಗೆ ಒಳಗಾಗಿ ಭೂಮಿಯನ್ನು ಬಿಟ್ಟು ಮೇಲೆ ಹಾರಿದರೆ ಅದು ತನ್ನ ಕಂಠವನ್ನೇ ಕತ್ತರಿಸುತ್ತದೆ. ಅಂತಹ ವೈರವನ್ನು ಪಾಂಡು ಪುತ್ರರ ಜೊತೆಯಲ್ಲಿ ನೀನು ಹುಟ್ಟುಹಾಕಬೇಡ.
ನ ಕಿಂಚಿದಿತ್ಥಂ ಪ್ರವದಂತಿ ಪಾರ್ಥಾಃ
ವನೇಚರಂ ವಾ ಗೃಹಮೇಧಿನಂ ವಾ |
ತಪಸ್ವಿನಃ ಸಂಪರಿಪೂರ್ಣವಿದ್ಯಾಃ
ಭಷಂತಿ ಯೇ ವೈ ಶ್ವನರಾಃ ಸದೈವ ||9||
ಪಾಂಡವರಾದರೂ ತಪಸ್ವಿಗಳು ಮತ್ತು ವಿದ್ಯೆಯಿಂದ ಪರಿಪೂರ್ಣರಾದವರು. ಅವರು ಕಾಡಿನಲ್ಲಿ ವಾಸಿಸುವ ಮನುಷ್ಯನಿಗಾಗಲೀ

ಅಥವಾ ರಾಜಧಾನಿಯಲ್ಲಿ ವಾಸಿಸುವ ಮನುಷ್ಯನನ್ನು ಕುರಿತಾಗಲೀ ಈ ರೀತಿ ಮಾತನಾಡುವುದಿಲ್ಲ. ಯಾರೂ ಯಾವಾಗಲೂ ಇಂತಹ ಪಾಪದ ಮಾತುಗಳನ್ನೇ ಆಡುತ್ತಾರೆಯೋ (ಬೊಗಳುತ್ತಾರೆಯೋ) ಅವರು ಮನುಷ್ಯರೂಪದಲ್ಲಿರುವ ನಾಯಿಗಳು.

ದ್ವಾರಂ ಸುಘೋರಂ ನರಕಸ್ಯ ಜಿಹ್ಮ

ನ ಬುಧ್ಯಸೇ ಧೃತರಾಷ್ಟ್ರಸ್ಯ ಪುತ್ರ |

ತಮತ್ಯೇತಾರೋ ಬಹವಃ ಕುರವಃ

ದ್ಯೂತೋದಯೇ ಸಹ ದುಶ್ಶಾಸನೇನ ॥10॥

ಎಲೈ ವಕ್ರನಾದ ಧೃತರಾಷ್ಟ್ರನಪುತ್ರನೇ! ನರಕದ ಘೋರವಾದ ದ್ವಾರವು ತೆಗೆದಿರುವುದನ್ನು ನೀನು ಗಮನಿಸುತ್ತಿಲ್ಲ. ಈ ದ್ಯೂತದ ಉದಯದ ಕಾರಣದಿಂದ ದುಶ್ಶಾಸನನನ್ನು ಸೇರಿಸಿ ಅನೇಕಮಂದಿ ಕುರುಗಳು ಆ ಬಾಗಿಲನ್ನು ದಾಟಿ ಒಳಗೆ ಹೋಗುವವರಿದ್ದಾರೆ.

ಮಜ್ಜಂತ್ಯಲಾಬೂನಿ ಶಿಲಾಃ ಪ್ಲವಂತೇ

ಮುಹ್ಯಂತಿ ಚಾಪೋಽಂಭಸಿ(ನಾವೋಽಂಭಸಿ) ಶಶ್ವದೇವ |

ಅಹೋ ಮೂಢೋ ಧೃತರಾಷ್ಟ್ರಸ್ಯ ಪುತ್ರೋ

ನ ಮೇ ವಾಚಂ ಪಥ್ಯರೂಪಾಂ ಶೃಣೋತಿ ॥11॥

ಸೊರೆಯ ಬುರುಡೆಗಳು ನೀರಿನಲ್ಲಿ ಮುಳುಗಬಹುದು. ಬಂಡೆಗಳು ನೀರಿನಲ್ಲಿ ತೇಲಬಹುದು. ಸಮುದ್ರಕ್ಕೆ ಹರಿಯುವನದಿಗಳು ತಮ್ಮ ಮಾರ್ಗವನ್ನು ಮರೆತು ಬಿಡಬಹುದು. ಆದರೆ ಧೃತರಾಷ್ಟ್ರ ಪುತ್ರನಾದ ಈ ಮೂಢನು ಮಾತ್ರ ಎಂದೂ ಹಿತವಚನಗಳನ್ನು ಕೇಳುವುದಿಲ್ಲ.

ಅತೋ ನೂನಂ ಭವಿತಾಽನೇನ ತೇಷಾಂ

ಸುದಾರುಣಃ ಸರ್ವಹರೋ ವಿನಾಶಃ |

ವಾಚಃ ಪುಣ್ಯಾಃ ಸುಹೃದಾಂ ಪಥ್ಯರೂಪಾಃ

ನ ಶ್ರೂಯಂತೇ ವರ್ಧತೇ ಲೋಭ ಏವ ॥12॥

ಆದ್ದರಿಂದ ಇವನಿಗೂ ಮತ್ತು ಆ ಪಾಂಡವರಿಗೂ ನಿಶ್ಚಯವಾಗಿ ವಿರೋಧವು ಉಂಟಾಗುತ್ತದೆ. ಅದರಿಂದ ಘೋರವಾದ ಸರ್ವಹರವಾದ ವಿನಾಶವು ಉಂಟಾಗುತ್ತದೆ. ವಿಶ್ವಾಸಿಗಳ ಹಿತವಚನಗಳನ್ನು ಯಾರೂ ಕೇಳುತ್ತಿಲ್ಲ. ಐಶ್ವರ್ಯದ ಲೋಭವೇ ಹೆಚ್ಚಾಗುತ್ತಿದೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಷಡಶೀತಿತಮೋಧ್ಯಾಯಃ ॥

॥ ದ್ಯೂತಪರ್ವಣಿ ಅಷ್ಟಾದಶೋಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತಾರನೆಯ ಅಧ್ಯಾಯವು ಮುಗಿಯಿತು.

*****

ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21

ಸೂತೋ ಗತ್ವಾ ತದಂತಂ ಸಮಕಥಯದಿಮಾಂ ದ್ಯೂತಮಧ್ಯೇ ಜಿತಾಸಿ

ಕ್ಷಿಪ್ರಂ ಚಾಯಾಹಿ ರಾಜ್ಞಾಂ ಸಮಿತಿಮುರುತರಾ-

ಮಿತ್ಯಥೋ ಸಾಽಪ್ಯವಾದೀತ್ |

ನಾಹಂ ಯಾಸ್ಯೇ ಗುರೂಣಾಂ ಸಮಿತಿಮಿತಿ ಯಯೌ

ಸೋಽಪ್ಯಮುಂ ಭೀಮಭೀತಂ

ಜ್ಞಾತ್ವಾ ದುಶ್ಶಾಸನಂ ಸೋಽಪ್ಯದಿಶದಥ ನೃಪೋ

ಧಾರ್ತರಾಷ್ಟ್ರೋಽನುಜಂ ಸ್ವಂ ॥328॥

ಪ್ರಾತಿಕಾಮಿ ದ್ರೌಪದಿಯ ಬಳಿಗೆ ಹೋಗಿ ಹೇಳಿದ. `ನೀನು ಜೂಜಿನಲ್ಲಿ ಪರಾಜಿತಳಾಗಿರುವೆ. ರಾಜರ ಮಹಾಸಭೆಗೆ ಬೇಗನೆ ಬಾ' ಎಂದು. ಆಗ ದ್ರೌಪದಿ ಹೇಳಿದಳು. `ನಾನು ಗುರು ಹಿರಿಯರಿಂದ ತುಂಬಿದ ಸಭೆಗೆ ಬರಲಾರೆ' ಸಾರಥಿ ಹಿಂತಿರುಗಿ ಬಂದ. ಅವನು ಭೀಮನಿಗೆ ಅಂಜುತ್ತಾನೆ ಎಂದು ತಿಳಿದು ದುರ್ಯೋಧನ ತನ್ನ ತಮ್ಮನಾದ ದುಃಶಾಸನನನ್ನೇ ಕಳಿಸಿದ.

ಸ ಪಾಪಪೂರುಷೋತ್ತಮಃ ಪ್ರಗೃಹ್ಯ ಕೇಶಪಕ್ಷಕೇ |

ಪುರಃ ಸ್ವಮಾತುರಾನಯತ್ಸಭಾಮಯುಗ್ಮವಾಸಸೀಂ ॥329॥

ಪಾಪಪುರುಷರಲ್ಲಿ ಅಗ್ರಗಣ್ಯನಾದ ದುಃಶಾಸನ ತನ್ನ ತಾಯಿಯ ಮುಂದೆಯೆ ಏಕವಸ್ತ್ರೆಯಾದ ದ್ರೌಪದಿಯನ್ನು ಕೇಶಪಾಶದಲ್ಲಿ ಹಿಡಿದು ಸಭೆಗೆ ಎಳೆದು ತಂದ.

ಸಮಾಹೃತಾ ರಜಸ್ವಲಾ ಜಗಾದ ಭೀಷ್ಮಪೂರ್ವಕಾನ್ |

ಅಧರ್ಮ ಏಷ ವಾರ್ಯತೇ ನ ಧರ್ಮಿಭಿರ್ಭವದ್ವಿಧೈಃ ॥330॥

ರಜಸ್ವಲೆಯಾಗಿದ್ದ ದ್ರೌಪದಿ ಸಭೆಯಲ್ಲಿ ತರಲ್ಪಟ್ಟು ಭೀಷ್ಮಾದಿಗಳನ್ನು ಆಕ್ಷೇಪಿಸಿದಳು, `ಇದು ಅಧರ್ಮ. ನಿಮ್ಮಂಥ ಧಾರ್ಮಿಕರು ಇದನ್ನು ಏಕೆ ತಡೆಯುತ್ತಿಲ್ಲ?'

ಕಥಂ ಛಲಾತ್ಮಕೇ ದ್ಯೂತೇ ಜಿತೇ ಧರ್ಮಜಯೋ ಭವೇತ್ |

ನ ಹಿ ದ್ಯೂತಂ ಧರ್ಮ್ಯಮಾಹುರ್ವಿಶೇಷೇಣ ತು ಭೂಭುಜಾಂ ॥331॥

ಮೋಸದಿಂದ ತುಂಬಿದ ಜೂಜಿನಲ್ಲಿ ಗೆದ್ದ ಮಾತ್ರಕ್ಕೆ ಹೇಗೆ ನ್ಯಾಯವಾಗಿ ಗೆದ್ದಂತಾದೀತು? ಜೂಜನ್ನು ಧರ್ಮಕಾರ್ಯವೆಂದು ಬಲ್ಲವರು ಹೇಳುವುದಿಲ್ಲ. ವಿಶೇಷವಾಗಿ ಕ್ಷತ್ರಿಯರಿಗೆ ಅದು ಸರ್ವಥಾ ಧರ್ಮವಲ್ಲ.

ಯೇ ಧರ್ಮಂ ನ ವದಂತೀಹ ನ ತೇ ವೃದ್ಧಾ ಇತೀರಿತಾಃ |

ಅವೃದ್ಧಮಂಡಿತಾಂ ನೈವ ಸಭೇತ್ಯಾಹುರ್ಮನೀಷಿಣಃ ॥332॥
ಯಾರುಧರ್ಮವನ್ನು ಹೇಳುವುದಿಲ್ಲವೋ ಅವರು ಜ್ಞಾನಿಗಳೆನಿಸುವುದಿಲ್ಲ. ಜ್ಞಾನಿಗಳಿಲ್ಲದ ಸಭೆಯನ್ನು ಸಭೆ ಎಂದು ತಿಳಿದವರು ಹೇಳುವುದಿಲ್ಲ.
ಕಥಂ ದ್ಯೂತೇ ಜಿತಾ ಚಾಹಮಜಿತೇ ಸ್ವಪತೌ ಸ್ಥಿತೇ |
ಸಮಾನಧರ್ಮಿಣೀಮಾಹುರ್ಭಾರ್ಯಾಂ ಯಸ್ಮಾದ್ ವಿಪಶ್ಚಿತಃ ॥333॥
ನನ್ನ ಪತಿ ಪರಾಜಿತನಾಗದಿದ್ದಾಗ ನಾನು ಹೇಗೆ ಪರಾಜಿತಳಾದೆ? ಏಕೆಂದರೆ ಪತ್ನಿಯನ್ನು ಪತಿಯ ಸಹಧರ್ಮಿಣಿ ಎನ್ನುತ್ತಾರೆ ಬಲ್ಲವರು.
ಸಹೈವ ಕರ್ಮ ಕರ್ತವ್ಯಂ ಪತೌ ದಾಸೇ ಹಿ ಭಾರ್ಯಯಾ |
ದಾಸೀತ್ವಂ ನ ಪೃಥಙ್ ಮೇ ಸ್ಯಾಮೇಜ್ಜಿತೇऽಪಿ ಹಿ ಪತೌ ತತಃ ॥334॥
ಪತಿ ದಾಸನಾದಾಗಲೂ ಪತ್ನಿ ಅವನು ಮಾಡುವ ಕೆಲಸವನ್ನು ಅವನ ಜೊತೆಗೇ ಮಾಡಬೇಕು. ಅದರಿಂದ ಪತಿ ಪರಾಜಿತನಾದರೂ ನನಗೆ ಪ್ರತ್ಯೇಕವಾಗಿ ದಾಸ್ಯ ಬರುವುದಿಲ್ಲ.
ಇತ್ಯುಕ್ತಾ ಅಪಿ ಭೀಷ್ಮಾದ್ಯಾಃ ಕಲ್ಯಾವೇಶೇನ ಮೋಹಿತಾಃ |
ಪೃಚ್ಛ ಧರ್ಮಜಮಿತ್ಯುಕತ್ವ ತೂಷ್ಣೀಮೇವ ಬಭೂವಿರೇ ॥335॥
ದ್ರೌಪದಿ ಹೀಗೆ ಹೇಳಿದರೂ ಭೀಷ್ಮಾದಿಗಳು ಕಲ್ಯಾವೇಶದಿಂದ ಮೂಢರಾಗಿ ಧರ್ಮರಾಜನನ್ನೇ ಕೇಳು ಎಂದು ಹೇಳಿ ಸುಮ್ಮನೆ ಕುಳಿತರು.
ದುರ್ಯೋಧನಪ್ರತೀಪಂ ಹಿ ನ ಕಶ್ಚಿದಶಕತ್ ತದಾ |
ಉವಾಚ ವಿದುರಸ್ತತ್ರ ನ ಧರ್ಮೋऽಯಮಿತಿ ಸ್ಫುಟಂ ॥336॥
ದುರ್ಯೋಧನನಿಗೆ ವಿರೋಧವಾಗಿ ನುಡಿಯಲೂ ನಡೆಯಲೂ ಯಾರೂ ಆಗ ಶಕ್ತರಾಗಲಿಲ್ಲ. ಆಗ ವಿದುರನೊಬ್ಬನೆ ಇದು ಧರ್ಮವಲ್ಲವೆಂದು ಸ್ಪಷ್ಟವಾಗಿ ನುಡಿದ.
ನ ತಸ್ಯ ವಾಚಂ ಜಗ್ರಾಹ ಧೃತರಾಷ್ಟ್ರಃ ಸಹಾತ್ಮಜಃ |
ಊರ್ಧ್ವಬಾಹುಃ ಸ ಚುಕ್ರೋಶ ದೇವಾನಾಂ ಖ್ಯಾಪಯಂಸ್ತದಾ ॥337॥
ಸ್ವಾಶಕ್ತಿಂ ದ್ರೌಪದೀಂ ಚಾಹ ಜಿತಾ ನೈವಾಸಿ ಧರ್ಮತಃ |
ಅಧರ್ಮೋ ಹಿ ಮಹಾನೇತಾಂ ಸಭಾಮಾಕ್ರಮ್ಯ ತಿಷ್ಠತಿ ॥338॥
ತನ್ನ ಮಾತನ್ನು ಧೃತರಾಷ್ಟ್ರನಾಗಲಿ ಅವನ ಮಕ್ಕಳಾಗಲಿ ಕೇಳದಿದ್ದಾಗ ವಿದುರ ತನ್ನ ಅಶಕ್ತಿಯನ್ನು ತೋರುತ್ತ ಎರಡು ಕೈಯೆತ್ತಿ ದೇವತೆಗಳಿಗೆ ಸಾರಿ ಹೇಳಿದ. ದ್ರೌಪದಿಗೂ `ನ್ಯಾಯವಾಗಿ ನೀನು ಸರ್ವಥಾ ಪರಾಜಿತಳ ಅಲ್ಲ. ಮಹಾ ಅಧರ್ಮವೆ ಈ ಸಭೆಯನ್ನು ಆಕ್ರಮಿಸಿಕೊಂಡಿದೆ' ಎಂದ.
* * * *

ಎಂಭತ್ತೇಳನೆಯ ಅಧ್ಯಾಯ
(ದುಶ್ಶಾಸನನಿಂದ ದ್ರೌಪದಿಯ ಸಭಾನಯನ, ದ್ರೌಪದಿಯ ಮಾತುಗಳು)
ವೈಶಂಪಾಯನಃ
ಧಿಗಸ್ತು ಕ್ಷತ್ತಾರಮಿತಿ ಬ್ರುವಾಣೋ
ದರ್ಪೇಣ ಪೂರ್ಣೋ ಧೃತರಾಷ್ಟ್ರಸ್ಯ ಪುತ್ರಃ |
ಅವೈಕ್ಷತ ಪ್ರಾತಿಕಾಮೀಂ ಸಭಾಯಾಮ್
ಉವಾಚೈನಂ ಪರಮಾಚಾರ್ಯಮಧ್ಯೇ ॥1॥
ದರ್ಪಪೂರ್ಣನಾದ ಧೃತರಾಷ್ಟ್ರಪುತ್ರನಾದ ದುರ್ಯೋಧನನು ವಿದುರನಿಗೆ ದಿಕ್ಕಾರವಿರಲಿ ಎಂದು ಹೇಳುತ್ತಾ ಸಭೆಯಲ್ಲಿ ಪ್ರಾತಿಕಾಮಿ ಎಂಬ ತನ್ನ ಸೂತನನ್ನು ನೋಡಿದನು. ಅಷ್ಟುಮಂದಿ ಗುರುಹಿರಿಯರ ಮಧ್ಯದಲ್ಲಿ ಅವನನ್ನು ಕುರಿತು ಹೇಳಿದನು.
ತ್ವಂ ಪ್ರಾತಿಕಾಮಿನ್ ದ್ರೌಪದೀಮಾನಯಸ್ವ
ನ ತೇ ಭಯಂ ವಿದ್ಯತೇ ಪಾಂಡವೇಭ್ಯಃ |
ಕ್ಷತ್ತಾ ಹ್ಯಯಂ ವಿವದತ್ಯೇಷ ನಿತ್ಯಂ
ನ ಚಾಸ್ಮಾಕಂ ವೃದ್ಧಿಕಾಮಃ ಸದೈವ ॥2॥
ಎಲೈ ಪ್ರಾತಿಕಾಮಿಯೇ! ನೀನು ಹೋಗಿ ದ್ರೌಪದಿಯನ್ನು ಇಲ್ಲಿಗೆ ಕರೆದುಕೊಂಡು ಬಾ. ನಿನಗೆ ಪಾಂಡವರಿಂದ ಹೆದರಿಕೆ ಏನೂ ಇಲ್ಲ. ಈ ವಿದುರನಾದರೋ ನಮ್ಮ ಏಳಿಗೆಯನ್ನು ಸಹಿಸದವನಾಗಿ ಯಾವಾಗಲೂ ಹೀಗೆಯೆ ವಿವಾದವನ್ನು ಮಾಡುತ್ತಿರುತ್ತಾನೆ.
ಏವಮುಕ್ತಃ ಪ್ರಾತಿಕಾಮೀ ಸ ಸೂತಃ
ಪ್ರಾಯಾಚ್ಛೀಘ್ರಂ ರಾಜವಚೋ ನಿಶಮ್ಯ |
ಪ್ರವಿಶ್ಯ ಚ ಶ್ವೇವ ಸ ಸಿಂಹಗೋಷ್ಠಂ
ಸಮಾಸದನ್ಮಹಿಷೀಂ ಪಾಂಡವಾನಾಮ್ ॥3॥
ಹೀಗೆ ಹೇಳಲ್ಪಟ್ಟ ಪ್ರಾತಿಕಾಮಿಯೆಂಬ ಸೂತನು ರಾಜವಾಚನವನ್ನು ಕೇಳಿ ಶೀಘ್ರವಾಗಿ ಹೊರಟು ನಾಯಿಯು ಸಿಂಹದ ಗುಹೆಯನ್ನು ಪ್ರವೇಶಿಸುವಂತೆ ಪಾಂಡವರ ಪಟ್ಟಮಹಿಷಿಯನ್ನು ಸಮೀಪಿಸಿದನು.
ಪ್ರಾತಿಕಾಮೀ
ಯುಧಿಷ್ಠಿರೇ ದ್ಯೂತಮದೇನ ಮತ್ತೇ

ದುರ್ಯೋಧನೋ ದ್ರೌಪದಿ ತ್ವಾಮಜೈಷೀತ್ |
ಆಗಚ್ಛ ತ್ವಂ ಧೃತರಾಷ್ಟ್ರಸ್ಯ ವೇಶ್ಮ
ನಯಾಮಿ ತ್ವಾಂ ಕರ್ಮಣಿ ಯಾಜ್ಞಸೇನಿ ॥4॥
ಎಲೌ ದ್ರೌಪದಿಯೇ! ಯುಧಿಷ್ಠಿರನು ದ್ಯೂತಮದದಿಂದ ಮತ್ತನಾಗಿರುವಾಗ ದುರ್ಯೋಧನನು ನಿನ್ನನ್ನು ಜಯಿಸಿದನು. ಯಾಜ್ಞಸೇನಿಯೇ! ನೀನು ಧೃತರಾಷ್ಟ್ರನ ಮನಗೆ ಬಾ. ಕೆಲಸವನ್ನು ಮಾಡುವುದಕ್ಕೆ ನಿನ್ನನ್ನು ಕರೆದೊಯ್ಯುತ್ತಿದ್ದೇನೆ.
ದ್ರೌಪದೀ
ಕಥಂ ತ್ವೇವಂ ವದಸಿ ಪ್ರಾತಿಕಾಮಿನ್
ಕೋ ವಾ ದೀವ್ಯೇದ್ ಭಾರ್ಯಯಾ ರಾಜಪುತ್ರಃ |
ಮೂಢೋ ರಾಜಾ ದ್ಯೂತಮದೇನ ಮತ್ತ
ಅಹೋ ನಾನ್ಯತ್ ಕೈತವಮಸ್ಯ ಕಿಂಚಿತ್ ॥5॥
ಪ್ರಾತಿಕಾಮಿಯೇ! ಹೇಗೆ ಈ ರೀತಿ ಮಾತನಾಡುತ್ತಿದ್ದೀಯೆ? ಯಾವ ರಾಜಪುತ್ರನು ತನ್ನ ಭಾರ್ಯೆಯನ್ನು ಪಣಕ್ಕೆ ಒಡ್ಡುತ್ತಾನೆ? ರಾಜನು ದ್ಯೂತಮದದಿಂದ ಮತ್ತನಾಗಿ ವಿವೇಕವನ್ನು ಕಳೆದುಕೊಂಡನೋ ಅಥವಾ ಇದೇನಾದರೂ ದುರ್ಯೋಧನನ ಇನ್ನೊಂದು ಮೋಸವೋ?
ಪ್ರಾತಿಕಾಮೀ
ಯದಾ ನಾಸೀತ್ ಕೈತವಮಸ್ಯ ಕಿಂಚತ್
ತದಾದೇವೀತ್ ಪಾಂಡವೋಽಜಾತಶತ್ರುಃ |
ನ್ಯಸ್ತಾಃ ಪೂರ್ವಂ ಭ್ರಾತರಸ್ತೇನ ರಾಜ್ಞಾ
ಸ್ವಯಂ ಚಾತ್ಮಾನಂ ತ್ವಾಮಥೋ ರಾಜಪುತ್ರಿ ॥6॥
ರಾಜಪುತ್ರಿಯೇ! ಪಾಂಡವನಾದ ಅಜಾತಶತ್ರುವಿನ ಬಳಿ ಪಣಕ್ಕೆ ಒಡ್ಡಬಹುದಾದ ಯಾವ ಧನವೂ ಇಲ್ಲದಿರುವಾಗ ರಾಜನು ಆಟವಾಡಿದನು. ಆಗ ಮೊದಲು ತಮ್ಮಂದಿರನ್ನೂ ಅನಂತರ ತನ್ನನ್ನೂ, ಅನಂತರ ನಿನ್ನನ್ನೂ ಪಣಕ್ಕೊಡ್ಡಿ ಸೋತನು.
ದ್ರೌಪದೀ
ಗಚ್ಛ ತ್ವಂ ಕಿತವಂ ಗತ್ವಾ ಸಭಾಯಾಂ ಪೃಚ್ಛ ಸೂತಜ |
ಕಿಂ ನು ಪೂರ್ವಂ ಪರಾಜೈಷೀರಾತ್ಮಾನಮಥವಾಽಪಿ ಮಾಮ್ ॥7॥
ಏತಜ್ಜ್ಞಾತ್ವಾ ತ್ವಮಾಗಚ್ಛ ತತೋ ಮಾಂ ನಯ ಸೂತಜ |
ಜ್ಞಾತ್ವಾ ಚಿಕೀರ್ಷಿತಮಹಂ ರಾಜ್ಞೋ ಯಾಸ್ಯಾಮಿ ದುಃಖಿತಾ ॥8॥
ಸೂತಪುತ್ರನೇ! ನೀನು ಸಭೆಗೆ ಹೋಗಿ ದ್ಯೂತವನ್ನು ಆಡಿದ ಧರ್ಮರಾಜನನ್ನು ತನ್ನನ್ನು ಮೊದಲು ಸೋತನೇ ಅಥವಾ ನನ್ನನ್ನು ಮೊದಲು ಸೋತನೇ ಎಂದ ಕೇಳು. ಸೂತ ಪುತ್ರನೇ! ಇದನ್ನು ತಿಳಿದುಕೊಂಡು ಬಂದು ಅನಂತರ ನನ್ನನ್ನು ಕರೆದುಕೊಂಡು ಹೋಗು. ರಾಜನ ಅಭಿಪ್ರಾಯವನ್ನು ತಿಳಿದು ದುಃಖಿತಳಾದ ನಾನೇ ಬರುವೆನು.
ವೈಶಂಪಾಯನಃ
ಸಭಾಂ ಗತ್ವಾ ಸ ಚೋವಾಚ ದ್ರೌಪದ್ಯಾಸ್ತದ್ವಚಸ್ತದಾ |
ಯುಧಿಷ್ಠಿರಂ ನರೇಂದ್ರಾಣಾಂ ಮಧ್ಯೇ ಸ್ಥಿತಮರಿಂದಮಮ್ ॥9॥
ಅವನು ಸಭೆಗೆ ಹೋಗಿ ದ್ರೌಪದಿಯ ವಚನದಂತೆ ರಾಜರಮಧ್ಯದಲ್ಲಿ ಇದ್ದ ಅರಿಂದಮನಾದ ಯುಧಿಷ್ಠಿರನನ್ನು ಕುರಿತು ಹಾಗೆಯೇ ಹೇಳಿದನು.
ಪ್ರಾತಿಕಾಮೀ
ಕಸ್ಯ ಸ್ವಿನ್ ನಃ ಪರಾಜೈಷೀರಿತಿ ತ್ವಾಮಾಹ ದ್ರೌಪದೀ |
ಕಿಂ ತ್ವಂ ಪೂರ್ವಂ ಪರಾಜೈಷೀರಾತ್ಮಾನಮಥವಾಽಪಿ ಮಾಮ್ ॥10॥
ಯಾವ ಕಾರ್ಯದ ಸಲುವಾಗಿ ನೀನು ನಮ್ಮನ್ನು ಪಣಕ್ಕೊಡ್ಡಿ ಸೋತೆ ಎಂದು ದ್ರೌಪದಿಯು ಕೇಳುತ್ತಾಳೆ. ನೀನು ಮೊದಲು ನಿನ್ನನ್ನೇ ಪಣಕ್ಕೊಡ್ಡಿಸೋತೆಯೋ? ಅಥವಾ ನನ್ನನ್ನೇ ಪಣಕ್ಕೊಡ್ಡಿ ಸೋತೆಯೊ? (ಎಂದು ಅವಳ ಪ್ರಶ್ನೆ)
ವೈಶಂಪಾಯನಃ
ಯುಧಿಷ್ಠಿರಸ್ತು ತಚ್ಛ್ರುತ್ವಾ ಗತಸತ್ವ ಇವಾಭವತ್ |
ನ ತಂ ಸೂತಂ ಪ್ರತ್ಯುವಾಚ ವಚನಂ ಸಾಧ್ವಸಾಧು ವಾ ॥11॥
ಯುಧಿಷ್ಠಿರನು ಆ ಮಾತನ್ನು ಕೇಳಿ ಮೃತನಂತೆ ಆದನು. ಅವನು ಆ ಸೂತನನ್ನು ಕುರಿತು ಒಳ್ಳೆಯದಾಗಲೀ ಕೆಟ್ಟದ್ದಾಗಲೀ ಯಾವ ಮಾತನ್ನೂ ಆಡಲಿಲ್ಲ.
ದುರ್ಯೋಧನಃ
ಇಹೈತ್ಯ ಕೃಷ್ಣಾ ಪಾಂಚಾಲೀ ಪ್ರಶ್ನಂ ಸಮನುಪೃಚ್ಛತಾಮ್ |
ಇಹೈವ ಸಭ್ಯಾಃ ಶೃಣ್ವಂತು ತಸ್ಯಾ ಅಸ್ಯ ಚ ಯದ್ವಚಃ ॥12॥
ಪಾಂಚಾಲಿಯಾದ ಕೃಷ್ಣೆಯು ಇಲ್ಲಿ ಬಂದು ಆ ಪ್ರಶ್ನೆಯನ್ನು ಕೇಳಲಿ. ಸಭ್ಯರಾದವರು ಇಲ್ಲಿಯೇ ಇವಳ ಮತ್ತು ಅವನ ಮಾತನ್ನು ಕೇಳಲಿ.
ವೈಶಂಪಾಯನಃ
ಸ ಗತ್ವಾ ರಾಜಭವನಂ ದುರ್ಯೋಧನವಶಾನುಗಃ |

ಉವಾಚ ದ್ರೌಪದೀಂ ಸೂತಃ ಪ್ರಾತಿಕಾಮೀ ವ್ಯಥನ್ನಿವ ॥13॥
ದುರ್ಯೋಧನನ ವಶವರ್ತಿಯಾದ ಪ್ರಾತಿಕಾಮಿಸೂತನು ರಾಜಭವನಕ್ಕೆ ಹೋಗಿ ವ್ಯಥೆಯನ್ನು ಪಡುವವನಂತೆ ದ್ರೌಪದಿಯನ್ನು ಕುರಿತು ಹೇಳಿದನು.
ಸಭ್ಯಾಶ್ಚ ತ್ವಾಮಿಹ ರಾಜಪುತ್ರ್ಯಾಹ್ವಯಂತಿ
ಮನ್ಯೇ ಪ್ರಾಪ್ತಂ ಸಂಕ್ಷಯಂ ಕೌರವಾಣಾಮ್ |
ನ ವೈ ಸಮಯಂ ಪಾಲಯತೇ ಲಘೀಯಾನ್
ಯಸತ್ವಂ ಸಭಾಂ ನೇಷ್ಯತಿ ರಾಜಪುತ್ರಿ ॥14॥
ರಾಜಪುತ್ರಿಯೇ! ಸಭ್ಯರು ನಿನ್ನನ್ನು ಇಲ್ಲಿ ಸಭೆಗೆ ಆಹ್ವಾನಿಸುತ್ತಿದ್ದಾರೆ. ಕೌರವರ ವಿನಾಶವು ಪ್ರಾಪ್ತವಾಗಿದೆ ಎಂದು ಭಾವಿಸುತ್ತೇನೆ. ಅಲ್ಪರು ಯಾವ ಮರ್ಯಾದೆಯನ್ನೂ ಅನುಸರಿಸುವುದಿಲ್ಲ. ರಾಜಕುಮಾರಿಯೇ! ಯಾವ ಅಲ್ಪನು ನಿನ್ನನ್ನು ಸಭೆಗೆ ಕರೆದುಕೊಂಡು ಹೋಗುವನೊ ಅವನು ತನ್ನ ಸಂವೃದ್ಧಿಯನ್ನು ರಕ್ಷಿಸಿಕೊಳ್ಳುವುದಿಲ್ಲವೆಂದು ತೋರುತ್ತಿದೆ.
ದ್ರೌಪದೀ
ಏವಂ ದ್ಯೂತೇ ವ್ಯದಧಾತ್ ಸಂವಿಧಾತಾ
ಸ್ಪರ್ಶಾವುಭೌ ಸ್ಪೃಶತೋ ಧೀರಬಾಲೌ |
ಧರ್ಮಂ ತ್ವೇಕಂ ಪರಮಂ ಪ್ರಾಹ ಲೋಕಃ
ಸ ನಃ ಶಮಂ ದಾಸ್ಯತಿ ಗೋಪ್ಯಮಾನಃ ॥15॥
ವಿಧಿಯು ದ್ಯೂತವನ್ನು ಹೀಗೆಯೇ ನಿರೂಪಿಸಿದ್ದಾನೆ. ಸುಖದುಃಖಗಳಿಗೆ ಕಾರಣವಾದ ಜಯಾಪಜಯಗಳು ಧೀರರಿಗೂ ಬರುತ್ತವೆ. ಬಾಲಕರಿಗೂ ಬರುತ್ತವೆ. ಆದರೆ ಲೋಕವು ಧರ್ಮವೇ ಶ್ರೇಷ್ಠವೆಂದು ಹೇಳುತ್ತದೆ. ಆ ಧರ್ಮವನ್ನು ರಕ್ಷಿಸಿದರೆ ಅದು ನಮಗೆ ಕ್ಷೇಮವನ್ನು ಉಂಟುಮಾಡುವುದು.
ವೈಶಂಪಾಯನಃ
ಯುಧಿಷ್ಠಿರಸ್ತು ತಚ್ಛ್ರುತ್ವಾ ದುರ್ಯೋಧನಚಿಕೀರ್ಷಿತಮ್ |
ದ್ರೌಪದ್ಯಾಃ ಸಮ್ಮತಂ ದೂತಂ ಪ್ರಾಹಿಣೋದ್ ಭರತರ್ಷಭ ॥16॥
ಎಲೈ ಭರತರ್ಷಭನೇ! ಯುಧಿಷ್ಠಿರನು ದ್ರೌಪದಿಯ ಅಭಿಪ್ರಾಯವನ್ನು ತಿಳಿದವನಾಗಿ ದ್ರೌಪದಿಗೆ ಸಂಮತನಾದ ಒಬ್ಬ ದೂತನನ್ನು ಕಳುಹಿಸಿದನು.
ಸಭಾಮಾಗಮ್ಯ ಪಾಂಚಾಲಿ ಶ್ವಶುರಸ್ಯಾಗ್ರತೋ ಭವ |
ಅಥ ತ್ವಾಮಾಗತಾಂ ದೃಷ್ಟ್ವಾ ರಾಜಪುತ್ರೀಂ ಸಭಾಂ ತದಾ |
ಸಭ್ಯಾಃ ಸರ್ವೇ ವಿನಿಂದೇರನ್ ತತೋ ಹಿ ಧೃತರಾಷ್ಟ್ರಜಮ್ ॥17॥
ಪಾಂಚಾಲಿಯೇ! ಸಭೆಗೆ ಬಂದು ನಿನ್ನ ಮಾವನ ಮುಂದೆ ನಿಲ್ಲು. ರಾಜ ಪುತ್ರಿಯಾದ ನೀನು ಸಭೆಗೆ ಬಂದುದನ್ನು ನೋಡಿ ಎಲ್ಲಾ ಸಭ್ಯರು ದುರ್ಯೋಧನನನ್ನು ನಿಂದಿಸಿಯಾರು.
ವೈಶಂಪಾಯನಃ
ಸ ಗತ್ವಾ ತ್ವರಿತಂ ದೂತಃ ಕೃಷ್ಣಾಯಾ ಭವನಂ ನೃಪ |
ನ್ಯವೇದಯನ್ಮತಂ ಧೀಮಾನ್ ಧರ್ಮರಾಜಸ್ಯ ನಿಶ್ಚಿತಮ್ ॥18॥
ಎಲೈ ರಾಜನೇ! ಆ ದೂತನು ಶೀಘ್ರವಾಗಿ ದ್ರೌಪದಿಯ ಮನೆಗೆ ಹೋಗಿ ಧರ್ಮರಾಜನ ಅಭಿಪ್ರಾಯವನ್ನು ಅವಳಿಗೆ ನಿವೇದಿಸಿದನು.
ಪಾಂಡವಾಶ್ಚ ಮಹಾತ್ಮಾನೋ ದೀನಾ ದುಃಖಸಮನ್ವಿತಾಃ |
ಸತ್ಯೇನಾಧಿಪರೀತಾಂಗಾ ನೋದೀಕ್ಷಂತೇ ಸ್ಮ ಕಿಂಚನ ॥19॥
ಮಹಾತ್ಮರಾದ ಪಾಂಡವರು ದೈನ್ಯದಿಂದಲೂ ದುಃಖದಿಂದಲೂ ಕೂಡಿದವರಾಗಿ ಸತ್ಯದಿಂದ ಕಟ್ಟಲ್ಪಟ್ಟವರಾಗಿ ಕಣ್ಣೆತ್ತಿ ಏನನ್ನೂ ನೋಡಲಿಲ್ಲ.
ತತಸ್ತೇಷಾಂ ಮುಖಮಾಲೋಕ್ಯ ರಾಜಾ
ದುರ್ಯೋಧನಃ ಸೂತಮುವಾಚ ಹೃಷ್ಟಃ |
ಇಹೈವ ತಾಮಾನಯ ಪ್ರಾತಿಕಾಮಿನ್
ಪ್ರತ್ಯಕ್ಷಮಸ್ಯಾಃ ಕುರವೋ ಬ್ರುವಂತು ॥20॥
ಆಗ ಆ ಪಾಂಡವರ ಮುಖವನ್ನು ನೋಡಿದ ದುರ್ಯೋಧನನು ಸಂತೋಷದಿಂದ ಸೂತನನ್ನು ಕುರಿತು ಪ್ರಾತಿಕಾಮಿಯೇ ಅವಳನ್ನು ಇಲ್ಲಿಗೆ ಕರೆದುಕೊಂಡು ಬಾ. ಅವಳ ಎದುರಿನಲ್ಲಿಯೇ ಈ ಪಾಂಡವರು ಮಾತನಾಡಲಿ. (ಎಂದು ಹೇಳಿದನು.)
ತತಃ ಸೂತಸ್ತಸ್ಯ ವಶಾನುಗಾಮೀ
ಭೀತಶ್ಚ ಕೋಪಾದ್ ದ್ರುಪದಾತ್ಮಜಾಯಾಃ |
ವಿಗಾಹಮಾನಃ ಪುನರೇವ ಸಭ್ಯಾನ್
ಉವಾಚ ಕೃಷ್ಣಾಂ ಕಿಮಹಂ ಬ್ರವೀಮಿ ॥21॥
ಆಗ ದುರ್ಯೋಧನನ ವಶವರ್ತಿಯಾದ ಸೂತನು ದ್ರೌಪದಿಯ ಕೋಪಕ್ಕೆ ಹೆದರಿದವನಾಗಿ ಪುನಃ ಸಭ್ಯರನ್ನು ದಾಟಿಕೊಂಡು ದುರ್ಯೋಧನನ ಬಳಿಗೆ ಬಂದು ದ್ರೌಪದಿಗೆ ನಾನು ಏನು ಹೇಳಲಿ ಎಂದು ಕೇಳಿದನು.
ದುರ್ಯೋಧನಃ
ದುಶ್ಶಾಸನೈಷಾಂ ಮಮ ಸೂತಪುತ್ರೋ

ವೃಕೋದರಾದುದ್ವಿಜತೇಽಲ್ಪಚೇತಾಃ |
ಸ್ವಯಂ ನಿಗೃಹ್ಯಾನಯ ಯಾಜ್ಞಸೇನೀಂ
ಕಿಂ ತೇ ಕರಿಷ್ಯಂತ್ಯವಶಾಃ ಸಪತ್ನಾಃ ॥22॥
ದುಶ್ಶಾಸನನೇ! ಈ ಅಲ್ಪ ಚೇತಸ್ಸಿನ ನನ್ನ ಸೂತಪುತ್ರನು ಭೀಮಸೇನನಿಗೆ ಹೆದರುತ್ತಿದ್ದಾನೆ. ನೀನೇ ದ್ರೌಪದಿಯನ್ನು ಬಲಾತ್ಕಾರದಿಂದ ಎಳೆದುಕೊಂಡು ಬಾ. ಸ್ವಾತಂತ್ರ್ಯವನ್ನು ಕಳೆದುಕೊಂಡ ನಮ್ಮ ಶತ್ರುಗಳು ಏನು ಮಾಡುವರು? (ಎಂದು ಹೇಳಿದನು.)
ವೈಶಂಪಾಯನಃ
ತತಃ ಸಮುತ್ಥಾಯ ಸ ರಾಜಪುತ್ರಃ
ಶ್ರುತ್ವಾ ಭ್ರಾತುಃ ಶಾಸನಂ ರಕ್ತದೃಷ್ಟಿಃ |
ಪ್ರವಿಶ್ಯ ತದ್ವೇಶ್ಮ ಮಹಾರಥಾನಾಮ್
ಇತ್ಯಬ್ರವೀದ್ ದೌಪದೀಂ ರಾಜಪುತ್ರೀಮ್ ॥23॥
ಆಗ ರಾಜಪುತ್ರನಾದ ದುಶ್ಶಾಸನನು ಕೋಪದಿಂದ ಕೆಂಪಾದ ಕಣ್ಣುಳ್ಳ ತನ್ನ ಅಣ್ಣನ ಶಾಸನವನ್ನು ಕೇಳಿ ಅಲ್ಲಿಂದ ಎದ್ದು ಮಹಾರಥರಾದ ಪಾಂಡವರ ಗೃಹವನ್ನು ಪ್ರವೇಶಿಸಿ ರಾಜಪುತ್ರಿಯಾದ ದ್ರೌಪದಿಯನ್ನು ಕುರಿತು ಹೀಗೆ ಹೇಳಿದನು.
ದುಶ್ಶಾಸನಃ
ಏಹ್ಯೇಹಿ ಪಾಂಚಾಲಿ ಜಿತಾಽಸಿ ಕೃಷ್ಣೇ
ದುರ್ಯೋಧನಂ ಪಶ್ಯ ವಿಮುಕ್ತಲಜ್ಜಾ |
ಕುರೂನ್ ಭಜಸ್ವಾಯತಪದ್ಮನೇತ್ರೇ
ಧರ್ಮೇಣ ಲಬ್ಧಾಸಿ ಸಭಾಂ ಪರೈಹಿ ॥24॥
ಪಾಂಚಾಲಿ ಏಳು ಏಳು. ನೀನು ದ್ಯೂತದಲ್ಲಿ ಜಿತಳಾಗಿದ್ದೀಯೆ. ಕೃಷ್ಣೆಯೇ! ನೀನು ನಾಚಿಕೆಯನ್ನು ಬಿಟ್ಟು ದುರ್ಯೋಧನನನ್ನು ನೋಡು. ವಿಶಾಲಾಕ್ಷಿಯೇ! ನೀನು ಕುರುಗಳನ್ನು ಹೊಂದು. ನಿನ್ನನ್ನು ನಾವು ಧರ್ಮದಿಂದ ಪಡೆದಿದ್ದೇವೆ. ಸಭೆಗೆ ಹೊರಟು ಬಾ. (ಎಂದು ಹೇಳಿದನು.)
ವೈಶಂಪಾಯನಃ
ತತಃ ಸಮುತ್ಥಾಯ ಸುದುರ್ಮನಾಃ ಸಾ
ವಿವರ್ಣಮಾಮೃತ್ಯ ಮುಖಂ ಕರೇಣ |
ಆರ್ತಾ ಪ್ರದುದ್ರಾವ ಯತಃ ಸ್ತ್ರಿಯಸ್ತಾ
ವೃದ್ಧಸ್ಯ ರಾಜ್ಞಃ ಕುರುಪುಂಗವಸ್ಯ ॥25॥
ಆಗ ಅತ್ಯಂತದುಃಖಪೂರಿತಳಾದ ಅವಳು ಎದ್ದು ತನ್ನ ಕೈಯಿಂದ ಬಾಡಿದ ಮುಖವನ್ನು ಮುಚ್ಚಿಕೊಂಡು ಕುರು ಪುಂಗವನಾದ ವೃದ್ಧನಾದ ಧೃತರಾಷ್ಟ್ರನ ಸ್ತ್ರೀಯರು ಇದ್ದ ಸ್ಥಳಕ್ಕೆ ಆರ್ತಳಾಗಿ ಓಡಿ ಬಂದಳು.
ತತೋ ಜವೇನಾಭಿಪಪಾತ ರೋಷಾದ್
ದುಶ್ಶಾಸನಸ್ತಾಮಭಿಗರ್ಜಮಾನಃ |
ದೀರ್ಘೇಷು ನೀಲೇಷ್ವಥ ಚೋರ್ಮಿಮತ್ಸು
ಜಗ್ರಾಹ ಕೇಶೇಷು ನರೇಂದ್ರಪತ್ನೀಮ್ ॥26॥
ಆಗ ದುಶ್ಶಾಸನನು ರೋಷದಿಂದ ಗರ್ಜಿಸುತ್ತಾ ಅವಳ ಹಿಂದೆ ಓಡಿ ಬಂದು ನರೇಂದ್ರಪತ್ನಿಯಾದ ಅವಳನ್ನು ದೀರ್ಘವಾದ ಕಪ್ಪಾದ ಗುಂಗುರುಗಳಿಂದ ಕೂಡಿದ ಅವಳ ತಲೆ ಕೂದಲುಗಳಲ್ಲಿ ಹಿಡಿದು ಕೊಂಡನು.
ಯೇ ರಾಜಸೂಯಾವಭೃಥೇ ಜಲೇನ
ಮಹಾಕ್ರತೌ ಮಂತ್ರಪೂತೇನ ಸಿಕ್ತಾಃ |
ತೇ ಪಾಂಡವಾನಾಂ ಪರಿಭೂಯ ವೀರ್ಯಂ
ಬಲಾತ್ ಪ್ರಮೃಷ್ಟಾ ಧೃತರಾಷ್ಟ್ರಜೇನ ॥27॥
ಯಾವ ದ್ರೌಪದಿಯ ಕೇಶಗಳು ರಾಜಸೂಯ ಮಹಾಯಾಗದ ಅವಭೃಥ ಸ್ನಾನದ ಸಮಯದಲ್ಲಿ ಮಂತ್ರಪೂತವಾದ ಜಲದಿಂದ ಅಭಿಷೇಕಮಾಡಲ್ಪಟ್ಟಿದ್ದವೋ ಅಂತಹ ಕೂದಲುಗಳನ್ನು ಧೃತರಾಷ್ಟ್ರನ ಪುತ್ರನಾದ ದುಶ್ಶಾಸನನು ಪಾಂಡವರ ಪರಾಕ್ರಮವನ್ನು ಲೆಕ್ಕಿಸದೆ ಬಲದಿಂದ ತನ್ನ ಕೈಗಳಿಂದ ಹಿಡಿದನು.
ಸ ತಾಂ ಪರಾಮೃಶ್ಯ ಸಭಾಸಮೀಪಮ್
ಆನೀಯ ಕೃಷ್ಣಾಮತಿಕೃಷ್ಣಕೇಶೀಮ್ |
ದುಶ್ಶಾಸನೋ ನಾಥವತೀಮನಾಥವತ್
ಚಕರ್ಷ ವಾಯುಃ ಕದಳೀಮಿವಾರ್ತಾಮ್ ॥28॥
ದುಶ್ಶಾಸನನು ಅತಿ ಕಪ್ಪಾದ ಕೂದಲುಳ್ಳ ದ್ರೌಪದಿಯನ್ನು ಹಾಗೆಯೇ ಹಿಡಿದು ಸಭೆಯ ಸಮೀಪಕ್ಕೆ ಎಳೆದುಕೊಂಡು ಬಂದನು. ನಾಥವತಿಯಾದ ಅವಳನ್ನು ಅನಾಥಳಂತೆ ಬಿರುಗಾಳಿಯು ಕದಳಿ ವೃಕ್ಷವನ್ನು ಎಳೆದಂತೆ ಆರ್ತಳಾದ ದ್ರೌಪದಿಯನ್ನು ಎಳೆದಾಡಿದನು.
ಸಾ ಕೃಷ್ಯಮಾಣಾ ನಮಿತಾಂಗಯಷ್ಟಿಃ
ಶನೈರುವಾಚಾದ್ಯ ರಜಸ್ವಲಾಽಸ್ಮಿ |
ಏಕಂ ಚ ವಾಸೋ ಮಮ ಮಂದಬುದ್ಧೇ

ನೇತುಂ ಸಭಾಂ ನಾರ್ಹಸೇ ಮಾಮನಾರ್ಯ ॥29॥
ಹೀಗೆ ಎಳೆದಾಡಲ್ಪಡುವ ದ್ರೌಪದಿಯು ತನ್ನ ಕೃಶವಾದ ಶರೀರವನ್ನು ಮುಚ್ಚಿಕೊಂಡು ಸಣ್ಣ ಧ್ವನಿಯಲ್ಲಿ , ಎಲೈ ಮಂದಬುದ್ಧಿಯ ಅನಾರ್ಯನೇ! ನಾನು ಈ ದಿನ ರಜಸ್ವಲೆಯಾಗಿದ್ದೇನೆ. ನನಗೆ ಒಂದೇ ವಸ್ತ್ರವಿದೆ. ನನ್ನನ್ನು ಸಭೆಗೆ ಎಳೆದು ಕೊಂಡು ಹೋಗಬೇಡ ಎಂದು ಹೇಳಿದಳು.
ತತೋಽಬ್ರವೀತ್ ತಾಂ ಪ್ರಹಸನ್ ನಿಗೃಹ್ಯ
ಕೇಶೇಷು ಕೃಷ್ಣೇಷು ತದಾ ಸ ಕೃಷ್ಣಾಮ್ |
ಜಿಷ್ಣುಂ ಚ ಕೃಷ್ಣಂ ಚ ಹರಿಂ ನರಂ ಚ
ತ್ರಾಣಾಯ ವಿಕ್ರೋಶಯ ಯಾಜ್ಞಸೇನಿ ॥30॥
ಆಗ ಅವನು ಅವಳನ್ನು ಕೃಷ್ಣಕೇಶಗಳಲ್ಲಿ ಹಿಡಿದು ಗಟ್ಟಿಯಾಗಿ ನಗುತ್ತಾ ದ್ರೌಪದಿಯನ್ನು ಕುರಿತು ಯಾಜ್ಞಸೇನಿ ಅರ್ಜುನನ್ನಾಗಲೀ ಕೃಷ್ಣನನ್ನಾಗಲೀ ಹರಿಯನ್ನಾಗಲೀ ಅಥವಾ ನರನನ್ನಾಗಲೀ ನಿನ್ನ ರಕ್ಷಣೆಗೋಸ್ಕರ ಕಿರುಚು.
ರಜಸ್ವಲಾ ವಾಽಪ್ಯಥ ಯಾಜ್ಞಸೇನಿ
ಏಕಾಂಬರಾ ವಾಽಪ್ಯಥವಾ ವಿವಸತ್ರ |
ದ್ಯೂತೇ ಜಿತಾ ಚಾಸಿ ಕೃತಾ ಚ ದಾಸೀ
ದಾಸೀಷು ಕಾಮಶ್ಚ ಯಥೋಪಜೋಷಮ್ ॥31॥
ಯಾಜ್ಞಸೇನಿಯೇ! ನೀನು ರಜಸ್ವಲೆಯಾಗಿರು ಅಥವಾ ಒಂದೇ ವಸ್ತ್ರವನ್ನು ಧರಿಸಿರು ಅಥವಾ ವಿವಸ್ತ್ರಳಾಗಿರು. ಏನಾದರೂ ದ್ಯೂತದಲ್ಲಿ ಗೆಲ್ಲಲ್ಪಟ್ಟು ದಾಸಿಯಾಗಿದ್ದೀಯೆ. ದಾಸಿಯರ ವಿಷಯದಲ್ಲಿ ಮನಸ್ಸಿಗೆ ಬಂದಂತೆ ವ್ಯವಹರಿಸಬಹುದು. (ಎಂದು ಹೇಳಿದನು.)
ಪ್ರಕೀರ್ಣಕೇಶೀ ಪತಿತಾರ್ಧವಸತ್ರ
ದುಶ್ಶಾಸನೇನ ವ್ಯವಧೂಯಮಾನಾ |
ಹ್ರೀಮತ್ಯಮರ್ಷೇಣ ಚ ದಹ್ಯಮಾನಾ
ಶನೈರಿದಂ ವಾಕ್ಯಮುವಾಚ ಕೃಷ್ಣಾ ॥32॥
ತನ್ನ ಕೂದಲುಗಳನ್ನು ಕೆದರಿಕೊಂಡು ವಸ್ತ್ರದ ಒಂದು ಭಾಗವು ಜಾರುತ್ತಿರಲು ದುಶ್ಶಾಸನನಿಂದ ಎಳೆಯಲ್ಪಡುತ್ತಿದ್ದ ನಾಚಿಕೆಯಿಂದ ಕೂಡಿದ ದ್ರೌಪದಿಯು ಕೋಪದಿಂದ ಉರಿಯುತ್ತಾ ಮೆಲ್ಲಗೆ ಈ ಮಾತನ್ನು ಆಡಿದಳು.
ಇಮೇ ಸಭಾಯಾಮುಪದಿಷ್ಟಶಾಸ್ತ್ರಾಃ
ಕ್ರಿಯಾವಂತಃ ಸರ್ವ ಏವೇಂದ್ರಕಲ್ಪಾಃ |
ಗುರುಸ್ಥಾನಾ ಗುರವಶ್ಚ ಸರ್ವೇ
ತೇಷಾಮಗ್ರೇ ನೋತ್ಸಹೇ ಸ್ಥಾತುಮೇವಮ್ ॥33॥
ಸಭೆಯಲ್ಲಿರುವ ಇವರೆಲ್ಲರೂ ಶಾಸ್ತ್ರೋಪದೇಶವನ್ನು ಮಾಡಿದ ಗುರುಗಳು. ಸತ್ಕರ್ಮವನ್ನು ಮಾಡಿದವರು. ಇಂದ್ರನಂತೆ ಇರುವವರು. ಎಲ್ಲರೂ ನನ್ನ ಗುರುಸ್ಥಾನದಲ್ಲಿ ಇರುವ ಗುರುಗಳೇ ಆಗಿದ್ದಾರೆ. ಅವರ ಎದುರಿನಲ್ಲಿ ನಾನು ಹೀಗೆ ನಿಲ್ಲಲು ಬಯಸುವುದಿಲ್ಲ.
ನೃಶಂಸಕರ್ಮಂಸ್ತ್ವಮನಾರ್ಯವೃತ್ತ
ಮಾ ಮಾ ವಿವಸತ್ರಮಿತಿ ಮಾ ವಿಕರ್ಷೀಃ |
ನ ಮರ್ಷಯೇಯುಸ್ತವ ರಾಜಪುತ್ರಾಃ
ಸೇಂದ್ರಾ ದೇವಾ ಯದಿ ತೇ ಸ್ಯೆ ಸಭಾಯಾಮ್ ॥34॥
ಕ್ರೂರಕರ್ಮಿಯೇ! ಅನಾರ್ಯವೃತ್ತನೇ! ನನ್ನನ್ನು ಹೀಗೆ ಎಳೆದು ವಿವಸ್ತ್ರಳನ್ನಾಗಿ ಮಾಡಬೇಡ. ಇಂದ್ರಾದಿ ದೇವತೆಗಳು ಸಭೆಯಲ್ಲಿದ್ದರೂ ಸಹ ರಾಜಪುತ್ರರಾದ ನನ್ನ ಪತಿಗಳು ನಿನ್ನ ಈ ಕಾರ್ಯವನ್ನು ಎಂದೂ ಸಹಿಸುವುದಿಲ್ಲ.
ಧರ್ಮೇ ಸ್ಥಿತೋ ಧರ್ಮಸುತಶ್ಚ ರಾಜಾ
ಧರ್ಮಶ್ಚ ಸೂಕ್ಷ್ಮೋ ನಿಪುಣೋಪಲಕ್ಷ್ಯಃ |
ನ ಚಾಪಿ ಭರ್ತುಃ ಪರಮಾಣುಮಾತ್ರಮ್
ಇಚ್ಛಾಮಿ ದೋಷಂ ಸ್ವಗುಣಾನ್ ವಿಸೃಜ್ಯ ॥35॥
ಯಮಧರ್ಮನ ಮಗನಾದ ಯುಧಿಷ್ಠಿರರಾಜನು ಯಾವಾಗಲೂ ಧರ್ಮದಲ್ಲಿಯೇ ಇರುವವನು. ಧರ್ಮವು ಬಹಳ ಸೂಕ್ಷ್ಮವಾದುದು. ಇದು ನಿಪುಣರಿಗೆ ಮಾತ್ರ ತಿಳಿಯುವಂತಹದು. ನನ್ನ ಗುಣಗಳನ್ನು ತೊರೆದು ನಾನು ನನ್ನ ಪತಿಯಾದ ಧರ್ಮರಾಜನಲ್ಲಿ ಒಂದು ಪರಮಾಣುವಿನಷ್ಟು ದೋಷವನ್ನೂ ಸಹ ಎಣಿಸಲು ಬಯಸುವುದಿಲ್ಲ.
ಇದಂ ತ್ವನಾರ್ಯಂ ಕುರುವೀರಮಧ್ಯೇ
ರಜಸ್ವಲಾಂ ಯತ್ ಪರಿಕರ್ಷಸೇ ಮಾಮ್ |
ನ ಚಾಪಿ ಕಶ್ಚಿತ್ ಕುರುತೇ ಸ್ಮ ಪೂಜಾಂ
ಬಲಂ ತವೇದಂ ಪರಮಂ ತ್ವವೇಕ್ಷ್ಯ ॥36॥
ಆದರೆ ಎಲೈ ಅನಾರ್ಯನೇ! ರಜಸ್ವಲೆಯಾದ ನನ್ನನ್ನು ಕುರುವೀರರ ಮಧ್ಯೆ ಎಳೆದಾಡುತ್ತಿರುವುದು ನಿನ್ನ ನೀಚವಾದ ಕರ್ಮ. ಇಲ್ಲಿ ನಿನ್ನ ಈ ನೀಚಕರ್ಮವನ್ನು ನೋಡಿ ನಿನ್ನ ಬಲವನ್ನು ನೋಡಿ ಯಾರೂ ನಿನ್ನನ್ನು ಸತ್ಕರಿಸುತ್ತಿಲ್ಲ. ಅಧರ್ಮವು ನಡೆಯುತ್ತಿದೆ.
ಧಿಗಸ್ತು ನಷ್ಟಃ ಖಲು ಭಾರತಾನಾಂ

ಧರ್ಮಸ್ತಥಾ ಧರ್ಮವಿದಾಂ ಚ ವೃತ್ತಮ್ |
ಯತ್ರ ಹ್ಯತೀತಾಂ ಕುರುಧರ್ಮವೇಲಾಂ
ಪ್ರೇಕ್ಷಂತಿ ಸರ್ವೇ ಕುರವಃ ಸಭಾಯಾಮ್ ॥37॥
ನಿನಗೆ ಧಿಕ್ಕಾರವಿರಲಿ. ಭಾರತವಂಶದವರ ಧರ್ಮವೆತ್ತ ನಡತೆಯು ಈ ದಿನ ನಷ್ಟವಾಯಿತು. ಏಕೆಂದರೆ ಎಲ್ಲಾ ಕುರುಗಳೂ ಸಭೆಯಲ್ಲಿ ಕುರುವಂಶದ ಧರ್ಮದ ಮರ್ಯಾದೆಯನ್ನು ಮೀರಿ ನಡೆಯುತ್ತಿರುವ ನಿನ್ನನ್ನು ನೋಡುತ್ತಿದ್ದಾರೆ.
ದ್ರೋಣಸ್ಯ ಭೀಷ್ಮಸ್ಯ ಚ ನಾಸ್ತಿ ಸತ್ವಂ
ಕ್ಷತ್ತುಸ್ತಥೈವಾಸ್ಯ ಮಹಾತ್ಮನೋಽಪಿ |
ರಾಜ್ಞಸ್ತಥಾ ಭೀಮಮಧರ್ಮಮುಗ್ರಂ
ನ ಲಕ್ಷಯಂತೇ ಕುರುವೃದ್ಧಮುಖ್ಯಾಃ ॥38॥
ದ್ರೋಣರಿಗಾಗಲೀ ಭೀಷ್ಮರಿಗಾಗಲೀ ಸತ್ವವಿಲ್ಲ. ಮಹಾತ್ಮನಾದ ಈ ವಿದುರನಿಗೂ ಕೂಡ ಸತ್ವವಿಲ್ಲ. ಇಲ್ಲಿ ನೆರೆದಿರುವ ಈ ರಾಜರುಗಳಿಗೂ ಸತ್ವವಿಲ್ಲ. ಕುರುವೃದ್ಧರೂ ಮತ್ತು ಮುಖ್ಯರಾದವರೂ ಸಹ ತಮ್ಮ ಕಣ್ಣೆದುರಿಗೆ ನಡೆದಿರುವ ಈ ಘೋರ ಭಯಂಕರವಾದ ಅಧರ್ಮವನ್ನು ಗಮನಿಸುತ್ತಿಲ್ಲ.
ಇಮಂ ಪ್ರಶ್ನಮಿಮೇ ಬ್ರೂತ ಸರ್ವ ಏವ ಸಭಾಸದಃ |
ಜಿತಾಂ ವಾಽಪ್ಯಜಿತಾಂ ವಾ ಮಾಂ ಮನ್ಯಧ್ವೇ ಸರ್ವಭೂಮಿಪಾಃ॥39॥
ಎಲ್ಲಾ ಸಭಾಸದರು ಮತ್ತು ರಾಜರು ಈ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿ. ನಾನು ಜಿತಳಾಗಿದ್ದೇನೆಯೇ? ಅಥವಾ ಇಲ್ಲವೆ? ನಿಮ್ಮ ಅಭಿಪ್ರಾಯವೇನು?
ವೈಶಂಪಾಯನಃ
ತಥಾ ಬ್ರುವಂತೀ ಕರುಣಂ ಸುಮಧ್ಯಾ
ಭರ್ತ್ರೂನ್ ಕಟಾಕ್ಷೈಃ ಕುಪಿತಾನಪಶ್ಯತ್ |
ಸಾ ಪಾಂಡವಾನ್ ಕೋಪಪರೀತದೇಹಾ
ಸಂದೇಶಯಾಮಾಸ ಕಟಾಕ್ಷಪತ್ರೈಃ ॥40॥
ಸುಂದರಿಯಾದ ದ್ರೌಪದಿಯು ಹೀಗೆ ಮಾತನಾಡುತ್ತಾ ಓರೆಗಣ್ಣಿನಿಂದ ತನ್ನ ಪತಿಗಳು ಕುಪಿತರಾಗಿರುವುದನ್ನು ನೋಡಿದಳು. ಕೋಪದಿಂದ ಪೂರ್ಣವಾದ ದೇಹವನ್ನು ಹೊಂದಿದ್ದ ಅವಳು ತನ್ನ ಕಟಾಕ್ಷ ಎಂಬ ಪತ್ರಗಳಿಂದಲೇ ಸಂದೇಶವನ್ನು ಕಳುಹಿಸಿದಳು.
ಹೃತೇನ ರಾಜ್ಯೇನ ತಥಾ ಧನೇನ
ರತ್ನೈಶ್ಚ ಮುಖ್ಯೈರ್ನ ತಥಾ ಬಭೂವ |
ಯಥಾ ತಥಾ ಕೋಪಸಮೀರಿತೇನ
ಕೃಷ್ಣಾಕಟಾಕ್ಷೇಣ ಬಭೂವ ದುಃಖಮ್ ॥41॥
ಪಾಂಡವರಿಗೆ ಕೋಪಪೂರ್ಣವಾದ ದ್ರೌಪದಿಯ ಕಟಾಕ್ಷ ಸಂದೇಶದಿಂದ ಎಂತಹ ದುಃಖವು ಉಂಟಾಯಿತೋ ಅಂತಹ ದುಃಖವು ರಾಜ್ಯವನ್ನು ಕಳೆದುಕೊಂಡಾಗಲಾಗಲೀ ಅಥವಾ ಧನವನ್ನು ಕಳೆದುಕೊಂಡಾಗಲಾಗಲೀ ಶ್ರೇಷ್ಠರತ್ನಗಳನ್ನು ಕಳೆದುಕೊಂಡಾಗಲಾಗಲೀ ಆಗಿರಲಿಲ್ಲ.
ದುಶ್ಶಾಸನಶ್ಚಾಪಿ ಸಮೀಕ್ಷ್ಯ ಕೃಷ್ಣಾಮ್
ಅವೇಕ್ಷಮಾಣಾಂ ಕೃಪಣಾಂ ಪತೀಂಸ್ತಾನ್ |
ಆಧೂಯ ವೇಗೇನ ವಿಸಂಜ್ಞಕಲ್ಪಾಮ್
ಉವಾಚ ದಾಸೀತಿ ಹಸನ್ನಿವೋಗ್ರಮ್ ॥42॥
ದುಶ್ಶಾಸನನು ಸಹ ದ್ರೌಪದಿಯು ತನ್ನ ಕೃಪಣರಾದ ಪತಿಗಳನ್ನು ನೋಡುತ್ತಿರುವುದನ್ನು ಗಮನಿಸಿ ಪ್ರಜ್ಞೆಯನ್ನು ಕಳೆದುಕೊಳ್ಳುವ ಸ್ಥಿತಿಗೆ ಹತ್ತಿರವಾದ ಸ್ಥಿತಿಯಲ್ಲಿದ್ದ ಅವಳನ್ನು ವೇಗದಿಂದ ಎಳೆದು ನಗುತ್ತಾ ದಾಸಿ ದಾಸಿ ಎಂದು ಉಗ್ರವಾಗಿ ಕರೆದನು.
ಕರ್ಣಸ್ತು ತದ್ವಾಕ್ಯಮತೀವ ಹೃಷ್ಟಃ
ಸಂಪೂಜಯಾಮಾಸ ಹಸನ್ ಸಶಬ್ದಮ್ |
ಗಾಂಧಾರರಾಜಃ ಸುಬಸ್ಯ ಪುತ್ರಃ
ತಥೈವ ದುಶ್ಶಾನಸಮಭ್ಯನಂದತ್ ॥43॥
ಕರ್ಣನು ಸಂತೋಷದಿಂದ ಗಟ್ಟಿಯಾಗಿ ನಗುತ್ತಾ ದುಶ್ಶಾಸನನ ಮಾತುಗಳನ್ನು ಸತ್ಕರಿಸಿದನು. ಸುಬಲನ ಪುತ್ರನಾದ ಗಾಂಧಾರರಾಜನಾದ ಶಕುನಿಯು ಸಹ ದುಶ್ಶಾಸನನನ್ನು ಅಭಿನಂದಿಸಿದನು.
ಸಭ್ಯಾಸ್ತು ಯೇ ತತ್ರ ಬಭೂವುರನ್ಯೇ
ತಾಭ್ಯಾಮೃತೇ ಧಾರ್ತರಾಷ್ಟ್ರೇಣ ಚೈವ |
ತೇಷಾಮಭೂದ್ ದುಃಖಮತೀವ ಕೃಷ್ಣಾಂ
ದೃಷ್ಟ್ವಾ ಸಭಾಯಾಂ ಪರಿಕೃಷ್ಯಮಾಣಾಮ್ ॥44॥
ಕರ್ಣ ಶಕುನಿಗಳನ್ನು ಬಿಟ್ಟು ದುರ್ಯೋಧನನನ್ನೂ ಬಿಟ್ಟು ಅಲ್ಲಿದ್ದ ಉಳಿದ ಎಲ್ಲಾ ಸಭ್ಯರಿಗೂ ಸಹ ಸಭೆಯಲ್ಲಿ ಹಾಗೆ ಎಳೆದಾಡಲ್ಪಡುತ್ತಿರುವ ದ್ರೌಪದಿಯನ್ನು ನೋಡಿ ಬಹಳ ದುಃಖ ಉಂಟಾಯಿತು.
ಭೀಷ್ಮಃ
ನ ಧರ್ಮಸೌಕ್ಷ್ಮ್ಯಾತ್ ಸುಭಗೇ ವಿವೇಕ್ತುಂ

ಶಕ್ನೋಮಿ ತೇ ಪ್ರಶ್ನಮಿಮಂ ಯಥಾವತ್ |
ಅಸ್ವೋಽಪ್ಯಶಕ್ತಃ ಪಣಿತುಂ ಪರಸ್ವಂ
ಸ್ತ್ರಿಯಾಶ್ಚ ಭರ್ತುರ್ವಶತಾಂ ಸಮೀಕ್ಷ್ಯ ॥45॥
ಸೌಭಾಗ್ಯವತಿಯೇ! ಧರ್ಮವು ಸೂಕ್ಷ್ಮವಾದುದರಿಂದ ನಿನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಲಾರೆ. ತನ್ನಲ್ಲಿ ಧನವಿಲ್ಲದವನು ಪರಧನವನ್ನು ಪಣಕ್ಕೆ ಒಡ್ಡಲು ಸಾಧ್ಯವಿಲ್ಲ. ಮತ್ತು ಸ್ತ್ರೀಯರು ಯಾವಾಗಲೂ ಪತಿಯ ವಶರಾದವರು ಎಂಬ ವಿಷಯಗಳನ್ನು ತಿಳಿದು ನಾನು ಉತ್ತರವನ್ನು ಕೊಡಲಾರೆ.
ತ್ಯಜೇದ್ಧಿ ಸರ್ವಾಂ ಪೃಥಿವೀಂ ಸಮೃದ್ಧಾಂ
ಯುಧಿಷ್ಠಿರಃ ಸತ್ಯಮಥೋ ನ ಜಹ್ಯಾತ್ |
ಉಕ್ತಂ ಜಿತೋಽಸ್ಮೀತಿ ಚ ಪಾಂಡವೇನ
ತಸ್ಮಾನ್ನ ಶಕ್ನೋಮಿ ವಿವೇಕ್ತುಮೇತತ್ ॥46॥
ಯುಧಿಷ್ಠಿರನು ಸಮೃದ್ಧವಾದ ಪೃಥಿವಿಯನ್ನಾದರೂ ತ್ಯಜಿಸಬಹುದು. ಆದರೆ ಎಂದೂ ಸತ್ಯವನ್ನು ತ್ಯಜಿಸಲಾರ. ಪಾಂಡವನಾದ ಅವನು ನಾನು ಪರಾಜಿತನಾಗಿದ್ದೇನೆ ಎಂದು ಹೇಳಿದ್ದಾನೆ. ಆದ್ದರಿಂದ ನಿನ್ನ ಪ್ರಶ್ನೆಯನ್ನು ಬಿಡಿಸಲು ನಾನು ಸಮರ್ಥನಾಗಿರುವುದಿಲ್ಲ.
ದ್ಯೂತೇಽದ್ವಿತೀಯಃ ಶಕುನಿರ್ನರೇಷು
ಕುಂತೀಸುತಸ್ತೇನ ನಿಸೃಷ್ಟ(ನಿಕೃತ್ತ)ಕಾಮಃ |
ನ ಮನ್ಯತೇ ತಾಂ ನಿಕೃತಿಂ ಮಹಾತ್ಮಾ
ತಸ್ಮಾನ್ನ ತೇ ಪ್ರಶ್ನಮಿಮಂ ಬ್ರವೀಮಿ ॥47॥
ಭೂಮಿಯ ಮೇಲೆ ಇರುವ ನರರಲ್ಲಿ ಶಕುನಿಯ ದ್ಯೂತದಲ್ಲಿ ಅದ್ವಿತಿಯ ನಾದವನು. ಕುಂತೀಸುತನು ಅವನಿಂದ ತನ್ನ ಎಲ್ಲಾ ವಸ್ತುಗಳನ್ನು ಕಳೆದು ಕೊಂಡಿದ್ದಾನೆ. ಆದರೆ ಮಹಾತ್ಮನಾದ ಅವನು ಅದನ್ನು ಮೋಸವೆಂದು ಹೇಳುತ್ತಿಲ್ಲ. ಆದ್ದರಿಂದ ನಿನ್ನ ಪ್ರಶ್ನೆಗೆ ಉತ್ತರವನ್ನು ಕೊಡಲಾರೆ.
ದ್ರೌಪದೀ
ಆಹೂಯ ರಾಜಾ ಕುಶಲೈಃ ಸಭಾಯಾಂ
ಧೃಷ್ಟಾತ್ಮಭಿರ್ನೈಕೃತಿಕೈರನಾರ್ಯೈಃ |
ದ್ಯೂತಪ್ರಿಯೈರ್ನಾತಿಕೃತಪ್ರಯತ್ನಃ
ಕಸ್ಮಾದಯಂ ನಾಮ ನಿಕೃಷ್ಟಕಾಮಃ ॥48॥
ದ್ಯೂತದಲ್ಲಿ ಅಷ್ಟು ಪರಿಶ್ರಮವನ್ನು ಹೊಂದಿರದ ಧರ್ಮರಾಜನನ್ನು ದ್ಯೂತದಲ್ಲಿ ಕುಶಲನಾದ ದುಷ್ಟ ಸ್ವಭಾವವನ್ನು ಹೊಂದಿದ ಮೋಸಗಾರರಾದ, ದ್ಯೂತ ಪ್ರಿಯರಾದ ಅನಾರ್ಯರೆಲ್ಲರೂ ಸೇರಿ ದ್ಯೂತವನ್ನು ಮಾಡಿ ಸೋಲಿಸಿದಾಗ ಅವನು ಹೇಗೆ ತನ್ನ ಎಲ್ಲಾ ಧನವನ್ನು ಕಳೆದುಕೊಳ್ಳುತ್ತಾನೆ?
ಸ ಶುದ್ಧಕಾಮೋ ನಿಕೃತಿಪ್ರವೃತ್ತಿಮ್
ಅಬುಧ್ಯಮಾನಃ ಕುರುಪಾಂಡವಾಗ್ರ್ಯಃ |
ಸಂಭೂಯ ಸರ್ವೈಶ್ಚ ಜಿತೋಽಪಿ ಯಸ್ಮಾತ್
ಪಶ್ಚಾಚ್ಚ ತತ್ ಕೈತವಮಭ್ಯುಪೇತಃ ॥49॥
ಶುದ್ಧಮನಸ್ಸಿನ ಅವನು ಮೋಸದ ಪ್ರವೃತ್ತಿಯನ್ನು ತಿಳಿಯದಂತಹ ಕುರು ಪಾಂಡವಾಗ್ರಗಣ್ಯನಾದವನು. ಅವನನ್ನು ಎಲ್ಲರೂ ಸೇರಿ ದ್ಯೂತದಲ್ಲಿ ಕೆಡವಿ ಬೇರೆ ಧನವಿಲ್ಲದಂತೆ ಮಾಡಿದ ಮೇಲೆ ಅವನು ಇಂತಹ ಪಣಗಳನ್ನು ಒಡ್ಡಿದ್ದಾನಷ್ಟೇ?
ತಿಷ್ಠಂತಿ ಚೇಮೇ ಕುರವಃ ಸಭಾಯಾಮ್
ಈಶಾಃ ಸುತಾನಾಂ ಚ ತಥಾ ಸ್ನುಷಾಣಾಮ್ |
ಸಮೀಕ್ಷ್ಯ ಸರ್ವೇ ಮಮ ಚಾಪಿ ವಾಕ್ಯಂ
ಬ್ರುವಂತು ಮೇ ಪ್ರಶ್ನಮಿಮಂ ಯಥಾವತ್ ॥50॥
ಈ ಸಭೆಯಲ್ಲಿ ಕುರುಗಳಿದ್ದಾರೆ. ಅವರು ಹೇಗೆ ತಮ್ಮ ಮಕ್ಕಳ ಮೇಲೆ ಪ್ರಭುತ್ವವನ್ನು ಹೊಂದಿದ್ದಾರೆಯೋ ಹಾಗೆಯೇ ಸೊಸೆಯರ ಮೇಲೆಯೂ ಪ್ರಭುತ್ವವನ್ನು ಹೊಂದಿದ್ದಾರೆ. ಅವರೆಲ್ಲರೂ ಎಲ್ಲಾ ವಿಷಯಗಳನ್ನು ಮತ್ತು ನನ್ನ ಮಾತನ್ನು ಗಮನಿಸಿ ನನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಿ.
ನ ಸಾ ಸಭಾ ಯತ್ರ ನ ಸಂತಿ ವೃದ್ಧಾ
ನ ತೇ ವೃದ್ಧಾ ಯೇ ನ ವದಂತಿ ಧರ್ಮಮ್ |
ನಾಸೌ ಧರ್ಮೋ ಯತ್ರ ನ ಸತ್ಯಮಸ್ತಿ
ನ ತತ್ ಸತ್ಯಂ ಯಚ್ಛಲೇನಾನುವಿದ್ಧಮ್ ॥51॥
ಎಲ್ಲಿ ವೃದ್ಧರಿರುವುದಿಲ್ಲವೋ ಅದು ಸಭೆಯಲ್ಲ ಯಾರು ಧರ್ಮವನ್ನು ಹೇಳುವುದಿಲ್ಲವೋ ಅವರು ವೃದ್ಧರಲ್ಲ. ಎಲ್ಲಿ ಸತ್ಯವಿಲ್ಲವೋ ಅದು ಧರ್ಮವಲ್ಲ. ಯಾವುದು ಮೋಸದಿಂದ ಕೂಡಿರುತ್ತದೆಯೋ ಅದು ಸತ್ಯವಲ್ಲ .
ವೈಶಂಪಾಯನಃ
ತಥಾ ಬ್ರುವಂತೀಂ ಕರುಣಂ ರುದಂತೀಮ್
ಅವೇಕ್ಷಮಾಣಾಮಸಕೃತ್ ಪತೀಂಸ್ತಾನ್ |
ದುಶ್ಶಾಸನಃ ಪರುಷಾಣ್ಯಪ್ರಿಯಾಣಿ

ವಾಕ್ಯಾನ್ಯುವಾಚಾಮಧುರಾಣಿ ಚೈವ ॥52॥
ಹೀಗೆ ಕರುಣಾಜನಕವಾಗಿ ಮಾತನಾಡುತ್ತಾ ಅಳುತ್ತಾ ತನ್ನ ಪತಿಗಳನ್ನು ಮತ್ತೆ ಮತ್ತೆ ನೋಡುತ್ತಿದ್ದ ಅವಳನ್ನು ಕುರಿತು ದುಶ್ಶಾಸನನು ಕ್ರೂರವಾದಕಿವಿಯಿಂದ ಕೇಳಲು ಸಾಧ್ಯವಾಗದ ನಿಷ್ಠುರವಾದ ಮಾತುಗಳನ್ನು ಆಡಿದನು.
ತಾಂ ಕ್ಲಿಶ್ಯಮಾನಾಂ ಚ ರಜಸ್ವಲಾಂ ಚ
ಸ್ರಸ್ತೋತ್ತರೀಯಾಮತದರ್ಹಮಾಣಾಮ್ |
ವೃಕೋದರಃ ಪ್ರೇಕ್ಷ್ಯ ಯುಧಿಷ್ಠಿರಸ್ಯ
ಚಕಾರ ರೋಷಂ ಪರಮಾರ್ತರೂಪಃ ॥53॥
ಅವನ ಕೈಯಲ್ಲಿ ಸಿಲುಕಿ ಒದ್ದಾಡುತ್ತಿರುವ, ರಜಸ್ವಲೆಯಾದ, ವಸ್ತ್ರವು ಜಾರುತ್ತಿರುವ, ಅಂತಹ ಅವಮಾನಕ್ಕೆ ಯೋಗ್ಯಳಲ್ಲದ ದ್ರೌಪದಿಯನ್ನು ನೋಡಿ, ಭೀಮಸೇನನು ಪರಮಾರ್ತಿಯಿಂದ ಕೂಡಿದವನಾಗಿ ಯುಧಿಷ್ಠಿರನ ಮೇಲೆ ರೋಷವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಸಪ್ತಾಶೀತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಏಕೋನವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತೇಳನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ದೃಷ್ಟ್ವಾ ಭೀಮಃ ಕ್ಲಿಷ್ಯಮಾನಾಂ ತು ಕೃಷ್ಣಾಂ
ಧರ್ಮಾತ್ಯಯಂ ಧರ್ಮರಾಜೇ ಚ ದೃಷ್ಟ್ವಾ |
ರಾಜಾ ಶಾಸ್ಯೋ ಯುವರಾಜೇನ ಧರ್ಮಾ-
ಚ್ಚಲನ್ ಯಸ್ಮಾದ್ ವಾಕ್ಯಮಿದಂ ಬಭಾಷೇ ॥341॥
ಇಮಾಂ ನ್ಯಸ್ತವತೋ ದ್ಯೂತೇ ಧಕ್ಷಣೀಯೌ ಹಿ ತೇ ಭುಜೌ |
ನೈವಮಿತ್ಯರ್ಜುನೋಽವಾದೀತ್ ತಮಾಹಾಥ ವೃಕೋದರಃ |
ವಕ್ತವ್ಯಂ ನ ತು ಕರ್ತವ್ಯಂ ತಸ್ಮಾನ್ನ ಹಿ ಮಯಾ ಕೃತಂ ॥342॥
ದ್ರೌಪದಿ ಕ್ಲೇಶಪಡುವುದನ್ನೂ ಧರ್ಮರಾಜನಲ್ಲಿ ಧರ್ಮಚ್ಯುತಿಯಾಗಿರುವುದನ್ನೂ ಕಂಡು, ರಾಜ ಧರ್ಮಮಾರ್ಗದಿಂದ ದೂರ ಸರಿಯುವಾಗ ಯುವರಾಜ ಅವನಿಗೆ ಶಾಸನ ಮಾಡಬೇಕೆಂದು, `ದ್ರೌಪದಿಯನ್ನು ಜೂಜಿನಲ್ಲಿ ಪಣಕ್ಕಿಟ್ಟ ನಿನ್ನ ಕೈಗಳನ್ನು ಸುಡಬೇಕು' ಎಂದ. `ಅಣ್ಣ! ಹಾಗೆ ಹೇಳಬೇಡ' ಎಂದ ಅರ್ಜುನ. ಆಗ ಭೀಮ ನುಡಿದ, `ಹೇಳಬೇಕು, ಮಾಡಬಾರದು. ಅದರಿಂದಲೆ ನಾನು ಮಾಡಲಿಲ್ಲ'.
ಉತ್ತಮೇ ವಚಸಾ ಶಿಕ್ಷಾ ಮಧ್ಯಮೇಽರ್ಥಾಪಹಾರಣಂ |
ಅಧಮೇ ದೇಹದಂಡಶ್ಚ ತಸ್ಮಾದ್ವಾಚ್ಯೋ ಯುಧಿಷ್ಠಿರಃ ॥343॥
ಉತ್ತಮರಿಗೆ ಮಾತಿನಿಂದಲೆ ಶಿಕ್ಷೆ. ಮಧ್ಯಮರಿಗೆ ಧನಾಪಹಾರ. ಅಧಮರಿಗೆ ದೇಹದಂಡನೆ. ಅದರಿಂದ ನಾನು ಯುಧಿಷ್ಠಿರನಿಗೆ ಮಾತಿನಿಂದ ಹೇಳಬೇಕು.
ಅಥ ಕರ್ಣೋಽಬ್ರವೀತ್ ಕೃಷ್ಣಾಮಪತಿರ್ಹ್ಯಸಿ ಶೋಭನೇ |
ಧಾರ್ತರಾಷ್ಟ್ರಗೃಹಂ ಯಾಹೀತ್ಯಥ ದುರ್ಯೋಧನೋಽವದತ್ ॥344॥
ಪರಸ್ಪರ ವಿರೋಧಾರ್ಥಂ ಪಾಂಡವಾನಾಮಿದಂ ವಚಃ ॥345॥
ಯುಧಿಷ್ಠಿರೋ ದುಃಖಹೇತುಸ್ತವೈಕೋ
ಯದ್ಯೇನಮನ್ಯೇ ನ ಗುರುರ್ನ ಏಷಃ |
ಇತಿ ಬ್ರೂಯುರಥವಾ ಭೀಮಪಾರ್ಥಾ-
ವೇಕೇಽಪಿ ವಾ ಭೀಮ ಇಹೋತ್ಸೃಜೇತ್ತ್ವಾಮ್ ॥346॥
ಬಳಿಕ ಕರ್ಣ ದ್ರೌಪದಿಗೆ ಹೇಳಿದ, `ಸುಂದರಿ, ನಿನಗೆ ಇನ್ನು ಪತಿಗಳಿಲ್ಲ. ದುರ್ಯೋಧನನ ಮನೆಗೇ ಹೋಗು'. ದುರ್ಯೋಧನನೂ ಪಾಂಡವರಲ್ಲಿ ಪರಸ್ಪರ ವಿರೋಧ ಉಂಟುಮಾಡುವ ಉದ್ದೇಶದಿಂದ ಈ ಮಾತನ್ನು ನುಡಿದ- `ದ್ರೌಪದಿ ಯುಧಿಷ್ಠಿರನೊಬ್ಬನೇ ನಿನಗೆ ಈ ರೀತಿ ದುಃಖ ನೀಡುವವನು. ಉಳಿದವರು ಈತನನ್ನು ನಮಗೆ ಈತ ಪೂಜ್ಯನಲ್ಲ ಎನ್ನಲಿ, ನಾನು ನಿನ್ನನ್ನು ಬಿಟ್ಟು ಬಿಡುತ್ತೇನೆ. ಭೀಮಾರ್ಜುನರಾಗಲಿ, ಕೊನೆಗೆ ಭೀಮನೊಬ್ಬನೆ ಆಗಲಿ ಹಾಗೆ ಹೇಳಿದರೂ ನಿನ್ನನ್ನು ಬಿಟ್ಟು ಬಿಡುತ್ತೇನೆ'.
ಇತ್ಯುಕ್ತ ಊಚೇ ಪವಮಾನಸೂನುಃ
ಪೂಜ್ಯೋಽಸ್ಮಾಕಂ ಧರ್ಮಜೋಽಸಂಶಯೇನ |
ಗುರುಶ್ಚಾಹಂ ವೋಽಖಿಲಾನಾಂ ಯತೋ ಹಿ
ಬಲಜ್ಯೇಷ್ಠಂ ಕ್ಷತ್ರಮಾಹುರ್ಮಹಾಂತಃ ॥347॥
ಆಗ ಭೀಮನೆಂದ, ಧರ್ಮರಾಜ ನಮಗೆಲ್ಲರಿಗೂ ಪೂಜ್ಯನೆ. ಇದರಲ್ಲಿ ಸಂಶಯವಿಲ್ಲ. ನಾನು ನಿಮಗೆಲ್ಲರಿಗೂ ಪೂಜ್ಯ. ಏಕೆಂದರೆ ಕ್ಷತ್ರಿಯರಲ್ಲಿ ಯಾರು ಹೆಚ್ಚು ಬಲಿಷ್ಠನೋ ಅವನು ಪೂಜ್ಯ ಎನ್ನುತ್ತಾರೆ ಹಿರಿಯರು.
ಬಲಜ್ಯೈಷ್ಠ್ಯೇ ಯದಿ ವಃ ಸಂಶಯಃ ಸ್ಯಾ-
ದುತ್ತಿಷ್ಠಧ್ವಂ ಸರ್ವ ಏವಾದ್ಯ ವೀರಾಃ |
ಮೃದ್ನಾಮಿ ವಃ ಪಾದತಳೇನ ಸರ್ವಾನ್
ಸಹಾನುಬಂಧಾನ್ ಯಶ್ಚ ಮಾಂ ಯೋದ್ಧುಕಾಮಃ॥348॥

ಬಲದಲ್ಲಿ ನಾನು ನಿಮ್ಮೆಲ್ಲರನ್ನೂ ಮೀರಿಸಿರುವೆನೆಂಬ ವಿಷಯದಲ್ಲಿ ನಿಮಗೆ ಸಂಶಯವಿರುವುದೇ ಆದರೆ ಈಗಲೆ ಎಲ್ಲ ವೀರರೂ ಎದ್ದೇಳಿರಿ. ಎಲ್ಲರನ್ನೂ ಪರಿವಾರ ಸಮೇತ ನನ್ನ ಕಾಲಿಂದ ತುಳಿದು ಹೊಸಕಿ ಹಾಕುತ್ತೇನೆ. ಯಾರು ನನ್ನೊಡನೆ ಹೋರಾಡಲು ಬಯಸುತ್ತಾನೆ?
ಇತಿ ಬ್ರುವನ್ ಸಮುತ್ಥಿತೋ ನದನ್ ವೃಕೋದರೋ ಯದಾ |
ವಿಘೂರ್ಣಿತಾ ಸಭಾಽಖಿಲಾ ಭಯಾನ್ನ ಚಾಹ ಕಿಂಚನ ॥349॥
ಹೀಗೆ ಹೇಳುತ್ತ ಗುಡುಗುತ್ತ ಭೀಮನೆದ್ದು ನಿಂತಾಗ ಇಡೀ ಸಭೆ ಭಯದಿಂದ ನಡುಗಿ ಏನೂ ಹೇಳದಾಯಿತು.
ಭೀಷ್ಮೋ ದ್ರೋಣೋ ವಿದುರಾದ್ಯಾಃ ಕ್ಷಮಸ್ವ
ಸರ್ವಂ ತ್ವಯೋಕ್ತಂ ಸತ್ಯಮಿತ್ಯೇವ ಹಸ್ತೌ |
ಗೃಹೀತ್ವೈನಂ ಸ್ವಾಪಯಾಮಾಸುರಸ್ಮಿನ್-
ಸ್ಥಿತೇ ಶಾಂತಿಂ ಚಾಪಿರೇ ಧಾರ್ತರಾಷ್ಟ್ರಾಃ ॥350॥
ಭೀಷ್ಮ ದ್ರೋಣ ವಿದುರ ಮುಂತಾದವರು `ತಾಳು ಭೀಮಸೇನ. ನೀನು ಹೇಳಿದುದೆಲ್ಲವೂ ನಿಜವೆ' ಎಂದು ಎರಡೂ ಕೈಗಳನ್ನು ಹಿಡಿದು ಕೂಡಿಸಿದರು. ಭೀಮ ಸುಮ್ಮನಾದ, ಕೌರವರು ನೆಮ್ಮದಿ ಹೊಂದಿದರು.
ನಿವಾರಿತೋ ಧರ್ಮಜೇನ ಗುರುಭಿಶ್ಚಾಪರೈಸ್ತದಾ |
ಮಾನನಾರ್ಥಂ ಗುರೂಣಾಂ ತು ನ ಭೀಮಸ್ತಾನ್ ಜಘಾನ ಹ ॥
ಧರ್ಮರಾಜನೂ ಭೀಮನನ್ನು ತಡೆದ, ಬೇರೆ ಹಿರಿಯರೂ ತಡೆದರು ಎಂದು ಹಿರಿಯರಿಗೆ ಗೌರವ ಕೊಡುವುದಕ್ಕಾಗಿ ಭೀಮ ಕೌರವರನ್ನು ಆಗ ಕೊಲ್ಲಲಿಲ್ಲ.
ನಚಾತ್ಯವರ್ತತ ಜ್ಯೇಷ್ಠಂ ಧರ್ಮಾತ್ಮಾನಂ ಯುಧಿಷ್ಠಿರಂ |
ತೇಷಾಂ ಪಾಪಾಭಿವೃದ್ಧ್ಯರ್ಥಂ ಜ್ಯೇಷ್ಠವೃತ್ತಿಂ ಚ ದರ್ಶಯನ್ ॥352॥
ಕೌರವರ ಪಾಪ ಇನ್ನೂ ಹೆಚ್ಚುವುದಕ್ಕಾಗಿ ಮತ್ತು ಅಣ್ಣನಲ್ಲಿ ತಮ್ಮ ಹೇಗೆ ವರ್ತಿಸಬೇಕೆನ್ನುವುದನ್ನು ತೋರುವುದಕ್ಕಾಗಿ ಭೀಮ ಧರ್ಮಾತ್ಮನಾದ ಯುಧಿಷ್ಠಿರನ ಮಾತನ್ನು ಮೀರಲಿಲ್ಲ.
ಅಥ ದುರ್ಯೋಧನಃ ಪಾಪೋ ಭೀಮಸೇನಸ್ಯ ಪಶ್ಯತಃ |
ಊರುಂ ಸಂದರ್ಶಯಾಮಾಸ ಕೃಷ್ಣಾಯೈಃ ಭೀಮ ಆಹ ತಂ ॥353॥
ತವೋರುಮೇನಂ ಗದಯೋರುವೇಗಯಾ
ಬಿಭೇತ್ಸ್ಯ ಇತ್ಯೇವ ಪುನಃ ಸುಯೋಧನಃ |
ಊಚೇ ನಾನ್ಯದ್ ಭವತಾಮಸ್ತಿ ವಿತ್ತಂ
ದ್ಯೂತೇ ಕೃಷ್ಣಂ ಸ್ವಾಪಯಧ್ವಂ ಪಣಾಯ ॥354॥
ಬಳಿಕ ಪಾಪಿ ದುರ್ಯೋಧನ ಭೀಮಸೇನ ನೋಡುತ್ತಿದ್ದಂತೆಯೆ ದ್ರೌಪದಿಗೆ ತನ್ನ ತೊಡೆಯನ್ನು ತೋರಿದ. ಭೀಮ ಹೇಳಿದ, `ನಿನ್ನ ಈ ತೊಡೆಯನ್ನು ಬಲು ವೇಗದ ನನ್ನ ಗದೆಯಿಂದ ಕುಟ್ಟಿ ಪುಡಿ ಮಾಡುತ್ತೇನೆ. ನಿಶ್ಚಯ'. ದುರ್ಯೋಧನನೆಂದ `ನಿಮಗೆ ಜೂಜಿನಲ್ಲಿ ಪಣವಾಗಿಡಲು ಇನ್ನು ಬೇರೆ ಸಂಪತ್ತು ಏನೂ ಇಲ್ಲ. ಕೃಷ್ಣನನ್ನು ಪಣವಾಗಿಟ್ಟು ಆಡಿರಿ'.
ಅಥಾಬ್ರುವೀದ್ ವೃಕೋದರಃ ಕೃತೇಽವಮಾನನೇ ಹರೇಃ |
ನಿಪಾತ್ಯ ಭೂತಳೇ ಹಿ ತೇ ಶಿರೋ ಮೃದಿಷ್ಯ ಇತ್ಯಲಂ ॥355॥
ಹೀಗೆ ದುರ್ಯೋಧನ ಶ್ರೀಕೃಷ್ಣನಿಗೆ ಅವಮಾನ ಮಾಡಿದಾಗ ಭೀಮನೆಂದ, `ನಿನ್ನನ್ನು ನೆಲದ ಮೇಲೆ ಕೆಡವಿ ತಲೆಯನ್ನು ಚೆನ್ನಾಗಿ ತುಳಿಯುವೆನು'.
ಸ ವಧ್ಯ ಏವ ಮೇ ಸದಾ ಪರೋಕ್ಷತೋಽಪಿ ಯೋ ಹರಿಂ |
ವಿನಿಂದಯೇದಿತಿ ಧ್ರುವಂ ಪ್ರತಿಶ್ರುತಂ ಹಿ ಮಾರುತೇಃ ॥356॥
ಪರೋಕ್ಷದಲ್ಲಿಯಾದರೂ ಸರಿಯೆ, ಯಾರು ಹರಿಯನ್ನು ನಿಂದಿಸುವನೋ ಅವನು ಸದಾ ನನಗೆ ವಧಾರ್ಹನೇ ಆಗುತ್ತಾನೆ ಎಂಬುದು ಭೀಮನ ದೃಢಪ್ರತಿಜ್ಞೆ.
ಪುನಶ್ಚ ಪಾಪವೃದ್ಧಯೇ ತದೈವ ನೋ ಜಘಾನ ತಂ |
ವಿಕರ್ತನಾತ್ಮಜಃ ಪುನರ್ಜಗಾದ ಸೋಮಕಾತ್ಮಜಾಂ ॥357॥
ಪ್ರಯಾಹಿ ಭೂಭೃತೋ ಹಿ ನೋ ಗೃಹಂ ನ ಸಂತಿ ಪಾಂಡವಾಃ |
ಇತೀರಿತೇ ಸಮುತ್ಥಿತೋ ವೃಕೋದರೋಽನು ಚಾರ್ಜುನಃ |
ಉಭೌ ಚ ತೌ ಯುಧಿಷ್ಠಿರೋ ನ್ಯವಾರಯತ್ ತಥಾಪರೇ ॥358॥
ಇನ್ನಷ್ಟು ಪಾಪ ವೃದ್ಧಿಯಾಗಲಿ ಎಂದು ಭೀಮ ಆಗಲೆ ದುರ್ಯೋಧನನನ್ನು ಕೊಲ್ಲದೆ ಬಿಟ್ಟ. ಕರ್ಣ ಪುನಃ ದ್ರೌಪದಿಗೆ ಹೇಳಿದ `ನಿನಗೆ ಇನ್ನು ಈ ಪಾಂಡವರಿಲ್ಲ. ನೀನು ಇನ್ನು ನಮ್ಮ ರಾಜನಾದ ದುರ್ಯೋಧನನ ಮನೆಗೇ ಹೋಗು'. ಕರ್ಣ ಹೀಗೆ ಹೇಳಿದಾಗ ಭೀಮ ಎದ್ದ. ಅರ್ಜುನನೂ ಎದ್ದ. ಆಗ ಅವರನ್ನು ಯುಧಿಷ್ಠಿರನೂ ಇನ್ನಿತರರೂ ತಡೆದರು.
ತತೋ ನಿಷಣ್ಣಯೋಸ್ತಯೋಃ ಸುಯೋಧನೋ ವಚೋಽಬ್ರವಿತ್ |
ದುಶ್ಶಾಸನೈಷಾಂ ವಾಸಾಂಸಿ ದಾಸಾನಾಂ ನೋ ವ್ಯಪಾಕುರು ॥359॥
ಇತ್ಯುಕ್ತೋಽಭ್ಯಗಮತ್ ಪಾರ್ಥಾನ್ ಸ್ವವಾಸಾಂಸ್ಯಥ ತೇ ದದುಃ |
ತೇ ಚರ್ಮವಸನಾ ಭೂತ್ವಾ ತಾನಶಿಷ್ಟಾನ್ಪ್ರಕಾಶ್ಯ ಚ |
ನಿಷೇದುಶ್ಚ ಕ್ಷಮಾಯಾಂ ತೇ ಕ್ಷಮಾಮಾಲಂಬ್ಯ ವಿಸ್ತೃತಾಂ ॥360॥

ಭೀಮಾರ್ಜುನರು ಕುಳಿತ ಮೇಲೆ ದುರ್ಯೋಧನನೆಂದ `ದುಃಶಾಸನ, ಇವರು ನಮ್ಮ ದಾಸರು. ಅವರ ಉಟ್ಟ ಬಟ್ಟೆಗಳನ್ನು ತೆಗೆ'. ಹೀಗೆ ಹೇಳಿದಾಗ ದುಃಶಾಸನ ಪಾಂಡವರ ಬಳಿಗೆ ನಡೆದ. ಪಾಂಡವರು ಅತ್ಯಂತ ತಾಳ್ಮೆ ವಹಿಸಿ ತಮ್ಮ ಬಟ್ಟೆಗಳನ್ನು ಬಿಚ್ಚಿಕೊಟ್ಟರು. ಕೃಷ್ಣಾಜಿನವನ್ನು ಉಟ್ಟು ಕೌರವರನ್ನು ಅಸಭ್ಯರೆಂದು ತೋರಿಸುತ್ತ ನೆಲದ ಮೇಲೆ ಕುಳಿತರು.

ಪುನರ್ದುರ್ಯೋಧನೇನೋಕ್ತಃ ಪಾರ್ಥಾನಾಮಥ ಪಶ್ಯತಾಮ್ |
ಚಕರ್ಷ ವಾಸೋ ದ್ರೌಪದ್ಯಾಸ್ತದಾವಾದೀದ್ ವೃಕೋದರಃ ॥361॥

ಪುನಃ ದುರ್ಯೋಧನನ ಮಾತಿನಂತೆ ದುಃಶಾಸನ ಪಾಂಡವರು ನೋಡುತ್ತಿದ್ದಂತೆಯೆ ದ್ರೌಪದಿಯ ಸೀರೆಯನ್ನು ಸೆಳೆದ. ಆಗ ಭೀಮ ನುಡಿದ.

ಪಾಪೇಷು ಪೂರ್ವಸ್ಯ ತಥಾಽಧಮಸ್ಯ
ವಂಶೇ ಕುರೂಣಾಮುರುಧರ್ಮಶೀಲಿನಾಮ್ |
ದುಶ್ಶಾಸನಸ್ಯಾಸ್ಯ ವಿದಾರ್ಯ ವಕ್ಷಃ
ಪಿಬಾಮಿ ರಕ್ತಂ ಜಗತಃ ಸಮಕ್ಷಂ ॥362॥

`ಪಾಪಿಗಳಲ್ಲಿ ಶ್ರೇಷ್ಠ ಮತ್ತು ಮಹಾಧರ್ಮಶೀಲರಾದ ಕುರುಗಳ ವಂಶದಲ್ಲಿ ನೀಚನಾದ ಈ ದುಃಶಾಸನನ ಎದೆಯನ್ನು ಬಗಿದು ಲೋಕದ ಸಮಕ್ಷಮದಲ್ಲಿ ರಕ್ತಪಾನ ಮಾಡುವೆನು'.

ವಿಕೃಷ್ಯಮಾಣೇ ವಸನೇ ತು ಕೃಷ್ಣಾ
ಸಸ್ಮಾರ ಕೃಷ್ಣಂ ಸುವಿಶೇಷತೋಽಪಿ |
ತದಾನ್ಯದಾಸೀದ್ ವಸನಂ ಚ ತಸ್ಯಾ
ದಿವ್ಯಂ ಸುಸೂಕ್ಷ್ಮಂ ಕನಕಾವದಾತಂ ॥363॥

ದುಃಶಾಸನ ಸೀರೆಯನ್ನು ಸೆಳೆಯುವಾಗ ಸದಾ ಕೃಷ್ಣಸ್ಮರಣೆ ಮಾಡುವ ದ್ರೌಪದಿ ಇನ್ನೂ ವಿಶೇಷವಾಗಿ ಶ್ರೀಕೃಷ್ಣನನ್ನು ನೆನೆದಳು. ಆಗ ಅವಳಿಗೆ ಬಂಗಾರದಂತೆ ಶುಭ್ರವಾದ ಬಲು ತೆಳ್ಳಗಿನ ಇನ್ನೂ ಉತ್ತಮವಾದ ಬೇರೆ ಸೀರೆ ಪ್ರಾದುರ್ಭವಿಸಿತು.

ಪುನಃ ಪುನಶ್ಚೈವ ವಿಕರ್ಷಮಾಣೇ
ದುಶ್ಶಾಸನೇಽನ್ಯಾನಿ ಚ ತಾದೃಶಾನಿ |
ಬಭೂವುರಂತಂ ನ ಜಗಾಮ ಪಾಪಃ
ಶ್ರಾಂತೋ ನ್ಯಷೀದತ್ ಸ್ವಿನ್ನಗಾತ್ರಃ ಸಭಾಯಾಂ ॥364॥

ಪುನಃ ಪುನಃ ದುಃಶಾಸನ ಸೀರೆ ಎಳೆಯುತ್ತಿದ್ದಂತೆ ಅದೇ ರೀತಿಯ ಬೇರೆ ಸೀರೆಗಳು ಪ್ರಾದುರ್ಭವಿಸಿದವು. ಪಾಪಿಯಾದ ಆತ ನೋಡಿದರೆ ಸೀರಿಗಳಿಗೆ ಕೊನೆಯ ಇರಲಿಲ್ಲ. ಸೋತು ಮೈ ಬೆವೆತುಕೊಂಡು ನೆಲದ ಮೇಲೆ ಕುಸಿತು ಕುಳಿತ.

ವಸೊತ್ರೇಚ್ಚಯೇ ಶೈಲನಿಭೇ ಪ್ರಜಾತೇ
ದುರ್ಯೋಧನಃ ಪ್ರಾಹ ಸಂಜಾತಕೋಪಃ |
ಪ್ರವೇಶಯೇಮಾಂ ಗೃಹಮೇವ ಶೀಘ್ರಂ
ಕಿಂ ನಶ್ಚಿರೇಣೇತಿ ಸುಮಂದಬುದ್ಧಿಃ ॥365॥

ಸೀರೆಗಳ ರಾಶಿ ಬೆಟ್ಟದಂತಾಗಲು ಮಹಾಮಂದ ಬುದ್ಧಿಯವನಾದ ದುರ್ಯೋಧನ ಕೋಪಗೊಂಡು ನುಡಿದ, `ದುಃಶಾಸನ, ಇನ್ನೇಕೆ ವಿಲಂಬ? ಇವಳನ್ನು ಬೇಗನೆ ಮನೆಯೊಳಕ್ಕೆ ಒಯ್ಯು!'

* * * *

ಎಂಭತ್ತೆಂಟನೆಯ ಅಧ್ಯಾಯ

(ಯುಧಿಷ್ಠಿರನ ಮೇಲೆ ಭೀಮನ ಕೋಪ, ವಿಕರ್ಣನ ವಚನ, ದುಶ್ಶಾಸನನಿಂದ ದ್ರೌಪದಿಯ ವಸಾತ್ರಪಹರಣದ ಕ್ರಿಯೆ, ಕೃಷ್ಣನಿಂದ ರಕ್ಷಣೆ, ವಿದುರ ವಚನ.)

ಭೀಮಸೇನಃ

ಭವಂತಿ ವೇಶ್ಯಾ ವರ್ಧಕ್ಯಃ ಕಿತವಾನಾಂ ಯುಧಿಷ್ಠಿರ |
ನ ತಾಭಿರಪಿ ದೀವ್ಯಂತಿ ದಯಾ ನೈವಾಸ್ತಿ ತೇ ವಿಭೋ ॥1॥

ಯುಧಿಷ್ಠರನೇ! ತನ್ನ ಮನೆಯಲ್ಲಿಯೇ ಇದ್ದು ಭೋಗ್ಯರಾದ ದಾಸಿಯರು ಮತ್ತು ತಮ್ಮ ದೇಹವನ್ನು ಮಾರಿ ಸ್ವಾಮಿಗೆ ಧನವನ್ನು ತಂದುಕೊಡುವ ವರ್ಧಕಿಯರು ದ್ಯೂತವನ್ನು ಆಡುವವರಿಗೂ ಇರುತ್ತಾರೆ. ಆದರೆ ಯಾರೂ ಅವರನ್ನೂ ಪಣವಾಗಿ ಇಡುವುದಿಲ್ಲ. ವಿಭುವೇ! ನಿನಗೆ ದಯಯೇ ಇಲ್ಲ.

ಕಾಶ್ಯೋ ಯದ್ಧನಮಾಹಾರ್ಷೀದ್ ದ್ರವ್ಯಂ ಯಚ್ಚಾನ್ಯದುತ್ತಮಮ್ |
ತಥಾಽನ್ಯೇ ಪೃಥಿವೀಪಾಲಾ ಯಾನಿ ರತ್ನಾನ್ಯುಪಾಹರನ್ ॥2॥
ವಾಹನಾನಿ ಧನಂ ಚೈವ ಕವಚಾನ್ಯಾಯುಧಾನಿ ಚ |
ರಾಜ್ಯಮಾತ್ಮಾ ವಯಂ ಚೈವ ಕೈತವೇನ ಹೃತಾಃ ಪರೈಃ ॥3॥
ನ ಚ ಮೇ ತತ್ರ ಕೋಪೋಽಭೂತ್ ಸರ್ವಸ್ಯೇಶೋ ಹಿ ನೋ ಭವಾನ್ |
ಇದಂ ತ್ವತಿಕೃತಂ ಮನ್ಯೇ ದ್ರೌಪದೀ ಯತ್ರ ಪಣ್ಯತೇ ॥4॥

ಕಾಶಿರಾಜನು ಯಜ್ಞಕ್ಕಾಗಿ ಯಾವ ಶ್ರೇಷ್ಠವಾದ ಧನವನ್ನು ತಂದು ಕೊಟ್ಟನೋ ಹಾಗೆಯೇ ಉಳಿದ ರಾಜರೂ ಸಹ ಯಾವ ರತ್ನಗಳನ್ನೂ ವಾಹನಗಳನ್ನೂ ಧನವನ್ನೂ ಕವಚಗಳನ್ನೂ ಮತ್ತು ಆಯುಧಗಳನ್ನು ತಂದುಕೊಟ್ಟರೋ ಅವೆಲ್ಲವೂ ರಾಜ್ಯವೂ ನೀನೂ ಮತ್ತು ನಾವೂ ಸಹ ಮೋಸದಿಂದ ಶತ್ರುಗಳಿಂದ ಅಪಹರಿಸಿಲ್ಪಟ್ಟಿದ್ದೇವೆ. ನನಗೆ ಅದಾವುದರಿಂದಲೂ ಕೋಪವುಂಟಾಗಲಿಲ್ಲ.

ಏಕೆಂದರೆ ನಮಗೆಲ್ಲರಿಗೂ ನೀನು ಪ್ರಭುವಾದವನು. ಆದರೆ ದ್ರೌಪದಿಯನ್ನು ಪಣಕ್ಕಿಟ್ಟುದುದು ಮಾತ್ರ ಎಲ್ಲಾ ಧರ್ಮದ ಎಲ್ಲೆಯನ್ನು ಮೀರಿದ ನಿನ್ನ ಕಾರ್ಯ.
ಏಷಾ ಹ್ಯನರ್ಹತೀ ಬಾಲಾ ಪಾಂಡವಾನ್ ಪ್ರಾಪ್ಯ ಕೌರವೈಃ |
ತ್ವತ್ಕೃತೇ ಕ್ಲಿಶ್ಯತೇ ಕ್ಷುದ್ರೈರ್ನೃಶಂಸೈರ್ನಿಕೃತಿಪ್ರಿಯೈಃ ॥5॥
ಅಂತಹ ಅವಮಾನಕ್ಕೆ ಯೋಗ್ಯಳಲ್ಲದ ಈ ಬಾಲೆಯು ಪಾಂಡವರನ್ನು ಹೊಂದಿ ನಿನ್ನ ಕಾರಣದಿಂದ ಕ್ಷುದ್ರರೂ ಕ್ರೂರರೂ ಕಪಟಪ್ರಿಯರೂ ಆದ ಕೌರವರಿಂದ ಕ್ಲೇಶವನ್ನು ಅನುಭವಿಸುತ್ತಿದ್ದಾಳೆ.
ಅಸ್ಯಾಃ ಕೃತೇ ಮನ್ಯುರಯಂ ತ್ವಯಿ ರಾಜನ್ ನಿಪಾತ್ಯತೇ |
ಬಾಹೂ ತೇ ಸಂಪ್ರಧಕ್ಷ್ಯಾಮಿ ಸಹದೇವಾಗ್ನಿಮಾನಯ ॥6॥
ಎಲೈ ರಾಜನೇ! ಇವಳ ಸಲುವಾಗಿ ನನ್ನ ಕೋಪವನ್ನು ನಿನ್ನ ಮೇಲೆ ಕೇಂದ್ರಿಕರಿಸುತ್ತಿದ್ದೇನೆ. ನಿನ್ನ ಎರಡು ಬಾಹುಗಳನ್ನು ಸುಡುವೆನು. ಸಹದೇವನೇ! ಅಗ್ನಿಯನ್ನು ತೆಗೆದುಕೊಂಡು ಬಾ.
ಅರ್ಜುನಃ
ಪುರಾ ನ ಭೀಮಸೇನ ತ್ವಮೀದೃಶೀರ್ವದಸೇ ಗಿರಃ |
ಪರೈಸ್ತೇ ನಾಶಿತಂ ನೂನಂ ನೃಶಂಸೈರ್ಧರ್ಮಗೌರವಮ್ ॥7॥
ಭೀಮಸೇನನೇ! ನೀನು ಹಿಂದೆ ಇಂತಹ ಮಾತುಗಳನ್ನು ಆಡುತ್ತಿರಲಿಲ್ಲ. ಕ್ರೂರರಾದ ಶತ್ರುಗಳಿಂದ ನಿನ್ನ ಧರ್ಮಬುದ್ಧಿಯು ಖಂಡಿತವಾಗಿ ಹಾಳಾಗಿದೆ.
ನ ಸಕಾಮಾಃ ಪರೇ ಕಾರ್ಯಾ ಧರ್ಮಮೇವಾಚರೋತ್ತಮಮ್ |
ಭ್ರಾತರಂ ಧಾರ್ಮಿಕಂ ಜ್ಯೇಷ್ಠಂ ನಾತಿಕ್ರಮಿತುಮರ್ಹಸಿ ॥8॥
ಶತ್ರುಗಳ ಆಸೆಯನ್ನು ನಾವು ಪೂರ್ಣಗೊಳಿಸಬಾರದು. ಶ್ರೇಷ್ಠವಾದ ಧರ್ಮವನ್ನೇ ಆಚರಿಸು. ಧಾರ್ಮಿಕನಾದ ಅಣ್ಣನನ್ನು ನೀನು ಅತಿಕ್ರಮಿಸಬಾರದು.
ಆಹೂತೋಪಿ ಪರೈ ರಾಜಾ ಕ್ಷಾತ್ರಂ ಧರ್ಮಮನುಸ್ಮರನ್ |
ದೀವ್ಯತೇ ಪರಕಾಮೇನ ತನ್ನಃ ಕೀರ್ತಿಕರಂ ಮಹತ್ ॥9॥
ಪರರಿಂದ ಆಹ್ವಾನವನ್ನು ಪಡೆದ ರಾಜನು ಕ್ಷತ್ರಿಯ ಮರ್ಯಾದೆಯನ್ನು ಅನುಸರಿಸಿ ಇನ್ನೊಬ್ಬರ ಇಚ್ಛೆಯಂತೆ ಆಡಿಸಲ್ಪಟ್ಟಿದ್ದಾನೆ. ಇದು ನಮಗೆ ದೊಡ್ಡ ಕೀರ್ತಿಯನ್ನೇ ತರುವಂತಹದು.
ಭೀಮಸೇನಃ
ಏವಮಸ್ಮಿನ್ ಕೃತೇ ವಿದ್ಯಾಂ ಯದಿ ಸ್ಯಾಹ ಧನಂಜಯ |
ದೀಪ್ತೋಽಗ್ನೌ ಸಹಿತೌ ಬಾಹೂ ಪ್ರಕ್ಷಿಪೇಯಂ ಬಲಾದಿವ ॥10॥
ಧನಂಜಯನೇ! ಧರ್ಮರಾಯನ ಈ ಬುದ್ಧಿಯನ್ನು ಧರ್ಮಬುದ್ಧಿಯೆಂದು ನೀನು ತಿಳಿಯುವುದಾದರೆ ದೀಪ್ತವಾದ ಅಗ್ನಿಯಲ್ಲಿ ಅವನ ಬಾಹುಗಳ ಜೊತೆಯಲ್ಲಿ ನಿನ್ನ ಬಾಹುಗಳನ್ನೂ ನನ್ನ ಸಾಮರ್ಥ್ಯದಿಂದ ಹಾಕುವೆನು.(ಸುಡುವೆನು)
ವೈಶಂಪಾಯನಃ
ತಥಾ ತಾನ್ ದುಃಖಿತಾನ್ ದೃಷ್ಟ್ವಾ ಪಾಂಡವಾನ್ ಧೃತರಾಷ್ಟ್ರಜಃ |
ಕ್ಲಿಶ್ಯಮಾನಾಂ ಚ ಪಾಂಚಾಲೀಂ ವಿಕರ್ಣ ಇದಮಬ್ರವೀತ್ ॥11॥
ಹಾಗೆ ಪಾಂಡವರು ದುಃಖಿತರಾಗಿರುವುದನ್ನು ನೋಡಿ ಮತ್ತು ದ್ರೌಪದಿಯು ಕ್ಲೇಶಪಡುತ್ತಿರುವುದನ್ನು ನೋಡಿ ಧೃತರಾಷ್ಟ್ರಪುತ್ರನಾದ ವಿಕರ್ಣನು ಹೀಗೆ ಮಾತನಾಡಿದನು.
ಯಾಜ್ಞಸೇನ್ಯಾ ಯದುಕ್ತಂ ತದ್ ವಾಕ್ಯಂ ವಿಬ್ರೂತ ಪಾರ್ಥಿವಾಃ |
ಅವಿವೇಕೇನ ವಾಕ್ಯಸ್ಯ ನರಕಃ ಸತ್ಯಮೇವ ನಃ ॥12॥
ಎಲೈ ರಾಜರೇ! ಯಾಜ್ಞಸೇನಿಯಾದ ದ್ರೌಪದಿಯು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿ. ಆ ಪ್ರಶ್ನೆವಾಕ್ಯವನ್ನು ನಾವು ವಿವೇಚನೆ ಮಾಡದಿದ್ದರೆ. ನಮಗೆಲ್ಲರಿಗೂ ಖಂಡಿತವಾಗಿ ನರಕವೇ ಆಗುವುದು.
ಭೀಷ್ಮಶ್ಚ ಧೃತರಾಷ್ಟ್ರಶ್ಚ ಕುರುವೃದ್ಧತಮಾವುಭೌ |
ಸಮೇತ್ಯ ನಾಹತುಃ ಕಿಂಚಿದ್ ವಿದುರಶ್ಚ ಮಹಾಮತಿಃ ॥13॥
ಭೀಷ್ಮ ಮತ್ತು ಧೃತರಾಷ್ಟ್ರ ಇವರಿಬ್ಬರೂ ಕುರುವಂಶದಲ್ಲಿ ಅತ್ಯಂತ ವೃದ್ಧರಾದವರು. ಅವರಿಬ್ಬರೂ ಒಟ್ಟಾಗಿ ಅಥವಾ ಮಹಾಮತಿಯಾದ ವಿದುರನೂ ಸಹ ಏನನ್ನೂ ಮಾತನಾಡಲಿಲ್ಲ.
ಭಾರದ್ವಾಜೋಽಪಿ ಸರ್ವೇಷಾಮಾಚಾರ್ಯಃ ಕೃಪ ಏವ ಚ |
ಯತ ಏತಾವಪಿ ಪ್ರಶ್ನಂ ನಾಹತುರ್ದ್ವಿಜಸತ್ತಮೌ ॥14॥
ದ್ರೋಣರು ಮತ್ತು ಕೃಪರೂ ಸಹ ಎಲ್ಲರಿಗೂ ಆಚಾರ್ಯರಾದವರು. ದ್ವಿಜ ಶ್ರೇಷ್ಠರಾದ ಅವರಿಬ್ಬರೂ ಸಹ ಪ್ರಶ್ನೆಗೆ ಏನೂ ಉತ್ತರವನ್ನು ಹೇಳಲಿಲ್ಲ.
ಯೇ ತ್ವನ್ಯೇ ಪೃಥಿವೀಪಾಲಾಃ ಸಮೇತಾಃ ಸರ್ವತೋದಿಶಮ್ |
ಕಾಮಕ್ರೋಧೌ ವಿಹಾಯೈವ ತೇ ಬ್ರುವಂತು ಯಥಾಮತಿ ॥15॥
ಆದ್ದರಿಂದ ಎಲ್ಲ ದಿಕ್ಕುಗಳಿಂದ ಬಂದು ಇಲ್ಲಿ ಒಟ್ಟಿಗೆ ಸೇರಿರುವ ಎಲ್ಲರಾಜರೂ ಕಾಮ ಕ್ರೋಧಗಳನ್ನು ಬಿಟ್ಟು ತಮಗೆ ತಿಳಿದಂತೆ ಉತ್ತರವನ್ನು ಹೇಳಲಿ.
ಯದೇತದ್ ದ್ರೌಪದೀ ವಾಕ್ಯಮುಕ್ತವತ್ಯಸಕೃಚ್ಛುಭಮ್ |

ವಿಮೃಶ್ಯ ಕಸ್ಯ ಕಃ ಪಕ್ಷಃ ಪಾರ್ಥಿವಾ ವದತೋತ್ತರಮ್ ॥16॥
ದ್ರೌಪದಿಯು ಮತ್ತೆ ಮತ್ತೆ ಶುಭವಾದ ಯಾವ ವಾಕ್ಯವನ್ನು ಹೇಳಿದ್ದಾಳೆಯೋ ಅದನ್ನು ವಿಮರ್ಶೆಮಾಡಿ ಎಲೈ ರಾಜರೇ! ಯಾರದ್ದು ಯಾವ ಪಕ್ಷವೆಂದು ಉತ್ತರವನ್ನು ಹೇಳಿ.
ಏವಂ ಸ ಬಹುಶಃ ಸರ್ವಾನ್ ಉಕ್ತವಾಂಸ್ತಾನ್ ಸಭಾಸದಃ |
ನ ಚ ತೇ ಪೃಥಿವೀಪಾಲಾಸ್ತಮೂಚುಃ ಸಾಧ್ವಸಾಧು ವಾ ॥17॥
ಹೀಗೆ ವಿಕರ್ಣನು ಆ ಎಲ್ಲಾ ಸಭಾಸದರನ್ನು ಕುರಿತು ಅನೇಕಬಾರಿ ಹೇಳಿದರೂ ಸಹ ಆ ರಾಜರು ಶುಭವನ್ನಾಗಲೀ ಅಶುಭವನ್ನಾಗಲೀ ಏನನ್ನೂ ಮಾತನಾಡಲಿಲ್ಲ.
ಉಕತ್ತ್ವಽಸಕೃತ್ ತಥಾ ಸರ್ವಾನ್ ವಿಕರ್ಣಃ ಪೃಥಿವೀಪತೀನ್ |
ಪಾಣಿಂ ಪಾಣೌ ವಿನಿಷ್ಪಿಷ್ಯ ನಿಶ್ಶ್ವಸನ್ನಿದಮಬ್ರವೀತ್ ॥18॥
ವಿಕರ್ಣನು ಆ ರಾಜರುಗಳನ್ನು ಉದ್ದೇಶಿಸಿ ಅನೇಕ ಬಾರಿ ಹೀಗೆ ಮಾತನಾಡಿ ಕೈಯಿಂದ ಕೈಯನ್ನು ಹೊಸಕುತ್ತಾ ನಿಟ್ಟುಸಿರನ್ನು ಬಿಡುತ್ತಾ ಹೀಗೆ ಮಾತನಾಡಿದನು.
ವಿಬ್ರೂತ ಪೃಥಿವೀಪಾಲಾ ವಾಕ್ಯಂ ಮಾ ವಾ ಕಥಂಚನ |
ಮನ್ಯೇ ನ್ಯಾಯ್ಯಂ ಯದತ್ರಾಹಂ ತದ್ಧಿ ವಕ್ಷ್ಯಾಮಿ ಕೌರವಾಃ ॥19॥
ಎಲೈ ರಾಜರೇ! ದ್ರೌಪದಿಯ ವಾಕ್ಯಕ್ಕೆ ನೀವು ಉತ್ತರವನ್ನು ಹೇಳಿ ಅಥವಾ ಬಿಡಿ. ಎಲೈ ಕೌರವರೇ! ಈ ವಿಷಯದಲ್ಲಿ ನಾನು ಯಾವುದನ್ನು ನ್ಯಾಯವೆಂದು ತಿಳಿದಿದ್ದೀನೋ ಅದನ್ನು ಹೇಳುವೆನು.
ಚತ್ವಾರ್ಯಾಹುರ್ಮುನಿಶ್ರೇಷ್ಠಾ ವ್ಯಸನಾನಿ ಮಹೀಕ್ಷಿತಾಮ್ |
ಮೃಗಯಾಂ ಪಾನಮಕ್ಷಾಂಶ್ಚ ಸ್ತ್ರೀಷು ಚೈವಾತಿಸಕ್ತತಾಮ್ ॥20॥
ಎಲೈ ಮುನಿಶ್ರೇಷ್ಠರೇ! ಬೇಟೆ ಪಾನ ದ್ಯೂತ ಮತ್ತು ಅತಿಯಾದ ಸ್ತ್ರೀಸಕ್ತಿ. ಈ ನಾಲ್ಕನ್ನು ರಾಜರ ವ್ಯಸನ ಸ್ಥಾನಗಳೆಂದು ಹೇಳುತ್ತಾರೆ.
ಏತೇಷು ಚ ನರಃ ಸಕ್ತೋ ಧರ್ಮಮುತ್ಸೃಜ್ಯ ವರ್ತತೇ |
ತಥಾಯುಕ್ತೇನ ಚ ಕೃತಾಂ ಕ್ರಿಯಾಂ ಲೋಕೋ ನ ಪಶ್ಯತಿ ॥21॥
ಈ ನಾಲ್ಕರಲ್ಲಿ ವಿಶೇಷವಾಗಿ ಸಕ್ತನಾದವನು ಧರ್ಮವನ್ನು ಮೀರಿ ನಡೆಯುತ್ತಾನೆ. ಧರ್ಮವನ್ನು ಮೀರಿ ನಡೆದ ಆ ವ್ಯಕ್ತಿಯ ಕ್ರಿಯೆಯನ್ನು ಲೋಕವು ಪರಿಗಣಿಸುವುದಿಲ್ಲ.
ತಥೇಯಂ ಪಾಂಡುಪುತ್ರೇಣ ವ್ಯಸನೇ ವರ್ತತಾ ಭೃಶಮ್ |
ಸಮಾಹೂತೇನ ಕಿತವೈರಾಹಿತಾ ದ್ರೌಪದೀ ಪಣಃ ॥22॥
ಹಾಗೆಯೇ ವ್ಯಸನಕ್ಕೆ ಬಲಿಯಾದ ಈ ಧರ್ಮರಾಜನು ಕಿತವರು ಆಹ್ವಾನಮಾಡಿದ ಕಾರಣದಿಂದ ದ್ರೌಪದಿಯನ್ನು ಪಣಕ್ಕೆ ಒಡ್ಡಿದನು.
ಸಾಧಾರಣೀ ಚ ಸರ್ವೇಷಾಂ ಪಾಂಡವಾನಾಮನಿಂದಿತಾ |
ಜಿತೇನ ಪೂರ್ವಂ ಚಾನೇನ ಪಾಂಡವೇನ ಪಣೀಕೃತಾ ॥23॥
ಅನಿಂದಿತಳಾದ ಈ ದ್ರೌಪದಿಯು ಎಲ್ಲಾ ಪಾಂಡವರಿಗೆ ಸಮಾನವಾಗಿ ಸೇರಿದವಳು. ತಾನು ಮೊದಲು ತನ್ನನ್ನು ಸೋತ ಯುಧಿಷ್ಠಿರನು ಅವಳನ್ನು ಅನಂತರ ಪಣವಾಗಿ ಇಟ್ಟನು.
ಇಯಂ ಚ ಕೀರ್ತಿತಾ ಕೃಷ್ಣಾ ಸೌಬಲೇನ ಪಣಾರ್ಥಿನಾ |
ಏತತ್ ಸರ್ವಂ ವಿಚಾರ್ಯಾಹಂ ಮನ್ಯೇ ನ ವಿಜಿತಾಮಿಮಾಮ್ ॥
ಪಣವನ್ನು ಬಯಸಿದ ಶಕುನಿಯು ದ್ರೌಪದಿಯ ಹೆಸರನ್ನು ಸೂಚಿಸಿದನು. (ಧರ್ಮರಾಜನು ತಾನಾಗಿಯೇ ಎಡವಿದ) ಈ ಎಲ್ಲಾ ಅಂಶಗಳನ್ನು ವಿಮರ್ಶೆಮಾಡಿ ನಾನು ದ್ರೌಪದಿಯು ಅಜಿತಳೆಂದು ತಿಳಿಯುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ಮಹಾನ್ ನಾದಃ ಸಭ್ಯಾನಾಮುದತಿಷ್ಠತ |
ವಿಕರ್ಣಂ ಶಂಸಮಾನಾನಾಂ ಸೌಬಲಂ ಚ ವಿನಿಂದತಾಮ್ ॥25॥
ಇದನ್ನು ಕೇಳಿ ಸಭ್ಯರಲ್ಲಿ ವಿಕರ್ಣನನ್ನು ಪ್ರಸಂಶಿಸಿಸುವ ಮತ್ತು ಶಕುನಿಯನ್ನು ನಿಂದಿಸುವ ಮಹಾನಾದವು ಉದ್ಭವಿಸಿತು.
ತಸ್ಮಿನ್ನುಪರತೇ ಶಬ್ದೇ ರಾಧೇಯಃ ಕ್ರೋಧಮೂರ್ಚ್ಛಿತಃ |
ಪ್ರಗೃಹ್ಯ ರುಚಿರಂ ಬಾಹುಮಿದಂ ವಚನಮಬ್ರವೀತ್ ॥26॥
ಆ ಶಬ್ದವು ಅಡಗುತ್ತಿರಲು ಕ್ರೋಧಾವಿಷ್ಟನಾದ ಕರ್ಣನು ತನ್ನ ಸುಂದರವಾದ ಬಾಹುವನ್ನು ಮೇಲಕ್ಕೆತ್ತಿ ಈ ಮಾತನ್ನು ಆಡಿದನು.
ಕರ್ಣಃ
ದೃಶ್ಯಂತೇ ವೈ ವಿಕರ್ಣೇ ಹಿ ವೈಕೃತಾನಿ ಬಹೂನ್ಯಪಿ |
ತಜ್ಜಾತಸ್ತದ್ವಿನಾಶಾಯ ಯಥಾಽಗ್ನಿರರಣೀಪ್ರಜಃ ॥27॥
ವಿಕರ್ಣನಲ್ಲಿ ಅನೇಕ ವಿಕಾರಗಳು ಕಂಡು ಬರುತ್ತವೆ. ಇವನು ಅರಣಿಯಿಂದ ಹುಟ್ಟಿದ ಅಗ್ನಿಯು ಅರಣಿಯನ್ನೇ ನಾಶಮಾಡುವಂತೆ ಎಲ್ಲಿ ಜನಿಸಿದ್ದಾನೆಯೋ ಆ ಕುಲವನ್ನೇ ನಾಶಮಾಡಲು ಹೊರಟಿದ್ದಾನೆ.
ವ್ಯಾಧಿರ್ಬಲಂ ನಾಶಯತೇ ಶರೀರಸ್ಥೋಽಪಿ ಸಂಭೃತಃ |
ತೃಣಾನಿ ಪಶವೋ ಘ್ನಂತಿ ಸ್ವಪಕ್ಷಂ ಚೈವ ಕೌರವಃ ॥28॥
ವ್ಯಾಧಿಯು ಶರೀರವನ್ನೇ ಆಶ್ರಯಿಸಿಕೊಂಡಿದ್ದರೂ ವ್ಯಾಧಿಯು ಬೆಳೆಯುತ್ತಾ ಶರೀರವನ್ನೇ ನಾಶಮಾಡುತ್ತದೆ. ತೃಣವನ್ನು ಉಪಜೀವಿಸಕೊಂಡು ಇರುವ ಪಶುಗಳು ತೃಣಗಳನ್ನೇ ನಾಶಮಾಡುತ್ತವೆ. ಹಾಗೆ ಕೌರವನಾದ ಈ ವಿಕರ್ಣನೂ ಸಹ ತನ್ನ ಪಕ್ಷವನ್ನೇ ನಾಶಮಾಡುತ್ತಿದ್ದಾನೆ.

ದ್ರೋಣೋ ಭೀಷ್ಮಃ ಕೃಪೋ ದ್ರೌಣಿರ್ವಿದುರಶ್ಚ ಮಹಾಮತಿಃ |
ಧೃತರಾಷ್ಟ್ರಶ್ಚ ಗಾಂಧಾರೀ ಭವತಃ ಪ್ರಾಜ್ಞವತ್ತರಾಃ ||29||
ಎಲೈ ವಿಕರ್ಣನೇ! ದ್ರೋಣ ಭೀಷ್ಮ ಕೃಪ ಅಶ್ವತ್ಥಾಮ ಮಹಾಮಂತ್ರಿಯಾದ ವಿದುರ. ಧೃತರಾಷ್ಟ್ರ ಮತ್ತು ಗಾಂಧಾರಿ ಇವರೆಲ್ಲರೂ ನಿನಗಿಂತ ಪ್ರಾಜ್ಞರಾದವರು.
ಏತೇ ನ ಕಿಂಚಿದಪ್ಯಾಹುಶ್ಚೋದ್ಯಮಾನಾಶ್ಚ ಕೃಷ್ಣಯಾ |
ಧರ್ಮೇಣ ವಿಜಿತಾಂ ಕೃಷ್ಣಾಂ ಮನ್ಯಂತೇ ದ್ರುಪದಾತ್ಮಜಾಮ್ ||30||
ದ್ರೌಪದಿಯು ಮತ್ತೆ ಮತ್ತೆ ಕೇಳುತ್ತಿದ್ದರೂ ಇವರಲ್ಲಿ ಯಾರೂ ಒಂದು ಮಾತನ್ನೂ ಆಡಲಿಲ್ಲ. ಇವರೆಲ್ಲರೂ ದ್ರುಪದಾತ್ಮಜೆಯಾದ ಕೃಷ್ಣೆಯು ಧರ್ಮದಿಂದಲೇ ಜಿತಳಾಗಿದ್ದಾಳೆ ಎಂದು ತಿಳಿದಿದ್ದಾರೆ.
ತ್ವಂ ತು ಕೇವಲಬಾಲ್ಯೇನ ಧಾರ್ತರಾಷ್ಟ್ರ ವದಿಷ್ಯಸಿ |
ಯದ್ ಬ್ರವೀಷಿ ಸಭಾಮಧ್ಯೇ ಬಾಲಃ ಸ್ಥವಿರಭಾಷಿತಮ್ |
ನ ಚ ಧರ್ಮಂ ಯಥಾವತ್ ತ್ವಂ ವೇತ್ಸಿ ದುರ್ಯೋಧನಾವರ ||31||
ಧೃತರಾಷ್ಟ್ರನ ಪುತ್ರನಾದ ವಿಕರ್ಣನೇ! ನೀನು ಸಭಾಮಧ್ಯದಲ್ಲಿ ಬಾಲಕನಾದರೂ ವೃದ್ಧನಂತೆ ಮಾತನಾಡುತ್ತಿರುವುದರಿಂದ ನಿನ್ನ ಮಾತುಗಳೆಲ್ಲವೂ ಬಾಲವಾಕ್ಯವೇ ಸರಿ. ಎಲೈ ದುರ್ಯೋಧನನ ತಮ್ಮನೇ! ನೀನು ಸರಿಯಾಗಿ ಧರ್ಮವನ್ನು ತಿಳಿದಿಲ್ಲ.
ಯದ್ ಬ್ರವೀಷಿ ಜಿತಾಂ ಕೃಷ್ಣಮಜಿತೇತಿ ಸುಮಂದಧೀಃ |
ಕಥಂ ಹ್ಯವಿಜಿತಾಂ ಕೃಷ್ಣಾಂ ಮನ್ಯಸೇ ಧೃತರಾಷ್ಟ್ರಜ ||32||
ಧರ್ಮದಿಂದ ಜಿತಳಾದ ಕೃಷ್ಣೆಯನ್ನು ಅಜಿತಳೆಂದು ಹೇಳುತ್ತಿದ್ದೀಯೆ. ಎಲೈ ಧೃತರಾಷ್ಟ್ರಪುತ್ರನೇ! ನೀನು ಕೃಷ್ಣೆಯು ಅಜಿತಳೆಂದು ಹೇಗೆ ಹೇಳುತ್ತೀಯೆ?
ಯದಾ ಸಭಾಯಾಂ ಸರ್ವಸ್ವಂ ನ್ಯಸ್ತವಾನ್ ಪಾಂಡವಾಗ್ರಜಃ |
ಅಭ್ಯಂತರಾಂಶ್ಚ ಸರ್ವಸ್ವಂ ದ್ರೌಪದೀಂ ಭರತರ್ಷಭಃ |
ಏವಂ ಧರ್ಮಜಿತಾಂ ಕೃಷ್ಣಾಂ ಮನ್ಯಸೇ ನಜಿತಾಂ ಕಥಮ್ ||33||
ಸಭೆಯಲ್ಲಿ ಯಾವಾಗ ಭರತಶ್ರೇಷ್ಠನಾದ ಪಾಂಡವಾಗ್ರಜನಾದ ಯುಧಿಷ್ಠಿರನು ಸರ್ವಸ್ವವನ್ನು ಪಣವಾಗಿ ಒಡ್ಡಿದನೋ ಅನಂತರ ತನ್ನ ತಮ್ಮಂದಿರನ್ನೂ ಮತ್ತು ದ್ರೌಪದಿಯನ್ನೂ ಪಣವಾಗಿ ಒಡ್ಡಿದನು. ಆಗ ದ್ರೌಪದಿಯು ಧರ್ಮದಿಂದಲೇ ಜಿತಳಾದಳು ಅವಳು ಜಿತಳಲ್ಲವೆಂದು ಹೇಗೆ ಹೇಳುತ್ತಿಯೇ?
ಕೀರ್ತಿತಾ ದ್ರೌಪದೀ ವಾಚಾಽಪ್ಯನುಜ್ಞಾತಾ ಚ ಪಾಂಡವೈಃ |
ಭವತ್ಯವಿಜಿತಾ ಕೇನ ಹೇತುನೈಷಾ ಮತಾ ತವ ||34||
ದ್ರೌಪದಿಯ ಹೆಸರನ್ನು ಕಂಠತಃ ಹೇಳಿದ್ದಾಯಿತು. ಪಾಂಡವರು ಅದಕ್ಕೆ ತಮ್ಮ ಅನುಜ್ಞೆಯನ್ನೂ ಕೊಟ್ಟರು. ಹೀಗಿರುವಾಗ ನಿನ್ನ ದೃಷ್ಟಿಯಲ್ಲಿ ಯಾವ ಕಾರಣದಿಂದ ದ್ರೌಪದಿಯು ಅಜಿತಳಾಗುತ್ತಾಳೆ?
ಅಹಂ ಮನ್ಯೇ ಸಭಾಮೇತಾಮಾನೀತಾಮೇಕವಾಸಸಮ್ |
ಅಧರ್ಮೇಣೇತಿ ತತ್ರಾಪಿ ಶೃಣು ಮೇ ವಾಕ್ಯಮುತ್ತರಮ್ ||35||
ಈ ಸಭೆಗೆ ಏಕವಸ್ತ್ರಳಾದ ಅವಳನ್ನು ಕರೆದುಕೊಂಡು ಬಂದದ್ದು ಅಧರ್ಮವೆಂದು ತಿಳಿದಿರುವೆ. ಆ ವಿಷಯದಲ್ಲೂ ನನ್ನ ಉತ್ತರವನ್ನು ಹೇಳುವೆನು ಕೇಳು.
ಏಕೋ ಭರ್ತಾ ಸ್ತ್ರಿಯೋ ದೇವೈರ್ವಿಹಿತಃ ಕುರುನಂದನ |
ಇಯಂ ತ್ವನೇಕವಶಗಾ ವರ್ಧಕೀತಿ ವಿನಿಶ್ಚಿತಾ ||36||
ಎಲೈ ಕುರುನಂದನನೇ! ಒಬ್ಬ ಹೆಂಗಸಿಗೆ ಒಬ್ಬ ಪತಿಯೆಂದು ದೇವತೆಗಳಿಂದ ವಿಹಿತವಾಗಿದೆ. ಅನೇಕ ಪತಿಗಳನ್ನು ಹೊಂದಿರುವ ಇವಳು ವೇಶ್ಯೆ ಎಂಬುವಲ್ಲಿ ಸಂಶಯವಿಲ್ಲ.
ಅಸ್ಯಾಃ ಸಭಾಯಾಂ ನಯನಂ ನ ಚಿತ್ರಮಿತಿ ಮೇ ಮತಿಃ |
ಏಕಾಂಬರಧರತ್ವಂ ವಾಽಪ್ಯಥವಾಪಿ ವಿವಸ್ತ್ರತಾ ||37||
ಇವಳು ಒಂದೇ ವಸ್ತ್ರವನ್ನು ಧರಿಸಿದವಳಾಗಿರಲಿ ಅಥವಾ ವಿವಸ್ತ್ರಳೇ ಆಗಿರಲಿ ಇಂತಹವಳನ್ನು ಸಭೆಗೆ ಕರತಂದುದರಲ್ಲಿ ಯಾವ ದೋಷವಿಲ್ಲ ಎಂದು ನನ್ನ ಅಭಿಪ್ರಾಯ.
ಯಚ್ಚೈಷಾಂ ದ್ರವಿಣಂ ಕಿಂಚಿದ್ ಯಾ ಚೈಷಾ ಯೇ ಚ ಪಾಂಡವಾಃ|
ಸೌಬಲೇನೇಹ ತತ್ ಸರ್ವಂ ಧರ್ಮೇಣ ವಿಜಿತಂ ವಸು ||38||
ಈ ಪಾಂಡವಧನ ಈ ದ್ರೌಪದಿ ಮತ್ತು ಪಾಂಡವರು ಈ ಎಲ್ಲವನ್ನೂ ಶಕುನಿಯು ಧರ್ಮದಿಂದಲೇ ಜಯಿಸಿದ್ದಾನೆ.
ದುಶ್ಶಾಸನ ಸುಬಾಲೋಽಯಂ ವಿಕರ್ಣಃ ಪ್ರಾಜ್ಞವಾದಿಕಃ |
ಪಾಂಡವಾನಾಂ ಚ ವಾಸಾಂಸಿ ದ್ರೌಪದ್ಯಾಶ್ಚಾಪ್ಯುಪಾಹರ ||39||
ಎಲೈ ದುಶ್ಶಾಸನನೇ! ದೊಡ್ಡ ಮಾತುಗಳನ್ನು ಆಡುವ ಈ ವಿಕರ್ಣನು ಕೇವಲ ಬಾಲಕನಾಗಿದ್ದಾನೆ. ಪಾಂಡವರ ಮತ್ತು ದ್ರೌಪದಿಯ ವಸ್ತ್ರಗಳನ್ನು ತೆಗೆದುಕೋ.
ವೈಶಂಪಾಯನಃ
ತಚ್ಛ್ರುತ್ವಾ ಪಾಂಡವಾಃ ಸರ್ವೇ ಸ್ವಾನಿ ವಾಸಾಂಸಿ ಭಾರತ |
ಅವಕೀರ್ಯೋತ್ತರೀಯಾಣಿ ಸಭಾಯಾಂ ಸಮುಪಾವಿಶನ್ ||40||
ಎಲೈ ಭಾರತನೇ! ಆ ಮಾತುಗಳನ್ನು ಕೇಳಿದ ಪಾಂಡವರು ತಮ್ಮ ಉತ್ತರೀಯವನ್ನು ತೆಗೆದು ಸಭೆಯಲ್ಲಿಟ್ಟು ನೆಲದ ಮೇಲೆ ಕುಳಿತರು.

ತತೋ ದುಶ್ಶಾಸನೋ ರಾಜನ್ ದ್ರೌಪದ್ಯಾ ವಸನಂ ಬಲಾತ್ |
ಸಭಾಮಧ್ಯೇ ಸಮಾಕ್ಷಿಪ್ಯ ವ್ಯಪಾಕೃಷ್ಟುಂ ಪ್ರಚಕ್ರಮೇ |
ಆಕೃಷ್ಯಮಾಣೇ ವಸನೇ ವಿಲಲಾಪ ಸುದುಃಖಿತಾ ॥41॥
ರಾಜನೇ! ಅನಂತರ ದುಶ್ಶಾಸನನು ಬಲಾತ್ಕರದಿಂದ ಸಭಾಮಧ್ಯದಲ್ಲಿ ದ್ರೌಪದಿಯ ವಸ್ತ್ರವನ್ನು ಮೇಲೆತ್ತಿ ಎಳೆಯಲು ಪ್ರಾರಂಬಿಸಿದನು. ವಸ್ತ್ರವು ಎಳೆಯಲ್ಪಡುತ್ತಿರಲು ಅತ್ಯಂತ ದುಃಖಿತಳಾದ ದ್ರೌಪದಿಯು ವಿಲಾಪವನ್ನು ಮಾಡಿದಳು.
ಜ್ಞಾತಂ ಮಯಾ ವಸಿಷ್ಠೇನ ಪುರಾ ಗೀತಂ ಮಹಾತ್ಮನಾ |
ಮಹತ್ಯಾಪದಿ ಸಂಪ್ರಾಪ್ತೇ ಸ್ಮರ್ತವ್ಯೋ ಭಗವಾನ್ ಹರಿಃ ॥42॥
ಮಹಾತ್ಮರಾದ ವಸಿಷ್ಠರು ಹಿಂದೆ ಹೇಳಿದ ಮಾತನ್ನು ನಾನು ತಿಳಿದಿದ್ದೇನೆ. ದೊಡ್ಡ ಆಪತ್ತು ಒದಗಿದಾಗ ಭಗವಂತನಾದ ಹರಿಯನ್ನು ಸ್ಮರಿಸಬೇಕು.
ಇತಿ ನಿಶ್ಚಿತ್ಯ ಮನಸಾ ಶರಣಾಗತವತ್ಸಲಮ್ |
ಮನಸಾ ಚಿಂತಯಾಮಾಸ ದೇವಂ ನಾರಾಯಣಂ ಪ್ರಭುಮ್ ॥43॥
ಹೀಗೆ ಮನಸ್ಸಿನಲ್ಲೇ ನಿಶ್ಚಯಿಸಿ ಶರಣಾಗತವತ್ಸಲನಾದ ಪ್ರಭುವಾದ ದೇವನಾದ ನಾರಾಯಣನನ್ನು ಮನಸ್ಸಿನಲ್ಲಿಯೇ ಚಿಂತಿಸಿದಳು.
ದ್ರೌಪದೀ
ಶಂಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ |
ಗೋವಿಂದ ಪುಂಡರೀಕಾಕ್ಷ ರಕ್ಷ ಮಾಂ ಶರಣಾಗತಾಮ್ ॥44॥
ಎಲೈ ಶಂಖಚಕ್ರಗದಾಪಾಣಿಯಾದ ದ್ವಾರಕಾವಾಸಿಯಾದ ಅಚ್ಯುತನೇ ಗೋವಿಂದನೇ ಪುಂಡರೀಕಾಕ್ಷನೇ ಶರಣಾಗತಳಾದ ನನ್ನನ್ನು ರಕ್ಷಿಸು.
ಹಾ ಕೃಷ್ಣ ದ್ವಾರಕಾವಾಸಿನ್ ಕ್ವಾಸಿ ಯಾದವನಂದನ |
ಇಮಾಮವಸ್ಥಾಂ ಸಂಪ್ರಾಪ್ತಾಮನಾಥಾಂ ಕಿಮುಪೇಕ್ಷಸೇ ॥45॥
ಅಯ್ಯೋ ಅಯ್ಯೋ ದ್ವಾರಕಾವಾಸಿಯಾದ ಯಾವದನಂದನನಾದ ಕೃಷ್ಣನೇ! ಎಲ್ಲಿ ಹೋಗಿರುವೆ? ಇಂತಹ ದುರವಸ್ಥೆಯನ್ನು ಹೊಂದಿರುವ ಅನಾಥಳಾದ ನನ್ನನ್ನು ಏಕೆ ಉಪೇಕ್ಷೆಮಾಡುತ್ತಿರುವೆ?
ಗೋವಿಂದ ದ್ವಾರಕಾವಾಸಿನ್ ಕೃಷ್ಣ ಗೋಪೀಜನಪ್ರಿಯ |
ಕೌರವೈಃ ಪರಿಭೂತಾಂ ಮಾಂ ಕಿಂ ನ ಜಾನಾಸಿ ಕೇಶವ ॥46॥
ದ್ವಾರಕಾವಾಸಿಯಾದ ಗೋವಿಂದನೇ! ಗೋಪೀಜನ ಪ್ರಿಯನಾದ ಕೃಷ್ಣನೇ! ಕೇಶವನೇ! ನಾನು ಕೌರವರಿಂದ ಅಪಮಾನಕ್ಕೆ ಒಳಗಾಗಿರುವುದನ್ನು ನೀನು ತಿಳಿಯುತ್ತಿಲ್ಲವೆ?
ಹೇ ನಾಥ ಹೇ ರಮಾನಾಥ ವ್ರಜನಾಥಾರ್ತಿನಾಶನ |
ಕೌರವಾರ್ಣವಮಗ್ನಾಂ ಮಾಮುದ್ಧರಸ್ವ ಜನಾರ್ದನ ॥47॥
ಎಲೈ ಸ್ವಾಮಿಯೇ ಲಕ್ಷ್ಮೀಪತಿಯೇ ವ್ರಜನಾಥನೇ! ಜನಾರ್ದನನೇ! ಕೌರವಸಮುದ್ರದಲ್ಲಿ ಮುಳುಗಿ ಹೋಗುತ್ತಿರುವ ನನ್ನನ್ನು ಮೇಲಕ್ಕೆ ಎತ್ತು.
ಕೃಷ್ಣ ಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಭಾವನ |
ಪ್ರಪನ್ನಾಂ ಪಾಹಿ ಗೋವಿಂದ ಕುರುಮಧ್ಯೇಽವಸೀದತೀಮ್ ॥48॥
ಕೃಷ್ಣಾ ಕೃಷ್ಣಾ ಮಹಾಯೋಗಿಯೇ! ವಿಶ್ವ ಸ್ವಾಮಿಯೇ ಸೃಷ್ಟಿಕರ್ತನೇ! ಗೋವಿಂದನೇ! ಕೌರವರ ಮಧ್ಯದಲ್ಲಿ ವಿನಾಶವನ್ನು ಹೊಂದುತ್ತಿರುವ ನಿನಗೆ ಶರಣಾಗತಳಾಗಿರುವ ನನ್ನನ್ನು ರಕ್ಷಿಸು.
ವೈಶಂಪಾಯನಃ
ಇತ್ಯನುಸ್ಮೃತ್ಯ ಕೃಷ್ಣಾ ಸಾ ಹರಿಂ ತ್ರಿಭುವನೇಶ್ವರಮ್ |
ಪ್ರಾರುದದ್ ದುಃಖಿತಾ ರಾಜನ್ ಮುಖಮಾಚ್ಛಾದ್ಯ ಭಾಮಿನೀ |
ಯಾಜ್ಞಸೇನ್ಯಾ ವಚಃ ಶ್ರುತ್ವಾ ಕೃಷ್ಣಾಂಗಂ ಪರಿತೋಭವತ್ ॥49॥
(ಕೃಷ್ಣಾಂಗಂಜ್ವಲಿತೋಽಭವತ್/ ಕೃಷ್ಣೋಽಂಗ ಜ್ವಲಿತೋಭವತ್)
ಎಲೈ ರಾಜನೇ! ಹೀಗೆ ಭಾಮಿನಿಯಾದ ದ್ರೌಪದಿಯು ತ್ರಿಭುವನೇಶ್ವರನಾದ ಹರಿಯನ್ನು ಸ್ಮರಿಸಿ ತನ್ನ ಮುಖವನ್ನು ಮುಚ್ಚಿಕೊಂಡು ದುಃಖಿತಳಾಗಿ ಬಹಳವಾಗಿ ಅತ್ತಳು. ಎಲೈ ಪ್ರೀತಿ ಪಾತ್ರನೇ! ದ್ರೌಪದಿಯ ಮಾತನ್ನು ಕೇಳಿ ಕೃಷ್ಣನು ಅವಳ ಸುತ್ತಲೂ ನಿಂತನು.
ವೈಶಂಪಾಯನಃ
ಕೃಷ್ಣಂ ಚ ವಿಷ್ಣುಂ ಚ ಹರಿಂ ನರಂ ಚ
ತ್ರಾಣಾಯ ವಿಕ್ರೋಶತಿ ಯಾಜ್ಞಸೇನೀ |
ತತೋ ಹರಿಸ್ತ್ವಂತರಿತೋ ಮಹಾತ್ಮಾ
ಸಮಾವೃಣೋತ್ ತಾಂ ವಿವಿಧೈರ್ವಸ್ತ್ರಪೂಗೈಃ ॥50॥
ಕೃಷ್ಣನನ್ನೂ ವಿಷ್ಣುವನ್ನೂ ಹರಿಯನ್ನೂ ನರನನ್ನೂ ದ್ರೌಪದಿಯು ರಕ್ಷಣೆಗಾಗಿ ಮೊರೆಹೋಗುತ್ತಿರಲು ಮಹಾತ್ಮನಾದ ಹರಿಯು ಅದೃಶ್ಯನಾಗಿ ಅನೇಕ ವಿಧವಾದವಸ್ತ್ರ ರಾಶಿಗಳಿಂದ ಅವಳನ್ನು ಚೆನ್ನಾಗಿ ಸುತ್ತಿದನು.
ಆಕೃಷ್ಯಮಾಣೇ ವಸನೇ ದ್ರೌಪದ್ಯಾಶ್ಚ ವಿಶಾಂಪತೇ |
ತದ್ರೂಪಮಪರಂ ವಸ್ತ್ರಂ ಪ್ರಾದುರಾಸೀದನೇಕಶಃ ॥51॥
ಎಲೈ ರಾಜನೇ! ದ್ರೌಪದಿಯ ವಸ್ತ್ರವು ಎಳೆಯಲ್ಪಡುತ್ತಿರಲು ಆಂತಹದೇ ಇನ್ನೊಂದು ವಸ್ತ್ರವು ಅನೇಕ ಸಂಖ್ಯೆಯಲ್ಲಿ

ಪ್ರಾದುರ್ಭವಿಸಿತು.
ನಾನಾರಾಗವಿರಾಗಾಣಿ ವಸನಾನ್ಯಥ ವೈ ಪ್ರಭೋ |
ಪ್ರಾದುರ್ಭವಂತಿ ಶತಶಃ ಕೃಷ್ಣಸ್ಯ ಪರಿಪಾಲನಾತ್ ॥52॥
ಪ್ರಭುವೇ! ಅನಂತರ ಕೃಷ್ಣನ ರಕ್ಷಣೆಯ ಕಾರಣದಿಂದಾಗಿ ಅನೇಕ ಬಣ್ಣದ ವಿಚಿತ್ರವಾದ ವಸನಗಳು ನೂರರ ಸಂಖ್ಯೆಯಲ್ಲಿ ಪ್ರಾದುರ್ಭವಿಸಲು ಪ್ರಾರಂಭವಾದವು.
ತತೋ ಹಲಹಲಾಶಬ್ದಃ ತತ್ರಾಸೀದ್ ಘೋರನಿಸ್ಸ್ವನಃ |
ತದದ್ಭುತತಮಂ ಲೋಕೇ ಪ್ರೇಕ್ಷ್ಯ ಸರ್ವೇ ಸಭಾಸದಃ |
ಧಿಗ್ಧಿಗಿತ್ಯನಿಶಂ ವಾಚ ಉತ್ಸೃಜನ್ ಕೌರವಂ ಪ್ರತಿ ॥53॥
ಆಗ ಆ ಸಭೆಯಲ್ಲಿ ಘೋರವಾದ ನಾದವುಳ್ಳ ಸಂತೋಷದಿಂದ ಕೂಡಿದ ಶಬ್ದವು ಉಂಟಾಯಿತು. ಈ ಅತ್ಯದ್ಭುತವಾದ ದೃಶ್ಯವನ್ನು ನೋಡಿದ ಎಲ್ಲಾ ಸಭಾಸದರೂ ಕೌರವನಿಗೆ ಧಿಕ್ಕಾರ ಧಿಕ್ಕಾರ ಎಂಬ ಮಾತುಗಳನ್ನು ಆಡಿದರು.
ಯದಾ ತು ವಾಸಸಾಂ ರಾಶಿಃ ಸಭಾಮಧ್ಯೇ ಸಮಾಸ್ಥಿತಃ |
ತತೋ ದೃಶ್ಶಾಸನಃ ಶ್ರಾಂತೋ ವ್ರೀಳಿತಃ ಸಮುಪಾವಿಶತ್ ॥54॥
ಯಾವಾಗ ಸಭೆಯ ಮಧ್ಯದಲ್ಲಿ ದೊಡ್ಡ ವಸ್ತ್ರದ ರಾಶಿಯೇ ಬಿದ್ದಿತೋ ಆಗ ದುಶ್ಶಾಸನನು ದಣಿದು ನಾಚಿಕೆಯಿಂದ ಕುಳಿತು ಕೊಂಡನು.
ಶಶಾಪ ತತ್ರ ಭೀಮಸ್ತು ರಾಜಮಧ್ಯೇ ಮಹಾಸ್ವರಃ |
ಕ್ರೋಧಾದ್ ವಿಷ್ಫುರಮಾಣೋಷ್ಠೋ ವಿನಿಷ್ಪಿಷ್ಯ ಕರೇ ಕರಮ್ ॥55॥
ಆಗ ಅಲ್ಲಿ ರಾಜಮಧ್ಯದಲ್ಲಿ ಭೀಮಸೇನನು ಕ್ರೋಧದಿಂದ ಅವನ ತುಟಿಗಳು ಅದುರುತ್ತಿರಲು ಕೈಯಿಂದ ಕೈಯನ್ನು ಹೊಸಕುತ್ತಾ ದೊಡ್ಡ ಧ್ವನಿಯಿಂದ ಹೀಗೆ ಶಪಿಸಿದನು.
ಭೀಮಃ
ಇದಂ ಮೇ ವಾಕ್ಯಮಾದಧ್ವಂ ಕ್ಷತ್ರಿಯಾ ಲೋಕವಾಸಿನಃ |
ನೋಕ್ತಪೂರ್ವಂ ನರೈರನ್ಯೈರ್ನ ಚಾನ್ಯೋ ಯದ್ ವದಿಷ್ಯತಿ ॥56॥
ಲೋಕವಾಸಿಗಳಾದ ಕ್ಷತ್ರಿಯರೇ ಈ ನನ್ನ ಮಾತನ್ನು ಸ್ವೀಕರಿಸಿ. ಇಂತಹ ಮಾತನ್ನು ಹಿಂದೆ ಯಾವ ಮನುಷ್ಯನೂ ಆಡಿರಲಿಲ್ಲ. ಮುಂದೆ ಯಾವನೂ ಆಡುವುದಿಲ್ಲ.
ಯದ್ಯೇತದೇವಮುಕ್ತ್ವಾ ತು ನ ಕುರ್ಯಾಂ ಪೃಥಿವೀಶ್ವರಾಃ |
ಪಿತಾಮಹಾನಾಂ ಸರ್ವೇಷಾಂ ನಾಹಂ ಗತಿಮವಾಪ್ನುಯಾಮ್ ॥57॥
ಅಸ್ಯ ಪಾಪಸ್ಯ ದುರ್ಜಾತೇರ್ಭಾರತಾಪಶದಸ್ಯ ಚ |
ನ ಪಿಬೇಯಂ ಬಲಾದ್ ವಕ್ಷೋ ಭಿತ್ತ್ವಾ ಚೇದ್ರುಧಿರಂ ರಣೇ ॥58॥
ಎಲೈ ಪೃಥಿವೀಪತಿಗಳೇ! ನಾನು ಈ ಮಾತನ್ನು ಆಡಿ ಅದರಂತೆ ನಡೆದುಕೊಳ್ಳದಿದ್ದರೆ ನಾನು ಮೃತನಾದ ಮೇಲೆ ನನ್ನ ಎಲ್ಲಾ ಪಿತಾಮಹರಿಗೂ ಆದ ಗತಿಯು ನನಗೆ ಆಗದೇ ಇರಲಿ. ಭರತವಂಶದಲ್ಲಿ ಅಧಮನಾಗಿ ದುರ್ಜಾತನಾದ ಈ ಪಾಪಿಯ ಎದೆಯನ್ನು ನಾನು ಯುದ್ಧದಲ್ಲಿ ಬಗೆದು ಅವನ ರಕ್ತವನ್ನು ಕುಡಿಯದಿದ್ದರೆ ( ನನಗೆ ನನ್ನ ಪಿತಾಮಹರ ಸದ್ಗತಿಯು ಆಗುವುದು ಬೇಡ.)
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಸರ್ವಲೋಕಪ್ರಹರ್ಷಣಮ್ |
ಪ್ರಚಕ್ರುರ್ಬಹುಲಾಂ ಪೂಜಾಂ ಕುತ್ಸಂತೋ ಧೃತರಾಷ್ಟ್ರಜಮ್ ॥59॥
ಸರ್ವಲೋಕಸಂತೋಷದಾಯಕವಾದ ಭೀಮನ ಆ ಮಾತುಗಳನ್ನು ಕೇಳಿ ಸಭಾಸದರೆಲ್ಲರೂ ಧೃತರಾಷ್ಟ್ರನನ್ನು ನಿಂದಿಸಿ ಭೀಮನ ಮಾತುಗಳನ್ನು ಬಹಳವಾಗಿ ಗೌರವಿಸಿದರು.
ಧಿಗ್ಧಿಕ್ಶಬ್ದಸ್ತತಸ್ತತ್ರ ಸಮಭೂದ್ ರೋಮಹರ್ಷಣಃ |
ಸಭ್ಯಾನಾಂ ನರದೇವಾನಾಂ ದೃಷ್ಟ್ವಾ ಕುಂತೀಸುತಾಂಸ್ತದಾ ॥60॥
ಆಗ ಕುಂತೀ ಪುತ್ರರನ್ನು ನೋಡಿದ ಸಭ್ಯರಾದ ಎಲ್ಲ ರಾಜರೂ ರೋಮಾಂಚಕಾರಿಯಾದ ಧಿಕ್ಕಾರ ಶಬ್ದವನ್ನು ಎಲ್ಲ ಕಡೆಗಳಿಂದಲೂ ಉಚ್ಚರಿಸಿದರು.
ನ ಬ್ರುವಂತಿ ಹಿ ಕೌರವ್ಯಾಃ ಪ್ರಶ್ನಮೇತಮಿತಿ ಸ್ಮ ಹ |
ಸಜ್ಜನಃ ಕ್ರೋಶತಿ ಸ್ಮಾತ್ರ ಧೃತರಾಷ್ಟ್ರಂ ವಿಗರ್ಹಯನ್ ॥61॥
ಅಲ್ಲಿದ್ದ ಸಜ್ಜನರೆಲ್ಲರೂ ದ್ರೌಪದಿಯು ಕೇಳಿದ ಈ ಪ್ರಶ್ನೆಗೆ ಕೌರವರು ಯಾರೂ ಉತ್ತರವನ್ನು ಕೊಡುತ್ತಿಲ್ಲ. ಎಂದು ಹೇಳಿ ಧೃತರಾಷ್ಟ್ರನನ್ನು ನಿಂದಿಸುತ್ತಾ ಸಿಡುಕಿದರು.
ತತೋ ಬಾಹೂ ಸಮುದ್ಧೃತ್ಯ ನಿವಾರ್ಯ ಚ ಸಭಾಸದಃ |
ವಿದುರಃ ಸರ್ವಧರ್ಮಜ್ಞ ಇದಂ ವಚನಮಬ್ರವೀತ್ ॥62॥
ಆಗ ಸರ್ವಧರ್ಮಜ್ಞನಾದ ವಿದುರನು ತನ್ನ ಬಾಹುಗಳನ್ನು ಮೇಲೆಕ್ಕೆತ್ತಿ ಸಭಾಸದರನ್ನು ಸುಮ್ಮನಿರುವಂತೆ ಹೇಳಿ ಈ ಮಾತನ್ನು ಆಡಿದನು.
ದ್ರೌಪದೀ ಪ್ರಶ್ನಮುಕ್ತ್ವೈವಂ ರೋರವೀತಿ ಹ್ಯನಾಥವತ್ |
ನ ಚ ವಿಬ್ರೂತ ತಂ ಪ್ರಶ್ನಂ ಸಭ್ಯಾ ಧರ್ಮೋಽತ್ರ ಪೀಡ್ಯತೇ ॥63॥
ದ್ರೌಪದಿಯು ಈ ಪ್ರಶ್ನೆಯನ್ನು ಕೇಳಿ ಅನಾಥಳಂತೆ ಮತ್ತೆ ಮತ್ತೆ ಆಳುತ್ತಿದ್ದಾಳೆ. ಎಲೈ ಸಭ್ಯರೆ! ನೀವು ಯಾರು ಈ ಪ್ರಶ್ನೆಗೆ ಉತ್ತರವನ್ನು

ಹೇಳುತ್ತಿಲ್ಲ. ಇಲ್ಲಿ ಧರ್ಮದ ಪೀಡೆಯು ಉಂಟಾಗಿದೆ.
ಸಭಾಂ ಪ್ರಪದ್ಯತೇ ಪ್ರಶ್ನಃ ಪ್ರಜ್ವಲನ್ನಿವ ಹವ್ಯವಾಟ್ |
ತಂ ವೈ ಸತ್ಯೇನ ಧರ್ಮೇಣ ಸಭ್ಯಾಃ ಪ್ರಶಮಯಂತ್ಯುತ ॥64॥
ಪ್ರಜ್ವಲಿಸುವ ಅಗ್ನಿಯಂತೆ ಪ್ರಶ್ನೆಯು ಸಭೆಯನ್ನು ಪ್ರವೇಶಿಸುತ್ತದೆ. ಪ್ರಾಜ್ಞರಾದವರು ಸತ್ಯದಿಂದಲೂ ಮತ್ತು ಧರ್ಮದಿಂದಲೂ ಆ ಅಗ್ನಿಯನ್ನು ಉಪಶಮನಗೊಳಿಸುತ್ತಾರೆ.
ಧರ್ಮ್ಯಪ್ರಶ್ನಮಥೋ ಬ್ರೂಯಾದೇತತ್ ಸತ್ಯೇನ ಮಾನವಃ |
ನ ಬ್ರೂಯುಶ್ಚ ತತಃ ಪ್ರಶ್ನಂ ಕಾಮಕ್ರೋಧವಶಾನುಗಾಃ ॥65॥
ಆದ್ದರಿಂದ ಮನುಷ್ಯನಾದವನು ಇಂತಹ ಧರ್ಮಪ್ರಶ್ನೆಗೆ ಸತ್ಯದಿಂದ ಉತ್ತರಿಸಬೇಕು. ಕಾಮ ಕ್ರೋಧಗಳಿಗೆ ವಶರಾಗುವವರನ್ನು ಅನುಸರಿಸುವವರು ಮಾತ್ರ ಪ್ರಶ್ನೆಗೆ ಉತ್ತರವನ್ನು ಕೊಡುವುದಿಲ್ಲ.
ವಿಕರ್ಣೇನ ಯಥಾಪ್ರಶ್ನಂ ಪೂರ್ವಮುಕ್ತಂ ನರಾಧಿಪಾಃ |
ಭವಂತೋಽಪಿ ಹಿ ತಂ ಪ್ರಶ್ನಂ ವಿಬ್ರುವಂತು ಯಥಾಮತಿ ॥66॥
ಎಲ್ಲೈ ರಾಜರೇ! ವಿಕರ್ಣನು ಪ್ರಶ್ನೆಗೆ ಅನುಗುಣವಾಗಿ ಮೊದಲು ಉತ್ತರವನ್ನು ಹೇಳಿದ್ದಾನೆ. ನೀವೂ ಸಹ ನಿಮ್ಮ ಮನಸ್ಸಿಗೆ ಒಪ್ಪುವಂತೆ ಆ ಪ್ರಶ್ನೆಗೆ ಉತ್ತರವನ್ನು ಹೇಳಿ.
ಯೋ ಹಿ ಪ್ರಶ್ನಂ ನ ವಿಬ್ರೂಯಾದ್ ಧರ್ಮದರ್ಶೀ ಸಭಾಂ ಗತಃ |
ಅನೃತೇ ಯಾ ಫಲಪ್ರಾಪ್ತಿಸ್ತಸ್ಯಾಃ ಸೋಽರ್ಧಂ ಸಮಶ್ನುತೇ ॥67॥
ಯಾವನು ಧರ್ಮದರ್ಶಿಯಾಗಿ ಸಭೆಗೆ ಬಂದು ಪ್ರಶ್ನೆಗೆ ಉತ್ತರವನ್ನು ಹೇಳುವುದಿಲ್ಲವೋ ಅವನು ಸುಳ್ಳನ್ನು ಆಡಿದರೆ ಏನು ಫಲವೋ ಅದರಲ್ಲಿ ಅರ್ಧಫಲವನ್ನು ಹೊಂದುತ್ತಾನೆ.
ಯಃ ಪುನರ್ವಿತಥಂ ಬ್ರೂಯಾದ್ ಧರ್ಮದರ್ಶೀ ಸಭಾಂ ಗತಃ |
ಅನೃತಸ್ಯ ಫಲಂ ಕೃತ್ಸ್ನಂ ಪ್ರಾಪ್ನೋತೀತಿ ವಿನಿಶ್ಚಯಃ ॥68॥
ಯಾವನು ಧರ್ಮದರ್ಶಿಯಾಗಿ ಸಭೆಗೆ ಬಂದು ವಿರುದ್ಧವಾಗಿ ಹೇಳುತ್ತಾನೆಯೋ ಅವನು ಅನೃತದ ಪೂರ್ಣಫಲವನ್ನು ನಿಶ್ಚಯವಾಗಿ ಪಡೆಯುತ್ತಾನೆ.
ಅತ್ರಾಪ್ಯುದಾಹರಂತೀಮಿತಿಹಾಸಂ ಪುರಾತನಮ್ |
ಪ್ರಹ್ಲಾದಸ್ಯ ಚ ಸಂವಾದಂ ಮುನೇರಾಂಗಿರಸಸ್ಯ ಚ ॥69॥
ಈ ವಿಷಯದಲ್ಲಿ ಪ್ರಹ್ಲಾದನಿಗೂ ಮತ್ತು ಅಂಗೀರಸರ ಕುಲದವನಾದ ಒಬ್ಬ ಋಷಿಗೂ ಹಿಂದೆ ನಡೆದ ಒಂದು ಸಂವಾದವನ್ನು ಇತಿಹಾಸರೂಪವಾಗಿ ಹೇಳುತ್ತಾರೆ.
ಪ್ರಹ್ಲಾದೋ ನಾಮ ದೈತ್ಯೇಂದ್ರಸ್ತಸ್ಯ ಪುತ್ರೋ ವಿರೋಚನಃ
ಕನ್ಯಾಹೇತೋರಾಂಗಿರಸಂ ಸುಧನ್ವಾನಮುಪಾದ್ರವತ್ ॥70॥
ಪ್ರಹ್ಲಾದನೆಂಬ ಒಬ್ಬ ದೈತ್ಯೇಂದ್ರನ ಮಗನಾದ ವಿರೋಚನನು ಒಂದು ಕನ್ಯಾ ಸಲುವಾಗಿ ಅಂಗೀರಸರ ಮಗನಾದ ಸುಧನ್ವನ ಕಡೆಗೆ ಹೋದನು.
ಅಹಂ ಜ್ಯಾಯಾನಹಂ ಜ್ಯಾಯಾನಿತಿ ಕನ್ಯೇಪ್ಸಯಾ ತದಾ |
ತಯೋರ್ದೇವನಮತ್ರಾಸೀತ್ ಪ್ರಾಣಯೋರಿತಿ ನಃ ಶ್ರುತಮ್ ॥71॥
ಒಂದೇ ಕನ್ಯೆಯನ್ನು ಬಯಸಿದ ಇಬ್ಬರಲ್ಲಿ ನಾನು ಶ್ರೇಷ್ಠ .ನಾನು ಶ್ರೇಷ್ಠ ಎಂಬ ವಿವಾದವು ಉಂಟಾಯಿತು. ಆಗ ಅವರು ತಮ್ಮ ಪ್ರಾಣವನ್ನೇ ಪಣವಾಗಿಟ್ಟು ದ್ಯೂತವನ್ನು ಆಡಿದರೆಂದು ಕೇಳಿದ್ದೇನೆ.
ತಯೋಃ ಪ್ರಶ್ನವಿವಾದೋಽಭೂತ್ ಪ್ರಹ್ಲಾದಂ ತಾವಪೃಚ್ಛತಾಮ್ |
ಜ್ಯಾಯಾನ್ ಕ ಆವಯೋರೇಕಃ ಪ್ರಶ್ನಂ ಪ್ರಬ್ರೂಹಿ ಮಾ ಮೃಷಾ ॥72॥
ಅವರಿಗೆ ಪ್ರಶ್ನೆವಿವಾದವು ಉಂಟಾಯಿತು. ಆಗ ಅವರು ಪ್ರಹ್ಲಾದನ ಬಳಿಗೆ ಹೋಗಿ, ನಮ್ಮಿಬ್ಬರಲ್ಲಿ ಯಾರು ಶ್ರೇಷ್ಠ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳು ಸುಳ್ಳನ್ನು ಹೇಳಬೇಡ ಎಂದು ಹೇಳಿದರು.
ಸ ವೈ ವಿವದನಾದ್ಭೀತಃ ಸುಧನ್ವಾನಂ ವ್ಯಲೋಕಯತ್ |
ತಂ ಸುಧನ್ವಾಬ್ರವೀತ್ ಕ್ರುದ್ಧೋ ಬ್ರಹ್ಮದಂಡ ಇವ ಜ್ವಲನ್ ॥73॥
ಯದಿ ವೈ ವಕ್ಷ್ಯಸಿ ಮೃಷಾ ಪ್ರಹ್ಲಾದಾಥ ನ ವಕ್ಷ್ಯಸಿ |
ಶತಧಾ ತೇ ಶಿರೋ ವಜ್ರೀ ವಜ್ರೇಣ ಪ್ರಹರಿಷ್ಯತಿ ॥74॥
ವಿರುದ್ಧವಾಗಿ ಮಾತನಾಡುವುದಕ್ಕೆ ಹೆದರಿ ಪ್ರಹ್ಲಾದನು ಸುಧನ್ವನನ್ನು ನೋಡಿದನು. ಆಗ ಸುಧನ್ವನು ಕೋಪದಿಂದ ಬ್ರಹ್ಮದಂಡದಂತೆ ಪ್ರಜ್ವಲಿಸುತ್ತಾ ಹೀಗೆ ಮಾತನಾಡಿದನು. ಎಲ್ಲೈ ಪ್ರಹ್ಲಾದನೇ! ನೀನು ಸುಳ್ಳನ್ನು ಹೇಳಿದರೆ ಅಥವಾ ಏನನ್ನೂ ಹೇಳದಿದ್ದರೆ ನಿನ್ನ ಶಿರಸ್ಸನ್ನು ಇಂದ್ರನು ವಜ್ರಾಯುಧದಿಂದ ನೂರು ಭಾಗಗಳಾಗಿ ಸೀಳುವನು.
ವಿದುರಃ
ಸುಧನ್ವನಾ ತಥೋಕ್ತಃ ಸನ್ ವ್ಯಥಿತೋಽಶ್ವತ್ಥಪರ್ಣವತ್ |
ಜಗಾಮ ಕಾಶ್ಯಪಂ ದೈತ್ಯೋ ಧೃತರಾಷ್ಟ್ರ ಮಹೌಜಸಮ್ ॥75॥
ಎಲ್ಲೈ ಧೃತರಾಷ್ಟ್ರನೇ! ಸುಧನ್ವನಿಂದ ಈ ಮಾತನ್ನು ಕೇಳಿದ ಪ್ರಹ್ಲಾದನು ಅಶ್ವತ್ಥ ವೃಕ್ಷದ ಎಲೆಯಂತೆ ನಡುಗುತ್ತಾ ವ್ಯಾಧಿತನಾಗಿ ಮಹಾಪರಾಕ್ರಮಶಾಲಿಗಳಾದ ಕಾಶ್ಯಪರ ಬಳಿಗೆ ಹೋದನು.
ಪ್ರಹ್ಲಾದಃ

ತ್ವಂ ವೈ ಧರ್ಮಸ್ಯ ವಿಜ್ಞಾತಾ ದೈವಸ್ಯೇಹಾಸುರಸ್ಯ ಚ |
ಬ್ರಾಹ್ಮಣಸ್ಯ ಮಹಾಪ್ರಾಜ್ಞ ಧರ್ಮಕೃಚ್ಛ್ರಮಿದಂ ಶೃಣು ॥75॥
ಮಹಾಪ್ರಾಜ್ಞರೇ! ನೀವು ದೇವಧರ್ಮಗಳನ್ನೂ ಅಸುರ ಧರ್ಮಗಳನ್ನೂ ತಿಳಿದಿದ್ದೀರಿ. ಬ್ರಾಹ್ಮಣರಿಗೆ ಒದಗಿದ ಈ ಧರ್ಮವ್ಯಥೆಯನ್ನು ಕೇಳಿ.
ಯೋ ಹಿ ಪ್ರಶ್ನಂ ನ ವಿಬ್ರೂಯಾದ್ ವಿತಥಂ ವಾ ವಿನಿರ್ದಿಶೇತ್ |
ಕೇ ಚ ತಸ್ಯ ಪರೇ ಲೋಕಾಸ್ತನ್ಮಮಾಚಕ್ಷ್ವ ಪೃಚ್ಛತಃ ॥76॥
ಯಾರು ಪ್ರಶ್ನೆಗೆ ಉತ್ತರವನ್ನು ಹೇಳುವುದಿಲ್ಲವೋ ಅಥವಾ ವಿರುದ್ಧವಾಗಿ ಹೇಳುತ್ತಾನೋ ಅವನಿಗೆ ಪರಲೋಕದಲ್ಲಿ ಯಾವ ಗತಿಯು ಆಗುವುದೆಂದು ಪ್ರಶ್ನೆಮಾಡುತ್ತಿರುವ ನನಗೆ ತಿಳಿಸಿ.
ಕಶ್ಯಪಃ
ಜಾನನ್ನವಿಬ್ರುವನ್ ಪೃಷ್ಟಃ ಕಾಮಾತ್ ಕ್ರೋಧಾದ್ ಭಯಾತ್ ತಥಾ |
ಸಹಸ್ರಂ ವಾರುಣಾನ್ ಪಾಶಾನ್ ಆತ್ಮನಿ ಪ್ರತಿಮುಂಚತಿ ॥77॥
ಪ್ರಶ್ನೆಯನ್ನು ಮಾಡಿದಾಗ ಉತ್ತರವನ್ನು ತಿಳಿದಿದ್ದರೂ ಯಾವನು ಕಾಮದಿಂದಲಾಗಲೀ ಕ್ರೋಧದಿಂದಲಾಗಲೀ ಭಯದಿಂದಲಾಗಲೀ ಉತ್ತರವನ್ನು ಹೇಳುವುದಿಲ್ಲವೋ ಅವನು ಸಹಸ್ರ ವಾರುಣ ಪಾಶಗಳಿಂದ ಬಿಗಿಯಲ್ಪಡುತ್ತಾನೆ.
ಸಾಕ್ಷೀ ಚ ವಿಬ್ರುವನ್ ಸಾಕ್ಷ್ಯಂ ಗೋಕರ್ಣಶಿಥಿಲಂ ಚರನ್ |
ಸಹಸ್ರಂ ವಾರುಣಾನ್ ಪಾಶಾನ್ ಆತ್ಮನಿ ಪ್ರತಿಮುಂಚತಿ ॥78॥
ಯಾವ ಸಾಕ್ಷಿಯು ಪ್ರಶ್ನೆಯನ್ನು ಕೇಳಿದಾಗ ಕೇಳದವನಂತೆ ನಟಿಸುತ್ತಾನೆಯೋ, ಅಥವಾ ಕೇಳಿದರೂ ಉತ್ತರವನ್ನು ಕೊಡದೆ ಇರುತ್ತಾನೆಯೋ ಅಂತಹ ಸಾಕ್ಷಿಯು ಪರಲೋಕದಲ್ಲಿ ನೂರು ವಾರುಣ ಪಾಶಗಳಿಂದ ಬಂಧಿಸಲ್ಪಡುತ್ತಾನೆ.
ತಸ್ಯ ಸಂವತ್ಸರೇ ಪೂರ್ಣೇ ಪಾಶ ಏಕಃ ಪ್ರಮುಚ್ಯತೇ |
ತಸ್ಮಾತ್ ಸತ್ಯಂ ಹಿ ವಕ್ತವ್ಯಂ ಜಾನತಾ ಸತ್ಯಮಂಜಸಾ ॥79॥
ಒಂದೊಂದು ವರ್ಷವು ಪೂರ್ಣವಾದಾಗ ಸಾವಿರ ಪಾಶಗಳಲ್ಲಿ ಒಂದು ಪಾಶವು ಬಿದ್ದು ಹೋಗುತ್ತದೆ. ಆದ್ದರಿಂದ ಸತ್ಯವನ್ನು ತಿಳಿದವನು ಸಭೆಯಲ್ಲಿ ಸತ್ಯವನ್ನೇ ಹೇಳಬೇಕು.
ವಿದ್ಧೋ ಧರ್ಮೋ ಹ್ಯಧರ್ಮೇಣ ಸಭಾಂ ಯತ್ರೋಪಪದ್ಯತೇ |
ನ ಚಾಸ್ಯ ಶಲ್ಯಂ ಕೃಂತಂತಿ ವಿದ್ಧಾಃ ಸರ್ವೇ ಸಭಾಸದಃ ॥80॥
ಯಾವ ಸಭೆಯಲ್ಲಿ ಧರ್ಮವು ಅಧರ್ಮದಿಂದ ವಿದ್ಧವಾಗುತ್ತದೆಯೋ ಅಲ್ಲಿ ಧರ್ಮಕ್ಕೆ ನಾಟಿದ ಈ ಶಲ್ಯವನ್ನು ಯಾರೂ ತೆಗೆಯದಿರುವ ಕಾರಣ ಎಲ್ಲಾ ಸಭಾಸದರೂ ಪಾಪವಿದ್ಧರಾಗುತ್ತಾರೆ.
ಅರ್ಧಂ ಭಜತಿ ವೈ ಶ್ರೇಷ್ಠಃ ಪಾದೋ ಭವತಿ ಕರ್ತೃಷು |
ಪಾದಶ್ಚೈಕಃ ಸಭಾಸತ್ಸು ಯೇ ನ ನಿಂದಂತಿ ನಿಂನಿತಮ್ ॥81॥
ನಿಂದನೀಯನಾದವನನ್ನು (ಅಥವಾ ನಿಂದನೀಯವಾದ ಕರ್ಮವನ್ನು) ನಿಂದಿಸದಿದ್ದರೆ ಸಭೆಯಲ್ಲಿ ಶ್ರೇಷ್ಠವಾದ ಸಭಾಪತಿಯು ಅರ್ಧಭಾಗ ಪಾಪವನ್ನು ಪಡೆಯುತ್ತಾನೆ. ಪಾಪವನ್ನು ಆಚರಿಸಿದವನು ಕಾಲುಭಾಗವನ್ನು ಪಡೆಯುತ್ತಾನೆ. ಉಳಿದೆಲ್ಲಾ ಸಭಾಸದರಿಗೂ ಇನ್ನು ಕಾಲು ಭಾಗವು ಸೇರುತ್ತದೆ.
ಅನೇನಾ ಭವತಿ ಶ್ರೇಷ್ಠೋ ಮುಚ್ಯಂತೇ ಚ ಸಭಾಸದಃ |
ಏನೋ ಗಚ್ಛತಿ ಕರ್ತಾರಂ ನಿಂದಾಹೋ ಯತ್ರ ನಿಂದ್ಯತೇ ॥82॥
ನಿಂದನಾರ್ಹನಾದವನನ್ನು ನಿಂದಿಸಿದರೆ ಸಭಾಪತಿಯು ಪಾಪದಿಂದ ನಿರ್ಮುಕ್ತನಾಗುತ್ತಾನೆ. ಸಭಾಸದರೂ ಪಾಪದಿಂದ ನಿರ್ಮುಕ್ತರಾಗುತ್ತಾರೆ. ಸಮಗ್ರವಾದ ಪಾಪವು ಪಾಪಕರ್ಮವನ್ನು ಮಾಡಿದವನನ್ನೇ ಹೋಗಿ ಸೇರುತ್ತದೆ.
ವಿತಥಂ ತು ವದೇಯುರ್ಯೇ ಧರ್ಮಂ ಪ್ರಹ್ಲಾದ ಪೃಚ್ಛತೇ |
ಇಷ್ಟಾಪೂರ್ತಂ ಚ ತೇ ಘ್ನಂತಿ ಸಪ್ತ ಚೈವ ಪರಾವರಾನ್ ॥83॥
ಎಲೈ ಪ್ರಹ್ಲಾದನೇ! ಸಭೆಯಲ್ಲಿ ಯಾರು ಪ್ರಶ್ನೆಮಾಡಿದವನನ್ನು ಕುರಿತು ಸುಳ್ಳನ್ನು ಹೇಳುತ್ತಾರೆಯೋ ಅವರು ಮಾಡಿದ ಇಷ್ಟಾಪೂರ್ತಗಳೆಲ್ಲವೂ ನಾಶವನ್ನು ಹೊಂದುತ್ತವೆ. ಹಿಂದಿನ ಏಳು ತಲೆಮಾರಿನವರು ಮತ್ತೆ ಮುಂದೆ ಬರುವ ಏಳು ತಲೆಮಾಡಿನವರು ದುರ್ಗತಿಯನ್ನು ಹೊಂದುತ್ತಾರೆ.
ಹೃತಕನ್ಯಸ್ಯ ಯದ್ ದುಃಖಂ ಮೃತಪುತ್ರಸ್ಯ ಚಾಪಿ ಯತ್ |
ವೈರಿಣಾ ಪ್ರತಿಪನ್ನಸ್ಯ ರಾಜ್ಞಾ ಗ್ರಸ್ತಸ್ಯ ಚಾಪಿ ಯತ್ ॥84॥
ಸ್ತ್ರಿಯಾಃ ಪತ್ಯಾ ವಿಹೀನಾಯಾಃ ಸ್ವಾರ್ಥಾದ್ ಭ್ರಷ್ಟಸ್ಯ ಚೈವ ಯತ್ |
ಅಧ್ಯೂಢಾಯಾಶ್ಚ ಯದ್ ದುಃಖಂ ಸಾಕ್ಷಿಭಿರ್ವಿಹತಸ್ಯ ಚ ॥85॥
ಏತಾನಿ ವೈ ಸಮಾನ್ಯಾಹುರ್ದುಃಖಾನಿ ತ್ರಿದಶೇಶ್ವರಾಃ
ತಾನಿ ದುಃಖಾನಿ ಸರ್ವಾಣಿ ಪ್ರಾಪ್ನೋತಿ ವಿತಥಂ ಬ್ರುವನ್ ॥86॥
ಮಗಳನ್ನು ಕಳೆದುಕೊಂಡವನಿಗೆ ಯಾವ ದುಃಖವೋ ಮಗನು ಮೃತನಾದರೆ ಯಾವ ದುಃಖವೋ ಶತ್ರುವಿನಿಂದ ಮುತ್ತಿಗೆ ಹಾಕಲ್ಪಟ್ಟ ದುರ್ಬಲನಾದ ರಾಜನಿಗೆ ಯಾವ ದುಃಖವೋ ಪತಿಯನ್ನು ಶತ್ರುವಿನಿಂದ ಕಳೆದುಕೊಂಡ ಸ್ತ್ರೀಗೆ ಯಾವ ದುಃಖವೋ ತನ್ನ ಎಲ್ಲಾ ಸಂಪತ್ತನ್ನು ಕಳೆದುಕೊಂಡ ಮನುಷ್ಯನಿಗೆ ಯಾವ ದುಃಖವೋ ತನಗಿಂತ ಶ್ರೇಷ್ಠಳಾದ ಸವತಿಯನ್ನು ಪಡೆದವಳಿಗೆ ಯಾವ ದುಃಖವೋ ಈ ಎಲ್ಲಾ ದುಃಖಗಳೂ ಸಾಕ್ಷಿಯಿಂದ ವಿಹತನಾದ ಮನುಷ್ಯನ ದುಃಖಕ್ಕೆ ಸಮನಾಗುತ್ತದೆ. ದೇವತೆಗಳು ಈ ದುಃಖಗಳನ್ನು ಸಮಾನವೆಂದು ಹೇಳುತ್ತಾರೆ. ಸುಳ್ಳನ್ನು ಹೇಳುವವನಿಗೆ ಮತ್ತು ಸಭೆಯಲ್ಲಿ ವಿರುದ್ಧವಾಗಿ ಮಾತನಾಡುವವನಿಗೆ ಈ ಎಲ್ಲಾ ದುಃಖಗಳೂ

ಬಂದು ಸೇರುತ್ತವೆ.
ಸಮಕ್ಷಂ ದರ್ಶನಾತ್ ಸಾಕ್ಷ್ಯಂ ಶ್ರವಣಾಚ್ಚೇತಿ ಧಾರಣಾತ್ |
ತಸ್ಮಾತ್ ಸತ್ಯಂ ಬ್ರುವನ್ ಸಾಕ್ಷೀ ಧರ್ಮಾರ್ಥಾಭ್ಯಾಂ ನ ಹೀಯತೇ ||
ಸ್ವತಃ ನೋಡುವುದರಿಂದ ಸಾಕ್ಷಿ ಎಂದು ಕರೆಯುತ್ತಾರೆ. ಅಥವಾ ಕೇಳುವುದರಿಂದ ಅಥವಾ ಶಿಲೆ, ಪತ್ರಗಳಲ್ಲಿ ಬರೆದಿಡುವುದರಿಂದಲೂ ಸಾಕ್ಷಿ ಎನ್ನುತ್ತಾರೆ. ಆದ್ದರಿಂದ ಸತ್ಯವನ್ನು ಹೇಳುವ ಸಾಕ್ಷಿಯು ಧರ್ಮಾರ್ಥವನ್ನು ಕಳೆದು ಕೊಳ್ಳುವುದಿಲ್ಲ.
ವಿದುರಃ
ಕಾಶ್ಯಪಸ್ಯ ವಚಃ ಶ್ರುತ್ವಾ ಪ್ರಹ್ಲಾದಃ ಪುತ್ರಮಬ್ರವೀತ್ |
ಶ್ರೇಯಾನ್ ಸುಧನ್ವಾ ತ್ವತ್ತೋ ವೈ ಮತ್ತಃ ಶ್ರೇಯಾಂಸ್ತಥಾಽಂಗಿರಾಃ ||
ಮಾತಾ ಸುಧನ್ವನಶ್ಚೈವ ಶ್ರೇಯಸೀ ಮಾತೃತಸ್ತವ |
ವಿರೋಚನ ಸುಧನ್ವಾಽಯಂ ಪ್ರಾಣಾನಾಮೀಶ್ವರಸ್ತವ ||89||
ಕಾಶ್ಯಪರ ಮಾತುಗಳನ್ನು ಕೇಳಿದ ರಾಜನು ಪುತ್ರನಾದ ವಿರೋಚನನನ್ನು ಕುರಿತು ನಿನಗಿಂತ ಸುಧನ್ವನು ಶ್ರೇಷ್ಠನಾದವನು ನನಗಿಂತಲೂ ಅಂಗೀರಸರು ಶ್ರೇಷ್ಠರಾದವರು ಸುಧನ್ವನ ತಾಯಿಯು ನಿನ್ನ ತಾಯಿಗಿಂತ ಶ್ರೇಷ್ಠಳಾದವಳು. ಆದ್ದರಿಂದ ಎಲೈ ವಿರೋಚನನೇ ಈ ಸುಧನ್ವನು ನಿನ್ನ ಪ್ರಾಣಗಳಿಗೆ ಒಡೆಯನಾಗಿದ್ದಾನೆ.
ಸುಧನ್ವಾ
ಪುತ್ರಸ್ನೇಹಂ ಪರಿತ್ಯಜ್ಯ ಯಸ್ತ್ವಂ ಧರ್ಮೇ ವ್ಯವಸ್ಥಿತಃ |
ಅನುಜಾನಾಮಿ ತೇ ಪುತ್ರಂ ಜೀವತ್ವೇಷ ಶತಂ ಸಮಾಃ ||90||
ಪ್ರಹ್ಲಾದನೇ! ಪುತ್ರಸ್ನೇಹವನ್ನು ತೊರೆದು ನೀನು ಧರ್ಮದಲ್ಲೇ ವ್ಯವಸ್ಥಿತನಾಗಿರುವುದರಿಂದ ನಿನ್ನ ಪುತ್ರನಿಗೆ ಅನುಮತಿಯನ್ನು ಕೊಡುತ್ತಿದ್ದೇನೆ. ಇವನು ನೂರು ವರ್ಷ ಜೀವಿಸಲಿ.
ವಿದುರಃ
ಏವಂ ವೈ ಪರಮಂ ಧರ್ಮಂ ಶ್ರುತ್ವಾ ಸರ್ವೇ ಸಭಾಸದಃ |
ಯಥಾಪ್ರಶ್ನಂ ಚ ಕೃಷ್ಣಾಯಾ ಮನ್ಯಧ್ವಂ ತತ್ರ ಕಿಂ ಪರಮ್ ||91||
ಹೀಗೆ ಪರಮಧರ್ಮವನ್ನು ಕೇಳಿದ ಸಭಾಸದರಾದ ನೀವೆಲ್ಲರೂ ದ್ರೌಪದಿಯ ಪ್ರಶ್ನೆಗೆ ಯಾವುದು ಶ್ರೇಷ್ಠವಾದ ಉತ್ತರ ಎಂದು ತಿಳಿಯುತ್ತೀರಿ?
ವಿದುರಸ್ಯ ವಚಃ ಶ್ರುತ್ವಾ ನೋಚುಃ ಕಿಂಚನ ಪಾರ್ಥಿವಾಃ |
ಕರ್ಣೋ ದುಶ್ಶಾಸನಂ ಪ್ರಾಹ ಕೃಷ್ಣಾಂ ದಾಸೀಂ ಗೃಹಂ ನಯ ||92||
ವಿದುರನ ಮಾತುಗಳನ್ನು ಕೇಳಿದ ರಾಜರು ಏನನ್ನೂ ಮಾತನಾಡಲಿಲ್ಲ. ಕರ್ಣನು ದುಶ್ಶಾಸನನನ್ನು ಕುರಿತು ದಾಸಿಯಾದ ದ್ರೌಪದಿಯನ್ನು ಮನೆಗೆ ಕರೆದುಕೊಂಡು ಹೋಗು ಎಂದನು.
ತಾಂ ವೇಪಮಾನಾಂ ಸವ್ರೀಡಾಂ ಲೋಕಯಂತೀಂ ಚ ಪಾಂಡವಾನ್ |
ದುಶ್ಶಾಸನಃ ಸಭಾಮಧ್ಯೇ ವಿಚಕರ್ಷ ತಪಸ್ವಿನೀಮ್||93||
ನಾಚಿಕೆ ಮತ್ತು ಅವಮಾನಗಳಿಂದ ಸಭೆಯ ಮಧ್ಯೆ ನಡುಗುತ್ತಾ ಪಾಂಡವರ ಕಡೆಗೆ ನೋಡುತ್ತಿದ್ದ ಶೋಚನೀಯಳಾದ ಆ ದ್ರೌಪದಿಯನ್ನು ದುಶ್ಶಾಸನನು ಪುನಃ ಎಳೆದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸಭಾಪರ್ವಣಿ ಅಷ್ಟಾಶೀತಿತಮೋಧ್ಯಾಯಃ ||
|| ದ್ಯೂತಪರ್ವಣಿ ವಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತೆಂಟನೆಯ ಅಧ್ಯಾಯವು ಮುಗಿಯಿತು.
*****
ಎಂಭತ್ತೊಂಭತ್ತನೆಯ ಅಧ್ಯಾಯ
(ದ್ರೌಪದಿಯ ವಿಲಾಪ ಮತ್ತು ವಿದುರನ ಸಾಂತ್ವನ.)
ದ್ರೌಪದೀ
ತಾವತ್ ಪ್ರತೀಕ್ಷ ದುಷ್ಪ್ರಜ್ಞ ದುಶ್ಶಾಸನ ನರಾಧಮ |
ಪುರಸ್ತಾತ್ ಕರಣೀಯಂ ಮೇ ನ ಕೃತಂ ಕಾರ್ಯಮುತ್ತಮಮ್ |
ವಿಹ್ವಲಾಽಸ್ಮಿ ಕೃತಾನೇನ ಕರ್ಷತಾ ಬಲಿನಾ ಬಲಾತ್ ||1||
ಅಭಿವಾದಂ ಕರೋಮ್ಯೇಷಾಂ ಕುರೂಣಾಂ ಕುರುಸಂಸದಿ |
ನ ಮೇ ಸ್ಯಾದಪರಾಧೋಽಯಂ ಯದಿದಂ ನ ಕೃತಂ ಮಯಾ ||2||
ಎಲೈ ನರಾಧಮನಾದ ದುರ್ಬುದ್ಧಿಯುಳ್ಳ ದುಶ್ಶಾಸನನೇ! ಒಂದು ಕ್ಷಣ ತಡೆ. ನಾನು ಮೊದಲು ಮಾಡಬೇಕಿದ್ದ ನಿನ್ನ ಹಸ್ತಚ್ಛೇದ ರೂಪವಾದ ಶ್ರೇಷ್ಠವಾದ ಕಾರ್ಯವನ್ನು ಮಾಡಲಿಲ್ಲ. ಅಂತಹ ನಾನು ಬಲಿಷ್ಠನಾದ ನೀನು ನನ್ನನ್ನು ಎಳೆದೊಯ್ಯುತ್ತಿರುವಾಗ ವಿಹ್ವಲಳಾಗಿದ್ದೇನೆ. ಈ ಕುರುಸಭೆಯಲ್ಲಿ ಎಲ್ಲ ಕುರುಗಳಿಗೂ ನಮಸ್ಕಾರವನ್ನು ಮಾಡುತ್ತಿದ್ದೇನೆ.ಈ ದ್ಯೂತವನ್ನು ನಾನು ಮಾಡಲಿಲ್ಲ. ಆದ್ದರಿಂದ ನನ್ನ ಅಪರಾಧವಿಲ್ಲ.
ವೈಶಂಪಾಯನಃ
ಸಾ ತೇನ ಚ ಸಮುದ್ಧೂತಾ ದುಃಖೇನ ಚ ತಪಸ್ವಿನೀ |
ಪತಿತಾ ವಿಲಲಾಪೇದಂ ಸಭಾಯಾಮತಥೋಚಿತಾ ||3||

ಶೋಚನೀಯಳಾದ ದ್ರೌಪದಿಯು ದುಶ್ಶಾಸನನಿಂದ ಎಳೆಯಲ್ಪಟ್ಟವಳಾಗಿ ದುಃಖದಿಂದ ನೆಲದ ಮೇಲೆ ಬಿದ್ದು, ಸಭೆಯಲ್ಲಿ ವಿಲಾಪಮಾಡಲು ಅನರ್ಹಳಾದ ಅವಳು ಹೀಗೆ ವಿಲಾಪವನ್ನು ಮಾಡಿದಳು.

ದ್ರೌಪದೀ

ಸ್ವಯಂವರೇ ಯಾಸ್ಮಿ ನೃಪೈರ್ದೃಷ್ಟಾ ರಂಗೇ ಸಮಾಗತೈಃ |
ನದೃಷ್ಟಪೂರ್ವಾ ಚಾನ್ಯತ್ರ ಸಾಽಹಮದ್ಯ ಸಭಾಂ ಗತಾ ॥4॥

ಯಾವ ನನ್ನನ್ನು ಸ್ವಯಂವರಕಾಲದಲ್ಲಿ ಮಾತ್ರ ರಂಗಸ್ಥಳದಲ್ಲಿ ರಾಜರು ನೋಡಿದ್ದರೋ ಇನ್ನು ಬೇರೆ ಸಮಯದಲ್ಲಿಯೂ ಹಿಂದೆ ಯಾರೂ ನೋಡಿರಲಿಲ್ಲವೋ ಅಂತಹ ನಾನು ಈ ದಿನ ಸಭೆಗೆ ಬಂದಿದ್ದೇನೆ.

ಯಾಂ ನ ವಾಯುರ್ನ ಚಾದಿತ್ಯೋ ದೃಷ್ಟವಂತೌ ಪುರಾ ಗೃಹೇ |
ಸಾಹಮದ್ಯ ಸಭಾಮಧ್ಯೇ ಕ್ಲಿಶ್ಯಾಮಿ ಕುರುಸಂಸದಿ ॥5॥

ಹಿಂದೆ ಅರಮನೆಯಲ್ಲಿ ಯಾವ ನನ್ನನ್ನು ವಾಯುವಾಗಲೀ ಅಥವಾ ಸೂರ್ಯನಾಗಲೀ ನೋಡಿರಲಿಲ್ಲವೋ ಅಂತಹ ನಾನು ಈ ದಿನ ಸಭೆಯ ಮಧ್ಯದಲ್ಲಿ ನಿಂತು ಈ ಕುರುಸಭೆಯಲ್ಲಿ ಕ್ಲೇಶವನ್ನು ಅನುಭವಿಸುತ್ತಿದ್ದೇನೆ.

ಯಾಂ ನ ಮೃಷ್ಯಂತಿ ವಾತೇನ ಸ್ಪೃಶ್ಯಮಾನಾಂ ಪುರಾ ಗೃಹೇ |
ಸ್ಪೃಶ್ಯಮಾನಾಂ ಸಹಂತೇದ್ಯ ಪಾಂಡವಾಸ್ತಾಂ ದುರಾತ್ಮನಾ ॥6॥

ಹಿಂದೆ ಅರಮನೆಯಲ್ಲಿ ಯಾವ ನನ್ನನ್ನು ವಾಯುವು ಸ್ಪರ್ಶಮಾಡಿದರೂ ಸಹಿಸದಿದ್ದ ಪಾಂಡವರು ಅಂತಹ ನನ್ನನ್ನು ಈ ದಿನ ಈ ದುರಾತ್ಮನು ಸ್ಪರ್ಶಮಾಡುವುದನ್ನು ಸಹಿಸುತ್ತಿದ್ದಾರೆ.

ಮೃಷ್ಯಂತೇ ಕುರವಶ್ಚೇಮೇ ಮನ್ಯೇ ಕಾಲವಿಪರ್ಯಯಮ್ |
ಸ್ನುಷಾಂ ದುಹಿತರಂ ಚೈವ ಕ್ಲಿಶ್ಯಮಾನಾಮನರ್ಹತೀಮ್ ॥7॥

ಸೊಸೆಯೂ ಮಗಳೂ ಆದ ಕ್ಲೇಶಕ್ಕೆ ಅನರ್ಹಳಾದ ನಾನು ಹೀಗೆ ಕ್ಲೇಶಪಡುವುದನ್ನು ನೋಡಿ ಈ ಕುರುಗಳೂ ಸುಮ್ಮನಿದ್ದಾರೆ. ಕಾಲವು ವ್ಯತ್ಯಾಸವನ್ನು ಹೊಂದಿದೆ ಎಂದು ಭಾವಿಸುತ್ತೇನೆ.

ಕಿನ್ನ್ವತಃ ಕೃಪಣಂ ಭೂಯೋ ಯದಹಂ ಸ್ತ್ರೀ ಸತೀ ಶುಭಾ |
ಸಭಾಮಧ್ಯೇ ವಿಗಾಹೇದ್ಯ ಕ್ವ ನು ಧರ್ಮೋ ಮಹೀಕ್ಷಿತಾಮ್ ॥8॥

ಇದಕ್ಕಿಂತ ಕೃಪಣವಾದದ್ದು ಏನಿದೆ? ನಾನು ಪರಿಶುದ್ಧಳಾದ ಸ್ತ್ರೀಯಾಗಿ ಈ ಸಭಾಮಧ್ಯದಲ್ಲಿ ನಿಂತಿದ್ದೇನೆ. ರಾಜರ ಧರ್ಮವು ಎಲ್ಲಿ ಹೊಯಿತು?

ಧರ್ಮ್ಯಂ ಸ್ತ್ರಿಯಃ ಸಭಾಂ ಪೂರ್ವಾಂ ನ ನಯಂತೀತಿ ನಃ ಶ್ರುತಮ್ |
ಸ ನಷ್ಟಃ ಕೌರವೇಯೇಷು ಪೂರ್ವೋ ಧರ್ಮಃ ಸನಾತನಃ ॥9॥

ಸ್ತ್ರೀಯರನ್ನು ಪೂರ್ಣವಾದ ಸಭೆಗೆ ಕರೆದುಕೊಂಡು ಹೋಗದಿರುವುದು ಧರ್ಮವೆಂದು ನಾನು ಕೇಳಿದ್ದೇನೆ. ಆ ಸನಾತನವಾದ ಪೂರ್ವಧರ್ಮವು ಈ ದಿನ ಕೌರವರಲ್ಲಿ ನಷ್ಟವಾಗಿದೆ.

ಕಥಂ ಭಾರ್ಯಾ ಪಾಂಡವಾನಾಂ ಪಾರ್ಷತಸ್ಯ ಸ್ವಸಾ ಸತೀ |
ವಾಸುದೇವಸ್ಯ ಚ ಸಖೀ ಪಾರ್ಥಿವಾನಾಂ ಸಭಾಮಿಮಾಮ್ ॥10॥

ಪಾಂಡವರ ಭಾರ್ಯೆಯೂ ಧೃಷ್ಟದ್ಯುಮ್ನನ ತಂಗಿಯೂ ಕೃಷ್ಣನ ಸ್ನೇಹಿತೆಯೂ ಆದ ನನ್ನನ್ನು ರಾಜರಿರುವ ಈ ಸಭೆಗೆ ಹೇಗೆ ಕರೆತಂದರು?

ಮಾಮಿಮಾಂ ಧರ್ಮರಾಜಸ್ಯ ಭಾರ್ಯಾಂ ಸದೃಶವರ್ಣಜಾಮ್ |
ಬ್ರೂತ ದಾಸೀಮದಾಸೀಂ ಚ ಕಿಂ ಕರಿಷ್ಯಾಮಿ ಕೌರವಾಃ ॥11॥

ಕೌರವರೇ! ನಿಮಗೆ ಸಮಾನವಾದ ವರ್ಣದಳಾದ ಧರ್ಮರಾಜನ ಭಾರ್ಯೆಯಾದ ಅದಾಸಿಯಾದ ನನ್ನನ್ನು ದಾಸಿ ಎಂದು ಕರೆಯುತ್ತಿದ್ದೀರಿ. ನಾನೇನು ಮಾಡಲಿ?

ಅಯಂ ಹಿ ಮಾಂ ದೃಢಂ ಕ್ಷುದ್ರಃ ಕೌರವಾಣಾಂ ಯಶೋಹರಃ |
ಕ್ಲಿಶ್ನಾತಿ ನಾಹಂ ತತ್ ಸೋಢುಂ ಚಿರಂ ಶಕ್ಷ್ಯಾಮಿ ಕೌರವಾಃ ॥12॥

ಕೌರವರ ಕೀರ್ತಿನಾಶಕನಾದ ಈ ಕ್ಷುದ್ರನು ನನ್ನನ್ನು ದೃಢವಾಗಿ ಕ್ಲೇಶಕ್ಕೆ ಒಳಪಡಿಸುತ್ತಿದ್ದಾನೆ. ಕೌರವರೇ! ನಾನು ಇದನ್ನು ಬಹಳ ಕಾಲ ಸಹಿಸಲಾರೆ.

ವಿದುರಃ

ಉಕ್ತವಾನಸ್ಮಿ ಕಲ್ಯಾಣಿ ಧರ್ಮಸ್ಯಾಸ್ಯ ಪರಾಂ ಗತಿಮ್ |
ಲೋಕೇ ನ ಶಕ್ಯತೇ ಗಂತುಮಪಿ ವಿಪ್ರೈರ್ಮಹಾತ್ಮಭಿಃ ॥13॥

ಎಲೌ ಕಲ್ಯಾಣಿಯೇ ನಾನು ನಿನಗೆ ಧರ್ಮದ ಸೂಕ್ಷ್ಮಗತಿಯನ್ನು ತಿಳಿಸಿದ್ದೇನೆ. ಲೋಕದಲ್ಲಿ ಮಹಾತ್ಮರಾದ ಬ್ರಾಹ್ಮಣರಿಗೂ ಸಹ ಅದನ್ನು ತಿಳಿಯುವುದು ಕಷ್ಟ.

ಬಲವಾಂಸ್ತು ಯಥಾ ಧರ್ಮಂ ಲೋಕೇ ಪಶ್ಯತಿ ಪೂರುಷಃ |
ಸ ಧರ್ಮೋ ಧರ್ಮವೇಳಾಯಾಂ ಭವತ್ಯಭಿಹತಃ ಪರೈಃ ॥14॥

ಪ್ರಬಲನಾದ ವ್ಯಕ್ತಿಯು ಧರ್ಮವನ್ನು ಹೇಗೆ ನೋಡುತ್ತಾನೋ ಅಂತಹಧರ್ಮವು, ಅಧರ್ಮದ ಸಮಯದಲ್ಲಿ ಪರರಿಂದ ಕೆಡಿಸಲ್ಪಡುತ್ತದೆ.

ನಹಿ ವಕ್ತುಂ ತು ತೇ ಪ್ರಶ್ನಮಿಮಂ ಶಕ್ನೋಮಿ ನಿಶ್ಚಯಾತ್ |
ಸೂಕ್ಷ್ಮತ್ವಾದ್ ಗಹನತ್ವಾಚ್ಚ ಕಾರ್ಯಸ್ಯಾಸ್ಯ ಚ ಗೌರವಾತ್ ॥15॥

ನಾನು ಖಂಡಿತವಾಗಿ ನಿನ್ನ ಈ ಪ್ರಶ್ನೆಯು ಸೂಕ್ಷ್ಮವಾಗಿರುವುದರಿಂದ ಗಹನವಾಗಿರುವುದರಿಂದ ಮತ್ತು ಮುಂದೆ ಆಗ ಬೇಕಾಗಿರುವ ಭೂಭಾರಹರಣರೂಪವಾದ ಕಾರ್ಯದ ಗೌರವದಿಂದ ಅದಕ್ಕೆ ಬಿಡಿಸಿ ಉತ್ತರವನ್ನು ಹೇಳಲು ಸಮರ್ಥನಾಗುತ್ತಿಲ್ಲ.
ನೂನಮಂತಃ ಕುಲಸ್ಯಾಸ್ಯ ಭವಿತಾ ನಚಿರಾದಿವ |
ತಥಾ ಹಿ ಕುರವಃ ಸರ್ವೇ ಲೋಭಮೋಹಪರಾಯಣಾಃ ॥16॥
ನಿಶ್ಚಯವಾಗಿ ಇನ್ನು ಅಲ್ಪ ಕಾಲದಲ್ಲಿಯೇ ಈ ಕುಲದ ನಾಶವು ಸಂಭವಿಸುವುದು. ಅದಕ್ಕೆ ಆನುಗುಣವಾಗಿ ಎಲ್ಲಾ ಕುರುಗಳು ಲೋಭವನ್ನೂ ಮೋಹವನ್ನೂ ಆಶ್ರಯಿಸಿದ್ದಾರೆ.
ಕುಲೇ ಜಾತಾ ಹಿ ಕಲ್ಯಾಣಿ ವ್ಯಸನಾಭ್ಯಾಹತಾ ಭೃಶಮ್ |
ಧರ್ಮ್ಯಾನ್ಮಾರ್ಗಾನ್ನ ಚ್ಯವಂತೇ ಯಥಾ ನಸ್ತ್ವಂ ವಧೂಸ್ತಥಾ ॥17॥
ಎಲೌ ಕಲ್ಯಾಣಿಯೇ! ಸತ್ಕುಲದಲ್ಲಿ ಹುಟ್ಟಿದ ವ್ಯಸನಕ್ಕೆ ಸಿಲುಕಿದ ನಿನ್ನ ಪತಿಗಳಾದ ಪಾಂಡವರು ಧರ್ಮಸಮ್ಮತವಾದ ಮಾರ್ಗವನ್ನು ಬಿಡುತ್ತಿಲ್ಲ. ನೀನಾದರೂ ಸಹ ನಮ್ಮ ಸೊಸೆಯು ಹೇಗಿರಬೇಕೊ ಹಾಗೆಯೇ ನಡೆದು ಕೊಳ್ಳುತ್ತಿದ್ದೀಯೆ.
ಉಪಪನ್ನಂ ಚ ಪಾಂಚಾಲಿ ತವೇದಂ ವೃತ್ತಮೀದೃಶಮ್ |
ಯತ್ ಕೃಚ್ಛ್ರಮಪಿ ಸಂಪ್ರಾಪ್ತಾ ಧರ್ಮಮೇವಾನ್ವವೇಕ್ಷಸೇ ॥18॥
ಪಾಂಚಾಲಿಯೇ ಕಷ್ಟಕ್ಕೆ ಸಿಲುಕಿದರೂ ಧರ್ಮವನ್ನೇ ನೋಡುವ ಇಂತಹ ನಡತೆಯು ಅತ್ಯಂತ ಪಪನ್ನವಾಗಿದೆ.
ಏತೇ ದ್ರೋಣಾದಯಶ್ಚೈವ ವೃದ್ಧಾ ಧರ್ಮವಿದೋ ಜನಾಃ |
ಶೂನ್ಯೈಃ ಶರೀರೈಸ್ತಿಷ್ಠಂತಿ ಗತಾಸವ ಇವಾನತಾಃ ॥19॥
ಈ ದ್ರೋಣ ಮೊದಲಾದ ಪೂಜ್ಯರೂ ಧರ್ಮಜ್ಞರೂ ಮೊದಲಾದ ಜನರೆಲ್ಲರೂ ಪ್ರಾಣವನ್ನು ಕಳೆದು ಕೊಂಡವರಂತೆ ಶೂನ್ಯ ಶರೀರದಿಂದ ತಲೆಯನ್ನು ತಗ್ಗಿಸಿ ಕುಳಿತಿದ್ದಾರೆ.
ಯುಧಿಷ್ಠಿರಸ್ತು ಪ್ರಶ್ನೇಽಸ್ಮಿನ್ ಪ್ರಮಾಣಮಿತಿ ಮೇ ಮತಿಃ |
ಅಜಿತಾಂ ವಾ ಜಿತಾಂ ವಾ ತ್ವಾಂ ಸ್ವಯಂ ವ್ಯಾಹರ್ತುಮರ್ಹತಿ ॥20॥
ಈ ಪ್ರಶ್ನೆಗೆ ಉತ್ತರವನ್ನು ಹೇಳುವ ವಿಷಯದಲ್ಲಿ ಧರ್ಮರಾಜನೇ ಸಮರ್ಥನೆಂದು ನನ್ನ ಅಭಿಪ್ರಾಯ. ನೀನು ಜಿತಳಾಗಿದ್ದೀಯೋ ಅಥವಾ ಅಜಿತಳಾಗಿದ್ದೀಯೋ ಎಂದು ತಾನೇ ಹೇಳಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕೋನನವತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಏಕವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****

ತೊಂಬತ್ತನೆಯ ಅಧ್ಯಾಯ
(ಧರ್ಮರಾಜನು ನಮಗೆ ಪ್ರಭುವಲ್ಲ ಎಂದು ಪಾಂಡವರು ಹೇಳಲಿ ಎಂದು ದುರ್ಯೋಧನನ ಒತ್ತಾಯ, ಅದಕ್ಕೆ ಭೀಮಸೇನನ ಉತ್ತರ.)
ವೈಶಂಪಾಯನಃ
ತಥಾ ಚ ದೃಷ್ಟ್ವಾ ಬಹು ತತ್ರ ದೇವೀಂ
ರೋರೂಯಮಾಣಾಂ ಕುರರೀಮಿವಾರ್ತಾಮ್ |
ನೋಚುರ್ವಚಃ ಸಾಧ್ವಥವಾಽಪ್ಯಸಾಧು
ಮಹೀಕ್ಷಿತೋ ಧಾರ್ತರಾಷ್ಟ್ರಸ್ಯ ಭೀತಾಃ ॥1॥
ಹಾಗೆ ದ್ರೌಪದಿದೇವಿಯು ಆರ್ತಳಾಗಿ ಬಹಳ ರೋದನ ಮಾಡುತ್ತಿರುವುದನ್ನು ನೋಡಿ ರಾಜರು ದುರ್ಯೋಧನನಿಗೆ ಹೆದರಿ ಶುಭವನ್ನಾಗಲೀ ಅಥವಾ ಅಶುಭವನ್ನಾಗಲೀ ಏನನ್ನೂ ಮಾತನಾಡಲಿಲ್ಲ.
ದೃಷ್ಟ್ವಾ ತು ತಾನ್ ಪಾರ್ಥಿವಪುತ್ರಪೌತ್ರಾನ್
ತೂಷ್ಣೀಂಭೂತಾನ್ ಧೃತರಾಷ್ಟ್ರಸ್ಯ ಪುತ್ರಃ |
ಸ್ಮಯನ್ನಿದಂ ವಚನಂ ಬಭಾಷೇ
ಪಾಂಚಾಲರಾಜಸ್ಯ ಸುತಾಂ ತದಾನೀಮ್ ॥2॥
ರಾಜರ ಮಕ್ಕಳು ಮೊಮ್ಮಕ್ಕಳು ಸುಮ್ಮನಿರುವುದನ್ನು ನೋಡಿದ ದುರ್ಯೋಧನನು ಆಗ ಪಾಂಚಾಲರಾಜ ಕುಮಾರಿಯಾದ ಕೃಷ್ಣೆಯನ್ನು ಕುರಿತು ನಗುತ್ತಾ ಹೀಗೆ ಮಾತನಾಡಿದನು.
ತಿಷ್ಠತ್ವಯಂ ಪ್ರಶ್ನ ಉದಾರಸತ್ತ್ವೇ
ಭೀಮೇಽರ್ಜುನೇ ಸಹದೇವೇ ತಥೈವ |
ಪತ್ಯೌ ಚ ತೇ ನಕುಲೇ ಯಾಜ್ಞಸೇನಿ
ವದಂತ್ವೇತೇ ವಚನಂ ತ್ವತ್ಪ್ರಯುಕ್ತಮ್ ॥3॥
ಉದಾರಸತ್ವವುಳ್ಳವಳೇ! ಈ ಪ್ರಶ್ನೆಯನ್ನು ಭೀಮನಿಗೆ ಅರ್ಜುನನಿಗೆ ಮತ್ತು ಸಹದೇವನಿಗೆ ಕೇಳು. ಯಾಜ್ಞಸೇನೆಯೆ! ನಿನ್ನ ಪತಿಯಾದ ನಕುಲನಿಗೂ ಈ ಪ್ರಶ್ನೆಯನ್ನು ಕೇಳು. ನೀನು ಕೇಳಿದ ಪ್ರಶ್ನೆಗೆ ಇವರು ಉತ್ತರವನ್ನು ಹೇಳಲಿ.
ಅನೀಶ್ವರಂ ವಿಬ್ರುವಂತ್ವಾರ್ಯಮಧ್ಯೇ
ಯುಧಿಷ್ಠಿರಂ ತವ ಪಾಂಚಾಲಿಹೇತೋಃ |
ಕುರ್ವಂತು ಸರ್ವೇ ಚಾನೃತಂ ಧರ್ಮರಾಜಂ

ಪಾಂಚಾಲಿ ತ್ವಂ ಮೋಕ್ಷ್ಯಸೇ ದಾಸಭಾವಾತ್ ॥4॥

ಪಾಂಚಾಲಿಯೇ ! ನಿನ್ನ ಕ್ಲೇಶವನ್ನು ನೋಡಿದ ಇವರು ಯುಧಿಷ್ಠಿರನು ನಮಗೆ ಪ್ರಭುವಲ್ಲ ಎಂದು ಈ ಸಭೆಯಲ್ಲಿ ಹೇಳಲಿ. ಪಾಂಚಾಲಿಯೇ ಧರ್ಮರಾಜನ ಮಾತನ್ನು ಎಲ್ಲರೂ ಸುಳ್ಳು ಎಂದು ಹೇಳಲಿ. ಆಗ ನೀನು ದಾಸ್ಯದಿಂದ ಬಿಡುಗಡೆಯನ್ನು ಹೊಂದುವಿ.

ಧರ್ಮೇ ಸ್ಥಿತೋ ಧರ್ಮರಾಜೋ ಮಹಾತ್ಮಾ
ಸ್ವಯಂ ಚೇದಂ ಕಥಯತ್ವಿಂದ್ರಕಲ್ಪಃ |
ಈಶೋ ವಾ ತೇ ಹ್ಯನೀಶೋಽಥವೈಷ
ವಾಕ್ಯಾದಸ್ಯ ಕ್ಷಿಪ್ರಮೇಕಂ ಭಜಸ್ವ ॥5॥

ಮಹಾತ್ಮನಾದ ಧರ್ಮರಾಜನು ಯಾವಾಗಲೂ ಧರ್ಮದಲ್ಲಿಯೇ ನಡೆಯುವವನು. ಇಂದ್ರನಿಗೆ ಸಮಾನವಾದ ಅವನು ತಾನೇ ನಿನಗೆ ಪ್ರಭುವೋ ಅಲ್ಲವೋ ಎಂದು ಹೇಳಲಿ. ಅವನ ವಾಕ್ಯದಂತೆ ಶೀಘ್ರವಾಗಿ ಯಾವುದಾದರೊಂದು ಪಕ್ಷವನ್ನು ಸ್ವೀಕರಿಸಲಿ.

ಸರ್ವೇ ಹೀಮೇ ಕೌರವೇಯಾಃ ಸಭಾಯಾಂ
ದುಃಖಾಂತರೇ ವರ್ತಮಾನಾಸ್ತಥೈವ |
ನ ವಿಬ್ರುವಂತ್ಯಾರ್ಯವೃತ್ತಾ ಯಥಾವತ್
ಪತೀಂಶ್ಚ ತೇ ಸಮವೇಕ್ಷ್ಯಾಲ್ಪಭಾಗ್ಯಾನ್ ॥6॥

ಈ ಸಭೆಯಲ್ಲಿ ಕುಳಿತಿರುವ ಕೌರವರೆಲ್ಲರೂ ನಿನಗೆ ಸಮಾನವಾದ ದುಃಖವನ್ನು ಹೊಂದಿದವರು. ಅಲ್ಪ ಭಾಗ್ಯರಾದ ನಿನ್ನ ಪತಿಗಳನ್ನು ನೋಡಿ ಆರ್ಯವೃತ್ತರಾದ ಇವರು ನಿನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೀಡುತ್ತಿಲ್ಲ.

ವೈಶಂಪಾಯನಃ

ತತಃ ಸಭ್ಯಾಃ ಕುರುರಾಜಸ್ಯ ತತ್ರ
ವಾಕ್ಯಂ ಸರ್ವೇ ಪ್ರಶಶಂಸುಸ್ತಥೋಚ್ಚೈಃ |
ಚೇಲಾವೇಧಾಂಶ್ಚಾಪಿ ಚಕ್ರುರ್ನದಂತೋ
ಹಾಹೇತ್ಯಾಸೀದಪಿ ಚೈವಾತ್ರ ನಾದಃ |
ಸರ್ವೇ ಚಾಸನ್ ಪಾರ್ಥಿವಾಃ ಪ್ರೀತಿಮಂತಃ|
ಕುರುಶ್ರೇಷ್ಠಂ ಪಾರ್ಥಿವಂ ಪೂಜಯಂತಃ ॥7॥

ಆಗ ಕುರುರಾಜನ ಸಭೆಯಲ್ಲಿದ್ದ ಎಲ್ಲಾ ಸಭ್ಯರು ಅವನ ಮಾತುಗಳನ್ನು ಗಟ್ಟಿಯಾಗಿ ಪ್ರಶಂಸಿಸಿದರು. ತಮ್ಮ ಉತ್ತರೀಯಗಳನ್ನು ಬೀಸಿ ಸಂತೋಷದಿಂದ ಗರ್ಜಿಸುತ್ತಾ ದೊಡ್ಡನಾದವನ್ನು ಮಾಡಿದರು. ಅಲ್ಲಿ ಹಾಹಾಕಾರನಾದವು ಉಂಟಾಯಿತು. ಎಲ್ಲ ರಾಜರು ದುರ್ಯೋಧನನಲ್ಲಿ ಪ್ರೀತಿಯುಳ್ಳವರಾಗಿ ಅವನನ್ನು ಮನಸ್ಸಿನಲ್ಲಿಯೇ ಪೂಜಿಸಿದರು.

ಯುಧಿಷ್ಠಿರಂ ಚ ತೇ ಸರ್ವೇ ಸಮವೈಕ್ಷಂತ ಪಾರ್ಥಿವಾಃ |
ಕಿಂ ನು ವಕ್ಷ್ಯತಿ ಧರ್ಮಾತ್ಮಾ ಇತಿ ಸಾಚೀಕೃತಾನನಾಃ ॥8॥

ಆ ಎಲ್ಲ ರಾಜರೂ ಮುಖವನ್ನು ತಿರುಗಿಸಿ ಧರ್ಮರಾಜನ ಕಡೆಗೆ ನೋಡಿ ಈ ಧರ್ಮಾತ್ಮನು ಏನು ಹೇಳುವನು ಎಂದು ಕುತೂಹಲಭರಿತರಾದರು.

ಕಿಂ ನು ವಕ್ಷ್ಯತಿ ಬೀಭತ್ಸುರಜಿತೋ ಯುಧಿ ಪಾಂಡವಃ |
ಭೀಮಸೇನೋ ಯಮೌ ಚೋಭೌ ಭೃಶಂ ಕೌತೂಹಲಾನ್ವಿತಾಃ ॥9॥

ಯುದ್ಧದಲ್ಲಿ ಎಂದೂ ಪರಾಜಯವನ್ನು ಹೊಂದದ ಪಾಂಡುಪುತ್ರನಾದ ಅರ್ಜುನನಾಗಲಿ ಅಥವಾ ಭೀಮಸೇನನಾಗಲೀ ಅಥವಾ ನಕುಲಸಹದೇವರಾಗಲೀ ಏನು ಹೇಳುವರು ಎಂದು ಯೋಚಿಸುತ್ತಾ ಅತ್ಯಂತ ಕುತೂಹಲ ಭರಿತರಾದರು.

ತಸ್ಮಿನ್ನುಪರತೇ ಶಬ್ದೇ ಭೀಮಸೇನೋಽಬ್ರವೀದಿದಮ್ |
ಪ್ರಗೃಹ್ಯ ವಿಪುಲಂ ವೃತ್ತಂ ಭುಜಂ ಚಂದನರೂಷಿತಮ್ ॥10॥

ಅ ಶಬ್ದವು ಅಡಗುತ್ತಿರಲು ಭೀಮಸೇನನು ಚಂದನಲೇಪಿತವಾದ ತನ್ನ ಪೀನವಾದ ವಿಸ್ತಾರವಾದ ಭುಜವನ್ನು ಎತ್ತಿ ಈ ಮಾತನ್ನು ಆಡಿದನು.

ಯದ್ಯೇಷ ಗುರುರಸ್ಮಾಕಂ ಧರ್ಮರಾಜೋ ಯುಧಿಷ್ಠಿರಃ |
ನ ಪ್ರಭುಃ ಸ್ಯಾತ್ ಕುಲಸ್ಯಾಸ್ಯ ನ ವಯಂ ಮರ್ಷಯಾಮಹೇ ॥11॥

ನಮ್ಮ ಹಿರಿಯನಾದ ಧರ್ಮರಾಜನಾದ ಯುಧಿಷ್ಠಿರನು ನಮ್ಮ ಕುಲಕ್ಕೆ ಪ್ರಭುವಲ್ಲ ಎಂದು ಯಾರಾದರೂ ಹೇಳಿದರೆ ನಾವು ಅದನ್ನು ಸಹಿಸುವುದಿಲ್ಲ.

ಈಶೋ ಹಿ ನಃ ಪುಣ್ಯತಪಾಃ ಪ್ರಾಣಾನಾಮಪಿ ಚೇಶ್ವರಃ |
ಮನ್ಯತೇ ಜಿತಮಾತ್ಮಾನಂ ಯದ್ಯೇಷ ವಿಜಿತಾ ವಯಮ್ ॥12॥

ಪವಿತ್ರವಾದ ತಪಸ್ಸುಳ್ಳ ಅವನು ನಮಗೆಲ್ಲರಿಗೂ ಪ್ರಭು. ಅವನು ನಮ್ಮ ಪ್ರಾಣಗಳಿಗೂ ಒಡೆಯ. ಅವನು ತಾನು ಸೋತಿದ್ದೇನೆ ಎಂದು ಭಾವಿಸುವುದಾದರೆ, ನಾವೆಲ್ಲರೂ ಸೋತಿದ್ದೇವೆ.

ನ ಹಿ ಮುಚ್ಯೇತ ಜೀವನ್ ಮೇ ಪದಾ ಭೂಮಿಮುಪಸ್ಪೃಶನ್ |
ಸತ್ಯಧರ್ಮಾನ್ ಪರಾಮೃಶ್ಯ ಪಾಂಚಾಲ್ಯಾ ಮೂರ್ಧಜಾನಿಮಾನ್ ॥

ಪಾಂಚಾಲಿಯ ಕೇಶವನ್ನು ಹಿಡಿದವನು ನನ್ನ ಪಾದಘಾತದಿಂದ ಭೂಮಿಯ ಮೇಲೆ ಬಿದ್ದು ಜೀವ ಸಹಿತನಾಗಿ ಉಳಿಯುವುದಿಲ್ಲ. ಸತ್ಯಧರ್ಮಗಳನ್ನು ಆಶ್ರಯಿಸಿದರೆ ಮಾತ್ರ ಜೀವಸಹಿತನಾಗಿ ಬಿಡುಗಡೆಯನ್ನು ಹೊಂದಬಹುದು.

ಪಶ್ಯಧ್ವಂ ಹ್ಯಾಯತೌ ವೃತ್ತೌ ಭುಜೌ ಮೇ ಪರಿಘಾವಿವ |
ನೈತಯೋರಂತರಂ ಪ್ರಾಪ್ಯ ಮುಚ್ಯೇತಾಪಿ ಪುರಂದರಃ ॥14॥
ನನ್ನ ವಿಸ್ತಾರವಾದ ವೃತ್ತವಾದ ಒನಕೆಗಳಿಂತಿರುವ ಈ ಭುಜಗಳನ್ನು ನೋಡಿ. ಇದರ ಮಧ್ಯದಲ್ಲಿ ಸಿಲುಕಿದವನು ಇಂದ್ರನೇ ಆದರೂ ಅವನು ಬಿಡಿಸಿಕೊಳ್ಳಲಾರ.
ಧರ್ಮಪಾಶಸ್ಸಿತಸ್ತ್ವೇವಮಧಿಗಚ್ಛಾಮಿ ಸಂಕಟಮ್ |
ಗೌರವೇಣ ನಿರುದ್ಧೋಸ್ಯ ನಿಗ್ರಹಾದರ್ಜುನಸ್ಯ ಚ ॥15॥
ಧರ್ಮರಾಜನ ಮೇಲಿನ ಗೌರವದಿಂದ ಬದ್ಧನಾಗಿ ಅರ್ಜುನನ ನಿಗ್ರಹದಿಂದ ನಿಬದ್ಧನಾಗಿ ಈ ಸಂಕಟವನ್ನು ಅನುಭವಿಸುತ್ತಿದ್ದೇನೆ.
ಧರ್ಮರಾಜನಿಸೃಷ್ಟಸ್ತು ಸಿಂಹಃ ಕ್ಷುದ್ರಮೃಗಾನಿವ |
ಧಾರ್ತರಾಷ್ಟ್ರಾನಿಮಾನ್ ಪಾಪಾನ್ ನಿಷ್ಪಿಷೇಯಂ ತಳಾಸಿನಾ ॥16॥
ಧರ್ಮರಾಜನು ಅನುಮತಿಯನ್ನು ನೀಡಿದರೆ ಈ ಕ್ಷುದ್ರರಾದ ಪಾಪಿಗಳಾದ ಧೃತರಾಷ್ಟ್ರಪುತ್ರರನ್ನು ಸಿಂಹವು ಕ್ಷುದ್ರ ಮೃಗಗಳನ್ನು ಸಂಹರಿಸಿದಂತೆ ನನ್ನ ಹಸ್ತತಳದಿಂದಲೇ ಭೂಮಿಯ ಮೇಲೆ ಒರೆಸಿಬಿಡುತ್ತೇನೆ.
ವೈಶಂಪಾಯನಃ
ಏವಮುಕತತ್ವ ಮಹಾಬಾಹುಂ ವಿಷ್ಫುರಂತಂ ಮುಹುರ್ಮುಹುಃ |
ತಮುವಾಚ ತದಾ ಭೀಷ್ಮೋ ದ್ರೋಣೋ ವಿದುರ ಏವ ಚ |
ಕ್ಷಾಮ್ಯತಾಂ ಕ್ಷಾಮ್ಯತಾಮೇವಂ ಸರ್ವಂ ಸಂಭವತಿ ತ್ವಯಿ ॥17॥
ಮಹಾಬಾಹುವಾದ ಭೀಮನು ಹೀಗೆ ಮಾತನಾಡುತ್ತಾ ಅವನ ತುಟಿಗಳು ಕೋಪದಿಂದ ಅದುರುತ್ತಿರಲು ಭೀಷ್ಮ ದ್ರೋಣ ಮತ್ತು ವಿದುರರು ಅವನನ್ನು ಕುರಿತು ಭೀಮಸೇನನೇ! ಶಾಂತನಾಗು ಶಾಂತನಾಗು. ನೀನು ಹೇಳುದುದೆಲ್ಲವೂ ನಿನ್ನಲ್ಲಿ ಉಪಪನ್ನವಾಗಿಯೇ ಇದೆ ಎಂದು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ನವತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ದ್ವಾವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತನೆಯ ಅಧ್ಯಾಯವು ಮುಗಿಯಿತು.
*****
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ತಚ್ಛ್ರುತ್ವಾ ವಚನಂ ಕೃಷ್ಣಾ ಪ್ರತಿಜ್ಞಾಮಕರೋತ್ ತದಾ |
ಭೀಮೋ ದುರ್ಯೋಧನಂ ಹಂತಾ ಕರ್ಣಂ ಹಂತಾ ಧನಂಜಯಃ ॥
ಶಕುನಿಂ ತ್ವಕ್ಷಕಿತವಂ ಸಹದೇವೋ ವಧಿಷ್ಯತಿ |
ಇತ್ಯುಕ್ತೇ ತತ್ ತಥೇತ್ಯಾಹ ಭೀಮಸೇನಃ ಸಭಾತಲೇ ॥367॥
ಅದನ್ನು ಕೇಳಿದ ದ್ರೌಪದಿ ಸಭೆಯಲ್ಲಿ ಪ್ರತಿಜ್ಞೆ ಮಾಡಿದಳು. `ಭೀಮ ದುರ್ಯೋಧನನನ್ನು ಕೊಲ್ಲುತ್ತಾನೆ. ಅರ್ಜುನ ಕರ್ಣನನ್ನು ಕೊಲ್ಲುತ್ತಾನೆ. ಜೂಜಿನಲ್ಲಿ ವಂಚನೆ ಮಾಡುವ ಶಕುನಿಯನ್ನು ಸಹದೇವ ಕೊಲ್ಲುತ್ತಾನೆ'. ದ್ರೌಪದಿ ಹೀಗೆ ಹೇಳಿದಾಗ `ಅದು ಹಾಗೇ ಆಗುವುದು' ಎಂದ ಭೀಮ.
ಪ್ರತಿಜ್ಞಾಮಾದದೇ ಪಾರ್ಥಸ್ತಾಂ ಮಾದ್ರೀನಂದನಸ್ತಥಾ |
ನಕುಲಃ ಪ್ರತಿಜಜ್ಞೇಽಥ ಶಾಕುನೇಯವಧಂ ಪ್ರತಿ ॥368॥
ಅರ್ಜುನನೂ ಆ ಪ್ರತಿಜ್ಞೆಯನ್ನು ಸ್ವೀಕರಿಸಿದ. ಸಹದೇವನೂ ಹಾಗೇ ಮಾಡಿದ. ನಕುಲನೂ ಶಕುನಿಯ ಮಗನನ್ನು ಕೊಲ್ಲುವುದಕ್ಕೆ ಪ್ರತಿಜ್ಞೆ ಮಾಡಿದ.
ತತಃ ಸುಯೋಧನಾನುಜಶ್ಚಕರ್ಷ ಪಾರ್ಷತಾತ್ಮಜಾಮ್ |
ಗೃಹಾಯ ತನ್ನಿಶಾಮ್ಯ ತು ಕ್ರುಧಾಽಽಹ ಮಾರುತಾತ್ಮಜಃ ॥369॥
ಬಳಿಕ ದುಃಶಾಸನ ದ್ರೌಪದಿಯನ್ನು ಮನೆಯೊಳಗೆ ಸೆಳೆದೊಯ್ಯಲು ತೊಡಗಿದ. ಅದನ್ನು ನೋಡಿ ಭೀಮ ಕೋಪದಿಂದ ನುಡಿದ.
ಅರ್ಜುನಾರ್ಜುನ ನೈವಾತ್ರ ಕ್ಷಮಾ ಮೇ ತಾತ ರೋಚತೇ |
ಪತಿತಸ್ಯಾಸ್ಯ ದೇಹಸ್ಯ ಕಾಷ್ಠವಿಷ್ಠಾಸಮಸ್ಯ ಚ |
ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾ ಕರ್ಮ ಸುತಾ ಇತಿ ॥370॥
ಅರ್ಜುನ, ಅರ್ಜುನ, ಈಗ ಸಹನೆ ಮಾಡಿಕೊಳ್ಳುವುದು ನನಗೆ ಸರಿಕಾಣುವುದಿಲ್ಲ. ಈ ಶರೀರ ಪತನ ಹೊಂದಿದಾಗ ಕಟ್ಟಿಗೆಯಂತೆ ಇಲ್ಲವೆ ಮಲದಂತೆ ಆಗುವುದು. ವಿದ್ಯೆ ಕರ್ಮ ಸಂತಾನ ಇವು ಮೂರೇ ಬದುಕಿನ ಫಲವಾಗಿ ಉಳಿವವು.
ಇತಿ ವೇದೋದಿತಂ ವಾಕ್ಯಂ ನ ಸುತೋ ದಾರದೂಷಣೇ |
ದುಷ್ಟದಾರೋ ನ ಚಾಪ್ನೋತಿ ಲೋಕಾನದ್ರ್ಧೋ ಹಿ ದೂಷಿತಃ ॥371॥
ಅರಕ್ಷಣಾದ್ ದೂಷಿತಾಯಾ ನ ತ್ಯಾಗಾಚ್ಚ ಶುಭಂ ಭವೇತ್ ॥372॥
ಇದು ವೇದೋಕ್ತ ವಚನ. ಪತ್ನಿಯನ್ನು ಯಾರಾದರೂ ಬಲಾತ್ಕರಿಸಿದರೆ ಪತಿಗೆ ಸತ್ಸಂತಾನ ಇಲ್ಲವಾಗುವುದು. ಮತ್ತು ಪತ್ನಿ ಕೆಟ್ಟರೆ ಪತಿ ಪುಣ್ಯಲೋಕಗಳನ್ನು ಪಡೆಯಲಾರ. ಏಕೆಂದರೆ ಅವನ ಅರ್ಧ ಅಂಗವೆ ಕೆಟ್ಟು ಹೋಗಿರುತ್ತದೆ. ಪತ್ನಿ ಕೆಟ್ಟು ಹೋದ ಬಳಿಕ ತಾನು ರಕ್ಷಣೆ ಮಾಡದಿದ್ದರೂ ಪರಿತ್ಯಾಗ ಮಾಡಿದರೂ ಸುಖವಿಲ್ಲ.
ಅತೋಽದ್ಯ ಸಾನುಬಂಧಕಾನ್ನಿಹನ್ಮಿ ಧಾರ್ತರಾಷ್ಟ್ರಕಾನ್ |
ಇತಿ ಬ್ರುವನ್ ವ್ಯಲೋಕಯದ್ ರಿಪೂನ್ ದಹನ್ನಿವೌಜಸಾ ॥373॥

ಅದರಿಂದ ನಾನು ಈಗಲೆ ಕೌರವರನ್ನು ಬಂಧು ಸಮೇತರಾಗಿ ಸಂಹರಿಸುವೆನು ಎಂದು ಹೇಲುತ್ತ ಭೀಮ ಓಜಸ್ಸಿನಿಂದ ಶತ್ರುಗಳನ್ನು ಸುಟ್ಟು ಬಿಡುವಂತೆ ನೋಡಿದ.
ದದರ್ಶ ಚ ಮಹಾಘೋರಮಾದಾತುಂ ಪರಿಘಂ ರುಷಾ |
ಕರ್ತುಂ ವ್ಯವಸಿತೋ ಬುದ್ಧ್ಯಾ ನಿಃಶೇಷಾನ್ ಧೃತರಾಷ್ಟ್ರಜಾನ್ ॥374॥
ಭೀಮ ಕೌರವರನ್ನು ಆಗಲೆ ನಿಃಶೇಷರನ್ನಾಗಿ ಮಾಡಲು ಮನಸ್ಸಿನಲ್ಲಿ ನಿಶ್ಚಯಿಸಿದವನಂತೆ ಪರಿಘವನ್ನು ಎತ್ತಿಕೊಳ್ಳಲು ಮಹಾಭಯಂಕರವಾಗಿ ದಿಟ್ಟಿಸಿ ನೋಡಿದ.
ತದಾ ಶಿವಾ ವವಾಶಿರೇ ಸುಯೋಧನಾಗ್ನಿಗೇಹತಃ |
ತಥೈವ ತತ್ಪಿತುರ್ಗೃಹೇಪ್ಯಭೂದ್ ಭಯಾನಕಂ ಬಹು ॥375॥
ಆಗ ದುರ್ಯೋಧನನ ಯಾಗಶಾಲೆಯಲ್ಲಿ ಹೆಣ್ಣು ನರಿಗಳು ಕೂಗಿದುವು. ಧೃತರಾಷ್ಟ್ರನ ಅರಮನೆಯಲ್ಲಿಯೂ ಬಹುಭಯಾನಕ ಉತ್ಪಾತಗಳು ಕಂಡುಬಂದುವು.
ನಿಮಿತ್ತಾನ್ಯತಿಘೋರಾಣಿ ಕುಪಿತೇ ಮಾರುತಾತ್ಮಜೇ |
ದೃಷ್ಟ್ವಾSಂಬಿಕೇಯೋ ವಿದುರಂ ಪಪ್ರಚ್ಛೈಷಾಂ ಫಲಂ ದ್ರುತಂ ॥376॥
ಭೀಮ ಕುಪಿತನಾದಾಗ ಅತಿ ಭಯಾನಕ ಉತ್ಪಾತಗಳುಂಟಾದುದನ್ನು ಕಂಡು ಧೃತರಾಷ್ಟ್ರ ಬೇಗನೆ ವಿದುರನ ಮುಂದೆ ಅವುಗಳ ಫಲವನ್ನು ಕೇಳಿದ.
ಆಹ ತಂ ವಿದುರೋ ಜ್ಯೇಷ್ಠಂ ಕ್ಷಣೇSಸ್ಮಿಂಸ್ತವ ಪುತ್ರಕಾಃ |
ಸಾನುಬಂಧಾ ನಶಿಷ್ಯಂತಿ ವೃಕೋದರಬಲಾಹತಾಃ ॥377॥
ವಿದುರ ಧೃತರಾಷ್ಟ್ರನಿಗೆ ಹೇಳಿದ, `ಇದೇ ಕ್ಷಣದಲ್ಲಿ ನಿನ್ನ ಮಕ್ಕಳೂ, ಬಂಧು ಬಾಂಧವರೂ ಭೀಮನ ಬಲವಾದ ಹೊಡೆತಕ್ಕೆ ಸಿಕ್ಕಿ ನಾಶವಾಗುತ್ತಾರೆ'.
ಕ್ರೀಡಸೇSರ್ಭಕವತ್ ತ್ವಂ ಹಿ ಕಿಂ ಜಿತಂ ಕಿಂ ಜಿತಂ ತ್ವಿತಿ |
ಅಧರ್ಮೇಣ ಜಿತಾನತ್ರ ಜಿತಾನ್ ಪಶ್ಯಸಿ ಪಾಂಡವಾನ್ ॥378॥
ಆದರೂ ನೀನು ಏನು ಗೆದ್ದೆವು ಏನು ಗೆದ್ದೆವೆಂದು ಮಕ್ಕಳಂತೆ ಆಡುತ್ತಿರುವೆ. ಅಧರ್ಮದಿಂದ ಪಾಂಡವರನ್ನು ಗೆದ್ದು ನ್ಯಾಯವಾಗಿ ಗೆದ್ದೆವೆಂದುಕೊಳ್ಳುತ್ತಿ.
ಸ್ತ್ರೀಷು ದ್ಯೂತೇಷು ವಾ ದತ್ತಂ ಮದಾಂಧೇನ ನರೇಣ ವಾ |
ನ ದತ್ತಮಾಹುರ್ವಿದ್ವಾಂಸಸ್ತಸ್ಯ ಬಂಧುಭಿರೇವ ಚ ॥379॥
ಆಹಾರ್ಯಂ ಪುನರಾಹುಶ್ಚ ತಥಾಪಿ ನ ತು ಪಾಂಡವೈಃ |
ತತ್ ಕೃತಂ ತವ ಪುತ್ರಾಣಾಂ ಖ್ಯಾಪಯದ್ಭಿರಶಿಷ್ಟತಾಂ ॥380॥
ವೇಶ್ಯಾಸ್ತ್ರೀಯರಿಗೆ ಕೊಟ್ಟಿದ್ದು, ಜೂಜುಗಳಲ್ಲಿ ಕೊಟ್ಟಿದ್ದು, ಮತ್ತೇರಿ ಎಚ್ಚರದಪ್ಪಿದ ಮನುಷ್ಯ ಕೊಟ್ಟಿದ್ದು ಇವನ್ನು ಬಲ್ಲವರು ನ್ಯಾಯವಾಗಿ ಕೊಟ್ಟಿದ್ದೆಂದು ಹೇಳುವುದಿಲ್ಲ. ಅವರ ಬಂಧುಗಳು ಅವನ್ನು ಹಿಂದಿರುಗಿ ಪಡೆಯಬಹುದು ಎನ್ನುತ್ತಾರೆ. ಆದರೂ ಪಾಂಡವರು ಹಾಗೆ ಮಾಡಲಿಲ್ಲ. ನಿನ್ನ ಮಕ್ಕಳು ಎಷ್ಟು ಅಸಭ್ಯರೆಂದು ಲೋಕಕ್ಕೆ ತೋರಿಸುತ್ತಿದ್ದಾರೆ.
ಇತ್ಯುಕ್ತ ಆಹಾಂSಬಿಕೇಯೋ ನಿಮಿತ್ತಾನಾಂ ಫಲಂ ಕಥಂ |
ನ ಭವೇದಿತಿ ಸ ಪ್ರಾಹ ದ್ರುತಂ ಕೃಷ್ಣ ವಿಮುಚ್ಯತಾಮ್ ॥381॥
ವಿದುರ ಹೀಗೆ ಹೇಳಿದಾಗ ಧೃತರಾಷ್ಟ್ರ `ಈ ಉತ್ಪಾತಗಳ ಫಲ ಬಾರದಂತೆ ಮಾಡುವ ಬಗ್ಗೆ ಹೇಗೆ ಎಂದು ಕೇಳಿದ. ಒಡನೆ ವಿದುರನೆಂದ, `ದ್ರೌಪದಿಯನ್ನು ಮೊದಲು ಬಿಡಿಸು'.
ತೋಷಯಸ್ವ ವರೈಶ್ಚೈನಾಮನ್ಯಥಾ ತೇ ಸುತಾನ್ ಮೃತಾನ್ |
ವಿದ್ಧಿ ಭೀಮೇನ ನಿಷ್ಪಿಷ್ಟಾನ್ ಮಾತ್ರ ತೇ ಸಂಶಯೋ ಭವೇತ್ ॥382॥
ಅವಳಿಗೆ ವರಗಳನ್ನಿತ್ತು ಸಂತೋಷಗೊಳಿಸು. ಇಲ್ಲದಿದ್ದರೆ ನಿನ್ನ ಮಕ್ಕಳು ಭೀಮನಿಂದ ಪುಡಿಯಾಗಿ ಈ ಕ್ಷಣದಲ್ಲಿ ಸತ್ತರೆಂದೇ ತಿಳಿ. ಇದರಲ್ಲಿ ನಿನಗೆ ಸಂಶಯಬೇಡ.
ಕೃಷ್ಣಾ ಚ ಪಾಂಡವಾಶ್ಚೈವ ತಪೋವೃದ್ಧಿಮಭೀಪ್ಸವಃ |
ತಪಸಾ ನೈವ ಧಕ್ಷ್ಯಂತಿ ತೇನ ಜೀವಂತಿ ತೇ ಸುತಾಃ ॥383॥
ದ್ರೌಪದಿಯಾಗಲಿ ಪಾಂಡವರಾಗಲಿ ತಪೋವೃದ್ಧಿಯನ್ನು ಬಯಸುವುದರಿಂದ ತಪಸ್ಸಿನಿಂದ ಸುಡುತ್ತಿಲ್ಲ. ಅದರಿಂದ ನಿನ್ನ ಮಕ್ಕಳು ಇನ್ನೂ ಬದುಕಿದ್ದಾರೆ.
ತಥಾSಪಿ ಯದಿ ಕೃಷ್ಣಾಂ ತ್ವಂ ನ ಮೋಚಯಸಿ ತೇ ಸುತಾನ್ |
ಹನಿಷ್ಯತಿ ನ ಸಂದೇಹೋ ಬಲೇನೈವ ವೃಕೋದರಃ ॥384॥
ಇಷ್ಟಾದರೂ ನೀನು ದ್ರೌಪದಿಯನ್ನು ಬಿಡಿಸದಿದ್ದರೆ ನಿನ್ನ ಮಕ್ಕಳನ್ನು ಭೀಮ ತನ್ನ ಬಾಹುಬಲದಿಂದಲೆ ಕೊಲ್ಲುತ್ತಾನೆ, ಸಂಶಯವಿಲ್ಲ.
ಇತೀರಿತೋ ವಿನಿರ್ಭರ್ತ್ಸ್ಯ ಪುತ್ರಂ ದುಃಶಾಸನಂ ನೃಪಃ |
ಅಮೋಚಯದ್ ವರೈಶ್ಚೈನಾಂ ಛಂದಯಾಮಾಸ ಪಾರ್ಷತೀಂ ॥385॥
ವಿದುರ ಹೀಗೆ ಹೇಳಿದಾಗ ಧೃತರಾಷ್ಟ್ರ ಪುತ್ರ ದುಃಶಾಸನನನ್ನು ಬೈದು ದ್ರೌಪದಿಯನ್ನು ಬಿಡಿಸಿದ. ವರಗಳನ್ನು ಸ್ವೀಕರಿಸುವಂತೆ ಅವಳಿಗೆ ಒತ್ತಾಯಿಸಿದ.
ಛಂದಿತಾ ಸಾ ವರೈಸ್ತೇನ ಧರ್ಮೇ ಭಾಗವತೇ ಸ್ಥಿತಾ |
ನೈವಾತ್ಮನೋ ವರಾನ್ ವವ್ರೇ ತೇಷಾಂ ವಿಮೋಕ್ಷಣಂ ॥386॥

ವರಗಳನ್ನು ಸ್ವೀಕರಿಸಲು ಧೃತರಾಷ್ಟ್ರ ದ್ರೌಪದಿಗೆ ಒತ್ತಾಯಿಸಿದರೂ ಭಾಗವತ ಧರ್ಮದಲ್ಲಿ ನಿಷ್ಠಳಾದ ಅವಳು ತನಗಾಗಿ ವರಗಳನ್ನು ಕೇಳಲಿಲ್ಲ. ಕೇವಲ ಪಾಂಡವರ ವಿಮೋಚನೆಯನ್ನೇ ಕೇಳಿದಳು.

ಯುಧಿಷ್ಠಿರಸ್ಯ ಸಭ್ರಾತುಃ ಸರಾಷ್ಟ್ರಸ್ಯ ವಿಮೋಕ್ಷಣಂ |
ದದೌ ನೃಪೋऽಸ್ಯಾ ನ ಪುನಶ್ಛಂದ್ಯಮಾನಾಪಿ ಸಾऽವೃಣೋತ್ ॥387॥

ಧೃತರಾಷ್ಟ್ರ ಧರ್ಮರಾಜನನ್ನೂ ಅವನ ತಮ್ಮಂದಿರನ್ನೂ ರಾಜ್ಯಸಹಿತ ಬಿಡುಗಡೆ ಮಾಡಿ ಹಿಂದಿರುಗಿಸಿದ. ಇನ್ನೂ ವರ ಕೇಳೆಂದು ಒತ್ತಾಯಿಸಿದರೂ ದ್ರೌಪದಿ ಕೇಳಲಿಲ್ಲ.

ಭರ್ತುರ್ವಿಷ್ಣೋಶ್ಚ ನಾನ್ಯಸ್ಮಾದ್ ವರಸ್ವೀಕಾರ ಇಷ್ಯತೇ |
ಏವಂ ಹಿ ಭಗವದ್ಧರ್ಮಸ್ತಸ್ಮಾತ್ ಸಾ ನಾವೃಣೋತ್ಪರಂ ॥388॥

ಹೆಣ್ಣು ತನ್ನ ಗಂಡನಿಂದ ಅಥವಾ ಪರಮಾತ್ಮನಿಂದ ಹೊರತು ಬೇರೆಯವರಿಂದ ವರ ಪಡೆಯಕೂಡದು. ಭಾಗವತ ಧರ್ಮ ಹೀಗಿದೆ. ಅದರಿಂದ ದ್ರೌಪದಿ ಬೇರೆ ವರ ಪಡೆಯಲಿಲ್ಲ.

ಅಧರ್ಮತೋ ಹೃತತ್ವಾತ್ತು ತದ್ ದಾನಂ ನ ವರೋ ಭವೇತ್ |
ಇತಿ ಮತ್ವಾ ಪಾಂಡವಾನಾಂ ವವ್ರೇ ಕೃಷ್ಣಾ ವಿಮೋಕ್ಷಣಂ ॥389॥

ಧೃತರಾಷ್ಟ್ರ ಪಾಂಡವರ ಬಿಡುಗಡೆಯನ್ನು ನೀಡುದುದು ವರವಾಗುವುದಿಲ್ಲ. ಏಕೆಂದರೆ ಅದು ಅನ್ಯಾಯದಿಂದ ಅಪಹೃತವಾಗಿರುವಂಥದ್ದು. ಹೀಗೆ ಆಲೋಚಿಸಿ ದ್ರೌಪದಿ ಪಾಂಡವರ ಬಿಡುಗಡೆಯನ್ನು ಕೇಳಿದಳು.

ಶ್ವಶುರಾದೈಹಿಕವರಾಃ ಕ್ಷತ್ರಿಯಾಯಾಸ್ತ್ರಯೋ ಯತಃ |
ಉಕ್ತಾಃ ಶತಂ ಚ ವಿಪ್ರಾಯಾ ಧರ್ಮೇ ಭಾಗವತೇ ತತಃ |
ಹೇತುऽನಾನೇನ ವವ್ರೇ ಸಾ ನಾನ್ಯತ್ ಕಿಂಚಿದತಃ ಪರಂ ॥390॥

ಕ್ಷತ್ರಿಯ ಸ್ತ್ರೀಗೆ ಮಾವನಿಂದ ಮೂರು ಐಹಿಕ ವರಗಳೂ ಬ್ರಾಹ್ಮಣ ಸ್ತ್ರೀಗೆ ನೂರು ಐಹಿಕ ವರಗಳೂ ಭಾಗವತ ಧರ್ಮದಲ್ಲಿ ವಿಹಿತವಾಗಿವೆ. ಅದರಿಂದಲೂ ದ್ರೌಪದಿ ಮೇಲೆ ಹೇಳಿದ ವರಗಳನ್ನು ಹೊರತು ಬೇರೇನನ್ನು ಕೇಳಲಿಲ್ಲ.

ತತೋ ವಿಮುಕ್ತಾಃ ಪ್ರಯಯುಶ್ಚ ಪಾರ್ಥಾ
ಗುರೂನ್ಪ್ರಣಮ್ಯ ಸ್ವಪುರಂ ಸಕೃಷ್ಣಾಃ |
ದುರ್ಯೋಧನಾನಂತರಜೋ ಜಗಾದ
ತಾತಂ ನಿಜಂ ಪಾಪಕೃತಾಂ ಪ್ರಧಾನಃ ॥391॥

ಆಗ ಪಾಂಡವರು ವಿಮುಕ್ತರಾಗಿ ಹಿರಿಯರನ್ನು ನಮಸ್ಕರಿಸಿ ದ್ರೌಪದಿಯೊಂದಿಗೆ ತಮ್ಮ ಪಟ್ಟಣಕ್ಕೆ ಹೊರಟರು. ಆಗ ಪಾಪಕಾರಿಗಳಲ್ಲಿ ಅಗ್ರಗಣ್ಯನಾದ ದುಃಶಾಸನ ಧೃತರಾಷ್ಟ್ರನ ಮುಂದೆ ನುಡಿದ.

* * * *

ತೊಂಬತ್ತೊಂದನೆಯ ಅಧ್ಯಾಯ

(ಕರ್ಣನಮಾತುಗಳು. ದುರ್ಯೋಧನನಿಂದ ಊರುದರ್ಶನ, ದ್ರೌಪದಿ ಮೊದಲಾದರ ಪ್ರತಿಜ್ಞೆ, ವಿದುರನ ಮಾತಿನಂತೆ ಧೃತರಾಷ್ಟ್ರನಿಂದ ದ್ರೌಪದಿಗೆ ವರಪ್ರದಾನ.)

ಕರ್ಣಃ

ತ್ರಯಃ ಕಿಲೇಮೇ ಹ್ಯಧನಾ ಭವಂತಿ
ದಾಸಃ ಶಿಷ್ಯಶ್ಚಾಸ್ವತಂತ್ರಾಚ ನಾರೀ |
ತ್ವಂ ದಾಸಪತ್ನೀ ಧನಮಸ್ಯ ಭದ್ರೇ
ಹೀನೇಶ್ವರಾ ದಾಸಧನಂ ಚ ದಾಸೀ ॥1॥

ದಾಸ, ಶಿಷ್ಯ ಮತ್ತು ಅಸ್ವತಂತ್ರಳಾದ ನಾರಿ ಈ ಮೂವರು ಲೋಕದಲ್ಲಿ ನಿರ್ಧನರೆನಿಸುತ್ತಾರೆ. ಎಲೌ ಭದ್ರೆಯೇ! ನೀನು ಪತಿಗಳನ್ನು ಕಳೆದುಕೊಂಡು ದಾಸಧನವೂ ಮತ್ತು ದಾಸಿಯೂ ಆಗಿದ್ದೀಯೆ (ದುರ್ಯೋಧನನ ಮನೆಯ ಕೆಲಸವನ್ನು ಮಾಡುವುದಕ್ಕೆ ಯೋಗ್ಯವಾಗಿರುವುದರಿಂದ ನೀನು ದಾಸಿ. ನೀನು ದುರ್ಯೋಧನನ ದಾಸನಾದ ಧರ್ಮರಾಜ ಪತ್ನಿ ಯಾಗಿರುವುದರಿಂದ ದಾಸನ ಜೀವಂತವಾದ ಧನ. ಆದ್ದರಿಂದ ಸಾಕ್ಷಾತ್ ಉಪಭೋಗಾರ್ಹಳಲ್ಲ.)

ಪ್ರವಿಶ್ಯ ಚಾऽಂತಃ ಪರಿಚಾರೈರ್ಭಜಸ್ವ
ತತ್ ತೇ ಕಾರ್ಯಂ ದಿಷ್ಟಮಾವಿಶ್ಯ ವೇಶ್ಮ |
ಈಶಾಶ್ಚ ಸರ್ವೇ ತವ ರಾಜಪುತ್ರಿ
ಭವಂತಿ ತೇ ಧಾರ್ತರಾಷ್ಟ್ರಾ ನ ಪಾರ್ಥಾಃ ॥2॥

ಆದ್ದರಿಂದ ನೀನು ಅಂತರ್ಗೃಹವನ್ನು ಪ್ರವೇಶಿಸಿ ಪರಿಚಾರಕರ ಜೊತೆಯಲ್ಲಿ ನಿನಗೆ ಆದಿಷ್ಟವಾದ ಕೆಲಸವನ್ನು ಮಾಡು. ರಾಜಕುಮಾರಿಯೇ ಇನ್ನು ಮೇಲೆ ಧೃತರಾಷ್ಟ್ರಪುತ್ರರೆಲ್ಲರೂ ನಿನ್ನ ಒಡೆಯರಾಗುತ್ತಾರೆ. ಪಾಂಡವರು ಒಡೆಯರಾಗುವುದಿಲ್ಲ.

ಅನ್ಯಂ ವೃಣೀಷ್ವ ಪತಿಮಾಶು ಭಾಮಿನಿ
ಯಸ್ಮಾದ್ ದಾಸ್ಯಂ ನ ಭಜಸೇ ದೇವನೇನ |
ಅನವದ್ಯಾ ವೈ ಪತಿಷು ಕಾಮವೃತ್ತಿಃ
ನಿತ್ಯಂ ತು ದಾಸ್ಯೇ ವಿಹಿತಾ ವೈ ತವಾಸ್ತು ॥3॥

ಎಲೌ ಭಾಮಿನಿಯೇ! ಯಾವನು ದ್ಯೂತವನ್ನು ಆಡಿ ದಾಸ್ಯವನ್ನು ಪಡೆಯುವುದಿಲ್ಲವೋ ಅಂತಹ ಇನ್ನೊಬ್ಬ ಪತಿಯನ್ನು ಆರಿಸಿಕೋ. ದಾಸಿಯರು ತಮ್ಮ ಪತಿಗಳ ವಿಷಯದಲ್ಲಿ ಯಾವ ರೀತಿಯಿಂದ ಬೇಕಾದರೂ ವ್ಯವಹರಿಸಬಹುದು. ಅಂತಹ ದಾಸ್ಯವು ನಿನಗೆ

ಶಾಶ್ವತವಾಗಿರಲಿ.
ಪರಾಜಿತೋ ನಕುಲೋ ಭೀಮಸೇನೋ
ಯುಧಿಷ್ಠಿರಃ ಸಹದೇವೋಽರ್ಜುನಶ್ಚ |
ದಾಸೀಭೂತಾ ಪ್ರವಿಶತು ಯಾಜ್ಞಸೇನಿ |
ಪರಾಜಿತಾಸ್ತೇ ಪತಯೋ ನ ಸಂತಿ ||4||
ನಕುಲ ಸಹದೇವ ಅರ್ಜುನ ಭೀಮಸೇನ ಮತ್ತು ಧರ್ಮರಾಜ ಎಲ್ಲರೂ ಪರಾಜಿತರಾಗಿದ್ದಾರೆ. ಎಲೌ ಯಾಜ್ಞಸೇನಿಯೆ ನೀನು ದಾಸಿಯಾಗಿ ದುರ್ಯೋಧನನ ಗೃಹವನ್ನು ಪ್ರವೇಶಿಸು. ಪರಾಜಿತನಾದ ನಿನ್ನ ಮೊದಲಿನ ಪತಿಗಳು ಇಲ್ಲವೆಂದು ತಿಳಿ.
ಪ್ರಯೋಜನಂ ಜನ್ಮನಿ ಕಿಂ ನು ಮನ್ಯತೇ |
ಪರಾಕ್ರಮಂ ಚಾತ್ಮನಿ ಚೇಹ ಪಾರ್ಥಃ |
ಪಾಂಚಾಲ್ಯಸ್ಯ ದ್ರುಪದಸ್ಯಾತ್ಮಜಾಂ ತ್ವಾಂ
ಸಭಾಮಧ್ಯೇ ಯೋಽತಿದೇವೀದ್ ಗ್ಲಹೇಷು ||5||
ಪಾಂಚಾಲರಾಜನಾದ ದ್ರುಪದನ ಪುತ್ರಿಯಾದ ನಿನ್ನನ್ನು ಸಭಾಮಧ್ಯದಲ್ಲಿ ಪಣಕ್ಕೊಡ್ಡಿದ ಧರ್ಮರಾಜನು ಇನ್ನು ತನ್ನ ಜೀವನದಲ್ಲಿ ಯಾವ ಪ್ರಯೋಜನವಿದೆ ಎಂದು ಭಾವಿಸುತ್ತಾನೆ? ಅಥವಾ ತನ್ನಲ್ಲಿ ಏನಾದರೂ ಪರಾಕ್ರಮವಿದೆ ಎಂದು ಹೇಗೆ ತಿಳಿಯುತ್ತಾನೆ?
ವೈಶಂಪಾಯನಃ
ತಚ್ಚ ಶ್ರುತ್ವಾ ಭೀಮಸೇನೋಽತ್ಯಮರ್ಷೀ
ಭೃಶಂ ನಿಶಶ್ವಾಸ ತದಾಽರ್ತರೂಪಃ |
ರಾಜಾನುಗೋ ಧರ್ಮಪಾಶಾನುಬದ್ಧೋ
ದಹನ್ನಿವೈನಂ ಕ್ರೋಧವಿರಕ್ತಚಕ್ಷುಃ ||6||
ಅದನ್ನು ಕೇಳಿದ ಕ್ರೋಧಶೀಲನಾದ ಭೀಮಸೇನನು ರಾಜನನ್ನು ಮೀರಲು ಸಾಧ್ಯವಾಗದೆ ಧರ್ಮಪಾಶದಿಂದ ಬದ್ಧನಾಗಿ ಕ್ರೋಧದಿಂದ ಇನ್ನೂ ಕೆಂಪಾದ ಕಣ್ಣುಳ್ಳವನಾಗಿ ಕರ್ಣನನ್ನು ಸುಟ್ಟು ಬಿಡುವಂತೆ ನೋಡುತ್ತಾ ಬಹಳ ದುಃಖವನ್ನು ಹೊಂದಿ ದೀರ್ಘವಾದ ನಿಟ್ಟುಸಿರನ್ನು ಬಿಟ್ಟನು.
ಭೀಮಸೇನಃ
ನಾಹಂ ಕುಪ್ಯೇ ಸೂತಪುತ್ರಾಯ ರಾಜನ್
ಏತತ್ ಸತ್ಯಂ ದಾಸಧರ್ಮಂ ಪ್ರದಿಷ್ಟಃ |
ಕಿಂ ವಿದ್ವಿಷೋ ವಾಕ್ಯಮಾಹಾರಯೇಯುಃ
ನಾದೇವೀಸ್ತ್ವಂ ಯದ್ಯನಯಾ ನರೇಂದ್ರ ||7||
ಎಲೈ ರಾಜನೇ! ಸೂತಪುತ್ರನಾದ ಕರ್ಣನ ಮಾತುಗಳಿಂದ ನಾನು ಕೋಪಗೊಳ್ಳುವುದಿಲ್ಲ. ಅವನು ನಿಜವಾದ ದಾಸಧರ್ಮವನ್ನು ಹೇಳಿದ್ದಾನೆ. ನರೇಂದ್ರನೇ! ನೀನು ದ್ರೌಪದಿಯನ್ನು ಪಣಕ್ಕೆ ಒಡ್ಡದಿದ್ದರೆ ನಮ್ಮ ಶತ್ರುಗಳು ಇಂತಹ ಮಾತುಗಳನ್ನು ಆಡಲು ಸಾಧ್ಯವಾಗುತ್ತಿತ್ತೆ?
ವೈಶಂಪಾಯನಃ
ರಾಧೇಯಸ್ಯ ವಚಃ ಶ್ರುತ್ವಾ ರಾಜಾ ದುರ್ಯೋಧನಸ್ತದಾ |
ಯುಧಿಷ್ಠಿರಮುವಾಚೇದಂ ತೂಷ್ಣೀಂಭೂತಮಚೇತನಮ್ ||8||
ಕರ್ಣನ ಮಾತುಗಳನ್ನು ಕೇಳಿದ ದುರ್ಯೋಧನನು ಪ್ರಜ್ಞಾರಹಿತನಂತೆ ಮೋಹಿತನಾಗಿದ್ದ ಯುಧಿಷ್ಠಿರನನ್ನು ಕುರಿತು ಈ ಮಾತುಗಳನ್ನು ಆಡಿದನು.
ಭೀಮಾರ್ಜುನೌ ಯಮೌ ಚೈವ ಸ್ಥಿತೌ ನೃಪತಿಶಾಸನೇ |
ಪ್ರಶ್ನಂ ಪ್ರಬ್ರೂಹಿ ಕೃಷ್ಣಾಂ ತ್ವಮಜಿತಾಂ ಯದಿ ಮನ್ಯಸೇ ||9||
ಏವಮುಕತ್ವ ಸ ಕೌಂತೇಯಮಪೋಹ್ಯ ವಸನಂ ಸ್ವಕಮ್ |
ಸ್ಮಯನ್ನೈಕ್ಷತ ಪಾಂಚಾಲೀಮೈಶ್ವರ್ಯಮದಮೋಹಿತಃ ||10||
ಭೀಮಾರ್ಜುನರು ಮತ್ತು ನಕುಲಸಹದೇವರು ರಾಜನಾದ ನಿನ್ನ ಶಾಸನವನ್ನು ಪಾಲಿಸುವವರಾಗಿದ್ದಾರೆ. ದ್ರೌಪದಿಯು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳು. ನೀನು ದ್ರೌಪದಿಯನ್ನು ಅಜಿತಳೆಂದೇನಾದರೂ ಹೇಳುವೆಯಾ? ಧರ್ಮರಾಜನನ್ನು ಕುರಿತು ಹೀಗೆ ಹೇಳಿ, ಐಶ್ವರ್ಯಮದಮೋಹಿತನಾದ ದುರ್ಯೋಧನನು ತನ್ನ ವಸ್ತ್ರವನ್ನು ಧರಿಸಿ ನಗುತ್ತಾ ದ್ರೌಪದಿಯನ್ನು ನೋಡಿದನು.
ಕದಳೀಕಾಂಡಸದೃಶಂ ಸರ್ವಲಕ್ಷಣಪೂಜಿತಮ್ |
ಗಜಹಸ್ತಪ್ರತೀಕಾಶಂ ವಜ್ರಪ್ರತಿಮಗೌರವಮ್ ||11||
ಅಭ್ಯುತ್ಸ್ಮಯಿತ್ವಾ ರಾಧೇಯಂ ಭೀಮಮಾಧರ್ಷಯನ್ನಿವ |
ದ್ರೌಪದ್ಯಾಂ ಪ್ರೇಕ್ಷಮಾಣಾಯಾಂ ಸವ್ಯಮೂರುಮದರ್ಶಯತ್ ||12||
ಬಾಳೆಯ ಕಂಬದಂತೆ ಇದ್ದ, ಸರ್ವಲಕ್ಷಣಸಂಪನ್ನವಾದ, ಆನೆಯಸೊಂಡಿಲ ಕಾಂತಿಯನ್ನು ಹೊಂದಿದ್ದ, ವಜ್ರದಂತೆ ಧೃಢವಾದ, ತನ್ನ ಎಡತೊಡೆಯನ್ನು ಕರ್ಣನನ್ನು ನೋಡಿ ನಗುತ್ತಾ ಭೀಮಸೇನನನ್ನು ಅವಮಾನಗೊಳಿಸುವವನಂತೆ, ದ್ರೌಪದಿಗೆ ತೋರಿಸಿದನು.
ವೃಕೋದರಸ್ತದಾಲೋಕ್ಯ ನೇತ್ರೇ ಉತ್ಫಾಲ್ಯ ಲೋಹಿತೇ|
ಪ್ರೋವಾಚ ರಾಜಮಧ್ಯೇ ತಂ ಸಭಾಂ ವಿಶ್ರಾವಯನ್ನಿವ ||13||
ಭೀಮಸೇನನು ಅದನ್ನು ನೋಡಿ ರಾಜಮಧ್ಯದಲ್ಲಿ ತನ್ನ ಕಣ್ಣುಗಳನ್ನು ಅರಳಿಸಿ ಎಲ್ಲಾ ಸಭೆಗೂ ಕೇಳಿಸುವಂತೆ ಗಟ್ಟಿಯಾಗಿ

ಹೇಳಿದನು.
ಪಿತೃಭಿಃ ಸಹ ಸಾಲೋಕ್ಯಂ ಮಾ ಸ್ಮ ಗಚ್ಛೇದ್ ವೃಕೋದರಃ |
ಯದ್ಯೇತಮೂರುಂ ಗದಯಾ ನ ಭಿದ್ಯೇಽಹಂ ತೇ ಮಹಾಹವೇ ||14||
ಈ ನಿನ್ನ ತೊಡೆಯನ್ನು ನಾನು ದೊಡ್ಡ ಯುದ್ಧದಲ್ಲಿ ಮುರಿಯುದಿದ್ದರೆ ವೃಕೋದರನಾದ ನನಗೆ ಮರಣಾನಂತರದಲ್ಲಿ ಪಿತೃಗಳ ಲೋಕ ಪ್ರಾಪ್ತಿಯಾಗುವುದು ಬೇಡ.
ವೈಶಂಪಾಯನಃ
ಕ್ರುದ್ಧಸ್ಯ ತಸ್ಯ ಸ್ರೋತೋಭ್ಯಃ ನಿಃಸೃತಾಃ ಪಾವಕಾರ್ಚಿಷಃ |
ವೃಕ್ಷಸ್ಯೇವ ವಿನಿಶ್ಚೇರುಃ ಕೋಟರೇಭ್ಯಃ ಪ್ರದಹ್ಯತಃ ||15||
ಉರಿಯುತ್ತಿರುವ ಮರದ ಪೊಟರೆಗಳಿಂದ ಕಿಡಿಗಳು ಹೊರಟಂತೆ ಕ್ರುದ್ಧನಾದ ಭೀಮಸೇನನ ಜ್ವಲಿಸುವ ಕೋಪದಿಂದ ಅಗ್ನಿಯ ಕಿಡಿಗಳು ಹಾರಿ ಬರುತ್ತಿದ್ದವು.
ವಿದುರಃ
ಪರಂ ಭಯಂ ಪಶ್ಯತಿ ಭೀಮಸೇನಾದ್
ಬುಧ್ಯಧ್ವಂ ವೈ ವರುಣಸ್ಯೇವ ಪಾಶಾತ್ |
ದೈವೇಷಿತೋ ನೂನಮಯಂ ಪುರಸ್ತಾತ್ |
ಪರಾಭವೋ ಭರತೇಷೂದಪಾದಿ ||16||
ವರುಣನ ಪಾಶದಿಂದಲೋ ಎಂಬಂತೆ ದುರ್ಯೋಧನನು ಭೀಮಸೇನನಿಂದ ಮಹಾಭಯವನ್ನು ಪಡೆಯುತ್ತಾನೆ. ಇದನ್ನು ಎಲ್ಲರೂ ತಿಳಿಯಿರಿ. ಧರ್ಮರಾಜನ ಪರಾಭವವವು ಮೊದಲೇ ದೇವತೆಗಳಿಂದ ಸಂಕಲ್ಪಿತವಾದದ್ದು ಎನಿಸುತ್ತದೆ. ಅಂತಹ ಒಂದು ಘೋರಕಾರ್ಯವು ಭರತವಂಶದಲ್ಲಿ ಉಂಟಾಯಿತು.
ಅತಿದ್ಯೂತಂ ಕೃತಮಿದಂ ಧಾರ್ತರಾಷ್ಟ್ರಾ
ಯೇಸ್ಯಾಂ ಸ್ತ್ರಿಯಾಂ ವಿವದಧ್ವೇ ಸಭಾಯಾಮ್ |
ಯೋಗಕ್ಷೇಮೋ ದೃಶ್ಯತೇ ನೈವ ನಾಶಂ
ಪಾಪಾತ್ಮಾನಃ ಕುರವೋ ಮಂತ್ರಯಂತೇ ||17||
ಧೃತರಾಷ್ಟ್ರಪುತ್ರರು ಸಭೆಯಲ್ಲಿ ಈ ದ್ರೌಪದಿಯ ಜೊತೆಯಲ್ಲಿ ವಿವಾದವನ್ನು ಮಾಡುತ್ತಿರುವುದರಿಂದ ಇದು ದ್ಯೂತವನ್ನು ಮೀರಿದ ಪಾಪಕರ್ಮವಾಯಿತು. ಕುರುಗಳಿಗೆ ತಮ್ಮ ಯೋಗಕ್ಷೇಮವು ಕಾಣುತ್ತಿಲ್ಲ. ಪಾಪಾತ್ಮರಾದ ಅವರು ತಮ್ಮ ನಾಶವನ್ನೇ ಚಿಂತಿಸುತ್ತಿದ್ದಾರೆ.
ಇದಂ ಧರ್ಮಂ ಕುರವೋ ಜಾನತಾಶು
ದುರ್ದುಷ್ಟೇಽಸ್ಮಿನ್ ಪರಿಷತ್ ಸಂಪ್ರದುಷ್ಯೇತ್ |
ಇಮಾಂ ಚ ಪೂರ್ವಂ ಕಿತವೋಽಗ್ರಹೀಷ್ಯದ್
ದೋಷೋಽಭವಿಷ್ಯನ್ನಪರಾಜಿತಾತ್ಮಾ ||18||
ಈ ಧರ್ಮವನ್ನು ಎಲ್ಲಾ ಕುರುಗಳು ಮೊದಲೇ ತಿಳಿಯಲಿ. ಜಿತಮನಸ್ಕನಲ್ಲದ ಈ ದುರ್ಯೋಧನನು ಈ ದ್ಯೂತಲೀಲೆಯನ್ನು ಧರ್ಮರಾಜನ ಮೇಲೆ ಬಲಾತ್ಕಾರವಾಗಿ ಹೇರದಿದ್ದರೆ ಇಂತಹ ಪರಿಸ್ಥಿತಿಯು ಬರುತ್ತಿರಲಿಲ್ಲ. ದುಷ್ಟಾಲೋಚನೆಯಿಂದ ಮಾಡಿದ ಈ ಕಾರ್ಯದಲ್ಲಿ ಮೂಕರಾಗಿ ಭಾಗವಸಿದ ಈ ಸಭಾಸದರು ದೋಷಕ್ಕೆ ಒಳಗಾಗುವರು.
ಸ್ವಪ್ನೇ ಯಥೈತದ್ಧಿ ಧನಂ ಜಿತಂ ಸ್ಯಾತ್
ಏವಂ ಮನ್ಯೇ ಯದಿ ದೀವ್ಯತ್ಯನೀಶಃ |
ಗಾಂಧಾರಪುತ್ರಸ್ಯ ವಚೋ ನಿಶಮ್ಯ
ಧರ್ಮಾದಸ್ಮಾತ್ ಕುರವೋ ಮಾಽಪಗಾತ ||19||
ಒಂದು ಪಕ್ಷ ಅಸ್ವತಂತ್ರನಾದ ಧರ್ಮರಾಜನು ದ್ಯೂತವನ್ನು ಆಡಿ ಕಳೆದುಕೊಂಡಿದ್ದರೆ, ಹಾಗೆ ಗೆದ್ದ ಧನವು ಸ್ವಪ್ನದಲ್ಲಿಗಳಿಸಿದ ಧನಕ್ಕೆ ಸಮವಾಗಿರುತ್ತದೆ. ಎಲೈ ಕೌರವರೇ! ಗಾಂಧಾರ ರಾಜನ ಪುತ್ರನಾದ ಶಕುನಿಯ ಮಾತನ್ನು ಕೇಳಿ ನೀವು ಧರ್ಮದ ಮಾರ್ಗದಿಂದ ದೂರಹೋಗಬೇಡಿ.
ದುರ್ಯೋಧನಃ
ಭೀಮಸ್ಯ ವಾಕ್ಯೇ ತದ್ವದೇವಾರ್ಜುನಸ್ಯ
ಸ್ಥಿತೋಽಹಂ ವೈ ಯಮಯೋಶ್ಚೈವಮೇವ |
ಯುಧಿಷ್ಠಿರಶ್ಚೇದ್ ವಿವದತ್ಯನೀಶಂ
ತದಾ ದಾಸ್ಯಾನ್ಮೋಕ್ಷ್ಯತೇ ಯಾಜ್ಞಸೇನೀ ||20||
ನಾನು ಭೀಮನ ಅದರಂತೆ ಅರ್ಜುನ ನಕುಲಸಹದೇವರ ಮಾತುಗಳನ್ನು ನಂಬುತ್ತೇನೆ.ತಾನು ಅಸ್ವತಂತ್ರನೆಂದು ಯುಧಿಷ್ಠಿರನು ಸ್ಪಷ್ಟವಾಗಿ ಹೇಳಿದರೆ ಆಗ ದ್ರೌಪದಿಯು ದಾಸ್ಯದಿಂದ ಬಿಡುಗಡೆಯನ್ನು ಹೊಂದುವಳು.
ಅರ್ಜುನಃ
ಈಶೋ ರಾಜಾ ಪೂರ್ವಮಾಸೀದ್ ಗೃಹೇಶಃ
ಕುಂತೀಪುತ್ರೋ ಧರ್ಮರಾಜೋ ಮಹಾತ್ಮಾ |
ಈಶಸ್ತ್ವಯಂ ಕಸ್ಯ ಪರಾಜಿತಾತ್ಮಾ

ತಂ ಜಾನೀಧ್ವಂ ಕುರವಃ ಸರ್ವ ಏವ ॥21॥
ಕುಂತಿಪುತ್ರನಾದ ಮಹಾತ್ಮನಾದ ಧರ್ಮರಾಜನು ಮೊದಲು ನಮಗೆ ಪ್ರಭುವಾಗಿಯೇ ಇದ್ದನು. ಈಗಲೂ ಅವನು ನಮಗೆ ಪ್ರಭುವಾಗಿಯೇ ಇದ್ದಾನೆ. ಅವನು ಯಾರಿಗೆ ಸೋತಿದ್ದಾನೆಂದು ಕುರುಗಳಾದ ನೀವೆಲ್ಲರೂ ತಿಳಿಯಿರಿ. (ಶಕುನಿಯು ಮೋಸಗಾರನಾದ್ದರಿಂದ ಅವನ ಕೈಯ್ಯಲ್ಲಿ ಉಂಟಾದ ಸೋಲು ಸೋಲಾಗುವುದಿಲ್ಲ ಎಂದು ಅರ್ಜುನನ ಅಭಿಪ್ರಾಯ.)
ಕರ್ಣಃ
ದುಶ್ಶಾಸನ ನಿಬೋಧೇದಂ ವಚನಂ ಮೇ ಪ್ರಭಾಷಿತಮ್ |
ಕಿಮನೇನ ಚಿರಂ ವೀರ ನಯಸ್ವ ದ್ರುಪದಾತ್ಮಜಾಮ್ |
ದಾಸೀಭಾವೇನ ಭುಂಕ್ಷ್ವ ತ್ವಂ ಯಥೇಷ್ಟಂ ಕುರು ಮಾನದ ॥22॥
ದುಶ್ಶಾಸನನೇ! ನನ್ನ ಮಾತನ್ನು ಕೇಳು. ಇವರ ಮಾತುಗಳಿಂದ ಏನು ಪ್ರಯೋಜನ? ಮಾನದನೇ! ದ್ರೌಪದಿಯನ್ನು ಕರೆದುಕೊಂಡು ಹೋಗಿ ಅವಳಿಗೆ ದಾಸ್ಯವನ್ನು ನೀಡಿ ನಿನಗೆ ಮನ ಬಂದಂತೆ ಉಪಭೋಗಿಸು.
ವೈಶಂಪಾಯನಃ
ತತೋ ಗಾಂಧಾರರಾಜಸ್ಯ ಪುತ್ರಃ ಶಕುನಿರಬ್ರವೀತ್ |
ಸಾಧು ಕರ್ಣ ಮಹಾಬಾಹೋ ಯಥೇಷ್ಟಂ ಕ್ರಿಯತಾಮಿತಿ ॥23॥
ಗಾಂಧಾರರಾಜನಾದ ಶಕುನಿಯು ಕರ್ಣನೇ! ಸಾಧು, ದುಶ್ಶಾಸನನಿಗೆ ಬೇಕಾದಂತೆ ಮಾಡಲಿ ಎಂದು ಹೇಳಿದನು.
ತತೋ ದುಶ್ಶಾಸನಸ್ತೂರ್ಣಂ ದ್ರುಪದಸ್ಯ ಸುತಾಂ ಬಲಾತ್ |
ಪ್ರವೇಶಯಿತುಮಾರಬ್ಧಃ ಸ ಚಕರ್ಷ ದುರಾತ್ಮವಾನ್ ॥24॥
ಆಗ ದುರಾತ್ಮನಾದ ದುಶ್ಶಾಸನನು ತನ್ನ ಬಲದಿಂದ ದ್ರುಪದರಾಜನ ಪುತ್ರಿಯಾದ ಕೃಷ್ಣೆಯನ್ನು ಅಂತಃಪುರದ ಒಳಗೆ ಕರೆದುಕೊಂಡು ಹೋಗುವುದಕ್ಕಾಗಿ ಎಳೆಯಲು ಪ್ರಾರಂಭಿಸಿದನು.
ತತೋ ವಿಕ್ರೋಶತೀ ವೇಗಾತ್ ಪಾಂಚಾಲೀ ದೇವವರ್ಣಿನೀ ॥25॥
ಆಗ ದೇವತಾಸ್ತ್ರೀ ಕಾಂತಿಯನ್ನು ಹೊಂದಿದ ಪಾಂಚಾಲಿಯು ದುಃಖದಿಂದ ಕಿರುಚಿದಳು.
ದ್ರೌಪದೀ
ಪರಿತ್ರಾಯಸ್ವ ಮಾಂ ಭೀಷ್ಮ ದ್ರೋಣ ದ್ರೌಣೇ ತಥಾ ಕೃಪ |
ಪರಿತ್ರಾಯಸ್ವ ವಿದುರ ಧರ್ಮಿಷ್ಠೋ ಧರ್ಮವತ್ಸಲ ॥26॥
ಎಲೈ ಭೀಷ್ಮನೇ! ದ್ರೋಣ ಅಶ್ವಥಾಮ ಮತ್ತು ಕೃಪಾಚಾರ್ಯರೇ! ಧರ್ಮಿಷ್ಠನಾದ ಧರ್ಮವತ್ಸಲನಾದ ವಿದುರನೇ! ನನ್ನನ್ನು ಕಾಪಾಡಿ. ಕಾಪಾಡಿ.
ಧೃತರಾಷ್ಟ್ರ ಮಹಾರಾಜ ಪರಿತ್ರಾಯಸ್ವ ವೈ ಸ್ನುಷಾಮ್ |
ಗಾಂಧಾರಿ ತ್ವಂ ಮಹಾಭಾಗೇ ಸರ್ವಜ್ಞೇ ಧರ್ಮದರ್ಶಿನಿ |
ಪರಿತ್ರಾಯಸ್ವ ಮಾಂ ದೇವಿ ಸುಯೋಧನಪರಾಜಿತಾಮ್ ॥27॥
ಧೃತರಾಷ್ಟ್ರಮಹಾರಾಜನೇ! ನಿನ್ನ ಸೊಸೆಯನ್ನು ರಕ್ಷಿಸು. ಮಹಾನುಭಾವಳಾದ ಸರ್ವಜ್ಞಳಾದ ಧರ್ಮದರ್ಶಿನಿಯಾದ ಗಾಂಧಾರಿ ದೇವಿಯೇ ಸುಯೋಧನನ ಭಯದಲ್ಲಿ ಸಿಲುಕಿರುವ ನನ್ನನ್ನು ರಕ್ಷಿಸು.
ತ್ವಮಾರ್ಯೇ ವೀರಜನನಿ ಕಿಂ ಮಾಂ ಪಶ್ಯಸಿ ಚಾಪದಿ |
ಕ್ಲಿಶ್ಯಮಾನಾಮನಾರ್ಯೈರ್ಮಾಂ ಕಿ ನ ತ್ರಾಯಸಿ ಸ್ವಾಂ ವಧೂಮ್ ॥
ಎಲೈ ವೀರಮಾತೆಯಾದ ಕುಂತಿಯೇ! ನಾನು ಸಂಕಟದಲ್ಲಿ ಇರುವುದನ್ನು ನೀನು ನೋಡುತ್ತಿಲ್ಲವೇ? ಅನಾರ್ಯ ಪುರುಷರಿಂದ ಕ್ಲೇಶಕ್ಕೆ ಒಳಗಾದ ನಿನ್ನ ಸೊಸೆಯನ್ನು ಏಕೆ ರಕ್ಷಿಸುತ್ತಿಲ್ಲ?
ಇತಿ ಲಾಲಪ್ಯಮಾನಾಂ ಮಾಂ ನ ಕಶ್ಚಿತ್ ಕಿಂಚಿದಬ್ರವೀತ್ |
ಹಾ ಹತಾಸ್ಮಿ ಸುಮಂದಾತ್ಮಾ ಸುಯೋಧನವಶಂ ಗತಾ ॥29॥
ಹೀಗೆ ಗೋಳಾಡುತ್ತಿರುವ ನನ್ನನ್ನು ಕುರಿತು ಯಾರೂ ಒಂದೂಮಾತನ್ನೂ ಆಡುತ್ತಿಲ್ಲ. ಅಯ್ಯೋ! ದುರ್ಯೋಧನನ ವಶಳಾಗಿ ಮಂದ ಭಾಗ್ಯೆಯಾದ ನಾನು ಸತ್ತೆ.
ನ ವಾ ಪಾಂಡುರ್ನರಪತಿರ್ನ ಧರ್ಮೋ ನ ಚ ದೇವರಾಟ್ |
ನ ವಾಯುರ್ನಾಶ್ವಿನೌ ವಾಽಪಿ ಪರಿತ್ರಾಯಂತಿ ವೈ ಸ್ನುಷಾಮ್ |
ಧಿಕ್ ಕಷ್ಟಂ ಯದಹಂ ಜೀವೇ ಮಂದಭಾಗ್ಯಾ ಪತಿವ್ರತಾ ॥30॥
ರಾಜನಾದ ಪಾಂಡುವಾಗಲೀ ಯಮಧರ್ಮರಾಜನಾಗಲೀ ದೇವೇಂದ್ರನಾಗಲೀ ವಾಯುದೇವನಾಗಲೀ ಅಶ್ವಿನಿ ದೇವತೆಗಳಾಗಲೀ ತಮ್ಮಸೊಸೆಯಾದ ನನ್ನನ್ನು ರಕ್ಷಿಸುತ್ತಿಲ್ಲ. ಪತಿವ್ರತೆಯಾದ ಮಂದಭಾಗ್ಯಳಾದ ನಾನು ಬದುಕಿದ್ದೇನೆ. ಅಯ್ಯೋ ಎಂತಹ ಕಷ್ಟ!
ವಿದುರಃ
ಶೃಣೋಮಿ ವಾಕ್ಯಂ ತವ ರಾಜಪುತ್ರಿ
ನವ್ಯೈ ಪಾರ್ಥಾಃ ಕಿಂಚಿದಪಿ ಬ್ರುವಂತಿ |
ಸಾ ತ್ವಂ ಪ್ರಿಯಾರ್ಥಂ ಕುರು ವಾಕ್ಯಮೇತದ್
ಯದುಚ್ಯತೇ ಪಾಪಮತಿಃ ಕೃತಘ್ನಃ ॥31॥
ಸುಯೋಧನಃ ಸಾನುಚರಃ ಸುದುಷ್ಟಃ
ಸಹೈವ ರಾಜ್ಞಾ ಧಿಕ್ಕೃತಸೂನುನಾ ಚ |

ಯದ್ಯೇವ ವಾಕ್ಯಂ ಮಹದುಚ್ಯಮಾನಂ
ನ ಶ್ರೋಷ್ಯತೇ ಪಾಪಮತಿಃ ಸುದುಷ್ಟಃ ॥32॥
ರಾಜ ಪುತ್ರಿಯೇ! ನಿನ್ನ ಮಾತುಗಳನ್ನು ನಾನು ಕೇಳುತ್ತಿದ್ದೇನೆ. ಪಾಂಡವರು ಏನನ್ನೂ ಮಾತನಾಡುತ್ತಿಲ್ಲ. ಎಲ್ಲಾ ಸಜ್ಜನರಿಂದಲೂ ಧಿಕೃತನಾದ ಪಾಪಬುದ್ಧಿಯುಳ್ಳವನೂ ಅತ್ಯಂತದುಷ್ಟನೂ ಆದ ಅನುಚರರಿಂದ ಒಡಗೂಡಿದ ಸುಯೋಧನನು ಹೀಗೆ ಗಟ್ಟಿಯಾಗಿ ಗೋಳಿಡುತ್ತಿರುವ ನಿನ್ನ ಮಾತನ್ನು ಕೇಳದಿದ್ದರೆ, ದುರ್ಯೋಧನನ ಪ್ರೀತಿಗಾಗಿ ಆ ಕೃತಘ್ನನೂ ಮತ್ತು ಪಾಪಮತಿಯೂ ಹೇಳುವ ಮಾತನ್ನು ಕೇಳು.
ವೈಶಂಪಾಯನಃ
ಇತ್ಯೇವಮುಕತ್ತ್ವ ದ್ರುಪದಸ್ಯ ಪುತ್ರೀಂ
ಕ್ಷತ್ತಾಽಬ್ರುವೀದ್ ಧೃತರಾಷ್ಟ್ರಸ್ಯ ಪುತ್ರಮ್ |
ಮಾ ಕ್ಲಿಶ್ಯತಾಂ ವೈ ದ್ರುಪದಸ್ಯ ಪುತ್ರೀ
ಮಾ ತ್ವಂ ಚಾರೀನ್ ದ್ರಕ್ಷ್ಯಸಿ ರಾಜಪುತ್ರಃ ॥33॥
ವಿದುರನು ದ್ರೌಪದಿಯನ್ನು ಕುರಿತು ಹೀಗೆ ಮಾತನಾಡಿ ಅನಂತರ ದುರ್ಯೋಧನನನ್ನು ಕುರಿತು ರಾಜಪುತ್ರನೇ ದ್ರೌಪದಿಯನ್ನು ಹೀಗೆ ಕ್ಲೇಶಗೊಳಿಸಬೇಡ. ಹೀಗೆ ಕ್ಲೇಶಗೊಳಿಸಿದರೆ ನೀನು ಶತ್ರುಗಳಿಂದ ವಿನಾಶವನ್ನು ಹೊಂದುವಿ ಎಂದು ಹೇಳಿದನು.
ತಮೇವಮುಕತ್ತ್ವ ಪ್ರಥಮಂ ಧೃತರಾಷ್ಟ್ರಮುವಾಚ ಹ |
ಯದ್ಯೇವಂ ತ್ವಂ ಮಹಾರಾಜ ಸಂಕ್ಲೇಶಯಸಿ ದ್ರೌಪದೀಮ್ ॥34॥
ಅಚಿರೇಣೈವ ಕಾಲೇನ ಪುತ್ರಸ್ತೇ ಸಹ ಮಂತ್ರಿಭಿಃ |
ಗಮಿಷ್ಯತಿ ಕ್ಷಯಂ ಪಾಪಃ ಪಾಂಡವಾಪ್ರಿಯಕಾರಕಃ ॥35॥
ಭೀಮಾರ್ಜುನಾಭ್ಯಾಂ ಕ್ರುದ್ಧಾಭ್ಯಾಂ ಮಾದ್ರೀಪುತ್ರದ್ವಯೇನ ಚ |
ತಸ್ಮಾನ್ನಿವಾರಯ ಸುತಂ ಮಾ ವಿನಾಶಂ ವಿಚಿಂತಯ ॥36॥
ದುರ್ಯೋಧನನ್ನು ಕುರಿತು ಮೊದಲು ಹೀಗೆ ಮಾತನಾಡಿ ಅನಂತರ ಧೃತರಾಷ್ಟ್ರನನ್ನು ಕುರಿತು ಹೀಗೆ ಮಾತನಾಡಿದನು. ಮಹಾರಾಜನೇ! ನೀನು ಹೀಗೆ ದ್ರೌಪದಿಯನ್ನು ಕ್ಲೇಶಪಡಿಸುತ್ತಿದ್ದರೆ ಅಲ್ಪಕಾಲದಲ್ಲಿಯೇ ನಿನ್ನ ಪುತ್ರನೂ ಮಂತ್ರಿಗಳೂ ಎಲ್ಲರೂ ಪಾಂಡವರಿಗೆ ಅಪ್ರಿಯವನ್ನು ಉಂಟುಮಾಡಿದ ಕಾರಣದಿಂದ ಕ್ರೋಧಗೊಂಡ ಭೀಮಾರ್ಜುನರಿಂದ ಮತ್ತು ನಕುಲಸಹದೇವರಿಂದ ವಿನಾಶವನ್ನು ಹೊಂದುವರು. ಆದ್ದರಿಂದ ನಿನ್ನ ಮಗನನ್ನು ತಡೆ. ವಿನಾಶವನ್ನು ಹೊಂದಬೇಡ.
ವೈಶಂಪಾಯನಃ
ಏತಚ್ಛ್ರುತ್ವಾ ಮಂದಬುದ್ಧಿರ್ನೋತ್ತರಂ ಕಿಂಚಿದಬ್ರುವೀತ್ |
ತತೋ ದುರ್ಯೋಧನಸ್ತತ್ರ ದೈವಮೋಹಬಲಾತ್ಕೃತಃ ॥37॥
ಅಚಿಂತ್ಯ ಕ್ಷತ್ತುರ್ವಚನಂ ಹರ್ಷೇಣಾಯತಲೋಚನಃ |
ಊರೂ ಡರ್ಶಯತೇ ಪಾಪೋ ದ್ರೌಪದ್ಯಾ ವೈ ಮುಹುರ್ಮುಹುಃ ॥
ಇದನ್ನು ಕೇಳಿದ ಮಂದಬುದ್ಧಿಯಾದ ಧೃತರಾಷ್ಟ್ರನಾಗಲೀ ಅಥವಾ ದುರ್ಯೋಧನನಾಗಲೀ ಯಾವ ಮಾತನ್ನೂ ಆಡಲಿಲ್ಲ. ಆಗ ಪಾಪಿಯಾದ ದುರ್ಯೋಧನನು ದೈವಘಟನೆಯಿಂದ ಮೋಹಕ್ಕೆ ಒಳಗಾದವನಾಗಿ ವಿದುರನ ಮಾತುಗಳನ್ನು ಲೆಕ್ಕಿಸದೆ ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ ದ್ರೌಪದಿಗೆ ಮತ್ತೆ ತನ್ನ ತೊಡೆಗಳನ್ನು ತೋರಿಸಿದನು.
ದ್ರೌಪದೀ
ಯಸ್ಮಾಚ್ಚೋರುಂ ದರ್ಶಯಸೇ ಯಸ್ಮಾಚ್ಚೋರುಂ ನಿರೀಕ್ಷಸಿ |
ತಸ್ಮಾತ್ ತವಾಪ್ಯಧರ್ಮಿಷ್ಠ ಊರೌ ಮೃತ್ಯುರ್ಭವಿಷ್ಯತಿ ॥39॥
ಯಸ್ಮಾಚ್ಚೈವಂ ಕ್ಲೇಶಯತಿ ಭ್ರಾತಾ ತೇ ಮಾಂ ದುರಾತ್ಮವಾನ್ |
ತಸ್ಮಾದ್ ರುಧಿರಮೇವಾಸ್ಯ ಪಾಸ್ಯತೇ ವೈ ವೃಕೋದರಃ ॥40॥
ಇಮಂ ಚ ಪಾಪಿಷ್ಠಮತಿಂ ಕರ್ಣಂ ಸಸುತಬಾಂಧವಮ್ |
ಸಾಮಾತ್ಯಂ ಸಪರೀವಾರಂ ಹನಿಷ್ಯತಿ ಧನಂಜಯಃ ॥41॥
ಕ್ಷುದ್ರಕರ್ಮನ್ ನೈಕೃತಿಕಂ ಶಕುನಿಂ ಪಾಪಚೇತಸಮ್ |
ಸಹದೇವೋ ರಣೇ ಕ್ರುದ್ಧೋ ಹನಿಷ್ಯತಿ ಸಬಾಂಧವಮ್ ॥42॥
ಎಲೈ ಅಧರ್ಮಿಷ್ಠನೇ! ನಿನ್ನ ತೊಡೆಗಳನ್ನು ತೊರಿಸುತ್ತಿದ್ದೀಯೆ ಮತ್ತು ನನ್ನ ತೊಡೆಯನ್ನು ನೋಡುತ್ತಿದ್ದೀಯೆ ಆ ಕಾರಣದಿಂದ ನಿನಗೆ ತೊಡೆಯಲ್ಲಿಯೇ ಮೃತ್ಯುವುಂಟಾಗುವುದು. ನಿನ್ನ ದುರಾತ್ಮನಾದ ತಮ್ಮನು ನನ್ನನ್ನು ಈ ರೀತಿ ಸಂಕಟಕ್ಕೆ ಗುರಿಮಾಡಿದುದರಿಂದ ವೃಕೋದರನು ಅವನ ರಕ್ತವನ್ನು ಕುಡಿಯುವನು. ಅತ್ಯಂತ ಪಾಪದ ಬುದ್ಧಿಯುಳ್ಳ ಈ ಕರ್ಣನನ್ನು ಅವನ ಪುತ್ರರು ಬಂಧುಗಳು ಅಮಾತ್ಯರು ಮತ್ತು ಪರಿವಾರದೊಡನೆ ಅರ್ಜುನನು ಸಂಹರಿಸುವನು. ಎಲೈ ಕ್ಷುದ್ರಕರ್ಮಿಯಾದ ದುರ್ಯೋಧನನೇ! ಈ ಪಾಪಬುದ್ಧಿಯುಳ್ಳ ಮೋಸಗಾರನಾದ ಶಕುನಿ ಮತ್ತು ಅವನ ಬಂಧುಗಳನ್ನು ಕ್ರುದ್ಧನಾದ ಸಹದೇವನು ಯುದ್ಧದಲ್ಲಿ ಸಂಹರಿಸುವನು.
ಇತ್ಯೇವಮಾಹ ವಚನಂ ದ್ರೌಪದೀ ಧರ್ಮದರ್ಶಿನೀ |
ತತೋಽಂತರಿಕ್ಷಾತ್ ಸುಮಹತ್ ಪುಷ್ಪವರ್ಷಮವಾಪತತ್ |
ಮೂರ್ಧ್ನ್ಯದೃಶ್ಯತ ಪಾಂಚಾಲ್ಯಾಃ ಸಾಧುಶಬ್ದಶ್ಚ ಸರ್ವಶಃ ॥43॥
ಧರ್ಮದರ್ಶಿನಿಯಾದ ದ್ರೌಪದಿಯು ಹೀಗೆ ಮಾತನಾಡಿದಳು. ಆಗ ದ್ರೌಪದಿಯು ತಲೆಯ ಮೇಲೆ ಅಂತರಿಕ್ಷದಿಂದ ದೊಡ್ಡ

ಪುಷ್ಪವೃಷ್ಟಿಯುಂಟಾಯಿತು. ಎಲ್ಲ ಕಡೆಗಳಿಂದಲೂ ಸಾಧುವೆಂಬ ಶಬ್ದವು ಕೇಳಿ ಬಂದಿತು.
ತೇಷಾಂ ತು ವಚನಂ ಶ್ರುತ್ವಾ ನೋಚುಸ್ತತ್ರ ಸಭಾಸದಃ |
ಅರ್ಜುನಸ್ಯ ಭಯಾದ್ ರಾಜನ್ನಭೂನ್ನಿಶ್ಶಬ್ದಮತ್ರ ವೈ ॥44॥
ಅವರುಗಳ ಮಾತನ್ನು ಕೇಳಿದ ಸಭಾಸದರು ಅರ್ಜುನನ ಭಯದಿಂದ ಏನನ್ನೂ ಮಾತನಾಡಲಿಲ್ಲ. ರಾಜನೇ! ಸಭೆಯು ನಿಶ್ಶಬ್ದವಾಯಿತು.
ದ್ರೌಪದ್ಯಾ ವಚನಂ ಶ್ರುತ್ವಾ ಚುಕೋಪಾಥ ಧನಂಜಯಃ |
ಸ ತದಾ ಕ್ರೋಧತಾಮ್ರಾಕ್ಷ ಇದಂ ವಚನಮಬ್ರವೀತ್ |
ಕರ್ಣಂ ಹಂತಾಸ್ಮಿ ಸಮರೇ ಸಪುತ್ರಂ ಸಹಬಾಂಧವಮ್ ॥45॥
ದ್ರೌಪದಿಯ ಮಾತುಗಳನ್ನು ಕೇಳಿ ಧನಂಜಯನು ಕೋಪಗೊಂಡನು. ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಅವನು ಈ ಮಾತುಗಳನ್ನು ಆಡಿದನು. ಕರ್ಣನನ್ನು ಅವನ ಪುತ್ರ ಮತ್ತು ಬಂಧುಗಳ ಜೊತೆಯಲ್ಲಿ ಯುದ್ಧದಲ್ಲಿ ನಾನು ಕೊಲ್ಲುವೆನು.
ಯಸ್ಯಾಶ್ರಯಾತ್ ಸ್ವಯಂ ಪಾಪೋ ಧಾರ್ತರಾಷ್ಟ್ರಃ ಪ್ರಗರ್ಜತಿ |
ತಂ ಸಮೂಲಂ ಹನಿಷ್ಯಾಮಿ ಸೂತಜಂ ಬಲಶಾಲಿನಮ್ ॥46॥
ಯಾವನನ್ನು ಆಶ್ರಯಿಸಿ ಪಾಪಿಯಾದ ದುರ್ಯೋಧನನು ಹೀಗೆ ಗರ್ಜಿಸುತ್ತಿದ್ದಾನೆಯೋ, ಅಂತಹ ಬಲಶಾಲಿಯಾದ ಸೂತಪುತ್ರನಾದ ಕರ್ಣನನ್ನು ಮೂಲಸಹಿತನಾದ ನಾಶಮಾಡುವೆನು.
ಯೇ ಚಾಪರೇ ಚ ಯೋತ್ಸ್ಯಂತಿ ಧಾರ್ತರಾಷ್ಟ್ರಸ್ಯ ರಾಜಕಾಃ |
ತಾನ್ ಸರ್ವಾನ್ ನಿಹನಿಷ್ಯಾಮಿ ಸತ್ಯೇನಾಯುಧಮಾಲಭೇ ॥47॥
ಇನ್ನು ದುರ್ಯೋಧನನ ಪರವಾಗಿ ಯಾವ ರಾಜರು ಯುದ್ಧವನ್ನು ಮಾಡುವರೋ ಅವರೆಲ್ಲರನ್ನು ನಾನು ಸಂಹರಿಸುವೆನು ಎಂದು ಆಯುಧವನ್ನು ಹಿಡಿದು ಈ ಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ.
ಅದ್ಯೈವಾಹಂ ಹನಿಷ್ಯಾಮಿ ಸರ್ವಾನೇತಾನ್ ಸಭಾಸದಃ |
ಅತೀವ ಮನ್ಯುರ್ಭವತಿ ದೃಷ್ಟ್ವೇಮಾಂ ದ್ರುಪದಾತ್ಮಜಾಮ್ |
ಕಿನ್ನ್ವಹಂ ವೈ ಕರಿಷ್ಯಾಮಿ ಯದ್ ರಾಜಾ ಸತತಂ ಘೃಣೀ ॥48॥
ಈ ಸಭಾಸದರನ್ನು ಈ ದಿನವೇ ಕೊಲ್ಲುವೆನು. ದ್ರೌಪದಿಯ ಸಂಕಟವನ್ನು ನೋಡುವಾಗ ಬಹಳ ಕ್ರೋಧವು ಉಂಟಾಗುತ್ತದೆ. ಆದರೆ ಧರ್ಮರಾಜನು ಯಾವಾಗಲೂ ದಯಾಶೀಲನಾಗಿದ್ದಾನೆ. ನಾನು ಏನುಮಾಡಲು ಸಾಧ್ಯ?
ಅದ್ಯೈವಾಽಹಂ ಮುಹೂರ್ತೇನ ಕೃತ್ಸ್ನಂ ನೃಪತಿಮಂಡಲಮ್ |
ಶರೈರ್ನಯಿಷ್ಯೇ ಸದನಂ ಯಮಸ್ಯಾಮಿತ್ರಕರ್ಶಿನಃ |
ಅಯಂ ತು ಮಾಂ ವಾರಯತೇ ಧರ್ಮರಾಜೋ ಯುಧಿಷ್ಠಿರಃ ॥49॥
ಈ ದಿನವೇ ನಾನು ಇಲ್ಲಿ ನೆರೆದಿರುವ ಸಮಗ್ರವಾದ ರಾಜಸಮೂಹವನ್ನು ನನ್ನ ಬಾಣಗಳಿಂದ ಯಮಲೋಕಕ್ಕೆ ಕಳುಹಿಸುವೆನು. ಈ ಧರ್ಮರಾಜನಾದ ಯುಧಿಷ್ಠಿರನು ಮಾತ್ರ ನನ್ನನ್ನು ತಡೆಯುತ್ತಿದ್ದಾನೆ.
ಯುಧಿಷ್ಠಿರಃ
ಮಾ ಪಾರ್ಥ ಸಾಹಸಂ ಕಾರ್ಷೀರ್ವಿನಾಶಂ ಗಮಯೇದ್ ಯಶಃ |
ಪಾಪಂ ತ್ವಿಮಂ ಪಾಪಮತಿಂ ಸ ಭವಾನ್ ಹಂತುಮುತ್ಸಹೇತ್ |
ತ್ವಮಿಮಂ ಜಗತೋಽರ್ಥೇ ವೈ ಕ್ರೋಧಂ ಸಂಯಚ್ಛ ಪಾಂಡವ ॥
ಅರ್ಜುನನೇ! ಸಾಹಸವನ್ನು ಮಾಡಬೇಡ. ನಮ್ಮ ಕೀರ್ತಿಯು ವಿನಾಶವಾಗದಿರಲಿ. ನೀನು ಈ ಪಾಪ ಬುದ್ಧಿಯುಳ್ಳ ದುರ್ಯೋಧನನನ್ನು ಕೊಲ್ಲಲು ಉತ್ಸಾಕನಾಗಿದ್ದೀಯೆ. ಎಲೈ ಪಾಂಡವನೇ! ಆದರೂ ಪ್ರಪಂಚದ ಸಲುವಾಗಿ ಈ ನಿನ್ನ ಕೋಪವನ್ನು ಉಪಸಂಹಾರಮಾಡು.
ವೈಶಂಪಾಯನಃ
ಏವಮುಕ್ತಸ್ತದಾ ರಾಜ್ಞಾ ಪಾಂಡವೋಥ ಧನಂಜಯಃ |
ಕ್ರೋಧಂ ಸಂಶಮಯನ್ ಪಾರ್ಥೋ ಧಾರ್ತರಾಷ್ಟ್ರಂ ಪ್ರತಿ ಸ್ಥಿತಃ ॥
ರಾಜನಾದ ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಅರ್ಜುನನು ದುರ್ಯೋಧನನ ಬಗ್ಗೆ ಇದ್ದ ತನ್ನ ಕೋಪವನ್ನು ಉಪಶಮನಗೊಳಿಸಿ ದುರ್ಯೋಧನನ ಎದುರಿಗೆ ನಿಂತನು.
ತಸ್ಮಿನ್ ವೀರೇ ಪ್ರಶಾಂತೇ ತು ಪಾಂಡವೇ ಫಲ್ಗುನೇ ತತಃ |
ಸರ್ವಂ ಪ್ರಹೃಷ್ಟಮಭವಜ್ಜಗತ್ ಸ್ಥಾವರಜಂಗಮಮ್ ॥52॥
ಆ ವೀರನಾದ ಪಾಂಡುಪುತ್ರನಾದ ಅರ್ಜುನನು ಶಾಂತನಾಗುತ್ತಿರಲು ಸ್ಥಾವರಜಂಗಮಾತ್ಮಕವಾದ ಎಲ್ಲ ಪ್ರಪಂಚವೂ ಸಂತೋಷಗೊಂಡಿತು.
ವಾರಿತಂ ಚ ತತೋ ದೃಷ್ಟ್ವಾ ಭ್ರಾತ್ರಾ ಪಾರ್ಥಂ ವೃಕೋದರಃ |
ಬಭೂವ ವಿಮನಾ ರಾಜನ್ನಭೂನ್ನಿಶ್ಶಬ್ದಮತ್ರ ವೈ ॥53॥
ಅಣ್ಣನಾದ ಧರ್ಮರಾಜನಿಂದ ಅರ್ಜುನನು ನಿವಾರಿಸಲ್ಪಟ್ಟಿದ್ದನ್ನು ನೋಡಿ ಭೀಮಸೇನನು ಬಹಳ ಬೇಸರಗೊಂಡನು. ರಾಜನೇ! ಪುನಃ ಸಭೆಯು ನಿಶ್ಶಬ್ದವಾಯಿತು.
ತತೋ ರಾಜ್ಞೋ ಧೃತರಾಷ್ಟ್ರಸ್ಯ ಗೇಹೇ
ಗೋಮಾಯುರುಚ್ಚೈರ್ವ್ಯಾಜಹಾರಾಗ್ನಿಹೋತ್ರೇ |

ತಂ ರಾಸಭಾಃ ಪ್ರತ್ಯವದಂಶ್ಚ ರಾಜನ್
ಸಮಂತತಃ ಪಕ್ಷಿಣಶ್ಚೈವ ರೌದ್ರಾಃ ॥54॥
ಆಗ ರಾಜನಾದ ಧೃತರಾಷ್ಟ್ರನ ಅಗ್ನಿಹೋತ್ರದಲ್ಲಿ ನರಿಯು ಉಚ್ಛಸ್ವರದಲ್ಲಿ ಕೂಗಿತು. ರಾಜನೇ! ಅದಕ್ಕೆ ಕತ್ತೆಗಳು ಮತ್ತು ಉಗ್ರವಾದ ಪಕ್ಷಿಗಳು ಎಲ್ಲ ಕಡೆಗಳಿಂದಲೂ ಪ್ರತಿಧ್ವನಿಯನ್ನು ನೀಡಿದವು.
ತಂ ವೈ ಶಬ್ದಂ ವಿದುರಸ್ತ್ವ ವೇದೀತ್
ಸಾ ಚೈವ ದೇವೀ ಸುಬಲಾತ್ಮಜಾ ಚ |
ಭೀಷ್ಮೋ ದ್ರೋಣೋ ಗೌತಮಶ್ಚಾಪಿ ವಿದ್ವಾನ್
ಸ್ವಸ್ತಿ ಸ್ವಸ್ತೀತ್ಯಬ್ರುವನ್ ಸರ್ವ ಏವ ॥55॥
ಆ ಶಬ್ದವನ್ನು(ಶಬ್ದದ ಫಲವನ್ನು) ವಿದುರನು ತಿಳಿದನು. ಹಾಗೆಯೇ ಸುಬಲಪುತ್ರಿಯಾದ ಗಾಂಧಾರಿಯೂ ತಿಳಿದಳು ಮತ್ತು ವಿದ್ವಾಂಸರಾದ ಭೀಷ್ಮ, ದ್ರೋಣ ಮತ್ತು ಕೃಪರು ತಿಳಿದರು. ಎಲ್ಲರೂ ಸ್ವಸ್ತಿ ಎಂದು ಹೇಳಿದರು. (ಒಳ್ಳೆಯದಾಗಲಿ, ಕೆಟ್ಟದ್ದು ಆಗುವುದು ಬೇಡ ಎಂದು ಹೇಳಿದರು.)
ತತೋ ಗಾಂಧಾರೀ ವಿದುರಶ್ಚೈವ ವಿದ್ವಾನ್
ತಮುತ್ಪಾತಂ ಘೋರಮಾಲಕ್ಷ್ಯ ರಾಜ್ಞೇ |
ನಿವೇದಯಾಮಾಸತುರಾರ್ತವತ್ ತದಾ
ತತೋ ರಾಜಾ ವಾಕ್ಯಮಿದಂ ಬಭಾಷೇ॥56॥
ಆಗ ಗಾಂಧಾರಿಯೂ ಮತ್ತು ಮೇಧಾವಿಯಾದ ವಿದುರನೂ ಈ ಘೋರವಾದ ಅಪಶಕುನಗಳನ್ನು ಅವಲೋಕಿಸಿ ಆರ್ತರಾಗಿ ರಾಜನಿಗೆ ನಿವೇದಿಸಿದರು. ಆಗ ರಾಜನಾದ ಧೃತರಾಷ್ಟ್ರನು ಈ ಮಾತನ್ನು ಆಡಿದನು.
ಹತೋಽಸಿ ದುರ್ಯೋಧನ ಮಂದಬುದ್ಧೇ
ಯಸ್ತ್ವಂ ಸಭಾಯಾಂ ಕುರುಪುಂಗವಾನಾಮ್ |
ಸ್ತ್ರಿಯಂ ಸಮಾಕರ್ಷಸಿ ದುರ್ವಿನೀತ
ವಿಶೇಷತೋ ದ್ರೌಪದೀಂ ಧರ್ಮಪತ್ನೀಮ್ ॥57॥
ಮಂದಬುದ್ಧಿಯಾದ ದುರ್ಯೋಧನನೇ! ನೀನು ಸಭೆಯಲ್ಲಿ ಕುರುಶ್ರೇಷ್ಠರ ಅದರಲ್ಲೂ ವಿಶೇಷವಾಗಿ ಪಾಂಡವರ ಧರ್ಮಪತ್ನಿಯನ್ನು ಹೀಗೆ ಎಳೆದಾಡುತ್ತಿರುವುದರಿಂದ ಎಲೈ ದುರ್ವಿನೀತನೇ! ನೀನು ಮೃತನಾಗಿದ್ದೀಯೆ.
ಏವಮುಕತ್ವ ಧೃತರಾಷ್ಟ್ರೋ ಮನೀಷೀ
ಹಿತಾನ್ವೇಷೀ ಬಾಂಧವಾನಾಮಪಾಯಾತ್ |
ಕೃಷ್ಣಾಂ ಪಾಂಚಾಲೀಮಬ್ರವೀತ್ ಸಾಂತ್ವಪೂರ್ವಂ
ವಿಮೃಶ್ಯೈತತ್ ಪ್ರಜ್ಞಯಾ ಮಂದಬುದ್ಧಿಃ ॥58॥
ಹೀಗೆ ಮಾತನಾಡಿ ವಿವೇಕಿಯಾದ ಧೃತರಾಷ್ಟ್ರನು ತನ್ನ ಬಂಧುಗಳನ್ನು ಅಪಾಯದಿಂದ ಪಾರುಮಾಡಲು ಬಯಸಿ ಮೇಧಾವಿಯಾದ ಅವನು ತನ್ನ ಪ್ರಜ್ಞೆಯಿಂದ ಎಲ್ಲವನ್ನು ವಿಮರ್ಶೆಮಾಡಿ ದ್ರೌಪದಿಯನ್ನು ಕುರಿತು ಸಮಾಧಾನಪೂರ್ವಕವಾಗಿ ಈ ಮಾತನ್ನು ಆಡಿದನು.
ವರಂ ವೃಣೀಷ್ವ ಪಾಂಚಾಲಿ ಮತ್ತೋ ಯದಭಿಕಾಂಕ್ಷಸಿ |
ವಧೂನಾಂ ಹಿ ವಿಶಿಷ್ಟಾ ಮೇ ತ್ವಂ ಧರ್ಮಪರಮಾ ಸತೀ ॥59॥
ಪಾಂಚಾಲಿಯೇ! ನೀನು ನನ್ನ ಎಲ್ಲಾ ಸೊಸೆಯರಲ್ಲಿಯೂ ಶ್ರೇಷ್ಠಳಾದವಳು ಮತ್ತು ಧರ್ಮಿಷ್ಠಳಾದವಳು. ನಿನಗೆ ಬೇಕಾದ ವರವನ್ನು ನನ್ನಿಂದ ಕೇಳು.
ದ್ರೌಪದೀ
ದದಾಸಿ ಚೇದ್ ವರಂ ಮಹ್ಯಂ ವೃಣೋಮಿ ಭರತರ್ಷಭ |
ಸರ್ವಧರ್ಮಾನುಗಃ ಶ್ರೀಮಾನದಾಸೋಽಸ್ತು ಯುಧಿಷ್ಠಿರಃ ॥60॥
ಭರತರ್ಷಭನೇ! ನೀನು ನನಗೆ ವರವನ್ನು ಕೊಡುವುದಾದರೆ ಸರ್ವಧರ್ಮಅನುಸಾರಿಯಾದ ಸಂಪದ್ಯುಕ್ತನಾದ ಯುಧಿಷ್ಠಿರನು ದಾಸ್ಯದಿಂದ ಬಿಡುಗಡೆಯನ್ನು ಹೊಂದಲಿ.
ಮನಸ್ವಿನಮಜಾನಂತೋ ಮೈವಂ ಬ್ರೂಯುಃ ಕುಮಾರಕಾಃ |
ಏಷ ವೈ ದಾಸಪುತ್ರೇತಿ ಪ್ರತಿವಿಂಧ್ಯಂ ಮಮಾತ್ಮಜಮ್ ॥61॥
ಅವನ ಧೈರ್ಯ ಸಾಹಸಗಳನ್ನು ತಿಳಿಯದೆ ಉಳಿದ ಕುಮಾರರು ನನ್ನ ಮತ್ತು ಧರ್ಮರಾಜನ ಪುತ್ರನಾದ ಪ್ರತಿವಿಂಧ್ಯನನ್ನು ದಾಸಪುತ್ರ ಎಂದು ಕರೆಯುವುದು ಬೇಡ.
ರಾಜಪುತ್ರಃ ಪುರಾ ಭೂತ್ವಾ ಯಥಾ ನಾನ್ಯಃ ಪುಮಾನ್ ಕ್ವಚಿತ್ |
ಲಾಳಿತೋ ದಾಸಪುತ್ರತ್ವಂ ಪಶ್ಯನ್ ನಶ್ಯೇದ್ಧಿ ಭಾರತ ॥62॥
ಎಲೈ ಭಾರತನೇ! ಮೊದಲು ರಾಜಪುತ್ರನಾಗಿ ಮರ್ಯಾದೆಯನ್ನು ಪಡೆದು ಇನ್ನೊಬ್ಬ ಕುಮಾರನು ಪಡೆಯದ ಲಾಲನೆಯನ್ನು ಪಡೆದು ಈಗ ತಾನು ದಾಸ ಪುತ್ರನೆಂದು ತಿಳಿದರೆ ಅವನು ವಿನಾಶವನ್ನು ಹೊಂದುವನು.
ಧೃತರಾಷ್ಟ್ರ
ತಥಾಸ್ತು ತೇ ಮಹಾಭಾಗೇ ಯಥಾ ತ್ವಂ ನಂದಿನೀಚ್ಛಸಿ |
ದ್ವಿತೀಯಂ ತೇ ವರಂ ಭದ್ರೇ ದದಾಮಿ ವರಯಸ್ವ ಮೇ |

ಮನೋ ಹಿ ಮೇ ವಿತರತಿ ನೈಕಂ ತ್ವಂ ವರಮರ್ಹಸಿ ॥63॥
ಮಹಾನುಭಾವಳೇ! ಮಗಳೇ! ನೀನು ಬಯಸಿದಂತೆಯೇ ಆಗಲಿ. ಮಂಗಳಸ್ವರೂಪಳೇ ಎರಡನೆಯ ವರವನ್ನು ಕೊಡುತ್ತೇನೆ. ಅದನ್ನು ಕೇಳು. ನನ್ನ ಮನಸ್ಸು ನಿನಗೆ ಇನ್ನೂ ವರವನ್ನು ಕೊಡಬೇಕೆಂದು ಕಾತರಿಸುತ್ತಿದೆ. ಒಂದು ವರವು ನಿನಗೆ ಸಾಕಾಗುವುದಿಲ್ಲ.
ದ್ರೌಪದೀ
ಸರಥೌ ಸಧನುಷ್ಕೌ ಚ ಭೀಮಸೇನಧನಂಜಯೌ |
ನಕುಲಃ ಸಹದೇವಶ್ಚ ದ್ವಿತೀಯಂ ವರಯೇ ವರಮ್ ॥64॥
ಭೀಮಸೇನಾರ್ಜುನರು ಮತ್ತು ನಕುಲ ಸಹದೇವರು ತಮ್ಮ ರಥ ಮತ್ತು ಆಯುಧಗಳಿಂದ ಕೂಡಿದವರಾಗಿ ದಾಸ್ಯದಿಂದ ಬಿಡುಗಡೆಯನ್ನು ಹೊಂದಲಿ. ಇದು ನಾನು ಕೇಳುವ ಎರಡನೆಯ ವರ.
ಧೃತರಾಷ್ಟ್ರಃ
ಏವಂ ಭವತು ಕಲ್ಯಾಣಿ ಯಥಾ ತ್ವಮಭಿಭಾಷಸೇ |
ತೃತೀಯಂ ವರಯಾಸ್ಮತ್ತೋ ನಾಸಿ ದ್ವಾಭ್ಯಾಂ ಸುಸತ್ಕೃತಾ |
ತ್ವಂ ಹಿ ಸರ್ವಸ್ನುಷಾಣಾಂ ಮೇ ಶ್ರೇಯಸೀ ಧರ್ಮಚಾರಿಣೀ ॥65॥
ಎಲೌ ಕಲ್ಯಾಣಿಯೇ ನೀನು ಹೇಳಿದಂತೆ ಆಗಲಿ. ಮೂರನೆಯ ವರವನ್ನು ಕೇಳು. ಎರಡು ವರಗಳಿಂದ ನಿನ್ನನ್ನು ಸತ್ಕರಿಸಿದಂತೆ ಆಗುವುದಿಲ್ಲ. ನೀನು ನನ್ನ ಎಲ್ಲಾ ಸೊಸೆಯರಲ್ಲಿಯೂ ಶ್ರೇಷ್ಠಳಾದವಳು ಮತ್ತು ಧರ್ಮಿಷ್ಠಳಾದವಳು.
ದ್ರೌಪದೀ
ಲೋಭೋ ಧರ್ಮವಿನಾಶಾಯ ಭಗವನ್ ನಾಹಮುತ್ಸಹೇ |
ಅನರ್ಹಾ ವರಮಾದಾತುಂ ತೃತೀಯಂ ರಾಜಸತ್ತಮ ॥66॥
ಪೂಜ್ಯನಾದ ರಾಜಶ್ರೇಷ್ಠನೇ! ಲೋಭವು ಧರ್ಮವನ್ನು ನಾಶಮಾಡುತ್ತದೆ. ನಾನು ಮೂರನೆಯ ವರವನ್ನು ಕೇಳಲು ಬಯಸುವುದಿಲ್ಲ. ನಾನು ಮೂರನೆಯ ವರವನ್ನು ಕೇಳಲು ಅರ್ಹಳೂ ಅಲ್ಲ.
ಏಕಮಾಹುರ್ವೈಶ್ಯವರಂ ದ್ವೌ ವರೌ ಕ್ಷತ್ರಿಯಸ್ತ್ರಿಯಾಃ |
ತ್ರಯಸ್ತು ರಾಜ್ಞಾಂ ರಾಜೇಂದ್ರ ಬ್ರಾಹ್ಮಣಸ್ಯ ಶತಂ ವರಾಃ ॥67॥
ರಾಜೇಂದ್ರನೇ! ವೈಶ್ಯರಿಗೆ ಒಂದು ವರ. ಕ್ಷತ್ರಿಯ ಸ್ತ್ರೀಗೆ ಎರಡುವರಗಳು. ರಾಜರಿಗೆ ಮೂರು ವರಗಳು ಮತ್ತು ಬ್ರಾಹ್ಮಣರಿಗೆ ನೂರು ವರಗಳು (ಎಂದು ಹೇಳುತ್ತಾರೆ.)
ಪಾಪೀಯಾಂಸ ಇಮೇ ಭೂತ್ವಾ ಸಂತೀರ್ಣಾಃ ಪತಯೋ ಮಮ |
ವೇತ್ಸ್ಯಂತಿ ಚೈವ ಭದ್ರಾಣಿ ರಾಜನ್ ಪುಣ್ಯೇನ ಕರ್ಮಣಾ ॥68॥
ನನ್ನ ಪತಿಗಳೆಲ್ಲರೂ ಪಾಪಿಯಾದ ದುರ್ಯೋಧನನ ದಾಸರಾಗಿ ಈ ದಾಸ್ಯದಿಂದ ಬಿಡುಗಡೆಯನ್ನು ಹೊಂದಿದ್ದಾರೆ. ಎಲೈ ರಾಜನೇ! ತಮ್ಮ ಶುಭಕರ್ಮಗಳಿಂದ ಅವರು ಎಲ್ಲಾ ಮಂಗಳವನ್ನೂ ಸಂಪಾದಿಸುವರು. (ನನಗೆ ಬೇರೆವರಗಳ ಅವಶ್ಯಕತೆಯಿಲ್ಲ.)
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಏಕನವತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ತ್ರಯೋವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತೊಂದನೆಯ ಅಧ್ಯಾಯವು ಮುಗಿಯಿತು.
*****

ತೊಂಬತ್ತೆರಡನೆಯ ಅಧ್ಯಾಯ
(ಕರ್ಣಪ್ರಲಾಪದಿಂದ ಕ್ರೋಧಗೊಂಡ ಭೀಮನನ್ನು ಸಂತೈಸಿ, ಪಾಂಡವರಿಂದ ಇಂದ್ರಪ್ರಸ್ಥಗಮನ.)
ಕರ್ಣಃ
ಯಾ ನಃ ಶ್ರುತಾ ಮನುಷ್ಯೇಷು ಸ್ತ್ರಿಯೋ ರೂಪೇಣ ಸಮ್ಮತಾಃ |
ಯಾಸಾಮೇತಾದೃಶಂ ಕರ್ಮ ನ ಕಸ್ಯಾಶ್ಚಿನ್ನಿಶಾಮ್ಯತೇ ॥1॥
ನಾವು ಮನುಷ್ಯರಲ್ಲಿ ಸುಂದರಿಯಾದ ಎಷ್ಟು ಸ್ತ್ರೀಯರ ಬಗ್ಗೆ ಕೇಳಿದ್ದೇವೆಯೋ ಅವರಲ್ಲಿ ಯಾರೂ ದ್ರೌಪದಿಯು ಮಾಡಿದಂತಹ ಇಂತಹ ಕರ್ಮವನ್ನು ಮಾಡಿದುದನ್ನು ನೋಡಿಲ್ಲ.
ಕ್ರೋಧಾವಿಷ್ಟೇಷು ಪಾರ್ಥೇಷು ಧೃತರಾಷ್ಟ್ರಸುತೇನ ಚ |
ದ್ರೌಪದೀ ಪಾಂಡುಪುತ್ರಾಣಾಂ ಕೃಷ್ಣಾ ಶಾಂತಿರಿಹಾಭವತ್ ॥2॥
ಧೃತರಾಷ್ಟ್ರಸುತನಾದ ದುರ್ಯೋಧನನಿಂದ ಪಾಂಡವರು ಕೋಪಗೊಳ್ಳುತ್ತಿರಲು ದ್ರುಪದರಾಜಕುಮಾರಿಯಾದ ಕೃಷ್ಣೆಯು ಅವರಿಗೆ ಉಪಶಮನಮಾಡುವ ವಸ್ತುವಾದಳು.
ಅಪ್ಲವೇಽಂಭಸಿ ಮಗ್ನಾನಾಮಪ್ರತಿಷ್ಠೇ ನಿಮಜ್ಜತಾಮ್ |
ಪಾಂಚಾಲೀ ಪಾಂಡುಪುತ್ರಾಣಾಂ ಪಾರಗಾ ನೌರಿವಾಭವತ್ ॥3॥
ಚಂಚಲವಾದ ಸಮುದ್ರದಲ್ಲಿ ದೋಣಿಯಿಲ್ಲದೆ ಮುಳುಗುವ ಪಾಂಡವರಿಗೆ ಪಾಂಚಾಲಿಯು ದಡವನ್ನು ಸೇರಿಸುವ ದೋಣಿಯಾದಳು.
ವೈಶಂಪಾಯನಃ
ತದ್ವೈ ಶ್ರುತ್ವಾ ಭೀಮಸೇನಃ ಕುರುಮಧ್ಯೇಽತ್ಯಮರ್ಷಣಃ॥
ಸ್ತ್ರೀ ಗತಿಃ ಪಾಂಡುಪುತ್ರಾಣಾಮಿತ್ಯುವಾಚ ಸುದುರ್ಮನಾಃ ॥4॥
ಅದನ್ನು ಕೌರವರ ಮಧ್ಯದಲ್ಲಿ ಕೇಳಿದ ಭೀಮಸೇನನು ಅತ್ಯಂತ ಕೋಪಗೊಂಡವನಾಗಿ ಅತ್ಯಂತ ಖೇದದಿಂದ ಪಾಂಡುಪುತ್ರರಿಗೆ ಒಬ್ಬ

ವನಿತೆಯು ಗತಿಯಾದಳು ಎಂದು ಹೇಳಿದನು.
ಭೀಮಸೇನಃ
ತ್ರೀಣಿ ಜ್ಯೋತೀಂಷಿ ಪುರುಷ ಇತಿ ವೈ ದೇವಲೋಽಬ್ರವೀತ್ |
ಯುದ್ಧೇಽಪರಾಙ್ಮುಖತ್ವಂ ಚ ಆಹೂತಸ್ಯಾನಿವರ್ತನಮ್ |
ದಾರಾಣಾಂ ವರ್ತನಂ ಚೈವ ಇತಿ ತಜ್ಜ್ಯೋತಿಷಾಂ ತ್ರಯಮ್ ||5||
ಮನುಷ್ಯನಿಗೆ ಮೂರು ಜ್ಯೋತಿಗಳೆಂದು ದೇವಲರು ಹೇಳಿದ್ದಾರೆ. ಯುದ್ಧಕ್ಕೆ ಕರೆದಾಗ ಹೋಗುವುದು. ಯುದ್ಧದಲ್ಲಿ ಹಿಮ್ಮೆಟ್ಟದಿರುವುದು. ಮತ್ತು ಪತ್ನಿಯ ಜೊತೆಯಲ್ಲಿ ಔಪಾಸನಾಗ್ನಿಯನ್ನು ಸೇವಿಸುವುದು. ಇವು ಆ ಮೂರು ಧರ್ಮಗಳು.
ಅಮೇಧ್ಯೇ ವೈ ಗತಪ್ರಾಣೇ ಶೂನ್ಯೇ ಜ್ಞಾತಿಭಿರುಜ್ಝಿತೇ |
ದೇಹೇ ತ್ರಿತಯಮೇವೈತತ್ ಪುರುಷಸ್ಯೋಪಜಾಯತೇ ||6||
ಪತ್ನಿಯೆಂಬ ಮೂರನೆಯ ಜ್ಯೋತಿಯು ಅಪವಿತ್ರಳಾದರೆ ಅಥವಾ ಮೃತಳಾದರೆ ಅಥವಾ ಸದ್ಧರ್ಮರಹಿತಳಾದರೆ ಅಥವಾ ಬಾಂಧವರಿಂದ ತ್ಯಕ್ತಳಾದರೆ ಈ ಮೂರು ಜ್ಯೋತಿಗಳು ಪುರುಷನ ದೇಹದಲ್ಲಿಯೇ ಉಂಟಾಗುತ್ತವೆ. (ಕುಂಡವಿಲ್ಲದ ಅಗ್ನಿಯನ್ನು ದೇಹದಲ್ಲಿ ಸಮಾರೋಪಮಾಡಿಕೊಂಡು ಧ್ಯಾನ ಅರ್ಚನೆಗಳಿಂದ ಪೂಜಿಸುವಂತೆ ಒಳಗೆ ಪೂಜಿಸಬೇಕು. ಹೊರಗಲ್ಲ.)
ತನ್ನೋ ಜ್ಯೋತಿರುಪಹತಂ ದಾರಾಣಾಮಭಿಮರ್ಶನಾತ್ |
ಧನಂಜಯ ಕಥಂ ಸ್ವಿತ್ ಸ್ಯಾದ್ ಅಪತ್ಯಮಭಿಮೃಷ್ಟಜಮ್ ||7||
ದುಶ್ಶಾಸನನು ಅಭಿಮರ್ಶಣೆಮಾಡಿದುದರಿಂದ ನಮ್ಮ ಮೂರನೆಯ ಜ್ಯೋತಿಯು ನಷ್ಟವಾಗಿದೆ. ಧನಂಜಯನೇ! ನಮಗೆ ಇಷ್ಟವಾದ ಸಂತಾನವು ಎಲ್ಲಿಂದ ದೊರೆಯುವುದು?
ಧನಂಜಯಃ
ನ ಚೈವೋಕ್ತಾ ನ ಚಾನುಕ್ತಾ ಹೀನತಃ ಪರುಷಾ ಗಿರಃ |
ಭಾರತಾಃ ಪ್ರತಿಜಲ್ಪಂತಿ ಸದಾನುತ್ತಮಪೂರುಷಾಃ ||8||
ನೀಚರೂ ಆಡದಂತಹ ಅಥವಾ ಆಡಿದರೂ ಅಸ್ಪಷ್ಟವಾಗಿ ಆಡುವಂತಹ ಕೆಟ್ಟ ಮಾತುಗಳನ್ನು ಅಧಮ ಪುರುಷರಾದ ಈ ದುರ್ಯೋಧನಾದಿಗಳು ಯಾವಾಗಲೂ ಮಾತನಾಡುತ್ತಿದ್ದಾರೆ.
ಸ್ಮರಂತಿ ಸುಕೃತಾನ್ಯೇವ ನ ವೈರಾಣಿ ಕೃತಾನಿ ಚ |
ಸಂತಃ ಪ್ರತಿವಿಜಾನಂತೋ ಲಬ್ಧ್ವಾ ಪ್ರತ್ಯಯಮಾತ್ಮನಃ ||9||
ಸಜ್ಜನರಾದವರು ಪರಮಾತ್ಮನ ಮಾತಿಗೆ ಬದ್ಧರಾಗಿ ಅಧಮರ ಮಾತಿಗೆ ಪ್ರತ್ಯುತ್ತರವನ್ನು ತಿಳಿದಿದ್ದರೂ ಸಹ ಅವರು ಮಾಡಿದ ವಿರೋಧಗಳನ್ನು ಸಹಿಸದೆ ಅವರು ಮಾಡಿದ ಒಳ್ಳೆಯ ಕೆಲಸಗಳನ್ನೇ ಸ್ಮರಿಸುತ್ತಾರೆ.
ಭೀಮಸೇನಃ
ಇಹೈವೈತಾನಹಂ ಸರ್ವಾನ್ ಹತ್ವಾ ಶತ್ರೂನ್ ಸಮಾಗತಾನ್ |
ಅಥ ನಿಷ್ಕ್ರಮ್ಯ ರಾಜೇಂದ್ರ ಆಮೂಲಾದ್ದನ್ಮಿ ಭಾರತ ||10||
ರಾಜೇಂದ್ರನೇ! ಇಲ್ಲಿ ಬಂದ ಎಲ್ಲಾ ಶತ್ರುಗಳನ್ನೂ ಈಗಲೇ ಕೊಂದು ಹೊರಗೆ ಹೋಗಿ ಉಳಿದವರನ್ನು ಮೂಲಸಹಿತವಾಗಿ ಎಲ್ಲರನ್ನೂ ಕೊಲ್ಲುತ್ತೇನೆ.
ಕಿಂ ನೋ ವಿವದಿತೇನೇಹ ಕಿಂ ನಃ ಕ್ಲೇಶೇನ ಭಾರತ |
ಅದ್ಯೈವ ತಾನ್ ನಿಹತ್ಯಾಜೌ ಪ್ರಶಾಧಿ ವಸುಧಾಮಿಮಾಮ್ ||11||
ಎಲೈ ಭಾರತನೇ! ನಾವು ಏಕೆ ಕ್ಲೇಶವನ್ನು ಪಡಬೇಕು? ಇಲ್ಲಿ ಇವರ ಜೊತೆ ವಿವಾದ ಮಾಡಿ ಏನು ಪ್ರಯೋಜನ? ಈ ದಿನವೇ ಶತ್ರುಗಳೆಲ್ಲರನ್ನೂ ಕೊಂದು ನೀನು ಈ ಭೂಮಿಯನ್ನು ಆಳು.
ಇತ್ಯುಕ್ತ್ವಾ ಭೀಮಸೇನಸ್ತು ಕನಿಷ್ಠೈರ್ಭ್ರಾತೃಭಿರ್ವೃತಃ |
ಮೃಗಮಧ್ಯೇ ಯಥಾ ಸಿಂಹೋ ಮುಹುಃ ಪರಿಘಮೈಕ್ಷತ ||12||
ಹೀಗೆ ಹೇಳಿ ಮೃಗಗಳ ಮಧ್ಯೆ ಇರುವ ಸಿಂಹದಂತೆ ತನ್ನ ತಮ್ಮಂದಿರಿಂದ ಪರಿವೃತನಾದ ಭೀಮಸೇನನು ಮತ್ತೆ ಮತ್ತೆ ಒಂದು ದೊಡ್ಡ ಸ್ತಂಭವನ್ನು ನೋಡಿದನು.
ಸಾಂತ್ವ್ಯಮಾನೋ ವಾರ್ಯಮಾಣಃ ಪಾರ್ಥೇನಾಕ್ಲಿಷ್ಟಕರ್ಮಣಾ |
ಸ್ವಿದ್ಯತೇ ಚ ಮಹಾಬಾಹುರಂತರ್ದಾಹೇನ ವೀರ್ಯವಾನ್ ||13||
ಅಕ್ಲಿಷ್ಟಕಾರಿಯಾದ ಧರ್ಮರಾಜನು ಅವನನ್ನು ತಡೆದು ಸಮಾಧಾನಮಾಡುತ್ತಿದ್ದರೂ ಮಹಾಬಾಹುವಾದ ವೀರನಾದ ಭೀಮಸೇನನು ದೇಹದ ಒಳಗಿನ ತಾಪದಿಂದ ಬೆವರುತ್ತಿದ್ದನು.
ಕ್ರುದ್ಧಸ್ಯ ತಸ್ಯ ಸ್ರೋತೋಭ್ಯಃ ಕರ್ಣಾದಿಭ್ಯೋ ನರಾಧಿಪ |
ಸಧೂಮಃ ಸಸ್ಫುಲಿಂಗಾರ್ಚಿಃ ಪಾವಕಃ ಸಮಜಾಯತ ||14||
ಎಲೈ ಜನಮೇಜಯ ರಾಜನೇ! ಕೋಪಗೊಂಡ ಅವನ ರೋಮಕೂಪಗಳಿಂದಲೂ ಕರ್ಣಗಳಿಂದಲೂ ಧೂಮ ಮತ್ತು ಅಗ್ನಿಯ ಕಣಗಳಿಂದ ಕೂಡಿದ ಅಗ್ನಿಯು ಹೊರಬರುತ್ತಿತ್ತು.
ಭ್ರುಕುಟೀಪುಟದುಷ್ಪ್ರೇಕ್ಷಮಭವತ್ ತಸ್ಯ ತನ್ಮುಖಮ್ |
ಯುಗಾಂತಕಾಲೇ ಸಂಪ್ರಾಪ್ತೇ ಕೃತಾಂತಸ್ಯೇವ ರೂಪಿಣಃ ||15||
ಯುಗಾಂತಕಾಲದಲ್ಲಿ ಧರಿಸಿದ ಯಮನ ರೂಪದಂತಿದ್ದ ಅವನ ಹುಬ್ಬುಗಂಟಿನ ಮುಖವನ್ನು ನೋಡುವುದು ಸಹ ಅಸಾಧ್ಯವಾಗಿದ್ದಿತು.

ಯುಧಿಷ್ಠಿರಸ್ತಮಾವಾರ್ಯ ಬಾಹುನಾ ಬಾಹುಶಾಳಿನಮ್ |
ಮೈವಮಿತ್ಯಬ್ರವೀಚ್ಚೈನಂ ಜೋಷಮಾಸ್ಸ್ವೇತಿ ಭಾರತ ॥16॥
ಭಾರತನೇ! ಯುಧಿಷ್ಠಿರನು ತನ್ನ ಬಾಹುಗಳಿಂದ ಬಾಹುಶಾಲಿಯಾದ ಅವನನ್ನು ತಡೆದು ಹೀಗೆ ಮಾಡಬೇಡ ಸುಮ್ಮನಿರು ಎಂದು ಹೇಳಿದನು.
ನಿವಾರ್ಯ ತಂ ಮಹಾಬಾಹುಂ ಕೋಪಸಂರಕ್ತಲೋಚನಮ್ |
ಪಿತರಂ ಸಮುಪಾತಿಷ್ಠದ್ ಧೃತರಾಷ್ಟ್ರಂ ಕೃತಾಂಜಲಿಃ ॥17॥
ಧರ್ಮರಾಜನು ಕೋಪದಿಂದ ಕೆಂಪಾದ ಕಣ್ಣುಳ್ಳ ಮಹಾಬಾಹುವಾದ ಭೀಮಸೇನನನ್ನು ತಡೆದು ಕೈಗಳನ್ನು ಮುಗಿದು ತಂದೆಯಾದ ಧೃತರಾಷ್ಟ್ರನನ್ನು ಸ್ತೋತ್ರಮಾಡಿದನು.
ಯುಧಿಷ್ಠಿರಃ
ರಾಜನ್ ಕಿಂ ಕರವಾಮಸ್ತೇ ಪ್ರಶಾಧ್ಯಸ್ಮಾಂಸ್ತ್ವಮೀಶ್ವರಃ |
ನಿತ್ಯಂ ಹಿ ಸ್ಥಾತುಮಿಚ್ಛಾಮಸ್ತವ ಭಾರತ ಶಾಸನೇ ॥18॥
ರಾಜನೇ! ನೀನು ನಮಗೆ ಪ್ರಭುವಾದವನು. ನಮಗೆ ಶಾಸನವನ್ನು ಮಾಡು. ನಾವು ನಿನಗೆ ಏನನ್ನು ಮಾಡೋಣ? ಭಾರತನೇ! ನಾವು ಯಾವಾಗಲೂ ನಿನ್ನ ಶಾಸನದಲ್ಲಿ ಇರಲು ಬಯಸುತ್ತೇವೆ.
ಧೃತರಾಷ್ಟ್ರಃ
ಅಜಾತಶತ್ರೋ ಭದ್ರಂ ತೇ ಅರಿಷ್ಟಂ ಸ್ವಸ್ತಿ ಗಚ್ಛತ |
ಅನುಜ್ಞಾತಾಃ ಸಹಧನಾಃ ಸ್ವರಾಜ್ಯಮನುಶಾಸತ ॥19॥
ಅಜಾತ ಶತ್ರುವೇ! ನಿನಗೆ ಮಂಗಳವಾಗಲಿ. ನಿರ್ವಿಘ್ನವಾಗಿ ಇಲ್ಲಿಂದ ಹೋಗು. ನಿನ್ನ ಸಂಪತ್ತಿನೊಡನೆ (ಮತ್ತು ಪರಿವಾರದೊಡನೆ) ನನ್ನ ಅನುಜ್ಞೆಯನ್ನು ಪಡೆದು ಹೊರಟು ನಿನ್ನ ರಾಜ್ಯವನ್ನು ನೀನು ಆಳು.
ಇದಂ ತೇ ತಾತ ಬೋದ್ಧವ್ಯಂ ವೃದ್ಧಸ್ಯ ಮಮ ಶಾಸನಮ್ |
ಮಯಾ ನಿಗದಿತಂ ಕೃತ್ಸ್ನಂ ಪಶ್ಯ ನಿಶ್ರೇಯಸಂ ಪರಮ್ ॥20॥
ಪ್ರೀತಿಪಾತ್ರನೇ! ನನ್ನ ಶಾಸನವನ್ನು ತಿಳಿದುಕೋ. ನಾನು ಹೇಳಿದುದಿಲ್ಲವೂ ಉತ್ತಮ ಶ್ರೇಯಸ್ಸನ್ನು ಸಂಪಾದಿಸಿಕೊಡುವುದಾಗಿದೆ ಎಂದು ತಿಳಿ.
ವೇತ್ಥ ತ್ವಂ ತಾತ ಧರ್ಮಾಣಾಂ ಗತಿಂ ಸೂಕ್ಷ್ಮಾಂ ಯುಧಿಷ್ಠಿರ |
ವಿನೀತೋಽಸಿ ಮಹಾಪ್ರಾಜ್ಞ ವೃದ್ಧಾನಾಂ ಪರ್ಯುಪಾಸಿತಾ ॥21॥
ಎಲೈ ಯುಧಿಷ್ಠಿರನೇ! ನೀನು ಧರ್ಮದಸೂಕ್ಷ್ಮಗತಿಯನ್ನು ತಿಳಿದವನಾಗಿದ್ದೀಯೆ. ಮಹಾಪ್ರಾಜ್ಞನೇ! ನೀನು ಹಿರಿಯರ ಸೇವೆಯನ್ನು ಮಾಡಿ ವಿನಯವನ್ನು ಸಂಪಾದಿಸಿದವನಾಗಿದ್ದೀಯೆ.
ಯತೋಽನುಬುದ್ಧಿತಃ ಶಾಂತಿಃ ಪ್ರಶಮಂ ಗಚ್ಛ ಭಾರತ |
ನಾದಾರೌ ಕ್ರಮತೇ ಶಸ್ತ್ರಂ ದಾರೌ ಶಸ್ತ್ರಂ ನಿಪಾತ್ಯತೇ ॥22॥
ಎಲೈ ಭಾರತನೇ! ಒಳ್ಳೆಯ ವಿಮರ್ಶೆಯಿಂದ ಶಾಂತಿಯು ದೊರೆಯುವುದರಿಂದ ನೀನು ಪ್ರಯತ್ನಪೂರ್ವಕವಾಗಿ ಶಾಂತಿಯನ್ನು ಹೊಂದು. ಮರವಲ್ಲದೆ ಶಿಲೆಯಲ್ಲಿ ಯಾರೂ ಕೊಡಲಿಯನ್ನು ಬೀಸುವುದಿಲ್ಲ. ಮರದಲ್ಲಿಯೇ ಕೊಡಲಿಯನ್ನು ಪ್ರಹರಿಸುತ್ತಾರೆ. (ಮೃದುವಾದವನ ಮೇಲೆಯೇ ದುಷ್ಟರು ಆಕ್ರಮಣ ಮಾಡುತ್ತಾರೆ.)
ನ ವೈರಾಣ್ಯಭಿಜಾನಂತಿ ಗುಣಾನ್ ಪಶ್ಯಂತಿ ನಾಗುಣಾನ್
ವಿರೋಧಂ ನಾಧಿಗಚ್ಛಂತಿ ನಿತ್ಯಮುತ್ತಮಪೂರುಷಾಃ ॥23॥
ಉತ್ತಮ ಪುರುಷರು ವೈರವನ್ನು ಪರಿಗಣಿಸುವುದಿಲ್ಲ. ಗುಣಗಳನ್ನೇ ನೋಡುತ್ತಾರೆ ಹೊರತು ದೋಷಗಳನ್ನು ಎಣಿಸುವುದಿಲ್ಲ. ಆವರು ಇನ್ನೊಬ್ಬರ ಜೊತೆಯಲ್ಲಿ ಎಂದೂ ವಿರೋಧವನ್ನು ಸಂಪಾದಿಸುವುದಿಲ್ಲ.
ಸಂವಾದೇ ಪರುಷಾಣ್ಯಾಹುರ್ಯುಧಿಷ್ಠಿರ ನರಾಧಮಾಃ |
ಪ್ರತ್ಯಾಹುರ್ಮಧ್ಯಮಾಸ್ತ್ವೇತೇಽನುಕ್ತಾಃ (ಅನುಕಕ್ತ್ವ) ಪರುಷಮುತ್ತರಮ್ ॥
ಯುಧಿಷ್ಠಿರನೇ! ನರಾಧಮರು ಇನ್ನೊಬ್ಬರ ಜೊತೆಯಲ್ಲಿ ಮಾತನಾಡುವಾಗ ಕ್ರೂರವಾಗಿ ಮಾತನಾಡುತ್ತಾರೆ. ಮಧ್ಯಮರಾದವರು ಕ್ರೂರವಾದ ಮಾತುಗಳನ್ನು ಆಡದೆ ಅವರ ಮಾತುಗಳಿಗೆ ಉತ್ತರವನ್ನು ಕೊಡುತ್ತಾರೆ.
ನಚೈವೋಕ್ತಾ ನ ಚಾನುಕ್ತಾ ಅಹಿತಾಃ ಪರುಷಾ ಗಿರಃ |
ಅಭಿಜಲ್ಪಂತಿ ನೋ ಧೀರಾಃ ಸದಾ ತೂತ್ತಮಪೂರುಷಾಃ ॥25॥
ಉತ್ತಮ ಪುರುಷರಾದವರು ಮಾತ್ರ ಅಹಿತವಾದ ಮತ್ತು ಕ್ರೂರವಾದ ಮಾತುಗಳನ್ನು ಇನ್ನೊಬ್ಬರು ಆಡಿದರೂ ಆಡದಿದ್ದರೂ ಸಹ ಧೀರರಾದ ಅವರು ಆ ಮಾತುಗಳನ್ನು ಇನ್ನೊಮ್ಮೆ ಆಡುವುದಿಲ್ಲ.
ಸ್ಮರಂತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ |
ಸಂತಃ ಪ್ರತಿವಿಜಾನಂತೋ ಲಬ್ಧ್ವಾ ಪ್ರತ್ಯಯಮಾತ್ಮನಃ ॥26॥
ಸಜ್ಜನರಾದವರು ಪರಮಾತ್ಮನ ಜ್ಞಾನವನ್ನು ಹೊಂದಿ ಉತ್ತರವನ್ನು ಕೊಡಲು ತಿಳಿದಿದ್ದರೂ ಇನ್ನೊಬ್ಬರುಮಾಡಿದ ವೈರವನ್ನು ಸ್ಮರಿಸಿದೆ ಅವರು ಮಾಡಿದ ಸುಕೃತಗಳನ್ನೇ ಸ್ಮರಿಸುತ್ತಾರೆ.
ಯಥಾ ಚರಿತಮಾರ್ಯೇಣ ತ್ವಯಾಽಸ್ಮಿನ್ ಸತ್ಸಮಾಗಮೇ |
ದುರ್ಯೋಧನಸ್ಯ ಪಾರುಷ್ಯಂ ತತ್ ತಾತ ಹೃದಿ ಮಾ ಕೃಥಾಃ ॥27॥
ಪ್ರೀತಿಪಾತ್ರನೆ! ನೀನು ಈ ಸಜ್ಜನರ ಸಮಾಗಮದಲ್ಲಿ ಹಿಂದೆ ಸಜ್ಜನರು ಆಚರಿಸದಂತೆಯೇ ನಡೆದುಕೊಂಡಿದ್ದೀಯೆ. ಪ್ರೀತಿಪಾತ್ರನೇ!

ದುರ್ಯೋಧನನ ಕ್ರೂರವಾದ ಮಾತುಗಳನ್ನು ಮನಸ್ಸಿಗೆ ತಂದು ಕೊಳ್ಳಬೇಡ.
ಮಾತರಂ ಚೈವ ಗಾಂಧಾರೀಂ ಮಾಂ ಚ ತ್ವದ್ಗುಣಕಾಂಕ್ಷಿಣಮ್ |
ಉಪಸ್ಥಿತಂ ವೃದ್ಧಮಂಧಂ ಪಿತರಂ ಪಶ್ಯ ಭಾರತ ॥28॥
ಭಾರತನೇ! ನಿನ್ನ ಗುಣವನ್ನೇ ಬಯಸಿ ನಿನ್ನನ್ನು ಆಶ್ರಯಿಸುತ್ತಿರುವ ವೃದ್ಧನೂ ಅಂಧನೂ ಆದ ತಂದೆಯಾದ ನನ್ನನ್ನೂ ತಾಯಿಯಾದ ಗಾಂಧಾರಿಯನ್ನೂ ಗಮನಿಸು.
ಮಿತ್ರಾಣಿ ದ್ರಷ್ಟುಕಾಮೇನ ಪುತ್ರಾಣಾಂ ಚ ಬಲಾಬಲಮ್ |
ಅಶೋಚ್ಯಾಃ ಕುರವೋ ರಾಜನ್ ಯೇಷಾಂ ತ್ವಮನುಶಾಸಿತಾ ॥29॥
ರಾಜನೇ! ಮಿತ್ರರನ್ನು ನೋಡುವ ಆಸೆಯಿಂದ ಪುತ್ರರ ಬಲಾಬಲಗಳನ್ನು ತಿಳಿಯುವ ಆಸೆಯಿಂದ ನಾನು ಈ ಕಾರ್ಯವನ್ನು ಮಾಡಿದೆನು. ಯಾರಿಗೆ ನೀನು ಶಾಸಕನಾಗಿದ್ದೀಯೊ ಅಂತಹ ಕುರುಗಳು ಎಂದೂ ಶೋಚ್ಯರಲ್ಲ.
ಮಂತ್ರೀ ಚ ವಿದುರೋ ಧೀಮಾನ್ ಸರ್ವಶಾಸ್ತ್ರವಿಶಾರದಃ |
ತ್ವಯಿ ಧರ್ಮೋऽರ್ಜುನೇ ಧೈರ್ಯಂ ಭೀಮಸೇನೇ ಪರಾಕ್ರಮಃ ॥30॥
ಅಜಾತಶತ್ರೋ ಭದ್ರಂ ತೇ ಖಾಂಡವಪ್ರಸ್ಥಮಾವಿಶ |
ಭ್ರಾತೃಭಿಸ್ತೇऽಸ್ತು ಸೌಭ್ರಾತ್ರಂ ಧರ್ಮೇ ತೇ ಧೀಯತಾಂ ಮನಃ ॥31॥
ನಿನಗೆ ಸರ್ವಶಾಸ್ತ್ರವಿಶಾರದನಾದ ಮೇಧಾವಿಯಾದ ವಿದುರನು ಮಂತ್ರಿಯಾಗಿದ್ದಾನೆ. ನಿನ್ನಲ್ಲಿ ಧರ್ಮವೂ ಅರ್ಜುನನಲ್ಲಿ ವಿಜಯವೂ ಭೀಮಸೇನನಲ್ಲಿ ಪರಾಕ್ರಮವೂ ಇದೆ. ಅಜಾತಶತ್ರುವೇ ನಿನಗೆ ಮಂಗಳವಾಗಲಿ. ಇಂದ್ರಪ್ರಸ್ಥಕ್ಕೆ ಹಿಂದಿರುಗು. ನಿನ್ನ ತಮ್ಮಂದಿರ ಜೊತೆಯಲ್ಲಿ ನಿನಗೆ ಯಾವಾಗಲೂ ಸೌಭ್ರಾತೃತ್ಯವು ಇರಲಿ. ನಿನ್ನ ಮನಸ್ಸು ಯಾವಾಗಲೂ ಧರ್ಮದಲ್ಲಿಯೇ ನೆಲೆಸಲಿ.
ವೈಶಂಪಾಯನಃ
ಇತ್ಯುಕ್ತೋ ಭರತಶ್ರೇಷ್ಠೋ ಧರ್ಮರಾಜೋ ಯುಧಿಷ್ಠಿರಃ |
ಕೃತ್ವಾऽऽರ್ಯಸಮಯಂ ಸರ್ವಂ ಪ್ರತಸ್ಥೇ ಭ್ರಾತೃಭಿಃ ಸಹ ॥32॥
ಧೃತರಾಷ್ಟ್ರನಿಂದ ಹೀಗೆ ಹೇಳಲ್ಪಟ್ಟ ಭರತಶ್ರೇಷ್ಠನಾದ ಧರ್ಮರಾಜನಾದ ಯುಧಿಷ್ಠಿರನು ಎಲ್ಲಾ ವಿಷಯಗಳಲ್ಲಿಯೂ ಉದಾತ್ತವಾದ ಪ್ರತಿಜ್ಞೆಯನ್ನುಮಾಡಿ ತಮ್ಮಂದಿರ ಜೊತೆಯಲ್ಲಿ ಹೊರಟನು.
ತೇ ರಥಾನ್ ಸೂರ್ಯಸಂಕಾಶಾ ಆಸ್ಥಾಯ ಸಹ ಕೃಷ್ಣಯಾ |
ಪ್ರಯಯುರ್ಹೃಷ್ಟಮನಸ ಇಂದ್ರಪ್ರಸ್ಥಪುರಂ ಪ್ರತಿ ॥33॥
ಪಾಂಡವರು ಸೂರ್ಯನಂತೆ ಹೊಳೆಯವ ರಥಗಳನ್ನು ಏರಿ (ಸೂರ್ಯನಕಾಂತಿಯುಳ್ಳವರಾಗಿ) ದ್ರೌಪದಿಯ ಜೊತೆಯಲ್ಲಿ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಇಂದ್ರಪ್ರಸ್ಥಕ್ಕೆ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ದ್ವಿನವತಿತಮೋಧ್ಯಾಯಃ ॥
॥ ದ್ಯೂತಪರ್ವಣಿ ಚತುರ್ವಿಂಶೋಧ್ಯಾಯಃ ॥
॥ ದ್ಯೂತಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯವು ಮುಗಿಯಿತು.
ಇಲ್ಲಿಗೆ ದ್ಯೂತಪರ್ವವು ಮುಗಿಯಿತು
****
8. ಅನುದ್ಯೂತಪರ್ವ
ಮಹಾಭಾರತತಾತ್ಪರ್ಯನಿರ್ಣಯ - ಅಧ್ಯಾಯ-21
ಸಮಸ್ತ ಪಾಂಡವಶ್ರಿಯಂ ಸಮಾಗತಾಮಹೋ ಪುನಃ |
ವ್ಯಮೋಚಯೋ ವೃಕೋದರಾದ್ ವಧಶ್ಚ ನೋ ಧ್ರುವಂ ಭವೇತ್ ॥
ನಮ್ಮ ಕೈಗೇ ಬಂದಿದ್ದ ಪಾಂಡವರ ಎಲ್ಲ ಸಂಪತ್ತನ್ನೂ ಪುನಃ ಅವರಿಗೇ ಬಿಟ್ಟುಕೊಟ್ಟೆ! ಏನಾಶ್ಚರ್ಯ! ಇನ್ನು ಭೀಮನಿಂದ ನಮ್ಮ ವಧೆಯಾಗುವುದು ನಿಶ್ಚಿತ!
ಅತಃ ಪುನಶ್ಚ ಪಾಂಡವಾನ್ ಸಮಾಹ್ವಯಸ್ವ ನಃ ಕೃತೇ |
ಪುನಶ್ಚ ದೇವನಂ ಭವೇಜ್ಜಿತೋ ವನಂ ಪ್ರಯಾಂತು ಚ ॥393॥
ಅದರಿಂದ ನಮಗಾಗಿ ಪಾಂಡವರನ್ನು ಪುನಃ ಕರೆಸು. ಇನ್ನೊಮ್ಮೆ ಜೂಜು ನಡೆಯಲಿ. ಸೋತವರು ಕಾಡಿಗೆ ಹೋಗಲಿ.
ತೇನೋಕ್ತಃ ಸ ತದಾ ರಾಜಾ ಪಾಂಡವಾನ್ ಪುನರಾಹ್ವಯತ್ |
ಪುನಃ ಪಿತ್ರಾ ಸಮಾಹೂತೋ ದೇವನಾಯ ಯುಧಿಷ್ಠಿರಃ ॥394॥
ಭ್ರಾತೃಭಿರ್ವಾರ್ಯಮಾಣೋऽಪಿ ಕೃಷ್ಣಯಾ ಚಾऽಗಮತ್ ಸಭಾಂ |
ದುಃಶಾಸನ ಹೀಗೆ ಹೇಳಿದಾಗ ಧೃತರಾಷ್ಟ್ರ ಪಾಂಡವರನ್ನು ಪುನಃ ಕರೆಸಿದ. ದೊಡ್ಡಪ್ಪ ಪುನಃ ಜೂಜಿಗೆ ಕರೆದಾಗ ಧರ್ಮರಾಜ ಸೋದರರು ಮತ್ತು ದ್ರೌಪದಿ ತಡೆಯುತ್ತಿದರೂ ಸಭೆಗೆ ನಡೆದ.
ದ್ವಾದಶಾಬ್ದಂ ವನೇ ವಾಸಮಜ್ಞಾತಂ ತ್ವೇಕವತ್ಸರಂ ॥395॥
ವಾಸಂ ಪ್ರಸಿದ್ಧನೃಪತೇಃ ಪುರೇ ನೈವಾತಿದೂರತಃ ॥396॥
ಕೃಷ್ಣಾಯಾಃ ಪಾಂಡವಾನಾಂ ವಾ ದರ್ಶನೇಜ್ಞಾತವಾಸಿನಾಂ |
ಏಕಸ್ಯಾಪಿ ಸಮಸ್ತಾನಾಂ ದ್ವಾದಶಾಬ್ದಂ ಪುನರ್ವನಂ ॥397॥
ವತ್ಸರಾಜ್ಞಾತವಾಸಂ ಚ ತ್ಯಾಗೇऽಪ್ಯುಕ್ತವಿಧೇಸ್ತಥಾ |

ದುರ್ಯೋಧನಃ ಪಣಂ ಚಕ್ರೇ ಬದ್ವ್ಯಾ ದುಶ್ಶಾಸನೋಕ್ತಯಾ ॥398॥
ಹನ್ನೆರಡು ವರ್ಷ ವನವಾಸ ಮಾಡಬೇಕು. ಹೆಚ್ಚು ದೂರವಿರದ ಒಬ್ಬ ಪ್ರಸಿದ್ಧ ರಾಜನ ಪಟ್ಟಣದಲ್ಲಿ ಒಂದು ವರ್ಷ ಅಜ್ಞಾತವಾಸ ಮಾಡಬೇಕು. ಅಜ್ಞಾತವಾಸ ಮಾಡುತ್ತಿರುವಾಗ ದ್ರೌಪದಿಯನ್ನಾಗಲಿ, ಪಾಂಡವರಲ್ಲಿ ಒಬ್ಬನನ್ನಾಗಲಿ ಇಲ್ಲವೆ ಎಲ್ಲರನ್ನೂ ನೋಡಿದರೆ ತಿರುಗಿ ಎಲ್ಲರೂ ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಹಿಂದಿನಂತೆ ಅಜ್ಞಾತವಾಸವನ್ನೂ ಮಾಡಬೇಕು. ಈ ವನವಾಸ ಅಜ್ಞಾತವಾಸಗಳನ್ನು ನಡುವೆ ಬಿಟ್ಟರೆ ಪುನಃ ಪ್ರಾರಂಭದಿಂದಲೆ ಮಾಡಬೇಕು. ಹೀಗೆ ದುಃಶಾಸನನ ಸಲಹೆಯಂತೆ ದುರ್ಯೋಧನ ಪಣವನ್ನು ನಿರ್ಧರಿಸಿದ.
ಗಾಂಧಾರೇಣ ಪುನಶ್ಚಾಕ್ಷಹೃದಯಜ್ಞೇನ ಧರ್ಮಜಃ ।
ಪರಾಜಿತೋ ವನಂ ಯಾತುಮೈಚ್ಛತ್ ಸಭ್ರಾತೃಕೋ ಯದಾ ॥399॥
ತದಾ ನನರ್ತ ಪಾಪಕೃತ್ ಸುಯೋಧನಾನುಜೋ ಹಸನ್ ।
ವದಂಶ್ಚ ಮಾರುತಾತ್ಮಜಂ ಪುನಃ ಪುನಶ್ಚ ಗೌರಿತಿ ॥400॥
ಜೂಜಿನ ಮರ್ಮಜ್ಞನಾದ ಶಕುನಿಯಿಂದ ಯುಧಿಷ್ಠಿರ ಪುನಃ ಪರಾಜಿತನಾಗಿ ಸೋದರರರೊಂದಿಗೆ ಕಾಡಿಗೆ ಹೋಗಲು ಬಯಸಿದಾಗ ಪಾಪಕಾರಿಯಾದ ದುಃಶಾಸನ ಅಟ್ಟಹಾಸ ಮಾಡುತ್ತ ಭೀಮನನ್ನು ಪುನಃ ಪುನಃ `ಬಸವ ಬಸವ' ಎಂದೆನ್ನುತ್ತ ನರ್ತಿಸಿದ.
ಉವಾಚ ಚ ಪುನಃ ಕೃಷ್ಣಾಂ ನೃತ್ಯನ್ನೇವ ಸಭಾತಲೇ ।
ಅಪತಿರ್ಹ್ಯಸಿ ಕಲ್ಯಾಣಿ ಗಚ್ಛ ದುರ್ಯೋಧನಾಲಯಮ್ ॥401॥
ಏತೇಽಖಿಲಾಃ ಷಂಢತಿಲಾಸ್ತಮೋಽಂಧಂ-
ಪ್ರಾಪ್ತಾ ನ ಚೈಷಾಂ ಪುನರುತ್ಥಿತಿಃ ಸ್ಯಾತ್ ।
ಇತಿ ಬ್ರುವಾಣೋಽನುಚಕಾರ ಭೀಮಂ
ತದಾಹಸನ್ ಧಾರ್ತರಾಷ್ಟ್ರಾಶ್ಚ ಸರ್ವೇ ॥402॥
ಪುನಃ ಸಭಾಂಗಣದಲ್ಲಿ ಕುಣಿಯುತ್ತಲೇ ದುಃಶಾಸನ ದ್ರೌಪದಿಗೆ ಹೇಳಿದ, ಸುಂದರಿ, ನೀನು ಇನ್ನು ದುರ್ಯೋಧನನ ಮನೆಗೆ ಹೋಗು. ನಿನಗೆ ಇನ್ನು ಪತಿಗಳಿಲ್ಲ. ಇವರೆಲ್ಲರೂ ಎಣ್ಣೆ ಇಲ್ಲದ ಎಳ್ಳುಕಾಳುಗಳು. ನಪುಂಸಕರು. ಎಂದೂ ಮೇಲೇಳದಂಥ ದುಃಸ್ಥಿತಿಗೆ ಇಳಿದಿದ್ದಾರೆ. ಇನ್ನು ಮೇಲೇಳುವುದಿಲ್ಲ ಎಂದು ಹೇಳುತ್ತ ಭೀಮನ ನಡಿಗೆಯನ್ನು ತನ್ನ ನಡೆಯಿಂದ ಅಣುಕಿಸಿದ. ಆಗ ಕೌರವರೆಲ್ಲರೂ ನಕ್ಕರು.
ತದಾಕರೋದ್ಭೀಮಸೇನಃ ಪ್ರತಿಜ್ಞಾಂ
ಹಂತಾಸ್ಮಿ ವೋ ನಿಖಿಲಾನ್ ಸಂಗರೇಽಹಂ ।
ಇತೀರಿತೇ ಶರಣಂ ದ್ರೋಣಮೇವ
ಜಗ್ಮುಃ ಸಮಸ್ತಾ ಧೃತರಾಷ್ಟ್ರಪುತ್ರಾಃ ॥403॥
ಆಗ ಭೀಮಸೇನ ಪ್ರತಿಜ್ಞೆ ಮಾಡಿದ, `ನಾನು ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಕೊಲ್ಲುತ್ತೇನೆ' ಎಂದು. ಭೀಮ ಹೀಗೆ ಹೇಳಿದಾಗ ಕೌರವರೆಲ್ಲರೂ ದ್ರೋಣನನ್ನು ಮೊರೆಹೊಕ್ಕರು.
ಯತ್ರ ದ್ರೋಣಸ್ತತ್ರ ಪುತ್ರಸ್ತತ್ರ ಭೀಷ್ಮಃ ಕೃಪಸ್ತಥಾ ।
ನ ಜಾತ್ವೇತಿ ಗುರೂನ್ ಭೀಮ ಇತಿ ತಂ ಶರಣಂ ಯಯುಃ ॥404॥
ಎಲ್ಲಿ ದ್ರೋಣನಿರುವನೋ ಅಲ್ಲಿ ಅಶ್ವತ್ಥಾಮ, ಅಲ್ಲಿ ಭೀಷ್ಮಕೃಪರು. ಭೀಮ ಈ ಎಲ್ಲ ಗುರುಹಿರಿಯರನ್ನು ಅತಿಕ್ರಮಿಸುವುದಿಲ್ಲ ಎಂದು ಆಲೋಚಿಸಿ ಕೌರವರು ದ್ರೋಣನನ್ನೆ ಮೊರೆಹೊಕ್ಕರು.
ಅಬ್ರುವೀದ್ ಧಾರ್ತರಾಷ್ಟ್ರಾಂಶ್ಚ ದ್ರೋಣೋ ವಿಪ್ರೋಽಪಿ ಸನ್ನಹಂ ।
ಸಪುತ್ರಃ ಸಕೃಪಃ ಶಸ್ತ್ರಂ ಗ್ರಹೀಷ್ಯೇ ಭವತಾಂ ಕೃತೇ ॥405॥
ದ್ರೋಣ ಕೌರವರಿಗೆ ಹೇಳಿದ, `ನಾನು ಬ್ರಾಹ್ಮಣನಾದರೂ ಅಶ್ವತ್ಥಾಮಕೃಪರೊಂದಿಗೆ ನಿಮಗಾಗಿ ಶಸ್ತ್ರ ಹಿಡಿಯುವೆನು.
ರಕ್ಷಣೇ ಭವತಾಂ ಚೈವ ಕುರ್ಯಾಂ ಯತ್ನಂ ಸ್ವಶಕ್ತಿತಃ ।
ನ ತು ಭೀಮಾದ್ ರಕ್ಷಿತುಂ ವಃ ಶಕ್ತಃ ಸತ್ಯಂ ಬ್ರವೀಮ್ಯಹಂ ॥406॥
ನನ್ನ ಶಕ್ತಿ ಇದ್ದಷ್ಟು ನಿಮ್ಮ ರಕ್ಷಣೆಗೆ ಯತ್ನ ಮಾಡುವೆನು. ಆದರೆ ಭೀಮನಿಂದ ನಿಮ್ಮನ್ನು ರಕ್ಷಿಸಲು ನಾನು ಶಕ್ತನಲ್ಲ. ನಿಜವನ್ನೇ ಹೇಳುತ್ತಿದ್ದೇನೆ.
ತತೋ ಯಯುಃ ಪಾಂಡವಾಸ್ತೇ ಸಭಾಯಾ
ವನಾಯ ಕೃಷ್ಣಾಸಹಿತಾಃ ಸುಶೂರಾಃ ।
ಗತ್ಯಾನುಚಕ್ರೇ ಯುವಸಿಂಹಖೇಲ-
ಗತಿಂ ಭೀಮಂ ಧಾರ್ತರಾಷ್ಟ್ರೋಽಪಹಸ್ಯ ॥407॥
ಅಷ್ಟರಲ್ಲಿ ಮಹಾಶೂರರಾದ ಪಾಂಡವರು ದ್ರೌಪದಿಯೊಂದಿಗೆ ಸಭೆಯಿಂದ ಕಾಡಿಗೆ ಹೊರಟರು. ದುರ್ಯೋಧನ ಯೌವನಭರಿತ ಸಿಂಹನಂತೆ ಗಂಭೀರ ನಡೆಯುಳ್ಳ ಭೀಮನನ್ನು ಅಣಕಿಸುತ್ತ ಅವನ ನಡಿಗೆಯನ್ನು ತನ್ನ ನಡಿಗೆಯಿಂದ ಅನುಕರಣ ಮಾಡಿದ.
ದೃಷ್ಟ್ವಾ ಸಭಾಯಾ ಅರ್ಧನಿಷ್ಕ್ರಾಂತದೇಹೋ
ವ್ಯಾವೃತ್ಯ ಭೀಮಃ ಪ್ರಾಹ ಸಂರಕ್ತನೇತ್ರಃ ।
ಊರುಂ ತವಾನ್ಯಂ ಚ ರಣೇ ವಿಭೇತ್ಸ್ಯ
ಇತ್ಯುಕ್ತವತ್ಯಸೌ ನಿರ್ಗತೋಽಸತ್ಸಭಾಯಾಃ ॥408॥
ಆಗ ಸಭಾಂಗಣದಿಂದ ಅರ್ಧಹೊರಗೆ ಹೋಗಿದ್ದ ಭೀಮ ಹಿಂತಿರುಗಿ ಕೆಂಗಣ್ಣಿಂದ ನೋಡುತ್ತ `ನಿನ್ನ ಇನ್ನೊಂದು ತೊಡೆಯನ್ನು

ಯುದ್ಧದಲ್ಲಿ ಮುರಿಯುವೆನು' ಎಂದ. ಹೀಗೆ ಹೇಳಿ ಆ ದುಷ್ಟಸಭೆಯಿಂದ ಹೊರಗೆ ನಡೆದ.
ಪ್ರಯಾತಾನನು ತಾನ್ ಕುಂತೀ ಪ್ರಯಯೌ ಪುತ್ರಗೃದ್ಧಿನೀ |
ರೋರುದ್ಯಮಾನಾಂ ವಿದುರಃ ಸ್ಥಾಪಯಾಮಾಸ ತಾಂ ಗೃಹೇ ॥409॥
ಮಕ್ಕಳನ್ನು ಪ್ರೀತಿಸುವ ತಾಯಿ ಕುಂತಿ ಕಾಡಿಗೆ ಹೊರಟ ಪಾಂಡವರನ್ನು ತಾನೂ ಅಳುತ್ತ ಹಿಂಬಾಲಿಸಿದಳು. ವಿದುರ ಅವಳನ್ನು ತಡೆದು ತನ್ನ ಮನೆಯಲ್ಲಿ ನಿಲ್ಲಿಸಿದ.
ಪ್ರಣಮ್ಯ ತಾಂ ಯಯುಃ ಪಾರ್ಥಾಃ ಸಕೃಷ್ಣಾಃ ಶೀಘ್ರಗಾಮಿನಃ |
ಯುಧಿಷ್ಠಿರೋಽವಾಗ್ವದನೋ ಯಯೌ ನ ಕ್ರೋಧಚಕ್ಷುಷಾ |
ದಹೇಯಂ ಕೌರವಾನ್ ಸರ್ವಾನಿತಿ ಕಾರುಣಿಕೋ ನೃಪಃ ॥410॥
ಪಾಂಡವರು ದ್ರೌಪದೀ ಸಹಿತರಾಗಿ ಕುಂತಿಯನ್ನು ನಮಿಸಿ ಶೀಘ್ರವಾಗಿ ಹೆಜ್ಜೆಯಿಡುತ್ತ ಹೊರಟರು. ಧರ್ಮರಾಜ ಮುಖ ತಗ್ಗಿಸಿಕೊಂಡು ನಡೆದ. ಕೋಪದ ಕಣ್ಣಿಂದ ಎಲ್ಲ ಕೌರವರನ್ನೂ ಸುಡಬಾರದೆಂದು ಕರುಣಾಳುವಾದ ಯುಧಿಷ್ಠಿರ ಹಾಗೆ ಮಾಡಿದ.
ಉದ್ಧೃತ್ಯ ಬಾಹೂ ಪ್ರಯಯೌ ಬಾಹುಶಾಲೀ ವೃಕೋದರಃ |
ಆಭ್ಯಾಮೇವಾಖಿಲಾನ್ ಶತ್ರೂನ್ ಶಕ್ತೋ ಹಂತುಮಹಂ ತ್ವಿತಿ ॥411॥
ಬಾಹುಶಾಲಿಯಾದ ವೃಕೋದರ ಎರಡು ತೋಳುಗಳನ್ನು ಮೇಲೆತ್ತಿ ತೋರುತ್ತ ನಡೆದ. ಈ ಎರಡು ತೋಳುಗಳಿಂದಲೆ ಎಲ್ಲ ಶತ್ರುಗಳನ್ನು ಕೊಲ್ಲಲು ನಾನು ಶಕ್ತ ಎಂದು.
ಅಬದ್ಧಕೇಶಾ ಪ್ರಯಯೌ ದ್ರೌಪದೀ ಸಾ ಸಭಾತಲಾತ್ |
ಮುಕ್ತಕೇಶಾ ಭವಿಷ್ಯಂತಿ ಧಾರ್ತರಾಷ್ಟ್ರಸ್ತ್ರಿಯಸ್ತ್ವತಿ ॥412॥
ದ್ರೌಪದಿ ಮುಕ್ತಕೇಶಳಾಗಿಯೆ ಸಭಾಂಗಣದಿಂದ ಹೊರಟಳು. `ಕೌರವರ ಹೆಂಡಿರು ಸದಾ ಮುಕ್ತ ಕೇಶರಾಗುವರು' ಎಂದು.
ವರ್ಷನ್ ಪಾಂಸೂನ್ ಯಯೌ ಪಾರ್ಥ ಇತ್ಥಂ ಶತ್ರುಷು ಸಾಯಕಾನ್|
ವರ್ಷಯಾಮೀತ್ಯಭಿಪ್ರಾಯಃ ಪರಮಾಸ್ತ್ರವಿದಾಂ ವರಃ ॥413॥
ಮಹಾ ಅಸ್ತ್ರಜ್ಞರಲ್ಲಿಯೇ ಉತ್ತಮನಾದ ಅರ್ಜುನ ದಾರಿಯುದ್ದಕ್ಕೂ ಧೂಳೆರಚುತ್ತ ನಡೆದ. ಹೀಗೇ ಶತ್ರುಗಳ ಮೇಲೆ ನಾನು ಬಾಣಗಳನ್ನು ಎರಚುತ್ತೇನೆ ಎಂಬುದು ಅವನ ಭಾವವಾಗಿತ್ತು.
ಯಮಾವವಾಙ್ಮುಖೌ ಯಾತೌ ನಾವಯೋಃ ಶತ್ರವೋ ಮುಖಂ |
ಪಶ್ಯಂತ್ವಸ್ಯಾಮವಸ್ಥಾಯಾಮಿತ್ಯೇವ ಧೃತಚೇತಸೌ ॥414॥
ನಕುಲ ಸಹದೇವರು ಮುಖ ತಗ್ಗಿಸಿಕೊಂಡು ನಡೆದರು. ಅವರು, ನಮ್ಮ ಶತ್ರುಗಳು ಇನ್ನು ಮುಂದೆ ಈ ಅವಸ್ಥೆಯಲ್ಲಿ ನಮ್ಮ ಮುಖವನ್ನು ನೋಡುವಂತಾಗಬಾರದೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದರು.
ಪ್ರೇತಸಂಸ್ಕಾರಸೂಕ್ತಾನಿ ಪಠನ್ ಧೌಮ್ಯೋಽಗ್ರತೋ ಯಯೌ |
ಹತೇಷು ಧಾರ್ತರಾಷ್ಟ್ರೇಷು ಮಯಾ ಕಾರ್ಯಾಃ ಕ್ರಿಯಾ ಇತಿ ॥415॥
ಶವಸಂಸ್ಕಾರ ಸೂಕ್ತಗಳನ್ನು ಪಠಿಸುತ್ತ ಧೌಮ್ಯರು ಮುಂದೆ ನಡೆದರು. ಕೌರವರು ಹತರಾದಾಗ ನಾನು ಈ ಕಾರ್ಯಮಾಡಬೇಕು ಎಂದ.
ತಾನಥಾನುಯಯುಃ ಸೂತಾ ರಥೈಃ ಪರಿಚತುರ್ದಶೈಃ |
ಸೂದಾಃ ಪೌರೋಗವಾಶ್ಚೈವ ಭೃತ್ಯಾ ಯೇ ತ್ವಾಪ್ತಕಾರಿಣಃ ॥416॥
ಪಾಂಡವರನ್ನು ಹದಿನಾಲ್ಕು ಉಪರಥಗಳಿಂದ ಕೂಡಿದ ಐದು ಮುಖ್ಯ ರಥಗಳಿಂದ ಸಾರಥಿಗಳೂ ಅಡಿಗೆಯವರೂ ಪಾಕಾಧ್ಯಕ್ಷರೂ ಬೇರೆ ಆಪ್ತರಾದ ಭೃತ್ಯರೂ ಹಿಂಬಾಲಿಸಿದರು.
ತತಸ್ತೇ ಜಾಹ್ನವೀತೀರೇ ವನೇ ವಟಮುಪಾಶ್ರಿತಾಃ |
ನೃಷೀದನ್ನಾಗತಾನ್ ದೃಷ್ಟ್ವಾ ಸಮಸ್ತಾನ್ ಪುರವಾಸಿನಃ ॥417॥
ಬಳಿಕ ಪಾಂಡವರು ಎಲ್ಲ ನಗರವಾಸಿಗಳೂ ತಮ್ಮನ್ನು ಹಿಂಬಾಲಿಸಿ ಬಂದುದನ್ನು ಕಂಡು ಗಂಗಾನದಿತೀರದ ಕಾಡಿನಲ್ಲಿ ಒಂದು ಆಲದ ಮರದ ಬುಡವನ್ನಾಶ್ರಯಿಸಿ ಕುಳಿತರು.
ತತಸ್ತು ತೇ ಸರ್ವಜಗನ್ನಿವಾಸಂ
ನಾರಾಯಣಂ ನಿತ್ಯಸಮಸ್ತ ಸದ್ಗುಣಂ |
ಸ್ವಯಂಭುಶರ್ವಾದಿಭಿರರ್ಚಿತಂ ಸದಾ
ಭಕ್ತ್ಯಾ ಸ್ಮರನ್ ಭಕ್ತಭವಾಪಹಂ ಪ್ರಭುಂ ॥418॥
ಸರ್ವ ಜಗನ್ನಿವಾಸನೂ ನಿತ್ಯ ಸಕಲ ಸದ್ಗುಣನೂ ಸದಾ ಬ್ರಹ್ಮ ರುದ್ರಾದಿಗಳಿಂದ ಪೂಜಿತನೂ ಭಕ್ತರ ಸಂಸಾರವನ್ನು ಕಳೆವವನೂ ಆದ ಪ್ರಭು ನಾರಾಯಣನನ್ನು ಪಾಂಡವರು ಭಕ್ತಿಯಿಂದ ನೆನೆದರು.
* * * *
ತೊಂಬತ್ತೂರನೆಯ ಅಧ್ಯಾಯ
(ದುರ್ಯೋಧನನಿಂದ ಧೃತರಾಷ್ಟ್ರನ ಬುದ್ಧಿ ಭೇದನ ಮತ್ತು ಕಾರ್ತವೀರ್ಯನ ಕಥೆಯ ನಿರೂಪಣೆ.)
ಜನಮೇಜಯಃ
ಅನುಜ್ಞಾತಾಂಸ್ತಾನ್ ವಿದಿತ್ವಾ ಸರತ್ನಧನಸಂಚಯಾನ್ |
ಪಾಂಡವಾನ್ ಧಾರ್ತರಾಷ್ಟ್ರಾಣಾಂ ಕಥಮಾಸೀನ್ಮನಸ್ತದಾ ॥1॥
ಪಾಂಡವರು ತಮ್ಮ ಧನಸಂಚಯದೊಂದಿಗೆ ಹಿಂದಿರುಗಲು ಧೃತರಾಷ್ಟ್ರನ ಅನುಮತಿಯನ್ನು ಪಡೆದುದನ್ನು ಕೇಳಿದ ಧೃತರಾಷ್ಟ್ರನ ಮಕ್ಕಳ ಮನಸ್ಸು ಆಗ ಹೇಗಾಯಿತು?

ವೈಶಂಪಾಯನಃ
ಅನುಜ್ಞಾತಾಂಸ್ತಾನ್ ವಿದಿತ್ವಾ ಧೃತರಾಷ್ಟ್ರೇಣ ಧೀಮತಾ |
ರಾಜನ್ ದುಶ್ಶಾಸನಃ ಕ್ಷಿಪ್ರಂ ಜಗಾಮ ಭ್ರಾತರಂ ಪ್ರತಿ ||2||
ರಾಜನೇ! ಮೇಧಾವಿಯಾದ ಧೃತರಾಷ್ಟ್ರನಿಂದ ಪಾಂಡವರು ಅನುಮತಿಯನ್ನು ಪಡೆದುದನ್ನು ಕೇಳಿ ದುಶ್ಶಾಸನನು ಶೀಘ್ರವಾಗಿ ತನ್ನ ಅಣ್ಣನ ಬಳಿಗೆ ಹೋದನು.
ದುರ್ಯೋಧನಂ ಸಮಾಸೀನಂ ಸಾಮಾತ್ಯಂ ಭರತರ್ಷಭ |
ದುಃಖಾರ್ತೋ ಭರತಶ್ರೇಷ್ಠ ಇದಂ ವಚನಮಬ್ರವೀತ್ ||3||
ಎಲೈ ಭರತರ್ಷಭನೇ! ದುಃಖಾರ್ತನಾದ ಭರತಶ್ರೇಷ್ಠನಾದ ದುಶ್ಶಾಸನನು ಅಮಾತ್ಯರ ಜೊತೆಯಲ್ಲಿ ಕುಳಿತಿದ್ದ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದನು.
ದುಃಖೇನೈತಾನ್ ಸಮಾನೀತಾನ್ ಸ್ಥವಿರೋ ನಾಶಯತ್ಯಸೌ |
ಶತ್ರುಸಾದ್ ಗಮಯನ್ ದ್ರವ್ಯಂ ತದ್ ಬುಧ್ಯಧ್ವಂ ಮಹಾಬಲಾಃ ||4||
ಎಲೈ ಮಹಾಬಲರೇ! ಬಹಳ ಕಷ್ಟಪಟ್ಟು ನಾವು ಸಂಪಾದಿಸಿದ ಶತ್ರುಸಂಪತ್ತನ್ನು ಈ ಮುದುಕನು ಶತ್ರುಗಳಿಗೆ ಅಧೀನವನ್ನಾಗಿ ಮಾಡಿ ನಾಶಮಾಡುತ್ತಿದ್ದಾನೆ. ಅದನ್ನು ನೀವೆಲ್ಲರೂ ಗಮನಿಸಿ.
ವೈಶಂಪಾಯನಃ
ಅಥ ದುರ್ಯೋಧನಃ ಕರ್ಣಃ ಶಕುನಿಶ್ಚಾಪಿ ಸೌಬಲಃ |
ಮಿಥಃ ಸಂಗಮ್ಯ ಸಹಿತಾಃ ಪಾಂಡವಾನ್ ಪ್ರತಿ ಮಂತ್ರಿತಾಃ ||5||
ಆಗ ದುರ್ಯೋಧನ ಕರ್ಣ ಮತ್ತು ಸುಬಲಪುತ್ರನಾದ ಶಕುನಿ ಮೂವರೂ ಸೇರಿ ದುಶ್ಶಾಸನನ ಜೊತೆಯಲ್ಲಿ ಸೇರಿ ಪಾಂಡವರನ್ನು ಮಣಿಸಲು ಏನು ತಂತ್ರವನ್ನು ಮಾಡಬೇಕೆಂದು ಮಂತ್ರಾಲೋಚನೆಯನ್ನು ಮಾಡಿದರು.
ವೈಚಿತ್ರವೀರ್ಯಂ ರಾಜಾನಂ ಧೃತರಾಷ್ಟ್ರಂ ಮನೀಷಿಣಮ್ |
ಅಭಿಗಮ್ಯ ತ್ವರಾಯುಕ್ತಾಃ ಶ್ಲಕ್ಷ್ಣಂ ವಚನಮಬ್ರುವನ್ ||6||
ಅವರು ಕ್ಷಿಪ್ರವಾಗಿ ವಿಚಿತ್ರವೀರ್ಯನ ಸುತನಾದ ಮೇಧಾವಿಯಾದ ಧೃತರಾಷ್ಟ್ರನನ್ನು ಸಮೀಪಿಸಿ ನಯವಾಗಿ ಈ ಮಾತುಗಳನ್ನು ಆಡಿದರು.
ನ ತ್ವಯೇದಂ ಶ್ರುತಂ ರಾಜನ್ ಯಜ್ಜಗಾದ ಬೃಹಸ್ಪತಿಃ |
ಶಕ್ರಸ್ಯ ನೀತಿಂ ಪ್ರವದನ್ ಧೀಮಾನ್ ದೇವಪುರೋಹಿತಃ ||7||
ರಾಜನೇ! ಮೇಧಾವಿಯಾದ ದೇವಪುರೋಹಿತರಾದ ಬೃಹಸ್ಪತ್ಯಾಚಾರ್ಯರು ಇಂದ್ರನಿಗೆ ನೀತಿಯನ್ನು ಉಪದೇಶಮಾಡುತ್ತಾ ಹೇಳಿದ ವಿಷಯವನ್ನು ನೀನು ಕೇಳಿಲ್ಲವೆ?
ಸರ್ವೋಪಾಯೈರ್ನಿಹಂತವ್ಯಾಃ ಶತ್ರವಃ ಶತ್ರುಕರ್ಶನ |
ಪುರಾ ಯುದ್ಧಾದ್ ಬಲಾದ್ವಾಽಪಿ ಪ್ರಕುರ್ವಂತಿ ಯಥಾಹಿತಮ್ ||8||
ಎಲೈಶತ್ರುಕರ್ಶನನೇ! ಶತ್ರುಗಳನ್ನು ಯುದ್ಧಕ್ಕಿಂತ ಮೊದಲೇ ಎಲ್ಲಾ ಉಪಾಯಗಳಿಂದಲೂ ಸಂಹರಿಸಬೇಕು. ಅವರು ತಮ್ಮ ಹಿತವನ್ನು ಸಾಧಿಸಿಕೊಳ್ಳದಂತೆ ನಮ್ಮ ಸಾಮರ್ಥ್ಯದಿಂದ ನೋಡಿಕೊಳ್ಳಬೇಕು.
ತೇ ವಯಂ ಪಾಂಡವಧನೈಃ ಸರ್ವಾನ್ ಸಂಪೂಜ್ಯ ಪಾರ್ಥಿವಾನ್ |
ಯದಿ ತಾನ್ ಯೋಧಯಿಷ್ಯಾಮಃ ಕಿಂ ವಾ ನಃ ಪರಿಹಾಸ್ಯತಿ ||9||
ಅಂತಹ ನಾವು ಪಾಂಡವರ ಸಂಪತ್ತಿನಿಂದ ಎಲ್ಲಾ ರಾಜರನ್ನೂ ಪೂಜಿಸಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದ್ದರೆ ನಮ್ಮ ಗಂಟು ಏನು ಹೋಗುತ್ತಿತ್ತು?
ಅಹೀನಾಶೀವಿಷಾನ್ ಕ್ರುದ್ಧಾನ್ ದಂಶಾಯ ಸಮುಪಸ್ಥಿತಾನ್ |
ಕೃತ್ವಾ ಕಂಠೇ ಚ ಪೃಷ್ಠೇ ಚ ಕಃ ಸಮುತ್ಸ್ರಷ್ಟುಮರ್ಹತಿ ||10||
ಮಹಾ ವಿಷದಿಂದ ಕೂಡಿದ ಕೋಪಗೊಂಡ ಕಚ್ಚಲು ಉದ್ಯುಕ್ತವಾಗಿರುವ ಸರ್ಪಗಳನ್ನು ಕಂಠದಲ್ಲಿಯೂ ಬೆನ್ನಿನ ಮೇಲೆಯೂ ಇಟ್ಟುಕೊಂಡು ಯಾವನು ಅವುಗಳನ್ನು ಹಾಗೆಯೇ ಬಿಡುತ್ತಾನೆ?
ಆತ್ತಶಸ್ತ್ರಾ ರಥಗತಾಃ ಕುಪಿತಾಸ್ತಾತ ಪಾಂಡವಾಃ |
ನಿಶ್ಶೇಷಾನ್ ನಃ ಕರಿಷ್ಯಂತಿ ಕ್ರುದ್ಧಾ ಹ್ಯಾಶೀವಿಷಾ ಯಥಾ ||11||
ಎಲೈ ತಂದೆಯೇ ಶಸ್ತ್ರವನ್ನು ಹಿಡಿದು ರಥದಲ್ಲಿ ಕುಳಿತ ಕ್ರುದ್ಧರಾದ ಪಾಂಡವರು ಆ ಸರ್ಪಗಳಂತೆ ನಮ್ಮನ್ನು ನಿಶ್ಶೇಷಗೊಳಿಸುವರು.
ಸನ್ನದ್ಧೋ ಹ್ಯರ್ಜುನೋ ಯಾತಿ ವಿವರ್ತ್ಯ ಪರಮೇಷುಧೀ |
ಗಾಂಡೀವಂ ಗೃಹ್ಯ ಸಂಕ್ರುದ್ಧಃ ಪಾರ್ಥಃ ಶಸ್ತ್ರಭೃತಾಂ ವರಃ ||12||
ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಯುದ್ಧ ಸನ್ನದ್ಧನಾಗಿ ತನ್ನ ಬತ್ತಳಿಕೆಗಳನ್ನೂ ಗಾಂಡೀವ ಧನುಸ್ಸನ್ನೂ ಅಲಂಕರಿಸಿ ಕ್ರೋಧದಿಂದ ಕೂಡಿದವನಾಗಿ ಹೋಗುತ್ತಿದ್ದಾನೆ.
ಗದಾಂ ಗುರ್ವೀಂ ಸಮುದ್ಯಮ್ಯ ತ್ವರಿತಂಚ ವೃಕೋದರಃ |
ಸ್ವಂ ರಥಂ ಯೋಜಯಿತ್ವಾಽಶು ನಿರ್ಯಾತ ಇತಿ ನಃ ಶ್ರುತಮ್ ||13||
ಭೀಮಸೇನನು ಶೀಘ್ರವಾಗಿ ತನ್ನ ಭಾರವಾದ ಗದೆಯನ್ನು ಎತ್ತಿಕೊಂಡು ತನ್ನ ರಥವನ್ನು ಹೂಡಿ ಹೊರಟನೆಂದು ಕೇಳಿದ್ದೇವೆ.
ನಕುಲಃ ಖಡ್ಗಮಾದಾಯ ಚರ್ಮ ಚಾಪ್ಯಷ್ಟಚಂದ್ರಕಮ್ |
ಸಹದೇವಶ್ಚ ರಾಜಾ ಚ ಚಕ್ರುರಾಕಾರಮಿಂಗಿತೈಃ ||14||

ನಕುಲನು ಅಷ್ಟ ಚಂದ್ರಗಳಿಂದ ಕೂಡಿರುವ ಗುರಾಣಿಯನ್ನು ಮತ್ತು ಖಡ್ಗವನ್ನು ಹಿಡಿದು ಹೊರಟನು. ರಾಜನಾದ ಯುಧಿಷ್ಠಿರನೂ ಸಹದೇವನೂ ಸಹ ತಮ್ಮ ಭಾವನೆಗಳನ್ನು ತಮ್ಮ ಚೇಷ್ಟೆಗಳಿಂದಲೇ ವ್ಯಕ್ತಪಡಿಸಿದರು.
ತೇ ಚಾಸ್ಥಾಯ ರಥಾನ್ ಸರ್ವೇ ಬಹುಶಸ್ತ್ರಪರಿಚ್ಛದಾನ್ |
ಅಭಿಘ್ನಂತೋ ರಥಾನ್ ರಾಜನ್ ಸೇನಾಯೋಗಾಯ ನಿರ್ಯಯುಃ ॥15॥
ಎಲೈ ರಾಜನೇ! ಅವರೆಲ್ಲರೂ ಬಹು ಶಸ್ತ್ರಗಳಿಂದ ಸುಸಜ್ಜಿತವಾದ ರಥಗಳನ್ನು ಏರಿ ರಥಗಳನ್ನು ವೇಗವಾಗಿ ಓಡಿಸುತ್ತಾ ಸೈನ್ಯವನ್ನು ಸಂಗ್ರಹಮಾಡುವುದಕ್ಕಾಗಿಯೇ ಹೊರಟಿದ್ದಾರೆ.
ನ ಕ್ಷಮಂತೇ ಯಥಾऽಸ್ಮಾಭಿರ್ಜಾತು ವಿಪ್ರಕೃತಾ ಹಿ ತೇ |
ದ್ರೌಪದ್ಯಾಸ್ತು ಪರಿಕ್ಲೇಶಂ ಕಸ್ತೇಷಾಂ ಕ್ಷಂತುಮರ್ಹತಿ ॥16॥
ನಮ್ಮಿಂದ ಅವಮಾನಕ್ಕೆ ಒಳಗಾದ ಅವರು ನಮ್ಮನ್ನು ಎಂದೂ ಕ್ಷಮಿಸುವುದಿಲ್ಲ. ದ್ರೌಪದಿಗೆ ಉಂಟಾದ ಕ್ಲೇಶವನ್ನು ಅವರಲ್ಲಿ ಯಾರೂ ಕ್ಷಮಿಸುವರು.
ಪುನರ್ದೀವ್ಯಾಮ ಭದ್ರಂ ತೇ ವನವಾಸಾಯ ಪಾಂಡವೈಃ |
ನ ಪಶ್ಯಾಮಿ ರಣೇ ಕ್ರುದ್ಧಂ ಬೀಭತ್ಸುಂ ಪ್ರತಿ ವಾರಣಮ್ ॥17॥
ನಿನಗೆ ಮಂಗಳವಾಗಲಿ. ನಾವು ವನವಾಸವನ್ನು ಪಣವಾಗಿಟ್ಟು ಪಾಂಡವರ ಜೊತೆಯಲ್ಲಿ ಪುನಃ ದ್ಯೂತವನ್ನು ಆಡೋಣ. ಈ ಯುದ್ಧದಲ್ಲಿ ಕ್ರುದ್ಧನಾದ ಅರ್ಜುನನ್ನು ತಡೆಯುವ ಯಾವ ಪುರುಷನನ್ನೂ ನಾನು ಕಾಣುತ್ತಿಲ್ಲ.
ಭೀಷ್ಮೋ ದ್ರೋಣಶ್ಚ ಕರ್ಣಶ್ಚ ದ್ರೌಣಿಶ್ಚ ರಥಿನಾಂ ವರಃ |
ಕೃಪಶ್ಚ ವೃಷಸೇನಶ್ಚ ವಿಕರ್ಣಶ್ಚ ಜಯದ್ರಥಃ ॥18॥
ಬಾಹ್ಲೀಕಃ ಸೋಮದತ್ತಶ್ಚ ಭೂರಿರ್ಭೂರಿಶ್ರವಾಃ ಶಲಃ |
ಶಕುನಿಃ ಸಸುತಶ್ಚೈವ ನೃಪಾಶ್ಚಾನ್ಯೇ ಚ ಕೌರವಾಃ |
ಏತೇ ಸರ್ವೇ ರಣೇ ಯತ್ತಾಃ ಪಾರ್ಥಂ ಸೋಢುಂ ನ ಶಕ್ನುವನ್ ॥19॥
ಭೀಷ್ಮ ದ್ರೋಣ ಕರ್ಣ ರಥಿಶ್ರೇಷ್ಠರಾದ ಅಶ್ವತ್ಥಾಮ ಕೃಪ ವೃಷಸೇನ ವಿಕರ್ಣ ಜಯದ್ರಥ ಬಾಹ್ಲೀಕ ಸೋಮದತ್ತ ಭೂರಿ ಭೂರಿಶ್ರವ ಶಲ ಮಕ್ಕಳಿಂದ ಒಡಗೂಡಿದ ಶಕುನಿ ಮತ್ತು ಉಳಿದ ಕೌರವ ರಾಜರುಗಳು ಇವರೆಲ್ಲರೂ ಸೇರಿ ಪ್ರಯತ್ನಪಟ್ಟರೂ ಯುದ್ಧದಲ್ಲಿ ಅರ್ಜುನನ್ನು ಎದುರಿಸಲು ಸಾಧ್ಯವಿಲ್ಲ.
ಅರ್ಜುನೇನ ಸಮೋ ವೀರ್ಯೇ ನಾಸ್ತಿ ಲೋಕೇ ಧನುರ್ಧರಃ |
ಯೋऽರ್ಜುನೇನಾರ್ಜುನಸ್ತುಲ್ಯೋ ದ್ವಿಬಾಹುರ್ಬಹುಬಾಹುನಾ ॥20॥
ಅರ್ಜುನನಿಗೆ ಸಮನಾದ ಧನುರ್ಧಾರಿಯು ಲೋಕದಲ್ಲಿ ಯಾರೂ ಇಲ್ಲ. ಎರಡು ಬಾಹುಗಳುಳ್ಳಸಹಸ್ರ ಬಾಹುಗಳುಳ್ಳ ಆ ಅರ್ಜುನನಿಗೆ (ಕಾರ್ತವೀರ್ಯಾರ್ಜುನನಿಗೆ) ಸಮನಾಗಿದ್ದಾನೆ.
ಧೃತರಾಷ್ಟ್ರಃ
ಕಸ್ತ್ವಯೋಕ್ತಃ ಪುಮಾನ್ ವೀರೋ ಬೀಭತ್ಸುಸಮವಿಕ್ರಮಃ |
ತಂ ಮೇ ಬ್ರೂಹಿ ಮಹಾವೀರ್ಯಂ ಶ್ರೋತುಮಿಚ್ಛಾಮಿ ಪುತ್ರಕ ॥21॥
ಪುತ್ರನೇ! ಅರ್ಜುನನಿಗೆ ಸಮಾನವಾದ ಪರಾಕ್ರಮವುಳ್ಳ ನೀನು ಹೇಳಿದ ಮಹಾಪರಾಕ್ರಮಿಯಾದ ಆ ಇನ್ನೊಬ್ಬ ವೀರನು ಯಾರು? ಅವನ ವಿಷಯವನ್ನು ನನಗೆ ತಿಳಿಸು. ನಾನು ಕೇಳಲು ಇಚ್ಛೆಪಡುತ್ತೇನೆ.
ದುರ್ಯೋಧನಃ
ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ |
ಹೇಹಯಾಧಿಪತಿರ್ವೀರಃ ಪಾಂಚದಶ್ಯಃ ಪಿತಾಮಹಾತ್ ॥22॥
ಕಾರ್ತವೀರ್ಯಾಜುನನೆಂಬ ರಾಜನು ಸಹಸ್ರಬಾಹುವುಳ್ಳವನು. ಅವನು ಹೇಹಯದೇಶದ ಅಧಿಪತಿಯಾದ ವೀರ. ಜಗತ್ಪಿತಾಮಹನಾದ ಬ್ರಹ್ಮ ಅವನು ಹದಿನೈದಯನೆಯವನು.
ಧೃತರಾಷ್ಟ್ರಃ
ಗಾಂಧಾರೀಪುತ್ರ ಸರ್ವಾಂಸ್ತಾನ್ ಕಾರ್ತವೀರ್ಯಪಿತಾಮಹಾನ್ |
ಆನುಪೂರ್ವ್ಯಾಚ್ಚ ಮೇ ಶಂಸ ತತಸ್ತಂ ಪಾರ್ಥಿವಂ ತಥಾ ॥23॥
ಗಾಂಧಾರೀ ಕುಮಾರನೇ ಕಾರ್ತವೀರ್ಯನ ಪಿತಾಮಹರನ್ನೆಲ್ಲಾ ಕ್ರಮವಾಗಿ ಹೇಳಿ ಅನಂತರ ಕಾರ್ತವೀರ್ಯನ ಚರಿತ್ರೆಯನ್ನು ಹೇಳು.
ದುರ್ಯೋಧನಃ
ಕಾರ್ತವೀರ್ಯಸ್ಯ ಚರಿತಂ ಶೃಣು ರಾಜನ್ ಮಹಾತ್ಮನಃ ॥24॥
ರಾಜನೇ! ಮಹಾತ್ಮನಾದ ಕಾರ್ತವೀರ್ಯನ ಚರಿತ್ರೆಯನ್ನು ಕೇಳು.
ಅವ್ಯಕ್ತಪ್ರಭವೋ ಬ್ರಹ್ಮಾ ಸರ್ವಲೋಕಪಿತಾಮಹಃ |
ಬ್ರಹ್ಮಣೋऽತ್ರಿಃ ಸುತೋ ವಿದ್ವಾನತ್ರೇಃ ಪುತ್ರೋ ನಿಶಾಕರಃ ॥25॥
ಸರ್ವಲೋಕಪಿತಾಮಹನಾದ ಬ್ರಹ್ಮನು ಅವ್ಯಕ್ತನಾದ ಪರಮಾತ್ಮನಿಂದ ಹುಟ್ಟಿದವನು. ಅತ್ರಿಋಷಿಗಳು ಬ್ರಹ್ಮನ ಮಕ್ಕಳು. ಚಂದ್ರನು ಅತ್ರಿಯ ಮಗ.
ಸೋಮಸ್ಯ ತು ಬುಧಃ ಪುತ್ರೋ ಬುಧಸ್ಯ ತು ಪುರೂರವಾಃ |
ತಸ್ಯಾಪ್ಯಥ ಸುತೋಪ್ಯಾಯುರಾಯೋಸ್ತು ನಹುಷಃ ಸುತಃ ॥26॥
ಚಂದ್ರನ ಮಗ ಬುಧ. ಬುಧನ ಮಗ ಪುರೂರವ. ಪುರೂರವನ ಮಗ ಆಯು ಮತ್ತು ಆಯುವಿನ ಮಗ ನಹುಷ.

ನಹುಷಸ್ಯ ಯಯಾತಿಸ್ತು ಯಯಾತೇಸ್ತನುಜೋ ಯದುಃ |
ಯದೋಃ ಪುತ್ರೋ ಮಹಾರಾಜ ಸಹಸ್ರೌಜೇತಿ ವಿಶ್ರುತಃ ॥27॥
ಯಯಾತಿಯು ನಹುಷನ ಪುತ್ರ. ಯದುವು ಯಯಾತಿಯ ಪುತ್ರ. ಮಹಾರಾಜನೇ! ಯದುವಿಗೆ ಸಹಸ್ರೌಜನೆಂಬ ಪ್ರಖ್ಯಾತನಾದ ಪುತ್ರನಾದನು.
ಸಹಸ್ರೌಜಸುತೋ ರಾಜನ್ ಚಕ್ರದಾಸೇತಿ ವಿಶ್ರುತಃ |
ಚಕ್ರದಾಸಸ್ಯ ದಾಯಾದೋ ಹೇಹಯೋ ನಾಮ ಪಾರ್ಥಿವಃ ॥28॥
ರಾಜನೇ! ಸಹಸ್ರೌಜನಿಗೆ ಚಕ್ರದಾಸನೆಂಬ ಪ್ರಖ್ಯಾತನಾದ ಸುತನಿದ್ದನು. ಚಕ್ರದಾಸನ ಮಗನೆಂದರೆ ಹೇಹಯ ಎಂಬರಾಜ.
ಹೇಹಯಸ್ಯಾಭವತ್ ಪುತ್ರೋ ಧರ್ಮನೇತ್ರ ಇತಿ ಶ್ರುತಃ |
ಧರ್ಮನೇತ್ರಸ್ಯ ಕಾರ್ತಸ್ತು ಕೃತವೀರ್ಯಸ್ತು ಕಾರ್ತಜಃ ॥29॥
ಹೇಹಯನಿಗೆ ಧರ್ಮನೇತ್ರನೆಂಬ ಮಗನಾದನು. ಧರ್ಮನೇತ್ರನಿಗೆ ಕಾರ್ತನೆಂಬ ಮಗ. ಕೃತವೀರ್ಯನು ಕಾರ್ತನ ಮಗ.
ಕೃತವೀರ್ಯಸ್ಯ ತನಯೋ ಹ್ಯರ್ಜುನೋ ಬಲಿನಾಂ ವರಃ |
ಸ ಚಾರ್ಜುನೋ ಮಹಾರಾಜ ತಪೋ ಘೋರಂ ಚಕಾರ ಹ ॥30॥
ಕೃತವೀರ್ಯನ ಮಗ ಬಲಿಷ್ಠನಾದ ಅರ್ಜುನ. ಎಲೈ ಮಹಾರಾಜನೇ! ಆ ಅರ್ಜುನನು ಘೋರವಾದ ತಪಸ್ಸನ್ನು ಆಚರಿಸಿದನು.
ಸಾಗ್ರಂ ವರ್ಷಾಯುತಂ ತಪ್ತ್ವಾ ತಪಃ ಪರಮದುಶ್ಚರಮ್ |
ದತ್ತಮಾರಾಧಯಾಮಾಸ ಸೋಽರ್ಜುನೋತ್ರಿಸುತಂ ಮುನಿಮ್ ॥31॥
ಅವನು ಹತ್ತುಸಾವಿರವರ್ಷಗಳಿಗಿಂತಲೂ ಹೆಚ್ಚುಕಾಲ ಅತ್ಯಂತ ದುಶ್ಚರವಾದ ತಪಸ್ಸನ್ನು ಆಚರಿಸಿ ಅತ್ರಿಸುತನಾದ ದತ್ತಾತ್ರೇಯ ಮುನಿಯನ್ನು ಆರಾಧಿಸಿದನು.
ತಸ್ಯ ದತ್ತೋ ವರಾನ್ ಪ್ರಾದಾಚ್ಚತುರಃ ಪಾರ್ಥಿವಸ್ಯ ವೈ |
ಪೂರ್ವಂ ಬಾಹುಸಹಸ್ರಂ ತು ಪ್ರಾರ್ಥಿತಃ ಪರಮೋ ವರಃ ॥32॥
ದತ್ತನು ಆ ರಾಜನಿಗೆ ನಾಲ್ಕುವರಗಳನ್ನು ನೀಡಿದನು. ಸಹಸ್ರ ಬಾಹುಗಳು ಅರ್ಜುನನು ಕೇಳಿದ ಮೊದಲ ವರ.
ಅಧರ್ಮೇ ಪ್ರೀಯಮಾಣಸ್ಯ ಸದ್ಭಿಸ್ತತ್ರ ನಿವಾರಣಮ್ |
ಧರ್ಮೇಣ ಪೃಥಿವೀಂ ಜಿತ್ವಾ ಧರ್ಮೇಣೈವಾನುರಂಜನಮ್ ॥33॥
ಅಧರ್ಮದಲ್ಲಿ ಆಸಕ್ತಿಯನ್ನು ಹೊಂದಿದರೆ ಸಜ್ಜನರಿಂದ ಅದರ ನಿವಾರಣೆ (ಇದು ಎರಡನೆಯ ವರ) ಭೂಮಿಯನ್ನು ಧರ್ಮದಿಂದಲೇ ಗೆದ್ದು ಧರ್ಮದಿಂದಲೇ ಪ್ರಜೆಗಳನ್ನು ಸಂತೋಷಪಡಿಸುವುದು (ಇದು ಮೂರನೆಯ ವರ)
ಸಂಗ್ರಾಮಾನ್ ಸುಬಹೂನ್ ಜಿತ್ವಾ ಹತ್ವಾ ಚಾರೀನ್ ಸಹಸ್ರಶಃ |
ಸಂಗ್ರಾಮೇ ಯತಮಾನಸ್ಯ ವಧಶ್ಚೈವಾಧಿಕಾದ್ ರಣೇ ॥34॥
ಅನೇಕ ಯುದ್ಧಗಳನ್ನು ಮಾಡಿ ಗೆದ್ದು ಸಹಸ್ರ ಸಂಖ್ಯೆಯಲ್ಲಿ ಶತ್ರುಗಳನ್ನು ಕೊಂದು ಯುದ್ಧದಲ್ಲಿ ಪ್ರಯತ್ನ ಶೀಲವಾಗಿರುವ ಸಮಯದಲ್ಲಿಯೇ ತನಗಿಂತ ಉತ್ತಮನಾದವನಿಂದ ಯುದ್ಧದಲ್ಲಿ ಮರಣ. (ಇದು ನಾಲ್ಕನೆಯ ವರ)
ತಸ್ಯ ಬಾಹುಸಹಸ್ರಂ ತು ಯುಧ್ಯತಃ ಕಿಲ ಭಾರತ |
ರಥೋ ಧ್ವಜಶ್ಚ ಸಂಜಾತಾ ಇತ್ಯೇವಂ ಮೇ ಶ್ರುತಂ ಪುರಾ ॥35॥
ಎಲೈ ಭಾರತನೇ! ಅವನು ಯುದ್ಧಮಾಡುತ್ತಿರುವಾಗ ಅವನಿಗೆ ಸಹಸ್ರ ಬಾಹುಗಳು ದಿವ್ಯವಾದ ರಥ ಮತ್ತು ಧ್ವಜಗಳು ಉಂಟಾದವು ಎಂದು ನಾನು ಕೇಳಿದ್ದೇನೆ.
ತಥೇಯಂ ಪೃಥಿವೀ ರಾಜನ್ ಸಪ್ತದ್ವೀಪಾ ಸಪತ್ತನಾ |
ಸಸಮುದ್ರಾಕರಾ ತಾತ ಬಲಿನೋಗ್ರೇಣ ವೈ ಜಿತಾ ॥36॥
ಎಲೈ ರಾಜನೇ! ಅವನು ತನ್ನ ಉಗ್ರವಾದ ವರದಿಂದ ಸಪ್ತದ್ವಿಪಗಳನ್ನು ಪಟ್ಟಣಗಳನ್ನು ಸಮುದ್ರಗಳನ್ನು ಮತ್ತು ಹೊಂದಿದ ಈ ಭೂಮಿಯನ್ನು ಜಯಿಸಿದನು.
ಸ ಚಾರ್ಜುನೋಥ ತೇಜಸ್ವೀ ಸಪ್ತದ್ವೀಪೇಶ್ವರೋಽಭವತ್ |
ಸ ಚ ರಾಜಾ ಮಹಾಯಜ್ಞಾನಾಜಹಾರ ಮಹಾಬಲಃ |
ಮಹೀಂ ಚ ಸಕಲಾಂ ಜಿತ್ವಾ ಅಸಕೃತ್ ಸ ಸಮಾ ಬಹೂಃ ॥37॥
ಮಹಾತೇಜಸ್ವಿಯಾದ ಆ ಅರ್ಜುನನು ಆಗ ಸಪ್ತದ್ವೀಪಾಧಿಪತಿಯಾದನು. ಮಹಾಬಲನಾದ ಅವನು ಅನಂತರ ಮಹಾಯಜ್ಞಗಳನ್ನು ಆಚರಿಸಿದನು. ಅನೇಕ ಬಾರಿ ಸಮಗ್ರವಾದ ಭೂಮಿಯನ್ನು ಜಯಿಸಿ ಅನೇಕ ವರ್ಷಗಳ ಕಾಲ ಆಳಿದನು.
ತತೋಽರ್ಜುನಃ ಕದಾಚಿದ್ವೈ ರಾಜನ್ ಮಾಹಿಷ್ಮತೀಪತಿಃ |
ನರ್ಮದಾಂ ಭರತಶ್ರೇಷ್ಠ ಸ್ನಾತುಂ ದಾರೈರ್ಯಯೌ ಸಹ ॥38॥
ಭರತ ಶ್ರೇಷ್ಠನಾದ ಎಲೈ ರಾಜನೇ! ಅನಂತರ ಒಮ್ಮೆ ಮಾಹಿಷ್ಮತೀಪತಿಯಾದ ಅರ್ಜುನನು ತನ್ನ ಪತ್ನಿಯ ಜೊತೆಯಲ್ಲಿ ನರ್ಮದಾ ನದಿಗೆ ಸ್ನಾನವನ್ನು ಮಾಡಲು ಹೋದನು.
ತತಸ್ತು ಸ ನದೀಂ ಗತ್ವಾ ಪ್ರವಿಶ್ಯಾಂತರ್ಜಲಂ ಮುದಾ |
ಕರ್ತುಂ ರಾಜನ್ ಜಲಕ್ರೀಡಾಂ ತತೋ ರಾಜೋಪಚಕ್ರಮೇ ॥39॥
ಎಲೈ ರಾಜನೇ! ಅನಂತರ ಅವನು ನದಿಯನ್ನು ಸಮೀಪಿಸಿ ಸಂತೋಷದಿಂದ ಜಲವನ್ನು ಪ್ರವೇಶಿಸಿ ಜಲಕ್ರೀಡೆಯನ್ನು ಮಾಡಲು ಉಪಕ್ರಮಿಸಿದನು.
ತಸ್ಮಿನ್ನೇವ ತು ಕಾಲೇ ತು ರಾವಣೋ ರಾಕ್ಷಸೈಃ ಸಹ |

ಲಂಕಾಯಾ ಈಶ್ವರಸ್ತಾತ ತಂ ದೇಶಂ ಪ್ರಯಯೌ ಬಲೀ ॥40॥
ಎಲೈ ತಂದೆಯೇ ಅದೇ ಕಾಲಕ್ಕೆ ಸರಿಯಾಗಿ ಲಂಕಾಧಿಪತಿಯಾದ ಬಲಿಷ್ಠನಾದ ರಾವಣನೂ ಸಹ ರಾಕ್ಷಸರ ಜೊತೆಯಲ್ಲಿ ಆ ದೇಶಕ್ಕೆ ಬಂದನು.
ತತಸ್ತಮರ್ಜುನಂ ದೃಷ್ಟ್ವಾ ನರ್ಮದಾಯಾಂ ದಶಾನನಃ |
ನಿತ್ಯಂ ಕ್ರೋಧಪರೋ ಧೀರೋ ವರದಾನೇನ ಮೋಹಿತಃ |
ಅಭ್ಯಧಾವತ್ ಸುಸಂಕ್ರುದ್ಧೋ ಮಹೇಂದ್ರಂ ಶಂಬರೋ ಯಥಾ ॥41॥
ನಿತ್ಯವೂ ಕ್ರೋಧಪರನಾದವನೂ ವರದಾನದಿಂದ ದರ್ಪಿತನೂ ಧೀರನಾದ ದಶಾನನನೂ ಆದ ರಾವಣನು ನರ್ಮದೆಯಲ್ಲಿ ಬಹಳ ಕೋಪವುಳ್ಳವನಾಗಿ ಶಂಬರನು ಮಹೇಂದ್ರನ ಜೊತೆಯಲ್ಲಿ ಯುದ್ಧಕ್ಕೆ ಹೋದಂತೆ ಅವನನ್ನು ಸಮೀಪಿಸಿದನು.
ಅರ್ಜುನೋಽಪ್ಯಥ ತಂ ದೃಷ್ಟ್ವಾ ರಾವಣಂ ಪ್ರತ್ಯವಾರಯತ್ |
ತತಸ್ತೌ ಚಕ್ರತುರ್ಯುದ್ಧಂ ರಾವಣಶ್ಚಾರ್ಜುನಶ್ಚ ವೈ ॥42॥
ಅರ್ಜುನನೂ ಸಹ ರಾವಣನನ್ನು ನೋಡಿ ಅವನನ್ನು ತಡೆದನು. ಆಗ ಅರ್ಜುನ ಮತ್ತು ರಾವಣರು ಯುದ್ಧವನ್ನು ಮಾಡಿದರು ಎಂದು ಪ್ರಸಿದ್ಧವಾಗಿದೆ.
ತತಸ್ತು ದುರ್ಜಯಂ ವೀರಂ ವರದಾನೇನ ದರ್ಪಿತಮ್ |
ರಾಕ್ಷಸೇಂದ್ರಂ ಮನುಷ್ಯೇಂದ್ರೋ ಯುಧ್ವಾ ಜಿತ್ವಾ ರಣೇ ಬತ |
ಬದ್ಧ್ವಾ ಧನುರ್ಜ್ಯಯಾ ರಾಜನ್ ವಿವೇಶಾಥ ಪುರೀಂ ಸ್ವಕಾಮ್ ॥43॥
ಅನಂತರ ವರದಾನದಿಂದ ಗರ್ವಿಷ್ಠನಾದ ದುರ್ಜಯನಾದ ರಾಕ್ಷಸಾಧಿಪತಿಯಾದ ವೀರನಾದ ರಾವಣನನ್ನು ಮನುಷ್ಯೇಂದ್ರನಾದ ಅರ್ಜುನನು ಯುದ್ಧದಲ್ಲಿ ತನ್ನ ಬಲದಿಂದ ಜಯಿಸಿ ಅವನನ್ನು ತನ್ನ ಧನುಸ್ಸಿನ ಹಗ್ಗದಿಂದ ಕಟ್ಟಿಕೊಂಡು ತನ್ನ ಪಟ್ಟಣವನ್ನು ಪ್ರವೇಶಿಸಿದನು.
ಸ ತು ತಂ ಬಂಧಿತಂ ಶ್ರುತ್ವಾ ಪುಲಸ್ತ್ಯೋ ರಾವಣಂ ತದಾ |
ಮೋಕ್ಷಯಾಮಾಸ ದೃಷ್ಟ್ವಾಥ ಪುರೇದೃಷ್ಟ್ವಾ ರ್ಜುನಂ ತದಾ ॥44॥
ಪುಲಸ್ತ್ಯರು ರಾವಣನು ಬಂಧಿತನಾಗಿದ್ದಾನೆ ಎಂದು ಕೇಳಿ ಲಂಕೆಯಲ್ಲಿ ಅವನನ್ನು ಕಾಣದೆ ಅರ್ಜುನನನ್ನು ನೋಡಿ ಅವನಿಂದ ರಾವಣನನ್ನು ಬಿಡಿಸಿದರು.
ತತಃ ಕದಾಚಿತ್ ತೇಜಸ್ವೀ ಕಾರ್ತವೀರ್ಯಾರ್ಜುನೋ ಬಲೀ |
ಸಮುದ್ರತೀರಂ ಗತ್ವಾಽಥ ವಿಚರನ್ ದರ್ಪಮೋಹಿತಃ ॥45॥
ಅವಾಕಿರತ್ ಶಿತಶರೈಃ ಸಮುದ್ರಂ ಸ ತು ಭಾರತ |
ತಂ ಸಮುದ್ರೋ ನಮಸ್ಕೃತ್ಯ ಕೃತಾಂಜಲಿರಭಾಷತ ॥47॥
ಅನಂತರ ತೇಜಸ್ವಿಯಾದ ಬಲಿಷ್ಠನಾದ ಕಾರ್ತವೀರ್ಯಾರ್ಜುನನು ಸಮುದ್ರತೀರಕ್ಕೆ ಹೋಗಿ ಅಲ್ಲಿ ದರ್ಪಮೋಹಿತನಾಗಿ ಸಂಚರಿಸುತ್ತಾ ತೀಕ್ಷ್ಣವಾದ ಬಾಣಗಳನ್ನು ಸಮುದ್ರದ ಮೇಲೆ ಪ್ರಯೋಗಿಸಿದನು. ಎಲೈ ಭಾರತನೇ! ಆಗ ಸಮುದ್ರರಾಜನು ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಹೀಗೆ ಹೇಳಿದನು.
ಆಶುಗಾನ್ ವೀರ ಮಾ ಮುಂಚ ಬ್ರೂಹಿ ಕಿಂ ಕರವಾಣಿ ತೇ |
ಮದಾಶ್ರಯಾಣಿ ಭೂತಾನಿ ತ್ವನ್ನಿಸೃಷ್ಟೈರ್ಮಹೇಷುಭಿಃ |
ವಧ್ಯಂತೇ ರಾಜಶಾರ್ದೂಲ ತೇಭ್ಯೋ ದೇಹ್ಯಭಯಂ ವಿಭೋ ॥48॥
ವೀರನೇ! ಇಂತಹ ವೇಗವುಳ್ಳ ಬಾಣಗಳನ್ನು ಪ್ರಯೋಗಿಸಬೇಡ. ನಿನಗೆ ನಾನೇನು ಮಾಡಲಿ ಎಂದು ಹೇಳು. ಪ್ರಾಯಶಃ ನೀನು ಪ್ರಯೋಗಿಸಿದ ಬಾಣದಿಂದ ನನ್ನನ್ನು ಆಶ್ರಯಿಸಿದ ಪ್ರಾಣಿಗಳು ಮರಣವನ್ನು ಹೊಂದುತ್ತಿವೆ. ವಿಭುವೇ! ಆ ಪ್ರಾಣಿಗಳಿಗೆ ಅಭಯವನ್ನು ಕೊಡು.
ಅರ್ಜುನಃ
ದೇಹಿ ಸಿಂಧುಪತೇ ಯುದ್ಧಮದ್ಯೈವ ತ್ವರಯಾ ಮಮ |
ಅಥವಾ ಪೀಡಯಾಮಿ ತ್ವಾಂ ತಸ್ಮಾತ್ ತ್ವಂ ಕುರು ಮಾ ಚಿರಮ್ ॥49॥
ಸಿಂಧುಪತಿಯೇ! ಈ ದಿನ ಶೀಘ್ರವಾಗಿ ನನಗೆ ಯುದ್ಧವನ್ನುಕೊಡು. ಇಲ್ಲದಿದ್ದರೆ ನಾನು ನಿನ್ನನ್ನು ಪೀಡಿಸುತ್ತೇನೆ. ಆದ್ದರಿಂದ ನೀನು ತಡಮಾಡದೆ ಯುದ್ಧವನ್ನು ಮಾಡು.
ಸಮುದ್ರಃ
ಲೋಕೇ ರಾಜನ್ ಮಹಾವೀರ್ಯಾ ಬಹವೋ ನಿವಸಂತಿ ಯೇ |
ತೇಷಾಮೇಕೇನ ರಾಜೇಂದ್ರ ಕುರು ಯುದ್ಧಂ ಮಹಾಬಲ ॥50॥
ರಾಜನೇ! ಲೋಕದಲ್ಲಿ ಅನೇಕ ಪರಾಕ್ರಮಶಾಲಿಗಳಿದ್ದಾರೆ ಮಹಾಬಲನಾದ ರಾಜೇಂದ್ರನೇ! ಅವರಲ್ಲಿ ಯಾರಾದರೂ ಒಬ್ಬನ ಜೊತೆಯಲ್ಲಿ ಯುದ್ಧವನ್ನು ಮಾಡು.
ಅರ್ಜುನಃ
ಮತ್ಸಮೋ ಯದಿ ಸಂಗ್ರಾಮೇ ವರಾಯುಧಧರಃ ಕ್ವಚಿತ್ |
ವಿದ್ಯತೇ ತಂ ಮಮಾಚಕ್ಷ್ವ ಯಃ ಸಹೇತ ಮಹಾಮೃಧೇ ॥51॥
ಯುದ್ಧದಲ್ಲಿ ನನಗೆ ಸಮಾನವಾದ ಶ್ರೇಷ್ಠವಾದ ಆಯುಧವನ್ನು ಧರಿಸಿ ಬಾ. ಇಲ್ಲದಿದ್ದರೆ ಯುದ್ಧದಲ್ಲಿ ನನ್ನ ಸಾಮರ್ಥ್ಯವನ್ನು ಸಹಿಸಬಲ್ಲವನನ್ನು ನನಗೆ ತಿಳಿಸು.

ಸಮುದ್ರಃ
ಮಹರ್ಷಿರ್ಜಮದಗ್ನಿಸ್ತು ಯದಿ ರಾಜನ್ ಪರಿಶ್ರುತಃ |
ತಸ್ಯ ಪುತ್ರೋ ರಣಂ ದಾತುಂ ಯಥಾವದ್ವೈ ತವಾರ್ಹತಿ ||52||
ರಾಜನೇ! ನೀನು ಮಹರ್ಷಿಗಳಾದ ಜಮದಗ್ನಿಗಳನ್ನು ಕೇಳಿದ್ದರೆ. ಅವರ ಪುತ್ರನು ನಿನಗೆ ಯಥಾಯೋಗ್ಯವಾದ ಯುದ್ಧವನ್ನು ಕೊಡಲು ಸಮರ್ಥನಾಗಿದ್ದಾನೆ.
ದುರ್ಯೋಧನಃ
ಸಮುದ್ರಸ್ಯ ವಚಃ ಶ್ರುತ್ವಾ ರಾಜಾ ಮಾಹಿಷ್ಮತೀಪತಿಃ |
ನನಾದ ಸಚಿವೈಃ ಪೂರ್ವಂ ಕ್ರೋಧೇನ ಮಹತಾ ವೃತಃ ||53||
ತತಃ ಪ್ರತಿಯಯೌ ಶೀಘ್ರಂ ಕ್ರೋಧೇನ ಸಹ ಭಾರತ |
ಸ ತಮಾಶ್ರಮಮಾಗತ್ಯ ರಾಮಮೇವಾನ್ವಪದ್ಯತ ||54||
ಮಾಹಿಷ್ಮತೀ ರಾಜನು ಸಮುದ್ರರಾಜನ ಮಾತುಗಳನ್ನು ಕೇಳಿ ತಾನು ಮೊದಲು ಕೇಳಿದ್ದ ಮಾತುಗಳನ್ನು ಕೇಳಿ
ಮಹಾಕ್ರೋಧಾವಿಷ್ಟನಾಗಿ ಶೀಘ್ರವಾಗಿ ಹೊರಟನು. ಎಲೈ ಭಾರತನೇ! ಜಮದಗ್ನಿಗಳ ಆಶ್ರಮವನ್ನು ಕೇಳಿ ಅಲ್ಲಿ ಪರುಶುರಾಮನನ್ನೇ ಸಂಧಿಸಿದನು.
ಸ ರಾಮಪ್ರತಿಕೂಲಾನಿ ಚಕಾರ ಸಹ ಬಂಧುಭಿಃ |
ಆಯಾಸಂ ಜನಯಾಮಾಸ ರಾಮಸ್ಯ ಸ ಮಹಾತ್ಮನಃ ||55||
ಅವನು ತನ್ನ ಬಂಧುಗಳ ಜೊತೆಯಲ್ಲಿ ಹೋದವನಾಗಿ ಪರಶುರಾಮನಿಗೆ ಪ್ರತಿಕೂಲವಾದ ಅನೇಕ ಕಾರ್ಯಗಳನ್ನು ಮಾಡಿ ಮಹಾತ್ಮನಾದ ರಾಮನಿಗೆ ತೊಂದರೆಯನ್ನು ಉಂಟುಮಾಡಿದನು.
ತತಸ್ತೇಜಃ ಪ್ರಜಜ್ವಾಲ ರಾಮಸ್ಯಾಮಿತತೇಜಸಃ |
ಪ್ರದಹನ್ನಿವ ಸೈನ್ಯಾನಿ ರಶ್ಮಿಮಾನಿವ ತೇಜಸಾ |
ಅಥ ತೌ ಚಕ್ರತುರ್ಯುದ್ಧಂ ವೃತ್ರವಾಸವಯೋರಿವ ||56||
ಆಗ ಅಮಿತ ಪರಾಕ್ರಮಿಯಾದ ರಾಮನ ತೇಜಸ್ಸು ಪ್ರಜ್ವಲಿಸಿತು. ಅವನು ರಶ್ಮಿಮಾಲೆಯುಳ್ಳ ಸೂರ್ಯನಂತೆ ತನ್ನ ತೇಜಸ್ಸಿನಿಂದ ಅರ್ಜುನನ ಸೈನ್ಯವನ್ನು ದಹಿಸುವವನಂತೆ ನೋಡಿದನು. ಅನಂತರ ಅವರಿಬ್ಬರೂ ವೃತ್ರ ಮತ್ತು ಇಂದ್ರರಂತೆ ಯುದ್ಧವನ್ನು ಮಾಡಿದರು.
ತತಃ ಪರಶುಮಾದಾಯ ನೃಪಂ ಬಾಹುಸಹಸ್ರಿಣಮ್ |
ಚಿಚ್ಛೇದ ಸಹಸಾ ರಾಮೋ ಬಹುಶಾಖಮಿವ ದ್ರುಮಮ್ ||57||
ಆಗ ರಾಮನು ತನ್ನ ಪರಶುವನ್ನು ತೆಗೆದುಕೊಂಡು ಸಹಸ್ರ ಬಾಹುಗಳುಳ್ಳ ಅರ್ಜುನನ್ನು ಅನೇಕ ಕೊಂಬೆಗಳಿರುವ ಮರದಂತೆ ಕಡಿದು ಉರುಳಿಸಿದನು.
ತಂ ಹತಂ ಪತಿತಂ ದೃಷ್ಟ್ವಾ ಸಮೇತಾಃ ಸರ್ವಬಾಂಧವಾಃ |
ಅಸೀನಾದಾಯ ಶಕ್ತೀಶ್ಚ ರಾಮಂ ತೇ ಪ್ರತ್ಯವಾರಯನ್ ||58||
ಅರ್ಜುನನು ಹತನಾಗಿ ಬಿದ್ದುದನ್ನು ನೋಡಿದ ಅವನ ಬಂಧುಗಳೆಲ್ಲರೂ ಖಡ್ಗಗಳನ್ನೂ ಶಕ್ತಿ ಆಯುಧಗಳನ್ನೂ ಹಿಡಿದುಕೊಂಡು ರಾಮನನ್ನು ತಡೆಯಲು ಪ್ರಯತ್ನಿಸಿದರು.
ರಾಮೋಽಪಿ ರಥಮಾಸ್ಥಾಯ ಧನುರಾಯಮ್ಯ ಸತ್ವರಃ |
ವಿಸೃಜನ್ ಪರಮಾಸ್ತ್ರಾಣಿ ವ್ಯಧಮತ್ ಪಾರ್ಥಿವಂ ಬಲಮ್ ||59||
ರಾಮನಾದರೂ ರಥವನ್ನು ಏರಿ ಶೀಘ್ರವಾಗಿ ತನ್ನ ಧನುಸ್ಸನ್ನು ಬಗ್ಗಿಸಿ ಶ್ರೇಷ್ಠವಾದ ಅಸ್ತ್ರಗಳನ್ನು ಪ್ರಯೋಗಿಸುತ್ತಾ ಆ ಕ್ಷತ್ರಿಯ ಬಲವನ್ನು ನಾಶಮಾಡಿದನು.
ತತಸ್ತು ಕ್ಷತ್ರಿಯಾ ರಾಜನ್ ಜಾಮದಗ್ನ್ಯಭಯಾರ್ದಿತಾಃ |
ವಿವಿಶುರ್ಗಿರಿದುರ್ಗಾಣಿ ಮೃಗಾಃ ಸಿಂಹಭಯಾದಿವ ||60||
ರಾಜನೇ! ಅನಂತರ ಪರುಶುರಾಮನ ಭಯದಿಂದ ಪೀಡಿತರಾದ ಕ್ಷತ್ರಿಯರು ಸಿಂಹದ ಭಯದಿಂದ ಪೀಡಿತವಾದ ಪಶುಗಳಂತೆ ಗಿರಿದುರ್ಗಗಳನ್ನು ಹೊಕ್ಕರು.
ತೇಷಾಂ ಸ್ವವಿಹಿತಂ ಕರ್ಮ ತದ್ಭಯಾನ್ನಾನುತಿಷ್ಠತಾಮ್ |
ಪ್ರಜಾ ವೃಷಲತಾಂ ಪ್ರಾಪ್ತಾ ಬ್ರಾಹ್ಮಣಾನಾಮದರ್ಶನಾತ್ ||61||
ಆ ಕ್ಷತ್ರಿಯರು ರಾಮನ ಭಯದಿಂದ ತಮಗೆ ವಿಹಿತವಾದ ಕರ್ಮಗಳನ್ನು ಆಚರಿಸಲಿಲ್ಲ. ಆ ಕಾರಣದಿಂದಲೂ ಮತ್ತು ಬ್ರಾಹ್ಮಣರ ದರ್ಶನವಿಲ್ಲದ ಕಾರಣದಿಂದಲೂ ಪ್ರಜೆಗಳು ಶೂದ್ರರಾದರು.
ತಥಾ ತೇ ದ್ರವಿಡಾಃ ಕಾಶಾಃ ಪುಂಡ್ರಾಶ್ಚ ಶಬರೈಃ ಸಹ |
ವೃಷಲತ್ವಂ ಪರಿಗತಾ ಹ್ಯುಚ್ಛಿನ್ನಾಃ ಕ್ಷತ್ರಕರ್ಮಣಃ ||62||
ಹಾಗೆ ದ್ರವಿಡರು ಕಾಶರು ಪುಂಡ್ರರು ಶಬಲರರೂ ಸಹ ಕ್ಷತ್ರಿಯಕರ್ಮಗಳನ್ನು ಬಿಟ್ಟು ವೃಷಲತ್ವವನ್ನು (ಶೂದ್ರತ್ವವನ್ನು) ಹೊಂದಿದರು.
ತತಸ್ತು ಹತವೀರಾಸು ಕ್ಷತ್ರಿಯಾಸು ಪುನಃ ಪುನಃ |
ದ್ವಿಜೈರಭ್ಯುದಿತಂ ಕ್ಷತ್ರಂ ತಾನಿ ರಾಮೋ ನಿಹತ್ಯ ಚ ||63||
ಅನಂತರ ತಮ್ಮ ಪತಿಗಳನ್ನು ಕಳೆದುಕೊಂಡ ಕ್ಷತ್ರಿಯಸ್ತ್ರೀಯರಲ್ಲಿ ಮತ್ತೆ ಮತ್ತೆ ಬ್ರಾಹ್ಮಣರು ಸಂತಾನವನ್ನು ಪಡೆದು ಕ್ಷತ್ರಿಯ

ಕುಲವನ್ನು ಬೆಳೆಸಿದರು ಪರಶುರಾಮನು ಆ ಕ್ಷತ್ರಿಯರನ್ನು ನಾಶಮಾಡಿದನು.
ತತಸ್ತ್ರಿಃಸಪ್ತಮಂ ವಾರಂ ರಾಮಂ ವಾಗಶರೀರಿಣೀ |
ದಿವ್ಯಾ ಪ್ರೋವಾಚ ಮಧುರಾ ಸರ್ವಲೋಕಪರಿಶ್ರುತಾ ॥64॥
ಅನಂತರ ಇಪ್ಪತ್ತೊಂದು ಬಾರಿ ರಾಮನು (ಭೂ ಪ್ರದಕ್ಷಿಣೆ ಮಾಡಿ ) ಕ್ಷತ್ರಿಯರನ್ನು ಸಂಹರಿಸುತ್ತಿರಲು ಲೋಕ ಪ್ರಸಿದ್ಧವಾದ ಅಶರೀರವಾಣಿಯು ದಿವ್ಯವಾದ ಮತ್ತು ಮಧುರವಾದ ವಾಣಿಯನ್ನು ಆಡಿತು.
ರಾಮ ರಾಮ ನಿವರ್ತಸ್ವ ಸ್ವಗುಣಂ ಚಾಥ ಪಶ್ಯಸಿ |
ಕ್ಷತ್ರಬಂಧೂನಿಮಾನ್ ಪ್ರಾಣೈರ್ವಿಪ್ರಯುಜ್ಯ ಪುನಃ ಪುನಃ ॥65॥
ಪರಶುರಾಮನೇ! ಈ ಕ್ಷತ್ರಿಯ ಬಂಧುಗಳನ್ನು ಪುನಃ ಪುನಃ ಕೊಲ್ಲುವುದನ್ನು ನಿಲ್ಲಿಸು. ನಿನ್ನ ಧರ್ಮವನ್ನೇ ನೀನು ಆಚರಿಸು.
ತಥೈವ ತಂ ಮಹಾತ್ಮಾನಮೃಚೀಕಪ್ರಮುಖಾಸ್ತಥಾ |
ರಾಮ ರಾಮ ಮಹಾವೀರ ನಿವರ್ತಸ್ವೇತ್ಯಥಾಬ್ರುವನ್ ॥66॥
ಹಾಗೆಯೇ ಅವನ ಪೂರ್ವಪಿತೃಗಳಾದ ಋಚೀಕ ಮೊದಲಾದವರು ಬಂದು ಆ ಮಹಾತ್ಮನನ್ನು ಕುರಿತು ಮಹಾವೀರನಾದ ರಾಮನೇ! ಕ್ಷತ್ರಿಯ ಹನನವನ್ನು ನಿಲ್ಲಿಸು ಎಂದು ಹೇಳಿದರು.
ಪಿತುರ್ವಧಮಮೃಷ್ಯಂಸ್ತು ರಾಮಃ ಪ್ರೋವಾಚ ತಾನೃಷೀನ್ |
ನಾರ್ಹಾ ಹಂತ ಭವಂತೋ ಮಾಂ ನಿವಾರಯಿತುಮಿತ್ಯುತ ॥67॥
ತನ್ನ ತಂದೆಯ ವಧೆಯನ್ನು ಸಹಿಸದಿದ್ದ ರಾಮನು ಆ ಋಷಿಗಳನ್ನು ಕುರಿತು ನೀವು ಹೀಗೆ ನನ್ನನ್ನು ತಡೆಯ ಬಾರದು ಎಂದು ಹೇಳಿದನು.
ಪಿತರಃ
ನಾರ್ಹಸಿ ಕ್ಷತ್ರಬಂಧೂಂಸ್ತ್ವಂ ನಿಹಂತುಂ ಜಯತಾಂ ವರ |
ನ ಹಿ ಯುಕ್ತಸ್ತದಾಘಾತೋ ಬ್ರಾಹ್ಮಣೇನ ಸತಾ ತ್ವಯಾ ॥68॥
ಜಯಶೀಲರಲ್ಲಿ ಶ್ರೇಷ್ಠನಾದವನೇ! ಹೀಗೆ ಕ್ಷತ್ರಬಂಧುಗಳನ್ನು ಕೊಲ್ಲುವುದು ನಿನಗೆ ಯೋಗ್ಯವಲ್ಲ. ಬ್ರಾಹ್ಮಣನಾದ ನೀನು ಅವರನ್ನು ಹಾಗೆ ಕೊಲ್ಲಬಾರದು.
ದುರ್ಯೋಧನಃ
ಪಿತೄಣಾಂ ವಚನಂ ಶ್ರುತ್ವಾ ಕ್ರೋಧಂ ತ್ಯಕ್ತ್ವಾ ಸ ಭಾರ್ಗವಃ |
ಅಶ್ವಮೇಧಸಹಸ್ರಾಣಿ ನರಮೇಧಶತಾನಿ ಚ ॥69॥
ಭಾರ್ಗವರಾಮನು ಪಿತೃವಚನವನ್ನು ಕೇಳಿ ಕ್ರೋಧವನ್ನು ತ್ಯಜಿಸಿ ಸಹಸ್ರಅಶ್ವಮೇಧಯಾಗಗಳನ್ನೂ ನೂರು ನರಮೇಧ ಯಾಗಗಳನ್ನೂ ಮಾಡಿದನು.
ಇಷ್ಟ್ವಾ ಸಾಗರಪರ್ಯಂತಾಂ ಕಾಶ್ಯಪಾಯ ಮಹೀಂ ದದೌ |
ತೇನ ರಾಮೇಣ ಸಂಗ್ರಾಮೇ ತುಲ್ಯಸ್ತಾತ ಧನಂಜಯಃ ॥70॥
ಯಾಗವನ್ನು ಮಾಡಿ ಸಾಗರಪರ್ಯಂತ ಭೂಮಿಯನ್ನು ಕಾಶ್ಯಪರಿಗೆ ದಾನವಾಗಿ ಕೊಟ್ಟನು. ತಂದೆಯೇ ಧನಂಜಯನು ಸಂಗ್ರಾಮದಲ್ಲಿ ಆ ರಾಮನಿಗೆ ಸಮಾನನಾದವನು.
ಕಾರ್ತವೀರ್ಯೇಣ ಚ ರಣೇ ತುಲ್ಯಃ ಪಾರ್ಥೋ ನ ಸಂಶಯಃ |
ರಣೇ ವಿಕ್ರಮ್ಯ ರಾಜೇಂದ್ರ ಪಾರ್ಥಂ ಜೇತುಂ ನ ಶಕ್ಯತೇ ॥71॥
ಪಾರ್ಥನು ಯುದ್ಧದಲ್ಲಿ ಕಾರ್ತವೀರ್ಯನಿಗೂ ಸಮನಾದವನು ಎಂಬ ವಿಷಯದಲ್ಲಿ ಸಂಶಯವಿಲ್ಲ. ರಾಜೇಂದ್ರನೇ! ಯುದ್ಧದಲ್ಲಿ ಪರಾಕ್ರಮದಿಂದ ಅರ್ಜುನನನ್ನು ಗೆಲ್ಲುವುದು ಅಸಾಧ್ಯವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ತ್ರಿನವತಿತಮೋಧ್ಯಾಯಃ ॥
॥ಅನುದ್ಯೂತಪರ್ವಣಿ ಪ್ರಥಮೋಧ್ಯಾಯಃ ॥1॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತಮೂರನೆಯ ಅಧ್ಯಾಯವು ಮುಗಿಯಿತು.
* * * *
ತೊಂಬತ್ತನಾಲ್ಕನೆಯ ಅಧ್ಯಾಯ.
(ದುರ್ಯೋಧನನಿಂದ ಅರ್ಜುನನ ಶೌರ್ಯವರ್ಣನೆ. ವಶೀಕೃತನಾದ ಧೃತರಾಷ್ಟ್ರನಿಂದ ಪಾಂಡವರನ್ನು ಮತ್ತೆ ಕರೆತರಲು ಆದೇಶ.)
ದುರ್ಯೋಧನಃ
ಶೃಣು ರಾಜನ್ ಪುರಾಽಚಿಂತ್ಯಾನ್ ಅರ್ಜುನಸ್ಯ ಚ ಸಾಹಸಾನ್ |
ಅರ್ಜುನೋ ಧನ್ವಿನಾಂ ಶ್ರೇಷ್ಠೋ ದುಷ್ಕೃತಂ ಕೃತವಾನ್ ಪುರಾ ॥1॥
ರಾಜನೇ! ಹಿಂದೆ ಅರ್ಜುನನು ಮಾಡಿದ ಅಚಿಂತ್ಯವಾದ ಸಾಹಸಕಾರ್ಯಗಳನ್ನು ಕೇಳು. ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನು, ಹಿಂದೆ ಇನ್ನೊಬ್ಬರು ಮಾಡಲು ಸಾಧ್ಯವಾಗದ ಅನೇಕ ಕಾರ್ಯಗಳನ್ನು ಮಾಡಿದ್ದಾನೆ.
ದ್ರುಪದಸ್ಯ ಪುರೇ ರಾಜನ್ ದ್ರೌಪದ್ಯಾಶ್ಚ ಸ್ವಯಂವರೇ |
ಆಬಾಲವೃದ್ಧಸಂಘೋಷೇ ಸರ್ವಕ್ಷತ್ರಸಮಾಗಮೇ |
ಕ್ಷಿಪ್ರಕಾರೀ ಜಲೇ ಮತ್ಸ್ಯಂ ದುರ್ನಿರೀಕ್ಷ್ಯಂ ಸಸರ್ಜ ಹ ॥2॥
ದ್ರುಪದರಾಜನ ಪಟ್ಟಣದಲ್ಲಿ ದ್ರೌಪದಿಯ ಸ್ವಯಂವರದ ಕಾಲದಲ್ಲಿ ಬಾಲರಿಂದ ವೃದ್ಧರವರೆಗೆ ಎಲ್ಲ ಕ್ಷತ್ರಿಯರ ಸಮಾಗಮವು

ಉಂಟಾಗಿರಲು ಕ್ಷಿಪ್ರಕಾರಿಯಾದ ಅರ್ಜುನನು ಇನ್ನೊಬ್ಬರಿಗೆ ಕಾಣದಂತಹ ಮತ್ಸ್ಯಪ್ರತಿಬಿಂಬವನ್ನು ಜಲದಲ್ಲಿ ನೋಡಿದನು.
ಸರ್ವೈರ್ನೃಪೈರಸಾಧ್ಯಂ ತತ್ ಕಾರ್ಮುಕಪ್ರವರಂ ಚ ವೈ |
ಕ್ಷಣೇನ ಸಜ್ಯಮಕರೋತ್ ಸರ್ವಕ್ಷತ್ರಸ್ಯ ಪಶ್ಯತಃ ॥3॥
ಇನ್ನು ಯಾವ ರಾಜರಿಗೂ ಹೆದೆ ಏರಿಸಲು ಸಾಧ್ಯವಾಗದ ಆ ಶ್ರೇಷ್ಠವಾದ ಬಿಲ್ಲನ್ನು ಎಲ್ಲ ಕ್ಷತ್ರಿಯರು ನೋಡುತ್ತಿರುವಂತೆ ಒಂದು ಕ್ಷಣದಲ್ಲಿ ಹೆದೆ ಏರಿಸಿದನು.
ತತೋ ಯಂತ್ರಮಯಂ ವಿದ್ಧ್ವಾ ವಿವಾಹಂ ಫಲ್ಗುನೋ ಬಲೀ |
ಕೃಷ್ಣಯಾ ಹೇಮಮಾಲ್ಯೇನ ಸ್ಕಂಧೇ ಸ ಪರಿವೇಷ್ಟಿತಃ ॥4॥
ಅನಂತರ ಬಲಿಷ್ಠನಾದ ಫಲ್ಗುಣನು ಯಂತ್ರಮಯವಾದ ಮತ್ಸ್ಯವನ್ನು ಹೊಡೆದು ಬೀಳಿಸಿ ದ್ರೌಪದಿಯಿಂದ ಹೇಮಮಾಲೆಯಿಂದ ಭುಜದಲ್ಲಿ ಅಲಂಕರಿಸಲ್ಪಟ್ಟನು.
ತತಸ್ತಯಾ ವೃತಂ ಪಾರ್ಥಂ ದೃಷ್ಟ್ವಾ ಸರ್ವೇ ನೃಪಾಸ್ತದಾ |
ರೋಷಾತ್ ಸರ್ವಾಯುಧಾನ್ ಗೃಹ್ಯ ಕ್ರುದ್ಧಾ ವೀರಾ ಮಹಾಬಲಾಃ |
ವೈಕರ್ತನಂ ಪುರಸ್ಕೃತ್ಯ ಸರ್ವೇ ಪಾರ್ಥಮುಪಾದ್ರವನ್ ॥5॥
ಆಗ ದ್ರೌಪದಿಯು ಅವನನ್ನು ವರಿಸಿಸುದನ್ನು ನೋಡಿ ಎಲ್ಲಾ ವೀರರಾದ ಮಹಾಬಲರಾದ ರಾಜರು ಕರ್ಣನನ್ನು ಮುಂದೆಮಾಡಿಕೊಂಡು ರೋಷದಿಂದ ತಮ್ಮ ಆಯುಧಗಳನ್ನು ಹಿಡಿದುಕೊಂಡು ಅರ್ಜುನನ ಕಡೆಗೆ ಧಾವಿಸಿದರು.
ಸ ದೃಷ್ಟ್ವಾ ಪಾರ್ಥಿವಾನ್ ಸರ್ವಾನ್ ಕ್ರುದ್ಧಾನ್ ಪಾರ್ಥೋ ಮಹಾಬಲಃ |
ವಾರಯಿತ್ವಾ ಶರೈಸ್ತೀಕ್ಷ್ಣೈರಜಯತ್ ತತ್ರ ಸ ಸ್ವಯಮ್ ॥6॥
ಮಹಾಬಲನಾದ ಅರ್ಜುನನು ಆ ಎಲ್ಲಾ ರಾಜರನ್ನೂ ತಡೆದು ತನ್ನ ತೀಕ್ಷ್ಣವಾದ ಬಾಣಗಳಿಂದ ತಾನೊಬ್ಬನೇ ಅವರನ್ನೆಲ್ಲಾ ಜಯಿಸಿದನು.
ಜಿತ್ವಾ ತು ತಾನ್ ಮಹೀಪಾಲಾನ್ ಸರ್ವಾನ್ ಕರ್ಣಪುರೋಗಮಾನ್ |
ಲೇಭೇ ಕೃಷ್ಣಾಂ ಶುಭಾಂ ಪಾರ್ಥೋ ಯುದ್ಧ್ವಾ ವೀರ್ಯಬಲಾತ್ ತದಾ |
ಸರ್ವಕ್ಷತ್ರಸಮೂಹೇಷು ಅಂಬಾಂ ಭೀಷ್ಮೋ ಯಥಾ ಪುರಾ ॥7॥
ಪರಾಕ್ರಮ ಮತ್ತು ಶೌರ್ಯ ಬಲದ ಕಾರಣದಿಂದ ಅರ್ಜುನನು ಕರ್ಣನೇ ಮೊದಲಾದ ಎಲ್ಲಾ ರಾಜರನ್ನೂ ಗೆದ್ದು ಹಿಂದೆ ಭೀಷ್ಮನು ಅಂಬೆಯನ್ನು ಪಡೆದಂತೆ ಸರ್ವಕ್ಷತ್ರಿಯ ಸಮೂಹದಲ್ಲಿ ಶುಭಳಾದ ದ್ರೌಪದಿಯನ್ನು ಪಡೆದನು.
ತತಃ ಕದಾಚಿದ್ಬೀಭತ್ಸುಃ ತೀರ್ಥಯಾತ್ರಾಂ ಯಯೌ ಸ್ವಯಮ್ |
ಅಥೋಲೂಪೀಂ ಶುಭಾಂ ಜಾತಾಂ ನಾಗರಾಜಸುತಾಂ ತದಾ |
ನಾಗೇಷ್ವವಾಪ ಚಾಗ್ರ್ಯೇಷು ಪ್ರಾರ್ಥಿತೋಥ ಯಥಾತಥಮ್ ॥8॥
ಅನಂತರ ಒಮ್ಮೆ ಅರ್ಜುನನು ತೀರ್ಥಯಾತ್ರೆಗೆ ಹೊರಟನು. ಆಗ ನಾಗರಾಜ ಕುಮಾರಿಯಾದ ಶುಭಳಾದ ಉಲೂಪಿಯನ್ನು ಅವಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಶ್ರೇಷ್ಠವಾದ ನಾಗಗಳ ಮಧ್ಯದಲ್ಲಿ ಅವಳನ್ನು ಪಡೆದನು.
ತತೋ ಗೋದಾವರೀಂ ವೇಣ್ಣಾಂ ಕಾವೇರೀಂ ಚಾವಗಾಹತ |
ತತ್ರ ಪಾಂಡ್ಯಂ ಸಮಾಸಾದ್ಯ ತಸ್ಯ ಕನ್ಯಾಮವಾಪ ಸಃ |
ಲಬ್ಧ್ವಾ ಜಿಷ್ಣುರ್ಮುದಂ ತತ್ರ ತತೋ ಯಾಮ್ಯಾಂ ಯಯೌ ದಿಶಮ್ ॥9॥
ಅನಂತರ ಗೋದಾವರಿಯನ್ನೂ ವೇಣ್ಣಾನದಿಯನ್ನೂ ಕಾವೇರಿಯನ್ನೂ ದಾಟಿ ಪಾಂಡ್ಯದೇಶದಲ್ಲಿ ಪಾಂಡ್ಯರಾಜಕುಮಾರಿಯನ್ನು ಪಡೆದನು. ಅರ್ಜುನನು ಅಲ್ಲಿ ಸ್ವಲ್ಪ ಸಮಯ ಸಂತೋಷದಿಂದ ಇದ್ದು ಅನಂತರ ದಕ್ಷಿಣ ದಿಕ್ಕಿಗೆ ಪ್ರಯಾಣವನ್ನು ಬೆಳೆಸಿದನು.
ಸ ದಕ್ಷಿಣಂ ಸಮುದ್ರಾಂತಂ ಗತ್ವಾ ಚಾಪ್ಸರಸಾಂ ಚ ವೈ |
ಕುಮಾರೀತೀರ್ಥಮಾಸಾದ್ಯ ಮೋಕ್ಷಯಾಮಾಸ ಚಾರ್ಜುನಃ |
ಗ್ರಾಹರೂಪಾನ್ವಿತಾಃ ಪಂಚ ಅತಿಶೌರ್ಯೇಣ ವೈ ಬಲಾತ್ ॥10॥
ಆ ಅರ್ಜುನನು ದಕ್ಷಿಣಸಮುದ್ರತೀರದಲ್ಲಿರುವ ಕನ್ಯಾತೀರ್ಥವನ್ನು ತಲುಪಿ ಅಲ್ಲಿ ತನ್ನ ಅತಿಶಯವಾದ ಬಲದಿಂದ ಮೊಸಳೆಯ ರೂಪದಲ್ಲಿದ್ದ ಐವರು ಅಪ್ಸರೆಯರನ್ನು ವಿಮೋಚನೆಗೊಳಿಸಿದನು.
ಕನ್ಯಾತೀರ್ಥಂ ಸಮಭ್ಯೇತ್ಯ ತತೋ ದ್ವಾರವತೀಂ ಯಯೌ |
ತತ್ರ ಕೃಷ್ಣನಿದೇಶಾತ್ ಸ ಸುಭದ್ರಾಂ ಪ್ರಾಪ್ಯ ಫಲ್ಗುನಃ |
ತಾಮಾರೋಪ್ಯ ರಥೋಪಸ್ಥೇ ಪ್ರಯಯೌ ಸ್ವಪುರೀಂ ಪ್ರತಿ ॥11॥
ಕನ್ಯಾತೀರ್ಥದಿಂದ ಅವನು ದ್ವಾರವತಿಗೆ ಹೊರಟನು. ಅಲ್ಲಿಗೆ ಬಂದು ಕೃಷ್ಣನ ಇಚ್ಛೆಯಂತೆ ಅವನು ಸುಭದ್ರೆಯನ್ನು ಪಡೆದು ಅವಳನ್ನು ರಥದಲ್ಲಿ ಕೂಡಿಸಿಕೊಂಡು ತನ್ನ ಪಟ್ಟಣಕ್ಕೆ ಹೊರಟನು.
ಅಥಾದಾಯ ಗತೇ ಪಾರ್ಥೇ ತೇ ಶ್ರುತ್ವಾ ಸರ್ವಯಾದವಾಃ |
ತಮಭ್ಯಧಾವನ್ ಸಂಕ್ರುದ್ಧಾಃ ಸಿಂಹಂ ವ್ಯಾಘ್ರಗಣಾ ಇವ ॥12॥
ಪ್ರದ್ಯುಮ್ನಃ ಕೃತವರ್ಮಾ ಚ ಗದಃ ಸಾರಣಸಾತ್ಯಕೀ |
ಆಹುಕಶ್ಚೈವ ಸಾಂಬಶ್ಚ ಚಾರುದೇಷ್ಣೋ ವಿಡೂರಥಃ ॥13॥
ಅನ್ಯೇ ಚ ಯಾದವಾಃ ಸರ್ವೇ ಬಲದೇವಪುರೋಗಮಾಃ |
ಏಕಮೇವ ಋತೇ ಕೃಷ್ಣಂ ಗಜವಾಜಿರಥೈರ್ಯುತಾಃ ॥14॥
ಅನಂತರ ಅರ್ಜುನನು ಸುಭದ್ರೆಯನ್ನು ಕರೆದುಕೊಂಡು ಹೋಗುತ್ತಿರುವದನ್ನು ಕೇಳಿದ ಎಲ್ಲಾ ಯಾದವರು ಸಂಕ್ರುದ್ಧರಾಗಿ

ವ್ಯಾಘ್ರಗಳ ಸಮೂಹವು ಸಿಂಹವನ್ನು ಎದುರಿಸಲು ಹೋದಂತೆ, ಅವನನ್ನು ಹಿಂಬಾಲಿಸಿ ಎದುರಿಸಿದರು. ಪ್ರದ್ಯುಮ್ನ ಕೃತವರ್ಮ ಗದ ಸಾರಣ ಸಾತ್ಯಕಿ ಆಹುಕ ಸಾಂಬ ಚಾರುದೇಷ್ಣ ವಿಡೂರಥ ಇವರಲ್ಲದೆ ಬಲದೇವನನ್ನು ಮುಂದೆಮಾಡಿಕೊಂಡು ಅನೇಕಯಾದವರು ಹೊರಟರು. ಕೃಷ್ಣನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ತಮ್ಮ ಅಶ್ವಗಳನ್ನು ರಥಗಳನ್ನು ಗಜಗಳನ್ನು ತೆಗೆದುಕೊಂಡು ಹೊರಟರು.

ಅಥಾಸಾದ್ಯ ವನೇ ಯಾಂತಂ ಪರಿವಾರ್ಯ ಧನಂಜಯಮ್ |
ಚಕ್ರುರ್ಯುದ್ಧಂ ಸುಸಂಕ್ರುದ್ಧಾ ಬಹುಕೋಟ್ಯಶ್ಚ ಯಾದವಾಃ ॥15॥
ಅನೇಕ ಕೋಟಿಸಂಖ್ಯೆಯಲ್ಲಿದ್ದ ಯಾದವರು ಕಾಡಿನಲ್ಲಿ ಹೋಗುತ್ತಿದ್ದ ಅರ್ಜುನನ್ನು ಸುತ್ತವರೆದು ಬಹಳ ಕೋಪದಿಂದ ಕೂಡಿದವರಾಗಿ ಯುದ್ಧವನ್ನು ಮಾಡಿದರು.
ಏಕ ಏವ ತು ಪಾರ್ಥಸ್ತೈರ್ಯುದ್ಧಂ ಚಕ್ರೇ ಸುದಾರುಣಮ್ |
ತೇನ ತೇಷಾಂ ಸಮಂ ಯುದ್ಧಂ ಮುಹೂರ್ತಂ ಪ್ರಬಭೂವ ಹ ॥16॥
ಪಾರ್ಥನೊಬ್ಬನೆ ಅವರೆಲ್ಲರ ಜೊತೆಯಲ್ಲಿ ದಾರುಣವಾಗಿ ಯುದ್ಧವನ್ನು ಮಾಡಿದನು. ಒಂದು ಮುಹೂರ್ತದ ವರೆಗೆ ಅವನ ಮತ್ತು ಅವರ ಯುದ್ಧವು ಸಮವಾಗಿದ್ದಿತು.
ತತಃ ಪಾರ್ಥೋ ರಣೇ ಸರ್ವಾನ್ ವಾರಯಿತ್ವಾ ಶಿತೈಃ ಶರೈಃ |
ಬಲಾದ್ ವಿಜಿತ್ಯ ರಾಜೇಂದ್ರ ವೀರಸ್ತಾನ್ ಸರ್ವಯಾದವಾನ್ |
ತಾಂ ಸುಭದ್ರಾಮಥಾದಾಯ ಶಕ್ರಪ್ರಸ್ಥಂ ವಿವೇಶ ಹ ॥17॥
ಎಲೈ ರಾಜೇಂದ್ರನೇ! ಅನಂತರ ಪಾರ್ಥನು ಆ ಎಲ್ಲ ಯಾದವರನ್ನು ತನ್ನ ನಿಶಿತವಾದ ಬಾಣಗಳಿಂದ ತಡೆದು ತನ್ನ ಬಲದಿಂದ ಅವರೆಲ್ಲರನ್ನೂ ಗೆದ್ದು ಆ ಸುಭದ್ರೆಯನ್ನು ಕರೆದುಕೊಂಡು ಇಂದ್ರಪ್ರಸ್ಥವನ್ನು ಪ್ರವೇಶಿಸಿದನು.
ಭೂಯಃ ಶೃಣು ಮಹಾರಾಜ ಫಲ್ಗುನಸ್ಯ ತು ಸಾಹಸಮ್ |
ದದೌ ಚ ವಹ್ನೇರ್ಬೀಭತ್ಸುಃ ಪ್ರಾರ್ಥಿತಂ ಖಾಂಡವಂ ವನಮ್ ॥18॥
ಮಹಾರಾಜನೇ! ಅರ್ಜುನನ ಸಾಹಸವನ್ನು ಇನ್ನೂ ಕೇಳು ಬೀಭತ್ಸುವು ಅಗ್ನಿಯಿಂದ ಪ್ರಾರ್ಥಿತನಾಗಿ ಅವನಿಗೆ ಖಾಂಡವ ವನವನ್ನು ಕೊಟ್ಟನು.
ಲಬ್ಧಮಾತ್ರೇ ತು ತೇನಾಥ ಭಗವಾನ್ ಹವ್ಯವಾಹನಃ |
ಭಕ್ಷಿತುಂ ಖಾಂಡವಂ ರಾಜನ್ ತತಃ ಸಮುಪಚಕ್ರಮೇ ॥19॥
ರಾಜನೇ! ಖಾಂಡವ ವನವು ದೊರಕಿದ ತಕ್ಷಣ ಪೂಜ್ಯನಾದ ಅಗ್ನಿಯ ಅದನ್ನು ಭಕ್ಷಿಸಲು ಪ್ರಾರಂಭಿಸಿದನು.
ತತಸ್ತಂ ಭಕ್ಷಯಂತಂ ವೈ ಸವ್ಯಸಾಚೀ ವಿಭಾವಸುಮ್ |
ರಥೀ ಧನ್ವೀ ಶರಾನ್ ಗೃಹ್ಯ ಸ ಕಲಾಪಯುತಃ ಪ್ರಭುಃ |
ಪಾಲಯಾಮಾಸ ರಾಜೇಂದ್ರ ಸ್ವವೀರ್ಯೇಣ ಮಹಾಬಲಃ ॥20॥
ಎಲೈ ರಾಜೇಂದ್ರನೇ! ಅಗ್ನಿಯು ಖಾಂಡವವನವನ್ನು ಭಕ್ಷಿಸುತ್ತಿರಲು ಮಹಾಬಲನಾದ ಸವ್ಯಸಾಚಿಯು ರಥವನ್ನು ಧನುಸ್ಸನ್ನು ಬಾಣಗಳನ್ನು ಮತ್ತು ಉಳಿದ ಕಲಾಪಗಳನ್ನು ಹೊಂದಿದವನಾಗಿ ಪ್ರಭುವಾದ ಅವನು ತನ್ನ ಪರಾಕ್ರಮದಿಂದ ಅಗ್ನಿಯ ರಕ್ಷಣೆಯನ್ನು ಮಾಡುತ್ತಿದ್ದನು.
ತತಃ ಶ್ರುತ್ವಾ ಮಹೇಂದ್ರಸ್ತಂ ಮೇಘಾಂಸ್ತಾನ್ ಸಂದಿದೇಶ ಹ |
ತೇನೋಕ್ತಾ ಮೇಘಸಂಘಾಶ್ಚ ವವರ್ಷುರತಿವೃಷ್ಟಿಭಿಃ ॥21॥
ಅನಂತರ ಅದನ್ನು ಕೇಳಿದ ಮಹೇಂದ್ರನು ಮೇಘಗಳಿಗೆ ಸಂದೇಶವನ್ನು ನೀಡಿದನು. ಅವನಿಂದ ಹೇಳಲ್ಪಟ್ಟ ಆ ಸಂವರ್ತಕ ಮೇಘಗಳ ಸಮೂಹವು ಅತಿವೃಷ್ಟಿಯನ್ನು ಕರೆದವು.
ತತೋ ಮೇಘಗಣಾನ್ ಪಾರ್ಥಃ ಶರವ್ರಾತೈಃ ಸಮಂತತಃ |
ಖಗಮೈರ್ವಾರಯಾಮಾಸ ತದಾಶ್ಚರ್ಯಮಿವಾಭವತ್ ॥22॥
ಪಾರ್ಥನು ಅಂತರಿಕ್ಷದಲ್ಲಿ ಚಲಿಸುವ ತನ್ನ ಬಾಣಗಳ ಸಮೂಹದಿಂದ ಎಲ್ಲ ಕಡೆಯಲ್ಲಿಯೂ ಆ ಮೇಘಗಳಿಂದ ಸುರಿದ ಮಳೆಯು ವನದ ಮೇಲೆ ಬೀಳದಂತೆ ತಡೆದನು. ಅದು ಆಶ್ಚರ್ಯಕರವಾಗಿದ್ದಿತು.
ವಾರಿತಾನ್ ಮೇಘಸಂಘಾಂಶ್ಚ ಶ್ರುತ್ವಾ ಕ್ರುದ್ಧಃ ಪುರಂದರಃ |
ಪಾಂಡರಂ ಗಜಮಾಸ್ಥಾಯ ಸರ್ವದೇವಗಣೈರ್ವೃತಃ |
ಯಯೌ ಪಾರ್ಥೇನ ಸಂಯೋದ್ಧುಂ ರಕ್ಷಾರ್ಥಂ ಖಾಂಡವಸ್ಯ ಚ ॥23॥
ಮೇಘ ಸಮೂಹವು ತಡೆಹಿಡಿಯಲ್ಪಟ್ಟಿದ್ದನ್ನು ಕೇಳಿ ಕ್ರುದ್ಧವಾದ ಇಂದ್ರನು ತನ್ನ ಬಿಳಿಯಾದ ಐರಾವತವನ್ನು ಏರಿ ಎಲ್ಲಾ ದೇವತೆಗಳ ಸಮೂಹದಿಂದಯುತನಾಗಿ ಖಾಂಡವವನವನ್ನು ರಕ್ಷಿಸಲು ಅರ್ಜುನನ ಜೊತೆಯಲ್ಲಿ ಯುದ್ಧಮಾಡುವುದಕ್ಕೆ ಹೊರಟನು.
ರುದ್ರಾಶ್ಚ ಮರುತಶ್ಚೈವ ವಸವಶ್ಚಾಶ್ವಿನೌ ತದಾ |
ಆದಿತ್ಯಾಶ್ಚೈವ ಸಾಧ್ಯಾಶ್ಚ ವಿಶ್ವೇ ದೇವಾಶ್ಚ ಭಾರತ |
ಗಂಧರ್ವಾಶ್ಚೈವ ಸಹಿತಾ ಅನ್ಯೇ ಸುರಗಣಾಶ್ಚ ಯೇ ॥24॥
ತೇ ಸರ್ವೇ ಶಸ್ತ್ರಸಂಪನ್ನಾ ದೀಪ್ಯಮಾನಾಃ ಸ್ವತೇಜಸಾ |
ಧನಂಜಯಂ ಜಿಘಾಂಸಂತಃ ಪ್ರಪೇತುರ್ವಿಬುಧಾಧಿಪಾಃ ॥25॥
ಎಲೈ ಭಾರತನೇ! ರುದ್ರರು ಮರುತ್‌ಗಳು ವಸುಗಳು ಅಶ್ವಿನಿಗಳು ಆದಿತ್ಯರು ಸಾಧ್ಯರು ವಿಶ್ವೇದೇವತೆಗಳು ಗಂಧರ್ವರು ಮತ್ತು ಉಳಿದ ಸುರಗಣಗಳೆಲ್ಲರೂ ಶಸ್ತ್ರಗಳನ್ನು ಧರಿಸಿ ತಮ್ಮ ಕಾಂತಿಯಿಂದ ಬೆಳಗುತ್ತಾ ಅರ್ಜುನನ್ನು ಕೊಲ್ಲುವ ಇಚ್ಛೆಯುಳ್ಳವರಾಗಿ ಅವನ

ಮೇಲೆ ಎರಗಿದರು.
ಯುಗಾಂತೇ ಯಾನಿ ದೃಶ್ಯಂತೇ ನಿಮಿತ್ತಾನಿ ಮಹಾಂತ್ಯಪಿ |
ಸರ್ವಾಣಿ ತತ್ರ ದೃಶ್ಯಂತೇ ಸುಘೋರಾಣಿ ಮಹೀಪತೇ |
ತತೋ ದೇವಗಣಾಃ ಸರ್ವೇ ಪಾರ್ಥಂ ಸಮಭಿದುದ್ರುವುಃ ॥26॥
ರಾಜನೇ! ಯುಗಾವಸಾನದಲ್ಲಿ ಯಾವ ಯಾವ ದೊಡ್ಡ ಅಪಶಕುನಗಳು ಕಂಡು ಬರುತ್ತವೆಯೋ ಅಂತಹ ಎಲ್ಲಾ ಘೋರವಾದ ಅಪಶಕುನಗಳು ಆಗ ಕಂಡುಬಂದವು. ಆಗ ಎಲ್ಲಾ ದೇವಸಮೂಹಗಳೂ ಅರ್ಜುನನ ಮೇಲೆ ಎರಗಿದವು.
ಅಸಂಭ್ರಾಂತಸ್ತು ತಾನ್ ದೃಷ್ಟ್ವಾ ಸ ತಾಂ ದೇವಮಯೀಂ ಚಮೂಮ್ |
ತ್ವರಿತಃ ಫಲ್ಗುನೋ ಗೃಹ್ಯ ತೀಕ್ಷ್ಣಾಂಸ್ತಾನಾಶುಗಾಂಸ್ತದಾ |
ಶಕ್ರಂ ದೇವಾಂಶ್ಚ ಸಂಪ್ರೇಕ್ಷ್ಯ ತಸ್ಥೌ ಕಾಲ ಇವಾತ್ಯಯೇ ॥27॥
ಅರ್ಜುನನು ಆ ದೇವತೆಗಳ ಸೈನ್ಯವನ್ನೂ ಇಂದ್ರ ಮತ್ತು ಉಳಿದ ದೇವತೆಗಳನ್ನೂ ನೋಡಿ ಯಾವ ಗಾಬರಿಯೂ ಇಲ್ಲದೆ ಶೀಘ್ರವಾಗಿ ತೀಕ್ಷ್ಣವಾದ ವೇಗಗಾಮಿಗಳಾದ ತನ್ನ ಬಾಣಗಳನ್ನು ಹಿಡಿದುಕೊಂಡು ಪ್ರಳಯಕಾಲದ ಮೃತ್ಯುವಿನಂತೆ ನಿಂತನು.
ತತೋ ದೇವಗಣಾಃ ಸರ್ವೇ ಬೀಭತ್ಸುಂ ಸಪುರಂದರಾಃ |
ಆವಾಕಿರನ್ ಶರವ್ರಾತೈರ್ಮಾನುಷಂ ತಂ ಮಹೀಪತೇ ॥28॥
ಎಲೈ ಮಹಾರಾಜನೇ! ಆಗ ಇಂದ್ರನನ್ನು ಮುಂದೆಮಾಡಿಕೊಂಡ ದೇವತೆಗಳ ಸಮೂಹಗಳೆಲ್ಲವೂ ಮನುಷ್ಯನಾದ ಬಿಭತ್ಸುವಿನ ಮೇಲೆ ತಮ್ಮ ಬಾಣಗಳ ಮಳೆಗಳನ್ನು ಕರೆದವು.
ತತಃ ಪಾರ್ಥೋ ಮಹಾತೇಜಾ ಗಾಂಡೀವಂ ಗೃಹ್ಯ ಸತ್ವರಃ |
ವಾರಯಾಮಾಸ ದೇವಾನಾಂ ಶರವ್ರಾತೈಃ ಶರಾಂಸ್ತದಾ ॥29॥
ಅನಂತರ ಮಹಾತೇಜಸ್ವಿಯಾದ ಪಾರ್ಥನು ಶೀಘ್ರವಾಗಿ ಗಾಂಡೀವ ಧನುಸ್ಸನ್ನು ತೆಗೆದುಕೊಂಡು ತನ್ನ ಬಾಣಗಳ ಸಮೂಹದಿಂದ ದೇವತೆಗಳ ಬಾಣಗಳನ್ನು ನಿವಾರಿಸಿದನು.
ಪುನಃ ಕ್ರುದ್ಧಾಃ ಸುರಾಃ ಸರ್ವೇ ಮರ್ತ್ಯಂ ಸಂಖೇ ಮಹಾಬಲಾಃ |
ನಾನಾಶಸ್ತ್ರೈರ್ವವರ್ಷುಸ್ತಂ ಸವ್ಯಸಾಚಿಂ ಮಹೀಪತೇ ॥30॥
ಎಲೈ ಮಹಿಪತಿಯೇ! ಪುನಃ ಕ್ರುದ್ಧರಾದ ಮಹಾಬಲರಾದ ಎಲ್ಲಾ ದೇವತೆಗಳು ಮರ್ತ್ಯನಾದ ಸವ್ಯಸಾಚಿಯ ಮೇಲೆ ಅನೇಕ ಶಸ್ತ್ರಗಳ ಮಳೆಯನ್ನು ಕರೆದರು.
ತಾನ್ ಪಾರ್ಥಃ ಶಸ್ತ್ರವರ್ಷಾನ್ ವೈ ವಿಸೃಷ್ಟಾನ್ ವಿಬುಧೈಸ್ತದಾ |
ದ್ವಿಧಾ ತ್ರಿಧಾ ಚ ಚಿಚ್ಛೇದ ಖ ಏವ ನಿಶಿತೈಃ ಶರೈಃ ॥31॥
ದೇವತೆಗಳಿಂದ ಪ್ರಯೋಗಿಸಲ್ಪಟ್ಟ ಆ ಶಸ್ತ್ರಗಳ ಮಳೆಯನ್ನು ಪಾರ್ಥನುತನ್ನ ನಿಶಿತವಾದ ಬಾಣಗಳಿಂದ ಆಕಾಶದಲ್ಲಿಯೇ ಮೂರು ನಾಲ್ಕು ತುಂಡುಗಳಾಗಿ ಕತ್ತರಿಸಿದನು.
ಪುನಶ್ಚ ಪಾರ್ಥಃ ಸಂಕ್ರುದ್ಧೋ ಮಂಡಲೀಕೃತಕಾರ್ಮುಕಃ |
ದೇವಸಂಘಾಂಛರೈಸ್ತೀಕ್ಷ್ಣೈರರ್ಪಯದ್ವೈ ಸಮಂತತಃ ॥32॥
ಪುನಃ ಕೋಪಗೊಂಡ ಪಾರ್ಥನು ತನ್ನ ಬಿಲ್ಲನ್ನು ಬಗ್ಗಿಸಿ ದೇವಸಂಘಗಳ ಮೇಲೆ ಎಲ್ಲಕಡೆಗಳಿಂದಲೂ ತನ್ನ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.
ತತೋ ದೇವಗಣಾಃ ಸರ್ವೇ ಯುದ್ಧ್ವಾ ಪಾರ್ಥೇನ ವೈ ಮುಹುಃ |
ರಣೇ ಜೇತುಮಶಕ್ಯಂ ತಂ ಜ್ಞಾತ್ವಾ ತೇ ಭರತರ್ಷಭ ॥33॥
ಶಾಂತಾಸ್ತೇ ವಿಬುಧಾಃ ಸರ್ವೇ ಪಾರ್ಥಬಾಣಾಭಿಪೀಡಿತಾಃ |
ಸದ್ವಿಪಂ ವಾಸವಂ ತ್ಯಕ್ತ್ವಾ ದುದ್ರುವುಃ ಸರ್ವತೋದಿಶಮ್ ॥34॥
ಎಲೈ ಭರತರ್ಷಭನೇ! ಅನಂತರ ದೇವತೆಗಳ ಎಲ್ಲ ಗಣಗಳು ಅರ್ಜುನನ ಜೊತೆಯಲ್ಲಿ ಪುನಃ ಪುನಃ ಯುದ್ಧವನ್ನುಮಾಡಿ ಯುದ್ಧದಲ್ಲಿ ಅವನನ್ನು ಗೆಲ್ಲುವುದು ಅಸಾಧ್ಯವೆಂದು ತಿಳಿದು ಶಾಂತರಾದ ಅವರೆಲ್ಲರೂ ಅರ್ಜುನನ ಬಾಣಗಳಿಂದ ಪೀಡಿತರಾಗಿ ಇಂದ್ರನನ್ನೂ ಐರಾವತವನ್ನೂ ಅಲ್ಲಿಯೇ ಬಿಟ್ಟು ಎಲ್ಲ ದಿಕ್ಕುಗಳಿಗೂ ಓಡಿ ಹೋದರು.
ಪ್ರಾಚೀಂ ರುದ್ರಾಃ ಸಗಂಧರ್ವಾ ದಕ್ಷಿಣಾಂ ಮರುತೋ ಯುಧಿ |
ದಿಶಂ ಪ್ರತೀಚೀಂ ಭೀತಾಸ್ತೇ ವಸವಶ್ಚ ತಥಾಽಶ್ವಿನೌ ॥35॥
ಗಂಧರ್ವಸಹಿತರಾದ ರುದ್ರರು ಪೂರ್ವದಿಕ್ಕಿಗೂ ಮರುತ್ತುಗಳು ದಕ್ಷಿಣದಿಕ್ಕಿಗೂ ವಸುಗಳು ಮತ್ತು ಅಶ್ವಿನಿಗಳು ಯುದ್ಧದಲ್ಲಿ ಭೀತರಾಗಿ ಪಶ್ಚಿಮ ದಿಕ್ಕಿಗೂ ಓಡಿ ಹೋದರು.
ಆದಿತ್ಯಾಶ್ಚೈವ ವಿಶ್ವೇ ಚ ದುದ್ರುವುರ್ವಾ ಉದಙ್ಮುಖಾಃ |
ಸಾಧ್ಯಾಶ್ಚೋರ್ಧ್ವಮುಖಾ ಭೀತಾಶ್ಚಿಂತಯನ್ ಪಾರ್ಥಸಾಯಕಾನ್ ॥
ಆದಿತ್ಯರು ಮತ್ತು ವಿಶ್ವೇದೇವತೆಗಳು ಪಾರ್ಥನ ಬಾಣಗಳನ್ನೇ ಚಿಂತಿಸುತ್ತಾ ಭೀತರಾಗಿ ಉತ್ತರಾಭಿಮುಖವಾಗಿ ಓಡಿಹೋದರು. ಸಾಧ್ಯರು ಊರ್ಧ್ವಮುಖವಾಗಿ ಓಡಿಹೋದರು.
ಏವಂ ಸುರಗಣಾಃ ಸರ್ವೇ ಪ್ರಾದ್ರುವನ್ ಸರ್ವತೋದಿಶಮ್ |
ಮುಹುರ್ಮುಹುಃ ಪ್ರೇಕ್ಷಮಾಣಾಃ ಪಾರ್ಥಮೇವ ಸಕಾರ್ಮುಕಮ್ ॥
ಹೀಗೆ ಸುರಗಣಗಳೆಲ್ಲವೂ ಧನುಸ್ಸನ್ನು ಹಿಡಿದ ಅರ್ಜುನನನ್ನೇ ಪುನಃ ಪುನಃ ನೋಡುತ್ತಾ ಎಲ್ಲ ದಿಕ್ಕುಗಳಿಗೂ ಓಡಿ ಹೋದರು.
ವಿದ್ರುತಾನ್ ದೇವಸಂಘಾಂಸ್ತಾನ್ ರಣೇ ದೃಷ್ಟ್ವಾ ಪುರಂದರಃ |

ತತಃ ಕ್ರುದ್ಧೋ ಮಹಾತೇಜಾಃ ಪಾರ್ಥಂ ಬಾಣೈರವಾಕಿರತ್ |
ಪಾರ್ಥೋಽಪಿ ಶಕ್ರಂ ವಿವ್ಯಾಥ ಮಾನುಷೋ ವಿಬುಧಾಧಿಪಮ್ ॥38॥
ದೇವತೆಗಳ ಸಮೂಹವು ಯುದ್ಧದಲ್ಲಿ ಓಡಿಹೋದುದನ್ನು ನೋಡಿ ಮಹಾತೇಜಸ್ವಿಯಾದ ಇಂದ್ರನು ಕ್ರುದ್ಧನಾಗಿ ಅರ್ಜುನನ ಮೇಲೆ ತನ್ನ ಬಾಣಗಳ ಮಳೆಯನ್ನು ಸುರಿಸಿದನು. ಮನುಷ್ಯನಾದ ಅರ್ಜುನನು ಸಹ ದೇವಾಧಿಪನಾದ ಇಂದ್ರನಿಗೆ ಬಾಣಗಳನ್ನು ಪ್ರಯೋಗಿಸಿ ಅವನನ್ನು ವ್ಯಥೆ ಪಡಿಸಿದನು.
ತತಃ ಸೋಽಶ್ಮಮಯಂ ವರ್ಷಂ ವ್ಯಸೃಜದ್ ವಿಬುಧಾಧಿಪಃ |
ತಚ್ಛರೈರರ್ಜುನೋ ವರ್ಷಂ ಪ್ರತಿಜಘ್ನೇಽತ್ಯಮರ್ಷಣಃ ॥39॥
ಅನಂತರ ವಿಬುಧಾಧಿಪನಾದ ಇಂದ್ರನು ಪಾಷಾಣಮಯವಾದ ವರ್ಷವನ್ನು ಸೃಷ್ಟಿಸಿದನು. ಅತ್ಯಂತ ಸಿಟ್ಟಿನಿಂದ ಕೂಡಿದ ಅರ್ಜುನನು ತನ್ನ ಬಾಣಗಳಿಂದ ಆ ಬಂಡೆಗಳ ಮಳೆಯನ್ನು ನಿವಾರಿಸಿದನು.
ಅಥ ಸಂವರ್ಧಯಾಮಾಸ ತದ್ವರ್ಷಂ ದೇವರಾಡಪಿ |
ಭೂಯ ಏವ ತದಾ ವೀರ್ಯಂ ಜಿಜ್ಞಾಸುಃ ಸವ್ಯಸಾಚಿನಃ ॥40॥
ಆಗ ಇಂದ್ರನು ಅರ್ಜುನನ ಬಲವನ್ನು ಇನ್ನೂ ತಿಳಿಯಲು ಅಪೇಕ್ಷಿಸಿದನವಾಗಿ ಆ ಮಳೆಯನ್ನು ಇನ್ನೂ ಹೆಚ್ಚಿಸಿದನು.
ಸೋಽಶ್ಮವರ್ಷಂ ಮಹಾವೇಗಮಿಷುಭಿಃ ಪಾಂಡವೋಽಪಿ ಚ |
ವಿಲಯಂ ಗಮಯಾಮಾಸ ಹರ್ಷಯನ್ ಪಾಕಶಾಸನಮ್ ॥41॥
ಅರ್ಜುನನೂ ಸಹ ಮಹಾವೇಗವುಳ್ಳ ಆ ಬಂಡೆಗಳ ಮಳೆಯನ್ನು ತನ್ನ ಬಾಣಗಳಿಂದ ನಾಶಮಾಡಿ ದೇವೇಂದ್ರನನ್ನು ಸಂತೋಷಪಡಿಸಿದನು.
ಉಪಾದಾಯ ತು ಪಾಣಿಭ್ಯಾಮಂಗದಂ ನಾಮ ಪರ್ವತಮ್ |
ಸದ್ರುಮಂ ವ್ಯಸೃಜಚ್ಛಕ್ರೋ ಜಿಘಾಂಸುಃ ಶ್ವೇತವಾಹನಮ್ ॥42॥
ಇಂದ್ರನು ಅಂಗದವೆಂಬ ಪರ್ವತವನ್ನು ಅದರಲ್ಲಿದ್ದ ವೃಕ್ಷಗಳ ಸಹಿತವಾಗಿ ತನ್ನ ಎರಡೂ ಕೈಗಳಿಂದ ಕಿತ್ತು ಅರ್ಜುನನನ್ನು ಕೊಲ್ಲುವ ಇಚ್ಛೆಯಿಂದ ಅದನ್ನು ಅರ್ಜುನನ ಮೇಲೆ ಎಸೆದನು.
ತತೋಽರ್ಜುನೋ ವೇಗವದ್ಭಿರ್ಜ್ವಲಮಾನೈರಜಿಹ್ಮಗೈಃ |
ಬಾಣೈರ್ವಿಧ್ವಂಸಯಾಮಾಸ ಗಿರಿರಾಜಂ ಸಹಸ್ರಶಃ |
ಶಕ್ರಂ ಚ ವಾರಯಾಮಾಸ ಶರೈಃ ಪಾರ್ಥೋ ಬಲಾದ್ಯುಧಿ ॥43॥
ಆಗ ಅರ್ಜುನನು ವೇಗವುಳ್ಳ ಪ್ರಕಾಶಮಾನವಾದ ಮತ್ತು ನೇರವಾಗಿ ಹೋಗುವ ತನ್ನ ಬಾಣಗಳಿಂದ ಆ ಶ್ರೇಷ್ಠವಾದ ಪರ್ವತವನ್ನು ಸಹಸ್ರಾರು ಚೂರುಗಳನ್ನಾಗಿ ಮಾಡಿ ನಾಶಗೊಳಿಸಿದನು. ಅರ್ಜುನನು ತನ್ನ ಬಲದಿಂದ ಯುದ್ಧದಲ್ಲಿ ಇಂದ್ರನನ್ನೂ ಸಹ ತನ್ನ ಬಾಣಗಳಿಂದ ತಡೆದನು.
ತತಃ ಶಕ್ರೋ ಮಹಾರಾಜ ರಣೇ ವೀರಂ ಧನಂಜಯಮ್ |
ಜ್ಞಾತ್ವಾ ಜೇತುಮಶಕ್ಯಂ ತಂ ತೇಜೋಬಲಸಮನ್ವಿತಮ್ |
ಪರಾಂ ಪ್ರೀತಿಂ ಯಯೌ ತತ್ರ ಪುತ್ರಶೌರ್ಯೇಣ ವಾಸವಃ ॥44॥
ಮಹಾರಾಜನೇ! ಆಗ ಇಂದ್ರನು ವೀರನೂ ತೇಜೋಬಲಸಮನ್ವಿತನೂ ಆದ ಅರ್ಜುನನನ್ನು ಯುದ್ಧದಲ್ಲಿ ಜಯಿಸಲು ಸಾಧ್ಯವಿಲ್ಲವೆಂದು ತಿಳಿದು ತನ್ನ ಮಗನ ಪರಾಕ್ರಮದಿಂದ ಬಹಳ ಸಂತೋಷಗೊಂಡನು.
ತದಾ ತತ್ರ ನ ತಸ್ಯಾಸೀದ್ ದಿವಿ ಕಶ್ಚಿನ್ಮಹಾಯಶಾಃ |
ಸಮರ್ಥೋ ನಿರ್ಜಯೇ ರಾಜನ್ನಪಿ ಸಾಕ್ಷಾತ್ ಪ್ರಜಾಪತಿಃ ॥45॥
ಮಹಾರಾಜನೇ! ಆಗ ದೇವಲೋಕದಲ್ಲಿ ಪ್ರಜಾಪತಿಯನ್ನು ಸೇರಿಸಿ ಯಾವ ಮಹಾಕೀರ್ತಿವಂತನಾದವನೂ ಅರ್ಜುನನನ್ನು ಜಯಿಸಲು ಸಾಧ್ಯವಾಗಲಿಲ್ಲ.
ತತಃ ಪಾರ್ಥಃ ಶರೈರ್ಹತ್ವಾ ಯಕ್ಷರಾಕ್ಷಸಪನ್ನಗಾನ್ |
ದೀಪ್ತೇ ಚಾಗ್ನೌ ಮಹಾತೇಜಾಃ ಪಾತಯಾಮಾಸ ಸಂತತಮ್ ॥46॥
ಅನಂತರ ಮಹಾತೇಜಸ್ವಿಯಾದ ಅರ್ಜುನನು ತನ್ನ ಬಾಣಗಳಿಂದ ಯಕ್ಷರಾಕ್ಷಸಗಣಗಳನ್ನು ಕತ್ತರಿಸಿ ಸಂತತವಾಗಿ ಅವು ಉರಿಯುತ್ತಿರುವ ಅಗ್ನಿಯಲ್ಲಿ ಬೀಳುವಂತೆ ಮಾಡಿದನು.
ಪ್ರತಿಪ್ರೇಕ್ಷಯಿತುಂ ಪಾರ್ಥಂ ನ ಶೇಕುಸ್ತತ್ರ ಕೇಚನ |
ದೃಷ್ಟ್ವಾ ನಿವಾರಿತಂ ಶಕ್ರಂ ದಿವಿ ದೇವಗಣೈಃ ಸಹ ॥47॥
ದೇವಗಣಗಳಿಂದ ಕೂಡಿದ ಇಂದ್ರನೂ ಸಹ ಪಾರ್ಥನಿಂದ ನಿವಾರಿಸಲ್ಪಟ್ಟುದುದನ್ನು ನೋಡಿ ಆಗ ಯಾರೂ ಸಹ ಅರ್ಜುನನನ್ನು ನೋಡುವುದಕ್ಕೂ ಸಮರ್ಥರಾಗಲಿಲ್ಲ.
ಯಥಾ ಸುಪರ್ಣಃ ಸೋಮಾರ್ಥಂ ವಿಬುಧಾನಜಯತ್ ಪುರಾ |
ತಥಾ ಜಿತ್ವಾ ಸುರಾನ್ ಪಾರ್ಥಸ್ತರ್ಪಯಾಮಾಸ ಪಾವಕಮ್ ॥48॥
ಹೇಗೆ ಗರುಡನು ಹಿಂದೆ ಅಮೃತದ ಸಲುವಾಗಿ ಎಲ್ಲ ದೇವತೆಗಳನ್ನು ಜಯಿಸಿದನೋ ಹಾಗೆ ಅರ್ಜುನನು ಎಲ್ಲಾ ದೇವತೆಗಳನ್ನೂ ಜಯಿಸಿ ಅಗ್ನಿಯನ್ನು ಸಂತೋಷಪಡಿಸಿದನು.
ತತೋಽರ್ಜುನಃ ಸ್ವವೀರ್ಯೇಣ ತರ್ಪಯಿತ್ವಾ ವಿಭಾವಸುಮ್ |
ರಥಂ ಧ್ವಜಂ ಹಯಾಂಶ್ಚೈವ ದಿವ್ಯಾಸ್ತ್ರಾಣಿ ಸಭಾಂ ಚ ವೈ ॥49॥
ಗಾಂಡೀವಂ ಚ ಧನುಶ್ರೇಷ್ಠಂ ತೂಣೀ ಚಾಕ್ಷಯಸಾಯಕೌ |

ಏತಾನ್ಯವಾಪ ಬೀಭತ್ಸುರ್ಲೇಭೇ ಕೀರ್ತಿಂ ಚ ಭಾರತ ॥50॥
ಅನಂತರ ಅರ್ಜುನನು ತನ್ನ ಪರಾಕ್ರಮದಿಂದ ಅಗ್ನಿಯನ್ನು ಸಂತೋಷಪಡಿಸಿ ಅವನಿಂದ ರಥ ಧ್ವಜ, ಅಶ್ವಗಳು ದಿವ್ಯಾಸ್ತ್ರಗಳು ಸಭೆ ಮತ್ತು ಶ್ರೇಷ್ಠವಾದ ಗಾಂಡೀವ ಧನುಸ್ಸು ಅಕ್ಷಯಬತ್ತಳಿಕೆಗಳು ಎಲ್ಲವನ್ನೂ ಪಡೆದನು. ಭಾರತನೇ! ಕೀರ್ತಿಯನ್ನೂ ಪಡೆದನು.
ಭೂಯೋಽಪಿ ಶೃಣು ರಾಜೇಂದ್ರ ಪಾರ್ಥೋ ಗತ್ವೋತ್ತರಾಂ ದಿಶಮ್ |
ವಿಜಿತ್ಯ ನವವರ್ಷಾಂಶ್ಚ ಸಪುರಾಂಶ್ಚ ಸಪರ್ವತಾನ್ ॥51॥
ಜಂಬೂದ್ವೀಪಂ ವಶೇ ಕೃತ್ವಾ ಸರ್ವಂ ತದ್ಭರತರ್ಷಭ |
ಬಲಾಜ್ಜಿತ್ವಾ ನೃಪಾನ್ ಸರ್ವಾನ್ ಕರೇ ಚ ವಿನಿವೇಶ್ಯ ಚ ॥52॥
ರತ್ನಾನ್ಯಾದಾಯ ಸರ್ವಾಣಿ ಗತ್ವಾ ಚೈವ ಪುನಃ ಪುರೀಮ್ |
ತತೋ ಜ್ಯೇಷ್ಠಂ ಮಹಾತ್ಮಾನಂ ಧರ್ಮರಾಜಂ ಯುಧಿಷ್ಠಿರಮ್ |
ರಾಜಸೂಯಂ ಕ್ರತುಶ್ರೇಷ್ಠಂ ಕಾರಯಾಮಾಸ ಭಾರತ ॥53॥
ರಾಜೇಂದ್ರನೇ ಅರ್ಜುನನ ಸಾಹಸಗಳನ್ನು ಇನ್ನೂ ಕೇಳು. ಅವನು ಉತ್ತರದಿಕ್ಕನ್ನು ಗೆದ್ದು ಪಟ್ಟಣಗಳು ಮತ್ತು ಪರ್ವತಗಳಿಂದ ಕೂಡಿದ ನವವರ್ಷಗಳನ್ನು ಗೆದ್ದು ಸಮಸ್ತವಾದ ಜಂಬೂದ್ವೀಪವನ್ನು ವಶಪಡಿಸಿಕೊಂಡು ತನ್ನ ಬಲದಿಂದ ಎಲ್ಲಾ ರಾಜರನ್ನೂ ಗೆದ್ದು ಎಲ್ಲರೂ ಕಪ್ಪಕಾಣಿಕೆಯನ್ನು ಕೊಡುವಂತೆಮಾಡಿ ಅವರು ಕೊಟ್ಟ ಎಲ್ಲಾ ರತ್ನಗಳನ್ನೂ ತೆಗೆದುಕೊಂಡು ತನ್ನ ಪುರಕ್ಕೆ ಹಿಂದಿರುಗಿ ತನ್ನ ಅಣ್ಣನಾದ ಮಹಾತ್ಮನಾದ ಧರ್ಮರಾಜನಿಂದ ಶ್ರೇಷ್ಠವಾದ ರಾಜಸೂಯಯಾಗವನ್ನು ಮಾಡಿಸಿದನು.
ಸ ತಾನ್ಯನ್ಯಾನಿ ಕರ್ಮಾಣಿ ಕೃತವಾನರ್ಜುನಃ ಪುರಾ |
ಅರ್ಜುನೇನ ಸಮೋ ವೀರ್ಯೇ ನಾಸ್ತಿ ಲೋಕೇ ಪುಮಾನ್ ಕ್ವಚಿತ್ ॥
ಅರ್ಜುನನು ಹಿಂದೆ ಅಂತಹ ಅನೇಕ ಕರ್ಮಗಳನ್ನು ಮಾಡಿದನು.ಪರಾಕ್ರಮದಲ್ಲಿ ಅರ್ಜುನನಿಗೆ ಸಮನಾದವರು ಲೋಕದಲ್ಲಿ ಯಾರೂ ಇಲ್ಲ.
ದೇವದಾನವಯಕ್ಷಾಶ್ಚ ಪಿಶಾಚೋರಗರಾಕ್ಷಸಾಃ |
ಭೀಷ್ಮದ್ರೋಣಾದಯಃ ಸರ್ವೇ ಕುರವಶ್ಚ ಮಹಾರಥಾಃ ॥55॥
ಲೋಕೇ ಸರ್ವನೃಪಾಶ್ಚೈವ ವೀರಾಶ್ಚಾನ್ಯೇ ಧನುರ್ಧರಾಃ |
ಏತೇ ಚಾನ್ಯೇ ಚ ಬಹವಃ ಪರಿವಾರ್ಯ ಮಹೀಪತೇ |
ಏಕಂ ಪಾರ್ಥಂ ರಣೇ ಯತ್ತಾಃ ಪ್ರತಿಯೋದ್ಧುಂ ನ ಶಕ್ನುಯುಃ ॥56॥
ದೇವತೆಗಳು ದಾನವರು ಯಕ್ಷರು ಪಿಶಾಚಿಗಳು ಉರಗಗಳು ರಾಕ್ಷಸರು ಮಹಾರಥರಾದ ಎಲ್ಲ ಕುರುಗಳು ಭೀಷ್ಮದ್ರೋಣಾದಿಗಳು ಲೋಕದಲ್ಲಿರುವ ಎಲ್ಲ ರಾಜರೂ ಇನ್ನೂ ಬೇರೆ ಧನುರ್ಧಾರಿಗಳಾದ ವೀರರು, ಎಲೈ ರಾಜನೇ! ಈ ಅನೇಕ ಜನರು ಸುತ್ತುವರೆದರೂ ಒಬ್ಬ ಪಾರ್ಥನ ಜೊತೆಯಲ್ಲಿ ಯುದ್ಧಮಾಡಲು ಸಮರ್ಥರಾಗುವುದಿಲ್ಲ.
ಅಹಂ ಹಿ ನಿತ್ಯಂ ಕೌರವ್ಯ ಫಲ್ಗುನಂ ಪ್ರತಿ ಸತ್ತಮಮ್ |
ಅನಿಶಂ ಚಿಂತಯಿತ್ವಾ ತಂ ಸಮುದ್ವಿಗ್ನೋಽಸ್ಮಿ ತದ್ಭಯಾತ್ ॥57॥
ಕುರುರಾಜನೇ! ನಾನು ಯಾವಾಗಲೂ ಶ್ರೇಷ್ಠನಾದ ಅರ್ಜುನನನ್ನು ಚಿಂತಿಸಿ ಅವನ ಭಯದಿಂದ ಉದ್ವಿಗ್ನನಾಗಿದ್ದೇನೆ.
ಗೃಹೇ ಗೃಹೇ ಚ ಪಶ್ಯಾಮಿ ತಾತ ಪಾರ್ಥಮಹಂ ಸದಾ |
ಶರಗಾಂಡೀವಸಂಯುಕ್ತಂ ಪಾಶಹಸ್ತಮಿವಾಂತಕಮ್ ॥58॥
ತಂದೆಯೇ! ನಾನು ಮನೆಮನೆಗಳಲ್ಲಿ ಪಾಶಹಸ್ತನಾಗಿರುವ ಯಮನಂತೆ ಶರಗಾಂಡೀವಯುಕ್ತನಾದ ಅರ್ಜುನನನ್ನು ನೋಡುತ್ತೇನೆ.
ಅಪಿ ಪಾರ್ಥಸಹಸ್ರಾಣಿ ಭೀತಃ ಪಶ್ಯಾಮಿ ಭಾರತ |
ಪಾರ್ಥಭೂತಮಿದಂ ಸರ್ವಂ ನಗರಂ ಪ್ರತಿಭಾತಿ ಮೇ ॥59॥
ಎಲೈ ಭಾರತನೇ! ನಾನು ಭಯದಿಂದ ಕೂಡಿದವನಾಗಿ ಸಹಸ್ರಸಂಖ್ಯೆಯಲ್ಲಿ ಪಾರ್ಥರನ್ನು ನೋಡುತ್ತೇನೆ. ಈ ನಗರವೆಲ್ಲವೋ ಅರ್ಜುನರಿಂದಲೇ ತುಂಬಿರುವಂತೆ ನನಗೆ ತೋರುತ್ತದೆ.
ಪಾರ್ಥಮೇವ ಹಿ ಪಶ್ಯಾಮಿ ರಹಿತೇ ತಾತ ಭಾರತ |
ದೃಷ್ಟ್ವಾ ಸ್ವಪ್ನಗತಂ ಪಾರ್ಥಮುದ್ಭ್ರಮಾಮಿ ಹ್ಯಚೇತನಃ ॥60॥
ಎಲೈ ಭಾರತನೇ! ನಾನು ಏಕಾಂತದಲ್ಲಿರುವಾಗ ಅರ್ಜುನನೇ ಕಾಣುತ್ತಾನೆ. ನಾನು ಸ್ವಪ್ನದಲ್ಲಿ ಅರ್ಜುನನನ್ನು ನೋಡಿದರೂ ಹೆದರಿ ಪ್ರಜ್ಞಾಶೂನ್ಯನಾಗುತ್ತೇನೆ.
ಅಕಾರಾದೀನಿ ನಾಮಾನಿ ಅರ್ಜುನತ್ರಸ್ತಚೇತಸಃ |
ಅಶ್ವಾಶ್ಚಾರ್ಥಾ ಹ್ಯಜಾಶ್ಚೈವ ತ್ರಾಸಂ ಸಂಜನಯಂತಿ ಮೇ ॥61॥
ಅಕಾರದಿಂದ ಪ್ರಾರಂಭವಾಗುವ ಅಶ್ವ ಅರ್ಥ ಅಜ ಮೊದಲಾದ ಶಬ್ದಗಳೆಲ್ಲವೂ ನನಗೆ ಭಯವನ್ನು ಉಂಟುಮಾಡುತ್ತವೆ.
ನಾಸ್ತಿ ಪಾರ್ಥಾದೃತೇ ತಾತ ಪರವೀರಾದ್ ಭಯಂ ಮಮ |
ಪ್ರಹ್ಲಾದಂ ವಾ ಬಲಿಂ ವಾಽಪಿ ಹನ್ಯಾದ್ಧಿ ವಿಜಯೋ ರಣೇ ॥62॥
ತಂದೆಯೇ! ಅರ್ಜುನನನ್ನು ಬಿಟ್ಟು ನನಗೆ ಇನ್ನಾವ ಶತ್ರುವೀರರಿಂದಲೂ ಭಯವಿಲ್ಲ. ಅರ್ಜುನನು ಯುದ್ಧದಲ್ಲಿ ಪ್ರಹ್ಲಾದನನ್ನೇ ಆಗಲಿ ಅಥವಾ ಬಲಿಯನ್ನೇ ಆಗಲಿ ಕೊಂದಾನು.
ತಸ್ಮಾತ್ ತೇನ ಮಹಾರಾಜ ಯುದ್ಧಮಸ್ಮಜ್ಜನಕ್ಷಯಮ್ |
ಅಹಂ ತಸ್ಯ ಪ್ರಭಾವಜ್ಞೋ ನಿತ್ಯಂ ದುಃಖಂ ವಹಾಮಿ ಚ ॥63॥
ಮಹಾರಾಜನೇ! ಅದ್ದರಿಂದ ಅವನ ಜೊತೆಯಲ್ಲಿ ಯುದ್ಧವು ನಮ್ಮ ಜನಗಳನಾಶಕ್ಕೆ ಕಾರಣವಾಗುತ್ತದೆ. ಅವನ ಪ್ರಭಾವವನ್ನು ತಿಳಿದ

ನಾನು ನಿತ್ಯವೂ ದುಃಖವನ್ನು ಧರಿಸಿದ್ದೇನೆ.
ಪುರಾ ಹಿ ದಂಡಕಾರಣ್ಯೇ ಮಾರೀಚಸ್ಯ ಯಥಾ ಭಯಮ್ |
ಭವೇದ್ರಾಮೇ ಮಹಾವೀರ್ಯೇ ತಥಾ ಪಾರ್ಥೇ ಭಯಂ ಮಮ ||
ಹಿಂದೆ ದಂಡಕಾರಣ್ಯದಲ್ಲಿ ಮಾರೀಚನು ಹೇಗೆ ಮಹಾವೀರ್ಯನಾದ ರಾಮನಿಗೆ ಹೆದರಿದನೋ ಹಾಗೆ ನಾನು ಅರ್ಜುನನಿಗೆ ಹೆದರುತ್ತೇನೆ.
ಧೃತರಾಷ್ಟ್ರಃ
ಜಾನಾಮ್ಯೇವ ಮಹದ್ವೀರ್ಯಂ ಜಿಷ್ಣೋರೇತದ್ ದುರಾಸದಮ್ |
ತಾತ ವೀರಸ್ಯ ಪಾರ್ಥಸ್ಯ ಮಾ ಕಾರ್ಷೀಸ್ತ್ವಂ ತು ವಿಪ್ರಿಯಮ್ |
ದ್ಯೂತಂ ವಾ ಶಸ್ತ್ರಯುದ್ಧಂ ವಾ ದುರ್ವಾಕ್ಯಂ ವಾ ಕದಾಚನ ||65||
ಪ್ರೀತಿಪಾತ್ರನೇ! ನಾನು ದುರಾಸದನಾದ ಅರ್ಜುನನ ಈ ಮಹಾಪರಾಕ್ರಮವನ್ನು ತಿಳಿದೇ ಇದ್ದೇನೆ. ನೀನಾದರೋ ವೀರನಾದ ಪಾರ್ಥನಿಗೆ ಅಪ್ರಿಯವಾದುದನ್ನು ಏನನ್ನೂ ಮಾಡಬೇಡ.ದ್ಯೂತವನ್ನಾಗಲೀ ಶಸ್ತ್ರಯುದ್ಧವನ್ನಾಗಲೀ ಅಥವಾ ದುರ್ವಾಕ್ಯ ಪ್ರಯೋಗವನ್ನಾಗಲೀ ಎಂದೂ ಮಾಡಬೇಡ.
ಏತೇಷ್ವೇವಂ ಕೃತೇ ತಸ್ಯ ವಿಗ್ರಹಶ್ಚೈವ ವೋ ಭವೇತ್ |
ತಸ್ಮಾತ್ ತ್ವಂ ಪುತ್ರ ಪಾರ್ಥೇನ ನಿತ್ಯಂ ಸ್ನೇಹೇನ ವರ್ತಯ ||66||
ಇವುಗಳಲ್ಲಿ ಅವನಿಗೆ ಯಾವುದನ್ನಾದರೂ ಮಾಡಿದರೆ ನಿನಗೆ ನಿಶ್ಚಿತವಾಗಿ ಅವರ ವಿರೋಧವು ಉಂಟಾಗುವುದು. ಪುತ್ರನೇ! ಆದುದರಿಂದ ನೀನು ಪಾರ್ಥನ ಜೊತೆಯಲ್ಲಿ ಯಾವಾಗಲೂ ಸ್ನೇಹದಿಂದಿರು.
ಯಶ್ಚ ಪಾರ್ಥೇನ ಸಂಬಂಧಾದ್ ವರ್ತತೇ ಚ ನರೋ ಭುವಿ |
ತಸ್ಯ ನಾಸ್ತಿ ಭಯಂ ಕಿಂಚಿತ್ ತ್ರಿಷು ಲೋಕೇಷು ಭಾರತ |
ತಸ್ಮಾತ್ ತ್ವಂ ಜಿಷ್ಣುನಾ ವತ್ಸ ನಿತ್ಯಂ ಸ್ನೇಹೇನ ವರ್ತಯ ||67||
ಎಲೈ ಭಾರತನೇ! ಭೂಮಿಯಲ್ಲಿರುವ ಯಾವನು ಅರ್ಜುನನ ಜೊತೆಯಲ್ಲಿ ಸ್ನೇಹಸಂಬಂಧವನ್ನು ಹೊಂದಿರುತ್ತಾನೆಯೋ ಅವನಿಗೆ ಮೂರುಲೋಕಗಳಿಲ್ಲಿಯೂ ಯಾವ ಭಯವೂ ಇಲ್ಲ. ವತ್ಸನೇ! ಆದ್ದರಿಂದ ನೀನು ಅರ್ಜುನನ ಜೊತೆಯಲ್ಲಿ ಸ್ನೇಹದಿಂದಿರು.
ದುರ್ಯೋಧನಃ
ದ್ಯೂತೇ ಪಾರ್ಥಸ್ಯ ಕೌರವ್ಯ ಮಾಯಯಾ ನಿಕೃತಿಃ ಕೃತಾ |
ತಸ್ಮಾದ್ಧಿ ತಂ ಜಹಿ ಸದಾ ತ್ವನ್ಯೋಪಾಯೇನ ನೋ ಭವೇತ್ ||68||
ಕುರುರಾಜನೇ! ದ್ಯೂತದಲ್ಲಿ ಅರ್ಜುನನಿಗೆ ಕಪಟವನ್ನು ಆಶ್ರಯಿಸಿ ಮೋಸಮಾಡಿದ್ದಾಯಿತು. ಅವನನ್ನು ಆ ಉಪಾಯದಿಂದಲೇ ಗೆಲ್ಲಬೇಕು. ಇನ್ನು ಬೇರೆಯಾವ ಉಪಾಯದಿಂದಲೂ ಸಾಧ್ಯವಿಲ್ಲ.
ಧೃತರಾಷ್ಟ್ರಃ
ಉಪಾಯಶ್ಚ ನ ಕರ್ತವ್ಯಃ ಪಾಂಡವಾನ್ ಪ್ರತಿ ಭಾರತ |
ಪಾರ್ಥಾನ್ ಪ್ರತಿ ಪುರಾ ವತ್ಸ ಬಹೂಪಾಯಾಃ ಕೃತಾಸ್ತ್ವಯಾ |
ತಾನುಪಾಯಾನ್ ಹಿ ಕೌಂತೇಯಾ ಬಹುಶೋ ವ್ಯತಿಚಕ್ರಮುಃ ||69||
ಭಾರತನೇ! ಪಾಂಡವರನ್ನು ಕುರಿತು ಅಂತಹ ಯಾವ ಉಪಾಯವನ್ನು ಮಾಡಬೇಡ. ವತ್ಸನೇ! ನೀನು ಹಿಂದೆ ಪಾಂಡವರ ವಿರುದ್ಧವಾಗಿ ಅನೇಕ ಉಪಾಯಗಳನ್ನು ಮಾಡಿದ್ದೆ. ಕುಂತಿಯ ಪುತ್ರರಾದ ಅವರು ಆ ಎಲ್ಲಾ ಉಪಾಯಗಳನ್ನು ಮೀರಿ ನಿಂತರು.
ತಸ್ಮಾದ್ಧಿತಂ ಜೀವಿತಾಯ ನಃ ಕುಲಸ್ಯ ಜನಸ್ಯ ಚ |
ತ್ವಂ ಚಿಕೀರ್ಷಸಿ ಚೇದ್ವತ್ಸ ಸಮಿತ್ರಃ ಸಹಬಾಂಧವಃ |
ಸಭ್ರಾತೃಕಸ್ತ್ವಂ ಪಾರ್ಥೇನ ನಿತ್ಯಂ ಸ್ನೇಹೇನ ವರ್ತಯ ||70||
ಆದ್ದರಿಂದ ವತ್ಸನೇ! ನೀನು ನಮ್ಮ ಕುಲಕ್ಕೆ ಮತ್ತು ಜನಗಳಿಗೆ ಜೀವನವನ್ನು ಕೊಡಲು ಹಿತವನ್ನು ಮಾಡಲು ಬಯಸುವುದಾದರೆ ಮಿತ್ರರಿಂದಲೂ ಬಾಂಧವರಿಂದಲೂ, ತಮ್ಮಂದಿರಿಂದಲೂ ಕೂಡಿದವನಾಗಿ ನಿತ್ಯವೂ ಅರ್ಜುನನ ಜೊತೆಯಲ್ಲಿ ಸ್ನೇಹದಿಂದಿರು.
ವೈಶಂಪಾಯನಃ
ಧೃತರಾಷ್ಟ್ರವಚಃ ಶ್ರುತ್ವಾ ರಾಜಾ ದುರ್ಯೋಧನಸ್ತದಾ |
ಚಿಂತಯಿತ್ವಾ ಮುಹೂರ್ತಂ ತು ವಿಧಿನಾ ಚೋದಿತೋಽಬ್ರವೀತ್ ||
ಧೃತರಾಷ್ಟ್ರನ ಮಾತುಗಳನ್ನು ಕೇಳಿದ ರಾಜನಾದ ದುರ್ಯೋಧನನು ಒಂದು ಮುಹೂರ್ತಕಾಲ ಚಿಂತಿಸಿ ವಿಧಿಯಿಂದ (ಚೋದಿತನಾಗಿ) ಪ್ರೇರಿತನಾಗಿ ಮಾತನಾಡಿದನು.
ದುರ್ಯೋಧನಃ
ನ ತ್ವಯೇದಂ ಶ್ರುತಂ ರಾಜನ್ ಯಜ್ಜಗಾದ ಬೃಹಸ್ಪತಿಃ |
ಶಕ್ರಸ್ಯ ನೀತಿಂ ಪ್ರವದನ್ ವಿದ್ವಾನ್ ದೇವಪುರೋಹಿತಃ ||72||
ರಾಜನೇ! ಇಂದ್ರನಿಗೆ ರೀತಿಯನ್ನು ಉಪದೇಶಿಸುತ್ತಾ ದೇವಪುರೋಹಿತರಾದ ಮೇಧಾವಿಗಳಾದ ಬೃಹಸ್ಪತ್ಯಾಚಾರ್ಯರು ಹೇಳಿದುದನ್ನು ನೀನು ಕೇಳಿಲ್ಲವೆ?
ಸರ್ವೋಪಾಯೈರ್ನಿಹಂತವ್ಯಾಃ ಶತ್ರವಃ ಶತ್ರುಕರ್ಶನ |
ಪುರಾ ಯುದ್ಧಾದ್ ಬಲಾದ್ವಾಽಪಿ ಪ್ರಕುರ್ವಂತಿ ಯಥಾಹಿತಮ್ ||73||
ಎಲೈ ಶತ್ರುಕರ್ಶನನೇ! ಯುದ್ಧವನ್ನು ಮಾಡುವುದಕ್ಕಿಂತ ಮುಂಚೆಯೇ ನಮ್ಮ ಬಲದಿಂದ ಶತ್ರುಗಳು ತಮ್ಮ ಹಿತವನ್ನು

ಸಾಧಿಸಿಕೊಳ್ಳಲಾಗದಂತೆ ಎಲ್ಲಾ ಉಪಾಯಗಳಿಂದಲೂ ಅವರನ್ನು ಕೊಲ್ಲಬೇಕು.
ತೇ ವಯಂ ಪಾಂಡವಧನೈಃ ಸರ್ವಾನ್ ಸಂಪೂಜ್ಯ ಪಾರ್ಥಿವಾನ್ |
ಯದಿ ತಾನ್ ಯೋಧಯಿಷ್ಯಾಮಃ ಕಿಂ ವಾ ನಃ ಪರಿಹಾಸ್ಯತಿ ॥74॥
ಅಂತಹ ನಾವು ಪಾಂಡವರ ಸಂಪತ್ತಿನಿಂದ ಎಲ್ಲ ರಾಜರನ್ನು ಸತ್ಕರಿಸಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ನಮಗೆ ಏನು ನಷ್ಟವಾಗುವುದು?
ಅಹೀನಾಶೀವಿಷಾನ್ ಕ್ರುದ್ಧಾನ್ ದಂಶಾಯ ಸಮುಪಸ್ಥಿತಾನ್ |
ಬದ್ಧ್ವಾ ಕಂಠೇ ಚ ಪೃಷ್ಠೇ ಚ ಕಃ ಸಮುತ್ಸ್ರಷ್ಟುಮರ್ಹತಿ ॥75॥
ಕೋಪಗೊಂಡ ಮಹಾವಿಷಪೂರಿತವಾದ ಕಚ್ಚಲು ಉದ್ಯುಕ್ತವಾದ ಸರ್ಪಗಳನ್ನು ಕಂಠದಲ್ಲಿಯೂ ಬೆನ್ನಿನಲ್ಲಿಯೂ ಕಟ್ಟಿಕೊಂಡು ಯಾರು ಅವುಗಳನ್ನು ಸುಮ್ಮನೆ ಬಿಡಲು ಸಾಧ್ಯ?
ಆತ್ತಶಸತ್ರ ರಥಗತಾಃ ಕುಪಿತಾಸ್ತಾತ ಪಾಂಡವಾಃ |
ನಿಶ್ಶೇಷಾನ್ ನಃ ಕರಿಷ್ಯಂತಿ ಕ್ರುದ್ಧಾ ಹ್ಯಾಶೀವಿಷಾ ಯಥಾ ॥76॥
ಎಲೈ ತಂದೆಯೇ! ಶಸ್ತ್ರಗಳನ್ನು ಹಿಡಿದ ರಥಗತರಾದ ಕುಪಿತರಾದ ಪಾಂಡವರು ಕ್ರುದ್ಧ ಸರ್ಪಗಳಂತೆ ನಮ್ಮನ್ನು ನಿಶ್ಶೇಷಗೊಳಿಸುವರು.

ಸನ್ನದ್ಧೋ ಹ್ಯರ್ಜುನೋ ಯಾತೋ ವಿವೃತ್ಯ ಪರಮೇಷುಧೀಃ |
ಗಾಂಡೀವಂ ಮುಹುರಾದತ್ತೇ ನಿಶ್ಶ್ವಾಸ ನರಾಧಿಪ |
ಸರಥಂ ಯೋಜಯಿತ್ವಾ ತು ನಿರ್ಯಾತ ಇತಿ ನಃ ಶ್ರುತಮ್ ॥77॥
ಎಲೈ ನರಾಧಿಪನೇ! ಸನ್ನಗ್ಧನಾದ ಅರ್ಜುನನು ತನ್ನ ಬತ್ತಳಿಕೆಗಳನ್ನು ತೆಗೆದು ಗಾಂಡೀವವನ್ನು ಪುನಃ ಪುನಃ ಕೈಯಲ್ಲಿ ಹಿಡಿದು ನಿಟ್ಟುಸುರು ಬಿಡುತ್ತಾ ರಥವನ್ನು ಹೂಡಿ ನಡೆದನೆಂದು ನಾವು ಕೇಳಿದ್ದೇವೆ.
ನಕುಲಃ ಖಡ್ಗಮಾದಾಯ ಚರ್ಮ ಚಾಪ್ಯಷ್ಟಚಂದ್ರಕಮ್ |
ಸಹದೇವಶ್ಚ ರಾಜಾ ಚ ಚಕ್ರುರಾಕಾರಮಿಂಗಿತೈಃ ॥78॥
ನಕುಲನು ಅಷ್ಟ ಚಂದ್ರವಿರುವ ಚರ್ಮವನ್ನು ಮತ್ತು ಖಡ್ಗವನ್ನು ಹಿಡಿದು (ಹೊರಟನೆಂದು ಕೇಳಿದ್ದೇವೆ.) ನಕುಲ ಸಹದೇವರು ತಮ್ಮ ಆಕಾರದಿಂದಲೇ ತಮ್ಮ ಮನಸ್ಸಿನ ಅಭಿಪ್ರಾಯವನ್ನು ಸೂಚಿಸಿದರು.
ತೇ ತ್ವಾಸ್ಥಾಯ ರಥಾನ್ ಸರ್ವೇ ಬಹುಶಸ್ತ್ರಪರಿಗ್ರಹಾಃ |
ಅಭಿಘ್ನಂತೋ ರಥಾನ್ ರಾಜನ್ ಸೇನಾಯೋಗಾಯ ನಿರ್ಯಯುಃ ॥
ಎಲೈ ರಾಜನೇ! ಬಹುಶಸ್ತ್ರಗಳನ್ನು ಹೊಂದಿದ್ದ ಅವರೆಲ್ಲರೂ ರಥಗಳನ್ನು ಏರಿ ರಥಗಳನ್ನು ಓಡಿಸುತ್ತಾ ಸೈನ್ಯವನ್ನು ಕೂಡಿಸುವುದಕ್ಕಾಗಿಯೇ ಹೊರಟಿದ್ದಾರೆ.
ನ ಕ್ಷಮಂತೇ ತಥಾಸ್ಮಾಭಿಃ ಜಾತು ವಿಪ್ರಕೃತಾಸ್ತು ತೇ |
ದ್ರೌಪದ್ಯಾಸ್ತು ಪರಿಕ್ಲೇಶಂ ಕಸ್ತೇಷಾಂ ಕ್ಷಂತುಮರ್ಹತಿ ॥80॥
ನಮ್ಮಿಂದ ಅವಮಾನಾದಿಗಳಿಗೆ ಒಳಗಾದ ಅವರು ಎಂದೂ ನಮ್ಮನ್ನು ಕ್ಷಮಿಸುವುದಿಲ್ಲ. ಅವರಲ್ಲಿ ಯಾವನು ದ್ರೌಪದಿಯ ಕ್ಲೇಶವನ್ನು ಸಹಿಸುತ್ತಾನೆ?
ಪುನರ್ದೀವ್ಯಾಮ ಭದ್ರಂ ತೇ ವನವಾಸಾಯ ಪಾಂಡವೈಃ |
ಏವಮೇತಾನ್ ವಶೇ ಕರ್ತುಂ ಶಕ್ಷ್ಯಾಮೋ ಭರತರ್ಷಭ ॥81॥
ಭರತರ್ಷಭನೇ! ನಿನಗೆ ಮಂಗಳವಾಲಿ. ವನವಾಸವನ್ನು ಪಣವಾಗಿಟ್ಟು ನಾವು ಪಾಂಡವರ ಜೊತೆಯಲ್ಲಿ ಪುನಃ ದ್ಯೂತವನ್ನು ಆಡೋಣ. ಈ ರೀತಿಯಲ್ಲಿ ಮಾತ್ರ ನಾವು ಅವರನ್ನು ವಶದಲ್ಲಿ ಇಟ್ಟುಕೊಳ್ಳಲು ಸಮರ್ಥರಾಗುವೆವು.
ತೇ ವಾ ದ್ವಾದಶ ವರ್ಷಾಣಿ ವಯಂ ವಾ ದ್ಯೂತನಿರ್ಜಿತಾಃ |
ಪ್ರವಿಶೇಮ ಮಹಾರಣ್ಯಂ ರೌರವಾಜಿನವಾಸಸಃ ॥82॥
ಅವರಾಗಲೀ ಅಥವಾ ನಾವಾಗಲೀ ದ್ಯೂತದಲ್ಲಿ ನಿರ್ಜಿತರಾದರೆ ರೌರವಾಜಿನಗಳನ್ನು ಧರಿಸಿ ಹನ್ನೆರಡು ವರ್ಷಗಳ ಕಾಲ ದೊಡ್ಡ ಅರಣ್ಯವನ್ನು ಪ್ರವೇಶಿಸೋಣ.
ತ್ರಯೋದಶಂ ಚ ಸ್ವಜನೈರಜ್ಞಾತಾಃ ಪರಿವತ್ಸರಮ್ |
ಜ್ಞಾತಾಶ್ಚ ಪುನರನ್ಯಾನಿ ವನೇ ವರ್ಷಾಣಿ ದ್ವಾದಶ |
ನಿವಸೇಮ ವಯಂ ತೇ ವಾ ತಥಾ ದ್ಯೂತಂ ಪ್ರವರ್ತತಾಮ್ |
ಅಜ್ಞಾತಸಾತ್ ಪುನರ್ದ್ಯೂತಮಿದಂ ಕುರ್ವಂತು ಪಾಂಡವಾಃ ॥83॥
ಹದಿಮೂರನೆಯ ವರ್ಷ ಯಾವ ಸ್ವಜನರಿಗೂ ಗೊತ್ತಾಗದಂತೆ ಅಜ್ಞಾತವಾಸವನ್ನು ಮಾಡಬೇಕು. ಆ ಸಂದರ್ಭದಲ್ಲಿ ಯಾರಿಂದಲಾದರೂ ಜ್ಞಾತವಾದರೆ ಪುನಃ ಹನ್ನೆರಡುವರ್ಷ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಮಾಡಬೇಕೆಂಬ ಪಣವನ್ನು ಇಟ್ಟು. ಪಾಂಡವರ ಜೊತೆಯಲ್ಲಿ ಪುನಃ ದ್ಯೂತವು ನಡೆಯಲಿ.
ಏತತ್ ಕೃತ್ಯತಮಂ ರಾಜನ್ನಸ್ಮಾಕಂ ಭರತರ್ಷಭ |
ಅಯಂ ಹಿ ಶಕುನಿರ್ವೇದ ತದ್ವಿಧಾಮಕ್ಷಸಂವಿದಮ್ | ॥84॥
ಭರತರ್ಷಭನೇ! ರಾಜನೇ! ಇದು ನಾವು ಅತ್ಯಂತ ಅವಶ್ಯಕವಾಗಿ ಮಾಡಬೇಕಾದ ಕಾರ್ಯ. ಈ ಸಭೆಯಲ್ಲಿ ಈ ಶಕುನಿಯು ಅಂತಹ ಅಕ್ಷಜ್ಞಾನವನ್ನು ಪಡೆದಿದ್ದಾನೆ.
ದೃಢಮೂಲಾ ವಯಂ ರಾಜ್ಯೇ ಮಿತ್ರಾಣಿ ಪರಿಗೃಹ್ಯ ಚ |

ಸಾರವದ್ವಿಪುಲಂ ಸೈನ್ಯಂ ಸತ್ಕೃತ್ಯ ಸುದುರಾಸದಮ್ ॥85॥
ಏತೇ ತ್ರಯೋದಶೇ ವರ್ಷೇ ಪಾರಯಿಷ್ಯಂತಿ ಚೇದ್ ವ್ರತಮ್ ।
ಜೇಷ್ಯಾಮಸ್ತಾನ್ ವಯಂ ರಾಜನ್ ರೋಚತಾಂ ತೇ ಪರಂತಪ ॥86॥
ನಾವು ರಾಜ್ಯದಲ್ಲಿ ಚೆನ್ನಾಗಿ ಬೇರೂರಿದ ಮಿತ್ರರನ್ನು ಸಂಪಾದಿಸಿ ದುರಾಸದವಾದ ಬಲಿಷ್ಠವಾದ ದೊಡ್ಡ ಸೈನ್ಯವನ್ನು ಸತ್ಕರಿಸಿ ಈ ಪಾಂಡವರು ಏನಾದರೂ ಹದಿಮೂರುವರ್ಷದ ವ್ರತವನ್ನು ಸಮಾಪ್ತಿಗೊಳಿಸಿದ್ರೇ ಆದರೆ ಅವರನ್ನು ಯುದ್ಧದಲ್ಲಿ ಗೆಲ್ಲೋಣ. ಪರಂತಪನಾದ ರಾಜನೇ! ಇದನ್ನು ನೀನು ಅಂಗೀಕರಿಸು.
ಧೃತರಾಷ್ಟ್ರಃ
ತೂರ್ಣಂ ಪ್ರತ್ಯಾನಯಸ್ವೈತಾನಿಂದ್ರಪ್ರಸ್ಥಗತಾನಪಿ ।
ಆಗಚ್ಛಂತು ಪುನರ್ದ್ಯೂತಮಿದಂ ಕುರ್ವಂತು ಪಾಂಡವಾಃ ॥87॥
ಪಾಂಡವರು ಇಂದ್ರಪ್ರಸ್ಥವನ್ನು ತಲುಪಿದರೂ ಸಹ (ಅವರು ದಾರಿಯಲ್ಲೇ ಇದ್ದರೂ ಸಹ) ಬೇಗ ಹಿಂದಿರುಗುವಂತೆ ಮಾಡು. ಪಾಂಡವರು ಹಿಂದಿರುಗಿ ಬಂದು ಪುನಃ ಈ ದ್ಯೂತವನ್ನು ಆಡಲಿ.
ವೈಶಂಪಾಯನಃ
ತತೋ ದ್ರೋಣಃ ಸೋಮದತ್ತೋ ಬಾಹ್ಲೀಕಶ್ಚೈವ ಗೌತಮಃ ।
ವಿದುರೋ ದ್ರೋಣಪುತ್ರಶ್ಚ ವೈಶ್ಯಾಪುತ್ರಶ್ಚ ವೀರ್ಯವಾನ್ ॥88॥
ಭೂರಿಶ್ರವಾಃ ಶಾಂತನವೋ ವಿಕರ್ಣಶ್ಚ ಮಹಾರಥಃ ।
ಮಾ ದ್ಯೂತಮಿತ್ಯಭಾಷಂತ ಶಮೋಽಸ್ತ್ವಿತಿ ಚ ಸರ್ವಶಃ ॥89॥
ಆಗ ದ್ರೋಣ ಸೋಮದತ್ತ ಬಾಹ್ಲೀಕ ಕೃಪ ವಿದುರ ಅಶ್ವತ್ಥಾಮ ಪರಾಕ್ರಮಿಯಾದ ವೈಶ್ಯಪುತ್ರನಾದ ಯುಯುತ್ಸು ಭೂರಿಶ್ರವ ಭೀಷ್ಮ ಮಹಾರಥನಾದ ವಿಕರ್ಣ ಎಲ್ಲರೂ ದ್ಯೂತವು ಬೇಡ ಎಲ್ಲರೂ ಶಾಂತಿಯಿಂದ ಇರಲಿ ಎಂದು ಹೇಳಿದರು.
ಅಕಾಮಾನಾಂ ಚ ಸರ್ವೇಷಾಂ ಸುಹೃದಾಮರ್ಥದರ್ಶಿನಾಮ್ ।
ಅಕರೋತ್ ಪಾಂಡವಾಹ್ವಾನಂ ಧೃತರಾಷ್ಟ್ರಃ ಸುತಪ್ರಿಯಃ ॥90॥
ಆದರೆ ಸಂತಪ್ರಿಯನಾದ ಧೃತರಾಷ್ಟ್ರನು ಹಿತೈಷಿಗಳಾದ ದೀರ್ಘದರ್ಶಿಗಳಾದ ಎಲ್ಲಾ ಸುಹೃಜ್ಜನರ ಇಚ್ಛೆಗೆ ವಿರುದ್ಧವಾಗಿ ಪಾಂಡವರ ಆಹ್ವಾನವನ್ನು ಮಾಡಿದನು.
ಅಥಾಬ್ರುವೀನ್ಮಹಾರಾಜ ಧೃತರಾಷ್ಟ್ರಂ ಜನೇಶ್ವರಮ್ ।
ಪುತ್ರಹಾರ್ದಾದ್ಧರ್ಮಶೀಲಾ ಗಾಂಧಾರೀ ಶೋಕಕರ್ಶಿತಾ ॥91॥
ಮಹಾರಾಜನೇ! ಆಗ ದುಃಖತಪ್ತಳಾದ ಗಾಂಧಾರಿಯು ಪುತ್ರನ ಮೇಲಿನ ಮಮತೆಯನ್ನು ತೊರೆದು ರಾಜನಾದ ಧೃತರಾಷ್ಟ್ರನನ್ನು ಕುರಿತು ಹೇಳಿದಳು.
ಜಾತೇ ದುರ್ಯೋಧನೇ ಕ್ಷತ್ತಾ ಮಹಾಮತಿರಭಾಷತ ।
ನೀಯತಾಂ ಪರಲೋಕಾಯ ಸಾಧ್ವಯಂ ಕುಲಪಾಂಸನಃ ॥92॥
ದುರ್ಯೋಧನನು ಜನಿಸಿದಾಗ ಮಹಾಮತಿಯಾದ ವಿದುರನು ಈ ಕುಲನಾಶಕನಾದ ಪುತ್ರನನ್ನು ಪರಲೋಕಕ್ಕೆ ಕಳುಹಿಸು ಎಂದು ಹೇಳಿದನು.
ವ್ಯನದಜ್ಜಾತಮಾತ್ರೋ ಹಿ ಗೋಮಾಯುರಿವ ಭಾರತ ।
ಅಂತೋ ನೂನಂ ಕುಲಸ್ಯಾಸ್ಯ ಕುರವಸ್ತನ್ನಿಬೋಧತ ॥93॥
ಎಲೈ ಭಾರತನೇ! ಇವನು ಹುಟ್ಟಿದ ತಕ್ಷಣ ನರಿಯಂತೆ ಕಿರುಚಿದನು. ಎಲೈ ಕುರುಗಳೇ! ಈ ವಂಶದ ವಿನಾಶವು ಪ್ರಾಪ್ತವಾಗಿದೆಯೆಂದು ತಿಳಿಯಿರಿ.
ಅಬಾಲಾನಾಂ ವಿಶಿಷ್ಟಾನಾಂ ಮಾಽವಮಂಸ್ಥಾ ಮತಿಂ ಪ್ರಭೋ ।
ನೀಯತಾಂ ಪರಲೋಕಾಯ ಸಾಧ್ವಯಂ ಕುಲಪಾಂಸನಃ ।
ಮಾ ಕುಲಸ್ಯ ಕ್ಷಯೇ ಘೋರೇ ಕಾರಣಂ ತ್ವಂ ನರೇಂದ್ರ ಭೂಃ ॥94॥
ಪ್ರಭುವೇ! ವೃದ್ಧರೂ ಧರ್ಮವಿಶಿಷ್ಟರೂ ಆದವರು ಹೇಳಿದ ಮಾತನ್ನು ಮೀರಿ ಅವರನ್ನು ಅವಮಾನಗೊಳಿಸುವುದು ಬೇಡ. ಈ ಕುಲನಾಶಕನನ್ನು ಈಗಲಾದರೂ ಪರಲೋಕಕ್ಕೆ ಕಳುಹಿಸು. ನರೇಂದ್ರನೇ! ಘೋರ ಕುಲನಾಶಕ್ಕೆ ನೀನು ಕಾರಣವಾಗುವುದು ಬೇಡ.
ಬದ್ಧಂ ಸೇತುಂ ಕೋ ನು ಭಿಂದ್ಯಾದ್ ಧಮೇಚ್ಛಾಂತಂ ಹುತಾಶನಮ್ ।
ಕ್ಷಮೇಧಿತಾನ್ ಪಾಂಡುಪುತ್ರಾನ್ ಕೋಪಯೇತ್ ಕೋ ನು ಭಾರತ ॥95॥
ಕಟ್ಟಿದ ಸೇತುವೆಯನ್ನು ಯಾವನು ಒಡೆಯುತ್ತಾನೆ? ಶಾಂತವಾದ ಅಗ್ನಿಯನ್ನು ಯಾವನು ಪುನಃ ಪುನರುಜ್ಜೀವನಮಾಡುತ್ತಾನೇ ರಾಜನೇ! ಸಹನೆಯಿಂದ ಅಭಿವೃದ್ಧಿಯನ್ನು ಹೊಂದುತ್ತಿರುವ ಪಾಂಡುಪುತ್ರರನ್ನು ಯಾವನು ಕೋಪಗೊಳ್ಳುವಂತೆ ಮಾಡುತ್ತಾನೆ?
ಸ್ಮರಂತಂ ತ್ವಾಮಾಜಮೀಢಂ ಸ್ಮಾರಯಿಷ್ಯಾಮ್ಯಹಂ ಪುನಃ ।
ನ ಶಾಸ್ತ್ರಂ ಶಾಸ್ತಿ ದುರ್ಬುದ್ಧಿಂ ಶ್ರೇಯಸೇ ವೇತರಾಯ ವಾ ॥96॥
ಆಜಮೀಢನೇ! ನಿನ್ನ ನೆನಪಿನಲ್ಲಿ ಇದ್ದರೂ ಇನ್ನೊಮ್ಮೆ ನಿನಗೆ ಜ್ಞಾಪಿಸುತ್ತಿದ್ದೇನೆ. ದುರ್ಬುದ್ಧಿಯಿಂದ ಕೂಡಿದ ಮನುಷ್ಯನನ್ನು ಶಾಸ್ತ್ರವು ಶ್ರೇಯಸ್ಸಿಗಾಗಲೀ ಅಶ್ರೇಯಸ್ಸಿಗಾಗಲೀ ಶಾಸನಮಾಡುವುದಿಲ್ಲ.
ನ ವೈ ವೃದ್ಧೋ ಬಾಲಮತಿರ್ಭವೇದ್ ರಾಜನ್ ಕಥಂಚನ ।
ತ್ವನ್ನೇತ್ರಾಃ ಸಂತು ತೇ ಪುತ್ರಾ ಮಾ ತ್ವಾಂ ಜೀರ್ಣಾಃ ಪ್ರಹಾಸಿಷುಃ ॥97॥
ರಾಜನೇ! ವೃದ್ಧನಾದವನು ಎಂದೂ ಬಾಲಬುದ್ಧಿಯನ್ನುಹೊಂದಬಾರದು. ನಿನ್ನ ಮಕ್ಕಳೆಲ್ಲರೂ ನಿನ್ನನ್ನೇ

ನಾಯಕನನ್ನಾಗಿಹೊಂದಿರಲಿ. ಪಾಂಡವರನ್ನು ವಿರೋಧಿಸಿ ನಾಶವನ್ನು ಹೊಂದಿ ಅವರು ನಿನ್ನನ್ನು ತೊರೆಯವುದು ಬೇಡ.
ಶಮೇನ ಧರ್ಮೇಣ ಪರಸ್ಯ ಬುದ್ಧ್ಯಾ
ಜಾತಾ ಬುದ್ಧಿಃ ಸಾಽಸ್ತು ತೇ ಮಾ ಪ್ರತೀಪಾ |
ಪ್ರಧ್ವಂಸಿನೀ ಕ್ರೂರಸಮಾಹಿತಾ ಶ್ರೀಃ
ಮೃದುಪ್ರೌಢಾ ಗಚ್ಛತಿ ಪುತ್ರಪೌತ್ರಾನ್ ॥98॥
ಶ್ರಮದಿಂದಲೂ ಧರ್ಮದಿಂದಲೂ ಹಿರಿಯರ ಉಪದೇಶದಿಂದಲೂ ಉಂಟಾದ ಸದ್ಬುದ್ಧಿಯು ನಿನಗಿರಲಿ. ಕುಲನಾಶಕವಾದ ಬುದ್ಧಿಯು ನಿನಗೆ ಇರುವುದು ಬೇಡ. ಕುರುಗಳನ್ನು ಆಶ್ರಯಿಸಿದ ಸಂಪತ್ತು ಅವರನ್ನೇ ನಾಶಗೊಳಿಸುತ್ತದೆ. ಶಾಂತರಾದ ಪುರುಷರು ಸಂಪಾದಿಸಿದ ಐಶ್ವರ್ಯವು ಅವರ ಮಕ್ಕಳನ್ನು ಮೊಮ್ಮಕ್ಕಳನ್ನು ತಲುಪುತ್ತದೆ.
ವೈಶಂಪಾಯನಃ
ಅಥಾಬ್ರವೀನ್ಮಹಾಪ್ರಜ್ಞಾಂ ಗಾಂಧಾರೀಂ ಧರ್ಮಚಾರಿಣೀಮ್ |
ಅಂತಃ ಕಾಮಂ ಕುಲಸ್ಯಾಸ್ತು ನ ಶಕ್ನ್ಯಾಮಿ ನಿವರ್ತಿತುಮ್ ॥99॥
ಆಗ ಧೃತರಾಷ್ಟ್ರನು ಧರ್ಮಚಾರಿಣಿಯಾದ ಮಹಾಪ್ರಾಜ್ಞಳಾದ ಗಾಂಧಾರಿಯನ್ನು ಕುರಿತು ಬೇಕಾದರೆ ನನ್ನ ಕುಲವು ನಾಶವಾಗಲಿ ನಾನು ದ್ಯೂತದಿಂದ ಹಿಂದಿರುಗಿಸಲು ಶಕ್ತನಾಗುವುದಿಲ್ಲ ಎಂದು ಹೇಳಿದನು.
ಯಥೇಚ್ಛಂತಿ ತಥೈವಾಸ್ತು ಪ್ರತ್ಯಾಗಚ್ಛಂತು ಪಾಂಡವಾಃ |
ಪುನರ್ದ್ಯೂತಂ ತು ಕುರ್ವಂತು ಮಾಮಕಾಃ ಪಾಂಡವೈಃ ಸಹ ॥100॥
ದುರ್ಯೋಧನಾದಿಗಳು ಹೇಗೆ ಬಯಸುತ್ತಾರೋ ಹಾಗೆಯೇ ಆಗಲಿ. ಪಾಂಡವರು ಹಿಂದಿರುಗಿ ಬರಲಿ. ನನ್ನ ಮಕ್ಕಳು ಪಾಂಡವರ ಜೊತೆಯಲ್ಲಿ ಪುನಃ ದ್ಯೂತವನ್ನು ಆಡಲಿ.
॥ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ
ಚತುರ್ನವತಿತಮೋಧ್ಯಾಯಃ॥
॥ಅನುದ್ಯೂತಪರ್ವಣಿ ದ್ವಿತೀಯೋಧ್ಯಾಯಃ॥2॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.
*****
ತೊಂಬತ್ತೈದನೆಯ ಅಧ್ಯಾಯ
(ಪುನಃ ದ್ಯೂತ. ವನವಾಸ ಅಜ್ಞಾತವಾಸದ ಪಣದಲ್ಲಿ
ಧರ್ಮರಾಜನ ಪರಾಜಯ.)
ವೈಶಂಪಾಯನಃ
ತತೋ ವ್ಯಧ್ವಗತಂ ಪಾರ್ಥಂ ಪ್ರಾತಿಕಾಮೀ ಯುಧಿಷ್ಠಿರಮ್ |
ಉವಾಚ ವಚನಾದ್ರಾಜ್ಞೋ ಧೃತರಾಷ್ಟ್ರಸ್ಯ ಧೀಮತಃ ॥1॥
ಅನಂತರ ಮೇಧಾವಿಯಾದ ಧೃತರಾಷ್ಟ್ರನ ಮಾತಿನಂತೆ ಪ್ರಾತಿಕಾಮಿಯು ಬಹುದೂರಹೋಗಿದ್ದ ಯುಧಿಷ್ಠಿರನನ್ನು ಸಂಧಿಸಿ ಮಾತನಾಡಿದನು.
ಉಪಾಸ್ತೀರ್ಣಾ ಸಭಾ ರಾಜನ್ನಕ್ಷಾನುಪ್ತತ್ವ ಯುಧಿಷ್ಠಿರ |
ಏಹಿ ಪಾಂಡವ ದೀವ್ಯೇತಿ ಪಿತಾ ತ್ವಾಹ ನರಾಧಿಪಃ ॥2॥
ಸಭೆಯು ಸಿದ್ಧವಾಗಿ ಪಗಡೆಯ ಹಾಸನ್ನು ಹಾಸಿದೆ. ಪಾಂಡವನೇ ಇಲ್ಲಿಗೆ ಬಂದು ದಾಳಗಳನ್ನು ಉರುಳಿಸಿ ದ್ಯೂತವನ್ನು ಆಡು ಎಂದು ನಿನ್ನ ತಂದೆಯಾದ ರಾಜನು ನಿನಗೆ ಹೇಳಿಕಳುಹಿಸಿದ್ದಾನೆ.
ಯುಧಿಷ್ಠಿರಃ
ಧಾತುರ್ನಿಯೋಗಾದ್ ಭೂತಾನಿ ಪ್ರಾಪ್ನುವಂತಿ ಶುಭಾಶುಭೇ |
ನ ನಿವೃತ್ತಿಸ್ತಯೋರಸ್ತಿ ದೇವಿತವ್ಯಂ ಪುನರ್ಯದಿ ॥3॥
ವಿಧಿಯ ನಿಯೋಗದಂತೆ ಪ್ರಾಣಿಗಳಿಗೆ ಶುಭಾಶುಭ ಉಂಟಾಗುತ್ತದೆ. ನಾನು ಪುನಃ ದ್ಯೂತವನ್ನು ಆಡಬೇಕಾಗಿ ಬಂದರೆ ಆ ಶುಭಾಶುಭಗಳಿಗೆ ಪರಿಹಾರವಿಲ್ಲ.
ಅಕ್ಷದ್ಯೂತೇ ಸಮಾಹ್ವಾನಂ ನಿಯೋಗಾತ್ ಸ್ಥವಿರಸ್ಯ ಚ |
ಜಾನನ್ನಪಿ ಚ ಯತ್ ಕ್ಷುದ್ರಂ ನಾತಿಕ್ರಮಿತುಮುತ್ಸಹೇ ॥4॥
ವೃದ್ಧನಾದ ರಾಜನು ಆಹ್ವಾನಿಸುತ್ತಿರುವಾಗ ಅಕ್ಷದ್ಯೂತವು ಕ್ಷುದ್ರವೆಂದು ತಿಳಿದಿದ್ದರೂ ಸಹ ನಾನು ರಾಜನ ಆದೇಶವನ್ನು ಮೀರಲಾರೆ.
ವೈಶಂಪಾಯನಃ
ಇತಿ ಬ್ರುವನ್ ನಿವವೃತೇ ಭ್ರಾತೃಭಿಃ ಸಹ ಪಾಂಡವಃ |
ಜಾನಂಶ್ಚ ಶಕುನೇರ್ಮಾಯಾಂ ಪಾರ್ಥೋ ದ್ಯೂತಮಿಯಾತ್ ಪುನಃ ॥5॥
ಹೀಗೆ ಹೇಳುತ್ತಾ ಧರ್ಮರಾಜನು ತನ್ನ ತಮ್ಮಂದಿರ ಜೊತೆಯಲ್ಲಿ ಹಿಂದಿರುಗಿದನು. ಶಕುನಿಯ ಮೋಸವನ್ನು ತಿಳಿದಿದ್ದರೂ ಸಹ ಧರ್ಮರಾಜನು ಪುನಃ ದ್ಯೂತಕ್ಕೆ ಹೊರಟನು.
ವಿವಿಶುಸ್ತೇ ಸಭಾಂ ತಾಂ ತು ಪುನರೇವ ಮಹಾರಥಾಃ |
ವ್ಯಥಯಂತಿ ಸ್ಮ ಚೇತಾಂಸಿ ಸುಹೃದಾಂ ಭರತರ್ಷಭ ॥6॥

ಎಲೈ ಭರತರ್ಷಭನೇ! ಆ ಮಹಾರಥರೆಲ್ಲರೂ ಪುನಃ ಸಭೆಯನ್ನು ಪ್ರವೇಶಿಸಿದರು. ವಿಶ್ವಾಸವುಳ್ಳವರ ಅವರ ಹಿತೈಷಿಗಳ ಮನಸ್ಸೆಲ್ಲವೂ ದುಃಖದಿಂದ ಕೂಡಿದ್ದಿತು.
ಯಥೋಪಜೋಷಮಾಸೀನಾಃ ಪುನರ್ದ್ಯೂತಪ್ರವೃತ್ತಯೇ |
ಸರ್ವರಾಜವಿನಾಶಾಯ ದೈವೇನೋಪನಿಪೀಡಿತಾಃ ॥7॥
ಸರ್ವಕ್ಷತ್ರಿಯರ ವಿನಾಶದ ಸಲುವಾಗಿ ದೈವದಿಂದ ಪ್ರೇರಿಸಲ್ಪಟ್ಟ ಅವರು ಪುನಃ ದ್ಯೂತವನ್ನು ಆಡುವುದಕ್ಕೋಸ್ಕರ ತಮಗೆ ಉಚಿತವಾದ ಆಸನಗಳಲ್ಲಿ ಕುಳಿತರು.
ಶಕುನಿಃ
ಅಮುಂಚತ್ ಸ್ಥವಿರೋ ಯದ್ವೋ ಧನಂ ವಿಜಿತಮೇವ ತತ್ |
ಮಹಾಗ್ಲಹಂ ಧನಂ ಚೈಕಂ ಶೃಣು ಮೇ ಭರತರ್ಷಭ ॥8॥
ಭರತರ್ಷಭನೇ! ವೃದ್ಧನಾದ ಧೃತರಾಷ್ಟ್ರನು ನಿಮಗೆ ಏನು ಧನವನ್ನು ಹಿಂದಕ್ಕೆ ಕೊಟ್ಟನೋ ಅವೆಲ್ಲವೂ ನಿಮ್ಮದೇ. ಮಹಾಪಣದ ಇನ್ನೊಂದು ಧನವನ್ನು ಕೇಳು.
ವಯಂ ದ್ವಾದಶ ವರ್ಷಾಣಿ ಯುಷ್ಮಾಭಿರ್ದ್ಯೂತನಿರ್ಜಿತಾಃ |
ಪ್ರವಿಶೇಮ ಮಹಾರಣ್ಯಂ ರೌರವಾಜಿನವಾಸಸಃ ॥9॥
ನಾವು ನಿಮ್ಮಿಂದ ದ್ಯೂತದಲ್ಲಿ ನಿರ್ಜಿತರಾದರೆ ರೌರವಾಜಿನಗಳನ್ನು ಧರಿಸಿ ಹನ್ನೆರಡುವರ್ಷಗಳಕಾಲ ಮಹಾರಣ್ಯವನ್ನು ಪ್ರವೇಶಿಸುತ್ತೇನೆ.
ತ್ರಯೋದಶಂ ಚ ಸ್ವಜನೈಃ ಪ್ರಚ್ಛನ್ನಾಃ ಪರಿವತ್ಸರಮ್ |
ಜ್ಞಾತಾಶ್ಚೇತ್ ಪುನರನ್ಯಾನಿ ವನೇ ವರ್ಷಾಣಿ ದ್ವಾದಶ ॥10॥
ಹದಿಮೂರನೆಯ ವರ್ಷ ಪೂರ್ಣವಾದ ಒಂದು ವರ್ಷದವರೆಗೆ ಸ್ವಜನರಿಗೆ ತಿಳಿಯದಂತೆ ಅಜ್ಞಾತವಾಸವು ಇರುತ್ತವೆ. ಆ ಸಮಯದಲ್ಲಿ ನಮ್ಮನ್ನು ಯಾರಾದರೂ ಗುರುತಿಸಿದರೆ ನಾವು ಪುನಃ ಹನ್ನೆರಡುವರ್ಷಗಳ ಕಾಲ ವನವಾಸವನ್ನು ಮಾಡುತ್ತೇವೆ.
ಅಸ್ಮಾಭಿರ್ವಾ ಜಿತಾ ಯೂಯಂ ವನೇ ವರ್ಷಾಣಿ ದ್ವಾದಶ |
ವಸಧ್ವಂ ಕೃಷ್ಣಯಾ ಸಾರ್ಧಮಜಿನೈಃ ಪರಿವಾರಿತಾಃ ॥11॥
ಅಥವಾ ನೀವೇ ನಮ್ಮಿಂದ ಜಿತರಾದರೆ ಅಜಿನಗಳನ್ನು ಧರಿಸಿ ದ್ರೌಪದಿಯ ಜೊತೆಯಲ್ಲಿ ಹನ್ನೆರಡುವರ್ಷಗಳಕಾಲ ವನವಾಸವನ್ನು ಮಾಡಿ.
ತ್ರಯೋದಶೇ ಚ ನಿರ್ವೃತ್ತೇ ಪುನರೇವ ಯಥೋಚಿತಮ್ |
ಸ್ವರಾಜ್ಯಂ ಪ್ರತಿಪತ್ತವ್ಯಮಿತರೈರಥವೇತರೈಃ ॥12॥
ಹದಿಮೂರು ವರ್ಷಗಳು ಕಳೆದ ಮೇಲೆ ನಾವಾಗಲೀ ಅಥವಾ ನೀವಾಗಲೀ ಹಿಂದೆ ಬಂದು ಯಥೋಚಿತವಾದ ರೀತಿಯಲ್ಲಿ ನಮ್ಮನಮ್ಮ ರಾಜ್ಯವನ್ನು ಹೊಂದೋಣ.
ಅನೇನ ವ್ಯವಸಾಯೇನ ಸಹಾಸ್ಮಾಭಿರ್ನೃಪೋತ್ತಮ |
ಅಕ್ಷಾನುಪ್ತತ್ವ ಪುನರ್ದ್ಯೂತಮೇಹಿ ದೀವ್ಯಸ್ವ ಭಾರತ ॥13॥
ಎಲೈ ಭಾರತನೇ! ನೃಪೋತ್ತಮನೇ! ಈ ನಿರ್ಧಾರದೊಂದಿಗೆ ದಾಳಗಳನ್ನು ಉರುಳಿಸಿ ದ್ಯೂತಕ್ಕೆ ಬಂದು ಪುನಃ ನಮ್ಮ ಜೊತೆಯಲ್ಲಿ ಆಟವಾಡು.
ಅಥ ಸಭ್ಯಾಃ ಸಭಾಮಧ್ಯೇ ಸಮುಚ್ಛ್ರಿತಕರಾಸ್ತಥಾ |
ಊಚುರುದ್ವಿಗ್ನಮನಸಃ ಸಂವೇಗಾತ್ ಸರ್ವ ಏವ ಹಿ ॥14॥
ಆಗ ಸಭೆಯಲ್ಲಿದ್ದ ಸಭ್ಯರೆಲ್ಲರೂ ತಮ್ಮ ಕೈಗಳನ್ನು ಎತ್ತಿ ಉದ್ವಿಗ್ನವಾದ ಮನಸ್ಸಿನಿಂದ ಮತ್ತು ದುಃಖದಿಂದ ಹೀಗೆ ಹೇಳಿದರು.
ಅಹೋ ಧಿಕ್ ಬಾಂಧವಾನೇತಾನ್ ಬೋಧಯಂತಿ ಮಹದ್ಭಯಮ್ |
ಬುದ್ಧ್ಯಾಽಬುಧ್ಯಂತ ಬುಧ್ಯಂತೇ ವಯಂ ಚ ಭರತರ್ಷಭಾಃ ॥15॥
ಅಯ್ಯೋ ಈ ಬಾಂಧವರಿಗೆ ಧಿಕ್ಕಾರವಿರಲಿ. ಪಾಂಡವರಿಗೆ ಶಕುನಿ ಮೊದಲಾದವರು ದುರ್ಬುದ್ಧಿಯಿಂದ ಬೋಧಿಸುತ್ತಿದ್ದಾರೆ. ಅದಕ್ಕೂ ಧಿಕ್ಕಾರವಿರಲಿ. ನಾವು ಮತ್ತು ಭರತರ್ಷಭರು ಅವರ ಕುಬುದ್ಧಿಯ ಕೊನೆಯಲ್ಲಿ ಅವರಿಂದ ನೋಡಲ್ಪಟ್ಟವು ಇದಕ್ಕಿಂತ ಮೊದಲು ಈ ದುರ್ಜನರಿಂದ ನೋಡಲ್ಪಟ್ಟಿರುವುದಿಲ್ಲ. (ಅಥವಾ- ಈ ದುರ್ವಾಕ್ಯದಫಲಗಳನ್ನು ದುರ್ಯೋಧನಾದಿಗಳು ಹಿಂದೆ ಅನುಭವಿಸಿದ್ದಾರೆ. ಮುಂದೆಯೂ ಅನುಭವಿಸುವವರಿದ್ದಾರೆ. ಆ ದುರ್ಬುದ್ಧಿಯಪರಿಪಾಕದ ಸಮಯದಲ್ಲಿ ನಾವು ಮತ್ತು ಭರತರ್ಷಭರು ಅದನ್ನು ನೋಡುವೆವು ಎಂದು ಇನ್ನೊಂದು ಅರ್ಥ.)
ವೈಶಂಪಾಯನಃ
ಜನಪ್ರವಾದಾನ್ ಸುಬಹೂನ್ ಇತಿ ಶೃಣ್ವನ್ ನರಾಧಿಪಃ |
ಹ್ರಿಯಾ ಚ ಧರ್ಮಸಂಗಾಚ್ಚ ಪಾರ್ಥೋ ದ್ಯೂತಮಿಯಾತ್ ಪುನಃ ॥
ಜನಗಳ ಇಂತಹವಾದಗಳನ್ನು ಕೇಳುತ್ತಿದ್ದರೂ ಸಹ ಕುಂತಿಯ ಮಗನಾದ ಧರ್ಮರಾಜನು ನಾಚಿಕೆಯಿಂದಲೂ ಮತ್ತು ಧರ್ಮದ ಆಸಕ್ತಿಯಿಂದಲೂ ಪುನಃ ದ್ಯೂತಕ್ಕೆ ಬಂದನು.
ಜಾನನ್ನಪಿ ಮಹಾಬುದ್ಧಿಃ ಪುನರ್ದ್ಯೂತಮವರ್ತಯತ್ |
ಅಪ್ಯಯಂ ನು ವಿನಾಶಃ ಸ್ಯಾತ್ ಕುರೂಣಾಮಿತಿ ಚಿಂತಯನ್ ॥17॥
ಮಹಾಬುದ್ಧಿಯುಳ್ಳ ಧರ್ಮರಾಜನು ಈ ದ್ಯೂತವು ಎಲ್ಲಕುರುಗಳ ವಿನಾಶಕ್ಕೆ ಕಾರಣವಾಗುವುದೋ ಎಂದು ಚಿಂತಿಸುತ್ತಲೇ ಪುನಃ ದ್ಯೂತವನ್ನು ಜರುಗಿಸಿದರು.

ಯುಧಿಷ್ಠಿರಃ
ಕಥಂ ವೈ ಮದ್ವಿಧೋ ರಾಜಾ ಸ್ವಧರ್ಮಮನುಪಾಲಯನ್ |
ಆಹೂತೋ ವಿನಿವರ್ತೇತ ದೀವ್ಯಾಮಿ ಶಕುನೇ ತ್ವಯಾ ||18||
ನನ್ನಂತಹ ಸ್ವಧರ್ಮವನ್ನು ಪಾಲಿಸುವ ರಾಜನು ಆಹ್ವಾನಮಾಡಿದ ಮೇಲೆ ಹೇಗೆ ಹಿಂದೆ ಹೋಗಲು ಸಾಧ್ಯ? ಆದ್ದರಿಂದ ಶಕುನಿಯೇ ನಿನ್ನ ಜೊತೆಯಲ್ಲಿ ದ್ಯೂತವನ್ನು ಆಡುತ್ತೇನೆ.
ಶಕುನಿಃ
ಗಜಾಶ್ವಂ ಬಹುಧೇನೂಕಮಪರ್ಯಂತಮಜಾವಿಕಮ್ |
ತಥಾ ಗಾವೋ ಹಿರಣ್ಯಂ ಚ ದಾಸೀದಾಸಂ ಚ ಸರ್ವಶಃ |
ಏಷ ವೈ ಗ್ಲಹ ಏವೈಕೋ ವನವಾಸಾಯ ಪಾಂಡವಃ ||19||
ಎಲೈ ಪಾಂಡವನೇ! ಗಜಾಶ್ವಗಳು ಧೇನುಗಳ ಸಮೂಹ ಅಪರ್ಯಂತ ಅಜಾವಿಗಳು ಹಿರಣ್ಯ ದಾಸರ ಮತ್ತು ದಾಸಿಯರ ಸಮೂಹ ಇದು ವನವಾಸ ಮತ್ತು ಅಜ್ಞಾತವಾಸಕ್ಕಾಗಿ ಇರುವ ಒಂದೇ ಪಣ.
ಯೂಯಂ ವಯಂ ವಾ ವಿಜಿತಾ ವಸೇಮ ವನಮಾಶ್ರಿತಾಃ |
ತ್ರಯೋದಶಂ ಚ ವೈ ವರ್ಷಮಜ್ಞಾತಾಃ ಸ್ವಜನೈಸ್ತಥಾ ||20||
ನಾವು ಅಥವಾ ನೀವು ಪರಾಜಿತರಾದರೆ ವನವಾಸವನ್ನು ಮಾಡೋಣ. ಹದಿಮೂರನೆಯ ವರ್ಷ ಸ್ವಜನರಿಗೆ ತಿಳಿಯದಂತೆ ಅಜ್ಞಾತವಾಸವನ್ನು ಮಾಡೋಣ.
ಅನೇನ ವ್ಯವಸಾಯೇನ ದೀವ್ಯಾಮ ಭರತರ್ಷಭ |
ಸಮುತ್ಕ್ಷೇಪೇಣ ಚೈಕೇನ ವನವಾಸಾಯ ಭಾರತ ||21||
ಭರತರ್ಷಭನೇ! ಈ ನಿರ್ಧಾರದಿಂದ ನಾವು ದ್ಯೂತವನ್ನು ಆಡೋಣ. ಎಲೈ ಭಾರತನೇ! ಒಂದೇ ಸಲ ದಾಳವನ್ನು ಉರುಳಿಸಿ ವನವಾಸ ಪಣಕ್ಕಾಗಿ ದ್ಯೂತವನ್ನು ಆಡೋಣ.
ವೈಶಂಪಾಯನಃ
ಏವಂ ದೈವಬಲಾವಿಷ್ಟೋ ಧರ್ಮರಾಜೋ ಯುಧಿಷ್ಠಿರಃ |
ಭೀಷ್ಮದ್ರೋಣೈರ್ವಾರ್ಯಮಾಣೋ ವಿದುರೇಣ ಚ ಧೀಮತಾ ||22||
ಯುಯುತ್ಸುನಾ ಕೃಪೇಣಾಥ ಸಂಜಯೇನ ಚ ಭಾರತ |
ಗಾಂಧಾರ್ಯಾ ಪೃಥಯಾ ಚೈವ ಭೀಮಾರ್ಜುನಯಮೈಸ್ತಥಾ ||23||
ವಿಕರ್ಣೇನ ಚ ವೀರೇಣ ದ್ರೌಪದ್ಯಾ ದ್ರೌಣಿನಾ ತಥಾ |
ಸೋಮದತ್ತೇನ ಚ ತಥಾ ಬಾಹ್ಲೀಕೇನ ಚ ಧೀಮತಾ |
ವಾರ್ಯತೇಽತೀವ ಸತತಂ ನ ಚ ರಾಜಾ ನಿಯಚ್ಛತಿ ||24||
ಎಲೈ ಭಾರತನೇ! ಹೀಗೆ ದೈವಬಲಕ್ಕೆ ಅಧೀನನಾದ ಯುಧಿಷ್ಠಿರನು ಭೀಷ್ಮದ್ರೋಣರಿಂದಲೂ ಮೇಧಾವಿಯಾದ ವಿದುರನಿಂದಲೂ ಯುಯುತ್ಸುವಿನಿಂಲೂ ಕೃಪರಿಂದಲೂ ಸಂಜಯನಿಂದಲೂ ಗಾಂಧಾರಿಯಿಂದಲೂ ಕುಂತಿಯಿಂದಲೂ ಭೀಮಾರ್ಜುನ ನಕುಲಸಹದೇವರಿಂದಲೂ ವೀರನಾದ ವಿಕರ್ಣನಿಂದಲೂ ದ್ರೌಪದಿಯಿಂದಲೂ ಅಶ್ವತ್ಥಾಮರಿಂದಲೂ ಸೋಮದತ್ತನಿಂದಲೂ, ಮೇಧಾವಿಯಾದ ಬಾಹ್ಲೀಕನಿಂದಲೂ ನಿವಾರಿಸಲ್ಪಟ್ಟರೂ ಸಹ ರಾಜನು ತನ್ನನ್ನು ತಾನು ನಿಯಂತ್ರಿಸಿಕೊಳ್ಳಲು ಸಾಧ್ಯವಾಗಲಿಲ್ಲ.
ಏವಂ ಸಂ ವಾರ್ಯಮಾಣೋಽಪಿ ಕೌಂತೇಯೋ ಹಿತಕಾಮ್ಯಯಾ |
ದೇವಕಾರ್ಯಾರ್ಥಸಿದ್ಧ್ಯರ್ಥಂ ಮುಹೂರ್ತಂ ಕಲಿಮಾವಿಶತ್ ||25||
ಹೀಗೆ ತಮ್ಮ ಹಿತವನ್ನು ಬಯಸಿದ ಹಿತೈಷಿಗಳಿಂದ ನಿವಾರಿಸಲ್ಪಡುತ್ತಿದ್ದರೂ ಸಹ ದೇವಕಾರ್ಯ ಸಿದ್ಧಿಗಾಗಿ ಧರ್ಮರಾಜನು ಒಂದು ಮುಹೂರ್ತದ ಕಾಲ ಕಲಿಯ ಅವೇಶಕ್ಕೆ ಒಳಗಾದನು.
ಆವಿಷ್ಟಃ ಕಲಿನಾ ರಾಜನ್ ಶಕುನಿಂ ಪ್ರತ್ಯಭಾಷತ |
ಏವಂ ಭವತ್ವಿತಿ ತದಾ ವನವಾಸಾಯ ದೀವ್ಯತೇ ||26||
ರಾಜನೇ! ಕಲಿಯ ಅವೇಶಕ್ಕೆ ಒಳಗಾದ ಅವನು ಶಕುನಿಯು ವನವಾಸದ ಪಣವನ್ನು ಸ್ವೀಕರಿಸಿ ಅವನಿಗೆ ಹಾಗೆಯೇ ಆಗಲಿ ಎಂದು ಹೇಳಿದನು.
ಪ್ರತಿಜಗ್ರಾಹ ತತ್ ಪಾರ್ಥೋ ಗ್ಲಹಂ ಜಗ್ರಾಹ ಸೌಬಲಃ |
ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ||27||
ಶಕುನಿಯು ಹೇಳಿದ ವನವಾಸದ ಪಣವನ್ನು ಧರ್ಮರಾಜನು ಸ್ವೀಕರಿಸಿದನು ಶಕುನಿಯು ದಾಳಗಳನ್ನು ತೆಗೆದುಕೊಂಡು ಉರುಳಿಸಿ ಯುಧಿಷ್ಠಿರನನ್ನು ಕುರಿತು ನಾನು ಗೆದ್ದಿದ್ದೇನೆ ಎಂದೇ ಹೇಳಿದನು.
||ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಪಂಚನವತಿತಮೋಧ್ಯಾಯಃ||
||ಅನುದ್ಯೂತಪರ್ವಣಿ ತೃತೀಯೋಧ್ಯಾಯಃ ||3||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯವು ಮುಗಿಯಿತು.
* * * *
ತೊಂಬತ್ತಾರನೆಯ ಅಧ್ಯಾಯ
(ಸಭೆಯಿಂದ ಹೊರಗೆ ಹೊರಟ ಪಾಂಡವರ ಪ್ರತಿಜ್ಞೆಗಳು)

ವೈಶಂಪಾಯನಃ
ವನವಾಸಾಯ ಚಕ್ರುಸ್ತೇ ಮತಿಂ ಪಾರ್ಥಾಃ ಪರಾಜಿತಾಃ |
ಅಜಿನಾನ್ಯುತ್ತರೀಯಾಣಿ ಜಗೃಹುಶ್ಚ ಯಥಾಕ್ರಮಮ್ ॥1॥
ದ್ಯೂತದಲ್ಲಿ ಪರಾಜಿತರಾದ ಪಾಂಡವರು ವನವಾಸಕ್ಕೆ ಹೊರಡಲು ನಿರ್ಧರಿಸಿ ಕ್ರಮವಾಗಿ ಕೃಷ್ಣಾಜಿನದ ಉತ್ತರೀಯಗಳನ್ನು ತೆಗೆದುಕೊಂಡರು.
ಅಜಿನೈಃ ಸಂವೃತಾನ್ ದೃಷ್ಟ್ವಾ ಹೃತರಾಜ್ಯಾನರಿಂದಮಾನ್ |
ಪ್ರಸ್ಥಿತಾನ್ ವನವಾಸಾಯ ತತೋ ದುಶ್ಶಾಸನೋಽಬ್ರವೀತ್ ॥2॥
ರಾಜ್ಯವನ್ನು ಕಳೆದುಕೊಂಡು ಅಜಿನಗಳನ್ನು ಧರಿಸಿ ವನವಾಸಕ್ಕೆ ಹೊರಟ ಅರಿಂಧಮರಾದ ಪಾಂಡವರನ್ನು ನೋಡಿ ಆಗ ದುಶ್ಶಾಸನನು ಮಾತನಾಡಿದನು.
ಪ್ರವೃತ್ತಂ ಧಾರ್ತರಾಷ್ಟ್ರಸ್ಯ ಚಕ್ರಂ ರಾಜ್ಞೋ ಮಹಾತ್ಮನಃ |
ಪರಿಭೂತಾಃ ಪಾಂಡುಸುತಾ ಆರ್ತಿಂ ಪರಮಿಕಾಂ ಗತಾಃ ॥3॥
ಮಹಾತ್ಮನಾದ ಧೃತರಾಷ್ಟ್ರನ ಪುತ್ರನಾದ ದುಯೋಧನನ ಸಾಮ್ರಾಜ್ಯವು ಪ್ರವೃತ್ತವಾಗಿದೆ. ಪಾಂಡುಪುತ್ರರು ಪರಾಭವವನ್ನು ಹೊಂದಿ ಅತ್ಯಂತ ದುಃಸ್ಥಿತಿಯನ್ನು ಹೊಂದಿದ್ದಾರೆ.
ಅದ್ಯ ದೇವಾಃ ಸುಪ್ರವೃತ್ತಾಃ ಸರ್ವೈರ್ವರ್ತ್ಮಭಿರಚ್ಛ್ಲೈಃ |
ಗುಣಜ್ಯೇಷ್ಠಾಸ್ತಥಾ ಜ್ಯೇಷ್ಠಾಃ ಶ್ರೇಯಾಂಸೋ ಯದ್ ವಯಂ ಪರೈಃ ॥4॥
ಈ ದಿನ ದೇವತೆಗಳು ಪರಿಶುದ್ಧವಾದ ಎಲ್ಲಾ ಮಾರ್ಗಗಳಿಂದಲೂ ನಮಗೆ ಅನುಕೂಲರಾಗಿ ಪ್ರವೃತ್ತರಾಗಿದ್ದಾರೆ. ಗುಣಜ್ಯೇಷ್ಠರೂ ಮತ್ತು ಜ್ಯೇಷ್ಠರೂ ಆದ ನಾವು ಶತ್ರುಗಳಾದ ಪಾಂಡವರಿಗಿಂತಲೂ ಉನ್ನತರಾಗಿದ್ದೇವೆ.
ನರಕಂ ಪತಿತಾಃ ಪಾರ್ಥಾ ದೀರ್ಘಕಾಲಮನಂತಕಮ್ |
ಸುಖಾಚ್ಚ ಹೀನಾ ರಾಜ್ಯಾಚ್ಚ ವಿನಷ್ಟಾಃ ಶಾಶ್ವತೀಃ ಸಮಾಃ ॥5॥
ಪಾಂಡವರು ಕೊನೆಯೇ ಇಲ್ಲದ ದೀರ್ಘಕಾಲದವರೆಗೆ ನರಕದಲ್ಲಿ ಬಿದ್ದಿದ್ದಾರೆ. ಸುಖವನ್ನೂ ರಾಜ್ಯವನ್ನೂ ಕಳೆದುಕೊಂಡ ಅವರು ಶಾಶ್ವತವಾಗಿ ಬಹುಕಾಲ ವಿನಾಶವನ್ನು ಹೊಂದಿದ್ದಾರೆ.
ಬಲೇನ ಮತ್ತಾ ಯೇ ತೇ ಸ್ಮ ಧಾರ್ತರಾಷ್ಟ್ರಾನ್ ಪ್ರಹಾಸಿಷುಃ |
ತೇ ನಿರ್ಜಿತಾ ಹೃತಧನಾ ವನಮೇಷ್ಯಂತಿ ಪಾಂಡವಾಃ ॥6॥
ತಮ್ಮ ಬಲದಿಂದ ಗರ್ವಿಷ್ಠರಾದ ಯಾವ ಪಾಂಡವರು ಧೃತರಾಷ್ಟ್ರಪುತ್ರರಾದ ನಮ್ಮನ್ನು ಅಪಹಾಸಮಾಡಿದ್ದಾರೋ ಅಂತಹ ಪಾಂಡವರು ದ್ಯೂತದಲ್ಲಿ ನಿರ್ಜಿತರಾಗಿ ತಮ್ಮ ಸಂಪತ್ತನ್ನು ಕಳೆದುಕೊಂಡು ವನವಾಸಕ್ಕೆ ಹೋಗುವರು.
ಚಿತ್ರಾನ್ ಸನ್ನಾಹಾನವಮುಂಚಂತು ಪಾರ್ಥಾ
ವಾಸಾಂಸಿ ದಿವ್ಯಾನಿ ಚ ಭಾನುಮಂತಿ |
ವಿವಸ್ಯಂತಾಂ ರುರುಚರ್ಮಾಣಿ ತಾನಿ
ಯಥಾಗ್ಲಹಂ ಸೌಬಲೇನಾಭ್ಯುಪೇತಂ ॥7॥
ಪಾಂಡವರು ವಿಚಿತ್ರವಾದ ವೇಶವನ್ನೂ ದಿವ್ಯವಾದ ಪ್ರಕಾಶಮಾನವಾದ ವಸ್ತ್ರಗಳನ್ನೂ ತೆಗೆದು ಕೆಳಗಿಡಲಿ. ಸೌಬಲನಾದ ಶಕುನಿಯು ಹೇಳಿದ ಪಣಕ್ಕೆ ಅನುಗುಣವಾಗಿ ಅವರು ರುರುಚರ್ಮವನ್ನು ಧರಿಸಲಿ.
ನ ಸಂತಿ ಲೋಕೇಷು ಪುಮಾಂಸ ಈದೃಶಾ
ಇತ್ಯೇವಂ ವೈ ಭಾವಿತಬುದ್ಧಯಃ ಸದಾ |
ಜ್ಞಾಸ್ಯಂತಿ ತೇ ತ್ಮಾನಮಿಮೇಽದ್ಯ ಪಾಂಡವಾ
ವಿಪರ್ಯಯೇ ಷಂಡತಿಲಾ ಇವಾಫಲಾಃ ॥8॥
ಲೋಕದಲ್ಲಿ ನಮ್ಮಂತಹ ಪುರುಷರೇ ಇಲ್ಲ ಎಂದು ಯಾವಾಗಲೂ ಗರ್ವಿಷ್ಠರಾಗಿದ್ದ ಈ ಪಾಂಡವರು ಈಗ ವಿಪರ್ಯಯವನ್ನು ಹೊಂದಿ ಹುಳಿತುಹೋದ ಎಳ್ಳುಕಾಳುಗಳಂತೆ ತಮ್ಮ ಬೆಲೆ ಏನೆಂಬುದನ್ನು ಈ ದಿನ ತಿಳಿಯುವರು
ಅಯಂ ಹಿ ಭಾವೋದಯ ಈದೃಶಾನಾಂ
ಮನಸ್ವಿನಾಂ ಕೌರವ ಮಾ ಭವೇದ್ವಃ |
ಆದೀಕ್ಷಿತಾನಾಮಜಿನಾನಿ ಯದ್ವದ್
ಬಲೀಯಸಾಂ ಪಾಂಡವಾನಾಂ ತಥೈವ ॥9॥
ಎಲೈ ಕೌರವನಾದ ದುರ್ಯೋಧನನೇ! ಇಂತಹ ಗರ್ವಿಷ್ಠರಾದ ರುರುಚರ್ಮಗಳನ್ನು ಧರಿಸಿದ ಬಲಿಷ್ಠರಾದ ಪಾಂಡವರಿಗೆ ಬಂದು ಒದಗಿದ ಸ್ಥಿತಿಯು ನಿನಗೆ ಎಂದೂ ಬರುವುದು ಬೇಡ.
ಮಹಾಪ್ರಾಜ್ಞಃ ಸೋಮಕೋ ಯಜ್ಞಸೇನಃ
ಕನ್ಯಾಂ ಪಾಂಚಾಲೀಂ ಪಾಂಡವೇಭ್ಯಃ ಪ್ರದಾಯ |
ಸಚಾಕಾರ್ಷೀತ್ ದುಷ್ಕೃತಂ ತೇ ಹಸಂತಿ
ಕ್ಲೀಬಾಃ ಪಾರ್ಥಾಃ ಪತಯೋ ಯಾಜ್ಞಸೇನ್ಯಾಃ ॥10॥
ಮಹಾಪ್ರಾಜ್ಞನಾದ ಸೋಮರಾಜನಾದ ಯಜ್ಞಸೇನನು ತನ್ನ ಮಗಳಾದ ಪಾಂಚಾಲಿಯನ್ನು ಪಾಂಡವರಿಗೆ ಕೊಟ್ಟು ದೊಡ್ಡ ದುಷ್ಕಾರ್ಯವನ್ನು ಮಾಡಿದನು. ಯಾಜ್ಞಸೇನೆಯಪತಿಗಳಾದ ಪಾಂಡವರು ನಪುಂಸಕರು ಎಂದು ಈ ದಿನ ಎಲ್ಲ ಜನರೂ ಹಾಸ್ಯಮಾಡುತ್ತಾರೆ.

ಪುನಸ್ತ್ವವೃತ್ತಾನಜಿನಾನಿವೋಷಿತಾನ್
ದೃಷ್ಟ್ವಾSರಣ್ಯೇ ನಿರ್ಧನಾನಪ್ರತಿಷ್ಠಾನ್ |
ಕಾಂ ತ್ವಂ ಪ್ರೀತಿಂ ಲಪ್ಸ್ಯಸೇ ಯಾಜ್ಞಸೇನಿ
ಪತಿಂ ವೃಣೀಷ್ವಾನ್ಯಮಥೋ ಯಮಿಚ್ಛಸಿ ॥11॥
ಎಲೌ ಯಾಜ್ಞಸೇನಿಯೇ! ತಮ್ಮ ವೃತ್ತಿಯನ್ನು ಕಳೆದುಕೊಂಡು ಭಿಕ್ಷುಕರಂತೆ ಅಜಿನಗಳನ್ನು ಧರಿಸಿ ನಿರ್ಧನರಾಗಿ ಒಂದು ನೆಲೆಯಿಲ್ಲದೆ ಕಾಡಿನಲ್ಲಿ ಇಂತಹ ಪಾಂಡವರನ್ನು ನೋಡಿ ನಿನಗೆ ಯಾವ ಸಂತೋಷ ಉಂಟಾಗುವುದು? ಆದ್ದರಿಂದ ನೀನು ನಿನ್ನ ಮನಸ್ಸಿಗೆ ಬಂದಂತೆ ಬೇರೆಯಾವನನ್ನಾದರೂ ಪತಿಯನ್ನು ವರಿಸು.
ಏತೇ ಹಿ ಸರ್ವೇ ಕುರವಃ ಸಮೇತಾಃ
ಕ್ಷಾಂತಾ ದಾಂತಾಃ ಸುದ್ರವಿಣೋಪಪನ್ನಾಃ |
ಏಷಾಂ ವೃಣೀಷ್ವಾನ್ಯತರಂ ಪತಿತ್ವೇ
ಮಾ ತ್ವಾಂ ತಪೇತ್ ಕಾರ್ಯವಿಪರ್ಯಯೋSಯಮ್ ॥12॥
ಕುರುಗಳಾದ ಈ ದುರ್ಯೋಧನಾದಿಗಳೆಲ್ಲರೂ ಸಹನೆಯುಳ್ಳವರು. ದಾಂತರು ಮತ್ತು ಒಳ್ಳೆಯ ಐಶ್ವರ್ಯದಿಂದ ಕೂಡಿದವರು. ಇವರಲ್ಲಿ ಯಾವನನ್ನಾದರೂ ಒಬ್ಬನನ್ನು ಪತಿಯಾಗಿ ಆರಿಸು. ಈಗ ಉಂಟಾದ ಕಾರ್ಯವಿರ್ಪಯಾಸವು ನಿನಗೆ ತಾಪವನ್ನು ಕೊಡದಿರಲಿ.
ಯಥಾSಫಲಾಃ ಷಂಡತಿಲಾ ಯಥಾ ಚರ್ಮಮಯಾ ಮೃಗಾಃ |
ತಥೈವ ಪಾಂಡವಾಃ ಸರ್ವೇ ಯಥಾ ಕಾಕಯವಾ ಅಪಿ ॥13॥
ಹೇಗೆ ಹುಳಿತುಹೋದ ಎಳ್ಳುಕಾಳು ನಿಷ್ಫಲವೋ ಚರ್ಮಮಯವಾದ ಮೃಗಗಳು ನಿಷ್ಫಲವೋ ಕಾಗೆಗಳನ್ನು ತಿಂದ ಯವಗಳು ನಿಷ್ಫಲವೋ ಅದರಂತೆ ಎಲ್ಲಾ ಪಾಂಡವರು ನಿಷ್ಫಲರಾಗಿದ್ದಾರೆ.
ಕಿಂ ಪಾಂಡವಾಂಸ್ತ್ವಂ ಪತಿತಾನುಪಾಸ್ಸೇ
ಮೋಘಃ ಶ್ರಮಃ ಷಂಡತಿಲಾನುಪಾಸ್ಯ ॥13॥
ಪತಿತರಾದ ಪಾಂಡವರನ್ನು ನೀನು ಏಕೆ ಸೇವಿಸುತ್ತಿದ್ದೀಯೆ? ಅಂತಹ ಷಂಡತಿಲರನ್ನು ಉಪಾಸನೆಯನ್ನು ಮಾಡುವುದು ವ್ಯರ್ಥ ಮತ್ತು ಶ್ರಮದಾಯಕ.
ವೈಶಂಪಾಯನಃ
ಏವಂ ನೃಶಂಸಃ ಪರುಷಾಣಿ ಪಾರ್ಥಾನ್
ವ್ಯಾಶ್ರಾವಯದ್ ಧೃತರಾಷ್ಟ್ರಸ್ಯ ಪುತ್ರಃ ॥14॥
ಹೀಗೆ ಧೃತರಾಷ್ಟ್ರನ ಪುತ್ರನಾದ ದುಶ್ಶಾಸನನು ಪಾಂಡವರನ್ನು ಕುರಿತು ಇಂತಹ ಉಗ್ರವಾದ ಮಾತುಗಳನ್ನು ಆಡಿದನು.
ತದ್ವೈ ಶ್ರುತ್ವಾ ಭೀಮಸೇನೋSತ್ಯಮರ್ಷೀ
ನಿರ್ಭರ್ತ್ಸ್ಯೋಚ್ಚೈಃ ಸನ್ನಿಗೃಹ್ಯೈವ ರೋಷಾತ್ |
ಉವಾಚೈನಂ ಸಹಸೈವೋಪಗಮ್ಯ
ಸಿಂಹೋ ಯಥಾ ಹೈಮವತಃ ಸೃಗಾಲಮ್ ॥15॥
ಅದನ್ನು ಕೇಳಿದ ಕೋಪಿಷ್ಠನಾದ ಭೀಮಸೇನನು ತನ್ನನ್ನು ನಿಯಂತ್ರಿಸಿಕೊಂಡು ದುಶ್ಶಾಸನನನ್ನು ಗಟ್ಟಿಯಾಗಿ ಹೀಯಾಳಿಸಿ ರೋಷದಿಂದ ತಕ್ಷಣ ಮೇಲೆದ್ದು ಹಿಮಾಲಯದ ಸಿಂಹವು ನರಿಯ ಬಳಿಗೆ ಹೋದಂತೆ ಅವನ ಬಳಿಗೆ ಹೋಗಿ ಮಾತನಾಡಿದನು.
ಕ್ರೂರ ಪಾಪಜನೈರ್ಜುಷ್ಟಮಕೃತಾರ್ಥಂ ಪ್ರಭಾಷಸೇ |
ಗಾಂಧಾರವಿದ್ಯಯಾ ಹಿ ತ್ವಂ ರಾಜಮಧ್ಯೇ ವಿಕತ್ಥಸೇ ॥16॥
ಎಲೈ ಕ್ರೂರನೇ! ಪಾಪಜನರು ಮಾತ್ರ ಮಾತನಾಡುವ ಅಧನ್ಯವಾದ ಮಾತುಗಳನ್ನು ಆಡುತ್ತಿದ್ದೀಯೆ. ಗಾಂಧಾರರಾಜನಾದ ಶಕುನಿಯ ವಿದ್ಯೆಯ ಬಲದಿಂದ ನೀನು ರಾಜರ ಮಧ್ಯದಲ್ಲಿ ಬಡಬಡಿಸುತ್ತಿದ್ದೀಯೆ.
ಯಥಾ ತುದಸಿ ಮರ್ಮಾಣಿ ವಾಕ್ಶರೈರಿಹ ನೋ ಭೃಶಮ್ |
ತಥಾ ಸ್ಮಾರಯಿತಾ ತೇSಹಂ ಕೃಂತನ್ ಮರ್ಮಾಣಿ ಸಂಯುಗೇ ॥17॥
ನೀನು ನಿನ್ನ ವಾಗ್ಬಾಣಗಳಿಂದ ಹೇಗೆ ನಮ್ಮನ್ನು ಮರ್ಮಸ್ಥಾನದಲ್ಲಿ ಅತ್ಯಂತವಾಗಿ ಭೇದಿಸುತ್ತಿದ್ದೀಯೋ ಹಾಗೆ ನಿನ್ನನ್ನು ಯುದ್ಧದಲ್ಲಿ ಈ ಮಾತುಗಳನ್ನು ನೆನಪಿಗೆ ತಂದುಕೊಟ್ಟು ನಿನ್ನ ಮರ್ಮವನ್ನು ಭೇದಿಸುತ್ತೇನೆ.
ಯೇ ಚ ತ್ವಾಮನುವರ್ತಂತೇ ಕಾಮಲೋಭವಶಾನುಗಮ್ |
ಗೋಪ್ತಾರಃ ಸಾನುಬಂಧಾಂಸ್ತಾನ್ ನೇಷ್ಯಾಮಿ ಯಮಸಾದನಮ್ ॥18॥
ಯಾರು ಕಾಮಲೋಭವಶನಾದ ನಿನ್ನನ್ನು ಅನುಸರಿಸಿ ನಿನ್ನನ್ನು ರಕ್ಷಿಸುತ್ತಾರೋ ಅವರನ್ನೂ ಮತ್ತು ಅವರ ಪರಿವಾರವನ್ನೂ ಯಮಸದನಕ್ಕೆ ಕಳುಹಿಸುವೆನು.
ವೈಶಂಪಾಯನಃ
ಏವಂ ಬ್ರುವಾಣಮಜಿನೈರ್ವಿವಾಸಿತಂ
ದುಃಖಾಭಿಭೂತಂ ಪರಿನೃತ್ಯತಿ ಸ್ಮ |
ಮಧ್ಯೇ ಕುರೂಣಾಮನಿಷಿದ್ಧಮಾರ್ಗಂ
ಗೌರ್ಗೌರಿತಿ ಸ್ಮಾಹ್ವಯನ್ ಮುಕ್ತಲಜ್ಜಃ ॥19॥
ಅಜಿನಗಳನ್ನು ಧರಿಸಿದ ಭೀಮಸೇನನು ದುಃಖದಿಂದ ಪೂರ್ಣನಾಗಿ ಹೀಗೆ ಮಾತನಾಡುತ್ತಿರಲು ಕುರುಗಳ ಮಧ್ಯದಲ್ಲಿ ಯಾರಿಂದಲೂ

ತಡೆಯಲ್ಪಡದೆ ಭೀಮಸೇನನನ್ನು ಗೌಃ ಗೌಃ (ದನ ದನ) ಎಂದು ಕರೆಯುತ್ತಾ ನಾಚಿಕೆಯನ್ನು ಬಿಟ್ಟು ದುಶ್ಶಾಸನನು ನರ್ತನವನ್ನು ಮಾಡಿದನು.
ಭೀಮಸೇನಃ
ನೃಶಂಸ ಪರುಷಂ ವಕ್ತುಂ ಶಕ್ಯಂ ದುಶ್ಶಾಸನ ತ್ವಯಾ |
ನಿಕೃತ್ಯಾ ಹಿ ಧನಂ ಲಬ್ಧ್ವಾ ಕೋ ವಿಕತ್ಥಿತುಮರ್ಹತಿ ||20||
ಎಲೈ ಕ್ರೂರನಾದ ದುಶ್ಶಾಸನನೇ! ಇಂತಹ ಒರಟುಮಾತುಗಳನ್ನು ನೀನು ಮಾತ್ರ ಆಡಲು ಸಾಧ್ಯ. ಮೋಸದಿಂದ ಧನವನ್ನು ಪಡೆದು ಯಾವನು ಹೀಗೆ ಹೊಗಳಿಕೊಳ್ಳುತ್ತಾನೆ?
ಮಾ ಹ ಸ್ಮ ಸುಕೃತಾಂ ಲೋಕಾನ್ ಗಚ್ಛೇತ್ ಪಾರ್ಥೋ ವೃಕೋದರಃ |
ಯದಿ ವಕ್ಷಸಿ ಭಿತ್ತ್ವಾ ತೇ ನ ಪಿಬೇಚ್ಛೋಣಿತಂ ರಣೇ ||21||
ಯುದ್ಧದಲ್ಲಿ ನಿನ್ನ ಎದೆಯನ್ನು ಬಗೆದು ರಕ್ತವನ್ನು ಕುಡಿಯದಿದ್ದರೆ ಕುಂತಿಯ ಪುತ್ರನಾದ ವೃಕೋದರನಿಗೆ ಪುಣ್ಯವಂತರು ಹೊಂದುವ ಲೋಕಗಳು ದೊರೆಯುವುದು ಬೇಡ.
ಧಾರ್ತರಾಷ್ಟ್ರಾನ್ ರಣೇ ಹತ್ವಾ ಮಿಷತಾಂ ಸರ್ವಧನ್ವಿನಾಮ್ |
ಶಮಂ ಗಂತಾಸ್ಮಿ ನಚಿರಾತ್ ಸತ್ಯಮೇತತ್ ಬ್ರವೀಮಿ ತೇ ||22||
ಎಲ್ಲ ಧರ್ಮಧಾರಿಗಳ ಎದುರಿನಲ್ಲಿ ಯುದ್ಧದಲ್ಲಿ ಧೃತರಾಷ್ಟ್ರನ ಪುತ್ರರನ್ನು ಕೊಂದು ನಾನು ಸದ್ಯದಲ್ಲಿಯೇ ಶಾಂತಿಯನ್ನು ಪಡೆಯುವೆನು. ಇದು ನನ್ನ ಸತ್ಯವಾದ ಪ್ರತಿಜ್ಞೆ.
ವೈಶಂಪಾಯನಃ
ತತಃ ಸ ರಾಜಾ ಸಿಂಹಗತೇಃ ಸಹೇಳಂ
ದುರ್ಯೋಧನೋ ಭೀಮಸೇನಸ್ಯ ರೋಷಾತ್ |
ಗತಿಂ ಸರೋಷಾದನುಚಕಾರ ಮಂದೋ
ನಿರ್ಗಚ್ಛತಾಂ ಕೌರವಾಣಾಂ ಸಭಾಯಾಃ ||23||
ಆಗ ರಾಜನಾದ ದುರ್ಯೋಧನನು ತಿರಸ್ಕಾರಪೂರ್ವಕವಾಗಿ ಭೀಮಸೇನನ ರೋಷವನ್ನು ಅನುಕರಿಸಿ ಪಾಂಡವರು ಸಭೆಯಿಂದ ಹೊರಕ್ಕೆ ಹೋಗುತ್ತಿರಲು ಭೀಮಸೇನನ ನಡಿಗೆಯನ್ನು ತಿರಸ್ಕಾರದಿಂದ ಅನುಕರಿಸಿದನು.
ನೈತಾವತಾ ಕೃತಮಿತ್ಯಬ್ರವೀತ್ ತಂ
ವೃಕೋದರಃ ಸನ್ನಿವೃತ್ತಾರ್ಧಕಾಯಃ |
ಶೀಘ್ರಂ ಹಿ ತ್ವಾಂ ನಿಹತಂ ಸಾನುಬಂಧಂ
ಸಂಸ್ಮಾರ್ಯಾಹಂ ಸಂಪ್ರವಕ್ಷ್ಯಾಮಿ ಮೂಢಮ್ ||24||
ಭೀಮಸೇನನು ಅರ್ಧತಿರುಗಿ ಇಷ್ಟರಿಂದಲೇ ಮುಗಿಯುವುದಿಲ್ಲ. ಶೀಘ್ರದಲ್ಲಿಯೇ ನಿನ್ನನ್ನೂ ನಿನ್ನ ಅನುಚರರನ್ನೂ ಕೊಂದು ಮೂಢನಾದ ನಿನಗೆ ನಿನ್ನ ನೀಚವೃತ್ಯಗಳನ್ನು ಸ್ಮರಣೆಮಾಡಿಸಿ ಉತ್ತರವನ್ನು ಹೇಳುವೆನು ಎಂದು ಹೇಳಿದನು.
ಏವಂ ಸಮೀಕ್ಷ್ಯಾತ್ಮನಿ ವಾಚ್ಯಮಾನಂ
ನಿಯಮ್ಯ ಮನ್ಯುಂ ಬಲವಾನ್ ಸ ಮಾನೀ |
ರಾಜಾನುಜಃ ಸಂಸದಿ ಕೌರವಾಣಾಂ
ವಿನಿಷ್ಕ್ರಮನ್ ವಾಕ್ಯಮುವಾಚ ಭೀಮಃ ||25||
ಹೀಗೆ ತನ್ನಲ್ಲಿ ಪ್ರಯುಕ್ತವಾದ ಅವಮಾನವನ್ನು ಗಮನಿಸಿ ಬಲಿಷ್ಠನೂ ಮತ್ತು ಆತ್ಮಾಭಿಮಾನವುಳ್ಳವನೂ ರಾಜಾನುಜನೂ ಆದ ಭೀಮಸೇನನು ತನ್ನ ರೋಷವನ್ನು ನಿಯಂತ್ರಿಸಿಕೊಂಡು ಕೌರವರ ಸಭೆಯಿಂದ ಹೊರಗೆ ಹೋಗುತ್ತಾ ಮಾತನಾಡಿದನು.
ಅಹಂ ದುರ್ಯೋಧನಂ ಹಂತಾ ಕರ್ಣಂ ಹಂತಾ ಧನಂಜಯಃ |
ಶಕುನಿಂ ಚಾಕ್ಷಕಿತವಂ ಸಹದೇವೋ ಹನಿಷ್ಯತಿ ||26||
ನಾನು ದುರ್ಯೋಧನನನ್ನು ಕೊಲ್ಲುವೆನು. ಅರ್ಜುನನು ಕರ್ಣನನ್ನು ಕೊಲ್ಲುವನು. ಮೋಸದ ದ್ಯೂತದ ಶಕುನಿಯನ್ನು ಸಹದೇವನು ಕೊಲ್ಲುವನು.
ಇದಂ ಚ ಭೂಯೋ ವಕ್ಷ್ಯಾಮಿ ಸಭಾಮಧ್ಯೇ ಮಹದ್ ವಚಃ |
ಸತ್ಯಂ ದೇವಾಃ ಕರಿಷ್ಯಂತಿ ಯನ್ನೋ ಯುದ್ಧಂ ಭವಿಷ್ಯತಿ ||27||
ಈ ಸಭೆಯ ಮಧ್ಯದಲ್ಲಿ ದೇವತೆಗಳಲ್ಲಿ ನನ್ನ ಮಾತನ್ನು ಸತ್ಯವನ್ನಾಗಿ ಮಾಡುವರು. ನಮ್ಮ ಮನಸ್ಸಿನಲ್ಲಿ ಸಂಕಲ್ಪಿಸಿದುದು ನಿಶ್ಚಯವಾಗಿ ಜರುಗುತ್ತದೆ.
ಸುಯೋಧನಮಿಮಂ ಪಾಪಂ ಹಂತಾಸ್ಮಿ ಗದಯಾ ಯುಧಿ |
ಶಿರಃ ಪಾದೇನ ಚಾಸ್ಯಾಹಮಧಿಷ್ಠಾಸ್ಯಾಮಿ ಭೂತಳೇ ||28||
ಈ ಪಾಪಿಯಾದ ಸುಯೋಧನನನ್ನು ನಾನು ಯುದ್ಧದಲ್ಲಿ ಗದೆಯಿಂದ ಕೊಲ್ಲುವೆನು. ಭೂಮಿಯ ಮೇಲೆ ಅವನ ತಲೆಯನ್ನು ನನ್ನ ಪಾದದಿಂದ ಮೆಟ್ಟಿ ನಿಲ್ಲುವೆನು.
ವಾಕ್ಯಶೂರಸ್ಯ ಚೈವಾಸ್ಯ ಪರುಷಸ್ಯ ದುರಾತ್ಮನಃ |
ದುಶ್ಶಾಸನಸ್ಯ ರುಧಿರಂ ಪಾತಾಸ್ಮಿ ಮೃಗರಾಡಿವ ||29||
ಈ ದುರಾತ್ಮನಾದ ಉಗ್ರನಾದ ಕೇವಲ ವಾಕ್ಯಶೂರನಾದ ದುಶ್ಶಾಸನನ ರಕ್ತವನ್ನು ಸಿಂಹದಂತೆ ಕುಡಿಯುವೆನು.
ಅರ್ಜುನಃ

ಭೀಮಸೇನ ನ ತೇ ಸಂತಿ ಯೇಷಾಂ ವೈರಂ ತ್ವಯಾ ಸಹ |
ಮತ್ವಾ ಗೃಹೇಷು ಸುಖಿನೋ ನ ಬುದ್ಧ್ಯಂತೇ ಮಹದ್ಭಯಮ್ ॥30॥
ಭೀಮಸೇನನೇ! ನೀನು ಯಾರ ಜೊತೆಯಲ್ಲಿ ವೈರವನ್ನು ಸಾಧಿಸುತ್ತೀಯೋ ಅವರು ಇಲ್ಲವೆಂದು ತಿಳಿ. ತಮ್ಮ ಮನೆಗಳಲ್ಲಿ ತಾವು ಸುಖವಾಗಿದ್ದೇವೆ ಎಂದು ತಿಳಿದು ಮಹದ್ಭಯವನ್ನು ಅವರು ತಿಳಿಯುತ್ತಿಲ್ಲ.
ನ ವೈ ವಾಚ್ಯಂ ವ್ಯವಸಿತಂ ಭೀಮ ವಿಜ್ಞಾಯತಾಂ ಸತಾಮ್ |
ಇತಶ್ಚತುರ್ದಶೇ ವರ್ಷೇ ದ್ರಷ್ಟಾರೋ ಯದ್ ಭವಿಷ್ಯತಿ ॥31॥
ಎಲೈ ಭೀಮಸೇನನೇ! ಸಜ್ಜನರು ತಮ್ಮ ಮನಸ್ಸಿನ ನಿರ್ಧಾರಗಳನ್ನು ಮಾತಿನಿಂದ ಆಡಿ ತೋರಿಸಬಾರದು ಪ್ರಯತ್ನದಿಂದ ಮಾಡಿ ತೋರಿಸಬೇಕು. ಸಜ್ಜನರು ಅದನ್ನು ನೋಡಬೇಕು. ಇವತ್ತಿನಿಂದ ಹದಿನಾಲ್ಕನೆಯ ವರ್ಷದಲ್ಲಿ ಏನು ನಡೆಯುವುದೆಂದು ಎಲ್ಲರೂ ನೋಡುವರು.
ಭೀಮಸೇನಃ
ದುರ್ಯೋಧನಸ್ಯ ಕರ್ಣಸ್ಯ ಶಕುನೇಶ್ಚ ದುರಾತ್ಮನಃ |
ದುಶ್ಶಾಸನಚತುರ್ಥಾನಾಂ ಭೂಮಿಃ ಪಾಸ್ಯತಿ ಶೋಣಿತಮ್ ॥32॥
ದುರ್ಯೋಧನ ಕರ್ಣ ದುರಾತ್ಮನಾದ ಶಕುನಿ ಮತ್ತು ನಾಲ್ಕನೆಯವನಾದ ದುಶ್ಶಾಸನ ಇವರ ರಕ್ತವನ್ನು ಭೂಮಿಯು ಕುಡಿಯುವುದು.
ಅರ್ಜುನಃ
ಅಸೂನೃತಾನಾಂ ವಕ್ತಾರಂ ಸಂಹೃಷ್ಟಾನಾಂ ದುರಾತ್ಮನಾಮ್ |
ಭೀಮಸೇನ ನಿಯೋಗಾತ್ ತೇ ಹಂತಾಽಹಂ ಕರ್ಣಮಾಹವೇ ॥33॥
ಉಗ್ರಮಾತುಗಳನ್ನು ಆಡಿ ಸಂತೋಷಪಡುವ ದುಷ್ಟರಿಗೆ ದುರ್ಮಾತುಗಳನ್ನು ಉಪದೇಶಿಸುವ ಕರ್ಣನನ್ನು ಎಲೈ ಭೀಮಸೇನನೇ! ನಿನ್ನ ಆದೇಶದಿಂದ ನಾನು ಯುದ್ಧದಲ್ಲಿ ಕೊಲ್ಲುವೆನು.
ಅರ್ಜುನಃ ಪ್ರತಿಜಾನೀತೇ ಭೀಮಸ್ಯ ಪ್ರಿಯಕಾಮ್ಯಯಾ |
ಕರ್ಣಂ ಕರ್ಣಾನುಗಾಂಶ್ಚೈವ ರಣೇ ಹಂತಾಸ್ಮಿ ಪತ್ರಿಭಿಃ ॥34॥
ಭೀಮನಿಗೆ ಪ್ರಿಯವನ್ನು ಮಾಡುವ ಉದ್ದೇಶದಿಂದ ಅರ್ಜುನನು ಪ್ರತಿಜ್ಞೆಯನ್ನು ಮಾಡುತ್ತಾನೆ. ಕರ್ಣನನ್ನು ಮತ್ತು ಕರ್ಣನ ಅನುಚರರನ್ನು ಯುದ್ಧದಲ್ಲಿ ಬಾಣಗಳಿಂದ ಕೊಲ್ಲುವೆನು.
ಯೇ ಚಾನ್ಯೇ ಪ್ರತಿಯೋತ್ಸ್ಯಂತಿ ಬುದ್ಧಿಮೋಹೇನ ಮೈ ನೃಪಾಃ |
ತಾಂಶ್ಚ ಸರ್ವಾನ್ ಶಿತೈರ್ಬಾಣೈರ್ನೇತಾಸ್ಮಿ ಯಮಸಾದನಮ್ ॥35॥
ಇನ್ನು ಯಾರಾದರೂ ಬೇರೆರಾಜರು ಬುದ್ಧಿಮೋಹದಿಂದ ನನಗೆ ಪ್ರತಿಯಾಗಿ ಯುದ್ಧಮಾಡುವುದಾದರೆ ಅವರೆಲ್ಲರನ್ನೂ ನಿಶಿತವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸುವೆನು.
ಚಲೇದ್ಧಿ ಹಿಮವಾನ್ ಸ್ಥಾನಾನ್ನಿಷ್ಪ್ರಭಃ ಸ್ಯಾದ್ದಿವಾಕರಃ |
ಶೈತ್ಯಂ ಸೋಮಾತ್ ಪ್ರಣಶ್ಯೇತ ಮತ್ಸತ್ಯಂ ವಿಚಲೇದ್ ಯದಿ ॥36॥
ನನ್ನ ಮಾತಿನ ಸಾದ್ಯವು ವಿಚಲಿತವಾನಾದರೆ (ನನ್ನ ಮಾತು ಸುಳ್ಳಾಗುವುದಾದರೆ) ಹಿಮಾಲಯವು ತನ್ನ ಸ್ಥಾನವನ್ನು ಬಿಟ್ಟು ಕದಲೀತು. ಸೂರ್ಯನು ಕಾಂತಿ ಹೀನನಾದಾನು. ಚಂದ್ರನ ಶೈತ್ಯವು ನಾಶವಾದೀತು.
ನ ಪ್ರದಾಸ್ಯತಿ ಚೇದ್ ರಾಜ್ಯಮಿತೋ ವರ್ಷೇ ಚತುರ್ದಶೇ |
ದುರ್ಯೋಧನೋಽಪಿ ಸತ್ಕೃತ್ಯ ಸತ್ಯಮೇತದ್‌ಭವಿಷ್ಯತಿ ॥37॥
ದುರ್ಯೋಧನನು ಈ ದಿನಕ್ಕೆ ಹದಿನಾಲ್ಕನೆ ವರ್ಷದಲ್ಲಿ ಸತ್‌ಕಾರಪೂರ್ವಕವಾಗಿ ನಮಗೆ ರಾಜ್ಯವನ್ನು ಹಿಂದಿರುಗಿ ಕೊಡದಿದ್ದರೆ ನಾನು ಹೇಳಿದ ಮಾತುಗಳೆಲ್ಲವೂ ಸತ್ಯವಾಗುವುವು.
ವೈಶಂಪಾಯನಃ
ಇತ್ಯುಕ್ತವತಿ ಪಾರ್ಥೇ ತು ಶ್ರೀಮಾನ್ ಮಾದ್ರವತೀಸುತಃ |
ಪ್ರಗೃಹ್ಯ ವಿಪುಲಂ ಬಾಹುಂ ಸಹದೇವಃ ಪ್ರತಾಪವಾನ್ ॥38॥
ಸೌಬಲಸ್ಯ ವಧಪ್ರೇಪ್ಸುರಿದಂ ವಚನಮಬ್ರವೀತ್ |
ಕ್ರೋಧಸಂರಕ್ತನಯನೋ ನಿಶ್ಶ್ವಸನ್ನಿವ ಪನ್ನಗಃ ॥39॥
ಅರ್ಜುನನು ಹೀಗೆ ಹೇಳುತ್ತಿರಲು ಕಾಂತಿಯುಕ್ತನಾದ ಮಾದ್ರೀಪುತ್ರನಾದ ಪ್ರತಾಪಶಾಲಿಯಾದ ಸಹದೇವನು ಶಕುನಿಯ ವಧೆಯನ್ನು ಮಾಡಲು ಬಯಸಿ ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ಸರ್ಪದಂತೆ ಉಸಿರಾಡುತ್ತಾ ತನ್ನ ವಿಪುಲವಾದ ಬಾಹುವನ್ನು ಎತ್ತಿ ಮಾತನಾಡಿದನು.
ಅಕ್ಷಾಣಿ ಮೂಢ ದುರ್ಬುದ್ಧೇ ಗಾಂಧಾರಾಣಾಂ ಯಶೋಹರ |
ನೈತೇಕ್ಷಾ ನಿಶಿತಾ ಬಾಣಾಃ ತ್ವಯೈತೇ ಸಮರೇ ವೃತಾಃ ॥40॥
ಗಾಂಧಾರರ ಕೀರ್ತಿನಾಶಕನಾದ ದುರ್ಬುದ್ಧಿಯಾದ ಎಲೈ ಶಕುನಿಯೇ ನೀನು ಹಿಡಿದ ಅಕ್ಷಗಳು ಅಕ್ಷಗಳಲ್ಲ. ಅವುಗಳನ್ನು ನೀನು ಸಮರದಲ್ಲಿ ಸ್ವೀಕರಿಸಿದ ಬಾಣಗಳು ಎಂದು ತಿಳಿ.
ಯಥೈವೇಹೋಕ್ತವಾನ್ ಭೀಮಃ ತ್ವಾಮುದ್ದಿಶ್ಯ ಸಬಾಂಧವಮ್ |
ಕರ್ತಾಽಹಂ ಕರ್ಮಣಸ್ತಸ್ಯ ಕುರು ಕಾರ್ಯಾಣಿ ಸರ್ವಶಃ ॥41॥
ನಿನ್ನ ಮತ್ತು ನಿನ್ನ ಬಾಂಧವರ ವಿಷಯದಲ್ಲಿ ಭೀಮನು ಇಲ್ಲಿ ಏನು ಹೇಳಿದನೋ ನಾನು ಅದೆಲ್ಲವನ್ನೂ ಮಾಡುತ್ತೇನೆ. ನಿನ್ನ ಕಾರ್ಯಗಳನ್ನೆಲ್ಲಾ ಬೇಗ ಮುಗಿಸು.

ಹಂತಾಸ್ಮಿ ತರಸಾ ಯುದ್ಧೇ ತ್ವಾಂ ವಿಕ್ರಮ್ಯ ಸಬಾಂಧವಮ್ |
ಯದಿ ಸ್ಥಾಸ್ಯಸಿ ಸಂಗ್ರಾಮೇ ಕ್ಷತ್ರಧರ್ಮೇಣ ಸೌಬಲ ||42||
ಎಲೈ ಶಕುನಿಯೇ ಕ್ಷತ್ರಧರ್ಮಕ್ಕೆ ಅನುಸಾರವಾಗಿ ಯುದ್ಧದಲ್ಲಿ ನನ್ನ ಎದುರಿಗೆ ನೀನು ನಿಲ್ಲುವುದಾದರೆ ನಿನ್ನನ್ನೂ ನಿನ್ನ ಬಂಧುಗಳನ್ನೂ ಮೆಟ್ಟಿ ಶೀಘ್ರವಾಗಿ ಯುದ್ಧದಲ್ಲಿ ನಿನ್ನನ್ನು ಕೊಲ್ಲುವೆನು.
ವೈಶಂಪಾಯನಃ
ಸಹದೇವವಚಃ ಶ್ರುತ್ವಾ ನಕುಲೋಽಪಿ ವಿಶಾಂಪತೇ |
ದರ್ಶನೀಯತಮೋ ನೃಣಾಮಿದಂ ವಚನಮಬ್ರವೀತ್ ||43||
ಎಲೈ ರಾಜನೇ! ಸಹದೇವನ ಮಾತನ್ನು ಕೇಳಿ ಮನುಷ್ಯರಲ್ಲಿ ಅತ್ಯಂತ ಸುಂದರನಾದ ನಕುಲನು ಸಹ ಈ ಮಾತನ್ನು ಹೇಳಿದನು.
ಸುತೇಯಂ ಯಜ್ಞಸೇನಸ್ಯ ದ್ಯೂತೇಸ್ಮಿನ್ ಧೃತರಾಷ್ಟ್ರಜೈಃ |
ಯೈರ್ವಾಚಃ ಶ್ರಾವಿತಾ ರೂಕ್ಷಾಃ ಸ್ಥಿತೈರ್ದುರ್ಯೋಧನಪ್ರಿಯೇ ||44||
ಧಾರ್ತರಾಷ್ಟ್ರಾನ್ ಸುದುರ್ವೃತ್ತಾನ್ ಮುಮೂರ್ಷೂನ್ ಕಾಲಚೋದಿತಾನ್|
ದರ್ಶಯಿಷ್ಯಾಮಿ ಭೂಯಿಷ್ಠಮಹಂ ವೈವಸ್ವತಕ್ಷಯಮ್ ||45||
ಯಾವ ಧೃತರಾಷ್ಟ್ರ ಪುತ್ರರು ದ್ಯೂತದಲ್ಲಿ ಯುಜ್ಞಸೇನನ ಪುತ್ರಿಯಾದ ದ್ರೌಪದಿಗೆ ದುರ್ಯೋಧನನಿಗೆ ಪ್ರಿಯವನ್ನು ಉಂಟುಮಾಡುವ ಸಲುವಾಗಿ ಕ್ರೂರವಾದ ಮಾತುಗಳನ್ನು ಆಡಿದರೋ ಅಂತಹ ಕೆಟ್ಟನಡತೆಯುಳ್ಳ ಮರಣವು ಸನ್ನಿಹಿತವಾದ ಕಾಲಚೋದಿತರಾದ ಎಲ್ಲಾ ಧೃತರಾಷ್ಟ್ರಪುತ್ರರಿಗೆ ನಾನು ಯಮಲೋಕವನ್ನು ಚೆನ್ನಾಗಿ ತೋರಿಸುವೆನು.
ಉಲೂಕಂ ಚ ದುರಾತ್ಮಾನಂ ಸೌಬಲಸ್ಯ ಸುತಂ ಪ್ರಿಯಮ್ |
ಕ್ರೂರಂ ಹಂತಾಸ್ಮಿ ಸಮರೇ ತಂ ವೈ ಕ್ರೂರಂ ನರಾಧಮಮ್ ||46||
ಶಕುನಿಯ ಪ್ರಿಯಪುತ್ರನಾದ ಕ್ರೂರನಾದ ದುರಾತ್ಮನಾದ ನರಾಧಮನಾದ ಉಲೂಕನನ್ನು ನಾನು ಯುದ್ಧದಲ್ಲಿ ಕೊಲ್ಲುವೆನು.
ನಿದೇಶಾದ್ ಧರ್ಮರಾಜಸ್ಯ ದ್ರೌಪದ್ಯಾಃ ಪದವೀಂ ಚರನ್ |
ನಿರ್ಧಾರ್ತರಾಷ್ಟ್ರಾಂ ಪೃಥಿವೀಂ ಕರ್ತಾಸ್ಮಿ ನಚಿರಾದಿವ ||47||
ಧರ್ಮರಾಜನ ಅದೇಶದಂತೆ ದ್ರೌಪದಿಗೆ ದುಶ್ಶಾಸನನು ಮಾಡಿದಂತೆ ಕೇಶಗಳಲ್ಲಿ ಹಿಡಿದು ಎಳೆದು ಅವನನ್ನು ಕೊಲ್ಲುವೆನು. ಶೀಘ್ರದಲ್ಲಿಯೇ ಪೃಥಿವಿಯ ಮೇಲೆ ಧೃತರಾಷ್ಟ್ರಪುತ್ರರು ಇಲ್ಲದಂತೆ ಮಾಡುವೆನು.
ವೈಶಂಪಾಯನಃ
ಏವಂ ತೇ ಪುರುಷವ್ಯಾಘ್ರಾಃ ಪರಿಘಾಯತಬಾಹವಃ |
ಪ್ರತಿಜ್ಞಾಂ ವಿಪುಲಾಂ ಕೃತ್ವಾ ಧೃತರಾಷ್ಟ್ರಮುಪಾಗಮನ್ ||48||
ಹೀಗೆ ಪರಿಘದಂತೆ ವಿಸ್ತಾರವಾದ ಬಾಹುಗಳುಳ್ಳ ಆ ಪುರುಷವ್ಯಾಘ್ರರು ದೊಡ್ಡ ಪ್ರತಿಜ್ಞೆಯನ್ನು ಮಾಡಿ ಧೃತರಾಷ್ಟ್ರನ ಸಮೀಪಕ್ಕೆ ಬಂದರು.
||ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ
ಷಣ್ಣವತಿತಮೋಧ್ಯಾಯಃ||
||ಅನುದ್ಯೂತಪರ್ವಣಿ ಚತುರ್ಥೋಽಧ್ಯಾಯಃ ||4||
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯವು ಮುಗಿಯಿತು.
*****

ತೊಂಬತ್ತೇಳನೆಯ ಅಧ್ಯಾಯ
(ಭೀಷ್ಮಾದಿಗಳ ಅನುಜ್ಞೆಯನ್ನು ಪಡೆದು ಪಾಂಡವರ ಪ್ರಯಾಣ)
ಯುಧಿಷ್ಠಿರಃ
ಆಮಂತ್ರಯಾಮಿ ಭವತಃ ತಥಾ ವೃದ್ಧಂ ಪಿತಾಮಹಮ್ |
ರಾಜಾನಂ ಸೋಮದತ್ತಂ ಚ ಮಹಾರಾಜಂ ಚ ಬಾಹ್ಲಿಕಮ್ ||1||
ದ್ರೋಣಂ ಕೃಪಂ ನೃಪಾಂಶ್ಚಾನ್ಯಾನ್ ಅಶ್ವತ್ಥಾಮಾನಮೇವ ಚ |
ವಿದುರಂ ಧೃತರಾಷ್ಟ್ರಂ ಚ ಧಾರ್ತರಾಷ್ಟ್ರಾಂಶ್ಚ ಸರ್ವಶಃ ||2||
ಸೌಮದತ್ತಿಂ ಮಹಾವೀರ್ಯಂ ವಿಕರ್ಣಂ ಚ ಮಹಾಬಲಮ್ |
ಯುಯುತ್ಸುಂ ಸಂಜಯಂ ಚೈವ ತಥೈವಾನ್ಯಾನ್ ಸಭಾಸದಃ ||3||
ಗಾಂಧಾರೀಂ ಚ ಮಹಾಭಾಗಾಂ ಮಾತರಂ ಚ ತಥಾ ಪೃಥಾಮ್ | ಸರ್ವಾನಾಮಂತ್ರ್ಯ ಗಚ್ಛಾಮಿ ದ್ರಕ್ಷ್ಯಾಮಿ ಪುನರೇತ್ಯ ಚ ||4||
ನಿಮ್ಮೆಲ್ಲರನ್ನೂ ಹಾಗೂ ವೃದ್ಧನಾದ ಪಿತಾಮಹನನ್ನು ಹೋಗಿಬರಲು ಅಪ್ಪಣೆಯನ್ನು ಕೇಳುತ್ತಿದ್ದೇನೆ. ಸೋಮದತ್ತರಾಜ ಬಾಹ್ಲೀಕಮಹಾರಾಜ ದ್ರೋಣ ಕೃಪ ಉಳಿದ ರಾಜರು ಅಶ್ವತ್ಥಾಮ ವಿದುರ ಧೃತರಾಷ್ಟ್ರನ ಎಲ್ಲಾ ಪುತ್ರರು ಮಹಾಪರಾಕ್ರಮಿಯಾದ ಸೋಮದತ್ತನ ಮಗನಾದ ಭೂರಿಶ್ರವ ಮಹಾಬಲನಾದ ವಿಕರ್ಣ ಯುಯುತ್ಸು ಸಂಜಯ ಹಾಗೆಯೇ ಉಳಿದ ಸಭಾಸದರು ಮಹಾನುಭಾವಳಾದ ಗಾಂಧಾರಿ ತಾಯಿಯಾದ ಕುಂತಿ ಈ ಎಲ್ಲರ ಅನುಮತಿಯನ್ನು ಪಡೆದು ನಾನು ಹೋಗುತ್ತಿದ್ದೇನೆ. ಹಿಂದಿರುಗಿ ಬಂದು ನಿಮ್ಮನ್ನು ನೋಡುವೆನು.
ವೈಶಂಪಾಯನಃ

ನೈವ ಕಿಂಚಿತ್ ತದೋಚುಸ್ತೇ ಹ್ರಿಯಾ ಸಂತೋ ಯುಧಿಷ್ಠಿರಮ್ |
ಮನೋಭಿರೇವ ಕಲ್ಯಾಣಂ ದಧ್ಯುಸ್ತೇ ತಸ್ಯ ಧೀಮತಃ ॥5॥
ಅವರೆಲ್ಲರೂ ನಾಚಿಕೆಯಿಂದ ಕೂಡಿದವರಾಗಿ ಯುಧಿಷ್ಠಿರನನ್ನು ಕುರಿತು ಏನನ್ನೂ ಮಾತನಾಡಲಿಲ್ಲ. ತಮ್ಮ ಮನಸ್ಸಿನಿಂದಲೇ ಮೇಧಾವಿಯಾದ ಅವನಿಗೆ ಕಲ್ಯಾಣವನ್ನು ಬಯಸಿದರು.
ವಿದುರಃ
ಆರ್ಯಾ ಪೃಥಾ ರಾಜಪುತ್ರೀ ನಾರಣ್ಯಂ ವಸ್ತುಮರ್ಹತಿ |
ಸುಕುಮಾರೀ ಚ ವೃದ್ಧಾ ಚ ನಿತ್ಯಂ ಚೈವ ಸುಖೋಚಿತಾ ॥6॥
ಇಹ ವತ್ಸ್ಯತಿ ಕಲ್ಯಾಣೀ ಸತ್ಕೃತಾ ಮಮ ವೇಶ್ಮನಿ |
ಇದಂ ಪಾರ್ಥಾ ವಿಜಾನೀಧ್ವಮಭಯಂ ವೋಽಸ್ತು ಸರ್ವಶಃ ॥7॥
ಆರ್ಯೆಯೂ ವೃದ್ಧೆಯೂ ಸುಕುಮಾರಿಯೂ ರಾಜಕುಮಾರಿಯೂ ಆದ ಕುಂತಿಯು ಯಾವಾಗಲೂ ಸುಖಕ್ಕೆ ಅರ್ಹಳಾದವಳು. ಅವಳು ವನವಾಸವನ್ನು  ಮಾಡುವುದು ಬೇಡ. ಕಲ್ಯಾಣಿಯಾದ ಅವಳು ನನ್ನ ಮನೆಯಲ್ಲಿ ಸತ್ಕರಿಸಲ್ಪಟ್ಟು ವಾಸವನ್ನು ಮಾಡುವಳು. ಪಾಂಡವರೇ ಇದನ್ನು ತಿಳಿಯಿರಿ. ನಿಮಗೆಲ್ಲರಿಗೂ ಕ್ಷೇಮವಾಗಲಿ.
ಯುಧಿಷ್ಠಿರ ವಿಜಾನೀಹಿ ಮಮೇದಂ ಭರತರ್ಷಭ |
ನ ಧರ್ಮೋಪಚಿತಃ ಕಶ್ಚಿದ್ ವಿಂದತೇ ವೈ ಪರಾಭವಮ್ ॥8॥
ಭರತರ್ಷಭನೇ! ಯುಧಿಷ್ಠಿರನೇ! ನನ್ನ ಈ ಮಾತನ್ನು ಕೇಳು. ಧರ್ಮವನ್ನು ಆಶ್ರಯಿಸಿದ ವ್ಯಕ್ತಿಯು ಎಂದೂ ಪರಾಭವವನ್ನು ಹೊಂದುವುದಿಲ್ಲ.
ತ್ವಂ ವೈ ಧರ್ಮಂ ವಿಜಾನೀಷೇ ಯುದ್ಧಂ ವೇತ್ತಾ ಧನಂಜಯಃ |
ಹಂತಾಽರೀಣಾಂ ಭೀಮಸೇನೋ ನಕುಲಸ್ತ್ವರ್ಥಸಂಗ್ರಹೀ ॥9॥
ಸಹದೇವಸ್ತು ಸಂಯಂತಾ  ಧೌಮ್ಯೋ ಬ್ರಹ್ಮವಿದುತ್ತಮಃ |
ಧರ್ಮಾರ್ಥಕುಶಲಾ ಚೈವ ದ್ರೌಪದೀ ಧರ್ಮಚಾರಿಣೀ ॥10॥
ಅನ್ಯೋನ್ಯಸ್ಯ ಪ್ರಿಯಾಃ ಸರ್ವೇ ತಥೈವ ಪ್ರಿಯವಾದಿನಃ |
ಪರೈರಲಂಘ್ಯಾಃ ಸಂತುಷ್ಟಾಃ ಕೋ ವೋ ನ ಸ್ಪೃಹಯೇದಿಹ ॥11॥
ನೀನು ಧರ್ಮವನ್ನು ಚೆನ್ನಾಗಿ ತಿಳಿದಿದ್ದೀಯೆ. ಅರ್ಜುನನು ಯುದ್ಧವನ್ನು ತಿಳಿದಿದ್ದಾನೆ. ಭೀಮಸೇನನು ಶತ್ರುಗಳನ್ನು ಸಂಹಾರಮಾಡುತ್ತಾನೆ. ನಕುಲನು ದ್ರವ್ಯಸಂಗ್ರಹವನ್ನು ಮಾಡುತ್ತಾನೆ. ಸಹದೇವನು ಸೈನ್ಯವನ್ನು ನಡೆಸುತ್ತಾನೆ. ಧೌಮ್ಯರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರು. ಧರ್ಮಚಾರಿಣಿಯಾದ ದ್ರೌಪದಿಯು ಧರ್ಮಾರ್ಥಕುಶಲಳಾದವಳು. ನೀವೆಲ್ಲರೂ ಪರಸ್ಪರವಾಗಿ ಪ್ರೀತಿಯಿಂದ ಇದ್ದೀರಿ. ಮತ್ತು ಪರಸ್ಪರವಾದ ಪ್ರಿಯವಾದ ಮಾತುಗಳನ್ನು ಆಡುತ್ತೀರಿ.  ಶತ್ರುಗಳು ನಿಮ್ಮನ್ನು ಮೀರಲಾರದಂತೆ ಸಂತುಷ್ಟರಾಗಿದ್ದೀರಿ.  ನಿಮ್ಮಲ್ಲಿ ಒಬ್ಬರನೊಬ್ಬರು ಪ್ರೀತಿಸದಿದ್ದವರು ಅಥವಾ ಬಯಸದಿದ್ದವರು ಯಾರಿದ್ದಾರೆ? (ನಿಮ್ಮನ್ನು ಬಯಸದಿರುವ ಸಜ್ಜನರು ಇಲ್ಲಿ ಯಾರಿದ್ದಾರೆ?)
ಏಷ ವೈ ಸರ್ವಕಲ್ಯಾಣಃ ಸಮಾಧಿಸ್ತವ ಭಾರತ |
ನೈವ ಶತ್ರುರ್ವಿಷಹತೇ ಶಕ್ರೇಣಾಪಿ ಸಮದ್ಯುತಿಃ ॥12॥
ಭಾರತನಾದ ಧರ್ಮರಾಜನೇ! ನಿನ್ನ ಸಮಾಧಾನವು ಪರಮಮಂಗಳಕರವಾದುದು. ಇಂದ್ರನಿಗೆ ಸಮಾನವಾದ ತೇಜಸ್ಸುಳ್ಳ ಶತ್ರುವೂ ಸಹ ಅದನ್ನು ನೋಡಿ ಸಹಿಸಲಾರ.
ಹಿಮವತ್ಯನುಶಿಷ್ಟೋಽಸಿ ಮೇರುಸಾವರ್ಣಿನಾ ಪುರಾ |
ದ್ವೈಪಾಯನೇನ ಕೃಷ್ಣೇನ ನಗರೇ ವಾರಣಾವತೇ ॥13॥
ಭೃಗುತುಂಗೇ ಚ ರಾಮೇಣ ದೃಷದ್ವತ್ಯಾಂ ಚ ಶಂಭುನಾ |
ಅಶ್ರೌಷೀರಸಿತಸ್ಯಾಪಿ ಮಹರ್ಷೇರಥ ಧೀಮತಃ ॥14॥
ನೀನು ಹಿಂದೆ ಬಾಲ್ಯದಲ್ಲಿ ಹಿಮಾಲಯ ಪರ್ವದಲ್ಲಿ ಮೇರುಸಾವರ್ಣಿಯಿಂದ ಶಿಕ್ಷಿತನಾಗಿದ್ದೀಯೆ. ವಾರಣಾವತದಲ್ಲಿ ವೇದವ್ಯಾಸರಿಂದ ಶಿಕ್ಷಿತನಾಗಿದ್ದೀಯೆ. ಭೃಗುತುಂಗದಲ್ಲಿ ಪರಶುರಾಮನಿಂದಲೂ ದೃಶದ್ವತಿಯಲ್ಲಿ ಶಿವನಿಂದಲೂ ಉಪದೇಶವನ್ನು ಪಡೆದಿದ್ದೀಯೆ. ಮಹರ್ಷಿಗಳೂ ಮೇಧಾವಿಗಳೂ ಆದ  ಅಸಿತರಿಂದಲೂ ಉಪದೇಶವನ್ನು ಪಡೆದಿದ್ದೀಯೆ.
ದ್ರಷ್ಟಾ ಸದಾ ನಾರದಸ್ಯ ಧೌಮ್ಯಸ್ತೇಽಯಂ ಪುರೋಹಿತಃ |
ಮಹರ್ಷಿಃ ಸಾಂಪರಾಯೇ ತೇ ಬುದ್ಧಿಂ ತಾಮೃಷಿಪೂಜಿತಾಮ್ |
ಪುರೂರವಸಮೈಲಂ ಚ ಬುದ್ಧ್ಯಾ ಜಯಸಿ ಪಾಂಡವ ॥15॥
ನಿನ್ನ ಪುರೋಹಿತರಾದ ಧೌಮ್ಯರು ಯಾವಾಗಲೂ ನಾರದರನ್ನು ನೋಡುವವರು. ಆಪತ್ತು ಒದಗಿದಾಗ ಮಹರ್ಷಿಗಳಾದ ಧೌಮ್ಯರು ಋಷಿಪೂಜಿತವಾದ ನಿನ್ನ ಬುದ್ಧಿಯನ್ನು ತಿದ್ದುವರು. ಪಾಂಡವನೇ! ನೀನು ಇಳೆಯ ಪುತ್ರನಾದ ಪುರೂರವನನ್ನೂ ಬುದ್ಧಿಯಲ್ಲಿ ಮೀರಿದ್ದೀಯೆ.
ಶಕ್ತ್ಯಾ ಜಯಸಿ ರಾಜ್ಞೋನ್ಯಾನ್ ಋಷೀನ್ ಧರ್ಮೋಪಸೇವಯಾ |
ಐಂದ್ರೇ ಜಯೇ ಧೃತಾತ್ಮಾ ತ್ವಂ ಯಾಮ್ಯಕೋಪವಿಧಾರಣೇ |
ವಿಸರ್ಗೇ ಚೈವ ಧನದೋ ವರುಣಶ್ಚೈವ ಸಂಯಮೇ ॥16॥
ನೀನು ನಿನ್ನ ಶಕ್ತಿಯಲ್ಲಿ ಬೇರೆ ರಾಜರನ್ನು ಮೀರಿದ್ದೀಯೆ. ಧರ್ಮಾಚರಣೆಯ ವಿಷಯದಲ್ಲಿ ಋಷಿಗಳನ್ನು ಮೀರಿದ್ದೀಯೆ. ಇಂದ್ರನ ಜಯವನ್ನೂ ಯಮನ ಕೋಪನಿಯಂತ್ರಣವನ್ನೂ ಯಾವಾಗಲೂ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದೀಯೆ. ಧನವನ್ನು ಕೊಡುವ

ವಿಷಯದಲ್ಲಿ ನೀನು ಕುಬೇರನಾಗಿದ್ದೀಯೆ. ಸಂಯಮದ ವಿಷಯದಲ್ಲಿ ನೀನು ವರುಣನಾಗಿದ್ದೀಯೆ.
ಆತ್ಮಪ್ರದಾನೇ ಸೋಮ್ಯಸ್ತ್ವಮಗ್ರ್ಯಶ್ಚೈವಾತ್ಮಜೀವನೇ |
ಭೂಮೇಃ ಕ್ಷಮಾಂ ಚ ತೇಜಶ್ಚ ಸಾಮಗ್ರ್ಯಂ ಸೂರ್ಯಮಂಡಲಾತ್ |
ವಾಯೋಶ್ಚೈವ ಬಲಂ ವಿದ್ಧಿ ಭೂತೇಭ್ಯಶ್ಚಾತ್ಮಸಂಪದಃ ॥18॥
ನಿನ್ನನ್ನೇ ಕೊಟ್ಟುಕೊಳ್ಳುವ ವಿಷಯದಲ್ಲಿ ನೀನು ಚಂದ್ರನನ್ನು ಹೋಲುತ್ತೀಯೆ. ಪ್ರಾಣಿಗಳಿಗೆ ಜೀವನವನ್ನು ಕೊಡುವುದರಲ್ಲಿ ನೀನು ಶ್ರೇಷ್ಠನಾಗಿದ್ದೀಯೆ. ನಿನ್ನ ಸಂಪತ್ತುಗಳಾದ ಕ್ಷಮೆಯನ್ನು ಭೂಮಿಯಿಂದಲೂ ತೇಜಸ್ಸು ಮತ್ತು ಸರ್ವದಾ ಏಕಪ್ರಕಾರಸ್ಥಿತಿಯನ್ನು ಸೂರ್ಯಮಂಡಲ- ದಿಂದಲೂ ಬಲವನ್ನು ವಾಯುವಿನಿಂದಲೂ ಮತ್ತು ಉಳಿದ ಯೋಗ್ಯವಾದ ಗುಣಗಳನ್ನು ಉಳಿದ ಭೂತಗಳಿಂದಲೂ ತೆಗೆದುಕೊಂಡಿದ್ದೀಯೆ.
ಅಗದಂ ವೋಽಸ್ತು ಸರ್ವಂ ವೋ ದ್ರಕ್ಷ್ಯಾಮಿ ಪುನರಾಗತಾನ್ |
ಆಪದ್ಧರ್ಮಾರ್ಥಕೃಚ್ಛ್ರೇಷು ಸರ್ವಕಾರ್ಯೇಷು ವಾ ಪುನಃ |
ಯಥಾವತ್ ಪ್ರತಿಪದ್ಯೇಥಾಃ ಕಾಲೇ ಕಾಲೇ ಯುಧಿಷ್ಠಿರ ॥19॥
ನೀವು ಯಾವಾಗಲೂ ಆರೋಗ್ಯವಂತರಾಗಿರಿ. ಪುನಃ ಹಿಂದೆ ಬಂದ ಮೇಲೆ ನಾನು ನಿಮ್ಮೆಲ್ಲರನ್ನೂ ನೋಡುವೆನು. ಯುಧಿಷ್ಠಿರನೇ! ಅರ್ಥಸಂಕಟವು ಒದಗಿದಾಗ ಆಪದ್ಧರ್ಮದ ವಿಷಯದಲ್ಲೂ ಎಲ್ಲಾ ಕಾರ್ಯಗಳ ವಿಷಯದಲ್ಲಿಯೂ, ನೀನು ಸರಿಯಾದ ಆಲೋಚನೆಯನ್ನು ಹೊಂದುವವನಾಗು.
ಆಪೃಷ್ಟೋಸಿತ್ವಹ ಕೌಂತೇಯ ಸ್ವಸ್ತಿ ಪ್ರಾಪ್ನುಹಿ ಭಾರತ |
ಕೃತಾರ್ಥಂ ಸ್ವಸ್ತಿಮಂತಂ ತ್ವಾ ದ್ರಕ್ಷ್ಯಾಮಃ ಪುನರಾಗತಮ್ ॥20॥
ಕೌಂತೇಯನೇ ನಿನಗೆ ನಾನು ಅನುಮತಿಯನ್ನು ಕೊಟ್ಟಿದ್ದೇನೆ. ಭಾರತನೇ! ನಿನಗೆ ಮಂಗಳವಾಗಲಿ. ಕೃತಾರ್ಥನಾಗಿ ಹಿಂದಿರುಗಿ ಬಂದು ಕ್ಷೇಮದಿಂದಿರುವ ನಿನ್ನನ್ನು ನಾನು ನೋಡುವೆನು.
ವೈಶಂಪಾಯನಃ
ಏವಮುಕ್ತಸ್ತಥೇತ್ಯುಕ್ತ್ವಾ ಪಾಂಡವಃ ಸತ್ಯವಿಕ್ರಮಃ |
ಭೀಷ್ಮದ್ರೋಣೌ ನಮಸ್ಕೃತ್ಯ ಪ್ರಾತಿಷ್ಠತ ಯುಧಿಷ್ಠಿರಃ ॥21॥
ಹೀಗೆ ಹೇಳಲ್ಪಟ್ಟ ಸತ್ಯವಿಕ್ರಮನಾದ ಪಾಂಡುಪುತ್ರನಾದ ಯುಧಿಷ್ಠಿರನು ಹಾಗೆಯೇ ಆಗಲಿ ಎಂದು ಭೀಷ್ಮ ದ್ರೋಣರಿಗೆ ನಮಸ್ಕರಿಸಿ ಅಲ್ಲಿಂದ ಹೊರಟನು.
॥ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ
ಸಪ್ತನವತಿತಮೋಧ್ಯಾಯಃ॥
॥ಅನುದ್ಯೂತಪರ್ವಣಿ ಪಂಚಮೋಧ್ಯಾಯಃ ॥5॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯವು ಮುಗಿಯಿತು.
*****

ತೊಂಬತ್ತೆಂಟನೆಯ ಅಧ್ಯಾಯ
(ಪಾಂಡವರು ಕಾಡಿಗೆ ಹೊರಡುತ್ತಿರಲು ಪೌರರ ಮತ್ತು ಕುಂತಿಯ ವಿಲಾಪ)
ವೈಶಂಪಾಯನಃ
ತತಃ ಸಂಪ್ರಸ್ಥಿತೇ ತತ್ರ ಧರ್ಮರಾಜೇ ತದಾ ನೃಪ |
ಜನಾಃ ಸಮಸ್ತಾಸ್ತಂ ದ್ರಷ್ಟುಂ ಸಮಾರುರುಹುರಾತುರಾಃ ॥1॥
ಎಲೈ ರಾಜನೇ! ಧೃತರಾಷ್ಟ್ರನು ಅಲ್ಲಿಂದ ಹೊರಡುತ್ತಿರಲು ಆಗ ಎಲ್ಲ ಜನರೂ ದುಃಖಾತುರರಾಗಿ ಮನೆಯ ಮೇಲು ಭಾಗಗಳಿಗೆ ಹತ್ತಿದರು.
ತತಃ ಪ್ರಾಸಾದವರ್ಯಾಣಿ ವಿಮಾನಶಿಖರಾಣಿ ಚ |
ಗೋಪುರಾಣಿ ಚ ಸರ್ವಾಣಿ ವೃಕ್ಷಾನನ್ಯಾಂಶ್ಚ ಸರ್ವಶಃ ॥2॥
ಅಥಾಽಧಿರುಹ್ಯ ಸಸ್ತ್ರೀಕಾ ಉದಾಸೀನಾ ವ್ಯಲೋಕಯನ್ |
ನ ಹಿ ರಥ್ಯಾಸ್ತತಃ ಶಕ್ಯಾ ಗಂತುಂ ತಾಃ ಸ್ವಜನಾಕುಲಾಃ ॥3॥
ಆಗ ಅನೇಕ ಅಂತಸ್ತಿನ ಮನೆಗಳನ್ನೂ ವಿಮಾನ ಶಿಖರಗಳನ್ನೂ ಗೋಪುರಗಳನ್ನೂ ಮರಗಳನ್ನೂ ಹತ್ತಿದ ಜನರು ಎತ್ತರವಾದ ಸ್ಥಾನದಲ್ಲಿ ಕುಳಿತು ನೋಡಿದರು. ಜನನಿಬಿಡವಾದ ರಸ್ತೆಗಳಲ್ಲಿ ಸ್ತ್ರೀಯರಾಗಲೀ ಬಾಲಕರಾಗಲೀ ಹೋಗಲು ಸಾಧ್ಯವಿರಲಿಲ್ಲ.
ಆರುಹ್ಯ ತೇನ ತೇ ಸರ್ವೇ ದೀನಾಃ ಪಶ್ಯಂತಿ ಪಾಂಡವಮ್ |
ಪದಾತಿಂ ವರ್ಜಿತರಥಂ ವಲ್ಕಲಾಜಿನವಾಸಸಮ್ ॥4॥
ಆ ಕಾರಣದಿಂದ ದೈನ್ಯದಿಂದ ಕೂಡಿದ ಅವರೆಲ್ಲರೂ ಮೇಲು ಭಾಗಗಳಿಗೆ ಹೋಗಿ ವಲ್ಕಲಾಜಿನಗಳನ್ನು ಧರಿಸಿ ರಥವನ್ನು ಬಿಟ್ಟು ಕಾಲ್ನಡಿಗೆಯಲ್ಲಿ ಹೋಗುತ್ತಿದ್ದ ಧರ್ಮರಾಜನನ್ನು ನೋಡಿದರು.
ಪಾರ್ಥಂ ದೃಷ್ಟ್ವಾ ಜನಾಃ ಸರ್ವೇ ವ್ಯಸನೈರ್ಬಹು ಪೀಡಿತಾಃ |
ಊಚುರ್ಬಹುವಿಧಾ ವಾಚಃ ಶೋಕೋಪಹತಚೇತಸಃ ॥5॥
ಧರ್ಮರಾಜನನ್ನು ನೋಡಿದ ಜನರೆಲ್ಲರೂ ದುಃಖಗಳಿಂದ ಬಹಳ ಪೀಡಿತರಾದರು. ಶೋಕದಿಂದ ಉದ್ವಿಗ್ನವಾದ ಮನಸ್ಸಿನಿಂದ ಅವರೆಲ್ಲರೂ ಬಹುವಿಧಾವಾದ ಮಾತುಗಳನ್ನು ಆಡಿದರು.

ಯಂ ಯಾಂತಮನುಯಾಂತಿ ಸ್ಮ ಚತುರಂಗಬಲಂ ಮಹತ್ |
ತಮೇಕಂ ಕೃಷ್ಣಯಾ ಸಾರ್ಧಮನುಯಾಂತಿ ಸ್ಮ ಪಾಂಡವಾಃ |
ಚತ್ವಾರೋ ಭ್ರಾತರಶ್ಚೈವ ಪುರೋಧಾಶ್ಚ ವಿಶಾಂಪತೇ ॥6॥
ಎಲೈ ರಾಜನ್! ಯಾವನು ಹೊರಟಾಗ ದೊಡ್ಡ ಚತುರಂಗಬಲವು ಅವನನ್ನು ಹಿಂಬಾಲಿಸುತ್ತಿದ್ದಿತೊ ಅಂತಹ ಧರ್ಮರಾಜನು ನಾಲ್ವರು ತಮ್ಮಂದಿರಾದ ಪಾಂಡವರಿಂದಲೂ ಪುರೋಹಿತರಿಂದಲೂ ಹಿಂಬಾಲಿಸಲ್ಪಟ್ಟು ದ್ರೌಪದಿಯ ಜೊತೆಯಲ್ಲಿ ಒಬ್ಬನೇ ಮುಂದೆ ನಡೆಯುತ್ತಿದ್ದಾನೆ.
ಭೀಮಾರ್ಜುನೌ ವಾರಯಿತಾ ನಿಕೃತ್ಯಾ ಬದ್ಧಕಾರ್ಮುಕೌ |
ಧರ್ಮ ಏವಾಸ್ಥಿತೋ ಯೇನ ತ್ಯಕ್ತಂ ರಾಜ್ಯಂ ಮಹಾತ್ಮನಾ ॥7॥
ಮುಂದೆ ಬಹಳ ಕಾರ್ಯವಿದೆ ಎಂದು ಹೇಳಿ ಭೀಮಾರ್ಜುನರನ್ನು ತಮ್ಮ ಬಿಲ್ಲುಗಳನ್ನು ಕಟ್ಟಿಡುವಂತೆ ಮಾಡಿದ, ಧರ್ಮದಲ್ಲಿಯೇ ಸ್ಥಿತನಾದ ಮಹಾತ್ಮನಾದ ಧೌಮ್ಯನು ಸಹ ರಾಜ್ಯವನ್ನು ಬಿಟ್ಟು ಹಿಂಬಾಲಿಸುತ್ತಿದ್ದಾನೆ.
ಯಾ ನ ಶಕ್ಯಾ ಪುರಾ ದ್ರಷ್ಟುಂ ಭೂತೈರಾಕಾಶಗೈರಪಿ |
ತಾಮದ್ಯ ಕೃಷ್ಣಾಂ ಪಶ್ಯಂತಿ ರಾಜಮಾರ್ಗಗತಾ ಜನಾಃ ॥8॥
ಯಾವ ದ್ರೌಪದಿಯನ್ನು ಹಿಂದೆ ಆಕಾಶದಲ್ಲಿ ಸಂಚರಿಸುವ ಪ್ರಾಣಿಗಳಿಗೂ ಸಹ ನೋಡಲು ಸಾಧ್ಯವಿರಲಿಲ್ಲವೋ ಅಂತಹ ಅವಳನ್ನು ಈ ದಿನ ರಾಜಮಾರ್ಗದಲ್ಲಿ ನಡೆಯುವ ಜನಗಳು ನೋಡುತ್ತಿದ್ದಾರೆ.
ಅಂಗರಾಗೋಚಿತಾಂ ಕೃಷ್ಣಾಂ ರಕ್ತಚಂದನಸೇವಿತಾಮ್ |
ವರ್ಷಮುಷ್ಣಂ ಚ ಶೀತಂ ಚ ನೇಷ್ಯತ್ಯಾಶು ವಿವರ್ಣತಾಮ್ ॥9॥
ದಿವ್ಯವಾದ ಅಂಗರಾಗಗಳಿಗೂ ರಕ್ತಚಂದನಕ್ಕೂ ಅರ್ಹಳಾದ ದ್ರೌಪದಿಯನ್ನು ಛಳಿಮಳೆಗಾಳಿಗಳು ವಿವರ್ಣವುಳ್ಳವಳನ್ನಾಗಿ ಮಾಡುವುವು.
ಅದ್ಯ ನೂನಂ ಪೃಥಾ ದೇವೀ ಸತ್ಯಮಾವಿಶ್ಯ ಭಾಷತೇ |
ಪುತ್ರಾನ್ ಸ್ನುಷಾಂ ಚ ದೇವೀ ತು ದ್ರಷ್ಟುಮಪ್ಯಥ ನಾರ್ಹತಿ ॥10॥
ಈ ದಿನ ನಿಶ್ಚಿತವಾಗಿ ಕುಂತಿಯು ಧೈರ್ಯವನ್ನು ಅವಲಂಬಿಸಿ ಮಾತನಾಡುತ್ತಿದ್ದಾಳೆ. ಈ ದಿನ ಆ ದೇವಿಯು ಮಕ್ಕಳನ್ನಾಗಲೀ ಸೊಸೆಯನ್ನಾಗಲೀ  ನೋಡಬಾರದು.
ನಿರ್ಗುಣಸ್ಯಾಪಿ ಪುತ್ರಸ್ಯ ಕಥಂಸ್ಯಾದ್ವಿಪ್ರವಾಸನಮ್ |
ಕಿಂ ಪುನರ್ಯಸ್ಯ ಲೋಕೋಽಯಂ ಜಿತೋ ವೃತ್ತೇನ ಕೇವಲಮ್ ॥11॥
ಗುಣರಹಿತನಾದ ಪುತ್ರನನ್ನೂ ಸಹ ರಾಜ್ಯದಿಂದ ಹೊರಗೆ ಕಳುಹಿಸಲು ಸಾಧ್ಯವಿಲ್ಲ. ಹೀಗಿರುವಾಗ ಯಾರ ಗುಣಗಳಿಂದ ಸಮಸ್ತವಾದ ಲೋಕವೇ ಜಿತವಾಗಿದೆಯೋ ಅಂತಹವನನ್ನು ರಾಜ್ಯದಿಂದ ಹೊರಗೆ ಕಳುಹಿಸುವುದು ಹೇಗೆ?
ಆನೃಶಂಸ್ಯಮನುಕ್ರೋಶೋ ಧೃತಿಃ ಶೀಲಂ ದಮಃ ಶಮಃ |
ಪಾಂಡವಂ ಶೋಭಯಂತ್ಯೇ ತೇ ಸದ್ಗುಣಾಃ ಪುರುಷೋತ್ತಮಮ್ ॥12॥
ಮಾರ್ದವ ದಯೆ ಧೈರ್ಯ ಶೀಲ ದಮ ಶಮ ಈ ಎಲ್ಲ ಸದ್ಗುಣಗಳೂ ಪುರುಷೋತ್ತಮನಾದ ಪಾಂಡವನಿಗೆ ಶೋಭೆಯನ್ನು ಉಂಟುಮಾಡುತ್ತವೆ.
ತಸ್ಮಾತ್ ತಸ್ಯೋಪಘಾತೇನ ಪ್ರಜಾಃ ಪರಮಪೀಡಿತಾಃ |
ಔದಕಾನೀವ ಸತ್ವಾನಿ ಗ್ರೀಷ್ಮೇ ಸಲಿಲಸಂಕ್ಷಯಾತ್ ॥13॥
ಆದ್ದರಿಂದ ಗ್ರಿಷ್ಮ ಋತುವಿನಲ್ಲಿ ನೀರು ಒಣಗಿಹೋಗುವಾಗ ಜಲಸಸ್ಯಗಳು ಬಾಡಿಹೋದಂತೆ ಧರ್ಮರಾಜನಿಗೆ ಉಂಟಾದ ದುಃಖದಿಂದ ಎಲ್ಲ ಪ್ರಜೆಗಳೂ ಬಹಳ ಪೀಡಿತರಾಗಿದ್ದಾರೆ.
ಪೀಡಯಾ ಪೀಡಿತಂ ಸರ್ವಂ ಜಗತ್ ತಸ್ಯ ಜಗತ್ಪತೇಃ |
ಮೂಲಸ್ಯೇವೋಪಾಘಾತೇನ ವೃಕ್ಷಃ ಪುಷ್ಪಫಲೋಪಗಃ ॥14॥
ವೃಕ್ಷದ ಮೂಲವನ್ನು ಕಡಿಯುವುದರಿಂದ ಸದ್ಯದಲ್ಲಿಯೇ ಪುಷ್ಪಫಲಗಳನ್ನು ಕೊಡಲಿರುವ ವೃಕ್ಷವೇ ನಾಶವಾಗುವಂತೆ ಜಗತ್ಪತಿಯಾದ ಅವನನ್ನು ಪೀಡಿಸುವುದರಿಂದ ಜಗತ್ತೇ ಪೀಡಿತವಾಗಿದೆ.
ಮೂಲಂ ಹ್ಯೇಷ ಮನುಷ್ಯಾಣಾಂ ಧರ್ಮರಾಜೋ ಮಹಾದ್ಯುತಿಃ |
ಪುಷ್ಪಂ ಫಲಂ ಚ ಪತ್ರಂ ಚ ಶಾಖಾಶ್ಚಾಸ್ಯೇತರೇ ಜನಾಃ ॥15॥
ಮಹಾದ್ಯುದ್ವಿತಿಯುಳ್ಳ ಈ ಧರ್ಮರಾಜನು ಎಲ್ಲ ಮನುಷ್ಯರಿಗೆ ಮೂಲವಾಗಿದ್ದಾನೆ. ಇತರ ಜನಗಳು ಆ ವೃಕ್ಷದ ಪುಷ್ಪ ಪತ್ರ ಮತ್ತು ಕೊಂಬೆಗಳಾಗಿದ್ದಾರೆ.
ತೇ ಭ್ರಾತರ ಇವ ಕ್ಷಿಪ್ರಂ ಸಪುತ್ರಾಃ ಸಹಬಾಂಧವಾಃ |
ಗಚ್ಛಂತಮನುಗಚ್ಛಾಮೋ ಯೇನ ಗಚ್ಛಂತಿ ಪಾಂಡವಃ ॥16॥
ಅವನ ತಮ್ಮಂದಿರಂತೆ ನಾವೂ ಸಹ ಪುತ್ರ ಬಾಂಧವರೊಡನೆ ಪಾಂಡವನು ಯಾವ ಮಾರ್ಗದಲ್ಲಿ ಹೋಗುವನೋ ಅದರಲ್ಲಿ ಅವನನ್ನು ನಾವೂ ಹಿಂಬಾಲಿಸೋಣ.
ಉದ್ಯಾನಾನಿ ಪರಿತ್ಯಜ್ಯ ಕ್ಷೇತ್ರಾಣಿ ಚ ಗೃಹಾಣಿ ಚ |
ಏಕದುಃಖಸುಖಾಃ ಪಾರ್ಥಮನುಯಾಮ ಸುಧಾರ್ಮಿಕಮ್ ॥17॥
ನಮ್ಮ ಉದ್ಯಾನಗಳನ್ನು ನಮ್ಮ ಮನೆಗಳನ್ನು ನಮ್ಮ ಭೂಕ್ಷೇತ್ರಗಳನ್ನು ಪರಿತ್ಯಜಿಸಿ ಧಾರ್ಮಿಕನಾದ ಧರ್ಮರಾಜನ ಜೊತೆಯಲ್ಲಿ ಸಮಾನಸುಖದುಃಖಗಳನ್ನು ಹೊಂದಿದವರಾಗಿ ಅವನನ್ನು ಹಿಂಬಾಲಿಸೋಣ.

ಸಮುದ್ಧೃತನಿಧಾನಾನಿ ಪರಿಧ್ವಸ್ತಾಜಿರಾಣಿ ಚ |
ಉಪಾತ್ತಧನಧಾನ್ಯಾನಿ ಹೃತಸಾರಾಣಿ ಸರ್ವಶಃ ॥18॥
ರಜಸಾಽಪ್ಯವಕೀರ್ಣಾನಿ ಪರಿತ್ಯಕ್ತಾನಿ ದೈವತೈಃ |
ಮೂಷಕೈಃ ಪರಿಧಾವದ್ಭಿರುಪಲೈರಾವೃತಾನಿ ಚ ॥19॥
ಸರ್ವತೋದಕಧೂಮಾನಿ ಹೀನಸಮ್ಮಾರ್ಜನಾನಿ ಚ |
ಪ್ರನಷ್ಟಬಲಿಕರ್ಮೇಜ್ಯಾಮಂತ್ರಹೋಮಜಪಾನಿ ಚ ॥20॥
ದುಷ್ಕಾಲ ಇವ ಭಗ್ನಾನಿ ಭಿನ್ನಭಾಜನವಂತಿ ಚ |
ಅಸ್ಮತ್ತ್ಯಕ್ತಾನಿ ವೇಶ್ಮಾನಿ ಸೌಬಲಃ ಪ್ರತಿಪದ್ಯತಾಮ್ ॥21॥
ಎಲ್ಲ ನಿಧಿಗಳನ್ನು ಬರಿದುಮಾಡಿದಂತಹ, ನಾಶವಾದ ಮನೆಗಳುಳ್ಳ, ಧನಧಾನ್ಯಗಳನ್ನೂ ಶ್ರೇಷ್ಠವಾದ ಪದಾರ್ಥಗಳನ್ನೂ ಎಲ್ಲ ಕಡೆಗಳಿಂದಲೂ ತೆಗೆಯಲ್ಪಟ್ಟಿರುವ, ಎಲ್ಲ ಕಡೆಗಳಲ್ಲಿಯೂ ಕಸದಿಂದ ತುಂಬಿರುವ, ದೇವತೆಗಳಿಂದ ಪರಿತ್ಯಕ್ತವಾದ, ಇಲಿಗಳ ಓಡಾಟಕ್ಕೆ ಪಾತ್ರವಾದ, ಕಲ್ಲುಗಳಿಂದ ಆವೃತವಾದ, ಎಲ್ಲರಿಗೂ ಹಿಂಸೆಯನ್ನು ಕೊಡುವ ಧೂಮದಿಂದ ಕೂಡಿರುವ, ಸಮ್ಮಾರ್ಜನಾದಿಗಳಿಂದ ಹೀನವಾದ, ಬಲಿಕರ್ಮಗಳು ಯಾಗಗಳು ಮಂತ್ರಗಳು ಹೋಮ ಜಪಗಳು ಇವುಗಳಿಂದ ರಹಿತವಾದ, ದುಷ್ಕಾಲದಿಂದಲೋ ಎಂಬಂತೆ ಮುರಿದ ಮತ್ತು ಒಡೆದ ಪಾತ್ರೆಗಳಿಂದ ತುಂಬಿದ ನಮ್ಮಿಂದ ಪರಿತ್ಯಕ್ತವಾದ ಗೃಹಗಳನ್ನು ಶಕುನಿಯು ಹೊಂದಲಿ.
ವನಂ ನಗರಮದ್ಯಾಸ್ತು ಯತ್ರ ಗಚ್ಛಂತಿ ಪಾಂಡವಾಃ |
ಅಸ್ಮಾಭಿಶ್ಚ ಪರಿತ್ಯಕ್ತಂ ಪುರಂ ಸಂಪದ್ಯತಾಂ ವನಮ್ ॥22॥
ವನಂ ಬಿಲಾನಿ ದಂಷ್ಟ್ರೀಣಿ ಸರ್ವಸ್ಥಾನಾನಿ ಪಕ್ಷಿಣಃ |
ತ್ಯಜಂತ್ವಸ್ಮದ್ಭಯಾದ್ಭೀತಾ ಗಜಾಃ ಸಿಂಹಾಶ್ಚ ಗಾಸ್ತಥಾ ॥23॥
ಪಾಂಡವರು ಎಲ್ಲಿ ಹೋಗುತ್ತಾರೆಯೋ ಆ ವನವು ಈ ದಿನ ನಗರವಾಗಲಿ. ನಮ್ಮಿಂದ ಪರಿತ್ಯಕ್ತವಾದ ಈ ಪುರವು ವನವಾಗಲಿ. ಮಾಂಸಹಾರಿ ಪ್ರಾಣಿಗಳು ಕಾಡನ್ನು ಮತ್ತು ಬಿಲವನ್ನು ತ್ಯಜಿಸಲಿ. ಉಗ್ರವಾದ ಪಕ್ಷಿಗಳು ಕಾಡಿನಲ್ಲಿರುವ ತಮ್ಮ ಸ್ಥಾನವನ್ನು ತ್ಯಜಿಸಲಿ. ನಮ್ಮ ಭಯದಿಂದ ಭೀತವಾದ ಗಜಗಳು ಸಿಂಹಗಳು ಮತ್ತು ಅರಣ್ಯಪ್ರಾಣಿಗಳು ಕಾಡಿನಲ್ಲಿ ತಮ್ಮ ಸ್ಥಾನಗಳನ್ನು ತ್ಯಜಿಸಲಿ.
ಅನಾಕ್ರಾಂತಂ ಪ್ರಪದ್ಯಂತಾಂ ಸೇವ್ಯಮಾನಂ ತ್ಯಜಂತು ಚ |
ವಯಂ ಪಾರ್ಥೈರ್ವನೇ ಸಮ್ಯಕ್ ಸಹ ವತ್ಸ್ಯಾಮ ನಿರ್ವೃತಾಃ ॥24॥
ಅವು ಕಾಡಿನಲ್ಲಿ ನಾವು ಹೋಗದಿರುವಸ್ಥಾನವನ್ನು ಆಕ್ರಮಿಸಲಿ. ನಾವು ವಾಸಿಸುವ ಸ್ಥಾನವನ್ನು ತ್ಯಜಿಸಲಿ. ನಾವು ಪಾಂಡವರ ಜೊತೆಯಲ್ಲಿ ಕಾಡಿನಲ್ಲಿ ಸುಖದಿಂದ ವಾಸಮಾಡುವೆವು.
ಇತ್ಯೇವಂ ವಿವಿಧಾ ವಾಚೋ ನಾನಾಜನಸಮೀರಿತಾಃ |
ಶುಶ್ರಾವ ಪಾರ್ಥಃ ಶ್ರುತ್ವಾ ಚ ನ ವಿಚಕ್ರೇಽಸ್ಯ ಮಾನಸಮ್ ॥25॥
ಧರ್ಮರಾಜನು ಈ ರೀತಿಯಾಗಿ ನಾನಾ ಜನರು ಆಡಿದ ವಿವಿಧಮಾತುಗಳನ್ನು ಕೇಳಿದನು. ಆದರೂ ಅವನ ಮನಸ್ಸಿನಲ್ಲಿ ಯಾವುದೇ ವಿಕಾರವೂ ಆಗಲಿಲ್ಲ.
ತತಃ ಪ್ರಾಸಾದಸಂಸ್ಥಾಸ್ತು ಸಮಂತಾದ್ವೈ ಗೃಹೇ ಗೃಹೇ |
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚೈವ ಯಾಃ ಸ್ಥಿತಾಃ ॥26॥
ತತಃ ಪ್ರಾಸಾದಜಾಲಾನಿ ಉತ್ಪಾಟ್ಯಾವರಣಾನಿ ಚ |
ದದೃಶುಃ ಪಾಂಡವಾನ್ ದಾಂತಾನ್ ರೌರವಾಜಿನವಾಸಸಃ ॥27॥
ಆಗ ಪ್ರಾಸಾದಗಳಲ್ಲಿ ವಾಸಿಸುವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರವರ್ಗಗಳಿಗೆ ಸೇರಿದ ಪ್ರಜೆಗಳೆಲ್ಲರೂ ಮನೆ ಮನೆಗಳಲ್ಲಿ ಮಹಡಿಯನ್ನು ಹತ್ತಿ ಕಿಟಕಿಯ ಬಾಗಿಲುಗಳನ್ನು ತೆರೆದು ರೌರವಾಜಿನವಸ್ತ್ರಗಳನ್ನು ಧರಿಸಿದ ವಿನೀತರಾದ ಪಾಂಡವರನ್ನು ನೋಡಿದರು.
ಕೃಷ್ಣಾಂ ಚಾದೃಷ್ಟಪೂರ್ವಾಂ ತಾಂ ವ್ರಜಂತೀಂ ಪದ್ಭಿರೇವ ಚ |
ಏಕವಸ್ತ್ರಾಂ ರುದಂತೀ ತಾಂ ಮುಕ್ತಕೇಶೀಂ ರಜಸ್ವಲಾಮ್ ॥28॥
ದೃಷ್ಟ್ವಾ ತದಾ ಸ್ತ್ರಿಯಃ ಸರ್ವಾ ವಿವರ್ಣವದನಾ ಭೃಶಮ್ |
ವಿಲಪ್ಯ ಬಹುಶೋ ಮೋಹಾದ್ ದುಃಖಶೋಕಸಮಾಚಿತಾಃ |
ಹಾ ಹಾ ಧಿಗ್ಧಿಗ್ಧಿಗಿತ್ಯುಕ್ತ್ವಾ ನೇತ್ರೈರಶ್ರೂಣ್ಯವರ್ತಯನ್ ॥29॥
ತಾವು ಹಿಂದೆ ನೋಡದಿದ್ದಂತಹ ಪಾದಗಳಿಂದಲೇ ನಡೆದು ಹೋಗುತ್ತಿದ್ದಂತಹ ರಜಸ್ವಲೆಯಾಗಿ ಏಕವಸ್ತ್ರವನ್ನು ಧರಿಸಿ ತಲೆಕೂದಲುಗಳನ್ನು ಕೆದರಿಕೊಂಡು ಅಳುತ್ತಾ ನಡೆಯುತ್ತಿರುವ ದ್ರೌಪದಿಯನ್ನು ನೋಡಿ ಎಲ್ಲ ಸ್ತ್ರೀಯರೂ ಮುಖದ ಕಾಂತಿಯನ್ನು ಕಳೆದುಕೊಂಡು ಬಹಳವಾಗಿ ವಿಲಾಪವನ್ನು ಮಾಡಿ ಮೋಹದಿಂದಲೂ ದುಃಖಶೋಕಗಳಿಂದಲೂ ಕೂಡಿದವರಾಗಿ ಅಯ್ಯೋ ಧಿಕ್ಕಾರವಿರಲಿ ಧಿಕ್ಕಾರವಿರಲಿ ಎಂದು ಹೇಳುತ್ತಾ ತಮ್ಮ ಕಣ್ಣುಗಳಿಂದ ನೀರನ್ನು ಸುರಿಸಿದರು.
ಜನಸ್ಯಾಥ ವಚಃ ಶ್ರುತ್ವಾ ಸ ರಾಜಾ ಭ್ರಾತೃಭಿಃ ಸಹ |
ಉದ್ದಿಶ್ಯ ವನವಾಸಾಯ ಪ್ರತಸ್ಥೇ ಕೃತನಿಶ್ಚಯಃ ॥30॥
ಧರ್ಮರಾಜನಾದರೋ ತನ್ನ ಜನಗಳ ಮಾತುಗಳನ್ನೇ ಕೇಳುತ್ತಲೇ ವನವಾಸವನ್ನು ಮಾಡಲು ನಿರ್ಧರಿಸಿ ತಮ್ಮಂದಿರ ಜೊತೆಯಲ್ಲಿ ಮುಂದೆ ನಡೆದನು.
ತಸ್ಮಿನ್ ಸಂಪ್ರಸ್ಥಿತೇ ಕೃಷ್ಣಾ ಪೃಥಾಂ ಪ್ರಾಪ್ಯ ಯಶಸ್ವಿನೀಮ್ |

ಅಪೃಚ್ಛದ್ ಭೃಶದುಃಖಾರ್ತಾ ಯಾಶ್ಚಾನ್ಯಾಸ್ತತ್ರ ಯೋಷಿತಃ ॥31॥
ಧರ್ಮರಾಜನು ಹಾಗೆ ಹೊರಡುತ್ತಿರಲು ಯಶಸ್ವಿನಿಯಾದ ದ್ರೌಪದಿಯು ಕುಂತಿಯನ್ನು ಮತ್ತು ಉಳಿದ ಅಲ್ಲಿದ್ದ ವನಿತೆಯರನ್ನು ಸಂಧಿಸಿ ಬಹಳ ದುಃಖಾರ್ತಳಾಗಿ ಅನುಮತಿಯನ್ನು ಕೇಳಿದಳು.
ಯಥಾರ್ಹಂ ವಂದನಾಶ್ಲೇಷಾನ್ ಕೃತ್ವಾ ಗಂತುಮಿಯೇಷ ಸಾ |
ತತೋ ನಿನಾದಃ ಸುಮಹಾನ್ ಪಾಂಡವಾಂತಃಪುರೇಽಭವತ್ ॥32॥
ಯಥಾಯೋಗ್ಯವಾಗಿ ನಮಸ್ಕಾರಾದಿಗಳನ್ನು ಆಲಿಂಗನಾದಿಗಳನ್ನು ಮಾಡಿದ ಅವಳು ಅಲ್ಲಿಂದ ಹೊರಡಲು ಬಯಸಿದಳು. ಆಗ ಪಾಂಡವರ ಅಂತಃಪುರದಲ್ಲಿ ದೊಡ್ಡ ದುಃಖದನಾದವು ಉಂಟಾಯಿತು.
ಕುಂತೀ ಚ ಭೃಶಸಂತಪ್ತಾ ದ್ರೌಪದೀಂ ಪ್ರೇಕ್ಷ್ಯ ಗಚ್ಛತೀಮ್ |
ಶೋಕವಿಹ್ವಲಯಾ ವಾಚಾ ಕೃಚ್ಛ್ರಾದ್ ವಚನಮಬ್ರವೀತ್ ॥33॥
ಬಹಳಸಂತಪ್ತಳಾದ ಕುಂತಿಯೂಸಹ ಹೊರಟಿರುವ ದ್ರೌಪದಿಯನ್ನು ನೋಡಿ ಶೋಕವಿಹ್ವಲಳಾಗಿ ಬಹಳ ಕಷ್ಟದಿಂದ ಅವಳನ್ನು ಕುರಿತು ಮಾತನಾಡಿದಳು.
ವತ್ಸೇ ಶೋಕೋ ನ ತೇ ಕಾರ್ಯಃ ಪ್ರಾಪ್ಯೇದಂ ವ್ಯಸನಂ ಮಹತ್ |
ಸ್ತ್ರೀಧರ್ಮಾನಮಭಿಜಾನಾಸಿ ಶೀಲಾಚಾರವತೀ ತಥಾ ॥34॥
ಮಗಳೇ! ಈ ದೊಡ್ಡ ಕಷ್ಟವನ್ನು ಹೊಂದಿ ಶೋಕಪಡಬೇಡ. ಶೀಲಾಚಾರವುಳ್ಳ ನೀನು ಸ್ತ್ರೀಧರ್ಮಗಳನ್ನು ಚೆನ್ನಾಗಿ ತಿಳಿದವಳಾಗಿದ್ದೀಯೆ.
ನ ತ್ವಾಂ ಸಂದೇಷ್ಟುಮರ್ಹಾಮಿ ಭರ್ತೄನ್ ಪ್ರತಿ ಶುಚಿಸ್ಮಿತೇ |
ಸಾಧ್ವೀ ಗುಣಸಮಾಧಾನೈರ್ಭೂಷಿತಂ ತೇ ಕುಲದ್ವಯಮ್ ॥35॥
ಎಲೌ ಶುಚಿಸ್ಮಿತೆಯೇ! ಪತಿಗಳ ಜೊತೆಯಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ನಿನಗೆ ಹೇಳಲು ನಾನು ಅರ್ಹಳಲ್ಲ. ಪತಿವ್ರತೆಯಾದ ನೀನು ನಿನ್ನ ಗುಣ ಮತ್ತು ಸಮಾಧಾನದಿಂದ ಎರಡು ಕುಲಗಳನ್ನು ಅಲಂಕರಿಸಿದ್ದೀಯೆ.
ಸಭಾಗ್ಯಾಃ ಕುರವಶ್ಚೇಮೇ ಯೇ ನ ದಗ್ಧಾಸ್ತ್ವಯಾಽನಘೇ |
ಅರಿಷ್ಟಂ ವ್ರಜ ಪಂಥಾನಂ ಮದನುಧ್ಯಾನಬೃಂಹಿತಾ ॥36॥
ಪರಿಶುದ್ಧಳಾದವಳೇ! ನಿನ್ನಿಂದ ದಗ್ಧರಾಗದ ಈ ಕುರುಗಳನ್ನು ಭಾಗ್ಯವಂತರೆಂದು ತಿಳಿಯಬೇಕು. ನನ್ನ ಆಶೀರ್ವಾದದೊಂದಿಗೆ ಯಾವ ತೊಂದರೆಯೂ ಉಂಟಾಗದಂತೆ ನಿನ್ನ ದಾರಿಯಲ್ಲಿ ನೀನು ಮುಂದೆ ಸಾಗು.
ಭಾವಿನ್ಯರ್ಥೇ ಹಿ ಸತ್ಸ್ತ್ರೀಣಾಂ ವೈಕ್ಲವ್ಯಂ ನೋಪಜಾಯತೇ |
ಗುರುಧರ್ಮಾಭಿಗುಪ್ತಾ ಚ ಶ್ರೇಯಃ ಕ್ಷಿಪ್ರಮವಾಪ್ಸ್ಯಸಿ ॥37॥
ಅಪರಿಹಾರ್ಯವಾದ ಕಾರ್ಯಗಳ ವಿಷಯದಲ್ಲಿ ಸಾಧುಸ್ವಭಾವದ ಸ್ತ್ರೀಯರ ಮನಸ್ಸಿನಲ್ಲಿ ಎಂದೂ ವೈಕ್ಲವ್ಯವು ಉಂಟಾಗುವುದಿಲ್ಲ. ಶ್ರೇಷ್ಠವಾದ ಧರ್ಮದಿಂದ ರಕ್ಷಿತಳಾದ ನೀನು ಬೇಗ ಶ್ರೇಯಸ್ಸನ್ನು ಹೊಂದುವಿ.
ಸಹದೇವಶ್ಚ ಮೇ ಪುತ್ರಃ ಸದಾಽವೇಕ್ಷ್ಯೋ ವನೇ ವಸನ್ |
ಯಥೇದಂ ವ್ಯಸನಂ ಪ್ರಾಪ್ಯ ನಾವಸೀದೇನ್ಮಹಾಮನಾಃ ॥38॥
ನನ್ನ ಮಗನಾದ ಉದಾರಸ್ವಭಾವದ ಸಹದೇವನು ಇಂತಹ ಕಷ್ಟವನ್ನು ಹೊಂದಿ ನಲುಗಿ ಹೋಗದಂತೆ ನೀನು ಅವನನ್ನು ಯಾವಾಗಲೂ ನೋಡಿಕೊಳ್ಳಬೇಕು.
ತಥೇತ್ಯುಕ್ತ್ವಾ ತು ಸಾ ದೇವೀ ಸ್ರವನ್ನೇತ್ರಜಲಾವಿಲಾ |
ಶೋಣಿತಾಕ್ತೈಕವಸನಾ ಮುಕ್ತಕೇಶ್ಯಭಿನಿರ್ಯಯೌ ॥39॥
ಹಾಗೆಯೇ ಆಗಲೆಂದು ಹೇಳಿ ದ್ರೌಪದೀದೇವಿಯು ನೀರನ್ನು ಸುರಿಸುವ ಕಣ್ಣುಗಳಿಂದ ಮಂಕಾದ ದೃಷ್ಟಿಯುಳ್ಳವಳಾಗಿ ರಕ್ತಸಿಕ್ತವಾದ ಒಂದು ವಸ್ತ್ರವನ್ನು ಧರಿಸಿ ಕೇಶಗಳನ್ನು ಕೆದರಿಕೊಂಡು ಅಲ್ಲಿಂದ ಹೊರಟಳು.
ತಾಂ ಕ್ರೋಶಂತೀಂ ಪೃಥಾ ದುಃಖಾದನುವವ್ರಾಜ ಗಚ್ಛತೀಮ್ |
ಅಥಾಪಶ್ಯತ್ ಸುತಾನ್ ಸರ್ವಾನ್ ಗತಾಭರಣವಾಸಸಃ ॥40॥
ಅಳುತ್ತಾ ಮುಂದೆ ನಡೆಯುತ್ತಿರುವ ದ್ರೌಪದಿಯನ್ನು ಕುಂತಿಯು ಹಿಂಬಾಲಿಸಿ ವಸತ್ರಭರಣರಹಿತರಾಗಿ ನಡೆಯುತ್ತಿರುವ ತನ್ನ ಎಲ್ಲಾ ಮಕ್ಕಳನ್ನೂ ನೋಡಿದಳು.
ರುರುಚರ್ಮಾವೃತತನೂನ್ ಹ್ರಿಯಾ ಕಿಂಚಿದವಾಙ್ಮುಖಾನ್ |
ಪರೈಃ ಪರೀತಾನ್ ಸಂಹೃಷ್ಟೈಃ ಸುಹೃದ್ಭಿಶ್ಚಾನುಶೋಚತಃ |
ಸಸ್ವಜಾನಾಽವದಚ್ಛೋಕಾತ್ ತತ್ತದ್ವಿಲಪತೀ ಬಹು ॥41॥
ರುರುಚರ್ಮವನ್ನು ಧರಿಸಿ ನಾಚಿಕೆಯಿಂದ ಮುಖವನ್ನು ಸ್ವಲ್ಪತಗ್ಗಿಸಿ ಶೋಕಪಡುತ್ತಿರುವ ಹಿತೈಷಿಗಳಿಂದಲೂ ಹರ್ಷಪಡುತ್ತಿರುವ ಶತ್ರುಗಳಿಂದಲೂ ಪರಿವೃತರಾಗಿ ನಡೆಯುತ್ತಿರುವ ಅವರನ್ನು ನೋಡಿ ಅವರನ್ನು ಆಲಿಂಗಿಸಿ ಬಹುವಿಧವಾಗಿ ವಿಲಾಪಮಾಡುತ್ತಾ ಶೋಕದಿಂದ ಮಾತನಾಡಿದಳು.
ಕುಂತೀ
ಕಥಂ ಸದ್ಧರ್ಮಚಾರಿತ್ರವೃತ್ತಸ್ಥಿತಿವಿಭೂಷಿತಾನ್ |
ಅಕ್ಷುದ್ರಾಂಶ್ಚೈವ ಭಕ್ತಾಂಶ್ಚ ದೈವತೇಜ್ಯಾಪರಾನ್ ಸದಾ |
ಸದಾ ವ್ಯಸನಮಭ್ಯಾಗಾದ್ ವಿಧೇಃ ಕೋಽಯಂ ವಿಪರ್ಯಯಃ ॥42॥
ಸದ್ಧರ್ಮ ಚಾರಿತ್ರ್ಯ ನಡತೆ ಸುಸ್ಥಿತಿಯಿಂದ ವಿಭೂಷಿತರಾದ ಕ್ಷುದ್ರರಲ್ಲದ ಭಗವದ್ಭಕ್ತರಾದ ಯಾವಾಗಲೂ

ದೇವತಾಪೂಜಾತತ್ಪರರಾದ ನನ್ನ ಮಕ್ಕಳಿಗೆ ಇಂತಹ ವ್ಯಸನವು ಹೇಗೆ ಪ್ರಾಪ್ತವಾಯಿತು? ಎಲೈ ವಿಧಿಯೇ ಇದೇನು ವಿಪರ್ಯಯ?
ಕಸ್ಯಾಪಧ್ಯಾನಜಂ ಚೇದಂ ಧಿಯಾ ಪಶ್ಯಾಮಿ ನೈವ ತತ್ |
ಸ್ಯಾತ್ತು ಮದ್ಭಾಗ್ಯದೋಷೋಽಯಂ ಯಾಽಹಂ ಯುಷ್ಮಾನಜೀಜನಮ್ ॥
ಇದು ಯಾರ ದುರ್ಧ್ಯಾನದ ಫಲವೆಂದು ಎಷ್ಟು ಯೋಚಿಸಿದರೂ ನನಗೆ ತಿಳಿಯುತ್ತಿಲ್ಲ. ಬಹುಶಃ ಉತ್ತಮ ಗುಣಗಳುಳ್ಳ ನಿಮ್ಮನ್ನು ದುಃಖಾಯಾಸವನ್ನು ಅನುಭವಿಸುವ ಸಲುವಾಗಿಯೇ ಮಕ್ಕಳನ್ನಾಗಿ ಪಡೆದ ನನ್ನ ದೌರ್ಭಾಗ್ಯವೇ ದೋಷವೆಂದು ಭಾವಿಸುತ್ತೇನೆ.
ದುಃಖಾಯಾಸಭುಜೋಽತ್ಯರ್ಥಂ ಯುಕ್ತಾಂಶ್ಚಾಪ್ಯುತ್ತಮೈರ್ಗುಣೈಃ |
ಕಥಂ ವತ್ಸ್ಯಥ ದುರ್ಗೇಷು ವನೇಷ್ವೃದ್ಧಿವಿನಾಕೃತಾಃ |
ಪರಾಕ್ರಮಬಲೋತ್ಸಾಹತೇಜೋಭಿರಕೃಶಾಃ ಕೃಶಾಃ ॥44॥
ಪುತ್ರರೇ! ಸಮೃದ್ಧಿ ಹೀನರಾಗಿ ಪರಾಕ್ರಮ ಬಲ ಉತ್ಸಾಹ ತೇಜಸ್ಸುಗಳಿಂದ ತುಂಬಿದವರಾದ ನೀವು ಕೃಶರಾಗಿ ಅಗಮ್ಯವಾದ ಕಾಡುಗಳಲ್ಲಿ ಹೇಗೆ ವಾಸಿಸುವಿರಿ?
ಯದ್ಯೇತದಹಮಜ್ಞಾಸ್ಯಂ ವನವಾಸಂ ಹಿ ವೋ ಧ್ರುವಮ್ |
ಶತಶೃಂಗಾನ್ಮೃತೇ ಪಾಂಡೌ ನಾಗಮಿಷ್ಯಂ ಗಜಾಹ್ವಯಂ ॥45॥
ನಾನು ಈ ನಿಮ್ಮ ವನವಾಸವನ್ನು ಮೊದಲೇ ನಿಶ್ಚಿತವಾಗಿ ತಿಳಿದಿದ್ದರೆ. ಪಾಂಡುವು ಮೃತನಾದ ಮೇಲೆ ಶತಶೃಂಗ ಪರ್ವತದದಿಂದ ಹಸ್ತಿನಪುರಕ್ಕೆ ಬರುತ್ತಲೇ ಇರಲಿಲ್ಲ.
ಧನ್ಯಂ ವಃ ಪಿತರಂ ಮನ್ಯೇ ತಪಸ್ತಪ್ತ್ವಾ ಮೃತಂ ತದಾ |
ಯಮಪುತ್ರಾಧಿಮಪ್ರಾಪ್ಯ ಸ್ವರ್ಗೇಚ್ಛಾಮಕರೋತ್ ಪ್ರಿಯಾಮ್ ॥46॥
ತಪಸ್ಸನ್ನುಮಾಡಿ ಮೃತನಾದ ನಿಮ್ಮ ತಂದೆಯು ಧನ್ಯನೆಂದು ಭಾವಿಸುತ್ತೇನೆ. ನಕುಲ ಸಹದೇವರ ಮಾತೆಯಾದ ಪ್ರಿಯೆಯಾದ ಮಾದ್ರಿಯ ಆಸೆಯನ್ನು ಪೂರೈಸಿಕೊಳ್ಳದೆ ಅವನು ಸ್ವರ್ಗದ ಆಸೆಯನ್ನೇ ಮಾಡಿದನು.
ಧನ್ಯಾಂ ಚಾತೀಂದ್ರಿಯಜ್ಞಾನಾಂ ಪ್ರಾಪ್ತಾಂ ಚೈವ ಪರಾಂ ಗತಿಮ್ |
ಮನ್ಯೇಽದ್ಯ ಮಾದ್ರೀಂ ಧರ್ಮಜ್ಞಾಂ ಕಲ್ಯಾಣೀಂ ಸರ್ವಥೈವ ತು ॥47॥
ನಾನು ಈ ದಿನ ಧರ್ಮಜ್ಞಳೂ ಕಲ್ಯಾಣಿಯೂ ಅತೀಂದ್ರಿಯ ಜ್ಞಾನವನ್ನು ಹೊಂದಿ ಪರಗತಿಯನ್ನು ಪಡೆದವಳೂ ಆದ ಮಾದ್ರಿಯನ್ನು ಎಲ್ಲ ರೀತಿಯಿಂದಲೂ ಧನ್ಯಳೆಂದು ಭಾವಿಸುತ್ತೇನೆ.
ರತ್ಯಾ ಗತ್ಯಾ ಚ ಮತ್ಯಾ ಚ ಮಾದ್ರ್ಯಾಹಮಭಿಸಂಧಿತಾ |
ಜೀವಿತಪ್ರಿಯತಾಮೇತಾಂ ಧಿಗ್ ಧಿಙ್ಮಾಂ ಕ್ಲೇಶಭಾಗಿನೀಮ್ ॥48॥
ರತಿ ಗತಿ ಮತ್ತು ಬುದ್ಧಿಗಳಿಂದ ನಾನು ಮಾದ್ರಿಯಿಂದ ವಂಚಿಸಲ್ಪಟ್ಟೆ. ನನ್ನ ಜೀವನದ ಆಸೆಗೆ ಧಿಕ್ಕಾರವಿರಲಿ. ಕ್ಲೇಶ ಭಾಗಿನಿಯಾದ ನನಗೂ ಧಿಕ್ಕಾರವಿರಲಿ.
ಪುತ್ರಕಾನ್ ನ ವಿಹಾಸ್ಯೇಽಹಂ ಕೃಚ್ಛ್ರಲಬ್ಧಾನ್ ಪ್ರಿಯಾನ್ ಸತಃ |
ಸಾಹಂ ಯಾಸ್ಯಾಮಿ ಹಿ ವನಂ ಹಾ ಕೃಷ್ಣೇ ಕಿಂ ಜಹಾಸಿ ಮಾಮ್ ॥
ಕಷ್ಟದಿಂದ ಪಡೆದ ಪ್ರಿಯರಾದ ನನ್ನ ಮಕ್ಕಳನ್ನು ನಾನು ಬಿಡಲಾರೆ. ನಾನೂ ಸಹ ಕಾಡಿಗೆ ಹೋಗುವೆನು. ಅಯ್ಯೋ ದ್ರೌಪದಿಯೇ ಏಕೆ ನನ್ನನ್ನು ತೊರೆಯುತ್ತಿರುವೆ.
ಅಂತವತ್ಯಸುಧರ್ಮೇಽಸ್ಮಿನ್ ಧಾತ್ರಾ ಕಿಂನು ಪ್ರಮಾದತಃ |
ಮಮಾಂತೋ ನೈವ ವಿಹಿತಸ್ತೇನಾಯುರ್ನ ಜಹಾತಿ ಮಾಮ್ ॥50॥
ಪ್ರಾಣಧರ್ಮವು ನಾಶವುಳ್ಳದ್ದಾದರೂ ವಿಧಿಯು ಏಕೆ ಮರೆತು ನನ್ನ ವಿನಾಶವನ್ನು ಬರೆಯಲಿಲ್ಲ? ಆದ್ದರಿಂದ ನನ್ನ ಆಯುಸ್ಸು ಮುಗಿಯುತ್ತಿಲ್ಲ.
ಹಾ ಕೃಷ್ಣ ದ್ವಾರಕಾವಾಸಿನ್ ಕ್ವಾಸಿ ಸಂಕರ್ಷಣಾನುಜ |
ಕಸ್ಮಾನ್ನ ತ್ರಾಯಸೇ ದುಃಖಾನ್ಮಾಂ ಚೇಮಾಂಶ್ಚ ನರೋತ್ತಮಾನ್ ॥51॥
ಅಯ್ಯೋ ದ್ವಾರಕಾವಾಸಿಯಾದ ಕೃಷ್ಣನೇ! ಬಲರಾಮನ ತಮ್ಮನೇ! ನೀನು ಎಲ್ಲಿದ್ದೀಯೆ? ದುಃಖದಲ್ಲಿ ಮುಳುಗಿದ ನನ್ನನ್ನೂ ಈ ಪುರುಷ ಶ್ರೇಷ್ಠರನ್ನೂ ನೀನು ಏಕೆ ಕಾಪಾಡುವುದಿಲ್ಲ?
ಅನಾದಿನಿಧನಂ ತ್ವಾಂ ಯೇ ಬುಧ್ವ್ಯಾ ಯಂತಿ ನರಾಃ ಸದಾ |
ತಾಂಸ್ತ್ವಂ ಪಾಸೀತ್ಯಯಂ ವಾದಃ ಸ ಗತೋ ವ್ಯರ್ಥತಾಂ ಕಥಮ್ ॥
ಅನಾದಿನಿಧನನಾದ ನಿನ್ನನ್ನು ಯಾರು ತಮ್ಮ ಬುದ್ಧಿಯಿಂದ ಶರಣು ಹೊಂದುತ್ತಾರೋ ಅಂತಹವರನ್ನು ನೀನು ಯಾವಾಗಲೂ ರಕ್ಷಿಸುತ್ತೀಯೆ ಎಂಬ ಮಾತು ಈ ದಿನ ಹೇಗೆ ಸುಳ್ಳಾಯಿತು?
ಇಮೇ ಸ್ವಧರ್ಮಮಾಹಾತ್ಮ್ಯಾದ್ ಯಶೋವೀರ್ಯಾನುವರ್ತಿನಃ |
ನಾರ್ಹಂತಿ ವ್ಯಸನಂ ಭೋಕ್ತುಂ ತಸ್ಮಾದ್ ವೈ ಕ್ರಿಯತಾಂ ದಯಾ ॥53॥
ಪ್ರಭುವೇ! ತಮ್ಮ ಧರ್ಮದಿಂದಲೂ ತಮ್ಮ ಮಹಿಮೆಯಿಂದಲೂ ಯಶಸ್ಸನ್ನೂ ಪರಾಕ್ರಮವನ್ನೂ ಅನುಸರಿಸಿಕೊಂಡಿರುವ ಈ ನನ್ನ ಮಕ್ಕಳು ಹೀಗೆ ಕಷ್ಟ ಪಡಲು ಅರ್ಹರಲ್ಲ. ಆದ್ದರಿಂದ ದಯೆಯನ್ನು ತೋರಿಸು.
ಸೇಯಂ ನೀತ್ಯರ್ಥವಿಜ್ಞೇಷು ಭೀಷ್ಮದ್ರೋಣಕೃಪಾದಿಷು |
ಸ್ಥಿತೇಷು ಕುಲನಾಥೇಷು ಕಥಮಾಪದುಪಾಗತಾ ॥54॥
ನೀತ್ಯರ್ಥವಿಶಾರದರಾದ ಕುಲನಾಥರಾದ ಭೀಷ್ಮದ್ರೋಣಕೃಪಾದಿಗಳು ಇರುವಾಗ ಇಂತಹ ಆಪತ್ತು ಹೇಗೆ ಉಂಟಾಯಿತು?
ಹಾ ಪಾಂಡೋ ಹಾ ಮಹಾರಾಜ ಕ್ವಾಸಿ ಕಿಂ ಸಮುಪೇಕ್ಷಸೇ |

ಪುತ್ರಾನ್ ನಿರ್ವಾಸ್ಯತಃ ಸಾಧೂನರಿಭಿರ್ದ್ಯೂತವಂಚಿತಾನ್ ॥55॥
ಅಯ್ಯೋ ಪಾಂಡುಮಹಾರಾಜನೇ! ಎಲ್ಲಿದ್ದೀಯೆ? ಸಜ್ಜನರಾದ ನಿನ್ನ ಪುತ್ರರನ್ನು ಶತ್ರುಗಳು ದ್ಯೂತದಲ್ಲಿ ವಂಚಿಸಿ ಕಾಡಿಗೆ ಕಳುಹಿಸುತ್ತಿರುವಾಗ ನೀನು ಏಕೆ ಉಪೇಕ್ಷೆಮಾಡುತ್ತಿದ್ದೀಯೆ?
ಸಹದೇವ ನಿವರ್ತಸ್ವ ನನು ತ್ವಮಸಿ ಮೇ ಪ್ರಿಯೇ |
ಶರೀರಾದಪಿ ಮಾದ್ರೇಯ ಮಾಂ ಮಾ ತ್ಯಾಕ್ಷೀಃ ಕುಪುತ್ರವತ್ ॥56॥
ಸಹದೇವನೇ! ನೀನಾದರೂ ಹಿಂದಿರುಗು. ನೀನು ಯಾವಾಗಲೂ ನನಗೆ ಪ್ರಿಯವನ್ನು ಮಾಡುವವನಷ್ಟೇ? ಮಾದ್ರೇಯನೇ! ನಿನ್ನ ಶರೀರಕ್ಕಿಂತಲೂ ನಿನಗೆ ನನ್ನ ಮೇಲಿನ ಪ್ರೀತಿಯು ಅಧಿಕ. ಕೆಟ್ಟ ಮಗನಂತೆ ನೀನು ನನ್ನನ್ನು ತೊರೆಯಬೇಡ.
ವ್ರಜಂತ್ವಿಮೇ ಭ್ರಾತರಸ್ತೇ ಯದಿ ಸತ್ಯಾಭಿಸಂಧಿತಾಃ |
ಮತ್ಪರಿತ್ರಾಣಜಂ ಧರ್ಮಮಿಹೈವ ತ್ವಮವಾಪ್ನುಹಿ ॥57॥
ಈ ನಿನ್ನ ಸಹೋದರರು ಸತ್ಯಪ್ರತಿಜ್ಞೆಯುಳ್ಳವರಾದರೆ ಅವರು ವನಕ್ಕೆ ಹೋಗಲಿ. ನೀನು ಇಲ್ಲಿಯೇ ಇದ್ದು ನನ್ನನ್ನು ರಕ್ಷಣೆಮಾಡುವುದರಿಂದ ಉಂಟಾಗುವ ಪುಣ್ಯವನ್ನು ಪಡೆ.
ಯದಿ ಶುಶ್ರೂಷತೇ ನೈವ ಮದ್ವಾಕ್ಯಂ ಸಾತ್ವತರ್ಷಭಃ |
ಬಹುಪ್ರಲಾಪಯುಕ್ತೇನ ಕಿಮುಕ್ತೇನ ಪ್ರಯೋಜನಮ್ ॥58॥
ಇಷ್ಟು ಪ್ರಲಾಪವನ್ನು ಮಾಡಿದರೂ ಸಾತ್ವತರ್ಷಭನಾದ ಕೃಷ್ಣನು ನನ್ನ ಮಾತನ್ನು ಕೇಳದಿದ್ದರೆ ಪ್ರಲಾಪವನ್ನು ಮಾಡಿ ಏನು ಪ್ರಯೋಜನ?
ಏವಂ ವಿಲಪತೀಂ ಕುಂತೀಮಭಿಸಾಂತ್ವ್ಯ ಪ್ರಣಮ್ಯ ಚ |
ಪಾಂಡವಾ ವಿಗತಾನಂದಾ ವನಾಯೈವ ಪ್ರಚಕ್ರಮುಃ ॥59॥
ಹೀಗೆ ವಿಲಾಪವನ್ನು ಮಾಡುತ್ತಿದ್ದ ಕುಂತಿಯನ್ನು ಸಮಾಧಾನಪಡಿಸಿ ಅವಳಿಗೆ ನಮಸ್ಕರಿಸಿ ಪಾಂಡವರು ನಿರಾನಂದರಾಗಿ ಕಾಡಿಗೇ ಹೊರಟರು.
ವಿದುರಾದಯಶ್ಚ ತಾಮಾರ್ತಾಂ ಕುಂತೀಮಾಶ್ವಾಸ್ಯ ಹೇತುಭಿಃ |
ಪ್ರಾವೇಶಯದ್ ಗೃಹಂ ಕ್ಷತ್ತಾ ಸ್ವಯಮಾರ್ತಾತುರಾನ್ ಶನೈಃ ॥60॥
ವಿದುರ ಮೊದಲಾದವರು ಆರ್ತಳಾದ ಕುಂತಿಯನ್ನು ಒಳ್ಳೆಯ ಯುಕ್ತಿಗಳಿಂದ ಸಮಾಧಾನಪಡಿಸಿ ನಿದಾನವಾಗಿ ತಮ್ಮ ಮನೆಗೆ ಕರೆದುಕೊಂಡು ಹೋದರು. ವಿದುರನು ಆರ್ತಾತುರರಾದ ಎಲ್ಲರನ್ನೂ ತಾನೇ ಸಮಾಧಾನ ಮಾಡಿ (ಕುಂತಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದನು.)
ಧೃತರಾಷ್ಟ್ರಸ್ತ್ರಿಯಸ್ತಾಶ್ಚ ನಿಖಿಲೇನೋಪಲಕ್ಷ್ಯ ತತ್ |
ಗಮನಂ ಪರಿಕರ್ಷಂ ಚ ಕೃಷ್ಣಾಯಾ ದ್ಯೂತಮಂಡಲೇ ॥61॥
ರುರುದುಃ ಸಸ್ವನಂ ಸರ್ವಾ ವಿನಿಂದಂತ್ಯಃ ಕುರೂನ್ ಭೃಶಮ್ |
ದಧ್ಯುಶ್ಚ ಸುಚಿರಂ ಕಾಲಂ ಕರಾಸಕ್ತಮುಖಾಂಬುಜಾಃ ॥62॥
ಧೃತರಾಷ್ಟ್ರನ ಎಲ್ಲ ಸ್ತ್ರೀಯರೂ ದ್ಯೂತಮಂಡಲದಲ್ಲಿ ಕೃಷ್ಣೆಯನ್ನು ಕರೆತಂದುದನ್ನೂ ಅವಳನ್ನು ಎಳೆದಾಡಿದುದನ್ನೂ ಅವಳ ಗಟ್ಟಿಯಾದ ರೋದನವನ್ನೂ ಸಮಗ್ರವಾಗಿ ನೋಡಿ ಕುರುಗಳನ್ನು ಬಹಳವಾಗಿ ನಿಂದಿಸುತ್ತಾ ಕೈಗಳ ಮೇಲೆ ತನ್ನ ಮುಖ ಕಮಲಗಳನ್ನು ಇಟ್ಟು ಬಹಳಕಾಲ ಚಿಂತಾಪರವಶರಾದರು.
ರಾಜಾ ಚ ಧೃತರಾಷ್ಟ್ರಃ ಸ ಪುತ್ರಾಣಾಮನಯಾತ್ ತದಾ |
ಧ್ಯಾಯನ್ನುದ್ವಿಗ್ನಹೃದಯಃ ಶಾಂತಿಂ ನ ಸ್ಮಾಧಿಗಚ್ಛತಿ ॥63॥
ಧೃತರಾಷ್ಟ್ರರಾಜನು ಮಕ್ಕಳ ದುರ್ನೀತಿಯಿಂದ ಉದ್ವಿಗ್ನವಾದ ಹೃದಯವುಳ್ಳವನಾಗಿ ಚಿಂತಿಸುತ್ತಾ ಆಗ ಶಾಂತಿಯನ್ನು ಹೊಂದಲಿಲ್ಲ.

ಸ ಚಿಂತಯನ್ನನೇಕಾಗ್ರಃ ಶೋಕಾಕುಲಿತಚೇತನಃ |
ಕ್ಷತ್ತುಃ ಸಂಪ್ರೇಷಯಾಮಾಸ ಶೀಘ್ರಮಾಗಮ್ಯತಾಮಿತಿ ॥64॥
ಶೋಕಗ್ರಸ್ತಮನಸ್ಸುಳ್ಳವನಾಗಿ ಏಕಾಗ್ರತೆಯನ್ನು ಕಳೆದುಕೊಂಡು ಚಿಂತಿಸುತ್ತಾ ಅವನು ಬೇಗ ವಿದುರನನ್ನು ಕರೆದುಕೊಂಡು ಬನ್ನಿ ಎಂದು ಹೇಳಿ ದೂತರನ್ನು ಕಳುಹಿಸಿದನು.
ತತೋ ಜಗಾಮ ವಿದುರೋ ಧೃತರಾಷ್ಟ್ರನಿವೇಶನಮ್ |
ತಂ ಪರ್ಯಪೃಚ್ಛತ್ ಸಂವಿಗ್ನೋ ಧೃತರಾಷ್ಟ್ರೋ ನರಾಧಿಪಃ ॥65॥
ಅನಂತರ ವಿದುರನು ಧೃತರಾಷ್ಟ್ರನ ಮನೆಗೆ ಹೋದನು. ಶೋಕಸಂವಿಗ್ನನಾದ ಧೃತರಾಷ್ಟ್ರರಾಜನು ಅವನನ್ನು ಕುರಿತು ಪ್ರಶ್ನೆಮಾಡಿದನು.
॥ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಅಷ್ಟನವತಿತಮೋಧ್ಯಾಯಃ॥
॥ಅನುದ್ಯೂತಪರ್ವಣಿ ಷಷ್ಠೋಧ್ಯಾಯಃ॥6॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತೆಂಟನೆಯ ಅಧ್ಯಾಯವು ಮುಗಿಯಿತು.
* * * *
ತೊಂಬತ್ತೊಂಬನೆಯ ಅಧ್ಯಾಯ
(ವಿದುರನಿಂದ ಪಾಂಡವರ ಚೇಷ್ಟಾವಿಶೇಷದ ಅಭಿಪ್ರಾಯ ಕಥನ. ನಾರದರಿಂದ ಕೌರವರ ವಿನಾಶದ ಭವಿಷ್ಯವಾಣಿ.

ದುರ್ಯೋಧನಾದಿಗಳಿಂದ ದ್ರೋಣರ ಶರಣಾಗತಿ. ದ್ರೋಣರ ಮತ್ತು ಧೃತರಾಷ್ಟ್ರನ ಹಿತೋಪದೇಶ.)
ಧೃತರಾಷ್ಟ್ರಃ
ಕಥಂ ಗಚ್ಛತಿ ಕೌಂತೇಯೋ ಧರ್ಮಪುತ್ರೋ ಯುಧಿಷ್ಠಿರಃ |
ಭೀಮಸೇನಃ ಸವ್ಯಸಾಚೀ ಮಾದ್ರೀಪುತ್ರೌ ಚ ತಾವುಭೌ ||1||
ಧೌಮ್ಯಶ್ಚಾಪಿ ಕಥಂ ಕ್ಷತ್ತರ್ದ್ರೌಪದೀ ಚ ಯಶಸ್ವಿನೀ |
ಶ್ರೋತುಮಿಚ್ಛಾಮ್ಯಹಂ ಸರ್ವಂ ತೇಷಾಮಿಂಗಿತಚೇಷ್ಟಿತಮ್ ||2||
ಕುಂತಿಪುತ್ರನಾದ ಯಮಪುತ್ರನಾದ ಯುಧಿಷ್ಠಿರನು ಹೇಗೆ ಹೋಗುತ್ತಿದ್ದಾನೆ? ಭೀಮಸೇನನು ಸವ್ಯಸಾಚಿಯಾದ ಅರ್ಜುನನು ಮತ್ತು ಮಾದ್ರಿ ಪುತ್ರರು ಹೇಗೆ ಹೋಗುತ್ತಿದ್ದಾರೆ? ವಿದುರನೇ! ಧೌಮ್ಯನು ಮತ್ತು ಕೀರ್ತಿಶಾಲಿನಿಯಾದ ದ್ರೌಪದಿಯು ಹೇಗೆ ಹೋಗುತ್ತಿದ್ದಾಳೆ? ಅವರಚೇಷ್ಟೆಗಳಿಂದ ಅವರ ಮನಸ್ಸಿನ ಎಲ್ಲಾ ಅಭಿಪ್ರಾಯಗಳನ್ನು ನಾನು ತಿಳಿಯಲು ಬಯಸುತ್ತೇನೆ.
ವಿದುರಃ
ವಸ್ತ್ರೇಣ ಮುಖಮಾವೃತ್ಯ ಕುಂತೀಪುತ್ರೋ ಯುಧಿಷ್ಠಿರಃ |
ಬಾಹೂ ವಿಶಾಲೌ ಕೃತ್ವಾ ತು ಭೀಮೋ ಗಚ್ಛತಿ ಪಾಂಡವಃ ||3||
ಕುಂತಿಪುತ್ರನಾದ ಯುಧಿಷ್ಠಿರನು ವಸ್ತ್ರದಿಂದ ತನ್ನ ಮುಖವನ್ನು ಮುಚ್ಚಿಕೊಂಡು ಹೋಗುತ್ತಿದ್ದಾನೆ. ಪಾಂಡವನಾದ ಭೀಮಸೇನನು ತನ್ನ ಬಾಹುಗಳನ್ನು ವಿಶಾಲವಾಗಿ ಚಾಚಿ ಹೋಗುತ್ತಿದ್ದಾನೆ.
ಸಿಕತಾನ್ ವಪನ್ ಸವ್ಯಸಾಚೀ ರಾಜಾನಮನುಗಚ್ಛತಿ |
ಮಾದ್ರೀಪುತ್ರಃ ಸಹದೇವೋ ಮುಖಮಾಲಿಪ್ಯ ಗಚ್ಛತಿ ||4||
ಧನಂಜಯನು ಮರಳುಗಳನ್ನು ತೂರುತ್ತಾ ರಾಜನ ಹಿಂದೆ ಹೋಗುತ್ತಿದ್ದಾನೆ. ಮಾದ್ರೀಪುತ್ರನಾದ ಸಹದೇವನು ತನ್ನ ಮುಖವನ್ನೆಲ್ಲಾ ಬಣ್ಣದಿಂದ ಬಳಿದುಕೊಂಡು ಹೋಗುತ್ತಿದ್ದಾನೆ.
ಪಾಂಸೂಪಲಿಪ್ತಸರ್ವಾಂಗೋ ನಕುಲಶ್ಚಿತ್ತವಿಹ್ವಲಃ |
ದರ್ಶನೀಯತಮೋ ವೀರೋ ರಾಜಾನಮನುಗಚ್ಛತಿ ||5||
ಅತ್ಯಂತಸುಂದರನೂ ವೀರನೂ ಆದ ನಕುಲನು ಚಿತ್ತಕ್ಷೋಭೆಯುಳ್ಳವನಾಗಿ ತನ್ನ ದೇಹವನ್ನೆಲ್ಲಾ ಧೂಳಿನಿಂದ ಲೇಪನವನ್ನುಮಾಡಿಕೊಂಡು ರಾಜನ ಹಿಂದೆ ಹೋಗುತ್ತಿದ್ದಾನೆ.
ಕೃಷ್ಣಾ ಕೇಶೈಃ ಪ್ರತಿಚ್ಛಾದ್ಯ ಮುಖಮಾಯತಲೋಚನಾ |
ದರ್ಶನೀಯಾ ಪ್ರರುದತೀ ರಾಜಾನಮನುಗಚ್ಛತಿ ||6||
ಆಯತಾಕ್ಷಿಯಾದ ದ್ರೌಪದಿಯು ತನ್ನ ಕೇಶಗಳಿಂದ ಮುಖವನ್ನು ಮುಚ್ಚಿಕೊಂಡು ಸುಂದರಿಯಾದ ಅವಳು ಅಳುತ್ತಾ ರಾಜನ ಹಿಂದೆ ಹೋಗುತ್ತಿದ್ದಾಳೆ.
ಧೌಮ್ಯೋ ಯಾಮ್ಯಾನಿ ಸಾಮಾನಿ ರೌದ್ರಾಣಿ ಚ ವಿಶಾಂಪತೇ |
ಗಾಯನ್ ಗಚ್ಛತಿ ಮಾರ್ಗೇಷು ಕುಶಾನಾದಾಯ ಪಾಣಿನಾ ||7||
ಎಲೈ ರಾಜನೇ! ಧೌಮ್ಯರು ಘೋರವಾದ ಯಮದೇವತಾಕವಾದ ಸಾಮಗಳನ್ನು ಗಾನಮಾಡುತ್ತಾ ಕೈಯಲ್ಲಿ ದರ್ಭೆಗಳನ್ನು ಹಿಡಿದುಕೊಂಡು ದಾರಿಯಲ್ಲಿ ನಡೆದುಕೊಂಡು ಹೋಗುತ್ತಿದ್ದಾರೆ.
ಧೃತರಾಷ್ಟ್ರಃ
ವಿವಿಧಾನೀಹ ರೂಪಾಣಿ ಕೃತ್ವಾ ಗಚ್ಛಂತಿ ಪಾಂಡವಾಃ |
ತನ್ಮಮಾಚಕ್ಷ್ವ ವಿದುರ ಏವಂ ಕಸ್ಮಾದ್ ಬ್ರವೀಮಿ ತೇ ||8||
ಪಾಂಡವರು ಅನೇಕ ರೂಪಗಳನ್ನು ಧರಿಸಿ ಹೋಗುತ್ತಿದ್ದಾರೆ. ವಿದುರನೇ ನಾನು ನಿನ್ನನ್ನು ಕೇಳುತ್ತಿದ್ದೇನೆ. ಇದಕ್ಕೆ ಕಾರಣವನ್ನು ನನಗೆ ಹೇಳು.
ವಿದುರಃ
ನಿಕೃತಸ್ಯಾಪಿ ತೇ ಪುತ್ರೈರ್ಹೃತೇ ರಾಜ್ಯೇ ಧನೇಷು ಚ |
ನ ಧರ್ಮಾಚ್ಚ್ಯವತೇ ಬುದ್ಧಿರ್ಧರ್ಮರಾಜಸ್ಯ ಧೀಮತಃ ||9||
ರಾಜ್ಯದಿಂದಲೂ ಧನದಿಂದಲೂ ಮೋಸದಿಂದ ನಿನ್ನ ಪುತ್ರರಿಂದ ವಂಚಿತನಾದ ಮೇಧಾವಿಯಾದ ಧರ್ಮರಾಜನ ಬುದ್ಧಿಯು ಧರ್ಮವನ್ನು ಬಿಟ್ಟು ಕದಲುವುದಿಲ್ಲ.
ಯೋಽಸೌ ರಾಜಾ ಘೃಣೀ ನಿತ್ಯಂ ಧಾರ್ತರಾಷ್ಟ್ರೇಷು ಭಾರತ |
ನಿಕೃತ್ಯಾ ಕ್ರೋಧಸಂತಪ್ತೋ ನೋನ್ಮೀಲಯತಿ ಲೋಚನೇ ||10||
ನಾಹಂ ಜನಂ ನಿರ್ದಹೇಯಂ ದೃಷ್ಟ್ವಾ ಘೋರೇಣ ಚಕ್ಷುಷಾ |
ಅಪಿಧಾಯ ಮುಖಂ ರಾಜಾ ತಸ್ಮಾದ್ ಗಚ್ಛತಿ ಪಾಂಡವಃ |
ಯಥಾ ಚ ಭೀಮೋ ವ್ರಜತಿ ತನ್ಮೇ ನಿಗದತಃ ಶೃಣು ||11||
ಎಲೈ ಭಾರತನೇ! ದುರ್ಯೋಧನಾದಿಗಳಲ್ಲಿ ಯಾವಾಗಲೂ ದಯಾಪರನಾದ ರಾಜನು ಮೋಸದ ನಿಮಿತ್ತದಿಂದ ಉಂಟಾದ ಕ್ರೋಧದಿಂದ ಸಂತಪ್ತನಾದ ಕಾರಣ ಕಣ್ಣುಗಳನ್ನು ಮುಚ್ಚಿಕೊಂಡಿದ್ದಾನೆ. ಕ್ರೋಧಸತವಾದ ನನ್ನ ದೃಷ್ಟಿಯಿಂದ ನಾನು ನೋಡಿದ ಜನರನ್ನು ದಹಿಸಬಾರದು ಎಂದು ಪಾಂಡುಪುತ್ರನಾದ ಧರ್ಮರಾಜನು ಮುಖವನ್ನು ಮುಚ್ಚಿಕೊಂಡು ನಡೆಯುತ್ತಿದ್ದಾನೆ. ಭೀಮನು ಹೇಗೆ ಹೋಗುತ್ತಿದ್ದಾನೆಂದು ಹೇಳುತ್ತೇನೆ ಕೇಳು.
ಬಾಹ್ವೋರ್ಬಲೇ ನಾಸ್ತಿ ಸಮೋ ಮಮೇತಿ ಭರತರ್ಷಭ |

ಬಾಹೂ ವಿಶಾಲೌ ಕೃತ್ವಾಽ ತು ಭೀಮಸೇನೋಽನುಗಚ್ಛತಿ ॥12॥
ಭರತರ್ಷಭನೇ! ಬಾಹುಬಲದಲ್ಲಿ ನನಗೆ ಸಮನಾದವರು ಯಾರೂ ಇಲ್ಲ ಎಂದು ತಿಳಿಸುತ್ತಾ ಭೀಮನು ತನ್ನ ಬಾಹುಗಳನ್ನು ಚಾಚಿಕೊಂಡು ರಾಜನನ್ನು ಹಿಂಬಾಲಿಸುತ್ತಿದ್ದಾನೆ.
ಪ್ರದಿಶನ್ ಶರಸಂಘಾತಾನ್ ಕುಂತೀಪುತ್ರೋಽರ್ಜುನಸ್ತದಾ |
ಸಿಕತಾ ವಪನ್ ಸವ್ಯಸಾಚೀ ರಾಜಾನಮನುಗಚ್ಛತಿ ॥13॥
ಕುಂತೀಪುತ್ರನಾದ ಅರ್ಜುನನು ಬಾಣಗಳ ಸಮೂಹವನ್ನು ನಿದರ್ಶಿಸುವಂತೆ ಮರಳುಗಳನ್ನು ಗಾಳಿಯಲ್ಲಿ ತೂರುತ್ತಾ ರಾಜನನ್ನು ಹಿಂಬಾಲಿಸುತ್ತಿದ್ದಾನೆ.
ಅಸಕ್ತಾಃ ಸಿಕತಾಸ್ತಸ್ಯ ಯಥಾ ಸಂಪ್ರತಿ ಭಾರತ |
ಅಸಕ್ತಾಃ ಶರವರ್ಷಾಣಿ ತಥಾ ಮೋಕ್ಷ್ಯತಿ ಶತ್ರುಷು ॥14॥
ಎಲೈ ಭಾರತನೇ! ಅವನು ತೂರಿದ ಮರಳಿನ ಕಣಗಳು ಹೇಗೆ ಪರಸ್ಪರ ಸೇರಿಕೊಳ್ಳುವುದಿಲ್ಲವೋ ಮತ್ತು ಅಸಂಖ್ಯೇಯವಾಗಿ ಇರುತ್ತವೆಯೋ ಹಾಗೆ ಅವನು ಶತ್ರುಗಳಲ್ಲಿ ಪರಸ್ಪರವಾಗಿ ಸಕ್ತವಾಗದಂತಹ ಬಾಣಗಳ ಮಳೆಯನ್ನು ಸುರಿಸುವನು.
ನ ಮೇ ಕಶ್ಚಿದ್ ವಿಜಾನೀಯಾನ್ಮುಖಮದ್ಯೇತಿ ಭಾರತ |
ಮುಖಮಾಲಿಪ್ಯ ತೇನಾಸೌ ಸಹದೇವೋಽನುಗಚ್ಛತಿ ॥15॥
ಎಲೈ ಭಾರತನೇ! ಈ ದಿನ ಯಾರೂ ನನ್ನ ಮುಖವನ್ನು ನೋಡುವುದು ಬೇಡ ಎಂದು ಸಹದೇವನು ತನ್ನ ಮುಖವನ್ನು ಬಣ್ಣದಿಂದ ಬಳಿದುಕೊಂಡು ಹಿಂಬಾಲಿಸುತ್ತಿದ್ದಾನೆ.
ನಾಸಾಂ ಮನಾಂಸ್ಯಾದದೇಯಂ ಮಾರ್ಗೇ ಸ್ತ್ರೀಣಾಮಿತಿ ಪ್ರಭುಃ |
ಪಾಂಸೂಪಲಿಪ್ತಸರ್ವಾಂಗೋ ನಕುಲಸ್ತೇನ ಗಚ್ಛತಿ ॥16॥
ಪ್ರಭುವಾದ ನಕುಲನು ದಾರಿಯಲ್ಲಿ ಹೋಗುವ ಸ್ತ್ರೀಯರ ಮನಸ್ಸನ್ನು ತಾನು ಅಪಹರಿಸಬಾರದೆಂದು ದೇಹಕ್ಕೆಲ್ಲಾ ಧೂಳನ್ನು ಲೇಪಿಸಿಕೊಂಡು ಹೋಗುತ್ತಿದ್ದಾನೆ.
ಏಕವಸಾತ್ರ ಪ್ರರುದತೀ ಮುಕ್ತಕೇಶೀ ರಜಸ್ವಲಾ|
ಶೋಣಿತಾಕ್ತಾರ್ದ್ರವಸನಾ ದ್ರೌಪದೀ ವಾಕ್ಯಮಬ್ರವೀತ್ ॥17॥
ಏಕವಸ್ತ್ರವನ್ನು ಧರಿಸಿದ ರಜಸ್ವಲೆಯಾದ ರಕ್ತದಿಂದ ಆರ್ದ್ರವಾದ ವಸ್ತ್ರವುಳ್ಳ ದ್ರೌಪದಿಯು ತನ್ನ ಕೇಶಗಳನ್ನು ಕೆದರಿಕೊಂಡು ಹೀಗೆ ಮಾತನಾಡಿದಳು.
ಯತ್ಕೃತೇಽಹಮಿದಂ ಪ್ರಾಪ್ತಾ ತೇಷಾಂ ವರ್ಷೇ ಚತುರ್ದಶೇ |
ಹತಾಃ ಪತ್ಯಾ ಹತಸುತಾ ಹತಬಂಧುಜನಪ್ರಿಯಾಃ ॥18॥
ಬಹ್ವ್ಯಃ ಶೋಣಿತದಿಗ್ಧಾಂಗ್ಯೋ ಮುಕ್ತಕೇಶ್ಯೋ ರಜಸ್ವಲಾಃ |
ಏವಂ ಕೃತೋದಕಾ ನಾರ್ಯ್ಯಃ ಪ್ರವೇಕ್ಷ್ಯಂತಿ ಗಜಾಹ್ವಯಮ್ ॥19॥
ಯಾರ ನಿಮಿತ್ತದಿಂದ ನಾನು ಇಂತಹ ದುರವಸ್ಥೆಯನ್ನು ಹೊಂದಿದೆನೋ ಇವತ್ತಿಗೆ ಹದಿನಾಲ್ಕನೆವರ್ಷದಲ್ಲಿ ಅವರ ಸ್ತ್ರೀಯರೆಲ್ಲರೂ ತನ್ನ ಪತಿಗಳಿಂದ ವೈಧವ್ಯವನ್ನು ಹೊಂದಿದವರಾಗಿ ಮಕ್ಕಳನ್ನೂ ಬಂಧುಜನಗಳನ್ನೂ ಪ್ರಿಯಜನರನ್ನೂ ಕಳೆದುಕೊಂಡು ರಣರಂಗದಲ್ಲಿ ಪತಿಯ ಶವದ ಮೇಲೆ ಹೊರಳಾಡುವುದರಿಂದ ಧೂಳಿನಿಂದಲೂ ರಕ್ತದಿಂದಲೂ ಅಂಕಿತವುಳ್ಳ ಶರೀರವುಳ್ಳವರಾಗಿ ಕೇಶಗಳನ್ನು ಕೆದರಿಕೊಂಡು ಧರ್ಮೋದಕವನ್ನು ಕೊಟ್ಟು ಈ ರೀತಿಯಲ್ಲಿಯೇ ಹಸ್ತಿನಪುರವನ್ನು ಪ್ರವೇಶಿಸುವರು.
ಕೃತ್ವಾ ತು ನೈಋತಾನ್ ದರ್ಭಾನ್ ಧೀರೋ ಧೌಮ್ಯಃ ಪುರೋಹಿತಃ |
ಸಾಮಾನಿ ಗಾಯನ್ ಯಾಮ್ಯಾನಿ ಪುರತೋ ಯಾತಿ ಭಾರತ ॥20॥
ಹತೇಷು ಭರತೇಷ್ವಾಜೌ ಕುರೂಣಾಂ ಕುರವಸ್ತದಾ |
ಏವಂ ಸಾಮಾನಿ ಗಾಯಂತ್ವಿತ್ಯುಕತ್ವ ಧೌಮ್ಯೋಪಿ ಗಚ್ಛತಿ ॥21॥
ಭಾರತನೇ! ಪುರೋಹಿತರಾದ ಧೀರರಾದ ಧೌಮ್ಯರು ಉತ್ತರಕ್ರಿಯೆಗೆ ಬೇಕಾದಂತೆ ದರ್ಭೆಗಳನ್ನು ನಿಯೋಜಿಸಿ ಉತ್ತರಕ್ರಿಯೆಗೆ ಬೇಕಾದ ಸಾಮಗಳನ್ನು ಗಾನಮಾಡುತ್ತಾ ಮುಂದೆ ಹೋಗುತ್ತಿದ್ದಾರೆ. ಯುದ್ಧದಲ್ಲಿ ಕುರುಗಳು ಹತರಾದ ಮೇಲೆ ಅವರ ಪುರೋಹಿತರು ಹೀಗೆಯೇ ಉತ್ತರಕ್ರಿಯೆಯೂ ಮಂತ್ರಗಳನ್ನು ಗಾನಮಾಡಲಿ ಎಂದು ಹೇಳುತ್ತಾ ಧೌಮ್ಯರು ಹೋಗುತ್ತಿದ್ದಾರೆ.
ಪ್ರಸ್ಥಾಪ್ಯ ಪಾಂಡವಾನೇತಾನ್ ನಿಶ್ಶೇಷಸ್ತೇ ಭವಿಷ್ಯತಿ |
ಇತಿ ಧೌಮ್ಯೋ ವ್ಯವಸಿತೋ ರೌದ್ರಸಾಮಾನಿ ಗಾಯತಿ ॥22॥
ಈ ಪಾಂಡವರನ್ನು ನಗರದಿಂದ ವನವಾಸಕ್ಕೆ ಕಳುಹಿಸಿದ ಮೇಲೆ ನಿನ್ನ ವಂಶವು ನಿಶ್ಶೇಷವಾಗುವುದು ಎಂದು ನಿರ್ಧರಿಸಿದ ಧೌಮ್ಯರು ಭಯಂಕರ ಮಂತ್ರಗಳನ್ನು ಗಾನಮಾಡುತ್ತಿದ್ದಾರೆ.
ಏವಮಾಕಾರಲಿಂಗೈಸ್ತೇ ವ್ಯವಸಾಯಂ ಮನೋಗತಮ್ |
ಕಥಯಂತಶ್ಚ ಕೌಂತೇಯಾ ವನಂ ಜಗ್ಮುರ್ಮನಸ್ವಿನಃ ॥23॥
ಧೀರರಾದ ಕುಂತಿಪುತ್ರರಾದ ಪಾಂಡವರು ಇಂತಹ ಆಕಾರಗಳಿಂದ ತಮ್ಮ ಮನಸ್ಸಿನ ನಿರ್ಧಾರವನ್ನು ತಿಳಿಸುತ್ತಾ ವನಕ್ಕೆ ತೆರಳಿದರು.
ಏವಂ ತೇಷು ನರಾಗ್ರ್ಯೇಷು ನಿರ್ಯತ್ಸು ಗಜಸಾಹ್ವಯಾತ್ |
ಅನಭ್ರೇ ವಿದ್ಯುತಶ್ಚಾಸನ್ ಭೂಮಿಶ್ಚ ಸಮಕಂಪತ ॥24॥
ಹೀಗೆ ಆ ಪುರುಷಶ್ರೇಷ್ಠರು ಹಸ್ತಿನಪುರವನ್ನು ಬಿಟ್ಟು ಹೊರಡುತ್ತಿರಲು ಮೋಡವಿಲ್ಲದ ಆಕಾಶದಲ್ಲಿ ಮಿಂಚುಗಳು ಉಂಟಾದವು. ಭೂಮಿಯು ನಡುಗಿತು.
ರಾಹುರಗ್ರಸದಾದಿತ್ಯಮಪರ್ವಣಿ ವಿಶಾಂಪತೇ |

ಉಲ್ಕಾ ಚಾಪ್ಯಪಸವ್ಯಂ ತು ಪುರಸ್ಕೃತ್ವಾ ವ್ಯಶೀರ್ಯತ ॥25॥
ರಾಜನೇ! ಪರ್ವಕಾಲವಲ್ಲದ ದಿವಸದಲ್ಲಿ ರಾಹುವು ಸೂರ್ಯನನ್ನು ನುಂಗಿದನು. ಉಲ್ಕೆಗಳು ಮುಂದಿನಿಂದ ಬಲಬಾಗಕ್ಕೆ ಬಂದು ನಾಶವನ್ನು ಹೊಂದಿದವು.
ಪ್ರವ್ಯಾಹರಂತ ಕ್ರವ್ಯಾದಾ ಗೃಧ್ರಗೋಮಾಯುವಾಯಸಾಃ।
ದೇವಾಯತನಚೈತ್ಯೇಷು ಪ್ರಾಕಾರಾಟ್ಟಾಲಕೇಷು ಚ॥26॥
ಮಾಂಸಹಾರಿಪ್ರಾಣಿಗಳು ತಮ್ಮ ತಮ್ಮ ಧ್ವನಿಗಳನ್ನು ಮಾಡಿದವು. ದೇವಾಲಯಗಳಲ್ಲಿಯೂ ಪೂಜ್ಯವಾದ ವೃಕ್ಷಗಳಲ್ಲಿಯೂ ಕೋಟೆ ಮೊದಲಾದ ಸ್ಥಳಗಳಲ್ಲಿಯೂ ಹದ್ದುಗಳು ನರಿಗಳು ಮತ್ತು ಕಾಗೆಗಳು ಕಿರುಚಿದವು.
ಏವಮೇತೇ ಮಹಾರಾಜ ವನಂ ಗಚ್ಛಂತಿ ಪಾಂಡವಾಃ।
ಭರತಾನಾಂ ವಿನಾಶಾಯ ರಾಜನ್ ದುರ್ಮಂತ್ರಿತೇ ತವ।
ಏವಮುಕತ್ವ ತು ವಿದುರಃ ತೂಷ್ಣೀಮಾಸೀದ್ ವಿಶಾಂಪತೇ ॥27॥
ಮಹಾರಾಜನೇ! ನಿನ್ನ ದುರ್ಮಂತ್ರಣದ ನಿಮಿತ್ತದಿಂದ ಭರತವಂಶದ ವಿನಾಶಕ್ಕಾಗಿ ಈ ಪಾಂಡವರು ಹೀಗೆ ಕಾಡಿಗೆ ಹೋಗುತ್ತಿದ್ದಾರೆ. ಎಲೈ ರಾಜನೇ! ಹೀಗೆ ಹೇಳಿ ವಿದುರನು ಸುಮ್ಮನಾದನು.
ನಾರದಶ್ಚ ಸಭಾಮಧ್ಯೇ ಕುರೂಣಾಮಗ್ರತಃ ಸ್ಥಿತಃ।
ಮಹರ್ಷಿಭಿಃ ಪರಿವೃತೋ ರೌದ್ರಂ ವಾಕ್ಯಮುವಾಚ ಹ ॥28॥
ಆ ವೇಳೆಗೆ ಸಭಾಮಧ್ಯದಲ್ಲಿ ನಾರದರು ಮಹರ್ಷಿಗಳ ಜೊತೆಯಲ್ಲಿ ಕುರುಗಳ ಮುಂದೆ ಪ್ರತ್ಯಕ್ಷವಾಗಿ ನಿಂತು ಭಯಂಕರವಾದ ಮಾತನ್ನು ಆಡಿದರು.
ಇತಶ್ಚತುರ್ದಶೇ ವರ್ಷೇ ವಿನಶಿಷ್ಯಂತಿ ಕೌರವಾಃ।
ದುರ್ಯೋಧನಾಪರಾಧೇನ ಭೀಮಾರ್ಜುನಬಲೇನ ಚ ॥29॥
ಇವತ್ತಿಗೆ ಹದಿನಾಲ್ಕನೆಯ ವರ್ಷದಲ್ಲಿ ದುರ್ಯೋಧನನ ಅಪರಾಧದಿಂದ ಮತ್ತು ಭೀಮಾರ್ಜುನನರ ಬಲದಿಂದ ಕೌರವರು ನಾಶವನ್ನು ಹೊಂದುವರು.
ಇತ್ಯುಕತ್ವ ದಿವಮಾಕ್ರಮ್ಯ ಕ್ಷಿಪ್ರಮಂತರಧೀಯತ।
ಬ್ರಾಹ್ಮೀಂ ಶ್ರಿಯಂ ಚ ವಿಪುಲಾಂ ಬಿಭ್ರದ್ ದೇವರ್ಷಿಸತ್ತಮಃ ॥30॥
ವಿಪುಲವಾದ ಬ್ರಹ್ಮತೇಜಸ್ಸನ್ನು ಹೊಂದಿದ್ದ ದೇವರ್ಷಿಶ್ರೇಷ್ಠರಾದ ಅವರು ಹೀಗೆ ಹೇಳಿ ಆಕಾಶಕ್ಕೆ ಹಾರಿ ಬೇಗ ಅಂತರ್ಧಾನವನ್ನು ಹೊಂದಿದರು.
ಧೃತರಾಷ್ಟ್ರಃ
ಕಿಮಬ್ರುವನ್ ನಾಗರಿಕಾಃ ಕಿಂ ವೈ ಜಾನಪದಾ ಜನಾಃ।
ಮಹ್ಯಂ ತತ್ತ್ವೇನ ಚಾಚಕ್ಷ್ವ ಕ್ಷತ್ತಃ ಸರ್ವಮಶೇಷತಃ ॥31॥
ನಗರವಾಸಿಗಳಾದ ಜನರೂ ರಾಷ್ಟ್ರವಾಸಿಗಳಾದ ಜನರೂ ಏನನ್ನು ಹೇಳಿದರು? ವಿದುರನೇ! ನನಗೆ ಅದೆಲ್ಲವನ್ನೂ ಯಥಾರ್ಥವಾಗಿ ಹೇಳು.
ವಿದುರಃ
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಯೇನ್ಯೇ ವದಂತ್ಯಥ।
ತಚ್ಛೃಣುಷ್ವ ಮಹಾರಾಜ ವಕ್ಷ್ಯತೇ ಚ ಮಯಾ ತವ ॥32॥
ಮಹಾರಾಜನೇ! ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಮತ್ತು ಶೂದ್ರರು ಮತ್ತು ಉಳಿದವರೂ ಸಹ ಏನು ಮಾತನಾಡುತ್ತಾರೆಂದು ನಾನು ನಿನಗೆ ಹೇಳುತ್ತೇನೆ. ಅದನ್ನು ಕೇಳು.
ಹಾ ಹಾ ಗಚ್ಛಂತಿ ನೋ ನಾಥಾಃ ಸಮವೇಕ್ಷಧ್ವಮೀದೃಶಮ್।
ಇತಿ ಪೌರಾಃ ಸುದುಃಖಾರ್ತಾಃ ಶೋಚಂತಿ ಸ್ಮ ಸಮಂತತಃ ॥33॥
ಅಯ್ಯೋ ನಮ್ಮ ಒಡೆಯರಾದ ಪಾಂಡವರು ಹೋಗುತ್ತಿದ್ದಾರೆ. ಇಂತಹ ದೃಶ್ಯವನ್ನು ನೋಡಿ ಎಂದು ದುಃಖಾರ್ಥವಾಗಿ ಹೇಳುತ್ತಾ ಪೌರರು ಎಲ್ಲಾ ಕಡೆಗಳಲ್ಲಿಯೂ ಶೋಕವನ್ನು ಮಾಡಿದರು.
ತತಃ ಪೌರಾಶ್ಚ ದೀನಾಸ್ತೇ ಗತೇ ಪಾರ್ಥೇ ವನಂ ತಥಾ।
ಗಾವೋ ಹೀನಾ ಯಥಾ ವತ್ಸೈಃ ಪುರಂ ಪ್ರವಿವಿಶುಃ ಪುನಃ ॥34॥
ಅನಂತರ ಪಾಂಡವರು ಕಾಡಿಗೆಹೋದಮೇಲೆ ದೀನರಾದ ಪೌರರು ಕರುಗಳನ್ನು ಕಳೆದುಕೊಂಡ ಹಸುಗಳಂತೆ ಪಟ್ಟಣಕ್ಕೆ ಹಿಂದಿರುಗಿದರು.
ತದಹೃಷ್ಟಮಿವಾಕೂಜಂ ಗತೋತ್ಸವಮಿವಾಭವತ್।
ನಗರಂ ಹಸ್ತಿನಪುರಂ ಸಸ್ತ್ರೀವೃದ್ಧಕುಮಾರಕಮ್।
ಸರ್ವೇ ಚಾಸನ್ ನಿರುತ್ಸಾಹಾ ವ್ಯಾಧಿನಾ ಬಾಧಿತಾ ಯಥಾ ॥35॥
ಹಸ್ತಿನಪುರವು ಸ್ತ್ರೀವೃದ್ಧಕುಮಾರಕರನ್ನು ಸೇರಿ ಅಸಂತೋಷಮಯವೂ ನಿಶ್ಶಬ್ದವೂ ಉತ್ಸವಹೀನವೂ ಆಯಿತು. ವ್ಯಾಧಿಯಿಂದ ಬಾಧಿತರಾದಂತೆ ಎಲ್ಲರೂ ಉತ್ಸಾಹವನ್ನು ಕಳೆದುಕೊಂಡರು.
ಪಾರ್ಥಾನ್ ಪ್ರತಿ ನರಾ ನಿತ್ಯಂ ಚಿಂತಾಶೋಕಪರಾಯಣಾಃ।
ತತ್ರ ತತ್ರ ಕಥಾಂ ಚಕ್ರುಃ ಸಮಾಸಾದ್ಯ ಪರಸ್ಪರಮ್ ॥36॥
ಚಿಂತಾಶೋಕಪರಾಯಣರಾದ ಪ್ರಜೆಗಳು ಒಬ್ಬರನೊಬ್ಬರು ಸೇರಿ ಪಾಂಡವರ ವಿಷಯದಲ್ಲಿ ಯಾವಾಗಲೂ ಮಾತನಾಡಿದರು.

ಕುಂತೀ ಚ ಭೃಶದುಃಖಾರ್ತಾ ಪುತ್ರೈಃ ಸರ್ವೈರ್ವಿವರ್ಜಿತಾ |
ಹೀನವತ್ಸಾ ಯಥಾ ಧೇನುರ್ವಿಲಾಪ ಸುದುಃಖಿತಾ ॥37॥
ಎಲ್ಲಾ ಮಕ್ಕಳಿಂದ ವಿಯೋಗವನ್ನು ಪಡೆದ ಕುಂತಿಯು ಬಹಳ ದುಃಖಕ್ಕೆ ಒಳಗಾದವಳಾಗಿ ಕರುವನ್ನು ಕಳೆದು ಕೊಂಡ ಹಸುವಿನಂತೆ ದುಃಖದಿಂದ ವಿಲಾಪವನ್ನು ಮಾಡಿದಳು.
ವನಂ ಗತೇ ಧರ್ಮರಾಜೇ ದುಃಖಶೋಕಪರಾಯಣಾಃ |
ಬಭೂವುಃ ಕೌರವಾ ವೃದ್ಧಾ ಭೃಶಂ ಶೋಕೇನ ಪೀಡಿತಾಃ ॥38॥
ಧರ್ಮರಾಜನು ಕಾಡಿಗೆ ಹೋಗುತ್ತಿರಲು ದುಃಖಶೋಕ- ಪರಾಯಣರಾದ ಕುರುವೃದ್ಧರು ಬಹಳ ಶೋಕದಿಂದ ಪೀಡಿತರಾದರು.
ತತಃ ಪೌರಜನಃ ಸರ್ವಃ ಶೋಚನ್ನಾಸ್ತೇ ಜನಾಧಿಪಮ್ |
ಕುರ್ವಾಣಾಶ್ಚ ಕಥಾಸ್ತತ್ರ ಬ್ರಾಹ್ಮಣಾಃ ಪಾರ್ಥಿವಂ ಪ್ರತಿ ॥39॥
ಅನಂತರ ಪೌರಜನರೆಲ್ಲರೂ ರಾಜನಾದ ಧರ್ಮರಾಜನನ್ನು ಕುರಿತು ಶೋಕಪಡುತ್ತಿದ್ದರು. ಬ್ರಾಹ್ಮಣರೂ ಸಹ ರಾಜನ ವಿಷಯದಲ್ಲಿ ಅಲ್ಲಲ್ಲಿ ಮಾತನಾಡಿದರು.
ಕಥಂ ನು ರಾಜಾ ಧರ್ಮಾತ್ಮಾ ವನೇ ವಸತಿ ನಿರ್ಜನೇ |
ತಸ್ಯಾನುಜಾಶ್ಚ ತೇ ನಿತ್ಯಂ ಕೃಷ್ಣಾ ಚ ದ್ರುಪದಾತ್ಮಜಾ |
ಸುಖಾರ್ಹಾಽಪಿ ಚ ದುಃಖಾರ್ತಾ ಕಥಂ ವಸತಿ ಸಾ ವನೇ ॥40॥
ಧರ್ಮಾತ್ಮನಾದ ರಾಜನು ನಿರ್ಜನವಾದ ಕಾಡಿನಲ್ಲಿ ಹೇಗೆ ವಾಸಮಾಡುತ್ತಾನೆ? ಅವನ ತಮ್ಮಂದಿರಾಗಲೀ ಸುಖಕ್ಕೆ ಯೋಗ್ಯಳಾದ ದ್ರೌಪದಿಯಾಗಲೀ ಯಾವಾಗಲೂ ದುಃಖಾರ್ತರಾಗಿ ಕಾಡಿನಲ್ಲಿ ಹೇಗೆ ವಾಸಮಾಡುತ್ತಾರೆ?
ಏವಂ ಪೌರಾಶ್ಚ ವಿಪ್ರಾಶ್ಚ ಸದಾರಾಃ ಸಹಪುತ್ರಕಾಃ |
ಸ್ಮರಂತಃ ಪಾಂಡವಾನ್ ಸರ್ವೇ ಬಭೂವುರ್ಭೃಶದುಃಖಿತಾಃ ॥41॥
ಹೀಗೆ ಪೌರರೂ ಮತ್ತು ವಿಪ್ರರೂ ತಮ್ಮ ಪತ್ನೀ ಪುತ್ರರ ಜೊತೆಯಲ್ಲಿ ಪಾಂಡವರನ್ನು ಸ್ಮರಿಸುತ್ತಾ ಅತ್ಯಂತ ದುಃಖಿತರಾದರು.
ಆವಿದ್ಧಾ ಇವ ಶಸ್ತ್ರೇಣ ನಾಭ್ಯನಂದನ್ ಕಥಂಚನ |
ಸಂಭಾಷ್ಯಮಾಣಾ ಅಪಿ ತೇ ನ ಕಂಚಿತ್ ಪ್ರತ್ಯಪೂಜಯನ್ ॥42॥
ಶಸ್ತ್ರದ ಆಘಾತಕ್ಕೆ ಒಳಗಾದವರಂತೆ ಅವರು ಯಾವುದರಿಂದಲೂ ಸಂತೋಷಪಡಲಿಲ್ಲ. ಮಾತನಾಡಿಸಿದರೂ ಅವರು ಪ್ರತಿವಚನವನ್ನು ನೀಡಿ ಯಾರನ್ನೂ ಸತ್ಕರಿಸಲಿಲ್ಲ.
ನಭುಕ್ತ್ವಾ ನಶಯಿತ್ವಾ ತೇ ದಿವಾ ವಾ ಯದಿ ವಾ ನಿಶಿ |
ಶೋಕೋಪಹತವಿಜ್ಞಾನಾ ನಷ್ಟಸಂಜ್ಞಾ ಇವಾಭವನ್ ॥43॥
ಅವರು ಹಗಲಾಗಲೀ ರಾತ್ರಿಯಾಗಲೀ ಊಟವನ್ನು ಮಾಡದೆ ನಿದ್ರೆಯನ್ನೂ ಮಾಡದೆ ಶೋಕದಿಂದ ಉಪಹತವಾದ ಬುದ್ಧಿಯುಳ್ಳವರಾಗಿ ಪ್ರಜ್ಞೆತಪ್ಪಿದವರಂತೆ ಆದರು.
ಯದವಸ್ಥಾ ಬಭೂವಾರ್ತಾ ಹ್ಯಯೋಧ್ಯಾ ನಗರೀ ಪುರಾ |
ರಾಮೇ ವನಂ ಗತೇ ದುಃಖಾದ್ಹೃತರಾಜ್ಯೇ ಸಲಕ್ಷ್ಮಣೇ ॥44॥
ತದವಸ್ಥಂ ಬಭೂವಾರ್ತಮದ್ಯೇದಂ ಗಜಸಾಹ್ವಯಮ್ |
ಗತೇ ಪಾರ್ಥೇ ವನಂ ದುಃಖಾದ್ಹೃತರಾಜ್ಯೇ ಸಹಾನುಜೈಃ ॥45॥
ಹಿಂದೆ ರಾಮನು ರಾಜ್ಯವನ್ನು ಕಳೆದುಕೊಂಡು ಲಕ್ಷ್ಮಣನ ಜೊತೆಯಲ್ಲಿ ಕಾಡಿಗೆಹೋದಾಗ ಅಯೋಧ್ಯಾಪಟ್ಟಣಕ್ಕೆ ಎಂತಹ ಅವಸ್ಥೆಯು ಉಂಟಾಯಿತೋ ಅಂತಹ ಅವಸ್ಥೆಯು ರಾಜ್ಯವನ್ನು ಕಳೆದುಕೊಂಡು ತಮ್ಮಂದಿರ ಜೊತೆಯಲ್ಲಿ ಧರ್ಮರಾಜನು ಕಾಡಿಗೆ ಹೋಗುತ್ತಿರಲು ಈ ಹಸ್ತಿನಪುರಕ್ಕೆ ಉಂಟಾಯಿತು.
ವೈಶಂಪಾಯನಃ
ವಿದುರಸ್ಯ ವಚಃ ಶ್ರುತ್ವಾ ನಾಗರಸ್ಯ ಗಿರಂ ಚ ವೈ |
ಭೂಯೋ ಮುಮೋಹ ಶೋಕಾಚ್ಚ ಧೃತರಾಷ್ಟ್ರಃ ಸಬಾಂಧವಃ ॥46॥
ವಿದುರನು ಹೇಳಿದ ನಾಗರಿಕರ ಮಾತುಗಳನ್ನು ಕೇಳಿದ ಧೃತರಾಷ್ಟ್ರನು ಶೋಕದಿಂದ ಬಂಧುಸಹಿತನಾಗಿ ಪುನಃ ಮೋಹಕ್ಕೆ ಒಳಗಾದನು.
ತತೋ ದುರ್ಯೋಧನಃ ಕರ್ಣಃ ಶಕುನಿಶ್ಚಾಪಿ ಭಾರತ |
ದ್ರೋಣಂ ದೀಪಮಮನ್ಯಂತ ರಾಜ್ಯಂ ಚಾಸ್ಮೈ ನ್ಯವೇದಯನ್ ॥47॥
ಭಾರತನೇ! ಆಗ ದುರ್ಯೋಧನ ಕರ್ಣ ಮತ್ತು ಶಕುನಿ ಇವರು ದ್ರೋಣರನ್ನು ಅಂಧಕಾರದಲ್ಲಿ ದೀಪದಂತೆ ಭಾವಿಸಿ ಅವರಿಗೆ ತಮ್ಮ ರಾಜ್ಯವನ್ನು ನಿವೇದಿಸಿದರು.
ಅಥಾಬ್ರುವೀತ್ ತದಾ ದ್ರೋಣೋ ದುರ್ಯೋಧನಮಮರ್ಷಣಮ್ |
ದುಶ್ಶಾಸನಂ ಚ ಕರ್ಣಂ ಚ ಸರ್ವಾನೇವ ಚ ಭಾರತಾನ್ ॥48॥
ಆಗ ದ್ರೋಣರು ಅಸಹನಶೀಲನಾದ ದುರ್ಯೋಧನನನ್ನು ದುಶ್ಶಾಸನನನ್ನು ಕರ್ಣನನ್ನು ಮತ್ತು ಉಳಿದ ಎಲ್ಲಾ ಭಾರತ ವಂಶದವರನ್ನು ಕುರಿತು ಹೇಳಿದರು.
ಅವಧ್ಯಾನ್ ಪಾಂಡವಾನಾಹುರ್ದೇವಪುತ್ರಾನ್ ದ್ವಿಜಾತಯಃ |
ಅಹಂ ತು ಚರಣಂ ಪ್ರಾಪ್ತಾನ್ ವರ್ತಮಾನಾನ್ ಯಥಾಬಲಮ್ ॥
ಆಗತಾನ್ ಪಾಲಯಿಷ್ಯಾಮಿ ಧಾರ್ತರಾಷ್ಟ್ರಾನ್ ಸರಾಜಕಾನ್ |

ನೋತ್ಸಹೇ ಸಮಭಿತ್ಯಕ್ತುಂ ದೈವಂ ಮೂಲಮತಃ ಪರಮ್ ॥50॥
ಬ್ರಾಹ್ಮಣರು ಪಾಂಡವರು ದೇವಪುತ್ರರೆಂದೂ ಅವಧ್ಯರೆಂದೂ ಹೇಳುತ್ತಾರೆ. ನಾನು ಶರಣಾಗತರಾಗಿ ನನ್ನ ಕಾಲಿಗೆ ಬಿದ್ದ ದುರ್ಯೋಧನಾದಿಗಳನ್ನು ಮತ್ತು ಉಳಿದ ರಾಜರನ್ನು ನನಗೆ ಶಕ್ತಿಯಿದ್ದಷ್ಟು ರಕ್ಷಿಸುವೆನು. ಅವರನ್ನು ಪರಿತ್ಯಾಗಮಾಡಲು ನಾನು ಸಮರ್ಥನಾಗುವುದಿಲ್ಲ. ಉಳಿದ ವಿಷಯವು ದೈವವನ್ನು ಅವಲಂಬಿಸಿದೆ.
ಧರ್ಮತಃ ಪಾಂಡುಪುತ್ರಾ ವೈ ವನಂ ಗಚ್ಛಂತಿ ಕೌರವಾಃ|
ತೇ ಚ ದ್ವಾದಶ ವರ್ಷಾಣಿ ವನೇ ವತ್ಸ್ಯಂತಿ ನಿರ್ಜಿತಾಃ ॥51॥
ಎಲ್ಲೈ ಕೌರವರೇ ಪಾಂಡುಪುತ್ರರು ಧರ್ಮದಿಂದಲೇ ಕಾಡಿಗೆ ಹೋಗುತ್ತಿದ್ದಾರೆ. ದ್ಯೂತದಲ್ಲಿ ಪರಾಜಿತರಾದ ಅವರು ಕಾಡಿನಲ್ಲಿ ಹನ್ನೆರಡುವರ್ಷಗಳ ಕಾಲ ವಾಸವನ್ನು ಮಾಡುವರು.
ಚರಿತಬ್ರಹ್ಮಚರ್ಯಾಶ್ಚ ಕ್ರೋಧಾಮರ್ಷವಶಾನುಗಾಃ|
ವೈರಂ ಪ್ರತ್ಯಾನಯಿಷ್ಯಂತಿ ಮಮ ದುಃಖಾಯ ಪಾಂಡವಾಃ ॥52॥
ಪಾಂಡವರು ಬ್ರಹ್ಮಚರ್ಯವ್ರತವನ್ನು ಧರಿಸಿದವರಾಗಿ ಕ್ರೋಧ ಮತ್ತು ಅಸಹನೆಯಿಂದ ಕೂಡಿದವರಾಗಿ ನನ್ನ ದುಃಖಕ್ಕಾಗಿ ನೀನು ಮಾಡಿದ ವೈರವನ್ನು ಹಿಂದಿರುಗಿಸುವರು.
ಮಯಾ ತು ಭ್ರಂಶಿತೋ ರಾಜ್ಯಾದ್ ದ್ರುಪದಃ ಸಖಿವಿಗ್ರಹೇ|
ಪುತ್ರಾರ್ಥಮಯಜತ್ ಕೋಪಾದ್ ವಧಾಯ ಮಮ ಭಾರತ ॥53॥
ನಾನು ಹಿಂದೆ ಸ್ನೇಹಿತನ ಜೊತೆಯ ಕಲಹದಲ್ಲಿ ದ್ರುಪದನನ್ನು ರಾಜ್ಯಚ್ಯುತನಾಗುವಂತೆ ಮಾಡಿದೆ. ಎಲ್ಲೈ ಭಾರತನೇ! ಅವನು ಕೋಪದಿಂದ ನನ್ನನ್ನು ವಧಿಸುವ ಪುತ್ರನನ್ನು ಪಡೆಯುವ ಸಲುವಾಗಿ ಯಾಗವನ್ನು ಮಾಡಿದನು.
ಯಾಜೋಪಯಾಜತಪಸಾ ಪುತ್ರಂ ಲೇಭೇ ಸ ಪಾವಕಾತ್|
ಧೃಷ್ಟದ್ಯುಮ್ನಂ ದ್ರೌಪದೀಂ ಚ ವೇದಿಮಧ್ಯಾತ್ ಸುಮಧ್ಯಮಾಮ್ ॥
ಯಾಜೋಪಯಾಜರ ತಪಸ್ಸಿನ ಬಲದಿಂದ ಅಗ್ನಿಕುಂಡದಿಂದ ಧೃಷ್ಟದ್ಯುಮ್ನನನ್ನೂ ವೇದಿಮಧ್ಯದಿಂದ ಸುಂದರಿಯಾದ ದ್ರೌಪದಿಯನ್ನೂ ಮಕ್ಕಳಾಗಿ ಪಡೆದನು.
ಜ್ವಾಲಾವರ್ಣೋ ದೇವದತ್ತೋ ಧನುಷ್ಮಾನ್ ಕವಚೀ ಶರೀ|
ಮರ್ತ್ಯಧರ್ಮತಯಾऽಸ್ಮಾಕಂ ತಸ್ಮಾನ್ಮಾಂ ಭಯಮಾವಿಶತ್ ॥55॥
ಅಗ್ನಿಜ್ವಾಲೆಯ ವರ್ಣವುಳ್ಳವನಾಗಿ ಧನುನಸ್ಸು ಕವಚ ಮತ್ತು ಬಾಣಗಳನ್ನು ಧರಿಸಿ ಧೃಷ್ಟದ್ಯುಮ್ನನು ಅಗ್ನಿಯಿಂದ ದತ್ತನಾದನು. ನಾನು ಮರಣಶೀಲನಾದುದರಿಂದ ನನ್ನ ಮೃತ್ಯುವಾದ ಧೃಷ್ಟದ್ಯುಮ್ನನ ದೆಸೆಯಿಂದ ನನಗೆ ಭಯವು ಉಂಟಾಯಿತು.
ಗತೋ ಹಿ ಪಕ್ಷತಾಂ ತೇಷಾಂ ಪಾರ್ಷತಃ ಪುರುಷರ್ಷಭಃ|
ಮದ್ವಧಾಯೋತ್ಥಿತೋ ಧೀಮಾನ್ ಲೋಕೇ ಚಾಪ್ಯಭಿವಿಶ್ರುತಃ|
ಸೃಷ್ಟಪ್ರಾಣೋ ಭೃಶತರಂ ತಸ್ಮಾದ್ ಯೋತ್ಸ್ಯೇ ತವಾರಿಭಿಃ ॥56॥
ಪುರುಷಶ್ರೇಷ್ಠನಾದ ಪಾರ್ಷತನು ಪಾಂಡವರ ಪಕ್ಷವನ್ನು ಸೇರಿದನು. ನನ್ನ ಮರಣದ ಸಲುವಾಗಿಯೇ ಜನ್ಮವೆತ್ತಿದ ಅವನು ಲೋಕದಲ್ಲಿ ಬಹಳ ಪ್ರಖ್ಯಾತನಾಗಿದ್ದಾನೆ. ನೀನು ಬಹಳ ವೇತನವನ್ನು ಕೊಟ್ಟು ನನ್ನ ಪ್ರಾಣಗಳನ್ನು ಉಳಿಸಿರುವುದರಿಂದ ನಾನು ನಿನ್ನ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ನೂನಂ ಸೋಯಮಭಿಪ್ರಾಪ್ತಃ ತ್ವತ್ಕೃತೇ ಕಾಲಪರ್ಯಯಃ|
ತ್ವರಿತಾಃ ಕುರುತ ಶ್ರೇಯೋ ನೈತದೇತಾವತಾ ಕೃತಮ್ ॥57॥
ನಿನ್ನ ಕಾರಣದಿಂದಾಗಿಯೇ ಈ ಕಾಲವಿಪರ್ಯಾಸವು ನಿಶ್ಚಿತವಾಗಿ ಪ್ರಾಪ್ತವಾಗಿದೆ. ಶೀಘ್ರವಾಗಿ ಒಳ್ಳೆಯ ಕಾರ್ಯಗಳನ್ನುಮಾಡಿ. ಇದು ಇಷ್ಟಕ್ಕೇ ಮುಗಿಯುವುದಿಲ್ಲ.
ಮುಹೂರ್ತಂ ಸುಖಮೇವೈತತ್ ಕೂಲಚ್ಛಾಯೇವ ಹೇಮನಿ|
ಯಜಧ್ವಂ ಚ ಮಹಾಯಜ್ಞೈರ್ಭೋಗಾನಶ್ನೀತ ಪಾರ್ಥಿವಾಃ ॥58॥
ಹೇಮಂತಋತುವಿನ ತೀರಛಾಯೆಯಂತೆ ಇದು ಒಂದು ಮುಹೂರ್ತಕಾಲ ಮಾತ್ರ ಸುಖವನ್ನು ಕೊಡುವಂತಹದು. ಎಲ್ಲೈ ರಾಜರೇ! ಮಹಾಯಜ್ಞಗಳನ್ನು ಆಚರಿಸಿ ಮತ್ತು ಇಷ್ಟವಾದ ಭೋಗಗಳನ್ನು ಭುಂಜಿಸಿ.
ಇತಶ್ಚತುರ್ದಶೇ ವರ್ಷೇ ಮಹತ್ ಪ್ರಾಪ್ಸ್ಯಥ ವೈಶಸಮ್|
ದುರ್ಯೋಧನ ನಿಶಮ್ಯೈತತ್ ಪ್ರತಿಪದ್ಯ ಯಥೇಚ್ಛಸಿ|
ಶಮಂ ವಾ ಪಾಂಡವೇಯೇಷು ಪ್ರಯುಂಕ್ಷ್ವ ಯದಿ ಮನ್ಯಸೇ ॥59॥
ಈ ದಿನಕ್ಕೆ ಹದಿನಾಲ್ಕನೆಯ ವರ್ಷದಲ್ಲಿ ದೊಡ್ಡ ಹಿಂಸೆಗೆ ಪಾತ್ರರಾಗುವಿರಿ. ದುರ್ಯೋಧನನೇ ಇದನ್ನು ಕೇಳಿ ನಿನಗೆ ಇಷ್ಟವಾದಂತೆ ಮಾಡು. ಅಥವಾ ನಿನ್ನ ಅಭಿಪ್ರಾಯವಿದ್ದರೆ ಪಾಂಡುಪುತ್ರರಲ್ಲಿ ಉಪಶಮನವನ್ನು ಹೊಂದು.
ವೈಶಂಪಾಯನಃ
ದ್ರೋಣಸ್ಯ ವಚನಂ ಶ್ರುತ್ವಾ ಧೃತರಾಷ್ಟ್ರೋಽಬ್ರವೀದಿದಮ್|
ಸಮ್ಯಗಾಹ ಗುರುಃ ಕ್ಷತ್ತರುಪಾವರ್ತಯ ಪಾಂಡವಾನ್ ॥60॥
ದ್ರೋಣರ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಹೀಗೆ ಹೇಳಿದನು. ಗುರುಗಳಾದ ದ್ರೋಣರು ಸರಿಯಾಗಿ ಹೇಳಿದ್ದಾರೆ. ವಿದುರನೇ ಪಾಂಡವರನ್ನು ಹಿಂದಿರುಗಿಸು.
ಯದಿ ವಾ ನ ನಿವರ್ತಂತೇ ಸತ್ಕೃತಾ ಯಾಂತು ಪಾಂಡವಾಃ|
ಸಶಸ್ತ್ರರಥಪಾದಾತಾ ಭೋಗವಂತಶ್ಚ ಪುತ್ರಕಾಃ ॥61॥

ಎಲೈ ಪುತ್ರರೇ! ಒಂದು ಪಕ್ಷ ಅವರು ಹಿಂದಿರುಗದಿದ್ದರೆ ಪಾಂಡವರು ಒಮ್ಮೆ ಇಲ್ಲಿ ಬಂದು ನಮ್ಮ ಸತ್ಕಾರವನ್ನು ಸ್ವೀಕರಿಸಿ ತಮ್ಮ ಶಸ್ತ್ರ ರಥ ಪತಾಕೆಗಳ ಜೊತೆಯಲ್ಲಿಯೂ ಮತ್ತು ಸಕಲ ಭೋಗಗಳ ಜೊತೆಯಲ್ಲಿಯೂ ಪುನಃ ಹೋಗಲಿ.
॥ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ
ಏಕೋನಶತತಮೋಧ್ಯಾಯಃ॥
॥ಅನುದ್ಯೂತಪರ್ವಣಿ ಸಪ್ತಮೋಧ್ಯಾಯಃ ॥7॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.
*****

ನೂರನೆಯ ಅಧ್ಯಾಯ
(ಸಂಜಯ ಧೃತರಾಷ್ಟ್ರ ಸಂವಾದ)
ವೈಶಂಪಾಯನಃ
ವನಂ ಗತೇಷು ಪಾರ್ಥೇಷು ನಿರ್ಜಿತೇಷು ದುರೋದರೇ |
ಧೃತರಾಷ್ಟ್ರಂ ಮಹಾರಾಜ ತದಾ ಚಿಂತಾ ಸಮಾವಿಶತ್ ॥1॥
ಮಹಾರಾಜನೇ! ಪಾಂಡವರು ದ್ಯೂತದಲ್ಲಿ ನಿರ್ಜಿತರಾಗಿ ವನಕ್ಕೆ ತೆರಳಿದ ಮೇಲೆ ಧೃತರಾಷ್ಟ್ರನನ್ನು ಚಿಂತೆಯು ಆವರಿಸಿತು.
ತಂ ಚಿಂತಯಾನಮಾಸೀನಂ ಧೃತರಾಷ್ಟ್ರಂ ಜನೇಶ್ವರಮ್ |
ನಿಶ್ಶ್ವಸಂತಮನೇಕಾಗ್ರಮಿತಿ ಹೋವಾಚ ಸಂಜಯಃ ॥2॥
ಹೀಗೆ ಚಿಂತಿಸುತ್ತಾ ಕುಳಿತ ಏಕಾಗ್ರತೆಯನ್ನು ಕಳೆದುಕೊಂಡು ನಿಟ್ಟುಸಿರು ಬಿಡುತ್ತಿದ್ದ ಧೃತರಾಷ್ಟ್ರರಾಜನನ್ನು ಕುರಿತು ಸಂಜಯನು ಹೀಗೆ ಮಾತನಾಡಿದನು.
ಅವಾಪ್ಯ ವಸುಸಂಪೂರ್ಣಾಂ ವಸುಧಾಂ ವಸುಧಾಧಿಪ |
ಪ್ರವ್ರಾಜ್ಯ ಪಾಂಡವಾನ್ ರಾಜ್ಯಾದ್ ರಾಜನ್ ಕಿಮನುಶೋಚಸಿ ॥3॥
ಎಲೈ ವಸುಧಾದಿಪನೇ! ಧನಪೂರ್ಣವಾದ ಭೂಮಿಯನ್ನು ಪಡೆದು ಪಾಂಡವರನ್ನು ರಾಜ್ಯದಿಂದ ಹೊರಗೆ ಕಳುಹಿಸಿ ಏತಕ್ಕೆ ಶೋಕಡುತ್ತಿದ್ದೀಯೆ?
ಧೃತರಾಷ್ಟ್ರಃ
ಅಶೋಚ್ಯತ್ವಂ ಕುತಸ್ತೇಷಾಂ ಯೇಷಾಂ ವೈರಂ ಭವಿಷ್ಯತಿ |
ಪಾಂಡವೈರ್ಯುದ್ಧಶೌಂಡೈಸ್ತು ಬಲವದ್ಭಿರ್ಮಹಾರಥೈಃ ॥4॥
ಯಾರು ಬಲಿಷ್ಠರಾದ ಯುದ್ಧನಿಪುಣರಾದ ಮಹಾರಥರಾದ ಪಾಂಡವರ ಜೊತೆಯಲ್ಲಿ ವೈರವನ್ನು ಸಂಪಾದಿಸುತ್ತಾರೆಯೋ ಅವರು ಹೇಗೆ ಶೋಕಪಡದೆ ಇರಲು ಸಾಧ್ಯ?
ಸಂಜಯಃ
ತವೇದಂ ಸ್ವಕೃತಂ ರಾಜನ್ ಮಹದ್ವೈರಂ ಭವಿಷ್ಯತಿ |
ವಿನಾಶಃ ಸರ್ವಲೋಕಸ್ಯ ಸಾನುಬಂಧೋ ಭವಿಷ್ಯತಿ ॥5॥
ರಾಜನೇ! ಇದು ನಿನ್ನ ಆತ್ಮಕೃತವಾದ ದೋಷ. ದೊಡ್ಡ ವೈರವು ಉಂಟಾಗುವುದು. ಸರ್ವಲೋಕದ ವಿನಾಶವೂ ಅನಂತರ ಯಮಲೋಕದಲ್ಲಿ ಯಮಪಾಶಗಳಿಂದ ಬಂಧನವೂ ಉಂಟಾಗುವುದು.
ವಾರ್ಯಮಾಣೋಽಪಿ ಭೀಷ್ಮೇಣ ದ್ರೋಣೇನ ವಿದುರೇಣ ಚ |
ಪಾಂಡವಾನಾಂ ಪ್ರಿಯಾಂ ಭಾರ್ಯಾಂ ದ್ರೌಪದೀಂ ಧರ್ಮಚಾರಿಣೀಮ್ ॥
ಪ್ರಾಹಿಣೋದಾನಯೇಹೇತಿ ಪುತ್ರೋ ದುರ್ಯೋಧನಸ್ತವ |
ಸೂತಪುತ್ರಂ ಸುಮಂದಾತ್ಮಾ ನಿರ್ಲಜ್ಜಃ ಪ್ರಾತಿಕಾಮಿನಮ್ ॥7॥
ಭೀಷ್ಮರಿಂದಲೂ ದ್ರೋಣರಿಂದಲೂ ವಿದುರನಿಂದಲೂ ನಿಷೇಧಿ- ಸಲ್ಪಟ್ಟರೂ ಸಹ ಮೂರ್ಖನಾದ ನಿರ್ಲಜ್ಜನಾದ ನಿನ್ನ ಪುತ್ರನಾದ ದುರ್ಯೋಧನನು ಪಾಂಡವರ ಪ್ರಿಯ ಭಾರ್ಯೆಯಾದ ಧರ್ಮಚಾರಿಣಿಯಾದ ದ್ರೌಪದಿಯನ್ನು ಇಲ್ಲಿಗೆ ಕರೆದುಕೊಂಡು ಬಾ ಎಂದು ಹೇಳಿ ತನ್ನ ಸೂತಪುತ್ರನಾದ ಪ್ರಾತಿಕಾಮಿಯನ್ನು ಕಳುಹಿಸಿದನು.
ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ ಪರಾಭವಮ್ |
ಬುದ್ಧಿಂ ತಸ್ಯಾಪಕರ್ಷಂತಿ ಸೋಽಪನೀತಾನಿ ಪಶ್ಯತಿ ॥8॥
ದೇವತೆಗಳು ಯಾವ ಪುರುಷನಿಗೆ ಪರಾಭವವನ್ನು ಕೊಡಲು ಇಚ್ಛಿಸುತ್ತಾರೋ ಅವರು ಅವರ ಬುದ್ಧಿಯನ್ನು ಅಪಹರಿಸುತ್ತಾರೆ. ಆ ಪುರುಷನು ದುರ್ನೀತಿಯುಳ್ಳವನಾಗಿ ಅರ್ಥಕಾಮಗಳನ್ನೇ ಕಾಣುತ್ತಾನೆ.
ಬುದ್ಧೌ ಕಲುಷಭೂತಾಯಾಂ ವಿನಾಶೇ ಪರ್ಯುಪಸ್ಥಿತೇ |
ಅನಯೋ ನಯಸಂಕಾಶೋ ಹೃದಯಾನ್ನಾಪಸರ್ಪತಿ ॥9॥
ವಿನಾಶವು ಸಮೀಪಸ್ಥವಾದಾಗ ಬುದ್ಧಿಯು ಕೆಟ್ಟುಹೋಗುತ್ತಿರಲು ನ್ಯಾಯದಂತೆ ತೋರುವ ಅನ್ಯಾಯವು ಮನಸ್ಸಿನಿಂದ ಹೊರಗೆ ಹೋಗುವುದಿಲ್ಲ.
ಅನರ್ಥಾಶ್ಚಾರ್ಥರೂಪೇಣ ಅರ್ಥಾಶ್ಚಾನರ್ಥರೂಪಿಣಃ |
ಉತ್ತಿಷ್ಠಂತಿ ವಿನಶ್ಯಂತಿ ನೂನಂ ತಚ್ಚಾಸ್ಯ ರೋಚತೇ ॥10॥
ಅನರ್ಥಗಳು ಅರ್ಥಗಳಂತೆ ಉದ್ಭವಿಸುತ್ತವೆ. ಅರ್ಥಗಳು ಅನರ್ಥಗಳಂತೆ ನಾಶವನ್ನು ಹೊಂದುತ್ತವೆ. ಇದು ಆ ಪುರುಷನಿಗೆ ಬಹಳ

ಮೆಚ್ಚುಗೆಯಾಗುತ್ತದೆ.
ನ ಕಾಲೋ ದಂಡಮುದ್ಯಮ್ಯ ಶಿರಃ ಕೃಂತತಿ ಕಸ್ಯ ಚಿತ್ |
ಕಾಲಸ್ಯ ಬಲಮೇವೈತದ್ ವಿಪರೀತಾರ್ಥದರ್ಶನಮ್ ॥11॥
ಕಾಲವು ಕೈಯಲ್ಲಿ ದಂಡವನ್ನು ಹಿಡಿದು ಯಾರ ಶಿರಸ್ಸನ್ನು ಕತ್ತರಿಸುವುದಿಲ್ಲ. ಈ ವಿರುದ್ಧಾರ್ಥ ದರ್ಶನವೇ ಕಾಲದ ಬಲ.
ಆಸಾದಿತಮಿದಂ ಘೋರಂ ತುಮುಲಂ ರೋಮಹರ್ಷಣಮ್ |
ಪಾಂಚಾಲೀಮಪಕರ್ಷದ್ಭಿಃ ಸಭಾಮಧ್ಯೇ ತಪಸ್ವಿನೀಮ್ ॥12॥
ಸಭಾಮಧ್ಯದಲ್ಲಿ ತಪಸ್ವಿನಿಯಾದ ಪಾಂಚಾಲಿಯನ್ನು ಎಳೆದು ಈ ಘನಘೋರವಾದ ರೋಮಾಂಚಕಾರಿಯಾದ ವಿಪತ್ತು ನಿಮ್ಮಿಂದ ಸಂಪಾದಿಸಲ್ಪಟ್ಟಿತು.
ಅಯೋನಿಜಾಂ ರೂಪವತೀಂ ಕುಲಜಾಂ ತಾಂ ವಿಭಾವರೀಮ್ |
ಕೋ ನು ತಾಂ ಸರ್ವಧರ್ಮಜ್ಞಾಂ ಪರಿಹೂಯ ಯಶಸ್ವಿನೀಮ್ |
ಪರ್ಯಾನಯೇತ್ ಸಭಾಮಧ್ಯೇ ದ್ಯೂತೇ ದುರ್ದ್ಯೂತದೇವಿನಃ ॥13॥
ಸ್ತ್ರೀಧರ್ಮಿಣೀಂ ವರಾರೋಹಾಂ ಶೋಣಿತೇನ ಸಮುಕ್ಷಿತಾಮ್ |
ಏಕವಸ್ತ್ರಾಂ ಚ ಪಾಂಚಾಲೀಂ ಪಾಂಡವಾನಪ್ಯವೇಕ್ಷ್ಯ ಚ ॥14॥
ಹೃತಸ್ವಾನ್ ಭ್ರಷ್ಟಚಿತ್ತಾಂಸ್ತಾನ್ ಹೃತದಾರಾನ್ ಖತಪ್ರಿಯಾನ್ |
ವಿಹೀನಾನ್ ಸರ್ವಕಾಮೇಭ್ಯೋ ದಾಸಭಾವಮುಪಾಗತಾನ್ |
ಧರ್ಮಪಾಶಪರಿಕ್ಷಿಪ್ತಾನ್ ಅಶಕ್ತಾನಿವ ವಿಕ್ರಮೇ ॥15॥
ತಮ್ಮ ಧನವನ್ನೆಲ್ಲಾ ಕಳೆದುಕೊಂಡು ಚಿತ್ತಸ್ವಾಸ್ಥ್ಯವನ್ನು ಕಳೆದುಕೊಂಡು ಸತ್ಯಪ್ರಿಯರಾದ ಪಾಂಡವರು ಎಲ್ಲ ಕಾಮಗಳಿಂದಲೂ ರಹಿತರಾಗಿ ದಾಸಭಾವವನ್ನು ಹೊಂದಿ ಧರ್ಮಪಾಶದಿಂದ ಕಟ್ಟಲ್ಪಟ್ಟು ಪರಾಕ್ರಮವನ್ನು ತೋರಿಸಲು ಅಶಕ್ತರಂತೆ ಕಂಡು ತಮ್ಮ ಪತ್ನಿಯನ್ನು ಕಳೆದುಕೊಂಡಿದ್ದನ್ನು ಗಮನಿಸಿ ಅಯೋನಿಜಯೂ ಸುಂದರಿಯೂ ಸತ್ಕುಲಪ್ರಸೂತೆಯೂ ತನ್ನ ವಿರುದ್ಧಭಾವನೆಯುಳ್ಳವರನ್ನು ನಾಶಪಡಿಸುವವಳೂ ಸರ್ವಧರ್ಮಜ್ಞಳೂ ಕೀರ್ತಿಶಾಲಿನಿಯೂ ರಜಸ್ವಲೆಯೂ ರಕ್ತದಿಂದ ಸಿಕ್ತವಾದ ಏಕವಸ್ತ್ರವುಳ್ಳವಳೂ ಆದ ಪಾಂಚಾಲಿಯನ್ನು ಮೋಸದ ದ್ಯೂತವನ್ನು ಆಡುವ ಶಕುನಿಯ ದ್ಯೂತದಲ್ಲಿ ಆಹ್ವಾನಮಾಡಿ ಯಾವನು ಎಳೆದುತರುತ್ತಾನೆ?
ಕ್ರುದ್ಧಾಮಮರ್ಷಿತಾಂ ಕೃಷ್ಣಾಂ ದುಃಖಿತಾಂ ಕುರುಸಂಸದಿ |
ದುರ್ಯೋಧನಶ್ಚ ಕರ್ಣಶ್ಚ ಕಟುಕಾನ್ಯಭ್ಯಭಾಷತಾಮ್ ॥16॥
ದುರ್ಯೋಧನ ಮತ್ತು ಕರ್ಣರು ಕುರುಸಂಸತ್ತಿನಲ್ಲಿ ಕೋಪ ಅಸಹನೆ ಮತ್ತು ದುಃಖಗಳಿಂದ ಕೂಡಿದ್ದ ದ್ರೌಪದಿಯನ್ನು ಕುರಿತು ಕಟುವಾದ ಮಾತುಗಳನ್ನು ಆಡಿದರು.
ಧೃತರಾಷ್ಟ್ರಃ
ತಸ್ಯಾಃ ಕೃಪಣಚಕ್ಷುರ್ಭ್ಯಾಂ ಪ್ರದಹ್ಯೇತಾಪಿ ಮೇದಿನೀ |
ಅವಿಶೇಷಂ ಭವೇದೇಷಾಂ ಪುತ್ರಾಣಾಮಪಿ ಸಂಜಯ ॥17॥
ಅವಳ ಕಾರ್ಪಣ್ಯದೃಷ್ಟಿಯಿಂದ ಭೂಮಿಯೇ ಬೇಕಾದರೂ ಸುಟ್ಟು ಹೋಗಬಹುದು. ಸಂಜಯನೇ! ನನ್ನ ಪುತ್ರರ ವಂಶವು ನಿರ್ವಂಶವಾಗುತ್ತದೆ.
ಭಾರತಾನಾಂ ಸ್ತ್ರಿಯಃ ಸರ್ವಾ ಗಾಂಧಾರ್ಯಾ ಸಹ ಸಂಯುತಾಃ |
ಪ್ರಾಕ್ರೋಶನ್ ಭೈರವಂ ತತ್ರ ದೃಷ್ಟ್ವಾ ಕೃಷ್ಣಾಂ ಸಭಾಗತಾಮ್ ॥18॥
ದ್ರೌಪದಿಯು ಸಭೆಗೆ ಬಂದುದನ್ನು ನೋಡಿ ಗಾಂಧಾರಿಯ ಜೊತೆಯಲ್ಲಿ ಭರತವಂಶಕ್ಕೆ ಸೇರಿದ ಸ್ತ್ರೀಯರೆಲ್ಲರೂ ಭೈರವನಾದವನ್ನು ಮಾಡಿ ಕಿರುಚಿದರು.
ಅಗ್ನಿಹೋತ್ರಾಣಿ ಸಾಯಾಹ್ನೇ ನ ಚಾಹೂಯಂತ ಸರ್ವಶಃ |
ಬ್ರಾಹ್ಮಣಾಃ ಕುಪಿತಾಶ್ಚಾಸನ್ ದ್ರೌಪದ್ಯಾಃ ಪರಿಕರ್ಷಣೇ |
ಆಸೀನ್ನಿಷ್ಠಾತಪೋ ಘೋರೋ ನಿರ್ಘಾತಶ್ಚ ಮಹಾನಭೂತ್ ॥19॥
ಸಾಯಂಕಾಲದಲ್ಲಿ ಎಲ್ಲಿಯೂ ಅಗ್ನಿಹೋತ್ರದಲ್ಲಿ ಹವಿಸ್ಸಿನ ಅರ್ಪಣೆಯಾಗಲಿಲ್ಲ. ದ್ರೌಪದಿಯನ್ನು ಎಳೆದಾಗ ಬ್ರಾಹ್ಮಣರೆಲ್ಲರೂ ಕುಪಿತರಾದರು. ಸೂರ್ಯನು ಪ್ರಖರವಾದ ತಾಪವನ್ನು ಉಂಟುಮಾಡಿದನು. ಘೋರವಾದ ಸಿಡಿಲು ಉಂಟಾಯಿತು.
ದಿವ ಉಲ್ಕಾಶ್ಚಾಪತಂತ ರಾಹುಶ್ಚಾರ್ಕಮುಪಾಗ್ರಸತ್ |
ಅಪರ್ವಣಿ ಮಹಾಘೋರಂ ಪ್ರಾಣಿನಾಂ ಜನಯನ್ ಭಯಮ್ ॥20॥
ಆಕಾಶದಿಂದ ಉಲ್ಕೆಗಳು ಬಿದ್ದವು. ಎಲ್ಲ ಪ್ರಾಣಿಗಳಿಗೆ ಘೋರವಾದ ಭಯವನ್ನು ಉಂಟುಮಾಡುತ್ತಾ ಪರ್ವವಲ್ಲದ ಕಾಲದಲ್ಲಿ ರಾಹುವು ಸೂರ್ಯಗ್ರಹಣದಲ್ಲಿ ಸೂರ್ಯನನ್ನು ನುಂಗಿದನು.
ತಥೈವ ರಥಶಾಲಾಸು ಪ್ರಾದುರಾಸೀದ್ಧುತಾಶನಃ |
ಧ್ವಜಾಶ್ಚಾಪ್ಯವಶೀರ್ಯಂತ ಭಾರತಾನಾಮಭೂತಯೇ ॥21॥
ರಥಶಾಲೆಗಳಲ್ಲಿ ಅಗ್ನಿಯು ಕಾಣಿಸಿಕೊಂಡಿತು. ಭಾರತವಂಶದವರ ಅಭೂತಿಯನ್ನು ಸೂಚಿಸುತ್ತಾ ಧ್ವಜಗಳು ಮುರಿದವು.
ದುರ್ಯೋಧನಸ್ಯಾಗ್ನಿಹೋತ್ರೇ ಸೃಗಾಲೋತ್ಯಭಷದ್ ಭೃಶಮ್ |
ತಂ ತಥಾ ಪ್ರತ್ಯವಾಶ್ಯಂತ ರಾಸಭಾಃ ಸರ್ವತೋದಿಶಮ್ ॥22॥
ದುರ್ಯೋಧನನ ಅಗ್ನಿಹೋತ್ರದಲ್ಲಿ ನರಿಯು ಬಹಳವಾಗಿ (ನಾಯಿಯಂತೆ ) ಬೊಗುಳಿತು. ಅದಕ್ಕೆ ಪ್ರತಿಯಾಗಿ ಎಲ್ಲ ದಿಕ್ಕುಗಳಲ್ಲಿಯೂ

ಕತ್ತೆಗಳು (ನರಿಯಂತೆ) ಪ್ರತಿಧ್ವನಿಯನ್ನು ನೀಡಿದವು.
ಪ್ರಾತಿಷ್ಠತ ತದಾ ಭೀಷ್ಮೋ ದ್ರೋಣೇನ ಸಹ ಸಂಜಯ |
ಕೃಪಶ್ಚ ಸೋಮದತ್ತಶ್ಚ ಬಾಹ್ಲೀಕಶ್ಚ ಮಹಾರಥಃ ॥23॥
ಸಂಜಯನೇ! ಆಗ ಭೀಷ್ಮರು ದ್ರೋಣರ ಜೊತೆಯಲ್ಲಿ ಅಲ್ಲಿಂದ ಹೊರಟರು. ಮಹಾರಥರಾದ ಕೃಪ ಸೋಮದತ್ತ ಮತ್ತು ಬಾಹ್ಲೀಕರೂ ಹೊರಟರು.
ತತೋಽಹಮಬ್ರುವಂ ತತ್ರ ವಿದುರೇಣಾಭಿ ಚೋದಿತಃ |
ವರಂ ದದಾಮಿ ಕೃಷ್ಣಾಯೈ ಕಾಂಕ್ಷಿತಂ ಯದ್ಯದಿಚ್ಛತಿ ॥24॥
ಆಗ ನಾನು ವಿದುರನಿಂದ ಪ್ರೇರಿಸಲ್ಪಟ್ಟು ದ್ರೌಪದಿಗೆ ಇಷ್ಟವಾದ ವರವನ್ನು ಕೊಡುತ್ತೇನೆ ಎಂದು ಹೇಳಿದೆ.
ಸಾವೃಣೋತ್ ತತ್ರ ಪಾಂಚಾಲೀ ಪಾಂಡವಾನಮಿತೌಜಸಃ |
ಸರಥಾನ್ ಸಧನುಷ್ಕಾಂಶ್ಚಾಪ್ಯನ್ವಜ್ಞಾಸಿಷಮಪ್ಯಹಮ್ ॥25॥
ಆಗ ಪಾಂಚಾಲಿಯು ತಮ್ಮ ರಥ ಮತ್ತು ಧನುಸ್ಸುಗಳಿಂದ ಸಹಿತರಾದ ಅಮಿತಪರಾಕ್ರಮಿಗಳಾದ ಪಾಂಡವರು ದಾಸ್ಯದಿಂದ ವಿಮೋಚನೆಯನ್ನು ಹೊಂದಲಿ ಎಂದು ವರವನ್ನು ಕೇಳಿದಳು. ನಾನು ಹಾಗೆಯೇ ಆಗಲಿ ಎಂದು ಆಜ್ಞೆಯನ್ನು ಮಾಡಿದೆ.
ಅಥಾಬ್ರವೀನ್ಮಹಾಪ್ರಾಜ್ಞೋ ವಿದುರಃ ಸರ್ವಧರ್ಮವಿತ್ |
ಏತದಂತಾಃ ಸ್ಥ ಭರತಾ ಯದ್ವಃ ಕೃಷ್ಣಾ ಸಭಾಗತಾ ॥26॥
ಆಗ ಮಹಾಪ್ರಾಜ್ಞನೂ ಸರ್ವಧರ್ಮಜ್ಞನೂ ಆದ ವಿದುರನು ಹೀಗೆ ಹೇಳಿದನು. ಎಲೈ ಭರತರೇ! ನೀವು ದ್ರೌಪದಿಯನ್ನು ಸಭೆಗೆ ಕರೆದಂದುದರಿಂದ ಇದೇ ನಿಮ್ಮ ವಿನಾಶ.
ಏಷಾ ಪಾಂಚಾಲರಾಜಸ್ಯ ಸುತೇಷ್ಟಾ ಶ್ರೀರನುತ್ತಮಾ |
ಪಾಂಚಾಲೀ ಪಾಂಡವಾನೇತಾನ್ ದೇವಸೃಷ್ಟೋಪಸರ್ಪತಿ ॥27॥
ಪಾಂಚಾಲರಾಜನ ಪ್ರಿಯಕುಮಾರಿಯಾದ ಶ್ರೇಷ್ಠಳಾದ ಶ್ರೀದೇವಿಯಾದ ದೇವತೆಗಳಿಂದ ಸೃಷ್ಟಳಾದ ಈ ಪಾಂಚಾಲಿಯು ಈ ಪಾಂಡವರನ್ನು ಸಮೀಪಿಸುತ್ತಾಳೆ. (ದ್ರೌಪದಿಯ ದೇಹದಲ್ಲಿರುವ ಭಾರತ್ಯಾದಿ ಪಂಚದೇವಿಯರಿಗೂ ತಮ್ಮ ತಮ್ಮ ಪತಿಗಳನ್ನು ಆಶ್ರಯಿಸಿದ ಕಾರಣದಿಂದ ಶ್ರೀದೇವಿ ಎಂಬ ಹೆಸರಿದೆ)
ತಸ್ಯಾಃ ಪಾರ್ಥಾಃ ಪರಿಕ್ಲೇಶಂ ನ ಕ್ಷಮಂತೇ ಹ್ಯಮರ್ಷಿಣಃ |
ವೃಷ್ಣಯೋ ವಾ ಮಹೇಷ್ವಾಸಾಃ ಪಾಂಚಾಲಾಶ್ಚಮಿತೌಜಸಃ ॥28॥
ಅಸಹನಶೀಲರಾದ ಮಹಾಧನುರ್ಧಾರಿಗಳಾದ ಪಾಂಡವರಾಗಲೀ ವೃಷ್ಣಿಗಳಾಗಲೀ ಅಥವಾ ಅಮಿತ ಶೌರ್ಯವುಳ್ಳ ಪಾಂಚಾಲರಾಗಲೀ ದ್ರೌಪದಿಯ ಪರಿಕ್ಲೇಶವನ್ನು ಸಹಿಸುವುದಿಲ್ಲ.
ತೇನ ಸತ್ಯಾಭಿಸಂಧೇನ ವಾಸುದೇವೇನ ರಕ್ಷಿತಾಃ |
ಆಗಮಿಷ್ಯತಿ ಬೀಭತ್ಸುಃ ಪಾಂಚಾಲೈಶ್ಚಾಭಿಸೇವಿತಃ ॥29॥
ಸತ್ಯಪ್ರತಿಜ್ಞೆಯುಳ್ಳ ಕೃಷ್ಣನಿಂದ ರಕ್ಷಿತನಾಗಿ ಪಾಂಚಾಲರಿಂದಲೂ ಕೂಡಿದವನಾಗಿ ಅರ್ಜುನನು ಯುದ್ಧಕ್ಕಾಗಿ ಬರುವನು.
ತೇಷಾಂ ಮಧ್ಯೇ ಮಹೇಷ್ವಾಸೋ ಭೀಮಸೇನೋ ಮಹಾಬಲಃ |
ಆಗಮಿಷ್ಯತಿ ಧೂನ್ವಾನೋ ಗದಾಂ ದಂಡಮಿವಾಂತಕಃ ॥30॥
ಅವರ ಮಧ್ಯದಲ್ಲಿ ಮಹಾಧನುರ್ಧಾರಿಯೂ ಮಹಾಬಲವುಳ್ಳವನೂ ಆದ ಭೀಮಸೇನನು ಸಹ ಯಮನು ತನ್ನ ದಂಡವನ್ನು ತಿರುಗಿಸಿದಂತೆ ಗದೆಯನ್ನು ತಿರುಗಿಸುತ್ತಾ ಬರುವನು.
ತತೋ ಗಾಂಡೀವನಿರ್ಘೋಷಂ ಶ್ರುತ್ವಾ ಪಾರ್ಥಸ್ಯ ಧೀಮತಃ |
ಗದಾವೇಗಂ ಚ ಭೀಮಸ್ಯ ನಾಲಂ ಸೋಢುಂ ನರಾಧಿಪಾಃ ॥31॥
ಆಗ ಮೇಧಾವಿಯಾದ ಅರ್ಜುನನ ಗಾಂಡೀವಘೋಷವನ್ನು ಮತ್ತು ಭೀಮಸೇನನ ಗದಾವೇಗವನ್ನು ಸಹಿಸಲು ಯಾವ ರಾಜರಿಗೂ ಸಾಧ್ಯವಾಗುವುದಿಲ್ಲ.
ತತ್ರ ಮೇ ರೋಚತೇ ನಿತ್ಯಂ ಪಾರ್ಥೈಃ ಸಾಮ ನ ವಿಗ್ರಹಃ |
ಕುರುಭ್ಯೋ ಹಿ ಸದಾ ಮನ್ಯೇ ಪಾಂಡವಾನ್ ಶಕ್ತಿಮತ್ತರಾನ್ ॥32॥
ಆ ವಿಷಯದಲ್ಲಿ ನನಗೆ ಯಾವಾಗಲೂ ಪಾಂಡವರ ಜೊತೆಯಲ್ಲಿ ಶಾಂತಿಸಂಧಾನವೇ ಇಷ್ಟವಾಗುತ್ತದೆ. ವಿರೋಧವು ಎಂದೂ ಇಷ್ಟವಾಗುವುದಿಲ್ಲ. ಕುರುಗಳಿಗಿಂತ ಪಾಂಡವರು ಎಂದೂ ಹೆಚ್ಚು ಶಕ್ತಿಯಿಂದ ಕೂಡಿದವರು. ಎಂದು ನಾನು ಯಾವಾಗಲೂ ತಿಳಿದಿದ್ದೇನೆ.
ತಥಾಽತಿಬಲವಾನ್ ರಾಜಾ ಜರಾಸಂಧೋ ಮಹಾದ್ಯುತಿಃ |
ಬಾಹುಪ್ರಹರಣೇನೈವ ಭೀಮೇನ ನಿಹತೋ ಯುಧಿ ॥33॥
ಅಂತಹ ಬಲಿಷ್ಠನಾದ ಮಹಾಕಾಂತಿಯುಕ್ತನಾದ ಜರಾಸಂಧರಾಜನು ಭೀಮಸೇನನಿಂದ ಯುದ್ಧದಲ್ಲಿ ಕೇವಲ ಬಾಹುಗಳಿಂದಲೇ ಕೊಲ್ಲಲ್ಪಟ್ಟನು.
ತಸ್ಯ ತೇ ಶಮ ಏವಾಸ್ತು ಪಾಂಡವೈರ್ಭರತರ್ಷಭ |
ಉಭಯೋಃ ಪಕ್ಷಯೋರ್ಯುಕ್ತಂ ಕ್ರಿಯತಾಮವಿಶಂಕಯಾ ॥34॥
ಎಲೈ ಭರತರ್ಷಭನೇ! ಅಂತಹ ಪಾಂಡವರ ಜೊತೆಯಲ್ಲಿ ನಿನಗೆ ಶಾಂತಿಯೇ ಉಂಟಾಗಲಿ. ಎರಡು ಪಕ್ಷಗಳಿಗೂ ಯೋಗ್ಯವಾದ ಈ ಕಾರ್ಯವನ್ನು ನೀನು ಶಂಕೆಯಿಲ್ಲದೆ ಮಾಡು.
ಏವಂ ಗಾವಲ್ಗಣೇ ಕ್ಷತ್ತಾ ಧರ್ಮಾರ್ಥಸಹಿತಂ ವಚಃ |

ಉಕ್ತವಾನ್ ನ ಗೃಹೀತಂ ವೈ ಮಯಾ ಪುತ್ರಹಿತೇಪ್ಸುನಾ ॥35॥
ಸಂಜಯನೇ! ಹೀಗೆ ವಿದುರನು ಧರ್ಮಾರ್ಥಸಹಿತವಾದ ವಚನಗಳನ್ನು ಹೇಳಿದನು. ಆದರೆ ಪುತ್ರಹಿತವನ್ನು ಬಯಸಿದ ನಾನು ಅವನ ಮಾತುಗಳನ್ನು ಕೇಳಲಿಲ್ಲ.
ವೈಶಂಪಾಯನಃ
ಸಮಾಪ್ತೇ ಪರ್ವಣಿ ತದಾ ಸ್ವಶಕ್ತ್ಯಾ ತರ್ಪಯೇದ್ ದ್ವಿಜಾನ್ |
ಪರ್ವಪರ್ವಣಿ ಚಾವಶ್ಯಂ ಹೋಮಂ ಕುರ್ಯಾತ್ ಪ್ರಯತ್ನತಃ ॥36॥
ಪರ್ವಸಮಾಪ್ತಿಯಾದಾಗ ಶಕ್ತಿಯಿದ್ದಷ್ಟು ಬ್ರಾಹ್ಮಣರನ್ನು ಸಂತೋಷಪಡಿಸಬೇಕು. ಪ್ರತಿಯೊಂದು ಪರ್ವದಲ್ಲಿಯೂ ಅವಶ್ಯವಾಗಿ ಪ್ರಯತ್ನಪೂರ್ವಕವಾಗಿ ಹೋಮವನ್ನು ಮಾಡಬೇಕು.
ಆದೌ ಚ ವಾಚಕೇ ದೇಯಂ ವಸ್ತ್ರಂ ಗಂಧಸಮನ್ವಿತಮ್ |
ಸಭಾಪರ್ವಣಿ ರಾಜೇಂದ್ರ ಹವಿಷ್ಯಂ ಭೋಜಯೇದ್ ದ್ವಿಜಾನ್ ॥37॥
ಆದಿಪರ್ವದಲ್ಲಿ ವಾಚಕರಿಗೆ ಗಂಧವನ್ನು ಮತ್ತು ವಸ್ತ್ರವನ್ನು ಕೊಡಬೇಕು. ರಾಜೇಂದ್ರನೇ! ಸಭಾಪರ್ವದಲ್ಲಿ ಬ್ರಾಹ್ಮಣರಿಗೆ ಹವಿಷ್ಯಾನ್ನವನ್ನು ಭೋಜನಮಾಡಿಸಬೇಕು.
ತರ್ಪಯೇದ್ ವಿವಿಧೈಃ ಕಾಮೈರ್ದಾನೈಶ್ಶ್ರೇಷ್ಠಾವಚೈಸ್ತಥಾ |
ಅತಿರಾತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥38॥
ವಿವಿಧಕಾಮಗಳಿಂದಲೂ ಶ್ರೇಷ್ಠವಾದ ಮತ್ತು ಕನಿಷ್ಠವಾದ ದಾನಗಳಿಂದಲೂ ಬ್ರಾಹ್ಮಣರನ್ನು ಸಂತೋಷಗೊಳಿಸಿದ ಮನುಷ್ಯನು ಅತಿರಾತ್ರಯಾಗದ ಫಲವನ್ನು ಹೊಂದುತ್ತಾನೆ.
ಪ್ರಾಪ್ನುಯಾಚ್ಚ ಕ್ರತುಫಲಂ ನರಃ ಪುಸ್ತಕಪೂಜನೇ |
ಅಪುತ್ರಃ ಪುತ್ರಮಾಪ್ನೋತಿ ಪುತ್ರವಾನ್ ಲಭತೇ ಧನಮ್ ॥39॥
ಪುಸ್ತಕವನ್ನು ಪೂಜಿಸುವ ಮನುಷ್ಯನು ಕ್ರತುವಿನ ಫಲವನ್ನು ಪಡೆಯುತ್ತಾನೆ.ಪುತ್ರನಿಲ್ಲದವನು ಪುತ್ರನನ್ನು ಪಡೆಯುತ್ತಾನೆ. ಪುತ್ರನನ್ನು ಹೊಂದಿದವನು ಧನವನ್ನು ಪಡೆಯುತ್ತಾನೆ.
ಪುತ್ರೈರ್ಧನೈಶ್ಚ ಸಹಿತೋ ಯಶಃ ಕೀರ್ತಿಂ ಚ ವಿಂದತಿ |
ಶ್ರುತ್ವಾಖ್ಯಾನಮಿದಂ ಪುಣ್ಯಂ ನಿಷ್ಪಾಪೋ ಜಾಯತೇ ನರಃ ॥40॥
ಪುತ್ರ ಮತ್ತು ಧನ ಎರಡನ್ನು ಹೊಂದಿದವನು ಯಶಸ್ಸನ್ನು ಕೀರ್ತಿಯನ್ನು ಪಡೆಯುತ್ತಾನೆ. ಈ ಆಖ್ಯಾನವನ್ನು ಶ್ರವಣಮಾಡಿದ ಮನುಷ್ಯನು ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಏತತ್ಸರ್ವಂ ಸಭಾಪರ್ವ ಹ್ಯಾಖ್ಯಾತಂ ತೇ ಮಹಾವಿಭೋ |
ಗ್ರಂಥಾಗ್ರಂ ಸಪ್ತಕೇ ಯಾತೇ ವ್ಯಾಪ್ತೌ ಚಾಷ್ಟಸಮಾಖ್ಯಯಾ ॥
ಶ್ಲೋಕಾನಾಂ ದ್ವೇ ಸಹಸ್ರೇ ತು ಪಂಚಶ್ಲೋಕಶತಾನಿ ಚ |
ವೇದವ್ಯಾಸೇನ ಮುನಿನಾ ಪರ್ವಣ್ಯಸ್ಮಿನ್ ಪ್ರಕೀರ್ತಿತಾಃ ॥42॥
ಮಹಾಪ್ರಭುವಾದ ಜನಮೇಜಯನೇ! ನಾನು ಸಮಗ್ರವಾದ ಸಭಾಪರ್ವವನ್ನು ನಿನಗೆ ಹೇಳಿದ್ದೇನೆ. ಇದರಲ್ಲಿ ಶ್ಲೋಕಪ್ರಮಾಣವು ಏಳುನೂರು ಎಂಟುನೂರು ಎರಡುಸಾವಿರ ಎರಡುಸಾವಿರ ಐದುನೂರು ಮತ್ತು ಐದುನೂರು ಹೀಗೆ ನಾಲ್ಕುಸಾವಿರದ ಐದುನೂರು. ವಿಶ್ವರೂಪವನ್ನು ಧರಿಸಿದ ವೇದವ್ಯಾಸರು ಈ ಪರ್ವದಲ್ಲಿ ಇಷ್ಟು ಶ್ಲೋಕಗಳನ್ನು ಹೇಳಿದ್ದಾರೆ.
॥ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ಸಭಾಪರ್ವಣಿ ಶತತಮೋಧ್ಯಾಯಃ॥
॥ಅನುದ್ಯೂತಪರ್ವಣಿ ಅಷ್ಟಮೋಧ್ಯಾಯಃ ॥8॥
॥ ಅನುದ್ಯೂತ ಪರ್ವ ಸಮಾಪ್ತಮ್ ॥
॥ ಸಭಾಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ಸಭಾಪರ್ವದಲ್ಲಿ ನೂರನೆಯ ಅಧ್ಯಾಯವು ಮುಗಿಯಿತು.
ಅನುದ್ಯೂತಪರ್ವವು ಮುಗಿಯಿತು.
ಇಲ್ಲಿಗೆ ಸಭಾಪರ್ವವು ಮುಗಿಯಿತು.
* * * *

ಮಹಾಭಾರತ ವನಪರ್ವ
1. ಆರಣ್ಯಕಪರ್ವ
ಒಂದನೆಯ ಅಧ್ಯಾಯ
(ಪಾಂಡವರ ವನಾಗಮನ. ಅನುರಕ್ತರಾದ ಪೌರರಿಂದ ಹಿಂಬಾಲಿಸುವಿಕೆ, ಬ್ರಾಹ್ಮಣರ ಆಗಮನ. ಗಂಗಾತೀರದ ವಟದಲ್ಲಿ ವಾಸ.)
ಜನಮೇಜಯಃ
ಏವಂ ದ್ಯೂತಜಿತಾಃ ಪಾರ್ಥಾಃ ಕೋಪಿತಾಶ್ಚ ದುರಾತ್ಮಭಿಃ |
ಧಾರ್ತರಾಷ್ಟ್ರೈಃ ಸಹಾಮಾತ್ಯೈರ್ನಿಕೃತ್ಯಾ ದ್ವಿಜಸತ್ತಮ ॥1॥
ಶ್ರಾವಿತಾಃ ಪರುಷಾ ವಾಚಃ ಸೃಜದ್ಭಿರ್ವೈರಮುತ್ತಮಮ್ |
ಕಿಮಕುರ್ವತ ಕೌರವ್ಯಾ ಮಮ ಪೂರ್ವಪಿತಾಮಹಾಃ ॥2॥
ಎಲೈ ಬ್ರಾಹ್ಮಣಶ್ರೇಷ್ಠನೇ! ಕುರುಕುಲದಲ್ಲಿ ಜನಿಸಿದ ನನ್ನ ಪೂರ್ವಪಿತಾಮಹರಾದ ಪಾಂಡವರು ದುಷ್ಟರಾದ ಮತ್ತು ಮಂತ್ರಿಗಳಿಂದ

ಸಹಿತರಾದ ಧೃತರಾಷ್ಟ್ರಪುತ್ರರಿಂದ ಮೋಸದಿಂದ ದ್ಯೂತದಲ್ಲಿ ಸೋಲಿಸಲ್ಪಟ್ಟು ಮಹಾವೈರವನ್ನು ಉತ್ಪಾದನೆಮಾಡುವ ಕ್ರೂರವಾದ ಮಾತುಗಳನ್ನು ಆಲಿಸಿ ಕೋಪಗೊಂಡವರಾಗಿ ಮುಂದೇನು ಮಾಡಿದರು?
ಕಥಮೈಶ್ವರ್ಯಭ್ರೂಯಿಷ್ಠಾಃ ಸಹಸಾ ದುಃಖಮೀಯುಷಃ |
ವನೇ ವಿಜಹ್ರಿರೇ ಪಾರ್ಥಾಃ ಶಕ್ರಪ್ರತಿಮತೇಜಸಃ ॥3॥
ಐಶ್ವರ್ಯದ ತುತ್ತ ತುದಿಯಲ್ಲಿದ್ದ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಪಾಂಡವರು ಒಮ್ಮೆಲೇ ದುಃಖವನ್ನು ಪಡೆದವರಾಗಿ ಕಾಡಿನಲ್ಲಿ ಹೇಗೆ ವಿಹರಿಸಿದರು?
ಕೇ ಚೈನಾನನ್ವವರ್ತಂತ ಪ್ರಾಪ್ತಾನ್ ವ್ಯಸನಮುತ್ತಮಮ್ |
ಕಿಮಾಹಾರಾಃ ಕಿಮಾಚಾರಾಃ ಕ್ವಚ ವಾಸೋ ಮಹಾತ್ಮನಾಮ್ ॥4॥
ಇಂತಹ ಉಗ್ರವಾದ ವ್ಯಸನವನ್ನು ಹೊಂದಿದ ಪಾಂಡವರನ್ನು ಯಾರು ಹಿಂಬಾಲಿಸಿದರು? ಮಹಾತ್ಮರಾದ ಆ ಪಾಂಡವರು ಎಲ್ಲಿ ವಾಸಮಾಡಿದರು? ಯಾವ ಆಹಾರವನ್ನು ಸ್ವೀಕರಿಸಿದರು? ಮತ್ತು ಯಾವ ಕಾರ್ಯಗಳನ್ನು ಮಾಡಿದರು?
ಕಥಂ ದ್ವಾದಶ ವರ್ಷಾಣಿ ವನೇ ತೇಷಾಂ ಮಹಾತ್ಮನಾಮ್ |
ವ್ಯತೀಯುರ್ಬ್ರಾಹ್ಮಣಶ್ರೇಷ್ಠ ಶೂರಾಣಾಮನಿವರ್ತಿನಾಮ್ ॥5॥
ಎಲೈ ಬ್ರಾಹ್ಮಣಶ್ರೇಷ್ಠನೇ! ಶೂರರೂ ಯುದ್ಧದಿಂದ ಎಂದೂ ಹಿಮ್ಮೆಟ್ಟದವರೂ ಮಹಾತ್ಮರೂ ಆದ ಅವರು ಕಾಡಿನಲ್ಲಿ ಹೇಗೆ ಹನ್ನೆರಡು ವರ್ಷಗಳನ್ನು ಕಳೆದರು?
ಕಥಂ ಚ ರಾಜಪುತ್ರೀ ಸಾ ಪ್ರವರಾ ಸರ್ವಯೋಷಿತಾಮ್ |
ಪತಿವ್ರತಾ ಮಹಾಭಾಗಾ ಸತತಂ ಸತ್ಯವಾದಿನೀ ॥6॥
ವನವಾಸಮದುಃಖಾರ್ಹಾ ದಾರುಣಂ ಸಮಪದ್ಯತ |
ಏತದಾಚಕ್ಷ್ವ ಮೇ ಸರ್ವಂ ವಿಸ್ತರೇಣ ತಪೋಧನ ॥7॥
ಎಲ್ಲ ಸ್ತ್ರೀಯರಿಗಿಂತಲೂ ಉತ್ಕೃಷ್ಟಳಾದವಳೂ ಪತಿವ್ರತೆಯೂ ಸತ್ಯವನ್ನು ನುಡಿಯುವವಳೂ ಸತತವಾಗಿ ಮಹಾನುಭಾವಳೂ ದುಃಖಕ್ಕೆ ಅನರ್ಹಳೂ ಆದ ರಾಜಕುಮಾರಿಯಾದ ದ್ರೌಪದಿಯು ದಾರುಣವಾದ ವನವಾಸವನ್ನು ಹೇಗೆ ಅನುಭವಿಸಿದಳು? ಎಲೈ ತಪೋಧನನೇ ! ಎಲ್ಲಾ ವಿಷಯವನ್ನು ನನಗೆ ವಿಸ್ತಾರವಾಗಿ ಹೇಳು.
ಶ್ರೋತುಮಿಚ್ಛಾಮಿ ಚರಿತಂ ಭೂರಿದ್ರವಿಣತೇಜಸಾಮ್ |
ಕಥ್ಯಮಾನಂ ತ್ವಯಾ ವಿಪ್ರ ಪರಂ ಕೌತೂಹಲಂ ಹಿ ಮೇ ॥8॥
ಎಲೈ ಬ್ರಾಹ್ಮಣನೇ! ಬಹುವಾದ ಸಂಪತ್ತು ಮತ್ತು ಪರಾಕ್ರಮವುಳ್ಳವರಾದ ಅವರ ಚರಿತ್ರೆಯನ್ನು ನಾನು ನಿನ್ನಿಂದ ಕೇಳಬಯಸುತ್ತೇನೆ. ನನಗೆ ಈ ವಿಷಯದಲ್ಲಿ ಬಹಳ ಕುತೂಹಲವಿದೆ.
ವೈಶಂಪಾಯನಃ
ಏವಂ ದ್ಯೂತಜಿತಾಃ ಪಾರ್ಥಾಃ ಕೋಪಿತಾಶ್ಚ ದುರಾತ್ಮಭಿಃ |
ಧಾರ್ತರಾಷ್ಟ್ರೈಃ ಸಹಾಮಾತ್ಯೈರ್ನಿರ್ಯಯುರ್ಗಜಸಾಹ್ವಯಾತ್ ॥9॥
ಹೀಗೆ ದ್ಯೂತದಲ್ಲಿ ಪರಾಭವವನ್ನು ಹೊಂದಿ ದುರಾತ್ಮರಾದ ಧೃತರಾಷ್ಟ್ರ ಪುತ್ರರಿಂದ ಮತ್ತು ಅವರ ಮಂತ್ರಿಗಳಿಂದ ಕೋಪಗೊಂಡ ಪಾಂಡವರು ಹಸ್ತಿನಾವತಿಯನ್ನು ಬಿಟ್ಟು ಹೊರಟರು.
ವರ್ಧಮಾನಪುರದ್ವಾರಾನ್ನಿಃಸೃತ್ಯ ಪುರುಷರ್ಷಭಾಃ |
ಉದಙ್ಮುಖಾಃ ಶಸ್ತ್ರಭೃತಃ ಪ್ರಯಯುಃ ಸಹ ಕೃಷ್ಣಯಾ ॥10॥
ಪುರುಷಶ್ರೇಷ್ಠರಾದ ಅವರು ಕೋಟೆಬಾಗಿಲನ್ನು ದಾಟಿ ಕೈಯಲ್ಲಿ ಶಸ್ತ್ರಗಳನ್ನು ಹಿಡಿದು ದ್ರೌಪದಿಯ ಜೊತೆಯಲ್ಲಿ ಉತ್ತರಾಭಿಮುಖವಾಗಿ ಹೊರಟರು.
ಇಂದ್ರಸೇನಾದಯಶ್ಚೈತಾನ್ ಭೃತ್ಯಾಃ ಪರಿಚತುರ್ದಶೈಃ |
ರಥೈರನುಯಯುಃ ಶೀಘ್ರೈಃ ಸ್ತ್ರಿಯ ಆದಾಯ ಸರ್ವಶಃ ॥11॥
ಇಂದ್ರಸೇನ ಮೊದಲಾದ ಅವರ ಸಾರಥಿಗಳು ಮತ್ತು ಭೃತ್ಯರು ಶೀಘ್ರವಾಗಿ ಚಲಿಸುವ ಹದಿನಾಲ್ಕು ರಥಗಳಲ್ಲಿ ಪಾಂಡವರ ರಾಣಿವಾಸದ ಎಲ್ಲರನ್ನೂ ಕರೆದುಕೊಂಡು ಪಾಂಡವರನ್ನು ಹಿಂಬಾಲಿಸಿದರು.
ತತಸ್ತೇ ರಥಮಾಸ್ಥಾಯ ಸಹಧೌಮ್ಯಾಶ್ಚ ಭಾರತ |
ದದೃಶುರ್ಜಾಹ್ನವೀತೀರೇ ಪ್ರಮಾಣಾಖ್ಯಂ ಮಹಾವಟಮ್ ॥12॥
ಎಲೈ ಭಾರತನೇ! ಅನಂತರ ಅವರು ಧೌಮ್ಯರ ಜೊತೆಯಲ್ಲಿ ರಥಗಳನ್ನು ಏರಿ ಗಂಗಾತಟದಲ್ಲಿ ಪ್ರಮಾಣವೆಂಬ ಹೆಸರಿನ ಒಂದು ದೊಡ್ಡ ವಟವೃಕ್ಷವನ್ನು ನೋಡಿದರು.
ವ್ರಜತಸ್ತಾನ್ ವಿದಿತ್ವಾ ತು ಪೌರಾಃ ಶೋಕಾಭಿಪೀಡಿತಾಃ |
ಗರ್ಹಯಂತೋಽಸಕೃದ್ ಭೀಷ್ಮವಿದುರದ್ರೋಣಗೌತಮಾನ್ |
ಊಚುರ್ವಿಗ್ನಾಃ ಸಮಯಂ ಕೃತ್ವಾ ಸಮಾಗಮ್ಯ ಪರಸ್ಪರಮ್ ॥13॥
ಹಸ್ತಿನಾವತಿಯಿಂದ ಹೊರಟ ಪಾಂಡವರನ್ನು ನೋಡಿ ಶೋಕಪೀಡಿತರಾದ ಪೌರರು ಭೀಷ್ಮ ವಿದುರ ದ್ರೋಣ ಮತ್ತು ಕೃಪಾಚಾರ್ಯರನ್ನು ಪುನಃಪುನಃ ನಿಂದಿಸುತ್ತಾ ತಮ್ಮತಮ್ಮಲ್ಲಿ ಒಂದು ಸಮಯ(ಒಪ್ಪಂದ)ವನ್ನು ಮಾಡಿಕೊಂಡು ಪರಸ್ಪರವಾಗಿ ಮಾತನಾಡಿದರು.
ನೇದಮಸ್ತಿ ಕುಲಂ ಕೃತ್ಸ್ನಂ ನ ವಯಂ ನ ಚ ನೋ ಗೃಹಾಃ |
ಯತ್ರ ದುರ್ಯೋಧನಃ ಪಾಪಃ ಸೌಬಲೇನಾಭಿಪಾಲಿತಃ ॥14॥

ಎಲ್ಲಿ ಪಾಪಿಯಾದ ದುರ್ಯೋಧನನು ಶಕುನಿಯ ಜೊತೆಯಲ್ಲಿ ಕೂಡಿಕೊಂಡಿದ್ದಾನೆಯೋ ಅಲ್ಲಿ ಈ ನಮ್ಮ ಸಮಗ್ರವಾದ ಕುಲವೇ ಇಲ್ಲ. ನಮ್ಮ ಗೃಹಗಳೂ ಇಲ್ಲ. ಮತ್ತು ನಾವೂ ಇಲ್ಲ.
ಕರ್ಣದುಶ್ಶಾಸನಾಭ್ಯಾಂ ಚ ರಾಜ್ಯಮೇವ ಬುಭೂಷತೇ |
ನ ತತ್ ಕುಲಂ ನ ಚಾಚಾರೋ ನ ಧರ್ಮೋಽರ್ಥಃ ಕುತಃ ಸುಖಮ್ |
ಯತ್ರ ಪಾಪಸಹಾಯೋಽಯಂ ಪಾಪೋ ರಾಜ್ಯಂ ಬುಭೂಷತೇ ॥15॥
ಕರ್ಣ ದುಶ್ಶಾಸನರ ಸಹಾಯದಿಂದ ದುರ್ಯೋಧನನು ರಾಜ್ಯವನ್ನು ಹೊಂದಲು ಬಯಸುತ್ತಿದ್ದಾನೆ. ನಮಗೆ ಕುಲವಾಗಲೀ ಆಚಾರವಾಗಲೀ ಧರ್ಮವಾಗಲೀ ಅರ್ಥವಾಗಲೀ ಯಾವುದೂ ಉಳಿದಿಲ್ಲ. ಪಾಪಿಯಾದ ಶಕುನಿಯ ಸಹಾಯವನ್ನು ಪಡೆದ ಪಾಪಿಯಾದ ದುರ್ಯೋಧನನು ಎಲ್ಲಿ ರಾಜ್ಯವನ್ನು ಬಯಸುತ್ತಾನೆಯೋ ಅಲ್ಲಿ ಸುಖವು ಎಲ್ಲಿಂದ ಬರಬೇಕು?
ಅರ್ಥಲುಬ್ಧೋಽತಿಮಾನೀ ಚ ನೀಚಃ ಪ್ರಕೃತಿನಿರ್ಘೃಣಃ |
ನೇಯಮಸ್ತಿ ಮಹೀ ಸರ್ವಾ ಯತ್ರ ದುರ್ಯೋಧನೋ ನೃಪಃ ॥16॥
ದುರ್ಯೋಧನನು ಬಹಳ ಧನಲೋಭವುಳ್ಳವನು ದುರಹಂಕಾರಿ ನೀಚ ಮತ್ತು ಸ್ವಾಭಾವಿಕವಾಗಿಯೇ ನಿರ್ದಯವಾದವನು. ಎಲ್ಲಿ ದುರ್ಯೋಧನನು ರಾಜನೋ ಅಂತಹ ಭೂಮಿಯು ಇಲ್ಲವೆಂದು ತಿಳಿಯಬೇಕು.
ಸಾಧು ಗಚ್ಛಾಮಹೇ ಸರ್ವೇ ಯತ್ರ ಗಚ್ಛಂತಿ ಪಾಂಡವಾಃ |
ಸಾನುಕ್ರೋಶಾ ಮಹಾತ್ಮಾನೋ ವಿಜಿತೇಂದ್ರಿಯಶತ್ರವಃ |
ಹ್ರೀಮಂತಃ ಕೀರ್ತಿಮಂತಶ್ಚ ಧರ್ಮಾಚಾರಪರಾಯಣಾಃ ॥17॥
ಪಾಂಡವರು ದಯಾಪೂರ್ಣರೂ ಮಹಾನುಭಾವರೂ ಜಿತೇಂದ್ರಿಯರೂ ಜಿತಶತ್ರುಗಳೂ ವಿನಯಸ್ವಭಾವದವರೂ ಕೀರ್ತಿವಂತರೂ ಧರ್ಮಾಚಾರನಿಷ್ಠರೂ ಆಗಿದ್ದಾರೆ. ಆದ್ದರಿಂದ ಪಾಂಡವರು ಎಲ್ಲಿ ಹೋಗುತ್ತಾರೆಯೋ ನಾವೆಲ್ಲರೂ ಅಲ್ಲಿಗೇ ಹೋಗೋಣ.
ಏವಮುಕತ್ವನುಜಗ್ಮುಸ್ತಾನ್ ಪಾಂಡವಾಂಸ್ತೇ ಸಮೇತ್ಯ ಚ |
ಊಚುಃ ಪ್ರಾಂಜಲಯಃ ಸರ್ವೇ ತಾನ್ ಕುಂತೀಮಾದ್ರಿನಂದನಾನ್ ॥
ಹೀಗೆ ಮಾತನಾಡಿಕೊಂಡು ಆ ಪೌರರೆಲ್ಲರೂ ಒಟ್ಟುಗೂಡಿ ಪಾಂಡವರನ್ನು ಹಿಂಬಾಲಿಸಿದರು. ಅವರೆಲ್ಲರೂ ಕುಂತಿ ಮತ್ತು ಮಾದ್ರಿಯ ಮಕ್ಕಳಾದ ಪಾಂಡವರನ್ನು ಸಮೀಪಿಸಿ ಕೈಗಳನ್ನು ಜೋಡಿಸಿ ಹೀಗೆ ಮಾತನಾಡಿದರು.
ಕ್ವ ಗಮಿಷ್ಯಥ ಭದ್ರಂ ವಸ್ತ್ಯಕತ್ವಽಸ್ಮಾನ್ ದುಃಖಭಾಗಿನಃ |
ವಯಮಪ್ಯನುಯಾಸ್ಯಾಮೋ ಯತ್ರ ಯೂಯಂ ಗಮಿಷ್ಯಥ ॥19॥
ನಿಮಗೆ ಮಂಗಳವಾಗಲಿ. ದುಃಖಭಾಗಿಗಳಾದ ನಮ್ಮನ್ನು ತೊರೆದು ನೀವು ಎಲ್ಲಿಗೆ ಹೋಗುವಿರಿ? ನೀವು ಹೋಗುವ ಸ್ಥಳಕ್ಕೆ ನಾವು ನಿಮ್ಮನ್ನು ಹಿಂಬಾಲಿಸಿ ಬರುತ್ತೇವೆ.
ಅಧರ್ಮೇಣ ಜಿತಾನ್ ಶ್ರುತ್ವಾ ಯುಷ್ಮಾಂಸ್ತ್ಯಕ್ತಘೃಣೈಃ ಪರೈಃ |
ಉದ್ವಿಗ್ನಾಃ ಸ್ಮೋ ಭೃಶಂ ಸರ್ವೇ ನಾಸ್ಮಾನ್ ಹಾತುಮಿಹಾರ್ಹಥ ॥20॥
ನಿರ್ದಯರಾದ ನಿಮ್ಮ ಶತ್ರುಗಳು ನಿಮ್ಮನ್ನು ಅನ್ಯಾಯದಿಂದ ಸೋಲಿಸಿದುದನ್ನು ಕೇಳಿ ನಾವೆಲ್ಲರೂ ಬಹಳ ಉದ್ವಿಗ್ನರಾಗಿದ್ದೇವೆ. ನೀವು ನಮ್ಮನ್ನು ತೊರೆಯಬಾರದು.
ಭಕ್ತಾನುರಕ್ತಾಃ ಸುಹೃದಃ ಸದಾ ಪ್ರಿಯಹಿತೇ ರತಾಃ |
ಕುರಾಜಾಧಿಷ್ಠಿತೇ ರಾಜ್ಯೇ ನ ವಿನಶ್ಯೇಮ ಸರ್ವಶಃ ॥21॥
ನಿಮ್ಮ ವಿಶ್ವಾಸಪಾತ್ರರೂ ನಿಮ್ಮಲ್ಲಿ ಭಕ್ತಿಯನ್ನು ಉಳ್ಳವರೂ. ಸ್ನೇಹವನ್ನು ಉಳ್ಳವರೂ. ನಿಮ್ಮ ಪ್ರಿಯಹಿತಗಳಲ್ಲೇ ಆಸಕ್ತರಾದವರೂ ಆದ ನಾವೆಲ್ಲರೂ ಕೆಟ್ಟರಾಜನಿಂದ ಆಳಲ್ಪಡುವ ಈ ರಾಜ್ಯದಲ್ಲಿ ವಿನಾಶವನ್ನು ಹೊಂದಬಾರದು.
ಶ್ರೂಯತಾಂ ಚಾಭಿಧಾಸ್ಯಾಮೋ ಗುಣದೋಷಾನ್ ನರಾಧಿಪಾಃ |
ಶುಭಾಶುಭಾಧಿವಾಸೇನ ಸಂಸರ್ಗಂ ಕುರುತೇ ಯಥಾ ॥22॥
ಎಲೈ ನರಶ್ರೇಷ್ಠರೇ! ಒಳ್ಳೆಯವರ ಮತ್ತು ದುಷ್ಟರ ಜೊತೆಯಲ್ಲಿ ವಾಸಮಾಡುವುದರಿಂದ ಎಂತಹ ಗುಣದೋಷಗಳು ಉಂಟಾಗುವವು ಎಂದು ನಾವು ಹೇಳುತ್ತೇವೆ. ಅದನ್ನು ಕೇಳಿ.
ವಸ್ತ್ರಮಂಭಸ್ತಿಲಾನ್ ಭೂಮಿಂ ಗಂಧೋ ವಾಸಯತೇ ಯಥಾ|
ಪುಷ್ಪಾಣಾಮಧಿವಾಸೇನ ತಥಾ ಸಂಸರ್ಗಜಾ ಗುಣಾಃ ॥23॥
ಹೂವುಗಳು ಹೇಗೆ ತಮ್ಮ ಸಂಪರ್ಕಕ್ಕೆ ಬಂದ ವಸ್ತ್ರವನ್ನಾಗಲೀ ನೀರನ್ನಾಗಲೀ ಎಳ್ಳನ್ನಾಗಲೀ ಅಥವಾ ಭೂಮಿಯನ್ನಾಗಲೀ ಗಂಧಯುಕ್ತವನ್ನಾಗಿ ಮಾಡುತ್ತವೆಯೋ ಅದರಂತೆ ಸಜ್ಜನರ ಮತ್ತು ದುರ್ಜನರ ಸಂಸರ್ಗದಿಂದ ಅವರ ಗುಣಗಳು ಇನ್ನೊಂದು ಕಡೆಯಲ್ಲಿ ಉಂಟಾಗುತ್ತವೆ.
ಮೋಹಜಾಲಸ್ಯ ಯೋನಿರ್ಹಿ ಮೂಢೈರೇವ ಸಮಾಗಮಃ |
ಅಹನ್ಯಹನಿ ಧರ್ಮಸ್ಯ ಯೋನಿಃ ಸಾಧುಸಮಾಗಮಃ ॥24॥
ಮೂಢರ ಜೊತೆಯಲ್ಲಿ ಸಂಸರ್ಗವು ಮೋಹಜಾಲಕ್ಕೇ ಕಾರಣವಾದುದು. ಸಜ್ಜನರ ಸಮಾಗಮವು ದಿನದಿನದಲ್ಲಿ ಧರ್ಮದ ವೃದ್ಧಿಗೆ ಕಾರಣವಾದುದು.
ತಸ್ಮಾತ್ ಪ್ರಾಜ್ಞೈಶ್ಚ ವೃದ್ಧೈಶ್ಚ ಸ್ಥಿರಭಾವೈಸ್ತಪಸ್ವಿಭಿಃ |
ಸದ್ಭಿಶ್ಚ ಸಹ ಸಂಸರ್ಗಃ ಕಾರ್ಯಃ ಶಮಪರಾಯಣೈಃ |
ನ ನೀಚೈರ್ನಾಢ್ಯವಿದ್ವದ್ಭಿರ್ನಾನಾತ್ಮಜ್ಞೈರ್ವಿಶೇಷತಃ ॥25॥
ಆದ್ದರಿಂದ ಪ್ರಾಜ್ಞರೂ ವೃದ್ಧರೂ ಅಚಂಚಲರೂ ತಪಃಶೀಲರೂ ಶಾಂತರೂ ಆದ ಸಜ್ಜನರ ಜೊತೆಯಲ್ಲಿ ಸಂಸರ್ಗವನ್ನು

ಹೊಂದಬೇಕು. ಹೊರತು ನೀಚರ ದುರಹಂಕಾರಿಗಳ ತಮ್ಮ ಸ್ವರೂಪವನ್ನೇ ತಿಳಿಯದವರ ಜೊತೆಯಲ್ಲಿ ಎಂದೂ ಸಂಸರ್ಗವನ್ನು ಹೊಂದಬಾರದು.
ಯೇಷಾಂ ತ್ರೀಣ್ಯವದಾತಾನಿ ವಿದ್ಯಾ ಯೋನಿಶ್ಚ ಕರ್ಮ ಚ |
ತೇ ಸೇವ್ಯಾಸ್ತೈಃ ಸಮಾಸ್ಯಾ ಹಿ ಶಾಸ್ತ್ರೇಭ್ಯೋಽಪಿ ವಿಶಿಷ್ಯತೇ ॥26॥
ಯಾರಿಗೆ ವಿದ್ಯೆ ಕುಲ ಮತ್ತು ಕರ್ಮ ಈ ಮೂರೂ ಶುದ್ಧವಾಗಿರುತ್ತವೆಯೋ ಅಂತಹವರು ಸೇವನೀಯರು. ಅವರ ಜೊತೆಯಲ್ಲಿ ಕುಳಿತುಕೊಳ್ಳುವುದು ಸಹ ಶಾಸ್ತ್ರಾಧ್ಯಯನಕ್ಕಿಂತಲೂ ಮಿಗಿಲಾದುದು.
ಯೇಷಾಮೇತತ್ ತ್ರಯಂ ನಾಸ್ತಿ ಶಾಸ್ತ್ರಮೇಷಾಂ ನ ವಿದ್ಯತೇ |
ತೇಷಾಂ ಸಂಗೋ ನ ಧನ್ಯಃ ಸ್ಯಾದಿತಿ ನೋ ನಿಶ್ಚಿತಂ ವಚಃ ॥27॥
ಯಾರಿಗೆ ಈ ಮೂರೂ ಇಲ್ಲವೋ ಅವರ ಬಳಿ ಶಾಸ್ತ್ರವೂ ಇರುವುದಿಲ್ಲ. ಅವರ ಸಂಸರ್ಗವು ಎಂದೂ ಶುಭವಾದುದಲ್ಲ ಎಂದು ನಮ್ಮ ನಿಶ್ಚಿತವಾದ ಅಭಿಪ್ರಾಯ.
ನಿರಾರಂಭಾಹ್ಯಪಿ ವಯಂ ಪುಣ್ಯಶೀಲೇಷು ಸಾಧುಷು |
ಪುಣ್ಯಮೇವಾಪ್ನುಯಾಮೇಹ ಪಾಪಂ ಪಾಪೋಪಸೇವನಾತ್ |
ಪುಣ್ಯಾರ್ಥಂ ವಸ್ತುಮಿಚ್ಛಾಮಃ ಪಾಪಂ ಸ್ಯಾತ್ ಪಾಪಸೇವನಾತ್ ॥28॥
ನಾವು ಯಾವ ಕಾರ್ಯವನ್ನು ಮಾಡದಿದ್ದರೂ ಪುಣ್ಯಶೀಲರಾದ ಸಾಧುಗಳ ಜೊತೆಯಲ್ಲಿ ಇದ್ದರೆ ಇಲ್ಲಿ ಪುಣ್ಯವನ್ನೇ ಗಳಿಸುತ್ತೇವೆ. ಪಾಪವನ್ನು ಸಂಪಾದಿಸುವವರ ಜೊತೆಯಲ್ಲಿ ಇದ್ದರೆ ಪಾಪವನ್ನೇ ಗಳಿಸುತ್ತೇವೆ. ನಾವು ಪುಣ್ಯವನ್ನು ಸಂಪಾದಿಸುವ ಉದ್ದೇಶದಿಂದ ನಿಮ್ಮ ಜೊತೆಯಲ್ಲಿ ವಾಸಿಸಲು ಬಯಸುತ್ತೇವೆ. ಪಾಪಿಗಳ ಜೊತೆಯಲ್ಲಿ ವಾಸಿಸಿದರೆ ಪಾಪವೇ ಉಂಟಾಗುವುದಷ್ಟೇ?
ಅಸತಾಂ ದರ್ಶನಾತ್ ಸ್ಪರ್ಶಾತ್ ಸಂಜಲ್ಪೇನ ಸಹಾಸನಾತ್ |
ಧರ್ಮಾಚಾರಾಃ ಪ್ರಹೀಯಂತೇ ನಚ ಸಿದ್ಧ್ಯಂತಿ ಮಾನವಾಃ ॥29॥
ದುಷ್ಟರ ದರ್ಶನದಿಂದ ಸ್ಪರ್ಶದಿಂದ ಅವರ ಜೊತೆಯಲ್ಲಿ ಮಾತನಾಡುವುದರಿಂದ ಮತ್ತು ಅವರ ಜೊತೆಯಲ್ಲಿ ಕುಳಿತುಕೊಳ್ಳುವುದರಿಂದ ಧರ್ಮವು ಮತ್ತು ಆಚಾರವು ನಶಿಸಿಹೋಗುತ್ತದೆ. ಮತ್ತು ಮನುಷ್ಯರಿಗೆ ಯಾವ ಸಿದ್ಧಿಯೂ ಉಂಟಾಗುವುದಿಲ್ಲ.
ಬುದ್ಧಿಶ್ಚ ಹೀಯತೇ ಪುಂಸಾಂ ನೀಚೈಃ ಸಹ ಸಮಾಗಮಾತ್ |
ಮಧ್ಯಮೈರ್ಮಧ್ಯತಾಂ ಯಾತಿ ಶ್ರೇಷ್ಠತಾಂ ಯಾತಿ ಚೋತ್ತಮೈಃ ॥30॥
ನೀಚರ ಸಮಾಗಮದಿಂದ ಮನುಷ್ಯರಿಗೆ ಬುದ್ಧಿಯು ನಾಶಹೊಂದುತ್ತದೆ. ಮಧ್ಯಮರ ಸಹವಾಸದಿಂದ ಬುದ್ಧಿಯು ಮಧ್ಯಸ್ಥವಾಗುತ್ತದೆ. ಉತ್ತಮರ ಜೊತೆಯಲ್ಲಿ ಇದ್ದರೆ ಮಾತ್ರ ಬುದ್ಧಿಯು ಶ್ರೇಷ್ಠವಾಗುತ್ತದೆ.
ಯೇ ಗುಣಾಃ ಕೀರ್ತಿತಾ ಲೋಕೇ ಧರ್ಮಕಾಮಾರ್ಥಸಂಭವಾಃ |
ಲೋಕಾಚಾರಾಚ್ಚ ಸಂಭೂತಾ ವೇದೋಕ್ತಾಃ ಶಿಷ್ಟಸಂಮತಾಃ ॥31॥
ತೇ ಯುಷ್ಮಾಸು ಸಮಸ್ತಾಶ್ಚ ವ್ಯಸ್ತಾಶ್ಚೈವೇಹ ಸದ್ಗುಣಾಃ |
ಇಚ್ಛಾಮೋ ಗುಣವನ್ಮಧ್ಯೇ ವಸ್ತುಂ ಶ್ರೇಯೋಭಿಕಾಂಕ್ಷಿಣಃ ॥32॥
ಲೋಕದಲ್ಲಿ ಧರ್ಮ ಅರ್ಥ ಮತ್ತು ಕಾಮಜನಕವಾದ ಯಾವಯಾವ ಗುಣಗಳು ಹೇಳಲ್ಪಟ್ಟಿವೆಯೋ ಲೋಕದ ನಡೆವಳಿಕೆಯಿಂದ ಯಾವಯಾವ ಗುಣಗಳು ಉಂಟಾಗುತ್ತವೆಯೋ ಮತ್ತು ವೇದೋಕ್ತವಾದ ಸಜ್ಜನಸಂಮತವಾದ ಯಾವ ಗುಣಗಳು ಇವೆಯೋ ಆ ಎಲ್ಲ ಸದ್ಗುಣಗಳೂ ನಿಮ್ಮಲ್ಲಿ ಪ್ರತ್ಯೇಕವಾಗಿಯೂ ಮತ್ತು ಒಟ್ಟಾಗಿಯೂ ಇವೆ. ಶ್ರೇಯಸ್ಕಾಮಿಗಳಾದ ನಾವು ಗುಣವಂತರ ಮಧ್ಯದಲ್ಲಿ ವಾಸಿಸಲು ಬಯಸುತ್ತೇವೆ.
ಯುಧಿಷ್ಠಿರಃ
ಧನ್ಯಾ ವಯಂ ಯದಸ್ಮಾನ್ ವೈ ಸ್ನೇಹಕಾರುಣ್ಯಯಂತ್ರಿತಾಃ |
ಅಸತೋಽಪಿ ಗುಣಾನಾಹುರ್ಬ್ರಾಹ್ಮಣಪ್ರಮುಖಾಃ ಪ್ರಜಾಃ ॥33॥
ಎಲೈ ಪ್ರಜೆಗಳೇ! ಬ್ರಾಹ್ಮಣರೇ ಮೊದಲಾದ ನೀವು ಸ್ನೇಹ ಮತ್ತು ಕಾರುಣ್ಯಪರವಶರಾಗಿ ನಮ್ಮಲ್ಲಿ ಇಲ್ಲದಿರುವ ಗುಣಗಳನ್ನೂ ಸಹ ನಮ್ಮಲ್ಲಿ ಅನುಸಂಧಾನಮಾಡಿ ಹೇಳುತ್ತಿರುವುದರಿಂದ ನಾವು ಧನ್ಯರೆಂದು ಭಾವಿಸುತ್ತೇವೆ.
ತದಹಂ ಭ್ರಾತೃಸಹಿತಃ ಸರ್ವಾನ್ ವಿಜ್ಞಾಪಯಾಮಿ ವಃ |
ನಾನ್ಯಥಾ ತದ್ಧಿ ಕರ್ತವ್ಯಮಸ್ಮತ್ಸ್ನೇಹಾನುಕಂಪಯಾ ॥34॥
ನಾನು ನನ್ನ ಎಲ್ಲ ತಮ್ಮಂದಿರ ಜೊತೆಯಲ್ಲಿ ನಿಮಗೆ ವಿಜ್ಞಾಪನೆಯನ್ನು ಮಾಡುತ್ತಿದ್ದೇನೆ. ನಮ್ಮ ಮೇಲಿನ ಸ್ನೇಹ ಮತ್ತು ದಯದಿಂದ ಅದನ್ನು ಹಾಗೆಯೇ ನಡೆಸಿಕೊಡಬೇಕು. ವ್ಯತ್ಯಾಸಮಾಡಬಾರದು.
ಭೀಷ್ಮಃ ಪಿತಾಮಹೋ ರಾಜಾ ಜನನೀ ವಿದುರಶ್ಚ ಮೇ |
ಸುಹೃಜ್ಜನಶ್ಚ ಪ್ರಾಯೋ ಮೇ ನಗರೇ ನಾಗಸಾಹ್ವಯೇ ॥35॥
ತೇ ಹ್ಯಸ್ಮದ್ಧಿತಕಾಮಾರ್ಥಂ ಪಾಲನೀಯಾಃ ಪ್ರಯತ್ನತಃ |
ಯುಷ್ಮಾಭಿಃ ಸಹಿತೈಃ ಸರ್ವೈಃ ಶೋಕಸಂತಾಪವಿಹ್ವಲೈಃ ॥36॥
ನಮ್ಮ ಪಿತಾಮಹರಾದ ಭೀಷ್ಮ , ಧೃತರಾಷ್ಟ್ರರಾಜ, ತಾಯಿಯಾದ ಕುಂತಿ ವಿದುರ ಮತ್ತು ಹಸ್ತಿನಾವತಿಯಲ್ಲಿರುವ ಹೆಚ್ಚಾದ ನಮ್ಮ ಸುಹೃತ್‌ಜನರು ಇವರೆಲ್ಲರನ್ನೂ ನಮ್ಮ ಹಿತವನ್ನು ಬಯಸುವ ನೀವು ಪ್ರಯತ್ನಪೂರ್ವಕವಾಗಿ ರಕ್ಷಣೆಮಾಡಬೇಕು. ಶೋಕಸಂತಾಪ ವಿಹ್ವಲರಾದ ನೀವೆಲ್ಲರೂ ಒಟ್ಟುಗೂಡಿ ಅವರ ರಕ್ಷಣೆಯನ್ನು ಮಾಡಬೇಕು.
ನಿವರ್ತಧ್ವಂ ಗತಾ ದೂರಂ ಮಮಾಗಮನಕಾಂಕ್ಷಿಣಃ |

ಸ್ವಜನೇ ನ್ಯಾಸಭೂತೇ ಮೇ ಕಾರ್ಯಾ ಸ್ನೇಹಾನ್ವಿತಾ ಮತಿಃ ॥37॥
ನನ್ನ ಆಗಮನವನ್ನು ಬಯಸಿ ನೀವೆಲ್ಲರೂ ಬಹಳ ದೂರ ಬಂದಿದ್ದೀರಿ. ನೀವು ದಯವಿಟ್ಟು ಹಿಂದಿರುಗಿ. ನಾವು ನಿಮ್ಮಲ್ಲಿ ನ್ಯಾಸವಾಗಿ ಇಟ್ಟಿರುವ ಈ ಭೀಷ್ಮಾದಿಗಳಲ್ಲಿ ನಿಮ್ಮ ಸ್ನೇಹಪೂರ್ಣವಾದ ಬುದ್ಧಿಯನ್ನು ತೋರಿಸಿ.
ಏತದ್ಧಿ ಮಮ ಕಾರ್ಯಾಣಾಂ ಪರಮಂ ಹೃದಿ ಸಂಸ್ಥಿತಮ್ |
ಕೃತೇನಾನೇನ ತುಷ್ಟಿರ್ಮೇ ಸತ್ಕಾರಶ್ಚ ಕೃತೋ ಭವೇತ್ ॥38॥
ನೀವು ಮಾಡಬೇಕಾದ ಕಾರ್ಯದಲ್ಲಿ ಅತ್ಯಂತ ಶ್ರೇಷ್ಠವಾದ ಕಾರ್ಯವೆಂದರೆ ಇದೇ ಎಂಬುದಾಗಿ ನನ್ನ ಮನಸ್ಸಿನಲ್ಲಿ ಧೃಢವಾಗಿದೆ. ನೀವು ಹೀಗೆ ನಡೆದುಕೊಂಡರೆ ನನಗೆ ಸಂತೋಷ ಉಂಟಾಗುತ್ತದೆ. ಮತ್ತು ನನಗೆ ಸತ್ಕಾರವನ್ನೂ ಮಾಡಿದಂತೆ ಆಗುತ್ತದೆ.
ತಥಾऽನುಮಂತ್ರಿತಾಸ್ತೇನ ಧರ್ಮರಾಜೇನ ವೈ ಪ್ರಜಾಃ |
ಚಕ್ರುರಾರ್ತಸ್ವರಂ ಘೋರಂ ಹಾ ರಾಜನ್ನಿತಿ ದುಃಖಿತಾಃ ॥39॥
ಹೀಗೆ ಧರ್ಮರಾಜನಿಂದ ಹೇಳಲ್ಪಟ್ಟ ಆ ಪ್ರಜೆಗಳು ದುಃಖದಿಂದ ಕೂಡಿದವರಾಗಿ, ಹಾ ರಾಜ ! ಎಂದು ಹೇಳುತ್ತಾ ಘೋರವಾದ ಆರ್ತಸ್ವರವನ್ನು ಮಾಡಿದರು.
ಗುಣಾನ್ ಪಾರ್ಥಸ್ಯ ಸಂಸ್ಮೃತ್ಯ ದುಃಖಾರ್ತಾಃ ಪರಮಾತುರಾಃ |
ಅಕಾಮಾಃ ಸಂನ್ಯವರ್ತಂತ ಸಮಾಗಮ್ಯಾಥ ಪಾಂಡವೈಃ ॥40॥
ಪಾಂಡವರ ಜೊತೆಯಲ್ಲಿ ಸಮಾಗಮವನ್ನು ಹೊಂದಿದ್ದ ಅವರು ಪಾಂಡವರ ಗುಣಗಳನ್ನು ಸ್ಮರಿಸುತ್ತಾ ದುಃಖದಿಂದ ಕೂಡಿದವರಾಗಿ ಪಾಂಡವರ ವಿರಹದಿಂದ ಆತುರರಾಗಿ ತಮಗೆ ಇಷ್ಟವಿಲ್ಲದಿದ್ದರೂ ಹಸ್ತಿನಾವತಿಗೆ ಹಿಂದಿರುಗಿದರು.
ವಿನಿವೃತ್ತೇಷು ಪೌರೇಷು ರಥಾನಾಸ್ಥಾಯ ಪಾಂಡವಾಃ |
ಪ್ರಜಗ್ಮುರ್ಜಾಹ್ನವೀತೀರೇ ಪ್ರಮಾಣಾಖ್ಯಂ ಮಹಾವಟಮ್ ॥41॥
ಪೌರರು ಹಿಂದಿರುಗಿದ ಮೇಲೆ ಪಾಂಡವರು ರಥಗಳನ್ನು ಏರಿ ಗಂಗಾತೀರದಲ್ಲಿ ಇದ್ದ ಪ್ರಮಾಣ ಎಂಬ ಹೆಸರಿನ ದೊಡ್ಡ ವಟವೃಕ್ಷವನ್ನು ತಲುಪಿದರು.
ತತೋ ದಿವಸಶೇಷೇಣ ವಟಂ ಗತ್ವಾऽಥ ಪಾಂಡವಾಃ |
ಊಷುಸ್ತಾಂ ರಜನೀಂ ವೀರಾಃ ಸಂಸ್ಪೃಶ್ಯ ಸಲಿಲಂ ಶುಚಿ ॥42॥
ವೀರರಾದ ಪಾಂಡವರು ದಿವಸದ ಉಳಿದ ಭಾಗದಲ್ಲಿ ಪ್ರಯಾಣವನ್ನು ಮಾಡಿ ಆ ವಟವೃಕ್ಷವನ್ನು ತಲುಪಿ ಕೈಕಾಲುಗಳನ್ನು ತೊಳೆದು ಶುಚಿರ್ಭೂತರಾಗಿ ಅವರು ಆ ರಾತ್ರಿಯನ್ನು ಅಲ್ಲಿಯೇ ಕಳೆದರು.
ಉದಕೇನೈವ ತಾಂ ರಾತ್ರಿಮೂಷುಸ್ತೇ ಶ್ರಮಕರ್ಶಿತಾಃ |
ಅನುಜಗ್ಮುಶ್ಚ ತತ್ರೈತಾನ್ ಸ್ನೇಹಾತ್ ಕೇಚಿದ್ ದ್ವಿಜಾತಯಃ ॥43॥
ಶ್ರಮದಿಂದ ಬಳಲಿದ ಅವರು ಆ ರಾತ್ರಿಯನ್ನು ಉದಕದ ಅಹಾರದಿಂದಲೇ ಕಳೆದರು. ಕೆಲವು ಬ್ರಾಹ್ಮಣರು ಅವರ ಮೇಲಿನ ಸ್ನೇಹದಿಂದ ಅವರನ್ನು ಅಲ್ಲಿಯೂ ಹಿಂಬಾಲಿಸಿದರು.
ಸಾಗ್ನಯೋऽನಗ್ನಯಶ್ಚೈವ ಸಶಿಷ್ಯಗಣಬಾಂಧವಾಃ |
ಸ ತೈಃ ಪರಿವೃತೋ ರಾಜಾ ಶುಶುಭೇ ಬ್ರಹ್ಮವಾದಿಭಿಃ ॥44॥
ಅಗ್ನಿಗಳನ್ನು ಹೊಂದಿದ ಮತ್ತು ನಿರಗ್ನಿಗಳಾದ ಮತ್ತು ಶಿಷ್ಯಪರಿವಾರಬಾಂಧವರಿಂದ ಒಡಗೂಡಿದ ಅಂತಹ ಬ್ರಾಹ್ಮಣರಿಂದ ಸುತ್ತುವರಿಯಲ್ಪಟ್ಟ ಧರ್ಮರಾಜನು ಅಲ್ಲಿ ಶೋಭಿಸಿದನು.
ತೇಷಾಂ ಪ್ರಾದುಷ್ಕೃತಾಗ್ನೀನಾಂ ಮುಹೂರ್ತೇ ರಮ್ಯದಾರುಣೇ |
ಬ್ರಹ್ಮಘೋಷಪುರಸ್ಕಾರಃ ಸಂಜಲ್ಪಃ ಸಮಜಾಯತ ॥45॥
ಸಾಧುಗಳಿಗೆ ರಮ್ಯವೂ ದೈತ್ಯರಿಗೆ ದಾರುಣವೂ ಆದ ಸೂರ್ಯಾಸ್ತಕ್ಕಿಂತ ಮುಂಚಿನ ಕಾಲದಲ್ಲಿ ಅವರು ತಮ್ಮ ಅಗ್ನಿಗಳ ಪ್ರಾದುಷ್ಕಾರಗಳನ್ನು ಮಾಡಿ ವೇದಘೋಷಗಳನ್ನು ಮಾಡಿ ಪರಸ್ಪರವಾಗಿ ಮಾತನಾಡಿಕೊಂಡರು.
ರಾಜಾನಂ ತು ಕುರುಶ್ರೇಷ್ಠಂ ತೇ ಹಂಸಮಧುರಸ್ವರಾಃ |
ಆಶ್ವಾಸಯಂತೋ ವಿಪ್ರೇಂದ್ರಾಃ ಕ್ಷಪಾಂ ಸರ್ವಾಮನೋದಯನ್ ॥
ಹಂಸದಂತೆ ಮಧುರಸ್ವರವನ್ನು ಹೊಂದಿದ್ದ ಆ ಬ್ರಾಹ್ಮಣಶ್ರೇಷ್ಠರು ಕುರುರಾಜನಾದ ಧರ್ಮರಾಜನನ್ನು ಸಮಾಧಾನಪಡಿಸುತ್ತಾ ಆ ರಾತ್ರಿಯನ್ನೆಲ್ಲಾ ಕಳೆದರು.
ರಾಜಾ ತು ಭ್ರಾತೃಭಿಃ ಸಾರ್ಧಂ ತಥಾ ಸರ್ವೈಃ ಸುಹೃದ್ಗಣೈಃ |
ಅತೀಯಾತ್ ತಾಂ ನಿಶಾಂ ರಾಜನ್ ದುಃಖಶೋಕಸಮಾಹತಃ ॥
ಎಲೈ ಜನಮೇಜಯನೇ! ಧರ್ಮರಾಜನಾದರೋ ತನ್ನ ಎಲ್ಲ ತಮ್ಮಂದಿರ ಜೊತೆಯಲ್ಲಿ ಮತ್ತು ಎಲ್ಲ ಸುಹೃದ್ಗಣಗಳ ಜೊತೆಯಲ್ಲಿ ದುಃಖಶೋಕಾಭಿತಪ್ತನಾಗಿ ಆ ರಾತ್ರಿಯನ್ನು ಕಳೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವನಪರ್ವಣಿ ಪ್ರಥಮೋऽಧ್ಯಾಯಃ ॥
॥ ಆರಣ್ಯಕಪರ್ವಣಿ ಪ್ರಥಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ನಿಹತ್ಯ ರಕ್ಷೋ ವನಮಧ್ಯಸಂಸ್ಥಾ

ಸ್ತದಾ ಯತೀನಾಮಯುತೈಃ ಸಮೇತಾಃ |
ಅಶೀತಿಸಾಹಸ್ರಮುನಿಪ್ರವೀರೈ
ರ್ದಶಾಂಶಯುಕ್ತೈಃ ಸಹಿತಾ ವ್ಯಚಿಂತಯನ್ ॥4॥
ಪಾಂಡವರು ಕಿರ್ಮೀರನನ್ನು ಕೊಂದ ಬಳಿಕ ತಮ್ಮೊಡನೆ ಬಂದಿದ್ದ ಹತ್ತು ಸಾವಿರ ಯತಿಗಳ ಮತ್ತು ಎಂಬತ್ತೆಂಟು ಸಾವಿರ ಮುನೀಶ್ವರರ ಜೊತೆಗೆ ಅರಣ್ಯಮಧ್ಯದಲ್ಲಿ ವಾಸಮಾಡುತ್ತ ಅವರ ಪೋಷಣೆಯ ಬಗ್ಗೆ ಚಿಂತಿಸಿದರು.
ವಿಂಚಿತ್ಯ ತೇಷಾಂ ಭರಣಾಯ ಧರ್ಮಜಃ
ಸಂಪೂಜ್ಯ ಸೂರ್ಯಸ್ಥಿತಮಚ್ಯುತಂ ಪ್ರಭುಂ |
ದಿನೇಽಕ್ಷಯಾನ್ನಂ ಪಿಠರಂ ತದಾಪ
ರತ್ನಾದಿದಂ ಕಾಮವರಾನ್ನದಂ ಚ ॥5॥
ಆ ಯತಿಗಳ ಮತ್ತು ಮುನಿಗಳ ಪೋಷಣೆಗೆ ತಕ್ಕ ಉಪಾಯವನ್ನು ಆಲೋಚಿಸಿ ಹಗಲಿನಲ್ಲಿ ಸೂರ್ಯಾಂತರ್ಗತನಾದ ಶ್ರೀನಾರಾಯಣನನ್ನು ಆರಾಧಿಸಿ ಪ್ರತಿದಿನವೂ ಅಕ್ಷಯ ಅನ್ನವನ್ನೂ ಬೇಕಾದ ಉತ್ತಮ ಭಕ್ಷ್ಯಾದಿಗಳನ್ನೂ ರತ್ನ ಮುಂತಾದವುಗಳನ್ನೂ ಕೊಡಬಲ್ಲ ಒಂದು ಅಕ್ಷಯಪಾತ್ರೆಯನ್ನು ಪಡೆದರು.
ಬಭಾರ ತೇನೈವ ಯುಧಿಷ್ಠಿರಸ್ತಾನ್
ಪ್ರತೇಕಶಸಿತ್ರಂಶತದಾಸದಾಸಿಕಾನ್ |
ಸುವರ್ಣಪಾತ್ರೇಷು ಹಿ ಭುಂಜತೇ ಯೇ
ಗೃಹೇ ತದೀಯೇ ಬಹುಕೋಟಿದಾಸಕೇ ॥6॥
ಹಿಂದೆ ಕೋಟಿಗಟ್ಟಲೆ ದಾಸರುಗಳಿದ್ದ ತನ್ನ ಅರಮನೆಯಲ್ಲಿ ಪ್ರತಿಯೊಬ್ಬರೂ ಪ್ರತ್ಯೇಕವಾಗಿ ಮೂವತ್ತು ಮಂದಿ ದಾಸದಾಸಿಯರುಗಳಿಂದ ಯುಕ್ತರಾಗಿದ್ದು ಸುವರ್ಣ ಪಾತ್ರೆಗಳಲ್ಲಿ ಅನ್ನ ಉಣ್ಣುತ್ತಿದ್ದ ಆ ಯತಿಗಳು ಮುಂತಾದವರನ್ನು ಯುಧಿಷ್ಠಿರ ಅರಣ್ಯದಲ್ಲಿಯೂ ಆ ಅಕ್ಷಯ ಪಾತ್ರೆಯ ಬಲದಿಂದ ಹಾಗೇ ಪೋಷಿಸಿದ.
ಸತ್ಸಂಗಮಾಕಾಂಕ್ಷಿಣ ಏವ ತೇಽವಸನ್
ಪಾರ್ಥೈಃ ಸಹಾನ್ಯೇ ಚ ಮುನೀಂದ್ರಬೃಂದಾಃ |
ಶೃಣ್ವಂತ ಏಭ್ಯಃ ಪರಮಾರ್ಥಸಾರಾಃ
ಕಥಾ ವದಂತಶ್ಚ ಪುರಾತನಾಸ್ತಥಾ ॥7॥
ಆ ಯತಿಗಳೂ ಬೇರೆ ಮುನೀಶ್ವರರ ಸಮೂಹಗಳೂ ಸರ್ವೋತ್ತಮನಾದ ಶ್ರೀಹರಿಯ ಕುರಿತಾದ ಮಾತುಕತೆಗಳನ್ನು ಪಾಂಡವರಿಂದ ಕೇಳುತ್ತಲೂ ಅವರಿಗೆ ಪ್ರಾಚೀನ ಕಥೆಗಳನ್ನು ಹೇಳುತ್ತಲೂ ಕೇವಲ ಸತ್ಸಂಗದಲ್ಲಿ ಇರುವುದನ್ನು ಬಯಸಿಯೆ ಅವರೊಂದಿಗೆ ವಾಸ ಮಾಡಿದರು.
ಏವಂ ಗಜಾನಾಂ ಬಹುಕೋಟಿಬೃಂದಾನ್
ತಥಾ ರಥಾನಾಂ ಚ ಹಯಾಂಶ್ಚ ಬೃಂದಶಃ |
ವಿಸೃಜ್ಯ ರತ್ನಾನಿ ನರಾಂಶ್ಚ ಬೃಂದಶೋ
ವನೇ ವಿಜಹ್ರುರ್ದಿವಿ ದೇವವತ್ ಸುಖಂ ॥8॥
ಹಿಂದೆ ಇಂದ್ರಪ್ರಸ್ಥದಲ್ಲಿದ್ದ ಬಹುಕೋಟಿ ವೃಂದ ಆನೆ ರಥಗಳನ್ನೂ ವೃಂದ ಕುದುರೆಗಳನ್ನೂ ವೃಂದ ದಾಸದಾಸಿಯರನ್ನೂ ರತ್ನಗಳನ್ನೂ ಪರಿತ್ಯಜಿಸಿ ಪಾಂಡವರು ಕಾಡಿನಲ್ಲಿಯೂ ಹೀಗೆ ಸ್ವರ್ಗದಲ್ಲಿ ದೇವತೆಗಳಂತೆ ಸುಖವಾಗಿಯೇ ವಿಹರಿಸಿದರು.
ಗವಾಂ ಚ ಲಕ್ಷಂ ಪ್ರದದಾತಿ ನಿತ್ಯಶಃ
ಸುವರ್ಣಭಾರಾಂಶ್ಚ ಶತಂ ಯುಧಿಷ್ಠಿರಃ |
ಸಭ್ರಾತೃಕೋಽಸೌ ವನಮಾಪ್ಯ ಶಕ್ರವ-
ನ್ಮುಮೋದ ವಿಪ್ರೈಃ ಸಹಿತೋ ಯಥಾಸುಖಂ ॥9॥
ಯುಧಿಷ್ಠಿರ ಹಿಂದೆ ನಿತ್ಯವೂ ಲಕ್ಷ ಗೋವುಗಳನ್ನೂ ನೂರು ಸುವರ್ಣ ಭಾರಗಳನ್ನು ದಾನ ಮಾಡುತ್ತಿದ್ದ. ಈಗಲೂ ಸೋದರರೊಂದಿಗೆ ಕಾಡಿಗೆ ಹೋಗಿ ಮುನಿಗಳಿಂದ ಕೂಡಿ ಹಿಂದಿನಂತೆಯೇ ಸುಖವಾಗಿ ಇಂದ್ರನಂತೆಯೇ ಆನಂದಿಸಿದ.
* * * *
ಎರಡನೆಯ ಅಧ್ಯಾಯ
(ಬ್ರಾಹ್ಮಣರನ್ನು ಪೋಷಿಸಲು ತನ್ನ ಅಶಕ್ತಿಯನ್ನು ತಿಳಿಸಿ ಧರ್ಮರಾಜನಿಂದ ಅವರು ಹಿಂದಿರುಗುವಂತೆ ಪ್ರಾರ್ಥನೆ. ಬ್ರಾಹ್ಮಣರಿಂದ ಅದರ ನಿರಾಕರಣೆ. ಶೌನಕರಿಂದ ಯುಧಿಷ್ಠಿರನಿಗೆ ಸೂರ್ಯೋಪಾಸನೆಯ ಪ್ರೇರಣೆ)
ವೈಶಂಪಾಯನಃ
ಪ್ರಭಾತಾಯಾಂ ತು ಶರ್ವರ್ಯಾಂ ತೇಷಾಮಕ್ಲಿಷ್ಟಕರ್ಮಣಾಮ್|
ವನಂ ಯಿಯಾಸತಾಂ ವಿಪ್ರಾಃ ತಸ್ಥುರ್ಭಿಕ್ಷಾಭುಜೋಽಗ್ರತಃ |
ತಾನುವಾಚ ತತೋ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ॥1॥
ಬೆಳಗಾದನಂತರ ಅಕ್ಲಿಷ್ಟಕಾರಿಗಳಾದ ಪಾಂಡವರು ವನಕ್ಕೆ ಹೊರಡಲು ಉದ್ಯುಕ್ತರಾಗುತ್ತಿರಲು ಭಿಕ್ಷಾನ್ನ ಜೀವಿಗಳಾದ ಬ್ರಾಹ್ಮಣರು ಅವರ ಎದುರಿಗೆ ನಿಂತರು. ಕುಂತೀಪುತ್ರನಾದ ಧರ್ಮರಾಜನು ಆಗ ಅವರನ್ನು ಕುರಿತು ಮಾತನಾಡಿದನು.
ವಯಂ ಹಿ ಹೃತಸರ್ವಸ್ವಾ ಹೃತರಾಜ್ಯಾ ಹೃತಶ್ರಿಯಃ |
ಫಲಮೂಲಾಮಿಷಾಹಾರಾ ವನಂ ಯಾಸ್ಯಾಮ ದುಃಖಿತಾಃ ॥2॥

ನಾವಾದರೋ ರಾಜ್ಯವನ್ನೂ ಸಂಪತ್ತನ್ನೂ ಸರ್ವಸ್ವವನ್ನೂ ಕಳೆದುಕೊಂಡು ಫಲಮೂಲಾಹಾರರಾಗಿ ಮತ್ತು ಕಾಡಿನಲ್ಲಿ ದೊರಕುವ ಮಾಂಸಾಹಾರಿಗಳಾಗಿ ದುಃಖದಿಂದ ಕಾಡಿಗೆ ಹೋಗುತ್ತಿದ್ದೇವೆ.
ವನಂ ಚ ದೋಷಬಹುಲಂ ಬಹುವ್ಯಾಲಸರೀಸೃಪಮ್ |
ಪರಿಕ್ಲೇಶಶ್ಚ ವೋ ಮನ್ಯೇ ಧ್ರುವಂ ತತ್ರ ಭವಿಷ್ಯತಿ ॥3॥
ಕಾಡಿನಲ್ಲಿ ಅನೇಕ ಗಜಗಳ ಮತ್ತು ಸರ್ಪಗಳಿಂದ ಬಹಳ ಉಪದ್ರವವಿದೆಯಷ್ಟೇ? ನಿಮಗೆ ನಿಶ್ಚಯವಾಗಿ ಅಲ್ಲಿ ಬಹಳ ತೊಂದರೆಯಾಗುವುದೆಂದು ನಾನು ಭಾವಿಸುತ್ತೇನೆ.
ಬ್ರಾಹ್ಮಣಾನಾಂ ಚ ಸಂಕ್ಲೇಶೋ ದೈವತಾನ್ಯಪಿ ಸಾದಯೇತ್ |
ಕಿಂ ಪುನರ್ಮಾಮಿತೋ ವಿಪ್ರಾ ನಿವರ್ತಧ್ವಂ ಯಥಾಗತಮ್ ॥4॥
ಬ್ರಾಹ್ಮಣರಿಗೆ ಕ್ಲೇಶವುಂಟಾದರೆ ಅದು ದೇವತೆಗಳನ್ನೂ ನಾಶಮಾಡೀತು. ಇನ್ನು ನನ್ನ ಪಾಡೇನು? ಆದ್ದರಿಂದ ಎಲೈ ಬ್ರಾಹ್ಮಣರೇ ನೀವು ಇಲ್ಲಿಂದ ಬಂದದಾರಿಯಲ್ಲೇ ಹಿಂದಿರುಗಿ ಹೋಗಿ.
ಬ್ರಾಹ್ಮಣಾಃ
ಯಾ ಗತಿರ್ಭವತಾಂ ರಾಜನ್ ತಾಂ ವಯಂ ಗಂತುಮುದ್ಯತಾಃ |
ನಾರ್ಹಥಾಸ್ಮಾನ್ ಪರಿತ್ಯಕ್ತುಂ ಭಕ್ತಾನ್ ಸದ್ಧರ್ಮದರ್ಶಿನಃ ॥5॥
ರಾಜನೇ! ನಿನಗೆ ಯಾವ ಗತಿಯು ಉಂಟಾಗುತ್ತದೆಯೋ ನಾವೂ ಅದನ್ನೇ ಹೊಂದಲು ಸಿದ್ಧರಾಗಿದ್ದೇವೆ. ಸದ್ಧರ್ಮದರ್ಶಿಗಳೂ ಭಕ್ತರೂ ಆದ ನಮ್ಮನ್ನು ನೀವು ಪರಿತ್ಯಾಗಮಾಡಬಾರದು.
ಅನುಕಂಪಾಂ ಹಿ ಭಕ್ತೇಷು ದೈವತಾನ್ಯಪಿ ಕುರ್ವತೇ |
ವಿಶೇಷತೋ ಬ್ರಾಹ್ಮಣೇಷು ಸದಾಚಾರಾವಲಂಬಿಷು ॥6॥
ದೇವತೆಗಳೂ ಸಹ ತಮ್ಮ ಭಕ್ತರಲ್ಲಿ ಅನುಕಂಪೆಯನ್ನು ಮಾಡುತ್ತಾರಷ್ಟೇ? ಅದರಲ್ಲಿಯೂ ಸದಾಚಾರನಿಷ್ಠರಾದ ಬ್ರಾಹ್ಮಣರಲ್ಲಿ ವಿಶೇಷವಾಗಿ ಅನುಗ್ರಹವನ್ನು ಮಾಡುತ್ತಾರೆ.
ಯುಧಿಷ್ಠಿರಃ
ಮಮಾಪಿ ಪರಮಾ ಭಕ್ತಿರ್ಬ್ರಾಹ್ಮಣೇಷು ಸದಾ ದ್ವಿಜಾಃ |
ಸಹಾಯವಿಪರಿಭ್ರಂಶಸ್ತ್ವಯಂ ಸಾದಯತೀವ ಮಾಮ್ ॥7॥
ಎಲೈ ಬ್ರಾಹ್ಮಣರೇ ನನಗೂ ಸಹ ಯಾವಾಗಲೂ ಬ್ರಾಹ್ಮಣರಲ್ಲಿ ಪರಮಭಕ್ತಿಯೇ ಇದೆ. ಆದರೆ ಧನಧಾನ್ಯಾದಿ ಸಹಾಯನಾಶವು ನನ್ನನ್ನು ಹೀಗೆ ವಿಷಾದಗೊಳಿಸುತ್ತಿದೆ.
ಆಹರೇಯುರ್ಹಿ ಮೇ ಕಿಂಚಿತ್ ಫಲಮೂಲಮೃಗಾಂಸ್ತಥಾ |
ತ ಇಮೇ ಶೋಕಜೈರ್ದುಃಖೈರ್ಭ್ರಾತರೋ ಮೇ ವಿಮೋಹಿತಾಃ ॥8॥
ಶೋಕದುಃಖಗಳಿಂದ ಭರಿತರಾದ ವಿಮೋಹಕ್ಕೆ ಒಳಗಾದ ನನ್ನ ಈ ತಮ್ಮಂದಿರು ನನಗಾಗಿ ಸ್ವಲ್ಪ ಫಲಮೂಲಗಳನ್ನು ಅಥವಾ ಮೃಗಗಳನ್ನು ತರಬಹುದು.
ದ್ರೌಪದ್ಯಾ ವಿಪ್ರಕರ್ಷೇಣ ರಾಜ್ಯಾಪಹರಣೇನ ಚ |
ದುಃಖಾನ್ವಿತಾನಿಮಾನ್ ಕ್ಲೇಶೈರ್ನಾಹಂ ವಕ್ತುಮಿಹೋತ್ಸಹೇ ॥9॥
ದ್ರೌಪದಿಯನ್ನು ಎಳೆದಾಡುವುದರಿಂದಲೂ ಮತ್ತು ರಾಜ್ಯವನ್ನು ಕಳೆದುಕೊಂಡಿರುವುದರಿಂದಲೂ ದುಃಖದಿಂದ ಕೂಡಿದ ಇವರನ್ನು ಇನ್ನೂ ಕ್ಲೇಶಗೊಳಿಸುವಂತೆ ನಾನು ಅವರನ್ನು ಕುರಿತು ಮಾತನಾಡಲಾರೆ.
ಬ್ರಾಹ್ಮಣಾಃ
ಅಸ್ಮತ್ಪೋಷಣಜಾ ಚಿಂತಾ ಮಾ ಭೂತ್ ತೇ ಹೃದಿ ಪಾರ್ಥಿವ |
ಸ್ವಯಮಾಹೃತ್ಯ ವನ್ಯಾನಿ ಹ್ಯನುಯಾಸ್ಯಾಮಹೇ ವಯಮ್ ॥10॥
ಎಲೈ ರಾಜನೇ! ನಮ್ಮನ್ನು ಸಾಕುವ ಚಿಂತೆಯು ನಿನ್ನ ಮನಸ್ಸಿಗೆ ಬಾರದಿರಲಿ. ಕಾಡಿನಲ್ಲಿ ಸಿಗುವ ಫಲಮೂಲಾದಿಗಳನ್ನು ನಾವೇ ತಂದುಕೊಂಡು ನಿಮ್ಮನ್ನು ಹಿಂಬಾಲಿಸುತ್ತೇವೆ.
ಅನುಧ್ಯಾನೇನ ಜಪ್ಯೇನ ವಿಧಾಸ್ಯಾಮಃ ಶಿವಂ ತವ |
ಕಥಾಭಿಶ್ಚಾನುಕೂಲಾಭಿಃ ಸಹ ರಂಸ್ಯಾಮಹೇ ವನೇ ॥11॥
ಜಪವನ್ನು ಮಾಡಿ ಮತ್ತು ಆಶೀರ್ವಾದವನ್ನು ಮಾಡಿ ನಿನಗೆ ಮಂಗಳವನ್ನು ಉಂಟುಮಾಡುವೆವು. ಕಾಡಿನಲ್ಲಿ ನಿನಗೆ ಹಿತಕರವಾದ ಕಥೆಗಳನ್ನು ಹೇಳಿ ನಿನ್ನ ಜೊತೆಯಲ್ಲಿ ಸಂತೋಷಪಡುತ್ತೇವೆ.
ಯುಧಿಷ್ಠಿರಃ
ಏವಮೇತನ್ನ ಸಂದೇಹೋ ರಮೇಯಂ ಬ್ರಾಹ್ಮಣೈಃ ಸಹ |
ನ್ಯೂನಭಾವಾತ್ತು ಪಶ್ಯಾಮಿ ಪ್ರತ್ಯಾದೇಶಮಿವಾತ್ಮನಃ ॥12॥
ಅದು ಹಾಗೆಯೇ ಸರಿ. ನಾನೂ ಸಹ ಬ್ರಾಹ್ಮಣರ ಜೊತೆಯಲ್ಲಿ ಸಂತೋಷದಿಂದ ಇರುತ್ತೇನೆ. ಆದರೆ ನನ್ನ ಕೈಯು ಬರಿದಾಗಿರುವುದರಿಂದ ನಿಮ್ಮನ್ನು ನಿರಾಕರಣೆಮಾಡುತ್ತಿದ್ದೇನೆ.
ಕಥಂ ದ್ರಕ್ಷ್ಯಾಮಿ ವಃ ಸರ್ವಾನ್ ಸ್ವಯಮಾಹೃತಭೋಜನಾನ್ |
ಮದ್ಭಕ್ತಾನ್ ಕ್ಲಿಶ್ಯತೋಽನರ್ಹಾನ್ ಧಿಕ್ ಪಾಪಾನ್ ಧೃತರಾಷ್ಟ್ರಜಾನ್ ॥
ನನ್ನ ಭಕ್ತರಾದ ಕ್ಲೇಶಕ್ಕೆ ಅನರ್ಹರಾದ ನೀವೆಲ್ಲರೂ ನಿಮ್ಮ ಆಹಾರವನ್ನು ನೀವೇ ಸಂಪಾದಿಸಿಕೊಂಡು ಕ್ಲೇಶಪಡುವುದನ್ನು ನಾನು ಹೇಗೆ ನೋಡಲಿ? ಪಾಪಿಗಳಾದ ದುರ್ಯೋಧನಾದಿಗಳಿಗೆ ಧಿಕ್ಕಾರವಿರಲಿ.

ವೈಶಂಪಾಯನ
ಇತ್ಯುಕತ್ವ ನೃಪತಿಃ ಶೋಚನ್ ನಿಷಸಾದ ಮಹೀತಳೇ ॥14॥
ತಮಧ್ಯಾತ್ಮರತೋ ವಿದ್ವಾನ್ ಶೌನಕೋ ನಾಮ ವೈ ದ್ವಿಜಃ |
ಯೋಗೇ ಸಾಂಖ್ಯೇ ಚ ಕುಶಲೋ ರಾಜಾನಮಿದಮಬ್ರವೀತ್ ॥ 15॥
ಹೀಗೆ ಹೇಳಿ ರಾಜನು ಶೋಕಪಡುತ್ತಾ ಭೂಮಿಯ ಮೇಲೆ ಕುಳಿತನು. ಆಗ ಸಾಂಖ್ಯದಲ್ಲಿಯೂ ಯೋಗದಲ್ಲಿಯೂ ನಿಪುಣನಾದ ಅಧ್ಯಾತ್ಮನಿಷ್ಠನಾದ ವಿದ್ವಾಂಸನಾದ ಶೌನಕನೆಂಬ ಒಬ್ಬ ಬ್ರಾಹ್ಮಣನು ರಾಜನನ್ನು ಕುರಿತು ಈ ಮಾತುಗಳನ್ನು ಆಡಿದನು.
ಶೌನಕಃ
ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥16॥
ಮೂಢನಾದ ಮನುಷ್ಯನಿಗೆ ಪ್ರತಿದಿವಸದಲ್ಲಿಯೂ ಶೋಕಕ್ಕೆ ಕಾರಣವಾದ ಸಹಸ್ರವಿಷಯಗಳೂ ಭಯಕ್ಕೆ ಕಾರಣವಾದ ನೂರು ವಿಷಯಗಳೂ ಉಂಟಾಗುತ್ತವೆ. ಪಂಡಿತನಿಗೆ ಅವು ಉಂಟಾಗುವುದಿಲ್ಲ.
ನಹಿ ಜ್ಞಾನನಿರುದ್ಧೇಷು ಬಹ್ವಪಾಯೇಷು ಕರ್ಮಸು |
ಶ್ರೇಯೋಘಾತಿಷು ಸಜ್ಜಂತೇ ಬುದ್ಧಿಮಂತೋ ಭವದ್ವಿಧಾಃ ॥17॥
ನಿನ್ನಂತಹ ಬುದ್ಧಿವಂತರು ಜ್ಞಾನಕ್ಕೆ ಪ್ರತಿಬಂಧಕವಾದ ಶ್ರೇಯೋವಿಘಾತಕವಾದ ಮತ್ತು ಅನೇಕ ಅಪಾಯಗಳಿಂದ ಕೂಡಿದ ಕರ್ಮಗಳಲ್ಲಿ ಎಂದೂ ನಿರತರಾಗಿರುವುದಿಲ್ಲ.
ಅಷ್ಟಾಂಗಾಂ ಬುದ್ಧಿಮಾಹುರ್ಹಿ ಸರ್ವಶ್ರೇಯೋಽವಿಘಾತಿನೀಮ್ |
ಶ್ರುತಿಸ್ಮೃತಿಸಮಾಯುಕ್ತಾಂ ಸಾ ರಾಜನ್ ತ್ವಯ್ಯವಸ್ಥಿತಾ ॥18॥
ಅಷ್ಟಾಂಗಯುತವಾದ ಬುದ್ಧಿಯನ್ನು ಸರ್ವಶ್ರೇಯಃ ಸಂಪಾದಕವೆಂದು ಹೇಳುತ್ತಾರಷ್ಟೇ? ಎಲೈ ರಾಜನೇ! ಶ್ರುತಿಸ್ಮೃತಿ ಯುಕ್ತವಾದ ಅಂತಹ ಬುದ್ಧಿಯು ನಿನ್ನಲ್ಲಿದೆ.
ಶುಶ್ರೂಷಾ, ಶ್ರವಣ, ಮನನ ಧ್ಯಾನ ಉತೆಪ್ರೇಕ್ಷಾ ಮಿಥ್ಯಾಜ್ಞಾನರಾಹಿತ್ಯ ಪದಾರ್ಥಗಳ ವಿಶೇಷವಾದ ಜ್ಞಾನ ಮತ್ತು ತತ್ವಜ್ಞಾನ ಇವುಗಳು ಬುದ್ಧಿಯ ಅಷ್ಟಾಂಗಗಳೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ.
ಅರ್ಥಕೃಚ್ಛ್ರೇಷು ದುರ್ಗೇಷು ವ್ಯಾಪತ್ಸು ಸ್ವಜನೇಷ್ವಪಿ |
ಶಾರೀರೇ ಮಾನಸೇ ದುಃಖೇ ನ ಸೀದಂತಿ ಭವಾದೃಶಾಃ ॥19॥
ನಿನ್ನಂತಹ ಮೇಧಾವಿಗಳು ದುರ್ಗಮವಾದ ಅರ್ಥಕ್ಲೇಶವು ಒದಗಿದಾಗ ಅಥವಾ ಸ್ವಜನರಿಗೆ ವಿಪತ್ತು ಉಂಟಾದಾಗ ಅಥವಾ ಶರೀರ ಅಥವಾ ಮನಸ್ಸಿನಲ್ಲಿ ದುಃಖವುಂಟಾಗುವ ಸಂದರ್ಭ ಬಂದಾಗಲೂ ವಿಷಾದವನ್ನು ಹೊಂದುವುದಿಲ್ಲ.
ಶ್ರೂಯತಾಂ ಚಾಭಿಧಾಸ್ಯಾಮಿ ಜನಕೇನ ಯಥಾ ಪುರಾ |
ಆತ್ಮವ್ಯವಸ್ಥಾನಕರಾ ಗೀತಾಃ ಶ್ಲೋಕಾ ಮಹಾತ್ಮನಾ ॥20॥
ಹಿಂದೆ ಮಹಾತ್ಮನಾದ ಜನಕನು ತನ್ನ ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳುವಂತಹ ಶ್ಲೋಕಗಳನ್ನು ಹೇಗೆ ಗಾನಮಾಡಿದನೆಂದು ನಾನು ಹೇಳುವೆನು. ಕೇಳು.
ಮನೋದೇಹಸಮುತ್ಥಾಭ್ಯಾಂ ದುಃಖಾಭ್ಯಾಮರ್ದಿತಂ ಜಗತ್ |
ತಯೋರ್ವ್ಯಾಸಸಮಾಸಾಭ್ಯಾಂ ಶಮೋಪಾಯಮಿಮಂ ಶೃಣು ॥21॥
ಮಾನಸದುಃಖದಿಂದ ಅಥವಾ ದೇಹದಿಂದ ಉಂಟಾದ ದುಃಖದಿಂದ ಈ ಜಗತ್ತು ಪೀಡೆಗೆ ಒಳಗಾಗಿದೆ. ಸಂಕ್ಷೇಪವಾಗಿ ಮತ್ತು ವಿಸ್ತಾರವಾಗಿ ಆ ದುಃಖಗಳನ್ನು ಪರಿಹಾರಮಾಡುವ ಈ ಉಪಾಯವನ್ನು ಕೇಳು.
ವ್ಯಾಧೇರನಿಷ್ಟಸಂಯೋಗಾತ್ ಶ್ರಮಾದಿಷ್ಟವಿವರ್ಜನಾತ್ |
ದುಃಖಂ ಚತುರ್ಭಿಃ ಶಾರೀರಂ ಕಾರಣೈಃ ಸಂಪ್ರವರ್ತತೇ ॥22॥
ವ್ಯಾಧಿಯಿಂದ ಅನಿಷ್ಟಪ್ರಾಪ್ತಿಯಿಂದ ಶ್ರಮದಿಂದ ಮತ್ತು ಇಷ್ಟಹಾನಿಯಿಂದ ಹೀಗೆ ನಾಲ್ಕುವಿಧವಾದ ಕಾರಣಗಳಿಂದ ಶಾರೀರಕವಾದ ದುಃಖವು ಉಂಟಾಗುತ್ತದೆ.
ವ್ಯಾಧಯಶ್ಚ ಶರೀರೇಽಸ್ಮಿನ್ ವಾತಪಿತ್ತಕಫೋದ್ಭವಾಃ |
ಅಜೀರ್ಣಪ್ರಭವಾಃ ಸರ್ವೇ ದುಃಖಪಾಪೋದ್ಭವಾ ನೃಣಾಮ್ ॥23॥
ವಾತ ಪಿತ್ತ ಮತ್ತು ಕಫಗಳ ವೈಷಮ್ಯದಿಂದ ಈ ಶರೀರದಲ್ಲಿ ಉಂಟಾಗುವ ಎಲ್ಲ ರೋಗಗಳೂ ಅಜೀರ್ಣದಿಂದ ಉಂಟಾಗುತ್ತವೆ. ದುಃಖವನ್ನು ಕೊಡುವ ಈ ಎಲ್ಲ ರೋಗಗಳು ಮನುಷ್ಯರಿಗೆ ಪಾಪದ ಫಲವಾಗಿ ಉಂಟಾಗುವುಗಳು.
ತದಾಶುಪ್ರತಿಕಾರಾಚ್ಚ ಸತತಂ ಚಾಪಿ ಚಿಂತನಾತ್ |
ಆಧಿವ್ಯಾಧಿಪ್ರಶಮನಂ ಕ್ರಿಯಾಯೋಗಂ ಫಲೇನ ಚ ॥24॥
ಮತಿಮಂತೋ ವಿದೋ ವೈದ್ಯಾಃ ಶಮಂ ಪ್ರಾಯೇಣ ಕುರ್ವತೇ |
ಮಾನಸೇನ ಹಿ ದುಃಖೇನ ಶರೀರಮುಪತಪ್ಯತೇ ॥25॥
ಮೇಧಾವಿಗಳಾದ ವಿದ್ವಾಂಸರು ಸರ್ವಕರ್ಮಸಾಕ್ಷಿಯಾದ ಶ್ರೀಹರಿಯ ಚಿಂತನೆಯೇ ಈ ಪಾಪ ಮತ್ತು ದುಃಖಗಳ ಪರಿಹಾರರೂಪವೆಂದು ತಿಳಿದು ಕ್ರಿಯಾಯೋಗಜನ್ಯವಾದ ಹರಿಪ್ರಸಾದದಿಂದ ಆಧಿವ್ಯಾಧಿ ಪ್ರಶಮನವನ್ನು ಮಾಡುವವರಾಗಿ ಹರ್ಯರ್ಪಣಬುದ್ಧಿಯಿಂದ ಮಾಡುವ ನಿತ್ಯನೈಮಿತ್ತಿಕಕರ್ಮರೂಪವಾದ ಉಪಾಯವನ್ನು ಅನುಷ್ಠಾನವನ್ನು ಮಾಡುತ್ತಾರೆ.
ಮಾನಸಸ್ಯ ಪ್ರಿಯಾಖ್ಯಾನೈಃ ಸಂಭೋಗೋಪನಯೈರ್ನೃಣಾಂ |
ಅಯಃ ಪಿಂಡೇನ ತಪ್ತೇನ ಕುಂಭಸಂಸ್ಥಮಿವೋದಕಮ್ ॥26॥

ಹಾಗೆಯೇ ಮಾನಸದುಃಖವನ್ನು ಪ್ರಿಯೆಯ ಜೊತೆಯಲ್ಲಿ ಸಲ್ಲಾಪಮಾಡುವುದರಿಂದಲೂ ಸಂಭೋಗಮಾಡುವುದರಿಂದಲೂ ಕಳೆದುಕೊಳ್ಳಬಹುದು. ಕಾದ ಕಬ್ಬಿಣದ ಪಿಂಡದಿಂದ ಸಂಬಂಧವನ್ನು ಹೊಂದಿದ ಪಾತ್ರೆಯಲ್ಲಿರುವ ನೀರು ಕಾಯುವಂತೆ ಮಾನಸದುಃಖದಿಂದ ಶರೀರವು ಪೀಡಿಸಲ್ಪಡುತ್ತದೆ.

ಮಾನಸಂ ಶಮಯೇತ್ ತಸ್ಮಾತ್ ಜ್ಞಾನೇನಾಗ್ನಿಮಿವಾಂಬುನಾ |
ಪ್ರಶಾಂತೇ ಮಾನಸೇ ದುಃಖೇ ಶಾರೀರಮುಪಶಾಮ್ಯತಿ ॥27॥

ಅಗ್ನಿಯನ್ನು ನೀರಿನಿಂದ ಉಪಶಮನಮಾಡಿದಂತೆ ಮಾನಸದುಃಖವನ್ನು ಜ್ಞಾನದಿಂದ ನಾಶಮಾಡಬೇಕು. ಮಾನಸದುಃಖವು ನಾಶಹೊಂದಿದರೆ ಶರೀರದ ದುಃಖವು ನಾಶಹೊಂದುತ್ತದೆ.

ಮನಸೋ ದುಃಖಮೂಲಂ ತು ಸ್ನೇಹ ಇತ್ಯುಪಲಭ್ಯತೇ |
ಸ್ನೇಹಾತ್ತು ಸಜ್ಜತೇ ಜಂತುರ್ದುಃಖಯೋಗಮುಪೈತಿ ಚ ॥28॥

ಮನಸ್ಸಿನ ದುಃಖಕ್ಕೆ ಕಾರಣವಾದುದು ಸ್ನೇಹವೆಂದು ತಿಳಿಯಲ್ಪಡುತ್ತದೆ. ಮನುಷ್ಯನು (ಪ್ರಾಣಿಯು)ಸ್ನೇಹದಿಂದ ಒಂದು ವಸ್ತುವಿನಲ್ಲಿ ಆಸಕ್ತನಾಗಿ ಅದರಿಂದ ದುಃಖದ ಸಂಬಂಧವನ್ನು ಪಡೆಯುತ್ತಾನೆ.

ಸ್ನೇಹಮೂಲಾನಿ ದುಃಖಾನಿ ಸ್ನೇಹಜಾನಿ ಭಯಾನಿ ಚ |
ಶೋಕಹರ್ಷೌ ತಥಾಽಽಯಾಸಃ ಸ್ನೇಹಾತ್ ಸರ್ವಂ ಪ್ರವರ್ತತೇ ॥29॥

ದುಃಖವು ಸ್ನೇಹಮೂಲವಾದುದು. ಭಯಗಳು ಸಹ ಸ್ನೇಹದಿಂದಲೇ ಉಂಟಾಗುವವು. ಶೋಕ ಹರ್ಷ ಅದರಂತೆ ಆಯಾಸ ಇವೆಲ್ಲವೂ ಸ್ನೇಹದಿಂದಲೇ ಉಂಟಾಗುತ್ತವೆ.

ಸ್ನೇಹಾತ್ ಕಾರುಣ್ಯರಾಗೌ ಚ ಪ್ರಜಾಸ್ವೀರ್ಷ್ಯಾಽನಯಸ್ತಥಾ |
ಅಶ್ರೇಯಸ್ಕಾವುಭಾವೇತೌ ಪೂರ್ವಸ್ತತ್ರ ಗುರುಃ ಸ್ಮೃತಃ ॥30॥

ಸ್ನೇಹದಿಂದಲೇ ಕರುಣೆ ಮತ್ತು ರಾಗ ಎರಡೂ ಉಂಟಾಗುತ್ತವೆ. ಅದರಂತೆಯೇ ಅಸೂಯೆ ಮತ್ತು ದುರ್ನೀತಿಗಳು ಸ್ನೇಹದಿಂದಲೇ ಜನರಲ್ಲಿ ಉಂಟಾಗುತ್ತವೆ. ಅಸೂಯೆ ಮತ್ತು ದುರ್ನೀತಿಗಳೆರಡೂ ಅಶ್ರೇಯಸ್ಸಿಗೆ ಕಾರಣವಾದವುಗಳು ಅದರಲ್ಲಿಯೂ ಅಸೂಯೆಯು ಬಹಳ ಪ್ರಬಲವಾದುದು ಎಂದು ಹೇಳಲ್ಪಡುತ್ತದೆ.

ಕೋಟರಾಗ್ನಿರ್ಯಥಾಽಶೇಷಂ ಸಮೂಲಂ ಪಾದಪಂ ದಹೇತ್ |
ಧರ್ಮಾರ್ಥಿನಂ ತಥಾಽಲ್ಪೋಽಪಿ ರಾಗದ್ವೇಷೋ ವಿನಾಶಯೇತ್ ॥31॥

ವೃಕ್ಷದ ಪೊಟರೆಯಲ್ಲಿದ್ದ ಅಲ್ಪವಾದ ಅಗ್ನಿಯು ಹೇಗೆ ಮೂಲಸಹಿತವಾದ ವೃಕ್ಷವನ್ನೇ ಸುಡುತ್ತದೆಯೋ ಹಾಗೆ ಧರ್ಮವನ್ನು ಅಪೇಕ್ಷಿಸುವ ಪುರುಷನನ್ನು ಅಲ್ಪವಾದ ರಾಗ ದ್ವೇಷಾದಿಗಳೂ ಸಹ ವಿನಾಶಗೊಳಿಸುತ್ತವೆ.

ವಿಪ್ರಯೋಗೇನ ತು ತ್ಯಾಗೀ ದೋಷದರ್ಶೀ ಸಮಾಗಮಾತ್ |
ವಿರಾಗಂ ಭಜತೇ ಜಂತುರ್ನಿರ್ವೈರೋ ನಿಷ್ಪರಿಗ್ರಹಃ ॥32॥

ವಿಷಯವನ್ನು ಪರಿತ್ಯಾಗಮಾಡುವುದರಿಂದ ದೋಷವನ್ನು ಪರಿತ್ಯಾಗಮಾಡುವ ಮತ್ತು ವಿಷಯಗಳ ಸಮಾಗಮಗಳಿಂದ ದೋಷವನ್ನು ಅನುಸಂಧಾನಮಾಡುವ ವ್ಯಕ್ತಿಯು ವೈರಾಗ್ಯವನ್ನು ಹೊಂದಿ ನಿರ್ವೈರನೂ ನಿಷ್ಪರಿಗ್ರಹನೂ ಆಗುತ್ತಾನೆ.

ತಸ್ಮಾತ್ ಸ್ನೇಹಂ ನ ಲಿಪ್ಸೇತ ಮಿತ್ರೇಭ್ಯೋ ಧನಸಂಚಯಾತ್ |
ಸ್ವಶರೀರಸಮುತ್ಥಂ ತು ಜ್ಞಾನೇನ ವಿನಿವರ್ತತೇ ॥32॥

ಆದ್ದರಿಂದ ಮಿತ್ರರಿಂದ ಧನಸಂಚಯ ಕಾರಣದಿಂದ ಸ್ನೇಹವನ್ನು ಹೊಂದಬಾರದು. ತನ್ನ ಶರೀರದಲ್ಲಿ ಉಂಟಾದ ದುಃಖವು ಜ್ಞಾನದಿಂದಲೇ ನಿವೃತ್ತವಾಗುತ್ತದೆ.

ಜ್ಞಾನಾನ್ವಿತೇಷು ದುಃಖೇಷು ಶಾಸ್ತ್ರಜ್ಞೇಷು ಕೃತಾತ್ಮಸು |
ನ ತೇಷು ಸಜ್ಜತೇ ಸ್ನೇಹಃ ಪದ್ಮಪತ್ರೇಷ್ವಿವೋದಕಮ್ ॥33॥

ದುಃಖಗಳು ಉಂಟಾದಾಗ ಜ್ಞಾನನಿಷ್ಠರಾದ ಶಾಸ್ತ್ರಜ್ಞರಾದ ಸಜ್ಜನರು (ಕುಶಲರಾದವರು) ಅಂತಹ ಸ್ನೇಹವನ್ನು ಹೊಂದುವುದಿಲ್ಲ. ಪದ್ಮಪತ್ರದಲ್ಲಿ ಇರುವ ಉದಕದಂತೆ ಅಂತಹ ದುಃಖಕರವಾದ ಸ್ನೇಹವು ಅವರಿಗೆ ಅಂಟುವುದಿಲ್ಲ.

ರಾಗಾಭಿಭೂತಃ ಪುರುಷಃ ಕಾಮೇನ ಪರಿಕೃಷ್ಯತೇ |
ಇಚ್ಛಾ ಸಂಜಾಯತೇ ಚಾಸ್ಯ ತತಸ್ತೃಷ್ಣಾ ಪ್ರವರ್ತತೇ ॥34॥

ವಿಷಯದಲ್ಲಿ ಸ್ನೇಹವುಳ್ಳ ಪುರುಷನು ಸ್ತ್ರೀಭೋಗಾದಿ ಆಸಕ್ತಿಯನ್ನು ಹೊಂದುತ್ತಾನೆ. ಅದರಂತೆಯೇ ಅನ್ನ ಪಾನಾದಿ ಆಸೆಯನ್ನು ಹೊಂದುತ್ತಾನೆ. ಅನಂತರ ಭೋಗಗಳಲ್ಲಿ ಅತೃಪ್ತಿಯನ್ನು ಹೊಂದುತ್ತಾನೆ.

ತೃಷ್ಣಾ ಹಿ ಸರ್ವಪಾಪಿಷ್ಠಾ ನಿತ್ಯೋದ್ವೇಗಕರೀ ಸ್ಮೃತಾ |
ಅಧರ್ಮಬಹುಲಾ ಚೈವ ಘೋರಾ ಪಾಪಾನುಬಂಧಿನೀ ॥35॥

ಭೋಗಗಳಲ್ಲಿ ಅತೃಪ್ತಿಯು ಎಂದರೆ ಅಲಂಬುದ್ಧಿಯು ಇಲ್ಲದಿರುವಿಕೆಯು ಎಲ್ಲಕ್ಕಿಂತಲೂ ಪಾಪಿಷ್ಠವಾದುದು. ಅದು ಯಾವಾಗಲೂ ಮನಸ್ಸಿಗೂ ಉದ್ವೇಗವನ್ನು ಉಂಟುಮಾಡುವುದು ಎಂದು ಹೇಳಲ್ಪಡುತ್ತದೆ. ಅದು ಘೋರವಾದುದೂ ಅಧರ್ಮದ ಕಡೆಗೆ ಎಳೆಯುವುದೂ ಮತ್ತು ಪಾಪಕರ್ಮಗಳನ್ನು ಮಾಡಿಸುವುದೂ ಆಗಿದೆ.

ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ |
ಯೋಽಸೌ ಪ್ರಾಣಾಂತಿಕೋ ರೋಗಃ ತಾಂ ತೃಷ್ಣಾಂ ತ್ಯಜತಃ ಸುಖಮ್ ॥

ದುರ್ಮತಿಗಳಾದವರು ಆ ತೃಷ್ಣೆಯನ್ನು ಎಂದೂ ಬಿಡಲು ಸಾಧ್ಯವಿಲ್ಲ. ಅದು ವಯಸ್ಸಾದಂತೆ ಕಡಿಮೆಯಾಗುವುದಿಲ್ಲ. ಅದೊಂದು ಪ್ರಾಣಾಂತಿಕರೋಗ. ಆ ಅತೃಪ್ತಿಯನ್ನು ಬಿಟ್ಟರೆ ಮಾತ್ರ ಸುಖವುಂಟಾಗುತ್ತದೆ.

ಅನಾದ್ಯಂತಾ ತು ಸಾ ತೃಷ್ಣಾ ಅಂತರ್ದೇಹಗತಾ ನೃಣಾಮ್ |

ವಿನಾಶಯತಿ ಸಂಭೂತಾ ಅಯೋರಜ ಇವಾನಲಃ ॥37॥
ಆ ಅತೃಪ್ತಿಗೆ ಕೊನೆಮೊದಲಿಲ್ಲ. ಅದು ದೇಹದೊಳಗೆ ಹುಟ್ಟಿಬೆಳೆದು ಅಗ್ನಿಯು ಕಬ್ಬಿಣದ ಧೂಳನ್ನು ನಾಶಮಾಡುವಂತೆ ಮನುಷ್ಯನನ್ನು ನಾಶಮಾಡುತ್ತದೆ.
ಯಥೈಧಃ ಸ್ವಸಮುತ್ಥೇನ ವಹ್ನಿನಾ ನಾಶಮೃಚ್ಛತಿ |
ತಥಾಽಕೃತಾತ್ಮಾ ಲೋಭೇನ ಸಹಜೇನ ವಿನಶ್ಯತಿ ॥38॥
ಹೇಗೆ ಕಟ್ಟಿಗೆಯು ತನ್ನಿಂದಲೇ ಉಂಟಾದ ವಹ್ನಿಯಿಂದ ನಾಶವನ್ನು ಹೊಂದುತ್ತದೆಯೋ ಹಾಗೆ ಅವಿವೇಕಿಯಾದವನು ತನ್ನ ದೇಹದಲ್ಲೇ ಬೆಳೆದು ಬಂದ ಲೋಭದಿಂದ ನಾಶವನ್ನು ಹೊಂದುತ್ತಾನೆ.
ರಾಜತಃ ಸಲಿಲಾದಗ್ನೇಃ ಚೋರತಃ ಸ್ವಜನಾದಪಿ |
ಭಯಮರ್ಥವತಾಂ ನಿತ್ಯಂ ಮೃತ್ಯೋಃ ಪ್ರಾಣಭೃತಾಮಿವ ॥39॥
ಎಲ್ಲ ಪ್ರಾಣಿಗಳಿಗೂ ಯಾವಾಗಲೂ ಮೃತ್ಯು ಭಯವಿರುವಂತೆ, ಧನವನ್ನು ಹೊಂದಿದವನು ರಾಜರಿಂದ ಜಲಾಗ್ನಿ ಪ್ರಕೋಪಗಳಿಂದ ಕಳ್ಳರಿಂದ ಮತ್ತು ಸ್ವಜನರಿಂದಲೂ ಯಾವಾಗಲೂ ಭಯಪಡುತ್ತಾನೆ.
ಯಥಾ ಹ್ಯಾಮಿಷಮಾಕಾಶೇ ಪಕ್ಷಿಭಿಃ ಶ್ವಾಪದೈರ್ಭುವಿ |
ಭಕ್ಷ್ಯತೇ ಸಲಿಲೇ ಮತ್ಸ್ಯೈಸ್ತಥಾ ಸರ್ವೇಣ ವಿತ್ತವಾನ್ ॥40॥
ಹೇಗೆ ಒಂದು ಮಾಂಸದ ಚೂರು ಆಕಾಶದಲ್ಲಿ ಪಕ್ಷಿಗಳಿಂದಲೂ ಭೂಮಿಯಲ್ಲಿ ಮಾಂಸಾಹಾರಿ ಪ್ರಾಣಿಗಳಿಂದಲೂ ನೀರಿನಲ್ಲಿ ಮತ್ಸ್ಯಗಳಿಂದಲೂ ನುಂಗಲ್ಪಡುತ್ತದೆಯೋ ಅದರಂತೆ ದ್ರವ್ಯವುಳ್ಳ ಮನುಷ್ಯನು ಎಲ್ಲರಿಂದಲೂ ಭಕ್ಷಿಸಲ್ಪಡುತ್ತಾನೆ.
ಅರ್ಥ ಏವ ಹಿ ಕೇಷಾಂಚಿದನರ್ಥೋ ಭವಿತಾ ನೃಣಾಮ್ |
ಅರ್ಥಶ್ರೇಯಸಿ ಚಾಸಕ್ತೋ ನ ಶ್ರೇಯೋ ವಿಂದತೇ ನರಃ |
ತಸ್ಮಾದರ್ಥಾಗಮಾಃ ಸರ್ವೇ ಮದಮೋಹವಿವರ್ಧನಾಃ ॥41॥
ಕೆಲವು ಪುರುಷರಿಗೆ ಅರ್ಥವೇ ಅನರ್ಥಕ್ಕೆ ಕಾರಣವಾಗುತ್ತದೆ. ದ್ರವ್ಯರೂಪವಾದ ಶ್ರೇಯಸ್ಸಿನಲ್ಲಿಯೇ ಆಸಕ್ತನಾದ ಮನುಷ್ಯನು ಮೋಕ್ಷರೂಪವಾದ ಶ್ರೇಯಸ್ಸನ್ನು ಹೊಂದುವುದಿಲ್ಲ. ಆದ್ದರಿಂದ ಧನಪ್ರಾಪ್ತಿ ಎಲ್ಲವೂ ಮದಮೋಹಗಳನ್ನು ಹೆಚ್ಚುಸುವವೇ ಆಗಿವೆ.
ಕಾರ್ಪಣ್ಯಂ ದರ್ಪಮಾನೌ ಚ ಭಯಮುದ್ವೇಗ ಏವ ಚ |
ಅರ್ಥಜಾನಿ ವಿದುಃ ಪ್ರಾಜ್ಞಾ ದುಃಖಾನ್ಯೇತಾನಿ ದೇಹಿನಾಮ್ ॥42॥
ಅರ್ಥಸ್ಯೋಪಾರ್ಜನೇ ದುಃಖಂ ಪಾಲನೇ ರಕ್ಷಣೇ ತಥಾ |
ನಾಶೇ ದುಃಖಂ ವ್ಯಯೇ ದುಃಖಂ ಘ್ನಂತಿ ಚಾಪ್ಯರ್ಥಕಾರಣಾತ್ ॥43॥
ಕಾರ್ಪಣ್ಯ ಭಯ ಲೋಭ ದರ್ಪ ಅಹಂಕಾರ ಮತ್ತು ಉದ್ವೇಗ ಇವುಗಳು ಅರ್ಥದಿಂದ ಮನುಷ್ಯರಿಗೆ ಉಂಟಾಗುವ ದುಃಖಗಳೆಂದು ಪ್ರಾಜ್ಞರು ತಿಳಿಯುತ್ತಾರೆ. ಧನವನ್ನು ಸಂಪಾದಿಸುವುದು ದುಃಖ. ಅದನ್ನು ರಕ್ಷಣೆಮಾಡುವುದು ದುಃಖ. ಅದು ನಾಶವಾದರೆ ದುಃಖ. ಖರ್ಚಾದರೂ ದುಃಖ. ಅಷ್ಟೇ ಅಲ್ಲದೆ ಧನದ ಸಲುವಾಗಿ ಇನ್ನೊಬ್ಬರು ಕೊಲ್ಲುತ್ತಾರೆ.
ಅರ್ಥಾ ದುಃಖಂ ಪರಿತ್ಯಕ್ತುಃ ಪಾಲಿತಾಶ್ಚಾಪಿ ತೇಽಸುಖಾಃ |
ದುಃಖೇನ ಚಾಧಿಗಮ್ಯಂತೇ ತೇಷಾಂ ನಾಶಂ ನ ಚಿಂತಯೇತ್ ॥45॥
ಅರ್ಥವನ್ನು ಪರಿತ್ಯಾಗಮಾಡುವವನಿಗೂ ಅರ್ಥವು ದುಃಖವನ್ನು ಕೊಡುತ್ತದೆ. ಅರ್ಥವನ್ನು ರಕ್ಷಣೆಮಾಡುವವನಿಗೂ ದುಃಖವನ್ನು ಕೊಡುತ್ತದೆ. ಅರ್ಥಪ್ರಾಪ್ತಿಯೂ ದುಃಖದಿಂದಲೇ ಆಗುತ್ತದೆ. ಅರ್ಥದ ನಾಶವನ್ನು ಕುರಿತು ಚಿಂತಾಕ್ರಾಂತರಾಗಬಾರದು.
ಅಸಂತೋಷಪರಾ ಮೂಢಾಃ ಸಂತೋಷಂ ಯಾಂತಿ ಪಂಡಿತಾಃ |
ಅತೋ ನಾಸ್ತಿ ಪಿಪಿತ್ಸಾಯಾಃ ಸಂತೋಷಃ ಪರಮಂ ಸುಖಮ್ |
ತಸ್ಮಾತ್ ಸಂತೋಷಮೇವೇಹ ಧನಂ ಪಶ್ಯಂತಿ ಪಂಡಿತಾಃ ॥46॥
ಮೂಢರು ಯಾವಾಗಲೂ ಅಸಂತುಷ್ಟರಾಗಿರುತ್ತಾರೆ. ಪ್ರಾಜ್ಞರು ಸಂತುಷ್ಟರಾಗಿರುತ್ತಾರೆ. ಆದ್ದರಿಂದ ಧನಲಾಭೇಚ್ಛೆಯಿಂದ ಎಂದಿಗೂ ತೃಪ್ತಿಯೂ ಶ್ರೇಷ್ಠವಾದ ಸುಖವೂ ಉಂಟಾಗುವುದಿಲ್ಲ. ಆದ್ದರಿಂದ ಪಂಡಿತರಾದವರು ಸಂತೋಷವನ್ನೇ ಎಂದರೆ ತೃಪ್ತಿಯನ್ನೇ ಧನವೆಂದು ಭಾವಿಸುತ್ತಾರೆ.
ಅನಿತ್ಯಂ ಯೌವನಂ ರೂಪಂ ಜೀವಿತಂ ದ್ರವ್ಯಸಂಚಯಃ |
ಆರೋಗ್ಯಂ ಪ್ರಿಯಸಂವಾಸೋ ಗೃಧ್ಯೇದೇಷು ನ ಪಂಡಿತಃ ॥47॥
ಯೌವನ ರೂಪ ಜೀವನ ಧನಸಂಚಯ ಆರೋಗ್ಯ ಪ್ರಿಯರ ಜೊತೆಯಲ್ಲಿ ವಾಸ ಇವೆಲ್ಲವೂ ಅನಿತ್ಯವಾದವು ವಿವೇಕಿಯಾದವನು ಇವುಗಳಿಗಾಗಿ ಆಸೆಪಡಬಾರದು.
ತ್ಯಜೇತ ಸಂಚಯಾಂಸ್ತಸ್ಮಾತ್ ತಜ್ಜಂ ಕ್ಲೇಶಂ ಸಹೇತುಕಃ |
ನಹಿ ಸಂಚಯವಾನ್ ಕಶ್ಚಿದ್ ದೃಶ್ಯತೇ ನಿರುಪದ್ರವಃ ॥48॥
ಆದ್ದರಿಂದ ಧನಸಂಚಯಗಳನ್ನು ಅದರಿಂದ ಉಂಟಾಗುವ ಕ್ಲೇಶಗಳ ಜೊತೆಯಲ್ಲಿ ಪರಿತ್ಯಜಿಸಬೇಕು. ಧನ ಸಂಚಯವುಳ್ಳಯಾವನೂ ಭೂಮಿಯಲ್ಲಿ ಉಪದ್ರವಕ್ಕೆ ಒಳಗಾಗದಿರುವುದು ಕಂಡುಬರುವುದಿಲ್ಲ.
ಅತಶ್ಚ ಧರ್ಮಿಭಿಃ ಸದ್ಭಿರ್ನ ಚೇಹಾರ್ಥಃ ಪ್ರಶಸ್ಯತೇ |
ಪ್ರಕ್ಷಾಲನಾದ್ಧಿ ಪಂಕಸ್ಯ ಶ್ರೇಯೋ ನಸ್ಪರ್ಶನಂ ನೃಣಾಮ್ ॥49॥
ಆದ್ದರಿಂದಲೇ ಧರ್ಮಿಷ್ಠರಾದ ಸಜ್ಜನರು ಅರ್ಥವನ್ನು ಹೊಗಳುವುದಿಲ್ಲ. ಕೆಸರನ್ನು ಮೆಟ್ಟಿ ತೊಳೆದುಕೊಳ್ಳುವುದಕ್ಕಿಂತಲೂ ಮನುಷ್ಯರಿಗೆ ಕೆಸರನ್ನು ಮುಟ್ಟದಿರುವುದೇ ಲೇಸು.
ಯುಧಿಷ್ಠಿರ ತ್ವಮರ್ಥೇಷು ನ ಸ್ಪೃಹಾಂ ಕರ್ತುಮರ್ಹಸಿ |

ಧರ್ಮೇಣ ಯದಿ ತೇ ಕಾರ್ಯಂ ವಿಮುಕ್ತೇಪ್ಸುರ್ಭವಾರ್ಥತಃ ॥50॥
ಎಲೈ ಯುಧಿಷ್ಠಿರನೇ! ನೀನು ಅರ್ಥದ ಆಸೆಯನ್ನು ಮಾಡಬೇಡ. ನಿನಗೆ ಧರ್ಮದ ಸಂಪಾದನೆಯನ್ನು ಮಾಡುವ ಅಭಿಪ್ರಾಯವಿದ್ದರೆ ಅರ್ಥಪ್ರಾಪ್ತಿಯ ಇಚ್ಛೆಯಿಂದ ವಿಮುಕ್ತನಾಗು.
ಯುಧಿಷ್ಠಿರಃ
ನ ಬ್ರಹ್ಮನ್ ಭೋಗಲಿಪ್ಸಾರ್ಥಮಿಯಮರ್ಥೇಪ್ಸುತಾ ಮಮ |
ಭರಣಾರ್ಥಂ ತು ವಿಪ್ರಾಣಾಂ ಬ್ರಹ್ಮನ್ ಕಾಂಕ್ಷೇ ನ ಲೋಭತಃ ॥51॥
ಪೂಜ್ಯರೇ! ನನ್ನ ಭೋಗದ ಸಲುವಾಗಿ ನಾನು ಈ ಧನವನ್ನು ಬಯಸುತ್ತಿಲ್ಲ. ಪೂಜ್ಯರೇ! ಬ್ರಾಹ್ಮಣರನ್ನು ಪೋಷಿಸಲು ಮಾತ್ರ ನಾನು ಧನವನ್ನು ಅಪೇಕ್ಷಿಸುತ್ತೇನೆ. ಲೋಭದಿಂದಲ್ಲ.
ಕಥಂ ಹ್ಯಸ್ಮದ್ವಿಧೋ ಬ್ರಹ್ಮನ್ ವರ್ತಮಾನೋ ಗೃಹಾಶ್ರಮೇ |
ಭರಣಂ ಪಾಲನಂ ಚಾಪಿ ನ ಕುರ್ಯಾದನುಯಾಯಿನಾಮ್ ॥52॥
ಬ್ರಾಹ್ಮಣರೇ! ಗೃಹಸ್ಥಾಶ್ರಮಿಯಾದ ನನ್ನಂಥವನು ನಮ್ಮನ್ನು ಅನುಸರಿಸಿ ಬರುವ ಬ್ರಾಹ್ಮಣರ ರಕ್ಷಣೆ ನತ್ತು ಪಾಲನೆಗಳನ್ನು ಹೇಗೆ ಮಾಡದೆ ಇರಲು ಸಾಧ್ಯ?
ಸಂವಿಭಾಗೋ ಹಿ ಭೂತಾನಾಂ ಸರ್ವೇಷಾಮೇವ ಶಿಷ್ಯತೇ |
ತಥೈವ ಯಾಚಮಾನೇಭ್ಯಃ ಪ್ರದೇಯಂ ಗೃಹಮೇಧಿನಾ ॥53॥
ಹಂಚಿಕೊಂಡು ಭೋಗಿಸುವುದು ಎಲ್ಲ ಪ್ರಾಣಿಗಳಿಗೂ ಶ್ರೇಷ್ಠವಾದುದು. ಅದರಂತಯೇ ಗೃಹಸ್ಥಾಶ್ರಮಿಯಾದವನು ಬೇಡಿದವರಿಗೆ ನೀಡಬೇಕಾದುದು ಶ್ರೇಷ್ಠವಾದುದೇ.
ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ |
ಸತಾಮೇತಾನಿ ಗೇಹೇಷು ನೋಚ್ಛಿದ್ಯಂತೇ ಕದಾಚನ ॥54॥
ಒಂದು ದರ್ಭೆಯ ಚಾಪೆ, ಕುಳಿತುಕೊಳ್ಳುವ ಭೂಮಿ, ಕುಡಿಯಲು ನೀರು, ಒಳ್ಳೆಯ ಮಾತು ಈ ನಾಲ್ಕು ವಸ್ತುಗಳು ಸಜ್ಜನರ ಮನೆಯಲ್ಲಿ ಎಂದೂ ವಿನಾಶವನ್ನು ಹೊಂದುವುದಿಲ್ಲ.
ದೇಯಮಾರ್ತಸ್ಯ ಶಯನಂ ಸತಿ ಶ್ರಾಂತಸ್ಯ ಚಾಸನಮ್ |
ತೃಷಿತಸ್ಯ ಚ ಪಾನೀಯಂ ಕ್ಷುಧಿತಸ್ಯ ಚ ಭೋಜನಮ್ ॥55॥
ನಾವು ಕೊಡಬೇಕಾದ ವಸ್ತುಗಳಿದ್ದರೆ ಆರ್ತನಾದವನಿಗೆ ಶಯನವನ್ನು ಕೊಡಬೇಕು. ದಣಿದವನಿಗೆ ಆಸನವನ್ನು ಕೊಡಬೇಕು. ಬಾಯಾರಿದವನಿಗೆ ನೀರನ್ನು ಕೊಡಬೇಕು. ಮತ್ತು ಹಸಿದವನಿಗೆ ಅನ್ನವನ್ನು ಕೊಡಬೇಕು.
ಚಕ್ಷುರ್ದದ್ಯಾನ್ಮನೋ ದದ್ಯಾದ್ ವಾಚಂ ದದ್ಯಾಚ್ಚ ಸೂನೃತಾಮ್ |
ಉತ್ಥಾಯ ಚಾಸನಂ ದದ್ಯಾದೇಷ ಧರ್ಮಃ ಸನಾತನಃ |
ಪ್ರತ್ಯುತ್ಥಾಯಾಭಿಗಮನಂ ಕುರ್ಯಾನ್ನ್ಯಾಯೇನ ಚಾರ್ಚನಮ್ ॥56॥
ಬಂದ ಅತಿಥಿಗೆ ನಮ್ಮ ದೃಷ್ಟಿಯನ್ನು ಕೊಡಬೇಕು. ಮನಸ್ಸನ್ನು ಕೊಡಬೇಕು. ಒಳ್ಳೆಯಮಾತನ್ನು ಕೊಡಬೇಕು. ಎದ್ದು ಆಸನವನ್ನು ಕೊಡಬೇಕು. ಇದು ಸನಾತನವಾದ ಧರ್ಮ. ಎದ್ದು ಅಭಿಮುಖವಾಗಿ ಹೋಗಿ ನ್ಯಾಯರೀತಿಯಿಂದ ಅವರ ಅರ್ಚನೆಯನ್ನು ಮಾಡಬೇಕು.
ಅಗ್ನಿಹೋತ್ರಮನಡ್ವಾಂಶ್ಚ ಜ್ಞಾತಯೋಽತಿಥಿಬಾಂಧವಾಃ |
ಪುತ್ರದಾರಭೃತಾಶ್ಚೈವ ನಿರ್ದಹೇಯುರಪೂಜಿತಾಃ ॥57॥
ಅಗ್ನಿಹೋತ್ರ, ಗೋಸಂಪತ್ತು, ಜ್ಞಾತಿಗಳು, ಅತಿಥಿಗಳು, ಬಾಂಧವರು, ಪುತ್ರರು, ಪತ್ನಿ, ಸೇವಕರು ಇವರು ಪೂಜಿಸಲ್ಪಡದಿದ್ದರೆ ಯಜಮಾನನನ್ನು ದಹಿಸುತ್ತಾರೆ.
ನಾತ್ಮಾರ್ಥೇ ಪಾಚಯೇದನ್ನಂ ನ ವೃಥಾ ಘಾತಯೇತ್ ಪಶೂನ್ |
ನ ಚೈಕಃ ಸ್ವಯಮಶ್ನೀಯಾದ್ ವಿಧಿವದ್ ಯನ್ನ ನಿರ್ವಪೇತ್ ॥58॥
ತನ್ನ ಸಲುವಾಗಿ ಎಂದೂ ಅಡುಗೆಯನ್ನು ಮಾಡಬಾರದು. ವ್ಯರ್ಥವಾಗಿ ಪಶುಗಳನ್ನು ಘಾತಿಸಬಾರದು. ಒಬ್ಬನೇ ಕುಳಿತು ಊಟಮಾಡಬಾರದು. ಯಾವುದು ಶಾಸ್ತ್ರಶುದ್ಧವಾಗಿಲ್ಲವೋ ಅಂತಹ ವಸ್ತುವಿನಿಂದ ಹೋಮವನ್ನು ಮಾಡಬಾರದು.
ಶ್ವಭ್ಯಶ್ಚ ಶ್ವಪಚೇಭ್ಯಶ್ಚ ವಯೋಭ್ಯಶ್ಚಾವಪೇದ್ ಭುವಿ |
ವೈಶ್ವದೇವಂ ಹಿ ನಾಮೈತತ್ ಸಾಯಂಪ್ರಾತರ್ವಿಧೀಯತೇ ॥59॥
ನಾಯಿಗಳಿಗೂ ಶ್ವಪಚರಿಗೂ ಮತ್ತು ಪಕ್ಷಿಗಳಿಗೂ ಭೂಮಿಯಲ್ಲಿ ಅನ್ನವನ್ನು ಚೆಲ್ಲಬೇಕು. ಇದಕ್ಕೆ ವೈಶ್ವದೇವ ಎಂದು ಹೆಸರು. ಇದನ್ನು ಹಗಲು ಮತ್ತು ರಾತ್ರಿಯಲ್ಲಿ ಮಾಡಬೇಕು.
ವಿಘಸಾಶೀ ಭವೇನ್ನಿತ್ಯಂ ನಿತ್ಯಂ ಚಾಮೃತಭೋಜನಃ |
ವಿಘಸಂ ಭೃತ್ಯಶೇಷಂ ಸ್ಯಾದ್ ಯಜ್ಞಶೇಷಸ್ತಥಾಽಮೃತಮ್ ॥60॥
ನಿತ್ಯವೂ ವಿಘಸಾನ್ನವನ್ನು ಭುಂಜಿಸಬೇಕು. ನಿತ್ಯವೂ ಅಮೃತವನ್ನು ಭುಂಜಿಸಬೇಕು. ಭೃತ್ಯರು ಊಟಮಾಡಿ ಉಳಿದುದು ವಿಘಸ. ಯಜ್ಞಶೇಷವು ಅಮೃತವೆನಿಸುತ್ತದೆ.
ದೇವಾನ್ ಪಿತೃನ್ ಮನುಷ್ಯಾಂಶ್ಚ ಭಿಕ್ಷೂನತಿಥಿಪಂಚಮಾನ್ |
ಅನುವ್ರಜೇದುಪಾಸೀತ ಸ ಯಜ್ಞಃ ಪಂಚದಕ್ಷಿಣಃ ॥61॥
ದೇವತೆಗಳು ಪಿತೃಗಳು ಮನುಷ್ಯರು ಸಂನ್ಯಾಸಿಗಳು ಮತ್ತು ಐದನೆಯವರಾದ ಅತಿಥಿಗಳು ಇವರನ್ನು ಹಿಂಬಾಲಿಸಬೇಕು. ಅವರ ಸಮೀಪದಲ್ಲಿ ಕುಳಿತುಕೊಳ್ಳಬೇಕು. ಇದಕ್ಕೆ ಪಂಚದಕ್ಷಿಣವುಳ್ಳ ಯಜ್ಞ ಎಂದು ಹೆಸರು.

ಯೋ ದದ್ಯಾದಪರಿಕ್ಲಿಷ್ಟಮನ್ನಮಧ್ವನಿ ತಿಷ್ಠತೇ |
ಶ್ರಾಂತಾಯಾದೃಷ್ಟಪೂರ್ವಾಯ ತಸ್ಯ ಪುಣ್ಯಫಲಂ ಮಹತ್ ॥62॥
ಯಾವನು ಹಿಂದೆ ನೋಡದಿದ್ದ ಬಳಲಿದ ದಾರಿಹೋಕನಿಗೆ ಶುದ್ಧವಾದ ಅನ್ನವನ್ನು ಕೊಡುತ್ತಾನೆಯೋ ಅವನ ಪುಣ್ಯಫಲವು ಬಹಳ ದೊಡ್ಡದು.
ಏತಾಂ ಯೋ ವರ್ತತೇ ವೃತ್ತಿಂ ವರ್ತಮಾನೋ ಗೃಹಾಶ್ರಮೇ |
ತಸ್ಯ ಧರ್ಮಂ ಪರಂ ಪ್ರಾಹುಃ ಕಥಂ ವಾ ವಿಪ್ರ ಮನ್ಯಸೇ ॥63॥
ಎಲೈ ಪೂಜ್ಯರೇ! ಯಾವ ಗೃಹಸ್ಥಾಶ್ರಮಿಯು ಇಂತಹ ಆಚರಣೆಯಲ್ಲಿ ಇರುತ್ತಾನೆಯೋ ಅವನ ಧರ್ಮವು ಬಹಳ ಶ್ರೇಷ್ಠವಾದುದು ಎಂದು ಹೇಳುತ್ತಾರೆ. ತಮ್ಮ ಅಭಿಪ್ರಾಯವೇನು?
ಶೌನಕಃ
ಅಹೋ ಬತ ಮಹತ್ ಕಷ್ಟಂ ವಿಪರೀತಮಿದಂ ಜಗತ್ |
ಯೇನಾಪತ್ರಪತೇ ಸಾಧುರಸಾಧುಸ್ತೇನ ತುಷ್ಯತಿ ॥64॥
ಅಯ್ಯೋ ಬಹಳ ಕಷ್ಟವಾಗಿದೆ. ಈ ಜಗತ್ತು ತಲೆಕೆಳಗಾಗಿದೆ. ಏಕೆಂದರೆ ಸಜ್ಜನರು ನಾಚಿ ಹಿಂದೆ ಸರಿಯುತ್ತಾರೆ. ದುರ್ಜನರು ಸಂತೋಷದಿಂದ ಇರುತ್ತಾರೆ.
ಶಿಶ್ನೋದರಕೃತೇ ಚಾಜ್ಞಃ ಕರೋತಿ ವಿಘಸಂ ಬಹು |
ಮೋಹರಾಗಸಮಾಕ್ರಾಂತ ಇಂದ್ರಿಯಾರ್ಥವಶಾನುಗಃ ॥65॥
ಶಿಶ್ನೋದರಪರಾಯಣನಾದ ಅಜ್ಞನು ಮೋಹರಾಗಗಳಿಗೆ ವಶನಾಗಿ ಇಂದ್ರಿಯಪ್ರೀತಿಯನ್ನು ಉಂಟುಮಾಡುವ ಸಲುವಾಗಿ ಅನ್ಯಾಯದಿಂದ ಧನವನ್ನು ಗಳಿಸಿ ಅದರಿಂದ ಭೃತ್ಯರನ್ನು ಪೋಷಿಸುತ್ತಾ ಅವರ ಶೇಷವನ್ನು ಭುಂಜಿಸುತ್ತಾನೆ. (ವೈರಾಗ್ಯಾದಿ ಮಹಾಭಾಗ್ಯವನ್ನು ತೊರೆಯುತ್ತಾನೆ.)
ಹ್ರಿಯತೇ ಬುಧ್ಯಮಾನೋಽಪಿ ಮನೋಹಾರಿಭಿರಿಂದ್ರಿಯೈಃ |
ವಿಮೂಢಸಂಜ್ಞೋ ದುಷ್ಟಾಶ್ವೈರುದ್ಭ್ರಾಂತೈರಿವ ಸಾರಥಿಃ ॥66॥
ವಿವೇಕವುಳ್ಳವನೂ ಸಹ ಮನಸ್ಸನ್ನು ಸೆಳೆಯುವ ಇಂದ್ರಿಯಗಳಿಗೆ ವಶನಾಗಿ ಆವುಗಳಿಂದ ಸೆಳೆಯಲ್ಪಡುತ್ತಾನೆ. ದಿಗ್ಭ್ರಾಂತವಾದ ದುಷ್ಟಕುದುರೆಗಳನ್ನು ನಿಯಂತ್ರಿಸದ ಸಾರಥಿಯಂತೆ ತನ್ನ ಪ್ರಜ್ಞೆಯನ್ನು ಕಳೆದುಕೊಳ್ಳುತ್ತಾನೆ.
ಷಡಿಂದ್ರಿಯಾಣಿ ವಿಷಯಂ ಸಮಾಗಚ್ಛಂತಿ ವೈ ಯದಾ |
ತದಾ ಪ್ರಾದುರ್ಭವತ್ಯೇಷಾಂ ಪೂರ್ವಸಂಕಲ್ಪಜಂ ಮನಃ ॥67॥
ಆರು ಇಂದ್ರಿಯಗಳು ತಮ್ಮತಮ್ಮ ವಿಷಯಗಳ ಸಂಪರ್ಕವನ್ನು ಪಡೆದಾಗ ಮನಸ್ಸು ಹಿಂದಿನ ಸಂಸ್ಕಾರದಿಂದ ಉದ್ಬುದ್ಧವಾಗುತ್ತದೆ.
ಮನೋ ಯಸ್ಯೇಂದ್ರಿಯಗ್ರಾಮವಿಷಯಂ ಪ್ರತಿ ಚೋದಿತಮ್ |
ತಸ್ಯೌತ್ಸುಕ್ಯಂ ಸಂಭವತಿ ಪ್ರವೃತ್ತಿಶ್ಚೋಪಜಾಯತೇ ॥68॥
ಯಾವನಿಗೆ ಇಂದ್ರಿಯಗಳ ವಿಷಯದಲ್ಲಿ ಮನಸ್ಸು ಎಳೆಯಲ್ಪಡುತ್ತದೆಯೋ ಅವನಿಗೆ ಕುತೂಹಲವೂ ಅನಂತರ ಪ್ರವೃತ್ತಿಯೂ ಉಂಟಾಗುತ್ತದೆ.
ತತಃ ಸಂಕಲ್ಪವೀರ್ಯೇಣ ಕಾಮೇನ ವಿಷಯೇಷುಭಿಃ |
ವಿದ್ಧಃ ಪತತಿ ಲೋಭಾಗ್ನೌ ಜ್ಯೋತಿರ್ಲೋಭಾತ್ ಪತಂಗವತ್ ॥69॥
ಅನಂತರ ಮನಸ್ಸಿನ ಸಂಕಲ್ಪಸಾಮರ್ಥ್ಯದಿಂದ ಉಂಟಾಗುವ ಕಾಮದಿಂದ ವಿಷಯ ಎಂಬ ಬಾಣದಿಂದ ಹೊಡೆಯಲ್ಪಟ್ಟವನಾಗಿ ಅಗ್ನಿಯ ಲೋಭದಿಂದ ಪತಂಗವು ಅಗ್ನಿಯಲ್ಲಿ ಬೀಳುವಂತೆ ಲೋಭಾಗ್ನಿಯಲ್ಲಿ ಬೀಳುತ್ತಾನೆ.
ತತೋ ದಾರೈರ್ವಿಹಾರೈಶ್ಚ ಮೋಹಿತಶ್ಚ ಮಹೇಪ್ಸಯಾ |
ಮಹಾಮೋಹಮುಖೇ ಮಗ್ನೋ ನಾತ್ಮಾನಮವಬುಧ್ಯತೇ ॥70॥
ಅನಂತರ ಹೆಂಡತಿ ಅವಳ ಜೊತೆಯಲ್ಲಿ ವಿಹಾರ ಮತ್ತು ಮಹಾಧನಪ್ರಾಪ್ತಿಯ ಇಚ್ಛೆ ಇವುಗಳಿಂದ ಮೋಹಿತನಾಗಿ ಮಹಾಮೋಹದ ಮುಖದಲ್ಲಿ ಬಿದ್ದು ತನ್ನನ್ನೇ ತಾನು ಮರೆಯುತ್ತಾನೆ.
ಏವಂ ಪತತಿ ಸಂಸಾರೇ ತಾಸು ತಾಸ್ವಿಹ ಯೋನಿಷು |
ಅವಿದ್ಯಾಕರ್ಮತೃಷ್ಣಾಭಿರ್ಭ್ರಾಮ್ಯಮಾಣೋಽಥ ಚಕ್ರವತ್ ॥71॥
ಹೀಗೆ ಅವಿದ್ಯೆ ಕರ್ಮ ಅತೃಪ್ತಿ ಇವುಗಳಿಂದ ತಿರುಗಿಸಲ್ಪಟ್ಟವನಾಗಿ ಸಂಸಾರದಲ್ಲಿ ನಾನಾ ಯೋನಿಗಳಲ್ಲಿ ಬಿದ್ದು ಚಕ್ರದಂತೆ ತಿರುಗುತ್ತಾನೆ.
ಬ್ರಹ್ಮಾದಿಷು ತೃಣಾಂತೇಷು ಭೂತೇಷು ಪರಿವರ್ತತೇ |
ಜಲೇ ಭುವಿ ತಥಾಽಽಕಾಶೇ ಜಾಯಮಾನಃ ಪುನಃ ಪುನಃ ॥72॥
ಜನಿಸುವವನು ಬ್ರಹ್ಮಾದಿ ತೃಣಾಂತಯೋನಿಗಳಲ್ಲಿ ನೀರಿನಲ್ಲಿ ಭೂಮಿಯಲ್ಲಿ ಮತ್ತು ಆಕಾಶದಲ್ಲಿ ಪುನಃಪುನಃ ಜನಿಸುವವನಾಗಿ ಸುತ್ತುತ್ತಾನೆ.
ಅಬುಧಾನಾಂ ಗತಿಸ್ತ್ವೇಷಾ ಬುಧಾನಾಮಪಿ ಮೇ ಶೃಣು |
ಯೇ ಧರ್ಮೇ ಶ್ರೇಯಸಿ ರತಾ ವಿಮೋಕ್ಷರತಯೋ ಜನಾಃ ॥73॥
ಇದು ಅಜ್ಞಾನಿಗಳಿಗೆ ಉಂಟಾಗುವ ಗತಿ. ಯಾರು ಧರ್ಮವೆಂಬ ಶ್ರೇಯಸ್ಸಿನಲ್ಲಿ ಮತ್ತು ಮೋಕ್ಷದಲ್ಲಿ ರತರಾಗಿರುತ್ತಾರೆಯೋ ಅಂತಹ ಬುಧ ಜನರ ಗತಿಯನ್ನು ಹೇಳುತ್ತೇನೆ ಕೇಳು.
ಯದಿದಂ ವೇದವಚನಂ ಕುರು ಕರ್ಮ ತ್ಯಜೇತಿ ಚ |

ತಸ್ಮಾತ್ ಸರ್ವಾನಿಮಾನ್ ಧರ್ಮಾನಭಿಜಾನನ್ ಸಮಾಚರೇತ್ ॥74॥
ಪ್ರವೃತ್ತಿಕರ್ಮವನ್ನು ಬಿಡು ನಿವೃತ್ತಿಕರ್ಮವನ್ನುಮಾಡು ಎಂಬ ಯಾವ ವೇದವಚನವಿದೆಯೋ ಅದನ್ನು ಅನುಸರಿಸಿ ಈ ಎಲ್ಲಾ ಧರ್ಮಗಳನ್ನುತಿಳಿದು ಆಚರಿಸಬೇಕು.(ಆಚರಿಸುತ್ತಾನೆ)
ಇಜ್ಯಾಧ್ಯಯನದಾನಾನಿ ತಪಃ ಸತ್ಯಂ ಕ್ಷಮಾ ದಮಃ|
ಅಲೋಭ ಇತಿ ಮಾರ್ಗೋಽಯಂ ಧರ್ಮಸ್ಯಾಷ್ಟವಿಧಃ ಸ್ಮೃತಃ ॥75॥
ಪೂಜೆ ಅಧ್ಯಯನ ದಾನ ತಪಸ್ಸು ಯಥಾರ್ಥಜ್ಞಾನ ಕ್ಷಮೆ ಇಂದ್ರಿಯನಿಗ್ರಹ ಲೋಭವಿಲ್ಲದಿರುವಿಕೆ ಇವುಗಳು ಧರ್ಮದ ಅಷ್ಟವಿಧವಾದ ಮಾರ್ಗಗಳೆಂದು ಹೇಳಲ್ಪಡುತ್ತವೆ.
ತತ್ರ ಪೂರ್ವಶ್ಚ ತುರ್ಭಾಗಃ ಪಿತೃಯಾನಪಥೇ ಸ್ಥಿತಃ|
ಕರ್ತವ್ಯಮಿತಿ ಯತ್ ಕಾರ್ಯಂ ನಾಭಿಮಾನಾನ್ನ ಮತ್ಸರಾತ್ ॥76॥
ಉತ್ತರಂ ದೇವಯಾನಂ ತು ಸದ್ಭಿರಾಚರಿತಂ ಸದಾ|
ಅಷ್ಟಾಂಗೇನೈವ ಮಾರ್ಗೇಣ ವಿಶುದ್ಧಾತ್ಮಾ ಸಮಾಚರೇತ್ ॥77॥
ಅದರಲ್ಲಿ ಮೊದಲನೆಯ ನಾಲ್ಕು ಪಿತೃಯಾನದಲ್ಲಿ ಕರೆದುಕೊಂಡು ಹೋಗುವಂತಹವು. ಇವುಗಳನ್ನು ಇದು ನಮ್ಮ ಕರ್ತವ್ಯ ಎಂದು ಆಚರಿಸಬೇಕು. ಅಹಂಕಾರದಿಂದಲಾಗಲೀ ಅಥವಾ ಮಾತ್ಸರ್ಯದಿಂದಲಾಗಲೀ ಆಚರಿಸಬಾರದು. ಕೊನೆಯ ನಾಲ್ಕು ಸಜ್ಜನರಿಂದ ಆಚರಿಸಲ್ಪಡುತ್ತದೆ. ಅದು ಯಾವಾಗಲೂ ದೇವಯಾನಕ್ಕೆ ಕರೆದುಕೊಂಡು ಹೋಗುತ್ತದೆ. ಮನಸ್ಸಿನ ಶುದ್ಧಿಯುಳ್ಳವನು ಈ ಎಂಟು ವಿಧವಾದ ಅಂಗಗಳಿಂದ ಕೂಡಿದ ಪ್ರಕಾರದಿಂದ ಧರ್ಮಾಚರಣೆಯನ್ನು ಮಾಡಬೇಕು.
ಸಮ್ಯಕ್ಸಂಕಲ್ಪಯೋಗಾಚ್ಚ ಸಮ್ಯಕ್ಚೇಂದ್ರಿಯಗೋಚರಾತ್|
ಸಮ್ಯಗ್ವ್ರತವಿಶೇಷಾಚ್ಚ ಸಮ್ಯಕ್ ಚ ಗುರುಸೇವನಾತ್ ॥78॥
ಸಮ್ಯಗಾಹಾರಯೋಗಾಚ್ಚ ಸಮ್ಯಕ್ ಚಾಧ್ಯಯನಾಗಮಾತ್|
ಸಮ್ಯಕ್ ಕರ್ಮೋಪಸಂನ್ಯಾಸಾತ್ ಸಮ್ಯಕ್ ಚಿತ್ತನಿರೋಧನಾತ್ ॥79॥
ಸಮ್ಯಕ್ ಕರ್ಮಾಣಿ ಕುರ್ವಂತಿ ಸಂಸಾರವಿಜಿಗೀಷವಃ|
ರಾಗದ್ವೇಷವಿನಿರ್ಮುಕ್ತಾ ಐಶ್ವರ್ಯವಶತಾಂ ಗತಾಃ ॥80॥
ಸಂಸಾರವನ್ನು ಗೆಲ್ಲುವ ಇಚ್ಛೆಯುಳ್ಳ ರಾಗದ್ವೇಷದಿಂದ ಮುಕ್ತರಾದ ಸಜ್ಜನರು ಸಾಮರ್ಥ್ಯವನ್ನು ಹೊಂದಿದವರಾಗಿ ಒಳ್ಳೆಯ ಸಂಕಲ್ಪವನ್ನುಮಾಡಿ, ಎಲ್ಲ ಇಂದ್ರಿಯಗಳನ್ನು ವಿದ್ಯಾನಿಷ್ಠವನ್ನಾಗಿ ಮಾಡಿ ಅನೇಕ ವ್ರತಗಳನ್ನು ಆಚರಿಸಿ ಗುರುಶುಶ್ರೂಷೆಯನ್ನು ಮಾಡಿ, ಯೋಗ್ಯ ಮಿತ ಅಹಾರವನ್ನು ಹೊಂದಿದವರಾಗಿ ಆಗಮಗಳನ್ನು ಚೆನ್ನಾಗಿ ಅಧ್ಯಾಯನ ಮಾಡಿ ಚಿತ್ತ ನಿರೋಧವನ್ನುಮಾಡಿ, ಕರ್ಮಫಲವನ್ನು ದೇವರಿಗೆ ಸಮರ್ಪಿಸಿ ಕರ್ಮಗಳನ್ನು ಆಚರಿಸುತ್ತಾರೆ.
ರುದ್ರಾಃ ಸಾಧ್ಯಾಸ್ತಥಾಽಽದಿತ್ಯಾ ವಸವೋಽಥಾಶ್ವಿನಾವಪಿ|
ಯೋಗೈಶ್ವರ್ಯೇಣ ಸಂಯುಕ್ತಾ ಧಾರಯಂತಿ ಪ್ರಜಾ ಇಮಾಃ ॥81॥
ತಥಾ ತ್ವಮಪಿ ಕೌಂತೇಯ ತಪ ಆಸ್ಥಾಯ ಪುಷ್ಕಲಮ್|
ತಪಸಾ ಸಿದ್ಧಿಮನ್ವಿಚ್ಛ ಯೋಗಸಿದ್ಧಿಂ ಚ ಭಾರತ ॥82॥
ರುದ್ರರು ಸಾಧ್ಯರು ಅದರಂತೆ ಅದಿತ್ಯರು ವಸುಗಳು ಅಶ್ವಿನಿಗಳೂ ಸಹ ತಮ್ಮ ಯೋಗೈಶ್ವರ್ಯದಿಂದ ಕೂಡಿದವರಾಗಿ ಈ ಜಗತ್ತಿನ ಪ್ರಜೆಗಳನ್ನು ರಕ್ಷಿಸುತ್ತಾರೆ. ಎಲೈ ಧರ್ಮರಾಜನೇ! ಅದರಂತೆ ನೀನೂ ಸಹ ಪುಷ್ಕಳವಾದ ತಪಸ್ಸನ್ನು ಮಾಡಿ ತಪಸ್ಸಿದ್ಧಿಯನ್ನು ಯೋಗ ಸಿದ್ಧಿಯನ್ನು ಪಡೆಯುವವನಾಗು.
ಪಿತೃಮಾತೃಮಯೀ ಸಿದ್ಧಿಃ ಪ್ರಾಪ್ತಾ ಕರ್ಮಮಯೀ ಚ ತೇ|
ತಪಸಾ ಸಿದ್ಧಿಮನ್ವಿಚ್ಛ ದ್ವಿಜಾನಾಂ ಭರಣಾಯ ವೈ ॥83॥
ಒಳ್ಳೆಯ ತಂದೆತಾಯಿಗಳ ಪ್ರಾಪ್ತಿ ಎಂಬ ಸಿದ್ಧಿ ಮತ್ತು ಕರ್ಮಗಳಿಂದ ಉಂಟಾಗುವ ಸಿದ್ಧಿಯನ್ನು ನೀನು ಈಗಾಗಲೇ ಪಡೆದಿದ್ದೀಯೆ. ಬ್ರಾಹ್ಮಣರನ್ನು ಪೋಷಿಸುವುದಕ್ಕಾಗಿ ತಪಸ್ಸಿನ ಸಿದ್ಧಿಯನ್ನು ಪಡೆಯುವವನಾಗು.
ಸಿದ್ಧಾ ಹಿ ಯದ್ಯದಿಚ್ಛಂತಿ ಕುರ್ವತೇ ತದನುಗ್ರಹಮ್|
ತಸ್ಮಾತ್ ತಪಃ ಸಮಾಸ್ಥಾಯ ಕುರುಷ್ವಾತ್ಮಮನೋರಥಮ್ ॥84॥
ಸಿದ್ಧರಾದವರು ಹೇಗೆಹೇಗೆ ಇಚ್ಛಿಸುತ್ತಾರೋ ಅದರಂತೆ ಅನುಗ್ರಹವನ್ನು ಮಾಡುತ್ತಾರೆ. ಆದ್ದರಿಂದ ತಪಸ್ಸನ್ನು ಆಚರಿಸಿ ನಿನ್ನ ಮನೋರಥವನ್ನು ಪೂರ್ಣಗೊಳಿಸಿಕೊಳ್ಳುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿತೀಯೋಽಧ್ಯಾಯಃ ॥
॥ ಆರಣ್ಯಕಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
*****
ಮೂರನೆಯ ಅಧ್ಯಾಯ
(ಯುಧಿಷ್ಠಿರನ ಸೂರ್ಯೋಪಾಸನೆ. ಪ್ರಸನ್ನನಾದ ಸೂರ್ಯನಿಂದ ಅಕ್ಷಯ ಪಾತ್ರೆಯ ದಾನ.)
ವೈಶಂಪಾಯನಃ
ಶೌನಕೇನೈವಮುಕ್ತಸ್ತು ಕುಂತೀಪುತ್ರೋ ಯುಧಿಷ್ಠಿರಃ|
ಪುರೋಹಿತಮುಪಾಗಮ್ಯ ಭ್ರಾತೃಭಿಃ ಸಹಿತೋಽಬ್ರವೀತ್ ॥1॥
ಶೌನಕನಿಂದ ಹೀಗೆ ಹೇಳಲ್ಪಟ್ಟ ಕುಂತೀಸುತನಾದ ಯುಧಿಷ್ಠಿರನು ತಮ್ಮಂದಿರ ಜೊತೆಯಲ್ಲಿ ಪುರೋಹಿತರಾದ ಧೌಮ್ಯರನ್ನು

ಸಮೀಪಿಸಿ ಮಾತನಾಡಿದನು.
ಪ್ರಸ್ಥಿತಾನನುಯಾತಾ ನೋ ಬ್ರಾಹ್ಮಣಾ ವೇದಪಾರಗಾಃ |
ನ ಚಾಸ್ಮಿ ಪಾಲನೇ ಶಕ್ತೋ ಬಹುದುಃಖಸಮನ್ವಿತಃ ॥2॥
ಕಾಡಿಗೆ ಹೊರಟ ನಮ್ಮನ್ನು ವೇದಪಾರಂಗತರಾದ ಅನೇಕ ಬ್ರಾಹ್ಮಣರು ಹಿಂಬಾಲಿಸಿದ್ದಾರೆ. ಬಹುದುಃಖದಿಂದ ಕೂಡಿದ ನಾನು ಅವರ ರಕ್ಷಣೆಯನ್ನು ಮಾಡಲು ಸಮರ್ಥನಾಗಿಲ್ಲ.
ಪರಿತ್ಯಕ್ತುಂ ನ ಶಕ್ನೋಮಿ ದಾನಶಕ್ತಿಶ್ಚ ನಾಸ್ತಿ ಮೇ |
ಕಥಮತ್ರ ಮಯಾ ಕಾರ್ಯಂ ತದ್ ಭವಾನ್ ಪ್ರಬ್ರವೀತು ಮೇ ॥3॥
ನಾನು ಅವರನ್ನು ಬಿಡಲಾರೆ. ಅವರನ್ನು ಸಾಕುವ ಶಕ್ತಿಯೂ ನನಗಿಲ್ಲ. ನಾನು ಏನು ಮಾಡಲಿ. ತಾವು ಅದನ್ನು ನನಗೆ ಹೇಳಬೇಕು.
ವೈಶಂಪಾಯನಃ
ಮುಹೂರ್ತಂ ಮನಸಾ ಧ್ಯಾತ್ವಾ ಧರ್ಮಜ್ಞೋಽನ್ವೀಕ್ಷ್ಯ ತಾಂ ಗತಿಮ್ |
ಯುಧಿಷ್ಠಿರಮುವಾಚೇದಂ ಧೌಮ್ಯೋ ಧರ್ಮಭೃತಾಂ ವರಃ ॥4॥
ಧರ್ಮಿಷ್ಠರಲ್ಲೇ ಶ್ರೇಷ್ಠರಾದ ಧೌಮ್ಯರು ಈ ಮಾತುಗಳನ್ನು ಕೇಳಿ ಒಂದು ಮುಹೂರ್ತಕಾಲ ಮನಸ್ಸಿನಲ್ಲಿ ಆಲೋಚಿಸಿ ಮುಂದೆಮಾಡಬೇಕಾದ ವಿಧಾನವನ್ನು ಜ್ಞಾನದೃಷ್ಟಿಯಿಂದ ನೋಡಿ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿದರು.
ಪುರಾ ಸೃಷ್ಟಾನಿ ಭೂತಾನಿ ಪೀಡ್ಯಂತೇ ಕ್ಷುಧಯಾ ಭೃಶಮ್ |
ತತೋಽನುಕಂಪಯಾ ತೇಷಾಂ ಸವಿತಾ ಸ್ವಪಿತಾ ಇವ ॥5॥
ಗತ್ವೋತ್ತರಾಯಣಂ ತೇಜೋ ಲೋಕಾದುದ್ಧೃತ್ಯ ರಶ್ಮಿಭಿಃ |
ದಕ್ಷಿಣಾಯನಮಾವೃತ್ತೋ ಮಹೀಂ ವರ್ಷತಿ ವಾರಿಣಾ ॥6॥
ಹಿಂದೆ ಸೃಷ್ಟಿಸಲ್ಪಟ್ಟ ಪ್ರಾಣಿಗಳೆಲ್ಲವೂ ಹಸಿವೆಯಿಂದ ಬಹಳವಾಗಿ ಬಳಲಿದವು. ಆಗ ಸೂರ್ಯನು ತಂದೆಯಂತೆ ಆ ಪ್ರಾಣಿಗಳ ಮೇಲಿನ ಅನುಕಂಪೆಯಿಂದ ಉತ್ತರಾಯಣಮಾರ್ಗಕ್ಕೆ ಹೋಗಿ ತನ್ನ ಕಿರಣಗಳಿಂದ ಎಲ್ಲ ಲೋಕಗಳ ಸಾಮರ್ಥ್ಯವನ್ನು ಸೆಳೆದುಕೊಂಡು ದಕ್ಷಿಣಾಯನಮಾರ್ಗಕ್ಕೆ ಬಂದು ಭೂಮಿಯ ಮೇಲೆ ಮಳೆಯನ್ನು ಸುರಿಸುತ್ತಾನೆ.
ದಿವಸ್ತೇಜಃ ಸಮುದ್ಧೃತ್ಯ ಸೂಯತೇ ಜಗತೋ ರವಿಃ |
ಓಷಧ್ಯಃ ಷಡ್ರಸಾ ಮೇಧ್ಯಾಸ್ತದನ್ನಂ ಪ್ರಾಣಿನಾಂ ಭುವಿ ॥7॥
ಅಂತರಿಕ್ಷಲೋಕದ ತೇಜಸ್ಸನ್ನು ತನ್ನ ಕಿರಣಗಳಿಂದ ಹೀರಿ ಸೂರ್ಯನು ಜಗತ್ತಿಗೆ ಅದನ್ನು ಪ್ರಸವಿಸುತ್ತಾನೆ. ಆಗ ಷಡ್ರಸೋಪೇತವಾದ ಆಯಾ ಪ್ರಾಣಿಗಳ ಸ್ವೀಕಾರಕ್ಕೆ ಯೋಗ್ಯವಾದ ಅನೇಕ ಓಷಧಿಗಳು ಭೂಮಿಯಲ್ಲಿ ಉಂಟಾಗುತ್ತವೆ. ಅವು ಪ್ರಾಣಿಗಳಿಗೆ ಅಹಾರವಾಗುತ್ತವೆ.
ಏವಂ ಭಾನುಮಯಂ ಹ್ಯನ್ನಂ ಭೂತಾನಾಂ ಪ್ರಾಣಧಾರಣಮ್ |
ನಾಥೋಽಯಂ ಸರ್ವಭೂತಾನಾಂ ತಸ್ಮಾತ್ ತಂ ಶರಣಂ ವ್ರಜ ॥
ಹೀಗೆ ಪ್ರಾಣಿಗಳ ಅನ್ನವು ಆದಿತ್ಯನನ್ನು ಅವಲಂಬಿಸಿದೆ. ಅವನ ಅನುಗ್ರಹದಿಂದ ಎಲ್ಲರೂ ಪ್ರಾಣಧಾರಣೆಯನ್ನು ಮಾಡುತ್ತಾರೆ. ಎಲ್ಲ ಪ್ರಾಣಿಗಳಿಗೂ ಅವನು ಒಡೆಯನಾದವನು. ಆದ್ದರಿಂದ ಸೂರ್ಯನನ್ನು ಶರಣುಹೊಂದು.
ರಾಜಾನೋ ಹಿ ಮಹಾತ್ಮಾನೋ ಯೋನಿಕರ್ಮವಿಶೋಧಿತಾಃ |
ಉದ್ಧರಂತಿ ಪ್ರಜಾಃ ಸರ್ವಾಃ ತಪ ಆಸ್ಥಾಯ ಪುಷ್ಕಲಮ್ ॥9॥
ಕುಲಶುದ್ಧಿಯುಳ್ಳ ಮತ್ತು ಕರ್ಮಶುದ್ಧಿಯುಳ್ಳ ಮಹಾತ್ಮರಾದ ರಾಜರು ಪುಷ್ಕಲವಾದ ತಪಸ್ಸನ್ನು ಮಾಡಿ ಎಲ್ಲ ಪ್ರಜೆಗಳನ್ನೂ ದುಃಖದಿಂದ ಪಾರುಮಾಡುತ್ತಾರೆ.
ಭೌಮೇನ ಕಾರ್ತವೀರ್ಯೇಣ ವೈನ್ಯೇನ ನಹುಷೇಣ ಚ |
ತಪೋಯೋಗಸಮಾಧಿಸ್ಥೈರುದ್ಧೃತಾ ಹ್ಯಾಪದಃ ಪ್ರಜಾಃ ॥10॥
ಸಾರ್ವಭೌಮನಾದ ಕಾರ್ತವೀರ್ಯನೂ ಪೃಥುವೂ ಮತ್ತು ನಹುಷನೂ ಸಹ ತಪೋಯೋಗಸಮಾಧಿಗಳನ್ನು ಆಚರಿಸಿ ಪ್ರಜೆಗಳನ್ನು ಆಪತ್ತಿನಿಂದ ಪಾರುಮಾಡಿದ್ದಾರಷ್ಟೆ.
ತಥಾ ತ್ವಮಪಿ ಕೌಂತೇಯ ಕರ್ಮಣಾ ಚ ವಿಶೋಧಿತಃ |
ತಪ ಆಸ್ಥಾಯ ಧರ್ಮೇಣ ದ್ವಿಜಾತೀನ್ ಭರ ಭಾರತ ॥11॥
ಎಲೈ ಕೌಂತೇಯನನೇ! ಎಲೈ ಭಾರತನನೇ! ನೀನೂ ಸಹ ಕರ್ಮಶುದ್ಧಿಯನ್ನು ಹೊಂದಿದವನಾಗಿದ್ದೀಯೆ. ತಪಸ್ಸನ್ನು ಆಚರಿಸಿ ಧರ್ಮದಿಂದ ಬ್ರಾಹ್ಮಣರನ್ನು ರಕ್ಷಿಸಿ ಪೋಷಿಸು.
ವೈಶಂಪಾಯನಃ
ಏವಮುಕ್ತಸ್ತು ಧೌಮ್ಯೇನ ತತ್ಕಾಲಸದೃಶಂ ವಚಃ |
ಧರ್ಮರಾಜೋ ವಿಶುದ್ಧಾತ್ಮಾ ತಪ ಆತಿಷ್ಠದುತ್ತಮಮ್ ॥12॥
ಹೀಗೆ ಧೌಮ್ಯರಿಂದ ಆ ಕಾಲಕ್ಕೆ ಉಚಿತವಾದ ಮಾತುಗಳನ್ನು ಆಡಲ್ಪಟ್ಟವನಾಗಿ ಶುದ್ಧವಾದ ಮನಸ್ಸುಳ್ಳ ಧರ್ಮರಾಜನು ಶ್ರೇಷ್ಠವಾದ ತಪಸ್ಸನ್ನು ಆಚರಿಸಿದನು.
ಪುಷ್ಪೋಪಹಾರೈರ್ಬಹುಭಿರಂಚಯಿತ್ವಾ ದಿವಾಕರಮ್ |
ಯೋಗಮಾಸ್ಥಾಯ ಧರ್ಮಾತ್ಮಾ ವಾಯುಭಕ್ಷೋ ಜಿತೇಂದ್ರಿಯಃ |
ಗಾಂಗೇಯಂ ವಾರ್ಯುಪಸ್ಪೃಶ್ಯ ಪ್ರಾಣಾಯಾಮೇನ ತಸ್ಥಿವಾನ್ ॥13॥
ಧರ್ಮಾತ್ಮನೂ ಜಿತೇಂದ್ರಿಯನೂ ಆದ ಧರ್ಮರಾಜನು ಗಂಗೆಯ ನೀರಿನಲ್ಲಿ ಸ್ನಾನವನ್ನುಮಾಡಿ ಅನೇಕವಿಧವಾದ ಪುಷ್ಪ ಮತ್ತು

ನೈವೇದ್ಯದಿಂದ ಸೂರ್ಯನನ್ನು ಅರ್ಚಿಸಿ ಕೇವಲ ವಾಯುಭಕ್ಷನಾಗಿ ಯೋಗದ ಮಾರ್ಗವನ್ನು ಹಿಡಿದು ಪ್ರಾಣಾಯಾಮಮಾಡಿ ಸೂರ್ಯನ ಧ್ಯಾನತತ್ಪರನಾದನು.
ತತೋ ದಿವಾಕರಃ ಪ್ರೀತೋ ದರ್ಶಯಾಮಾಸ ಪಾಂಡವಮ್ |
ದೀಪ್ಯಮಾನಃ ಸ್ವವಪುಷಾ ಜ್ವಲನ್ನಿವ ಹುತಾಶನಃ ॥14॥
ಆಗ ಪಾಂಡವನ ತಪಸ್ಸಿಗೆ ಮೆಚ್ಚಿದ ಸೂರ್ಯನು ಉರಿಯುತ್ತಿರುವ ಆಗ್ನಿಯಂತೆ ತನ್ನ ನಿಜ ದೇಹದಿಂದ ಪ್ರಕಾಶಿಸುವವನಾಗಿ ಧರ್ಮರಾಜನಿಗೆ ದರ್ಶನವನ್ನು ಕೊಟ್ಟನು.
ಯತ್ ತೇಽಭಿಲಷಿತಂ ರಾಜನ್ ಸರ್ವಮೇತದವಾಪ್ಸ್ಯಸಿ |
ಅಹಮನ್ನಂ ಪ್ರದಾಸ್ಯಾಮಿ ನವ ವರ್ಷಾಣಿ ತ್ರೀಣಿ ಚ ॥15॥
ರಾಜನೇ! ನಿನ್ನ ಮನಸ್ಸಿನಲ್ಲಿ ಇರುವ ಅಭಿಲಾಷೆಯೆಲ್ಲವೂ ಪೂರ್ಣಗೊಳ್ಳುವುದು. ಹನ್ನೆರಡುವರ್ಷಗಳ ಕಾಲ ನಾನು ಅನ್ನವನ್ನು ಕೊಡುವೆನು.
ಫಲಮೂಲಾಮಿಷಂ ಶಾಕಂ ಸಂಸ್ಕೃತಂ ಯನ್ಮಹಾನಸೇ |
ಗೃಹ್ಣೀಷ್ವ ಪಿಠರಂ ತಾಮ್ರಂ ಮಯಾ ದತ್ತಂ ನರಾಧಿಪ ॥16॥
ಪಾಕಶಾಲೆಯಲ್ಲಿ ಸಿದ್ಧಪಡಿಸಿದ ಫಲಮೂಲಾದಿಗಳಾಗಲೀ ಮಾಂಸಾದಿಗಳಾಗಲೀ ತರಕಾರಿಗಳಾಗಲೀ ಅಭಿವೃದ್ಧಿಯನ್ನು ಹೊಂದುತ್ತವೆ. ಎಲೈ ರಾಜನೇ ನಾನು ಕೊಡುವ ಈ ತಾಮ್ರದ ಪಾತ್ರೆಯನ್ನು ಸ್ವೀಕರಿಸು.
ಯಾವದ್ ವಾಂಛತಿ ಪಾಂಚಾಲೀ ಪಾತ್ರೇಣಾನೇನ ಸುವ್ರತಾ |
ಚತುರ್ವಿಧಂ ತದನ್ನಾದ್ಯಮಕ್ಷಯಂ ತೇ ಭವಿಷ್ಯತಿ |
ಧನಂ ಚ ವಿವಿಧಂ ತುಭ್ಯಮಿತ್ಯುಕತ್ವಂತರಧೀಯತ ॥17॥
ಒಳ್ಳೆಯ ವ್ರತಧಾರಿಣಿಯಾದ ದ್ರೌಪದಿಯು ಈ ಪಾತ್ರೆಯಿಂದ ಯಾವ ಚತುರ್ವಿಧವಾದ ಅನ್ನವನ್ನು ಬಯಸುತ್ತಾಳೆಯೋ ಅವೆಲ್ಲವೂ ಅಕ್ಷಯವಾಗುವುದು ಅಲ್ಲದೆ ಈ ಪಾತ್ರೆಯು ನಿನಗೆ ಅನೇಕ ವಿಧವಾದ ಧನವನ್ನು ಕೊಡುತ್ತದೆ ಎಂದು ಹೇಳಿ ದಿವಾಕರನು ಅದೃಶ್ಯನಾದನು.
ವೈಶಂಪಾಯನಃ
ಲಬ್ಧ್ವಾ ವರಂ ತು ಕೌಂತೇಯೋ ಜಲಾದುತ್ತೀರ್ಯ ಧರ್ಮವಿತ್ |
ಜಗ್ರಾಹ ಪಾದೌ ಧೌಮ್ಯಸ್ಯ ಭ್ರಾತೃಭಿಃ ಸ್ವಜನೈಃ ಸಹ ॥18॥
ಕೌಂತೇಯನಾದ ಧರ್ಮರಾಜನು ಹೀಗೆ ವರವನ್ನು ಪಡೆದು ನೀರಿನಿಂದ ಮೇಲೆ ಬಂದು ಧರ್ಮಜ್ಞನಾದ ಅವನು ತನ್ನ ತಮ್ಮಂದಿರ ಮತ್ತು ಸ್ವಜನರ ಜೊತೆಯಲ್ಲಿ ಧೌಮ್ಯರ ಪಾದಗಳಿಗೆ ನಮಸ್ಕರಿಸಿದನು.
ದ್ರೌಪದ್ಯಾ ಸಹ ಸಂಗಮ್ಯ ವಂದ್ಯಮಾನೋ ಹ್ಯಯಾತ್ ಪ್ರಭುಃ |
ಮಹಾನಸೇ ತದಾಽನ್ನಂ ತು ಸಾಧಯಾಮಾಸ ಪಾಂಡವಃ ॥19॥
ದ್ರೌಪದಿಯಿಂದ ನಮಸ್ಕರಿಸಲ್ಪಟ್ಟವನಾಗಿ ಪ್ರಭುವಾದ ಅವನು ದ್ರೌಪದಿಯ ಜೊತೆಯಲ್ಲಿ ಮಹಾನಸಕ್ಕೆ (ಬಾಣಸಾಗಾರ-ಅಡುಗೆಯಮನೆ)ಹೋಗಿ ಸಾಧ್ಯವಾದ ಅನ್ನವನ್ನು ಸಿದ್ಧಪಡಿಸಿದನು.
ಸಂಸ್ಕೃತಂ ಪ್ರಸವಂ ಯಾತಿ ವನ್ಯಮನ್ನಂ ಚತುರ್ವಿಧಮ್ |
ಅಕ್ಷಯಂ ವರ್ಧತೇ ಚಾನ್ನಂ ತೇನಾಭೋಜಯತ ದ್ವಿಜಾನ್ ॥20॥
ಸಿದ್ಧಪಡಿಸಿದ ವನಜನ್ಯವಾದ ಆ ಚತುರ್ವಿಧವಾದ ಅನ್ನವು ಆ ಪಾತ್ರೆಯಲ್ಲಿ ಅಭಿವೃದ್ಧಿಯನ್ನು ಹೊಂದಿ ಅಕ್ಷಯವಾಗುತ್ತದೆ. ಧರ್ಮರಾಜನು ಬ್ರಾಹ್ಮಣರಿಗೆ ಆ ಅನ್ನದಿಂದ ಭೋಜನವನ್ನು ಮಾಡಿಸಿದನು.
ಭುಕ್ತವತ್ಸ್ವಥ ವಿಪ್ರೇಷು ಭೋಜಯಿತ್ವಾಽನುಜಾನಪಿ |
ಶೇಷಂ ವಿಘಸಸಂಜ್ಞಂ ತು ಪಶ್ಚಾದ್ಭುಂಕ್ತೇ ಯುಧಿಷ್ಠಿರಃ |
ಯುಧಿಷ್ಠಿರಂ ಭೋಜಯಿತ್ವಾ ಶೇಷಮಶ್ನಾತಿ ಪಾರ್ಷತೀ ॥21॥
ಎಲ್ಲ ಬ್ರಾಹ್ಮಣರೂ ಭೋಜನವನ್ನು ಮಾಡಿದ ಮೇಲೆ ತನ್ನ ತಮ್ಮಂದರಿಗೂ ಭೋಜನವನ್ನು ಮಾಡಿಸಿ ಉಳಿದ ವಿಘಸವೆಂದು ಕರೆಯಲ್ಪಡುವ ಶೇಷಾನ್ನವನ್ನು ಯುಧಿಷ್ಠಿರನು ಅನಂತರ ಭುಂಜಿಸುತ್ತಿದ್ದನು. ಯುಧಿಷ್ಠಿರನ ಭೋಜನವಾದ ಮೇಲೆ ಶೇಷವನ್ನು ದ್ರೌಪದಿಯು ಭೋಜನಮಾಡುತ್ತಾಳೆ.
ಏವಂ ದಿವಾಕರಾತ್ ಪ್ರಾಪ್ಯ ದಿವಾಕರಸಮದ್ಯುತಿಃ |
ಕಾಮಾನ್ ಮನೋಭಿಲಷಿತಾನ್ ಬ್ರಾಹ್ಮಣೇಭ್ಯೋಽದದಾತ್ ಪ್ರಭುಃ ॥
ಹೀಗೆ ಸೂರ್ಯನ ಸಮಾನವಾದ ಕಾಂತಿಯುಳ್ಳ ಧರ್ಮರಾಜನು ಸೂರ್ಯನಿಂದ ತನ್ನ ಮನೋಭೀಷ್ಟವಾದ ವರಗಳನ್ನು ಪಡೆದು ಬ್ರಾಹ್ಮಣರಿಗೆ ಅನ್ನಾದಿಗಳನ್ನು ನೀಡಿದನು.
ಪುರೋಹಿತಪುರೋಗಾಶ್ಚ ತಿಥಿನಕ್ಷತ್ರಪರ್ವಸು |
ಇಜ್ಯಾರ್ಥೇಷು ಪ್ರವರ್ತಂತೇ ವಿಧಿಮಂತ್ರಪ್ರಮಾಣತಃ ॥23॥
ಯೋಗ್ಯ ತಿಥಿ ನಕ್ಷತ್ರ ಮತ್ತು ಪರ್ವಕಾಲಗಳಲ್ಲಿ ಪುರೋಹಿತರಾದ ಧೌಮ್ಯರೇ ಮೊದಲಾದವರು ವಿಧಿಮಂತ್ರಪ್ರಮಾಣಪೂರ್ವಕವಾಗಿ ಮಾಡಬೇಕಾದ ಹೋಮಗಳಲ್ಲಿ ತೊಡಗುತ್ತಾರೆ.
ತತಃ ಕೃತಸ್ವಸ್ತ್ಯಯನಾ ಧೌಮ್ಯೇನ ಸಹ ಪಾಂಡವಾಃ |
ದ್ವಿಜಸ್ಸಂಘೈಃ ಪರಿಧೃತಾಃ ಪ್ರಯಯುಃ ಕಾಮ್ಯಕಂ ವನಮ್ ॥24॥
ಅನಂತರ ಸ್ವಸ್ತಿವಾಚನವನ್ನು ಮಾಡಿಸಿಕೊಂಡ ಪಾಂಡವರು ಧೌಮ್ಯರಜೊತೆಯಲ್ಲಿ ಬ್ರಾಹ್ಮಣರ ಸಮೂಹಗಳಿಂದ

ರಕ್ಷಿಸಲ್ಪಟ್ಟವರಾಗಿ ಕಾಮ್ಯಕವನಕ್ಕೆ ತೆರಳಿದರು.
ಜನಮೇಜಯಃ
ಕಥಂ ಕುರೂಣಾಮೃಷಭಃ ಸ ವೈ ರಾಜಾ ಯುಧಿಷ್ಠಿರಃ |
ವಿಪ್ರಾರ್ಥಮಾರಾಧಿತವಾನ್ ಸೂರ್ಯಮದ್ಭುತವಿಕ್ರಮಃ ॥25॥
ಕುರುಶ್ರೇಷ್ಠನೂ ಮತ್ತು ಅದ್ಭುತಪರಾಕ್ರಮವುಳ್ಳವನೂ ಆದ ಯುಧಿಷ್ಠಿರರಾಜನು ಬ್ರಾಹ್ಮಣರ ಸಲುವಾಗಿ ಸೂರ್ಯನನ್ನು ಹೇಗೆ ಆರಾಧಿಸಿದನು?
ವೈಶಂಪಾಯನಃ
ಶೃಣುಷ್ವಾವಹಿತೋ ರಾಜನ್ ಶುಚಿರ್ಭೂತ್ವಾ ಸಮಾಹಿತಃ |
ಕ್ಷಣಂ ಚ ಕುರು ರಾಜೇಂದ್ರ ಸಂಪ್ರವಕ್ಷ್ಯಾಮ್ಯಶೇಷತಃ ॥26॥
ಎಲ್ಲೈರಾಜನೇ! ಶುಚಿಯಾಗಿ ಸಮಾಧಾನದಿಂದ ಏಕಚಿತ್ತದಿಂದ ಕೇಳು. ರಾಜೇಂದ್ರನೇ! ಕೇಳಲು ಅವಕಾಶವನ್ನು ಮಾಡಿಕೋ. ನಾನು ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು.
ಧೌಮ್ಯೇನ ತು ಯಥಾ ಪೂರ್ವಂ ಪಾರ್ಥಾಯ ಸುಮಹಾತ್ಮನೇ |
ನಾಮಾಷ್ಟಶತಮಾಖ್ಯಾತಂ ತಚ್ಛೃಣುಷ್ವ ಮಹಾದ್ಯುತೇ ॥27॥
ಎಲ್ಲೈ ಮಹಾದ್ಯುತಿಯೇ! ಹಿಂದೆ ಧೌಮ್ಯರು ಶ್ರೇಷ್ಠಮಹಾತ್ಮನಾದ ಧರ್ಮರಾಜನಿಗೆ ಯಾವ ಸೂರ್ಯನ ಅಷ್ಟೋತ್ತರ ಶತನಾಮವನ್ನು ಹೇಳಿದರೋ ಅದನ್ನು ಕೇಳು.
ಸೂರ್ಯೋಽರ್ಯಮಾ ಭಗಸ್ತ್ವಷ್ಟಾ ಪೂಷಾಽರ್ಕಃ ಸವಿತಾ ರವಿಃ |
ಗಭಸ್ತಿಮಾನಜಃ ಕಾಲೋ ಮೃತ್ಯುರ್ಧಾತಾ ಪ್ರಭಾಕರಃ ॥28॥
ಸೂರ್ಯ ಅರ್ಯಮಾ ಭಗ ತ್ವಷ್ಟಾ ಪೂಷಾ ಅರ್ಕ ಸವಿತಾ ರವಿ ಗಭಸ್ತಿಮಾನ್ ಅಜ ಕಾಲ ಮೃತ್ಯು ಧಾತೃ ಪ್ರಭಾಕರ.
ಪೃಥಿವ್ಯಾಪಶ್ಚ ತೇಜಶ್ಚ ಖಂ ವಾಯುಶ್ಚ ಪರಾಯಣಮ್ |
ಸೋಮೋ ಬೃಹಸ್ಪತಿಃ ಶುಕ್ರೋ ಬುಧೋಽಂಗಾರಕ ಏವ ಚ ॥29॥
ಪೃಥಿವಿ ಆಪ ತೇಜಸ್ ಖ ವಾಯು ಪರಾಯಣ ಸೋಮ ಬೃಹಸ್ಪತಿ ಶುಕ್ರ ಬುಧ ಮತ್ತು ಅಂಗಾರಕ.
ಇಂದ್ರೋ ವಿವಸ್ವಾನ್ ದೀಪ್ತಾಂಶುಃ ಶುಚಿಃ ಶೌರಿಃ ಶನೈಶ್ಚರಃ |
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ್ಕಂದೋ ವೈಶ್ರವಣೋ ಯಮಃ ॥30॥
ಇಂದ್ರ ವಿವಸ್ವಾನ್ ದೀಪ್ತಾಂಶು ಶುಚಿ ಶೌರಿ ಶನೈಶ್ಚರ ಬ್ರಹ್ಮ ವಿಷ್ಣು ರುದ್ರ ಸ್ಕಂದ ವೈಶ್ರವಣ ಮತ್ತು ಯಮ.
ವೈದ್ಯುತೋ ಜಾಠರಶ್ಚಾಗ್ನಿರೈಂಧನಸ್ತೇಜಸಾಂ ಪತಿಃ |
ಧರ್ಮಧ್ವಜೋ ವೇದಕರ್ತಾ ವೇದಾಂಗೋ ವೇದವಾಹನಃ ॥31॥
ವೈದ್ಯುತ ಜಾಠರ ಅಗ್ನಿ ಐಂಧನ ತೇಜಸಾಂಪತಿ ಧರ್ಮಧ್ವಜ ವೇದಕರ್ತಾ ವೇದಾಂಗ ವೇದವಾಹನ.
ಕೃತಂ ತ್ರೇತಾ ದ್ವಾಪರಶ್ಚ ಕಲಿಃ ಸರ್ವಾಮರಾಶ್ರಯಃ |
ಕಲಾಃ ಕಾಷ್ಠಾ ಮುಹೂರ್ತಾಶ್ಚ ಪಕ್ಷಾ ಮಾಸಾ ಋತುಸ್ತಥಾ ॥32॥
ಕೃತ ತ್ರೇತಾ ದ್ವಾಪರ ಕಲಿ ಸರ್ವಾಮರಾಶ್ರಯ ಕಲಾ ಕಾಷ್ಠಾ ಮೂಹೂರ್ತ ಪಕ್ಷ ಮಾಸ ಹಾಗೆಯೇ ಋತು.
ಸಂವತ್ಸರಕರೋಽಶ್ವತ್ಥಃ ಕಾಲಚಕ್ರೋ ವಿಭಾವಸುಃ |
ಪುರುಷಃ ಶಾಶ್ವತೋ ಯೋಗೀ ವ್ಯಕ್ತಾವ್ಯಕ್ತಃ ಸನಾತನಃ ॥33॥
ಸಂವತ್ಸರಕರ ಅಶ್ವತ್ಥ ಕಾಲಚಕ್ರ ವಿಭಾವಸು ಪುರುಷ ಶಾಶ್ವತ ಯೋಗೀ ವ್ಯಕ್ತಾವ್ಯಕ್ತ ಸನಾತನ.
ಲೋಕಾಧ್ಯಕ್ಷಃ ಪ್ರಜಾಧ್ಯಕ್ಷೋ ವಿಶ್ವಕರ್ಮಾ ತಮೋನುದಃ |
ವರುಣಃ ಸಾಗರೋಂಽಶುಶ್ಚ ಜೀಮೂತೋ ಜೀವನೋಽರಿಹಾ ॥34॥
ಲೋಕಾಧ್ಯಕ್ಷ ಪ್ರಜಾಧ್ಯಕ್ಷ ವಿಶ್ವಕರ್ಮ ತಮೋನುದ ವರುಣ ಸಾಗರ ಅಂಶು ಜೀಮೂತ ಜೀವನ ಅರಿಹಾ.
ಭೂತಾಶ್ರಯೋ ಭೂತಪತಿಃ ಸರ್ವಭೂತನಿಷೇವಿತಃ |
ಮನುಃ ಸುವರ್ಣೋ ಭೂತಾದಿಃ ಕಾಮದಃ ಸರ್ವತೋಮುಖಃ ॥35॥
ಭೂತಾಶ್ರಯ ಭೂತಪತಿ ಸರ್ವಭೂತನಿಷೇವಿತ ಮನು ಸುವರ್ಣ ಭೂತಾದಿ ಕಾಮದ ಸರ್ವತೋಮುಖ
ಜಯೋ ವಿಶಾಲೋ ವರದಃ ಶೀಘ್ರಗಃ ಪ್ರಾಣಧಾರಣಃ |
ಧನ್ವಂತರಿರ್ಧೂಮಕೇತುರಾದಿದೇವೋಽದಿತೇಃ ಸುತಃ ॥36॥
ಜಯ ವಿಶಾಲ ವರದ ಶೀಘ್ರಗ ಪ್ರಾಣಧಾರಣ ಧನ್ವಂತರಿ ಧೂಮಕೇತು ಆದಿದೇವ ಅದಿತಿಸುತ
ದ್ವಾದಶಾತ್ಮಾಽರವಿಂದಾಕ್ಷಃ ಪಿತಾ ಮಾತಾ ಪಿತಾಮಹಃ |
ಸ್ವರ್ಗದ್ವಾರಂ ಪ್ರಜಾದ್ವಾರಂ ಮೋಕ್ಷದ್ವಾರಂ ತ್ರಿವಿಷ್ಟಪಮ್ ॥37॥
ದ್ವಾದಶಾತ್ಮಾ ಅರವಿಂದಾಕ್ಷ ಪಿತಾ ಮಾತಾ ಪಿತಾಮಹ ಸ್ವರ್ಗದ್ವಾರ ಪ್ರಜಾದ್ವಾರ ಮೋಕ್ಷದ್ವಾರ ತ್ರಿವಿಷ್ಟಪ
ದೇವಕರ್ತಾ ಪ್ರಶಾಂತಾತ್ಮಾ ವಿಶ್ವಾತ್ಮಾ ವಿಶ್ವತೋಮುಖಃ |
ಚರಾಚರಾತ್ಮಾ ಸೂಕ್ಷ್ಮಾತ್ಮಾ ಮೈತ್ರೇಣ ವಪುಷಾಽನ್ವಿತಃ ॥38॥
ದೇವಕರ್ತಾ ಪ್ರಶಾಂತಾತ್ಮಾ ವಿಶ್ವಾತ್ಮಾ ವಿಶ್ವತೋಮುಖ ಚರಾಚರಾತ್ಮಾ ಸೂಕ್ಷ್ಮಾತ್ಮಾ ಮೈತ್ರವಪುಷಾನ್ವಿತ.
ಏತದ್ವೈ ಕೀರ್ತನೀಯಸ್ಯ ಸೂರ್ಯಸ್ಯಾಮಿತತೇಜಸಃ |
ನಾಮ್ನಾಮಷ್ಟಶತಂ ಪುಣ್ಯಂ ಶಕ್ರೇಣೋಕ್ತಂ ಮಹಾತ್ಮನಾ ॥39॥

ಇವು ಕೀರ್ತನೀಯನಾದ ಅಮಿತಪರಾಕ್ರಮಿಯಾದ  ಸೂರ್ಯನ ಪವಿತ್ರವಾದ ಅಷ್ಟೋತ್ತರಶತನಾಮಗಳು. ಇವುಗಳನ್ನು ಮಹಾತ್ಮನಾದ ಶಕ್ರನು ಹಿಂದೆ ಹೇಳಿದನು.
ಶಕ್ರಾಚ್ಚ ನಾರದಃ ಪ್ರಾಪ್ತೋ ಧೌಮ್ಯಸ್ತು ತದನಂತರಮ್ |
ಧೌಮ್ಯಾದ್ ಯುಧಿಷ್ಠಿರಃ ಪ್ರಾಪ್ಯ ಸರ್ವಾನ್ ಕಾಮಾನವಾಪ್ತವಾನ್ ॥
ಇಂದ್ರನಿಂದ ನಾರದರು ಅದನ್ನು ಪಡೆದರು. ಅನಂತರ ಧೌಮ್ಯರು ಅದನ್ನು ಪಡೆದರು. ಯುಧಿಷ್ಠಿರನು ಧೌಮ್ಯರಿಂದ ಅದನ್ನು ಪಡೆದು ತನ್ನ ಎಲ್ಲ ಕಾಮಗಳನ್ನೂ ಹೊಂದಿದರು.
ಸುರಪಿತೃಗಣಯಕ್ಷಸೇವಿತಂ ಅಸುರನಿಶಾಚರಸಿದ್ಧವಂದಿತಮ್ |
ವರಕನಕಹುತಾಶನಪ್ರಭಂ ತ್ವಮಪಿ ನಮಸ್ವ ಹಿತಾಯ ಭಾಸ್ಕರಮ್ ॥41॥
ಎಲೈ ಜನಮೇಜಯನೇ! ನೀನೂ ಸಹ ನಿನ್ನ ಶ್ರೇಯಸ್ಸಿಗಾಗಿ ದೇವತೆಗಳಿಂದಲೂ ಪಿತೃಗಣಗಳಿಂದಲೂ ಯಕ್ಷರಿಂದಲೂ ಸೇವಿತನಾದ, ಅಸುರರಿಂದಲೂ ರಾಕ್ಷಸರಿಂದಲು ಸಿದ್ಧರಿಂದಲೂ ವಂದ್ಯನಾದ, ಶ್ರೇಷ್ಠವಾದ ಸುವರ್ಣ ಮತ್ತು ಅಗ್ನಿಗಳ ಪ್ರಭೆಯುಳ್ಳ ಭಾಸ್ಕರನನ್ನು ನಮಸ್ಕರಿಸು.
ಸೂರ್ಯೋದಯೇ ಯಃ ಸುಸಮಾಹಿತಃ ಪಠೇತ್
ಸ ಪುತ್ರಲಾಭಂ ಧನರತ್ನಸಂಚಯಮ್ |
ಲಭೇತ ಜಾತಿಸ್ಮರತಾಂ ಸದಾ ನರೋ
ಧೃತಿಂ ಚ ಮೇಧಾಂ ಚ ಸ ವಿಂದತೇ ವರಾಮ್ ॥42॥
ಯಾವ ಪುರುಷನು ಸೂರ್ಯೋದಯದ ಸಮಯದಲ್ಲಿ ಸಮಚಿತ್ತನಾಗಿ ಈ ಸ್ತೋತ್ರವನ್ನು ಹೇಳುತ್ತಾನೆಯೋ (ಈ ಅಷ್ಟೋತ್ತರಶತನಾಮಗಳನ್ನು ಹೇಳುತ್ತಾನೆಯೋ) ಅವನು ಪುತ್ರಲಾಭವನ್ನೂ ಧನರತ್ನಗಳ ರಾಶಿಯನ್ನೂ ಪೂರ್ವಜನ್ಮ ಸ್ಮರಣೆಯನ್ನೂ ಧೈರ್ಯವನ್ನೂ ಮತ್ತು ಶ್ರೇಷ್ಠವಾದ ಮೇಧಾ ಶಕ್ತಿಯನ್ನೂ ಪಡೆಯುತ್ತಾನೆ.
ಇಮಂ ಸ್ತವಂ ದೇವವರಸ್ಯ ಯೋ ನರಃ
ಪ್ರಕೀರ್ತಯೇತ್ ಶುದ್ಧಮನಾಃ ಸಮಾಹಿತಃ
ಸ ಮುಚ್ಯತೇ ಶೋಕದವಾಗ್ನಿಸಾಗರಾ-
ಲ್ಲಭೇತ ಕಾಮಾನ್ ಮನಸಾ ಯಥೇಪ್ಸಿತಾನ್ ॥43॥
ದೇವಶ್ರೇಷ್ಠನಾದ ಇಂದ್ರನು ಹೇಳಿದ ಈ ಸ್ತೋತ್ರವನ್ನು ಯಾವ ಮನುಷ್ಯನು ಶುದ್ಧವಾದ ಮನಸ್ಸಿನಿಂದ ಸಮಚಿತ್ತನಾಗಿ ಪಠಿಸುತ್ತಾನೆಯೋ ಅವನು ಸಾಗರದಂತಹ ಶೋಕದಾವಾಗ್ನಿಗಳನ್ನು ದಾಟಿ ಮನಸ್ಸಿನಿಂದ ಇಚ್ಛಿಸಿದ ಎಲ್ಲಾ ಕಾಮಗಳನ್ನೂ ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತೃತೀಯೋಽಧ್ಯಾಯಃ ॥
॥ ಆರಣ್ಯಕಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯನಿರ್ಣಯ -22ನೇ ಅಧ್ಯಾಯ
ಪಾರ್ಥೇಷು ಯಾತೇಷು ಕಿಮತ್ರ ಕಾರ್ಯ-
ಮಿತಿ ಸ್ಮಪೃಷ್ಟೋ ವಿದುರೋಽಗ್ರಜೇನ |
ಆಹೂಯ ರಾಜ್ಯಂ ಪ್ರತಿಪಾದಯೇತಿ
ಪ್ರಾಹೈನಮಾಹಾಥ ರುಷಾಂಬಿಕೇಯಃ ॥10॥
ಪಾಂಡವರು ಕಾಡಿಗೆ ಹೋದ ಬಳಿಕ ಧೃತರಾಷ್ಟ್ರ ವಿದುರನ ಮುಂದೆ `ಈಗ ನಾವು ಮಾಡಬೇಕಾದುದೇನು?' ಎಂದು ಕೇಳಿದಾಗ `ಪಾಂಡವರನ್ನು ಕರೆಸಿಕೊಂಡು ಅವರ ರಾಜ್ಯವನ್ನು ಅವರಿಗೇ ಹಿಂತಿರುಗಿ ಕೊಡು` ಎಂದ, ವಿದುರ. ಧೃತರಾಷ್ಟ್ರ ಸಿಟ್ಟಿನಿಂದ ಅವನಿಗೆ ಹೇಳಿದ.
ಜ್ಞಾತಂ ಪ್ರತೀಪೋಽಸಿ ಮಮಾತ್ಮಜಾನಾಂ
ನಮೇ ತ್ವಯಾ ಕಾರ್ಯಮಿಹಾಸ್ತಿ ಕಿಂಚಿತ್ |
ಯಥೇಷ್ಟತಸ್ತಿಷ್ಠ ವಾ ಗಚ್ಛವೇತಿ
ಪ್ರೋಕ್ತೋ ಯಯೌ ವಿದುರಃ ಪಾಂಡುಪುತ್ರಾನ್ ॥11॥
`ನೀನು ನನ್ನ ಮಕ್ಕಳಿಗೆ ವಿರೋಧಿಯಾಗಿರುವಿ ಎಂದು ನನಗೆ ಈಗ ತಿಳಿಯಿತು. ಇನ್ನು ನಿನ್ನಿಂದ ನನಗೆ ಏನೂ ಕೆಲಸವಿಲ್ಲ. ನೀನು ನಿನ್ನಿಷ್ಟದಂತೆ ಇಲ್ಲಿ ಇರು ಇಲ್ಲವೆ ಹೋಗು' ಎಂದು ಧೃತರಾಷ್ಟ್ರ ಹೇಳಿದಾಗ ವಿದುರ ಪಾಂಡವರ ಬಳಿಗೆ ನಡೆದ.
ತಸ್ಮಿನ್ ಗತೇ ಭ್ರಾತೃವಿಯೋಗಕರ್ಶಿತಃ
ಪಪಾತ ಭೂಮೌ ಸಹಸೈವ ರಾಜಾ |
ಸಂಜ್ಞಾಮವಾಪ್ಯಾದಿಶದಾಶು ಸಂಜಯಂ
ಜೀವಾಮಿ ಚೇದಾಶು ಮಮಾನಯಾನುಜಂ ॥12॥
ವಿದುರ ಹೊರಟುಹೋದಾಗ ಧೃತರಾಷ್ಟ್ರ ತಮ್ಮನ ವಿಯೋಗದಿಂದ ದುಃಖಿತನಾಗಿ ನೆಲಕ್ಕೆ ಒರಗಿದ. ಬಳಿಕ ಎಚ್ಚರಗೊಂಡು ಸಂಜಯನಿಗೆ ಹೇಳಿದ `ನಾನು ಬದುಕಬೇಕೆಂದಿದ್ದರೆ ತಮ್ಮನನ್ನು ಬೇಗನೆ ಕರೆದು ತಾ'.
ಇತೀರಿತಃ ಸಂಜಯಃ ಪಾಂಡವೇಯಾನ್

ಪ್ರಾಪ್ಯಾನಯದ್ ವಿದುರಂ ಶೀಘ್ರಮೇವ |
ಸೋಽಪ್ಯಾಗತಃ ಕ್ಷಿಪ್ರಮಪಾಸ್ತದೋಷೋ
ಜ್ಯೇಷ್ಠಂ ವವಂದೇಽಥ ಸಚ್ಛ್ಯೇನಮಾಶ್ಲಿಷತ್ ॥13॥
ಧೃತರಾಷ್ಟ್ರ ಹೀಗೆ ಹೇಳಿದೊಡನೆ ಸಂಜಯ ಬೇಗನೆ ಪಾಂಡವರ ಬಳಿಗೆ ಹೋಗಿ ವಿದುರನನ್ನು ಕರೆದುತಂದ. ದೋಷರಹಿತನಾದ ವಿದುರ ಬೇಸರಿಸದೆ ಬೇಗನೆ ಹಿಂತಿರುಗಿ ಬಂದು ಧೃತರಾಷ್ಟ್ರನನ್ನು ನಮಿಸಿದ. ಧೃತರಾಷ್ಟ್ರ ಅವನನ್ನು ಬಿಗಿದಪ್ಪಿಕೊಂಡ.
* * * *
ನಾಲ್ಕನೆಯ ಅಧ್ಯಾಯ
(ವಿದುರನಿಂದ ಧೃತರಾಷ್ಟ್ರನಿಗೆ ಹಿತೋಪದೇಶ. ಧೃತರಾಷ್ಟ್ರನಿಂದ ಅದರ ತಿರಸ್ಕಾರ. ಪಾಂಡವರ ಬಳಿಗೆ ವಿದುರನ ಗಮನ.)
ವೈಶಂಪಾಯನಃ
ವನಂ ಪ್ರವಿಷ್ಟೇಷ್ವಥ ಪಾಂಡವೇಷು
ಪ್ರಜ್ಞಾಚಕ್ಷುಸ್ತಪ್ಯಮಾನೋಽಂಬಿಕೇಯಃ |
ಧರ್ಮಾತ್ಮಾನಂ ವಿದುರಮಗಾಧಬುದ್ಧಿಂ
ಸುಖಾಸೀನಂ ವಾಕ್ಯಮುವಾಚ ರಾಜಾ ॥1॥
ಪಾಂಡವರು ಕಾಡಿಗೆ ಹೋಗುತ್ತಿರಲು ಪ್ರಜ್ಞಾಚಕ್ಷುವಾದ ಅಂಬಿಕಾಪುತ್ರನಾದ ಧೃತರಾಷ್ಟ್ರರಾಜನು ತಾಪವನ್ನು ಪಡುತ್ತಾ, ಧರ್ಮಾತ್ಮನೂ ಅಗಾಧಬುದ್ಧಿಯೂ ಆದ ಸುಖಾಸೀನನಾದ ವಿದುರನನ್ನು ಕುರಿತು ಮಾತನಾಡಿದನು.
ಪ್ರಜ್ಞಾ ಹಿ ತೇ ಭಾಸ್ಕರಸ್ಯೇವ ವೃದ್ಧಾ
ಧರ್ಮಂ ಚ ತ್ವಂ ಪರಮಂ ವೇತ್ಥ ಸೂಕ್ಷ್ಮಮ್ |
ಸಮಶ್ಚ ತ್ವಂ ಸಮ್ಮತಃ ಕೌರವಾಣಾಂ
ಪಥ್ಯಂ ಚೈಷಾಂ ಮಮ ಚೈವ ಬ್ರವೀಹಿ ॥2॥
ನಿನ್ನ ಪ್ರಜ್ಞೆಯು ಸೂರ್ಯಪ್ರಕಾಶದಂತೆ ವಿಸ್ತಾರವಾಗಿದೆ. ನೀನು ಪರಮಸೂಕ್ಷ್ಮವಾದ ಧರ್ಮವನ್ನು ತಿಳಿದಿದ್ದೀಯೆ. ನೀನು ಕೌರವರಿಗೂ ಮತ್ತು ಪಾಂಡವರಿಗೂ ಸಮಾನನಾದವನು ಮತ್ತು ಸಮ್ಮತನಾದವನು ನನಗೂ ಮತ್ತು ಪಾಂಡವರಿಗೂ ಯಾವುದು ಹಿತವೋ ಅದನ್ನು ಹೇಳು.
ಏವಂ ಗತೇ ವಿದುರ ಯದದ್ಯ ಕಾರ್ಯಂ
ಪೌರಾಶ್ಚೇಮೇ ಕಥಮಸ್ಮಾನ್ ಭಜೇರನ್ |
ತೇ ಚಾಪ್ಯಸ್ಮಾನ್ ನೋದ್ಧರೇಯುಃ ಸಮೂಲಾನ್
ನ ಕಾಮಯೇ ತಾಂಶ್ಚ ವಿನಶ್ಯಮಾನಾನ್ ॥3॥
ವಿದುರನೇ! ಪರಿಸ್ಥಿತಿಯು ಹೀಗಿರುವಾಗ ನಾನು ಏನನ್ನು ಮಾಡಬೇಕು? ಏನನ್ನು ಮಾಡಿದರೆ ಈ ಪೌರರು ನಮ್ಮಲ್ಲಿ ಅನುರಾಗವುಳ್ಳವರಾಗುತ್ತಾರೆ ಮತ್ತು ನಮ್ಮನ್ನು ಮೂಲಸಹಿತವಾಗಿ ಕಿತ್ತು ಒಗೆಯುವುದಿಲ್ಲ? ಮತ್ತು ಆ ಪೌರರು (ಪಾಂಡವರು) ವಿನಾಶವನ್ನು ಹೊಂದುವುದನ್ನೂ ನಾನು ಬಯಸುವುದಿಲ್ಲ.
ವಿದುರಃ
ತ್ರಿವರ್ಗೋಽಯಂ ಧರ್ಮಮೂಲೋ ನರೇಂದ್ರ
ರಾಜ್ಯಂ ಚೇದಂ ಧರ್ಮಮೂಲಂ ವದಂತಿ |
ಧರ್ಮೇ ರಾಜನ್ ವರ್ತಮಾನಃ ಸ್ವಶಕ್ತ್ಯಾ
ಪುತ್ರಾನ್ ಸರ್ವಾನ್ ಪಾಹಿ ಕುಂತೀಸುತಾಂಶ್ಚ ॥4॥
ಎಲೈ ನರೇಂದ್ರನೇ! ಧರ್ಮ ಅರ್ಥ ಕಾಮಗಳ ಈ ಸಮುದಾಯವು ಧರ್ಮಮೂಲವಾದುದು. ಈ ರಾಜ್ಯವನ್ನು ಧರ್ಮಮೂಲವೆಂದೇ ಹೇಳುತ್ತಾರೆ. ಎಲೈರಾಜನೇ! ನಿನಗೆ ಶಕ್ತಿಯಿದ್ದಷ್ಟು ಧರ್ಮದಲ್ಲಿಯೇ ಇರುವವನಾಗಿ ನಿನ್ನ ಎಲ್ಲಾ ಮಕ್ಕಳನ್ನೂ ಮತ್ತು ಕುಂತೀ ಪುತ್ರರನ್ನೂ ರಕ್ಷಿಸು.
ಸ ವೈ ಧರ್ಮೋ ವಿಪ್ರಲುಪ್ತಃ ಸಭಾಯಾಂ
ಪಾಪಾತ್ಮಭಿಃ ಸೌಬಲೇಯಪ್ರಧಾನೈಃ |
ಆನಾಯ್ಯ ಕುಂತೀಸುತಮಕ್ಷವತ್ಯಾಂ
ಪರಾಜೈಷೀತ್ ಸತ್ಯಸಂಧಂ ಸುತಸ್ತೇ ॥5॥
ಆ ಧರ್ಮವು ಸಭೆಯಲ್ಲಿ ಪಾಪಾತ್ಮರಾದ ಶಕುನಿ ಮೊದಲಾದವರಿಂದ ನಾಶವನ್ನು ಹೊಂದಿತು. ನಿನ್ನ ಮಗನು ಸತ್ಯಸಂಧನಾದ ಕುಂತೀಸುತನಾದ ಧರ್ಮರಾಜನನ್ನು ಕರೆಸಿ ಅಕ್ಷಗೋಷ್ಠಿಯಲ್ಲಿ ಅವನನ್ನು ಪರಾಭವ ಗೊಳಿಸಿದನು.
ಏತಸ್ಯ ತೇ ದುಷ್ಪ್ರಣೀತಸ್ಯ ರಾಜನ್
ದ್ವೇಷಸ್ಯಾಹಂ ಪರಿಪಶ್ಯಾಮ್ಯುಪಾಯಮ್ |
ತಥಾ ಪುತ್ರಸ್ತವ ಕೌರವ್ಯ ಪಾಪಾ-
ನ್ಮುಕ್ತೋ ಲೋಕೇ ಪ್ರತಿತಿಷ್ಠೇತ ಸಾಧು ॥6॥
ಎಲೈ ರಾಜನೇ! ಇಂತಹ ನಿನ್ನ ದುರ್ನೀತಿಯಿಂದ ಉಂಟಾದ ದ್ವೇಷದ ಪರಿಹಾರಕ್ಕಾಗಿ ನಾನು ಇದನ್ನೇ ಉಪಾಯವೆಂದು ತಿಳಿಯುತ್ತೇನೆ. ಹಾಗೆ ಮಾಡಿದರೆ ಧೃತರಾಷ್ಟ್ರನೇ ನಿನ್ನ ಪುತ್ರನೂ ಸಹ ಪಾಪದಿಂದ ಮುಕ್ತನಾಗಿ ಲೋಕದಲ್ಲಿ ಸುಪ್ರತಿಷ್ಠೆಯನ್ನು ಪಡೆಯುವನು.

ತದ್ವೈ ಸರ್ವಂ ಪಾಂಡುಪುತ್ರಾ ಲಭಂತಾಂ
ಯತ್ತದ್ರಾಜನ್ ವಿನಿಸೃಷ್ಟಂ ತ್ವಯಾಽಽಸೀತ್ |
ಏಷ ಧರ್ಮಃ ಪರಮೋ ಯತ್ ಸ್ವಕೇನ
ರಾಜಾ ತುಷ್ಯೇನ್ನ ಪರಸ್ವೇಷು ಗೃದ್ಯೇತ್ ||7||
ಎಲ್ಲೈ ರಾಜನೇ! ನೀನು ಮೊದಲು ಪಾಂಡವರಿಗೆ ಏನನ್ನು ನೀಡಿದ್ದೆಯೋ ಅವೆಲ್ಲವನ್ನೂ ಪಾಂಡವರು ಪುನಃ ಪಡೆಯಲಿ. ರಾಜನು ತನ್ನ ಸಂಪತ್ತಿನಲ್ಲಿ ತೃಪ್ತಿಯನ್ನು ಹೊಂದಿ ಇನ್ನೊಬ್ಬರ ಸಂಪತ್ತನ್ನು ಆಶಿಸಬಾರದು ಎಂಬುದು ಪರಮಧರ್ಮ.
ಏತತ್ ಕಾರ್ಯಂ ತವ ಚೈವ ಪ್ರಧಾನಂ
ತೇಷಾಂ ತುಷ್ಟಿಃ ಶಕುನೇಶ್ಚಾವಮಾನಃ |
ಏತಚ್ಚ್ರೇಯಸ್ತವ ಪುತ್ರೇಷು ವೈ ಸ್ಯಾದ್
ಏತದ್ ರಾಜನ್ ತ್ವರಮಾಣಃ ಕುರುಷ್ವ ||8||
ಪಾಂಡವರ ಸಂತೋಷ ಮತ್ತು ಶಕುನಿಗೆ ಅವಮಾನ. ಇದು ನೀನು ಈಗ ಪ್ರಧಾನವಾಗಿ ಮಾಡಬೇಕಾಗಿರುವ ಕಾರ್ಯ. ನಿನ್ನ ಪುತ್ರರಿಗೂ ಇದು ಶ್ರೇಯಸ್ಸನ್ನು ಉಂಟುಮಾಡುತ್ತದೆ. ರಾಜನೇ! ಶೀಘ್ರವಾಗಿ ಈ ಕೆಲಸವನ್ನು ಮಾಡು.
ಅಥೈತದೇವಂ ನ ಕರೋಷಿ ರಾಜನ್
ಧ್ರುವಂ ಕುರೂಣಾಂ ಭವಿತಾ ವಿನಾಶಃ |
ನಹಿ ಕ್ರುದ್ಧೌ ಭೀಮಸೇನಾರ್ಜುನೌ ಚ
ಶೇಷಂ ಕುರ್ಯಾತಾಂ ಶಾತ್ರವಾಣಾಮನೀಕೇ ||9||
ರಾಜನೇ! ನೀನು ಒಂದು ಪಕ್ಷ ಹೀಗೆ ಮಾಡದಿದ್ದರೆ ಕುರುಗಳ ವಿನಾಶವು ನಿಶ್ಚಯವಾಗಿ ಉಂಟಾಗುತ್ತದೆ. ಕ್ರುದ್ಧರಾದ ಭೀಮಾರ್ಜುನರು ಶತ್ರು ಸೈನ್ಯದಲ್ಲಿ ಯಾರನ್ನೂ ಉಳಿಸುವುದಿಲ್ಲ.
ಯೇಷಾಂ ಯೋದ್ಧಾ ಸವ್ಯಸಾಚೀ ಕೃತಾಸ್ತ್ರೋ
ಧನುರ್ಯೇಷಾಂ ಗಾಂಡಿವಂ ಲೋಕಸಾರಮ್ |
ಯೇಷಾಂ ಭೀಮೋ ಬಾಹುಶಾಲೀ ಚ ಯೋದ್ಧಾ
ತೇಷಾಂ ಲೋಕೇ ಕಿಂ ನು ನಪ್ರಾಪ್ಯಮಸ್ತಿ ||10||
ಯಾರಿಗೆ ಸವ್ಯಸಾಚಿಯೂ ಮತ್ತು ಸರ್ವಾಸ್ತ್ರಗಳನ್ನೂ ಬಲ್ಲ ಅರ್ಜುನನು ಯೋಧನಾಗಿದ್ದಾನೆಯೋ ಲೋಕ ಶ್ರೇಷ್ಠವಾದ ಗಾಂಡೀವವು ಯಾರಿಗೆ ಧನುಸ್ಸಾಗಿದೆಯೋ ಯಾರಿಗೆ ಭುಜಬಲವುಳ್ಳ ಭೀಮಸೇನನು ಯೋಧನಾಗಿದ್ದಾನೆಯೋ ಅವರಿಗೆ ಲೋಕದಲ್ಲಿ ಯಾವುದು ಅಪ್ರಾಪ್ಯವಾಗುತ್ತದೆ?
ಉಕ್ತಂ ಪೂರ್ವಂ ಜಾತಮಾತ್ರೇ ಸುತೇ ತೇ
ಮಯಾ ಯತ್ ತೇ ಹಿತಮಾಸೀತ್ ತದಾನೀಮ್ |
ಪುತ್ರಂ ತ್ಯಜೈನಮಹಿತಂ ಕುಲಸ್ಯೇ-
ತ್ಯೇತದ್ರಾಜನ್ ನಾಕರೋಸ್ತ್ವಂ ಚಕರ್ಥ ||11||
ಇದಾನೀಂ ತೇ ಹಿತಮುಕ್ತಂ ಚ ರಾಜನ್
ಕರ್ತಾ ನ ಚೇತ್ ಪರಿತಪ್ತಾಽಸಿ ಪಶ್ಚಾತ್ ||11||
ನಾನು ನಿನ್ನ ಪುತ್ರನು ಹುಟ್ಟಿದಾಗಲೇ ಆಗ ನಿನಗೆ ಯಾವುದು ಹಿತವೆಂದು ಹೇಳಿದೆ. ರಾಜನೇ ಕುಲಕ್ಕೆ ಅಹಿತನಾದ ಈ ಪುತ್ರನನ್ನು ತ್ಯಜಿಸು ಎಂದು ಹೇಳಿದೆನು. ನೀನು ಹಾಗೆ ಮಾಡಲಿಲ್ಲ. ಆದರೆ ಈಗ ಪ್ರಶ್ನೆಯನ್ನು ಮಾಡುತ್ತಿದ್ದೀಯೆ. ರಾಜನೇ! ಈಗಲೂ ನಿನಗೆ ಹಿತವನ್ನು ಹೇಳಿದ್ದೇನೆ. ಇದನ್ನು ಮಾಡದಿದ್ದರೆ ನೀನು ಮುಂದೆ ಪರಿತಾಪವನ್ನು ಪಡಬೇಕಾಗುತ್ತದೆ.
ಯದ್ಯೇತದೇವಮನುಮಂತಾ ಸುತಸ್ತೇ
ಸಂಪ್ರೀಯಮಾಣಃ ಪಾಂಡವೈರೇಕರಾಜ್ಯಮ್ |
ತಾಪೋ ನ ತೇ ಭವಿತಾ ಪ್ರೀತಿಯೋಗಾತ್
ನಚೇನ್ನಿಗೃಹ್ಣೀಷ್ವ ಸುತಂ ಸುಖಾಯ ||12||
ಪಾಂಡವರ ಜೊತೆಯಲ್ಲಿ ಒಂದುರಾಜ್ಯವನ್ನು ಅನುಭವಿಸುವುದನ್ನು ನಿನ್ನ ಸುತನು ಒಪ್ಪುವುದಾದರೆ ಪರಸ್ಪರ ಪ್ರೀತಿ ಉಂಟಾಗುವುದರಿಂದ ನಿನಗೆ ತಾಪವುಂಟಾಗುವುದಿಲ್ಲ. ಒಪ್ಪದಿದ್ದರೆ ಈಗಲಾದರೂ ನಿನ್ನ ಪುತ್ರನನ್ನು ನಿಗ್ರಹಿಸು. ಸುಖವನ್ನು ಅನುಭವಿಸು.
ಅಪಜ್ವರೋ ಭವಸಿ ಹಿ ತಂ ಪ್ರಗೃಹ್ಯ
ಪಾಂಡೋಃ ಪುತ್ರಂ ಪ್ರಕುರುಷ್ವಾಧಿರಾಜ್ಯೇ
ಜ್ಯೇಷ್ಠಂ ಸುತಂ ಧರ್ಮರಾಜಂ ನರೇಂದ್ರ
ಧ್ರುವಂ ವಿನಾಶಃ ಸಹಪುತ್ರೇಣ ಧೀಮನ್ ||13||
ದುರ್ಯೋಧನನನ್ನು ನಿಗ್ರಹಿಸಿ ಪಾಂಡುಪುತ್ರನಾದ ಧರ್ಮರಾಜನನ್ನು ರಾಜ್ಯದಲ್ಲಿ ಸ್ಥಾಪಿಸಿದರೆ ನಿನ್ನ ಎಲ್ಲಾ ಮಾನಸಜ್ವರವೂ ದೂರವಾಗುತ್ತದೆ. ನರೇಂದ್ರನೇ! ಜೇಷ್ಠಪುತ್ರನಾದ ಧರ್ಮರಾಜನ್ನು ರಾಜ್ಯದಲ್ಲಿ ಸ್ಥಾಪಿಸು. ಇಲ್ಲದಿದ್ದರೆ ಎಲ್ಲೈ ಮೇಧಾವಿಯೆ! ನಿನ್ನ ಮಕ್ಕಳ ಜೊತೆಯಲ್ಲಿ ನಿನ್ನ ವಿನಾಶವು ನಿಶ್ಚಯವಾಗಿ ಉಂಟಾಗುತ್ತದೆ.
ಚತುರ್ದಶೇ ಚೈವ ವರ್ಷೇ ನರೇಂದ್ರ
ಕುಲಕ್ಷಯಂ ಪ್ರಾಪ್ಸ್ಯಸಿ ರಾಜಸಿಂಹ |

ತಸ್ಮಾತ್ ಕುರುಷ್ವಾಧಿಪತ್ಯೇ ನರೇಂದ್ರಂ
                    ಯುಧಿಷ್ಠಿರಂ ಧರ್ಮಭೃತಾಂ ಪ್ರಧಾನಮ್           ॥14॥
ಎಲೈ ನರೇಂದ್ರನೇ! ರಾಜಸಿಂಹನೇ! ಇಂದಿಗೆ ಹದಿನಾಲ್ಕನೆಯ ವರ್ಷದಲ್ಲಿ ನೀನು ಕುಲಕ್ಷಯವನ್ನು ಹೊಂದುತ್ತೀಯೆ. ಆದ್ದರಿಂದ ಧರ್ಮಿಷ್ಠರಲ್ಲಿ ಪ್ರಧಾನನಾದ  ಯುಧಿಷ್ಠಿರನನ್ನು ಇಂದೇ ರಾಜ್ಯಾಧಿಪತ್ಯದಲ್ಲಿ ಕುಳ್ಳಿರಿಸು.
ಅಜಾತಶತ್ರುರ್ಹಿ ವಿಮುಕ್ತರಾಗೋ
                    ಧರ್ಮೇಣೇಮಾಂ ಪೃಥಿವೀಂ ಶಾಸ್ತು ರಾಜಾ |
ರಾಜಾನಸ್ತೇ ವಶ್ಯಭೂತಾ ಭವಂತು
                    ವೈಶ್ಯಾ ಇವಾಸ್ಮಾನುಪತಿಷ್ಠಂತು ಸದ್ಯಃ               ॥15॥
ರಾಗಾದಿದೋಷರಹಿತನಾದ ಅಜಾತಶತ್ರುವು ರಾಜನಾಗಿ ಧರ್ಮದಿಂದ ಈ ಭೂಮಿಯನ್ನು ಆಳಲಿ. ಉಳಿದೆಲ್ಲ ರಾಜರು  ನಿನಗೆ ಅಧೀನರಾಗಿ ತಕ್ಷಣದಲ್ಲಿಯೇ ವೈಶ್ಯರಂತೆ ಕಪ್ಪಕಾಣಿಕೆಗಳನ್ನು ಕೊಡುವವರಾಗಲಿ.
ದುರ್ಯೋಧನಃ ಶಕುನಿಃ ಸೂತಪುತ್ರಃ
                    ಪ್ರೀತ್ಯಾ ರಾಜನ್ ಪಾಂಡುಪುತ್ರಂ ಭಜಂತಾಮ್ |
ದುಃಶಾಸನೋ ಯಾಚತು ಭೀಮಸೇನಂ
                    ಸಭಾಮಧ್ಯೇ ದ್ರುಪದಸ್ಯಾತ್ಮಜಾಂ ಚ   ॥16॥
ದುರ್ಯೋಧನ ಕರ್ಣ ಶಕುನಿ ಎಲ್ಲರೂ ಪಾಂಡುಪುತ್ರನಾದ ಧರ್ಮರಾಜನನ್ನು ಪ್ರೀತಿಯಿಂದ ಭಜಿಸಲಿ. ರಾಜನೇ, ದುಶ್ಶಾಸನನು ಸಭೆಯ ಮಧ್ಯದಲ್ಲಿ ಭೀಮಸೇನನನ್ನು ಮತ್ತು ದ್ರುಪದಕುಮಾರಿಯನ್ನು ಕ್ಷಮೆಯನ್ನು ಯಾಚಿಸಲಿ.
ಯುಧಿಷ್ಠಿರಂ ತ್ವಂ ಪರಿಸಾಂತ್ವಯಸ್ವ
                    ರಾಜ್ಯೇ ಚೈನಂ ಸ್ಥಾಪಯಿತ್ವಾಽಭಿಪೂಜ್ಯ |
ತ್ವಯಾ ಪೃಷ್ಟೋ ಹಿತಮೇತದ್ ವದೇಯಂ
                    ಏತತ್ ಕೃತ್ವಾ ಕೃತಕೃತ್ಯೋಽಸಿ ರಾಜನ್               ॥16॥
ನೀನು ರಾಜ್ಯದಲ್ಲಿ ಯುಧಿಷ್ಠಿರನನ್ನು ಸ್ಥಾಪಿಸಿ ಅವನನ್ನು ಸಮಾಧಾನಪಡಿಸು. ಎಲೈ ರಾಜನೇ ನೀನು ಕೇಳಿದುದಕ್ಕಾಗಿ ನಿನಗೆ ಹಿತವನ್ನು ಹೇಳುತ್ತಿದ್ದೇನೆ. ಇದನ್ನು ಮಾಡಿ ನೀನು ಕೃತಕೃತ್ಯನಾಗು.
ಧೃತರಾಷ್ಟ್ರಃ
ಏತದ್ವಾಕ್ಯಂ ವಿದುರೋಕ್ತಂ ಸಭಾಯಾಮ್
                    ಇಹ ಪ್ರೋಕ್ತಂ ಪಾಂಡವಾನ್ ಪ್ರಾಪ್ಯ ಮಾಂ ಚ |
ಹಿತಂ ತೇಷಾಮಹಿತಂ ಮಾಮಕಾನಾಮ್
                    ಏತತ್ ಸರ್ವಂ ಮಮ ನಾವೈತಿ ಚೇತಃ ॥17॥
ಎಲೈ ವಿದುರನೇ! ಪಾಂಡವರ ವಿಷಯದಲ್ಲಿ  ಈ ಮಾತುಗಳನ್ನು ಹಿಂದೆ ಸಭೆಯಲ್ಲಿ ಆಡಿದ್ದೀಯೆ. ಈಗ  ನನ್ನ ಬಳಿಗೂ ಬಂದು ಹೇಳುತ್ತಿದ್ದೀಯೆ. ಇದು ಪಾಂಡವರಿಗೆ ಹಿತವಾದದ್ದು. ಮತ್ತು ನನ್ನವರಿಗೆ ಅಹಿತವಾದದ್ದು.  ನೀನು ಹೇಳಿದ ಯಾವುದೂ ನನ್ನ ಮನಸ್ಸಿಗೆ ಬರುವುದಿಲ್ಲ. (ಒಪ್ಪುವುದಿಲ್ಲ.)
ಇದಂ ತ್ವಿದಾನೀಂ ಕೃತಮೇವ ನಿಶ್ಚಿತಂ
                    ತೇಷಾಮರ್ಥೇ ಪಾಂಡವಾನಾಂ ಯಥಾರ್ಥಮ್ |
ತೇನಾದ್ಯ ಮನ್ಯೇ ಹ್ಯಹಿತೋ ಮಮೇತಿ
                    ಕಥಂ ನು ಪುತ್ರಂ ಪಾಂಡವಾರ್ಥೇ ತ್ಯಜೇಯಮ್     ॥18॥
ನೀನು ಪಾಂಡವರ ಸಲುವಾಗಿ ಹೀಗೆಯೇ ಮಾಡಬೇಕೆಂದು ನಿಶ್ಚಯಿಸಿದ್ದೀಯೆ.  ಆ ಕಾರಣದಿಂದ ನೀನು ನನಗೆ ಅಹಿತನಾದವನು. (ಪಾಂಡವರಿಗೆ ಮಾತ್ರ ಹಿತನಾದವನು) ಪಾಂಡವರ ಸಲುವಾಗಿ ನನ್ನ ಮಗನನ್ನು ನಾನು ಹೇಗೆ ತೊರೆಯಲು ಸಾಧ್ಯ?
ಅಸಂಶಯಂ ತೇಽಪಿ ಮಮೈವ ಪುತ್ರಾ
                    ದುರ್ಯೋಧನೋ ಮಮ ದೇಹಾತ್ ಪ್ರಸೂತಃ |
ತ್ವಂ ವೈ ಪ್ರಾಹ ಪರಹೇತೋಸ್ತ್ಯಜೇತಿ
                    ಕೋ ನು ಬ್ರೂಯಾತ್ ಸಮತಾಮನ್ವವೇಕ್ಷನ್         ॥19॥
ನಿಸ್ಸಂಶಯವಾಗಿಯೂ  ಪಾಂಡವರು ನನ್ನ ಮಕ್ಕಳೇ ಸರಿ. ಆದರೆ ದುರ್ಯೋಧನನು ನನ್ನ ದೇಹದಿಂದ ಹುಟ್ಟಿದವನು. ನೀನು ಪರರ ಸಲುವಾಗಿ ಸ್ವಂತ ಮಗನನ್ನು ಬಿಡು ಎಂದು ಹೇಳುತ್ತಿದ್ದೀಯೆ. ಬುದ್ದಿ ಸಾಮ್ಯವಿದ್ದ ಯಾವ ವ್ಯಕ್ತಿಯು ಹೀಗೆ ಹೇಳಲು ಸಾಧ್ಯ?
ಸ ಮೇ ಸರ್ವಂ ವಿದುರ ಜಿಹ್ಮಂ ಬ್ರವೀಷಿ
                    ಮನ್ಯುಂ ತೇಽಹಮಧಿಕಂ ಧಾರಯಾಮಿ |
ಯಥೇಷ್ಟಕಂ ಗಚ್ಛ ವಾ ತಿಷ್ಠ ವಾ ತ್ವಂ
                    ಸುಸಾಂತ್ವ್ಯಮಾನಾಽಪ್ಯಸತೀ ಸ್ತ್ರೀ ಜಹಾತಿ             ॥20॥
ಎಲೈ ವಿದುರನೇ! ನೀನು ನನಗೆ ಎಲ್ಲಾ ಮೋಸದ ಮಾತುಗಳನ್ನೇ ಆಡುತ್ತಿದ್ದೀಯೆ. ನಿನ್ನ  ಮೇಲೆ ನನಗೆ ಅಧಿಕವಾದ ಕೋಪವುಂಟಾಗಿದೆ. ನಿನ್ನ ಇಚ್ಛೆಯಿದ್ದಂತೆ ಹೊರಟು ಹೋಗು ಅಥವಾ  ಇಲ್ಲಿಯೇ ಇರು. ಎಷ್ಟು ಸಮಾಧಾನಪಡಿಸಿದರೂ. ದುಷ್ಟಳಾದ ಸ್ತ್ರೀಯು ಪತಿಯನ್ನು ಬಿಟ್ಟು ಹೋಗುತ್ತಾಳೆ.
ವೈಶಂಪಾಯನಃ

ಏವಮುಕತ್ವ ಧೃತರಾಷ್ಟ್ರೋಽನ್ವಪದ್ಯದ್
ಅಂತರ್ವೇಶ್ಮ ಸಹಸೋತ್ಥಾಯ ರಾಜನ್ |
ನೇದಮಸ್ತೀತಿ ವಿದುರೋ ಭಾಷಮಾಣಃ
ಸಂಪ್ರಾದ್ರುವದ್ಯತ್ರ ಪಾರ್ಥಾ ಬಭೂವುಃ ॥21॥
ಎಲೈ ಜನಮೇಜಯರಾಜನೇ! ಹೀಗೆ ಹೇಳಿ ಧೃತರಾಷ್ಟ್ರನು ತಕ್ಷಣ ಒಳಗಿನ ಗೃಹಕ್ಕೆ ಎದ್ದು ಹೋದನು. ವಿದುರನಾದರೂ ಈ ಸಂಧಿಕಾರ್ಯವು ಎಂದಿಗೂ ಉಂಟಾಗುವುದಿಲ್ಲವೆಂದು ಹೇಳುತ್ತಾ ಪಾಂಡವರಿದ್ದ ಕಡೆಗೆ ಓಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರ್ಥೋಽಧ್ಯಾಯಃ ॥
॥ ಆರಣ್ಯಕಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಐದನೆಯ ಅಧ್ಯಾಯ
(ಕಾಮ್ಯಕವನದಲ್ಲಿ ವಿದುರನಿಂದ ಪಾಂಡವರಿಗೆ ಹಿತೋಪದೇಶ.)
ವೈಶಂಪಾಯನಃ
ಪಾಂಡವಾಸ್ತು ವನೇ ವಾಸಮುದ್ದಿಶ್ಯ ಭರತರ್ಷಭಾಃ |
ಪ್ರಯಯುರ್ಜಾಹ್ನವೀಕೂಲಾತ್ ಕುರುಕ್ಷೇತ್ರಂ ಸಹಾನುಗಾಃ ॥1॥
ಭರತಶ್ರೇಷ್ಠರಾದ ಆ ಪಾಂಡವರು ವನವಾಸವನ್ನು ಉದ್ದೇಶಿಸಿ ಜಾಹ್ನವೀತೀರದಿಂದ ತಮ್ಮ ಪರಿವಾರ ಸಹಿತರಾಗಿ ಕುರುಕ್ಷೇತ್ರಕ್ಕೆ ಹೊರಟರು.
ಸರಸ್ವತೀದೃಷದ್ವತ್ಯೌ ಯಮುನಾಂ ಚ ನಿಷೇವ್ಯ ತೇ |
ಯಯುರ್ವನೇನೈವ ವನಂ ಸತತಂ ಪಶ್ಚಿಮಾಂ ದಿಶಮ್ ॥2॥
ಅವರು ಸರಸ್ವತಿ ದೃಷದ್ವತಿ ಮತ್ತು ಯಮುನಾನದಿಗಳನ್ನು ದಾಟಿ ಕಾಡಿನಿಂದ ಕಾಡಿಗೆ ಹೋಗುತ್ತಾ ಸತತವಾಗಿ ಪಶ್ಚಿಮಾಭಿಮುಖವಾಗಿ ನಡೆದರು.
ತತಃ ಸರಸ್ವತೀತೀರೇ ಸಮೇಷು ಮರುಧನ್ವಸು |
ಕಾಮ್ಯಕಂ ನಾಮ ದದೃಶುರ್ವನಂ ಮುನಿಜನಪ್ರಿಯಮ್ ॥3॥
ಅನಂತರ ಮರುಭೂಮಿಯಲ್ಲಿ ಸರಸ್ವತೀ ನದಿಯ ಸಮತಟ್ಟಾದ ಒಂದುತೀರದಲ್ಲಿ ಮುನಿಜನಪ್ರಿಯವಾದ ಕಾಮ್ಯಕವನವೆಂಬ ವನವನ್ನು ನೋಡಿದರು.
ತತ್ರ ತೇ ನ್ಯವಸನ್ ವೀರಾ ವನೇ ಬಹುಮೃಗದ್ವಿಜೇ |
ಅನ್ವಾಸ್ಯಮಾನಾ ಮುನಿಭಿಃ ಸಾಂತ್ವ್ಯಮಾನಾಶ್ಚ ಭಾರತ ॥4॥
ಎಲೈ ಭಾರತನೇ! ಧೀರರಾದ ಅವರು ಅನೇಕ ಮೃಗಪಕ್ಷಿಗಳಿಂದ ಕೂಡಿದ ಆ ವನದಲ್ಲಿ ಋಷಿಗಳಿಂದ ಸುತ್ತುವರಿಯಲ್ಪಟ್ಟು ಮತ್ತು ಸಮಾಧಾನಮಾಡಲ್ಪಟ್ಟು ವಾಸಮಾಡಿದರು.
ವಿದುರಸ್ತ್ವಥ ಪಾಂಡೂನಾಂ ಸದಾ ದರ್ಶನಲಾಲಸಃ |
ಜಗಾಮೈಕರಥೇನೈವ ಕಾಮ್ಯಕಂ ವನಮೃದ್ಧಿಮತ್ ॥5॥
ಅನಂತರ ಪಾಂಡವರ ದರ್ಶನವನ್ನು ಮಾಡಲು ಯಾವಾಗಲೂ ಹಾತೊರೆಯುತ್ತಿದ್ದ ವಿದುರನು ಒಂದೇ ರಥವನ್ನು ತೆಗೆದುಕೊಂಡು ಸಂಪದ್ಭರಿತವಾದ ಕಾಮ್ಯಕವನಕ್ಕೆ ಬಂದನು.
ತತೋ ಯಾತ್ವಾ ವಿದುರಃ ಕಾನನಂ ತತ್
ಶೀಘ್ರೈರಶ್ವೈರ್ವಾಹಿತಃ ಸ್ಯಂದನೇನ |
ದದರ್ಶಾಸೀನಂ ಧರ್ಮಾತ್ಮಾನಂ ವಿವಿಕ್ತೇ
ಸಾರ್ಧಂ ದ್ರೌಪದ್ಯಾ ಭ್ರಾತೃಭಿರ್ಬ್ರಾಹ್ಮಣೈಶ್ಚ ॥5॥
ಅನಂತರ ಶೀಘ್ರವಾಗಿ ನಡೆಯುವ ಅಶ್ವಗಳನ್ನು ಹೂಡಿದ ರಥದಲ್ಲಿ ಕುಳಿತು ಕಾನನವನ್ನು ತಲುಪಿ ವಿದುರನು ಏಕಾಂತದಲ್ಲಿ ದ್ರೌಪದಿಯ ತಮ್ಮಂದಿರ ಮತ್ತು ಬ್ರಾಹ್ಮಣರ ಜೊತೆಯಲ್ಲಿ ಕುಳಿತಿದ್ದ ಧರ್ಮಾತ್ಮನಾದ ಧರ್ಮರಾಜನನ್ನು ನೋಡಿದನು.
ತತೋಽಪಶ್ಯದ್ ವಿದುರಂ ತೂರ್ಣಮೇಕಮ್
ಅಭ್ಯಾಗತಂ ಸತ್ಯಸಂಧಃ ಸ ರಾಜಾ |
ಅಥಾಬ್ರವೀದ್ ಭೀಮಸೇನಂ ಸಮೀಕ್ಷ್ಯ
ಕಿಂ ನು ಕ್ಷತ್ತಾ ವಕ್ಷ್ಯತಿ ನಃ ಸಮೇತ್ಯ ॥6॥
ಆಗ ಸತ್ಯಸಂಧನಾದ ಆ ಧರ್ಮರಾಜನು ಶೀಘ್ರವಾಗಿ ವಿದುರನು ಒಬ್ಬನೇ ಅಲ್ಲಿಗೆ ಬಂದುದನ್ನು ನೋಡಿ ಭೀಮಸೇನನನ್ನು ಕುರಿತು ವಿದುರನು ಇಲ್ಲಿಗೆ ಬಂದು ನಮಗೆ ಏನನ್ನು ಹೇಳುವನು ಎಂದು ನುಡಿದನು.
ಕಚ್ಚಿನ್ನಾಯಂ ವಚನಾತ್ ಸೌಬಲಸ್ಯ
ಸಮಾಹ್ವಾತುಂ ದೇವನಾಯೋಪಯಾತಿ |
ಕಚ್ಚಿತ್ ಕ್ಷುದ್ರಃ ಶಕುನಿಶ್ಚಾಯುಧಾನಿ
ಜೇಷ್ಯತ್ಯಸ್ಮಾಕಂ ಪುನರೇವಾಕ್ಷವತ್ಯಾಮ್ ॥7॥
ಶಕುನಿಯ ವಚನದಂತೆ ಇನ್ನೊಮ್ಮೆ ದ್ಯೂತಕ್ಕೆ ಆಹ್ವಾನಮಾಡಲು ಇಲ್ಲಿಗೆ ಬಂದಿಲ್ಲವಷ್ಟೇ? ಆ ಕ್ಷುದ್ರನಾದ ಶಕುನಿಯು ಪುನಃ

ಅಕ್ಷದ್ಯೂತದಲ್ಲಿ ನಮ್ಮನ್ನು ಕರೆದು ನಮ್ಮ ಆಯುಧಗಳನ್ನು ಗೆಲ್ಲುತ್ತಾನೆಯೇ.
ಸಮಾಹೂತಃ ಕೇನಚಿದಾಹವಾಯ
ನಾಹಂ ಶಕ್ತೋ ಭೀಮಸೇನಾಪಯಾತುಮ್ |
ಗಾಂಡೀವೇ ವಾ ಸಂಶಯಿತೇ ಕಥಂಚಿದ್
ರಾಜ್ಯಪ್ರಾಪ್ತಿಃ ಸಂಶಯಿತಾ ಭವೇನ್ನಃ ॥8॥
ಎಲೈ ಭೀಮಸೇನನೇ! ಯಾರಾದರೂ ನನ್ನನ್ನು ದ್ಯೂತಕ್ಕೆ ಯುದ್ಧಕ್ಕೆ ಕರೆದರೆ ನಾನು ಅದನ್ನು ನಿರಾಕರಿಸಲು ಶಕ್ತನಾಗುವುದಿಲ್ಲ. ದ್ಯೂತದಲ್ಲಿ ಪಣಕ್ಕಿಟ್ಟ ಗಾಂಡೀವ ಧನುಸ್ಸು ಸಹ ಶತ್ರುಗಳ ಮನೆಯಲ್ಲಿ ಮಲಗಿದರೆ ನಮ್ಮ ರಾಜ್ಯಪ್ರಾಪ್ತಿಯು ಸಂಶಯಗ್ರಸ್ತವಾಗುತ್ತದೆ.
ತತ ಉತ್ಥಾಯ ವಿದುರಂ ಪಾಂಡವೇಯಾಃ
ತಂ ಪ್ರತ್ಯಗೃಹ್ಣನ್ ನೃಪತೇ ಸರ್ವ ಏವ |
ತೈಃ ಸತ್ಕೃತಃ ಸ ಚ ತಾನಾಜಮೀಢೋ
ಯಥೋಚಿತಂ ಪಾಂಡುಪುತ್ರಾನ್ ಸಮೇಯಾತ್ ॥9॥
ಎಲೈ ರಾಜನೇ! ಅನಂತರ ಪಾಂಡವರೆಲ್ಲರೂ ಎದ್ದು ವಿದುರನನ್ನು ಸ್ವೀಕರಿಸಿದರು. ಅವರಿಂದ ಸತ್ಕರಿಸಲ್ಪಟ್ಟ ಆಜಮೀಢನಾದ ವಿದುರನು ಯಥಾಯೋಗ್ಯವಾಗಿ ಪಾಂಡವರ ಜೊತೆಯಲ್ಲಿ ಬೆರೆತನು.
ಸಮಾಶ್ವಸ್ತಂ ವಿದುರಂ ತೇ ನರರ್ಷಭಾಃ
ತತೋಽಪೃಚ್ಛನ್ನಾಗಮನಾಯ ಹೇತುಮ್ |
ಸ ಚಾಪಿ ತೇಭ್ಯೋ ವಿಸ್ತರತಃ ಶಶಂಸ
ಯಥಾವೃತ್ತೋ ಧೃತರಾಷ್ಟ್ರೋಽಂಬಿಕೇಯಃ ॥10॥
ಸುಧಾರಿಸಿಕೊಂಡ ವಿದುರನನ್ನು ಕುರಿತು ಆ ನರಶ್ರೇಷ್ಠರು ಅನಂತರ ಅಲ್ಲಿಗೆ ಬರುವುದಕ್ಕೆ ಕಾರಣವನ್ನು ಕೇಳಿದರು. ವಿದುರನಾದರೂ ಕೂಡ ಅವರಿಗೆ ಅಂಬಿಕೇಯನಾದ ಧೃತರಾಷ್ಟ್ರನ ನಡತೆಯನ್ನು ವಿಸ್ತಾರವಾಗಿ ಹೇಳಿದನು.
ಅವೋಚನ್ಮಾಂ ಧೃತರಾಷ್ಟ್ರೋಽಭಿತಪ್ತಮ್
ಅಜಾತಶತ್ರೋ ಪರಿಗೃಹ್ಯಾಭಿಪೂಜ್ಯ ಚ |
ಏವಂ ಗತೇ ಸಮತಾಮಭ್ಯುಪೇತ್ಯ
ಪಥ್ಯಂ ತೇಷಾಂ ಮಮ ಚ ಬ್ರೂಹಿ ಸೌಮ್ಯ ॥11॥
ಎಲೈ ಅಜಾತಶತ್ರುವೇ ಧೃತರಾಷ್ಟ್ರನು ಶೋಕಾಭಿತಪ್ತನಾದ ನನ್ನನ್ನು ಸ್ವೀಕರಿಸಿ ಸತ್ಕರಿಸಿ ನನ್ನನ್ನು ಕುರಿತು ಪರಿಸ್ಥಿತಿಯು ಹೀಗಿರುವಾಗ ಸಮಾನದೃಷ್ಟಿಯನ್ನು ಹೊಂದಿ ನನಗೂ ಮತ್ತು ಪಾಂಡವರಿಗೂ ಹಿತವಾದುದುನ್ನು ಹೇಳು ಎಂದು ಹೇಳಿದನು.
ಮಯಾ ಹ್ಯುಕ್ತಃ ಸ ಚ ಯತ್ ಕೌರವಾಣಾಂ
ಹಿತಂ ಪಥ್ಯಂ ಧೃತರಾಷ್ಟ್ರಸ್ಯ ಚೈವ |
ತದ್ವೈ ಪಥ್ಯಂ ತನ್ಮನೋ ನಾಭ್ಯುಪೈತಿ
ತತಶ್ಚಾಹಂ ಕ್ಷಮಮನ್ಯಂ ನ ಮನ್ಯೇ ॥12॥
ನಾನಾದರೋ ಧೃತರಾಷ್ಟ್ರನಿಗೂ ಮತ್ತು ಕೌರವರಿಗೂ ಹಿತವೂ ಮತ್ತು ಪಥ್ಯವೂ ಆದ ವಿಷಯವನ್ನೇ ಹೇಳಿದೆ. ಆದರೆ ಅವನ ಮನಸ್ಸು ಅದನ್ನು ಒಪ್ಪುತ್ತಿಲ್ಲ. ಅದನ್ನು ಬಿಟ್ಟು ಬೇರೆಮಾರ್ಗವು ನನಗೆ ತೋರುತ್ತಿಲ್ಲ.
ಪರಂ ಶ್ರೇಯಃ ಪಾಂಡವೇಯಾ ಮಯೋಕ್ತಂ
ನ ಮೈ ಮತ್ತಃ ಶ್ರುತವಾನಂಬಿಕೇಯಃ |
ಯಥಾಽಽತುರಸ್ಯೇವ ಹಿ ಪಥ್ಯಮೌಷಧಂ
ನ ರೋಚತೇ ಸ್ಮಾಸ್ಯ ತದುಚ್ಯಮಾನಮ್ ॥13॥
ಎಲೈ ಪಾಂಡವರೇ! ನಾನು ಶ್ರೇಷ್ಠವಾದ ಶ್ರೇಯೋಮಾರ್ಗವನ್ನು ಅವನಿಗೆ ಹೇಳಿದೆ. ಆದರೆ ಅಂಬಿಕೇಯನಾದ ಧೃತರಾಷ್ಟ್ರನು ನನ್ನ ಮಾತುಗಳನ್ನು ಕೇಳಲಿಲ್ಲ. ಮರಣಸನ್ನಿಹಿತವಾದ ರೋಗಿಗೆ ಹೇಗೆ ಪಥ್ಯವಾದ ಔಷಧವು ಹಿಡಿಸುವುದಿಲ್ಲವೋ ಅದರಂತೆ ನನ್ನ ಮಾತುಗಳು ಅವನಿಗೆ ಹಿಡಿಸಲಿಲ್ಲ.
ನ ಶ್ರೇಯಸೇ ನೀಯತೇಽಜಾತಶತ್ರೋ
ಸ್ತ್ರೀ ಶ್ರೋತ್ರಿಯಸ್ಯೇವ ಗೃಹೇ ಪ್ರದುಷ್ಟಾ |
ಬ್ರುವನ್ ನ ರುಚ್ಯೈ ಭರತರ್ಷಭಸ್ಯ
ಪತಿಃ ಕುಮಾರ್ಯಾ ಇವ ಷಷ್ಟಿವರ್ಷಃ ॥14॥
ಎಲೈ ಅಜಾತಶತ್ರುವೇ! ಶ್ರೋತ್ರಿಯನ ಮನೆಯನ್ನು ಸೇರಿದ ದುಷ್ಟಸ್ತ್ರೀಯಂತೆ ಅವನ ಮನಸ್ಸು ಶ್ರೇಯೋಮಾರ್ಗದಲ್ಲಿ ಹೋಗುವುದಿಲ್ಲ. ಅರವತ್ತು ವರ್ಷದ ಪತಿಯು ಹೇಗೆ ಕನ್ಯೆಗೆ ರುಚಿಸುವುದಿಲ್ಲವೋ ಅದರಂತೆ ನಾನು ಹೇಳುವ ಮಾತುಗಳು ಭರತಶ್ರೇಷ್ಠನಾದ ಧೃತರಾಷ್ಟ್ರನಿಗೆ ರುಚಿಸುವುದಿಲ್ಲ.
ಧ್ರುವಂ ವಿನಾಶೇ ನೃಪ ಕೌರವಾಣಾಂ
ನ ವೈ ಶ್ರೇಯೋ ಧೃತರಾಷ್ಟ್ರಃ ಪರೈತಿ |
ಯಥಾ ಪರ್ಣೇ ಪುಷ್ಕರಸ್ಯಾವಸಿಕ್ತಂ
ಜಲಂ ನ ತಿಷ್ಠೇತ್ ಪಥ್ಯಮುಕ್ತಂ ತಥಾಽಸ್ಮಿನ್ ॥15॥

ಎಲೈ ರಾಜನೇ! ಕೌರವರಿಗೆ ವಿನಾಶವು ನಿಶ್ಚಯವಾಗಿ ಸನ್ನಿಹಿತವಾಗಿರುವಾಗ ಧೃತರಾಷ್ಟ್ರನು ಶ್ರೇಯಸ್ಸನ್ನು ಕಾಣುತ್ತಿಲ್ಲ. ಕಮಲಪತ್ರದ ಮೇಲೆ ಹಾಕಿದ ನೀರು ಹೇಗೆ ನಿಲ್ಲುವುದಿಲ್ಲವೋ ಹಾಗೆ ನನ್ನ ಪಥ್ಯವಾದ ಮಾತುಗಳು ಅವನ ಮನಸ್ಸಿನಲ್ಲಿ ನಿಲ್ಲುತ್ತಿಲ್ಲ.

ತತಃ ಕ್ರುದ್ಧೋ ಧೃತರಾಷ್ಟ್ರೋಽಬ್ರವೀನ್ಮಾಂ
ಯತ್ರ ಶ್ರದ್ಧಾ ತಾತ ತತ್ರ ಪ್ರಯಾಹಿ |
ನಾಹಂ ಭೂಯಃ ಕಾಮಯೇ ತ್ವಾಂ ಸಹಾಯಂ
ಮಹೀಮಿಮಾಂ ಪಾಲಯಿತುಂ ಪುರಂ ವಾ ॥16॥

ಆಗ ಕ್ರುದ್ಧನಾದ ಧೃತರಾಷ್ಟ್ರನು ನನ್ನನ್ನು ಕುರಿತು ನಿನಗೆ ಎಲ್ಲಿ ವಿಶ್ವಾಸವಿದೆಯೋ ಅಲ್ಲಿಗೆ ಹೊರಟುಹೋಗು. ರಾಜ್ಯವನ್ನು ಆಳುವುದಕ್ಕೆ ಅಥವಾ ರಾಜಧಾನಿಯನ್ನು ಆಳುವುದಕ್ಕೆ ನನಗೆ ಇನ್ನು ನಿನ್ನ ಸಹಾಯದ ಅಗತ್ಯವಿಲ್ಲ ಎಂದು ಹೇಳಿದನು.

ಸೋಽಹಂ ತ್ಯಕ್ತೋ ಧೃತರಾಷ್ಟ್ರೇಣ ರಾಜನ್
ತ್ವಾಂ ಶಂಸಿತುಂ ಸಮುಪಾಯಾತಸ್ತ್ವರಾವಾನ್ |
ಯುಕ್ತಂ ಸರ್ವಂ ಯನ್ಮಯೋಕ್ತಂ ಸಭಾಯಾಂ
ತದ್ ಧಾರ್ಯತಾಂ ಯಚ್ಚ ವಕ್ಷ್ಯಾಮಿ ಭೂಯಃ ॥17॥

ಎಲೈ ರಾಜನೇ! ಧೃತರಾಷ್ಟ್ರನಿಂದ ಪರಿತ್ಯಕ್ತನಾಗಿ ನಾನು ನಿನಗೆ ಈ ವಿಷಯವನ್ನು ತಿಳಿಸಲು ಇಲ್ಲಿಗೆ ಶೀಘ್ರವಾಗಿ ಬಂದೆನು. ನಾನು ಸಭೆಯಲ್ಲಿ ಹೇಳಿದ ಯೋಗ್ಯವಾದ ಮಾತುಗಳೆಲ್ಲವನ್ನೂ ಮನಸ್ಸಿನಲ್ಲಿ ಇಡು. ಮತ್ತು ಈಗ ಹೇಳುವ ಮಾತುಗಳನ್ನೂ ಮನಸ್ಸಿನಲ್ಲಿ ಇಟ್ಟುಕೊ.

ಕ್ಲೇಶೈಸ್ತೀವ್ರೈರ್ಯುಜ್ಯಮಾನಃ ಸಪತ್ನೈಃ
ಕ್ಷಮಾಂ ಕುರ್ವನ್ ಕಾಲ ಉಪಾಗತೇ ಯಃ |
ಸಂವರ್ಧಯನ್ ಸ್ತೋಕಮಿವಾಗ್ನಿಮಾತ್ಮವಾನ್
ಸ ವೈ ಭುಂಕ್ತೇ ಪೃಥಿವೀಮೇಕ ಏವ ॥18॥

ಯಾವನು ಶತ್ರುಗಳಿಂದ ತೀವ್ರವಾದ ಕ್ಲೇಶಗಳಿಗೆ ತುತ್ತಾದರೂ ಸಹನೆಯನ್ನು ತಾಳಿ ಯೋಗ್ಯವಾದ ಕಾಲವು ಬಂದಾಗ ಅಲ್ಪವಾದ ಅಗ್ನಿಯು ವೃದ್ಧಿಯನ್ನು ಹೊಂದುವಂತೆ ಧೈರ್ಯದಿಂದ ಬೆಳೆಯುತ್ತಾನೆಯೋ ಅವನೊಬ್ಬನೇ ಪೃಥಿವಿಯನ್ನು ಭೋಗಿಸುತ್ತಾನೆ.

ಯಸ್ಯಾವಿಭಕ್ತಂ ವಸು ರಾಜನ್ ಸಹಾಯೈಃ
ತಸ್ಯ ದುಃಖಸ್ಯಾಂಶಭಾಜಃ ಸಹಾಯಾಃ |
ಸಹಾಯಾನಾಮೇಷ ಸಂಗ್ರಹಣೇಽಭ್ಯುಪಾಯಃ
ಸಹಾಯಾವಾಪ್ತೌ ಪೃಥಿವೀಪ್ರಾಪ್ತಿಮಾಹುಃ ॥19॥

ರಾಜನೇ ಯಾರ ಸಂಪತ್ತು ಸಹಾಯಭೂತರಾದ ಜನರಿಗೆ ಚೆನ್ನಾಗಿ ಹಂಚಲ್ಪಡುತ್ತದೆಯೋ ಸಹಾಯಭೂತರಾದ ಆ ಜನರು ಆ ರಾಜನ ದುಃಖದ ಒಂದು ಅಂಶವನ್ನು ಸ್ವೀಕರಿಸುತ್ತಾರೆ. ಸಹಾಯಕರನ್ನು ಸಂಗ್ರಹಿಸುವುದಕ್ಕೆ ಇದೇ ಒಳ್ಳೆಯ ಉಪಾಯ. ಒಳ್ಳೆಯ ಸಹಾಯವಿದ್ದರೆ ಮಾತ್ರ ಪೃಥ್ವಿಯ ಪ್ರಾಪ್ತಿಯಾಗುತ್ತದೆ ಎಂದು ಹೇಳುತ್ತಾರೆ.

ಸತ್ಯಂ ಶ್ರೇಷ್ಠಂ ಪಾಂಡವಾ ನಿಷ್ಪ್ರಲಾಪಾಃ
ತುಲ್ಯಂ ಚಾನ್ನಂ ಸಹ ಭೋಜ್ಯಂ ಸಹಾಯೈಃ |
ಆತ್ಮಾ ಚೈಷಾಮಗ್ರತೋ ನಾತಿವರ್ತೇದ್
ಏವಂವೃತ್ತಿರ್ವರ್ಧತೇ ಭೂಮಿಪಾಲ ॥20॥

ಪಾಂಡವರು ವ್ಯರ್ಥವಾದ ಮಾತುಗಳನ್ನು ಆಡುವುದಿಲ್ಲ ಎಂಬುದು ಸತ್ಯವಾದುದು ಮತ್ತು ಶ್ರೇಷ್ಠವಾದುದು. ಶ್ರೀಮದ್ ದ್ರವ್ಯವು ಸಹಾಯಭೂತರಾದವರ ಜೊತೆಯಲ್ಲಿಯೇ ಸಮಾನವಾಗಿ ಭೋಗಿಸಲ್ಪಡಬೇಕು. ಎಲೈ ರಾಜನೇ ! ಯಾವನು ಅಂತಹ ಭೋಗದ ವಿಷಯದಲ್ಲಿ ಸಹಾಯರಾದವರನ್ನು ಮೀರಿ ಮುಂದೆ ಹೋಗುವುದಿಲ್ಲವೋ ಅಂತಹ ರಾಜನೇ ಸಂವೃದ್ಧಿಯನ್ನು ಹೊಂದುತ್ತಾನೆ.

ಯುಧಿಷ್ಠಿರಃ
ತಥಾ ಕರಿಷ್ಯಾಮಿ ಯಥಾ ಬ್ರವೀಷಿ
ಪರಾಂ ಬುದ್ಧಿಮುಪಗಮ್ಯಾಪ್ರಮತ್ತಃ |
ಯಚ್ಚಾಪ್ಯನ್ಯದ್ ದೇಶಕಾಲೋಪಪನ್ನಂ
ತದ್ವೈ ವಾಚ್ಯಂ ತತ್ ಕರಿಷ್ಯಾಮಿ ಭೂಯಃ ॥21॥

ಎಲೈ ವಿದುರನೇ ! ನೀನು ಹೇಗೆ ಹೇಳುತ್ತಿಯೋ ಹಾಗೆಯೇ ಶ್ರೇಷ್ಠವಾದ ಬುದ್ಧಿಯನ್ನು ಹೊಂದಿ ಬಹಳ ಎಚ್ಚರಿಕೆಯಿಂದ ಅದನ್ನು ಮಾಡುತ್ತೇನೆ. ದೇಶಕಾಲೋಚಿತವಾಗಿ ನಾನು ಮಾಡಬೇಕಾದ ಅದನ್ನು ತಿಳಿಸಬೇಕು. ಅದನ್ನು ಪುನಃ ನೆರವೇರಿಸುತ್ತೇನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಮೋಽಧ್ಯಾಯಃ ॥
॥ ಆರಣ್ಯಕಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.

*****

ಆರನೆಯ ಅಧ್ಯಾಯ

(ಸಂಜಯವಚನದಂತೆ ವಿದುರನು ಹಸ್ತಿನಾವತಿಗೆ ಹಿಂದಿರುಗಿ ಧೃತರಾಷ್ಟ್ರನನ್ನು ಸಮಾಧಾನ ಪಡಿಸುವುದು.)

ವೈಶಂಪಾಯನಃ
ಗತೇ ತು ವಿದುರೇ ರಾಜನ್ನಾಶ್ರಮಂ ಪಾಂಡವಾನ್ ಪ್ರತಿ |

ಧೃತರಾಷ್ಟ್ರೋ ಮಹಾಪ್ರಾಜ್ಞಃ ಪರ್ಯತಪ್ಯತ ದುರ್ಮನಾಃ ॥1॥
ಎಲೈ ರಾಜನೇ! ಪಾಂಡವರನ್ನು ನೋಡಲು ವಿದುರನು ಕಾಮ್ಯಕವನದ ಆಶ್ರಮಕ್ಕೆ ಹೋಗುತ್ತಿರಲು ಮಹಾಪ್ರಾಜ್ಞನಾದ ಧೃತರಾಷ್ಟ್ರನು ವಿಷಣ್ಣವಾದ ಮನಸ್ಸಿನಿಂದ ಪರಿತಾಪವನ್ನು ಹೊಂದಿದನು.
ಸ ಸಭಾದ್ವಾರಮಾಗಮ್ಯ ವಿದುರಸ್ಮಾರಮೋಹಿತಃ |
ಸಮಕ್ಷಂ ಪಾರ್ಥಿವೇಂದ್ರಾಣಾಂ ವಿಸಂಜ್ಞಃ ಪ್ರಾಪತದ್ ಭುವಿ ॥2॥
ಅವನು ಸಭಾದ್ವಾರಕ್ಕೆ ಬಂದು ವಿದುರನ ಸ್ಮರಣೆಯಿಂದ ಮೋಹಕ್ಕೆ ಒಳಗಾಗಿ ಎಲ್ಲ ರಾಜರ ಕಣ್ಣೆದುರಿಗೆ ಜ್ಞಾನವನ್ನು ಕಳೆದುಕೊಂಡು ನೆಲದಲ್ಲಿ ಬಿದ್ದನು.
ಸ ತು ಲಬ್ಧ್ವಾ ಚಿರಾತ್ ಸಂಜ್ಞಾಂ ಸಮುತ್ಥಾಯ ಮಹೀತಳಾತ್ |
ಸಮೀಪೋಪಸ್ಥಿತಂ ರಾಜಾ ಸಂಜಯಂ ವಾಕ್ಯಮಬ್ರವೀತ್ ॥3॥
ಬಹಳ ಕಾಲದ ಮೇಲೆ ಅವರು ಸಂಜ್ಞೆಯನ್ನು ಮರಳಿಪಡೆದು ಭೂಮಿಯಿಂದ ಎದ್ದು ಸಮೀಪದಲ್ಲಿ ಇದ್ದ ಸಂಜಯನನ್ನು ಕುರಿತು ಹೀಗೆ ಮಾತನಾಡಿದನು.
ಭ್ರಾತಾ ಮಮ ಸುಹೃಚ್ಚೈವ ಸಾಕ್ಷಾದ್ಧರ್ಮ ಇವಾಪರಃ |
ತಸ್ಯ ಸ್ಮೃತ್ವಾಽದ್ಯ ಹೃದಯಂ ಸುಭೃಶಂ ದೀರ್ಯತೇ ಮಮ ॥4॥
ನನ್ನ ತಮ್ಮನೂ ಮತ್ತು ವಿಶ್ವಾಸಪಾತ್ರನೂ ಆದ ವಿದುರನು ಇನ್ನೊಬ್ಬ ಸಾಕ್ಷಾತ್ ಧರ್ಮದೇವತೆಯಂತೆ ಇದ್ದಾನೆ. ಅವನ ಸ್ಮರಣೆಯಿಂದ ಈ ದಿನ ನನ್ನ ಹೃದಯವು ಬಹಳ ಬಿರಿದು ಹೋಗುತ್ತಿದೆ.
ತಮಾನಯಸ್ವ ಧರ್ಮಜ್ಞಂ ಮಮ ಭ್ರಾತರಮಾಶು ವೈ |
ಇತಿ ಬ್ರುವನ್ ಸಂತಪತಿ ಕರುಣಂ ಪರ್ಯದೇವಯತ್ ॥5॥
ಅಂತಹ ಧರ್ಮಜ್ಞನಾದ ನನ್ನ ತಮ್ಮನನ್ನು ಬೇಗ ಕರೆದುಕೊಂಡು ಬಾ ಎಂದು ಹೇಳುತ್ತಾ ಕರುಣಾ ಜನಕವಾಗಿ ಗೋಳಾಡುತ್ತಾ ಸಂತಾಪಪಟ್ಟನು.
ಪಶ್ಚಾತ್ತಾಪಾಭಿಸಂತಪ್ತೋ ವಿದುರಸ್ಮಾರಕರ್ಶಿತಃ |
ಭ್ರಾತೃಸ್ನೇಹಾದಿದಂ ರಾಜಾ ಸಂಜಯಂ ವಾಕ್ಯಮಬ್ರವೀತ್ ॥6॥
ಪಶ್ಚಾತ್ತಾಪದಿಂದ ಬೆಂದುಹೋದ ಧೃತರಾಷ್ಟ್ರರಾಜನು ವಿದುರನ ಸ್ಮರಣೆಯಿಂದ ದುಃಖಿತನಾಗಿ ತಮ್ಮನ ಮೇಲಿನ ಸ್ನೇಹದಿಂದ ಸಂಜಯನನ್ನು ಕುರಿತು ಈ ಮಾತನ್ನು ಆಡಿದನು.
ಗಚ್ಚ ಸಂಜಯ ಜಾನೀಹಿ ಭ್ರಾತರಂ ವಿದುರಂ ಮಮ |
ಮಯಾ ಮೂಢೇನ ನಿಕೃತಃ ಕಚ್ಚಿಜ್ಜೀವತಿ ವಾ ನ ವಾ ॥7॥
ಎಲೈ ಸಂಜಯನೇ! ನೀನು ಹೋಗಿ ಮೂಢನಾದ ನನ್ನಿಂದ ಅಪಕೃತನಾದ ವಿದುರನು ಬದುಕಿದ್ದಾನೆಯೋ ಅಥವಾ ಇಲ್ಲವೋ ಎಂದು ತಿಳಿ.
ನಹಿ ತೇನ ಮಮ ಭ್ರಾತ್ರಾ ಸುಸೂಕ್ಷ್ಮಮಪಿ ಕಿಂಚನ |
ವ್ಯಲೀಕಂ ಕೃತಪೂರ್ವಂ ಮೇ ಪ್ರಾಜ್ಞೇನಾಮಿತಬುದ್ಧಿನಾ ॥8॥
ನನ್ನ ತಮ್ಮನೂ ಅಮಿತಬುದ್ಧಿಯೂ ಪ್ರಾಜ್ಞನೂ ಆದ ಅವನು ಹಿಂದೆಂದೂ ಸಹ ನನಗೆ ಅಲ್ಪವಾದ ಅಪ್ರಿಯವನ್ನೂ ಉಂಟುಮಾಡಿಲ್ಲ.
ಸ ವ್ಯಲೀಕಂ ಕಥಂ ಪ್ರಾಪ್ತೋ ಮತ್ತಃ ಪರಮಬುದ್ಧಿಮಾನ್ |
ನ ಜಹ್ಯಾಜ್ಜೀವಿತಂ ಪ್ರಾಜ್ಞಸ್ತಂ ಗಚ್ಛಾನಯ ಸಂಜಯ ॥9॥
ಪರಮಮೇಧಾವಿಯಾದ ಅವನು ನನ್ನಿಂದ ಅಪಕೃತನಾಗಿ ತನ್ನ ಜೀವಿತವನ್ನು ತೊರೆಯಬಾರದು. ಸಂಜಯನೇ ಹೋಗಿ ಪ್ರಾಜ್ಞನಾದ ಅವನನ್ನು ಕರೆದುಕೊಂಡು ಬಾ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ರಾಜ್ಞಸ್ತಮನುಮಾನ್ಯ ಚ |
ಸಂಜಯೋ ಬಾಢಮಿತ್ಯುಕ್ತ್ವಾ ಪ್ರಾದ್ರವತ್ ಕಾಮ್ಯಕಂ ವನಮ್॥10॥
ರಾಜನ ಆ ಮಾತುಗಳನ್ನು ಕೇಳಿ ರಾಜನ ಅನುಮತಿಯನ್ನು ಪಡೆದು ಹಾಗೆಯೇ ಮಾಡುತ್ತೇನೆ ಎಂದು ಹೇಳಿ ಸಂಜಯನು ಕಾಮ್ಯಕವನಕ್ಕೆ ಶೀಘ್ರವಾಗಿ ಹೊರಟು ಬಂದನು.
ಸೋಽಚಿರೇಣ ಸಮಾಸಾದ್ಯ ತದ್ವನಂ ಯತ್ರ ಪಾಂಡವಾಃ |
ರೌರವಾಜಿನಸಂವೀತಂ ದದರ್ಶಾಥ ಯುಧಿಷ್ಠಿರಮ್ ॥11॥
ಅವನು ಶೀಘ್ರವಾಗಿ ಪಾಂಡವರಿದ್ದವನಕ್ಕೆ ಬಂದು ರೌರವಾಜಿನವನ್ನು ಧರಿಸಿದ್ದ ಯುಧಿಷ್ಠಿರನನ್ನು ನೋಡಿದನು.
ವಿದುರೇಣ ಸಹಾಸೀನಂ ಬ್ರಾಹ್ಮಣೈಶ್ಚ ಸಹಸ್ರಶಃ |
ಭ್ರಾತೃಭಿಶ್ಚಾಭಿಸಂಗುಪ್ತಂ ದೇವೈರಿವ ಶತಕ್ರತುಮ್ ॥12॥
ವಿದುರನ ಜೊತೆಯಲ್ಲಿ ಸಹಸ್ರಾರು ಬ್ರಾಹ್ಮಣರಿಂದ ಪರಿವೃತನಾಗಿ ತನ್ನ ತಮ್ಮಂದಿರಿಂದ ರಕ್ಷಿಸಲ್ಪಟ್ಟ ದೇವತೆಗಳಿಂದ ಸುತ್ತುವರೆಯಲ್ಪಟ್ಟ ಇಂದ್ರನಂತಿರುವ ಧರ್ಮರಾಜನನ್ನು ನೋಡಿದನು.
ಯುಧಿಷ್ಠಿರಮಥಾಭ್ಯೇತ್ಯ ಪೂಜಯಾಮಾಸ ಸಂಜಯಃ |
ಭೀಮಾರ್ಜುನಯಮಾಂಶ್ಚಾಪಿ ತದರ್ಹಂ ಪ್ರತ್ಯಪದ್ಯತ ॥13॥
ಅನಂತರ ಸಂಜಯನು ಯುಧಿಷ್ಠಿರನನ್ನು ಸಮೀಪಿಸಿ ಅವನನ್ನು ಸತ್ಕರಿಸಿದನು. ಭೀಮಾರ್ಜುನನಕುಲ ಸಹದೇವರನ್ನು

ಯಥಾಯೋಗ್ಯವಾಗಿ ಸಮೀಪಿಸಿದನು.
ರಾಜ್ಞಾ ಪೃಷ್ಟಃ ಸ ಕುಶಲಂ ಸುಖಾಸೀನಶ್ಚ ಸಂಜಯಃ |
ಶಶಂಸಾಗಮನೇ ಹೇತುಮಿದಂ ಚೈವಾಬ್ರವೀದ್ ವಚಃ ||14||
ಸುಖವಾಗಿ ಕುಳಿತ ಸಂಜಯನು ರಾಜನಿಂದ ಕುಶಲಪ್ರಶ್ನೆಯನ್ನು ಮಾಡಲ್ಪಟ್ಟು ತಾನು ಅಲ್ಲಿಗೆ ಬರಲು ಪಾಂಡವರ ದರ್ಶನಲಾಭವೇ ಪರಮ ಪ್ರಯೋಜನ ಎಂದು ಹೇಳಿ ಈ ಮಾತನ್ನು ಆಡಿದನು.
ರಾಜಾ ಸ್ಮರತಿ ತೇ ಕ್ಷತ್ತಃ ಧೃತರಾಷ್ಟ್ರೋಽಂಬಿಕಾಸುತಃ |
ತಂ ಪಶ್ಯ ಗತ್ವಾ ತ್ವಂ ಕ್ಷಿಪ್ರಂ ಸಂಜೀವಯ ನರಾಧಿಪಮ್ ||15||
ಎಲೈ ವಿದುರನೇ! ಅಂಬಿಕಾಸುತನಾದ ಧೃತರಾಷ್ಟ್ರರಾಜನು ನಿನ್ನನ್ನು ಸ್ಮರಿಸುತ್ತಿದ್ದಾನೆ. ಬೇಗ ಹೋಗಿ ರಾಜನನ್ನು ನೋಡಿ ಅವನನ್ನು ಉಜ್ಜೀವನಗೊಳಿಸು.
ಸೋಽನುಮಾನ್ಯ ಕುರುಶ್ರೇಷ್ಠಾನ್ ಪಾಂಡವಾನ್ ಕುರುನಂದನಾನ್ |
ನಿಯೋಗಾದ್ ರಾಜಸಿಂಹಸ್ಯ ಗಂತುಮರ್ಹಸಿ ಮಾನದ ||16||
ಎಲೈ ಮಾನದನೇ! ಅಂತಹ ನೀನು ಕುರುನಂದನರಾದ ಮತ್ತು ಕುರುಶ್ರೇಷ್ಠರಾದ ಪಾಂಡವರ ಅನುಮತಿಯನ್ನು ಪಡೆದು ರಾಜಸಿಂಹನಾದ ಧೃತರಾಷ್ಟ್ರನ ಅಪ್ಪಣೆಯಂತೆ ಇಲ್ಲಿಂದ ಹೊರಡಬೇಕು.
ಏವಮುಕ್ತಸ್ತು ವಿದುರೋ ಧೀಮಾನ್ ಸ್ವಜನವತ್ಸಲಃ |
ಯುಧಿಷ್ಠಿರಸ್ಯಾನುಮತೇ ಪುನರಾಯಾದ್ ಗಜಾಹ್ವಯಮ್ ||17||
ಹೀಗೆ ಹೇಳಲ್ಪಟ್ಟ ಮೇಧಾವಿಯೂ ಸುಜನವತ್ಸಲನೂ ಆದ ವಿದುರನು ಯುಧಿಷ್ಠಿರನ ಅನುಮತಿಯನ್ನು ಪಡೆದು ಪುನಃ ಹಸ್ತಿನಾವತಿಗೆ ಬಂದನು.
ಸೋಽಭಿಗತ್ವಾ ತದಾ ವೇಶ್ಮ ರಾಜ್ಞಃಸಮಭಿವಾದ್ಯ ಚ |
ಉಪಾತಿಷ್ಠನ್ಮಹಾತ್ಮಾನಂ ರಾಜಾನಂ ಪ್ರತ್ಯವರ್ತತ |
ತಮಬ್ರವೀನ್ಮಹಾಪ್ರಾಜ್ಞೋ ಧೃತರಾಷ್ಟ್ರೋಽಂಬಿಕಾಸುತಃ ||18||
ಅವನು ರಾಜನ ಅರಮನೆಗೆ ಹೋಗಿ ಅವನಿಗೆ ನಮಸ್ಕರಿಸಿ ಮಹಾತ್ಮನಾದ ಆ ರಾಜನ ಸಮೀಪದಲ್ಲಿ ನಿಂತನು. ಮಹಾಪ್ರಾಜ್ಞನಾದ ಅಂಬಿಕಾಸುತನಾದ ಧೃತರಾಷ್ಟ್ರನು ಅವನನ್ನು ಕುರಿತು ಮಾತನಾಡಿದನು.
ದಿಷ್ಟ್ಯಾ ಪ್ರಾಪ್ತೋಽಸಿ ಧರ್ಮಜ್ಞ ದಿಷ್ಟ್ಯಾ ಸ್ಮರಸಿ ಮೇಽನಘ |
ಅದ್ಯ ರಾತ್ರೌ ದಿವಾ ಚಾಹಂ ತ್ವತ್ಕೃತೇ ಭರತರ್ಷಭ |
ಪ್ರಜಾಗರೇ ಪ್ರಪಶ್ಯಾಮಿ ವಿಚಿತ್ರಂ ದೇಹಮಾತ್ಮನಃ ||19||
ಎಲೈ ಧರ್ಮಜ್ಞನೇ! ದೇವರದಯೆಯಿಂದ ಇಲ್ಲಿಗೆ ಬಂದಿದ್ದೀಯೆ. ಎಲೈ ಪರಿಶುದ್ಧನೇ ನನ್ನನ್ನು ಸ್ಮರಿಸುತ್ತಿದ್ದೀಯೆ. ಎಲೈ ಭರತವಂಶದಲ್ಲಿ ಶ್ರೇಷ್ಠನೇ! ದಿನ ಹಗಲೂ ಮತ್ತು ರಾತ್ರಿಯೂ ನಿನ್ನನ್ನು ಚಿಂತಿಸುತ್ತಾ ನಿದ್ರೆಯನ್ನು ಮಾಡದೆ ನನ್ನ ದೇಹವು ವಿಚಿತ್ರವಾಗಿರುವುದುನ್ನು ನೋಡುತ್ತಿದ್ದೇನೆ.
ವೈಶಂಪಾಯನಃ
ಸೋಽಂಕಮಾರೋಪ್ಯ ವಿದುರಂ ಮೂರ್ಧ್ನ್ಯಾಘ್ರಾಯ ಚೈವ ಹ |
ಕ್ಷಮ್ಯತಾಮಿತಿ ಹೋವಾಚ ಯದುಕ್ತೋಽಸಿ ಮಯಾ ರುಷಾ ||20||
ಅವನು ವಿದುರನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವನ ಶಿರಸ್ಸನ್ನು ಆಘ್ರಾಣಿಸಿ ನಾನು ಕೋಪದಲ್ಲಿ ಆಡಿದ ಮಾತುಗಳಿಗೋಸ್ಕರ ನನ್ನನ್ನು ಕ್ಷಮಿಸು ಎಂದು ಹೇಳಿದನು.
ವಿದುರಃ
ಕ್ಷಾಂತಮೇವ ಮಯಾ ರಾಜನ್ ಗುರುರ್ನಃ ಪರಮೋ ಭವಾನ್|
ತಥಾಽಹಮಾಗತಃ ಕ್ಷಿಪ್ರಂ ತ್ವದ್ದರ್ಶನಪರಾಯಣಃ ||21||
ಎಲೈ ರಾಜನೇ! ನಾನು ಯಾವಾಗಲೋ ಕ್ಷಮಿಸಿದ್ದೇನೆ. ನೀನು ನಮ್ಮೆಲ್ಲರಿಗೂ ಶ್ರೇಷ್ಠವಾದ ಗುರುವಾದವನು. ನಾನೂ ಸಹ ನಿನ್ನನ್ನು ನೋಡುವ ತವಕದಿಂದಲೇ ಶೀಘ್ರವಾಗಿ ಬಂದಿದ್ದೇನೆ.
ಭವಂತಿ ಹಿ ಕುರುಶ್ರೇಷ್ಠ ಪುರುಷಾ ಧರ್ಮಚೇತನಾಃ |
ದೀನಾನುಪಾತಿನೋ ರಾಜನ್ ನಾತ್ರ ಕಾರ್ಯಾ ವಿಚಾರಣಾ ||22||
ಎಲೈ ಕುರುಶ್ರೇಷ್ಠನೇ! ರಾಜನೇ! ಧರ್ಮವನ್ನೇ ಜೀವನೋಪಾಯನ್ನಾಗಿ ಮಾಡಿಕೊಂಡ ಸಜ್ಜನರು ದೀನಾನುಕಂಪಿಗಳಾಗಿರುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ. ವಿಚಾರಮಾಡಬೇಕಾದ ಅಗತ್ಯವಿಲ್ಲ.
ಪಾಂಡವಾ ಯಾದೃಶಾ ಮೇ ವೈ ತಾದೃಶಾಸ್ತೇ ಮತಾ ಮಮ |
ಪಾಂಡೋಃ ಪುತ್ರಾ ಯಾದೃಶಾಸ್ತೇ ತಾದೃಶಾ ಮೇ ಸುತಾಸ್ತವ |
ದೀನಾ ಇತಿ ಹಿ ಮೇ ಬುದ್ಧಿರಭಿಪನ್ನಾದ್ಯ ತಾನ್ ಪ್ರತಿ ||23||
ನನಗೆ ಪಾಂಡವರು ಯಾವ ರೀತಿಯೋ ನಿನ್ನ ಮಕ್ಕಳೂ ಸಹ ಅದೇ ರೀತಿ. ಪಾಂಡುವಿನ ಮಕ್ಕಳು ಯಾವ ರೀತಿಯೋ ನಿನ್ನ ಮಕ್ಕಳೂ ಸಹ ಅದೇ ರೀತಿ. ಪಾಂಡವರು ಕಷ್ಟದಲ್ಲಿ ಇದ್ದಾರೆ ಎಂಬ ಕಾರಣದಿಂದ ನನ್ನ ಬುದ್ಧಿಯು ಅವರೆಡೆಗೆ ಹೋಯಿತು.
ವೈಶಂಪಾಯನಃ
ಅನ್ಯೋನ್ಯಮನುನೀಯೈವಂ ಭ್ರಾತರೌ ತೌ ಮಹಾದ್ಯುತೀ |
ವಿದುರೋ ಧೃತರಾಷ್ಟ್ರಶ್ಚ ಲೇಭಾತೇ ಪರಮಾಂ ಮುದಮ್ ||24||

ಹೀಗೆ ಮಹಾತೇಜಸ಼್ಳ್ಳ ಅಣ್ಣತಮ್ಮಂದಿರಾದ ಆ ವಿದುರಧೃತರಾಷ್ಟ್ರರು ಪರಸ್ಪರವಾಗಿ ಸಮಾಧಾನಮಾಡಿಕೊಂಡು ಬಹಳ ಸಂತೋಷವನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಷ್ಠೋಽಧ್ಯಾಯಃ ॥
॥ ಆರಣ್ಯಕಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಅಂಕಂ ಸಮಾರೋಪ್ಯಸ ಮೂರ್ಧ್ನಿ ಚೈನ-
ಮಾಘ್ರಾಯ ಲೇಭೇ ಪರಮಾಂ ಮುದಂ ತದಾ |
ಕ್ಷತ್ತಾರಮಾಯಾಂತಮುದೀಕ್ಷ್ಯ ಸರ್ವೇ
ಸಸೌಬಲಾ ಧಾರ್ತರಾಷ್ಟ್ರಾ ಅಮರ್ಷಾತ್ |
ಸಂಮಂತ್ರ್ಯ ಹಂತುಂ ಪಾಂಡವಾನಾಮುತೈಕಂ
ಛನ್ನೋಪಧೇನೈವ ಸಸೂತಜಾ ಯಯುಃ ॥14॥
ಧೃತರಾಷ್ಟ್ರ ವಿದುರನನ್ನು ತೊಡೆಯ ಮೇಲೇರಿಸಿಕೊಂಡು ನೆತ್ತಿಯಲ್ಲಿ ಆಘ್ರಾಣನ ಮಾಡಿ ಪರಮಾನಂದ ಹೊಂದಿದ. ಆದರೆ ವಿದುರ ಪುನಃ ಬರುವುದನ್ನು ಕಂಡು ಅಸಹನೆಯಿಂದ ಶಕುನಿಯೂ ಎಲ್ಲ ಕೌರವರೂ ಮಂತ್ರಾಲೋಚನ ಮಾಡಿ ಪಾಂಡವರಲ್ಲಿ ಒಬ್ಬರನ್ನಾದರೂ ಕೊಲ್ಲುವುದಕ್ಕಾಗಿ, ಈ ದುರುದ್ದೇಶ ಯಾರಿಗೂ ತಿಳಿಯದಂತೆ ಅರಣ್ಯದರ್ಶನದ ನೆಪದಿಂದ ಕರ್ಣನೊಂದಿಗೆ ಹೊರಟರು.
ವಿಜ್ಞಾಯ ತೇಷಾಂ ಗಮನಂ ಸಮಸ್ತ-
ಲೋಕಾಂತರಾತ್ಮಾ ಪರಮೇಶ್ವರೇಶ್ವರಃ |
ವ್ಯಾಸೋಽಭಿಗಮ್ಯಾವದದಾಂಬಿಕೇಯಂ
ನಿವಾರಯಾಶ್ವೇವ ಸುತಂ ತವೇತಿ ॥15॥
ಕೌರವರು ದುರುದ್ದೇಶದಿಂದ ಕಾಮ್ಯಕವನಕ್ಕೆ ಹೊರಟದ್ದನ್ನು ಸಕಲ ಲೋಕದ ಅಂತರಾತ್ಮರಾದ ಪರಮೇಶ್ವರನಿಗೂ ಈಶ್ವರರಾದ ವೇದವ್ಯಾಸರು ತಿಳಿದು ಧೃತರಾಷ್ಟ್ರನ ಬಳಿ ಹೋಗಿ ನಿನ್ನ ಮಗನನ್ನು ಬೇಗನೆ ತಡೆದು ನಿಲ್ಲಿಸು ಎಂದರು.
ಅವಾಪ್ಯ ಪಾರ್ಥಾನಯಮದ್ಯ ಮೃತ್ಯುಂ
ಸಹಾನುಬಂಧೋ ಗಮಿತಾ ಹ್ಯಸಂಶಯಂ |
ಇತೀರಿತೇ ತೇನ ನಿವಾರಯೇತಿ
ಪ್ರೋಕ್ತೋ ಹರಿಃ ಪ್ರಾಹ ನ ಸಂವದೇ ತೈಃ ॥16॥
ಈತ ಪಾಂಡವರನ್ನು ಕೊಲ್ಲಲು ಹೋಗಿ ತಾನೇ ಪರಿವಾರ ಸಮೇತನಾಗಿ ಈಗಲೇ ಮರಣ ಹೊಂದುತ್ತಾನೆ. ಸಂಶಯವಿಲ್ಲ' ಎಂದು ವೇದವ್ಯಾಸರು ಹೇಳಿದಾಗ `ನೀನೆ ತಡೆ' ಎಂದ ಧೃತರಾಷ್ಟ್ರ. ಆದರೆ ವೇದವ್ಯಾಸರು ಹೇಳಿದರು `ನಾನು ಅವರೊಡನೆ ಮಾತನಾಡೆನು'.
ಮೈತ್ರೇಯ ಆಯಾಸ್ಯತಿ ಸೋಽಪಿ ವಾಚಂ
ಶಿಕ್ಷಾರ್ಥಮೇತೇಷ್ವಭಿಧಾಸ್ಯತೀಹ |
ತಾಂ ಚೇತ್ ಕರೋತ್ಯೇಷ ಸುತಸ್ತವಾಸ್ಯ
ಭದ್ರಂ ತದಾ ಶಪ್ಸ್ಯತಿ ತ್ವನ್ಯಥಾ ಸಃ ॥17॥
`ಮೈತ್ರೇಯ ಮುನಿ ಬರುತ್ತಾನೆ, ಬುದ್ಧಿ ಹೇಳುತ್ತಾನೆ. ನಿನ್ನ ಮಗ ಅವನ ಮಾತಿನಂತೆ ನಡೆದುಕೊಂಡರೆ ಒಳ್ಳೆಯದು. ಇಲ್ಲದಿದ್ದಲ್ಲಿ ಅವನು ಶಪಿಸುತ್ತಾನೆ'.
ಉಕ್ತ್ವೇತಿ ರಾಜಾನಮನಂತಶಕ್ತಿ-
ರ್ವ್ಯಾಸೋ ಯಯೌ ತತ್ರ ಗತೇಷು ತೇಷು |
ಸುಯೋಧನಾದ್ಯೇಷು ಹತೇಷು ಪಾರ್ಥೈ-
ರ್ಭೂಭಾರಹಾನಿರ್ನ ಭವೇದಿತಿ ಪ್ರಭುಃ ॥18॥
ಅನಂತಶಕ್ತಿ ಉಳ್ಳ ವೇದವ್ಯಾಸರು ಧೃತರಾಷ್ಟ್ರನಿಗೆ ಹೀಗೆ ಹೇಳಿ ಹೊರಟು ಹೋದರು. ದುರ್ಯೋಧನ ಮುಂತಾದವರು ಕಾಡಿಗೆ ಹೋಗಿ ಪಾಂಡವರಿಂದ ಹತರಾದರೆ ಭೂಭಾರ ನಾಶವಾದಂತಾಗದೆಂದು ಪ್ರಭು ವೇದವ್ಯಾಸರು ತಡೆದು ನಿಲ್ಲಿಸಲು ಹೇಳಿದರು.
ಸರ್ವಾಶ್ಚ ಚೇಷ್ಟಾ ಭಗವನ್ನಿಯುಕ್ತಾಃ
ಸದಾ ಸಮಸ್ತಸ್ಯ ಚಿತೋಽಚಿತಶ್ಚ |
ತಥಾಪಿ ವಿಷ್ಣುರ್ವಿವಾರಯೇತ್ಕ್ವಚಿದ್-
ವಾಚಾ ವಿಧತ್ತೇ ಚ ಜನಾನ್ ವಿಡಂಬಯನ್ ॥19॥
ಎಲ್ಲ ಚೇತನ ಅಚೇತನಗಳ ಎಲ್ಲ ವ್ಯಾಪಾರಗಳೂ ಸದಾ ಅಂತರ್ಯಾಮಿಯಾದ ಭಗವಂತನಿಂದಲೇ ಪ್ರೇರಿತವಾಗಿರುತ್ತವೆ. ಆದರೂ ಅವನು ಕೆಲವೊಮ್ಮೆ ಅಕಾರ್ಯ ನಡೆಯುತ್ತಿದ್ದರೆ ಮಾತಿನಿಂದಲೇ ತಡೆಯುತ್ತಾನೆ. ಸತ್ಕಾರ್ಯವಾಗಿದ್ದರೆ ಮಾತಿನಿಂದಲೇ ವಿಧಿಸುತ್ತಾನೆ. ಇದು ಲೋಕದ ಜನರನ್ನು ಅನುಕರಿಸುವುದಕ್ಕಾಗಿ.
ಮೈತ್ರೇಯ ಆಗಾದಥ ಭೂಪತಿಶ್ಚ
ಪುತ್ರಾನ್ ಸಮಾಹೂಯ ಸಕರ್ಣಸೌಬಲಾನ್ |

ಸಂಪೂಜಯಾಮಾಸ ಮುನಿಂ ಸ ಚಾಹ
ದಾತುಂ ರಾಜ್ಯಂ ಪಾಂಡವಾನ್ ಸಂಪ್ರಶಂಸನ್ ॥20॥
ಬಳಿಕ ಮೈತ್ರೇಯ ಮುನಿ ಬಂದ. ಧೃತರಾಷ್ಟ್ರ ತನ್ನ ಮಕ್ಕಳನ್ನು ಕರ್ಣ ಶಕುನಿಗಳನ್ನೂ ಕರೆದು ಅವರೊಂದಿಗೆ ಕೂಡಿ ಮುನಿಯನ್ನು ಸತ್ಕರಿಸಿದ. ಮುನಿ ಪಾಂಡವರನ್ನು ಹೊಗಳುತ್ತ ಅವರಿಗೆ ರಾಜ್ಯವನ್ನು ಕೊಡಲು ಹೇಳಿದ.
ವಿಶೇಷತೋ ಭೀಮಬಲಂ ಶಶಂಸ
ಕಿರ್ಮೀರನಾಶಾದಿ ವದನ್ ಮುನೀಂದ್ರಃ |
ಶ್ರುತ್ವಾಹಸಂಸ್ತದ್ ಧೃತರಾಷ್ಟ್ರಪುತ್ರ
ಆಸ್ಫಾಲಯಾಮಾಸ ನಿಜೋರುಮುಗ್ರಃ॥21॥
ಮುನೀಶ್ವರನಾದ ಮೈತ್ರೇಯ ಕಿರ್ಮೀರ ವಧೆ ಮುಂತಾದುವನ್ನು ವರ್ಣಿಸುತ್ತ ವಿಶೇಷವಾಗಿ ಭೀಮನ ಬಲವನ್ನು ಹೊಗಳಿದ. ಕ್ರೂರ ದುರ್ಯೋಧನ ಅದನ್ನು ಕೇಳಿ ಸಹಿಸದೆ ತನ್ನ ತೊಡೆಯನ್ನು ತಟ್ಟಿಕೊಂಡ.
ಶಶಾಪ ಚೈನಂ ಮುನಿರುಗ್ರತೇಜಾ-
ಸ್ತವೋರುಭೇದಾಯ ಭವೇತ್ಸುಯುದ್ಧಂ |
ಇತ್ಯೂಚಿವಾನ್ ಧೃತರಾಷ್ಟ್ರಾನತೋಽಪಿ
ಯಯೌ ನ ಚೇದ್ ರಾಜ್ಯದಸ್ತ್ವಂ ತಥೇತಿ ॥22॥
ಭಯಂಕರ ತೇಜಸ್ವಿಯಾದ ಮೈತ್ರೇಯ ದುರ್ಯೋಧನನನ್ನು ಶಪಿಸಿದ. `ಭೀಮನೊಡನೆ ನಿನಗೆ ಒಂದು ಮಹಾಯುದ್ಧ ನಡೆಯುವುದು. ಅದರಲ್ಲಿ ನಿನ್ನ ತೊಡೆ ಮುರಿಯುವುದು' ಎಂದು. ಬಳಿಕ ಧೃತರಾಷ್ಟ್ರ ನಮಿಸಿದರೂ `ನೀನು ಪಾಂಡವರಿಗೆ ರಾಜ್ಯ ಕೊಡದಿದ್ದರೆ ನಾನು ಹೇಳಿದ್ದು ಆಗಿಯೇ ತೀರುವುದು' ಎಂದು ಹೇಳಿ ಹೊರಟು ಹೋದ.
* * * *
ಏಳನೆಯ ಅಧ್ಯಾಯ
(ಹಿಂದಿರುಗಿದ ವಿದುರನನ್ನು ನೋಡಿ ದುರ್ಯೋಧನಾದಿಗಳ ಕುಮಂತ್ರ. ವ್ಯಾಸರ ಆಗಮನ)
ವೈಶಂಪಾಯನಃ
ಶ್ರುತ್ವಾ ತು ವಿದುರಂ ಪ್ರಾಪ್ತಂ ರಾಜ್ಞಾ ತು ಪರಿಸಾಂತ್ವಿತಮ್ |
ಧೃತರಾಷ್ಟ್ರಾತ್ಮಜೋ ರಾಜನ್ ಪರ್ಯತಪ್ಯತ ದುರ್ಮತಿಃ ॥1॥
ಎಲೈ ರಾಜನೇ! ವಿದುರನು ಹಿಂದಿರುಗಿದುದನ್ನು ಮತ್ತು ಧೃತರಾಷ್ಟ್ರನಿಂದ ಸಾಂತ್ವನಗೊಳಿಸಲ್ಪಟ್ಟುದುದನ್ನು ಕೇಳಿ ದುರ್ಮತಿಯಾದ ದುರ್ಯೋಧನನು ಬಹಳವಾಗಿ ಪರಿತಪಿಸಿದನು.
ಸ ಸೌಬಲಂ ಸಮಾನಾಯ್ಯ ಕರ್ಣದುಶ್ಶಾಸನೌ ತಥಾ |
ಅಬ್ರವೀದ್ ವಚನಂ ರಾಜಾ ಪ್ರವಿಶ್ಯಾಬುದ್ಧಿಜಂ ತಮಃ ॥2॥
ಆ ರಾಜನಾದ ದುರ್ಯೋಧನನು ಶಕುನಿಯನ್ನು ಮತ್ತು ಕರ್ಣದುಶ್ಶಾಸನರನ್ನು ಕರೆಸಿ ಅವಿವೇಕದಿಂದ ಉಂಟಾದ ಅಜ್ಞಾನಕ್ಕೆ ವಶನಾಗಿ ಮಾತನಾಡಿದನು.
ಏಷ ಪ್ರತ್ಯಾಗತೋ ಮಂತ್ರೀ ಧೃತರಾಷ್ಟ್ರಸ್ಯ ಸಮ್ಮತಃ |
ವಿದುರಃ ಪಾಂಡುಪುತ್ರಾಣಾಂ ಸುಹೃದ್ ವಿದ್ವಾನ್ ಹಿತೇ ರತಃ ॥3॥
ಪಾಂಡುಪುತ್ರರ ಹಿತೈಷಿಯಾದ ಮತ್ತು ಅವರಿಗೆ ಪ್ರಿಯನಾದ ಮತ್ತು ಧೃತರಾಷ್ಟ್ರನಿಗೆ ಸಮ್ಮತನಾದ ಮಂತ್ರಿಯಾದ ಮೇಧಾವಿಯಾದ ಈ ವಿದುರನು ಹಿಂದಿರುಗಿ ಬಂದಿದ್ದಾನೆ.
ಯಾವದಸ್ಯ ಪುನರ್ಬುದ್ಧಿಂ ವಿದುರೋ ನಾಪಕರ್ಷತಿ |
ಪಾಂಡವಾನಯನೇ ತಾವನ್ಮಂತ್ರಯಧ್ವಂ ಹಿತಂ ಮಮ ॥4॥
ಎಲ್ಲಿಯವರೆಗೆ ವಿದುರನು ಈ ಧೃತರಾಷ್ಟ್ರನ ಬುದ್ಧಿಯನ್ನು ಕೆಡಿಸಿ ಪಾಂಡವರನ್ನು ಹಿಂದಿರುಗಿ ಕರೆದುಕೊಂಡು ಬರುವಂತೆ ಮಾಡುವುದಿಲ್ಲವೋ ಅಷ್ಟರೊಳಗೆ ನನ್ನ ಹಿತವನ್ನು ಕುರಿತು ಮಂತ್ರಾಲೋಚನೆಯನ್ನು ನಡೆಸಿ.
ಅಥ ಪಶ್ಯಾಮ್ಯಹಂ ಪಾರ್ಥಾನ್ ಪ್ರಾಪ್ತಾನಿಹ ಕಥಂಚನ |
ಪುನಃ ಶೋಕಂ ಗಮಿಷ್ಯಾಮಿ ನಿರಾಸೂನ್ ನಿಷ್ಪ್ರತಿಗ್ರಹಾನ್ ॥5॥
ಒಂದು ಪಕ್ಷ ನಾನು ಪುನಃ ಶತ್ರುಗಳನ್ನು ಸಂಹರಿಸುವ ಸ್ವಭಾವವುಳ್ಳ ನಿಷ್ಪ್ರತಿಗ್ರಹರಾದ ಪಾಂಡವರು ಇಲ್ಲಿಗೆ ಬಂದುದನ್ನು ನೋಡಿದರೆ ಪುನಃ ಶೋಕಕ್ಕೆ ಒಳಗಾಗುವೆನು.
ಕ್ಷಿಪ್ರಮುದ್ಬಂಧನಂ ಚೈವ ಶಸ್ತ್ರಮಗ್ನಿಪ್ರವೇಶನಮ್ |
ಕರಿಷ್ಯೇ ನ ಹಿ ತಾನ್ ವೃದ್ಧಾನ್ ಪುನರ್ದ್ರಷ್ಟುಮಿಹೋತ್ಸಹೇ ॥6॥
ತಕ್ಷಣ ನೇಣುಹಾಕಿಕೊಳ್ಳುತ್ತೇನೆ. ಅಥವಾ ಶಸ್ತ್ರದಿಂದ ಮರಣಹೊಂದುವೆನು. ಅಥವಾ ಅಗ್ನಿಪ್ರವೇಶವನ್ನು ಮಾಡುವೆನು. ಪುನಃ ಸಂವೃದ್ಧಿಯನ್ನು ಹೊಂದಿದ ಆ ಪಾಂಡವರನ್ನು ನಾನು ನೋಡಲಾರೆ.
ಶಕುನಿಃ
ಕಿಂ ಬಾಲಿಶಮತಿಂ ರಾಜನ್ನಾಸ್ಥಿತೋಽಸಿ ವಿಶಾಂಪತೇ |
ಗತಾಸ್ತೇ ಸಮಯಂ ಕೃತ್ವಾ ನೈತದೇವಂ ಭವಿಷ್ಯತಿ ॥7॥
ಎಲೈ ರಾಜನೇ! ಏಕೆ ಇಂತಹ ಹುಡುಗಬುದ್ಧಿಯನ್ನು ಹೊಂದಿದ್ದೀಯೆ? ಅವರು ಶಪಥವನ್ನು ಮಾಡಿ ಹೋಗಿದ್ದಾರೆ. ಹಿಂದಿರುಗಿ ಬರುವುದಿಲ್ಲ.

ಸತ್ಯವಾಕ್ಯೇ ಸ್ಥಿತಾಃ ಸರ್ವೇ ಪಾಂಡವಾ ಭರತರ್ಷಭ |
ಪಿತುಸ್ತೇ ವಚನಂ ತಾತ ನ ಗ್ರಹೀಷ್ಯಂತಿ ಕರ್ಹಿಚಿತ್ ||8||
ಎಲೈ ಭರತರ್ಷಭನೇ! ಪಾಂಡವರು ಸತ್ಯವಚನದಲ್ಲಿ ಸ್ಥಿತರಾದವರು. ಪ್ರೀತಿಪಾತ್ರನೇ ನಿನ್ನ ತಂದೆಯು ಹಿಂದೆ ಬರಬೇಕೆಂದು ಹೇಳಿದರೂ ಆ ಮಾತುಗಳನ್ನು ಅವರು ಸ್ವೀಕರಿಸುವುದಿಲ್ಲ.
ಅಥವಾ ತೇ ಗ್ರಹೀಷ್ಯಂತಿ ಪುನರೇಷ್ಯಂತಿ ವಾ ಗೃಹಮ್ |
ನಿರಸ್ಯ ಸಮಯಂ ಭೂಯಃ ಪಣೋಽಸ್ಮಾಕಂ ಭವಿಷ್ಯತಿ ||9||
ಅಥವಾ ಅವರು ಧೃತರಾಷ್ಟ್ರನ ಮಾತನ್ನು ಸ್ವೀಕರಿಸಿ ತಮ್ಮ ಶಪಥವನ್ನು ಮುರಿದು ಪುನಃ ಅರಮನೆಗೆ ಹಿಂದಿರುಗಿದರೆ ನಾವು ಪುನಃ ದ್ಯೂತವನ್ನು ಆಡೋಣ.
ಸರ್ವೇ ಭವಾಮೋ ಮಧ್ಯಸ್ಥಾ ರಾಜ್ಞಶ್ಚಂದಾನುವರ್ತಿನಃ |
ಛಿದ್ರಂ ಬಹು ಪ್ರಪಶ್ಯಂತಃ ಪಾಂಡವಾನಾಂ ಸುಸಂವೃತಾಃ ||10||
ನಾವೆಲ್ಲರೂ ರಾಜನ ಅಭಿಪ್ರಾಯದಂತೆ ನಡೆದುಕೊಳ್ಳುತ್ತಾ ಮಧ್ಯಸ್ಥರಂತೆ ಇದ್ದು ಯಾರಿಗೂ ತಿಳಿಯದಂತೆ ಪಾಂಡವರ ದೌರ್ಬಲ್ಯವನ್ನು ಚೆನ್ನಾಗಿ ತಿಳಿಯೋಣ.
ದುಶ್ಶಾಸನಃ
ಏವಮೇತನ್ಮಹಾಪ್ರಾಜ್ಞ ಯಥಾ ವದಸಿ ಮಾತುಲ |
ನಿತ್ಯಂ ಹಿ ಮೇ ಕಥಯತಸ್ತವ ಬುದ್ಧಿರ್ಹಿ ರೋಚತೇ ||11||
ಎಲೈ ಮಹಾಪ್ರಾಜ್ಞನಾದ ಸೋದರಮಾವನೇ! ನೀನು ಆಡುವ ಮಾತು ಸರಿಯಾಗಿದೆ. ನೀನು ಹೀಗೆ ನಿತ್ಯವೂ ಮಾತನಾಡುವಾಗ ನಿನ್ನ ಬುದ್ಧಿಯು ನನಗೆ ಬಹಳವಾಗಿ ಹಿಡಿಸುತ್ತದೆ.
ಕರ್ಣಃ
ಕಾಮಮೀಕ್ಷಾಮಹೇ ಸರ್ವೇ ದುರ್ಯೋಧನ ತವೇಪ್ಸಿತಮ್ |
ಏಕಮತ್ಯಂ ಹಿ ನೋ ರಾಜನ್ ಸರ್ವೇಷಾಮೇವ ಲಕ್ಷ್ಯತೇ ||12||
ದುರ್ಯೋಧನನೇ! ನಾವೆಲ್ಲರೂ ನಿನ್ನ ಇಷ್ಟವನ್ನು ಚೆನ್ನಾಗಿ ಗಮನಿಸೋಣ. ಎಲೈ ರಾಜನೇ! ನಮ್ಮೆಲ್ಲರಿಗೂ ಈ ವಿಷಯದಲ್ಲಿ ಐಕಮತ್ಯವು ಕಂಡುಬರುತ್ತಿದೆ.
ವೈಶಂಪಾಯನಃ
ಏವಮುಕ್ತಸ್ತು ಕರ್ಣೇನ ರಾಜಾ ದುರ್ಯೋಧನಸ್ತದಾ |
ನಾತಿಹೃಷ್ಟಮನಾಃ ಕ್ಷಿಪ್ರಮಭವತ್ ಸ ಪರಾಂಗ್ಮುಖಃ ||13||
ಕರ್ಣನಿಂದ ಹೀಗೆ ಹೇಳಲ್ಪಟ್ಟ ರಾಜನಾದ ದುರ್ಯೋಧನನು ಮನಸ್ಸಿನಲ್ಲಿ ಸಂತೋಷಹೊಂದದೆ ಬೇಗ ಮುಖವನ್ನು ಬೇರೆಕಡೆಗೆ ತಿರುಗಿಸಿದನು.
ಉಪಲಭ್ಯ ತತಃ ಕರ್ಣೋ ವಿವೃತ್ಯ ನಯನೇ ಶುಭೇ |
ರೋಷಾದ್ ದುಶ್ಶಾಸನಂ ಚೈವ ಸೌಬಲೇಯಂ ಚ ತಾವುಭೌ ||14||
ಉವಾಚ ಪರಮಕ್ರುದ್ಧ ಉದ್ಯಮ್ಯಾತ್ಮಾನಮಾತ್ಮನಾ |
ಅಹೋ ಮಮ ಮತಂ ಯತ್ತು ತನ್ನಿಬೋಧ ನರಾಧಿಪಾಃ ||15||
ಅದನ್ನು ಗಮನಿಸಿದ ಕರ್ಣನು ತನ್ನ ಶುಭ್ರವಾದ ಕಣ್ಣುಗಳನ್ನು ಅಗಲವಾಗಿ ತೆರೆದು ರೋಷದಿಂದ ದುಶ್ಶಾಸನ ಮತ್ತು ಶಕುನಿಯನ್ನು ಉದ್ದೇಶಿಸಿ ತನ್ನ ಬಾಹುಗಳನ್ನು ತಾನೇ ಎತ್ತಿ ಪರಮಕ್ರುದ್ಧನಾಗಿ ಮಾತನಾಡಿದನು. ಎಲೈ ರಾಜರೇ! ನನ್ನ ಅಭಿಪ್ರಾಯವೇನಿದೆಯೋ ಅದನ್ನು ತಿಳಿಯಿರಿ.
ಪ್ರಿಯಂ ಸರ್ವೇ ಚಿಕೀರ್ಷಾಮೋ ರಾಜ್ಞಃ ಕಿಂ ಕರವಾಮಹೇ |
ನ ಚಾಸ್ಯ ಶಕ್ನುಮಃ ಸರ್ವೇ ಹ್ಯವಸ್ಥಾತುಮತಂದ್ರಿತಾಃ ||16||
ನಾವೆಲ್ಲರೂ ರಾಜನಿಗೆ ಪ್ರಿಯನ್ನು ಉಂಟುಮಾಡಲು ಬಯಸುತ್ತೇವೆ. ಬೇರೆ ಏನುಮಾಡಲು ಸಾಧ್ಯ? ಆದರೆ ಯಾವಾಗಲೂ ಜಾಗರೂಕರಾಗಿದ್ದು ರಾಜನಿಗೆ ಪ್ರಿಯವನ್ನು ಉಂಟುಮಾಡಲು ನಾವು ಶಕ್ತರಾಗಿಲ್ಲ.
ವಯಂ ತು ಶಸ್ತ್ರಾಣ್ಯಾದಾಯ ರಥಾನಾಸ್ಥಾಯ ದಂಶಿತಾಃ |
ಗಚ್ಛಾಮಃ ಸಹಿತಾ ಹಂತುಂ ಪಾಂಡವಾನ್ ವನಗೋಚರಾನ್ ||17||
ನಾವು ರಥಗಳನ್ನು ಸಜ್ಜುಗೊಳಿಸಿ ಶಸ್ತ್ರಗಳನ್ನು ತೆಗೆದುಕೊಂಡು ಕಾಡಿನಲ್ಲಿರುವ ಪಾಂಡವರನ್ನು ಕೊಲ್ಲಲು ಒಟ್ಟಿಗೆ ಹೋಗೋಣ.
ತೇಷು ಸರ್ವೇಷು ಶಾಂತೇಷು ಗತೇಷ್ವವಿದಿತಾಂ ಗತಿಮ್ |
ನಿರ್ವಿಶಂಕಾ ಭವಿಷ್ಯಾಮೋ ಧಾರ್ತರಾಷ್ಟ್ರಾಸ್ತಥಾ ವಯಮ್ ||18||
ಅವರೆಲ್ಲರೂ ನಾಶವನ್ನು ಹೊಂದಿ ಅಜ್ಞಾತಲೋಕವನ್ನು ಸೇರಿದ ಮೇಲೆ ನಾವು ಮತ್ತು ದುರ್ಯೋಧನಾದಿಗಳು ನಿರಾತಂಕವಾಗಿ ಇರುವೆವು.
ಯಾವದೇವ ಪರಿದ್ಯೂನಾ ಯಾವಚ್ಛೋಕಪರಾಯಣಾಃ |
ಯಾವನ್ಮಂತ್ರವಿಹೀನಾಶ್ಚ ತಾವದ್ ಗಚ್ಛಾಮ ಮಾಚಿರಮ್ ||19||
ಎಲ್ಲಿಯವರೆಗೆ ಪಾಂಡವರು ಕೃಶರಾಗಿದ್ದು ಶೋಕಪರಾಯಣರಾಗಿದ್ದು ಮಂತ್ರಾಲೋಚನೆ ರಹಿತರಾಗಿರುತ್ತಾರೆಯೋ ಅಷ್ಟರೊಳಗೆ ಶೀಘ್ರವಾಗಿ ಪಾಂಡವರ ಮೇಲೆ ಎರಗೋಣ.
ತಸ್ಯ ತದ್ವಚನಂ ಶ್ರುತ್ವಾ ಪೂಜಯಂತಃ ಪುನಃ ಪುನಃ |

ಪ್ರಸನ್ನಮನಸಃ ಸರ್ವೇ ಪ್ರತ್ಯೂಚುಃ ಸೂತಜಂ ತದಾ ॥20॥
ಕರ್ಣನ ಮಾತುಗಳನ್ನು ಕೇಳಿ ಎಲ್ಲರೂ ಅವನನ್ನು ಮತ್ತೆ ಮತ್ತೆ ಸತ್ಕರಿಸಿ ಪ್ರಸನ್ನಮನಸ್ಕರಾಗಿ ಆಗ ಅವನನ್ನು ಕುರಿತು ಮಾತನಾಡಿದರು.
ಏತತ್ ಕೃತ್ಯತಮಂ ರಾಜ್ಞಃ ಕೌರವಸ್ಯ ಮಹಾತ್ಮನಃ ॥21॥
ಮಹಾತ್ಮನಾದ ದುರ್ಯೋಧನರಾಜನ ಸಲುವಾಗಿ ಮಾಡಬೇಕಾದುದು ಇದೇ ಅತ್ಯಂತ ಶ್ರೇಷ್ಠವಾದ ಕಾರ್ಯ.
ವೈಶಂಪಾಯನಃ
ಏವಮುಕತ್ವ ಸುಸಂಕ್ರುದ್ಧಾ ರಥೈಃ ಸರ್ವೇ ಪೃಥಕ್ಪೃಥಕ್ |
ನಿರ್ಯಯುಃ ಪಾಂಡವಾನ್ ಹಂತುಂ ಸಂಘಶಃ ಕೃತನಿಶ್ಚಯಾಃ ॥22॥
ಹೀಗೆ ಹೇಳಿ ಎಲ್ಲರೂ ಬಹಳ ಸಂಕ್ರುದ್ಧರಾಗಿ ಬೇರೆಬೇರೆ ರಥಗಳನ್ನು ಹೂಡಿ ಪಾಂಡವರನ್ನು ಕೊಲ್ಲಲು ಗುಂಪುಗುಂಪುಗಳಾಗಿ ಹೊರಟರು.
ತಾನ್ ಪ್ರಸ್ಥಿತಾನ್ ಪರಿಜ್ಞಾಯ ಕೃಷ್ಣದ್ವೈಪಾಯನಸ್ತದಾ |
ಆಜಗಾಮ ಮಹಾಯೋಗೀ ದೃಷ್ಟ್ವಾ ದಿವ್ಯೇನ ಚಕ್ಷುಷಾ ॥23॥
ಆಗ ಮಹಾಯೋಗೀಶ್ವರರಾದ ವೇದವ್ಯಾಸರು ತಮ್ಮ ದಿವ್ಯದೃಷ್ಟಿಯಿಂದ ಅವರೆಲ್ಲರೂ ಹೊರಟದ್ದನ್ನು ನೋಡಿ ಅಲ್ಲಿಗೆ ಆಗಮಿಸಿದರು.
ಪ್ರತಿಷಿಧ್ಯ ತು ತಾನ್ ಸರ್ವಾನ್ ಭಗವಾಂಲ್ಲೋಕಪೂಜಿತಃ |
ಪ್ರಜ್ಞಾಚಕ್ಷುಷಮಾಸೀನಮುವಾಚಾಭ್ಯೇತ್ಯ ಸತ್ವರಮ್ ॥24॥
ಲೋಕಪೂಜಿತರಾದ ಸಾಕ್ಷಾತ್ ಭಗವದವತಾರರಾದ ವೇದವ್ಯಾಸರು ಅವರೆಲ್ಲರನ್ನು ನಿವಾರಿಸಿ ಸುಖಾಸೀನನಾಗಿದ್ದ ಪ್ರಜ್ಞಾಚಕ್ಷುವಾದ ಧೃತರಾಷ್ಟ್ರನ ಬಳಿಗೆ ಶೀಘ್ರವಾಗಿ ಬಂದು ಮಾತನಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿಸಪ್ತಮೋಽಧ್ಯಾಯಃ ॥
॥ ಆರಣ್ಯಕಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
*****
ಎಂಟನೆಯ ಅಧ್ಯಾಯ
(ಧೃತರಾಷ್ಟ್ರನನ್ನು ಕುರಿತು ವ್ಯಾಸರ ಹಿತವಚನ ಮತ್ತು
ಇಂದ್ರ- ಸುರಭಿ ಸಂವಾದ.)
ವ್ಯಾಸಃ
ಧೃತರಾಷ್ಟ್ರ ಮಹಾಪ್ರಾಜ್ಞ ನಿಬೋಧ ವಚನಂ ಮಮ |
ವಕ್ಷ್ಯಾಮಿ ತ್ವಾಂ ಕೌರವಾಣಾಂ ಸರ್ವೇಷಾಂ ಹಿತಮುತ್ತಮಮ್ ॥1॥
ಎಲೈ ಮಹಾಪ್ರಾಜ್ಞನಾದ ಧೃತರಾಷ್ಟ್ರನೇ ನನ್ನ ಮಾತನ್ನು ಕೇಳು. ನಾನು ಎಲ್ಲ ಕೌರವರಿಗೂ ಹಿತವಾದ ಶೇಷ್ಠವಾದ ವಿಷಯವನ್ನು ನಿನಗೆ ಹೇಳುವೆನು.
ನ ಮೇ ಪ್ರಿಯಂ ಮಹಾಬಾಹೋ ಯದ್ಗತಾಃ ಪಾಂಡವಾ ವನಮ್ |
ನಿಕೃತ್ಯಾ ನಿರ್ಜಿತಾಶ್ಚೈವ ದುರ್ಯೋಧನವಶಾನುಗೈಃ ॥2॥
ಎಲೈ ಮಹಾಬಾಹುವೇ! ಪಾಂಡವರು ವನಕ್ಕೆ ಹೋದುದು ನನಗೆ ಇಷ್ಟವಿಲ್ಲ. ಅವರು ದುರ್ಯೋಧನನ ವಶವರ್ತಿಗಳಿಂದ ಮೋಸವನ್ನು ಆಶ್ರಯಿಸಿ ಸೋಲಿಸಲ್ಪಟ್ಟರು.
ತೇ ಸ್ಮರಂತಃ ಪರಿಕ್ಲೇಶಾನ್ ವರ್ಷೇ ಪೂರ್ಣೇ ತ್ರಯೋದಶೇ |
ವಿಮೋಕ್ಷ್ಯಂತಿ ವಿಷಂ ಕ್ರುದ್ಧಾಃ ಕೌರವೇಯೇಷು ಭಾರತ ॥3॥
ಎಲೈ ಭಾರತನೇ! ಹದಿಮೂರು ವರ್ಷಗಳು ತುಂಬಿದ ಮೇಲೆ ಅವರು ಹಿಂದೆ ಅನುಭವಿಸಿದ ಕ್ಲೇಶವನ್ನು ಸ್ಮರಿಸಿಕೊಂಡು ದುರ್ಯೋಧನಾದಿಗಳಲ್ಲಿ ಕ್ರುದ್ಧರಾಗಿ ವಿಷವನ್ನು ಕಾರುವರು.
ತದಯಂ ಕಿಂ ನು ಪಾಪಾತ್ಮಾ ತವ ಪುತ್ರಃ ಸುಮಂದಧೀಃ |
ಪಾಂಡವಾನ್ ನಿತ್ಯಸಂಕ್ರುದ್ಧಾನ್ ರಾಜ್ಯಹೇತೋರ್ಜಿಘಾಂಸತಿ ॥4॥
ನಿನ್ನ ಪುತ್ರನಾದ ಅತ್ಯಂತ ಮಂದಬುದ್ಧಿಯುಳ್ಳ ಪಾಪಾತ್ಮನಾದ ಈ ದುರ್ಯೋಧನನು ನಿತ್ಯ ಸಂಕ್ರುದ್ಧರಾದ ಪಾಂಡವರನ್ನು ರಾಜ್ಯದ ಸಲುವಾಗಿ ಏಕೆ ಕೊಲ್ಲಲು ಬಯಸುತ್ತಾನೆ?
ವಾರ್ಯತಾಂ ಸಾಧ್ವಯಂ ಮೂಢಃ ಶಮಂ ಗಚ್ಛತು ತೇ ಸುತಃ|
ವನಸ್ಥಾಂಸ್ತಾನಯಂ ಹಂತುಮಿಚ್ಛನ್ ಪ್ರಾಣೈರ್ವಿಮೋಕ್ಷ್ಯತೇ ॥5॥
ಈ ಮೂಢನನ್ನು ತಡೆಯಿರಿ. ನಿನ್ನ ಮಗನು ಪಾಂಡವರ ಜೊತೆಯಲ್ಲಿ ಶಾಂತಿಯನ್ನು ಹೊಂದಲಿ. ವನಗತರಾದ ಅವರನ್ನು ಕೊಲ್ಲಲು ಬಯಸಿದರೆ ಇವನೇ ಪ್ರಾಣಗಳನ್ನು ಬಿಡುತ್ತಾನೆ.
ಯಥಾಽಽಹ ವಿದುರಃ ಪ್ರಾಜ್ಞೋ ಯಥಾ ಭೀಷ್ಮೋ ಯಥಾ ವಯಮ್ |
ಯಥಾ ಕೃಪಶ್ಚ ದ್ರೋಣಶ್ಚ ತಥಾ ಸಾಧು ವಿಧೀಯತಾಮ್ ॥6॥
ಪ್ರಾಜ್ಞನಾದ ವಿದುರನು ಹೇಗೆ ಹೇಳಿದನೋ ಭೀಷ್ಮರು ನಾನು ಕೃಪರು ಮತ್ತು ದ್ರೋಣರು ಹೇಗೆ ಹೇಳಿದೆವೋ ಅದರಂತೆ ಚೆನ್ನಾಗಿ ನಡೆದುಕೊಳ್ಳಿ.

ವಿಗ್ರಹೋ ಹಿ ಮಹಾಪ್ರಾಜ್ಞ ಸ್ವಜನೇನ ವಿಗರ್ಹಿತಃ |
ಅಧರ್ಮ್ಯಮಯಶಸ್ಯಂ ಚ ಮಾ ರಾಜನ್ ಪ್ರತಿಪದ್ಯಥಾಃ ||7||
ಎಲೈ ಮಹಾಪ್ರಾಜ್ಞನೇ! ಸ್ವಜನರ ಜೊತೆಯಲ್ಲಿ ವಿರೋಧವು ನಿಂದ್ಯವಾದುದು. ಅದು ಧರ್ಮವನ್ನು ಮತ್ತು ಕೀರ್ತಿಯನ್ನು ಹಾಳುಮಾಡುವಂತಹದು. ರಾಜನೇ ಅಂತಹ ವಿರೋಧವನ್ನು ಹೊಂದಬೇಡ.
ಸಮೀಕ್ಷಾ ಯಾದೃಶೀ ಹ್ಯಸ್ಯ ಪಾಂಡವಾನ್ ಪ್ರತಿ ಭಾಷತಃ |
ಉಪೇಕ್ಷ್ಯಮಾಣಾ ಸಾ ರಾಜನ್ ಮಹಾಂತಮನಯಂ ಸೃಜೇತ್ ||8||
ಪಾಂಡವರ ವಿಷಯದಲ್ಲಿ ಮಾತನಾಡುವ ಇವನ ದೃಷ್ಟಿಯು ಹೇಗಿದೆಯೋ ಅದನ್ನು ಉಪೇಕ್ಷೆಮಾಡಿದರೆ ಎಲೈ ರಾಜನೇ! ಅದು ದೊಡ್ಡ ಅನರ್ಥವನ್ನು ಉಂಟುಮಾಡುತ್ತದೆ.
ಅಥವಾಽಯಂ ಸುಮಂದಾತ್ಮಾ ವನಂ ಗಚ್ಛತು ತೇ ಸುತಃ |
ಪಾಂಡವೈಃ ಸಹಿತೋ ರಾಜನ್ನೇಕ ಏವಾಸಹಾಯವಾನ್ ||9||
ಎಲೈ ರಾಜನ್! ಮಂದಬುದ್ಧಿಯಾದ ಈ ನಿನ್ನ ಮಗನು ಪಾಂಡವರ ಜೊತೆಯಲ್ಲಿ ಒಬ್ಬನೇ ಅಸಹಾಯಕನಾಗಿ ಕಾಡಿಗೆ ಹೋಗಲಿ.
ತತಃ ಸಂಸರ್ಗಜಃ ಸ್ನೇಹಃ ಪುತ್ರಸ್ಯ ತವ ಪಾಂಡವೈಃ |
ಯದಿ ಸ್ಯಾತ್ ಕೃತಕೃತ್ಯಸ್ತ್ವಂ ಭವೇಥಾಃ ಪುರುಷರ್ಷಭ ||10||
ಆಗ ಜೊತೆಯಲ್ಲಿ ವಾಸಮಾಡುವುದರಿಂದ ಪಾಂಡವರಿಗೂ ನಿನ್ನ ಪುತ್ರನಿಗೂ ಸ್ನೇಹವುಂಟಾದರೆ ಎಲೈ ಪುರುಷರ್ಷಭನೇ! ನೀನು ಧನ್ಯನಾಗುತ್ತೀಯೆ.
ಅಥವಾ ಜಾಯಮಾನಸ್ಯ ಯಚ್ಛೀಲಮನುಜಾಯತೇ |
ಭೂಯಸ್ತದೇತನ್ಮಾ ರಾಜನ್ ನಾಮೃತಸ್ಯಾಪಸರ್ಪತಿ ||11||
ಎಲೈ ರಾಜನೇ! ಹುಟ್ಟುವಾಗ ಮನುಷ್ಯನಿಗೆ ಯಾವ ಸ್ವಭಾವವಿರುತ್ತದೆಯೋ ಆ ಸ್ವಭಾವವು ಅವನು ಬದುಕಿರುವವರೆಗೆ ಅವನನ್ನು ಬಿಟ್ಟು ಹೋಗುವುದಿಲ್ಲ.
ಕಥಂ ವಾ ಮನ್ಯತೇ ಭೀಷ್ಮೋ ದ್ರೋಣೋಽಥ ವಿದುರೋಽಪಿ ವಾ |
ಭವಾನ್ ವಾಽತ್ರ ಪರಂ ಕಾರ್ಯಂ ಪುರಾಽಪಾರ್ಥೋ ನಿವರ್ತತೇ ||
ಪಾಂಡವರ ವಿರೋಧಿಯಾದ ಈ ದುರ್ಯೋಧನನು ನಿಷ್ಪ್ರಯೋಜನವಾಗಿ ಪಾಂಡವರ ಮೇಲೆ ಎರಗುವ ಕಾರ್ಯವನ್ನು ನಿವಾರಣೆಮಾಡಲು, ಭೀಷ್ಮರಾಗಲೀ ದ್ರೋಣರಾಗಲೀ ಅಥವಾ ವಿದುರನಾಗಲೀ ಅಥವಾ ನೀನೇ ಆಗಲೀ ಯಾವ ಉಪಾಯವನ್ನು ಮಾಡುತ್ತೀರಿ?
ಧೃತರಾಷ್ಟ್ರಃ
ಭಗವನ್ ನಾಹಮಪ್ಯೇತದ್ ರೋಚಯೇ ದ್ಯೂತಸಂಸ್ತವಮ್|
ಮನ್ಯೇ ತು ವಿಧಿನಾಽಽಕ್ರಮ್ಯ ಕಾರಿತೋಽಸ್ಮೀತಿ ವೈ ಮುನೇ ||13||
ಪೂಜ್ಯರೇ! ನಾನೂ ಸಹ ಈ ದ್ಯೂತ ಪ್ರಶಂಸೆಯನ್ನು ಒಪ್ಪುವುದಿಲ್ಲ. ವಿಧಿಯ ಪ್ರಭಾವಕ್ಕೆ ಒಳಗಾಗಿ ನಾನು ಈ ಕೆಲಸವನ್ನು ಬಲಾತ್ಕಾರದಿಂದ ಮಾಡಿದ್ದೇನೆ ಎಂದು ನಾನು ಭಾವಿಸುತ್ತೇನೆ.
ನ ತದ್ ರೋಚಯತೇ ಭೀಷ್ಮೋ ನ ದ್ರೋಣೋ ವಿದುರೋ ನ ಚ |
ಗಾಂಧಾರ್ಯಾ ನೇಷ್ಯತೇ ದ್ಯೂತಂ ತಚ್ಚ ಮೋಹಾತ್ ಪ್ರವರ್ತಿತಮ್ ||14||
ಭೀಷ್ಮರು ದ್ಯೂತವನ್ನು ಇಷ್ಟಪಡುವುದಿಲ್ಲ. ದ್ರೋಣರು ವಿದುರ ಇಷ್ಟಪಡುವುದಿಲ್ಲ. ಗಾಂಧಾರಿಯೂ ಇಷ್ಟಪಡುವುದಿಲ್ಲ. ನಾನು ಮೋಹದಿಂದ ದ್ಯೂತವನ್ನು ಪ್ರವರ್ತನೆಮಾಡಿದೆ.
ಪರಿತ್ಯಕ್ತುಂ ನ ಶಕ್ನೋಮಿ ದುರ್ಯೋಧನಮಚೇತನಮ್ |
ಪುತ್ರಸ್ನೇಹೇನ ಭಗವನ್ ಜಾನನ್ನಪಿ ಯತವ್ರತ ||15||
ಪೂಜ್ಯರೇ! ಮತ್ತು ನಿಯತವ್ರತರೇ! ನನಗೆ ತಿಳಿದಿದ್ದರೂ ಸಹ ಪುತ್ರಸ್ನೇಹಕ್ಕೆ ವಶನಾಗಿ ದುರ್ಬುದ್ಧಿಯಾದ ದುರ್ಯೋಧನನ್ನು ಪರಿತ್ಯಾಗಮಾಡಲು ಸಾಧ್ಯವಾಗುತ್ತಿಲ್ಲ.
ವ್ಯಾಸಃ
ವೈಚಿತ್ರವೀರ್ಯ ನೃಪತೇ ಸತ್ಯಮಾಹ ಯಥಾ ಭವಾನ್ |
ದೃಢಂ ವೇದ್ಮಿ ಪರಂ ಪುತ್ರ ಪರಂ ಪುತ್ರಾನ್ನ ವಿದ್ಯತೇ ||16||
ಎಲೈ ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರರಾಜನೇ! ನೀನು ಆಡಿದಮಾತು ಸತ್ಯವಾಗಿದೆ. ಪುತ್ರನೇ! ಪುತ್ರನಿಗಿಂತ ಅಧಿಕವಾದ ವಸ್ತುವಿಲ್ಲವೆಂದು ನಾನು ಚೆನ್ನಾಗಿ ತಿಳಿದಿದ್ದೇನೆ.
ಇಂದ್ರೋಽಪ್ಯಶ್ರುನಿಪಾತೇನ ಸುರಭ್ಯಾ ಪ್ರತಿಬೋಧಿತಃ |
ಅನ್ಯೈಃ ಸಮೃದ್ಧೈರಪ್ಯರ್ಥೈರ್ನ ಸುತಾನ್ಮನ್ಯತೇ ಪರಮ್ ||17||
ಇಂದ್ರನೂ ಸಹ ಕಣ್ಣೀರು ಸುರಿಸುವ ಸುರಭಿಯಿಂದ ತಿಳಿಸಲ್ಪಟ್ಟವನಾಗಿ ಉಳಿದ ಎಲ್ಲಾ ಶ್ರೇಷ್ಠವಾದ ವಸ್ತುಗಳಿಗಿಂತ ಪುತ್ರನೇ ಶ್ರೇಷ್ಠವೆಂದು ತಿಳಿದಿದ್ದಾನೆ.
ಅತ್ರ ತೇ ಕಥಯಿಷ್ಯಾಮಿ ಮಹದಾಖ್ಯಾನಮುತ್ತಮಮ್ |
ಸುರಭ್ಯಾಶ್ಚೈವ ಸಂವಾದಮಿಂದ್ರಸ್ಯ ಚ ವಿಶಾಂಪತೇ ||18||
ಎಲೈ ರಾಜನೇ! ನಾನು ಈ ವಿಷಯದಲ್ಲಿ ಸುರಭಿಗೂ ಇಂದ್ರನಿಗೂ ನಡೆದ ಸಂವಾದರೂಪವಾದ ಶ್ರೇಷ್ಠವಾದ ಕಥೆಯನ್ನು ನಿನಗೆ ಹೇಳುವೆನು.

ತ್ರಿವಿಷ್ಟಪಗತಾ ರಾಜನ್ ಸುರಭಿಃ ಪ್ರಾರುದತ್ ಕಿಲ |
ಗವಾಂ ಮಾತಾ ಪುರಾ ತಾತ ತಾಮಿಂದ್ರೋಽನ್ವಕೃಪಾಯತ ॥19॥
ಎಲೈ ರಾಜನೇ! ಹಿಂದೆ ಗೋಮಾತೆಯಾದ ಸುರಭಿಯು ಸ್ವರ್ಗಲೋಕಕ್ಕೆ ಹೋಗಿ ಇಂದ್ರನ ಮುಂದೆ ಅತ್ತಳು. ಇಂದ್ರನು ಅವಳಲ್ಲಿ ಅನುಕಂಪೆಯನ್ನು ಮಾಡಿದನು.
ಇಂದ್ರಃ
ಕಿಮಿದಂ ರೋದಿಷಿ ಶುಭೇ ಕಚ್ಚಿತ್ ಕ್ಷೇಮಂ ದಿವೌಕಸಾಮ್ |
ಮನುಷ್ಯೇಷ್ವಥವಾ ಗೋಷು ನೈತದಲ್ಪಂ ಭವಿಷ್ಯತಿ ॥20॥
ಎಲೌ ಶುಭವಾದವಳೇ! ಏಕೆ ಅಳುತ್ತಿದ್ದೀಯೆ? ದೇವತೆಗಳಿಗೆಲ್ಲಾ ಕ್ಷೇಮವಷ್ಟೇ? ಮನುಷ್ಯರಿಗೆ ಗೋವುಗಳಿಗೆ ಕ್ಷೇಮವಷ್ಟೇ? ನೀನು ಅಳುವುದಕ್ಕೆ ಅಲ್ಪವಾದ ಕಾರಣವು ಇರಲಾರದು.
ಸುರಭಿಃ
ವಿನಿಪಾತೋ ನ ವಃ ಕಶ್ಚಿದ್ ದೃಶ್ಯತೇ ತ್ರಿದಶಾಧಿಪ |
ಅಹಂ ತು ಪುತ್ರಂ ಶೋಚಾಮಿ ತೇನ ರೋದಿಮಿ ಕೌಶಿಕ ॥21॥
ಎಲೈ ದೇವರಾಜನೇ! ನಿಮಗೆ ಯಾವ ಸ್ಥಾನಭ್ರಂಶವೂ ಇಲ್ಲ. ನಾನು ನನ್ನ ಮಗನನ್ನು ಕುರಿತು ಶೋಕಪಡುತ್ತಿದ್ದೇನೆ. ಇಂದ್ರನೇ, ಆ ಕಾರಣದಿಂದ ಅಳುತ್ತಿದ್ದೇನೆ.
ಪಶ್ಯೈನಂ ಕರ್ಷಕಂ ರೌದ್ರಂ ದುರ್ಬಲಂ ಮಮ ಪುತ್ರಕಮ್ |
ಪ್ರತೋದೇನಾಭಿನಿಘ್ನಂತಂ ಲಾಂಗಲೇನಾಭಿಪೀಡಿತಮ್ ॥22॥
ನನ್ನ ದುರ್ಬಲನಾದ ಪುತ್ರನನ್ನೂ ಈ ಉಗ್ರವಾಗಿ ಉಳುವವನನ್ನೂ ನೋಡು. ಇವನು ಉಗ್ರವಾದ ಚಾವಟಿಯಿಂದ ಹೊಡೆಯುತ್ತಾ ಬಾಲವನ್ನು ಮುರಿಯುತ್ತಾ ಪೀಡಿಸುತ್ತಿದ್ದಾನೆ.
ಏನಂ ದೃಷ್ಟ್ವಾ ಭೃಶಂ ಶ್ರಾಂತಂ ವಧ್ಯಮಾನಂ ಸುರಾಧಿಪ |
ಕೃಪಾವಿಷ್ಟಾಽಸ್ಮಿ ದೇವೇಂದ್ರ ಮನಶ್ಚೋದ್ವಿಜತೇ ಮಮ ॥23॥
ಎಲೈ ದೇವೇಂದ್ರನೇ! ಸುರಾಧಿಪನೇ! ಬಹಳ ಆಯಾಸಗೊಂಡಿದ್ದರೂ ಬಹಳವಾಗಿ ಹೊಡೆಯಲ್ಪಡುವ ಈ ನನ್ನ ಪುತ್ರನನ್ನು ನೋಡಿ ನನಗೆ ಅವನಲ್ಲಿ ಕೃಪೆಯುಂಟಾಗಿದೆ. ನನ್ನ ಮನಸ್ಸು ಅವನಿಗಾಗಿ ಹೊಯ್ದಾಡುತ್ತಿದೆ.
ಏಕಸ್ತ್ವತ್ರ ಬಲೋಪೇತೋ ಧುರಮುದ್ವಹತೇಽಧಿಕಾಮ್ |
ಅಪರೋಽಲ್ಪಬಲಪ್ರಾಣಃ ಕೃಶೋ ಧಮನಿಸಂತತಃ |
ಕೃಚ್ಛ್ರಾದುದ್ವಹತೇ ಭಾರಂ ತಂ ವೈ ಶೋಚಾಮಿ ವಾಸವ ॥24॥
ಆ ಕೃಷಿಕನು ಹೂಡಿರುವ ಎರಡು ಎತ್ತುಗಳಲ್ಲಿ ಒಂದು ಎತ್ತು ಬಲಾಢ್ಯವಾಗಿದ್ದು ಹೆಚ್ಚಿನ ಭಾರವನ್ನು ಹೊರುತ್ತಿದೆ. ಇನ್ನೊಂದು ಎತ್ತು ಕೃಶವಾಗಿದ್ದು ಧಮನಿಗಳು ಕಾಣುತ್ತಾ ಅಲ್ಪಬಲ ಅಲ್ಪಪ್ರಾಣವುಳ್ಳದ್ದಾಗಿ ಕಷ್ಟಪಟ್ಟು ಭಾರವನ್ನು ಹೊರುತ್ತಿದೆ. ಇಂದ್ರನೇ ಆ ಕೃಶವಾದ ಎತ್ತನ್ನು ನೋಡಿ ನಾನು ಶೋಕಪಡುತ್ತಿದ್ದೇನೆ.
ವಧ್ಯಮಾನಃ ಪ್ರತೋದೇನ ತುದ್ಯಮಾನಸ್ತಥೈವ ಚ |
ನೈವ ಶಕ್ನೋತಿ ತಂ ಭಾರಮುದ್ವೋಢುಂ ಪಶ್ಯ ವಾಸವ ॥25॥
ಇಂದ್ರನೇ ಚಾವಟಿಯಿಂದ ಹೊಡೆದರೂ ಮತ್ತು ಬಹಳವಾಗಿ ಚುಚ್ಚಿ ಪ್ರಯೋಗಿಸಿದರೂ ಆ ಎತ್ತು ಭಾರವನ್ನು ಹೊರಲಾರದು ಎಂಬುದನ್ನು ನೋಡು.
ತತೋಽಹಂ ತಸ್ಯ ದುಃಖಾರ್ತಾ ವಿರೌಮಿ ಭೃಶದುಃಖಿತಾ |
ಅಶ್ರೂಣ್ಯಾವರ್ತಯಂ ಚೈವ ನೇತ್ರಾಭ್ಯಾಂ ಕರುಣಾವತೀ ॥26॥
ಆದ್ದರಿಂದ ನಾನು ಅವನ ದುಃಖದಿಂದ ದುಃಖಿತಳಾಗಿ ಅವನ ಮೇಲೆ ಕರುಣೆಯನ್ನುಹೊಂದಿ ಕಣ್ಣುಗಳಿಂದ ನೀರನ್ನು ಸುರಿಸುತ್ತಾ ಅಳುತ್ತಿದ್ದೇನೆ.
ಇಂದ್ರಃ
ತವ ಪುತ್ರಸಹಸ್ರೇಷು ಪೀಡ್ಯಮಾನೇಷು ಶೋಭನೇ |
ಕಿಂ ಕೃಪಾಯಿತವತ್ಯತ್ರ ಪುತ್ರ ಏಕೋಽತ್ರ ಪೀಡ್ಯತೇ ॥27॥
ಎಲೌ ಶೋಭನಳೇ! ನಿನ್ನ ಸಹಸ್ರಪುತ್ರರು ಹೀಗೆ ಪೀಡಿಸಲ್ಪಡುತ್ತಿರುವಾಗ ಈ ಒಬ್ಬ ಪುತ್ರನ ಪೀಡೆಯನ್ನು ಮಾತ್ರ ನೋಡಿ ನಿನಗೆ ಏಕೆ ಕೃಪೆಯುಂಟಾಗಿದೆ?
ಸುರಭಿಃ
ಯದಿ ಪುತ್ರಸಹಸ್ರಂ ಮೇ ಸರ್ವತ್ರ ಸಮಮೇವ ಮೇ |
ದೀನಸ್ಯ ತು ತತಃ ಶಕ್ರ ಪುತ್ರಸ್ಯಾಭ್ಯಧಿಕಾ ಕೃಪಾ ॥28॥
ನನಗೆ ಸಹಸ್ರ ಮಕ್ಕಳಿದ್ದರೂ ಎಲ್ಲರೂ ಸಮರಾದವರೇ. ಆದರೆ ಎಲೈ ಇಂದ್ರನೇ ಅವರಲ್ಲಿ ದುರ್ಬಲನಾದ ಪುತ್ರನಲ್ಲಿ ನನ್ನ ಕೃಪೆಯು ಅಧಿಕವಾಗಿರುತ್ತದೆ.
ವ್ಯಾಸಃ
ತದಿಂದ್ರಃ ಸುರಭೇರ್ವಾಕ್ಯಂ ನಿಶಮ್ಯ ಭೃಶವಿಸ್ಮಿತಃ |
ಜೀವಿತೇನಾಪಿ ಕೌರವ್ಯ ಮೇನೇಽಭ್ಯಧಿಕಮಾತ್ಮಜಮ್ ॥29॥
ಎಲೈ ಕೌರವ್ಯನೇ! ಇಂದ್ರನು ಸುರಭಿಯ ಆ ವಾಕ್ಯವನ್ನು ಕೇಳಿ ಬಹಳ ವಿಸ್ಮಿತನಾಗಿ ತನ್ನ ಜೀವನಕ್ಕಿಂತಲೂ ಪುತ್ರನೇ ಶ್ರೇಷ್ಠನೆಂದು

ತಿಳಿದನು.
ಪ್ರವವರ್ಷ ಚ ತತ್ರೈವ ಸಹಸಾ ತೋಯಮುಲ್ಬಣಮ್ |
ಕರ್ಷಕಸ್ಯಾಚರನ್ ವಿಘ್ನಂ ಭಗವಾನ್ ಪಾಕಶಾಸನಃ ॥30॥
ತಕ್ಷಣದಲ್ಲಿ ಅಲ್ಲಿಯೇ ಇದ್ದಕ್ಕಿದ್ದಂತೆ ಬಹಳವಾದ ಮಳೆಯನ್ನು ಸುರಿಸಿ ಪೂಜ್ಯನಾದ ಇಂದ್ರನು ಆ ಕರ್ಷಕನಿಗೆ ವಿಘ್ನವನ್ನು ತಂದೊಡ್ಡಿದನು.
ತದ್ಯಥಾ ಸುರಭಿಃ ಪ್ರಾಹ ಸಮಮೇವಾಸ್ತು ತೇ ತಥಾ |
ಸುತೇಷು ರಾಜನ್ ಸರ್ವೇಷು ದೀನೇಷ್ವಭ್ಯಧಿಕಾ ಕೃಪಾ ॥31॥
ಎಲೈ ರಾಜನೇ! ಸುರಭಿಯು ಹೇಳಿದಂತೆ ನಿನ್ನ ದೃಷ್ಟಿಯು ಎಲ್ಲ ಮಕ್ಕಳಲ್ಲಿಯೂ ಸಮವಾಗಿಯೇ ಇರಲಿ. ಆದರೆ ದೀನರಾದವರಲ್ಲಿ ಹೆಚ್ಚಾಗಿ ಕೃಪೆಯಿರಲಿ.
ಯಾದೃಶೋ ಮೇ ಸುತಃ ಪಾಂಡುಸ್ತಾದೃಶೋ ಮೇಽಸಿ ಪುತ್ರಕ|
ವಿದುರಶ್ಚ ಮಹಾಪ್ರಾಜ್ಞಃ ಸ್ನೇಹಾದೇತದ್ ಬ್ರವೀಮ್ಯಹಮ್ ॥32॥
ಎಲೈ ಪುತ್ರನೇ! ನನಗೆ ಪಾಂಡವು ಹೇಗೋ ನೀನೂ ಹಾಗೆಯೇ ಮತ್ತು ಮಹಾಪ್ರಾಜ್ಞನಾದ ವಿದುರನೂ ಹಾಗೆಯೇ ಪುತ್ರನಾಗಿದ್ದಾನೆ. ನಾನು ಈ ವಿಷಯವನ್ನು ಸ್ನೇಹದಿಂದ  ಹೇಳುತ್ತಿದ್ದೇನೆ.
ಚಿರಾಯ ತವ ಪುತ್ರಾಣಾಂ ಶತಮೇಕಂ ಚ ಪಾರ್ಥಿವ |
ಪಾಂಡೋಃ ಪಂಚೈವ ಲಕ್ಷ್ಯಂತೇ ತೇಽಪಿ ಮಂದಾಃ ಸುದುಃಖಿತಾಃ ॥
ಎಲೈ ರಾಜನೇ! ನಿನಗೆ ನೂರು ಮಕ್ಕಳಿದ್ದಾರೆ. ಪಾಂಡುವಿಗಾದರೆ ಐದೇ ಮಕ್ಕಳು. ಅವರೂ ಸಹ ಮಂದರೂ ಮತ್ತು ದುಃಖಪೂರ್ಣರು ಆಗಿದ್ದಾರೆ.
ಕಥಂ ಜೀವೇಯುರಿತ್ಯೇವ ಕಥಂ ವರ್ಧೇಯುರಿತ್ಯಪಿ |
ಇತಿ ದೀನೇಷು ಪಾರ್ಥೇಷು ಮನೋ ಮೇ ಪರಿತಪ್ಯತೇ ॥34॥
ಅವರು ಹೇಗೆ ಜೀವಿಸುತ್ತಾರೆ ಹೇಗೆ ಅಭಿವೃದ್ಧಿಯನ್ನು ಹೊಂದುತ್ತಾರೆ ಎಂದು ದೀನರಾದ ಪಾಂಡವರ ವಿಷಯದಲ್ಲಿ ನನ್ನ ಮನಸ್ಸು ಪರಿತಪಿಸುತ್ತದೆ.
ಯದಿ ಪಾರ್ಥಿವ ಕೌರವ್ಯಾನ್ ಜೀವಮಾನಾನಿಹೇಚ್ಛಸಿ |
ದುರ್ಯೋಧನಸ್ತವ ಸುತಃ ಶಮಂ ಗಚ್ಛತು ಪಾಂಡವೈಃ ॥35॥
ಎಲೈ ರಾಜನೇ ನೀನು ಕುರುವಂಶದವರೆಲ್ಲರೂ ಬದುಕಿರಬೇಕೆಂದು ಬಯಸುವುದಾದರೆ ನಿನ್ನ ಪುತ್ರನಾದ ದುರ್ಯೋಧನನು ಪಾಂಡವರ ಜೊತೆಯಲ್ಲಿ ಸಂಧಾನವನ್ನು ಮಾಡಿಕೊಳ್ಳಲಿ.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಮೋಽಧ್ಯಾಯಃ ॥
॥ ಆರಣ್ಯಕಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
*****
ಒಂಭತ್ತನೆಯ ಅಧ್ಯಾಯ
(ದುರ್ಯೋಧನನಿಗೆ ಉಪದೇಶಮಾಡಲು ನಿರಾಕರಿಸಿ ವ್ಯಾಸರ ಗಮನ, ಮೈತ್ರೇಯರ ಆಗಮನ ಮತ್ತು ದುರ್ಯೋಧನನಿಗೆ ಅವರ ಶಾಪ)
ಧೃತರಾಷ್ಟ್ರಃ
ಏವಮೇತನ್ಮಹಾಪ್ರಾಜ್ಞ ಯಥಾ ವದಸಿ ನೋ ಮುನೇ |
ಅಹಂ ಚೈವ ವಿಜಾನಾಮಿ ಸರ್ವೇ ಚೇಮೇ ನರಾಧಿಪಾಃ ॥1॥
ಎಲೈ ಮಹಾಪ್ರಾಜ್ಞರಾದ ಮುನಿಗಳೇ! ನೀವು ಹೇಳಿದಂತೆಯೇ ಸರಿ. ಅದರಂತೆಯೇ ನಾನೂ ಮತ್ತು ಈ ಎಲ್ಲ ರಾಜರೂ ತಿಳಿದಿದ್ದೇವೆ.
ಭವಾಂಸ್ತು ಮನ್ಯತೇ ಸಾಧು ಯತ್ ಕುರೂಣಾಂ ಸುಖೋದಯಮ್ |
ತದೇವ ವಿದುರೋಽಪ್ಯಾಹ ಭೀಷ್ಮೋ ದ್ರೋಣಶ್ಚ ಮಾಂ ಮುನೇ ॥
ನೀವು ಕುರುಗಳಿಗೆ ಸುಖಾವಹವೆಂದು ಯಾವುದನ್ನು ಭಾವಿಸಿದ್ದೀರೋ ಅದನ್ನೇ ವಿದುರನೂ ಭೀಷ್ಮರೂ ಮತ್ತು ದ್ರೋಣರೂ ನನ್ನನ್ನು ಕುರಿತು ಹೇಳಿದ್ದಾರೆ.
ಯದಿ ತ್ವಹಮನುಗ್ರಾಹ್ಯಃ  ಕೌರವೇಷು ದಯಾ ಯದಿ |
ಅನುಶಾಧಿ ದುರಾತ್ಮಾನಂ ಪುತ್ರಂ ದುರ್ಯೋಧನಂ ಮಮ ॥3॥
ನನ್ನ ಮೇಲೆ ನಿಮ್ಮ ಅನುಗ್ರಹವಿದ್ದರೆ ಮತ್ತು ಕೌರವರಲ್ಲಿ ದಯೆ ಇದ್ದರೆ ನನ್ನ ದುಷ್ಟಪುತ್ರನಾದ ದುರ್ಯೋಧನನಿಗೆ ಅನುಶಾಸನವನ್ನು ಮಾಡಿ.
ವ್ಯಾಸಃ
ಅಯಮಾಯಾತಿ ವೈ ರಾಜನ್ ಮೈತ್ರೇಯೋ ಭಗವಾನೃಷಿಃ |
ಅನ್ವೀಕ್ಷ್ಯ ಪಾಂಡವಾನ್ ಭ್ರಾತೄ ನ್ ಇಹೈವಾಽಸ್ಮದ್ದಿದೃಕ್ಷಯಾ ॥4॥
ಪೂಜ್ಯರಾದ ಮೈತ್ರೇಯಋಷಿಗಳು  ಅಣ್ಣ ತಮ್ಮಂದಿರಾದ ಪಾಂಡವರನ್ನು ನೋಡಿ ನನ್ನನ್ನು ನೋಡುವ ಇಚ್ಛೆಯಿಂದ ಇಲ್ಲಿಗೇ ಬರುತ್ತಿದ್ದಾರೆ.
ಏಷ ದುರ್ಯೋಧನಂ ಪುತ್ರಂ ತವ ರಾಜನ್ ಮಹಾನೃಷಿಃ |

ಅನುಶಾಸ್ತು ಯಥಾನ್ಯಾಯಂ ಶಮಾಯಾಸ್ಯ ಕುಲಸ್ಯ ತೇ ॥5॥
ಎಲೈ ಮಹಾರಾಜನೇ! ಈ ಮಹರ್ಷಿಗಳು ನಿನ್ನ ಪುತ್ರನಾದ ದುರ್ಯೋಧನನಿಗೆ ನ್ಯಾಯಕ್ಕೆ ಅನುಗುಣವಾಗಿ ನಿನ್ನ ಕುಲದ ಹಿತಕ್ಕೋಸ್ಕರವಾಗಿ ಅನುಶಾಸನಮಾಡುತ್ತಾರೆ.
ಬ್ರೂಯಾದ್ ಯದೇಷ ರಾಜೇಂದ್ರ ತತ್ ಕಾರ್ಯಮವಿಶಂಕಯಾ |
ಅಕ್ರಿಯಾಯಾಂ ಹಿ ಕಾರ್ಯಸ್ಯ ಪುತ್ರಂ ತೇ ಶಪ್ಸ್ಯತೇ ರುಷಾ ॥6॥
ಎಲೈ ರಾಜೇಂದ್ರನೇ, ಅವರು ಏನನ್ನು ಹೇಳುತ್ತಾರೆಯೋ ಅದನ್ನು ನಿಃಶಂಕೆಯಿಂದ ನೆರವೇರಿಸಬೇಕು. ಆ ಕಾರ್ಯವನ್ನು ಮಾಡದಿದ್ದರೆ ಅವರು ಸಿಟ್ಟಿನಿಂದ ನಿನ್ನ ಮಗನಿಗೆ ಶಾಪವನ್ನು ಕೊಡುವರು.
ವೈಶಂಪಾಯನಃ
ಏವಮುಕತ್ವ ಯಯೌ ವ್ಯಾಸೋ ಮೈತ್ರೇಯಃ ಪ್ರತ್ಯದೃಶ್ಯತ |
ಪೂಜಯಾ ಪ್ರತಿಜಗ್ರಾಹ ಸಸುತಸ್ತಂ ನರಾಧಿಪಃ ॥7॥
ಹೀಗೆ ಹೇಳಿ ವ್ಯಾಸರು ಹೊರಟುಹೋದರು. ಮೈತ್ರೇಯರು ಕಾಣಿಸಿಕೊಂಡರು. ರಾಜನು ತನ್ನ ಮಕ್ಕಳ ಜೊತೆಯಲ್ಲಿ ಅವರನ್ನು ಪೂಜಿಸಿ ಸ್ವೀಕರಿಸಿದನು.
ಕೃತ್ವಾಽರ್ಘ್ಯಾದ್ಯಾಃ ಕ್ರಿಯಾಃ ಸರ್ವಾ ವಿಶ್ರಾಂತಂ ಮುನಿಪುಂಗವಮ್ |
ಪ್ರಶ್ರಯೇಣಾಬ್ರವೀದ್ ರಾಜಾ ಧೃತರಾಷ್ಟ್ರೋಽಂಬಿಕಾಸುತಃ ॥8॥
ಅಂಬಿಕಾಸುತನಾದ ಧೃತರಾಷ್ಟ್ರರಾಜನು ಅವರಿಗೆ ಅರ್ಘ್ಯಾದಿ ಉಚಿತಕ್ರಿಯೆಗಳನ್ನು ಮಾಡಿ ಅವರು ವಿಶ್ರಾಂತಿಯನ್ನು ತೆಗೆದುಕೊಂಡಮೇಲೆ ಆ ಮುನಿಪುಂಗವರನ್ನು ಕುರಿತು ವಿನಯದಿಂದ ಮಾತನಾಡಿದನು.
ಸುಖೇನಾಗಮನಂ ಕಚ್ಚಿದ್ ಭಗವನ್ ಕುರುಜಾಂಗಲಾನ್ |
ಕಚ್ಚಿತ್ ಕುಶಲಿನೋ ವೀರಾ ಭ್ರಾತರಃ ಪಂಚ ಪಾಂಡವಾಃ ॥9॥
ಪೂಜ್ಯರೇ! ತಾವು ಸುಖವಾಗಿ ಕುರುಜಾಂಗಲಕ್ಕೆ ಆಗಮನವನ್ನು ಮಾಡಿದ್ದೀರಾ? ವೀರರೂ, ಅಣ್ಣತಮ್ಮಂದಿರೂ ಆದ ಪಂಚಪಾಂಡವರು ಕ್ಷೇಮದಿಂದಿದ್ದಾರೆಯೇ?
ಸಮಯೇ ಸ್ಥಾತುಮಿಚ್ಛಂತಿ ಕಚ್ಚಿಚ್ಚ ಪುರುಷರ್ಷಭಾಃ |
ಕಚ್ಚಿತ್ ಕುರೂಣಾಂ ಸೌಭ್ರಾತ್ರಮವಿಚ್ಛಿನ್ನಂ ಭವಿಷ್ಯತಿ ॥10॥
ಪುರುಷರ್ಷಭರಾದ ಆ ಪಾಂಡವರು ತಾವು ಮಾಡಿದ ಹದಿಮೂರುವರ್ಷದ ನಿಯಮವನ್ನು ಪಾಲಿಸುವ ಇಚ್ಛೆಯುಳ್ಳವ-ರಾಗಿದ್ದಾರೆಯೇ? ಕುರುಗಳಿಗೆ ಅವಿಚ್ಛಿನ್ನವಾದ ಭ್ರಾತೃಪ್ರೇಮವು ಉಂಟಾಗುವುದೇ?
ಮೈತ್ರೇಯಃ
ತೀರ್ಥಯಾತ್ರಾಂ ಪರಿಕ್ರಾಮನ್ ಪ್ರಾಪ್ತೋ ವೈ ಕುರುಜಾಂಗಲಮ್ |
ಯದೃಚ್ಛಯಾ ಧರ್ಮರಾಜಂ ದೃಷ್ಟವಾನ್ ಕಾಮ್ಯಕೇ ವನೇ ॥11॥
ನಾನು ತೀರ್ಥಯಾತ್ರೆಯನ್ನು ಮಾಡುತ್ತಾ ಯದೃಚ್ಛೆಯಿಂದ ಕಾಮ್ಯಕವನಲ್ಲಿ ಧರ್ಮರಾಜನನ್ನು ನೋಡಿ ಕುರುಜಾಂಗಲಕ್ಕೆ ಬಂದಿದ್ದೇನೆ.
ತಂ ಜಟಾಜಿನಸಂವೀತಂ ತಪೋವನನಿವಾಸಿನಃ |
ಸಮಾಜಗ್ಮುರ್ಮಹಾತ್ಮಾನಂ ದ್ರಷ್ಟುಂ ಮುನಿಗಣಾಃ ಪ್ರಭೋ ॥12॥
ಪ್ರಭುವೇ! ಜಟಾಜಿನಧಾರಿಯಾದ ಆ ಮಹಾತ್ಮನನ್ನು ನೋಡಲು ತಪೋವನನಿವಾಸಿಗಳಾದ ಮುನಿಗಳ ಸಮೂಹವೆಲ್ಲವೂ ಅಲ್ಲಿಗೆ ಬಂದವು.
ತತ್ರಾಶ್ರೌಷಮಹಂ ರಾಜನ್ ಪುತ್ರಾಣಾಂ ತವ ವಿಗ್ರಹಮ್ |
ಅನಯಂ ದ್ಯೂತರೂಪೇಣ ಮಹಾಪಾಯಮುಪಸ್ಥಿತಮ್ ॥13॥
ಎಲೈರಾಜನೇ! ಅಲ್ಲಿ ನಾನು ನಿನ್ನ ಪುತ್ರರ ವಿರೋಧವನ್ನೂ ದ್ಯೂತರೂಪದಿಂದ ಉಂಟಾದ ಅನ್ಯಾಯವನ್ನೂ ಮತ್ತು ಸನ್ನಿಹಿತವಾಗಿರುವ ದೊಡ್ಡ ಅಪಾಯವನ್ನೂ ಕೇಳಿದೆನು.
ತತೋಽಹಂ ತ್ವಾಮನುಪ್ರಾಪ್ತಃ ಕೌರವಾಣಾಮವೇಕ್ಷಯಾ |
ಸದಾ ಹ್ಯಭ್ಯಧಿಕಃ ಸ್ನೇಹಃ ಪ್ರೀತಿಶ್ಚ ತ್ವಯಿ ಮೇ ವಿಭೋ ॥14॥
ಆದ್ದರಿಂದ ಕೌರವರ ಮೇಲಿನ ಅನುಕಂಪೆಯಿಂದ ನಾನು ನಿನ್ನ ಬಳಿಗೆ ಬಂದಿದ್ದೇನೆ. ನಿನ್ನಲ್ಲಿ ನನಗೆ ಯಾವಾಗಲೂ ಬಹಳ ಅಧಿಕವಾದ ಪ್ರೀತಿಯಿದೆ.
ನೈತದೌಪಯಿಕಂ ರಾಜನ್ ತ್ವಯಿ ಭೀಷ್ಮೇ ಚ ಜೀವತಿ |
ಯದನ್ಯೋನ್ಯೇನ ತೇ ಪುತ್ರಾ ವಿರುಧ್ಯಂತೇ ನರಾಧಿಪ ॥15॥
ಎಲೈ ನರಾಧಿಪನೇ! ರಾಜನೇ! ನೀನು ಮತ್ತು ಭೀಷ್ಮರು ಬದುಕಿರುವಾಗ ನಿನ್ನ ಮಕ್ಕಳು ಪರಸ್ಪರವಾಗಿ ವಿರೋಧವನ್ನು ಮಾಡುವುದು ಯುಕ್ತವಲ್ಲ.
ಮೇಢೀಭೂತಃ ಸ್ವಯಂ ರಾಜನ್ ನಿಗ್ರಹೇ ಪ್ರಗ್ರಹೇ ಭವಾನ್ |
ಕಿಮರ್ಥಮನಯಂ ಘೋರಮುತ್ಪತಂತಮುಪೇಕ್ಷಸೇ ॥16॥
ರಾಜನೇ! ನೀನು ಯಾರನ್ನು ನಿಗ್ರಹಮಾಡಬೇಕಾದರೂ ಅಥವಾ ಸ್ವೀಕಾರಮಾಡಬೇಕಾದರೂ ಮೇಟಿಯಂತೆ ಪ್ರಧಾನನಾದವನು. ಘೋರವಾಗಿ ಎದ್ದುಬರುತ್ತಿರುವ ಈ ಅನ್ಯಾಯವನ್ನು ಏತಕ್ಕೆ ಉಪೇಕ್ಷೆಮಾಡುತ್ತಿದ್ದೀಯೆ?
ದಸ್ಯೂನಾಮಿವ ಯದ್ ವೃತ್ತಂ ಸಭಾಯಾಂ ಕುರುನಂದನ |

ತೇನ ನ ಭ್ರಾಜಸೇ ರಾಜನ್ ತಾಪಸಾನಾಂ ಸಮಾಗಮೇ ॥17॥
ಎಲೈ ಕುರುನಂದನನೇ! ಸಭೆಯಲ್ಲಿ ದಸ್ಯುಗಳ ನಡೆವಳಿಕೆಯಂತೆ ಏನು ನಡೆಯಿತೋ ಅದರಿಂದ ನೀನು ತಾಪಸರ ಸಮೂಹದಲ್ಲಿ ಶೋಭಿಸುವುದಿಲ್ಲ.
ವೈಶಂಪಾಯನಃ
ತತೋ ವ್ಯಾವೃತ್ಯ ರಾಜಾನಂ ದುರ್ಯೋಧನಮಮರ್ಷಣಮ್ |
ಉವಾಚ ಶ್ಲಕ್ಷ್ಣಯಾ ವಾಚಾ ಮೈತ್ರೇಯೋ ಭಗವಾನೃಷಿಃ ॥18॥
ಅನಂತರ ರಾಜನಿಂದ ಮುಖವನ್ನು ತಿರುಗಿಸಿ ಕ್ರೋಧಶೀಲನಾದ ದುರ್ಯೋಧನನ್ನು ಕುರಿತು ಪೂಜ್ಯರಾದ ಮೈತ್ರೇಯ ಋಷಿಗಳು ಮಧುರವಾಗಿ ಮಾತನಾಡಿದರು.
ದುರ್ಯೋಧನ ಮಹಾಬಾಹೋ ನಿಬೋಧ ವದತಾಂವರ |
ವಚನಂ ಮೇ ಮಹಾಪ್ರಾಜ್ಞ ಬ್ರುವತೋ ಯದ್ಧಿತಂ ತವ ॥19॥
ಮಹಾಬಾಹುವಾದ ದುರ್ಯೋಧನನೇ! ಮಾತನಾಡುವವರಲ್ಲಿ ಶ್ರೇಷ್ಠನಾದವನೇ! ಮಹಾಪ್ರಾಜ್ಞನಾದವನೇ ನಾನು ಹೇಳುವ ನಿನ್ನ ಹಿತವನ್ನು ಕೇಳು.
ಮಾ ದ್ರುಹಃ ಪಾಂಡವಾನ್ ರಾಜನ್ ಕುರುಷ್ವ ಹಿತಮಾತ್ಮನಃ |
ಕುರೂಣಾಂ ಪಾಂಡವಾನಾಂ ಚ ಲೋಕಸ್ಯ ಚ ನರರ್ಷಭ ॥20॥
ಎಲೈ ರಾಜನೇ! ಪಾಂಡವರಿಗೆ ದ್ರೋಹವನ್ನು ಮಾಡದೆ ನಿನಗೆ ಹಿತವನ್ನು ಸಂಪಾದಿಸಿಕೋ. ಎಲೈ ನರಶ್ರೇಷ್ಠನೇ! ಕುರುಗಳಿಗೂ ಪಾಂಡವರಿಗೂ ಮತ್ತು ಲೋಕಕ್ಕೂ ಹಿತವನ್ನು ಉಂಟುಮಾಡು.
ಪಾಂಡವಾನ್ ಪ್ರಾಪ್ಯ ತಾನ್ ರಾತ್ರೌ ಕಿರ್ಮೀರೋ ನಾಮ ರಾಕ್ಷಸಃ |
ಆವೃತ್ಯ ಮಾರ್ಗಂ ರೌದ್ರಾತ್ಮಾ ತಸ್ಥೌ ಗಿರಿರಿವಾಚಲಃ ॥21॥
ರಾತ್ರಿಯ ವೇಳೆಯಲ್ಲಿ ಕಿರ್ಮೀರ ಎಂಬ ರಾಕ್ಷಸನು ಪಾಂಡವರ ಸಮೀಪಕ್ಕೆ ಬಂದು ಮಾರ್ಗವನ್ನು ಅಡ್ಡಗಟ್ಟಿ ಅಚಲವಾದ ಪರ್ವತದಂತೆ ಘೋರ ಸ್ವರೂಪವನ್ನು ಧರಿಸಿ ನಿಂತನು.
ತಂ ಭೀಮಃ ಸಮರಶ್ಲಾಘೀ ಬಲೇನ ಬಲಿನಾಂ ವರಃ |
ಜಘಾನ ಪಶುಮಾರೇಣ ವ್ಯಾಘ್ರಃ ಕ್ಷುದ್ರಮೃಗಂ ಯಥಾ ॥22॥
ಯುದ್ಧಪ್ರಿಯನಾದ ಮತ್ತು ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನು ವ್ಯಾಘ್ರವು ಕ್ಷುದ್ರಮೃಗವನ್ನು ಕೊಲ್ಲುವಂತೆ ಪಶುಮರಣದಂತೆ ಅವನನ್ನು ಕೊಂದನು.
ಪಶ್ಯ ದಿಗ್ವಿಜಯೇ ರಾಜನ್ ಯಥಾ ಭೀಮೇನ ಪಾತಿತಃ |
ಜರಾಸಂಧೋ ಮಹೇಷ್ವಾಸೋ ನಾಗಾಯುತಬಲೋ ಯುಧಿ ॥23॥
ಎಲೈ ರಾಜನೇ! ದಿಗ್ವಿಜಯ ಸಮಯದಲ್ಲಿ ಹತ್ತುಸಾವಿರ ಆನೆಗಳ ಬಲವುಳ್ಳ ಮಹಾಧನುರ್ಧಾರಿಯಾದ ಜರಾಸಂಧನು ಯುದ್ಧದಲ್ಲಿ ಹೇಗೆ ಭೀಮನಿಂದ ಹತನಾದನು ಎಂಬುದನ್ನು ನೋಡು.
ಸಂಬಂಧೀ ಯಸ್ಯ ಶ್ರೀಕೃಷ್ಣೋ ಯೇಷಾಂ ಸ್ಯಾಲಶ್ಚ ಪಾರ್ಷತಃ|
ತೇ ತೇ ಸರ್ವೇ ನರವ್ಯಾಘ್ರಾಃ ಶೂರಾ ವಿಕ್ರಾಂತಯೋಧಿನಃ ॥24॥
ಯಾರಿಗೆ ಶ್ರೀಕೃಷ್ಣನು ಬಂಧುವೋ ಯಾರಿಗೆ ಧೃಷ್ಟದ್ಯುಮ್ನನು ಭಾವಮೈದುನನೊ ಅಂತಹ ಪಾಂಡವರೆಲ್ಲರೂ ನರವ್ಯಾಘ್ರರು ಶೂರರು ಮತ್ತು ವಿಕ್ರಮದಿಂದ ಯುದ್ಧಮಾಡುವವರು.
ಸರ್ವೇ ನಾಗಾಯುತಪ್ರಾಣಾ ವಜ್ರಸಂಹನನಾ ದೃಢಾಃ |
ರಾಜನ್ ಪ್ರೀತಿಕರಾಃ ಸರ್ವೇ ಸರ್ವೇ ಪುರುಷಮಾನಿನಃ ॥25॥
ಎಲ್ಲರೂ ಹತ್ತುಸಾವಿರ ಆನೆಗಳ ಬಲವುಳ್ಳವರು ವಜ್ರ ಸಮಾನವಾದ ಶರೀರವನ್ನು ಧರಿಸಿದವರು ಮತ್ತು ದೃಢರಾದವರು. ರಾಜನೇ! ಎಲ್ಲರೂ ಪ್ರೀತಿಯುಕ್ತರಾದವರು ಮತ್ತು ಇನ್ನೊಬ್ಬರಿಗೆ ಗೌರವವನ್ನು ನೀಡುವವರು.
ಹಂತಾರೋ ದೇವಶತ್ರೂಣಾಂ ರಕ್ಷಸಾಂ ಕಾಮರೂಪಿಣಾಮ್|
ಹಿಡಿಂಬಬಕಮುಖ್ಯಾನಾಂ ಕಿರ್ಮೀರಸ್ಯ ಚ ರಕ್ಷಸಃ ॥26॥
ದೇವಶತ್ರುಗಳಾದ ಇಚ್ಛೆಯಂತೆ ಬೇರೆ ಬೇರೆ ರೂಪಗಳನ್ನು ಧರಿಸುವ ರಾಕ್ಷಸರನ್ನು ಕೊಲ್ಲುವವರು. ಹಿಡಿಂಬ ಬಕ ಕಿರ್ಮೀರ ಮೊದಲಾದ ಅನೇಕ ರಾಕ್ಷಸರನ್ನು ಸಂಹರಿಸಿದವರು.
ಕಸ್ತಾನ್ ಯುಧಿ ಸಮಾಸೀತ ಜರಾಮರಣವಾನ್ ನರಃ |
ತಸ್ಯ ತೇ ಶಮ ಏವಾಸ್ತು ಪಾಂಡವೈರ್ಭರತರ್ಷಭ |
ಕುರುಷ್ವ ವಚನಂ ರಾಜನ್ ಮಾ ಮೃತ್ಯುವಶಮನ್ವಗಾಃ ॥27॥
ಜರಾಮರಣವುಳ್ಳ ಯಾವ ಮನುಷ್ಯನು ಅವರ ಎದುರಿಗೆ ಯುದ್ಧದಲ್ಲಿ ನಿಲ್ಲಲು ಸಾಧ್ಯ? ಎಲೈ ಭರತರ್ಷಭನೇ! ಅಂತಹ ಪಾಂಡವರ ಜೊತೆಯಲ್ಲಿ ನಿನಗೆ ಶಾಂತಿಯೇ ಉಂಟಾಗಲಿ. ರಾಜನೇ! ನನ್ನ ಮಾತನ್ನು ನಡೆಸಿಕೊಡು. ಮೀರಿ ಮೃತ್ಯುವಶನಾಗಬೇಡ.
ಏವಂ ತು ಬ್ರುವತಸ್ತಸ್ಯ ಮೈತ್ರೇಯಸ್ಯ ವಿಶಾಂಪತೇ |
ಊರುಂ ಗಜಕರಾಕಾರಂ ಮೈತ್ರೇಯಾಯ ಜಘಾನ ಸಃ ॥28॥
ಎಲೈ ರಾಜನೇ! ಮೈತ್ರೇಯರು ಹೀಗೆ ಹೇಳುತ್ತಿರಲು ದುರ್ಯೋಧನನು ಆನೆಯ ಸೊಂಡಿಲಿನಂತಿದ್ದ ತನ್ನ ತೊಡೆಯನ್ನು ಮೈತ್ರೇಯರಿಗೆ ಕಾಣುವಂತೆ ತಟ್ಟಿದನು.
ದುರ್ಯೋಧನಃ ಸ್ಮಿತಂ ಕೃತ್ವಾ ಚರಣೇನೋಲ್ಲಿಖನ್ ಮಹೀಮ್|

ನ ಕಿಂಚಿದುಕ್ತ್ವ ದುರ್ಮೇಧಾಸ್ತಸ್ಥೌ ಕಿಂಚಿದವಾಂಗ್ಮುಖಃ ॥29॥
ದುರ್ಯೋಧನನು ಮುಗುಳ್ನಗೆಯನ್ನು ನಕ್ಕು ಪಾದದಿಂದ ಭೂಮಿಯನ್ನು ಕೆದಕುತ್ತಾ ಏನೂ ಮಾತನಾಡದೆ ಮುಖವನ್ನು ಸ್ವಲ್ಪ ತಗ್ಗಿಸಿ ದುರ್ಬುದ್ಧಿಯಿಂದ ಹಾಗೆಯೇ ನಿಂತನು.
ತಮಶುಶ್ರೂಷಮಾಣಂ ತು ವಿಲಿಖಂತಂ ವಸುಂಧರಾಮ್ |
ದೃಷ್ಟ್ವಾ ದುರ್ಯೋಧನಂ ರಾಜನ್ ಮೈತ್ರೇಯಂ ಕೋಪ ಆವಿಶತ್ ॥
ಎಲೈ ಜನಮೇಜಯರಾಜನೇ! ತಮ್ಮ ಮಾತನ್ನು ಕೇಳದೆ ಕಾಲಿನಿಂದ ಭೂಮಿಯನ್ನು ಬರೆಯುತ್ತಿರುವ ದುರ್ಯೋಧನನ್ನು ನೋಡಿ ಮೈತ್ರೇಯರಿಗೆ ಕೋಪವುಂಟಾಯಿತು.
ಸ ಕೋಪವಶಮಾಪನ್ನೋ ಮೈತ್ರೇಯೋ ಭಗವಾನೃಷಿಃ |
ವಿಧಿನಾ ಸಂಪ್ರಯುಕ್ತಶ್ಚ ಶಾಪಾಯಾಸ್ಯ ಮನೋ ದಧೇ ॥31॥
ಕೋಪಕ್ಕೆ ವಶರಾದ ಪೂಜ್ಯರಾದ ಆ ಮೈತ್ರೇಯಋಷಿಗಳು
ವಿಧಿಯಿಂದ ಪ್ರೇರಿಸಲ್ಪಟ್ಟವರಾಗಿ ದುರ್ಯೋಧನನಿಗೆ ಶಾಪವನ್ನು ಕೊಡಲು ನಿರ್ಧರಿಸಿದರು.
ತತಃ ಸ ವಾರ್ಯುಪಸ್ಪೃಶ್ಯ ಕೋಪಸಂರಕ್ತಲೋಚನಃ |
ಮೈತ್ರೇಯೋ ಧಾರ್ತರಾಷ್ಟ್ರಂ ತಮಶಪದ್ ದುಷ್ಟಚೇತಸಮ್ ॥32॥
ಆ ಮೈತ್ರೇಯರು ಜಲವನ್ನು ಉಪಸ್ಪರ್ಶಮಾಡಿ ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ದುಷ್ಟಮನಸ್ಸುಳ್ಳ ಆ ದುರ್ಯೋಧನನಿಗೆ ಶಾಪವನ್ನು ನೀಡಿದರು.
ಯಸ್ಮಾತ್ ತ್ವಂ ಮಾಮನಾದೃತ್ಯ ನ ಮೇ ವಾಚಂ ಚಿಕೀರ್ಷಸಿ |
ತಸ್ಮಾದಸ್ಯಾತಿಮಾನಸ್ಯ ಸದ್ಯಃ ಫಲಮವಾಪ್ಸ್ಯಸಿ ॥33॥
ನನ್ನನ್ನು ಆದರಿಸದೆ ನನ್ನ ಮಾತನ್ನು ನಡೆಸಿಕೊಡಲು ಬಯಸದೇ ಇರುವ ಕಾರಣದಿಂದ ನೀನು ಈ ಅತಿಗರ್ವದ ಫಲವನ್ನು ಸಧ್ಯದಲ್ಲಿಯೇ ಹೊಂದುವಿ.
ತ್ವದಭಿದ್ರೋಹಸಂಯುಕ್ತಂ ಯುದ್ಧಮುತ್ಪತ್ಸ್ಯತೇ ಮಹತ್ |
ಯತ್ರ ಭೀಮೋ ಗದಾಘಾತೈಸ್ತವೋರುಂ ಭೇತ್ಸ್ಯತೇ ಬಲಾತ್ ॥34॥
ನೀನು ಮಾಡಿದ ದ್ರೋಹದಿಂದ ಪ್ರಯುಕ್ತವಾದ ದೊಡ್ಡಯುದ್ಧವು ಜರುಗುವುದು. ಅಲ್ಲಿ ಭೀಮಸೇನನು ಗದೆಯ ಹೊಡೆತಗಳಿಂದ ತನ್ನ ಬಲದಿಂದ ನಿನ್ನ ತೊಡೆಯನ್ನು ಮುರಿಯುವನು.
ಇತ್ಯೇವಮುಕ್ತೇ ವಚನೇ ಧೃತರಾಷ್ಟ್ರೋ ಮಹೀಪತಿಃ |
ಪ್ರಸಾದಯಾಮಾಸ ಮುನಿಂ ನೈತದೇವಂ ಭವೇದಿತಿ॥35॥
ಋಷಿಗಳು ಹೀಗೆ ಹೇಳುತ್ತಿರಲು ರಾಜನಾದ ಧೃತರಾಷ್ಟ್ರನು ಹೀಗೆ ಆಗದಂತೆ ಅನುಗ್ರಹಿಸಿ ಎಂದು ಅವರನ್ನು ಕೇಳಿಕೊಂಡನು.
ಮೈತ್ರೇಯಃ
ಶಮಂ ಯಾಸ್ಯತಿ ಚೇತ್ ಪುತ್ರಸ್ತವ ರಾಜನ್ ಯಥಾ ತಥಾ |
ಶಾಪೋ ನ ಭವಿತಾ ತಾತ ವಿಪರೀತೇ ಭವಿಷ್ಯತಿ ॥36॥
ಎಲೈ ರಾಜನೇ! ನಿನ್ನ ಪುತ್ರನು ನಾನು ಹೇಳಿದಂತೆ ಪಾಂಡವರ ಜೊತೆಯಲ್ಲಿ ಶಾಂತಿ ಸಂಧಾನವನ್ನು ಮಾಡಿಕೊಂಡರೆ ಶಾಪದ ಫಲವು ಉಂಟಾಗುವುದಿಲ್ಲ. ಇಲ್ಲದಿದ್ದರೆ ಅವಶ್ಯವಾಗಿ ಶಾಪದಫಲವು ಉಂಟಾಗುವುದು.
ವೈಶಂಪಾಯನಃ
ಸ ವಿಲಕ್ಷಸ್ತು ರಾಜೇಂದ್ರ ದುರ್ಯೋಧನಪಿತಾ ತದಾ |
ಮೈತ್ರೇಯಂ ಪ್ರಾಹ ಕಿರ್ಮೀರಃ ಕಥಂ ಭೀಮೇನ ಪಾತಿತಃ ॥37॥
ಎಲೈ ರಾಜೇಂದ್ರನೇ! ಆಗ ದುರ್ಯೋಧನನ ತಂದೆಯಾದ ಧೃತರಾಷ್ಟ್ರನು ತನ್ನ ಲಕ್ಷ್ಯವನ್ನು ಬೇರೆ ಕಡೆಗೆ ತಿರುಗಿಸಿ ಮೈತ್ರೇಯರನ್ನು ಕುರಿತು ಕಿರ್ಮೀರನು ಭೀಮನಿಂದ ಹೇಗೆ ಹತನಾದನು ಎಂದು ಕೇಳಿದನು.
ಮೈತ್ರೇಯಃ
ನಾಹಂ ವಕ್ಷ್ಯಾಮ್ಯಸೂಯಾ ಮೇ ನ ತೇ ಶುಶ್ರೂಷತೇ ಸುತಃ |
ಏಷ ತೇ ವಿದುರಃ ಸರ್ವಮಾಖ್ಯಾಸ್ಯತಿ ಗತೇ ಮಯಿ ॥38॥
ಅದನ್ನು ನಾನು ಹೇಳುವೆನು ನನಗೆ ಅಸೂಯೆ ಇಲ್ಲ. ಆದರೆ ನಿನ್ನ ಮಗನು ಕೇಳುವುದಿಲ್ಲ. ಆದ್ದರಿಂದ ನಾನು ಹೋದಮೇಲೆ ಈ ವಿದುರನು ನಿನಗೆ ಎಲ್ಲವನ್ನೂ ಹೇಳುವನು.
ಇತ್ಯೇವಮುಕ್ತ್ವ ಮೈತ್ರೇಯಃ ಸ ಪ್ರಾತಿಷ್ಠದ್ ಯಥಾಗತಮ್ |
ಕಿರ್ಮೀರವಧಸಂವಿಗ್ನೋ ಭಯಂ ದುರ್ಯೋಧನೋಽಗಮತ್ ॥39॥
ಹೀಗೆ ಹೇಳಿ ಮೈತ್ರೇಯರು ಬಂದ ದಾರಿಯಲ್ಲಿಯೇ ಹಿಂದಿರುಗಿದರು. ಕಿರ್ಮೀರನ ವಧೆಯನ್ನು ಕೇಳಿದುದರಿಂದ ಉಂಟಾದ ಭಯವು ದುರ್ಯೋಧನನನ್ನು ಆವರಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ನವಮೋಽಧ್ಯಾಯಃ ॥ ॥
ಆರಣ್ಯಕಪರ್ವಣಿ ನವಮೋಽಧ್ಯಾಯಃ ॥
॥ ಆರಣ್ಯಕಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಆರಣ್ಯಕಪರ್ವವು ಮುಗಿಯಿತು.

* * * *

2. ಕಿಮ್ಮೀರವಧಪರ್ವ
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಓಂ ಆಗಂತುಕಾಮಾನ್ ಪುರವಾಸಿನಸ್ತೇ
ಸಂಸ್ಥಾಪ್ಯಕೃಚ್ಛ್ರೇಣ ಕುರುಪ್ರವೀರಾಃ |
ರಾತ್ರೌ ಪ್ರವಿಷ್ಟಾ ಗಹನಂ ವನಂ ಚ
ಕಿರ್ಮೀರಮಾಸೇದುರಥೋ ನರಾಶಂ ॥1॥
ಪಾಂಡವರು ತಮ್ಮ ಜೊತೆಗೆ ಕಾಡಿಗೆ ಬರಲು ಬಯಸಿದ ನಗರವಾಸಿಗಳನ್ನು ಕಷ್ಟದಿಂದ ತಡೆದು ನಿಲ್ಲಿಸಿ ರಾತ್ರಿಯಲ್ಲಿ ದಟ್ಟವಾದ ಕಾಡನ್ನು ಪ್ರವೇಶಿಸಿದರು. ಅಲ್ಲಿ ಕಿರ್ಮೀರನೆಂಬ ನರಭಕ್ಷಕ ರಾಕ್ಷಸನನ್ನು ಸಂಧಿಸಿದರು.
ಬಕಾನುಜೋಽಸೌ ನಿಖಿಲೈರಜೇಯೋ
ವರಾದ್ ಗಿರೀಶಸ್ಯ ನಿಹಂತುಕಾಮಃ |
ಸದಾರಸೋದರ್ಯಮಭಿಪ್ರವಸಸ್ರೇ
ಭೀಮಂ ಮಹಾವೃಕ್ಷಗಿರೀನ್ ಪ್ರಮುಂಚನ್ ॥2॥
ಕಿರ್ಮೀರ ಬಕಾಸುರನ ತಮ್ಮ ರುದ್ರನ ವರಬಲದಿಂದ ಎಲ್ಲರಿಗೂ ಅಜೇಯನಾಗಿದ್ದ. ಪತ್ನೀ ಸೋದರರ ಸಮೇತ ಭೀಮನನ್ನು ಕೊಲ್ಲಲು ಬಯಸಿ ಅವನು ದೊಡ್ಡ ಮರಗಳನ್ನೂ ಬೆಟ್ಟಗಳನ್ನೂ ಎಸೆಯುತ್ತ ಇದಿರಿಗೆ ಬಂದ.
ಸ ಸಂಪ್ರಹಾರಂ ಸಹ ತೇನ ಕೃತ್ವಾ
ಭೀಮೋ ನಿಪಾತ್ಯಾಶು ಧರಾತಲೇ ತಂ |
ಚಕ್ರೇ ಮಖೇ ಸಂಗರನಾಮಧೇಯೇ
ಪ್ರಸಹ್ಯ ನಾರಾಯಣದೈವತೇ ಪಶುಂ ॥3॥
ಭೀಮ ಕಿರ್ಮೀರನೊಡನೆ ಹೋರಾಡಿ ಬೇಗನೆ ನೆಲದ ಮೇಲೆ ಕೆಡವಿ ನಾರಾಯಣ ದೇವತಾಕವಾದ ಯುದ್ಧವೆಂಬ ಯಜ್ಞದಲ್ಲಿ ಅವನನ್ನು ಬಲಾತ್ಕಾರವಾಗಿ ಬಲಿಪಶುವನ್ನಾಗಿ ಮಾಡಿದ.
*****
ಹತ್ತನೆಯ ಅಧ್ಯಾಯ
(ವಿದುರನಿಂದ ಭೀಮಸೇನನು ಮಾಡಿದ ಕಿರ್ಮೀರ ವಧೆಯ ಕಥನ.)
ಧೃತರಾಷ್ಟ್ರ
ಕಿರ್ಮೀರಸ್ಯ ವಧಂ ಕ್ಷತ್ತಃ ಶ್ರೋತುಮಿಚ್ಛಾಮಿ ಕಥ್ಯತಾಮ್ |
ರಕ್ಷಸಾ ಭೀಮಸೇನಸ್ಯ ಕಥಮಾಸೀತ್ ಸಮಾಗಮಃ ॥1॥
ವಿದುರನೇ! ಕಿರ್ಮೀರವಧೆಯನ್ನು ಕೇಳಲು ಬಯಸುತ್ತೇನೆ ಅದನ್ನು ಹೇಳು. ಆ ರಾಕ್ಷಸನಿಗೂ ಭೀಮಸೇನನಿಗೂ ಹೇಗೆ ಸಮಾಗಮವು ಉಂಟಾಯಿತು?
ವಿದುರಃ
ಶೃಣು ಭೀಮಸ್ಯ ಕರ್ಮೇದಮತಿಮಾನುಷಕರ್ಮಣಃ |
ಶ್ರುತಪೂರ್ವಂ ಮಯಾ ತೇಷಾಂ ಕಥಾಂತೇಷು ಪುನಃ ಪುನಃ ॥2॥
ರಾಜನೇ! ಅತಿಮಾನುಷಕರ್ಮವನ್ನು ಮಾಡುವ ಭೀಮನ ಈ ಕಿರ್ಮೀರವಧೆಯನ್ನು ಕೇಳು. ನಾನು ಇದನ್ನು ಪಾಂಡವರ ಕಥೆಯ ಮಧ್ಯದಲ್ಲಿ ಹಿಂದೆ ಪುನಃ ಪುನಃ ಕೇಳಿದ್ದೇನೆ.
ಇತಃ ಪ್ರಯಾತಾ ರಾಜೇಂದ್ರ ಪಾಂಡವಾ ದ್ಯೂತನಿರ್ಜಿತಾಃ |
ಜಗ್ಮುಸ್ತ್ರಿಭಿರಹೋರಾತ್ರೈಃ ಕಾಮ್ಯಕಂ ನಾಮ ತದ್ವನಮ್ ॥3॥
ರಾಜೇಂದ್ರನೇ! ದ್ಯೂತದಲ್ಲಿ ಪರಾಭವವನ್ನು ಹೊಂದಿದ ಪಾಂಡವರು ಇಲ್ಲಿಂದ ಹೊರಟು ಮೂರು ಹಗಲು ರಾತ್ರಿಗಳಲ್ಲಿ ನಡೆದು ಕಾಮ್ಯಕವನವನ್ನು ತಲುಪಿದರು.
ರಾತ್ರೌ ನಿಶೀಥೇ ಸ್ವಾಲೀಢೇ ಗತೇಽರ್ಧಸಮಯೇ ನೃಪ |
ಪ್ರಚಾರೇ ಪುರುಷಾದಾನಾಂ ರಕ್ಷಸಾಂ ಭೀಮಕರ್ಮಣಾಮ್ ॥4॥
ತದ್ವನಂ ತಾಪಸಾ ನಿತ್ಯಂ ಗೋಪಾಶ್ಚ ವನಚಾರಿಣಃ |
ದೂರಾತ್ ಪರಿಹರಿಷ್ಯಂತಿ ಪುರುಷಾದಭಯಾತ್ ಕಿಲ ॥5॥
ರಾತ್ರಿಯಲ್ಲಿ ಅರ್ಧಸಮಯವು ಕಳೆದ ಮೇಲೆ ಇದು ತಮ್ಮ ಸಮಯ ಎಂದು ಆಸ್ವಾದಿಸಿ ಕ್ರೂರಕರ್ಮಿಗಳೂ ಮನುಷ್ಯಭಕ್ಷಕರೂ ಆದ ರಾಕ್ಷಸರು ಮತ್ತು ಪಿಶಾಚಗಳು ಸಂಚಾರಮಾಡುವ ಸಮಯದಲ್ಲಿ ತಾಪಸರು ಗೋಪಾಲಕರು ಮತ್ತು ವನಚಾರಿಗಳು ರಾಕ್ಷಸಭಯದಿಂದ ಆ ವನವನ್ನು ದೂರದಲ್ಲಿಯೇ ತ್ಯಜಿಸುತ್ತಾರೆ.
ತೇಷಾಂ ಪ್ರವಿಶತಾಂ ತತ್ರ ಮಾರ್ಗಮಾವೃತ್ಯ ಭಾರತ |
ದೀಪ್ತಾಕ್ಷಂ ಭೀಷಣಂ ರಕ್ಷಃ ಸೋಲ್ಮುಕಂ ಸಮದೃಶ್ಯತ ॥6॥
ಎಲೈ ಭಾರತನೇ! ಅವರು ಕಾಮ್ಯಕವನನ್ನು ಪ್ರವೇಶಿಸುತ್ತಿರುವಷ್ಟರಲ್ಲೇ ತಮ್ಮ ದಾರಿಯನ್ನು ಅಡ್ಡಗಟ್ಟಿನಿಂತ ಭಯಂಕರವಾದ ಹೊಳೆಯುತ್ತಿರುವ ಕಣ್ಣುಗಳುಳ್ಳ ಕೈಯಲ್ಲಿ ಒಂದು ಉಲ್ಮುಕವನ್ನು (ಕೊಳ್ಳಿಯನ್ನು) ಹಿಡಿದ ರಾಕ್ಷಸನು ಕಾಣಿಸಿಕೊಂಡನು.
ಬಾಹೂ ಮಹಾಂತೌ ಕೃತ್ವಾ ತು ತಥಾಽಽಸ್ಯಂ ಚ ಭಯಾನಕಮ್ |

ಸ್ಥಿತಮಾವೃತ್ಯ ಪಂಥಾನಂ ಯೇನ ಯಾಂತಿ ಕುರೂದ್ವಹಾಃ ॥7॥
ದಷ್ಟೋಷ್ಠದ್ರುಂಷ್ಟ್ರಂ ತಾಮ್ರಾಕ್ಷಂ ಪ್ರದೀಪ್ತೋರ್ಧ್ವಶಿರೋರುಹಮ್ |
ಸಾರ್ಕರಶ್ಮಿತಡಿಚ್ಚಕ್ರಂ ಸಬಾಲಾರ್ಕಮಿವಾಂಬುದಮ್ ॥8॥
ತನ್ನ ಬಾಹುಗಳನ್ನು ಚಾಚಿ, ಬಾಯಿಯನ್ನು ಭಯಂಕರವಾಗಿ ತೆರೆದು ಪಾಂಡವರು ಹೋಗುವ ದಾರಿಯನ್ನು ಅಡ್ಡಗಟ್ಟಿ ನಿಂತನು. ತುಟಿಯನ್ನು ಹಲ್ಲು ಮುಡಿಯನ್ನು ಕಚ್ಚಿ ಕೆಂಪಾದ ಕಣ್ಣುಳ್ಳವನಾಗಿ ಹೊಳೆಯುವ ಊರ್ಧ್ವಮುಖವಾದ ಕೇಶವುಳ್ಳವನಾಗಿ ಸೂರ್ಯರಶ್ಮಿಯಂತೆ ಮೇಲ್ಮುಖವಾದ ಜಟೆ ಮಿಂಚಿನ ಮಂಡಲದಂತೆ ಕ್ಷಣಕ್ಷಣಕ್ಕೆ ತಿರುಗುವ ಉಲ್ಮುಕ ಮತ್ತು ಬಾಲಸೂರ್ಯನಂತೆ ಕಣ್ಣುಗಳನ್ನು ಹೊಂದಿ ಸ್ವತಃ ಕಪ್ಪುಮೋಡದ ಕಾಂತಿಯುಳ್ಳವನಾಗಿ ನಿಂತನು.
ಸೃಜಂತಂ ರಾಕ್ಷಸೀಂ ಮಾಯಾಂ ಮಹಾರಾವವಿಗರ್ವಿಣೀಮ್ |
ಮುಂಚಂತಂ ವಿಪುಲಂ ನಾದಂ ಸತೋಯಮಿವ ತೋಯದಮ್ ॥9॥
ರಾಕ್ಷಸಮಾಯೆಯನ್ನು ಸೃಷ್ಟಿಸುತ್ತಾ ದೊಡ್ಡ ಗರ್ಜನೆಯನ್ನುಮಾಡಿ ಗರ್ವಪಡುತ್ತಾ ನೀರಿನಿಂದ ಕೂಡಿದ ಮೋಡದಂತೆ ವಿಪುಲವಾದ ನಾದವನ್ನುಮಾಡುತ್ತಾ ನಿಂತನು.
ಯಸ್ಯ ನಾದೇನ ಸಂತ್ರಸ್ತಾಃ ಪಕ್ಷಿಣಃ ಸರ್ವತೋದಿಶಮ್ |
ವಿಮುಕ್ತನಾದಾಃ ಸಂಪೇತುಃ ಸ್ಥಲಜಾ ಜಲಜೈಃ ಸಹ ॥10॥
ಅವನ ಆ ನಾದಕ್ಕೆ ಹೆದರಿದ ಸ್ಥಲಜ ಮತ್ತು ಜಲಜ ಪಕ್ಷಿಗಳು ಚೀರುತ್ತಾ ದಿಕ್ಕುದಿಕ್ಕುಗಳಿಗೆ ಹಾರಿಹೋದವು.
ಸಂಪ್ರದ್ರುತಮೃಗದ್ವೀಪಿಮಹಿಷರ್ಕ್ಷಸಮಾಕುಲಮ್ |
ತದ್ವನಂ ತಸ್ಯ ನಾದೇನ ವಿತ್ರಸ್ತಮಿವ ಚಾಭವತ್ ॥11॥
ಜಿಂಕೆಗಳು ಹುಲಿಗಳು ಮಹಿಷಗಳು ಕರಡಿಗಳು ಎಲ್ಲವೂ ಓಡಿಹೋಗಿ ಅವನ ನಾದದಿಂದ ಆ ವನವೇ ಭಯಗ್ರಸ್ತವಾದಂತೆ ಇದ್ದಿತು.
ತಸ್ಯೋರುವಾತಾಭಿಹತಾಃ ತಾಮ್ರಪಲ್ಲವಬಾಹವಃ |
ವಿದೂರಜಾತಾಶ್ಚ ಲತಾಃ ಸಮಾಶ್ಲಿಷ್ಯಂತ ಪಾದಪಾನ್ ॥12॥
ತಸ್ಮಿನ್ ಕ್ಷಣೇऽಥ ಪ್ರವವೌ ಮಾರುತೋ ಭೃಶದಾರುಣಃ |
ರಜಸಾ ಸಂವೃತಂ ತೇನ ನಷ್ಟರ್ಕ್ಷಮಭವನ್ನಭಃ ॥13॥
ಅವನ ಪ್ರಬಲವಾದ ಶ್ವಾಸವಾಯುವಿನಿಂದ ಬಡಿಯಲ್ಪಟ್ಟ ಕೆಂಪಾದ ಎಳೆಯ ಚಿಗುರುಗಳುಳ್ಳ ಲತೆಗಳು ಅವನಿಗೆ ದೂರದಲ್ಲಿದ್ದರೂ ವೃಕ್ಷಗಳನ್ನು ಆಲಿಂಗಿಸಿದವು. ಆ ಸಮಯದಲ್ಲಿ ಭಯಂಕರವಾದ ಗಾಳಿಯು ಬೀಸಿ ಧೂಳಿನಿಂದ ಆಕಾಶದಲ್ಲಿದ್ದ ನಕ್ಷತ್ರಗಳು ಕಾಣಲಿಲ್ಲ.
ಪಂಚಾನಾಂ ಪಾಂಡವೇಯಾನಾಮವಿಜ್ಞಾತೋ ಮಹಾರಿಪುಃ |
ಪಂಚಾನಾಮಿಂದ್ರಿಯಾಣಾಂ ತು ಶೋಕವೇಗ ಇವಾತುರಃ ॥14॥
ಪಂಚೇಂದ್ರಿಯಗಳಿಗೆ ಇದ್ದಕ್ಕಿದ್ದಂತೆಯೇ ಶೋಕವೇಗ ಉಂಟಾದಂತೆ ಆ ಮಹಾಶತ್ರುವು ಐವರು ಪಾಂಡವರು ಮೊದಲು ಯೋಚನೆಮಾಡದಿದ್ದಂತೆಯೇ ಅವರ ಮುಂದೆ ನಿಂತನು.
ಸ ದೃಷ್ಟ್ವಾ ಪಾಂಡವಾನ್ ದೂರಾತ್ ಕೃಷ್ಣಾಜಿನಸಮಾವೃತಾನ್ |
ಆವೃಣೋತ್ ತದ್ವನದ್ವಾರಂ ಮೈನಾಕ ಇವ ಪರ್ವತಃ ॥15॥
ಕೃಷ್ಣಾಜಿನವನ್ನು ಧರಿಸಿದ ಪಾಂಡವರನ್ನು ಅವನು ದೂರದಿಂದಲೇ ನೋಡಿ, ಆ ವನದ ಪ್ರವೇಶದ್ವಾರವನ್ನು ಮೈನಾಕಪರ್ವತದಂತೆ ಅಡ್ಡಗಟ್ಟಿ ನಿಂತನು.
ತಂ ಸಮಾಸಾದ್ಯ ವಿತ್ರಸ್ತಾ ಕೃಷ್ಣಾ ಕಮಲಲೋಚನಾ |
ಅದೃಷ್ಟಪೂರ್ವಮತ್ಯರ್ಥಂ ವಿಷಾದಮಗಮತ್ ಪರಮ್ ॥16॥
ಹಿಂದೆಂದೂ ನೋಡದಿದ್ದಂತಹ ಅವನನ್ನು ನೋಡಿ ಹೆದರಿದ ಕಮಲಲೋಚನೆಯಾದ ದ್ರೌಪದಿಯು ಬಹಳ ವಿಷಾದವನ್ನು ಹೊಂದಿದಳು.
ದುಶ್ಶಾಸನಕರಸ್ಪರ್ಶವಿಪ್ರಕೀರ್ಣಶಿರೋರುಹಾ |
ಪಂಚಪರ್ವತಮಧ್ಯಸ್ಥಾ ನದೀವಾಕುಲತಾಂ ಗತಾ ॥17॥
ದುಶ್ಶಾಸನನ ಕರಸ್ಪರ್ಶದಿಂದ ಕೆದರಿದ ಕೂದಲುಗಳುಳ್ಳ ಅವಳು ಐದು ಪರ್ವತಗಳ ಮಧ್ಯದಲ್ಲಿ ಇರುವ ನದಿಯಂತೆ ಪ್ರಕ್ಷುಬ್ಧಳಾದಳು.

ಮೋಮುಹ್ಯಮಾನಾಂ ತಾಂ ತತ್ರ ಜಗೃಹುಃ ಪಂಚ ಪಾಂಡವಾಃ |
ಇಂದ್ರಿಯಾಣಿ ಪ್ರಸಕ್ತಾನಿ ವಿಷಯೇಷು ಯಥಾ ಗತಿಮ್ ॥18॥
ವಿಷಯಗಳಲ್ಲಿ ಪ್ರಸಕ್ತವಾದ ಇಂದ್ರಿಯಗಳು ರತಿಯನ್ನು (ಇಂದ್ರಿಯಸುಖವನ್ನು) ಹಿಡಿದುಕೊಂಡಂತೆ ಪುನಃಪುನಃ ಮೋಹಕ್ಕೆ ಒಳಗಾಗುತ್ತಿದ್ದ ಅವಳನ್ನು ಪಂಚಪಾಂಡವರು ಹಿಡಿದುಕೊಂಡರು.
ಅಥ ತಾಂ ರಾಕ್ಷಸೀಂ ಮಾಯಾಮುತ್ಥಿತಾಂ ಘೋರದರ್ಶನಾಮ್ |
ರಕ್ಷ್ನೈರ್ರೋರ್ವಿವಿಧೈರ್ಮಂತ್ರೈರ್ಧೌಮ್ಯಃ ಸಮ್ಯಕ್ಪ್ರಯೋಜಿತೈಃ |
ಪಶ್ಯತಾಂ ಪಾಂಡುಪುತ್ರಾಣಾಂ ನಾಶಯಾಮಾಸ ವೀರ್ಯವಾನ್ ॥19॥
ಆಗ ಪರಾಕ್ರಮಶಾಲಿಗಳಾದ ಧೌಮ್ಯರು ರಾಕ್ಷಸರನ್ನು ನಿವಾರಣೆಮಾಡುವ ಅನೇಕ ಮಂತ್ರಗಳನ್ನು ಚೆನ್ನಾಗಿ ಪ್ರಯೋಗಿಸಿ ಪಾಂಡವರ ಕಣ್ಣೆದುರಿಗೇ ಆ ಭಯಂಕರವಾಗಿ ಮೂಡಿಬಂದ ರಾಕ್ಷಸಮಾಯೆಯನ್ನು ನಾಶಪಡಿಸಿದರು.
ಸ ನಷ್ಟಮಾಯೋऽತಿಬಲಃ ಕ್ರೋಧವಿಸ್ಫಾರಿತೇಕ್ಷಣಃ |

ಕಾಮಮೂರ್ತಿಧರಃ ಕ್ರುದ್ಧಃ ಕಾಲಕಲ್ಪೋ ಹ್ಯದೃಶ್ಯತ ॥20॥
ತನ್ನ ಮಾಯೆಯು ನಷ್ಟವಾದಮೇಲೆ ಮಹಾಬಲಶಾಲಿಯಾದ ಕ್ರೋಧದಿಂದ ಅರಳಿದ ಕಣ್ಣುಳ್ಳ ಕಾಮರೂಪಧರನಾದ ಮೃತ್ಯುವಿನಂತಿದ್ದ ಆ ಕೋಪಗೊಂಡ ರಾಕ್ಷಸನು ಕಾಣಿಸಿದನು.
ತಮುವಾಚ ತತೋ ರಾಜಾ ದೀರ್ಘಪ್ರಜ್ಞೋ ಯುಧಿಷ್ಠಿರಃ|
ಕೋ ಭವಾನ್ ಕಸ್ಯ ವಾ ಕಿಂ ತೇ ಕ್ರಿಯತಾಂ ಕಾರ್ಯಮುಚ್ಯತಾಮ್|
ಪ್ರತ್ಯುವಾಚಾಥ ತದ್ರಕ್ಷೋ ಧರ್ಮರಾಜಂ ಯುಧಿಷ್ಠಿರಮ್ ॥21॥
ದೀರ್ಘಪ್ರಜ್ಞೆಯುಳ್ಳ ಯುಧಿಷ್ಠಿರನು ಆ ರಾಕ್ಷಸನನ್ನು ಕುರಿತು ಆಗ ನೀನು ಯಾರು? ಯಾರ ಪುತ್ರ? ನಮ್ಮಿಂದ ನಿನಗೆ ಏನು ಆಗಬೇಕಾಗಿದೆ? ಎಂದು ಕೇಳಿದನು. ಆಗ ಆ ರಾಕ್ಷಸನು ಧರ್ಮರಾಜನಾದ ಯುಧಿಷ್ಠಿರನನ್ನು ಕುರಿತು ಉತ್ತರವನ್ನು ನೀಡಿದನು.
ಅಹಂ ಬಕಸ್ಯ ವೈ ಭ್ರಾತಾ ಕಿರ್ಮೀರ ಇತಿ ವಿಶ್ರುತಃ|
ವನೇಽಸ್ಮಿನ್ ಕಾಮ್ಯಕೇ ಶೂನ್ಯೇ ನಿವಸಾಮಿ ಗತಜ್ವರಃ|
ಯುಧಿ ನಿರ್ಜಿತ್ಯ ಪುರುಷಾನಾಹಾರಂ ನಿತ್ಯಮಾಚರನ್ ॥23॥
ನಾನು ಬಕನ ಸಹೋದರ. ಕಿರ್ಮೀರನೆಂದು ನನ್ನ ಹೆಸರು ಪ್ರಸಿದ್ಧವಾಗಿದೆ. ಈ ನಿರ್ಜನವಾದ ಕಾಮ್ಯಕವನದಲ್ಲಿ ನಿರಾತಂಕವಾಗಿ ವಾಸಮಾಡುತ್ತಿದ್ದೇನೆ. ಯುದ್ಧದಲ್ಲಿ ಮನುಷ್ಯರನ್ನು ಸೋಲಿಸಿ ನಿತ್ಯವೂ ಅವರನ್ನು ಆಹಾರವಾಗಿ ಸ್ವೀಕರಿಸುತ್ತೇನೆ.
ಕೇ ಯೂಯಮಿಹ ಸಂಪ್ರಾಪ್ತಾ ಭಕ್ಷ್ಯಭೂತಾ ಮಮಾಂತಿಕಮ್|
ಯುಧಿ ನಿರ್ಜಿತ್ಯ ವಃ ಸರ್ವಾನ್ ಭಕ್ಷಯಿಷ್ಯೇ ಗತಜ್ವರಃ ॥24॥
ನನಗೆ ಅಹಾರಭೂತರಾಗಿ ನನ್ನ ಸಮೀಪಕ್ಕೆ ಇಲ್ಲಿಗೆ ಬಂದ ನೀವು ಯಾರು? ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಸೋಲಿಸಿ ನಿರಾತಂಕವಾಗಿ ನಿಮ್ಮನ್ನು ಭಕ್ಷಿಸುವೆನು.
ವಿದುರಃ
ಯುಧಿಷ್ಠಿರಸ್ತು ತಚ್ಛ್ರುತ್ವಾ ವಚಸ್ತಸ್ಯ ದುರಾತ್ಮನಃ|
ಆಚಚಕ್ಷೇ ತತಃ ಸರ್ವಂ ಗೋತ್ರನಾಮಾದಿ ಭಾರತ ॥25॥
ಎಲೈ ಭಾರತನೇ! ಯುಧಿಷ್ಠಿರನು ಆ ದುರಾತ್ಮನ ಮಾತುಗಳನ್ನು ಕೇಳಿ ತನ್ನ ಗೋತ್ರ ನಾಮ ಎಲ್ಲವುಗಳನ್ನೂ ಹೇಳಿದನು.
ಪಾಂಡವೋ ಧರ್ಮರಾಜೋಽಹಂ ಯದಿ ತೇ ಶ್ರೋತ್ರಮಾಗತಃ|
ಸಹಿತೋ ಭ್ರಾತೃಭಿಃ ಸರ್ವೈರ್ಭೀಮಸೇನಾರ್ಜುನಾದಿಭಿಃ ॥26॥
ಹೃತರಾಜ್ಯೋ ವನೇ ವಾಸಂ ವಸ್ತುಂ ಕೃತಮತಿಸ್ತತಃ|
ವನಮಭ್ಯಾಗತೋ ಘೋರಮಿದಂ ತವ ಪರಿಗ್ರಹಮ್ ॥27॥
ನಿನ್ನ ಕಿವಿಗೆ ಬಿದ್ದಿದ್ದರೆ ನಾನು ಪಾಂಡುಪುತ್ರನಾದ ಧರ್ಮರಾಜ. ತಮ್ಮಂದಿರಾದ ಭೀಮಸೇನ ಅರ್ಜುನ ಇವರೆಲ್ಲರಿಂದಲೂ ಸಹಿತನಾಗಿ ರಾಜ್ಯವನ್ನು ಕಳೆದುಕೊಂಡು ವನವಾಸವನ್ನು ಮಾಡಲು ನಿಶ್ಚಯಿಸಿ ನೀನು ವಾಸಸ್ಥಾನವಾಗಿ ಸ್ವೀಕರಿಸಿರುವ ಈ ಘೋರವಾದ ಅರಣ್ಯಕ್ಕೆ ಬಂದಿದ್ದೇನೆ.
ವಿದುರಃ
ಕಿರ್ಮೀರಸ್ತ್ವಬ್ರವೀದೇನಂ ದಿಷ್ಟ್ಯಾ ದೇವೈರಿದಂ ಮಮ|
ಉಪಪಾದಿತಮದ್ಯೇಹ ಚಿರಕಾಲಾನ್ಮನೋರಥಮ್ ॥28॥
ಕಿರ್ಮೀರನು ಅವನನ್ನು ಕುರಿತು ದೇವತೆಗಳ ದಯೆಯಿಂದ ನೀನು ಇಲ್ಲಿಗೆಬಂದಿದ್ದೀಯೆ. ಬಹುಕಾಲದಿಂದ ಬಯಸಿದ ನನ್ನ ಮನೋರಥವನ್ನು ದೇವತೆಗಳು ಇಂದು ಪೂರ್ಣಮಾಡಿದ್ದಾರೆ ಎಂದು ಹೇಳಿದನು.
ಭೀಮಸೇನವಧಾರ್ಥಂ ಹಿ ನಿತ್ಯಮಭ್ಯುದ್ಯತಾಯುಧಃ|
ಚರಾಮಿ ಪೃಥಿವೀಂ ಕೃತ್ಸ್ನಾಂ ನೈನಂ ಚಾಸಾದಯಾಮ್ಯಹಮ್ ॥29॥
ಭೀಮಸೇನನನ್ನು ಕೊಲ್ಲಲು ನಾನು ಆಯುಧವನ್ನು ಎತ್ತಿ ಹಿಡಿದು ಸಮಗ್ರವಾದ ಭೂಮಿಯನ್ನೆಲ್ಲಾ ತಿರುಗುತ್ತಿದ್ದೇನೆ. ಆದರೆ ಎಂದೂ ಅವನು ನನಗೆ ಕಾಣಲಿಲ್ಲ.
ಸೋಽಯಮಾಸಾದಿತೋ ದಿಷ್ಟ್ಯಾ ಭ್ರಾತೃಹಾ ಕಾಂಕ್ಷಿತಶ್ಚಿರಮ್|
ಅನೇನ ಹಿ ಮಮ ಭ್ರಾತಾ ಬಕೋ ವಿನಿಹತಃ ಪ್ರಿಯಃ ॥30॥
ಆದರೆ ಈ ದಿನ ದೇವತೆಗಳ ಅನುಗ್ರಹದಿಂದ ನನ್ನ ಅಣ್ಣನನ್ನು ಕೊಂದ ಚಿರಕಾಲದಿಂದ ಅಪೇಕ್ಷಿತನಾದ ಅವನೇ ಇಲ್ಲಿಗೆ ಬಂದಿದ್ದಾನೆ. ಇವನೇ ನನ್ನ ಪ್ರಿತಿಪಾತ್ರನಾದ ಸಹೋದರನನ್ನು ಕೊಂದವನು.
ವೇತ್ರಕೀಯಗೃಹೇ ರಾಜನ್ ಬ್ರಾಹ್ಮಣಚ್ಛದ್ಮರೂಪಿಣಾ|
ವಿದ್ಯಾಬಲಮುಪಾಶ್ರಿತ್ಯ ನ ಹ್ಯಸ್ಯಸ್ತ್ಯೌರಸಂ ಬಲಮ್ ॥31॥
ರಾಜನೇ! ಏಕಚಕ್ರನಗರದಲ್ಲಿ ಮೋಸದಿಂದ ಬ್ರಾಹ್ಮಣವೇಷವನ್ನು ಧರಿಸಿ ತನ್ನ ವಿದ್ಯೆಯಬಲದಿಂದ ಬಕನನ್ನು ಕೊಂದನು. ಇವನಿಗೆ ಸಹಜವಾದ ಔರಸ ಬಲವಿಲ್ಲ.
ಹಿಡಿಂಬಶ್ಚ ಸಖಾ ಮಹ್ಯಂ ದಯಿತೋ ವನಗೋಚರಃ|
ಹತೋ ದುರಾತ್ಮನಾಽನೇನ ಸ್ವಸಾ ಚಾಸ್ಯ ಹೃತಾ ಪುನಃ ॥32॥
ನನ್ನ ಪ್ರೀತಿಪಾತ್ರನಾದ ಸ್ನೇಹಿತನಾದ ಹಿಡಿಂಬನೂ ಸಹ ಕಾಡಿನಲ್ಲಿ ಈ ದುರಾತ್ಮನಿಂದ ಕೊಲ್ಲಲ್ಪಟ್ಟನು. ಮತ್ತು ಅವನ ತಂಗಿಯೂ ಸಹ ಇವನಿಂದ ಅಪಹರಿಸಲ್ಪಟ್ಟಿದ್ದಾಳೆ.
ಸೋಽಯಮಭ್ಯಾಗತೋ ಮೂಢೋ ಮಮೇದಂ ಗಹನಂ ವನಮ್|

ಪ್ರಚಾರಸಮಯೇಽಸ್ಮಾಕರ್ಮರ್ದ್ಧರಾತ್ರೇ ಸಮಾಸ್ಥಿತೇ ॥33॥
ಅಂತಹ ಈ ಮೂರ್ಖನು ಅರ್ಧರಾತ್ರಿಯಲ್ಲಿ ನಮ್ಮಂತಹವರ ಸಂಚಾರಸಮಯದಲ್ಲಿ ನನ್ನ ದಟ್ಟವಾದ ಕಾಡಿಗೆ ತಾನೇ ಬಂದಿದ್ದಾನೆ.
ಅದ್ಯಾಸ್ಯ ಯಾತಯಿಷ್ಯಾಮಿ ತದ್ವೈರಂ ಚಿರಸಂಭೃತಮ್ |
ತರ್ಪಯಿಷ್ಯಾಮಿ ಚ ಬಕಂ ರುಧಿರೇಣಾಸ್ಯ ಭೂರಿಣಾ ॥34॥
ಬಹಳ ಸಮಯದಿಂದ ಇವನ ಮೇಲಿದ್ದ ವೈರವನ್ನು ಈ ದಿನ ತೀರಿಸುವೆನು. ಇವನ ಬಹುವಾದ ರಕ್ತದಿಂದ ಬಕನಿಗೆ ತರ್ಪಣವನ್ನು ಕೊಡುವೆನು.
ಅದ್ಯಾಹಮನೃಣೋ ಭೂತ್ವಾ ಭ್ರಾತುಃ ಸಖ್ಯುಸ್ತಥೈವ ಚ |
ಶಾಂತಿಂ ಲಬ್ಧಾಸ್ಮಿ ಪರಮಾಂ ಹತ್ವಾ ರಾಕ್ಷಸಕಂಟಕಮ್ ॥35॥
ಈ ದಿನ ನಾನು ನನ್ನ ಅಣ್ಣನಾದ ಬಕನ ಮತ್ತು ಸ್ನೇಹಿತನಾದ ಹಿಡಂಬನ ಋಣವನ್ನು ತೀರಿಸಿ ರಾಕ್ಷಸಕಂಟಕನಾದ ಇವನನ್ನು ಕೊಂದು ಪರಮ ಶಾಂತಿಯನ್ನು ಪಡೆಯುವೆನು.
ಯುಧಿ ತೇನ ಪುರಾ ಮುಕ್ತೋ ಭೀಮಸೇನೋ ಬಕೇನ ವೈ |
ಅದ್ಯೈನಂ ಭಕ್ಷಯಿಷ್ಯಾಮಿ ಪಶ್ಯತಸ್ತೇ ಯುಧಿಷ್ಠಿರ ॥36॥
ಹಿಂದೆ ಬಕನು ಯುದ್ಧದಲ್ಲಿ ಭೀಮಸೇನನನ್ನು ಬೇಕೆಂತಲೇ ಉಳಿಸಿದನು. ಎಲೈ ಯುಧಿಷ್ಠರನೇ! ಈ ದಿನ ನಿನ್ನ ಕಣ್ಣೆದುರಿಗೇ ಅವನನ್ನು ತಿನ್ನುವೆನು.
ಏನಂ ಹಿ ವಿಪುಲಪ್ರಾಣಮದ್ಯ ಹತ್ವಾ ವೃಕೋದರಮ್ |
ಸಂಭಕ್ಷ್ಯ ಜರಯಿಷ್ಯಾಮಿ ಯಥಾಽಗಸ್ತ್ಯೋ ಮಹಾಸುರಮ್ ॥37॥
ಮಹಾಬಲಶಾಲಿಯಾದ ಈ ವೃಕೋದರನನ್ನು ತಿಂದು ಅಗಸ್ತ್ಯರು ಮಹಾಸುರನಾದ ವಾತಾಪಿಯನ್ನು ಅರಗಿಸಿಕೊಂಡಂತೆ ನಾನು ಇವನನ್ನು ಅರಗಿಸಿಕೊಳ್ಳುವೆನು.
ಏವಮುಕ್ತಸ್ತು ಧರ್ಮಾತ್ಮಾ ಸತ್ಯಸಂಧೋ ಯುಧಿಷ್ಠಿರಃ |
ನೈತದಸ್ತೀತಿ ಸಂಕ್ರುದ್ಧೋ ಭರ್ತ್ಸಯಾಮಾಸ ರಾಕ್ಷಸಮ್ ॥38॥
ಹೀಗೆ ಹೇಳಲ್ಪಟ್ಟ ಧರ್ಮಾತ್ಮನೂ ಸತ್ಯಸಂಧನೂ ಆದ ಯುಧಿಷ್ಠಿರನು ಇದು ಎಂದೂ ಆಗುವುದಿಲ್ಲ ಎಂದು ಹೇಳಿ ಸಿಟ್ಟಿನಿಂದ ಆ ರಾಕ್ಷಸನನ್ನು ನಿಂದಿಸಿದನು.
ತತೋ ಭೀಮೋ ಮಹಾಬಾಹುರಾರುಜ್ಯ ತರಸಾ ದ್ರುಮಮ್ |
ಶತವ್ಯಾಮಮಿವೋದ್ವಿದ್ಧಂ ನಿಷ್ಪತ್ರಮಕರೋತ್ತದಾ ॥39॥
ಆಗ ಮಹಾಬಾಹುವಾದ ಭೀಮನು ಶೀಘ್ರವಾಗಿ ನೂರು ಮಾರು ಎತ್ತರವಾಗಿ ಬೆಳೆದಿದ್ದ ಒಂದು ಮರವನ್ನು ಕಿತ್ತು ಅದನ್ನು ನೆದ ಮೇಲೆ ಬಡಿದು ಎಲ್ಲಾ ಎಲೆಗಳನ್ನೂ ಉದುರಿಸಿದನು.
ಚಕಾರ ಸಜ್ಯಂ ಗಾಂಡೀವಂ ವಜ್ರನಿಷ್ಪೇಷಭೈರವಮ್ |
ನಿಮೇಷಾಂತರಮಾತ್ರೇಣ ತಥೈವ ವಿಜಯೋಽರ್ಜುನಃ ॥40॥
ಅದರಂತೆಯೇ ಅರ್ಜುನನು ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ವಜ್ರಾಯುಧದಂತೆ ಭಯಂಕರವಾದ ತನ್ನ ಗಾಂಡೀವ ಧನುಸ್ಸಿಗೆ ಹೆದೆಯನ್ನು ಏರಿಸಿದನು.
ನಿವಾರ್ಯ ಜಿಷ್ಣುಂ ಭೀಮೋಽಥ ತದ್ರಕ್ಷೋ ಭೀಮಗರ್ಜಿತಮ್ |
ಅಭಿದ್ರುತ್ಯಾಬ್ರವೀದ್ ವಾಕ್ಯಂ ತಿಷ್ಠ ತಿಷ್ಠೇತಿ ಭಾರತ ॥41॥
ಎಲೈ ಭಾರತನೇ! ಆಗ ಭೀಮಸೇನನು ಅರ್ಜುನನನ್ನು ತಡೆದು ಭಯಂಕರವಾಗಿ ಗರ್ಜಿಸುತ್ತಿದ್ದ ಆ ರಾಕ್ಷಸನ ಕಡೆಗೆ ಓಡಿಹೋಗಿ ಅವನನ್ನು ಕುರಿತು ನಿಲ್ಲುನಿಲ್ಲು ಎಂದು ಹೇಳಿದನು.
ಇತ್ಯುಕ್ತ್ವೈವ ತಮಭಿಕ್ರುದ್ಧಂ ಕಕ್ಷ್ಯಾಮುತ್ಪೀಡ್ಯ ಪಾಂಡವಃ |
ನಿಷ್ಪಿಷ್ಯ ಪಾಣಿನಾ ಪಾಣಿಂ ಸಂದಷ್ಟೌಷ್ಠಪುಟೋ ಬಲೀ |
ಅಭ್ಯಧಾವತ ವೇಗೇನ ಭೀಮೋ ವೃಕ್ಷಾಯುಧಸ್ತದಾ ॥42॥
ಯಮದಂಡಪ್ರತೀಕಾಶಂ ತತಸ್ತಂ ತಸ್ಯ ಮೂರ್ಧನಿ |
ಪಾತಯಾಮಾಸ ವೇಗೇನ ಕುಲಿಶಂ ಮಘವಾನಿವ ॥43॥
ಹೀಗೆ ಹೇಳಿ ಬಲಿಷ್ಠನಾದ ಭೀಮಸೇನನು ಆ ಕಾಡಿನಲ್ಲಿದ್ದ ಲತಾಗುಲ್ಮಗಳನ್ನು ಕಿತ್ತು ಕೈಯಿಂದ ಕೈಯನ್ನು ಉಜ್ಜುತ್ತಾ ಹಲ್ಲು ಮುಡಿಯನ್ನು ಕಚ್ಚಿ ಕೈಯಲ್ಲಿ ವೃಕ್ಷಾಯುಧವನ್ನು ಹಿಡಿದು ವೇಗದಿಂದ ಸಿಟ್ಟುಗೊಂಡ ಆ ರಾಕ್ಷಸನ ಎಡೆಗೆ ಧಾವಿಸಿದನು. ಭೀಮನು ಯಮದಂಡದಂತಿದ್ದ ಆ ವೃಕ್ಷವನ್ನು ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದಂತೆ ಆ ರಾಕ್ಷಸನ ತಲೆಯ ಮೇಲೆ ಬಲವಾಗಿ ಹೊಡೆದನು.
ಅಸಂಭ್ರಾಂತಂ ತು ತದ್ರಕ್ಷಃ ಸಮರೇ ಪ್ರತ್ಯದೃಶ್ಯತ |
ಚಿಕ್ಷೇಪ ಚೋಲ್ಮುಕಂ ದೀಪ್ತಾಂತಮಶನಿಂ ಜ್ವಲಿತಾಮಿವ ॥44॥
ಆ ರಾಕ್ಷಸನು ಅದರಿಂದ ಏನೂ ಗಾಬರಿಗೊಳ್ಳದೆ ಯುದ್ಧಮಾಡುವುದು ಕಂಡುಬಂದಿತು. ಆ ರಾಕ್ಷಸನು ಉರಿಯುತ್ತಿರುವ ಉಲ್ಮುಕವನ್ನು ಸಿಡಿಲಿನಂತೆ ಭೀಮಸೇನನ ಕಡೆಗೆ ಎಸೆದನು.
ತದುದಸ್ತಮಲಾತಂ ತು ಭೀಮಃ ಪ್ರಹರತಾಂ ವರಃ |
ಪದಾ ಸವ್ಯೇನ ಚಿಕ್ಷೇಪ ತದ್ರಕ್ಷಃ ಪುನರಾವ್ರಜತ್ ॥45॥
ಆ ರಾಕ್ಷಸನು ಪ್ರಯೋಗಿಸಿದ ಆ ಉಲ್ಮುಕವು ಭೀಮಸೇನನ ಬಳಿಗೆ ಬರುತ್ತಿರಲು ಯುದ್ಧಮಾಡುವವರಲ್ಲಿ ಶ್ರೇಷ್ಠನಾದ ಭೀಮಸೇನನು

ಅದನ್ನು ತನ್ನ ಎಡಗಾಲಿನಿಂದ ಒದ್ದನು. ಆ ಉಲ್ಮುಕವು ಪುನಃ ರಾಕ್ಷಸನ ಬಳಿಗೆ ಬಂದಿತು.
ಕಿರ್ಮೀರಶ್ಚಾಪಿ ಸಹಸಾ ವೃಕ್ಷಮುತ್ಪಾಟ್ಯ ಪಾಂಡವಮ್ |
ದಂಡಪಾಣಿರಿವ ಕ್ರುದ್ಧಃ ಸಮರೇ ಪ್ರತ್ಯದೃಶ್ಯತ ॥46॥
ಕಿರ್ಮೀರನೂ ಸಹ ಬೇಗ ಒಂದು ವೃಕ್ಷವನ್ನು ಕಿತ್ತು ದಂಡಪಾಣಿಯಾದ ಯಮನಂತೆ ಸಿಟ್ಟಿನಿಂದ ಯುದ್ಧದಲ್ಲಿ ಪಾಂಡವನ ಎದುರಿಗೆ ನಿಂತನು.
ತದ್ವೃಕ್ಷಯುದ್ಧಮಭವನ್ಮಹೀರುಹವಿನಾಶನಮ್ |
ವಾಲಿಸುಗ್ರೀವಯೋಃ ಪೂರ್ವಂ ಭ್ರಾತ್ರೋಃ ಸ್ತ್ರೀಕಾಂಕ್ಷಿಣೋರಿವ ॥47॥
ಅಣ್ಣತಮ್ಮಂದಿರಾದ ವಾಲಿಸುಗ್ರೀವರು ಹಿಂದೆ ಸುಗ್ರೀವನ ಪತ್ನಿಯ ಸಲುವಾಗಿ ಹೊಡೆದಾಡಿದಂತೆ ಆ ಕಾಡಿನ ಮರಗಳೆಲ್ಲವನ್ನು ವಿನಾಶಮಾಡುವ ವೃಕ್ಷಯುದ್ಧವು ನಡೆಯಿತು.
ಶೀರ್ಷಯೋಃ ಪತಿತಾ ವೃಕ್ಷಾ ಬಿಭಿದುರ್ನೈಕಧಾ ತಯೋಃ |
ಯಥೈವೋತ್ಪಲಪತ್ರಾಣಿ ಮತ್ತಯೋರ್ದ್ವಿಪಮುಖ್ಯಯೋಃ ॥48॥
ಎರಡು ಮದಿಸಿದ ಆನೆಗಳು ಹೋರಾಡುವಾಗ ನೈದಿಲೆಪತ್ರಗಳು ಚೂರುಚೂರಾದಂತೆ ಅವರ ತಲೆಯ ಮೇಲೆ ಬಿದ್ದ ಆ ಮರಗಳು ಚೂರುಚೂರಾದವು.
ಮೂರ್ಧ್ನಿ ಝುರ್ಝುರಭೂತಾಸ್ತು ಬಹವಸ್ತತ್ರ ಪಾದಪಾಃ |
ಚೀರಾಣೀವ ವ್ಯುದಸ್ತಾನಿ ವಿರೇಜುಸ್ತತ್ರ ಭಾರತ ॥49॥
ಎಲೈ ಭಾರತನೇ! ಅವರ ತಲೆಯ ಮೇಲೆ ಬಿದ್ದು ಚೂರುಚೂರಾದ ಅನೇಕ ವೃಕ್ಷಗಳು ಅಲ್ಲಿ ಹರಡಿದ ಚಿಂದಿ ಬಟ್ಟೆಯಂತೆ ಕಂಗೊಳಿಸಿದವು.
ತದ್ವೃಕ್ಷಯುದ್ಧಮಭವತ್ ಮುಹೂರ್ತಂ ತು ವಿಶಾಂಪತೇ |
ರಾಕ್ಷಸಾನಾಂ ಚ ಮುಖ್ಯಸ್ಯ ನರಾಣಾಮುತ್ತಮಸ್ಯ ಚ ॥50॥
ಎಲೈ ರಾಜನೇ! ಹೀಗೆ ರಾಕ್ಷಸರ ಅಧಿಪತಿಗೂ ಮತ್ತು ಮನುಷ್ಯರಲ್ಲಿ ಸರ್ವಶ್ರೇಷ್ಠನಾದ ಭೀಮಸೇನನಿಗೂ ಒಂದು ಮುಹೂರ್ತಕಾಲ ವೃಕ್ಷಯುದ್ಧವು ನಡೆಯಿತು.
ತತಃ ಶಿಲಾಂ ಸಮುತ್ಕ್ಷಿಪ್ಯ ಭೀಮಸ್ಯ ಯುಧಿ ತಿಷ್ಠತಃ |
ಪ್ರಾಹಿಣೋದ್ರಾಕ್ಷಸಃ ಕ್ರುದ್ಧೋ ಭೀಮಶ್ಚ ನ ಚಚಾಲ ಹ ॥51॥
ಅನಂತರ ಆ ರಾಕ್ಷಸನು ಯುದ್ಧದಲ್ಲಿ ಎದುರಿಗೆ ನಿಂತಿದ್ದ ಭೀಮಸೇನನ ಮೇಲೆ ಒಂದು ದೊಡ್ಡ ಬಂಡೆಯನ್ನು ಎತ್ತಿ ಎಸೆದನು. ಕೋಪಗೊಂಡ ಭೀಮಸೇನನು ಅಲುಗಾಡದೆ ನಿಂತನು.
ತಂ ಶಿಲಾತಾಡನಜಡಂ ಪರ್ಯಧಾವತ ರಾಕ್ಷಸಃ |
ಬಾಹುವಿಕ್ಷಿಪ್ತಕಿರಣಃ ಸ್ವರ್ಭಾನುರಿವ ಭಾಸ್ಕರಮ್ ॥52॥
ಬಂಡೆಯ ಹೊಡೆತದಿಂದ ಸ್ವಲ್ಪ ಸ್ತಂಭಿತನಾದ ಭೀಮಸೇನನ ಕಡೆಗೆ ಆ ರಾಕ್ಷಸನು ತನ್ನ ಬಾಹುಗಳೆಂಬ ಕಿರಣಗಳನ್ನು ಚಾಚಿ ರಾಹುವು ಸೂರ್ಯನನ್ನು ಹಿಡಿಯಲು ಬಂದಂತೆ ಓಡಿ ಬಂದನು.
ತಾವನ್ಯೋನ್ಯಂ ಸಮಾಶ್ಲಿಷ್ಯ ಪ್ರಕರ್ಷಂತೌ ಪರಸ್ಪರಮ್ |
ಉಭಾವಪಿ ಚಕಾಶೇತೇ ಪ್ರಯುದ್ಧೌ ವೃಷಭಾವಿವ ॥53॥
ಅವರಿಬ್ಬರೂ ಪರಸ್ಪರವಾಗಿ ಬಿಗಿಯಾಗಿ ಹಿಡಿದು ಒಬ್ಬರನ್ನೊಬ್ಬರು ಎಳೆದಾಡುತ್ತಾ ಹೋರಾಡುವ ಎರಡು ಗೂಳಿಗಳಂತೆ ಕಂಗೊಳಿಸಿದರು.
ತಯೋರಾಸೀತ್ ಸುತುಮುಲಃ ಸಂಪ್ರಹಾರಃ ಸುದಾರುಣಃ |
ನಖದಂಷ್ಟ್ರಾಯುಧವತೋರ್ವ್ಯಾಘ್ರಯೋರಿವ ದೃಪ್ತಯೋಃ ॥54॥
ನಖ ಮತ್ತು ದಂಷ್ಟ್ರಗಳಿಂದ ಹೊಡೆದಾಡುವ ಎರಡು ಗರ್ವಿಷ್ಠ ವ್ಯಾಘ್ರಗಳಂತೆ ಅವರಿಬ್ಬರಿಗೂ ದಾರುಣವಾದ ತೀವ್ರವಾದ ಯುದ್ಧವು ಪರಸ್ಪರವಾಗಿ ನಡೆಯಿತು.
ದುರ್ಯೋಧನನಿಕಾರಾಚ್ಚ ಬಾಹುವೀರ್ಯಾಚ್ಚ ದರ್ಪಿತಃ |
ಕೃಷ್ಣಾನಯನಹೃಷ್ಟಶ್ಚ ವ್ಯವರ್ಧತ ವೃಕೋದರಃ ॥55॥
ದೃಷ್ಟಿಯುದ್ಧವನ್ನುಮಾಡುವ ಕಿರ್ಮೀರನ ಮೇಲಿನ ತಿರಸ್ಕಾರದಿಂದಲೂ ತನ್ನ ಬಾಹುಬಲದಿಂದಲೂ ದರ್ಪವನ್ನು ಹೊಂದಿದ ಮತ್ತು ದ್ರೌಪದಿಯ ಕಟಾಕ್ಷವೀಕ್ಷಣದಿಂದ ಸಂತೋಷಗೊಂಡ ವೃಕೋದರನು ಬಲದಲ್ಲಿ ಬೆಳೆದನು.
ಅಭಿಹತ್ಯಾಥ ಬಾಹುಭ್ಯಾಂ ಪ್ರತ್ಯಗೃಹ್ಣಾದಮರ್ಷಿತಃ |
ಮಾತಂಗಮಿವ ಮಾತಂಗಃ ಪ್ರಭಿನ್ನಕರಟಾಮುಖಮ್ ॥56॥
ಎರಡು ಬಾಹುಗಳಿಂದ ಆ ರಾಕ್ಷಸನನ್ನು ಹೊಡೆದು ಒಂದು ಮದಿಸಿದ ಆನೆಯು ಇನ್ನೊಂದು ಮದಿಸಿದ ಆನೆಯನ್ನು ಹಿಡಿಯುವಂತೆ ಸಿಟ್ಟಿನಿಂದ ಆ ರಾಕ್ಷಸನನ್ನು ಬಾಹುಗಳಿಂದ ಹಿಡಿದನು.
ತಚ್ಚಾಪ್ಯೇನಂ ತತೋ ರಕ್ಷಃ ಪ್ರತಿಜಗ್ರಾಹ ವೀರ್ಯವತ್ |
ತದಾಕ್ಷಿಪದ್ ಭೀಮಸೇನೋ ಬಲೇನ ಬಲಿನಾಂ ವರಃ ॥57॥
ಆ ಬಲಶಾಲಿಯಾದ ರಾಕ್ಷಸನೂ ಕೂಡ ಭೀಮನನ್ನು ಹಾಗೆಯೇ ಹಿಡಿದನು. ಆಗ ಬಲಶಾಲಿಗಳಲ್ಲಿ ಅಗ್ರಗಣ್ಯನಾದ ಭೀಮಸೇನನು ಆ ರಾಕ್ಷಸನನ್ನು ಎತ್ತಿ ಎಸೆದನು.
ತಯೋರ್ಭುಜವಿನಿಷ್ಪೇಷಾದುಭಯೋರ್ಬಲಿನೋಸ್ತಥಾ |

ಶಬ್ದಃ ಸಮಭವದ್ ಘೋರೋ ವೇಣುಸ್ಫೋಟಸಮೋ ಯುಧಿ ॥58॥
ಆ ಬಲಶಾಲಿಗಳಾದ ಅವರಿಬ್ಬರೂ ಭುಜದಿಂದ ಭುಜಕ್ಕೆ ಹೊಡೆದಾಡುವಾಗ ಉಂಟಾದ ಶಬ್ದವು ಬಿದಿರು ಸಿಡಿಯುವ ಶಬ್ದಕ್ಕೆ ಸದೃಶವಾಗಿ ಆ ಯುದ್ಧದಲ್ಲಿ ಭಯಂಕರವಾಗಿ ಕೇಳುತ್ತಿದ್ದಿತು.
ಅಥೈನಮಾಕ್ಷಿಪ್ಯ ಬಲಾದ್ ಗೃಹ್ಯ ಮಧ್ಯೇ ವೃಕೋದರಃ।
ಧೂನಯಾಮಾಸ ವೇಗೇನ ವಾಯುಶ್ಚಂಡ ಇವ ದ್ರುಮಮ್ ॥59॥
ಅನಂತರ ಭೀಮಸೇನನು ಅವನನ್ನು ತನ್ನ ಬಲದಿಂದ ಮೇಲಕ್ಕೆ ಎಸೆದು ಅವನ ಮಧ್ಯಭಾಗದಲ್ಲಿ ಹಿಡಿದು ಚಂಡವಾಯುವು ಮರವನ್ನು ತೂಗಾಡಿಸುವಂತೆ ವೇಗವಾಗಿ ಅವನನ್ನು ತೂಗಾಡಿಸಿದನು.
ಸ ಭೀಮೇನ ಪರಾಮೃಷ್ಟೋ ದುರ್ಬಲೋ ಬಲಿನಾ ರಣೇ।
ಪ್ರಾಸ್ಪಂದತ ಯಥಾಪ್ರಾಣಂ ವಿಚಕರ್ಷ ಚ ಪಾಂಡವಃ ॥60॥
ಯುದ್ಧದಲ್ಲಿ ಭೀಮಸೇನನಿಂದ ಹಸ್ತದಲ್ಲಿ ಹಿಡಿಯಲ್ಪಟ್ಟ ಆ ದುರ್ಬಲವಾದ ರಾಕ್ಷಸನು ತನ್ನ ಶಕ್ತಿಯಿದ್ದಷ್ಟು ಅಲುಗಾಡಲು ಪ್ರಯತ್ನಿಸಿದನು. ಭೀಮಸೇನನು ಅವನನ್ನು ಎಳೆದಾಡಿದನು.
ತತ ಏನಂ ಪರಿಶ್ರಾಂತಮುಪಲಕ್ಷ್ಯ ವೃಕೋದರಃ।
ಯೋಕ್ತ್ರಯಾಮಾಸ ಬಾಹುಭ್ಯಾಂ ಪಶುಂ ರಶನಯಾ ಯಥಾ ॥61॥
ಅನಂತರ ಭೀಮಸೇನನು ಅವನು ದಣಿದಿರುವುದನ್ನು ಗಮನಿಸಿ ತನ್ನ ಬಾಹುಗಳಿಂದ ಪಶುವನ್ನು ಹಗ್ಗದಿಂದ ಕಟ್ಟಿದಂತೆ ಅವನಿಗೆ ನೇಗಿಲಿನಂತೆ ಪಟ್ಟು ಹಾಕಿದನು.
ನದಂತಂ ತಂ ಮಹಾನಾದಂ ಭಿನ್ನಭೇರೀನಿಭಸ್ವನಮ್।
ಭ್ರಾಮಯಾಮಾಸ ಸುಚಿರಂ ವಿಸ್ಫುರಂತಮಚೇತನಮ್ ॥62॥
ಒಡೆದ ಭೇರಿಯಸದ್ದಿನಂತೆ ದೊಡ್ಡ ಶಬ್ದವನ್ನು ಮಾಡುತ್ತಿದ್ದ ಮತ್ತು ಚೇತನವನ್ನು ಕಳೆದುಕೊಂಡು ಹಾಗೆಯೇ ಮಿಸುಕಾಡುತ್ತಿದ್ದ ಆ ರಾಕ್ಷಸನನ್ನು ಬಹಳ ಸಮಯದವರೆಗೆ ತಿರುಗಿಸಿದನು.
ತಂ ವಿಷೀದಂತಮಾಜ್ಞಾಯ ರಾಕ್ಷಸಂ ಪಾಂಡುನಂದನಃ।
ಪ್ರಗೃಹ್ಯ ತರಸಾ ದೋರ್ಭ್ಯಾಂ ಪಶುಮಾರಮಮಾರಯತ್ ॥63॥
ಪಾಂಡುನಂದನನಾದ ಭೀಮಸೇನನು ಆ ರಾಕ್ಷಸನು ಕ್ಷೀಣಿಸುತ್ತಿರುವುದನ್ನು ಗಮನಿಸಿ ತನ್ನ ಬಾಹುಗಳಲ್ಲಿ ಹಿಡಿದು ಭೂಮಿಯ ಮೇಲೆ ಬಡಿದು ಪಶುವಿನಂತೆ ಕೊಂದನು.
ಆಕ್ರಮ್ಯ ಚ ಕಟೀದೇಶೇ ಜಾನುನಾ ರಾಕ್ಷಸಾಧಮಮ್।
ಅಪೀಡಯತ್ ಸ್ವಬಾಹುಭ್ಯಾಂ ತಸ್ಯ ಕಂಠಂ ವೃಕೋದರಃ ॥64॥
ಅವನ ಸೊಂಟದಲ್ಲಿ ತನ್ನ ಮಂಡಿಯನ್ನು ಊರಿ ತನ್ನ ಬಾಹುಗಳಿಂದ ವೃಕೋದರನು ಅವನ ಕಂಠವನ್ನು ಬಿಗಿಯಾಗಿ ಹಿಡಿದನು.
ಅಥ ತಂ ಜಡಸರ್ವಾಂಗಂ ವ್ಯಾವೃತ್ತನಯನೋಲ್ಬಣಮ್।
ಭೂತಳೇ ಪಾತಯಾಮಾಸ ವಾಕ್ಯಂ ಚೇದಮುವಾಚ ಹ ॥65॥
ಅನಂತರ ತನ್ನ ಸರ್ವಾಂಗಗಳೂ ಜಡವಾಗಿ ದೊಡ್ಡದಾಗಿ ಕಣ್ಣುತೆರೆದು ಭಯಂಕರವಾಗಿ ಕಾಣುತ್ತಿದ್ದ ಆ ರಾಕ್ಷಸನನ್ನು ಭೂಮಿಯ ಮೇಲೆ ಕೆಡವಿ ಈ ಮಾತನ್ನು ಆಡಿದನು.
ಹಿಡಿಂಬಬಕಯೋಃ ಪಾಪ ನ ತ್ವಮಶ್ರುಪ್ರಮಾರ್ಜನಮ್।
ಕರಿಷ್ಯಸಿ ಗತಶ್ಚಾಸಿ ಯಮಸ್ಯ ಸದನಂ ಪ್ರತಿ ॥66॥
ಪಾಪಿಯೇ ನೀನು ಹಿಡಿಂಬ ಮತ್ತು ಬಕರ ಕಣ್ಣೀರನ್ನು ಒರೆಸಲು ಸಾಧ್ಯವಿಲ್ಲ. ನೀನೇ ಯಮಲೋಕಕ್ಕೆ ಹೋಗಿದ್ದೀಯೆ.
ಇತ್ಯೇವಮುಕತ್ವ ಪುರುಷಪ್ರವೀರಃ।
ತಂ ರಾಕ್ಷಸಂ ಕ್ರೋಧವಿವೃತ್ತನೇತ್ರಃ।
ವಿಸ್ರಸ್ತವಸಾತ್ರಭರಣಂ ಸ್ಫುರಂತಮ್।
ಉದ್ಭ್ರಾಂತಚಿತ್ತಂ ವ್ಯಸುಮುತ್ಸಸರ್ಜ ॥67॥
ಹೀಗೆ ಹೇಳಿ ಪುರುಷಶ್ರೇಷ್ಠನಾದ ಆ ಭೀಮಸೇನನು ಕ್ರೋಧದಿಂದ ಅರಳಿದ ಕಣ್ಣುಳ್ಳವನಾಗಿ ವಸ್ತ್ರ ಮತ್ತು ಆಭರಣಗಳು ಅಸ್ತವ್ಯಸ್ತವಾಗಿದ್ದ ಭ್ರಾಂತಚಿತ್ತನಾಗಿ ಇನ್ನೂ ಸ್ವಲ್ಪ ಅಲುಗಾಡುತ್ತಾ ಪ್ರಾಣವನ್ನು ತೊರೆದ ಆ ರಾಕ್ಷಸನನ್ನು ಪರಿತ್ಯಜಿಸಿದನು.
ತಸ್ಮಿನ್ ಹತೇ ತೋಯದತುಲ್ಯರೂಪೇ
ಕೃಷ್ಣಾಂ ಪುರಸ್ಕೃತ್ಯ ನರೇಂದ್ರಮುಖ್ಯಾಃ।
ಭೀಮಂ ಪರಿಷ್ವಜ್ಯ ಗುಣೈರನೇಕೈಃ।
ಸ್ತುತ್ವಾ ತತೋ ದ್ವೈತವನಾಯ ಜಗ್ಮುಃ ॥68॥
ಮೋಡದಂತೆ ಇದ್ದ ಆ ರಾಕ್ಷಸನು ಹತನಾದ ಮೇಲೆ ನರಶ್ರೇಷ್ಠರಾದ ಆ ಪಾಂಡವರು ದ್ರೌಪದಿಯನ್ನು ಮುಂದೆಮಾಡಿಕೊಂಡು ಭೀಮಸೇನನನ್ನು ಆಲಿಂಗಿಸಿ ಅವನ ಅನೇಕ ಗುಣಗಳನ್ನು ಸ್ತೋತ್ರಮಾಡುತ್ತಾ ಅಲ್ಲಿಂದ ದ್ವೈತವನಕ್ಕೆ ಹೊರಟರು.
ಏವಂ ವಿನಿಹತಃ ಸಂಖ್ಯೇ ಕಿರ್ಮೀರೋ ಮನುಜಾಧಿಪ।
ಭೀಮೇನ ವಚನಾತ್ ತಸ್ಯ ಧರ್ಮರಾಜಸ್ಯ ಕೌರವ ॥69॥
ಎಲೈ ಕೌರವರಾಜನಾದ ಧೃತರಾಷ್ಟ್ರನೇ! ಹೀಗೆ ಧರ್ಮರಾಜನ ವಚನದಂತೆ ಭೀಮಸೇನನು ಯುದ್ಧದಲ್ಲಿ ಕಿರ್ಮೀರನನ್ನು ನಾಶಪಡಿಸಿದನು.
ತತೋ ನಿಷ್ಕಂಟಕಂ ಕೃತ್ವಾ ವನಂ ತದಪರಾಜಿತಾಃ।

ದ್ರೌಪದ್ಯಾ ಸಹ ಧರ್ಮಜ್ಞಾ ವಸತೀರವಸನ್ ತತಃ ॥70॥
ಅನಂತರ ಅಪರಾಜಿತರಾದ ಮತ್ತು ಧರ್ಮಜ್ಞರಾದ ಆ ಪಾಂಡವರು ಆ ವನವನ್ನು ನಿರ್ಭಯವನ್ನಾಗಿಮಾಡಿ ದ್ರೌಪದಿಯ ಜೊತೆಯಲ್ಲಿ ವಾಸವನ್ನು ಮಾಡಿದರು.
ಸಮಾಶ್ವಾಸ್ಯ ಚ ತೇ ಸರ್ವೇ ದ್ರೌಪದೀಂ ಭರತರ್ಷಭಾಃ।
ಪ್ರಹೃಷ್ಟಮನಸಃ ಸರ್ವೇ ಪ್ರಶಶಂಸುರ್ವೃಕೋದರಮ್ ॥71॥
ಆ ಭರತಶ್ರೇಷ್ಠರೆಲ್ಲರೂ ದ್ರೌಪದಿಯನ್ನು ಸಮಾಧಾನಪಡಿಸಿ ಎಲ್ಲರೂ ಸಂತುಷ್ಟಚಿತ್ತರಾಗಿ ವೃಕೋದರನನ್ನು ಪ್ರಶಂಸೆಮಾಡಿದರು.
ಭೀಮಬಾಹುಬಲೋತ್ಪಿಷ್ಟೇ ವಿನಷ್ಟೇ ರಾಕ್ಷಸೇ ತತಃ।
ವಿವಿಶುಸ್ತದ್ವನಂ ವೀರಾಃ ಕ್ಷೇಮಂ ನಿಹತಕಂಟಕಮ್ ॥72॥
ಭೀಮನ ಬಾಹುಬಲದಿಂದ ಆ ರಾಕ್ಷಸನು ಒರೆಸಲ್ಪಡುತ್ತಿರಲು ವೀರರಾದ ಪಾಂಡವರು ಕ್ಷೇಮವೂ ನಿಷ್ಕಂಟಕವೂ ಆದ ಆ ವನವನ್ನು ಪ್ರವೇಶಿಸಿದರು.
ಸ ಮಯಾ ಗಚ್ಛತಾ ಮಾರ್ಗೇ ವಿನಿಕೀರ್ಣೋ ಭಯಾನಕಃ।
ವನೇ ಮಹತಿ ದುಷ್ಟಾತ್ಮಾ ದೃಷ್ಟೋ ಭೀಮಬಲಾಹತಃ ॥73॥
ನಾನು ಆ ವನಕ್ಕೆ ಹೋಗುತ್ತಾ ಮಾರ್ಗದಲ್ಲಿ ಭೀಮಸೇನನಿಂದ ಹತನಾದ ಆ ದುಷ್ಟನ ಭಯಂಕರವಾಗಿ ಶಿಥಿಲವಾಗಿದ್ದ ದೇಹವನ್ನು ನೋಡಿದೆನು.
ತತ್ರಾಶ್ರೌಷಮಹಂ ರಾಜನ್ ಕರ್ಮ ಭೀಮಸ್ಯ ಸಂಯುಗೇ।
ಬ್ರಾಹ್ಮಣಾನಾಂ ಕಥಯತಾಂ ಯೇ ತತ್ರಾಸನ್ ಸಮಾಗತಾಃ ॥74॥
ಎಲೈ ರಾಜನೇ! ನಾನು ಅಲ್ಲಿಗೆ ಬಂದ ಬ್ರಾಹ್ಮಣರಿಂದ ಆ ಯುದ್ಧದಲ್ಲಿ ಭೀಮಸೇನನು ಮಾಡಿದ ಅದ್ಭುತಕರ್ಮವನ್ನು ಕೇಳಿದೆನು.
ವೈಶಂಪಾಯನಃ
ಏವಂ ವಿನಿಹತಂ ಸಂಖ್ಯೇ ಕಿರ್ಮೀರಂ ರಾಕ್ಷಸಾಧಮಮ್।
ಶ್ರುತ್ವಾ ಧ್ಯಾನಪರೋ ರಾಜಾ ನಿಶಸ್ವಾಸಾರ್ತವತ್ ತದಾ ॥75॥
ಹೀಗೆ ರಾಕ್ಷಸಾಧಮನಾದ ಕಿರ್ಮೀರನು ಯುದ್ಧದಲ್ಲಿ ಭೀಮಸೇನನಿಂದ ಹತನಾದುದನ್ನು ಕೇಳಿ ಧೃತರಾಷ್ಟ್ರನು ಚಿಂತಾಪರವಶನಾಗಿ ದುಃಖದಿಂದ ನಿಟ್ಟುಸಿರನ್ನು ಬಿಟ್ಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವನಪರ್ವಣಿ ದಶಮೋಽಧ್ಯಾಯಃ ॥
॥ ಕಿರ್ಮೀರವಧಪರ್ವ ಪ್ರಥಮೋಽಧ್ಯಾಯಃ ॥
॥ ಕಿರ್ಮೀರವಧಪರ್ವಣಿ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಕಿರ್ಮೀರವಧಪರ್ವವು ಮುಗಿಯಿತು.
*****
3. ಕೈರಾತಪರ್ವ
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಶ್ರುತ್ವಾ ತು ಕಿರ್ಮೀರವಧಂ ಸ್ವಪಿತ್ರಾ
ಪೃಷ್ಟಂ ಕ್ಷತ್ತ್ರೋಕ್ತಂ ಸೋಽತ್ರಸದ್ಧಾರ್ತರಾಷ್ಟ್ರಃ।
ವನೇ ವಸಂತೋಽಥ ಪೃಥಾಸುತಾಸ್ತೇ
ವಾರ್ತಾಂ ಸ್ವಕೀಯಾಂ ಪ್ರಾಪಯಾಮಾಸುರಾಶು ॥23 ॥
ಕೃಷ್ಣೇ ಸೋಽಪಿ ದ್ರುತಮಾಯಾತ್ಸಸತ್ಯಃ
ಸಂಬಂಧಿನೋ ಯೇ ಚ ಪಾಂಚಾಲಮುಖ್ಯಾಃ।
ಕ್ರುದ್ಧಂ ಕೃಷ್ಣಂ ಧಾರ್ತರಾಷ್ಟ್ರಾಯ ಪಾರ್ಥಾಃ
ಕ್ಷಮಾಪಯಾಮಾಸುರುಚ್ಚೈರ್ಗೃಣಂತಃ ॥24॥
ಗುಣಾಂಸ್ತದೀಯನಮಿತಾನ್ ಪ್ರಣಮ್ಯ
ತದಾ ರುದಂತೀ ದ್ರೌಪದೀ ಚಾಪ ಪಾದೌ।
ಸಾ ಪಾದಯೋಃ ಪತಿತಾ ವಾಸುದೇವ-
ಮಸ್ತೌತ್ ಸಮಸ್ತಪ್ರಭುಮಾತ್ಮತಂತ್ರಂ ॥25॥
ಧೃತರಾಷ್ಟ್ರ ವಿದುರನನ್ನು ಕೇಳಿದಾಗ ಅವನು ಕಿರ್ಮೀರ ವಧೆಯನ್ನು ಬಣ್ಣಿಸಿದ. ಅದನ್ನು ಕೇಳಿ ದುರ್ಯೋಧನ ಭಯಪಟ್ಟ. ಪಾಂಡವರು ಕಾಡಿನಲ್ಲಿ ವಾಸ ಮಾಡುತ್ತ ತಮ್ಮ ಕಷ್ಟದ ಸಮಾಚಾರವನ್ನು ಶ್ರೀಕೃಷ್ಣನಿಗೂ ದ್ರುಪನಿಗೂ ಹೇಳಿ ಕಳಿಸಿದರು. ಕೂಡಲೇ ಶ್ರೀಕೃಷ್ಣ ಸತ್ಯಭಾಮಾ ಸಮೇತನಾಗಿ ಬಂದ. ದ್ರುಪದ ಮುಂತಾದ ಬಾಂಧವರೂ ಬಂದರು. ಶ್ರೀಕೃಷ್ಣ ಎಲ್ಲ ಸಮಾಚಾರವನ್ನು ಕೇಳಿತಿಳಿದು ದುರ್ಯೋಧನನ ಬಗ್ಗೆ ಕುಪಿತನಾದಾಗ ಪಾಂಡವರು ಅವನ ಅಪರಿಮಿತ ಗುಣಗಳನ್ನು ಹೊಗಳುತ್ತ ನಮಿಸಿ ಸಮಾಧಾನಗೊಳಿಸಿದರು. ದ್ರೌಪದಿ ಅಳುತ್ತ ಅವನ ಕಾಲುಗಳನ್ನು ಹಿಡಿದಳು. ಸ್ವತಂತ್ರ ಸರ್ವಶಕ್ತನಾದ ಅವನನ್ನು ಸ್ತೋತ್ರ ಮಾಡಿದಳು.
ಅಚಿಂತ್ಯನಿತ್ಯಾವ್ಯಯಪೂರ್ಣಸದ್ಗುಣಾ-
ರ್ಣವೈಕದೇಹಾಖಿಲದೋಷದೂರ।

ರಮಾಬ್ಜಜೇರೇಶಸುರೇಂದ್ರಪೂರ್ವ-
ಬೃಂದಾರಕಾಣಾಂ ಸತತಾಭಿವಂದ್ಯ ॥26॥
ಸಮಸ್ತ ಚೇಷ್ಟಾಪ್ರದ ಸರ್ವಜೀವ-
ಪ್ರಭೋ ವಿಮುಕ್ತಾಶ್ರಯ ಸರ್ವಸಾರ |
ಇತಿ ಬ್ರುವಂತೀ ಸಕಲಾನುಭೂತಂ
ಜಗಾದ ಸರ್ವೇಶಿತುರಚ್ಯುತಸ್ಯ ॥27॥
`ಹೇ ಅಚಿಂತ್ಯ ನಿತ್ಯ ಅವ್ಯಯ ಪೂರ್ಣಸದ್ಗುಣ ಸಾಗರ ಮಾತ್ರ ಶರೀರ! ಸಕಲದೋಷ ವಿದೂರ! ಲಕ್ಷ್ಮೀ ಬ್ರಹ್ಮವಾಯು ಶಿವ ಇಂದ್ರಾದಿ ದೇವತೆಗಳಿಂದ ಸದಾವಂದ್ಯ! ಎಲ್ಲಕ್ಕೂ ಚೇಷ್ಟಾಪ್ರದ! ಸರ್ವಜೀವೇಶ್ವರ! ಮುಕ್ತಾಶ್ರಯ! ಸರ್ವೋತ್ತಮ!' ಎಂದು ಸ್ತೋತ್ರ ಮಾಡುತ್ತ ದ್ರೌಪದಿ ಸರ್ವೇಶನಾದ ಶ್ರೀಕೃಷ್ಣನಿಗೆ ತಾನು ಅನುಭವಿಸಿದ ಎಲ್ಲ ದುಃಖವನ್ನೂ ಹೇಳಿಕೊಂಡಳು.
ಯಸ್ಯಾಧಿಕಾನುಗ್ರಹಪಾತ್ರಭೂತಾ
ಸ್ವಯಂ ಹಿ ಶೇಷೇಶವಿಪಾದಿಕೇಭ್ಯಃ |
ಶ್ರುತ್ವಾ ಸಮಸ್ತಂ ಭಗವಾನ್ ಪ್ರತಿಜ್ಞಾಂ
ಚಕಾರ ತೇಸಾಮಖಿಲಾಶ್ಚ ಯೋಷಾಃ ॥
ಪತೀನ್ಸಮಾಲಿಂಗ್ಯ ವಿಮುಕ್ತಕೇಶಾ
ಭೀಮಾಹತಾನ್ ದರ್ಶಯೇ ನಾನ್ಯಥೇತಿ ॥28॥
ತಾಂ ಸಾಂತ್ವಯಿತ್ವಾ ಮಧುರೈಃ ಸುವಾಕ್ಯೈ
ರ್ನಾರಾಯಣೋ ವಾಚಮಿಮಾಂ ಜಗಾದ ॥29॥
ಶ್ರೀಕೃಷ್ಣನಿಗೆ ದ್ರೌಪದಿ ಸ್ವಯಂ ಶೇಷ ಶಿವ ಗರುಡಾದಿಗಳಿಗಿಂತ ಹೆಚ್ಚು ಅನುಗ್ರಹ ಪಾತ್ರಳಾದ್ದರಿಂದ ಅವನು ಎಲ್ಲವನ್ನೂ ಕೇಳಿ ಪ್ರತಿಜ್ಞೆ ಮಾಡಿದ, `ಕೌರವರ ಹೆಂಡಂದಿರೆಲ್ಲರೂ ಭೀಮನಿಂದ ಹತರಾದ ತಮ್ಮ ಪತಿಗಳನ್ನು ಆಲಿಂಗಿಸಿ ಮುಕ್ತಕೇಶರಾಗುವುದನ್ನು ನಿಶ್ಚಯವಾಗಿ ನಿನಗೆ ತೋರಿಸುವೆನು' ಎಂದು.
ಯದೀಹಾಹಂ ಸ್ಥಿತೋ ನೈವಂ ಭವಿತಾಹಂ ತ್ವಯೋಧಯಂ |
ಸಾಲ್ವರಾಜಂ ದುರಾತ್ಮಾನಂ ಹತಶ್ಚಾಸೌ ಸುಪಾಪಕೃತ್ ॥30॥
ಶ್ರೀಕೃಷ್ಣ ದ್ರೌಪದಿಯನ್ನು ಒಳ್ಳೆಯ ಸವಿನುಡಿಗಳಿಂದ ಸಂತೈಸಿ ಈ ಮಾತನ್ನು ನುಡಿದ `ನಾನು ಇಲ್ಲಿ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ. ನಾನು ಆಗ ದುರಾತ್ಮನಾದ ಸಾಲ್ವನೊಡನೆ ಯುದ್ದ ಮಾಡುತ್ತಿದ್ದೆ. ಮಹಾಪಾಪಕಾರಿಯಾದ ಆತ ಹತನಾಗಿದ್ದಾನೆ'.
ಸನ್ನಿಧಾನೇऽಥ ದೂರೇ ವಾ ಕಾಲವ್ಯವಹಿತೇऽಪಿ ವಾ |
ಸ್ವಭಾವಾದ್ವಾ ವ್ಯವಹಿತೇ ವಸ್ತುವ್ಯವಹಿತೇऽಪಿ ವಾ ॥31॥
ನಾಶಕ್ತಿರ್ವಿದ್ಯತೇ ವಿಷ್ಣೋರ್ನಿತ್ಯಾವ್ಯವಹಿತತ್ವತಃ |
ತಥಾಪಿ ನರಲೋಕಸ್ಯ ಕಲೋತ್ಯನುಕೃತಿಂ ಪ್ರಭುಃ ॥32॥
ವಸ್ತು ಹತ್ತಿರವಿರಲಿ ದೂರವಿರಲಿ, ಕಾಲ ಸ್ವಭಾವ ವಸ್ತುಗಳಿಂದ ವ್ಯವಧಾನದಲ್ಲಿರಲಿ. ನಿತ್ಯ ಅವ್ಯವಹಿತನಾದ ವಿಷ್ಣುವಿಗೆ ಅಶಕ್ತಿ ಇರುವುದಿಲ್ಲ. ಆದರೂ ಸರ್ವಶಕ್ತನಾದ ಅವನು ನರಲೋಕದ ಅನುಕರಣೆ ಮಾಡುತ್ತಾನೆ.
ದುಷ್ಟಾನಾಂ ದೋಷವೃದ್ಧ್ಯರ್ಥಂ
ಭೀಮಾದೀನಾಂ ಗುಣೋನ್ನತೇಃ |
ಯುಧಿಷ್ಠಿರೇऽತಿವೃದ್ಧಂತು ರಾಜಸೂಯಾದಿಸಂಭವಂ ॥33॥
ಧರ್ಮಂ ಚ ಸಂಕ್ರಾಮಯಿತುಂ ಕೃಷ್ಣಾಯಾನುಜೇಷು ಚ |
ಯೋಗ್ಯತಾಕ್ರಮಮತೋ ವಿಷ್ಣುರಿಚ್ಛಯೇತ್ಥಮಚೀಕ್ಲ್ರಪತ್ ॥34॥
ಶ್ರೀಕೃಷ್ಣ ಮಾಡಿದ ಈ ನರಲೋಕದ ಅನುಕರಣೆ ದುಷ್ಟರಲ್ಲಿ ದೋಷವೃದ್ಧಿಯಾಗುವುದಕ್ಕಾಗಿ ಮತ್ತು ಭೀಮ ಮುಂತಾದವರಲ್ಲಿ ಗುಣವೃದ್ಧಿಯಾಗುವುದಕ್ಕಾಗಿ ಧರ್ಮರಾಜನಿಗೆ ರಾಜಸೂಯಾದಿಗಳಿಂದ ಉಂಟಾದ ಪುಣ್ಯ ಯೋಗ್ಯತೆಗೆ ಮೀರಿದ್ದರಿಂದ ಅದನ್ನು ಯೋಗ್ಯತಾನುಸಾರ ದ್ರೌಪದಿಯಲ್ಲಿಯೂ ತಮ್ಮಂದಿರಲ್ಲಿಯೂ ಹರಿದು ಬರುವಂತೆ ಮಾಡುವ ಉದ್ದೇಶದಿಂದಲೂ ಶ್ರೀಕೃಷ್ಣ ಸ್ವೇಚ್ಛೆಯಿಂದಲೇ ಹಾಗೆ ಮಾಡಿದ್ದ.
ಏಧಮಾನದ್ವಿಡಿತ್ಯೇವ ವಿಷ್ಣೋರ್ನಾಮ ಹಿ ವೈದಿಕಂ ॥35॥
ಏಧಮಾನದ್ವಿಟ್ ಎಂಬ ವೈದಿಕನಾಮ ವಿಷ್ಣುವಿಗೆ ಪ್ರಸಿದ್ಧವಾಗಿದೆ.
ಸ್ವಯೋಗ್ಯತಾಯಾ ಅಧಿಕಂ ಧರ್ಮಜ್ಞಾನಾದಿಜಂ ಫಲಂ |
ಭೀಷ್ಮದ್ರೋಣಾಂಬಿಕೇಯಾದೇಃ ಪಾರ್ಥೇಷ್ವೇವ ನಿಧಾಪಿತುಂ ॥36॥
ಭೀಷ್ಮದ್ರೋಣ ಧೃತರಾಷ್ಟ್ರ ಮುಂತಾದವರು ಗಳಿಸಿದ ಧರ್ಮಜ್ಞಾನಾದಿಗಳ ಫಲವಾದ ಪುಣ್ಯವನ್ನು ಪಾಂಡವರಲ್ಲಿ ತಂದು ಸೇರಿಸುವ ಉದ್ದೇಶದಿಂದಲೂ ಶ್ರೀಕೃಷ್ಣ ಹಾಗೆ ಮಾಡಿದ.
ಪುನಶ್ಚ ಪಾಪವೃದ್ಧ್ಯರ್ಥಮಜೋ ದುರ್ಯೋಧನಾದಿಷು |
ವ್ಯಾಸೋऽಂಬಿಕಾಸುತಂ ಪ್ರಾಹ ಪಾರ್ಥಾ ಮೇऽಭ್ಯಧಿಕಂ ಪ್ರಿಯಾಃ ॥
ದುರ್ಯೋಧನಾದಿಗಳಲ್ಲಿ ಪುನಃ ಪಾಪಸಂಗ್ರಹ ಹೆಚ್ಚಲೆಂದು ವೇದವ್ಯಾಸರು ಧೃತರಾಷ್ಟ್ರನ ಮುಂದೆ ತನಗೆ ಪಾಂಡವರೇ ಹೆಚ್ಚು ಪ್ರಿಯರು ಎಂದರು.
ತೇಷಾಂ ಪ್ರವಾಸನಂ ಚೈವ ಪ್ರಿಯಂ ನ ಮಮ ಸರ್ವಥಾ |

ಇತಿ ದುರ್ಯೋಧನಾದೀನಾಂ ಪಾಪವೃದ್ಧ್ಯರ್ಥಮೇವ ಸಃ |
ಪ್ರಿಯಾ ಇತ್ಯೇವ ಕಥನಾತ್ ಪಾಂಡವಾನಾಂ ಶುಭೋನ್ನತೇ ॥38॥
ಪಾಂಡವರನ್ನು ಕಾಡಿಗೆ ಅಟ್ಟಿದುದು ನನಗೆ ಸರ್ವಥಾ ಪ್ರಿಯವಲ್ಲ ಎನ್ನುತ್ತ ಪಾಂಡವರೇ ನನಗೆ ಪ್ರಿಯರೆಂದು ಹೇಳುವ ಮೂಲಕ ದುರ್ಯೋಧನಾದಿಗಳಲ್ಲಿ ಪಾಪವನ್ನು ಹೆಚ್ಚಿಸುವುದಕ್ಕಾಗಿಯೂ ಪಾಂಡವರಲ್ಲಿ ಪುಣ್ಯವನ್ನು ಹೆಚ್ಚಿಸುವುದಕ್ಕಾಗಿಯೂ ವೇದವ್ಯಾಸರು ಧೃತರಾಷ್ಟ್ರನ ಬಳಿಗೆ ಬಂದಿದ್ದರು.
ಗುರುತ್ವಾದ್ ಭೀಮಸೇನಸ್ಯ ಕ್ಷಮಾ ದ್ಯೂತೇಽರ್ಜುನಾದಿನಾಂ |
ನಾತಿಧರ್ಮಸ್ವರೂಪೋಽತ್ರ ಧರ್ಮೋ ಭೀಮೇ ನಿರೌಷಧಃ ॥39॥
ದ್ರೌಪದ್ಯಾ ಅಪ್ಯತಿಕ್ಲೇಶಾತ್ ಕ್ಷಮಾ ಧರ್ಮೋ ಮಹಾನಭೂತ್ |
ಸಾ ಹಿ ಭೀಮಮನೋ ವೇದ ನ ಕಾರ್ಯಃ ಶಾಪ ಇತ್ಯಲಂ ॥40॥
ಭೀಮಸೇನ ಅರ್ಜುನಾದಿಗಳಿಗೆ ಹಿರಿಯನಾದ್ದರಿಂದ ಕೌರವರು ಮಾಡುತ್ತಿದ್ದ ಅನ್ಯಾಯಗಳನ್ನು ಅರ್ಜುನಾದಿಗಳು ಸಹಿಸಿಕೊಂಡಿದ್ದುದು ಅವರಿಗೆ ಹೆಚ್ಚು ಪುಣ್ಯಕರವಾಗಿರಲಿಲ್ಲ. ಭೀಮ ಸಹಿಸಿಕೊಂಡಿದ್ದುದು ಅವನಿಗೆ ಬಹಳ ಪುಣ್ಯಕರವಾಗಿತ್ತು. ದ್ರೌಪದಿ ಅತ್ಯಂತ ಕ್ಲೇಶವನ್ನು ಸಹನೆ ಮಾಡಿದ್ದರಿಂದ ಅವಳಿಗೆ ಅದು ಮಹಾಪುಣ್ಯಕರವಾಯಿತು. ಅವಳು ಭೀಮನ ಇಚ್ಛೆಯನ್ನು ತಿಳಿದಿದ್ದಳು, ಶಾಪ ಕೊಡಬಾರದು ಎಂದು.
ತಸ್ಮಾದ್ ಯಥಾಯೋಗ್ಯತಯಾ ಹರಿಣಾ ಧರ್ಮವರ್ಧನಂ |
ಕೃತಂ ತತ್ರಾಸನ್ನಿಧಾನಕಾರಣಂ ಕೇಶವೋಽಬ್ರವಿತ್ ॥41॥
ಅದರಿಂದ ಶ್ರೀಕೃಷ್ಣ ಜೂಜಿನ ಸಂದರ್ಭದಲ್ಲಿ ಪಾಂಡವರಲ್ಲಿ ಅವರವರ ಯೋಗ್ಯತಾನುಸಾರವೆ ಪುಣ್ಯವೃದ್ಧಿ ಉಂಟುಮಾಡಿದ. ತಾನು ಪಾಂಡವರ ಬಳಿ ಇರದಿದ್ದುದಕ್ಕೆ ಕಾರಣವನ್ನೂ ಹೇಳಿದ.
* * * *
ಹನ್ನೊಂದನೆಯ ಅಧ್ಯಾಯ
(ಕೃಷ್ಣನಿಂದ ದ್ವೈತವನಕ್ಕೆ ಆಗಮನ. ಸಿಟ್ಟುಗೊಂಡ ಕೃಷ್ಣನನ್ನು ಸಂತೈಸಲು ಅರ್ಜುನನ ಸ್ತೋತ್ರ, ದ್ರೌಪದಿಯ ವಿಲಾಪ ಮತ್ತು ಕೃಷ್ಣನ ಪ್ರತಿಜ್ಞೆ.)
ವೈಶಂಪಾಯನಃ
ಭೋಜಾಃ ಪ್ರವ್ರಜಿತಾನ್ ಶ್ರುತ್ವಾ ವೃಷ್ಣಯಶ್ಚಾಂಧಕೈಃ ಸಹ |
ಪಾಂಡವಾನ್ ದುಃಖಸಂತಪ್ತಾನ್ ಸಮಾಜಗ್ಮುರ್ಮಹಾವನೇ ॥1॥
ಪಾಂಡವರು ದುಃಖಸಂತಪ್ತರಾಗಿ ಕಾಡಿಗೆ ತೆರಳಿದುದನ್ನು ಕೇಳಿ ಭೋಜರು ವೃಷ್ಣಿಗಳು ಮತ್ತು ಅಂಧಕರು ಸಹ ವನಕ್ಕೆ ಬಂದರು.
ಪಾಂಚಾಲಸ್ಯ ತು ದಾಯಾದೋ ಧೃಷ್ಟಕೇತುಶ್ಚ ಚೇದಿಪಃ |
ಕೇಕಯಾಶ್ಚ ಮಹೇಷ್ವಾಸಾ ಭ್ರಾತರೋ ಲೋಕವಿಶ್ರುತಾಃ ॥2॥
ವನೇ ತೇಽಭಿಯಯುಃ ಪಾರ್ಥಾನ್ ಕ್ರೋಧಾಮರ್ಷಸಮನ್ವಿತಾನ್ |
ಗರ್ಹಯಂತೋ ಧಾರ್ತರಾಷ್ಟ್ರಾನ್ ಕಿಂ ಕುರ್ಮ ಇತಿ ಚಾಬ್ರುವನ್ ॥3॥
ಪಾಂಚಾಲರಾಜನ ದಾಯಾದಿಯಾದ ಚೇದಿರಾಜನಾದ ಧೃಷ್ಟಕೇತುವೂ ಕೇಕಯದೇಶದ ರಾಜರುಗಳಾದ ಲೋಕವಿಶ್ರುತರಾದ ಅಣ್ಣತಮ್ಮಂದಿರೂ ಕ್ರೋಧಾಮರ್ಷಗಳಿಂದ ಕೂಡಿದ್ದ ಪಾಂಡವರನ್ನು ನೋಡಲು ಕಾಡಿಗೆ ಬಂದರು. ಅವರು ದುರ್ಯೋಧನಾದಿಗಳನ್ನು ನಿಂದಿಸುತ್ತಾ ನಾವು ಏನುಮಾಡೋಣ ಎಂದು ಕೇಳಿದರು.
ವಾಸುದೇವಂ ಪುರಸ್ಕೃತ್ಯ ಸರ್ವೇ ತೇ ಕ್ಷತ್ರಿಯರ್ಷಭಾಃ |
ಪರಿವಾರ್ಯೋಪವಿವಿಶುರ್ಧರ್ಮರಾಜಂ ಯುಧಿಷ್ಠಿರಮ್ ॥4॥
ಆ ಕ್ಷತ್ರಿಯಶ್ರೇಷ್ಠರೆಲ್ಲರೂ ಶ್ರೀಕೃಷ್ಣನನ್ನು ಮುಂದೆ ಮಾಡಿಕೊಂಡು ಧರ್ಮರಾಜನಾದ ಯುಧಿಷ್ಠಿರನ ಸುತ್ತಲೂ ಸಮೀಪದಲ್ಲಿ ಕುಳಿತರು.
ಶ್ರೀವಾಸುದೇವಃ
ದುರ್ಯೋಧನಸ್ಯ ಕರ್ಣಸ್ಯ ಶಕುನೇಶ್ಚ ದುರಾತ್ಮನಃ |
ದುಶ್ಶಾಸನಚತುರ್ಥಾನಾಂ ಭೂಮಿಃ ಪಾಸ್ಯತಿ ಶೋಣಿತಮ್ ॥5॥
ದುರ್ಯೋಧನ ಕರ್ಣ ದುರಾತ್ಮನಾದ ಶಕುನಿ ಮತ್ತು ನಾಲ್ಕನೆಯನಾದ ದುಶ್ಶಾಸನ ಇವರ ರಕ್ತವನ್ನು ಭೂಮಿಯು ಪಾನಮಾಡುವುದು.
ತತಃ ಸರ್ವೇಽಭಿಷಿಂಚಾಮೋ ಧರ್ಮರಾಜಂ ಯುಧಿಷ್ಠಿರಮ್ |
ನಿಕೃತ್ಯಾ ಚ ಚರನ್ ವಧ್ಯ ಏಷ ಧರ್ಮಃ ಸನಾತನಃ ॥6॥
ಅನಂತರ ನಾವೆಲ್ಲರೂ ಸೇರಿ ಧರ್ಮರಾಜನಾದ ಯುಧಿಷ್ಠಿರನಿಗೆ ಪಟ್ಟಾಭಿಷೇಕವನ್ನು ಮಾಡೋಣ ಮೋಸಮಾಡುವವರನ್ನು ಕೊಲ್ಲಲೇ ಬೇಕು. ಇದು ಸನಾತನವಾದ ಧರ್ಮ.
ವೈಶಂಪಾಯನಃ
ಪಾರ್ಥಾನಾಮಭಿಷಂಗೇಣ ತಥಾ ಕ್ರುದ್ಧಂ ಜನಾರ್ದನಮ್ |
ಅರ್ಜುನಃ ಶಮಯಾಮಾಸ ದಿಧಕ್ಷಂತಮಿವ ಪ್ರಜಾಃ ॥7॥
ಪಾಂಡವರ ಮೇಲಿನ ಪ್ರೀತಿಯಿಂದ ಅವರ ಕಾರ್ಪಣ್ಯವನ್ನು ನೋಡಿ ಹಾಗೆ ಕೋಪಗೊಂಡು ಎಲ್ಲಾ ಪ್ರಜೆಗಳನ್ನೂ ಸುಟ್ಟುಬಿಡುವಂತೆ ತೋರುವ ಜನಾರ್ದನನನ್ನು ಅರ್ಜುನನು ಸಮಾಧಾನಗೊಳಿಸಿದನು.

ಸಂಕ್ರುದ್ಧಂ ಕೇಶವಂ ದೃಷ್ಟ್ವಾ ಪೂರ್ವದೇವೇಷು ಭಾರತ |
ಕೀರ್ತಯಾಮಾಸ ಕರ್ಮಾಣಿ ಸತ್ಯಕೀರ್ತೇರ್ಮಹಾತ್ಮನಃ ॥8॥
ಪುರುಷಸ್ಯಾಪ್ರಮೇಯಸ್ಯ ಸತ್ಯಸ್ಯಾಮಿತತೇಜಸಃ |
ಪ್ರಜಾಪತಿಪತೇರ್ವಿಷ್ಣೋರ್ಲೋಕನಾಥಸ್ಯ ಧೀಮತಃ ॥9॥
ಎಲೈ ಭಾರತನೇ! ಮೊದಲು ಅಕ್ಷದ್ಯೂತವನ್ನು ಆಡಿ ಈ ದುರವಸ್ಥೆಯನ್ನು ತಂದ ದೈತ್ಯರಾದ ದುರ್ಯೋಧನಾದಿಗಳ ಮೇಲೆ ಸಂಕ್ರುದ್ಧನಾದ ಕೃಷ್ಣನನ್ನು ನೋಡಿ ಅರ್ಜುನನು ಸತ್ಯಕೀರ್ತಿಯುಳ್ಳ ಮಹಾತ್ಮನಾದ ಅಪ್ರಮೇಯನಾದ ಅನಂತಗುಣಪೂಣರ್ನಾದ ಅಮಿತಪರಾಕ್ರಮಿಯಾದ ಬ್ರಹ್ಮದೇವರ ತಂದೆಯಾದ ಲೋಕನಾಥನಾದ ಮೇಧಾವಿಯಾದ ಪರಮಪುರುಷನಾದ ವಿಷ್ಣುವಿನ ಅದ್ಭುತ ಕರ್ಮಗಳನ್ನು ಹೊಗಳಿದನು.
ಅರ್ಜುನಃ
ದಶವರ್ಷಸಹಸ್ರಾಣಿ ಯತ್ರ ಸಾಯಂಗೃಹೋ ಮುನಿಃ |
ವ್ಯಚರಸ್ತ್ವಂ ಪುರಾ ಕೃಷ್ಣ ಪರ್ವತೇ ಗಂಧಮಾದನೇ ॥10॥
ಕೃಷ್ಣನೇ! ನೀನು ಹಿಂದೆ ಗಂಧಮಾದನಪರ್ವತದಲ್ಲಿ ಹತ್ತುಸಹಸ್ರವರ್ಷಗಳ ಕಾಲ ಎಲ್ಲಿ ಸಾಯಂಕಾಲವಾಗುತ್ತದೆಯೋ ಅಲ್ಲಿಯೇ ಬಿಡಾರಮಾಡಿ ಸಂಚರಿಸಿದೆ.(ವಿಷ್ಣುವಿನ ಎಲ್ಲಾ ರೂಪಗಳಿಗೂ ಅಭೇದವಿರುವುದರಿಂದ ಬದರೀನಾರಾಯಣರೂಪದಿಂದ ಮಾಡಿದ ತಪಸ್ಸನ್ನು ಅರ್ಜುನನು ಇಲ್ಲಿ ಹೇಳುತ್ತಿದ್ದಾನೆ.)
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ |
ಪುಷ್ಕರೇಷ್ವವಸಃ ಕೃಷ್ಣ ತ್ವಮಪೋ ಭಕ್ಷಯನ್ ಪುರಾ ॥11॥
ಕೃಷ್ಣನೇ! ನೀನು ಹಿಂದೆ ಪುಷ್ಕರಕ್ಷೇತ್ರದಲ್ಲಿ ಹತ್ತು ಸಾವಿರವರ್ಷಗಳು ಮತ್ತು ಹತ್ತುನೂರು ವರ್ಷಗಳ ಕಾಲ ಕೇವಲ ಜಲಭಕ್ಷಣೆಮಾಡಿ ವಾಸಮಾಡಿ ತಪಸ್ಸನ್ನು ಮಾಡಿದೆ.
ಊರ್ಧ್ವಬಾಹುರ್ವಿಶಾಲಾಯಾಂ ಬದರ್ಯಾಂ ಮಧುಸೂದನ |
ಅತಿಷ್ಠಸ್ತ್ವೇಕಪಾದೇನ ವಾಯುಭಕ್ಷಃ ಶತಂ ಸಮಾಃ ॥12॥
ಎಲೈ ಮಧುಸೂದನನೇ! ನೀನು ವಿಶಾಲಾ ಎಂದು ಕರೆಯಲ್ಪಡುವ ಬದರೀಕ್ಷೇತ್ರದಲ್ಲಿ ಊರ್ಧ್ವಬಾಹುವಾಗಿ ಒಂದೇ ಪಾದದಮೇಲೆ ನಿಂತು ನೂರುವರ್ಷಗಳ ಕಾಲ ವಾಯುಭಕ್ಷನಾಗಿ ತಪಸ್ಸನ್ನು ಮಾಡಿದೆ.
ಕೃಷ್ಣಾಜಿನೋತ್ತರಾಸಂಗಃ ಕೃಶೋ ಧಮನಿಸಂತತಃ |
ಆಸೀಃ ಕೃಷ್ಣ ಸರಸ್ವತ್ಯಾಂ ಸತ್ರೇ ದ್ವಾದಶವಾರ್ಷಿಕೇ ॥13॥
ಎಲೈ ಕೃಷ್ಣನೇ! ನೀನು ಸರಸ್ವತೀ ನದಿಯ ತೀರದಲ್ಲಿ ಹನ್ನೆರಡುವರ್ಷ ನಡೆದ ಸತ್ರಯಾಗದಲ್ಲಿ ಕೃಷ್ಣಾಜಿನದ ಉತ್ತರೀಯವನ್ನು ಧರಿಸಿ ಧಮನಿಗಳು ಕಾಣುವಂತೆ ಕೃಶನಾಗಿ ವಾಸಮಾಡಿದೆ. (ತಪಸ್ಸನ್ನು ಮಾಡಿದೆ)
ಪ್ರಭಾಸಮಪ್ಯಥಾಸಾದ್ಯ ತೀರ್ಥಂ ಪುಣ್ಯಜನಾರ್ಚಿತಮ್ |
ತತ್ರ ಕೃಷ್ಣ ಮಹಾಬಾಹೋ ದಿವ್ಯಂ ವರ್ಷಸಹಸ್ರಕಮ್ |
ಅತಿಷ್ಠಸ್ತಪ ಏಕೇನ ಪಾದೇನ ನಿಯಮೇ ಸ್ಥಿತಃ ॥14॥
ಎಲೈ ಮಹಾಬಾಹುವಾದ ಕೃಷ್ಣನೇ! ಪುಣ್ಯಜನರಿಂದ ಪ್ರಾರ್ಥಿಸಲ್ಪಡುವ ಪ್ರಭಾಸಕ್ಷೇತ್ರಕ್ಕೆ ಬಂದು ಎಲೈ ಮಹಾಬಾಹುವೇ ಅಲ್ಲಿ ದೇವಮಾನದ ಸಹಸ್ರವರ್ಷಗಳ ಕಾಲ ಒಂದು ಪಾದದಮೇಲೆ ನಿಂತು ನಿಯಮವನ್ನು ಧರಿಸಿ ತಪಸ್ಸನ್ನು ಆಚರಿಸಿದೆ.
ಕ್ಷೇತ್ರಜ್ಞಃ ಸರ್ವಭೂತಾನಾಮಾದಿರಂತಶ್ಚ ಕೇಶವ |
ತಪಸಾಂ ಚ ನಿಧಿಃ ಕೃಷ್ಣ ಯಜ್ಞಸ್ತ್ವಂ ಚ ಸನಾತನಃ ॥15॥
ಎಲೈ ಕೇಶವನೇ! ನೀನು ಎಲ್ಲ ಜೀವರ ಹೃದಯದಲ್ಲಿ ಇದ್ದು ಕ್ಷೇತ್ರಜ್ಞನೆನೆಸಿದವನು. ನೀನು ಈ ಜಗತ್ತಿಗೆ ಆದಿ ಮತ್ತು ಅಂತನಾದವನು. ಕೃಷ್ಣನೇ! ನೀನು ತಪಸ್ಸಿಗೆ ನಿಧಿಯಾದವನು. ಸನಾತನನಾದವನು. ನೀನೇ ಯಜ್ಞವೆಂದು ಕರೆಯಲ್ಪಡುವವನು.
ನಿಹತ್ಯ ನರಕಂ ಭೌಮಮಾಹೃತ್ಯ ಮಣಿಕುಂಡಲೇ |
ಪ್ರಾದಾಸ್ತ್ವಮದಿತೇಃ ಕೃಷ್ಣ ಭವಾನ್ ನಃ ಪರಮಾ ಗತಿಃ ॥16॥
ಕೃಷ್ಣನೇ! ನೀನು ಭೂದೇವಿಯ ಮಗನಾದ ನರಕಾಸುರನನ್ನು ಸಂಹರಿಸಿ ಮಣಿಕುಂಡಲಗಳನ್ನು ತೆಗೆದುಕೊಂಡು ಬಂದು ಅದಿತಿಗೆ ಸಮರ್ಪಿಸಿದೆ. ಅಂತಹ ನೀನು ನಮಗೆ ಶ್ರೇಷ್ಠವಾದ ಗತಿ.
ಪ್ರಥಮೋತ್ಪಾದಿತಂ ಕೃಷ್ಣ ಮೇಧ್ಯಮಶ್ವಮವಾಸೃಜಃ |
ಕೃತ್ವಾ ತತ್ ಕರ್ಮ ಲೋಕಾನಾಮೃಷಭಃ ಸರ್ವಲೋಕಜಿತ್ |
ಅವಧೀಸ್ತ್ವಂ ರಣೇ ಸರ್ವಾನ್ ಸಮೇತಾನ್ ದೈತ್ಯದಾನವಾನ್ ॥17॥
ಕೃಷ್ಣನೇ, ಮೊದಲು ಸೃಷ್ಟಿಸಿದ ಮೇಧ್ಯಾಶ್ವವನ್ನು ಸಂಚರಿಸಲು ಬಿಟ್ಟು ಎಲ್ಲ ಲೋಕಗಳಲ್ಲಿ ಶ್ರೇಷ್ಠನಾದ ನೀನು ಲೋಕಗಳನ್ನು ಗೆದ್ದು ಅಶ್ವಮೇಧಯಾಗವನ್ನು ಮಾಡಿ ಯುದ್ಧದಲ್ಲಿ ಸಮೇತರಾದ ಸರ್ವದೈತ್ಯದಾನವರನ್ನು ಸಂಹರಿಸಿದೆ.
ತತಃ ಸರ್ವೇಶ್ವರತ್ವಂ ಚ ಸಂಪ್ರದಾಯ ಶಚೀಪತೇಃ |
ಮಾನುಷೇಷು ಮಹಾಬಾಹೋ ಪ್ರಾದುರ್ಭೂತೋಽಸಿ ಕೇಶವ ॥18॥
ಅನಂತರ ಶಚೀಪತಿಯಾದ ಇಂದ್ರನಿಗೆ ಮೂರುಲೋಕಾಧಿಪತ್ಯವನ್ನು ಕೊಟ್ಟು, ಎಲೈ ಮಹಾಬಾಹುವಾದ ಕೇಶವನೇ! ನೀನು ಮನುಷ್ಯಲೋಕದಲ್ಲಿ ಅವತರಿಸಿದ್ದೀಯೆ.
ಸ ತ್ವಂ ನಾರಾಯಣೋ ಭೂತ್ವಾ ಹರಿರಾಸೀಃ ಸನಾತನಃ |
ಬ್ರಹ್ಮಾ ಸೋಮಶ್ಚ ಸೂರ್ಯಶ್ಚ ಧರ್ಮೋ ಧಾತಾ ಯಮೋಽನಲಃ ॥

ವಾಯುರ್ವೈಶ್ರವಣೋ ರುದ್ರಃ ಕಾಲಃ ಖಂ ಪೃಥಿವೀ ದಿಶಃ |
ಅಜಶ್ಚರಾಚರಗುರುಃ ಸ್ರಷ್ಟಾ ತ್ವಂ ಪುರುಷೋತ್ತಮಃ ॥20॥
ನೀನು ಹಿಂದೆ ನಾರಾಯಣನಾಗಿ ಅನಂತರ ಸನಾತನನಾದ ಹರಿಯಾಗಿ ಅವತಾರಮಾಡಿದೆ. ನೀನೇ ಬ್ರಹ್ಮ ಸೋಮ ಸೂರ್ಯ ಧರ್ಮ ಧಾತೃ ಯಮ ಅಗ್ನಿ ವಾಯು ಕುಬೇರ ರುದ್ರ ಕಾಲ ಆಕಾಶ ಪೃಥಿವೀ, ದಿಕ್ಕುಗಳು( ಬ್ರಹ್ಮಾದಿಗಳಲ್ಲಿ ಇದ್ದು ಆಯಾ ಹೆಸರುಗಳಿಂದ ಮುಖ್ಯವಾಗಿ ಕರೆಸಿಕೊಳ್ಳಲ್ಪಡುವವನು) ನೀನು ಜನನರಹಿತನಾದವನು. ಚರಾಚರ ಸ್ವರೂಪವಾದ ಜಗತ್ತಿಗೆ ಗುರುವಾದವನು. ನೀನೇ ಸೃಷ್ಟಿಕರ್ತನಾದ ಪುರುಷೋತ್ತಮನು.
ನಾರಾಯಣೋ ಹ್ಯಭೂಃ ಪೂರ್ವಂ ಕ್ರತುಭಿರ್ಭೂರಿದಕ್ಷಿಣೈಃ |
ಅಯಜೋ ಭೂರಿತೇಜಾಸ್ತ್ವಂ ಕೃಷ್ಣ ಚೈತ್ರರಥೇ ವನೇ ॥21॥
ಎಲೈ ಮಹಾತೇಜಸ್ವಿಯಾದ ಕೃಷ್ಣನೇ! ನೀನು ಹಿಂದೆ ನಾರಾಯಣನಾಗಿ ಚೈತ್ರರಥವನದಲ್ಲಿ ಬಹಳವಾದ ದಕ್ಷಿಣೆಗಳನ್ನು ಕೊಟ್ಟು ಅನೇಕ ಯಾಗಗಳನ್ನು ಮಾಡಿದೆ.
ಶತಂ ಶತಸಹಹ್ರಾಣಿ ಸುವರ್ಣಸ್ಯ ಜನಾರ್ದನ |
ಏಕೈಕಸ್ಮಿಂಸ್ತಥಾ ಯಜ್ಞೇ ಪರಿಪೂರ್ಣಾನಿ ದತ್ತವಾನ್ ॥22॥
ಎಲೈ ಜನಾರ್ದನನೇ! ಒಂದೊಂದು ಯಜ್ಞದಲ್ಲಿಯೂ ನೀನು ಪ್ರತಿಯೊಬ್ಬರಿಗೂ ಪರಿಪೂರ್ಣವಾದ ಹತ್ತು ಸಹಸ್ರ ಸುವರ್ಣಗಳನ್ನು ದಕ್ಷಿಣೆಯಾಗಿ ಕೊಟ್ಟಿದ್ದೀಯೆ.
ಅದಿತೇರಪಿ ಪುತ್ರತ್ವಮಾಪ್ಯ ಯಾದವನಂದನ |
ತ್ವಂ ವಿಷ್ಣುರಿತಿ ವಿಖ್ಯಾತ ಇಂದ್ರಾದವರಜೋಽಭವಃ ॥23॥
ಯಾದವನಂದನನೇ! ನೀನು ಅದಿತಿಯ ಮಗನಾಗಿ ವಿಷ್ಣು ಎಂಬ ಹೆಸರಿನಿಂದ ಪ್ರಖ್ಯಾತನಾಗಿ ಇಂದ್ರನ ತಮ್ಮನಾಗಿ ಅವತಾರಮಾಡಿದೆ.

ಶಿಶುರ್ಭೂತ್ವಾ ದಿವಂ ಖಂ ಚ ಪೃಥಿವೀಂ ಚ ಪರಂತಪ |
ತ್ರಿಭಿರ್ವಿಕ್ರಮಣೈಃ ಕೃಷ್ಣ ಪೂರ್ವಂ ತ್ವಂ ಕ್ರಾಂತವಾನಸಿ ॥24॥
ಎಲೈ ಪರಂತಪನೇ! ನೀನು ವಾಮನರೂಪದಿಂದ ಅವತಾರಮಾಡಿ ಸ್ವರ್ಗ ಅಂತರಿಕ್ಷ ಮತ್ತು ಭೂಮಿಗಳನ್ನು ಮೂರುಹೆಜ್ಜೆಗಳಿಂದ ಹಿಂದೆ ಅಳೆದವನಾಗಿದ್ದೀಯೆ.
ಸಂಪ್ರಾಪ್ಯ ದಿವಮಾಕಾಶಮಾದಿತ್ಯಸದನೇ ಸ್ಥಿತಃ |
ಅತ್ಯರೋಚಶ್ಚ ಭೂತಾತ್ಮನ್ ಭಾಸ್ಕರಂ ಸ್ವೇನ ತೇಜಸಾ ॥25॥
ಎಲೈ ಭೂತಾತ್ಮನೇ! ಸೂರ್ಯಲೋಕಕ್ಕೆ ಹೋಗಿ ಸೂರ್ಯನ ಗೃಹದಲ್ಲಿ ಇದ್ದು ನಿನ್ನ ತೇಜಸ್ಸಿನಿಂದ ಸೂರ್ಯನಿಗಿಂತಲೂ ಚೆನ್ನಾಗಿ ಬೆಳಗಿದ್ದೀಯೆ.
ಮೌರವಾಃ ಸಾದಿತಾಃ ಪಾಶಾ ನಿಶುಂಭನರಕೌ ಹತೌ |
ಕೃತಃ ಕ್ಷೇಮಃ ಪುನಃ ಪಂಥಾಃ ಪ್ರಾಗ್ಜ್ಯೋತಿಷಪುರಂ ಪ್ರತಿ ॥26॥
ಹಿಂದೆ ಪ್ರಾಗ್ಜ್ಯೋತಿಷಪಟ್ಟಣದಲ್ಲಿ ಮುರ ಎಂಬ ಅಸುರ ನಿರ್ಮಿಸಿದ ಪಾಶಗಳನ್ನು ಕತ್ತರಿಸಿ ನಿಶುಂಭ ಮತ್ತು ನರಕಾಸುರರನ್ನು ಕೊಂದು ಆ ನಗರದ ಮಾರ್ಗವು ಪುನಃ ಕ್ಷೇಮದಿಂದ ಇರುವಂತೆ ಮಾಡಿದ್ದೀಯೆ.
ಜಾರುಥ್ಯಾಮಾವೃತಿಃ ಕ್ರುದ್ಧಃ ಶಿಶುಪಾಲೋ ನೃಪೈಃ ಸಹ |
ಭೀಮಧನ್ವಾ ಚ ಶೈಬ್ಯಶ್ಚ ಶತಧನ್ವಾ ಚ ನಿರ್ಜಿತಃ ॥27॥
ಅಗ್ರಪೂಜೆಯ ಸಮಯದಲ್ಲಿ ಅಗ್ರಪೂಜೆಗೆ ಪ್ರತಿಬಂಧಕನಾದ ಸಂಕ್ರುದ್ಧನಾದ ಶಿಶುಪಾಲನನ್ನು ಮತ್ತು ಭಯಂಕರ ಧನುಸ್ಸುಳ್ಳ ಶೈಬ್ಯರಾಜನನ್ನು ಮತ್ತು ಶತಧನ್ವನನ್ನು ಉಳಿದ ರಾಜರುಗಳ ಜೊತೆಯಲ್ಲಿ ಪರಾಭವಗೊಳಿಸಿದ್ದೀಯೆ.
ತಥಾ ಪರ್ಜನ್ಯಘೋಷೇಣ ರಥೇನಾದಿತ್ಯವರ್ಚಸಾ |
ಅಹಾರ್ಷೀ ರುಗ್ಮಿಣೀಂ ಭೈಷ್ಮೀಂ ನಿರ್ಜಿತ್ಯ ರುಗ್ಮಿಣಂ ಮೃಧೇ ॥28॥
ಅದರಂತೆ ಮೇಘಗರ್ಜನೆಯನ್ನು ಹೊಂದಿದ ಸೂರ್ಯನಂತೆ ಪ್ರಕಾಶಿಸುವ ರಥದಲ್ಲಿ ಕುಳಿತು ಯುದ್ಧದಲ್ಲಿ ರುಗ್ಮಿಯನ್ನು ಸೋಲಿಸಿ ಭೀಷ್ಮರಾಜನ ಮಗಳಾದ ರುಗ್ಮಿಣಿಯನ್ನು ಕರೆತಂದಿದ್ದೀಯೆ.
ಇಂದ್ರದ್ಯುಮ್ನೋ ಹತಃ ಕೋಪಾದ್ ಯವನಶ್ಚ ಕಶೇರುಕಃ |
ಹತಃ ಸೌಭಪತಿಃ ಸಾಲ್ವಃ ತ್ವಯಾ ಸೌಭಂ ಚ ಪಾತಿತಮ್ ॥29॥
ಕೋಪದಿಂದ ಇಂದ್ರದ್ಯುಮ್ನನನ್ನು ಸಂಹರಿಸಿದ್ದೀಯೆ. ಯವನ ರಾಜನಾದ ಕಶೇರುಕನನ್ನು ಕೊಂದಿದ್ದೀಯೆ. ಸೌಭಪತಿಯಾದ ಸಾಲ್ವನನ್ನು ಸಂಹರಿಸಿ ಸೌಭವನ್ನು ನೆಲಕ್ಕೆ ಉರುಳಿಸಿದ್ದೀಯೆ.
ಇರಾವತ್ಯಾಂ ತಥಾ ಭೋಜಃ ಕಾರ್ತವೀರ್ಯಸಮೋ ಯುಧಿ |
ಗೋಪತಿಸ್ತಾಳಕೇತುಶ್ಚ ತ್ವಯಾ ವಿನಿಹತಾವುಭೌ ॥30॥
ಯುದ್ಧದಲ್ಲಿ ಇರಾವತಿಯಲ್ಲಿ ಕಾರ್ತವೀರ್ಯನಿಗೆ ಸಮಾನನಾದ ಭೋಜನನ್ನು ಸಂಹರಿಸಿದ್ದೀಯೆ. ಅದರಂತೆ ಗೋಪತಿ ಮತ್ತು ತಾಳಕೇತು ಇವರಿಬ್ಬರೂ ನಿನ್ನಿಂದ ಹತರಾಗಿದ್ದಾರೆ.
ತಾಂ ಚ ಭೋಗವತೀಂ ಪುಣ್ಯಾಮೃಷಿಕಾಂತಾಂ ಜನಾರ್ದನ |
ದ್ವಾರಕಾಮಾತ್ಮಸಾತ್ ಕೃತ್ವಾ ಸಮುದ್ರಂ ಗಮಯಿಷ್ಯಸಿ ॥31॥
ಎಲೈ ಜನಾರ್ದನನೇ! ಭೋಗಪೂರ್ಣವಾದ, ಋಷಿಗಳಿಗೆ ಪ್ರಿಯವಾದ, ಪವಿತ್ರವಾದ ಆ ದ್ವಾರಕಾಪಟ್ಟಣವನ್ನು ಸ್ವಾಧೀನಮಾಡಿಕೊಂಡು ಸಮುದ್ರವನ್ನು ದೂರಕ್ಕೆ ತಳ್ಳಿದ್ದೀಯೆ.

ನ ಕ್ರೋಧೋ ನ ಚ ಮಾತ್ಸರ್ಯಂ ನಾನೃತಂ ಮಧುಸೂದನ |
ತ್ವಯಿ ತಿಷ್ಠತಿ ದಾಶಾರ್ಹ ನ ನೃಶಂಸಃ ಕುತೋಽನೃಜುಃ ||32||
ಎಲೈ ದಾಶಾರ್ಹನೇ! ಎಲೈ ಮಧುಸೂದನನೇ! ನಿನ್ನಲ್ಲಿ ಕ್ರೋಧವಾಗಲೀ ಮಾತ್ಸರ್ಯವಾಗಲೀ ಅನೃತವಾಗಲೀ ಎಂದೂ ಇಲ್ಲ. ನೀನು ಎಂದೂ ಕ್ರೂರಿಯಲ್ಲ. ಇನ್ನು ವಕ್ರತೆಯು ಎಲ್ಲಿಂದ ಬರಬೇಕು?
ಆಸೀನಂ ಚಿತ್ತಮಧ್ಯೇ ತ್ವಾಂ ದೀಪ್ಯಮಾನಂ ಸ್ವತೇಜಸಾ |
ಆಗಮ್ಯ ಋಷಯಃ ಸರ್ವೇ ಯಾಚಂತ್ಯಭಯಮುಚ್ಯುತ ||33||
ಎಲೈ ಅಚ್ಯುತನೇ! ಹೃದಯಮಧ್ಯದಲ್ಲಿ ನಿನ್ನ ಕಾಂತಿಯಿಂದ ಬೆಳಗುತ್ತಿರುವ ನಿನ್ನನ್ನು ಋಷಿಗಳು ಚೆನ್ನಾಗಿ ತಿಳಿದು ನಿನ್ನಿಂದ ಮೋಕ್ಷವನ್ನು ಯಾಚಿಸುತ್ತಾರೆ.
ಯುಗಾಂತೇ ಸರ್ವಭೂತಾನಿ ಸಂಕ್ಷಿಪ್ಯ ಮಧುಸೂದನ |
ಆತ್ಮನ್ಯೇವಾತ್ಮನಾ ಕೃತ್ವಾ ಜಗದಾಸ್ಸೇ ಪರಂತಪ ||34||
ಎಲೈ ಮಧುಸೂದನನೇ! ಎಲೈ ಪರಂತಪನೇ! ಯುಗಾಂತಸಮಯದಲ್ಲಿ ಎಲ್ಲಾ ಪ್ರಾಣಿಗಳನ್ನೂ ಸಂಹರಿಸಿ ಜಗತ್ತನ್ನು ನಿನ್ನ ಉದರದಲ್ಲೇ ಇಟ್ಟುಕೊಂಡಿರುತ್ತೀಯೆ.
ನೈವ ಪೂರ್ವೇ ಪರೇ ಚೈವ ಕರಿಷ್ಯಂತಿ ಕೃತಾನಿ ತೇ |
ಕರ್ಮಾಣಿ ಯಾನಿ ದೇವ ತ್ವಂ ಬಾಲ ಏವ ಮಹಾದ್ಯುತೇ ||35||
ಕೃತವಾನ್ ಪುಂಡರೀಕಾಕ್ಷ ಬಲದೇವಸಹಾಯವಾನ್ |
ವೈರಾಜಭವನೇ ಚಾಪಿ ಬ್ರಹ್ಮಣಾ ನ್ಯವಸಃ ಸಹ ||36||
ಎಲೈ ದೇವನೇ! ಎಲೈ ಮಹಾದ್ಯುತಿಯೇ! ನೀನು ಬಾಲಕನಾಗಿಯೇ ಯಾವ ಕಾರ್ಯಗಳನ್ನು ಮಾಡಿದೆಯೋ ಅದನ್ನು ನಿನ್ನ ಹಿಂದಿನವರು ಯಾರೂ ಮಾಡಲಿಲ್ಲ. ಮುಂದಿನವರು ಮಾಡುವುದಿಲ್ಲ. ಎಲೈ ಪುಂಡರೀಕಾಕ್ಷನೇ! ಬಲರಾಮನ ಜೊತೆಯಲ್ಲಿ ನೀನು ಅಂತಹ ಕಾರ್ಯಗಳನ್ನು ಮಾಡಿದೆ. ಬ್ರಹ್ಮದೇವರ ಸದನದಲ್ಲಿಯೂ ಸಹ ಅವರ ಜೊತೆಯಲ್ಲಿ ವಾಸವನ್ನು ಮಾಡಿದೆ.
ವೈಶಂಪಾಯನಃ
ಏವಮುಕ್ತ್ವಾ ಸ್ವಮಾತ್ಮಾನಮಾತ್ಮಾ ಕೃಷ್ಣಸ್ಯ ಪಾಂಡವಃ |
ತೂಷ್ಣೀಮಾಸೀತ್ ತತಃ ಪಾರ್ಥಮಿತ್ಯುವಾಚ ಜನಾರ್ದನಃ ||37||
ಕೃಷ್ಣನಿಗೆ ಪ್ರಿಯನಾದ ಪಾಂಡವನಾದ ಅರ್ಜುನನು ತನ್ನ ಸ್ವಾಮಿಯಾದ ಪರಮಾತ್ಮನಾದ ಕೃಷ್ಣನನ್ನು ಕುರಿತು ಹೀಗೆ ಮಾತನಾಡಿ ಸುಮ್ಮನಾದನು. ಅನಂತರ ಜನಾರ್ದನನು ಅರ್ಜುನನನ್ನು ಕುರಿತು ಮಾತನಾಡಿದನು.
ಮಮೈವ ತ್ವಂ ತವೈವಾಹಂ ಯೇ ಮದೀಯಾಸ್ತವೈವ ತೇ |
ಯಸ್ತ್ವಾಂ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತ್ವಾಮನು ಸ ಮಾಮನು ||38||
ನೀನು ನನ್ನವನು ಮತ್ತು ನಾನು ನಿನ್ನವನು. ನನ್ನವರೆಲ್ಲರೂ ನಿನಗೆ ಸೇರಿದವರೇ ಆಗಿದ್ದಾರೆ. ಯಾರು ನಿನ್ನನ್ನು ದ್ವೇಷಿಸುತ್ತಾರೆಯೋ ಅವರು ನನ್ನನ್ನು ದ್ವೇಷಿಸುತ್ತಾರೆ. ಯಾರು ನಿನಗೆ ಅನುಕೂಲವಾಗಿದ್ದಾರೆಯೋ ಅವರು ನನಗೂ ಅನುಕೂಲರಾಗಿದ್ದಾರೆ.
ನರಸ್ತ್ವಮಸಿ ದುರ್ಧರ್ಷ ಹರಿರ್ನಾರಾಯಣೋಽಸ್ಮ್ಯಹಮ್ |
ಲೋಕಾಲ್ಲೋಕಮಿಮಂ ಪ್ರಾಪ್ತೌ ನರನಾರಾಯಣಾವೃಷೀ ||39||
ಎಲೈ ದುರ್ಧರ್ಷನೇ! ನೀನು ಹಿಂದೆ ನರನಾಗಿದ್ದೀಯೆ. ನಾನು ಹರಿನಾರಾಯಣನಾಗಿದ್ದೆ. ನಾವಿಬ್ಬರೂ ಬೇರೆ ಲೋಕದಿಂದ ಈ ಲೋಕಕ್ಕೆ ಬಂದ ನರನಾರಾಯಣ ಋಷಿಗಳು.
ಅನನ್ಯಃ ಪಾರ್ಥ ಮತ್ತಸ್ತ್ವಮ್ ಅಹಂ ತ್ವತ್ತಶ್ಚ ಭಾರತ |
ನಾವಯೋರಂತರಂ ಶಕ್ಯಂ ವೇದಿತುಂ ಭರತರ್ಷಭ ||40||
ಎಲೈ ಪಾರ್ಥನೇ! ನನ್ನ ಮೂಲರೂಪದಿಂದ ನಾನು ಅಭಿನ್ನನಾಗಿದ್ದೇನೆ. ನೀನು ನೀನೇ ಆಗಿದ್ದೀಯೆ. ಎಲೈ ಭರತರ್ಷಭನೇ! ನನ್ನ ಮೂಲರೂಪಕ್ಕೂ ಅವತಾರರೂಪಕ್ಕೂ ದೇಶದಿಂದ ಕಾಲದಿಂದ ಅಥವಾ ಅವಧಿಯಿಂದ ಅಥವಾ ಗುಣದಿಂದ ವ್ಯತ್ಯಾಸವನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಅಥವಾ ನಿನಗೂ ನನಗೂ ಇರುವ ತಾರತಮ್ಯವನ್ನು ಸಹ ತಿಳಿಯುವುದೂ ಅಶಕ್ಯವಾದುದು.
ವೈಶಂಪಾಯನಃ
ತಸ್ಮಿನ್ ವೀರಸಮಾವಾಯೇ ಸಂಕ್ರುದ್ಧೇಷ್ವಥ ರಾಜಸು |
ಧೃಷ್ಟದ್ಯುಮ್ನಮುಖೈರ್ವೀರೈರ್ಭ್ರಾತೃಭಿಃ ಪರಿವಾರಿತಾ ||41||
ಪಾಂಚಾಲೀ ಪುಂಡರೀಕಾಕ್ಷಮಾಸೀನಂ ಯಾದವೈಃ ಸಹ |
ಅಭಿಗಮ್ಯಾಬ್ರವೀತ್ ಕೃಷ್ಣಾ ಶರಣ್ಯಂ ಶರಣೈಷಿಣೀ ||42||
ಆ ವೀರಸಮುದಾಯದಲ್ಲಿ ಎಲ್ಲ ರಾಜರೂ ಕೋಪಗೊಂಡಿರಲು ಧೃಷ್ಟದ್ಯುಮ್ನ ಮೊದಲಾದ ವೀರರಿಂದಲೂ ಮತ್ತು ಉಳಿದ ಸಹೋದರರಿಂದಲೂ ಸುತ್ತುವರಿಯಲ್ಪಟ್ಟ ಶರಣಾರ್ಥಿಯಾದ ಪಾಂಚಾಲಿಯಾದ ದ್ರೌಪದಿಯು ಯಾದವರ ಜೊತೆಯಲ್ಲಿ ಕುಳಿತಿದ್ದ ಕೃಷ್ಣನನ್ನು ಸಮೀಪಿಸಿ ಮಾತನಾಡಿದಳು
ಪೂರ್ವೇ ಪ್ರಜಾನಿಸರ್ಗೇ ತ್ವಾಮಾಹುರೇಕಂ ಪ್ರಜಾಪತಿಮ್ |
ಸ್ರಷ್ಟಾರಂ ಸರ್ವಲೋಕಾನಾಮಸಿತೋ ದೇವಲೋಽಬ್ರವೀತ್ ||43||
ಹಿಂದಿನ ಪ್ರಜಾಸರ್ಗದಲ್ಲಿ ನೀನೇ ಮುಖ್ಯವಾದ ಪ್ರಜಾಪತಿ ಎಂದು ಹೇಳುತ್ತಾರೆ. ಅಸಿತ ಮತ್ತು ದೇವಲರು ನೀನೇ ಎಲ್ಲ ಲೋಕಗಳ ಸೃಷ್ಟಿಕರ್ತನೆಂದು ಹೇಳಿದ್ದಾರೆ.
ವಿಷ್ಣುಸ್ತ್ವಮಸಿ ದುರ್ಧರ್ಷಸ್ತ್ವಂ ಯಜ್ಞೋ ಮಧುಸೂದನ |

ಯಷ್ಟಾ ತ್ವಮಸಿ ಯಷ್ಟವ್ಯೋ ಜಾಮದಗ್ನ್ಯೋ ಯಥಾಽಬ್ರವೀತ್ ॥44॥
ದುರ್ಧರ್ಷನಾದ ಮಧುಸೂದನನೇ! ನೀನೇ ವಿಷ್ಣು. ನೀನೇ ಯಜ್ಞ. ಯಜ್ಞವನ್ನು ಮಾಡುವವನೂ ನೀನೇ ಯಜ್ಞದಿಂದ ಪೂಜಿಸಲ್ಪಡುವವನೂ ನೀನೇ ಎಂದು ಜಾಮದಗ್ನ್ಯರು ಹೇಳಿದ್ದಾರೆ.
ಋಷಯಸ್ತ್ವಾಂ ಕ್ಷಮಾಮಾಹುಃ ಸತ್ಯಂ ಚ ಪುರುಷೇಶ್ವರ |
ಸತ್ಯಾದ್ ಯಜ್ಞೋಽಸಿ ಸಂಭೂತಃ ಕಾಶ್ಯಪಸ್ತ್ವಾಂ ಯಥಾಽಬ್ರವೀತ್ ॥
ಎಲೈ ಪುರುಷೇಶ್ವರನೇ! ಋಷಿಗಳು ನಿನ್ನನ್ನು ಕ್ಷಮೆಯೆಂದೂ ಸತ್ಯವೆಂದೂ ಕರೆಯುತ್ತಾರೆ. ಕಾಶ್ಯಪರು ಹೇಳಿದಂತೆ ನೀನು ಸತ್ಯದಿಂದ ಯಜ್ಞನಾಗಿ ಆವಿರ್ಭವಿಸಿದ್ದೀಯೆ.
ಸಾಧ್ಯಾನಾಮಪಿ ದೇವಾನಾಂ ವಸೂನಾಮೀಶ್ವರೇಶ್ವರಃ |
ಲೋಕಭಾವನ ಲೋಕೇಶ ಯಥಾ ತ್ವಾಂ ನಾರದೋಽಬ್ರವೀತ್ ॥46॥
ನೀನು ಸಾಧ್ಯರಿಗೂ ದೇವತೆಗಳಿಗೂ ಮತ್ತು ವಸುಗಳಿಗೂ ರಾಜಾಧಿರಾಜನಾಗಿದ್ದೀಯೆ. ಎಲೈ ಲೋಕಭಾವನನೇ! ನೀನು ಸಮಸ್ತಲೋಕಗಳಿಗೂ ಒಡೆಯನೆಂದು ನಾರದರು ಹೇಳಿದರು.
ದ್ಯೌಶ್ಚ ತೇ ಶಿರಸಾ ವ್ಯಾಪ್ತಾ ಪದ್ಭ್ಯಾಂ ಚ ಪೃಥಿವೀ ವಿಭೋ |
ಜಠರೇ ತ ಇಮೇ ಲೋಕಾಃ ಪುರುಷೋಽಸಿ ಸನಾತನಃ ॥47॥
ಎಲೈ ವಿಭುವೇ! ದ್ಯುಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ಭೂಲೋಕವು ನಿನ್ನ ಪಾದಗಳಿಂದ ವ್ಯಾಪ್ತವಾಗಿದೆ. ಈ ಎಲ್ಲ ಲೋಕಗಳೂ ಉದರಲ್ಲಿವೆ. ನೀನು ಸನಾತನನಾದ ಪರಮ ಪುರುಷ.
ವಿದ್ಯಾತಪೋಭಿತೃಪ್ತಾನಾಂ ತಪಸಾ ಭಾವಿತಾತ್ಮನಾಮ್ |
ಆತ್ಮದರ್ಶನಸಿದ್ಧಾನಾಮೃಷೀಣಾಮಸಿ ಸತ್ತಮಃ ॥48॥
ವಿದ್ಯಾ ಮತ್ತು ತಪಸ್ಸುಗಳಿಂದ ಸಂತುಷ್ಟಗೊಂಡ, ತಪಸ್ಸಿನಿಂದ ತಮ್ಮ ಮನಸ್ಸಿನ ಶುದ್ಧೀಕರಿಸಿಕೊಂಡು ನಿನ್ನ ದರ್ಶನವನ್ನು ಪಡೆದು ಸಿದ್ಧರಾದ, ಋಷಿಗಳಿಗೆ ನೀನು ನಿರ್ದೋಷಗುಣಪರಿಪೂರ್ಣ ವಸ್ತುವಾಗಿದ್ದೀಯೆ.
ರಾಜರ್ಷೀಣಾಂ ಪುಣ್ಯಕೃತಾಮಾಹವೇಷ್ವನಿವರ್ತಿನಾಮ್ |
ಸರ್ವಧರ್ಮೋಪಪನ್ನಾನಾಂ ತ್ವಂ ಗತಿಃ ಪುರುಷೋತ್ತಮ ॥49॥
ಎಲೈ ಪುರುಷೋತ್ತಮನೇ! ಪುಣ್ಯವನ್ನು ಮಾಡಿ ಯುದ್ಧದಲ್ಲಿ ಹಿಂದಿರುಗದೆ ಸರ್ವಧರ್ಮಗಳನ್ನು ಸಾಧಿಸಿದ ರಾಜರ್ಷಿಗಳಿಗೆ ನೀನು ಗತಿಯಾಗಿದ್ದೀಯೆ.
ತ್ವಂ ಪ್ರಭುಸ್ತ್ವಂ ವಿಭುಶ್ಚ ತ್ವಮಾತ್ಮಭೂಸ್ತ್ವಂ ಸನಾತನಃ |
ಲೋಕಪಾಲಾಶ್ಚ ಲೋಕಾಶ್ಚ ನಕ್ಷತ್ರಾಣಿ ದಿಶೋ ದಶ |
ನಭಶ್ಚಂದ್ರಶ್ಚ ಸೂರ್ಯಶ್ಚ ತ್ವಯಿ ಸರ್ವಂ ಪ್ರತಿಷ್ಠಿತಮ್ ॥50॥
ನೀನು ಸಮರ್ಥನಾಗಿದ್ದೀಯೆ. ನೀನು ವ್ಯಾಪ್ತನಾಗಿದ್ದೀಯೆ. ನಿನ್ನಿಂದ ನೀನೇ ಹುಟ್ಟುವವನಾಗಿದ್ದೀಯೆ. ನೀನು ವೇದಪ್ರತಿಪಾದ್ಯನಾಗಿದ್ದೀಯೆ. ಎಲ್ಲ ಲೋಕಗಳು ಲೋಕಪಾಲಕರು ನಕ್ಷತ್ರಗಳು ಹತ್ತು ದಿಕ್ಕುಗಳು ಅಂತರಿಕ್ಷಲೋಕವು ಸೂರ್ಯಚಂದ್ರರು ಈ ಎಲ್ಲರೂ ನಿನ್ನಲ್ಲೇ ಪ್ರತಿಷ್ಠಿತರಾಗಿದ್ದಾರೆ. (ಆಶ್ರಿತರಾಗಿದ್ದಾರೆ)
ಮರ್ತ್ಯತಾ ಚೈವ ಭೂತಾನಾಮಮರತ್ವಂ ದಿವೌಕಸಾಮ್ |
ತ್ವಯಿ ಸರ್ವಂ ಮಹಾಬಾಹೋ ಲೋಕಕಾರ್ಯಂ ಪ್ರತಿಷ್ಠಿತಮ್ ॥51॥
ಸಾ ತೇಽಹಂ ದುಃಖಮಾಖ್ಯಾಸ್ಯೇ ಪ್ರಣಯಾನ್ಮಧುಸೂದನ |
ಈಶಸ್ತ್ವಂ ಸರ್ವಲೋಕಾನಾಂ ಯೇ ದಿವ್ಯಾ ಯೇ ಚ ಮಾನುಷಾಃ ॥
ಮಹಾಬಾಹುವೇ! ಎಲ್ಲ ಪ್ರಾಣಿಗಳ ಮರಣ ಶೀಲತೆಯೂ ದೇವತೆಗಳ ಅಮೃತ್ಯುತ್ವವೂ ನಿನ್ನ ಅಧೀನವಾಗಿದೆ. ಲೋಕಕಾರ್ಯವು ನಿನ್ನನ್ನೇ ಆಶ್ರಯಿಸಿದೆ. ಎಲೈ ಮಧುಸೂಧನನೇ! ಅಂತಹ ನಾನು ನಿನ್ನ ಮೇಲಿನ ಪ್ರೀತಿಯಿಂದ ನನ್ನ ದುಃಖವನ್ನು ಹೇಳಿಕೊಳ್ಳುವೆನು. ಎಷ್ಟು ದಿವ್ಯ ಲೋಕಗಳು ಮತ್ತು ಮನುಷ್ಯಲೋಕಗಳು ಇವೆಯೋ ಅವೆಲ್ಲಕ್ಕೂ ನೀನೇ ಒಡೆಯನಾದವನು.
ಕಥಂ ನು ಭಾರ್ಯಾ ಪಾರ್ಥಾನಾಂ ತವ ಕೃಷ್ಣ ಸಖೀ ವಿಭೋ |
ಧೃಷ್ಟದ್ಯುಮ್ನಸ್ಯ ಭಗಿನೀ ಪರಿಕೃಷ್ಯೇತ ಮಾದೃಶೀ ॥53॥
ಎಲೈ ಕೃಷ್ಣನೇ! ಪಾಂಡವರ ಭಾರ್ಯೆಯಾದ, ನಿನ್ನ ಗೆಳತಿಯಾದ, ಧೃಷ್ಟದ್ಯುಮ್ನನ ತಂಗಿಯಾದ ನನ್ನಂತಹವಳನ್ನು ಸಭೆಯಲ್ಲಿ ಹೇಗೆ ತಾನೆ ಎಳೆದಾಡಿದರು?
ಸ್ತ್ರೀಧರ್ಮಿಣೀ ವೇಪಮಾನಾ ರುಧಿರೇಣ ಸಮುಕ್ಷಿತಾ |
ಏಕವಸ್ತ್ರಾ ವಿಕೃಷ್ಟಾಽಸ್ಮಿ ದುಃಖಿತಾ ಕುರುಸಂಸದಿ ॥54॥
ರಜಸ್ವಲೆಯಾಗಿ ನಾನು ರಕ್ತದಿಂದ ಒದ್ದೆಯಾಗಿ ಒಂದು ವಸ್ತ್ರವನ್ನು ಧರಿಸಿ ದುಃಖದಿಂದ ನಡುಗುತ್ತಿರುವಾಗ ಕುರುರಾಜರ ಸಭೆಯಲ್ಲಿ ಎಳೆದಾಡಲ್ಪಟ್ಟೆ.
ರಾಜಮಧ್ಯೇ ಸಭಾಯಾಂ ತು ರಜಸಾಽಭಿಸಮೀರಿತಾಃ |
ದಾಸೀಭಾವೇನ ಭೋಕ್ತುಂ ಮಾಮೀಷುಸ್ತೇ ಮಧುಸೂದನ ॥55॥
ಎಲೈ ಮಧುಸೂದನನೇ! ರಾಗಾಭಿಭೂತರಾದ ಆ ದುಷ್ಟರು ಸಭೆಯಲ್ಲಿ ರಾಜರ ಮಧ್ಯದಲ್ಲಿ ನನ್ನನ್ನು ದಾಸಿ ಎಂದು ಮಾಡಿ ನನ್ನನ್ನು ಭೋಗಿಸಲು ಬಯಸಿದರು.
ದೃಷ್ಟ್ವಾ ಚ ಮಾಂ ಧಾರ್ತರಾಷ್ಟ್ರಾಃ ಪ್ರಾಹಸನ್ ಪಾಪಚೇತಸಃ |
ಜೀವತ್ಸು ಪಾಂಡುಪುತ್ರೇಷು ಪಾಂಚಾಲೇಷ್ವಥ ವೃಷ್ಣಿಷು ॥56॥

ಪಾಂಡವರೂ ಪಾಂಚಾಲರೂ ಮತ್ತು ವೃಷ್ಣಿಗಳೂ ಬದುಕಿರುವಾಗ ನನ್ನನ್ನು ನೋಡಿ ಪಾಪಮನಸ್ಸುಳ್ಳ ಧೃತರಾಷ್ಟ್ರಪುತ್ರರು ಅಪಹಾಸವನ್ನು ಮಾಡಿದರು.
ನನ್ವಹಂ ಕೃಷ್ಣ ಭೀಷ್ಮಸ್ಯ ಧೃತರಾಷ್ಟ್ರಸ್ಯ ಚೋಭಯೋಃ |
ಸ್ನುಷಾ ಭವಾಮಿ ಧರ್ಮೇಣ ಸಾಽಹಂ ದಾಸೀಕೃತಾ ಬಲಾತ್ ॥57॥
ಎಲ್ಲೈ ಕೃಷ್ಣನೇ! ನಾನು ಭೀಷ್ಮ ಮತ್ತು ಧೃತರಾಷ್ಟ್ರ ಇಬ್ಬರಿಗೂ ಧರ್ಮದಿಂದಲೇ ಸೊಸೆಯಾಗುತ್ತೇನಷ್ಟೇ? ಅಂತಹ ನನ್ನನ್ನು ಬಲಾತ್ಕಾರದಿಂದ ದಾಸಿ ಎಂದು ಕರೆದರು.
ಗರ್ಹಯೇ ಪಾಂಡವಾಂಸ್ತ್ವೇವ ಯುಧಿ ಶ್ರೇಷ್ಠಾನ್ ಮಹಾಬಲಾನ್ |
ಯೇ ಕ್ಲಿಶ್ಯಮಾನಾಂ ಪಶ್ಯಂತಿ ಧರ್ಮಪತ್ನೀಂ ಯಶಸ್ವಿನೀಮ್ ॥58॥
ಯಾವ ಪಾಂಡವರು ಯಶಸ್ವಿನಿಯಾದ ತಮ್ಮ ಧರ್ಮಪತ್ನಿಯು ಸಭೆಯಲ್ಲಿ ಕ್ಲೇಶಪಡುವುದನ್ನು ನೋಡುತ್ತಾ ಕುಳಿತಿದ್ದರೋ ಅಂತಹ ಮಹಾಬಲರಾದ ಯುದ್ಧದಲ್ಲಿ ಶ್ರೇಷ್ಠರಾದ ಪಾಂಡವರನ್ನೇ ನಿಂದಿಸುತ್ತೇನೆ.
ಧಿಗ್ಬಲಂ ಭೀಮಸೇನಸ್ಯ ಧಿಕ್ ಪಾರ್ಥಸ್ಯ ಧನುಷ್ಮತಃ |
ಯೌ ಮಾಂ ವಿಪ್ರಕೃತಾಂ ಕ್ಷುದ್ರೈರ್ಮರ್ಷಯೇತಾಂ ಜನಾರ್ದನ ॥59॥
ಎಲ್ಲೈ ಜನಾರ್ದನನೇ! ಯಾವ ಭೀಮಾರ್ಜುನರು ಸಭೆಯಲ್ಲಿ ತುಚ್ಛಪುರುಷರಿಂದ ಅವಮಾನಿತಳಾದ ನನ್ನನ್ನು ಸಹಿಸಿ ನಿಂತರೋ ಅಂತಹ ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ. ಅರ್ಜುನನ ಧನುರ್ವಿದ್ಯೆಗೂ ಧಿಕ್ಕಾರವಿರಲಿ.
ಶಾಶ್ವತೋಽಯಂ ಧರ್ಮಪಥಃ ಸದ್ಭಿರಾಚರಿತಃ ಸದಾ |
ಯದ್ ಭಾರ್ಯಾಂ ಪರಿರಕ್ಷಂತೇ ಭರ್ತಾರೋಽಲ್ಪಬಲಾ ಅಪಿ ॥60॥
ಅಲ್ಪಬಲವುಳ್ಳ ಗಂಡಂದಿರೂ ಸಹ ತಮ್ಮ ಪತ್ನಿಯರನ್ನು ರಕ್ಷಿಸುವುದು ಯಾವಾಗಲೂ ಸಜ್ಜನರಿಂದ ಆಚರಿಸಲ್ಪಟ್ಟ ಶಾಶ್ವತವಾದ ಧರ್ಮಮಾರ್ಗ.
ಭಾರ್ಯಾಯಾಂ ರಕ್ಷ್ಯಮಾಣಾಯಾಂ ಪ್ರಜಾ ಭವತಿ ರಕ್ಷಿತಾ |
ಪ್ರಜಾಯಾಂ ರಕ್ಷ್ಯಮಾಣಾಯಾಮಾತ್ಮಾ ಭವತಿ ರಕ್ಷಿತಃ ॥61॥
ಭಾರ್ಯೆಯನ್ನು ರಕ್ಷಿಸಿದರೆ ಪ್ರಜೆಯು ರಕ್ಷಿತನಾಗುತ್ತಾನೆ. ಪ್ರಜೆಯು ರಕ್ಷಿತನಾಗುತ್ತಿರಲು ತಾನೇ ರಕ್ಷಿತನಾಗುತ್ತಾನೆ.
ಆತ್ಮಾ ಹಿ ಜಾಯತೇ ತಸ್ಯಾಂ ತಸ್ಮಾಜ್ಜಾಯಾ ಭವತ್ಯುತ |
ಭರ್ತಾ ಚ ಭಾರ್ಯಯಾ ರಕ್ಷ್ಯಃ ಕಥಂ ಜಾಯೇನ್ಮಮೋದರೇ ॥62॥
ತಾನೇ ಪತ್ನಿಯಲ್ಲಿ ಹುಟ್ಟುತ್ತಾನೆ ಎಂಬ ಕಾರಣದಿಂದ ಪತ್ನಿಯನ್ನು ಜಾಯಾ ಎಂದು ಕರೆಯುತ್ತಾರೆ. ಪತಿಯನ್ನು ಸಹ ಭಾರ್ಯೆಯು ರಕ್ಷಿಸಬೇಕು. ಇಲ್ಲದಿದ್ದರೆ ಅವನು ನನ್ನ ಉದರದಲ್ಲಿ ಜನಿಸುವುದು ಹೇಗೆ?
ನನ್ವಿಮೇ ಶರಣಂ ಪ್ರಾಪ್ತಂ ನ ತ್ಯಜಂತಿ ಕದಾಚನ |
ತೇ ಮಾಂ ಶರಣಮಾಪನ್ನಾಮನ್ವಪದ್ಯನ್ ಕಥಂ ಪರಾನ್ ॥63॥
ಈ ಪಾಂಡವರು ಶರಣಾಗತರಾದವರನ್ನು ಎಂದೂ ಬಿಡುವುದಿಲ್ಲವಷ್ಟೇ? ಅಂತಹ ಈ ಪಾಂಡವರು ಶರಣಾಗತಳಾದ ನನ್ನನ್ನು ಶತ್ರುಗಳಿಗೆ ಹೇಗೆ ಒಪ್ಪಿಸಿದರು?
ಪಂಚೇಮೇ ಪಂಚಭಿರ್ಜಾತಾಃ ಕುಮಾರಾ ಭೂರಿತೇಜಸಃ |
ಏತೇಷಾಮಪ್ಯವೇಕ್ಷಾರ್ಥಂ ತ್ರಾತವ್ಯಾಽಸ್ಮಿ ಜನಾರ್ದನ ॥64॥
ಮಹಾತೇಜಸ್ವಿಗಳಾದ ಪ್ರತಿವಿಂಧ್ಯ ಮೊದಲಾದ ಐದು ಕುಮಾರರು ಪಂಚಪಾಂಡವರಿಂದ ಜನಿಸಿದ್ದಾರೆ. ಎಲ್ಲೈ ಜನಾರ್ದನನೇ! ಇವರನ್ನು ನೋಡಿಕೊಳ್ಳುವ ಸಲುವಾಗಿಯಾದರೂ ಪಾಂಡವರು ನನ್ನನ್ನು ರಕ್ಷಿಸಬೇಕಾಗಿತ್ತಷ್ಟೆ?
ಪ್ರತಿವಿಂಧ್ಯೋ ಯುಧಿಷ್ಠಿರಾತ್ ಸುತಸೋಮೋ ವೃಕೋದರಾತ್ |
ಅರ್ಜುನಾಚ್ಛ್ರುತಕೀರ್ತಿಸ್ತು ಶತಾನೀಕಸ್ತು ನಾಕುಲಿಃ ॥65॥
ಕನಿಷ್ಠಾಚ್ಛ್ರುತಸೇನಶ್ಚ ಸರ್ವೇ ಸತ್ಯಪರಾಕ್ರಮಾಃ |
ಪ್ರದ್ಯುಮ್ನೋ ಯಾದೃಶಃ ಕೃಷ್ಣ ತಾದೃಶಾಸ್ತೇ ಮಹಾರಥಾಃ ॥66॥
ಪ್ರತಿವಿಂಧ್ಯನು ಯುಧಿಷ್ಠಿರನಿಂದಲೂ ಸುತಸೋಮನು ವೃಕೋದರನಿಂದಲೂ ಶ್ರುತಕೀರ್ತಿಯು ಅರ್ಜುನನಿಂದಲೂ ಶ್ರುತಾನೀಕನು ನಕುಲನಿಂದಲೂ ಶ್ರುತಸೇನನು ಸಹದೇವನಿಂದಲೂ ಜನಿಸಿದ್ದಾರೆ. ಎಲ್ಲರೂ ಸತ್ಯಪರಾಕ್ರಮ ಉಳ್ಳವರು. ಎಲ್ಲೈ ಕೃಷ್ಣನೇ! ಪ್ರದ್ಯುಮ್ನನು ಹೇಗೋ ಹಾಗೆ ಇವರೆಲ್ಲರೂ ಮಹಾರಥರು.
ನನ್ವಿಮೇ ಧನುಷಿ ಶ್ರೇಷ್ಠಾ ಅಜೇಯಾ ಯುಧಿ ಶಾತ್ರವೈಃ |
ಕಿಮರ್ಥಂ ಧಾರ್ತರಾಷ್ಟ್ರಾಣಾಂ ಸಹಂತೇ ದುರ್ಬಲೀಯಸಾಮ್ ॥67॥
ಇವರೆಲ್ಲರೂ ಧನುರ್ವಿದ್ಯೆಯಲ್ಲಿ ಪಾರಂಗತರಾಗಿ ಯುದ್ಧದಲ್ಲಿ ಶತ್ರುಗಳಿಂದ ಪರಾಭವವನ್ನು ಹೊಂದುವವರಲ್ಲವಷ್ಟೇ? ಇವರು ದುರ್ಬಲರಾದ ಧೃತರಾಷ್ಟ್ರಪುತ್ರರ ಅನ್ಯಾಯವನ್ನು ಹೇಗೆ ಸಹಿಸುತ್ತಿದ್ದಾರೆ?
ಅಧರ್ಮೇಣ ಹೃತಂ ರಾಜ್ಯಂ ಸರ್ವೇ ದಾಸಾಸ್ತಥಾ ಕೃತಾಃ |
ಸಭಾಯಾಂ ಪರಿಕೃಷ್ಟಾಽಹಮೇಕವಸ್ತ್ರಾ ರಜಸ್ವಲಾ ॥68॥
ಅಧರ್ಮದಿಂದ ನಮ್ಮ ರಾಜ್ಯವನ್ನು ಕಸಿದುಕೊಂಡರು. ಹಾಗೆಯೇ ನಮ್ಮೆಲ್ಲರನ್ನೂ ದಾಸರನ್ನಾಗಿ ಮಾಡಿದರು. ಏಕವಸ್ತ್ರಳೂ ರಜಸ್ವಲೆಯೂ ಆದ ನನ್ನನ್ನು ಸಭೆಯಲ್ಲಿ ಎಳೆದಾಡಿದರು.
ನಾಧಿಜ್ಯಮಪಿ ತಚ್ಛಕ್ಯಂ ಕರ್ತುಮನ್ಯೇನ ಗಾಂಡಿವಮ್ |
ಅನ್ಯತ್ರಾರ್ಜುನಭೀಮಾಭ್ಯಾಂ ತ್ವಯಾ ವಾ ಮಧುಸೂದನ ॥69॥

ಎಲೈ ಮಧುಸೂದನನೇ! ಭೀಮಾರ್ಜುನರನ್ನು ಮತ್ತು ನಿನ್ನನ್ನು ಬಿಟ್ಟು ಬೇರೆಯಾರಿಗೂ ಗಾಂಡೀವ ಧನುಸ್ಸನ್ನು ಹೆದೆಏರಿಸಲು ಸಹ ಸಾಧ್ಯವಿಲ್ಲ.
ಧಿಗ್ ಬಲಂ ಭೀಮಸೇನಸ್ಯ ಧಿಕ್ ಪಾರ್ಥಸ್ಯ ಚ ಗಾಂಡಿವಮ್ |
ಯತ್ರ ದುರ್ಯೋಧನಃ ಪಾಪೋ ಮುಹೂರ್ತಮಪಿ ಜೀವತಿ ॥70॥
ಯ ಏತಾನಾಕ್ಷಿಪದ್ ರಾಷ್ಟ್ರಾತ್ ಸಹ ಮಾತ್ರಾ ವಿಹಿಂಸಕಾನ್ |
ಅಧೀಯಾನಾನ್ ಪುರಾ ಬಾಲಾನ್ ವ್ರತಸ್ಥಾನ್ ಮಧುಸೂದನ ॥71॥
ಯಾವ ದುರ್ಯೋಧನನು ಬಾಲಕರಾಗಿ ವ್ರತವನ್ನು ಧರಿಸಿ ವೇದಾಧ್ಯಯನಮಾಡುತ್ತಾ ಇನ್ನೊಬ್ಬರಿಗೆ ಹಿಂಸೆಕೊಡದಿರುವ ಪಾಂಡವರನ್ನು ತಾಯಿಯ ಜೊತೆಯಲ್ಲಿ ರಾಷ್ಟ್ರದಿಂದ ಹೊರಗೆ ಕಳುಹಿಸಿದನೋ ಅಂತಹ ಪಾಪಿಯಾದ ದುರ್ಯೋಧನನು ಒಂದು ಮುಹೂರ್ತ ಬದುಕಿದ್ದರೂ ಸಹ ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ. ಅರ್ಜುನನ ಗಾಂಡೀವ ಧನುಸ್ಸಿಗೆ ಧಿಕ್ಕಾರವಿರಲಿ.
ಭೋಜನೇ ಭೀಮಸೇನಸ್ಯ ಪಾಪಃ ಪ್ರಾಕ್ಷೇಪಯದ್ ವಿಷಮ್ |
ಕಾಲಕೂಟನಿಭಂ ತೀಕ್ಷ್ಣಂ ಸಂಭೃತಂ ರೋಮಹರ್ಷಣಮ್ ॥72॥
ಪಾಪಿಯಾದ ದುರ್ಯೋಧನನು ಭೀಮಸೇನನ ಭೋಜನದಲ್ಲಿ ರೋಮಾಂಚಕಾರಿಯಾದ ಸಾಂದ್ರವಾದ ತೀಕ್ಷ್ಣವಾದ ಮತ್ತು ಕಾಲಕೂಟ ವಿಷಕ್ಕೆ ಸಮಾನವಾದ ವಿಷವನ್ನು ಬೆರೆಸಿದನು.
ತಜ್ಜೀರ್ಣಮವಿಕಾರೇಣ ಸಹಾನ್ನೇನ ಜನಾರ್ದನ |
ಸಶೇಷತ್ವಾನ್ಮಹಾಬಾಹೋ ಭೀಮಸ್ಯ ಪುರುಷೋತ್ತಮ ॥73॥
ಎಲೈ ಜನಾರ್ದನನೇ! ಎಲೈ ಮಹಾಬಾಹುವೇ! ಎಲೈ ಪುರುಷೋತ್ತಮನೇ! ಭೀಮಸೇನನಿಗೆ ವಿಶೇಷಸಾಮರ್ಥ್ಯವಿದ್ದುದರಿಂದ ಅವನು ಅನ್ನದ ಜೊತೆಯಲ್ಲಿ ಅವಿಕಾರನಾಗಿ ವಿಷವನ್ನು ಅರಗಿಸಿಕೊಂಡನು.
ಪ್ರಮಾಣಕೋಟ್ಯಾಂ ವಿಶ್ವಸ್ತಂ ಪಾಶೈರ್ಬದ್ಧ್ವಾ ವೃಕೋದರಮ್ |
ತೋಯೇ ಸುಭೀಮೇ ಗಂಗಾಯಾಃ ಪ್ರಾಕ್ಷಿಪ್ಯ ಗೃಹಮಾವ್ರಜನ್ ॥74॥
ಪ್ರಮಾಣಕೋಟಿ ಮಡುವಿನಲ್ಲಿ ಒಳ್ಳೆಯ ನಿದ್ರೆಯಲ್ಲಿದ್ದ ಭೀಮಸೇನನನ್ನು ಪಾಶಗಳಿಂದ ಕಟ್ಟಿ ಗಂಗೆಯ ಭಯಂಕರವಾದ ಒಂದು ಮಡುವಿನಲ್ಲಿ ಎಸೆದು ಮನೆಗೆ ಹಿಂದಿರುಗಿದರು.
ಯದಾ ವಿಬುದ್ಧಃ ಕೌಂತೇಯಸ್ತದಾ ಸಂಛಿದ್ಯ ಬಂಧನಮ್ |
ಉದತಿಷ್ಠನ್ಮಹಾಬಾಹುರ್ಭೀಮಸೇನೋ ಮಹಾಬಲಃ ॥75॥
ಭೀಮಸೇನನು ಯಾವಾಗ ಎಚ್ಚರಗೊಂಡನೋ ಆಗ ಮಹಾಬಾಹುವೂ ಮಹಾಬಲನೂ ಆದ ಆ ಕೌಂತೇಯನು ತನ್ನ ಬಂಧನಗಳನ್ನು ಕಿತ್ತುಹಾಕಿ ನೀರಿನಿಂದ ಮೇಲೆದ್ದನು.
ಆಶೀವಿಷೈಃ ಕೃಷ್ಣಸರ್ಪೈಃ ಸುಪ್ತಂ ಚೈನಮದಂಶಯತ್ |
ಸರ್ವೇಷ್ವೇವಾಂಗದೇಶೇಷು ನ ಮಮಾರ ಹ ಶತ್ರುಹಾ ॥76॥
ದೃಷ್ಟಿಯಲ್ಲಿಯಲ್ಲಿಯೇ ವಿಷವುಳ್ಳ ಕೃಷ್ಣಸರ್ಪಗಳಿಂದ ಸುಪ್ತನಾದ ಭೀಮನನ್ನು ಸರ್ವಾಂಗಗಳಲ್ಲಿ ಕಚ್ಚಿಸಿದರು. ಆದರೆ ಶತ್ರುಸಂಹಾರಕನಾದ ಭೀಮನು ಅದರಿಂದ ಮರಣ ಹೊಂದಲಿಲ್ಲ.
ಪ್ರತಿಬುದ್ಧಸ್ತು ಕೌಂತೇಯಃ ಸರ್ಪಾನ್ ಸರ್ವಾನಪೋಥಯತ್ |
ಸಾರಥಿಂ ಚಾಸ್ಯ ದಯಿತಮಪಹಸ್ತೇನ ಜಘ್ನಿವಾನ್ ॥77॥
ಎಚ್ಚರಗೊಂಡ ಭೀಮಸೇನನು ಎಲ್ಲ ಸರ್ಪಗಳನ್ನೂ ಕೊಂದುಹಾಕಿದನು. ಮತ್ತು ದುರ್ಯೋಧನನ ಪ್ರಿಯವಾದ ಸಾರಥಿಯನ್ನು ತನ್ನ ಎಡಗೈಯಿಂದಲೇ ಹೊಡೆದು ಕೊಂದನು.
ತತಃ ಪುನರುಪಾಧಾಕ್ಷೀದ್ ಬಾಲಕಾನ್ ವಾರಣಾವತೇ |
ಶಯಾನಾನಾರ್ಯಯಾ ಸಾರ್ಧಂ ಕೋ ನು ತತ್ ಕರ್ತುಮರ್ಹತಿ ॥
ಅನಂತರ ಪುನಃ ವಾರಣಾವತದಲ್ಲಿ ಅರಗಿನಮನೆಯಲ್ಲಿ ಪೂಜ್ಯಳಾದ ಕುಂತಿಯ ಜೊತೆಯಲ್ಲಿ ಮಲಗಿದ್ದ ಈ ಬಾಲಕರನ್ನು ಸುಟ್ಟುಹಾಕಲು ಪ್ರಯತ್ನಿಸಿದರು. ಯಾವನು ತಾನೇ ಅಂತಹ ಕೆಲಸವನ್ನು ಮಾಡಲು ಸಾಧ್ಯ?
ತತ್ರಾರ್ಯಾ ರುದತೀ ಭೀತಾ ಪಾಂಡವಾನಿದಮಬ್ರವೀತ್ |
ಮಹದ್ವ್ಯಸನಮಾಪನ್ನಾ ಶಿಖಿನಾ ಪರಿವಾರಿತಾ ॥79॥
ಹಾ ಹತಾಽಸ್ಮಿ ಕುತೋ ನ್ವದ್ಯ ಭವೇಚ್ಛಾಂತಿರಿಹಾನಲಾತ್ |
ಅನಾಥಾ ವಿನಶಿಷ್ಯಾಮಿ ಬಾಲಕೈಃ ಪುತ್ರಕೈಃ ಸಹ ॥80॥
ಆಗ ಆರ್ಯೆಯಾದ ಕುಂತಿಯು ಭಯಗ್ರಸ್ತಳಾಗಿ ಅಳುತ್ತಾ ಪಾಂಡವರನ್ನು ಕುರಿತು ಹೀಗೆ ಹೇಳಿದಳು. ನಾನು ದೊಡ್ಡ ಸಂಕಟಕ್ಕೆ ಸಿಲುಕಿದ್ದೇನೆ. ಅಗ್ನಿಯು ನನ್ನನ್ನು ಸುತ್ತುವರಿದಿದೆ. ಅಯ್ಯೋ ನಾನು ಸಾಯುತ್ತಿದ್ದೇನೆ. ಈ ಅಗ್ನಿಯಿಂದ ನನಗೆ ಈ ದಿನ ಶಾಂತಿಯು ಹೇಗೆ ಉಂಟಾಗುತ್ತದೆ. ಅನಾಥಳಾದ ನಾನು ಬಾಲಕರಾದ ಪುತ್ರರಿಂದ ಒಡಗೂಡಿ ವಿನಾಶವನ್ನು ಹೊಂದುವೆನು.
ತತ್ರ ಭೀಮೋ ಮಹಾಬಾಹುರ್ವಾಯುವೇಗಪರಾಕ್ರಮಃ |
ಆರ್ಯಾಮಾಶ್ವಾಸಯಾಮಾಸ ಭ್ರಾತೄಂಶ್ಚಾಪಿ ವೃಕೋದರಃ ॥81॥
ಆಗ ಮಹಾಬಾಹುವೂ ವಾಯುವೇಗವನ್ನೂ ವಾಯುಪರಾಕ್ರಮವನ್ನೂ ಹೊಂದಿದ್ದ ವೃಕೋದರನು ಆರ್ಯೆಯಾದ ಕುಂತಿಯನ್ನು ಮತ್ತು ಅಣ್ಣತಮ್ಮಂದಿರನ್ನು ಸಮಾಧಾನಪಡಿಸಿದನು.
ವೈನತೇಯೋ ಯಥಾ ಪಕ್ಷೀ ಗರುಡಃ ಪತತಾಂ ವರಃ |
ತಥೈವಾಭಿಪತಿಷ್ಯಾಮಿ ಭಯಂ ವೋ ನೇಹ ವಿದ್ಯತೇ ॥82॥

ಹೇಗೆ ಪಕ್ಷಿಶ್ರೇಷ್ಠನಾದ ವಿನತೆಯ ಮಗನಾದ ಗರುಡನು ಹಾರುತ್ತಾನೋ ಹಾಗೆ ನಿಮ್ಮೆಲ್ಲರನ್ನೂ ಕರೆದು ಕೊಂಡು ಹೋಗುತ್ತೇನೆ. ನೀವು ಇಲ್ಲಿ ಭಯಪಡಬೇಕಾದ ಕಾರಣವಿಲ್ಲ.
ಆರ್ಯಾಮಂಕೇನ ವಾಮೇನ ದಕ್ಷಿಣೇನ ಯುಧಿಷ್ಠಿರಮ್ |
ಅಂಸಯೋಶ್ಚ ಯವೌ ಕೃತ್ವಾ ಪೃಷ್ಠೇ ಬೀಭತ್ಸುಮೇವ ಚ ॥83॥
ಸಹಸೋತ್ಪತ್ಯ ವೇಗೇನ ಸರ್ವಾನಾದಾಯ ವೀರ್ಯವಾನ್ |
ಭ್ರಾತೄನಾರ್ಯಾಂ ಚ ಬಲವಾನ್ ಮೋಕ್ಷಯಾಮಾಸ ಪಾವಕಾತ್ ॥
ಕುಂತಿಯನ್ನು ಎಡತೊಡೆಯಲ್ಲಿ ಧರಿಸಿ ದಕ್ಷಿಣ ತೊಡೆಯಲ್ಲಿ ಯುಧಿಷ್ಠಿರನನ್ನು ಧರಿಸಿ ಎರಡೂ ಭುಜಗಳಲ್ಲಿ ನಕುಲ ಸಹದೇವರನ್ನು ಧರಿಸಿ ಬೆನ್ನಿನ ಮೇಲೆ ಅರ್ಜುನನನ್ನು ಧರಿಸಿ ಮಹಾಸಾಮರ್ಥ್ಯೋಪೇತನಾದ ಭೀಮನು ಎಲ್ಲರನ್ನೂ ಎತ್ತಿಕೊಂಡು ವೇಗವಾಗಿ ಹಾರಿ ಅಣ್ಣ ತಮ್ಮಂದಿರನ್ನೂ ಮತ್ತು ತಾಯಿಯನ್ನೂ ಅಗ್ನಿಯಿಂದ ರಕ್ಷಿಸಿದನು.
ತೇ ರಾತ್ರೌ ಪ್ರಸ್ಥಿತಾಃ ಸರ್ವೇ ಮಾತ್ರಾ ಸಹ ಯಶಸ್ವಿನಃ |
ಅಭ್ಯಗಚ್ಛನ್ ಮಹಾರಣ್ಯಂ ಹಿಡಿಂಬವನಮಂತಿಕಾತ್ ॥85॥
ರಾತ್ರಿಯಲ್ಲಿ ತಾಯಿಯ ಜೊತೆಯಲ್ಲಿ ಹೊರಟ ಯಶಸ್ವಿಗಳಾದ ಆ ಪಾಂಡವರೆಲ್ಲರೂ ಸಮೀಪದಲ್ಲಿ ಇದ್ದ ಹಿಡಿಂಬವನವಾಗಿದ್ದ ಮಹಾರಣ್ಯವನ್ನು ತಲುಪಿದರು.
ಶ್ರಾಂತಾಃ ಪ್ರಸುಪ್ತಾಸ್ತತ್ರೇಮೇ ಮಾತ್ರಾ ಸಹ ಸುಖೇಧಿತಾಃ |
ಸುಪ್ತಾಂಶ್ಚೈನಾನಭ್ಯಗಚ್ಛದ್ಧಿಡಿಂಬಾ ನಾಮ ರಾಕ್ಷಸೀ ॥86॥
ಸುಖವಾಗಿ ಬೆಳೆದ ಇವರು ಬಹಳ ದಣಿದವರಾಗಿ ತಾಯಿಯ ಜೊತೆಯಲ್ಲಿ ಅಲ್ಲಿ ಮಲಗಿ ನಿದ್ರಿಸಿದರು. ಇವರು ಮಲಗಿದ ಸಮಯದಲ್ಲಿ ಅಲ್ಲಿಗೆ ಹಿಡಿಂಬೆಯೆಂಬ ರಾಕ್ಷಸಿಯು ಬಂದಳು.
ಸಾ ದೃಷ್ಟ್ವಾ ಪಾಂಡವಂ ಭೀಮಂ ಶಯಾನಂ ಭ್ರಾತೃಭಿಃ ಸಹ |
ಹೃಚ್ಛಯೇಣಾಭಿಭೂತಾಂಗೀ ಭೀಮಸೇನಮಕಾಮಯತ್ ॥87॥
ಅವಳು ಪಾಂಡುಪುತ್ರನಾದ ಭೀಮಸೇನನು ಸಹೋದರರ ಜೊತೆಯಲ್ಲಿ ಮಲಗಿರುವುದನ್ನು ನೋಡಿ ಕಾಮಪೀಡಿತಳಾಗಿ ಭೀಮಸೇನನನ್ನು ಕಾಮಿಸಿದಳು.
ಭೀಮಸ್ಯ ಪಾದೌ ಕೃತ್ವಾ ತು ಸ್ವಉತ್ಸಂಗೇ ತತೋ ಬಲಾತ್ |
ಪರ್ಯಷ್ವಜತ ಸಂಹೃಷ್ಟಾ ಕಲ್ಯಾಣೀ ಮೃದುಪಾಣಿನಾ ॥88॥
ಮಲಗಿ ನಿದ್ರಿಸುತ್ತಿದ್ದ ಭೀಮಸೇನನ ಪಾದಗಳನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಶುಭಸ್ವರೂಪಳಾದ ಅವಳು ಸಂತೋಷದಿಂದ ತನ್ನ ಮೃದುವಾದ ಹಸ್ತಗಳಿಂದ ಅವನನ್ನು ಬಲವಾಗಿ ಆಲಿಂಗಿಸಿದಳು.
ತಾಮಬುದ್ಧ್ಯದಮೇಯಾತ್ಮಾ ಬಲವಾನ್ ಸತ್ಯವಿಕ್ರಮಃ |
ಪರ್ಯಪೃಚ್ಛಚ್ಚ ತಾಂ ಭೀಮಃ ಕಸ್ಯ ತ್ವಮಸಿ ಶೋಭನೇ ॥89॥
ಸತ್ಯವಿಕ್ರಮನೂ ಬಲಶಾಲಿಯೂ ಅಪರಿಮಿತ ಮಹಿಮೆಯುಳ್ಳವನೂ ಆದ ಭೀಮಸೇನನು ಎದ್ದು ಅವಳನ್ನು ನೋಡಿ ಶೋಭನಸ್ವರೂಪಳೇ, ನೀನು ಯಾರು ಎಂದು ಅವಳನ್ನು ಕೇಳಿದನು.
ಸೈವಮುಕ್ತಾ ತು ಭೀಮೇನ ರಾಕ್ಷಸೀ ಕಾಮರೂಪಿಣೀ |
ಭೀಮಸೇನಂ ಮಹಾತ್ಮಾನಮಿದಮಾಹ ಶುಚಿಸ್ಮಿತಾ ॥90॥
ಭೀಮಸೇನನಿಂದ ಹೀಗೆ ಹೇಳಲ್ಪಟ್ಟ ಕಾಮರೂಪಿಣಿಯಾದ ಆ ರಾಕ್ಷಸಿಯು ಮಹಾತ್ಮನಾದ ಭೀಮಸೇನನನ್ನು ಕುರಿತು ಮುಗುಳ್ನಗುತ್ತಾ ಹೀಗೆ ಮಾತನಾಡಿದಳು.
ಪಲಾಯಧ್ವಮಿತಃ ಕ್ಷಿಪ್ರಂ ಮಮ ಭ್ರಾತಾ ಸುವೀರ್ಯವಾನ್ |
ಆಗಮಿಷ್ಯತಿ ಸಂಹರ್ತುಂ ತಸ್ಮಾದ್ ಗಚ್ಛತ ಮಾಚಿರಮ್ ॥91॥
ಇಲ್ಲಿಂದ ಎಲ್ಲರೂ ಬೇಗ ಓಡಿಹೋಗಿರಿ. ಮಹಾಬಲಶಾಲಿಯಾದ ನನ್ನ ಅಣ್ಣನು ನಿಮ್ಮನ್ನು ಸಂಹರಿಸಲು ಇಲ್ಲಿಗೆ ಬರುತ್ತಿದ್ದಾನೆ. ಆದ್ದರಿಂದ ತಡಮಾಡದೆ ಹೊರಟು ಹೋಗಿ.
ಅಥ ತಾಂ ಪ್ರತ್ಯುವಾಚೈಷ ಸಾಮ್ನಾ ಪರಮವಲ್ಗುನಾ |
ನೋದ್ವಿಜಾಮಿ ತವ ಭ್ರಾತುರ್ನೈತಾಂಶ್ಚ ಪ್ರತಿಬೋಧಯೇ |
ಆಗತಂ ಪ್ರತಿಪತ್ಸ್ಯಾಮಿ ಭ್ರಾತರಂ ರಾಕ್ಷಸಂ ತವ ॥92॥
ಆಗ ಭೀಮಸೇನನು ಮಧುರವಾದ ಸ್ವರದಿಂದ ಅವಳನ್ನು ಕುರಿತು ಮಾತನಾಡಿದನು. ನಾನು ನಿನ್ನ ಅಣ್ಣನಿಗೆ ಹೆದರುವುದೂ ಇಲ್ಲ. ಮತ್ತು ನಿದ್ರಿಸುತ್ತಿರುವ ಇವರನ್ನು ಎಬ್ಬಿಸುವುದೂ ಇಲ್ಲ. ಇಲ್ಲಿಗೆ ಬರುವ ರಾಕ್ಷಸನಾದ ನಿನ್ನ ಅಣ್ಣನನ್ನು ಎದುರಿಸುತ್ತೇನೆ.
ತಯೋಃ ಶ್ರುತ್ವಾ ತು ಕಥಿತಮಾಗಚ್ಛದ್ ರಾಕ್ಷಸಾಧಮಃ |
ಭೀಮರೂಪೋ ಮಹಾನಾದಾನ್ ವಿನದನ್ ಭೀಮದರ್ಶನಃ ॥93॥
ಅವರಿಬ್ಬರ ಸಂವಾದವನ್ನು ದೂರದಿಂದ ಕೇಳಿದ ರಾಕ್ಷಸಾಧಮನಾದ ಆ ಹಿಡಿಂಬನು ಭಯಂಕರ ರೂಪವನ್ನು ಧರಿಸಿ ಮಹಾನಾದಗಳನ್ನು ಮಾಡಿ ಕಿರುಚುತ್ತಾ ಉಗ್ರವಾಗಿ ಕಾಣಿಸುತ್ತಾ ಅಲ್ಲಿಗೆ ಬಂದನು.
ಕೇನ ಸಾರ್ಧಂ ಕಥಯಸಿ ಆನಯೈನಂ ಮಮಾಂತಿಕಮ್ |
ಹಿಡಿಂಬೇ ಭಕ್ಷಯಿಷ್ಯಾವೋ ನ ಚಿರಂ ಕರ್ತುಮರ್ಹಸಿ ॥94॥
ಹಿಡಿಂಬಿಯೇ, ಯಾರ ಜೊತೆಯಲ್ಲಿ ಮಾತನಾಡುತ್ತಿದ್ದೀಯೆ? ಅವನನ್ನು ನನ್ನ ಬಳಿಗೆ ಕರೆದು ತಾ. ಇಬ್ಬರೂ ಸೇರಿ ಅವನನ್ನು ಹರಿದು ತಿನ್ನೋಣ. ತಡಮಾಡಬೇಡ.

ದ್ರೌಪದೀ
ಸಾ ಕೃಪಾಸಂಗೃಹೀತೇನ ಹೃದಯೇನ ಮನಸ್ವಿನೀ |
ನೈನಮೈಚ್ಛತ್ ತದಾऽऽಖ್ಯಾತುಮನುಕ್ರೋಶಾದನಿಂದಿತಾ ॥95॥
ಆಗ ನಿರ್ದುಷ್ಟಸ್ವಭಾವದವಳಾದ ಧೈರ್ಯಶಾಲಿನಿಯಾದ ಆ ಹಿಡಿಂಬೆಯು ಕೃಪೆಯಿಂದ ಕೂಡಿದ ಮನಸ್ಸುಳ್ಳವಳಾಗಿ ತನ್ನ ಪ್ರೀತಿಯ ಕಾರಣದಿಂದಾಗಿ ಭೀಮಸೇನನನ್ನು ಹಿಡಿಂಬನಿಗೆ ತಿಳಿಸಲು ಇಷ್ಟಪಡಲಿಲ್ಲ.
ಸ ನಾದಾನ್ ವಿನದನ್ ಘೋರಾನ್ ರಾಕ್ಷಸಃ ಪುರುಷಾದಕಃ |
ಅಭ್ಯದ್ರವತ ವೇಗೇನ ಭೀಮಸೇನಂ ತದಾ ಕಿಲ ॥96॥
ಆ ನರಭಕ್ಷಕನಾದ ಘೋರರಾಕ್ಷಸನಾದರೋ ಭಯಂಕರನಾದವನ್ನು ಮಾಡುತ್ತಾ ವೇಗವಾಗಿ ಭೀಮಸೇನನಿದ್ದ ಕಡೆಗೆ ಓಡಿಬಂದನು.
ತಮಭಿದ್ರುತ್ಯ ವೇಗೇನ ಸಂಕ್ರುದ್ಧೋ ಮಹತಾ ಬಲೀ |
ಅಗೃಹ್ಣಾತ್ ಪಾಣಿನಾ ಪಾಣಿಂ ಭೀಮಸೇನಸ್ಯ ರಾಕ್ಷಸಃ ॥97॥
ಹೀಗೆ ಬಹಳ ವೇಗವಾಗಿ ಓಡಿಬಂದು ಕೋಪಗೊಂಡವನೂ, ಬಲಿಷ್ಠನೂ ಆದ ಆ ರಾಕ್ಷಸನು ಭೀಮಸೇನನ ಕೈಯನ್ನು ತನ್ನ ಕೈಯಿಂದ ಹಿಡಿದು ಕೊಂಡನು.
ಇಂದ್ರಾಶನಿಸಮಸ್ಪರ್ಶಂ ವಜ್ರಸಂಹನನಂ ದೃಢಮ್ |
ಸಂಹತ್ಯ ಭೀಮಸೇನಸ್ಯ ವ್ಯಾಕ್ಷಿಪತ್ ಸಹಸಾ ಕರಮ್ ॥98॥
ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಸ್ಪರ್ಶವುಳ್ಳ ವಜ್ರದಂತೆ ದೃಢವಾದ ಭೀಮಸೇನನ ಕೈಗೆ ಹೊಡೆದು ತಕ್ಷಣ ದೂರ ತಳ್ಳಿದನು.
ಗೃಹೀತಃ ಪಾಣಿನಾ ಪಾಣಿಂ ಭೀಮಸೇನೋऽಥ ರಕ್ಷಸಾ |
ನಾಮೃಷ್ಯತ ಮಹಾಬಾಹುಸ್ತತ್ರಾಕ್ರುದ್ಧ್ಯದ್ ವೃಕೋದರಃ ॥99॥
ರಾಕ್ಷಸನಿಂದ ಕೈಯಲ್ಲಿ ಹಿಡಿಯಲ್ಪಟ್ಟ ಮಹಾಬಾಹುವಾದ ವೃಕೋದರನಾದ ಭೀಮಸೇನನು ಅದನ್ನು ಸಹಿಸಲಿಲ್ಲ.
ಅಥಾಸೀತ್ ತುಮುಲಂ ಯುದ್ಧಂ ಭೀಮಸೇನಹಿಡಿಂಬಯೋಃ |
ಸರ್ವಾಸ್ತ್ರವಿದುಷೋರ್ಘೋರಂ ವೃತ್ರವಾಸವಯೋರಿವ ॥100॥
ಅನಂತರ ಸರ್ವಾಸ್ತ್ರಗಳನ್ನು ತಿಳಿದ ಭೀಮಸೇನ ಮತ್ತು ಹಿಡಿಂಬರಿಗೆ ಇಂದ್ರ ವೃತ್ರರ ನಡುವೆ ನಡೆದಂತೆ ಘೋರವಾದ ಯುದ್ಧವು ನಡೆಯಿತು.
ಹತ್ವಾ ಹಿಡಿಂಬಂ ಭೀಮೋऽಥ ಪ್ರಸ್ಥಿತೋ ಭ್ರಾತೃಭಿಃ ಸಹ |
ಹಿಡಿಂಬಾಮಗ್ರತಃ ಕೃತ್ವಾ ಯಸ್ಯಾಂ ಜಾತೋ ಘಟೋತ್ಕಚಃ ॥101॥
ಆಗ ಭೀಮನು ಹಿಡಿಂಬನನ್ನು ಕೊಂದು ಹಿಡಿಂಬೆಯನ್ನು ಮುಂದೆಮಾಡಿಕೊಂಡು ತನ್ನ ಸಹೋದರರ ಜೊತೆಯಲ್ಲಿ ಮುಂದಕ್ಕೆ ಹೊರಟನು. ಹಿಡಿಂಬೆಯಲ್ಲಿ ಘಟೋತ್ಕಚನು ಜನಿಸಿದನು.
ತತಸ್ತೇ ಭ್ರಾತರಃ ಸರ್ವೇ ಸಹ ಮಾತ್ರಾ ಯಶಸ್ವಿನಃ |
ಏಕಚಕ್ರಾಮಭಿಗತಾಃ ಸಂವೃತಾ ಬ್ರಾಹ್ಮಣವ್ರಜೈಃ ॥102॥
ಅನಂತರ ಆ ಎಲ್ಲಾ ಯಶಸ್ವಿಗಳಾದ ಸಹೋದರರು ತಾಯಿಯ ಜೊತೆಯಲ್ಲಿ ಬ್ರಾಹ್ಮಣಸಮೂಹಗಳಿಂದ ಸುತ್ತುವರಿಯಲ್ಪಟ್ಟವರಾಗಿ ಏಕಚಕ್ರನಗರಕ್ಕೆ ಬಂದರು.
ಪ್ರಸ್ಥಾನೇ ವ್ಯಾಸ ಏಷಾಂ ಚ ಮಂತ್ರೀ ಪ್ರಿಯಹಿತೋऽಭವತ್ |
ತತೋऽಗಚ್ಛನ್ನೇಕಚಕ್ರಾಂ ಪಾಂಡವಾಃ ಸಂಶಿತವ್ರತಾಃ ॥103॥
ಅಲ್ಲಿಂದ ಹೊರಡುವ ಸಮಯದಲ್ಲಿ ವ್ಯಾಸರು ಬಂದು ಅವರಿಗೆ ಪ್ರಿಯಹಿತವಾದ ಮಂತ್ರಾಲೋಚನೆಯನ್ನು ನೀಡಿದರು. ಅನಂತರ ಒಳ್ಳೆಯ ವ್ರತಧಾರಿಗಳಾದ ಪಾಂಡವರು ಏಕಚಕ್ರನಗರವನ್ನು ತಲುಪಿದರು.
ತತ್ರಾಪ್ಯಾಸಾದಯಾಮಾಸುರ್ಬಕಂ ನಾಮ ಮಹಾಬಲಮ್ |
ಪುರುಷಾದಂ ಪ್ರತಿಭಯಂ ಹಿಡಿಂಬೇನೈವ ಸಮ್ಮಿತಮ್ ॥104॥
ಅಲ್ಲಿಯೂ ಸಹ ಮಹಾಬಲಿಷ್ಠನಾದ ನರಭಕ್ಷಕನಾದ ಭಯಂಕರನಾದ ಹಿಡಿಂಬನಿಗೆ ಸಮನಾದ ಬಕನನ್ನು ಸಮೀಪಿಸಿದರು.
ತಂ ಚಾಪಿ ವಿನಿಹತ್ಯೋಗ್ರಂ ಭೀಮಃ ಪ್ರಹರತಾಂ ವರಃ |
ಸಹಿತೋ ಭ್ರಾತೃಭಿಃ ಸರ್ವೈರ್ದ್ರುಪದಸ್ಯ ಪುರಂ ಯಯೌ ॥105॥
ಪ್ರಹಾರಮಾಡುವವರಲ್ಲಿ ಶ್ರೇಷ್ಠನಾದ ಭೀಮಸೇನನು ಆ ಉಗ್ರನಾದ ಅಸುರನನ್ನು ಕೊಂದು ಎಲ್ಲಾ ತಮ್ಮಂದಿರ ಜೊತೆಯಲ್ಲಿ ದ್ರುಪದಪಟ್ಟಣಕ್ಕೆ ಹೋದನು.
ಲಬ್ಧಾऽಹಮಪಿ ತತ್ರೈವ ವಸತಾ ಸವ್ಯಸಾಚಿನಾ |
ಯಥಾ ತ್ವಯಾ ಜಿತಾ ಕೃಷ್ಣ ರುಗ್ಮಿಣೀ ಭೀಷ್ಮಕಾತ್ಮಜಾ ॥106॥
ದ್ರುಪದನ ಪಟ್ಟಣದಲ್ಲಿ ವಾಸಿಸುವಾಗ ಸವ್ಯಸಾಚಿಯಾದ ಅರ್ಜುನನು ನೀನು ಭೀಷ್ಮ ಪುತ್ರಿಯಾದ ರುಗ್ಮಿಣಿಯನ್ನು ಜಯಿಸಿದಂತೆ ನನ್ನನ್ನು ಪಡೆದನು.
ಏವಂ ಸುಯುದ್ಧೇ ಪಾರ್ಥೇನ ಜಿತಾऽಹಂ ಮಧುಸೂದನ |
ಸ್ವಯಂವರೇ ಮಹತ್ ಕರ್ಮ ಕೃತ್ವಾ ಹ್ಯಸುಕರಂ ಪರೈಃ ॥107॥
ಎಲೈ ಮಧುಸೂದನನೇ, ಹೀಗೆ ಸ್ವಯಂವರದಲ್ಲಿ ಇನ್ನೊಬ್ಬರಿಂದ ಸಾಧ್ಯವಿಲ್ಲದ ಮಹಾಕಾರ್ಯವನ್ನು ಮಾಡಿ ಯುದ್ಧದಲ್ಲಿ ಅರ್ಜುನನು ನನ್ನನ್ನು ಗೆದ್ದನು.
ಏವಂ ಕ್ಲೇಶೈಃ ಸುಬಹುಭಿಃ ಕ್ಲಿಶ್ಯಮಾನಾ ಸುದುಃಖಿತಾ |

ನಿವಸಾಮ್ಯಾರ್ಯಯಾ ಹೀನಾ ಕೃಷ್ಣ ಧೌಮ್ಯಪುರಸ್ಸರಾ ॥108॥
ಎಲೈ ಕೃಷ್ಣನೇ! ಅನೇಕ ಕ್ಲೇಶಗಳಿಗೆ ಒಳಗಾಗಿ ಅತ್ಯಂತ ದುಃಖಿತಳಾದ ನಾನು ಕುಂತಿಯ ಸಾನ್ನಿಧ್ಯವೂ ಇಲ್ಲದೆ ಧೌಮ್ಯರನ್ನು ಮುಂದೆಮಾಡಿಕೊಂಡು ಹೀನಳಾಗಿ ವಾಸಿಸುತ್ತಿದ್ದೇನೆ.
ತ ಇಮೇ ಸಿಂಹವಿಕ್ರಾಂತಾ ವೀರ್ಯೇಣಾಭ್ಯಧಿಕಾಃ ಪರೈಃ |
ವಿಹೀನೈಃ ಪರಿಕ್ಲಿಶ್ಯಂತೀಂ ಸಮುಪೈಕ್ಷಂತ ಮಾಂ ಕಥಮ್ ॥109॥
ಈ ನನ್ನ ಪತಿಗಳೆಲ್ಲರೂ ಸಿಂಹಪರಾಕ್ರಮಿಗಳು ಮತ್ತು ಮಹಾ ಸಾಮರ್ಥ್ಯಶಾಲಿಗಳು. ತುಚ್ಛರಾದ ಶತ್ರುಗಳು ನನ್ನನ್ನು ಎಳೆದಾಡುವಾಗ ಇವರು ಹೇಗೆ ಉಪೇಕ್ಷೆಮಾಡಿದರು?
ಏತಾದೃಶಾನಿ ದುಃಖಾನಿ ಸಹಂತೇ ದುರ್ಬಲೀಯಸಾಮ್ |
ದೀರ್ಘಕಾಲಂ ಪ್ರದೀಪ್ತಾನಿ ಪಾಪಾನಾಂ ಕ್ಷುದ್ರಕರ್ಮಣಾಮ್ ॥110॥
ದುರ್ಬಲರಾದ ನೀಚಕರ್ಮವನ್ನು ಮಾಡುವ ಪಾಪಿಷ್ಠರಾದ ದುರ್ಯೋಧನಾದಿಗಳಿಂದ ಉಂಟಾದ ಇಂತಹ ಘೋರವಾದ ದುಃಖವನ್ನು ಇವರು ಬಹುಕಾಲದಿಂದಲೂ ಸಹಿಸುತ್ತಿದ್ದಾರೆ.
ಕುಲೇ ಮಹತಿ ಜಾತಾಽಸ್ಮಿ ದಿವ್ಯೇನ ವಿಧಿನಾ ಕಿಲ |
ಪಾಂಡವಾನಾಂ ಪ್ರಿಯಾ ಭಾರ್ಯಾ ಸ್ನುಷಾ ಪಾಂಡೋರ್ಮಹಾತ್ಮನಃ ॥
ನಾನು ಶ್ರೇಷ್ಠವಾದ ಕುಲದಲ್ಲಿ ದಿವ್ಯವಾದ ರೀತಿಯಿಂದ ಹುಟ್ಟಿದವಳಷ್ಟೇ? ನಾನು ಪಾಂಡವರ ಪ್ರೀತಿಯ ಭಾರ್ಯೆ ಮತ್ತು ಮಹಾತ್ಮನಾದ ಪಾಂಡುವಿನ ಸೊಸೆ.
ಕಚಗ್ರಹಮನುಪ್ರಾಪ್ತಾ ಕಾ ನು ಜೀವೇತ ಮಾದೃಶೀ |
ಪಂಚಾನಾಮಿಂದ್ರಕಲ್ಪಾನಾಂ ಪ್ರೇಕ್ಷತಾಂ ಮಧುಸೂದನ ॥112॥
ಎಲೈ ಮಧುಸೂದನನೇ! ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಐವರು ಪತಿಗಳ ಕಣ್ಣೆದುರಿಗೇ ಮುಂದಲೆಯನ್ನು ಹಿಡಿಸಿಕೊಂಡ ನನ್ನಂತಹ ಯಾವಳು ಬದುಕಿರುತ್ತಾಳೆ?
ಇತ್ಯುಕ್ತ್ವಾ ಪ್ರಾರುದತ್ ಕೃಷ್ಣಾ ಮುಖಂ ಪ್ರಚ್ಛಾದ್ಯ ಪಾಣಿನಾ |
ಪದ್ಮಕೋಶಪ್ರಕಾಶೇನ ಮೃದುನಾ ಮೃದುಭಾಷಿಣೀ ॥113॥
ಹೀಗೆ ಹೇಳಿ ಮೃದುಭಾಷಿಣಿಯಾದ ದ್ರೌಪದಿಯು ಮೃದುವಾದ ಪದ್ಮ ಮೊಗ್ಗಿನಂತಿರುವ ತನ್ನ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಅತ್ತಳು.
ಸ್ತನಾವಪತಿತಾ ಪೀನೌ ಸುಜಾತೌ ಶುಭಲಕ್ಷಣೌ |
ಅಭ್ಯವರ್ಷತ ಪಾಂಚಾಲೀ ದುಃಖಜೈರಶ್ರುಬಿಂದುಭಿಃ ॥114॥
ಕೆಳಗೆ ಬೀಳದಿದ್ದ ಪೀನವಾದ ಚೆನ್ನಾಗಿ ಬೆಳೆದ ಶುಭಲಕ್ಷಣವುಳ್ಳ ತನ್ನ ಸ್ತನಗಳನ್ನು ದುಃಖದಿಂದ ಉಂಟಾದ ಕಣ್ಣೀರಿನ ಬಿಂದುಗಳಿಂದ ಪಾಂಚಾಲಿಯು ತೋಯಿಸಿದಳು.
ಚಕ್ಷುಷೀ ಪರಿಮಾರ್ಜಂತೀ ನಿಃಶ್ವಸಂತೀ ಪುನಃ ಪುನಃ |
ಬಾಷ್ಪಪೂರ್ಣೇನ ಕಂಠೇನ ಕ್ರುದ್ಧಾ ವಚನಮಬ್ರವೀತ್ ॥115॥
ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ಪುನಃಪುನಃ ನಿಟ್ಟುಸಿರನ್ನು ಬಿಡುತ್ತಾ ಬಾಷ್ಪಗದ್ಗದವಾದ ಕಂಠದಿಂದ ಕೋಪದಿಂದ ಈ ಮಾತನ್ನು ಆಡಿದಳು.
ನೈವ ಮೇ ಪತಯಃ ಸಂತಿ ನ ಪುತ್ರಾ ಮಧುಸೂದನ |
ನ ಭ್ರಾತರೋ ನ ಚ ಪಿತಾ ನೈವ ತ್ವಂ ನ ಚ ಬಾಂಧವಾಃ ॥116॥
ಮಧುಸೂದನನೇ! ನನಗೆ ಪತಿಗಳಿಲ್ಲ. ಪುತ್ರರಿಲ್ಲ. ಸಹೋದರರಿಲ್ಲ. ತಂದೆಯಿಲ್ಲ. ಬಾಂಧವರಿಲ್ಲ. ನೀನೂ ಸಹ ಇಲ್ಲ.
ಯೇ ಮಾಂ ವಿಪ್ರಕೃತಾಂ ಕ್ಷುದ್ರೈರುಪೇಕ್ಷಂತೇ ವಿಶೋಕವತ್ |
ನಹಿ ಮೇ ಶಾಮ್ಯತೇ ದುಃಖಂ ಕರ್ಣೋ ಯತ್ ಪ್ರಾಹಸತ್ ತದಾ ॥
ಯಾವ ಇವರೆಲ್ಲರೂ ಕ್ಷುದ್ರರಿಂದ ಅವಮಾನಕ್ಕೆ ಒಳಗಾದ ನನ್ನನ್ನು ಶೋಕರಹಿರಂತೆ ಉಪೇಕ್ಷೆಮಾಡಿದರೋ ಮತ್ತು ಆ ಸಮಯದಲ್ಲಿ ಕರ್ಣನು ನನ್ನನ್ನು ಹೇಗೆ ಅಪಹಾಸಮಾಡಿದನೋ ಅದರಿಂದ ಉಂಟಾದ ನನ್ನ ದುಃಖವು ಶಮನವನ್ನು ಹೊಂದುವುದಿಲ್ಲ.
ವೈಶಂಪಾಯನಃ
ಅಥೈನಾಮಬ್ರವೀತ್ ಕೃಷ್ಣಸ್ತಸ್ಮಿನ್ ವೀರಸಮಾಗಮೇ |
ರೋದಿಷ್ಯಂತಿ ಸ್ತ್ರಿಯೋ ಹ್ಯೇವಂ ಯೇಷಾಂ ಕ್ರುದ್ಧಾಽಸಿ ಭಾಮಿನಿ ॥
ಅನಂತರ ಆ ವೀರಸಮುದಾಯದಲ್ಲಿ ಕೃಷ್ಣನು ಅವಳನ್ನು ಕುರಿತು ಮಾತನಾಡಿದನು. ಭಾಮಿನಿಯೇ, ನೀನು ಯಾರಮೇಲೆ ಕೋಪಗೊಂಡಿದ್ದೀಯೋ ಅವರ ಪತ್ನಿಯರೂ ಸಹ ಹೀಗೆಯೇ ಮುಂದೆ ರೋದಿಸುವರು.
ಬೀಭತ್ಸುಶರಸಂಛನ್ನಾನ್ ಶೋಣಿತೌಘಪರಿಪ್ಲುತಾನ್ |
ದ್ರಕ್ಷ್ಯಸಿ ಹ್ಯನವದ್ಯಾಂಗಿ ದುರ್ಯೋಧನಮುಖಾನ್ ರಿಪೂನ್ ॥119॥
ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟ ರಕ್ತದ ಮಡುವಿನಲ್ಲಿ ಮುಳುಗಿದ ದುರ್ಯೋಧನ ಮೊದಲಾದ ಶತ್ರುಗಳನ್ನು ಎಲೌ ದೋಷರಹಿತ ಅವಯವವನ್ನುಳ್ಳವಳೇ, ನೀನು ಖಂಡಿತವಾಗಿ ನೋಡುವಿ.
ನಿಹತಾನ್ ಜೀವಿತಂ ತ್ಯಕ್ತ್ವಾ ಶಯಾನಾನ್ ವಸುಧಾತಳೇ |
ಸತ್ಯಂ ತೇ ಪ್ರತಿಜಾನಾಮಿ ರಾಜ್ಞೋ ರಾಜ್ಞೀ ಭವಿಷ್ಯಸಿ ॥120॥
ಎಲೌ ದ್ರೌಪದಿಯೇ! ತಮ್ಮ ಜೀವವನ್ನು ತೊರೆದು ಭೂತಳದಲ್ಲಿ ಮಲಗಿದ ಅವರೆಲ್ಲರನ್ನೂ ನೀನು ನೋಡುವಿ. ಸತ್ಯವಾಗಿ ನಿನಗೆ

ನಾನು ಪ್ರತಿಜ್ಞೆಯನ್ನು ಮಾಡಿ ಹೇಳುತ್ತಿರುವೆ. ನೀನು ರಾಜನ ರಾಣಿಯಾಗುವಿ.
ಪತೇದ್ ದ್ಯೌರ್ಹಿಮವಾನ್ ಶೀರ್ಯೇತ್ ಪೃಥಿವೀ ಶಕಲೀಭವೇತ್ |
ಶುಷ್ಯೇತ್ ತೋಯನಿಧಿಃ ಕೃಷ್ಣೇ ನ ಮೇ ಮಿಥ್ಯಾ ವಚೋ ಭವೇತ್ ॥
ಅಂತರಿಕ್ಷಲೋಕವು ಕೆಳಗೆ ಬಿದ್ದೀತು ಹಿಮಾಲಯವು ಬಿರಿದೀತು. ಭೂಮಿಯು ಪುಡಿಪುಡಿಯಾದೀತು. ಸಮುದ್ರವು ಬತ್ತಿಹೋದೀತು. ಆದರೆ ನನ್ನ ವಚನವು ಎಂದೂ ಸುಳ್ಳಾಗುವುದಿಲ್ಲ.
ತಚ್ಛ್ರುತ್ವಾ ದ್ರೌಪದೀ ವಾಕ್ಯಪ್ರತಿವಾಕ್ಯಮಥಾಚ್ಯುತಾ |
ಸಾಚೀಕೃತಮವೈಕ್ಷತ್ ಸಾ ಪಾಂಚಾಲೀ ಮಧ್ಯಮಂ ಪತಿಮ್ ॥122॥
ತನ್ನ ವಾಕ್ಯಕ್ಕೆ ಪ್ರತ್ಯುತ್ತರವನ್ನು ನೀಡಿದ ಆ ಕೃಷ್ಣನ ವಾಕ್ಯಗಳನ್ನು ಕೇಳಿ ದ್ರೌಪದಿಯು ಧೈರ್ಯದಿಂದ ಚ್ಯುತಳಾಗದೆ ಮುಖವನ್ನು ತಿರುಗಿಸಿ ತನ್ನ ಮಧ್ಯಮ ಪತಿಯಾದ ಭೀಮಸೇನನನ್ನು ನೋಡಿದಳು.
ಧೃಷ್ಟದ್ಯುಮ್ನಃ
ಅಹಂ ದ್ರೋಣಂ ಹನಿಷ್ಯಾಮಿ ಶಿಖಂಡೀ ಚ ಪಿತಾಮಹಮ್ |
ದುರ್ಯೋಧನಂ ಭೀಮಸೇನಃ ಕರ್ಣಂ ಹಂತಾ ಧನಂಜಯಃ ॥123॥
ನಾನು ದ್ರೋಣರನ್ನು ಕೊಲ್ಲುವೆನು. ಶಿಖಂಡಿಯು ಭೀಷ್ಮರನ್ನು ಕೊಲ್ಲುತ್ತಾನೆ. ದುರ್ಯೋಧನನನ್ನು ಭೀಮಸೇನನು ಕೊಲ್ಲುವನು. ಕರ್ಣನನ್ನು ಅರ್ಜುನನು ಕೊಲ್ಲುವನು.
ಆಬಭಾಷೇ ತಥಾ ಕೃಷ್ಣಾಮರ್ಜುನಃ ಪ್ರಹಸನ್ನಿವ |
ಮಾ ರೋದೀಃ ಶುಭತಾಮ್ರಾಕ್ಷಿ ಯಥಾಽಽಹ ವರವರ್ಣಿನಿ |
ಕೃಷ್ಣೋಽಯಂ ತತ್ ತಥಾ ದೇವಿ ನಾನ್ಯಥಾ ಚಾರುಲೋಚನೇ ॥124॥
ಹಾಗೆಯೇ ಅರ್ಜುನನು ದ್ರೌಪದಿಯನ್ನು ನೋಡಿ ನಗುತ್ತಾ ಮಾತನಾಡಿದನು. ಸುಂದರವಾದ ನೇತ್ರವುಳ್ಳವಳೇ, ಅಳಬೇಡ. ಕೃಷ್ಣನು ಹೇಗೆ ಹೇಳಿದನೋ ಹಾಗೆಯೇ ಎಲ್ಲವೂ ನಡೆಯುತ್ತದೆ. ದೇವಿಯೇ, ಅದು ಎಂದೂ ವ್ಯತ್ಯಾಸವಾಗುವುದಿಲ್ಲ.
ರಾಮಕೃಷ್ಣೌ ವ್ಯಪಾಶ್ರಿತ್ಯ ಅಜೇಯಾಃ ಸ್ಮ ಶುಚಿಸ್ಮಿತೇ |
ಅಪಿ ವೃತ್ರಹಣಾ ಯುದ್ಧೇ ಕಿಂ ಪುನರ್ಧೃತರಾಷ್ಟ್ರಜೈಃ ॥125॥
ಎಲೌ ಶುಚಿಸ್ಮಿತೆಯೇ! ನಾವು ಕೃಷ್ಣಬಲರಾಮರನ್ನು ಆಶ್ರಯಿಸಿ ಯುದ್ಧದಲ್ಲಿ ವೃತ್ರಹಂತಕನಾದ ಇಂದ್ರನಿಗೂ ಅಜೇಯರಾಗಿದ್ದೇವೆ. ಇನ್ನು ಧೃತರಾಷ್ಟ್ರರ ಪುತ್ರರ ಮಾತೇನು?
ಇತ್ಯುಕ್ತಸ್ತ್ವಭಿಮುಖಾ ವೀರಾ ವಾಸುದೇವಮುಪಸ್ಥಿತಾಃ |
ತೇಷಾಂ ಮಧ್ಯೇ ಮಹಾಬಾಹುಃ ಕೇಶವೋ ವಾಕ್ಯಮಬ್ರವೀತ್ ॥126॥
ಹೀಗೆ ಹೇಳಿ ಆ ವೀರರೆಲ್ಲರೂ ಕೃಷ್ಣನ ಕಡೆಗೆ ತಿರುಗಿದರು. ಮಹಾಬಾಹುವಾದ ಕೇಶವನು ಅವರ ಮಧ್ಯದಲ್ಲಿ ಕುಳಿತು ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಾದಶೋಽಧ್ಯಾಯಃ ॥
॥ ಕೈರಾತಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಸಾಲ್ವಂ ಶ್ರುತ್ವಾ ಸಮಾಯಾಂತಂ ರೌಕ್ಮಿಣೇಯಾದಯೋ ಮಯಾ |
ಪ್ರಸ್ಥಾಪಿತಾ ಹಿ ಭವತಾಂ ಸಕಾಶೇ ತೇ ಯಯುಃ ಪುರೀಂ |
ತದಾ ಸಾಲ್ವೋಽಪಿ ಸೌಭೇನ ದ್ವಾರಕಾಮರ್ದಯದ್‌ಭೃಶಂ ॥42॥
ನಾನು ನಿಮ್ಮಲ್ಲಿದ್ದಾಗ ಸಾಲ್ವ ಬರುತ್ತಿರುವ ವಾರ್ತೆಯನ್ನು ಕೇಳಿ ಪ್ರದ್ಯುಮ್ನ ಮೊದಲಾದವರನ್ನೇ ದ್ವಾರಕೆಗೆ ಕಳಿಸಿದೆ. ಅವರು ಹೋದರು. ಸಾಲ್ವ ಸೌಭ ವಿಮಾನದ ಬಲದಿಂದ ದ್ವಾರಕೆಯನ್ನು ಬಹಳ ಪೀಡಿಸಿದ.
ಪ್ರದ್ಯುಮ್ನ ಆಶು ನಿರಗಾದಥ ಸರ್ವಸೈನ್ಯೈ
ರನ್ಯೈಶ್ಚ ಯಾದವಗಣೈಃ ಸಹಿತೋಽನುಜೈಶ್ಚ |
ಸಾಲ್ವೋಽವಗಮ್ಯ ತನಯಂ ಮಮ ತದ್ವಿಮಾನಾತ್
ಪಾಪೋಽವರುಹ್ಯ ರಥಮಾರುಹದತ್ರ ಯೋದ್ಧುಂ ॥43॥
ಒಡನೆ ಪ್ರದ್ಯುಮ್ನ ಎಲ್ಲ ಸೈನ್ಯಗಳಿಂದಲೂ ಬೇರೆ ಯಾದವ ಗುಂಪುಗಳಿಂದಲೂ ತಮ್ಮಂದಿರಿಂದಲೂ ಕೂಡಿಕೊಂಡು ಸಾಲ್ವನೊಡನೆ ಯುದ್ಧಕ್ಕೆ ಹೊರಟ. ಆ ಪಾಪಿ ಪ್ರದ್ಯುಮ್ನನನ್ನು ನನ್ನ ಮಗನೆಂದು ತಿಳಿದು ಯುದ್ಧ ಮಾಡುವುದಕ್ಕೆ ವಿಮಾನದಿಂದ ಕೆಳಗಿಳಿದು ರಥವನ್ನೇರಿದ.
ಕೃತ್ವಾ ಸುಯುದ್ಧಮಮುನಾ ಮಮ ಪುತ್ರಕೋಽಸಾ-
ವಸ್ತ್ರಾಣಿ ತಸ್ಯ ವಿನಿವಾರ್ಯ ಮಹಾಸ್ತ್ರಜಾಲೈಃ |
ದತ್ತಂ ಮಯಾ ಶರಮಮೋಘಮಥಾದದೇ ತಂ
ಹಂತುಂ ನೃಪಂ ಕೃತಮತಿಸ್ತ್ವಶೃಣೋದ್ ವಚಃ ಖೇ ॥44॥
ನನ್ನ ಮಗ ಪ್ರದ್ಯುಮ್ನ ಸಾಲ್ವನೊಡನೆ ಚೆನ್ನಾಗಿ ಯುದ್ಧ ಮಾಡಿ ಅವನ ಅಸ್ತ್ರಗಳನ್ನು ಮಹಾ ಅಸ್ತ್ರ ಸಮೂಹಗಳಿಂದ ತಡೆದು ಅವನನ್ನು ಕೊಲ್ಲಲು ನಿಶ್ಚಯ ಮಾಡಿ ನಾನು ಕೊಟ್ಟಿದ್ದ ಒಂದು ಅಮೋಘವಾದ ಬಾಣವನ್ನು ಎತ್ತಿಕೊಂಡ. ಅಷ್ಟರಲ್ಲಿ ಆಕಾಶದಲ್ಲಿ

ಅಶರೀರವಾಣಿಯನ್ನು ಕೇಳಿದ.
ನಾರಾಯಣೇನ ಹಿ ಪುರಾ ಮನಸಾಭಿಕ್ಲೃಪ್ತಂ
ಕೃಷ್ಣಾವತಾರಮುಪಗಮ್ಯ ನಿಹನ್ಮಿ ಸಾಲ್ವಂ |
ಇತ್ಯೇವ ತೇನ ಹರಿಣಾಪಿ ಸ ಭಾರ್ಗವೇಣ
ವಿದ್ರಾವಿತೋ ನ ನಿಹತಃ ಸ್ವಮನೋಽನುಸಾರಾತ್ ॥45॥
`ನಾರಾಯಣ ಹಿಂದೆಯೇ, ಮನಸ್ಸಿನಲ್ಲಿ ಸಂಕಲ್ಪಿಸಿದ್ದಾನೆ. ಕೃಷ್ಣಾವತಾರ ಮಾಡಿಯೇ ಸಾಲ್ವನನ್ನು ಕೊಲ್ಲುವೆನು ಎಂದು. ಅದರಿಂದಲೇ ಪರಶುರಾಮ ರೂಪನಾದ ಆ ಹರಿಯೂ ಕೂಡ ತನ್ನ ಈ ಸಂಕಲ್ಪಾನುಸಾರವಾಗಿ ಸಾಲ್ವನನ್ನು ಓಡಿಸಿದನೇ ಹೊರತು ಕೊಲ್ಲಲಿಲ್ಲ.
ವಧ್ಯಸ್ತ್ವಯಾ ನ ಹಿ ತತೋಽಯಮಯಂ ಚ ಬಾಣ-
ಶ್ಚಕ್ರಾಯುಧಸ್ಯ ದಯಿತೋ ನಿತರಾಮಮೋಘಃ |
ಮಾ ಮುಂಚ ತೇನ ತಮಿಮಂ ವಿನಿವರ್ತಯೇಽಹಂ
ಸಾಲ್ವಂ ಹೃದಿ ಸ್ಥಿತ ಇತೀರಿತಮೀರಣೇನ ॥46॥
ಅದರಿಂದ ಈ ಸಾಲ್ವ ನಿನ್ನಿಂದ ಹತನಾಗುವವನಲ್ಲ. ಈ ಬಾಣ ಶ್ರೀಹರಿಗೆ ಬಹಳ ಪ್ರಿಯವಾದುದು. ಅಮೋಘವಾದುದು. ಅದನ್ನು ಪ್ರಯೋಗಿಸಬೇಡ. ನಾನೇ ಸಾಲ್ವನನ್ನು ಅವನ ಹೃದಯದಲ್ಲಿ ನಿಂತು ಪ್ರೇರಿಸಿ ಹಿಂತಿರುವಂತೆ ಮಾಡುತ್ತೇನೆ ಎಂದು ನುಡಿದ, ವಾಯು.
ಶ್ರುತ್ವಾವಚಃ ಸ ಪವನಸ್ಯ ಶರಂ ತ್ವಮೋಘಂ
ಸಂಜಹ್ರ ಆಶು ಸ ಚ ಸಾಲ್ವಪತಿಃ ಸ್ವಸೌಭಂ |
ಆರುಹ್ಯ ಬಾಲಕಲಹೇನ ಕಿಮತ್ರ ಕಾರ್ಯಂ
ಕೃಷ್ಣೇನ ಸಂಗರ ಇತಿ ಪ್ರಯಯೌ ಸ್ವದೇಶಂ ॥47॥
ವಾಯು ವಚನವನ್ನು ಕೇಳಿ ಪ್ರದ್ಯುಮ್ನ ಆ ಅಮೋಘ ಬಾಣವನ್ನು ಹಿಂತೆಗೆದುಕೊಂಡ. ಸಾಲ್ವ `ಬಾಲಕನೊಡನೆ ಯುದ್ಧ ಮಾಡಿ ಏನು ಪ್ರಯೋಜನ? ಕೃಸ್ಣನೊಡನೆಯೆ ಯುದ್ದ' ಎಂದು ಹೇಳುತ್ತ ವಿಮಾನವನ್ನು ಹತ್ತಿ ತನ್ನ ದೇಶಕ್ಕೆ ಹೊರಟ.
ಪ್ರದ್ಯುಮ್ನಸಾಂಬಗದಸಾರಣಚಾರುದೇಷ್ಣಾಃ
ಸೇನಾಂ ನಿಹತ್ಯ ಸಹ ಮಂತ್ರಿಗಣೈಸ್ತದೀಯಾಂ |
ಆಹ್ಲಾದಿನಃ ಸ್ವಪುರಮಾಯಯುರಪ್ಯಹಂ ಚ
ತತ್ರಾಗಮಂ ಸಪದಿ ತೈಃ ಶ್ರುತವಾನಶೇಷಂ ॥48॥
ಯಾವ ಬಾಣ ಕೈಯಲ್ಲಿದ್ದರೆ ನನ್ನ ಪ್ರಭಾವದಿಂದ ವಿಜಯ ನಿಶ್ಚಯವಾಗಿ ದೊರೆಯುವುದೋ ಆ ಬಾಣವನ್ನು ಪ್ರದ್ಯುಮ್ನ ಹಿಡಿದಿದ್ದುದರಿಂದ ಶತ್ರು ಹೊರಟು ಹೋದ. ಈ ಸಮಾಚಾರವನ್ನು ಕೇಳಿ ಮತ್ತು ಶತ್ರು ನಮ್ಮ ಪಟ್ಟಣವನ್ನು ನಾಶಮಾಡಿರುವುದನ್ನೂ ಕಂಡು ಒಡನೆಯೇ ಅವನ ಬೆನ್ನುಹತ್ತಿದೆ.
ತಂ ಸಾಗರೋಪರಿಗಸೌಭಗತಂ ನಿಶಾಮ್ಯ
ಮುಕ್ತೇ ಚ ತೇನ ಮಯಿ ಶಸ್ತ್ರಮಹಾಸ್ತ್ರವರ್ಷೇ |
ತಂ ಸನ್ನಿವಾರ್ಯ ಚ ಮಯಾ ಶರಪೂಗವಿದ್ಧೋ
ಮಾಯಾಂ ಯಯೋಜ ಮಯಿ ಪಾಪತಮಃ ಸ ಸಾಲ್ವಃ ॥50॥
ಸಾಲ್ವ ಸಮುದ್ರದ ಮೇಲೆ ಸೌಭವಿಮಾನದಲ್ಲಿ ಸಂಚರಿಸುತ್ತಿದ್ದುದನ್ನು ನಾನು ಕಂಡೆ. ನನ್ನ ಮೇಲೆ ಅವನು ಪ್ರಯೋಗಿಸಿದ ಶಸ್ತ್ರ ಮಹಾಸ್ತ್ರಗಳ ಮಳೆಯನ್ನೂ ತಡೆದೆ. ಬಾಣ ಸಮೂಹಗಳಿಂದ ಅವನನ್ನು ಹೊಡೆದೆ. ಆಗ ಆ ಮಹಾಪಾಪಿ ಸಾಲ್ವ ನನ್ನಲ್ಲಿ ಮಾಯೆಗಳನ್ನು ಪ್ರಯೋಗಿಸಿದ.
ತಾಃ ಕ್ರೀಡಯಾ ಕ್ಷಣಮಹಂ ಸಮರೇ ನಿಶಾಮ್ಯ
ಜ್ಞಾನಾಸ್ತ್ರತಃ ಪ್ರತಿವಿಧಾಯ ಬಹೂಂಶ್ಚ ದೈತ್ಯಾನ್ |
ಹತ್ವಾಶು ತಂ ಚ ಗಿರಿವರ್ಷಿಣಮಾಶು ಸೌಭಂ
ವಾರ್ಧಾ ನ್ಯಪಾತಯಮರೀಂದ್ರ ವಿಭಿನ್ನಬಂಧಂ ॥51॥
ಆ ಮಾಯೆಗಳನ್ನು ಯುದ್ಧದಲ್ಲಿ ನಾನು ಕ್ಷಣ ಕಾಲ ಲೀಲೆಯಿಂದ ನೋಡಿ ವಿಜ್ಞಾನಾಸ್ತ್ರದಿಂದ ನಿವಾರಿಸಿ ಬಹಳ ದಾನವರನ್ನು ಸಂಹರಿಸಿದೆ. ಸಾಲ್ವ ಬೆಟ್ಟಗಳನ್ನೇ ಮಳೆಗರೆದ. ನಾನು ಬೇಗನೆ ಚಕ್ರದಿಂದ ಅವನ ಸೌಭವನ್ನು ಕತ್ತರಿಸಿ ಸಮುದ್ರದಲ್ಲಿ ಬೀಳಿಸಿದೆ. ಅವನನ್ನು ಸಮುದ್ರದಲ್ಲಿ ಹಾಕಿದೆ.
ತಂ ಸ್ಯಂದನೇ ಸ್ಥಿತಮಥೋ ವಿಭುಜಂ ವಿಧಾಯ
ಬಾಣೇನ ತದ್ರಥವರಂ ಗದಯಾ ವಿಭಿದ್ಯ |
ಚಕ್ರೇಣ ತಸ್ಯ ಚ ಶಿರೋ ವಿನಿಕೃತ್ತ್ಯಧಾತೃ
ಶರ್ವಾದಿಭಿಃ ಪ್ರತಿನುತಃ ಸ್ವಪುರೀಮಗಾಂ ಚ ॥52॥
ಸಾಲ್ವ ರಥವೇರಿ ಬಂದ. ನಾನು ಅವನ ಬಾಹುಗಳನ್ನು ಬಾಣಗಳಿಂದ ಕತ್ತರಿಸಿ, ಉತ್ತಮವಾದ ರಥವನ್ನು ಗದೆಯಿಂದ ಮುರಿದು, ಶಿರವನ್ನು ಚಕ್ರದಿಂದ ತರಿದು ಬ್ರಹ್ಮರುದ್ರಾದಿಗಳಿಂದ ಹೊಗಳಿಸಿಕೊಳ್ಳುತ್ತ ನನ್ನ ಪಟ್ಟಣಕ್ಕೆ ಹಿಂತಿರುಗಿದೆ.
ತಸ್ಮಾದಿದಂ ವ್ಯಸನಮಾಸ ಹಿ ವಿಪ್ರಕರ್ಷಾತ್
ಮೇ ಕಾರ್ಯತಸಿತ್ವತಿ ನಿಗದ್ಯ ಪುನಶ್ಚ ಪಾರ್ಥಾನ್ |
ಕೃಷ್ಣಾಂ ಚ ಸಾಂತ್ವಯಿತುಮತ್ರ ದಿನಾನ್ಯುವಾಸ

ಸತ್ಯಾ ಚ ಸೋಮಕಸುತಾಮನುಸಾಂತ್ವಯಂತೀ ॥53॥
ನನ್ನ ಈ ಸಾಲ್ವವಧ ಕಾರ್ಯದ ದೆಸೆಯಿಂದ ನಾನು ದೂರವಿರಬೇಕಾಯಿತು. ಅದರಿಂದ ಈ ಕಷ್ಟ ಬಂದೊದಗಿತು - ಹೀಗೆ ಹೇಳಿ ಶ್ರೀಕೃಷ್ಣ ಪಾಂಡವರನ್ನೂ ದ್ರೌಪದಿಯನ್ನೂ ಸಂತೈಸುವುದಕ್ಕಾಗಿ ಪುನಃ ಕೆಲವು ದಿನಗಳ ಕಾಲ ಅವರೊಡನೆ ವಾಸ ಮಾಡಿದ, ಸತ್ಯಭಾಮೆಯೂ ದ್ರೌಪದಿಯನ್ನು ಸಂತೈಸಲು ಅಲ್ಲಿ ವಾಸ ಮಾಡಿದಳು.
* * * *
ಹನ್ನೆರಡನೆಯ ಅಧ್ಯಾಯ
(ಸಾಲ್ವನ ಜೊತೆಯಲ್ಲಿ ಯುದ್ಧವನ್ನು ಮಾಡಲು ತಾನು ದ್ವಾರಕೆಯನ್ನು ಬಿಟ್ಟುಹೋದದ್ದು ಈ ಅನರ್ಥಕ್ಕೆ ಕಾರಣವಾಯಿತೆಂದು ಕೃಷ್ಣನಿಂದ ನಿರೂಪಣೆ.)
ಶ್ರೀಭಗವಾನ್
ನೇದಂ ಕೃಚ್ಛ್ರಮನುಪ್ರಾಪ್ತೋ ಭವಾನ್ ಸ್ಯಾದ್ ವಸುಧಾಧಿಪ |
ಯದ್ಯಹಂ ದ್ವಾರಕಾಯಾಂ ಸ್ಯಾಂ ರಾಜನ್ ಸನ್ನಿಹಿತಃ ಪುರಾ ॥1॥
ಎಲೈ ರಾಜನೇ! ನಾನು ದ್ವಾರಕೆಯಲ್ಲಿ ಇದ್ದಿದ್ದರೆ ನಿನಗೆ ಇಂತಹ ಅನರ್ಥವು ಪ್ರಾಪ್ತವಾಗುತ್ತಿರಲಿಲ್ಲ.
ಆಗಚ್ಛೇಯಮಹಂ ದ್ಯೂತಮನಾಹೂತೋಽಪಿ ಕೌರವೈಃ |
ಆಂಬಿಕೇಯೇನ ದುರ್ಧರ್ಷ ರಾಜ್ಞಾ ದುರ್ಯೋಧನೇನ ಚ |
ವಾರಯೇಯಮಹಂ ದ್ಯೂತಂ ಬಹೂನ್ ದೋಷಾನ್ ಪ್ರದರ್ಶಯನ್
ಎಲೈ ದುರ್ಧರ್ಷನೇ! ಕೌರವರಾಗಲೀ ಧೃತರಾಷ್ಟ್ರನಾಗಲೀ ಅಥವಾ ದುರ್ಯೋಧನನಾಗಲೀ ಆಹ್ವಾನಮಾಡದಿದ್ದರೂ ನಾನಾಗಿಯೇ ಬಂದು ದ್ಯೂತದಿಂದ ಉಂಟಾಗುವ ಅನೇಕ ದೋಷಗಳನ್ನು ತೋರಿಸಿ ನಾನು ದ್ಯೂತವನ್ನು ನಿಲ್ಲಿಸುತ್ತಿದ್ದೆ.
ಭೀಷ್ಮದ್ರೋಣೌ ಸಮಾಸಾದ್ಯ ಕೃಪಂ ಬಾಹ್ಲೀಕಮೇವ ಚ |
ವೈಚಿತ್ರವೀರ್ಯಂ ರಾಜಾನಮಲಂ ದ್ಯೂತೇನ ಕೌರವ ॥3॥
ಪುತ್ರಾಣಾಂ ತವ ರಾಜೇಂದ್ರ ತ್ವನ್ನಿಮಿತ್ತಮಿತಿ ಪ್ರಭೋ |
ತತ್ರ ವಕ್ಷ್ಯಾಮ್ಯಹಂ ದೋಷಾನ್ ಯೈರ್ಭವಾನವರೋಪಿತಃ ॥4॥
ಭೀಷ್ಮದ್ರೋಣರ ಸಮಾಗಮವನ್ನು ಮಾಡಿ ಕೃಪರನ್ನು ಮತ್ತು ಬಾಹ್ಲೀಕರನ್ನು ಸಂಧಿಸಿ ಧೃತರಾಷ್ಟ್ರರಾಜನ ಬಳಿಗೆ ಹೋಗಿ ಎಲೈ ಕೌರವನೇ! ರಾಜೇಂದ್ರನೇ! ನಿನ್ನ ನಿಮಿತ್ತದಿಂದ ನಿನ್ನ ಪುತ್ರರಿಗೆ ಉಂಟಾದ ದ್ಯೂತವನ್ನು ನಿಲ್ಲಿಸು ಎಂದು ಹೇಳುತಿತದ್ದೆ. ಯಾವ ದೋಷಗಳಿಂದ ನೀನು ರಾಜ್ಯ ಭ್ರಷ್ಟನಾದೆಯೋ ಅಂತಹ ದೋಷಗಳನ್ನು ನಾನು ಹೇಳುತ್ತಿದ್ದೆ.
ವೀರಸೇನಸುತೋ ಯೈಶ್ಚ ರಾಜ್ಯಾತ್ ಪ್ರಭ್ರಂಶಿತಃ ಪುರಾ |
ಅಲಕ್ಷಿತವಿನಾಶಶ್ಚ ದೇವನೇನ ವಿಶಾಂಪತೇ ॥5॥
ಸ್ವಾತಂತ್ರ್ಯಂ ದ್ಯೂತಸಂಗಸ್ಯ ವರ್ಣಯೇಯಂ ಯಥಾತಥಮ್ ॥6॥
ಎಲೈ ರಾಜನೇ! ತನ್ನ ನಾಶವನ್ನೇ ನಿರೀಕ್ಷಣೆ ಮಾಡದಿದ್ದ ವೀರಸೇನನ ಸುತನಾದ ನಳನು ಹಿಂದೆ ಯಾವ ದೋಷಗಳಿಂದ ದ್ಯೂತವನ್ನು ಆಡಿ ರಾಜ್ಯಭ್ರಷ್ಟನಾದನೋ ಅದನ್ನೂ ಮತ್ತು ದ್ಯೂತಪ್ರಸಂಗವು ಎಲ್ಲರನ್ನೂ ತನ್ನ ವಶವನ್ನಾಗಿ ಮಾಡಿಕೊಳ್ಳುತ್ತದೆ ಎಂದೂ ಯಥಾರ್ಥವಾಗಿ ವರ್ಣಿಸುತ್ತಿದ್ದೆ.
ಸ್ತ್ರಿಯೋಽಕ್ಷಾ ಮೃಗಯಾ ಪಾನಮೇತತ್ ಕಾಮಸಮುತ್ಥಿತಮ್ |
ವ್ಯಸನಂ ಚತುಷ್ಟಯಂ ಪ್ರೋಕ್ತಂ ಯೈ ರಾಜಾ ಭ್ರಶ್ಯತೇ ಶ್ರಿಯಃ ॥7॥
ಸ್ತ್ರೀಯರು, ಅಕ್ಷಕ್ರೀಡೆ, ಬೇಟೆ ಮತ್ತು ಮದ್ಯಪಾನ ಇವೆಲ್ಲವೂ ಕಾಮದಿಂದ ಉಂಟಾಗುವಂತಹವು. ಈ ನಾಲ್ಕನ್ನು ರಾಜನ ಚಟಗಳೆಂದು ಹೇಳುತ್ತಾರೆ. ಅವುಗಳಿಂದ ರಾಜನು ತನ್ನ ಸಂಪತ್ತನ್ನು ಕಳೆದುಕೊಳ್ಳುತ್ತಾನೆ.
ತತ್ರ ಸರ್ವತ್ರ ವಕ್ತವ್ಯಂ ಮನ್ಯಂತೇ ಶಾಸ್ತ್ರಕೋವಿದಾಃ |
ಏಕಾಹ್ನಾ ದ್ರವ್ಯನಾಶೋಽತ್ರ ಧ್ರುವಂ ವ್ಯಸನಮೇವ ಚ |
ವಿಶೇಷತಶ್ಚ ವಕ್ತವ್ಯಂ ದ್ಯೂತೇ ಪಶ್ಯಂತಿ ತದ್ವಿದಃ ॥8॥
ಈ ನಾಲ್ಕರಲ್ಲಿಯೂ ಶಾಸ್ತ್ರಕೋವಿದರು ಅನೇಕ ದೋಷಗಳನ್ನು ಹೇಳುತ್ತಾರೆ. ಅದರಲ್ಲಿಯೂ ದ್ಯೂತದಲ್ಲಿ ವಿಶೇಷವಾಗಿ ಒಂದೇ ದಿನದಲ್ಲಿ ಸಮಸ್ತದ್ರವ್ಯನಾಶವನ್ನು ಮತ್ತು ಶಾಶ್ವತವಾದ ದುಃಖವನ್ನು ಜ್ಞಾನಿಗಳು ದೋಷವೆಂದು ಪರಿಗಣಿಸುತ್ತಾರೆ.
ಅಭುಕ್ತನಾಶಶ್ಚಾರ್ಥಾನಾಂ ವಾಕ್ಪಾರುಷ್ಯಂ ಚ ಕೇವಲಮ್ |
ಅವಿಶ್ವಾಸ್ಯಮನರ್ಥಂ ಚ ಪ್ರಸಂಗೇ ಕಟುಕೋದಯಃ |
ದ್ಯೂತೇ ಬ್ರೂಯಾಂ ಮಹಾಬಾಹೋ ಸಮಾಸಾದ್ಯಾಂಬಿಕಾಸುತಮ್ ॥
ಎಲೈ ಮಹಾಬಾಹುವೇ! ತಾನು ಭೋಗಿಸದಿರುವ ಎಲ್ಲಾ ದ್ರವ್ಯಗಳ ನಾಶ, ವ್ಯರ್ಥವಾದ ಉಗ್ರವಾದ ಮಾತುಗಳು, ಪರಸ್ಪರ ಅವಿಶ್ವಾಸ, ಅನರ್ಥ, ವೈರದ ಉದ್ಭವ, ಇವೆಲ್ಲವೂ ದ್ಯೂತ ಪ್ರಸಂಗದಲ್ಲಿ ಉದ್ಭವವಾಗುತ್ತವೆ ಎಂದು ನಾನು ಅಂಬಿಕಾಸುತನಾದ ಧೃತರಾಷ್ಟ್ರನಿಗೆ ಹೇಳುತ್ತಿದ್ದೆ.
ಏವಮುಕ್ತೋ ಯದಿ ಮಯಾ ಗೃಹ್ಣೀಯಾದ್ ವಚನಂ ಮಮ |
ಅನಾಮಯಂ ಸ್ಯಾದ್ ಧರ್ಮಜ್ಞ ಕುರೂಣಾಂ ಕುರುನಂದನ ॥10॥
ಎಲೈ ಧರ್ಮಜ್ಞನಾದ ಕುರುನಂದನನೇ! ಹೀಗೆ ಹೇಳಿದ ನನ್ನ ಮಾತನ್ನು ಧೃತರಾಷ್ಟ್ರನು ಏನನ್ನಾದರೂ ಕೇಳಿದರೆ ಎಲ್ಲಾ ಕುರುಗಳಿಗೆ ಕ್ಷೇಮವುಂಟಾಗುತ್ತದೆ.
ನ ಚೇತ್ತನ್ಮಮ ರಾಜೇಂದ್ರ ಗೃಹ್ಣೀಯಾತ್ಮಧುರಂ ವಚಃ |

ಪಥ್ಯಂ ಚ ಭರತಶ್ರೇಷ್ಠ ನಿಗೃಹ್ಣೀಯಾಂ ಬಲೇನ ತಮ್ ॥11॥
ಎಲೈ ರಾಜೇಂದ್ರನೇ! ಎಲೈ ಭರತಶ್ರೇಷ್ಠನೇ! ನನ್ನ ಮಧುರವಾದ ಪಥ್ಯವಾದ ಈ ಮಾತುಗಳನ್ನು ಧೃತರಾಷ್ಟ್ರನು ಕೇಳದಿದ್ದರೆ ನನ್ನ ಬಲದಿಂದ ಅವನನ್ನು ನಿಗ್ರಹಿಸುತ್ತಿದ್ದೆ.
ಅಥೈನಾನಾಪನೇಯೈವಂ ದುಹೃರ್ದಾನಾಮದುಹೃರ್ದಮ್ |
ಸಭಾಸದಶ್ಚ ತಾನ್ ಸರ್ವಾನ್ ಭೇದಯೇಯಂ ದುರೋದರಾತ್ ॥12॥
ಅಥವಾ ದುಷ್ಟ ಹೃದಯವುಳ್ಳ ಇವರೆಲ್ಲರನ್ನೂ ಸಭೆಯಿಂದ ಹೊರಗೆ ಕಳುಹಿಸಿ ಶಾಂತನಾದ ಧೃತರಾಷ್ಟ್ರನನ್ನು ಮತ್ತು ಶಾಂತರಾದ ಸಭಾಸದರನ್ನು ಉದ್ದೇಶಿಸಿ ಈ ದ್ಯೂತಪ್ರಸಂಗದಿಂದ ಅವರೆಲ್ಲರನ್ನೂ ಬೇರ್ಪಡಿಸುತ್ತಿದ್ದೆ.
ಅಸಾನ್ನಿಧ್ಯಂ ತು ಕೌಂತೇಯ ಮಮಾನರ್ಥೇಷ್ವಭೂತ್ ತದಾ |
ಯೇನೇದಂ ವ್ಯಸನಂ ಪ್ರಾಪ್ತಾ ಭವಂತೋ ದ್ಯೂತಕಾರಿತಮ್ ॥13॥
ಎಲೈ ಕೌಂತೇಯನೇ! ನಾನು ದ್ವಾರಕಾಪಟ್ಟಣದಲ್ಲಿ ಇಲ್ಲದಿದ್ದುದು ದ್ಯೂತದಿಂದ ನೀವು ಅನುಭವಿಸುತ್ತಿರುವ ಈ ದುಃಖಕ್ಕೆ ಕಾರಣವಾಯಿತು.
ಸೋಽಹಮೇತ್ಯ ಕುರುಶ್ರೇಷ್ಠ ದ್ವಾರಕಾಂ ಪಾಂಡುನಂದನ |
ಅಶ್ರೌಷಂ ತ್ವಾ ವ್ಯಸನಿನಂ ಯುಯುಧಾನಾದ್ ಯಥಾತಥಮ್ ॥14॥
ಎಲೈ ಕುರುಶ್ರೇಷ್ಠನೇ! ಪಾಂಡುನಂದನನೇ! ನಾನು ದ್ವಾರಕೆಗೆ ಹಿಂದಿರುಗಿ ಯುಯುಧಾನನಿಂದ ನಿಮಗೆ ಉಂಟಾದ ವ್ಯಸನವನ್ನೆಲ್ಲಾ ಯಥಾರ್ಥವಾಗಿ ಕೇಳಿದೆ.
ಶ್ರುತ್ವೈವ ಚಾಹಂ ರಾಜೇಂದ್ರ ಪರಮೋದ್ವಿಗ್ನಮಾನಸಃ |
ತೂರ್ಣಮಭ್ಯಾಗತೋಽಸ್ಮಿ ತ್ವಾಂ ದ್ರಷ್ಟುಕಾಮೋ ಮಹೀಪತೇ ॥15॥
ಎಲೈ ಮಹೀಪತಿಯೇ, ಎಲೈ ರಾಜೇಂದ್ರನೇ!ಆ ವಾರ್ತೆಯನ್ನು ಕೇಳಿದ ತಕ್ಷಣ ನಾನು ಬಹಳ ಉದ್ವಿಗ್ನವಾದ ಮನಸ್ಸುಳ್ಳವನಾಗಿ ಶೀಘ್ರವಾಗಿ ನಿನ್ನನ್ನು ನೋಡಲು ಇಲ್ಲಿಗೆ ಬಂದೆ.
ಅಹೋ ಕೃಚ್ಛ್ರಮನುಪ್ರಾಪ್ತಾಃ ಸರ್ವೇ ಸ್ಮ ಪುರುಷರ್ಷಭ |
ಯೇ ವಯಂ ತ್ವಾಂ ವ್ಯಸನಿನಂ ಪಶ್ಯಾಮ ಸಹ ಸೋದರೈಃ ॥16॥
ಎಲೈ ಪುರುಷ ಶ್ರೇಷ್ಠನೇ! ನೀವೆಲ್ಲರೂ ಬಹಳ ಕಷ್ಟಕ್ಕೆ ಸಿಲುಕಿದ್ದೀರಿ. ಇಂತಹ ವ್ಯಸನಕ್ಕೆ ಸಿಲುಕಿದ ನಿನ್ನನ್ನು ನಿನ್ನ ಸಹೋದರರ ಜೊತೆಯಲ್ಲಿ ನೋಡುತ್ತಿರುವ ನಮಗೂ ಸಂಕಟವು ಪ್ರಾಪ್ತವಾಗಿದೆ. ಇದು ವಿಷಾದಕರ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾದಶೋಽಧ್ಯಾಯಃ ॥
॥ ಕೈರಾತಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
*****
ಹದಿಮೂರನೆಯ ಅಧ್ಯಾಯ
(ಧರ್ಮರಾಜನ ಪ್ರಶ್ನೆಗೆ ಉತ್ತರವಾಗಿ ಕೃಷ್ಣನಿಂದ ಸಾಲ್ವಪ್ರಸಂಗದ ವರ್ಣನೆ.)
ಯುಧಿಷ್ಠಿರಃ
ಅಸಾನ್ನಿಧ್ಯಂ ಕಥಂ ಕೃಷ್ಣ ತವಾಸೀದ್ ವೃಷ್ಣಿನಂದನ |
ಕ್ವ ಚಾಸೀದ್ ವಿಪ್ರವಾಸಸ್ತೇ ಕಿಂ ಚಾಕಾರ್ಷೀಃ ಪ್ರವಾಸಿತಃ ॥1॥
ವೃಷ್ಣಿನಂದನನಾದ ಎಲೈ ಕೃಷ್ಣನೇ! ನೀನು ದ್ವಾರಕೆಯಲ್ಲಿ ಏಕೆ ಇರಲಿಲ್ಲ? ಎಲ್ಲಿಗೆ ಪ್ರವಾಸವನ್ನು ಕೈಗೊಂಡಿದ್ದೆ? ಮತ್ತು ಆ ಪ್ರವಾಸಸಮಯದಲ್ಲಿ ಏನನ್ನು ಮಾಡಿದೆ?
ಕೃಷ್ಣಃ
ಸಾಲ್ವಸ್ಯ ನಗರಂ ಸೌಭಂ ಗತೋಽಹಂ ಭರತರ್ಷಭ |
ನಿಹಂತುಂ ಭರತಶ್ರೇಷ್ಠ ಶೃಣು ಮೇ ತತ್ರ ಕಾರಣಮ್ ॥2॥
ಎಲೈ ಭರತಶ್ರೇಷ್ಠನೇ! ನಾನು ಸಾಲ್ವನ ನಗರವಾದ ಸೌಭವನ್ನು ನಾಶಪಡಿಸಲು ಹೋಗಿದ್ದೆ. ಅದಕ್ಕೆ ಕಾರಣವನ್ನು ನನ್ನಿಂದ ಕೇಳು.
ಮಹಾತೇಜಾ ಮಹಾಬಾಹುರ್ಯಃ ಸ ರಾಜಾ ಮಹಾಯಶಾಃ |
ದಮಘೋಷಾತ್ಮಜೋ ವೀರಃ ಶಿಶುಪಾಲೋ ಮಯಾ ಹತಃ ॥3॥
ಮಹಾತೇಜಸ್ವಿಯೂ ಮಹಾಬಾಹುವೂ ಮಹಾಕೀರ್ತಿವಂತನೂ ವೀರನೂ ಆದ ದಮಘೋಷಪುತ್ರನಾದ ಶಿಶುಪಾಲರಾಜನು ನನ್ನಿಂದ ಹತನಾದನು.
ಯಜ್ಞೇ ತೇ ಭರತಶ್ರೇಷ್ಠ ರಾಜಸೂಯೇಽರ್ಹಣಾಂ ಪ್ರತಿ |
ಸರೋಷಮನುಸಂಪ್ರಾಪ್ತೋ ನಾಮೃಷ್ಯತ ದುರಾತ್ಮವಾನ್ ॥4॥
ಎಲೈ ಭರತಶ್ರೇಷ್ಠನೇ! ನಿನ್ನ ರಾಜಸೂಯಯಾಗದಲ್ಲಿ ಅಗ್ರಪೂಜೆಯ ಸಂದರ್ಭದಲ್ಲಿ ಅವನು ನನ್ನಿಂದ ಹತನಾದನು. ರೋಷದಿಂದ ಅಲ್ಲಿಗೆ ಬಂದಿದ್ದ ಆ ದುರಾತ್ಮನಾದ ಅವನು ನನಗೆ ಮಾಡಿದ ಅಗ್ರಪೂಜೆಯನ್ನು ಸಹಿಸಲಿಲ್ಲ.
ಶ್ರುತ್ವಾ ತಂ ನಿಹತಂ ಸಾಲ್ವಃ ತೀವ್ರಕೋಪಸಮನ್ವಿತಃ |
ಉಪಾಯಾದ್ ದ್ವಾರಕಾಂ ಶೂನ್ಯಾಮಿಹಸ್ಥೇ ಮಯಿ ಭಾರತ ॥5॥
ಎಲೈ ಭಾರತನೇ! ಶಿಶುಪಾಲನು ಹತನಾದುದನ್ನು ಕೇಳಿದ ಸಾಲ್ವನು ಬಹಳ ಕೋಪದಿಂದ ಕೂಡಿದವನಾಗಿ ನಾನು ಇಲ್ಲಿ ಇದ್ದ ಕಾರಣದಿಂದ ದ್ವಾರಕೆಯಲ್ಲಿ ಇಲ್ಲದಿದ್ದ ಸಮಯದಲ್ಲಿ ದ್ವಾರಕೆಗೆ ಬಂದನು.

ಸ ತತ್ರ ಯೋಧಿತೋ ರಾಜನ್ ಬಾಲಕೈರ್ವೃಷ್ಣಿಪುಂಗವೈಃ |
ನಿವೃತ್ತಃ ಕಾಮಗಂ ಸೌಭಮಾರುಹ್ಯೈವ ನೃಶಂಸಕೃತ್ |
ಚಿರಜೀವೀ ನೃಪಃ ಸೋಽಪಿ ಪ್ರಸಾದಾತ್ ಪದ್ಮಜನ್ಮನಃ ||6||
ಎಲೈ ರಾಜನೇ! ವೃಷ್ಣಿಪುಂಗವರಾದ ಬಾಲಕರು ಅವನ ಜೊತೆಯಲ್ಲಿ ಯುದ್ಧಮಾಡಿದರು. ಆ ಕ್ರೂರಕರ್ಮಿಯಾದ ಅವನು ತನ್ನ ಕಾಮಗಾಮಿಯಾದ ವಿಮಾನವನ್ನು ಏರಿ ಹೊರಟು ಹೋದನು. ಬ್ರಹ್ಮದೇವರ ವರದಿಂದ ಅವನೂ ಕೂಡ ಚಿರಜೀವಿಯಾದವನು.
ತತೋ ವೃಷ್ಣಿಪ್ರವೀರಾಂಸ್ತಾನ್ ಬಾಲಾನ್ ಹತ್ವಾ ಬಹೂಂಸ್ತದಾ |
ಪುರೋದ್ಯಾನಾನಿ ಸರ್ವಾಣಿ ಭೇದಯಾಮಾಸ ದುರ್ಮತಿಃ ||7||
ಅವನು ಹೋಗುವುದಕ್ಕಿಂತ ಮೊದಲು ಅನೇಕ ವೃಷ್ಣಿವೀರರಾದ ಬಾಲಕರನ್ನು ಕೊಂದನು ಮತ್ತು ದುರ್ಮತಿಯಾದ ಅವನು ಎಲ್ಲಾ ಪುರೋದ್ಯಾನಗಳನ್ನೂ ನಾಶಪಡಿಸಿದನು.
ಉಕ್ತವಾಂಶ್ಚ ಮಹಾಬಾಹೋ ಕ್ವಾಸೌ ವೃಷ್ಣಿಕುಲಾಧಮಃ |
ವಾಸುದೇವಃ ಸ ಮಂದಾತ್ಮಾ ವಸುದೇವಸುತೋ ಗತಃ ||8||
ಎಲೈ ಮಹಾಬಾಹುವೇ! ಅವನು ವೃಷ್ಣಿಕುಲಾಧಮನಾದ ವಾಸುದೇವನು ಎಲ್ಲಿದ್ದಾನೆ? ಆ ಮಂದಾತ್ಮನಾದ ವಸುದೇವಸುತನು ಎಲ್ಲಿಗೆ ಹೋಗಿದ್ದಾನೆ? ಎಂದು ಕೇಳುತ್ತಿದ್ದನು.
ತಸ್ಯ ಯುದ್ಧಾರ್ಥಿನೋ ದರ್ಪಂ ಯುದ್ಧೇ ವಿನಯಿತಾಽಸ್ಮ್ಯಹಮ್ |
ಆನರ್ತಾಃ ಸರ್ವಮಾಖ್ಯಾತ ತತ್ರ ಗಂತಾಸ್ಮಿ ಯತ್ರ ಸಃ ||9||
ಯುದ್ಧಪ್ರಿಯನಾದ ಅವನ ದರ್ಪವನ್ನು ನಾನು ಈ ದಿನ ಯುದ್ಧದಲ್ಲಿ ವಿನಾಶಮಾಡುತ್ತೇನೆ. ದ್ವಾರಕಾವಾಸಿಗಳೇ, ನನಗೆ ಎಲ್ಲವನ್ನೂ ಹೇಳಿ. ಅವನು ಎಲ್ಲಿದ್ದಾನೋ ಅಲ್ಲಿಗೆ ಹೋಗುವೆನು.
ತಂ ಹತ್ವಾ ವಿನಿವರ್ತಿಷ್ಯೇ ಕಂಸಕೇಶಿನಿಷೂದನಮ್ |
ಅಹತ್ವಾ ನ ವಿವರ್ತಿಷ್ಯೇ ಸತ್ಯೇನಾಯುಧಮಾಲಭೇ ||10||
ಕಂಸ ಮತ್ತು ಕೇಶಿಗಳನ್ನು ಕೊಂದ ಅವನನ್ನು ಕೊಂದು ಹಿಂದಿರುಗುವೆನು. ಅವನನ್ನು ಕೊಲ್ಲದೆ ಹಿಂದಿರುಗುವುದಿಲ್ಲ. ನನ್ನ ಆಯುಧವನ್ನು ಮುಟ್ಟಿ ಪ್ರತಿಜ್ಞೆಯನ್ನು ಮಾಡುತ್ತೇನೆ.
ಕ್ವಾಸೌ ಕ್ವಾಸಾವಿತಿ ಪುನಸ್ತತ್ರ ತತ್ರ ಪ್ರಧಾವತಿ |
ಮಯಾ ಕಿಲ ರಣೇ ಯೋದ್ಧುಂ ಕಾಂಕ್ಷಮಾಣಃ ಸ ಸೌಭರಾಟ್ ||11||
ಆ ಸೌಭಪತಿಯು ನನ್ನ ಜೊತೆಯಲ್ಲಿ ಯುದ್ಧಮಾಡುವ ಆಸೆಯಿಂದ ಹೀಗೆ ಅವನೆಲ್ಲಿ ಅವನೆಲ್ಲಿ ಎಂದು ಕೇಳುತ್ತಾ ಅಲ್ಲೆಲ್ಲಾ ಓಡಾಡಿದನು.
ಅದ್ಯಾಹಂ ಪಾಪಕರ್ಮಾಣಂ ಕ್ಷುದ್ರಂ ವಿಶ್ವಾಸಘಾತಿನಮ್ |
ಶಿಶುಪಾಲವಧಾಮರ್ಷಾದ್ ಗಮಯಿಷ್ಯೇ ಯಮಕ್ಷಯಮ್ ||12||
ಈ ದಿನ ನಾನು ಶಿಶುಪಾಲವಧೆಯಿಂದ ಕೋಪಗೊಂಡವನಾಗಿ ಪಾಪಕರ್ಮವನ್ನು ಮಾಡುವ ವಿಶ್ವಾಸ ಘಾತುಕನಾದ ಆ ನೀಚನನ್ನು ಯಮಲೋಕಕ್ಕೆ ಕಳುಹಿಸುವೆನು.
ಮಮ ಪಾಪಸ್ವಭಾವೇನ ಭ್ರಾತಾ ಯೇನ ನಿಪಾತಿತಃ |
ಶಿಶುಪಾಲೋ ಮಹಾವೀರ್ಯಂ ತಂ ಹನಿಷ್ಯಾಮ್ಯಹಂ ರಣೇ ||13||
ಪಾಪಸ್ವಭಾವವುಳ್ಳ ಯಾವನಿಂದ ನನ್ನ ಸಹೋದರನಾದ ಶಿಶುಪಾಲನು ಕೊಲ್ಲಲ್ಪಟ್ಟನೋ ಅಂತಹ ಮಹಾವೀರ್ಯಶಾಲಿಯಾದ ಆ ಕೃಷ್ಣನನ್ನು ಯುದ್ಧದಲ್ಲಿ ಕೊಲ್ಲುವೆನು.
ಭ್ರಾತಾ ಬಾಲಶ್ಚ ರಾಜಾ ಚ ನ ಚ ಸಂಗ್ರಾಮಮೂರ್ಧನಿ |
ಪ್ರಮತ್ತಶ್ಚ ಹತೋ ವೀರಃ ತಂ ವಧಿಷ್ಯೇ ಜನಾರ್ದನಮ್ ||14||
ನನ್ನ ಸಹೋದರ, ಬಾಲಕ ಮತ್ತು ರಾಜ. ಅವನು ಪ್ರಮತ್ತನಾಗಿದ್ದನು(ಯುದ್ಧಕ್ಕೆ ಸಿದ್ಧನಾಗಿರಲಿಲ್ಲ) ಅವನು ಯುದ್ಧದಲ್ಲಿ ಕೊಲ್ಲಲ್ಪಡಲಿಲ್ಲ. ಅಂತಹ ಜನಾರ್ದನನನ್ನು ಇಂದು ಯುದ್ಧದಲ್ಲಿ ಕೊಲ್ಲುವೆನು.
ಏವಮಾದಿ ಮಹಾರಾಜ ವಿಲಪ್ಯ ದಿವಮಾಸ್ಥಿತಃ |
ಕಾಮಗೇನ ಸ ಸೌಭೇನ ಕ್ಷಿಪ್ತತ್ವ ಮಾಂ ಕುರುನಂದನ ||15||
ಎಲೈ ಮಹಾರಾಜನೇ! ಈ ರೀತಿಯಾಗಿ ಬಹಳ ನನ್ನನ್ನು ಮಾತನಾಡಿ ನಿಂದಿಸಿ ತನ್ನ ಕಾಮಗಾಮಿಯಾದ ವಿಮಾನದಲ್ಲಿ ಅಂತರಿಕ್ಷಕ್ಕೆ ಹಾರಿದನು.
ತಮಶ್ರೌಷಮಹಂ ಗತ್ವಾ ಯಥಾವೃತ್ತಃ ಸ ದುರ್ಮತಿಃ |
ಗತಃ ಕೌರವ್ಯ ದುಷ್ಟಾತ್ಮಾ ಮಾರ್ತಿಕಾವತಕೋ ನೃಪಃ ||16||
ಎಲೈ ಕೌರವ್ಯನೇ! ನಾನು ದ್ವಾರಕೆಗೆ ಹಿಂದಿರುಗಿ ನಡೆದ ವೃತ್ತಾಂತವನ್ನೂ ಮತ್ತು ಆ ದುರ್ಮತಿಯೂ ದುಷ್ಟಾತ್ಮನೂ ಆದ ಮಾರ್ತಿಕಾವತಿಯ ದೇಶದ ರಾಜನಾದ ಸಾಲ್ವನು ಹೇಗೆ ಹಿಂದಿರುಗಿದನು ಎಂಬುದನ್ನೂ ಕೇಳಿದೆನು.
ತತೋಽಹಮಪಿ ಕೌರವ್ಯ ರೋಷವ್ಯಾಕುಲಲೋಚನಃ |
ನಿಶ್ಚಿತ್ಯ ಮನಸಾ ರಾಜನ್ ವಧಾಯಾಸ್ಯ ಮನೋ ದಧೇ ||17||
ಎಲೈ ಕೌರವ್ಯರಾಜನೇ! ಆಗ ನಾನೂ ಸಹ ರೋಷದಿಂದ ತುಂಬಿದ ಕಣ್ಣುಳ್ಳವನಾಗಿ ಅವನ ವಧೆಯನ್ನು ಮಾಡುವುದೆಂದು ಮನಸ್ಸಿನಲ್ಲಿ ನಿಶ್ಚಯಿಸಿದೆ.
ಆನರ್ತೇಷು ವಿಮರ್ದಂ ಚ ಕ್ಷೇಪಂ ಚಾತ್ಮನಿ ಕೌರವ |

ಪ್ರವೃದ್ಧಮವಲೇಪಂ ಚ ತಸ್ಯ ದುಷ್ಕೃತಕರ್ಮಣಃ ॥18॥
ತತಃ ಸೌಭವಧಾಯಾಹಂ ಪ್ರಸ್ಥಿತಃ ಪೃಥಿವೀಪತೇ |
ಸ ಮಯಾ ಸಾಗರೋಪಾಂತೇ ದೃಷ್ಟ ಆಸೀತ್ ಪರೀಪ್ಸತಾ ॥19॥
ಎಲೌ ಕೌರವ್ಯನೇ! ದ್ವಾರಕಾಪಟ್ಟಣದ ಧ್ವಂಸವನ್ನೂ ನನಗೆ ಮಾಡಿದ ನಿಂದನೆಯನ್ನೂ ಆ ದುಷ್ಕರ್ಮಕಾರಿಯು ಹೊಂದಿದ್ದ ದುರಹಂಕಾರವನ್ನೂ ಗಮನಿಸಿ ಎಲ್ಲೈ ರಾಜನೇ! ನಾನು ಅವನ ವಧೆಗಾಗಿ ಹೊರಟೆನು. ನಾನು ಅವನನ್ನು ಹುಡುಕುತ್ತಾ ಸಾಗರದ ಸಮೀಪದಲ್ಲಿ ಅವನನ್ನು ನೋಡಿದೆನು.
ತತಃ ಪ್ರಧ್ಮಾಪ್ಯ ಜಲಜಂ ಪಾಂಚಜನ್ಯಮಹಂ ನೃಪ |
ಆಹೂಯ ಸಾಲ್ವಂ ಸಮರೇ ಯುದ್ಧಾಯ ಸಮವಸ್ಥಿತಃ ॥20॥
ಎಲ್ಲೈ ರಾಜನೇ! ಆಗ ನಾನು ಪಾಂಚಜನ್ಯಶಂಖವನ್ನು ಊದಿ ಸಾಲ್ವನನ್ನು ಆಹ್ವಾನಿಸಿ ಯುದ್ಧಕ್ಕೆ ಸಿದ್ಧವಾಗಿ ನಿಂತೆನು.
ಮುಹೂರ್ತಮಭವದ್ ಯುದ್ಧಂ ತತ್ರ ಮೇ ದಾನವೈಃ ಸಹ |
ವಶೀಭೂತಾಶ್ಚ ಮೇ ಸರ್ವೇ ಭೂತಳೇ ಚ ನಿಪಾತಿತಾಃ ॥21॥
ಒಂದು ಮುಹೂರ್ತದ ಕಾಲ ದಾನವರಿಗೂ ಮತ್ತು ನನಗೂ ಯುದ್ಧವಾಯಿತು. ಅನಂತರ ಅವರೆಲ್ಲರೂ ನನ್ನ ವಶವಾಗಿ ಭೂತಳದಲ್ಲಿ ಬಿದ್ದರು.
ಏತತ್ ಕಾರ್ಯಂ ಮಹಾಬಾಹೋ ಯೇನಾಹಂ ನಾಗತಸ್ತದಾ |
ಶ್ರುತ್ವೈವ ಹಸ್ತಿನಪುರೇ ದ್ಯೂತಂ ಚಾವಿನಯೋತ್ಥಿತಮ್ ॥22॥
ಎಲ್ಲೈ ಮಹಾಬಾಹುವೇ! ದ್ಯೂತದ ಸಮಯದಲ್ಲಿ ನಾನು ಬರದೆ ಇರುವುದಕ್ಕೆ ಇದೇ ಕಾರಣ. ಈಗ ಹಸ್ತಿನಪುರದಲ್ಲಿ ಅವಿನಯದಿಂದ ಉಂಟಾದ ದ್ಯೂತವನ್ನು ಕೇಳಿ ಇಲ್ಲಿಗೆ ಬಂದಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಯೋದಶೋಽಧ್ಯಾಯಃ ॥
॥ ಕೈರಾತಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * *
ಹದಿನಾಲ್ಕನೆಯ ಅಧ್ಯಾಯ
(ವಿಸ್ತಾರವಾಗಿ ಸಾಲ್ವನ ಜೊತೆಯಲ್ಲಿ ಮಾಡಿದ ಯುದ್ಧದ ವರ್ಣನೆ. )
ಯುಧಿಷ್ಠಿರಃ
ವಾಸುದೇವ ಮಹಾಬಾಹೋ ವಿಸ್ತರೇಣ ಮಹಾಮತೇ |
ಸೌಭಸ್ಯ ವಧಮಾಚಕ್ಷ್ವ ನ ಹಿ ತೃಪ್ಯಾಮಿ ಕಥ್ಯತಾಮ್ ॥1॥
ಮಹಾಮತಿಯಾದ ಮಹಾಬಾಹುವಾದ ವಾಸುದೇವನೇ! ಸೌಭವಧೆಯ ಕಥೆಯನ್ನು ವಿಸ್ತಾರವಾಗಿ ಹೇಳು. ನೀನು ಹೇಳುವ ಕಥೆಯನ್ನು ಕೇಳುತ್ತಿದ್ದರೆ ನನಗೆ ತೃಪ್ತಿಯೇ ಉಂಟಾಗುವುದಿಲ್ಲ.
ಶ್ರೀಭಗವಾನ್
ಹತಂ ಶ್ರುತ್ವಾ ಮಹಾಬಾಹೋ ಮಯಾ ಶ್ರೌತಶ್ರವಂ ನೃಪಮ್ |
ಉಪಾಯಾದ್ ಭರತಶ್ರೇಷ್ಠ ಸಾಲ್ವೋ ದ್ವಾರವತೀಂ ಪುರೀಮ್ ॥2॥
ಮಹಾಬಾಹುವೇ! ಭರತಶ್ರೇಷ್ಠನೇ! ಶ್ರುತಶ್ರವೆಯ (ಶ್ರುತಶ್ರವಾ ಎಂಬುದು ಧಮಘೋಷನ ಪತ್ನಿಯ ಹೆಸರು) ಪುತ್ರನಾದ ಶಿಶುಪಾಲನು ಹತನಾದುದನ್ನು ಕೇಳಿ ಸಾಲ್ವನು ದ್ವಾರಾವತಿಗೆ ಮುತ್ತಿಗೆಯನ್ನು ಹಾಕಲು ಬಂದನು.
ಅರುಧತ್ ತಾಂ ಸುದುಷ್ಟಾತ್ಮಾ ಸರ್ವತಃ ಪಾಂಡುನಂದನ |
ಸಾಲ್ವೋ ವೈಹಾಯಸಂ ಚಾಪಿ ತತ್ ಪುರಂ ವ್ಯೂಹ್ಯ ವಿಷ್ಠಿತಃ ॥3॥
ಎಲ್ಲೈ ಪಾಂಡುನಂದನನೇ! ಸುದುಷ್ಟನಾದ (ಬಹಳ ದುಷ್ಟನಾದ) ಅವನು ತನ್ನ ಅಂತರಿಕ್ಷಗಾಮಿಯಾದ ಸೌಭದಲ್ಲಿ ತನ್ನ ಸೈನ್ಯವನ್ನು ವ್ಯೂಹಮಾಡಿ ಎಲ್ಲ ಕಡೆಗಳಿಂದಲೂ ದ್ವಾರಕಾಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿದನು.
ತತ್ರ ಸೋಽಥ ಮಹೀಪಾಲೋ ಯೋಧಯಾಮಾಸ ತಾಂ ಪುರೀಮ್ |
ಅಭಿಸಾರೇಣ ಸೌಭೇನ ತತ್ರ ಯುದ್ಧಮವರ್ತತ ॥4॥
ಅನಂತರ ಆ ರಾಜನು ದ್ವಾರಕಾಪಟ್ಟಣದ ಜೊತೆಯಲ್ಲಿ ಯುದ್ಧಮಾಡಿದನು. ಸರ್ವತ್ರ ಸಂಚರಿಸುವ ಸೌಭದ ಸಹಾಯದಿಂದ ಅವನ ಯುದ್ಧವು ಜರುಗಿತು.
ಪುರೀ ಸಮಂತಾದ್ ವಿಹಿತಾ ಸಪತಾಕಾ ಸತೋರಣಾ |
ಸಚಕ್ರಾ ಸಹುಳಾ ಚೈವ ಸಯಂತ್ರಖನಕಾ ತಥಾ ॥5॥
ದ್ವಾರಾಕವತಿಪಟ್ಟಣವಾದರೂ ಸಹ ಎಲ್ಲ ಕಡೆಗಳಲ್ಲಿ ಪತಾಕೆಗಳಿಂದಲೂ ತೋರಣಗಳಿಂದಲೂ ಚಕ್ರ ಮತ್ತು ಹುಳಾ ಎಂಬ ಆಯುಧಗಳಿಂದಲೂ ಯಂತ್ರಗಳು ಮತ್ತು ಅಗೆಯುವ ಸಾಧನಗಳಿಂದಲೂ ಸಜ್ಜಾಗಿದ್ದಿತು.
ಸೋಪತಲ್ಪಪ್ರತೋಲೀಕಾ ಸಾಟ್ಟಾಟ್ಟಾಲಕಗೋಪುರಾ |
ಸಚಕ್ರಗ್ರಾಹಿಣೀ ಚೈವ ಸೋಲ್ಕಾಲಾತಾವಪೋಥಿಕಾ ॥6॥
ಎಲ್ಲೈ ಭರತಶ್ರೇಷ್ಠನೇ ಆ ನಗರವು ಉಪಕಲ್ಪ, ಪ್ರತೋಲಿಕೆ, ಅಟ್ಟ ಅಟ್ಟಾಲಕ ಗೋಪುರಗಳಿಂದ ಶೋಭಿತವಾಗಿದ್ದಿತು. ಮತ್ತು ಶತ್ರುಗಳಿಂದ ಪ್ರಯುಕ್ತವಾದ ಚಕ್ರಗಳನ್ನು ನಾಶಮಾಡುವ ಸಾಧನಗಳಿಂದಲೂ ಮತ್ತು ಶತ್ರುಗಳಿಂದ ಪ್ರಯೋಗಿಸಲ್ಪಟ್ಟ ಉಲ್ಕೆಗಳು ಮತ್ತು ಅಲಾತಗಳನ್ನು ನಾಶಮಾಡುವ ಸಾಧನಗಳಿಂದಲೂ ಸಜ್ಜಾಗಿದ್ದಿತು.

ಸೋಷ್ಟಿಕಾ ಭರತಶ್ರೇಷ್ಠ ಸಭೇರೀಪಣವಾನಕಾ |
ಸೋಷ್ಟಿಕಾ ಸಾಂಕುಶಾ ರಾಜನ್ ಸಶತಘ್ನೀ ಸಲಾಂಗಲಾ ||7||
ಎಲೈ ಭರತಶ್ರೇಷ್ಠನೇ! ಹೆಣ್ಣು ಒಂಟೆಗಳಿಂದಲೂ ಭೇರೀಪಣವಗಳಿಂದಲೂ ಅಂಕುಶ ಶತಘ್ನೀ ಮತ್ತು ಲಾಂಗಲಗಳಿಂದಲೂ ನಗರವು ಸಜ್ಜಾಗಿದ್ದಿತು.
ಸಸುತೂಣೀ ಸಾಸಿಧರಾ ಸಾಯುಧಾ ಸಪರಶ್ವಧಾ |
ಲೋಹಚರ್ಮವತೀ ಚಾಪಿ ಸಾಗ್ನಿಃ ಸಹುಲಶೃಂಗಿಕಾ |
ಶಾಸ್ತ್ರದೃಷ್ಟೇನ ವಿಧಿನಾ ಸುಯುಕ್ತಾ ಭರತರ್ಷಭ ||8||
ಎಲೈ ಭರತರ್ಷಭನೇ! ಒಳ್ಳೆಯ ಬತ್ತಳಿಕೆಗಳಿಂದಲೂ ಒಳ್ಳೆಯ ಖಡ್ಗಧಾರಿಗಳಿಂದಲೂ ಪರಶು ಹುಳ ಮತ್ತು ಇತರ ಆಯುಧಗಳಿಂದಲೂ ಚರ್ಮಮಯವಾದ ಲೋಹಕೋಶಗಳಿಂದಲೂ ಅಗ್ನಿಗಳಿಂದಲೂ ಶಾಸ್ತ್ರದೃಷ್ಟವಾದ ರೀತಿಯಲ್ಲಿ ನಗರವು ಸಜ್ಜಾಗಿದ್ದಿತು.
ದ್ರವ್ಯೈರನೇಕೈರ್ವಿವಿಧೈರ್ಗದಸಾಂಬೋದ್ಧವಾದಿಭಿಃ |
ಪುರುಷೈ ರಾಜಶಾರ್ದೂಲ ಸರಥೈಃ ಪರಿಪಾಲಿತಾ ||9||
ಎಲೈ ರಾಜಶಾರ್ದೂಲನೇ! ಅನೇಕವಿಧವಾದ ದ್ರವ್ಯಗಳಿಂದಲೂ ರಥಸಹಿತರಾದ ಗದ ಸಾಂಬ ಉದ್ಧವಾದಿಗಳಿಂದಲೂ ಆ ನಗರವು ರಕ್ಷಿತವಾಗಿದ್ದಿತು.
ಅಭಿಜ್ಞಾತಕುಲೈರ್ವಿರೈ ರ್ದೃಷ್ಟವೀರ್ಯೈಶ್ಚ ಸಂಯುಗೇ |
ಮಧ್ಯಮೇನ ಚ ಗುಲ್ಮೇನ ರಕ್ಷಿತಾ ಸಾ ಪುರೀ ತದಾ ||10||
ಚೆನ್ನಾಗಿ ಪರೀಕ್ಷಿಸಲ್ಪಟ್ಟ ಕುಲವುಳ್ಳ ಯುದ್ಧದಲ್ಲಿ ಶೌರ್ಯವನ್ನು ಪ್ರದರ್ಶಿಸಿದಪುರುಷರಿಂದ ಮತ್ತು ಮಧ್ಯಮವಾದ ಸೈನ್ಯಕಟಕದಿಂದ ಆ ಪಟ್ಟಣವು ರಕ್ಷಿತವಾಗಿದ್ದಿತು.
ಉತ್ಕಿಪ್ತಗುಲ್ಮೈಶ್ಚ ತಥಾ ಹಯೈಶ್ಚ ಸಪತಾಕಿಭಿಃ |
ಆಘೋಷಿತಂ ಚ ನಗರೇ ನ ಪಾತವ್ಯಾ ಸುರೇತಿ ಹ ||11||
ಪ್ರಮಾದಂ ಪರಿರಕ್ಷದ್ಭಿರುಗ್ರಸೇನೋದ್ಧವಾದಿಭಿಃ |
ಪ್ರಮತ್ತೇಷ್ವಭಿಘಾತಂ ಹಿ ಕುರ್ಯಾತ್ ಸಾಲ್ವೋ ನರಾಧಿಪಃ |
ಇತಿ ಕೃತ್ವಾऽಪ್ರಮತ್ತಾಸ್ತೇ ಸರ್ವೇ ವೃಷ್ಣ್ಯಂಧಕಾಃ ಸ್ಥಿತಾಃ ||12||
ಗುಲ್ಮಗಳಿಂದಲೂ ಮೇಲೆಕ್ಕೆತ್ತಿದ ಪತಾಕೆಗಳನ್ನು ಹಿಡಿದ ಪುರುಷರಿಂದ ಅಧಿಷ್ಠಿತವಾದ ಅಶ್ವಗಳಿಂದಲೂ ನಗರವು ರಕ್ಷಿತವಾಗಿದ್ದಿತು. ಉಗ್ರಸೇನ ಉದ್ಧವ ಮೊದಲಾದವರು ಯಾವುದೇ ಪ್ರಮಾದ ಉಂಟಾಗದಿರಲು ನಗರದಲ್ಲಿ ಯಾರೂ ಸುರಾಪಾನವನ್ನು ಮಾಡಬಾರದೆಂದು ಘೋಷಿಸಿದರು. ಪಾನದಿಂದ ಮತ್ತರಾಗಿ ಮೈಮರೆತವರ ಮೇಲೆ ಸಾಲ್ವರಾಜನು ಎರಗಬಹುದೆಂದು ಆಲೋಚಿಸಿ ಎಲ್ಲಾ ವೃಷ್ಣ್ಯಂಧಕರು ಅಪ್ರಮತ್ತರಾಗಿ ಜಾಗರೂಕರಾಗಿದ್ದರು.
ಆನರ್ತಾಶ್ಚ ತಥಾ ಸರ್ವೇ ನಟನರ್ತಕಗಾಯಕಾಃ |
ಬಹಿರ್ನಿರ್ವಾಸಿತಾಃ ಕ್ಷಿಪ್ರಂ ರಕ್ಷದ್ಭಿರ್ವಿತ್ತಸಂಚಯಾನ್ ||13||
ಸಂಕ್ರಮಾ ಭೇದಿತಾಃ ಸರ್ವೇ ನಾವಶ್ಚ ಪ್ರತಿಷೇಧಿತಾಃ |
ಪರಿಘಾಶ್ಚಾಪಿ ಕೌರವ್ಯ ಕೀಲಕೈಶ್ಚ ಸುಕೀಲಿತಾಃ ||14||
ನಗರದ ವಿತ್ತಕೋಶಗಳನ್ನು ರಕ್ಷಿಸಲು ದ್ವಾರಕೆಯ ಎಲ್ಲ ನಟ ನರ್ತಕ ಗಾಯಕರು ಶೀಘ್ರವಾಗಿ ಊರಿನಿಂದ ಹೊರಗೆ ಕಳುಹಿಸಲ್ಪಟ್ಟರು. ದ್ವಾರಕೆಯನ್ನು ಪ್ರವೇಶಿಸುವ ಎಲ್ಲ ಸೇತುವೆಗಳು ಒಡೆಯಲ್ಪಟ್ಟವು. ಹಡಗುಗಳು ಪ್ರತಿಷೇಧಿಸಲ್ಪಟ್ಟವು. ಎಲೈ ಕೌರವ್ಯನೇ! ದ್ವಾರಕೆಯಲ್ಲಿ ಇದ್ದ ಕಂದಕಗಳೆಲ್ಲವೂ ಬೀಗ ಮುದ್ರೆಗಳಿಂದ ಬಂಧಿಸಲ್ಪಟ್ಟವು.
ಉದಪಾನಾಃ ಕುರುಶ್ರೇಷ್ಠ ತಥಾ ವಾಪ್ಯಃ ಕ್ಷತಾಸ್ತಥಾ |
ಸಮಂತಾತ್ ಕ್ರೋಶಮಾತ್ರಂ ತು ಕಾರಿತಾ ವಿಷಮಾ ಚ ಭೂಃ ||15||
ಎಲೈ ಕುರುಶ್ರೇಷ್ಠನೇ! ನಗರದ ಸುತ್ತಲೂ ಒಂದು ಕ್ರೋಶದವರೆಗೆ ಇರುವ ಭಾವಿಗಳು ಮತ್ತು ಜಲಾಶಯಗಳು ಒಡೆಯಲ್ಪಟ್ಟು ಭೂಮಿಯು ವಿಷಮವಾಗಿ ಮಾಡಲ್ಪಟ್ಟಿತು.
ಪ್ರಕೃತ್ಯಾ ವಿಷಮಂ ದುರ್ಗಂ ಪ್ರಕೃತ್ಯಾ ಚ ಸುರಕ್ಷಿತಮ್ |
ಪ್ರಕೃತ್ಯಾ ಚಾಯುಧೋಪೇತಂ ವಿಶೇಷೇಣ ತದಾऽನಘ ||16||
ಎಲೈ ಅನಘನೇ! ಸ್ವಾಭಾವಿಕವಾಗಿಯೇ ವಿಷಮವಾದ ಸ್ವಾಭಾವಿಕವಾಗಿಯೇ ಸುರಕ್ಷಿತವಾದ ಸ್ವಾಭಾವಿಕವಾಗಿಯೇ ಎಲ್ಲ ಆಯುಧಗಳಿಂದ ಕೂಡಿದ ಕೋಟೆಯು ಆಗ ವಿಶೇಷವಾಗಿ ಸಜ್ಜುಗೊಂಡಿತು.
ಸುರಕ್ಷಿತಂ ಸುಗುಪ್ತಂ ಚ ಸರ್ವಾಯುಧಸಮನ್ವಿತಮ್ |
ತತ್ ಪುರಂ ಭರತಶ್ರೇಷ್ಠ ಯಥೇಂದ್ರಭವನಂ ತಥಾ ||17||
ಎಲೈ ಭರತಶ್ರೇಷ್ಠನೇ! ಆ ಪಟ್ಟಣವು ಇಂದ್ರಭವನದಂತೆ ಸರ್ವಾಯುಧಗಳಿಂದ ಕೂಡಿದ್ದು ಸುರಕ್ಷಿತವೂ ಸುಗುಪ್ತವೂ ಆಗಿದ್ದಿತು.
ನ ಚಾಮುದ್ರೋऽಭಿನಿರ್ಯಾತಿ ನ ಚಾಮುದ್ರಃ ಪ್ರವೇಶ್ಯತೇ |
ವೃಷ್ಣ್ಯಂಧಕಪುರೇ ರಾಜನ್ ತದಾ ಸೌಭಸಮಾಗಮೇ ||18||
ಎಲೈ ರಾಜನೇ! ಸೌಭಪತಿಯು ದ್ವಾರಕೆಗೆ ಬಂದಾಗ ಆ ವೃಷ್ಣ್ಯಂಧಕಪಟ್ಟಣದಲ್ಲಿ ರಾಜಮುದ್ರೆಯಿಲ್ಲದೆ ಯಾವನೂ ಹೊರಗೆ ಹೋಗುವಂತೆ ಇರಲಿಲ್ಲ, ಮತ್ತು ಯಾವನೂ ಒಳಗೆ ಬರುವಂತೆ ಇರಲಿಲ್ಲ.
ಅನುರಥ್ಯಾಸು ಸರ್ವಾಸು ಚತ್ವರೇಷು ಚ ಕೌರವ |

ಬಲಂ ಬಭೂವ ರಾಜೇಂದ್ರ ಪ್ರಭೂತಗಜವಾಜಿಮತ್ ॥19॥
ಎಲೈ ಕೌರವನೇ! ರಾಜಬೀದಿಗೆ ಸೇರುವ ಎಲ್ಲಾ ಸಣ್ಣಮಾರ್ಗಗಳಲ್ಲಿಯೂ ಚತ್ವರ(ನಾಲ್ಕು ಮಾರ್ಗಸಂಗಮ)ಗಳಲ್ಲಿಯೂ ಬಹಳವಾದ ಅಶ್ವಗಜಸೈನ್ಯವು ಸಿದ್ಧವಾಗಿದ್ದಿತು.
ದತ್ತವೇತನಭಕ್ತಂ ಚ ದತ್ತಾಯುಧಪರಿಚ್ಛದಮ್ ।
ಕೃತಾಪದಾನಂ ಚ ತದಾ ಬಲಮಾಸೀದ್ ವಿಶಾಂಪತೇ ॥20॥
ಎಲೈ ರಾಜನೇ! ಆ ಸೈನ್ಯವು ಕಾಲಕಾಲಕ್ಕೆ ವೇತನ ಮತ್ತು ಭತ್ಯಗಳನ್ನು ಕೊಟ್ಟಿದ್ದಾಗಿಯೂ ಎಲ್ಲ ಆಯುಧಗಳು ಮತ್ತು ಸಲಕರಣೆಗಳಿಂದ ಸುಸನ್ನದ್ಧವಾಗಿಯೂ ಮತ್ತು ಶೌರ್ಯವನ್ನು ತೋರಿಸಿದವರಿಗೆ ಸತ್ಕಾರ್ಯವನ್ನು ಮಾಡಿದುದಾಗಿಯೂ ಇದ್ದಿತು.
ನ ಕೋಽಪ್ಯವೇತನಃ ಕಶ್ಚಿನ್ನ ಚಾತಿಕ್ರಾಂತವೇತನಃ ।
ನಾನುಗ್ರಹಭೃತಃ ಕಶ್ಚಿನ್ನ ಚಾದೃಷ್ಟಪರಾಕ್ರಮಃ ॥21॥
ಆ ಸೈನ್ಯದಲ್ಲಿ ಸಂಬಳವನ್ನು ಪಡೆಯದವನಾಗಲೀ, ಅಥವಾ ಕಾಲವನ್ನು ಮೀರಿ ಸಂಬಳವನ್ನು ಪಡೆಯುವವನಾಗಲೀ, ಕೇವಲ ರಾಜನ ಅನುಗ್ರಹಕ್ಕೆ ಪಾತ್ರ ಎಂಬ ಕಾರಣಕ್ಕೆ ಸೈನ್ಯವನ್ನು ಸೇರಿದವನಾಗಲೀ, ಪರಾಕ್ರಮವನ್ನು ತೋರಿಸದವನಾಗಲೀ ಯಾವನೂ ಇರಲಿಲ್ಲ.
ಏವಂ ಸುವಿಹಿತಾ ರಾಜನ್ ದ್ವಾರಕಾ ಭೂರಿದಕ್ಷಿಣೈಃ ।
ಆಹುಕೇನ ಸುಗುಪ್ತಾ ಚ ರಾಜ್ಞಾ ರಾಜೀವಲೋಚನ ॥22॥
ಎಲೈ ರಾಜನೇ! ರಾಜೀವಲೋಚನನೇ! ಹೀಗೆ ದ್ವಾರಕೆಯು ಬಹಳ ವಿತ್ತವನ್ನು ಪಡೆದ ಸೈನ್ಯದ ಸಹಾಯದಿಂದ ಆಹುಕರಾಜನಿಂದ ಚೆನ್ನಾಗಿ ಸಜ್ಜಾಗಿ ರಕ್ಷಿತವಾಗಿದ್ದಿತು.
ತತ್ರಾಪಯಾತ್ವಾ ರಾಜೇಂದ್ರ ಸಾಲ್ವಃ ಸೌಭಪತಿಸ್ತದಾ ।
ಪ್ರಭೂತನರನಾಗೇನ ಬಲೇನೋಪವಿವೇಶ ಹ ॥23॥
ಎಲೈ ರಾಜೇಂದ್ರನೇ! ಆಗ ಸೌಭಪತಿಯಾದ ಸಾಲ್ವನು ಅಲ್ಲಿಗೆ ಬಹಳವಾದ ಗಜ ಮತ್ತು ಪದಾತಿಗಳನ್ನು ಕರೆದುಕೊಂಡು ಹೋಗಿ ತನ್ನ ಸೈನ್ಯದ ಜೊತೆಯಲ್ಲಿ ನಗರ ಸಮೀಪದಲ್ಲಿ ಬೀಡುಬಿಟ್ಟನು.
ಸಮೇ ನಿವಿಷ್ಟಾ ಸಾ ಸೇನಾ ಪ್ರಭೂತಸಲಿಲಾಶಯೇ ।
ಚತುರಂಗಬಲೋಪೇತಾ ಸಾಲ್ವರಾಜಾಭಿರಕ್ಷಿತಾ ॥24॥
ಸಾಲ್ವರಾಜನಿಂದ ಚೆನ್ನಾಗಿ ರಕ್ಷಿತವಾದ ಚತುರಂಗಬಲವುಳ್ಳ ಆ ಸೈನ್ಯವು ಚೆನ್ನಾಗಿ ನೀರಿರುವ ಸಮತಟ್ಟಾದಸ್ಥಳದಲ್ಲಿ ಬೀಡುಬಿಟ್ಟಿತು.

ವರ್ಜಯಿತ್ವಾ ಶ್ಮಶಾನಾನಿ ದೇವತಾಯತನಾನಿ ಚ ।
ವಲ್ಮೀಕಾಂಶ್ಚೈವ ಚೈತ್ಯಾಂಶ್ಚ ಸನ್ನಿವಿಷ್ಟಮಭೂದ್ ಬಲಮ್ ॥25॥
ಸ್ಮಶಾನಗಳನ್ನು ದೇವಾಲಯಗಳನ್ನು ವಲ್ಮೀಕಗಳನ್ನು ಪೂಜಾವೃಕ್ಷಗಳನ್ನು ಬಿಟ್ಟು ಆ ಸೈನ್ಯವು ಬೀಡು ಬಿಟ್ಟಿತು.
ಅನೀಕಾನಾಂ ವಿಧಾನೇನ ಪಂಥಾನಃ ಸಂವೃತಾಭವನ್ ।
ಪ್ರವಣಾನಿ ಚ ಸರ್ವಾಣಿ ಸಾಲ್ವಸ್ಯ ಶಿಬಿರೇ ನೃಪ ॥26॥
ಎಲೈ ರಾಜನೇ! ಸಾಲ್ವನ ಶಿಬಿರದಲ್ಲಿ ಸೈನ್ಯದ ಪದ್ಧತಿಯಂತೆ ಮಾರ್ಗಗಳು ಮುಚ್ಚಲ್ಪಟ್ಟವು. ಮತ್ತು ಎಲ್ಲಾ ತಗ್ಗು ಪ್ರದೇಶಗಳು ಮುಚ್ಚಲ್ಪಟ್ಟವು.
ಸರ್ವಾಯುಧಸಮೋಪೇತಂ ಸರ್ವಶಸ್ತ್ರವಿಶಾರದಮ್ ।
ರಥನಾಗಾಶ್ವಕಲಿಲಂ ಪದಾತಿಧ್ವಜಸಂಕುಲಮ್ ॥27॥
ತುಷ್ಟಪುಷ್ಟಜನೋಪೇತಂ ವೀರಲಕ್ಷಣಲಕ್ಷಿತಮ್ ।
ವಿಚಿತ್ರಧ್ವಜಸನ್ನಾಹಂ ವಿಚಿತ್ರರಥಕಾರ್ಮುಕಮ್ ॥28॥
ಸನ್ನಿವೇಶ್ಯ ತು ಕೌರವ್ಯ ದ್ವಾರಕಾಯಾಂ ನರರ್ಷಭ ।
ಅಭಿಸಾರಯಾಮಾಸ ತದಾ ವೇಗೇನ ಪತಗೇಂದ್ರವತ್ ॥29॥
ಎಲೈ ನರಶ್ರೇಷ್ಠನೇ! ಸಾಲ್ವನು ಸರ್ವಾಯುಧಗಳಿಂದ ಕೂಡಿದ, ಸರ್ವಶಸ್ತ್ರಗಳಲ್ಲಿಯೂ ಪರಿಣತವಾದ, ರಥಗಜ ಅಶ್ವಗಳಿಂದ ತುಂಬಿದ, ಪದಾತಿಗಳು ಮತ್ತು ಧ್ವಜಗಳಿಂದ ನಿಬಿಡವಾದ, ಸಂತುಷ್ಟರಾದ ಪುಷ್ಟ ಸೈನಿಕರಿಂದ ಕೂಡಿದ, ವೀರರ ರಕ್ಷಣದಿಂದ ಯುಕ್ತವಾದ, ವಿಚಿತ್ರವಾದ ಧ್ವಜ ವಿಚಿತ್ರವಾದ ರಥ ವಿಚಿತ್ರವಾದ ಧನುಸ್ಸು ವಿಚಿತ್ರವಾದ ಸಲಕರಣೆಗಳು ಇವುಗಳಿಂದ ಕೂಡಿದ ಸೈನ್ಯವನ್ನು ದ್ವಾರಕೆಯ ಸುತ್ತಲೂ ಜಮಾಯಿಸಿ ಗರುಡನಂತೆ ವೇಗದಿಂದ ದ್ವಾರಕೆಯ ಕಡೆಗೆ ನಡೆಸಿದನು.
ತದಾಪತತ್ತು ಸಂದೃಶ್ಯ ಬಲಂ ಸಾಲ್ವಪತೇಸ್ತದಾ ।
ನಿರ್ಯಾಯ ಯೋಧಯಾಮಾಸುಃ ಕುಮಾರಾಃ ವೃಷ್ಣಿನಂದನಾಃ ॥30॥
ಆಗ ಆ ಸಾಲ್ವರಾಜನ ಆ ಸೈನ್ಯವು ಎರಗಿಬರುತ್ತಿರುವುದನ್ನು ನೋಡಿ ವೃಷ್ಣಿಕುಮಾರರು ಊರಿನಿಂದ ಹೊರಗೆ ಬಂದು ಯುದ್ಧವನ್ನು ಮಾಡಿದರು.
ಅಸಹಂತೋಽಭಿಯಾನಂ ತತ್ ಸಾಲ್ವರಾಜೇನ ಕೌರವ ।
ಚಾರುದೇಷ್ಣಶ್ಚ ಸಾಂಬಶ್ಚ ಪ್ರದ್ಯುಮ್ನಶ್ಚ ಮಹಾರಥಃ ॥31॥
ತೇ ರಥೈರ್ದಂಶಿತಾಃ ಸರ್ವೇ ವಿಚಿತ್ರಾಭರಣಧ್ವಜಾಃ ।
ಸಂಸಕ್ತಾಃ ಸಾಲ್ವರಾಜಸ್ಯ ಬಹುಭಿರ್ಯೋಧಪುಂಗವೈಃ ॥32॥
ಎಲೈ ಕೌರವನೇ! ಸಾಲ್ವರಾಜನ ಆ ಎರಗುವಿಕೆಯನ್ನು ಸಹಿಸದ ಮಹಾರಥರಾದ ಚಾರುದೇಷ್ಣ ಸಾಂಬ ಪ್ರದ್ಯುಮ್ನ ಮೊದಲಾದವರು

ವಿಚಿತ್ರ ಆಭರಣ ಮತ್ತು ಧ್ವಜಗಳುಳ್ಳ ರಥಗಳಿಂದ ಸನ್ನದ್ಧರಾಗಿ ಸಾಲ್ವರಾಜನ ಅನೇಕ ಯೋಧಶ್ರೇಷ್ಠರ ಜೊತೆಯಲ್ಲಿ ಯುದ್ಧದಲ್ಲಿ ತೊಡಗಿದರು.
ಗೃಹೀತ್ವಾ ತು ಧನುಃ ಸಾಂಬಃ ಸಾಲ್ವಸ್ಯ ಸಚಿವಂ ರಣೇ |
ಯೋಧಯಾಮಾಸ ಸಂಹೃಷ್ಟಃ ಕ್ಷೇಮಧೂರ್ತಿಂ ಚಮೂಪತಿಮ್ ॥33॥
ಸಾಂಬನು ಕೈಯಲ್ಲಿ ಧನುಸ್ಸನ್ನು ತೆಗೆದುಕೊಂಡು ಸಾಲ್ವನ ಸಚಿವನೂ ಮತ್ತು ಯುದ್ಧದಲ್ಲಿ ಸೇನಾಪತಿಯೂ ಆದ ಕ್ಷೇಮಧೂರ್ತಿಯ ಜೊತೆಯಲ್ಲಿ ಸಂತೋಷದಿಂದ ಯುದ್ಧಮಾಡಿದನು.
ತಸ್ಯ ಬಾಣಮಯಂ ವರ್ಷಂ ಜಾಂಬವತ್ಯಾಃ ಸುತೋ ಮಹತ್ |
ಮುಮೋಚ ಭರತಶ್ರೇಷ್ಠ ಯಥಾ ವರ್ಷಂ ಸಹಸ್ರದೃಕ್ ॥34॥
ಎಲೈ ಭರತಶ್ರೇಷ್ಠನೇ! ಜಾಂಬವತಿಯ ಸುತನಾದ ಸಾಂಬನು ಇಂದ್ರನು ಮಳೆಯನ್ನು ಸುರಿಸಿದಂತೆ ಕ್ಷೇಮಧೂರ್ತಿಯ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತದ್ಬಾಣವರ್ಷಂ ತುಮುಲಂ ವಿಷೇಹೇ ಸ ಚಮೂಪತಿಃ |
ಕ್ಷೇಮಧೂರ್ತಿರ್ಮಹಾರಾಜ ಹಿಮವಾನಿವ ನಿಶ್ಚಲಃ ॥35॥
ಎಲೈ ಮಹಾರಾಜನೇ! ಸೇನಾಪತಿಯಾದ ಆ ಕ್ಷೇಮಧೂರ್ತಿಯು ಅಚಲನಾಗಿ ಹಿಮಾಲಯದಂತೆ ಬಾಣಗಳ ಮಳೆಯನ್ನು ಸಹಿಸಿದನು.

ತತಃ ಸಾಂಬಾಯ ರಾಜೇಂದ್ರ ಕ್ಷೇಮಧೂರ್ತಿರಪಿ ಸ್ಮ ಹ |
ಮುಮೋಚ ಮಾಯಾವಿಹಿತಂ ಶರಜಾಲಂ ಮಹತ್ತರಮ್ ॥36॥
ಎಲೈ ರಾಜೇಂದ್ರನೇ! ಅನಂತರ ಕ್ಷೇಮಧೂರ್ತಿಯೂ ಸಹ ಮಾಯಾಯುಕ್ತವಾದ ಬಾಣಗಳ ದೊಡ್ಡ ಸಮೂಹವನ್ನು ಸಾಂಬನ ಮೇಲೆ ಪ್ರಯೋಗಿಸಿದನು.
ತತೋ ಮಾಯಾಮಯಂ ಜಾಲಂ ಮಾಯಯೈವ ವಿದಾರ್ಯ ಸಃ |
ಸಾಂಬಃ ಶರಸಹಸ್ರೇಣ ರಥಮಸ್ಯಾಭ್ಯವರ್ಷತ ॥37॥
ಆಗ ಸಾಂಬನು ಕ್ಷೇಮಧೂರ್ತಿಯ ಮಾಯಾಮಯವಾದ ಬಾಣಗಳ ಸಮೂಹವನ್ನು ಮಾಯೆಯಿಂದಲೇ ನಾಶಮಾಡಿ ಅವನ ರಥದ ಮೇಲೆ ಸಹಸ್ರಬಾಣಗಳ ಮಳೆಯನ್ನು ಕರೆದನು.
ತತಃ ಸ ವಿದ್ಧಃ ಸಾಂಬೇನ ಕ್ಷೇಮಧೂರ್ತಿಶ್ಚಮೂಪತಿಃ |
ಅಪಾಯಾಜ್ಜವನೈರಶ್ವೈಃ ಸಾಂಬಬಾಣಪ್ರಪೀಡಿತಃ ॥38॥
ಆಗ ಸಾಂಬನ ಪ್ರಹಾರಕ್ಕೆ ಸಿಕ್ಕಿ ಬಾಣಗಳಿಂದ ಚೆನ್ನಾಗಿ ಪೀಡಿಸಲ್ಪಟ್ಟ ಸೇನಾಪತಿಯಾದ ಕ್ಷೇಮಧೂರ್ತಿಯು ರಣರಂಗವನ್ನು ಬಿಟ್ಟು ವೇಗವಾದ ಅಶ್ವಗಳಿಂದ ಹೊರಗೆ ಹೋದನು.
ತಸ್ಮಿನ್ ವಿಪ್ರದ್ರುತೇ ಶೂರೇ ಸಾಲ್ವಸ್ಯಾಥ ಚಮೂಪತೌ |
ವೇಗವಾನ್ ನಾಮ ದೈತೇಯಃ ಸುತಂ ಮೇಽಭ್ಯದ್ರವದ್ ಬಲೀ ॥39॥
ಶೂರನಾದ ಸಾಲ್ವನ ಸೇನಾಪತಿಯು ಯುದ್ಧಭೂಮಿಯಿಂದ ಓಡಿಹೋಗುತ್ತಿರಲು ವೇಗವಾನ್ ಎಂಬ ಬಲಿಷ್ಠನಾದ ಇನ್ನೊಬ್ಬ ದೈತ್ಯನು ನನ್ನ ಪುತ್ರನ ಕಡೆಗೆ ಧಾವಿಸಿದನು.
ಅಭಿದ್ರುತಸ್ಯ ರಾಜೇಂದ್ರ ಸಾಂಬೋ ವೃಷ್ಣಿಕುಲೋದ್ವಹಃ |
ವೇಗಂ ವೇಗವತೋ ರಾಜನ್ ತಸ್ಥೌ ವೀರೋ ವಿಧಾರಯನ್ ॥40॥
ಎಲೈ ರಾಜೇಂದ್ರನೇ! ವೃಷ್ಣಿಕುಲೋದ್ಭವನಾದ ವೀರನಾದ ಸಾಂಬನು ಹಾಗೆ ಓಡಿಬಂದ ವೇಗವಂತನ ವೇಗವನ್ನು ಸಹಿಸಿತಡೆದನು.
ಸ ವೇಗವತಿ ಕೌಂತೇಯ ಸಾಂಬೋ ವೇಗವತೀಂ ಗದಾಮ್ |
ಚಿಕ್ಷೇಪ ತರಸಾ ವೀರೋ ವ್ಯಾವಿದ್ಧ್ಯ ಸತ್ಯವಿಕ್ರಮಃ ॥41॥
ಕೌಂತೇಯನೇ! ಸತ್ಯವಿಕ್ರಮನಾದ ವೀರನಾದ ಸಾಂಬನು ವೇಗವಂತನ ಮೇಲೆ ವೇಗವುಳ್ಳ ತನ್ನ ಗದೆಯನ್ನು ಎಸೆದು ಅವನಿಗೆ ಹೊಡೆದನು.
ತಯಾ ತ್ವಭಿಹತೋ ರಾಜನ್ ವೇಗವಾನ್ ನ್ಯಪತದ್ ಭುವಿ |
ವಾತರುಗ್ಣ ಇವ ಕ್ಷುಣ್ಣಃ ಶೀರ್ಣಮೂಲೋ ವನಸ್ಪತಿಃ ॥42॥
ಎಲೈ ರಾಜನೇ! ಗದೆಯಿಂದ ತಾಡಿತನಾದ ವೇಗವಂತನು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಬೇರನ್ನು ಕಡಿದುಕೊಂಡು ಪುಡಿಪುಡಿಯಾಗಿ ಬಿದ್ದ ವೃಕ್ಷದಂತೆ ಭೂಮಿಯ ಮೇಲೆ ಬಿದ್ದನು.
ತಸ್ಮಿನ್ ನಿಪತಿತೇ ವೀರೇ ಗದಯಾ ದಾನವಾಧಮೇ |
ಪ್ರವಿಶ್ಯ ಮಹತೀಂ ಸೇನಾಂ ಯೋಧಯಾಮಾಸ ಮೇ ಸುತಃ ॥43॥
ಆ ದಾನವಾಧಮನಾದ ವೀರನು ನನ್ನ ಪುತ್ರನಿಂದ ಗದೆಯಿಂದ ಬೀಳಿಸಲ್ಪಟ್ಟ ಮೇಲೆ ನನ್ನ ಪುತ್ರನು ಸಾಲ್ವನ ದೊಡ್ಡ ಸೈನ್ಯವನ್ನು ಪ್ರವೇಶಿಸಿ ಯುದ್ಧವನ್ನು ಮಾಡಿದನು.
ಚಾರುದೇಷ್ಣೇನ ಸಂಸಕ್ತೋ ವಿವಿಂಧ್ಯೋ ನಾಮ ದಾನವಃ |
ಮಹಾರಥಃ ಸಮಾಜ್ಞಾತೋ ಮಹಾರಾಜ ಮಹಾಧನುಃ ॥44॥
ಎಲೈ ಮಹಾರಾಜನೇ! ಚಾರುದೇಷ್ಣನ ಜೊತೆಯಲ್ಲಿ ವಿವಿಂಧ್ಯ ಎಂಬ ದಾನವನು ಯುದ್ಧಮಾಡಿದನು ಅವನು ಮಹಾರಥನೂ ಮಹಾಧನುಸ್ಸುಳ್ಳವನೂ ಆಗಿದ್ದನು.
ತತಃ ಸುತುಮುಲಂ ಯುದ್ಧಂ ಚಾರುದೇಷ್ಣವಿವಿಂಧ್ಯಯೋಃ |

ವೃತ್ರವಾಸವಯೋ ರಾಜನ್ ಯಥಾಪೂರ್ವಂ ತಥಾऽಭವತ್ ॥45॥
ಎಲೈ ರಾಜನೇ! ಅನಂತರ ಚಾರುದೇಷ್ಣ ಮತ್ತು ವಿವಿಂಧ್ಯರಿಗೆ ಹಿಂದೆ ವೃತ್ರ ಮತ್ತು ಇಂದ್ರನಿಗೆ ನಡೆದ ದೊಡ್ಡಯುದ್ಧದಂತೆ ಘೋರವಾದ ಯುದ್ಧವು ನಡೆಯಿತು.
ಅನ್ಯೋನ್ಯಸ್ಯಾಭಿಸಂಕ್ರುದ್ಧಾವನ್ಯೋನ್ಯಂ ಜಘ್ನತುಃ ಶರೈಃ |
ವಿನದಂತೌ ಮಹಾರಾಜ ಸಿಂಹಾವಿವ ಮಹಾಬಲೌ ॥46॥
ಎಲೈ ಮಹಾರಾಜನೇ! ಅವರು ಪರಸ್ಪರವಾಗಿ ಸಂಕ್ರುದ್ಧರಾಗಿ ಮಹಾಬಲವುಳ್ಳ ಸಿಂಹಗಳಂತೆ ಗರ್ಜನೆಯನ್ನು ಮಾಡುತ್ತಾ ಒಬ್ಬರನ್ನೊಬ್ಬರು ಬಾಣಗಳಿಂದ ಹೊಡೆದರು.
ರೌಗ್ಮಿಣೇಯಸ್ತತೋ ಬಾಣಮಗ್ನ್ಯರ್ಕೋಪಮವರ್ಚಸಮ್ |
ಅಭಿಮಂತ್ರ್ಯ ಮಹಾಸ್ತ್ರೇಣ ಸಂದಧೇ ಶತ್ರುನಾಶನಮ್ ॥47॥
ಆಗ ರುಗ್ಮಿಣಿಯ ಪುತ್ರನಾದ ಚಾರುದೇಷ್ಣನು ಅಗ್ನಿ ಮತ್ತು ಸೂರ್ಯನಂತೆ ಪ್ರಕಾಶವುಳ್ಳ ಬಾಣವನ್ನು ಮಹಾಸ್ತ್ರದಿಂದ ಅಭಿಮಂತ್ರಿಸಿ ಶತ್ರುನಾಶವನ್ನು ಮಾಡಲು ಆ ಬಾಣವನ್ನು ಹೂಡಿದನು.
ಸ ವಿವಿಂಧ್ಯಾಯ ಸಕ್ರೋಧಃ ಸಮಾಹೂಯ ಮಹಾರಥಃ |
ಚಿಕ್ಷೇಪ ಮೇ ಸುತೋ ರಾಜನ್ ಸ ಗತಾಸುರವಾಪತತ್ ॥48॥
ರಾಜನೇ! ಮಹಾರಥನಾದ ನನ್ನ ಪುತ್ರನು ಕ್ರೋಧದಿಂದ ವಿವಿಂಧ್ಯವನ್ನು ಆಹ್ವಾನಿಸಿ ಅವನ ಮೇಲೆ ಆ ಬಾಣಪ್ರಯೋಗವನ್ನು ಮಾಡಿದನು. ವಿವಿಂಧ್ಯನು ಪ್ರಾಣವನ್ನು ಕಳೆದುಕೊಂಡು ನೆಲಕ್ಕೆ ಉರುಳಿದನು.
ವಿವಿಂಧ್ಯಂ ನಿಹತಂ ದೃಷ್ಟ್ವಾ ತಾಂ ಚ ವಿಕ್ಷೋಭಿತಾಂ ಚಮೂಮ್ |
ಕಾಮಗೇನ ಸ ಸೌಭೇನ ಸಾಲ್ವಃ ಪುನರುಪಾಗಮತ್ ॥49॥
ವಿವಿಂಧ್ಯನು ಹತವಾದುದನ್ನು ಮತ್ತು ತನ್ನ ಸೈನ್ಯವು ಚದುರಿಹೋದುದನ್ನು ನೋಡಿದ ಸಾಲ್ವನು ಕಾಮಗಾಮಿಯಾದ ತನ್ನ ವಿಮಾನದಲ್ಲಿ ಪುನಃ ಸಮೀಪದಲ್ಲಿ ಯುದ್ಧವನ್ನು ಮಾಡಲು ಬಂದನು.
ತತೋ ವ್ಯಾಕುಲಿತಂ ಸರ್ವಂ ದ್ವಾರಕಾವಾಸಿತಂ ಬಲಮ್ |
ದೃಷ್ಟ್ವಾ ಸಾಲ್ವಂ ಮಹಾಬಾಹೋ ಸೌಭಸ್ಥಂ ಭೂಪತಿಂ ತದಾ ॥50॥
ಎಲೈ ಮಹಾಬಾಹುವೇ! ಆಗ ದ್ವಾರಕಾವಾಸಿಯಾದ ಸೈನ್ಯವೆಲ್ಲವೂ ವಿಮಾನದಲ್ಲಿದ್ದ ಸಾಲ್ವರಾಜನನ್ನು ನೋಡಿ ವ್ಯಾಕುಲಕ್ಕೆ ಒಳಗಾಯಿತು.
ತತೋ ನಿರ್ಯಾಯ ಕೌಂತೇಯ ವ್ಯವಸ್ಥಾಪ್ಯ ಚ ತದ್ಬಲಮ್ |
ಆನಾರ್ತಾನಾಂ ಮಹಾರಾಜ ಪ್ರದ್ಯುಮ್ನೋ ವಾಕ್ಯಮಬ್ರವೀತ್ ॥51॥
ಎಲೈ ಕೌಂತೇಯನೇ! ಮಹಾರಾಜನೇ! ಆಗ ಪ್ರದ್ಯುಮ್ನನು ದ್ವಾರಕಾಪಟ್ಟಣದ ಆ ಸೈನ್ಯವನ್ನು ಸಮಾಧಾನಗೊಳಿಸಿ ನಿಲ್ಲಿಸಿ ಹೊರಗೆ ಬಂದು ಮಾತನಾಡಿದನು.
ಸರ್ವೇ ಭವಂತಸ್ತಿಷ್ಠಂತು ಸರ್ವೇ ಪಶ್ಯಂತು ಮಾಂ ಯುಧಿ |
ನಿವಾರಯಂತಂ ಸಂಗ್ರಾಮೇ ಬಲಾತ್ ಸೌಭಂ ಸರಾಜಕಮ್ ॥52॥
ನೀವೆಲ್ಲರೂ ಸುಮ್ಮನಿದ್ದು ನಾನು ಯುದ್ಧಮಾಡುವುದನ್ನು ನೋಡಿ. ನಾನು ಯುದ್ಧದಲ್ಲಿ ಸಾಲ್ವನನ್ನು ಮತ್ತು ಅವನ ವಿಮಾನವನ್ನು ತಡೆಯುತ್ತೇನೆ.
ಅಯಂ ಸೌಭಪತೇಃ ಸೇನಾಮಾಯಸೈರ್ಭುಜಗೋಪಮೈಃ |
ಧನುರ್ಮುಕ್ತೈಶ್ಚ ನಾರಾಚೈರ್ನಾಶಯಾಮ್ಯದ್ಯ ಯಾದವಾಃ ॥53॥
ಎಲೈ ಯಾದವರೇ! ನಾನು ಈ ದಿನ ಸರ್ಪದಂತೆ ಇರುವ ಕಬ್ಬಿಣದಿಂದ ನಿರ್ಮಿತವಾದ ಬಾಣಗಳನ್ನು ನನ್ನ ಧನುಸ್ಸಿನಿಂದ ಪ್ರಯೋಗಿಸಿ ಸೌಭಪತಿಯ ಸೈನ್ಯವನ್ನು ನಾಶಮಾಡುತ್ತೇನೆ.
ಆಶ್ವಸಧ್ವಂ ನ ಭೀಃ ಕಾರ್ಯಾ ಸೌಭರಾಡದ್ಯ ನಶ್ಯತಿ |
ಮಯಾऽಭಿಪನ್ನೋ ದುಷ್ಟಾತ್ಮಾ ಸಸೌಭಃ ಸಪದಾನುಗಃ ॥54॥
ನನ್ನನ್ನು ಸಂಧಿಸಿದ ದುಷ್ಟನಾದ ಸಾಲ್ವನು ತನ್ನ ಸೈನ್ಯ ಮತ್ತು ಪದಾತಿಗಳ ಜೊತೆಯಲ್ಲಿ ಈ ದಿನ ವಿನಾಶವನ್ನು ಹೊಂದುತ್ತಾನೆ. ನೀವು ಸಮಾಧಾನದಿಂದಿರಿ.
ಏವಂ ಬ್ರುವತಿ ಸಂಹೃಷ್ಟೇ ಪ್ರದ್ಯುಮ್ನೇ ಪಾಂಡುನಂದನ |
ವಿಷ್ಠಿತಂ ತದ್ಬಲಂ ದ್ವಾರಿ ಯುಯುಧೇ ಚ ಯಥಾಸುಖಮ್ ॥55॥
ಪಾಂಡವನಂದನನೇ! ಪ್ರದ್ಯುಮ್ನನು ಹೀಗೆ ಹೇಳುತ್ತಿರಲು ಆ ಸೈನ್ಯವು ದ್ವಾರದಲ್ಲಿಯೇ ನಿಂತು ಅನಾಯಾಸವಾಗಿ ಯುದ್ಧವನ್ನು ಮಾಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರ್ದಶೋऽಧ್ಯಾಯಃ ॥
॥ ಕೈರಾತಪರ್ವಣಿ ಚತುರ್ಥೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಹದಿನೈದನೆಯ ಅಧ್ಯಾಯ
(ಕೃಷ್ಣನಿಂದ ಪ್ರದ್ಯುಮ್ನ ಮತ್ತು ಸಾಲ್ವರ ಯುದ್ಧದ ವರ್ಣನೆ.)
ಶ್ರೀಭಗವಾನ್

ಏವಮುಕತ್ವ ರೌಗ್ಮಿಣೇಯೋ ಯಾದವಾನ್ ಯಾದವರ್ಷಭಃ |
ದಂಶಿತೈರ್ಹರಿಭಿರ್ಯುಕ್ತಂ ರಥಮಾಸ್ಥಾಯ ಕಾಂಚನಮ್ ॥1॥
ಉಚ್ಛ್ರಿತ್ಯ ಮಕರಂ ಕೇತುಂ ವ್ಯಾತ್ತಾನನಮಲಂಕೃತಮ್ |
ಉತ್ಪತದ್ಭಿರಿವಾಕಾಶಂ ಹಯೈರಭ್ಯಪತತ್ ಪರಾನ್ ॥2॥
ಯಾದವಶ್ರೇಷ್ಠನಾದ ರುಗ್ಮಿಣಿಯ ಮಗನಾದ ಪ್ರದ್ಯುಮ್ನನು ಯಾದವರನ್ನು ಕುರಿತು ಹೀಗೆ ಹೇಳಿ ಸಜ್ಜಾದ ಅಶ್ವಗಳನ್ನು ಹೂಡಿದ ಸುವರ್ಣಮಯವಾದ ರಥದಲ್ಲಿ ಕುಳಿತು ಬಾಯಿಯನ್ನು  ದೊಡ್ಡದಾಗಿ ತೆರೆದ ಅಲಂಕೃತವಾದ ತನ್ನ ಮಕರಧ್ವಜವನ್ನು  ಮೇಲೆತ್ತಿ ಆಕಾಶಕ್ಕೆ ಹಾರುವಂತಿರುವ ಅಶ್ವಗಳಿಂದ ಶತ್ರುಗಳ ಕಡೆಗೆ ಧಾವಿಸಿದನು.
ವಿಕ್ಷಿಪನ್ನಾದದಾನಶ್ಚ ಧನುರ್ಜ್ಯಾಮಾಕ್ಷಿಪನ್ ಮುಹುಃ |
ತೂಣಖಡ್ಗಧರಃ ಶೂರೋ ಬದ್ಧಗೋಧಾಂಗುಲಿತ್ರವಾನ್ ॥3॥
ಸವಿದ್ಯುಚ್ಚಪಲಂ ಚಾಪಂ ವಿಚರನ್ ವೈ ತಳಾತ್ ತಳಮ್ |
ಮೋಹಯಾಮಾಸ ದೈತೇಯಾನ್ ಸರ್ವಾನ್ ಸೌಭನಿವಾಸಿನಃ ॥4॥
ಬಾಣವನ್ನು ಪ್ರಯೋಗಮಾಡುತ್ತಾ ಬತ್ತಳಿಕೆಯಿಂದ  ಬಾಣವನ್ನು ತೆಗೆದು ಕೊಳ್ಳುತ್ತಾ ಮತ್ತೆ ಮತ್ತೆ ಧನುಸ್ಸಿನ ಹೆದೆಯನ್ನು ಹಿಂದಕ್ಕೆ ಎಳೆಯುತ್ತಾ ಬತ್ತಳಿಕೆಯನ್ನೂ ಖಡ್ಗವನ್ನೂ ಹಸ್ತ ರಕ್ಷಣೆಯ ಕವಚವನ್ನೂ  ಧರಿಸಿದ ಶೂರನಾದ ಅವನು ಮಿಂಚಿನಂತೆ ಚಂಚಲವಾದ ತನ್ನ ಧನುಸ್ಸನ್ನು ಒಂದು ಕೈಯಿಂದ ಒಂದು ಕೈಗೆ ಬದಲಾಯಿಸುತ್ತಾ ಸೌಭನಿವಾಸಿಗಳಾದ ಎಲ್ಲ ದೈತ್ಯರನ್ನೂ ಮೋಹಗೊಳಿಸಿದನು.
ಅಸ್ಯ ವಿಕ್ಷಿಪತಶ್ಚಾಪಂ ಸಂದಧಾನಸ್ಯ ಚಾಸಕೃತ್ |
ನಾಂತರಂ ದದೃಶೇ ಕಶ್ಚಿನ್ನಿಘ್ನತಃ ಶಾತ್ರವಾನ್ ರಣೇ ॥5॥
ಅವನು ಪುನಃಪುನಃ ಬಾಣವನ್ನು ಪ್ರಯೋಗಿಸುವುದಕ್ಕೂ ಮತ್ತು ಬಾಣವನ್ನು ಹೂಡುವುದಕ್ಕೂ ಮತ್ತು ಶತ್ರುಗಳನ್ನು ಪ್ರಹಾರಮಾಡುವುದಕ್ಕೂ ಮಧ್ಯೆ ಯುದ್ಧದಲ್ಲಿ ಯಾವ ಅಂತರವೂ ಕಾಣುತ್ತಿರಲಿಲ್ಲ.
ಮುಖಸ್ಯ ವರ್ಣೋ ನ ವಿಕಂಪತೇಽಸ್ಯ
ಚೇಲುಶ್ಚ ಗಾತ್ರಾಣಿ ನ ಚಾಪಿ ತಸ್ಯ |
ಸಿಂಹೋನ್ನತಂ ಚಾಪ್ಯಭಿಗರ್ಜತೋಽಸ್ಯ
ಶುಶ್ರಾವ ಲೋಕೋಽದ್ಭುತವೀರ್ಯಮಗ್ರ್ಯಮ್ ॥6॥
ಅವನ ಮುಖದಲ್ಲಿ ವರ್ಣವ್ಯತ್ಯಾಸವಾಗಲಿಲ್ಲ. ಅವನ ದೇಹದಲ್ಲಿ ಕಂಪವುಂಟಾಗಲಿಲ್ಲ. ಸಿಂಹದಂತೆ ಎತ್ತರದ ಧ್ವನಿಯಲ್ಲಿ ಗರ್ಜನೆಯನ್ನುಮಾಡುವ ಅವನ ಶ್ರೇಷ್ಠವಾದ ಮತ್ತು ಅದ್ಭುತವಾದ ಸಾಮರ್ಥ್ಯವನ್ನು ಎಲ್ಲರೂ ನೋಡಿದರು.
ಜಲೇಚರಃ ಕಾಂಚನಯಷ್ಟಿಸಂಸ್ಥೋ
ವ್ಯಾತ್ತಾನನಃ ಶತ್ರುಬಲಪ್ರಮಾಥೀ |
ವ್ಯತ್ರಾಸಯದ್ ದಾನವರಾಜಮುಖ್ಯಾನ್
ಸಾಲ್ವಸ್ಯ ಸೇನಾಪ್ರಮುಖೇ ಧ್ವಜಾಗ್ರ್ಯಃ ॥7॥
ಸುವರ್ಣಮಯವಾದ ಧ್ವಜಸ್ತಂಭದಲ್ಲಿ ಇದ್ದ ಮಕರವು ಬಾಯಿಯನ್ನು ತೆರೆದು ಶತ್ರುಗಳ ಸೈನ್ಯವನ್ನು ಕಲಕುತ್ತಾ ಸಾಲ್ವನ ಸೈನ್ಯದ ಮುಂಬಾಗದಲ್ಲಿ ಇದ್ದ ದಾನವೇಂದ್ರಶ್ರೇಷ್ಠರಿಗೆ ಭಯವನ್ನು ಉಂಟುಮಾಡಿತು.
ತತಸ್ತೂರ್ಣಂ ವಿನಿಷ್ಪತ್ಯ ಪ್ರದ್ಯುಮ್ನಃ ಶತ್ರುಕರ್ಶನಃ |
ಸಾಲ್ವಮೇವಾಭಿದುದ್ರಾವ ನಿವಾರ್ಯಾರಿಬಲಂ ರುಷಾ ॥8॥
ಆಗ ಶತ್ರುಗಳನ್ನು ಹಿಂಸಿಸುವ ಪ್ರದ್ಯುಮ್ನನು ವೇಗವಾಗಿ ನುಗ್ಗಿ ಸಿಟ್ಟಿನಿಂದ ಉಳಿದ ಶತ್ರುಸೈನ್ಯವನ್ನು ನಿವಾರಿಸಿ ಸಾಲ್ವನ ಕಡೆಗೆ ವೇಗದಿಂದ ಓಡಿದನು.
ಅಭಿಯಾನಂ ತು ವೀರೇಣ ಪ್ರದ್ಯುಮ್ನೇನ ಮಹಾಹವೇ |
ನಾಮರ್ಷಯತ ಸಂಕ್ರುದ್ಧಃ ಸಾಲ್ವಃ ಸೌಭಪತಿಸ್ತಥಾ ॥9॥
ಆ ಮಹಾಯುದ್ಧದಲ್ಲಿ ವೀರನಾದ ಪ್ರದ್ಯುಮ್ನನು ತನ್ನ ಮೇಲೆ ಎರಗುತ್ತಿರುವುದನ್ನು ನೋಡಿ ಸೌಭಪತಿಯಾದ ಸಾಲ್ವನು ಸಂಕ್ರುದ್ಧನಾಗಿ ಅದನ್ನು ಸಹಿಸಲಿಲ್ಲ.
ಸ ರೋಷಮದಮತ್ತೋ ವೈ ಕಾಮಗಾದವರುಹ್ಯ ಚ |
ಪ್ರದ್ಯುಮ್ನಂ ಯೋಧಯಾಮಾಸ ಸಾಲ್ವಃ ಪರಪುರಂಜಯಃ ॥10॥
ರೋಷದಿಂದಲೂ ಮತ್ತು ಮದದಿಂದಲೂ ಮತ್ತನಾದ ಶತ್ರುಗಳ ಪಟ್ಟಣವನ್ನು ಗೆಲ್ಲುವ ಸಾಲ್ವನು ತನ್ನ ಕಾಮಗಾಮಿಯಾದ ವಿಮಾನದಿಂದ ಇಳಿದು ಪ್ರದ್ಯುಮ್ನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತಯೋಃ ಸುತುಮುಲಂ ಯುದ್ಧಂ ಸಾಲ್ವವೃಷ್ಣಿಪ್ರವೀರಯೋಃ |
ಸಮೇತಾ ದದೃಶುರ್ಲೋಕಾ ವೃತ್ರವಾಸವಯೋರಿವ ॥11॥
ಸಾಲ್ವನಿಗೂ ಮತ್ತು ವೃಷ್ಣಿವೀರನಾದ ಪ್ರದ್ಯುಮ್ನನಿಗೂ ನಡೆದ ಘೋರವಾದ ಯುದ್ಧವನ್ನು ವೃತ್ರ ಮತ್ತು ಇಂದ್ರರ ಯುದ್ಧವನ್ನು ನೋಡಿದಂತೆ ಎಲ್ಲ ಜನರೂ ಸೇರಿ ನೋಡಿದರು.
ತಸ್ಯ ಮಾಯಾಮಯೋ ವೀರ ರಥೋ ಹೇಮಪರಿಷ್ಕೃತಃ |
ಸಧ್ವಜಃ ಸಪತಾಕಶ್ಚ ಸಾನುಕರ್ಷಃ ಸತೂಣವಾನ್ ॥12॥
ಎಲೈ ವೀರನೇ! ಸಾಲ್ವನ ರಥವು ಮಾಯಾಮಯವೂ  ಸುವರ್ಣಾಲಂಕೃತವೂ ಧ್ವಜ ಪತಾಕ ಅನುಕರ್ಷ ಮತ್ತು ಬತ್ತಳಿಕೆಗಳಿಂದ

ಸುಸಜ್ಜಿತವಾಗಿಯೂ ಇದ್ದಿತು.
ಸ ತಂ ರಥವರಂ ಶ್ರೀಮಾನ್ ಸಮಾರುಹ್ಯ ಕಿಲ ಪ್ರಭೋ |
ಮುಮೋಚ ಬಾಣಾನ್ ಕೌರವ್ಯ ಪ್ರದ್ಯುಮ್ನಾಯ ಮಹಾಬಲಃ ||13||
ಎಲೈ ಕೌರವ್ಯನೇ! ಮಹಾಬಲನಾದ ಕಾಂತಿಯುಕ್ತನಾದ ಆ ಸಾಲ್ವನು ಅಂತಹ ಶ್ರೇಷ್ಠವಾದ ರಥವನ್ನು ಏರಿ ಪ್ರದ್ಯುಮ್ನನ ಮೇಲೆ ಬಾಣಗಳನ್ನು ಪ್ರಯೋಗಿಸಿದನು.
ತತೋ ಬಾಣಮಯಂ ವರ್ಷಂ ವ್ಯಸೃಜತ್ ತರಸಾ ರಣೇ |
ಪ್ರದ್ಯುಮ್ನೋ ಭುಜವೇಗೇನ ಸಾಲ್ವಂ ಸಮ್ಮೋಹಯನ್ನಿವ ||14||
ಆಗ ಪ್ರದ್ಯುಮ್ನನು ಯುದ್ಧದಲ್ಲಿ ಸಾಲ್ವನನ್ನು ಸಂಮೋಹಿಸುವವನಂತೆ ಬಾಣಮಯವಾದ ಮಳೆಯನ್ನು ತನ್ನ ಭುಜಬಲದಿಂದ ಅವನ ಮೇಲೆ ಶೀಘ್ರವಾಗಿ ಕರೆದನು.
ಸ ತೈರಭಿಹತಃ ಸಂಖೇ ನಾಮರ್ಷಯತ ಸೌಭರಾಟ್ |
ಶರಾನ್ ದೀಪ್ತಾಗ್ನಿಸಂಕಾಶಾನ್ ಮುಮೋಚ ತನಯೇ ಮಮ ||15||
ಯುದ್ಧದಲ್ಲಿ ಆ ಬಾಣಗಳಿಂದ ಹೊಡೆಯಲ್ಪಟ್ಟ ಆ ಸೌಭಪತಿಯು ಅದನ್ನು ಸಹಿಸಲಿಲ್ಲ. ಜ್ವಲಿಸುತ್ತಿರುವ ಅಗ್ನಿಯಂತಿರುವ ಬಾಣಗಳನ್ನು ನನ್ನ ತನಯನ ಮೇಲೆ ಪ್ರಯೋಗಿಸಿದನು.
ಸ ಸಾಲ್ವಬಾಣೈ ರಾಜೇಂದ್ರ ವಿದ್ಧೋ ರುಗ್ಮಿಣಿನಂದನಃ |
ಮುಮೋಚ ಬಾಣಂ ತ್ವರಿತೋ ಮರ್ಮಭೇದಿನಮಾಹವೇ ||16||
ರಾಜೇಂದ್ರನೇ! ಸಾಲ್ವಬಾಣಗಳಿಂದ ಪೀಡಿತನಾದ ರುಗ್ಮಿಣಿನಂದನನು ಶೀಘ್ರವಾಗಿ ಅವನ ಮೇಲೆ ಮರ್ಮಭೇದಿಯಾದ ಬಾಣವನ್ನು ಪ್ರಯೋಗಿಸಿದನು.
ತಸ್ಯ ಮರ್ಮ ವಿಭಿದ್ಯಾಶು ಸ ಬಾಣೋ ಮತ್ಸುತೇರಿತಃ |
ವಿವೇಶ ಹೃದಯಂ ಪತ್ರೀ ಸ ಪಪಾತ ಭೃಶಾಹತಃ ||17||
ನನ್ನ ಪುತ್ರನಿಂದ ಪ್ರಯೋಗಿಸಲ್ಪಟ್ಟ ಆ ಬಾಣವು ಅವನ ಮರ್ಮವನ್ನು ಭೇದಿಸಿ ಹೃದಯವನ್ನು ಪ್ರವೇಶಿಸಿತು. ಆ ಬಾಣದಿಂದ (ಬಹಳ ಏಟನ್ನು ತಿಂದ) ಸಾಲ್ವನು ಭೂಮಿಯ ಮೇಲೆ ಬಿದ್ದನು.
ತಸ್ಮಿನ್ ನಿಪತಿತೇ ವೀರೇ ಸಾಲ್ವರಾಜೇ ವಿಚೇತಸಿ |
ಸಂಪ್ರಾದ್ರವನ್ ದಾನವೇಂದ್ರಾ ದಾರಯಂತೋ ವಸುಂಧರಾಮ್ ||18||
ಆ ವೀರನಾದ ಸಾಲ್ವರಾಜನು ಪ್ರಜ್ಞೆಯನ್ನು ಕಳೆದುಕೊಂಡು ಭೂಮಿಯ ಮೇಲೆ ಬೀಳುತ್ತಿರಲು ಅವನ ಸೈನ್ಯದ ದಾನವೇಂದ್ರರು (ತಮ್ಮ ಭಾರದಿಂದ) ಭೂಮಿಯನ್ನು ಸೀಳುವಂತೆ ಓಡಿ ಹೋದರು.
ಹಾಹಾಕೃತಮಭೂತ್ ಸೈನ್ಯಂ ಸಾಲ್ವಸ್ಯ ಪೃಥಿವೀಪತೇ |
ನಷ್ಟಸಂಜ್ಞೇ ನಿಪತಿತೇ ತದಾ ಸೌಭಪತೌ ನೃಪೇ ||19||
ಎಲೈ ರಾಜನೇ! ಸೌಭಪತಿಯಾದ ಸಾಲ್ವನು ಮೂರ್ಛಾಕ್ರಾಂತನಾಗಿ ಬೀಳುತ್ತಿರಲು ಅವನ ಸೈನ್ಯದಲ್ಲಿ ಹಾಹಾಕಾರ ಉಂಟಾಯಿತು.
ತತ ಉತ್ಥಾಯ ರಾಜೇಂದ್ರ ಪ್ರತಿಲಭ್ಯ ಚ ಚೇತನಾಮ್ |
ಮುಮೋಚ ಬಾಣಂ ತರಸಾ ಪ್ರದ್ಯುಮ್ನಾಯ ಮಹಾಬಲಃ ||20||
ರಾಜೇಂದ್ರನೇ! ಅನಂತರ ಮಹಾಬಲನಾದ ಸಾಲ್ವನು ಪ್ರಜ್ಞೆಯನ್ನು ಮರಳಿಪಡೆದು ಮೇಲೆದ್ದು ಶೀಘ್ರವಾಗಿ ಪ್ರದ್ಯುಮ್ನನ ಮೇಲೆ ಬಾಣಪ್ರಯೋಗವನ್ನು ಮಾಡಿದನು.
ತೇನ ಬಾಣೇನ ಮಹತಾ ಪ್ರದ್ಯುಮ್ನಃ ಸಮರೇ ಸ್ಥಿತಃ |
ಜತ್ರುದೇಶೇ ಭೃಶಂ ವಿದ್ಧೋ ವ್ಯವಾಸೀದದ್ ರಥೋತ್ತಮೇ ||21||
ಯುದ್ಧದಲ್ಲಿ ಆ ದೊಡ್ಡ ಬಾಣದಿಂದ ಪ್ರದ್ಯುಮ್ನನು ಕಂಠದೇಶದಲ್ಲಿ ಚೆನ್ನಾಗಿ ಹೊಡೆಯಲ್ಪಟ್ಟವನಾಗಿ ತನ್ನ ಶ್ರೇಷ್ಠವಾದ ರಥದಲ್ಲಿ ಕುಸಿದನು.
ತಂ ಸ ವಿದ್ಧ್ವಾ ತು ರಾಜೇಂದ್ರ ಸಾಲ್ವೋ ರುಗ್ಮಿಣಿನಂದನಮ್ |
ನನಾದ ಸಿಂಹನಾದಂ ಚ ನಾದೇನಾಪೂರಯನ್ ಮಹೀಮ್ ||22||
ರಾಜೇಂದ್ರನೇ! ಸಾಲ್ವನು ರುಗ್ಮಿಣಿಯ ಸುತನನ್ನು ತನ್ನಬಾಣದಿಂದ ಹೊಡೆದು ಸಿಂಹನಾದವನ್ನು ಮಾಡಿ ತನ್ನ ನಾದದಿಂದ ಭೂಮಿಯನ್ನೆಲ್ಲಾ ತುಂಬಿದನು.
ತತೋ ಮೋಹಂ ಸಮಾಪನ್ನೇ ತನಯೇ ಮಮ ಭಾರತ |
ಮುಮೋಚ ಬಾಣಾಂಸ್ತ್ವರಿತಃ ಪುನರನ್ಯಾನ್ ದುರಾತ್ಮವಾನ್ ||23||
ಎಲೈ ಭಾರತನೇ! ನನ್ನ ಪುತ್ರನು ಮೂರ್ಛೆಯನ್ನು ಹೊಂದುತ್ತಿರಲು ದುರಾತ್ಮನಾದ ಸಾಲ್ವನು ಶೀಘ್ರವಾಗಿ ಬೇರೆ ಬಾಣಗಳನ್ನು ಪ್ರಯೋಗಿಸಿದನು.
ಸ ತೈರಭಿಹತೋ ಬಾಣೈರ್ಬಹುಭಿಸ್ತೇನ ಮೋಹಿತಃ |
ನಿಶ್ಚೇಷ್ಟಃ ಕೌರವಶ್ರೇಷ್ಠ ಪ್ರದ್ಯುಮ್ನೋऽಭೂದ್ ರಣಾಜಿರೇ ||24||
ಎಲೈ ಕೌರವ ಶ್ರೇಷ್ಠನೇ! ಅಂತಹ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟ ಪ್ರದ್ಯುಮ್ನನು ಮೂರ್ಛೆಯನ್ನು ಹೊಂದಿ ಯುದ್ಧಭೂಮಿಯಲ್ಲಿ ನಿಶ್ಚೇಷ್ಟನಾದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾ ವೈಯಾಸಿಕ್ಯಾಂ ವನಪರ್ವಣಿ ಪಂಚದಶೋऽಧ್ಯಾಯಃ ||
|| ಕೈರಾತಪರ್ವಣಿ ಪಂಚಮೋऽಧ್ಯಾಯಃ ||

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
*****
ಹದಿನಾರನೆಯ ಅಧ್ಯಾಯ
(ಸಾರಥಿಯಿಂದ ಪ್ರದ್ಯುಮ್ನನ. ಅಪಯಾನ ಪ್ರಜ್ಞೆಯನ್ನು ಮರಳಿಪಡೆದು ಯುದ್ಧಮಾಡಿ ಪ್ರದ್ಯುಮ್ನನಿಂದ ಸಾಲ್ವನ ಪರಾಜಯ. ಸಾಲ್ವನ ಅಪಯಾನ.)
ವಾಸುದೇವಃ
ಸಾಲ್ವಬಾಣಾರ್ದಿತೇ ತಸ್ಮಿನ್ ಪ್ರದ್ಯುಮ್ನೇ ರಥಿನಾಂ ವರೇ |
ವೃಷ್ಣಯೋ ಭಗ್ನಸಂಕಲ್ಪಾ ವಿವ್ಯಥುಃ ಪೃತನಾಮುಖೇ ||1||
ರಥಿಕರಲ್ಲಿ ಶ್ರೇಷ್ಠನಾದ ಪ್ರದ್ಯುಮ್ನನು ಸಾಲ್ವಬಾಣದಿಂದ ಪೀಡಿಸಲ್ಪಡುತ್ತಿರಲು ಸೈನ್ಯದ ಮುಂಭಾಗದಲ್ಲಿದ್ದ ವೃಷ್ಣಿಗಳೆಲ್ಲರೂ ಭಗ್ನಸಂಕಲ್ಪರಾಗಿ ವ್ಯಥೆಯನ್ನು ಪಟ್ಟರು.
ಹಾಹಾಕೃತಮಭೂತ್ ಸರ್ವಂ ವೃಷ್ಣ್ಯಂಧಕಬಲಂ ತದಾ |
ಪ್ರದ್ಯುಮ್ನೇ ಪತಿತೇ ರಾಜನ್ ಸಾಲ್ವಃ ಪ್ರಮುದಿತೋಽಭವತ್ ||2||
ಪ್ರದ್ಯುಮ್ನನು ಪತಿತನಾಗುತ್ತಿರಲು ವೃಷ್ಣ್ಯಂಧಕ ಸೈನ್ಯದಲ್ಲೆಲ್ಲಾ ಹಾಹಾಕಾರ ಉಂಟಾಯಿತು. ಆಗ ಸಾಲ್ವನು ಸಂತೋಷಗೊಂಡನು.
ತಂ ತಥಾ ಮೋಹಿತಂ ದೃಷ್ಟ್ವಾ ಸಾರಥಿರ್ಜವನೈರ್ಹಯೈಃ |
ರಣಾದಪಾಹರತ್ ತೂರ್ಣಂ ಶಿಕ್ಷಿತೋ ದಾರುಕಿಸ್ತದಾ ||3||
ದಾರುಕನಿಂದ ಶಿಕ್ಷಿತನಾದ ಪ್ರದ್ಯುಮ್ನನ ಸಾರಥಿಯು ಮೂರ್ಛೆಹೋದ ಪ್ರದ್ಯುಮ್ನನನ್ನು ನೋಡಿ ಶೀಘ್ರಗಾಮಿಯಾದ ಹಯಗಳಿಂದ ಅವನನ್ನು ಬೇಗ ರಣಾಂಗಣದಿಂದ ಹೊರಗೆ ಕರೆದುಕೊಂಡು ಹೋದನು.
ನಾತಿದೂರಾಪಯಾತೇ ತು ರಥೇ ರಥಿವರಸ್ತತಃ |
ಧನುರ್ಗೃಹೀತ್ವಾ ಯಂತಾರಂ ಲಬ್ಧಸಂಜ್ಞೋಽಬ್ರವೀದಿದಮ್ ||4||
ಸ್ವಲ್ಪದೂರ ಹೋಗುವಷ್ಟರಲ್ಲೇ ರಥಿಶ್ರೇಷ್ಠನಾದ ಪ್ರದ್ಯುಮ್ನನು ಪ್ರಜ್ಞೆಯನ್ನು ಮರಳಿಪಡೆದು ರಥದಲ್ಲಿ ಕುಳಿತು ಧನುಸ್ಸನ್ನು ಹಿಡಿದು ಸಾರಥಿಯನ್ನು ಕುರಿತು ಹೀಗೆ ಹೇಳಿದನು.
ಸೌತೇ ಕಿಂ ತೇ ವ್ಯವಸಿತಂ ಕಸ್ಮಾದ್ ಯಾಸಿ ಪರಾಙ್ಮುಖಃ |
ನೈಷ ವೃಷ್ಣಿಪ್ರವೀರಾಣಾಮಾಹವೇ ಧರ್ಮ ಉಚ್ಯತೇ ||5||
ಸೂತಪುತ್ರನೇ! ಏನುಮಾಡಲು ನಿಶ್ಚಯಿಸಿದ್ದೀಯೆ? ರಣಪರಾಙ್ಮುಖವಾಗಿ ಏಕೆ ಹೋಗುತ್ತಿದ್ದೀಯೆ? ವೃಷ್ಣಿವೀರರಿಗೆ ಯುದ್ಧದಲ್ಲಿ ಇದು ಧರ್ಮವಲ್ಲ.
ಕಚ್ಚಿತ್ ಸೌತೇ ನ ತೇ ಮೋಹಃ ಸಾಲ್ವಂ ದೃಷ್ಟ್ವಾ ಮಹಾಹವೇ |
ವಿಷಾದೋ ವಾ ರಣಂ ದೃಷ್ಟ್ವಾ ಬ್ರೂಹಿ ಮೇ ತ್ವಂ ಯಥಾತಥಮ್ ||6||
ಸೂತಪುತ್ರನೇ! ಮಹಾಯುದ್ಧದಲ್ಲಿ ಸಾಲ್ವನನ್ನು ನೋಡಿ ನಿನಗೇನಾದರೂ ಮೋಹ ಉಂಟಾಗಿಲ್ಲವಷ್ಟೇ? ಅಥವಾ ಯುದ್ಧವನ್ನು ನೋಡಿ ವಿಷಾದ ಉಂಟಾಯಿತೇ? ನನಗೆ ನಿಜವಾಗಿ ಹೇಳು.
ಸೂತಃ
ಜಾನಾರ್ದನೇ ನ ಮೇ ಮೋಹೋ ನಾಪಿ ಮಾಂ ಭಯಮಾವಿಶತ್ |
ಅತಿಭಾರಂ ತು ತೇ ಮನ್ಯೇ ಸಾಲ್ವಂ ಕೇಶವನಂದನ ||7||
ಜನಾರ್ದನನ ಪುತ್ರನೇ! ನನಗೆ ಮೋಹವಾಗಲೀ ಭಯವಾಗಲೀ ಉಂಟಾಗಲಿಲ್ಲ. ಕೇಶವನಂದನನೇ! ಸಾಲ್ವನು ನಿನಗೆ ಮೀರಿದವನು ಎಂದು ನಾನು ತಿಳಿದೆ.
ಸೋಽಪಯಾಮಿ ರಣೇ ವೀರ ಬಲವಾನೇಷ ಪಾಪಕೃತ್ |
ಮೋಹಿತಶ್ಚ ರಣೇ ಶೂರೋ ರಕ್ಷ್ಯಃ ಸಾರಥಿನಾ ರಥೀ ||8||
ವೀರನೇ! ಈ ಪಾಪಿಯು ಬಲಿಷ್ಠನಾದವನು. ಆದ್ದರಿಂದ ಅಪಯಾನವನ್ನು ಮಾಡುತ್ತಿದ್ದೇನೆ. ಶೂರನಾದ ರಥಿಯು ಮೂರ್ಛೆಗೆ ಒಳಗಾದರೆ ಸಾರಥಿಯಿಂದ ರಕ್ಷಿಸಲ್ಪಡಬೇಕು.
ಆಯುಷ್ಮಾನ್ ಹಿ ಮಯಾ ನಿತ್ಯಂ ರಕ್ಷಿತವ್ಯಸ್ತ್ವಯಾಽಪ್ಯಹಮ್ |
ರಕ್ಷಿತವ್ಯೋ ರಣೇ ನಿತ್ಯಮಿತಿ ಮತ್ವಾಽಪಯಾಮ್ಯಹಮ್ ||9||
ಚಿರಂಜೀವಿಯೇ! ಯುದ್ಧದಲ್ಲಿ ನಾನು ನಿನ್ನನ್ನು ಯಾವಾಗಲೂ ರಕ್ಷಿಸಬೇಕು. ನೀನೂ ಸಹ ನನ್ನನ್ನು ರಕ್ಷಿಸಬೇಕು. ಎಂದು ತಿಳಿದು ಅಪಯಾನವನ್ನು ಮಾಡುತ್ತಿದ್ದೇನೆ.
ಏಕಶ್ಚಾಸಿ ಮಹಾಬಾಹೋ ಬಹವಶ್ಚಾಪಿ ದಾನವಾಃ |
ನ ಸಮಂ ರೌಗ್ಮಿಣೇಯಾಹಮಿತಿ ಮತ್ವಾಽಪಯಾಮಿ ಚ ||10||
ಮಹಾಬಾಹುವೇ! ನೀನು ಒಬ್ಬನೇ ಇದ್ದೀಯೆ. ದಾನವರಾದರೋ ಅನೇಕರಿದ್ದಾರೆ. ರುಗ್ಮಿಣಿಯ ಪುತ್ರನೇ! ಇದು ಸಮವಾದ ಯುದ್ಧವಲ್ಲವೆಂದು ತಿಳಿದು ನಾನು ಅಪಯಾನವನ್ನು ಮಾಡುತ್ತಿದ್ದೇನೆ.
ಏವಂ ಬ್ರುವತಿ ಸೂತೇ ತು ತದಾ ಮಕರಕೇತುಮಾನ್ |
ಉವಾಚ ಸೂತಂ ಕೌರವ್ಯ ಸನ್ನಿವರ್ತ್ಯ ರಥಂ ಪುನಃ ||11||
ಕೌರವ್ಯನೇ! ಸೂತನು ಹೀಗೆ ಹೇಳುತ್ತಿರಲು ಮಕರಧ್ವಜನಾದ ಪ್ರದ್ಯುಮ್ನನು ರಥವನ್ನು ತಿರುಗಿಸಿ ಸೂತನನ್ನು ಕುರಿತು ಹೇಳಿದನು.
ದಾರುಕಾತ್ಮಜ ಮೈವಂ ತ್ವಂ ಪುನಃ ಕಾರ್ಷೀಃ ಕಥಂಚನ |

ಅಪಯಾನಂ ರಣಾತ್ ಸೌತೇ ಜೀವತೋ ಮಮ ಕರ್ಹಿಚಿತ್ ॥12॥
ದಾರುಕಪುತ್ರನಾದ ಸೂತನೇ, ಇನ್ನೊಮ್ಮೆ ಹೀಗೆ ನಾನು ಬದುಕಿರುವಾಗ ಯಾವ ಕಾರಣದಿಂದಲೂ ಯುದ್ಧದಿಂದ ಅಪಯಾನವನ್ನು ಮಾಡಬೇಡ.
ನಾಸೌ ವೃಷ್ಣಿಕುಲೇ ಜಾತೋ ಯೋ ವೈ ತ್ಯಜತಿ ಸಂಗರಮ್ |
ಯಶ್ಚಾಪಿ ಪತಿತಂ ಹಂತಿ ತವಾಸ್ಮೀತಿ ಚ ವಾದಿನಮ್ ॥13॥
ತಥಾ ಸ್ತ್ರಿಯಂ ವೈ ಯೋ ಹಂತಿ ವೃದ್ಧಾನ್ ಬಾಲಾಂಸ್ತಥೈವ ಚ |
ವಿರಥಂ ಮುಕ್ತಕೇಶಂ ಚ ಭಗ್ನಶಸ್ತ್ರರಥಂ ತಥಾ ॥14॥
ವೃಷ್ಣಿಕುಲದಲ್ಲಿ ಜನಿಸಿ ಯುದ್ಧದಿಂದ ಹಿಮ್ಮೆಟ್ಟಿದವರು ಯಾರೂ ಇಲ್ಲ. ಹಾಗೆಯೇ ಕೆಳಗೆಬಿದ್ದವರನ್ನು ಕೊಲ್ಲುವವರೂ, ನಾನು ನಿನ್ನವನು ಎಂದು ಶರಣಾಗತರಾಗುವವರನ್ನು ಕೊಲ್ಲುವವರೂ, ಸ್ತ್ರೀಯರನ್ನು ಕೊಲ್ಲುವವರೂ ವೃದ್ಧರನ್ನು ಮತ್ತು ಬಾಲರನ್ನು ಕೊಲ್ಲುವವರೂ ರಥವಿಲ್ಲದವನನ್ನು ತಲೆಕೆದರಿದವನನ್ನು ರಥ ಮತ್ತು ಶಸ್ತ್ರಗಳನ್ನು ಮುರಿದವನನ್ನು ಕೊಲ್ಲುವವರೂ ವೃಷ್ಣಿಕುಲದಲ್ಲಿ ಯಾರೂ ಇಲ್ಲ.
ತ್ವಂ ಚ ಸೂತಕುಲೇ ಜಾತೋ ವಿನೀತಃ ಸೂತಕರ್ಮಣಿ |
ವ್ರತಂ ಜಾನಾಸಿ ವೃಷ್ಣೀನಾಮಾಹವೇಷ್ವನಿವರ್ತಿನಾಮ್ ॥15॥
ನೀನಾದರೋ ಸೂತಕುಲದಲ್ಲಿ ಜನಿಸಿ ಸೂತನ ಕರ್ತವ್ಯಗಳಲ್ಲಿ ಶಿಕ್ಷಿಸಲ್ಪಟ್ಟಿದ್ದೀಯೆ. ಯುದ್ಧದಲ್ಲಿ ಅಪಯಾನವನ್ನು ಮಾಡದಿರುವ ವೃಷ್ಣಿಗಳ ವ್ರತವನ್ನು ತಿಳಿದಿದ್ದೀಯೆ.
ಸ ಜಾನನ್ ಚರಿತಂ ಕೃತ್ಸ್ನಂ ವೃಷ್ಣೀನಾಂ ಪೃತನಾಮುಖೇ |
ಅಪಯಾನಂ ಪುನಃ ಸೌತೇ ನೈವಂ ಕಾರ್ಷೀಃ ಕಥಂಚನ ॥16॥
ಹೀಗೆ ವೃಷ್ಣಿಗಳ ಸಮಗ್ರವಾದ ಚರಿತ್ರೆಯನ್ನು ತಿಳಿದ ನೀನು ಇನ್ನೊಮ್ಮೆ ಯಾವ ಕಾರಣದಿಂದಲೂ ಸೇನಾಮುಖದಿಂದ ಹೀಗೆ ಅಪಯಾನವನ್ನು ಮಾಡಬೇಡ.
ಅಪಯಾತಂ ಹತಂ ಪೃಷ್ಠೇ ಭೀರುಂ ರಣಪಲಾಯಿನಮ್ |
ಗದಾಗ್ರಜೋ ದುರಾಧರ್ಷಃ ಕಿಂ ಮಾಂ ವಕ್ಷ್ಯತಿ ಮಾಧವಃ ॥17॥
ಯುದ್ಧದಿಂದ ಓಡಿ ಹೋಗಿ ಆಪಯಾನವನ್ನುಮಾಡಿ ಬೆನ್ನಿನಲ್ಲಿ ಏಟುತಿಂದ ಭಯಗ್ರಸ್ತನಾದ ನನ್ನನ್ನು ಕುರಿತು ಎಂದೂ ಪರಾಭವವನ್ನು ಹೊಂದದ ಗದಾಗ್ರಜನಾದ ಕೃಷ್ಣನು ಏನು ಹೇಳುವನು?
ಕೇಶವಸ್ಯಾಗ್ರಜೋ ವಾಽಪಿ ನೀಲವಾಸಾ ಮದೋತ್ಕಟಃ |
ಕಿಂ ವಕ್ಷ್ಯತಿ ಮಹಾಬಾಹುರ್ಬಲದೇವಃ ಸಮಾಗತಃ ॥18॥
ಕೃಷ್ಣನ ಅಣ್ಣನಾದ ನೀಲಾಂಬರನಾದ ಮದೋತ್ಕಟನಾದ ಮಹಾಬಾಹುವಾದ ಬಲರಾಮನೂ ಸಹ ಹಿಂದಿರುಗಿ ಬಂದು ಏನು ಹೇಳುವನು?
ಕಿಂ ವಕ್ಷ್ಯತಿ ಶಿನೇರ್ನಪ್ತಾ ನರಸಿಂಹೋ ಮಹಾರಥಃ |
ಅಪಯಾತಂ ರಣಾತ್ ಸೌತೇ ಸಾಂಬಶ್ಚ ಸಮಿತಿಂಜಯಃ ॥19॥
ಚಾರುದೇಷ್ಣಶ್ಚ ದುರ್ಧರ್ಷಸ್ತಥೈವ ಗದಸಾರಣೌ |
ಅಕ್ರೂರಶ್ಚ ಮಹಾಬಾಹುಃ ಕಿಂ ಮಾಂ ವಕ್ಷ್ಯತಿ ಸಾರಥೇ ॥20॥
ಸೂತಪುತ್ರನೇ, ಮಹಾರಥನೂ ನರರಲ್ಲಿ ಉತ್ತಮನೂ ಆದ ಸಾತ್ಯಕಿಯೂ ಯುದ್ಧದಲ್ಲಿ ಜಯವನ್ನುಗಳಿಸುವ ಸ್ವಭಾವವುಳ್ಳ ಸಾಂಬನೂ ಯುದ್ಧದಲ್ಲಿ ಅಪಯಾನವನ್ನು ಮಾಡಿದ ನನ್ನನ್ನು ನೋಡಿ ಏನು ಹೇಳುವರು? ದುರ್ಧಷನಾದ ಚಾರುದೇಷ್ಣನೂ ಗದಸಾರಣರೂ ಮಹಾಬಾಹುವಾದ ಅಕ್ರೂರನೂ ನನ್ನನ್ನು ನೋಡಿ ಏನನ್ನು ಹೇಳುವರು?
ಶೂರಂ ಸಂಭಾವಿನಂ ಸಂತಂ ನಿತ್ಯಂ ಪುರುಷಮಾನಿನಮ್ |
ಸ್ತ್ರಿಯಶ್ಚ ವೃಷ್ಣಿವೀರಾಣಾಂ ಕಿಂ ಮಾಂ ವಕ್ಷ್ಯಂತಿ ಸಂಗತಾಃ ॥21॥
ಪ್ರದ್ಯುಮ್ನೋಽಯಮಪಾಯಾತಿ ಭೀತಸ್ತ್ಯಕ್ತ್ವಾ ರಣಾಜಿರಮ್ |
ಧಿಗೇನಮಿತಿ ವಕ್ಷ್ಯಂತಿ ನ ತು ವಕ್ಷ್ಯಂತಿ ಸಾಧ್ವಿತಿ ॥22॥
ಶೂರನೂ ಆತ್ಮಗೌರವವುಳ್ಳವನೂ ನಿತ್ಯವೂ ತನ್ನ ಪೌರುಷದಲ್ಲಿ ಅಭಿಮಾನವುಳ್ಳವನೂ ಆದ ನನ್ನನ್ನು ನೋಡಿ ನನ್ನ ಬಳಿಗೆ ಬಂದು ವೃಷ್ಣಿವೀರರ ಪತ್ನಿಯರು ಏನು ಹೇಳುವರು? ಈ ಪ್ರದ್ಯುಮ್ನನು ಭಯದಿಂದ ಯುದ್ಧಭೂಮಿಯನ್ನು ತ್ಯಜಿಸಿ ಅಪಯಾನವನ್ನು ಮಾಡಿ ಬರುತ್ತಿದ್ದಾನೆ. ಇವನಿಗೆ ಧಿಕ್ಕಾರವಿರಲಿ ಎಂದು ಹೇಳುವರು. ಒಳ್ಳೆಯ ಕೆಲಸವನ್ನು ಮಾಡಿದ್ದಾನೆ ಎಂದು ಯಾರೂ ಹೇಳುವುದಿಲ್ಲ.
ಧಿಗ್ವಚಃ ಪರಿಹಾಸೋ ವಾ ಮಮ ವಾ ಮದ್ವಿಧಸ್ಯ ವಾ |
ಮೃತ್ಯುತೋಽಭ್ಯಧಿಕಃ ಸೌತೇ ತಸ್ಮಾನ್ಮಾ ವ್ಯಪಯಾಃ ಪುನಃ ॥23॥
ಸೂತಪುತ್ರನೇ, ನನಗಾಗಲೀ ಅಥವಾ ನನ್ನಂತಹವನಿಗಾಗಲೀ ಧಿಕ್ಕಾರವಚನವಾಗಲೀ ಅಥವಾ ಪರಿಹಾಸವಾಗಲೀ ಮರಣಕ್ಕಿಂತಲೂ ಹೆಚ್ಚು ದುಃಖದಾಯಕವಾದುದು.ಆದುದರಿಂದ ಇನ್ನೊಮ್ಮೆ ಅಪಯಾನವನ್ನು ಮಾಡಬೇಡ.
ಭಾರಂ ಹಿ ಮಯಿ ಸಂನ್ಯಸ್ಯ ಯಾತೋ ಮಧುನಿಹಾ ಹರಿಃ |
ಯಜ್ಞಂ ಭಾರತಸಿಂಹಸ್ಯ ಸ ನ ಶಕ್ಷ್ಯೇ ಪಲಾಯಿತುಮ್ ॥24॥
ಮಧುಸೂದನನಾದ ಕೃಷ್ಣನು ರಕ್ಷಣೆಯ ಭಾರವನ್ನು ನನಗೆ ಒಪ್ಪಿಸಿ ಭರತಶ್ರೇಷ್ಠನಾದ ಧರ್ಮರಾಜನ ಯಜ್ಞಕ್ಕೆ ಹೋಗಿದ್ದಾನೆ. ನಾನು ಯುದ್ಧ ಭೂಮಿಯಿಂದ ಪಲಾಯನಮಾಡುವುದು ಸಾಧ್ಯವಿಲ್ಲ.

ಕೃತವರ್ಮಾ ಮಯಾ ವೀರೋ ನಿರ್ಯಾಸ್ಯನ್ನೇವ ವಾರಿತಃ |
ಸಾಲ್ವಂ ನಿವಾರಯಿಷ್ಯೇಽಹಂ ತಿಷ್ಠ ತ್ವಮಿತಿ ಸೂತಜ ॥25॥
ಎಲೈ ಸೂತಪುತ್ರನೇ! ವೀರನಾದ ಕೃತವರ್ಮನು ಯುದ್ಧಕ್ಕೆ ಹೊರಡುತ್ತಿರುವಾಗಲೇ ನಾನು ಸಾಲ್ವನನ್ನು ತಡೆಯುತ್ತೇನೆ ನೀನು ಇಲ್ಲಿಯೇ ನಿಲ್ಲು ಎಂದು ಹೇಳಿ ಅವನನ್ನು ತಡೆದೆ.
ಸ ಚ ಸಂಭಾವಯನ್ಮಾಂ ವೈ ನಿವೃತ್ತೋ ಹೃದಿಕಾತ್ಮಜಃ |
ತಂ ಸಮೇತ್ಯ ರಣಂ ತ್ಯಕ್ತ್ವಾ ಕಿಂ ವಕ್ಷ್ಯಾಮಿ ಮಹಾರಥಮ್ ॥26॥
ಹೃದಿಕಾತ್ಮಜನಾದ ಆ ಕೃತವರ್ಮನು ನನಗೆ ಸತ್ಕಾರವನ್ನು ಮಾಡಿ ಹಿಂದಿರುಗಿದನು. ಯುದ್ಧವನ್ನು ಬಿಟ್ಟು ಆ ಮಹಾರಥವನ್ನು ಸಂಧಿಸಿ ನಾನು ಏನು ಹೇಳಲಿ?
ಉಪಯಾಂತಂ ದುರಾಧರ್ಷಂ ಶಂಕಚಕ್ರಗದಾಧರಮ್ |
ಪುರುಷಂ ಪುಂಡರೀಕಾಕ್ಷಂ ಕಿಂ ವಕ್ಷ್ಯಾಮಿ ಮಹಾದ್ಭುತಮ್ ॥27॥
ದುರಾಧರ್ಷನಾದ ಶಂಖಚಕ್ರಗದಾಧಾರಿಯಾದ ಮಹಾ ಅದ್ಭುತಪುರುಷನಾದ ಪುಂಡರೀಕಾಕ್ಷನಾದ ಕೃಷ್ಣನು ಹಿಂದಿರುಗಿ ಬಂದಾಗ ನಾನು ಏನು ಹೇಳಲಿ?
ಸಾತ್ಯಕಿಂ ಬಲದೇವಂ ಚ ಯೇ ಚಾನ್ಯೇಽಂಧಕವೃಷ್ಣಯಃ |
ಮಯಾ ಸ್ಪರ್ಧಂತಿ ಸತತಂ ಕಿಂ ನು ವಕ್ಷ್ಯಾಮಿ ತಾನಹಮ್ ॥28॥
ಸಾತ್ಯಕಿ ಬಲರಾಮ ಮತ್ತು ಇನ್ನೂ ಎಷ್ಟೋ ಅಂಧಕವೃಷ್ಣಿಗಳು ನನ್ನ ಜೊತೆಯಲ್ಲಿ ಯಾವಾಗಲೂ ಸ್ಪರ್ಧಿಸುತ್ತಾರೆ. ನಾನು ಅವರನ್ನು ಕುರಿತು ಏನು ಹೇಳಲಿ?
ತ್ಯಕ್ತ್ವಾ ರಣಮಿಮಂ ಸೌತೇ ಪೃಷ್ಠತೋಽಭ್ಯಾಹತಃ ಶರೈಃ |
ತ್ವಯಾಽಪನೀತೋ ವಿವಶೋ ನ ಜೀವೇಯಂ ಕಥಂಚನ ॥29॥
ಸೂತಪುತ್ರನೇ! ರಣಾಂಗಣವನ್ನು ಪರಿತ್ಯಜಿಸಿ ಶತ್ರುಗಳಿಂದ ಬೆನ್ನಿನಲ್ಲಿ ಬಾಣಗಳಿಂದ ಹೊಡೆಯಲ್ಪಟ್ಟು ನೀನು ವಿವಶನಾಗಿ ಅಪಯಾನವನ್ನು ಮಾಡಿದರೆ ನಾನು ಬದುಕಿರಲಾರೆ.
ಕದಾ ಮಾಂ ಸೂತಪುತ್ರ ತ್ವಂ ಜಾನೀಷೇ ವಾ ಭಯಾರ್ದಿತಮ್ |
ಅಪಯಾತಂ ರಣಂ ಹಿತ್ವಾ ಯಥಾ ಕಾಪುರುಷಸ್ತಥಾ ॥30॥
ಸೂತಪುತ್ರನೇ! ನಾನು ನೀಚಪುರುಷನಂತೆ ಯುದ್ಧವನ್ನು ಬಿಟ್ಟು ಭಯದಿಂದ ಅಪಯಾನವನ್ನು ಮಾಡಿರುವುದನ್ನು ನೀನು ಯಾವಾಗ ನೋಡಿದ್ದೀಯೆ?
ನ ಚ ಯುಕ್ತಂ ತವ ತ್ಯಕ್ತುಂ ಸಂಗ್ರಾಮಂ ದಾರುಕಾತ್ಮಜ |
ಮಯಿ ಯುದ್ಧಾರ್ಥಿನಿ ಭೃಶಂ ಸ ತ್ವಂ ಯಾಹಿ ಯತೋ ರಣಮ್ ॥
ದಾರುಕಾತ್ಮಜನೇ! ನಾನು ಯುದ್ಧಾರ್ಥಿಯಾಗಿರುವಾಗ ನೀನು ಯುದ್ಧಭೂಮಿಯನ್ನು ತ್ಯಜಿಸುವುದು ಸರ್ವಥಾ ಯುಕ್ತವಲ್ಲ. ನೀನು ಈಗ ರಣಾಂಗಣಕ್ಕೆ ಹೋಗು.
ಶ್ರೀಭಗವಾನ್
ಏವಮುಕ್ತಸ್ತು ಕೌಂತೇಯ ಸೂತಪುತ್ರಸ್ತದಾ ಮೃಧೇ |
ಪ್ರದ್ಯುಮ್ನಮಬ್ರವೀತ್ ಶ್ಲಕ್ಷ್ಣಂ ಮಧುರಂ ವಾಕ್ಯಮಂಜಸಾ ॥32॥
ಕೌಂತೇಯನೇ! ಹೀಗೆ ಹೇಳಲ್ಪಟ್ಟ ದಾರುಕಾತ್ಮಜನು ಆಗ ಯುದ್ಧದ ವಿಷಯದಲ್ಲಿ ಪ್ರದ್ಯುಮ್ನನನ್ನು ಕುರಿತು ಮಧುರವಾದ ಮತ್ತು ನಯವಾದ ಮಾತುಗಳನ್ನು ಚೆನ್ನಾಗಿ ಹೇಳಿದನು.
ನ ಮೇ ಭಯಂ ರೌಗ್ಮಿಣೇಯ ಸಂಗ್ರಾಮೇ ಯಚ್ಛತೋ ಹಯಾನ್ |
ಯುದ್ಧಜ್ಞಶ್ಚಾಸ್ಮಿ ವೃಷ್ಣೀನಾಂ ನಾತ್ರ ಕಿಂಚಿದತೋಽನ್ಯಥಾ ॥33॥
ರುಗ್ಮಿಣಿಪುತ್ರನೇ! ನನಗೆ ಯುದ್ಧದಲ್ಲಿ ಅಶ್ವಗಳನ್ನು ನಿಯಂತ್ರಿಸಲು ಯಾವ ಭಯವೂ ಇಲ್ಲ. ವೃಷ್ಣಿಗಳ ಯುದ್ಧದ ರೀತಿಯನ್ನು ನಾನು ಬಲ್ಲೆ. ಈ ವಿಷಯದಲ್ಲಿ ಯಾವ ವ್ಯತ್ಯಾಸವೂ ಇಲ್ಲ.
ಆಯುಷ್ಮನ್ನುಪದೇಶಸ್ತು ಸಾರಥ್ಯೇ ಶಿಕ್ಷಿತೈಃ ಕೃತಃ |
ಸರ್ವಾಪತ್ಸು ರಥೀ ರಕ್ಷ್ಯಃ ತ್ವಂ ಚಾಪಿ ಭೃಶಪೀಡಿತಃ ॥34॥
ಚಿರಂಜೀವಿಯೇ! ಸಾರಥ್ಯವಿದ್ಯೆಯಲ್ಲಿ ನಾನು ಚೆನ್ನಾಗಿ ತಿಳಿದವರಿಂದ ಶಿಕ್ಷಿಸಲ್ಪಟ್ಟಿದ್ದೇನೆ. ಎಲ್ಲಾ ಆಪತ್ತುಗಳಲ್ಲಿಯೂ ರಥಿಕನು ರಕ್ಷಿಸಲ್ಪಡಬೇಕು. ನೀನಾದರೋ ಬಹಳ ಪೀಡೆಗೆ ಒಳಗಾಗಿದ್ದೆ.
ತ್ವಂ ಹಿ ಸಾಲ್ವಪ್ರಮುಕ್ತೇನ ಪತ್ರಿಣಾಽಭಿಹತೋ ಭೃಶಮ್ |
ಕಶ್ಮಲಾಭಿಹತೋ ವೀರ ತತೋಽಹಮಪಯಾತವಾನ್ ॥35॥
ವೀರನೇ! ನೀನಾದರೋ ಸಾಲ್ವನು ಪ್ರಯೋಗಿಸಿದ ಬಾಣದಿಂದ ಬಹಳವಾಗಿ ಹೊಡೆಯಲ್ಪಟ್ಟವನಾಗಿ ಮೂರ್ಛೆಯನ್ನು ಹೊಂದಿದ್ದಿ. ಆದ್ದರಿಂದ ನಾನು ಅಪಯಾನವನ್ನು ಮಾಡಿದೆ.
ಸ ತ್ವಂ ಸಾತ್ವತಮುಖ್ಯಾದ್ಯ ಲಬ್ಧಸಂಜ್ಞೋ ಯದೃಚ್ಛಯಾ |
ಪಶ್ಯ ಮೇ ಹಯಸಂಯಾನೇ ಶಿಕ್ಷಾಂ ಕೇಶವನಂದನ ॥36॥
ಸಾತ್ವತಶ್ರೇಷ್ಠನೇ! ಈಗ ನೀನು ದೈವಾನುಗ್ರಹದಿಂದ ಪ್ರಜ್ಞೆಯನ್ನು ಮರಳಿಪಡೆದಿದ್ದೀಯೆ. ಕೇಶವ ಪುತ್ರನೇ!ಅಶ್ವಗಳನ್ನು ನಿಯಂತ್ರಿಸುವುದರಲ್ಲಿ ನನ್ನ ಚಾತುರ್ಯವನ್ನು ನೋಡು.
ದಾರುಕಾಚ್ಚಾಹಮುತ್ಪನ್ನೋ ಯಥಾವಚ್ಚೈವ ಶಿಕ್ಷಿತಃ |

ವೀತಭೀಃ ಪ್ರವಿಶಾಮ್ಯೇತಾಂ ಸಾಲ್ವಸ್ಯ ಮಹತೀಂ ಚಮೂಮ್ ॥37॥
ನಾನು ದಾರುಕನ ಪುತ್ರ. ಚೆನ್ನಾಗಿ ವಿದ್ಯೋಪದೇಶವನ್ನು ಪಡೆದಿದ್ದೇನೆ. ಸಾಲ್ವನ ಈ ದೊಡ್ಡ ಸೈನ್ಯವನ್ನು ನಿರ್ಭಯವಾಗಿ ಪ್ರವೇಶಿಸುತ್ತೇನೆ.
ಏವಮುಕ್ತ್ವಾ ತತೋ ವೀರೋ ಹಯಾನ್ ಸಂಚೋದ್ಯ ಸಂಯುಗೇ |
ರಶ್ಮಿಭಿಶ್ಚ ಸಮುದ್ಯಮ್ಯ ಜವೇನಾಭ್ಯಪತತ್ ತದಾ ॥38॥
ಹೀಗೆ ಹೇಳಿ ಆ ವೀರನು ಅಶ್ವಗಳನ್ನು ಪ್ರೇರಿಸಿ ಕಡಿವಾಣಗಳನ್ನು ಹಿಡಿದು ವೇಗದಿಂದ ಶತ್ರುಸೈನ್ಯವನ್ನು ಪ್ರವೇಶಿಸಿದನು.
ಮಂಡಲಾನಿ ವಿಚಿತ್ರಾಣಿ ದಕ್ಷಿಣಾನಿ ಚ ಸವ್ಯತಃ |
ಸವ್ಯಾನಿ ಚ ವಿಚಿತ್ರಾಣಿ ದಕ್ಷಿಣಾನಿ ಚ ಸರ್ವಶಃ ॥39॥
ಯುದ್ಧಭೂಮಿಯಲ್ಲಿ ವಿಚಿತ್ರವಾದ ಪ್ರದಕ್ಷಿಣಾಕಾರವಾದ ಮತ್ತು ಅಪ್ರದಕ್ಷಿಣಾಕಾರವಾದ ಮಾರ್ಗಗಳನ್ನು ಎಲ್ಲ ಕಡೆಗಳಲ್ಲಿಯೂ ರಚಿಸುತ್ತಾ (ಪ್ರವೇಶಿಸಿದನು.)
ಪ್ರತೋದೇನಾಹತಾ ರಾಜನ್ ರಶ್ಮಿಭಿಶ್ಚ ಸಮುದ್ಯತಾಃ |
ಉತ್ಪತಂತ ಇವಾಕಾಶೇ ಬಭೂವುಸ್ತೇ ಹಯೋತ್ತಮಾಃ ॥40॥
ರಾಜನೇ! ಚಾವಟಿಯಿಂದ ಹೊಡೆಯಲ್ಪಟ್ಟ ಕಡಿವಾಣಗಳಿಂದ ನಿಯಂತ್ರಿಸಲ್ಪಟ್ಟ ಆ ಶ್ರೇಷ್ಠವಾದ ಅಶ್ವಗಳು ಆಕಾಶದಲ್ಲಿ ಹಾರುವಂತೆ ನೆಗೆದವು.
ತೇ ಹಸ್ತಲಾಘವೋಪೇತಂ ವಿಜ್ಞಾಯ ನೃಪ ದಾರುಕಿಮ್ |
ದಹ್ಯಮಾನಾ ಇವ ತದಾ ಪಸ್ಪೃಶುಶ್ಚರಣೈರ್ಮಹೀಮ್ ॥41॥
ಆ ಅಶ್ವಗಳು ದಾರುಕಿಯ ಹಸ್ತಲಾಘವವನ್ನು ಗಮನಿಸಿ ಅಗ್ನಿಸ್ಪರ್ಶಮಾಡಿದಂತೆ ಪಾದಗಳಿಂದ ಭೂಮಿಯನ್ನು ಮುಟ್ಟುತ್ತಿದ್ದವು.
ಸೋಽಪಸವ್ಯಾಂ ಚಮೂಂ ತಸ್ಯ ಸಾಲ್ವಸ್ಯ ಭರತರ್ಷಭ |
ಚಕಾರ ನಾತಿಯತ್ನೇನ ತದದ್ಭುತಮಿವಾಭವತ್ ॥42॥
ಭರತಶ್ರೇಷ್ಠನೇ! ಅವನು ಸಾಲ್ವನ ಆ ಸೈನ್ಯವನ್ನು ಬಹಳ ಪ್ರಯತ್ನವಿಲ್ಲದೆಯೇ ತನ್ನ ಎಡಕ್ಕೆ ತಿರುಗಿಸಿ ಮುಂದೆ ಹೋದನು. ಅದು ಅದ್ಭುತವಾಗಿ ತೋರುತ್ತಿತ್ತು.
ಅಮೃಷ್ಯಮಾಣೋಽಪಸವ್ಯಂ ಸಾಲ್ವಃ ಸಮಿತಿದಾರುಣಃ |
ಯಂತಾರಮಸ್ಯ ಸಹಸಾ ತ್ರಿಭಿರ್ಬಾಣೈಃ ಸಮರ್ದಯತ್ ॥43॥
ತನ್ನ ಸೈನ್ಯದ ಈ ಎಡಕ್ಕೆ ತಿರುಗಿದ್ದನ್ನು ಸಹಿಸದ ಯುದ್ಧದಲ್ಲಿ ಭಯಂಕರನಾದ ಸಾಲ್ವನು ಪ್ರದ್ಯುಮ್ನನ ಸಾರಥಿಯನ್ನು ಮೂರು ಬಾಣಗಳಿಂದ ಬಹಳವಾಗಿ ಪೀಡಿಸಿದನು.
ದಾರುಕಸ್ಯ ಸುತಸ್ತಂ ತು ಬಾಣವೇಗಮಚಿಂತಯನ್ |
ಭೂಯ ಏವ ಮಹಾಬಾಹುಃ ಪ್ರಯಯೌ ಹಯಸಮ್ಮಿತಃ ॥44॥
ದಾರುಕಪುತ್ರನಾದರೋ ಆ ಬಾಣಗಳ ವೇಗವನ್ನು ಗಮನಿಸದೆ ಮಹಾಬಾಹುವಾದ ಅವನು ಅಶ್ವಗಳನ್ನು ನಿಯಂತ್ರಿಸಿ ಪುನಃ ಮುಂದಕ್ಕೆ ಹೋದನು.
ತತೋ ಬಾಣಾನ್ ಬಹುತರಾನ್ ಪುನರೇವ ಸ ಸೌಭರಾಟ್ |
ಮುಮೋಚ ತನಯೇ ವೀರ ಮಮ ರುಗ್ಮಿಣಿನಂದನೇ ॥45॥
ವೀರನೇ! ಆಗ ಆ ಸೌಭಪತಿಯು ಪುನಃ ಅನೇಕವಿಧವಾದ ಬಾಣಗಳನ್ನು ರುಗ್ಮಿಣಿಪುತ್ರನಾದ ನನ್ನ ತನಯನ ಮೇಲೆ ಪ್ರಯೋಗಿಸಿದನು.
ತಾನಪ್ರಾಪ್ತಾನ್ ಶಿತೈರ್ಬಾಣೈಶ್ಚಿಚ್ಛೇದ ಪರವೀರಹಾ |
ರೌಗ್ಮಿಣೇಯಃ ಸ್ಮಿತಂ ಕೃತ್ವಾ ದರ್ಶಯನ್ ಪಾಣಿಲಾಘವಮ್ ॥46॥
ಆ ಬಾಣಗಳು ತನ್ನನ್ನು ತಲುಪುವುದಕ್ಕೆ ಮೊದಲೇ ಪರವೀರರನ್ನು ಕೊಲ್ಲುವ ರುಗ್ಮಿಣಿನಂದನನು ನಕ್ಕು ತನ್ನ ಹಸ್ತಲಾಘವವನ್ನು ತೋರಿಸುತ್ತಾ ತನ್ನ ಬಾಣಗಳಿಂದ ಅವುಗಳನ್ನು ಛೇದಿಸಿದನು.
ಭಗ್ನಾನ್ ದೃಷ್ಟ್ವಾ ತು ತಾನ್ ಬಾಣಾನ್ ಪ್ರದ್ಯುಮ್ನೇನ ಸ ಸೌಭರಾಟ್ |
ಆಸುರೀಂ ದಾರುಣೀಂ ಮಾಯಾಮಾಸ್ಥಾಯ ವ್ಯಸೃಜಚ್ಛರಾನ್ ॥47॥
ತನ್ನ ಬಾಣಗಳು ಪ್ರದ್ಯುಮ್ನನಿಂದ ಕತ್ತರಿಸಲ್ಪಟ್ಟಿದ್ದನ್ನು ನೋಡಿದ ಸೌಭಪತಿಯು ಘೋರವಾದ ಆಸುರೀಮಾಯೆಯನ್ನು ಆಶ್ರಯಿಸಿ ಬಾಣಗಳನ್ನು ಪ್ರಯೋಗಿಸಿದನು.
ಪ್ರಯುಜ್ಯಮಾನಂ ತಂ ಜ್ಞಾತ್ವಾ ದೈತೇಯಾಸ್ತ್ರಂ ಮಹಾಬಲಃ |
ಬ್ರಹ್ಮಾಸ್ತ್ರೇಣಾಂತರಾ ಛಿತ್ತ್ವಾ ಮುಮೋಚಾನ್ಯಾಂಶ್ಚ ಪತ್ರಿಣಃ ॥48॥
ದೈತೇಯಾಸ್ತ್ರವನ್ನು ಪ್ರಯೋಗಿಸಿದ್ದನ್ನು ತಿಳಿದ ಮಹಾಬಲನಾದ ಪ್ರದ್ಯುಮ್ನನು ಮಧ್ಯದಲ್ಲಿಯೇ ಅದನ್ನು ಬ್ರಹ್ಮಾಸ್ತ್ರದಿಂದ ಕತ್ತರಿಸಿ ಇನ್ನೂ ಅನೇಕ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ತೇ ತದಸ್ತ್ರಂ ವಿಧೂಯಾಥ ವಿವಿಶೂ ರುಧಿರಾಶನಾಃ |
ಶಿರಸ್ಯುರಸಿ ವಕ್ತ್ರೇ ಚ ಸ ಮುಮೋಹ ಪಪಾತ ಚ ॥49॥
ರಕ್ತಪಿಪಾಸುವಾದ ಆ ಬಾಣಗಳು ಸಾಲ್ವನ ಅಸ್ತ್ರಗಳನ್ನು ನಿವಾರಿಸಿ ಅವನ ಶಿರಸ್ಸಿನಲ್ಲಿಯೂ ಎದೆಯಲ್ಲಿಯೂ ಮತ್ತು ಮುಖದಲ್ಲಿಯೂ ಪ್ರವೇಶಿಸಿದವು. ಸಾಲ್ವನು ಮೂರ್ಛೆಯನ್ನು ಹೊಂದಿ ಕೆಳಗೆ ಬಿದ್ದನು.
ತಸ್ಮಿನ್ ನಿಪತಿತೇ ಕ್ಷುದ್ರೇ ಸಾಲ್ವೇ ಬಾಣಪ್ರಪೀಡಿತೇ |
ರೌಗ್ಮಿಣೇಯೋಽಪರಂ ಬಾಣಂ ಸಂದಧೇ ಶತ್ರುತಾಪನಮ್ ॥50॥

ಆ ಕ್ಷುದ್ರನಾದ ಸಾಲ್ವನು ಬಾಣಗಳಿಂದ ಪೀಡಿತನಾಗಿ ನೆಕ್ಕೆ ಉರುಳುತ್ತಿರಲು ರುಗ್ಮಿಣಿಯ ಪುತ್ರನು ಶತ್ರುನಾಶಕರವಾದ ಇನ್ನೊಂದು ಬಾಣವನ್ನು ಹೂಡಿದನು.
ತಮರ್ಚಿತಂ ಸರ್ವದಾಶಾರ್ಹಮುಖ್ಯೈಃ
ಆಶೀರ್ಭಿರಗ್ನಿಜ್ವಲನಪ್ರಕಾಶಮ್ |
ದೃಷ್ಟ್ವಾ ಶರಂ ಜ್ಯಾಮಭಿನೀಯಮಾನಂ
ಬಭೂವ ಹಾಹಾರುತಮಂತರಿಕ್ಷಮ್ ॥51॥
ಸರ್ವದಾಶಾರ್ಹಶ್ರೇಷ್ಠರ ಆಶೀರ್ವಾದಗಳಿಂದ ಸತ್ಕರಿಸಲ್ಪಟ್ಟ, ಅಗ್ನಿಯ ಜ್ವಾಲೆಯಂತೆ ಹೊಳೆಯುವ, ಅವನು ಬಾಣವನ್ನು ಹೆದೆಯಲ್ಲಿ ಸಂಧಾನವನ್ನು ಮಾಡಿ ಹೆದೆಯನ್ನು ಹಿಂದಕ್ಕೆ ಎಳೆಯುತ್ತಿರುವುದನ್ನು ನೋಡಿ ಅಂತರಿಕ್ಷವೆಲ್ಲಾ ಹಾಹಾಕಾರದಿಂದ ತುಂಬಿಹೋಯಿತು.
ತತೋ ದೇವಗಣಾಃ ಸರ್ವೇ ಸೇಂದ್ರಾಃ ಸಹಗಣೇಶ್ವರಾಃ |
ನಾರದಂ ಪ್ರೇಷಯಾಮಾಸುಃ ಶ್ವಸನಂ ಚ ಮಹಾಬಲಮ್ |
ತೌ ರೌಗ್ಮಿಣೇಯಮಾಗಮ್ಯ ವಚೋಽಬ್ರೂತಾಂ ದಿವೌಕಸಃ ॥52॥
ಆಗ ಎಲ್ಲಾ ದೇವಗಣಗಳೂ ಇಂದ್ರನಿಂದ ಸಹಿತರಾದ ಅನೇಕ ಗಣಾಧ್ಯಕ್ಷರೂ ನಾರದರನ್ನೂ ಮತ್ತು ಮಹಾಬಲನಾದ ವಾಯುವನ್ನೂ ಪ್ರದ್ಯುಮ್ನನ ಬಳಿಗೆ ಕಳುಹಿಸಿದರು. ಅವರಿಬ್ಬರೂ ರುಗ್ಮಿಣಿಯ ಪುತ್ರನ ಬಳಿಗೆ ಬಂದು ದೇವತೆಗಳ ಮಾತನ್ನು ತಿಳಿಸಿದರು.
ನೈಷ ವಧ್ಯಸ್ತ್ವಯಾ ವೀರ ಸಾಲ್ವರಾಜಃ ಕಥಂಚನ |
ಸಂಹರಸ್ವ ಪುನರ್ಬಾಣಮವಧ್ಯೋಽಯಂ ತ್ವಯಾ ರಣೇ |
ಏತಸ್ಯ ಹಿ ಶರಸ್ಯಾಜೌ ನಾವಧ್ಯೋಽಸ್ತಿ ಪುಮಾನ್ ಕ್ವಚಿತ್ ॥53॥
ವೀರನೇ! ಈ ಸಾಲ್ವರಾಜನು ನಿನ್ನಿಂದ ವಧ್ಯನಲ್ಲ. ನೀನು ಬಾಣವನ್ನು ಹಿಂದಕ್ಕೆ ತೆಗೆದುಕೋ. ಯುದ್ಧದಲ್ಲಿ ಆವನು ನಿನಗೆ ಅವಧ್ಯನಾದವನು. ನೀನು ಹೂಡಿರುವ ಈ ಬಾಣಕ್ಕೆ ಯಾವ ಪುರುಷನೂ ಅವಧ್ಯನಾಗುವುದಿಲ್ಲ.
ಮೃತ್ಯುರಸ್ಯ ಮಹಾಬಾಹೋ ರಣೇ ದೇವಕಿನಂದನಃ |
ಕೃಷ್ಣಃ ಸಂಕಲ್ಪಿತೋ ಧಾತ್ರಾ ತನ್ಮಿಥ್ಯಾ ನ ಭವೇದಿತಿ ॥54॥
ಎಲೈ ಮಹಾಬಾಹುವೇ! ದೇವಕಿನಂದನನಾದ ಕೃಷ್ಣನು ಇವನ ಮೃತ್ಯುವೆಂದು ಬ್ರಹ್ಮದೇವರ ಸಂಕಲ್ಪವಿದೆ. ಅದು ಸುಳ್ಳಾಗಬಾರದು.
ತತಃ ಪರಮಸಂಹೃಷ್ಟಃ ಪ್ರದ್ಯುಮ್ನಃ ಶರಮುತ್ತಮಮ್ |
ಸಂಜಹಾರ ಧನುಃಶ್ರೇಷ್ಠಾತ್ ತೂಣೌ ಚೈವ ನ್ಯವೇಶಯತ್ ॥55॥
ಆಗ ಬಹಳ ಸಂತೋಷದಿಂದ ಕೂಡಿದ ಪ್ರದ್ಯುಮ್ನನು ತನ್ನ ಶ್ರೇಷ್ಠವಾದ ಬಾಣವನ್ನು ಧನುಸ್ಸಿನಿಂದ ತೆಗೆದು ಬತ್ತಳಿಕೆಯಲ್ಲಿ ಇಟ್ಟನು.
ತತ ಉತ್ಥಾಯ ರಾಜೇಂದ್ರ ಸಾಲ್ವಃ ಪರಮದುರ್ಮನಾಃ |
ವ್ಯಪಾಯಾತ್ ಸಬಲಸ್ತೂರ್ಣಂ ಪ್ರದ್ಯುಮ್ನಶರಪೀಡಿತಃ ॥56॥
ಅನಂತರ ರಾಜೇಂದ್ರನೇ! ಪ್ರದ್ಯುಮ್ನನ ಬಾಣಗಳಿಂದ ಪೀಡಿತನಾದ ಸಾಲ್ವನು ಬಹಳ ವಿಷಾದವನ್ನು ಹೊಂದಿ ತನ್ನ ಸೈನ್ಯದ ಜೊತೆಯಲ್ಲಿ ಶೀಘ್ರವಾಗಿ ರಣದಿಂದ ಆಪಯಾನವನ್ನು ಮಾಡಿದನು.
ಸ ದ್ವಾರಕಾಂ ಪರಿತ್ಯಜ್ಯ ಸಾಲ್ವೋ ವೃಷ್ಣಿಭಿರರ್ದಿತಃ |
ಸೌಭಮಾಸ್ಥಾಯ ರಾಜೇಂದ್ರ ದಿವಮಾಚಕ್ರಮೇ ತದಾ ॥58॥
ಎಲೈ ರಾಜೇಂದ್ರನೇ! ವೃಷ್ಣಿಗಳಿಂದ ಪೀಡೆಗೆ ಒಳಗಾದ ಸಾಲ್ವನು ದ್ವಾರಕಾಪಟ್ಟಣವನ್ನು ತ್ಯಜಿಸಿ ಸೌಭವನ್ನು ಏರಿ ಆಗ ಆಕಾಶಕ್ಕೆ ಹಾರಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷೋಡಶೋಽಧ್ಯಾಯಃ ॥
॥ ಕೈರಾತಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
*****
ಹದಿನೇಳನೆಯ ಅಧ್ಯಾಯ
(ಕೃಷ್ಣನಿಂದ ಯುಧಿಷ್ಠಿರನನ್ನು ಕುರಿತು ತಾನು ಸಾಲ್ವನ ಜೊತೆಯಲ್ಲಿ
ಮಾಡಿದ ಯುದ್ಧದ ವರ್ಣನೆ.)
ಶ್ರೀಭಗವಾನ್
ತತಸ್ತೇನಾಗಮಂ ಮುಕ್ತಾಂ ಆನರ್ತನಗರೀಂ ನೃಪ |
ಮಹಾಕ್ರತೌ ರಾಜಸೂಯೇ ನಿವೃತ್ತೇ ತವ ಭಾರತ ॥1॥
ಎಲೈ ರಾಜನೇ! ಭಾರತನೇ! ನಿನ್ನ ರಾಜಸೂಯ ಮಹಾಯಾಗವು ಮುಗಿದ ನಂತರ ನಾನು ಸಾಲ್ವನಿಂದ ಮುಕ್ತವಾದ ದ್ವಾರಕೆಗೆ ಬಂದೆನು.
ಅಪಶ್ಯಂ ದ್ವಾರಕಾಂ ಚಾಹಂ ಮಹಾರಾಜ ಹತತ್ವಿಷಮ್ |
ನಿಃಸ್ವಾಧ್ಯಾಯವಷಟ್ಕಾರಾಂ ನಿರ್ಭೂಷಣವರಸ್ತ್ರಿಯಮ್ ॥2॥
ಮಹಾರಾಜನೇ! ದ್ವಾರಕಾಪಟ್ಟಣವು ತನ್ನ ಕಾಂತಿಯನ್ನು ಕಳೆದುಕೊಂಡು ಸ್ವಾಧ್ಯಾಯವಷಟ್ಕಾರ (ವೇದಾಧ್ಯಯನ, ಯಜ್ಞ) ರಹಿತವಾಗಿ ಭೂಷಣಗಳಿಲ್ಲದ ಉತ್ತಮ ವನಿತೆಯಂತೆ ಇರುವುದನ್ನು ನೋಡಿದೆನು.
ಅನಭಿಜ್ಞೇಯರೂಪಾಣಿ ದ್ವಾರಕೋಪವನಾನಿ ಚ |

ದೃಷ್ಟ್ವಾ ಶಂಕೋಪಪನ್ನೋಽಹಮಪೃಚ್ಛಂ ಹೃದಿಕಾತ್ಮಜಮ್ ॥3॥
ದ್ವಾರಕೆಯ ಉಪವನಗಳೆಲ್ಲವೂ ಯಾವುದೂ ಗುರುತು ಸಿಗುವಂತೆ ಇರಲಿಲ್ಲ. ಅದನ್ನು ನೋಡಿ ಸಂಶಯಗ್ರಸ್ತನಾಗಿ ಕೃತವರ್ಮನನ್ನು ಕೇಳಿದೆನು.
ಅಸ್ವಸ್ಥನರನಾರೀಕಮಿದಂ ವೃಷ್ಣಿಪುರಂ ಭೃಶಮ್ |
ಕಿಮಿದಂ ನರಶಾರ್ದೂಲ ಶ್ರೋತುಮಿಚ್ಛಾಮಹೇ ವಯಮ್ ॥4॥
ನರಶಾರ್ದೂಲನೇ! ಈ ವೃಷ್ಣಿನಗರವು ಬಹಳ ಅಸ್ವಸ್ಥರಾದ ಪುರುಷ ಮತ್ತು ಸ್ತ್ರೀಯರಿಂದ ಕೂಡಿದೆ. ಇದಕ್ಕೆ ಏನು ಕಾರಣವೆಂದು ನಾನುಕೇಳಲು ಬಯಸುತ್ತೇನೆ.
ಏವಮುಕ್ತಸ್ತು ಸ ಮಯಾ ವಿಸ್ತರೇಣೇದಮಬ್ರವೀತ್ |
ರೋಧಂ ಮೋಕ್ಷಂ ಚ ಸಾಲ್ವೇನ ಹಾರ್ದಿಕ್ಯೋ ವೃಷ್ಣಿಸತ್ತಮಃ ॥5॥
ನನ್ನಿಂದ ಹೀಗೆ ಕೇಳಲ್ಪಟ್ಟವನಾಗಿ ಹೃದಿಕನ ಮಗನಾದ ವೃಷ್ಣಿಶ್ರೇಷ್ಠನಾದ ಕೃತವರ್ಮನು ವಿಸ್ತಾರವಾಗಿ ಸಾಲ್ವನು ಮುತ್ತಿಗೆ ಹಾಕಿದುದನ್ನೂ ಮತ್ತು ನಗರವನ್ನು ಬಿಟ್ಟು ಹೋದುದನ್ನೂ ತಿಳಿಸಿದನು.
ತತೋಽಹಂ ಕೌರವಶ್ರೇಷ್ಠ ಶ್ರುತ್ವಾಽಪ್ರಿಯಮನುತ್ತಮಮ್ |
ವಿನಾಶೇ ಸಾಲ್ವರಾಜಸ್ಯ ತದೈವಾಕರವಂ ಮತಿಮ್ ॥6॥
ಎಲೈ ಕೌರವಶ್ರೇಷ್ಠನೇ! ಆಗ ನಾನು ಈ ಘೋರವಾದ ಅಪ್ರಿಯವಾರ್ತೆಯನ್ನು ಕೇಳಿ ಸಾಲ್ವರಾಜನನ್ನು ಕೊಲ್ಲಬೇಕೆಂದು ಆಗಲೇ ಮನಸ್ಸಿನಲ್ಲಿ ನಿರ್ಧರಿಸಿದೆ.
ತತೋಽಹಂ ಭರತಶ್ರೇಷ್ಠ ಸಮಾಶ್ವಾಸ್ಯ ಪುರೇ ಜನಮ್ |
ರಾಜಾನಮಾಹುಕಂ ಚೈವ ತಥೈವಾನಕದುಂದುಭಿಮ್ ॥7॥
ಸರ್ವ ವೃಷ್ಣಿಪ್ರವೀರಾಂಶ್ಚ ಹರ್ಷಯನ್ನಬ್ರುವಂ ತದಾ |
ಅಪ್ರಮಾದಃ ಸದಾ ಕಾರ್ಯೋ ನಗರೇ ಯಾದವರ್ಷಭಾಃ ॥8॥
ಎಲೈ ಭರತಶ್ರೇಷ್ಠನೇ! ಅನಂತರ ನಾನು ಪಟ್ಟಣದಲ್ಲಿದ್ದ ಎಲ್ಲಾ ಜನರನ್ನೂ ಆಹುಕರಾಜನನ್ನೂ ಹಾಗೆಯೇ ವಸುದೇವನನ್ನೂ ಮತ್ತು ಎಲ್ಲಾ ವೃಷ್ಣಿವೀರರನ್ನೂ ಸಮಾಧಾನಪಡಿಸಿ ಆವರಿಗೆ ಸಂತೋಷವಾಗುವಂತೆ ಮಾತನಾಡಿದೆನು. ಯಾದವರ್ಷಭರೇ! ಪಟ್ಟಣದಲ್ಲಿ ಯಾವಾಗಲೂ ಎಚ್ಚರಿಕೆಯಿಂದ ಇರಬೇಕು.
ಸಾಲ್ವರಾಜವಿನಾಶಾಯ ಪ್ರಯಾತಂ ಮಾಂ ನಿಬೋಧತ |
ನಾಹತ್ವಾ ತಂ ನಿವರ್ತಿಷ್ಯೇ ಪುರೀಂ ದ್ವಾರವತೀಂ ಪ್ರತಿ ॥9॥
ನಾನು ಸಾಲ್ವರಾಜನ ವಧೆಗಾಗಿ ಹೋಗುತ್ತಿದ್ದೇನೆ ಎಂದು ತಿಳಿಯಿರಿ. ಅವನನ್ನು ಕೊಲ್ಲದೆ ನಾನು ದ್ವಾರವತಿಯ ಪಟ್ಟಣಕ್ಕೆ ಹಿಂದಿರುಗುವುದಿಲ್ಲ.
ಸಸಾಲ್ವಂ ಸೌಭನಗರಂ ಹತ್ವಾ ದ್ರಷ್ಟಾಸ್ಮಿ ವಃ ಪುನಃ |
ತ್ರಿಸಾಮಾ ಹನ್ಯತಾಮೇಷಾ ದುಂದುಭಿಃ ಶತ್ರುಭೀಷಣೀ ॥10॥
ನಾನು ಸಾಲ್ವನನ್ನೂ ಅವನ ಸೌಭಪಟ್ಟಣವನ್ನೂ ವಿನಾಶಮಾಡಿ ಪುನಃ ನಿಮ್ಮನ್ನು ನೋಡುವೆನು. ಶತ್ರು ಭಯಂಕರವಾದ ಈ ತ್ರಿಸಾಮ ಎಂಬ ನಗಾರಿಯು ಮೊಳಗಿಸಲ್ಪಡಲಿ.
ತೇ ಮಯಾಽಽಶ್ವಾಸಿತಾ ವೀರಾ ಯಥಾವದ್ ಭರತರ್ಷಭ |
ಸರ್ವೇ ಮಾಮಬ್ರುವನ್ ಹೃಷ್ಟಾಃ ಪ್ರಯಾಹಿ ಜಹಿ ಶಾತ್ರವಾನ್ ॥11॥
ಎಲೈ ಭರತರ್ಷಭನೇ! ನನ್ನಿಂದ ಯಥಾರ್ಥವಾಗಿ ಆಶ್ವಾಸಿತರಾದ ಆ ವೀರರೆಲ್ಲರೂ ನನ್ನನ್ನು ಕುರಿತು ಹೋಗಿ ಶತ್ರುಗಳನ್ನು ಸಂಹರಿಸು ಎಂದು ಸಂತೋಷದಿಂದ ಹೇಳಿದರು.
ತೈಃ ಪ್ರಹೃಷ್ಟಾತ್ಮಭಿರ್ವೀರೈರಾಶೀರ್ಭಿರಭಿನಂದಿತಃ |
ವಾಚಯಿತ್ವಾ ದ್ವಿಜಶ್ರೇಷ್ಠಾನ್ ಪ್ರಣಮ್ಯ ಶಿರಸಾಽಭವಮ್ ॥12॥
ಸಂತೋಷಗೊಂಡ ಮನಸ್ಸುಳ್ಳ ಆ ವೀರರ ಆಶೀರ್ವಾದಗಳಿಂದ ಅಭಿನಂದಿತನಾದ ನಾನು ಬ್ರಾಹ್ಮಣ ಶ್ರೇಷ್ಠರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಅವರಿಗೆ ಶಿರಸಾಪ್ರಣಾಮಗಳನ್ನು ಮಾಡಿದೆನು.
ಶೈಬ್ಯಸುಗ್ರೀವಯುಕ್ತೇನ ರಥೇನಾನಾದಯನ್ ದಿಶಃ |
ಪ್ರಧ್ಮಾಪ್ಯ ಶಂಖಪ್ರವರಂ ಪಾಂಚಜನ್ಯಂ ಭಯಾವಹಮ್ ॥13॥
ಪ್ರಯಾತೋಽಸ್ಮಿ ನರವ್ಯಾಘ್ರ ಬಲೇನ ಮಹತಾ ವೃತಃ |
ಕ್ಲೃಪ್ತೇನ ಚತುರಂಗೇಣ ಬಲೇನ ಜಿತಕಾಶಿನಾ ॥14॥
ಶೈಬ್ಯಸುಗ್ರೀವ ಎಂಬ ಹೆಸರಿನ ಕುದುರೆಗಳನ್ನು ಹೂಡಿದ ರಥದ ನಾದದಿಂದ ದಿಕ್ಕುಗಳನ್ನು ಪ್ರತಿಧ್ವನಿಸುತ್ತಾ ಶತ್ರುಭಯಂಕರವಾದ ಶ್ರೇಷ್ಠ ಶಂಖವಾದ ಪಾಂಚಜನ್ಯವನ್ನು ಊದುತ್ತಾ ಅಲ್ಲಿಂದ ಹೊರಟೆ. ಎಲೈ ನರವ್ಯಾಘ್ರನೇ! ಸಿದ್ಧವಾದ ದೊಡ್ಡ ಚತುರಂಗ ಸೈನ್ಯದಿಂದ ಯುಕ್ತನಾಗಿ ಜಯವನ್ನು ಬಯಸಿ ಅಲ್ಲಿಂದ ಹೊರಟೆ.
ಸಮತೀತ್ಯ ಬಹೂನ್ ದೇಶಾನ್ ಗಿರೀಂಶ್ಚ ಬಹುಪಾದಪಾನ್ |
ಸರಾಂಸಿ ಸರಿತಶ್ಚೈವ ಮಾರ್ತಿಕಾವತಮಾಸದಮ್ ॥15॥
ಅನೇಕ ದೇಶಗಳನ್ನೂ ಪರ್ವತಗಳನ್ನೂ ಅನೇಕ ವೃಕ್ಷಗಳನ್ನೂ ಸರೋವರಗಳನ್ನೂ ನದಿಗಳನ್ನೂ ದಾಟಿ ಸಾಲ್ವರಾಜನ ಪಟ್ಟಣವಾದ ಮಾರ್ತಿಕಾವತವನ್ನು ತಲುಪಿದೆ.
ತತ್ರಾಶ್ರೌಷಂ ನರವ್ಯಾಘ್ರ ಸಾಲ್ವಂ ನಗರಮಂತಿಕಾತ್ |

ಪ್ರಯಾಂತಂ ಸೌಭಮಾಸ್ಥಾಯ ತಮಹಂ ಪೃಷ್ಠತೋಽನ್ವಯಾಮ್ |
ದೃಷ್ಟವಾನಸ್ಮಿ ರಾಜೇಂದ್ರ ಸಾಲ್ವರಾಜಮಥಾಂತಿಕೇ ॥16॥
ನರವ್ಯಾಘ್ರನೇ! ಅಲ್ಲಿ ನಾನು ಸಾಲ್ವನು ನಗರ ಸಮೀಪದಲ್ಲಿ ಸೌಭವನ್ನು ಏರಿ ಹೋಗುತ್ತಿದ್ದಾನೆ ಎಂದು ಕೇಳಿದೆ. ಎಲೈ ರಾಜೇಂದ್ರನೇ! ನಾನು ಅವನನ್ನು ಹಿಂಬಾಲಿಸಿ ಸಮೀಪದಿಂದ ಆ ಸಾಲ್ವರಾಜನನ್ನು ನೋಡಿದೆ.
ತತಃ ಸಾಗರಮಾಸಾದ್ಯ ಕುಕ್ಷೌ ತಸ್ಯ ಚಲೋರ್ಮಿಣಃ |
ಸಮುದ್ರನಾಭ್ಯಾಂ ಸಾಲ್ವೋಽಭೂತ್ ಸೌಭಮಾಸ್ಥಾಯ ಶತ್ರುಹನ್ ॥
ಎಲೈ ಶತ್ರುಸಂಹಾರಕನೇ! ಅನಂತರ ಸಾಲ್ವನು ಸೌಭದಲ್ಲಿ ಕುಳಿತು ಸಾಗರವನ್ನು ತಲುಪಿ ಅಲೆಗಳಿಂದ ಚಂಚಲಿತವಾದ ಸಾಗರದ ಕುಕ್ಷಿಯಲ್ಲಿ ಸಮುದ್ರದ ಮಧ್ಯದಲ್ಲಿ ನೆಲೆಸಿದನು.
ಸ ಸಮಾಲೋಕ್ಯ ಸಹಸಾ ಸ್ಮಯನ್ನಿವ ಯುಧಿಷ್ಠಿರ |
ಆಹ್ವಯಾಮಾಸ ದುಷ್ಟಾತ್ಮಾ ಯುದ್ಧಾಯೈವ ಮುಹುರ್ಮುಹುಃ ॥18॥
ಯುಧಿಷ್ಠಿರನೇ! ಆ ದುಷ್ಟಾತ್ಮನು ಇದ್ದಕ್ಕಿದ್ದಂತೆ ನನ್ನನ್ನು ನೋಡಿ ನಗುತ್ತಾ ಯುದ್ಧಕ್ಕಾಗಿ ಪುನಃಪುನಃ ಆಹ್ವಾನ ಮಾಡಿದನು.
ಸ ಚಾಪಿ ಪಾಪಪ್ರಕೃತಿರ್ದೈತೇಯಾಪಶದೋ ನೃಪ |
ಪರ್ಯವರ್ಷತ ದುರ್ಧರ್ಷಃ ಶರಧಾರಾಂ ಮಮೋಪರಿ |
ಸೈನಿಕಾನ್ ಮಮ ಸೂತಂ ಚ ಹಯಾಂಶ್ಚ ಸಮವಾಕಿರತ್ ॥19॥
ಎಲೈ ರಾಜನೇ! ಆ ಪಾಪಸ್ವಭಾವದ ದೈತೇಯಾಧಮನಾದರೂ ದುರ್ಧರ್ಷನಾಗಿ ನನ್ನ ಮೇಲೆ ಬಾಣಗಳ ಮಳೆಗಳನ್ನು ಕರೆದನು. ನನ್ನ ಸೈನಿಕರ ಮೇಲೂ ಸಾರಥಿ ಮತ್ತು ಅಶ್ವಗಳ ಮೇಲೆಯೂ ಬಾಣಗಳ ಮಳೆಗಳನ್ನು ಕರೆದನು.
ತಸ್ಯ ಶಾರ್ಙ್ಗವಿನಿರ್ಮುಕ್ತೈರ್ಬಹುಭಿರ್ಮರ್ಮಭೇದಿಭಿಃ |
ಪುರಂ ನಾಸಾದ್ಯತ ಶರೈಸ್ತತೋ ಮಾಂ ರೋಷ ಆವಿಶತ್ |
ಅಚಿಂತಯಂತಸ್ತು ಶರಾನ್ ವಯಂ ಯೋತ್ಸ್ಯಾಮ ಭಾರತ ॥20॥
ನಾನು ಮರ್ಮಭೇದಿಗಳಾದ ಅನೇಕ ಬಾಣಗಳನ್ನು ಶಾರ್ಙ್ಗಧನುಸ್ಸಿನಿಂದ ಪ್ರಯೋಗಿಸಿದರೂ ಅವು ಯಾವವೂ ಅವನ ಪಟ್ಟಣವನ್ನು ತಲುಪಲಿಲ್ಲ. ಆಗ ನನಗೆ ರೋಷ ಉಂಟಾಯಿತು. ಎಲೈ ಭಾರತನೇ! ಅವನ ಬಾಣಗಳನ್ನು ಲೆಕ್ಕಿಸದೆ ನಾನು ಯುದ್ಧವನ್ನು ಮಾಡಿದೆ.
ತತಃ ಶತಸಹಸ್ರಾಣಿ ಶರಾಣಾಂ ನತಪರ್ವಣಾಮ್ |
ಚಿಕ್ಷಿಪುಃ ಸಮರೇ ವೀರಾ ಮಯಿ ಸಾಲ್ವಪದಾನುಗಾಃ ॥21॥
ಅನಂತರ ಸಾಲ್ವನ ಅನುಯಾಯಿಗಳಾದ ವೀರರಾದ ಸೈನಿಕರು ಬಾಗಿದ ತುದಿಯುಳ್ಳ ಹತ್ತಾರುಸಾವಿರ ಬಾಣಗಳನ್ನು ಯುದ್ಧದಲ್ಲಿ ನನ್ನ ಮೇಲೆ ಎಸೆದರು.
ತೇ ಹಯಾನ್ ಮೇ ರಥಂ ಚೈವ ಧ್ವಜಂ ದಾರುಕಮೇವ ಚ |
ಛಾದಯಾಮಾಸುರಸುರಾಃ ಸಾಲ್ವರಾಜೇನ ಚೋದಿತಾಃ ॥22॥
ಸಾಲ್ವರಾಜನಿಂದ ಪ್ರೇರಿತರಾದ ಆ ಅಸುರರು ನನ್ನ ಕುದುರೆಗಳನ್ನೂ ರಥವನ್ನೂ ಧ್ವಜವನ್ನೂ ಮತ್ತು ದಾರುಕನನ್ನೂ ಬಾಣಗಳ ಮಳೆಯಿಂದ ಮುಚ್ಚಿಹಾಕಿದರು.
ನ ಹಯಾ ನ ರಥೋ ವೀರ ನ ಧ್ವಜೋ ನ ಚ ದಾರುಕಃ |
ಅದೃಶ್ಯಂತ ಶರೈಶ್ಛನ್ನಾಸ್ತಥಾಽಹಂ ಸೈನಿಕಾಶ್ಚ ಮೇ ॥23॥
ಎಲೈ ವೀರನೇ! ನನ್ನ ಅಶ್ವಗಳಾಗಲೀ ರಥವಾಗಲೀ ಧ್ವಜವಾಗಲೀ ದಾರುಕನಾಗಲೀ ಎಲ್ಲವೂ ಬಾಣಗಳಿಂದ ಮುಚ್ಚಲ್ಪಟ್ಟು ಯಾವುದೂ ಕಾಣಲಿಲ್ಲ. ಹಾಗೆಯೇ ನಾನು ಮತ್ತು ನನ್ನ ಸೈನಿಕರು ಮುಚ್ಚಲ್ಪಟ್ಟು ಕಾಣಲಿಲ್ಲ.
ತತೋಽಹಮಪಿ ಕೌರವ್ಯ ಶರಾಣಾಮಯುತಾನ್ ಬಹೂನ್ |
ಅಭಿಮಂತ್ರ್ಯ ತೇನ ಧನುಷಾ ದಿವ್ಯೇನ ವಿಧಿನಾಽಕ್ಷಿಪಮ್ ॥24॥
ಎಲೈ ಕೌರವ್ಯನೇ! ಆಗ ನಾನೂ ಸಹ ಅನೇಕ ಹತ್ತಾರುಸಾವಿರ ಬಾಣಗಳನ್ನು ದಿವ್ಯಮಂತ್ರಗಳಿಂದ ಅಭಿಮಂತ್ರಿಸಿ ಧನುಸ್ಸಿನಿಂದ ಪ್ರಯೋಗಮಾಡಿದೆ.
ನ ತತ್ರ ವಿಷಯಸ್ತತ್ವಾಸೀನ್ಮಮ ಸೈನ್ಯಸ್ಯ ಭಾರತ |
ಖೇ ವಿಷಕ್ತಂ ಹಿ ತತ್ಸೈನ್ಯಂ ಕ್ರೋಶಮಾತ್ರಾತ್ ತದಾಽಭವತ್ ॥25॥
ಎಲೈ ಭಾರತನೇ! ಅಲ್ಲಿ ಯಾರೂ ನನ್ನ ಸೈನ್ಯದ ಬಾಣಗಳಿಗೆ ಗುರಿಯಾಗಲಿಲ್ಲ. ಆಕಾಶದಲ್ಲಿದ್ದ ಸಾಲ್ವನ ಸೈನ್ಯವು ಒಂದು ಕ್ರೋಶದೂರ ಹಿಂದಕ್ಕೆ ಸರಿಯಿತು.
ತತಸ್ತೇ ಪ್ರೇಕ್ಷಕಾಃ ಸರ್ವೇ ದೇವಾ ಯೇ ದಿವಮಾಸ್ಥಿತಾಃ |
ಹರ್ಷಯಾಮಾಸುರುಚ್ಚೈರ್ಮಾಂ ಸಿಂಹನಾದತಳಸ್ವನೈಃ ॥26॥
ಆಗ ಆಕಾಶದಲ್ಲಿ ನಿಂತು ಪ್ರೇಕ್ಷಕರಾಗಿದ್ದ ದೇವತೆಗಳೆಲ್ಲರೂ ಸಿಂಹನಾದಗಳನ್ನೂ ಚಪ್ಪಾಳೆಯ ಶಬ್ದಗಳನ್ನೂ ಮಾಡಿ ನನ್ನನ್ನು ಬಹಳವಾಗಿ ಉತ್ಸಾಹಗೊಳಿಸಿದರು.
ಮತ್ಕಾರ್ಮುಕವಿನಿರ್ಮುಕ್ತಾ ಬಾಣಾಸ್ತೇ ವಾತರಂಹಸಃ |
ಅಂಗೇಷು ರುಧಿರಾಭ್ಯಕ್ತಾ ವಿವಿಶುಃ ಶಲಭಾ ಇವ ॥27॥
ನನ್ನ ಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ವಾಯುವೇಗವುಳ್ಳ ಆ ಬಾಣಗಳು ದೀಪದ ಹುಳುಗಳಂತೆ ಅವರ ದೇಹಗಳಲ್ಲಿ ರಕ್ತದಿಂದ ಲೇಪಿತವಾಗಿ ಪ್ರವೇಶಿಸಿದವು.
ತತೋ ಹಲಹಲಾಶಬ್ದಃ ಸೌಭಮಧ್ಯೇಽಭ್ಯವರ್ತತ |

ವಧ್ಯತಾಂ ವಿಶಿಖೈಸ್ತೀಕ್ಷ್ಣೈಃ ಪತತಾಂ ಚ ಮಹಾರ್ಣವೇ ॥28॥
ಅನಂತರ ಹರಿತವಾದ ಬಾಣಗಳಿಂದ ವಧಿಸಲ್ಪಟ್ಟು ದೊಡ್ಡ ಸಮುದ್ರದಲ್ಲಿ ಬೀಳುವ ಆ ಸೈನ್ಯಿಕರ ದೊಡ್ಡ ಹಾಹಾಕಾರ ಶಬ್ದವು ಸೌಭಮಧ್ಯದಲ್ಲಿ ಉಂಟಾಯಿತು.
ತೇ ನಿಕೃತ್ತಭುಜಸ್ಕಂಧಾಃ ಕಬಂಧಾಃ ಕ್ರೂರದರ್ಶನಾಃ |
ನದಂತೋ ಭೈರವಾನ್ ನಾದಾನ್ ನಿಪತಂತಿ ಸ್ಮ ದಾನವಾಃ |
ಪತಿತಾಸ್ತೇ ವಿಲಕ್ಷ್ಯಂತೇ ಸಮುದ್ರಾಂಭೋನಿವಾಸಿಭಿಃ ॥29॥
ದಾನವರು ಭುಜ ಮತ್ತು ಕಂಠಗಳಲ್ಲಿ ಕತ್ತರಿಸಲ್ಪಟ್ಟು ಕಬಂಧ ರುಂಡವಿಲ್ಲದ ಮುಂಡಗಳು ಭಯಂಕರವಾಗಿ ಕಾಣಿಸುತ್ತಾ ಘೋರನಾದವನ್ನು ಮಾಡುತ್ತಾ ಸಮುದ್ರದೊಳಗೆ ಬೀಳುತ್ತಿದ್ದವು. ಅವು ಬೀಳುವುದನ್ನು ಸಮುದ್ರಜಲದಲ್ಲಿ ವಾಸಿಸುವವರು ನೋಡುತ್ತಿದ್ದರು.
ತತೋ ಗೋಕ್ಷೀರಕುಂದೇಂದುಮೃಣಾಲರಜತಪ್ರಭಮ್ |
ಜಲಜಂ ಪಾಂಚಜನ್ಯಂ ಚ ಪ್ರಾಣೇನಾಹಮಪೂರಯಮ್ ॥30॥
ಆಗ ಗೋಕ್ಷೀರದಂತೆ ಮಲ್ಲಿಗೆ ಪುಷ್ಪದಂತೆ ಚಂದ್ರನಂತೆ ಕಮಲದ ಎಳೆಯಂತೆ ಬೆಳ್ಳಿಯಂತೆ ಕಾಂತಿಯುಳ್ಳ ನನ್ನ ಪಾಂಚಜನ್ಯ ಶಂಖವನ್ನು ನಾನು ಗಟ್ಟಿಯಾಗಿ ಊದಿದೆನು.
ತಾನ್ ದೃಷ್ಟ್ವಾ ಪತಿತಾಂಸ್ತತ್ರ ಸಾಲ್ವಃ ಸೌಭಪತಿಸ್ತದಾ |
ಮಾಯಾಯುದ್ಧೇನ ಮಹತಾ ಯೋಧಯಾಮಾಸ ಮಾಂ ಯುಧಿ ॥
ತನ್ನ ಸೈನ್ಯಿಕರು ಬೀಳುತ್ತಿರುವುದನ್ನು ನೋಡಿದ ಸೌಭಪತಿಯಾದ ಸಾಲ್ವನು ಆಗ ದೊಡ್ಡ ಮಾಯಾಯುದ್ಧವನ್ನು ಮಾಡಿ ನನ್ನ ಜೊತೆಯಲ್ಲಿ ಹೋರಾಡಿದನು.
ಅಸಯಃ ಶಕ್ತಿಮುಸಲಾಃ ಪ್ರಾಸರ್ಷ್ಟಿಪರಿಘಾಃ ಶರಾಃ |
ತತೋ ಹುಳಹುಳಾಃ ಪ್ರಾಸಾ ಗದಾಶೂಲಪರಶ್ವಧಾಃ |
ಪಟ್ಟಸಾಶ್ಚ ಮುಸುಂಡ್ಯಶ್ಚ ಪ್ರಪತಂತ್ಯನಿಶಂ ಮಯಿ ॥32॥
ಖಡ್ಗಗಳು ಶಕ್ತ್ಯಾಯುಧಗಳು ಮುಸಲಗಳು ಪ್ರಾಸಗಳು ಋಷ್ಟಿಗಳು ಪರಿಘಗಳು ಬಾಣಗಳು ಹುಳಹುಳಗಳು ಗದೆಗಳು ಶೂಲಗಳು ಪರಶುಗಳು ಪಟ್ಟಸಗಳು ಮುಸುಂಡಿಗಳು ಎಲ್ಲವೂ ನನ್ನ ಮೇಲೆ ಸತತವಾಗಿ ಬಿದ್ದವು.
ತಾಮಹಂ ಮಾಯಯೈವಾಶು ಪ್ರತಿಗೃಹ್ಯ ವ್ಯನಾಶಯಮ್ |
ತಸ್ಯಾಂ ಹತಾಯಾಂ ಮಾಯಾಯಾಂ ಗಿರಿಶೃಂಗೈರಯೋಧಯತ್ ॥33॥
ಆ ಆಸುರೀಮಾಯೆಯನ್ನು ನಾನು ತಕ್ಷಣ ನನ್ನ ಮಾಯೆಯಿಂದಲೇ ಎದುರಿಸಿ ನಾಶಮಾಡಿದೆನು. ತನ್ನ ಮಾಯೆಯು ನಾಶಹೊಂದಿದ ಮೇಲೆ ಸಾಲ್ವನು ಗಿರಿಶೃಂಗಗಳಿಂದ ಯುದ್ಧವನ್ನು ಮಾಡಿದನು.
ತತೋಽಭವತ್ ತಮ ಇವ ಪ್ರಕಾಶ ಇವ ಚಾಭವತ್ |
ದುರ್ದಿನಂ ಸುದಿನಂ ಚೈವ ಶೀತಮುಷ್ಣಂ ಚ ಭಾರತ |
ಅಂಗಾರಪಾಂಸುವರ್ಷಂ ಚ ಶಸ್ತ್ರವೃಷ್ಟಿಶ್ಚ ಭಾರತ ॥34॥
ಅನಂತರ ಇದ್ದಕ್ಕಿದ್ದಂತೆ ಕತ್ತಲೆ ಮತ್ತು ಪ್ರಕಾಶಗಳು ಉಂಟಾದವು. ಮೋಡಗಳು ಕವಿದವು ಮತ್ತು ಚದುರಿದವು. ಉಷ್ಣವಾಯಿತು ಮತ್ತು ಶೀತಲವಾಯಿತು. ಅಂಗಾರದ ಮಳೆಯೂ ಧೂಳಿನ ಮಳೆಯೂ ಮತ್ತು ಶಸ್ತ್ರಗಳ ಮಳೆಯೂ ನನ್ನ ಮೇಲೆ ಉಂಟಾಯಿತು.
ಏವಂ ಮಾಯಾಂ ವಿಕುರ್ವಾಣೋ ಯೋಧಯಾಮಾಸ ಮಾಂ ರಿಪುಃ |
ವಿಜ್ಞಾಯ ತದಹಂ ಸರ್ವಂ ಮಾಯಯೈವ ವ್ಯನಾಶಯಮ್ ॥35॥
ಹೀಗೆ ವಿಧವಿಧವಾದ ಮಾಯೆಯನ್ನು ಮಾಡುತ್ತಾ ಶತ್ರುವು ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ನಾನು ಅದನ್ನು ತಿಳಿದು ಎಲ್ಲವನ್ನೂ ನನ್ನ ಮಾಯೆಯಿಂದಲೇ ನಾಶಮಾಡಿದೆನು.
ಯಥಾಕಾಲಂ ತು ಯುದ್ಧೇನ ವ್ಯಧಮಂ ಸರ್ವತಃ ಶರೈಃ |
ತತೋ ವ್ಯೋಮ ಮಹಾರಾಜ ಶತಸೂರ್ಯಮಿವಾಭವತ್ ॥36॥
ಶತಚಂದ್ರಂ ಚ ಕೌಂತೇಯ ಸಹಸ್ರಾಯುತತಾರಕಮ್ |
ತತೋ ನಾಜ್ಞಾಯತ ತದಾ ದಿವಾರಾತ್ರಂ ತಥಾ ದಿಶಃ ॥37॥
ತತೋಽಹಂ ಮೋಹಮಾಪನ್ನಃ ಪ್ರಜ್ಞಾಸ್ತ್ರಂ ಸಮಯೋಜಯಮ್ |
ತತಸ್ತದಸ್ತ್ರಂ ಮಂತ್ರೇಣ ವಿಧೂತಂ ಶರಜಾಲವತ್ ॥38॥
ಆ ಕಾಲಕ್ಕೆ ಅನುಗುಣವಾಗಿ ಯುದ್ಧದಲ್ಲಿ ನನ್ನ ಬಾಣಗಳಿಂದ ಅವನ ಮಾಯೆಯನ್ನು ನಾಶವಪಡಿಸಿದೆನು. ಮಹಾರಾಜನೇ! ಆಗ ಆಕಾಶದಲ್ಲಿ ಇದ್ದಕ್ಕಿದ್ದಂತೆಯೇ ಸಹಸ್ರಸೂರ್ಯರು ಶತಚಂದ್ರರು ಹತ್ತಾರು ಸಹಸ್ರ ನಕ್ಷತ್ರಗಳು ಕಂಡು ಬಂದವು ಆಗ ಹಗಲಾಗಲೀ ರಾತ್ರಿಯಾಗಲೀ ಅಥವಾ ದಿಕ್ಕುಗಳಾಗಲೀ ತಿಳಿಯಲಿಲ್ಲ. ಆಗ ನಾನು ವಿಜ್ಞಾನಾಸ್ತ್ರವನ್ನು ತೆಗೆದುಕೊಂಡು ಅದನ್ನು ಪ್ರಯೋಗಿಸಿದೆನು. ಶರಜಾಲವನ್ನುಳ್ಳ ಆ ಅಸ್ತ್ರವು ನನ್ನ ಮಂತ್ರದ ಬಲದಿಂದ ಸಾಲ್ವನ ಅಸ್ತ್ರವನ್ನು ನಾಶಮಾಡಿತು.
ಏವಂ ತದಭವದ್ಯುದ್ಧಂ ತುಮುಲಂ ರೋಮಹರ್ಷಣಮ್ |
ಲಬ್ಧ್ವಾಽಽಲೋಕಂ ಚ ರಾಜೇಂದ್ರ ಪುನಃಶತ್ರುಮಯೋಧಯಮ್ ॥
ರಾಜೇಂದ್ರನೇ! ಹೀಗೆ ತೀವ್ರವೂ ಮತ್ತು ರೋಮಾಂಚಕಾರಿಯೂ ಆದ ಆ ಯುದ್ಧವು ಜರುಗಿತು. ನಾನು ಪುನಃ ಬೆಳಕನ್ನು ಕಂಡು ಶತ್ರುವಿನ ಜೊತೆಯಲ್ಲಿ ಯುದ್ಧವನ್ನು ಮಾಡಿದೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತದಶೋಽಧ್ಯಾಯಃ ॥

॥ ಕೈರಾತಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
*****
ಹದಿನೆಂಟನೆಯ ಅಧ್ಯಾಯ
(ಕೃಷ್ಣಸಾಲ್ವರ ಯುದ್ಧ,ಸಾಲ್ವನಿಂದ ಮಾಯಾ ಸೃಷ್ಟಿ, ಕೃಷ್ಣನ ಪ್ರತಿಬೋಧ.)
ಶ್ರೀಭಗವಾನ್
ಏವಂ ಸ ಪುರುಷವ್ಯಾಘ್ರ ಸಾಲ್ವರಾಜೋ ಮಹಾರಿಪುಃ |
ಯುಧ್ಯಮಾನೋ ಮಯಾ ಸಂಖೇ ವಿಯದಭ್ಯಗಮತ್ ಪುನಃ ॥1॥
ಪುರುಷವ್ಯಾಘ್ರನೇ! ಮಹಾಶತ್ರುವಾದ ಆ ಸಾಲ್ವರಾಜನು ಹೀಗೆ ನನ್ನ ಜೊತೆಯಲ್ಲಿ ಯುದ್ಧಮಾಡುತ್ತಾ ಪುನಃ ಆಕಾಶವನ್ನು ಏರಿದನು.
ತತಃ ಶತಘ್ನೀಶ್ಚ ಮಹಾಗದಾಶ್ಚ
ದೀಪ್ತಾನ್ ಶೂಲಾನ್ಮುಸಲಾನಸೀಂಶ್ಚ |
ಚಿಕ್ಷೇಪ ರೋಷನ್ಮಯಿ ಮಂದಬುದ್ಧಿಃ
ಸಾಲ್ವೋ ಮಹಾರಾಜ ಜಯಾಭಿಕಾಂಕ್ಷೀ ॥2॥
ಎಲೈ ಮಹಾರಾಜನೇ! ಅನಂತರ ಜಯವನ್ನು ಬಯಸುತ್ತಾ ಮಂದಬುದ್ಧಿಯಾದ ಆ ಸಾಲ್ವನು ರೋಷದಿಂದ ನನ್ನ ಮೇಲೆ ಶತಘ್ನಿಗಳನ್ನು ಮಹಾಗದೆಗಳನ್ನು ಜ್ವಲಿಸುವ ಶೂಲಗಳನ್ನು ಮುಸಲಗಳನ್ನು ಮತ್ತು ಖಡ್ಗಗಳನ್ನು ಎಸೆದನು.
ತಾನಾಶುಗೈರಾಪತತೋಽಹಮಾಶು
ನಿವಾರ್ಯ ತೂರ್ಣಂ ಖಗಮಾನ್ ಖ ಏವ |
ದ್ವಿಧಾ ತ್ರಿಧಾ ವಾಽಚ್ಛಿದಮಸ್ತ್ರಮುಕ್ತೈಃ
ತತೋಽಂತರಿಕ್ಷೇ ನಿನದೋ ಬಭೂವ ॥3॥
ಆಕಾಶದಲ್ಲಿ ಬರುತ್ತಿರುವಾಗಲೇ ನಾನು ಅವುಗಳನ್ನು ತಡೆದು ನನ್ನ ಅಸ್ತ್ರಮುಕ್ತವಾದ ಬಾಣಗಳಿಂದ ಆಕಾಶದಲ್ಲಿಯೇ ಅವುಗಳನ್ನು ಎರಡು ಮೂರು ತುಂಡುಗಳಾಗಿ ಕತ್ತರಿಸಿದೆನು. ಆಗ ಅಂತರಿಕ್ಷದಲ್ಲಿ ದೊಡ್ಡ ನಾದವುಂಟಾಯಿತು.
ತತಃ ಶತಸಹಸ್ರೇಣ ಶರಾಣಾಂ ನತಪರ್ವಣಾಮ್ |
ದಾರುಕಂ ವಾಜಿನಶ್ಚೈವ ರಥಂ ಚ ಸಮವಾಕಿರತ್ ॥4॥
ಆಗ ಸಾಲ್ವನು ಬಾಗಿದ ತುದಿಯುಳ್ಳ ಒಂದು ಲಕ್ಷಬಾಣಗಳಿಂದ ದಾರುಕನನ್ನೂ ಅಶ್ವಗಳನ್ನೂ ಮತ್ತು ರಥವನ್ನೂ ಮಳೆಗೆರೆದನು.
ತತೋ ಬಾಣವಧೋತ್ಪೀಡೋ ದಾರುಕೋ ವಿಹ್ವಲನ್ನಿವ |
ಸ್ಥಾತವ್ಯಮಿತಿ ತಿಷ್ಠಾಮಿ ಸಾಲ್ವಬಾಣಪ್ರಪೀಡಿತಃ ॥5॥
ಆಗ ಬಾಣಗಳ ಪ್ರಹಾರದಿಂದ ಬಹಳವಾಗಿ ಪೀಡೆಯನ್ನು ಹೊಂದಿದ ದಾರುಕನು ವೇದನೆಯಿಂದ ವಿಹ್ವಲನಾಗಿ ಸಾಲ್ವಬಾಣಪೀಡಿತನಾದ ತಾನು ಯುದ್ಧದಲ್ಲಿ ಇರಬೇಕೆಂಬ ಒಂದೇ ನಿಯಮದಿಂದ ಇಲ್ಲಿ ಇದ್ದೇನೆ ಎಂದು ಹೇಳಿದನು.
ಇತಿ ತಸ್ಯ ನಿಶಮ್ಯಾಹಂ ಸಾರಥೇಃ ಕರುಣಂ ವಚಃ |
ಅವೇಕ್ಷಮಾಣೋ ಯಂತಾರಮವಶಂ ಶರಪೀಡಿತಮ್ ॥6॥
ನ ತಸ್ಯೋರಸಿ ನೋ ಮೂರ್ಧ್ನಿ ನ ಕಾಯೇ ನ ಭುಜದ್ವಯೇ |
ಅಂತರಂ ಪಾಂಡವಶ್ರೇಷ್ಠ ಪಶ್ಯಾಮಿ ನಿಚಿತಂ ಶರೈಃ ॥7॥
ಹೀಗೆ ನಾನು ಸಾರಥಿಯ ಕರುಣಾಜನಕವಾದ ಮಾತುಗಳನ್ನು ಕೇಳಿ ಅವನ ಕಡೆಗೆ ನೋಡಿ ಅವನು ಶರಪೀಡಿತನಾಗಿ ವಿವಶನಾಗಿರುವುದನ್ನು ಗಮನಿಸಿದೆನು. ಎಲೈ ಪಾಂಡವಶ್ರೇಷ್ಠನೇ! ಅವನ ಎದೆಯಲ್ಲಾಗಲೀ ತಲೆಯಲ್ಲಾಗಲೀ ಭುಜದಲ್ಲಾಗಲೀ ದೇಹದಲ್ಲಾಗಲೀ ಬಾಣವು ನೆಡದಿದ್ದ ಒಂದು ಸ್ವಲ್ಪ ಸ್ಥಳವೂ ಇರಲಿಲ್ಲ.
ಸ ತು ಬಾಣವಧೋತ್ಪೀಡೋ ವ್ಯಸೃಜದ್ ರುಧಿರಂ ಬಹು |
ಅಭಿವೃಷ್ಟೋ ಯಥಾ ಮೇಘೈರ್ಗಿರಿರ್ಗೈರಿಕಧಾತುಮಾನ್ ॥8॥
ಅವನು ಬಾಣಪ್ರಹಾರದಿಂದ ಬಹಳ ಬಾದೆಗೆ ಒಳಗಾಗಿ ಮೋಡಗಳು ಮಳೆಗರೆದ ಗೈರಿಕಾದಿಧಾತುವುಳ್ಳ ಪರ್ವತದಂತೆ ಬಹಳವಾಗಿ ರಕ್ತಸ್ರಾವವನ್ನು ಹೊಂದಿದನು.
ಅಭೀಶುಹಸ್ತಂ ತಂ ದೃಷ್ಟ್ವಾ ಸೀದಂತಂ ಸಾರಥಿಂ ರಣೇ |
ಸಂಸ್ತಂಭಯಂ ಮಹಾಬಾಹೋ ಸಾಲ್ವಬಾಣಪ್ರಪೀಡಿತಮ್ ॥9॥
ಎಲೈ ಮಹಾಬಾಹುವೇ! ಸಾಲ್ವಬಾಣಗಳಿಂದ ಪೀಡಿತನಾಗಿದ್ದರೂ ಕೈಯಲ್ಲಿ ಕಡಿವಾಣವನ್ನು ಹಿಡಿದು ಯುದ್ಧದಲ್ಲಿ ವಿಷಾದಕ್ಕೆ ಒಳಗಾಗುತ್ತಿದ್ದ ಸಾರಥಿಯನ್ನು ನೋಡಿ ಅವನನ್ನು ನಾನು ಸಮಾಧಾನಗೊಳಿಸಿದೆನು. (ಸ್ತಂಭನಗೊಳಿಸಿದೆನು)
ತ್ವರಿತೋ ರಥಮಾರೋಪ್ಯ ಸೌಹೃದಾದಿವ ಭಾರತ |
ಆಹುಕಸ್ಯ ವಚೋ ವೀರ ತಸ್ಯೈವ ಪರಿಚಾರಕಃ |
ವಿಷಣ್ಣಾಸನ್ನಕಂಠೇನ ತನ್ನಿಬೋಧ ಯುಧಿಷ್ಠಿರ ॥10॥
ಎಲೈ ಭಾರತನೇ! ಎಲೈ ಯುಧಿಷ್ಠಿರನೇ! ಆಗ ಇದ್ದಕ್ಕಿದ್ದಂತಯೇ ಆಹುಕನ ಒಬ್ಬ ಪರಿಚಾರಕನು ಸ್ನೇಹದಿಂದಲೋ ಎಂಬಂತೆ ಶೀಘ್ರವಾಗಿ ನನ್ನ ರಥವನ್ನು ಏರಿ ವಿಷಾದಯುಕ್ತವಾದ ಕಂಠದಿಂದ ಏನು ಹೇಳಿದನೆಂಬುದನ್ನು ನೀನು ಕೇಳು.
ದ್ವಾರಕಾಧಿಪತಿರ್ವೀರ ಆಹ ತ್ವಾಮಾಹುಕೋ ವಚಃ |
ಕೇಶವೇಹ ವಿಜಾನೀಷ್ವ ಯತತ್ತ್ವಂ ಪಿತೃಸಖೋಽಬ್ರವೀತ್ ॥11॥

ಎಲೈ ವೀರನೇ! ದ್ವಾರಕಾಧಿಪತಿಯಾದ ಆಹುಕನು ನಿನಗೆ ಈ ಮಾತನ್ನು ಹೇಳಿಕಳುಹಿಸಿದ್ದಾನೆ. ಎಲೈ ಕೇಶವನೇ! ನಿನ್ನ ತಂದೆಯ ಸ್ನೇಹಿತನಾದ ಆಹುಕನು ಹೇಳಿದ ವಿಷಯವನ್ನು ನೀನು ತಿಳಿದುಕೋ.

ಉಪಯಾತ್ವಾದ್ಯ ಸಾಲ್ವೇನ ದ್ವಾರಕಾಂ ವೃಷ್ಣಿನಂದನ |
ವಿಷಕ್ತೇ ತ್ವಯಿ ದುರ್ಧರ್ಷ ಹತಃ ಶೂರಸುತೋ ಬಲಾತ್ ॥12॥

ಎಲೈ ದುರ್ಧರ್ಷನೇ! ವೃಷ್ಣಿನಂದನನೇ! ನೀನು ಸಾಲ್ವನ ಸೈನ್ಯದ ಜೊತೆಯಲ್ಲಿ ಯುದ್ಧಮಾಡುತ್ತಿರುವಾಗ ಸಾಲ್ವನು ದ್ವಾರಕೆಗೆ ಬಂದು ಈ ದಿನ ಶೂರಸುತನಾದ ವಸುದೇವನನ್ನು ತನ್ನ ಬಲದಿಂದ ಕೊಂದಿದ್ದಾನೆ.

ತದಲಂ ಸಾಧು ಯುದ್ಧೇನ ನಿವರ್ತಸ್ವ ಜನಾರ್ದನ |
ದ್ವಾರಕಾಮೇವ ರಕ್ಷಸ್ವ ಕಾರ್ಯಮೇತನ್ಮಹತ್ ತವ ॥13॥

ಜನಾರ್ದನನೇ! ಯುದ್ಧಮಾಡುವುದು ಸಾಕು. ಯುದ್ಧದಿಂದ ಹಿಂದಿರುಗಿ ದ್ವಾರಕೆಯನ್ನು ರಕ್ಷಿಸು. ಇದು ನೀನು ಮಾಡಬೇಕಾದ ದೊಡ್ಡ ಕಾರ್ಯ.

ಶ್ರೀಭಗವಾನ್

ಇತ್ಯೇವಂ ತಸ್ಯ ವಚನಂ ಶ್ರುತ್ವಾ ಪರಮದುರ್ಮನಾಃ |
ನಿಶ್ಚಯಂ ನಾಧಿಗಚ್ಛಾಮಿ ಕರ್ತವ್ಯಸ್ಯೇತರಸ್ಯ ವಾ ॥14॥

ಹೀಗೆ ಅವನ ಮಾತನ್ನು ಕೇಳಿ ಬಹಳ ವಿಷಾದದಿಂದ ಕೂಡಿದ ಮನಸ್ಸುಳ್ಳವನಾಗಿ ನಾನು ಏನು ಮಾಡಬೇಕು ಏನು ಮಾಡಬಾರದು ಎಂದು ನಿಶ್ಚಯಿಸಲು ಸಾಧ್ಯವಾಗಲಿಲ್ಲ.

ಸಾತ್ಯಕಿಂ ಬಲದೇವಂ ಚ ಪ್ರದ್ಯುಮ್ನಂ ಚ ಮಹಾಬಲಮ್ |
ವಿಗರ್ಹೇ ಮನಸಾ ವೀರಾಂಸ್ತಚ್ಛ್ರುತ್ವಾ ಚಾಪ್ರಿಯಂ ವಚಃ ॥15॥

ಆ ಅಪ್ರಿಯವಾದ ವಾರ್ತೆಯನ್ನು ಕೇಳಿ ವೀರರಾದ ಸಾತ್ಯಕಿಯನ್ನೂ ಬಲದೇವನನ್ನೂ ಮಹಾಬಲಶಾಲಿಯಾದ ಪ್ರದ್ಯುಮ್ನನನ್ನೂ ಮನಸ್ಸಿನಲ್ಲಿಯೇ ನಿಂದಿಸಿದೆ.

ಅಹಂ ಹಿ ದ್ವಾರಕಾಯಾಶ್ಚ ಪಿತುಶ್ಚ ಕುರುನಂದನ |
ತೇಷು ರಕ್ಷಾಂ ಸಮಾಧಾಯ ಪ್ರಯಾತಃ ಸೌಭಪಾತನೇ |
ಬಲದೇವೋ ಮಹಾಬಾಹುಃ ಕಚ್ಚಿಜ್ಜೀವತಿ ಶತ್ರುಹಾ ॥16॥

ಎಲೈ ಕುರುನಂದನನೇ! ನಾನಾದರೂ ದ್ವಾರಕೆ ಮತ್ತು ವಸುದೇವನ ರಕ್ಷಣೆಯನ್ನು ಇವರಿಗೆ ವಹಿಸಿ ಸೌಭನನ್ನು ಕೊಲ್ಲುವುದಕ್ಕೆ ಹೊರಟುಬಂದಿದ್ದೆ. ಈಗ ಮಹಾಬಾಹುವೂ ಶತ್ರುಘಾತಕನೂ ಆದ ಬಲದೇವನು ಬದುಕಿದ್ದಾನೆಯೋ ಇಲ್ಲವೋ?

ಸಾತ್ಯಕಿಶ್ಚಾರುದೇಷ್ಣಶ್ಚ ರೌಗ್ಮಿಣೇಯಶ್ಚ ವೀರ್ಯವಾನ್ |
ಸಾಂಬಪ್ರಭೃತಯಶ್ಚೈವೇತ್ಯಹಮಾಸಂ ಸುದುರ್ಮನಾಃ ॥17॥

ಹಾಗೆಯೇ ಸಾತ್ಯಕಿ ರುಗ್ಮಿಣಿಯ ಪುತ್ರನಾದ ಪ್ರತಾಪಶಾಲಿಯಾದ ಚಾರುದೇಷ್ಣ ಮತ್ತು ಸಾಂಬ ಮೊದಲಾದವರು ಜೀವಿಸಿದ್ದಾರೆಯೋ ಇಲ್ಲವೋ ಎಂದು ಚಿಂತಿಸಿ ನಾನು ಬಹಳ ವಿಷಾದಗೊಂಡೆನು.

ಏತೇಷು ಹಿ ನರವ್ಯಾಘ್ರ ಜೀವತ್ಸು ನ ಕಥಂಚನ |
ಶಕ್ಯಃ ಶೂರಸುತೋ ಹಂತುಮಪಿ ವಜ್ರಭೃತಾ ಸ್ವಯಮ್ ॥18॥

ಎಲೈ ನರವ್ಯಾಘ್ರನೇ! ಈ ವೀರರು ಬದುಕಿರುವಾಗ ಇಂದ್ರನೂ ಕೂಡ ತಾನೇ ಬಂದರೂ ಶೂರಸುತನಾದ ವಸುದೇವನನ್ನು ಕೊಲ್ಲಲು ಸಾಧ್ಯವಿಲ್ಲ.

ಹತಃ ಶೂರಸುತೋ ವ್ಯಕ್ತಂ ವ್ಯಕ್ತಂ ತೇ ಚ ಪರಾಸವಃ |
ಬಲದೇವಮುಖಾಃ ಸರ್ವ ಇತಿ ಮೇ ನಿಶ್ಚಿತಾ ಮತಿಃ ॥19॥

ಆದರೆ ಸ್ಪಷ್ಟವಾಗಿ ವಸುದೇವನು ಮೃತನಾಗಿದ್ದಾನೆ. ಬಲರಾಮ ಮೊದಲಾದವರೂ ಸ್ಪಷ್ಟವಾಗಿ ಮೃತರಾಗಿದ್ದಾರೆ ಎಂದು ನಾನು ನಿಶ್ಚಯಿಸಿದೆ.

ಸೋಽಹಂ ಸರ್ವವಿನಾಶಂ ತಂ ಚಿಂತಯಾನೋ ಮುಹುರ್ಮುಹುಃ |
ಸುವಿಹ್ವಲೋ ಮಹಾರಾಜ ಪುನಃ ಸಾಲ್ವಮಯೋಧಯಮ್ ॥20॥

ಎಲೈ ಮಹಾರಾಜನೇ! ಅಂತಹ ನಾನು ಮತ್ತೆ ಮತ್ತೆ ಸರ್ವವಿನಾಶವನ್ನು ಚಿಂತಿಸುತ್ತಾ ಬಹಳ ವಿಹ್ವಲನಾಗಿ ಪುನಃ ಸಾಲ್ವನ ಜೊತೆಯಲ್ಲಿ ಯುದ್ಧವನ್ನು ಮಾಡಿದೆ.

ತತೋಽಪಶ್ಯಂ ಮಹಾರಾಜ ಪ್ರಪತಂತಮಹಂ ನೃಪ |
ಸೌಭಾಚ್ಛೂರಸುತಂ ವೀರ ತತೋ ಮಾಂ ಮೋಹ ಆವಿಶತ್ ॥21॥

ಮಹಾರಾಜನೇ! ಆಗ ನಾನು ಸೌಭದಿಂದ ವಸುದೇವನು ಕೆಳಗೆ ಬೀಳುತ್ತಿರುವುದನ್ನು ನೋಡಿದೆನು. ಎಲೈ ವೀರನೇ! ಆಗ ನನ್ನನ್ನು ಮೋಹವು ಆವರಿಸಿತು.

ತಸ್ಯ ರೂಪಂ ಪ್ರಪತತಃ ಪಿತುರ್ಮಮ ನರಾಧಿಪ |
ಯಯಾತೇಃ ಕ್ಷೀಣಪುಣ್ಯಸ್ಯ ಸ್ವರ್ಗಾದಿವ ಮಹೀತಳಮ್ ॥22॥

ಎಲೈ ನರಾಧಿಪನೇ! ಸೌಭದಿಂದ ಕೆಳಗೆ ಬೀಳುತ್ತಿದ್ದ ನನ್ನ ತಂದೆಯ ರೂಪವು ಪುಣ್ಯವನ್ನು ಕಳೆದುಕೊಂಡು ಸ್ವರ್ಗದಿಂದ ಭೂಮಿಗೆ ಬೀಳುತ್ತಿದ್ದ ಯಯಾತಿಯ ರೂಪದಂತಿದ್ದಿತು.

ವಿಶೀರ್ಣಗಲಿತೋಷ್ಣೀಷಃ ಪ್ರಕೀರ್ಣಾಂಬರಮೂರ್ಧಜಃ |
ಪ್ರಪತನ್ ದೃಶ್ಯತೇ ಹ ಸ್ಮ ಕ್ಷೀಣಪುಣ್ಯ ಇವ ಗ್ರಹಃ ॥23॥

ಹರಿದು ಹೋಗಿ ಜಾರುತ್ತಿರುವ ತಲೆಯರುಮಾಲು ಮತ್ತು ಕೆದರಿದ ಬಟ್ಟೆ ಕೂದಲುಗಳಿಂದ ಬೀಳುತ್ತಿದ್ದ ಅವನು ಪುಣ್ಯವನ್ನು ಕಳೆದುಕೊಂಡು ಭೂಮಿಗೆ ಬೀಳುತ್ತಿರುವ ಒಂದು ಗ್ರಹದಂತೆ ಕಂಡನು.
ತತಃ ಶಾರ್ಙ್ಗಂ ಧನುಃಶ್ರೇಷ್ಠಂ ಕರಾತ್ ಪ್ರಪತಿತಂ ಮಮ |
ಮೋಹಾಪನ್ನಸ್ತು ಕೌಂತೇಯ ರಥೋಪಸ್ಥ ಉಪಾವಿಶಮ್ ||24||
ಎಲೈ ಕೌಂತೇಯನೇ! ಆಗ ನನ್ನ ಶ್ರೇಷ್ಠವಾದ ಶಾರ್ಙ್ಗಧನುಸ್ಸು ಕೈಯಿಂದ ಕೆಳಗೆ ಬಿದ್ದಿತು. ಮೋಹಾವಿಷ್ಟನಾಗಿ ರಥದ ಪೀಠದಲ್ಲಿ ಕುಳಿತುಕೊಂಡೆನು.
ತತೋ ಹಾಹಾಕೃತಂ ಸರ್ವಂ ಸೈನ್ಯಂ ಮೇ ಗತಚೇತನಮ್ |
ಮಾಂ ದೃಷ್ಟ್ವಾ ರಥನೀಡಸ್ಥಂ ಗತಾಸುಮಿವ ಭಾರತ ||25||
ಎಲೈ ಭಾರತನೇ! ಆಗ ನನ್ನ ಸೈನ್ಯವೆಲ್ಲವೂ ರಥದ ಪೀಠದಲ್ಲಿ ಮೃತನಂತೆ ಕುಳಿತಿದ್ದ ನನ್ನನ್ನು ನೋಡಿ ನಿಶ್ಚೇತನವಾಗಿ ಹಾಹಾಕಾರವನ್ನು ಮಾಡಿತು.
ಪ್ರಸಾರ್ಯ ಬಾಹೂ ಪತತಃ ಪ್ರಸಾರ್ಯ ಚರಣಾವಪಿ |
ರೂಪಂ ಪಿತುರಪಶ್ಯಂ ತತ್ ಶಕುನೇಃ ಪತತೋ ಯಥಾ ||26||
ಕೈಗಳನ್ನು ಮತ್ತು ಕಾಲುಗಳನ್ನು ಚಾಚಿ ಬೀಳುತ್ತಿರುವ ನನ್ನ ತಂದೆಯ ರೂಪವು ಕೆಳಗೆ ಬೀಳುತ್ತಿರುವ ಒಂದು ಪಕ್ಷಿಯ ರೂಪದಂತೆ ಇದ್ದಿತು. ಅಂತಹ ರೂಪವನ್ನು ನೋಡಿದೆನು.
ತಂ ಪತಂತಂ ಮಹಾಬಾಹೋ ಶೂಲಪಟ್ಟಿಸಪಾಣಯಃ |
ಅಭಿಘ್ನಂತೋ ಭೃಶಂ ವೀರ ಮಮ ಚೇತೋ ವ್ಯಕಂಪಯನ್ ||27||
ಎಲೈ ಮಹಾಬಾಹುವೇ! ಹಾಗೆ ಬೀಳುತ್ತಿದ್ದ ಅವನನ್ನು ಶೂಲ ಮತ್ತು ಪಟ್ಟಿಸಗಳನ್ನು ಹಿಡಿದ ಸಾಲ್ವನ ಸೈನಿಕರು ಬಹಳವಾಗಿ ಹೊಡೆಯುತ್ತಾ ನನ್ನ ಮನಸ್ಸನ್ನು ಅಲ್ಲಾಡಿಸಿದರು.
ತತೋ ಮುಹೂರ್ತಾತ್ ಪ್ರತಿಲಭ್ಯ ಸಂಜ್ಞಾಮ್
ಅಹಂ ತದಾ ವೀರ ಮಹಾವಿಮರ್ದೇ |
ನ ತತ್ರ ಸೌಭಂ ನ ರಿಪುಂ ನ ಸಾಲ್ವಂ
ಪಶ್ಯಾಮಿ ವೃದ್ಧಂ ಪಿತರಂ ನ ಚಾಪಿ ||28||
ಎಲೈ ವೀರನೇ! ಒಂದು ಮುಹೂರ್ತದ ನಂತರ ನಾನು ನನ್ನ ಮೋಹದಿಂದ ಎದ್ದು ಸಂಜ್ಞೆಯನ್ನು ಮರಳಿ ಪಡೆದು ನೋಡಿದಾಗ ಆ ಮಹಾಸೆಣಸಾಟದಲ್ಲಿ ಸೌಭವಾಗಲೀ ಶತ್ರುವಾದ ಸಾಲ್ವನಾಗಲೀ ವೃದ್ಧನಾದ ನನ್ನ ತಂದೆಯಾಗಲೀ ಕಾಣಲಿಲ್ಲ.
ತತೋ ಮಮಾಸೀನ್ಮನಸಿ ಮಾಯೇಯಮಿತಿ ನಿಶ್ಚಿತಮ್ |
ಪ್ರಬುದ್ಧೋಽಸ್ಮಿ ತತೋ ಭೂಯಃ ಶತಶೋಽವಾಕಿರಂ ಶರಾನ್ ||29||
ಆಗ ನಾನು ಇದು ಸಾಲ್ವನ ಮಾಯೆಯೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಎಚ್ಚರಗೊಂಡವನಾಗಿ ಪುನಃ ನೂರಾರುಬಾಣಗಳನ್ನು ಸಾಲ್ವನ ಮೇಲೆ ಪ್ರಯೋಗಿಸಿದೆನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಾದಶೋಽಧ್ಯಾಯಃ ||
|| ಕೈರಾತಪರ್ವಣಿ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
*****
ಹತ್ತೊಂಬತ್ತನೆಯ ಅಧ್ಯಾಯ
(ಕೃಷ್ಣನಿಂದ ಸಾಲ್ವನ ವಧೆ. ಸುಭದ್ರೆ ಮತ್ತು ಅಭಿಮನ್ಯುವನ್ನು ಕರೆದುಕೊಂಡು ದ್ವಾರಕಾಗಮನ. ಧೃಷ್ಟದ್ಯುಮ್ನಾದಿಗಳ ಗಮನ.)
ಶ್ರೀಭಗವಾನ್
ತತೋಽಹಂ ಭರತಶ್ರೇಷ್ಠ ಪ್ರಗೃಹ್ಯ ರುಚಿರಂ ಧನುಃ |
ಶರೈರಪಾತಯಂ ಸೌಭಾತ್ ಶಿರಾಂಸಿ ವಿಬುಧದ್ವಿಷಾಮ್ ||1||
ಎಲೈ ಭರತಶ್ರೇಷ್ಠನೇ! ಆಗ ನಾನು ಮನೋಹರವಾದ ಧನುಸ್ಸನ್ನು ಕೈಯಲ್ಲಿ ಹಿಡಿದು ಬಾಣಗಳಿಂದ ದೇವಶತ್ರುಗಳ ಶಿರಸ್ಸುಗಳನ್ನು ಸೌಭದಿಂದ ಕೆಳಗೆ ಉರುಳಿಸಿದೆನು.
ಶರಾನಾಶೀವಿಷಾಕಾರಾನ್ ಊರ್ಧ್ವಗಾಂಸ್ತಿಗ್ಮತೇಜಸಃ |
ಪ್ರೇಷಯಂ ಸಾಲ್ವರಾಜಾಯ ಶಾಂರ್ಗಮುಕ್ತಾನ್ ಸುವಾಸಸಃ ||2||
ಸರ್ಪಗಳ ಆಕಾರವುಳ್ಳ ಕ್ರೂರ ಸಾಮಾರ್ಥ್ಯವನ್ನು ಹೊಂದಿದ ಒಳ್ಳೆಯ ಪುಂಖಗಳನ್ನು ಹೊಂದಿದ್ದ ಬಾಣಗಳನ್ನು ಸಾಲ್ವರಾಜನನ್ನು ಉದ್ದೇಶಿಸಿ ಶಾರ್ಙ್ಗಧನುಸ್ಸಿನಿಂದ ಊರ್ಧ್ವಮುಖವಾಗಿ ಪ್ರಯೋಗಿಸಿದೆನು.
ತತೋ ನಾದೃಶ್ಯತ ರಣೇ ಸೌಭಃ ಕುರುಕುಲೋದ್ವಹ |
ಅಂತರ್ಹಿತೋ ಮಾಯಯಾಽಭೂತ್ ತತೋಽಹಂ ವಿಸ್ಮಿತೋಽಭವಮ್ ||
ಎಲೈ ಕುರುಕುಲೋದ್ವಹನೇ! ಆಗ ಯುದ್ಧದಲ್ಲಿ ಸೌಭ ಕಾಣಲಿಲ್ಲ. ಸಾಲ್ವನು ಮಾಯೆಯಿಂದ ಅಂತರ್ಧಾನವನ್ನು ಹೊಂದಿದನು. ಆಗ ನಾನು ಆಶ್ಚರ್ಯಗೊಂಡೆನು.
ಅಥ ದಾನವಸಂಘಾಸ್ತೇ ವಿಕೃತಾನನಮೂರ್ಧಜಾಃ |
ಉದಕ್ರೋಶನ್ಮಹಾರಾಜ ವಿಷ್ಠಿತೇ ಮಯಿ ಭಾರತ ||4||
ಎಲೈ ಭಾರತನೇ, ಮಹಾರಾಜನೇ! ನಾನು ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುತ್ತಿರಲು ಆಗ ವಿಕೃತವಾದ ಮುಖ ಮತ್ತು ಕೇಶಗಳುಳ್ಳ ದಾನವ

ಸಮೂಹಗಳು ಜೋರಾಗಿ ಕಿರುಚಿದವು.
ತತೋಽಸ್ತ್ರಂ ಶಬ್ದಸಾಹಂ ವೈ ತ್ವರಮಾಣೋ ಮಹಾಹವೇ |
ಅಯೋಜಯಂ ತದ್ವಧಾಯ ತತಃ ಶಬ್ದ ಉಪಾರಮತ್ ||5||
ಆಗ ನಾನು ಶಬ್ದಗಳನ್ನು ನಿಲ್ಲಿಸುವ ಒಂದು ಅಸ್ತ್ರವನ್ನು ಆ ಯುದ್ಧದಲ್ಲಿ ಶೀಘ್ರವಾಗಿ ಆ ದಾನವರ ವಧೆಗಾಗಿ ಪ್ರಯೋಗಿಸಿದೆ. ಆಗ ಆ ಶಬ್ದವು ಶಾಂತವಾಯಿತು.
ಹತಾಸ್ತೇ ದಾನವಾಃ ಸರ್ವೇ ಯೈಃ ಸ ಶಬ್ದ ಉದೀರಿತಃ |
ಶರೈರಾದಿತ್ಯಸಂಕಾಶೈರ್ಜ್ವಲಿತೈಃ ಶಬ್ದಸಾಧನೈಃ ||6||
ಯಾವ ದಾನವರು ಅಂತಹಶಬ್ದವನ್ನು ಉತ್ಪಾದನೆಮಾಡಿದ್ದರೋ ಅವರೆಲ್ಲರೂ ಶಬ್ದವನ್ನು ಹಿಂಬಾಲಿಸಿ ಹೋಗುವ, ಆದಿತ್ಯನಂತೆ ಪ್ರಜ್ವಲಿಸುವ, ಬಾಣಗಳಿಂದ ಹತರಾದರು.
ತಸ್ಮಿನ್ನುಪರತೇ ಶಬ್ದೇ ಪುನರೇವಾನ್ಯತೋಽಭವತ್ |
ಶಬ್ದೋಽಪರೋ ಮಹಾರಾಜ ತತ್ರಾಪಿ ಪ್ರಾಹರಂ ಶರಾನ್ ||7||
ಎಲ್ಲೈ ಮಹಾರಾಜನೇ! ಆ ಶಬ್ದವು ಶಾಂತವಾಗುತ್ತಿರಲು ಇನ್ನೊಂದು ದಿಕ್ಕಿನಲ್ಲಿ ಅಂತಹದೇ ಇನ್ನೊಂದು ಶಬ್ದವುಂಟಾಯಿತು. ನಾನು ಅಲ್ಲಿಯೂ ಬಾಣಗಳನ್ನು ಪ್ರಯೋಗಿಸಿದೆ.
ಏವಂ ದಶ ದಿಶಃ ಸರ್ವಾಸ್ತಿರ್ಯಗೂರ್ಧ್ವಂ ಚ ಭಾರತ |
ನಾದಯಾಮಾಸುರಸುರಾಸ್ತೇ ಚಾಪಿ ನಿಹತಾ ಮಯಾ ||8||
ಎಲ್ಲೈ ಭಾರತನೇ! ಹೀಗೆ ಊರ್ಧ್ವಮುಖವಾಗಿ ಮತ್ತೆ ಕೆಳಮುಖವಾಗಿ ಒಟ್ಟು ಹತ್ತು ದಿಕ್ಕುಗಳಲ್ಲಿಯೂ ಅಸುರರು ಮಹಾನಾದವನ್ನು ಮಾಡಿದರು. ನಾನು ಅವರೆಲ್ಲರನ್ನೂ ಸಂಹರಿಸಿದೆನು.
ತತಃ ಪ್ರಾಗ್ಜ್ಯೋತಿಷಂ ಗತ್ವಾ ಪುನರೇವ ವ್ಯದೃಶ್ಯತ |
ಸೌಭಂ ಕಾಮಗಮಂ ವೀರ ಮೋಹಯನ್ಮಮ ಚಕ್ಷುಷೀ ||9||
ಆಗ ಆ ಕಾಮಗಾಮಿಯಾದ ಸೌಭವು ಪ್ರಾಗ್ಜ್ಯೋತಿಷನಗರದ ಮೇಲೆ ಹೋಗಿ ಪುನಃ ಕಾಣಿಸಿಕೊಂಡಿತು. ಎಲ್ಲೈ ವೀರನೇ! ನನ್ನ ಕಣ್ಣುಗಳಿಗೆ ಮೋಹ ಉಂಟಾಯಿತು.
ತತೋ ಲೋಕಾಂತಕರಣೋ ದಾನವೋಽಥ ನರಾಕೃತಿಃ |
ಶಿಲಾವರ್ಷೇಣ ಮಹತಾ ಸಹಸಾ ಮಾಂ ಸಮಾವೃಣೋತ್ ||10||
ಮನುಷ್ಯನ ಆಕೃತಿಯುಳ್ಳ, ಲೋಕವನ್ನೇ ನಾಶಮಾಡುವ, ಒಬ್ಬ ದಾನವನು ದೊಡ್ಡ ಬಂಡೆಗಳನ್ನು ನನ್ನ ಮೇಲೆ ಎಸೆದು ಬೇಗ ನನ್ನನ್ನು ಮುಚ್ಚಿ ಹಾಕಿದನು.
ಸೋಽಹಂ ಪರ್ವತವರ್ಷೇಣ ವಧ್ಯಮಾನಃ ಸಮಂತತಃ |
ವಲ್ಮೀಕ ಇವ ರಾಜೇಂದ್ರ ಪರ್ವತೋಪಚಿತೋಽಭವಮ್ ||11||
ಎಲ್ಲೈ ರಾಜಶ್ರೇಷ್ಠನೇ, ಹೀಗೆ ಪರ್ವತವರ್ಷದಿಂದ ಪೀಡಿಸಲ್ಪಡುವ ನಾನು ಎಲ್ಲ ಕಡೆಯಲ್ಲಿ ಪರ್ವತವು ಬಿದ್ದ ಒಂದು ಹುತ್ತದಂತೆ ಆದೆನು.
ತತೋಽಹಂ ಪರ್ವತಚಿತಃ ಸಹಯಃ ಸಹಸಾರಥಿಃ |
ಅಪ್ರಖ್ಯಾತಿಂ ಗತೋ ರಾಜನ್ ಸಧ್ವಜಃ ಸಾಯುಧಸ್ತದಾ ||12||
ಎಲ್ಲೈ ರಾಜನೇ! ಆಗ ಪರ್ವತದಿಂದ ಮುಚ್ಚಲ್ಪಟ್ಟ ನಾನೂ ನನ್ನ ಅಶ್ವಗಳೂ ನನ್ನ ಸಾರಥಿಯೂ ಆಯುಧ ಮತ್ತು ಧ್ವಜಗಳಿಂದ ಕೂಡಿದ ನನ್ನ ರಥವೂ ಯಾರಿಗೂ ಕಾಣಲಿಲ್ಲ.
ತತೋ ವೃಷ್ಣಿಪ್ರವೀರಾ ಯೇ ಮಮಾಸನ್ ಸೈನಿಕಾಸ್ತದಾ |
ತೇ ಭಯಾರ್ತಾ ದಿಶಃ ಸರ್ವೇ ಸಹಸಾ ವಿಪ್ರದುದ್ರುವುಃ ||13||
ಎಲ್ಲೈ ರಾಜನೇ! ಆಗ ನನ್ನ ಸೈನ್ನಿಕರಾದ ವೃಷ್ಣಿವೀರರು ಭಯದಿಂದ ನಡುಗಿ ಎಲ್ಲರೂ ದಿಕ್ಕುದಿಕ್ಕುಗಳಿಗೆ ಶೀಘ್ರವಾಗಿ ಓಡಿಹೋದರು.
ತತೋ ಹಾಹಾಕೃತಂ ಸರ್ವಮಭೂತ್ ತತ್ರ ವಿಶಾಂಪತೇ |
ದ್ಯೌರಂತರಿಕ್ಷಂ ಭೂಶ್ಚೈವಾದೃಶ್ಯಮಾನೇ ತದಾ ಮಯಿ ||14||
ಎಲ್ಲೈ ರಾಜನೇ! ಹಾಗೆ ನಾನು ಕಾಣದೆ ಹೋಗುತ್ತಿರಲು ಭೂಮಿಯಲ್ಲಿ ಅಂತರಿಕ್ಷದಲ್ಲಿ ಮತ್ತು ಸ್ವರ್ಗದಲ್ಲಿ ಎಲ್ಲ ಕಡೆಯಲ್ಲಿಯೂ ಹಾಹಾಕಾರವುಂಟಾಯಿತು.
ತತೋ ವಿಷಣ್ಣವದನಾ ಮಮ ರಾಜನ್ ಸುಹೃಜ್ಜನಾಃ |
ರುರುದುಶ್ಚುಕ್ರುಶುಶ್ಚೈವ ದುಃಖಶೋಕಸಮನ್ವಿತಾಃ ||15||
ಎಲ್ಲೈ ರಾಜನೇ! ಆಗ ದುಃಖಶೋಕಯುಕ್ತರಾದ ನನ್ನ ಸುಹೃದ್ ಜನರು ಕಳೆಗುಂದಿದ ಮುಖವುಳ್ಳವರಾಗಿ ರೋದನವನ್ನು ಮಾಡಿ ಕಿರುಚಿದರು.
ದ್ವಿಷತಾಂ ಸಂಪ್ರಹರ್ಷೋಽಭೂದಾರ್ತಿಶ್ಚಾದ್ವಿಷತಾಂ ಮಯಿ |
ಏವಮಜ್ಞಾತವಾನ್ ವೀರ ಪಶ್ಚಾದ್ ಜ್ಞಾಸಿಷಮಚ್ಯುತ ||16||
ನನ್ನ ಶತ್ರುಗಳಿಗೆ ಹರ್ಷವೂ ನನ್ನ ಸುಹೃದ್ ಜನಕ್ಕೆ ದುಃಖವೂ ಉಂಟಾಯಿತು. ಎಲ್ಲೈ ವೀರನೇ! ಎಲ್ಲೈ ಸದ್ಗುಣಗಳಿಂದ ಚ್ಯುತನಾಗದವನೇ! ನನಗೆ ಮೊದಲು ಏನೂ ತಿಳಿಯಲಿಲ್ಲ. ಅನಂತರ ತಿಳಿಯಿತು.
ತತೋಽಹಮಿಂದ್ರದಯಿತಂ ಸರ್ವಪಾಷಾಣಭೇದನಮ್ |
ವಜ್ರಮುದ್ಯಮ್ಯ ತಾನ್ ಸರ್ವಾನ್ ಪರ್ವತಾನ್ ಸಮಶಾತಯಮ್ ||

ಅನಂತರ ನಾನು ಬಂಡೆ ಕಲ್ಲುಗಳನ್ನು ಒಡೆಯಲು ಇಂದ್ರನಿಗೆ ಪ್ರಿಯವಾದ ವಜ್ರಾಸ್ತ್ರವನ್ನು ಎತ್ತಿ ಪ್ರಯೋಗಿಸಿ ಆ ಎಲ್ಲ ಪರ್ವತಗಳನ್ನೂ ನಾಶಪಡಿಸಿದೆನು.
ತತಃ ಪರ್ವತಭಾರಾರ್ತಾ ಮಂದಪ್ರಾಣವಿಚೇಷ್ಟಿತಾಃ |
ಹಯಾ ಮೇ ಸಹಸಾ ರಾಜನ್ ವೇಪಮಾನಾ ಇವಾಭವನ್ ॥18॥
ಎಲೈ ರಾಜನೇ! ಆಗ ಪರ್ವತಭಾರಕ್ಕೆ ಬಳಲಿ ಅಲ್ಪಪ್ರಾಣ ಮತ್ತು ಚೇಷ್ಟೆಯುಳ್ಳ ನನ್ನ ಅಶ್ವಗಳು ನಡುಗಲು ಪ್ರಾರಂಬಿಸಿದವು.
ಮೇಘಜಾಲ ಇವಾಕಾಶೇ ವಿದಾರ್ಯಾಭ್ಯುದಿತಂ ರವಿಮ್ |
ದೃಷ್ಟ್ವಾ ಮಾಂ ಬಾಂಧವಾಃ ಸರ್ವೇ ಹರ್ಷಮಾಹಾರಯನ್ ಪುನಃ |
ತತೋ ಮಾಮಬ್ರುವೀತ್ ಸೂತಃ ಪ್ರಾಂಜಲಿಃ ಪ್ರಣತಃ ಸ್ಥಿತಃ ॥19॥
ಆಕಾಶದಲ್ಲಿ ಮೇಘಜಾಲವನ್ನು ಭೇದಿಸಿ ಸೂರ್ಯನು ಉದಯಿಸಿದಂತೆ ನಾನು ಉದಯಿಸಿದುದನ್ನು ನೋಡಿ ನನ್ನ ಬಾಂಧವರೆಲ್ಲರೂ ಪುನಃ ಹರ್ಷವನ್ನು ತಾಳಿದರು. ಆಗ ಸೂತನು ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿ ನನ್ನೆದುರಿಗೆ ನಿಂತು ಹೀಗೆ ಹೇಳಿದನು.
ಸಾಧು ಸಂಪಶ್ಯ ವಾರ್ಷ್ಣೇಯ ಸಾಲ್ವಂ ಸೌಭಪತಿಂ ಸ್ಥಿತಮ್ |
ಅಲಂ ಕೃಷ್ಣಾವಮನ್ಯೈನಂ ಸಾಧು ಯತ್ನಂ ಸಮಾಚರ ॥20॥
ಎಲೈ ವಾರ್ಷ್ಣೇಯನೇ! ಸೌಭಪತಿಯಾದ ಸಾಲ್ವನು ಇರುವುದನ್ನು ಚೆನ್ನಾಗಿ ನೋಡು. ಅವನನ್ನು ಉಪೇಕ್ಷೆಮಾಡುವುದು ಸಾಕು. ಅವನನ್ನು ಕೊಲ್ಲಲು ಒಳ್ಳೆಯ ಪ್ರಯತ್ನವನ್ನು ಮಾಡು.
ಮಾರ್ದವಂ ಸಖಿತಾಂ ಚೈವ ಸಾಲ್ವಾದನ್ಯತ್ರ ಕೇಶವ |
ಜಹಿ ಸಾಲ್ವಂ ಮಹಾಬಾಹೋ ಮೈನಂ ಜೀವಯ ಕೇಶವ ॥21॥
ಎಲೈ ಕೇಶವನೇ! ಮೃದುತನವನ್ನು ಮತ್ತು ಸ್ನೇಹವನ್ನು ಸಾಲ್ವನನ್ನು ಬಿಟ್ಟು ಬೇರೆಯ ಕಡೆ ತೋರಿಸು. ಮಹಾಬಾಹುವೇ! ಸಾಲ್ವನನ್ನು ಸಂಹರಿಸು. ಕೇಶವನೇ ಅವನನ್ನು ಜೀವಿಸಲು ಬಿಡಬೇಡ.
ಸರ್ವೈಃ ಪರಾಕ್ರಮೈರ್ವೀರ ವಧ್ಯಃ ಶತ್ರುರಮಿತ್ರಹನ್ |
ನ ಶತ್ರುರವಮಂತವ್ಯೋ ದುರ್ಬಲೋಽಪಿ ಬಲೀಯಸಾ |
ಸೋಽಪಿ ಸ್ಯಾತ್ ಪೀಡಕಃ ಕಶ್ಚಿತ್ ಕಿಂ ಪುನಃ ಸಮರೇ ಸ್ಥಿತಃ ॥22॥
ಎಲೈ ವೀರನೇ! ಎಲೈ ಶತ್ರುಸಂಹಾರಕನೇ! ಪೂರ್ಣಪರಾಕ್ರಮದಿಂದ ಶತ್ರುವನ್ನು ಕೊಲ್ಲಬೇಕು. ಬಲಿಷ್ಠನಾದವನು ದುರ್ಬಲನಾದ ಶತ್ರುವನ್ನೂ ಉಪೇಕ್ಷೆಮಾಡಬಾರದು. ಅವನೂ ಒಂದುದಿನ ಪೀಡಕನಾಗಬಹುದು. ಹೀಗಿರುವಾಗ ಯುದ್ಧದಲ್ಲಿ ಎದುರಿಗೆ ನಿಂತವನು ಪೀಡಕನಾಗುವುದರಲ್ಲಿ ಏನು ಆಶ್ಚರ್ಯ?
ಸ ತ್ವಂ ಪುರುಷಶಾರ್ದೂಲ ಸರ್ವಯತ್ನೈರಿಮಂ ಪ್ರಭೋ |
ಜಹಿ ವೃಷ್ಣಿಕುಲಶ್ರೇಷ್ಠ ಮಾ ತೇ ಕಾಲೋಽತ್ಯಗಾದಯಮ್ ॥23॥
ಎಲೈ ಪುರುಷಶಾರ್ದೂಲನೇ! ಎಲೈ ಪ್ರಭುವೇ! ಸರ್ವಪ್ರಯತ್ನದಿಂದ ಈ ಶತ್ರುವನ್ನು ಕೊಲ್ಲು. ಎಲೈ ವೃಷ್ಣಿಕುಲಶ್ರೇಷ್ಠನೇ! ನಿನಗೆ ಈ ಕಾಲವು ಮೀರಿಹೋಗದಿರಲಿ.
ನೈಷ ಮಾರ್ದವಸಾಧ್ಯೋ ಹಿ ನಾಪಿ ಚೈವ ಸಖಾ ತವ |
ಯೇನ ತ್ವಂ ಬಾಧಿತೋ ವೀರ ದ್ವಾರಕಾ ಚಾಪಿ ಮರ್ದಿತಾ ॥24॥
ಎಲೈ ವೀರನೇ! ಯಾವ ಈ ಸಾಲ್ವನು ದ್ವಾರಕಾಪಟ್ಟಣವನ್ನು ಮರ್ದಿಸಿ ನಿನ್ನನ್ನು ಬಾಧಿಸುತ್ತಿದ್ದಾನೆಯೋ ಅವನು ಸುಲಭಸಾಧ್ಯನಲ್ಲ ಮತ್ತು ನಿನ್ನ ಸ್ನೇಹಿತನೂ ಅಲ್ಲ.
ಏವಮಾದಿ ತು ಕೌಂತೇಯ ಶ್ರುತ್ವಾಽಹಂ ಸಾರಥೇರ್ವಚಃ |
ತತ್ತ್ವಮೇತದಿತಿ ಜ್ಞಾತ್ವಾ ಯುದ್ಧೇ ಮತಿಮಧಾರಯಮ್ ॥25॥
ಎಲೈ ಕೌಂತೇಯನೇ! ಇವೇ ಮೊದಲಾದ ಸಾರಥಿಯ ಮಾತುಗಳನ್ನು ಕೇಳಿ ಇದು ಸತ್ಯವಾದುದು ಎಂದು ನಿಶ್ಚಯಿಸಿ ನಾನು ಯುದ್ಧವನ್ನು ಮಾಡಲು ನಿಶ್ಚಯಿಸಿದೆ.
ವಧಾಯ ಸಾಲ್ವರಾಜಸ್ಯ ಸೌಭಸ್ಯ ವಿನಿಪಾತನೇ |
ದಾರುಕಂ ಚಾಬ್ರುವಂ ವೀರ ಮುಹೂರ್ತಂ ಸ್ಥೀಯತಾಮಿತಿ ॥26॥
ಸಾಲ್ವರಾಜನನ್ನು ಸಂಹರಿಸಿ ಸೌಭವನ್ನು ಕೆಳಗೆ ಉರುಳಿಸಲು ನಿಶ್ಚಯಿಸಿ ದಾರುಕನನ್ನು ಕುರಿತು ವೀರನೇ! ಒಂದು ಮುಹೂರ್ತದ ಕಾಲ ಸಹನೆಯಿಂದ ಇರು ಎಂದು ಹೇಳಿದೆನು.
ತತೋಽಪ್ರತಿಹತಂ ದಿವ್ಯಮಭೇದ್ಯಮತಿವೀರ್ಯವತ್ |
ಆಗ್ನೇಯಮಸ್ತ್ರಂ ದಯಿತಂ ಸರ್ವದಾಹಂ ಮಹಾಪ್ರಭಮ್ ॥27॥
ಯಕ್ಷಾಣಾಂ ರಾಕ್ಷಸಾನಾಂ ಚ ದಾನವಾನಾಂ ಚ ಸಂಯುಗೇ |
ರಾಜ್ಞಾಂ ಚ ಪ್ರತಿಲೋಮಾನಾಂ ಭಸ್ಮಾಂತಕರಣಂ ಮಹತ್ ॥28॥
ಕ್ಷುರಾಂತಮಮಲಂ ಚಕ್ರಂ ಕಾಲಾಂತಕಯಮೋಪಮಮ್ |
ಅಭಿಮಂತ್ರ್ಯಾಹಮತುಲಂ ದ್ವಿಷತಾಂ ವಿನಿಬರ್ಹಣಮ್ ॥29॥
ಜಹಿ ಸೌಭಂ ಸ್ವವೀರ್ಯೇಣ ಯೇ ಚಾತ್ರ ರಿಪವೋ ಮಮ |
ಇತ್ಯುಕತ್ವ ಭುಜವೀರ್ಯೇಣ ತಸ್ಮೈ ಪ್ರಾಹಿಣವಂ ರುಷಾ ॥30॥
ಅನಂತರ ಅಪ್ರತಿಹತವಾದ ದಿವ್ಯವಾದ ಅಭೇದ್ಯವಾದ ಮಹಾಸಾಮರ್ಥ್ಯವುಳ್ಳ ಮಹಾಪ್ರಭೆಯುಳ್ಳ, ಸರ್ವವನ್ನೂ ದಹಿಸುವ, ಯಕ್ಷರನ್ನೂ ರಾಕ್ಷಸರನ್ನೂ ದಾವರನ್ನೂ ಪ್ರತಿಲೋಮದಲ್ಲಿ ಜನಿಸಿದ ರಾಜರನ್ನೂ ಭಸ್ಮವನ್ನಾಗಿ ಮಾಡುವ, ಕತ್ತಿಯ ಅಲುಗಿನಂತೆ

ಹರಿತವಾದ, ಸ್ವಚ್ಛವಾದ, ಕಾಲಾಂತಕ ಯಮನಂತಿರುವ, ನನಗೆ ಪ್ರಿಯವಾದ, ಆಗ್ನೇಯಾಸ್ತ್ರವಾದ, ಶತ್ರುಗಳನ್ನು ನಾಶಮಾಡುವ ಅಸದೃಶವಾದ ಸುದರ್ಶನವನ್ನು ಅಭಿಮಂತ್ರಿಸಿ ನಿನ್ನ ಪರಾಕ್ರಮದಿಂದ ಸೌಭವನ್ನು ಉರುಳಿಸು ಮತ್ತು ಇಲ್ಲಿರುವ ನನ್ನ ಶತ್ರುಗಳನ್ನು ಸಂಹರಿಸು ಎಂದು ಹೇಳಿ ನನ್ನ ಭುಜವೇಗದಿಂದ ಅದನ್ನು ಸೌಭದ ಮೇಲೆ ಸಿಟ್ಟಿನಿಂದ ಪ್ರಯೋಗಿಸಿದೆ.

ರೂಪಂ ಸುದರ್ಶನಸ್ಯಾಸೀದ್ ಆಕಾಶೇ ಪತತಸ್ತದಾ |
ದ್ವಿತೀಯಸ್ಯೇವ ಸೂರ್ಯಸ್ಯ ಯುಗಾಂತೇ ಪರಿವೇಷ್ಟ್ಯತಃ ॥31॥
ಆಕಾಶದಲ್ಲಿ ಹೋಗುವ ಸುದರ್ಶನದ ರೂಪವು ಯುಗಾಂತಸಮಯದಲ್ಲಿ ಪರಿವೇಷವನ್ನು ಸುತ್ತಲೂ ಒಂದು ವರ್ತುಲಾಕಾರದ ಪರಿಧಿ ಹೊಂದಿದ ಇನ್ನೊಂದು ಸೂರ್ಯನಂತೆ ಪ್ರಜ್ವಲಿಸುತ್ತಿತ್ತು.

ತತ್ ಸಮಾಸಾದ್ಯ ನಗರಂ ಸೌಭಂ ವ್ಯಪಹತದ್ವಿಷಮ್ |
ಮಧ್ಯೇನ ದಾರಯಾಮಾಸ ಮಹಾಮೇರುಮಿವೋಚ್ಛ್ರಿತಮ್ ॥32॥
ದ್ವಿಧಾ ಕೃತಂ ತು ತತ್ ಸೌಭಂ ಸುದರ್ಶನಬಲಾಹೃತಮ್ |
ಮಹೇಶ್ವರಶರೋದ್ಧೂತಮಪತತ್ ತ್ರಿಪುರಂ ಯಥಾ ॥33॥
ಆ ಸುದರ್ಶನವು ಶತ್ರುಗಳು ನಾಶಹೊಂದಿದ್ದ ಆ ಸೌಭನಗರವನ್ನು ತಲುಪಿ ಎತ್ತರವಾದ ಮಹಾಮೇರುವನ್ನು ಮಧ್ಯದಲ್ಲಿ ಸೀಳಿದಂತೆ ಮಧ್ಯದಲ್ಲಿ ಸೀಳಿಹಾಕಿತು. ಸುದರ್ಶನದ ಸಾಮರ್ಥ್ಯದಿಂದ ಮಧ್ಯದಲ್ಲಿ ಎರಡು ಭಾಗವಾಗಿ ಸೀಳಲ್ಪಟ್ಟ ಆ ಸೌಭವು ಮಹೇಶ್ವರ ಬಾಣಗಳಿಂದ ಸೀಳಲ್ಪಟ್ಟ ತ್ರಿಪುರಗಳಂತೆ ಕೆಳಗೆ ಬಿದ್ದಿತು.

ತಸ್ಮಿನ್ ನಿಪತಿತೇ ಸೌಭೇ ಚಕ್ರಮಾಗಾತ್ ಕರಂ ಮಮ |
ಪುನಶ್ಚೋದ್ಧೂಯ ವೇಗೇನ ಸಾಲ್ವಾಯೇತ್ಯಹಮಬ್ರುವಮ್ ॥34॥
ಆ ಸೌಭವು ಕೆಳಗೆ ಬೀಳುತ್ತಿರಲು ಚಕ್ರವುಬಂದು ನನ್ನ ಕೈಯನ್ನು ಸೇರಿತು. ಆ ಚಕ್ರವನ್ನು ಪುನಃ ವೇಗವಾಗಿ ತಿರುಗಿಸಿ ಈ ಬಾರಿ ಸಾಲ್ವನಿಗೆ ಎಂದು ಹೇಳಿದೆನು.

ತತಃ ಸಾಲ್ವಂ ಗದಾಂ ಗುರ್ವೀಮಾವಿಧ್ಯಂತಂ ಮಹಾಹವೇ |
ದ್ವಿಧಾ ಚಕಾರ ಸಹಸಾ ಪ್ರಜಜ್ವಾಲ ಚ ತೇಜಸಾ ॥35॥
ಆಗ ದೊಡ್ಡಯುದ್ಧದಲ್ಲಿ ಭಾರವಾದ ಗದೆಯನ್ನು ತಿರುಗಿಸುತ್ತಿದ್ದ ಸಾಲ್ವನನ್ನು ಚಕ್ರವು ತಕ್ಷಣ ಎರಡು ಭಾಗವಾಗಿ ಸೀಳಿ ತನ್ನ ತೇಜಸ್ಸಿನಿಂದ ಜ್ವಲಿಸಿತು.

ತಸ್ಮಿನ್ ನಿಪತಿತೇ ಪಾಪೇ ದಾನವಾಸ್ತ್ರಸ್ತಚೇತಸಃ |
ಹಾಹಾಭೂತಾ ದಿಶೋ ಜಗ್ಮುರರ್ದಿತಾ ಮಮ ಸಾಯಕೈಃ ॥36॥
ಆ ಪಾಪಿಯು ಬೀಳುತ್ತಿರಲು ಭಯಗ್ರಸ್ತ ಚೇತನರಾದ ದಾನವರೆಲ್ಲರೂ ನನ್ನ ಬಾಣಗಳಿಂದ ಪೀಡಿತರಾಗಿ ಹಾಹಾಕಾರವನ್ನು ಮಾಡುತ್ತಾ ದಿಕ್ಕುದಿಕ್ಕುಗಳಿಗೆ ಓಡಿಹೋದರು.

ತತೋಽಹಂ ಸಮವಸ್ಥಾಪ್ಯ ರಥಂ ಸೌಭಸಮೀಪತಃ |
ಶಂಖಂ ಪ್ರಧ್ಮಾಪ್ಯ ಹರ್ಷೇಣ ಸುಹೃದಃ ಪರ್ಯಹರ್ಷಯಮ್ ॥37॥
ಅನಂತರ ನಾನು ನನ್ನ ರಥವನ್ನು ಬಿರಿದುಬಿದ್ದ ಸೌಭದ ಸಮೀಪದಲ್ಲಿ ನಿಲ್ಲಿಸಿ ಶಂಖವನ್ನು ಸಂತೋಷದಿಂದ ಬಲವಾಗಿ ಊದಿ ನನ್ನ ಹಿತೈಷಿಗಳೆಲ್ಲರನ್ನೂ ಸಂತೋಷಗೊಳಿಸಿದೆನು.

ತನ್ಮೇರುಶಿಖರಾಕಾರಂ ವಿಧ್ವಸ್ತಾಟ್ಟಾಲಗೋಪುರಮ್ |
ದಹ್ಯಮಾನಮಭಿಪ್ರೇಕ್ಷ್ಯ ಸ್ತ್ರಿಯಸ್ತಾಃ ಸಂಪ್ರದುದ್ರುವುಃ ॥38॥
ಮೇರುಶಿಖರದಂತೆ ಇದ್ದ ಆ ಸೌಭವು ಅಟ್ಟಾಲ (ಉಪ್ಪರಿಗೆ) ಗೋಪುರಗಳ ಜೊತೆಯಲ್ಲಿ ವಿಧ್ವಸ್ತವಾಗಿ ಉರಿಯುತ್ತಿರುವುದನ್ನು ನೋಡಿ ಆ ಸ್ತ್ರೀಯರೆಲ್ಲರೂ ಓಡಿಹೋದರು.

ಏವಂ ನಿಹತ್ಯ ಸಮರೇ ಸಾಲ್ವಂ ಸೌಭಂ ನಿಪಾತ್ಯ ಚ |
ಆನರ್ತಾನ್ ಪುನರಾಗಮ್ಯ ಸುಹೃದಾಂ ಪ್ರೀತಿಮಾವಹಮ್ ॥39॥
ಹೀಗೆ ಯುದ್ಧದಲ್ಲಿ ಸಾಲ್ವನನ್ನು ಮತ್ತು ಸೌಭವನ್ನು ಹೊಡೆದು ಉರುಳಿಸಿ ದ್ವಾರಕಾಪಟ್ಟಣಕ್ಕೆ ಪುನಃ ಬಂದು ನನ್ನ ಬಂಧುಗಳೆಲ್ಲರಿಗೂ ಸಂತೋಷವನ್ನು ಉಂಟುಮಾಡಿದೆ.

ಏತಸ್ಮಾತ್ ಕಾರಣಾದ್ ರಾಜನ್ ನಾಗಮಂ ಗಜಸಾಹ್ವಯಮ್|
ಯದ್ಯಾಗಾಂ ಪರವೀರಘ್ನ ನ ಹಿ ಜೀವೇತ್ ಸುಯೋಧನಃ ॥40॥
ಎಲೈ ರಾಜನೇ! ಈ ಕಾರಣದಿಂದ ನಾನು ಹಸ್ತಿನಾವತಿಗೆ ಬರಲಿಲ್ಲ. ಎಲೈ ಶತ್ರುವೀರನಾಶಕನೇ! ನಾನು ಬಂದಿದ್ದರೆ ಸುಯೋಧನನು ಬದುಕಿ ಉಳಿಯುತ್ತಿರಲಿಲ್ಲ.

ವೈಶಂಪಾಯನಃ
ಏವಮುಕ್ತ್ವಾ ಮಹಾಬಾಹುರ್ಧರ್ಮಜಂ ಪುರುಷೋತ್ತಮಃ |
ಆಮಂತ್ರ್ಯ ಪ್ರಯಯೌ ಧೀಮಾನ್ ಪಾಂಡವಾನ್ ಮಧುಸೂದನಃ ॥41॥
ಹೀಗೆ ಹೇಳಿ ಮಹಾಬಾಹುವೂ ಪುರುಷೋತ್ತಮನೂ ಆದ ಮೇಧಾವಿಯಾದ ಮಧುಸೂದನನು ಧರ್ಮರಾಜನ ಮತ್ತು ಪಾಂಡವರ ಅನುಮತಿಯನ್ನು ಪಡೆದು ಹೊರಟನು.

ಅಭಿವಾದ್ಯ ಮಹಾಬಾಹುರ್ಧರ್ಮರಾಜಂ ಯುಧಿಷ್ಠಿರಮ್ |
ರಾಜ್ಞಾ ಮೂರ್ಧನ್ಯುಪಾಘ್ರಾತೋ ಭೀಮೇನ ಚ ಮಹಾಭುಜಃ ॥42॥
ಪರಿಷ್ವಕ್ತಶ್ಚಾರ್ಜುನೇನ ಯಮಾಭ್ಯಾಮಭಿವಾದಿತಃ |

ಸಮ್ಮಾನಿತಶ್ಚ ಧೌಮ್ಯೇನ ದ್ರೌಪದ್ಯಾ ಚಾಪಿ ಸಂಸ್ತುತಃ ॥43॥
ಮಹಾಬಾಹುವಾದ ಕೃಷ್ಣನು ಧರ್ಮರಾಜನಿಗೆ ನಮಸ್ಕಾರವನ್ನು ಮಾಡಿ ಅವನಿಂದಲೂ ಹಾಗೆಯೇ ಭೀಮನಿಂದಲೂ ಮಹಾಭುಜನಾದ ಅವನು ಶಿರಸ್ಸಿನಲ್ಲಿ ಆಘ್ರಾಣಿಸಲ್ಪಟ್ಟನು. ಅರ್ಜುನನಿಂದ ಆಲಿಂಗಿಸಲ್ಪಟ್ಟು ನಕುಲಸಹದೇವರಿಂದ ನಮಸ್ಕರಿಸಲ್ಪಟ್ಟು ಧೌಮ್ಯರಿಂದ ಗೌರವಿಸಲ್ಪಟ್ಟನು ಮತ್ತು ದ್ರೌಪದಿಯಿಂದ ಸ್ತೋತ್ರಮಾಡಲ್ಪಟ್ಟನು.
ಸುಭದ್ರಾಮಭಿಮನ್ಯುಂ ಚ ರಥಮಾರೋಪ್ಯ ಕಾಂಚನಮ್ |
ಆರುರೋಹ ರಥಂ ಕೃಷ್ಣಃ ಪಾಂಡವೈರಭಿಪೂಜಿತಃ ॥44॥
ಕೃಷ್ಣನು ಸುಭದ್ರೆ ಮತ್ತು ಅಭಿಮನ್ಯುವನ್ನು ತನ್ನ ಸುವರ್ಣಮಯವಾದ ರಥದಲ್ಲಿ ಕೂಡಿಸಿ ಪಾಂಡವರಿಂದ ಪೂಜಿತನಾಗಿ ರಥವನ್ನು ಏರಿದನು.
ಸೈನ್ಯಸುಗ್ರೀವಯುಕ್ತೇನ ರಥೇನಾದಿತ್ಯವರ್ಚಸಾ |
ಸ್ವಪುರಂ ಪ್ರಯಯೌ ಕೃಷ್ಣಃ ಸಮಾಶ್ವಾಸ್ಯ ಯುಧಿಷ್ಠಿರಮ್ ॥45॥
ಸೈನ್ಯ(ಶೈಭ್ಯ) ಸುಗ್ರೀವ ಕುದುರೆಗಳನ್ನು ಹೂಡಿದ ಸೂರ್ಯಕಾಂತಿಯುಳ್ಳ ತನ್ನ ರಥದಲ್ಲಿ ಕುಳಿತು ಯುಧಿಷ್ಠಿರನಿಗೆ ಸಮಾಧಾನವನ್ನು ಮಾಡಿ ಕೃಷ್ಣನು ತನ್ನ ಪುರಕ್ಕೆ ತೆರಳಿದನು.
ತತಃ ಪ್ರಯಾತೇ ದಾಶಾರ್ಹೇ ಧೃಷ್ಟದ್ಯುಮ್ನೋಽಪಿ ಪಾರ್ಷತಃ |
ದ್ರೌಪದೇಯಾನುಪಾದಾಯ ಪ್ರಯಯೌ ಸ್ವಪುರಂ ತದಾ ॥46॥
ದಾಶಾರ್ಹನಾದ ಕೃಷ್ಣನು ಹಿಂದಿರುಗುತ್ತಿರಲು ಪಾರ್ಷತನಾದ ಧೃಷ್ಟದ್ಯುಮ್ನನೂ ಸಹ ದ್ರೌಪದಿಯ ಐದು ಮಕ್ಕಳನ್ನು ಕರೆದುಕೊಂಡು ತನ್ನ ನಗರಕ್ಕೆ ಹಿಂದಿರುಗಿದನು.
ಧೃಷ್ಟಕೇತುಃ ಸಮಾದಾಯ ಸ್ವಸಾರಂ ಚಾಥ ಚೇದಿರಾಟ್ |
ಜಗಾಮ ಪಾಂಡವಾನ್ ದೃಷ್ಟ್ವಾ ರಮ್ಯಾಂ ಶುಕ್ತಿಮತೀಂ ಪುರೀಮ್ ॥
ಅನಂತರ ಚೇದಿರಾಜನಾದ ಧೃಷ್ಟಕೇತುವು ತನ್ನ ತಂಗಿಯನ್ನು ಕರೆದು ಕೊಂಡು ಪಾಂಡವರನ್ನು ನೋಡಿ ತನ್ನ ಸುಂದರವಾದ ಶುಕ್ತಿಮತೀಪಟ್ಟಣಕ್ಕೆ ತೆರಳಿದನು.
ಕೇಕಯಾಶ್ಚಾಭ್ಯನುಜ್ಞಾತಾಃ ಕೌಂತೇಯೇನಾಮಿತೌಜಸಃ |
ಆಮಂತ್ರ್ಯ ಪಾಂಡವಾನ್ ಸರ್ವಾನ್ ಪ್ರಯಯುಸ್ತೇಽಪಿ ಭಾರತ ॥
ಎಲೈ ಭಾರತನೇ! ಅಮಿತಪರಾಕ್ರಮಿಗಳಾದ ಕೇಕಯದೇಶದ ಸಹೋದರರು ಧರ್ಮರಾಜನಿಂದ ಅನುಮತಿಯನ್ನು ಪಡೆದು ಎಲ್ಲಾ ಪಾಂಡವರ ಅನುಮತಿಯನ್ನು ಪ್ರಾರ್ಥಿಸಿ ತಮ್ಮ ನಗರಕ್ಕೆ ಹೋದರು.
ಬ್ರಾಹ್ಮಣಾಶ್ಚ ವಿಶಶ್ಚೈವ ತಥಾ ವಿಷಯವಾಸಿನಃ |
ವಿಸೃಜ್ಯಮಾನಾಃ ಸುಭೃಶಂ ನ ತ್ಯಜಂತಿ ಸ್ಮ ಪಾಂಡವಾನ್ ॥49॥
ಬ್ರಾಹ್ಮಣರು ವೈಶ್ಯರು ಮತ್ತು ಹಸ್ತಿನಾವತಿಯ ಕೆಲವು ನಿವಾಸಿಗಳು ಮತ್ತೆಮತ್ತೆ ಹೋಗಲು ಒತ್ತಾಯಮಾಡಿದರೂ ಪಾಂಡವರನ್ನು ಬಿಡಲಿಲ್ಲ.
ಸಮವಾಯಃ ಸ ರಾಜೇಂದ್ರ ಸುಮಹಾದ್ಭುತದರ್ಶನಃ |
ಆಸೀನ್ಮಹಾತ್ಮನಾಂ ತೇಷಾಂ ಕಾಮ್ಯಕೇ ಭರತರ್ಷಭ ॥50॥
ಎಲೈ ರಾಜೇಂದ್ರನೇ! ಎಲೈ ಭರತರ್ಷಭನೇ! ಕಾಮ್ಯಕವನದಲ್ಲಿ ಅಂತಹ ನೋಡಲು ಅದ್ಭುತವಾದ ಆ ಮಹಾತ್ಮರ ಸಮಾವೇಶವು ನಡೆಯಿತು.
ಯುಧಿಷ್ಠಿರಸ್ತು ವಿಪ್ರಾಂಸ್ತಾನನುಮಾನ್ಯ ಮಹಾಮನಾಃ |
ಶಶಾಸ ಪುರುಷಾನ್ ಕಾಲೇ ರಥಾನ್ ಯೋಜಯತೇತಿ ಹ ॥51॥
ಉದಾರಿಯಾದ ಯುಧಿಷ್ಠಿರನು ಆ ಬ್ರಾಹ್ಮಣರನ್ನು ಅನುಮೋದಿಸಿ ಯೋಗ್ಯವಾದ ಕಾಲದಲ್ಲಿ ರಥಗಳನ್ನು ಹೂಡಿ ಎಂದು ತನ್ನ ಕಿಂಕರರಿಗೆ ಅಪ್ಪಣೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಪಾಂಡಾವಾನಾಂ ಚ ಯಾ ಭಾರ್ಯಾಃ ಪುತ್ರಾ ಅಪಿ ಚ ಸರ್ವಶಃ |
ಅನ್ವೇವ ಪಾಂಡವಾನ್ ಯಾತಾ ವನಮತ್ರೈವ ಸಂಸ್ಥಿತಾಃ ॥54॥
ಪಾಂಡವರ ಬೇರೆ ಪತ್ನಿಯರೂ ಎಲ್ಲ ಮಕ್ಕಳೂ ಅವರನ್ನು ಹಿಂಬಾಲಿಸಿ ಕಾಡಿಗೆ ಬಂದು ಜೊತೆಗೇ ಇದ್ದರು.
ಧೃಷ್ಟದ್ಯುಮ್ನಸ್ತತಃ ಕೃಷ್ಣಾಂ ಸಾಂತ್ವಯಿತ್ವೈವ ಕೇಶವಂ |
ಪ್ರಣಮ್ಯ ಸಮನುಜ್ಞಾತೋ ಭಾಗಿನೇಯೈಃ ಪುರಂ ಯಯೌ ॥55॥
ಧೃಷ್ಟದ್ಯುಮ್ನ ದ್ರೌಪದಿಯನ್ನು ಸಂತೈಸಿ ಕೃಷ್ಣನನ್ನು ನಮಿಸಿ ಅವನ ಅನುಜ್ಞೆ ಪಡೆದು ದ್ರೌಪದೀಪುತ್ರರೊಂದಿಗೆ ತನ್ನ ಪಟ್ಟಣಕ್ಕೆ ಹೊರಟುಹೋದ.
ಧೃಷ್ಟಕೇತುಶ್ಚ ಭಗಿನೀಂ ಕಾಶಿರಾಜಃ ಸುತಾಮಪಿ |
ಪುರಂ ಯಯತುರಾದಾಯ ಕುಂತ್ಯೈವಾನ್ಯಾಃ ಸಹ ಸ್ಥಿತಾಃ ॥56॥

ಧೃಷ್ಟಕೇತು ತನ್ನ ತಂಗಿಯನ್ನೂ ಕಾಶಿರಾಜ ತನ್ನ ಮಗಳನ್ನೂ ಕರೆದುಕೊಂಡು ತಮ್ಮ ಪಟ್ಟಣಗಳಿಗೆ ಹೋದರು. ಪಾಂಡವರ ಬೇರೆ ಪತ್ನಿಯರು ಕುಂತಿಯ ಜೊತೆಗೇ ಇದ್ದರು.
ಪಾರ್ವತೀ ನಕುಲಸ್ಯಾಸೀತ್ ಭಾರ್ಯಾ ಪೂರ್ವಂ ತಿಲೋತ್ತಮಾ |
ಪೂರ್ವೋಕ್ತೇ ಚೈವ ಯಮಯೋರ್ಭಾರ್ಯೇ ಕುಂತ್ಯಾ ನಿವಾರಿತಾಃ ||
ಹಿಂದೆ ತಿಲೋತ್ತಮೆ ಎಂಬ ಅಪ್ಸರೆಯಾಗಿದ್ದಳು ನಕುಲ ಪತ್ನಿ ಪಾರ್ವತಿ. ಅವಳನ್ನೂ ಹಿಂದೆ ಹೇಳಿದ ನಕುಲ ಸಹದೇವರ ಪತ್ನಿಯರಾದ ಶಲ್ಯ ಜರಾಸಂಧ ಪುತ್ರಿಯರನ್ನೂ ಕಾಡಿಗೆ ಹೋಗದಂತೆ ತಡೆದು ಕುಂತಿ ತನ್ನ ಬಳಿಯೆ ನಿಲ್ಲಿಸಿಕೊಂಡಿದ್ದಳು.
ಸುಭದ್ರಾಮಭಿಮನ್ಯುಂ ಚ ರಥಮಾರೋಪ್ಯ ಕೇಶವಃ |
ಪಾಂಡವಾನಭ್ಯನುಜ್ಞಾಪ್ಯ ಸಭಾರ್ಯಃ ಸ್ವಪುರಂ ಯಯೌ ||58||
ಸುಭದ್ರೆಯನ್ನೂ ಅಭಿಮನ್ಯುವನ್ನೂ ಶ್ರೀಕೃಷ್ಣ ರಥದಲ್ಲಿ ಕುಳ್ಳಿರಿಸಿಕೊಂಡು ಪಾಂಡವರಿಂದ ಬೀಳ್ಕೊಂಡು ಸತ್ಯಭಾಮಾ ಸಮೇತನಾಗಿ ದ್ವಾರಕೆಗೆ ತೆರಳಿದ.
ಕಂಚಿತ್ಕಾಲಂ ದ್ರೌಪದೇಯಾ ಉಷ್ಯ ಪಾಂಚಾಲಕೇ ಪುರೇ |
ಯಯುರ್ದ್ವಾರಾವತೀಮೇವ ತತ್ರೋಷುಃ ಕೃಷ್ಣಪಾಲಿತಾಃ ||59||
ದ್ರೌಪದಿಯ ಮಕ್ಕಳು ಪಾಂಚಾಲನಗರದಲ್ಲಿ ಕೆಲವು ಕಾಲ ಇದ್ದು ದ್ವಾರಕೆಗೆ ಹೋದರು. ಅಲ್ಲಿ ಶ್ರೀಕೃಷ್ಣನ ರಕ್ಷಣೆಯಲ್ಲಿ ವಾಸಮಾಡಿದರು.
ತತಃಪರಂ ಧರ್ಮರಾಜೋ ನಿರ್ವಿಣ್ಣಃ ಸ್ವಕೃತೇನ ಹ |
ಭ್ರಾತೃಭಾರ್ಯಾಪದೇ ಕೃಷ್ಣಾಂ ಸ್ಥಾಪಯಾಮಾಸ ಸರ್ವದಾ ||60||
ಅನಂತರ ಧರ್ಮರಾಜ ತನ್ನ ಕೃತ್ಯಕ್ಕೆ ತಾನೆ ಬೇಸತ್ತು ದ್ರೌಪದಿಯನ್ನು ಸದಾ ಸೋದರ ಪತ್ನೀ ಸ್ಥಾನದಲ್ಲಿಯೇ ಇರಿಸಿದ.
ಊಷುರ್ವನೇ ಚ ತೇ ಪಾರ್ಥಾ ಮುನಿಶೇಷಾನ್ನಭೋಜಿನಃ |
ಭುಕ್ತವತ್ಸ್ವೇವಾನುಜೇಷು ಭುಂಕ್ತೇ ರಾಜಾ ಯುಧಿಷ್ಠಿರಃ ||61||
ಪಾಂಡವರು ಮುನಿಗಳ ಭೋಜನಾನಂತರ ಅವರ ಶೇಷಾನ್ನ ಉಣ್ಣುತ್ತ ಕಾಡಿನಲ್ಲಿ ವಾಸಿಸಿದರು. ರಾಜಾ ಯುಧಿಷ್ಠಿರ ತಮ್ಮಂದಿರ ಭೋಜನಾ ನಂತರವೆ ಉಣ್ಣುತ್ತಿದ್ದ.
ಅಲಂಘ್ಯತ್ವಾತ್ತದಾಜ್ಞಾಯಾ ಅನುಜಾಃ ಪೂರ್ವಭೋಜಿನಃ |
ತಸ್ಯಾನಂತರಮೇವೈಕಾ ಭುಂಕ್ತೇ ಸಾ ಪಾರ್ಷತಾತ್ಮಜಾ ||62||
ಅಣ್ಣನ ಆಜ್ಞೆ ಅನುಲ್ಲಂಘನೀಯವಾದ್ದರಿಂದ ತಮ್ಮಂದಿರು ಮೊದಲಿಗೆ ಉಣ್ಣುತ್ತಿದ್ದರು. ಧರ್ಮರಾಜ ಉಂಡ ಬಳಿಕ ದ್ರೌಪದಿಯೊಬ್ಬಳೇ ಉಣ್ಣುತ್ತಿದ್ದಳು.
ಏವಂ ಸದಾ ವಿಷ್ಣುಪರಾಯಣಾನಾಂ
ತತ್ಪಾರ್ಪಣಾನ್ನೈಕಭುಜಾಂ ಪ್ರಯಾತಃ |
ಸಂವತ್ಸರಸ್ತತ್ರ ಜಗಾದ ಕೃಷ್ಣಾ
ಭೀಮಾಜ್ಞಯಾ ಧರ್ಮರಾಜಂ ಸುವೇತ್ರೀ ||63||
ಈ ರೀತಿಯಾಗಿ ಸದಾ ವಿಷ್ಣುಭಕ್ತರಾದ ಪಾಂಡವರು ವಿಷ್ಣುವಿಗೆ ನಿವೇದಿತವಾದ ಅನ್ನವನ್ನು ಮಾತ್ರ ಉಣ್ಣುತ್ತ ಒಂದು ವರ್ಷ ಕಳೆದರು. ಬಳಿಕ ಒಳ್ಳೆಯ ನೀತಿಜ್ಞಳಾದ ದ್ರೌಪದಿ ಭೀಮನ ಪ್ರೇರಣೆಯಿಂದ ಧರ್ಮರಾಜನ ಬಳಿಯಲ್ಲಿ ಹೇಳತೊಡಗಿದಳು.
ಇಪ್ಪತ್ತನೆಯ ಅಧ್ಯಾಯ
(ಪಾಂಡವರು ಪೌರರನ್ನು ಸಮಾಧಾನಪಡಿಸಿ ಹಿಂದೆ ಕಳುಹಿಸುವುದು.)
ವೈಶಂಪಾಯನಃ
ತಸ್ಮಿನ್ ದಶಾರ್ಹಾಧಿಪತೌ ಪ್ರಯಾತೇ
ಯುಧಿಷ್ಠಿರೋ ಭೀಮಸೇನಾರ್ಜುನೌ ಚ |
ಯಮೌ ಚ ಕೃಷ್ಣಾ ಚ ಪುರೋಹಿತಶ್ಚ
ರಥಾನ್ ಮಹಾರ್ಹಾನ್ ಪರಮಾಶ್ವಯುಕ್ತಾನ್ ||1||
ಆಸ್ಥಾಯ ವೀರಾಃ ಸಹಿತಾ ವನಾಯ
ಪ್ರತಸ್ಥಿರೇ ಭೂತಪತಿಪ್ರಕಾಶಾಃ |
ಹಿರಣ್ಯನಿಷ್ಕಾನ್ ವಸನಾನಿ ಗಾಶ್ಚ
ಪ್ರದಾಯ ಶಿಕ್ಷಾಕ್ಷರಮಂತ್ರವಿದ್ಭ್ಯಃ ||2||
ದಶಾರ್ಹಾಧಿಪತಿಯಾದ ಆ ಕೃಷ್ಣನು ಪ್ರಯಾಣಮಾಡುತ್ತಿರಲು ಯುಧಿಷ್ಠಿರ ಭೀಮಸೇನ ಅರ್ಜುನ ನಕುಲಸಹದೇವರು ದ್ರೌಪದಿ ಮತ್ತು ಪುರೋಹಿತರಾದ ಧೌಮ್ಯರು ಹಿರಣ್ಯನಿಷ್ಕಗಳನ್ನೂ ಬೆಲೆಬಾಳುವ ವಸ್ತ್ರಗಳನ್ನೂ ಗೋವುಗಳನ್ನೂ ವಿದ್ಯಾವಂತರಾದ ಮತ್ತು ಮಂತ್ರವೇತ್ತರಾದ ಬ್ರಾಹ್ಮಣರಿಗೆ ಕೊಟ್ಟು ಶ್ರೇಷ್ಠವಾದ ಅಶ್ವಗಳನ್ನು ಹೂಡಿದ ಬೆಲೆಬಾಳುವ ರಥಗಳನ್ನು ಏರಿ ರುದ್ರದೇವರಂತೆ ಕಂಗೊಳಿಸುತ್ತಾ ಎಲ್ಲರೂ ಒಟ್ಟಿಗೆ ವನಕ್ಕೆ ಹೊರಟರು.
ಪ್ರೇಷ್ಯಾಃ ಪುರಾ ವಿಂಶತಿರಾತ್ತಶಸತ್ರ
ಧನೂಂಷಿ ಶಸತ್ರಣಿ ಶರಾಂಶ್ಚ ದೀಪ್ತಾನ್ |
ಮೌರ್ವೀಃ ಸುಯಂತ್ರಾಣಿ ಕಲಾಪಕಾಂಶ್ಚ
ಸರ್ವೇ ಸಮಾದಾಯ ಜಘನ್ಯಮೀಯುಃ ||3||

ಮೊದಲೇ ಇಪ್ಪತ್ತು ಜನಸೇವಕರು ಧನುಸ್ಸುಗಳನ್ನೂ ಶತ್ರುಗಳನ್ನೂ ಹೊಳೆಯುವ ಬಾಣಗಳನ್ನೂ ಜ್ಯಾಬಂಧನಗಳನ್ನು ಉಳಿದ ಸಲಕರಣೆಗಳನ್ನೂ ತೆಗೆದುಕೊಂಡು ಸಮೀಪದಲ್ಲಿಯೇ ನಡೆದರು.
ತತಶ್ಚ ವಾಸಾಂಸಿ ಚ ರಾಜಪುತ್ರ್ಯಾ
ಧಾತ್ರ್ಯಶ್ಚ ದಾಸ್ಯಶ್ಚ ವಿಭೂಷಣಂ ಯತ್ |
ತದಿಂದ್ರಸೇನಸ್ತ್ವರಿತಃ ಪ್ರಗೃಹ್ಯ
ಜಘನ್ಯಮೇವೋಪಯಯೌ ರಥೇನ ||4||
ಅನಂತರ ರಾಜಪುತ್ರಿಯ ವಸ್ತ್ರಗಳನ್ನೂ ದಾದಿಯರನ್ನೂ ಮತ್ತು ದಾಸಿಯರನ್ನೂ ವಿಭೂಷಣಗಳನ್ನು ಇಂದ್ರಸೇನನು ತೆಗೆದುಕೊಂಡು ಸಮೀಪದಲ್ಲಿಯೇ ಇನ್ನೊಂದು ರಥದಲ್ಲಿ ಹೊರಟನು.
ತತಃ ಕುರುಶ್ರೇಷ್ಠಮುಪೇತ್ಯ ಪೌರಾಃ
ಪ್ರದಕ್ಷಿಣಂ ಚಕ್ರುರದೀನಸತ್ತ್ವಮ್ |
ತಂ ಬ್ರಾಹ್ಮಣಾಶ್ಚಾಭ್ಯವದನ್ ಪ್ರಸನ್ನಾ
ಮುಖ್ಯಾಶ್ಚ ಸರ್ವೇ ಕುರುಜಾಂಗಲೇಷು ||5||
ಆಗ ಪೌರರು ಕುರುಶ್ರೇಷ್ಠನಾದ, ಧೃತಿಗೆಡದ, ಧರ್ಮರಾಜನ ಸಮೀಪಕ್ಕೆ ಬಂದು ಅವನಿಗೆ ಪ್ರದಕ್ಷಿಣೆಯನ್ನು ಮಾಡಿದರು. ಕುರುಜಾಂಗಲದಲ್ಲಿ ಪ್ರಧಾನರಾದ ಬ್ರಾಹ್ಮಣರೆಲ್ಲರೂ ಪ್ರಸನ್ನರಾಗಿ ಅವನಿಗೆ ಆಶೀರ್ವಾದವನ್ನು ಮಾಡಿದರು.
ಸ ಚಾಪಿ ಸಾಂತ್ವಂ ಹ್ಯವದತ್ ಪ್ರಸನ್ನಃ
ಸಹೈವ ತೈರ್ಭ್ರಾತೃಭಿರ್ಧರ್ಮರಾಜಃ |
ತಸ್ಥೌ ಚ ತತ್ರಾಧಿಪತಿರ್ಮಹಾತ್ಮಾ
ದೃಷ್ಟ್ವಾ ಜನೌಘಂ ಕುರುಜಾಂಗಲಾನಾಮ್ ||6||
ಮಹಾತ್ಮನಾದ ಧರ್ಮರಾಜನೂ ಸಹ ತಮ್ಮಂದಿರ ಜೊತೆಯಲ್ಲಿ ಪ್ರಸನ್ನನಾಗಿ ಅವರಿಗೆ ಮಧುರವಾದ ಮಾತುಗಳನ್ನು ಆಡಿದನು. ಮಹಾತ್ಮನೂ ಅಧಿಪತಿಯೂ ಆದ ಅವನು ಕುರುಜಾಂಗಲದ ಜನಸ್ತೋಮವನ್ನು ನೋಡುತ್ತಾ ನಿಂತನು.
ಪಿತೇವ ಪುತ್ರೇಷು ಸ ತೇಷು ಭಾವಂ
ಚಕ್ರೇ ಕುರುಣಾಮೃಷಭೋ ಮಹಾತ್ಮಾ |
ತೇ ಚಾಪಿ ತಸ್ಮಿನ್ ಭರತಪ್ರಬರ್ಹೇ
ತದಾ ಬಭೂವುಃ ಪಿತರೀವ ಪುತ್ರಾಃ ||7||
ಮಹಾತ್ಮನಾದ ಆ ಕುರುಶ್ರೇಷ್ಠನು ಆ ಪ್ರಜೆಗಳನ್ನು ತಂದೆಯು ಮಕ್ಕಳನ್ನು ನೋಡಿಕೊಳ್ಳುವಂತೆ ನೋಡಿಕೊಂಡಿದ್ದನು. ಅವರಾದರೂ ಸಹ ಆ ಭರತಶ್ರೇಷ್ಠನನ್ನು ಮಕ್ಕಳು ತಂದೆಯನ್ನು ನೋಡುವಂತೆ ನೋಡುತ್ತಿದ್ದರು.
ತತಃ ಸಮಾಸಾದ್ಯ ಮಹಾಜನೌಘಾಃ
ಕುರೂಪ್ರವೀರಂ ಪರಿವಾರ್ಯ ತಸ್ಥುಃ |
ಹಾ ನಾಥ ಹಾ ಧರ್ಮ ಇತಿ ಬ್ರುವಾಣಾ
ದೀನಾಶ್ಚ ಸರ್ವೇಽಶ್ರುಮುಖಾ ಬಭೂವುಃ ||8||
ಅನಂತರ ಆ ಮಹಾಜನಸಮುದಾಯವು ಕುರುಶ್ರೇಷ್ಠನಾದ ಧರ್ಮರಾಜನನ್ನು ಸುತ್ತುವರಿದು ನಿಂತಿತು. ಹಾ ನಾಥ ಹಾ ಧರ್ಮ ಎಂದು ಹೇಳುತ್ತಾ ಎಲ್ಲರೂ ದೈನ್ಯದಿಂದ ಅಶ್ರುಮುಖರಾದರು.
ವರಃ ಕುರೂಣಾಮಧಿಪಃ ಪ್ರಜಾನಾಂ
ಪಿತೇವ ಪುತ್ರಾನಪಹಾಯ ಚಾಸ್ಮಾನ್ |
ಪೌರಾನಿಮಾನ್ ಜಾನಪದಾಂಶ್ಚ ಸರ್ವಾನ್
ಹಿತ್ವಾ ಪ್ರಯಾತಃ ಕ್ವನು ಧರ್ಮರಾಜಃ ||9||
ಕುರುಪ್ರವೀರನೂ ಪ್ರಜೆಗಳ ಅಧಿಪತಿಯೂ ಆದ ತಂದೆಯಂತಿರುವ ನೀನು ಮಕ್ಕಳಾದ ನಮ್ಮನ್ನು ಆಗಲಿ ಈ ಎಲ್ಲ ಪೌರರನ್ನು ಮತ್ತು ಜಾನಪದರನ್ನು ಅಗಲಿ ಎಲ್ಲಿಗೆ ಹೋಗುತ್ತಿದ್ದೀಯೆ? (ಅಂತಹ ಧರ್ಮರಾಜನು ಎಲ್ಲಿಗೆ ಹೋಗುತ್ತಿದ್ದಾನೆ?)
ಧಿಗ್ಧಾರ್ತರಾಷ್ಟ್ರಂ ಸುನೃಶಂಸಬುದ್ಧಿಂ
ಧಿಕ್ ಸೌಬಲಂ ಪಾಪಮತಿಂ ಚ ಕರ್ಣಮ್ |
ಅನರ್ಥಮಿಚ್ಛಂತಿ ನರೇಂದ್ರ ಪಾಪಾ
ಯೇ ಧರ್ಮನಿತ್ಯಸ್ಯ ಸತಸ್ತ್ವಮೋಗ್ರಾಃ ||10||
ಕ್ರೂರಬುದ್ಧಿಯನ್ನು ಹೊಂದಿರುವ ದುರ್ಯೋಧನನಿಗೆ ಧಿಕ್ಕಾರವಿರಲಿ. ಶಕುನಿಗೂ ಪಾಪಬುದ್ಧಿಯುಳ್ಳ ಕರ್ಣನಿಗೂ ಧಿಕ್ಕಾರವಿರಲಿ. ನರೇಂದ್ರನೇ! ಆ ಉಗ್ರರಾದ ಪಾಪಿಗಳೆಲ್ಲರೂ ಧರ್ಮನಿಷ್ಠನಾದ ಸಜ್ಜನನಾದ ನಿನಗೆ ಅನರ್ಥವನ್ನು ಬಯಸುತ್ತಾರೆ.
ಸ್ವಯಂ ನಿವೇಶ್ಯಾಪ್ರತಿಮಂ ಮಹಾತ್ಮಾ
ಪುರಂ ಮಹದ್ ದೇವಪುರಪ್ರಕಾಶಮ್ |
ಶತಕ್ರತುಪ್ರಸ್ಥಮಮೋಘಕರ್ಮಾ
ಹಿತ್ವಾ ಪ್ರಯಾತಃ ಕ್ವನು ಧರ್ಮರಾಜಃ ||11||
ಮಹಾತ್ಮನೂ ಅಮೋಘಕರ್ಮನೂ ಆದ ಧರ್ಮರಾಜನು ಅಸದೃಶವಾದ ದೇವನಗರದಂತೆ ಕಾಣುವ ಮಹಾಪಟ್ಟಣವಾದ ಇಂದ್ರಪ್ರಸ್ಥವನ್ನು ನಿರ್ಮಾಣಮಾಡಿ ಅದನ್ನು ಬಿಟ್ಟು ಎಲ್ಲಿಗೆ ಹೋಗುತ್ತಿದ್ದಾನೆ?

ಚಕಾರ ಯಾಮಪ್ರತಿಮಾಂ ಮಹಾತ್ಮಾ
ಸಭಾಂ ಮಯೋ ದೇವಸಭಾಪ್ರಕಾಶಾಮ್ |
ತಾಂ ದೇವಮಾಯಾಮಿವ ದೇವಕಲ್ಪೋ
ಹಿತ್ವಾ ಪ್ರಯಾತಃ ಕ್ವನು ಧರ್ಮರಾಜಃ ||12||
ಮಹಾತ್ಮನಾದ ಮಯನು ದೇವಸಭೆಯಂತೆ ಕಂಗೊಳಿಸುವ ಯಾವ ಅಸದೃಶವಾದ ಸಭೆಯನ್ನು ನಿರ್ಮಿಸಿದನೋ ಅಂತಹ ದೇವಮಾಯೆಯಂತಿರುವ ಸಭೆಯನ್ನು ಬಿಟ್ಟು ದೇವಸದೃಶನಾದ ಧರ್ಮರಾಜನು ಎಲ್ಲಿಗೆ ಹೋಗುತ್ತಿದ್ದಾನೆ?
ತಾನ್ ಧರ್ಮಕಾಮಾರ್ಥವಿದುತ್ತಮೌಜಾ
ಬೀಭತ್ಸುರುಚ್ಚೈಃ ಸಹಿತಾನುವಾಚ |
ಆದಾಸ್ಯತೇ ವಾಸಮಿಮಂ ನಿರುಷ್ಯ
ವನೇಷು ರಾಜಾ ದ್ವಿಷತಾಂ ಯಶಾಂಸಿ ||13||
ಧರ್ಮಾರ್ಥಕಾಮಗಳನ್ನು ತಿಳಿದ ಉತ್ತಮಪರಾಕ್ರಮವುಳ್ಳ ಅರ್ಜುನನು ಅವರೆಲ್ಲರನ್ನೂ ಕುರಿತು ಮಾತನಾಡಿದನು. ರಾಜನಾದ ಧರ್ಮರಾಜನು ಈ ವನವಾಸವನ್ನು ಮುಗಿಸಿ ಬಂದು ಶತ್ರುಗಳ ಕೀರ್ತಿಯನ್ನೆಲ್ಲಾ ಅಪಹರಿಸುವನು.
ದ್ವಿಜಾತಿಮುಖ್ಯಾಃ ಸಹಿತಾಃ ಪೃಥಕ್ ಚ
ಭವದ್ಭಿರಾಸಾದ್ಯ ತಪಸ್ವಿಭಿಶ್ಚ |
ಪ್ರಸಾದ್ಯ ಧರ್ಮಾರ್ಥವಿದಶ್ಚ ವಾಚ್ಯಾ
ಯಥಾರ್ಥಸಿದ್ಧಿಃ ಪರಮಾ ಭವೇನ್ನಃ ||14||
ಎಲೈ ದ್ವಿಜಾತಿಮುಖ್ಯರೇ! ನೀವು ಒಟ್ಟಾಗಿ ಮತ್ತು ಪ್ರತ್ಯೇಕವಾಗಿ ತಪಸ್ವಿಗಳ ಜೊತೆಯಲ್ಲಿ ನಗರವನ್ನು ತಲುಪಿ. ಅಲ್ಲಿರುವ ಧರ್ಮಾರ್ಥವೇತ್ತೃಗಳಿಗೆ ನಮಗೆ ಶ್ರೇಷ್ಠವಾದ ಅರ್ಥಸಿದ್ಧಿಯುಂಟಾಗುವಂತೆ ಆಶೀರ್ವಾದಮಾಡಬೇಕೆಂದು ಹೇಳಿ.
ಇತ್ಯೇವಮುಕ್ತೇ ವಚನೇಽರ್ಜುನೇನ
ತೇ ಬ್ರಾಹ್ಮಣಾಃ ಸರ್ವವರ್ಣಾಶ್ಚ ರಾಜನ್ |
ಮುದಾಽಭ್ಯನಂದನ್ ಸಹಿತಾಶ್ಚ ಚಕ್ರುಃ
ಪ್ರದಕ್ಷಿಣಂ ಧರ್ಮಭೃತಾಂ ವರಿಷ್ಠಮ್ ||15||
ಎಲೈ ರಾಜನೇ! ಅರ್ಜುನನು ಹೀಗೆ ಮಾತನಾಡುತ್ತಿರಲು ಆ ಬ್ರಾಹ್ಮಣರು ಮತ್ತು ಸರ್ವವರ್ಣದ ಪ್ರಜೆಗಳೂ ಸಹ ಸಂತೋಷದಿಂದ ಆ ಮಾತುಗಳನ್ನು ಅಭಿನಂದಿಸಿ ಧರ್ಮವನ್ನು ಧರಿಸಿದವರಲ್ಲಿ ಶ್ರೇಷ್ಠನಾದ ಧರ್ಮರಾಜನಿಗೆ  ಪ್ರದಕ್ಷಿಣೆಯನ್ನು ಮಾಡಿದರು.
ಆಮಂತ್ರ್ಯ ಪಾರ್ಥಂ ಚ ವೃಕೋದರಂ ಚ
ಧನಂಜಯಂ ಯಾಜ್ಞಸೇನೀಂ ಯಮೌ ಚ |
ಪ್ರತಸ್ಥಿರೇ ರಾಷ್ಟ್ರಮಪೇತಹರ್ಷಾ
ಯುಧಿಷ್ಠಿರೇಣಾನುಮತಾ ಯಥಾ ಸ್ವಮ್ ||16||
ಅವರು ಧರ್ಮನನ್ನೂ ಭೀಮಸೇನನ್ನೂ ಅರ್ಜುನನ್ನೂ ದ್ರೌಪದಿಯನ್ನೂ ನಕುಲಸಹದೇವರನ್ನೂ ಆಮಾಂತ್ರಿಸಿ (ಅವರಿಂದ ಅನುಮತಿಯನ್ನು ಪಡೆದು) ಇನ್ನೊಮ್ಮೆ ಯುಧಿಷ್ಠಿರನ ಅನುಮತಿಯನ್ನು ಪಡೆದು ಹರ್ಷರಹಿತರಾಗಿ ರಾಷ್ಟ್ರದಲ್ಲಿ ತಮ್ಮತಮ್ಮ ಮನೆಗಳಿಗೆ ಹೊರಟರು.
|| ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ವಿಂಶೋಽಧ್ಯಾಯಃ ||
|| ಕೈರಾತಪರ್ವಣಿ ದಶಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
*****
ಇಪ್ಪತ್ತೊಂದನೆಯ ಅಧ್ಯಾಯ
(ಪಾಂಡವರ ದ್ವೈತವನ ಪ್ರವೇಶ.)
ವೈಶಂಪಾಯನಃ
ತತಸ್ತೇಷು ಪ್ರಯಾತೇಷು ಕೌಂತೇಯಃ ಸತ್ಯಸಂಗರಃ |
ಅಭ್ಯಭಾಷತ ಧರ್ಮಾತ್ಮಾ ಭ್ರಾತೄನ್ ಸರ್ವಾನ್ ಯುಧಿಷ್ಠಿರಃ ||1||
ಆ ಪೌರರೆಲ್ಲರೂ ಹೋದ ಮೇಲೆ ಆ ಸತ್ಯಪ್ರತಿಜ್ಞೆಯುಳ್ಳವನೂ ಧರ್ಮಾತ್ಮನೂ ಆದ ಕುಂತೀಪುತ್ರನಾದ ಯುಧಿಷ್ಠಿರನು ತನ್ನ ಎಲ್ಲಾ ತಮ್ಮಂದಿರನ್ನು ಕುರಿತು ಮಾತನಾಡಿದನು.
ದ್ವಾದಶೇಮಾನಿ ವರ್ಷಾಣಿ ವಸ್ತವ್ಯಂ ನಿರ್ಜನೇ ವನೇ |
ಸಮೀಕ್ಷಧ್ವಂ ಮಹಾರಣ್ಯೇ ದೇಶಂ ಬಹುಮೃಗದ್ವಿಜಮ್ ||2||
ನಾವು ಈ ಹನ್ನೆರಡುವರ್ಷಕಾಲ ನಿರ್ಜನವಾದ ಅರಣ್ಯದಲ್ಲಿ ವಾಸಿಸಬೇಕಾಗಿದೆ. ಮಹಾರಣ್ಯದಲ್ಲಿ ಅನೇಕ ಮೃಗಪಕ್ಷಿಗಳಿರುವ ಒಳ್ಳೆಯ ಪ್ರದೇಶವನ್ನು ಹುಡುಕಿ.
ಬಹುಪುಷ್ಪಫಲಂ ರಮ್ಯಂ ಶಿವಂ ಪುಣ್ಯಜನೋಚಿತಮ್ |
ಯತ್ರೇಮಾ ದ್ವಾದಶ ಸಮಾಃ ಸುಖಂ ಪ್ರತಿವಸೇಮಹಿ ||3||
ಬಹುಪುಷ್ಪಫಲಗಳಿಂದ ಕೂಡಿರುವ ರಮ್ಯವಾದ ಮಂಗಳವಾದ ಪುಣ್ಯಜನರಿಗೆ ಯೋಗ್ಯವಾದ ದೇಶವನ್ನು ಹುಡುಕಬೇಕು. ಅಲ್ಲಿ ನಾವು ಹನ್ನೆರಡು ವರ್ಷಗಳಕಾಲ ಸುಖವಾಗಿ ವಾಸಮಾಡೋಣ.

ವೈಶಂಪಾಯನಃ
ಏವಮುಕ್ತೇ ಪ್ರತ್ಯುವಾಚ ಧರ್ಮರಾಜಂ ಧನಂಜಯಃ |
ಗುರುವನ್ಮಾನವಗುರುಂ ಮಾನಯಿತ್ವಾ ಮನಸ್ವಿನಮ್ ||4||
ಧರ್ಮರಾಜನು ಹೀಗೆ ಹೇಳುತ್ತಿರಲು ಧನಂಜಯನು ಬೃಹಸ್ಪತಿಯಂತೆ ಇದ್ದ ಧೈರ್ಯಶಾಲಿಯಾದ ಆ ಮಾನವಗುರುವನ್ನು ಸಂಮಾನಿಸಿ ಮಾತನಾಡಿದನು.
ಭವಾನೇವ ಮಹರ್ಷೀಣಾಂ ವೃದ್ಧಾನಾಂ ಪರ್ಯುಪಾಸಿತಾ |
ಅಜ್ಞಾತಂ ಮಾನುಷೇ ಲೋಕೇ ಭವತೋ ನಾಸ್ತಿ ಕಿಂಚನ ||5||
ನೀನೇ ಮಹರ್ಷಿಗಳ ಮತ್ತು ವೃದ್ಧರ ಸೇವೆಯನ್ನು ಮಾಡಿರುವವನು. ಮನುಷ್ಯಲೋಕದಲ್ಲಿ ನಿನಗೆ ಅಜ್ಞಾತವಾದುದು ಯಾವುದೂ ಇಲ್ಲ.
ತ್ವಯಾ ಹ್ಯುಪಾಸಿತಾ ನಿತ್ಯಂ ಬ್ರಾಹ್ಮಣಾ ವೇದಪಾರಗಾಃ |
ದ್ವೈಪಾಯನಪ್ರಭೃತಯೋ ನಾರದಶ್ಚ ಮಹಾತಪಾಃ ||6||
ನೀನಾದರೋ ವೇದಪಾರಂಗತರಾದ ಬ್ರಾಹ್ಮಣರಾದ ದ್ವೈಪಾಯನಾದಿ ಋಷಿಗಳನ್ನೂ ನಾರದಾದಿ ಮಹಾತಪಸ್ವಿಗಳನ್ನೂ ಯಾವಾಗಲೂ ಉಪಾಸನೆ ಮಾಡಿದ್ದೀಯೆ.
ಯಃ ಸರ್ವಲೋಕದ್ವಾರಾಣಿ ನಿತ್ಯಂ ಸಂಚರತೇ ವಶೀ |
ದೇವಲೋಕಾದ್ ಬ್ರಹ್ಮಲೋಕಂ ಗಂಧರ್ವಾಪ್ಸರಸಾಮಪಿ ||7||
ಆ ಪ್ರಭುಗಳಾದ ನಾರದರಾದರೋ ಸರ್ವಲೋಕದ್ವಾರಗಳಿಗೂ ದೇವಲೋಕದಿಂದ ಬ್ರಹ್ಮಲೋಕಕ್ಕೂ ಮತ್ತು ಗಂಧರ್ವ ಅಪ್ಸರಲೋಕಕ್ಕೂ ನಿತ್ಯವೂ ಸಂಚರಿಸುತ್ತಾರೆ.
ಅನುಭಾವಾಂಶ್ಚ ಜಾನಾಸಿ ಬ್ರಾಹ್ಮಣಾನಾಂ ನ ಸಂಶಯಃ |
ಪ್ರಭಾವಾಂಶ್ಚೈವ ವೇತ್ಥ ತ್ವಂ ಸರ್ವೇಷಾಮೇವ ಪಾಂಡವ ||8||
ಎಲೈ ಪಾಂಡವನೇ! ನೀನು ನಿಸ್ಸಂಶಯವಾಗಿ ಆ ಬ್ರಾಹ್ಮಣರ ಮಹಿಮೆಯನ್ನು ಆ ಎಲ್ಲ ಸಾಮರ್ಥ್ಯವನ್ನು ತಿಳಿದಿದ್ದೀಯೆ.
ತ್ವಮೇವ ರಾಜನ್ ಜಾನಾಸಿ ಶ್ರೇಯಃಕಾರಣಮೇವ ಚ |
ಯತ್ರೇಚ್ಛಸಿ ಮಹಾರಾಜ ನಿವಾಸಂ ತತ್ರ ಕುರ್ಮಹೇ ||9||
ಎಲೈ ರಾಜನೇ! ನಮ್ಮ ಶ್ರೇಯಸ್ಸಿಗೆ ಅನುಕೂಲವಾದುದು ಯಾವುದು ಎಂದು ನೀನೇ ತಿಳಿದಿದ್ದೀಯೆ. ಮಹಾರಾಜನೇ! ನೀನು ಎಲ್ಲಿ ಬಯಸುತ್ತೀಯೋ ಅಲ್ಲಿ ವಾಸವನ್ನು ಮಾಡೋಣ.
ಇದಂ ದ್ವೈತವನಂ ನಾಮ ಸರಃ ಪುಣ್ಯಜನೋಚಿತಮ್ |
ಬಹುಪುಷ್ಪಫಲಂ ರಮ್ಯಂ ನಾನಾದ್ವಿಜನಿಷೇವಿತಮ್ ||10||
ಇದು ದ್ವೈತವನವೆಂದು ಪುಣ್ಯಜನರಿಗೆ ಯೋಗ್ಯವಾದ ಸರೋವರಗಳಿಂದಲೂ ಬಹುಪುಷ್ಪಫಲಗಳಿಂದಲೂ ನಾನಾ ವಿಧವಾದ ಪಕ್ಷಿಗಳಿಂದಲೂ ಕೂಡಿ ಮನೋಹರವಾಗಿದೆ.
ಅತ್ರೇಮಾ ದ್ವಾದಶ ಸಮಾ ವಿಹರೇಮೇತಿ ರೋಚಯೇ |
ಯದಿ ತೇಽನುಮತಂ ರಾಜನ್ ಕಿಮನ್ಯನ್ಮನ್ಯತೇ ಭವಾನ್ ||11||
ರಾಜನೇ! ನಿನಗೆ ಅನುಮತವಾದರೆ ಇಲ್ಲಿ ಈ ಹನ್ನೆರಡುವರ್ಷಗಳನ್ನು ಸಂತೋಷದಿಂದ ಕಳೆಯೋಣವೆಂದು ನನ್ನ ಇಷ್ಟ. ನಿನ್ನ ಅಭಿಪ್ರಾಯವೇನು?
ಯುಧಿಷ್ಠಿರಃ
ಮಮಾಪ್ಯೇತನ್ಮತಂ ಪಾರ್ಥ ತ್ವಯಾ ಯತ್ ಸಮುದಾಹೃತಮ್ |
ಗಚ್ಛಾಮಃ ಪುಣ್ಯವಿಖ್ಯಾತಂ ಮಹದ್ ದ್ವೈತವನಂ ಸರಃ ||12||
ಅರ್ಜುನನೇ! ನೀನು ಹೇಳಿದುದು ನನಗೂ ಸಮ್ಮತವಾದುದು. ನಾವು ಪವಿತ್ರವೂ ಪ್ರಸಿದ್ಧವೂ ಶ್ರೇಷ್ಠವೂ ಆದ ದ್ವೈತವನಸರೋವರಕ್ಕೆ ಹೋಗೋಣ.
ವೈಶಂಪಾಯನಃ
ತತಸ್ತೇ ಪ್ರಯಯುಃ ಸರ್ವೇ ಪಾಂಡವಾ ಧರ್ಮಚಾರಿಣಃ |
ಬ್ರಾಹ್ಮಣೈರ್ಬಹುಭಿಃ ಸಾರ್ಧಂ ಪುಣ್ಯಂ ದ್ವೈತವನಂ ಸರಃ ||13||
ಅನಂತರ ಧರ್ಮಚಾರಿಗಳಾದ ಆ ಪಾಂಡವರೆಲ್ಲರೂ ಅನೇಕ ಬ್ರಾಹ್ಮಣರ ಜೊತೆಯಲ್ಲಿ ಪವಿತ್ರವಾದ ದ್ವೈತವನದ ಸರೋವರಕ್ಕೆ ಹೊರಟರು.
ಬ್ರಾಹ್ಮಣಾಃ ಸಾಗ್ನಿಹೋತ್ರಾಶ್ಚ ತಥೈವ ಚ ನಿರಗ್ನಯಃ |
ಸ್ವಾಧ್ಯಾಯಿನೋ ಭಿಕ್ಷವಶ್ಚ ಜಟಿನೋ ವನವಾಸಿನಃ ||14||
ಬಹವೋ ಬ್ರಾಹ್ಮಣಾಸ್ತತ್ರ ಪರಿವವ್ರುರ್ಯುಧಿಷ್ಠಿರಮ್ |
ತಪಸ್ವಿನಃ ಸತ್ಯಶೀಲಾಃ ಶತಶಃ ಸಂಶಿತವ್ರತಾಃ ||15||
ಅಗ್ನಿಹೋತ್ರವನ್ನು ಹೊಂದಿದ ಮತ್ತು ಹೊಂದದ ಬ್ರಾಹ್ಮಣರು ಸ್ವಾಧ್ಯಾಯಸಂಪನ್ನರು ಬ್ರಹ್ಮಚಾರಿಗಳು ವಾನಪ್ರಸ್ಥರು ಎಲ್ಲರೂ ತಪಸ್ವಿಗಳು ಸತ್ಯಶೀಲರು ಪ್ರಶಸ್ತವಾದ ವ್ರತವನ್ನು ಧರಿಸಿದವರು. ಇಂತಹ ಅನೇಕ ಬ್ರಾಹ್ಮಣರು ನೂರರ ಸಂಖ್ಯೆಯಲ್ಲಿ ಯುಧಿಷ್ಠಿರನನ್ನು ಸುತ್ತುವರಿದು ಹೊರಟರು.
ತೇ ಯಾತ್ವಾ ಪಾಂಡವಾಸ್ತತ್ರ ಬ್ರಾಹ್ಮಣೈರ್ಬಹುಭಿಃ ಸಹ |

ಪುಣ್ಯಂ ದ್ವೈತವನಂ ರಮ್ಯಂ ವಿವಿಶುರ್ಭರತರ್ಷಭಾಃ ॥16॥
ಪಾಂಡುವಿನ ಪುತ್ರರಾದ ಆ ಭರತಶ್ರೇಷ್ಠರು ಅನೇಕ ಬ್ರಾಹ್ಮಣರ ಜೊತೆಯಲ್ಲಿ ಪ್ರಯಾಣಮಾಡಿ ಪವಿತ್ರವೂ ರಮ್ಯವೂ ಆದ ದ್ವೈತವನವನ್ನು ತಲುಪಿದರು.
ತತ್ ಸಾಲತಾಲಾಮ್ರಮಧೂಕನೀಪ-
ಕದಂಬಸರ್ಜಾರ್ಜುನಕರ್ಣಿಕಾರೈಃ।
ತಪಾತ್ಯಯೇ ಪುಷ್ಪಫಲೈರುಪೇತಂ
ಮಹತ್ಪುಣ್ಯಂ ದ್ವೈತವನಂ ದದರ್ಶ ॥17॥
ಧರ್ಮರಾಜನು ಸಾಲ ತಾಳ ಆಮ್ರ ಮಧೂಕ ನೀಪ ಕದಂಬ ಸರ್ಜ ಅರ್ಜುನ ಕರ್ಣಿಕಾರ ಮೊದಲಾದ ವೃಕ್ಷಗಳಿಂದ ಕೂಡಿದ ಗ್ರೀಷ್ಮ ಋತುವಿನ ಕೊನೆಯಲ್ಲಿ ಬಹಳ ಪುಷ್ಪಫಲಗಳಿಂದ ಉಪೇತವಾದ ಮಹಾಪುಣ್ಯಪ್ರದವಾದ ದ್ವೈತವನವನ್ನು ನೋಡಿದನು.
ಮಹಾದ್ರುಮಾಣಾಂ ಶಿಖರೇಷು ತಸ್ಥುಃ
ಮನೋರಮಾ ವಾಚ ಉದೀರಯಂತಃ।
ಮಯೂರನತ್ಯೂಹಚಕೋರಸಂಘಾಃ
ತಸ್ಮಿನ್ ವನೇ ಕಾನನಕೋಕಿಲಾಶ್ಚ ॥18॥
ದೊಡ್ಡವೃಕ್ಷಗಳ ತುದಿಯಲ್ಲಿ ಮನೋಹರವಾಗಿ ಗಾನಮಾಡುತ್ತಿದ್ದ ಮಯೂರ ಚಕೋರ ಬಾತುಕೋಳಿ ಸಮುದಾಯಗಳನ್ನೂ ಕಾನನಕೋಗಿಲೆಗಳನ್ನೂ ಆ ವನದಲ್ಲಿ ನೋಡಿದನು.
ಕರೇಣುಯೂಥೈಃ ಸಹ ಯೂಥಪಾನಾಂ
ಮದೋತ್ಕಟಾನಾಮಚಲಪ್ರಭಾಣಾಮ್।
ಮಹಾಂತಿ ಯೂಥಾನಿ ಮಹಾದ್ವಿಪಾನಾಂ
ತಸ್ಮಿನ್ ವನೇ ರಾಷ್ಟ್ರಪತಿರ್ದದರ್ಶ ॥19॥
ರಾಷ್ಟ್ರಪತಿಯಾದ ಧರ್ಮರಾಜನು ಪರ್ವತವನ್ನು ಹೋಲುವ ಯೂಥಪತಿಗಳಾದ ಗಜಗಳು (ಗಂಡಾನೆಗಳು) ಮದೋತ್ಕಟವಾದ ಕರೇಣುಗಳ (ಚಿಕ್ಕ ಹೆಣ್ಣಾನೆಗಳ) ಜೊತೆಯಲ್ಲಿ ಹೋಗುವುದನ್ನೂ ಮಹಾಗಜಗಳ ದೊಡ್ಡದೊಡ್ಡ ಗುಂಪುಗಳನ್ನೂ ಆ ವನದಲ್ಲಿ ನೋಡಿದನು.
ಮನೋರಮಾಂ ಭೋಗವತೀಂ ಸಮೇತ್ಯ
ಧೃತಾತ್ಮನಾಂ ಚೀರಜಟಾಧರಾಣಾಮ್।
ತಸ್ಮಿನ್ ವನೇ ಧರ್ಮಭೃತಾಂ ನಿವಾಸೇ
ದದರ್ಶ ಸಿದ್ಧರ್ಷಿಗಣಾನನೇಕಾನ್ ॥20॥
ಮನೋನಿಗ್ರಹವುಳ್ಳ ಚೀರಜಟಾಧಾರಿಗಳಿಗೆ ಮನೋಹರವಾದ ಅವರಿಗೆ ಯೋಗ್ಯವಾದ ಭೋಗ್ಯಗಳಿಂದ ಕೂಡಿದ ಆ ತಪೋಭೂಮಿಯನ್ನು ನೋಡಿ ಧರ್ಮರಾಜನು ಧರ್ಮಾಚಾರಿಗಳ ನಿವಾಸವಾದ ಆ ವನದಲ್ಲಿ ಅನೇಕ ಸಿದ್ಧರಮತ್ತು ಋಷಿಗಳ ಗಣಗಳನ್ನು ನೋಡಿದನು.
ತತಃ ಸ ಯಾನಾದವರುಹ್ಯ ರಾಜಾ
ಸಭ್ರಾತೃಕಃ ಸಜನಃ ಕಾನನಂ ತತ್।
ವಿವೇಶ ಧರ್ಮಾತ್ಮವಿದಾಂ ವರಿಷ್ಠಃ
ತ್ರಿವಿಷ್ಟಪಂ ಶಕ್ರ ಇವಾಮಿತೌಜಾಃ ॥21॥
ಅನಂತರ ಧರ್ಮವೇತ್ತೃಗಳಲ್ಲಿ ಮತ್ತು ಆತ್ಮವೇತ್ತೃಗಳಲ್ಲಿ ಶ್ರೇಷ್ಠನಾದ ಆ ರಾಜನು ರಥದಿಂದ ಇಳಿದು ತಮ್ಮಂದಿರ ಮತ್ತು ಉಳಿದ ಜನಗಳ ಜೊತೆಯಲ್ಲಿ ಅಮಿತಪರಾಕ್ರಮಿಯಾದ ಇಂದ್ರನು ಸ್ವರ್ಗವನ್ನು ಪ್ರವೇಶಿಸುವಂತೆ ಆ ಕಾನನವನ್ನು ಪ್ರವೇಶಿಸಿದನು.
ತಂ ಸತ್ಯಸಂಧಂ ಸಹಿತಾ ನಿಪೇತುಃ
ದಿದೃಕ್ಷವಶ್ಚಾರಣಸಿದ್ಧಸಂಘಾಃ।
ವನೌಕಸಶ್ಚಾಪಿ ನರೇಂದ್ರಸಿಂಹಂ
ಮನಸ್ವಿನಃ ಸಂಪರಿವಾರ್ಯ ತಸ್ಥುಃ ॥22॥
ಆ ಸತ್ಯಸಂಧನಾದ ರಾಜನನ್ನು ನೋಡುವ ಇಚ್ಛೆಯಿಂದ ಚಾರಣಸಿದ್ಧರ ಸಂಘಗಳು ಒಟ್ಟಿಗೆ ಅಲ್ಲಿಗೆ ಬಂದವು. ವನವಾಸಿಗಳು ಸಹ ಆ ಧೈರ್ಯಶಾಲಿಯಾದ ರಾಜಸಿಂಹನನ್ನು ಸುತ್ತುವರಿದು ನಿಂತರು.
ಸ ತತ್ರ ಸರ್ವಾನಭಿವಾದ್ಯ ಸರ್ವೈಃ
ಪ್ರತ್ಯರ್ಚಿತೋ ರಾಜವದ್ ದೇವವಚ್ಚ।
ವಿವೇಶ ಸರ್ವೈಃ ಸಹಿತೋ ದ್ವಿಜಾಗ್ರ್ಯೈಃ
ಕೃತಾಂಜಲಿರ್ಧರ್ಮಭೃತಾಂ ವರಿಷ್ಠಃ ॥23॥
ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಅಲ್ಲಿ ಎಲ್ಲರಿಗೂ ನಮಸ್ಕರಿಸಿ ಎಲ್ಲರಿಂದಲೂ ರಾಜನಂತೆ ಮತ್ತು ದೇವತೆಯಂತೆ ಪೂಜಿಸಲ್ಪಟ್ಟವನಾಗಿ ಎಲ್ಲ ಬ್ರಾಹ್ಮಣಶ್ರೇಷ್ಠರ ಜೊತೆಯಲ್ಲಿ ಕೈಗಳನ್ನು ಮುಗಿದು ಆ ಕಾನನವನ್ನು ಪ್ರವೇಶಿಸಿದನು.
ಸ ಪುಣ್ಯಶೀಲಃ ಪಿತೃವನ್ಮಹಾತ್ಮಾ
ತಪಸ್ವಿಭಿರ್ಧರ್ಮಪರೈರುಪೇತ್ಯ।
ಪ್ರತ್ಯರ್ಚಿತಃ ಪುಷ್ಪಧರಸ್ಯ ಮೂಲೇ

मಹಾದ್ರುಮಸ್ಯೋಪವಿವೇಶ ರಾಜಾ ॥24॥
ಪುಣ್ಯಶೀಲನಾದ ಅವನು ತಂದೆಯಂತೆ ಧರ್ಮನಿಷ್ಠರಾದ ತಪಸ್ವಿಗಳ ಜೊತೆಯಲ್ಲಿ ಸೇರಿ ಅವರಿಂದ ಪೂಜಿಸಲ್ಪಟ್ಟು ಬಹಳ ಪುಷ್ಪಗಳಿದ್ದ ಒಂದು ಮಹಾವೃಕ್ಷದ ಬುಡದಲ್ಲಿ ಕುಳಿತುಕೊಂಡನು.
ಭೀಮಶ್ಚ ಕೃಷ್ಣಾ ಚ ಧನಂಜಯಶ್ಚ
ಯಮೌ ಚ ತೇ ಚಾನುಚರಾ ನರೇಂದ್ರ।
ವಿಮುಚ್ಯ ವಾಹಾನವಗಾಹ್ಯ ಸರ್ವೇ
ತತ್ರೋಪತಸ್ಥುರ್ಭರತಪ್ರಬರ್ಹಾಃ ॥25॥
ಎಲೈ ನರೇಂದ್ರನೇ! ಭೀಮ ದ್ರೌಪದಿ ಧನಂಜಯ ನಕುಲಸಹದೇವರು ಮತ್ತು ಅನುಚರರೆಲ್ಲರೂ ತಮ್ಮ ರಥಗಳಿಂದ ಅಶ್ವಗಳನ್ನು ಬಿಚ್ಚಿ ಸ್ನಾನವನ್ನು ಮಾಡಿ ಆ ಭರತಶ್ರೇಷ್ಠರೆಲ್ಲರೂ ಅವನ ಬಳಿ ಕುಳಿತುಕೊಂಡರು.
ಲತಾವಿತಾನಾವನತಃ ಸ ಪಾಂಡವೈಃ
ಮಹಾದ್ರುಮಃ ಪಂಚಭಿರುಗ್ರಧನ್ವಿಭಿಃ।
ಬಭೌ ನಿವಾಸೋಪಗತೈರ್ಮಹಾತ್ಮಭಿಃ
ಮಹಾಗಿರಿರ್ವಾರಣಯೂಥಪೈರಿವ ॥26॥
ಲತೆಯ ವಿಸ್ತಾರವಾದ ಭಾರಗಳಿಂದ ಬಾಗಿದ ಆ ಮಹಾವೃಕ್ಷವು ನಿವಾಸಕ್ಕೆ ಬಂದ ಉಗ್ರಧನುರ್ಧಾರಿಗಳಾದ ಪಾಂಡವರಿಂದ ಕೂಡಿದುದಾಗಿ ಗಜಪತಿಗಳಿಂದ ಕೂಡಿದ ಮಹಾಗಿರಿಯಂತೆ ಕಂಗೊಳಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
*****
ಇಪ್ಪತ್ತೆರಡನೆಯ ಅಧ್ಯಾಯ
(ಮಾರ್ಕಂಡೇಯರ ಆಗಮನ. ಧರ್ಮೋಪದೇಶವನ್ನು ಮಾಡಿ ನಿರ್ಗಮನ.)
ವೈಶಂಪಾಯನಃ
ತತ್ ಕಾನನಂ ಪ್ರಾಪ್ಯ ನರೇಂದ್ರಪುತ್ರಾಃ
ಸುಖೋಚಿತಾ ವಾಸಮುಪೇತ್ಯ ಕೃಚ್ಛ್ರಮ್।
ವಿಜಹ್ರುರಿಂದ್ರಪ್ರತಿಮಪ್ರಕಾಶಾಃ
ಭಾಗೀರಥೀಸಾಲವನೇಷು ತೇಷು ॥1॥
ಸುಖವಾಗಿ ಬೆಳೆಯಲು ಅರ್ಹರಾದ ಆ ರಾಜಪುತ್ರರು ಆ ಕಾನನವನ್ನು ಸೇರಿ ಕಷ್ಟಕರವಾದ ವಾಸವನ್ನು ಸ್ವೀಕರಿಸಿ ಇಂದ್ರನಿಗೆ ಸಮಾನವಾದ ಕಾಂತಿಯುಳ್ಳ ಅವರು ಭಾಗೀರಥೀತೀರದ ಆ ಸಾಲವನಗಳಲ್ಲಿ ವಿಹಾರಮಾಡಿದರು.
ಯತೀಂಶ್ಚ ಸರ್ವಾನ್ ಸ ಮುನೀಂಶ್ಚ ರಾಜಾ
ತಸ್ಮಿನ್ ವನೇ ಮೂಲಫಲೈರುದಗ್ರೈಃ।
ದ್ವಿಜಾತಿಮುಖ್ಯಾನೃಷಭಃ ಕುರೂಣಾಂ
ಸಂತರ್ಪಯಾಮಾಸ ಮಹಾನುಭಾವಃ॥2॥
ಕುರುಶ್ರೇಷ್ಠನಾದ ಮಹಾನುಭಾವನಾದ ಧರ್ಮರಾಜನು ಆ ಕಾಡಿನಲ್ಲಿ ಯತಿಗಳನ್ನು ಋಷಿಗಳನ್ನು ಮತ್ತು ಬ್ರಾಹ್ಮಣಶ್ರೇಷ್ಠರನ್ನು ಶ್ರೇಷ್ಠವಾದ ಫಲಮೂಲಗಳಿಂದ ಸಂತೋಷಪಡಿಸಿದನು.
ಇಷ್ಟೀಶ್ಚ ಪಿತ್ರ್ಯಾಣಿ ತಥಾ ಕ್ರಿಯಾಶ್ಚ
ತಸ್ಮಿನ್ ವನೇ ವಸತಾಂ ಪಾಂಡವಾನಾಮ್।
ಪುರೋಹಿತಃ ಸರ್ವಸಮೃದ್ಧತೇಜಾಃ
ಚಕಾರ ಧೌಮ್ಯಃ ಪಿತೃವನ್ಮಹಾತ್ಮಾ ॥3॥
ಪಾಂಡವರು ಆ ವನದಲ್ಲಿ ವಾಸಮಾಡುತ್ತಿರಲು ಪುರೋಹಿತರೂ ಅತಿಸಂವೃದ್ಧತೇಜಸ್ಸುಳ್ಳವರೂ ಮಹಾತ್ಮರೂ ಆದ ತಂದೆಯಂತಿದ್ದ ಧೌಮ್ಯರು ಅವರಿಗೆ ಆಯಾಕಾಲದಲ್ಲಿ ಮಾಡಬೇಕಾದ ಇಷ್ಟಿಗಳನ್ನೂ ಪಿತೃಕಾರ್ಯಗಳನ್ನೂ ಮತ್ತು ಉಳಿದ ಕ್ರಿಯೆಗಳನ್ನೂ ಮಾಡಿಸಿದರು.
ಅಪೇತ್ಯ ರಾಷ್ಟ್ರಾದ್ ವಸತಾಂ ತು ತೇಷಾಂ
ಋಷಿಃ ಪುರಾಣೋಽಭಿಸಸಾರ ರಾಜನ್।
ತಮಾಶ್ರಮಂ ತೀವ್ರಸಮೃದ್ಧತೇಜಾ
ಮಾರ್ಕಂಡೇಯಃ ಶ್ರೀಮತಾಂ ಪಾಂಡವಾನಾಮ್ ॥4॥
ಎಲೈ ಜನಮೇಜಯರಾಜನೇ! ರಾಷ್ಟ್ರವನ್ನು ತೊರೆದು ಅವರು ಕಾಡಿನಲ್ಲಿ ವಾಸಿಸುತ್ತಿರಲು ತೀವ್ರವಾದ ಸಮೃದ್ಧವಾದ ತೇಜಸ್ಸುಳ್ಳ ಪುರಾಣಪ್ರಮಿತರಾದ ಮಾರ್ಕಂಡೇಯಋಷಿಗಳು ಆ ಗುಣವಂತರಾದ ಪಾಂಡವರ ಆಶ್ರಮಕ್ಕೆ ಬಂದರು.
ತಮಾಗತಂ ಜ್ವಲಿತಹುತಾಶನತ್ವಿಷಂ
ಮಹಾಮನಾಃ ಕುರುವೃಷಭೋ ಯುಧಿಷ್ಠಿರಃ।
ಅಪೂಜಯತ್ ಸುರಋಷಿಮಾನವಾರ್ಚಿತಂ

ಸಹಾನುಗೈರನುಪಮಸತ್ವವೀರ್ಯವಾನ್ ॥5॥
ದೇವತೆಗಳಿಂದಲೂ ಋಷಿಗಳಿಂದಲೂ ಮತ್ತು ಮಾನವರಿಂದಲೂ ಪೂಜಿತರಾದ ದೀಪ್ತವಾದ ಅಗ್ನಿಯಂತೆ ಕಾಂತಿಯನ್ನು ಹೊಂದಿದ ಆ ಋಷಿಗಳು ಆಶ್ರಮಕ್ಕೆ ಬಂದಾಗ ಅಸದೃಶವಾದ ಸದ್ಗುಣವನ್ನು ಮತ್ತು ಪರಾಕ್ರಮವನ್ನು ಹೊಂದಿದ್ದ ಕುರುಶ್ರೇಷ್ಠನಾದ ಉದಾರಿಯಾದ ಯುಧಿಷ್ಠಿರನು ತನ್ನ ತಮ್ಮಂದಿರ ಜೊತೆಯಲ್ಲಿ ಅವರನ್ನು ಪೂಜಿಸಿದನು.
ಸ ಸರ್ವವಿದ್ ದ್ರೌಪದೀಂ ವೀಕ್ಷ್ಯ ಕೃಷ್ಣಾಂ
ಯುಧಿಷ್ಠಿರಂ ಭೀಮಸೇನಾರ್ಜುನೌ ಚ ।
ಸಂಸ್ಮೃತ್ಯ ರಾಮಂ ಮನಸಾ ಮಹಾತ್ಮಾ
ತಪಸ್ವಿಮಧ್ಯೇಽಸ್ಮಯತಾಮಿತೌಜಾಃ ॥6॥
ಸರ್ವಜ್ಞರಾದ ಮಹಾತ್ಮರಾದ ಅಮಿತಪರಾಕ್ರಮಿಗಳಾದ ಅವರು ದ್ರುಪದನ ಕುಮಾರಿಯಾದ ಕೃಷ್ಣೆಯನ್ನೂ ಯುಧಿಷ್ಠಿರ ಭೀಮಸೇನ ಮತ್ತು ಅರ್ಜುನರನ್ನೂ ನೋಡಿ ಮನಸ್ಸಿನಲ್ಲಿ ರಾಮನನ್ನು ಸ್ಮರಿಸಿ ತಪಸ್ವಿಗಳ ಮಧ್ಯದಲ್ಲಿ ಮುಗುಳ್ ನಗೆಯನ್ನು ನಕ್ಕರು.
ತಂ ಧರ್ಮರಾಜೋ ವಿಮನಾ ಇವಾಬ್ರವೀತ್
ಸರ್ವೇ ಹ್ರಿಯಾಽಽಯಾಂತಿ ತಪಸ್ವಿನೋ ಮಾಮ್ ।
ಭವಾನಿದಂ ಕಿಂ ಸ್ಮಯತೇ ಪ್ರಹೃಷ್ಟಃ
ತಪಸ್ವಿನಾಂ ಪಶ್ಯತಾಂ ಮಾಮುದೀಕ್ಷ್ಯ ॥7॥
ಆಗ ಧರ್ಮರಾಜನು ಬೇಸರಗೊಂಡವನಂತೆ ಅವರನ್ನು ಕುರಿತು ಹೀಗೆ ಹೇಳಿದನು. ಇಲ್ಲಿಗೆ ಬರುವ ತಪಸ್ವಿಗಳು ಎಲ್ಲರೂ ನನ್ನನ್ನು ನೋಡಿ ಸಂಕೋಚದಿಂದ ಕೂಡಿದವರಾಗುತ್ತಾರೆ. ತಾವು ಮಾತ್ರ ತಪಸ್ವಿಗಳ ಎದುರಿನಲ್ಲಿ ಸಂತೋಷದಿಂದ ನಗುತ್ತಿದ್ದೀರಿ.
ಮಾರ್ಕಂಡೇಯಃ
ನ ತಾತ ಹೃಷ್ಯಾಮಿ ನ ಚ ಸ್ಮಯಾಮಿ
ನ ಚ ಪ್ರಹರ್ಷೋ ಭಜತೇ ಮಾಂ ನ ದರ್ಪಃ ।
ಸಹಸ್ರನೇತ್ರಪ್ರತಿಮೋ ಮಹಾತ್ಮಾ
ಐದೃಗ್ವಿಧಂ ವ್ಯಸನಂ ಚಾಭ್ಯುಪೇತಃ ।
ತವಾಪದಂ ತಾತ ಸಮೀಕ್ಷ್ಯ ರಾಮಂ
ಸತ್ಯವ್ರತಂ ದಾಶರಥಿಂ ಸ್ಮರಾಮಿ ॥8॥
ಪ್ರೀತಿಪಾತ್ರನೇ! ನಾನು ಸಂತೋಷಗೊಂಡಿಲ್ಲ ಅಥವಾ ನಗುತ್ತಲೂ ಇಲ್ಲ. ನನಗೆ ಪ್ರಹರ್ಷವಾಗಲೀ ಅಥವಾ ದರ್ಪವಾಗಲೀ ಇಲ್ಲ. ಶಕ್ರನಿಗೆ ಸಮಾನವಾದ ಪರಾಮಕ್ರವುಳ್ಳ ಮಹಾತ್ಮನಾದ ನೀನು ಇಂತಹ ದುಃಖಕ್ಕೆ ಪಾತ್ರನಾಗಿದ್ದೀಯೆ. ಪ್ರೀತಿಪಾತ್ರನೇ! ಈ ನಿನ್ನ ಆಪತ್ತನ್ನು ನೋಡಿ ನಾನು ದಶರಥಪುತ್ರನಾದ ಸತ್ಯವ್ರತನಾದ ರಾಮನನ್ನು ಸ್ಮರಿಸಿದೆ.
ಸ ಚಾಪಿ ರಾಜಾ ಸಹ ಲಕ್ಷ್ಮಣೇನ
ವನೇ ನಿವಾಸಂ ಪಿತುರೇವ ಶಾಸನಾತ್ ।
ಧರ್ಮೀ ಚರನ್ ಪಾರ್ಥ ಪುರಾ ಮಯೈವ
ದೃಷ್ಟೋ ಗಿರೇಃ ಋಷ್ಯಮೂಕಸ್ಯ ಸಾನೌ ॥9॥
ರಾಜನಾದ ಅವನೂ ಸಹ ತಂದೆಯ ಶಾಸನದಂತೆ ಲಕ್ಷ್ಮಣನ ಜೊತೆಯಲ್ಲಿ ಕಾಡಿನಲ್ಲಿ ವಾಸಮಾಡಿ ಧರ್ಮವನ್ನು ಆಚರಿಸಿ ಹಿಂದೆ ಋಷ್ಯಮೂಕಪರ್ವತದ ತಪ್ಪಲಿನಲ್ಲಿ ನನ್ನಿಂದ ನೋಡಲ್ಪಟ್ಟಿದ್ದನು.
ಸಹಸ್ರನೇತ್ರಪ್ರತಿಮೋ ಮಹಾತ್ಮಾ
ಯಮಸ್ಯ ಜೇತಾ ನಮುಚೇಶ್ಚ ಹಂತಾ ।
ಪಿತುರ್ನಿದೇಶಾದನಯತ್ ಸ್ವಧರ್ಮಂ
ವನೇ ವಾಸಂ ದಾಶರಥಿಶ್ಚಕಾರ ॥10॥
ಯಮನಿಗೆ ನಾಯಕನಾದ ಮತ್ತು ನಮುಚಿಯ ಹಂತಕನಾದ ಇಂದ್ರನಿಗೆ ಸಮಾನವಾದ ತೇಜಸ್ಸುಳ್ಳ ಮಹಾನುಭಾವನಾದ ಅವನು ತನ್ನ ತಂದೆಯ ಆಜ್ಞೆಯಂತೆ ಸ್ವಧರ್ಮವನ್ನು ಆಚರಿಸಿದನು. ದಶರಥರಾಮನು ಕಾಡಿನಲ್ಲಿ ವಾಸಮಾಡಿದನು.
ಸ ಚಾಪಿ ಶಕ್ರಪ್ರತಿಮಪ್ರಭಾವೋ
ಮಹಾನುಭಾವಃ ಸಮರೇಷ್ವಜೇಯಃ ।
ವಿಹಾಯ ಭೋಗಾನ್ ವಿಚರನ್ ವನೇಷು
ನೇಶೋ ಬಲಸ್ಯೇತಿ ಚರೇದಧರ್ಮಮ್ ॥11॥
ಶಕ್ರನಿಗೆ ಸದೃಶನಾದ, ತೇಜಸ್ಸನ್ನು ಹೊಂದಿದ್ದ, ಮಹಾನುಭಾವನಾದ, ಯುದ್ಧದಲ್ಲಿ ಅಜೇಯನಾದ, ಅವನೂ ಸಹ ಭೋಗಗಳನ್ನು ತೊರೆದು ಕಾಡುಗಳಲ್ಲಿ ಸಂಚರಿಸಿದನು. ನಾನು ಸೇನೆಗೆ ಒಡಯನೆಂಬ ಕಾರಣದಿಂದ ಅಧರ್ಮವನ್ನು ಆಚರಿಸಿಬಾರದು.
ನೃಪಾಶ್ಚ ನಾಭಾಗಭಗೀರಥಾದಯೋ
ಮಹೀಮಿಮಾಂ ಸಾಗರಾಂತಾಂ ವಿಜಿತ್ಯ ।
ಸತ್ಯೇನ ತೇಽಪ್ಯಜಯಂಸ್ತಾತ ಲೋಕಾನ್
ನೇಶೋ ಬಲಸ್ಯೇತಿ ಚರೇದಧರ್ಮಮ್ ॥12॥
ಎಲೈ ಪ್ರೀತಿಪಾತ್ರನೇ! ನಾಭಾಗ ಭಗೀರಥ ಮೊದಲಾದ ರಾಜರೂ ಸಹ ಸಾಗರಾಂತವಾದ ಈ ಭೂಮಿಯನ್ನು ಜಯಿಸಿ ಸತ್ಯದಿಂದ ಪರಲೋಕಗಳನ್ನು ಜಯಿಸಿದರು. ನಾನು ಸೈನ್ಯಕ್ಕೆ ಒಡೆಯನೆಂಬ ಕಾರಣದಿಂದ ಅಧರ್ಮವನ್ನು ಮಾಡಬಾರದು.

ಅಳರ್ಕಮಾಹುರ್ನರವರ್ಯಮುತ್ತಮಂ
ಸತ್ಯವ್ರತಂ ಕಾಶಿಕರೂಶರಾಜಮ್ |
ವಿಹಾಯ ರಾಜ್ಯಾನಿ ವಸೂನಿ ಚೈವ
ನೇಶೋ ಬಲಸ್ಯೇತಿ ಚರೇದಧರ್ಮಮ್ ||13||
ಕಾಶಿಕರೂಷ ದೇಶದ ರಾಜನಾದ ಅಳರ್ಕನು ಸತ್ಯವ್ರತನೂ ನೃಪತಿಶ್ರೇಷ್ಠನೂ ಉತ್ತಮನೂ ಆಗಿದ್ದನು ಎಂದು ಹೇಳುತ್ತಾರೆ. ಅವನು ರಾಜ್ಯವನ್ನು ಮತ್ತು ಭಾಗ್ಯವನ್ನು ತೊರೆದು ಜೀವಿಸಿದನು. ನಾನು ಸೈನ್ಯಕ್ಕೆ ಒಡೆಯನೆಂದು ಅಧರ್ಮವನ್ನು ಮಾಡಬಾರದು.
ಧಾತ್ರಾ ವಿಧಿರ್ಯೋ ವಿಹಿತಃ ಪುರಾಣಃ
ತಂ ಪೂಜಯಂತೋ ನರವರ್ಯ ಸಂತಃ |
ಸಪ್ತರ್ಷಯಃ ಪಾರ್ಥ ದಿವಿ ಪ್ರಭಾಂತಿ
ನೇಶೋ ಬಲಸ್ಯೇತಿ ಚರೇದಧರ್ಮಮ್ ||14||
ಎಲೈ ಪಾರ್ಥನೇ! ಬ್ರಹ್ಮದೇವರಿಂದ ಯಾವ ಪ್ರಾಚೀನವಾದ ಧರ್ಮವು ವಿಹಿತವಾಗಿದೆಯೋ ಅದನ್ನು ಸನ್ಮಾನಿಸುತ್ತಾ ಸಜ್ಜನರಾದ ಸಪ್ತರ್ಷಿಗಳು ಆಕಾಶದಲ್ಲಿ ಪ್ರಕಾಶಿಸುತ್ತಿದ್ದಾರೆ. ನಾನು ಸೈನ್ಯಕ್ಕೆ ಒಡೆಯನೆಂದು ಅಧರ್ಮವನ್ನು ಮಾಡಬಾರದು.
ಸತ್ಯೇನ ಧರ್ಮೇಣ ಯಥಾನುವೃತ್ತ್ಯಾ
ಯಥಾಶ್ರಿಯಾ ಸರ್ವಭೂತಾನ್ಯತೀತ್ಯ |
ಯಶಶ್ಚ ತೇಜಶ್ಚ ತವಾಪಿ ದೀಪ್ತಂ
ವಿಭಾವಸೋರ್ಭಾಸ್ಕರಸ್ಯೇವ ಪಾರ್ಥ ||15||
ಎಲೈ ಪಾರ್ಥನೇ! ಸತ್ಯದಿಂದ ಧರ್ಮದಿಂದ ಯಥೋಕ್ತವಾದ ವೃದ್ಧಸೇವೆಯಿಂದ ಮತ್ತು ಯಥೋಕ್ತವಾದ ವೈರಾಗ್ಯಾದಿಸಂಪತ್ತಿನಿಂದ ನೀನೂ ಸಹ ಸರ್ವಜೀವರನ್ನು ಮೀರಿ ಅಗ್ನಿಯಂತೆ ಸೂರ್ಯನಂತೆ ದೀಪ್ತವಾದ ಯಶಸ್ಸನ್ನು ಮತ್ತು ತೇಜಸ್ಸನ್ನು ಹೊಂದುವಿ.
ಯಥಾಪ್ರತಿಜ್ಞಂ ತು ಮಹಾನುಭಾವ
ಕೃಚ್ಛ್ರಂ ವನೇ ವಾಸಮಿಮಂ ನಿರುಷ್ಯ |
ತತಃ ಶ್ರಿಯಂ ತೇಜಸಾ ತೇನ ದೀಪ್ತಾಮ್
ಆದಾಸ್ಯಸೇ ಪಾರ್ಥಿವ ಕೌರವೇಭ್ಯಃ ||16||
ಮಹಾನುಭಾವನೇ! ರಾಜನೇ! ನೀನು ಪ್ರತಿಜ್ಞೆಮಾಡಿದಂತೆ ಈ ಕಷ್ಟವಾದ ವನವಾಸವನ್ನು ಪೂರೈಸಿ ಆ ಸಾಮರ್ಥ್ಯದಿಂದ ದೀಪ್ತವಾದ ಸಂಪತ್ತನ್ನು ಕೌರವರಿಂದ ಜಯಿಸುತ್ತೀಯೆ. (ಸ್ವೀಕರಿಸುತ್ತೀಯೆ)
ವೈಶಂಪಾಯನಃ
ತಮೇವಮುಕ್ತ್ವಾ ವಚನಂ ಮಹರ್ಷಿಃ
ತಪಸ್ವಿಮಧ್ಯೇ ಸಹಿತಂ ಸುಹೃದ್ಭಿಃ |
ಸಮ್ಮಂತ್ರ್ಯ ಧೌಮ್ಯಂ ಸಹಿತಾಂಶ್ಚ ಪಾರ್ಥಾನ್
ತತಃ ಪ್ರತಸ್ಥೇ ದಿಶಮುತ್ತರಾಂ ಸಃ ||16||
ಆ ಮಹರ್ಷಿಗಳು ತಪಸ್ವಿಗಳ ಮತ್ತು ಹಿತೈಷಿಗಳ ಮಧ್ಯದಲ್ಲಿದ್ದ ಧರ್ಮರಾಜನನ್ನು ಕುರಿತು ಈ ರೀತಿ ಮಾತನಾಡಿ ಧೌಮ್ಯರ ಅನುಮತಿಯನ್ನೂ ಎಲ್ಲಾ ಪಾಂಡವರ ಅನುಮತಿಯನ್ನೂ ಪಡೆದು ಉತ್ತರಾಭಿಮುಖವಾಗಿ ಹೊರಟರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾವಿಂಶೋಽಧ್ಯಾಯಃ ||
|| ಕೈರಾತಪರ್ವಣಿ ದ್ವಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಇಪ್ಪತ್ಮೂರನೆಯ ಅಧ್ಯಾಯ
(ದಾಲ್ಭ್ಯಪುತ್ರರಾದ ಬಕ ಋಷಿಗಳಿಂದ ಬ್ರಾಹ್ಮಣ ಮಾಹಾತ್ಮ್ಯ ಕಥನ ಮತ್ತು ಮಹರ್ಷಿಗಳ ಆಗಮನ.)
ವೈಶಂಪಾಯನಃ
ವಸತ್ಸ್ವಥ ದ್ವೈತವನೇ ಪಾಂಡವೇಷು ಮಹಾತ್ಮಸು |
ಅನುಕೀರ್ಣಂ ಮಹಾರಣ್ಯಂ ಬ್ರಾಹ್ಮಣೈಃ ಸಮಪದ್ಯತ ||1||
ಅನಂತರ ಮಹಾತ್ಮರಾದ ಪಾಂಡವರು ದ್ವೈತವನದಲ್ಲಿ ವಾಸಿಸುತ್ತಿರಲು ಆ ಮಹಾರಣ್ಯವು ಬ್ರಾಹ್ಮಣರಿಂದ ತುಂಬಿಹೋಯಿತು.
ಈರ್ಯಮಾಣೇನ ಸತತಂ ಬ್ರಹ್ಮಘೋಷೇಣ ಸರ್ವತಃ |
ಬ್ರಹ್ಮಲೋಕಸಮಂ ಪುಣ್ಯಮಾಸೀದ್ ದ್ವೈತವನಂ ಸರಃ ||2||
ಎಲ್ಲ ಕಡೆಯಲ್ಲಿಯೂ ಉಚ್ಚರಿಸಲ್ಪಡುವ ವೇದಘೋಷದಿಂದ ಆ ದ್ವೈತವನಸರೋವರವು ಬ್ರಹ್ಮಲೋಕದಂತೆ ಪವಿತ್ರವಾಯಿತು.
ಋಚಾಂ ಚ ಯಜುಷಾಂ ಸಾಮ್ನಾಮಥರ್ವಾಣಾಂ ಚ ಸರ್ವಶಃ |
ಆಸೀದುಚ್ಚಾರ್ಯಮಾಣಾನಾಂ ನಿಃಸ್ವನೋ ಹೃದಯಂಗಮಃ ||3||
ಸತತವಾಗಿ ಉಚ್ಚರಿಸಲ್ಪಡುವ ಋಗ್ವೇದ ಯಜುರ್ವೇದ ಸಾಮ ಮತ್ತು ಅಥರ್ವವೇದದ ಸ್ವರಗಳಿಂದ ಎಲ್ಲ ಕಡೆಗಳಿಂದ ಉಂಟಾದ ನಾದವು ಹೃದಯಂಗಮವಾಗಿದ್ದಿತು.
ಜ್ಯಾಘೋಷಃ ಪಾಂಡವೇಯಾನಾಂ ಬ್ರಹ್ಮಘೋಷಶ್ಚ ಧೀಮತಾಮ್ |
ಸಂಸೃಷ್ಟಂ ಬ್ರಹ್ಮಣಾ ಕ್ಷತ್ರಂ ಭೂಯ ಏವ ವ್ಯವರ್ಧತ ||4||

ಪಾಂಡುಪುತ್ರರ ಹೆದೆಯ ಬಿಲ್ಲಿನ ಧ್ವನಿ ಮೇಧಾವಿಗಳಾದ ಬ್ರಾಹ್ಮಣರ ವೇದಘೋಷ ಹೀಗೆ ಬ್ರಾಹ್ಮಣ ಜಾತಿಯ ಜೊತೆಯಲ್ಲಿ ಕ್ಷತ್ರಿಯ ಜಾತಿಯು ಸೇರಿ ಅಭಿವೃದ್ಧಿಯನ್ನು ಹೊಂದಿತು.
ಅಥಾಬ್ರವೀದ್ ಬಕೋऽಭ್ಯೇತ್ಯ ಧರ್ಮರಾಜಂ ಯುಧಿಷ್ಠಿರಮ್ |
ಸಂಧ್ಯಾಂ ಕೌಂತೇಯಮಾಸೀನಮ್ ಋಷಿಭಿಃ ಪರಿವಾರಿತಮ್ ॥5॥
ಅನಂತರ ಋಷಿಗಳಿಂದ ಸುತ್ತುವರಿಯಲ್ಪಟ್ಟ ಸಂಧ್ಯಾವಂದನೆಯನ್ನು ಮಾಡಲು ಕುಳಿತಿದ್ದ ಧರ್ಮರಾಜನಾದ ಯುಧಿಷ್ಠಿರನ ಸಮೀಪಕ್ಕೆ ಬಕಮುನಿಗಳು ಬಂದು ಮಾತನಾಡಿದರು.
ಪಶ್ಯ ದ್ವೈತವನೇ ಪಾರ್ಥ ಬ್ರಾಹ್ಮಣಾನಾಂ ತಪಸ್ವಿನಾಮ್ |
ಹೋಮವೇಲಾಂ ಕುರುಶ್ರೇಷ್ಠ ಸಂಪ್ರಜ್ವಲಿತಪಾವಕಾಮ್ ॥6॥
ಎಲೈ ಪಾರ್ಥನೇ! ಕುರುಶ್ರೇಷ್ಠನೇ! ದ್ವೈತವನದಲ್ಲಿ ತಪಸ್ವಿಗಳಾದ ಬ್ರಾಹ್ಮಣರು ಪ್ರಜ್ವಲಿಸುತ್ತಿರುವ ಅಗ್ನಿಯನ್ನುಳ್ಳ ಹೋಮವೇಳೆಯನ್ನು ನೋಡು.
ಚರಂತಿ ಧರ್ಮಂ ಪುಣ್ಯೇऽಸ್ಮಿನ್ ತ್ವಯಾ ಗುಪ್ತಾ ಮಹಾವ್ರತಾಃ |
ಭೃಗವೋऽಂಗಿರಸಶ್ಚೈವ ವಸಿಷ್ಠಾಃ ಕಾಶ್ಯಪೈಃ ಸಹ ॥7॥
ಆಗಸ್ತ್ಯಾಶ್ಚ ಮಹಾಭಾಗಾ ಆತ್ರೇಯಾಶ್ಚೋತ್ತಮವ್ರತಾಃ |
ಸರ್ವತೋ ಜಗತಃ ಶ್ರೇಷ್ಠಾ ಬ್ರಾಹ್ಮಣಾಃ ಸಮ್ಮತಾಸ್ತ್ವಯಾ ॥8॥
ನಿನ್ನಿಂದ ರಕ್ಷಿಸಲ್ಪಟ್ಟ ಮಹಾವ್ರತರಾದ ಭೃಗುಗಳು ಅಂಗಿರಸರು ವಸಿಷ್ಠರು ಕಾಶ್ಯಪರು ಅಗಸ್ತ್ಯರು ಆತ್ರೇಯರು ಈ ನಿನಗೆ ಸಮ್ಮತರಾದ ಜಗತ್ತಿನಲ್ಲಿ ಶ್ರೇಷ್ಠರಾದ ಬ್ರಾಹ್ಮಣೋತ್ತಮರೆಲ್ಲರೂ ಪವಿತ್ರವಾದ ಈ ಆಶ್ರಮದಲ್ಲಿ ಧರ್ಮವನ್ನು ಆಚರಿಸುತ್ತಿದ್ದಾರೆ.
ಇದಂ ತು ವಚನಂ ಪಾರ್ಥ ಶೃಣ್ವೇಕಾಗ್ರಮನಾ ಮಮ |
ಭ್ರಾತೃಭಿಃ ಸಹ ಕೌಂತೇಯ ಯತ್ ತ್ವಾಂ ವಕ್ಷ್ಯಾಮಿ ಕೌರವ ॥9॥
ಎಲೈ ಪಾರ್ಥನೇ! ಕೌಂತೇಯನೇ! ನಾನು ಹೇಳುವ ಈ ಮಾತನ್ನು ತಮ್ಮಂದಿರ ಜೊತೆಯಲ್ಲಿ ಏಕಾಗ್ರಮನಸ್ಸಿನಿಂದ ಕೇಳು.
ಬ್ರಹ್ಮ ಕ್ಷತ್ರೇಣ ಸಂಸೃಷ್ಟಂ ಕ್ಷತ್ರಂ ಚ ಬ್ರಹ್ಮಣಾ ಸಹ |
ಉದೀರ್ಣೇ ದಹತಃ ಶತ್ರೂನ್ ವನಾನೀವಾಗ್ನಿಮಾರುತೌ ॥10॥
ಬ್ರಾಹ್ಮಣ್ಯವು ಕ್ಷತ್ರಿಯಜಾತಿಯಲ್ಲಿ ಸಂಬದ್ಧವಾಗಿ ಕ್ಷತ್ರಿಯ ಜಾತಿಯು ಬ್ರಾಹ್ಮಣ ಜಾತಿಯಲ್ಲಿ ಸಂಬದ್ಧವಾಗಿ ಅಭಿವೃದ್ಧಿಯನ್ನು ಹೊಂದಿದರೆ ಅಗ್ನಿಮಾರುತಗಳು ವನಗಳನ್ನು ದಹಿಸಿದಂತೆ ಶತ್ರುಗಳನ್ನು ಜಯಿಸುತ್ತಾರೆ.
ನಾಬ್ರಾಹ್ಮಣಸ್ತಾತ ಚಿರಂ ಬುಭೂಷೇದ್
ಇಚ್ಛನ್ನಿಮಂ ಲೋಕಮಮುಂ ಚ ಜೇತುಮ್ |
ವಿನೀತಧರ್ಮಾರ್ಥಮಪೇತದೋಷಂ
ಲಬ್ಧ್ವಾ ದ್ವಿಜಂ ಹಂತಿ ನೃಪಃ ಸಪತ್ನಾನ್ ॥11॥
ಪ್ರೀತಿಪಾತ್ರನೇ! ಬ್ರಾಹ್ಮಣನ ಸಹಾಯವಿಲ್ಲದ ರಾಜನು ಈ ಭೂಮಿಯನ್ನು ಜಯಿಸಿ ಬಹಳ ಕಾಲ ಆಳುತ್ತೇನೆ ಎಂದು ಬಯಸಬಾರದು. ಧರ್ಮಾರ್ಥಗಳಲ್ಲಿ ಸುಶಿಕ್ಷಿತನಾದ ದೋಷರಹಿತವಾದ ಬ್ರಾಹ್ಮಣನನ್ನು ಪಡೆದರೆ ರಾಜನು ಶತ್ರುಗಳನ್ನು ಸಂಹರಿಸುತ್ತಾನೆ.
ಚರನ್ ನಿಶ್ರೇಯಸಂ ಧರ್ಮಂ ಪ್ರಜಾಪಾಲನಕಾರಿತಮ್ |
ನಾಭ್ಯಗಚ್ಛದ್ ಬಲಿರ್ಲೋಕೇ ತೀರ್ಥಮನ್ಯತ್ರ ವೈ ದ್ವಿಜಾತ್ ॥12॥
ಪ್ರಜಾಪಾಲನದಿಂದ ಉಂಟಾದ ಮೋಕ್ಷಜನಕವಾದ ಧರ್ಮಗಳನ್ನು ಆಚರಿಸಿದ ವಿರೋಚನ ಪುತ್ರನಾದ ಬಲಿಯು ಲೋಕದಲ್ಲಿ ಬ್ರಾಹ್ಮಣರನ್ನು ಬಿಟ್ಟು ಬೇರೆ ಯಾರನ್ನೂ ಪವಿತ್ರೀಕರಿಸುವ ಸಾಮರ್ಥ್ಯವುಳ್ಳವರನ್ನಾಗಿ ಪಡೆಯಲಿಲ್ಲ.
ನಾನೂನಮಾಸೀದಸುರಸ್ಯ ರಾಜನ್
ವೈರೋಚನೇ ಶ್ರೀರಭಿಕಾಂಕ್ಷಿತಾ ಯಾ |
ಲಬ್ಧ್ವಾ ಮಹೀಂ ಬ್ರಾಹ್ಮಣಸಂಪ್ರಯೋಗಾತ್
ತೇಷಾಂ ಚರನ್ ದುಃಖಮತೋ ವ್ಯನಶ್ಯತ್ ॥13॥
ಎಲೈ ರಾಜನೇ! ಯಾವ ಸಂಪತ್ತು ಮೊದಲು ಅಪೇಕ್ಷಿಸಲ್ಪಟ್ಟಿತೋ ಆ ಸಂಪತ್ತು ವಿರೋಚನನ ಮಗನಾದ ಬಲಿಯಲ್ಲಿ ನ್ಯೂನವಾಗಿ ಏನೂ ಇರಲಿಲ್ಲ. ಬ್ರಾಹ್ಮಣರ ಸಹವಾಸದಿಂದಲೇ ಭೂಮಿಯನ್ನು ಪಡೆದು ಬಳಿಕ ಅವರಿಗೆ ದುಃಖವನ್ನು ಉಂಟುಮಾಡಿದ ಕಾರಣ ಬಲಿಗೆ ಆ ಸಂಪತ್ತು ನಾಶವಾಯಿತು.
ನಾಬ್ರಾಹ್ಮಣಂ ಭೂಮಿರಿಯಂ ಸಮೇತಿ
ವರ್ಣದ್ವಿತೀಯಂ ಭಜತೇ ಚಿರಾಯ |
ಸಮುದ್ರನೇಮಿರ್ನಮತೇ ತು ತಸ್ಮೈ
ಯಂ ಬ್ರಾಹ್ಮಣಃ ಶಾಸ್ತಿ ನಯೈರ್ವಿನೀತಮ್ ॥14॥
ಈ ಭೂಮಿಯು ಬ್ರಾಹ್ಮಣಸಹಾಯವಿಲ್ಲದ ಕ್ಷತ್ರಿಯನ ಜೊತೆಯಲ್ಲಿ ಬಹುಕಾಲ ಇರುವುದಿಲ್ಲ. ಸಮುದ್ರನೇಮಿ (ಪರಿಖೆ)ಯಾದ ಈ ಭೂಮಿಯು ಯಾವ ವಿಜಯಶೀಲನಾದ ರಾಜನನ್ನು ಬ್ರಾಹ್ಮಣನು ಶಾಸನಮಾಡುತ್ತಾನೆಯೋ ಅಂತಹ ರಾಜನಿಗೆ ನಮಸ್ಕರಿಸುತ್ತದೆ.
ಕುಂಜರಸ್ಯೇವ ಸಂಗ್ರಾಮೇ ಪರಿಗೃಹ್ಯಾಂಕುಶಗ್ರಹಮ್ |
ಬ್ರಹ್ಮಣಾ ವಿಪ್ರಹೀನಸ್ಯ ಕ್ಷತ್ರಸ್ಯ ಕ್ಷೀಯತೇ ಬಲಮ್ ॥15॥
ಗಜಯುದ್ಧದಲ್ಲಿ ಅಂಕುಶವನ್ನು ಹಿಡಿದ ಗಜಯೋಧನನ್ನು ಹಿಡಿದರೆ ಹೇಗೆ ಯುದ್ಧದಲ್ಲಿ ಆನೆಯ ಬಲವು ಕುಗ್ಗುತ್ತದೋ ಅದರಂತೆ ಬ್ರಾಹ್ಮಣನಿಂದ ಹೀನವಾದ ಕ್ಷತ್ರಿಯನ ಬಲವು ನಾಶಹೊಂದುತ್ತದೆ.

ಬ್ರಹ್ಮಣ್ಯನುಪಮಾ ದೃಷ್ಟಿಃ ಕ್ಷಾತ್ರಸ್ಯಾಪ್ರತಿಮಂ ಬಲಮ್ |
ತೌ ಯದಾ ಚರತಃ ಸಾರ್ಧಮಥ ಲೋಕಃ ಪ್ರಸೀದತಿ ॥16॥
ಬ್ರಾಹ್ಮಣನಲ್ಲಿ ಅಸದೃಶವಾದ ಜ್ಞಾನವಿದೆ ಕ್ಷತ್ರಿಯನಿಗೆ ಅಸದೃಶವಾದ ಬಲವಿದೆ. ಅವರೆಡು ಒಟ್ಟಿಗೆ ಸೇರಿದರೆ ಆಗ ಲೋಕಕ್ಕೆ ಪ್ರಸನ್ನತೆಯುಂಟಾಗುತ್ತದೆ.
ಭಗವಾನ್ ಸುಮಹಾನಗ್ನಿಃ ಕಕ್ಷಂ ದಹತಿ ಸಾನಿಲಃ |
ತಥಾ ದಹತಿ ರಾಜನ್ಯೋ ಬ್ರಾಹ್ಮಣೇನ ಸಮಂ ರಿಪೂನ್ ॥17॥
ಪೂಜ್ಯನಾದ ಅಗ್ನಿಯು ವಾಯುವಿನ ಜೊತೆಯಲ್ಲಿ ಸೇರಿದರೆ ಕಾಡನ್ನು ದಹಿಸುತ್ತಾನೆ. ಅದರಂತೆ ಕ್ಷತ್ರಿಯನು ಬ್ರಾಹ್ಮಣನ ಜೊತೆಯಲ್ಲಿ ಸೇರಿದರೆ ಶತ್ರುಗಳನ್ನು ಜಯಿಸುತ್ತಾನೆ.
ಬ್ರಾಹ್ಮಣೋ ಹ್ಯೇವ ಮೇಧಾವೀ ಬುದ್ಧಿಪರ್ಯೇಷಣಂ ಚರೇತ್ |
ಅಲಬ್ಧಸ್ಯ ಚ ಲಾಭಾಯ ಲಬ್ಧಸ್ಯ ಚ ವಿವೃದ್ಧಯೇ ॥18॥
ಮೇಧಾವಿಯಾದ ಬ್ರಾಹ್ಮಣನೇ ರಾಜನ ಅಲಭ್ಯವಾದುದುರ ಲಾಭಕ್ಕೆ ಮತ್ತು ಲಭ್ಯವಾದುದುರ ಅಭಿವೃದ್ಧಿಗೆ ತನ್ನ ಬುದ್ಧಿಯಿಂದ ವಿಚಾರಮಾಡಬೇಕು.
ಅಲಬ್ಧಲಾಭಾಯ ಚ ಲಬ್ಧವೃದ್ಧಯೇ
ಯಥಾರ್ಹತೀರ್ಥಪ್ರತಿಪಾದನಾಯ |
ಯಶಸ್ವಿನಂ ವೇದವಿದಂ ವಿಪಶ್ಚಿತಂ
ಬಹುಶ್ರುತಂ ಬ್ರಾಹ್ಮಣಮೇವ ವಾಸಯ ॥19॥
ಅಲಭ್ಯವಾದುದರ ಲಾಭಕ್ಕೆ ಲಭ್ಯವಾದುದುರ ಅಭಿವೃದ್ಧಿಗೆ ಮತ್ತು ಯಥಾಯೋಗ್ಯವಾಗಿ ಧರ್ಮಶಾಸ್ತ್ರವನ್ನು ಉಪದೇಶಮಾಡುವುದಕ್ಕಾಗಿ ಯಶಸ್ವಿಯಾದ ವೇದಜ್ಞನಾದ ಬಹುಶ್ರುತನಾದ ಜ್ಞಾನಿಯಾದ ಒಬ್ಬ ಬ್ರಾಹ್ಮಣನನ್ನು ನಿನ್ನ ಜೊತೆಯಲ್ಲಿ ಇರಿಸಿಕೋ.
ಬ್ರಾಹ್ಮಣೇಷೂತ್ತಮಾ ವೃತ್ತಿಸ್ತವ ನಿತ್ಯಂ ಯುಧಿಷ್ಠಿರ |
ತೇನ ತೇ ಸರ್ವಲೋಕೇಷು ದೀಪ್ಯತೇ ಪ್ರಥಿತಂ ಯಶಃ ॥20॥
ಎಲೈ ಯುಧಿಷ್ಠಿರನೇ! ನಿನಗೆ ಬ್ರಾಹ್ಮಣರಲ್ಲಿ ಯಾವಾಗಲೂ ಒಳ್ಳೆಯ ನಡೆವಳಿಕೆ ಇದೆ. ಆದ್ದರಿಂದ ನಿನ್ನ ವಿಸ್ತಾರವಾದ ಕೀರ್ತಿಯು ಎಲ್ಲಾ ಲೋಕಗಳಲ್ಲಿಯೂ ಬೆಳಗುತ್ತಿದೆ.
ವೈಶಂಪಾಯನಃ
ತತಸ್ತೇ ಬ್ರಾಹ್ಮಣಾಃ ಸರ್ವೇ ಬಕಂ ದಾಲ್ಭ್ಯಮಪೂಜಯನ್ |
ಯುಧಿಷ್ಠಿರೇ ಸ್ತೂಯಮಾನೇ ಸರ್ವೇ ಸುಮನಸೋಽಭವನ್ ॥21॥
ಅನಂತರ ಆ ಬ್ರಾಹ್ಮಣರೆಲ್ಲರೂ ದಾಲ್ಭ್ಯಪುತ್ರರಾದ ಬಕ ಋಷಿಗಳನ್ನು ಪೂಜಿಸಿದರು. ಅವರು ಯುಧಿಷ್ಠಿರನನ್ನು ಸ್ತೋತ್ರಮಾಡುತ್ತಿರಲು ಎಲ್ಲರಿಗೂ ಮನಸ್ಸಿನಲ್ಲಿ ಹರ್ಷವುಂಟಾಯಿತು.
ದ್ವೈಪಾಯನೋ ನಾರದಶ್ಚ ಜಾಮದಗ್ನ್ಯಃ ಪೃಥುಶ್ರವಾಃ |
ಇಂದ್ರದ್ಯುಮ್ನೋದ್ದಾಲಕೀ ಚ ಕ್ರತುಮೇಧಾಃ ಸಹಸ್ರಪಾತ್ ॥22॥
ಲವಣಾಶ್ವಶ್ಚ ಕಣ್ವಶ್ಚ ಕಾಶ್ಯಪಶ್ಚ ಮಹಾತಪಾಃ |
ಹಾರೀತಃ ಸ್ಥೂಲಕರ್ಣಶ್ಚ ಅಗ್ನಿವೇಶ್ಯೋಽಥ ಕೌಶಿಕಃ ॥23॥
ಜಿತವಾಕ್ಚ ಸುವಾಕ್ಚೈವ ಬೃಹದಶ್ವಋತಾವಸೂ |
ಊರ್ಧ್ವರೇತಾ ದೇವಮಿತ್ರಃ ಸುಹೋತ್ರೋ ಹೋತ್ರವಾಹನಃ ॥24॥
ಏತೇ ಚಾನ್ಯೇ ಚ ಬಹವೋ ಬ್ರಾಹ್ಮಣಾಃ ಸಂಶಿತವ್ರತಾಃ |
ಅಜಾತಶತ್ರುಮರ್ಚಂತಿ ಪುರಂದರಮಿವರ್ಷಯಃ ॥25॥
ವೇದವ್ಯಾಸರು ನಾರದರು ಜಾಮದಗ್ನ್ಯರು ಪೃಥುಶ್ರವ ಇಂದ್ರದ್ಯುಮ್ನ ಉದ್ದಾಲಕಿಗಳು ಕ್ರತುಮೇಧಾ ಸಹಸ್ರಪಾತ್ ಲವಣಾಶ್ವ ಕಣ್ವ ಮಹಾತಪಸ್ವಿಗಳಾದ ಕಾಶ್ಯಪರು ಹಾರೀತ ಸ್ಥೂಲಕರ್ಣ ಅಗ್ನಿವೇಶ್ಯ. ವಿಶ್ವಾಮಿತ್ರ ಜಿತವಾಕ್ ಸುವಾಕ್ ಬೃಹದಶ್ವ ಋತಾವಸು ಊರ್ಧ್ವರೇತ ದೇವಮಿತ್ರ ಸುಹೋತ್ರ ಹೋತ್ರವಾಹನ ಇವರೂ ಇನ್ನೂ ಪ್ರಶಸ್ತ ವ್ರತಧಾರಿಗಳಾದ ಅನೇಕ ಬ್ರಾಹ್ಮಣರೂ ಋಷಿಗಳು ದೇವೇಂದ್ರನನ್ನು ಅರ್ಚಿಸಿದಂತೆ ಅಜಾತಶತ್ರುವನ್ನು ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಯೋವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಅತಿಮಾರ್ದವಯುಕ್ತತ್ವಾದ್ ಧರ್ಮರಾಜಶ್ಚತುರ್ದಶೇ |
ಅಪಿ ವರ್ಷೇ ಗುರುಭಯಾದ್‌ರಾಜ್ಯಂ ನೇಚ್ಛೇದಿತಿ ಪ್ರಭುಃ |
ಮಾರುತಿಃ ಪ್ರೇಷಯಾಮಾಸ ಕೃಷ್ಣಾಂ ಪ್ರಸ್ತಾವಹೇತವೇ ॥64॥
ಧರ್ಮರಾಜ ಅತಿಯಾದ ಮೃದು ಸ್ವಭಾವದವನಾದ್ದರಿಂದ ಹದಿನಾಲ್ಕನೇ, ವರ್ಷದಲ್ಲಿಯೂ ಭೀಷ್ಮಾದಿಗಳು ಹಿರಿಯರು ಎನ್ನುವ ಭಯದಿಂದ ಅವರಲ್ಲಿ ವಿರೋಧಿಸಿ ರಾಜ್ಯವನ್ನು ಸಂಪಾದಿಸಲು ಒಪ್ಪದಿರಬಹುದು ಎಂದು ಭೀಮ ಆ ವಿಷಯ ಪ್ರಸ್ತಾವ

ಮಾಡುವ ಉದ್ದೇಶದಿಂದ ದ್ರೌಪದಿಯನ್ನು ಧರ್ಮರಾಜನ ಬಳಿಗೆ ಕಳಿಸಿದ.
ಕ್ಷಮಾ ಸರ್ವತ್ರ ಧರ್ಮೋ ನ ಪಾಪಹೇತುಶ್ಚ ದುರ್ಜನೇ |
ರಾಜ್ಞಾಂ ಸಾಮರ್ಥ್ಯಯುಕ್ತಾನಾಮಿತಿ ಸಂಸ್ಥಾಪ್ಯ ಶಾಸ್ತ್ರತಃ ॥65॥
ಹತ್ವಾ ಚತುರ್ದಶೇ ವರ್ಷೇ ಧಾರ್ತರಾಷ್ಟ್ರಾನರಾಜ್ಯದಾನ್ |
ಕರ್ತುಂ ರಾಜ್ಯಂ ಪುರೋ ಗಂತಾ ಭವಾನೀತ್ಯಗ್ರಜೇನ ಹ ॥66॥
ಕಾರಯನ್ ಸತ್ಯಶಪಥಂ ವಿವಾದಸ್ಯ ಕ್ರಮೇಚ್ಛಯಾ |
ಆದಿಶತ್ಪ್ರಥಮಂ ಕೃಷ್ಣಾಂ ಭೀಮಃ ಸಾ ನೃಪಮಬ್ರವೀತ್ ॥67॥
ಕ್ಷಮೆ ಎಲ್ಲರ ವಿಷಯದಲ್ಲಿ ಧರ್ಮವಾಗುವುದಿಲ್ಲ. ಶಕ್ತಿ ಉಳ್ಳ ರಾಜರಿಗೆ ದುರ್ಜನರ ವಿಷಯದಲ್ಲಿ ಕ್ಷಮೆ ಪಾಪಕ್ಕೇ ಕಾರಣವಾಗುತ್ತದೆ ಎಂದು ಧರ್ಮರಾಜನಿಗೆ ಶಾಸ್ತ್ರಾಧಾರದಿಂದ ಮನದಟ್ಟು ಮಾಡಿಸಿ ಮುಂದೆ ಹದಿನಾಲ್ಕನೇ ವರ್ಷದಲ್ಲಿ ಕೌರವರು ರಾಜ್ಯವನ್ನು ಹಿಂದಿರುಗಿಸದಿದ್ದರೆ ಅವರನ್ನು ಕೊಂದು ರಾಜ್ಯವನ್ನು ವಶಪಡಿಸಿಕೊಳ್ಳಲು ತಾನು ಮುಂದಾಗುವೆನೆಂದು ಧರ್ಮರಾಜನಿಂದ ಸತ್ಯ ಪ್ರತಿಜ್ಞೆ ಮಾಡಿಸುವುದಕ್ಕಾಗಿ ವಿವಾದೋಪಕ್ರಮದ ಉದ್ದೇಶದಿಂದ ಭೀಮ ಮೊದಲಿಗೆ ದ್ರೌಪದಿಯನ್ನು ಧರ್ಮರಾಜನ ಬಳಿಗೆ ಕಳಿಸಿದ. ದ್ರೌಪದಿ ಅವನ ಮುಂದೆ ನುಡಿದಳು.
ನೈವ ಕ್ಷಮಾ ಕುಜನತಾಸು ನೃಪಸ್ಯ ಧರ್ಮ
ಸ್ತ್ವಂತ್ವಂ ವೃಥೈವ ಧೃತವಾನಸಿ ಸರ್ವಕಾಲಂ |
ಇತ್ಯುಕ್ತ ಆಹ ನೃಪತಿಃ ಪರಮಾ ಕ್ಷಮೈವ
ಸರ್ವತ್ರ ತದ್ವಿಧೃತಮೇವ ಜಗತ್ಸಮಸ್ತಂ ॥68॥
`ದುರ್ಜನರಲ್ಲಿ ಕ್ಷಮೆ ತೋರುವುದು ರಾಜನಿಗೆ ಸರ್ವಥಾ ಧರ್ಮವಾಗುವುದಿಲ್ಲ. ನೀನು ಯಾವಾಗಲೂ ಅದರಲ್ಲಿ ವ್ಯರ್ಥವಾಗಿ ತಾಳ್ಮೆ ವಹಿಸುತ್ತಿರುವಿ'. ದ್ರೌಪದಿ ಹೀಗೆ ಹೇಳಿದಾಗ ಧರ್ಮರಾಜನೆಂದ, `ಎಲ್ಲ ಬಗೆಯ ಜನರಲ್ಲಿಯೂ ಕ್ಷಮೆ ತೋರುವುದು ರಾಜನಿಗೆ ಪರಮಧರ್ಮ. ಸಮಸ್ತ ಪ್ರಪಂಚವೂ ಈ ಕ್ಷಮಾಧರ್ಮದ ಬಲದಿಂದಲೇ ನಿಂತಿದೆ'. `ನಿನ್ನ ಈ ಸತ್ಯ ಧರ್ಮಕ್ಷಮೆ ಎಲ್ಲವೂ ನಿನಗೆ ದುಃಖವನ್ನೇ ತಂದಿದೆ. ಏಕೆಂದರೆ ಪಾಪಿಗಳಲ್ಲಿ ನೀನು ಕ್ಷಮೆ ತೋರುವಿ, ಸತ್ಯ ಧರ್ಮಗಳನ್ನು ಆಚರಿಸುವಿ' ಎನ್ನುತ್ತಾಳೆ ದ್ರೌಪದಿ.
ಕರ್ತಾ ಚ ಸರ್ವಜಗತಃ ಸುಖದುಃಖಯೋರ್ಹಿ
ನಾರಾಯಣಸ್ತದನು ದತ್ತಮಿಹಾಸ್ಯ ಸರ್ವಂ |
ತಸ್ಮಾನ್ನ ಕೋಪವಿಷಯೋಽಸ್ತಿ ಕುತಶ್ಚ ಕಶ್ಚಿತ್
ತಸ್ಮಾತ್ ಕ್ಷಮೈವ ಸಕಲೇಷು ಪರೋಽಸ್ಯಧರ್ಮಃ ॥69॥
ಸಮಸ್ತ ಪ್ರಪಂಚಕ್ಕೆ ಸುಖದುಃಖಗಳನ್ನು ಉಂಟುಮಾಡುವವನು ಶ್ರೀಹರಿ. ಅವನೇ ಜಗತ್ತಿಗೆ ಸುಖದುಃಖವೆಲ್ಲವನ್ನೂ ಯೋಗ್ಯತಾನುಗುಣವಾಗಿ ಕೊಡುತ್ತಾನೆ. ಅದರಿಂದ ನಮ್ಮ ಕೋಪಕ್ಕೆ ಯೋಗ್ಯನೆನಿಸುವ ವ್ಯಕ್ತಿ ಯಾರೂ ಎಲ್ಲಿಯೂ ಇಲ್ಲ. ಅದರಿಂದ ಎಲ್ಲರಲ್ಲಿಯೂ ಕ್ಷಮೆ ತೋರುವುದೇ ರಾಜನಿಗೆ ಪರಮಧರ್ಮ.
ಇತ್ಯುಕ್ತವಂತಂ ನೃಪಮಾಹ ಪಾರ್ಷತೀ
ಯದಿ ಕ್ಷಮಾ ಸರ್ವನರೇಷು ಧರ್ಮಃ |
ರಾಜ್ಞಾ ನ ಕೃತ್ಯಂ ನ ಚ ಲೋಕಯಾತ್ರಾ
ಭವೇಜ್ಜಗತ್ ಕಾಪುರುಷೈರ್ವಿನಶ್ಯೇತ್ ॥70॥
ಹೀಗೆ ಧರ್ಮರಾಜ ಹೇಳಿದಾಗ ದ್ರೌಪದಿ ಹೇಳಿದಳು, `ಎಲ್ಲ ಜನರಲ್ಲಿಯೂ ಕ್ಷಮೆ ತೋರುವುದು ರಾಜನ ಧರ್ಮವೆನ್ನುವುದಾದರೆ ರಾಜನಿದ್ದೇನು ಪ್ರಯೋಜನ? ಲೋಕವ್ಯವಹಾರವೂ ನಡೆಯದು, ಜಗತ್ತೂ ದುರ್ಜನರಿಂದ ನಾಶಹೊಂದೀತು.
ಸತ್ಯಂ ಚ ವಿಷ್ಣುಃ ಸಕಲಪ್ರವರ್ತಕೋ
ರಮಾವಿರಿಂಚೇಶಪುರಃಸರಾಶ್ಚ |
ಕಾಷ್ಠಾದಿವತ್ ತದ್ವಶಗಾಃ ಸಮಸ್ತಾ
ಸ್ತಥಾಪಿ ನ ವ್ಯರ್ಥತಾ ಪೌರುಷಸ್ಯ ॥71॥
ಶ್ರೀಹರಿಯೆ ಸಕಲಪ್ರವರ್ತಕನೆನ್ನುವುದು ನಿಜ. ರಮಾ ಬ್ರಹ್ಮರುದ್ರಾದಿಗಳೆಲ್ಲರೂ ಅವನ ಅಧೀನದಲ್ಲಿ ಮರದ ಕೈಗೊಂಬೆಗಳಂತೆ ಇರುವರೆನ್ನುವುದೂ ನಿಜವೆ. ಆದರೂ ಪುರುಷ ಪ್ರಯತ್ನ ವ್ಯರ್ಥವಾಗದು.
ತದಾಜ್ಞಯಾ ಪುರುಷಶ್ಚೇಷ್ಟಮಾನ-
ಶ್ಚೇಷ್ಟಾನುಸಾರೇಣ ಶುಭಾಶುಭಸ್ಯ |
ಭೋಕ್ತಾ ನ ತಚ್ಚೇಷ್ಟಿತಮನ್ಯಥಾ ಭವೇತ್
ಕರ್ತಾ ತಸ್ಮಾತ್ ಪುರುಷೋಽಪ್ಯಸ್ಯ ವಶ್ಯಃ ॥72॥
ಜೀವನು ಹರಿಯ ಪ್ರೇರಣೆಯಿಂದ ಕರ್ಮ ಮಾಡುತ್ತಾನೆ. ಆ ಕರ್ಮಾನುಸಾರ ಸುಖದುಃಖಗಳನ್ನು ಉಣ್ಣುತ್ತಾನೆ. ಅವನ ಕರ್ಮವು ವ್ಯರ್ಥವಾಗುವುದಿಲ್ಲ. ಅದರಿಂದ ಜೀವನೂ ಅವನ ಕರ್ಮಗಳಿಗೆ ಹರಿಯ ಅಧೀನನಾಗಿದ್ದು ಕರ್ತನೆನಿಸುತ್ತಾನೆ ಎನ್ನಬೇಕು.
ವೃಥಾ ಯದಿ ಸ್ಯಾತ್ ಪೌರುಷಂ ಕಸ್ಯ ಹೇತೋಃ
ವಿಧಿರ್ನಿಷೇಧಸ್ಯ ಸಮಸ್ತ ವೇದಗಃ |
ವಿಧೇರ್ನಿಷೇಧಸ್ಯ ಚ ನೈವ ಗೋಚರಃ
ಪುಮಾನ್ ಯದಿ ಸ್ಯಾದ್ ಭವತೋ ಹಿತೌ ಹರೇಃ ॥73॥
ಜೀವನು ಮಾಡುವ ಕರ್ಮ ವ್ಯರ್ಥವಾಗುವುದಾದರೆ ಎಲ್ಲ ವೇದಗಳಲ್ಲಿ ವಿಧಿನಿಷೇಧಗಳು ಯಾರಿಗಾಗಿ ಹೊರಟಿವೆ? ಜೀವನು

ವಿಧಿನಿಷೇಧಗಳಿಗೆ ಒಳಪಡುವುದಿಲ್ಲವಾದರೆ ಹಾಗೇ ಆ ವಿಧಿನಿಷೇಧಗಳೆನ್ನಬೇಕಾದೀತು.
ತೇನೈವ ಲೇಪಶ್ಚ ಭವೇದಮುಷ್ಯ
ಪುಣ್ಯೇನ ಪಾಪೇನ ಚ ನೈವ ಚಾಸೌ |
ಲಿಪ್ಯೇತ ತಾಭ್ಯಾಂ ಪರಮಃ ಸ್ವತಂತ್ರಃ
ಕರ್ತಾ ತತಃ ಪುರುಷೋಽಪ್ಯಸ್ಯ ವಶ್ಯಃ ॥74॥
ಅದರಿಂದ ಹರಿಗೆ ಪುಣ್ಯಪಾಪಗಳ ಲೇಪಗಳಿವೆ ಎಂದೂ ಹೇಳಬೇಕಾದೀತು. ಆದರೆ ಅವನು ಸರ್ವಥಾ ಲೇಪ ಉಳ್ಳವನಲ್ಲ. ಏಕೆಂದರೆ ಅವನು ಪರಮ ಸ್ವತಂತ್ರ. ಹೀಗಾಗಿ ಜೀವ ಅಸ್ವತಂತ್ರನಾದರೂ ಅವನು ಕರ್ತ ಎಂದೆನ್ನಲೇಬೇಕು.
* * * *
ಇಪ್ಪತ್ತನಾಲ್ಕನೆಯ ಅಧ್ಯಾಯ
(ಭೀಮನ ಸನ್ನಿಧಿಯಲ್ಲಿ ದ್ರೌಪದಿಯಿಂದ ಧರ್ಮರಾಜನನ್ನು ಕುರಿತು ಚುಚ್ಚುಮಾತುಗಳು.)
ವೈಶಂಪಾಯನಃ
ತತೋ ವನಂಗತಾಃ ಪಾರ್ಥಾ ಸಾಯಾಹ್ನೇ ಸಹ ಕೃಷ್ಣಯಾ |
ಉಪವಿಷ್ಟಾಃ ಕಥಾಶ್ಚಕ್ರುರ್ದುಃಖಶೋಕಪರಾಯಣಾಃ ॥1॥
ಅನಂತರ ಕಾಡಿನಲ್ಲಿ ನೆಲೆಸಿದ ಪಾರ್ಥರು ಸಾಯಂಕಾಲದ ವೇಳೆಯಲ್ಲಿ ದ್ರೌಪದಿಯ ಜೊತೆಯಲ್ಲಿ ಕುಳಿತು ದುಃಖಶೋಕಪರಾಯಣರಾಗಿ ಮಾತುಗಳನ್ನು ಆಡಿದರು.
ಪ್ರಿಯಾ ಚ ದರ್ಶನೀಯಾ ಚ ಪಂಡಿತಾ ಚ ಪತಿವ್ರತಾ |
ತತಃ ಕೃಷ್ಣಾ ಧರ್ಮರಾಜಮಿದಂ ವಚನಮಬ್ರವೀತ್ ॥2॥
ಆಗ ಪ್ರಿಯೆಯೂ ಸುಂದರಿಯೂ ಪಂಡಿತಳೂ ಮತ್ತು ಪತಿವ್ರತೆಯೂ ಆದ ದ್ರೌಪದಿಯು ಧರ್ಮರಾಜನನ್ನು ಕುರಿತು ಹೀಗೆ ಮಾತನಾಡಿದಳು.
ನ ನೂನಂ ತಸ್ಯ ಪಾಪಸ್ಯ ದುಃಖಮಸ್ಮಾಸು ಕಿಂಚನ |
ವಿದ್ಯತೇ ಧಾರ್ತರಾಷ್ಟ್ರಸ್ಯ ನೃಶಂಸಸ್ಯ ದುರಾತ್ಮನಃ ॥3॥
ಧೃತರಾಷ್ಟ್ರಪುತ್ರನಾದ ದುರಾತ್ಮನಾದ ಪಾಪಿಯಾದ ಕ್ರೂರನಾದ ಆ ದುರ್ಯೋಧನನಿಗೆ ನಮ್ಮ ಮೇಲೆ ಸ್ವಲ್ಪವೂ ಕನಿಕರವಿಲ್ಲ.
ಯಸ್ತ್ವಂ ರಾಜನ್ ಮಯಾ ಸಾರ್ಧಮಜಿನೈಃ ಪರಿವಾರಿತಮ್ |
ಭ್ರಾತೃಭಿಶ್ಚ ತದಾ ಸರ್ವೈರ್ನಾಭ್ಯಭಾಷತ ಕಿಂಚನ |
ವನಂ ಪ್ರಸ್ಥಾಪ್ಯ ದುರ್ಮೇಧಾ ನಾನುತಪ್ಯತಿ ದುರ್ಮತಿಃ ॥4॥
ರಾಜನೇ! ಯಾವ ಅವನು ನಿನ್ನನ್ನು ಸಹ ಕೃಷ್ಣಾಜಿನಗಳನ್ನು ಉಡಿಸಿ ನನ್ನ ಮತ್ತು ತಮ್ಮಂದಿರ ಜೊತೆಯಲ್ಲಿದ್ದ ನಿನ್ನನ್ನು ಕುರಿತು ಒಂದು ಮಾತನ್ನೂ ಆಡಲಿಲ್ಲವೋ ಅಂತಹ ದುರ್ಬುದ್ಧಿಯುಳ್ಳ ದುರ್ಮೇಧನಾದ ಅವನು ನಮ್ಮನ್ನು ಕಾಡಿಗೆ ಕಳುಹಿಸಿ ಪಶ್ಚತ್ತಾಪ ಪಡುವುದಿಲ್ಲ.
ಆಯಸಂ ಹೃದಯಂ ನೂನಂ ತಸ್ಯಾಸೀತ್ ಕ್ರೂರಕರ್ಮಣಃ |
ಯಸ್ತ್ವಂ ಧರ್ಮಪರಂ ಶ್ರೇಷ್ಠಂ ರೂಕ್ಷಾಣ್ಯಶ್ರಾವಯತ್ ತದಾ ॥5॥
ನಿಶ್ಚಯವಾಗಿ ಕ್ರೂರಕರ್ಮವನ್ನು ಮಾಡುವ ಅವನ ಹೃದಯವು ಕಬ್ಬಿಣದಿಂದ ಮಾಡಲ್ಪಟ್ಟಿದೆ. ಏಕೆಂದರೆ ಅವನು ಶ್ರೇಷ್ಠನೂ ಧರ್ಮಪರನೂ ಆದ ನಿನ್ನನ್ನು ಕುರಿತು ಆಗ ಅಂತಹ ಕ್ರೂರವಾದ ಮಾತುಗಳನ್ನು ಆಡಿದನು.
ಸುಖೋಚಿತಮದುಃಖಾರ್ಹಂ ದುರಾತ್ಮಾ ಸಸುಹೃದ್ಗಣಃ |
ಈದೃಶಂ ದುಃಖಮಾನೀಯ ಮೋದತೇ ಪಾಪಪೂರುಷಃ ॥6॥
ಸುಖೋಚಿತನಾದ, ದುಃಖಕ್ಕೆ ಅರ್ಹನಲ್ಲದ, ನಿನ್ನನ್ನು ಇಂತಹ ದುಃಖಕ್ಕೆ ಒಡ್ಡಿ ದುರಾತ್ಮನೂ ಪಾಪಪುರುಷನೂ ಆದ ಅವನು ತನ್ನ ಹಿತೈಷಿಗಳ ಗಣದ ಜೊತೆಯಲ್ಲಿ ಸಂತೋಷ ಪಡುತ್ತಿದ್ದಾನೆ.
ಚತುರ್ಣಾಮೇವ ಪಾಪಾನಾಂ ಶ್ರುತ್ವೈವಾನಾಶಿತಂ ತದಾ |
ತ್ವಯಿ ಭಾರತ ನಿಷ್ಕ್ರಾಂತೇ ವನಾಯಾಜಿನವಾಸಸಿ ॥7॥
ದುರ್ಯೋಧನಸ್ಯ ಕರ್ಣಸ್ಯ ಶಕುನೇಶ್ಚ ದುರಾತ್ಮನಃ |
ದುರ್ಭ್ರಾತುಸ್ತಸ್ಯ ಚೋಗ್ರಸ್ಯ ತಥಾ ದುಃಶಾಸನಸ್ಯ ಚ ॥6॥
ಎಲೈ ಭಾರತನೇ! ನೀನು ಅಜಿನಗಳನ್ನು ಧರಿಸಿ ವನವಾಸಕ್ಕಾಗಿ ಹೊರಗೆ ಬರುತ್ತಿರಲು ದುರ್ಯೋಧನ ಕರ್ಣ ದುರಾತ್ಮನಾದ ಶಕುನಿ ದುರ್ಯೋಧನನ ಕೆಟ್ಟ ತಮ್ಮನಾದ ಉಗ್ರನಾದ ದುಶ್ಶಾಸನ ಈ ನಾಲ್ಕು ಜನ ಪಾಪಿಗಳಿಗೆ ಮಾತ್ರ ಕ್ಷೇಮ ಉಂಟಾಯಿತು.
ಇತರೇಷಾಂ ತು ಸರ್ವೇಷಾಂ ಕುರೂಣಾಂ ಕುರುಸತ್ತಮ |
ದುಃಖೇನಾಪಿ ಪರೀತಾನಾಂ ನೇತ್ರೇಭ್ಯಃ ಪ್ರಾಪತಜ್ಜಲಮ್ ॥9॥
ಎಲೈ ಕುರುಶ್ರೇಷ್ಠನೇ! ದುಃಖದಿಂದ ಕೂಡಿದ ಉಳಿದ ಎಲ್ಲಾ ಕುರುಗಳಿಗೂ ಆಗ ಕಣ್ಣುಗಳಿಂದ ಕಣ್ಣೀರು ಉರುಳಿತು.
ಇದಂ ಚ ಶಯನಂ ದೃಷ್ಟ್ವಾ ಯಚ್ಚಾಸೀತ್ ತೇ ಪುರಾತನಮ್ |
ಶೋಚಾಮಿ ತ್ವಾಂ ಮಹಾರಾಜ ದೃಷ್ಟ್ವಾ ಭೂತಳಶಾಯಿನಮ್ ॥10॥
ಎಲೈ ಮಹಾರಾಜನೇ! ಈ ನಿನ್ನ ಹಾಸಿಗೆಯನ್ನು ನೋಡಿ ನಿನಗೆ ಹಿಂದೆ ಇದ್ದ ಆಸನವನ್ನು ಸ್ಮರಿಸಿ ಭೂತಳದಲ್ಲಿ ಮಲಗುವ ನಿನ್ನನ್ನು ನೋಡಿ ನಾನು ದುಃಖಪಡುತ್ತೇನೆ.
ದಾಂತಂ ಯಚ್ಚ ಸಭಾಮಧ್ಯ ಆಸನಂ ರತ್ನಭೂಷಿತಮ್ |

ದೃಷ್ಟ್ವಾ ಕುಶಪ್ರಸ್ತರೇ ಮಾಂ ಶೋಕೋ ದಾರಯತೇ ಭೃಶಮ್ ॥11॥
ಹಿಂದೆ ಸಭಾಮಧ್ಯದಲ್ಲಿ ದಂತಮಯವಾದ ರತ್ನ ಭೂಷಿತವಾದ ಆಸನದಲ್ಲಿ ಕುಳಿತಿದ್ದುದನ್ನು ಸ್ಮರಿಸಿ ಈಗ ದರ್ಭೆಯ ಚಾಪೆಯ ಮೇಲೆ ಕುಳಿತಿರುವ ನಿನ್ನನ್ನು ನೋಡಿ ಶೋಕವು ನನ್ನ ಹೃದಯವು ಬಿರಿಯುವಂತೆ ಮಾಡುತ್ತಿದೆ.
ಯದಪಶ್ಯಂ ಸಭಾಯಾಂ ತ್ವಾಂ ರಾಜಭಿಃ ಪರಿವಾರಿತಮ್ |
ತಚ್ಚ ರಾಜನ್ನಪಶ್ಯಂತ್ಯಾಃ ಕಾ ಶಾಂತಿಃ ಹೃದಯಸ್ಯ ಮೇ ॥12॥
ಎಲೈ ರಾಜನೇ! ಹಿಂದೆ ಸಭೆಯಲ್ಲಿ ರಾಜರಿಂದ ಸುತ್ತುವರಿಯಲ್ಪಟ್ಟ ನಿನ್ನನ್ನು ನೋಡಿ ಈಗ ಅದನ್ನು ಕಾಣದಿರುವ ನನ್ನ ಹೃದಯಕ್ಕೆ ಯಾವ ಶಾಂತಿಯು ದೊರೆಯುತ್ತದೆ?
ಯಾ ತ್ವಾಂ ಸ್ರಕ್ಚಂದನಾದಿಗ್ಧಮಪಶ್ಯಂ ಸೂರ್ಯವರ್ಚಸಮ್ |
ಸಾ ತ್ವಾಂ ಪಂಕಮಲಾದಿಗ್ಧಂ ದೃಷ್ಟ್ವಾ ಮುಹ್ಯಾಮಿ ಭಾರತ ॥13॥
ಭಾರತನೇ! ಹಿಂದೆ ಸೂರ್ಯಕಾಂತಿಯನ್ನು ಹೊಂದಿದ್ದ ನೀನು ಸ್ರಕ್ಚಂದನಾದಿಗಳಿಂದ ಲೇಪಿಸಲ್ಪಟ್ಟಿರುವುದನ್ನು ನೋಡಿ ಈಗ ಕೆಸರಿನಿಂದ ಲೇಪಿಸಲ್ಪಟ್ಟ ಮತ್ತು ಧೂಳಿನಿಂದ ಲೇಪಿಸಲ್ಪಟ್ಟ ನಿನ್ನನ್ನು ನೋಡಿ ನನಗೆ ಮೂರ್ಛೆಬಂದಂತೆ ಆಗುತ್ತಿದೆ.
ಯಾ ತ್ವಾಽಹಂ ಕೌಶಿಕೈರ್ವಸ್ತ್ರೈಃ ಶುಭ್ರೈರ್ಬಹುವಿಧೈಃ ಪುರಾ |
ದೃಷ್ಟವತ್ಯಸ್ಮಿ ರಾಜೇಂದ್ರ ಸಾ ತ್ವಾಂ ಪಶ್ಯಾಮಿ ಚೀರಿಣಮ್ ॥14॥
ಎಲೈ ರಾಜೇಂದ್ರನೇ! ಯಾವ ನಾನು ನೀನು ಬಹುವಿಧವಾದ ಶುಭ್ರವಾದ ರೇಷ್ಮೆಯ ವಸ್ತ್ರಗಳಿಂದ ಅಲಂಕೃತವಾದುದನ್ನು ಹಿಂದೆ ನೋಡಿದ್ದೆನೋ ಆ ನಾನು ಈಗ ನಾರುಮಡಿಯನ್ನು ಉಟ್ಟ ನಿನ್ನನ್ನು ನೋಡುತ್ತಿದ್ದೇನೆ.
ಯಚ್ಚ ತೇ ರುಗ್ಮಪಾತ್ರೀಭಿಃ ಬ್ರಾಹ್ಮಣೇಭ್ಯಃ ಸಹಸ್ರಶಃ |
ಹ್ರಿಯತೇ ತೇ ಗೃಹಾದನ್ನಂ ಸಂಸ್ಕೃತಂ ಸಾರ್ವಕಾಮಿಕಮ್ ॥15॥
ಯತೀನಾಂ ಸ್ನಾತಕಾನಾಂ ಚ ತಥೈವ ಗೃಹಮೇಧಿನಾಮ್ |
ದೀಯತೇ ಭೋಜನಂ ರಾಜನ್ನತೀವ ಗುಣವತ್ ಪ್ರಭೋ ॥16॥
ಸರ್ವಕಾಮೈಃ ಸುವಿಹಿತೈರ್ಯದಪೂಜಯಥಾ ದ್ವಿಜಾನ್ |
ತಚ್ಚ ರಾಜನ್ನಪಶ್ಯಂತ್ಯಾಃ ಕಾ ಶಾಂತಿರ್ಹೃದಯಸ್ಯ ಮೇ ॥17॥
ನಿನ್ನ ಮನೆಯಲ್ಲಿ ಸುವರ್ಣಮಯವಾದ ಪಾತ್ರೆಗಳನ್ನು ಹಿಡಿದ ಸ್ತ್ರೀಯರು ಸಹಸ್ರಸಂಖ್ಯೆಯಲ್ಲಿ ಎಲ್ಲರೂ ಬಯಸುವ ಸುಸಂಸ್ಕೃತವಾದ ಅನ್ನವನ್ನು ನಿನ್ನ ಮನೆಯಿಂದ ಬ್ರಾಹ್ಮಣರಿಗೂ ಯತಿಗಳಿಗೂ ಸ್ನಾತಕರಿಗೆ ಗೃಹಸ್ಥರಿಗೂ ತೆಗೆದುಕೊಂಡು ಹೋಗುತಿತದ್ದರು. ಪ್ರಭುವೇ! ರಾಜನೇ! ಅದು ಅತ್ಯಂತ ಶ್ರೇಷ್ಠವಾದ ಭೋಜನವಾಗಿದ್ದಿತು. ನೀನು ಬ್ರಾಹ್ಮಣರನ್ನು ಅವರ ಅಭೀಷ್ಟವಾದ ಎಲ್ಲ ಕಾಮನೆಗಳನ್ನು ಪೂರೈಸಿ ಪೂಜಿಸುತ್ತಿದ್ದೆ. ಅದನ್ನು ಕಾಣದಿರುವ ನನ್ನ ಹೃದಯಕ್ಕೆ ಹೇಗೆ ಶಾಂತಿಯುಂಟಾಗುತ್ತದೆ?
ಯಾಂಸ್ತೇ ಭ್ರಾತೄ ನ್ ಮಹಾರಾಜ ಯುವಾನೋ ಮೃಷ್ಟಕುಂಡಲಾಃ |
ಅಭೋಜಯಂತ ನಿಷ್ಕಾನ್ನೈಃ ಸೂದಾಃ ಪರಮಸಂಸ್ಕೃತೈಃ ॥18॥
ಸರ್ವಾಂಸ್ತಾನದ್ಯ ಪಶ್ಯಂತ್ಯಾ ವನೇ ವನ್ಯೇನ ಜೀವತಃ |
ಅದುಃಖಾರ್ಹಾನ್ ಮನುಷ್ಯೇಂದ್ರ ನೈವ ಶಾಮ್ಯತಿ ಮೇ ಮನಃ ॥19॥
ಎಲೈ ಮಹಾರಾಜನೇ! ಯಾವ ನಿನ್ನ ಯುವಕರಾದ ಶ್ರೇಷ್ಠಕರ್ಣಕುಂಡಲಗಳನ್ನು ಧರಿಸಿದ್ದ ತಮ್ಮಂದಿರನ್ನು ಪಾಚಕರು ಪರಮಸಂಸ್ಕೃತವಾದ ಉತ್ಕೃಷ್ಟವಾದ ಅನ್ನಗಳಿಂದ ಭೋಜನ ಮಾಡಿಸುತ್ತಿದ್ದರು. ದುಃಖಕ್ಕೆ ಅನರ್ಹರಾದ ಅವರೆಲ್ಲರೂ ಈ ದಿನ ವನದಲ್ಲಿ ದೊರೆಯುವ ಗೆಡ್ಡೆಗೆಣಸುಗಳಿಂದ ವನದಲ್ಲಿ ಜೀವಿಸುವುದನ್ನು ನೋಡಿ ನನ್ನ ಮನಸ್ಸಿಗೆ ಶಾಂತಿಯು ದೊರೆಯುವುದಿಲ್ಲ.
ಭೀಮಸೇನಮಿಮಂ ಚಾಪಿ ದುಃಖಿತಂ ವನವಾಸಿನಮ್ |
ಧ್ಯಾಯಂತಂ ಕಿಂ ನು ಮನ್ಯುಸ್ತೇ ಪ್ರಾಪ್ತೇ ಕಾಲೇ ನ ವರ್ಧತೇ ॥20॥
ದುಃಖಿತನೂ ವನವಾಸಿಯೂ ಆಗಿರುವ ಈ ಭೀಮಸೇನನು ಯಾವಾಗಲೂ ಚಿಂತಾಕ್ರಾಂತನಾಗಿರುವುದನ್ನು ನೋಡಿ ಯೋಗ್ಯವಾದ ಕಾಲದಲ್ಲಿ ನಿನಗೇಕೆ ಕೋಪವು ಉಂಟಾಗುವುದಿಲ್ಲ?
ಭೀಮಸೇನಂ ಹಿ ಕರ್ಮಾಣಿ ಸ್ವಯಂ ಕುರ್ವಾಣಮಚ್ಯುತಮ್ |
ಸುಖಾರ್ಹಮಸುಖಂ ದೃಷ್ಟ್ವಾ ಕಸ್ಮಾದ್ ರಾಜನ್ನುಪೇಕ್ಷಸೇ ॥21॥
ಸಂಸ್ಕೃತೈರ್ವಿವಿಧೈರ್ಧಾನ್ಯೈರ್ವಸ್ತ್ರೈರುಚ್ಚಾವಚೈಸ್ತಥಾ |
ತಂ ವೈ ವನಗತಂ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥22॥
ಎಲೈ ರಾಜನೇ! ತನ್ನ ಕರ್ಮಗಳನ್ನು ತಾನೇ ಮಾಡಿಕೊಳ್ಳುತ್ತಿರುವ ಗುಣಗಳಿಂದ ಚ್ಯುತನಾಗದ ಸುಖಾರ್ಹನಾದ ಸುಖರಹಿತನಾದ ಭೀಮಸೇನನನ್ನು ನೋಡಿ ನೀನು ಏಕೆ ಉಪೇಕ್ಷೆ ಮಾಡುತ್ತಿದ್ದೀಯೆ? ಹಿಂದೆ ವಿವಿಧವಾದ ಸಂಸ್ಕೃತವಾದ ಧಾನ್ಯಗಳಿಂದಲೂ ಅನೇಕ ಬಗೆಯ ಶ್ರೇಷ್ಠವಾದ ವಸ್ತ್ರಗಳಿಂದಲೂ ಸುಖವಾಗಿದ್ದ ಅವನು ಈಗ ಕಾಡಿನಲ್ಲಿ ಇರುವುದನ್ನು ನೋಡಿ ನಿನಗೆ ಏಕೆ ಕೋಪವು ಉಂಟಾಗುವುದಿಲ್ಲ?
ಕುರೂನಪೀಹ ಯಃಸರ್ವಾನ್ ಹಂತುಮುತ್ಸಹತೇ ಪ್ರಭುಃ |
ತ್ವತ್ಪ್ರತಿಜ್ಞಾಂ ಪ್ರತೀಕ್ಷಂಸ್ತು ಕ್ಷಮತೇಽದ್ಯ ವೃಕೋದರಃ ॥23॥
ಆ ವೃಕೋದರನು ಎಲ್ಲ ಕುರುಗಳನ್ನೂ ಒಬ್ಬನೇ ಕೊಲ್ಲಲು ಸಮರ್ಥನಾಗಿದ್ದಾನೆ. ನಿನ್ನ ಪ್ರತಿಜ್ಞೆಯನ್ನು ನಿರೀಕ್ಷಿಸುತ್ತಾ ಈಗ ಶಾಂತಿಯಿಂದ ಇದ್ದಾನೆ.
ಯೋಽರ್ಜುನೇನಾರ್ಜುನಸ್ತುಲ್ಯೋ ದ್ವಿಬಾಹುರ್ಬಹುಬಾಹುನಾ|

ಶರಾತಿಸರ್ಗೇ ಶೀಘ್ರಾಸ್ತ್ರೇ ಕಾಲಾಂತಕಯಮೋಪಮಃ ॥24॥
ಯಸ್ಯ ಶಸ್ತ್ರಪ್ರತಾಪೇನ ಪ್ರಣೀತಾಃ ಸರ್ವಪಾರ್ಥಿವಾಃ।
ಯಜ್ಞೇ ತವ ಮಹಾರಾಜ ಬ್ರಾಹ್ಮಣಾನುಪತಸ್ಥಿರೇ ॥25॥
ತಮಿಮಂ ಪುರುಷವ್ಯಾಘ್ರಂ ಪೂಜಿತಂ ದೇವದಾನವೈಃ।
ಧ್ಯಾಯಂತಮರ್ಜುನಂ ದೃಷ್ಟ್ವಾ ಕಸ್ಮಾದ್ ರಾಜನ್ ನ ಕುಪ್ಯಸಿ ॥26॥
ಎರಡು ಬಾಹುವುಳ್ಳ ಯಾವ ಅರ್ಜುನನು ಸಹಸ್ರಬಾಹುಗಳುಳ್ಳ ಯಾವ ಕಾರ್ತವೀರ್ಯಾರ್ಜುನನಿಗೆ ಸಮಾನನೋ, ಶರವನ್ನು ಪ್ರಯೋಗಮಾಡುವುದರಲ್ಲೂ ಶೀಘ್ರವಾಗಿ ಅಸ್ತ್ರಗಳನ್ನು ಪ್ರಯೋಗಮಾಡುವುದರಲ್ಲೂ ಯಾವನು ಕಾಲಾಂತಕ ಯಮನಂತೆ ಇದ್ದಾನೋ, ಯಾವನ ಶಸ್ತ್ರಪ್ರಭಾವದಿಂದ ಎಲ್ಲ ರಾಜರೂ ನಿನ್ನವಶವಾಗಿ ನಿನ್ನ ಯಜ್ಞದಲ್ಲಿ ಬ್ರಾಹ್ಮಣರ ಸೇವೆಯನ್ನು ಮಾಡಿದರೋ, ಎಲೈ ಮಹಾರಾಜನೇ! ಅಂತಹ ಪುರುಷವ್ಯಾಘ್ರನಾದ ದೇವದಾನವರಿಂದ ಪೂಜಿತನಾದ ಈ ಅರ್ಜುನನು ಚಿಂತಾಕ್ರಾಂತನಾಗಿರುವುದನ್ನು ನೋಡಿ ನಿನಗೆ ಏಕೆ ಕೋಪವುಂಟಾಗುವುದಿಲ್ಲ?
ದೃಷ್ಟ್ವಾ ವನಗತಾನ್ ಪಾರ್ಥಾನ್ ನದುಃಖಾರ್ಹಾನ್ ಸುಖೇಧಿತಾನ್।
ನ ಚ ತೇ ವರ್ಧತೇ ಮನ್ಯುಸ್ತೇನ ಮುಹ್ಯಾಮಿ ಭಾರತ ॥27॥
ಯೋ ದೇವಾಂಶ್ಚ ಮನುಷ್ಯಾಂಶ್ಚ ಸರ್ಪಾಂಶ್ಚೈಕರಥೋಽಜಯತ್।
ತಂ ವೈ ವನಗತಂ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥28॥
ಎಲೈ ಭಾರತನೇ! ಸುಖದಲ್ಲಿ ಬೆಳೆದ ದುಃಖಕ್ಕೆ ಅರ್ಹರಲ್ಲದ ಪಾಂಡವರೆಲ್ಲರೂ ಕಾಡಿನಲ್ಲಿ ಇರುವುದನ್ನು ನೋಡಿ ನಿನಗೆ ಕೋಪವುಂಟಾಗುತ್ತಿಲ್ಲ. ನಾನು ಅದರಿಂದ ಮೋಹಗೊಂಡಿದ್ದೇನೆ. ಯಾವ ಅರ್ಜುನನು ಏಕರಥನಾಗಿ ಹೋಗಿ ದೇವತೆಗಳನ್ನು ಮನುಷ್ಯರನ್ನು ಮತ್ತು ಸರ್ಪಗಳನ್ನು ಜಯಿಸಿದನೋ ಅಂತಹ ಅವನು ವನಗತನಾದುದನ್ನು ನೋಡಿ ನಿನಗೆ ಏಕೆ ಕೋಪವುಂಟಾಗುವುದಿಲ್ಲ?
ಯೋ ನಾಗೈರದ್ಭುತಾಕಾರೈರ್ಹಯೈರ್ನಾಗೈಶ್ಚ ಸಂವೃತಮ್।
ಪ್ರಸಹ್ಯ ವಿತ್ತಮಗೃಹ್ಣಾತ್ ಪಾರ್ಥಿವಾನಾಂ ಪರಂತಪಃ ॥29॥
ಕ್ಷಿಪತ್ಯೇಕೇನ ವೇಗೇನ ಪಂಚ ಬಾಣಶತಾನಿ ಯಃ।
ತಂ ವೈ ವನಗತಂ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥30॥
ಯಾವ ಪರಂತಪನಾದ ಅರ್ಜುನನು ಅಶ್ವಗಳಿಂದಲೂ ಗಜಗಳಿಂದಲೂ ರಕ್ಷಿತವಾದ ರಾಜರ ಕೋಶಗಳನ್ನು ಪರಾಕ್ರಮದಿಂದ ವಶಪಡಿಸಿಕೊಂಡು ಅದ್ಭುತವಾದ ಗಜಗಳಿಂದ ಹೊರಿಸಿಕೊಂಡು ತಂದನೋ. ಒಂದೇ ವೇಗದಿಂದ ಏಕಕಾಲದಲ್ಲಿ ಐದುನೂರು ಬಾಣಗಳನ್ನು ಪ್ರಯೋಗಿಸುತ್ತಾನೋ. ಅಂತಹ ಅರ್ಜುನನು ಕಾಡಿನಲ್ಲಿ ಇರುವುದನ್ನು ನೋಡಿ ನಿನಗೇಕೆ ಕೋಪವುಂಟಾಗುವುದಿಲ್ಲ?
ಶ್ಯಾಮಂ ಬೃಹಂತಂ ತರುಣಂ ಧನ್ವಿನಾಮುತ್ತಮಂ ರಣೇ।
ನಕುಲಂ ತೇ ವನೇ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥31॥
ಶ್ಯಾಮವರ್ಣದವನೂ ದೊಡ್ಡ ಶರೀರವನ್ನು ಹೊಂದಿದವನೂ ತರುಣನೂ ಯುದ್ಧದಲ್ಲಿ ಧನ್ವಿಶ್ರೇಷ್ಠನೂ ಆದ ನಕುಲನನ್ನು ಕಾಡಿನಲ್ಲಿ ನೋಡಿ ನಿನಗೆ ಏಕೆ ಕೋಪವುಂಟಾಗುವುದಿಲ್ಲ?
ದರ್ಶನೀಯಂ ಚ ಶೂರಂ ಚ ಮಾದ್ರೀಪುತ್ರಂ ಯುಧಿಷ್ಠಿರ।
ಸಹದೇವಂ ವನೇ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥32॥
ಎಲೈ ಯುಧಿಷ್ಠಿರನೇ! ಸುಂದರನಾದ ಶೂರನಾದ ಮಾದ್ರೀಪುತ್ರನಾದ ಸಹದೇವನನ್ನು ಕಾಡಿನಲ್ಲಿ ನೋಡಿ ನಿನಗೇಕೆ ಕೋಪವುಂಟಾಗುವುದಿಲ್ಲ?
ನಕುಲಂ ಸಹದೇವಂ ಚ ದೃಷ್ಟ್ವಾ ತೇ ದುಃಖಿತಾವುಭೌ।
ಅದುಃಖಾರ್ಹೌ ಮನುಷ್ಯೇಂದ್ರ ಕಸ್ಮಾನ್ಮನ್ಯುರ್ನ ವರ್ಧತೇ ॥33॥
ಎಲೈ ಮನುಷ್ಯೇಂದ್ರನೇ! ದುಃಖಕ್ಕೆ ಅರ್ಹರಲ್ಲದ ದುಃಖಿತರಾದ ನಕುಲಸಹದೇವರಿಬ್ಬರನ್ನೂ ನೋಡಿ ನಿನಗೇಕೆ ಕೋಪವುಂಟಾಗುವುದಿಲ್ಲ?
ದ್ರುಪದಸ್ಯ ಕುಲೇ ಜಾತಾಂ ಸ್ನುಷಾಂ ಪಾಂಡೋರ್ಮಹಾತ್ಮನಃ।
ತಾಂ ತೇ ವನಗತಾಂ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥34॥
ದ್ರುಪದಕುಲದಲ್ಲಿ ಹುಟ್ಟಿದ ಮಹಾತ್ಮನಾದ ಪಾಂಡುವಿನ ಸೊಸೆಯಾದ ಆ ದ್ರೌಪದಿಯು ಕಾಡಿನಲ್ಲಿ ಇರುವುದನ್ನು ನೋಡಿ ನಿನಗೇಕೆ ಕೋಪವುಂಟಾಗುವುದಿಲ್ಲ.
ನೂನಂ ಚ ತವ ನೈವಾಸ್ತಿ ಮನ್ಯುರ್ಭರತಸತ್ತಮ।
ಯತ್ತೇ ಭ್ರಾತೄಂಶ್ಚ ಮಾಂ ಚೈವ ದೃಷ್ಟ್ವಾ ನ ವ್ಯಥತೇ ಮನಃ ॥35॥
ಎಲೈ ಭರತಶ್ರೇಷ್ಠನೇ! ನಿನ್ನ ತಮ್ಮಂದಿರನ್ನು ಮತ್ತು ನನ್ನನ್ನು ನೋಡಿ ನಿನ್ನ ಮನಸ್ಸಿಗೆ ವ್ಯಥೆಯೇ ಉಂಟಾಗುವುದಿಲ್ಲವಾದ್ದರಿಂದ ನಿನಗೆ ಕೋಪವೇ ಇಲ್ಲ!?
ನ ನಿರ್ಮನ್ಯುಃ ಕ್ಷತ್ರಿಯೋಽಸ್ತಿ ಲೋಕೇ ನಿರ್ವಚನಂ ಸ್ಮೃತಮ್।
ತದದ್ಯ ತ್ವಯಿ ಪಶ್ಯಾಮಿ ಕ್ಷತ್ರಿಯೇ ವಿಪರೀತವತ್ ॥36॥
ಕೋಪವಿಲ್ಲದ ಕ್ಷತ್ರಿಯನಿಲ್ಲವೆಂದು ಲೋಕದಲ್ಲಿ ಎಲ್ಲರೂ ಹೇಳುತ್ತಾರೆ. ಆ ಮಾತನ್ನು ಕ್ಷತ್ರಿಯನಾದ ನಿನ್ನಲ್ಲಿ ವಿಪರೀತವಾಗಿ ಕಾಣುತ್ತಿದ್ದೇನೆ.
ಯೋ ನ ದರ್ಶಯತೇ ತೇಜಃ ಕ್ಷತ್ರಿಯಃ ಕಾಲ ಆಗತೇ।

ಸರ್ವಭೂತಾನಿ ತಂ ಪಾರ್ಥ ಸದಾ ಪರಿಭವಂತ್ಯುತ ॥37॥
ಎಲೈ ಪಾರ್ಥನೇ! ಯಾವ ಕ್ಷತ್ರಿಯನು ಯೋಗ್ಯವಾದ ಕಾಲದಲ್ಲಿ ತನ್ನ ಪರಾಕ್ರಮವನ್ನು ತೋರಿಸುವುದಿಲ್ಲವೋ ಅವನನ್ನು ಎಲ್ಲರೂ ಪರಾಭವಗೊಳಿಸುತ್ತಾರೆ.
ನ ತ್ವಯಾ ತು ಕ್ಷಮಾ ಕಾರ್ಯಾ ಶತ್ರೂನ್ ಪ್ರತಿ ಕಥಂಚನ |
ತೇಜಸೈವ ಹಿ ತೇ ಶಕ್ಯಾ ನಿಹಂತುಂ ನಾತ್ರ ಸಂಶಯಃ ॥38॥
ನೀನು ಶತ್ರುಗಳ ಮೇಲೆ ದಯೆಯನ್ನು ತೋರಿಸುವ ಅಗತ್ಯವಿಲ್ಲ. ಅವರನ್ನು ಪರಾಕ್ರಮದಿಂದ ಮಾತ್ರ ಕೊಲ್ಲಲು ಸಾಧ್ಯ. ಈ ವಿಷಯದಲ್ಲಿ ಸಂಶಯವಿಲ್ಲ.
ತಥೈವ ಯಃ ಕ್ಷಮಾಕಾಲೇ ಕ್ಷತ್ರಿಯೋ ನೋಪಶಾಮ್ಯತಿ |
ಅಪ್ರಿಯಃ ಸರ್ವಭೂತಾನಾಂ ಸೋಽಮುತ್ರೇಹ ಚ ನಶ್ಯತಿ ॥39॥
ಅದರಂತೆಯೇ ಯಾವ ಕ್ಷತ್ರಿಯನು ಕ್ಷಮಿಸಬೇಕಾದ ಕಾಲದಲ್ಲಿ ಕೋಪಶಾಂತಿಯನ್ನು ಹೊಂದುವುದಿಲ್ಲವೋ ಅವನು ಸರ್ವರಿಗೂ ಅಪ್ರಿಯನಾಗಿ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ನಾಶವನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರ್ವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಇಪ್ಪತ್ತೈದನೆಯ ಅಧ್ಯಾಯ
(ಪ್ರಕೃತದಲ್ಲಿ ಕ್ಷಮೆಯನ್ನು ಬಿಟ್ಟು ಪರಾಕ್ರಮವನ್ನು ಆಶ್ರಯಿಸುವಂತೆ ದ್ರೌಪದಿಯಿಂದ ಧರ್ಮರಾಜನಿಗೆ ಉಪದೇಶ. ಅದಕ್ಕಾಗಿ ಬಲಿಪ್ರಹ್ಲಾದಸಂವಾದಕಥನ.)
ದ್ರೌಪದೀ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪ್ರಹ್ಲಾದಸ್ಯ ಚ ಸಂವಾದಂ ಬಲೇರ್ವೈರೋಚನಸ್ಯ ಚ ॥1॥
ಈ ವಿಷಯದಲ್ಲಿ ಹಿಂದೆ ಪ್ರಹ್ಲಾದನಿಗೂ ವಿರೋಚನನ ಮಗನಾದ ಬಲಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ಹೇಳುತ್ತಾರೆ.
ಅಸುರೇಂದ್ರಂ ಮಹಾತ್ಮಾನಂ ಧರ್ಮಣಾಮಾಗತಾಗಮಮ್ |
ಬಲಿಃ ಪಪ್ರಚ್ಛ ದೈತ್ಯೇಂದ್ರಃ ಪ್ರಹ್ಲಾದಂ ಪಿತರಂ ಪಿತುಃ ॥2॥
ಮಹಾತ್ಮನೂ ಅಸುರೇಂದ್ರನೂ ಎಲ್ಲ ಧರ್ಮಶಾಸ್ತ್ರವನ್ನು ತಿಳಿದವನೂ ಆದ ಅಜ್ಜನಾದ ಪ್ರಹ್ಲಾದನನ್ನು ಕುರಿತು ದೈತ್ಯೇಂದ್ರನಾದ ಬಲಿಯು ಪ್ರಶ್ನೆಮಾಡಿದನು.
ಕ್ಷಮಾ ವಾ ತೈಜಸೀ ತಾತ ತೇಜೋ ವಾಽಸುರಸತ್ತಮ |
ಏತನ್ಮೇ ಸಂಶಯಸ್ತಾತ ಯಥಾ ತ್ವಂ ಬ್ರೂಹಿ ಪೃಚ್ಛತಃ ॥3॥
ತಾತನೇ! ಅಸುರಶ್ರೇಷ್ಠನೇ! ಕ್ಷಮೆಯು ಹೆಚ್ಚು ಸಾಮರ್ಥ್ಯವುಳ್ಳದ್ದೋ? ಅಥವಾ ತೇಜಸ್ಸು ಪರಾಕ್ರಮವು ಹೆಚ್ಚು ಸಾಮರ್ಥ್ಯವುಳ್ಳದ್ದೋ ಈ ವಿಷಯದಲ್ಲಿ ನನಗೆ ಸಂಶಯವಿದೆ. ನಿನ್ನನ್ನು ಕೇಳುತ್ತಿರುವ ನನಗೆ ಅದನ್ನು ಸರಿಯಾಗಿ ಹೇಳು.
ಶ್ರೇಯೋ ಯದತ್ರ ಧರ್ಮಜ್ಞ ಬ್ರೂಹಿ ಮೇ ತದಸಂಶಯಮ್ |
ಕರಿಷ್ಯಾಮಿ ಹಿ ತತ್ ಸರ್ವಂ ಯಥಾವದನುಶಾಸನಮ್ ॥4॥
ಎಲೈ ಧರ್ಮಜ್ಞನೇ! ಇವೆರಡರಲ್ಲಿ ಯಾವುದು ಶ್ರೇಯಸ್ಕರವೆಂದು ನಿಸ್ಸಂಶಯವಾಗಿ ಹೇಳು. ನಿನ್ನ ಆದೇಶವನ್ನು ನಾನು ಸರಿಯಾಗಿ ಪಾಲಿಸುವೆನು.
ತಸ್ಮೈ ಪ್ರೋವಾಚ ತತ್ ಸರ್ವಮೇವಂ ಪೃಷ್ಟಃ ಪಿತಾಮಹಃ |
ಸರ್ವನಿಶ್ಚಯವಿತ್ ಪ್ರಾಜ್ಞಃ ಸಂಶಯಂ ಪರಿಪೃಚ್ಛತೇ ॥5॥
ಹೀಗೆ ಕೇಳಲ್ಪಟ್ಟ ಪಿತಾಮಹನಾದ ಪ್ರಾಜ್ಞನಾದ ಪ್ರಹ್ಲಾದನು ಎಲ್ಲ ವಿಷಯಗಳನ್ನು ತಿಳಿದವನಾಗಿ ಪ್ರಶ್ನೆಯನ್ನು ಕೇಳಿದ ಬಲಿಗೆ ಸಂಶಯವನ್ನು ಪರಿಹರಿಸಿದನು.
ನ ಶ್ರೇಯಃ ಸತತಂ ತೇಜೋ ನ ನಿತ್ಯಂ ಶ್ರೇಯಸೀ ಕ್ಷಮಾ |
ಇತಿ ತಾತ ವಿಜಾನೀಹಿ ದ್ವಯಮೇತದಸಂಶಯಮ್ ॥6॥
ಪ್ರೀತಿಪಾತ್ರನೇ! ತೇಜಸ್ಸು ಮತ್ತು ಕ್ಷಮೆ ಇವೆರಡರ ವಿಷಯದಲ್ಲಿ ಸತತವಾದ ತೇಜಸ್ಸಾಗಲೀ ಅಥವಾ ಸತತವಾದ ಕ್ಷಮೆಯಾಗಲೀ ಒಳ್ಳೆಯದಲ್ಲ. ಇದನ್ನು ನಿಶ್ಚಯವಾಗಿ ತಿಳಿ.
ಯೋ ನಿತ್ಯಂ ಕ್ಷಮತೇ ತಾತ ಬಹೂನ್ ದೋಷಾನ್ ಸ ವಿಂದತಿ|
ಭೃತ್ಯಾಃ ಪರಿಭವಂತ್ಯೇನಮುದಾಸೀನಾಸ್ತಥೈವ ಚ ॥7॥
ಪ್ರೀತಿಪಾತ್ರನೇ! ಯಾವನು ಯಾವಾಗಲೂ ಕ್ಷಮಿಸುತ್ತಾನೋ ಅವನು ಬಹಳ ದೋಷಗಳನ್ನು ಸಂಪಾದಿಸುತ್ತಾನೆ. ಅವನ ಭೃತ್ಯರು ಉದಾಸೀನರಾಗಿ ಅವನನ್ನು ಅವಮಾನಗೊಳಿಸುತ್ತಾರೆ.
ಸರ್ವಭೂತಾನಿ ಚಾಪ್ಯಸ್ಯ ನ ನಮಂತಿ ಕದಾಚನ |
ತಸ್ಮಾನ್ನಿತ್ಯಂ ಕ್ಷಮಾ ತಾತ ಪಂಡಿತೈರಪವಾದಿತಾ ॥8॥
ಎಲ್ಲಾ ಜನರೂ ಅವನಿಗೆ ಯಾವಾಗಲೂ ನಮಸ್ಕಾರಮಾಡುವುದಿಲ್ಲ. ಆದ್ದರಿಂದ ಪ್ರೀತಿಪಾತ್ರನೇ ನಿತ್ಯದಲ್ಲಿಯೂ

ಕ್ಷಮಾಶೀಲನಾಗಿರುವುದನ್ನು ಪಂಡಿತರು ಒಪ್ಪುವುದಿಲ್ಲ.
ಅವಜ್ಞಾಯ ಚ ತಂ ಭೃತ್ಯಾ ಭಜಂತೇ ಬಹುದೋಷತಃ |
ಅವಜ್ಞಾನಂ ಹಿ ಲೋಕೇಽಸ್ಮಿನ್ ಮರಣಾದಪಿ ಗರ್ಹಿತಮ್ ॥9॥
ಅವನ ಭೃತ್ಯರು ಅವಮಾನವನ್ನು ಮಾಡಿ ಅನೇಕ ದೋಷಗಳನ್ನು ಹೊಂದಿ ಅವನನ್ನು ಸೇವಿಸುತ್ತಾರೆ. ಈ ಲೋಕದಲ್ಲಿ ಅವಮಾನವು ಮರಣಕ್ಕಿಂತಲೂ ನಿಂದಿತವಾದದ್ದು.
ಕ್ಷಮಿಣಂ ತಾದೃಶಂ ತಾತ ಬ್ರುವಂತಿ ಕಟುಕಾನ್ಯಪಿ |
ಪ್ರೇಷ್ಯಾ ಪುತ್ರಾಶ್ಚ ಭೃತ್ಯಾಶ್ಚ ತಥೋದಾಸೀನವೃತ್ತಯಃ ॥10॥
ಪ್ರೀತಿಪಾತ್ರನೇ ಅಂತಹ ಕ್ಷಮಾಶೀಲನನ್ನು ಕುರಿತು ಸೇವಕರೂ ಪುತ್ರರೂ ಭೃತ್ಯರೂ ಮತ್ತು ತಟಸ್ಥಪುರುಷರೂ ಸಹ ಚುಚ್ಚುಮಾತುಗಳನ್ನು ಆಡುತ್ತಾರೆ.
ಅಪ್ಯಸ್ಯ ದಾರಾನಿಚ್ಛಂತಿ ಪರಿಭೂಯ ಕ್ಷಮಾವತಃ |
ದಾರಾಶ್ಚಾಸ್ಯ ಪ್ರವರ್ತಂತೇ ಯಥಾಕಾಮಮಚೇತಸಃ ॥11॥
ಆ ಕ್ಷಮಾಶೀಲನನ್ನು ಅವಮಾನಗೊಳಿಸಿ ಅವನ ಪತ್ನಿಯರನ್ನು ಇಚ್ಛಿಸುತ್ತಾರೆ. ಅವನ ಪತ್ನಿಯರು ಕೂಡ ಬುದ್ಧಿಶೂನ್ಯರಾಗಿ ಮನಸ್ಸಿಗೆ ಬಂದಂತೆ ವರ್ತಿಸುತ್ತಾರೆ.
ತಥಾ ನಿತ್ಯಂ ಸಮುದಿತಾ ಯದಿ ವಾಽಲ್ಪಾಮಪೀಶ್ವರಾತ್ |
ಹಾನಿಮ್ಮಿಚ್ಛಂತಿ ದುಷ್ಯಂತಃ ಸ್ವಾಮಿನಂ ಚಾಪಕುರ್ವತೇ |
ಏತೇ ಚಾನ್ಯೇ ಚ ಬಹವೋ ನಿತ್ಯಂ ದೋಷಾಃ ಕ್ಷಮಾವತಾಮ್ ॥12॥
ಹಾಗೆ ನಿತ್ಯವೂ ಸಂತುಷ್ಟರಾಗಿದ್ದು ಸ್ವಾಮಿಯು ಅಲ್ಪವಾದ ಅಪರಾಧವನ್ನು ಮಾಡಿದರೂ ಅವನನ್ನು ದೂಷಿಸುತ್ತಾ ಅವನಿಗೆ ಹಾನಿಯನ್ನು ಬಯಸುತ್ತಾರೆ. ಸ್ವಾಮಿಗೆ ಅಪಕಾರವನ್ನು ಬಯಸುತ್ತಾರೆ. ನಿತ್ಯವೂ ಕ್ಷಮಾಶೀಲರಾದವರಿಗೆ ಇವೂ ಮತ್ತು ಇನ್ನೂ ಅನೇಕ ದೋಷಗಳೂ ಉಂಟಾಗುತ್ತವೆ.
ಅಸ್ಥಾನೇ ಹ್ಯಪಿ ಚ ಸ್ಥಾನೇ ಸತತಂ ಚಾನುಗಾಮಿನಾಮ್ |
ಕ್ರುದ್ಧೋ ದಂಡಾನ್ ಪ್ರಣಯತಿ ವಿವಿಧಾಂಸ್ತೇಜಸಾ ವೃತಃ |
ಪ್ರಾಪ್ನೋತಿ ದ್ವೇಷ್ಯತಾಂ ಲೋಕೇ ಭೃತ್ಯಾತ್ ಸ್ವಜನತಸ್ತಥಾ ॥13॥
ಯೋಗ್ಯವಾದ ಸಂದರ್ಭದಲ್ಲಿ ಮತ್ತು ಅಯೋಗ್ಯವಾದ ಸಂದರ್ಭದಲ್ಲಿ ಯಾವಾಗಲೂ ಕೋಪಕ್ಕೆ ವಶನಾಗಿ ಪರಾಕ್ರಮದಿಂದ ಕೂಡಿದವನಾಗಿ ತನ್ನ ಅನುಗಾಮಿಗಳಿಗೆ ಶಿಕ್ಷೆಯನ್ನು ವಿಧಿಸುವ ಸ್ವಾಮಿಯು ಲೋಕದಲ್ಲಿ ಭೃತ್ಯರಿಂದಲೂ ಸ್ವಜನರಿಂದಲೂ ದ್ವೇಷಿಸಲ್ಪಡುತ್ತಾನೆ.
ಸೋಽವಮಾನಾರ್ಥಲೋಪೌ ಚ ವಾಚ್ಯತಾಮೇಷ್ಯತೀತಿ ಚ |
ಸ ಲೋಕಗರ್ಹಿತಂ ಚೈವ ಶತ್ರೂಂಶ್ಚ ಲಭತೇ ನರಃ ॥14॥
ಅವನು ಅವಮಾನವನ್ನೂ ಅರ್ಥಹಾನಿಯನ್ನೂ ಮತ್ತು ಈ ರೀತಿಯಲ್ಲಿ ನಿಂದೆಯನ್ನೂ ಹೊಂದುತ್ತಾನೆ. ಅಂತಹ ಮನುಷ್ಯನು ಲೋಕಗರ್ಹಿತನಾಗಿ ಶತ್ರುಗಳನ್ನು ಸಂಪಾದಿಸುತ್ತಾನೆ.
ಕ್ರೋಧಾದ್ದಂಡಾನ್ ಮನುಷ್ಯೇಷು ವಿವಿಧಾನ್ ಪುರುಷೋ ನಯನ್ |
ಭ್ರಶ್ಯತೇ ಶೀಘ್ರಮೈಶ್ವರ್ಯಾತ್ ಪ್ರಾಣೇಭ್ಯಃ ಸ್ವಜನಾದಪಿ ॥15॥
ಕ್ರೋಧದಿಂದ ಮನುಷ್ಯರ ಮೇಲೆ ಅನೇಕ ವಿಧವಾದ ದಂಡವನ್ನು ವಿಧಿಸುವ ಪುರುಷನು ಶೀಘ್ರವಾಗಿ ಐಶ್ವರ್ಯದಿಂದ ಭ್ರಷ್ಟನಾಗುತ್ತಾನೆ. ಪ್ರಾಣಗಳಿಂದಲೂ ಮತ್ತು ಸ್ವಜನರಿಂದಲೂ ಭ್ರಷ್ಟನಾಗುತ್ತಾನೆ.
ಯೋಽಪಕರ್ತ್ರೂಂಶ್ಚ ಕರ್ತ್ರೂಂಶ್ಚ ತೇಜಸೈವೋಪಗಚ್ಛತಿ |
ತಸ್ಮಾದುದ್ವಿಜತೇ ಲೋಕಃ ಸರ್ಪಾದ್ ವೇಶ್ಮಗತಾದಿವ |
ಯಸ್ಮಾದುದ್ವಿಜತೇ ಲೋಕಃ ಕಥಂ ತಸ್ಯ ರತಿರ್ಭವೇತ್ ॥16॥
ಯಾವ ಪುರುಷನು ಅಪಕಾರಮಾಡುವವನನ್ನು ಮತ್ತು ಉಪಕಾರಮಾಡುವವನನ್ನು ತೇಜಸ್ಸಿನಿಂದಲೇ (ಕೋಪದಿಂದಲೇ) ಸಮೀಪಿಸುತ್ತಾನೆಯೋ ಅವನಿಗೆ ಲೋಕವು ಮನೆಯನ್ನು ಪ್ರವೇಶಿಸಿದ ಸರ್ಪಕ್ಕೆ ಹೆದರುವಂತೆ ಹೆದರುತ್ತದೆ. ಯಾವನಿಗೆ ಲೋಕವು ಹೆದರುತ್ತದೆಯೋ ಅವನಿಗೆ ಹೇಗೆ ಸುಖವು ಉಂಟಾದೀತು?
ಅಂತರಂ ಹ್ಯಸ್ಯ ದೃಷ್ಟ್ವೈವ ಲೋಕೇ ವಿಕುರುತೇ ಧ್ರುವಮ್ |
ತಸ್ಮಾನ್ನಾತ್ಯುತ್ಸೃಜೇತ್ತೇಜೋ ನ ಚ ನಿತ್ಯಂ ಮೃದುರ್ಭವೇತ್ ॥17॥
ಲೋಕವು ಒಂದು ಅವಕಾಶವನ್ನು ಕಾದುನೋಡಿ ಅವನಿಗೆ ಖಂಡಿತವಾಗಿ ಅಪಕಾರವನ್ನು ಮಾಡುತ್ತದೆ. ಆದ್ದರಿಂದ ಯಾವಾಗಲೂ ಕ್ರೋಧವನ್ನಾಗಲೀ ಅಥವಾ ಯಾವಾಗಲೂ ಮಾರ್ದವವನ್ನಾಗಲೀ ಹೊಂದಿರಬಾರದು.
ಕಾಲೇ ಮೃದುರ್ಯೋ ಭವತಿ ಕಾಲ ಏವ ಚ ದಾರುಣಃ |
ಸ ತು ವೈ ಸುಖಮಾಪ್ನೋತಿ ಲೋಕೇಽಸ್ಮಿಂಶ್ಚ ಪರತ್ರ ಚ ॥18॥
ಯಾವನು ಯೋಗ್ಯಕಾಲದಲ್ಲಿ ಮೃದುವಾಗುತ್ತಾನೆಯೋ ಮತ್ತು ಯೋಗ್ಯವಾದ ಕಾಲದಲ್ಲಿ ಭೀಷಣನಾಗುತ್ತಾನೆಯೋ ಅವನೇ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾನೆ.
ಕ್ಷಮಾಕಾಲಾಂಸ್ತು ವಕ್ಷ್ಯಾಮಿ ಶೃಣು ಮೇ ವಿಸ್ತರೇಣ ವೈ |
ಏತೇ ನಿತ್ಯಮಸಂತ್ಯಾಜ್ಯಾ ಯಥಾ ಪ್ರಾಹುರ್ಮನೀಷಿಣಃ ॥19॥
ಕ್ಷಮೆಯ ಕಾಲಗಳನ್ನು ಹೇಳುತ್ತೇನೆ. ಅದನ್ನು ವಿಸ್ತಾರವಾಗಿ ನನ್ನಿಂದ ಕೇಳು. ಮೇಧಾವಿಗಳು ಹೇಳುವಂತೆ ಈ ಕಾಲಗಳನ್ನು (ಇಷ್ಟ

ಪುರುಷರನ್ನು) ಎಂದೂ ಪರಿತ್ಯಾಗಮಾಡತಕ್ಕದ್ದಲ್ಲ.
ಪೂರ್ವೋಪಕಾರೀ ಯಸ್ತೇ ಸ್ಯಾದ್ ಅಪರಾಧೇ ಗರೀಯಸಿ |
ಉಪಕಾರೇಣ ತತ್ತಸ್ಯ ಕ್ಷಂತವ್ಯಮಪರಾಧಿತಮ್ |
ದ್ವಿತೀಯೇ ಸತಿ ವಧ್ಯಸ್ತು ಸ್ವಲ್ಪೇಽಪ್ಯಪಕೃತೇ ಭವೇತ್ ॥20॥
ಯಾವನು ಹಿಂದೆ ಉಪಕಾರವನ್ನು ಮಾಡಿದ್ದಾನೆಯೋ ಅವನು ದೊಡ್ಡ ಅಪಕಾರವನ್ನು ಮಾಡಿದರೂ ಅವನು ಹಿಂದೆಮಾಡಿದ ಉಪಕಾರದ ನಿಮಿತ್ತದಿಂದ ಅವನ ಅಪರಾಧವನ್ನು ಕ್ಷಮಿಸಬೇಕು. ಅವನು ಎರಡನೆಯ ಬಾರಿಗೆ ಅಲ್ಪವಾದ ಅಪರಾಧವನ್ನು ಮಾಡಿದರೂ ವಧ್ಯನಾಗುತ್ತಾನೆ.
ಅಬುದ್ಧಿಮಾಶ್ರಿತಾನಾಂ ತು ಕ್ಷಂತವ್ಯಮಪರಾಧಿನಾಮ್ |
ನ ಹಿ ಸರ್ವತ್ರ ಪಾಂಡಿತ್ಯಂ ಸುಲಭಂ ಪುರುಷೈರಿಹ ॥21॥
ಯಾರಿಗೆ ಬುದ್ಧಿಯಿರುವುದಿಲ್ಲವೋ (ಬೆಳೆದಿರುವುದಿಲ್ಲವೊ) ಅಂತಹವರು ಮಾಡಿದ ಅಪಕಾರವನ್ನು ಕ್ಷಮಿಸಬೇಕು. ಲೋಕದಲ್ಲಿ ಪುರುಷರಿಗೆ ಎಲ್ಲ ವಿಷಯಗಳಲ್ಲಿ ಪಾಂಡಿತ್ಯವು ಸುಲಭವಲ್ಲ.
ಅಥ ಚೇದ್ ಬುದ್ಧಿಜಂ ಕೃತ್ವಾ ಬ್ರೂಯುಸ್ತೇ ತದಬುದ್ಧಿಜಮ್ |
ಪಾಪೇಽಪ್ಯಲ್ಪೇಽಪಿ ತಾನ್ ಹನ್ಯಾದಪರಾಧೇ ತತೋಽನೃಜೂನ್ ॥22॥
ಒಂದುಪಕ್ಷ ಬುದ್ಧಿಪೂರ್ವಕವಾಗಿ ಅಪರಾಧವನ್ನು ಮಾಡಿ ಅವರು ಅದನ್ನು ಅಬುದ್ಧಿಪೂರ್ವಕವಾಗಿ ಮಾಡಿದೆ ಎಂದು ಹೇಳಿದರೆ ಅವರು ಅಲ್ಪವಾದ ಅಪರಾಧವನ್ನು ಮಾಡಿದರೂ ಅಂತಹ ವಕ್ರಪುರುಷರನ್ನು ಕೊಲ್ಲಬೇಕು.
ಸರ್ವಸ್ಯೈಕೋಽಪರಾಧಸ್ತು ಕ್ಷಂತವ್ಯಮಪರಾಧಿನಃ |
ದ್ವಿತೀಯೇ ಸತಿ ವಧ್ಯಸ್ತು ಸ್ವಲ್ಪೇಽಪ್ಯಪಕೃತೇ ಭವೇತ್ ॥23॥
ಎಲ್ಲ ಅಪರಾಧಿಗಳಿಗೂ ಮೊದಲನೆಯ ಅಪರಾಧವನ್ನು ಕ್ಷಮಿಸಬೇಕು. ಎರಡನೆಯಬಾರಿಗೆ ಅಲ್ಪ ಅಪರಾಧವನ್ನು ಮಾಡಿದರೂ ಅವರು ವಧ್ಯರಾಗುತ್ತಾರೆ.
ಅಜಾನತಾ ಭವೇತ್ ಕಶ್ಚಿದಪರಾಧಃ ಕೃತೋ ಯದಿ |
ಕ್ಷಂತವ್ಯಮೇವ ತದ್ಯಾಹುಃ ಸುಪರೀಕ್ಷ್ಯ ಪರೀಕ್ಷಕಾಃ ॥24॥
ತಿಳಿಯದೆ ಯಾವನಾದರೂ ಅಪರಾಧವನ್ನು ಮಾಡಿದರೆ ಅದನ್ನು ಪರೀಕ್ಷಕರಿಂದ ಚೆನ್ನಾಗಿ ಪರೀಕ್ಷಿಸಿ ಕ್ಷಮಿಸಲೇ ಬೇಕು ಎಂದು ಜ್ಞಾನಿಗಳು ಹೇಳುತ್ತಾರೆ.
ಮೃದುನಾ ಮಾರ್ದವಂ ಹಂತಿ ಮೃದುನಾ ಹಂತಿ ದಾರುಣಮ್ |
ನಾಸಾದ್ಯಂ ಮೃದುನಾ ಕಿಂಚಿತ್ ತಸ್ಮಾತ್ ತೀಕ್ಷ್ಣತರಂ ಮೃದು ॥25॥
ಮಾರ್ದವವು ಮಾರ್ದವವನ್ನು ಕೊಲ್ಲುತ್ತದೆ. ಮಾರ್ದವವು ಕ್ರೌರ್ಯವನ್ನು ಕೊಲ್ಲುತ್ತದೆ. ಮಾರ್ದವಕ್ಕೆ ಅಸಾಧ್ಯವಾದುದು ಯಾವುದೂ ಇಲ್ಲ. ಆದ್ದರಿಂದ ಮಾರ್ದವವೇ ಹೆಚ್ಚು ಸಾಮರ್ಥ್ಯದಿಂದ ಕೂಡಿದುದು.
ದೇಶಕಾಲೌ ತು ಸಂಪ್ರೇಕ್ಷ್ಯ ಬಲಾಬಲಮಥಾತ್ಮನಃ |
ಅನ್ವೀಕ್ಷ್ಯ ಕಾರಣಂ ಚೈವ ಕಾರ್ಯಂ ತೇಜಃ ಕ್ಷಮಾಪಿ ವಾ ॥26॥
ದೇಶಕಾಲಗಳನ್ನು ಗಮನಿಸಿ ತನ್ನ ಬಲ ಮತ್ತು ದೌರ್ಬಲ್ಯಗಳನ್ನು ಗಮನಿಸಿ ಅಪರಾಧದ ಕಾರಣವನ್ನು ಗಮನಿಸಿ ಕೋಪವನ್ನಾಗಲೀ ಅಥವಾ ಕ್ಷಮೆಯನ್ನಾಗಲೀ ತೋರಿಸಬೇಕು.
ನಾದೇಶಕಾಲೇ ಕಿಂಚಿತ್ ಸ್ಯಾದ್ ದೇಶಕಾಲಃ ಪರೀಕ್ಷ್ಯತೇ |
ತಥಾ ಲೋಕಭಯಾಚ್ಚಾಪಿ ಕ್ಷಂತವ್ಯಮಪರಾಧಿತಮ್ ॥27॥
ದೇಶಕಾಲಗಳನ್ನು ಪರೀಕ್ಷಿಸಬೇಕು. ಅಯೋಗ್ಯವಾದ ದೇಶಕಾಲಗಳಲ್ಲಿ ಏನನ್ನೂ ಮಾಡಬಾರದು. ಅದರಂತೆ ಲೋಕ ಭಯದಿಂದಲಾದರೂ ಅಪರಾಧವನ್ನು ಕ್ಷಮಿಸಬೇಕು.
ಏತ ಏವಂವಿಧಾಃ ಕಾಲಾಃ ಕ್ಷಮಾಯಾಃ ಪರಿಕೀರ್ತಿತಾಃ |
ಅತೋಽನ್ಯಥಾ ಚೇದ್ ವಿದ್ವದ್ಭಿಃ ತೇಜಸಃ ಕಾಲ ಉಚ್ಯತೇ ॥28॥
ಇಂತಹ ಇಷ್ಟುಕಾಲಗಳು ಕ್ಷಮೆಯಕಾಲವೆಂದು ಹೇಳಲ್ಪಡುತ್ತವೆ. ಇದಕ್ಕಿಂತ ಭಿನ್ನವಾದರೆ ಮೇಧಾವಿಗಳು ಅದನ್ನು ಕೋಪದ ಕಾಲವೆಂದು ಹೇಳುತ್ತಾರೆ.
ದ್ರೌಪದೀ
ತದಹಂ ತೇಜಸಃ ಕಾಲಂ ತವ ಮನ್ಯೇ ನರಾಧಿಪ |
ಧಾರ್ತರಾಷ್ಟ್ರೇಷು ಲುಬ್ಧೇಷು ಸತತಂ ಚಾಪಕಾರಿಷು ॥29॥
ಎಲೈ ರಾಜನೇ! ಆದ್ದರಿಂದ ಸತತವಾಗಿ ಅಪಕಾರವನ್ನು ಮಾಡಿರುವ ಲೋಭಿಗಳಾದ ಧೃತರಾಷ್ಟ್ರಪುತ್ರರಲ್ಲಿ ಇದು ನಿನ್ನ ಕೋಪ ಮತ್ತು ಪರಾಕ್ರಮದ ಕಾಲವೆಂದು ಭಾವಿಸುತ್ತೇನೆ.
ನ ಹಿ ಕಶ್ಚಿತ್ ಕ್ಷಮಾಕಾಲೋ ವಿದ್ಯತೇಽದ್ಯ ಕುರೂನ್ ಪ್ರತಿ |
ತೇಜಸಶ್ಚಾಗತೇ ಕಾಲೇ ತೇಜ ಉತ್ಸ್ರಷ್ಟುಮರ್ಹಸಿ ॥30॥
ಕುರುಗಳ ವಿಷಯದಲ್ಲಿ ಈದಿನ ಯಾವ ಕ್ಷಮಾಕಾಲವೂ ಇರುವುದಿಲ್ಲ. ಕೋಪವನ್ನು ತೋರಿಸುವ ಕಾಲವು ಪ್ರಾಪ್ತವಾದಾಗ ನೀನು ಕೋಪವನ್ನೇ ತೋರಿಸಬೇಕು.
ಮೃದುರ್ಭವತ್ಯವಜ್ಞಾತಃ ತೀಕ್ಷ್ಣಾದುದ್ವಿಜತೇ ಜನಃ |
ಕಾಲೇ ಪ್ರಾಪ್ತೇ ದ್ವಯಂ ಹ್ಯೇತದ್ ಯೋ ವೇತ್ತಿ ಸ ಮಹೀಪತಿಃ ॥31॥

ಮೃದುವಾದ ಪುರುಷನು ಎಲ್ಲರಿಂದಲೂ ಅವಮಾನಗೊಳಿಸಲ್ಪಡುತ್ತಾನೆ. ಕ್ರೋಧಶೀಲನಾದ ಪುರುಷನಿಗೆ ಜನರು ಹೆದರುತ್ತಾರೆ. ಯಾವನು ಈ ಎರಡನ್ನು ತೋರಿಸುವ ಯೋಗ್ಯವಾದ ಕಾಲವನ್ನು ತಿಳಿಯುತ್ತಾನೆಯೋ ಅವನೇ ರಾಜನಾಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****
ಇಪ್ಪತ್ತಾರನೆಯ ಅಧ್ಯಾಯ
(ಯುಧಿಷ್ಠಿರನಿಂದ ದ್ರೌಪದಿಗೆ ಕ್ಷಮೆಯ ಉಪದೇಶ.)
ಯುಧಿಷ್ಠಿರಃ
ಕ್ರೋಧೋ ಹಂತಾ ಮನುಷ್ಯಾಣಾಂ ಕ್ರೋಧೋ ಭಾವಯಿತಾ ಪುನಃ |
ಇತಿ ವಿದ್ಧಿ ಮಹಾಪ್ರಾಜ್ಞೇ ಕ್ರೋಧಮೂಲೌ ಭವಾಭವೌ ॥1॥
ಮಹಾಪ್ರಾಜ್ಞಳೇ! ಕ್ರೋಧವು ಮನುಷ್ಯರನ್ನು ಕೊಲ್ಲುತ್ತದೆ. ಮತ್ತು ಕ್ರೋಧವೇ ಪುನಃ ಹುಟ್ಟುವಂತೆ ಮಾಡುತ್ತದೆ. ಆದ್ದರಿಂದ ಕ್ರೋಧವೇ ಜನ್ಮಮರಣಗಳಿಗೆ ಕಾರಣವೆಂದು ತಿಳಿ.
ಯೋ ಹಿ ಸಂಹರತೇ ಕ್ರೋಧಂ ಭಾವಸ್ತಸ್ಯ ಶುಭಾನನೇ |
ಯೋ ನ ಸಂಹರತೇ ಕ್ರೋಧಂ ತಸ್ಯಾಭಾವೋ ಭವತ್ಯುತ |
ಅಭಾವಕಾರಣಂ ತಸ್ಮಾತ್ ಕ್ರೋಧೋ ಭವತಿ ಶೋಭನೇ ॥2॥
ಶುಭಾನನೆಯೇ! ಯಾವನು ಕ್ರೋಧವನ್ನು ನಾಶಮಾಡಿಕೊಳ್ಳುತ್ತಾನೆಯೋ ಅವನಿಗೆ ಕ್ಷೇಮವುಂಟಾಗುತ್ತದೆ. ಯಾವನು ಕ್ರೋಧವನ್ನು ನಾಶಮಾಡಿಕೊಳ್ಳುವುದಿಲ್ಲವೋ ಅವನಿಗೆ ವಿನಾಶವು ಉಂಟಾಗುತ್ತದೆ. ಶೋಭನೆಯೇ, ಆದ್ದರಿಂದ ಕ್ರೋಧವು ವಿನಾಶಕ್ಕೆ ಕಾರಣವಾಗುತ್ತದೆ.
ಯಃ ಪುನಃ ಪುರುಷಃ ಕ್ರೋಧಂ ನಿತ್ಯಂ ವಿಸೃಜತೇ ಶುಭೇ |
ತಸ್ಯಾಭಾವಾಯ ಭವತಿ ಕ್ರೋಧಃ ಪರಮದಾರುಣಃ ॥3॥
ಶುಭಳಾದವಳೇ! ಯಾವ ಪುರುಷನು ನಿತ್ಯವೂ ಕ್ರೋಧವನ್ನೇ ಸೃಷ್ಟಿಸುತ್ತಾನೆಯೋ ಅವನಿಗೆ ಪರಮದಾರುಣವಾದ ಆಕ್ರೋಶವು ಅವನ ನಾಶವನ್ನು ಉಂಟುಮಾಡುತ್ತದೆ.
ಕ್ರೋಧಮೂಲೋ ವಿನಾಶೋ ಹಿ ಪ್ರಜಾನಾಮಿಹ ದೃಶ್ಯತೇ |
ತತ್ ಕಥಂ ಮಾದೃಶಃ ಕ್ರೋಧಮುತ್ಸೃಜೇಲ್ಲೋಕನಾಶನಮ್ ॥4॥
ಈ ಲೋಕದಲ್ಲಿ ಪ್ರಜೆಗಳ ವಿನಾಶಕ್ಕೆ ಕ್ರೋಧವೇ ಕಾರಣವೆಂದು ತಿಳಿಯುತ್ತದೆ. ಹೀಗಿರುವಾಗ ಲೋಕನಾಶಕವಾದ ಕ್ರೋಧವನ್ನು ನನ್ನಂತಹವನು ಹೇಗೆ ಪ್ರದರ್ಶಿಸಲು ಸಾಧ್ಯ?
ಕ್ರುದ್ಧಃ ಪಾಪಂ ನರಃ ಕುರ್ಯಾತ್ ಕ್ರುದ್ಧೋ ಹನ್ಯಾತ್ ಗುರೂನಪಿ |
ಕ್ರುದ್ಧಃ ಪರುಷಯಾ ವಾಚಾ ಶ್ರೇಯಸೋಽಪ್ಯವಮನ್ಯತೇ ॥5॥
ಕೋಪಗೊಂಡ ಮನುಷ್ಯನು ಪಾಪವನ್ನು ಮಾಡುತ್ತಾನೆ. ಗುರುಗಳನ್ನೂ ಕೊಲ್ಲುತ್ತಾನೆ. ಕ್ರೂರವಾದ ಮಾತುಗಳಿಂದ ತನಗಿಂತ ಶ್ರೇಷ್ಠರಾದವರನ್ನು ಅವಮಾನಮಾಡುತ್ತಾನೆ.
ವಾಚ್ಯಾವಾಚ್ಯೇ ಹಿ ಕುಪಿತೋ ನ ಪ್ರಜಾನಾತಿ ಕರ್ಹಿಚಿತ್ |
ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇ ತಥಾ ॥6॥
ಕೋಪಗೊಂಡವನು ಯಾವ ಮಾತನ್ನು ಆಡಬೇಕು ಯಾವ ಮಾತನ್ನು ಆಡಬಾರದು ಎಂದು ತಿಳಿಯುವುದಿಲ್ಲ. ಕೋಪಗೊಂಡವನು ಮಾಡಲಾರದ ಕಾರ್ಯವಿಲ್ಲ. ಹಾಗೆಯೇ ಅವನು ಆಡಲಾರದ ಮಾತೂ ಇಲ್ಲ.
ಹಿಂಸ್ಯಾತ್ ಕ್ರೋಧಾದವಧ್ಯಾಂಸ್ತು ವಧ್ಯಾನ್ ಸಂಪೂಜಯೇದಪಿ |
ಆತ್ಮಾನಮಪಿ ವಾ ಕ್ರುದ್ಧಃ ಪ್ರೇಷಯೇದ್ ಯಮಸಾದನಮ್ ॥7॥
ಕ್ರೋಧವಶನಾದ ಮನುಷ್ಯನು ಅವಧ್ಯರಾದವರನ್ನು ಕೊಲ್ಲುತ್ತಾನೆ. ವಧ್ಯರಾದವರನ್ನು ಸತ್ಕರಿಸುತ್ತಾನೆ. ಕೋಪಕ್ಕೆ ಒಳಗಾಗಿ ತನ್ನನ್ನೂ ಯಮಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ.
ಏತಾನ್ ದೋಷಾನ್ ಪ್ರಪಶ್ಯದ್ಭಿರ್ಜಿತಃ ಕ್ರೋಧೋ ಮನೀಷಿಭಿಃ |
ಇಚ್ಛದ್ಭಿಃ ಪರಮಂ ಶ್ರೇಯ ಇಹ ವಾಽಮುತ್ರ ಚೋತ್ತಮಮ್ ॥8॥
ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಉತ್ತಮ ಶ್ರೇಯಸ್ಸನ್ನು ಬಯಸುವ ಮೇಧಾವಿಗಳು ಈ ದೋಷಗಳನ್ನು ನೋಡಿ ಕ್ರೋಧವನ್ನು ಜಯಿಸಿದ್ದಾರೆ.
ತಂ ಕ್ರೋಧಂ ನಿರ್ಜಿತಂ ಧೀರೈಃ ಕಥಮಸ್ಮದ್ವಿಧಶ್ಚರೇತ್ |
ಏತದ್ ದ್ರೌಪದಿ ಸಂಸ್ಮೃತ್ಯ ನ ಮೇ ಮನ್ಯುಃ ಪ್ರವರ್ಧತೇ ॥9॥
ಧೀರರು ಜಯಿಸಿದ ಆ ಕ್ರೋಧವನ್ನು ನನ್ನಂತಹವನು ಹೇಗೆ ಆಚರಿಸಬೇಕು? ದ್ರೌಪದಿಯೇ, ಇದನ್ನು ಸ್ಮರಿಸುವ ನನಗೆ ಕೋಪವು ಉಂಟಾಗುವುದಿಲ್ಲ.
ಆತ್ಮಾನಂ ಚ ಪರಂ ಚೈವ ತ್ರಾಯತೇ ಮಹತೋ ಭಯಾತ್ |
ಕ್ರುಧ್ಯಂತಮಪ್ರತಿಕ್ರುಧ್ಯನ್ ದ್ವಯೋರೇವ ಚಿಕಿತ್ಸಕಃ ॥10॥
ಶಾಂತಿಯು ತನ್ನನ್ನು ಮತ್ತು ಪರರನ್ನು ದೊಡ್ಡ ಭಯದಿಂದ ಪಾರುಮಾಡುತ್ತದೆ. ಕೋಪಗೊಂಡವನಿಗೆ ಪ್ರತಿಯಾಗಿ

ಕೋಪಗೊಳ್ಳದಿದ್ದರೆ ಅವನ ಶಾಂತಿಯು ಇಬ್ಬರಿಗೂ ಕ್ರೋಧರೂಪವಾದ ರೋಗಪರಿಹಾರಕವಾಗುತ್ತದೆ.
ಮೂಢೋ ಯದಿ ಕ್ಲಿಶ್ಯಮಾನಃ ಕ್ರುಧ್ಯತೇಽಶಕ್ತಿಮಾನ್ ನರಃ |
ಬಲೀಯಸಾಂ ಮನುಷ್ಯಾಣಾಂ ತ್ಯಜತ್ಯಾತ್ಮಾನಮಂತತಃ ॥11॥
ಮೂಢನೂ ಮತ್ತು ಅಶಕ್ತನೂ ಆದ ಪುರುಷನು ಕ್ಲೇಶಕ್ಕೆ ಒಳಗಾಗಿ ತನಗಿಂತ ಪ್ರಬಲರ ಮೇಲೆ ಕೋಪಮಾಡಿದರೆ ಅವನು ಕೊನೆಗೆ ತನ್ನನ್ನೇ ತನಗಿಂತ ಪ್ರಬಲರಾದ ಶತ್ರುಜನಗಳಿಗೆ ಒಪ್ಪಿಸಿಕೊಳ್ಳುತ್ತಾನೆ.
ತಸ್ಯಾತ್ಮಾನಂ ಪರಿತ್ಯಜ್ಯ ಲೋಕಾ ನಶ್ಯಂತ್ಯನಾತ್ಮನಃ |
ತಸ್ಮಾದ್ ದ್ರೌಪದ್ಯಶಕ್ತಸ್ಯ ಮನ್ಯೋರ್ನಿಯಮನಂ ಸ್ಮೃತಮ್ ॥12॥
ಹೀಗೆ ಮನೋಜಯರಹಿತನಾಗಿ ತನ್ನನ್ನೇ ತಾನು ಪರಿತ್ಯಾಗಮಾಡುವವನಿಗೆ ಉತ್ತಮಲೋಕಗಳು ನಾಶಹೊಂದುತ್ತವೆ. ಆದ್ದರಿಂದ ದ್ರೌಪದಿಯೇ, ಅಶಕ್ತನಾದವನು ಕೋಪವನ್ನು ನಿಯಂತ್ರಿಸಿಕೊಳ್ಳಬೇಕು ಎಂದು ಹೇಳಲಾಗುತ್ತದೆ.
ವಿದ್ವಾಂಸ್ತಥೈವ ಯಃ ಶಕ್ತಃ ಕ್ಲಿಶ್ಯಮಾನಃ ಪ್ರಕುಪ್ಯತಿ |
ಸ ನಾಶಯಿತ್ವಾ ದ್ವೇಷ್ಟಾರಂ ಪರಲೋಕೇ ನ ನಂದತಿ ॥13॥
ಹಾಗೆಯೇ ಜ್ಞಾನಿಯಾದವನು ಮತ್ತು ಶಕ್ತನಾದವನು ತನ್ನ ಕ್ಲೇಶವನ್ನು ಉಂಟುಮಾಡಿದವನ ಮೇಲೆ ಕೋಪಗೊಂಡರೆ ಅವನು ತನ್ನನ್ನು ದ್ವೇಷಿಸುವ ಆ ವ್ಯಕ್ತಿಯನ್ನು ನಾಶಮಾಡಿ ಪರಲೋಕದಲ್ಲಿ ಸುಖಪಡುವುದಿಲ್ಲ.
ತಸ್ಮಾದ್ ಬಲವತಾ ಚೈವ ದುರ್ಬಲೇನ ಚ ನಿತ್ಯದಾ |
ಕ್ಷಂತವ್ಯಂ ಪುರುಷೇಣಾಹುರಾಪತ್ಸ್ವಪಿ ವಿಜಾನತಾ ॥14॥
ಆದ್ದರಿಂದ ಬಲಿಷ್ಠನಾಗಲೀ ಅಥವಾ ದುರ್ಬಲನಾಗಲೀ ವಿವೇಕವುಳ್ಳ ಪುರುಷನು ಇನ್ನೊಬ್ಬರಿಂದ ಆಪತ್ತುವುಂಟಾದರೂ ಅವರನ್ನು ಯಾವಾಗಲೂ ಕ್ಷಮಿಸಬೇಕು ಎಂದು ಹೇಳುತ್ತಾರೆ.
ಮನ್ಯೋರ್ಹಿ ವಿಜಯಂ ಕೃಷ್ಣೇ ಪ್ರಶಂಸಂತೀಹ ಸಾಧವಃ |
ಕ್ಷಮಾವತೋ ಜಯೋ ನಿತ್ಯಂ ಸಾಧೋರಿಹ ಸತಾಂ ಮತಮ್ |
ಸತ್ಯಂ ಚಾನೃತತಃ ಶ್ರೇಯೋ ನೃಶಂಸಾಚ್ಚಾನೃಶಂಸತಾ ॥15॥
ದ್ರೌಪದಿಯೇ! ಕೋಪವನ್ನು ಜಯಿಸುವುದನ್ನು ಸಜ್ಜನರು ಹೊಗಳುತ್ತಾರೆ. ಕ್ಷಮೆಯನ್ನು ಹೊಂದಿದ ಸಾಧುವಿಗೆ ಈ ಲೋಕದಲ್ಲಿ ಜಯವುಂಟಾಗುತ್ತದೆ ಎಂಬುದು ಸಜ್ಜನರ ಮತ. ಸತ್ಯವು ಅನೃತಕ್ಕಿಂತ ಶ್ರೇಷ್ಠವಾದುದು. ಮಾರ್ದವವು ಕ್ರೌರ್ಯಕ್ಕಿಂತ ಶ್ರೇಷ್ಠವಾದುದು.
ತಮೇವ ಬಹುದೋಷಂ ತು ಕ್ರೋಧಂ ಸದ್ಭಿರ್ವಿವರ್ಜಿತಮ್ |
ಮಾದೃಶೋ ನ ಸೃಜೇತ್ ತಸ್ಮಾತ್ ಸುಯೋಧನಭಯಾದಪಿ ॥16॥
ಅಂತಹ ಸಜ್ಜನರು ವರ್ಜಿಸಿದ ಈ ಬಹುದೋಷವುಳ್ಳ ಕ್ರೋಧವನ್ನು ಸುಯೋಧನನ ಭಯದಿಂದಲಾದರೂ ಕೂಡ ನನ್ನಂತಹವನು ಹೊಂದಬಾರದು.
ತೇಜಸ್ವೀತಿ ಯಮಾಹುರ್ಹಿ ಪಂಡಿತಾ ದೀರ್ಘದರ್ಶಿನಃ |
ನ ಕ್ರೋಧೋಽಭ್ಯಂತರಸ್ತತ್ರ ಭವತೀತಿ ವಿನಿಶ್ಚಿತಮ್ ॥17॥
ದೀರ್ಘದರ್ಶಿಗಳಾದ ಪಂಡಿತರು ಯಾವನನ್ನು ತೇಜಸ್ವಿ ಎಂದು ಹೇಳುತ್ತಾರೋ ಅವನ ಮನಸ್ಸಿನಲ್ಲಿ ಕ್ರೋಧವಿರುವುದಿಲ್ಲವೆಂಬುದು ನಿಶ್ಚಿತವಾದುದು.
ಯಸ್ತು ಕ್ರೋಧಂ ಸಮುತ್ಪನ್ನಂ ಪ್ರಜ್ಞಯಾ ಪರಿಬಾಧತೇ |
ತೇಜಸ್ವಿನಂ ತಂ ವಿದುಷೋ ಮನ್ಯಂತೇ ತತ್ತ್ವದರ್ಶಿನಃ ॥18॥
ಯಾವ ಮನುಷ್ಯನು ಉತ್ಪನ್ನವಾದ ಕ್ರೋಧವನ್ನು ತನ್ನ ಜ್ಞಾನದಿಂದ ನಾಶಪಡಿಸುತ್ತಾನೋ ಅವನನ್ನು ತತ್ವದರ್ಶಿಗಳಾದ ವಿದ್ವಾಂಸರು ತೇಜಸ್ವಿ ಎಂದು ತಿಳಿಯುತ್ತಾರೆ.
ಕ್ರುದ್ಧೋ ಹಿ ಕಾರ್ಯಂ ಸುಶ್ರೋಣಿ ನ ಯಥಾವತ್ ಪ್ರಪಶ್ಯತಿ |
ನ ಕಾರ್ಯಂ ನ ಚ ಮರ್ಯಾದಾಂ ನರಃ ಕ್ರುದ್ಧೋಽನುಪಶ್ಯತಿ ॥19॥
ಎಲೌ ಸುಶ್ರೋಣಿಯೇ! ಕ್ರುದ್ಧನಾದವನು ಮಾಡಬೇಕಾದ ಕಾರ್ಯವನ್ನು ಚೆನ್ನಾಗಿ ತಿಳಿಯುವುದಿಲ್ಲ. ಕ್ರುದ್ಧನಾದ ನರನು ಕಾರ್ಯವನ್ನಾಗಲೀ ಮರ್ಯಾದೆಯನ್ನಾಗಲೀ ಅನುಗುಣವಾಗಿ ನೋಡುವುದಿಲ್ಲ.
ಹಂತ್ಯವಧ್ಯಾನಪಿ ಕ್ರುದ್ಧೋ ಗುರೂನ್ ರೂಕ್ಷೈಸ್ತುದತ್ಯಪಿ |
ತಸ್ಮಾತ್ ತೇಜಸಿ ಕರ್ತವ್ಯೇ ಕ್ರೋಧೋ ದೂರಾತ್ ಪ್ರತಿಷ್ಠಿತಃ ॥20॥
ಕ್ರುದ್ಧನಾದವನು ಅವಧ್ಯರನ್ನೂ ಕೊಲ್ಲುತ್ತಾನೆ. ಗುರುಗಳನ್ನು ಕ್ರೂರವಾದ ಮಾತುಗಳಿಂದ ಚುಚ್ಚುತ್ತಾನೆ. ಆದ್ದರಿಂದ ಶ್ರೇಯಸ್ಸನ್ನು ಸಂಪಾದನೆ ಮಾಡಬೇಕಾದರೆ ಕ್ರೋಧವನ್ನು ದೂರದಲ್ಲಿಟ್ಟಿರಬೇಕು.
ದಾಕ್ಷಿಣ್ಯಂ ಶೀಲಶೌರ್ಯೇ ಚ ಶೀಘ್ರತ್ವಮತಿತೇಜಸಃ |
ಗುಣಾಃ ಕ್ರೋಧಾಭಿಭೂತೇನ ನ ಶಕ್ಯಾಃ ಪ್ರಾಪ್ತುಮಂಜಸಾ |
ಕ್ರೋಧಂ ತ್ಯಕತ್ವಾ ತು ಪುರುಷಃ ಸಮ್ಯಕ್ತೇಜೋಽಭಿಪದ್ಯತೇ ॥22॥
ಕೋಪಿಷ್ಠನಾದ ಮನುಷ್ಯನು ಕ್ರೋಧಕ್ಕೆ ವಶನಾಗಿ ಮಾರ್ದವವನ್ನಾಗಲೀ ಶೀಲಶೌರ್ಯಗಳನ್ನಾಗಲೀ ಶೀಘ್ರತ್ವವನ್ನಾಗಲೀ ಚೆನ್ನಾಗಿ ಸಂಪಾದಿಸಲು ಸಾಧ್ಯವಿಲ್ಲ. ಕ್ರೋಧವನ್ನು ತ್ಯಜಿಸಿದ ಪುರುಷನು ಒಳ್ಳೆಯ ತೇಜಸ್ಸನ್ನು ಹೊಂದುತ್ತಾನೆ.
ಕಾಲಯುಕ್ತಂ ಮಹಾಪ್ರಾಜ್ಞೇ ಕ್ರುದ್ಧೈಸ್ತೇಜಃ ಸುದುರ್ಲಭಮ್ |
ಕ್ರೋಧಸ್ತ್ವಪಂಡಿತೈಃ ಶಶ್ವತ್ ತೇಜ ಇತ್ಯಭಿಧೀಯತೇ ॥23॥

ಮಹಾಪ್ರಾಜ್ಞೆಯೇ! ಕ್ರುದ್ಧರಾದವರು ಯೋಗ್ಯವಾದ ಕಾಲದಲ್ಲಿ ಹೊಂದಬೇಕಾದ ತೇಜಸ್ಸನ್ನು ಎಂದೂ ಹೊಂದುವುದಿಲ್ಲ. ಅಪಂಡಿತರಾದವರು ಯಾವಾಗಲೂ ಕ್ರೋಧವನ್ನೇ ತೇಜಸ್ಸೆಂದು ಕರೆಯುತ್ತಾರೆ.
ರಜಸ್ತತ್ ಲೋಕನಾಶಾಯ ವಿಹಿತಂ ಮಾನುಷಾನ್ ಪ್ರತಿ |
ತಸ್ಮಾಚ್ಛಶ್ವತ್ ತ್ಯಜೇತ್ ಕ್ರೋಧಂ ಪುರುಷಃ ಸಮ್ಯಗಾಚರನ್ ॥24॥
ಕ್ರೋಧವು ರಜೋಗುಣ. ಲೋಕನಾಶಕ್ಕೋಸ್ಕರ ಅದು ಮನುಷ್ಯರಲ್ಲಿ ಸೃಷ್ಟಿಸಲ್ಪಟ್ಟಿದೆ. ಆದ್ದರಿಂದ ಒಳ್ಳೆಯ ಆಚರಣೆಯುಳ್ಳ ಪುರುಷನು ಯಾವಾಗಲೂ ಕ್ರೋಧವನ್ನು ಪರಿತ್ಯಜಿಸಬೇಕು.
ಶ್ರೇಯಾನ್ ಸ್ವಧರ್ಮಾನುವಶೋ ನ ಕ್ರುದ್ಧ ಇತಿ ನಿಶ್ಚಿತಮ್ |
ಯದಿ ಸರ್ವಮಬುದ್ಧಾನಾಮತಿಕ್ರಾಂತಮಮೇಧಸಾಮ್ ॥25॥
ತನ್ನ ಧರ್ಮವನ್ನು ಅನುಸರಿಸುವವನು ಶ್ರೇಷ್ಠನಾದವನು. ಕ್ರುದ್ಧನಾದವನು ಶ್ರೇಷ್ಠನಲ್ಲ ಎಂದು ನಿಶ್ಚಿತವಾಗಿದೆ. ಮೂಢರಿಗೂ ಪ್ರಜ್ಞಾಹೀನರಿಗೂ ಧರ್ಮದ ಅತಿಕ್ರಮಣವಿದ್ದರೂ ಎಲೈ ಅನಿಂದಿತೆಯೇ! ನನ್ನಂತಹವನು ಹೇಗೆ ಅಂತಹ ಅತಿಕ್ರಮಣವನ್ನು ಮಾಡಲು ಸಾಧ್ಯ?
ಅತಿಕ್ರಮೋ ಮದ್ವಿಧಸ್ಯ ಕಥಂ ಸ್ವಿತ್ ಸ್ಯಾದನಿಂದಿತೇ |
ಯದಿ ನ ಸ್ಯುರ್ಮನುಷ್ಯೇಷು ಕ್ಷಮಿಣಃ ಪೃಥಿವೀಸಮಾಃ |
ನ ಸ್ಯಾತ್ ಸಂಧಿರ್ಮನುಷ್ಯಾಣಾಂ ಕ್ರೋಧಮೂಲೋ ಹಿ ವಿಗ್ರಹಃ ॥
ಮನುಷ್ಯರಲ್ಲಿ ಪೃಥ್ವಿಗೆ ಸಮಾನವಾದ ಕ್ಷಮೆಯನ್ನು ಹೊಂದಿದವರು ಇಲ್ಲದಿದ್ದರೆ ಮನುಷ್ಯರಲ್ಲಿ ಸಂಧಿಯೇ ಆಗುತ್ತಿರಲಿಲ್ಲ. ಎಲ್ಲ ಕಲಹಗಳೂ ಕ್ರೋಧಮೂಲವಾದವುಗಳು.
ಅಭಿಷಕ್ತೋ ಹ್ಯಭಿಷಜೇದ್ ಆಹನ್ಯಾದ್ಗುರುಣಾಽಽಹತಃ |
ಏವಂ ವಿನಾಶೋ ಭೂತಾನಾಮಧರ್ಮಪ್ರಭವೋ ಭವೇತ್ ॥27॥
ವನಿತಾದಿಗಳಲ್ಲಿ ಆಸಕ್ತನಾದವನು ಯಾವಾಗಲೂ ಅಲ್ಲಿಯೇ ಆಸಕ್ತನಾಗಿರುತ್ತಾನೆ. ಹಿರಿಯರಿಂದ ಹೊಡೆಯಲ್ಪಟ್ಟವನು ಅವರಿಗೆ ತಿರುಗಿಸಿ ಹೊಡೆಯುತ್ತಾನೆ. ಹೀಗೆ ಅಧರ್ಮದಿಂದ ಜೀವರಿಗೆ ವಿನಾಶವುಂಟಾಗುತ್ತದೆ.
ಆಕ್ರುಷ್ಟಃ ಪುರುಷಃ ಸರ್ವಾನ್ ಪ್ರತ್ಯಾಕ್ರೋಶೇದನಂತರಮ್ |
ಪ್ರತಿಹನ್ಯಾದ್ಧತಶ್ಚೈವ ತಥಾ ಹಿಂಸ್ಯಾಚ್ಚ ಹಿಂಸಿತಃ ॥28॥
ಇನ್ನೊಬ್ಬ ಪುರುಷನು ತನ್ನ ಮೇಲೆ ಆಕ್ರೋಶವನ್ನು ಮಾಡಿದರೆ ಅನಂತರ ಈ ಪುರುಷನು ಅವನ ಮೇಲೆ ಆಕ್ರೋಶವನ್ನು ಮಾಡುತ್ತಾನೆ. ಅವನು ಹೊಡೆದರೆ ಇವನೂ ಹೊಡೆಯುತ್ತಾನೆ. ಅವನು ಹಿಂಸೆಮಾಡಿದರೆ ಇವನೂ ಹಿಂಸೆಯನ್ನು ಮಾಡುತ್ತಾನೆ.
ಹನ್ಯುಶ್ಚ ಪಿತರಃ ಪುತ್ರಾನ್ ಪುತ್ರಾಶ್ಚಾಪಿ ತಥಾ ಪಿತೄನ್ |
ಹನ್ಯುಶ್ಚ ಪತಯೋ ಭಾರ್ಯಾಃ ಪತೀನ್ ಭಾರ್ಯಾಸ್ತಥೈವ ಚ ॥29॥
ತಂದೆಗಳು ಮಕ್ಕಳನ್ನು ಕೊಲ್ಲುತ್ತಾರೆ ಹಾಗೆಯೇ ಮಕ್ಕಳು ತಂದೆಯನ್ನು ಕೊಲ್ಲುತ್ತಾರೆ. ಹೆಂಡತಿಯರು ಪತಿಯನ್ನು ಕೊಲ್ಲುತ್ತಾರೆ ಪತಿಗಳು ಹೆಂಡತಿಯನ್ನು ಕೊಲ್ಲುತ್ತಾರೆ.
ಏವಂ ಸಂಕುಪಿತೇ ಲೋಕೇ ಶರ್ಮ ಕೃಷ್ಣೇ ನ ವಿದ್ಯತೇ |
ಪ್ರಜಾನಾಂ ವೃದ್ಧಿಮೂಲಂ ಹಿ ಜನ್ಮಸಿದ್ಧಿಃ ಶುಭಾನನೇ ॥30॥
ಎಲೌ ಕೃಷ್ಣೆಯೇ! ಹೀಗೆ ಕೋಪಗೊಂಡ ಲೋಕದಲ್ಲಿ ಎಲ್ಲಿಯೂ ಸುಖವಿರುವುದಿಲ್ಲ. ಶುಭಾನನೆಯೇ! ಕರ್ಮಭೂಮಿಯಲ್ಲಿ ಉತ್ತಮಜನ್ಮಪ್ರಾಪ್ತಿಯು ಪ್ರಜೆಗಳ ಅಭಿವೃದ್ಧಿಗೆ ಕಾರಣವಷ್ಟೇ?
ತಾಃ ಕ್ಷೀಯೇರನ್ ಪ್ರಜಾಸ್ಸರ್ವಾಃ ಕ್ಷಿಪ್ರಂ ದ್ರೌಪದಿ ತಾದೃಶಾಃ |
ತಸ್ಮಾನ್ಮನ್ಯುರ್ವಿನಾಶಾಯ ಪ್ರಜಾನಾಮಭವಾಯ ಚ ॥31॥
ಆದರೆ ದ್ರೌಪದಿಯೇ! ಅಂತಹ ಸಿಟ್ಟಿಗೆ ಒಳಗಾದ ಪ್ರಜೆಗಳೆಲ್ಲರೂ ನಾಶವನ್ನೇ ಹೊಂದುತ್ತಾರೆ. ಆದ್ದರಿಂದ ಕೋಪವು ವಿನಾಶಕ್ಕೂ ಮತ್ತು ಉತ್ತಮ ಜನ್ಮದ ಪ್ರಾಪ್ತಿಯ ಅಭಾವಕ್ಕೂ ಕಾರಣವಾಗುತ್ತದೆ.
ತಸ್ಮಾತ್ ತು ಲೋಕೇ ದೃಶ್ಯಂತೇ ಕ್ಷಮಿಣಃ ಪೃಥಿವೀಸಮಾಃ |
ತಸ್ಮಾಜ್ಜನ್ಮ ಚ ಭೂತಾನಾಂ ಭವಾಯ ಪ್ರತಿಪದ್ಯತೇ ॥32॥
ಆ ಕಾರಣದಿಂದಲೇ ಲೋಕದಲ್ಲಿ ಪೃಥಿವಿಗೆ ಸಮಾನವಾದ ಕ್ಷಮೆಯುಳ್ಳ ಪುರುಷರು ಕಂಡುಬರುತ್ತಾರೆ. ಹಾಗೆಯೇ ಜೀವರು ಸತ್ಕುಲದಲ್ಲಿ ಜನ್ಮವನ್ನು ಹೊಂದಿ ವೈಭವಾದಿ ಸಂಪತ್ತನ್ನು ಪಡೆಯುತ್ತಾರೆ.
ಕ್ಷಂತವ್ಯಂ ಪುರುಷೇಣಾಹುಃ ಸರ್ವಾಸ್ವಾಪತ್ಸು ಶೋಭನೇ |
ಕ್ಷಮಾಭಾವೋ ಹಿ ಭೂತಾನಾಂ ಜನ್ಮ ಚೈವ ಪ್ರಕೀರ್ತಿತಮ್ ॥33॥
ಶೋಭನೆಯೆ, ಎಲ್ಲ ಆಪತ್ತುಗಳಲ್ಲಿಯೂ ಪುರುಷನು ಕ್ಷಮೆಯನ್ನೇ ಹೊಂದಬೇಕೆಂದು ಹೇಳುತ್ತಾರೆ. ಕ್ಷಮೆಯನ್ನು ಹೊಂದಿರುವುದೇ ಜೀವರಿಗೆ ಜನ್ಮ ಎಂದು ಹೇಳಲ್ಪಡುತ್ತದೆ.
ಆಕ್ರುಷ್ಟಸ್ತಾಡಿತಃ ಕ್ಷಿಪ್ತಃ ಸಹತೇ ಯೋ ಬಲೀಯಸಾ |
ಯಶ್ಚ ನಿತ್ಯಂ ಜಿತಕ್ರೋಧೋ ವಿದ್ವಾನುತ್ತಮಪೂರುಷಃ ॥34॥
ಪ್ರತಾಪವಾನಪಿ ನರಸ್ತಸ್ಯ ಲೋಕಾಃ ಸನಾತನಾಃ |
ಕ್ರೋಧನಸ್ತ್ವಲ್ಪವಿಜ್ಞಾನಃ ಪ್ರೇತ್ಯ ಚೇಹ ಚ ನಶ್ಯತಿ ॥35॥
ಪ್ರಬಲನಾದ ಪುರುಷನಿಂದ ಆಕ್ರೋಶಕ್ಕೆ ಒಳಗಾದರೆ ಹೊಡೆಯಲ್ಪಟ್ಟರೆ ಬೈಯಲ್ಪಟ್ಟರೆ ಯಾವ ಉತ್ತಮಪುರುಷನಾದ ವಿದ್ವಾಂಸನು ಯಾವಾಗಲೂ ಕ್ರೋಧವನ್ನು ಜಯಿಸಿ ಅದನ್ನು ಸಹಿಸುತ್ತಾನೆಯೋ ಪ್ರಬಲನಾದ ಮನುಷ್ಯನಿಂದ ಹೆಚ್ಚು ತಾಪವುಂಟಾದರೂ

ಅದನ್ನು ಸಹಿಸುತ್ತಾನೆಯೋ ಅವನಿಗೆ ಸನಾತನವಾದ ಲೋಕಗಳು ಉಂಟಾಗುತ್ತವೆ. ಕ್ರೋಧಶೀಲನಾದ ಮನುಷ್ಯನು ಅಲ್ಪಜ್ಞಾನವುಳ್ಳವನು ಅವನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ನಾಶವನ್ನು ಹೊಂದುತ್ತಾನೆ.
ಅತ್ರಾಪ್ಯುದಾಹರಂತೀಮಾ ಗಾಥಾ ನಿತ್ಯಂ ಕ್ಷಮಾವತಾಮ್ |
ಗೀತಾಃ ಕ್ಷಮಾವತಾ ಕೃಷ್ಣೇ ಕಾಶ್ಯಪೇನ ಮಹಾತ್ಮನಾ ||36||
ಕೃಷ್ಣೆಯೇ! ಈ ವಿಷಯದಲ್ಲಿ ಎಂದರೆ ಕ್ಷಮೆಯುಳ್ಳವರ ವಿಷಯದಲ್ಲಿ ಮಹಾತ್ಮರಾದ ಕ್ಷಮಾಶೀಲರಾದ ಕಶ್ಯಪರು ಹಾಡಿದ ಗೀತೆಗಳನ್ನು ಜ್ಞಾನಿಗಳು ಹೇಳುತ್ತಾರೆ.
ಕ್ಷಮಾ ಧರ್ಮಃ ಕ್ಷಮಾ ಯಜ್ಞಃ ಕ್ಷಮಾ ವೇದಾಃ ಕ್ಷಮಾ ಶ್ರುತಮ್ |
ಯಸ್ತಮೇವಂ ವಿಜಾನಾತಿ ಸ ಸರ್ವಂ ಕ್ಷಂತುಮರ್ಹತಿ ||37||
ಕ್ಷಮೆಯೇ ಧರ್ಮ. ಕ್ಷಮೆಯೇ ಯಜ್ಞ. ಕ್ಷಮೆಯೇ ವೇದಗಳು. ಕ್ಷಮೆಯೇ ವಿದ್ಯೆ. ಯಾವನು ಹೀಗೆ ತಿಳಿಯುತ್ತಾನೆಯೋ ಅವನು ಎಲ್ಲವನ್ನು ಕ್ಷಮಿಸುತ್ತಾನೆ.
ಕ್ಷಮಾ ಬ್ರಹ್ಮ ಕ್ಷಮಾ ಸತ್ಯಂ ಕ್ಷಮಾ ಭೂತಂ ಚ ಭಾವಿ ಚ |
ಕ್ಷಮಾ ತಪಃ ಕ್ಷಮಾ ಶೌಚಂ ಕ್ಷಮಯಾ ಚೋದ್ಧೃತಂ ಜಗತ್ ||38||
ಕ್ಷಮೆಯೇ ಬ್ರಹ್ಮ. ಕ್ಷಮೆಯೇ ಸತ್ಯ. ಕ್ಷಮೆಯೇ ಭೂತ ಮತ್ತು ಭವಿಷ್ಯತ್‌ಗಳು. ಕ್ಷಮೆಯೇ ತಪಸ್ಸು. ಕ್ಷಮೆಯೇ ಶೌಚ. ಕ್ಷಮೆಯಿಂದಲೇ ಜಗತ್ತು ಉದ್ಧಾರವನ್ನು ಹೊಂದುತ್ತದೆ.
ಅತಿ ಯಜ್ಞವಿದಾಂ ಲೋಕಾನ್ ಕ್ಷಮಿಣಃ ಪ್ರಾಪ್ನುವಂತಿ ವೈ |
ಅತಿ ಬ್ರಹ್ಮವಿದಾಂ ಲೋಕಾನ್ ಅತಿ ಚಾಪಿ ತಪಸ್ವಿನಾಮ್ ||39||
ಯಜ್ಞವನ್ನು ಮಾಡಿ ಸಂಪಾದಿಸಿದ ಲೋಕಗಳಿಗಿಂತಲೂ ಉತ್ತಮ ಲೋಕಗಳನ್ನು ಕ್ಷಮಾವಂತರು ಪಡೆಯುತ್ತಾರೆ. ಬ್ರಹ್ಮಜ್ಞಾನಿಗಳು ಸಂಪಾದಿಸುವ ಲೋಕಗಳಿಗಿಂತಲೂ ಮತ್ತು ತಪಸ್ವಿಗಳು ಸಂಪಾದಿಸುವ ಲೋಕಕ್ಕಿಂತಲೂ ಉತ್ತಮವಾದ ಲೋಕಗಳನ್ನು ಕ್ಷಮಾವಂತರು ಪಡೆಯುತ್ತಾರೆ.
ಕ್ಷಮಾ ತೇಜಸ್ವಿನಾಂ ತೇಜಃ ಕ್ಷಮಾ ಬ್ರಹ್ಮ ತಪಸ್ವಿನಾಮ್ |
ಕ್ಷಮಾ ಸತ್ಯಂ ಸತ್ಯವತಾಂ ಕ್ಷಮಾ ದಾನಂ ಕ್ಷಮಾ ಯಶಃ ||40||
ಕ್ಷಮೆಯೇ ತೇಜಸ್ವಿಗಳ ತೇಜಸ್ಸು. ಕ್ಷಮೆಯೇ ತಪಸ್ವಿಗಳ ಬ್ರಹ್ಮ. ಕ್ಷಮೆಯೇ ಸತ್ಯವುಳ್ಳವರ ಸತ್ಯ. ಕ್ಷಮೆಯೇ ದಾನ. ಕ್ಷಮೆಯೇ ಕೀರ್ತಿ.
ತಾಂ ಕ್ಷಮಾಮೀದೃಶೀಂ ಕೃಷ್ಣೇ ಕಥಮಸ್ಮದ್ವಿಧಸ್ತ್ಯಜೇತ್ |
ಯತ್ರ ಬ್ರಹ್ಮ ಚ ಸತ್ಯಂ ಚ ಯಜ್ಞಾ ಲೋಕಾಃ ಪ್ರತಿಷ್ಠಿತಾಃ |
ಅನ್ಯೇ ಚ ಯಜ್ವನಾಂ ಲೋಕಾಃ ಕ್ಷಮಿಣಾಮಪರೇ ತಥಾ ||41||
ಎಲೌ ಕೃಷ್ಣೆಯೇ! ಯಾವ ಕ್ಷಮೆಯಲ್ಲಿ ಬ್ರಹ್ಮನೂ ಸತ್ಯವೂ ಯಜ್ಞಗಳೂ ಲೋಕಗಳೂ ಪ್ರತಿಷ್ಠಿತವಾಗಿವೆಯೋ ಅಂತಹ ಕ್ಷಮೆಯನ್ನು ನನ್ನಂತಹವನು ಹೇಗೆ ತ್ಯಜಿಸಲು ಸಾಧ್ಯ? ಯಾಗವನ್ನು ಮಾಡಿದವರಿಗೆ ದೊರೆಯುವ ಲೋಕಗಳೇ ಬೇರೆ. ಕ್ಷಮಾವಂತರಿಗೆ ದೊರೆಯುವ ಲೋಕಗಳೇ ಬೇರೆ.
ಕ್ಷಂತವ್ಯಮೇವ ಸತತಂ ಪುರುಷೇಣ ವಿಜಾನತಾ |
ಯದಾ ಹಿ ಕ್ಷಮತೇ ಸರ್ವಂ ಬ್ರಹ್ಮ ಸಂಪದ್ಯತೇ ತದಾ ||42||
ಜ್ಞಾನವುಳ್ಳ ಪುರುಷನು ಯಾವಾಗಲೂ ಕ್ಷಮೆಯನ್ನೇ ಹೊಂದಿರಬೇಕು. ಯಾವಾಗ ಎಲ್ಲವನ್ನು ಕ್ಷಮಿಸುತ್ತಾನೋ ಆಗ ಬ್ರಹ್ಮನನ್ನು ಹೊಂದುತ್ತಾನೆ.
ಕ್ಷಮಾವತಾಮಯಂ ಲೋಕಃ ಪರಶ್ಚೈವ ಕ್ಷಮಾವತಾಮ್ |
ಇಹ ಸನ್ಮಾನಮೃಚ್ಛಂತಿ ಪರತ್ರ ಚ ಪರಾಂ ಗತಿಮ್ ||43||
ಕ್ಷಮಾವಂತರಿಗೇ ಈ ಲೋಕ. ಕ್ಷಮಾವಂತರಿಗೇ ಪರಲೋಕ. ಕ್ಷಮಾವಂತರು ಈ ಲೋಕದಲ್ಲಿ ಸನ್ಮಾನವನ್ನು ಪಡೆಯುತ್ತಾರೆ. ಪರಲೋಕದಲ್ಲಿ ಶ್ರೇಷ್ಠವಾದ ಗತಿಯನ್ನು ಪಡೆಯುತ್ತಾರೆ.
ಯೇಷಾಂ ಮನ್ಯುರ್ಮನುಷ್ಯಾಣಾಂ ಕ್ಷಮಯಾಽಭಿಹತಃ ಸದಾ |
ತೇಷಾಂ ಪರತರೋ ಲೋಕಸ್ತಸ್ಮಾತ್ ಕ್ಷಾಂತಿಃ ಪರಾ ಮತಾ ||44||
ಯಾವ ಮನುಷ್ಯರಿಗೆ ಯಾವಾಗಲೂ ಕ್ಷಮೆಯು ಕೋಪವನ್ನು ನಾಶಮಾಡುತ್ತದೆಯೋ ಅವರಿಗೆ ಇನ್ನೂ ಶ್ರೇಷ್ಠತರವಾದ ಲೋಕಗಳು ದೊರೆಯುತ್ತವೆ. ಆದ್ದರಿಂದ ಕ್ಷಮೆಯೇ ಸರ್ವೋತ್ತಮವಾದುದು ಎಂದು ನನ್ನ ಅಭಿಪ್ರಾಯ.
ಇತಿ ಗೀತಾಃ ಕಾಶ್ಯಪೇನ ಗಾಥಾ ನಿತ್ಯಂ ಕ್ಷಮಾವತಾಮ್ |
ಶ್ರುತ್ವಾ ಗಾಥಾಃ ಕ್ಷಮಾಯಾಸ್ತ್ವಂ ತುಷ್ಯ ದ್ರೌಪದಿ ಮಾ ಕ್ರುಧಃ ||45||
ಹೀಗೆ ಕಾಶ್ಯಪರು ನಿತ್ಯವೂ ಕ್ಷಮಾವಂತರ ವಿಷಯದಲ್ಲಿ ಗಾದೆಗಳನ್ನು ಹಾಡಿದ್ದಾರೆ. ಆ ಕ್ಷಮೆಯ ವಿಷಯದ ಗಾನವನ್ನು ಕೇಳಿ ನೀನು ಸಂತುಷ್ಟಳಾಗು. ದ್ರೌಪದಿಯೇ, ಕ್ರೋಧವನ್ನು ಮಾಡಬೇಡ.
ಪಿತಾಮಹಃ ಶಾಂತನವಃ ಶಮಂ ಸಂಪೂಜಯಿಷ್ಯತಿ |
ಕೃಷ್ಣಶ್ಚ ದೇವಕೀಪುತ್ರಃ ಶಮಂ ಸಂಪೂಜಯಿಷ್ಯತಿ ||46||
ಪಿತಾಮಹರಾದ ಭೀಷ್ಮರು ಶಾಂತಿಯನ್ನು ಸಮ್ಮಾನಿಸುತ್ತಾರೆ. ದೇವಕೀಪುತ್ರನಾದ ಕೃಷ್ಣನೂ ಶಾಂತಿಯನ್ನು ಸಮ್ಮಾನಿಸುತ್ತಾನೆ.
ಆಚಾರ್ಯೋ ವಿದುರಶ್ಚೈವ ಸರ್ವೇ ವೃದ್ಧಾಸ್ತಥೈವ ಚ |
ಕೃಪಶ್ಚ ಸಂಜಯಶ್ಚೈವ ಶಮಮೇವ ಪ್ರಶಂಸತಃ ||47||
ಆಚಾರ್ಯದ್ರೋಣರೂ ವಿದುರನೂ ಎಲ್ಲಾ ಹಿರಿಯರೂ ಕೃಪರೂ ಮತ್ತು ಸಂಜಯನೂ ಶಾಂತಿಯನ್ನೇ ಪ್ರಶಂಸಿಸುತ್ತಾರೆ.

ಸೋಮದತ್ತೋ ಯುಯುತ್ಸುಶ್ಚ ದ್ರೋಣಪುತ್ರಸ್ತಥೈವ ಚ |
ಪಿತಾಮಹಶ್ಚ ನೋ ವ್ಯಾಸಃ ಶಮಂ ವದತಿ ನಿತ್ಯಶಃ ॥48॥
ಸೋಮದತ್ತನೂ ಯುಯುತ್ಸುವೂ ದ್ರೋಣಪುತ್ರರಾದ ಅಶ್ವತ್ಥಾಮರೂ ನಮ್ಮ ಪಿತಾಮಹರಾದ ವ್ಯಾಸರೂ ನಿತ್ಯವೂ ಶಾಂತಿಯನ್ನೇ ಉಪದೇಶಮಾಡುತ್ತಾರೆ.
ಏತೈರ್ಹಿ ರಾಜಾ ನಿಯತಂ ಚೋದ್ಯಮಾನಃ ಶಮಂ ಪ್ರತಿ |
ಆದಾಸ್ಯಾಮೀತಿ ಮೇ ಬುದ್ಧಿರ್ನಚ ಲೋಭಾನ್ನಶಿಷ್ಯತಿ ॥49॥
ಕಾಶ್ಯಪರು ಹಾಡಿದ ಈ ಹಾಡಿನಿಂದ ಪ್ರೇರಿತವಾದ ನಾನು ಶಾಂತಿಯನ್ನೇ ಹೊಂದುತ್ತೇನೆ ಕ್ರೋಧವನ್ನಲ್ಲ ಎಂದು ಬುದ್ಧಿಯು ಉಂಟಾಗಿರುತ್ತದೆ. ಈ ನನ್ನ ಬುದ್ಧಿಯಾದರೂ ರಾಜ್ಯಲೋಭದಿಂದ ನಾಶಹೊಂದುವುದಿಲ್ಲ.
ಕಾಲೋಽಯಂ ದಾರುಣಃ ಪ್ರಾಪ್ತೋ ಭರತಾನಾಮಭೂತಯೇ |
ನಿಶ್ಚಿತಂ ಮೇ ಸದೈವೈತತ್ ಪುರಸ್ತಾದಪಿ ಭಾಮಿನಿ ॥50॥
ಭರತರ ವಿನಾಶಕ್ಕಾಗಿ ಇಂತಹ ದಾರುಣವಾದ ಕಾಲವು ಪ್ರಾಪ್ತವಾಗಿದೆ. ಎಲೌ ಭಾಮಿನಿಯೇ, ನಾನು ಇದನ್ನು ಮೊದಲೇ ನಿಶ್ಚಯಿಸಿದ್ದೇನೆ.
ಕ್ಷಯಃ ಸರ್ವಸ್ಯ ಲೋಕಸ್ಯ ಪೃಥಿವ್ಯಾಮಿತಿ ಮೇ ಮತಿಃ |
ತತ್ರ ಪಾರ್ಥೋ ಧನುಷ್ಪಾಣಿರ್ಭೀಮಃ ಕೃಷ್ಣಶ್ಚ ವೀರ್ಯವಾನ್ |
ಭೀಷ್ಮೋ ದ್ರೋಣಶ್ಚ ಕರ್ಣಶ್ಚ ಕಿಂ ಶೇಷಂ ತತ್ರ ಪಶ್ಯಸಿ ॥51॥
ಭೂಮಿಯಲ್ಲಿ ಎಲ್ಲಾ ಜನರ ನಾಶವು ಉಂಟಾಗುತ್ತದೆ ಎಂದು ನನ್ನ ಅಭಿಪ್ರಾಯ. ಅಲ್ಲಿ ಧನುಸ್ಸನ್ನು ಹಿಡಿದ ಪಾರ್ಥನಿದ್ದಾನೆ. ಭೀಮನಿದ್ದಾನೆ. ಮಹಾಸಾಮರ್ಥ್ಯೋಪೇತನಾದ ಕೃಷ್ಣನಿದ್ದಾನೆ. ಭೀಷ್ಮ ದ್ರೋಣ ಕರ್ಣರು ಇದ್ದಾರೆ. ಹೀಗಿರುವಾಗ ಏನು ಉಳಿಯುವುದೆಂದು ನೀನು ಭಾವಿಸುತ್ತೀಯೆ?
ಸುಯೋಧನೋ ನಾರ್ಹತೀತಿ ಕ್ಷಮಾ ಮಾಮೇವ ವಿಂದತಿ |
ಅರ್ಹಸ್ತಸ್ಯಾಹಮಿತ್ಯೇವಂ ತಸ್ಮಾನ್ಮಾಂ ವಿಂದತೇ ಕ್ಷಮಾ ॥52॥
ಸುಯೋಧನನು ತಮ್ಮನಾದುದರಿಂದ ರಾಜ್ಯಕ್ಕೆ ಅರ್ಹನಲ್ಲ ವೆಂಬಕಾರಣದಿಂದ ಅವನನ್ನು ಕ್ಷಮೆಯು ವರಿಸುವುದಿಲ್ಲ. ನಾನೇ ಆ ಕ್ಷಮೆಗೆ ಯೋಗ್ಯನೆಂದು ತಿಳಿದು ಕ್ಷಮೆಯು ನನ್ನನ್ನೇ ವರಿಸುತ್ತದೆ.(ಪ್ರಾಪ್ತವಾಗುತ್ತದೆ)
ಏತದಾತ್ಮವತಾಂ ವೃತ್ತಮೇಷ ಧರ್ಮಃ ಸನಾತನಃ |
ಕ್ಷಮಾ ಚೈವಾನೃಶಂಸ್ಯಂ ಚ ತತ್ಕರ್ತಾ ಹ್ಯಹಮಂಜಸಾ ॥53॥
ಕ್ಷಮಾ ಮತ್ತು ಮಾರ್ದವ ಇದು ಮನೋನಿಗ್ರಹವುಳ್ಳವರ ನಡೆವಳಿಕೆ. ಇದು ಸನಾತನವಾದ ಧರ್ಮ. ನಾನು ಇದನ್ನೇ ಚೆನ್ನಾಗಿ ಮಾಡುವವನಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಡ್‌ವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಇಪ್ಪತ್ತೇಳನೆಯ ಅಧ್ಯಾಯ
(ಯುಧಿಷ್ಠಿರನನ್ನು ಕುರಿತು ಪೌರುಷಕ್ಕಿಂತಲೂ ವಿಧಿಯೇ ಪ್ರಬಲವೆಂದು ದ್ರೌಪದಿಯ ಸಮರ್ಥನೆ)
ದ್ರೌಪದೀ
ನಮೋ ಧಾತ್ರೇ ವಿಧಾತ್ರೇ ಚ ಯೌ ಮೋಹಂ ಚಕ್ರತುಸ್ತವ |
ಪಿತೃಪೈತಾಮಹೇ ರಾಜ್ಯೇ ವೋಢವ್ಯೇ ತೇಽನ್ಯಥಾ ಮತಿಃ ॥1॥
ನಿನಗೆ ಮೋಹವನ್ನುಂಟುಮಾಡಿದ ಸೃಷ್ಟಿಕರ್ತನಾದ ಬ್ರಹ್ಮನಿಗೂ ಪಾಲನಕರ್ತನಾದ ವಿಷ್ಣುವಿಗೂ ನಮಸ್ಕಾರ.
ಪಿತೃಪಿತಾಮಹರಿಂದ ಬಂದ ರಾಜ್ಯದಭಾರವನ್ನು ಹೊರುವ ಸಮಯದಲ್ಲಿ ನಿನ್ನ ಬುದ್ಧಿಯು ಬೇರೆರೀತಿಯಾಗಿದೆ.
ನೇಹ ಧರ್ಮಾನೃಶಂಸ್ಯಾಭ್ಯಾಂ ನ ಕ್ಷಾಂತ್ಯಾ ನಾರ್ಜವೇನ ಚ |
ಪುರುಷಃ ಶ್ರಿಯಮಾಪ್ನೋತಿ ನಿರ್ಘೃಣಿತ್ವೇನ ಕರ್ಹಿಚಿತ್ ॥2॥
ಪುರುಷನು ಇಲ್ಲಿ ಧರ್ಮಮಾರ್ದವಗಳಿಂದಲಾಗಲೀ ಕ್ಷಮೆಯಿಂದಲಾಗಲೀ ಆರ್ಜವದಿಂದಲಾಗಲೀ ಅಥವಾ ಕ್ರೌರ್ಯದಿಂದಲಾಗಲೀ ಯಾವ ಬಗೆಯಲ್ಲಿಯೂ ಸಂಪತ್ತನ್ನು ಪಡೆಯುವುದಿಲ್ಲ.
ತ್ವಾಂ ಚೇದ್‌ವ್ಯಸನಮಭ್ಯಾಗಾದಿದಂ ಭಾರತ ದುಃಸಹಮ್ |
ಸ ತ್ವಂ ನಾರ್ಹಸಿ ನಾಪೀಮೇ ಭ್ರಾತರಸ್ತೇ ಮಹೌಜಸಃ ॥3॥
ಎಲೈ ಭಾರತನೇ! ಯಾವ ವ್ಯಸನವು ದುಃಸಹವಾಗಿ ನಿನಗೆ ಬಂದಿದೆಯೋ ಆ ವ್ಯಸನಕ್ಕೆ ನೀನು ಅರ್ಹನಲ್ಲ. ಅಥವಾ ಪರಾಕ್ರಮಶಾಲಿಗಳಾದ ನಿನ್ನ ತಮ್ಮಂದಿರೂ ಆರ್ಹರಲ್ಲ.
ನ ಚ ತೇಽಧ್ಯಗಮನ್ ಜಾತು ತದಾನೀಂ ನಾದ್ಯ ಭಾರತ |
ಧರ್ಮಾತ್ ಪ್ರಿಯತರಂ ಕಿಂಚಿತ್ ಪ್ರಿಯಾತ್ ತೇ ಜೀವಿತಾದಪಿ ॥4॥
ಎಲೈ ಭಾರತನೇ! ಅವರು ಆಗಾಗಲೀ ಅಥವಾ ಈಗಾಗಲೀ ತಮ್ಮ ಜೀವಿತಕ್ಕಿಂತ ಪ್ರಿಯವಾದ ಧರ್ಮಕ್ಕಿಂತ ಹೆಚ್ಚು ಪ್ರಿಯವಾದ ಯಾವ ವಸ್ತುವನ್ನೂ ಕಾಣಲಿಲ್ಲ.
ಧರ್ಮಾರ್ಥಂ ಜೀವನಂ ಸರ್ವಂ ಧರ್ಮಾರ್ಥಂ ರಾಜ್ಯಮೇವ ತೇ |

ಬ್ರಾಹ್ಮಣಾ ಗುರುವಶ್ಚೈವ ಜಾನಂತ್ಯಪಿ ಚ ದೇವತಾಃ ॥5॥
ನಿಮ್ಮ ಜೀವನ ಧರ್ಮಾರ್ಥವಾಗಿಯೇ ಇದೆ. ನಿಮ್ಮ ರಾಜ್ಯವು ಧರ್ಮಾರ್ಥವಾಗಿಯೇ ಇದೆ. ಇದನ್ನು ಬ್ರಾಹ್ಮಣರು ಗುರುಗಳು ಮತ್ತು ದೇವತೆಗಳು ತಿಳಿದಿದ್ದಾರೆ.
ಭೀಮಸೇನಾರ್ಜುನೌ ಚೇಮೌ ಮಾದ್ರೇಯೌ ಚ ಮಯಾ ಸಹ |
ತ್ಯಜೇಸ್ತ್ವಮಿತಿ ಮೇ ಬುದ್ಧಿರ್ನತು ಧರ್ಮಂ ಪರಿತ್ಯಜೇಃ ॥6॥
ನೀನು ಭೀಮಾರ್ಜುನರನ್ನೂ ನಕುಲಸಹದೇವರನ್ನೂ ಮತ್ತು ನನ್ನನ್ನೂ ಬೇಕಾದರೆ ಪರಿತ್ಯಾಗಮಾಡಬಹುದು. ಆದರೆ ಧರ್ಮವನ್ನು ಎಂದೂ ಪರಿತ್ಯಾಗಮಾಡಲಾರೆ ಎಂದು ನನ್ನ ಅಭಿಪ್ರಾಯ.
ರಾಜಾನಂ ಧರ್ಮಗೋಪ್ತಾರಂ ಧರ್ಮೋ ರಕ್ಷತಿ ರಕ್ಷಿತಃ |
ಇತಿ ಮೇ ಶ್ರುತಮಾರ್ಯಾಣಾಂ ತ್ವಾಂ ತು ಮನ್ಯೇ ನ ರಕ್ಷತಿ ॥7॥
ಧರ್ಮವನ್ನು ರಕ್ಷಿಸುವ ರಾಜನನ್ನು ರಕ್ಷಿಸಲ್ಪಟ್ಟ ಧರ್ಮವು ರಕ್ಷಿಸುತ್ತದೆಂದು ನಾನು ದೊಡ್ಡವರಿಂದ ಕೇಳಿದ್ದೇನೆ ಆದರೆ ನಿನ್ನನ್ನು ಮಾತ್ರ ಧರ್ಮವು ರಕ್ಷಿಸುವುದಿಲ್ಲ ಎಂದು ತಿಳಿದಿದ್ದೇನೆ.
ತ್ಯಕ್ತ್ವಾನ್ಯಾನ್ ಹಿ ನರವ್ಯಾಘ್ರ ನಿತ್ಯದಾ ಧರ್ಮ ಏವ ತೇ |
ಬುದ್ಧಿಃ ಸತತಮನ್ವೇತಿ ಛಾಯೇವ ಪುರುಷಂ ನಿಜಾ ॥8॥
ಎಲೈ ನರವ್ಯಾಘ್ರನೇ! ನಿನ್ನ ಬುದ್ಧಿಯು ತನ್ನ ಛಾಯೆಯು ಆ ಪುರುಷನನ್ನು ಹಿಂಬಾಲಿಸಿದಂತೆ ಉಳಿದ ಎಲ್ಲ ವಿಷಯಗಳನ್ನು ಬಿಟ್ಟು ಯಾವಾಗಲೂ ಧರ್ಮವನ್ನೇ ಹಿಂಬಾಲಿಸಿ ಹೋಗುತ್ತದೆ.
ನಾವಮಂಸ್ಥಾ ಹಿ ಸದೃಶಾನ್ ನಾವರಾನ್ ಶ್ರೇಯಸಃ ಕುತಃ |
ಅವಾಪ್ಯ ಪೃಥಿವೀಂ ಕೃತ್ಸ್ನಾಂ ನ ತೇ ಶೃಂಗಮವರ್ಧತ ॥9॥
ನಿನಗೆ ಸದೃಶರಾದವರನ್ನೂ ನಿನಗಿಂತ ಕಿರಿಯರನ್ನೂ ಮತ್ತು ನಿನಗಿಂತ ಶ್ರೇಷ್ಠರಾದವರನ್ನೂ ಅವಮಾನಮಾಡಬೇಡ. ಸಮಗ್ರವಾದ ಪೃಥ್ವಿಯನ್ನು ಗೆದ್ದರೂ ನಿನಗೆ ಯಾವ ಕೋಡೂ ಉಂಟಾಗಲಿಲ್ಲ. (ಆದ್ದರಿಂದ ಐಶ್ವರ್ಯವು ಬಂದರೂ ಧರ್ಮವನ್ನೇ ಆಚರಿಸು ಎಂದು ಅಭಿಪ್ರಾಯ.)
ಸ್ವಾಹಾಕಾರೈಃ ಸ್ವಧಾಭಿಶ್ಚ ಪೂಜಾಭಿರಪಿ ಚ ದ್ವಿಜಾನ್ |
ದೇವತಾಶ್ಚ ಪಿತೄಂಶ್ಚೈವ ಸತತಂ ಪಾರ್ಥ ಸೇವಸೇ ॥10॥
ಎಲೈ ಪಾರ್ಥನೇ! ನೀನು ಯಾವಾಗಲೂ ಬ್ರಾಹ್ಮಣರನ್ನು ಪೂಜಾದಿಗಳಿಂದಲೂ ದೇವತೆಗಳನ್ನು ಸ್ವಾಹಾಕಾರಗಳಿಂದಲೂ ಪಿತೃಗಳನ್ನು ಸ್ವಾಧಾಕಾರಗಳಿಂದಲೂ ಸೇವಿಸುತ್ತೀಯೆ.
ಬ್ರಾಹ್ಮಣಾಃ ಸರ್ವಕಾಮಾಂಸ್ತೇ ಸತತಂ ಭುಂಜತೇ ಗೃಹೇ |
ಯತಯೋ ವಾನಪ್ರಸ್ಥಾಶ್ಚ ಗೃಹಸ್ಥಾಶ್ಚೈವ ಭಾರತ ॥11॥
ಎಲೈ ಭಾರತನೇ! ನಿನ್ನ ಮನೆಯಲ್ಲಿ ಯತಿಗಳೂ ವಾನಪ್ರಸ್ಥರೂ ಮತ್ತು ಗೃಹಸ್ಥರೂ ಆದ ಬ್ರಾಹ್ಮಣರು ಸರ್ವಕಾಮಗಳನ್ನು ಸತತವಾಗಿ ಭುಂಜಿಸುತ್ತಾರೆ.
ಆರಣ್ಯಕೇಭ್ಯೋ ವನ್ಯಾನಿ ಭೋಜನಾನಿ ಪ್ರಯಚ್ಛಸಿ |
ನಾದೇಯಂ ಬ್ರಾಹ್ಮಣೇಭ್ಯಸ್ತೇ ಗೃಹೇ ಕಿಂಚಿನ್ನ ವಿದ್ಯತೇ ॥12॥
ಅರಣ್ಯವಾಸಿಗಳಾದ ಬ್ರಾಹ್ಮಣರಿಗೆ ನೀನು ವನದಲ್ಲಿ ಲಭ್ಯವಾಗುವ ಭೋಜನವನ್ನು ಕೊಡುತ್ತೀಯೆ. ನಿನ್ನ ಮನೆಯಲ್ಲಿ ಬ್ರಾಹ್ಮಣರಿಗೆ ಕೊಡಲಾಗದ ಯಾವ ವಸ್ತುವೂ ಇಲ್ಲ.
ಯದಿದಂ ವೈಶ್ವದೇವಾಂತೇ ಸಾಯಂಪ್ರಾತಃ ಪ್ರದೀಯತೇ |
ತದ್ ದತ್ತ್ವಾತಿಥಿಭೃತ್ಯೇಭ್ಯೋ ರಾಜನ್ ಶೇಷೇಣ ಜೀವಸಿ ॥13॥
ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ವೈಶ್ವದೇವದ ಅನಂತರ ಅತಿಥಿ ಭೃತ್ಯರಿಗೆ ಕೊಡಬೇಕಾದ ಅನ್ನವನ್ನು ಕೊಟ್ಟು; ಎಲೈರಾಜನೇ, ಶೇಷಾನ್ನದಿಂದ ನೀನು ಜೀವಿಸುತ್ತೀಯೆ.
ಇಷ್ಟಯಃ ಪಶುಬಂಧಾಶ್ಚ ಕಾಮ್ಯನೈಮಿತ್ತಿಕಾಶ್ಚ ಯೇ |
ವರ್ತಂತೇ ಪಾಕಯಜ್ಞಾಶ್ಚ ಸದಾ ಯಜ್ಞಾಶ್ಚ ತೇಽನಘ ॥14॥
ಎಲೈ ದೋಷರಹಿತನೇ! ನಿನ್ನ ಇಷ್ಟಿಗಳು ಪಶುಯಾಗಗಳು ಕಾಮ್ಯನೈಮಿತ್ತಿಕ ಕರ್ಮಗಳು ಪಾಕಯಜ್ಞಗಳು ಮತ್ತು ಉಳಿದ ಯಜ್ಞಗಳು ಸದಾ ನಡೆಯುತ್ತಿವೆ.
ಅಸ್ಮಿನ್ನಪಿ ಮಹಾರಣ್ಯೇ ವಿಜನೇ ದಸ್ಯುಸೇವಿತೇ |
ರಾಷ್ಟ್ರಾದಪೇತ್ಯ ವಸತೋ ಧರ್ಮಸ್ತೇ ನಾವಸೀದತಿ ॥15॥
ರಾಷ್ಟ್ರವನ್ನು ಕಳೆದುಕೊಂಡು ದಸ್ಯುಸೇವಿತವಾದ ಈ ನಿರ್ಜನವಾದ ಮಹಾರಣ್ಯದಲ್ಲಿ ವಾಸಮಾಡುತ್ತಿದ್ದರೂ ಕೂಡ ನಿನ್ನ ಧರ್ಮವು ನಾಶವನ್ನು ಹೊಂದಿಲ್ಲ.
ಅಶ್ವಮೇಧೋ ರಾಜಸೂಯಃ ಪುಂಡರೀಕೋಽಥ ಗೋಸವಃ |
ಇಷ್ಟಾ ಸ್ತ್ವಯಾ ಮಹಾಯಜ್ಞಾ ಬಹವೋಽನ್ಯೇ ಸದಕ್ಷಿಣಾಃ ॥16॥
ಅಶ್ವಮೇಧ ರಾಜಸೂಯ ಪುಂಡರೀಕ ಗೋಸವ ಇಂತಹ ಮಹಾಯಜ್ಞಗಳೂ ಇನ್ನೂ ಅನೇಕ ಮಹಾಯಜ್ಞಗಳೂ ದಕ್ಷಿಣಾಪೂರ್ವಕವಾಗಿ ನಿನ್ನಿಂದ ಮಾಡಲ್ಪಟ್ಟಿವೆ.
ರಾಜನ್ ಪರೀತಯಾ ಬುದ್ಧ್ಯಾ ವಿಷಮಾಕ್ಷಪರಾಜಯೇ |
ಪಾರ್ಥ ಮಿತ್ರಾಣಿ ಗಾಶ್ಚೈವ ವಸೂನಿ ಚ ಪರಾಜಿತಃ |

ರಾಜ್ಯಂ ಪಶೂನಾಯುಧಾನಿ ಭ್ರಾತೄನ್ ಮಾಂ ಚಾಪಿ ನಿರ್ಜಿತಃ ॥17॥
ಎಲೈ ರಾಜನೇ! ವಿಪರೀತವಾದ ಬುದ್ಧಿಯನ್ನುಹೊಂದಿ ವಿಷಮವಾದ ಅಕ್ಷದ್ಯೂತದಲ್ಲಿ ಪರಾಜಯವನ್ನು ಹೊಂದಿ ನೀನು ಮಿತ್ರರನ್ನೂ ಗೋವುಗಳ ಸಂಪತ್ತನ್ನೂ ಕಳೆದುಕೊಂಡಿದ್ದೀಯೆ. ರಾಜ್ಯವನ್ನೂ ಪಶುಗಳನ್ನೂ ಆಯುಧಗಳನ್ನೂ ತಮ್ಮಂದಿರನ್ನು ಮತ್ತು ನನ್ನನ್ನೂ ಪಣಕ್ಕೊಡ್ಡಿ ಪರಾಜಿತನಾಗಿದ್ದೀಯೆ.
ಋಜೋರ್ಮೃದೋರ್ವದಾನ್ಯಸ್ಯ ಹ್ರೀಮತಃ ಸತ್ಯವಾದಿನಃ |
ಕಥಮಕ್ಷವ್ಯಸನಜಾ ಬುದ್ಧಿರಾಪತಿತಾ ತವ ॥18॥
ಋಜುಸ್ವಭಾವವುಳ್ಳ ಮೃದುವೂ ಪ್ರಿಯಭಾಷಿಯೂ ವಿನಯಶೀಲನೂ ಸತ್ಯವಾದಿಯೂ ಆದ ನಿನಗೆ ಈ ಅಕ್ಷದ್ಯೂತ ವ್ಯಸನದ ಬುದ್ಧಿಯು ಹೇಗೆ ಉಂಟಾಯಿತು?
ಅತೀವ ಮೋಹ ಆಯಾತಿ ಮನಶ್ಚ ಪರಿದೂಯತೇ |
ನಿಶಾಮ್ಯ ವ್ಯಸನಂ ಪಾರ್ಥ ತವೇದಮತಿದುಃಸಹಮ್ ॥19॥
ಎಲೈ ಪಾರ್ಥನೇ! ನಿನ್ನ ಅತಿದುಃಸಹವಾದ ಈ ವ್ಯಸನವನ್ನು ನೋಡಿ ನನ್ನ ಮನಸ್ಸು ದುಃಖಪಡುತ್ತಿದೆ. ನನಗೆ ಮೋಹ ಉಂಟಾಗುತ್ತಿದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಈಶ್ವರಸ್ಯ ವಶೇ ಲೋಕಃ ತಿಷ್ಠತೇ ನಾತ್ಮನೋ ಯಥಾ ॥20॥
ಜಗತ್ತು ಈಶ್ವರನ ವಶದಲ್ಲಿದೆ ನಮ್ಮ ವಶದಲ್ಲಿ ಇಲ್ಲ ಎಂಬ ವಿಷಯದಲ್ಲಿ ಜ್ಞಾನಿಗಳು ಪುರಾತನವಾದ ಈ ಒಂದು ಇತಿಹಾಸವನ್ನು ಹೇಳುತ್ತಾರೆ.
ಧಾತೈವ ಖಲು ಭೂತಾನಾಂ ಸುಖದುಃಖೇ ಪ್ರಿಯಾಪ್ರಿಯೇ |
ದದಾತಿ ಸರ್ವಮೀಶಾನಃ ಪುರಸ್ತಾಚ್ಛುಕ್ರಮುಚ್ಚರನ್॥21॥
ಈಶಾನನಾದ ನಾರಾಯಣನು ಸೃಷ್ಟಿಗಿಂತ ಮೊದಲು ಶೋಕರಹಿತನಾಗಿ ಇದ್ದು ಅನಂತರ ಪ್ರಕಾಶವನ್ನು ಹೊಂದಿ ಸೂರ್ಯನಂತೆ ಎಲ್ಲ ಜೀವರಿಗೂ ಸುಖದುಃಖಗಳು ಪ್ರಿಯಾಪ್ರಿಯಗಳು ಈ ಎಲ್ಲವನ್ನೂ ಕೊಡುತ್ತಾನೆ.
ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರಸಮಾಹಿತಃ |
ಇಂಗಯತ್ಯಂಗಮಂಗಾನಿ ತಥಾ ರಾಜನ್ನಿಮಾಃ ಪ್ರಜಾಃ ॥22॥
ಹೇಗೆ ಅಲುಗಾಡದೆ ಸಮಾಧಾನದಿಂದ ಕುಳಿತ ಮನುಷ್ಯನು ಮರದಿಂದ ಮಾಡಿದ ಸ್ತ್ರೀಬೊಂಬೆಯನ್ನು ದಾರಗಳಿಂದ ಕುಣಿಸುತ್ತಾನೆಯೋ ಹಾಗೆ ಎಲೈ ರಾಜನೇ! ಈಶ್ವರನು ಎಲ್ಲಾ ಪ್ರಜೆಗಳನ್ನೂ ಕುಣಿಸುತ್ತಾನೆ.
ಆಕಾಶಾ ಇವ ಭೂತಾನಿ ವ್ಯಾಪ್ಯ ಸರ್ವಾಣಿ ಭಾರತ |
ಈಶ್ವರೋ ವಿದಧಾತೀಹ ಕಲ್ಯಾಣಂ ಯಚ್ಚ ಪಾಪಕಮ್ |
ಈಶ್ವರಸ್ಯ ವಶೇ ಲೋಕಾಸ್ತಿಷ್ಠಂತೇ ನಾತ್ಮನೋ ಯಥಾ ॥23॥
ಶಕುನಿಸ್ತಂತುಬದ್ಧೋ ವಾ ನೀಯತೇಽಯಮನೀಶ್ವರಃ |
ಈಶ್ವರಸ್ಯ ವಶೇ ತಿಷ್ಠನ್ನಾನ್ಯೇಷಾಮಾತ್ಮನಃ ಪ್ರಭುಃ ॥24॥
ಎಲೈ ಭಾರತನೇ! ಆಕಾಶದಂತೆ ಎಲ್ಲ ಜೀವರಲ್ಲೂ ವ್ಯಾಪಿಸಿ ಈಶ್ವರನೇ ಜೀವರಿಗೆ ಕಲ್ಯಾಣವನ್ನಾಗಲೀ ಅಮಂಗಳವನ್ನಾಗಲೀ ವಿಧಾನಮಾಡುತ್ತಾನೆ. ಎಲ್ಲ ಲೋಕಗಳೂ ಈಶ್ವರನ ವಶವಾಗಿವೆ. ಅವರವರ ವಶದಲ್ಲಿ ಇಲ್ಲ. ಈ ಜೀವನು ಈಶ್ವರನ ವಶದಲ್ಲಿ ಇದ್ದು ಅಸ್ವತಂತ್ರನಾಗಿ ದಾರದಿಂದ ಕಟ್ಟಿದ ಪಕ್ಷಿಯಂತೆ ಎಳೆದೊಯ್ಯಲ್ಪಡುತ್ತಾನೆ.
ಮಣಿಃ ಸೂತ್ರ ಇವ ಪ್ರೋತೋ ನಸ್ಯೋತ ಇವ ಗೋವೃಷಃ |
ಧಾತುರಾದೇಶಮನ್ವೇತಿ ತನ್ಮಯೋ ಹಿ ತದರ್ಪಿತಃ ॥25॥
ಸೂತ್ರದಲ್ಲಿ ಪೋಣಿಸಿದ ಮಣಿಗಳಂತೆ ಮೂಗುದಾರವನ್ನು ಹಾಕಿದ ಎತ್ತಿನಂತೆ ಜೀವನು ನಾರಾಯಣನ ಆದೇಶವನ್ನು ಅನುಸರಿಸುತ್ತಾನೆ. ಜೀವನು ಈಶ್ವರನನ್ನೇ ಪ್ರಧಾನವಾಗಿ ಉಳ್ಳವನು ಮತ್ತು ಈಶ್ವರಾಧಾರನೂ ಆಗಿದ್ದಾನೆ.
ನಾತ್ಮಾಧೀನೋ ಮನುಷ್ಯೋಽಯಂ ಕಲ್ಯಂ ಭವತಿ ಕಶ್ಚನ |
ಸ್ರೋತಸೋ ಮಧ್ಯಮಾಪನ್ನಃ ಕೂಲವೃಕ್ಷ ಇವ ಚ್ಯುತಃ ॥26॥
ಪ್ರವಾಹದ ಮಧ್ಯದಲ್ಲಿ ಬಿದ್ದ ತೀರವೃಕ್ಷದಂತೆ ಮನುಷ್ಯನು ತನ್ನ ಪ್ರಯತ್ನದಿಂದ ಯಾವ ಕಲ್ಯಾಣವನ್ನೂ ಪಡೆಯುವುದಿಲ್ಲ.
ಅಜ್ಞೋ ಜಂತುರನೀಶೋಽಯಮಾತ್ಮನಃ ಸುಖದುಃಖಯೋಃ |
ಈಶ್ವರಪ್ರೇರಿತೋ ಗಚ್ಛೇತ್ ಸ್ವರ್ಗಂ ನರಕಮೇವ ವಾ ॥27॥
ಅಜ್ಞಾನಿಯಾದ ಈ ಜಂತುವು ತನ್ನ ಸುಖದುಃಖಗಳಿಗೆ ಎಂದೂ ಪ್ರಭುವಾಗಿರುವುದಿಲ್ಲ. ಈಶ್ವರಪ್ರೇರಿತನಾಗಿ ಸ್ವರ್ಗಕ್ಕಾಗಲೀ ಅಥವಾ ನರಕ್ಕಾಗಲೀ ಹೋಗುತ್ತಾನೆ.
ಯಥಾ ವಾಯೋಸ್ತೃಣಾಗ್ರಾಣಿ ವಶಂ ಯಾಂತಿ ಬಲೀಯಸಃ |
ಧಾತುರೇವಂ ವಶಂ ಯಾಂತಿ ಸರ್ವಭೂತಾನಿ ಭಾರತ ॥28॥
ಎಲೈ ಭಾರತನೇ! ಹುಲ್ಲಿನ ಚೂರುಗಳು ಪ್ರಬಲವಾದ ಗಾಳಿಗೆ ವಶವಾಗುವಂತೆ ಎಲ್ಲ ಜೀವರೂ ನಾರಾಯಣನ ವಶರಾಗುತ್ತಾರೆ.
ಆರ್ಯಕರ್ಮಣಿ ಯುಂಜಾನಃ ಪಾಪೇ ವಾ ಪುನರೀಶ್ವರಃ |
ವ್ಯಾಪ್ಯ ಭೂತಾನಿ ಚರತೇ ನ ಚಾಯಮಿತಿ ಲಕ್ಷ್ಯತೇ ॥29॥
ಈಶ್ವರನು ಜೀವರನ್ನು ವ್ಯಾಪಿಸಿ ಶ್ರೇಷ್ಠಕರ್ಮಗಳಲ್ಲಿ ಅಥವಾ ಪಾಪಕರ್ಮಗಳಲ್ಲಿ ತೊಡಗಿಸುತ್ತಾನೆ. ಆದರೆ ಯಾರಿಗೂ ತನ್ನನ್ನು ತೋರಿಸಿಕೊಳ್ಳುವುದಿಲ್ಲ.

ಹೇತುಮಾತ್ರಮಿದಂ ಧಾತುಃ ಶರೀರಂ ಕ್ಷೇತ್ರಸಂಜ್ಞಿತಮ್ |
ಯೇನ ಕಾರಯತೇ ಕರ್ಮ ಶುಭಾಶುಭಫಲಂ ವಿಭುಃ ॥30॥
ಸ್ವತಂತ್ರವಾಗಿ ಪ್ರೇರಿಸಿ ಕರ್ಮವನ್ನು ಮಾಡಿಸುವ ಈಶ್ವರನಿಗೆ ಕ್ಷೇತ್ರವೆಂದು ಕರೆಯಲ್ಪಡುವ ಈ ನಮ್ಮ ಶರೀರವು ನಿಮಿತ್ತಮಾತ್ರ. ವಿಭುವಾದ ನಾರಾಯಣನು ಅಂತಹ ಶರೀರಗಳಿಂದ ಕರ್ಮವನ್ನು ಮಾಡಿಸುತ್ತಾ ಶುಭಾಶುಭಫಲಗಳನ್ನು ಕೊಡುತ್ತಾನೆ.
ಪಶ್ಯ ಮಾಯಾಪ್ರಭಾವೋಽಯಮೀಶ್ವರೇಣ ಯಥಾ ಕೃತಃ |
ಯೋ ಹಂತಿ ಭೂತೈರ್ಭೂತಾನಿ ಮೋಹಯಿತ್ವಾಽಽತ್ಮಮಾಯಯಾ ॥
ಈಶ್ವರನಿಂದ ಮಾಡಲ್ಪಟ್ಟ ಈ ಮಾಯಾಪ್ರಭಾವವನ್ನು ನೋಡು. ಅವನೇ ತನ್ನ ಮಾಯೆಯಿಂದ ಎಲ್ಲ ಜೀವರನ್ನೂ ಮೋಹಿಸಿ ಎಲ್ಲರನ್ನೂ ಸಂಹರಿಸುತ್ತಾನೆ.
ಅನ್ಯಥಾ ಪರಿದೃಷ್ಟಾನಿ ಮುನಿಭಿರ್ವೇದದರ್ಶಿಭಿಃ |
ಅನ್ಯಥಾ ಪರಿವರ್ತಂತೇ ವೇಗಾ ಇವ ನಭಸ್ವತಃ ॥32॥
ವೇದದ್ರಷ್ಟಾರರಾದ ಋಷಿಗಳು ಬೇರೆ ರೀತಿಯಲ್ಲಿ ಯೋಚಿಸಿದ ಒಂದು ಕಾರ್ಯವು ದಿಕ್ಕು ಬದಲಿಸುವ ವಾಯುವೇಗದಂತೆ ಬೇರೆ ರೀತಿಯೇ ಉಂಟಾಗುತ್ತದೆ.
ಅನ್ಯಥೈವ ಹ ವರ್ತಂತೇ ಪುರುಷಾಸ್ತಾನಿ ತಾನಿ ವೈ |
ಅನ್ಯಥೈವ ಪ್ರಭುಸ್ತಾನಿ ಕರೋತಿ ವಿಕರೋತಿ ಚ ॥33॥
ಪುರುಷರು ಅವರ ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು ಬೇರೆ ರೀತಿಯಾಗಿಯೇ ಇರುತ್ತವೆ. ಪ್ರಭುವಾದ ನಾರಾಯಣನು ಅವುಗಳನ್ನು ಬೇರೆ ರೀತಿಯಲ್ಲಿಯೇ ಮಾಡುತ್ತಾನೆ ಮತ್ತು ವಿಕಾರಗೊಳಿಸುತ್ತಾನೆ.
ಯಥಾ ಕಾಷ್ಠೇನ ವಾ ಕಾಷ್ಠಮಶ್ಮಾನಂ ವಾಽಶ್ಮನಾ ಪುನಃ |
ಅಯಸಾ ಚಾಪ್ಯಯಶ್ಛಿಂದ್ಯಾನ್ನಿರ್ವಿಚೇಷ್ಟಮಚೇತನಮ್ ॥34॥
ಏವಂ ಸ ಭಗವಾನ್ ದೇವಃ ಸ್ವಯಂಭೂಃ ಪ್ರಪಿತಾಮಹಃ |
ಹಿನಸ್ತಿ ಭೂತೈರ್ಭೂತಾನಿ ಜನ್ಮ ಕೃತ್ವಾ ಯುಧಿಷ್ಠಿರ ॥35॥
ಎಲೈ ಯುಧಿಷ್ಠಿರನೇ! ಚೇಷ್ಟಾರಹಿತವೂ ಅಚೇತನವೂ ಆದ ಕಾಷ್ಠವನ್ನು ಕಾಷ್ಠದಿಂದ ಕಲ್ಲನ್ನು ಕಲ್ಲಿನಿಂದ ಮತ್ತು ಕಬ್ಬಿಣವನ್ನು ಕಬ್ಬಿಣದಿಂದ ಭೇದಿಸಿದಂತೆ ಸ್ವತಂತ್ರನಾಗಿ ಇರುವವನೂ ಜಗತ್ತಿಗೆ ಪ್ರಪಿತಾಮಹನೂ ಭಗವಂತನೂ ಆದ ನಾರಾಯಣದೇವನು ಪ್ರಾಣಿಗಳಿಗೆ ಜನ್ಮವನ್ನು ಕೊಟ್ಟು ಒಂದು ಪ್ರಾಣಿಯಿಂದ ಇನ್ನೊಂದು ಪ್ರಾಣಿಯನ್ನು ಕೊಲ್ಲುತ್ತಾನೆ.
ಸಂಪ್ರಯೋಜ್ಯ ವಿಯೋಜ್ಯೈವಂ ಕರ್ಮಕಾರಕರಃ ಪ್ರಭುಃ |
ಕ್ರೀಡತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ ॥36॥
ಜೀವರನ್ನು ಒಟ್ಟಿಗೆ ಸೇರಿಸಿ ಹೀಗೆ ವಿಯೋಗಗೊಳಿಸಿ ಅವರು ಕರ್ಮಗಳನ್ನು ಮಾಡುವಂತೆ ಮಾಡಿ ಪ್ರಭುವಾದ ಭಗವಂತನು ಮಕ್ಕಳು ಆಟಿಕೆಯ ಜೊತೆಯಲ್ಲಿ ಆಡುವಂತೆ ಜೀವರ ಜೊತೆಯಲ್ಲಿ ಆಡುತ್ತಾನೆ.
ನ ಮಾತೃಪಿತೃವದ್ ರಾಜನ್ ಧಾತಾ ಭೂತೇಷು ವರ್ತತೇ |
ರೋಷಾದಿವ ಪ್ರವೃತ್ತೋಽಯಂ ಯಥಾಽಯಮಿತರೋ ಜನಃ ॥37॥
ಎಲೈ ರಾಜನೇ! ಧಾತೃ ಆದ ನಾರಾಯಣನು ತಂದೆಯಂತೆ ಅಥವಾ ತಾಯಿಯಂತೆ ಎಲ್ಲಾ ಜೀವರಲ್ಲೂ ವರ್ತಿಸುವುದಿಲ್ಲ. ಪಾಮರ ಜನರಂತೆ ಅವನು ರೋಷದಿಂದ ಪ್ರವೃತ್ತನಾಗುತ್ತಾನೆ.
ಆರ್ಯಾನ್ ಶೀಲವತೋ ದೃಷ್ಟ್ವಾ ಹ್ರೀಮತೋ ವೃತ್ತಿಕರ್ಶಿತಾನ್ |
ಅನಾರ್ಯಾನ್ ಸುಖಿನಶ್ಚೈವ ಚಿಂತಯಾಮ್ಯತಿವಿಹ್ವಲಾ ॥38॥
ಆರ್ಯರೂ ಶೀಲವುಳ್ಳವರೂ ವಿನಯಸಂಪನ್ನರೂ ಆದ ಪುರುಷರು ಜೀವನೋಪಾಯವಿಲ್ಲದೆ ಬಳಲುವುದನ್ನೂ ಮತ್ತು ಅನಾರ್ಯರು ಸುಖಿಗಳಾಗಿ ಇರುವುದನ್ನೂ ನಾನು ಅತ್ಯಂತ ವಿಹ್ವಲಳಾಗಿ ಯೋಚಿಸುತ್ತೇನೆ.
ತವೇಮಾಮಾಪದಂ ದೃಷ್ಟ್ವಾ ಸಮೃದ್ಧಿಂ ಚ ಸುಯೋಧನೇ |
ಧಾತಾರಂ ಗರ್ಹಯೇ ಪಾರ್ಥ ವಿಷಮಂ ಯೋಽನುಪಶ್ಯತಿ ॥39॥
ಎಲೈ ಪಾರ್ಥನೇ! ನಿನ್ನ ಈ ಆಪತ್ತನ್ನೂ ದುರ್ಯೋಧನನ ಸಂಪತ್ತನ್ನೂ ನೋಡಿ ವಿಷಮವಾಗಿ ಎಲ್ಲವನ್ನೂ ನೋಡುವ ಆ ಈಶ್ವರನನ್ನೇ ನಿಂದಿಸುತ್ತೇನೆ.
ಆರ್ಯಶಾಸ್ತ್ರಾತಿಗೇ ಕ್ರೂರೇ ಲುಬ್ಧೇ ಧರ್ಮಾಪಲಾಪಿನಿ |
ಧಾರ್ತರಾಷ್ಟ್ರೇ ಶ್ರಿಯಂ ದತ್ತ್ವಾ ಧಾತಾ ಕಿಂ ಫಲಮಶ್ನುತೇ ॥40॥
ಆರ್ಯರ ನಡತೆಗೆ ಬಹಳ ದೂರನಾದ, ಕ್ರೂರನೂ ಲೋಭಿಯೂ ಧರ್ಮನಾಶಕನೂ, ಆದ ದುರ್ಯೋಧನನಿಗೆ ಸಂಪತ್ತನ್ನು ಕೊಟ್ಟು ಭಗವಂತನಿಗೆ ಯಾವ ಪ್ರಯೋಜನವು ಉಂಟಾಗುತ್ತದೆ? (ಎಷ್ಟು ಐಶ್ವರ್ಯವಿದ್ದರೂ ಅವನು ಭಗವದಾರಾಧನೆಯನ್ನು ಮಾಡುವುದಿಲ್ಲವಾದ್ದರಿಂದ ಅವನ ಐಶ್ವರ್ಯವು ನಿಷ್ಪ್ರಯೋಜನ ಎಂದು ಅಭಿಪ್ರಾಯ)
ಕರ್ಮ ಚೇತ್ ಕೃತಮನ್ವೇತಿ ಕರ್ತಾರಂ ನಾನ್ಯಮೃಚ್ಛತಿ |
ಕರ್ಮಣಾ ತೇನ ಪಾಪೇನ ಲಿಪ್ಯತೇ ನೂನಮೀಶ್ವರಾತ್ ॥41॥
ಒಂದು ಕರ್ಮವು ಆ ಜೀವನು ಹಿಂದೆಮಾಡಿದ ಕರ್ಮವನ್ನು ಅನುಸರಿಸುತ್ತದೆ ಎಂದಾದರೆ ಆ ಹಿಂದಿನ ಕರ್ಮಕ್ಕೂ ಈಶ್ವರನೇ ಸ್ವತಂತ್ರಕರ್ತೃವಾದವನು. ಜೀವನು ಅಸ್ವತಂತ್ರನಾದವನು. ಆದ್ದರಿಂದ ತನ್ನ ಸ್ವಾತಂತ್ರ್ಯದಿಂದ ಕರ್ಮವನ್ನು ಮಾಡಿಸಿದ ಈಶ್ವರನಿಗೆ ಆ ಕರ್ಮದ ಪಾಪದ ಫಲವು ದೊರೆಯಬೇಕು. (ಹೀಗೆ ಪೂರ್ವಪಕ್ಷವನ್ನು ಮಾಡಿ ಲಿಪ್ಯತೇ ನೂನಮೀಶ್ವರಾತ್ ಎಂಬ ಅಂಶದಿಂದ ಸಮಾಧಾನವನ್ನು ಹೇಳುತ್ತಾರೆ. ನು ಊನಂ ಈಶ್ವರಾತ್ ಎಂದು ಪದಚ್ಛೇದ. ಲಿಪ್ಯತೇ ಎಂಬುದನ್ನು ಅನುವೃತ್ತಿಮಾಡಿಕೊಳ್ಳಬೇಕು.)

ಜೀವ ಸಮುದಾಯವು ಈಶ್ವರನಿಗಿಂತ ಊನವಾಗಿದೆ ಎಂದರೆ ಈಶ್ವರನಿಗಿರುವ ಸ್ವಾತಂತ್ರ್ಯಾದಿಗುಣಗಳು ಜೀವರಿಗೆ ಇಲ್ಲ. ಆದ್ದರಿಂದ ಸ್ವತಂತ್ರನಾದ ಈಶ್ವರನು ಸ್ವಾತಂತ್ರ್ಯ ಇರುವ ಕಾರಣದಿಂದಲೇ ತನಗೆ ಪಾಪಲೇಪವಾಗದಂತೆ ನೋಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದಾನೆ. ಆದ್ದರಿಂದ ಅವನಿಗೆ ಪಾಪಲೇಪವಾಗುವುದಿಲ್ಲ. ಜೀವನು ಅಸ್ವತಂತ್ರನಾದರೂ ಕರ್ತೃತ್ವವನ್ನು ಹೊಂದಿರುವುದರಿಂದ . ಲೋಕದಲ್ಲಿ ಪರಾಧೀನಪಾಪಕರ್ತೃವಿಗೂ ಶಿಕ್ಷೆಯು ಇರುವಂತೆ ಜೀವನಿಗೆ ಪಾಪಲೇಪವಿದೆ. ಮತ್ತು ಜೀವನಿಗೆ ಪಾಪಲೇಪವನ್ನು ಪರಿಹರಿಸಿಕೊಳ್ಳುವ ಸ್ವಾತಂತ್ರ್ಯ ಅಥವಾ ಸಾಮರ್ಥ್ಯವಿಲ್ಲದಿರುವುದರಿಂದ ಅವನು ಪಾಪದ ಫಲವನ್ನು ಅನುಭವಿಸುತ್ತಾನೆ.

ಅಥ ಕರ್ಮಕೃತಂ ಪಾಪಂ ನ ಚೇತ್ ಕರ್ತಾರಮೃಚ್ಛತಿ |
ಕಾರಣಂ ಬಲಮೇವೇಹ ಜಾನಂಶೋಚಾಮಿ ದುರ್ಬಲಾನ್ ॥42॥

ಮತ್ತು ಕರ್ಮದಿಂದ ಉಂಟಾದ ಪಾಪವು ಸ್ವತಂತ್ರಕರ್ತೃವಾದ ನಾರಾಯಣನನ್ನು ತಲುಪದಿದ್ದರೆ ಅದಕ್ಕೆ ಸ್ವಾತಂತ್ರ್ಯರೂಪವಾದ ಬಲವೇ ಕಾರಣ. ಆದ್ದರಿಂದ ನಿಮ್ಮ ಶತ್ರುಗಳು ನಿಮ್ಮಿಂದ ರಾಜ್ಯವನ್ನು ಅಪಹರಿಸಿದರೂ ನಿಮಗೆ ನಿವಾರಿಸಿಕೊಳ್ಳುವ ಸಾಮರ್ಥ್ಯವಿಲ್ಲದಿರುವುದರಿಂದ ನೀವು ದುರ್ಬಲರು. ಹೀಗೆ ತಿಳಿದು ದುರ್ಬಲರಾದ ನಿಮ್ಮನ್ನು ನೋಡಿ ನಾನು ಶೋಕಪಡುತ್ತಿದ್ದೇನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಸಪ್ತದಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.

* * * *

ಇಪ್ಪತ್ತೆಂಟನೆಯ ಅಧ್ಯಾಯ

(ದ್ರೌಪದಿಯನ್ನು ಕುರಿತು ಯುಧಿಷ್ಠಿರನಿಂದ ಧರ್ಮದ ಸಫಲತ್ವ ಪ್ರತಿಪಾದನೆ.)

ಯುಧಿಷ್ಠಿರಃ

ಫಲ್ಗು ಚಿತ್ರಪದಂ ಶ್ಲಕ್ಷ್ಣಂ ಯಾಜ್ಞಸೇನಿ ತ್ವಯಾ ವಚಃ |
ಉಕ್ತಂ ಯಚ್ಛ್ರುತಮಸ್ಮಾಭಿರ್ನಾಸ್ತಿಕ್ಯಂ ಸಂಪ್ರಭಾಷಸೇ ॥1॥

ಯಾಜ್ಞಸೇನಿಯೇ! ನಾನು ಕೇಳಿದ ನೀನು ಆಡಿದ ಮಾತುಗಳು ಮಧುರವಾಗಿ ಸುಂದರಪದಗಳಿಂದ ಕೂಡಿದ್ದರೂ ಅಲ್ಪವಾದುದು (ನಿರರ್ಥಕವಾದುದು) ನೀನು ನಾಸ್ತಿಕ್ಯವಾದವನ್ನು ಹೇಳುತ್ತಿದ್ದೀಯೆ.

ನಾಹಂ ಧರ್ಮಫಲಾಕಾಂಕ್ಷೀ ರಾಜಪುತ್ರಿ ಚರಾಮ್ಯುತ |
ದದಾಮಿ ದೇಯಮಿತ್ಯೇವ ಯಜೇ ಯಷ್ಟವ್ಯಮಿತ್ಯುತ ॥2॥

ರಾಜಪುತ್ರಿಯೇ! ನಾನು ಧರ್ಮದ ಫಲವನ್ನು ಬಯಸಿ ಧರ್ಮವನ್ನು ಆಚರಿಸುತ್ತಿಲ್ಲ. ದಾನಮಾಡಬೇಕೆಂದಷ್ಟೇ ದಾನಮಾಡುತ್ತೇನೆ. ಯಾಗಮಾಡಬೇಕೆಂದಷ್ಟೇ ಯಾಗವನ್ನು ಮಾಡುತ್ತೇನೆ.

ಅಸ್ತು ವಾಽತ್ರ ಫಲಂ ಮಾ ವಾ ಕರ್ತವ್ಯಂ ಪುರುಷೇಣ ಯತ್ |
ಗೃಹೇ ನಿವಸತಾ ಕೃಷ್ಣೇ ಯಥಾಶಕ್ತಿ ಕರೋಮಿ ತತ್ ॥3॥

ಫಲವಿರಲಿ ಇಲ್ಲದಿರಲಿ ಗೃಹಸ್ಥನಾದವನು ತನ್ನ ಕರ್ತವ್ಯವನ್ನು ಮಾಡಬೇಕು.ನಾನು ನನ್ನ ಶಕ್ತಿಯಿದ್ದಷ್ಟು ಕರ್ತವ್ಯವನ್ನು ಮಾಡುತ್ತೇನೆ.

ಧರ್ಮವಾಣಿಜ್ಯಕೋ ದೀನೋ ಜಘನ್ಯೋ ಧರ್ಮವಾದಿನಾಮ್ |
ಧರ್ಮಂ ಚರಾಮಿ ಸುಶ್ರೋಣಿ ನ ಧರ್ಮಫಲಕಾರಣಾತ್ ॥4॥

ಎಲೌ ಸುಶ್ರೋಣಿಯೇ! ಧರ್ಮದವ್ಯಾಪಾರವನ್ನು ಮಾಡುವವನಾಗಿ, ದೀನನಾಗಿ, ಧರ್ಮವಾದಿಗಳಲ್ಲಿ ನೀಚನಾಗಿ, ಧರ್ಮದ ಫಲವನ್ನು ಉದ್ದೇಶಿಸಿ ನಾನು ಧರ್ಮವನ್ನು ಆಚರಿಸುವುದಿಲ್ಲ.

ಆಗಮಾನನತಿಕ್ರಮ್ಯ ಸತಾಂ ವೃತ್ತಮವೇಕ್ಷ್ಯ ಚ |
ಧರ್ಮ ಏವ ಮನಃ ಕೃಷ್ಣೇ ಸ್ವಭಾವಾಚ್ಚೈವ ಮೇ ಧೃತಮ್ ॥5॥

ದ್ರೌಪದಿಯೇ ಶಾಸ್ತ್ರಗಳನ್ನು ಮೀರದೆ ಸಜ್ಜನರ ಶೀಲವನ್ನು ನೋಡಿ ನನಗೆ ಸ್ವಾಭಾವಿಕವಾಗಿಯೇ ಧರ್ಮದಲ್ಲಿಯೇ ಮನಸ್ಸು ನಿಂತಿದೆ.

ನ ಧರ್ಮಫಲಮಾಪ್ನೋತಿ ಯೋ ಧರ್ಮಂ ದೋಗ್ಧುಮಿಚ್ಛತಿ |
ಯಶ್ಚೈನಂ ಶಂಕತೇ ಕೃತ್ವಾ ನಾಸ್ತಿಕ್ಯಾತ್ ಪಾಪಚೇತನಃ |
ನ ತಸ್ಯ ಜಾಯತೇ ಧರ್ಮೋ ನಿಷ್ಕ್ರಿಯಸ್ಯ ವರಾನನೇ ॥6॥

ಎಲೌ ಸುಂದರಿಯೇ! ಯಾರು ಧರ್ಮವನ್ನು ಆಚರಿಸಿ ಅದರಿಂದ ಫಲವನ್ನು ಪಡೆಯಲು ಬಯಸುತ್ತಾರೆಯೋ ಅಥವಾ ಯಾವನು ಧರ್ಮವನ್ನು ಆಚರಿಸಿದರೂ ಪಾಪಬುದ್ಧಿಯುಳ್ಳವನಾಗಿ ಇದಕ್ಕೆ ಫಲವಿದೆಯೋ ಇಲ್ಲವೋ ಎಂದು ಶಂಕೆಯನ್ನು ಮಾಡುತ್ತಾನೆಯೋ ಅಂತಹವನು ಮಾಡುವ ಕರ್ಮವು ವ್ಯರ್ಥವಾಗುವುದರಿಂದ ಧರ್ಮವೇ ಉತ್ಪತ್ತಿಯಾಗುವುದಿಲ್ಲ.

ಅತಿವಾದಾನ್ಮದಾಚ್ಚೈವ ಮಾ ಧರ್ಮಮತಿಶಂಕಥಾಃ |
ಧರ್ಮಾತಿಶಂಕೀ ಪುರುಷಃ ತಿರ್ಯಗ್ಗತಿಮವಾಪ್ಸ್ಯತಿ ॥7॥
ಧರ್ಮೋ ಯಸ್ಯಾತಿಶಂಕ್ಯಃ ಸ್ಯಾದ್ ದೋಷೋಽಸೌದುರ್ಬಲಾತ್ಮನಃ|
ವೇದಾಚ್ಛೂದ್ರ ಇವಾಪೇಯಾತ್ ಸ ಲೋಕಾದಜರಾಮರಾತ್ ॥8॥

ಅತಿವಾದಗಳಿಂದಾಗಲೀ ಅಥವಾ ಮದದಿಂದಾಗಲೀ ಧರ್ಮವನ್ನು ಶಂಕಿಸಬೇಡ. ಧರ್ಮದಲ್ಲಿ ಸಂಶಯಪಡುವ ಪುರುಷನು ನೀಚಯೋನಿಗಳನ್ನು ಹೊಂದುವನು. ಧರ್ಮವನ್ನು ಯಾವನು ಶಂಕಿಸುತ್ತಾನೆಯೋ ಅದು ದುರ್ಬಲ ಮನಸ್ಸುಳ್ಳ ಅವನ ದೋಷ. ವೇದಗಳಿಂದ ಶೂದ್ರನು ಹೊರಗೆ ಉಳಿದಂತೆ ಅಂತಹ ಅತಿಶಂಕೆಯನ್ನು ಮಾಡುವವನ ಅಜರಾಮರವಾದ ಲೋಕಗಳಿಂದ ಹೊರಗೆ

ಉಳಿಯುತ್ತಾನೆ.
ವೇದಾಧ್ಯಾಯೀ ಧರ್ಮರತಃ ಕುಲೇ ಜಾತೋ ಯಶಸ್ವಿನಿ |
ಸ್ಥವಿರೇಷು ಸ ಯೋಕ್ತವ್ಯೋ ರಾಜಭಿರ್ಧರ್ಮಚಾರಿಭಿಃ ॥9॥
ಎಲೌ ಯಶಸ್ವಿನಿಯೇ! ವೇದಾಧ್ಯಯನವನ್ನುಮಾಡಿ ಸತ್ಕುಲಪ್ರಸೂತನಾಗಿ ಧರ್ಮರತನಾಗಿರುವ ಪುರುಷನನ್ನು ಧರ್ಮಾನುಷ್ಠಾನ ತತ್ಪರರಾದ ರಾಜರು ದೊಡ್ಡವರ ಜೊತೆಯಲ್ಲಿ ಸಂಯೋಜಿಸಬೇಕು.
ಪಾಪೀಯಾನ್ ಸ ಹಿ ಶೂದ್ರೇಭ್ಯಃ ತಸ್ಕರೇಭ್ಯೋ ವಿಶೇಷತಃ |
ಶಾಸ್ತ್ರಾತಿಗೋ ಮಂದಬುದ್ಧಿರ್ಯೋ ಧರ್ಮಮತಿಶಂಕತೇ ॥10॥
ಯಾವ ಮಂದಬುದ್ಧಿಯುಳ್ಳವನು ಶಾಸ್ತ್ರಗಳನ್ನು ಮೀರಿ ಜೀವಿಸುತ್ತಾ ಧರ್ಮವನ್ನು ಶಂಕಿಸುತ್ತಾನೆಯೋ ಅವನು ಶೂದ್ರರಿಗಿಂತಲೂ ಮತ್ತು ಕಳ್ಳರಿಗಿಂತಲೂ ವಿಶೇಷವಾಗಿ ಪಾಪಿಷ್ಠನಾದವನು.
ಪ್ರತ್ಯಕ್ಷಂ ಹಿ ತ್ವಯಾ ದೃಷ್ಟ ಋಷಿರ್ಗಚ್ಛನ್ಮಹಾತಪಾಃ |
ಮಾರ್ಕಂಡೇಯೋಽಪ್ರಮೇಯಾತ್ಮಾ ಧರ್ಮೇಣ ಚಿರಜೀವಿತಃ ॥11॥
ಇಲ್ಲಿಗೆ ಬಂದು ಹೋದ ಮಹಾತಪಸ್ವಿಗಳಾದ ಅಪ್ರಮೇಯವಾದ ಅನುಭಾವವುಳ್ಳ ಮಾರ್ಕಂಡೇಯರು ಧರ್ಮದಿಂದಲೇ ಚಿರಜೀವಿಗಳಾಗಿದ್ದಾರೆ ಎಂದು ನೀನು ಪ್ರತ್ಯಕ್ಷವಾಗಿ ನೋಡಿದ್ದೀಯೆ.
ವ್ಯಾಸೋ ವಸಿಷ್ಠೋ ಮೈತ್ರೇಯೋ ನಾರದೋ ರೋಮಶಃ ಶುಕಃ |
ಅನ್ಯೇ ಚಾಪ್ಯೃಷಯಃ ಸರ್ವೇ ಧರ್ಮೇಣೈವ ಸುತೇಜಸಃ ॥12॥
ವ್ಯಾಸರು ವಸಿಷ್ಠರು ಮೈತ್ರೇಯರು ನಾರದರು ರೋಮಶರು ಶುಕಾಚಾರ್ಯರು ಇನ್ನೂ ಎಲ್ಲಾ ಋಷಿಗಳೂ ಸಹ ಧರ್ಮದಿಂದಲೇ ಒಳ್ಳೆಯ ಸಾಮರ್ಥ್ಯವನ್ನು ಪಡೆದಿದ್ದಾರೆ.
ಪ್ರತ್ಯಕ್ಷಂ ಪಶ್ಯಸಿ ಹ್ಯೇತಾನ್ ದಿವ್ಯಯೋಗಸಮನ್ವಿತಾನ್ |
ಶಾಪಾನುಗ್ರಹಣೇ ಶಕ್ತಾನ್ ದೇವೇಭ್ಯೋಽಪಿ ಗರೀಯಸಃ ॥13॥
ದಿವ್ಯಯೋಗಸಂಪನ್ನರಾದ ಶಾಪಾನುಗ್ರಹ ಶಕ್ತಿಸಂಪನ್ನರಾದ ದೇವತೆಗಳಿಗಿಂತಲೂ ಶ್ರೇಷ್ಠರಾದ ಇಂತಹವರನ್ನು ನೀನು ಪ್ರತ್ಯಕ್ಷವಾಗಿ ನೋಡುತ್ತಿದ್ದೀಯೆ.
ಏತೇ ಹಿ ಧರ್ಮಮೇವಾದೌ ವರ್ಣಯಂತಿ ಸದಾ ಮಮ |
ಕರ್ತವ್ಯಮಮರಪ್ರಖ್ಯಾಃ ಪ್ರತ್ಯಕ್ಷಾಗಮಬುದ್ಧಯಃ ॥14॥
ಪ್ರತ್ಯಕ್ಷ ಮತ್ತು ಆಗಮಾನುಸಾರಿಯಾದ ಬುದ್ಧಿಯುಳ್ಳ ಇವರೆಲ್ಲರೂ ಮೊದಲು ಧರ್ಮವನ್ನೇ ಅನುಷ್ಠಾನಮಾಡಬೇಕೆಂದು ನನಗೆ ಯಾವಾಗಲೂ ಹೇಳುತ್ತಿದ್ದಾರೆ.
ಅತೋ ನಾರ್ಹಸಿ ಕಲ್ಯಾಣಿ ಧಾತಾರಂ ಧರ್ಮಮೇವ ಚ |
ರಜೋಮೂಢೇನ ಮನಸಾ ಕ್ಷೇಪ್ತುಂ ಶಂಕಿತುಮೇವ ಚ |
ಉನ್ಮತ್ತಾನ್ ಮನ್ಯತೇ ಬಾಲಃ ಸರ್ವಾನಾಗತನಿಶ್ಚಯಾನ್ ॥15॥
ಎಲೌ ಕಲ್ಯಾಣಿಯೇ! ಆದ್ದರಿಂದ ನಾರಾಯಣನನ್ನಾಗಲೀ ಧರ್ಮವನ್ನಾಗಲೀ ದೋಷಯುಕ್ತವಾದ ಮನಸ್ಸಿನಿಂದ ನಿಂದಸಬೇಡ. ಅಥವಾ ಶಂಕಿಸಬೇಡ. ಬಾಲನಾದವನು ಎಲ್ಲವನ್ನೂ ತಿಳಿದ ದೊಡ್ಡವರನ್ನು ನೋಡಿ ಅವರನ್ನು ಹುಚ್ಚರೆಂದು ಭಾವಿಸುತ್ತಾನೆ.
ಸರ್ವಾತಿಶಂಕೀ ನಾನ್ಯಸ್ಮಿನ್ ಪ್ರಮಾಣಮಧಿಗಚ್ಛತಿ |
ಆತ್ಮಪ್ರಮಾಣಶ್ಚೋನ್ನದ್ಧಃ ಶ್ರೇಯಸೋ ಹ್ಯವಮನ್ಯತೇ ॥16॥
ಎಲ್ಲರನ್ನೂ ಶಂಕಿಸುವವನು ಇನ್ನೊಬ್ಬ ಪುರುಷನಲ್ಲಿ ವಿಶ್ವಾಸವನ್ನು ಹೊಂದುವುದಿಲ್ಲ. ತಾನೇ ತನಗೆ ಪ್ರಮಾಣಭೂತನಾಗಿ ದರ್ಪಿಷ್ಠನಾಗಿ ಶ್ರೇಷ್ಠರಾದವರನ್ನು ಅವಮಾನಮಾಡುತ್ತಾನೆ.
ಇಂದ್ರಿಯಪ್ರತಿಸಂಬದ್ಧಂ ಯದಿದಂ ಲೋಕಸಾಕ್ಷಿಕಮ್ |
ಏತಾವನ್ಮನ್ಯತೇ ಬಾಲೋ ಮೋಹಮನ್ಯತ್ರ ಗಚ್ಛತಿ ॥17॥
ಲೋಕಕ್ಕೆ ಪ್ರಮಾಣಭೂತರಾದ ಧರ್ಮಪ್ರದರ್ಶಕರಾದ ಋಷಿಗಳ ಕಥೆಯನ್ನು ಕೇಳಿ ಅವರನ್ನು ನಮ್ಮಂತೆ ಇಂದ್ರಿಯಲಂಪಟರು ಎಂದು ಭಾವಿಸಿ ಬಾಲಿಶನಾದ ತಾನೂ ಸಹ ವನಿತಾದಿಗಳಲ್ಲಿ ಆಸಕ್ತನಾಗುತ್ತಾನೆ.
ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ಯೋ ಧರ್ಮಮತಿಶಂಕತೇ |
ಧ್ಯಾಯನ್ ಸ ಕೃಪಣಃ ಪಾಪೋ ನ ಲೋಕಾನ್ ಪ್ರತಿಪದ್ಯತೇ ॥18॥
ಯಾವನು ಧರ್ಮವನ್ನು ಶಂಕಿಸುತ್ತಾನೆಯೋ ಅವನಿಗೆ ಪ್ರಾಯಶ್ಚಿತ್ತವಿಲ್ಲ. ಕೃಪಣನೂ ಪಾಪಿಯೂ ಆದ ಅವನು ಧರ್ಮದ ಫಲವನ್ನೇ ಚಿಂತಿಸುತ್ತಾ ಶ್ರೇಷ್ಠವಾದ ಲೋಕಗಳನ್ನು ಹೊಂದುವುದಿಲ್ಲ.
ಪ್ರಮಾಣಾನ್ಯತಿವೃತ್ತೋ ಹಿ ವೇದಶಾಸ್ತ್ರಾರ್ಥನಿಂದಕಃ |
ಕಾಮಲೋಭಾನ್ವಿತೋ ಮೂಢೋ ನರಕಂ ಪ್ರತಿಪದ್ಯತೇ ॥19॥
ಪ್ರಮಾಣಗಳನ್ನು ತಿರಸ್ಕರಿಸಿ ವೇದಶಾಸ್ತ್ರಾರ್ಥಗಳನ್ನು ನಿಂದಿಸಿ ಕಾಮಕ್ಕೂ ಲೋಭಕ್ಕೂ ವಶನಾದ ಮೂಢನು ನರಕವನ್ನು ಹೊಂದುತ್ತಾನೆ.
ಯಸ್ತು ನಿತ್ಯಂ ಕೃತಮತಿರ್ಧರ್ಮಮೇವಾಭಿಪದ್ಯತೇ |
ಅಶಂಕಮಾನಃ ಕಲ್ಯಾಣಿ ಸೋಽಮುತ್ರಾನಂದಮಶ್ನುತೇ ॥20॥
ಎಲೌ ಕಲ್ಯಾಣಿಯೇ! ಯಾವ ಸುಶಿಕ್ಷಿತಬುದ್ಧಿಯುಳ್ಳವನು ಧರ್ಮವನ್ನು ಶಂಕಿಸದೆ ನಿತ್ಯವೂ ಧರ್ಮವನ್ನೇ ಆಚರಿಸುತ್ತಾನೆಯೋ ಅವನು ಪರಲೋಕದಲ್ಲಿ ಆನಂದವನ್ನು ಪಡೆಯುತ್ತಾನೆ.

ಆರ್ಷಂ ಪ್ರಮಾಣಮುತ್ಸೃಜ್ಯ ಧರ್ಮಂ ನಪ್ರತಿಪಾಲಯನ್ |
ಧರ್ಮಶಾಸ್ತ್ರಾತಿಗೋ ಮೂಢ ಆಜನ್ಮಸು ನ ನಂದತಿ ॥21॥
ಋಷಿಗಳಿಗೂ ಪ್ರಮಾಣವಾದ ವೇದವನ್ನು ತಿರಸ್ಕರಿಸಿ ಧರ್ಮವನ್ನು ಆಚರಿಸದೆ ಧರ್ಮಶಾಸ್ತ್ರವನ್ನು ಮೀರುವ ಮೂಢನು ಜನ್ಮದಿಂದ ಆರಂಭಿಸಿ ಎಂದೂ ಒಳ್ಳೆಯದನ್ನು ಪಡೆಯುವುದಿಲ್ಲ.
ಯಸ್ಯ ನಾಕ್ಷಂ ಪ್ರಮಾಣಂ ಸ್ಯಾತ್ ಶಿಷ್ಟಾಚಾರಶ್ಚ ಭಾಮಿನಿ |
ನೈವ ತಸ್ಯ ವಶೇ ಲೋಕೋ ನಾಯಮಸ್ತೀತಿ ನಿಶ್ಚಯಃ ॥22॥
ಎಲೌ ಭಾಮಿನಿಯೇ! ಯಾವನಿಗೆ ಪ್ರತ್ಯಕ್ಷವಾಗಲೀ ಅಥವಾ ಶಿಷ್ಟಾಚಾರವಾಗಲೀ ಪ್ರಮಾಣವಾಗುವುದಿಲ್ಲವೋ ಅಂತಹವನಿಗೆ ಈ ಲೋಕವು ವಶವಾಗುವುದಿಲ್ಲ ಎಂಬುದು ನಿಶ್ಚಿತವಾದುದು.
ಶಿಷ್ಟೈರಾಚರಿತಂ ಧರ್ಮಂ ಕೃಷ್ಣೇ ಮಾ ಸ್ಮಾತಿಶಂಕಥಾಃ |
ಪುರಾಣಮೃಷಿಭಿಃ ಪ್ರೋಕ್ತಂ ಸರ್ವಜ್ಞೈಃ ಸರ್ವದರ್ಶಿಭಿಃ ॥23॥
ಎಲೌ ಕೃಷ್ಣೆಯೇ! ಸರ್ವಜ್ಞರೂ ಸರ್ವದರ್ಶಿಗಳೂ ಶಿಷ್ಟರೂ ಆದ ಋಷಿಗಳು ಉಪದೇಶಮಾಡಿ ಆಚರಿಸಿದ ಪುರಾತನ ಧರ್ಮವನ್ನು ಎಂದೂ ಶಂಕಿಸಬೇಡ.
ಧರ್ಮ ಏವ ಪ್ಲವೋ ನಾನ್ಯಃ ಸ್ವರ್ಗಂ ದ್ರೌಪದಿ ಗಚ್ಛತಾಮ್ |
ಸ ವೈ ನೌಃ ಸಾಗರಸ್ಯೇವ ವಣಿಜಃ ಪಾರಮಿಚ್ಛತಃ ॥24॥
ದ್ರೌಪದಿಯೇ! ಸಾಗರವನ್ನು ದಾಟಲು ಇಚ್ಛಿಸುವ ವ್ಯಾಪಾರಿಗೆ ಹಡಗು ಇದ್ದಂತೆ ಸ್ವರ್ಗಕ್ಕೆ ಹೋಗಲು ಬಯಸುವ ಸಜ್ಜನರಿಗೆ ಧರ್ಮವೇ ಹಡಗು. ಬೇರೆ ಉಪಾಯವಿಲ್ಲ.
ಅಚಲೋ ಯದಿ ಧರ್ಮಃ ಸ್ಯಾತ್ ಚರಿತೋಽಧರ್ಮಚಾರಿಭಿಃ |
ಅಪ್ರತಿಷ್ಠೇ ತಮಸ್ಯೇತದ್ ಜಗನ್ಮಜ್ಜೇದನಿಂದಿತೇ ॥25॥
ಎಲೌ ಅನಿಂದಿತೆಯೇ! ಅಧರ್ಮಾಚಾರಿಗಳಿಂದ ಭಕ್ಷಿಸಿ ನಾಶಮಾಡಲ್ಪಟ್ಟ ಧರ್ಮವು ಅಚಲವೇ ಆದ ಕಾರಣದಿಂದ (ನಾಶವು ಶಾಶ್ವತವಾದ ಕಾರಣದಿಂದ) ಧರ್ಮವನ್ನು ನಿಂದಿಸುವ ಈ ಜಗತ್ತು ನಿರಾಧಾರವಾದ ತಮಸ್ಸಿನಲ್ಲಿ ಮುಳುಗುತ್ತದೆ.
ನಿರ್ವಾಣಂ ನಾಧಿಗಚ್ಛೇಯುರ್ಜೀವೇಯುಃ ಪಶುಜೀವಿತಾಃ |
ವಿಘಾತೇನೈವ ಯುಜ್ಯೇಯುರ್ನ ಚಾರ್ಥಂ ಕಂಚಿದಾಪ್ನುಯುಃ ॥26॥
ತಪಶ್ಚ ಬ್ರಹ್ಮಚರ್ಯಂ ಚ ಯಜ್ಞಃ ಸ್ವಾಧ್ಯಾಯ ಏವ ಚ |
ದಾನಮಾರ್ಜವಮೇತಾನಿ ಯದಿ ಸ್ಯುರಫಲಾನಿ ವೈ ॥27॥
ಒಂದುಪಕ್ಷ ತಪಸ್ಸು ಬ್ರಹ್ಮಚರ್ಯ ಯಜ್ಞ ಸ್ವಾಧ್ಯಾಯ ದಾನ ಆರ್ಜವ ಇವುಗಳು ನಿಷ್ಫಲವಾದರೆ ಯಾರಿಗೂ ಮೋಕ್ಷವು ದೊರೆಯಲಾರದು ಮನುಷ್ಯರೆಲ್ಲರೂ ಪಶುಗಳಂತೆ ಜೀವಿಸುವರು. ಒಬ್ಬರನ್ನೊಬ್ಬರು ನಾಶಮಾಡುವುದರಲ್ಲೇ ಆಸಕ್ತರಾದಾರು. ಯಾರೂ ಯಾವ ಅರ್ಥವನ್ನೂ ಸಂಪಾದಿಸಲಾರರು.
ನಾಚರಿಷ್ಯನ್ ಪರೇ ಧರ್ಮಂ ಪರೇ ಪರತರೇ ಚ ಯೇ |
ವಿಪ್ರಲಂಭೋಽಯಮತ್ಯಂತಂ ಯದಿ ಸ್ಯುರಫಲಾಃ ಕ್ರಿಯಾಃ ॥28॥
ಯಾರು ಉಳಿದ ಪುರುಷರಿಗೆ ಅನ್ನದಾನಾದಿಧರ್ಮಗಳನ್ನು, ಸ್ವರ್ಗಾದಿಗಳ ವಿಷಯಗಳಲ್ಲಿ ಯಜ್ಞಾದಿಧರ್ಮಗಳನ್ನು, ಪರತರನಾದ ನಾರಾಯಣನ ವಿಷಯದಲ್ಲಿ ಪೂಜಾಧರ್ಮವನ್ನು, ಆಚರಿಸದೆ ಕೇವಲ ತಾವು ಉಪದೇಶಮಾಡುತ್ತಾರೆಯೋ ಅವರ ಧರ್ಮವಚನವು ಮೋಸದಿಂದ ಕೂಡಿದುದು. ಅವರ ಎಲ್ಲಾ ಕ್ರಿಯೆಗಳೂ ನಿಷ್ಫಲವಾಗುತ್ತವೆ.
ಋಷಯಶ್ಚೈವ ದೇವಾಶ್ಚ ಗಂಧರ್ವಾಸುರರಾಕ್ಷಸಾಃ |
ಈಶ್ವರಾಃ ಕಸ್ಯ ಹೇತೋಸ್ತೇ ಚರೇಯುರ್ಧರ್ಮಮಾದೃತಾಃ ॥29॥
ಸರ್ವಸಮರ್ಥರಾದ ಋಷಿಗಳು ದೇವತೆಗಳು ಗಂಧರ್ವರು ಅಸುರರು ಮತ್ತು ರಾಕ್ಷಸರು ಯಾವ ಕಾರಣಕ್ಕಾಗಿ ಆದರದಿಂದ ಧರ್ಮವನ್ನು ಆಚರಿಸುತ್ತಾರೆ?
ಸಫಲಂ ತ್ವಿಹ ವಿಜ್ಞಾಯ ಧಾತಾರಂ ಶ್ರೇಯಸಿ ಸ್ಥಿತಮ್ |
ಧರ್ಮಂ ತೇ ಹ್ಯಾಚರನ್ ಕೃಷ್ಣೇ ತದ್ಧಿ ಧರ್ಮಂ ಸನಾತನಮ್ ॥30॥
ಎಲೌ ದ್ರೌಪದಿಯೇ! ಅವರು ಧರ್ಮವನ್ನು ಸಫಲವೆಂದು ತಿಳಿದು ನಾರಾಯಣನು ಶ್ರೇಯಸ್ಸನ್ನು ಮಾಡುವವನೆಂದು ತಿಳಿದು ಧರ್ಮವನ್ನು ಆಚರಿಸಿದರು. ಎಲೌ ದ್ರೌಪದಿಯೇ ಅದೇ ಸನಾತನವಾದ ಧರ್ಮ.
ಸ ಚಾಯಂ ಸಫಲೋ ಧರ್ಮೋ ನ ಧರ್ಮೋಽಫಲಮಶ್ನುತೇ|
ದೃಶ್ಯಂತೇಽಪಿ ಹಿ ವಿದ್ಯಾನಾಂ ಫಲಾನಿ ತಪಸಾಂ ತಥಾ ॥31॥
ಅಂತಹ ಈ ಧರ್ಮವು ಸಫಲವಾದುದು. ಧರ್ಮವು ಅಫಲವಾಗುವುದಿಲ್ಲ. ವಿದ್ಯೆ ಮತ್ತು ತಪಸ್ಸಿನ ಫಲಗಳು ಪ್ರತ್ಯಕ್ಷವಾಗಿ ಕಾಣುತ್ತವೆಯಷ್ಟೇ?
ತ್ವಯ್ಯೇತದ್ವೈ ವಿಜಾನೀಹಿ ಜನ್ಮ ಕೃಷ್ಣೇ ಯಥಾ ಶ್ರುತಮ್ |
ವೇತ್ಥ ಚಾಪಿ ಯಥಾ ಜಾತೋ ಧೃಷ್ಟದ್ಯುಮ್ನಃ ಪ್ರತಾಪವಾನ್ ॥32॥
ದ್ರೌಪದಿಯೇ, ನಾನು ಕೇಳಿರುವಂತೆ ನಿನ್ನ ಜನನವನ್ನೇ ವಿಚಾರಮಾಡು. ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನು ಹೇಗೆ ಜನಿಸಿದನೆಂದು ನೀನು ತಿಳಿದಿದ್ದೀಯೆ.
ಏತಾವದೇವ ಪರ್ಯಾಪ್ತಮುಪಮಾನಂ ಶುಚಿಸ್ಮಿತೇ |
ಕರ್ಮಣಾಂ ಫಲಮಸ್ತೀತಿ ಧೀರೋಽಲ್ಪೇನಾಪಿ ತುಷ್ಯತಿ ॥33॥

ಶುಚಿಸ್ಮಿತೆಯೇ! ಕರ್ಮಗಳಿಗೆ ಫಲವಿದೆ ಎಂಬ ವಿಷಯದಲ್ಲಿ ಈ ದೃಷ್ಟಾಂತವೇ ಸಾಕು. ಧೀರನಾದವನು ಅಲ್ಪದಿಂದಲೂ (ಅಲ್ಪ ದೃಷ್ಟಾಂತದಿಂದಲೂ) ಸಂತುಷ್ಟನಾಗುತ್ತಾನೆ.
ಬಹುನಾಽಪಿ ಹ್ಯವಿದ್ವಾಂಸೋ ನೈವ ತುಷ್ಯಂತ್ಯಬುದ್ಧಯಃ |
ತೇಷಾಂ ನ ಧರ್ಮತಃ ಕಿಂಚಿತ್ ಪ್ರೇತ್ಯ ಕರ್ಮಾಸ್ತಿ ಶರ್ಮ ವಾ ॥34॥
ಅವಿದ್ವಾಂಸರಾದವರು ಸದ್ಬುದ್ಧಿ ಇಲ್ಲದೆ ಬಹುಲಾಭವಾದರೂ ಸಂತುಷ್ಟರಾಗುವುದಿಲ್ಲ. ಅವರಿಗೆ ಧರ್ಮದಿಂದ ಮುಂದೆ ಮರಣಾನಂತರದಲ್ಲಿ ಉಂಟಾಗುವ ಯಾವುದೇ ಕಾರ್ಯವಾಗಲೀ ಅಥವಾ ಸುಖವಾಗಲೀ ಇಲ್ಲ.
ಕರ್ಮಣಾಮುತ ಪುಣ್ಯಾನಾಂ ಪಾಪಾನಾಂ ಚ ಫಲೋದಯಃ |
ಪ್ರಭವಶ್ಚಾಪ್ಯಯಶ್ಚೈವ ದೇವಗುಹ್ಯಾನಿ ಭಾಮಿನಿ ॥35॥
ಎಲೌ ಭಾಮಿನಿಯೇ! ಪುಣ್ಯ ಮತ್ತು ಪಾಪಕರ್ಮಗಳ ಫಲೋದಯ ಅವುಗಳ ಉತ್ಪತ್ತಿ ಮತ್ತು ನಾಶಗಳು ದೇವಗುಹ್ಯವಾದವು. (ಕೋಪವುಳ್ಳ ಸ್ತ್ರೀಗೆ ಭಾಮಿನಿ ಎಂದು ಹೆಸರು. ದ್ರೌಪದಿಯೂ ಈಗ ದುರ್ಯೋಧನನ ಮೇಲೆ ಕೋಪಹೊಂದಿರುವುದರಿಂದ ಧರ್ಮರಾಜನು ಅವಳನ್ನು ಪುನಃಪುನಃ ಭಾಮಿನಿ ಎಂದು ಸಂಬೋಧಿಸುತ್ತಾನೆ.)
ನೈತಾನಿ ವೇದ ಯಃ ಕಶ್ಚಿನ್ಮಾನವಃ ಶುಭದರ್ಶನೇ |
ಅಪಿ ಕಲ್ಪಸಹಸ್ರೇಣ ನರಃ ಶ್ರೇಯೋಽಧಿಗಚ್ಛತಿ |
ರಕ್ಷ್ಯಾಣ್ಯೇತಾನಿ ದೇವಾನಾಂ ಗೂಢಮಾಯಾ ಹಿ ದೇವತಾಃ ॥36॥
ಶುಭದರ್ಶನೆಯೇ! ಇವುಗಳು ಯಾವ ಮಾನವನಿಗೂ ತಿಳಿಯುವುದಿಲ್ಲ. ಧರ್ಮಾಚರಣೆಯನ್ನು ಮಾಡುವ ಮನುಷ್ಯನು ಒಂದು ಸಹಸ್ರ ಕಲ್ಪದ ನಂತರವಾದರೂ ಶ್ರೇಯಸ್ಸನ್ನು ಹೊಂದುತ್ತಾನೆ. ಈ ದೇವಗುಹ್ಯವನ್ನು ರಕ್ಷಣೆಮಾಡಬೇಕು. ದೇವತೆಗಳಿಗೆ ತಮ್ಮ ಸಾಮರ್ಥ್ಯವನ್ನು ಗೂಹನ ಮಾಡುವುದರಲ್ಲೇ ಪ್ರೀತಿ.
ಕೃಶಾಂಗಾಃ ಸುವ್ರತಾಶ್ಚೈವ ತಪಸಾ ದಗ್ಧಕಿಲ್ಬಿಷಾಃ |
ಪ್ರಸನ್ನೈರ್ಮಾನಸೈರ್ಯುಕ್ತಾಃ ಪಶ್ಯಂತ್ಯೇತಾನಿ ವೈ ಪ್ರಜಾಃ ॥37॥
ಕೃಶಾಂಗರು, ಒಳ್ಳೆಯ ವ್ರತಧಾರಿಗಳು, ತಪಸ್ಸಿನಿಂದ ಪಾಪವನ್ನು ಕಳೆದುಕೊಂಡವರು, ಪ್ರಸನ್ನಮನಸ್ಸಿನಿಂದ ಯುಕ್ತರಾದವರು, ಇಂತಹ ಪುರುಷರನ್ನು ಪ್ರಜೆಗಳು ನೋಡುತ್ತಾರಷ್ಟೆ?
ನ ಫಲಾದರ್ಶನಾದ್ಧರ್ಮಃ ಶಂಕಿತವ್ಯೋ ನ ದೇವತಾಃ |
ಯಷ್ಟವ್ಯಂ ಚಾಪ್ರಮತ್ತೇನ ದಾತವ್ಯಂ ಚಾನಸೂಯತಾ ॥38॥
ಫಲವು ಕಾಣುವುದಿಲ್ಲ ಎಂಬ ಕಾರಣದಿಂದಾಗಿ ಧರ್ಮವನ್ನಾಗಲೀ ದೇವತೆಗಳನ್ನಾಗಲೀ ಶಂಕಿಸಬಾರದು. ಆಲಸ್ಯವನ್ನು ಮಾಡದೆ ಯಾಗವನ್ನು ಮಾಡಬೇಕು. ಮಾತ್ಸರ್ಯವಿಲ್ಲದೆ ದಾನವನ್ನು ಮಾಡಬೇಕು.
ಕರ್ಮಣಾಂ ಫಲಮಸ್ತೀತಿ ತಥೈತದ್ ಧರ್ಮಶಾಸನಮ್ |
ಬ್ರಹ್ಮಾ ಪ್ರೋವಾಚ ಪುತ್ರಾಣಾಂ ಯದೃಷಿರ್ವೇದ ಕಾಶ್ಯಪಃ ॥39॥
ತಸ್ಮಾತ್ತೇ ಸಂಶಯಃ ಕೃಷ್ಣೇ ನೀಹಾರ ಇವ ನಶ್ಯತು |
ವಿಮೃಶ್ಯ ಧರ್ಮಮಸ್ತೀತಿ ನಾಸ್ತಿಕ್ಯಂ ಭಾವಮುತ್ಸೃಜ ॥40॥
ಕರ್ಮಗಳಿಗೆ ಫಲವಿದೆ ಎಂಬುದು ಧರ್ಮಶಾಸನ. ಇದನ್ನು ಬ್ರಹ್ಮದೇವರು ತಮ್ಮ ಮಕ್ಕಳಿಗೆ ಹೇಳಿದರು. ಕಾಶ್ಯಪರು ಇದನ್ನು ತಿಳಿದಿದ್ದಾರೆ. ಆದ್ದರಿಂದ ಎಲೌ ಕೃಷ್ಣೆಯೇ! ನಿನ್ನ ಸಂಶಯವು ಮಂಜಿನಂತೆ ಕರಗಿಹೋಗಲಿ. ಧರ್ಮವಿದೆ ಎಂದು ವಿಮರ್ಶೆಮಾಡಿ ತಿಳಿದು ನಾಸ್ತಿಕ್ಯಭಾವವನ್ನು ತೊರೆ.
ಈಶ್ವರಂ ಚಾಪಿ ಭೂತಾನಾಂ ಧಾತಾರಂ ಮಾ ವಿಚಿಕ್ಷಿಪ |
ಶಿಕ್ಷಸ್ವೈನಂ ನಮಸ್ವೈನಂ ಮಾಭೂತ್ ತೇಽಬುದ್ಧಿರೀದೃಶೀ ॥41॥
ಎಲ್ಲ ಜೀವರಿಗೆ ಒಡೆಯನಾದ ನಾರಾಯಣನನ್ನು ನಿಂದಿಸಬೇಡ. ಅವನನ್ನು ತಿಳಿ. ಅವನಿಗೆ ನಮಸ್ಕರಿಸು. ನಿನಗೆ ಇಂತಹ ದುರ್ಬುದ್ಧಿಯು ಬರುವುದು ಬೇಡ.
ಯಸ್ಯ ಪ್ರಸಾದಾತ್ತದ್ಭಕ್ತೋ ಮರ್ತ್ಯೋ ಗಚ್ಛತ್ಯಮರ್ತ್ಯತಾಮ್ |
ಉತ್ತಮಾ ದೇವತಾಃ ಕೃಷ್ಣೇ ಮಾತಿವೋಚಃ ಕಥಂಚನ ॥42॥
ಅವನ ಅನುಗ್ರಹದಿಂದ ಮರಣಶೀಲನಾದ ಅವನ ಭಕ್ತನು ಮುಕ್ತನಾಗುತ್ತಾನೆ. ಕೃಷ್ಣೆಯೇ, ಉತ್ತಮ ದೇವತೆಗಳನ್ನು ಯಾವ ರೀತಿಯಲ್ಲಿಯೂ ನಿಂದಿಸಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
(ಯುಧಿಷ್ಠಿರನನ್ನು ಕುರಿತು ದ್ರೌಪದಿಯಿಂದ ಬೃಹಸ್ಪತಿಗಳು
ಹೇಳಿದ ನೀತಿಯ ಕಥನ.)
ದ್ರೌಪದೀ
ನಾವಮನ್ಯೇ ನ ಗರ್ಹೇ ಚ ಧರ್ಮಂ ಪಾರ್ಥ ಕದಾಚನ |
ಈಶ್ವರಂ ಕುತ ಏವಾಹಮವಮಂಸ್ಯೇ ಪ್ರಜಾಪತಿಮ್ ॥1॥

ಎಲೈ ಪಾರ್ಥನೇ! ನಾನು ನಿನ್ನನ್ನಾಗಲೀ ಅಥವಾ ಧರ್ಮವನ್ನಾಗಲೀ ಎಂದೂ ಅವಮಾನಮಾಡುತ್ತಿಲ್ಲ. ಪ್ರಜಾಪತಿಯಾದ ಈಶ್ವರನಿಗೆ ಏಕೆ ಅವಮಾನವನ್ನು ಮಾಡುತ್ತೇನೆ?
ಆರ್ತಾಽಹಂ ಪ್ರಲಪಾಮೀಹ ಇತಿ ಮಾಂ ವಿದ್ಧಿ ಭಾರತ |
ಭೂಯಶ್ಚ ವಿಲಪಿಷ್ಯಾಮಿ ಸುಮನಾಸ್ತನ್ನಿಬೋಧ ಮೇ ||2||
ಎಲೈ ಭಾರತನೇ! ನಾನು ಆರ್ತಳಾಗಿ ಪ್ರಲಾಪವನ್ನು ಮಾಡುತ್ತಿದ್ದೇನೆಂದು ನನ್ನನ್ನು ತಿಳಿ. ಶುದ್ಧವಾದ ಮನಸ್ಸನ್ನೇ ಹೊಂದಿ ಪುನಃ ವಿಲಾಪವನ್ನು ಮಾಡುವೆನು ಅದನ್ನು ನೀನು ಕೇಳು.
ಕರ್ಮ ಖಲ್ವಿಹ ಕರ್ತವ್ಯಂ ಜಾತೇನಾಮಿತ್ರಕರ್ಶನ |
ಅಕರ್ಮಾಣೋ ಹಿ ಜೀವಂತಿ ಸ್ಥಾವರಾ ನೇತರೇ ಜನಾಃ ||3||
ಶತ್ರುಕರ್ಶನನೇ! ಈ ಭೂಮಿಯಲ್ಲಿ ಹುಟ್ಟಿದವನು ಕರ್ಮವನ್ನು ಮಾಡಬೇಕು. ಕರ್ಮವನ್ನು ಮಾಡದೇ ಜೀವಿಸುವವು ಮರಗಿಡಗಳು ಮಾತ್ರ. ಮನುಷ್ಯಾದಿಗಳಲ್ಲ.
ಆಮಾತೃಸ್ತನ್ಯಪಾನಾಚ್ಚ ಯಾವಚ್ಛೈತ್ಯೋಪಸರ್ಪಣಾತ್ |
ಜಂಗಮಾಃ ಕರ್ಮಣಾ ವೃತ್ತಿಮಾಪ್ನುವಂತಿ ಯುಧಿಷ್ಠಿರ ||4||
ಎಲೈ ಯುಧಿಷ್ಠಿರನೇ! ತಾಯಿಯ ಸ್ತನ್ಯಪಾನದಿಂದ ಆರಂಭಿಸಿ ಚಿತೆಯನ್ನು ಏರುವವರೆಗೆ ಚಲಿಸುವ ಪ್ರಾಣಿಗಳೆಲ್ಲವೂ ಕರ್ಮದಿಂದಲೇ ಜೀವನವನ್ನು ಸಾಗಿಸುತ್ತವೆ. (ಮರಣದವರೆಗೆ ಎಂದು ಹೇಳದೆ ಚಿತೆಯವರೆಗೆ ಎಂದು ಹೇಳಿ ಶವದಾಹ ಜನಿತವಾದ ಪುಣ್ಯವು ಮೃತವ್ಯಕ್ತಿಗೆ ಸೇರುತ್ತದೆ ಎಂದು ಸೂಚಿಸುತ್ತಾರೆ ವಾದಿರಾಜರು)
ಜಂಗಮೇಷು ವಿಶೇಷೇಣ ಮನುಷ್ಯಾ ಭರತರ್ಷಭ |
ಇಚ್ಛಂತಿ ಕರ್ಮಣಾ ವೃತ್ತಿಮವಾಪ್ತುಂ ಪ್ರೇತ್ಯ ಚೇಹ ಚ ||5||
ಎಲೈ ಭರತಶ್ರೇಷ್ಠನೇ! ಚಲಿಸುವ ಪ್ರಾಣಿಗಳಲ್ಲಿ ವಿಶೇಷವಾಗಿ ಮನುಷ್ಯರು ತಮ್ಮ ಕರ್ಮದಿಂದಲೇ ಇಲ್ಲಿಯೂ ಮತ್ತು ಪರಲೋಕದಲ್ಲಿಯೂ ಜೀವನವನ್ನು ಮಾಡಲು ಇಚ್ಛಿಸುತ್ತಾರೆ.
ಉತ್ಥಾನಮಭಿಜಾನಂತಿ ಸರ್ವಭೂತಾನಿ ಭಾರತ |
ಪ್ರತ್ಯಕ್ಷಂ ಫಲಮಶ್ನಂತಿ ಕರ್ಮಣಾಂ ಲೋಕಸಾಕ್ಷಿಕಮ್ ||6||
ಪಶ್ಯಂತಃ ಸ್ವಂ ಸಮುತ್ಥಾನಮುಪಜೀವಂತಿ ಜಂತವಃ |
ಅಪಿ ಧಾತಾ ವಿಧಾತಾ ಚ ಯಥಾಽಯಮುದಕೇ ಬಕಃ ||7||
ಎಲೈ ಭಾರತನೇ! ಜ್ಞಾನಿಗಳು ಕರ್ಮಗಳ ಉತ್ಪತ್ತಿಗೆ ಆದಿಕಾರಣನಾದ ಲೋಕಸಾಕ್ಷಿಯಾದ ನಾರಾಯಣನನ್ನು ತಿಳಿಯುತ್ತಾರೆ. ಮತ್ತು ಪ್ರತ್ಯಕ್ಷವಾಗಿ ಫಲವನ್ನು ಅನುಭವಿಸುತ್ತಾರೆ. ಯಾವ ಧಾತೃವೆಸಿದ ನಾರಾಯಣನೂ ವಿಧಾತೃವೆನಿಸಿದ ಬ್ರಹ್ಮನೂ ಇದ್ದಾನೆಯೋ ಅವರಿಂದ ಈ ಕರ್ಮಗಳ ಉತ್ಥಾನವನ್ನು ಜಂತುಗಳು ತಿಳಿದು ಆ ಕರ್ಮಗಳನ್ನು ಉಪಜೀವಿಸುತ್ತಾರೆ. ಮೀನನ್ನು ಹಿಡಿಯುವ ಬಕವು ನೀರಿನಲ್ಲಿ ಉತ್ಥಿತವಾದ ಮೀನನ್ನು ಹಿಡಿದು ಉಪಜೀವಿಸುವಂತೆ ಉಪಜೀವಿಸುತ್ತಾರೆ. (ಮೀನಿನಂತೆ ಕರ್ಮ. ಮೀನನ್ನು ಮೇಲಕ್ಕೆತ್ತುವ ಜಲದಂತೆ ನಾರಾಯಣ ಮತ್ತು ಬ್ರಹ್ಮರು. ಮತ್ತು ಕಾಮ್ಯಕರ್ಮಗಳ ನಿಂದೆಯನ್ನು ಸೂಚಿಸುವುದಕ್ಕೋಸ್ಕರ ಬಕ ದೃಷ್ಟಾಂತ ಎಂದು ತಿಳಿಯಬೇಕು.)
ಸ್ವಕರ್ಮ ಕುರು ಮಾ ಗ್ಲಾಸೀಃ ಕರ್ಮಣಾ ಭವ ದಂಶಿತಃ |
ಅಕರ್ಮಣಾ ವೈ ಭೂತಾನಾಂ ವೃದ್ಧಿಃ ಸ್ಯಾನ್ನಹಿ ಕಾಚನ |
ತೇ ಚೈವ ಹಿ ಪ್ರಪದ್ಯೇರನ್ ನ ವಿಹನ್ಯುಃ ಕಥಂಚನ |
ಕೃತ್ಯಂ ಹಿ ಯೋಽಭಿಜಾನಾತಿ ಸಹಸ್ರೇ ನಾಸ್ತಿ ಸೋಽಸ್ತಿ ವಾ ||8||
ನಿನಗೆ ವಿಹಿತವಾದ ಕರ್ಮವನ್ನು ಮಾಡು ಆಲಸ್ಯವನ್ನು ಮಾಡಬೇಡ. ಯಾವಾಗಲೂ ಕರ್ಮವನ್ನು ಮಾಡುವುದರಲ್ಲಿ ಸನ್ನದ್ಧನಾಗಿರು. ಕರ್ಮವನ್ನು ಮಾಡದಿರುವುದರಿಂದ ಯಾರಿಗೂ ಯಾವ ವೃದ್ಧಿಯೂ ಉಂಟಾಗುವುದಿಲ್ಲ. ಯಾರು ಕರ್ಮವನ್ನು ಮಾಡುತ್ತಾರೆಯೋ ಅವರೇ ಫಲವನ್ನು ಪಡೆಯುತ್ತಾರೆ. ಅವರು ಕರ್ಮವನ್ನು ವಿಘಾತಮಾಡುವುದಿಲ್ಲ. ಮಾಡಬೇಕಾದ ಕರ್ತವ್ಯವನ್ನು ಯಾವನು ತಿಳಿಯುತ್ತಾನೆಯೋ ಅಂತಹವನು ಸಹಸ್ರದಲ್ಲಿ ಒಬ್ಬನಾದರೂ ದೊರೆಯುತ್ತಾನೋ ಅಥವಾ ಇಲ್ಲವೋ.
ತಸ್ಯ ಚಾಪಿ ಭವೇತ್ ಕಾರ್ಯಂ ವಿವೃದ್ಧೌ ರಕ್ಷಣೇ ತಥಾ |
ಭಕ್ಷ್ಯಮಾಣೋ ಪ್ರವೃದ್ಧೋ ಹಿ ಕ್ಷೀಯತೇ ಹಿಮವಾನಪಿ ||9||
ಅಂತಹವನಿಗೂ ಕರ್ಮನಾಶರೂಪವಾದ ಫಲವು ಆಗುತ್ತದೆ. ಆದ್ದರಿಂದ ಕರ್ಮಫಲವನ್ನು ರಕ್ಷಣೆಮಾಡಿ ಅಭಿವೃದ್ಧಿಯನ್ನು ಮಾಡುವ ಪ್ರಯತ್ನವನ್ನು ಮಾಡಬೇಕು. ದೊಡ್ಡದಾಗಿ ಬೆಳೆದ ಹಿಮಾಲಯವೂ ಸಹ ಯಾವಾಗಲೂ ತಿನ್ನಲ್ಪಡುತ್ತಿದ್ದರೆ ನಾಶವನ್ನು ಹೊಂದುತ್ತದೆ.
ಉತ್ಸೀದೇರನ್ ಪ್ರಜಾಃ ಸರ್ವಾ ನ ಕುರ್ಯುಃ ಕರ್ಮ ಚೇದಿಹ |
ತಥಾ ಹ್ಯೇತಾ ನ ವರ್ಧೇರನ್ ಕರ್ಮ ಚೇದಫಲಂ ಭವೇತ್ |
ಅನ್ಯಥಾ ಚಾಭಿಜಾನಂತಿ ಸಂತಿ ಲೋಕೇ ಹಿ ಡಾಂಭಿಕಾಃ |
ಅಪಿ ಚಾಪ್ಯಫಲಂ ಕರ್ಮ ಪಶ್ಯಾಮಃ ಕುರ್ವತೋ ಜನಾನ್ ||10||
ಈ ಲೋಕದಲ್ಲಿ ಕರ್ಮವನ್ನು ಮಾಡದಿದ್ದರೆ ಎಲ್ಲಾ ಪ್ರಜೆಗಳೂ ನಾಶವನ್ನು ಹೊಂದುವರು. ಮಾಡಿದ ಕರ್ಮಗಳು ನಿಷ್ಫಲವಾದರೆ ಈ ಯಾವ ಪ್ರಜೆಗಳೂ ಅಭಿವೃದ್ಧಿಯನ್ನು ಹೊಂದುತ್ತಿರಲಿಲ್ಲ. ಕೆಲವರು ಮಾಡಬೇಕಾದ ಕಾರ್ಯವನ್ನು ತಪ್ಪಾಗಿ ತಿಳಿಯುತ್ತಾರೆ. ಲೋಕದಲ್ಲಿ ಡಾಂಭಿಕರೂ ಇದ್ದಾರೆ. ಅಂತಹ ಜನರು ಮಾಡುವ ಕರ್ಮವು ನಿಷ್ಫಲವಾಗುವುದನ್ನು ನಾವು ನೋಡುತ್ತೇವೆ.
ಯಶ್ಚ ದಿಷ್ಟಫಲೋ ಲೋಕೇ ಯಶ್ಚಾಯಂ ಹಠವಾದಕಃ |

ಉಭಾವಪಶದಾವೇತೌ ಕರ್ಮಬುದ್ಧಿಃ ಪ್ರಶಸ್ಯತೇ ॥11॥
ಯೋ ಹಿ ದಿಷ್ಟಮುಪಾಸೀತ ನಿರ್ವಿಚೇಷ್ಟಃ ಸ್ವಪನ್ ಸುಖಮ್ |
ಅವಸೀದೇತ್ ಸುದುರ್ಬುದ್ಧಿರಾಮೋ ಘಟ ಇವಾಂಭಸಿ ॥12॥
ಯಾವನು ಲೋಕದಲ್ಲಿ ದೈವದಿಂದಲೇ ಎಲ್ಲ ಫಲವೂ ಉಂಟಾಗುತ್ತದೆ ಎಂದು ಹೇಳುತ್ತಾನೋ, ಯಾವನು ತನ್ನ ಯೋಗ್ಯತೆಯಿಂದಲೇ ಎಲ್ಲಾ ಫಲವು ಉಂಟಾಗುತ್ತದೆಯೆಂದು ಹೇಳುತ್ತಾನೋ, ಪ್ರಯತ್ನವನ್ನು ಮಾಡದಿರುವ ಅವರಿಬ್ಬರೂ ನೀಚರಾದವರು. ರಾಜ್ಯಸಾಧಕವಾದ ಯುದ್ಧದಲ್ಲಿ ಮೋಕ್ಷಸಾಧಕವಾದ ಶ್ರವಣಾದಿಕರ್ಮಗಳಲ್ಲಿ ಪ್ರಯತ್ನಮಾಡುವುದರಲ್ಲಿ ಯಾವನ ಬುದ್ಧಿಯಿರುತ್ತದೋ ಅವನು ಪ್ರಶಂಸಿಸಲ್ಪಡುತ್ತಾನೆ. ಯಾವನು ದೈವವನ್ನೇ ನಂಬಿ ಏನೂ ಪ್ರಯತ್ನಮಾಡದೆ ಸುಖವಾಗಿ ಮಲಗಿ ನಿದ್ರಿಸುತ್ತಾನೋ ಅಂತಹ ದುರ್ಬುದ್ಧಿಯುಳ್ಳ ಪುರುಷನು ಹಸಿಯ ಮಡಕೆಯು ನೀರಿನಲ್ಲಿ ಕರಗಿಹೋಗುವಂತೆ ನಾಶವನ್ನು ಹೊಂದುತ್ತಾನೆ.
ತಥೈವ ಹಠಬುದ್ಧಿರ್ಯಃ ಶಕ್ತಃ ಕರ್ಮಣ್ಯಕರ್ಮಕೃತ್ |
ಆಸೀತ ನ ಚಿರಂ ಜೀವೇದನಾಥ ಇವ ದುರ್ಬಲಃ ॥13॥
ಅದರಂತೆ ಯಾವನು ನನ್ನ ಯೋಗ್ಯತೆಯಿಂದಲೇ ಎಲ್ಲವೂ ಆಗುತ್ತದೆಯೆಂದು ತಿಳಿದು ಕರ್ಮವನ್ನು ಮಾಡುವ ಸಾಮರ್ಥ್ಯವಿದ್ದರೂ ಕರ್ಮವನ್ನು ಮಾಡದೆ ಸುಮ್ಮನಿರುತ್ತಾನೆಯೋ ಅವನು ದುರ್ಬಲನಾದ ಅನಾಥನಂತೆ ಬಹುಕಾಲ ಬದುಕುವುದಿಲ್ಲ.
ಅಕಸ್ಮಾದಪಿ ಯಃ ಕಶ್ಚಿದ್ ಅರ್ಥಂ ಪ್ರಾಪ್ನೋತಿ ಪೂರುಷಃ |
ತಂ ಹಠೇನೇತಿ ಮನ್ಯಂತೇ ಸ ಹಿ ಯತ್ನೋ ನ ಕಸ್ಯಚಿತ್ ॥14॥
ಯಾವನಾದರೂ ಪುರುಷನು ಅಕಸ್ಮಾತ್ ಎಂದರೆ ವಾಣಿಜ್ಯಾದಿ ಉಪಾಯಗಳಿಲ್ಲದೆ ಅಥವಾ ಪೂಜೆಗಳಿಂದ ಪ್ರಸನ್ನವಾದ ದೈವವಿಲ್ಲದೆ ಬಹಳ ಧನವನ್ನು ಪಡೆಯುತ್ತಾನೋ ಅದನ್ನು ಅವನ ಯೋಗ್ಯತೆಯಿಂದ ಪಡೆದುದು ಎಂದು ಅಲ್ಪಜ್ಞರು ತಿಳಿಯುತ್ತಾರೆ. ಸರ್ವೋತ್ಪತ್ತಿಗೆ ನಿಮಿತ್ತ ಕಾರಣವಾದ ಕರ್ಮರೂಪವಾದ ಅದೃಷ್ಟವನ್ನೂ ಮತ್ತು ದೈವವನ್ನೂ ಎಂದೂ ಪರಿಗಣಿಸದೆ ಇರಲು ಸಾಧ್ಯವಿಲ್ಲವಾದ್ದರಿಂದ ಆ ಹಠವೆಂಬ ಯೋಗ್ಯತೆಯು ಯಾರ ಪ್ರಯತ್ನವೂ ಅಲ್ಲ ಪ್ರಸನ್ನವಾದ ದೈವವೂ ಅಲ್ಲ.
ಯಚ್ಚಾಪಿ ಕಶ್ಚಿತ್ ಪುರುಷೋ ದಿಷ್ಟ್ಯಾ ಚಾಲಭತೇ ಧನಮ್ |
ದೈವೇನ ವಿಧಿನಾ ಪಾರ್ಥ ತದ್ದೈವಮಿತಿ ನಿಶ್ಚಿತಮ್ ॥15॥
ಯಾವನಾದರೂ ಒಬ್ಬ ಪುರುಷನು ಏನೂ ಪ್ರಯತ್ನವನ್ನು ಮಾಡದೆ ವಾಣಿಜ್ಯಾದಿವ್ಯಾಪಾರವಿಲ್ಲದೆ ತನ್ನ ಪ್ರಯತ್ನವೂ ಇಲ್ಲದೆ (ವೇದವ್ಯಾಸರ ಅನುಗ್ರಹದಿಂದ ಕೀಟವು ರಾಜ್ಯವನ್ನು ಪಡೆದಂತೆ) ಸಂಪತ್ತನ್ನು ಪಡೆದರೆ ಅದನ್ನು ದೈವದಿಂದ ಪಡೆದುದೆಂದು ಅಲ್ಪಜ್ಞರು ತಿಳಿಯುತ್ತಾರೆ.
ಯತ್ತ್ವಯಂ ಕರ್ಮಣಾ ಕಿಂಚಿತ್ ಫಲಮಾಪ್ನೋತಿ ಪೂರುಷಃ |
ಪ್ರತ್ಯಕ್ಷಂ ಚಕ್ಷುಷಾ ದೃಷ್ಟಂ ತತ್ ಪೌರುಷಮಿತಿ ಸ್ಮೃತಮ್ ॥16॥
ಯಾರಾದರೂ ಒಬ್ಬ ಪುರುಷನು ಪ್ರತ್ಯಕ್ಷವಾಗಿ ಸ್ವಯೋಗ್ಯ ವಾಣಿಜ್ಯಾದಿ ವ್ಯಾಪಾರದಿಂದ ಧನವನ್ನು ಗಳಿಸಿದರೆ ಅದು ಪುರುಷ ಪ್ರಯತ್ನ ಲಭ್ಯವಾದುದರಿಂದ ಅದು ಪೌರುಷವೆಂದು ತಿಳಿಯುತ್ತಾರೆ.
ಸ್ವಭಾವತಃ ಪ್ರವೃತ್ತೋಽನ್ಯಃ ಪ್ರಾಪ್ನೋತ್ಯರ್ಥಾನಕಾರಣಾತ್ |
ತತ್ಸ್ವಭಾವಾತ್ಮಕಂ ವಿದ್ಧಿ ಫಲಂ ಪುರುಷಸತ್ತಮ ॥17॥
ಸ್ವಭಾವದಿಂದಲೇ ಪ್ರವೃತ್ತನಾದ ಒಬ್ಬ ಪುರುಷನು ಬೇರೆ ಕಾರಣವಿಲ್ಲದೆ ಅರ್ಥವನ್ನು ಪಡೆದರೆ ಎಲೈ ಪುರುಷಶ್ರೇಷ್ಠನೇ! ಆ ಫಲವನ್ನು ಸ್ವಭಾವಾತ್ಮಕವೆಂದು ತಿಳಿ. (ಸ್ವಭಾವವೆಂದರೂ ಹಠವೆಂದರೂ ಒಂದೇ ವಸ್ತು. ಹಿಂದೆ ಹಠವೆಂದು ಹೇಳಿದ ವಿಷಯವನ್ನು ಇಲ್ಲಿ ಸ್ವಭಾವವೆಂದು ಇನ್ನೊಮ್ಮೆ ಹೇಳುತ್ತಿದ್ದಾರೆ.)
ಏವಂ ಹಠಾಚ್ಚ ದೈವಾಚ್ಚ ಸ್ವಭಾವಾತ್ ಕರ್ಮಣಸ್ತಥಾ |
ಯಾನಿ ಪ್ರಾಪ್ನೋತಿ ಪುರುಷಃ ತತ್ಫಲಂ ಪೂರ್ವಕರ್ಮಣಃ ॥18॥
ಹೀಗೆ ಸ್ವಭಾವರೂಪವಾದ ಹಠದಿಂದಾಗಲೀ ದೈವದಿಂದಾಗಲೀ ಅಥವಾ ಪ್ರಯತ್ನದಿಂದಾಗಲೀ ಪುರುಷನು ಏನನ್ನು ಪಡೆಯುತ್ತಾನೋ ಅದು ಪೂರ್ವಕರ್ಮದ ಫಲವಾಗಿರುತ್ತದೆ. (ಪ್ರತಿಯೊಂದು ಫಲಪ್ರಾಪ್ತಿಗೂ ಯೋಗ್ಯತೆಯೂ ದೈವಪ್ರಸಾದವೂ ಮತ್ತು ಪ್ರಯತ್ನವೂ ಮೂರು ಅವಶ್ಯಕವಾಗಿವೆ. ಒಂದೊಂದರಿಂದಲೇ ಫಲವುಂಟಾಗುತ್ತದೆ ಎಂದು ತಾತ್ಕಾಲಿಕ ದರ್ಶಿಗಳಾದ ಅಲ್ಪಜ್ಞರು ತಿಳಿಯುತ್ತಾರೆ. ಆದರೆ ಎಲ್ಲಾ ಕರ್ಮವೂ ಪೂರ್ವಕರ್ಮದ ಫಲ ಎಂದು ಹೇಳಿರುವುದರಿಂದ ಈ ಜನ್ಮದಲ್ಲಿ ಪ್ರಯತ್ನವು ಮಾತ್ರ ಕಂಡುಬಂದರೆ ಅದರ ಜೊತೆಯಲ್ಲಿ ಹಿಂದಿನ ಜನ್ಮದ ದೇವತಾರಾಧನೆಯನ್ನೂ ಯೋಗ್ಯತಾರೂಪವಾದ ಹಠವನ್ನೂ ತೆಗೆದುಕೊಳ್ಳಬೇಕು. ಅದರಂತೆ ದೈವವೇ ಕಾರಣವೆಂದು ತೋರುವ ಸ್ಥಳದಲ್ಲಿಯೂ ಹಿಂದಿನ ಜನ್ಮದ ಅವನ ಪ್ರಯತ್ನವನ್ನೂ ಮತ್ತು ಹಠವನ್ನೂ ತೆಗೆದುಕೊಳ್ಳಬೇಕು. ಮತ್ತು ಹಠದಿಂದಲೇ ಫಲವೂ ತೋರುವ ಸ್ಥಳದಲ್ಲಿಯೂ ಹಿಂದಿನ ಜನ್ಮದಲ್ಲಿ ಪ್ರಸನ್ನವಾದ ದೈವವನ್ನೂ ಮತ್ತು ಪ್ರಯತ್ನವನ್ನೂ ತೆಗೆದುಕೊಳ್ಳಬೇಕು. ಹೀಗಾಗಿ ಮಿಲಿತವಾದ ಈ ಮೂರು ಕಾರಣಗಳಿಂದ ಪ್ರಮೇಯಕ್ಕೆ ಎಲ್ಲಿಯೂ ವ್ಯಭಿಚಾರವಿಲ್ಲ. ಒಂದೊಂದೇ ಕಾರಣವೆಂದು ತಿಳಿದುಕೊಳ್ಳುವವರು ಅಲ್ಪಜ್ಞರು. ಜ್ಞಾನಿಗಳು ಮಾತ್ರ ಇವು ಮೂರು ಮಿಲಿತವಾದಕಾರಣವೆಂದು ತಿಳಿಯುತ್ತಾರೆ. ಮುಂದಿನ ಶ್ಲೋಕಗಳಲ್ಲಿ ಇದನ್ನೇ ಎಂದರೆ ಇವು ಮೂರೇ ಕಾರಣ ನಾಲ್ಕನೆಯ ಕಾರಣವಿಲ್ಲವೆಂದು ಸ್ಪಷ್ಟಪಡಿಸುತ್ತಾರೆ.)
ಧಾತಾಽಪಿ ಹಿ ಸ್ವಕರ್ಮೈವ ತೈಸ್ತೈರ್ಹೇತುಭಿರೀಶ್ವರಃ |
ವಿದಧಾತಿ ವಿಭಜ್ಯೇಹ ಫಲಂ ಪೂರ್ವಕೃತಂ ನೃಣಾಮ್ ॥19॥
ಫಲಪ್ರದನಾದ ನಾರಾಯಣನೂ ಸಹ ಹಿಂದಿನಜನ್ಮದ ಕರ್ಮವನ್ನು ಅನುಸರಿಸಿ ಉಳಿದ ಕಾರಣಗಳನ್ನು ಗಮನಿಸಿ ಜೀವರ ಕರ್ಮಕ್ಕೆ ಅನುಗುಣವಾದ ಫಲಗಳನ್ನು ವಿಭಾಗಮಾಡಿ ಬೇರೆಬೇರೆ ಜೀವರಿಗೆ ಬೇರೆಬೇರೆ ರೀತಿಯಲ್ಲಿ ಕೊಡುತ್ತಾನೆ.

ಯದ್ಧಿ ಯಃ ಪುರುಷಃ ಕಶ್ಚಿತ್ ಕುರುತೇ ವೈ ಶುಭಾಶುಭಮ್ |
ತದ್ ಧಾತ್ರಾ ವಿಹಿತಂ ವಿದ್ಧಿ ಪೂರ್ವಕರ್ಮಫಲೋದಯಮ್ ॥20॥
ಯಾವುದೇ ಪುರುಷನು ಯಾವುದೇ ಶುಭವನ್ನಾಗಲೀ ಅಶುಭವನ್ನಾಗಲೀ ಮಾಡಿದರೂ ಅದು ಪೂರ್ವಕರ್ಮದ ಫಲರೂಪವಾಗಿ ಧಾತೃವಾದ ನಾರಾಯಣನಿಂದ ವಿಹಿತವಾದದ್ದು ಎಂದು ತಿಳಿ.
ಕಾರಣಂ ತಸ್ಯ ದೇಹೋಽಯಂ ಧಾತುಃ ಕರ್ಮಣಿ ಕರ್ಮಣಿ |
ಸ ಯಥಾ ಪ್ರೇರಯತ್ಯೇನಂ ತಥಾಽಯಂ ಕುರುತೇಽವಶಃ ॥21॥
ಆ ಧಾತೃವಿನ ಪ್ರೇರಣೆಯಿಂದ ಉಂಟಾಗುವ ಪ್ರತಿಯೊಂದು ಕರ್ಮದಲ್ಲಿಯೂ (ಕರ್ಮಕ್ಕೂ) ಜೀವನ ಈ ದೇಹವು ಕಾರಣವಾಗಿದೆ. ಅವನು ಹೇಗೆ ಪ್ರೇರಿಸುತ್ತಾನೋ ಅದರಂತೆ ಜೀವನು ಅವಶನಾಗಿ ನಡೆದು ಕೊಳ್ಳುತ್ತಾನೆ.
ತೇಷು ತೇಷು ಹಿ ಕೃತ್ಯೇಷು ವಿನಿಯೋಕ್ತಾ ಮಹೇಶ್ವರಃ |
ಸರ್ವಭೂತಾನಿ ಕೌಂತೇಯ ಕಾರಯತ್ಯವಶಾನ್ಯಪಿ ॥22॥
ಎಲೈ ಕೌಂತೇಯನೇ! ಜೀವರನ್ನು ಆಯಾಕಾರ್ಯಗಳಲ್ಲಿ ತೊಡಗಿಸುವವನು ಆ ಮಹೇಶ್ವರ. ಅವನು ಜೀವರು ಅವಶರಾಗಿ ಆ ಕಾರ್ಯಗಳನ್ನು ಮಾಡುವಂತೆ ಪ್ರೇರಿಸುತ್ತಾನೆ.
ಮನಸಾ ತದ್ ವಿನಿಶ್ಚಿತ್ಯ ಪಶ್ಚಾತ್ ಪ್ರಾಪ್ನೋತಿ ಕರ್ಮಣಾ |
ಬುದ್ಧಿಪೂರ್ವಂ ಸ್ವಯಂ ಧೀರಃ ಪುರುಷಸ್ತತ್ರ ಕಾರಣಮ್ ॥23॥
ಮನಸ್ಸಿನಿಂದ ಭವಿಷ್ಯತ್ ಫಲವನ್ನು ನಿಶ್ಚಯಿಸಿ ಅನಂತರ ಬುದ್ಧಿಪೂರ್ವಕವಾಗಿ ಧೀರನಾದವನು ಆ ಫಲವನ್ನು ತಾನು ಪಡೆಯುತ್ತಾನೆ. ಅಲ್ಲಿ ಪುರುಷ ಪ್ರಯತ್ನವು ಕಾರಣ.
ಸಂಖ್ಯಾತುಂ ನೈವ ಶಕ್ಯಾನಿ ಕರ್ಮಾಣಿ ಪುರುಷರ್ಷಭ |
ಅಗಾರನಗರಾಣಾಂ ಹಿ ಸಿದ್ಧಿಃ ಪುರುಷಹೈತುಕೀ ॥24॥
ಎಲೈ ಪುರುಷಶ್ರೇಷ್ಠನೇ! ಕರ್ಮಗಳನ್ನು ಎಣಿಸಲು ಸಾಧ್ಯವಿಲ್ಲ. ಗೃಹ ನಗರ ಮೊದಲಾದ ವಸ್ತುಗಳ ಸಿದ್ಧಿಯು ಬಡಗಿ ಕಮ್ಮಾರ ಮೊದಲಾದವರ ಪುರುಷಪ್ರಯತ್ನದಿಂದಲೇ ಉಂಟಾಗುತ್ತದೆ. (ಅದೃಷ್ಟರೂಪ ಕಾರಣವಾದರೂ ದೃಷ್ಟಕಾರಣವನ್ನು ಮೇಳನಮಾಡಿ ಕಾರ್ಯವನ್ನು ಉತ್ಪಾದನೆ ಮಾಡುವುದರಿಂದ ದೈವಪ್ರಸಾದ ಮತ್ತು ಯೋಗ್ಯತೆ ಎಂಬ ಅದೃಷ್ಟಕಾರಣಗಳಿದ್ದರೂ ದೃಷ್ಟವಾದ ಪ್ರಯತ್ನವಿಲ್ಲದೆ ಈ ಲೋಕದಲ್ಲಿ ಯಾವುದೂ ಸಾಧ್ಯವಾಗುವುದಿಲ್ಲ. ಹೀಗೆ ಹಠದಿಂದ ಅಥವಾ ದೈವದಿಂದ ರಾಜ್ಯಪ್ರಾಪ್ತಿಯಾದರೂ ನಿಧಿನಿಕ್ಷೇಪಗಳಿಂದ ಧನಲಾಭವಾಗುತ್ತದೆ. ಅನಂತರ ಧನನಿಮಿತ್ತವಾದ ಗಜ ತುರಗ ಸೇನಾಪ್ರಾಪ್ತಿ ಸೇನೆಯಿಂದ ಶತ್ರುಗಳ ಪರಾಜಯ ಅದರಿಂದ ರಾಜ್ಯಲಾಭ ಹೀಗೆ ಎಲ್ಲ ಕಡೆಗಳಲ್ಲಿಯೂ ಪುರುಷ ಪ್ರಯತ್ನವು ಅವಶ್ಯಕವಾಗಿದೆ. ಆದರೆ ಅಷ್ಟೇ ಸಾಲದು ಮೂರೂ ಸೇರಿ ಕಾರಣವಾಗುತ್ತದೆ ಎಂದು ಅಭಿಪ್ರಾಯ.)
ತಿಲೇ ತೈಲಂ ಗವಿ ಕ್ಷೀರಂ ಕಾಷ್ಠೇ ವಾ ಪಾವಕಂ ತಥಾ |
ಧಿಯಾ ಧೀರೋ ವಿಜಾನೀಯಾದುಪಾಯಾಶ್ಚಾರ್ಥ ಸಿದ್ಧಯೇ ॥25॥
ತಿಲದಲ್ಲಿ ತೈಲವನ್ನು ಪಡೆಯಲು ತೈಲಯಂತ್ರಾದಿ ಪುರುಷಪ್ರಯತ್ನ, ಗೋವಿನಿಂದ ಕ್ಷೀರವನ್ನು ಪಡೆಯಲು ದೋಹನಾದಿ ಪ್ರಯತ್ನ, ಕಾಷ್ಠದಿಂದ ಅಗ್ನಿಯನ್ನು ಪಡೆಯಲು ಮಥನಾದಿ ಪ್ರಯತ್ನ, ಅರ್ಥಸಿದ್ಧಿಗಾಗಿ ಧೀರನಾದವನು ಈ ಉಪಾಯಗಳನ್ನು ಮುಂಚೆಯೇ ತಿಳಿಯಬೇಕು.
ತತಃ ಪ್ರವೃಣುತೇ ಪಶ್ಚಾತ್ ಕಾರಣಂ ಚಾಸ್ಯ ಸಿದ್ಧಯೇ |
ತಾಂ ಸಿದ್ಧಿಮುಪಜೀವಂತಿ ಕರ್ಮಣಾಮಿಹ ಜಂತವಃ ॥26॥
ಅನಂತರ ಅವನು ಅರ್ಥಸಿದ್ಧಿಗಾಗಿ ಯೋಗ್ಯವಾದ ಕಾರಣಗಳನ್ನು ತೊಡಗಿಸುತ್ತಾನೆ. ಪ್ರಯತ್ನವನ್ನು ಮಾಡಿ ಆ ಫಲಸಿದ್ಧಿಯನ್ನು ಪಡೆದು ತನ್ನ ಕರ್ಮದಿಂದ ಎಂದರೆ ಪ್ರಯತ್ನದಿಂದ ಉಪಜೀವಿಸುತ್ತಾನೆ.
ಕುಶಲೇನ ಕೃತಂ ಕರ್ಮ ಕರ್ತ್ರಾ ಸಾಧು ವಿನಿಶ್ಚಿತಮ್ |
ಇದಂ ಚಾಕುಶಲೇನೇತಿ ವಿಶೇಷಾದುಪಲಭ್ಯತೇ ॥27॥
ನಿಪುಣನಾದವನು ಮಾಡಿದ ಕರ್ಮವು ಚೆನ್ನಾಗಿರುವುದು. ಅಕುಶಲನು ಮಾಡಿದ ಕಾರ್ಯವು ಚೆನ್ನಾಗಿಲ್ಲದಿರುವುದು ಪ್ರತ್ಯಕ್ಷದಿಂದಲೇ ತಿಳಿಯುತ್ತದೆ.(ಪುರುಷ ಪ್ರಯತ್ನಕ್ಕೆ ಕಾರಣತ್ವವೇ ಇಲ್ಲದಿದ್ದರೆ ಈ ವೈಲಕ್ಷಣ್ಯವು ಕೂಡುವುದಿಲ್ಲ.)
ಇಷ್ಟಾಪೂರ್ತಫಲಂ ನ ಸ್ಯಾನ್ನ ಶಿಷ್ಯೋ ನ ಗುರುರ್ಭವೇತ್ |
ಪುರುಷಃ ಕರ್ಮಸಾಧ್ಯೇಷು ಸ್ಯಾಚ್ಚೇದಯಮಕಾರಣಮ್ ॥28॥
ಈಗ ಪ್ರಯತ್ನವನ್ನು ಮಾಡುವ ಪುರುಷನು ಕರ್ಮಸಾಧ್ಯಫಲಗಳಿಗೆ ಕಾರಣವಲ್ಲದಿದ್ದರೆ ಇಷ್ಟಾಪೂರ್ತದಲ್ಲಿ ಯಾರೂ ಪ್ರಯತ್ನಮಾಡಲಾರರು. ಇಷ್ಟಾಪೂರ್ತಫಲವು ದೊರೆಯಲಾರದು. ಶಿಷ್ಯನನ್ನು ಸಂಪಾದಿಸಲು ಅಥವಾ ಅಧ್ಯಯನಮಾಡಲು ಯಾರೂ ಪ್ರಯತ್ನಪಡಲಾರರು. ಆದ್ದರಿಂದ ಶಿಷ್ಯನೂ ಸಿದ್ಧಿಸಲಾರ ಗುರುವೂ ಸಿದ್ಧಿಸಲಾರ. (ಇಷ್ಟ ಎಂದರೆ ಯಾಗಾದಿಗಳು ಪೂರ್ತವೆಂದರೆ ಕೆರೆಭಾವಿಗಳ ನಿರ್ಮಾಣಾದಿಗಳು).
ಕರ್ತೃತ್ವಾದೇವ ಪುರುಷಃ ಕರ್ಮಸಿದ್ಧೌ ಪ್ರಶಸ್ಯತೇ |
ಅಸಿದ್ಧೌ ನಿಂದ್ಯತೇ ಚಾಪಿ ಕರ್ಮನಾಶಃ ಕಥಂ ತ್ವಿಹ ॥29॥
ಪುರುಷನಿಗೆ ಕರ್ತೃತ್ವವಿರುವುದರಿಂದಲೇ (ಪುರುಷ ಪ್ರಯತ್ನಕ್ಕೆ ಕಾರಣತ್ವವಿರುವುದರಿಂದಲೇ) ಕರ್ಮಸಿದ್ಧಿಯು ಉಂಟಾದಾಗ ಆ ಪುರುಷನು ಪ್ರಶಂಸಿಸಲ್ಪಡುತ್ತಾನೆ. ಕರ್ಮಸಿದ್ಧಿಯಾಗದಿದ್ದರೆ ಕರ್ಮಸಿದ್ಧಿಯಾಗದಿರುವುದಕ್ಕೆ ಏನು ಕಾರಣವೆಂದು ವಿಚಾರಮಾಡಿ ಅಂತಹ ಪ್ರಯತ್ನವನ್ನು ಮಾಡಿದ ಪುರುಷನು ನಿಂದಿಸಲ್ಪಡುತ್ತಾನೆ.
ತತಃ ಪ್ರವರ್ತತೇ ಪಶ್ಚಾತ್ ತ್ರಿಭಿಸ್ತಸ್ಯೇಹ ಕಾರಣೈಃ |

ಕರ್ಮಣ್ಯೇಕೇ ಹಠೇನ್ಯೈಕೇ ದಿಷ್ಟೇನ್ಯೈಕೇ ವದಂತ್ಯುತ |
ಪುರುಷಪ್ರಯತ್ನಜಂ ಕಿಂಚಿದ್ ತ್ರೈಧಮೇತತ್ಪ್ರಶಸ್ಯತೇ ॥30॥
ಆದ್ದರಿಂದ ಈ ಮೂರು ಕಾರಣಗಳಿಂದ ಇಲ್ಲಿ ಎಲ್ಲಾ ಕರ್ಮಗಳೂ ಪ್ರವೃತ್ತವಾಗುತ್ತವೆ. ಕೆಲವರು ಕೇವಲ ಪ್ರಯತ್ನದಿಂದಲೇ ಎಂದೂ ಕೆಲವರು ಕೇವಲ ಯೋಗ್ಯತೆಯಿಂದಲೇ ಎಂದೂ ಕೆಲವರು ಕೇವಲ ದೈವದಿಂದಲೇ ಎಂದೂ ಹೇಳುತ್ತಾರೆ. ಅವು ಮೂರೂ ಸರಿಯಾದುದಲ್ಲ. ಕೇವಲ ಪುರುಷಪ್ರಯತ್ನದಿಂದ ಯಾವುದೂ ಸಿದ್ಧಿಸುವುದಿಲ್ಲ. ಮೂರೂ ಸೇರಿ ಸಿದ್ಧಿಸುತ್ತದೆ ಎಂಬ ವಿಷಯವು ಪ್ರಶಂಸಿಸಲ್ಪಡುತ್ತದೆ.
ನ ಚೈವೈತಾವತಾ ಕಾರ್ಯಂ ಮನ್ಯಂತ ಇತಿ ಚಾಪರೇ |
ಅಸ್ತಿ ಸರ್ವಮದೃಶ್ಯಂ ತತ್ ದೈವಾದ್‌ದೃಶ್ಯಂ ತಥಾ ಹಠಃ ॥31॥
ಈ ಮೂರರಿಂದ ಕಾರ್ಯವಾಗುವುದಿಲ್ಲವೆಂದು ಇನ್ನು ಕೆಲವರು ಅಭಿಪ್ರಾಯಪಡುತ್ತಾರೆ. ಸ್ವಭಾವ ಪುರುಷ(ಜೀವ) ಪ್ರಯತ್ನ ಮತ್ತು ದೈವಗಳಲ್ಲಿ ಜೀವ ಮತ್ತು ಅವನ ಪ್ರಯತ್ನವು ದೃಶ್ಯವಾದರೂ ಉಳಿದೆರಡು ಅದೃಶ್ಯವಾದವುಗಳು ಆದ್ದರಿಂದ ನಿರೀಶ್ವರವಾದಿಗಳು ಅಂತಹ ಕಾರಣವನ್ನು ಒಪ್ಪದೆ ಅದೃಷ್ಟ ಮತ್ತು ಪುರುಷ ಪ್ರಯತ್ನ ಎರಡೇ ಕಾರಣಗಳು ಸಾಕು ಎಂದು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ದೈವವು ಕಾಣುವುದಿಲ್ಲ ಎಂಬ ಕಾರಣದಿಂದ ಅದನ್ನು ಒಪ್ಪದಿದ್ದರೆ ದೈವದಂತೆ ಅದೃಷ್ಟವೂ ಕಾಣುವುದಿಲ್ಲವಾದ್ದರಿಂದ ಅದನ್ನೂ ಒಪ್ಪಬಾರದು. ಒಂದನ್ನು ಒಪ್ಪಿ ಒಂದನ್ನು ಬಿಡುವುದು ನ್ಯಾಯವಲ್ಲ. ಮತ್ತು ದೈವವಾಗಲೀ ಯೋಗ್ಯತೆಯಾಗಲೀ ಅದೃಶ್ಯವೆಂಬುದು ಸರಿಯಲ್ಲ. ಏಕೆಂದರೆ ದೈವವೂ ಅದೃಷ್ಟವೂ ಮತ್ತು ತ್ರಿವಿಧ ಪುರುಷ ಸ್ವಭಾವವೂ ದೃಷ್ಟವಾಗಿದೆ. ದೈವವು ಯೋಗಿಗಳಿಂದ ದೃಷ್ಟವಾಗಿದೆ. ತ್ರಿವಿಧ ಪುರುಷ ಸ್ವಭಾವವು ಎಲ್ಲರಿಂದಲೂ ದೃಷ್ಟವಾಗಿದೆ.
ದೃಶ್ಯತೇ ವೈ ಹಠಾಚ್ಚೈವ ದಿಷ್ಟಾಚ್ಚಾರ್ಥಸ್ಯ ಸಂಗತಿಃ |
ಕಿಂಚಿದ್ದೈವಾದ್ಧಠಾತ್ಕಿಂಚಿತ್ ಕಿಂಚಿದೇವ ಸ್ವಕರ್ಮತಃ ॥32॥
ಪುರುಷಃ ಫಲಮವಾಪ್ನೋತಿ ಚತುರ್ಥಂ ನಾತ್ರ ಕಾರಣಮ್ |
ಕುಶಲಾಃ ಪ್ರತಿಜಾನಂತಿ ಯೇ ತತ್ತ್ವವಿದುಷೋ ಜನಾಃ ॥33॥
ಹಠದಿಂದಲೂ ದೈವದಿಂದಲೂ ಅರ್ಥದ ಸಿದ್ಧಿಯಾಗುವುದು ಕಂಡು ಬರುತ್ತದೆ. ಹಠದಿಂದ ಸ್ವಲ್ಪಭಾಗವೂ ದೈವದಿಂದ ಸ್ವಲ್ಪಭಾಗವೂ ಮತ್ತು ಪುರುಷ ಪ್ರಯತ್ನದಿಂದ ಸ್ವಲ್ಪಭಾಗವೂ ಉಂಟಾಗುತ್ತದೆ. ಒಂದು ಕಾರ್ಯಸಿದ್ಧಿಗೆ ಈ ಮೂರು ಕಾರಣಗಳನ್ನು ಬಿಟ್ಟು ನಾಲ್ಕನೆಯ ಕಾರಣವಿಲ್ಲ. ಕುಶಲರಾದ ತತ್ವಜ್ಞಾನಿಗಳು ಪ್ರತಿಕಾರ್ಯದಲ್ಲಿಯೂ ಈ ಮೂರಕ್ಕೂ ಕಾರಣತ್ವಗಳನ್ನು ತಿಳಿಯುತ್ತಾರೆ.
ತಥೈವ ಧಾತಾ ಭೂತಾನಾಮಿಷ್ಟಾನಿಷ್ಟಫಲಪ್ರದಃ |
ಯದಿ ನ ಸ್ಯಾನ್ನ ಭೂತಾನಾಂ ಕೃಪಣೋ ನಾಮ ಕಶ್ಚನ ॥34॥
ಹಾಗೆಯೇ ಜೀವರಿಗೆ ಇಷ್ಟಾನಿಷ್ಟ ಫಲಪ್ರದನಾದ ಒಬ್ಬ ದೇವರು ಇಲ್ಲದಿದ್ದರೆ ಮನುಷ್ಯರಲ್ಲಿ ಯಾವನೂ ದರಿದ್ರನಾಗಿರಬಾರದಾಗಿದ್ದಿತು. (ಹೀಗೆ ಪೂರ್ವಪಕ್ಷಮಾಡುವವರಿಗೆ ಜೀವನ ಯೋಗ್ಯತೆ ಮತ್ತು ಪ್ರಯತ್ನ ಎಲ್ಲರಿಗೂ ಸಮವಾಗಿರುವುದರಿಂದ ಒಬ್ಬನು ಶ್ರೀಮಂತ ಒಬ್ಬನು ದರಿದ್ರ ಎಂಬ ವಿಭಾಗಕ್ಕೆ ಕಾರಣವಿಲ್ಲವೆಂದು ಅಭಿಪ್ರಾಯ.)
ಯಂ ಯಮರ್ಥಮಭಿಪ್ರೇಪ್ಸುಃ ಕುರುತೇ ಕರ್ಮ ಪೂರುಷಃ |
ತತ್ತಸ್ಯ ಫಲಮೇವ ಸ್ಯಾದ್ ಯದಿ ನ ಸ್ಯಾತ್ ಕಿಲಾಶುಭಮ್ ॥35॥
ಯಾವಯಾವ ಫಲವನ್ನು ಪಡೆಯುವ ಉದ್ದೇಶದಿಂದ ಪುರುಷನು ಪ್ರಯತ್ನವನ್ನು ಮಾಡುತ್ತಾನೆಯೋ ಅದಕ್ಕೆ ಪ್ರತಿಬಂಧಕವಿಲ್ಲದಿದ್ದರೆ ಅವನು ಆ ಫಲಗಳನ್ನು ಪಡೆಯಲೇಬೇಕಾಗಿದ್ದಿತು.
ತ್ರಿದ್ವಾರಾಮರ್ಥಸಿದ್ಧಿಂ ವೈ ನಾನುಪಶ್ಯಂತಿ ಯೇ ನರಾಃ |
ತಥೈವಾನರ್ಥಸಿದ್ಧಿಂ ಚ ಯಥಾ ಲೋಕಾಸ್ತಥೈವ ತೇ ॥36॥
ಯಾರು ಇಂತಹ ಅರ್ಥಸಿದ್ಧಿಯು ಅಥವಾ ಅನರ್ಥಸಿದ್ಧಿಯು ಮೂರುಕಾರಣಗಳಿಂದ ಉಂಟಾಗುವುವು ಎಂದು ತಿಳಿಯುವುದಿಲ್ಲವೋ ಅವರು ಪಾಮರಜನರಂತೆ ಇರುತ್ತಾರೆ. ತತ್ವಜ್ಞರಲ್ಲ.
ಕರ್ತವ್ಯಂ ತ್ವೇವ ಕರ್ಮೇತಿ ಮನೋರೇಷ ವಿನಿಶ್ಚಯಃ |
ಏಕಾಂತೇನ ಹ್ಯನೀಹೋಽಯಂ ಪರಾಭವತಿ ಪೂರುಷಃ ॥37॥
ಕರ್ಮವನ್ನುಮಾಡಲೇ ಬೇಕು ಎಂದು ಮನುವಿನ ದೃಢವಾದ ನಿಶ್ಚಯ. ಏನೂ ಪ್ರಯತ್ನವನ್ನು ಮಾಡದಿರುವ ಪುರುಷನು ನಿಯಮೇನ ಪರಾಭವವನ್ನು ಹೊಂದುತ್ತಾನೆ.
ಕುರ್ವತೋ ಹಿ ಭವತ್ಯೇವ ಕರ್ಮ ಚಾಸ್ಯ ಪ್ರಶಸ್ಯತೇ |
ಏಕಾಂತಫಲಸಿದ್ಧಿಂ ತು ನ ವಿಂದತ್ಯಲಸಃ ಕ್ವಚಿತ್ ॥38॥
ಪ್ರಯತ್ನವನ್ನು ಮಾಡುವವನಿಗೆ ಫಲವು ದೊರೆತೇ ದೊರೆಯುತ್ತದೆ. ಅವನ ಆ ಕರ್ಮವು ಪ್ರಶಂಸಿಸಲ್ಪಡುತ್ತದೆ. ಆದರೆ ಯಾರು ಆಲಸ್ಯದಿಂದ ಪ್ರಯತ್ನಮಾಡುವುದಿಲ್ಲವೋ ಅವನಿಗೆ ನಿಶ್ಚಯವಾಗಿ ಎಂದೂ ಫಲಸಿದ್ಧಿಯಾಗುವುದಿಲ್ಲ.
ಅಸಂಭವೇ ತತ್ರ ಹೇತುಃ ಪ್ರಾಯಶ್ಚಿತ್ತಂ ತು ಲಕ್ಷ್ಯತೇ |
ಕೃತೇ ಕರ್ಮಣಿ ರಾಜೇಂದ್ರ ತಥಾಽಽನೃಣ್ಯಮವಾಪ್ನುತೇ ॥39॥
ಆಲಸ್ಯವುಳ್ಳ ಮನುಷ್ಯನಿಗೆ ಫಲವು ದೊರೆಯದಿರುವುದಕ್ಕೆ ಹೆಚ್ಚಾಗಿ ಅವನ ಮನಸ್ಸೇ ಕಾರಣವೆಂದು ತಿಳಿಯುತ್ತದೆ. ಎಲೈ ರಾಜೇಂದ್ರನೇ! ತನಗೆ ವಿಹಿತವಾದ ಕರ್ಮವನ್ನು ಮಾಡಿದರೆ ಆ ಪುರುಷನು ಋಣ ಮುಕ್ತನಾಗುತ್ತಾನೆ.
ಅಲಕ್ಷ್ಮೀರಾವಿಶತ್ಯೇನಂ ಶಯಾನಮಲಸಂ ನರಮ್ |
ನಿಃಸಂಶಯಂ ಫಲಂ ಲಬ್ಧ್ವಾ ದಕ್ಷೋ ಭೂರಿಮುಪಾಶ್ನುತೇ ॥40॥

ಯಾವ ಪುರುಷನು ಆಲಸ್ಯದಿಂದ ಮಲಗಿರುತ್ತಾನೆಯೋ ಅವನನ್ನು ಅಲಕ್ಷ್ಮಿಯು ಪ್ರವೇಶಿಸುತ್ತಾಳೆ. ದಕ್ಷನಾದವನು ಪ್ರಯತ್ನವನ್ನು ಮಾಡಿ ಫಲವನ್ನು ಪಡೆದು ಮಹಾ ವೈಭವವನ್ನು ಅನುಭವಿಸುತ್ತಾನೆ.
ಅನರ್ಥಂ ಸಂಶಯಾವಸ್ಥಂ ವೃಣ್ವತೇ ಮುಕ್ತಸಂಶಯಾಃ |
ಧೀರಾ ನರಾಃ ಕರ್ಮರತಾ ನ ತು ನಿಃಸಂಶಯಂ ಕ್ವಚಿತ್ ॥41॥
ಸಂಶಯಾವಸ್ಥೆಯಲ್ಲಿ ಇರುವವನನ್ನು ಸಂಶಯಾವಸ್ಥೆಯಲ್ಲಿ ಇರುವ ಉಳಿದವರು ತಮ್ಮ ವಶವನ್ನಾಗಿ ಮಾಡಿಕೊಳ್ಳುತ್ತಾರೆ. ಅವನಿಗೆ ಅನರ್ಥವು ಉಂಟಾಗುತ್ತದೆ. ಸಂಶಯರಹಿತನಾದ ಪುರುಷನು ಅಂತಹವರಿಗೆ ವಶನಾಗುವುದಿಲ್ಲ. ಅಂತಹ ಧೀರಪುರುಷರು ತಮ್ಮ ಕರ್ಮಗಳಲ್ಲಿ ತಾವು ನಿರತರಾಗಿರುತ್ತಾರೆ.
ಏಕಾಂತೇನ ಹ್ಯನರ್ಥೋಽಯಂ ವರ್ತತೇಽಸ್ಮಾಸು ಸಾಂಪ್ರತಮ್ |
ಸ ತು ನಿಃಸಂಶಯಂ ನ ಸ್ಯಾತ್ ತ್ವಯಿ ಕರ್ಮಣ್ಯವಸ್ಥಿತೇ |
ಅಥವಾ ಸಿದ್ಧಿರೇವ ಸ್ಯಾನ್ಮಹಿಮಾನಂ ತದೈವ ತೇ ॥42॥
ಸದ್ಯದಲ್ಲಿ ನಮಗೆ ಈ ವನವಾಸರೂಪವಾದ ಅನರ್ಥವು ನಿಶ್ಚಯವಾಗಿ ಉಂಟಾಗಿದೆ. ನೀನು ಪರಾಕ್ರಮವನ್ನು ವಹಿಸುವುದಾದರೆ ಈ ಅನರ್ಥವು ಖಂಡಿತವಾಗಿ ನಿವೃತ್ತವಾಗುತ್ತದೆ. (ರಾಜ್ಯಲಾಭಾದಿಕಾರ್ಯಸಿದ್ಧಿಯು ಆಗುತ್ತದೆ.)
ವೃಕೋದರಸ್ಯ ಬೀಭತ್ಸೋರ್ಭ್ರಾತ್ರೋಶ್ಚ ಯಮಯೋರಪಿ |
ಅನ್ಯೇಷಾಂ ಕರ್ಮ ಸಫಲಮಸ್ಮಾಕಮಪಿ ವಾ ಪುನಃ |
ವಿಪ್ರಕರ್ಷೇಣ ಬುಧ್ಯೇತ ಕೃತಕರ್ಮಾ ಯಥಾಬಲಮ್ ॥43॥
ಪೃಥಿವೀಂ ಲಾಂಗಲೇನೈವ ಕೃಷ್ಟ್ವಾ ಬೀಜಂ ವಪತ್ಯುತ |
ಆಸ್ತೇಽತ್ರ ಕರ್ಷಕಸ್ತೂಷ್ಣೀಂ ಪರ್ಜನ್ಯಸ್ತತ್ರ ಕಾರಣಮ್ |
ವೃಷ್ಟಿಶ್ಚೈವಾನುಗೃಹ್ಣೀಯಾದನೇನಾಸ್ತತ್ರ ಕರ್ಷಕಃ ॥44॥
ಅಥವಾ ರಾಜ್ಯರೂಪವಾದ ಲಾಭವೇ ಸಿದ್ಧಿಯಾಗುತ್ತದೆ. ನೀನು ಕಾರ್ಯಪ್ರವೃತ್ತನಾದರೆ ಪ್ರಯತ್ನವನ್ನುಮಾಡುವ ಕಾಲದಲ್ಲಿಯೇ ನಿನ್ನ ವೃಕೋದರನ ಅರ್ಜುನನ ಮತ್ತು ನಕುಲ ಸಹದೇವರ ಸಾಮರ್ಥ್ಯವು (ಮಹಿಮೆಯು) ನಿನಗೆ ತಿಳಿಯುತ್ತದೆ. ಅಥವಾ ಮಾಡಬೇಕಾದ ಪ್ರಯತ್ನವನ್ನು ನಿನ್ನ ಶಕ್ತಿಯಿದ್ದಷ್ಟು ಮಾಡಿದರೆ ಹದಿಮೂರುವರ್ಷದ ಅನಂತರವಾದರೂ ನಮ್ಮ ಕರ್ಮವು ಸಫಲವೋ ಅಥವಾ ದುರ್ಯೋಧನಾದಿಗಳ ಕರ್ಮವು ಸಫಲವೋ ಎಂದು ನಿನಗೆ ತಿಳಿಯುತ್ತದೆ. ಭೂಮಿಯನ್ನು ನೇಗಿಲಿನಿಂದ ಉತ್ತು ಕೃಷೀವಲನು ಬೀಜವನ್ನು ಬಿತ್ತುತ್ತಾನೆ. ಬೀಜವನ್ನು ಬಿತ್ತಿ ಸುಮ್ಮನೆ ಇರುತ್ತಾನೆ. ಫಲವನ್ನು ಪಡೆಯುವುದಕ್ಕೆ ಅಲ್ಲಿ ಪರ್ಜನ್ಯನು ಕಾರಣವೃಷ್ಟಿಯು ಅನುಗ್ರಹವನ್ನು ಮಾಡಿದರೆ ಅಲ್ಲಿ ಕರ್ಷಕನು ನಿರ್ದುಃಖನಾಗುತ್ತಾನೆ.
ಯದನ್ಯಃ ಪುರುಷಃ ಕುರ್ಯಾತ್ ಕೃತಂ ತತ್ ಸಕಲಂ ಮಯಾ |
ತಚ್ಛೇದಂ ಫಲಮಸ್ಮಾಕಂ ನಾಪರಾಧೋಽಸ್ತಿ ನಃ ಕ್ವಚಿತ್ |
ಇತಿ ಧೀರೋಽನ್ವವೇಕ್ಷ್ಯೈವ ನಾತ್ಮಾನಂ ತತ್ರ ಗರ್ಹಯೇತ್ ॥46॥
ಇನ್ನೊಬ್ಬ ಪುರುಷನು ಏನು ಮಾಡುತ್ತಾನೋ ಅದೆಲ್ಲವನ್ನೂ ನಾನು ಮಾಡಿದ್ದೇನೆ. ಆದರೆ ನನಗೆ ದೊರೆತಿರುವ ಫಲ ಈ ರೀತಿಯದು. ಇದರಲ್ಲಿ ನನ್ನ ಯಾವ ಅಪರಾಧವೂ ಇಲ್ಲ ಎಂದು ಧೀರನಾದ ವಿವೇಕಿಯು ತಿಳಿದು ತನ್ನನ್ನು ತಾನು ನಿಂದಿಸಿಕೊಳ್ಳುವುದಿಲ್ಲ.
ಕುರ್ವತೋ ನಾರ್ಥಸಿದ್ಧಿರ್ಮೇ ಭವತೀತಿ ಹಿ ಭಾರತ |
ನಿರ್ವೇದೋ ನಾತ್ರ ಕರ್ತವ್ಯೋ ದ್ವಾವೇತೌ ಹ್ಯಸ್ಯ ಕರ್ಮಣಃ ॥47॥
ಎಲೈ ಭಾರತನೇ! ಪ್ರಯತ್ನವನ್ನು ಮಾಡುವ ವ್ಯಕ್ತಿಯು ನನಗೆ ಅರ್ಥಸಿದ್ಧಿಯು ಉಂಟಾಗುವುದಿಲ್ಲ ಎಂದು ವೈರಾಗ್ಯದಿಂದ ವಿಮುಖನಾಗಬಾರದು. ಏಕೆಂದರೆ ಪ್ರತಿಯೊಂದು ಕರ್ಮಕ್ಕೂ ಜೀವ ಮತ್ತು ಈಶ್ವರ ಇಬ್ಬರೂ ಕರ್ತೃಗಳು.
ಸಿದ್ಧಿರ್ವಾಽಪ್ಯಥವಾಽಸಿದ್ಧಿರಪ್ರವೃತ್ತಿರತೋಽನ್ಯಥಾ |
ಬಹೂನಾಂ ಸಮವಾಯೇ ಹಿ ಭಾವನಾ ಕರ್ಮ ಸಿಧ್ಯತಿ ॥48॥
ಅರ್ಥಸಿದ್ಧಿ ಅಥವಾ ಅಸಿದ್ಧಿ ಪ್ರವೃತ್ತಿ ಅಥವಾ ಅಪ್ರವೃತ್ತಿ (ಪ್ರಯತ್ನ ಅಪ್ರಯತ್ನ) ಈ ನಾಲ್ಕರ ಸಮುದಾಯದಲ್ಲಿ ಎಲ್ಲಿ ಪ್ರಯತ್ನವಿದೆಯೊ ಅಲ್ಲಿಯೇ ಕರ್ಮವು ಸಿದ್ಧಿಸುತ್ತದೆ.
ಗುಣಭಾವೇ ಫಲಂ ನ್ಯೂನಂ ಭವತ್ಯಫಲಮೇವ ವಾ |
ಅನಾರಂಭೇ ತು ನ ಫಲಂ ನ ಗುಣೋ ದೃಶ್ಯತೇ ಕ್ವಚಿತ್ ॥49॥
ಜೀವನ ಪ್ರಯತ್ನವು ಉತ್ತಮವಾಗಿದ್ದರೆ ಹರಿಯ ಅನುಗ್ರಹದಿಂದ ಪೂರ್ಣಫಲವೇ ಉಂಟಾಗುತ್ತದೆ. ಮಧ್ಯಮವಾಗಿದ್ದರೆ ನ್ಯೂನಫಲವು ಉಂಟಾಗುತ್ತದೆ. ಅಧಮವಾಗಿದ್ದರೆ ಫಲವುಂಟಾಗುವುದಿಲ್ಲ. ಆದರೆ ಪ್ರಯತ್ನವನ್ನೇ ಮಾಡದಿದ್ದರೆ ಯಾವ ಫಲವೂ ದೊರೆಯುವುದಿಲ್ಲ. ಪ್ರಯತ್ನದ ಚಮತ್ಕಾರವು ಕಣ್ಣಿಗೆ ಕಾಣಿಸುವುದಿಲ್ಲ.
ದೇಶಕಾಲಾನುಪಾಯಾಂಶ್ಚ ಮಾಂಗಲ್ಯಸ್ವಸ್ತಿಸಿದ್ಧಯೇ |
ಯುನಕ್ತಿ ಮೇಧಯಾ ಧೀರೋ ಯಥಾಯೋಗಂ ಯಥಾಬಲಮ್ ॥
ಧೀರನಾದವನು ತನ್ನ ಬುದ್ಧಿಶಕ್ತಿಯಿಂದ ತನ್ನ ಯೋಗ್ಯತೆಯಿದ್ದಷ್ಟು ಮತ್ತು ಬಲವಿದ್ದಷ್ಟು ದೇಶ ಕಾಲ ಉಪಾಯ ಇವುಗಳನ್ನು ಮಾಂಗಲ್ಯ ಸ್ವಸ್ತಿಸಿದ್ಧಿಗಾಗಿ ಒಂದುಗೂಡಿಸುತ್ತಾನೆ.
ಅಪ್ಯುಪಾಯೇನ ತತ್ಕಾರ್ಯಮುಪದೇಷ್ಟಾ ಪರಾಕ್ರಮಃ |
ಭೂಯಿಷ್ಠಂ ಕರ್ಮ ಯೋಗೇಷು ದಿಷ್ಟಮೇವ ಪರಾಕ್ರಮಃ ॥51॥
ಶತ್ರುಪರಾಭವರೂಪವಾದ ಕಾರ್ಯವನ್ನು ಉಪಾಯದಿಂದ ಮಾಡಬೇಕು. ಅಂತಹ ಉಪಾಯವನ್ನು ಉಪದೇಶಮಾಡುವವರು ಕೃಷ್ಣನಂತೆ ಯಾರಾದರೂ ದೊರೆಯುತ್ತಾರೆ. ಎಲ್ಲಾ ಉಪಾಯಗಳಲ್ಲಿ ಸದ್ಯಕ್ಕೆ ಪರಾಕ್ರಮವೇ ಶ್ರೇಷ್ಠವಾದ ಉಪಾಯ. (ನಿಮ್ಮೆಲ್ಲರ

ಪರಾಕ್ರಮಗಳು ಶ್ರೇಷ್ಠವಾದ ಉಪಾಯ.)
ಯತ್ರ ಧೀರೋಽನ್ವವೇಕ್ಷೇತ ಶ್ರೇಯಾಂಸಂ ಬಹುಭಿರ್ಗುಣೈಃ |
ಸಾಮ್ನೈವಾರ್ಥಂ ತತೋ ಲಿಪ್ಸೇತ್ ಕರ್ಮ ನಾಸ್ಮೈ ಪ್ರಯೋಜಯೇತ್ ॥
ಎಲ್ಲಿ ಧೀರನಾದವನು ಸಾಮವೇ ಅನೇಕಗುಣಗಳಿಗಿಂತ ಶ್ರೇಷ್ಠವಾದುದೆಂದು ಸೂಚಿಸುತ್ತಾನೆಯೋ ಅಲ್ಲಿ ಸಾಮೋಪಾಯದಿಂದಲೇ ಅರ್ಥವನ್ನು ಸಾಧಿಸಬೇಕು. ಅಲ್ಲಿ ದಂಡರೂಪವಾದ ಪ್ರಯತ್ನವನ್ನು ಪ್ರಯೋಗಿಸಬಾರದು.
ವ್ಯಸನಂ ನಾಭಿಕಾಂಕ್ಷೇತ ನಿಧನಂ ವಾ ಯುಧಿಷ್ಠಿರ |
ಅಪಿ ಸಿಂಧೋರ್ಗಿರೇರ್ವಾಽಪಿ ಕಿಂ ಪುನರ್ಮೃದುಧರ್ಮಿಣಃ ॥53॥
ಎಲೈ ಯುಧಿಷ್ಠಿರನೇ! ಅಗಾಧವಾದ ಸಮುದ್ರಕ್ಕೂ ಉನ್ನತವಾದ ಪರ್ವತಕ್ಕೂ ದುಃಖವನ್ನಾಗಲೀ ನಾಶವನ್ನಾಗಲೀ ಅಪೇಕ್ಷಿಸಬಾರದು. ಆದರೆ ನಮಗೆ ಮತ್ತು ಇಂತಹ ನಾಶವನ್ನು ತಂದುಕೊಟ್ಟ ಧರ್ಮವನ್ನು ಉಲ್ಲಂಘಿಸಿದ ಮರಣಶೀಲನಾದ ದುರ್ಯೋಧನನಿಗೆ ಮತ್ತು ನಿಧನಗಳನ್ನು ಮಾಡಲೇಬೇಕು.(ಇದರಲ್ಲಿ ಯೋಚನೆಮಾಡುವ ಅಗತ್ಯವಿಲ್ಲ.)
ಉತ್ಥಾನಯುಕ್ತಃ ಸತತಂ ಪರೇಷಾಮಂತರೇಕ್ಷಣೇ |
ಆನೃಣ್ಯಮಾಪ್ನೋತಿ ನರಃ ಪರಸ್ಯಾತ್ಮನ ಏವ ಚ ॥54॥
ಯಾವಾಗಲೂ ಪ್ರಯತ್ನಯುಕ್ತನಾಗಿ ಶತ್ರುಗಳ ರಂಧ್ರಾನ್ವೇಷಣೆಯನ್ನು ಮಾಡುವ ಪುರುಷನು ಪರಮಾತ್ಮನಿಂದಲೂ ಮತ್ತು ತನ್ನಿಂದಲೂ ಆನೃಣ್ಯವನ್ನು ಪಡೆಯುತ್ತಾನೆ. (ತನ್ನ ಕರ್ತವ್ಯವನ್ನು ಮಾಡಿ ಋಣಮುಕ್ತನಾಗುತ್ತಾನೆ).
ನ ತ್ವೇವಾತ್ಮಾಽವಮಂತವ್ಯಃ ಪುರುಷೇಣ ಕದಾಚನ |
ನ ಹ್ಯಾತ್ಮಪರಿಭೂತಸ್ಯ ಭೂತಿರ್ಭವತಿ ಭಾರತ ॥55॥
ಎಲೈ ಭಾರತನೇ! ಪುರುಷನು ತನ್ನನ್ನು ತಾನೇ ನಿಂದಿಸಿಕೊಳ್ಳಬಾರದು. ತನ್ನಿಂದ ತಾನೇ ಪರಿಭವವನ್ನು ಹೊಂದುವ ಪುರುಷನಿಗೆ ಎಂದೂ ಸಂಪತ್ತಾಗಲೀ ಮಂಗಳವಾಗಲೀ ಉಂಟಾಗುವುದಿಲ್ಲ.
ಏವಂ ಸುಸಂಸ್ಥಿತಾ ಬುದ್ಧಿರಿಯಂ ಲೋಕಸ್ಯ ಪಾಂಡವ |
ಚಿತ್ರಾ ಸಿದ್ಧಿಗತಿಃ ಪ್ರೋಕ್ತಾ ಕಾಲಾವಸ್ಥಾವಿಭಾಗಶಃ ॥56॥
ಎಲೈ ಪಾಂಡವನೇ!ಇದು ಜ್ಞಾನಿಲೋಕದ ಸುಸ್ಥಿರವಾದ ಬುದ್ಧಿ. ಕರ್ಮಸಿದ್ಧಿಯ ಪ್ರಕಾರಗಳು ಕಾಲ ಮತ್ತು ಅವಸ್ಥೆಗಳ ವಿಭಾಗವನ್ನು ಅನುಸರಿಸಿ ವಿಚಿತ್ರವಾಗಿರುತ್ತವೆ ಎಂದು ಹೇಳಲ್ಪಡುತ್ತದೆ.
ಬ್ರಾಹ್ಮಣಂ ಮೇ ಪಿತಾ ಪೂರ್ವಂ ವಾಸಯಾಮಾಸ ಪಂಡಿತಮ್ |
ಸರ್ವಂ ಚಾರ್ಥಮಿಮಂ ಪ್ರಾಹ ಪಿತ್ರೇ ಮೇ ಭರತರ್ಷಭ ॥57॥
ಎಲೈ ಭರತರ್ಷಭನೇ! ಹಿಂದೆ ನನ್ನ ತಂದೆಯು ನಮ್ಮ ಮನೆಯಲ್ಲಿ ಒಬ್ಬ ಬ್ರಾಹ್ಮಣನನ್ನು ವಾಸಮಾಡಲು ಇರಿಸಿಕೊಂಡಿದ್ದನು. ಆ ಬ್ರಾಹ್ಮಣನು ಈ ಎಲ್ಲಾ ವಿಷಯವನ್ನೂ ನನ್ನ ತಂದೆಗೆ ಹೇಳಿದನು.
ನೀತಿಂ ಬೃಹಸ್ಪತಿಪ್ರೋಕ್ತಾಂ ಭಾತೄನ್ ಮೇಽಗ್ರಾಹಯತ್ ಪುರಾ|
ತೇಷಾಂ ಸಂಕಥಮಶ್ರೌಷಮಹಮೇತಾಂ ತದಾ ಗೃಹೇ ॥58॥
ಬೃಹಸ್ಪತಿಯಿಂದ ಹೇಳಲ್ಪಟ್ಟ ಈ ನೀತಿಯನ್ನು ಅವನು ನನ್ನ ಸಹೋದರರಿಗೆ ಉಪದೇಶಿಸಿದನು. ಅವರು ಹೀಗೆ ಮಾತನಾಡುತ್ತಿರುವಾಗ ನಾನು ಮನೆಯಲ್ಲಿ ಆ ಮಾತುಗಳನ್ನು ದೂರದಿಂದ ಕೇಳಿದೆ.
ಸ ಮಾಂ ರಾಜನ್ ಕರ್ಮವತೀಮಾಗತಾಮಾಹ ಸಾಂತ್ವಯನ್ |
ಶುಶ್ರೂಷಮಾಣಾಂ ಹ್ಯಾಸೀನಾಂ ಪಿತುರಂಕೇ ಯುಧಿಷ್ಠಿರ ॥59॥
ಎಲೈ ರಾಜನೇ! ಕೆಲಸಮಾಡುತ್ತಿದ್ದ ನಾನು ಆ ಬ್ರಾಹ್ಮಣನು ಸಮೀಪಕ್ಕೆ ಬಂದಾಗ ಅವನು ನನ್ನನ್ನು ಸಮಾಧಾನಪಡಿಸುತ್ತಾ ನನ್ನ ತಂದೆಯ ತೊಡೆಯಮೇಲೆ ಕುಳಿತು ಅವನ ಮಾತುಗಳನ್ನು ಕೇಳುತ್ತಿದ್ದ ನನಗೆ ಎಲ್ಲವನ್ನೂ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯ- 22ನೇ ಅಧ್ಯಾಯ
ಇತೀರಿತೋ ಧರ್ಮಜಃ ಕೃಷ್ಣಯೈವ
ನಿರುತ್ತರತ್ವಂ ಗಮಿತಸ್ತ್ವಭರ್ತ್ಸಯತ್ |
ಕುತರ್ಕಮಾಶ್ರಿತ್ಯ ಹರೇರಪಿ ತ್ವಂ
ಅಸ್ವಾತಂತ್ರ್ಯಂಸಾಧಯಸೀತಿ ಚೋಕ್ತತ್ವ ॥75॥
ದ್ರೌಪದಿ ಹೀಗೆ ಹೇಳಿದಾಗ ಧರ್ಮರಾಜ ನಿರುತ್ತರನಾದ. ನೀನು ಕುತರ್ಕ ಬಲದಿಂದ ಹರಿಗೂ ಅಸ್ವಾತಂತ್ರ್ಯವನ್ನು ಸಾಧಿಸುತ್ತಿರುವಿ ಎಂದು ಹೇಳುತ್ತ ದ್ರೌಪದಿಯನ್ನು ಬೈದುಬಿಟ್ಟ.
ಛಲೇನ ತೇನ ಪ್ರತಿಭರ್ತ್ಸಿತಾ ಸಾ
ಕ್ಷಮಾಪಯಾಮಾಸ ನೃಪಂ ಯತಃ ಸ್ತ್ರೀ |
ವಾಚಾಲತಾ ನಾತಿತರಾಂ ಹಿ ಶೋಭತೇ
ಸ್ತ್ರೀಣಾಂ ತತಃ ಪ್ರಾಹ ವೃಕೋದರಸ್ತಂ ॥76॥
ಧರ್ಮರಾಜ ಹೀಗೆ ಛಲದಿಂದ ದ್ರೌಪದಿಯನ್ನು ಬೈದಾಗ ಅವಳು ಸತಿಯಾದ್ದರಿಂದ ಪತಿಯ ಮುಂದೆ ಸತಿ ಇಂಥ ವಿಷಯದಲ್ಲಿ ಹೆಚ್ಚು

ಮಾತನಾಡುವುದು ಶೋಭಿಸುವುದಿಲ್ಲವಾದ್ದರಿಂದ ಕ್ಷಮೆ ಬೇಡಿ ಸುಮ್ಮನಾದಳು. ಆಗ ಭೀಮ ಮಾತನಾಡಲು ತೊಡಗಿದ.
ರಾಜನ್ವಿಷ್ಣುಃ ಸರ್ವಕರ್ತಾ ನ ಚಾನ್ಯಃ
ತತ್ತಂತ್ರಮೇವಾನ್ಯದಸೌ ಸ್ವತಂತ್ರಃ |
ತಥಾಪಿ ಪುಂಸಾ ವಿಹಿತಂ ಸ್ವಕರ್ಮ
ಕಾರ್ಯಂ ತ್ಯಾಜ್ಯಂ ಚಾನ್ಯದತ್ಯಂತಯತ್ನಾತ್ ॥77॥
ರಾಜನೇ, ವಿಷ್ಣುವೆ ಸರ್ವಕರ್ತ. ಬೇರೆ ಯಾರೂ ಅಲ್ಲ. ಅವನಿಗಿಂತ ಬೇರೆ ಎಲ್ಲವೂ ಅವನ ಅಧೀನ. ಅವನು ಸ್ವತಂತ್ರ. ಆದರೂ ಜೀವ ವಿಹಿತ ಸ್ವಕರ್ಮವನ್ನು ಅತ್ಯಂತ ಪ್ರಯತ್ನದಿಂದ ಮಾಡಲೇಬೇಕು. ನಿಷಿದ್ಧಕರ್ಮವನ್ನು ಹಾಗೇ ತ್ಯಜಿಸಲೂಬೇಕು.
ಪ್ರತ್ಯಕ್ಷಮೇತತ್ ಪುರುಷಸ್ಯ ಕರ್ಮ
ತೇನಾನುಮೇಯಾ ಪ್ರೇರಣಾ ಕೇಶವಸ್ಯ |
ಸ್ವಕರ್ಮ ಕೃತ್ವಾ ವಿಹಿತಂ ಹಿ ವಿಷ್ಣುನಾ
ತತ್ಪ್ರೇರಣೇತ್ಯೇವ ಬುಧೋಽನುಮನ್ಯತೇ ॥78॥
ಜೀವನು ಕರ್ಮ ಮಾಡುವುದು ಪ್ರತ್ಯಕ್ಷವೇ ಇದೆ. ಅದರಿಂದ ವಿಷ್ಣುಪ್ರೇರಣೆಯನ್ನು ಅನುಮಾನದಿಂದ ಊಹಿಸಿ ತಿಳಿಯಬಹುದು. ಜ್ಞಾನಿಯು ವಿಷ್ಣು ವಿಧಿಸಿದ ಸ್ವಕರ್ಮವನ್ನು ತಾನು ಮಾಡಿ ಅವನ ಪ್ರೇರಣೆಯೆಂದು ಭಾವಿಸುತ್ತಾನೆ.
ತೇನೈತಿ ಸಮ್ಯಗ್ಗತಿಮಸ್ಯ ವಿಷ್ಣೋ-
ರ್ಜನೋಽಶುಭೋ ದೈವಮಿತ್ಯೇವ ಮತ್ವಾ |
ಹಿತ್ವಾಸ್ವಕಂ ಕರ್ಮ ಗತಿಂ ಚ ತಾಮಸೀಂ
ಪ್ರಯಾತಿ ತಸ್ಮಾತ್ ಕಾರ್ಯಮೇವ ಸ್ವಕರ್ಮ ॥79॥
ಜ್ಞಾನಿ ಹರಿಪ್ರೇರಣೆ ಎಂದುಕೊಂಡು ಕರ್ಮ ಮಾಡುವುದರಿಂದ ಹರಿಯ ಅನುಗ್ರಹದಿಂದ ವಿಷ್ಣುಲೋಕವನ್ನು ಪಡೆಯುತ್ತಾನೆ. ಅವಿವೇಕಿ ದೈವವೇ ಎಲ್ಲವನ್ನೂ ಮಾಡುತ್ತದೆ ಎನ್ನುತ್ತ ವಿಹಿತವಾದ ಸ್ವಕರ್ಮವನ್ನು ತ್ಯಾಗಮಾಡಿ ತಾಮಸಗತಿಯನ್ನು ಹೊಂದುತ್ತಾನೆ. ಅದರಿಂದ ಪ್ರತಿಯೊಬ್ಬನೂ ಸ್ವಕರ್ಮ ಮಾಡಲೇಬೇಕು.
ಜ್ಞಾತವ್ಯಂ ಚೈವಾಸ್ಯ ವಿಷ್ಣೋರ್ವಶತ್ವಂ
ಕರ್ತವ್ಯಂ ಚೈವಾತ್ಮನಃ ಕಾರ್ಯಕರ್ಮ |
ಪ್ರತ್ಯಕ್ಷೈಷಾ ಕರ್ತೃತಾ ಜೀವಸಂಸ್ಥಾ
ತಥಾಗಮಾದನುಮಾನಾಚ್ಚ ಸರ್ವಂ ॥80॥
ವಿಷ್ಣೋರ್ವಶೇ ತನ್ನ ಹೇಯಂ ದ್ವಯಂ ಚ
ಜಾನನ್ ವಿದ್ವಾನ್ ಕುರುತೇ ಕಾರ್ಯಕರ್ಮ |
ತತ್ಪ್ರೇರಕಂ ವಿಷ್ಣುಮೇವಾಭಿಜಾನನ್
ಭವೇತ್ ಪ್ರಮಾಣತ್ರಿತಯಾನುಗಾಮಿ? ॥81॥
ಕರ್ಮಕರ್ತನಾದ ಜೀವ ಹರಿಯ ಅಧೀನನೆಂಬುದನ್ನು ತಿಳಿಯಲೇಬೇಕು. ತನ್ನ ಯೋಗ್ಯಕರ್ಮವನ್ನು ಆಚರಿಸಲೂಬೇಕು. ಜೀವನದಲ್ಲಿರುವ ಈ ಕರ್ತೃತ್ವ ಪ್ರತ್ಯಕ್ಷ ಸಿದ್ಧ. ಹಾಗೇ ಅನುಮಾನಾಗಮನಗಳಿಂದಲೂ ಸಿದ್ಧವಾಗಿದೆ. ಎಲ್ಲವೂ ವಿಷ್ಣುವಿನ ಅಧೀನವೆಂಬುದೂ ಪ್ರತ್ಯಕ್ಷಾನುಮಾನಾಗಮಗಳಿಂದ ಸಿದ್ಧವಾಗಿದೆ. ಅದರಿಂದ ಜೀವಕರ್ತೃತ್ವ ಮತ್ತು ಹರಿಯಧೀನತ್ವ ಇವೆರಡನ್ನೂ ತಿಳಿದ ಜ್ಞಾನಿ ತನಗೆ ಯೋಗ್ಯವಾದ ಕರ್ಮ ಮಾಡುತ್ತಾನೆ. ಹೀಗೆಯಾರು ಜೀವಕರ್ತೃತ್ವಕ್ಕೆ ವಿಷ್ಣುಪ್ರೇರಕ ಎಂದು ತಿಳಿಯುವನೋ ಅವನು ಮೂರೂ ಪ್ರಮಾಣಗಳನ್ನು ಅನುಸರಿಸಿದಂತಾಗುವುದು.
ಪೂರ್ಣಂ ಪ್ರಮಾಣ ತತ್ತ್ರಯಂ ಚಾವಿರೋಧೇ-
ನೈಕತ್ರಸ್ಥಂ ತತ್ತ್ರಯಂ ಚಾವಿರೋಧಿ |
ಪೃಥಜ್ಮಧ್ಯಂ ಚಾಪ್ರಮಾಣಂ ವಿರೋಧಿ
ಸ್ಯಾತ್ ತತ್ ತಸ್ಮಾತ್ ತ್ರಯಮೇಕತ್ರ ಕಾರ್ಯಂ ॥82॥
ಪ್ರತ್ಯಕ್ಷ ಅನುಮಾನ ಆಗಮ ಇವು ಮೂರೂ ಒಂದೇ ವಿಷಯದಲ್ಲಿ ಪರಸ್ಪರ ಅವಿರೋಧಿಯಾಗಿ ಕೂಡಿಬಂದರೆ ಅದು ಪೂರ್ಣಪ್ರಮಾಣವೆನಿಸುತ್ತದೆ. ಮೂರು ಪ್ರಮಾಣಗಳು ಬೇರೆ ಬೇರೆ ವಿಷಯಗಳನ್ನು ಹೊಂದಿ ಪರಸ್ಪರ ವಿರೋಧ ಪರಿಹರಿಸಿಕೊಂಡರೆ ಮಧ್ಯಮ ಪ್ರಮಾಣವಾಗುವುದು. ಪರಸ್ಪರ ವಿರೋಧಿಯೇ ಆಗಿದ್ದರೆ ಅಪ್ರಮಾಣವೇ ಆಗುವುದು. ಅದರಿಂದ ಮೂರನ್ನೂ ಒಂದೇ ವಿಷಯದಲ್ಲಿ ಅವಿರೋಧವಾಗಿ ಕೂಡಿಸಬೇಕು.
ಅಜ್ಞಃ ಪ್ರತ್ಯಕ್ಷಂ ತ್ವಪಹಾಯೈವ ವೈವಂ
ಮತ್ವಾ ಕರ್ತೃ ಸ್ವಾತ್ಮಕರ್ಮ ಪ್ರಜಹ್ಯಾತ್ |
ವಿದ್ವಾನ್ಜೀವಂ ವಿಷ್ಣುವಶೇ ವಿದಿತ್ವಾ
ಕರೋತಿ ಕರ್ತವ್ಯಮಜಸ್ರಮೇವ ॥83॥
ಅಜ್ಞಾನಿ ಪ್ರತ್ಯಕ್ಷಸಿದ್ಧವಾದ ಜೀವಕರ್ತೃತ್ವವನ್ನು ಬಿಟ್ಟು ದೈವವೇ ಕರ್ತೃ ಎಂದು ತಿಳಿದು ಸ್ವಕರ್ಮ ಭ್ರಷ್ಟನಾಗುತ್ತಾನೆ. ಜ್ಞಾನಿ ಜೀವನನ್ನು ವಿಷ್ಣ್ವಧೀನನೆಂದು ತಿಳಿದು ಕರ್ತವ್ಯ ಕರ್ಮವನ್ನು ನಿರಂತರ ಮಾಡುತ್ತಾನೆ.
ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ
ಯಾನಾದಿಸಿದ್ಧಾ ಸರ್ವಜೀವೇಷು ನಿತ್ಯಾ |
ಸಾ ಕಾರಣಂ ಪ್ರಥಮಂ ತು ದ್ವಿತೀಯ-

ಮನಾದಿಕರ್ಮೈವ ತಥಾ ತೃತೀಯಂ ॥84॥
ಜೀವಪ್ರಯತ್ನಃ ಪೌರುಷಾಖ್ಯಸ್ತದೇತತ್
ತ್ರಯಂ ವಿಷ್ಣೋರ್ವಶಗಂ ಸರ್ವದೈವ |
ಸ ಕಸ್ಯಚಿನ್ನ ವಶೇ ವಾಸುದೇವಃ
ಪರಾತ್ಪರಃ ಪರಮೋऽಸೌ ಸ್ವತಂತ್ರಃ ॥85॥
ಸರ್ವಜೀವರಲ್ಲಿಯೂ ಅನಾದಿಸಿದ್ಧವಾದ ನಿತ್ಯವಾದ ಯೋಗ್ಯತೆಯ ಕರ್ಮಕ್ಕೆ ಮೊದಲನೇ ಕಾರಣ. ಈ ಯೋಗ್ಯತೆಗೇ ಸ್ವಭಾವವೆಂದೂ ಹೆಸರು. ಹಠ ಎಂದೂ ಹೆಸರು. ಅನಾದಿ ಕರ್ಮ ಎರಡನೇ ಕಾರಣ. ಜೀವಪ್ರಯತ್ನ ಮೂರನೇ ಕಾರಣ. ಇದಕ್ಕೇ ಪೌರುಷ ಎಂದೂ ಹೆಸರು. ಇವು ಮೂರೂ ಸದಾ ಹರಿಯ ಅಧೀನ ಹೊರತು, ಹರಿ ಯಾರಿಗೂ ಅಧೀನನಲ್ಲ. ಏಕೆಂದರೆ ಅವನು ಸರ್ವೋತ್ತಮ ಪರಮಸ್ವತಂತ್ರ.
ಹಠಶ್ಚಾಸೌ ತಾರತಮ್ಯಸ್ಥಿತೋ ಹಿ
ಬ್ರಹ್ಮಾಣಮಾರಭ್ಯ ಕಲಿಶ್ಚ ಯಾವತ್ |
ಹಠಾಚ್ಚ ಕರ್ಮಾಣಿ ಭವಂತಿ ಕರ್ಮಜೋ
ಯತ್ನೋ ಯತೋ ಹಠಕರ್ಮಪ್ರಯೋಕ್ತಾ ॥86॥
ಜೀವಯೋಗ್ಯತೆ ಬ್ರಹ್ಮನಿಂದ ತೊಡಗಿ ಕಲಿಪರ್ಯಂತವೂ ತಾರತಮ್ಯದಿಂದ ಇರುತ್ತದೆ. ಆ ಯೋಗ್ಯತೆಯ ತಾರತಮ್ಯದಿಂದ ಪೂರ್ವಕರ್ಮಗಳು ತಾರತಮ್ಯದಿಂದ ಉಂಟಾಗುತ್ತವೆ. ಪೂರ್ವಕರ್ಮಗಳಿಂದ ಈಗಿನ ಪ್ರಯತ್ನಗಳು ತಾರತಮ್ಯದಿಂದ ಉಂಟಾಗುತ್ತದೆ. ಪುರುಷಪ್ರಯತ್ನ ಯೋಗ್ಯತೆಗೂ ಪೂರ್ವಕರ್ಮಕ್ಕೂ ಪ್ರಯೋಜಕವಾಗಿದೆ.
ವಿನಾ ಯತಂ ನ ಹಠೋ ನಾಪಿ ಕರ್ಮ
ಫಲಪ್ರದೋ ವಾಸುದೇವೋऽಖಿಲಸ್ಯ |
ಸ್ವಾತಮ್ರ್ಯಶಕ್ತೇರ್ವಿನಿಯಾಮಕೋ ಹಿ
ತಥಾಪ್ಯೇತಾನ್ ಸೋऽಪ್ಯಪೇಕ್ಷ್ಯೈವ ಯುಂಜೇತ್ ॥87॥
ಪ್ರಯತ್ನವಿಲ್ಲದೆ ಯೋಗ್ಯತೆಯೂ ಫಲಕೊಡುವುದಿಲ್ಲ. ಪೂರ್ವಕರ್ಮವೂ ಫಲಕೊಡುವುದಿಲ್ಲ. ಈ ಮೂರಕ್ಕೂ ಅನುಗುಣವಾಗಿ ಫಲಕೊಡುವವನು ಶ್ರೀಹರಿ. ಸ್ವಾತಂತ್ರ್ಯ ಶಕ್ತಿ ಇರುವುದರಿಂದ ಅವನೇ ಈ ಮೂರಕ್ಕೂ ನಿಯಾಮಕ. ಆದರೂ ಅವುಗಳನ್ನು ಅನುಸರಿಸಿಯೇ ಫಲ ಕೊಡುತ್ತಾನೆ.
ಏತಾನಪೇಕ್ಷ್ಯೈ ಫಲಂ ದದಾನೀ-
ತ್ಯಸ್ಯೈವ ಸಂಕಲ್ಪ ಇತಿ ಸ್ವತಂತ್ರತಾ |
ನಾಸ್ಯಾಪಗಚ್ಛೇತ್ಸ ಹಿ ಸರ್ವಶಕ್ತಿ
ರ್ನಾಶಕ್ತತಾ ಕ್ವಚಿದಸ್ಯ ಪ್ರಭುತ್ವಾತ್ ॥88॥
ಯೋಗ್ಯತಾ ಕರ್ಮಪ್ರಯತ್ನಗಳನ್ನು ಅನುಸರಿಸಿಯೇ ಫಲ ನೀಡುವೆನೆಂದು ಹರಿಯ ಸಂಕಲ್ಪ. ಅದರಿಂದ ಅವನಲ್ಲಿ ಸ್ವಾತಂತ್ರ್ಯಕ್ಕೆ ಕುಂದಿಲ್ಲ. ಅವನು ಸರ್ವಶಕ್ತ. ಸಕಲ ಕಾರ್ಯದಲ್ಲಿಯೂ ಅತ್ಯಂತ ಸಮರ್ಥನಾದ್ದರಿಂದ ಯಾವ ವಿಷಯದಲ್ಲಿಯೂ ಅಶಕ್ತಿ ಇಲ್ಲ.
ತಸ್ಮಾತ್ ಕಾರ್ಯಂ ತೇನ ಕ್ಲೃಪ್ತಂ ಸ್ವಕರ್ಮ
ತತ್ಪೂಜಾರ್ಥಂ ತೇನ ತತ್ಪ್ರಾಪ್ತಿರೇವ |
ಅತೋऽನ್ಯಥಾ ನಿರಯಃ ಸರ್ವಥಾ ಸ್ಯಾತ್
ಸ್ವಕರ್ಮ ವಿಪ್ರಸ್ಯ ಜಪೋಪದೇಶೌ ॥89॥
ವಿಷ್ಣೋರ್ಮುಖಾದ್ವಿಪ್ರಜಾತಿಃ ಪ್ರವೃತ್ತಾ
ಮುಖೋತ್ಥಿತಂ ಕರ್ಮ ತೇನಾಸ್ಯ ಸೋऽದಾತ್ ॥90॥
ಜೀವನಿಗೆ ಕರ್ತೃತ್ವವಿರುವುದರಿಂದ ಅವನು ಹರಿ ವಿಧಿಸುವ ಸ್ವಯೋಗ್ಯ ಕರ್ಮವನ್ನು ಹರಿಪೂಜೆಗಾಗಿ ಮಾಡಬೇಕು. ಅದರಿಂದಲೇ ಮೋಕ್ಷ ಸಾಧ್ಯ. ಹಾಗೆ ಕರ್ಮ ಮಾಡದಿದ್ದರೆ ಸರ್ವಥಾ ನರಕವೇ ಸಿಗುವುದು. ಬ್ರಾಹ್ಮಣನಿಗೆ ಸ್ವಯೋಗ್ಯ ಕರ್ಮ ಜಪ ಮತ್ತು ಉಪದೇಶ. ಏಕೆಂದರೆ ಬ್ರಾಹ್ಮಣ ಜಾತಿ ವಿಷ್ಣುವಿನ ಮುಖದಿಂದ ಉದ್ಭವಿಸಿತು. ಅದರಿಂದ ಅವನಿಗೆ ಮುಖದಿಂದಾಗುವ ಕರ್ಮವನ್ನೇ ವಿಧಿಸಿದ್ದಾನೆ ಹರಿ.
ಬಾಹ್ವೋರ್ಜಾತಃ ಕ್ಷತ್ರಿಯಸ್ತೇನ ಬಾಹ್ವೋಃ
ಕರ್ಮಾಸ್ಯ ಪಾಪಪ್ರತಿವಾರಣಂ ಹಿ |
ಪ್ರವರ್ತನಂ ಸಾಧುಧರ್ಮಸ್ಯ ಚೈವ
ಮುಖಸ್ಯ ಬಾಹ್ವೋಶ್ಚಾತಿಸಾಮೀಪ್ಯತೋऽಸ್ಯ ॥91॥
ಜಪೋಪದೇಶೌ ಕ್ಷತ್ರಿಯಸ್ಯಾಪಿ ವಿಷ್ಣು-
ಶ್ಚಕ್ರೇ ಧರ್ಮೌ ಯಜ್ಞಕರ್ಮಾಪಿ ವಿಪ್ರೇ |
ವೈಶ್ಯೋ ಯಸ್ಮಾದೂರುಜಸ್ತೇನ ತಸ್ಯ
ಪ್ರಜಾವೃದ್ಧಿಸ್ತಜ್ಜಕರ್ಮೈವ ಧರ್ಮಃ ॥92॥
ತತ್ಸಾದೃಶ್ಯಾತ್ ಸ್ಥಾವರಾಣಾಂ ಚ ವೃದ್ಧಿಃ
ಕರೋರುವೋಃ ಸನ್ನಿಕೃಷ್ಟತ್ವ ಹೇತೋಃ |
ವಾರ್ತಾತ್ಮಕಂ ಕರ್ಮ ಧರ್ಮಂ ಚಕಾರ

ವಿಷ್ಣುಸ್ತಸ್ಯೈವಾಂಘ್ರಿಜಃ ಶೂದ್ರ ಉಕ್ತಃ ॥93॥
ಗತಿ ಪ್ರಧಾನಂ ಕರ್ಮ ಶುಶ್ರೂಷಣಾಖ್ಯಂ
ಸಾದೃಶ್ಯತೋ ಹಸ್ತಪದೋಸ್ತಥೈವ |
ಹಸ್ತೋದ್ಭವಂ ಕರ್ಮ ತಸ್ಯಾಪಿ ಧರ್ಮಃ
ಸಂತಾನವೃದ್ಧಿಶ್ಚ ಸಮೀಪಗತ್ವಾತ್ ॥94॥
ವಿಷ್ಣುವಿನ ಬಾಹುಗಳಿಂದ ಕ್ಷತ್ರಿಯ ಹುಟ್ಟಿದ. ಅದರಿಂದ ಅವನಿಗೆ ಸ್ವಕರ್ಮ, ದುಷ್ಟನಿಗ್ರಹ ಜೊತೆಗೆ ವೈಷ್ಣವ ಧರ್ಮಪ್ರಚಾರವೂ ಅವನಿಗೆ ಕರ್ತವ್ಯವಾಗಿರುತ್ತದೆ. ಏಕೆಂದರೆ ಮುಖ ಮತ್ತು ಬಾಹುಗಳಿಗೆ ಅತ್ಯಂತ ಸಾಮೀಪ್ಯವಿರುವುದರಿಂದ ಜಪ ಉಪದೇಶಗಳನ್ನು ಕ್ಷತ್ರಿಯನಿಗೂ ಉಪದೇಶಿಸಿದ್ದಾನೆ, ಮತ್ತು ಯಜ್ಞಕರ್ಮವನ್ನು ಬ್ರಾಹ್ಮಣನಿಗೂ ಉಪದೇಶಿಸಿದ್ದಾನೆ. ವೈಶ್ಯ ತೊಡೆಗಳಿಂದ ಹುಟ್ಟಿದ ಪ್ರಯುಕ್ತ ತೊಡೆಗಳಿಂದಾಗುವ ಸಂತಾನವೃದ್ಧಿ ಅವನಿಗೆ ಧರ್ಮ. ಸಂತಾನವೃದ್ಧಿ ಗೋರಕ್ಷಣೆಗಳಿಗೆ ಸದೃಶವಾದ ಸ್ಥಾವರವೃದ್ಧಿ ಅಂದರೆ ಕೃಷಿ ಬೇಸಾಯ ವೃತ್ತಿಯೂ ಅವನಿಗೆ ಧರ್ಮ. ಕೈಗಳಿಗೂ ತೊಡೆಗಳಿಗೂ ಸಾಮೀಪ್ಯವಿರುವುದರಿಂದ ವೈಶ್ಯನಿಗೆ ವಾಣಿಜ್ಯ ಕೃಷಿ ಗೋರಕ್ಷಣ ಬಡ್ಡಿ ವ್ಯವಹಾರ ರೂಪವಾದ ಕರ್ಮವನ್ನೂ ಹರಿ ವಿಧಿಸಿದ್ದಾನೆ. ಅವನ ಕಾಲುಗಳಿಂದ ಶೂದ್ರ ಜನಿಸಿದನೆಂದು ಉಕ್ತವಾಗಿರುವುದರಿಂದ ಓಡಾಡುವುದೇ ಹೆಚ್ಚಾಗಿರುವ ಶುಶ್ರೂಷಣವೆಂಬ ಕರ್ಮ ಅವನಿಗೆ ಧರ್ಮ. ಕೈಗಳಿಗೂ ಕಾಲುಗಳಿಗೂ ಸಾದೃಶ್ಯವಿರುವುದರ್ದಂ ಕೈಗಳಿಂದಾಗುವ ಯುದ್ಧವೂ ಕೃಷಿ ವಾಣಿಜ್ಯಾದಿಗಳೂ ಶೂದ್ರನಿಗೆ ವಿಹಿತವೇ. ಕಾಲು ತೊಡೆಗಳಿಗೆ ಸಾಮೀಪ್ಯವಿರುವುದರಿಂದ ಸಂತಾನವೃದ್ಧಿಯೂ ಶೂದ್ರನಿಗೆ ವಿಹಿತವೆ.
ಭುಜಾವುರೋ ಹೃದಯಂ ಯದ್ಬಲಸ್ಯ
ಜ್ಞಾನಸ್ಯ ಚ ಸ್ಥಾನಮತೋ ನೃಪಾಣಾಂ |
ಬಲಂ ಜ್ಞಾನಂ ಚೋಭಯಂ ಧರ್ಮ ಉಕ್ತಃ
ಪಾಣೌ ಕೃತೀನಾಂ ಕೌಶಲಂ ಕೇವಲಂ ಹಿ |
ತಸ್ಮಾತ್ ಪಾಣ್ಯೋರೂರುಪದೋರುಪಸ್ಥಿತೇಃ
ವಿಟ್ ಛೂದ್ರಕೌ ಕರ್ಮಣಾಂ ಕೌಶಲೇತೌ ॥95॥
ಬಾಹುಗಳು ಮತ್ತು ಎದೆ ಇವು ಬಲದ ಸ್ಥಾನಗಳು. ಹೃದಯ ಜ್ಞಾನಕ್ಕೆ ಸ್ಥಾನ. ಅದರಿಂದ ರಾಜರಿಗೆ ಬಲಕಾರ್ಯಜ್ಞಾನಕಾರ್ಯಗಳೆರಡೂ ಧರ್ಮವೆಂದು ವಿಹಿತವಾಗಿವೆ. ಕೈಯು ಕೇವಲ ಕರ್ಮ ನಿಪುಣತಗೆ ಸ್ಥಾನ. ಬಾಹುವಿನಂತೆ ಬಲದ ಸ್ಥಾನವಲ್ಲ. ಅದರಿಂದ ಕೈಗಳಿಗೂ ತೊಡೆ ಕಾಲುಗಳಿಗೂ ಸಾಮೀಪ್ಯವಿರುವುದರಿಂದ ವೈಶ್ಯ ಶೂದ್ರರು ಕರ್ಮಕೌಶಲಯುಕ್ತರಾಗಿರಬೇಕು.
ಪ್ರಾಧಾನ್ಯತೋ ಧರ್ಮವಿಶೇಷ ಏಷ
ಸಾಮಾನ್ಯತಃ ಸರ್ವ ಏವಾಖಿಲಾನಾಂ |
ವಯಂ ಹಿ ದೇವಾಸ್ತೇನ ಸರ್ವಂ ಹಿ ಕರ್ಮ
ಪ್ರಾಯೇಣ ನೋ ಧರ್ಮತಾಮೇತಿ ಶಶ್ವತ್ ॥96॥
ಇದು ಪ್ರಾಧಾನ್ಯದೃಷ್ಟಿಯಿಂದ ಹೇಳಿದ ವಿಶೇಷ ಧರ್ಮ ವ್ಯವಸ್ಥೆ. ಸಾಮಾನ್ಯವಾಗಿ ಅಮುಖ್ಯ ದೃಷ್ಟಿಯಿಂದ ಹೇಳುವುದಾದರೆ ಎಲ್ಲರಿಗೂ ಎಲ್ಲ ಧರ್ಮವೂ ಅನುಮತವಾಗಿದೆ. ಏಕೆಂದರೆ ನಾವು ದೇವತೆಗಳಾಗಿರುವುದರಿಂದ ಪ್ರಾಯಃ ಎಲ್ಲ ಕರ್ಮವೂ ನಮಗೆ ಯಾವಾಗಲೂ ಧರ್ಮವೆಂದೇ ಎನಿಸುತ್ತದೆ.
ಏತೈರ್ಧರ್ಮೈರ್ವಿಷ್ಣುನಾ ಪೂರ್ವಕ್ಲೃಪ್ತೈಃ
ಸರ್ವೈರ್ವರ್ಣೈರ್ವಿಷ್ಣುರೇವಾಭಿಪೂಜ್ಯಃ |
ತದ್ಭಕ್ತಿರೇವಾಖಿಲಾನಾಂ ಚ ಧರ್ಮೋ
ಯಥಾಯೋಗ್ಯಂ ಜ್ಞಾನಮಸ್ಯಾಪಿ ಪೂಜಾ ॥97॥
ಶ್ರೀಹರಿ ಆದಿ ಸೃಷ್ಟಿಯಲ್ಲಿಯೇ ಕೃಪ್ತಗೊಳಿಸಿರುವ ಈ ಧರ್ಮಗಳಿಂದ ಎಲ್ಲ ವರ್ಣದವರೂ ಅವನನ್ನು ಆರಾಧಿಸಬೇಕು. ಅವನಲ್ಲಿ ಯಥಾಯೋಗ್ಯ ಭಕ್ತಿ ಮಾಡಿ ಜ್ಞಾನಸಂಪಾದಿಸುವುದೇ ಎಲ್ಲ ವರ್ಣದವರಿಗೂ ಧರ್ಮ. ಅದೇ ಆರಾಧನೆ.
ಪಿತಾ ಗುರುಃ ಪರಮಂ ದೈವತಂ ಚ
ವಿಷ್ಣುಃ ಸರ್ವೇಷಾಂ ತೇನ ಪೂಜ್ಯಃ ಸ ಏವ |
ತದ್ಭಕ್ತತ್ವಾದ್ದೇವತಾಶ್ಚಾಭಿಪೂಜ್ಯಾ
ವಿಶೇಷತಸ್ತೇಷು ಯೇಽತ್ಯಂತಭಕ್ತಾಃ ॥98॥
ಹರಿಯೇ ಎಲ್ಲರಿಗೂ ತಂದೆ ಗುರು ಪರದೇವತೆಯೂ ಕೂಡ. ಅದರಿಂದ ಅವನೇ ಪೂಜ್ಯ. ಅವನ ಭಕ್ತರಾದ್ದರಿಂದ ದೇವತೆಗಳೂ ಪೂಜ್ಯರಾಗುತ್ತಾರೆ. ಅವರಲ್ಲಿಯೂ ಅತ್ಯಂತ ಭಕ್ತರು ವಿಶೇಷವಾಗಿ ಪೂಜ್ಯರು.
ಸಂಪೂಜಿತೋ ವಾಸುದೇವಃ ಸ ಮುಕ್ತಿಂ
ದದ್ಯಾದೇವಾಪೂಜಿತೋ ದುಃಖಮೇವ |
ಸ್ವತಂತ್ರತ್ವಾತ್ಸುಖದುಃಖಪ್ರದೋಽಸೌ
ನಾನ್ಯಃ ಸ್ವತಂತ್ರಸ್ತದ್ವಶಾ ಯತ್ಸಮಸ್ತಾಃ ॥99॥
ಚೆನ್ನಾಗಿ ಆರಾಧಿಸಿದರೆ ಹರಿ ಮೋಕ್ಷ ಸುಖವನ್ನು ನಿಶ್ಚಯವಾಗಿ ಕೊಡುತ್ತಾನೆ. ಆರಾಧಿಸದಿದ್ದರೆ ದುಃಖವನ್ನೇ ಕೊಡುತ್ತಾನೆ. ಸ್ವತಂತ್ರನಾದ್ದರಿಂದ ಅವನೇ ಸುಖದುಃಖಗಳನ್ನು ನೀಡುವವನು ಬೇರೆ ಯಾರೂ ಸ್ವತಂತ್ರನಿಲ್ಲ. ಎಲ್ಲರೂ ಅವನ ಅಧೀನರೆ.
ಸ್ವತಂತ್ರತ್ವಾತ್ಸುಖಸಜ್ಞಾನಶಕ್ತಿ

ಪೂರ್ವೈರ್ಗುಣೈಃ ಪೂರ್ಣ ಏಷೋSಖಿಲೈಶ್ಚ |
ಸ್ವತಂತ್ರತ್ವಾತ್ಸರ್ವದೋಷೋಜ್ಝಿತಶ್ಚ
ನಿಸ್ಸೀಮಶಕ್ತಿರ್ಹಿ ಯತಃ ಸ್ವತಂತ್ರಃ ॥100॥
ಹರಿ ಸ್ವತಂತ್ರನಾದ್ದರಿಂದ ಆನಂದ ನಿರ್ಮಲಜ್ಞಾನ, ಬಲ ಮುಂತಾದ ಎಲ್ಲ ಗುಣಗಳಿಂದ ಪೂರ್ಣನಾಗಿದ್ದಾನೆ. ಸ್ವತಂತ್ರನಾದ್ದರಿಂದಲೆ ಸಕಲ ದೊಷರಹಿತನಾಗಿದ್ದಾನೆ. ಏಕೆಂದರೆ ಅಪರಿಮಿತ ಶಕ್ತಿ ಉಳ್ಳವನು ಸ್ವತಂತ್ರನೇ ಆಗಿರುತ್ತಾನೆ.
ದೋಷಾಸ್ಪೃಷ್ಟೌಗುಣಪೂರ್ತಾ ಚ ಶಕ್ತಿ-
ರ್ನಿಸ್ಸೀಮತ್ವಾದ್ವಿದ್ಯತೇ ತಸ್ಯ ಯಸ್ಮಾತ್ |
ಏವಂ ಗುಣೈರಖಿಲೈಶ್ಚಾಪಿ ಪೂರ್ಣೋ
ನಾರಾಯಣಃ ಪೂಜ್ಯತಮಃ ಸ್ವಧರ್ಮೈಃ ॥101॥
ಅಸ್ಮಾಕಂ ಯತ್ತೇನ ನಾತಿಕ್ಷಮೈವ
ಧರ್ಮೋ ದುಷ್ಟಾನಾಂ ವಾರಣಂ ಹ್ಯೇವ ಕಾರ್ಯಂ |
ಹನ್ಯಾದ್ದುಷ್ಟಾನ್ಯಃ ಕ್ಷತ್ರಿಯಃ ಕ್ಷತ್ರಿಯಾಂಶ್ಚ
ವಿಶೇಷತೋ ಯುದ್ಧಗತಾನ್ ಸ್ಮರನ್ ಹರಿಂ ॥102॥
ಸ್ವಬಾಹುವೀರ್ಯೇಣ ಚ ತಸ್ಯ ಬಾಹೂ
ಚೈತನ್ಯಮಾತ್ರೌ ಭವತಃ ಸದೇಹೌ |
ಪಾಪಾಧಿಕಾಂಶ್ಚೈವ ಬಲಾಧಿಕಾಂಶ್ಚ
ಹತ್ವಾ ಮುಕ್ತಾವಧಿಕಾನಂದವೃದ್ಧಿಃ ॥103॥
ದೋಷರಹಿತನಾಗಿರುವುದಕ್ಕೂ ಗುಣಪೂರ್ಣನಾಗಿರುವುದಕ್ಕೂ ಶ್ರೀಹರಿಗೆ ಸಾಮರ್ಥ್ಯವಿದೆ. ಏಕೆಂದರೆ ಅವನ ಶಕ್ತಿ ಅಪರಿಮಿತ. ಅದರಿಂದ ಅವನು ಸಕಲ ಗುಣಗಳಿಂದಲೂ ಪೂರ್ಣ, ಸರ್ವದೋಷಗಳಿಂದಲೂ ರಹಿತನಾಗಿದ್ದು ನಮಗೆ ಸ್ವಧರ್ಮದಿಂದ ಅತ್ಯಂತ ಪೂಜ್ಯನೆನಿಸಿದ್ದಾನೆ. ಅದರಿಂದ ನಾವು ದುಷ್ಟರಾದ ಕೌರವರಲ್ಲಿ ಹೆಚ್ಚು ಕ್ಷಮೆ ತೋರುವುದು ಧರ್ಮವಾಗುವುದಿಲ್ಲ. ನಿಗ್ರಹವನ್ನೆ ಮಾಡಬೇಕು. ದುಷ್ಟರನ್ನು ನಿಗ್ರಹಿಸುವವನೇ ಕ್ಷತ್ರಿಯ. ವಿಶೇಷವಾಗಿ ರಣರಂಗದಲ್ಲಿ ಇದಿರಾಗುವ ದುಷ್ಟ ಕ್ಷತ್ರಿಯರನ್ನು ಸರಿಸ್ಮರಣಪೂರ್ವಕ ತನ್ನ ತೋಳ್ಬಲದಿಂದ ಯಾರು ಸಂಹರಿಸುವನೋ ಅವನ ಬಾಹುಗಳೂ ದೇಹವೂ ಚಿನ್ಮಯವಾಗುತ್ತವೆ. ಶತ್ರುವಿನಲ್ಲಿ ಪಾಪವೂ ಬಲವೂ ಹೆಚ್ಚಿದಷ್ಟು ಅವನ ನಿಗ್ರಹದಿಂದ ಮೋಕ್ಷದಲ್ಲಿ ಅಧಿಕ ಆನಂದ ವೃದ್ಧಿಯಾಗುವುದು.
ಪ್ರೀತಿಶ್ಚ ವಿಷ್ಣೋಃ ಪರಮೈವ ತತ್ರ
ತಸ್ಮಾದ್ಧಂತವ್ಯಾಃ ಪಾಪಿನಃ ಸರ್ವಥೈವ |
ಯೇ ತ್ವಕ್ಷಧೂರ್ತಾ ಗ್ರಹಣಂ ಗತಾ ವಾ
ಪಾಪಾಸ್ತೇSನ್ಯೈರ್ಘಾತನೀಯಾಃ ಸ್ವಧೋಭ್ಯಾಂ |
ರಾಜಾನಂ ವಾ ರಾಜಪುತ್ರಂ ತಥೈವ
ರಾಜಾನುಜಂ ವಾಭಿಯಾತಂ ನಿಹನ್ಯಾತ್ ॥104॥
ಮಹಾಪಾಪಿಗಳಾದ ಬಲಿಷ್ಠರಾದ ಶತ್ರುಗಳ ನಿಗ್ರಹದಲ್ಲಿ ಹರಿಗೆ ಬಹಳ ಪ್ರೀತಿ. ಅದರಿಂದ ಪಾಪಿಗಳನ್ನು ಸರ್ವಥಾ ಸ್ವತಃ ನಿಗ್ರಹಿಸಬೇಕು. ಕಪಟದ ಜೂಜಾಡುವ ಶಕುನಿಯಂಥವರನ್ನು ಅಥವಾ ಯುದ್ಧದಲ್ಲಿ ಸೆರೆ ಸಿಗುವ ಪಾಪಿಗಳನ್ನು ಬೇರೆಯವರ ಕೈಯಿಂದ ಕೊಲ್ಲಿಸಬೇಕು. ರಣರಂಗದಲ್ಲಿ ಇದಿರಾಗಿ ಬರುವ ದುರ್ಯೋಧನನಂಥ ರಾಜನನ್ನಾಗಲಿ, ರಾಜಕುಮಾರರನ್ನಾಗಲಿ ದುಃಶಾಸನನಂಥ ರಾಜಸೋದರರನ್ನಾಗಲಿ ತನ್ನ ಕೈಗಳಿಂದಲೆ ಸಂಹರಿಸಬೇಕು.
ರಾಜ್ಞಃ ಪುತ್ರೋಪ್ಯಕೃತೋದ್ವಾಹಕೋಯಃ
ಸ ಘಾತನೀಯೋ ನ ಸ್ವಯಂ ವಧ್ಯ ಏವ |
ಕ್ರೂರಂ ಚಾನ್ಯದ್ಧರ್ಮಯುಕ್ತಂಪರೈಸ್ತತ್
ಪ್ರಸಾಧನೀಯಂ ಕ್ಷತ್ರಿಯೈರ್ನ ಸ್ವಕಾರ್ಯಂ ॥105॥
ರಾಜಕುಮಾರ ಭೀಷ್ಮನಂತೆ ಅವಿವಾಹಿತನಾಗಿದ್ದಲ್ಲಿ ಬೇರೆಯವರ ಕೈಯಿಂದ ಕೊಲ್ಲಿಸಬೇಕು. ಸ್ವತಃ ಕೊಲ್ಲಕೂಡದು. ಹಾಗೆಯೆ ಧರ್ಮಸಮ್ಮತವಾದ ಬೇರೆ ಯಾವುದೇ ಕ್ರೂರಕರ್ಮವನ್ನು ಕ್ಷತ್ರಿಯರು ಬೇರೆಯವರಿಂದಲೆ ಮಾಡಿಸಬೇಕು, ಹೊರತು ಸ್ವತಃ ಮಾಡಬಾರದು.
ಏವಂ ಧರ್ಮೋ ವಿಹಿತೋ ವೇದ ಏವ
ವಾಕ್ಯಂ ವಿಷ್ಣೋಃ ಪಂಚರಾತ್ರೇಷು ತಾದೃಕ್ |
ಅಕ್ಷದ್ಯೂತಂ ನಿಕೃತಿಃ ಪಾಪಮೇವ
ಕೃತಂ ತ್ವಯಾ ಗರ್ಹಿತಂ ಸೌಬಲೇನ ॥106॥
ಹೀಗೆ ಧರ್ಮ ವೇದದಲ್ಲಿಯೇ ವಿಹಿತವಾಗಿದೆ. ಪಂಚರಾತ್ರಗಳಲ್ಲಿ ವಿಷ್ಣುವಚನವೂ ಹಾಗೇ ಇದೆ. ಜೂಜು ಮೋಸದಿಂದ ಕೂಡಿದ್ದು ಪಾಪಕರವಾಗಿದೆ. ನಿಂದ್ಯವಾಗಿದೆ. ಅಂಥ ಜೂಜನ್ನು ನೀನು ಶಕುನಿಯೊಡನೆ ಆಡಿರುವೆ.
ನ ಕುತ್ರಚಿದ್ ವಿಧಿರಸ್ಯಾಸ್ತಿ ತೇನ
ನ ತದ್ದತ್ತಂ ದ್ಯೂತಹೃತಂ ವದಂತಿ |
ಭೀತೇನ ದತ್ತಂ ದ್ಯೂತದತ್ತಂ ತಥೈವ
ದತ್ತಂ ಕಾಮಿನ್ಯೈ ಪುನರಾಹಾರ್ಯಮೇವ ॥107॥

ಜೂಜಾಡಲು ಶಾಸ್ತ್ರದಲ್ಲಿ ಎಲ್ಲಿಯೂ ವಿಧಿಯಿಲ್ಲ. ಅದರಿಂದ ಜೂಜಿನಲ್ಲಿ ಅವರು ಅಪಹರಿಸಿದ ಸೊತ್ತನ್ನು ದತ್ತ ಎನ್ನುವುದಿಲ್ಲ. ಭಯದಿಂದ ಕೊಟ್ಟಿದ್ದು ಜೂಜಿನಲ್ಲಿ ಕೊಟ್ಟಿದ್ದು ವೇಶ್ಯೆಗೆ ಕೊಟ್ಟಿದ್ದು ಇವೆಲ್ಲವೂ ಬಂಧುಗಳು ಹಿಂದೆ ತೆಗೆದುಕೊಳ್ಳಲು ಯೋಗ್ಯವಾಗಿರುತ್ತವೆ.

ಏವಂ ಧರ್ಮಃ ಶಾಶ್ವತೋ ವೈದಿಕೋ ಹಿ
ದ್ಯೂತೇ ಸ್ತ್ರಿಯಾಂ ನಾಲ್ಪಮಾಹಾರ್ಯಮಾಹುಃ |
ಯದ್ವೇಷಾಂ ವೈ ಭೋಗ್ಯಮಲ್ಪಂ ತದೀಯಂ
ಭೋಗೇನ ತದ್ಬಂಧುಭಿಸ್ತಚ್ಚ ಹಾರ್ಯಂ ॥108॥
ನಿವಾರಣೇ ಪುರುಷಸ್ಯ ತ್ವಶಕ್ತೌ
ತದ್ರಾಜ್ಯಂ ನಃ ಪುನರಾಹಾರ್ಯಮೇವ |
ತ್ವಂ ಧರ್ಮನಿಷ್ಠಶ್ಚಾಗ್ರಜಶ್ಚೇತಿ ರಾಜನ್
ಋತೇಽನುಜ್ಞಾಂ ನ ಮಯಾ ತತ್ಕೃತಂ ಚ ॥109॥

ಹೀಗೆ ವೇದೋಕ್ತ ಸನಾತನ ಧರ್ಮವಿದೆ. ಜೂಜಿನಲ್ಲಾಗಲಿ ವೇಶ್ಯಾಸ್ತ್ರಿಯ ಕೈಯಲ್ಲಾಗಲಿ ಕೊಟ್ಟಿದ್ದು ಅಲ್ಪವಾಗಿದ್ದರೆ ಹಿಂದೆ ತೆಗೆದುಕೊಳ್ಳಲು ಯೋಗ್ಯವಲ್ಲ. ಕೊಟ್ಟ ಆಸ್ತಿಗೆ ಆ ವ್ಯಕ್ತಿಯ ಬಂಧುಗಳು ವಾರಸುದಾರರಾಗಿದ್ದು ಅವರು ಅವನನ್ನು ಅಶಕ್ತತೆಯಿಂದ ತಡೆಯದೆ ಬಿಟ್ಟಿದ್ದರೆ ಆ ಆಸ್ತಿ ಅಲ್ಪವಾಗಿದ್ದರೂ ಹಕ್ಕು ಇರುವುದರಿಂದ ಹಿಂದೆ ಪಡೆಯಬಹುದು. ಅಲ್ಪವಾದ ಭೋಗಕ್ಕೆ ಪ್ರತಿಯಾಗಿ ಬಹುಧನವನ್ನು ವೇಶ್ಯೆಯಾಗಲಿ ಜೂಜುಕೋರನಾಗಲಿ ವಂಚನೆಯಿಂದ ಬಾಲಕನ ಕೈಯಿಂದ ಪಡೆದಿದ್ದರೆ ಅದನ್ನೂ ಹಿಂದೆ ಪಡೆಯಬಹುದು. ಅದರಿಂದ ರಾಜನೇ! ನಮ್ಮ ರಾಜ್ಯವನ್ನು ಈಗಲೂ ನಾವು ಹಿಂತಿರುಗಿ ಪಡೆಯಬಹುದು. ನೀನು ಧರ್ಮನಿಷ್ಠ ಹಿರಿಯನೆಂದು ನಿನ್ನಾಜ್ಞೆ ಇಲ್ಲದೆ ನಾನು ಆ ಕಾರ್ಯವನ್ನು ಮಾಡಲಿಲ್ಲ.

ದಾತಾಸ್ಯನುಜ್ಞಾಂ ಯದಿ ತಾನ್ನಿಹತ್ಯ
ತ್ವಯ್ಯೇವ ರಾಜ್ಯಂ ಸ್ಥಾಪಯಾಮ್ಯದ್ಯ ಸಮ್ಯಕ್ |
ಸತ್ಯಂ ಪಾಪೇಷ್ವಪಿ ಕರ್ತುಂ ಯದೀಚ್ಛಾ
ತಥಾಪಿ ಮಾಸಾ ದ್ವಾದಶ ನಃ ಪ್ರಯಾತಾಃ ॥110॥

ಈಗಲೂ ನೀನು ಅನುಮತಿ ಇತ್ತರೆ ಆ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಚೆನ್ನಾಗಿ ನಿನ್ನ ವಶದಲ್ಲಿ ತಂದಿರಿಸುತ್ತೇನೆ. ಪಾಪಿಗಳಲ್ಲಿಯೂ ನೀನು ಕೊಟ್ಟ ಮಾತನ್ನು ಉಳಿಸಲು ಬಯಸುವಿಯಾದರೆ ಅದಕ್ಕೂ ಮಾರ್ಗವಿದೆ. ನಮಗೆ ಈಗಾಗಲೆ ವನವಾಸದಲ್ಲಿ ಹನ್ನೆರಡು ತಿಂಗಳು ಕಳೆದಿವೆ.

ವೇದಪ್ರಾಮಾಣ್ಯಾದ್ ವತ್ಸರಾಸ್ತೇ ಹಿ ಮಾಸೈಃ
ಸಹಸ್ರಾಬ್ದಂ ಸತ್ರಮುಕ್ತಂ ನರಾಣಾಂ |
ಅಜ್ಞಾತಮೇಕಂ ಮಾಸಮುಷ್ಯಾಥ ಶತ್ರೂನ್
ನಿಹತ್ಯ ರಾಜ್ಯಂ ಪ್ರತಿಪಾದಯಾಮಃ ॥111॥

ಸಾವಿರ ವರ್ಷಗಳ ಸತ್ರಯಾಗವನ್ನು ಮನುಷ್ಯರಿಗೆ ಸಾವಿರ ತಿಂಗಳಲ್ಲಿ ಮಾಡಲು ವೇದದಲ್ಲಿ ಹೇಳಿರುವುದರಿಂದ ಆ ವೇದ ಪ್ರಾಮಾಣ್ಯದ ಆಧಾರದಿಂದ ನಾವು ಕಳೆದ ಹನ್ನೆರಡು ತಿಂಗಳು ಹನ್ನೆರಡು ವರ್ಷಗಳೇ ಆದುವು. ಇನ್ನು ಒಂದು ತಿಂಗಳು ಅಜ್ಞಾತವಾಸ ಮಾಡಿ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ತಂದುಕೊಡುತ್ತೇವೆ.

ಮಾ ಮಿತ್ರಾಣಾಂ ತಾಪಕಸ್ತ್ವಂ ಭವೇಥಾ
ಸ್ತಥಾಮಿತ್ರಾಣಾಂ ನಂದಕಶ್ಚೈವ ರಾಜನ್ |
ಜ್ವಲಸ್ವಾರೀಣಾಂ ಮೂರ್ಧ್ನಿ ಮಿತ್ರಾಣಿ ನಿತ್ಯ-
ಮಾಹ್ಲಾದಯನ್ ವಾಸುದೇವಂ ಭಜಸ್ವ ॥112॥

ರಾಜನೆ, ಮಿತ್ರ ರಾಜರಿಗೆ ದುಃಖದಾಯಕನಾಗಬೇಡ, ಶತ್ರುರಾಜರಿಗೆ ಸುಖದಾಯಕನಾಗಬೇಡ. ಶತ್ರುಗಳ ತಲೆಯಲ್ಲಿ ಬೆಂಕಿಯಂತೆ ಪ್ರಜ್ವಲಿಸು, ಮಿತ್ರರನ್ನು ಸುಖಪಡಿಸುತ್ತ ಶ್ರೀಹರಿಯನ್ನು ಆರಾಧಿಸು.

ಸ್ವತಂತ್ರತ್ವಂ ವಾಸುದೇವಸ್ಯ ಸಮ್ಯಕ್
ಪ್ರತ್ಯಕ್ಷತೋ ದೃಶ್ಯತೇ ಹ್ಯದ್ಯ ರಾಜನ್ |
ಯಸ್ಮಾತ್ಕೃಷ್ಣೋ ವ್ಯಜಯಚ್ಛಂಕರಾದೀನ್
ಜರಾಸುತಾದೀನ್ ಕಾದಿವರೈರಜೇಯಾನ್ ॥113॥

ರಾಜನೇ, ಶ್ರೀಹರಿ ಸ್ವತಂತ್ರನೆಂಬುದು ನಮಗೆ ಈಗಲೇ ಚೆನ್ನಾಗಿ ಪ್ರತ್ಯಕ್ಷ ಕಾಣುತ್ತದೆ. ಏಕೆಂದರೆ ರುದ್ರಾದಿಗಳನ್ನೂ ಬ್ರಹ್ಮಾದಿಗಳ ಪರಬಲದಿಂದ ಅಜೇಯರಾದ ಜರಾಸಂಧಾದಿಗಳನ್ನೂ ಶ್ರೀಕೃಷ್ಣ ಗೆದ್ದಿದ್ದಾನೆ.

ಬ್ರಹ್ಮಾದೀನಾಂ ಪ್ರಕೃತೇಸ್ತದ್ವಶತ್ವಂ
ದೃಷ್ಟಂ ಹಿ ನೋ ಬಹುಶೋ ವ್ಯಾಸದೇಹೇ |
ಪಾರಾಶರ್ಯೋ ದಿವ್ಯದೃಷ್ಟಿಂ ಪ್ರದಾಯ
ಸ್ವಾತಂತ್ರ್ಯಂ ನೋಽದರ್ಶಯತ್ ಸರ್ವಲೋಕೇ ॥114॥

ಬ್ರಹ್ಮಾದಿಗಳು ಮಹಾಲಕ್ಷ್ಮಿಯ ಅಧೀನರು. ಮಹಾಲಕ್ಷ್ಮಿ ಶ್ರೀಹರಿಗೆ ಅಧೀನಳು ಎಂಬುದು ಅನೇಕ ಬಾರಿ ವೇದವ್ಯಾಸರೂಪಿ ಹರಿಯಲ್ಲಿ ಕಂಡಿದೆ. ವೇದವ್ಯಾಸರು ನಮಗೆ ಅನೇಕ ಬಾರಿ ದಿವ್ಯದೃಷ್ಟಿ ಕೊಟ್ಟು ಸಕಲ ಲೋಕದ ವಿಷಯದಲ್ಲಿ ತನಗಿರುವ ಸ್ವಾತಂತ್ರ್ಯವನ್ನು ಪ್ರತ್ಯಕ್ಷ ತೋರಿಸಿದ್ದಾರೆ.

ತಸ್ಮಾದ್ರಾಜನ್ನಭಿನಿರ್ಯಾಹಿ ಶತ್ರೂನ್
ಹಂತುಂ ಸರ್ವಾನ್ಭೋಕ್ತುಮೇವಾಧಿರಾಜ್ಯಂ |
ಏವಂ ಚ ತೇ ಕೀರ್ತಿಧರ್ಮೌ ಮಹಾಂತೌ
ಪ್ರಾಪ್ತೌ ರಾಜನ್ ವಾಸುದೇವಪ್ರಸಾದಾತ್ ||115||
ಅದರಿಂದ ರಾಜನೇ, ಎಲ್ಲ ಶತ್ರುಗಳನ್ನು ಸಂಹರಿಸುವುದಕ್ಕೆ, ಎಲ್ಲ ರಾಜ್ಯವನ್ನು ಭೋಗಿಸುವುದಕ್ಕೆ ಹೊರಡು. ರಾಜನೆ, ನಾನು ಹೇಳುವಂತೆ ಮಾಡಿದರೆ ನಿನಗೆ ಹರಿಯ ಅನುಗ್ರಹದಿಂದ ಮಹತ್ತಾದ ಕೀರ್ತಿ ಪುಣ್ಯಗಳು ಲಭಿಸುವುವು.
* * * *
ಮೂವತ್ತನೆಯ ಅಧ್ಯಾಯ
(ಭೀಮಸೇನನ ವಚನ. ತಕ್ಷಣ ಯುದ್ಧಕ್ಕೆ ಹೊರಡುವಂತೆ ಒತ್ತಾಯ)
ವೈಶಂಪಾಯನಃ
ಯಾಜ್ಞಸೇನ್ಯಾ ವಚಃ ಶ್ರುತ್ವಾ ಭೀಮಸೇನೋಽತ್ಯಮರ್ಷಣಃ |
ನಿಃಶ್ವಸನ್ನುಪಸಂಗಮ್ಯ ಕ್ರುದ್ಧೋ ರಾಜಾನಮಬ್ರವೀತ್ ||1||
ಯಾಜ್ಞಸೇನಿಯ ಮಾತುಗಳನ್ನು ಕೇಳಿ ಭೀಮಸೇನನು ಬಹಳ ಕೋಪದಿಂದ ನಿಟ್ಟುಸಿರನ್ನು ಬಿಡುತ್ತಾ ಕೋಪದಿಂದಲೇ ರಾಜನ ಬಳಿಗೆ ಬಂದು ಮಾತನಾಡಿದನು.
ಭೀಮಃ
ರಾಜ್ಯಸತ್ಪದವೀಂ ಧರ್ಮ್ಯಾಂ ವ್ರಜ ಸತ್ಪುರುಷೋಚಿತಾಮ್ |
ಧರ್ಮಕಾಮಾರ್ಥಹೀನಾನಾಂ ಕಿಂ ನೋ ವಸ್ತುಂ ತಪೋವನೇ ||2||
ಧರ್ಮಸಮ್ಮತವಾದ ಸತ್ಪುರುಷರಿಗೆ ಉಚಿತವಾದ ರಾಜ್ಯದ ಶ್ರೇಷ್ಠಪದವಿಯನ್ನು ಹೊಂದು. ಧರ್ಮಾರ್ಥಕಾಮಗಳನ್ನು ತೊರೆದು ಕಾಡಿನಲ್ಲಿ ವಾಸಿಸುವುದರಿಂದ ನಮಗೆ ಏನು ಪ್ರಯೋಜನ?
ನೈವ ಧರ್ಮೇಣ ತದ್ರಾಜ್ಯಂ ನಾರ್ಜವೇಣ ನ ಚೌಜಸಾ |
ಅಕ್ಷಕೂಟಮಧಿಷ್ಠಾಯ ಹೃತಂ ದುರ್ಯೋಧನೇನ ವೈ ||3||
ಗೋಮಾಯುನೇವ ಸಿಂಹಾನಾಂ ದುರ್ಬಲೇನ ಬಲೀಯಸಾಮ್ |
ಆಮಿಷಂ ವಿಘಸಾಶೇನ ತದ್ವದ್ರಾಜ್ಯಂ ಹಿ ನೋ ಹೃತಮ್ ||4||
ದುರ್ಯೋಧನನು ನಮ್ಮ ರಾಜ್ಯವನ್ನು ಧರ್ಮದಿಂದಾಗಲೀ ನೇರವಾದ ಮಾರ್ಗದಿಂದಲಾಗಲೀ ಅಥವಾ ಪರಾಕ್ರಮದಿಂದಾಗಲೀ ಜಯಿಸಲಿಲ್ಲ. ಮೋಸದ ಅಕ್ಷದ್ಯೂತವನ್ನು ಮಾಡಿ ಅಪಹರಿಸಿದನು. ನರಿಯು ಸಿಂಹದ ಅಹಾರವನ್ನು ಕಸಿದುಕೊಂಡಂತೆ, ದುರ್ಬಲನಾದವನು ಬಲಿಷ್ಠನಾದವನ ಆಹಾರವನ್ನು ತೆಗೆದುಕೊಂಡಂತೆ, ನಾಯಿಯು ಯಜ್ಞಯೋಗ್ಯವಾದ ಹವಿಸ್ಸನ್ನು ಅಪಹರಣಮಾಡಿದಂತೆ, ನಮ್ಮ ರಾಜ್ಯವು ಅಪಹರಿಸಲ್ಪಟ್ಟಿತು.
ಧರ್ಮಲೇಶಪ್ರತಿಚ್ಛನ್ನಃ ಪ್ರಭವಂ ಧರ್ಮಕಾಮಯೋಃ |
ಅರ್ಥಮುತ್ಸೃಜ್ಯ ಕಿಂ ರಾಜನ್ ದುಃಖೇನ ಪರಿತಪ್ಯಸೇ ||5||
ರಾಜನೇ! ಧರ್ಮಲೇಶವನ್ನು ಆಶ್ರಯಿಸಿ ಮಹಾಧರ್ಮಗಳನ್ನು ತಿರಸ್ಕರಿಸಿ ಧರ್ಮಕಾಮಗಳಿಗೆ ಕಾರಣವಾದ ಅರ್ಥವನ್ನು ಪರಿತ್ಯಾಗಮಾಡಿ ಏಕೆ ದುಃಖದಿಂದ ಪರಿತಾಪವನ್ನು ಪಡುತ್ತಿದ್ದೀಯೆ?
ಭವತೋಽನವಧಾನೇನ ರಾಜ್ಯಂ ನಃ ಪಶ್ಯತಾಂ ಹೃತಮ್ |
ಅಹಾರ್ಯಮಪಿ ಶಕ್ರೇಣ ಗುಪ್ತಂ ಗಾಂಡೀವಧನ್ವನಾ ||6||
ನಿನ್ನ ಪ್ರಮಾದದಿಂದ ನಮ್ಮ ಕಣ್ಣೆದುರಿಗೇ ಇಂದ್ರನಿಂದಲೂ ಜಯಿಸಲಾಗದ ಅರ್ಜುನನಿಂದ ಗುಪ್ತವಾದ ನಮ್ಮ ರಾಜ್ಯವು ಅಪಹರಿಸಲ್ಪಟ್ಟಿತು.
ಕುಣೀನಾಮಿವ ಬಿಲ್ವಾನಿ ಪಂಗೂನಾಮಿವ ಧೇನವಃ |
ಹೃತಮೈಶ್ವರ್ಯಮಸ್ಮಾಕಂ ಜೀವತಾಂ ಭವತಃ ಕೃತೇ ||7||
ಸೊಟ್ಟಕೈ ಮನುಷ್ಯನಿಂದ ಬಿಲ್ವ (ನಾಣ್ಯ)ಗಳನ್ನು ಕಸಿದುಕೊಂಡಂತೆ, ಕುಂಟರ ಧೇನುಗಳನ್ನು ಕಸಿದುಕೊಂಡಂತೆ, ನಾವು ಬದುಕಿರುವಾಗಲೇ ನಿನ್ನ ತಮ್ಮಂದಿರಾದಿಯಾಗಿ ನಮ್ಮ ಐಶ್ವರ್ಯವು ಅಪಹೃತವಾಯಿತು.
ಭವತಃ ಪ್ರಿಯಮಿತ್ಯೇವಂ ಮಹದ್ವ್ಯಸನಮೀದೃಶಮ್ |
ಧರ್ಮಕಾಮಪ್ರತೀತಸ್ಯ ಪ್ರತಿಪನ್ನಾಃ ಸ್ಮ ಭಾರತ ||8||
ಎಲೈ ಭಾರತನೇ! ಯಾವಾಗಲೂ ಧರ್ಮಕಾಮವುಳ್ಳವನೆಂದು ಪ್ರಸಿದ್ಧವಾದ ನಿನಗೆ ಪ್ರಿಯವೆಂಬ ಕಾರಣದಿಂದ ಇಂತಹ ದೊಡ್ಡ ವ್ಯಸನರೂಪವಾದ ವನವಾಸವನ್ನು ಹೊಂದಿದ್ದೇವೆ.
ಕರ್ಶಯಾಮಃ ಸ್ವಮಿತ್ರಾಣಿ ನಂದಯಾಮಶ್ಚ ಶಾತ್ರವಾನ್ |
ಆತ್ಮಾನಂ ಭವತಃ ಶಾಸ್ತ್ರೇ ನಿಯಮ್ಯ ಭರತರ್ಷಭ ||9||
ಎಲೈ ಭರತರ್ಷಭನೇ! ನಮ್ಮನ್ನು ನಿನ್ನ ಶಾಸನಕ್ಕೆ ಒಳಪಡಿಸಿ ನಮ್ಮ ಹಿತೈಷಿಗಳನ್ನು ದುಃಖಪಡಿಸುತ್ತಿದ್ದೇವೆ. ಮತ್ತು ಶತ್ರುಗಳನ್ನು ಸಂತೋಷಪಡಿಸುತ್ತಿದ್ದೇವೆ.
ತದ್ ವಯಂ ಹಿ ತದೈವೈತಾನ್ ಧಾರ್ತರಾಷ್ಟ್ರಾನ್ ನಿಹನ್ಮಹಿ |
ಭವತಃ ಶಾಸ್ತ್ರಮಾಸ್ಥಾಯ ತನ್ನಸ್ತಪತಿ ದುಷ್ಕೃತಮ್ ||10||
ನಾವು ಆಗಲೇ ಈ ದುರ್ಯೋಧನಾದಿಗಳನ್ನು ಕೊಂದುಬಿಡುತ್ತಿದ್ದೆವು ನಿನ್ನ ಶಾಸನವನ್ನು ಅವಲಂಬಿಸಿ ಅವರನ್ನು ಕೊಲ್ಲದಿದ್ದ

ಪಾಪವು ಈ ದಿನ ನಮ್ಮನ್ನು ಪೀಡಿಸುತ್ತಿದೆ.
ಅಥೈನಾಮನ್ವವೇಕ್ಷಸ್ವ ಮೃಗಚರ್ಯಾಮಿವಾತ್ಮನಃ |
ಅಧೀರಾಚರಿತಂ ರಾಜನ್ನಬಲಸ್ಥೈರ್ನಿಷೇವಿತಾಮ್ ॥11॥
ಎಲೈ ರಾಜನೇ! ಹೇಡಿಗಳಿಂದ ಆಚರಿಸಲ್ಪಡುವ, ದುರ್ಬಲರಿಂದ ಸ್ವೀಕೃತವಾದ, ನಿನ್ನ ವನಸಂಚಾರ ರೂಪವಾದ, ಈ ಮೃಗಚರ್ಯೆಯನ್ನು ಗಮನಿಸು.
ಯಾಂ ನ ಕೃಷ್ಣೋ ನ ಬೀಭತ್ಸುರ್ನಾಭಿಮನ್ಯುರ್ನ ಸೃಂಜಯಾಃ |
ನ ಚಾಹಮಭಿನಂದಾಮಿ ನ ಚ ಮಾದ್ರೀಸುತಾವುಭೌ ॥12॥
ಈ ನಿನ್ನ ಮೃಗಚರ್ಯೆಯನ್ನು ಕೃಷ್ಣನಾಗಲೀ ಅರ್ಜುನನಾಗಲೀ ಅಭಿಮನ್ಯುವಾಗಲೀ ಸೃಂಜಯರಾಗಲೀ ನಾನಾಗಲೀ ಅಥವಾ ಮಾದ್ರೀಸುತರಿಬ್ಬರಾಗಲೀ ಅಭಿನಂದಿಸುವುದಿಲ್ಲ.
ಭವಾನ್ ಧರ್ಮೋ ಧರ್ಮ ಇತಿ ಸತತಂ ಧರ್ಮಕರ್ಶಿತಃ |
ಕಚ್ಚಿದ್ರಾಜನ್ನ ನಿರ್ವೇದಾದಾಪನ್ನಃ ಕ್ಲೀಬಜೀವಿಕಾಮ್ ॥13॥
ರಾಜನೇ ನೀನು ಯಾವಾಗಲೂ ಧರ್ಮವೆನ್ನುತ್ತಾ ಧರ್ಮಪೀಡಿತನಾಗಿದ್ದೀಯೆ. ರಾಜನೇ ನೀನೇನಾದರೂ ರಾಜ್ಯದ ಮೇಲಿನ ವೈರಾಗ್ಯದಿಂದ ಇಂತಹ ನಪುಂಸಕಜೀವನವನ್ನು ನಡೆಸುತ್ತಿದ್ದೀಯಾ?
ದುರ್ಮನುಷ್ಯೋ ಹಿ ನಿರ್ವೇದಮಫಲಂ ಸರ್ವಘಾತಿನಮ್ |
ಪ್ರತಿಪನ್ನೋ ವಿಷೀದೇತ ಪಂಕೇ ಗೌರಿವ ದುರ್ಬಲಾ |
ಅಶಕ್ತಾಃ ಶ್ರಿಯಮಾಹರ್ತುಮಾತ್ಮನಃ ಕುರ್ವತೇ ಪ್ರಿಯಮ್ ॥14॥
ದುಷ್ಟಮನುಷ್ಯನು ಮಾತ್ರ ಸರ್ವನಾಶಕವಾದ ನಿಷ್ಫಲವಾದ ವೈರಾಗ್ಯವನ್ನು ಹೊಂದಿ ದುರ್ಬಲವಾದ ಗೋವು ಕೆಸರಿನಲ್ಲಿ ಮುಳುಗಿದಂತೆ ನಾಶಹೊಂದುತ್ತಾನೆ. ತಮಗೆ ಸಂಪತ್ತನ್ನು ಸಾಧಿಸಿಕೊಳ್ಳಲು ಸಾಧ್ಯವಿಲ್ಲದವರು ಇನ್ನೊಬ್ಬರಿಗೆ ಪ್ರಿಯವನ್ನು ಮಾಡುತ್ತಾರೆ.
ಸ ಭವಾನ್ ದೃಷ್ಟಿಮಾನ್ ಶಕ್ತಃ ಪಶ್ಯನ್ನಾತ್ಮನಿ ಪೌರುಷಮ್ |
ಆನೃಶಂಸ್ಯಪರೋ ರಾಜನ್ ನಾತ್ಮಾರ್ಥಮವಬುಧ್ಯಸೇ ॥15॥
ಅಂತಹ ಜ್ಞಾನವುಳ್ಳ ನೀನು ನಿನ್ನಲ್ಲಿ ಪೌರುಷವನ್ನು ಗಮನಿಸಿ ಶಕ್ತಿಯುತನಾಗಿದ್ದರೂ ಕೂಡ ಮಾರ್ದವಯುಕ್ತನಾಗಿ ನಿನ್ನ ಪ್ರಯೋಜನವನ್ನೇ ನೀನು ಗಮನಿಸುತ್ತಿಲ್ಲ.
ಅಸ್ಮಾನಮೀ ಧಾರ್ತರಾಷ್ಟ್ರಾಃ ಕ್ಷಮಮಾಣಾನಹಿಂಸತಃ |
ಅಶಕ್ತಾನೇವ ಮನ್ಯಂತೇ ತದ್ ದುಃಖಂ ನಾಹವೇ ವಧಃ ॥16॥
ಹಿಂಸೆಮಾಡದೆ ಸಹನೆಯಿಂದ ಇರುವ ನಮ್ಮನ್ನು ಈ ಧೃತರಾಷ್ಟ್ರಪುತ್ರರು ಅಶಕ್ತರೆಂದು ಭಾವಿಸುತ್ತಾರೆ. ಯುದ್ಧವಿಲ್ಲದೆ ಉಂಟಾಗಿರುವ ಈ ವಧೆಯು ದುಃಖಕರವಾದುದು.ಯುದ್ಧದಲ್ಲಿ ವಧೆಯು ದುಃಖವಲ್ಲ.
ತತ್ರ ಚೇದ್ ಯುಧ್ಯಮಾನಾನಾಮಜಿಹ್ಮಮನಿವರ್ತಿನಾಮ್ |
ಸರ್ವಶೋ ಹಿ ವಧಃ ಶ್ರೇಯಾನ್ ಪ್ರೇತ್ಯ ಲೋಕಾನ್ ಲಭೇಮಹಿ ॥
ಯುದ್ಧದಲ್ಲಿ ಯುದ್ಧಭೂಮಿಯಿಂದ ಹಿಮ್ಮೆಟ್ಟದೆ ಮೋಸವಿಲ್ಲದೆ ಯುದ್ಧಮಾಡುವ ನಮಗೆ ಎಲ್ಲ ರೀತಿಯಲ್ಲಿಯೂ ವಧೆಯುಂಟಾದರೆ ಅದು ಶ್ರೇಯಸ್ಕರವಾದುದು. ಮರಣವನ್ನು ಹೊಂದಿ ಉತ್ತಮ ಲೋಕವನ್ನು ಪಡೆಯುತ್ತೇವೆ.
ಅಥವಾ ವಯಮೇವೈತಾನ್ ನಿಹತ್ಯ ಭರತರ್ಷಭ |
ಆದದೀಮಹಿ ಗಾಂ ಸರ್ವಾಂ ತಥಾಪಿ ಶ್ರೇಯ ಏವ ನಃ ॥18॥
ಅಥವಾ ಭರತಶ್ರೇಷ್ಠನೇ ಯುದ್ಧದಲ್ಲಿ ನಾವೇ ಅವರೆಲ್ಲರನ್ನೂ ಕೊಂದು ಸಮಗ್ರವಾದ ಭೂಮಿಯನ್ನು ಪಡೆದುಕೊಳ್ಳಬಹುದು. ಆಗಲೂ ಅದು ನಮಗೆ ಶ್ರೇಯಸ್ಕರವಾದುದೇ.
ಸರ್ವಥಾ ಕಾರ್ಯಮೇತನ್ನಃ ಸ್ವಧರ್ಮಮನುತಿಷ್ಠತಾಮ್ |
ಕಾಂಕ್ಷತಾಂ ವಿಪುಲಾಂ ಕೀರ್ತಿಂ ವೈರಂ ಪ್ರತಿಚಿಕೀರ್ಷತಾಮ್ ॥19॥
ದುರ್ಯೋಧನಾದಿಗಳು ಮಾಡಿದ ಅಪಕಾರಕ್ಕೆ ಪ್ರತೀಕಾರವನ್ನುಮಾಡಲು ಇಚ್ಛಿಸುವ, ನಮ್ಮ ಧರ್ಮವನ್ನು ನಾವು ಅನುಷ್ಠಾನಮಾಡುತ್ತಿರುವ, ವಿಪುಲವಾದ ಕೀರ್ತಿಯನ್ನು ಬಯಸುವ, ನಮಗೆ ದುರ್ಯೋಧನಾದಿಗಳ ಜೊತೆಯಲ್ಲಿ ವೈರವು (ವೈರನಿಮಿತ್ತವಾದ) ಯುದ್ಧವು ಅವಶ್ಯವಾಗಿ ಮಾಡಲ್ಪಡಬೇಕಾದುದು.
ಆತ್ಮಾರ್ಥಂ ಯುಧ್ಯಮಾನಾನಾಂ ವಿದಿತೇ ಕೃತ್ಯಲಕ್ಷಣೇ |
ಅನ್ಯೈರಪಿ ಹೃತೇ ರಾಜ್ಯೇ ಪ್ರಶಂಸೈವ ನ ಗರ್ಹಣಾ ॥20॥
ಯುದ್ಧವು ಕರ್ತವ್ಯವೆಂದು ತಿಳಿದಿರುವಾಗ ನಮ್ಮ ಸಲುವಾಗಿ ನಾವು ಯುದ್ಧವನ್ನು ಮಾಡುತ್ತಾ ಪರರು ನಮ್ಮ ರಾಜ್ಯವನ್ನು ಅಪಹರಿಸಿದರೆ ಅದು ನಮ್ಮ ಪ್ರಶಂಸೆಯೇ ಹೊರತು ನಿಂದೆಯಲ್ಲ.
ಕರ್ಶಿತಾರ್ಥೋ ಹಿ ಯೋ ಧರ್ಮೋ ವಿಪ್ರಾಣಾಮಾತ್ಮನಸ್ತಥಾ |
ವ್ಯಸನಂ ನಾಮ ತದ್ರಾಜನ್ ನ ಸ ಧರ್ಮಃ ಕುವರ್ತ್ಮ ತತ್ ॥21॥
ರಾಜನೇ ಯಾವ ಧರ್ಮವು ಬ್ರಾಹ್ಮಣರಿಗೂ ಮತ್ತು ನಮಗೂ ಕ್ಲೇಶವನ್ನು ಉಂಟುಮಾಡುತ್ತದೆಯೋ ಅದು ಧರ್ಮವಲ್ಲ. ಅದೊಂದು ವ್ಯಸನ (ಚಟ). ಅದು ಕೆಟ್ಟದಾರಿ.
ಸರ್ವಥಾ ಧರ್ಮನಿತ್ಯಂ ತು ಪುರುಷಂ ಧನದುರ್ಬಲಮ್ |
ಜಹತಃ ಪಾರ್ಥ ಧರ್ಮಾರ್ಥೌ ಪ್ರೇತಂ ದುಃಖಸುಖೇ ಯಥಾ ॥22॥

ಎಲೈ ಪಾರ್ಥನೇ ಧನಹೀನನಾಗಿ ಎಲ್ಲ ರೀತಿಯಿಂದಲೂ ನಿತ್ಯವೂ ಧರ್ಮವನ್ನು ಆಚರಿಸುವ ಪುರುಷನನ್ನು ಮೃತನಾದವನು ಸುಖದುಃಖಗಳನ್ನು ಪರಿತ್ಯಜಿಸುವಂತೆ ಧರ್ಮಾರ್ಥಗಳೆರಡೂ ಪರಿತ್ಯಜಿಸುತ್ತವೆ.
ಯಸ್ಯ ಧರ್ಮೋ ಹಿ ಧರ್ಮಾರ್ಥಕ್ಲೇಶಭಾಜ್ ನ ಸ ಪಂಡಿತಃ |
ನ ಸ ಧರ್ಮಸ್ಯ ವೇದಾರ್ಥಂ ಸೂರ್ಯಸ್ಯಾಂಧಃ ಪ್ರಭಾಮಿವ ॥23॥
ಯಾವನ ಧರ್ಮವು ಬಹಳವಾದ ಧರ್ಮ ಮತ್ತು ಅರ್ಥಗಳಿಗೆ ಕ್ಲೇಶವನ್ನುಂಟುಮಾಡುತ್ತದೆಯೋ ಅವನು ಪಂಡಿತನಲ್ಲ. ಕುರುಡನು ಸೂರ್ಯಪ್ರಭೆಯನ್ನು ತಿಳಿಯದಿರುವಂತೆ ಅವನು ಧರ್ಮಶಾಸ್ತ್ರದ ಅರ್ಥವನ್ನು ತಿಳಿದಿರುವುದಿಲ್ಲ.
ಯಸ್ಯ ಚಾರ್ಥಾರ್ಥ ಏವಾರ್ಥಃ ಸ ಚ ನಾರ್ಥಸ್ಯ ಕೋವಿದಃ |
ರಕ್ಷತೇ ಭೃತಕಃ ಪುಣ್ಯಂ ಯಥಾ ಸ್ಯಾತ್ ತಾದೃಗೇವ ಸಃ ॥24॥
ಯಾವನ ಧನವು ಧನದ ಸಂಪಾದನೆಯ ಸಲುವಾಗಿಯೇ ಇದೆಯೋ ಅವನೂ ಧನದ ತತ್ವವನ್ನು ತಿಳಿದವನಲ್ಲ. ಪುಣ್ಯವನ್ನು ಮಾರಿ ಭೋಜನವನ್ನು ಮಾಡುವವನು ಹೇಗೆ ಭೋಜನಕ್ಕಾಗಿ ಪುಣ್ಯವನ್ನು ರಕ್ಷಿಸುತ್ತಾನೆಯೋ ಆ ಅರ್ಥಾರ್ಥಿಯು ಅಂತಹವನೇ ಆಗುತ್ತಾನೆ.
ಅತಿವೇಲಂ ತು ಯೋಽರ್ಥಾರ್ಥೀ ನೇತರಾವನುತಿಷ್ಠತಿ |
ಸ ವಧ್ಯಃ ಸರ್ವಭೂತಾನಾಂ ಬ್ರಹ್ಮಹೇವ ಜುಗುಪ್ಸಿತಃ ॥25॥
ಯಾವನು ಬಹಳವಾದ ಅರ್ಥದ ಆಸೆಯಿಂದ ಧರ್ಮಕಾಮಗಳನ್ನು ಅನುಷ್ಠಾನಮಾಡುವುದಿಲ್ಲವೋ ಅವನು ಬ್ರಹ್ಮಹತ್ಯೆಯನ್ನು ಮಾಡಿದವನಂತೆ ಜುಗುಪ್ಸಿತನಾದವನು ಮತ್ತು ಎಲ್ಲರಿಂದಲೂ ಕೊಲ್ಲಲ್ಪಡಬೇಕಾದವನು.
ಸತತಂ ಯಶ್ಚ ಕಾಮಾರ್ಥೀ ನೇತರಾವನುತಿಷ್ಠತಿ |
ಮಿತ್ರಾಣಿ ತಸ್ಯ ನಶ್ಯಂತಿ ಧರ್ಮಾರ್ಥಾಭ್ಯಾಂ ಚ ಹೀಯತೇ ॥26॥
ಯಾವನು ಸತತವಾಗಿ ಕಾಮವನ್ನೇ ಬಯಸಿ ಧರ್ಮಾರ್ಥಗಳನ್ನು ಅನುಷ್ಠಾನ ಮಾಡುವುದಿಲ್ಲವೋ ಅವನಿಗೆ ಮಿತ್ರರು ನಾಶವನ್ನು ಹೊಂದುತ್ತಾರೆ. ಧರ್ಮಾರ್ಥಗಳೂ ನಾಶವನ್ನು ಹೊಂದುತ್ತವೆ.
ತಸ್ಯ ಧರ್ಮಾರ್ಥಹೀನಸ್ಯ ಕಾಮಾಂತೇ ನಿಧನಂ ಧ್ರುವಮ್ |
ಕ್ರೀಡತೋ ರಮಮಾಣಸ್ಯ ಮೀನಸ್ಯೇವಾಂಭಸಃ ಕ್ಷಯೇ |
ತಸ್ಮಾದ್ ಧರ್ಮಾರ್ಥಯೋರ್ನಿತ್ಯಂ ನ ಪ್ರಮಾದ್ಯಂತಿ ಪಂಡಿತಾಃ ॥
ನೀರಿನಲ್ಲಿ ಸಂಚರಿಸಿ ಸಂತೋಷಪಡುತ್ತಿರುವ ಮೀನು ನೀರು ಒಣಗಿದಾಗ ನಾಶವಾಗುವಂತೆ ಧರ್ಮಾರ್ಥಹೀನನಾದ ಮನುಷ್ಯನು ಕಾಮದ ಕೊನೆಯಲ್ಲಿ ನಾಶವನ್ನು ಖಂಡಿತವಾಗಿ ಹೊಂದುತ್ತಾನೆ. ಆದ್ದರಿಂದ ಪಂಡಿತರಾದವರು ಧರ್ಮಾರ್ಥವಿಷಯಗಳಲ್ಲಿ ಎಚ್ಚರಿಕೆಯಿಂದ ಇರುತ್ತಾರೆ. ಎಂದೂ ಪ್ರಮಾದವನ್ನು ಮಾಡುವುದಿಲ್ಲ.
ಪ್ರಕೃತಿಸ್ತ್ವೋ ಹಿ ಕಾಮಸ್ಯ ಪಾವಕಸ್ಯಾರಣಿರ್ಯಥಾ ॥28॥
ಅಗ್ನಿಗೆ ಕಾಷ್ಠವು(ಅರಣಿಯು) ಮೂಲವಾಗಿರುವಂತೆ ಕಾಮಕ್ಕೆ ಪುರುಷನು ಮೂಲಕಾರಣನಾಗಿದ್ದಾನೆ.
ಸರ್ವಥಾ ಧರ್ಮಮೂಲೋಽರ್ಥೋ ಧರ್ಮಶ್ಚಾರ್ಥಪರಿಗ್ರಹಃ|
ಇತರೇತರಯೋರ್ನೀತೌ ವಿದ್ಧಿ ಮೇಘೋದಧೀ ಯಥಾ ॥29॥
ಎಲ್ಲ ರೀತಿಯಿಂದಲೂ ಅರ್ಥವು ಧರ್ಮವನ್ನೇ ಮೂಲವಾಗಿ ಹೊಂದಿದೆ. ಧರ್ಮವಾದರೂ ಕೂಡ ಅರ್ಥದಿಂದ ಸಂಪಾದಿಸಲು ಸಾಧ್ಯವಾದುದು. ಪರಸ್ಪರ ಸಂಕ್ರಾಂತವಾದ ಧರ್ಮಾರ್ಥಗಳು ಮೇಘಗಳು ಮತ್ತು ಸಮುದ್ರವಿದ್ದಂತೆ ಎಂದು ತಿಳಿ.
ದ್ರವ್ಯಾರ್ಥಸ್ಪರ್ಶಸಂಯೋಗೇ ಯಾ ಪ್ರೀತಿರುಪಜಾಯತೇ |
ಸ ಕಾಮಾಶ್ಚಿತ್ತಸಂಕಲ್ಪಃ ಶರೀರಂ ನಾಸ್ಯ ದೃಶ್ಯತೇ ॥30॥
ಪರಿಮಳಾದಿದ್ರವ್ಯಗಳು ಧನ ಮತ್ತು ವಸ್ತ್ರವನಿತಾದಿ ವಿಷಯಗಳು ಇವುಗಳ ಸಂಬಂಧವಾದರೆ ಯಾವ ಮನಃಪ್ರಸಾದವು ಉಂಟಾಗುತ್ತದೆಯೋ ಅದು ಚಿತ್ತದಲ್ಲಿ ಅಪೇಕ್ಷಿತವಾದ ಕಾಮವೆನಿಸುತ್ತದೆ. ಅದು ಪುರುಷಾರ್ಥ. ಅಂತಹ ಕಾಮಕ್ಕೆ ಒಂದು ಶರೀರವು ಕಾಣುವುದಿಲ್ಲ.
ಅರ್ಥಾರ್ಥೀ ಪುರುಷೋ ರಾಜನ್ ಬೃಹಂತಂ ಧರ್ಮಮಿಚ್ಛತಿ |
ಕಾಮಾರ್ಥೀ ಪುರುಷೋ ಲೋಕೇ ನ ಕಾಮಾದನ್ಯಮೃಚ್ಛತಿ ॥31॥
ರಾಜನೇ ಅರ್ಥವನ್ನು ಬಯಸುವ ಪುರುಷನು ದೊಡ್ಡದಾದ ಧರ್ಮವನ್ನು ಮಾಡಲು ಬಯಸುತ್ತಾನೆ. ಕಾಮವನ್ನು ಬಯಸುವ ಪುರುಷನು ಲೋಕದಲ್ಲಿ ಕಾಮದಿಂದ ಬೇರೆ ಏನನ್ನೂ ಸಂಪಾದಿಸುವುದಿಲ್ಲ.
ನ ಹಿ ಕಾಮೇನ ಕಾಮೋಽನ್ಯಃ ಸಿಧ್ಯತೇ ಫಲಮೇವ ತತ್ |
ಉಪಯೋಗಾತ್ ಫಲಸ್ಯೇವ ಕಾಷ್ಠಾದ್ ಭಸ್ಮೇವ ಪಂಡಿತಃ ॥32॥
ಒಂದು ಕಾಮದಿಂದ ಇನ್ನೊಂದು ಕಾಮವು ಸಿದ್ಧಿಸುವುದಿಲ್ಲ. ಕಾಮವು ಕೊನೆಯ ಫಲವೇ ಆಗಿದೆ. ಫಲವನ್ನು ಭಕ್ಷಣೆ ಮಾಡಿದರೆ ಇನ್ನೊಂದು ಫಲವು ಹೇಗೆ ಉಂಟಾಗುವುದಿಲ್ಲವೋ, ಕಾಷ್ಠವನ್ನು ಭಸ್ಮಮಾಡಿದ ಮೇಲೆ ಹೇಗೆ ಅದರಿಂದ ಇನ್ನೊಂದು ಕಾಷ್ಠವುಂಟಾಗುವುದಿಲ್ಲವೋ ಹಾಗೆ ಕಾಮದಿಂದ ಇನ್ನೊಂದು ಫಲವು ಉಂಟಾಗುವುದಿಲ್ಲ ಎಂದು ಪಂಡಿತನು ತಿಳಿಯುತ್ತಾನೆ.
ಇಮಾನ್ ಶಕುನಕಾನ್ ರಾಜನ್ ಹಂತಿ ವೈತಂಸಿಕೋ ಯಥಾ |
ಏತದ್ರೂಪಮಧರ್ಮಸ್ಯ ಭೂತೇಷು ಚ ವಿಹಿಂಸತಾಮ್ ॥33॥
ರಾಜನೇ ಈ ಮಾಂಸಜೀವಿಯಾದ ಪುರುಷನನ್ನು ನೋಡು. ಅವನು ಈ ಪಕ್ಷಿಗಳನ್ನು ಕೊಲ್ಲುತ್ತಾನೆ. ಅದರ ಮಾಂಸವನ್ನು ಭಕ್ಷಣೆಮಾಡಿದ ಮೇಲೆ ಅಥವಾ ಮಾರಿದ ಮೇಲೆ ಅದರಿಂದ ಇನ್ನೊಂದು ಮಾಂಸವು ಉಂಟಾಗುವುದಿಲ್ಲ. ಪ್ರಾಣಿಗಳನ್ನು ಹಿಂಸೆಮಾಡಿ ಅಧರ್ಮವನ್ನು ಆಚರಿಸುವವರಿಗೂ ಇದೇ ದೃಷ್ಟಾಂತ. ಸ್ವಸ್ತ್ರೀಗಮನದಂತೆ ಪರಸ್ತ್ರೀಗಮನವು ತಾತ್ಕಾಲಿಕ ಸುಖವನ್ನೇ ಕೊಡುತ್ತದೆ. ಅದರಿಂದ ಇನ್ನೊಂದು ಸುಖವು ಉಂಟಾಗುವುದಿಲ್ಲ.

ಕಾಮಾಲ್ಲೋಭಾಚ್ಚ ಧರ್ಮಸ್ಯ ಪ್ರವೃತ್ತಿಂ ಯೋ ನ ಗಚ್ಛಂತಿ |
ಸ ವಧ್ಯಃ ಸರ್ವಭೂತಾನಾಂ ಪ್ರೇತ್ಯ ಚೇಹ ಚ ದುರ್ಗತಿಃ ||34||
ಕಾಮಕ್ಕೂ ಮತ್ತು ಲೋಭಕ್ಕೂ ವಶನಾಗಿ ಯಾವನು ಧರ್ಮಾಚರಣೆಯನ್ನು ಮಾಡುವುದಿಲ್ಲವೋ ಅವನು ಎಲ್ಲರಿಂದಲೂ ವಧ್ಯನಾಗುತ್ತಾನೆ. ಅವನು ಇಲ್ಲಿಯೂ ಮತ್ತು ಪರಲೋಕದಲ್ಲಿಯೂ ದುರ್ಗತಿಯನ್ನು ಹೊಂದುತ್ತಾನೆ.
ವ್ಯಕ್ತಂ ತೇ ವಿದಿತೋ ರಾಜನ್ನರ್ಥೋ ದ್ರವ್ಯಪರಿಗ್ರಹಃ |
ಪ್ರಕೃತಿಂ ಚಾಪಿ ವೇತ್ಥಾಸ್ಯ ವಿಕೃತಿಂ ಚಾಪಿ ಭೂಯಸೀಮ್ ||35||
ರಾಜನೇ ಅರ್ಥವು ಗಜತುರಗಾದಿವಸ್ತುಗಳನ್ನು ಪರಿಗ್ರಹಿಸುವುದಕ್ಕೆ ಕಾರಣವೆಂದು ನೀನು ಸ್ಪಷ್ಟವಾಗಿ ತಿಳಿದಿದ್ದೀಯೆ. ಅರ್ಥಕ್ಕೆ ಮೂಲಕಾರಣವಾದುದು ಸ್ವಪಿತ್ರಾರ್ಜಿತವಾದ ಭೂಮಿ ಎಂಬುದನ್ನೂ ತಿಳಿದಿದ್ದೀಯೆ. ಅದರಿಂದ ಪುನಃ ಉಂಟಾಗುವ ಅರ್ಥದ ಅಭಿವೃದ್ಧಿಯನ್ನು ತಿಳಿದಿದ್ದೀಯೆ.
ತಸ್ಯ ನಾಶಂ ವಿನಾಶಂ ವಾ ಜರಯಾ ಮರಣೇನ ವಾ |
ಅನರ್ಥಮಿತಿ ಮನ್ಯಂತೇ ಸೋಽಯಮಸ್ಮಾಸು ವರ್ತತೇ ||36||
ಮುಪ್ಪಿನಿಂದ ಅಥವಾ ಮರಣದಿಂದ ಅದರ ವಿನಾಶವನ್ನಾಗಲೀ ಅಥವಾ ಅದರಲ್ಲಿ ವೈರಾಗ್ಯವನ್ನಾಗಲೀ ಜನರು ಅನರ್ಥವೆಂದು ಪರಿಗಣಿಸುತ್ತಾರೆ ಅಂತಹ ಅನರ್ಥವು ಈಗ ನಮ್ಮಲ್ಲಿದೆ.
ಇಂದ್ರಿಯಾಣಾಂ ಚ ಪಂಚಾನಾಂ ಮನಸೋ ಹೃದಯಸ್ಯ ಚ |
ವಿಷಯೇ ವರ್ತಮಾನಾನಾಂ ಯಾ ಪ್ರೀತಿರುಪಜಾಯತೇ |
ಸ ಕಾಮ ಇತಿ ಮೇ ಬುದ್ಧಿಃ ಕರ್ಮಣಾಂ ಫಲಮುತ್ತಮಮ್ ||37||
ಐದು ಇಂದ್ರಿಯಗಳಿಗೆ ಮತ್ತು ಮನಸ್ಸು ಬುದ್ಧಿಗಳಿಗೆ  ಹಿತವಾದ ವಿಷಯವನ್ನು ಸೇವಿಸುವವರಿಗೆ ಯಾವ ಸಂತೋಷವು ಉಂಟಾಗುತ್ತದೆಯೋ ಅದನ್ನು ಕಾಮವೆಂದು ಕರೆಯುತ್ತಾರೆ ಎಂದು ನನ್ನ ನಿಶ್ಚಯ. ಅದು ಮಾಡಿದ ಕರ್ಮಗಳಿಗೆ ಶ್ರೇಷ್ಠವಾದ ಫಲ.
ಏವಮೇವ ಪೃಥಗ್ ದೃಷ್ಟ್ವಾ ಧರ್ಮಾರ್ಥೌ ಕಾಮಮೇವ ಚ |
ನ ಧರ್ಮಪರ ಏವ ಸ್ಯಾನ್ನ ಚಾರ್ಥಪರಮೋ ನರಃ |
ನ ಕಾಮಪರಮೋ ವಾ ಸ್ಯಾತ್ ಸರ್ವಾನ್ ಸೇವೇತ ಸರ್ವದಾ ||38||
ಹೀಗೆ ಧರ್ಮಾರ್ಥಕಾಮಗಳನ್ನು ಪ್ರತ್ಯೇಕವಾಗಿ ವಿಮರ್ಶೆಮಾಡಿ ಮನುಷ್ಯನು ಕೇವಲ ಧರ್ಮಪರನಾಗಿರಬಾರದು. ಕೇವಲ ಅರ್ಥಪರಗಿರಬಾರದು ಅಥವಾ ಕೇವಲ ಕಾಮಪರನಾಗಿರಬಾರದು. ಎಲ್ಲವನ್ನೂ ಯಾವಾಗಲೂ ಸೇವಿಸಬೇಕು.
ಧರ್ಮಂ ಪೂರ್ವಂ ಧನಂ ಮಧ್ಯೇ ಜಘನ್ಯೇ ಕಾಮಮಾಚರೇತ್ |
ಅಹನ್ಯನುಚರೇದೇವಂ ಏಷ ಶಾಸ್ತ್ರಕೃತೋ ವಿಧಿಃ ||39||
ಒಂದು ದಿವಸದಲ್ಲಿ ಮೊದಲು (ಅರುಣೋದಯದಿಂದ ಮಧ್ಯಾಹ್ನದವರೆಗೆ) ಧರ್ಮವನ್ನು ಆಚರಿಸಬೇಕು. ಮಧ್ಯಕಾಲದಲ್ಲಿ ಮಧ್ಯಾಹ್ನದಿಂದ ರಾತ್ರಿಒಂದು ಯಾಮದವರೆಗೆ ಅರ್ಥವನ್ನು ಸಂಪಾದಿಸಬೇಕು. ಕೊನೆಯಕಾಲದಲ್ಲಿ ಅದರ ನಂತರ ಕಾಮವನ್ನು ಅನುಭವಿಸಬೇಕು. ಇದು ಶಾಸ್ತ್ರಕಾರರ ಮಾತು.
ಕಾಮಂ ಪೂರ್ವೇ ಧನಂ ಮಧ್ಯೇ ಜಘನ್ಯೇ ಧರ್ಮಮಾಚರೇತ್|
ವಯಸ್ಯನುಚರೇದೇವಮೇಷ ಶಾಸ್ತ್ರಕೃತೋ ವಿಧಿಃ ||40||
ತನ್ನ ಆಯುಸ್ಸಿನಲ್ಲಿ ಮಾತ್ರ ಪೂರ್ವವಯಸ್ಸಿನಲ್ಲಿ ಕಾಮವನ್ನು ಅನುಭವಿಸಬೇಕು. ಮಧ್ಯವಯಸ್ಸಿನಲ್ಲಿ ಧನಾರ್ಜನೆಯನ್ನು ಮಾಡಬೇಕು. ಕೊನೆಯವಯಸ್ಸಿನಲ್ಲಿ ಧರ್ಮಾಚರಣೆಯನ್ನು ಮಾಡಬೇಕು. ಇದೂ ಸಹ ಶಾಸ್ತ್ರಕಾರರ ಅನುಶಾಸನ.
ಧರ್ಮಂ ಚಾರ್ಥಂ ಚ ಕಾಮಂ ಚ ಯಥಾವದ್ ವದತಾಂ ವರ |
ವಿಭಜ್ಯ ಕಾಲೇ ಕಾಲಜ್ಞಃ ಸರ್ವಾನ್ ಸೇವೇತ ಪಂಡಿತಃ ||41||
ಮಾತನಾಡುವವರಲ್ಲಿ ಶ್ರೇಷ್ಠನಾದವನೇ, ಧರ್ಮಅರ್ಥಕಾಮಗಳನ್ನು ಸರಿಯಾಗಿ ವಿಂಗಡಿಸಿ ಅವುಗಳ ಕಾಲವನ್ನು ತಿಳಿದು ಅಯಾಕಾಲದಲ್ಲಿ ಅವುಗಳೆಲ್ಲವನ್ನು ಪಂಡಿತನಾದವನು ಸೇವಿಸಬೇಕು.
ಮೋಕ್ಷೋ ವಾ ಪರಮಂ ಶ್ರೇಯ ಏಷ ರಾಜನ್ ಸುಖಾರ್ಥಿನಾಮ್ |
ಪ್ರಾಪ್ತಂ ವಾ ಬುದ್ಧಿಮಾಸ್ಥಾಯ ಸೋಪಾಯಂ ಕುರುನಂದನ ||42||
ತದಾಶು ಕ್ರಿಯತಾಂ ರಾಜನ್ ಪ್ರಾಪ್ತಿಂ ಚಾಪ್ಯಧಿಗಮ್ಯತಾಮ್ |
ಜೀವಿತಂ ಹ್ಯಾತುರಸ್ಯೈವ ದುಃಖಮಂತರವರ್ತಿನಃ ||43||
ರಾಜನೇ ಸುಖವನ್ನು ಬಯಸುವವರಿಗೆ ಮೋಕ್ಷವೇ ಫಲರೂಪವಾದ ಪರಮಶ್ರೇಯಸ್ಸು. ಎಲೈ ಕುರುನಂದನನೇ ಆಯಾಕಾಲದಲ್ಲಿ ಪ್ರಾಪ್ತವಾದ ಧರ್ಮಾದಿಗಳನ್ನು ಬುದ್ಧಿಪೂರ್ವಕವಾಗಿ ಶೀಘ್ರವಾಗಿ ಅನುಷ್ಠಾನಮಾಡು. ರಾಜನೇ ಅದರ ಫಲವನ್ನು ಪಡೆಯುವವನಾಗು. ಧರ್ಮಾರ್ಥಗಳನ್ನು ಬಿಟ್ಟು ಜೀವಿಸುವ ಜೀವನವು ರೋಗಗ್ರಸ್ತನಾದವನ ಜೀವನದಂತೆ ನಿರರ್ಥಕವಾದುದು.
ವಿದಿತಶ್ಚೈವ ತೇ ಧರ್ಮಾಃ ಸತತಂ ಚರಿತಾಶ್ಚ ತೇ |
ಜಾನಂತಸ್ತು ಪ್ರಶಂಸಂತಿ ಸುಹೃದಃ ಕರ್ಮಚೋದನಾಮ್ ||44||
ನಿನಗೆ ಆ ಧರ್ಮಗಳು ತಿಳಿದಿವೆ ಮತ್ತು ಸತತವಾಗಿ ಅವುಗಳನ್ನು ಆಚರಿಸಿದ್ದೀಯೆ. ವಿವೇಕವುಳ್ಳ ನಮ್ಮ ಹಿತೈಷಿಗಳು ನಾವು ಯುದ್ಧರೂಪವಾದ ಕರ್ತವ್ಯದಲ್ಲಿ ತೊಡಗುವುದನ್ನೇ ಪ್ರಶಂಸಿಸುತ್ತಾರೆ.
ದಾನಂ ಯಜ್ಞಾಃ ಸತಾಂ ಪೂಜಾ ವೇದಧಾರಣಮಾರ್ಜವಮ್ |
ಏಷ ಧರ್ಮಃ ಪರೋ ರಾಜನ್ ಸಫಲಃ ಪ್ರೇತ್ಯ ಚೇಹ ಚ ||45||
ರಾಜನೇ, ದಾನ ಯಜ್ಞ ಸಜ್ಜನರಪೂಜೆ ವೇದಧಾರಣ ಆರ್ಜವ ಇವು ಶ್ರೇಷ್ಠವಾದ ಧರ್ಮ. ಇಲ್ಲಿಯೂ ಪರಲೋಕದಲ್ಲಿಯೂ ಇದರಿಂದ

ಶ್ರೇಷ್ಠವಾದ ಫಲವಿದೆ.
ಏಷ ನಾರ್ಥವಿಹೀನೇನ ಶಕ್ಯೋ ರಾಜನ್ ನಿಷೇವಿತುಮ್ |
ಅಖಿಲಾಃ ಪುರುಷವ್ಯಾಘ್ರ ಗುಣಾಃ ಸೀದಂತಿ ನಿರ್ಧನೇ ॥46॥
ರಾಜನೇ, ಅರ್ಥಹೀನನಾದ ಮನುಷ್ಯನಿಂದ ಈ ಧರ್ಮಗಳನ್ನು ಸೇವಿಸುವುದು ಸಾಧ್ಯವಿಲ್ಲ. ಪುರುಷವ್ಯಾಘ್ರನೇ, ಅಧನನಾದ ಪುರುಷನಿಗೆ ಎಲ್ಲ ಗುಣಗಳೂ ನಾಶವನ್ನು ಹೊಂದುತ್ತವೆ.
ಧರ್ಮಮೂಲಂ ಜಗದ್ ರಾಜನ್ ನಾನ್ಯದ್ ಧರ್ಮಾದ್ ವಿಶಿಷ್ಯತೇ |
ಧರ್ಮಶ್ಚಾರ್ಥೇನ ಮಹತಾ ಶಕ್ಯೋ ರಾಜನ್ನಿಷೇವಿತುಮ್ ॥47॥
ರಾಜನೇ, ಜಗತ್ತು ಧರ್ಮಮೂಲವಾಗಿದೆ. ಧರ್ಮಕ್ಕಿಂತ ಶ್ರೇಷ್ಠವಾದುದು ಇನ್ನೊಂದಿಲ್ಲ. ಪ್ರಭೂತವಾದ ಅರ್ಥದಿಂದ ಧರ್ಮವನ್ನು ಸಂಪಾದಿಸಲು ಸಾಧ್ಯ.
ನ ಚಾರ್ಥೋ ಭೈಕ್ಷ್ಯಚರ್ಯೇಣ ನಾಪಿ ಕ್ಲೈಬ್ಯೇನ ಕರ್ಹಿಚಿತ್ |
ವೇತ್ತುಂ ಶಕ್ಯಸ್ಸದಾ ರಾಜನ್ ಕೇವಲಂ ಧರ್ಮಬುದ್ಧಿನಾ ॥48॥
ಎಲೈ ರಾಜನೇ, ಅಂತಹ ಅರ್ಥವನ್ನು ಭೈಕ್ಷ್ಯಚರ್ಯೆಯಿಂದಲಾಗಲೀ ಅಥವಾ ನಪುಂಸಕನಂತೆ ಸುಮ್ಮನಿರುವುದರಿಂದಲಾಗಲೀ ಕೇವಲ ಧರ್ಮಬುದ್ಧಿಯುಳ್ಳ ಮನುಷ್ಯನಿಂದ ಎಂದೂ ಸಂಪಾದಿಸಲು ಸಾಧ್ಯವಿಲ್ಲ.
ಪ್ರತಿಷಿದ್ಧಾ ಹಿ ತೇ ಯಾಂಚಾ ಯಯಾ ಸಿಧ್ಯಂತಿ ವೈ ದ್ವಿಜಾಃ |
ತೇಜಸೈವಾರ್ಥಲಿಪ್ಸಾಯಾಂ ಯತಸ್ವ ಪುರುಷರ್ಷಭ ॥49॥
ಪುರುಷರ್ಷಭನೇ, ಬ್ರಾಹ್ಮಣರಿಗೆ ಸಿದ್ಧಿಯನ್ನು ಉಂಟುಮಾಡುವ ಯಾಚನೆಯು ಕ್ಷತ್ರಿಯನಾದ ನಿನಗೆ ನಿಷಿದ್ಧವಾಗಿದೆ. ಆದ್ದರಿಂದ ಪರಾಕ್ರಮದಿಂದಲೇ ಅರ್ಥವನ್ನು ಸಂಪಾದಿಸಲು ಪ್ರಯತ್ನಮಾಡು.
ಭೈಕ್ಷ್ಯಚರ್ಯಾ ನ ವಿಹಿತಾ ನ ಚ ವಿಟ್‌ಶೂದ್ರಜೀವಿಕಾ |
ಕ್ಷತ್ರಿಯಸ್ಯ ವಿಶೇಷೇಣ ಧರ್ಮಸ್ತು ಬಲಮೌರಸಮ್ ॥50॥
ನಿನಗೆ ಭೈಕ್ಷ್ಯಚರ್ಯೆಯು ವಿಹಿತವಲ್ಲ. ವೈಶ್ಯಶೂದ್ರರಂತೆ ಜೀವಿಸುವುದೂ ವಿಹಿತವಲ್ಲ. ಕ್ಷತ್ರಿಯನಿಗೆ ವಿಶೇಷವಾದ ಧರ್ಮವೆಂದರೆ ಔರಸ ಬಲ (ಔರಸ ಬಲದಿಂದ ಉಂಟಾದ ಪರಾಕ್ರಮ)
ಸ್ವಧರ್ಮಂ ಪ್ರತಿಪದ್ಯಸ್ವ ಜಹಿ ಶತ್ರೂನ್ ಸಮಾಗತಾನ್ |
ಧಾರ್ತರಾಷ್ಟ್ರವನಂ ಪಾರ್ಥ ಮಯಾ ಪಾರ್ಥೇನ ನಾಶಯ ॥51॥
ಪಾರ್ಥನೇ, ನಿನ್ನ ಧರ್ಮವನ್ನು ನೀನು ಅನುಷ್ಠಾನಮಾಡು. ಸಮಾಗತರಾದ ಶತ್ರುಗಳನ್ನು ಸಂಹಾರಮಾಡು. ನನ್ನ ಮತ್ತು ಅರ್ಜುನರ ಸಹಾಯದಿಂದ ಧಾರ್ತರಾಷ್ಟ್ರವನವನ್ನು ನಾಶಮಾಡು.
ಉದಾರಮೇವ ವಿದ್ವಾಂಸೋ ಧರ್ಮಂ ಪ್ರಾಹುರ್ಮನೀಷಿಣಃ |
ಉದಾರಂ ಪ್ರತಿಪದ್ಯಸ್ವ ನಾವರೇ ಸ್ಥಾತುಮರ್ಹಸಿ ॥52॥
ಮೇಧಾವಿಗಳಾದ ವಿದ್ವಾಂಸರು ಉತ್ಕೃಷ್ಟವಾದುದನ್ನೇ ಧರ್ಮವೆಂದು ಹೇಳುತ್ತಾರೆ. ಉತ್ಕೃಷ್ಟವಾದ ವರ್ತನೆಯನ್ನು ಹೊಂದು. ಅವಿಹಿತವರ್ತನೆಯಲ್ಲಿ ತೊಡಗಬೇಡ.
ಪ್ರತಿಪದ್ಯಸ್ವ ರಾಜೇಂದ್ರ ಸ್ವಾರ್ಥಧರ್ಮಾನ್ ಸನಾತನಾನ್ |
ಕ್ರೂರಕರ್ಮಾಭಿಜಾತೋಽಸಿ ಯಸ್ಮಾದುದ್ವಿಜತೇ ಜನಃ ॥53॥
ಎಲೈ ರಾಜೇಂದ್ರನೇ, ಸ್ವಾರ್ಥಸಾಧಕವಾದ ಸನಾತನಧರ್ಮಗಳನ್ನು ಅನುಷ್ಠಾನಮಾಡು. ದುಷ್ಟನಿಗ್ರಹರೂಪವಾದ ಕ್ರೂರಕರ್ಮವುಳ್ಳ ರಾಜಕುಲದಲ್ಲಿ ಜನಿಸಿದ್ದೀಯೆ. ಅಂತಹವನಿಗೆ ಜನರು ಹೆದರುತ್ತಾರೆ.
ಪ್ರಜಾಪಾಲನಸಂಭೂತಂ ಫಲಂ ರಾಜ್ಞಾಂ ನ ಗರ್ಹಿತಮ್ |
ಏಷ ತೇ ವಿಹಿತೋ ರಾಜನ್ ಧಾತ್ರಾ ಧರ್ಮಃ ಸನಾತನಃ ॥54॥
ರಾಜರಿಗೆ ಪ್ರಜಾಪಾಲನದಿಂದ ಉಂಟಾದ ಫಲವು ನಿಂದಿತವಲ್ಲ. ರಾಜನೇ, ಇದು ನಾರಾಯಣನು ನಿನಗೆ ವಿಧಿಸಿದ ಸನಾತನವಾದ ಧರ್ಮ.
ತಸ್ಮಾದ್ ವಿಚಲಿತಃ ಪಾರ್ಥ ಲೋಕೇ ಹಾಸ್ಯಂ ಗಮಿಷ್ಯತಿ |
ಸ್ವಧರ್ಮಾದ್ಧಿ ಮನುಷ್ಯಾಣಾಂ ಚಲನಂ ನ ಪ್ರಶಸ್ಯತೇ ॥55॥
ಎಲೈ ಪಾರ್ಥನೇ, ಅದರಿಂದ ವಿಚಲಿತವಾದರೆ ಲೋಕದಲ್ಲಿ ನೀನು ಹಾಸ್ಯಕ್ಕೆ ಗುರಿಯಾಗುವಿ. ಮನುಷ್ಯರಿಗೆ ಸ್ವವಿಹಿತವಾದ ಧರ್ಮದಿಂದ ಚಲನೆಯು ಪ್ರಶಂಸಿಸಲ್ಪಡುವುದಿಲ್ಲ.
ಸ ಕ್ಷಾತ್ರಂ ಹೃದಯಂ ಕೃತ್ವಾ ತ್ಯಜೇದಂ ಶಿಥಿಲಂ ಮನಃ |
ವೀರ್ಯಮಾಸ್ಥಾಯ ಕೌಂತೇಯ ಧುರಮುದ್ವಹ ಧುರ್ಯವತ್ ॥56॥
ಎಲೈ ಕೌಂತೇಯನೇ, ಅಂತಹ ನೀನು ಕ್ಷತ್ರಿಯ ಹೃದಯವನ್ನು ತಾಳಿ ಈ ದುರ್ಬಲವಾದ ಮನಸ್ಸನ್ನು ತ್ಯಜಿಸು. ಪರಾಕ್ರಮವನ್ನು ತಾಳಿ ಎತ್ತಿನಂತೆ ರಾಜ್ಯದ ಭಾರವನ್ನು ಹೊರು.
ನ ಹಿ ಕೇವಲಧರ್ಮೇಣ ಪೃಥಿವೀಂ ಶಾಸ್ತಿ ಕಶ್ಚನ |
ಪಾರ್ಥಿವೋ ಹ್ಯಜಯದ್ ರಾಜನ್ನ ಭೂತಿಂ ನ ಪುನಃ ಶ್ರಿಯಮ್ ॥57॥
ಕೇವಲ ಧರ್ಮದಿಂದ ಯಾವನೂ ಭೂಮಿಯನ್ನು ಆಳುವುದಿಲ್ಲ. ಯಾವ ರಾಜನು ಕೇವಲ ಧರ್ಮದಿಂದ ಅಮಂಗಳವನ್ನು ಜಯಿಸಿದನೋ ಆದರೆ ಸಂಪತ್ತನ್ನು ಜಯಿಸಲಿಲ್ಲವೋ ಅವನು ಭೂಮಿಯನ್ನು ಆಳುವುದಿಲ್ಲ.
ಜಿಹ್ಮಂ ದತಶ್ತ್ವ ಬಹೂನಾಂ ಹಿ ಕ್ಷುದ್ರಾಣಾಂ ಲುಬ್ಧಚೇತಸಾಮ್ |

ನಿಕೃತ್ಯಾ ಲಭತೇ ರಾಜ್ಯಮಾಹಾರಮಿವ ಶಲ್ಯಕಃ ॥58॥
ಅನೇಕ ಲೋಭಿಗಳಾದ ನೀಚರಿಗೆ ಮೋಸವನ್ನು ಮಾಡಿ ಮುಳ್ಳುಹಂದಿಯು ಅಹಾರವನ್ನು ಪಡೆದಂತೆ ರಾಜನು ರಾಜ್ಯವನ್ನು ಪಡೆಯುತ್ತಾನೆ.
ಭ್ರಾತರಃ ಪೂರ್ವಜಾತಾಶ್ಚ ಸುಸಮೃದ್ಧಾಶ್ಚ ಸರ್ವಶಃ |
ನಿಕೃತ್ಯಾ ನಿರ್ಜಿತಾ ದೇವೈರಸುರಾಃ ಪಾಂಡುನಂದನ ॥59॥
ಏವಂ ಬಲವತಃ ಸರ್ವಮಿತಿ ಬುದ್ಧ್ವಾ ವಿಶಾಂಪತೇ |
ಜಹಿ ಶತ್ರೂನ್ ಮಹಾಬಾಹೋ ಪರಾಂ ನಿಕೃತಿಮಾಸ್ಥಿತಾನ್ ॥60॥
ಎಲೈ ಪಾಂಡವನಂದನನೇ, ಸಹೋದರರೂ ತಮಗಿಂತಲೂ ಮೊದಲೇ ಜನಿಸಿದವರೂ ಎಲ್ಲ ರೀತಿಯಲ್ಲೂ ಸಮೃದ್ಧರಾದವರೂ ಆದ ಅಸುರರು ದೇವತೆಗಳಿಂದ ಮೋಸದಿಂದಲೇ ಜಯಿಸಲ್ಪಟ್ಟರು. ಎಲೈ ರಾಜನೇ, ಹೀಗೆ ಬಲಿಷ್ಠರಾದವರಿಗೆ ಅತಿಶಯಿತವಾದ ಬುದ್ಧಿಯಿಂದ ಎಲ್ಲ ಕಾರ್ಯವೂ ಸಿದ್ಧಿಸುತ್ತದೆ. ಎಲೈ ಮಹಾಬಾಹುವೇ, ಬಹಳ ಮೋಸವನ್ನು ಅವಲಂಬಿಸಿರುವ ಶತ್ರುಗಳನ್ನು ಸಂಹರಿಸು.
ನ ಹ್ಯರ್ಜುನಸಮಃ ಕಶ್ಚಿದ್ ಯುಧಿ ಯೋದ್ಧಾ ಧನುರ್ಧರಃ |
ಭವಿತಾ ನ ಪುಮಾನ್ ಕಶ್ಚಿನ್ಮತ್ಸಮೋಽನ್ಯೋ ಗದಾಧರಃ ॥61॥
ಸತ್ತ್ವೇನ ಕುರುತೇ ಯುದ್ಧಂ ರಾಜನ್ ಸುಬಲವಾನಪಿ |
ನ ಪ್ರಮಾಣೇನ ನೋತ್ಸಾಹಾತ್ ಸತ್ತ್ವಸ್ಥೋ ಭವ ಪಾರ್ಥಿವ ॥62॥
ರಾಜನೇ, ಬಹಳ ಬಲವುಳ್ಳರಾಜನು ಸತ್ವದಿಂದ ಪರಾಕ್ರಮದಿಂದಲೇ ಯುದ್ಧವನ್ನು ಮಾಡುತ್ತಾನೆ. ಧರ್ಮಶಾಸ್ತ್ರದಲ್ಲಿ ಉತ್ಸಾಹದಿಂದಲೇ ಆಗಲಿ ಅಥವಾ ಗಜತುರಗಾದಿಸೈನ್ಯದ ಉತ್ಸಾಹದಿಂದಲಾಗಲೀ ಯುದ್ಧವನ್ನು ಮಾಡುವುದಿಲ್ಲ. ಎಲೈ ರಾಜನೇ ಆದ್ದರಿಂದ ನೀನು ವಿಕ್ರಮಶಾಲಿಯಾಗು.
ಸತ್ತ್ವಂ ಹಿ ಮೂಲಮರ್ಥಸ್ಯ ವಿತಥಂ ಯದತೋಽನ್ಯಥಾ |
ನ ತು ಪ್ರಸಕ್ತಂ ಭವತಿ ವೃಕ್ಷಚ್ಛಾಯೇವ ಹೈಮನೀ ॥63॥
ಪರಾಕ್ರಮವು ಅರ್ಥಕ್ಕೆ ಮೂಲವಷ್ಟೆ? ಪರಾಕ್ರಮವಿಲ್ಲದಿದ್ದರೆ ಅರ್ಥವು ವ್ಯರ್ಥವಾಗುತ್ತದೆ. ಛಳಿಗಾಲದ ವೃಕ್ಷಚ್ಛಾಯೆಯಂತೆ ಅದು ದೀರ್ಘವಾಗಿ ಬೆಳೆಯುವುದಿಲ್ಲ.
ಅರ್ಥತ್ಯಾಗೋಽಪಿ ಕಾರ್ಯಃ ಸ್ಯಾದ್ ಅರ್ಥಂ ಶ್ರೇಯಾಂಸಮಿಚ್ಛತಾ |
ಬೀಜೌಪಮ್ಯೇನ ಕೌಂತೇಯ ಮಾ ತೇ ಭೂದತ್ರ ಸಂಶಯಃ ॥63॥
ಎಲೈ ಕೌಂತೇಯನೇ, ಸ್ವಲ್ಪಬೀಜವನ್ನು ಭೂಮಿಗೆ ಹಾಕಿ ಹೆಚ್ಚು ಬೀಜವನ್ನು ಪಡೆದಂತೆ ಬಹಳ ಅರ್ಥವನ್ನು ಗಳಿಸಲು ಬಯಸುವವನು ಅಲ್ಪವಾದ ಅರ್ಥದ ತ್ಯಾಗವನ್ನೂ ಮಾಡಬೇಕಾಗುತ್ತದೆ. ಈ ವಿಷಯದಲ್ಲಿ ನಿನಗೆ ಸಂಶಯವು ಬೇಡ.
ಅರ್ಥೇನ ತು ಸಮೋಽನರ್ಥೋ ಯತ್ರ ಲಭ್ಯೋ ಧನೋದಯಃ |
ನ ತತ್ರ ವಿಪಣಂ ಕಾರ್ಯಂ ಕರಕಂಡೂಯನಂ ಹಿ ತತ್ ॥64॥
ಅರ್ಥದಿಂದ ಉಂಟಾಗುವ ಧನಲಾಭಕ್ಕೂ ಮತ್ತು ಅದರಿಂದ ಉಂಟಾಗುವ ಅನರ್ಥಕ್ಕೂ ಸಾಮ್ಯವೇ ಇದ್ದರೆ (ಅಥವಾ ಅನರ್ಥಕ್ಕೆ ಆಧಿಕ್ಯವಿದ್ದರೆ) ಅಲ್ಲಿ ವ್ಯವಹಾರವನ್ನು ಮಾಡಬಾರದು. ಅದು ಕೈಯಿಂದ ಕೆರೆದುಕೊಂಡಂತೆ.
ಏವಮೇವ ಮನುಷ್ಯೇಂದ್ರ ಧರ್ಮಂ ತ್ಯಕತ್ವಽಲ್ಪಕಂ ನರಃ |
ಬೃಹಂತಂ ಧರ್ಮಮಾಪ್ನೋತಿ ಬುಧಾನಾಮೇಷ ನಿಶ್ಚಯಃ ॥65॥
ಎಲೈ ರಾಜನೇ, ಬೀಜವನ್ನು ಬಿತ್ತಿದಂತೆ ಮನುಷ್ಯನು ಅಲ್ಪವಾದ ಧರ್ಮವನ್ನು ತ್ಯಜಿಸಿ ಬಹಳ ಧರ್ಮವನ್ನು ಸಂಪಾದನೆಮಾಡುತ್ತಾನೆ. ಇದು ಜ್ಞಾನಿಗಳ ನಿಶ್ಚಯ.
ಅಮಿತ್ರಂ ಮಿತ್ರಸಂಪನ್ನಂ ಮಿತ್ರೈರ್ಭಿಂದಂತಿ ಪಂಡಿತಾಃ |
ಭಿನ್ನೈರ್ಮಿತ್ರೈಃ ಪರಿತ್ಯಕ್ತಂ ದುರ್ಬಲಂ ಕುರುತೇ ವಶೇ ॥66॥
ಮಿತ್ರರಿಂದ ಕೂಡಿದ ಶತ್ರುವಿಗೆ ಪಂಡಿತರು ಮಿತ್ರಬೇಧವನ್ನು ಮಾಡುತ್ತಾರೆ. ವಿರೋಧಿಗಳಾದ ಮಿತ್ರರು ಅವನನ್ನು ಪರಿತ್ಯಾಗಮಾಡಿದ ಮೇಲೆ ದುರ್ಬಲನಾದ ಆ ಶತ್ರುವನ್ನು ತಮ್ಮ ವಶದಲ್ಲಿ ಇಟ್ಟುಕೊಳ್ಳುತ್ತಾರೆ.
ಸತ್ತ್ವೇ ನ ಕುರುತೇ ಯುದ್ಧಂ ರಾಜನ್ ಸುಬಲವಾನಪಿ |
ನೋದ್ಯಮೇನ ನ ಮಾತ್ರಾಭಿಃ ಸರ್ವಾಃ ಸ್ವೀಕುರುತೇ ಪ್ರಜಾಃ ॥67॥
ರಾಜನೇ, ಯಾವನು ಬಲವಿದ್ದರೂ ಮತ್ತು ಪರಾಕ್ರಮವಿದ್ದರೂ ಯುದ್ಧವನ್ನು ಮಾಡುವುದಿಲ್ಲವೋ ಅವನ ಉದ್ಯಮದಿಂದ ಅಥವಾ ಅವನು ಕೊಟ್ಟ ಎಲ್ಲ ದಾನದ ಕಾರಣದಿಂದ ಎಲ್ಲಾ ಪ್ರಜೆಗಳು ಅವನನ್ನು ಸ್ವೀಕರಿಸುವುದಿಲ್ಲ.
ಸರ್ವಥಾ ಸಹಿತೈರೇವ ದುರ್ಬಲೈರ್ಬಲವಾನಪಿ |
ಅಮಿತ್ರಃ ಶಕ್ಯತೇ ಹಂತುಂ ಮಧುಹಾ ಭ್ರಮರೈರಿವ ॥68॥
ಜೇನುಕೀಳುವವನನ್ನು ಜೇನುಹುಳುಗಳು ಕೊಂದಂತೆ ದುರ್ಬಲರಾದವರೂ ಸಹ ಅನೇಕರು ಜೊತೆಗೂಡಿದರೆ ಬಲಿಷ್ಠನಾದ ಶತ್ರುವನ್ನು ಕೊಲ್ಲಲು ಸಾಧ್ಯವಾಗುತ್ತದೆ.
ಯಥಾ ರಾಜನ್ ಪ್ರಜಾಃ ಸರ್ವಾಃ ಸೂರ್ಯಃ ಪಾತಿ ಗಭಸ್ತಿಭಿಃ|
ಹಂತಿ ಚೈವ ತಥೈವ ತ್ವಂ ಸವಿತುಃ ಸದೃಶೋ ಭವ ॥69॥
ಹೇಗೆ ಸೂರ್ಯನು ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ತನ್ನ ಮೃದುಕಿರಣಗಳಿಂದ ಎಲ್ಲಾ ಪ್ರಜೆಗಳನ್ನು ಪಾಲಿಸುತ್ತಾನೆಯೋ ಮಧ್ಯಾಹ್ನದಲ್ಲಿ ತನ್ನ ಉಷ್ಣಕಿರಣಗಳಿಂದ ಎಲ್ಲರನ್ನು ಕೊಲ್ಲುತ್ತಾನೆಯೋ ಅದರಂತೆ ನೀನು ಸೂರ್ಯನಿಗೆ ಸದೃಶನಾಗು.

ಏತದ್ಧ್ಯಪಿ ತಪೋ ರಾಜನ್ ಪುರಾಣಮಿತಿ ನಃ ಶ್ರುತಮ್ |
ವಿಧಿನಾ ಪಾಲನಂ ಭೂಮೇರ್ಯತ್ಕೃತಂ ನಃ ಪಿತಾಮಹೈಃ ॥70॥
ಎಲ್ಲೈ ರಾಜನೇ, ನಮ್ಮ ಪಿತಾಮಹರು ಮಾಡಿದ ಶಾಸ್ತ್ರರೀತಿಯಿಂದ ಭೂಮಿಯ ಪಾಲನೆಯು ಏನಿದೆಯೋ ಅದೂ ಕೂಡ ಪರಂಪರಾಗತ ತಪಸ್ಸೆಂದು ನಾನು ಕೇಳಿದ್ದೇನೆ.
ಅಪೇಯಾತ್ ಕಿಲ ಭಾಃ ಸೂರ್ಯಾಲ್ಲಕ್ಷ್ಮ ಚಂದ್ರಮಸ ಸ್ತಥಾ |
ಇತಿ ಲೋಕೋ ವ್ಯವಸಿತೋ ದೃಷ್ಟ್ವೇಮಾಂ ಭವತೋ ವ್ಯಥಾಮ್ ॥71॥
ನಿನ್ನ ಈ ವ್ಯಸನವನ್ನು ನೋಡಿ ಜನರು ಸೂರ್ಯನಿಂದ ಪ್ರಕಾಶವೂ ಚಂದ್ರನಿಂದ ಚಿಹ್ನೆಯೂ ಹೊರಟು ಹೋಗುವುದೆಂದು ನಿಶ್ಚಯಿಸಿದ್ದಾರೆ.
ಭವತಶ್ಚ ಪ್ರಶಂಸಾಭಿರ್ನಿಂದಾಭಿರಿತರಸ್ಯ ಚ |
ಕಥಯಂತ್ಯಃ ಪರಿಷದಃ ಪೃಥಗ್ ರಾಜನ್ ಸಮಾಗತಾಃ ॥72॥
ರಾಜನೇ, ಅನೇಕ ಜನರ ಸಮೂಹಗಳು ನಿನ್ನ ಪ್ರಶಂಸಾವಚನಗಳನ್ನೂ ಶತ್ರುಗಳ ನಿಂದಾವಚನಗಳನ್ನೂ ಹೇಳುತ್ತಾ ಇಲ್ಲಿ ಸಮಾಗತರಾಗಿದ್ದಾರೆ.
ಇದಮಭ್ಯಧಿಕಂ ರಾಜನ್ ಬ್ರಾಹ್ಮಣಾಃ ಗುರುವಶ್ಚ ತೇ |
ಸಮೇತಾಃ ಕಥಯಂತೀಹ ಮುದಿತಾಃ ಸತ್ಯಸಂಧತಾಮ್ ॥73॥
ರಾಜನೇ, ಬ್ರಾಹ್ಮಣರು ಮತ್ತು ಗುರುಗಳು ಎಲ್ಲರೂ ಸೇರಿ ಸಂತೋಷದಿಂದ ನೀನು ಸತ್ಯಸಂಧನೆಂದು ಹೇಳುತ್ತಿರುವುದು ಒಂದು ದೊಡ್ಡವಿಷಯ.
ಯನ್ನ ಮೋಹಾನ್ನ ಕಾರ್ಪಣ್ಯಾನ್ನ ಲೋಭಾನ್ನ ಭಯಾದಪಿ |
ಅನೃತಂ ಕಿಂಚಿದುಕ್ತಂ ತೇ ನ ಕಾಮಾನ್ನಾರ್ಥಕಾರಣಾತ್ ॥74॥
ನೀನು ಮೋಹದಿಂದಲಾಗಲೀ ಕಾರ್ಪಣ್ಯದಿಂದಲಾಗಲೀ ಲೋಭದಿಂದಲಾಗಲೀ ಭಯದಿಂದಲಾಗಲೀ ಕಾಮದಿಂದಲಾಗಲೀ ಅರ್ಥದ ಕಾರಣದಿಂದಲಾಗಲೀ ಸ್ವಲ್ಪಸುಳ್ಳನ್ನೂ ಮಾತನಾಡಿಲ್ಲ.
ಯದೇನಃ ಕುರುತೇ ಕಿಂಚಿದ್ ರಾಜಾ ಭೂಮಿಮವಾಪ್ನುವನ್ |
ಸರ್ವಂ ನುದತಿ ತತ್ ಪಶ್ಚಾತ್ ಯಜ್ಞೈರ್ವಿಪುಲದಕ್ಷಿಣೈಃ ॥75॥
ರಾಜನು ಭುಮಿಯನ್ನು ಸಂಪಾದಿಸುವಾಗ ಯಾವ ಅಲ್ಪಪಾಪವನ್ನು ಮಾಡುತ್ತಾನೋ ಅವೆಲ್ಲವನ್ನೂ ಅನಂತರ ಬಹಳ ದಕ್ಷಿಣೆಯನ್ನು ಕೊಟ್ಟು ಯಜ್ಞಗಳನ್ನು ಮಾಡಿ ಪರಿಹರಿಸಿಕೊಳ್ಳುತ್ತಾನೆ.
ಬ್ರಾಹ್ಮಣೇಭ್ಯೋ ದದ್ ಗ್ರಾಮಾನ್ ಗಾಶ್ಚ ರಾಜನ್ ಸಹಸ್ರಶಃ|
ಮುಚ್ಯತೇ ವೀರ ಪಾಪೇಭ್ಯಸ್ತಮೋಭಿರಿವ ಚಂದ್ರಮಾಃ ॥76॥
ಎಲ್ಲೈ ರಾಜನೇ, ಬ್ರಾಹ್ಮಣರಿಗೆ ಗ್ರಾಮಗಳನ್ನು ಮತ್ತು ಸಹಸ್ರಸಂಖ್ಯೆಯಲ್ಲಿ ಗೋವುಗಳನ್ನು ಕೊಟ್ಟು ಚಂದ್ರನು ಕತ್ತಲೆಯಿಂದ ಬಿಡುಗಡೆಯಾದಂತೆ ರಾಜನು ಪಾಪದಿಂದ ಬಿಡುಗಡೆಯಾಗುತ್ತಾನೆ.
ಪೌರಜಾನಪದಾಃ ಸರ್ವೇ ಪ್ರಾಯಶಃ ಕುರುನಂದನ |
ಸವೃದ್ಧಬಾಲಾಃ ಸಹಿತಾಃ ಶಂಸಂತಿ ತ್ವಾಂ ಯುಧಿಷ್ಠಿರ ॥77॥
ಎಲ್ಲೈ ಕುರುನಂದನನಾದ ಯುಧಿಷ್ಠಿರನೇ, ಪೌರಜಾನಪದರೂ ವೃದ್ಧರೂ ಬಾಲಕರೂ ಎಲ್ಲರೂ ಸೇರಿ ನಿನ್ನನ್ನು ಹೊಗಳುತ್ತಾರೆ.
ಶ್ವದೃತೌ ಕ್ಷೀರಮಾಸಕ್ತಂ ಬ್ರಹ್ಮ ವಾ ವೃಷಲೇ ಯಥಾ |
ಸತ್ಯಂ ಸ್ತೇನೇ ಬಲಂ ನಾರ್ಯಾಂ ರಾಜ್ಯಂ ದುರ್ಯೋಧನೇ ತಥಾ ॥
ನಾಯಿಯ ಚರ್ಮದಲ್ಲಿ ಹಾಲು ಇದ್ದಂತೆ, ಶೂದ್ರನಲ್ಲಿ ವೇದವಿದ್ದಂತೆ, ಕಳ್ಳನಲ್ಲಿ ಸತ್ಯವಿದ್ದಂತೆ, ನಾರಿಯಲ್ಲಿ ಬಲವಿದ್ದಂತೆ, ದುರ್ಯೋಧನನಲ್ಲಿ ರಾಜ್ಯವಿದೆ.
ಇತಿ ನಿರ್ವಚನಂ ಲೋಕೇ ಚಿರಂ ಚರತಿ ಭಾರತ |
ಅಪಿ ಚೈನಾಃ ಸ್ತ್ರಿಯೋ ಬಾಲಾಃ ಸ್ವಾಧ್ಯಾಯಮಿವ ಕುರ್ವತೇ ॥79॥
ಎಲ್ಲೈ ಭಾರತನೇ, ಈ ಮಾತುಗಳನ್ನು ಸ್ತ್ರೀಯರು ಮತ್ತು ಬಾಲರು ವೇದಮಂತ್ರವನ್ನು ಜಪಮಾಡಿದಂತೆ ಮತ್ತೆಮತ್ತೆ ಹೇಳುತ್ತಿದ್ದಾರೆ.
ಸ ಭವಾನ್ ರಥಮಾಸ್ಥಾಯ ಪ್ರತಿಜ್ಞಾಯ ತಥೇತಿ ನಃ |
ತ್ವರಮಾಣೋಽಭಿನಿರ್ಯಾತು ಚಿರಮರ್ಥೋಪಘಾತಕಮ್ ॥80॥
ಅಂತಹ ನೀನು ಹಾಗೆಯೇ ಮಾಡುತ್ತೇನೆ ಎಂದು ನಮಗೆ ಪ್ರತಿಜ್ಞೆಯನ್ನು ಮಾಡಿ ರಥವನ್ನು ಏರಿ ಬಹಳಕಾಲ ನಮ್ಮ ಅರ್ಥವನ್ನು ನಾಶಮಾಡಿದ ಶತ್ರುವಿನ ಮೇಲೆ ಶೀಘ್ರವಾಗಿ ಎರಗು.
ವಾಚಯಿತ್ವಾ ದ್ವಿಜಶ್ರೇಷ್ಠಾನದ್ಯೈವ ಗಜಸಾಹ್ವಯಮ್ |
ಅಸ್ತ್ರವಿದ್ಭಿಃ ಪರಿವೃತೋ ಭ್ರಾತೃಭಿರ್ದೃಢಧನ್ವಿಭಿಃ ॥81॥
ಬ್ರಾಹ್ಮಣಶ್ರೇಷ್ಠರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಅಸ್ತ್ರವನ್ನು ತಿಳಿದ ದೃಢವಾದ ಧನುಸ್ಸುಳ್ಳ ತಮ್ಮಂದಿರಿಂದ ಸುತ್ತುವರಿಯಲ್ಪಟ್ಟು ಈ ದಿನವೇ ಹಸ್ತಿನಪುರಕ್ಕೆ ಹೋಗು.
ಆಶೀವಿಷಸಮೈರ್ವೀರೈರ್ಮರುದ್ಭಿರಿವ ವೃತ್ರಹಾ |
ಅಮಿತ್ರಾಂಸ್ತೇಜಸಾ ಮೃದ್ನನ್ನಸುರೇಭ್ಯ ಇವಾರಿಹಾ |
ಶ್ರಿಯಮಾದತ್ಸ್ವ ಕೌಂತೇಯ ಧಾರ್ತರಾಷ್ಟ್ರಾಂ ಮಹಾಬಲ ॥82॥
ಎಲ್ಲೈ ಮಹಾಬಲನಾದ ಕೌಂತೇಯನೇ, ಇಂದ್ರನು ಮರುತ್ತುಗಳ ಜೊತೆಯಲ್ಲಿ ಹೋದಂತೆ ದೃಷ್ಟಿ ವಿಷಸರ್ಪಗಳಿಗೆ ಸಮರಾದ

ವೀರರಾದ ತಮ್ಮಂದಿರ ಜೊತೆಯಲ್ಲಿ ಹೊರಟು ಚಕ್ರಧರನಾದ ನಾರಾಯಣನು ಅಸುರರನ್ನು ಮರ್ದಿಸಿದಂತೆ ನಿನ್ನ ತೇಜಸ್ಸಿನಿಂದ ಶತ್ರುಗಳನ್ನು ಮರ್ದಿಸಿ ವಿಷ್ಣುವು ಅಸುರರಿಂದ ಸಂಪತ್ತನ್ನು ತೆಗೆದುಕೊಂಡಂತೆ ದುರ್ಯೋಧನನ ಸಂಪತ್ತನ್ನು ವಶಮಾಡಿಕೋ.
ನ ಹಿ ಗಾಂಡೀವಮುಕ್ತಾನಾಂ ಶರಾಣಾಂ ಗೃಧ್ರವಾಸಸಾಮ್ |
ಸ್ಪರ್ಶಮಾಶೀವಿಷಾಭಾನಾಂ ಮರ್ತ್ಯಃ ಕಶ್ಚನ ಸಂಸಹೇತ್ ॥83॥
ಆಶೀವಿಷದಂತಿರುವ ಗೃಧ್ರಪಕ್ಷಗಳನ್ನು ಹೊಂದಿರುವ ಗಾಂಡಿವಮುಕ್ತವಾದ ಬಾಣಗಳನ್ನು ಯಾವ ಮನುಷ್ಯನೂ ಸಹಿಸಲಾರ.
ನ ಸ ವೀರೋ ನ ಮಾತಂಗೋ ನ ಸದಶ್ವೋಽಸ್ತಿ ಕಶ್ಚನ |
ಯಃ ಸಹೇತ ಗದಾವೇಗಂ ಮಮ ಕ್ರುದ್ಧಸ್ಯ ಸಂಯುಗೇ ॥84॥
ಯುದ್ಧದಲ್ಲಿ ಕೋಪಗೊಂಡ ನನ್ನ ಗದೆಯ ವೇಗವನ್ನು ಸಹಿಸುವ ವೀರನಾಗಲೀ ಗಜವಾಗಲೀ ಶ್ರೇಷ್ಠವಾದ ಅಶ್ವಗಳಾಗಲೀ ಯಾವುವೂ ಇಲ್ಲ.
ಸೃಂಜಯ್ಯೈಃ ಸಹ ಕೌಂತೇಯ್ಯೈರ್ವೃಷ್ಣೀನಾಮೃಷಭೇಣ ಚ |
ಕಥಂಸ್ವಿದ್ ಯುಧಿ ಕೌಂತೇಯ ರಾಜ್ಯಂ ನ ಪ್ರಾಪ್ನುಯಾಮಹೇ ॥85॥
ಕೌಂತೇಯನೇ, ಸೃಂಜಯದಿಂದ ಕೌಂತೇಯರಿಂದ ವೃಷ್ಣಿನಾಯಕನಾದ ಕೃಷ್ಣನಿಂದ ಕೂಡಿಕೊಂಡು ಹೋದರೆ ಯುದ್ಧದಲ್ಲಿ ನಾವು ಹೇಗೆ ರಾಜ್ಯವನ್ನು ಪಡೆಯದೆ ಇರುವೆವು?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯ - 22ನೇ ಅಧ್ಯಾಯ
ಏವಮುಕ್ತೋಽಬ್ರವೀದ್ ಭೀಮಂ ಧರ್ಮಪುತ್ರೋ ಯುಧಿಷ್ಠಿರಃ |
ತ್ರಯೋದಶಾಬ್ದಸ್ಯಾಂತೇಽಹಂ ಕುರ್ಯಾಮೇವ ತ್ವದೀರಿತಂ ॥116॥
ಭೀಮ ಹೀಗೆ ಹೇಳಿದಾಗ ಧರ್ಮಪುತ್ರ ಯುಧಿಷ್ಠಿರ ಭೀಮನಿಗೆ ಹೇಳಿದ. `ನೀನು ಹೇಳಿದ್ದನ್ನು ನಾನು ಹದಿಮೂರು ವರ್ಷಗಳ ಕೊನೆಯಲ್ಲಿ ಮಾಡುವೆನು'.
ಸತ್ಯಮೇತನ್ನ ಸಂದೇಹಃ ಸತ್ಯೇನಾತ್ಮಾನಮಾಲಭೇ |
ಲೋಕಾಪವಾದಭೀರುಂ ಮಾ ನಾತೋಽನ್ಯದ್ ವಕ್ತುಮರ್ಹಸಿ ॥117॥
`ಇದು ಸತ್ಯ, ಸಂಶಯವಿಲ್ಲ. ನನ್ನಾಣೆ ಇದೆ. ಲೋಕಾಪವಾದಕ್ಕೆ ಅಂಜುತ್ತಿರುವ ನನ್ನ ಮುಂದೆ ಇನ್ನು ಬೇರೆ ಏನೂ ಹೇಳಬೇಡ'.
ತುದಸೇ ಚಾತಿವಾಚಾ ಮಾಂ ಯದ್ಯೇವಂ ಭೀಮ ಮಾಂ ವದೇಃ |
ತದೈವ ಮೇಽತ್ಯಯಃ ಕಾರ್ಯೋ ಹಂತವ್ಯಾಶ್ಚೈವ ಶತ್ರುವಃ |
ನೈವಾದ್ಯಶ್ಚೈರಿದಾನೀಂ ತು ವಾಕ್ಯೈರ್ಬಾಧಿತುಮರ್ಹಸಿ ॥118॥
ನಾನು ಹೀಗೆ ಆಣೆ ಇಟ್ಟು ಹೇಳಿದಾಗಲೂ ನೀನು ಹೀಗೆ ಹೇಳುತ್ತಿದ್ದರೆ ಕ್ರೂರವಾದ ಮಾತಿನಿಂದ ನನಗೆ ನೋವು ಉಂಟು ಮಾಡುವಿ. ನೀನು ಅಂದೇ ನನ್ನನ್ನು ತಿರಸ್ಕರಿಸಿ ಶತ್ರುಗಳನ್ನು ಕೊಲ್ಲಬೇಕಾಗಿತ್ತು. ಈಗ ನೀನು ಇಂಥ ಮಾತುಗಳಿಂದ ನನ್ನನ್ನು ನೋಯಿಸುವುದು ಯುಕ್ತವಲ್ಲ.
ಭೀಷ್ಮದ್ರೋಣಾದಯೋಽಸ್ತ್ರಜ್ಞಾನಿವಾರ್ಯಾಶ್ಚ ಕಥಂ ಯುಧಿ |
ಪೂಜ್ಯಾಸ್ತೇ ಬಾಹುಯುದ್ಧೇನ ನ ನಿವಾರ್ಯಾಃ ಕಥಂಚನ ॥119॥
ಭೀಷ್ಮದ್ರೋಣ ಮುಂತಾದವರು ಅಸ್ತ್ರಜ್ಞರು. ಅವರನ್ನು ಯುದ್ಧದಲ್ಲಿ ಇದಿರಿಸುವುದು ಹೇಗೆ ಸಾಧ್ಯ? ಅವರು ಪೂಜ್ಯರು. ಬಾಹುಯುದ್ಧದಿಂದ ಯಾವ ರೀತಿಯಿಂದಲೂ ಅವರನ್ನು ಇದಿರಿಸಲಾಗದು.
ಅಸ್ತ್ರಾಣಿ ಚಾನನ್ನಪಿ ಹಿ ಪ್ರಯೋಜಯಸಿ ನ ಕ್ವಚಿತ್ |
ತಸ್ಮಾತ್ ತದೈವ ಗಂತವ್ಯಂ ವಿಜ್ಞಾತಾಸ್ತ್ರೇ ಧನಂಜಯೇ ॥120॥
ನೀನು ಅಸ್ತ್ರಗಳನ್ನು ತಿಳಿದವನಾದರೂ ಅವುಗಳನ್ನು ಎಲ್ಲಿಯೂ ಪ್ರಯೋಗಿಸುವುದಿಲ್ಲ. ಅದರಿಂದ ಅರ್ಜುನ ಅಸ್ತ್ರಗಳನ್ನು ತಿಳಿದಾಗಲೆ, ಹದಿಮೂರು ವರ್ಷ ದಾಟಿದಾಗಲೆ ನಾವು ಯುದ್ಧಕ್ಕೆ ಹೋಗಬೇಕು.
ಇತ್ಯುಕ್ತೋ ಭೀಮಸೇನಸ್ತು ಸ್ನೇಹಭಂಗಯಾತ್ ತತಃ |
ನೋವಾಚ ಕಿಂಚಿದ್‌ವಚನಂ ಸ್ವಾಭಿಪ್ರೇತಮವಾಪ್ಯ ಚ ॥121॥
ಹೀಗೆ ಧರ್ಮರಾಜ ಹೇಳಿದಾಗ ಭೀಮ ತಾನು ಇನ್ನೂ ಹೆಚ್ಚು ಮಾತನಾಡಿದರೆ ಸೋದರ ಸ್ನೇಹಕ್ಕೆ ಕುಂದು ಬಂದೀತೆಂಬ ಭಯದಿಂದ ಮತ್ತು ತನ್ನ ಉದ್ದೇಶ ಈಗಾಗಲೆ ನೆರವೇರಿದೆ ಎನ್ನುವ ತೃಪ್ತಿಯಿಂದ ಏನೂ ಹೇಳಲಿಲ್ಲ.
ಅಭಿಪ್ರಾಯೋ ಹಿ ಭೀಮಸ್ಯ ನಿಶ್ಚಯೇನ ತ್ರಯೋದಶೇ |
ಯುಧಿಷ್ಠಿರಸ್ಯ ರಾಜ್ಯಾರ್ಥಂ ಗಮನಾರ್ಥೇ ಪ್ರತಿಶ್ರವಃ ॥122॥
ಧರ್ಮರಾಜ ಹದಿಮೂರು ವರ್ಷದ ನಂತರವಾದರೂ ರಾಜ್ಯಕ್ಕಾಗಿ ಯುದ್ಧಮಾಡುವ ಬಗ್ಗೆ ಪ್ರತಿಜ್ಞೆ ಮಾಡಬೇಕೆಂಬುದೇ ಭೀಮನ ಉದ್ದೇಶವಾಗಿತ್ತು.
ಅನ್ಯಥಾತಿಮೃದುತ್ವಾತ್ಸ ನ ಗಚ್ಛೇದ್‌ಭಿನ್ನಧೀಃ ಹರ್ರೇಃ |
ಕೃತಕೃತ್ಯೇ ತದಾ ಭೀಮೇ ಸ್ಥಿತೇ ಧರ್ಮಾತ್ಮಜೋ ಹಿ ಸಃ ॥123॥
ಭೀಷ್ಮದ್ರೋಣಾದಿವಿಜಯಃ ಕಥಂ ಸ್ಯಾದಿತಿ ಚಿಂತಯನ್ |

ನಿವಾರಣಂ ಗುರೂಣಾಂ ಹಿ ಭೀಮ ಇಚ್ಛತಿ ನ ಕ್ವಚಿತ್ ॥124॥
ತಸ್ಮಾತ್ತೇ ಹ್ಯರ್ಜುನೇನೈವ ನಿವಾರ್ಯಾ ಇತ್ಯಚಿಂತಯತ್ |
ಆಪದ್ಯೇವ ಹಿ ಭೀಮಸ್ತಾನ್ನಿವಾರಯತಿ ನಾನ್ಯಥಾ ॥125॥
ಇಲ್ಲದಿದ್ದರೆ ಮೃದುಸ್ವಭಾವದಿಂದಾಗಿ ಧರ್ಮರಾಜ ಶತ್ರುಗಳ ಮಾತುಗಳಿಂದ ಬುದ್ಧಿ ಪರಿವರ್ತನ ಹೊಂದಿ ಯುದ್ಧಪ್ರವೃತ್ತಿಯನ್ನು ಕೈಬಿಡಬಹುದು ಎಂದು ಭೀಮನಿಗೆ ಚಿಂತೆಯಾಗಿತ್ತು. ಈ ರೀತಿ ಭೀಮ ಕೃತಕೃತ್ಯನಾಗಿ ಕುಳಿತಾಗ ಧರ್ಮರಾಜ ಭೀಷ್ಮ ದ್ರೋಣಾದಿಗಳನ್ನು ಗೆಲ್ಲುವುದು ಹೇಗೆ ಎಂದು ಚಿಂತಿಸಿದ. ಗುರುಹಿರಿಯರನ್ನು ಇದಿರಿಸುವುದನ್ನು ಭೀಮ ಎಲ್ಲೂ ಇಷ್ಟಪಡುವುದಿಲ್ಲ. ಅದರಿಂದ ಅರ್ಜುನನೇ ಇದಿರಿಸಬೇಕಾಗುತ್ತದೆ ಎಂದು ಚಿಂತಿಸಿದ. ಆಪತ್ಕಾಲದಲ್ಲಿ ಮಾತ್ರ ಭೀಮ ಗುರುಹಿರಿಯರನ್ನು ಇದಿರಿಸುತ್ತಾನೆ ಹೊರತು ಬೇರೆ ಸಮಯದಲ್ಲಿ ಅಲ್ಲ.
* * * *
ಮೂವತ್ತೊಂದನೆಯ ಅಧ್ಯಾಯ
(ಯುಧಿಷ್ಠಿರನ ಪ್ರತ್ಯುತ್ತರ. ಹದಿಮೂರುವರ್ಷದ ನಂತರ ಪರಾಕ್ರಮವನ್ನು ತೋರಿಸುವ ಪ್ರತಿಜ್ಞೆ.)
ಯುಧಿಷ್ಠಿರಃ
ಅಸಂಶಯಂ ಭಾರತ ಸತ್ಯಮೇತದ್
ಯನ್ಮಾಂ ತುದನ್ ವಾಕ್ಯಶಲ್ಯೈಃ ಕ್ಷಿಣೋಷಿ |
ನ ತ್ವಾ ವಿಗರ್ಹೇ ಪ್ರತಿಕೂಲಮೇತ-
ನ್ಮಮಾನಯಾದ್ಧಿ ವ್ಯಸನಂ ವ ಆಗಾತ್ ॥1॥
ಅಹಂ ಹ್ಯಕ್ಷಾನಾನ್ವಪದ್ಯೇ ಜಿಹೀರ್ಷನ್
ರಾಜ್ಯಂ ಸರಾಷ್ಟ್ರಂ ಧೃತರಾಷ್ಟ್ರಸ್ಯ ಪುತ್ರಾನ್ |
ತನ್ಮಾಂ ಶಠಃ ಕಿತವಃ ಪ್ರತ್ಯದೇವೀತ್
ಸುಯೋಧನಾರ್ಥಂ ಸುಬಲಸ್ಯ ಪುತ್ರಃ ॥2॥
ಎಲೈ ಭಾರತನೇ ನೀನು ವಾಗ್ಬಾಣಗಳಿಂದ ನನ್ನನ್ನು ಚುಚ್ಚಿ ಹಿಂಸಿಸುತ್ತಿರುವುದು ಯುಕ್ತವಾಗಿದೆ. ನಾನು ನಿನ್ನನ್ನು ನಿಂದಿಸುವುದಿಲ್ಲ. ನಿಮಗೆ ದುಃಖವು ನನ್ನ ಅಪರಾಧದಿಂದ ಉಂಟಾಯಿತಷ್ಟೆ? ನಾನು ಧೃತರಾಷ್ಟ್ರಪುತ್ರನಿಂದ ರಾಜ್ಯವನ್ನೂ ರಾಜಧಾನಿಯನ್ನೂ ಅಪಹರಿಸಲು ದಾಳಗಳನ್ನು ಹಿಡಿದೆ. ಆದರೆ ನನಗೆ ಎದುರಾಗಿ ಮೋಸಗಾರನೂ ದ್ವೇಷಿಯೂ ಆದ ಸುಬಲ ಪುತ್ರನಾದ ಶಕುನಿಯು ದುರ್ಯೋಧನನ ಸಲುವಾಗಿ ಆಡಿದನು.
ಮಹಾಮಾಯಃ ಶಕುನಿಃ ಪಾರ್ವತೀಯಃ
ಸದಾ ಸ ರಾಜಾ ಪ್ರವಪನ್ನಕ್ಷಪೂಗಾನ್ |
ಅಮಾಯಿನಂ ಮಾಯಯಾ ಪ್ರತ್ಯದೇವೀತ್
ತತೋಽಪಶ್ಯಂ ವೃಜಿನಂ ಭೀಮಸೇನ ॥3॥
ಕ್ಷರಂಸ್ತು ದೃಷ್ಟ್ವಾ ಶಕುನೇರ್ಯಥಾವತ್
ಕಾಮಾನುಲೋಮಾನಯುಜೋ ಯುಜಶ್ಚ |
ಶಕ್ಯೋ ನಿಯಂತುಂ ನ ಭವಿಷ್ಯದಾತ್ಮಾ
ಮನ್ಯುಸ್ತು ಧೈರ್ಯಂ ಪುರುಷಸ್ಯ ಹಂತಿ ॥4॥
ಆ ಪರ್ವತರಾಜನಾದ ಶಕುನಿಯು ಬಹಳ ಮೋಸಗಾರ. ಅವನು ದಾಳಗಳನ್ನು ಉರುಳಿಸಿ ಮೋಸವನ್ನು ಮಾಡಿ ನಿಷ್ಕಪಟನಾದ ನನ್ನನ್ನು ಸೋಲಿಸಿದನು. ಭೀಮಸೇನನೇ ಆಗ ಈ ಅನರ್ಥವು ಉಂಟಾಯಿತು. ದಾಳಗಳು ಶಕುನಿಯ ಇಚ್ಛೆಗೆ ಅನುಗುಣವಾಗಿ ಸಮ ಮತ್ತು ಬೆಸ ಗರಗಳನ್ನು ಕೊಡುತ್ತಿರುವುದನ್ನು ನೋಡಿ ನನ್ನ ಸಂತೋಷವು ನಾಶವಾಯಿತು. ಆಗ ನನ್ನನ್ನು ನಾನು ನಿಯಂತ್ರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕೋಪವು ಪುರುಷನ ಧೈರ್ಯವನ್ನು ನಾಶಪಡಿಸುತ್ತದೆ.
ಯಂತುಂ ನಾತ್ಮಾ ಶಕ್ಯತೇ ಪೌರುಷೇಣ
ಮಾನೇನ ವೀರ್ಯೇಣ ಚ ತಾತ ನದ್ಧಃ |
ನ ತೇ ವಾಚಂ ಭೀಮಸೇನಾಭ್ಯಸೂಯೇ
ಮನ್ಯೇ ತಥಾ ತದ್ ಭವಿತವ್ಯಮಾಸೀತ್ ॥5॥
ಪ್ರೀತಿಪಾತ್ರನೇ, ಕೋಪಯುಕ್ತವಾದ ಮನಸ್ಸನ್ನು ಪ್ರಯತ್ನದಿಂದಲಾಗಲೀ ಗರ್ವದಿಂದಲಾಗಲೀ ಪರಾಕ್ರಮದಿಂದಲಾಗಲೀ ನಿಯಂತ್ರಿಸಲು ಸಾಧ್ಯವಿಲ್ಲ. ಭೀಮಸೇನನನೇ, ನಿನ್ನ ಮಾತುಗಳನ್ನು ನಾನು ಆಕ್ಷೇಪಿಸುವುದಿಲ್ಲ. ಇದು ಹೀಗೆ ಆಗಬೇಕಾದುದೆಂದು ವಿಧಿಯ ಸಂಕಲ್ಪವೆಂದು ಭಾವಿಸುತ್ತೇನೆ.
ಸ ನೋ ರಾಜಾ ಧೃತರಾಷ್ಟ್ರಸ್ಯ ಪುತ್ರೋ
ನ್ಯಪಾತಯದ್ ವ್ಯಸನೇ ರಾಜ್ಯಮಿಚ್ಛನ್ |
ದಾಸ್ಯಂ ಚ ನೋಽಗಮಯದ್ ಭೀಮಸೇನ
ಯತ್ರಾಭವಚ್ಛರಣಂ ದ್ರೌಪದೀ ನಃ ॥6॥
ಧೃತರಾಷ್ಟ್ರಪುತ್ರನಾದ ಆ ದುರ್ಯೋಧನ ರಾಜನು ನಮ್ಮ ರಾಜ್ಯವನ್ನು ಬಯಸಿ ನಮ್ಮನ್ನು ದುಃಖದಲ್ಲಿ ಕೆಡವಿದನು. ಭೀಮಸೇನನೇ, ನಮಗೆ ದಾಸ್ಯವನ್ನು ಉಂಟುಮಾಡಿದನು. ಆಗ ನಮಗೆಲ್ಲಾ ದ್ರೌಪದಿಯೇ ದುಃಖದಿಂದ ದಾಟಿಸುವವಳಾದಳು.
ತ್ವಂ ಚಾಪಿ ತದ್ ವೇತ್ಥ ಧನಂಜಯಶ್ಚ

ಪುನರ್ದ್ಯೂತಾಯಾಗತಾನಾಂ ಸಭಾಂ ನಃ |
ಯನ್ಮಾಽಬ್ರುವೀದ್ ಧೃತರಾಷ್ಟ್ರಸ್ಯ ಪುತ್ರ
ಏವಂ ಗ್ಲಹಾರ್ಥಂ ಭಾರತಾನಾಂ ಸಮಕ್ಷಮ್ ॥7॥
ನಾವು ಪುನಃ ದ್ಯೂತಕ್ಕೆ ಸಭೆಗೆ ಆಗಮಿಸಿದಾಗ ಧೃತರಾಷ್ಟ್ರಪುತ್ರನು ಎಲ್ಲ ಭರತವಂಶದವರ ಎದುರಿನಲ್ಲಿ ಪಣಕ್ಕಾಗಿ ಏನನ್ನು ಹೇಳಿದನೆಂದು ನೀನೂ ಮತ್ತು ಅರ್ಜುನನೂ ತಿಳಿದಿದ್ದೀರಿ.
ವನೇ ಸಮಾ ದ್ವಾದಶ ರಾಜಪುತ್ರ
ಯಥಾಕಾಮಂ ವಿದಿತಮಜಾತಶತ್ರೋ |
ಅಥಾಪರಂ ಚಾವಿದಿತಶ್ಚರೇಥಾಃ
ಸಹೈತಯಾ ಭ್ರಾತೃಭಿಶ್ಚನ್ನರೂಪಃ ॥8॥
ಎಲೈ ರಾಜಪುತ್ರನಾದ ಅಜಾತಶತ್ರುವೇ, ನಿಮ್ಮ ಮನಸ್ಸಿಗೆ ಬಂದಂತೆ ಎಲ್ಲರಿಗೂ ಕಾಣುವಂತೆ ಹನ್ನೆರಡು ವರ್ಷ ವನವಾಸವನ್ನು ಮಾಡಬೇಕು. ಅನಂತರ ಯಾರಿಗೂ ತಿಳಿಯದಂತೆ ದ್ರೌಪದಿ ಮತ್ತು ತಮ್ಮಂದಿರ ಜೊತೆಯಲ್ಲಿ ಅಜ್ಞಾತವಾಸವನ್ನು ಮಾಡಬೇಕು.
ತಂ ಚೈವ ತ್ವಾಂ ತಾತ ತಥಾ ಚರಂತಮ್
ಆಬುಧ್ಯಂತೇ ಭಾರತಾನಾಂ ಚರಾ ವೈ |
ಅನ್ಯಾಂಶ್ಚರೇಥಾಸ್ತಾವತೋಽಬ್ದಾಂಸ್ತತಸ್ತ್ವಂ
ನಿಶ್ಚಿತ್ಯ ತತ್ ಪ್ರತಿಜಾನೀಹಿ ಪಾರ್ಥ ॥9॥
ಪ್ರೀತಿಪಾತ್ರನೇ, ನೀನು ಹಾಗೆ ಅಜ್ಞಾತವಾಸವನ್ನು ಮಾಡುತ್ತಿರುವಾಗ ಭಾರತರಾದ ನಮ್ಮ ಗೂಢಚಾರರು ಯಾರಾದರೂ ನಿನ್ನನ್ನು ತಿಳಿದರೆ ಮತ್ತೆ ಹನ್ನೆರಡುವರ್ಷ ವನವಾಸವನ್ನೂ ಒಂದು ವರ್ಷಅಜ್ಞಾತವಾಸವನ್ನೂ ಮಾಡಬೇಕು. ಪಾರ್ಥನೇ ಇದನ್ನು ಮೊದಲು ನಿಶ್ಚಯಿಸಿ ಪ್ರತಿಜ್ಞೆಯನ್ನು ಮಾಡು.
ಚರೈಶ್ಚ ನೋಽನಾವಿದಿತಃ ಕಾಲಮೇತಂ
ಯುಕ್ತೋ ರಾಜನ್ ಮೋಹಯಿತ್ವಾ ಮದೀಯಾನ್ |
ಬ್ರುವೀಮಿ ಸತ್ಯಂ ಕುರುಸಂಸದೀಹ
ತವೈವ ತಾ ಭಾರತ ಪಂಚ ನದ್ಯಃ ॥10॥
ಎಲೈ ರಾಜನೇ ನನ್ನ ಸೇವಕರನ್ನು ಮೋಹಿಸಿ ಒಂದು ವರ್ಷಕಾಲ ನೀನು ಅವರಿಗೆ ತಿಳಿಯದಂತೆ ಅಜ್ಞಾತವಾಸವನ್ನು ಮಾಡಿದರೆ ಪರಶುರಾಮನು ಮಾಡಿದ ಸಮಂತಪಂಚಕ ಇರುವ ದೇಶವೆಲ್ಲವೂ ನಿನ್ನದೇ ಆಗುತ್ತದೆ. ಎಲೈ ಭಾರತನೇ, ಕೌರವರ ಸಭೆಯಲ್ಲಿ ನಾನು ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ.
ವಯಂ ಚೈವ ಕೌರವಾಃ ಸರ್ವ ಏವ
ತ್ವಯಾ ಜಿತಾಃ ಕಾಲಮಪಾಸ್ಯ ಭೋಗಾನ್ |
ಚರೇಮ ಇತ್ಯಾಹ ಪುರಾ ಸ ರಾಜಾ
ಮಧ್ಯೇ ಕುರೂಣಾಂ ಸ ಮಯೋಕ್ತಸ್ತಥೇತಿ ॥11॥
ಅಥವಾ ನಿನ್ನಿಂದಲೇ ನಾವು ಸೋತರೆ ಕೌರವರಾದ ನಾವೆಲ್ಲರೂ ನಮ್ಮ ಭೋಗಗಳನ್ನು ತೊರೆದು ಅಷ್ಟುಕಾಲ ವನವಾಸವನ್ನೂ ಮತ್ತು ಅಜ್ಞಾತವಾಸವನ್ನೂ ಮಾಡುವೆವು ಎಂದು ಆ ರಾಜನು ಕುರುಗಳ ಮಧ್ಯದಲ್ಲಿ ಹೇಳಿದನು.ನಾನು ಹಾಗೆಯೇ ಆಗಲಿ ಎಂದು ಹೇಳಿದೆ.
ತತೋ ದ್ಯೂತಮಭವನ್ನೋ ಜಘನ್ಯಂ
ಯಸ್ಮಿನ್ ಜಿತಾಃ ಪ್ರವ್ರಜಿತಾಃ ಸ್ಮ ಸರ್ವೇ |
ಇತ್ಥಂ ತು ದೇಶಾನನುಸಂಚರಾಮೋ
ವನಾನಿ ದುರ್ಗಾಣಿ ಚ ಘೋರರೂಪಾಃ ॥12॥
ಅನಂತರ ಆ ನೀಚದ್ಯೂತವು ನಮಗೆ ಸಂಭವಿಸಿತು. ಅದರಲ್ಲಿ ಸೋತು ನಾವೆಲ್ಲರೂ ರಾಜ್ಯವನ್ನು ಬಿಟ್ಟು ಬಂದಿದ್ದೇವೆ. ಹೀಗೆ ನಾವು ಘೋರರೂಪರಾಗಿ ಬೇರೆ ದೇಶಗಳನ್ನೂ ದುರ್ಗಮವಾದ ಕಾಡುಗಳನ್ನೂ ಸಂಚರಿಸುತ್ತಿದ್ದೇವೆ.
ಸುಯೋಧನಶ್ಚಾಪಿ ನ ಶಾಂತಿಮೃಚ್ಛನ್
ಭೂಯಶ್ಚ ಮನ್ಯೋರ್ವಶಮನ್ವಗಚ್ಛತ್ |
ಉದ್ಯೋಜಯಾಮಾಸ ಕುರೂಂಶ್ಚ ಸರ್ವಾನ್
ಯೇ ಚಾಸ್ಯ ಕೇಚಿದ್ ವಶಮನ್ವಗಚ್ಛನ್ ॥13॥
ಸುಯೋಧನನು ಶಾಂತಿಯನ್ನು ಪಡೆಯದೆ ಪುನಃ ಕೋಪವಶನಾಗಿ ತನ್ನ ವಶದಲ್ಲಿದ್ದ ಎಲ್ಲಾ ಕುರುಗಳನ್ನೂ ನಮ್ಮ ವಿರುದ್ಧವಾಗಿ ಎತ್ತಿಕಟ್ಟಿದನು.
ತಂ ಸಂಧಿಮಾಸ್ಥಾಯ ಸತಾಂ ಸಕಾಶೇ
ಕೋ ನಾಮ ಜಹ್ಯಾದಿಹ ರಾಜ್ಯಹೇತೋಃ |
ಆರ್ಯಸ್ಯ ಮನ್ಯೇ ಮರಣಾದ್ ಗರೀಯೋ
ಯಃ ಸಂಧಿಮುತ್ಕ್ರಮ್ಯ ಮಹೀಂ ಪ್ರಶಾಸೇ ॥14॥
ಸಜ್ಜನರ ಎದುರಿನಲ್ಲಿ ಅಂತಹ ಪ್ರತಿಜ್ಞೆಯನ್ನು ಮಾಡಿ ಈಗ ರಾಜ್ಯದ ಸಲುವಾಗಿ ಯಾವ ಸತ್ಪುರುಷನು ಅದನ್ನು ಬಿಡಲು ಸಾಧ್ಯ? ನಾನು ಸಂಧಿಯನ್ನು ಮುರಿದು ಭೂಮಿಯನ್ನು ಆಳಿದರೆ ಅದು ಒಳ್ಳೆಯ ನಡತೆಯುಳ್ಳ ನನಗೆ ಮರಣಕ್ಕಿಂತ ಹೆಚ್ಚಿನ ದುಃಖವೆಂದು

ಭಾವಿಸುತ್ತೇನೆ.
ತದೈವ ಚೇದ್ ವೀರ ತಥಾಽಕರಿಷ್ಯೇ
ಯದಾ ದ್ಯೂತೇ ಪರಿಘಂ ಪರ್ಯಮೃಕ್ಷಃ |
ಬಾಹೂ ದಿಧಕ್ಷನ್ ವಾರಿತಃ ಫಲ್ಗುನೇನ
ಕೋ ದುಷ್ಕೃತಂ ಭೀಮ ತದಾಽಕರಿಷ್ಯತ್ ॥15॥
ಎಲೈ ವೀರನೇ, ಯಾವ ದ್ಯೂತಸಮಯದಲ್ಲಿ ನಿನ್ನ ಬಾಹುಗಳನ್ನು ಸುಡುತ್ತೇನೆ ಎಂದು ಹೇಳಿ ಪರಿಘವನ್ನು ನೀನು ಹಿಡಿದಾಗ ಅರ್ಜುನನಿಂದ ತಡೆಯಲ್ಪಟ್ಟೆಯೋ ಆಗಲೇ ಹಾಗೆಯೇ ಮಾಡಿದ್ದರೆ ಎಲೈ ಭೀಮನೇ ಯಾರು ಅಕ್ಷದ್ಯೂತವನ್ನು ಆಡುತಿತದ್ದರು?
ಪ್ರಾಗೇವ ಚೈವಂ ಸಮಯಕ್ರಿಯಾಯಾಃ
ಕಿಂ ನಾಬ್ರುವೀಃ ಪೌರುಷಂ ಮಾ ವಿಜಾನನ್ |
ಪ್ರಾಪ್ತಂ ತು ಕಾಲಂ ತ್ವತಿಪಾತ್ಯ ಪಶ್ಚಾತ್
ಕಿಂ ವಾ ತ್ವಿದಾನೀಮತಿವೇಲಮಾತ್ಥ ॥16॥
ನನ್ನ ಸ್ವಭಾವವನ್ನು ತಿಳಿದ ನೀನು ಅಕ್ಷದ್ಯೂತಕ್ಕೆ ಸಮಯಬಂಧವನ್ನು (ಶರತ್ತುಗಳನ್ನು) ಮಾಡಿದಾಗಲೇ ಏಕೆ ಈ ಪರಾಕ್ರಮದ ಮಾತುಗಳನ್ನು ಆಡಲಿಲ್ಲ? ಮಾತನಾಡಬೇಕಾಗಿದ್ದ ಯೋಗ್ಯವಾದ ಆ ಕಾಲವನ್ನು ಮೀರಿ ಈಗ ನೀನು ಏಕೆ ಬಹಳವಾಗಿ ಮಾತನಾಡುತ್ತಿದ್ದೀಯೆ?
ಭೂಯೋಽಪಿ ದುಃಖಂ ಮಮ ಭೀಮಸೇನ
ದೂಯೇ ವಿಷಸ್ಯೇವ ರಸಂ ವಿದಿತ್ವಾ |
ಯದ್ ಯಾಜ್ಞಸೇನೀಂ ಪರಿಕೃಷ್ಯಮಾಣಾಂ
ಸಂದೃಶ್ಯ ತಾಂ ಕ್ಷಾಂತಮಿತಿ ಸ್ಮ ಭೀಮ ॥17॥
ಭೀಮಸೇನನೇ, ಯಾಜ್ಞಸೇನಿಯಾದ ದ್ರೌಪದಿಯು ಸಭೆಯಲ್ಲಿ ಎಳೆದಾಡಲ್ಪಟ್ಟಿದ್ದನ್ನು ನೋಡಿ ಅದು ನಮ್ಮಿಂದ ಸಹಿಸಲ್ಪಟ್ಟಿತು ಎಂಬುದು ನನ್ನ ಹೆಚ್ಚಿನದುಃಖಕ್ಕೆ ಕಾರಣವಾಗಿದೆ. ಭೀಮನೇ ವಿಷದ ರಸವನ್ನು ಕುಡಿದಂತೆ ದುಃಖಪಡುತ್ತಿದ್ದೇನೆ.
ನ ತ್ವದ್ಯ ಶಕ್ಯಂ ಭರತಪ್ರವೀರ
ಕೃತ್ವಾ ಯದುಕ್ತಂ ಕುರುವೀರಮಧ್ಯೇ |
ಕಾಲಂ ಪ್ರತೀಕ್ಷಸ್ವ ಸುಖೋದಯಸ್ಯ
ಪಂಕ್ತಿಂ ಫಲಾನಾಮಿವ ಬೀಜವಾಪಃ ॥18॥
ತಥಾಪಿ ಪೂರ್ವಂ ನಿಕೃತೋ ಹಿ ಕ್ಷುದ್ರೈಃ
ವೈರಂ ಸಪುಷ್ಪಂ ಸಫಲಂ ವಿದಿತ್ವಾ |
ಮಹಾಗುಣಂ ಹರತಿ ಹಿ ಪೌರುಷೇಣ
ತದಾ ವೀರೋ ಜೀವತಿ ಜೀವಲೋಕೇ ॥19॥
ಎಲೈ ಭರತಪ್ರವೀರನೇ, ಕುರುವೀರರ ಮಧ್ಯದಲ್ಲಿ ಹಾಗೆ ಪ್ರತಿಜ್ಞೆಯನ್ನು ಮಾಡಿ ಈಗ ಅದನ್ನು ಪರಿತ್ಯಜಿಸಲು ಸಾಧ್ಯವಿಲ್ಲ. ಕರ್ಶಕನು ಬೀಜವನ್ನು ಬಿತ್ತಿ ಫಲದ ಗೊಂಚಲುಗಳಿಗೆ ಕಾದಂತೆ ಸುಖೋದಯದ ಕಾಲವನ್ನು ನಿರೀಕ್ಷಿಸುವೆನು. ಆದರೂ ನೀಚರಿಂದ ಹಿಂದೆ ಮೋಸಗೊಳಿಸಲ್ಪಟ್ಟ ಯಾವ ವೀರನು ವಾಗ್ವಿವಾದರೂಪವಾದ ಪುಷ್ಪಗಳನ್ನು ಹೊಂದಿದ ಪ್ರಾಣವಿಯೋಜನ ರೂಪವಾದ ಮರಣಫಲವನ್ನು ಹೊಂದಿದ ವೈರವನ್ನು ತಿಳಿದು ಪೌರುಷವಿದ್ದರೂ ಕ್ಷಮಾರೂಪವಾದ ಮಹಾಗುಣವನ್ನು ಹೊಂದುತ್ತಾನೆಯೋ ಆ ವೀರನು ಮನುಷ್ಯ ಲೋಕದಲ್ಲಿ ಬದುಕುತ್ತಾನೆ.
ಶ್ರಿಯಂ ಸ ಲೋಕೇ ಲಭತೇ ಸಮಗ್ರಾಂ
ಮನ್ಯೇ ಚಾಸ್ಮೈ ಶತ್ರವಃ ಸನ್ನಮಂತೇ |
ಮಿತ್ರಾಣಿ ಚೈನಮತಿರಾಗಾದ್ ಭಜಂತೇ
ದೇವಾ ಇವೇಂದ್ರಮುಪಜೀವಂತಿ ಚೈನಮ್ ॥20॥
ಅವನು ಸಮಗ್ರವಾದ ಸಂಪತ್ತನ್ನು ಪಡೆಯುತ್ತಾನೆ. ಶತ್ರುಗಳು ಅವನಿಗೆ ತಲೆಬಾಗುತ್ತಾರೆ. ಮಿತ್ರರು ಬಹಳ ಸ್ನೇಹದಿಂದ ಭಜಿಸಿ ದೇವತೆಗಳು ಇಂದ್ರನನ್ನು ಉಪಜೀವಿಸುವಂತೆ ಉಪಜೀವಿಸುತ್ತಾರೆ.
ಮಮ ಪ್ರತಿಜ್ಞಾಂ ಚ ನಿಬೋಧ ಸತ್ಯಾಂ
ಮುನೇರ್ಧರ್ಮಾದಮೃತಾಜ್ಜೀವಿತಾಚ್ಚ |
ರಾಜ್ಯಂ ಚ ಪುತ್ರಾಶ್ಚ ಯಶೋ ಧನಂ ಚ
ಸರ್ವಂ ನ ಸತ್ಯಸ್ಯ ಕಲಾಮುಪೈತಿ ॥21॥
ನನ್ನ ಪ್ರತಿಜ್ಞೆಯು ಋಷಿಗಳ ಪ್ರತಿಜ್ಞೆಗಿಂತಲೂ ಮೋಕ್ಷಕ್ಕಿಂತಲೂ ಜೀವನಕ್ಕಿಂತಲೂ ಹೆಚ್ಚು ಸತ್ಯವೆಂದು ತಿಳಿ (ಮುನಿಧರ್ಮವಾದುದುರಿಂದ ಮೋಕ್ಷಪ್ರದವಾದುದರಿಂದ ಮತ್ತು ಜೀವನ ಸಾಫಲ್ಯಪ್ರದವಾದುದರಿಂದ ನನ್ನು ಪ್ರತಿಜ್ಞೆಯು ಸತ್ಯವೆಂದು ತಿಳಿ.) ರಾಜ್ಯವಾಗಲೀ ಪುತ್ರರಾಗಲೀ ಕೀರ್ತಿಯಾಗಲೀ ಧನವಾಗಲೀ ಎಲ್ಲವೂ ಸತ್ಯದ ಒಂದು ಅಂಶಕ್ಕೂ ಸಮವಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.

* * * *

## ಮೂವತ್ತೆರಡನೆಯ ಅಧ್ಯಾಯ

(ಭೀಮನಿಂದ ಯುಧಿಷ್ಠಿರನನ್ನು ಕುರಿತು ಯುಕ್ತಿಪೂರ್ವಕವಾಗಿ ವನವಾಸಮುಗಿಯುವುದಕ್ಕಿಂತ ಮೊದಲೇ ದುರ್ಯೋಧನನನ್ನು ನಿಗ್ರಹಿಸಲು ಒತ್ತಾಯ)

ಭೀಮಸೇನಃ
ಸಂಧಿಂ ಕೃತ್ವೈವ ಕಾಲೇನ ಹ್ಯಂತಕೇನ ಪತತ್ರಿಣಾ |
ಅನಂತೇನಾಪ್ರಮೇಯೇಣ ಸ್ರೋತಸಾ ಸರ್ವಹಾರಿಣಾ ॥1॥
ಪ್ರತ್ಯಕ್ಷಂ ಮನ್ಯಸೇ ಕಾಲಂ ಮರ್ತ್ಯಃ ಸನ್ ಕಾಲಬಂಧನಃ |
ಫೇನಧರ್ಮಾ ಮಹಾರಾಜ ಫಲಧರ್ಮಾ ತಥೈವ ಚ ॥2॥
ಎಲೈ ಮಹಾರಾಜನೇ ಮರಣಶೀಲನಾಗಿ ಕಾಲಕ್ಕೆ ಅಧೀನನಾಗಿರುವ ನೀನು ಪಕ್ಷಿಯಂತೆ ಹಾರುವ ನದಿಯ ವೇಗದಂತೆ ಹರಿಯುವ, ಪ್ರತ್ಯಕ್ಷವಾಗಿ ಸರ್ವಪ್ರಾಣಗಳನ್ನು ಅಪಹರಿಸುವ, ಕಾಲನಾಮಕ ಮೃತ್ಯುವಿಗೆ ಅಧೀನವಾಗಿದ್ದು  ಬಹುಕಾಲ ಬದುಕುತೆತೇನೆ ಎಂದು ಭಾವಿಸಿದ್ದೀಯೆ. ನೀರಿನ ನೊರೆಯಂತೆ, ನಾಶವಾಗುವ ಹಣ್ಣಿನಂತೆ, ಇರುವ ನೀನು ಹೀಗೆ ಭಾವಿಸುತ್ತೀಯೆ.
ನಿಮೇಷಾದಪಿ ಕೌಂತೇಯ ಯಸ್ಯಾಯುರಪಚೀಯತೇ |
ಸೂಚ್ಯಾ ವಾಂಜನಚೂರ್ಣಾನಿ ಕಿಮಿತಿ ಪ್ರತಿಪಾಲಯೇತ್ ॥3॥
ಎಲೈ ಕೌಂತೇಯನೇ ಸೂಜಿಯಿಂದ ಅಂಜನ ಚೂರ್ಣವನ್ನು ತೆಗೆದಂತೆ ನಿಮಿಷ ನಿಮಿಷವೂ ಆಯುಸ್ಸು ನಾಶವನ್ನು ಹೊಂದುತ್ತಿರುವಾಗ ಯಾವನು ಕಾಲವನ್ನು ನಿರೀಕ್ಷಿಸುತ್ತಾನೆ?
ಯೋ ನೂನಮಮಿತಾಯುಃ ಸ್ಯಾದಥವಾಽಽಯುಃಪ್ರಮಾಣವಿತ್ |
ಸ ಕಾಲಂ ವೈ ಪ್ರತೀಕ್ಷೇತ ಸರ್ವಪ್ರತ್ಯಕ್ಷದರ್ಶಿವಾನ್ ॥4॥
ಯಾವನಿಗೆ ಅಪರಿಮಿತವಾದ ಆಯುಸ್ಸಿದೆಯೋ ಅಥವಾ ಯಾವನು ತನ್ನ ಆಯುಸ್ಸಿನಪ್ರಮಾಣವನ್ನು ತಿಳಿದಿದ್ದಾನೋ  ಅಂತಹ ಸರ್ವಪ್ರತ್ಯಕ್ಷದರ್ಶಿಯಾದ ಪುರುಷನು ಮಾತ್ರ ಕಾಲವನ್ನು ಪ್ರತೀಕ್ಷೆಮಾಡಬಹುದು.
ಪ್ರತೀಕ್ಷಮಾಣಾನ್ ಕಾಲೋ ನಃ ಸಮಾ ರಾಜಂಸ್ತ್ರಯೋದಶ |
ಆಯುಷೋಽಪಚಯಂ ಕೃತ್ವಾ ಮರಣಾಯೋಪನೇಷ್ಯತಿ ॥5॥
ಎಲೈ ರಾಜನೇ, ಹದಿಮೂರು ವರ್ಷಕಾಲವನ್ನು ಪ್ರತೀಕ್ಷೆಮಾಡುತ್ತಿರುವ ನಮ್ಮ ಆಯುಸ್ಸನ್ನು ಮೃತ್ಯುವು ವಿನಾಶವನ್ನು ಮಾಡಿ ನಮ್ಮನ್ನು ಮರಣದ ಕಡೆ ಕೊಂಡುಹೋಗುವುದು.
ಶರೀರಿಣಾಂ ಹಿ ಮರಣಂ ಶರೀರೇ ನಿತ್ಯಮಾಶ್ರಿತಮ್ |
ಪ್ರಾಗೇವ ಮರಣಾತ್ ತಸ್ಮಾದ್ ರಾಜ್ಯಾಯೈವ ಘಟಾಮಹೇ ॥6॥
ಯೋ ನ ಯಾತಿ ಪ್ರಸಂಖ್ಯಾನಮಸ್ಪಷ್ಟೋಽಭೂತಿವರ್ಧನಃ |
ಅಯಾತಯಿತ್ವಾ ವೈರಾಣಿ ಸೋಽವಸೀದತಿ ಗೌರಿವ ॥7॥
ಎಲ್ಲ ದೇಹಿಗಳಿಗೂ ದೇಹದಲ್ಲಿಯೇ ಮರಣವಿರುತ್ತದೆ. ಆದ್ದರಿಂದ ಮರಣಕ್ಕಿಂತ ಮೊದಲೇ ರಾಜ್ಯವನ್ನು ಪಡೆಯಲು ಪ್ರಯತ್ನಿಸೋಣ. ಯಾವನು ವೈರಗಳನ್ನು ಹಿಂದಿರುಗಿಸದೆ ರಾಜ್ಯೈಶ್ವರ್ಯವನ್ನು ಸಂಪಾದಿಸದೆ ಅಪ್ರಸಿದ್ಧನಾಗಿ ಶ್ರೇಷ್ಠರಲ್ಲಿ ಪರಿಗಣನೆಯನ್ನು ಹೊಂದುವುದಿಲ್ಲವೋ ಅವನು (ಕೆಸರಿನಲ್ಲಿ ಮುಳುಗುವ) ಗೋವಿನಂತೆ ನಾಶವನ್ನು ಹೊಂದುತ್ತಾನೆ.
ಯೋ ನ ಯಾತಯತೇ ವೈರಮಲ್ಪಸತ್ತ್ವೋದ್ಯತಃ ಪುಮಾನ್ |
ಅಫಲಂ ತಸ್ಯ ಜನ್ಮಾಹಂ ಮನ್ಯೇ ದುರ್ಜಾತಿಜಾಯಿನಃ ॥8॥
ಯಾವ ಮನುಷ್ಯನು ಅಲ್ಪಸತ್ವವುಳ್ಳವನಾಗಿ ಪ್ರಯತ್ನಪೂರ್ವಕವಾಗಿ ವೈರಕ್ಕೆ ಪ್ರತೀಕಾರವನ್ನು ಮಾಡುವುದಿಲ್ಲವೋ, ಕೆಟ್ಟ ಜಾತಿಯಲ್ಲಿ ಹುಟ್ಟಿದ ಅವನ ಜನ್ಮವು  ನಿಷ್ಫಲವೆಂದು ಭಾವಿಸುತ್ತೇನೆ.
ಹೈರಣ್ಯೋ ಭವತೋ ಬಾಹುಃ ಶ್ರುತಿರ್ಭವತಿ ಭಾರತ |
ಹತ್ವಾ ದ್ವಿಷಂತಂ ಸಂಗ್ರಾಮೇ ಭುಂಕ್ಷ್ವ ಬಾಹ್ವಾರ್ಜಿತಂ ವಸು ॥9॥
ಎಲೈ ಭಾರತನೇ ನಿನ್ನ ಬಾಹುಗಳು ಹಿರಣ್ಯದಾನವನ್ನು ಮಾಡುತ್ತವೆ (ಹಿರಣ್ಮಯವಾಗುತ್ತವೆ). ನಿನಗೆ ಕೀರ್ತಿಯುಂಟಾಗುತ್ತದೆ. ಯುದ್ಧದಲ್ಲಿ ಶತ್ರುವನ್ನು ಕೊಂದು ನಿನ್ನ ಬಾಹುಬಲದಿಂದ ಸಂಪಾದಿಸಿದ ಐಶ್ವರ್ಯವನ್ನು ಭೋಗಿಸು.
ಹತ್ವಾ ಚೇತ್ ಪುರುಷೋ ರಾಜನ್ ನಿಕರ್ತಾರಮರಿಂದಮ |
ಅಹ್ನಾಯ ನರಕಂ ಗಚ್ಛೇತ್ ಸ್ವರ್ಗೇಣ ವಸುಸಮ್ಮಿತಃ ॥10॥
ಎಲೈ ರಾಜನೇ, ಎಲೈ ಅರಿಂದಮನೇ,  ಯಾವ ಪುರುಷನು ತನಗೆ ಮೋಸಮಾಡಿದವನನ್ನು ಕೊಲ್ಲುತ್ತಾನೆಯೋ ಅವನು ತಾನು ಸಂಪಾದಿಸಿದ ಸ್ವರ್ಗದಲ್ಲಿ ವಸುಗಳಿಗೆ ಸಮಾನವಾದ ಭೋಗವನ್ನು ಅನುಭವಿಸುತ್ತಾನೆ. ಇಲ್ಲದಿದ್ದರೆ ಶೀಘ್ರವಾಗಿ ನರಕಕ್ಕೆ ಹೋಗುತ್ತಾನೆ.
ಅಮರ್ಷಜೋ ಹಿ ಸಂತಾಪಃ ಪಾವಕಾದ್ ದೀಪ್ತಿಮತ್ತರಃ |
ಯೇನಾಹಮಭಿಸಂತಪ್ತೋ ನ ನಕ್ತಂ ನ ದಿವಾ ಶಯೇ ॥11॥
ಸಿಟ್ಟಿನಿಂದ ಉಂಟಾಗುವ ತಾಪವು ಅಗ್ನಿಯಿಂದ ಉಂಟಾಗುವ ತಾಪಕ್ಕಿಂತಲೂ ತೀಕ್ಷ್ಣತರವಾದುದು. ನಾನು ಅದರಿಂದ ಸಂತಪ್ತನಾಗಿ ಹಗಲಾಗಲೀ ರಾತ್ರಿಯಾಗಲೀ ನಿದ್ರೆಮಾಡುತ್ತಿಲ್ಲ.
ಅಯಂ ಚ ಪಾರ್ಥೋ ಬೀಭತ್ಸುರ್ವರಿಷ್ಠೋ ಜ್ಯಾವಿಕರ್ಷಣೇ |
ಆಸ್ತೇ ಪರಮಸಂತಪ್ತೋ ನೂನ್ನಃ ಸಿಂಹ ಇವಾಶಯೇ ॥12॥

ಈ ಪಾರ್ಥನಾದ ಅರ್ಜುನನು ಧನುರ್ವಿದ್ಯೆಯಲ್ಲಿ ಶ್ರೇಷ್ಠನಾದವನು.ಬಾಣಗಳ ಏಟಿನಿಂದ ಸಿಂಹವು ತನ್ನ ಗುಹೆಯಲ್ಲಿರುವಂತೆ ಅವನು ಪರಮಸಂತಪ್ತನಾಗಿದ್ದಾನೆ.
ಯೋಽಯಮೇಕೋ ನುದೇತ್ ಸರ್ವಾಂಲ್ಲೋಕೇ ರಾಜನ್ ಧನುರ್ಭೃತಃ |
ಸೋಽಯಮಾತ್ಮಜಮೂಷ್ಮಾಣಂ ಮಹಾಹಸ್ತೀವ ಯಚ್ಛತಿ ॥13॥
ರಾಜನೇ, ಯಾವನು ಲೋಕದಲ್ಲಿ ಎಲ್ಲಾ ಧನುರ್ಧರರನ್ನೂ ಒಬ್ಬನೇ ನಿವಾರಿಸಬಲ್ಲನೋ ಅವನು ಕೋಪದಿಂದ ಉಂಟಾದ ನಿಟ್ಟುಸಿರನ್ನು ಮಹಾಗಜದಂತೆ ತಡೆದುಕೊಳ್ಳುತ್ತಿದ್ದಾನೆ.
ನಕುಲಃ ಸಹದೇವಶ್ಚ ವೃದ್ಧಾ ಮಾತಾ ಚ ವೀರಸೂಃ |
ತವೈವ ಪ್ರಿಯಮಿಚ್ಛಂತ ಆಸತೇ ಜಡಮೂಕವತ್ ॥14॥
ನಕುಲಸಹದೇವರೂ ಮತ್ತು ವೀರಪುತ್ರರನ್ನು ಪಡೆದ ವೃದ್ಧಳಾದ ತಾಯಿಯಾದ ಕುಂತಿಯೂ ನಿನ್ನ ಪ್ರಿಯವನ್ನೇ ಬಯಸುತ್ತಾ ಜಡಮೂಕರಂತೆ ಇದ್ದಾರೆ.
ಸರ್ವೇ ತೇ ಪ್ರಿಯಮಿಚ್ಛಂತಿ ಬಾಂಧವಾಃ ಸಹ ಸೃಂಜಯೈಃ |
ಇಮಮೇಕಾ ಚ ಸಂತಪ್ತಾ ಮಾತಾ ಚ ಪ್ರತಿವಿಂಧ್ಯತಃ ॥15॥
ನಿನ್ನ ಎಲ್ಲ ಬಾಂಧವರೂ ಮತ್ತು ಸೃಂಜಯರೂ ನಿನ್ನ ಪ್ರಿಯವನ್ನು ಬಯಸುತ್ತಾರೆ. ಪ್ರತಿವಿಂಧ್ಯನ ತಾಯಿಯಾದ ಈ ದ್ರೌಪದಿಯು ಸಂತಪ್ತಳಾಗಿದ್ದಾಳೆ.
ಪ್ರಿಯಮೇವ ತು ಸರ್ವೇಷಾಂ ಯದ್ ಬ್ರವೀಮ್ಯುತ ಕಿಂಚನ |
ಸರ್ವೇ ಹಿ ವ್ಯಸನಂ ಪ್ರಾಪ್ತಾಃ ಸರ್ವೇ ಯುದ್ಧಾಭಿನಂದಿನಃ ॥16॥
ನಾನು ಏನು ಹೇಳುತ್ತಿದ್ದೇನೆಯೋ ಅದು ಎಲ್ಲರಿಗೂ ಪ್ರಿಯವಾದುದು. ಎಲ್ಲರೂ ವ್ಯಸನದಲ್ಲಿ ಸಿಲುಕಿದ್ದಾರಷ್ಟೇ? ಎಲ್ಲರೂ ಯುದ್ಧವನ್ನು ಬಯಸುತ್ತಾರೆ.
ನಾತಃ ಪಾಪೀಯಸೀ ಕಾಚಿದ್ ಆಪತ್ ಪಾರ್ಥ ಭವಿಷ್ಯತಿ |
ಯನ್ನೋ ನೀಚೈರಲ್ಪಬಲೈ ರಾಜ್ಯಮಾಚ್ಛಿದ್ಯ ಭುಜ್ಯತೇ ॥17॥
ಎಲೈ ಪಾರ್ಥನೇ, ದುರ್ಬಲರಾದ ನೀಚರು ನಮ್ಮ ರಾಜ್ಯವನ್ನು ಕಸಿದುಕೊಂಡು ಭೋಗಿಸುತ್ತಿದ್ದಾರೆ. ಇದಕ್ಕಿಂತ ಘೋರವಾದ ವಿಪತ್ತು ಇನ್ನೊಂದಿಲ್ಲ.
ಶೀಲದೋಷಾದ್ ಘೃಣಾವಿಷ್ಟ ಆನೃಶಂಸ್ಯಾತ್ ಪರಂತಪ |
ಕ್ಲೇಶಾಂಸ್ತಿತಿಕ್ಷಸೇ ರಾಜನ್ ಯಾಂ ನ ಕಶ್ಚಿತ್ ಪ್ರಶಂಸತಿ ॥18॥
ಮಾರ್ದವರೂಪಸ್ವಭಾವದಿಂದ ಅಕ್ರೌರ್ಯವುಳ್ಳವನಾಗಿ ಕೃಪಾವಿಷ್ಟನಾಗಿ ಕ್ಲೇಶಗಳನ್ನು ಸಹಿಸುತ್ತಿದ್ದೀಯೆ. ಪರಂತಪನಾದ ರಾಜನೇ, ಇದನ್ನು ಯಾರೂ ಪ್ರಶಂಸಿಸುವುದಿಲ್ಲ.
ಘೃಣೀ ಬ್ರಾಹ್ಮಣರೂಪೋಽಸಿ ಕಥಂ ಕ್ಷತ್ರೇ ವ್ಯಜಾಯಥಾಃ |
ಅಸ್ಯಾಂ ಹಿ ಯೋನೌ ಜಾಯಂತೇ ಪ್ರಾಯಶಃ ಕ್ರೂರಬುದ್ಧಯಃ |
ಅಶ್ರೌಷೀಸ್ತ್ವಂ ರಾಜಧರ್ಮಾನ್ ಯಥೈವ ಮನುರಬ್ರವೀತ್ ॥19॥
ನೀನು ದಯಾಪೂರ್ಣನಾದ ಬ್ರಾಹ್ಮಣನಂತಿದ್ದೀಯೆ. ಕ್ಷತ್ರಿಯ ಕುಲದಲ್ಲಿ ಹೇಗೆ ಜನಿಸಿದ್ದೀಯೆ? ಈ ಯೋನಿಯಲ್ಲಿ ಪ್ರಾಯಶಃ ಕ್ರೂರಬುದ್ಧಿಯುಳ್ಳವರೇ ಜನಿಸುತ್ತಾರೆ. ನೀನು ರಾಜಧರ್ಮಗಳು ಶಾಂತವಲ್ಲವೆಂದು ಮನುವು ಹೇಳಿರುವುದನ್ನು ಕೇಳಿದ್ದೀಯೆ.
ಕ್ರೂರಾನ್ ನಿಕೃತಿಸಂಯುಕ್ತಾನಭಿತೋ ನಾಶಮಾತ್ಮಕಾನ್ |
ಧಾರ್ತರಾಷ್ಟ್ರಾನ್ ಮಹಾರಾಜ ಕ್ಷಮಸೇ ಕಿಂ ದುರಾತ್ಮನಃ ॥20॥
ಎಲೈ ಮಹಾರಾಜನೇ, ಕ್ರೂರರೂ ಸರ್ವಥಾ ಮೋಸಗಾರರೂ ದುಷ್ಟರೂ ಆದ ಧೃತರಾಷ್ಟ್ರಪುತ್ರರನ್ನು ಏಕೆ ಕ್ಷಮಿಸುತ್ತಿದ್ದೀಯೆ?
ಕರ್ತವ್ಯೇ ಪುರುಷವ್ಯಾಘ್ರ ಕಿಮಾಸ್ಸೇ ಪೀಠಸರ್ಪವತ್ |
ಬುದ್ಧ್ಯಾ ವೀರ್ಯೇಣ ಸಂಯುಕ್ತಃ ಶ್ರುತ್ವೇದಂ ನಾಭಿನಂದಸೇ ॥21॥
ಪುರುಷವ್ಯಾಘ್ರನೇ ಕಾರ್ಯೋನ್ಮುಖವಾಗಬೇಕಾದಾಗ ಏಕೆ ಕಲ್ಲಿನ ಸರ್ಪದಂತೆ ಸುಮ್ಮನಿದ್ದೀಯೆ? ಬುದ್ಧಿಯಿಂದಲೂ ಪರಾಕ್ರಮದಿಂದಲೂ ಕೂಡಿದವನಾದರೂ ಈ ನನ್ನ ಮಾತುಗಳನ್ನು ಕೇಳಿ ನೀನು ಅಭಿನಂದಿಸುತ್ತಿಲ್ಲ.
ತೃಣಾನಾಂ ಮುಷ್ಟಿನೈಕೇನ ಹಿಮವಂತಂ ತು ಪರ್ವತಮ್ |
ಛನ್ನಮಿಚ್ಛಸಿ ಕೌಂತೇಯ ಯೋಽಸ್ಮಾನ್ ಸಂಯಂತುಮಿಚ್ಛಸಿ ॥22॥
ಎಲೈ ಕೌಂತೇಯನೇ, ನಮ್ಮನ್ನು ನಿಯಂತ್ರಿಸಲು ಬಯಸುವ ನೀನು ಒಂದು ಹಿಡಿ ಹುಲ್ಲಿನಿಂದ ಹಿಮಾಲಯಪರ್ವತವನ್ನು ಮುಚ್ಚಲು ಬಯಸುತ್ತಿದ್ದೀಯೆ.
ಅಜ್ಞಾತಚರ್ಯಾ ಗೂಢೇನ ಪೃಥಿವ್ಯಾಂ ವಿಶ್ರುತೇನ ಚ |
ದಿವೀವ ಪಾರ್ಥ ಸೂರ್ಯೇಣ ನ ಶಕ್ಯಾ ಚರಿತುಂ ತ್ವಯಾ ॥23॥
ಎಲೈ ಪಾರ್ಥನೇ, ಆಕಾಶದಲ್ಲಿರುವ ಸೂರ್ಯನಂತೆ ಭೂಮಿಯಲ್ಲಿ ಪ್ರಖ್ಯಾತನಾದ ನೀನು ಗೂಢವಾದ ಅಜ್ಞಾತವಾಸವನ್ನು ಆಚರಿಸಲು ಸಾಧ್ಯವಿಲ್ಲ.
ಬೃಹತ್ಸಾಲ ಇವಾವಾಪೇ ಶಾಖಾಪುಷ್ಪಪಲಾಶವಾನ್ |
ಹಸ್ತೀ ಶ್ವೇತ ಇವಾಜ್ಞಾತಃ ಕಥಂ ಜಿಷ್ಣುಶ್ಚರಿಷ್ಯತಿ ॥24॥
ತನ್ನ ಸ್ಥಾನದಲ್ಲಿ ನಿಂತಿರುವ ಅನೇಕ ಶಾಖಾಪುಷ್ಪಗಳುಳ್ಳ ದೊಡ್ಡ ಸಾಲವೃಕ್ಷದಂತೆ ಮತ್ತು ಬಿಳಿಯಾನೆಯಂತೆ ಇರುವ ಅರ್ಜುನನು ಹೇಗೆ ಅಜ್ಞಾತವಾಸವನ್ನು ಮಾಡುವನು?

ಇವೌ ಹಿ ಸಿಂಹಸಂಕಾಶೌ ಭ್ರಾತರೌ ಸಹಿತೌ ಶಿಶೂ |
ನಕುಲಃ ಸಹದೇವಶ್ಚ ಕಥಂ ಪಾರ್ಥ ಚರಿಷ್ಯತಃ ॥25॥
ಎಲೈ ಪಾರ್ಥನೇ, ಸಿಂಹಸದೃಶರಾದ ಸಹೋದರರಾದ ಚಿಕ್ಕವಯಸ್ಸಿನವರಾದ ಯಾವಾಗಲೂ ಜೊತೆಯಲ್ಲೇ ಇರುವ ಈ ನಕುಲಸಹದೇವರು ಹೇಗೆ ಅಜ್ಞಾತವಾಸವನ್ನು ಮಾಡುತ್ತಾರೆ?
ಪುಣ್ಯಕೀರ್ತಿ ರಾಜಪುತ್ರೀ ದ್ರೌಪದೀ ವೀರಸೂರಿಯಮ್ |
ವಿಶ್ರುತಾ ಕಥಮಜ್ಞಾತಾ ಕೃಷ್ಣಾ ಪಾರ್ಥ ಚರಿಷ್ಯತಿ ॥26॥
ಎಲೈ ಪಾರ್ಥನೇ, ವೀರಪುತ್ರರನ್ನು ಪಡೆದು ಪವಿತ್ರಕೀರ್ತಿಯುಳ್ಳ ರಾಜಪುತ್ರಿಯಾದ ಪ್ರಖ್ಯಾತಳಾದ ಈ ದ್ರೌಪದಿಯಾದರೂ ಹೇಗೆ ಅಜ್ಞಾತವಾಸವನ್ನು ಮಾಡುವಳು?
ಮಾಂ ಚಾಪಿ ರಾಜನ್ ಜಾನಂತಿ ಹ್ಯಾಕುಮಾರಮಿಮಾಃ ಪ್ರಜಾಃ |
ಅಜ್ಞಾತಚರ್ಯಾಂ ಪಶ್ಯಾಮಿ ಮೇರೋರಿವ ನಿಗೂಹನಮ್ ॥27॥
ಎಲೈ ರಾಜನೇ ಈ ಎಲ್ಲ ಪ್ರಜೆಗಳು ಬಾಲ್ಯದಿಂದಲೂ ನನ್ನನ್ನು ತಿಳಿದಿದ್ದಾರೆ. ಆದ್ದರಿಂದ ಅಜ್ಞಾತಚರ್ಯೆಯು ಮೇರುಪರ್ವತವನ್ನು ಮುಚ್ಚಿದಂತೆ ಎಂದು ನಾನು ತಿಳಿಯುತ್ತೇನೆ.
ತಥೈವ ಬಹವೋಽಸ್ಮಾಭೀ ರಾಷ್ಟ್ರೇಭ್ಯೋ ವಿಪ್ರವಾಸಿತಾಃ |
ರಾಜಾನೋ ರಾಜಪುತ್ರಾಶ್ಚ ಧಾರ್ತರಾಷ್ಟ್ರಮನುವ್ರತಾಃ ॥28॥
ಅದರಂತೆ ನಾವು ದಿಗ್ವಿಜಯವನ್ನು ಮಾಡಿದಾಗ ಆನೇಕರಾಷ್ಟ್ರಗಳಿಂದ ಅನೇಕರಾಜರೂ ಮತ್ತು ರಾಜಪುತ್ರರೂ ನಿಷ್ಕಾಸಿತರಾಗಿದ್ದರೆ. ಅವರೆಲ್ಲರೂ ದುರ್ಯೋಧನನನ್ನು ಅನುಸರಿಸುತ್ತಿದ್ದಾರೆ.
ನ ಹಿ ತೇಽಪ್ಯುಪಶಾಮ್ಯಂತಿ ನಿಕೃತಿಂ ತಾಂ ನಿರಾಕೃತಾಃ |
ಅವಶ್ಯಂ ತೈರ್ನಿಕರ್ತವ್ಯಮಸ್ಮಾಕಂ ತತ್ಪ್ರಿಯೈಷಿಭಿಃ ॥29॥
ಅವರ ನಮ್ಮಿಂದ ಸೋಲಿಸಲ್ಪಟ್ಟು ಅವಮಾನವನ್ನು ಹೊಂದಿದ ಅವರು ಶಾಂತಿಯನ್ನು ಹೊಂದುತ್ತಿಲ್ಲ. ದುರ್ಯೋಧನನಿಗೆ ಪ್ರಿಯವನ್ನು ಮಾಡಲು ಇಚ್ಛಿಸುವ ಅವರು ಅವಶ್ಯವಾಗಿ ನಮಗೆ ಪ್ರತೀಕಾರವನ್ನು ಮಾಡುತ್ತಾರೆ.
ತೇಽಪ್ಯಸ್ಮಾಸು ಪ್ರಯುಂಜೀರನ್ ಪ್ರಚ್ಛನ್ನಾನ್ ಸುಬಹೂನ್ ಜನಾನ್ |
ಆಚಕ್ಷೀರಂಶ್ಚ ನೋ ಜ್ಞಾತ್ವಾ ತತಃ ಸ್ಯಾತ್ ಸುಮಹದ್ಭಯಮ್ ॥30॥
ಅವರೂ ಸಹ ನಮ್ಮಮೇಲೆ ಪ್ರಚ್ಛನ್ನರಾದ ಅನೇಕ ಚಾರರನ್ನು ನೇಮಿಸುತ್ತಾರೆ. ಆ ಚಾರರು ನಮ್ಮನ್ನು ಗುರುತುಹಿಡಿದು ಅವರಿಗೆ ಹೇಳುತ್ತಾರೆ. ಆಗ ನಮಗೆ ದೊಡ್ಡ ಭಯವು ಉಂಟಾಗುತ್ತದೆ.
ಅಸ್ಮಾಭಿರುಷಿತಾಃ ಸಮ್ಯಗ್ ವನೇ ಮಾಸಾಸ್ತ್ರಯೋದಶ |
ಪರಿಮಾಣೇನ ತಾನ್ ಪಶ್ಯ ತಾವತಃ ಪರಿವತ್ಸರಾನ್ ॥31॥
ನಾವು ಕಾಡಿನಲ್ಲಿ ಸರಿಯಾಗಿ ಹದಿಮೂರು ತಿಂಗಳುಗಳನ್ನು ಕಳೆದಿದ್ದೇವೆ. ಮಾಸಗಳನ್ನು ಸಂವತ್ಸರಗಳನ್ನಾಗಿ ಪರಿವರ್ತಿಸಿ ಹದಿಮೂರು ಮಾಸಗಳನ್ನೇ ಹದಿಮೂರು ವರ್ಷಗಳೆಂದು ಭಾವಿಸು.
ಅಸ್ತು ಮಾಸಃ ಪ್ರತಿನಿಧಿರ್ಯಥಾ ಪ್ರಾಹುರ್ಮನೀಷಿಣಃ |
ಪೂತೀಕಾಮಿವ ಸೋಮಸ್ಯ ತಥೈವ ಕ್ರಿಯತಾಮಿತಿ ॥32॥
ಮಾಸಗಳು ಸಂವತ್ಸರಗಳಿಗೆ ಪ್ರತಿನಿಧಿಗಳೆಂದು ಜ್ಞಾನಿಗಳು ಹೇಳುತ್ತಾರೆ. ಪೂತೀಕಾ ಲತೆಯು (ಅಮೃತಬಳ್ಳಿಯು) ಸೋಮಲತೆಗೆ ಪ್ರತಿನಿಧಿಯಾದಂತೆ ಜ್ಞಾನಿಗಳು ಹೇಳುವಂತೆ ಹಾಗೆಯೇ ಆಗಲಿ. ನೀನು ಹಾಗೆಯೇ ಮಾಡು.
ಅಥವಾಽನಡುಹೋ ರಾಜನ್ ಸಾಧವೇ ಸಾಧುವಾಹಿನಃ |
ಸೌಹಿತ್ಯದಾನಾದೇತಸ್ಮಾದೇನಸಃ ಪ್ರತಿಮುಚ್ಯಸೇ ॥33॥
ರಾಜನೇ, ಅಥವಾ ಸಾಧುಜನರಿಗೆ ಸಾಧುವಾದ ಎತ್ತುಗಳನ್ನು ಪರಿಕರಸಹಿತವಾಗಿ ದಾನಮಾಡುವುದರಿಂದಲೂ ಈ ಪ್ರತಿಜ್ಞಾಭಂಗದಿಂದ ಉಂಟಾದ ಪಾಪದಿಂದ ನಿರ್ಮುಕ್ತನಾಗುತ್ತೀಯೆ.
ತಸ್ಮಾದ್ ರಿಪುವಧೇ ರಾಜನ್ ಕ್ರಿಯತಾಂ ನಿಶ್ಚಯಸ್ತ್ವಯಾ |
ಕ್ಷತ್ರಿಯಸ್ಯ ತು ಸರ್ವಸ್ಯ ನಾನ್ಯೋ ಧರ್ಮೋಽಸ್ತಿ ಸಂಯುಗಾತ್ ॥34॥
ರಾಜನೇ, ಆದ್ದರಿಂದ ಶತ್ರುವಧೆಯನ್ನು ಮಾಡಲು ಈ ದಿನ ನೀನು ನಿರ್ಧರಿಸು. ಯಾವ ಕ್ಷತ್ರಿಯನಿಗೂ ಯುದ್ಧಕ್ಕಿಂತ ದೊಡ್ಡದಾದ ಧರ್ಮವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯ - 22ನೇ ಅಧ್ಯಾಯ
ಏವಂ ಚಿಂತಾಸಮಾವಿಷ್ಟಮಂ ವಿಜ್ಞಾಯೈವ ಯುಧಿಷ್ಠಿರಂ |
ಸರ್ವಜ್ಞಃ ಸರ್ವಶಕ್ತಿಶ್ಚ ಕೃಷ್ಣದ್ವೈಪಾಯನೋಽಗಮತ್ |
ನೃಪತಿಂ ಬೋಧಯಾಮಾಸ ಚಿಂತಾವ್ಯಾಕುಲಮಾನಸಂ ॥126॥
ಹೀಗೆ ಚಿಂತಾಮಗ್ನನಾಗಿದ್ದಾನೆ ಧರ್ಮರಾಜ ಎಂದು ತಿಳಿದೇ ಸರ್ವಜ್ಞರಾದ ಸರ್ವಶಕ್ತರಾದ ವೇದವ್ಯಾಸರು ಅವನ ಬಳಿಗೆ ಹೋದರು. ಚಿಂತೆಯಿಂದ ವ್ಯಾಕುಲಚಿತ್ತನಾದ ರಾಜನಿಗೆ ಬೋಧಿಸಿದರು.

ಇಮಂ ಮಂತ್ರಂ ವದಿಷ್ಯಾಮಿ ಯೇನ ಜೇಷ್ಯತಿ ಫಲ್ಗುನಃ |
ಭೀಷ್ಮದ್ರೋಣದಿಕಾನ್ ಸರ್ವಾಂಸ್ತಂ ತ್ವಂ ವದ ಧನಂಜಯೇ ||127||
ನಿನಗೆ ಒಂದು ಮಂತ್ರವನ್ನು ಉಪದೇಶಿಸುತ್ತೇನೆ. ಅದನ್ನು ನೀನು ಅರ್ಜುನನಿಗೆ ಉಪದೇಶಿಸು. ಅದರಿಂದ ಅರ್ಜುನ ಭೀಷ್ಮದ್ರೋಣಾದಿಗಳೆಲ್ಲರನ್ನೂ ಪರಾಭವಗೊಳಿಸುತ್ತಾನೆ.
ಇತ್ಯುಕ್ತ್ವೈರಿವಾವದನ್ಮಂತ್ರಂ ಸರ್ವದೈವತದೃಷ್ಟಿದಂ |
ನ ಸ್ವಯಂ ಹ್ಯವದತ್ ಪಾರ್ಥೇ ಫಲಾಧಿಕ್ಯಂ ಯತೋ ಭವೇತ್ ||
ಹೀಗೆ ಹೇಳಿ ವೇದವ್ಯಾಸರು ಎಲ್ಲ ದೇವತೆಗಳ ಪ್ರತ್ಯಕ್ಷವನ್ನು ನೀಡಬಲ್ಲ ಮಂತ್ರವನ್ನು ಧರ್ಮರಾಜನಿಗೆ ಉಪದೇಶಿಸಿದರು. ತಾನೇ ಅರ್ಜುನನಿಗೆ ಉಪದೇಶಿಸಲಿಲ್ಲ. ತಾನೇ ಉಪದೇಶಿಸಿದ್ದರೆ ಅದರ ಫಲ ಜಾಸ್ತಿಯಾಗುತ್ತಿತ್ತು.
ಭೀಷ್ಮದ್ರೋಣಾದಿವಿಜಯ ಏತಾವದ್ವೀರ್ಯಮೇವ ಹಿ |
ಅಲಂ ನಾತೋಽಧಿಕಂ ಕಾರ್ಯಮೇತಾವದ್ಯೋಗ್ಯಮಸ್ಯ ಚ |
ಫಲ್ಗುನಸ್ಯೇತಿ ಭಗವಾನ್ ನ ಸ್ವಯಂ ಹ್ಯವದನ್ಮನುಂ ||129||
ಭೀಷ್ಮದ್ರೋಣಾದಿಗಳನ್ನು ಗೆಲ್ಲುವುದಕ್ಕೆ ಇಷ್ಟು ಶಕ್ತಿ ಇದ್ದರೆ ಸಾಕು. ಇದಕ್ಕಿಂತ ಹೆಚ್ಚು ಏನು ಮಾಡಬೇಕಾಗುವುದಿಲ್ಲ. ಇಷ್ಟು ಮಾಡುವುದು ಮಾತ್ರ ಅರ್ಜುನನಿಗೆ ಯೋಗ್ಯ ಎಂದು ಭಗವಾನ್ ವ್ಯಾಸರು ತಾನು ಸ್ವತಃ ಅವನಿಗೆ ಮಂತ್ರವನ್ನು ಉಪದೇಶಿಸಲಿಲ್ಲ.
* * * *
ಮೂವತ್ತೂರನೆಯ ಅಧ್ಯಾಯ
(ವೇದವ್ಯಾಸರ ಆಗಮನ. ಯುಧಿಷ್ಠಿರನಿಗೆ ಮಂತ್ರೋಪದೇಶ. ಪಾಂಡವರಿಂದ ದ್ವೈತವನದಿಂದ ಕಾಮ್ಯಕವನಕ್ಕೆ ಗಮನ.)
ವೈಶಂಪಾಯನಃ
ಭೀಮಸೇನವಚಃ ಶ್ರುತ್ವಾ ಕುಂತೀಪುತ್ರೋ ಯುಧಿಷ್ಠಿರಃ |
ನಿಃಶ್ವಸ್ಯ ಪುರುಷವ್ಯಾಘ್ರಃ ಸಂಪ್ರದಧ್ಯೌ ಪರಂತಪಃ ||1||
ಭೀಮಸೇನನ ಮಾತುಗಳನ್ನು ಕೇಳಿ ಕುಂತೀಪುತ್ರನಾದ ಪುರುಷವ್ಯಾಘ್ರನಾದ ಶತ್ರುತಾಪನನಾದ ಯುಧಿಷ್ಠಿರನು ನಿಟ್ಟುಸಿರನ್ನು ಬಿಟ್ಟು ಚಿಂತಿಸಿದನು.
ಶ್ರುತಾ ಮೇ ರಾಜಧರ್ಮಾಶ್ಚ ವರ್ಣಾನಾಂ ಚ ಪೃಥಕ್ಪೃಥಕ್ |
ಆಯತ್ಯಾಂ ಚ ತದಾತ್ವೇ ಚ ಯಃ ಪಶ್ಯತಿ ಸ ಪಶ್ಯತಿ ||2||
ನಾನು ರಾಜಧರ್ಮಗಳನ್ನೂ ಉಳಿದ ವರ್ಣಗಳ ಧರ್ಮಗಳನ್ನೂ ಪ್ರತ್ಯೇಕವಾಗಿ ಕೇಳಿದ್ದೇನೆ. ಸಂಪತ್ತಿನ ನಾಶದಲ್ಲಿಯೂ ಮತ್ತು ಸಂಪತ್ತು ಇರುವಾಗಲೂ ಯಾರು ರಾಜಧರ್ಮವನ್ನು ಸರಿಯಾಗಿ ತಿಳಿಯುತ್ತಾನೆಯೋ ಅವನೇ ನಿಜವಾಗಿ ತಿಳಿದವನು.
ಧರ್ಮಸ್ಯ ಜಾನಮಾನೋಽಹಂ ಗತಿಮಗ್ರ್ಯಾಂ ಸುದುರ್ವಿದಾಮ್ |
ಕಥಂ ಬಲಾತ್ಕರಿಷ್ಯಾಮಿ ಮೇರೋರಿವ ವಿವರ್ತನಮ್ ||3||
ಧರ್ಮದ ಗತಿಯು ಶ್ರೇಷ್ಠವಾದುದು ಮತ್ತು ದುರ್ಗಮವಾದುದು ಎಂದು ತಿಳಿದ ನಾನು ಮೇರು ಪರ್ವತವನ್ನು ಕೈಯಿಂದ ಉರುಳಿಸಿದಂತೆ ಹೇಗೆ ಬಲಾತ್ಕಾರವನ್ನು ಮಾಡಲಿ?
ಸ ಮುಹೂರ್ತಮಿವ ಧ್ಯಾತ್ವಾ ವಿನಿಶ್ಚಿತ್ಯೇತಿಕೃತ್ಯತಾಮ್ |
ಭೀಮಸೇನಮಿದಂ ವಾಕ್ಯಮಪದಾಂತರಮಬ್ರವೀತ್ ||4||
ಅವನು ಒಂದು ಮುಹೂರ್ತಕಾಲ ಯೋಚಿಸಿ ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿ ಭೀಮಸೇನನನ್ನು ಕುರಿತು ಭೀಮಸೇನನು ಉತ್ತರವನ್ನು ಕೊಡಲು ಸಾಧ್ಯವಿಲ್ಲದಂತೆ ಮಾತನಾಡಿದನು.
ಏವಮೇತನ್ಮಹಾಬಾಹೋ ಯಥಾ ವದಸಿ ಭಾರತ |
ಇದಮನ್ಯತ್ ಸಮಾದತ್ಸ್ವ ವಾಕ್ಯಂ ಮೇ ವಾಕ್ಯಕೋವಿದ ||5||
ಮಹಾಬಾಹುವೇ! ಭಾರತನೇ! ವಾಕ್ಯವಿಶಾರದನೇ! ಎಲ್ಲವೂ ನೀನು ಹೇಳಿದಂತೆಯೇ ಸರಿ. ನಾನು ಹೇಳುವ ಈ ಇನ್ನೊಂದು ವಾಕ್ಯವನ್ನು ಸ್ವೀಕರಿಸು.
ದುರ್ಗಮಾಃ ಕಾರ್ಯಗತಯೋ ದುರ್ವಿಜ್ಞೇಯಾಸ್ತ್ವರಾನ್ವಿತೈಃ |
ನಾರಬ್ಧವ್ಯಾನಿ ಕಾರ್ಯಾಣಿ ನಿವರ್ತೇಥಾ ಹಿ ಭಾರತ ||6||
ಭಾರತನೇ! ಕಾರ್ಯಗತಿಗಳು ದುರ್ಗಮವಾದವು. ತ್ವರೆಯಿಂದ ಕೂಡಿದವರು ಅದನ್ನು ತಿಳಿಯಲಾರರು. ತ್ವರೆಯಿಂದ ಕೂಡಿದವರು ಕಾರ್ಯವನ್ನು ಆರಂಭಿಸಲೂ ಬಾರದು. ಅದರಿಂದ ನಿವೃತ್ತರಾಗಬೇಕು.
ಮಹಾಪಾಪಾನಿ ಕಾರ್ಯಾಣಿ ಯಾನಿ ಕೇವಲಸಾಹಸಾತ್ |
ಆರಭ್ಯಂತೇ ಭೀಮಸೇನ ವ್ಯಥಂತೇ ತಾನಿ ಭಾರತ ||7||
ಕೇವಲ ಸಾಹಸದಿಂದ ಮಹಾಪಾಪಕಾರ್ಯವನ್ನು ಆರಂಭಿಸಿದರೆ ಎಲೈ ಭೀಮಸೇನನೇ ಅವು ವ್ಯಥೆಯನ್ನು ಉಂಟುಮಾಡುತ್ತವೆ.
ಸುಮಂತ್ರಿತೇ ಸುವಿಕ್ರಾಂತೇ ಸುಕೃತೇ ಸುವಿಚಾರಿತೇ |
ಸಿದ್ಧ್ಯಂತ್ಯರ್ಥಾ ಮಹಾಬಾಹೋ ದೈವಂ ಚಾತ್ರ ಪ್ರದಕ್ಷಿಣಮ್ ||8||
ಮಹಾಬಾಹುವೇ! ಒಳ್ಳೆಯ ಮಂತ್ರಾಲೋಚನೆಯನ್ನು ನಡೆಸಿ ಚೆನ್ನಾಗಿ ವಿಚಾರಮಾಡಿ ಪರಾಕ್ರಮದಿಂದ ಚೆನ್ನಾಗಿ ಮಾಡಿದ ಕಾರ್ಯಗಳು ಫಲವನ್ನು ಕೊಡುತ್ತವೆ. ದೈವವೂ ಅಲ್ಲಿ ಅನುಕೂಲವಾಗಿರುತ್ತದೆ.
ತ್ವಂ ತು ಕೇವಲಚಾಪಲ್ಯಾದ್ ಬಲದರ್ಪೋಚ್ಛ್ರಿತಃ ಸ್ವಯಮ್ |
ಆರಬ್ಧವ್ಯಮಿದಂ ಕಾರ್ಯಂ ಮನ್ಯಸೇ ಶೃಣು ತತ್ರ ಮೇ ||9||

ನೀನಾದರೂ ಸ್ವತಃ ಬಲದರ್ಪಗಳಿಂದ ಕೂಡಿದವನಾಗಿ ಕೇವಲ ಚಾಪಲ್ಯದಿಂದ ಈ ಕಾರ್ಯವನ್ನು ಮಾಡಬೇಕೆಂದು ಬಯಸುತ್ತಿದ್ದೀಯೆ. ಈ ವಿಷಯದಲ್ಲಿ ನನ್ನ ಮಾತನ್ನು ಕೇಳು.

ಭೂರಿಶ್ರವಾಃ ಶಲಶ್ಚೈವ ಜಲಸಂಧಶ್ಚ ವೀರ್ಯವಾನ್ |
ಭೀಷ್ಮೋ ದ್ರೋಣಶ್ಚ ಕರ್ಣಶ್ಚ ದ್ರೋಣಪುತ್ರಶ್ಚ ವೀರ್ಯವಾನ್ ॥10॥
ಧಾರ್ತರಾಷ್ಟ್ರಾ ದುರಾಧರ್ಷಾ ದುರ್ಯೋಧನಪುರೋಗಮಾಃ |
ಸರ್ವ ಏವ ಕೃತಾಸ್ತ್ರಾಶ್ಚ ಸತತಂ ಚಾತತಾಯಿನಃ ॥11॥

ಭೂರಿಶ್ರವ ಶಲ ಪರಾಕ್ರಮಶಾಲಿಯಾದ ಜಲಸಂಧ ಭೀಷ್ಮ ದ್ರೋಣ ಕರ್ಣ ಪರಾಕ್ರಮಿಯಾದ ಅಶ್ವತ್ಥಾಮ ಧೃತರಾಷ್ಟ್ರ ಪುತ್ರರಾದ ದುರ್ಯೋಧನ ಮೊದಲಾದವರು ಎಲ್ಲರೂ ಸೋಲಿಸಲು ಅಸಾಧ್ಯರಾದವರು. ಎಲ್ಲರೂ ಅಸ್ತ್ರವಿದ್ಯೆಯನ್ನು ಬಲ್ಲವರು ಮತ್ತು ಶಸ್ತ್ರವಿದ್ಯೆಯನ್ನು ಬಲ್ಲವರು.

ರಾಜಾನಃ ಪಾರ್ಥಿವಾಶ್ಚೈವ ಯೇಽಸ್ಮಾಭಿರುಪತಾಪಿತಾಃ |
ಸಂಶ್ರಿತಾಃ ಕೌರವಂ ಪಕ್ಷಂ ಜಾತಸ್ನೇಹಾಶ್ಚ ಸಾಂಪ್ರತಮ್ ॥12॥

ಯಾವ ರಾಜರು ನಮ್ಮಿಂದ ಪೀಡಿತರಾಗಿ ಕೌರವಪಕ್ಷವನ್ನು ಸೇರಿದ್ದಾರೆಯೋ ಅವರು ಸದ್ಯದಲ್ಲಿ ದುರ್ಯೋಧನನಲ್ಲಿ ಸ್ನೇಹವನ್ನು ಹೊಂದಿದ್ದಾರೆ.

ದುರ್ಯೋಧನಹಿತೇ ಯುಕ್ತಾ ನಚ ತೇಽಸ್ಮಾಸು ಭಾರತ |
ಪೂರ್ಣಕೋಶಾ ಬಲೋಪೇತಾಃ ಪ್ರಯತಿಷ್ಯಂತಿ ರಕ್ಷಣೇ ॥13॥

ಎಲೈ ಭಾರತನೇ! ಅವರು ದುರ್ಯೋಧನನ ಹಿತದಲ್ಲಿ ಆಸಕ್ತರಾಗಿದ್ದಾರೆ. ನಮ್ಮ ಹಿತದಲ್ಲಿ ಆಸಕ್ತರಾಗಿಲ್ಲ. ಅವರು ಪೂರ್ಣವಾದ ಕೋಶವುಳ್ಳವರಾಗಿ ಸೈನ್ಯದಿಂದ ಕೂಡಿದವರಾಗಿ ದುರ್ಯೋಧನನನ್ನು ರಕ್ಷಣೆಮಾಡಲು ಪ್ರಯತ್ನಿಸುವರು.

ಸರ್ವೇ ಕೌರವಸೈನ್ಯಸ್ಯ ಸಪುತ್ರಾಮಾತ್ಯಸೈನಿಕಾಃ |
ಸಂವಿಭಕ್ತಾ ಮಹೀಪಾಲಾಃ ಸರ್ವಭೋಗೈಶ್ಚ ಕೌರವೈಃ ॥14॥

ಕೌರವಸೈನ್ಯದ ಎಲ್ಲಾ ಮಹೀಪಾಲರಿಗೂ ಅವರ ಪುತ್ರರಿಗೂ ಅಮಾತ್ಯರಿಗೂ ಮತ್ತು ಸೈನಿಕರಿಗೂ ಕೌರವರು ಎಲ್ಲಾ ಭೋಗಗಳನ್ನೂ ಸರಿಯಾಗಿ ಹಂಚಿದ್ದಾರೆ.

ದುರ್ಯೋಧನೇನ ತೇ ವೀರಾ ಮಾನಿತಾಶ್ಚ ವಿಶೇಷತಃ |
ಪ್ರಾಣಾಂಸ್ತ್ಯಕ್ಷ್ಯಂತಿ ಸಂಗ್ರಾಮ ಇತಿ ಮೇ ನಿಶ್ಚಿತಾ ಮತಿಃ ॥15॥

ದುರ್ಯೋಧನನಿಂದ ವಿಶೇಷವಾಗಿ ಸನ್ಮಾನಿಸಲ್ಪಟ್ಟ ಆ ವೀರರು ಯುದ್ಧದಲ್ಲಿ ದುರ್ಯೋಧನನ ಸಲುವಾಗಿ ಪ್ರಾಣಗಳನ್ನು ಬಿಡುವರು ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ.

ಸಮಾ ಯದ್ಯಪಿ ಭೀಷ್ಮಸ್ಯ ವೃತ್ತಿರಸ್ಮಾಸು ತೇಷ್ವಪಿ |
ದ್ರೋಣಸ್ಯ ಚ ಮಹಾಬಾಹೋ ಕೃಪಸ್ಯ ಚ ಮಹಾತ್ಮನಃ ॥16॥

ಮಹಾಬಾಹುವೇ! ದ್ರೋಣರ ಭೀಷ್ಮರ ಮತ್ತು ಮಹಾತ್ಮರಾದ ಕೃಪರ ವರ್ತನೆಯು ಯದ್ಯಪಿ ನಮ್ಮ ವಿಷಯದಲ್ಲಿಯೂ ಕೌರವರ ವಿಷಯದಲ್ಲೂ ಸಮಾನವಾಗಿದೆ.

ಅವಶ್ಯಂ ರಾಜಪಿಂಡಸ್ತೈರ್ನಿರ್ವೇಶ್ಯ ಇತಿ ಮೇ ಮತಿಃ |
ತಸ್ಮಾತ್ ತ್ಯಕ್ಷ್ಯಂತಿ ಸಂಗ್ರಾಮೇ ಪ್ರಾಣಾನಪಿ ಸುದುಸ್ತ್ಯಜಾನ್ ॥17॥

ಆದರೆ ಅವರು ಅವಶ್ಯವಾಗಿ ರಾಜಾನ್ನದ ಋಣವನ್ನು ತೀರಿಸಬೇಕಾಗಿದೆಯೆಂದು ನನ್ನ ಅಭಿಪ್ರಾಯ. ಆದ್ದರಿಂದ ಅವರು ಯುದ್ಧದಲ್ಲಿ ದುಸ್ತ್ಯಜವಾದ ಪ್ರಾಣವನ್ನು ತ್ಯಜಿಸುವರು.

ಸರ್ವೇ ದಿವ್ಯಾಸ್ತ್ರವಿದುಷಃ ಸರ್ವೇ ಧರ್ಮಪರಾಯಣಾಃ |
ಅಜೇಯಾಶ್ಚೇತಿ ಮೇ ಬುದ್ಧಿರಪಿ ದೇವೈಃ ಸವಾಸವೈಃ ॥18॥

ಅವರೆಲ್ಲರೂ ದಿವ್ಯಾಸ್ತ್ರವೇತ್ತರು ಧರ್ಮಪರಾಯಣರು. ಇಂದ್ರನಿಂದ ಸಹಿತವಾದ ದೇವತೆಗಳಿಂದಲೂ ಅವರು ಅಜೇಯರೆಂದು ನನ್ನ ಬುದ್ಧಿ.

ಅಮರ್ಷೀ ನಿತ್ಯಸಂರಬ್ಧಃ ತತ್ರ ಕರ್ಣೋ ಮಹಾರಥಃ |
ಸರ್ವಾಸ್ತ್ರವಿದನಾಧೃಷ್ಯೋಽಭೇದ್ಯಕವಚಾವೃತಃ ॥19॥

ಅವರಲ್ಲಿ ಮಹಾರಥನಾದ ಕರ್ಣನು ಅಭೇದ್ಯವಾದ ಕವಚದಿಂದ ಕೂಡಿದ್ದಾನೆ. ಅವನು ಯಾರಿಗೂ ಸೋಲದವನು. ಸರ್ವಾಸ್ತ್ರವೇತ್ತಾ ಮತ್ತು ನಿತ್ಯವೂ ನಮ್ಮ ಮೇಲೆ ಬಹಳ ಕೋಪವನ್ನು ಹೊಂದಿದವನಾಗಿದ್ದಾನೆ.

ಅನಿರ್ಜಿತ್ಯ ರಣೇ ಸರ್ವಾನ್ ಏತಾನ್ ಪುರುಷಸತ್ತಮಾನ್ |
ಅಶಕ್ಯೋ ಹ್ಯಸಹಾಯೇನ ಹಂತುಂ ದುರ್ಯೋಧನಸ್ತ್ವಯಾ ॥20॥

ಯುದ್ಧದಲ್ಲಿ ಈ ಪುರುಷಶ್ರೇಷ್ಠರನ್ನೆಲ್ಲಾ ಸೋಲಿಸದೆ ನೀನು ಅಸಹಾಯಕನಾಗಿ ದುರ್ಯೋಧನನನ್ನು ಕೊಲ್ಲುವುದು ಸಾಧ್ಯವಿಲ್ಲ.

ನ ನಿದ್ರಾಮಧಿಗಚ್ಛಾಮಿ ಚಿಂತಯಾನೋ ವೃಕೋದರ |
ಅತಿ ಸರ್ವಾನ್ ಧನುರ್ಗ್ರಾಹಾನ್ ಸೂತಪುತ್ರಸ್ಯ ಲಾಘವಮ್ ॥21॥

ವೃಕೋದರನೇ! ಎಲ್ಲ ಧನುರ್ಧಾರಿಗಳಿಗಿಂತಲೂ ಅತಿಶಯಿತವಾದ ಶೀಘ್ರತೆಯನ್ನು ಸೂತಪುತ್ರನಾದ ಕರ್ಣನನ್ನು ಚಿಂತಿಸುತ್ತಾ ನನಗೆ ನಿದ್ರೆಯೇ ಬರುತ್ತಿಲ್ಲ.

ವೈಶಂಪಾಯನಃ
ಏತದ್ ವಚನಮಾಜ್ಞಾಯ ಭೀಮಸೇನೋಽತ್ಯಮರ್ಷಣಃ

ಬಭೂವ ಶಾಂತಿಸಂಯುಕ್ತೋ ಗುರೋರ್ವಚನವಾರಿತಃ ॥22॥
ಈ ಮಾತುಗಳನ್ನು ಕೇಳಿ ಅತ್ಯಂತಕೋಪಗೊಂಡಿದ್ದ ಭೀಮಸೇನನು ಹಿರಿಯನಾದ ಧರ್ಮರಾಜನ ವಚನದಿಂದ ತಡೆಯಲ್ಪಟ್ಟವನಾಗಿ ಶಾಂತಿಯುಕ್ತನಾದನು.
ತಯೋಃ ಸಂವದತೋರೇವಂ ತದಾ ರಾಜನ್ಯಯೋರ್ದ್ವಯೋಃ |
ಆಜಗಾಮ ಮಹಾಯೋಗೀ ವ್ಯಾಸಃ ಸತ್ಯವತೀಸುತಃ ॥23॥
ಅವರಿಬ್ಬರು ರಾಜರೂ ಹಿಗೆ ಮಾತನಾಡುತ್ತಿರಲು ಆ ವೇಳೆಗೆ ಸರಿಯಾಗಿ ಮಹಾಯೋಗಿಗಳಾದ ಸತ್ಯವತೀಕುಮಾರರಾದ ವೇದವ್ಯಾಸರು ಅಲ್ಲಿಗೆ ಬಂದರು.
ಸೋಽಭಿಗಮ್ಯ ಯಥಾನ್ಯಾಯಂ ಪಾಂಡವೈರಭಿಪೂಜಿತಃ |
ಯುಧಿಷ್ಠಿರಮಿದಂ ವಾಕ್ಯಮುವಾಚ ವದತಾಂ ವರಃ ॥24॥
ವಾಗ್ಮಿಗಳಲ್ಲಿ ಶ್ರೇಷ್ಠರಾದ ಅವರು ಪಾಂಡವರ ಎದುರಿಗೆ ಬಂದು ಯಥಾಯೋಗ್ಯವಾಗಿ ಪೂಜಿಸಲ್ಪಟ್ಟು ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿದರು.
ವ್ಯಾಸಃ
ಯುಧಿಷ್ಠಿರಮಹಾಬಾಹೋ ವೇದ್ಮಿ ತೇ ಹೃದಿ ಮಾನಸಮ್ |
ಮನೀಷಯಾ ತತಃ ಕ್ಷಿಪ್ರಮಾಗತೋಽಸ್ಮಿ ನರರ್ಷಭ ॥25॥
ಮಹಾಬಾಹುವಾದ ಯುಧಿಷ್ಠಿರನೇ! ನಿನ್ನ ಮನಸ್ಸಿನ ಅಭಿಪ್ರಾಯವನ್ನು ನಾನು ತಿಳಿದಿದ್ದೇನೆ. ನರರ್ಷಭನೇ! ಆದ್ದರಿಂದಲೇ ನನ್ನ ಮನಸ್ಸಿನ ಇಚ್ಛೆಯಿಂದಲೇ ನಾನು ಇಲ್ಲಿಗೆ ಬಂದಿದ್ದೇನೆ.
ಭೀಷ್ಮಾದ್ದ್ರೋಣಾತ್ ಕೃಪಾತ್ ಕರ್ಣಾದ್ ದ್ರೋಣಪುತ್ರಾತ್ ತಥೈವ ಚ |
ದುರ್ಯೋಧನಾನ್ನೃಪಸುತಾತ್ ತಥಾ ದುಶ್ಶಾಸನಾದಪಿ ॥26॥
ಯತ್ತೇ ಭಯಮಮಿತ್ರಘ್ನ ಹೃದಿ ಸಂಪರಿವರ್ತತೇ |
ತತ್ತೇ ಪ್ರಶಮಯಿಷ್ಯಾಮಿ ವಿಧಿದೃಷ್ಟೇನ ಹೇತುನಾ ॥27॥
ಎಲೈ ಶತ್ರುನಾಶಕನೇ! ಭೀಷ್ಮರಿಂದ ದ್ರೋಣರಿಂದ ಕೃಪರಿಂದ ಕರ್ಣನಿಂದ ಅಶ್ವತ್ಥಾಮರಿಂದ ಹಾಗೆಯೇ ದುರ್ಯೋಧನನಿಂದ ನಿನ್ನ ಮನಸ್ಸಿನಲ್ಲಿ ಯಾವ ಭಯವಿದೆಯೋ ಅದನ್ನು ಶಾಸ್ತ್ರದೃಷ್ಟವಾದ ಕಾರಣದಿಂದ ನಾಶಗೊಳಿಸುವೆನು.
ತಚ್ಛ್ರುತ್ವಾ ಧೃತಿಮಾಸ್ಥಾಯ ಕರ್ಮಣಾ ಪ್ರತಿಪಾದಯ |
ಪ್ರತಿಪಾದ್ಯ ತು ರಾಜೇಂದ್ರ ತತಃ ಕ್ಷಿಪ್ರಂ ಜ್ವರಂ ಜಹಿ ॥28॥
ಅದನ್ನು ಕೇಳಿ ಧೈರ್ಯವನ್ನು ಅವಲಂಬಿಸಿ ಅದರಂತೆ ಕರ್ಮವನ್ನು ಅನುಷ್ಠಾನಮಾಡು. ಎಲೈ ರಾಜೇಂದ್ರನೇ! ಹಾಗೆ ಅನುಷ್ಠಾನ ಮಾಡಿ ನಿನ್ನ ಮನೋಜ್ವರವನ್ನು ಶೀಘ್ರವಾಗಿ ನಾಶ ಮಾಡು.
ವೈಶಂಪಾಯನಃ
ತತ ಏಕಾಂತಮಾನೀಯ ಪಾರಾಶರ್ಯೋ ಯುಧಿಷ್ಠಿರಮ್ |
ಅಬ್ರವೀದುಪಪನ್ನಾರ್ಥಮಿದಂ ವಾಕ್ಯವಿಶಾರದಃ ॥29॥
ಆಗ ಪರಾಶರರ ಮಕ್ಕಳಾದ ವಾಕ್ಯವಿಶಾರದರಾದ ವೇದವ್ಯಾಸರು ಯುಧಿಷ್ಠಿರನನ್ನು ಏಕಾಂತಕ್ಕೆ ಕರೆದುಕೊಂಡು ಹೋಗಿ ಆ ಕಾಲಕ್ಕೆ ಉಚಿತವಾದ ಈ ಮಾತನ್ನು ಆಡಿದರು.
ಶ್ರೇಯಸಸ್ತೇಽಪರಃ ಕಾಲಃ ಪ್ರಾಪ್ತೋ ಭರತಸತ್ತಮ |
ಯೇನಾಭಿಭವಿತಾ ಶತ್ರೂನ್ ರಣೇ ಪಾರ್ಥೋ ಧನಂಜಯಃ ॥30॥
ಎಲೈ ಭರತಸತ್ತಮನೇ! ನಿನಗೆ ಮುಂದಿನ ಶ್ರೇಯಸ್ಸಿನ ಕಾಲವು ಪ್ರಾಪ್ತವಾಗಿದೆ. ಅದರಿಂದ ಪಾರ್ಥನಾದ ಧನಂಜಯನು ಯುದ್ಧದಲ್ಲಿ ಶತ್ರುಗಳನ್ನು ಸೋಲಿಸುವನು.
ಗೃಹಾಣೇಮಾಂ ಮಯಾ ಪ್ರೋಕ್ತಾಂ ಸಿದ್ಧಿಂ ಮೂರ್ತಿಮತೀಮಿವ|
ವಿದ್ಯಾಂ ಪ್ರತಿಸ್ಮೃತಿಂ ನಾಮ ಪ್ರಪನ್ನಾಯ ಬ್ರವೀಮಿ ತೇ |
ಯಾಮವಾಪ್ಯ ಮಹಾಬಾಹುರರ್ಜುನಃ ಸಾಧಯಿಷ್ಯತಿ ॥31॥
ನಾನು ಕೊಡುವ ಸಿದ್ಧಿಪೂರ್ವಕವಾದ ಶರೀರವನ್ನು ಧರಿಸಿದಂತಿರುವ ಈ ಪ್ರತಿಸ್ಮೃತಿ ಎಂಬ ವಿದ್ಯೆಯನ್ನು ಸ್ವೀಕರಿಸು. ಶರಣಾಗತನಾದ ನಿನಗೆ ಅದನ್ನು ಹೇಳುತ್ತಿದ್ದೇನೆ. ಆ ವಿದ್ಯೆಯನ್ನು ಪಡೆದು ಅರ್ಜುನನು ಎಲ್ಲವನ್ನೂ ಸಾಧಿಸುವನು.
ಅಸ್ತ್ರಹೇತೋರ್ಮಹೇಂದ್ರಂ ಚ ರುದ್ರಂ ಚೈವಾಭಿಗಚ್ಛತು |
ವರುಣಂ ಚ ಕುಬೇರಂ ಚ ಧರ್ಮರಾಜಂ ಚ ಪಾಂಡವಃ |
ಶಕ್ತೋ ಹ್ಯೇಷ ಸುರಾನ್ ದ್ರಷ್ಟುಂ ತಪಸಾ ವಿಕ್ರಮೇಣ ಚ ॥32॥
ಅಸ್ತ್ರವನ್ನು ಸಂಪಾದಿಸುವುದಕ್ಕಾಗಿ ಪಾಂಡುಪುತ್ರನಾದ ಅರ್ಜುನನು ರುದ್ರನನ್ನು ವರುಣನನ್ನು ಕುಬೇರನನ್ನು ಮತ್ತು ಯಮನನ್ನು ಉಪಸತ್ತಿಮಾಡಲಿ. ಈ ಅರ್ಜುನನು ತನ್ನ ತಪಸ್ಸು ಮತ್ತು ಪರಾಕ್ರಮಗಳಿಂದ ದೇವತೆಗಳನ್ನು ನೋಡಲು ಸಮರ್ಥನಾದವನು.
ಋಷಿರೇಷ ಮಹಾತೇಜಾ ನಾರಾಯಣಸಹಾಯವಾನ್ |
ಪುರಾಣಃ ಶಾಶ್ವತೋ ಭೂತಃ ವಿಷ್ಣೋರಂಶಃ ಸನಾತನಃ ॥33॥
ಇವನು ಮಹಾತೇಜಸ್ವಿಯಾದ ನಾರಾಯಣಸಹಾಯವುಳ್ಳ ಪ್ರಾಚೀನನೂ ಮತ್ತು ಶಾಶ್ವತನೂ ಆದ ಋಷಿ. ಇವನು ಸನಾತನನಾದ ವಿಷ್ಣುವಿನ ಅಂಶದಿಂದ ಕೂಡಿದವನಾಗಿದ್ದಾನೆ.
ಅಸಾತ್ತ್ರಣೀಂದ್ರಾಚ್ಚ ರುದ್ರಾಚ್ಚ ಲೋಕಪಾಲೇಭ್ಯ ಏವ ಚ |

ಸಮಾದಾಯ ಮಹಾಬಾಹುರ್ಮಹತ್ ಕರ್ಮ ಕರಿಷ್ಯತಿ ॥34॥
ಮಹಾಬಾಹುವಾದ ಅರ್ಜುನನು ಇಂದ್ರನಿಂದಲೂ ರುದ್ರನಿಂದಲೂ ಲೋಕಪಾಲಕರಿಂದಲೂ ಅಸ್ತ್ರಗಳನ್ನು ಸ್ವೀಕರಿಸಿ ದೊಡ್ಡಕಾರ್ಯವನ್ನು ಎಸಗುವನು.
ವನಾದಸ್ಮಾಚ್ಚ ಕೌಂತೇಯ ವನಮನ್ಯದ್ ವಿಚಿಂತ್ಯತಾಮ್ |
ನಿವಾಸಾರ್ಥಂ ತು ಯದ್ಯುಕ್ತಂ ಭವೇತ ಪೃಥಿವೀಪತೇ |
ಏಕತ್ರ ಚಿರವಾಸೋ ಹಿ ನ ಪ್ರೀತಿಜನನೋ ಭವೇತ್ ॥35॥
ಎಲ್ಲೈ ಕೌಂತೇಯನೇ! ಪೃಥಿವೀಪತಿಯೇ! ಈ ವನವನ್ನು ಬಿಟ್ಟು ನಿವಾಸಾರ್ಥವಾಗಿ ಇನ್ನೊಂದು ಯೋಗ್ಯವಾದ ವನಕ್ಕೆ ಹೋಗುವ ವಿಷಯವನ್ನು ಚಿಂತಿಸು. ಒಂದೇ ಕಡೆಯಲ್ಲಿ ಬಹಳ ಕಾಲವಿದ್ದರೆ ಮನಸ್ಸಿಗೆ ಸಂತೋಷವಾಗುವುದಿಲ್ಲ.
ತಾಪಸಾನಾಂ ಚ ಶಾಂತಾನಾಂ ಭವೇದುದ್ವೇಗಕಾರಕಃ |
ಮೃಗಾಣಾಮುಪರೋಧಶ್ಚ ವೀರುದೌಷಧಸಂಕ್ಷಯಃ |
ಬಿಭರ್ಷಿ ಚ ಬಹೂನ್ ವಿಪ್ರಾನ್ ವೇದವೇದಾಂಗಪಾರಗಾನ್ ॥36॥
ನೀನು ವೇದವೇದಾಂಗಪಾರಂಗತರಾದ ಅನೇಕ ಬ್ರಾಹ್ಮಣರನ್ನು ಪೋಷಿಸುತ್ತಿದ್ದೀಯೆ. ಒಂದೇ ಕಡೆಯಲ್ಲಿ ಬಹಳ ಕಾಲವಿರುವುದರಿಂದ ಶಾಂತರಾದ ತಪಸ್ವಿಗಳಿಗೆ ಉದ್ವೇಗ ಉಂಟಾಗುತ್ತದೆ. ಮೃಗಗಳಿಗೆ ಉಪದ್ರವವೂ ಮತ್ತು ಲತೆ ಔಷಧಿಗಳ ವಿನಾಶವೂ ಉಂಟಾಗುತ್ತದೆ.
ಏವಮುಕತ್ವಪ್ರಪನ್ನಾಯ ಶುಚಯೇ ಭಗವಾನ್ ಪ್ರಭುಃ |
ಪ್ರಾಹ ಶಸತ್ರಸ್ತ್ರತತ್ತ್ವಜ್ಞೋ ಯೋಗೀ ವಿದ್ಯಾಮನುತ್ತಮಾಮ್ ॥37॥
ಹೀಗೆ ಹೇಳಿ ಪ್ರಭುಗಳಾದ ಯೋಗಿಗಳಾದ ಶಸತ್ರರ್ಥಗಳನ್ನು ತಿಳಿದ ಭಗವಾನ್ ವ್ಯಾಸರು ಶರಣಾಗತನಾದ ಶುಚಿರ್ಭೂತನಾದ ಧರ್ಮರಾಜನಿಗೆ ಶ್ರೇಷ್ಠವಾದ ವಿದ್ಯೆಯನ್ನು ಉಪದೇಶಮಾಡಿದರು.
ಧರ್ಮರಾಜಸ್ಯ ಧೀಮಾನ್ ಸ ವ್ಯಾಸಃ ಸತ್ಯವತೀಸುತಃ |
ಅನುಜ್ಞಾಯ ಚ ಕೌಂತೇಯಂ ತತ್ರೈವಾಂತರಧೀಯತ ॥38॥
ಸತ್ಯವತೀ ಸುತರಾದ ವ್ಯಾಸರು ಮೇಧಾವಿಯಾದ ಧರ್ಮರಾಜನಿಗೆ ವಿದ್ಯೆಯನ್ನು ಉಪದೇಶಮಾಡಿ ಧರ್ಮರಾಜನ ಅನುಮತಿಯನ್ನು ಪಡೆದು ಅಲ್ಲಿಯೇ ಅದೃಶ್ಯರಾದರು.
ಯುಧಿಷ್ಠಿರಸ್ತು ಧರ್ಮಾತ್ಮಾ ತದ್ ಬ್ರಹ್ಮ ಮನಸಾ ಯತಃ |
ಧಾರಯಾಮಾಸ ಮೇಧಾವೀ ಕಾಲೇ ಕಾಲೇ ಸಮಭ್ಯಸನ್ ॥39॥
ಧರ್ಮಾತ್ಮನಾದ ಯುಧಿಷ್ಠಿರನಾದರೂ ಆ ವೇದವಿದ್ಯೆಯನ್ನು ನಿಯಮಪೂರ್ವಕವಾಗಿ ಮನಸ್ಸಿನಲ್ಲಿ ಧರಿಸಿ ಮೇಧಾವಿಯಾದ ಅವನು ಕಾಲಕಾಲಗಳಲ್ಲಿ ಅದನ್ನು ಅಭ್ಯಾಸಮಾಡಿದನು.
ಸ ವ್ಯಾಸವಾಕ್ಯಮುದಿತೋ ವನಾದ್ ದ್ವೈತವನಾತ್ ತತಃ |
ಯಯೌ ಸರಸ್ವತೀಕೂಲೇ ಕಾಮ್ಯಕಂ ಕಾನನಂ ಮಹತ್ ॥40॥
ವ್ಯಾಸರ ಮಾತುಗಳಿಂದ ಸಂತೋಷಗೊಂಡ ಅವನು ಅನಂತರ ದ್ವೈತವನವನ್ನು ಬಿಟ್ಟು ಸರಸ್ವತೀತೀರದಲ್ಲಿ ಇದ್ದ ಕಾಮ್ಯಕವೆಂಬ ವನಕ್ಕೆ ಹೋದನು.
ತಮನ್ವಯುರ್ಮಹಾರಾಜ ಶಿಕ್ಷಾಕ್ಷರವಿದಸ್ತಥಾ |
ಬ್ರಾಹ್ಮಣಾಸ್ತಪಸಾ ಯುಕ್ತಾ ದೇವೇಂದ್ರಮೃಷಯೋ ಯಥಾ ॥41॥
ಎಲ್ಲೈ ಮಹಾರಾಜನೇ! ವೇದವಿದ್ಯೆ ಮತ್ತು ಶಿಕ್ಷಾಶಾಸ್ತ್ರಗಳಲ್ಲಿ ಪರಿಣತರಾದ ತಾಪಸಬ್ರಾಹ್ಮಣರು ದೇವೇಂದ್ರನನ್ನು ಋಷಿಗಳು ಹಿಂಬಾಲಿಸಿದಂತೆ ಅವನನ್ನು ಹಿಂಬಾಲಿಸಿದರು.
ತತಃ ಕಾಮ್ಯಕಮಾಸಾದ್ಯ ಸರ್ವೇ ತೇ ಭರತರ್ಷಭಾಃ |
ನ್ಯವಸಂತ ಮಹಾತ್ಮಾನಃ ಸಾಮಾತ್ಯಾಃ ಸಪದಾನುಗಾಃ ॥42॥
ಅನಂತರ ಆ ಮಹಾತ್ಮರಾದ ಭರತರ್ಷಭರೆಲ್ಲರೂ ಕಾಮ್ಯಕವನವನ್ನು ಸೇರಿ ತಮ್ಮ ಅಮಾತ್ಯ ಮತ್ತು ಪದಾತಿಗಳೊಂದಿಗೆ ಅಲ್ಲಿ ವಾಸಮಾಡಿದರು.
ತತ್ರ ತೇ ನ್ಯವಸನ್‌ರಾಜನ್ ಕಂಚಿತ್ ಕಾಲಂ ಮನಸ್ವಿನಃ |
ಧನುರ್ವೇದಪರಾ ಧೀರಾಃ ಶೃಣ್ವಾನಾ ವೇದಮುತ್ತಮಮ್ ॥43॥
ಎಲ್ಲೈ ರಾಜನೇ! ಅಲ್ಲಿ ಧೀರರಾದ ಅವರು ಧನುರ್ವಿದ್ಯೆಯನ್ನು ಅಭ್ಯಾಸಮಾಡುತ್ತಾ ಶ್ರೇಷ್ಠವಾದ ವೇದವನ್ನು ಶ್ರವಣಮಾಡುತ್ತಾ ಧೈರ್ಯಶೀಲರಾಗಿ ಸ್ವಲ್ಪ ಸಮಯದವರೆಗೆ ವಾಸಮಾಡಿದರು.
ಚರಂತೋ ಮೃಗಯಾಂ ನಿತ್ಯಂ ಶುದ್ಧೈರ್ಬಾಣೈರ್ಮೃಗಾರ್ಥಿನಃ |
ಪಿತೃದೈವತವಿಪ್ರೇಭ್ಯೋ ನಿರ್ವಪಂತೋ ಯಥಾವಿಧಿ ॥44॥
ನಿತ್ಯವೂ ಮೃಗಾರ್ಥಿಗಳಾಗಿ ಶುದ್ಧಬಾಣಗಳಿಂದ ಬೇಟೆಯನ್ನು ಆಡುತ್ತಾ ಶಾಸೊತ್ರೕಕ್ತರೀತಿಯಲ್ಲಿ ಪಿತೃಗಳಿಗೆ ದೇವತೆಗಳಿಗೆ ಮತ್ತು ವಿಪ್ರರಿಗೆ ಅದನ್ನು ಸಂವಿಭಾಗಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
॥ ಕೈರಾತಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೂರನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯ - 22ನೇ ಅಧ್ಯಾಯ

ಗತೇ ವ್ಯಾಸೇ ಭಗವತಿ ಸರ್ವಜ್ಞೇ ಸರ್ವಕರ್ತರಿ |
ಧರ್ಮರಾಜೋऽವದನ್ಮಂತ್ರಂ ಫಲ್ಗುನಾಯ ರಹಸ್ಯಮುಂ ॥130॥
ಸರ್ವಜ್ಞ, ಸರ್ವಕರ್ತರಾದ ಭಗವಾನ್ ವೇದವ್ಯಾಸರು ಹೊರಟು ಹೋದ ಬಳಿಕ ಧರ್ಮರಾಜ ಏಕಾಂತದಲ್ಲಿ ಅರ್ಜುನನಿಗೆ ಆ ಮಂತ್ರವನ್ನು ಉಪದೇಶಿಸಿದ.
ತಮಾಪ್ಯ ಫಲ್ಗುನೋ ಮಂತ್ರಂ ಯಯೌ ಜ್ಯೇಷ್ಠೌ ಪ್ರಣಮ್ಯ ॥131॥
ಯಮಜೌ ಚ ಸಮಾಶ್ಲಿಷ್ಯ ಗಿರಿಮೇವೇಂದ್ರಕೀಲಕಂ ॥132॥
ತಪಶ್ಚಚಾರ ತತ್ರಸ್ಥಃ ಶಂಕರಸ್ಥಂ ಹರಿಂ ಸ್ಮರನ್ |
ಷಣ್ಮಾಸೇऽತಿಗತೇऽಪಶ್ಯನ್ಮೂಕಂ ನಾಮಾಸುರಂ ಗಿರೌ ॥133॥
ಅರ್ಜುನ ಮಂತ್ರೋಪದೇಶ ಪಡೆದು ಅಣ್ಣಂದಿರನ್ನು ನಮಿಸಿ ನಕುಲ ಸಹದೇವರನ್ನೂ ಆಲಿಂಗಿಸಿ ಇಂದ್ರಕೀಲಕಪರ್ವತಕ್ಕೆ ಹೋದ. ಅಲ್ಲಿದ್ದು ಶಿವಾಂತರ್ಗತನಾದ ಹರಿಯನ್ನು ಸ್ಮರಿಸುತ್ತ ತಪಸ್ಸು ಮಾಡಿದ. ಆರು ತಿಂಗಳು ಕಳೆದಾಗ ಮೂಕನೆಂಬ ಅಸುರನನ್ನು ಬೆಟ್ಟದಲ್ಲಿ ಕಂಡ.
ವರಾಹರೂಪಮಾಯಾತಂ ವಧಾರ್ಥಂ ಫಲ್ಗುನಸ್ಯ ಚ |
ತಂ ಜ್ಞಾತ್ವಾ ಫಲ್ಗುನೋ ವೀರಃ ಸಜ್ಯಂ ಕೃತ್ವಾ ಚ ಗಾಂಡಿವಂ ॥134॥
ಚಿಕ್ಷೇಪ ವಜ್ರಸಮಿತಾಂಸ್ತತ್ಕಾಯೇ ಸಾಯಕಾನ್ಬಹೂನ್ ॥135॥
ಹಂದಿಯ ರೂಪತಾಳಿ ಅರ್ಜುನನನ್ನು ಕೊಲ್ಲಲು ಬರುತ್ತಿದ್ದ ಮೂಕಾಸುರನನ್ನು ವೀರ ಅರ್ಜುನ ನೋಡಿ ಗಾಂಡೀವವನ್ನು ಹೆದೆಯೇರಿಸಿ ವಜ್ರಸಮಾನವಾದ ಅನೇಕ ಬಾಣಗಳನ್ನು ಅವನ ಮೈಮೇಲೆ ಎಸೆದ.
ಕಿರಾತರೂಪಸ್ತಮನು ಸಭಾರ್ಯಶ್ಚ ತ್ರಿಯಂಬಕಃ |
ಸ ಮಮಾರ ಹತಸ್ತಾಭ್ಯಾಂ ದಾನವಃ ಪಾಪಚೇತನಃ ॥136॥
ಶಿವನೂ ಪಾರ್ವತೀಸಮೇತ ಕಿರಾತರೂಪನಾಗಿ ಬಂದು ಆ ಅಸುರನನ್ನು ಬೆನ್ನಟ್ಟಿದ. ಪಾಪಿ ಚೇತನನಾದ ಆ ದಾನವ ಇಬ್ಬರಿಂದಲೂ ಹೊಡೆಸಿಕೊಂಡು ಪ್ರಾಣಬಿಟ್ಟ.
ತೇನೋಕ್ತೋऽಸೌ ಮಯ್ಯೆವಾಯಂ ವರಾಹೋऽನುಗತೋऽದ್ಯ ಹಿ |
ತಮವಿಧ್ಯೋ ಯತಸ್ತ್ವಂ ಹಿ ತದ್ ಯುಧ್ಯಸ್ವ ಮಯಾ ಸಹ ॥137॥
ಶಿವ ಅರ್ಜುನನಿಗೆ ಹೇಳಿದ, `ನಾನು ಬೆನ್ನಟ್ಟಿದ್ದ ಹಂದಿಯನ್ನು ನೀನು ಹೊಡೆದಿರುವುದರಿಂದ ನನ್ನೊಂದಿಗೆ ಯುದ್ಧಮಾಡು' ಎಂದು.
ಇತ್ಯುಕ್ತಃ ಫಲ್ಗುನಃ ಪ್ರಾಹ ತಿಷ್ಠತಿಷ್ಠ ನ ಮೋಕ್ಷ್ಯಸೇ |
ಇತ್ಯುಕತ್ವ ತಾವುಭೌ ಯುದ್ಧಂ ಚಕ್ರತುಃ ಪುರುಷರ್ಷಭೌ ॥138॥
ಶಿವ ಹೀಗೆ ಹೇಳಿದಾಗ ಅರ್ಜುನನೆಂದ `ನಿಲ್ಲು ನಿಲ್ಲು ನಾನು ನಿನ್ನನ್ನು ಬಿಡುವುದಿಲ್ಲ. ಹೀಗೆ ಮಹಾಪುರುಷರಾದ ಅವರಿಬ್ಬರೂ ಹೇಳುತ್ತ ಯುದ್ಧ ಮಾಡಿದರು.
ತತ್ರಾಖಿಲಾನಿ ಶಸತ್ರಣಿ ಫಲ್ಗುನಸ್ಯಾಗ್ರಸಚ್ಛಿವಃ |
ತತೋऽರ್ಜುನಸ್ತು ಗಾಂಡೀವಂ ಸಮಾದಾಯಾಭ್ಯತಾಡಯತ್ ॥139॥
ಆಗ ಅರ್ಜುನನ ಎಲ್ಲ ಬಾಣಗಳನ್ನೂ ಶಿವ ನುಂಗಿದ. ಬಳಿಕ ಅರ್ಜುನ ಗಾಂಡೀವನ್ನೆತ್ತಿ ಹೊಡೆದ.
ತದಪ್ಯಗ್ರಸದೇವಾಸೌ ಪ್ರಹಸನ್ಗಿರಿಶಸ್ತದಾ |
ಬಾಹುಯುದ್ಧಂ ತತಸತತ್ವಸೀತ್ತಯೋಃ ಪುರುಷಸಿಂಹಯೋಃ ॥140॥
ಆಗ ಶಿವ ನಗುತ್ತ ಗಾಂಡೀವವನ್ನೂ ನುಂಗಿಬಿಟ್ಟ. ಬಳಿಕ ಆ ಪುರುಷ ಸಿಂಹರೊಳಗೆ ಬಾಹುಯುದ್ಧ ನಡೆಯಿತು.
ಪಿಂಡೀಕೃತ್ಯ ತತೋ ರುದ್ರಶ್ಚಿಕ್ಷೇಪ ಚ ಧನಂಜಯಂ |
ಮೂರ್ಚ್ಛಾಮವಾಪ ಮಹತೀಂ ಫಲ್ಗುನೋ ರುದ್ರಪೀಡಿತಃ ॥141॥
ಶಿವ ಅರ್ಜುನನನ್ನು ಮುದ್ದೆ ಮಾಡಿ ಎಸೆದ. ಶಿವನಿಂದ ಹೀಗೆ ಪೀಡಿತನಾದ ಅರ್ಜುನ ಗಾಢವಾದ ಮೂರ್ಛೆಯನ್ನು ಹೊಂದಿದ.
ಪೂರ್ವಂ ಸಂಪ್ರಾರ್ಥಯಾಮಾಸ ಶಂಕರೋ ಗರುಡಧ್ವಜಂ |
ಅವರಾಣಾಂ ವರಂ ಮತ್ತೋ ಯೇಷಾಂ ತ್ವಂ ಸಂಪ್ರಯಚ್ಛಸಿ ॥142॥
ಅಜೇಯತ್ವಂ ಪ್ರಸಾದಾತ್ತೇ ವಿಜೇಯಾಃ ಸ್ಯುರ್ಮಯಾಪಿ ತೇ |
ಇತ್ಯುಕ್ತಃ ಪ್ರದದೌ ವಿಷ್ಣುರುಮಾಧೀಶಾಯ ತಂ ವರಃ |
ತೇನಾಜಯಚ್ಛ್ವೇತವಾಹಂ ಗಿರಿಶೋ ರಣಮಧ್ಯಗಂ ॥143॥
ಹಿಂದೆ ಶಿವ ಹರಿಯನ್ನು ಬೇಡಿದ್ದ `ನನಗಿಂತ ಕೆಳಗಿನವರಿಗೆ ಯಾರಿಗೆ ನೀನು ಅಜೇಯತ್ವ ವರವನ್ನು ಕೊಡುವಿಯೋ ಅವರು ನಿನ್ನ ಅನುಗ್ರಹದಿಂದ ನನಗೆ ಸೋಲುವಂತಾಗಬೇಕು' ಎಂದು. ಶಿವ ಹೀಗೆ ಹೇಳಿದಾಗ ವಿಷ್ಣು ಆಗಲಿ ಎಂದು ಶಿವನಿಗೆ ಆ ವರ ನೀಡಿದ್ದ. ಅದರಿಂದ ಶಿವ ಅರ್ಜುನನನ್ನು ರಣರಂಗ ಮಧ್ಯದಲ್ಲಿ ಪರಾಭವಗೊಳಿಸಿದ.
ಕೇವಲಾನ್ ವೈಷ್ಣವಾನ್ ಮಂತ್ರಾನ್ ವ್ಯಾಸಃ ಪಾರ್ಥಾಯ ನೋ ದದೌ|
ಏತಾವತಾಲಂ ಭೀಷ್ಮಾದೇರ್ಜಯಾರ್ಥಮಿತಿ ಚಿದ್ಘನಃ ॥144॥
ಚಿನ್ಮಯನಾದ ವೇದವ್ಯಾಸರು ಕೇವಲ ವೈಷ್ಣವ ಮಂತ್ರಗಳನ್ನು ಅರ್ಜುನನಿಗೆ ಕೊಡಲಿಲ್ಲ. ಭೀಷ್ಮಾದಿಗಳನ್ನು ಗೆಲ್ಲಲು ಇಷ್ಟು ಸಾಕು ಎಂದು.
ಕೇವಲೈರ್ವೈಷ್ಣವೈರ್ಮಂತ್ರೈಸ್ತ್ವದತ್ತೈರ್ವಿಜಯಾವಹೈಃ |
ಅತಿವೃದ್ಧಸ್ಯ ಪಾರ್ಥಸ್ಯ ದರ್ಪಃ ಸ್ಯಾದಿತಿ ಚಿಂತಯನ್ ॥145॥

ವಿಜಯದಾಯಕವಾದ ಕೇವಲ ವೈಷ್ಣವ ಮಂತ್ರವನ್ನು ಕೊಟ್ಟರೆ ಅರ್ಜುನ ಅತಿ ಬಲಿಷ್ಠನಾಗುತ್ತಾನೆ. ಅದರಿಂದ ಅವನಿಗೆ ಅಹಂಕಾರ ಬಂದೀತೆಂದು ವೇದವ್ಯಾಸರು ಆಲೋಚಿಸಿದ್ದರು.
ಪಾರ್ಥಃ ಸಂಜ್ಞಾಮವಾಪ್ಯಾಥ ಜಯಾರ್ಥ್ಯಾರಾಧಯಚ್ಛಿವಂ |
ವ್ಯಾಸೋದಿತೇನ ಮಂತ್ರೇಣ ತಾನಿ ಪುಷ್ಪಾಣಿ ತಚ್ಛಿರಃ ॥146॥
ಆರುಹನ್‌ಸ ತು ತಂ ಜ್ಞಾತ್ವಾ ರುದ್ರ ಇತ್ಯೇವ ಫಲ್ಗುನಃ |
ನಮಶ್ಚಕ್ರೇ ತತಃ ಪ್ರಾದಾದಸ್ತ್ರಂ ಪಾಶುಪತಂ ಶಿವಃ ॥147॥
ಅರ್ಜುನ ಮೂರ್ಛೆ ತಿಳಿದೆದ್ದು ಯುದ್ಧದಲ್ಲಿ ಜಯವಾಗಬೇಕೆಂದು ಬಯಸಿ ವ್ಯಾಸರು ಕೊಟ್ಟ ಮಂತ್ರದಿಂದಲೆ ಶಿವನನ್ನು ಆರಾಧಿಸಿದ. ಆಗ ಅವನು ಲಿಂಗದ ಮೇಲೇರಿಸಿದ ಹೂಗಳು ಕಿರಾತನ ತಲೆಯನ್ನೇರಿದುವು. ಅದನ್ನು ನೋಡಿ ಕಿರಾತನನ್ನು ಶಿವನೇ ಎಂದು ತಿಳಿದು ಅರ್ಜುನ ನಮಸ್ಕರಿಸಿದ. ಆಗ ಶಿವ ಪಾಶುಪತಾಸ್ತ್ರವನ್ನು ಅರ್ಜುನನಿಗೆ ನೀಡಿದ.
ಅಸ್ತ್ರಂ ತದ್‌ವಿಷ್ಣುದೈವತ್ಯಂ ಸಾಧಿತಂ ಶಂಕರೇಣ ಯತ್ |
ತಸ್ಮಾತ್‌ಪಾಶುಪತಂ ನಾಮ ಸ್ವಾನ್ಯಸ್ತ್ರಾಣ್ಯಪರೇ ಸುರಾಃ |
ದದುಸ್ತದೈವ ಪಾರ್ಥಾಯ ಸರ್ವೇ ಪ್ರತ್ಯಕ್ಷಗೋಚರಾಃ ॥148॥
ಆ ಪಾಶುಪತಾಸ್ತ್ರ ವಿಷ್ಣುದೇವತಾಕವೆ. ಶಿವನಿಂದ ಪಶುಪತಿಯಿಂದ ಸಾಧಿತವಾದುದರಿಂದ ಪಾಶುಪತ ಎಂದು ಹೆಸರು. ಬಳಿಕ ಎಲ್ಲ ಬೇರೆ ದೇವತೆಗಳೂ ಆಗಲೇ ಪ್ರತ್ಯಕ್ಷರಾಗಿ ತಮ್ಮ ಅಸ್ತ್ರಗಳನ್ನು ಅರ್ಜುನನಿಗೆ ನೀಡಿದರು.
* * * *
ಮೂವತ್ತನಾಲ್ಕನೆಯ ಅಧ್ಯಾಯ
(ಬಂಧುಗಳನ್ನು ವಂದಿಸಿ ಆರ್ಜುನನ ಇಂದ್ರಕೀಲಪರ್ವತ ಗಮನ ಮತ್ತು ಇಂದ್ರನ ಜೊತೆಯಲ್ಲಿ ಸಂವಾದ)
ವೈಶಂಪಾಯನಃ
ಕಸ್ಯಚಿತ್ತ್ವಥ ಕಾಲಸ್ಯ ಧರ್ಮರಾಜೋ ಯುಧಿಷ್ಠಿರಃ |
ಸಂಸ್ಮೃತ್ಯ ಮುನಿಸಂದೇಶಮಿದಂ ವಚನಮಬ್ರವೀತ್ ॥1॥
ವಿವಿಕ್ತೇ ವಿದಿತಪ್ರಜ್ಞಮರ್ಜುನಂ ಪುರುಷರ್ಷಭಮ್ |
ಸಾಂತ್ವಪೂರ್ಣಂ ಸ್ಮಿತಂ ಕೃತ್ವಾ ಪಾಣಿನಾ ಪರಿಸಂಸ್ಪೃಶನ್ ॥2॥
ಸ್ವಲ್ಪಕಾಲವು ಕಳೆದಮೇಲೆ ಧರ್ಮರಾಜನಾದ ಯುಧಿಷ್ಠಿರನು ವೇದವ್ಯಾಸರ ಸಂದೇಶವನ್ನು ಸ್ಮರಿಸಿ ಏಕಾಂತಪ್ರದೇಶದಲ್ಲಿ ಪ್ರಾಜ್ಞನಾದ ಪುರುಷರ್ಷಭನಾದ ಅರ್ಜುನನನ್ನು ಕರೆದು ಮುಗುಳುನಗುತ್ತಾ ಅವನ ಕೈಯನ್ನು ಹಿಡಿದು ಸಮಾಧಾನಪೂರ್ವಕವಾಗಿ ಈ ಮಾತುಗಳನ್ನು ಆಡಿದನು.
ಸ ಮುಹೂರ್ತಮಿವ ಧ್ಯಾತ್ವಾ ವನವಾಸಮರಿಂದಮಃ |
ಧನಂಜಯಂ ಧರ್ಮರಾಜೋ ರಹಸೀದಮುವಾಚ ಹ ॥3॥
ಅರಿಂದಮನಾದ ಧರ್ಮರಾಜನು ಒಂದು ಮುಹೂರ್ತಕಾಲ ಚಿಂತಿಸಿ ಏಕಾಂತದಲ್ಲಿ ಅರ್ಜುನನನ್ನು ಕುರಿತು. ಹೀಗೆ ಮಾತನಾಡಿದನು.
ಭೀಷ್ಮೇ ದ್ರೋಣೇ ಕೃಪೇ ಕರ್ಣೇ ದ್ರೋಣಪುತ್ರೇ ಚ ಭಾರತ |
ಧನುರ್ವೇದಶ್ಚತುಷ್ಪಾದ ಏತೇಷ್ವದ್ಯ ಪ್ರತಿಷ್ಠಿತಃ ॥4॥
ಎಲೈ ಭಾರತನೇ! ನಾಲ್ಕುಪಾದಗಳುಳ್ಳ ಧನುರ್ವೇದವು ಈದಿನ ಭೀಷ್ಮರಲ್ಲಿ ದ್ರೋಣರಲ್ಲಿ ಕೃಪರಲ್ಲಿ ಅಶ್ವತ್ಥಾಮರಲ್ಲಿ ಮತ್ತು ಕರ್ಣನಲ್ಲಿ ಪ್ರತಿಷ್ಠಿತವಾಗಿದೆ.
ಬ್ರಾಹ್ಮಂ ದೈವಂ ಚಾಸುರಂ ಚ ಸಪ್ರಯೋಗಚಿಕಿತ್ಸಿತಮ್ |
ಸರ್ವಾಸ್ತ್ರಾಣಾಂ ಪ್ರಯೋಗಂ ಚ ತೇ ವಿಜಾನಂತಿ ಕೃತ್ಸ್ನಶಃ ॥5॥
ಅವರು ಬ್ರಾಹ್ಮಣಸಂಬಂಧಿಯಾದ ದೈವಸಂಬಂಧಿಯಾದ ಅಸುರಸಂಬಂಧಿಯಾದ ಎಲ್ಲಾ ವಿದ್ಯೆಗಳನ್ನೂ ಮತ್ತು ಆ ವಿದ್ಯೆಗಳ ನಿವಾರಣೋಪಾಯವನ್ನೂ ಮತ್ತು ಎಲ್ಲಾ ಅಸ್ತ್ರಗಳ ಪ್ರಯೋಗವನ್ನೂ ಸಮಗ್ರವಾಗಿ ತಿಳಿದಿದ್ದಾರೆ.
ತೇ ಸರ್ವೇ ಧೃತರಾಷ್ಟ್ರಸ್ಯ ಪುತ್ರೇಣ ಪರಿಸಾಂತ್ವಿತಾಃ |
ಸಂವಿಭಕ್ತಾಶ್ಚ ತುಷ್ಟಾಶ್ಚ ಗುರುವಚ್ಚೈಷು ವರ್ತತೇ ॥6॥
ಅವರೆಲ್ಲರೂ ಧೃತರಾಷ್ಟ್ರಪುತ್ರರಿಂದ ಸಮ್ಮಾನಿಸಲ್ಪಟ್ಟಿದ್ದಾರೆ. ಆವನಿಂದ ಬೇಕಾದಷ್ಟು ಧನವನ್ನು ಹೊಂದಿ ಸಂತುಷ್ಟರಾಗಿದ್ದಾರೆ. ಧುರ್ಯೋಧನನು ಅವರಲ್ಲಿ ಗುರುಗಳಂತೆ ನಡೆದುಕೊಳ್ಳುತ್ತಾನೆ.
ಸರ್ವಯೋಧೇಷು ಚೈವಾಸ್ಯ ಸಮಾ ವೃತ್ತಿರನುತ್ತಮಾ |
ಶಕ್ತಿಂ ನ ಹಾಪಯಿಷ್ಯಂತಿ ತೇ ಕಾಲೇ ಪ್ರತಿಪೂಜಿತಾಃ ॥7॥
ದುರ್ಯೋಧನನು ಎಲ್ಲಾ ಯೋಧರಲ್ಲಿಯೂ ಯಾವಾಗಲೂ ಶ್ರೇಷ್ಠವಾದ ಸಮಾನವಾದ ವರ್ತನೆಯನ್ನು ಹೊಂದಿದ್ದಾನೆ. ಹೀಗೆ ಸಮ್ಮಾನಿಸಲ್ಪಟ್ಟ ಅವರು ಯೋಗ್ಯವಾದ ಕಾಲದಲ್ಲಿ ತಮ್ಮ ಶಕ್ತಿಯನ್ನು ಕಳೆದು ಕೊಳ್ಳುವುದಿಲ್ಲ.
ಅದ್ಯ ಚೇಯಂ ಮಹೀ ಕೃತ್ಸ್ನಾ ದುರ್ಯೋಧನವಶಾನುಗಾ |
ತ್ವಯಿ ವ್ಯಪಾಶ್ರಯೋಽಸ್ಮಾಕಂ ತ್ವಯಿ ಭಾರಃ ಸಮಾಹಿತಃ ॥8॥
ಈ ದಿನ ಸಮಗ್ರವಾದ ಭೂಮಿಯು ದುರ್ಯೋಧನನ ವಶವಾಗಿದೆ. ನಮಗೆ ನಿನ್ನನ್ನು ಬಿಟ್ಟು ಬೇರೆ ಆಶ್ರಯವಿಲ್ಲ. ನಮ್ಮ ಜವಾಬ್ದಾರಿಯೆಲ್ಲಾ ನಿನ್ನ ಭುಜದ ಮೇಲಿದೆ.
ತತ್ರ ಕೃತ್ಯಂ ಪ್ರಪಶ್ಯಾಮಿ ಪ್ರಾಪ್ತಕಾಲಮರಿಂದಮ |
ಕೃಷ್ಣದ್ವೈಪಾಯನಾತ್ ತಾತ ಗೃಹೀತೋಪನಿಷನ್ಮಯಾ ॥9॥

ಅರಿಂದಮನೇ! ಅದಕ್ಕೆ ಯೋಗ್ಯವಾದ ಈ ಕಾಲದಲ್ಲಿ ಮಾಡಬೇಕಾದ ಕರ್ತವ್ಯವನ್ನು ನಾನು ಕಾಣುತ್ತಿದ್ದೇನೆ. ಪ್ರೀತಿಪಾತ್ರನೇ! ನಾನು ಕೃಷ್ಣ ದ್ವೈಪಾಯನರಿಂದ ಮಂತ್ರವನ್ನು ಸ್ವೀಕರಿಸಿದ್ದೇನೆ.

ತಯಾ ಪ್ರಯುಕ್ತಯಾ ಸಮ್ಯಕ್ ಜಗತ್ ಸರ್ವಂ ಪ್ರಕಾಶತೇ |
ತೇನ ತ್ವಂ ಬ್ರಹ್ಮಣಾ ತಾತ ಸಂಯುಕ್ತಃ ಸುಸಮಾಹಿತಃ ||10||
ದೇವತಾನಾಂ ಯಥಾಕಾಲಂ ಪ್ರಸಾದಂ ಪ್ರತಿಪಾಲಯನ್ |
ತಪಸಾ ಯೋಜಯಾತ್ಮಾನಮುಗ್ರೇಣ ಭರತರ್ಷಭ ||11||

ಅದನ್ನು ಚೆನ್ನಾಗಿ ಪ್ರಯೋಗಮಾಡಿದರೆ ಜಗತ್ತೆಲ್ಲವೂ ತಿಳಿಯುತ್ತದೆ. ಎಲೈ ಪ್ರೀತಿಪಾತ್ರನೇ! ಭರತರ್ಷಭನೇ! ಆ ಮಂತ್ರವನ್ನು ಸ್ವೀಕರಿಸಿ ಯೋಗ್ಯವಾದ ಕಾಲದಲ್ಲಿ ಉಂಟಾಗುವ ದೇವತೆಗಳ ಅನುಗ್ರಹವನ್ನು ನಿರೀಕ್ಷಿಸುತ್ತಾ ಸಮಧಾನಗೊಂಡ ಮನಸ್ಸಿನಿಂದ ಉಗ್ರವಾದ ತಪಸ್ಸನ್ನು ಆಚರಿಸು.

ಧನುಷ್ಮಾನ್ ಕವಚೀ ಖಡ್ಗೀ ಮುನಿಃ ಸಾರಸಮನ್ವಿತಃ |
ನ ಕಸ್ಯಚಿದ್ ದದನ್ ಮಾರ್ಗಂ ಗಚ್ಛ ತಾತೋತ್ತರಾಂ ದಿಶಮ್ ||12||

ಧನುಸ್ಸನ್ನು ಹಿಡಿದು ಕವಚವನ್ನು ಧರಿಸಿ ಕೈಯಲ್ಲಿ ಖಡ್ಗವನ್ನು ಹಿಡಿದು ಮೌನವಾಗಿ ಬಲವನ್ನು ಹೊಂದಿದವನಾಗಿ ಯಾರಿಗೂ ದಾರಿಯನ್ನು ಬಿಡದೆ ಉತ್ತರದಿಕ್ಕಿಗೆ ಪ್ರಯಾಣಮಾಡು.

ಇಂದ್ರೇ ಹ್ಯಸ್ತ್ರಾಣಿ ದಿವ್ಯಾನಿ ಸಮಸ್ತಾನಿ ಧನಂಜಯ |
ವೃತ್ರಾದ್ ಭೀತೈಃ ಪುರಾ ದೇವೈರ್ಬಲಮಿಂದ್ರೇ ಸಮರ್ಪಿತಮ್ ||13||

ಧನಂಜಯನೇ! ಇಂದ್ರನಲ್ಲಿ ಎಲ್ಲಾ ದಿವ್ಯಾಸ್ತ್ರಗಳೂ ಇವೆ. ಮತ್ತು ಹಿಂದೆ ವೃತ್ರನಿಗೆ ಹೆದರಿದ ದೇವತೆಗಳು ತಮ್ಮ ಬಲವನ್ನು (ಮತ್ತು ಅಸ್ತ್ರವನ್ನು) ಇಂದ್ರನಿಗೆ ಕೊಟ್ಟಿದ್ದಾರೆ.

ತಾನ್ಯೇಕಸ್ಥಾನಿ ಸರ್ವಾಣಿ ತತಸ್ತ್ವಂ ಪ್ರತಿಪತ್ಸ್ಯಸೇ |
ಅನೇನ ಬ್ರಹ್ಮಣಾ ತಾತ ಸರ್ವಂ ಸಂಪ್ರತಿಪದ್ಯತೇ ||14||

ಪ್ರೀತಿಪಾತ್ರನೇ! ನೀನು ಆ ಎಲ್ಲಾ ಅಸ್ತ್ರಗಳನ್ನೂ ಒಂದೇ ಕಡೆಯಲ್ಲಿ ಇಂದ್ರನಿಂದ ಪಡೆಯುತ್ತೀಯೆ. ಈ ಮಂತ್ರದಿಂದ ಎಲ್ಲವೂ ಕೈಗೂಡುತ್ತದೆ.

ಶಕ್ರಮೇವ ಪ್ರಪದ್ಯಸ್ವ ಸ ತೇಽಸ್ತ್ರಾಣಿ ಪ್ರದಾಸ್ಯತಿ |
ದೀಕ್ಷಿತೋಽದ್ಯೈವ ಗಚ್ಛ ತ್ವಂ ದ್ರಷ್ಟುಂ ದೇವಂ ಪುರಂದರಮ್ ||15||

ಇಂದ್ರನಿಗೆ ಶರಣಾಗು. ಅವನು ನಿನಗೆ ಅಸ್ತ್ರಗಳನ್ನು ಕೊಡುವನು. ಇಂದೇ ದೀಕ್ಷಿತನಾಗಿ ಆ ಇಂದ್ರದೇವನನ್ನು ನೋಡಲು ಹೊರಡು.

ಏವಮುಕ್ತ್ವಾ ಧರ್ಮರಾಜಃ ತಮಧ್ಯಾಪಯತ ಪ್ರಭುಃ |
ದೀಕ್ಷಿತಂ ವಿಧಿನಾ ತೇನ ಯತವಾಕ್ಕಾಯಮಾನಸಮ್ ||16||

ಹೀಗೆ ಹೇಳಿ ಪ್ರಭುವಾದ ಧರ್ಮರಾಜನು ಮನೋವಾಕ್ಕಾಯ- ನಿಯಮವನ್ನು ಹೊಂದಿದ್ದ ದೀಕ್ಷಿತನಾದ ಅರ್ಜುನನಿಗೆ ಶಾಸ್ತ್ರವಿಧಿಯಂತೆ ಮಂತ್ರೋಪದೇಶವನ್ನು ಮಾಡಿದನು.

ಅನುಜಜ್ಞೇ ತತೋ ವೀರೋ ಭ್ರಾತಾ ಭ್ರಾತರಮಗ್ರಜಃ |
ನಿದೇಶಾದ್ ಧರ್ಮರಾಜಸ್ಯ ದ್ರಷ್ಟುಕಾಮಂ ಪುರಂದರಮ್ ||17||

ತನ್ನ ಅಪ್ಪಣೆಯಂತೆ ಇಂದ್ರನನ್ನು ನೋಡಲು ಹೊರಟ ತಮ್ಮನಾದ ಅರ್ಜುನನಿಗೆ ವೀರನಾದ ಧರ್ಮರಾಜನು ಅನುಮತಿಯನ್ನು ನೀಡಿದನು.

ಧನುರ್ಗಾಂಡೀವಮಾದಾಯ ತಥಾಽಕ್ಷಯ್ಯೌ ಮಹೇಷುಧೀ |
ಕವಚೀ ಸತಲತ್ರಾಣಃ ಖಡ್ಗಗೋಧಾಂಗುಲಿತ್ರವಾನ್ ||18||
ಹುತ್ವಾಗ್ನಿಂ ಬ್ರಾಹ್ಮಣಾನ್ ನಿಷ್ಕೈಃ ಸ್ವಸ್ತಿ ವಾಚ್ಯ ಮಹಾಭುಜಃ |
ಪ್ರಾತಿಷ್ಠತ ಮಹಾಬಾಹುಃ ಪ್ರಗೃಹೀತಶರಾಸನಃ |
ವಧಾಯ ಧಾರ್ತರಾಷ್ಟ್ರಾಣಾಂ ನಿಃಶ್ವಸ್ಯೋರ್ಧ್ವಮುದೀಕ್ಷ್ಯ ಚ ||19||

ಮಹಾಬಾಹುವಾದ ಅರ್ಜುನನು ಗಾಂಡೀವಧನುಸ್ಸನ್ನೂ ಹಾಗೆಯೇ ಅಕ್ಷಯ ಬತ್ತಳಿಕೆಗಳನ್ನೂ ತೆಗೆದುಕೊಂಡು ಕವಚವನ್ನೂ ಹಸ್ತರಕ್ಷಣೆಗಳನ್ನೂ ಧರಿಸಿ ಖಡ್ಗವನ್ನೂ ಗೋಧದ ಚರ್ಮದಿಂದ ಮಾಡಿದ ಅಂಗುಲಿತ್ರಾಣಗಳನ್ನೂ ಧರಿಸಿ ಅಗ್ನಿಯಲ್ಲಿ ಹೋಮವನ್ನು ಮಾಡಿ ಬ್ರಾಹ್ಮಣರಿಗೆ ಹಿರಣ್ಯದಾನವನ್ನು ಕೊಟ್ಟು ಅವರಿಂದ ಮಂಗಳ ಆಶೀರ್ವಾದವನ್ನು ಪಡೆದು ಮಹಾಭುಜನಾದ ಆವನು ಬಿಲ್ಲನ್ನು ಹಿಡಿದು ನಿಟ್ಟುಸಿರನ್ನು ಬಿಟ್ಟು ಮೇಲ್ಮುಖವಾಗಿ ನೋಡಿ ದುರ್ಯೋಧನಾದಿಗಳ ವಧೆಯನ್ನು ಉದ್ದೇಶಿಸಿ ಹೊರಟನು.

ತಂ ದೃಷ್ಟ್ವಾ ತತ್ರ ಕೌಂತೇಯಂ ಪ್ರಗೃಹೀತಶರಾಸನಮ್ |
ಅಬ್ರುವನ್ ಬ್ರಾಹ್ಮಣಾಃ ಸಿದ್ಧಾ ಭೂತಾನ್ಯಂತರ್ಹಿತಾನಿ ಚ |
ಸಿದ್ಧಚಾರಣಸಂಘಾಶ್ಚ ಗಂಧರ್ವಾಶ್ಚ ತಮಬ್ರುವನ್ ||20||

ಕುಂತೀಪುತ್ರನಾದ ಅರ್ಜುನನು ಕೈಯಲ್ಲಿ ಧನುಸ್ಸನ್ನು ಹಿಡಿದಿದ್ದನ್ನು ನೋಡಿ ಬ್ರಾಹ್ಮಣರೂ ಸಿದ್ಧರೂ ಅದೃಷ್ಯವಾದ ಭೂತಗಳೂ ಸಿದ್ಧಚಾರಣಸಂಘಗಳೂ ಮತ್ತು ಗಂಧರ್ವರೂ ಅವನನ್ನು ಕುರಿತು ಹೇಳಿದರು.

ಸ್ವಸ್ತಿ ವ್ರತಮುಪಾದತ್ಸ್ವ ಸಂಕಲ್ಪಸ್ತವ ಸಿದ್ಧ್ಯತಾಮ್ |
ಮನೋರಥಾಶ್ಚ ತೇ ಸರ್ವೇ ಸಮೃದ್ಧ್ಯಂತಾಂ ಮಹಾರಥ ||21||

ಮಹಾರಥನೇ! ನಿನಗೆ ಮಂಗಳವಾಗಲಿ. ವ್ರತವನ್ನು ಅನುಷ್ಠಾನಮಾಡು. ನಿನ್ನ ಸಂಕಲ್ಪವೂ ಮತ್ತು ಎಲ್ಲಾ ಮನೋರಥಗಳೂ

ಸಿದ್ಧಿಸಲಿ.
ಏವಮುಕ್ತೋಽಭಿವಾದ್ಯೈತಾನ್ ಕೃತಾಂಜಲಿಪುಟಸ್ತಥಾ |
ತಪೋಯೋಗಮನಾಃ ಪಾರ್ಥಃ ಪುರೋಹಿತಮವಂದತ ||22||
ಹೀಗೆ ಹೇಳಲ್ಪಟ್ಟ ಅರ್ಜುನನು ಕೈಗಳನ್ನು ಮುಗಿದು ಅವರಿಗೆ ನಮಸ್ಕರಿಸಿ ತಪೋಯೋಗಗಳಲ್ಲಿ ಮನಸ್ಸುಳ್ಳವನಾಗಿ ಪುರೋಹಿತರಾದ ಧೌಮ್ಯರಿಗೆ ನಮಸ್ಕಾರವನ್ನು ಮಾಡಿದನು.
ತತಃ ಪ್ರೀತಮನಾ ಜಿಷ್ಣುಃ ತಾವುಭಾವಭ್ಯವಂದತ |
ಸಹೋದರಾವತಿರಥೌ ಯುಧಿಷ್ಠಿರವೃಕೋದರೌ ||23||
ಅನಂತರ ಸಂತೋಷಗೊಂಡ ಅರ್ಜುನನು ಸಹೋದರರರೂ ಅತಿರಥರೂ ಆದ ಯುಧಿಷ್ಠಿರ ಮತ್ತು ಭೀಮಸೇನ ಇವರಿಬ್ಬರಿಗೂ ನಮಸ್ಕಾರವನ್ನು ಮಾಡಿದನು.
ಸಂಕ್ಲಾಂತಮನಸೌ ತೂರ್ಣಮುಪಗಮ್ಯ ಮಹಾರಥೌ |
ಯಮೌ ಗಾಂಡೀವಧನ್ವಾನಮಭ್ಯವಾದಯತಾಮುಭೌ |
ಅಭಿವಾದ್ಯ ತು ತೌ ವೀರಾವೂಚತುಃ ಪಾಕಶಾಸನಿಮ್ ||24||
ಮನೋವಿಷಾದದಿಂದ ಕೂಡಿದ್ದ ಮಹಾರಥರಾದ ನಕುಲಸಹದೇವರು ಗಾಂಡೀವಧನುಸ್ಸನ್ನು ಹಿಡಿದಿದ್ದ ಅರ್ಜುನನ ಬಳಿಗೆ ಶೀಘ್ರವಾಗಿ ಬಂದು ನಮಸ್ಕಾರವನ್ನು ಮಾಡಿ ಅರ್ಜುನನನ್ನು ಕುರಿತು ಮಾತನಾಡಿದರು.
ಅವಾಪ್ತವ್ಯಾನಿ ಸರ್ವಾಣಿ ದಿವ್ಯಾನ್ಯಸ್ತ್ರಾಣಿ ವಾಸವಾತ್ |
ಅಸ್ತ್ರಾಣ್ಯಾಪ್ನುಹಿ ಕೌಂತೇಯ ಮನಸಾ ಯದ್ಯದಿಚ್ಛಸಿ ||25||
ಕೌಂತೇಯನೇ! ಪಡೆಯಬೇಕಾದ ದಿವ್ಯಾಸ್ತ್ರಗಳು ಯಾವುವು ಇವೆಯೋ ಇಂದ್ರನಿಂದ ಆ ಎಲ್ಲಾ ಅಸ್ತ್ರಗಳನ್ನೂ ಪಡೆಯುವವನಾಗು.
ಗಿರಂ ಸತ್ಯಾಮಶಿಥಿಲಾಂ ನಿರ್ದೋಷಾಂ ಸಮ್ಮತಾಂ ಸತಾಂ |
ತ್ವಮೇಕಃ ಪಾಂಡವೇಷ್ವದ್ಯ ಸಂಪ್ರಾಪ್ತೋಽಸಿ ಧನಂಜಯ ||26||
ಎಲೈ ಧನಂಜಯನೇ! ಈ ದಿನ ಪಾಂಡವರಲ್ಲಿ ನೀನೊಬ್ಬನೇ ಸತ್ಯವಾದ ದೃಢವಾದ ನಿರ್ದೋಷವಾದ ಸಜ್ಜನ ಸಮ್ಮತವಾದ ಮಂತ್ರವನ್ನು ಪಡೆದಿರುತ್ತೀಯೆ.
ನ ಚಾಧರ್ಮವಿದಂ ದೇವಾ ನಾಸಿದ್ಧಂ ನಾತಪಸ್ವಿನಮ್ |
ದ್ರಷ್ಟುಮಿಚ್ಛಂತಿ ಕೌಂತೇಯ ಚಲಚ್ಚಿತ್ತಂ ಶಠಂ ನ ಚ ||27||
ಎಲೈ ಕೌಂತೇಯನೇ! ದೇವತೆಗಳು ಅಧರ್ಮಿಷ್ಠನನ್ನಾಗಲೀ ಮಂತ್ರಸಿದ್ಧಿ ಇಲ್ಲದವನನ್ನಾಗಲೀ ತಪಸ್ಸಿಲ್ಲದವನನ್ನಾಗಲೀ ಚಂಚಲಚಿತ್ತನನ್ನಾಗಲೀ ಅಥವಾ ನಿಗೂಢ ದ್ವೇಷಿಯನ್ನಾಗಲೀ ನೋಡಲು ಇಚ್ಛಿಸುವುದಿಲ್ಲ.
ರೋರೂಯಮಾಣಃ ಕಟುಕಮೀರ್ಷ್ಯಕಃ ಕಟುಕಾಕ್ಷರಃ |
ಶಠಃ ಶ್ಲಾಘಕರಃ ಕ್ಷೇಪ್ತಾ ಹಂತಾ ಚ ವಿಚಿಕಿತ್ಸಿತಾ ||28||
ವಿಶ್ವಸ್ತಹಂತಾ ಮಾಯಾವೀ ಕ್ರೋಧನೋಽನೃತಭಾಷಿತಾ |
ಅತ್ಯಾಶೀ ನಾಸ್ತಿಕೋಽದಾತಾ ಮಿತ್ರಧ್ರುಕ್ ಸರ್ವಕರ್ಕಶಃ ||29||
ಆಕ್ರೋಷ್ಟಾ ಚಾತಿಮಾನೀ ಚ ರೌದ್ರೋ ಲುಬ್ಧೋಽಥ ಲೋಲುಪಃ |
ಸ್ತೇನಶ್ಚ ಮದ್ಯಪಶ್ಚೈವ ಭ್ರೂಣಹಾ ಗುರುತಲ್ಪಗಃ ||30||
ಸಂಭಾವಿತಾತ್ಮಾ ಚಾತ್ಯರ್ಥಂ ನೃಶಂಸಃ ಪುರುಷಶ್ಚ ಯಃ |
ನೈತೇ ಲೋಕಾನಾಪ್ನುವಂತಿ ನಿರ್ಲೋಕಾಸ್ತೇ ಧನಂಜಯ ||31||
ತೀಕ್ಷ್ಣವಾಗಿ ಕಿರುಚುವವನು ಅಸೂಯೆಯನ್ನು ಪಡುವವನು ಚುಚ್ಚಿ ಮಾತನಾಡುವವನು ನಿಗೂಢ ದ್ವೇಷಿಯಾದವನು ತನ್ನನ್ನು ತಾನು ಹೊಗಳಿಕೊಳ್ಳುವವನು ಇನ್ನೊಬ್ಬರನ್ನು ನಿಂದಿಸುವವನು ಮತ್ತು ಕೊಲ್ಲುವವನು ಯಾವಾಗಲೂ ಸಂಶಯಪಡುವವನು ವಿಶ್ವಾಸಘಾತಕನಾದವನು ಮಾಯಾವಿಯಾದವನು ಕ್ರೋಧಸ್ವಭಾವದವನು ಸುಳ್ಳನ್ನು ಮಾತನಾಡುವವನು ಬಹಳವಾಗಿ ಊಟಮಾಡುವವನು ನಾಸ್ತಿಕನಾದವನು ದಾನವನ್ನು ಕೊಡದಿರುವನು ಮಿತ್ರದ್ರೋಹವನ್ನು ಮಾಡುವವನು ಯಾವಾಗಲೂ ಬಹಳ ಆತ್ಮಾಭಿಮಾನ ಇರುವವನು ಉಗ್ರನಾದವನು ಲೋಭಿಯಾದವನು ಇಂದ್ರಿಯಲೋಲುಪನಾದವನು ಕಳ್ಳನಾದವನು ಮದ್ಯಪಾನವನ್ನು ಮಾಡುವವನು ಭ್ರೂಣಹತ್ಯೆಯನ್ನು ಮಾಡಿದವನು ಗುರುತಲ್ಪಗಾಮಿಯಾದವನು ತನ್ನನ್ನು ತಾನೆ ಶ್ರೇಷ್ಠನೆಂದು ತಿಳಿದುಕೊಳ್ಳುವವನು ಮತ್ತು ಬಹಳ ಕ್ರೂರಿಯಾದವನು, ಎಲೈ ಧನಂಜಯನೇ, ಇವರಾರೂ ಒಳ್ಳೆಯ ಲೋಕವನ್ನು ಪಡೆಯುವುದಿಲ್ಲ. ಧನಂಜಯನೇ ಅವರು ಲೋಕಶೂನ್ಯರಾದವರು.
ಆನೃಶಂಸ್ಯಮನುಕ್ರೋಶಃ ಸತ್ಯಂ ಕರುಣವೇದಿತಾ |
ದಮಃ ಸ್ಥಿತಿಧೃತಿರ್ಧರ್ಮಃ ಕ್ಷಮಾ ರೂಪಮನುತ್ತಮಮ್ ||32||
ದಯಾ ಶಮಸ್ತಿತಿಕ್ಷಾ ಚ ಗುರುಪೂಜಾ ಕೃತಜ್ಞತಾ |
ಮೈತ್ರತಾ ದ್ವಿಜಭಕ್ತಿಶ್ಚ ವಸಂತಿ ತ್ವಯಿ ಫಲ್ಗುನ ||33||
ಎಲೈಅರ್ಜುನನೇ! ಮಾರ್ದವ ದಯೆ ಸತ್ಯ ಕರುಣೆ ಇಂದ್ರಿಯನಿಗ್ರಹ ವೈಷ್ಣವಸಿದ್ಧಾಂತದಲ್ಲಿ ಸ್ಥಿತಿ ಧೈರ್ಯ ಧರ್ಮ ಕ್ಷಮೆ ಶ್ರೇಷ್ಠವಾದ ರೂಪ ಶಮ (ಭಗವದ್ ಭಕ್ತಿ) ದ್ವಂದಸಹಿಷ್ಣುತೆ ಗುರುಪೂಜೆ ಕೃತಜ್ಞತೆ ಸ್ನೇಹ ಬ್ರಾಹ್ಮಣರಲ್ಲಿ ಭಕ್ತಿ ಎಲ್ಲವೂ ನಿನ್ನಲ್ಲಿ ಇವೆ.
ವ್ಯಪೇಕ್ಷಾ ಸರ್ವಭೂತೇಷು ಕೃಪಾ ದಾನಂ ಮತಿಃ ಸ್ಮೃತಿಃ |
ತಸ್ಮಾತ್ ಕೌರವ್ಯ ಶಕ್ರೇಣ ಸಮೇಷ್ಯಸಿ ಧನಂಜಯ ||34||
ತ್ವಾದೃಶೇನ ಹಿ ದೇವಾನಾಂ ಶ್ಲಾಘನೀಯಃ ಸಮಾಗಮಃ ||35||

ಎಲ್ಲ ಪ್ರಾಣಿಗಳಿಗೂ ಉಪಕಾರಮಾಡುವ ಇಚ್ಛೆ ಕೃಪೆ ದಾನ ಒಳ್ಳೆಯ ಬುದ್ಧಿ ಸ್ಮರಣೆ ಎಲ್ಲವೂ ನಿನ್ನಲ್ಲಿ ಇವೆ. ಧನಂಜಯನೇ! ಆದ್ದರಿಂದ ನೀನು ಇಂದ್ರನ ಜೊತೆಯಲ್ಲಿ ಸಮಾಗಮವನ್ನು ಹೊಂದುವಿ. ನಿನ್ನಂತಹವನ ಜೊತೆಯಲ್ಲಿ ಸಮಾಗಮವು ದೇವತೆಗಳಿಗೂ ಶ್ಲಾಘ್ಯವಾದುದು.
ಸುಹೃದಾಂ ಸೋದರಾಣಾಂ ಚ ಸರ್ವೇಷಾಂ ಭರತರ್ಷಭ |
ತ್ವಂ ಗತಿಃ ಪರಮಾ ತಾತ ವೃತ್ರಹಾ ಮರುತಾಮಿವ ॥36॥
ಎಲೈ ಭರತರ್ಷಭನೇ! ಪ್ರೀತಿಪಾತ್ರನೇ! ಮರುತ್ತುಗಳಿಗೆ ಇಂದ್ರನು ಆಶ್ರಯನಾದಂತೆ ಎಲ್ಲಾ ಸೋದರರಿಗೂ ಮತ್ತು ಹಿತೈಷಿಗಳಿಗೂ ನೀನೇ ಪರಮಾಶ್ರಯನಾಗಿದ್ದೀಯೆ.
ತಸ್ಮಿಂಸ್ತ್ರಯೋದಶೇ ವರ್ಷೇ ಭ್ರಾತರಃ ಸುಹೃದಶ್ಚ ತೇ |
ಸರ್ವೇ ಹಿ ಸಂಶ್ರಯಿಷ್ಯಂತಿ ಬಾಹುವೀರ್ಯಂ ಮಹಾಬಲ ॥37॥
ಎಲೈ ಮಹಾಬಲನೇ! ಆ ಹದಿಮೂರನೆಯ ವರ್ಷದಲ್ಲಿ ನಿನ್ನ ಎಲ್ಲಾ ಸಹೋದರರರೂ ಮತ್ತು ಹಿತೈಷಿಗಳಾದ ಬಾಂಧವರೂ ನಿನ್ನ ಬಾಹುಬಲವನ್ನು ಆಶ್ರಯಿಸುವರು.
ಸ ಪಾರ್ಥ ಪಿತರಂ ಗಚ್ಛ ಸಹಸ್ರಾಕ್ಷಮರಿಂದಮಮ್ |
ಮುಷ್ಟಿಗ್ರಹಣಮಾದತ್ಸ್ವ ಸರ್ವಾಣ್ಯಸ್ತ್ರಾಣಿ ವಾಸವಾತ್ ॥38॥
ಎಲೈ ಪಾರ್ಥನೇ! ಅಂತಹ ನೀನು ತಂದೆಯಾದ ಇಂದ್ರನನ್ನು ಹೋಗಿ ನೋಡು. ಎಲ್ಲಾ ಅಸ್ತ್ರಗಳನ್ನು ಇಂದ್ರನಿಂದ ಒಂದೇ ಹಿಡಿಯಲ್ಲಿ ಸ್ವೀಕರಿಸು.
ಶತಶೃಂಗೇ ಮಹಾಬಾಹೋ ಮಘವಾನಿದಮಬ್ರವೀತ್ |
ಶೃಣ್ವತಾಂ ಸರ್ವಭೂತಾನಾಂ ತ್ವಾಮುಪಾಘ್ರಾಯ ಮೂರ್ಧನಿ ॥39॥
ಎಲೈ ಮಹಾಬಾಹುವೇ ಶತಶೃಂಗಪರ್ವತದಲ್ಲಿ ನಿನ್ನ ಶಿರಸ್ಸನ್ನು ಆಘ್ರಾಣಿಸಿ ಎಲ್ಲರೂ ಕೇಳುವಂತೆ ಇಂದ್ರನು ಈ ಮಾತನಾಡಿದನು.
ವಿದಿತಃ ಸರ್ವಭೂತಾನಾಂ ದಿವಂ ತಾತ ಗಮಿಷ್ಯಸಿ |
ಪ್ರಾಪ್ಯ ಪುಣ್ಯಕೃತಾಂ ಲೋಕಾನ್ ರಂಸ್ಯಸೇ ಜಯತಾಂ ವರ ॥40॥
ಎಲೈ ಜಯಶೀಲರಲ್ಲಿ ಶ್ರೇಷ್ಠನಾದವನೇ, ನೀನು ಸ್ವರ್ಗಲೋಕಕ್ಕೆ ಹೋಗುವಿ ಎಂದು ಎಲ್ಲರೂ ತಿಳಿದಿದ್ದಾರೆ. ಪುಣ್ಯವನ್ನು ಮಾಡಿದವರು ಹೋಗುವ ಲೋಕಕ್ಕೆ ಹೋಗಿ ಅಲ್ಲಿ ನೀನು ಸುಖಪಡುತ್ತೀಯೆ.
ಮಾನಿತಸ್ತ್ರಿದಶೈಃ ಪಾರ್ಥ ವಿಹೃತ್ಯ ಸುಸುಖಂ ದಿವಿ |
ಅವಾಪ್ಯ ಪರಮಾಸ್ತ್ರಾಣಿ ಪೃಥಿವೀಂ ಪುನರೇಷ್ಯಸಿ ॥41॥
ಪಾರ್ಥನೇ ದೇವತೆಗಳಿಂದ ಸಮ್ಮಾನಿಸಲ್ಪಟ್ಟು ಸ್ವರ್ಗದಲ್ಲಿ ಸುಖವಾಗಿ ವಿಹರಿಸಿ ಎಲ್ಲಾ ಶ್ರೇಷ್ಠವಾದ ಅಸ್ತ್ರಗಳನ್ನು ಸಂಪಾದಿಸಿ ಪುನಃ ಭೂಮಿಗೆ ಬರುವಿ.
ಗುಣಾಂಸ್ತೇ ವಾಸವಸ್ತಾತ ಖಾಂಡವೇ ದಹ್ಯತಿ ತ್ವಯಾ |
ಶೃಣ್ವತಾಂ ಸರ್ವಭೂತಾನಾಂ ಪುನಃ ಪುನರಭಾಷತ ॥42॥
ಎಲೈ ಪ್ರೀತಿಪಾತ್ರನೇ ಖಾಂಡವವನವು ಉರಿಯುತ್ತಿರುವಾಗ ಇಂದ್ರನು ಎಲ್ಲಾ ಭೂತಗಳೂ ಕೇಳುವಂತೆ ನಿನ್ನ ಗುಣಗಳನ್ನು ಪುನಃಪುನಃ ಹೇಳಿದನು.
ತಾಂ ಪ್ರತಿಜ್ಞಾಂ ನರಶ್ರೇಷ್ಠ ಕರ್ತುಮರ್ಹಸಿ ವಾಸವೀಮ್ |
ಕಂಚಿದ್ದೇಶಮಿತಃ ಪ್ರಾಪ್ಯ ತಪೋಯೋಗಮನಾ ಭವ ॥43॥
ಎಲೈ ನರಶ್ರೇಷ್ಠನೇ ಇಂದ್ರನು ಮಾಡಿದ ಆ ಪ್ರತಿಜ್ಞೆಯನ್ನು ನೀನು ಸತ್ಯವನ್ನಾಗಿ ಮಾಡಬೇಕು. ಇಲ್ಲಿಂದ ಸ್ವಲ್ಪದೂರ ಪ್ರಯಾಣಮಾಡಿ ತಪೋಯೋಗನಿರತನಾಗು.
ಕರ್ತುಮರ್ಹಸಿ ಕೌರವ್ಯ ಮಘವದ್ವಚನಂ ಹಿತಮ್ |
ದೀಕ್ಷಿತೋಽದ್ಯೈವ ಗಚ್ಛಸ್ವ ದ್ರಷ್ಟಾಸಿ ತ್ವಂ ಪುರಂದರಮ್ ॥44॥
ಎಲೈ ಕೌರವ್ಯನೇ ಹಿತವಾದ ಇಂದ್ರನ ವಚನವನ್ನು ನೀನು ಈಗಲೇ ನೆರವೇರಿಸಬೇಕು. ನೀನು ಈ ದಿನವೇ ದೀಕ್ಷಿತನಾಗಿ ಹೊರಡು. ಇಂದ್ರನನ್ನು ನೀನು ನೋಡುವಿ.
ವೈಶಂಪಾಯನಃ
ತೌ ಪರಿಷ್ವಜ್ಯ ಬೀಭತ್ಸುಃ ಕೃಷ್ಣಾಮಾಮಂತ್ರ್ಯ ಚಾಭಿಭೋ |
ಅಭ್ಯವಾದಯತ ಪ್ರೀತಃ ತಪಸ್ವಿಪ್ರವರಾನಪಿ |
ಮನಾಂಸ್ಯಾದಾಯ ಸರ್ವೇಷಾಂ ಪ್ರಯಾತಃ ಪುರುಷರ್ಷಭಃ ॥45॥
ಎಲೈ ರಾಜನೇ, ಅರ್ಜುನನು ನಕುಲಸಹದೇವರನ್ನು ಆಲಿಂಗಿಸಿ ದ್ರೌಪದಿಯ ಅನುಮತಿಯನ್ನು ಪಡೆದು, ಶ್ರೇಷ್ಠರಾದ ತಪಸ್ವಿಗಳಿಗೆ ಪ್ರಣಾಮವನ್ನು ಮಾಡಿದನು. ಪುರುಷರ್ಷಭನಾದ ಅವನು ಎಲ್ಲರ ಮನಸ್ಸನ್ನೂ ಅಪಹರಿಸಿ ಅಲ್ಲಿಂದ ಪ್ರಯಾಣಮಾಡಿದನು.
ತಂ ಸಿಂಹಮಿವ ಗಚ್ಛಂತಂ ಸಿಂಹಸ್ಕಂಧೋರಸಂ ತದಾ |
ಪ್ರಾಂಜಲಿಃ ಪಾಂಡವಂ ಕೃಷ್ಣಾ ದೇವಾನಾಂ ಕುರ್ವತೀ ನಮಃ ॥46॥
ವಾಗ್ಭಿಃ ಪರಮಶಕ್ತಾಭಿರ್ಮಂಗಲಾಭಿರಭಾಷತ |
ನಮೋ ಧಾತ್ರೇ ವಿಧಾತ್ರೇ ಚ ಸ್ವಸ್ತಿ ಗಚ್ಛ ವನಾದ್ವನಮ್ ॥47॥
ಸಿಂಹಸ್ಕಂಧನಾಗಿ ಸಿಂಹದ ಗತಿಯಲ್ಲಿ ಹೊರಟ ಅವನನ್ನು ನೋಡಿ ದ್ರೌಪದಿಯು ಕೈಗಳನ್ನು ಮುಗಿದು ದೇವತೆಗಳಿಗೆ ನಮಸ್ಕಾರವನ್ನು ಮಾಡುತ್ತಾ ಪರಮಮಂಗಳವಾದ ಸಮರ್ಥವಾದ ವಚನಗಳಿಂದ ಮಾತನಾಡಿದಳು. ನಾರಾಯಣನಿಗೂ ಬ್ರಹ್ಮರಿಗೂ ನಮಸ್ಕಾರ.

ಕಾಡಿನಿಂದ ಕಾಡಿಗೆ ಕ್ಷೇಮದಿಂದ ಹೋಗು.
ಧರ್ಮಸ್ತ್ವಾಂ ಜುಷತಾಂ ಪಾರ್ಥ ಭಾಸ್ಕರಶ್ಚ ವಿಭಾವಸುಃ |
ಬ್ರಹ್ಮಾ ತ್ವಾಂ ಬ್ರಾಹ್ಮಣಾಶ್ಚೈವ ಪಾಲಯಂತು ಧನಂಜಯ ||48||
ಎಲೈ ಪಾರ್ಥನೇ! ಧರ್ಮವು ನಿನ್ನನ್ನು ಸೇವಿಸಲಿ. ಪ್ರಕಾಶಕರನಾದ ಸೂರ್ಯನು ನಿನ್ನನ್ನು ಸೇವಿಸಲಿ. ಧನಂಜಯನೇ! ಬ್ರಹ್ಮನು ಮತ್ತು ಬ್ರಾಹ್ಮಣರು ನಿನ್ನನ್ನು ರಕ್ಷಿಸಲಿ.
ಜ್ಯೇಷ್ಠಾಪಚಾಯೀ ಜ್ಯೇಷ್ಠಸ್ಯ ಭ್ರಾತುರ್ವಚನಮಾಸ್ಥಿತಃ |
ಪ್ರಪದ್ಯೇಥಾ ವಸೂನ್ ರುದ್ರಾನಾದಿತ್ಯಾನ್ ಸಮರುದ್ಗಣಾನ್ |
ವಿಶ್ವೇದೇವಾಂಸ್ತಥಾ ಸಾಧ್ಯಾನ್ ಶಾಂತ್ಯರ್ಥಂ ಭರತರ್ಷಭ ||49||
ಎಲೈ ಭರತರ್ಷಭನೇ ಜ್ಯೇಷ್ಠರನ್ನು ಪೂಜಿಸುವ ನೀನು ಜ್ಯೇಷ್ಠ ಭ್ರಾತೃವಿನ ವಚನವನ್ನು ಅನುಸರಿಸಿ ವಸುಗಳನ್ನೂ ರುದ್ರರನ್ನೂ ಆದಿತ್ಯರನ್ನೂ ಮರುದ್ಗಣಸಂಯುತರಾದ ವಿಶ್ವೇದೇವತೆಗಳನ್ನೂ ಹಾಗೆಯೇ ಸಾಧ್ಯರನ್ನೂ ಶಾಂತ್ಯರ್ಥವಾಗಿ ಶರಣು ಹೊಂದುವವನಾಗು.
ಸ್ವಸ್ತಿ ತೇಽಸ್ತ್ವಂತರಿಕ್ಷೇಭ್ಯೋ ದಿವ್ಯೇಭ್ಯೋ ಭರತರ್ಷಭ |
ಪಾರ್ಥಿವೇಭ್ಯಶ್ಚ ಸರ್ವೇಭ್ಯೋ ಯೇ ಕೇಚಿತ್ ಪರಿಪಂಥಿನಃ ||50||
ಎಲೈ ಭರತರ್ಷಭನೇ ನಿನಗೆ ದಿವ್ಯವಾದ ಅಂತರಿಕ್ಷಗಳಿಂದ ಕ್ಷೇಮವುಂಟಾಗಲಿ. ವಿರುದ್ಧವಾದ ರಾಜರುಗಳೂ ಇದ್ದಾರೆ. ಅವರಿಂದಲೂ ಕ್ಷೇಮ ಉಂಟಾಗಲಿ.
ಅವರೋಧಾದ್ ವನೇ ವಾಸಾತ್ ಸರ್ವಸ್ವಹರಣಾದಪಿ |
ಇದಂ ದುಃಖತರಂ ಮನ್ಯೇ ಪುತ್ರೇಭ್ಯಶ್ಚ ವಿವಾಸನಾತ್ ||51||
ಸಭೆಯಲ್ಲಿ ಸಂದುದಕ್ಕಿಂತಲೂ ವನವಾಸಕ್ಕಿಂತಲೂ ಸರ್ವಸ್ವ ಅಪಹಾರಕ್ಕಿಂತಲೂ ನಿನ್ನನ್ನು ಅಗಲುವುದು ಹಾಗೆಯೇ ಮಕ್ಕಳನ್ನು ಅಗಲುವುದು ನನಗೆ ಹೆಚ್ಚು ದುಃಖಕರವೆಂದು ಭಾವಿಸುತ್ತೇನೆ.
ಮಾ ಸ್ಮಾಹಂ ಕ್ಷತ್ರಿಯಕುಲೇ ಜಾತುಚಿತ್ಪುನರಾಭವಮ್ |
ಬ್ರಾಹ್ಮಣೇಭ್ಯೋ ನಮಸ್ಯಾಮಿ ಯೇಷಾಂ ನಾಯುಧಜೀವಿಕಾ ||52||
ನಾನು ಇನ್ನೊಮ್ಮೆ ಕ್ಷತ್ರಿಯಕುಲದಲ್ಲಿ ಹುಟ್ಟುವುದು ಬೇಡ. ಯಾರು ಅಯುಧವನ್ನು ಹಿಡಿದು ಜೀವಿಸುವುದಿಲ್ಲವೋ ಅಂತಹ ಬ್ರಾಹ್ಮಣರಿಗೆ ನಮಸ್ಕಾರಮಾಡುತ್ತೇನೆ.
ಧ್ವಂಸಿತಾಃ ಸ್ವಗೃಹೇಭ್ಯಶ್ಚ ರಾಷ್ಟ್ರಾಚ್ಚ ಭರತರ್ಷಭ |
ವನೇ ಪ್ರತಿಷ್ಠಿತೋ ಭೂತ್ವಾ ಸೌಹಾರ್ದಾದವತಿಷ್ಠತೇ ||53||
ಭರತರ್ಷಭನೇ ನಾವೆಲ್ಲರೂ ನಾಶವನ್ನು ಹೊಂದಿದ್ದೇವೆ. ನಮ್ಮ ಮನೆಗಳಿಂದಲೂ  ನಮ್ಮ ರಾಜ್ಯದಿಂದಲೂ ಚ್ಯುತರಾಗಿ ಕಾಡಿನಲ್ಲಿ ಇದ್ದೇವೆ.  ದುರ್ಯೋಧನನು ರಾಜ್ಯದಲ್ಲಿ ಪ್ರತಿಷ್ಠಿತನಾಗಿ ಸಂತೋಷದಿಂದ ಇದ್ದಾನೆ.
ಜೇತಾ ಸ ಸರ್ವಶತ್ರೂಣಾಂ ಯಃ ಪಾವಕಮತರ್ಪಯತ್ |
ಜನಸ್ತ್ವಾಂ ಪಶ್ಯತೀದಾನೀಂ ಗಚ್ಛಂತಂ ಭರತರ್ಷಭ ||54||
ಎಲೈ ಭರರ್ಷಭನೇ ಸರ್ವಶತ್ರುಗಳನ್ನು ಗೆದ್ದಂತಹ ಅಗ್ನಿಯನ್ನು ಸಂತೋಷದಪಡಿಸಿದಂತಹ ನೀನು ಈಗ  ನಮ್ಮನ್ನು ಬಿಟ್ಟು ಹೋಗುವುದನ್ನು ಜನರು ನೋಡುತ್ತಿದ್ದಾರೆ.
ಅಸ್ಮಿನ್ನೂನಂ ಮಹಾರಣ್ಯೇ ಭ್ರಾತರಃ ಸುಹೃದಶ್ಚ ತೇ |
ತ್ವತ್ಕಥಾಃ ಕಥಯಿಷ್ಯಂತಿ ಚಾರಣಾ ಋಷಯಸ್ತಥಾ ||55||
ಈ ಮಹಾಕಾಡಿನಲ್ಲಿ ನಿನ್ನ ಸಹೋದರರೂ ಹಿತೈಷಿಗಳೂ ಚಾರಣರೂ ಮತ್ತು ಋಷಿಗಳೂ ಸಹ ಖಂಡಿತವಾಗಿ ನಿನ್ನ ಕಥೆಗಳನ್ನು ಹೇಳುವರು.
ಯತ್ತತ್ ಕುಂತೀ ಮಹಾಬಾಹೋ ಜಾತಸ್ಯೈಚ್ಛದ್ ಧನಂಜಯ |
ತತ್ತೇ ಸರ್ವಂ ತಥೈವಾಸ್ತು ಯಥಾ ಚ ಮನಸೇಚ್ಛಸಿ ||56||
ವಸುದೇವಸ್ವಸಾ ದೇವೀ ತ್ವಾಮಾರ್ಯಾ ಪುನರಾಗಮತ್ |
ಪಶ್ಯತು ತ್ವಾ ಪೃಥಾ ಪಾರ್ಥ ಸಹಸ್ರಾಕ್ಷಮಿವಾದಿತಿಃ ||57||
ಧನಂಜಯನೇ! ನೀನು ಜನಿಸಿದಾಗ ಕುಂತಿಯು ನಿನಗೆ ಯಾವಯಾವ ಭಾಗ್ಯಗಳನ್ನು ಆಶಿಸಿದಳೋ ಅವೆಲ್ಲವೂ ಹಾಗೆಯೇ ಆಗಲಿ. ನೀನು ಮನಸ್ಸಿನಲ್ಲಿ ಇಚ್ಛಿಸುವುದೆಲ್ಲಾ ಕೈಗೂಡಲಿ. ವಸುದೇವಸಹೋದರಿಯಾದ ಅತ್ತೆಯಾದ ಕುಂತೀದೇವಿಯು ಅದಿತಿಯು ಇಂದ್ರನನ್ನು ನೋಡಿದಂತೆ ತಪಸ್ಸನ್ನು ಮಗಿಸಿ ಹಿಂದಿರುಗಿ ಬಂದ ನಿನ್ನನ್ನು ನೋಡಲಿ.
ನೂನಂ ತೇ ಭ್ರಾತರಃ ಸರ್ವೇ ತ್ವತ್ಕಥಾಭಿಃ ಪ್ರಜಾಗರೇ |
ರಂಸ್ಯಂತೇ ತವ ಕರ್ಮಾಣಿ ಕೀರ್ತಯಂತಃ ಪುನಃ ಪುನಃ ||58||
ಖಂಡಿತವಾಗಿ ನಿನ್ನ ಸಹೋದರರು ಜಾಗರಣೆಯನ್ನು ಮಾಡಿ  ನಿನ್ನ ಕಥೆಗಳನ್ನೂ ನಿನ್ನ ಕರ್ಮಗಳನ್ನೂ ಪುನಃಪುನಃ ಹೇಳುತ್ತಾ ಸಂತೋಷಪಡುವರು.
ನೈವಂ ನಃ ಪಾರ್ಥ ಭೋಗೇಷು ನ ಧನೇ ನೋತ ಜೀವಿತೇ |
ತುಷ್ಟಾ ಬುದ್ಧಿರ್ಭವಿತ್ರೀ ವಾ ತ್ವಯಿ ದೀರ್ಘಪ್ರವಾಸಿನಿ ||59||
ಎಲೈ ಪಾರ್ಥನೇ ನೀನು ದೀರ್ಘಪ್ರವಾಸಕ್ಕೆ ಹೋಗಿರಲು ನಮಗೆ ಭೋಗದಲ್ಲಾಗಲೀ ಧನದಲ್ಲಾಗಲೀ ಅಥವಾ ಜೀವನದಲ್ಲಾಗಲೀ ಸಂತೋಷದ ಬುದ್ಧಿಯೂ ಉಂಟಾಗುವುದಿಲ್ಲ.

ಆಶಾ ಸಂಜಾಯತೇ ವೀರ ತ್ವಯ್ಯರಣ್ಯಂ ಪ್ರಪದ್ಯತಿ |
ತ್ವಯಿ ನಃ ಪಾರ್ಥ ಸರ್ವೇಷಾಂ ಸುಖದುಃಖೇ ಪ್ರತಿಷ್ಠಿತೇ |
ಜೀವಿತಂ ಮರಣಂ ಚೈವ ಸ್ವರ್ಗೋಽಥ ನರಕಸ್ತಥಾ ||60||
ಎಲೈ ವೀರನೇ! ನೀನು ಅರಣ್ಯಕ್ಕೆ ಹೋಗುತ್ತಿರಲು ನಿನ್ನನ್ನು ನೋಡುವ ಆಸೆಯು ಉಂಟಾಗುತ್ತದೆ. ಎಲೈ ಪಾರ್ಥನೇ, ನಮ್ಮ ಸುಖದುಃಖಗಳು ಜೀವನ ಅಥವಾ ಮರಣ ಸ್ವರ್ಗ ಅಥವಾ ನರಕ ಇವೆಲ್ಲವೂ ನಿನ್ನನ್ನು ಅವಲಂಬಿಸಿವೆ.
ಆಪೃಷ್ಟೋ ನೋಽಸಿ ಕೌಂತೇಯ ಸ್ವಸ್ತಿ ಪ್ರಾಪ್ನುಹಿ ಪಾಂಡವ |
ಕೃತಾಸ್ತ್ರಂ ಸ್ವಸ್ತಿಮಂತಂ ತ್ವಾಂ ದ್ರಕ್ಷ್ಯಾಮಿ ಪುನರಾಗತಮ್ ||61||
ಎಲೈ ಕೌಂತೇಯನೇ, ನಾವು ಅನುಮತಿಯನ್ನು ನೀಡಿದ್ದೇವೆ. ಪಾಂಡವನೇ ಕ್ಷೇಮದಿಂದ ಪ್ರಯಾಣಮಾಡು. ಅಸ್ತ್ರವನ್ನು ಸಂಪಾದಿಸಿ ಕ್ಷೇಮದಿಂದ ಹಿಂದಿರುಗಿದ ನಿನ್ನನ್ನು ನಾನು ಪುನಃ ನೋಡುವೆನು. (ಎಂದು ದ್ರೌಪದಿಯು ಹೇಳಿದಳು)
ಪ್ರದಕ್ಷಿಣಂ ತತಃ ಕೃತ್ವಾ ಭ್ರಾತೄನ್ ಧೌಮ್ಯಂ ಚ ಪಾಂಡವಃ |
ಕೃಷ್ಣಾಕಟಾಕ್ಷಪಾಥೇಯಂ ಹೃದಿ ಕೃತ್ವಾ ತತೋಽರ್ಜುನಃ |
ಪ್ರಾತಿಷ್ಠತ ಮಹಾಬಾಹುಃ ಸುಮನಾಃ ಪ್ರೀತಿಮಾಂಸ್ತದಾ ||62||
ಮಹಾಬಾಹುವಾದ ಅರ್ಜುನನು ತನ್ನ ಅಣ್ಣಂದಿರಿಗೂ ಮತ್ತು ಧೌಮ್ಯರಿಗೂ ಪ್ರದಕ್ಷಿಣೆಯನ್ನು ಮಾಡಿ ದ್ರೌಪದಿಯ ಕಟಾಕ್ಷವನ್ನು ಪಾಥೇಯವೆಂದು ಹೃದಯದಲ್ಲಿ ಧರಿಸಿ ಮಹಾಬಾಹುವಾದ ಅವನು ಒಳ್ಳೆಯ ಮನಸ್ಸಿನಿಂದ ಸಂತೋಷಯುಕ್ತನಾಗಿ ಮುಂದೆ ನಡೆದನು.
ಶನೈರಿವ ದಿಶಂ ವೀರ ಉದೀಚೀಂ ಭರತರ್ಷಭ |
ಸಂಹರಂಸ್ತರಸಾ ವೃಕ್ಷಾನ್ ಲತಾ ವಲ್ಲೀಶ್ಚ ಭಾರತ |
ಅಸಜ್ಜಮಾನೋ ವೃಕ್ಷೇಷು ಜಗಾಮ ಸುಮಹಾಬಲಃ ||63||
ಎಲೈ ಭರತರ್ಷಭನೇ, ವೀರನಾದ ಅರ್ಜುನನು ಮೊದಲು ನಿಧಾನವಾಗಿ ತೋರುವಂತೆ ಉತ್ತರದಿಕ್ಕಿಗೆ ಹೊರಟು ತನ್ನ ವೇಗದಿಂದ ವೃಕ್ಷಗಳನ್ನೂ ಲತೆಗಳನ್ನೂ ಮತ್ತು ಬಳ್ಳಿಗಳನ್ನೂ ಬೀಳಿಸುತ್ತಾ, ಮಹಾಬಲಶಾಲಿಯಾಗಿ ಯಾವ ವೃಕ್ಷಗಳಲ್ಲಿಯೂ ಸಿಕ್ಕಿಹಾಕಿಕೊಳ್ಳದೆ ಮುಂದೆ ಸಾಗಿದನು.
ತಸ್ಯ ಮಾರ್ಗಾದಪಾಕ್ರಾಮನ್ ಸರ್ವಭೂತಾನಿ ಗಚ್ಛತಃ |
ಯುಕ್ತಸ್ಯೈಂದ್ರೇಣ ಯೋಗೇನ ಪರಾಕ್ರಾಂತಸ್ಯ ಶುಷ್ಮಿಣಃ ||64||
ಇಂದ್ರಸಂಬಂಧಿಯಾದ ಯೋಗವನ್ನು (ಮಂತ್ರವನ್ನು) ಧರಿಸಿ ಪರಾಕ್ರಮದಿಂದ ಮುಂದೆ ಸಾಗುತ್ತಿರುವ ವೀರ್ಯವಂತನಾದ ಅವನ ಮಾರ್ಗದಿಂದ ಎಲ್ಲ ಪ್ರಾಣಿಗಳೂ ದೂರ ಸರಿದವು.
ಸೋಽಗಚ್ಛತ್ ಪರ್ವತಂ ಪುಣ್ಯಮೇಕಾಹ್ನಾ ಸುಮಹಾಮನಾಃ |
ಮನೋಜವಗತಿರ್ಭೂತ್ವಾ ಯೋಗಯುಕ್ತೋ ಯಥಾಽನಿಲಃ ||65||
ಮಹಾಮನಸ್ವಿಯಾದ ಅವನು ಯೋಗಯುಕ್ತನಾಗಿ ವಾಯುವಿನಂತೆ ಮನೋವೇಗವುಳ್ಳ ಗಮನವನ್ನು ಹೊಂದಿ ಒಂದೇ ದಿನದಲ್ಲಿ ಹಿಮಾಲಯ ಪರ್ವತವನ್ನು ತಲುಪಿದನು.
ಹಿಮವಂತಮತಿಕ್ರಮ್ಯ ಗಂಧಮಾದನಮೇವ ಚ |
ಅತ್ಯಕ್ರಾಮತ್ ಸುದುರ್ಗಾಣಿ ದಿವಾರಾತ್ರಮನಿಂದಿತಃ ||66||
ಇಂದ್ರಕೀಲಂ ಸಮಾಸಾದ್ಯ ತತೋಽತಿಷ್ಠದ್ ಧನಂಜಯಃ |
ಅಂತರಿಕ್ಷೇ ಸ ಶುಶ್ರಾವ ತಿಷ್ಠೇತಿ ಚ ವಚಸ್ತದಾ ||67||
ಹಿಮಾಲಯಪರ್ವತವನ್ನು ದಾಟಿ ಅಲ್ಲಿಯೇ ಒಂದು ಶಿಖರವಾದ ಗಂಧಮಾಧನವನ್ನು ದಾಟಿ ಅನಿಂದಿತನಾದ ಅವನು ಹಗಲು ರಾತ್ರಿಗಳಲ್ಲಿ ನಡೆದು ಅನೇಕ ದುರ್ಗಗಳನ್ನು ದಾಟಿದನು. ಧನಂಜಯನು ಇಂದ್ರಕೀಲಪರ್ವತವನ್ನು ತಲುಪಿ ಅಲ್ಲಿ ನೆಲೆಸಿದನು. ಆಗ ಅವನು ಇಲ್ಲಿಯೇ ನಿಲ್ಲು ಎಂಬ ಅಂತರಿಕ್ಷವಾಣಿಯನ್ನು ಕೇಳಿದನು.
ಗತ್ವಾ ಹಿ ಷಡಹೋರಾತ್ರಾನ್ ಸಪ್ತಮೇಽಹನಿ ಪಾಂಡವಃ |
ಇಂದ್ರಕೀಲಸ್ಯ ತು ಪ್ರಸ್ಥೇ ತತೋ ಯೋಗಪರೋಽಭವತ್ ||68||
ಹೀಗೆ ಪಾಂಡವನು ಆರು ದಿನಗಳ ಕಾಲ ಹಗಲೂ ಮತ್ತು ರಾತ್ರಿಯೂ ನಡೆದು ಏಳನೆಯ ದಿವಸ ಇಂದ್ರಕೀಲಪರ್ವತದ ತಪ್ಪಲನ್ನು ತಲುಪಿ ಅಲ್ಲಿ ಯೋಗಪರನಾದನು.
ಊರ್ಧ್ವಬಾಹುರ್ನ ಚಾಂಗಾನಿ ಪ್ರಾಸ್ಪಂದಯತ ಕಿಂಚನ |
ಸಮಾಹಿತಾತ್ಮಾ ನಿಯತಃ ಸಹಸ್ರಾಕ್ಷಸುತೋಽಚ್ಯುತಃ ||69||
ಅಲ್ಲಿ ಅವನು ಊರ್ಧ್ವಬಾಹುವಾಗಿ ತನ್ನ ಶರೀರವನ್ನು ಅಲ್ಲಾಡಿಸದೆ ಮನಃಸಮಾಧಿಯಿಂದಲೂ ನಿಯಮದಿಂದಲೂ ಕೂಡಿದವನಾಗಿ ತನ್ನ ಗುಣಗಳಿಂದ ಚ್ಯುತನಾಗದ ಇಂದ್ರಪುತ್ರನಾದ ಅವನು ತಪಸ್ಸನ್ನು ಮಾಡಿದನು.
ತತೋಽಪಶ್ಯತ್ ಸವ್ಯಸಾಚೀ ವೃಕ್ಷಮೂಲೇ ತಪಸ್ವಿನಮ್ |
ಬ್ರಾಹ್ಮ್ಯಾ ಶ್ರಿಯಾ ದೀಪ್ಯಮಾನಂ ಪಿಂಗಲಂ ಜಟಿಲಂ ಕೃಶಮ್ |
ಸೋಽಬ್ರವೀದರ್ಜುನಂ ತತ್ರ ಸ್ಥಿತಂ ದೃಷ್ಟ್ವಾ ಮಹಾತಪಾಃ ||70||
ಅನಂತರ ಅರ್ಜುನನು ಅಲ್ಲಿ ಒಂದು ವೃಕ್ಷಮೂಲದಲ್ಲಿ ಕುಳಿತಿದ್ದ ಬ್ರಹ್ಮಕಾಂತಿಯಿಂದ ಬೆಳಗುತ್ತಿದ್ದ ಪಿಂಗಲನೂ ಜಟಿಲನೂ ಮತ್ತು ಕೃಶನೂ ಆದ ತಪಸ್ವಿಯನ್ನು ನೋಡಿದನು. ಆ ಮಹಾತಪಸ್ವಿಯು ಅಲ್ಲಿ ನಿಂತ ಅರ್ಜುನನನ್ನು ನೋಡಿ ಹೀಗೆ ಹೇಳಿದನು.
ಕಸ್ತ್ವಂ ತಾತೇಹ ಸಂಪ್ರಾಪ್ತೋ ಧನುಷ್ಮಾನ್ ಕವಚೀ ಶರೀ |

ಬದ್ಧ್ವಾಸಿ ಸತನುತ್ರಾಣಃ ಕ್ಷತ್ರಧರ್ಮಮನುವ್ರತಃ ॥71॥
ಎಲೈ ಪ್ರೀತಿಪಾತ್ರನೇ! ಧನುಸ್ಸನ್ನು ಧರಿಸಿ ಕವಚವನ್ನು ಧರಿಸಿ ಶರಗಳನ್ನು ಹಿಡಿದು ಖಡ್ಗವನ್ನು ಕಟ್ಟಿಕೊಂಡು ರಕ್ಷಣೆಯ ಕವಚಗಳನ್ನು ತೊಟ್ಟುಕೊಂಡು ಇಲ್ಲಿಗೆ ಬಂದು ಕ್ಷತ್ರಿಯ ಧರ್ಮವನ್ನು ಪಾಲಿಸುತ್ತಿರುವ ನೀನು ಯಾರು?
ನೇಹ ಶಸ್ತ್ರೇಣ ಕರ್ತವ್ಯಂ ಶಾಂತಾನಾಮಯಮಾಲಯಃ।
ವಿನೀತಕ್ರೋಧಹರ್ಷಾಣಾಂ ಬ್ರಾಹ್ಮಣಾನಾಂ ತಪಸ್ವಿನಾಮ್ ॥72॥
ಇದು ಶಾಂತರಾದ ಋಷಿಗಳ ಆವಾಸಸ್ಥಾನ. ಇಲ್ಲಿ ಶಸ್ತ್ರದಿಂದ ಮಾಡಬೇಕಾದ ಕಾರ್ಯವು ಯಾವುದೂ ಇಲ್ಲ. ಇದು ಕ್ರೋಧಹರ್ಷಗಳನ್ನು ನಿಯಂತ್ರಿಸಿದ ಬ್ರಾಹ್ಮಣತಪಸ್ವಿಗಳ ಆವಾಸಸ್ಥಾನ.
ನೇಹಾಸ್ತಿ ಧನುಷಾ ಕಾರ್ಯಂ ನ ಸಂಗ್ರಾಮೋಽತ್ರ ಕರ್ಹಿಚಿತ್।
ನಿಕ್ಷಿಪೈತದ್ ಧನುಸ್ತಾತ ಪ್ರಾಪ್ತೋಽಸಿ ಪರಮಾಂ ಗತಿಮ್ ॥73॥
ಇಲ್ಲಿ ಬಿಲ್ಲಿನಿಂದ ಯಾವ ಉಪಯೋಗವೂ ಇಲ್ಲ. ಇಲ್ಲಿ ಯಾವ ಯುದ್ಧವೂ ನಡೆಯುವುದಿಲ್ಲ. ಪ್ರೀತಿಪಾತ್ರನೇ ಧನುಸ್ಸನ್ನು ಇಲ್ಲಿಯೇ ಇಡು. ನೀನು ಶ್ರೇಷ್ಠವಾದ ಗತಿಯನ್ನು ಹೊಂದಿದ್ದೀಯೆ.
ಇತ್ಯನಂತೌಜಸಂ ವೀರಂ ಯಥಾ ಚಾನ್ಯಂ ಪೃಥಗ್ಜನಮ್।
ತಥಾ ವಾಚಮಥಾಭೀಕ್ಷ್ಣಂ ಬ್ರಾಹ್ಮಣೋಽರ್ಜುನಮಬ್ರವೀತ್ ॥74॥
ಹೀಗೆ ಅಮಿತಪರಾಕ್ರಮಿಯೂ ವೀರನೂ ಆದ ಅರ್ಜುನನನ್ನು ಕುರಿತು ಆ ಬ್ರಾಹ್ಮಣನು ಸಾಧಾರಣಮನುಷ್ಯನನ್ನು ಕುರಿತು ಆಡಿದಂತೆ ಈ ಮಾತುಗಳನ್ನು ಪುನಃಪುನಃ ಆಡಿದನು.
ನ ಚೈನಂ ಚಾಲಯಾಮಾಸ ಧೈರ್ಯಾತ್ ಸುದೃಢನಿಶ್ಚಯಮ್।
ತಮುವಾಚ ತತಃ ಪ್ರೀತಃ ಸ ದ್ವಿಜಃ ಪ್ರಹಸನ್ನಿವ।
ವರಂ ವೃಣೀಷ್ವ ಭದ್ರಂ ತೇ ಶಕ್ರೋಽಹಮರಿಸೂದನ ॥75॥
ಆದರೂ ದೃಢವಾದ ನಿಶ್ಚಯವುಳ್ಳ ಅರ್ಜುನನು ಧೈರ್ಯದಿಂದ ಚಲಿಸುವಂತೆ ಮಾಡಲು ಸಾಧ್ಯವಾಗಲಿಲ್ಲ. ಆಗ ಆ ಬ್ರಾಹ್ಮಣನು ನಗುತ್ತಾ ಸಂತೋಷಗೊಂಡು ಅರ್ಜುನನನ್ನು ಕುರಿತು ಎಲೈ ಶತ್ರುಸೂದನನೇ ನಿನಗೆ ಮಂಗಳವಾಗಲಿ. ನಾನು ಇಂದ್ರ. ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದನು.
ಏವಮುಕ್ತಃ ಪ್ರತ್ಯುವಾಚ ಸಹಸ್ರಾಕ್ಷಂ ಧನಂಜಯಃ।
ಪ್ರಾಂಜಲಿಃ ಪ್ರಣತೋ ಭೂತ್ವಾ ಶೂರಃ ಕುರುಕುಲೋದ್ವಹಃ ॥76॥
ಹೀಗೆ ಹೇಳಲ್ಪಟ್ಟ ಕುರುಕುಲೋದ್ವಹನೂ ಶೂರನೂ ಆದ ಅರ್ಜುನನು ಇಂದ್ರನಿಗೆ ಕೈಗಳನ್ನು ಮುಗಿದು ನಮಸ್ಕರಿಸಿ ಉತ್ತರವಾಗಿ ಮಾತನಾಡಿದನು.
ಈಪ್ಸಿತೋ ಹ್ಯೇಷ ವೈ ಕಾಮೋ ವರಂ ಚೈವ ಪ್ರಯಚ್ಛ ಮೇ।
ತ್ವತ್ತೋಽದ್ಯ ಭಗವನ್ನಸ್ತ್ರಂ ಕೃತ್ಸ್ನಮಿಚ್ಛಾಮಿ ವೇದಿತುಮ್।
ಪ್ರತ್ಯುವಾಚ ಮಹೇಂದ್ರಸ್ತಂ ಪ್ರೀತಾತ್ಮಾ ಪ್ರಹಸನ್ನಿವ ॥77॥
ಇದು ನನಗೆ ಅಭೀಪ್ಸಿತವಾದ ಕಾಮ. ನನಗೆ ವರವನ್ನು ಕೊಡು. ಪೂಜ್ಯನೇ ನಿನ್ನಿಂದ ಎಲ್ಲಾ ಅಸ್ತ್ರಗಳನ್ನೂ ಸಂಪಾದಿಸಲು ನಾನು ಈ ದಿನ ಬಯಸುತ್ತೇನೆ. ಆಗ ಮಹೇಂದ್ರನು ಸಂತೋಷಗೊಂಡು ನಗುತ್ತಾ ಪುನಃ ಅರ್ಜುನನನ್ನು ಕುರಿತು ಮಾತನಾಡಿದನು.
ಇಹ ಪ್ರಾಪ್ತಸ್ಯ ಕಿಂ ಕಾರ್ಯಮಸ್ತ್ರೈಸ್ತವ ಧನಂಜಯ।
ಕಾಮಾನ್ ವೃಣೀಶ್ವ ಲೋಕಾಂಶ್ಚ ಪ್ರಾಪ್ತೋಽಸಿ ಪರಮಾಂ ಗತಿಮ್ ॥
ಧನಂಜಯನೇ! ಇಲ್ಲಿಗೆ ಬಂದವನಿಗೆ ಅಸ್ತ್ರಗಳಿಂದ ಏನು ಪ್ರಯೋಜನ? ನಿನಗೆ ಬೇಕಾದ ಕಾಮಗಳನ್ನು ಮತ್ತು ಲೋಕಗಳನ್ನು ಕೇಳು. ಶ್ರೇಷ್ಠವಾದ ಗತಿಯನ್ನು ಹೊಂದಿದವನಾಗಿದ್ದೀಯೆ.
ಏವಮುಕ್ತಃ ಪ್ರತ್ಯುವಾಚ ಸಹಸ್ರಾಕ್ಷಂ ಧನಂಜಯಃ।
ನ ಲೋಕಾನ್ ನ ಪುನಃ ಕಾಮಾನ್ ನ ದೇವತ್ವಂ ಕುತಃ ಸುಖಮ್।
ನ ಚ ಸರ್ವಾಮರೈಶ್ವರ್ಯಂ ಕಾಮಯೇ ತ್ರಿದಶಾಧಿಪ ॥79॥
ಹೀಗೆ ಹೇಳಲ್ಪಟ್ಟ ಅರ್ಜುನನು ಇಂದ್ರನನ್ನು ಕುರಿತು ಎಲೈ ದೇವಾಧಿಪತಿಯೇ ನನಗೆ ಲೋಕಗಳು ಬೇಡ. ಕಾಮಗಳೂ ಬೇಡ. ದೇವ ಪದವಿಯೂ ಬೇಡ. ಸುಖವು ಏಕೆಬೇಕು? ನಾನು ಎಲ್ಲಾ ದೇವತೆಗಳ ಐಶ್ವರ್ಯವನ್ನೂ ಬಯಸುವುದಿಲ್ಲ.
ಭ್ರಾತೄಂಸ್ತಾನ್ ವಿಪಿನೇ ತ್ಯಕ್ತ್ವಾ ವೈರಮಪ್ರತಿಯಾತ್ಯ ಚ।
ಅಕೀರ್ತಿಂ ಸರ್ವಲೋಕೇಷು ಗಚ್ಛೇಯಂ ಶಾಶ್ವತೀಃ ಸಮಾಃ ॥80॥
ಆ ನನ್ನ ಸಹೋದರರನ್ನು ಕಾಡಿನಲ್ಲಿ ಬಿಟ್ಟು ದುರ್ಯೋಧನನ ವೈರಕ್ಕೆ ಪ್ರತೀಕಾರವನ್ನು ಮಾಡದೆ ಸರ್ವಲೋಕಗಳಲ್ಲಿ ಶಾಶ್ವತವಾದ ಕಾಲದಲ್ಲಿ ಅಪಕೀರ್ತಿಯನ್ನು ಹೊಂದಿಯೇನು (ಎಂದು ಹೇಳಿದನು.)
ಏವಮುಕ್ತಃ ಪ್ರತ್ಯುವಾಚ ವೃತ್ರಹಾ ಪಾಂಡುನಂದನಮ್।
ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಸರ್ವಲೋಕನಮಸ್ಕೃತಃ ॥81॥
ಹೀಗೆ ಹೇಳಲ್ಪಟ್ಟ ಸರ್ವಲೋಕನಮಸ್ಕೃತನಾದ ಇಂದ್ರನು ಪಾಂಡುನಂದನನಾದ ಅರ್ಜುನನನ್ನು ಮಧುರವಾದ ಮಾತುಗಳಿಂದ ಸಮಾಧಾನಪಡಿಸುತ್ತಾ ಮಾತನಾಡಿದನು.
ಯದಾ ದ್ರಕ್ಷ್ಯಸಿ ಭೂತೇಶಂ ತ್ರ್ಯಕ್ಷಂ ಶೂಲಧರಂ ಶಿವಮ್।
ತದಾ ದಾತಾಸ್ಮಿ ತೇ ತಾತ ದಿವ್ಯಾನ್ಯಸ್ತ್ರಾಣಿ ಸರ್ವಶಃ ॥82॥
ಎಲೈ ಪ್ರೀತಿಪಾತ್ರನೇ ನೀನು ಯಾವಾಗ ಭೂತಪತಿಯೂ ತ್ರಿನೇತ್ರನೂ ತ್ರಿಶೂಲಧಾರಿಯೂ ಆದ ಶಿವನನ್ನು ನೋಡುವಿಯೋ ಆಗ

ನಿನಗೆ ಎಲ್ಲಾ ದಿವ್ಯಾಸ್ತ್ರಗಳನ್ನೂ ಕೊಡುವೆನು.
ಕ್ರಿಯತಾಂ ದರ್ಶನೇ ಯತ್ನೋ ದೇವಸ್ಯ ಪರಮೇಷ್ಠಿನಃ |
ದರ್ಶನಾತ್ ತಸ್ಯ ಕೌಂತೇಯ ಸಂಸಿದ್ಧಃ ಸ್ವರ್ಗಮೇಷ್ಯಸಿ ||83||
ಆ ಪರಮ ದೇವತೆಯ ದರ್ಶನಕ್ಕಾಗಿ ಪ್ರಯತ್ನಪಡು. ಕೌಂತೇಯನೇ ಆ ದೇವನ ದರ್ಶನದಿಂದ ನೀನು ಸಿದ್ಧಿಯನ್ನು ಪಡೆದು ಸ್ವರ್ಗಕ್ಕೆ ಆಗಮಿಸುವಿ.
ಇತ್ಯುಕ್ತ್ವಾ ಫಲ್ಗುನಂ ಶಕ್ರೋ ಜಗಾಮಾದರ್ಶನಂ ತತಃ |
ಅರ್ಜುನೋಽಪ್ಯಥ ತತ್ರೈವ ತಸ್ಥೌ ಯೋಗಬಲಾನ್ವಿತಃ ||84||
ಅರ್ಜುನನನ್ನು ಕುರಿತು ಹೀಗೆ ಹೇಳಿ ಇಂದ್ರನು ಅಲ್ಲಿಯೇ ಅದೃಶ್ಯನಾದನು. ಅನಂತರ ಅರ್ಜುನನೂ ಕೂಡ ಅಲ್ಲಿಯೇ ಯೋಗಬಲದಿಂದ ಕೂಡಿದವನಾಗಿ ತಪಸ್ಸನ್ನು ಮುಂದುವರಿಸುತ್ತಾ ನಿಂತನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ||
|| ಕೈರಾತಪರ್ವಣಿ ಚತುರ್ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತೈದನೆಯ ಅಧ್ಯಾಯ
(ಅರ್ಜುನನ ತಪಸ್ಸು. ಋಷಿಗಳ ಪ್ರಾರ್ಥನೆ.
ಮತ್ತು ಮಹೇಶ್ವರನಿಂದ ಸಮಾಶ್ವಾಸನೆ.)
ಜನಮೇಜಯಃ
ಭಗವನ್ ಶ್ರೋತುಮಿಚ್ಛಾಮಿ ಪಾರ್ಥಸ್ಯಾಕ್ಲಿಷ್ಟಕರ್ಮಣಃ |
ವಿಸ್ತರೇಣ ಕಥಾಮೇತಾಂ ಯಥಾಽಸ್ತ್ರಾಣ್ಯುಪಲಬ್ಧವಾನ್ ||1||
ಪೂಜ್ಯರೇ ಅಕ್ಲಿಷ್ಟಕಾರಿಯಾದ ಪಾರ್ಥನು ಅಸ್ತ್ರಗಳನ್ನು ಪಡೆದ ಈ ಕಥೆಯನ್ನು ವಿಸ್ತಾರವಾಗಿ ಕೇಳಲು ನಾನು ಬಯಸುತ್ತೇನೆ.
ಕಥಂ ಸ ಪುರುಷವ್ಯಾಘ್ರೋ ದೀರ್ಘಬಾಹುಃ ಸುಲೋಚನಃ |
ವನಂ ಪ್ರವಿಷ್ಟಸ್ತೇಜಸ್ವೀ ನಿರ್ಮನುಷ್ಯಮಭೀತವತ್ ||2||
ದೀರ್ಘಬಾಹುವೂ ಸುಲೋಚನನೂ ತೇಜಸ್ವಿಯೂ ಪುರುಷವ್ಯಾಘ್ರನೂ ಆದ ಅವನು ನಿರ್ಜನವಾದ ಅರಣ್ಯವನ್ನು ಹೇಗೆ ಪ್ರವೇಶಿಸಿದನು?
ಕಿಂ ವಾಽನೇನ ಕೃತಂ ತತ್ರ ವಸತಾ ಬ್ರಹ್ಮವಿತ್ತಮ |
ಕಥಂ ಚ ಭಗವಾನ್ ರುದ್ರೋ ದೇವರಾಜಶ್ಚ ತೋಷಿತಃ ||3||
ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರೇ, ಅಲ್ಲಿ ವಾಸಮಾಡಿ ಅವನು ಏನು ಮಾಡಿದನು? ಪೂಜ್ಯನಾದ ಭಗವಂತನಾದ ರುದ್ರನು ಮತ್ತು ಇಂದ್ರನು ಅವನಿಂದ ಹೇಗೆ ಪ್ರಸನ್ನಗೊಳಿಸಲ್ಪಟ್ಟರು?
ಏತದಿಚ್ಛಾಮ್ಯಹಂ ಶ್ರೋತುಂ ತ್ವತ್ಪ್ರಸಾದಾದ್ ದ್ವಿಜೋತ್ತಮ |
ತ್ವಂ ಹಿ ಸರ್ವಜ್ಞ ದಿವ್ಯಂ ಚ ಮಾನುಷಂ ಚೈವ ವೇತ್ಥ ಹ ||4||
ಎಲೈ ಸರ್ವೋತ್ತಮರಾದ ದ್ವಿಜೋತ್ತಮರೇ, ನಿಮ್ಮ ಅನುಗ್ರಹದಿಂದ ನಾನು ಇದನ್ನು ಕೇಳಲು ಬಯಸುತ್ತೇನೆ. ನೀವು ದೇವಲೋಕದ ಕಥೆಗಳನ್ನು ಮತ್ತು ಮನುಷ್ಯಲೋಕದ ಕಥೆಗಳನ್ನು ತಿಳಿದಿದ್ದೀರಿ.
ಅತ್ಯದ್ಭುತಂ ಮಹಾಪ್ರಾಜ್ಞ ರೋಮಹರ್ಷಣಮರ್ಜುನಃ |
ಭವೇನ ಸಹ ಸಂಗ್ರಾಮಂ ಚಕಾರಾಪ್ರತಿಮಂ ಕಿಲ |
ಪುರಾ ಪ್ರಹರತಾಂ ಶ್ರೇಷ್ಠಃ ಸಂಗ್ರಾಮೇಷ್ವಪರಾಜಿತಃ ||5||
ಯಚ್ಛ್ರುತ್ವಾ ನರಸಿಂಹಾನಾಂ ದೈನ್ಯಹರ್ಷಾತಿವಿಸ್ಮಯಾತ್ |
ಶೂರಾಣಾಮಪಿ ಪಾರ್ಥಾನಾಂ ಹೃದಯಾನಿ ಚಕಂಪಿರೇ ||6||
ಮಹಾಪ್ರಾಜ್ಞರೇ, ಹಿಂದೆ ಯೋಧರಲ್ಲಿ ಶ್ರೇಷ್ಠನೂ ಯುದ್ಧಗಳಲ್ಲಿ ಅಪರಾಜಿತನೂ ಆದ ಅರ್ಜುನನು ಮಹೇಶ್ವರನ ಜೊತೆಯಲ್ಲಿ ಅಸದೃಶವಾದ ಯುದ್ಧವನ್ನು ಮಾಡಿದನಷ್ಟೇ. ಅದನ್ನು ಕೇಳಿ ನರಶ್ರೇಷ್ಠರಾದ ಪಾರ್ಥಿವ ರಾಜರುಗಳಿಗೆ ಬಹಳ ವಿಸ್ಮಯವೂ ಹರ್ಷವೂ ಮತ್ತು ಶೂರರಾದವರಿಗೆ ನಮಗೆ ಇಂತಹ ಶೌರ್ಯವಿಲ್ಲವೆಂದು ದೈನ್ಯವೂ ಉಂಟಾಗಿ ಅವರ ಹೃದಯಗಳು ನಡುಗಿದವಷ್ಟೇ?
ಯದ್ಯಚ್ಚ ಕೃತವಾನನ್ಯತ್ ಪಾರ್ಥಸ್ತದಖಿಲಂ ವದ ||7||
ನ ಹ್ಯಸ್ಯ ನಿಂದಿತಂ ಜಿಷ್ಣೋಃ ಸುಸೂಕ್ಷ್ಮಮಪಿ ಲಕ್ಷಯೇ |
ಚರಿತಂ ತಸ್ಯ ಶೂರಸ್ಯ ತನ್ಮೇ ಸರ್ವಂ ಪ್ರಕೀರ್ತಯ ||8||
ಅರ್ಜುನನು ಏನನ್ನು ಮಾಡಿದನೋ ಅದೆಲ್ಲವನ್ನೂ ನನಗೆ ಹೇಳಿ. ಅರ್ಜುನನ ಚರಿತ್ರೆಯಲ್ಲಿ ನಿಂದ್ಯವಾದ ಯಾವ ಸಣ್ಣ ಅಂಶವೂ ಇಲ್ಲ. ಆ ಶೂರನ ಎಲ್ಲಾ ಕಥೆಯನ್ನೂ ನನಗೆ ಹೇಳಿ.
ವೈಶಂಪಾಯನಃ
ಕಥಯಿಷ್ಯಾಮಿ ತೇ ಪಾರ್ಥಕಥಾಮೇತಾಂ ಮಹಾತ್ಮನಃ |
ದಿವ್ಯಾಂ ಕೌರವಶಾರ್ದೂಲ ಮಹತೀಮದ್ಭುತೋಪಮಾಮ್ ||9||
ಕೌರವಶಾರ್ದೂಲನೇ! ಶ್ರೇಷ್ಠವಾದ ಅದ್ಭುತಸದೃಶವಾದ ಮಹಾತ್ಮನಾದ ಅರ್ಜುನನ ಈ ದಿವ್ಯಕಥೆಯನ್ನು ಹೇಳುವೆನು.

ಗಾತ್ರಸಂಸ್ಪರ್ಶಸಂಬದ್ಧಾಂ ತ್ರ್ಯಂಬಕೇಣ ಮಹಾಹವೇ |
ಪಾರ್ಥಸ್ಯ ದೇವದೇವೇನ ಶೃಣು ಸಮ್ಯಕ್ ಸಮಾಗಮಮ್ ॥10॥
ದೊಡ್ಡಯುದ್ಧದಲ್ಲಿ ದೇವದೇವನಾದ ತ್ರ್ಯಂಬಕನ ಜೊತೆಯಲ್ಲಿ ಶರೀರಸ್ಪರ್ಶಮಾಡಿ ನಡೆದ ಪಾರ್ಥನ ಸಮಾಗಮವನ್ನು ಚೆನ್ನಾಗಿ ಕೇಳು.
ಯುಧಿಷ್ಠಿರನಿಯೋಗಾತ್ ಸ ಜಗಾಮಾಮಿತವಿಕ್ರಮಃ |
ಶಕ್ರಂ ಸುರೇಶ್ವರಂ ದ್ರಷ್ಟುಂ ದೇವದೇವಂ ಚ ಶಂಕರಮ್ ॥11 ॥
ಅಮಿತವಿಕ್ರಮನಾದ ಅರ್ಜುನನು ಯುಧಿಷ್ಠಿರನ ಆದೇಶದಂತೆ ದೇವರಾಜನಾದ ಇಂದ್ರನನ್ನು ಮತ್ತು ದೇವದೇವನಾದ ಶಂಕರನನ್ನು ನೋಡಲು ಹೋದನು.
ದಿವ್ಯಂ ತದ್ಧನುರಾದಾಯ ಖಡ್ಗಂ ಚ ಪುರುಷರ್ಷಭಃ |
ಮಹಾಬಲೋ ಮಹಾಬಾಹುರರ್ಜುನಃ ಕಾರ್ಯಸಿದ್ಧಯೇ ॥12॥
ಪುರುಷರ್ಷಭನೂ ಮಹಾಬಲನೂ ಮಹಾಬಾಹುವೂ ಆದ ಅರ್ಜುನನು ದಿವ್ಯವಾದ ಗಾಂಡೀವಧನುಸ್ಸನ್ನು ಮತ್ತು ಖಡ್ಗವನ್ನು ತೆಗೆದುಕೊಂಡು ಕಾರ್ಯಸಿದ್ಧಿಗಾಗಿ ಹೊರಟನು.
ದಿಶಂ ಹ್ಯುದೀಚೀಂ ಕೌರವ್ಯೋ ಹಿಮವಚ್ಛಿಖರಂ ಪ್ರತಿ |
ಐಂದ್ರಿಃ ಸ್ಥಿರಮನಾ ರಾಜನ್ ಸರ್ವಲೋಕಮಹಾರಥಃ ॥13॥
ತ್ವರಯಾ ಪರಯಾ ಯುಕ್ತಸ್ತಪಸೇ ಧೃತನಿಶ್ಚಯಃ |
ವನಂ ಕಂಟಕಿನಂ ಘೋರಮೇಕ ಏವಾನ್ವಪದ್ಯತ ॥14॥
ನಾನಾಪುಷ್ಪಫಲೋಪೇತಂ ನಾನಾಪಕ್ಷಿವಿನಾದಿತಮ್ |
ನಾನಾಮೃಗಗಣಾಕೀರ್ಣಂ ಸಿದ್ಧಚಾರಣಸೇವಿತಮ್ ॥15॥
ಕುರುಕುಲದಲ್ಲಿ ಜನಿಸಿದ ಸರ್ವಲೋಕಮಹಾರಥನೂ ಸ್ಥಿರಮನಸ್ಸುಳ್ಳವನೂ ಇಂದ್ರಪುತ್ರನೂ ಕೌರವ್ಯನೂ ಆದ ಅರ್ಜುನನು ತಪಸ್ಸನ್ನು ಮಾಡುವುದಾಗಿ ನಿಶ್ಚಯಿಸಿ ಉತ್ತರದಿಕ್ಕಿಗೆ ಹಿಮಾಲಯದ ಶಿಖರವನ್ನು ಕುರಿತು ಜಾಗ್ರತೆಯಾಗಿ ಪ್ರಯಾಣಮಾಡಿ ಮುಳ್ಳುಗಳುಳ್ಳ ಮರಗಳಿಂದ ಕೂಡಿದ್ದ ಒಂದು ಘೋರವಾದ ಆರಣ್ಯವನ್ನು ಏಕಾಕಿಯಾಗಿ ಹೊಕ್ಕನು. ಆ ಅರಣ್ಯವು ನಾನಾ ಪುಷ್ಪ ಫಲಗಳಿಂದಲೂ ನಾನಾ ಪಕ್ಷಿಗಳ ನಿನಾದದಿಂದಲೂ ನಾನಾ ಮೃಗಗಳ ಗಣಗಳಿಂದಲೂ ಕೂಡಿ ಸಿದ್ಧಚಾರಣರಿಂದ ಸೇವಿತವಾಗಿದ್ದಿತು.
ತತಃ ಪ್ರಯಾತೇ ಬೀಭತ್ಸೌ ವನಂ ಮಾನುಷವರ್ಜಿತಮ್ |
ಶಂಖಾನಾಂ ಪಟಹಾನಾಂ ಚ ಶಬ್ದಃ ಸಮಭವದ್ ದಿವಿ ॥16॥
ಅನಂತರ ಅರ್ಜುನನು ಮನುಷ್ಯರಹಿತರಾದ ಆ ಅರಣ್ಯವನ್ನು ಪ್ರವೇಶಿಸುತ್ತಿರಲು ಆಕಾಶದಲ್ಲಿ ಶಂಖಗಳ ಮತ್ತು ಭೇರಿಗಳ ಶಬ್ದವು ಉಂಟಾಯಿತು.
ಪುಷ್ಪವರ್ಷಂ ಚ ಸುಮಹನ್ನಿಪಪಾತ ಮಹೀತಳೇ |
ಮೇಘಜಾಲಂ ಚ ವಿತತಂ ಛಾದಯಾಮಾಸ ಸರ್ವತಃ ॥17॥
ಭೂಮಿಯ ಮೇಲೆ ದೊಡ್ಡ ಪುಷ್ಪವೃಷ್ಟಿಯು ಉಂಟಾಯಿತು. ಮೇಘಸಮೂಹವು ಎಲ್ಲೆಡೆಯಲ್ಲಿ ಹರಡಿ ಅರ್ಜುನನಿಗೆ ನೆರಳನ್ನು ಕೊಟ್ಟಿತು.
ಸೋಽತೀತ್ಯ ವನದುರ್ಗಾಣಿ ಸನ್ನಿಕರ್ಷೇ ಮಹಾಗಿರೇಃ |
ಶುಶುಭೇ ಹಿಮವತ್ಪೃಷ್ಠೇ ವಸಮಾನೋಽರ್ಜುನಸ್ತದಾ ॥18॥
ಅರ್ಜುನನು ಆನೇಕ ವನದುರ್ಗಗಳನ್ನು ದಾಟಿ ಮಹಾಪರ್ವತವಾದ ಹಿಮಾಲಯದ ಸಮೀಪದ ತಪ್ಪಲಿನಲ್ಲಿ ವಾಸಮಾಡುತ್ತಾ ಶೋಭಿಸಿದನು.
ತತ್ರ ಪುಣ್ಯದ್ರುಮಾನ್ಪುಷ್ಪಾನ್ ವಿಹಗೈರ್ವಲ್ಗುನಾದಿತಾನ್ |
ದೀರ್ಘಂ ಚ ವಿಪುಲಾವರ್ತಾಂ ನೀಲವೈಡೂರ್ಯಸನ್ನಿಭಾಮ್ ॥19॥
ಹಂಸಕಾರಂಡವೋದ್ಗೀತಾಂ ಸಾರಸಾಭಿರುತಾಂ ತಥಾ |
ಪುಂಸ್ಕೋಕಿಲರುತಾಂ ಚೈವ ಕೌಂಚಬರ್ಹಿಣನಾದಿತಾಮ್ ॥20॥
ಮನೋಹರವನೋಪೇತಾಂ ತಸ್ಮಿನ್ನತಿರಥೋಽರ್ಜುನಃ |
ಪುಣ್ಯಶೀಲಾಮಲಜಲಾಂ ಪಶ್ಯನ್ ಪ್ರೀತಮನಾಽಭವತ್ ॥21॥
ಅಲ್ಲಿ ಅರ್ಜುನನು ಪಕ್ಷಿಗಳಿಂದ ಸುಂದರವಾಗಿ ನಿನಾದಿತವಾದ ಪುಣ್ಯ ವೃಕ್ಷಗಳನ್ನೂ ಪುಷ್ಪಗಳನ್ನೂ ನೋಡಿ, ದೊಡ್ಡ ಸುಳಿಗಳನ್ನುಳ್ಳ ನೀಲ ವೈಡೂರ್ಯದಂತೆ ಕಂಗೊಳಿಸುವ ಹಂಸಕಾರಂಡವ ಸಾರಸ ಮೊದಲಾದ ಜಲಪಕ್ಷಿಗಳ ಕೌಂಚಗಳ ಮತ್ತು ಮಯೂರಗಳ ನಾದಗಳಿಂದಲೂ ಕೂಡಿ, ಮನೋಹರವಾದ ಕಾಡಿನ ಮಧ್ಯದಲ್ಲಿದ್ದ ಪವಿತ್ರವಾದ ಸ್ವಚ್ಛವಾದ ಜಲವನ್ನು ಹೊಂದಿದ್ದ ಸರೋವರವನ್ನು ನೋಡಿ ಅತಿರಥನಾದ ಅವನು ಸಂತೋಷಗೊಂಡನು.
ರಮಣೀಯೇ ವನೋದ್ದೇಶೇ ರಮಮಾಣೋಽರ್ಜುನಸ್ತದಾ |
ತಪಸ್ಯುಗ್ರೇ ವರ್ತಮಾನ ಉಗ್ರತೇಜಾ ಮಹಾಮನಾಃ ॥22॥
ದರ್ಭಚೀರಂ ನಿವಸ್ಯಾಥ ದಂಡಾಜಿನವಿಭೂಷಿತಃ |
ಪೂರ್ಣೇ ಪೂರ್ಣೇ ತ್ರಿರಾತ್ರೇ ತು ಮಾಸಮೇಕಂ ಫಲಾಶನಃ |
ದ್ವಿಗುಣೇನ ಚ ಕಾಲೇನ ದ್ವಿತೀಯಂ ಮಾಸಮತ್ಯಗಾತ್ ॥23॥
ರಮಣೀಯವಾದ ವನಪ್ರದೇಶದಲ್ಲಿ ಸಂತೋಷಪಡುತ್ತಾ ಉಗ್ರವಾದ ತಪಸ್ಸಿನಲ್ಲಿ ನಿರತನಾದ ಮಹಾತೇಜಸ್ವಿಯಾದ

ಧೈರ್ಯಶಾಲಿಯಾದ ಅರ್ಜುನನು ಆಗ ದರ್ಭೆಯಮಡಿಯನ್ನು ಉಟ್ಟು ದಂಡ ಮತ್ತು ಅಜಿನಗಳಿಂದ ವಿಭೂಷಿತನಾಗಿ ಮೊದಲನೆಯ ತಿಂಗಳಿನಲ್ಲಿ ಮೂರುಮೂರು ರಾತ್ರಿಗಳಿಗೆ ಒಮ್ಮೆ ಫಲವನ್ನು ಸ್ವೀಕರಿಸಿ ತಪಸ್ಸನ್ನುಮಾಡಿದನು. ಆರು ದಿನಗಳಿಗೆ ಒಮ್ಮೆ ಸ್ವೀಕರಿಸಿ ತಪಸ್ಸನ್ನು ಮಾಡಿ ಎರಡನೆಯ ತಿಂಗಳನ್ನು ಕಳೆದನು.
ತೃತೀಯಮಾಸಸಮಯೇ ಪಕ್ಷೇಣಾಹಾರಮಾಚರತ್ |
ಜೀರ್ಣಂ ಚ ಪತಿತಂ ಭೂಮೌ ಪರ್ಣಂ ಸಮುಪಯುಕ್ತವಾನ್ ॥24॥
ಚತುರ್ಥೇ ತ್ವಥ ಸಂಪ್ರಾಪ್ತೇ ಮಾಸಿ ಪೂರ್ಣೇ ತತಃ ಪರಮ್ |
ವಾಯುಭಕ್ಷೋ ಮಾಹಾಬಾಹುರಭವತ್ ಪಾಂಡುನಂದನಃ ॥25॥
ಊರ್ಧ್ವಬಾಹುರ್ನಿರಾಲಂಬಃ ಪಾದಾಂಗುಷ್ಠಾಗ್ರವಿಷ್ಠಿತಃ ॥26॥
ಮೂರನೆಯ ತಿಂಗಳಿನಲ್ಲಿ ಹದಿನೈದು ದಿನಕ್ಕೊಮ್ಮೆ ಅಹಾರವನ್ನು ಸೇವಿಸುತ್ತಾ ಹಣ್ಣಾಗಿ ಭೂಮಿಗೆ ಬಿದ್ದ ಎಲೆಗಳನ್ನು ಭುಂಜಿಸಿದನು. ನಾಲ್ಕನೆಯ ಮಾಸವು ಪ್ರಾಪ್ತವಾದಾಗ ಪಾಂಡುನಂದನನೂ ಮಹಾಬಾಹುವೂ ಆದ ಅವನು ಒಂದು ತಿಂಗಳು ಪೂರ್ತಿ ಊರ್ಧ್ವಬಾಹುವಾಗಿ ಪಾದಾಂಗುಷ್ಠದ ಮೇಲೆ ನಿಂತು ಬೇರೆಯ ಅಶ್ರಯವನ್ನು ಪಡೆಯದೆ ಕೇವಲ ವಾಯು ಭಕ್ಷನಾದನು.
ಸದೋಪಸ್ಪರ್ಶನಾಚ್ಚಾಸ್ಯ ಬಭೂವುರಮಿತೌಜಸಃ |
ವಿದ್ಯುದಂಭೋರುಹನಿಭಾ ಜಟಾಸ್ತಸ್ಯ ಮಹಾತ್ಮನಃ ॥27॥
ಅಮಿತತೇಜಸ್ವಿಯಾದ ಅವನು ಯಾವಾಗಲೂ ಸ್ನಾನಮಾಡುವುದರಿಂದ ಮಹಾತ್ಮನಾದ ಅವನ ಜಟೆಗಳು ಮಿಂಚಿನಿಂದ ಮಾಡಿದ ಕಮಲಗಳಂತೆ ಶೋಭಿಸಿದವು.
ತತೋ ಮಹರ್ಷಯಃ ಸರ್ವೇ ಜಗ್ಮುರ್ದೇವಂ ಪಿನಾಕಿನಮ್ |
ಶಿತಿಕಂಠಂ ಮಹಾದೇವಂ ಪ್ರಣಿಪತ್ಯ ಪ್ರಸಾದಯನ್ |
ಸರ್ವಂ ನಿವೇದಯಾಮಾಸುಃ ಕರ್ಮ ತತ್ ಫಲ್ಗುನಸ್ಯ ಚ ॥28॥
ಆಗ ಮಹರ್ಷಿಗಳೆಲ್ಲರೂ ಪಿನಾಕಧಾರಿಯೂ ನೀಲಕಂಠನೂ ಆದ ಮಹಾದೇವನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ಪ್ರಸನ್ನೀಕರಿಸಿಕೊಂಡು ಅರ್ಜುನನ ಎಲ್ಲಾ ತಪಸ್ಸಿನ ವಿಷಯಗಳನ್ನೂ ನಿವೇದಿಸಿದರು.
ಏಷಃ ಪಾರ್ಥೋ ಮಹಾತೇಜಾ ಹಿಮವತ್ಪೃಷ್ಠಮಾಶ್ರಿತಃ |
ಉಗ್ರೇ ತಪಸಿ ದುಷ್ಪಾರೇ ಸ್ಥಿತೋ ಧೂಮಾಪಯನ್ ದಿಶಃ ॥29॥
ಮಹಾತೇಜಸ್ವಿಯಾದ ಈ ಅರ್ಜುನನು ಹಿಮಾಲಯದ ತಪ್ಪಲನ್ನು ಆಶ್ರಯಿಸಿ ಉಗ್ರವಾದ ಮುಗಿಯದ ತಪಸ್ಸಿನಲ್ಲಿ ನಿರತನಾಗಿ ಎಲ್ಲ ದಿಕ್ಕುಗಳಲ್ಲಿ ತನ್ನ ತಪಃಪ್ರಭಾವದಿಂದ ಧೂಮವನ್ನು ಎಬ್ಬಿಸುತ್ತಿದ್ದಾನೆ.
ತಸ್ಯ ದೇವೇಶ ನ ವಯಂ ವಿದ್ಮಃ ಸರ್ವೇ ಚಿಕೀರ್ಷಿತಮ್ |
ಸಂತಾಪಯತಿ ನಃ ಸರ್ವಾನಸೌ ಸಾಧು ನಿವಾರ್ಯತಾಮ್ ॥30॥
ದೇವೇಶನೇ, ಅವನ ಉದ್ದೇಶವು ನಮಗೆ ತಿಳಿದಿಲ್ಲ. ಅವನು ನಮ್ಮೆಲ್ಲರಿಗೆ ಸಂತಾಪವನ್ನು ಉಂಟುಮಾಡುವನೆಂದು ತೋರುತ್ತದೆ. ಅವನನ್ನು ತಪಸ್ಸಿನಿಂದ ಹಿಂದಿರುಗಿಸು.
ಶ್ರೀಮಹೇಶ್ವರಃ
ಶೀಘ್ರಂ ಗಚ್ಛತ ಸಂಹೃಷ್ಟಾ ಯಥಾಗತಮತಂದ್ರಿತಾಃ |
ಅಹಮಸ್ಯ ವಿಜಾನಾಮಿ ಸಂಕಲ್ಪಂ ಮನಸಿ ಸ್ಥಿತಮ್ ॥31॥
ನಾಸ್ಯ ಸ್ವರ್ಗಸ್ಪೃಹಾ ಕಾಚಿನ್ನೈಶ್ವರ್ಯಸ್ಯ ತಥಾಽಽಯುಷಃ |
ಯತ್ ತಸ್ಯ ಕಾಂಕ್ಷಿತಂ ಸರ್ವಂ ತದಸ್ಯ ಕರವಾಣ್ಯಹಂ ॥32॥
ನೀವೆಲ್ಲರೂ ಸಂತುಷ್ಟರಾಗಿ ಆಲಸ್ಯಮಾಡದೆ ಬಂದದಾರಿಯಲ್ಲಿಯೇ ಶೀಘ್ರವಾಗಿ ಹಿಂದಿರುಗಿ. ನಾನು ಅವನ ಮನಸ್ಸಿನಲ್ಲಿರುವ ಸಂಕಲ್ಪವನ್ನು ತಿಳಿದಿದ್ದೇನೆ. ಅವನಿಗೆ ಸ್ವರ್ಗದ ಆಸೆಯಾಗಲೀ ಐಶ್ವರ್ಯದ ಆಸೆಯಾಗಲೀ ಆಯುಷ್ಯದ ಆಸೆಯಾಗಲೀ ಇಲ್ಲ. ಅವನಿಗೆ ಏನು ಅಪೇಕ್ಷಿತವಾಗಿದೆಯೋ ಅದೆಲ್ಲವನ್ನೂ ನಾನು ನೆರವೇರಿಸುತ್ತೇನೆ.
ವೈಶಂಪಾಯನಃ
ತಚ್ಛ್ರುತ್ವಾ ಭಗವದ್ವಾಕ್ಯಮೃಷಯಃ ಸತ್ಯವಾದಿನಃ |
ಪ್ರಹೃಷ್ಟಮನಸೋ ಜಗ್ಮುರ್ಯಥಾಸ್ವಂ ಪುನರಾಶ್ರಮಾನ್ ॥33॥
ಆ ಭಗವದ್ವಾಕ್ಯವನ್ನು ಕೇಳಿ ಸತ್ಯವಾದಿಗಳಾದ ಋಷಿಗಳು ಸಂತುಷ್ಟಚಿತ್ತರಾಗಿ ತಾವು ಬಂದ ದಾರಿಯಲ್ಲಿಯೇ ತಮ್ಮತಮ್ಮ ಆಶ್ರಮಗಳಿಗೆ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತಾರನೆಯ ಅಧ್ಯಾಯ
(ಕಿರಾತಾರ್ಜುನಯುದ್ಧ. ಅರ್ಜುನನ ಪರಾಜಯ. ಮಹೇಶ್ವರನ ಅನುಗ್ರಹ. ಪಾಶುಪತಾಸ್ತ್ರ ದಾನ.)
ವೈಶಂಪಾಯನಃ
ಗತೇಷು ತೇಷು ಸರ್ವೇಷು ಬ್ರಾಹ್ಮಣೇಷು ತಪಸ್ವಿಷು |
ಪಿನಾಕಪಾಣಿರ್ಭಗವಾನ್ ಸರ್ವಪಾಪಹರೋ ಹರಃ ॥1॥

ಕೈರಾತಂ ವೇಷಮಾಸ್ಥಾಯ ಕಾಂಚನದ್ರುಮಸನ್ನಿಭಃ |
ವಿಭ್ರಾಜಮಾನೋ ಧನುಷಾ ಗಿರಿರ್ಮೇರುರಿವಾಪರಃ ॥2॥
ಶ್ರೀಮದ್ಧನುರುಪಾದಾಯ ಶರಾಂಶ್ಚಾಶೀವಿಷೋಪಮಾನ್ |
ನಿಷ್ಪಪಾತ ಮಹಾರ್ಚಿಷ್ಮಾನ್ ದಹನಃ ಕಕ್ಷವಾನಿವ ॥3॥
ತಪಸ್ವಿಗಳಾದ ಆ ಬ್ರಾಹ್ಮಣರೆಲ್ಲರೂ ಹೊರಟುಹೋಗುತ್ತಿರಲು ಸರ್ವಪಾಪಹರನಾದ ಪಿನಾಕಪಾಣಿಯಾದ ಪೂಜ್ಯನಾದ ಹರನು ಕಿರಾತರೂಪವನ್ನು ಧರಿಸಿ ಕಾಂಚನಮಯವಾದ ವೃಕ್ಷದಂತೆ ಶೋಭಿಸುತ್ತಾ ಧನುಸ್ಸನ್ನು ಮತ್ತು ಸರ್ಪಸದೃಶವಾದ ಬಾಣಗಳನ್ನು ತೆಗೆದುಕೊಂಡು ತನ್ನ ಧನುಸ್ಸಿನ ಜೊತೆಯಲ್ಲಿ ಇನ್ನೊಂದು ಮೇರುಪರ್ವತದಂತೆ ಶೋಭಿಸುತ್ತಾ ಮಹಾಕಾಂತಿಯುಕ್ತನಾಗಿ ಕಾಡನ್ನು ದಹಿಸುವ ಅಗ್ನಿಯಂತೆ ಹೊರಟನು.
ದೇವ್ಯಾ ಸಹೋಮಯಾ ಶ್ರೀಮಾನ್ ಸಮಾನವ್ರತವೇಷಯಾ |
ನಾನಾವೇಷಧರೈರ್ಹೃಷ್ಟೈರ್ಭೂತೈರನುಗತಸ್ತಥಾ ॥4॥
ಕಿರಾತವೇಷಸಂಛನ್ನೈಃ ಸ್ತ್ರೀಭಿಶ್ಚಾಪಿ ಸಹಸ್ರಶಃ |
ಅಶೋಭತ ತದಾ ರಾಜನ್ ಸ ದೇವೋಽತೀವ ಭಾರತ ॥5॥
ಎಲೈ ಭಾರತನೇ! ಕಾಂತಿಯುಕ್ತನಾದ ಆ ದೇವನು ಸಮಾನವ್ರತವನ್ನು ಸಮಾನವೇಷವನ್ನು ಧರಿಸಿದ ಪಾರ್ವತಿಯ ಜೊತೆಯಲ್ಲಿ, ಮತ್ತು ನಾನಾವೇಷವನ್ನು ಧರಿಸಿ ಸಂತುಷ್ಟರಾದ ಭೂತಗಳಿಂದಲೂ ಕಿರಾತವೇಷವನ್ನು ಧರಿಸಿದ ಸಹಸ್ರಾರು ಸ್ತ್ರೀಯರಿಂದಲೂ ಅನುಗತನಾಗಿ, ಬಹಳವಾಗಿ ಕಂಗೊಳಿಸಿದನು.
ಕ್ಷಣೇನ ತದ್ವನಂ ಸರ್ವಂ ನಿಃಶಬ್ದಮಭವತ್ ತದಾ |
ನಾದಃ ಪ್ರಸ್ರವಣಾನಾಂ ಚ ಪಕ್ಷಿಣಾಮಪ್ಯುಪಾರಮತ್ ॥6॥
ಒಂದು ಕ್ಷಣದಲ್ಲಿ ಆ ವನವೆಲ್ಲವೂ ನಿಶ್ಶಬ್ದವಾಯಿತು. ಆಗ ಹರಿಯುವ ನೀರಿನ ಶಬ್ದಗಳು ಮತ್ತು ಪಕ್ಷಿಗಳ ನಾದಗಳು ಶಾಂತವಾದವು.
ಸ ಸನ್ನಿಕರ್ಷಮಾಗಮ್ಯ ಪಾರ್ಥಸ್ಯಾಕ್ಲಿಷ್ಟಕರ್ಮಣಃ |
ಮೂಕಂ ನಾಮ ದಿತೇಃ ಪುತ್ರಂ ದದರ್ಶಾದ್ಭುತವಿಕ್ರಮಮ್ ॥7॥
ವಾರಾಹಂ ರೂಪಮಾಸ್ಥಾಯ ತರ್ಜಯಂತಮಿವಾರ್ಜುನಮ್ |
ಹಂತುಂ ಪರಮದುಷ್ಟಾತ್ಮಾ ತಮುವಾಚಾಥ ಫಲ್ಗುನಃ ॥8॥
ಅವನು ಅಕ್ಲಿಷ್ಟಕಾರಿಯಾದ ಅರ್ಜುನನ ಬಳಿಗೆ ಬಂದು ವರಾಹರೂಪವನ್ನು ಧರಿಸಿ ಅರ್ಜುನನನ್ನು ಹೆದರಿಸಿ ಅರ್ಜುನನನ್ನು ಸಂಹರಿಸಲು ಬಯಸಿದ ಪರಮ ದುಷ್ಟನಾದ ಮಹಾಪರಾಕ್ರಮಶಾಲಿಯಾದ ಮೂಕ ಎಂಬ ದೈತ್ಯನನ್ನು ನೋಡಿದನು. ಆಗ ಅರ್ಜುನನು ದೈತ್ಯನನ್ನು ಕುರಿತು ಮಾತನಾಡಿದನು.
ಗಾಂಡೀವಂ ಧನುರಾದಾಯ ಶರಾಂಶ್ಚಾಶೀವಿಷೋಪಮಾನ್ |
ಸಜ್ಯಂ ಧನುರ್ವರಂ ಕೃತ್ವಾ ಜ್ಯಾಘೋಷೇಣ ವ್ಯನಾದಯನ್ ॥9॥
ಯನ್ಮಾಂ ಪ್ರಾರ್ಥಯಸೇ ಹಂತುಮನಾಗಸಮಿಹಾಗತಃ |
ತಸ್ಮಾತ್ತ್ವಾಂ ಪೂರ್ವಮೇವಾದ್ಯ ನೇಷ್ಯಾಮಿ ಯಮಸಾದನಮ್ ॥10॥
ಅರ್ಜುನನು ಗಾಂಡೀವಧನುಸ್ಸನ್ನೂ ಸರ್ಪಗಳಂತೆ ಇದ್ದ ಬಾಣಗಳನ್ನೂ ತೆಗೆದುಕೊಂಡು ಹೆದೆ ಏರಿಸಿ ಜಯಘೋಷವನ್ನು ಮಾಡುತ್ತಾ ಆ ಮೂಕನನ್ನು ಕುರಿತು ನಿರಪರಾಧಿಯಾದ ನನ್ನನ್ನು ಇಲ್ಲಿಗೆ ಬಂದು ನೀನು ಕೊಲ್ಲಲು ಬಯಸುವುದರಿಂದ ನಾನು ಮೊದಲೇ ನಿನ್ನನ್ನು ಯಮಲೋಕಕ್ಕೆ ಕಳುಹಿಸುವೆನು ಎಂದು ಹೇಳಿದನು.
ವೈಶಂಪಾಯನಃ
ದೃಷ್ಟ್ವಾ ತಂ ಪ್ರಹರಿಷ್ಯಂತಂ ಫಲ್ಗುನಂ ದೃಢಧನ್ವಿನಮ್ |
ಕಿರಾತರೂಪೀ ಸಹಸಾ ವಾರಯಾಮಾಸ ಶಂಕರಃ ॥11॥
ದೃಢಧನುಸ್ಸನ್ನು ಹೊಂದಿದ ಅರ್ಜುನನು ಆ ವರಾಹವನ್ನು ಹೊಡೆಯಲು ಉದ್ಯುಕ್ತನಾಗಿರುವುದನ್ನು ನೋಡಿ ಕಿರಾತರೂಪಿಯಾದ ಶಂಕರನು ತಕ್ಷಣ ಅರ್ಜುನನನ್ನು ತಡೆದನು.
ಮಯೈಷ ಪ್ರಾರ್ಥಿತಃ ಪೂರ್ವಂ ನೀಲಮೇಘಸಮಪ್ರಭಃ |
ಅನಾದೃತ್ಯೈವ ತದ್ವಾಕ್ಯಂ ಪ್ರಜಹಾರೈವ ಫಲ್ಗುನಃ ॥12॥
ಈ ಕಪ್ಪುಮೋಡದ ಸಮಾನಕಾಂತಿಯುಳ್ಳ ವರಾಹವು ನನ್ನಿಂದಲೇ ಮೊದಲು ಪ್ರಾರ್ಥಿತವಾಗಿದ್ದಿತು ಎಂಬ ಶಂಕರನ ಮಾತುಗಳನ್ನು ಪರಿಗಣಿಸದೆಯೇ ಅರ್ಜುನನು ಬಾಣಪ್ರಯೋಗವನ್ನು ಮಾಡಿಯೇ ಬಿಟ್ಟನು.
ಕಿರಾತಶ್ಚ ಸಮಂ ತಸ್ಮಿನ್ನೇಕಲಕ್ಷ್ಯೇ ಮಹಾದ್ಯುತಿಃ |
ಪ್ರಮುಮೋಚಾಶನಿಪ್ರಖ್ಯಂ ಶರಮಗ್ನಿಶಿಖೋಪಮಮ್ ॥13॥
ಮಹಾಕೀರ್ತಿಯುಳ್ಳ ಕಿರಾತನೂ ಸಹ ಅದೇ ಕ್ಷಣದಲ್ಲಿ ಅದೇ ಲಕ್ಷ್ಯದ ಮೇಲೆ ಸಿಡಿಲಿನಂತೆ ಮತ್ತು ಅಗ್ನಿಶಿಖೆಯಂತೆ ಇರುವ ಬಾಣವನ್ನು ಪ್ರಯೋಗಿಸಿದನು.
ತೌ ಮುಕ್ತೌ ಸಾಯಕೌ ತಾಭ್ಯಾಂ ಸಮಂ ತತ್ರ ನಿಪೇತತುಃ |
ಮೂಕಸ್ಯ ಗಾತ್ರೇ ವಿಸ್ತೀರ್ಣೇ ಶೈಲಪ್ರಸ್ಥನಿಭೇ ತದಾ ॥14॥
ಅವರಿಬ್ಬರಿಂದ ಮುಕ್ತವಾದ ಆ ಬಾಣಗಳು ಪರ್ವತದ ಬಂಡೆಯಂತೆ ವಿಸ್ತಾರವಾಗಿದ್ದ ಆ ಮೂಕನ ಶರೀರದಲ್ಲಿ ಬಿದ್ದವು.
ಯಥಾಽಶನೇರ್ವಿನಿಷ್ಪೇಷೋ ವಜ್ರಸ್ಯೇವ ಚ ಪರ್ವತೇ |
ತಥಾ ತಯೋಃ ಸನ್ನಿಪಾತಃ ಶರಯೋರಭವತ್ ತದಾ ॥15॥

ಎರಡು ಸಿಡಿಲುಗಳ ಸಂಘರ್ಷವಿದ್ದಂತೆ ಅಥವಾ ಪರ್ವತದಲ್ಲಿ ವಜ್ರಪಾತವಾದಂತೆ ಆಗ ಅವೆರಡು ಬಾಣಗಳಿಗೆ ಸಂಯೋಗ ಉಂಟಾಯಿತು.
ಸ ವಿದ್ಧೋ ಬಹುಭಿರ್ಬಾಣೈರ್ದೀಪ್ತಾಸ್ಯೈಃ ಪನ್ನಗೈರಿವ |
ಮಮಾರ ರಾಕ್ಷಸಂ ರೂಪಂ ಭೂಯಃ ಕೃತ್ವಾಽತಿದಾರುಣಮ್ ॥16॥
ಸರ್ಪಗಳಿಂತಿರುವ ದೀಪ್ತವಾದ ತುದಿಗಳುಳ್ಳ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟ ಮೂಕನು ವರಾಹರೂಪವನ್ನು ಬಿಟ್ಟು ಘೋರವಾದ ರಾಕ್ಷಸರೂಪವನ್ನು ಧರಿಸಿ ಮೃತನಾದನು.
ದದರ್ಶಾಥ ತತೋ ಜಿಷ್ಣುಃ ಪುರುಷಂ ಕಾಂಚನಪ್ರಭಮ್ |
ಕಿರಾತವೇಷಪ್ರಚ್ಛನ್ನಂ ಸ್ತ್ರೀಸಹಾಯಮಮಿತ್ರಹಾ |
ತಮಬ್ರವೀತ್ ಪ್ರೀತಮನಾಃ ಕೌಂತೇಯಃ ಪ್ರಹಸನ್ನಿವ ॥17॥
ಆಗ ಜಯಶೀಲನಾದ ಅರ್ಜುನನು ಕಿರಾತವೇಷವನ್ನು ಧರಿಸಿದ ಪತ್ನೀಸಹಿತನಾದ ಕಾಂಚನಪ್ರಭೆಯನ್ನು ಹೊಂದಿದ್ದ ಪುರುಷನನ್ನು ನೋಡಿದನು. ಕೌಂತೇಯನು ಅವನನ್ನು ನೋಡಿ ಸಂತೋಷಗೊಂಡು ನಗುವವನಂತೆ ಅವನ ಜೊತೆ ಮಾತನಾಡಿದನು.
ಕೋ ಭವಾನಟತೇ ಶೂನ್ಯೇ ವನೇ ಸ್ತ್ರೀಗಣಸಂವೃತಃ |
ನ ತ್ವಮಸ್ಮಿನ್ ವನೇ ಘೋರೇ ಬಿಭೇಷಿ ಕನಕಪ್ರಭ ॥18॥
ಸ್ತ್ರೀಸಮೂಹಸಹಿತನಾಗಿ ಈ ನಿರ್ಜನವಾದ ಅರಣ್ಯದಲ್ಲಿ ಸಂಚರಿಸುತ್ತಿರುವ ನೀನು ಯಾರು? ಎಲೈ ಕನಕ ಪ್ರಭನೇ, ಈ ಘೋರವಾದ ಅರಣ್ಯದಲ್ಲಿ ನೀನು ಭಯಪಡುತ್ತಿಲ್ಲ?
ಕಿಮರ್ಥಂ ಚ ತ್ವಯಾ ವಿದ್ಧೋ ಮೃಗೋಽಯಂ ಮತ್ಪರಿಗ್ರಹಃ |
ಮಯಾಽಭಿಪನ್ನಃ ಪೂರ್ವಂ ಹಿ ರಾಕ್ಷಸೋಽಯಮಿಹಾಗತಃ |
ಕಾಮಾತ್ ಪರಿಭವಾಚ್ಚಾಪಿ ನ ಮೇ ಜೀವನ್ ವಿಮೋಕ್ಷ್ಯಸೇ ॥19॥
ನನ್ನಿಂದ ಸ್ವೀಕೃತವಾದ ಈ ಮೃಗವನ್ನು ನೀನು ಏಕೆ ಹೊಡೆದೆ? ಇಲ್ಲಿಗೆ ಬಂದಿದ್ದ ಈ ರಾಕ್ಷಸನು ಮೊದಲು ನನ್ನ ದೃಷ್ಟಿಗೆ ಬಿದ್ದವನು. ನನ್ನನ್ನು ಅವಮಾನಗೊಳಿಸಿ ನೀನು ನಿನ್ನ ಇಚ್ಛೆಯಂತೆ ಜೀವಸಹಿತವಾಗಿ ಇಲ್ಲಿಂದ ಹೋಗಲಾರೆ.
ನ ಹ್ಯೇಷ ಮೃಗಯಾ ಧರ್ಮೋ ಯಸ್ತ್ವಯಾಽದ್ಯ ಕೃತೋ ಮಯಿ |
ತೇನ ತ್ವಾಂ ಭ್ರಂಶಯಿಷ್ಯಾಮಿ ಜೀವಿತಾತ್ ಪರ್ವತಾಶ್ರಯಮ್ ॥20॥
ನೀನು ನನ್ನ ಜೊತೆಯಲ್ಲಿ ಈ ದಿನ ನಡೆದುಕೊಂಡ ರೀತಿಯು ಬೇಟೆಯ ಧರ್ಮವಲ್ಲ. ಆದ್ದರಿಂದ ಪರ್ವತವಾಸಿಯಾದ ನಿನ್ನನ್ನು ನಾನು ಈದಿನ ಸಂಹರಿಸುವೆನು.
ಇತ್ಯುಕ್ತಃ ಪಾಂಡವೇಯೇನ ಕಿರಾತಃ ಪ್ರಹಸನ್ನಿವ |
ಉವಾಚ ಶ್ಲಕ್ಷ್ಣಯಾ ವಾಚಾ ಪಾಂಡವಂ ಸವ್ಯಸಾಚಿನಮ್ ॥21॥
ಪಾಂಡುಪುತ್ರನಾದ ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಕಿರಾತನು ಸವ್ಯಸಾಚಿಯಾದ ಪಾಂಡವನನ್ನು ಕುರಿತು ಮಧುರವಾದ ಮಾತುಗಳನ್ನು ಆಡಿದನು.
ಮಮೈವಾಯಂ ಲಕ್ಷಭೂತಃ ಪೂರ್ವಮೇವ ಪರಿಗ್ರಹಃ |
ಮಮೈವ ಚ ಪ್ರಹಾರೇಣ ಜೀವಿತಾದವರೋಪಿತಃ ॥22॥
ಇದನ್ನು ನಾನೇ ಮೊದಲು ನೋಡಿದ್ದು. ಆದ್ದರಿಂದ ನನಗೇ ಲಕ್ಷ್ಯವಾದ ವಸ್ತು. ಅಲ್ಲದೆ ನನ್ನ ಪ್ರಹಾರದಿಂದಲೇ ಅದು ಮೃತವಾಗಿದೆ.
ದೋಷಾನ್ ಸ್ವಾನ್ ನಾರ್ಹಸೇಽನ್ಯಸ್ಮೈ ವಕ್ತುಂ ಸ್ವಬಲದರ್ಪಿತಃ |
ಅಭಿಷಕ್ತೋಽಸ್ಮಿ ಮಂದಾತ್ಮನ್ ನ ಮೇ ಜೀವನ್ ವಿಮೋಕ್ಷ್ಯಸೇ ॥23॥
ನಿನ್ನ ದೋಷಗಳನ್ನು ನಿನ್ನ ಬಲದಿಂದ ದರ್ಪಿತನಾಗಿ ಇನ್ನೊಬ್ಬರಿಗೆ ಹೇಳಬೇಡ. ಮಂದಾತ್ಮನೇ ನಾನು ನಿನ್ನನ್ನು ಎದುರಿಸಲು ಸಿದ್ಧನಾಗಿದ್ದೇನೆ. ಜೀವಸಹಿತವಾಗಿ ನೀನು ಇಲ್ಲಿಂದ ಹೋಗುವುದಿಲ್ಲ.
ಸ್ಥಿರೋ ಭವಸ್ವ ಮೋಕ್ಷ್ಯಾಮಿ ಸಾಯಕಾನಶನೀನಿವ |
ಘಟಸ್ವ ಪರಯಾ ಶಕ್ತ್ಯಾ ಮುಂಚ ತ್ವಮಪಿ ಸಾಯಕಾನ್ ॥24॥
ಸ್ಥಿರವಾಗಿ ನಿಲ್ಲು. ಸಿಡಿಲುಗಳಂತಿರುವ ಬಾಣಗಳನ್ನು ಪ್ರಯೋಗಿಸುತ್ತೇನೆ. ನಿನ್ನ ಪರಮಶಕ್ತಿಯಿಂದ ನೀನು ನನ್ನನ್ನು ಎದುರಿಸಿ ಬಾಣಗಳನ್ನು ಪ್ರಯೋಗಿಸು.
ವೈಶಂಪಾಯನಃ
ತತಸ್ತೌ ತತ್ರ ಸಂರಬ್ಧೌ ಗರ್ಜಮಾನೌ ಮುಹುರ್ಮುಹುಃ |
ಶರೈರಾಶೀವಿಷಾಕಾರೈಃ ತತಕ್ಷಾತೇ ಪರಸ್ಪರಮ್ ॥25॥
ಅನಂತರ ಅವರಿಬ್ಬರೂ ಸಂಕ್ರುದ್ಧರಾಗಿ ಮತ್ತೆ ಮತ್ತೆ ಗರ್ಜಿಸುತ್ತಾ ಸರ್ಪಾಕಾರವುಳ್ಳ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ತತೋಽರ್ಜುನಃ ಶರವ್ರಾತಾನ್ ಕಿರಾತೇ ಸಮವಾಸೃಜತ್ |
ತತ್ಪ್ರಸನ್ನೇನ ಮನಸಾ ಪ್ರತಿಜಗ್ರಾಹ ಶಂಕರಃ ॥26॥
ಆಗ ಅರ್ಜುನನು ಕಿರಾತನ ಮೇಲೆ ಬಾಣಗಳ ಸಮೂಹವನ್ನು ಸೃಷ್ಟಿಮಾಡಿದನು. ಆ ಬಾಣವರ್ಷವನ್ನು ಶಂಕರನು ಪ್ರಸನ್ನವಾದ ಮನಸ್ಸಿನಿಂದಲೇ ಸ್ವೀಕರಿಸಿದನು.
ಮುಹೂರ್ತಂ ಶರವರ್ಷಂ ತು ಪ್ರತಿಗೃಹ್ಯ ಪಿನಾಕಧೃಕ್ |
ಅಕ್ಷತೇನ ಶರೀರೇಣ ತಸ್ಥೌ ಗಿರಿರಿವಾಚಲಃ ॥27॥
ಪಿನಾಕಪಾಣಿಯಾದ ಶಿವನು ಆ ಶರವರ್ಷವನ್ನು ಒಂದು ಮುಹೂರ್ತದಕಾಲ ಸ್ವೀಕರಿಸಿ ಶರೀರದಲ್ಲಿ ಏನೂ ಗಾಯಗೊಳ್ಳದೆ

ಅಲುಗಾಡದ ಪರ್ವತದಂತೆ ನಿಂತನು.
ಸ ದೃಷ್ಟ್ವಾ ಬಾಣವರ್ಷಂ ತು ಮೋಘೀಭೂತಂ ಧನಂಜಯಃ |
ಪರಮಂ ವಿಸ್ಮಯಂ ಚಕ್ರೇ ಸಾಧು ಸಾಧ್ವಿತಿ ಚಾಬ್ರವೀತ್ ॥28॥
ಅರ್ಜುನನು ತನ್ನ ಬಾಣವರ್ಷವು ಅವನಲ್ಲಿ ವ್ಯರ್ಥವಾದುದನ್ನು ನೋಡಿ ಬಹಳ ಆಶ್ಚರ್ಯಚಕಿತನಾಗಿ ಸಾಧುಸಾಧು ಎಂದು ಅವನನ್ನು ಪ್ರಶಂಸಿಸಿದನು.
ಅರ್ಜುನಃ
ಅಹೋಽಯಂ ಸುಕುಮಾರಾಂಗೋ ಹಿಮವಚ್ಛಿಖರಾಶ್ರಯಃ |
ಗಾಂಡೀವಮುಕ್ತಾನ್ ನಾರಾಚಾನ್ ಪ್ರತಿಗೃಹ್ಣಾತ್ಯವಿಹ್ವಲಃ ॥29॥
ಅಹೋ ಇದು ಆಶ್ಚರ್ಯ. ಹಿಮಾಲಯ ಪರ್ವತ ಶಿಖರವನ್ನು ಆಶ್ರಯಿಸಿದ ಈ ಕೋಮಲಾಂಗನು ಗಾಂಡೀವದಿಂದ ಹೊರಟ ನನ್ನ ಬಾಣಗಳನ್ನು ಯಾವ ವ್ಯಥೆಯೂ ಇಲ್ಲದೆ ತನ್ನ ಶರೀರದ ಮೇಲೆ ತೆಗೆದು ಕೊಳ್ಳುತ್ತಿದ್ದಾನೆ.
ಕೋಽಯಂ ದೇವೋ ಭವೇತ್ ಸಾಕ್ಷಾದ್ ರುದ್ರೋ ಯಕ್ಷೋಽಥ ರಾಕ್ಷಸಃ |
ವಿದ್ಯತೇ ಹಿ ಗಿರಿಶ್ರೇಷ್ಠೇ ತ್ರಿದಶಾನಾಂ ಸಮಾಗಮಃ ॥30॥
ಇವನು ಯಾವುದಾದರೂ ದೇವತೆಯೆ? ಅಥವಾ ಸಾಕ್ಷಾತ್ ರುದ್ರನೇ ಅಥವಾ ಯಕ್ಷನೇ ಅಥವಾ ರಾಕ್ಷಸನೇ? ಶ್ರೇಷ್ಠವಾದ ಈ ಪರ್ವತದಲ್ಲಿ ದೇವತೆಗಳ ಸಮಾಗಮವು ಇರುತ್ತದೆಯಷ್ಟೇ?
ನ ಹಿ ಮದ್ಬಾಣಜಾಲಾನಾಮುತ್ಸೃಷ್ಟಾನಾಂ ಸಹಸ್ರಶಃ |
ಶಕ್ತೋಽನ್ಯಃ ಸಹಿತುಂ ವೇಗಮೃತೇ ದೇವಂ ಪಿನಾಕಿನಮ್ ॥31॥
ಸಹಸ್ರ ಸಂಖ್ಯೆಯಲ್ಲಿ ಪ್ರಯೋಗಿಸಿದ ನನ್ನ ಬಾಣಸಮೂಹಗಳನ್ನು ದೇವನಾದ ಪಿನಾಕಪಾಣಿಯೊಬ್ಬನನ್ನು ಬಿಟ್ಟು ಉಳಿದ ಯಾವನೂ ಸಹಿಸಲಾರ.
ದೇವೋ ವಾ ಯದಿ ವಾ ರಕ್ಷೋ ರುದ್ರೋಽನ್ಯೋ ವಾ ವ್ಯವಸ್ಥಿತಃ|
ಅಹಮೇನಂ ಶರೈಸ್ತೀಕ್ಷ್ಣೈರ್ನಯಾಮಿ ಯಮಸಾದನಮ್ ॥32॥
ಎದುರಿಗೆ ನಿಂತವನು ದೇವತೆಯಾಗಲಿ ರಾಕ್ಷಸನಾಗಲಿ ರುದ್ರನೇ ಆಗಲಿ ಅಥವಾ ಬೇರೆ ಯಾರೇ ಆಗಲಿ. ನಾನು ಅವನನ್ನು ನನ್ನ ತೀಕ್ಷ್ಣವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸುತ್ತೇನೆ.
ವೈಶಂಪಾಯನಃ
ತತೋ ಹೃಷ್ಟಮನಾ ಜಿಷ್ಣುರ್ನಾರಾಚಾನ್ ಮರ್ಮಭೇದಿನಃ |
ವ್ಯಸೃಜಚ್ಛತಧಾ ರಾಜನ್ ಮಯೂಖಾನಿವ ಭಾಸ್ಕರಃ ॥33॥
ಎಲೈ ರಾಜನೇ ಅನಂತರ ಅರ್ಜುನನು ಮನಸ್ಸಿನಲ್ಲಿ ಸಂತೋಷಗೊಂಡವನಾಗಿ ಸೂರ್ಯನು ಕಿರಣಗಳನ್ನು ಸೃಷ್ಟಿಸಿದಂತೆ ಮರ್ಮಭೇದಿಯಾದ ಬಾಣಗಳನ್ನು ನೂರಾರು ಸಂಖ್ಯೆಯಲ್ಲಿ ಸೃಷ್ಟಿಸಿದನು.
ತಾನ್ ಪ್ರಸನ್ನೇನ ಮನಸಾ ಭಗವಾನ್‌ಲ್ಲೋಕಭಾವನಃ |
ಶೂಲಪಾಣಿಃ ಪ್ರತ್ಯಗೃಹ್ಣಾತ್ ಶಿಲಾವರ್ಷಮಿವಾಚಲಃ ॥34॥
ಲೋಕಪಾವನನಾದ ಶೂಲಪಾಣಿಯಾದ ಭಗವಂತನಾದ ಶಂಕರನು ಪ್ರಸನ್ನವಾದ ಮನಸ್ಸಿನಿಂದಲೇ ಪರ್ವತವು ಶಿಲಾವರ್ಷವನ್ನು ಸ್ವೀಕರಿಸಿದಂತೆ ಆ ಬಾಣಗಳನ್ನು ಸ್ವೀಕರಿಸಿದನು.
ಕ್ಷಣೇನ ಕ್ಷೀಣಬಾಣಸ್ತು ಸಂವೃತ್ತಃ ಫಲ್ಗುನಸ್ತದಾ |
ಶರಾಸಂ ಚ ಸ ಜಗ್ರಾಹ ತಂ ದೃಷ್ಟ್ವಾ ಶರಸಂಕ್ಷಯಮ್ |
ಚಿಂತಯಾಮಾಸ ಜಿಷ್ಣುಸ್ತು ಭಗವಂತಂ ಹುತಾಶನಮ್ ॥35॥
ಒಂದು ಕ್ಷಣದಲ್ಲಿ ಅರ್ಜುನನ ಬಾಣಗಳು ಬರಿದಾದವು. ಆ ಬಾಣಕ್ಷಯವನ್ನು ನೋಡಿ ಅವನು ಕೈಯಲ್ಲಿ ಧನುಸ್ಸನ್ನು ಹಿಡಿದು ಭಗವಂತನಾದ ಅಗ್ನಿಯನ್ನು ಚಿಂತಿಸಿದನು.
ಅರ್ಜುನಃ
ಪುರಸ್ತಾದಕ್ಷಯೌ ದತ್ತೌ ತೂಣೌ ಮೇ ಯೇನ ಖಾಂಡವೇ |
ಕಿಂ ನು ಮೋಕ್ಷ್ಯಾಮಿ ಧನುಷಾ ಯನ್ಮೇ ಬಾಣಾಃ ಕ್ಷಯಂ ಗತಾಃ |
ಅಯಂ ಚ ಪುರುಷಃ ಕೋಽಪಿ ಬಾಣಾನ್ ಗ್ರಸತಿ ಸರ್ವಶಃ ॥36॥
ಹಿಂದೆ ಖಾಂಡವದಹನಕಾಲದಲ್ಲಿ ಅಕ್ಷಯ ಬತ್ತಳಿಕೆಗಳು ಅಗ್ನಿಯಿಂದ ನನಗೆ ಕೊಡಲ್ಪಟ್ಟಿದ್ದವು. ನನ್ನ ಬಾಣಗಳೆಲ್ಲವೂ ಬರಿದಾದಮೇಲೆ ಈಗ ಧನುಸ್ಸಿನಿಂದ ನಾನು ಏನನ್ನು ಪ್ರಯೋಗಿಸಲಿ? ಈ ವಿಲಕ್ಷಣ ಪುರುಷನಾದರೂ ನನ್ನ ಎಲ್ಲಾ ಬಾಣಗಳನ್ನೂ ನುಂಗುತ್ತಿದ್ದಾನೆ.
ಅಹಮೇನಂ ಧನುಷ್ಕೋಟ್ಯಾ ಶೂಲಾಗ್ರೇಣೇವ ಕುಂಜರಮ್ |
ನಯಾಮಿ ದಂಡಧಾರಸ್ಯ ಯಮಸ್ಯ ಸದನಂ ಪ್ರತಿ ॥37॥
ಅಂಕುಶದತುದಿಯಿಂದ ಆನೆಯನ್ನು ಹಿಂಸಿಸಿದಂತೆ ನಾನು ನನ್ನ ಧನುಸ್ಸಿನ ತುದಿಯಿಂದ ಇವನನ್ನು ಸಂಹರಿಸಿ ದಂಡಧಾರಿಯಾದ ಯಮನ ಲೋಕಕ್ಕೆ ಕಳುಹಿಸುತ್ತೇನೆ.
ವೈಶಂಪಾಯನಃ
ಸಂಪ್ರಾಯುದ್ಧ್ಯತ್ ತಮಾಸಾದ್ಯ ಕ್ಷಾತ್ರಂ ಧರ್ಮಮನುವ್ರತಃ |
ಸಂಪ್ರಯುದ್ಧ್ಯನ್ ಧನುಷ್ಕೋಟ್ಯಾ ಕೌಂತೇಯಃ ಪರವೀರಹಾ ॥38॥

ಪರವೀರಘಾತಕನಾದ ಕೌಂತೇಯನು ಶಾಸ್ತ್ರಧರ್ಮವನ್ನು ಪಾಲಿಸುವವನಾಗಿ ಕಿರಾತನನ್ನು ಸಮೀಪಿಸಿ ಧನುಷ್ಕೋಟಿಯಿಂದಲೇ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ಅತುಲಂ ದೇವಮೀಶಾನಂ ಲಲಾಟೇ ಸಮತಾಡಯತ್ |
ತದಪ್ಯಸ್ಯ ಧನುರ್ದಿವ್ಯಂ ಜಗ್ರಾಹ ಗಿರಿಗೋಚರಃ ||39||

ಅಸದೃಶನಾದ ದೇವನಾದ ಮಹೇಶ್ವರನಿಗೆ ಹಣೆಯಲ್ಲಿ ಹೊಡೆದನು ಆ ಗಿರಿವಾಸಿಯಾದ ಶಂಕರನು ಆ ಧನುಸ್ಸನ್ನು ಕೈಯಲ್ಲಿ ಹಿಡಿದುಕೊಂಡನು.

ತತೋಽರ್ಜುನೋ ಗ್ರಸ್ತಧನುಃ ಖಡ್ಗಪಾಣಿರತಿಷ್ಠತ |
ಯುದ್ಧಸ್ಯಾಂತಮಭೀಪ್ಸನ್ ವೈ ವೇಗೇನಾಭಿಜಗಾಮ ತಮ್ ||40||

ಆಗ ಅರ್ಜುನನು ಯುದ್ಧವನ್ನು ಮುಗಿಸಲು ಬಯಸಿ ಧನುಸ್ಸನ್ನು ಕಳೆದುಕೊಂಡು ಕೈಯಲ್ಲಿ ಖಡ್ಗವನ್ನು ಹಿಡಿದು ವೇಗವಾಗಿ ಆ ಕಿರಾತನ ಕಡೆಗೆ ಹೋದನು.

ತಸ್ಯ ಮೂರ್ಧ್ನಿ ಶಿತಂ ಖಡ್ಗಮಸಕ್ತಂ ಪರ್ವತೇಷ್ವಪಿ |
ಮುಮೋಚ ಭುಜವೀರ್ಯೇಣ ವಿಕ್ರಮ್ಯ ಕುರುನಂದನಃ |
ತಸ್ಯ ಮೂರ್ಧಾನಮಾಸಾದ್ಯ ಪಫಾಲಾಸಿವರೋಽಥ ಸಃ ||41||

ಅವನ ತಲೆಯ ಮೇಲೆ ಪರ್ವತಗಳಲ್ಲಿಯೂ ನಾಟದಿದ್ದ ತನ್ನ ಹರಿತವಾದ ಖಡ್ಗವನ್ನು ಅರ್ಜುನನು ಪರಾಕ್ರಮದಿಂದ ತನ್ನ ಭುಜವೀರ್ಯವನ್ನೆಲ್ಲಾ ಉಪಯೋಗಿಸಿ ಪ್ರಯೋಗಿಸಿದನು. ಆ ಶ್ರೇಷ್ಠವಾದ ಖಡ್ಗವು ಕಿರಾತನ ಹಣೆಯನ್ನು ತಲುಪಿ ಚೂರುಚೂರಾಯಿತು.

ತತೋ ವೃಕ್ಷೈಃ ಶಿಲಾಭಿಶ್ಚ ಯೋಧಯಾಮಾಸ ಫಲ್ಗುನಃ |
ಯಥಾ ವೃಕ್ಷಾನ್ಮಹಾಕಾಯಃ ಪ್ರತ್ಯಗೃಹ್ಣಾದಥೋ ಶಿಲಾಃ ||42||
ಕಿರಾತರೂಪೀ ಭಗವಾಂಸ್ತತಃ ಪಾರ್ಥೋ ಮಹಾಬಲಃ |
ಮುಷ್ಟಿಭಿರ್ವಜ್ರಸಂಸ್ಪರ್ಶೈರ್ಧೂಮಮುತ್ಪಾದಯನ್ ಮುಖೇ |
ಪ್ರಜಹಾರ ದುರಾಧರ್ಷೇ ಕಿರಾತಸಮರೂಪಿಣಿ ||43||

ಅನಂತರ ಅರ್ಜುನನು ಬಂಡೆಗಳಿಂದ ಕಿರಾತನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಅರ್ಜುನನು ಶಿಲೆಗಳನ್ನು ಎಸೆದಂತೆ ಕಿರಾತರೂಪಿಯೂ ಮಹಾಶರೀರವುಳ್ಳವನೂ ಆದ ಭಗವಂತನು ಆ ಶಿಲೆಗಳನ್ನು ಹಿಡಿದು ಕೊಂಡನು ಆಗ ಮಹಾಬಲನಾದ ಅರ್ಜುನನು ಮುಖದಲ್ಲಿ ಹೊಗೆಯನ್ನು ಸೃಷ್ಟಿಸುತ್ತಾ ತನ್ನ ವಜ್ರಸದೃಶವಾದ ಮುಷ್ಟಿಗಳಿಂದ ದುರಾಧರ್ಷನಾದ ಕಿರಾತವೇಷವನ್ನು ಧರಿಸಿದ ಶಂಕರನಿಗೆ ಪ್ರಹಾರವನ್ನು ಮಾಡಿದನು.

ತತಃ ಶಕ್ರಾಶನಿಸಮೈರ್ಮುಷ್ಟಿಭಿರ್ಭೃಶದಾರುಣೈಃ |
ಕಿರಾತರೂಪೀ ಭಗವಾನರ್ದಯಾಮಾಸ ಫಲ್ಗುನಮ್ ||44||
ತತಶ್ಚಟಚಟಾಶಬ್ದಃ ಸುಘೋರಃ ಸಮಜಾಯತ |
ಪಾಂಡವಸ್ಯ ಚ ಮುಷ್ಟೀನಾಂ ಕಿರಾತಸ್ಯ ಚ ಯುಧ್ಯತಃ ||45||

ಆಗ ಇಂದ್ರನ ವಜ್ರಾಯುಧಕ್ಕೆ ಸಮವಾದ ಅತ್ಯಂತ ಕ್ರೂರವಾದ ತನ್ನ ಮುಷ್ಟಿಗಳಿಂದ ಕಿರಾತರೂಪಿಯಾದ ಭಗವಂತನು ಅರ್ಜುನನನ್ನು ಪೀಡಿಸಿದನು. ಆಗ ಪಾಂಡವನೂ ಮತ್ತು ಕಿರಾತನೂ ಮುಷ್ಟಿಗಳಿಂದ ಯುದ್ಧಮಾಡುತ್ತಿರಲು ಅತ್ಯಂತ ಘೋರವಾದ ಚಟಚಟ ಎಂಬ ಶಬ್ದವು ಉಂಟಾಯಿತು.

ಸುಮುಹೂರ್ತಂ ತಯೋರ್ಯುದ್ಧಮಾಸೀಲ್ಲೋಕಪ್ರಹರ್ಷಣಮ್ |
ಭುಜಪ್ರಹಾರಸಂಯುಕ್ತಂ ವೃತ್ರವಾಸವಯೋರಿವ ||46||

ಲೋಕಕ್ಕೆ ರೋಮಾಂಚಕಾರಿಯಾದ ಭುಜಪ್ರಹಾರಯುಕ್ತವಾದ ಅವರಿಬ್ಬರ ಯುದ್ಧವು ಇಂದ್ರ ಮತ್ತು ವೃತ್ರರ ಯುದ್ಧದಂತೆ ಒಂದು ಮುಹೂರ್ತ ನಡೆಯಿತು.

ಜಹಾರಾಥ ತತೋ ಜಿಷ್ಣುಃ ಕಿರಾತಮುರಸಾ ಬಲೀ |
ಪಾಂಡವಂ ಚ ವಿಚೇಷ್ಟಂತಂ ಕಿರಾತೋಽಪ್ಯಹನದ್ಬಲಾತ್ ||47||
ತಯೋರ್ಭುಜವಿನಿಷ್ಪೇಷಾತ್ ಸಂಘರ್ಷೇಣೋರಸೋಸ್ತದಾ |
ಸಮಜಾಯತ ಗಾತ್ರೇಷು ಪಾವಕೋಽಂಗಾರಧೂಮವಾನ್ ||48||

ಅನಂತರ ಬಲಿಷ್ಠನಾದ ಅರ್ಜುನನು ಕಿರಾತನನ್ನು ತನ್ನ ವಕ್ಷಃಸ್ಥಳದಿಂದ ಹೊಡೆದನು. ಹೀಗೆ ಪ್ರಯತ್ನಪಡುತ್ತಿದ್ದ ಅರ್ಜುನನಿಗೆ ಕಿರಾತನು ಬಲವಾಗಿ ಹೊಡೆದನು. ಹೀಗೆ ಆವರಿಬ್ಬರೂ ಭುಜಗಳಿಂದ ಹೊಡೆದಾಡುವಾಗ ಅವರ ವಕ್ಷಃಸ್ಥಳದ ಸಂಘರ್ಷದಿಂದ ಕಿಡಿಗಳು ಮತ್ತು ಧೂಮಗಳುಳ್ಳ ಅಗ್ನಿಯು ಅವರ ಶರೀರದಲ್ಲಿ ಉಂಟಾಯಿತು.

ತತ ಏನಂ ಮಹಾದೇವಃ ಪೀಡ್ಯ ಗಾತ್ರೈಃ ಸುಪೀಡಿತಃ |
ತೇಜಸಾಽತ್ಯಾಕ್ರಮದ್ ರೋಷಾಚ್ಚೇತಸ್ತಸ್ಯ ವಿಮೋಹಯನ್ ||49||

ಅನಂತರ ಅರ್ಜುನನ ಶರೀರದಿಂದ ಪೀಡಿಸಲ್ಪಟ್ಟ ಮಹಾದೇವನು ಅರ್ಜುನನ ಚಿತ್ತವನ್ನು ಮೋಹಿಸುತ್ತಾ ಕೋಪದಿಂದ ಪರಾಕ್ರಮದಲ್ಲಿ ಅರ್ಜುನನನ್ನು ಮೀರಿಸಿದನು.

ತತೋ ನಿಷ್ಪೀಡಿತೈರ್ಗಾತ್ರೈಃ ಪಿಂಡೀಕೃತ ಇವಾಬಭೌ |
ಫಲ್ಗುನೋ ಗಾತ್ರಸಂರುದ್ಧೋ ದೇವದೇವೇನ ಭಾರತ ||50||

ಎಲೈ ಭಾರತನೇ ಆಗ ದೇವದೇವನ ದೇಹದಿಂದ ಹಿಡಿಯಲ್ಪಟ್ಟ ಅರ್ಜುನನ ಶರೀರವು ಒಂದು ಮುದ್ದೆಯಂತೆ ತೋರಿತು.

ನಿರುಚ್ಛ್ವಾಸೋಽಭವಚ್ಚೈಷ ಸನ್ನಿರುದ್ಧೋ ಮಹಾಮನಾಃ |
ತತಃ ಪಪಾತ ಸಮ್ಮೂಢಃ ತತಃ ಪ್ರೀತೋಽಭವದ್ಧರಃ ||51||
ಧೈರ್ಯಶಾಲಿಯಾದ ಅರ್ಜುನನು ನಿರುಚ್ಛ್ವಾಸನಾಗಿ ಕಿರಾತನಿಂದ ಹಿಡಿಯಲ್ಪಟ್ಟು ಸಮ್ಮೂಢನಾಗಿ ಭೂಮಿಯ ಮೇಲೆ ಬಿದ್ದನು. ಆಗ ಶಂಕರನು ಸಂತುಷ್ಟನಾದನು.
ಸುಮುಹೂರ್ತಂ ತತೋ ಭೂತ್ವಾ ಸಚೇತಾಃ ಪುನರುತ್ಥಿತಃ |
ರುಧಿರೇಣಾಪ್ಲುತಾಂಗಸ್ತು ಪಾಂಡವೋ ಭೃಶದುಃಖಿತಃ ||52||
ಶರಣ್ಯಂ ಶರಣಂ ಗತ್ವಾ ಭಗವಂತಂ ಪಿನಾಕಿನಮ್ |
ಮೃನ್ಮಯಂ ಸ್ಥಂಡಿಲೇ ಕೃತ್ವಾ ಭಾವಪುಷ್ಪೈರ್ಭವಂ ತದಾ ||53||
ಪೂಜಯಾಮಾಸ ಪುಷ್ಪೈಶ್ಚ ಸರ್ವಲೋಕೇಶ್ವರಂ ಪ್ರಭುಮ್ |
ಶರಣ್ಯಂ ಶರಣಂ ಗತ್ವಾ ಮನಸಾ ಪಾಂಡುನಂದನಃ ||54||
ಒಂದು ಮುಹೂರ್ತಕಾಲ ಹಾಗೆಯೇ ಇದ್ದು ಪುನಃ ಪ್ರಜ್ಞೆಯನ್ನು ಪಡೆದು ಮೇಲೆಕ್ಕೆದ್ದು ಅರ್ಜುನನು ತನ್ನ ದೇಹವೆಲ್ಲ ರಕ್ತಸಿಕ್ತವಾಗಿ ಬಹಳ ದುಃಖದಿಂದ ಕೂಡಿದವನಾಗಿ ಶರಣ್ಯನಾದ ಭಗವಂತನಾದ ಪಿನಾಕಪಾಣಿಗೆ ಶರಣಾಗತನಾದನು. ಸ್ಥಂಡಿಲದಲ್ಲಿ ಮಣ್ಣಿನಿಂದ ಒಂದು ಶಿವನ ಲಿಂಗವನ್ನು ಮಾಡಿ ಪುಷ್ಪಗಳಿಂದ ಮತ್ತು ಭಾವಪುಷ್ಪಗಳಿಂದ ಸರ್ವಲೋಕೇಶ್ವರನಾದ ಆ ಪ್ರಭುವನ್ನು ಪೂಜಿಸಿದನು. ಶರಣ್ಯನಾದ ಶಿವನಿಗೆ ಮನಸಾ ಶರಣಾಗತನಾಗಿ ಪೂಜಿಸಿದನು.
ಯೈಃ ಪೂಜಿತಸ್ತದಾ ಪಾರ್ಥಸ್ತಾನ್ ದೃಷ್ಟ್ವಾ ತಸ್ಯ ಮೂರ್ಧನಿ |
ಹರ್ಷೇಣ ವಿಸ್ಮಯಾವಿಷ್ಟೋ ಜ್ಞಾತ್ವಾ ದೇವಂ ಮಹೇಶ್ವರಮ್ ||55||
ಪಪಾತ ಪಾದಯೋಸ್ತಸ್ಯ ತತಃ ಪ್ರೀತೋಽಭವದ್ ಭವಃ ||56||
ಯಾವ ಪುಷ್ಪಗಳಿಂದ ತಾನು ಮೂರ್ತಿಯನ್ನು ಪೂಜಿಸಿದನೋ ಆ ಪುಷ್ಪಗಳು ಕಿರಾತನ ತಲೆಯ ಮೇಲೆ ಇರುವುದನ್ನು ನೋಡಿ ಸಂತೋಷದಿಂದ ಮತ್ತು ವಿಸ್ಮಯದಿಂದ ಅರ್ಜುನನು ಅವನು ದೇವನಾದ ಮಹೇಶ್ವರನೆಂದು ತಿಳಿದು ಅವನ ಪಾದಗಳಿಗೆ ನಮಸ್ಕರಿಸಿದನು. ಆಗ ರುದ್ರನು ಪ್ರಸನ್ನನಾದನು.
ರುದ್ರಃ
ಭೋ ಭೋ ಫಲ್ಗುನ ತುಷ್ಟೋಽಸ್ಮಿ ಕರ್ಮಣಾಽಪ್ರತಿಮೇನ ತೇ |
ಶೌರ್ಯೇಣಾನೇನ ಧೃತ್ಯಾ ಚ ಕ್ಷತ್ರಿಯೋ ನಾಸ್ತಿ ತೇ ಸಮಃ ||57||
ಎಲೈ ಅರ್ಜುನನೇ, ಈ ನಿನ್ನ ಅಸದೃಶವಾದ ಕರ್ಮದಿಂದ ಮತ್ತು ನಿನ್ನ ಶೌರ್ಯದಿಂದ ಮತ್ತು ಧೈರ್ಯದಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಸಮಾನನಾದ ಕ್ಷತ್ರಿಯನು ಇನ್ನೊಬ್ಬನಿಲ್ಲ.
ಸಮಂ ತೇಜಶ್ಚ ವೀರ್ಯಂ ಚ ತವಾದ್ಯ ಮಮ ಚಾನಘ |
ಪ್ರೀತಸ್ತೇಽಹಂ ಮಹಾಬಾಹೋ ಪಶ್ಯ ಮಾಂ ಪುರುಷರ್ಷಭ ||58||
ಅನಘನೇ, ನಿನ್ನ ಪರಾಕ್ರಮ ಮತ್ತು ತೇಜಸ್ಸು ಈ ದಿನ ನನ್ನ ಪರಾಕ್ರಮ ಮತ್ತು ತೇಜಸ್ಸುಗಳಿಗೆ ಸಮವಾಗಿದೆ. ನಾನು ನಿನಗೆ ಪ್ರಸನ್ನನಾಗಿದ್ದೇನೆ. ಮಹಾಬಾಹುವೇ ಪುರುಷರ್ಷಭನೇ ನನ್ನನ್ನು ನೋಡು.
ದದಾಮಿ ತೇ ವಿಶಾಲಾಕ್ಷ ಚಕ್ಷುಃ ಪೂರ್ವಂ ಮುನಿರ್ಭವಾನ್ |
ವಿಜೇಷ್ಯಸಿ ರಣೇ ಶತ್ರೂನಪಿ ದೇವಾನ್ ದಿವೌಕಸಃ ||59||
ಎಲೈ ವಿಶಾಲಾಕ್ಷನೇ, ನಿನಗೆ ದಿವ್ಯವಾದ ದೃಷ್ಟಿಯನ್ನು ಕೊಡುತ್ತೇನೆ. ಹಿಂದೆ ನೀನು ಋಷಿಯಾಗಿದ್ದೆ. ನೀನು ಯುದ್ಧದಲ್ಲಿ ಶತ್ರುಗಳನ್ನು ಮತ್ತು ಸ್ವರ್ಗವಾಸಿಗಳಾದ ದೇವತೆಗಳನ್ನು ಜಯಿಸುವಿ.
ವೈಶಂಪಾಯನಃ
ತತೋ ದೇವಂ ಮಹಾದೇವಂ ಗಿರಿಶಂ ಶೂಲಪಾಣಿನಮ್ |
ದದರ್ಶ ಫಲ್ಗುನಸ್ತತ್ರ ಸಹ ದೇವ್ಯಾ ಮಹಾದ್ಯುತಿಮ್ ||60||
ಸ ಜಾನುಭ್ಯಾಂ ಮಹೀಂ ಗತ್ವಾ ಶಿರಸಾ ಪ್ರಣಿಪತ್ಯ ಚ |
ಪ್ರಸಾದಯಾಮಾಸ ಹರಂ ಪಾರ್ಥಃ ಪರಪುರಂಜಯಃ ||61||
ಆಗ ಪರಪುರಂಜಯನಾದ ಅರ್ಜುನನು ಶೂಲಪಾಣಿಯೂ ಗಿರೀಶನೂ ಮಹಾದೇವನೂ ಮಹಾದ್ಯುತಿಯೂ ಆದ ಮಹೇಶ್ವರನನ್ನು ಪಾರ್ವತಿಯ ಜೊತೆಯಲ್ಲಿ ಅಲ್ಲಿ ನೋಡಿದನು. ಮಂಡಿಗಳ ಮೇಲೆ ಭೂಮಿಯಲ್ಲಿ ಬಿದ್ದು ಶಿರಸಾ ಪ್ರಣಾಮವನ್ನು ಮಾಡಿ ಮಹೇಶ್ವರನನ್ನು ಪ್ರಸನ್ನಗೊಳಿಸಿದನು.
ಅರ್ಜುನಃ
ಕಪರ್ದಿನ್ ಸರ್ವಭೂತೇಶ ಭಗನೇತ್ರನಿಪಾತನ |
ಕಾರಣಾನಾಮಪಿ ಪರಂ ಜಾನೇ ತ್ವಾಂ ತ್ರ್ಯಂಬಕಂ ಪರಮ್ ||62||
ಎಲೈ ಕಪರ್ದಿಯೇ ಸರ್ವಭೂತೇಶ್ವರನೇ ಭಗನೇತ್ರನಾಶಕನೇ ತ್ರ್ಯಂಬಕನಾದ ನೀನು (ಜಗತ್ತಿನ) ಕಾರಣಗಳಿಗಿಂತಲೂ ಶ್ರೇಷ್ಠನಾದವನೆಂದು ನಾನು ತಿಳಿದಿದ್ದೇನೆ.
ದೇವಾನಾಂ ಚ ಗತಿಂ ದೇವ ತ್ವತ್ಪ್ರಸೂತಮಿದಂ ಜಗತ್ |
ಅಜೇಯಸ್ತ್ವಂ ತ್ರಿಭಿರ್ಲೋಕೈಃ ಸದೇವಾಸುರಮಾನುಷೈಃ ||63||
ದೇವನೇ! ನೀನು ದೇವತೆಗಳಿಂದ ಗಮ್ಯನಾದವನು. ಈ ಜಗತ್ತು ನಿನ್ನಿಂದ ಜನಿಸಿದೆ. ದೇವಾಸುರಮನುಷ್ಯರನ್ನು ಒಳಗೊಂಡ ಮೂರುಲೋಕಗಳಿಂದಲೂ ನೀನು ಅಜೇಯನಾದವನು.

ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ |
ದಕ್ಷಯಜ್ಞವಿನಾಶಾಯ ಹರಿರುದ್ರಾಯ ವೈ ನಮಃ ॥64॥
ಲಲಾಟಾಕ್ಷಾಯ ರುದ್ರಾಯ ಮೀಢುಷೇ ಶೂಲಪಾಣಯೇ |
ಪಿನಾಕಗೋಪ್ತ್ರೇ ಸೂರ್ಯಾಯ ಮಾರ್ಜನೀಯಾಯ ವೇಧಸೇ ॥65॥
ವಿಷ್ಣುರೂಪನಾದ ಶಿವನಿಗೂ ಶಿವರೂಪನಾದ ವಿಷ್ಣುವಿಗೂ ದಕ್ಷಯಜ್ಞವಿನಾಶಕನಾದ ಹರಿರುದ್ರನಾದ ನಿನಗೂ ನಮಸ್ಕಾರ.
ಫಾಲಾಕ್ಷನೂ ರುದ್ರನೂ ಭಕ್ತಾಭೀಷ್ಟದಾನದೀಕ್ಷಿತನೂ ಶೂಲಪಾಣಿಯೂ ಪಿನಾಕಧಾರಿಯೂ ಜ್ಞಾನಿಗಮ್ಯನೂ ಮಾಂಗಲ್ಯಪ್ರದನೂ ಸೃಷ್ಟಿಕರ್ತನೂ ಆದ ನಿನಗೆ ನಮಸ್ಕಾರ.
ಪ್ರಸಾದಯೇ ತ್ವಾಂ ಭಗವನ್ ಸರ್ವಭೂತನಮಸ್ಕೃತಮ್ |
ಗಣೇಶಂ ಜಗತಃ ಶಂಭುಂ ಲೋಕಕಾರಣಕಾರಣಮ್ ॥66॥
ಎಲೈ ಭಗವಂತನೇ ಸರ್ವಭೂತನಮಸ್ಕೃತನಾದ ಲೋಕಕಾರಣಗಳಿಗೆ ಕಾರಣನಾದ ಜಗತ್ತಿಗೆ ಶುಭಪ್ರದನಾದ ಭೂತಗಣಗಳಿಗೆ ಒಡೆಯನಾದ ನೀನು ಪ್ರಸನ್ನನಾಗು ಎಂದು ಬೇಡಿ ಕೊಳ್ಳುತ್ತಿದ್ದೇನೆ.
ಪ್ರಧಾನಪುರುಷಾದಿಭ್ಯಃ ಪರಂ ಸೂಕ್ಷ್ಮತರಂ ಹರಿಮ್ |
ವ್ಯತಿಕ್ರಮಂ ಮೇ ಭಗವನ್ ಕ್ಷಂತುಮರ್ಹಸಿ ಶಂಕರ ॥67॥
ಪ್ರಧಾನ ಪುರುಷರಗಿಂತಲೂ (ಲಕ್ಷ್ಮೀಬ್ರಹ್ಮರಿಗಿಂತಲೂ) ಅವ್ಯಕ್ತನೂ ಶ್ರೇಷ್ಠನೂ ಆದ ಹರಿಯೆಂದು ತಿಳಿದಿದ್ದೇನೆ. ಎಲೈ ಶಂಕರನೇ ನನ್ನ ಈ ಅಪಚಾರವನ್ನು ನೀನು ಕ್ಷಮಿಸಬೇಕು.
(ಇಲ್ಲಿ ಈ ಸ್ತೋತ್ರವನ್ನು ಶಿವನಲ್ಲಿ ಯೋಗ್ಯವಿದ್ದಷ್ಟು ಶಿವನ ಪರವಾಗಿಯೂ ಉಳಿದುದನ್ನು ಶಿವನ ಅಂತರ್ಯಾಮಿಯಾದ ಹರಿಯ ಪರವಾಗಿಯೂ ಅರ್ಥವನ್ನು ಮಾಡಬೇಕು.)
ಭಗವದ್ದರ್ಶನಾಕಾಂಕ್ಷೀ ಪ್ರಾಪ್ತೋಽಸ್ಮೀಮಂ ಮಹಾಗಿರಿಮ್ |
ದಯಿತಂ ತವ ದೇವೇಶ ತಾಪಸಾಲಯಮುತ್ತಮಮ್ ॥68॥
ಪ್ರಸಾದಯೇ ತ್ವಾಂ ಭಗವನ್ ಸರ್ವಭೂತವಿಭುಂ ಗುರುಮ್ |
ನ ಮೇ ಸ್ಯಾದಪರಾಧೋಽಯಂ ಮಹಾದೇವಾತಿಸಾಹಸಾತ್ ॥69॥
ದೇವೇಶನೇ ನಿನ್ನ ದರ್ಶನಾಕಾಂಕ್ಷಿಯಾಗಿ ತಾಪಸರ ನಿವಾಸವಾದ , ನಿನಗೆ ಪ್ರಿಯವಾದ, ಈ ಶ್ರೇಷ್ಠವಾದ ಮಹಾಪರ್ವತಕ್ಕೆ ಬಂದಿದ್ದೇನೆ. ಎಲೈ ಮಹಾದೇವನೇ! ನನ್ನ ಈ ಅತಿಸಾಹಸವನ್ನು ಅಪರಾಧವೆಂದು ಎಣಿಸಬೇಡವೆಂದು ಸರ್ವಭೂತಗಳಲ್ಲಿ ವ್ಯಾಪ್ತನಾಗಿ ಗುರುವಾಗಿರುವ ನಿನ್ನನ್ನು ಬೇಡಿಕೊಳ್ಳುತ್ತೇನೆ.
ಕೃತೋ ಮಯಾ ಯದಜ್ಞಾನಾದ್ ವಿಮರ್ದೋ ಯಸ್ತ್ವಯಾ ಸಹ |
ಶರಣಂ ಮೇ ಪ್ರಪನ್ನಾಯ ತತ್ ಕ್ಷಮಸ್ವಾದ್ಯ ಶಂಕರ ॥70॥
ಎಲೈ ಶಂಕರನೇ, ಅಜ್ಞಾನದಿಂದ ನಿನ್ನ ಜೊತೆಯಲ್ಲಿ ಮಾಡಿದ ಸಂಘರ್ಷವನ್ನು ಶರಣಾಗತನಾದ ನನಗೆ ನೀನು ಈ ದಿನ ಕ್ಷಮಿಸು.
ವೈಶಂಪಾಯನಃ
ತಮುವಾಚ ಮಹಾತೇಜಾಃ ಪ್ರಹಸ್ಯ ವೃಷಭಧ್ವಜಃ |
ಪ್ರಗೃಹ್ಯ ರುಚಿರಂ ಬಾಹುಂ ಕ್ಷಾಂತಮಿತ್ಯೇವ ಫಲ್ಗುನಮ್ ॥71॥
ಮಹಾತೇಜಸ್ವಿಯಾದ ವೃಷಭಧ್ವಜನು ನಕ್ಕು ಸುಂದರವಾದ ಅರ್ಜುನನ ಬಾಹುವನ್ನು ಹಿಡಿದು ಅರ್ಜುನನನ್ನು ಕುರಿತು ನಾನು ಕ್ಷಮಿಸಿದ್ದೇನೆ ಎಂದು ಹೇಳಿದನು.
ಪರಿಷ್ವಜ್ಯ ಚ ಬಾಹುಭ್ಯಾಂ ಪ್ರೀತಾತ್ಮಾ ಭಗವಾನ್ ಹರಃ |
ಪುನಃ ಪಾರ್ಥಂ ಸಾಂತ್ವಪೂರ್ವಮುವಾಚ ವೃಷಭಧ್ವಜಃ ॥72॥
ಸಂತೋಷಗೊಂಡ ಭಗವಂತನಾದ ವೃಷಭಧ್ವಜನಾದ ಹರನು ತನ್ನ ಬಾಹುಗಳಿಂದ ಅರ್ಜುನನನ್ನು ಆಲಿಂಗಿಸಿ ಪುನಃ ಸಮಾಧಾನ ಪೂರ್ವಕವಾಗಿ ಮಾತನಾಡಿದನು.
ಗಂಗಾಂಕಿತಜಟಃ ಶರ್ವಃ ಪಾರ್ಥಸ್ಯಾಮಿತತೇಜಸಃ |
ಪ್ರಗೃಹ್ಯ ರುಚಿರಂ ಬಾಹುಂ ವೃತ್ತಂ ತಾಮ್ರತಳಾಂಗುಲಿಮ್ ॥73॥
ಗಂಗೆಯನ್ನು ಧರಿಸಿದ ಜಟೆಯುಳ್ಳ ರುದ್ರನು ಅಮಿತಪರಾಕ್ರಮಿಯಾದ ಅರ್ಜುನನ ಸುಂದರವಾದ ಮತ್ತು ಪುಷ್ಟವಾದ ಬಾಹುವನ್ನು ಹಿಡಿದು ಮಾತನಾಡಿದನು.
ನರಸ್ತ್ವಂ ಪೂರ್ವದೇಹೇ ವೈ ನಾರಾಯಣಸಹಾಯವಾನ್ |
ಬದರ್ಯಾಂ ತಪ್ತವಾನುಗ್ರಂ ತಪೋ ವರ್ಷಾಯುತಾನ್ ಬಹೂನ್ ॥
ನೀನು ಹಿಂದಿನ ಜನ್ಮದಲ್ಲಿ ನಾರಾಯಣನ ಅನುಗ್ರಹವನ್ನು ಪಡೆದ ನರನಾಗಿದ್ದೆ. ಅನೇಕ ಸಹಸ್ರವರ್ಷಗಳ ಕಾಲ ಬದರಿಯಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿದೆ.
ತ್ವಯಿ ವಾ ಪರಮಂ ತೇಜೋ ವಿಷ್ಣೌ ವಾ ಪುರುಷೋತ್ತಮೇ |
ಯುವಾಭ್ಯಾಂ ಪುರುಷಾಗ್ರ್ಯಾಭ್ಯಾಂ ತೇಜಸಾ ಧಾರ್ಯತೇ ಜಗತ್ ॥
ಪುರುಷೋತ್ತಮನಾದ ವಿಷ್ಣುವಿನಲ್ಲಿ ಮತ್ತು ನಿನ್ನಲ್ಲಿ ಶ್ರೇಷ್ಠವಾದ ತೇಜಸ್ಸಿದೆ. ಪುರುಷಶ್ರೇಷ್ಠರಾದ ನಿಮ್ಮಿಬ್ಬರಿಂದ ಈ ಜಗತ್ತು ಧರಿಸಲ್ಪಟ್ಟಿದೆ.
ಶಕ್ರಾಭಿಷೇಕೇ ಸುಮಹದ್ ಧನುರ್ಜಲದನಿಸ್ವನಮ್ |
ಪ್ರಗೃಹ್ಯ ದಾನವಾಃ ಶಸ್ತಾಃ ತ್ವಯಾ ಕೃಷ್ಣೇನ ಚ ಪ್ರಭೋ ॥76॥

ಎಲೈ ಪ್ರಭುವೇ, ಖಾಂಡವದಹನಕಾಲದಲ್ಲಿ ಇಂದ್ರನು ಮೇಘಜಲಗಳಿಂದ ಅಭಿಷೇಕಮಾಡುವಾಗ ಮೇಘ ಗಂಭೀರವಾದ ಧನುಸ್ಸನ್ನು ಹಿಡಿದುಕೊಂಡು ನೀನೂ ಮತ್ತು ಕೃಷ್ಣನೂ ದಾನವರನ್ನು ನಾಶಮಾಡಿದಿರಿ.
ಏತತ್ತದೇವ ಗಾಂಡೀವಂ ತವ ಪಾರ್ಥ ಕರೋಚಿತಮ್ |
ಮಾಯಾಮಾಸ್ಥಾಯ ಯದ್ ಗ್ರಸ್ತಂ ಮಯಾ ಪುರುಷಸತ್ತಮ ॥77॥
ಪಾರ್ಥನೇ! ಇದು ನಿನ್ನ ಕೈಗೇ ಯೋಗ್ಯವಾದ ಅದೇ ಗಾಂಡೀವ ಧನುಸ್ಸು. ಪುರುಷಶ್ರೇಷ್ಠನೇ! ನಾನು ನನ್ನ ಸಾಮರ್ಥ್ಯವಿಶೇಷದಿಂದ ಆ ಧನುಸ್ಸನ್ನು ಹಿಡಿದೆ. (ನುಂಗಿದೆ)
ತೂಣೌ ಚಾಪ್ಯಕ್ಷಯೌ ಭೂಯಃ ತವ ಪಾರ್ಥ ಕರೋಚಿತೌ |
ಭವಿಷ್ಯತಿ ಶರೀರಂ ಚ ನೀರುಜಂ ಕುರುನಂದನ ॥78॥
ಪಾರ್ಥನೇ, ಅಕ್ಷಯಬತ್ತಳಿಕೆಗಳು ನಿನ್ನ ಕೈಗಳಿಗೇ ಯೋಗ್ಯವಾದವು. ಅವು ನಿನಗೆ ಬರುತ್ತವೆ. ಕುರುನಂದನನೇ ನಿನ್ನ ಶರೀರವು ರೋಗರಹಿತವಾಗುವುದು.
ಪ್ರೀತಿಮಾನಸ್ಮಿ ವೈ ಪಾರ್ಥ ತವ ಸತ್ಯಪರಾಕ್ರಮ |
ಗೃಹಾಣ ವರಮಸ್ಮತ್ತಃ ಕಾಂಕ್ಷಿತಂ ಪುರುಷರ್ಷಭ ॥79॥
ಸತ್ಯಪರಾಕ್ರಮನಾದ ಪಾರ್ಥನೇ, ನಿನಗೆ ಸಂತುಷ್ಟನಾಗಿದ್ದೇನೆ. ಪುರುಷಶ್ರೇಷ್ಠನೇ, ನಿನಗೆ ಇಷ್ಟವಾದ ವರವನ್ನು ನನ್ನಿಂದ ತೆಗೆದುಕೋ.
ನ ತ್ವಯಾ ಸದೃಶಃ ಕಶ್ಚಿತ್ ಪುಮಾನ್ ಮರ್ತ್ಯೇಷು ಭಾರತ |
ದಿವಿ ವಾ ವಿದ್ಯತೇ ಕ್ಷತ್ರಂ ತ್ವತ್ಪ್ರಧಾನಮರಿಂದಮ ॥80॥
ಎಲೈ ಭಾರತನೇ! ಮನುಷ್ಯರಲ್ಲಿ ನಿನಗೆ ಸದೃಶನಾದವನು ಇನ್ನೊಬ್ಬನಿಲ್ಲ. ಅರಿಂದಮನೇ ಅಥವಾ ಸ್ವರ್ಗಲೋಕದಲ್ಲಿ ನಿನಗಿಂತ ಉತ್ತಮನಾದ ಇನ್ನೊಬ್ಬ ಕ್ಷತ್ರಿಯನಿಲ್ಲ.
ಅರ್ಜುನಃ
ಭವಾನ್ ದದಾಸಿ ಚೇನ್ಮಹ್ಯಂ ಕಾಮಂ ಪ್ರೀತ್ಯಾ ವೃಷಭಧ್ವಜ |
ಕಾಮಯೇ ದಿವ್ಯಮಸ್ತ್ರಂ ತದ್ ಘೋರಂ ಪಾಶುಪತಂ ಮಹತ್ ॥81॥
ಯತ್ ತದ್ ಬ್ರಹ್ಮಶಿರೋ ನಾಮ ರೌದ್ರಂ ಭೀಮಪರಾಕ್ರಮಮ್ |
ಯುಗಾಂತೇ ದಾರುಣೇ ಪ್ರಾಪ್ತೇ ಕೃತ್ಸ್ನಂ ಸಂಹರತೇ ಜಗತ್ ॥82॥
ಜಯೇಯಂ ಯೇನ ಸಂಗ್ರಾಮೇ ದಾನವಾನ್ ರಾಕ್ಷಸಾಂಸ್ತಥಾ |
ರಾಜ್ಞಶ್ಚೈವ ಪಿಶಾಚಾಂಶ್ಚ ಗಂಧರ್ವಾನಥ ಪನ್ನಗಾನ್ ॥83॥
ಯಸ್ಮಿನ್ ಶೂಲಸಹಸ್ರಾಣಿ ಗದಾಶ್ಚೋಗ್ರಪ್ರದರ್ಶನಾಃ |
ಶರಾಶ್ಚಾಶೀವಿಷಾಕಾರಾಃ ಸಂಭವಂತ್ಯನುಮಂತ್ರಿತಾಃ ॥84॥
ಯುಧ್ಯೇಯಂ ಯೇನ ಭೀಷ್ಮೇಣ ದ್ರೋಣೇನ ಚ ಕೃಪೇಣ ಚ |
ಸೂತಪುತ್ರೇಣ ಚ ರಣೇ ನಿತ್ಯಂ ಕಟುಕಭಾಷಿಣಾ ॥85॥
ವೃಷಭಧ್ವಜನೇ, ನೀನು ನನಗೆ ಸಂತೋಷದಿಂದ ವರವನ್ನು ಕೊಡುವುದಾದರೆ ದಿವ್ಯವಾದ ಘೋರವಾದ ಆ ಪಾಶುಪತಮಹಾಸ್ತ್ರವನ್ನು ಬಯಸುತ್ತೇನೆ. ಯಾವ ಬ್ರಹ್ಮಶಿರೋನಾಮಕವಾದ ಭಯಂಕರಪರಾಕ್ರಮವುಳ್ಳ ಕಠೋರವಾದ ಅಸ್ತ್ರವು ದಾರುಣವಾದ ಪ್ರಳಯಕಾಲವು ಸನ್ನಿಹಿತವಾದಾಗ ಎಲ್ಲ ಜಗತ್ತನ್ನು ಸಂಹರಿಸುತ್ತದೋ ಯಾವುದನ್ನು ಅವಲಂಬಿಸಿ ಯುದ್ಧದಲ್ಲಿ ದಾನವರನ್ನೂ ರಾಕ್ಷಸರನ್ನೂ ಪಿಶಾಚಿಗಳನ್ನೂ ಗಂಧರ್ವರನ್ನೂ ಮತ್ತು ಸರ್ಪಗಳನ್ನೂ ಗೆಲ್ಲುವೆನೋ ಯಾವ ಅಸ್ತ್ರದಲ್ಲಿ ಅಭಿಮಂತ್ರಣವನ್ನು ಮಾಡಿದರೆ ಸಹಸ್ರಾರು ಶೂಲಗಳು ಉಗ್ರವಾಗಿ ತೋರುವ ಅನೇಕ ಗದೆಗಳು ಸರ್ಪಾಕಾರವಾದ ಶರಗಳು ಹೊರಹೊಮ್ಮುತ್ತವೆಯೋ ಯಾವ ಅಸ್ತ್ರದಿಂದ ಭೀಷ್ಮರ ದ್ರೋಣರ ಕೃಪಾಚಾರ್ಯರ ಜೊತೆಯಲ್ಲಿ ಯುದ್ಧಮಾಡುವೆನೊ (ಅಂತಹ ಪಾಶುಪತಾಸ್ತ್ರವನ್ನು) ಬೇಡುತ್ತೇನೆ.
ಏಷ ಮೇ ಪ್ರಥಮಃ ಕಾಮೋ ಭಗವನ್ ಭಗನೇತ್ರಹನ್ |
ತ್ವತ್ಪ್ರಸಾದಾದ್ವಿನಿರ್ವೃತ್ತಃ ಸಮರ್ಥಃ ಸ್ಯಾಮಹಂ ಯಥಾ ॥86॥
ಭಗನೇತ್ರಹಾರಿಯಾದ ಭಗವಂತನೇ ಇದು ನನ್ನ ಶ್ರೇಷ್ಠವಾದ ಕಾಮ. ನಿನ್ನ ಅನುಗ್ರಹದಿಂದ ನಾನು ಅದನ್ನು ಸ್ವೀಕರಿಸಿ ಸಮರ್ಥನಾಗಿದ್ದು ಸಂತೋಷದಿಂದ ಇರುತ್ತೇನೆ.
ರುದ್ರಃ
ದದಾಮಿ ತೇಽಸ್ತ್ರಂ ದಯಿತಮಹಂ ಪಾಶುಪತಂ ಮಹತ್ |
ಸಮರ್ಥೋ ಧಾರಣೇ ಮೋಕ್ಷೇ ಸಂಹಾರೇ ಚಾಸಿ ಪಾಂಡವ ॥87॥
ನ ತದ್ವೇದ ಮಹೇಂದ್ರೋಽಪಿ ನ ಯಮೋ ನ ಚ ಯಕ್ಷರಾಟ್ |
ವರುಣೋಽಪ್ಯಥವಾ ವಾಯುಃ ಕುತೋ ವೇತ್ಸ್ಯಂತಿ ಮಾನವಾಃ ॥
ಪಾಂಡವನೇ ನಿನಗೆ ಪ್ರಿಯವಾದ ಪಾಶುಪತವೆಂಬ ಮಹಾಸ್ತ್ರವನ್ನು ಕೊಡುತ್ತೇನೆ. ನೀನು ಅದನ್ನು ಧರಿಸುವುದಕ್ಕೂ ಪ್ರಯೋಗಮಾಡುವುದಕ್ಕೂ ಮತ್ತು ಉಪಸಂಹಾರಮಾಡುವುದಕ್ಕೂ ಸಮರ್ಥನಾಗಿದ್ದೀಯೆ. ಆ ಪಾಶುಪತಾಸ್ತ್ರವನ್ನು ಮಹೇಂದ್ರನಾಗಲೀ ಯಮನಾಗಲೀ ಕುಬೇರನಾಗಲೀ ವರುಣನಾಗಲೀ ಅಥವಾ ವಾಯುವಾಗಲೀ ಪಡೆದಿಲ್ಲ. ಇನ್ನು ಮನುಷ್ಯರು ಎಲ್ಲಿಂದ ಪಡೆಯುತ್ತಾರೆ?
ನ ತ್ವಯಾ ಸಹಸಾ ತಾತ ಮೋಕ್ತವ್ಯಂ ಪುರುಷೇ ಕ್ವಚಿತ್ |
ಜಗದ್ವಿನಿರ್ದಹೇತ್ ಸರ್ವಮಲ್ಪತೇಜಸಿ ಪಾತಿತಮ್ ॥89॥

ಎಲೈ ಪ್ರೀತಿಪಾತ್ರನೇ! ನೀನು ಆ ಅಸ್ತ್ರವನ್ನು ಆಲೋಚಿಸದೆ ಸಾಮಾನ್ಯಪುರುಷನಲ್ಲಿ ಪ್ರಯೋಗಿಸಬಾರದು. ಅಲ್ಪಪರಾಕ್ರಮವುಳ್ಳ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ ಆ ಅಸ್ತ್ರವು ಜಗತ್ತನ್ನೇ ನಾಶಮಾಡೀತು.
ಅವಧ್ಯೋ ನಾಮ ನಾಸ್ತ್ಯಸ್ಯ ತ್ರೈಲೋಕ್ಯೇ ಸಚರಾಚರೇ |
ಮನಸಾ ಚಕ್ಷುಷಾ ವಾಚಾ ಧನುಷಾ ಚ ನಿಪಾತ್ಯತೇ ॥90॥
ಚರಾಚರ ಪ್ರಾಣಿಗಳನ್ನು ಒಳಗೊಂಡ ಮೂರುಲೋಕಗಳಲ್ಲಿ ಈ ಅಸ್ತ್ರಕ್ಕೆ ಅವಧ್ಯನಾದವನು ಯಾವನೂ ಇಲ್ಲ. ಮನಸ್ಸಿನಲ್ಲಿ ಮಂತ್ರವನ್ನು ಸ್ಮರಿಸಿ ಇವನು ನಷ್ಟನಾಗಲಿ ಎಂದು ಇಚ್ಛಿಸಿದರೂ ಮಂತ್ರವನ್ನು ಜಪಿಸಿ ಕಣ್ಣಿನಿಂದ ನೋಡಿದರೂ ಅಥವಾ ನಷ್ಟನಾಗು ಎಂದು ಮಾತಿನಿಂದ ಹೇಳಿದರೂ ಅಥವಾ ಧನುಸ್ಸಿನಿಂದ ಪ್ರಯೋಗಿಸಿದರೂ ಆ ವ್ಯಕ್ತಿಯು ನಾಶವನ್ನು ಹೊಂದುತ್ತಾನೆ.
ವೈಶಂಪಾಯನಃ
ತಚ್ಛ್ರುತ್ವಾ ಸಹಸಾ ಪಾರ್ಥಃ ಶುಚಿರ್ಭೂತ್ವಾ ಸಮಾಹಿತಃ |
ಉಪಸಂಗೃಹ್ಯ ವಿಶ್ವೇಶಮಧೀಷ್ವೇತಿ ಚ ಸೋಽಬ್ರುವೀತ್ ॥91॥
ತತಸ್ತ್ವಧ್ಯಾಪಯಾಮಾಸ ಸರಹಸ್ಯನಿವರ್ತನಮ್ |
ತದಸ್ತ್ರಂ ಪಾಂಡವಶ್ರೇಷ್ಠಂ ಮೂರ್ತಿಮಂತಮಿವಾಂತಕಮ್ ॥92॥
ಅದನ್ನು ಕೇಳಿದ ಅರ್ಜುನನು ಶುಚಿಯಾಗಿ ಮನಃಸಮಾಧಾನವನ್ನು ಹೊಂದಿದವನಾಗಿ ವಿಶ್ವೇಶ್ವರ ನನ್ನು ಸಮೀಪಿಸಿ ಉಪದೇಶವನ್ನು ಕೊಡು ಎಂದು ಕೇಳಿದನು. ಶಂಕರನು ರಹಸ್ಯ ಮತ್ತು ಉಪಸಂಹಾರ ಸಹಿತವಾಗಿ ಪಾಶುಪತಾಸ್ತ್ರವನ್ನು ಪಾಂಡವಶ್ರೇಷ್ಠನಿಗೆ ಉಪದೇಶವನ್ನು ಮಾಡಿದನು.
ಉಪತಸ್ಥೇ ಮಹಾತ್ಮಾನಂ ತಥಾ ತ್ರ್ಯಕ್ಷಮುಮಾಪತಿಮ್ |
ಪ್ರತಿಜಗ್ರಾಹ ತತ್ಪಾರ್ಥಃ ಪ್ರೀತಿಮಾನರಿಮರ್ದನಃ ॥93॥
ತತಶ್ಚಚಾಲ ಪೃಥಿವೀ ಸಪರ್ವತವನದ್ರುಮಾ |
ಸಸಾಗರವನೋದ್ದೇಶಾ ಸಗ್ರಾಮನಗರಾಕರಾ ॥94॥
ಶರೀರವನ್ನು ಧರಿಸಿದ ಯಮನಂತೆ ಇದ್ದ ಆ ಅಸ್ತ್ರವು ಮಹಾತ್ಮನಾದ ಅರ್ಜುನನನ್ನು ಸಮೀಪಿಸಿತು. ಹಾಗೆಯೇ ತ್ರಿನೇತ್ರನಾದ ಪಾರ್ವತೀಪತಿಯ ಬಳಿಯಲ್ಲಿಯೂ ಇದ್ದಿತು. ಶತ್ರುಮರ್ದನನಾದ ಅರ್ಜುನನು ಸಂತೋಷದಿಂದ ಆ ಅಸ್ತ್ರವನ್ನು ಸ್ವೀಕರಿಸಿದನು. ಆಗ ಪರ್ವತ ವನ ವೃಕ್ಷಗಳಿಂದಲೂ ಸಾಗರ ಮತ್ತು ತೀರದ ವನಪ್ರದೇಶಗಳಿಂದಲೂ ಗ್ರಾಮನಗರಗಳಿಂದಲೂ ಕೂಡಿದ ಭೂಮಿಯು ನಡುಗಿತು.
ಶಂಖದುಂದುಭಿಘೋಷಾಶ್ಚ ಭೇರೀಣಾಂ ಚ ಸಹಸ್ರಶಃ |
ತಸ್ಮಿನ್ ಮುಹೂರ್ತೇ ಸಂಪ್ರಾಪ್ತೇ ನಿರ್ಘಾತಶ್ಚ ಮಹಾನಭೂತ್ ॥
ಆ ಮುಹೂರ್ತದಲ್ಲಿ ಶಂಖದುಂದುಭಿಘೋಷಗಳೂ ಸಹಸ್ರಾರು ಭೇರಿಗಳ ಶಬ್ದಗಳೂ ಉಂಟಾದವು. ದೊಡ್ಡ ಸಿಡಿಲುಗಳು ಉಂಟಾದವು.
ಅಥಾಸ್ತ್ರಂ ಜಾಜ್ವಲದ್ಘೋರಂ ಪಾಂಡವಸ್ಯಾಮಿತೌಜಸಃ |
ಮೂರ್ತಿಮದ್ ವಿಷ್ಠಿತಂ ಪಾರ್ಶ್ವೇ ದದೃಶುರ್ದೇವದಾನವಾಃ ॥96॥
ಆಗ ಪ್ರಕಾಶಮಾನವಾದ ಆ ಘೋರವಾದ ಅಸ್ತ್ರವು ಶರೀರವನ್ನು ಧರಿಸಿ ಅಮಿತಪರಾಕ್ರಮಿಯಾದ ಅರ್ಜುನನ ಪಾರ್ಶ್ವದಲ್ಲಿ ನಿಂತುದನ್ನು ದೇವತೆಗಳು ಮತ್ತು ದಾನವರು ನೋಡಿದರು.
ಸ್ಪೃಷ್ಟಸ್ಯ ಚ ತ್ರ್ಯಂಬಕೇಣ ಫಲ್ಗುನಸ್ಯಾಮಿತೌಜಸಃ |
ಯತ್ ಕಿಂಚಿದಶುಭಂ ದೇಹೇ ತತ್ ಸರ್ವಂ ನಾಶಮೇಯಿವಾನ್ ॥
ಶಂಕರನ ಸ್ಪರ್ಶಕ್ಕೆ ಪಾತ್ರನಾದ ಅಮಿತಪರಾಕ್ರಮಿಯಾದ ಅರ್ಜುನನ ದೇಹದಲ್ಲಿ ಯಾವ ಸ್ವಲ್ಪ ಅಶುಭವಿದ್ದಿತೋ ಅವೆಲ್ಲವೂ ನಾಶವನ್ನು ಹೊಂದಿತು.
ಸ್ವರ್ಗಂ ಗಚ್ಛೇತ್ಯನುಜ್ಞಾತಃ ತ್ರ್ಯಂಬಕೇಣ ಮಹಾತ್ಮನಾ |
ಪ್ರಣಮ್ಯ ಶಿರಸಾ ರಾಜನ್ ಪ್ರಾಂಜಲಿರ್ಹರಮೈಕ್ಷತ ॥98॥
ರಾಜನೇ! ಸ್ವರ್ಗಕ್ಕೆ ಹೋಗು ಎಂದು ಮಹಾತ್ಮನಾದ ತ್ರ್ಯಂಬಕನಿಂದ ಅನುಜ್ಞಾತನಾದ ಅರ್ಜುನನು ಶಿರಸಾ ನಮಸ್ಕಾರವನ್ನು ಮಾಡಿ ಕೈಗಳನ್ನು ಜೋಡಿಸಿ ಶಂಕರನನ್ನು ನೋಡಿದನು.
ತತಃ ಪ್ರಭುಸ್ತ್ರಿದಿವನಿವಾಸಿನಂ ವಶೀ
ಮಹಾಮತಿರ್ಗಿರಿಶ ಉಮಾಪತಿಃ ಶಿವಃ |
ಧನುರ್ಮಹದ್ ದಿತಿಜಪಿಶಾಚಸೂದನಂ
ದದೌ ಭವಃ ಪುರುಷವರಾಯ ಗಾಂಡಿವಮ್ ॥99॥
ಅನಂತರ ಸ್ವರ್ಗವಾಸಿಗಳಾದ ದೇವತೆಗಳಿಗೆ ಪ್ರಭುವಾದ, ಜಗತ್ತನ್ನು ತನ್ನ ವಶದಲ್ಲಿ ಇಟ್ಟುಕೊಂಡ, ಮಹಾಮತಿಯಾದ, ಉಮಾಪತಿಯಾದ, ಗಿರೀಶನೆಂದು ಕರೆಯಲ್ಪಡುವ ಶಿವನು ದೈತ್ಯರನ್ನೂ ಪಿಶಾಚಿಗಳನ್ನೂ ಸಂಹರಿಸುವ ಆ ದೊಡ್ಡ ಗಾಂಡೀವಧನುಸ್ಸನ್ನು ಪುರುಷಶ್ರೇಷ್ಠನಾದ ಅರ್ಜುನನಿಗೆ ಕೊಟ್ಟನು.
ತತಃ ಶುಭಂ ಗಿರಿವರಮೀಶ್ವರಸ್ತದಾ
ಸಹೋಮಯಾ ಸಿತತಟಸಾನುಕಂದರಮ್ |
ವಿಹಾಯ ತಂ ಪತಗಮಹರ್ಷಿಸೇವಿತಂ
ಜಗಾಮ ಖಂ ಪುರುಷವರಸ್ಯ ಪಶ್ಯತಃ ॥100॥

ಅನಂತರ ಈಶ್ವರನು ಶ್ವೇತವರ್ಣದ ಶಿಖರ ಮತ್ತು ಕಂದರಗಳನ್ನು ಹೊಂದಿದ್ದ , ಪಕ್ಷಿಗಳಿಂದ ಮತ್ತು ಮಹರ್ಷಿಗಳಿಂದ ಕೂಡಿದ್ದ, ಆ ಶ್ರೇಷ್ಠವಾದ ಪರ್ವತವನ್ನು ಬಿಟ್ಟು ಪುರುಷಶ್ರೇಷ್ಠನಾದ ಅರ್ಜುನನು ನೋಡುತ್ತಿರುವಂತೆಯೇ ಪಾರ್ವತಿಯ ಜೊತೆಯಲ್ಲಿ ಅಂತರಿಕ್ಷದಲ್ಲಿ ಪ್ರಯಾಣಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಷಡ್‌ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯ - 22ನೇ ಅಧ್ಯಾಯ
ಇಂದ್ರೋಽರ್ಜುನಂ ಸಮಾಗಮ್ಯ ಪ್ರಾಹ ಪ್ರೀತೋಽಸ್ಮಿತೇಽನಘ ॥
ರುದ್ರದೇಹಸ್ಥಿತಂ ಬ್ರಹ್ಮ ವಿಷ್ಣ್ವಾಖ್ಯಂ ತೋಷಿತಂ ತ್ವಯಾ |
ತೇನ ಲೋಕಂ ಮಮಾಗಚ್ಛ ಪ್ರೇಷಯಾಮಿ ರಥಂ ತವ ॥150॥
ಇಂದ್ರ ಅರ್ಜುನನ ಬಳಿಗೆ ಬಂದು ಹೇಳಿದ `ಪಾಪರಹಿತನಾದ ಅರ್ಜುನನೆ, ನಿನ್ನ ಬಗ್ಗೆ ನಾನು ಸಂತುಷ್ಟನಾಗಿದ್ದೇನೆ.
ರುದ್ರದೇಹದಲ್ಲಿರುವ ವಿಷ್ಣುರೂಪಿ ಪರಬ್ರಹ್ಮನನ್ನು ನೀನು ಸಂತೋಷಪಡಿಸಿರುವಿ. ಅದರಿಂದ ನೀನು ನನ್ನ ಲೋಕಕ್ಕೆ ಬಾ. ನಿನಗೆ ರಥವನ್ನು ಕಳಿಸುತ್ತೇನೆ.
ಇತ್ಯುಕತ್ವ ಪ್ರಯಯಾವಿಂದ್ರಸ್ತದ್ರಥೇನೈವ ಮಾತಲಿಃ |
ಆಯಾತ್‌ಪಾರ್ಥಸ್ತಮಾರುಹ್ಯ ಯಯೌ ತಾತನಿಕೇತನಂ ॥151॥
ಹೀಗೆ ಹೇಳಿ ಇಂದ್ರ ಹೊರಟು ಹೋದ. ಬಳಿಕ ಅದೇ ರಥದಿಂದ ಮಾತಲಿ ಹಿಂತಿರುಗಿ ಬಂದ. ಅರ್ಜುನ ಆ ರಥವನ್ನೇರಿ ಸ್ವರ್ಗಕ್ಕೆ ತೆರಳಿದ.
ಪೂಜಿತೋ ದೈವತೈಃ ಸರ್ವೈರಿಂದ್ರೇಣಾಭಿನಿವೇಶಿತಃ |
ತೇನ ಸಾರ್ಧಮುಪಾಸೀದತ್‌ತಸ್ಮಿನ್ನೈಂದ್ರೇ ವರಾಸನೇ ॥152॥
ಅರ್ಜುನ ಎಲ್ಲ ದೇವತೆಗಳಿಂದಲೂ ಸತ್ಕೃತನಾಗಿ ಇಂದ್ರನಿಂದ ತನ್ನಾಸನದಲ್ಲಿ ಕುಳ್ಳಿರಿಸಲ್ಪಟ್ಟ. ಅರ್ಜುನ ಇಂದ್ರನೊಂದಿಗೆ ಉತ್ಕೃಷ್ಟವಾದ ಆ ಆಸನದಲ್ಲಿ ಕುಳಿತ.
ಪ್ರೀತ್ಯಾ ಸಮಾಶ್ಲಿಸ್ಯ ಕುರುಪ್ರವೀರಂ
ಶತ್ರೋದ್ವಿತೀಯಾಂ ತನುಮಾತ್ಮನಃ ಸಃ |
ಈಕ್ಷನ್‌ಮುಖಂ ತಸ್ಯ ಮುಮೋದ ಸೋಽಪಿ
ಹ್ಯುವಾಸ ತಸ್ಮಿನ್‌ವತ್ಸರಾನ್‌ಪಂಚ ಲೋಕೇ ॥153॥
ಇಂದ್ರ ತನ್ನ ಎರಡನೆ ರೂಪವಾದ ಅರ್ಜುನನನ್ನು ಪ್ರೀತಿಯಿಂದಾಲಿಂಗಿಸಿ ಅವನ ಮುಖ ನೋಡುತ್ತ ಆನಂದಿಸಿದ. ಅರ್ಜುನ ಆ ಸ್ವರ್ಗಲೋಕದಲ್ಲಿ ಐದು ವರ್ಷಕಾಲ ವಾಸಮಾಡಿದ.
ಅಸತ್ರಣಿ ತಸ್ಯಾದದಿಶಚ್ಚ ವಾಸವೋ
ಮಹಾಂತಿ ದಿವ್ಯಾನಿ ತದೋರ್ವಶೀ ತಂ |
ಸಂಪ್ರಾಪ್ಯ ಭಾವೇನ ತು ಮಾನುಷೇಣ
ಮಾತಾ ಕುಲಸ್ಯೇತಿ ನಿವಾರಿತಾಭೂತ್ ॥154॥
ದೇವೇಂದ್ರ ಅರ್ಜುನನಿಗೆ ಮಹಾದಿವ್ಯಾಸ್ತ್ರಗಳನ್ನು ಉಪದೇಶಿಸಿದ. ಊರ್ವಶಿ ಅರ್ಜುನನ ಬಳಿಗೆ ಬಂದು ಸಂಗವನ್ನು ಬೇಡಿದಳು. ಅರ್ಜುನ ತಾನು ಮನುಷ್ಯನೆಂಬ ಭಾವನೆಯಿಂದ ಊರ್ವಶಿ ತನ್ನ ಕುಲದ ಮಾತೆ ಎಂದುಕೊಂಡು ಅವಳ ಸಂಗವನ್ನು ನಿರಾಕರಿಸಿದ.
ಷಂಢೋ ಭವೇತ್ಯೇವ ತಯಾಭಿಶಪ್ತೇ
ಪಾರ್ಥೇ ಶಕ್ರೋಽನುಗ್ರಹಂ ತಸ್ಯ ಚಾದಾತ್ |
ಸಂವತ್ಸರಂ ಷಂಢರೂಪೀ ಚರಸ್ವ
ನ ಷಂಢತಾ ತೇ ಭವತೀತಿ ಧೃಷ್ಣುಃ ॥155॥
ನೀನು ನಪುಂಸಕನಾಗೆಂದು ಊರ್ವಶಿ ಅರ್ಜುನನನ್ನು ಶಪಿಸಿದಾಗ ದೇವೇಂದ್ರ ಅವನಿಗೆ ಶಾಪ ಪರಿಹಾರವನ್ನು ಅನುಗ್ರಹಿಸಿದ. `ನಪುಂಸಕ ವೇಷದಲ್ಲಿ ಒಂದು ವರ್ಷ ಕಾಲ ಮಾತ್ರ ಸಂಚರಿಸು, ನಪುಂಸಕತ್ವ ನಿನಗೆ ಬಾರದು' ಎಂದು.
ತತೋಽವಸತ್ ಪಾಂಡವೇಯೋ ಗಾಂಧರ್ವಂ ವೇದಮಭ್ಯಸನ್ |
ಗಂಧರ್ವಾಚ್ಚಿತ್ರಸೇನಾಸ್ತು ತಥಾಸತ್ರಣಿ ಸುರೇಶ್ವರಾತ್ ॥156॥
ಬಳಿಕ ಅರ್ಜುನ ಚಿತ್ರಸೇನ ಗಂಧರ್ವನಿಂದ ಗಾಂಧರ್ವ ವೇದವನ್ನೂ ಇಂದ್ರನಿಂದ ಅಸ್ತ್ರಗಳನ್ನೂ ಅಭ್ಯಾಸಮಾಡುತ್ತ ಸ್ವರ್ಗದಲ್ಲಿ ವಾಸಮಾಡಿದ.
* * * *
ಮೂವತ್ತೇಳನೆಯ ಅಧ್ಯಾಯ
(ಯಮ ವರುಣ ಕುಬೇರ ಇವರಿಂದ ಅರ್ಜುನನಿಗೆ ಅಸ್ತ್ರದಾನ. ಇಂದ್ರನಿಂದ ಸ್ವರ್ಗಕ್ಕೆ ಬರುವಂತೆ ಅರ್ಜುನನಿಗೆ ಪ್ರೇರಣೆ.)
ವೈಶಂಪಾಯನಃ
ತಸ್ಯ ಸಂಪಶ್ಯತಸ್ತ್ವೇವ ಪಿನಾಕೀ ವೃಷಭಧ್ವಜಃ |
ಜಗಾಮಾದರ್ಶನಂ ಭಾನುರ್ಲೋಕಸ್ಯೇವಾಸ್ತಮೇಯಿವಾನ್ ॥1॥

ಅರ್ಜುನನು ನೋಡುತ್ತಿರುವಂತೆಯೇ ಅಸ್ತಂಗತನಾದ ಸೂರ್ಯನಂತೆ ವೃಷಭಧ್ವಜನಾದ ಪಿನಾಕಿಯು ಅದೃಶ್ಯನಾದನು.
ತತೋಽರ್ಜುನಃ ಪರಂ ಚಕ್ರೇ ವಿಸ್ಮಯಂ ಪರವೀರಹಾ |
ಮಯಾ ಸಾಕ್ಷಾನ್ಮಹಾದೇವೋ ದೃಷ್ಟ ಇತ್ಯಸಕೃತ್ ಪ್ರಭುಃ ॥2॥
ಆಗ ಶತ್ರುವೀರರನ್ನು ಸಂಹರಿಸುವ ಪ್ರಭುವಾದ ಅರ್ಜುನನು ತಾನು ಸಾಕ್ಷಾತ್ ಮಹಾದೇವನನ್ನು ನೋಡಿದೆ ಎಂದು ತಿಳಿದು ಮತ್ತೆಮತ್ತೆ ವಿಸ್ಮಯವನ್ನು ಹೊಂದಿದನು.
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮಯಾ ತ್ರ್ಯಂಬಕೋ ಹರಃ |
ಪಿನಾಕೀ ವರದೋ ರೂಪೀ ದೃಷ್ಟಃ ಸ್ಪೃಷ್ಟಶ್ಚ ಪಾಣಿನಾ ॥3॥
ತ್ರಿನೇತ್ರನಾದ ವರದನಾದ ಪಿನಾಕಿಯಾದ ಶಿವನನ್ನು ನಾನು ಮೂರ್ತಿಮತ್ತಾಗಿ ನೋಡಿದ್ದೇನೆ. ಅವನ ಹಸ್ತಸ್ಪರ್ಶವನ್ನು ಪಡೆದಿದ್ದೇನೆ. ಆದ್ದರಿಂದ ನಾನು ಧನ್ಯನಾಗಿದ್ದೇನೆ ಮತ್ತು ಶಿವನ ಅನುಗ್ರಹವನ್ನು ಪಡೆದಿದ್ದೇನೆ.
ಕೃತಾರ್ಥಂ ಚಾವಗಚ್ಛಾಮಿ ಪುನರಾತ್ಮಾನಮಾತ್ಮನಾ |
ಶತ್ರೂಂಶ್ಚ ವಿಜಿತಾನ್ ಸರ್ವಾನ್ ನಿರ್ವೃತ್ತಂ ಚ ಪ್ರಯೋಜನಮ್ ॥
ನಾನು ನನ್ನನ್ನು ಕೃತಾರ್ಥನೆಂದು ಭಾವಿಸುತ್ತೇನೆ. ಎಲ್ಲ ಶತ್ರುಗಳನ್ನೂ ಸೋಲಿಸುತ್ತೇನೆಂದು ಭಾವಿಸುತ್ತೇನೆ. ನನ್ನ ತಪಸ್ಸಿಗೆ ಫಲವು ದೊರಕಿದೆ.
ತತೋ ವೈಡೂರ್ಯವರ್ಣಾಭೋ ದ್ಯೋತಯನ್ ಸರ್ವತೋದಿಶಮ್ |
ಯಾದೋಗಣವೃತಃ ಶ್ರೀಮಾನಾಜಗಾಮ ಜಲೇಶ್ವರಃ ॥5॥
ಅನಂತರ ವೈಡೂರ್ಯವರ್ಣದಿಂದ ಕೂಡಿದ ಜಲೇಶ್ವರನಾದ ಕಾಂತಿಯುಕ್ತನಾದ ವರುಣನು ಎಲ್ಲಾ ದಿಕ್ಕುಗಳನ್ನೂ ಬೆಳಗುತ್ತಾ ಜಲಚರಪ್ರಾಣಿಗಳ ಜೊತೆಯಲ್ಲಿ (ಅಲ್ಲಿಗೆ) ಆಗಮಿಸಿದನು.
ನಾಗೈರ್ನದೈರ್ನದೀಭಿಶ್ಚ ದೈತ್ಯೈಃ ಸಾಧ್ಯೈರ್ಮರುದ್ಗಣೈಃ |
ವರುಣೋ ಯಾದಸಾಂ ಭರ್ತಾ ವಶೀ ತಂ ದೇಶಮಭ್ಯಗಾತ್ ॥6॥
ಸರ್ಪಗಳು ನದಗಳು ನದಿಗಳು ದೈತ್ಯರು ಸಾಧ್ಯರು ಮತ್ತು ಮರುದ್ಗಣಗಳ ಜೊತೆಯಲ್ಲಿ ಜಲಚರಪ್ರಾಣಿಗಳ ಒಡೆಯನಾದ ಮತ್ತು ಆತ್ಮವಶನಾದ ವರುಣನು ಆ ಪ್ರದೇಶಕ್ಕೆ ಬಂದನು.
ಅಥ ಜಾಂಬೂನದವಪುರ್ವಿಮಾನೇನ ಮಹಾರ್ಚಿಷಾ |
ಕುಬೇರಃ ಸಮನುಪ್ರಾಪ್ತೋ ಯಕ್ಷೈರನುಗತಃ ಪ್ರಭುಃ ॥7॥
ಅನಂತರ ಸುವರ್ಣಮಯವಾದ ಕಾಂತಿಯುಳ್ಳ ದೇಹದಿಂದ ಕೂಡಿದ ಪ್ರಭುವಾದ ಕುಬೇರನು ಮಹಾಪ್ರಕಾಶವುಳ್ಳ ವಿಮಾನದಿಂದ ಯಕ್ಷರಿಂದ ಅನುಗತನಾಗಿ ಬಂದನು.
ವಿದ್ಯೋತಯನ್ನಿವಾಕಾಶಮ್ ಅದ್ಭುತೋಪಮದರ್ಶನಃ |
ಧನಾನಾಮೀಶ್ವರಃ ಶ್ರೀಮಾನ್ ಅರ್ಜುನಂ ದ್ರಷ್ಟುಮಾಗಮತ್ ॥8॥
ಅದ್ಭುತ ದರ್ಶನನಾದ ಧನಪತಿಯಾದ ಕಾಂತಿಯುಕ್ತನಾದ ಕುಬೇರನು ಆಕಾಶವನ್ನು ಬೆಳಗುತ್ತಾ ಅರ್ಜುನನನ್ನು ನೋಡಲು ಆಗಮಿಸಿದನು.
ತಥಾ ಲೋಕಾಂತಕಃ ಶ್ರೀಮಾನ್ ಯಮಃ ಸಾಕ್ಷಾತ್ ಪ್ರತಾಪವಾನ್ |
ಮರ್ತ್ಯಮೂರ್ತಿಧರೈಃ ಸಾರ್ಧಂ ಪಿತೃಭಿರ್ಲೋಕಭಾವನೈಃ ॥9॥
ದಂಡಪಾಣಿರಚಿಂತ್ಯಾತ್ಮಾ ಸರ್ವಭೂತವಿನಾಶಕೃತ್ |
ವೈವಸ್ವತೋ ಧರ್ಮರಾಜೋ ವಿಮಾನೇನಾವಭಾಸಯನ್ ॥10॥
ತ್ರೀನ್‌ಲೋಕಾನ್ ಗುಹ್ಯಕಾಂಶ್ಚೈವ ಗಂಧರ್ವಾಂಶ್ಚ ಸಪನ್ನಗಾನ್ |
ದ್ವಿತೀಯ ಇವ ಮಾರ್ತಾಂಡೋ ಯುಗಾಂತೇ ಸಮುಪಸ್ಥಿತೇ ॥11॥
ಹಾಗೆಯೇ ಲೋಕನಾಶಕನಾದ ಮಹಾಪ್ರತಾಪಶಾಲಿಯಾದ ಸರ್ವಪ್ರಾಣಿಗಳ ಮರಣವನ್ನುಂಟುಮಾಡುವ ಅಚಿಂತ್ಯ ಪ್ರಭಾವವುಳ್ಳ ಸೂರ್ಯಪುತ್ರನಾದ ದಂಡಪಾಣಿಯಾದ ಕಾಂತಿಯುಕ್ತನಾದ ಯಮಧರ್ಮರಾಜನು ತನ್ನ ವಿಮಾನದ ಕಾಂತಿಯಿಂದ ಮೂರು ಲೋಕಗಳನ್ನೂ ಗುಹ್ಯಕರನ್ನೂ ಗಂಧರ್ವರನ್ನೂ ಮತ್ತು ಸರ್ಪಗಳನ್ನೂ ಪ್ರಕಾಶಿಸುತ್ತಾ ಯುಗಾಂತವು ಸಮೀಪಿಸಿದಾಗ ಇರುವ ಎರಡನೆಯ ಸೂರ್ಯನಂತೆ ಅಲ್ಲಿಗೆ ಬಂದನು.
ಭಾನುಮಂತಿ ವಿಚಿತ್ರಾಣಿ ಶಿಖರಾಣಿ ಮಹಾಗಿರೇಃ |
ಸಮಾಸ್ಥಾಯಾರ್ಜುನಂ ತತ್ರ ದದೃಶುಸ್ತಪಸಾನ್ವಿತಮ್ ॥12॥
ಸೂರ್ಯನ ಪ್ರಕಾಶವನ್ನು ಹೊಂದಿದ ಆ ಮಹಾಪರ್ವತದ ವಿಚಿತ್ರ ಶಿಖರಗಳಲ್ಲಿ ಅವರು ನಿಂತು ತಪೋಯುಕ್ತನಾದ ಅರ್ಜುನನನ್ನು ಅಲ್ಲಿ ನೋಡಿದರು.
ತತೋ ಮುಹೂರ್ತಾದ್ ಭಗವಾನೈರಾವತಶಿರೋಗತಃ |
ಆಜಗಾಮ ಸಹೇಂದ್ರಾಣ್ಯಾ ಶಕ್ರಃ ಸುರಗಣೈರ್ವೃತಃ ॥13॥
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ಶುಶುಭೇ ನಾಗರಾಜಸ್ಥಃ ಸಿತಮಭ್ರಮಿವಾಸ್ಥಿತಃ ॥14॥
ಅನಂತರ ಒಂದು ಮುಹೂರ್ತವು ಕಳೆದ ಮೇಲೆ ಐರಾವತದ ಶಿರಸ್ಸಿನಲ್ಲಿ ಕುಳಿತವನಾಗಿ ಇಂದ್ರನು ಶಚೀ ಮತ್ತು ಸುರಗಣಗಳಿಂದ ಕೂಡಿಕೊಂಡು ಅಲ್ಲಿಗೆ ಬಂದನು. ತನ್ನ ತಲೆಯ ಮೇಲೆ ಹಿಡಿದ ಶ್ವೇತಛತ್ರದಿಂದಲೂ ಶ್ವೇತ ಗಜದ ಮೇಲೆ ಕುಳಿತಿದ್ದರಿಂದಲೂ ಬಿಳಿಯ ಮೋಡದ ಮೇಲೆ ಕುಳಿತವನಂತೆ ಅವನು ಶೋಭಿಸಿದನು.

ಸಂಸ್ತೂಯಮಾನೋ ಗಂಧರ್ವೈಃ ಋಷಿಭಿಶ್ಚ ತಪೋಧನೈಃ |
ಶೃಂಗಂ ಗಿರೇಃ ಸಮಾಸಾದ್ಯ ತಸ್ಥೌ ಸೂರ್ಯ ಇವೋದಿತಃ ॥15॥
ಗಂಧರ್ವರಿಂದಲೂ ತಪೋಧನರಾದ ಋಷಿಗಳಿಂದಲೂ ಸ್ತೋತ್ರಮಾಡಲ್ಪಟ್ಟವನಾಗಿ ಪರ್ವತಶಿಖರವನ್ನು ತಲುಪಿ ಉದಯಿಸಿದ ಸೂರ್ಯನಂತೆ ಅಲ್ಲಿ ನಿಂತನು.
ಅಥ ಮೇಘಸ್ವನಃ ಶ್ರೀಮಾನ್ ವ್ಯಾಜಹಾರ ಶುಭಾಂ ಗಿರಮ್ |
ಯಮಃ ಪರಮಧರ್ಮಜ್ಞೋ ದಕ್ಷಿಣಾಂ ದಿಶಮಾಶ್ರಿತಃ ॥16॥
ನಂತರ ಪರಮಧರ್ಮಜ್ಞನಾದ ಕಾಂತಿಯುಕ್ತನಾದ ಮೇಘ ಗಂಭೀರವಾಣಿಯನ್ನು ಹೊಂದಿದ್ದ ಯಮನು ದಕ್ಷಿಣದಿಕ್ಕನ್ನು ಆಶ್ರಯಿಸಿದವನಾಗಿ ಶುಭವಾದ ಮಾತುಗಳನ್ನು ಆಡಿದನು.
ಅರ್ಜುನಾರ್ಜುನ ಪಶ್ಯಾಸ್ಮಾನ್ ಲೋಕಪಾಲಾನ್ ಸಮಾಗತಾನ್ |
ದೃಷ್ಟಿಂ ತೇ ವಿತರಾಮೋಽದ್ಯ ಭವಾನರ್ಹಸಿ ದರ್ಶನಮ್ ॥17॥
ಎಲೈ ಅರ್ಜುನನೇ ಇಲ್ಲಿಗೆ ಬಂದ ಲೋಕಪಾಲರಾದ ನಮ್ಮನ್ನು ನೋಡು. ನಿನಗೆ ನಾವು ಈ ದಿನ ದಿವ್ಯದೃಷ್ಟಿಯನ್ನು ಕೊಡುತ್ತೇವೆ. ನೀನು ಅಂತಹ ದರ್ಶನಕ್ಕೆ ಯೋಗ್ಯನಾಗಿದ್ದೀಯೆ.
ಪೂರ್ವರ್ಷಿರಮಿತಾತ್ಮಾ ತ್ವಂ ನರೋ ನಾಮ ಮಹಾಬಲಃ |
ನಿಯೋಗಾದ್ ಬ್ರಹ್ಮಣಸ್ತಾತ ಮರ್ತ್ಯತಾಂ ಸಮುಪಾಗತಃ ॥18॥
ನೀನು ಹಿಂದೆ ಅಮಿತವಾದ ಸಾಮರ್ಥ್ಯವುಳ್ಳ ಮಹಾಬಲವುಳ್ಳ ನರನೆಂಬ ಋಷಿಯಾಗಿದ್ದಿ. ಪ್ರೀತಿಪಾತ್ರನೇ, ಬ್ರಹ್ಮದೇವರ ಅಪ್ಪಣೆಯಂತೆ ಮನುಷ್ಯನಾಗಿ ಜನಿಸಿದ್ದೀಯೆ.
ತ್ವಂ ವಾಸವ ಸಮುದ್ಭೂತೋ ಮಹಾವೀರ್ಯಪರಾಕ್ರಮಃ |
ಕ್ಷಾತ್ರಂ ಚಾಗ್ನಿಸಮಸ್ಪರ್ಶಂ ಭಾರದ್ವಾಜೇನ ರಕ್ಷಿತಮ್ ॥19॥
ನೀನು ಇಂದ್ರನಿಂದ ಜನಿಸಿ ಮಹಾವೀರ್ಯಪರಾಕ್ರಮ- ವುಳ್ಳವನಾಗಿದ್ದೀಯೆ. ದ್ರೋಣರಿಂದ ರಕ್ಷಿತನಾಗಿದ್ದೀಯೆ. ಅಗ್ನಿ ಸಮಾನವಾದ ಸ್ಪರ್ಶವುಳ್ಳ ಕ್ಷಾತ್ರತೇಜಸ್ಸು ನಿನ್ನಲ್ಲಿ ತುಂಬಿದೆ.
ದಾನವಾಶ್ಚ ಮಹಾವೀರ್ಯಾ ಯೇ ಮನುಷ್ಯತ್ವಮಾಗತಾಃ |
ನಿವಾತಕವಚಾಶ್ಚೈವ ಸಂಸಾಧ್ಯಾಃ ಕುರುನಂದನ ॥20॥
ಎಲೈ ಕುರುನಂದನನೇ ಭೂಮಿಯಲ್ಲಿ ಮನುಷ್ಯರಾಗಿ ಅವತರಿಸಿ ಮಹಾಪರಾಕ್ರಮಶಾಲಿಗಳಾದ ದಾನವರು ಮತ್ತು ನಿವಾತಕವಚರು ನಿನ್ನಿಂದ ಸಂಹರಿಸಲ್ಪಡಬೇಕು.
ಪಿತುರ್ಮಮಾಂಶೋ ದೇವಸ್ಯ ಸರ್ವಲೋಕಪ್ರತಾಪಿನಃ |
ಕರ್ಣಃ ಸ ಸುಮಹಾವೀರ್ಯಃ ತ್ವಯಾ ವಧ್ಯೋ ಧನಂಜಯ ॥21॥
ಧನಂಜಯನೇ! ಎಲ್ಲಾ ಲೋಕಗಳನ್ನೂ ಬೆಳಗುವ ಮತ್ತು ಪ್ರತಾಪಶಾಲಿಯಾದ ನನ್ನ ತಂದೆಯಾದ ಸೂರ್ಯದೇವನ ಅಂಶವಾದ ಮಹಾಪರಾಕ್ರಮಶಾಲಿಯಾದ ಆ ಕರ್ಣನು ನಿನ್ನಿಂದ ಸಂಹರಿಸಲ್ಪಡಬೇಕು.
ಅಂಶಾಶ್ಚ ಭುವಿಸಂಪ್ರಾಪ್ತಾ ದೇವಗಂಧರ್ವರಕ್ಷಸಾಮ್ |
ತ್ವಯಾ ನಿಪಾತಿತಾ ಯುದ್ಧೇ ಸ್ವಕರ್ಮಫಲನಿರ್ಜಿತಾಮ್ |
ಗತಿಂ ಪ್ರಾಪ್ಸ್ಯಂತಿ ಕೌಂತೇಯ ಯಥಾಸ್ವಮರಿಕರ್ಶನ ॥22॥
ಎಲೈ ಕೌಂತೇಯನೇ, ಶತ್ರುಕರ್ಶನನೇ, ಭೂಮಿಗೆ ಬಂದ ದೇವತೆಗಳ ಗಂಧರ್ವರ ಮತ್ತು ರಾಕ್ಷಸರ ಅಂಶಗಳು ಯುದ್ಧದಲ್ಲಿ ನಿನ್ನಿಂದ ಉರುಳಿಸಲ್ಪಟ್ಟು ತಮ್ಮ ತಮ್ಮ ಕರ್ಮ ಫಲದಿಂದ ನಿರ್ಜಿತವಾದ ಗತಿಯನ್ನು ಹೊಂದುವರು.
ಅಕ್ಷಯಾ ತವ ಕೀರ್ತಿಶ್ಚ ಲೋಕೇ ಸ್ಥಾಸ್ಯತಿ ಫಲ್ಗುನ |
ತ್ವಯಾ ಸಾಕ್ಷಾನ್ಮಹಾದೇವಃ ತೋಷಿತೋ ಹಿ ಮಹಾಮೃಧೇ |
ಲಘ್ವೀ ವಸುಮತೀ ಚಾಪಿ ಕರ್ತವ್ಯಾ ವಿಷ್ಣುನಾ ಸಹ॥23॥
ಎಲೈ ಫಲ್ಗುನನೇ, ಲೋಕದಲ್ಲಿ ನಿನ್ನ ಅಕ್ಷಯವಾದ ಕೀರ್ತಿಯು ಉಳಿಯುವುದು. ನೀನು ದೊಡ್ಡ ಯುದ್ಧದಲ್ಲಿ ಸಾಕ್ಷಾತ್ ಮಹಾದೇವನನ್ನು ಸಂತೋಷಪಡಿಸಿದ್ದೀಯಷ್ಟೇ. ವಿಷ್ಣುವಿನ ಜೊತೆಯಲ್ಲಿ ಭೂಭಾರವನ್ನು ಇಳಿಸಬೇಕು.
ಗೃಹಾಣಾಸ್ತ್ರಂ ಮಹಾಬಾಹೋ ದಂಡಮಪ್ರತಿಮಂ ಮಹತ್ |
ಅನೇನಾಸ್ತ್ರೇಣ ಸುಮಹತ್ ತ್ವಂ ಹಿ ಕರ್ಮ ಕರಿಷ್ಯಸಿ ॥24॥
ಮಹಾಬಾಹುವೇ, ಅಸದೃಶವಾದ ಮಹತ್ತಾದ ಈ ನನ್ನ ದಂಡಾಸ್ತ್ರವನ್ನು ಸ್ವೀಕರಿಸು. ಈ ಅಸ್ತ್ರದಿಂದ ನೀನು ಬಹಳ ದೊಡ್ಡ ಕಾರ್ಯವನ್ನು ಸಾಧಿಸುವಿ.
ಪ್ರತಿಜಗ್ರಾಹ ತತ್ ಪಾರ್ಥೋ ವಿಧಿವತ್ ಕುರುನಂದನಃ |
ಸಮಂತ್ರಂ ಸೋಪಚಾರಂ ಚ ಸಮೋಕ್ಷಂ ಸನಿವರ್ತನಮ್ ॥25॥
ಕುರುನಂದನನಾದ ಅರ್ಜುನನು ಮಂತ್ರ ಉಪಚಾರ ಪ್ರಯೋಗ ಮತ್ತು ಉಪಸಂಹಾರಗಳಿಂದ ಸಹಿತವಾದ ಆ ಅಸ್ತ್ರವನ್ನು ವಿಧಿವತ್ತಾಗಿ ಸ್ವೀಕರಿಸಿದನು.
ತತೋ ಜಲಧರಶ್ಯಾಮೋ ವರುಣೋ ಯಾದಸಾಂ ಪತಿಃ |
ಪಶ್ಚಿಮಾಂ ದಿಶಮಾಸ್ಥಾಯ ಗಿರಮುಚ್ಚಾರಯನ್ ಪ್ರಭುಃ ॥26॥
ಅನಂತರ ಯಾದೋಗಣಪತಿಯಾದ ಜಲಧರಶ್ಯಾಮನಾದ ಪ್ರಭುವಾದ ವರುಣನು ಪಶ್ಚಿಮ ದಿಕ್ಕಿನಲ್ಲಿನಿಂತು ಮಾತನಾಡಿದನು.
ಪಾರ್ಥ ಕ್ಷತ್ರಿಯಮುಖ್ಯಸ್ತ್ವಂ ಕ್ಷತ್ರಧರ್ಮೇ ವ್ಯವಸ್ಥಿತಃ |

ಪಶ್ಯ ಮಾಂ ಪೃಥುತಾಮ್ರಾಕ್ಷ ವರುಣೋಽಸ್ಮಿ ಜಲೇಶ್ವರಃ ॥27॥
ಪಾರ್ಥನೇ, ನೀನು ಕ್ಷತ್ರಿಯರಲ್ಲಿ ಪ್ರಧಾನನಾದವನು. ಕ್ಷತ್ರಿಯಧರ್ಮದಲ್ಲಿ ನಿಷ್ಠನಾದವನು. ವಿಶಾಲರಕ್ತನೇತ್ರನೇ ನನ್ನನ್ನು ನೋಡು. ನಾನು ಜಲೇಶ್ವರನಾದ ವರುಣ.
ಮಯಾ ಸಮುದ್ಯತಾನ್ ಪಾಶಾನ್ ವಾರುಣಾನನಿವಾರಣಾನ್ |
ಪ್ರತಿಗೃಹ್ಣೀಷ್ವ ಕೌಂತೇಯ ಸರಹಸ್ಯನಿವರ್ತನಾನ್ ॥28॥
ಕೌಂತೇಯನೇ ನಾನು ಕೊಡುತ್ತಿರುವ ನಿವಾರಿಸಲು ಅಸಾಧ್ಯವಾದ ವಾರುಣಪಾಶಗಳನ್ನು ಮಂತ್ರ ಮತ್ತು ಉಪಸಂಹಾರಗಳೊಂದಿಗೆ ಸ್ವೀಕರಿಸು.
ಏಭಿಸ್ತದಾ ಮಯಾ ವೀರ ಸಂಗ್ರಾಮೇ ತಾರಕಾಮಯೇ |
ದೈತೇಯಾನಾಂ ಸಹಸ್ರಾಣಿ ಸಂಯತಾನಿ ಮಹಾತ್ಮನಾಮ್ ॥29॥
ವೀರನೇ ಈ ಪಾಶಗಳಿಂದ ಕಣ್ಣಿಗೆ ಹಿಂಸೆಯುಂಟಾಗುವಂತೆ ನಡೆದ ಯುದ್ಧದಲ್ಲಿ ನಾನು ಮಹಾಪ್ರಯತ್ನ ಶೀಲರಾದ ಸಾವಿರಾರು ದೈತ್ಯರನ್ನು ಬಂಧಿಸಿದ್ದೇನೆ.
ತಸ್ಮಾದಿಮಾನ್ ಮಹಾಸತ್ತ್ವ ಮತ್ಪ್ರಸಾದಸಮುತ್ಥಿತಾನ್ |
ಗೃಹಾಣ ನ ಹಿ ತೇ ಮುಚ್ಯೇದಂತಕೋಽಪ್ಯಾತತಾಯಿನಃ ॥30॥
ಮಹಾಸತ್ವನೇ, ನನ್ನ ಅನುಗ್ರಹದಿಂದ ಕೊಡಮಾಡಲ್ಪಟ್ಟ ಈ ಪಾಶಗಳನ್ನು ಸ್ವೀಕರಿಸು. ಶಸ್ತ್ರಧಾರಿಯಾದ ನಿನ್ನಿಂದ ಯಮನೂ ಕೂಡ ಬಿಡಿಸಿಕೊಂಡು ಹೋಗಲು ಸಾಧ್ಯವಿಲ್ಲ.
ಅನೇನ ತ್ವಂ ಯದಾಽಸ್ತ್ರೇಣ ಸಂಗ್ರಾಮೇ ವಿಚರಿಷ್ಯಸಿ |
ತದಾ ನಿಃಕ್ಷತ್ರಿಯಾ ಭೂಮಿರ್ಭವಿಷ್ಯತಿ ನ ಸಂಶಯಃ ॥31॥
ನೀನು ಈ ಅಸ್ತ್ರವನ್ನು ಹಿಡಿದು ಯಾವಾಗ ಯುದ್ಧ ಭೂಮಿಯಲ್ಲಿ ಸಂಚರಿಸುವಿಯೋ ಆಗ ಭೂಮಿಯು ನಿಃಕ್ಷತ್ರಿಯವಾಗುವುದು. ಇದರಲ್ಲಿ ಸಂಶಯವಿಲ್ಲ.
ತತಸ್ತಾನ್ ವಾರುಣಾನ್ ದಿವ್ಯಾನ್ ಅಸಹತ್ರುನಸ್ತ್ರವಿದಾಂ ವರಃ |
ಪ್ರತಿಜಗ್ರಾಹ ವಿಧಿವದ್ ವರುಣಾದ್ ವಾಸವಿಸ್ತದಾ ॥32॥
ಅನಂತರ ಆಗ ಅಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಅರ್ಜುನನು ದಿವ್ಯವಾದ ವಾರುಣಾಸ್ತ್ರವನ್ನು ವರುಣನಿಂದ ವಿಧಿವತ್ತಾಗಿ ಸ್ವೀಕರಿಸಿದನು.

ತತಃ ಕೈಲಾಸನಿಲಯೋ ಧನಾಧ್ಯಕ್ಷೋಽಭ್ಯಭಾಷತ |
ದತ್ತೇಷ್ವಸ್ತ್ರೇಷು ದಿವ್ಯೇಷು ವರುಣೇನ ಯಮೇನ ಚ ॥33॥
ವರುಣನು ಮತ್ತು ಯಮನು ದಿವ್ಯವಾದ ಅಸ್ತ್ರಗಳನ್ನು ಕೊಟ್ಟಮೇಲೆ ಕೈಲಾಸವಾಸಿಯಾದ ಕುಬೇರನು ಮಾತನಾಡಿದನು.
ಸವ್ಯಸಾಚಿನ್ ಮಹಾಬಾಹೋ ಪೂರ್ವದೇವ ಸನಾತನ |
ಸಹಾಸ್ಮಾಭಿರ್ಭವಾನ್ ಜಾತಃ ಪುರಾಕಲ್ಪೇಷು ನಿತ್ಯಶಃ ॥34॥
ಸವ್ಯಸಾಚಿಯಾದ ಮಹಾಬಾಹುವೇ, ಪೂರ್ವದೇವನೇ, ಸನಾತನನೇ, ನೀನು ಹಿಂದಿನ ಕಲ್ಪಗಳಲ್ಲಿ ಯಾವಾಗಲೂ ನಮ್ಮ ಜೊತೆಯಲ್ಲಿಯೇ ಜನಿಸಿದ್ದೀಯೆ.
ಮತ್ತೋಽಪಿ ತ್ವಂ ಗೃಹಾಣಾಸ್ತ್ರಮಂತರ್ಧಾನಂ ಪ್ರಿಯಂ ಮಮ |
ಓಜಸ್ತೇಜೋದ್ಯುತಿಕರಂ ಪ್ರಸ್ವಾಪನಮಮಿತ್ರಹನ್ ॥35॥
ನನ್ನಿಂದಲೂ ಕೂಡ ನನಗೆ ಪ್ರಿಯವಾದ ಅಂತರ್ಧಾನವೆಂಬ ಅಸ್ತ್ರವನ್ನು ಸ್ವೀಕರಿಸು. ಆ ಅಸ್ತ್ರವು ನಿನ್ನ ಸಾಮರ್ಥ್ಯವನ್ನೂ ಪರಾಕ್ರಮವನ್ನೂ ಮತ್ತು ಕಾಂತಿಯನ್ನೂ ಹೆಚ್ಚಿಸುವುದು ಮತ್ತು ಶತ್ರುಗಳಿಗೆ ಗಾಢವಾದ ನಿದ್ರೆಯನ್ನು ಉಂಟುಮಾಡುವುದು.
ತತೋಽರ್ಜುನೋ ಮಹಾಬಾಹುರ್ವಿಧಿವತ್ ಕುರುನಂದನಃ |
ಕೌಬೇರಮಪಿ ಜಗ್ರಾಹ ದಿವ್ಯಮಸ್ತ್ರಂ ಮಹಾಬಲಃ ॥36॥
ಆಗ ಮಹಾಬಾಹುವೂ ಮಹಾಬಲನೂ ಆದ ಕುರುನಂದನನಾದ ಅರ್ಜುನನು ದಿವ್ಯವಾದ ಅಂತರ್ಧಾನ ಅಸ್ತ್ರವನ್ನು ಕುಬೇರನಿಂದ ಸ್ವೀಕರಿಸಿದನು.
ತತೋಽಬ್ರವೀದ್ ದೇವರಾಜಃ ಪಾರ್ಥಮಕ್ಲಿಷ್ಟಕಾರಿಣಮ್ |
ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಮೇಘದುಂದುಭಿನಿಃಸ್ವನಃ ॥37॥
ಅನಂತರ ದೇವರಾಜನಾದ ಇಂದ್ರನು ಅಕ್ಲಿಷ್ಟಕಾರಿಯಾದ ಅರ್ಜುನನನ್ನು ಸಮಾಧಾನಪಡಿಸುತ್ತಾ ಮೇಘ ದುಂದುಭಿಗಳಂತೆ ಗಂಭೀರವಾದ ನಾದವುಳ್ಳವನಾಗಿ ಮಧುರವಾದ ಮಾತುಗಳನ್ನು ಆಡಿದನು.
ಕುಂತೀಪುತ್ರ ಮಹಾಬಾಹೋ ತ್ವಮೀಶಾನಃ ಪುರಾತನಃ |
ಪರಾಂ ಸಿದ್ಧಿಮನುಪ್ರಾಪ್ತಃ ಸಾಕ್ಷಾದ್ ದೇವಗತಿಂ ಗತಃ ॥38॥
ಮಹಾಬಾಹುವಾದ ಕುಂತೀಪುತ್ರನೇ! ನೀನು ಹಿಂದೆ ಒಡೆಯನಾಗಿ ಶ್ರೇಷ್ಠಸಿದ್ಧಿಯನ್ನುಪಡೆದು ಸಾಕ್ಷಾತ್ ದೇವಗತಿಯನ್ನು ಹೊಂದಿದವನಾಗಿದ್ದೆ.
ದೇವಕಾರ್ಯಂ ಹಿ ಸುಮಹತ್ ತ್ವಯಾ ಕಾರ್ಯಮರಿಂದಮ |
ಆರೋಢವ್ಯಸ್ತ್ವಯಾ ಸ್ವರ್ಗಃ ಸಜ್ಜೀಭವ ಮಹಾದ್ಯುತೇ ॥39॥
ಅರಿಂದಮನೇ, ನೀನು ದೊಡ್ಡ ದೇವಕಾರ್ಯವನ್ನು ಮಾಡಬೇಕಾಗಿದೆ. ಮಹಾದ್ಯುತಿಯೇ, ನೀನು ಸ್ವರ್ಗವನ್ನು ಏರಬೇಕಾಗಿದೆ. ಸಿದ್ಧನಾಗು.

ರಥೋ ಮಾತಲಿಸಂಯುಕ್ತ ಆಗಂತಾ ತ್ವತ್ಕೃತೇ ಮಮ |
ತತ್ರ ತೇಽಹಂ ಪ್ರದಾಸ್ಯಾಮಿ ಸರ್ವಾಣ್ಯಸ್ತ್ರಾಣಿ ಕೌರವ ॥40॥
ನನ್ನ ಸಾರಥಿಯಾದ ಮಾತಲಿಯು ಹೂಡಿದ ರಥವು ನಿನ್ನ ಸಲುವಾಗಿ ಬರಲಿದೆ. ಎಲೈ ಕೌರವನೇ, ನಾನು ನಿನಗೆ ಸ್ವರ್ಗದಲ್ಲಿಯೇ ಎಲ್ಲಾ ಅಸ್ತ್ರಗಳನ್ನೂ ಕೊಡುವೆನು.
ವೈಶಂಪಾಯನಃ
ತಾನ್ ದೃಷ್ಟ್ವಾ ಲೋಕಪಾಲಾಂಸ್ತು ಸಮೇತಾನ್ ಗಿರಿಮೂರ್ಧನಿ |
ಜಗಾಮ ವಿಸ್ಮಯಂ ಧೀಮಾನ್ ಕುಂತೀಪುತ್ರೋ ಧನಂಜಯಃ ॥41॥
ಕುಂತಿಪುತ್ರನೂ ಮೇಧಾವಿಯೂ ಆದ ಧನಂಜಯನು ಪರ್ವತಶಿಖರದಲ್ಲಿ ಸಮೇತರಾಗಿದ್ದ ಲೋಕಪಾಲಕರನ್ನು ನೋಡಿ ವಿಸ್ಮಯವಶನಾದನು.
ತತೋಽರ್ಜುನೋ ಮಹಾತೇಜಾ ಲೋಕಪಾಲಾನ್ ಸಮಾಗತಾನ್ |
ಪೂಜಯಾಮಾಸ ವಿಧಿವದ್ ವಾಗ್ಭಿರದ್ಭಿಃ ಫಲೈರಪಿ ॥42॥
ಅನಂತರ ಮಹಾತೇಜಸ್ವಿಯಾದ ಅರ್ಜುನನು ಸಮಾಗತರಾದ ಲೋಕಪಾಲಕರಿಗೆ ಸ್ತೋತ್ರಗಳಿಂದಲೂ ಜಲದಿಂದಲೂ ಮತ್ತು ಫಲದಿಂದಲೂ ವಿಧಿವತ್ತಾಗಿ ಪೂಜೆಯನ್ನು ಸಲ್ಲಿಸಿದನು.
ತತಃ ಪ್ರತಿಯಯುರ್ದೇವಾಃ ಪ್ರತಿಪೂಜ್ಯ ಧನಂಜಯಮ್ |
ಯಥಾಗತೇನ ವಿಬುಧಾಃ ಸರ್ವೇ ಕಾಮಮನೋಜವಾಃ ॥43॥
ಅನಂತರ ದೇವತೆಗಳೆಲ್ಲರೂ ಅರ್ಜುನನನ್ನು ಸತ್ಕರಿಸಿ ತಾವು ಬಂದ ಮಾರ್ಗವನ್ನೇ ಹಿಡಿದು ಮನಸ್ಸಿಗೆ ಇಷ್ಟವಾದ ವೇಗವುಳ್ಳವರಾಗಿ ಹಿಂದಿರುಗಿದರು.
ತತೋಽರ್ಜುನೋ ಮುದಂ ಲೇಭೇ ಲಬ್ಧಾಸ್ತ್ರಃ ಪುರುಷರ್ಷಭಃ |
ಕೃತಾರ್ಥಮಿತಿ ಚಾತ್ಮಾನಂ ಸ ಮೇನೇ ಪೂರ್ಣಮಾನಸಮ್ ॥43॥
ಆಗ ಪುರುಷರ್ಷಭನಾದ ಅರ್ಜುನನು ಅಸ್ತ್ರಗಳನ್ನು ಪಡೆದು ಸಂತೋಷಗೊಂಡನು. ಅವನು ತನ್ನ ಮನೋರಥವು ಪೂರ್ಣವಾದ ಕಾರಣದಿಂದ ತಾನು ಕೃತಾರ್ಥನೆಂದು ಭಾವಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
॥ ಕೈರಾತಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ಕೈರಾತಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಕೈರಾತಪರ್ವವು ಮುಗಿಯಿತು.
4. ಇಂದ್ರಲೋಕಾಭಿಗಮನಪರ್ವ
ಮೂವತ್ತೆಂಟನೆಯ ಅಧ್ಯಾಯ
(ಅರ್ಜುನನಿಂದ ಮಾತಲಿಯ ರಥದಲ್ಲಿ ಸ್ವರ್ಗಗಮನ.)
ವೈಶಂಪಾಯನಃ
ಗತೇಷು ಲೋಕಪಾಲೇಷು ಪಾರ್ಥಃ ಶತ್ರುನಿಬರ್ಹಣಃ |
ಚಿಂತಯಾಮಾಸ ರಾಜೇಂದ್ರ ದೇವರಾಜರಥಾಗಮಮ್ ॥1॥
ಎಲೈ ರಾಜೇಂದ್ರನಾದ ಜನಮೇಜಯನೇ, ಲೋಕಪಾಲಕರು ಹೊರಟು ಹೋಗುತ್ತಿರಲು ಶತ್ರುಸಂಹಾರಕನಾದ ಪಾರ್ಥನು ದೇವರಾಜನಾದ ಇಂದ್ರನ ರಥದ ಆಗಮನವನ್ನು ನಿರೀಕ್ಷಿಸಿದನು.
ತತಶ್ಚಿಂತಯಮಾನಸ್ಯ ಗುಡಾಕೇಶಸ್ಯ ಧೀಮತಃ |
ರಥೋ ಮಾತಲಿಸಂಯುಕ್ತ ಆಜಗಾಮ ಮಹಾಪ್ರಭಃ ॥2॥
ನಭೋ ವಿತಿಮಿರಂ ಕುರ್ವನ್ ಜಲದಾನ್ ಪಾಟಯನ್ನಿವ |
ದಿಶಃ ಸಂಪೂರಯನ್ ನಾದೈರ್ಮಹಾಮೇಘರವೋಪಮೈಃ ॥3॥
ಅನಂತರ ಹೀಗೆ ಚಿಂತಿಸುತ್ತಿದ್ದ ಮೇಧಾವಿಯಾದ ಅರ್ಜುನನೆಡೆಗೆ ಮಹಾಕಾಂತಿಯುಳ್ಳ ಮಾತಲಿಯಿಂದ ಕೂಡಿದ ರಥವು ಆಗಮಿಸಿತು. ಆಕಾಶದ ಕತ್ತಲೆಯನ್ನು ಓಡಿಸುತ್ತಾ ಮೇಘಗಳನ್ನು ಸೀಳುವಂತೆ ಮತ್ತು ಮೇಘಗರ್ಜನೆಗೆ ಸದೃಶವಾದ ತನ್ನ ನಾದದಿಂದ ದಿಕ್ಕುಗಳನ್ನು ತುಂಬುತ್ತಾ ರಥವು ಬಂದಿತು.
ಅಸಯಃ ಶಕ್ತಯೋ ಭೀಮಾ ಗದಾಶ್ಚೋಗ್ರಪ್ರದರ್ಶನಾಃ |
ದಿವ್ಯಪ್ರಭಾವಾಃ ಪ್ರಾಸಾಶ್ಚ ವಿದ್ಯುತಶ್ಚ ಮಹಾಪ್ರಭಾಃ ॥4॥
ತಥೈವಾಶನಯಸ್ತತ್ರ ಚಕ್ರಯುಕ್ತಾ ಹುಲಾಹುಲಾಃ |
ವಾಯುಸ್ಫೋಟಾಃ ಸನಿರ್ಘಾತಾಃ ಶಂಖಮೇಘನಿಭಾಸ್ತಥಾ ॥5॥
ತತ್ರ ನಾಗಾ ಮಹಾಕಾಯಾ ಜ್ವಲಿತಾಸ್ಯಾಃ ಸುದಾರುಣಾಃ |
ಸಿತಾಭ್ರಕೂಟಪ್ರತಿಮಾಃ ಸಂಹತಾಶ್ಚ ಯಥೋಪಲಾಃ ॥6॥
ಆ ರಥದಲ್ಲಿ ಖಡ್ಗಗಳು ಭಯಂಕರವಾದ ಶಕ್ತ್ಯಾಯುಧಗಳು ಉಗ್ರವಾಗಿ ಕಾಣುವ ಗದೆಗಳು ದಿವ್ಯಪ್ರಭೆಯುಳ್ಳ ಪ್ರಾಸಗಳು ಮಹಾಪ್ರಭೆಯುಳ್ಳ ವಿದ್ಯುತ್‌ಗಳು ಹಾಗೆಯೇ ಅಶನಿಗಳು ಚಕ್ರಗಳು ಹುಲಾಹುಲಗಳು ಶಂಖ ಮೇಘ ಸದೃಶವಾದ ದೊಡ್ಡ ಶಬ್ದವುಳ್ಳ ವಾಯು ಸ್ಫೋಟಗಳು (ಇವೆಲ್ಲಾ ಯುದ್ಧದಲ್ಲಿ ಉಪಯೋಗಿಸುವ ಆಯುಧಗಳು) ಮತ್ತು ಉರಿಯುವ ಮುಖಗಳಿಂದ ಕೂಡಿದ

ಭಯಂಕರವಾದ ಮಹಾಶರೀರವುಳ್ಳ ಬಿಳಿಯ ಮೋಡದ ಸಮುದಾಯದಂತೆ ಸಣ್ಣ ಕಲ್ಲುಗಳನ್ನು ಜೋಡಿಸಿದಂತೆ ಇದ್ದ ಸರ್ಪಗಳು ಕಂಡು ಬಂದವು.
ದಶವಾಜಿಸಹಸ್ರಾಣಿ ಹರೀಣಾಂ ವಾತರಂಹಸಾಮ್ |
ವಹಂತಿ ಯಂ ನೇತ್ರಮುಷಂ ದಿವ್ಯಂ ಮಾಯಾಮಯಂ ರಥಮ್ ||
ವಾಯುವೇಗವುಳ್ಳ ಹತ್ತು ಸಹಸ್ರ ಕುದುರೆಗಳು ಆ ದಿವ್ಯವಾದ ಮಾಯಾಮಯವಾದ ನೋಡಿದವರ ಕಣ್ಣನ್ನು ಕುಕ್ಕುವ ರಥವನ್ನು ಎಳೆಯುತ್ತವೆ.
ತತ್ರಾಪಶ್ಯನ್ಮಹೀಪಾಲೋ ವೈಜಯಂತಂ ಮಹಾಪ್ರಭಮ್ |
ಧ್ವಜಮಿಂದೀವರಶ್ಯಾಮಂ ವಂಶಂ ಕನಕಭೂಷಿತಮ್ ||8||
ಮಹೀಪಾಲನಾದ ಅರ್ಜುನನು ಆ ರಥದಲ್ಲಿ ಮಹಾಪ್ರಭೆಯುಳ್ಳ ಇಂದೀವರಕಾಂತಿಯನ್ನು ಹೊಂದಿದ್ದ ವೈಜಯಂತ ಧ್ವಜವನ್ನು ಮತ್ತು ಸುವರ್ಣಭೂಷಿತವಾದ ವಂಶ (ಸ್ತಂಭ)ವನ್ನು ನೋಡಿದನು.
ತಸ್ಮಿನ್ ರಥೇ ಸ್ಥಿತಂ ಸೂತಂ ಹೇಮಜಾಲವಿಭೂಷಿತಮ್ |
ದೃಷ್ಟ್ವಾ ಪಾರ್ಥೋ ಮಹಾಬಾಹುರ್ದೇವರಾಜಮತರ್ಕಯತ್ ||9||
ಆ ರಥದಲ್ಲಿ ಕುಳಿತಿದ್ದ ಸುವರ್ಣಭೂಷಿತನಾದ ಸಾರಥಿಯನ್ನು ನೋಡಿ ಮಹಾಬಾಹುವಾದ ಅರ್ಜುನನು ಅವನನ್ನು ದೇವರಾಜನಾದ ಇಂದ್ರನೆಂದು ಭಾವಿಸಿದನು.
ತಥಾ ತರ್ಕಯತಸ್ತಸ್ಯ ಫಲ್ಗುನಸ್ಯ ಸ ಮಾತಲಿಃ |
ಸನ್ನತಃ ಪ್ರಶ್ರಿತೋ ಭೂತ್ವಾ ವಾಕ್ಯಮರ್ಜುನಮಬ್ರವೀತ್ ||10||
ಹೀಗೆ ಚಿಂತಿಸುತ್ತಿರುವ ಅರ್ಜುನನನ್ನು ಕುರಿತು ಮಾತಲಿಯು ವಿನಯದಿಂದ ಬಾಗಿ ಈ ಮಾತನ್ನು ಆಡಿದನು.
ಭೋ ಭೋ ಶಕ್ರಾತ್ಮಜ ಶ್ರೀಮನ್ ಶಕ್ರಸ್ತ್ವಾಂ ದ್ರಷ್ಟುಮಿಚ್ಛತಿ |
ಆರೋಹತು ಭವಾನ್ ಶೀಘ್ರಂ ರಥಮಿಂದ್ರಸ್ಯ ಸಮ್ಮತಮ್ ||11||
ಎಲೈ ಕಾಂತಿಯುಕ್ತನಾದ ಶಕ್ರಪುತ್ರನೇ, ಇಂದ್ರನು ನಿನ್ನನ್ನು ನೋಡಲು ಬಯಸುತ್ತಾನೆ. ಇಂದ್ರನಿಗೆ ಪ್ರಿಯವಾದ ಈ ರಥವನ್ನು ನೀನು ಶೀಘ್ರವಾಗಿ ಏರು.
ಆಹ ಮಾಮಮರಶ್ರೇಷ್ಠಃ ಪಿತಾ ತವ ಶತಕ್ರತುಃ |
ಕುಂತೀಮಾತರಿಹ ಪ್ರಾಪ್ತಂ ಪಶ್ಯಂತು ತ್ರಿದಶಾಲಯಾಃ ||12||
ಎಲೈ ಕುಂತೀಪುತ್ರನೇ, ದೇವಶ್ರೇಷ್ಠನಾದ ನಿನ್ನ ತಂದೆಯಾದ ಇಂದ್ರನು ಇಲ್ಲಿಗೆ ಬಂದ ಅರ್ಜುನನನ್ನು ಸ್ವರ್ಗನಿವಾಸಿಗಳೆಲ್ಲಾ ನೋಡಲಿ ಎಂದು ನನಗೆ ಹೇಳಿದನು.
ಏಷ ಶಕ್ರಃ ಪರಿವೃತೋ ದೇವೈಃ ಸರ್ಷಿಗಣೈಸ್ತಥಾ |
ಗಂಧರ್ವೈರಪ್ಸರೋಭಿಶ್ಚ ತ್ವಾಂ ದಿದೃಕ್ಷುಃ ಪ್ರತೀಕ್ಷತೇ ||13||
ದೇವತೆಗಳಿಂದಲೂ ಋಷಿಗಣಗಳಿಂದಲೂ ಹಾಗೆಯೇ ಗಂಧರ್ವರಿಂದಲೂ ಮತ್ತು ಅಪ್ಸರೆಯರಿಂದಲೂ ಪರಿವೃತನಾದ ಈ ಇಂದ್ರನು ನಿನ್ನನ್ನು ನೋಡುವ ಆಸೆಯನ್ನು ಹೊಂದಿ ನಿನಗಾಗಿ ಕಾಯುತ್ತಿದ್ದಾನೆ.
ಅಸ್ಮಾಲ್ಲೋಕಾದ್ದೇವಲೋಕಂ ಪಾಕಶಾಸನಶಾಸನಾತ್ |
ಆರೋಹ ತ್ವಂ ಮಯಾ ಸಾರ್ಧಂ ಲಬ್ಧಾಸ್ತ್ರಃ ಪುನರೇಷ್ಯಸಿ ||14||
ಇಂದ್ರನ ಅಪ್ಪಣೆಯಂತೆ ನೀನು ನನ್ನ ಜೊತೆಯಲ್ಲಿ ಈ ಲೋಕದಿಂದ ದೇವಲೋಕವನ್ನು ಏರುವವನಾಗಿ ಅಲ್ಲಿ ಅಸ್ತ್ರಗಳನ್ನು ಪಡೆದು ನೀನು ಪುನಃ ಇಲ್ಲಿಗೆ ಬರುವಿ.
ಅರ್ಜುನಃ
ಮಾತಲೇ ಗಚ್ಛ ಶೀಘ್ರಂ ತ್ವಮಾರೋಹಸ್ವ ರಥೋತ್ತಮಮ್ |
ರಾಜಸೂಯಾಶ್ವಮೇಧಾನಾಂ ಶತೈರಪಿ ಸುದುರ್ಲಭಮ್ ||15||
ಪಾರ್ಥಿವೈಃ ಸುಮಹಾಭಾಗೈರ್ಯಜ್ವಭಿರ್ಭೂರಿದಕ್ಷಿಣೈಃ |
ದೈವತೈರ್ವಾ ಸಮಾರೋಢುಂ ದಾನವೈರ್ವಾ ಮಹಾರಥಮ್ |
ದ್ರಷ್ಟುಂ ವಾಽಪ್ಯಥವಾ ಸ್ಪ್ರಷ್ಟುಮಾರೋಢುಂ ಕುತ ಏವ ತತ್ ||16||
ಮಾತಲಿಯೇ ನೀನು ಬೇಗ ರಥವನ್ನು ಏರು. ಈ ರಥವು ನೂರು ರಾಜಸೂಯ ಅಶ್ವಮೇಧಯಾಗವನ್ನುಮಾಡಿದರೂ ಬಹಳ ದುರ್ಲಭವಾದುದು. ಬಹಳ ದಕ್ಷಿಣೆಗಳನ್ನು ಕೊಟ್ಟು ಯಾಗಗಳನ್ನು ಮಾಡಿದ ಮಹಾನುಭಾವರಾದ ರಾಜರಿಂದಲಾಗಲೀ ದೇವತೆಗಳಿಂದಾಗಲೀ ದಾನವರಿಂದಲಾಗಲೀ ಈ ರಥವು ಏರಲ್ಪಟ್ಟಿಲ್ಲ. ಈ ರಥವನ್ನು ನೋಡುವುದೂ ಮುಟ್ಟುವುದೂ ದುರ್ಲಭ. ಇನ್ನು ಏರುವ ವಿಷಯ ಹಾಗಿರಲಿ.
ತ್ವಯಿ ಪ್ರತಿಷ್ಠಿತೇ ಸಾಧೋ ರಥಸ್ಥೇ ಸ್ಥಿರವಾಜಿನಿ |
ಪಶ್ಚಾದಹಮಥಾರೋಕ್ಷ್ಯೇ ಸುಕೃತೀ ಸತ್ಪಥಂ ಯಥಾ ||17||
ಎಲೈ ಸಜ್ಜನನೇ, ನೀನು ರಥವನ್ನು ಏರಿ ಕುದುರೆಗಳನ್ನು ಹಿಡಿದ ಮೇಲೆ ನಾನು ಪುಣ್ಯವನ್ನು ಮಾಡಿದವನು ಸ್ವರ್ಗಮಾರ್ಗವನ್ನು ಏರುವಂತೆ ರಥವನ್ನು ಏರುತ್ತೇನೆ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಮಾತಲಿಃ ಶಕ್ರಸಾರಥಿಃ |
ಆರುರೋಹ ರಥಂ ಶೀಘ್ರಂ ಹಯಾನ್ ಜಗ್ರಾಹ ರಶ್ಮಿಭಿಃ ||18||

ಅರ್ಜುನನ ಆ ಮಾತುಗಳನ್ನು ಕೇಳಿ ಇಂದ್ರನ ಸಾರಥಿಯಾದ ಮಾತಲಿಯು ಶೀಘ್ರವಾಗಿ ರಥವನ್ನು ಏರಿ ಕಡಿವಾಣಗಳಿಂದ ಅಶ್ವಗಳನ್ನು ಹಿಡಿದುಕೊಂಡನು.
ತತೋಽರ್ಜುನೋ ಹೃಷ್ಟಮನಾ ಗಂಗಾಯಾಮಾಪ್ಲುತಃ ಶುಚಿಃ |
ಜಜಾಪ ಜಪ್ಯಂ ಕೌಂತೇಯ ವಿಧಿವತ್ ಕುರುನಂದನಃ ॥19॥
ತತಃ ಪಿತ್ನೂನ್ ಯಥಾನ್ಯಾಯಂ ತರ್ಪಯಿತ್ವಾ ಯಥಾವಿಧಿ |
ಮಂದರಂ ಶೈಲರಾಜಂ ತಮಾಪ್ರಷ್ಟುಮುಪಚಕ್ರಮೇ ॥20॥
ಆಗ ಅರ್ಜುನನು ಸಂತೋಷದಿಂದ ಗಂಗೆಯಲ್ಲಿ ಸ್ನಾನಮಾಡಿ ಶುದ್ಧನಾಗಿ ಕುರುನಂದನನಾದ ಕುಂತೀಪುತ್ರನಾದ ಅವನು ವಿಧಿವತ್ತಾಗಿ ಜಪವನ್ನು ಮಾಡಿದನು. ಅನಂತರ ವಿಧಿಪೂರ್ವಕವಾಗಿ ಕ್ರಮವಾಗಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಮಂದರಿಗೂ ಸಂತೋಷವನ್ನುಂಟುಮಾಡುವ ಅಥವಾ ಮಂದಾನಿಲವನ್ನು ಕೊಡುವ ಶೈಲರಾಜನಾದ ಇಂದ್ರಕೀಲನ ಅನುಮತಿಯನ್ನು ಕೇಳಲು ಉಪಕ್ರಮಿಸಿದನು.
ಅರ್ಜುನಃ
ಸಾಧೂನಾಂ ಪುಣ್ಯಶೀಲಾನಾಂ ಮುನೀನಾಂ ಪುಣ್ಯಕರ್ಮಣಾಮ್|
ತ್ವಂ ಸದಾ ಸಂಶ್ರಯಃ ಶೈಲ ತಥಾ ಸ್ವರ್ಗಾಭಿಕಾಂಕ್ಷಿಣಾಮ್ ॥21॥
ಎಲೈ ಪರ್ವತವೇ, ನೀನು ಪುಣ್ಯಶೀಲರಾದ ಸಾಧುಗಳಿಗೂ ಪುಣ್ಯಕರ್ಮವನ್ನು ಮಾಡುವ ಮುನಿಗಳಿಗೂ ಮತ್ತು ಸ್ವರ್ಗವನ್ನು ಅಭಿಲಾಷೆಪಡುವವರಿಗೂ ಯಾವಾಗಲೂ ಆಶ್ರಯನಾಗಿದ್ದೀಯೆ.
ತ್ವತ್ಪ್ರಸಾದಾನ್ಮಹಾಶೈಲ ಬ್ರಾಹ್ಮಣಾಃ ಕ್ಷತ್ರಿಯಾ ವಿಶಃ |
ಸ್ವರ್ಗಂ ಪ್ರಾಪ್ತಾಶ್ಚರಂತಿ ಸ್ಮ ದೇವೈಃ ಸಹ ಗತವ್ಯಥಾಃ ॥22॥
ಎಲೈ ಮಹಾಶೈಲವೇ, ನಿನ್ನ ಅನುಗ್ರಹದಿಂದ ಬ್ರಾಹ್ಮಣರು ಕ್ಷತ್ರಿಯರು ಮತ್ತು ಶೂದ್ರರು ಸ್ವರ್ಗವನ್ನು ಹೊಂದಿ ದೇವತೆಗಳ ಜೊತೆಯಲ್ಲಿ ನಿರಾತಂಕವಾಗಿ ಸಂಚರಿಸುತ್ತಾರೆ.
ಅದ್ರಿರಾಜ ಮಹಾಶೈಲ ಮುನಿಸಂಶ್ರಯ ತೀರ್ಥವನ್ |
ಗಚ್ಛಾಮ್ಯಾಮಂತ್ರಯಾಮಿ ತ್ವಾಂ ಸುಖಮಸ್ಮ್ಯುಷಿತಸ್ತ್ವಯಿ ॥23॥
ಅದ್ರಿರಾಜನೇ, ಮುನಿಗಳಿಗೆ ಆಶ್ರಯವಾದ ಮಹಾಶೈಲವೇ, ಅನೇಕ ತೀರ್ಥಗಳನ್ನು ಧರಿಸಿದವನೇ, ನಾನು ನಿನ್ನಲ್ಲಿ ಸುಖವಾಗಿ ವಾಸಮಾಡಿದೆ, ಹೋಗಿಬರುತ್ತೇನೆ. ನಿನ್ನ ಅನುಮತಿಯನ್ನು ಕೇಳುತ್ತಿದ್ದೇನೆ.
ತವ ಸಾನೂನಿ ಕುಂಜಾಶ್ಚ ನದ್ಯಃ ಪ್ರಸ್ರವಣಾನಿ ಚ |
ತೀರ್ಥಾನಿ ಚ ಸುಪುಣ್ಯಾನಿ ಮಯಾ ದೃಷ್ಟಾನ್ಯನೇಕಶಃ ॥24॥
ನಾನು ನಿನ್ನ ಶಿಖರಗಳನ್ನೂ ತಪ್ಪಲುಗಳನ್ನೂ ನದಿಗಳನ್ನೂ ಝರಿಗಳನ್ನೂ ಪವಿತ್ರವಾದ ತೀರ್ಥಗಳನ್ನು ಅನೇಕಬಾರಿ ನೋಡಿದೆನು.
ಫಲಾನಿ ಚ ಸುಗಂಧೀನಿ ಭಕ್ಷಿತಾನಿ ತತಸ್ತ್ವಯಿ |
ಸುಸುಗಂಧಾಶ್ಚ ವಾರ್ಯೋಘಾಃ ತ್ವಚ್ಛರೀರವಿನಿಸ್ಸೃತಾಃ |
ಅಮೃತಾಸ್ವಾದನೀಯಾ ಮೇ ಪೀತಾಃ ಪ್ರಸ್ರವಣೋದಕಾಃ ॥25॥
ನಿನ್ನಲ್ಲಿ ವಾಸಮಾಡಿ ಸುಗಂಧಯುಕ್ತ ಫಲಗಳನ್ನು ಭಕ್ಷಿಸಿದೆನು. ನಿನ್ನ ಶರೀರದಿಂದ ಹೊರಟ ಸುಗಂಧಯುಕ್ತವಾದ ಜಲಸಮೂಹಗಳನ್ನುಳ್ಳ ಅಮೃತದಂತೆ ಸ್ವಾದುವಾದ ನೀರಿನಿಂದ ಕೂಡಿದ ಝರಿಗಳ ನೀರು ನನ್ನಿಂದ ಕುಡಿಯಲ್ಪಟ್ಟಿತು.
ಶಿಶುರ್ಯಥಾ ಪಿತುಶ್ಚಾಂಕೇ ಸುಖಂ ಶೇತೇ ನಗೇ ತಥಾ |
ಮಯಾ ಚೈವ ತವಾಂಕೇಽತ್ರ ಲಳಿತಂ ನಗಸತ್ತಮ ॥26॥
ಎಲೈ ಪರ್ವತಶ್ರೇಷ್ಠನೇ, ಶಿಶುವು ತಂದೆಯ ತೊಡೆಯಮೇಲೆ ಸುಖವಾಗಿ ಮಲಗಿದಂತೆ ನಾನು ನಿನ್ನ ತೊಡೆಯಲ್ಲಿ ಸುಖವಾಗಿ ನಲಿದಾಡಿದೆ.
ಅಪ್ಸರೋಗಣಸಂಕೀರ್ಣೇ ಬ್ರಹ್ಮಘೋಷಾನುನಾದಿತೇ |
ಸುಖಮಧ್ಯುಷಿತಃ ಶೈಲ ತವ ಸಾನುನಿ ನಿತ್ಯದಾ ॥27॥
ಎಲೈ ಪರ್ವತವೇ, ಅಪ್ಸರೆಯರ ಗಣದಿಂದ ವೇದಘೋಷಗಳಿಂದ ಪ್ರತಿಧ್ವನಿಸುವ ನಿನ್ನ ಶಿಖರಗಳಲ್ಲಿ ಯಾವಾಗಲೂ ಸುಖವಾಗಿ ವಾಸಮಾಡಿದೆ.
ಏವಮುಕ್ತ್ವಾಽರ್ಜುನಃ ಶೈಲಮಾಮಂತ್ರ್ಯಚ ಶತ್ರುಹಾ |
ಆರುರೋಹ ರಥಂ ದಿವ್ಯಂ ದ್ಯೋತಯನ್ನಿವ ಭಾಸ್ಕರಃ ॥28॥
ಹೀಗೆ ಹೇಳಿ ಶತ್ರುಸಂಹಾರಕನಾದ ಅರ್ಜುನನು ಪರ್ವತದ ಅಪ್ಪಣೆಯನ್ನು ಕೇಳಿ ಸೂರ್ಯನಂತೆ ಪ್ರಕಾಶಿಸುತ್ತಾ ಆ ದಿವ್ಯವಾದ ರಥವನ್ನು ಏರಿದನು.
ಸ ತೇನಾದಿತ್ಯವರ್ಣೇನ ದಿವ್ಯೇನಾದ್ಭುತಕರ್ಮಣಾ |
ಊರ್ಧ್ವಮಾಚಕ್ರಮೇ ಧೀಮಾನ್ ಪ್ರಹೃಷ್ಟಃ ಕುರುನಂದನಃ ॥29॥
ಆ ಮೇಧಾವಿಯಾದ ಕುರುನಂದನನು ಸಂತೋಷದಿಂದ ಕೂಡಿದವನಾಗಿ ಸೂರ್ಯಪ್ರಕಾಶವನ್ನು ಹೊಂದಿದ್ದ ದಿವ್ಯವಾದ ಮತ್ತು ಅದ್ಭುತವಾದ ಕರ್ಮಯುಕ್ತವಾದ ಆ ದಿವ್ಯವಾದ ರಥದಲ್ಲಿ ಕುಳಿತು ಊರ್ಧ್ವಮುಖವಾಗಿ ಹಾರಿದನು.
ಸೋಽದರ್ಶನಪಥಂ ಗತ್ವಾ ಮರ್ತ್ಯಾನಾಂ ಭೂಮಿಚಾರಿಣಾಮ್ |
ದದರ್ಶಾದ್ಭುತರೂಪಾಣಿ ವಿಮಾನಾನಿ ಸಹಸ್ರಶಃ ॥30॥
ಅವನು ಭೂಮಿಯಲ್ಲಿರುವ ಮರ್ತ್ಯರಿಗೆ ಅದೃಶ್ಯವಾದ ಮಾರ್ಗವನ್ನು ತಲುಪಿ ಅಲ್ಲಿ ಅದ್ಭುತಾಕಾರದ ವಿಮಾನಗಳನ್ನು

ಸಹಸ್ರಸಂಖ್ಯೆಯಲ್ಲಿ ನೋಡಿದನು.
ನ ತತ್ರ ಸೂರ್ಯಃ ಸೋಮೋ ನ ದ್ಯೋತತೇ ನೋತ ಪಾವಕಃ |
ಸ್ವಯೈವ ಪ್ರಭಯಾ ಯುಕ್ತಾ ದ್ಯೋತಂತೇ ಪುಣ್ಯಲಕ್ಷಣಾಃ ॥31॥
ಅಲ್ಲಿ ಸೂರ್ಯನಾಗಲೀ ಚಂದ್ರನಾಗಲೀ ಅಥವಾ ಅಗ್ನಿಯಾಗಲೀ ಪ್ರಕಾಶಿಸುವುದಿಲ್ಲ. ಪುಣ್ಯವನ್ನು ಮಾಡಿದವರು ತಮ್ಮ ಸ್ವಂತ ಪ್ರಭೆಯಿಂದಲೇ ಪ್ರಕಾಶಿಸುತ್ತಾರೆ.
ತಾರಾರೂಪಾಣಿ ಯಾನೀಹ ದೃಶ್ಯಂತೇ ದ್ಯುತಿಮಂತಿ ವೈ |
ದೀಪವದ್ ವಿಪ್ರಕೃಷ್ಟತ್ವಾದ್ ಅಣೂನಿ ಸುಮಹಾಂತ್ಯಪಿ ॥32॥
ತಾನಿ ತತ್ರ ಚ ಭಾಸ್ವಂತಿ ರೂಪವಂತಿ ಚ ಪಾಂಡವಃ |
ದದರ್ಶ ತೇಷು ಧಿಷ್ಣ್ಯೇಷು ದೀಪ್ತಿಮಂತಿ ಸ್ವಯಾಽರ್ಚಿಷಾ ॥33॥
ಭೂಮಿಯಿಂದ ನೋಡಿದಾಗ ನಕ್ಷತ್ರಗಳಂತೆ ಕಾಣುವ ಪ್ರಕಾಶಮಾನವಾದ ಬಹಳದೊಡ್ಡದಾಗಿದ್ದರೂ ದೂರದಲ್ಲಿ ಇರುವುದರಿಂದ ಸಣ್ಣದೀಪಗಳಂತೆ ಕಾಣುವ ಆ ಪ್ರಕಾಶಮಾನವಾದ ರೂಪವನ್ನು ಧರಿಸಿದ ವಸ್ತುಗಳನ್ನು ಪಾಂಡವನು ನೋಡಿದನು. ತನ್ನ ಪ್ರಭೆಯಿಂದಲೇ ಬೆಳಗುವ ಅವುಗಳನ್ನು ಅವುಗಳ ಸ್ಥಾನದಲ್ಲಿ ನೋಡಿದನು.
ತತ್ರ ರಾಜರ್ಷಯಸ್ಸಿದ್ಧಾ ಧೀರಾಶ್ಚ ನಿಹತಾ ಯುಧಿ |
ತಪಸಾ ಚ ಜಿತಸ್ವರ್ಗಾಃ ಸಂಪೇತುಃ ಶತಸಂಘಶಃ ॥34॥
ಅಲ್ಲಿ ರಾಜರ್ಷಿಗಳೂ ಯುದ್ಧದಲ್ಲಿ ಹತರಾದ ಧೀರರೂ ತಪಸ್ಸಿನಿಂದ ಸ್ವರ್ಗವನ್ನು ಸಂಪಾದಿಸಿದ ಅನೇಕರೂ ನೂರಾರು ಸಂಖ್ಯೆಯಲ್ಲಿ ವಾಸವಾಗಿದ್ದರು.
ಗಂಧರ್ವಾಣಾಂ ಸಹಸ್ರಾಣಿ ಸೂರ್ಯಜ್ವಲಿತತೇಜಸಾಮ್ |
ಗುಹ್ಯಕಾನಾಮೃಷೀಣಾಂ ಚ ತಥೈವಾಪ್ಸರಸಾಂ ಗಣಾನ್ ॥35॥
ಲೋಕಾನಾತ್ಮಪ್ರಭಾನ್ ಪಶ್ಯನ್ ಫಲ್ಗುನೋ ವಿಸ್ಮಯಾನ್ವಿತಃ |
ಪಪ್ರಚ್ಛ ಮಾತಲಿಂ ಪ್ರೀತ್ಯಾ ಸ ಚಾಪ್ಯೇನಮುವಾಚ ಹ ॥36॥
ಸೂರ್ಯನ ಪ್ರಕಾಶದಿಂದ ಹೊಳೆಯುವ ಸಹಸ್ರಾರು ಗಂಧರ್ವರನ್ನೂ ಗುಹ್ಯಕರ ಋಷಿಗಳ ಮತ್ತು ಅಪ್ಸರೆಯರ ಅನೇಕ ಗಣಗಳನ್ನೂ ಸ್ವಯಂಪ್ರಕಾಶಿಸುವವ ಅನೇಕ ಲೋಕಗಳನ್ನೂ ನೋಡಿ ವಿಸ್ಮಯಾವಿಷ್ಟನಾದ ಫಲ್ಗುನನು ಪ್ರೀತಿಯಿಂದ ಮಾತಲಿಯನ್ನು ಕುರಿತು ಕೇಳಿದನು. ಮಾತಲಿಯಾದರೋ ಅವನಿಗೆ ಉತ್ತರವನ್ನು ಕೊಟ್ಟನು.
ಏತೇ ಸುಕೃತಿನಃ ಪಾರ್ಥ ಸ್ವೇಷು ಧಿಷ್ಣ್ಯೇಷು ವಿಷ್ಠಿತಾಃ |
ಯಾನ್ ದೃಷ್ಟವಾನಸಿ ವಿಭೋ ತಾರಾರೂಪಾಣಿ ಭೂತಲೇ ॥37॥
ವಿಭುವೇ ಪಾರ್ಥನೇ, ನೀನು ಭೂತಲದಿಂದ ಯಾವ ನಕ್ಷತ್ರದಂತೆ ಕಾಣುವ ವಸ್ತುವನ್ನು ನೋಡಿದೆಯೋ ಇವುಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಅಧಿಷ್ಠಿತರಾದ ಪುಣ್ಯಶಾಲಿಗಳು.
ವೈಶಂಪಾಯನಃ
ತತೋಽಪಶ್ಯತ್ ಸ್ಥಿತಂ ದ್ವಾರಿ ಸಿತಂ ವಿಜಯಿನಂ ಗಜಮ್ |
ಐರಾವತಂ ಚತುರ್ದಂತಂ ಕೈಲಾಸಮಿವ ಶೃಂಗಿಣಮ್ ॥38॥
ಅನಂತರ ಅರ್ಜುನನು ಬಾಗಿಲಿನಲ್ಲಿ ನಿಂತಿದ್ದ, ಕೈಲಾಸಕ್ಕೆ ಶೃಂಗವು ಮೂಡಿದಂತೆ ತೋರುವ, ವಿಜಯಶಾಲಿಯಾದ, ನಾಲ್ಕುದಂತಗಳುಳ್ಳ ಐರಾವತಗಜವನ್ನು ನೋಡಿದನು.
ಸ ಸಿದ್ಧಮಾರ್ಗಮಾಕ್ರಮ್ಯ ಕುರುಪಾಂಡವಸತ್ತಮಃ |
ವ್ಯರೋಚಯದ್ ಯಥಾಪೂರ್ವಂ ಮಾಂಧಾತಾ ಪಾರ್ಥಿವೋತ್ತಮಃ ॥
ಸಿದ್ಧಮಾರ್ಗವನ್ನು ತಲುಪಿದ ಕುರುಶ್ರೇಷ್ಠನಾದ ಅರ್ಜುನನು ಹಿಂದೆ ರಾಜಶ್ರೇಷ್ಠನಾದ ಮಾಂಧಾತೃವಿನಂತೆ ಶೋಭಿಸಿದನು.
ಅತಿಚಕ್ರಾಮ ಲೋಕಾನ್ ಸ ರಾಜ್ಞಾಂ ರಾಜೀವಲೋಚನಃ |
ತತೋ ದದರ್ಶ ಶಕ್ರಸ್ಯ ಪುರೀಂ ನಾಮ್ನಾಽಮರಾವತೀಮ್ ॥40॥
ರಾಜೀವಲೋಚನನಾದ ಅವನು ರಾಜರ ಲೋಕಗಳನ್ನು ಅತಿಕ್ರಮಿಸಿ ಅನಂತರ ಇಂದ್ರನ ಪಟ್ಟಣವಾದ ಅಮರಾವತಿಯನ್ನು ನೋಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
॥ ಇಂದ್ರಲೋಕಾಭಿಗಮನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತೊಂಬತ್ತನೆಯ ಅಧ್ಯಾಯ
(ಅರ್ಜುನನಿಗೆ ಇಂದ್ರನಿಂದ ಬಹುಮಾನಪೂರ್ವಕವಾಗಿ ಅರ್ಧಾಸನ ದಾನ.)
ವೈಶಂಪಾಯನಃ
ಸ ದದರ್ಶ ಪುರೀಂ ರಮ್ಯಾಂ ಸಿದ್ಧಚಾರಣಸೇವಿತಾಮ್ |
ಸರ್ವರ್ತುಕುಸುಮೈಃ ಪುಣ್ಯೈಃ ಪಾದಪೈರುಪಶೋಭಿತಾಮ್ ॥1॥
ಅರ್ಜುನನು ಸಿದ್ಧ ಚಾರಣ ಸೇವಿತವಾದ, ಎಲ್ಲ ಋತುಗಳಲ್ಲಿಯೂ ಕುಸುಮಗಳಿಂದ ತುಂಬಿದ ಪವಿತ್ರವಾದ ವೃಕ್ಷಗಳಿಂದ ಶೋಭಿತವಾದ, ಮನೋಹರವಾದ ಆ ಅಮರಾವತಿ ಪಟ್ಟಣವನ್ನು ನೋಡಿದನು.

ತತ್ರ ಸೌಗಂಧಿಕಾನಾಂ ಸ ದ್ರುಮಾಣಾಂ ಪುಣ್ಯಗಂಧಿನಾಮ್ |
ಉಪವೀಜ್ಯಮಾನೋ ಮಿಶ್ರೇಣ ವಾಯುನಾ ಪುಣ್ಯಗಂಧಿನಾ ॥2॥
ನಂದನಂ ಚ ವನಂ ದಿವ್ಯಮಪ್ಸರೋಗಣಸೇವಿತಮ್ |
ದದರ್ಶ ದಿವ್ಯಕುಸುಮೈರಾಹ್ವಯದ್ಭಿರಿವ ದ್ರುಮೈಃ ॥3॥
ಅಲ್ಲಿ ಮನೋಹರವಾದ ಗಂಧವುಳ್ಳ ಸೌಗಂಧಿಕಾಗಂಧಯುಕ್ತವಾದ ವಾಯುವಿನಿಂದ ಬೀಸಿ ಸೇವಿಸಲ್ಪಟ್ಟವನಾಗಿ, ದಿವ್ಯವಾದ ಅಪ್ಸರೆಯರ ಸಮೂಹದಿಂದ ಸೇವಿತವಾದ ದಿವ್ಯಕುಸುಮಗಳನ್ನುಹೊಂದಿ ಆಹ್ವಾನ ಮಾಡುವ ವೃಕ್ಷಗಳಿಂದ ಕೂಡಿರುವ, ನಂದನವನವನ್ನು ನೋಡಿದನು.
ನಾತಪ್ತತಪಸಾ ಶಕ್ಯಂ ದ್ರಷ್ಟುಂ ನಾನಾಹಿತಾಗ್ನಿನಾ |
ಸ ಲೋಕಃ ಪುಣ್ಯಕರ್ತ್ಯಾಣಾಂ ನಾಪಿ ಯುದ್ಧಪರಾಙ್ಮುಖೈಃ ॥4॥
ನಾಯಜ್ವಭಿರ್ನಾನೃತಕೈರ್ನ ವೇದಶ್ರುತಿವರ್ಜಿತೈಃ |
ನಾನಾಪ್ಲುತಾಂಗೈಸ್ತೀರ್ಥೇಷು ಯಜ್ಞದಾನವಬಹಿಷ್ಕೃತೈಃ ॥5॥
ಪುಣ್ಯವನ್ನು ಮಾಡಿದವರಿಗೆ ದೊರಕುವ ಆ ಲೋಕವನ್ನು ತಪಸ್ಸನ್ನು ಮಾಡದಿದ್ದವನು ಅಗ್ನಿಯ ಆಧಾನವನ್ನು ಮಾಡದಿದ್ದವನು ಯುದ್ಧದಲ್ಲಿ ಹಿಮ್ಮೆಟ್ಟುವವನು ಯಾಗವನ್ನು ಮಾಡದವನು ಸುಳ್ಳು ಮಾತಾಡುವವನು ವೇದಹೀನನಾದವನು ತೀರ್ಥಗಳಲ್ಲಿ ಸ್ನಾನಮಾಡದವನು ಯಜ್ಞ ಮತ್ತು ದಾನಗಳಿಂದ ಬಹಿಷ್ಕೃತನಾದವನು ಕಣ್ಣಿನಿಂದ ನೋಡಲೂ ಸಾಧ್ಯವಿಲ್ಲ.
ನಾಪಿ ಯಜ್ಞಹನೈಃ ಕ್ಷುದ್ರೈರ್ದ್ರಷ್ಟುಂ ಶಕ್ಯಃ ಕಥಂಚನ |
ಪಾನಪೈರ್ಗುರುತಲ್ಪೈಶ್ಚ ಮಾಂಸಾದೈರ್ವಾ ದುರಾತ್ಮಭಿಃ ॥6॥
ಮತ್ತು ಮದ್ಯಪಾನಮಾಡುವವರಿಂದಲಾಗಲೀ, ಗುರುತಲ್ಪಗಾಮಿ ಗಳಿಂದಲಾಗಲೀ, ಮಾಂಸವನ್ನು ಭಕ್ಷಿಸುವ ದುರಾತ್ಮರಿಂದಲಾಗಲೀ, ಯಜ್ಞವನ್ನು ನಾಶಮಾಡುವವರಿಂದಲಾಗಲೀ, ನೀಚರಿಂದಲಾಗಲೀ, ಸಹ ಆ ಲೋಕವನ್ನು ನೋಡಲು ಸಾಧ್ಯವಿಲ್ಲ.
ಸ ತದ್ದಿವ್ಯವನಂ ಪಶ್ಯನ್ ದಿವ್ಯಗೀತವಿನಾದಿತಮ್ |
ಪ್ರವಿವೇಶ ಮಹಾಬಾಹುಃ ಶಕ್ರಸ್ಯ ದಯಿತಾಂ ಪುರೀಮ್ ॥7॥
ಮಹಾಬಾಹುವಾದ ಅವನು ದಿವ್ಯಗೀತಶಬ್ದದಿಂದ ಕೂಡಿದ್ದ ಆ ದಿವ್ಯ ವನವನ್ನು ನೋಡುತ್ತಾ ಶಕ್ರನಿಗೆ ಪ್ರಿಯವಾದ ಆ ಪಟ್ಟಣವನ್ನು ಪ್ರವೇಶಿಸಿದನು.
ತತ್ರ ದೇವವಿಮಾನಾನಿ ಕಾಮಗಾನಿ ಸಹಸ್ರಶಃ |
ಸ್ಥಿತಾನ್ಯಭಿಪ್ರಯಾತಾನಿ ದದರ್ಶಾಯುತಶಸ್ತದಾ ॥8॥
ಅಲ್ಲಿ ಸಹಸ್ರಸಂಖ್ಯೆಯಲ್ಲಿ ಇದ್ದ ಕಾಮಗಾಮಿಯಾದ ದೇವವಿಮಾನಗಳು ಹೋಗುತ್ತಿರುವುದನ್ನು ಮತ್ತು ಬರುತ್ತಿರುವುದನ್ನು ಸಹಸ್ರ ಸಂಖ್ಯೆಯಲ್ಲಿ ನೋಡಿದನು.
ಸಂಸ್ತೂಯಮಾನೋ ಗಂಧರ್ವೈರಪ್ಸರೋಭಿಶ್ಚ ಪಾಂಡವಃ |
ಪುಷ್ಪಗಂಧವಹೈಃ ಪುಣ್ಯೈರ್ವಾಯುಭಿಶ್ಚಾನುಜೀವಿತಃ ॥9॥
ಪಾಂಡವನಾದ ಅರ್ಜುನನು ಗಂಧರ್ವರಿಂದಲೂ ಮತ್ತು ಅಪ್ಸರೆಯರಿಂದಲೂ ಸ್ತೋತ್ರಮಾಡಲ್ಪಟ್ಟು ಪುಷ್ಪಗಂಧವನ್ನು ಹೊತ್ತ ಪುಣ್ಯವಾಯುಗಳಿಂದ ಬೀಸಿ ಸೇವಿಸಲ್ಪಟ್ಟನು.
ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ |
ಹೃಷ್ಟಾಃ ಸಂಪೂಜಯಾಮಾಸುಃ ಪಾರ್ಥಮಕ್ಲಿಷ್ಟಕಾರಿಣಮ್ ॥10॥
ಆಗ ಗಂಧರ್ವರ ಜೊತೆಯಲ್ಲಿ ಸೇರಿದ ದೇವತೆಗಳು ಸಿದ್ಧರು ಮತ್ತು ಪರಮ ಋಷಿಗಳು ಸಂತೋಷದಿಂದ ಅಕ್ಲಿಷ್ಟಕಾರಿಯಾದ ಅರ್ಜುನನನ್ನು ಸತ್ಕಾರದಿಂದ ಪೂಜಿಸಿದರು.
ಆಶೀರ್ವಾದೈಃ ಸ್ತೂಯಮಾನೋ ದಿವ್ಯವಾದಿತ್ರನಿಃಸ್ವನೈಃ |
ಪ್ರತಿಪೇದೇ ಮಹಾಬಾಹುಃ ಶಂಖದುಂದುಭಿನಾದಿತಮ್ ॥11॥
ನಕ್ಷತ್ರಮಾರ್ಗಂ ವಿಪುಲಂ ಸುರವೀಥೀತಿ ವಿಶ್ರುತಮ್ |
ಇಂದ್ರಾಜ್ಞಯಾ ಯಯೌ ಪಾರ್ಥಃ ಸ್ತೂಯಮಾನಃ ಸಮಂತತಃ ॥12॥
ಆಶೀರ್ವಾದಗಳಿಂದ ಸ್ತೋತ್ರಮಾಡಲ್ಪಟ್ಟ ಮಹಾಬಾಹುವಾದ ಅರ್ಜುನನು ದಿವ್ಯ ವಾದಿತ್ರ ಶಬ್ದಗಳಿಂದ ಶಂಖ ದುಂದುಭಿನಾದದಿಂದ ಕೂಡಿದ ಸುರವೀಥಿ ಎಂದು ಪ್ರಖ್ಯಾತವಾದ ವಿಸ್ತಾರವಾದ ನಕ್ಷತ್ರಮಾರ್ಗವನ್ನು ಪ್ರವೇಶಿಸಿದನು. ಇಂದ್ರನ ಅಪ್ಪಣೆಯಂತೆ ಎಲ್ಲೆಡೆಯಲ್ಲಿಯೂ ಸ್ತೋತ್ರಮಾಡಲ್ಪಟ್ಟವನಾಗಿ ಅರ್ಜುನನು ಮುಂದೆ ನಡೆದನು.
ತತ್ರ ಸಾಧ್ಯಾಸ್ತಥಾ ವಿಶ್ವೇ ಮರುತೋಽಥಾಶ್ವಿನಾವಪಿ |
ಆದಿತ್ಯಾ ವಸವೋ ರುದ್ರಾಃ ತಥಾ ಬ್ರಹ್ಮರ್ಷಯೋಽಮಲಾ ॥13॥
ರಾಜರ್ಷಯಶ್ಚ ತತ್ರಾಸನ್ ದಿಲೀಪನಹುಷಾದಯಃ |
ತುಂಬುರುರ್ನಾರದಶ್ಚೈವ ಗಂಧರ್ವೌ ಚ ಹಹಾಹುಹೂ ॥14॥
ಅಲ್ಲಿ ಸಾಧ್ಯರು ವಿಶ್ವೇದೇವತೆಗಳು ಮರುತ್‌ಗಳು ಅಶ್ವಿನೀದೇವತೆಗಳು ಆದಿತ್ಯರು ವಸುಗಳು ರುದ್ರರು ಹಾಗೆಯೇ ಪರಿಶುದ್ಧರಾದ ಬ್ರಹ್ಮರ್ಷಿಗಳು ರಾಜರ್ಷಿಗಳು ಮತ್ತು ಚಕ್ರವರ್ತಿಗಳಾದ ದಿಲೀಪ ನಹುಷಮೊದಲಾದವರು ಮತ್ತು ತುಂಬುರು ನಾರದರು ಹಹಾಹುಹೂ ಗಂಧರ್ವರು ಇದ್ದರು.
ತಾನ್ ಸ ಸರ್ವಾನ್ ಸಮಾಗಮ್ಯ ವಿಧಿವತ್ ಕುರುನಂದನಃ |

ತತೋಽಪಶ್ಯದ್ ದೇವರಾಜಂ ಶತಕ್ರತುಮರಿಂದಮಮ್ ॥15॥
ಆ ಕುರುನಂದನನು ಯಥಾ ಯೋಗ್ಯವಾಗಿ ಅವರೆಲ್ಲರನ್ನೂ ಸಂಧಿಸಿ ಅನಂತರ ಅರಿಂದಮನಾದ ದೇವರಾಜನಾದ ಇಂದ್ರನನ್ನು ನೋಡಿದನು.
ತತಃ ಪಾರ್ಥೋ ಮಹಾಬಾಹುರವತೀರ್ಯ ರಥೋತ್ತಮಾತ್ |
ದದರ್ಶ ಸಾಕ್ಷಾದ್ ದೇವೇಂದ್ರಂ ಪಿತರಂ ಪಾಕಶಾಸನಮ್ ॥16॥
ಆಗ ಮಹಾಬಾಹುವಾದ ಪಾರ್ಥನು ತನ್ನ ಶ್ರೇಷ್ಠವಾದ ರಥದಿಂದ ಇಳಿದು ತನ್ನ ತಂದೆಯೂ ಪಾಕನೆಂಬ ದೈತ್ಯನನ್ನು ಸಂಹರಿಸಿದವನೂ ಆದ ದೇವೇಂದ್ರನನ್ನು ಸಾಕ್ಷಾತ್ ನೋಡಿದನು.
ಪಾಂಡರೇಣಾತಪತ್ರೇಣ ಹೇಮದಂಡೇನ ಚಾರುಣಾ |
ದಿವ್ಯಗಂಧಾಧಿವಾಸೇನ ವ್ಯಜನೇನ ಚ ವೀಜಿತಮ್ ॥17॥
ವಿಶ್ವಾವಸುಪ್ರಭೃತಿಭಿರ್ಗಂಧರ್ವೈಃ ಸ್ತುತಿವಂದನೈಃ |
ಸ್ತೂಯಮಾನಂ ದ್ವಿಜಾಗ್ರ್ಯೈಶ್ಚ ಋಗ್ಯಜುಃಸಾಮಸಂಸ್ತವೈಃ ॥18॥
ಸುಂದರವಾದ ಸುವರ್ಣದಂಡದಿಂದ ಕೂಡಿದ ಶ್ವೇತಚ್ಛತ್ರದಿಂದ ಸೇವಿಸಲ್ಪಟ್ಟ, ದಿವ್ಯಗಂಧಸಿಕ್ತವಾದ ವ್ಯಜನಗಳಿಂದ ಬೀಸಲ್ಪಟ್ಟ, ವಿಶ್ವಾವಸು ಮೊದಲಾದ ಗಂಧರ್ವರಿಂದ ಸ್ತೋತ್ರ ಮತ್ತು ವಂದನೆಗಳಿಂದ  ಹೊಗಲ್ಪಡುತ್ತಿದ್ದಂತಹ, ಋಗ್ವೇದ ಯರ್ಜುವೇದ ಮತ್ತು ಸಾಮವೇದದ ಸ್ತೋತ್ರಗಳನ್ನು ಪಠಿಸುತ್ತಿದ್ದ ಬ್ರಾಹ್ಮಣ ಶ್ರೇಷ್ಠರಿಂದ ಪರಿವೃತನಾದ ಇಂದ್ರನನ್ನು ನೋಡಿದನು.
ತತೋಽಭಿಗಮ್ಯ ಕೌಂತೇಯಃ ಶಿರಸಾ ಪ್ರಾಣಮದ್ ಬಲೀ |
ಸ ಚೈನಂ ವೃತ್ತಪೀನಾಭ್ಯಾಂ ಭುಜಾಭ್ಯಾಂ ಪ್ರತ್ಯಗೃಹ್ಣತ ॥19॥
ಆಗ ಬಲಿಷ್ಠನಾದ ಕೌಂತೇಯನು ಮುಂದೆಹೋಗಿ ಶಿರಸಾಪ್ರಣಾಮವನ್ನು ಮಾಡಿದನು. ಆಗ ಇಂದ್ರನಾದರೋ ತನ್ನ ವೃತ್ತ ಮತ್ತು ಪೀನವಾದ ಭುಜಗಳಿಂದ ಅರ್ಜುನನನ್ನು ಮೇಲಕ್ಕೆತ್ತಿ ಸ್ವೀಕರಿಸಿದನು.
ತತಃ ಶಕ್ರಾಸನೇ ಪುಣ್ಯೇ ದೇವರಾಜರ್ಷಿಪೂಜಿತೇ |
ಶಕ್ರಃ ಪಾಣೌ ಗೃಹೀತ್ವೈನಮುಪಾವೇಶಯದಂತಿಕೇ ॥20॥
ಅನಂತರ ಇಂದ್ರನು ಅರ್ಜುನನನ್ನು ಕೈಯಲ್ಲಿ  ಹಿಡಿದು ದೇವತೆಗಳಿಂದಲೂ ರಾಜರ್ಷಿಗಳಿಂದಲೂ ಪೂಜಿತವಾದ ಪವಿತ್ರವಾದ ತನ್ನ ಆಸನದಲ್ಲಿ ತನ್ನ ಸಮೀಪದಲ್ಲಿ  ಕುಳ್ಳಿರಿಸಿದನು.
ಮೂರ್ಧ್ನಿ ಚೈನಮುಪಾಘ್ರಾಯ ದೇವೇಂದ್ರಃ ಪರವೀರಹಾ |
ಅಂಕಮಾರೋಪಯಾಮಾಸ ಪ್ರಶ್ರಯಾವನತಂ ತದಾ ॥21॥
ಶತ್ರುವೀರರನ್ನು ಸಂಹರಿಸುವ ಅರ್ಜುನನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ವಿನಯದಿಂದ ಬಾಗಿದ್ದ ಅವನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು.
ಸಹಸ್ರಾಕ್ಷನಿಯೋಗಾತ್ ಸ ಪಾರ್ಥಃ ಶಕ್ರಾಸನಂ ತದಾ |
ಅಧ್ಯಾಕ್ರಮದಮೇಯಾತ್ಮಾ ದ್ವಿತೀಯ ಇವ ವಾಸವಃ ॥22॥
ಸಹಸ್ರಾಕ್ಷನಾದ ಇಂದ್ರನ ಅಪ್ಪಣೆಯಂತೆ  ಅಪರಿಮಿತ ಮಹಿಮೆಯುಳ್ಳ ಆ ಪಾರ್ಥನು ಎರಡನೆಯ ಇಂದ್ರನಂತೆ ಆಗ ಶಕ್ರಾಸನವನ್ನು ಏರಿದನು.
ತತಃ ಪ್ರೇಮ್ಣಾ ವೃತ್ರಶತ್ರುರರ್ಜುನಸ್ಯ ಮುಖಂ ಶುಭಮ್ |
ಪಸ್ಪರ್ಶ ಪುಣ್ಯಗಂಧೇನ ಕರೇಣ ಪರಿಸಾಂತ್ವಯನ್ ॥23॥
ಅನಂತರ ವೃತ್ರಶತ್ರುವಾದ ಇಂದ್ರನು ಪ್ರೀತಿಯಿಂದ ಅರ್ಜುನನ ಶುಭವಾದ ಮುಖವನ್ನು ಸುಗಂಧಯುಕ್ತವಾದ ತನ್ನ ಹಸ್ತದಿಂದ ಸ್ಪರ್ಶಿಸಿ ಸಮಾಧಾನ ಗೊಳಿಸಿದನು.
ಪರಿಮಾರ್ಜಂಶ್ಚ  ಶನಕೈರ್ಬಾಹೂ ಚಾಸ್ಯಾಯತೌ ಶುಭೌ |
ಜ್ಯಾಶರಕ್ಷೇಪಕಠಿನೌ ಸ್ತಂಭಾವಿವ ಹಿರಣ್ಮಯೌ ॥24॥
ವಜ್ರಗ್ರಹಣಚಿಹ್ನೇನ ಪಾಣಿನಾ ಬಲಸೂದನಃ |
ಮುಹುರ್ಮುಹುರ್ವಜ್ರಧರೋ ಬಾಹೂ ಸಂಸ್ಫಾಲಯನ್  ಶನೈಃ ॥25॥
ಬಲಶತ್ರುವಾದ ಇಂದ್ರನು ವಜ್ರವನ್ನು ಹಿಡಿದು ಜಡ್ಡುಗಟ್ಟಿದ ತನ್ನ ಕೈಯಿಂದ ಅರ್ಜುನನ ದೀರ್ಘವಾದ ವೃತ್ತವಾದ ಶುಭವಾದ ಬಾಣಪ್ರಯೋಗದಿಂದ ಜಡ್ಡುಕಟ್ಟಿದ ಸುವರ್ಣಸ್ತಂಭಗಳಿಂತಿದ್ದ ಬಾಹುಗಳನ್ನು ನಿಧಾನವಾಗಿ ಸವರುತ್ತಾ ಪುನಃಪುನಃ ವಜ್ರಧರನು ಬಾಹುಗಳನ್ನು ಮೃದುವಾಗಿ ಅಲ್ಲಾಡಿಸಿದನು.
ಸ್ಮಯನ್ನಿವ ಗುಡಾಕೇಶಂ ಪ್ರೇಕ್ಷಮಾಣಃ ಸಹಸ್ರದೃಕ್ |
ವಿಸ್ಮಯೋತ್ಫುಲ್ಲನಯನೋ ನ ತತರ್ಪ ಚ ವೃತ್ರಹಾ ॥26॥
ಸಹಸ್ರಾಕ್ಷನಾದ ಇಂದ್ರನು ನಗುತ್ತಾ ಗುಡಾಕೇಶನಾದ ಅರ್ಜುನನ ಮುಖವನ್ನು ನೋಡಿ ವಿಸ್ಮಯದಿಂದ ಅರಳಿದ ಕಣ್ಣುಳ್ಳವನಾಗಿ ತೃಪ್ತಿಯನ್ನೇ ಹೊಂದಲಿಲ್ಲ.
ಏಕಾಸನೋಪವಿಷ್ಟೌ  ತೌ ಶೋಭಯಾಂಚಕ್ರತುಃ ಸಭಾಮ್ |
ಸೂರ್ಯಾಚಂದ್ರಮಸೌ ವ್ಯೋಮ್ನಿ ಪೌರ್ಣಮಾಸ್ಯಾಮಿವೋದಿತೌ ॥
ಏಕಾಸನದಲ್ಲಿ ಕುಳಿತ ಅವರಿಬ್ಬರೂ ಆಕಾಶದಲ್ಲಿ ಪೌರ್ಣಮಾಸಿಯಂದು ಸೂರ್ಯಚಂದ್ರರು ಒಟ್ಟಿಗೆ ಉದಯಿಸಿದಂತೆ ಆ ಸಭೆಗೆ ಶೋಭೆಯನ್ನು ಉಂಟುಮಾಡಿದರು.
ತತ್ರ ಸ್ಮ ಗಾಥಾ ಗಾಯಂತಿ ಸಾಮ್ನಾ ಪರಮಫಲ್ಗುನಾ |

ಗಂಧರ್ವಾಸ್ತುಂಬುರುಶ್ರೇಷ್ಠಾಃ ಕುಶಲಾ ಗೀತಸಾಮಸು ॥28॥
ಗಾನಪ್ರಭೇದಗಳಲ್ಲಿ ಕುಶಲರಾದ ತುಂಬುರು ಮೊದಲಾದ ಗಂಧರ್ವರು ಶ್ರೇಷ್ಠವಾದ ಸಾಮಗಳನ್ನು ಸೇರಿಸಿ ಗಾನವನ್ನು ಮಾಡಿದರು.
ಘೃತಾಚೀ ಮೇನಕಾ ರಂಭಾ ಪೂರ್ವಚಿತ್ತಿಃ ಸ್ವಯಂಪ್ರಭಾ |
ಉರ್ವಶೀ ಮಿಶ್ರಕೇಶೀ ಚ ಚಂಡಾ ಗೌರೀ ವರೂಥಿನೀ ॥29॥
ಗೋಪಾಲೀ ಸಹಜನ್ಯಾ ಚ ಕುಂಭಯೋನಿಃ ಪ್ರಜಾಗರಾ |
ಚಿತ್ರಸೇನಾ ಚಿತ್ರಲೇಖಾ ಸಹಾ ಚ ಮಧುರಸ್ವನಾ ॥30॥
ಏತಾಶ್ಚಾನ್ಯಾಶ್ಚ ನನೃತುಃ ತತ್ರ ತತ್ರ ಶುಭಾನನಾಃ |
ಚಿತ್ತಪ್ರಸಾದನೇ ಯುಕ್ತಾಃ ಸಿದ್ಧಾನಾಂ ಪದ್ಮಲೋಚನಾಃ ॥31॥
ಘೃತಾಚೀ ಮೇನಕೆ ರಂಭೆ ಪೂರ್ವಚಿತ್ತಿ ಸ್ವಯಂಪ್ರಭಾ ಉರ್ವಶೀ ಮಿಶ್ರಕೇಶಿ ಚಂಡಾ ಗೌರೀ ವರೂಥಿನೀ ಗೋಪಾಲೀ ಸಹಜನ್ಯಾ ಕುಂಭಯೋನಿ ಪ್ರಜಾಗರಾ ಚಿತ್ರಸೇನಾ ಚಿತ್ರಲೇಖಾ ಸಹಾ ಮಧುರಸ್ವನಾ ಇವರೂ ಮತ್ತು ಇನ್ನು ಅನೇಕ ಸುಂದರಿಯರಾದ ಪದ್ಮನೇತ್ರೆಯರಾದ ಅಪ್ಸರೆಯರೂ ಸಿದ್ಧರ ಮನಸ್ಸಿಗೆ ಸಂತೋಷವನ್ನು ಉಂಟುಮಾಡುತ್ತಾ ನರ್ತನವನ್ನು ಮಾಡಿದರು.
ಮಹಾಕಟಿತಟಶ್ರೋಣ್ಯಃ ಕಂಪಮಾನೈಃ ಪಯೋಧರೈಃ |
ಕಟಾಕ್ಷಹಾಸಮಾಧುರ್ಯೈಶ್ಚೇತೋಬುದ್ಧಿಮನೋಹರಾಃ ॥32॥
ಅವರು ವಿಸ್ತಾರವಾದ ಕಟಿತಟವುಳ್ಳ ಶ್ರೋಣಿಗಳಿಂದಲೂ ಅಲುಗಾಡುವ ಪಯೋಧರಗಳಿಂದಲೂ ಕಟಾಕ್ಷ ಮಂದಹಾಸ ಮತ್ತು ಮಾಧುರ್ಯಗಳಿಂದಲೂ ಮನಸ್ಸಿಗೂ ಮತ್ತು ಬುದ್ಧಿಗೂ ಬಹಳ ಹಿತವಾಗಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
॥ ಇಂದ್ರಲೋಕಾಭಿಗಮನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
ನಲವತ್ತನೆಯ ಅಧ್ಯಾಯ
(ಅರ್ಜುನೋರ್ವಶೀ ಸಮಾಗಮ ಪ್ರಸಂಗ.)
ವೈಶಂಪಾಯನಃ
ತತೋ ದೇವಾಃ ಸಗಂಧರ್ವಾಃ ಸಮಾದಾಯಾರ್ಘ್ಯಮುತ್ತಮಮ್ |
ಶಕ್ರಸ್ಯ ಮತಮಾಜ್ಞಾಯ ಪಾರ್ಥಮಾನೇಮುರಂಜಸಾ ॥1॥
ಆಗ ದೇವತೆಗಳು ಮತ್ತು ಗಂಧರ್ವರು ಇಂದ್ರನ ಅಭಿಪ್ರಾಯವನ್ನು ತಿಳಿದು ಉತ್ತಮವಾದ ಅರ್ಘ್ಯವನ್ನು ತೆಗೆದುಕೊಂಡು ಬಂದು ಅರ್ಜುನನಿಗೆ ಪ್ರಣಾಮವನ್ನು ಮಾಡಿದರು.
ಪಾದ್ಯಮಾಚಮನೀಯಂ ಚ ಪ್ರತಿಗೃಹ್ಯ ನೃಪಾತ್ಮಜಮ್ |
ಪ್ರವೇಶಯಾಮಾಸುರಥೋ ಪುರಂದರನಿವೇಶನಮ್ ॥2॥
ರಾಜಪುತ್ರನಾದ ಅವನಿಗೆ ಪಾದ್ಯ ಮತ್ತು ಅಚಮನೀಯಗಳನ್ನು ಕೊಟ್ಟು ನಂತರ ಇಂದ್ರಭವನಕ್ಕೆ ಪ್ರವೇಶಮಾಡಿಸಿದರು.
ಏವಂ ಸಂಪೂಜಿತೋ ಜಿಷ್ಣುರುವಾಸ ಭವನೇ ಪಿತುಃ |
ಉಪಶಿಕ್ಷನ್ ಮಹಾಸತ್ರಣಿ ಸಸಂಹಾರಾಣಿ ಪಾಂಡವಃ ॥3॥
ಶಕ್ರಸ್ಯ ಹಸ್ತಾದ್ ದಯಿತಂ ವಜ್ರಮಸ್ತ್ರಂ ಸುದಾರುಣಮ್ |
ಅಶನೀಶ್ಚ ಮಹಾನಾದಾ ಮೇಘಬರ್ಹಿಣಲಕ್ಷಣಾಃ ॥4॥
ಹೀಗೆ ಪೂಜಿಸಲ್ಪಟ್ಟ ಅರ್ಜುನನು ತಂದೆಯಮನೆಯಲ್ಲಿ ವಾಸಮಾಡಿದನು. ಪಾಂಡವನು ಉಪಸಂಹಾರ ಪೂರ್ವಕವಾದ ಮಹಾಸ್ತ್ರಗಳನ್ನೂ ಮತ್ತು ಇಂದ್ರನ ಹಸ್ತಗಳಿಂದ ಅವನಿಗೆ ಪ್ರಿಯವಾದ ಘೋರವಾದ ವಜ್ರಾಸ್ತ್ರವನ್ನೂ ಮಹಾನಾದವನ್ನು ಮಾಡುವ ಮೇಘಗಳ ಮತ್ತು ನವಿಲುಗಳ ಬಣ್ಣವುಳ್ಳ ಅಶನಿಗಳನ್ನೂ ಸ್ವೀಕರಿಸಿ ಅಭ್ಯಾಸಮಾಡಿದನು.
ಗೃಹೀತಾಸ್ತ್ರಸ್ತು ಕೌಂತೇಯೋ ಭ್ರಾತೄನ್ ಸಸ್ಮಾರ ಪಾಂಡವಃ |
ಪುರಂದರನಿಯೋಗಾಚ್ಚ ಪಂಚಾಬ್ದಮವಸತ್ ಸುಖೀ ॥5॥
ಅಸ್ತ್ರಗಳನ್ನು ಸ್ವೀಕರಿಸಿದ ಮೇಲೆ ಕುಂತೀಪುತ್ರನಾದ ಪಾಂಡವನಾದ ಅರ್ಜುನನು ತನ್ನ ಸಹೋದರರನ್ನು ಸ್ಮರಿಸಿದನು. ಇಂದ್ರನ ಆದೇಶದಂತೆ ಐದು ವರ್ಷಗಳ ಕಾಲ ಅಲ್ಲಿ ಸುಖವಾಗಿ ವಾಸಿಸಿದನು.
ತತಃ ಶಕ್ರೋಽಬ್ರವೀತ್ ಪಾರ್ಥಂ ಕೃತಾಸ್ತ್ರಂ ಕಾಲ ಆಗತೇ |
ನೃತ್ತಂ ಗೀತಂ ಚ ಕೌಂತೇಯ ಚಿತ್ರಸೇನಾದವಾಪ್ನುಹಿ ॥6॥
ವಾದಿತ್ರಂ ದೇವವಿಹಿತಂ ನೃಲೋಕೇ ಯನ್ನ ವಿದ್ಯತೇ |
ತದಾರ್ಜಯಸ್ವ ಕೌಂತೇಯ ಶ್ರೇಯೋ ವೈ ತೇ ಭವಿಷ್ಯತಿ ॥7॥
ಅನಂತರ ಅರ್ಜುನನು ಅಸ್ತ್ರಗಳನ್ನು ಪಡೆದ ಮೇಲೆ ಒಂದು ಸೂಕ್ತಸಮಯದಲ್ಲಿ ಇಂದ್ರನು ಅರ್ಜುನನನ್ನು ಕರೆದು ಕೌಂತೇಯನೇ, ಚಿತ್ರಸೇನನಿಂದ ನೃತ್ಯವಿದ್ಯೆಯನ್ನು ಮತ್ತು ಗೀತವಿದ್ಯೆಯನ್ನು ಕಲಿ. ಮನುಷ್ಯಲೋಕದಲ್ಲಿ ಇಲ್ಲದಿರುವ ದೇವಲೋಕದ ವಾದಿತ್ರವನ್ನು ಸಂಪಾದಿಸು. ಕೌಂತೇಯನೇ, ಅದರಿಂದ ನಿನಗೆ ಶ್ರೇಯಸ್ಸು ಉಂಟಾಗುವುದು ಎಂದು ಹೇಳಿದನು.
ಸಖಾಯಂ ಪ್ರದದೌ ಚಾಸ್ಯ ಚಿತ್ರಸೇನಂ ಪುರಂದರಃ |
ಸ ತೇನ ಸಹ ಸಂಗಮ್ಯ ರೇಮೇ ಪಾರ್ಥೋ ನಿರಾಮಯಃ ॥8॥
ಅರ್ಜುನನಿಗೆ ಇಂದ್ರನು ಚಿತ್ರಸೇನನನ್ನು ಸ್ನೇಹಿತನನ್ನಾಗಿ ಕೊಟ್ಟನು. ಅರ್ಜುನನು ಚಿತ್ರಸೇನನ ಜೊತೆಯಲ್ಲಿ ಬೆರತು ನಿರಾತಂಕವಾಗಿ

ಸಂತೋಷಪಟ್ಟನು.
ಕದಾಚಿತ್ ಸ ಹಿ ದೇವೇಂದ್ರಶ್ಚಿತ್ರಸೇನಂ ರಹೋಽಬ್ರವೀತ್ |
ಪಾರ್ಥಸ್ಯ ತಸ್ಯ ವಿಜ್ಞಾಯ ಸಕ್ತಂ ಚಕ್ಷುಃ ಪ್ರಸಂಗತಃ ॥9॥
ಒಮ್ಮೆ ಪಾರ್ಥನ ದೃಷ್ಟಿಯು ಎಲ್ಲಿ ನೆಟ್ಟಿದೆ ಎಂಬುದನ್ನು ತಿಳಿದ ದೇವೇಂದ್ರನು ಏಕಾಂತದಲ್ಲಿ ಚಿತ್ರಸೇನನನ್ನು ಕರೆದು ಹೀಗೆ ಹೇಳಿದನು.
ಗಂಧರ್ವರಾಜಾದ್ಯ ಮಯಾ ಪ್ರಹಿತಾಽಪ್ಸರಸಾಂ ವರಾ |
ಕಟಾಕ್ಷೇಣ ಚ ಮಾಧುರ್ಯೈ ರೂಪಭಾವೈಃ ಸವಿಭ್ರಮೈಃ ॥10॥
ಏಷಾದ್ಯ ಫಲ್ಗುನೇನೇಹ ನೃತ್ಯಂತೀ ಪ್ರೇಷಿತಾ ಕಿಲ |
ಉರ್ವಶೀ ಪುರುಷವ್ಯಾಘ್ರಂ ಉಪತಿಷ್ಠತು ಫಲ್ಗುನಮ್ ॥11॥
ಗಂಧರ್ವರಾಜನೇ ನಾನು ಈ ದಿನ ಅಪ್ಸರೆಯಾದ ಊರ್ವಶಿಯನ್ನು ಅರ್ಜುನನಬಳಿಗೆ ಕಳುಹಿಸುತ್ತಿದ್ದೇನೆ ಅವಳು ಈ ದಿನ ನೃತ್ಯಮಾಡುತ್ತಿರುವಾಗ ಅವಳ ಕಟಾಕ್ಷಗಳಿಗೂ ಮಾಧುರ್ಯಗಳಿಗೂ ಸೌಂದರ್ಯಗಳಿಗೂ ಮತ್ತು ವಿಲಾಸಗಳಿಗೂ ವಶನಾದ ಅರ್ಜುನನಿಂದ ಅವಳು ಬಹಳವಾಗಿ ನೋಡಲ್ಪಟ್ಟಳಷ್ಟೇ? ಉರ್ವಶಿಯು ಪುರುಷವ್ಯಾಘ್ರನಾದ ಅರ್ಜುನನ ಸಮೀಪಕ್ಕೆ ಹೋಗಲಿ.
ಯಥಾ ಚ ತಾಮಾಭಿಸೃತಾಂ ವಿದ್ಯಾದಸ್ಮನ್ನಿಯೋಗಗಾಮ್ |
ತಥಾ ತ್ವಯಾ ವಿಧಾತವ್ಯಂ ಸ್ತ್ರೀಸಂಸರ್ಗವಿಶಾರದ ॥12॥
ಎಲೈ ಸ್ತ್ರೀಸಂಗವಿಶಾರದನೇ, ನನ್ನ ಆದೇಶದಂತೆ ಉರ್ವಶಿಯು ತನ್ನ ಬಳಿಗೆ ಬಂದಿದ್ದಾಳೆ ಎಂದು ಅರ್ಜುನನು ತಿಳಿಯುವಂತೆ ನೀನು ಮಾಡಬೇಕು.
ಏವಮುಕ್ತಸ್ತಥೇತ್ಯುಕ್ತ್ವಾ ಸೋಽನುಜ್ಞಾಂ ಪ್ರಾಪ್ಯ ವಾಸವಾತ್ |
ಗಂಧರ್ವರಾಜೋಽಪ್ಸರಸಮಭ್ಯಾಗಾದುರ್ವಶೀಂ ವರಾಮ್ ॥13॥
ಹೀಗೆ ಹೇಳಲ್ಪಟ್ಟ ಗಂಧರ್ವರಾಜನಾದ ಚಿತ್ರಸೇನನು ಹಾಗೆಯೇ ಆಗಲಿ ಎಂದು ಹೇಳಿ ಇಂದ್ರನ ಅಪ್ಪಣೆಯನ್ನು ಪಡೆದು ಶ್ರೇಷ್ಠವಾದ ಅಪ್ಸರೆಯಾದ ಉರ್ವಶಿಯ ಸಮೀಪಕ್ಕೆ ಬಂದನು.
ತಾಂ ದೃಷ್ಟ್ವಾಽವಿದಿತೇ ಹೃಷ್ಟಃ ಸ್ವಾಗತೇನಾರ್ಚಿತಸ್ತಯಾ |
ಸುಖಾಸೀನಾಂ ಸುಖಾಸೀನಃ ಸ್ಮಿತಪೂರ್ವಂ ವಚೋಽಬ್ರವೀತ್ ॥14॥
ಏಕಾಂತದಲ್ಲಿ ಅವಳನ್ನು ನೋಡಿ ಸಂತೋಷಗೊಂಡು ಅವಳಿಂದ ಸ್ವಾಗತವನ್ನು ಕೋರಿ ಸತ್ಕರಿಸಿಲ್ಪಟ್ಟನು. ಅವಳು ಸುಖಾಸೀನಳಾದ ಮೇಲೆ ತಾನು ಸುಖವಾಗಿ ಕುಳಿತು ಮುಗುಳ್ನಗುತ್ತಾ ಮಾತನಾಡಿದನು.
ವಿದಿತಂ ತೇಽಸ್ತು ಸುಶ್ರೋಣಿ ಪ್ರೇಷಿತೋಽಹಮುಪಾಗತಃ |
ತ್ರಿದಿವಸ್ಯೈಕರಾಜೇನ ತ್ವತ್ಪ್ರಸಾದಾಭಿನಂದಿನಾ ॥15॥
ಎಲೌ ಸುಶ್ರೋಣಿಯೇ, ಮೂರು ಲೋಕಗಳಿಗೆ ಏಕಾಧಿಪತಿಯಾದ ನಿನಗೆ ಅನುಗ್ರಹವನ್ನು ಮಾಡಲು ಬಯಸುವ ಇಂದ್ರನಿಂದ ಪ್ರೇರಿತನಾಗಿ ನಾನು ನಿನ್ನ ಬಳಿಗೆ ಬಂದಿದ್ದೇನೆಂದು ನೀನು ತಿಳಿ.
ಯಃ ಸ ದೇವಮನುಷ್ಯೇಷು ಪ್ರಖ್ಯಾತಃ ಸಹಜೈರ್ಗುಣೈಃ |
ಶ್ರಿಯಾ ಶೀಲೇನ ರೂಪೇಣ ಶ್ರುತೇನ ಚ ಬಲೇನ ಚ ॥16॥
ಪ್ರಖ್ಯಾತಃ ಶೌರ್ಯವೀರ್ಯಾಭ್ಯಾಂ ಸಂಪನ್ನಃ ಪ್ರತಿಭಾನವಾನ್|
ತೇಜಸ್ವೀ ಸೌಮ್ಯಶೀಲಶ್ಚ ಕ್ಷಮಾವಾನ್ ಜಿತಮತ್ಸರಃ ॥17॥
ಸಾಂಗೋಪನಿಷದಾನ್ ವೇದಾನ್ ಗುರುಶುಶ್ರೂಷುರಾತ್ಮವಾನ್|
ಯೋಽಧೀತೇ ಚತುರಃ ಸರ್ವಾನ್ ಮೇಧಾವೀ ಗುಣವಾನಿಹ ॥18॥
ಬ್ರಹ್ಮಚರ್ಯೇಣ ದಾಕ್ಷ್ಯೇಣ ಪ್ರಶ್ರಯೈಃ ಸ್ವಧಿಯಾ ಚ ಯಃ |
ಏಕೋ ಹಿ ರಕ್ಷಿತಾ ಚೈವ ತ್ರಿದಶಾನ್ ಮಘವಾನಿವ ॥19॥
ಅಕತ್ಥನೋ ಮಾನಯಿತಾ ಸ್ಥೂಲಾಕ್ಷಃ ಪ್ರಿಯವಾಕ್ ಸುಹೃತ್ |
ಸುಹೃದಶ್ಚಾನ್ನಪಾನೇನ ವಿವಿಧೇನಾಭಿವರ್ಷತಿ ॥20॥
ಸತ್ಯವಾಗೂರ್ಜಿತೋ ವಕ್ತಾ ರೂಪವಾನನಹಂಕೃತಃ |
ಭಕ್ತಾನುಕಂಪೀ ಕಾಂತಶ್ಚ ಪ್ರಿಯೋಽದ್ಯ ಸ್ಥಿರಸಂಗರಃ ॥21॥
ಶ್ಲಾಘನೀಯೋ ಗುಣಗಣೈರ್ಮಹೇಂದ್ರವರುಣೋಪಮಃ |
ವಿದಿತಸ್ತೇಽರ್ಜುನೋ ವೀರಃ ಸ ಸ್ವರ್ಗಫಲಮಾಪ್ತವಾನ್ ॥22॥
ಮೇಧಾವಿಯೂ ಗುಣವಂತನೂ ಆದ ಯಾವನು ತನ್ನ ಸಹಜವಾದ ಗುಣಗಳಿಂದಲೂ ಕಾಂತಿಯಿಂದಲೂ ಶೀಲದಿಂದಲೂ ರೂಪದಿಂದಲೂ ವಿದ್ಯೆ ಮತ್ತು ಬಲಗಳಿಂದಲೂ ದೇವತೆಗಳಲ್ಲಿ ಮತ್ತು ಮನುಷ್ಯರಲ್ಲಿಯೂ ಪ್ರಖ್ಯಾತನಾಗಿದ್ದಾನೆಯೋ, ಶೌರ್ಯವೀರ್ಯಗಳಿಂದ ಯುಕ್ತನಾಗಿದ್ದಾನೆಯೋ, ಪ್ರತಿಭೆಯನ್ನು ಹೊಂದಿದವನಾಗಿ ತೇಜಸ್ವಿಯೂ ಸೌಮ್ಯಸ್ವಭಾವದವನೂ ಕ್ಷಮಾವುಳ್ಳವನೂ ಮತ್ತು ಮಾತ್ಸರ್ಯರಹಿತನೂ ಆಗಿದ್ದಾನೆಯೋ, ಯಾವನು ದೃಢಮನಸ್ಸಿನವನಾಗಿ ಗುರುಶುಶ್ರೂಷೆಯನ್ನು ಮಾಡಿ ಎಲ್ಲಾ ನಾಲ್ಕು ವೇದಗಳು ಅವುಗಳ ಅಂಗಗಳು ಮತ್ತು ಉಪನಿಷತ್‌ಗಳನ್ನು ಅಧ್ಯಯನಮಾಡುತ್ತಾನೆಯೋ, ಯಾವನು ಬ್ರಹ್ಮಚರ್ಯದಿಂದಲೂ ದಕ್ಷತೆಯಿಂದಲೂ ವಿನಯದಿಂದಲೂ ಮತ್ತು ತನ್ನ ಬುದ್ಧಿಯಿಂದಲೂ ಇಂದ್ರನು ದೇವತೆಗಳನ್ನು ರಕ್ಷಿಸಿದಂತೆ ಒಬ್ಬನೇ ಎಲ್ಲರನ್ನೂ ರಕ್ಷಿಸುತ್ತಾನೆಯೋ, ಯಾವನು ತನ್ನ ಪ್ರತಾಪವನ್ನು ತಾನೇ ಹೇಳಿಕೊಳ್ಳುವುದಿಲ್ಲವೋ, ಇನ್ನೊಬ್ಬರಿಗೆ ಮರ್ಯಾದೆಯನ್ನು ಕೊಡುತ್ತಾನೆಯೋ, ವಿಸ್ತಾರವಾದ ಕಣ್ಣುಗಳನ್ನು ಹೊಂದಿ ಪ್ರಿಯವಾಗಿ ಮಾತನಾಡುತ್ತಾನೆಯೋ, ಯಾವನು

ಒಳ್ಳೆಯ ಹೃದಯವನ್ನು ಹೊಂದಿದ್ದಾನೆಯೋ, ತನ್ನ ಮಿತ್ರಬಾಂಧವರಿಗೆಲ್ಲ ವಿಧವಿಧವಾದ ಅನ್ನಪಾನಗಳಿಂದ ಅಭಿವರ್ಷಣೆಮಾಡುತ್ತಾನೆಯೋ, ಯಾವನು ಸತ್ಯವಚನನೋ ಉತ್ಕೃಷ್ಟನೋ ವಕ್ತೃತ್ವಗುಣವುಳ್ಳವನೋ ರೂಪವಂತನೋ ಅಂಹಕಾರರಹಿತನೋ ಭಕ್ತಾನುಕಂಪಿಯೋ ಮನೋಹರನೋ ಪ್ರಿಯನೋ ಮತ್ತು ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವನೋ, ಮತ್ತು ಯಾವನು ಮಹೇಂದ್ರನಿಗೂ ವರುಣನಿಗೂ ಸದೃಶನಾಗಿದ್ದು ತನ್ನ ಗುಣಗಣಗಳಿಂದ ಶ್ಲಾಘ್ಯನಾಗಿದ್ದಾನೆಯೋ, ಅಂತಹ ವೀರನಾದ ಅರ್ಜುನನನ್ನು ನೀನು ತಿಳಿದಿರುವೆಯಷ್ಟೆ? ಅವನು ಸ್ವರ್ಗಕ್ಕೆ ಬಂದು ಸ್ವರ್ಗಫಲವನ್ನು ಹೊಂದಿದ್ದಾನೆ.

ತವ ಶಕ್ರಾಭ್ಯನುಜ್ಞಾತಾ ಪಾದಾವದ್ಯ ಪ್ರಪದ್ಯತಾಮ್ |
ತದೇವಂ ಕುರು ಕಲ್ಯಾಣಿ ಪ್ರಪನ್ನಸ್ತ್ವಾಂ ಧನಂಜಯಃ ||23||

ನೀನು ಶಕ್ರನ ಅಪ್ಪಣೆಯಿಂದ ಅವನ ಪಾದಗಳನ್ನು ಸೇವಿಸು. ಕಲ್ಯಾಣಿಯೇ, ನೀನು ಹೀಗೆ ಮಾಡು. ಧನಂಜಯನು ನಿನಗೆ ಪ್ರಪನ್ನನಾಗಿದ್ದಾನೆ.

ಏವಮುಕ್ತಾ ಸ್ಮಿತಂ ಕೃತ್ವಾ ಸನ್ಮಾನಂ ಬಹುಮಾನ್ಯ ಚ |
ಪ್ರತ್ಯುವಾಚೋರ್ವಶೀ ಪ್ರೀತಾ ಚಿತ್ರಸೇನಮನಿಂದಿತಾ ||24||

ಹೀಗೆ ಹೇಳಲ್ಪಟ್ಟವಳಾದ ಉರ್ವಶಿಯು ಮಂದಹಾಸವನ್ನು ಬೀರಿ ತನಗೆ ದೊರೆತ ಸನ್ಮಾನವನ್ನು ದೊಡ್ಡದೆಂದು ಭಾವಿಸಿ ಚಿತ್ರಸೇನನನ್ನು ಕುರಿತು ಅನಿಂದಿತಳಾದ ಅವಳು ಸಂತೋಷದಿಂದ ಮಾತನಾಡಿದಳು

ಯಸ್ತ್ವಸ್ಯ ಕಥಿತಃ ಸತ್ಯೋ ಗುಣೋದ್ದೇಶಸ್ತ್ವಯಾಽನಘ |
ತಂ ಶ್ರುತ್ವಾಽದ್ಯ ಪ್ರಿಯಂ ನಾರೀ ವೃಣುಯಾತ್ ಕಿಮತೋಽರ್ಜುನಮ್ ||

ಎಲೈ ಅನಘನೇ, ಅವನ ಯಾವ ಗುಣಸಮೂಹಗಳನ್ನು ಹೇಳಿದೆಯೋ ಅದನ್ನು ಕೇಳಿ ಯಾವ ನಾರಿಯುತಾನೆ ಆರ್ಜುನನನ್ನು ಬಿಟ್ಟು ಇನ್ನೊಬ್ಬನನ್ನು ವರಿಸಬಹುದು?

ಮಹೇಂದ್ರಸ್ಯ ನಿಯೋಗೇನ ತ್ವತ್ತಃ ಸಂಪ್ರೇಷಣೇನ ಚ |
ತಸ್ಯ ಚಾಹಂ ಗುಣೌಘೇನ ಫಲ್ಗುನೇ ಜಾತಮನ್ಮಥಾ |
ಗಚ್ಛ ತ್ವಂ ಹಿ ಯಥಾಕಾಮಮಾಗಮಿಷ್ಯಾಮ್ಯಹಂ ಸಖೇ ||26||

ದೇವೇಂದ್ರನ ಅಪ್ಪಣೆಯಿಂದ ಪ್ರೇರಿತಳಾದ ನಾನು ಮತ್ತು ನಿನ್ನನ್ನು ಕಳುಹಿಸಿಕೊಟ್ಟಿರುವುದರಿಂದ ಉತ್ತೇಜಿತಳಾಗಿ ಮತ್ತು ಅರ್ಜುನನ ಗುಣಸಮೂಹಗಳಿಂದ ನಾನು ಅವನಲ್ಲಿ ಕಾಮವನ್ನು ಹೊಂದಿದವಳಾಗಿದ್ದೇನೆ. ಸ್ನೇಹಿತನೇ ನಿನ್ನ ಇಷ್ಟಬಂದಂತೆ ನೀನು ಹೋಗು. ನಾನು ಅರ್ಜುನನಿದ್ದಲ್ಲಿಗೆ ಬರುವೆನು.

ವೈಶಂಪಾಯನಃ
ತತೋ ವಿಸೃಜ್ಯ ಗಂಧರ್ವಂ ಕೃತಕೃತ್ಯಂ ಶುಚಿಸ್ಮಿತಾ |
ಉರ್ವಶೀ ಸಾಽಕರೋನ್ಮಾನಂ ಪಾರ್ಥಪ್ರಾರ್ಥನಲಾಲಸಾ ||27||

ಆಗ ಉರ್ವಶಿಯು ಗಂಧರ್ವನನ್ನು ಕಳುಹಿಸಿ ತನ್ನನ್ನು ಕೃತಾರ್ಥಳೆಂದು ಭಾವಿಸಿ ಶುಚಿಸ್ಮಿತಳಾಗಿ ಪಾರ್ಥನನ್ನು ಹೊಂದುವ ಆಸೆಯುಳ್ಳವಳಾಗಿ ಅವಳು ತನ್ನನ್ನು ತಾನೇ ಸಮ್ಮಾನಿಸಿಕೊಂಡಳು. (ಶ್ರೇಷ್ಠಳೆಂದು ತಿಳಿದಳು.)

ಸ್ನಾನಾಲಂಕಾರನೇಪಥ್ಯೈರ್ಗಂಧಮಾಲ್ಯೈಶ್ಚ ಶೋಭನೈಃ |
ಧನಂಜಯಸ್ಯ ರೂಪೇಣ ಶಕ್ರಸ್ಯಾಭ್ಯರ್ಥನೇನ ಚ ||28||
ವಾಕ್ಯೈಶ್ಚ ಚಿತ್ರಸೇನಸ್ಯ ಮನ್ಮಥೇನ ಚ ಪೀಡಿತಾ |
ದಿವ್ಯಾಸ್ತರಣಸಂಸ್ತೀರ್ಣೇ ವಿಸ್ತೀರ್ಣೇ ಶಯನೋತ್ತಮೇ ||29||
ಚಿತ್ತಸಂಕಲ್ಪಭಾವೇನ ಸುಚಿತ್ತಾಽನನ್ಯಮಾನಸಾ |
ಮನೋರಥೇನ ಸಂಪ್ರಾಪ್ತಂ ಕಾಮಯತ್ಯೇವ ಫಲ್ಗುನಮ್ ||30||

ಸ್ನಾನ ವಸ್ತ್ರಾಲಂಕಾರ ಭೂಷಣಗಳು ಮನೋಹರವಾದ ಗಂಧಮಾಲ್ಯಗಳು ಇವುಗಳಿಂದ ಶೋಭಿತಳಾಗಿ ಅರ್ಜುನನ ರೂಪದಿಂದಲೂ ಶಕ್ರನ ಆದೇಶದಿಂದಲೂ ಚಿತ್ರಸೇನನ ವಾಕ್ಯಗಳಿಂದಲೂ ಪ್ರೇರಿತಳಾಗಿ ಮನ್ಮಥನಿಂದ ಪೀಡಿತಳಾಗಿ ದಿವ್ಯವಾದ ಆಸ್ತರಣಗಳಿಂದ ಕೂಡಿದ ವಿಸ್ತಾರವಾದ ಶ್ರೇಷ್ಠವಾದ ಶಯನದಲ್ಲಿ ತನ್ನ ಮನಸ್ಸಿನ ಸಂಕಲ್ಪಗಳಿಗೆ ಅನುಸಾರವಾಗಿ ಕಲ್ಪನೆಗಳನ್ನು ಮಾಡುತ್ತಾ ಒಳ್ಳೆಯ ಮನಸ್ಸುಳ್ಳ ಅವಳು ಬೇರೆ ಏನನ್ನೂ ಯೋಚನೆಮಾಡದೆ ತನ್ನ ಮನೋರಥಕ್ಕೆ ಅನುಸಾರವಾಗಿ ಬಂದ ಅರ್ಜುನನ್ನೂ ಕಾಮಿಸಿದಳು.

ನಿಶಾಮ್ಯ ಚಂದ್ರೋದಯನಂ ವಿಗಾಢೇ ರಜನೀಮುಖೇ |
ಪ್ರಸ್ಥಿತಾ ಸಾ ಪೃಥುಶ್ರೋಣೀ ಪಾರ್ಥಸ್ಯ ಭವನಂ ಪ್ರತಿ ||31||

ರಾತ್ರಿಯು ಆವರಿಸುತ್ತಿರಲು ಚಂದ್ರೋದಯವನ್ನು ನೋಡಿ ಪೃಥುಶ್ರೋಣಿಯಾದ ಅವಳು ಅರ್ಜುನನ ನಿವೇಶನಕ್ಕೆ ಹೊರಟಳು.

ಮೃದುಕುಂಚಿತದೀರ್ಘೇಣ ಕುಸುಮೋತ್ತಮಧಾರಿಣಾ |
ಕೇಶಪಾಶೇನ ಲಲನಾ ಗಚ್ಛಮಾನಾ ವ್ಯರಾಜತ ||32||

ಅರ್ಜುನನ ನಿವೇಶನಕ್ಕೆ ಹೋಗುತ್ತಾ ಶ್ರೇಷ್ಠವಾದ ಕುಸುಮಗಳನ್ನು ಮುಡಿದ ದೀರ್ಘವಾದ ಗುಂಗುರುಕೂದಲುಗಳ ಕೇಶಪಾಶಗಳಿಂದ ಆ ವನಿತೆಯು ಶೋಭಸಿದಳು.

ಭ್ರೂಕ್ಷೇಪಾಲಾಪಮಾಧುರ್ಯೈಃ ಕಾಂತ್ಯಾ ಸೌಮ್ಯತಯಾಽಪಿ ಚ |
ಶಶಿನಂ ವಕ್ತ್ರಚಂದ್ರೇಣ ಆಹ್ವಯಂತೀವ ಗಚ್ಛತೀ ||33||

ಹುಬ್ಬಿನ ಚಲನೆಗಳಿಂದಲೂ ಮಾತಿನ ಮಾಧುರ್ಯದಿಂದಲೂ ದೇಹದ ಕಾಂತಿಯಿಂದಲೂ ಮತ್ತು ತನ್ನ ಸೌಮ್ಯಭಾವದಿಂದಲೂ ಚಂದ್ರನಂತಿರುವ ತನ್ನ ಮುಖದಿಂದ ಚಂದ್ರನನ್ನು ಆಹ್ವಾನಿಸುವಂತೆ ಅವಳು ಹೊರಟಳು.

ದಿವ್ಯಾಂಗರಾಗೌ ರುಚಿರೌ ದಿವ್ಯಚಂದನರೂಷಿತೌ |
ಗಚ್ಛಂತ್ಯಾ ಹಾರವಿಕಚೌ ಸ್ತನೌ ತಸ್ಯಾ ವವಲ್ಗತುಃ ॥34॥
ದಿವ್ಯಾಂಗರಾಗವನ್ನು ಧರಿಸಿ ದಿವ್ಯಚಂದನದಿಂದ ಲೇಪಿತವಾದ ಹಾರಗಳಿಂದ ಭೂಷಿತವಾಗಿ ಅರಳಿದ ಅವಳ ಕುಚಗಳು ಅವಳು ನಡೆದಂತೆ ಕಂಪಿಸಿದವು.
ಸ್ತನೋದ್ವಹನಸಂಕ್ಷೋಭಾತ್ ತಾಮ್ಯಮಾನಾ ಪದೇ ಪದೇ |
ತ್ರಿವಲೀದಾಮಚಿತ್ರೇಣ ಮಧ್ಯೇನಾತೀವ ಶೋಭನಾ ॥35॥
ಸ್ತನವನ್ನು ಹೊರುವ ಭಾರದಿಂದ ಕ್ಷೋಭೆಗೊಂಡ ಅವಳು ಹೆಜ್ಜೆ ಹೆಜ್ಜೆಗೆ ಬಳುಕುತ್ತಾ ಉದರದ ತ್ರಿವಳಿಯ ಮೇಲೆ ಧರಿಸಿದ ಕಾಂಚೀದಾಮದಿಂದ ಬಹುವಾಗಿ ಶೋಭಿಸಿದಳು.
ರಥಕೂಬರವಿಸ್ತೀರ್ಣಂ ನಿತಂಬೋನ್ನತಪೀವರಮ್ |
ಮನ್ಮಥಾಯತನಂ ಶುಭ್ರರಶನಾದಾಮಶೋಭಿತಮ್ ॥36॥
ರಥಪೀಠದಂತೆ ವಿಸ್ತಾರವಾದ ಉನ್ನತವೂ ಮತ್ತು ಪುಷ್ಟವೂ ಆದ ನಿತಂಬಸ್ಥಾನದಲ್ಲಿ ಇದ್ದ ಮನ್ಮಥಾಯತನವು ಶುಭ್ರವಾದ ಕಾಂಚೀರಶನಾದಾಮಗಳಿಂದ ಶೋಭಿಸಿತು.
ಋಷೀಣಾಮಪಿ ದಿವ್ಯಾನಾಂ ಮನೋವ್ಯಾಘಾತಕಾರಕಮ್ |
ಸೂಕ್ಷ್ಮವಸತ್ರವೃತಂ ಭಾತಿ ಜಘನಂ ಚಾನವದ್ಯಯಾ ॥37॥
ದಿವ್ಯ ಋಷಿಗಳಿಗೂ ಮನಸ್ಸಿಗೆ ಚಾಂಚಲ್ಯವನ್ನು ಉಂಟುಮಾಡುವ ನಿರ್ದುಷ್ಟಳಾದ ಅವಳ ಜಘನವು ಸೂಕ್ಷ್ಮವಸ್ತ್ರದಿಂದ ಆವೃತ್ತವಾಗಿ ಶೋಭಿಸುತ್ತಿತ್ತು.
ಗೂಢಗುಲ್ಫಶಿರೌ ಪಾದೌ ತಾಮ್ರಾಯತತಳಾಂಗುಲೀ |
ಕೂರ್ಮಪೃಷ್ಠೋನ್ನತೌ ಚಾಸ್ಯಾಃ ಶೋಭೇತೇ ಕಿಂಕಿಣೀಕಿಣೌ ॥38॥
ಶೀಧುಪಾನೇನ ಚಾಲ್ಪೇನ ತುಷ್ಟ್ಯಾ ಚ ಮದನೇನ ಚ |
ವಿಲಾಸಿತೈಶ್ಚ ವಿವಿಧೈಃ ಪ್ರೇಕ್ಷಣೀಯತರಾಽಭವತ್ ॥39॥
ಚರ್ಮದೊಳಗೆ ಸೇರಿದ ಮಣಿಗಂಟಿನ ಧಮನಿಗಳನ್ನುಳ್ಳ ತಾಮ್ರದ ಬಣ್ಣವನ್ನು ಹೊಂದಿದ ದೀರ್ಘವಾದ ಪಾದತಲ ಮತ್ತು ಆಯತ ಅಂಗುಲಿಗಳನ್ನು ಹೊಂದಿದ್ದ ಕೂರ್ಮ ಪೃಷ್ಠದಂತೆ ಮೇಲೆ ಉನ್ನತವಾಗಿದ್ದ ಗೆಜ್ಜೆಯ ಗುರುತುಗಳಿಂದ ಸ್ವಲ್ಪ ಗಟ್ಟಿಯಾಗಿದ್ದ ಅವಳ ಪಾದಗಳು ಶೋಭಿಸಿದವು. ಅವಳು ಅಲ್ಪವಾದ ಮದ್ಯಪಾನದಿಂದ ಮತ್ತು ಮನಸ್ಸಲ್ಲಿ ಉಂಟಾದ ಕಾಮದಿಂದ ಸಂತುಷ್ಟಳಾಗಿ ತನ್ನ ವಿವಿಧ ವಿಲಾಸಗಳಿಂದ ಬಹಳ ಸುಂದರಿಯಾಗಿ ತೋರಿದಳು.
ಸಿದ್ಧಚಾರಣಗಂಧರ್ವೈಃ ಸಾಗ್ರೈರ್ಯಾತಿ ವಿಲಾಸಿನೀ |
ಬಹ್ವಾಶ್ಚರ್ಯಪದೇ ಸ್ವರ್ಗೇ ಸಾಽಽಶ್ಚರ್ಯಮಿವ ದೃಶ್ಯತೇ ॥40॥
ಆ ವಿಲಾಸಿನಿಯು ಸಿದ್ಧಚಾರಣಗಂಧರ್ವರನ್ನು ಮುಂದೆಮಾಡಿಕೊಂಡು ನಡೆಯುತ್ತಾ ಅನೇಕ ಆಶ್ಚರ್ಯಗಳಿಗೆ ಆಸ್ಪದವಾದ ಸ್ವರ್ಗದಲ್ಲಿ ತಾನೂ ಒಂದು ಆಶ್ಚರ್ಯದಂತೆ ಕಾಣುತ್ತಿದ್ದಳು.
ಸುಸೂಕ್ಷ್ಮೇಣೋತ್ತರೀಯೇಣ ಮೇಘವರ್ಣೇನ ರಾಜತಾ |
ತನ್ವಭ್ರಪ್ರಾವೃತಾ ವ್ಯೋಮ್ನಿ ಚಂದ್ರಲೇಖೇವ ಗಚ್ಛತಿ ॥41॥
ಮೇಘವರ್ಣದ ತೆಳುವಾದ ಉತ್ತರೀಯದಿಂದ ಶೋಭಿಸುತ್ತಿದ್ದ ಅವಳು ಆಕಾಶದಲ್ಲಿ ತೆಳುವಾದ ಮೋಡಗಳಿಂದ ಅವೃತವಾದ ಚಂದ್ರಲೇಖೆಯಂತೆ ನಡೆದಳು.
ತತಃ ಪ್ರಾಪ್ತಾಽತಿದುಷ್ಪ್ರಾಪಾ ಮನಸಾಽಪಿ ವಿಕರ್ಮಭಿಃ |
ಭವನಂ ಪಾಂಡುಪುತ್ರಸ್ಯ ಫಲ್ಗುನಸ್ಯ ಗುಣಾಧಿಕಾ ॥42॥
ಅನಂತರ ದುಷ್ಕರ್ಮವನ್ನು ಮಾಡಿದವರು ಮನಸ್ಸಿನಿಂದಲೂ ಹೊಂದಲು ಸಾಧ್ಯವಾಗದ, ಪಾಂಡುಪುತ್ರನಾದ ಅರ್ಜುನನ ಭವನಕ್ಕೆ, ಗುಣಾಧಿಕಳಾದ ಅವಳು ಬಂದಳು.
ತತ್ರ ದ್ವಾರಮನುಪ್ರಾಪ್ತಾ ದ್ವಾರಸ್ಥೈಶ್ಚ ನಿವೇದಿತಾ |
ಪರಮಾಽಪ್ಸರಸಾಂ ತತ್ರ ಪಾರ್ಥಾಯಾಯತಲೋಚನಾ ॥43॥
ಅವಳು ಮನೆಯ ದ್ವಾರಕ್ಕೆ ಬಂದಾಗ ದ್ವಾರಸ್ಥರು ಒಳಗೆ ಹೋಗಿ ಅರ್ಜುನನಿಗೆ ಆಯತಲೋಚನೆಯಾದ ಅಪ್ಸರೆಯಾದ ಶ್ರೇಷ್ಠಳಾದ ಉರ್ವಶಿಯ ಆಗಮನವನ್ನು ತಿಳಿಸಿದರು.
ತಾಂ ದೃಷ್ಟ್ವಾ ಪಾಂಡುತನಯಃ ಶಯನಾದುತ್ಥಿತೋ ಬಲೀ |
ಅಶಂಕಿತಮನಾ ರಾಜನ್ ಪ್ರತ್ಯಗಚ್ಛತ ತಾಂ ನಿಶಿ ॥44॥
ಎಲೈ ರಾಜನೇ! ಅವಳನ್ನು ನೋಡಿದ ಬಲಿಷ್ಠನಾದ ಪಾಂಡುತನಯನು ಶಯನದಿಂದ ಎದ್ದು ಮನಸ್ಸಿನಲ್ಲಿ ಯಾವ ಶಂಕೆಯೂ ಇಲ್ಲದೆ ರಾತ್ರಿಯ ವೇಳೆಯಲ್ಲಿ ಅವಳನ್ನು ಎದುರುಗೊಳ್ಳಲು ಬಂದನು.
ದೃಷ್ಟ್ವೈವ ಚೋರ್ವಶೀಂ ಪಾರ್ಥೋ ಲಜ್ಜಾಸಂವೃತಲೋಚನಃ|
ಪಾದಾಭಿವಂದನಂ ಕೃತ್ವಾ ಗುರುಪೂಜಾಂ ಪ್ರಯುಕ್ತವಾನ್ ॥45॥
ಅರ್ಜುನನು ಉರ್ವಶಿಯನ್ನು ನೋಡಿದ ತಕ್ಷಣ ನಾಚಿಕೆಯಿಂದ ಕಣ್ಣುಗಳನ್ನು ಮುಚ್ಚಿ ಅವಳ ಪಾದಗಳಿಗೆ ನಮಸ್ಕರಿಸಿ ಗುರುಪೂಜೆಯನ್ನು ಮಾಡಿದನು.
ಅರ್ಜುನಃ
ಅಭಿವಾದಯೇ ತ್ವಾಂ ಶಿರಸಾ ಪ್ರಮದೇಽಪ್ಸರಸಾಂ ವರೇ |

ಕಿಂ ಚಾಗಮನಕೃತ್ಯಂ ತೇ ಬ್ರೂಹಿ ಸರ್ವಂ ಯಥಾತಥಮ್ ॥46॥
ಅಪ್ಸರೆಯರಲ್ಲಿ ಶ್ರೇಷ್ಠಳಾದ ವನಿತೆಯೇ, ನಿನಗೆ ನಾನು ನಮಸ್ಕಾರವನ್ನು ಮಾಡುತ್ತೇನೆ. ನೀನು ಬಂದ ಉದ್ದೇಶವೇನು? ಎಲ್ಲವನ್ನೂ ನನಗೆ ಸತ್ಯವಾಗಿ ಹೇಳು.
ವೈಶಂಪಾಯನಃ
ಅಕಾಮಂ ಫಲ್ಗುನಂ ಜ್ಞಾತ್ವಾ ಇಂಗಿತಜ್ಞಾ ತದೋರ್ವಶೀ |
ಗಂಧರ್ವವಚನಂ ಸರ್ವಂ ಶ್ರಾವಯಾಮಾಸ ಫಲ್ಗುನಮ್ ॥47॥
ಇಂಗಿತಜ್ಞಳಾದ ಆ ಉರ್ವಶಿಯು ಆಗ ಅರ್ಜುನನು ಕಾಮರಹಿತನಾಗಿದ್ದಾನೆಂದು ತಿಳಿದು ಅರ್ಜುನನಿಗೆ ಚಿತ್ರರಥಗಂಧರ್ವನ ಎಲ್ಲ ಮಾತುಗಳನ್ನೂ ತಿಳಿಸಿದಳು.
ಉರ್ವಶೀ
ಯಥಾ ಮೇ ಚಿತ್ರಸೇನೇನ ಕಥಿತಂ ಮನುಜೋತ್ತಮ |
ತತ್ತೇ ಸರ್ವಂ ಪ್ರವಕ್ಷ್ಯಾಮಿ ಯಥಾ ಚಾಹಮಿಹಾಗತಾ ॥48॥
ಎಲೈ ಮನುಜೋತ್ತಮನೇ ಚಿತ್ರಸೇನನು ನನಗೆ ಹೇಳಿದುದಕ್ಕೆ ಅನುಗುಣವಾಗಿ ನಾನು ಇಲ್ಲಿಗೆ ಬಂದ ಕಾರಣವನ್ನೆಲ್ಲಾ ನಿನಗೆ ಸರಿಯಾಗಿ ಹೇಳುವೆನು.
ಉಪಸ್ಥಾನೇ ಮಹೇಂದ್ರಸ್ಯ ವರ್ತಮಾನೇ ಮನೋರಮೇ |
ತ್ವದಾಗಮನತುಷ್ಟ್ಯಾ ಚ ಸ್ವರ್ಗಸ್ಯ ಪರಮೋತ್ಸವೇ ॥49॥
ರುದ್ರಾಣಾಂ ಚೈವ ಸಾನ್ನಿಧ್ಯೇ ಆದಿತ್ಯಾನಾಂ ಚ ಸರ್ವಶಃ |
ಸಮಾಗಮೇಽಶ್ವಿನೋಶ್ಚಾಪಿ ವಸೂನಾಂ ಚ ನರೋತ್ತಮ ॥50॥
ಮಹರ್ಷೀಣಾಂ ಚ ಸೇಂಷು ರಾಜರ್ಷಿಪ್ರವರೇಷು ಚ |
ಸಿದ್ಧಚಾರಣಯಕ್ಷೇಷು ಮಹೋರಗಗಣೇಷು ಚ ॥51॥
ಉಪವಿಷ್ಟೇಷು ಹೃಷ್ಟೇಷು ಸ್ಥಾನಮಾನಪ್ರಭಾವತಃ |
ಋದ್ಧ್ಯಾ ಪ್ರಜ್ವಲಮಾನೇಷು ಅಗ್ನೀಷೋಮಾರ್ಕವರ್ಷ್ಮಸು ॥52॥
ವೀಣಾಸು ವಾದ್ಯಮಾನಾಸು ಗಂಧರ್ವೈಃ ಶಕ್ರನಂದನ |
ದಿವ್ಯೇ ಮನೋರಮೇ ಗೀತೇ ಪ್ರವೃತ್ತೇ ಪೃಥುಲೋಚನ ॥53॥
ಸರ್ವಾಪ್ಸರಸ್ಸಮಸ್ತ್ಯಾಸು ಪ್ರವೃತ್ತಾಸು ಕುರೂತ್ತಮ |
ತ್ವಂ ಕಿಲಾನಿಮಿಷಃ ಪಾರ್ಥ ಮಾಮೇಕಾಂ ತತ್ರ ದೃಷ್ಟವಾನ್ ॥54॥
ನೀನು ಸ್ವರ್ಗಕ್ಕೆ ಬಂದ ಸಂತೋಷದಿಂದ ಸ್ವರ್ಗದಲ್ಲಿ ಪರಮೋತ್ಸವವನ್ನು ನಡೆಸುತ್ತಾ ಮಹೇಂದ್ರನ ಮನೋಹರವಾದ ಒಡ್ಡೋಲಗವು ನಡೆಯುತ್ತಿರಲು, ರುದ್ರರು ಮತ್ತು ಎಲ್ಲ ಆದಿತ್ಯರು ಸನ್ನಿಹಿತರಾಗಿರಲು, ಎಲೈ ನರೋತ್ತಮನೇ! ವಸುಗಳು ಮತ್ತು ಅಶ್ವಿನಿಗಳು ಅಲ್ಲಿ ಸಮಾಗತರಾಗಿರಲು, ಮಹರ್ಷಿಗಳ ಸಮೂಹಗಳು ರಾಜರ್ಷಿಶ್ರೇಷ್ಠರು ಸಿದ್ಧಚಾರಣಶ್ರೇಷ್ಠರು ಮಹಾಸರ್ಪಗಣಗಳು ಅಲ್ಲಿ ಸಂತೋಷವಾಗಿ ಕುಳಿತುಕೊಂಡು ಅವರ ಸ್ಥಾನ ಮತ್ತು ಮಾನಗಳ ಪ್ರಭಾವದಿಂದ ಮತ್ತು ಸಂವೃದ್ಧಿಯ ಪ್ರಭಾವದಿಂದಲೂ ಅಗ್ನಿಯಂತೆ ಚಂದ್ರನಂತೆ ಸೂರ್ಯನಂತೆ ಪ್ರಕಾಶಿಸುತ್ತಿರಲು, ವೀಣೆಗಳು ಗಂಧರ್ವರಿಂದ ನುಡಿಸಲ್ಪಡುತ್ತಿರಲು, ಎಲೈ ಶಕ್ರಪುತ್ರನೇ, ಆಯತಲೋಚನನೇ, ದಿವ್ಯವಾದ ಮತ್ತು ಮನೋಹರವಾದ ಗಾನವು ಪ್ರವೃತ್ತವಾಗಿರಲು, ಎಲ್ಲ ಅಪ್ಸರೆಯರು ತಮ್ಮ ತಮ್ಮಲ್ಲಿ ಗೂಢಾರ್ಥವಾದ ಮಾತುಗಳನ್ನು ಆಡುತ್ತಿರಲು, ಎಲೈ ಕುರುಶ್ರೇಷ್ಠನಾದ ಪಾರ್ಥನೇ, ನೀನು ರೆಪ್ಪೆಯನ್ನು ಮುಚ್ಚದೆ ನನ್ನೊಬ್ಬಳನ್ನೇ ನೋಡುತ್ತಿದ್ದೆ.
ತತ್ರ ಚಾವಭೃಥೇ ತಸ್ಮಿನ್ನುಪಸ್ಥಾನೇ ದಿವೌಕಸಾಮ್ |
ತವ ಪಿತ್ರಾಽಭ್ಯನುಜ್ಞಾತಾ ಗತಾಃ ಸ್ವನಿಲಯಾನ್ ಸುರಾಃ ॥55॥
ಅಲ್ಲಿ ಆ ದೇವತೆಗಳ ಉತ್ಸವವು ಮುಗಿಯುತ್ತಿರಲು ನಿನ್ನ ತಂದೆಯಿಂದ ಅಪ್ಪಣೆಯನ್ನು ಪಡೆದು ದೇವತೆಗಳು ತಮ್ಮ ಮನೆಗೆ ಹೋದರು.
ತಥೈವಾಪ್ಸರಸಃ ಸರ್ವಾ ವಿಸೃಷ್ಟಾ ನಿಲಯಂ ಗತಾಃ |
ಅಹಂ ಚಾನ್ಯಾಶ್ಚ ಶತ್ರುಘ್ನ ತವ ಪಿತ್ರಾ ವಿಸರ್ಜಿತಾಃ ॥56॥
ಹಾಗೆಯೇ ಎಲ್ಲಾ ಅಪ್ಸರೆಯರು ಇಂದ್ರನಿಂದ ಬೀಳ್ಕೊಡಲ್ಪಟ್ಟವರಾಗಿ ತಮ್ಮ ಮನೆಗಳಿಗೆ ಹೋದರು. ಎಲೈ ಶತ್ರುಘ್ನನೇ! ನಾನೂ ಮತ್ತು ಉಳಿದ ಅಪ್ಸರೆಯರೂ ನಿನ್ನ ತಂದೆಯಿಂದ ಬೀಳ್ಕೊಡಲ್ಪಟ್ಟೆವು.
ತತಃ ಶಕ್ರೇಣ ಸಂದಿಷ್ಟಃ ಚಿತ್ರಸೇನೋ ಮಮಾಂತಿಕಮ್ |
ಪ್ರಾಪ್ತಃ ಕಮಲಪತ್ರಾಕ್ಷ ಸ ಚ ಮಾಮಬ್ರವೀದಿದಮ್ ॥57॥
ಎಲೈ ಕಮಲಪತ್ರಾಕ್ಷನೇ! ಅನಂತರ ಇಂದ್ರನ ಆದೇಶದಂತೆ ಚಿತ್ರಸೇನನು ನನ್ನ ಬಳಿಗೆ ಬಂದು ನನ್ನನ್ನು ಕುರಿತು ಈ ಮಾತುಗಳನ್ನು ಆಡಿದನು.
ತ್ವತ್ಕೃತೇಽಹಂ ಸುರೇಶೇನ ಪ್ರೇಷಿತೋ ವರವರ್ಣಿನಿ |
ಪ್ರಿಯಂ ಕುರು ಮಹೇಂದ್ರಸ್ಯ ಮಮ ಚೈವಾತ್ಮನಶ್ಚ ಹ ॥58॥
ಸುಂದರಿಯೇ, ನಿನ್ನ ಸಲುವಾಗಿ ನಾನು ದೇವೇಂದ್ರನಿಂದ ಕಳುಹಿಸಲ್ಪಟ್ಟಿದ್ದೇನೆ. ದೇವೇಂದ್ರನಿಗೂ ನನಗೂ ಮತ್ತು ನಿನಗೂ ಸಹ ಪ್ರಿಯವನ್ನು ಉಂಟುಮಾಡು.
ಶಕ್ರತುಲ್ಯಂ ರಣೇ ಶೂರಂ ರೂಪೌದಾರ್ಯಗುಣಾನ್ವಿತಮ್ |

ಪಾರ್ಥಂ ಪ್ರಾರ್ಥಯ ಸುಶ್ರೋಣಿ ತ್ವಮಿತ್ಯೇವಂ ಸ ಮಾಽಬ್ರವೀತ್॥
ಎಲೌ ಸುಶ್ರೋಣಿಯೇ, ಯುದ್ಧದಲ್ಲಿ ಇಂದ್ರನಿಗೆ ಸಮಾನವಾದ ಶೂರನಾದ ರೂಪ ಔದಾರ್ಯಗುಣಗಳಿಂದ ಕೂಡಿದ ಪಾರ್ಥನನ್ನು ನೀನು ಪ್ರಾರ್ಥಿಸು ಎಂದು ಇಂದ್ರನು ನನಗೆ ಹೇಳಿಕಳುಹಿಸಿದ್ದಾನೆ.
ತತೋಽಹಂ ಸಮನುಜ್ಞಾತಾ ತೇನ ಪಿತ್ರಾ ಚ ತೇಽನಘ |
ತವಾಂತಿಕಮನುಪ್ರಾಪ್ತಾ ಶುಶ್ರೂಷಿತುಮರಿಂದಮ ॥60॥
ಅನಘನೇ, ಅರಿಂದಮನೇ, ಆದ್ದರಿಂದ ನಾನು ನಿನ್ನ ತಂದೆಯಿಂದ ಆದಿಷ್ಟಳಾಗಿ ನಿನ್ನ ಪಾದಸೇವೆಯನ್ನು ಮಾಡಲು ನಿನ್ನ ಬಳಿಗೆ ಬಂದಿದ್ದೇನೆ.
ನ ಕೇವಲಂ ಹಿ ಶಕ್ರೇಣ ಪ್ರೇಷಿತಾ ಚಾಹಮಾಗತಾ |
ಚಿರಾಭಿಲಷಿತೋ ವೀರ ಮಮಾಪ್ಯೇಷ ಮನೋರಥಃ ॥61॥
ಎಲೈ ವೀರನೇ, ಕೇವಲ ಶಕ್ರನ ಆದೇಶದಂತೆಯೇ ನಾನು ಬಂದಿರುವುದಲ್ಲ. ಬಹುಕಾಲದಿಂದಲೂ ನನಗೆ ಈ ಮನೋರಥವಿದ್ದಿತು.
ವೈಶಂಪಾಯನಃ
ತಾಂ ತಥಾ ಬ್ರುವತೀಂ ಶ್ರುತ್ವಾ ಭೃಶಂ ಲಜ್ಜಾನ್ವಿತೋಽರ್ಜುನಃ |
ಉವಾಚ ಕರ್ಣೌ ಹಸ್ತಾಭ್ಯಾಂ ಪಿಧಾಯ ತ್ರಿದಶೋಪಮಃ ॥62॥
ಅವಳ ಅಂತಹ ಮಾತುಗಳನ್ನು ಕೇಳಿದ ದೇವತೆಗಳಿಗೆ ಸಮಾನನಾದ ಅರ್ಜುನನು ಬಹಳ ಲಜ್ಜೆಯಿಂದ ಕೂಡಿದವನಾಗಿ ತನ್ನ ಹಸ್ತಗಳಿಂದ ಕಿವಿಗಳನ್ನು ಮುಚ್ಚಿಕೊಂಡು ಮಾತನಾಡಿದನು.
ಅಶ್ರುತಂ ಮೇಽಸ್ತು ಸುಭಗೇ ಯನ್ಮಾಂ ವದಸಿ ಭಾಮಿನಿ |
ಗುರುದಾರೈಃ ಸಮಾನಾ ಹಿ ದೇವವಾರಾ ವರಾನನೇ ॥63॥
ಸುಂದರಿಯಾದ ಭಾಮಿನಿಯೇ, ನಿನ್ನ ಮಾತುಗಳು ನನ್ನ ಕಿವಿಗಳಿಗೆ ಬೀಳದಿರಲಿ. ಸುಂದರ ಮುಖವುಳ್ಳವಳೇ, ದೇವತೆಯ ವಾರಾಂಗನೆಯರು ನಮಗೆ ಗುರುಪತ್ನಿಯರಿಗೆ ಸಮನಾದವರು.
ಯಚ್ಚೇಕ್ಷಿತಾ ಹಿ ವಿಸ್ಪಷ್ಟಂ ವಿಶೇಷೇನ ಮಯಾ ಶುಭೇ |
ತಚ್ಚ ಮೇ ಕಾರಣಂ ಸರ್ವಂ ಶೃಣು ಸತ್ಯೇನ ಸುಸ್ಮಿತೇ ॥64॥
ಎಲೌ ಶುಭಳೇ, ಸುಸ್ಮಿತೆಯೇ, ನಾನು ನಿನ್ನನ್ನು ಸಭೆಯಲ್ಲಿ ವಿಶೇಷವಾಗಿ ಮತ್ತು ಸ್ಪಷ್ಟವಾಗಿ ನೋಡಿದುದರ ಎಲ್ಲಾ ಕಾರಣವನ್ನು ಹೇಳುತ್ತೇನೆ. ಅದನ್ನು ನನ್ನಿಂದ ಕೇಳು.
ಇಯಂ ಪೌರವವಂಶಸ್ಯ ಜನನೀ ಸುದತೀತಿ ಹ |
ತ್ವಾಮಹಂ ದೃಷ್ಟವಾಂಸ್ತತ್ರ ವಿಸ್ಮಯೋತ್ಫುಲ್ಲಲೋಚನಃ ॥65॥
ಈ ಸುಂದರಿಯು ಪೌರವವಂಶದ ಜನನಿಯೆಂದು ನಾನು ವಿಸ್ಮಯದಿಂದ ಅರಳಿದ ಕಣ್ಣುಳ್ಳವನಾಗಿ ಅಲ್ಲಿ ನಿನ್ನನ್ನು ನೋಡಿದೆ.
ನ ಮಾಮರ್ಹಸಿ ಕಲ್ಯಾಣಿ ಅನ್ಯಥಾ ಮಂತುಮಂಗನೇ |
ಗುರೋರ್ಗುರುತರೀ ಮೇ ತ್ವಂ ಮಮ ವಂಶವಿವರ್ಧಿನೀ ॥66॥
ಎಲೌ ಕಲ್ಯಾಣಿಯೇ ಎಲೌಸುಂದರಿಯೇ, ನೀನು ನನ್ನನ್ನು ಅನ್ಯಥಾ ಭಾವಿಸಬೇಡ. ನಮ್ಮ ವಂಶವರ್ಧನಿಯಾದ ನೀನು ತಾಯಿಗಿಂತಲೂ ಪೂಜ್ಯಳೆಂದು ಭಾವಿಸುತ್ತೇನೆ.
ಉರ್ವಶೀ
ಅನಾವೃತಾ ವಯಂ ಸರ್ವಾ ದೇವವಾರಾ ವರಾನನ |
ಗುರುಸ್ಥಾನೇ ನ ಮಾಂ ವೀರ ನಿಯೋಕ್ತುಂ ತ್ವಮಿಹಾರ್ಹಸಿ ॥67॥
ಎಲೈ ಸುಮುಖನೇ, ದೇವವಾರಾಂಗನೆಯರಾದ ನಾವು ಯಾವ ನಿರ್ಬಂಧಕ್ಕೂ ಒಳಪಟ್ಟವರಲ್ಲ. ವೀರನೇ, ನನ್ನನ್ನು ನೀನು ಗುರುಸ್ಥಾನದಲ್ಲಿ ಇಟ್ಟು ನೋಡಬಾರದು.
ಪಿತರಃ ಸೋದರಾಃ ಪುತ್ರಾ ನಪ್ತಾರೋ ವಾಽಽಗತಾ ಇಹ |
ತಪಸಾ ರಮಯಂತ್ಯಸ್ಮಾನ್ ನ ಚಾಸ್ಯೇಷಾಂ ವ್ಯತಿಕ್ರಮಃ ॥68॥
ಪಿತೃಗಳಾಗಲೀ ಸಹೋದರರಾಗಲೀ ಪುತ್ರರಾಗಲೀ ಪೌತ್ರರಾಗಲೀ ತಪಸ್ಸನ್ನು ಮಾಡಿ ಇಲ್ಲಿಗೆ ಬಂದವರು ನಮ್ಮನ್ನು ರಮಿಸುತ್ತಾರೆ. ಅವರಿಗೆ ಯಾವ ದೋಷವೂ ಇಲ್ಲ.
ತತ್ ಪ್ರಸೀದ ನ ಮಾಮಾರ್ತಾಂ ವಿಸರ್ಜಯಿತುಮರ್ಹಸಿ |
ಹೃಚ್ಛಯೇನ ಸುಸಂಪ್ರಾಪ್ತಾಂ ಭಕ್ತಾಂ ತ್ವಂ ಭಜ ಮಾಽನಘ ॥69॥
ಆದ್ದರಿಂದ ಪ್ರಸನ್ನನಾಗು. ಆರ್ತಳಾಗಿ ಬಂದ ನನ್ನನ್ನು ನೀನು ಹಿಂದಕ್ಕೆ ಕಳುಹಿಸಬೇಡ. ಅನಘನೇ, ಕಾಮದಿಂದ ಸಂಪ್ರಾಪ್ತಳಾದ ನಿನ್ನಲ್ಲಿ ಅನುರಾಗವನ್ನು ಹೊಂದಿರುವ ನನ್ನನ್ನು ಸ್ವೀಕರಿಸು.
ಅರ್ಜುನಃ
ಶೃಣು ಸತ್ಯಂ ವರಾರೋಹೇ ಯತ್ತತ್ತ್ವಂ ವಕ್ಷ್ಯಾಮ್ಯನಿಂದಿತೇ |
ಶೃಣ್ವಂತು ಮೇ ದಿಶಶ್ಚೈವ ವಿದಿಶಶ್ಚ ಸದೇವತಾಃ ॥70॥
ಸುಂದರಿಯೇ, ಅನಿಂದಿತೆಯೇ, ನಾನು ನಿನ್ನನ್ನು ಕುರಿತು ಹೇಳುವ ಸತ್ಯವಾದ ಮಾತುಗಳನ್ನು ಕೇಳು. ದಿಗ್ದೇವತೆಗಳು ಅವಾಂತರದಿಗ್ದೇವತೆಗಳು ಮತ್ತು ಉಳಿದ ದೇವತೆಗಳು ನನ್ನ ಮಾತನ್ನು ಕೇಳಲಿ.
ಯಥಾ ಕುಂತೀ ಚ ಮಾದ್ರೀ ಚ ಶಚೀ ಚೈವ ಸಮಾ ಇಹ |
ತಥಾ ತ್ವಂ ವಂಶಜನನೀ ತ್ವಂ ಹಿ ಮೇಽದ್ಯ ಗರೀಯಸೀ ॥71॥

ಹೇಗೆ ನನಗೆ ಕುಂತಿ ಮಾದ್ರಿ ಮತ್ತು ಶಚಿಯು ಸಮಾನರಾಗಿ ಪೂಜ್ಯರೋ ಹಾಗೆ ವಂಶಜನನಿಯಾದ ನೀನೂ ಸಹ ನನಗೆ ಪೂಜ್ಯಳಾದವಳು.
ಗಚ್ಛ ಮೂರ್ಧ್ನಾ ಪ್ರಪನ್ನೋಽಸ್ಮಿ ಪಾದೌ ತೇ ವರವರ್ಣಿನಿ |
ತ್ವಂ ಹಿ ಮೇ ಮಾತೃವತ್ ಪೂಜ್ಯಾ ರಕ್ಷ್ಯೋಽಹಂ ಪುತ್ರವತ್ ತ್ವಯಾ ॥
ಸುಂದರಿಯೇ, ನಿನ್ನ ಪಾದಗಳಿಗೆ ನಾನು ನಮಸ್ಕರಿಸಿದ್ದೇನೆ. ನೀನು ನನಗೆ ತಾಯಿಯಂತೆ ಪೂಜ್ಯಳಾದವಳು. ನನ್ನನ್ನು ನೀನು ಮಗನಂತೆ ರಕ್ಷಿಸಬೇಕು. ನೀನು ಹೊರಡು.
ವೈಶಂಪಾಯನಃ
ತಥಾಽವಧೂತಾ ಪಾರ್ಥೇನ ಉರ್ವಶೀ ಕ್ರೋಧಮೂರ್ಚ್ಛಿತಾ |
ವೇಪಂತೀ ಭ್ರುಕುಟೀಃ ಕೃತ್ವಾ ಶಶಾಪಾಥ ಧನಂಜಯಮ್ ॥73॥
ಹಾಗೆ ಅರ್ಜುನನಿಂದ ತಿರಸ್ಕರಿಸಲ್ಪಟ್ಟ ಉರ್ವಶಿಯು ಕ್ರೋಧಮೂರ್ಚ್ಛಿತಳಾಗಿ ನಡುಗುತ್ತಾ ಹುಬ್ಬುಗಳನ್ನು ಗಂಟಿಕ್ಕಿ ಅರ್ಜುನನಿಗೆ ಶಾಪವನ್ನು ಕೊಟ್ಟಳು.
ತವ ಪಿತ್ರಾಽಭ್ಯನುಜ್ಞಾತಾಂ ಸ್ವಯಂ ಚ ಗೃಹಮಾಗತಾಮ್ |
ಯಸ್ಮಾನ್ಮಾಂ ನಾಭಿನಂದೇಥಾಃ ಕಾಮಬಾಣವಶಂ ಗತಾಮ್ ॥74॥
ತಸ್ಮಾತ್ತ್ವಂ ನರ್ತಕಃ ಪಾರ್ಥ ಸ್ತ್ರೀಮಧ್ಯೇ ಮಾನವರ್ಜಿತಃ |
ಅಪುಮಾನಿತಿ ವಿಖ್ಯಾತಃ ಷಂಡವದ್ ವಿಚರಿಷ್ಯಸಿ ॥75॥
ನಿನ್ನ ತಂದೆಯ ಅನುಮತಿಯನ್ನು ಪಡೆದು ಸ್ವತಃ ನಿನ್ನ ಮನೆಯ ಬಾಗಿಲಿಗೆ ಬಂದ ಕಾಮವಶಳಾದ ನನ್ನನ್ನು ಸ್ವೀಕರಿಸುತ್ತಿಲ್ಲವಾದ ಕಾರಣ ಪಾರ್ಥನೇ ನೀನು ಸ್ತ್ರೀಯರ ಮಧ್ಯದಲ್ಲಿ ಮಾನವರ್ಜಿತನಾಗಿ ನರ್ತಕನಾಗಿ ನಪುಂಸಕನೆಂದು ಪ್ರಖ್ಯಾತನಾಗಿ ನಪುಂಸಕನಂತೆ ಸಂಚರಿಸುವಿ.
ವೈಶಂಪಾಯನಃ
ಏವಂ ದತ್ತತ್ವಽರ್ಜುನೇ ಶಾಪಂ ಸ್ಫುರಿತೋಷ್ಠೀ ಶ್ವಸಂತ್ಯಪಿ |
ಪುನಃ ಪ್ರತ್ಯಾಗತಾ ಶೀಘ್ರಮುರ್ವಶೀ ಸ್ವಂ ನಿವೇಶನಮ್ ॥76॥
ಪಾರ್ಥೋಽಪಿ ಲಬ್ಧ್ವಾ ಶಾಪಂ ತಂ ತಾಂ ನಿಶಾಂ ದುಃಖಿತೋಽವಸತ್ |
ವಿವಕ್ಷುಶ್ಚಿತ್ರಸೇನಾಯ ಪ್ರಾತಃ ಸರ್ವಮಹೃಷ್ಟವತ್ ॥77॥
ಹೀಗೆ ಅರ್ಜುನನಿಗೆ ಶಾಪವನ್ನು ಕೊಟ್ಟು ನಿಟ್ಟುಸಿರನ್ನು ಬಿಡುತ್ತಾ ಅವಳ ತುಟಿಗಳು ಅದುರುತ್ತಿರಲು ಶೀಘ್ರವಾಗಿ ಉರ್ವಶಿಯು ತನ್ನ ಮನೆಗೆ ಹಿಂದಿರುಗಿದಳು. ಅರ್ಜುನನಾದರೂ ಕೂಡ ಆ ಶಾಪವನ್ನು ಪಡೆದು ಪ್ರಾತಃಕಾಲದಲ್ಲಿ ಚಿತ್ರಸೇನನಿಗೆ ಎಲ್ಲವನ್ನೂ ಹೇಳುತ್ತೇನೆ ಎಂದು ಚಿಂತಿಸಿ ಅಸಂತುಷ್ಟನಂತೆ ದುಃಖಿತನಾಗಿಯೇ ಆ ರಾತ್ರಿಯನ್ನು ಕಳೆದನು.
ತತಃ ಪ್ರಭಾತೇ ವಿಮಲೇ ಗಂಧರ್ವಸ್ಯ ಯಥಾತಥಮ್ |
ನಿವೇದಯಾಮಾಸ ತದಾ ಚಿತ್ರಸೇನಸ್ಯ ಫಲ್ಗುನಃ ॥78॥
ಅನಂತರ ಸುಂದರವಾದ ಪ್ರಾತಃಕಾಲವಾಗುತ್ತಿರಲು ಅರ್ಜುನನು ಚಿತ್ರಸೇನಗಂಧರ್ವನಿಗೆ ನಡೆದುದೆಲ್ಲವನ್ನೂ ಯಥಾರ್ಥವಾಗಿ ನಿವೇದಿಸಿದನು.
ತಚ್ಚ ಸರ್ವಂ ಯಥಾವೃತ್ತಂ ಶಾಪಂ ಚೈವ ಯಥಾತಥಮ್ |
ಅವೇದಯಚ್ಚ ಶಕ್ರಸ್ಯ ಚಿತ್ರಸೇನೋಽಪಿ ಸರ್ವಶಃ ॥79॥
ಚಿತ್ರಸೇನನೂ ಸಹ ನಡೆದ ಎಲ್ಲಾ ಘಟನೆಯನ್ನೂ ಮತ್ತು ಶಾಪದ ವೃತ್ತಾಂತವನ್ನೂ ಇಂದ್ರನಿಗೆ ಯಥಾರ್ಥವಾಗಿ ನಿವೇದಿಸಿದನು.
ತದಾ ತ್ವಾನಾಯ್ಯ ತನಯಂ ವಿವಿಕ್ತೇ ಹರಿವಾಹನಃ |
ಸಾಂತ್ವಯಿತ್ವಾ ಶುಭೈರ್ವಾಕ್ಯೈಃ ಸ್ಮಯಮಾನೋಽಭ್ಯಭಾಷತ ॥80॥
ಆಗ ಹರಿವಾಹನನಾದ ಇಂದ್ರನು ತನ್ನ ತನಯನಾದ ಅರ್ಜುನನನ್ನು ಏಕಾಂತದಲ್ಲಿ ಕರೆಸಿ ಸಮಾಧಾನಪಡಿಸಿ ನಗುತ್ತಾ ಶುಭವಾದ ವಾಕ್ಯಗಳನ್ನು ಮಾತನಾಡಿದನು.
ಸುಪುತ್ರಾಽದ್ಯ ಪೃಥಾ ತಾತ ತ್ವಯಾ ಪುರುಷಸತ್ತಮ |
ಋಷಯೋಽಪಿ ಹಿ ಧೈರ್ಯೇಣ ಜಿತಾ ವೈ ತೇ ಮಹಾಭುಜ ॥81॥
ಎಲೈ ಪುರುಷಶ್ರೇಷ್ಠನೇ! ನಿನ್ನಂತಹ ಪುತ್ರನನ್ನು ಪಡೆದ ಕುಂತಿಯು ಸುಪುತ್ರಳಾದವಳು. ಎಲೈ ಮಹಾಭುಜನೇ, ನಿನ್ನ ಮನೋಧೈರ್ಯದಿಂದ ಋಷಿಗಳೂ ಜಿತರಾಗಿದ್ದಾರೆ.
ಯಂ ಚ ದತ್ತವತೀ ಶಾಪಮುರ್ವಶೀ ತವ ಮಾನದ |
ಸ ಚಾಪಿ ತೇಽರ್ಥಕೃತ್ತಾತ ಸಾಧಕಶ್ಚ ಭವಿಷ್ಯತಿ ॥82॥
ಎಲೈ ಮಾನದನೇ, ನಿನಗೆ ಉರ್ವಶಿಯು ಏನು ಶಾಪವನ್ನು ಕೊಟ್ಟಿದ್ದಾಳೆಯೋ ಅದು ನಿನಗೆ ಶ್ರೇಯಸ್ಸನ್ನು ಉಂಟುಮಾಡಿ ಶುಭವನ್ನೇ ತಂದು ಕೊಡುತ್ತದೆ.
ಅಜ್ಞಾತವಾಸೋ ವಸ್ತವ್ಯೋ ಭವದ್ಭಿರ್ಭೂತಳೇಽನಘ |
ವರ್ಷೇ ತ್ರಯೋದಶೇ ವೀರ ತತ್ರ ತ್ವಂ ಗಮಯಿಷ್ಯಸಿ ॥83॥
ತೇನ ನರ್ತಕವೇಷೇಣ ಅಪುಂಸಾಽಽತ್ಮ್ಯೇನ ವೈ ಭವ |
ವರ್ಷಮೇಕಂ ವಿಹೃತ್ಯೈವಂ ತತಃ ಪುಂಸ್ತ್ವಮವಾಪ್ಸ್ಯಸಿ ॥84॥
ಅನಘನೇ! ವೀರನೇ! ನೀನು ಭೂಮಿಯಲ್ಲಿ ಒಂದು ವರ್ಷ ಅಜ್ಞಾತವಾಸವನ್ನು ಮಾಡಬೇಕು. ಅಲ್ಲಿ ಹದಿಮೂರನೆಯ ವರ್ಷದಲ್ಲಿ

ನೀನು ಈ ಶಾಪವನ್ನು ಕಳೆಯುತ್ತೀಯೆ. ನೀನು ನರ್ತಕವೇಷವನ್ನು ಧರಿಸಿ ನಪುಂಸಕವೇಷವನ್ನು ಧರಿಸುವವನಾಗು. ಒಂದು ವರ್ಷದ ಕಾಲ ಹೀಗೆ ವಿಹಾರಮಾಡಿ ಅನಂತರ ಪುನಃ ಪುರುಷತ್ವವನ್ನು ಪಡೆಯುವಿ.
ವೈಶಂಪಾಯನಃ
ಏವಮುಕ್ತಸ್ತು ಶಕ್ರೇಣ ಫಲ್ಗುನಃ ಪರವೀರಹಾ |
ಮುದಂ ಪರಮಿಕಾಂ ಲೇಭೇ ನ ಚ ಶಾಪಮಚಿಂತಯತ್ ॥85॥
ಇಂದ್ರನಿಂದ ಹೀಗೆ ಹೇಳಲ್ಪಟ್ಟ ಪರವೀರಘಾತಕನಾದ ಅರ್ಜುನನು ಬಹಳ ಸಂತೋಷವನ್ನು ಹೊಂದಿದನು. ಮತ್ತು ಶಾಪವನ್ನು ಕುರಿತು ಚಿಂತಿಸಲೇ ಇಲ್ಲ.
ಚಿತ್ರಸೇನೇನ ಸಹಿತೋ ಗಂಧರ್ವೇಣ ಯಶಸ್ವಿನಾ |
ಕೃತವಾನ್ ಶಕ್ರಸದನೇ ಪಾಂಡುಪುತ್ರೋ ಧನಂಜಯಃ |
ನೃತ್ತಂ ಗೇಯಂ ಚ ವಿವಿಧಂ ಶಿಕ್ಷಯಾಮಾಸ ಪಾಂಡವಃ ॥86॥
ಕೀರ್ತಿವಂತನಾದ ಚಿತ್ರಸೇನಗಂಧರ್ವನಿಂದ ಪುಣ್ಯಶಾಲಿಯಾದ ಪಾಂಡುಪುತ್ರನಾದ ಧನಂಜಯನು ಇಂದ್ರನ ಮನೆಯಲ್ಲಿ ವಿವಿಧವಾದ ನೃತ್ತ ಮತ್ತು ಗಾನಗಳನ್ನು ಅಭ್ಯಾಸಮಾಡಿದನು.
ಯ ಇಮಾಂ ಶೃಣುಯಾನ್ನಿತ್ಯಂ ಧೃತಿಂ ಪಾಂಡುಸುತಸ್ಯ ವೈ |
ನ ತಸ್ಯ ಕಾಮಃ ಕಾಮೇಷು ಪಾಪಕೇಷು ಪ್ರವರ್ತತೇ ॥87॥
ಯಾವನು ಪಾಂಡುಪುತ್ರನ ಈ ಧೈರ್ಯದ ಕಥೆಯನ್ನು ನಿತ್ಯವೂ ಕೇಳುತ್ತಾನೋ ಅವನ ಕಾಮವು ನಿಷಿದ್ಧವಾದ ಕಾಮ್ಯ ವಸ್ತುಗಳಲ್ಲಿ ಪ್ರವರ್ತಿಸುವುದಿಲ್ಲ.
ಯ ಇದಮಮರವರಾತ್ಮಜಸ್ಯ ಘೋರಾಂ
ಧೃತಿಮಚಲಾಂ ಚ ಧನಂಜಯಸ್ಯ ಶ್ರುತ್ವಾ |
ವ್ಯಪಗತಭಯದಂಭರಾಗದೋಷಾಃ
ತ್ರಿದಿವಗತಾ ರಮಯಂತಿ ಮಾನವೇಂದ್ರಾಃ ॥88॥
ಯಾರು ಸುರೇಂದ್ರಪುತ್ರನಾದ ಧನಂಜಯನ ಈ ಧೈರ್ಯವನ್ನೂ ಕಾಮಜಯವನ್ನೂ ಮತ್ತು ಶಾಪಪ್ರಸಂಗವನ್ನೂ ಕೇಳುತ್ತಾರೋ ಅಂತಹ ಮಾನವೇಂದ್ರರು ಭಯ ಡಂಭ ರಾಗ ದೋಷಗಳನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದಿ ಸುಖವನ್ನು ಪಡುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತ್ವಾರಿಂಶೋಽಧ್ಯಾಯಃ ॥
॥ ಇಂದ್ರಲೋಕಾಭಿಗಮನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೊಂದನೆಯ ಅಧ್ಯಾಯ
(ಲೋಮಶರ ಸ್ವರ್ಗಾಗಮನ. ಅರ್ಜುನನ ಸ್ವರೂಪವನ್ನು ತಿಳಿಸಿ ಇಂದ್ರನಿಂದ ಲೋಮಶರಿಗೆ ಕಾಮ್ಯಕವನಕ್ಕೆ ಹೋಗುವಂತೆ ಆದೇಶ.)
(ಗಮನಿಸಿ:- 40ನೆಯ ಅಧ್ಯಾಯದಲ್ಲಿ ಮೊದಲ ಎಂಟುಶ್ಲೋಕಗಳು 41ನೆಯ ಅಧ್ಯಾಯದಲ್ಲೂ ಪುನರುಕ್ತವಾಗಿವೆ. ಒಂದೆರಡುಶಬ್ದಗಳ ವ್ಯತ್ಯಾಸ ಬಿಟ್ಟರೆ ಉಳಿದ ವ್ಯತ್ಯಾಸವಿಲ್ಲ. ಆದರೆ ಎಲ್ಲಾ ಮುದ್ರಿತವಾದ ಪುಸ್ತಕಗಳಲ್ಲಿಯೂ ಇದೇ ಶ್ಲೋಕಗಳು ಮತ್ತೆ ಹೇಳಲ್ಪಟ್ಟಿವೆ.)
ವೈಶಂಪಾಯನಃ
ತತೋ ದೇವಾಃ ಸಗಂಧರ್ವಾಃ ಸಮಾದಾಯಾರ್ಘ್ಯಮುತ್ತಮಮ್ |
ಶಕ್ರಸ್ಯ ಮತಮಾಜ್ಞಾಯ ಪಾರ್ಥಮಾನರ್ಚುರಂಜಸಾ ॥1॥
ಅನಂತರ ಗಂಧರ್ವರಿಂದ ಕೂಡಿದ ದೇವತೆಗಳು ಇಂದ್ರನ ಅಭಿಪ್ರಾಯವನ್ನು ತಿಳಿದು ಶ್ರೇಷ್ಠವಾದ ಅರ್ಘ್ಯವನ್ನು ತೆಗೆದುಕೊಂಡು ಬಂದು ಅರ್ಜುನನನ್ನು ಚೆನ್ನಾಗಿ ಅರ್ಚಿಸಿದರು.
ಪಾದ್ಯಮಾಚಮನೀಯಂ ಚ ಪ್ರತಿಗೃಹ್ಯ ನೃಪಾತ್ಮಜಮ್ |
ಪ್ರವೇಶಯಾಮಾಸುರಥೋ ಪುರಂದರನಿವೇಶನಮ್ ॥2॥
ರಾಜಪುತ್ರನಾದ ಅವನಿಗೆ ಪಾದ್ಯ ಮತ್ತು ಆಚಮನೀಯಗಳನ್ನು ಕೊಟ್ಟು ಅನಂತರ ಇಂದ್ರಭವನಕ್ಕೆ ಪ್ರವೇಶವನ್ನು ಮಾಡಿಸಿದರು.
ಏವಂ ಸಂಪೂಜಿತೋ ಜಿಷ್ಣುರುವಾಸ ಭವನೇ ಪಿತುಃ |
ಉಪಶಿಕ್ಷನ್ ಮಹಾಸಕತ್ರಣಿ ಸಸಂಹಾರಾಣಿ ಪಾಂಡವಃ ॥3॥
ಹೀಗೆ ಪೂಜಿಸಲ್ಪಟ್ಟ ಆ ಪಾಂಡುಪುತ್ರನಾದ ಅರ್ಜುನನು ತನ್ನ ತಂದೆಯಾದ ಇಂದ್ರನ ಮನೆಯಲ್ಲಿ ಮಹಾಸ್ತ್ರಗಳನ್ನೂ ಅವುಗಳ ಉಪಸಂಹಾರವನ್ನೂ ಕಲಿಯುತ್ತಾ ವಾಸಮಾಡಿದನು.
ಶಕ್ರಸ್ಯ ಹಸ್ತಾದ್ ದಯಿತಂ ವಜ್ರಮಸ್ತ್ರಂ ದುರುತ್ಸಹಮ್ |
ಅಶನಿಂ ಚ ಮಹಾನಾದಾಂ ಮೇಘಬರ್ಹಿಣಲಕ್ಷಣಾಮ್ ॥4॥
ಇಂದ್ರನ ಹಸ್ತದಿಂದ ಇಂದ್ರನಿಗೆ ಪ್ರಿಯವಾದ ಯಾರೂ ಸಹಿಸಲು ಸಾಧ್ಯವಿಲ್ಲದ ವಜ್ರಾಸ್ತ್ರವನ್ನೂ ಮಹಾನಾದವುಳ್ಳ ಮೇಘ ಮತ್ತು ನವಿಲುಗಳ ಬಣ್ಣವನ್ನು ಹೊಂದಿದ ಅಶನಿ ಎಂಬ ಅಸ್ತ್ರವನ್ನೂ ಸ್ವೀಕರಿಸಿದನು.
ಗೃಹೀತಾಸ್ತ್ರಸ್ತು ಕೌಂತೇಯೋ ಭ್ರಾತೄನ್ ಸಸ್ಮಾರ ಪಾಂಡವಃ |
ಪಂಚಾಬ್ದಮವಸತ್ ತತ್ರ ಪಾಕಶಾಸನಶಾಸನಾತ್ ॥5॥
ಕುಂತೀಪುತ್ರನಾದ ಪಾಂಡವನಾದ ಅರ್ಜುನನು ಅಸ್ತ್ರಗಳನ್ನು ಸಂಪಾದಿಸಿ ತನ್ನ ಸಹೋದರರನ್ನು ಸ್ಮರಿಸಿದನು. ಅವನು ಇಂದ್ರನ ಅಪ್ಪಣೆಯಂತೆ ಸ್ವರ್ಗದಲ್ಲಿ ಐದು ವರ್ಷಗಳ ಕಾಲ ವಾಸಮಾಡಿದನು.

ತತಃ ಶಕ್ರೋಽಬ್ರವೀತ್ ಪಾರ್ಥಂ ಕೃತಾಸ್ತ್ರಂ ಕಾಲ ಆಗತೇ |
ನೃತ್ತಂ ಗೀತಂ ಚ ವಾದ್ಯಂ ಚ ಚಿತ್ರಸೇನಾದವಾಪ್ನುಹಿ ||6||
ಅಸ್ತ್ರವಿದ್ಯೆಯನ್ನು ಪಡೆದ ಅರ್ಜುನನನ್ನು ಕುರಿತು ಇಂದ್ರನು ಒಂದು ಯೋಗ್ಯವಾದ ಕಾಲದಲ್ಲಿ ನೀನು ಚಿತ್ರಸೇನನಿಂದ ನೃತ್ಯ ಗೀತಾ ಮತ್ತು ವಾದ್ಯ ವಿದ್ಯೆಗಳನ್ನು ಕಲಿ ಎಂದು ಹೇಳಿದನು.
ವಾದಿತ್ರಂ ದೈವವಿಹಿತಂ ತ್ರಿಲೋಕೇ ಯನ್ನ ವಿದ್ಯತೇ |
ತದಾಜ್ಞಾಯ ಚ ಕೌಂತೇಯ ಶ್ರೇಯೋ ವೈ ತೇ ಭವಿಷ್ಯತಿ ||7||
ಎಲೈ ಕೌಂತೇಯನೇ! ದೇವಲೋಕದಲ್ಲಿರುವ ವಾದಿತ್ರವು ಮೂರು ಲೋಕಗಳಲ್ಲಿಯೂ ಇಲ್ಲ. ನೀನು ಅದನ್ನು ಸಂಪಾದಿಸಿದರೆ ನಿನಗೆ ಶ್ರೇಯಸ್ಸು ಉಂಟಾಗುವುದು.
ಸಖಾಯಂ ಪ್ರದದೌ ಚಾಸ್ಯ ಚಿತ್ರಸೇನಂ ಪುರಂದರಃ |
ಸ ತೇನ ಸಹ ಸಂಗಮ್ಯ ರೇಮೇ ಪಾರ್ಥೋ ಧನಂಜಯಃ ||8||
ಪುರಂದರನು ಅರ್ಜುನನಿಗೆ ಚಿತ್ರಸೇನ ಎಂಬ ಗಂಧರ್ವನನ್ನು ಸ್ನೇಹಿತನನ್ನಾಗಿ ಕೊಟ್ಟನು. ಕುಂತೀ ಪುತ್ರನಾದ ಧನಂಜಯನು ಅವನನ್ನು ಪಡೆದು ಅವನ ಜೊತೆಯಲ್ಲಿ ಸಂತೋಷದಿಂದಿದ್ದನು.
ಕದಾಚಿದಟಮಾನಸ್ತು ಮಹರ್ಷಿರಥ ಲೋಮಶಃ |
ಜಗಾಮ ಶಕ್ರಭವನಂ ಪುರಂದರದಿದೃಕ್ಷಯಾ ||9||
ಅನಂತರ ಒಮ್ಮೆ ಮಹರ್ಷಿಗಳಾದ ಲೋಮಶರು ಸಂಚಾರಮಾಡುತ್ತಾ ಇಂದ್ರನನ್ನು ನೋಡಲು ಬಯಸಿ ಇಂದ್ರಭವನಕ್ಕೆ ಬಂದರು.
ಸ ಸಮೇತ್ಯ ನಮಸ್ಕೃತ್ಯ ದೇವರಾಜಂ ಮಹಾಮುನಿಃ |
ದದರ್ಶಾರ್ಧಾಸನಗತಂ ಪಾಂಡವಂ ವಾಸವಸ್ಯ ಹ ||10||
ಆ ಮಹಾಮುನಿಗಳು ದೇವರಾಜನ ಸಮೀಪಕ್ಕೆ ಬಂದು ನಮಸ್ಕರಿಸಿ ಇಂದ್ರನ ಅರ್ಧಾಸನದಲ್ಲಿ ಕುಳಿತಿದ್ದ ಪಾಂಡುಪುತ್ರನಾದ ಅರ್ಜುನನನ್ನು ನೋಡಿದರು.
ತತಃ ಶಕ್ರಾಭ್ಯನುಜ್ಞಾತ ಆಸನೇ ಚಾಸ್ತೃತೋತ್ತರೇ |
ನಿಷಸಾದ ಮುನಿಶ್ರೇಷ್ಠಃ ಪೂಜ್ಯಮಾನೋ ಮಹರ್ಷಿಭಿಃ ||11||
ಅನಂತರ ಇಂದ್ರನ ಅಪ್ಪಣೆಯನ್ನು ಪಡೆದು ಒಳ್ಳೆಯ ಹಾಸನ್ನು ಹಾಸಿದ ಆಸನದಲ್ಲಿ ಆ ಮುನಿಶ್ರೇಷ್ಠರು ಮಹರ್ಷಿಗಳಿಂದ ಪೂಜಿತರಾಗಿ ಕುಳಿತುಕೊಂಡರು.
ತಸ್ಯ ದೃಷ್ಟ್ವಾಭವದ್ಬುದ್ಧಿಃ ಪಾರ್ಥಮಿಂದ್ರಾಸನೇ ಸ್ಥಿತಮ್ |
ಕಥಂ ನು ಕ್ಷತ್ರಿಯಃ ಪಾರ್ಥಃ ಶಕ್ರಾಸನಮವಾಪ್ತವಾನ್ ||12||
ಇಂದ್ರಾಸನದಲ್ಲಿ ಕುಳಿತಿದ್ದ ಪಾರ್ಥನನ್ನು ನೋಡಿ ಅವರಿಗೆ ಕ್ಷತ್ರಿಯನಾದ ಅರ್ಜುನನು ಹೇಗೆ ಶಕ್ರಾಸನವನ್ನು ಹೊಂದಿದ್ದಾನೆ ಎಂಬ ಬುದ್ಧಿಯುಂಟಾಯಿತು.
ಕಿಂ ತಸ್ಯ ಸುಕೃತಂ ಕರ್ಮ ಲೋಕಾ ವಾ ಕೇ ವಿನಿರ್ಜಿತಾಃ |
ಯ ಏವಮುಪಸಂಪ್ರಾಪ್ತಃ ಸ್ಥಾನಂ ದೇವನಮಸ್ಕೃತಮ್ ||13||
ದೇವತೆಗಳಿಂದಲೂ ನಮಸ್ಕೃತವಾದ ಸ್ಥಾನವನ್ನು ಯಾವ ಅರ್ಜುನನು ಹೀಗೆ ಪಡೆದಿದ್ದಾನೆಯೋ ಅವನು ಮಾಡಿದ ಸುಕೃತವಾದರೂ ಏನು? ಅಥವಾ ಯಾವ ಲೋಕಗಳು ಅವನಿಂದ ಜಯಿಸಲ್ಪಟ್ಟಿವೆ. (ಎಂದು ಯೋಚಿಸಿದರು.)
ತಸ್ಯ ವಿಜ್ಞಾಯ ಸಂಕಲ್ಪಂ ಶಕ್ರೋ ವೃತ್ರನಿಷೂದನಃ |
ಲೋಮಶಂ ಪ್ರಹಸನ್ ವಾಕ್ಯಮಿದಮಾಹ ಶಚೀಪತಿಃ ||14||
ವೃತ್ರನಿಷೂದನನಾದ ಶಚೀಪತಿಯಾದ ಇಂದ್ರನು ಅವರ ಮನಸ್ಸಿನ ಸಂಕಲ್ಪವನ್ನು ತಿಳಿದು ನಗುತ್ತಾ ಲೋಮಶರನ್ನು ಕುರಿತು ಹೀಗೆ ಮಾತನಾಡಿದನು.
ಬ್ರಹ್ಮರ್ಷೇ ಶ್ರೂಯತಾಂ ಯತ್ತೇ ಮನಸೈತದ್ ವಿವಕ್ಷಿತಮ್ |
ನಾಯಂ ಕೇವಲಮರ್ತ್ಯೋಽಭೂತ್ ಕ್ಷತ್ರಿಯತ್ವಮುಪಾಗತಃ ||15||
ಬ್ರಹ್ಮರ್ಷಿಗಳೇ, ನಿಮ್ಮ ಮನಸ್ಸಿನಲ್ಲಿ ಕೇಳಬೇಕೆಂದಿರುವ ಈ ವಿಷಯವನ್ನು ಕೇಳಿ. ಇವನು ಕ್ಷತ್ರಿಯ ಜಾತಿಯಲ್ಲಿ ಹುಟ್ಟಿದ ಒಬ್ಬ ಸಾಮಾನ್ಯ ಮನುಷ್ಯನಲ್ಲ.
ಮಹರ್ಷೇ ಮಮ ಪುತ್ರೋಽಯಂ ಕುಂತ್ಯಾ ಜಾತೋ ಮಹಾಭುಜಃ |
ಅಸ್ತ್ರಹೇತೋರಿಹ ಪ್ರಾಪ್ತಃ ಕಸ್ಮಾಚ್ಚಿತ್ ಕಾರಣಾಂತರಾತ್ ||16||
ಅಹೋ ನೈನಂ ಭವಾನ್ ವೇತ್ತಿ ಪುರಾಣಮೃಷಿಸತ್ತಮಮ್ |
ಶೃಣು ಮೇ ವದತೋ ಬ್ರಹ್ಮನ್ ಯೋಽಯಂ ಯಚ್ಚಾಸ್ಯ ಕಾರಣಮ್ ||
ನರನಾರಾಯಣಾವೇತೌ ಪುರಾಣಾವೃಷಿಸತ್ತಮೌ |
ತಾವಿಮಾವಭಿಜಾನೀಹಿ ಹೃಷೀಕೇಶಧನಂಜಯೌ ||18||
ಸ ನ ಶಕ್ಯಃ ಸುರೈರ್ದ್ರಷ್ಟುಮೃಷಿಭಿರ್ವಾ ಮಹಾತ್ಮಭಿಃ |
ತದಾಶ್ರಮಪದಂ ಪುಣ್ಯಂ ಬದರೀನಾಮ ವಿಶ್ರುತಮ್ ||19||
ಮಹರ್ಷಿಗಳೇ, ಇವನು ನನ್ನ ಪುತ್ರ. ಕುಂತಿಯಲ್ಲಿ ಜನಿಸಿದ ಮಹಾಭುಜ. ಯಾವುದೋ ಕಾರಣಾಂತರದಿಂದ ಅಸ್ತ್ರವಿದ್ಯೆಯನ್ನು ಸಂಪಾದಿಸಲು ಇಲ್ಲಿಗೆ ಬಂದಿದ್ದಾನೆ. ಪುರಾತನ ಋಷಿಶ್ರೇಷ್ಠನಾದ ಇವನನ್ನು ನೀವು ತಿಳಿದಿಲ್ಲ. ಇದು ಆಶ್ಚರ್ಯ. ಬ್ರಾಹ್ಮಣರೇ ಇವನು ಯಾರು ಇವನ ಕಾರಣವೇನು ಎಲ್ಲವನ್ನು ನಾನು ಹೇಳುತ್ತೇನೆ ಕೇಳಿ. ಇವರಿಬ್ಬರೂ ಪುರಾಣ ಋಷಿಶ್ರೇಷ್ಠರಾದ ನರನಾರಾಯಣರೆಂದು

ತಿಳಿದುಕೊಳ್ಳಿ. ಕೃಷ್ಣಾರ್ಜುನರಾದ ಬದರಿಯೆಂದು ಪ್ರಖ್ಯಾತವಾದ ಪವಿತ್ರವಾದ ಆಶ್ರಮವು ಮಹಾತ್ಮರಾದ ಋಷಿಗಳಿಂದಾಗಲೀ ಅಥವಾ ದೇವತೆಗಳಿಂದಾಗಲೀ ನೋಡಲು ಸಾಧ್ಯವಿಲ್ಲದುದು.
ಸ ನಿವಾಸೋಽಭವದ್ ವಿಪ್ರ ವಿಷ್ಣೋರ್ಜಿಷ್ಣೋಸ್ತಥೈವ ಚ |
ಯತ್ರ ಪ್ರವವೃತೇ ಗಂಗಾ ಸಿದ್ಧಚಾರಣಸೇವಿತಾ ||20||
ಬ್ರಾಹ್ಮಣರೇ ಸಿದ್ಧಚಾರಣಸೇವಿತಳಾದ ಗಂಗೆಯು ಎಲ್ಲಿಂದ ಹರಿದಳೋ ಆ ಸ್ಥಳವು (ಈಕೃಷ್ಣಾರ್ಜುನರಾದ) ವಿಷ್ಣುವಿಗೂ ಮತ್ತು ಜಿಷ್ಣುವಿಗೂ ನಿವಾಸಸ್ಥಾನವಾಗಿದ್ದಿತು.
ತೌ ಮನ್ನಿಯೋಗಾದ್ ಬ್ರಹ್ಮರ್ಷೇ ಕ್ಷಿತೌ ಜಾತೌ ಮಹಾದ್ಯುತೀ |
ಭೂಮೇರ್ಭಾರಾವತರಣಂ ಮಹಾವೀರ್ಯೌ ಕರಿಷ್ಯತಃ ||21||
ಎಲೈ ಬ್ರಹ್ಮರ್ಷಿಗಳೇ, ಅವರಿಬ್ಬರೂ ನನ್ನ ನಿಯೋಗದಂತೆ ಭೂಮಿಯಲ್ಲಿ ಮಹಾಕಾಂತಿಯುಕ್ತರಾಗಿ ಜನಿಸಿದ್ದಾರೆ. ಮಹಾಪರಾಕ್ರಮಿಗಳಾದ ಅವರು ಭೂಮಿಯಲ್ಲಿ ಭೂಭಾರವನ್ನು ಹರಣಮಾಡುವರು.
ಉದ್ವೃತಾ ಹ್ಯಸುರಾಃ ಕೇಚಿನ್ನಿವಾತಕವಚಾ ಇತಿ |
ವಿಪ್ರಿಯೇಷ್ವಾಸ್ಥಿತಾಽಸ್ಮಾಕಂ ವರದಾನೇನ ದರ್ಪಿತಾಃ ||22||
ನಿವಾತಕವಚರೆಂಬ ಉದ್ವೃತರಾದ ಅಸುರರು ವರದಾನದಿಂದ ದರ್ಪಿತರಾಗಿ ನಮಗೆ ವಿರೋಧಮಾಡುವುದರಲ್ಲಿ ತೊಡಗಿದ್ದಾರೆ.
ಅರ್ಥಯಂತೇ ಸುರಾನ್ ಹಂತುಂ ಬಲದರ್ಪಸಮನ್ವಿತಾಃ |
ದೇವಾನ್ ನ ಗಣಯಂತೇ ಚ ತಥಾ ದತ್ತವರಾ ಹಿ ತೇ ||23||
ಬಲದರ್ಪಗಳಿಂದ ಸಮನ್ವಿತರಾದ ಅವರು ದೇವತೆಗಳನ್ನು ಕೊಲ್ಲಲು ಆಶಿಸುತ್ತಿದ್ದಾರೆ. ಅವರು ದೇವತೆಗಳನ್ನೂ ಲೆಕ್ಕಿಸುವುದಿಲ್ಲ. ಏಕೆಂದರೆ ಅಂತಹ ವರಗಳನ್ನು ಪಡೆದಿದ್ದಾರೆ.
ಪಾತಾಳವಾಸಿನೋ ರೌದ್ರಾಃ ದನೋಃ ಪುತ್ರಾ ಮಹಾಬಲಾಃ |
ಸರ್ವದೇವಸಹಾಯೋಽಪಿ ನಾಹಂ ಯೋಧಯಿತುಂ ಕ್ಷಮಃ ||24||
ದನುವಿನ ಮಕ್ಕಳಾದ ಅವರೆಲ್ಲರೂ ಮಹಾಬಲಿಷ್ಠರಾದವರು ಮತ್ತು ಕ್ರೂರರಾದವರು. ಅವರು ಪಾತಾಳದಲ್ಲಿ ವಾಸಿಸುತ್ತಾರೆ. ಎಲ್ಲ ದೇವತೆಗಳ ಸಹಾಯವಿದ್ದರೂ ನಾನು ಅವರ ಜೊತೆಯಲ್ಲಿ ಯುದ್ಧ ಮಾಡಲಾರೆ.
ಯೋಽಸೌ ಭೂಮಿಗತಃ ಶ್ರೀಮಾನ್ ವಿಷ್ಣುರ್ಮಧುನಿಷೂದನಃ |
ಕಪಿಲೋ ನಾಮ ದೇವೋಽಸೌ ಭಗವಾನಜಿತೋ ಹರಿಃ ||25||
ಯೇನ ಪೂರ್ವಂ ಮಹಾತ್ಮಾನಃ ಖನಮಾನಾ ರಸಾತಳಮ್ |
ದರ್ಶನಾದೇವ ನಿಹತಾಃ ಸಗರಸ್ಯಾತ್ಮಜಾ ವಿಭೋ ||26||
ತೇನ ಕಾರ್ಯಂ ಮಹತ್ ಬ್ರಹ್ಮನ್ನಸ್ಮಾಕಂ ಹಿ ದ್ವಿಜೋತ್ತಮ |
ಪಾರ್ಥೇನ ಚ ಮಹಾಯುದ್ಧೇ ಸಮೇತಾಭ್ಯಾಮಸಂಶಯಮ್ ||27||
ಯಾವ ಮಧುಸೂದನನಾದ ಕಾಂತಿಯುಕ್ತನಾದ ಕಪಿಲನಾಮಕನಾದ ಅಜಿತನಾಮಕನಾದ ಭಗವಂತನಾದ ಹರಿ ಇದ್ದಾನೆಯೋ ಅವನೇ ಕೃಷ್ಣರೂಪದಿಂದ ಭೂಮಿಗೆ ಬಂದಿದ್ದಾನೆ. ಹಿಂದೆ ರಸಾತಳವನ್ನು ಅಗೆಯುತ್ತಿದ್ದ ಮಹಾಪ್ರಯತ್ನ ಶೀಲರಾದ ಸಗರನ ಮಕ್ಕಳು ಅವನ ದರ್ಶನಮಾತ್ರದಿಂದಲೇ ಹತರಾಗಿದ್ದಾರೆ. ಸಮರ್ಥರಾದ ದ್ವಿಜೋತ್ತಮರೇ ಬ್ರಹ್ಮರ್ಷಿಗಳೇ, ಅವನು ಮತ್ತು ಅರ್ಜುನನು ಸೇರಿ ಮಹಾಯುದ್ಧದಲ್ಲಿ ನಿಸ್ಸಂಶಯವಾಗಿ ನಮಗೆ ದೊಡ್ಡ ಹಿತವನ್ನು ಮಾಡುವವರಿದ್ದಾರೆ.
ಅಯಂ ತೇಷಾಂ ಸಮಸ್ತಾನಾಂ ಶಕ್ತಃ ಪ್ರತಿನಿವಾರಣೇ |
ತಾನ್ ನಿಹತ್ಯ ರಣೇ ಶೂರಃ ಪುನರ್ಯಾಸ್ಯತಿ ಮಾನುಷಾನ್ ||28||
ಭವಾಂಶ್ಚಾಸ್ಮನ್ನಿಯೋಗೇನ ಯಾತು ತಾವನ್ಮಹೀತಳಮ್ |
ಈ ಅರ್ಜುನನು ಅವರೆಲ್ಲರನ್ನೂ ತಡೆಯಲು ಸಮರ್ಥನಾಗಿದ್ದಾನೆ. ಇವನು ಅವರೆಲ್ಲರನ್ನೂ ಸಂಹರಿಸಿ ಪುನಃ ಮನುಷ್ಯಲೋಕಕ್ಕೆ ಹೋಗುವನು. ನೀವು ಸಹ ನನ್ನ ಆದೇಶದಂತೆ ಭೂಮಿಗೆ ಹೋಗಿ ಕಾಮ್ಯಕವನದಲ್ಲಿ ವಾಸಮಾಡುತ್ತಿರುವ ವೀರನಾದ ಯುಧಿಷ್ಠಿರನನ್ನು ನೋಡುವಿರಿ.(ನೋಡಿ)
ಸ ವಾಚ್ಯೋ ಮಮ ಸಂದೇಶಾದ್ ಧರ್ಮಾತ್ಮಾ ಸತ್ಯಸಂಗರಃ |
ನೋತ್ಕಂಠಾ ಫಲ್ಗುನೇ ಕಾರ್ಯಾ ಕೃತಾಸ್ತ್ರಃ ಶೀಘ್ರಮೇಷ್ಯತಿ ||30||
ಧರ್ಮಾತ್ಮನೂ ಸತ್ಯಸಂಧನೂ ಆದ ಅವನಿಗೆ ನನ್ನ ಆದೇಶದಂತೆ ಅರ್ಜುನನ ವಿಷಯದಲ್ಲಿ ಚಿಂತೆಯು ಬೇಡ ಅವನು ಅಸ್ತ್ರಗಳನ್ನು ಪಡೆದು ಶೀಘ್ರವಾಗಿ ಹಿಂದಿರುಗುವನು ಎಂದು ನೀವು ಹೇಳಬೇಕು.
ಕೇವಲಂ ಭುಜವೀರ್ಯೇಣ ನಾಕೃತಾಸ್ತ್ರೇಣ ವಾ ರಣೇ |
ಭೀಷ್ಮದ್ರೋಣಾದಯಃ ಶಕ್ಯಾ ಯುದ್ಧೇ ಪ್ರತಿಸಮಾಸಿತುಮ್ ||31||
ಗೃಹೀತಾಸ್ತ್ರೋತ್ರೇ ಮಹಾಬಾಹುರ್ಗುಡಾಕೇಶಃ ಪರಂತಪಃ |
ನೃತ್ತವಾದಿತ್ರಗೀತಾನಾಂ ದಿವ್ಯಾನಾಂ ಪಾರಮೇಯಿವಾನ್ ||32||
ಭವಾನಪಿ ವಿವಿಕ್ತಾನಿ ತೀರ್ಥಾನಿ ಮನುಜೇಶ್ವರ |
ಭ್ರಾತೃಭಿಃ ಸಹಿತಃ ಸರ್ವೈರ್ದ್ರಷ್ಟುಮರ್ಹತ್ಯರಿಂದಮ ||33||
ಅಸ್ತ್ರವಿದ್ಯೆಯನ್ನು ಸಂಪಾದಿಸದೆ ಕೇವಲ ಭುಜವೀರ್ಯದಿಂದ ಯುದ್ಧದಲ್ಲಿ ಭೀಷ್ಮದ್ರೋಣಾದಿಗಳ ಎದುರಿಗೆ ನಿಲ್ಲಲು ಸಾಧ್ಯವಿಲ್ಲ. ಅಸ್ತ್ರವಿದ್ಯೆಯನ್ನು ಸಂಪಾದಿಸಿದ ಮಹಾಬಾಹುವೂ ಪರಂತಪನೂ ಗುಡಾಕೇಶನೂ ಆದ ಅರ್ಜುನನು ದೇವ ಲೋಕಸಂಬಂಧಿಯಾದ ನೃತ್ಯವಾದಿತ್ರ ಮತ್ತು ಸಂಗೀತಗಳಲ್ಲಿ ಪಾರಂಗತನಾಗಿದ್ದಾನೆ. ರಾಜನೇ ಅರಿಂದಮನೇ! ನೀನು ಸಹ ಎಲ್ಲ ತಮ್ಮಂದಿರ ಜೊತೆಯಲ್ಲಿ

ತೀರ್ಥಯಾತ್ರೆಯನ್ನು ಮಾಡುವುದು ಯೋಗ್ಯವಾಗಿರುತ್ತದೆ.
ತೀರ್ಥೇಷ್ವಾಪ್ಲುತ್ಯ ಪುಣ್ಯೇಷು ವಿಪಾಪ್ಮಾ ವಿಗತಜ್ವರಃ |
ರಾಜ್ಯಂ ಭೋಕ್ಷ್ಯಸಿ ಧರ್ಮೇಣ ಸುಖೀ ವಿಗತಕಲ್ಮಷಃ ||34||
ಪವಿತ್ರವಾದ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ ಪಾಪವನ್ನು ಮತ್ತು ಮನಸ್ಸಿನ ಚಿಂತೆಯನ್ನು ಕಳೆದುಕೊಂಡು ದೋಷ ರಹಿತನಾಗಿ ಸುಖಿಯಾಗಿ ಧರ್ಮದಿಂದ ರಾಜ್ಯವನ್ನು ಆಳುವಿ. (ಎಂದೂ ಧರ್ಮರಾಜನಿಗೆ ನನ್ನ ಆದೇಶದಂತೆ ಹೇಳಬೇಕು.)
ಭವಾಂಶ್ಚೈನಂ ದ್ವಿಜಶ್ರೇಷ್ಠ ಪರ್ಯಟಂತಂ ಮಹೀತಳೇ |
ತ್ರಾತುಮರ್ಹತಿ ವಿಪ್ರಾಗ್ರ್ಯ ತಪೋಬಲಸಮನ್ವಿತಃ ||35||
ದ್ವಿಜಶ್ರೇಷ್ಠರೇ ಬ್ರಾಹ್ಮಣೋತ್ತಮರೇ, ಅವನು ಭೂತಳದಲ್ಲಿ ತೀರ್ಥಯಾತ್ರೆಗಾಗಿ ಸಂಚಾರಮಾಡುವಾಗ ತಪೋಬಲ ಸಮನ್ವಿತರಾದ ನೀವೂ ಸಹ ಅವನನ್ನು ರಕ್ಷಿಸಬೇಕು.
ಗಿರಿದುರ್ಗೇಷು ಚ ಸದಾ ದೇಶೇಷು ವಿಷಮೇಷು ಚ |
ವಸಂತಿ ರಾಕ್ಷಸಾ ರೌದ್ರಾಸ್ತೇಭ್ಯೋ ರಕ್ಷೇತ್ ಸದಾ ಭವಾನ್ ||36||
ಗಿರಿದುರ್ಗಗಳಲ್ಲಿಯೂ ವಿಷಮಪ್ರದೇಶಗಳಲ್ಲಿಯೂ ಸದಾ ಕ್ರೂರರಾದ ರಾಕ್ಷಸರು ವಾಸಮಾಡುತ್ತಾರೆ. ಅವರಿಂದ ನೀವು ಧರ್ಮರಾಜನನ್ನು ಯಾವಾಗಲೂ ರಕ್ಷಿಸಬೇಕು.
ವೈಶಂಪಾಯನಃ
ತಥೇತ್ಯಥ ಪ್ರತಿಜ್ಞಾಯ ಲೋಮಶಃ ಸುಮಹಾತಪಾಃ |
ಕಾಮ್ಯಕಂ ವನಮುದ್ದಿಶ್ಯ ಸಮುಪಾಯಾನ್ಮಹೀತಳಮ್ ||37||
ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ ಮಹಾತಪಸ್ವಿಗಳಾದ ಲೋಮಶರು ಕಾಮ್ಯಕವನಕ್ಕೆ ಹೋಗಲು ಉದ್ದೇಶಿಸಿ ಭೂಮಿಗೆ ಬಂದರು.
ದದರ್ಶ ತತ್ರ ಕೌಂತೇಯಂ ಧರ್ಮರಾಜಮರಿಂದಮಮ್ |
ತಾಪಸೈರ್ಭ್ರಾತೃಭಿಶ್ಚೈವ ಸರ್ವತಃ ಪರಿವಾರಿತಮ್ ||38||
ಆ ಕಾಮ್ಯಕವನದಲ್ಲಿ ಸುತ್ತಲೂ ತಾಪಸರಿಂದಲೂ ಮತ್ತು ಸಹೋದರರಿಂದಲೂ ಪರಿವೃತನಾದ ಶತ್ರುದಮನನಾದ ಶ ಧರ್ಮರಾಜನನ್ನು ನೋಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ||
|| ಇಂದ್ರಲೋಕಾಭಿಗಮನಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
*****
ನಲವತ್ತೆರಡನೆಯ ಅಧ್ಯಾಯ
(ಅರ್ಜುನನ ಅದ್ಭುತ ಕರ್ಮಗಳನ್ನು ಕೇಳಿ ಸಂಜಯನ
ಎದುರಿಗೆ ಧೃತರಾಷ್ಟ್ರನ ಶೋಕ.)
ಜನಮೇಜಯಃ
ಅತ್ಯದ್ಭುತಾನಿ ಕರ್ಮಾಣಿ ಪಾರ್ಥಸ್ಯಾಮಿತತೇಜಸಃ |
ಧೃತರಾಷ್ಟ್ರೋ ಮಹಾತೇಜಾಃ ಶ್ರುತ್ವಾ ವಿಪ್ರ ಕಿಮಬ್ರವೀತ್ ||1||
ವೈಶಂಪಾಯನರೇ, ಅಮಿತಪರಾಕ್ರಮಿಯಾದ ಅರ್ಜುನನ ಅತ್ಯದ್ಭುತವಾದ ಕರ್ಮಗಳನ್ನು ಕೇಳಿ ಮಹಾತೇಜಸ್ವಿಯಾದ ಧೃತರಾಷ್ಟ್ರನು ಏನು ಹೇಳಿದನು?
ವೈಶಂಪಾಯನಃ
ಶಕ್ರಲೋಕಗತಂ ಪಾರ್ಥಂ ಶ್ರುತ್ವಾ ರಾಜಾಽಂಬಿಕಾಸುತಃ |
ದ್ವೈಪಾಯನಾದೃಷಿಶ್ರೇಷ್ಠಾತ್ ಸಂಜಯಂ ವಾಕ್ಯಮಬ್ರವೀತ್ ||2||
ಅಂಬಿಕಾಸುತನಾದ ಧೃತರಾಷ್ಟ್ರನು ಅರ್ಜುನನು ಇಂದ್ರಲೋಕಕ್ಕೆ ಹೋದ ವಿಷಯವನ್ನು ಋಷಿಶ್ರೇಷ್ಠರಾದ ದ್ವೈಪಾಯನರಿಂದ ತಿಳಿದು ಸಂಜಯನನ್ನು ಕುರಿತು ಹೀಗೆ ಮಾತನಾಡಿದನು.
ಶ್ರುತಂ ಮೇ ಸೂತ ಕಾರ್ತ್ಸ್ನ್ಯೇನ ಕರ್ಮ ಪಾರ್ಥಸ್ಯ ಧೀಮತಃ |
ಕಚ್ಚಿತ್ ತವಾಪಿ ವಿದಿತಂ ಯಾಥಾತಥ್ಯೇನ ಸಾರಥೇ ||3||
ಪ್ರಮತ್ತೋ ಗ್ರಾಮ್ಯಧರ್ಮೇಷು ಮಂದಾತ್ಮಾ ಪಾಪನಿಶ್ಚಯಃ |
ಮಮ ಪುತ್ರಃ ಸುದುರ್ಬುದ್ಧಿಃ ಪೃಥಿವೀಂ ನಾಶಯಿಷ್ಯತಿ ||4||
ಸೂತನೇ, ನಾನು ಮೇಧಾವಿಯಾದ ಪಾರ್ಥನ ಕರ್ಮಗಳನ್ನು ಸಮಗ್ರವಾಗಿ ಕೇಳಿದೆ. ಎಲೈ ಸಾರಥಿಯೇ. ನಿನಗೂ ಸಹ ಅವು ಯಥಾರ್ಥವಾಗಿ ತಿಳಿದಿರಬಹುದು. ನನ್ನ ಪುತ್ರನು ಮಂದಾತ್ಮನೂ ಪಾಪನಿಶ್ಚಯನೂ ಮತ್ತು ಇಂದ್ರಿಯಭೋಗದಲ್ಲಿ ಆಸಕ್ತನೂ ಆಗಿ ಮಹಾದುರ್ಬುದ್ಧಿಯುಳ್ಳವನಾಗಿ ಭೂಮಿಯನ್ನು ನಾಶಮಾಡುವನು.
ಯಸ್ಯ ನಿತ್ಯಮೃತಾ ವಾಚಃ ಸ್ವೈರೇಷ್ವಪಿ ಮಹಾತ್ಮನಃ |
ತ್ರೈಲೋಕ್ಯಮಪಿ ತಸ್ಯ ಸ್ಯಾದ್ ಯೋದ್ಧಾ ಯಸ್ಯ ಧನಂಜಯಃ ||5||
ಯಾವ ಮಹಾತ್ಮನಾದ ಧರ್ಮರಾಜನ ವಿನೋದದಲ್ಲಿ ಆಡಿದ ಮಾತುಗಳೂ ಸಹ ಸತ್ಯವಾಗಿವೆಯೋ ಯಾರಿಗೆ ಧನಂಜಯನು ಯೋಧನಾಗಿದ್ದಾನೆಯೋ ಅವನಿಗೆ ಮೂರುಲೋಕಗಳೂ ದೊರೆಯುತ್ತವೆ.

ಅಸ್ಯತಃ ಕರ್ಣಿನಾರಾಚಾನ್ ತೀಕ್ಷ್ಣಾಗ್ರಾಂಶ್ಚ ಶಿಲಾಶಿತಾನ್ |
ನಾರ್ಜುನಸ್ಯಾಗ್ರತಸ್ತಿಷ್ಠೇದ್ ಅಪಿ ಮೃತ್ಯುಜರಾತಿಗಃ ||6||
ಕಲ್ಲಿನಲ್ಲಿ ಸಾಣೆಯನ್ನು ಹಿಡಿದು ತೀಕ್ಷ್ಣವಾದ ತುದಿಯನ್ನು ಹೊಂದಿದ ಬಾಣಗಳನ್ನು ಅರ್ಜುನನು ಕಿವಿಯವರೆಗೂ ಎಳೆದು ಪ್ರಯೋಗಿಸುವಾಗ ಜರಾಮರಣರಹಿತನಾದ ವ್ಯಕ್ತಿಯು ಸಹ ಅರ್ಜುನನ ಎದುರಿಗೆ ನಿಲ್ಲಲಾರ.
ಮಮ ಪುತ್ರಾ ದುರಾತ್ಮಾನಃ ಸರ್ವೇ ಮೃತ್ಯುವಶಂ ಗತಾಃ |
ಯೇಷಾಂ ಯುದ್ಧಂ ದುರಾಧರ್ಷೈಃ ಪಾಂಡವೈಃ ಸಮುಪಸ್ಥಿತಮ್ ||7||
ಎಂದೂ ಸೋಲಿಸಲು ಸಾಧ್ಯವಿಲ್ಲದ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಸಂಪಾದನೆಮಾಡಿದ ನನ್ನ ಮಕ್ಕಳೆಲ್ಲರೂ ದುಷ್ಟರು. ಎಲ್ಲರೂ ಮೃತ್ಯುವಶರಾಗಿದ್ದಾರೆ.
ತಸ್ಯೈವ ಚ ನ ಪಶ್ಯಾಮಿ ಯುಧಿ ಗಾಂಡೀವಧನ್ವನಃ |
ಅನಿಶಂ ಚಿಂತಯಾನೋಽಪಿ ಯ ಏನಮಭಿಯಾದ್ ಯುಧಿ ||8||
ಗಾಂಡೀವಧನುಸ್ಸನ್ನು ಧರಿಸಿದ ಆ ಅರ್ಜುನನ ಜೊತೆಯಲ್ಲಿ ಯಾರು ಅವನಿಗೆ ಎದುರಾಗಿ ನಿಂತು ಯುದ್ಧವನ್ನು ಮಾಡುತ್ತಾರೆ ಎಂದು ಸತತವಾಗಿ ಚಿಂತನೆಯನ್ನು ಮಾಡಿದರೂ ನನಗೆ ಯಾರೂ ತೋರುತ್ತಿಲ್ಲ.
ದ್ರೋಣಕರ್ಣೌ ಪ್ರತೀಯಾತಾಂ ಯದಿ ಭೀಷ್ಮೋಽಪಿ ವಾ ರಣೇ |
ಮಹಾನ್ ಸ್ಯಾತ್ ಸಂಶಯೋ ಲೋಕೇ ನ ತು ಪಶ್ಯಾಮಿ ನೋ ಜಯಮ್
ಒಂದು ಪಕ್ಷ ದ್ರೋಣಕರ್ಣರು ಅವನಿಗೆ ಎದುರಿಗೆ ನಿಲ್ಲಬಹುದು. ಅಥವಾ ಭೀಷ್ಮರು ಅವನ ಎದುರಿಗೆ ನಿಲ್ಲಬಹುದು. ಆದರೂ ಜಯದ ವಿಷಯದಲ್ಲಿ ದೊಡ್ಡ ಸಂಶಯವುಂಟಾಗುತ್ತದೆಯೇ ಹೊರತು ನಮಗೆ ನಿಶ್ಚಿತವಾಗಿ ಜಯವು ನನಗೆ ಕಾಣುವುದಿಲ್ಲ.
ಘೃಣೀ ಕರ್ಣಃ ಪ್ರಮಾದೀ ಚ ಆಚಾರ್ಯಃ ಸ್ಥವಿರೋ ಗುರುಃ |
ಅಮರ್ಷೀ ಬಲವಾನ್ ಪಾರ್ಥಃ ಸಂರಂಭೀ ದೃಢವಿಕ್ರಮಃ ||10||
ಕರ್ಣನು ದಯಾ ಶೀಲನಾದವನು. ದ್ರೋಣರು ಪ್ರಮಾದವುಳ್ಳವರು. ಭೀಷ್ಮರು ವೃದ್ಧರಾಗಿದ್ದಾರೆ. ಪಾರ್ಥನಾದರೋ ಬಲಿಷ್ಠನಾಗಿ ಸಿಟ್ಟಿನಿಂದಕೂಡಿ ದೃಢವಾದ ಪರಾಕ್ರಮವುಳ್ಳವನಾಗಿದ್ದಾನೆ.
ಭವೇತ್ ಸುತುಮುಲಂ ಯುದ್ಧಂ ಸರ್ವಸ್ಯಾಪ್ಯಪರಾಜಿತಮ್ |
ಸರ್ವೇಪ್ಯಸ್ತ್ರವಿದಃ ಶೂರಾಃ ಸರ್ವೇ ಪ್ರಾಪ್ತಾ ಮಹದ್ಯಶಃ ||11||
ಅಪಿ ಸರ್ವೇಶ್ವರತ್ವಂ ಹಿ ನ ವಾಂಛೇರನ್ ಪರಾಜಿತಾಃ |
ವಧೇ ನೂನಂ ಭವೇಚ್ಛಾಂತಿಃ ತೇಷಾಂ ವಾ ಫಲ್ಗುನಸ್ಯ ವಾ ||12||
ಘೋರವಾದ ಯುದ್ಧವು ನಡೆಯುತ್ತದೆ. ಪಾಂಡವರೆಲ್ಲರೂ ಎಂದೂ ಶತ್ರುಗಳಿಂದ ಪರಾಜಿತರಲ್ಲ ಎಲ್ಲರೂ ಅಸ್ತ್ರವಿದ್ಯೆಯನ್ನು ಬಲ್ಲವರು ಶೂರರು ಮಹಾಕೀರ್ತಿಯನ್ನು ಗಳಿಸಿದವರು. ಆದ್ದರಿಂದ ಪರಾಜಯವನ್ನು ಹೊಂದಿ ಅವರಲ್ಲಿ ಯಾರೊಬ್ಬರೂ ಸರ್ವೇಶ್ವರರಾಗುವುದನ್ನು ಯಾರೂ ಬಯಸುವುದಿಲ್ಲ. ಅವರು (ನನ್ನ ಮಕ್ಕಳ)ಅಥವಾ ಅರ್ಜುನನ ವಧೆಯಾದರೆ ಮಾತ್ರ ಶಾಂತಿ ಯುಂಟಾಗುತ್ತದೆ.
ನ ತು ಹಂತಾರ್ಽಜುನಸ್ಯಾಸ್ತಿ ಜೇತಾ ವಾಽಸ್ಯ ನ ವಿದ್ಯತೇ |
ಮನ್ಯುಸ್ತಸ್ಯ ಕಥಂ ಶಾಮ್ಯೇನ್ಮಂದಾನ್ ಪ್ರತಿ ಸಮುತ್ಥಿತಃ ||13||
ಆದರೆ ಅರ್ಜುನನನ್ನು ಕೊಲ್ಲುವವರಾಗಲೀ ಅಥವಾ ಜಯಿಸುವವರಾಗಲೀ ಯಾರೂ ಇಲ್ಲ. ಮಂದರಾದ ನನ್ನ ಪುತ್ರರ ಮೇಲೆ ಉಂಟಾದ ಅವನ ಕೋಪವು ಹೇಗೆ ಶಾಂತವಾದೀತು?
ತ್ರಿದಶೇಶಸಮೋ ವೀರಃ ಖಾಂಡವೇಽಗ್ನಿಮತರ್ಪಯತ್ |
ಜಿಗಾಯ ಪಾರ್ಥಿವಾನ್ ಸರ್ವಾನ್ ರಾಜಸೂಯೇ ಮಹಾಕ್ರತೌ ||14||
ಅರ್ಜುನನು ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನು. ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಪಡಿಸಿದನು. ರಾಜಸೂಯ-ಮಹಾಯಾಗದಲ್ಲಿ ಎಲ್ಲ ರಾಜರನ್ನೂ ಗೆದ್ದನು.
ಶೇಷಂ ಕುರ್ಯಾದ್ ಗಿರೇರ್ವಜ್ರಂ ನಿಪತನ್ ಮೂರ್ಧ್ನಿ ಸಂಜಯ |
ನ ತು ಕುರ್ಯುಃ ಶರಾಃ ಶೇಷಂ ಕ್ಷಿಪ್ತಾಸ್ತಾತ ಕಿರೀಟಿನಾ ||15||
ಎಲೈ ಸಂಜಯನೇ, ಪರ್ವತ ಶಿಖರದ ಮೇಲೆ ಬಿದ್ದ ವಜ್ರಾಯುಧವು ಪರ್ವತವನ್ನು ಉಳಿಸಬಹುದು ಆದರೆ ಪ್ರೀತಿಪಾತ್ರನೇ, ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಶತ್ರುಗಳಲ್ಲಿ ಯಾರನ್ನೂ ಉಳಿಸುವುದಿಲ್ಲ.
ಯಥಾ ಹಿ ಕಿರಣಾ ಭಾನೋಸ್ತಪಂತೀಹ ಚರಾಚರಮ್ |
ತಥಾ ಪಾರ್ಥಕರೋತ್ಸೃಷ್ಟಾಃ ಶರಾಸ್ತಪ್ಸ್ಯಂತಿ ಮೇ ಸುತಾನ್ ||16||
ಹೇಗೆ ಸೂರ್ಯನ ಕಿರಣಗಳು ಮಧ್ಯಾಹ್ನಕಾಲದಲ್ಲಿ ಚರಾಚರವಾದ ಜಗತ್ತನ್ನು ದಹಿಸುತ್ತವೆಯೋ ಹಾಗೆ ಪಾರ್ಥನ ಕೈಯಿಂದ ಪ್ರೇರಿಸಲ್ಪಟ್ಟ ಬಾಣಗಳು ನನ್ನ ಪುತ್ರರನ್ನು ದಹಿಸುತ್ತವೆ.
ಅಪೀಮಾಂ ರಥಘೋಷೇಣ ಭಯಾರ್ತಾ ಸವ್ಯಸಾಚಿನಃ |
ಪ್ರತಿಭಾತಿ ವಿದೀರ್ಣೇವ ಸರ್ವತೋ ಭಾರತೀ ಚಮೂಃ ||17||
ಆ ಬಾಣಗಳು ಭೂಮಿಯನ್ನು ಬೇಕಾದರೂ ದಹಿಸುತ್ತವೆ. ಸವ್ಯಸಾಚಿಯ ರಥಘೋಷದಿಂದ ಭಯಾರ್ತವಾದ ಭರತಕುಲದವರಾದ ನಮ್ಮ ಸೈನ್ಯವು ಎಲ್ಲ ಕಡೆಗಳಲ್ಲಿಯೂ ಬಿರಿದುಹೋದಂತೆ ಕಾಣುತ್ತದೆ.
ಯ ಉದ್ವರನ್ ಪ್ರವಪಂಶ್ಚೈವ ಬಾಣಾನ್
ತಥಾಽಽತತಾಯೀ ಸಮರೇ ಕಿರೀಟೀ |

ಸೃಷ್ಟೋಽಂತಕಃ ಸರ್ವಹರೋ ವಿಧಾತ್ರಾ
ಭವೇದ್ಯಥಾ ತದ್ವದವಾರಣೀಯಃ ॥18॥
ಕೈಯಲ್ಲಿ ಗಾಂಡೀವಧನುಸ್ಸನ್ನು ಹಿಡಿದ ಶತ್ರುವಧೋದ್ಯತನಾದ ಅರ್ಜುನನು ಯುದ್ಧದಲ್ಲಿ ಬಾಣಗಳನ್ನು ಪ್ರಯೋಗಿಸುವಾಗ ಬ್ರಹ್ಮದೇವರು ಸರ್ವನಾಶಕನಾಗಿ ಸರ್ವಸಂಹಾರಕನಾಗಿ ಸೃಷ್ಟಿಮಾಡಿದ ಯಮನಂತೆ ಇರುವ ಅರ್ಜುನನನ್ನು ಯಾರೂ ನಿವಾರಿಸಲು ಸಾಧ್ಯವಿಲ್ಲ.
ಸಂಜಯಃ
ಯದೇತತ್ ಕಥಿತಂ ರಾಜನ್ ತ್ವಯಾ ದುರ್ಯೋಧನಂ ಪ್ರತಿ |
ಸರ್ವಮೇತದ್ ಯಥಾತಥ್ಯಂ ನ ತನ್ಮಿಥ್ಯಾ ಮಹೀಪತೇ ॥19॥
ಮನ್ಯುನಾಽಭಿಸಮಾವಿಷ್ಟಾಃ ಪಾಂಡವಾಸ್ತ್ವಮಿತೌಜಸಃ |
ದೃಷ್ಟ್ವಾ ನೀತಾಂ ಸಭಾಂ ಕೃಷ್ಣಾಂ ಧರ್ಮಪತ್ನೀಂ ಯಶಸ್ವಿನೀಮ್ ॥20॥
ರಾಜನೇ! ನೀನು ದುರ್ಯೋಧನನನ್ನು ಕುರಿತು ಏನು ಹೇಳಿದೆಯೋ ಅದೆಲ್ಲವೂ ಸತ್ಯ. ಮಹಿಪತಿಯೇ, ಅದು ಸುಳ್ಳಲ್ಲ.
ಧರ್ಮಪತ್ನಿಯೂ ಕೀರ್ತಿವಂತೆಯೂ ಆದ ದ್ರೌಪದಿಯನ್ನು ಸಭೆಗೆ ಎಳೆತಂದುದನ್ನು ನೋಡಿ ಅಮಿತಪರಾಕ್ರಮಿಗಳಾದ ಪಾಂಡವರು ಕೋಪದಿಂದ ತುಂಬಿಹೋಗಿದ್ದಾರೆ.
ದುಃಶಾಸನಸ್ಯ ತಾ ವಾಚಃ ಶ್ರುತ್ವಾ ವೈ ದಾರುಣೋದಯಾಃ |
ಕರ್ಣಸ್ಯ ಚ ಮಹಾರಾಜ ನ ಸ್ವಪ್ಸ್ಯಂತೀತಿ ಮೇ ಮತಿಃ ॥21॥
ಎಲೈ ಮಹಾರಾಜನೇ, ಭಯಂಕರ ಪರಿಣಾಮವುಳ್ಳ ದುಶ್ಶಾಸನನ ಮಾತುಗಳನ್ನು ಮತ್ತು ಕರ್ಣನ ಮಾತುಗಳನ್ನು ಕೇಳಿ ಅವರು ನಿದ್ರೆಯನ್ನು ಮಾಡುವುದಿಲ್ಲವೆಂದು ನನ್ನ ಅಭಿಪ್ರಾಯ.
ಶ್ರುತಂ ಹಿ ತೇ ಮಹಾರಾಜ ಯಥಾ ಪಾರ್ಥೇನ ಸಂಯುಗೇ |
ಏಕಾದಶತನುಃ ಸ್ಥಾಣುರ್ಧನುಷಾ ಪರಿತೋಷಿತಃ ॥22॥
ಮಹಾರಾಜನೇ, ಅರ್ಜುನನಿಂದ ಯುದ್ಧದಲ್ಲಿ ಏಕಾದಶಮೂರ್ತಿಯಾದ ಮಹೇಶ್ವರನು ಹೇಗೆ ಧನುಸ್ಸಿನಿಂದ ಸಂತೋಷಪಡಿಸಲ್ಪಟ್ಟನೆಂದು ನೀನು ಕೇಳಿದ್ದೀಯೆ.
ಕೈರಾತಂ ವೇಷಮಾಸ್ಥಾಯ ಯೋಧಯಾಮಾಸ ಫಲ್ಗುನಮ್ |
ಜಿಜ್ಞಾಸುಃ ಸರ್ವದೇವೇಶಃ ಕಪರ್ದೀ ಭಗವಾನ್ ಸ್ವಯಮ್ ॥23॥
ಸರ್ವದೇವೇಶನಾದ ಭಗವಂತನಾದ ಕಪರ್ದಿಯು ತಾನೇ ಅರ್ಜುನನ ಪರಾಕ್ರಮವನ್ನು ತಿಳಿಯುವ ಅಭಿಪ್ರಾಯದಿಂದ ಕಿರಾತವೇಷವನ್ನು ಧರಿಸಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತತ್ರೈನಂ ಲೋಕಪಾಲಾಸ್ತೇ ದರ್ಶಯಾಮಾಸುರರ್ಜುನಮ್ |
ಅಸ್ತ್ರಹೇತೋಃ ಪರಾಕ್ರಾಂತಂ ತಪಸಾ ಕೌರವರ್ಷಭಮ್ ॥24॥
ಅಸ್ತ್ರವನ್ನು ಸಂಪಾದಿಸಲು ತಪಸ್ಸಿನಲ್ಲಿ ಉದ್ಯುಕ್ತನಾದ ಕೌರವ ಶ್ರೇಷ್ಠನಾದ ಅರ್ಜುನನಿಗೆ ಅಲ್ಲಿಯೇ ಲೋಕಪಾಲಕರು ತಮ್ಮ ದರ್ಶನವನ್ನು ಕೊಟ್ಟರು.
ನೈತದುತ್ಸಹತೇಽನ್ಯೋ ಹಿ ಲಬ್ಧುಮನ್ಯತ್ರ ಫಲ್ಗುನಾತ್ |
ಸಾಕ್ಷಾದ್ದರ್ಶನಮೇತೇಷಾಮೀಶ್ವರಾಣಾಂ ನರೋ ಭುವಿ ॥25॥
ಭೂಮಿಯಲ್ಲಿ ಅರ್ಜುನನನ್ನು ಬಿಟ್ಟು ಬೇರೆಯಾವ ಮನುಷ್ಯನೂ ಅಧೀಶ್ವರರಾದ ಆ ಲೋಕಪಾಲಕರ ದರ್ಶನವನ್ನು ಪಡೆಯಲು ಪ್ರಯತ್ನಿಸಲಾರ (ಪಡೆಯುವುದಿಲ್ಲ.)
ಮಹೇಶ್ವರೇಣ ಯೋ ರಾಜನ್ನ ಜೀರ್ಣೋ ಗ್ರಸ್ತಮೂರ್ತಿಮಾನ್ |
ಕಸ್ತಮುತ್ಸಹತೇ ವೀರೋ ಯುದ್ಧೇ ಜರಯಿತುಂ ಪುಮಾನ್ ॥26॥
ರಾಜನೇ, ಯಾರು ಮಹೇಶ್ವರನ ಬಾಣಗಳಿಂದ ಆಚ್ಛಾದಿತನಾದರೂ ಸೋಲಲಿಲ್ಲವೋ ಅಂತಹ ವೀರನಾದ ಅರ್ಜುನನನ್ನು ಯಾವ ಪುರುಷನು ಯುದ್ಧದಲ್ಲಿ ಸೋಲಿಸಲು ನಾಶಗೊಳಿಸಲು ಬಯಸಬಹುದು?
ಆಸಾದಿತಮಿದಂ ಘೋರಂ ತುಮುಲಂ ರೋಮಹರ್ಷಣಮ್ |
ದ್ರೌಪದೀಂ ಪರಿಕರ್ಷದ್ಭಿಃ ಕೋಪಯದ್ಭಿಶ್ಚ ಪಾಂಡವಾನ್ ॥27॥
ಯತ್ರ ವಿಸ್ಫುರಮಾಣೌಷ್ಠೋ ಭೀಮಃ ಪ್ರಾಹ ವಚೋ ಮಹತ್ |
ದೃಷ್ಟ್ವಾ ದುರ್ಯೋಧನೇನೋರೂ ದ್ರೌಪದ್ಯಾ ದರ್ಶಿತಾವುಭೌ ॥28॥
ದ್ರೌಪದಿಯನ್ನು ಎಳೆದಾಡಿ ಪಾಂಡವರನ್ನು ಕೋಪಗೊಳಿಸಿದ ನಿನ್ನ ಮಕ್ಕಳಿಂದ ಘೋರವೂ ತೀವ್ರವೂ ರೋಮಾಂಚಕಾರಿಯೂ ಆದ ಈ ಯುದ್ಧವು ಸಂಪಾದಿಸಲ್ಪಟ್ಟಿತು. ಅಲ್ಲಿ ತುಟಿಗಳು ಅದರುತ್ತಿದ್ದ ಭೀಮಸೇನನು ದ್ರೌಪದಿಗೆ ತೋರಿಸಿದ ದುರ್ಯೋಧನನ ಎರಡು ತೊಡೆಗಳನ್ನು ನೋಡಿ ದೊಡ್ಡ ಮಾತುಗಳನ್ನು ಆಡಿದನಷ್ಟೆ.
ಊರುಂ ಭೇತ್ಸ್ಯಾಮಿ ತೇ ಪಾಪ ಗದಯಾ ವಜ್ರಕಲ್ಪಯಾ |
ತ್ರಯೋದಶಾನಾಂ ವರ್ಷಾಣಾಮಂತೇ ದುರ್ದ್ಯೂತದೇವಿನಃ ॥29॥
ಎಲೈ ಪಾಪಿಯೇ, ಹದಿಮೂರುವರ್ಷಗಳು ಕಳೆದಮೇಲೆ ಕೆಟ್ಟದ್ಯೂತವನ್ನು ಆಡಿದ ನಿನ್ನ ತೊಡೆಯನ್ನು ವಜ್ರಸದೃಶವಾದ ನನ್ನ ಗದೆಯಿಂದ ಮುರಿಯುವೆನು (ಎಂದು ಹೇಳಿದನಷ್ಟೆ).
ಸರ್ವೇ ಪ್ರಹರತಾಂ ಶ್ರೇಷ್ಠಾಃ ಸರ್ವೇ ಚಾಮಿತತೇಜಸಃ |
ಸರ್ವಾಸ್ತ್ರನಿಪುಣಾಃ ಸರ್ವೇ ದೇವೈರಪಿ ಸುದುರ್ಜಯಾಃ ॥30॥

ಎಲ್ಲರೂ ಶಸತತ್ರಸ್ತ್ರಪ್ರಯೋಗದಲ್ಲಿ ನಿಪುಣರು. ಎಲ್ಲರೂ ಅಮಿತಪರಾಕ್ರಮಿಗಳು. ಎಲ್ಲರೂ ಎಲ್ಲಾ ಅಸ್ತ್ರಗಳಲ್ಲಿಯೂ ಕುಶಲರು ಮತ್ತು ಎಲ್ಲರೂ ದೇವತೆಗಳಿಂದಲೂ ಅಜೇಯರು.
ಮನ್ಯೇ ಮನ್ಯುಸಮುದ್ಭೂತಾಃ ಪುತ್ರಾಣಾಂ ತವ ಸಂಗರೇ |
ಅಂತಂ ಪಾರ್ಥಾಃ ಕರಿಷ್ಯಂತಿ ವೀರ್ಯಾಮರ್ಷಸಮನ್ವಿತಾಃ ॥31॥
ವೀರ್ಯ ಮತ್ತು ಕೋಪಗಳಿಂದ ಕೂಡಿದ ಮಹಾಕೋಪದಿಂದ ಯುಕ್ತರಾದ ಪಾಂಡವರು ಯುದ್ಧದಲ್ಲಿ ನಿನ್ನ ಮಕ್ಕಳ ಅಂತ್ಯವನ್ನು ಮಾಡುವರು ಎಂದು ನಾನು ಭಾವಿಸುವೆನು.
ಧೃತರಾಷ್ಟ್ರಃ
ಕಿಂ ಕೃತಂ ಸೂತ ಕರ್ಣೇನ ವದತಾ ಪರುಷಂ ವಚಃ |
ಪರ್ಯಾಪ್ತಂ ವೈರಮೇತಾವದ್ ಯತ್ ಕೃಷ್ಣಾ ಸಾ ಸಭಾಂ ಗತಾ ॥32॥
ಅಪೀದಾನೀಂ ಮಮ ಸುತಾಃ ತಿಷ್ಠೇರನ್ ಮಂದಚೇತಸಃ |
ಯೇಷಾಂ ಭ್ರಾತಾ ಗುರುರ್ಜ್ಯೇಷ್ಠೋ ವಿನಯೇ ನಾವತಿಷ್ಠತೇ ॥33॥
ಎಲೈ ಸೂತನೇ, ಕರ್ಣನು ಒರಟಾದ ಮಾತುಗಳನ್ನು ಆಡಿ ಏನುಮಾಡಿದಂತಾಯಿತು? ದ್ರೌಪದಿಯನ್ನು ಸಭೆಗೆ ಎಳೆತಂದ ಒಂದು ವಿಷಯವು ಪಾಂಡವರಿಗೆ ಇಷ್ಟು ವೈರವನ್ನು ಉಂಟುಮಾಡಲು ಸಾಕಾಗುತ್ತದೆ. ಯಾರ ಹಿರಿಯಣ್ಣನು ಎಂದೂ ವಿನಯದಿಂದ ನಡೆದುಕೊಳ್ಳಲಿಲ್ಲವೋ ಅಂತಹ ಅಣ್ಣನನ್ನು ಹೊಂದಿದ ಮಂದಪ್ರಜ್ಞೆಯುಳ್ಳ ನನ್ನ ಮಕ್ಕಳು ಈಗಲಾದರೂ ಒಳ್ಳೆಯ ಮಾರ್ಗದಲ್ಲಿ ಇರುತ್ತಾರೆಯೇ?
ಮಮಾಪಿ ವಚನಂ ಸೂತ ನ ಶುಶ್ರೂಷತಿ ಮಂದಭಾಕ್ |
ದೃಷ್ಟ್ವಾ ಮಾಂ ಚಕ್ಷುಷಾ ಹೀನಂ ನಿರ್ವಿಚೇಷ್ಟಮಚೇತಸಮ್ ॥34॥
ಸೂತನೇ, ದೃಷ್ಟಿಹೀನನಾದ ಚೇಷ್ಟಾರಹಿತನಾದ ಉದ್ಭ್ರಾಂತನಾದ ನನ್ನ ಮಾತುಗಳನ್ನು ಮಂದಭಾಗ್ಯನಾದ ದುರ್ಯೋಧನನು ಕೇಳುವುದಿಲ್ಲ.
ಯೇ ಚಾಸ್ಯ ಸಚಿವಾ ಮಂದಾಃ ಕರ್ಣಸೌಬಲಕಾದಯಃ |
ತೇ ತಸ್ಯ ಭೂಯಸೋ ದೋಷಾನ್ ವರ್ಧಯಂತಿ ವಿಚೇತಸಃ ॥35॥
ಇನ್ನು ಅವನ ಸಚಿವರೂ ಮಂದರೂ ಆದ ಕರ್ಣ ಶಕುನಿ ಮೊದಲಾದವರು ಯಾರು ಇದ್ದಾರೋ ಅವರು ಜ್ಞಾನವಿಲ್ಲದೆ ಅವನ ದೋಷಗಳನ್ನು ಇನ್ನೂ ಹೆಚ್ಚಿಸುತ್ತಿದ್ದಾರೆ.
ಸ್ವೈರಂ ಮುಕ್ತಾ ಅಪಿ ಶರಾಃ ಪಾರ್ಥೇನಾಮಿತತೇಜಸಾ |
ನಿರ್ದಹೇಯುರ್ಮಮ ಸುತಾನ್ ಕಿಂಪುನರ್ಮನ್ಯುನೇರಿತಾಃ ॥36॥
ಅಮಿತಪರಾಕ್ರಮಿಯಾದ ಅರ್ಜುನನು ವಿನೋದಕ್ಕಾಗಿ ಪ್ರಯೋಗಿಸಿದ ಬಾಣಗಳೂ ನನ್ನ ಮಕ್ಕಳನ್ನು ಸುಟ್ಟುಬಿಡುತ್ತವೆ. ಇನ್ನು ಸಿಟ್ಟಿನಿಂದ ಪ್ರಯೋಗಿಸಿದ ಬಾಣಗಳ ವಿಷಯದಲ್ಲಿ ಹೇಳುವುದೇನು?
ಪಾರ್ಥಬಾಹುಬಲೋತ್ಸೃಷ್ಟಾ ಮಹಾಚಾಪವಿನಿಃಸೃತಾಃ |
ದಿವ್ಯಾಸ್ತ್ರಮಂತ್ರಮುದಿತಾಃ ಸಾದಯೇಯುಃ ಸುರಾನಪಿ ॥37॥
ದಿವ್ಯಾಸ್ತ್ರಮಂತ್ರಗಳಿಂದ ಪ್ರೇರಿತವಾದ ಗಾಂಡೀವಚಾಪದಿಂದ ಹೊರಟ ಅವನ ಬಾಹುಬಲದಿಂದ ಪ್ರಯೋಗಿಸಲ್ಪಟ್ಟ ಬಾಣಗಳು ದೇವತೆಗಳನ್ನೂ ಕೊಲ್ಲಲು ಸಮರ್ಥವಾಗಿವೆ.
ಯಸ್ಯ ಮಂತ್ರೀ ಚ ಗೋಪ್ತಾ ಚ ಸುಹೃಚ್ಚೈವ ಜನಾರ್ದನಃ |
ಹರಿಸ್ತ್ರೈಲೋಕ್ಯನಾಥಃ ಸ ಕಿಂನು ತೇನ ನ ನಿರ್ಜಿತಮ್ ॥38॥
ಯಾರಿಗೆ ಮೂರುಲೋಕಕ್ಕೆ ಒಡೆಯನಾದ ಜನಾರ್ದನನಾದ ಹರಿಯು ಮಂತ್ರಿಯೂ ರಕ್ಷಕನೂ ಮತ್ತು ಹಿತೈಷಿಯೂ ಆಗಿದ್ದಾನೆಯೋ ಅವನು ಏನನ್ನು ಗೆಲ್ಲದೆ ಇರಲು ಸಾಧ್ಯ?
ಇದಂ ಚ ಸುಮಹಚ್ಚಿತ್ರಮ್ ಅರ್ಜುನಸ್ಯೈವ ಸಂಜಯ |
ಮಹಾದೇವೇನ ಬಾಹುಭ್ಯಾಂ ಯತ್ಸಮೇತ ಇತಿ ಶ್ರುತಿಃ ॥39॥
ಸಂಜಯನೇ, ಅರ್ಜುನನು ಬಾಹುಗಳಿಂದ ಮಹೇಶ್ವರನ ಜೊತೆಯಲ್ಲಿ ಸಂಗತನಾದನು ಎಂದು ಏನು ಕೇಳಿದ್ದೇವೆಯೋ ಇದು ದೊಡ್ಡ ಆಶ್ಚರ್ಯದ ಸಂಗತಿ.
ಪ್ರತ್ಯಕ್ಷಂ ಸರ್ವಲೋಕಸ್ಯ ಖಾಂಡವೇ ಯತ್ಕೃತಂ ಪುರಾ |
ಫಲ್ಗುನೇನ ಸಹಾಯೇನ ವಹ್ನೇರ್ದಾಮೋದರೇಣ ಚ ॥40॥
ಖಾಂಡವವನದಲ್ಲಿ ಸರ್ವಲೋಕದ ಎದುರಿನಲ್ಲಿ ದಾಮೋದರನ ಸಹಾಯದಿಂದ ವಹ್ನಿಗೆ ಹಿಂದೆ ಅರ್ಜುನನು ಏನು ಸಾಧಿಸಿದನೆಂಬುದು (ಎಲ್ಲರಿಗೂ ತಿಳಿದವಿಷಯ)
ಸರ್ವಥಾ ನಾಸ್ತಿ ಮೇ ಪುತ್ರಃ ಸಾಮಾತ್ಯಃ ಸಹಬಾಂಧವಃ |
ಕ್ರುದ್ಧೇ ಪಾರ್ಥೇ ಚ ಭೀಮೇ ಚ ವಾಸುದೇವೇ ಚ ಸಾತ್ಯಕೌ ॥41॥
ಅರ್ಜುನನೂ ಭೀಮನೂ ಕೃಷ್ಣನೂ ಮತ್ತು ಸಾತ್ಯಕಿಯೂ ಕ್ರುದ್ಧರಾಗಿರುವಾಗ ತನ್ನ ಬಾಂಧವರು ಮತ್ತು ಅಮಾತ್ಯರೊಡನೆ ಕೂಡಿದ ನನ್ನ ಪುತ್ರನು ಸರ್ವಥಾ ಇಲ್ಲವೆಂದೇ ಭಾವಿಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಇಂದ್ರಲೋಕಾಭಿಗಮನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.

*****
ನಲವತ್ತೊಂಬತ್ತನೆಯ ಅಧ್ಯಾಯ
(ಕಾಡಿನಲ್ಲಿ ಪಾಂಡವರ ಭೋಜ್ಯವಸ್ತು ಕಥನ.)
ಜನಮೇಜಯಃ
ಯದಿದಂ ಶೋಚಿತಂ ರಾಜ್ಞಾ ಧೃತರಾಷ್ಟ್ರೇಣ ವೈ ಮುನೇ |
ಪ್ರವ್ರಾಜ್ಯ ಪಾಂಡವಾನ್ ವೀರಾನ್ ಸರ್ವಮೇತನ್ನಿರರ್ಥಕಮ್ ॥1॥
ವೈಶಂಪಾಯನರೇ, ವೀರರಾದ ಪಾಂಡವರನ್ನು ವನಕ್ಕೆ ಕಳುಹಿಸಿ ರಾಜನಾದ ಧೃತರಾಷ್ಟ್ರನು ಏನು ಶೋಕಪಟ್ಟನೋ ಅದೆಲ್ಲವೂ ನಿರರ್ಥಕವಾದುದಷ್ಟೇ?
ಕಥಂ ಹಿ ರಾಜಾ ಪುತ್ರಂ ಸ್ವಮುಪೇಕ್ಷೇತಾಲ್ಪಚೇತಸಮ್ |
ದುರ್ಯೋಧನಂ ಪಾಂಡುಪುತ್ರಾನ್ ಕೋಪಯಾನಂ ಮಹಾರಥಾನ್ ॥
ಮಹಾರಥರಾದ ಪಾಂಡುಪುತ್ರರನ್ನು ಕೋಪಗೊಳಿಸುವ ಅಲ್ಪಚೇತನನಾದ ತನ್ನ ಪುತ್ರನಾದ ದುರ್ಯೋಧನನನ್ನುರಾಜನಾದ ಧೃತರಾಷ್ಟ್ರನು ಹೇಗೆ ಉಪೇಕ್ಷೆಮಾಡುತ್ತಾನೆ?
ಕಿಮಾಸೀತ್ ಪಾಂಡುಪುತ್ರಾಣಾಂ ವನೇ ಭೋಜನಮುಚ್ಯತಾಮ್ |
ವನ್ಯಂ ವಾಽಪ್ಯಥವಾ ಕೃಷ್ಟಮೇತದಾಖ್ಯಾತು ಮೇ ಭವಾನ್ ॥3॥
ಪಾಂಡುಪುತ್ರರಿಗೆ ವನದಲ್ಲಿ ಎಂತಹ ಭೋಜನವಾಯಿತು? ವನದಲ್ಲಿ ಸಹಜವಾಗಿ ದೊರೆಯುವ ಭೋಜನವೇ ಅಥವಾ ಕೃಷಿಯನ್ನು ಮಾಡಿ ಬೆಳೆದ ಧಾನ್ಯಗಳೇ ಎಂದು ನೀವು ನನಗೆ ತಿಳಿಸಿ.
ವೈಶಂಪಾಯನಃ
ವಾನೇಯಾಂಸ್ತು ಮೃಗಾಂಸ್ತೇ ತು ಶುದ್ಧೈರ್ಬಾಣೈರ್ನಿಪಾತಿತಾನ್|
ಬ್ರಾಹ್ಮಣಾನಾಂ ನಿವೇದ್ಯಾಗ್ರೇ ಭುಂಜತೇ ಭರತರ್ಷಭಾಃ ॥4॥
ಆ ಭರತರ್ಷಭರು ಶುದ್ಧಬಾಣಗಳಿಂದ ಹೊಡೆಯಲ್ಪಟ್ಟ ವನ್ಯಮೃಗಗಳನ್ನು ಮೊದಲು ಬ್ರಾಹ್ಮಣರಿಗೆ ಸಮರ್ಪಿಸಿ ಅನಂತರ ಭುಂಜಿಸಿದರು.
ತಾಂಶ್ಚ ಶೂರಾನ್ ಮಹೇಷ್ವಾಸಾನ್ ತದಾ ನಿವಸತೋ ವನೇ |
ಅನ್ವಯುರ್ಬ್ರಾಹ್ಮಣಾ ರಾಜನ್ ಸಾಗ್ನಯೋಽನಗ್ನಯಸ್ತಥಾ ॥5॥
ಎಲೈ ರಾಜನೇ, ಶೂರರೂ ಮತ್ತು ಧನುರ್ಧಾರಿಗಳೂ ಆಗಿ ಕಾಡಿನಲ್ಲಿ ವಾಸಿಸುವ ಅವರನ್ನು ಅಗ್ನಿಯುಳ್ಳ ಮತ್ತು ಅಗ್ನಿ ಇರದ ಅನೇಕ ಬ್ರಾಹ್ಮಣರು ಹಿಂಬಾಲಿಸಿದರು.
ಬ್ರಾಹ್ಮಣಾನಾಂ ಸಹಸ್ರಾಣಿ ಸ್ನಾತಕಾನಾಂ ಮಹಾತ್ಮನಾಮ್ |
ದಶ ಮೋಕ್ಷವಿದಾಂ ತದ್ವದ್ ಯಾನ್ ಬಿಭರ್ತಿ ಯುಧಿಷ್ಠಿರಃ ॥6॥
ಯುಧಿಷ್ಠಿರನು ಮಹಾತ್ಮರಾದ ಸಹಸ್ರಸ್ನಾತಕಬ್ರಾಹ್ಮಣರನ್ನು ಅದರಂತೆ ಮೋಕ್ಷಾಪೇಕ್ಷಿಗಳಾದ ಹತ್ತುಸಹಸ್ರ ಸಂನ್ಯಾಸಿಗಳನ್ನು ಪೋಷಿಸಿದನು.
ರುರೂನ್ ಕೃಷ್ಣಮೃಗಾಂಶ್ಚೈವ ಮೇಧ್ಯಾಂಶ್ಚಾನ್ಯಾನ್ ಮನೋರಮಾನ್ |
ಬಾಣೈರುನ್ಮಥ್ಯ ವಿಧಿವದ್ ಬ್ರಾಹ್ಮಣೇಭ್ಯೋ ನ್ಯವೇದಯತ್ ॥7॥
ರುರುಗಳನ್ನು ಕೃಷ್ಣಮೃಗಗಳನ್ನು ಮತ್ತು ಮೇಧ್ಯವಾದ ಮನೋಹರವಾದ ಬೇರೆ ಮೃಗಗಳನ್ನು ಬಾಣಗಳಿಂದ ಸಂಹರಿಸಿ ವಿಧಿಪೂರ್ವಕವಾಗಿ ಧರ್ಮರಾಜನು ಬ್ರಾಹ್ಮಣರಿಗೆ ನಿವೇದಿಸಿದನು.
ನ ತತ್ರ ಕಶ್ಚಿದ್ ದುರ್ವರ್ಣೋ ವ್ಯಾಧಿತೋ ವಾಽಪಿ ದೃಶ್ಯತೇ |
ಕೃಶೋ ವಾ ದುರ್ಬಲೋ ವಾಽಪಿ ದೀನೋ ಭೀತೋಽಪಿ ವಾ ನರಃ |
ನ ತತ್ರಾವಿನಯಃ ಕಶ್ಚಿದ್ ಅದೃಶ್ಯತ ತದಾ ದ್ವಿಜಃ ॥8॥
ಅಲ್ಲಿ ಯಾವನೂ ದುರ್ವರ್ಣದವನಾಗಲೀ ಅಥವಾ ರೋಗಗ್ರಸ್ತನಾಗಲೀ ಕಾಣುತ್ತಿರಲಿಲ್ಲ. ಕೃಶನಾದವನು ದುರ್ಬಲನಾದವನು ದೀನನಾದವನು ಭೀತನಾದವನು ಯಾವ ಮನುಷ್ಯನೂ ಇರಲಿಲ್ಲ. ಅಥವಾ ಅಲ್ಲಿ ಅವಿನೀತನಾದ ಒಬ್ಬ ದ್ವಿಜನೂ ಕಾಣಬರುತ್ತಿರಲಿಲ್ಲ.
ಪುತ್ರಾನಿವ ಪ್ರಿಯಾನ್ ಜ್ಞಾತೀನ್ ಭ್ರಾತ್ರೂ ನಿವ ಸಹೋದರಾನ್ |
ಪುಪೋಷ ಕೌರವಶ್ರೇಷ್ಠೋ ಧರ್ಮರಾಜೋ ಯುಧಿಷ್ಠಿರಃ ॥9॥
ಕೌರವಶ್ರೇಷ್ಠನಾದ ಧರ್ಮರಾಜನಾದ ಯುಧಿಷ್ಠಿರನು ತನಗೆ ಪ್ರಿಯರಾದದಾಯಾದಿಗಳನ್ನು ಮಕ್ಕಳಂತೆ ಮತ್ತು ಒಡಹುಟ್ಟಿದ ಸಹೋದರರಂತೆ ಪೋಷಿಸಿದನು.
ಪತೀಂಶ್ಚ ದ್ರೌಪದೀ ಸರ್ವಾನ್ ದ್ವಿಜಾತೀಂಶ್ಚ ಯಶಸ್ವಿನೀ |
ಮಾತೇವ ಭೋಜಯಿತ್ವಾಽಗ್ರೇ ಶಿಷ್ಟಮಾಹಾರಯತ್ ತದಾ ॥10॥
ಯಶಸ್ವಿನಿಯಾದ ದ್ರೌಪದಿಯು ತಾಯಿಯಂತೆ ಎಲ್ಲಾ ಬ್ರಾಹ್ಮಣರಿಗೂ ಮತ್ತು ಪತಿಗಳಿಗೂ ಮೊದಲು ಭೋಜನಗಳನ್ನು ಬಡಿಸಿ ಉಳಿದುದನ್ನು ತಾನು ಸ್ವೀಕರಿಸುತ್ತಿದ್ದಳು.
ಪ್ರಾಚೀಂ ರಾಜಾ ದಕ್ಷಿಣಾಂ ಭೀಮಸೇನೋ
ಯಮೌ ಪ್ರತೀಚೀಮಥವಾಽಪ್ಯುದೀಚೀಮ್ |
ಧನುರ್ಧರಾ ಮಾಂಸಹೇತೋರ್ಮೃಗಾಣಾಂ

ಕ್ಷಯಂ ಚಕ್ರುರ್ನಿತ್ಯಮೇವೋಪಗಮ್ಯ ||11||
ಧರ್ಮರಾಜನು ಪೂರ್ವದಿಕ್ಕಿಗೂ ಭೀಮಸೇನನು ದಕ್ಷಿಣದಿಕ್ಕಿಗೂ ನಕುಲಸಹದೇವರು ಪಶ್ಚಿಮ ಅಥವಾ ಉತ್ತರದಿಕ್ಕಿಗೂ ಬಿಲ್ಲನ್ನು ಹಿಡಿದು ಹೊರಟು ಮಾಂಸದ ಸಲುವಾಗಿ ಮೃಗಗಳನ್ನು ಸಮೀಪಿಸಿ ಬೇಟೆಯಾಡುತ್ತಿದ್ದರು.
ತಥಾ ತೇಷಾಂ ವಸತಾಂ ಕಾಮ್ಯಕೇ ವೈ
ವಿಹೀನಾನಾಮರ್ಜುನೇನೋತ್ಸುಕಾನಾಮ್ |
ಪಂಚೈವ ವರ್ಷಾಣಿ ತಥಾ ವ್ಯತೀಯುಃ |
ಅಧೀಯತಾಂ ಜಪತಾಂ ಜುಹ್ವತಾಂ ಚ ||12||
ಹಾಗೆ ಅರ್ಜುನನಿಂದ ರಹಿತರಾಗಿ ಅರ್ಜುನನನ್ನು ನೋಡುವ ತವಕದಿಂದ ಕಾಮ್ಯಕವನದಲ್ಲಿ ಅಧ್ಯಯನವನ್ನೂ ಜಪವನ್ನೂ ಹೋಮವನ್ನೂ ಮಾಡುತ್ತಿದ್ದ ಅವರಿಗೆ ಐದು ವರ್ಷಗಳು ಕಳೆದುಹೋದವು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ||
|| ಇಂದ್ರಲೋಕಾಭಿಗಮನಪರ್ವಣಿ ಷಷ್ಠೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
*****
ನಲವತ್ನಾಲ್ಕನೆಯ ಅಧ್ಯಾಯ
(ಸಂಜಯನ ಎದುರಿನಲ್ಲಿ ಧೃತರಾಷ್ಟ್ರನ ಶೋಕ ಮತ್ತು ಸಂಜಯನ ಉತ್ತರ)
ವೈಶಂಪಾಯನಃ
ದೀರ್ಘಮುಷ್ಣಂ ಸುನಿಃಶ್ವಸ್ಯ ಧೃತರಾಷ್ಟ್ರೋಽಂಬಿಕಾಸುತಃ |
ಅಬ್ರುವೀತ್ ಸಂಜಯಂ ಸೂತಮಾಮಂತ್ರ್ಯ ಭರತರ್ಷಭ ||1||
ಎಲೈ ಭರತರ್ಷಭನೇ ಅಂಬಿಕಾಸುತನಾದ ಧೃತರಾಷ್ಟ್ರನು ದೀರ್ಘವಾದ ಉಷ್ಣವಾದ ನಿಟ್ಟುಸಿರನ್ನು ಬಿಟ್ಟು ಸೂತನಾದ ಸಂಜಯನನ್ನು ಕರೆದು ಮಾತನಾಡಿದನು.
ದೇವಪುತ್ರೌ ಮಹಾಭಾಗೌ ದೇವರಾಜಸಮದ್ಯುತೀ |
ನಕುಲಃ ಸಹದೇವಶ್ಚ ಪಾಂಡವೌ ಯುದ್ಧದುರ್ಮದೌ ||2||
ದೃಢಾಯುಧೌ ದೂರಪಾತೌ ಯುದ್ಧೇ ಚ ಕೃತನಿಶ್ಚಯೌ |
ಶೀಘ್ರಹಸ್ತೌ ದೃಢಕ್ರೋಧೌ ನಿತ್ಯಯುಕ್ತೌ ರಥೇ ಸ್ಥಿತೌ ||3||
ದೇವರಾಜನಿಗೆ ಸಮಾನವಾದ ಕಾಂತಿಯುಳ್ಳ ದೇವಪುತ್ರರಾದ ಮಹಾನುಭಾವರಾದ ಪಾಂಡವರಾದ ನಕುಲಸಹದೇವರು ಯುದ್ಧ ದುರ್ಮದರಾಗಿದ್ದಾರೆ. ಅವರು ದೃಢವಾದ ಆಯುಧಗಳನ್ನು ಧರಿಸಿ ದೂರದ ಗುರಿಯನ್ನು ಭೇಧಿಸುವ ವ್ಯಕ್ತಿತ್ವವುಳ್ಳವರು. ಬೇಗನೇ ಬಾಣಗಳನ್ನು ಪ್ರಯೋಗಿಸುವ ಕೈಚಳಕವುಳ್ಳವರು, ದೃಢವಾದ ಕ್ರೋಧವನ್ನು ಹೊಂದಿದ್ದಾರೆ. ಯುದ್ಧವನ್ನು ಮಾಡುವುದೆಂದು ನಿಶ್ಚಯಿಸಿ ಯಾವಾಗಲೂ ರಥದಲ್ಲಿ ನಿರತರಾಗಿದಾರೆ.
ಭೀಮಾರ್ಜುನೌ ಪುರೋಧಾಯ ಯದಾ ತೌ ರಣಮೂರ್ಧನಿ |
ಸ್ಥಾಸ್ಯೇತೇ ಸಿಂಹವಿಕ್ರಾಂತಾವಶ್ವಿನಾವಿವ ದುಸ್ಸಹೌ |
ನ ಶೇಷಮನುಪಶ್ಯಾಮಿ ಮಮ ಸೈನ್ಯಸ್ಯ ಸಂಜಯ ||4||
ಸಿಂಹವಿಕ್ರಮಶಾಲಿಗಳಾದ ದುಸ್ಸಹರಾದ ಅಶ್ವಿನೀದೇವತೆಗಳಂತೆ ಇರುವ ಅವರು ಭೀಮಾರ್ಜುನರನ್ನು ಮುಂದೆಮಾಡಿಕೊಂಡು ಯುದ್ಧದಲ್ಲಿ ಅಗ್ರಭಾಗದಲ್ಲಿ ನಿಂತಾಗ ಎಲೈ ಸಂಜಯನೇ, ನನ್ನ ಸೈನ್ಯವು ಉಳಿಯುವುದಿಲ್ಲವೆಂದು ನಾನು ಭಾವಿಸುತ್ತೇನೆ.
ತೌ ಹ್ಯಪ್ರತಿರಥೌ ಯುದ್ಧೇ ದೇವಪುತ್ರೌ ಮಹಾಬಲೌ |
ದ್ರೌಪದ್ಯಾಸ್ತಂ ಪರಿಕ್ಲೇಶಂ ನ ಕ್ಷಂಸ್ಯೇತೇಽತ್ಯಮರ್ಷಿಣೌ ||5||
ಯುದ್ಧದಲ್ಲಿ ಅಪ್ರತಿರಥರೂ ದೇವಪುತ್ರರೂ ಮಹಾಬಲಿಷ್ಠರೂ ಮಹಾಕೋಪವುಳ್ಳವರೂ ಆದ ಅವರಿಬ್ಬರೂ ದ್ರೌಪದಿಯ ಆ ಪರಿಕ್ಲೇಶವನ್ನು ಕ್ಷಮಿಸುವುದಿಲ್ಲ.
ವೃಷ್ಣಯೋಽಥ ಮಹೇಷ್ವಾಸಾಃ ಪಾಂಚಾಲಾಶ್ಚಾಮಿತೌಜಸಃ |
ಯುಧಿ ಸತ್ಯಾಭಿಸಂಧೇನ ವಾಸುದೇವೇನ ರಕ್ಷಿತಾಃ |
ಪ್ರಧಕ್ಷ್ಯಂತಿ ರಣೇ ಪಾರ್ಥಾಃ ಪುತ್ರಾಣಾಂ ಮಮ ವಾಹಿನೀಮ್ ||
ಮಹಾಧನುರ್ಧಾರಿಗಳಾದ ವೃಷ್ಣಿಗಳು ಮತ್ತು ಅಮಿತಪರಾಕ್ರಮಿಗಳಾದ ಪಾಂಚಾಲರು ಯುದ್ಧದಲ್ಲಿ ಸತ್ಯಸಂಧನಾದ ಕೃಷ್ಣನಿಂದ ರಕ್ಷಿಸಲ್ಪಟ್ಟವರಾಗಿ ಪಾಂಡವರೂ ಸೇರಿ ನನ್ನ ಪುತ್ರರ ಸೈನ್ಯವನ್ನು ದಹಿಸುತ್ತಾರೆ.
ರಾಮಕೃಷ್ಣಪ್ರಣೀತಾನಾಂ ವೃಷ್ಣೀನಾಂ ಸೂತನಂದನ |
ನ ಶಕ್ಯಃ ಸಹಿತುಂ ವೇಗಃ ಪರ್ವತೈರಪಿ ದುಸ್ಸಹಃ ||8||
ಎಲೈ ಸೂತನಂದನನೇ, ರಾಮಕೃಷ್ಣರನ್ನು ನಾಯಕರಾಗುಳ್ಳ ವೃಷ್ಣಿಗಳ ವೇಗವು ಪರ್ವತಗಳಿಂದಲೂ ಸಹಿಸಲು ಅಸಾಧ್ಯವಾದುದು. ಅದನ್ನು ಯಾರೂ ಸಹಿಸಲಾರರು.
ತೇಷಾಂ ಮಧ್ಯೇ ಮಹೇಷ್ವಾಸೋ ಭೀಮೋ ಭೀಮಪರಾಕ್ರಮಃ |
ಶೈಕ್ಯಯಾ ವೀರಘಾತಿನ್ಯಾ ಗದಯಾ ವಿಚರಿಷ್ಯತಿ ||9||
ಅವರ ಮಧ್ಯದಲ್ಲಿ ಮಹಾಧನುರ್ಧಾರಿಯೂ ಭಯಂಕರ- ಪರಾಕ್ರಮವುಳ್ಳವನೂ ಆದ ಭೀಮನು ನೆಲುವಿನಲ್ಲಿ ತೂಗುಹಾಕಿರುವ ವೀರರನ್ನೂ ಸದೆಬಡಿಯುವ ತನ್ನ ಗದೆಯನ್ನು ಹಿಡಿದು ಸಂಚರಿಸುವನು.

ತಥಾ ಗಾಂಡೀವನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ಗದಾವೇಗಂ ಚ ಭೀಮಸ್ಯ ನಾಲಂ ಸೋಢುಂ ನರಾಧಿಪಾಃ ||10||
ಹಾಗೆಯೇ ಸಿಡಿಲಿನ ಅಬ್ಬರದಂತಿರುವ ಗಾಂಡೀವದ ಘೋಷವನ್ನೂ ಭೀಮಸೇನನ ಗದಾವೇಗವನ್ನೂ ಯಾವ ರಾಜರೂ ಸಹಿಸಲಾರರು.
ತತೋಽಹಂ ಸುಹೃದಾಂ ವಾಚೋ ದುರ್ಯೋಧನವಶಾನುಗಃ |
ಸ್ಮರಣೀಯಾಃ ಸ್ಮರಿಷ್ಯಾಮಿ ಮಯಾ ಯನ್ನ ಕೃತಂ ಪುರಾ ||11||
ಆಗ ದುರ್ಯೋಧನನವಶನಾದ ನಾನು ಯಾರ ಮಾತನ್ನು ಹಿಂದೆ ನಡೆಸಲಿಲ್ಲವೋ ಅಂತಹ ಸ್ಮರಣೆಗೆ ಯೋಗ್ಯವಾದ ಹಿತೈಷಿಗಳ ಮಾತನ್ನು ಸ್ಮರಿಸಿಕೊಳ್ಳುವೆನು.
ಸಂಜಯಃ
ವ್ಯತಿಕ್ರಮೋಽಯಂ ಸುಮಹಾನ್ ತ್ವಯಾ ರಾಜನ್ನುಪೇಕ್ಷಿತಃ |
ಸಮರ್ಥೇನಾಪಿ ಯನ್ಮೋಹಾತ್ ಪುತ್ರಸ್ತೇ ನ ನಿವಾರಿತಃ ||12||
ರಾಜನ್! ನೀನು ಸಮರ್ಥನಾಗಿದ್ದರೂ ಮೋಹದಿಂದ ನಿನ್ನ ಪುತ್ರನನ್ನು ನಿವಾರಿಸಲಿಲ್ಲ. ಈ ದೊಡ್ಡ ಧರ್ಮದ ಉಲ್ಲಂಘನೆಯು ನಿನ್ನಿಂದ ಉಪೇಕ್ಷಿಸಲ್ಪಟ್ಟಿತು.
ಶ್ರುತ್ವಾಽಯಂ ನಿರ್ಜಿತಾನ್ ದ್ಯೂತೇ ಪಾಂಡವಾನ್ ಮಧುಸೂದನಃ|
ತ್ವರಿತಃ ಕಾಮ್ಯಕೇ ಪಾರ್ಥಾನ್ ಸಮಭಾವಯದಚ್ಯುತಃ ||13||
ದ್ಯೂತದಲ್ಲಿ ಪಾಂಡವರು ಪರಾಜಿತರಾದರೆಂದು ಕೇಳಿದ ಮಧುಸೂದನನಾದ ಅಚ್ಯುತನು ತಕ್ಷಣ ಕಾಮ್ಯಕ ವನಕ್ಕೆ ಬಂದು ಪಾಂಡವರನ್ನು ಸತ್ಕರಿಸಿದನು.
ದ್ರುಪದಸ್ಯ ತಥಾ ಪುತ್ರಾ ಧೃಷ್ಟದ್ಯುಮ್ನಪುರೋಗಮಾಃ |
ವಿರಾಟೋ ಧೃಷ್ಟಕೇತುಶ್ಚ ಕೇಕಯಾಶ್ಚ ಮಹಾರಥಾಃ ||14||
ಹಾಗೆಯೇ ದ್ರುಪದನ ಪುತ್ರನಾದ ಧೃಷ್ಟದ್ಯುಮ್ನ ಮೊದಲಾದವರು ಮತ್ತು ಮಹಾರಥರಾದ ವಿರಾಟ ಧೃಷ್ಟಕೇತು ಕೈಕೆಯ ರಾಜರುಗಳು (ಪಾಂಡವರನ್ನು) ಸತ್ಕರಿಸಿದರು.
ತೈಶ್ಚ ಯತ್ ಕಥಿತಂ ದೃಷ್ಟ್ವಾ ತತ್ರ ಪಾರ್ಥಾಂಸ್ತಥಾಗತಾನ್ |
ಚಾರೇಣ ವಿದಿತಂ ಸರ್ವಂ ತನ್ಮಯಾ ವೇದಿತಂ ಚ ತೇ ||15||
ಅವರು ಆ ಅವಸ್ಥೆಯಲ್ಲಿದ್ದ ಪಾಂಡವರನ್ನು ನೋಡಿ ಆಡಿದ ಮಾತುಗಳನ್ನು ನಾನು ಚಾರರ ಮೂಲಕ ತಿಳಿದು ಎಲ್ಲವನ್ನೂ ನಿನಗೆ ತಿಳಿಸಿದ್ದೇನೆ.
ಸಮಾಗಮ್ಯ ವೃತಸ್ತತ್ರ ಪಾಂಡವೈರ್ಮಧುಸೂದನಃ |
ಸಾರಥ್ಯೇ ಫಲ್ಗುನಸ್ಯಾಜೌ ತಥೇತ್ಯಾಹ ಚ ತಾನ್ ಹರಿಃ ||16||
ಅಲ್ಲಿ ಪಾಂಡವರ ಸಮಾಗಮವನ್ನು ಹೊಂದಿದ ಮಧುಸೂದನನು ಅರ್ಜುನನಿಂದ ಸಾರಥ್ಯದಲ್ಲಿ ಪ್ರಾರ್ಥಿಸಲ್ಪಟ್ಟವನಾಗಿ ಹಾಗೆಯೇ ಆಗಲಿ ಎಂದು ಅವರನ್ನು ಕುರಿತು ಹೇಳಿದನು.
ಅಮರ್ಷೀ ಸಹಿ ಕೃಷ್ಣೋಽಪಿ ದೃಷ್ಟ್ವಾ ಪಾರ್ಥಾಂಸ್ತಥಾಗತಾನ್ |
ಕೃಷ್ಣಾಜಿನೋತ್ತರಸಂಗಾನಬ್ರವೀಚ್ಚ ಯುಧಿಷ್ಠಿರಮ್ ||17||
ಕೃಷ್ಣಾಜಿನದ ಉತ್ತರೀಯಗಳನ್ನು ಧರಿಸಿ ಅಂತಹ ಅವಸ್ಥೆಯಲ್ಲಿ ಇದ್ದ ಪಾಂಡವರನ್ನು ನೋಡಿ ಕ್ರೋಧವಶನಾದ ಕೃಷ್ಣನು ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು.
ಯಾ ಸಾ ಸಮೃದ್ಧಿಃ ಪಾರ್ಥಾನಾಮಿಂದ್ರಪ್ರಸ್ಥೇ ಬಭೂವ ಹ |
ರಾಜಸೂಯೇ ಮಯಾ ದೃಷ್ಟಾ ನೃಪೈರನ್ಯೈಃ ಸುದುರ್ಲಭಾ ||18||
ಯತ್ರ ಸರ್ವಾನ್ ಮಹೀಪಾಲಾನ್ ಶಸ್ತ್ರತೇಜೋಭಯಾರ್ದಿತಾನ್ |
ಕಲಿಂಗಾಂಗಮರೂನ್ ಪೌಂಡ್ರಾನ್ ಸಚೋಲದ್ರಮಿಳಾಂಧ್ರಕಾನ್ ||19||
ಸಾಗರಾನೂಪಕಾಂಶ್ಚೈವ ಯೇ ಚ ಪತ್ತನವಾಸಿನಃ |
ಸಿಂಹಳಾನ್ ಬರ್ಬರಾನ್ ಮ್ಲೇಚ್ಛಾನ್ ಯೇ ಚ ಜಾಂಗಲವಾಸಿನಃ ||
ಪಶ್ಚಿಮಾನಿ ಚ ರಾಜ್ಯಾನಿ ಶತಶಃ ಸಾಗರಾಂತಿಕಾನ್ |
ಪಲ್ಲವಾನ್ ದರದಾನ್ ಸರ್ವಾನ್ ಕಿರಾತಾನ್ ಯವನಾನ್ ಶಕಾನ್ ||
ಹಾರಹೂಣಾಂಶ್ಚ ಚೀರಾಂಶ್ಚ ತುಷಾರಾನ್ ಸೈಂಧವಾಂಸ್ತಥಾ |
ವಂಗಾಂಶ್ಚ ಮಗಧಾನ್ ಪುಂಡ್ರಾನ್ ಸ್ತ್ರೀರಾಜ್ಯಾನಥ ತಂಕಣಾನ್ ||22||
ಕೇಕಯಾನ್ ಮಾಳವಾಂಶ್ಚೈವ ತಥಾ ಕಾಶ್ಮೀರಕಾನಪಿ |
ಏತೇ ಚಾನ್ಯೇ ಚ ಬಹವೋ ಯೇ ಚ ತೇ ಭರತರ್ಷಭ |
ಆಗತಾನಹಮದ್ರಾಕ್ಷಂ ಯಜ್ಞೇ ತೇ ಪರಿವೇಷಕಾನ್ ||23||
ರಾಜಸೂಯಯಾಗದಲ್ಲಿ ಇಂದ್ರಪ್ರಸ್ಥದಲ್ಲಿ ಸುದುರ್ಲಭವಾದ ಪಾಂಡವರ ಯಾವ ಸಮೃದ್ಧಿಯನ್ನು ನಾನು ನೋಡಿದ್ದೇನೋ ಎಲ್ಲಿ ಪಾಂಡವರ ಶಸ್ತ್ರ ಮತ್ತು ಪರಾಕ್ರಮಗಳ ಭಯದಿಂದ ಪೀಡಿತರಾದ ಕಳಿಂಗ ಅಂಗ ಮರು ಪೌಂಡ್ರ ಚೋಳ ದ್ರಮಿಳ ಆಂಧ್ರಕ ರಾಜರು ಸಾಗರತೀರವಾಸಿಗಳು ಪಟ್ಟಣವಾಸಿಗಳು ಸಿಂಹಳರಾಜರು ಬರ್ಬರರು ಮ್ಲೇಂಚ್ಛರು ಜಾಂಗಲವಾಸಿಗಳೂ ಆದ ರಾಜರುಗಳು ಪಶ್ಚಿಮದಿಕ್ಕಿನಲ್ಲಿ ಸಾಗದರ ಸಮೀಪದಲ್ಲಿ ಇರುವ ನೂರಾರು ರಾಜ್ಯದ ರಾಜರುಗಳು ಪಲ್ಲವರು ದರದರು ಎಲ್ಲಾ ಕಿರಾತರು

ಯವನರು ಶಕರು ಹಾರಹೂಣರು ಚೀರರು ತುಷಾರರು ಸೈಂಧವರು ವಂಗರು ಮಗಧರು ಪುಂಡ್ರರು ಸ್ತ್ರೀರಾಜ್ಯಾಧಿಪತಿಗಳು ತಂಕಣರು ಕೇಕಯರು ಮಾಳವರು  ಕಾಶ್ಮೀರಕರು ಎಲೈ ಭರತರ್ಷಭನೇ, ಇವರೂ ಮತ್ತು ಇನ್ನೂ ಅನೇಕರೂ ನಿನ್ನ ಯಜ್ಞಕ್ಕೆ ಬಂದು ಬ್ರಾಹ್ಮಣರಿಗೆ  ಬಡಿಸುತ್ತಿದ್ದುದನ್ನು ನಾನು ನೋಡಿದ್ದೆನೋ
ಸಾ ತೇ ಸಮೃದ್ಧಿರ್ಯೈರಾಪ್ತಾ ಚಪಲಾ ಪ್ರತಿಸಾರಿಣೀ |
ಆದಾಯ ಜೀವಿತಂ ತೇಷಾಮಾಹರಿಷ್ಯಾಮಿ ತಾಮಹಮ್ ॥24॥
ಆ ನಿನ್ನ  ಯಾವಾಗಲೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವ ಚಂಚಲ ಸ್ವಭಾವವುಳ್ಳ ಸಮೃದ್ಧಿಯು ಯಾರನ್ನು ಸೇರಿತೋ ನಾನು ಅವರ ಪ್ರಾಣಗಳ ಜೊತೆಯಲ್ಲಿ ಆ ಸಂಪತ್ತನ್ನು ಹಿಂದೆ ತರುವೆನು.
ರಾಮೇಣ ಸಹ ಕೌರವ್ಯ ಭೀಮಾರ್ಜುನಯಮೈಸ್ತಥಾ |
ಅಕ್ರೂರಗದಸಾಂಬೈಶ್ಚ ಪ್ರದ್ಯುಮ್ನೇನಾಹುಕೇನ ಚ ॥25॥
ಧೃಷ್ಟದ್ಯುಮ್ನೇನ ವೀರೇಣ ಶಿಶುಪಾಲಾತ್ಮಜೇನ ಚ |
ದುರ್ಯೋಧನಂ  ರಣೇ ಹತ್ವಾ ಸದ್ಯಃ ಕರ್ಣಂ ಚ ಭಾರತ |
ದುಃಶಾಸನಂ ಸೌಬಲೇಯಂ ಯಶ್ಚಾನ್ಯಃ ಪ್ರತಿಯೋತ್ಸ್ಯತಿ ॥26॥
ಎಲೌ ಕೌರವ್ಯನೇ, ಬಲರಾಮನಿಂದಲೂ ಭೀಮಾರ್ಜುನ ನಕುಲಸಹದೇವರಿಂದಲೂ ಅಕ್ರೂರಗದಸಾಂಬರಿಂದಲೂ ಪ್ರದ್ಯುಮ್ನ ಮತ್ತು ಆಹುಕರಿಂದಲೂ ವೀರರಾದ ಧೃಷ್ಟದ್ಯುಮ್ನನಿಂದಲೂ ಶಿಶುಪಾಲನ ಪುತ್ರನಿಂದಲೂ ಕೂಡಿದವನಾಗಿ ಎಲೈ ಭಾರತನೇ, ದುರ್ಯೋಧನನನ್ನು ಕರ್ಣನನ್ನು ದುಶ್ಶಾಸನನನ್ನು ಸುಬಲಪುತ್ರನಾದ ಶಕುನಿಯನ್ನು ಮತ್ತು ಬೇರೆ ಯಾರಾದರೂ ಪ್ರತಿಯಾಗಿಯುದ್ಧವನ್ನು ಮಾಡಿದರೆ ಅವರನ್ನು ಸಹ ಯುದ್ಧದಲ್ಲಿ ಕೊಂದು (ಆ ಸಂಪತ್ತನ್ನು ನಿನಗೆ ಹಿಂದಿರುಗಿಸುವೆನು.)
ತತಸ್ತ್ವಂ ಹಸ್ತಿನಪುರೇ ಭ್ರಾತೃಭಿಃ ಸಹಿತೋ ವಸನ್ |
ಧಾರ್ತರಾಷ್ಟ್ರೀಂ ಶ್ರಿಯಂ ಪ್ರಾಪ್ಯ ಪ್ರಶಾಧಿ ಪೃಥಿವೀಮಿಮಾಮ್ ॥27॥
ಅನಂತರ ನೀನು ಈಗ ಧೃತರಾಷ್ಟ್ರನಲ್ಲಿರುವ ಸಂಪತ್ತನ್ನು ಹೊಂದಿ ತಮ್ಮಂದಿರಿಂದ  ಸಹಿತನಾಗಿ ಹಸ್ತಿನಪುರದಲ್ಲಿ ನೆಲೆಸಿ ಈ ಭೂಮಿಯನ್ನು ಆಳು.
ಸಂಜಯಃ
ಅಥೈನಮಬ್ರವೀದ್ರಾಜಾ ತಸ್ಮಿನ್ ವೀರಸಮಾಗಮೇ |
ಶೃಣ್ವತ್ಸು ತೇಷು ಸರ್ವೇಷು ಧೃಷ್ಟದ್ಯುಮ್ನಮುಖೇಷು ಚ ॥28॥
ಆಗ ಆ ವೀರಸಮುದಾಯದಲ್ಲಿ ಧೃಷ್ಟದ್ಯುಮ್ನ ಮೊದಲಾದ  ಎಲ್ಲರೂ ಕೇಳುತ್ತಿರುವಂತೆ ಧರ್ಮರಾಜನು ಕೃಷ್ಣನನ್ನು ಕುರಿತು ಮಾತನಾಡಿದನು.
ಪ್ರತಿಗೃಹ್ಣಾಮಿ ತೇ ವಾಚಂ ಸತ್ಯಾಮಭಿಹಿತೋ ಹ್ಯಸಿ |
ಅಮಿತ್ರಾನ್ ಮೇ ಮಹಾಬಾಹೋ ಸಾನುಬಂಧಾನ್ ಹನಿಷ್ಯಸಿ ॥29॥
ಮಹಾಬಾಹುವೇ ನೀನು ಆಡಿದ ಸತ್ಯವಾದ ಮಾತುಗಳನ್ನು ನಾನು  ಸ್ವೀಕರಿಸುತ್ತೇನೆ. ನೀನು ನನ್ನ ಶತ್ರುಗಳನ್ನು ಅವರ ಪರಿವಾರಸಹಿತವಾಗಿ ಸಂಹರಿಸುವಿ.
ವರ್ಷಾತ್ ತ್ರಯೋದಶಾದೂರ್ಧ್ವಂ ಸತ್ಯಂ ಮಾಂ ಕುರು ಕೇಶವ |
ಪ್ರತಿಜ್ಞಾತೋ ವನೇ ವಾಸೋ ರಾಜ್ಞಾಂ ಮಧ್ಯೇ ಮಯಾಽಪ್ಯಯಮ್ ॥
ಕೇಶವನೇ, ಹದಿಮೂರುವರ್ಷಗಳ ನಂತರ ನನ್ನನ್ನು ಸತ್ಯವಚನನ್ನಾಗಿ ಮಾಡು. ನಾನಾದರೋ ರಾಜರ ಮಧ್ಯದಲ್ಲಿ ಈ ವನವಾಸವನ್ನು ಪ್ರತಿಜ್ಞೆಮಾಡಿದ್ದೇನೆ.
ಧರ್ಮರಾಜಸ್ಯ ವಚನಂ ಶ್ರುತ್ವಾ ಸತ್ಯಂ ಸಭಾಸದಃ |
ಧೃಷ್ಟದ್ಯುಮ್ನಪುರೋಗಾಸ್ತೇ ಶಮಯಾಮಾಸುರಂಜಸಾ ॥31॥
ಕೇಶವಂ ಮಧುರೈರ್ವಾಕ್ಯೈಃ ಸಮಾಯುಕ್ತೈರಮರ್ಷಿತಮ್ |
ಪಾಂಚಾಲೀಂ ಚಾಹ್ವಯಾಮಾಸ ವಾಸುದೇವಸ್ತು ಶೃಣ್ವತಾಮ್ ॥32॥
ಧರ್ಮರಾಜನ ಸತ್ಯವಚನಗಳನ್ನು ಕೇಳಿದ ಧೃಷ್ಟದ್ಯುಮ್ನ ಮೊದಲಾದ ಸಭಾಸದರು ಸಿಟ್ಟಿನಿಂದ ಕೂಡಿದ್ದ ಕೃಷ್ಣನನ್ನು ಮಧುರವಾಕ್ಯಗಳಿಂದ ಕೂಡಿದ ಮಾತುಗಳಿಂದ ಸಮಾದಾನಗೊಳಿಸಿದರು. ಕೃಷ್ಣನು ಎಲ್ಲರೂ ಕೇಳುತ್ತಿರುವಂತೆ ದ್ರೌಪದಿಯನ್ನು ಕರೆಸಿದನು.
ಶ್ರೀಭಗವಾನ್
ದುರ್ಯೋಧನಸ್ತವ ಕ್ರೋಧಾತ್ ದೇವಿ ತ್ಯಕ್ಷ್ಯತಿ ಜೀವಿತಮ್ |
ಸತ್ಯಂ ತೇ ಪ್ರತಿಜಾನೀಮೋ ಮಾ ಶುಚೋ ವರವರ್ಣಿನಿ ॥33॥
ದೇವಿಯೇ, ನಿನ್ನ ಸಿಟ್ಟಿನಿಂದಾಗಿ ದುರ್ಯೋಧನನು ಪ್ರಾಣವನ್ನು ತೊರೆಯುವನು. ನಾನು ಪ್ರಮಾಣಮಾಡಿ ಹೇಳುತ್ತಿದ್ದೇನೆ. ಸುಂದರಿಯೇ, ಶೋಕಪಡಬೇಡ.
ಯೇ ತ್ವೇತೇ ಕುರವಃ ಕೃಷ್ಣೇ ದೃಷ್ಟ್ವಾ ತ್ವಾಂ ಪ್ರಾಹಸಂಸ್ತದಾ |
ಮಾಂಸಾನಿ ತೇಷಾಂ ಖಾದಂತೋ ಹರಿಷ್ಯಂತಿ ಮೃಗದ್ವಿಜಾಃ ॥32॥
ದ್ರೌಪದಿಯೇ, ಯಾವ ಕುರುಗಳು ಆಗ ನಿನ್ನನ್ನು ನೋಡಿ ಪರಿಹಾಸಮಾಡಿದರೋ ಅವರ ಮಾಂಸಗಳನ್ನು ಮೃಗಪಕ್ಷಿಗಳು ಎಳೆದಾಡುತ್ತಾ ತಿನ್ನುವುವು.
ಪಾಸ್ಯಂತಿ ರುಧಿರಂ ತೇಷಾಂ ಗೃಧ್ರಾ ಗೋಮಾಯವಸ್ತಥಾ |

ಉತ್ತಮಾಂಗಾನಿ ಕರ್ಷಂತೋ ಯೈಸ್ತ್ವಂ ನೀತಾ ಸಭಾಂ ಪುರಾ ॥35॥
ಹಿಂದೆ ನೀನು ಯಾರಿಂದ ಸಭೆಗೆ ತರಲ್ಪಟ್ಟಿಯೋ ಅವರ ತಲೆಗಳನ್ನು ಎಳೆದಾಡುತ್ತಾ ಹದ್ದುಗಳು ಮತ್ತು ನರಿಗಳು ಅವರ ರಕ್ತವನ್ನು ಪಾನಮಾಡುವುವು.
ತೇಷಾಂ ದ್ರಕ್ಷ್ಯಸಿ ಪಾಂಚಾಲಿ ಗಾತ್ರಾಣಿ ಪೃಥಿವೀತಳೇ |
ಕ್ರವ್ಯಾದ್ಯೈಃ ಕೃಷ್ಯಮಾಣಾನಿ ಭಕ್ಷ್ಯಮಾಣಾನಿ ಚಾಸಕೃತ್ ॥36॥
ಪಾಂಚಾಲಿಯೇ, ಅವರ ಶರೀರಗಳು ಭೂಮಿಯಲ್ಲಿಯೇ ಬಿದ್ದು ಮಾಂಸಾಹಾರಿ ಪ್ರಾಣಿಗಳಿಂದ ಎಳೆದಾಡುತ್ತಾ ತಿನ್ನಲ್ಪಡುವುದನ್ನು ನೀನು ಅನೇಕ ಬಾರಿ ನೋಡುವಿ.
ಪರಿಕ್ಲಿಷ್ಟಾಽಸಿ ಯೈಸ್ತತ್ರ ಯೈಶ್ಚಾಸಿ ಸಮುಪೇಕ್ಷಿತಾ |
ತೇಷಾಮುತ್ಕೃಷ್ಟಶಿರಸಾಂ ಭೂಮಿಃ ಪಾಸ್ಯತಿ ಶೋಣಿತಮ್ ॥37॥
ಯಾರು ನಿನ್ನನ್ನು ಪರಿಕ್ಲೇಶ ಪಡಿಸಿದರೋ ಮತ್ತು ಉಪೇಕ್ಷೆಮಾಡಿದರೋ ಭೂಮಿಯು ತನ್ನ ಮೇಲೆ ಶಿರಚ್ಛೇದಹೊಂದಿ ಬಿದ್ದ ಅವರ ರಕ್ತವನ್ನು ಪಾನಮಾಡುವುದು.
ಸಂಜಯಃ
ಏವಂ ಬಹುವಿಧಾ ವಾಚಃ ತದೋಚುಃ ಪುರುಷರ್ಷಭಾಃ |
ಸರ್ವೇ ತೇಜಸ್ವಿನಃ ಶೂರಾಃ ಸರ್ವೇ ಚಾಹವಲಕ್ಷಣಾಃ ॥38॥
ಆಗ ಶೂರರೂ ತೇಜಸ್ವಿಗಳೂ ಯುದ್ಧಾಕಾಂಕ್ಷಿಗಳೂ ಪುರುಷರ್ಷಭರೂ ಆದ ಅವರೆಲ್ಲರೂ ಹೀಗೆ ಬಹುವಿಧವಾಗಿ ಮಾತನಾಡಿದರು.
ತೇ ಧರ್ಮರಾಜೇನ ವೃತಾ ವರ್ಷಾದೂರ್ಧ್ವಂ ತ್ರಯೋದಶಾತ್|
ಪುರಸ್ಕೃತ್ಯೋಪಯಾಸ್ಯಂತಿ ವಾಸುದೇವಂ ಮಹಾರಥಾಃ ॥39॥
ಧರ್ಮರಾಜನಿಂದ ಸಹಾಯಕ್ಕಾಗಿ ಪ್ರಾರ್ಥಿತರಾದ ಆ ಮಹಾರಥರೆಲ್ಲರೂ ಹದಿಮೂರು ವರ್ಷಗಳ ನಂತರ ಕೃಷ್ಣನನ್ನು ಮುಂದೆಮಾಡಿಕೊಂಡು ಬರುವವರಿದ್ದಾರೆ.
ರಾಮಂ ಚ ಕೃಷ್ಣಂ ಚ ಧನಂಜಯಂ ಚ
ಪ್ರದ್ಯುಮ್ನಸಾಂಬೌ ಯುಯುಧಾನಭೀಮೌ |
ಮಾದ್ರೀಪುತ್ರೌ ಕೇಕಯರಾಜಪುತ್ರಾನ್
ಪಾಂಚಾಲಪುತ್ರಾನ್ ಸಹ ಮದ್ರರಾಜ್ಞಾ ॥40॥
ಏತಾನ್ ಸರ್ವಾನ್ ಲೋಕಧೀರಾನಜೇಯಾನ್
ಮಹಾತ್ಮನಃ ಸಾನುಬಂಧಾನ್ ಸಸೈನ್ಯಾನ್ |
ಕೋ ಜೀವಿತಾರ್ಥೀ ಸಮರೇಽಭ್ಯುದೀಯಾತ್
ಕ್ರುದ್ಧಾನ್ ಸಿಂಹಾನ್ ಕೇಸರಿಣೋ ಯಥೈವ ॥41॥
ಸರ್ವಲೋಕೈಕವೀರರು ಅಜೇಯರು ಮತ್ತು ಮಹಾತ್ಮರೂ ಆದ ಬಲರಾಮ ಕೃಷ್ಣ ಧನಂಜಯ ಪ್ರದ್ಯುಮ್ನ ಸಾಂಬರು ಯುಯುಧಾನ ಭೀಮ ಮಾದ್ರಿಪುತ್ರರು ಕೇಕಯರಾಜಕುಮಾರರು ಪಾಂಚಾಲ- ರಾಜಕುಮಾರರು ಮದ್ರರಾಜನಾದ ಶಲ್ಯ ಇವರೆಲ್ಲರೂ ತಮ್ಮ ಪರಿವಾರ ಮತ್ತು ಸೈನ್ಯದ ಜೊತೆಯಲ್ಲಿ ಒಟ್ಟಿಗೆ ದಂಡೆತ್ತಿ ಬಂದಾಗ ಅವರನ್ನು ಜೀವನವನ್ನು ಬಯಸುವ ಯಾವನು ತಾನೇ ಕೋಪದಿಂದ ಕೇಸರಗಳನ್ನು ಕೆದರಿಕೊಂಡು ಕ್ರುದ್ಧವಾದ ಸಿಂಹವನ್ನು ಎದುರಿಸಿದಂತೆ ಎದುರಿಸಬಹುದು?
ಧೃತರಾಷ್ಟ್ರಃ
ಯನ್ಮಾಽಬ್ರವೀದ್ ವಿದುರೋ ದ್ಯೂತಕಾಲೇ
ತ್ವಂ ಪಾಂಡವಾನ್ ಜೇಷ್ಯಸಿ ಚೇನ್ನರೇಂದ್ರ |
ಧ್ರುವಂ ಕುರೂಣಾಮಯಮಂತಕಾಲೋ
ಮಹಾಭಯೋ ಭವಿತಾ ಶೋಣಿತೌಘಃ ॥42॥
ಮನ್ಯೇ ತಥಾ ತದ್ಭವಿತೇತಿ ಸೂತ
ಯಥಾ ಕ್ಷತ್ತಾ ಪ್ರಾಹ ವಚಃ ಪುರಾ ಮಾಮ್ |
ಅಸಂಶಯಂ ಭವಿತಾ ಯುದ್ಧಮೇತದ್
ಗತೇ ಕಾಲೇ ಪಾಂಡವಾನಾಂ ಯಥೋಕ್ತಮ್ ॥43॥
ದ್ಯೂತಕಾಲದಲ್ಲಿ ವಿದುರನು ನನ್ನನ್ನು ಕುರಿತು ನರೇಂದ್ರನೇ! ದ್ಯೂತದಲ್ಲಿ ನೀನು ಪಾಂಡವರನ್ನು ಏನಾದರೂ ಜಯಿಸಿದರೆ ಕುರುಗಳಿಗೆ ನಿಶ್ಚಯವಾಗಿ ಮಹಾಭಯವನ್ನು ಉಂಟುಮಾಡುವ ಅಂತಕಾಲವು ಉಂಟಾಗುತ್ತದೆ. ರಕ್ತದ ಪ್ರವಾಹವು ಹರಿಯುತ್ತದೆ ಎಂದು ಯಾವ ಮಾತುಗಳನ್ನು ಆಡಿದ್ದನೋ ಅದು ಹಾಗೆಯೇ ನಡೆಯುವುದೆಂದು ನನಗೆ ತೋರುತ್ತದೆ. ಎಲೈ ಸೂತನೇ, ಹಿಂದೆ ನನಗೆ ವಿದುರನು ಹೇಗೆ ಹೇಳಿದ್ದನೋ ಅದರಂತೆ ಪಾಂಡವರಿಗೆ ಹದಿಮೂರು ವರ್ಷಗಳು ಕಳೆದ ಮೇಲೆ ನಿಸ್ಸಂಶಯವಾಗಿ ವಿದುರನು ಹೇಳಿದಂತೆ ಈ ಯುದ್ಧವು ನಡೆಯುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
॥ ಇಂದ್ರಲೋಕಾಭಿಗಮನಪರ್ವಣಿ ಸಪ್ತಮೋಽಧ್ಯಾಯಃ ॥
॥ ಇಂದ್ರಲೋಕಾಭಿಗಮನಪರ್ವ ಸಮಾಪ್ತಮ್ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
ಇಲ್ಲಿಗೆ ಇಂದ್ರಲೋಕಾಭಿಗಮನಪರ್ವವು ಮುಗಿಯಿತು.

*****

5. ತೀರ್ಥಯಾತ್ರಾಪರ್ವ

ನಲವತ್ತೈದನೆಯ ಅಧ್ಯಾಯ

(ಕಾಮ್ಯಕವನಕ್ಕೆ ಬೃಹದಶ್ವರ ಆಗಮನ. ಯುಧಿಷ್ಠಿರನನ್ನು ಕುರಿತು ನಳ ಚರಿತ್ರೆಯ ಕಥನ.)

ಜನಮೇಜಯಃ

ಅಸ್ತ್ರಹೇತೋರ್ಗತೇ ಪಾರ್ಥೇ ಶಕ್ರಲೋಕಂ ಮಹಾತ್ಮನಿ |
ಯುಧಿಷ್ಠಿರಪ್ರಭೃತಯಃ ಕಿಮಕುರ್ವತ ಪಾಂಡವಾಃ ||1||

ಅಸ್ತ್ರವನ್ನು ಸಂಪಾದಿಸುವುದಕ್ಕಾಗಿ ಮಹಾತ್ಮನಾದ ಅರ್ಜುನನು ಇಂದ್ರಲೋಕಕ್ಕೆ ಹೋದಮೇಲೆ ಯುಧಿಷ್ಠಿರ ಮೊದಲಾದ ಪಾಂಡವರು ಏನು ಮಾಡಿದರು?

ವೈಶಂಪಾಯನಃ

ಅಸ್ತ್ರಹೇತೋರ್ಗತೇ ಪಾರ್ಥೇ ಶಕ್ರಲೋಕಂ ಮಹಾತ್ಮನಿ |
ನ್ಯವಸನ್ ಕೃಷ್ಣಯಾ ಸಾರ್ಧಂ ಕಾಮ್ಯಕೇ ಪುರುಷರ್ಷಭಾಃ ||2||

ಅಸ್ತ್ರವನ್ನು ಸಂಪಾದಿಸುವ ಸಲುವಾಗಿ ಆರ್ಜುನನು ಸ್ವರ್ಗಲೋಕಕ್ಕೆ ಹೋದಮೇಲೆ ಕಾಮ್ಯಕವನದಲ್ಲಿ ಪುರುಷ ಶ್ರೇಷ್ಠರಾದ ಪಾಂಡವರು ದ್ರೌಪದಿಯ ಜೊತೆಯಲ್ಲಿ ವಾಸಮಾಡಿದರು.

ತತಃ ಕದಾಚಿದೇಕಾಂತೇ ವಿವಿಕ್ತೇ ಮೃದುಶಾದ್ವಲೇ |
ದುಃಖಾರ್ತಾ ಭರತಶ್ರೇಷ್ಠಾ ನಿಷೇದುಃ ಸಹ ಕೃಷ್ಣಯಾ ||3||

ಅನಂತರ ಒಮ್ಮೆ ಆ ಭರತಶ್ರೇಷ್ಠರು ಏಕಾಂತವಾದ ವಿವಿಕ್ತವಾದ ಒಂದು ಮೃದು ಮತ್ತು ಶೀತಲವಾದ ಪ್ರದೇಶದಲ್ಲಿ ದ್ರೌಪದಿಯ ಜೊತೆಯಲ್ಲಿ ದುಃಖಾರ್ತರಾಗಿ ಕುಳಿತಿದ್ದರು.

ಧನಂಜಯಂ ಶೋಚಮಾನಾಃ ಸಾಸ್ರುನೇತ್ರಾಃ ಸುದುಃಖಿತಾಃ |
ತದ್ವಿಯೋಗಾತ್ ತು ಸರ್ವೇಷಾಂ ಶೋಕಃ ಸಮಭಿಪುಪ್ಲುವೇ ||4||

ಅರ್ಜುನನನ್ನು ಕುರಿತು ಶೋಕಪಡುತ್ತಾ ಕಣ್ಣುಗಳಲ್ಲಿ ನೀರುತುಂಬಿಕೊಂಡು ದುಃಖಿತರಾದ ಅವರೆಲ್ಲರಿಗೂ ಅರ್ಜುನನ ವಿಯೋಗದಿಂದ ಶೋಕವು ಅಧಿಕವಾಯಿತು.

ಧನಂಜಯವಿಯೋಗಾಚ್ಚ ರಾಜ್ಯನಾಶಾಚ್ಚ ದುಃಖಿತಾಃ |
ಅಥ ಭೀಮೋ ಮಹಾಬಾಹುರ್ಯುಧಿಷ್ಠಿರಮಭಾಷತ ||5||

ಅರ್ಜುನನ ವಿಯೋಗದಿಂದಲೂ ಮತ್ತು ರಾಜ್ಯನಾಶದಿಂದಲೂ ಅವರು ದುಃಖಿತರಾದರು ಆಗ ಮಹಾಬಾಹುವಾದ ಭೀಮನು ಯುಧಿಷ್ಠಿರನನ್ನು ಕುರಿತು ಮಾತನಾಡಿದನು.

ನಿದೇಶಾತ್ ತೇ ಮಹಾರಾಜ ಗತೋಽಸೌ ಪುರುಷರ್ಷಭಃ |
ಅರ್ಜುನಃ ಪಾಂಡುಪುತ್ರಾಣಾಂ ಯಸ್ಮಿನ್ ಪ್ರಾಣಾಃ ಪ್ರತಿಷ್ಠಿತಾಃ ||6||

ಮಹಾರಾಜನೇ, ಯಾವ ಅರ್ಜುನನಲ್ಲಿ ಪಾಂಡವರಾದ ನಮ್ಮೆಲ್ಲರ ಪ್ರಾಣಗಳು ಪ್ರತಿಷ್ಠಿತವಾಗಿವೆಯೋ ಅಂತಹ ಪುರುಷಶ್ರೇಷ್ಠನಾದ ಅರ್ಜುನನು ನಿನ್ನ ಆದೇಶದಂತೆ ಹೋಗಿದ್ದಾನೆ.

ಯಸ್ಮಿನ್ ವಿನಷ್ಟೇ ಪಾಂಚಾಲಾಃ ಸಹ ಪುತ್ರೈಸ್ತಥಾ ವಯಮ್ |
ಸಾತ್ಯಕಿರ್ವಾಸುದೇವೋಽಪಿ ವಿನಶ್ಯೇಯುರಸಂಶಯಃ ||7||

ಅವನು ವಿನಾಶವನ್ನು ಹೊಂದಿದರೆ ತಮ್ಮ ಮಕ್ಕಳ ಜೊತೆಯಲ್ಲಿ ಪಾಂಚಾಲರು ಮತ್ತು ನಾವು ಸಾತ್ಯಕಿ ಮತ್ತು ಕೃಷ್ಣನೂ ನಾಶವಾಗುವುದರಲ್ಲಿ ಸಂಶಯವಿಲ್ಲ.

ಯೋಽಸೌ ಗಚ್ಛತಿ ತೇಜಸ್ವೀ ಬಹೂನ್ ಕ್ಲೇಶಾನ್ ವಿಚಿಂತಯನ್ |
ಭವನ್ನಿಯೋಗಾದ್ ಬೀಭತ್ಸುಃ ತತೋ ದುಃಖತರಂ ನು ಕಿಮ್ ||8||

ಈ ತೇಜಸ್ವಿಯಾದ ಅರ್ಜುನನು ಅನೇಕ ದೋಷಗಳನ್ನು ಪರಿಗಣಿಸದೆ ನಿನ್ನ ಆಜ್ಞೆಯಂತೆ ನಮ್ಮನ್ನು ಬಿಟ್ಟು ಹೋಗಿದ್ದಾನೆ. ಇದಕ್ಕಿಂತ ಹೆಚ್ಚು ದುಃಖಕರವಾದುದ್ದು ಏನಿದೆ?

ಯಸ್ಯ ಬಾಹೂ ಸಮಾಶ್ರಿತ್ಯ ವಯಂ ಸರ್ವೇ ಮಹಾತ್ಮನಃ |
ಮನ್ಯಾಮಹೇ ಜಿತಾನಾಜೌ ಪರಾನ್ ಪ್ರಾಪ್ತಾಂ ಚ ಮೇದಿನೀಮ್ ||

ಯಸ್ಯ ಪ್ರಭಾವಾದ್ದಿ ವಯಂ ಸಭಾಮಧ್ಯೇ ಧನುಷ್ಮತಃ |
ಜಿತಾನ್ ಮನ್ಯಾಮಹೇ ಸರ್ವಾನ್ ಧಾರ್ತರಾಷ್ಟ್ರಾನ್ ಸಸೌಬಲಾನ್ ||

ಯಸ್ಯ ಪ್ರಭಾವಾನ್ನ ಮಯಾ ಸಭಾಮಧ್ಯೇ ಮಹಾಬಲಾಃ |
ನೀತಾ ಲೋಕಮಮುಂ ಸರ್ವೇ ಧಾರ್ತಾರಾಷ್ಟ್ರಾಃ ಸಸೌಬಲಾಃ ||11||

ತೇ ವಯಂ ಬಾಹುಬಲಿನಃ ಕ್ರೋಧಮುತ್ಥಿತಮಾತ್ಮನಃ |
ಸಹಾಮಹೇ ಭವನ್ಮೂಲಂ ವಾಸುದೇವೇನ ಪಾಲಿತಾಃ ||12||

ಮಹಾತ್ಮನಾದ ಯಾರ ಬಾಹುಬಲವನ್ನು ಆಶ್ರಯಿಸಿ ಶತ್ರುಗಳನ್ನು ಪರಾಭವಗೊಳಿಸಿ ಭೂಮಿಯು ನಮ್ಮ ವಶಕ್ಕೆ ಬಂದಿದೆ ಎಂದು ಭಾವಿಸುತ್ತೇವೆಯೋ, ಯಾವನ ಪ್ರಭಾವದಿಂದ ನಾವು ಸಭಾಮಧ್ಯದಲ್ಲಿ ದುರ್ಯೋಧನ ಮತ್ತು ಶಕುನಿಯಿಂದ ಕೂಡಿದ ಎಲ್ಲಾ ಧನುರ್ಧಾರಿಗಳನ್ನು ಪರಾಭವಗೊಳಿಸಿದ್ದೇವೆ ಎಂದು ಭಾವಿಸಿದ್ದೇವೆಯೋ, ಯಾರ ಸಮಾಧಾನ ವಚನಗಳ ಸಾಮರ್ಥ್ಯದಿಂದಾಗಿ ಸಭಾಮಧ್ಯದಲ್ಲಿ ಮಹಾಬಲಿಷ್ಠರಾದ ಶಕುನಿಯಿಂದ ಸೇರಿದ ಎಲ್ಲಾ ಧೃತರಾಷ್ಟ್ರಪುತ್ರರನ್ನೂ ನಾನು ಯಮಲೋಕಕ್ಕೆ

ಕಳುಹಿಸಲಿಲ್ಲವೋ, ಅಂತಹ ಬಾಹುಬಲವುಳ್ಳ ನಾವು ನಿನ್ನ ನಿಮಿತ್ತದಿಂದಾಗಿ ಮನಸ್ಸಿನಲ್ಲಿ ಉಂಟಾದ ಕ್ರೋಧವನ್ನು ಕೃಷ್ಣನಿಂದ ರಕ್ಷಿತರಾಗಿ ಸಹಿಸಿಕೊಂಡಿದ್ದೇವೆ.
ವಯಂ ಹಿ ಸಹ ಕೃಷ್ಣೇನ ಹತ್ವಾ ಕರ್ಣಮುಖಾನ್ ಪರಾನ್ |
ಸ್ವಬಾಹುವಿಜಿತಾಂ ಕೃತ್ಸ್ನಾಂ ಪ್ರಶಾಸೇಮ ವಸುಂಧರಾಮ್ ॥13॥
ನಾವು ಕೃಷ್ಣನ ಸಹಾಯದಿಂದ ಕರ್ಣಮೊದಲಾದ ಎಲ್ಲಾ ಶತ್ರುಗಳನ್ನೂ ಗೆದ್ದು ನಮ್ಮ ಬಾಹುಬಲದಿಂದಲೇ ಜಯಿಸಲ್ಪಡುವ ಸಮಗ್ರವಾದ ಭೂಮಿಯನ್ನು ಆಳೋಣ.
ಭವತೋ ದ್ಯೂತದೋಷೇಣ ಸರ್ವೇ ವಯಮವಪ್ಲುತಾಃ |
ಅಹೀನಪೌರುಷಾ ರಾಜನ್ ಬಲಿಭಿರ್ಬಲವತ್ತರಾಃ ॥14॥
ರಾಜನೇ! ನಿನ್ನ ದ್ಯೂತದೋಷದಿಂದ ಬಲವುಳ್ಳವರಿಗಿಂತಲೂ ಬಲಿಷ್ಠರಾದ ಮಹಾಪೌರುಷವನ್ನು ಹೊಂದಿದ ನಾವೆಲ್ಲರೂ ಅಧಃಪತನವನ್ನು ಹೊಂದಿದ್ದೇವೆ.
ಕ್ಷಾತ್ರಂ ಧರ್ಮಂ ಮಹಾರಾಜ ಸಮವೇಕ್ಷಿತುಮರ್ಹಸಿ |
ನ ಹಿ ಧರ್ಮೋ ಮಹಾರಾಜ ಕ್ಷತ್ರಿಯಸ್ಯ ವನಾಶ್ರಯಃ ॥15॥
ಮಹಾರಾಜನೇ! ನೀನು ಕ್ಷತ್ರಿಯ ಧರ್ಮವನ್ನು ಗಮನಿಸು. ಮಹಾರಾಜನೇ ಕ್ಷತ್ರಿಯನಿಗೆ ವನವಾಸವು ಧರ್ಮವಲ್ಲವಷ್ಟೇ?
ರಾಜ್ಯಮೇವ ಪರಂ ಧರ್ಮಂ ಕ್ಷತ್ರಿಯಸ್ಯ ವಿದುರ್ಬುಧಾಃ |
ಸ ಕ್ಷಾತ್ರಧರ್ಮವಿದ್ರಾಜನ್ ಮಾಽಸ್ಮಾನ್ ವಿನಶನಂ ಪಥಃ ॥16॥
ಕ್ಷತ್ರಿಯನಿಗೆ ರಾಜ್ಯಪಾಲನವೇ ಧರ್ಮವೆಂದು ಜ್ಞಾನಿಗಳು ತಿಳಿದಿದ್ದಾರೆ. ರಾಜನೇ, ಕ್ಷತ್ರಿಯಧರ್ಮವನ್ನು ತಿಳಿದ ಅಂತಹ ನೀನು ನಮ್ಮನ್ನು ವಿನಾಶದ ದಾರಿಯಲ್ಲಿ ನಡೆಸಬೇಡ.
ಪ್ರಾಗ್ದ್ವಾದಶ ಸಮಾ ರಾಜನ್ ಧಾರ್ತರಾಷ್ಟ್ರಾನ್ ನಿಹನ್ಮಹಿ |
ನಿವರ್ತ್ಯ ಚ ವನಾತ್ ಪಾರ್ಥಮಾನಾಯ್ಯ ಚ ಜನಾರ್ದನಮ್ ॥17॥
ರಾಜನೇ, ನಾವು ಹನ್ನರಡು ವರ್ಷಕ್ಕಿಂತ ಮೊದಲೇ ಅರ್ಜುನನನ್ನು ಹಿಂದಕ್ಕೆ ಕರೆಸಿ ಮತ್ತು ಕೃಷ್ಣನನ್ನು ಕರೆಸಿ ಕಾಡಿನಿಂದ ಹಿಂದಿರುಗಿ ಧೃತರಾಷ್ಟ್ರಪುತ್ರರನ್ನು ಕೊಲ್ಲೋಣ.
ವ್ಯೂಢಾನೀಕಾ ಮಹಾರಾಜ ಜವೇನೈವ ಮಹಾಹವೇ |
ಧಾರ್ತರಾಷ್ಟ್ರಾನಮುಂ ಲೋಕಂ ಗಮಯಾಮ ವಿಶಾಂಪತೇ ॥18॥
ಎಲೈ ಮಹಾರಾಜನೇ ನರಾಧಿಪನೇ, ನಾವು ಸೈನ್ಯವನ್ನು ಸೇರಿಸಿ ಶೀಘ್ರವಾಗಿಯೇ ದೊಡ್ಡಯುದ್ಧದಲ್ಲಿ ಧೃತರಾಷ್ಟ್ರಪುತ್ರರನ್ನು ಪರಲೋಕಕ್ಕೆ ಕಳುಹಿಸೋಣ.
ಸರ್ವಾನಹಂ ಹನಿಷ್ಯಾಮಿ ಧಾರ್ತರಾಷ್ಟ್ರಾನ್ ಸಸೌಬಲಾನ್ |
ದುರ್ಯೋಧನಂ ಚ ಕರ್ಣಂ ಚ ಯೋ ವಾಽನ್ಯಃ ಪ್ರತಿಯೋತ್ಸ್ಯತಿ ॥
ನಾನು ಧಾರ್ತರಾಷ್ಟ್ರರನ್ನು ಮತ್ತು ಶಕುನಿಯನ್ನು ಕೊಲ್ಲುವೆನು ದುರ್ಯೋಧನನನ್ನು ಕರ್ಣನನ್ನು ಮತ್ತು ನನ್ನ ಎದುರಿಗೆ ಯುದ್ಧಮಾಡುವ ಬೇರೆಯವರನ್ನೂ ಕೊಲ್ಲುವೆನು.
ಮಯಾ ಪ್ರಶಮಿತೇ ಪಶ್ಚಾತ್ ತ್ವಮೇಷ್ಯಸಿ ವನಾತ್ ತತಃ |
ಏವಂ ಕೃತೇ ನ ತೇ ದೋಷೋ ಭವಿಷ್ಯತಿ ವಿಶಾಂಪತೇ ॥20॥
ನಾನು ದುರ್ಯೋಧನನನ್ನು ಮತ್ತು ಎಲ್ಲರನ್ನೂ ಸಂಹರಿಸಿದ ಮೇಲೆ ನೀನು ವನದಿಂದ ಹಿಂದಿರುಗಿ ಬಾ. ನರಾಧಿಪನೇ, ಹೀಗೆ ಮಾಡಿದರೆ ನಿನಗೆ ದೋಷವುಂಟಾಗುವುದಿಲ್ಲ.
ಯಜ್ಞೈಶ್ಚ ವಿವಿಧೈಸ್ತಾತ ಕೃತಂ ಪಾಪಮರಿಂದಮ |
ಅವಧೂಯ ಮಹಾಭಾಗ ಗಚ್ಛೇಮ ಸ್ವರ್ಗಮುತ್ತಮಮ್ ॥21॥
ಪ್ರೀತಿಪಾತ್ರನೇ ಮಹಾನುಭಾವನೇ ಅರಿಂದಮನೇ, ಅನೇಕ ಯಜ್ಞಗಳನ್ನು ಆಚರಿಸಿ ನಮಗೆ ಉಂಟಾದ ಪಾಪಗಳನ್ನು ಕಳೆದುಕೊಂಡು ಶ್ರೇಷ್ಠವಾದ ಸ್ವರ್ಗವನ್ನು ಪಡೆಯೋಣ.
ಏವಮೇತದ್ ಭವೇದ್ರಾಜನ್ ಯದಿ ರಾಜಾ ನ ಬಾಲಿಶಃ |
ಅಸ್ಮಾಕಂ ದೀರ್ಘಸೂತ್ರಃ ಸ್ಯಾದ್ ಭವಾನ್ ಧರ್ಮಪರಾಯಣಃ ॥
ರಾಜನೇ, ರಾಜನಾದ ನೀನು ಬಾಲಬುದ್ಧಿಯುಳ್ಳವನಾಗದಿದ್ದರೆ ಹೀಗೆಯೇ ನಡೆಯುತ್ತದೆ. ಇಲ್ಲದಿದ್ದರೆ ನೀನು ಧರ್ಮಪರಾಯಣನಾಗಿರುವುದರಿಂದ ನಮಗೆ ವಿಳಂಬಕಾರಿತ್ವ ದೋಷವು ಉಂಟಾಗುತ್ತದೆ.
ನಿಕೃತ್ಯಾ ನಿಕೃತಿಪ್ರಜ್ಞಾ ಹಂತವ್ಯಾ ಇತಿ ನಿಶ್ಚಯಃ |
ನ ಹಿ ನೈಕೃತಿಕಂ ಹತ್ವಾ ನಿಕೃತ್ಯಾ ಪಾಪಮುಚ್ಯತೇ ॥23॥
ಮೋಸದ ಪ್ರಜ್ಞೆಯುಳ್ಳವರನ್ನು ಮೋಸದಿಂದಲೇ ನಾಶಮಾಡಬೇಕೆಂಬುದು ನಿಶ್ಚಿತವಾದದ್ದು. ಮೋಸಮಾಡುವವನನ್ನು ಮೋಸದಿಂದ ಕೊಂದರೆ ಪಾಪವು ಉಂಟಾಗುವುದಿಲ್ಲವೆಂದು ಹೇಳಲ್ಪಡುತ್ತದೆ.
ತಥಾ ಭಾರತ ಧರ್ಮೇಷು ಸರ್ವಜ್ಞೈರಿತಿ ದೃಶ್ಯತೇ |
ಅಹೋರಾತ್ರಂ ಮಹಾರಾಜ ತುಲ್ಯಂ ಸಂವತ್ಸರೇಣ ಹ ॥24॥
ತಥೈವ ವೇದವಚನಂ ಶ್ರೂಯತೇ ನಿತ್ಯದಾ ವಿಭೋ |
ಸಂವತ್ಸರೋ ಮಹಾರಾಜ ಪೂರ್ಣೋ ಭವತಿ ಕೃಚ್ಛ್ರತಃ ॥25॥
ಎಲೈ ಭಾರತನೇ, ಧರ್ಮಶಾಸ್ತ್ರಗಳಲ್ಲಿ ಈ ವಿಷಯವನ್ನು ಸರ್ವಜ್ಞರಾದವರು ನೋಡುತ್ತಾರೆ. ಮಹಾರಾಜನೇ ಒಂದು ಹಗಲೂ ಮತ್ತು

ರಾತ್ರಿಯೂ ಸೇರಿ ಒಂದು ಸಂವತ್ಸರಕ್ಕೆ ಸಮನಾಗುತ್ತದೆ. ವಿಭುವೇ ವೇದವಚನವು ಹಾಗೆಯೇ ನಿತ್ಯವೂ ಕೇಳಿಬರುತ್ತದೆ. ಮಹಾರಾಜನೇ, ಒಂದು ಕೃಚ್ಛ್ರವನ್ನು ಆಚರಿಸಿದರೂ ಸಂವತ್ಸರವು ಪೂರ್ಣವಾಗುತ್ತದೆ.
ಯದಿ ವೇದಾಃ ಪ್ರಮಾಣಂ ತೇ ದಿವಸಾದೂರ್ಧ್ವಮದ್ಯ ವೈ |
ತ್ರಯೋದಶಾದಿತಃ ಕಾಲೋ ಜ್ಞಾಯತಾಂ ಪರಿನಿಷ್ಠಿತಃ ||26||
ನಿನಗೆ ವೇದವು ಪ್ರಮಾಣವಾದರೆ ಹದಿಮೂರನೆಯ ದಿವಸವಾದ ಈ ದಿನದ ನಂತರ ವನವಾಸದ ಕಾಲವು ಪೂರ್ಣವಾಗುವುದೆಂದು ತಿಳಿ.
ಕಾಲೋ ದುರ್ಯೋಧನಂ ಹಂತುಂ ಸಾನುಬಂಧಮರಿಂದಮ |
ಏಕಾಗ್ರಾಂ ಪೃಥಿವೀಂ ಕೃತ್ಸ್ನಾಂ ಪುರಾ ರಾಜನ್ ಕರೋತಿ ಸಃ ||27||
ಅರಿಂದಮನೇ, ಇದು ದುರ್ಯೋಧನನನ್ನು ಪರಿವಾರಸಹಿತನಾಗಿ ಕೊಲ್ಲಬೇಕಾದ ಕಾಲ. ಅವನು ಸಮಗ್ರವಾದ ಭೂಮಿಯನ್ನು ತನ್ನ ಅಧೀನವಾಗಿ ಮಾಡಿಕೊಳ್ಳುವುದಕ್ಕಿಂತ ಮೊದಲೇ ನಾವು ಅವನನ್ನು ಕೊಲ್ಲಬೇಕು.
ವೈಶಂಪಾಯನಃ
ಏವಂ ಬ್ರುವಾಣಂ ಭೀಮಂ ತು ಧರ್ಮಪುತ್ರೋ ಯುಧಿಷ್ಠಿರಃ |
ಉವಾಚ ಸಾಂತ್ವಯನ್ ರಾಜಾ ಮೂರ್ಧ್ನ್ಯುಪಾಘ್ರಾಯ ಪಾಂಡವಮ್ ||
ಧರ್ಮಪುತ್ರನಾದ ಯುಧಿಷ್ಠಿರರಾಜನು ಹೀಗೆ ಮಾತನಾಡುತ್ತಿದ್ದ ಪಾಂಡುಪುತ್ರನಾದ ಭೀಮನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ಅವನನ್ನು ಸಮಾಧಾನಮಾಡುತ್ತಾ ಮಾತನಾಡಿದನು.
ಅಸಂಶಯಂ ಮಹಾಬಾಹೋ ಹನಿಷ್ಯಸಿ ಸುಯೋಧನಮ್ |
ವರ್ಷಾತ್ ತ್ರಯೋದಶಾದೂರ್ಧ್ವಂ ಸಹ ಗಾಂಡೀವಧನ್ವನಾ ||30||
ಮಹಾಬಾಹುವೇ, ನೀನು ಹದಿಮೂರುವರ್ಷಗಳು ಕಳೆದಮೇಲೆ ಅರ್ಜುನನ ಸಹಾಯದಿಂದ ಖಂಡಿತವಾಗಿ ಸುಯೋಧನನನ್ನು ಕೊಲ್ಲುವಿ.
ಯದಿ ತ್ವಂ ಮನ್ಯಸೇ ಪಾರ್ಥ ಪ್ರಾಪ್ತಃ ಕಾಲ ಇತಿ ಪ್ರಭೋ |
ಅನೃತಂ ನೋತ್ಸಹೇ ವಕ್ತುಂ ನ ಹ್ಯೇತನ್ಮಯಿ ವಿದ್ಯತೇ ||31||
ಅಂತರೇಣಾಪಿ ಕೌಂತೇಯ ನಿಕೃತಂ ಪಾಪನಿಶ್ಚಯಮ್ |
ಹಂತಾ ತ್ವಮಸಿ ದುರ್ಧರ್ಷ ಸಾನುಬಂಧಂ ಸುಯೋಧನಮ್ ||32||
ಪ್ರಭುವೇ, ನೀನು ಅವನ ವಧೆಯ ಕಾಲವು ಪ್ರಾಪ್ತವಾಗಿದೆ ಎಂದು ತಿಳಿದರೂ ನಾನು ಸುಳ್ಳುಮಾತನಾಡಲಾರೆ. ಇದು ನನ್ನಲ್ಲಿಲ್ಲ. ಕೌಂತೇಯನೇ ದುರ್ಧರ್ಷನೇ, ಮೋಸಮಾರ್ಗವಿಲ್ಲದೆಯೂ ನೀನು ಮೋಸಗಾರನೂ ಪಾಪಬುದ್ಧಿಯುಳ್ಳವನೂ ಆದ ಸುಯೋಧನನನ್ನು ಪರಿವಾರಸಹಿತನಾಗಿ ಕೊಲ್ಲಲು ಶಕ್ತನಾಗಿದ್ದೀಯೆ.
ಏವಂ ಬ್ರುವತಿ ಭೀಮಂ ತು ಧರ್ಮರಾಜೇ ಯುಧಿಷ್ಠಿರೇ|
ಆಜಗಾಮ ಮಹಾಯೋಗೀ ಬೃಹದಶ್ವೋ ಮಹಾನೃಷಿಃ ||22||
ಯಮಧರ್ಮರಾಜನ ಪುತ್ರನಾದ ಯುಧಿಷ್ಠಿರನು ಭೀಮನನ್ನು ಕುರಿತು ಹೀಗೆ ಮಾತನಾಡುತ್ತಿರಲು ಮಹಾಯೋಗಿಗಳೂ ದೊಡ್ಡ ಋಷಿಗಳೂ ಆದ ಬೃಹದಶ್ವರು ಅಲ್ಲಿಗೆ ಬಂದರು.
ತಮಭಿಪ್ರೇಕ್ಷ್ಯ ಧರ್ಮಾತ್ಮಾ ಸಂಪ್ರಾಪ್ತಂ ಧರ್ಮಚಾರಿಣಮ್ |
ಶಾಸ್ತ್ರವನ್ಮಧುಪರ್ಕೇಣ ಪೂಜಯಾಮಾಸ ಧರ್ಮರಾಟ್ ||34||
ಧರ್ಮಚಾರಿಗಳಾದ ಅವರು ಅಲ್ಲಿಗೆ ಬಂದುದನ್ನು ನೋಡಿ ಧರ್ಮಾತ್ಮನಾದ ಧರ್ಮರಾಜನು ಮಧುಪರ್ಕವನ್ನು ನೀಡಿ ಶಾಸ್ತ್ರೋಕ್ತರೀತಿಯಿಂದ ಪೂಜಿಸಿದನು.
ಆಶ್ವಸ್ತಂ ಚೈವಮಾಸೀನಮುಪಾಸೀನೋ ಯುಧಿಷ್ಠಿರಃ |
ಅಭಿಪ್ರೇಕ್ಷ್ಯ ಮಹಾಬಾಹುಃ ಕೃಪಣಂ ಬಹ್ವಭಾಷತ ||35||
ಅವರು ಕುಳಿತು ಸುಧಾರಿಸಿಕೊಂಡ ಮೇಲೆ ಮಹಾಬಾಹುವಾದ ಯುಧಿಷ್ಠಿರನು ಅವರ ಸಮೀಪದಲ್ಲಿ ಕುಳಿತು ಅವರನ್ನು ನೋಡುತ್ತಾ ದೈನ್ಯದಿಂದ ಬಹಳ ಮಾತನಾಡಿದನು.
ಅಕ್ಷದ್ಯೂತೇನ ಮಾಂ ಜಿತ್ವಾ ಧನಂ ರಾಜ್ಯಂ ಚ ಮೇ ಹೃತಮ್ |
ಆಹೂಯ ನಿಕೃತಿಪ್ರಜ್ಞೈಃ ಕಿತವೈರಕ್ಷಕೋವಿದೈಃ ||36||
ಮೋಸಬುದ್ಧಿಯುಳ್ಳವರೂ ಅಕ್ಷಕೋವಿದರೂ ಆದ ಕಿತವರು (ಧೂರ್ತರು) ಅಕ್ಷದ್ಯೂತಕ್ಕೆ ನನ್ನನ್ನು ಆಹ್ವಾನಿಸಿ ಸೋಲಿಸಿ ನನ್ನ ಧನವನ್ನು ಮತ್ತು ರಾಜ್ಯವನ್ನು ಅಪಹರಿಸಿದರು.
ಅನಕ್ಷಜ್ಞಸ್ಯ ಹಿ ತತೋ ನಿಕೃತ್ಯಾ ಪಾಪನಿಶ್ಚಯೈಃ |
ಭಾರ್ಯಾ ಚ ಮೇ ಸಭಾಂ ನೀತಾ ಪ್ರಾಣೇಭ್ಯೋಽಪಿ ಗರೀಯಸೀ ||
ಪಾಪಬುದ್ಧಿಯುಳ್ಳ ಅವರು ಮೋಸದಿಂದ ಅಕ್ಷವಿದ್ಯೆಯನ್ನು ತಿಳಿಯದ ನನ್ನನ್ನು ಸೋಲಿಸಿ ನನ್ನ ಪ್ರಾಣಗಳಿಂತಲೂ ಪ್ರಿಯಳಾದ ಪತ್ನಿಯನ್ನು ಸಭೆಗೆ ಎಳೆತಂದರು.
ಪುನರ್ದ್ಯೂತೇನ ಮಾಂ ಜಿತ್ವಾ ವನವಾಸಂ ಸುದಾರುಣಮ್ |
ಪ್ರಾವ್ರಾಜಯನ್ ಮಹಾರಣ್ಯಮಜಿನೈಃ ಪರಿವಾರಿತಮ್ ||38||
ಪುನಃ ಇನ್ನೊಮ್ಮೆ ದ್ಯೂತಕ್ಕೆ ಕರೆದು ನನ್ನನ್ನು ಸೋಲಿಸಿ ಕೃಷ್ಣಾಜಿನಗಳಿಂದ ಸಹಿತನಾಗಿರುವಂತೆ ಮಾಡಿ ಈ ಘೋರವಾದ ಮಹಾರಣ್ಯಕ್ಕೆ ಕಳುಹಿಸಿದರು.

ಸೋಽಹಂ ವನೇ ದುರ್ವಸತೀಃ ಶಯೇ ಪರಮದುಃಖಿತಃ |
ಅಕ್ಷದ್ಯೂತಾನುಷಂಗೇಣ ಗಿರಃ ಶೃಣ್ವನ್ ಸುದಾರುಣಾಃ ॥39॥
ಸಂಪ್ರಾಪ್ತಾನಾಂ ಚ ಸುಹೃದಾಂ ಶೃಣ್ವನ್ ಸತ್ಯಾಭಿಸಂಹಿತಾಮ್ |
ದ್ಯೂತಾತ್ ಪ್ರಭೃತಿ ಧರ್ಮಜ್ಞ ರಾತ್ರೀಃ ಸರ್ವಾ ವಿಚಿಂತಯನ್ ॥
ಅಂತಹ ನಾನು ಪರಮದುಃಖದಿಂದ ಈ ಕಾಡಿನಲ್ಲಿ ಅಕ್ಷದ್ಯೂತದಿಂದ ಉಂಟಾದ ದಾರುಣವಾದ ಮಾತುಗಳನ್ನು ಕೇಳುತ್ತಾ ನನ್ನನ್ನು ನೋಡಲು ಇಲ್ಲಿಗೆ ಬಂದ ಹಿತೈಷಿಗಳ ಸತ್ಯಪ್ರತಿಜ್ಞೆಯನ್ನು ಕೇಳುತ್ತಾ ಕೆಟ್ಟವಾಸವನ್ನು ಮಾಡುತ್ತಿದ್ದೇನೆ. ಧರ್ಮಜ್ಞನೇ, ದ್ಯೂತದಿಂದ ಇಲ್ಲಿಯ ವರೆಗೆ ಎಲ್ಲಾ ರಾತ್ರಿಗಳನ್ನು ಚಿಂತೆಯಿಂದಲೇ ಕಳೆಯುತ್ತಿದ್ದೇನೆ.
ಯಸ್ಮಿಂಶ್ಚ ವಯಮಾಯತ್ತಾಃ ಸದಾ ಗಾಂಡೀವಧನ್ವನಿ |
ಮಹಾತ್ಮನಾ ವಿನಾ ತೇನ ಗತಸತ್ತ್ವಾ ಇವಾಸ್ಮಹೇ ॥41॥
ಕದಾ ದ್ರಕ್ಷ್ಯಾಮ ಬೀಭತ್ಸುಂ ಕೃತಾಸ್ತ್ರಂ ಪುನರಾಗತಮ್ |
ಇತಿ ಸರ್ವೇ ಮಹೇಷ್ವಾಸಂ ಚಿಂತಯಾನಾ ಧನಂಜಯಮ್ |
ಅನೇನ ತು ವಿಷಣ್ಣೋಽಹಂ ಕಾರಣೇನ ಸಹಾನುಜಃ ॥42॥
ಯಾವ ಗಾಂಡೀವಧರ್ನುಧಾರಿಯಾದ ಮಹಾತ್ಮನಾದ ಅರ್ಜುನನನ್ನು ನಾವೆಲ್ಲರೂ ಆಶ್ರಯಿಸಿದ್ದೇವೆಯೋ ಅವನು ಇಲ್ಲದೆ ನಾವೆಲ್ಲರೂ ಅಸ್ತ್ರವಿದ್ಯೆಯನ್ನು ಸಂಪಾದಿಸಿ ಹಿಂದಿರುಗಿ ಬರುವ ಅರ್ಜುನನ್ನು ಯಾವಾಗ ನೋಡುವೆವು ಎಂದು ಯಾವಾಗಲೂ ಅರ್ಜುನನನ್ನೇ ಚಿಂತಿಸುತ್ತಾ ಪ್ರಾಣ ಇಲ್ಲದಂತೆ ಆಗಿದ್ದೇವೆ. ಈ ಕಾರಣದಿಂದ ನಾನು ಮತ್ತು ನನ್ನ ತಮ್ಮಂದಿರು ವಿಷಾದವನ್ನು ಹೊಂದಿದ್ದೇವೆ.
ವನವಾಸಾನ್ನಿವೃತ್ತಂ ಮಾಂ ಪುನಸ್ತೇ ಪಾಪಬುದ್ಧಯಃ |
ಜಾನಂತಃ ಪ್ರೀಯಮಾಣಾ ವೈ ದೇವನೇ ಭ್ರಾತೃಭಿಃ ಸಹ |
ದ್ಯೂತೇನೈವಾಹ್ವಯಿಷ್ಯಂತಿ ಬಲಾದಕ್ಷೇಷು ತದ್ವಿದಃ ॥43॥
ನಾನು ವನವಾಸದಿಂದ ಹಿಂದಿರುಗಿದ ಮೇಲೆ ಅದನ್ನು ತಿಳಿದ ಪಾಪಬುದ್ಧಿಗಳಾದ ಅಕ್ಷಕೋವಿದರಾದ ಅವರು ಪುನಃ ತಮ್ಮಂದಿರ ಜೊತೆಯಲ್ಲಿ ನನ್ನನ್ನು ಬಲಾತ್ಕರಿಸಿ ಸಂತೋಷದಿಂದ ಅಕ್ಷದ್ಯೂತಕ್ಕೆ ಆಹ್ವಾನಮಾಡುವರು.
ಆಹೂತಶ್ಚ ಪುನರ್ದ್ಯೂತೇ ನಾಸ್ಮಿ ಶಕ್ತೋ ನಿವರ್ತಿತುಮ್ |
ಪಣೇ ಚ ಮಮ ನಾತ್ಯರ್ಥಂ ವಿದ್ಯತೇ ವಸು ಕಿಂಚನ ॥43॥
ನನ್ನನ್ನು ಪುನಃದ್ಯೂತಕ್ಕೆ ಆಹ್ವಾನಮಾಡಿದರೆ ನಾನು ಬರುವುದಿಲ್ಲವೆಂದು ಹೇಳಲಾರೆ. ಈ ಬಾರಿ ಪಣಕ್ಕೆ ಇಡಲು ನನ್ನ ಬಳಿ ಯಾವ ಧನವೂ ಇಲ್ಲ.
ಏತತ್ ಸರ್ವಮನುಧ್ಯಾಯನ್ ಚಿಂತಯಾಮಿ ದಿವಾನಿಶಮ್ |
ನ ಮತ್ತೋ ದುಃಖಿತತರಃ ಪುಮಾನಸ್ತೀಹ ಕಶ್ಚನ ॥44॥
ಈ ಎಲ್ಲವನ್ನು ಹಗಲೂ ರಾತ್ರಿಯೂ ಚಿಂತಿಸುತ್ತಿದ್ದೇನೆ. ನನಗಿಂತ ದುಃಖಿಯಾದ ಮನುಷ್ಯನು ಈ ಭೂಮಿಯಲ್ಲಿ ಇನ್ನೊಬ್ಬನಿಲ್ಲ.
ನಾಸ್ತಿ ರಾಜಾ ಮಯಾ ಕಶ್ಚಿದ್ ಅಲ್ಪಭಾಗ್ಯತರೋ ಭುವಿ |
ಭವತಾ ದೃಷ್ಟಪೂರ್ವೋಽಪಿ ಶ್ರುತಪೂರ್ವೋಽಪಿ ವಾ ಭವೇತ್ |
ನ ಮತ್ತೋ ದುಃಖಿತತರಃ ಪುಮಾನಸ್ತೀತಿ ಮೇ ಮತಿಃ ॥45॥
ನನಗಿಂತ ದುರ್ಭಾಗ್ಯನಾದ ರಾಜನನ್ನು ಭೂಮಿಯಲ್ಲಿ ನೀವು ಹಿಂದೆ ನೋಡಲೂ ಇಲ್ಲ ಅಥವಾ ಕೇಳಲೂ ಇಲ್ಲ ಎಂದು ತೋರುತ್ತದೆ. ನನಗಿಂತ ದುಃಖಿಯಾದ ಇನ್ನೊಬ್ಬ ಮನುಷ್ಯನಿಲ್ಲವೆಂದು ನನ್ನ ಅಭಿಪ್ರಾಯ.
ಏವಂ ಬ್ರುವಂತಂ ರಾಜಾನಮುವಾಚ ಭಗವಾನೃಷಿಃ |
ಶೋಕಂ ವ್ಯಪನುದನ್ ರಾಜ್ಞೋ ಧರ್ಮರಾಜಸ್ಯ ಧೀಮತಃ ॥46॥
ಆಗ ಬೃಹದಶ್ವ ಋಷಿಗಳು ಹೀಗೆ ಮಾತನಾಡುತ್ತಿದ್ದ ಮೇಧಾವಿಯಾದ ಧರ್ಮರಾಜನ ಶೋಕವನ್ನು ಪರಿಹರಿಸುತ್ತಾ ಆ ರಾಜನನ್ನು ಕುರಿತು ಮಾತನಾಡಿದರು.
ನ ವಿಷಾದೇ ಮನಃ ಕಾರ್ಯಂ ತ್ವಯಾ ಬುದ್ಧಿಮತಾಂ ವರ |
ಆಗಮಿಷ್ಯತಿ ಭೀಬತ್ಸುರಮಿತ್ರಾಂಶ್ಚ ವಿಜೇಷ್ಯತಿ ॥47॥
ಮೇಧಾವಿಗಳಲ್ಲಿ ಶ್ರೇಷ್ಠನಾದವನೇ, ನೀನು ವಿಷಾದವನ್ನು ಹೊಂದಬಾರದು. ಅರ್ಜುನನು ಹಿಂದಿರುಗಿ ಬಂದು ಶತ್ರುಗಳನ್ನು ಗೆಲ್ಲುವನು.
ಯದ್ ಬ್ರವೀಷಿ ಮಹಾರಾಜ ನ ಮತ್ತೋ ವಿದ್ಯತೇ ಕ್ವಚಿತ್ |
ಅಲ್ಪಭಾಗ್ಯತರಃ ಕಶ್ಚಿತ್ ಪುಮಾನಸ್ತೀತಿ ಪಾಂಡವ ॥48॥
ಅತ್ರ ತೇ ಕಥಯಿಷ್ಯಾಮಿ ಯದಿ ಶುಶ್ರೂಷಸೇ ನೃಪ |
ಯಸ್ತ್ವತ್ತೋ ದುಃಖಿತತರೋ ರಾಜಾಽಽಸೀತ್ ಪೃಥಿವೀಪತೇ ॥49॥
ಎಲೈ ಮಹಾರಾಜನೇ, ನೀನು ನಿನಗಿಂತ ದುರ್ಭಾಗ್ಯಶಾಲಿಯಾದ ಒಬ್ಬ ಮನುಷ್ಯನು ಇಲ್ಲವೆಂದು ಹೇಳುತ್ತಿರುವೆಯಷ್ಟೆ. ಭಾರತನೇ ನೀನು ಕೇಳುವುದಾದರೆ ನಿನಗಿಂತ ದುಃಖಿಯಾದ ಒಬ್ಬ ರಾಜನ ಕಥೆಯನ್ನು ಹೇಳುತ್ತೇನೆ. ಪೃಥ್ವೀಪತಿಯೇ, ಅದನ್ನು ಕೇಳು.
ವೈಶಂಪಾಯನಃ
ಅಥೈನಮಬ್ರವೀದ್ ರಾಜಾ ಬ್ರವೀತು ಭಗವಾನಿತಿ |
ಇಮಾಮವಸ್ಥಾಂ ಸಂಪ್ರಾಪ್ತಂ ಶ್ರೋತುಮಿಚ್ಛಾಮಿ ಪಾರ್ಥಿವಮ್ ॥50॥

ಆಗ ರಾಜನು ಪೂಜ್ಯರು ಅವನ ಕಥೆಯನ್ನು ಹೇಳಬೇಕು, ಇಂತಹ ಅವಸ್ಥೆಯನ್ನು ಹೊಂದಿದ ರಾಜನ ಕಥೆಯನ್ನು ನಾನು ಕೇಳಲು ಬಯಸುತ್ತೇನೆ ಎಂದು ಹೇಳಿದನು.
ಬೃಹದಶ್ವಃ
ಶೃಣು ರಾಜನ್ನವಹಿತಃ ಸಹ ಭ್ರಾತೃಭಿರಚ್ಯುತ |
ಯಸ್ತ್ವತ್ತೋ ದುಃಖಿತತರೋ ರಾಜಾऽऽಸೀತ್ ಪೃಥಿವೀಪತೇ ॥51॥
ಎಲೈ ರಾಜನೇ, ಎಲೈ ಪೃಥಿವೀಪತಿಯೇ, ನಿನ್ನ ಗುಣಗಳಿಂದ ಚ್ಯುತನಾಗದವನೇ, ನಿನಗಿಂತ ಹೆಚ್ಚು ದುಃಖಿಯಾದ ರಾಜನು ಯಾವನಿದ್ದನೋ ಅಂತಹ ರಾಜನ ಕಥೆಯನ್ನು ನಿನ್ನ ತಮ್ಮಂದಿರ ಜೊತೆಯಲ್ಲಿ ಕೇಳು.
ನಿಷಧೇಷು ಮಹೀಪಾಲೋ ವೀರಸೇನ ಇತಿ ಸ್ಮ ಹ |
ತಸ್ಯ ಪುತ್ರೋऽಭವನ್ನಾಮ್ನಾ ನಳೋ ಧರ್ಮಾರ್ಥದರ್ಶಿವಾನ್ ॥52॥
ನಿಷಧದೇಶದಲ್ಲಿ ವೀರಸೇನನೆಂಬ ರಾಜನಿದ್ದನು. ಅವನಿಗೆ ಧರ್ಮಾರ್ಥಗಳನ್ನು ತಿಳಿದ ನಳನೆಂಬ ಒಬ್ಬ ಪುತ್ರನು ಜನಿಸಿದನು.
ಸ ನಿಕೃತ್ಯಾ ಜಿತೋ ರಾಜಾ ಪುಷ್ಕರೇಣೇತಿ ನಃ ಶ್ರುತಮ್ |
ವನವಾಸಮದುಃಖಾರ್ಹೋ ಭಾರ್ಯಯಾ ನ್ಯವಸತ್ ಸಹ ॥53॥
ಅವನು ತಮ್ಮನಾದ ಪುಷ್ಕರನಿಂದ ಮೋಸದಿಂದ ಅಕ್ಷದ್ಯೂತದಲ್ಲಿ ಜಯಿಸಲ್ಪಟ್ಟನು ಎಂದು ನಾವು ಕೇಳಿದ್ದೇವೆ. ದುಃಖಕ್ಕೆ ಅರ್ಹನಲ್ಲದ ಅವನು ಭಾರ್ಯೆಯ ಜೊತೆಯಲ್ಲಿ ವನವಾಸವನ್ನು ಮಾಡಿದನು.
ನ ತಸ್ಯ ದಾಸಾ ನ ರಥೋ ನ ಭ್ರಾತಾ ನ ಚ ಬಾಂಧವಾಃ |
ವನೇ ನಿವಸತೋ ರಾಜನ್ನಶ್ರೂಯಂತ ಕದಾಚನ ॥54॥
ರಾಜನೇ, ಅವನು ವನವಾಸವನ್ನು ಮಾಡುವಾಗ ಅವನಿಗೆ ದಾಸರಾಗಲೀ ರಥವಾಗಲೀ ಸಹೋದರರಾಗಲೀ ಬಾಂಧವರಾಗಲೀ ಎಂದೂ ಇರಲಿಲ್ಲವೆಂದು ನಾವು ಕೇಳಿದ್ದೇವೆ.
ಭವಾನ್ ಹಿ ಸಂವೃತೋ ವೀರೈರ್ಭ್ರಾತೃಭಿರ್ದೇವಸಮ್ಮಿತೈಃ |
ಬ್ರಹ್ಮಕಲ್ಪೈರ್ದ್ವಿಜಾಗ್ರ್ಯೈಶ್ಚ ತಸ್ಮಾನ್ನಾರ್ಹಸಿ ಶೋಚಿತುಮ್ ॥55॥
ನೀನಾದರೋ ವೀರರೂ ದೇವತೆಗಳಿಗೆ ಸಮಾನರೂ ಆದ ಸಹೋದರರಿಂದಲೂ ಬ್ರಹ್ಮನಿಗೆ ಸಮಾನರಾದ ಶ್ರೇಷ್ಠಬ್ರಾಹ್ಮಣರಿಂದಲೂ ಕೂಡಿದ್ದೀಯೆ. ಆದ್ದರಿಂದ ಶೋಕಪಡುವ ಕಾರಣವಿಲ್ಲ.
ಯುಧಿಷ್ಠಿರಃ
ವಿಸ್ತರೇಣಾಧಿಗಚ್ಛಾಮಿ ನಳಸ್ಯ ಸುಮಹಾತ್ಮನಃ |
ಚರಿತಂ ವದತಾಂ ಶ್ರೇಷ್ಠ ತ್ವಂ ತದಾಖ್ಯಾತುಮರ್ಹಸಿ ॥56॥
ಎಲೈ ಮಾತನಾಡುವವರಲ್ಲಿ ಶ್ರೇಷ್ಠರೇ, ಮಹಾತ್ಮನಾದ ನಳನ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಯಲು ಬಯಸುತ್ತೇನೆ. ನೀವು ಅದನ್ನು ಹೇಳಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಚತ್ವಾರಿಂಶೋऽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪ್ರಥಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
ನಲವತ್ತಾರನೆಯ ಅಧ್ಯಾಯ
(ನಳಚರಿತೆ. ಹಂಸಸಂದೇಶ)
ಬೃಹದಶ್ವಃ
ಆಸೀದ್ರಾಜಾ ನಳೋ ನಾಮ ವೀರಸೇನಸುತೋ ಬಲೀ |
ಉಪಪನ್ನೋ ಗುಣೈರಿಷ್ಟೈ ರೂಪವಾನಶ್ವಕೋವಿದಃ ॥1॥
ವೀರಸೇನನ ಸುತನಾದ ಪ್ರಬಲನಾದ ನಳನೆಂಬ ರಾಜನಿದ್ದನು. ಅವನು ರೂಪವಂತನೂ ಅಶ್ವವಿದ್ಯೆಯನ್ನು ಬಲ್ಲವನೂ ಮತ್ತು ಅಪೇಕ್ಷಿತವಾದ ಎಲ್ಲಾ ಗುಣಗಳಿಂದಲೂ ಕೂಡಿದವನೂ ಆಗಿದ್ದನು.
ಯಜ್ವಾ ದಾನಪತಿರ್ದಕ್ಷಃ ಸದಾ ಶೀಲಪುರಸ್ಕೃತಃ |
ಅತಿಷ್ಠನ್ಮನುಜೇಂದ್ರಾಣಾಂ ಮೂರ್ಧ್ನಿ ದೇವಪತಿರ್ಯಥಾ |
ಉಪರ್ಯುಪರಿ ಸರ್ವೇಷಾಮಾದಿತ್ಯ ಇವ ತೇಜಸಾ ॥2॥
ಯಾಗವನ್ನು ಮಾಡುವವನೂ ದಾನಶೂರನೂ ದಕ್ಷನೂ ಯಾವಾಗಲೂ ಶೀಲಸಂಪನ್ನನೂ ಆದ ಅವನು ದೇವರಾಜನಾದ ಇಂದ್ರನಂತೆ ಎಲ್ಲ ರಾಜರ ತಲೆಯ ಮೇಲೆ ಇದ್ದನು. ಅವನು ತನ್ನ ತೇಜಸ್ಸಿನಿಂದ ಎಲ್ಲರ ಮೇಲೆ ಬೆಳಗುವ ಸೂರ್ಯನಂತೆ ಇದ್ದನು.
ಬ್ರಹ್ಮಣ್ಯೋ ವೇದವಿಚ್ಛೂರೋ ನಿಷಧೇಷು ಮಹೀಪತಿಃ |
ಅಕ್ಷಪ್ರಿಯಃ ಸತ್ಯವಾದೀ ಮಹಾನಕ್ಷೌಹಿಣೀಪತಿಃ ॥3॥
ನಿಷಧಾಧಿಪತಿಯಾದ ಆ ರಾಜನು ಬ್ರಾಹ್ಮಣರಿಗೆ ಶರಣ್ಯನಾದವನೂ ವೇದಗಳನ್ನು ಬಲ್ಲವನೂ ಶೂರನೂ ಸತ್ಯವಾದಿಯೂ ಅಕ್ಷಪ್ರಿಯನೂ ಮತ್ತು ದೊಡ್ಡ ಅಕ್ಷೋಹಿಣಿನಾಯಕನೂ ಆಗಿದ್ದನು.
ಈಪ್ಸಿತೋ ವರನಾರೀಣಾಮುದಾರಃ ಸಂಯತೇಂದ್ರಿಯಃ |
ರಕ್ಷಿತಾ ಧನ್ವಿನಾಂ ಶ್ರೇಷ್ಠಃ ಸಾಕ್ಷಾದಿವ ಮನುಃ ಸ್ವಯಮ್ ॥4॥
ಜಿತೇಂದ್ರಿಯನೂ ಉದಾರನೂ ಆದ ಅವನು ಎಲ್ಲ ಸುಂದರಿಯರಿಗೆ ಅಪೇಕ್ಷಿತನಾಗಿದ್ದನು. ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅವನು ಸಾಕ್ಷಾತ್ ಮನುವಿನಂತೆ ಭೂಮಿಯನ್ನು ರಕ್ಷಿಸಿದನು.

ತಥೈವಾಸೀದ್ ವಿದರ್ಭೇಷು ಭೀಮೋ ಭೀಮಪರಾಕ್ರಮಃ |
ಶೂರಃ ಸರ್ವಗುಣೋಪೇತಃ ಪ್ರಜಾಕಾಮಃ ಸ ಚಾಪ್ರಜಃ ||5||
ಹಾಗೆಯೇ ವಿದರ್ಭದೇಶದಲ್ಲಿ ಭಯಂಕರಪರಾಕ್ರಮವುಳ್ಳ ಭೀಮನೆಂಬ ರಾಜನಿದ್ದನು. ಸರ್ವಗುಣೋಪೇತನಾದ ಅವನು ಪ್ರಜಾಕಾಮನಾಗಿದ್ದನು ಅವನಿಗೆ ಮಕ್ಕಳಿರಲಿಲ್ಲ.
ಸ ಪ್ರಜಾರ್ಥೇ ಪರಂ ಯತ್ನಮಕರೋತ್ ಸುಸಮಾಹಿತಃ |
ತಮಭ್ಯಗಚ್ಛದ್ ಬ್ರಹ್ಮರ್ಷಿರ್ದಮನೋ ನಾಮ ಭಾರತ ||6||
ಅವನು ಸಮಾಧಾನದಿಂದ ಕೂಡಿದ ಮನಸ್ಸುಳ್ಳವನಾಗಿ ಪ್ರಜೆಯನ್ನು ಪಡೆಯುವ ಸಲುವಾಗಿ ಮಹಾಪ್ರಯತ್ನವನ್ನು ಮಾಡಿದನು. ಭಾರತನೇ! ಒಮ್ಮೆ ಬ್ರಹ್ಮರ್ಷಿಗಳಾದ ದಮನರು ಅವನನ್ನು ಸಮೀಪಿಸಿದರು.
ತಂ ಸ ಭೀಮಃ ಪ್ರಜಾಕಾಮಃ ತೋಷಯಾಮಾಸ ಧರ್ಮವಿತ್ |
ಮಹಿಷ್ಯಾ ಸಹ ರಾಜೇಂದ್ರ ಸತ್ಕಾರೇಣ ಸುವರ್ಚಸಮ್ ||7||
ಎಲೈ ರಾಜೇಂದ್ರನೇ, ಧರ್ಮಜ್ಞನಾದ ಪ್ರಜಾಕಾಮನಾದ ಭೀಮನು ತನ್ನ ರಾಣಿಯ ಜೊತೆಯಲ್ಲಿ ವರ್ಚಸ್ವಿಗಳಾದ ಆ ಋಷಿಗಳನ್ನು ಸತ್ಕಾರದಿಂದ ಸಂತೋಷಪಡಿಸಿದನು.
ತಸ್ಮೈ ಪ್ರಸನ್ನೋ ದಮನಃ ಸಭಾರ್ಯಾಯ ವರಂ ದದೌ |
ಕನ್ಯಾರತ್ನಂ ಕುಮಾರಾಂಶ್ಚ ತ್ರೀನುದಾರಾನ್ ಮಹಾಯಶಾಃ ||8||
ದಮಯಂತೀಂ ದಮಂ ದಾಂತಂ ದಮನಂ ಚ ಸುವರ್ಚಸಮ್ |
ಉಪಪನ್ನಾನ್ ಗುಣೈಃ ಸರ್ವೈರ್ಭೀಮಾನ್ ಭೀಮಪರಾಕ್ರಮಾನ್ ||
ಪ್ರಸನ್ನರಾದ ಮಹಾಯಶಸ್ವಿಗಳಾದ ದಮನರು ಭಾರ್ಯಾಸಹಿತನಾದ ರಾಜನಿಗೆ ಒಂದು ಕನ್ಯಾರತ್ನವನ್ನು ಮತ್ತು ಮೂರು ಪುತ್ರರನ್ನು ವರವನ್ನಾಗಿ ಕೊಟ್ಟು ಕರುಣಿಸಿದನು. ದಮಯಂತಿ ದಮ ದಾಂತ ಮತ್ತು ದಮನ ಎಂಬ ವರ್ಚಸ್ವಿಗಳಾದ ಮಕ್ಕಳು. ಎಲ್ಲರೂ ಸರ್ವಗುಣಗಳಿಂದಲೂ ಕೂಡಿದ್ದರು. ಕುಮಾರರು ಮಹಾಪರಾಕ್ರಮವುಳ್ಳವರು ಮತ್ತು ಶತ್ರುಭಯಂಕರರೂ ಆಗಿದ್ದರು.
ದಮಯಂತೀ ತು ರೂಪೇಣ ತೇಜಸಾ ವಪುಷಾ ಶ್ರಿಯಾ |
ಸೌಭಾಗ್ಯೇನ ಚ ಲೋಕೇಷು ಯಶಃ ಪ್ರಾಪ ಸುಮಧ್ಯಮಾ ||10||
ಸುಮಧ್ಯಮಳಾದ ದಮಯಂತಿಯಾದರೂ ತನ್ನ ರೂಪದಿಂದ ತೇಜಸ್ಸಿನಿಂದ ಶರೀರದಿಂದ ಕಾಂತಿಯಿಂದ ಮತ್ತು ಸೌಭಾಗ್ಯದಿಂದ ಲೋಕಗಳಲ್ಲಿ ಕೀರ್ತಿಗಳನ್ನು ಪಡೆದಳು.
ಅಥೋ ತಾಂ ವಯಸಿ ಪ್ರಾಪ್ತೇ ದಾಸೀನಾಂ ಸಮಲಂಕೃತಮ್ |
ಶತಂ ಸಖೀನಾಂ ಚ ತಥಾ ಪರ್ಯುಪಾಸ್ತೆ ಶಚೀಮಿವ ||11||
ಅನಂತರ ಅವಳು ಪ್ರಾಪ್ತವಯಸ್ಕಳಾದಾಗ ಅವಳಿಗೆ ಅಲಂಕೃತರಾದ ನೂರು ಜನ ಸಖಿಯರು ಮತ್ತು ದಾಸಿಯರು ಶಚಿಯನ್ನು ಸೇವಿಸಿದಂತೆ ಸೇವೆಮಾಡುತ್ತಿದ್ದರು.
ತತಃ ಸಾ ಭ್ರಾಜತೇ ತಾಭಿಃ ಸರ್ವಾಭರಣಭೂಷಿತಾ |
ಸಖೀಮಧ್ಯೇಽನವದ್ಯಾಂಗೀ ವಿದ್ಯುತ್ಸೌದಾಮಿನೀ ಯಥಾ ||12||
ಆಗ ಅನವದ್ಯಾಂಗಿಯಾದ ಅವಳು ಸರ್ವಾಭರಣಭೂಷಿತಳಾಗಿ ಆ ಸಖೀಜನರ ಮಧ್ಯೆ ಮೋಡಗಳ ಮಧ್ಯೆ ಇರುವ ಮಿಂಚಿನಂತೆ ಕಂಗೊಳಿಸುತ್ತಿದ್ದಳು.
ಅತೀವ ರೂಪಸಂಪನ್ನಾ ಶ್ರೀರಿವಾಯತಲೋಚನಾ |
ನ ದೇವೇಷು ನ ಯಕ್ಷೇಷು ತಾದೃಗ್ರೂಪವತೀ ಕ್ವಚಿತ್ ||13||
ವಿಶಾಲನೇತ್ರೆಯಾದ ರೂಪಸಂಪನ್ನೆಯಾದ ಅವಳು ಲಕ್ಷ್ಮೀದೇವಿಯಂತೆ ಇದ್ದಳು. ದೇವತೆಗಳಲ್ಲಿಯಾಗಲೀ ಅಥವಾ ಯಕ್ಷರಲ್ಲಿಯಾಗಲೀ ಅಂತಹ ಸುಂದರಿಯು ಇರಲಿಲ್ಲ.
ಮಾನುಷೇಷ್ವಪಿ ನೈವಾನ್ಯಾ ದೃಷ್ಟಪೂರ್ವಾಽಥವಾ ಶ್ರುತಾ |
ಚಿತ್ತಪ್ರಮಾಥಿನೀ ಬಾಲಾ ದೇವನಾಮಪಿ ಸುಂದರೀ ||14||
ಮನುಷ್ಯರಲ್ಲಿಯೂ ಸಹ ಅಂತಹ ಸುಂದರಿಯನ್ನು ಹಿಂದೆ ನೋಡಿರಲಿಲ್ಲ. ಅಥವಾ ಕೇಳಿರಲಿಲ್ಲ. ಸುಂದರಿಯಾದ ಆ ಬಾಲೆಯು ದೇವತೆಗಳ ಮನಸ್ಸನ್ನೂ ಕಲಕುವವಳಾಗಿದ್ದಳು.
ನಳಶ್ಚ ರಾಜಶಾರ್ದೂಲೋ ರೂಪೇಣಾಪ್ರತಿಮೋ ಭುವಿ |
ಕಂದರ್ಪ ಇವ ರೂಪೇಣ ಮೂರ್ತಿಮಾನಭವತ್ ಸ್ವಯಮ್ ||15||
ರಾಜಶಾರ್ದೂಲನಾದ ನಳನು ಭೂಮಿಯಲ್ಲಿ ರೂಪದಲ್ಲಿ ಅಸದೃಶನಾಗಿದ್ದನು. ತನ್ನ ಸೌಂದರ್ಯದಿಂದ ಅವನು ಸ್ವಯಂ ಶರೀರವನ್ನು ಧರಿಸಿದ ಇನ್ನೊಬ್ಬ ಮನ್ಮಥನಂತೆ ಇದ್ದನು.
ತಸ್ಯಾಃ ಸಮೀಪೇ ತು ನಳಂ ಪ್ರಶಶಂಸುಃ ಕುತೂಹಲಾತ್ |
ನೈಷಧಸ್ಯ ಸಮೀಪೇ ತು ದಮಯಂತೀಂ ಪುನಃ ಪುನಃ ||16||
ಜನರು ದಮಯಂತಿಯ ಸಮೀಪದಲ್ಲಿ ಕುತೂಹಲದಿಂದ ನಳನನ್ನು ಪ್ರಸಂಶೆಮಾಡಿದರು. ನಳನ ಸಮೀಪದಲ್ಲಿ ದಮಯಂತಿಯನ್ನು ಸಹ ಪುನಃಪುನಃ ಪ್ರಶಂಸೆಮಾಡಿದರು.
ತಯೋರದೃಷ್ಟಃ ಕಾಮೋಽಭೂತ್ ಶೃಣ್ವತೋಃ ಸತತಂ ಗುಣಾನ್|
ಅನ್ಯೋನ್ಯಂ ಪ್ರತಿ ಕೌಂತೇಯ ಸೋಽಭ್ಯವರ್ಧತ ಹೃಚ್ಛಯಃ ||17||
ಕೌಂತೇಯನೇ! ಒಬ್ಬರನ್ನೊಬ್ಬರು ನೋಡದೆ ಸತತವಾಗಿ ಪರಸ್ಪರಗುಣಗಳನ್ನು ಕೇಳುವ ಅವರಿಗೆ ಪರಸ್ಪರವಾಗಿ ಕಾಮವುಂಟಾಗಿ

ಅದು ಹಾಗೆಯೆ ಬೆಳೆಯಿತು.
ಅಶಕ್ನುವನ್ನಳಃ ಕಾಮಂ ತದಾ ಧಾರಯಿತುಂ ಹೃದಾ |
ಅಂತಃಪುರಸಮೀಪಸ್ಥೋ ವನ ಆಸ್ತೇ ರಹೋಗತಃ ॥18॥
ತನ್ನ ಕಾಮದ ವೇಗವನ್ನು ತಡೆದುಕೊಳ್ಳಲಾಗದೆ ಆಗ ನಳನು ಅಂತಃಪುರದ ಸಮೀಪದ ವನದಲ್ಲಿ ಏಕಾಂತದಲ್ಲಿ ಇದ್ದನು.
ಸ ದದರ್ಶ ತದಾ ಹಂಸಾನ್ ಜಾತರೂಪಪರಿಚ್ಛದಾನ್ |
ವನೇ ವಿಚರತಾಂ ತೇಷಾಮೇಕಂ ಜಗ್ರಾಹ ಪಕ್ಷಿಣಮ್ ॥19॥
ಅವನು ಆ ವನದಲ್ಲಿ ಸಂಚರಿಸುವ ಸುವರ್ಣಮಯವಾದ ಪಕ್ಷಗಳನ್ನುಳ್ಳ ಹಂಸಗಳನ್ನು ನೋಡಿ ಅವುಗಳಲ್ಲಿ ಒಂದನ್ನು ಹಿಡಿದುಕೊಂಡನು.
ತತೋಽಂತರಿಕ್ಷಗೋ ವಾಚಂ ವ್ಯಾಜಹಾರ ತದಾ ನಳಮ್ |
ನ ಹಂತವ್ಯೋಽಸ್ಮಿ ತೇ ರಾಜನ್ ಕರಿಷ್ಯಾಮಿ ಹಿ ವೈ ಪ್ರಿಯಮ್ |
ದಮಯಂತೀಸಕಾಶೇ ತ್ವಾಂ ಕಥಯಿಷ್ಯಾಮಿ ನೈಷಧ ॥20॥
ಆಗ ಅಂತರಿಕ್ಷದಲ್ಲಿ ಹಾರುವ ಆ ಪಕ್ಷಿಯು ನಳನನ್ನು ಕುರಿತು ರಾಜನೇ ನನ್ನನ್ನು ಕೊಲ್ಲಬೇಡ. ನಿನಗೆ ಪ್ರಿಯವನ್ನು ಉಂಟುಮಾಡುವೆನು. ನೈಷಧನೇ, ದಮಯಂತಿಯ ಸಮೀಪಕ್ಕೆ ಹೋಗಿ ನಿನ್ನನ್ನು ತಿಳಿಸುವೆನು ಎಂದು ಹೇಳಿತು.
ಯಥಾ ತ್ವದನ್ಯಂ ಪುರುಷಂ ನ ಸಾ ಮಂಸ್ಯತಿ ಕರ್ಹಿಚಿತ್ |
ತವೈವ ಚ ಯಥಾ ಭಾರ್ಯಾ ಭವಿಷ್ಯತಿ ತಥಾಽನಘ |
ವಿಧಾಸ್ಯಾಮಿ ನರವ್ಯಾಘ್ರ ಸೋಽನುಜಾನಾತು ಮಾಂ ಭವಾನ್ ॥
ನರವ್ಯಾಘ್ರನೇ, ನಿನ್ನನ್ನು ಬಿಟ್ಟು ಇನ್ನೊಬ್ಬ ಪುರುಷನನ್ನು ಅವಳು ಯೋಚನೆಮಾಡದಂತೆ ಮತ್ತು ನಿನ್ನ ಭಾರ್ಯೆಯೇ ಆಗುವಂತೆ ನಾನು ಮಾಡುವೆನು. ಅನಘನೇ ನನ್ನನ್ನು ಬಿಟ್ಟುಬಿಡು.
ಏವಮುಕ್ತಸ್ತತೋ ಹಂಸಮುತ್ಸಸರ್ಜ ಮಹೀಪತಿಃ |
ತೇ ತು ಹಂಸಾಃ ಸಮುತ್ಪತ್ಯ ವಿದರ್ಭಾನಗಮಂಸ್ತತಃ ॥22॥
ಹೀಗೆ ಹೇಳಲ್ಪಟ್ಟ ರಾಜನು ಆ ಹಂಸವನ್ನು ಬಿಟ್ಟನು. ಆಗ ಆ ಹಂಸಗಳು ಹಾರಿ ವಿದರ್ಭದೇಶಕ್ಕೆ ಬಂದವು.
ವಿದರ್ಭನಗರೀಂ ಗತ್ವಾ ದಮಯಂತ್ಯಾಸ್ತದಾಽಂತಿಕೇ |
ನಿಪೇತುಸ್ತೇ ಗರುತ್ಮಂತಃ ಸಾ ದದರ್ಶಾಥ ತಾನ್ ಖಗಾನ್ ॥23॥
ವಿದರ್ಭದೇಶದ ಪಟ್ಟಣಕ್ಕೆ ಹೋಗಿ ಆ ಪಕ್ಷಿಗಳು ದಮಯಂತಿಯ ಸಮೀಪದಲ್ಲಿ ಇಳಿದವು. ಆಗ ದಮಯಂತಿಯು ಆ ಪಕ್ಷಿಗಳನ್ನು ನೋಡಿದಳು.
ಸಾ ತಾನದ್ಭುತರೂಪಾನ್ ವೈ ದೃಷ್ಟ್ವಾ ಸಖಿಗಣಾವೃತಾ |
ಹೃಷ್ಟಾ ಗ್ರಹೀತುಂ ಖಗಮಾನ್ ತ್ವರಮಾಣೋಪಚಕ್ರಮೇ ॥34॥
ಅವಳೂ ಸಹ ಅದ್ಬುತರೂಪವುಳ್ಳ ಆ ಪಕ್ಷಿಗಳನ್ನು ನೋಡಿ ಸಖೀಗಣದಿಂದ ಸಹಿತಳಾಗಿ ಸಂತೋಷದಿಂದ ಆ ಪಕ್ಷಿಗಳನ್ನು ಹಿಡಿಯಲು ಶೀಘ್ರವಾಗಿ ಪ್ರಯತ್ನಿಸಿದಳು.
ಹಂಸಾ ವಿಸಸೃಪುಃ ಶೀಘ್ರಂ ಸರ್ವತಃ ಪ್ರಮದಾವನೇ |
ಏಕೈಕಶಸ್ತದಾ ಕನ್ಯಾಃ ತಾನ್ ಹಂಸಾನ್ ಸಮುಪಾದ್ರವನ್ ॥25॥
ಹಂಸಗಳು ಆ ಪ್ರಮದಾವನದಲ್ಲಿ ಅವರ ಕೈಗೆ ಸಿಲುಕದೆ ಎಲ್ಲ ಕಡೆಗಳಲ್ಲಿ ಓಡಾಡಿದವು. ಆ ಕನ್ಯೆಯರು ಒಬ್ಬೊಬ್ಬರು ಒಂದೊಂದರಂತೆ ಹಂಸಗಳನ್ನು ಹಿಂಬಾಲಿಸಿದರು.
ದಮಯಂತೀ ತು ಯಂ ಹಂಸಂ ಸಮುಪಾಧಾವದಂತಿಕಾತ್ |
ಸ ಮಾನುಷೀಂ ಗಿರಂ ಕೃತ್ವಾ ದಮಯಂತೀಮಥಾಬ್ರವೀತ್ ॥26॥
ದಮಯಂತಿಯು ಯಾವ ಹಂಸದ ಸಮೀಪಕ್ಕೆ ಹೋದಳೋ ಆ ಹಂಸವು ಮನುಷ್ಯರ ಮಾತಿನಿಂದ ದಮಯಂತಿಯನ್ನು ಕುರಿತು ಹೇಳಿತು.
ದಮಯಂತಿ ನಳೋ ನಾಮ ನಿಷಧೇಷು ಮಹೀಪತಿಃ |
ಅಶ್ವಿನೋಃ ಸದೃಶೋ ರೂಪೇ ನ ಸಮೋಽಸ್ಯಸ್ಯ ಮಾನುಷಃ ॥27॥
ದಮಯಂತಿಯೇ, ನಳನೆಂಬ ನೈಷಧರಾಜನಿದ್ದಾನೆ. ಅವನು ರೂಪದಲ್ಲಿ ಅಶ್ವಿನೀದೇವತೆಗಳಿಗೆ ಸದೃಶನಾಗಿದ್ದಾನೆ. ಅವನಿಗೆ ಸಮಾನನಾದ ಇನ್ನೊಬ್ಬ ಮನುಷ್ಯನಿಲ್ಲ.
ತಸ್ಯ ವೈ ಯದಿ ಭಾರ್ಯಾ ತ್ವಂ ಭವೇಥಾ ವರವರ್ಣಿನಿ |
ಸಫಲಂ ತೇ ಭವೇಜ್ಜನ್ಮ ರೂಪಂ ಚೇದಂ ಸುಮಧ್ಯಮೇ ॥28॥
ಸುಂದರಿಯೇ ಸುಮಧ್ಯಮೆಯೇ, ನೀನು ಅವನ ಭಾರ್ಯೆಯಾದರೆ ನಿನ್ನ ಜನ್ಮವು ಮತ್ತು ನಿನ್ನ ಸೌಂದರ್ಯವು ಸಾರ್ಥಕವಾಗುತ್ತದೆ.
ವಯಂ ಹಿ ದೇವಗಂಧರ್ವಮನುಷ್ಯೋರಗರಾಕ್ಷಸಾನ್ |
ದೃಷ್ಟವಂತೋ ನ ಚಾಸ್ಮಾಭಿರ್ದೃಷ್ಟಪೂರ್ವಸ್ತಥಾವಿಧಃ ॥29॥
ನಾವು ದೇವತೆಗಳನ್ನು ಗಂಧರ್ವರನ್ನು ಮನುಷ್ಯರನ್ನು ಉರಗಗಳನ್ನು ಮತ್ತು ರಾಕ್ಷಸರನ್ನು ನೋಡಿದ್ದೇವೆ. ಆದರೆ ನಳನಂತಹ ಪುರುಷನನ್ನು ಹಿಂದೆ ಎಂದೂ ನೋಡಲಿಲ್ಲ.
ತ್ವಂ ಚಾಪಿ ರತ್ನಂ ನಾರೀಣಾಂ ನರೇಷು ಚ ನಳೋ ವರಃ |
ವಿಶಿಷ್ಟಾಯಾ ವಿಶಿಷ್ಟೇನ ಸಂಗಮೋ ಗುಣವಾನ್ ಭವೇತ್ ॥30॥

ನೀನೂ ಸಹ  ನಾರಿಯರಲ್ಲಿ ಶ್ರೇಷ್ಠಳಾಗಿದ್ದೀಯೆ. ನಳನು ಪುರುಷರಲ್ಲಿ  ಶ್ರೇಷ್ಠನಾಗಿದ್ದಾನೆ. ಶ್ರೇಷ್ಠಳಾದವಳಿಗೆ ಶ್ರೇಷ್ಠನಾದವನ ಸಂಗಮವು ಶ್ಲಾಘನೀಯವಾಗುತ್ತದೆ.
ಏವಮುಕ್ತಾ ತು ಹಂಸೇನ ದಮಯಂತೀ ವಿಶಾಂಪತೇ |
ಅಬ್ರುವೀತ್ತತ್ರ ತಂ ಹಂಸಂ ತ್ವಮಪ್ಯೇವಂ ನಳಂ ವದ ||31||
ಎಲೈ ರಾಜನೇ ಹೀಗೆ ಹಂಸದಿಂದ ಹೇಳಲ್ಪಟ್ಟ ದಮಯಂತಿಯು ಆಗ ಹಂಸವನ್ನು ಕುರಿತು ನೀನು ಹೀಗೆಯೇ ನಳನಿಗೂ ಹೇಳು ಎಂದು ಹೇಳಿದಳು.
ತಥೇತ್ಯುಕತ್ವಽಂಡಜಃ ಕನ್ಯಾಂ ವೈದರ್ಭಸ್ಯ ವಿಶಾಂಪತೇಃ |
ಪುನರಾಗಮ್ಯ ನಿಷಧಾನ್ ನಳೇ ಸರ್ವಂ ನ್ಯವೇದಯತ್ ||32||
ಆ ಹಂಸವು ವಿದರ್ಭರಾಕಜಕುಮಾರಿಯಾದ ದಮಯಂತಿಗೆ ಹಾಗೆಯೇ ಆಗಲಿ ಎಂದು ಹೇಳಿ ಪುನಃ ನಿಷಧ ದೇಶಕ್ಕೆ ಬಂದು ನಳನಿಗೆ ಎಲ್ಲವನ್ನೂ ನಿವೇದಿಸಿತು.
|| ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
*****
ನಲವತ್ತೇಳನೆಯ ಅಧ್ಯಾಯ
(ದಮಯಂತಿಯ ಸ್ವಯಂವರದ ಘೋಷಣೆ.
ದೇವತೆಗಳ ಆಗಮನ, ನಳನ ದೌತ್ಯ.)
ಬೃಹದಶ್ವಃ
ದಮಯಂತೀ ತು ತಚ್ಛ್ರುತ್ವಾ ವಚೋ ಹಂಸಸ್ಯ ಭಾರತ |
ತದಾ ಪ್ರಭೃತಿ ನಸ್ವಸ್ಥಾ ನಳಂ ಪ್ರತಿ ಬಭೂವ ಸಾ ||1||
ಎಲೈ ಭಾರತನೇ ದಮಯಂತಿಯು ಹಂಸದ ಆ ಮಾತುಗಳನ್ನು ಕೇಳಿ ಆಗಿನಿಂದ ನಳನನ್ನು ಯೋಚಿಸುತ್ತಾ ಅಸ್ವಸ್ಥಳಾದಳು.
ತತಶ್ಚಿಂತಾಪರಾ ದೀನಾ ವಿವರ್ಣವದನಾ ಕೃಶಾ |
ಬಭೂವ ದಮಯಂತೀ ತು ನಿಃಶ್ವಾಸಪರಮಾ ತದಾ ||2||
ದಮಯಂತಿಯು ಚಿಂತಾಕ್ರಾಂತಳೂ ದೀನಳೂ ಕಳೆಗುಂದಿದ ಮುಖ್ಖವುಳ್ಳವಳೂ, ಕೃಶಳೂ ಆಗಿ ಯಾವಾಗಲೂ ನಿಟ್ಟುಸಿರನ್ನು ಬಿಡುತ್ತಿದ್ದಳು.
ಊರ್ಧ್ವದೃಷ್ಟಿರ್ಧ್ಯಾನಪರಾ ಬಭೂವೋನ್ಮತ್ತದರ್ಶನಾ |
ನ ಶಯ್ಯಾಸನಭೋಗೇಷು ರತಿಂ ವಿಂದತಿ ಕರ್ಹಿಚಿತ್ ||3||
ಊರ್ಧ್ವದೃಷ್ಟಿಯುಳ್ಳವಳಾಗಿ ಚಿಂತಾಕ್ರಾಂತಳಾಗಿ ಹುಚ್ಚಿಯಂತೆ ಕಾಣುತ್ತಿದ್ದಳು. ಶಯನ ಆಸನ ಭೋಗಗಳಲ್ಲಿ  ಆಸಕ್ತಿಯನ್ನೇ ಹೊಂದಲಿಲ್ಲ.
ನ ನಕ್ತಂ ನ ದಿವಾ ಶೇತೇ ಹಾಹೇತಿ ವದತೀ ಮುಹುಃ |
ತಾಮಸ್ವಸ್ಥಾಂ ತದಾಕಾರಾಂ ಸಖ್ಯಸ್ತಾ ಜಜ್ಞುರಿಂಗಿತೈಃ ||4||
ಹಗಲಾಗಲೀ ಅಥವಾ ರಾತ್ರಿಯಾಗಲೀ ನಿದ್ರೆಯನ್ನು ಮಾಡಲಿಲ್ಲ. ಪುನಃಪುನಃ ಹಾಹಾ ಎಂದು ಹೇಳುತ್ತಿದ್ದಳು. ಅವಳ ಆ ಅವಸ್ಥೆಯನ್ನು  ಇಂಗಿತಜ್ಞರಾದ ಅವಳ ಸಖಿಯರು ತಿಳಿದರು.
ತತೋ ವಿದರ್ಭಪತಯೇ ದಮಯಂತ್ಯಾಃ ಸಖೀಗಣಃ |
ನ್ಯವೇದಯತ ಚಾಸ್ವಸ್ಥಾಂ ದಮಯಂತೀಂ ನರೇಶ್ವರ ||5||
ಎಲೈ ನರೇಶ್ವನೇ! ಆಗ ದಮಯಂತಿಯ ಸಖಿಯರ ಸಮೂಹವು ವಿದರ್ಭರಾಜನ ಬಳಿಗೆ ಹೋಗಿ ದಮಯಂತಿಯು ಅಸ್ವಸ್ಥಳಾಗಿದ್ದಾಳೆ ಎಂದು ತಿಳಿಸಿತು.
ತಚ್ಛ್ರುತ್ವಾ  ನೃಪತಿರ್ಭೀಮೋ ದಮಯಂತೀಸಖೀಗಣಾತ್ |
ಚಿಂತಯಾಮಾಸ ತತ್ ಕಾರ್ಯಂ ಸುಮಹತ್ ಸ್ವಾಂ ಸುತಾಂ ಪ್ರತಿ |
ಕಿಮಸ್ಮದ್ದುಹಿತಾ ಮೇಽದ್ಯ ನಾತಿಸ್ವಸ್ಥೇವೋಪಲಕ್ಷ್ಯತೇ ||6||
ಅದನ್ನು ದಮಯಂತಿಯ ಸಖೀಗಣದಿಂದ ಕೇಳಿದ ಭೀಮರಾಜನು ತನ್ನ ಮಗಳ ವಿಷಯದಲ್ಲಿ ಈಗ ಮುಖ್ಯವಾಗಿ ಮಾಡಬೇಕಾದದ್ದು ಏನು? ನನ್ನ ಮಗಳು ಏತಕ್ಕೆ ಅಸ್ವಸ್ಥಳಾಗಿ  ಕಾಣಿಸುತ್ತಿದ್ದಾಳೆ ಎಂದು ಚಿಂತಿಸಿದನು.
ಸ ಸಮೀಕ್ಷ್ಯ ಮಹೀಪಾಲಃ ಸ್ವಸುತಾಂ ಪ್ರಾಪ್ತಯೌವನಾಮ್ |
ಅಪಶ್ಯದಾತ್ಮನಃ ಕಾರ್ಯಂ ದಮಯಂತ್ಯಾಃ ಸ್ವಯಂವರಮ್ ||7||
ಆ ರಾಜನು ತನ್ನ ಮಗಳು ಯೌವನಸ್ಥಳಾಗಿದ್ದಾಳೆ ಎಂದು ತಿಳಿದು ತಾನು ದಮಯಂತಿಯ ಸ್ವಯಂವರವನ್ನು ಮಾಡುವುದು ಯೋಗ್ಯವಾದ ಕಾರ್ಯವೆಂದು ಭಾವಿಸಿದನು.
ಸ ಸನ್ನಿಮಂತ್ರಯಾಮಾಸ ಮಹೀಪಾಲಾನ್ ವಿಶಾಂಪತೇ |
ಏಷೋಽನುಭೂಯತಾಂ ವೀರಾಃ ಸ್ವಯಂವರ ಇತಿ ಸ್ಮಹ ||8||
ಶ್ರುತ್ವಾ ತು ಪಾರ್ಥಿವಾಃ ಸರ್ವೇ ದಮಯಂತ್ಯಾಃ ಸ್ವಯಂವರಮ್ |
ಅಭಿಜಗ್ಮುಸ್ತದಾ ಭೀಮಂ ರಾಜಾನೋ ಭೀಮಶಾಸನಾತ್ ||9||

ಹಸ್ತ್ಯಶ್ವರಥಘೋಷೇಣ ನಾದಯಂತೋ ವಸುಂಧರಾಮ್ |
ವಿಚಿತ್ರಮಾಲ್ಯಾಭರಣೈರ್ಬಲೈರ್ಭೃತ್ಯೈಃ ಸ್ವಲಂಕೃತಾಃ ॥10॥
ಎಲೈ ರಾಜನೇ! ಅವನು ವೀರರೆಲ್ಲರೂ ಬಂದು ಈ ಸ್ವಯಂವರದಲ್ಲಿ ಭಾಗವಹಿಸಿ ಎಂದು ಎಲ್ಲ ರಾಜರುಗಳನ್ನೂ ಆಹ್ವಾನಿಸಿದನು. ಭೀಮರಾಜನ ಶಾಸನವನ್ನು ಕೇಳಿದ ರಾಜರೆಲ್ಲರೂ ದಮಯಂತಿಯ ಸ್ವಯಂವರವನ್ನು ಕೇಳಿ ಆಗ ಭೀಮರಾಜನ ಬಳಿಗೆ ಬಂದರು. ಗಜಗಳು ಅಶ್ವಗಳು ಮತ್ತು ರಥಗಳ ಘೋಷದಿಂದ ಭೂಮಿಯಲ್ಲಿ ದೊಡ್ಡ ಶಬ್ದವನ್ನು ಉಂಟುಮಾಡುತ್ತಾ ವಿಚಿತ್ರಮಾಲ್ಯಾಭರಣಗಳನ್ನು ಧರಿಸಿ ಅಲಂಕೃತರಾಗಿ ತಮ್ಮ ಭೃತ್ಯ ಮತ್ತು ಸೈನ್ಯದ ಜೊತೆಯಲ್ಲಿ ಬಂದರು.
ಏತಸ್ಮಿನ್ನೇವ ಕಾಲೇ ತು ಪುರಾಣಾವೃಷಿಸತ್ತಮೌ |
ಅಟಮಾನೌ ಮಹಾತ್ಮಾನಾವಿಂದ್ರಲೋಕಾನ್ಮಹೀಂ ಗತೌ ॥11॥
ನಾರದಃ ಪರ್ವತಶ್ಚೈವ ಮಹಾಪ್ರಾಜ್ಞೌ ಮಹಾದ್ಯುತೀ |
ದೇವರಾಜಸ್ಯ ಭವನಂ ವಿವಿಶಾತೇ ಸುಪೂಜಿತೌ ॥12॥
ಈ ಸಮಯದಲ್ಲಿ ಋಷಿಶ್ರೇಷ್ಠರಾದ ಪ್ರಾಚೀನರಾದ ಮಹಾಪ್ರಾಜ್ಞರೂ ಮಹಾಕಾಂತಿಯುಕ್ತರೂ ಆದ ಮಹಾತ್ಮರಾದ ನಾರದ ಮತ್ತು ಪರ್ವತರು ಸಂಚಾರವನ್ನುಮಾಡುತ್ತಾ ಇಂದ್ರಲೋಕಕ್ಕೆ ಹೋಗಿ ದೇವರಾಜನ ಗೃಹವನ್ನು ಪ್ರವೇಶಿಸಿ ಅಲ್ಲಿ ಪೂಜಿಸಲ್ಪಟ್ಟರು.
ತಾವರ್ಚಿತ್ವಾ ಸಹಸ್ರಾಕ್ಷಸ್ತತಃ ಕುಶಲಮವ್ಯಯಮ್ |
ಪಪ್ರಚ್ಛಾನಾಮಯಂ ಚಾಪಿ ತಯೋಃ ಸರ್ವಗತಂ ಪ್ರಭುಃ ॥13॥
ಸಹಸ್ರಾಕ್ಷನೂ ಪ್ರಭುವೂ ಆದ ಇಂದ್ರನು ಅವರನ್ನು ಪೂಜಿಸಿ ಕುಶಲಪ್ರಶ್ನೆಯನ್ನುಮಾಡಿ ಅವರ ಸಾರ್ವತ್ರಿಕವಾದ ಯೋಗಕ್ಷೇಮವನ್ನು ವಿಚಾರಿಸಿದನು.
ನಾರದಃ
ಆವಯೋಃ ಕುಶಲಂ ದೇವ ಸರ್ವತ್ರ ಗತಮೀಶ್ವರ |
ಲೋಕೇ ಚ ಭಗವನ್ ಕೃತ್ಸ್ನೇ ನೃಪಾಃ ಕುಶಲಿನೋ ವಿಭೋ ॥14॥
ಪ್ರಭುವೇ ನಾವು ಕುಶಲಿಗಳು. ದೇವನೆ ನಾವು ಎಲ್ಲ ಕಡೆಯಲ್ಲಿಯೂ ತಿರುಗಾಡಿದೆವು. ವಿಭುವೇ ಪೂಜ್ಯನೇ, ಭೂಮಿಯಲ್ಲಿ ಎಲ್ಲರಾಜರೂ ಕ್ಷೇಮದಿಂದ ಇದ್ದಾರೆ.
ಬೃಹದಶ್ವಃ
ನಾರದಸ್ಯ ವಚಃ ಶ್ರುತ್ವಾ ಪಪ್ರಚ್ಛ ಬಲವೃತ್ರಹಾ ॥15॥
ಧರ್ಮಜ್ಞಾಃ ಪೃಥಿವೀಪಾಲಾಃ ತ್ಯಕ್ತಜೀವಿತಯೋಧಿನಃ |
ಶಸ್ತ್ರೇಣ ನಿಧನಂ ಕಾಲೇ ಯೇ ಗಚ್ಛಂತ್ಯಪರಾಙ್ಮುಖಾಃ |
ಅಯಂ ಲೋಕೋಽಕ್ಷಯಸ್ತೇಷಾಂ ಯಥೈವ ಮಮ ಕಾಮಧೃಕ್ ॥16॥
ಕ್ವ ನು ತೇ ಕ್ಷತ್ರಿಯಾಃ ಶೂರಾ ನ ಹಿ ಪಶ್ಯಾಮಿ ತಾನಹಮ್ |
ಆಗಚ್ಛತೋ ಮಹೀಪಾಲಾನತಿಥೀನ್ ದಯಿತಾನ್ ಮಮ ॥17॥
ನಾರದರಮಾತನ್ನು ಕೇಳಿ ಬಲವೃತ್ರಸೂದನನಾದ ಇಂದ್ರನು ಧರ್ಮಜ್ಞರಾದ ರಾಜರು ಮತ್ತು ರಣರಂಗದಿಂದ ಹಿಮ್ಮೆಟ್ಟದೆ ಶಸ್ತ್ರದಿಂದ ಹತರಾದ ಯೋಧರು ಬರುವ ಈ ಲೋಕವು ನನಗೆ ಹೇಗೆ ಅಕ್ಷಯ ಸುಖವನ್ನು ಕೊಡುತ್ತದೆಯೋ ಹಾಗೆಯೇ ಅವರಿಗೂ ಅಕ್ಷಯಸುಖವನ್ನು ಕೊಡುತ್ತದೆ. ಆದರೆ ಆ ಶೂರರಾದ ಕ್ಷತ್ರಿಯರೆಲ್ಲರೂ ಎಲ್ಲಿಗೆ ಹೋದರು? ನನಗೆ ಅತಿಥಿಗಳಾಗಿ ಬರುತ್ತಿದ್ದಂತಹ ನನಗೆ ಪ್ರಿಯರಾದ ಅವರನ್ನು ನಾನು ಕಾಣುತ್ತಿಲ್ಲ ಎಂದು ಕೇಳಿದನು.
ಏವಮುಕ್ತಸ್ತು ಶಕ್ರೇಣ ನಾರದಃ ಪ್ರತ್ಯುವಾಚ ಹ |
ಶೃಣು ಮೇ ಭಗವನ್ ಯೇನ ನ ದೃಶ್ಯಂತೇ ಮಹೀಕ್ಷಿತಃ ॥18॥
ಇಂದ್ರನಿಂದ ಹೀಗೆ ಕೇಳಲ್ಪಟ್ಟ ನಾರದರು ಉತ್ತರವನ್ನು ಕೊಟ್ಟರು. ಪೂಜ್ಯನೇ ಯಾವ ಕಾರಣದಿಂದ ರಾಜರು ಕಾಣುತ್ತಿಲ್ಲವೆಂದು ಹೇಳುತ್ತೇನೆ ಕೇಳು.
ವಿದರ್ಭರಾಜತನಯಾ ದಮಯಂತೀತಿ ವಿಶ್ರುತಾ |
ರೂಪೇಣ ಸಮತಿಕ್ರಾಂತಾ ಪೃಥಿವ್ಯಾಂ ಸರ್ವಯೋಷಿತಃ ॥19॥
ವಿದರ್ಭರಾಜಕುಮಾರಿಯಾದ ದಮಯಂತಿ ಎಂದು ಪ್ರಸಿದ್ಧಳಾದ ಕನ್ಯೆಯು ತನ್ನ ಸೌಂದರ್ಯದಿಂದ ಭೂಮಿಯಲ್ಲಿರುವ ಎಲ್ಲಾ ಸ್ತ್ರೀಯರನ್ನು ಮೀರಿದ್ದಾಳೆ.
ತಸ್ಯಾಃ ಸ್ವಯಂವರಃ ಶಕ್ರ ಭವಿತಾ ನಚಿರಾದಿವ |
ತತ್ರ ಗಚ್ಛಂತಿ ರಾಜಾನೋ ರಾಜಪುತ್ರಾಶ್ಚ ಸರ್ವಶಃ ॥20॥
ಎಲೈ ಇಂದ್ರನೇ ಸ್ವಲ್ಪಸಮಯದಲ್ಲಿಯೇ ಅವಳ ಸ್ವಯಂವರವು ಏರ್ಪಡುವುದಿದೆ ಎಲ್ಲ ರಾಜರು ಮತ್ತು ರಾಜಪುತ್ರರು ಅಲ್ಲಿಗೆ ಹೋಗುತ್ತಿದ್ದಾರೆ.
ತಾಂ ರತ್ನಭೂತಾಂ ಲೋಕಸ್ಯ ಪ್ರಾರ್ಥಯಂತೋ ಮಹೀಕ್ಷಿತಃ |
ಕಾಂಕ್ಷಂತಿ ಸ್ಮ ವಿಶೇಷೇಣ ಬಲವೃತ್ರನಿಷೂದನ ॥21॥
ಎಲೈ ಬಲವೃತ್ರನಿಷೂದನನೇ ಭೂಮಿಯಲ್ಲಿ ರತ್ನಪ್ರಾಯಳಾಗಿರುವ ಅವಳನ್ನು ಎಲ್ಲ ರಾಜರೂ ವಿಶೇಷವಾಗಿ ಪ್ರಾರ್ಥನೆಮಾಡುತ್ತಾ ಆಕಾಂಕ್ಷೆ ಪಡುತ್ತಿದ್ದಾರೆ.
ಬೃಹದಶ್ವಃ
ಏತೇಷು ಕಥ್ಯಮಾನೇಷು ಲೋಕಪಾಲಾಶ್ಚ ಸಾಗ್ನಿಕಾಃ |

ಆಜಗ್ಮುರ್ದೇವರಾಜಸ್ಯ ಸಮೀಪಮಮರೋತ್ತಮಾಃ ॥22॥
ಇವರು ಹೀಗೆ ಮಾತಾಡುತ್ತಿರುವಾಗ ಅಮರಶ್ರೇಷ್ಠರಾದ ಅಗ್ನಿ ಮೊದಲಾದ ಲೋಕಪಾಲಕರು ದೇವರಾಜನಾದ ಇಂದ್ರನ ಸಮೀಪಕ್ಕೆ ಬಂದರು.
ತತಸ್ತೇ ಶುಶ್ರುವುಃ ಸರ್ವೇ ನಾರದಸ್ಯ ವಚೋ ಮಹತ್ |
ಶ್ರುತ್ವಾ ಚೈವಾಬ್ರುವನ್ ಸರ್ವೇ ಗಚ್ಛಾಮ ವಯಮಪ್ಯುತ ॥23॥
ಅವರೆಲ್ಲರೂ ನಾರದರ ಶ್ರೇಷ್ಠವಾದ ಮಾತುಗಳನ್ನು ಕೇಳಿದರು. ಕೇಳಿದ ಮೇಲೆ ನಾವೆಲ್ಲರೂ ಅಲ್ಲಿಗೆ ಹೋಗೋಣ ಎಂದು ಹೇಳಿದರು.
ತತಃ ಸರ್ವೇ ಮಹಾರಾಜ ಸಗಣಾಃ ಸಹವಾಹನಾಃ |
ವಿದರ್ಭಾನಭಿತೋ ಜಗ್ಮುರ್ಯತ್ರ ಸರ್ವೇ ಮಹೀಕ್ಷಿತಃ ॥24॥
ಮಹಾರಾಜನೇ, ಅನಂತರ ಆ ದೇವತೆಗಳೆಲ್ಲರೂ ತಮ್ಮ ವಾಹನ ಮತ್ತು ಪರಿವಾರದೊಂದಿಗೆ ಎಲ್ಲಿ ರಾಜರೆಲ್ಲರೂ ಮೊದಲೇ ಸೇರಿದ್ದರೋ ಅಂತಹ ವಿದರ್ಭದೇಶಕ್ಕೆ ಹೊರಟರು.
ನಳೋಽಪಿ ರಾಜಾ ಕೌಂತೇಯ ಶ್ರುತ್ವಾ ರಾಜ್ಞಾಂ ಸಮಾಗಮಮ್|
ಅಭ್ಯಗಚ್ಛದದೀನಾತ್ಮಾ ದಮಯಂತೀಮನುವ್ರತಃ ॥25॥
ಕೌಂತೇಯನೇ, ನಳನೂ ಸಹ ರಾಜರ ಸಮಾಗಮವನ್ನು ಕೇಳಿ ದಮಯಂತಿಯಲ್ಲಿ ಅನುರಕ್ತವಾದ ಮನಸ್ಸುಳ್ಳವನಾಗಿ ಧೀರನಾಗಿ ಅಲ್ಲಿಗೆ ಹೊದನು.
ಅಥ ದೇವಾಃ ಪಥಿ ನಳಂ ದದೃಶುರ್ಭೂತಳೇ ಸ್ಥಿತಮ್ |
ಸಾಕ್ಷಾದಿವ ಸ್ಥಿತಂ ಮೂರ್ತ್ಯಾ ಮನ್ಮಥಂ ರೂಪಸಂಪದಾ ॥26॥
ಆಗ ದೇವತೆಗಳು ತನ್ನರೂಪಸಂಪತ್ತಿನಿಂದ ಶರೀರವನ್ನು ಧರಿಸಿದ ಮನ್ಮಥನಂತೆ ಕಂಗೊಳಿಸುತ್ತಿದ್ದ ನಳನು ಭೂಮಿಯಲ್ಲಿ ನಿಂತಿರುವುದನ್ನು ನೋಡಿದರು.
ತಂ ದೃಷ್ಟ್ವಾ ಲೋಕಪಾಲಾಸ್ತೇ ಭ್ರಾಜಮಾನಂ ಯಥಾ ರವಿಮ್ |
ತಸ್ಥುರ್ವಿಗತಸಂಕಲ್ಪಾ ವಿಸ್ಮಿತಾ ರೂಪಸಂಪದಾ ॥27॥
ಆ ಲೋಕಪಾಲಕರು ತನ್ನ ರೂಪಸಂಪತ್ತಿನಿಂದ ಸೂರ್ಯನಂತೆ ಬೆಳಗುತ್ತಿದ್ದ ಅವನನ್ನು ನೋಡಿ ವಿಸ್ಮಿತರಾಗಿ ಭಗ್ನಸಂಕಲ್ಪರಾದರು.
ತತೋಽಂತರಿಕ್ಷೇ ವಿಷ್ಟಭ್ಯ ವಿಮಾನಾನಿ ದಿವೌಕಸಃ |
ಅಬ್ರುವನ್ ನೈಷಧಂ ರಾಜನ್ನವತೀರ್ಯ ನಭಸ್ತಲಾತ್ ॥28॥
ರಾಜನೇ! ಆಗ ದೇವತೆಗಳು ಆಕಾಶದಲ್ಲಿ ತಮ್ಮ ವಿಮಾನಗಳನ್ನು ನಿಲ್ಲಿಸಿ ಕೆಳಗೆ ಇಳಿದುಬಂದು ನಳನನ್ನು ಕುರಿತು ಮಾತನಾಡಿದರು.
ಭೋ ಭೋ ನೈಷಧ ರಾಜೇಂದ್ರ ನಳ ಸತ್ಯವ್ರತೋ ಭವಾನ್ |
ಅಸ್ಮಾಕಂ ಕುರು ಸಾಹಾಯ್ಯಂ ದೂತೋ ಭವ ನರೋತ್ತಮ ॥29॥
ಎಲೈ ನೈಷಧರಾಜೇಂದ್ರನೇ, ನರೋತ್ತಮನಾದ ನಳನೇ ನೀನು ಸತ್ಯವ್ರತವುಳ್ಳವನು. ನಮಗೆ ಸಹಾಯವನ್ನು ಮಾಡು. ನಮ್ಮ ದೂತನಾಗು.
ಬೃಹದಶ್ವಃ
ತೇಭ್ಯಃ ಪ್ರತಿಜ್ಞಾಯ ನಳಃ ಕರಿಷ್ಯ ಇತಿ ಭಾರತ |
ಅಥೈತಾನ್ ಪರಿಪಪ್ರಚ್ಛ ಕೃತಾಂಜಲಿರುಪಸ್ಥಿತಃ ॥30॥
ಕೇ ವೈ ಭವಂತಃ ಕಶ್ಚಾಸೌ ಯಸ್ಯಾಹಂ ದೂತ ಈಪ್ಸಿತಃ |
ಕಿಂಚ ತತ್ರ ಮಯಾ ಕಾರ್ಯಂ ಕಥಯಧ್ವಂ ಯಥಾತಥಮ್ ॥31॥
ಭಾರತನೇ! ನಳನು ಹಾಗೆಯೇ ಮಾಡುತ್ತೇನೆಂದು ಅವರಿಗೆ ಪ್ರತಿಜ್ಞೆಯನ್ನುಮಾಡಿ ಅನಂತರ ಕೈಗಳನ್ನು ಮುಗಿದು ಅವರನ್ನು ಕುರಿತು ಯಾವ ನಿಮಗೆ ನಾನು ದೂತನಾಗಬೇಕೆಂದು ಇಚ್ಛೆ ಇದೆಯೋ ಅಂತಹ ನೀವು ಯಾರು ಈ ವ್ಯಕ್ತಿಯಾರು ಮತ್ತು ನಾನು ನಿಮಗಾಗಿ ಏನುಮಾಡಬೇಕಾಗಿದೆ ಎಲ್ಲವನ್ನೂ ಸರಿಯಾಗಿ ಹೇಳಿ ಎಂದು ಕೇಳಿದನು.
ಬೃಹದಶ್ವಃ
ಏವಮುಕ್ತೋ ನೈಷಧೇನ ಮಘವಾನಭ್ಯಭಾಷತ |
ಅಮರಾನ್ ವೈ ನಿಬೋಧಾಸ್ಮಾನ್ ದಮಯಂತ್ಯರ್ಥಮಾಗತಾನ್ ॥32॥
ನಳನಿಂದ ಹೀಗೆ ಕೇಳಲ್ಪಟ್ಟ ಇಂದ್ರನು ನಾವು ದೇವತೆಗಳು ದಮಯಂತಿಯ ಸಲುವಾಗಿ ಬಂದವರು ಎಂದು ನಮ್ಮನ್ನು ತಿಳಿ ಎಂದು ಹೇಳಿದನು.
ಅಹಮಿಂದ್ರೋಽಯಮಗ್ನಿಶ್ಚ ತಥೈವಾಯಮಪಾಂಪತಿಃ |
ಶರೀರಾಂತಕರೋ ನೃಣಾಂ ಯಮೋಽಯಮಪಿ ಪಾರ್ಥಿವ |
ಸ ವೈ ತ್ವಮಾಗತಾನಸ್ಮಾನ್ ದಮಯಂತ್ಯೈ ನಿವೇದಯ ॥33॥
ನಾನು ಇಂದ್ರ ಇವನು ಅಗ್ನಿ ಅದರಂತೆ ಇವನು ವರುಣ. ಎಲೈ ರಾಜನೇ ಇವನೂ ಸಹ ಎಲ್ಲರ ಪ್ರಾಣಾಂತಕನಾದ ಯಮ. ನೀನು ಹೋಗಿ ದಮಯಂತಿಗೆ ನಾವೆಲ್ಲರೂ ಬಂದಿದ್ದೇವೆ ಎಂದು ಹೇಳು.
ಲೋಕಪಾಲಾಃ ಸಹೇಂದ್ರಾಸ್ತ್ವಾಂ ಸಮಾಯಾಂತಿ ದಿದೃಕ್ಷವಃ |
ಪ್ರಾಪ್ತುಮಿಚ್ಛಂತಿ ದೇವಾಸ್ತ್ವಾಂ ಶಕ್ರೋಽಗ್ನಿರ್ವರುಣೋ ಯಮಃ |
ತೇಷಾಮನ್ಯತಮಂ ದೇವಂ ಪತಿತ್ವೇ ವರಯೇತಿ ಹ ॥34॥
ಇಂದ್ರನಿಂದ ಸಹಿತನಾದ ಲೋಕಪಾಲಕರು ನಿನ್ನನ್ನು ನೋಡುವ ಇಚ್ಛೆಯಿಂದ ಬರುತ್ತಿದ್ದಾರೆ. ದೇವತೆಗಳಾದ ಇಂದ್ರ ಅಗ್ನಿ ವರುಣ

ಯಮ ಇವರು ನಿನ್ನನ್ನು ಪಡೆಯಲು ಬಯಸುತ್ತಾರೆ. ಅವರಲ್ಲಿ ಯಾರಾದರೂ ಒಬ್ಬರನ್ನು ನೀನು ಪತಿಯಾಗಿ ವರಿಸು. (ಎಂದು ನಿವೇದಿಸು)
ಏವಮುಕ್ತಃ ಸ ಶಕ್ರೇಣ ನಳಃ ಪ್ರಾಂಜಲಿರಬ್ರವೀತ್ |
ಏಕಾರ್ಥಸಮವೇತಂ ಮಾಂ ನ ಪ್ರೇಷಯಿತುಮರ್ಹಥ ॥35॥
ಇಂದ್ರನಿಂದ ಹೀಗೆ ಹೇಳಲ್ಪಟ್ಟ ನಳನು ಕೈಗಳನ್ನು ಮುಗಿದು ಅದೇ ಉದ್ದೇಶದಿಂದ ಬರುತ್ತಿರುವ ನನ್ನನ್ನು ನೀವು ಹೀಗೆ ಕಳುಹಿಸಬಾರದು ಎಂದು ಹೇಳಿದನು.
ಕಥಂ ಹಿ ಜಾತಸಂಕಲ್ಪಃ ಸ್ತ್ರಿಯಮುತ್ಸಹತೇ ನರಃ |
ಪರಾರ್ಥಮೀದೃಶಂ ವಕ್ತುಂ ತದ್ಕ್ಷಮಂತು ಪಶ್ಯ ಸುರೇಶ್ವರ |
ಏವಮುಕ್ತೋ ನೈಷಧೇನ ಮಘವಾನ್ ಪುನರಬ್ರವೀತ್ ॥36॥
ಸುರೇಶ್ವರನೇ, ತಾನು ಅನುರಾಗವನ್ನು ಹೊಂದಿದ ಸ್ತ್ರೀಯನ್ನು ಕುರಿತು ಯಾವ ಮನುಷ್ಯನು ಹೀಗೆ ಇನ್ನೊಬ್ಬರ ಪರವಾಗಿ ಹೇಳಲು ಸಾಧ್ಯ? ಇದನ್ನು ಗಮನಿಸು. ನಳನಿಂದ ಹೀಗೆ ಹೇಳಲ್ಪಟ್ಟ ಇಂದ್ರನು ಪುನಃ ಮಾತನಾಡಿದನು.
ಕರಿಷ್ಯ ಇತಿ ಸಂಶ್ರುತ್ಯ ಪೂರ್ವಮಸ್ಮಾಸು ನೈಷಧ |
ನ ಕರಿಷ್ಯಸಿ ಕಸ್ಮಾತ್ ತ್ವಂ ವ್ರಜ ನೈಷಧ ಮಾಚಿರಮ್ ॥37॥
ಸ ವೈ ತ್ವಮಾಗತಾನಸ್ಮಾನ್ ದಮಯಂತ್ಯೈ ನಿವೇದಯ |
ನೈಷಧನೇ ಮೊದಲು ಮಾಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿ ಈಗ ಹೇಗೆ ಮಾಡುವುದಿಲ್ಲ ಎಂದು ಹೇಳುತ್ತಿದ್ದೀಯೆ? ನೈಷಧನೇ ತಡಮಾಡದೆ ನೀನು ಹೊರಡು. ದಮಯಂತಿಗೆ ನಾವೆಲ್ಲರೂ ಬಂದಿದ್ದೇವೆ ಎಂದು ತಿಳಿಸು.
ಏವಮುಕ್ತಃ ಸ ದೇವೈಸ್ತೈರ್ನೈಷಧಃ ಪುನರಬ್ರವೀತ್ |
ಸುರಕ್ಷಿತಾನಿ ವೇಶ್ಮಾನಿ ಪ್ರವೇಷ್ಟುಂ ಕಥಮುತ್ಸಹೇ ॥38॥
ಹೀಗೆ ಹೇಳಲ್ಪಟ್ಟ ನಳನು ದೇವತೆಗಳನ್ನು ಕುರಿತು ಕನ್ಯಾಗೃಹಗಳು ಸುರಕ್ಷಿತವಾಗಿರುತ್ತವೆ. ನಾನು ಹೇಗೆ ಪ್ರವೇಶಿಸಲಿ ಎಂದು ಕೇಳಿದನು.
ಬೃಹದಶ್ವಃ
ಪ್ರವೇಕ್ಷ್ಯಸೀತಿ ತಂ ಶಕ್ರಃ ಪುನರೇವಾಭ್ಯಭಾಷತ |
ಸ ಜಗಾಮ ತಥೇತ್ಯುಕ್ತ್ವಾ ದಮಯಂತ್ಯಾ ನಿವೇಶನಮ್ ॥39॥
ನೀನು ನಿರ್ವಿಘ್ನವಾಗಿ ಪ್ರವೇಶಿಸುವಿ ಎಂದು ಇಂದ್ರನು ಪುನಃ ಅವನಿಗೆ ಹೇಳಿದನು. ನಳನು ಹಾಗೆಯೇ ಆಗಲಿ ಎಂದು ದಮಯಂತಿಯ ನಿವೇಶನಕ್ಕೆ ಹೋದನು.
ದದರ್ಶ ತತ್ರ ವೈದರ್ಭೀಂ ಸಖೀಗಣಸಮಾವೃತಾಮ್ |
ದೇದೀಪ್ಯಮಾನಾಂ ವಪುಷಾ ಶ್ರಿಯಾ ಚ ವರವರ್ಣಿನೀಮ್ ॥40॥
ಅಲ್ಲಿ ಅವನು ಸಖೀಗಣ ಸಹಿತಳಾಗಿದ್ದ ಸುಂದರಿಯಾದ ತನ್ನ ದೇಹದ ಕಾಂತಿಯಿಂದ ಬೆಳಗುತ್ತಿದ್ದ ದಮಯಂತಿಯನ್ನು ನೋಡಿದನು.
ಅತೀವ ಸುಕುಮಾರಾಂಗೀಂ ತನುಮಧ್ಯಾಂ ಸುಲೋಚನಾಮ್ |
ಆಕ್ಷಿಪಂತೀಮಿವ ಚ ತಾಂ ಶಶಿನಂ ಸ್ವೇನ ತೇಜಸಾ ॥41॥
ಬಹಳ ಸುಕುಮಾರಿಯಾಗಿ ಕೃಶವಾದ ಮಧ್ಯವನ್ನೂ ಸುಂದರವಾದ ಕಣ್ಣುಗಳನ್ನೂ ಹೊಂದಿ ತನ್ನ ಕಾಂತಿಯಿಂದ ಚಂದ್ರನನ್ನು ಧಿಕ್ಕರಿಸುವಂತಿದ್ದ ಅವಳನ್ನು ನೋಡಿದನು.
ತಸ್ಯ ದೃಷ್ಟ್ವೈವ ವವೃಧೇ ಕಾಮಸ್ತಾಂ ಚಾರುಹಾಸಿನೀಮ್ |
ಸತ್ಯಂ ಚಿಕೀರ್ಷಮಾಣಸ್ತು ವಾರಯಾಮಾಸ ಹೃಚ್ಛಯಮ್ ॥42॥
ಆ ಚಾರುಹಾಸಿನಿಯನ್ನು ನೋಡಿದ ತಕ್ಷಣವೇ ಅವನಿಗೆ ಕಾಮವು ಅಭಿವೃದ್ಧಿಯಾಯಿತು. ಆದರೆ ತನ್ನ ಸತ್ಯಪ್ರತಿಜ್ಞೆಯನ್ನು ಕಾಯ್ದುಕೊಳ್ಳಲು ಅವನು ತನ್ನ ಕಾಮವನ್ನು ತಡೆದುಕೊಂಡನು.
ತತಸ್ತಾ ನೈಷಧಂ ದೃಷ್ಟ್ವಾ ಸಂಭ್ರಾಂತಾಃ ಪರಮಾಂಗನಾಃ |
ಆಸನೇಭ್ಯಃ ಸಮುತ್ಪೇತುಃ ತೇಜಸಾ ತಸ್ಯ ಧರ್ಷಿತಾಃ ॥43॥
ಆಗ ನಳನನ್ನು ನೋಡಿ ಸಂಭ್ರಾಂತರಾದ ಆ ಸುಂದರಿಯರು ಅವನ ತೇಜಸ್ಸಿನಿಂದ ಧರ್ಷಿತರಾಗಿ ತಮ್ಮ ಆಸನಗಳಿಂದ ಬೇಗ ಮೇಲೆದ್ದರು.
ಪ್ರಶಶಂಸುಶ್ಚ ಸಂಪ್ರೀತಾ ನಳಂ ತಾ ವಿಸ್ಮಯಾನ್ವಿತಾಃ |
ನ ಚೈನಮಭ್ಯಭಾಷಂತ ಮನೋಭಿಸ್ತ್ವಭ್ಯಚಿಂತಯನ್ ॥44॥
ವಿಸ್ಮಿತರಾದ ಅವರು ಸಂತೋಷಗೊಂಡು ನಳನನ್ನು ಪ್ರಶಂಸಿಸಿದರು. ಅವನನ್ನು ಕುರಿತು ಮಾತನಾಡಲಿಲ್ಲ. ಆದರೆ ಮನಸ್ಸಿನಲ್ಲಿಯೇ ಯೋಚಿಸಿದರು.
ಅಹೋ ರೂಪಮಹೋ ಧೈರ್ಯಮಹೋ ಕಾಂತಿರ್ಮಹಾತ್ಮನಃ |
ಕೋಽಯಂ ದೇವೋಽಥವಾ ಯಕ್ಷೋ ಗಂಧರ್ವೋ ನು ಭವಿಷ್ಯತಿ ॥
ಎಂತಹ ರೂಪ, ಎಂತಹ ಧೈರ್ಯ, ಈ ಮಹಾತ್ಮನಿಗೆ ಎಂತಹ ಕಾಂತಿ! ಇವನೊಬ್ಬ ದೇವತೆಯೋ ಅಥವಾ ಯಕ್ಷನೋ ಅಥವಾ ಗಂಧರ್ವನೋ ಯಾರಾಗಿರಬಹುದು?
ನ ತ್ವೇನಂ ಶಕ್ನುವಂತಿ ಸ್ಮ ವ್ಯಾಹರ್ತುಮಪಿ ಕಿಂಚನ |

ತೇಜಸಾ ಧರ್ಷಿತಾಃ ಸರ್ವಾ ಲಜ್ಜಾವತ್ಯೋ ವರಾಂಗನಾಃ ॥46॥
ಅವನ ತೇಜಸ್ಸಿನಿಂದ ಧರ್ಷಿತರಾದ ಲಜ್ಜಾವತಿಯರಾದ ಆ ವರಾಂಗನೆಯರು ಅವನ ಜೊತೆಯಲ್ಲಿ ಏನನ್ನೂ ಮಾತನಾಡಲು ಸಮರ್ಥರಾಗಲಿಲ್ಲ.
ಅಥೈನಂ ಸ್ಮಯಮಾನೇವ ಸ್ಮಿತಪೂರ್ವಾಭಿಭಾಷಿಣೀ |
ದಮಯಂತೀ ನಳಂ ವೀರಮಭ್ಯಭಾಷತ ವಿಸ್ಮಿತಾ ॥47॥
ಆಗ ಮಂದಹಾಸಪೂರ್ವಕವಾಗಿ ಮಾತನಾಡುವ ಸ್ವಭಾವವುಳ್ಳ ದಮಯಂತಿಯು ಮಂದಹಾಸವನ್ನು ಬೀರುತ್ತಾ ವಿಸ್ಮಿತಳಾಗಿ ವೀರನಾದ ನಳನನ್ನು ಕುರಿತು ಮಾತನಾಡಿದಳು.
ಕಸ್ತ್ವಂ ಸರ್ವಾನವದ್ಯಾಂಗ ಮಮ ಹೃಚ್ಛಯವರ್ಧನ |
ಪ್ರಾಪ್ತೋಽಸ್ಯಮರವದ್ ವೀರ ಜ್ಞಾತುಮಿಚ್ಛಾಮಹೇಽನಘ ॥48॥
ಸುಂದರಾಂಗನೇ, ನನ್ನ ಕಾಮವನ್ನು ವೃದ್ಧಿಪಡಿಸುತ್ತಿರುವ ನೀನು ಯಾರು? ವೀರನೇ, ದೇವತೆಯಂತೆ ಇಲ್ಲಿಗೆ ಬಂದಿದ್ದೀಯೆ. ಅನಘನೇ ನೀನು ಯಾರೆಂದು ತಿಳಿಯಲು ಬಯಸುತ್ತೇನೆ.
ಕಥಮಾಗಮನಂ ಚೇಹ ಕಥಂ ಚಾಪಿ ನ ಲಕ್ಷಿತಃ |
ಸುರಕ್ಷಿತಂ ಚ ಮೇ ವೇಶ್ಮ ರಾಜಾ ಚೈವೋಗ್ರಶಾಸನಃ॥49॥
ನೀನು ಇಲ್ಲಿಗೆ ಹೇಗೆ ಬಂದೆ? ಹೇಗೆ ಯಾರೂ ನಿನ್ನನ್ನು ಗಮನಿಸಲಿಲ್ಲ? ನನ್ನ ಗೃಹವಾದರೂ ಸುರಕ್ಷಿತವಾಗಿದೆ ಮತ್ತು ರಾಜನು ಉಗ್ರಶಾಸನನಾಗಿದ್ದಾನೆ.
ಏವಮುಕ್ತಸ್ತು ವೈದರ್ಭ್ಯಾ ನಳಸ್ತಾಂ ಪ್ರತ್ಯಭಾಷತ |
ನಳಂ ಮಾಂ ವಿದ್ಧಿ ಕಲ್ಯಾಣಿ ದೇವದೂತಮಿಹಾಗತಮ್ ॥50॥
ಹೀಗೆ ಹೇಳಲ್ಪಟ್ಟ ನಳನು ದಮಯಂತಿಯನ್ನು ಕುರಿತು ಕಲ್ಯಾಣಿಯೇ, ನನ್ನನ್ನು ನಳನೆಂದು ತಿಳಿ. ನಾನು ದೇವದೂತನಾಗಿ ಇಲ್ಲಿಗೆ ಬಂದಿದ್ದೇನೆ ಎಂದು ಹೇಳಿದನು.
ದೇವಾಸಂತ್ವಂ ಪ್ರಾಪ್ತುಮಿಚ್ಛಂತಿ ಶಕ್ರೋಽಗ್ನಿರ್ವರುಣೋ ಯಮಃ |
ತೇಷಾಮನ್ಯತಮಂ ದೇವಂ ಪತಿಂ ವರಯ ಶೋಭನೇ ॥51॥
ಇಂದ್ರ ಅಗ್ನಿ ವರುಣ ಯಮ ಈ ದೇವತೆಗಳು ನಿನ್ನನ್ನು ಹೊಂದಲು ಬಯಸುತ್ತಾರೆ. ಶೋಭನಳೇ ಅವರಲ್ಲಿ ಒಬ್ಬರನ್ನು ಪತಿಯಾಗಿ ವರಿಸು.
ತೇಷಾಮೇವ ಪ್ರಭಾವೇಣ ಪ್ರವಿಷ್ಟೋಽಹಮಲಕ್ಷಿತಃ |
ಪ್ರವಿಶಂತಂ ಹಿ ಮಾಂ ಕಶ್ಚಿತ್ ನಾಪಶ್ಯನ್ನಾಪ್ಯವಾರಯತ್ ॥52॥
ಅವರ ಪ್ರಭಾವದಿಂದಲೇ ನಾನು ಯಾರಿಂದಲೂ ಗಮನಿಸಲ್ಪಡದೆ ಇಲ್ಲಿಗೆ ಬಂದಿದ್ದೇನೆ. ಇಲ್ಲಿಗೆ ಬರುವ ನನ್ನನ್ನು ಯಾರೂ ನೋಡಲಿಲ್ಲ. ಮತ್ತು ತಡೆಯಲಿಲ್ಲ.
ಏತದರ್ಥಮಹಂ ಭದ್ರೇ ಪ್ರೇಷಿತಃ ಸುರಸತ್ತಮೈಃ |
ಏತಚ್ಛ್ರುತ್ವಾ ತು ಮೇ ವಾಕ್ಯಂ ಪ್ರಕುರುಷ್ವ ಯಥೇಚ್ಛಸಿ ॥53॥
ಮಂಗಳಸ್ವರೂಪಳೇ ಈ ಉದ್ದೇಶದಿಂದ ನಾನು ಸುರಶ್ರೇಷ್ಠರಿಂದ ನಿನ್ನ ಬಳಿಗೆ ಕಳುಹಿಸಲ್ಪಟ್ಟಿದ್ದೇನೆ. ಈ ನನ್ನ ವಾಕ್ಯವನ್ನು ಕೇಳಿ ನಿನಗೆ ಇಷ್ಟಬಂದಂತೆ ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
*****
ನಲವತ್ತೆಂಟನೆಯ ಅಧ್ಯಾಯ
(ನಳದಮಯಂತಿ ಸಂವಾದ. ನಳನಿಂದ ದಮಯಂತಿಗೆ ಸಂದೇಶ ಹರಣ.)
ಬೃಹದಶ್ವಃ
ಸಾ ನಮಸ್ಕೃತ್ಯ ದೇವೇಭ್ಯಃ ಪ್ರಹಸಂತೀದಮಬ್ರವೀತ್ |
ಪ್ರಣಯಂ ಭಾವಯಂತ್ಯಸ್ಮಿನ್ ಕಿಂ ಕರವಾಣಿ ತೇ ॥1॥
ಅಹಂ ಚೈವ ಹಿ ಯಚ್ಚಾನ್ಯನ್ಮಮಾಸ್ತಿ ವಸು ಕಿಂಚನ |
ಸರ್ವಂ ತತ್ ತವ ವಿಸ್ರಬ್ಧಂ ಕುರು ಪ್ರಣಯಮೀಶ್ವರ ॥2॥
ಹಂಸಾನಾಂ ವಚನಂ ಯತ್ತತ್ ತನ್ಮಾಂ ದಹತಿ ಪಾರ್ಥಿವ |
ತ್ವತ್ಕೃತೇ ಹಿ ಮಯಾ ವೀರ ರಾಜಾನಃ ಸನ್ನಿಪಾತಿತಾಃ ॥3॥
ಯದಿ ಚೇದ್ ಭಜಮಾನಾಂ ಮಾಂ ಪ್ರತ್ಯಾಖ್ಯಾಸ್ಯಸಿ ಮಾನದ |
ವಿಷಮಗ್ನಿಂ ಜಲಂ ರಜ್ಜುಮಾಸ್ಥಾಸ್ಯೇ ತವ ಕಾರಣಾತ್ |
ಏವಮುಕ್ತಸ್ತು ವೈದರ್ಭ್ಯಾ ನಳಸ್ತಾಂ ಪ್ರತ್ಯುವಾಚ ಹ ॥4॥
ಆ ದಮಯಂತಿಯು ದೇವತೆಗಳಿಗೆ ನಮಸ್ಕರಿಸಿ ನಗುತ್ತಾ ನಳನಲ್ಲಿ ಪ್ರೀತಿಯನ್ನು ಹೊಂದುತ್ತಾ ಹೀಗೆ ಮಾತನಾಡಿದಳು. ನಾನು ನಿನಗೆ ಏನುಮಾಡಲಿ? ಪ್ರಭುವೇ, ನಾನು ಮತ್ತು ನನ್ನ ಬಳಿ ಏನು ಸಂಪತ್ತಿದೆಯೋ ಅದೆಲ್ಲವೂ ನಿನ್ನದೇ. ನನ್ನ ಮಾತನ್ನು ನಂಬಿ ನನ್ನಲ್ಲಿ ಪ್ರೀತಿಯನ್ನು ತೋರಿಸು. ಪಾರ್ಥಿವನೆ ಹಂಸಗಳು ಆಡಿದ ಮಾತುಗಳು ನನ್ನನ್ನು ದಹಿಸುತ್ತಿವೆ. ವೀರನೇ, ನಿನ್ನ ಸಲುವಾಗಿ ನಾನು

ಅನೇಕ ರಾಜರನ್ನು ತಿರಸ್ಕರಿಸಿದ್ದೇನೆ. ಎಲೈ ಮಾನದನೇ, ನನ್ನ ಪ್ರೀತಿಯನ್ನು ನೀನು ನಿರಾಕರಿಸಿದರೆ ನಿನ್ನ ನಿಮಿತ್ತದಿಂದಾಗಿ ನಾನು ವಿಷವನ್ನಾಗಲೀ ಜಲವನ್ನಾಗಲೀ ಅಥವಾ ರಜ್ಜುವನ್ನಾಗಲೀ ಆಶ್ರಯಿಸುತ್ತೇನೆ ಎಂದು ಹೇಳಿದಳು. ಹೀಗೆ ದಮಯಂತಿಯಿಂದ ಹೇಳಲ್ಪಟ್ಟ ನಳನು ಅವಳಿಗೆ ಉತ್ತರವನ್ನು ಕೊಟ್ಟನು.
ತಿಷ್ಠತ್ಸು ಲೋಕಪಾಲೇಷು ಕಥಂ ಮಾನುಷಮಿಚ್ಛಸಿ |
ಯೇಷಾಮಹಂ ಲೋಕಪಾನಾಮೀಶ್ವರಾಣಾಂ ಮಹಾತ್ಮನಾಮ್|
ನ ಪಾದರಸಜಸಾ ತುಲ್ಯೋ ಮನಸ್ತೇ ತೇಷು ವರ್ತತಾಮ್ ॥5॥
ಲೋಕಪಾಲರು ಇರುವಾಗ ಏಕೆ ಮನುಷ್ಯರನ್ನು ಇಚ್ಛಿಸುತ್ತೀಯೆ? ನಾನು ಮಹಾತ್ಮರಾದ ಪ್ರಭುಗಳಾದ ಆ ಲೋಕಪಾಲಕರ ಪಾದಧೂಳಿಗೂ ಸಮನಾದವನಲ್ಲ. ನಿನ್ನ ಮನಸ್ಸನ್ನು ಅವರಲ್ಲಿಯೇ ಇಡು.
ವಿಪ್ರಿಯಂ ಹ್ಯಾಚರನ್ ಮರ್ತ್ಯೋ ದೇವಾನಾಂ ಮೃತ್ಯುಮೃಚ್ಛತಿ |
ತ್ರಾಹಿ ಮಾಮನವದ್ಯಾಂಗಿ ವರಯಸ್ವ ಸುರೋತ್ತಮಾನ್ ॥6॥
ದೇವತೆಗಳಿಗೆ ಪ್ರತಿಕೂಲವನ್ನು ಮಾಡಿದ ಮನುಷ್ಯನು ಮರಣವನ್ನು ಹೊಂದುತ್ತಾನೆ. ಸರ್ವಾಂಗಸುಂದರಿಯೇ ನನ್ನನ್ನು ರಕ್ಷಿಸು. ದೇವತೆಗಳನ್ನು ವರಿಸು.
ತತೋ ಬಾಷ್ಪಾಕುಲಾಂ ವಾಚಂ ದಮಯಂತೀ ಶುಚಿಸ್ಮಿತಾ |
ಪ್ರವ್ಯಾಹರಂತೀ ಶನಕೈರ್ನಳಂ ರಾಜಾನಮಬ್ರುವೀತ್ ॥7॥
ಆಗ ಶುಚಿಸ್ಮಿತೆಯಾದ ದಮಯಂತಿಯು ಕಣ್ಣುಗಳಲ್ಲಿ ನೀರು ತುಂಬಿ ಕೊಂಡು ರಾಜನನ್ನು ಕುರಿತು ನಿಧಾನವಾಗಿ ಮಾತನಾಡಿದಳು.
ಅಸ್ತ್ಯುಪಾಯೋ ಮಯಾ ದೃಷ್ಟೋ ನಿರಪಾಯೋ ನರೇಶ್ವರ |
ಯೇನ ದೋಷೋ ನ ಭವಿತಾ ತವ ರಾಜನ್ ಕಥಂಚನ ॥8॥
ನರೇಶ್ವರನೇ, ನನಗೆ ಕಾಣಿಸುವ ಒಂದು ಅಪಾಯರಹಿತವಾದ ಉಪಾಯವಿದೆ. ರಾಜನೇ! ಅದರಿಂದ ನಿನಗೆ ಯಾವ ರೀತಿಯಲ್ಲಿಯೂ ದೋಷವು ಬರುವುದಿಲ್ಲ.
ತ್ವಂ ಚೈವ ಹಿ ನರಶ್ರೇಷ್ಠ ದೇವಾಶ್ಚೇಂದ್ರಪುರೋಗಮಾಃ |
ಆಯಾಂತು ಸಹಿತಾಃ ಸರ್ವೇ ಮಮ ಯತ್ರ ಸ್ವಯಂವರಃ ॥9॥
ನರಶ್ರೇಷ್ಠನೇ, ನೀನೂ ಮತ್ತು ದೇವತೆಗಳೂ ಜೊತೆಯಲ್ಲಿಯೇ ನನ್ನ ಸ್ವಯಂವರವು ನಡೆಯುವ ಸ್ಥಳಕ್ಕೆ ಬನ್ನಿ.
ತತೋಽಹಂ ಲೋಕಪಾಲಾನಾಂ ಸನ್ನಿಧೌ ತ್ವಾಂ ನರೇಶ್ವರ |
ವರಯಿಷ್ಯೇ ನರಶ್ರೇಷ್ಠ ನೈಷ ದೋಷೋ ಭವಿಷ್ಯತಿ ॥11॥
ನರೇಶ್ವರನೇ, ಆಗ ನಾನು ಲೋಕಪಾಲಕರ ಸನ್ನಿಧಿಯಲ್ಲಿ ನಿನ್ನನ್ನು ವರಿಸುವೆನು. ನರಶ್ರೇಷ್ಠನೇ, ಆಗ ನಿನಗೆ ಈ ದೋಷವು ಉಂಟಾಗುವುದಿಲ್ಲ.
ಬೃಹದಶ್ವಃ
ಏವಮುಕ್ತಸ್ತು ವೈದರ್ಭ್ಯಾ ನಳೋ ರಾಜಾ ವಿಶಾಂಪತೇ |
ಆಜಗಾಮ ಪುನಸ್ತತ್ರ ಯತ್ರ ದೇವಾಃ ಸ ವಾಸವಾಃ ॥12॥
ಎಲೈ ರಾಜನೇ, ದಮಯಂತಿಯಿಂದ ಹೀಗೆ ಹೇಳಲ್ಪಟ್ಟ ರಾಜನಾದ ನಳನು ಇಂದ್ರಸಹಿತರಾದ ದೇವತೆಗಳು ಇದ್ದಲ್ಲಿಗೆ ಪುನಃ ಬಂದನು.
ತಮಪಶ್ಯನ್ನಥಾಯಾಂತಂ ಲೋಕಪಾಲಾ ಮಹೇಶ್ವರಾಃ |
ದೃಷ್ಟ್ವಾ ಚೈನಂ ತತೋಽಪೃಚ್ಛನ್ ವೃತ್ತಾಂತಂ ಸರ್ವಮೇವ ತತ್ ॥13॥
ಕಚ್ಚಿದ್ ದೃಷ್ಟಾ ತ್ವಯಾ ರಾಜನ್ ದಮಯಂತೀ ಶುಚಿಸ್ಮಿತಾ |
ಕಿಮಬ್ರವೀಚ್ಚ ನಃ ಸರ್ವಾನ್ ವದ ಭೂಮಿಪತೇಽನಘ ॥14॥
ಲೋಕಪಾಲಕರಾದ ಆ ಮಹೇಶ್ವರರು ಅವನು ಹಿಂದಿರುಗುವುದನ್ನು ನೋಡಿ ಅವನನ್ನು ಕುರಿತು ನಡೆದ ಎಲ್ಲಾ ವೃತ್ತಾಂತವನ್ನೂ ಪ್ರಶ್ನೆಮಾಡಿದರು. ರಾಜನೇ! ಶುಚಿಸ್ಮಿತೆಯಾದ ದಮಯಂತಿಯನ್ನು ನೀನು ನೋಡಿದೆಯಾ? ಅವಳು ನಮ್ಮನ್ನು ಕುರಿತು ಏನು ಹೇಳಿದಳು? ಪರಿಶುದ್ಧರಾಜನೇ ಅದನ್ನು ನಮಗೆ ಹೇಳು.
ಭವದ್ಭಿರಹಮಾದಿಷ್ಟೋ ದಮಯಂತ್ಯಾ ನಿವೇಶನಮ್ |
ಪ್ರವಿಷ್ಟಃ ಸುಮಹಾಕಕ್ಷ್ಯಂ ದಂಡಿಭಿಃ ಸ್ಥವಿರೈರ್ವೃತಮ್ ॥15॥
ನಿಮ್ಮಿಂದ ಆದಿಷ್ಟನಾಗಿ ನಾನು ದೊಡ್ಡ ಪ್ರಾಕಾರಗಳಿಂದ ಕೂಡಿದ ಸೈನಿಕರಿಂದಲೂ ವೃದ್ಧರಿಂದಲೂ ರಕ್ಷಿತವಾದ ದಮಯಂತಿಯ ನಿವೇಶನವನ್ನು ಪ್ರವೇಶಿಸಿದೆನು.
ಪ್ರವಿಶಂತಂ ಚ ಮಾಂ ತತ್ರ ನ ಕಶ್ಚಿದ್ ದೃಷ್ಟವಾನ್ನರಃ |
ಋತೇ ತಾಂ ಪಾರ್ಥಿವಸುತಾಂ ಭವತಾಮೇವ ತೇಜಸಾ ॥16॥
ನಾನು ಅಲ್ಲಿ ಪ್ರವೇಶಿಸುವಾಗ ನಿಮ್ಮ ಪ್ರಭಾವದಿಂದ ಆ ದಮಯಂತಿ ಒಬ್ಬಳನ್ನು ಬಿಟ್ಟು ಬೇರೆಯಾರೂ ನನ್ನನ್ನು ನೋಡಲಿಲ್ಲ.
ಸಖ್ಯಶ್ಚಾಸ್ಯಾ ಮಯಾ ದೃಷ್ಟಾಃ ತಾಭಿಶ್ಚಾಪ್ಯುಪಲಕ್ಷಿತಃ |
ವಿಸ್ಮಿತಾಶ್ಚಾಭವನ್ ದೃಷ್ಟ್ವಾ ಸರ್ವಾ ಮಾಂ ವಿಬುಧೇಶ್ವರಾಃ ॥17॥
ಅವಳ ಸಖಿಯರು ನನ್ನನ್ನು ನೋಡಿದರು. ನಾನೂ ಅವರನ್ನು ನೋಡಿದೆ. ವಿಬುಧೇಶ್ವರರೇ ನನ್ನನ್ನು ನೋಡಿದ ಅವರೆಲ್ಲರೂ ವಿಸ್ಮಿತರಾದರು.
ವರ್ಣ್ಯಮಾನೇಷು ಚ ಮಯಾ ಭವತ್ಸು ರುಚಿರಾನನಾ |
ಮಾಮೇವ ಗತಸಂಕಲ್ಪಾ ವೃಣೀತೇ ಸುರಸತ್ತಮಾಃ ॥18॥

ಎಲೈ ಸುರಶ್ರೇಷ್ಠರೇ, ನಾನು ನಿಮ್ಮನ್ನು ಅವಳಿಗೆ ವರ್ಣಿಸುತ್ತಿರಲು ಸುಂದರಮುಖಿಯಾದ ಅವಳು ನನ್ನಲ್ಲೇ ಮನಃಸಂಕಲ್ಪವುಳ್ಳವಳಾಗಿ ನನ್ನನ್ನೇ ವರಿಸುತ್ತಾಳೆ.
ಅಬ್ರುವೀಚ್ಚೈವ ಮಾಂ ಬಾಲಾ ಆಯಾಂತು ಸುರಸತ್ತಮಾಃ|
ತ್ವಯಾ ಸಹ ನರಶ್ರೇಷ್ಠ ಮಮ ಯತ್ರ ಸ್ವಯಂವರಃ ॥19॥
ತೇಷಾಮಹಂ ಸನ್ನಿಧೌ ತ್ವಾಂ ವರಯಿಷ್ಯೇ ನರೋತ್ತಮಮ್|
ಏವಂ ತವ ಮಹಾಬಾಹೋ ದೋಷೋ ನ ಭವಿತೇತಿ ಹ ॥20॥
ಆ ಕನ್ಯೆಯು ನರಶ್ರೇಷ್ಠನೇ, ಸುರೋತ್ತಮರೆಲ್ಲರೂ ನಿನ್ನ ಜೊತೆಯಲ್ಲಿ ನನ್ನ ಸ್ವಯಂವರದ ಸ್ಥಳಕ್ಕೆ ಬರಲಿ. ಅವರ ಸನ್ನಿಧಿಯಲ್ಲಿ ನರಶ್ರೇಷ್ಠನಾದ ನಿನ್ನನ್ನು ವರಿಸುವೆನು. ಹಾಗೆಮಾಡಿದರೆ ಮಹಾಬಾಹುವೇ ನಿನಗೆ ದೋಷವು ಉಂಟಾಗುವುದಿಲ್ಲ ಎಂದು ಹೇಳಿದಳು.
ಏತಾವದೇವ ವಿಬುಧಾ ಯಥಾವೃತ್ತಮುದಾಹೃತಮ್|
ಮಯಾಽಶೇಷಂ ಪ್ರಮಾಣಂ ತು ಭವಂತಃ ಸುರಸತ್ತಮಾಃ ॥21॥
ದೇವತೆಗಳೇ, ಅಲ್ಲಿ ನಡೆದ ಇಷ್ಟು ಘಟನೆಗಳನ್ನು ನಾನು ನಡೆದಂತೆ ಯಾವುದನ್ನೂ ಬಿಡದೆ ಹೇಳಿದ್ದೇನೆ. ದೇವೋತ್ತಮರೇ, ಇನ್ನು ಮುಂದಿನ ವಿಷಯದಲ್ಲಿ ನೀವೇ ಪ್ರಮಾಣಭೂತರಾದವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ನಲವತ್ತೊಂಬತ್ತನೆಯ ಅಧ್ಯಾಯ
(ಸ್ವಯಂವರದಲ್ಲಿ ದಮಯಂತಿಯಿಂದ ನಳನ ವರಣ ಮತ್ತು ಅವರ ವಿವಾಹ.)
ಬೃಹದಶ್ವಃ
ಅಥ ಕಾಲೇ ಶುಭೇ ಪ್ರಾಪ್ತೇ ತಿಥೌ ಪುಣ್ಯೇ ಕ್ಷಣೇ ತಥಾ|
ಆಜುಹಾವ ಮಹೀಪಾಲಾನ್ ಭೀಮೋ ರಾಜಾ ಸ್ವಯಂವರೇ ॥1॥
ಅನಂತರ ಶುಭಕಾಲದಲ್ಲಿ ಪುಣ್ಯತಿಥಿ ಮತ್ತು ಒಳ್ಳೆಯ ಮುಹೂರ್ತವು ಪ್ರಾಪ್ತವಾದಾಗ ಭೀಮರಾಜನು ಸ್ವಯಂವರಮಂಟಪಕ್ಕೆ ಎಲ್ಲಾ ರಾಜರನ್ನೂ ಆಹ್ವಾನಿಸಿದನು.
ತಚ್ಛ್ರುತ್ವಾ ಪೃಥಿವೀಪಾಲಾಃ ಸರ್ವೇ ಹೃಚ್ಛಯಪೀಡಿತಾಃ|
ತ್ವರಿತಾಃ ಸಮುಪಾಜಗ್ಮುರ್ದಮಯಂತೀಮಭೀಪ್ಸವಃ ॥2॥
ಅದನ್ನು ಕೇಳಿದ ಕಾಮಪೀಡಿತರಾದ ಎಲ್ಲರಾಜರೂ ದಮಯಂತಿಯನ್ನು ಪಡೆಯುವ ಇಚ್ಛೆಯಿಂದ ಶೀಘ್ರವಾಗಿ ಅಲ್ಲಿಗೆ ಬಂದರು.
ಕನಕಸ್ತಂಭರುಚಿರಂ ತೋರಣೇನ ವಿರಾಜಿತಮ್|
ವಿವಿಶುಸ್ತೇ ಮಹಾರಂಗಂ ನೃಪಾಃ ಸಿಂಹಾ ಇವಾಚಲಮ್ ॥3॥
ಚಿನ್ನದ ಕಂಬಗಳಿಂದ ಮನೋಹರವಾಗಿದ್ದ ತೋರಣಗಳಿಂದ ಅಲಂಕೃತವಾಗಿದ್ದ ದೊಡ್ಡ ರಂಗಮಂಟಪವನ್ನು ಆ ರಾಜರು ಸಿಂಹಗಳು ಪರ್ವತವನ್ನು ಪ್ರವೇಶಿಸುವಂತೆ ಪ್ರವೇಶಿಸಿದರು.
ತತ್ರಾಸನೇಷು ವಿವಿಧೇಷ್ವಾಸೀನಾಃ ಪೃಥಿವೀಕ್ಷಿತಃ|
ಸುರಭಿಸ್ರಗ್ಧರಾಃ ಸರ್ವೇ ಪ್ರಮೃಷ್ಟಮಣಿಕುಂಡಲಾಃ॥4॥
ಅಲ್ಲಿ ವಿವಿಧವಾದ ಆಸನಗಳಲ್ಲಿ ಸುಗಂಧಯುಕ್ತವಾದ ಮಾಲೆಗಳನ್ನು ಧರಿಸಿದ ಹೊಳೆಯುವ, ಮಣಿಕುಂಡಲಗಳಿಂದ ಭೂಷಿತರಾದ, ಎಲ್ಲಾ ರಾಜರೂ ಕುಳಿತರು.
ತಾಂ ರಾಜಸಮಿತಿಂ ಪೂರ್ಣಾಂ ನಾಗೈರ್ಭೋಗವತೀಮಿವ|
ಸಂಪೂರ್ಣಮೃಷಭಸ್ಕಂಧೈರ್ವ್ಯಾಘ್ರೈರ್ಗಿರಿಗುಹಾಮಿವ ॥5॥
ನಾಗಗಳಿಂದ ಪೂರ್ಣವಾದ ಭೋಗವತಿ ಪಟ್ಟಣದಂತೆ ವ್ಯಾಘ್ರಗಳಿಂದ ತುಂಬಿದ ಪರ್ವತದ ಗುಹೆಯಂತೆ ಋಷಭಸ್ಕಂಧರಾದ, ರಾಜರಿಂದ ತುಂಬಿದ ಆ ಸಭೆಯನ್ನು (ದಮಯಂತಿಯು ಪ್ರವೇಶಿದಳು ಎಂದು 8ನೆಯಶ್ಲೋಕದಿಂದ ಅನ್ವಯ)
ತತ್ರ ಸ್ಮ ಪೀನಾ ದೃಶ್ಯಂತೇ ಬಾಹವಃ ಪರಿಘೋಪಮಾಃ|
ಆಕಾರವರ್ಣಸುಶ್ಲಕ್ಷ್ಣಾಃ ಪಂಚಶೀರ್ಷಾ ಇವೋರಗಾಃ ॥6॥
ಸುಕೇಶಾಂತಾನಿ ಚಾರೂಣಿ ಸುನಾಸಾನಿ ಶುಭಾನಿ ಚ|
ಮುಖಾನಿ ರಾಜ್ಞಾಂ ಶೋಭಂತೇ ನಕ್ಷತ್ರಾಣಿ ಯಥಾ ದಿವಿ ॥7॥
ಅಲ್ಲಿ ಒನಕೆಯಂತೆ ಪುಷ್ಟವಾದ ಪೀನವಾದ ಐದು ಹೆಡೆಯ ಸರ್ಪಗಳಂತೆ ತೋರುವ ಆಕಾರ ಮತ್ತು ವರ್ಣಗಳಿಂದ ಕೂಡಿದ ಸುಂದರವಾದ ಬಾಹುಗಳು ಒಳ್ಳೆಯ ಬೈತಲೆಗಳುಳ್ಳ ಒಳ್ಳೆಯ ನಾಸಿಕಗಳು ರಾಜರ ಶುಭವಾದ ಮುಖಗಳು ಆಕಾಶದಲ್ಲಿ ನಕ್ಷತ್ರಗಳು ಹೊಳೆಯುವಂತೆ ಹೊಳೆಯುತ್ತಿದ್ದವು.
ದಮಯಂತೀ ತತೋ ರಂಗಂ ಪ್ರವಿವೇಶ ಶುಭಾನನಾ|
ಮುಷ್ಣಂತೀ ಪ್ರಭಯಾ ರಾಜ್ಞಾಂ ಚಕ್ಷೂಂಷಿ ಚ ಮನಾಂಸಿ ಚ ॥8॥
ಶುಭಾನನೆಯಾದ ದಮಯಂತಿಯು ತನ್ನ ಕಾಂತಿಯಿಂದ ರಾಜರ ಕಣ್ಣುಗಳನ್ನು ಮತ್ತು ಮನಸ್ಸನ್ನು ಸೆಳೆಯುತ್ತಾ ರಂಗವನ್ನು ಪ್ರವೇಶಿಸಿದಳು.
ತಸ್ಯಾ ಗಾತ್ರೇಷು ಪತಿತಾ ತೇಷಾಂ ದೃಷ್ಟಿರ್ಮಹಾತ್ಮನಾಮ್|

ತತ್ರ ತತ್ರೈವ ಸಕ್ತಾಽಭೂತ್ ನ ಚಚಾಲ ಚ ಪಶ್ಯತಾಮ್ ॥9॥
ಅವಳ ಶರೀರದಲ್ಲಿ (ಶರೀರದ ಅವಯವಗಳಲ್ಲಿ) ಬಿದ್ದ ಮಹಾತ್ಮರಾದ ರಾಜರ ದೃಷ್ಟಿಯು ಅಲ್ಲಲ್ಲಿಯೇ ಸಕ್ತವಾಯಿತು (ನೆಟ್ಟು ಹೋಯಿತು). ಅಲುಗಾಡಲಿಲ್ಲ.
ತತಃ ಸಂಕೀರ್ತ್ಯಮಾನೇಷು ರಾಜ್ಞಾಂ ನಾಮಸು ಭಾರತ |
ದದರ್ಶ ಭೈಮೀ ಪುರುಷಾನ್ ಪಂಚ ತುಲ್ಯಾಕೃತೀನಿಹ ॥10॥
ಅನಂತರ ಎಲೈ ಭಾರತನೇ! ರಾಜರುಗಳ ಹೆಸರು ಹೇಳಲ್ಪಡುತ್ತಿರಲು ದಮಯಂತಿಯು ಸಮಾನಾಕೃತಿಯುಳ್ಳ ಐವರು ಪುರುಷರನ್ನು ಅಲ್ಲಿ ನೋಡಿದಳು.
ತಾನ್ ಸಂಲಕ್ಷ್ಯ ತತಃ ಸರ್ವಾನ್ ನಿರ್ವಿಶೇಷಾಕೃತೀನಿವ |
ಸಂದೇಹಾದಥ ವೈದರ್ಭೀ ನಾಭ್ಯಜಾನಾನ್ನಳಂ ನೃಪಮ್ ॥11॥
ಎಲ್ಲರೂ ಒಂದೇರೀತಿ ಆಕಾರವನ್ನು ಹೊಂದಿರುವುದನ್ನು ಗಮನಿಸಿದ ವೈದರ್ಭಿಯು ಆಗ ಸಂದೇಹದಿಂದ ನಳನನ್ನು ಗುರುತಿಸಲಾಗಲಿಲ್ಲ.
ನಿರ್ವಿಶೇಷವಯೋರೂಪಾನ್ ನಿರ್ವಿಶೇಷಾನ್ ಶುಭಾನನಾ |
ಯಂ ಯಂ ಹಿ ದದೃಶೇ ತೇಷಾಂ ತಂ ತಂ ಮೇನೇ ನಳಂ ನೃಪಮ್ ॥
ಸಮಾನವಾದ ವಯಸ್ಸು ರೂಪ ಮತ್ತು ಎಲ್ಲರೀತಿಯಲ್ಲೂ ಸಮಾನವಾದ ಆಕಾರಗಳನ್ನು ಧರಿಸಿದ ಅವರ ಮಧ್ಯದಲ್ಲಿ ಶುಭಾನನೆಯಾದ ದಮಯಂತಿಯು ಯಾವಯಾವನನ್ನು ನೋಡಿದಳೋ ಅವನನ್ನು ನಳನೃಪನೆಂದೇ ತಿಳಿದಳು.
ಸಾ ಚಿಂತಯಂತೀ ಬುದ್ಧ್ಯಾಽಥ ತರ್ಕಯಾಮಾಸ ಭಾಮಿನೀ |
ಕಥಂ ನು ದೇವಾನ್ ಜಾನೀಯಾಂ ಕಥಂ ವಿದ್ಯಾಮಹಂ ನಳಂ ॥13॥
ಆ ಭಾಮಿನಿಯು ಬುದ್ಧಿಯಿಂದ ಚಿಂತಿಸುತ್ತಾ ಆಗ ನಾನು ಹೇಗೆ ದೇವತೆಗಳನ್ನು ತಿಳಿದೇನು ಹೇಗೆ ನಳನನ್ನು ಗುರುತಿಸಿಯೇನು ಎಂದು ತರ್ಕಿಸಿದಳು.
ಏವಂ ಸಂಚಿಂತಯಂತೀ ಸಾ ವೈದರ್ಭೀ ಭೃಶದುಃಖಿತಾ |
ಶ್ರುತಾನಿ ದೇವಲಿಂಗಾನಿ ಚಿಂತಯಾಮಾಸ ಭಾರತ ॥14॥
ಎಲೈ ಭಾರತನೇ, ಹೀಗೆ ಚಿಂತೆಯನ್ನು ಮಾಡುತ್ತಾ ಬಹಳ ದುಃಖದಿಂದ ಕೂಡಿದ ಆ ವೈದರ್ಭಿಯು ತಾನು ಕೇಳಿದ್ದ ದೇವತೆಗಳ ಚಿಹ್ನೆಗಳನ್ನು ಸ್ಮರಿಸಿಕೊಂಡಳು.
ದೇವಾನಾಂ ಯಾನಿ ಲಿಂಗಾನಿ ಸ್ಥವಿರೇಭ್ಯಃ ಶ್ರುತಾನಿ ಮೇ |
ತಾನೀಹ ತಿಷ್ಠತಾಂ ಭೂಮಾವೇಕಸ್ಯಾಪಿ ನ ಲಕ್ಷಯೇ ॥15॥
ನಾನು ಹಿರಿಯರಿಂದ ಯಾವ ದೇವತೆಗಳ ಚಿಹ್ನೆಗಳನ್ನು ಕೇಳಿದ್ದೇನೆಯೋ ಭೂಮಿಯಲ್ಲಿ ನಿಂತ ಇವರಲ್ಲಿ ನಾನು ಆಯಾವ ಚಿಹ್ನೆಯನ್ನೂ ಕಾಣುತ್ತಿಲ್ಲ.
ಏವಂ ವಿಚಿಂತ್ಯ ಬಹುಧಾ ವಿಚಾರ್ಯ ಚ ಪುನಃ ಪುನಃ |
ಶರಣಂ ಪ್ರತಿ ದೇವಾನಾಂ ಪ್ರಾಪ್ತಕಾಲಮಮನ್ಯತ ॥16॥
ಹೀಗೆ ಚಿಂತಿಸಿ ಪುನಃಪುನಃ ಅನೇಕರೀತಿಯಲ್ಲಿ ವಿಚಾರಮಾಡಿ ದೇವತೆಗಳನ್ನು ಶರಣುಹೊಂದುವುದೇ ಯೋಗ್ಯವಾದ ಮಾರ್ಗವೆಂದು ಭಾವಿಸಿದಳು.
ವಾಚಾ ಚ ಮನಸಾ ಚೈವ ನಮಸ್ಕಾರಂ ಪ್ರಯುಜ್ಯ ಸಾ |
ದೇವೇಭ್ಯಃ ಪ್ರಾಂಜಲಿರ್ಭೂತ್ವಾ ವೇಪಮಾನೇದಮಬ್ರವೀತ್ ॥17॥
ಮಾತಿನಿಂದಲೂ ಮತ್ತು ಮನಸ್ಸಿನಿಂದಲೂ ದೇವತೆಗಳಿಗೆ ನಮಸ್ಕಾರವನ್ನು ಮಾಡಿ ಅವಳು ಕೈಗಳನ್ನು ಮುಗಿದು ನಡುಗುತ್ತಾ ಈ ಮಾತನ್ನು ಆಡಿದಳು.
ಹಂಸಾನಾಂ ವಚನಂ ಶ್ರುತ್ವಾ ಯಥಾ ಮೇ ನೈಷಧೋ ವೃತಃ |
ಪತಿತ್ವೇ ತೇನ ಸತ್ಯೇನ ದೇವಾಸ್ತಂ ಪ್ರದಿಶಂತು ಮೇ ॥18॥
ಹಂಸಗಳ ಮಾತನ್ನು ಕೇಳಿ ನಾನು ಮನಸ್ಸಿನಲ್ಲಿ ನೈಷಧನನ್ನು ಪತಿಯಾಗಿ ವರಿಸಿದುದು ಸತ್ಯವಾದರೆ ಆ ಸತ್ಯದಿಂದ ದೇವತೆಗಳು ನನಗೆ ನೈಷಧನನ್ನು ತೋರಿಸಲಿ.
ಮನಸಾ ವಚಸಾ ಚೈವ ಯಥಾ ನಾತಿಚರಾಮ್ಯಹಮ್ |
ತೇನ ಸತ್ಯೇನ ವಿಬುಧಾಸ್ತಮೇವ ಪ್ರದಿಶಂತು ಮೇ ॥19॥
ನಾನು ಮನಸ್ಸಿನಿಂದಾಗಲೀ ಅಥವಾ ವಚನದಿಂದಾಗಲೀ ನಳನನ್ನು ಅತಿಕ್ರಮಿಸದಿದ್ದರೆ ಆ ಸತ್ಯದಿಂದ ದೇವತೆಗಳು ನನಗೆ ಆ ನಳನನ್ನು ತೋರಿಸಲಿ.
ಯಥಾ ದೇವೈಃ ಸ ಮೇ ಭರ್ತಾ ವಿಹಿತೋ ನಿಷಧಾಧಿಪಃ |
ತೇನ ಸತ್ಯೇನ ಮೇ ದೇವಾಸ್ತಮೇವ ಪ್ರದಿಶಂತು ಮೇ ॥20॥
ದೇವತೆಗಳು ನಿಷಧಾಧಿಪನಾದ ನಳನನ್ನು ನನಗೆ ಪತಿಯಾಗಿ ಸಂಕಲ್ಪಿಸಿದ್ದರೆ ಆ ಸತ್ಯದಿಂದ ದೇವತೆಗಳು ನನಗೆ ನಳನನ್ನು ತೋರಿಸಲಿ.

ಸ್ವಂ ಚೈವ ರೂಪಂ ಪುಷ್ಯಂತು ಲೋಕಪಾಲಾ ಮಹೇಶ್ವರಾಃ |
ಯಥಾಽಹಮಭಿಜಾನೀಯಾಂ ಪುಣ್ಯಶ್ಲೋಕಂ ನರಾಧಿಪಮ್ ॥21॥
ಮಹೇಶ್ವರರಾದ ಲೋಕಪಾಲಕರು ನಾನು ಪುಣ್ಯಶ್ಲೋಕನಾದ ರಾಜನಾದ ನಳನನ್ನು ಗುರುತಿಸುವಂತೆ ತಮ್ಮತಮ್ಮ ರೂಪಗಳನ್ನು

ಪ್ರೋಷಿಸಿ(ಧರಿಸಿ) ಪ್ರದರ್ಶಿಸಲಿ.
ಬೃಹದಶ್ವಃ
ನಿಶಮ್ಯ ದಮಯಂತ್ಯಾಸ್ತತ್ ಕರುಣಂ ಪರಿದೇವಿತಮ್ |
ನಿಶ್ಚಯಂ ಪರಮಂ ತಸ್ಯಾ ಅನುರಾಗಂ ಚ ನೈಷಧೇ ||22||
ಮನೋ ವಿಶುದ್ಧಾಂ ಬುದ್ಧಿಂ ಚ ಭಕ್ತಿಂ ರಾಗಂ ಚ ಭಾರತ |
ಯಥೋಕ್ತಂ ಚಕ್ರಿರೇ ದೇವಾಃ ಸಮಸ್ತಂ ಲಿಂಗಧಾರಣಮ್ ||23||
ಎಲೈ ಭಾರತನೇ! ದೇವತೆಗಳು ದಮಯಂತಿಯ ಆ ಕರುಣಾಜನಕ ವಿಲಾಪವನ್ನು ಕೇಳಿ ಅವಳ ಮನಸ್ಸಿನ ಶ್ರೇಷ್ಠವಾದ ನಿಶ್ಚಯವನ್ನೂ ನಳನಲ್ಲಿ ಅವಳಿಗಿರುವ ಪ್ರೀತಿಯನ್ನೂ ಅವಳ ಮನಸ್ಸನ್ನೂ ವಿಶುದ್ಧವಾದ ಬುದ್ಧಿಯನ್ನೂ ಭಕ್ತಿಯನ್ನೂ ಮತ್ತು ಪ್ರೇಮವನ್ನೂ ಗಮನಿಸಿ ಅವಳು ಕೇಳಿದಂತೆ ತಮ್ಮ ಎಲ್ಲಾ ಚಿಹ್ನೆಗಳನ್ನು ಧರಿಸಿದರು.
ಸಾಽಪಶ್ಯದ್ ವಿಬುಧಾನ್ ಸರ್ವಾನಸ್ವೇದಾನ್ ಸ್ತಬ್ಧಲೋಚನಾನ್ |
ಹೃಷಿತಸ್ರಗ್ರಜೋಹೀನಾನ್ ಸ್ಥಿತಾನಸ್ಪೃಶತಃ ಕ್ಷಿತಿಮ್ ||24||
ಆಗ ದಮಯಂತಿಯು ಎಲ್ಲಾ ದೇವತೆಗಳು ಸ್ವೇದ(ಬೆವರು)ರಹಿತರಾಗಿ ಕಣ್ಣನ್ನು ಮಿಟುಕಿಸದೆ ಅರಳಿದ ಮಾಲೆಗಳನ್ನು ಹೊಂದಿರುವುದನ್ನೂ ರಜೋಹೀನರಾಗಿ ಭೂಮಿಯನ್ನು ಸ್ಪರ್ಶಮಾಡದೆ ನಿಂತಿರುವುದನ್ನೂ ಗಮನಿಸಿದಳು.
ಛಾಯಾದ್ವಿತೀಯೋ ಮ್ಲಾನಸ್ರಗ್ರಜಸ್ಸ್ವೇದಸಮನ್ವಿತಃ |
ಭೂಮಿಷ್ಠೋ ನೈಷಧಶ್ಚೈವ ನಿಮೇಷೇಣೈವ ಸೂಚಿತಃ ||25||
ಆಯಾಸಸಹಿತನಾಗಿ ಸ್ವಲ್ಪ ಬಾಡಿದ ಹೂವಿನಮಾಲೆಯುಳ್ಳವನಾಗಿ ದೂಳು ಮತ್ತು ಬೆವರುಗಳಿಂದ ಕೂಡಿದವನಾಗಿ ಭೂಮಿಯನ್ನು ಸ್ಪರ್ಶಮಾಡಿ ನಿಂತ ನಳನು ಒಂದು ನಿಮಿಷದಲ್ಲಿ ಸೂಚಿಸಲ್ಪಟ್ಟನು.
ಸಾ ಸಮೀಕ್ಷ್ಯ ತತೋ ದೇವಾನ್ ಪುಣ್ಯಶ್ಲೋಕಂ ಚ ಭಾಮಿನೀ |
ನೈಷಧಂ ವರಯಾಮಾಸ ಭೈಮೀ ಧರ್ಮೇಣ ಭಾರತ ||26||
ಎಲೈ ಭಾರತನೇ! ಆ ಭೀಮಪುತ್ರಿಯಾದ ಭಾಮಿನಿಯು ಆ ದೇವತೆಗಳನ್ನು ಮತ್ತು ಪುಣ್ಯಶ್ಲೋಕನಾದ ನಳನನ್ನು ಚೆನ್ನಾಗಿ ನೋಡಿ ಧರ್ಮದಿಂದ ನಳನನ್ನು ವರಿಸಿದಳು.
ವಿಲಜ್ಜಮಾನಾ ವಸತ್ರಾಂತೇ ಜಗ್ರಾಹಾಯತಲೋಚನಾ |
ಸ್ಕಂಧದೇಶೇ ಸ್ರಜಂ ಚಾಸ್ಯ ನಿಕ್ಷಿಪ್ಯ ವರವರ್ಣಿನೀ ||27||
ಸುಂದರಿಯೂ ವಿಶಾಲ ಲೋಚನೆಯೂ ಆದ ಅವಳು ಅವನ ಕೊರಳಿಗೆ ಮಾಲೆಯನ್ನು ಹಾಕಿ ನಾಚಿಕೆಯಿಂದ ಅವನ ಉತ್ತರೀಯದ ತುದಿಯನ್ನು ಹಿಡಿದುಕೊಂಡಳು.
ವರಯಾಮಾಸ ಚೈವೈನಂ ಪತಿತ್ವೇ ವರವರ್ಣಿನೀ |
ತತೋ ಹಾಹೇತಿ ಸಂಜಜ್ಞೇ ಶಬ್ದೋ ಮುಕ್ತೋ ನರಾಧಿಪೈಃ ||28||
ಆ ಸುಂದರಿಯು ನಳನನ್ನು ಪತಿಯಾಗಿ ವರಿಸಿದಳು. ಆಗ ಎಲ್ಲಾ ರಾಜರೂ ಉಚ್ಚರಿಸಿದ ಹಾಹಾಕಾರಶಬ್ದವು ಉಂಟಾಯಿತು.
ದೇವೈರ್ಮಹರ್ಷಿಭಿಶ್ಚೈವ ಸಾಧುಸಾಧ್ವಿತಿ ಭಾರತ |
ವಿಸ್ಮಿತೈರೀರಿತಃ ಶಬ್ದಃ ಪ್ರಶಂಸದ್ಭಿರ್ನಳಂ ನೃಪಮ್ ||29||
ಭಾರತನೇ! ವಿಸ್ಮಿತರಾದ ದೇವತೆಗಳು ಮತ್ತು ಮಹರ್ಷಿಗಳಿಂದ ಉಚ್ಚರಿಸಲ್ಪಟ್ಟ ನಳನನ್ನು ಪ್ರಶಂಸೆಮಾಡುವಂತಹ ಸಾಧುಸಾಧು ಎಂಬ ಶಬ್ದವು ಕೇಳಿಬಂದಿತು.
ವೃತೇ ತು ನೈಷಧೇ ಭೈಮ್ಯಾ ಲೋಕಪಾಲಾ ಮಹೌಜಸಃ |
ಪ್ರಹೃಷ್ಟಮನಸಃ ಸರ್ವೇ ನಳಾಯಾಷ್ಟೌ ವರಾನ್ ದದುಃ ||30||
ದಮಯಂತಿಯಿಂದ ನೈಷಧನು ವರಿಸಲ್ಪಡುತ್ತಿರಲು ಮಹಾಸಾಮರ್ಥ್ಯಶಾಲಿಗಳಾದ ದೇವತೆಗಳು ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ನಳನಿಗೆ ಎಂಟು ವರಗಳನ್ನು ಕೊಟ್ಟರು.
ಪ್ರತ್ಯಕ್ಷದರ್ಶನಂ ಯಜ್ಞೇ ಗತಿಂ ಚಾನುತ್ತಮಾಂ ಶುಭಾಮ್ |
ನೈಷಧಾಯ ದದೌ ಶಕ್ರಃ ಪ್ರೀಯಮಾಣಃ ಶಚೀಪತಿಃ ||31||
ಅಗ್ನಿರಾತ್ಮಭವಂ ಪ್ರಾದಾದ್ ಯತ್ರ ವಾಂಛತಿ ನೈಷಧಃ |
ಲೋಕಾನಾತ್ಮಭವಾಂಶ್ಚೈವ ದದೌ ತಸ್ಮೈ ಹುತಾಶನಃ ||32||
ಯಜ್ಞದಲ್ಲಿ ಪ್ರತ್ಯಕ್ಷದರ್ಶನವನ್ನೂ ಮತ್ತು ಶ್ರೇಷ್ಠವಾದ ಶುಭಗತಿಯನ್ನೂ ಶಚೀಪತಿಯಾದ ಇಂದ್ರನು ಸಂತೋಷಗೊಂಡು ನಳನಿಗೆ ಕೊಟ್ಟನು. ಅಗ್ನಿಯು ನಳನು ಇಚ್ಛಿಸಿದಲ್ಲಿ ತನ್ನ ಪ್ರಾದುರ್ಭಾವವನ್ನು ವರವಾಗಿ ಕೊಟ್ಟನು ಮತ್ತು ಹುತಾಶನನು ತನ್ನ ಲೋಕಗಳನ್ನು ಅವನಿಗೆ ನೀಡಿದನು.
ಯಮಸ್ತ್ವನ್ನರಸಂ ಪ್ರಾದಾದ್ ಧರ್ಮೇ ಚ ಪರಮಾಂ ಸ್ಥಿತಿಮ್ |
ಅಪಾಂಪತಿರಪಾಂ ಭಾವಂ ಯತ್ರ ವಾಂಛತಿ ನೈಷಧಃ ||33||
ಯಮನು ಅನ್ನವಿಲ್ಲದಿದ್ದರೂ ಭೋಜನಜನ್ಯಬಲವನ್ನು ಅಥವಾ ರುಚಿಕರವಾದ ಆನ್ನವನ್ನು ಮಾಡುವ ಸಾಮರ್ಥ್ಯವನ್ನು ಮತ್ತು ಧರ್ಮದಲ್ಲಿ ಪರಮ ನಿಷ್ಠೆಯನ್ನು ಕೊಟ್ಟನು. ಜಪತಿಯಾದ ವರುಣನು ನೈಷಧನು ಇಚ್ಛಿಸಿದಲ್ಲಿ ಜಲದ ಪ್ರಾದುರ್ಭಾವವನ್ನು ವರವಾಗಿ ಕೊಟ್ಟನು.
ಸ್ರಜಶ್ಚೋತ್ತಮಗಂಧಾಢ್ಯಾಃ ಸರ್ವೇ ಚ ಮಿಥುನಂ ದದುಃ |
ವರಾನೇವಂ ಪ್ರದಾಯಾಸ್ಯ ದೇವಾಸ್ತೇ ತ್ರಿದಿವಂ ಯಯುಃ ||34||

ಏತತ್ ಸರ್ವಂ ನಳೋಽಪಶ್ಯದ್ ದಮಯಂತೀ ಚ ಭಾರತ |
ಯಥಾ ಸ್ವಪ್ನಂ ಮಹಾರಾಜ ತಥೈವ ದದೃಶುರ್ಜನಾಃ ||35||
ಎಲೈ ರಾಜನೇ, ಉತ್ತಮ ಸುಗಂಧದಿಂದ ಕೂಡಿದ ಮಾಲೆಗಳನ್ನು ಮತ್ತು ಅವಳಿಮಕ್ಕಳನ್ನು ಎಲ್ಲರೂ ನೀಡಿದರು. ನಳನಿಗೆ ಹೀಗೆ ವರಗಳನ್ನು ಕೊಟ್ಟು ದೇವತೆಗಳು ಸ್ವರ್ಗಕ್ಕೆ ಹೊರಟು ಹೋದರು. ಇದೆಲ್ಲವನ್ನೂ ನಳದಯಂತಿಯರು ನೋಡಿದರು. ಎಲೈ ಮಹಾರಾಜನೇ, ಎಲ್ಲಾ ಜನರಿಗೆ ಇದೊಂದು ಸ್ವಪ್ನದಂತೆ ತೋರಿತು.
ತತಃ ಸ್ವಯಂವರೇ ಚಕ್ರೇ ಭೀಮೋ ರಾಜಾಽತಿಮಾನುಷಮ್ |
ಸಮಾಗತೇಷು ಸರ್ವೇಷು ಭೂಪಾಲೇಷು ವಿಶಾಂಪತೇ ||36||
ಎಲೈ ರಾಜನೇ, ಅನಂತರ ಸ್ವಯಂವರದಲ್ಲಿ ಭೀಮರಾಜನು ಸಮಾಗತರಾದ ರಾಜರುಗಳಿಗೆ ಮನುಷ್ಯರಿಗೆ ಮೀರಿದ ಸತ್ಕಾರ್ಯಗಳನ್ನು ಮಾಡಿದನು.
ದಮಯಂತ್ಯಪಿ ತತ್ರೈಷಾ ರಾಜಮಂಡಲಮೃದ್ಧಿಮತ್ |
ಅನ್ವೀಕ್ಷ್ಯ ನೈಷಧಂ ವವ್ರೇ ಭೈಮೀ ಧರ್ಮೇಣ ಭಾರತ ||37||
ಎಲೈ ಭಾರತನೇ ಈ ದಮಯಂತಿಯೂ ಸಹ ಸಮೃದ್ಧಿಯಿಂದ ಕೂಡಿದ ಆ ರಾಜಸಮೂಹವನ್ನು ನೋಡಿ ನಳನನ್ನೇ ಧರ್ಮದಿಂದ ಪತಿಯಾಗಿ ವರಿಸಿದಳು.
ವೃತೇ ಚ ನೈಷಧೇ ಭೈಮ್ಯಾ ನಿವೃತ್ತೇ ಚ ಸ್ವಯಂವರೇ |
ಸರ್ವ ಏವ ಮಹೀಪಾಲಾಃ ಪ್ರತಿಜಗ್ಮುರ್ಯಥಾಗತಮ್ ||38||
ದಮಯಂತಿಯು ನೈಷಧನನ್ನು ವರಿಸಿ ಸ್ವಯಂವರವೂ ಪೂರ್ಣವಾಗುತ್ತಿರಲು ಎಲ್ಲ ರಾಜರೂ ಬಂದದಾರಿಗಳಲ್ಲಿ ಹಿಂದಿರುಗಿದರು.
ಗತೇಷು ಪಾರ್ಥಿವೇಂದ್ರೇಷು ಭೀಮಃ ಪ್ರೀತೋ ಮಹಾಮನಾಃ |
ವಿವಾಹಂ ಕಾರಯಾಮಾಸ ದಮಯಂತ್ಯಾ ನಳಸ್ಯ ಚ ||39||
ಎಲ್ಲ ರಾಜರೂ ಹೀಗೆ ಹೊರಟುಹೋದ ಮೇಲೆ ಉದಾರಿಯಾದ ಭೀಮನು ಸಂತೋಷದಿಂದ ನಳದಮಯಂತಿಯರಿಗೆ ವಿವಾಹವನ್ನು ಮಾಡಿಸಿದನು.
ಅವಾಪ್ಯ ನಾರೀರತ್ನಂ ತು ಪುಣ್ಯಶ್ಲೋಕೋಽಪಿ ಪಾರ್ಥಿವಃ |
ರೇಮೇ ಸಹ ತಯಾ ರಾಜನ್ ಶಚ್ಯೇವ ಬಲವೃತ್ರಹಾ ||40||
ಎಲೈ ರಾಜನೇ, ಪುಣ್ಯಶ್ಲೋಕನಾದ ನಳನೂ ಸಹ ನಾರೀರತ್ನವನ್ನು ಪಡೆದು ಶಚಿಯ ಜೊತೆಯಲ್ಲಿ ಬಲವೃತ್ರಸೂದನನಾದ ಇಂದ್ರನಂತೆ ಅವಳ ಜೊತೆಯಲ್ಲಿ ಸುಖಪಟ್ಟನು.
ಅತೀವ ಮುದಿತೋ ರಾಜಾ ಭ್ರಾಜಮಾನೋಂಽಶುಮಾನಿವ |
ರಂಜಯನ್ ವಸುಧಾಂ ವೀರೋ ಧರ್ಮೇಣ ಪರಿಪಾಲಯನ್ ||41||
ಈಜೇ ಚಾಪ್ಯಶ್ವಮೇಧೇನ ಯಯಾತಿರಿವ ನಾಹುಷಃ |
ಅನ್ಯೈಶ್ಚ ಬಹುಭಿಃ ಶ್ರೀಮಾನ್ ಕ್ರತುಭಿಶ್ಚಾಪ್ತದಕ್ಷಿಣೈಃ ||42||
ಬಹಳ ಸಂತೋಷದಿಂದ ಯುಕ್ತನಾದ ರಾಜನಾದ ನಳನು ಸೂರ್ಯನಂತೆ ಬೆಳಗುತ್ತಾ ಭೂಮಿಯನ್ನೆಲ್ಲಾ ಸಂತೋಷಪಡಿಸುತ್ತಾ ಧರ್ಮದಿಂದ ಭೂಮಿಯನ್ನು ಆಳುತ್ತಾ ವೀರನಾದ ಅವನು ನಹುಷಪುತ್ರನಾದ ಯಯಾತಿಯಂತೆ ಅಶ್ವಮೇಧ ಯಾಗವನ್ನು ಮಾಡಿದನು. ಮೇಧಾವಿಯಾದ ಅವನು ಬಹಳ ದಕ್ಷಣೆಗಳಿಂದ ಕೂಡಿದ ಇನ್ನೂ ಅನೇಕ ಯಾಗಗಳನ್ನು ಮಾಡಿದನು.
ಪುನಶ್ಚ ರಮಣೀಯೇಷು ವನೇಷೂಪವನೇಷು ಚ |
ದಮಯಂತ್ಯಾ ಸಹ ನಳೋ ವಿಜಹಾರಾಮರೋಪಮಃ ||43||
ಪುನಃ ರಮಣೀಯವಾದ ವನಗಳಲ್ಲಿಯೂ ಮತ್ತು ಉಪವನಗಳಲ್ಲಿಯೂ ದೇವತೆಗಳಿಗೆ ಸದೃಶನಾಗಿದ್ದ ನಳನು ದಮಯಂತಿಯ ಜೊತೆಯಲ್ಲಿ ವಿಹಾರವನ್ನು ಮಾಡಿದನು.
ಜನಯಾಮಾಸ ಚ ನಳೋ ದಮಯಂತ್ಯಾಂ ಮಹಾಮನಾಃ |
ಇಂದ್ರಸೇನಂ ಕುಮಾರಂಚ ಇಂದ್ರಸೇನೀಂ ಕುಮಾರಿಕಾಮ್ ||44||
ಮಹಾಮನನಾದ ನಳನು ದಮಯಂತಿಯಲ್ಲಿ ಇಂದ್ರಸೇನನೆಂಬ ಪುತ್ರನನ್ನೂ ಮತ್ತು ಇಂದ್ರಸೇನೆ ಎಂಬ ಪುತ್ರಿಯನ್ನೂ ಅವಳಿ ಮಕ್ಕಳಾಗಿ ಪಡೆದನು.
ಏವಂ ಸ ಯಜಮಾನಶ್ಚ ವಿಹರಂಶ್ಚ ನರಾಧಿಪಃ |
ರರಕ್ಷ ವಸುಸಂಪೂರ್ಣಾಂ ವಸುಧಾಂ ವಸುಧಾಧಿಪಃ ||45||
ಹೀಗೆ ಆ ನರಾಧಿಪನೂ ವಸುಧಾಧಿಪನೂ ಆದ ನಳನು ಯಾಗವನ್ನು ಮಾಡುತ್ತಾ ಮತ್ತು ವಿಹಾರವನ್ನುಮಾಡುತ್ತಾ ಸಂಪತ್ತಿನಿಂದ ಪೂರ್ಣವಾದ ಭೂಮಿಯನ್ನು ರಕ್ಷಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಪಂಚಾಂಶೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಪಂಚಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ಐವತ್ತನೆಯ ಅಧ್ಯಾಯ
(ದೇವತೆಗಳ ಮತ್ತು ಕಲಿಯ ಸಂವಾದ. ಕಲಿಯ ದುಷ್ಟಪ್ರತಿಜ್ಞೆ
ಮತ್ತು ದ್ವಾಪರನ ಸಹಾಯಯಾಚನೆ.)

ಬೃಹದಶ್ವಃ
ವೃತೇ ತು ನೈಷಧೇ ಭೈಮ್ಯಾ ಲೋಕಪಾಲಾ ಮಹೌಜಸಃ |
ಯಾಂತೋ ದದೃಶುರಾಯಾಂತಂ ದ್ವಾಪರಂ ಕಲಿನಾ ಸಹ ॥1॥
ಭೀಮಕುಮಾರಿಯಾದ ದಮಯಂತಿಯು ನಳನನ್ನು ವರಿಸುತ್ತಿರಲು ಮಹಾಸಾಮರ್ಥ್ಯಶಾಲಿಗಳಾದ ಲೋಕಪಾಲಕರು ಹಿಂದಿರುಗಿ ಹೋಗುತ್ತಾ ಕಲಿಯ ಜೊತೆಯಲ್ಲಿ ಬರುತ್ತಿದ್ದ ದ್ವಾಪರನನ್ನು ನೋಡಿದರು.
ಅಥಾಬ್ರವೀತ್ ಕಲಿಂ ಶಕ್ರಃ ಸಂಪ್ರೇಕ್ಷ್ಯ ಬಲವೃತ್ರಹಾ |
ದ್ವಾಪರೇಣ ಸಹಾಯೇನ ಕಲೇ ಬ್ರೂಹಿ ಕ್ವ ಯಾಸ್ಯಸಿ ॥2॥
ಆಗ ಬಲವೃತ್ರಸೂದನನಾದ ಇಂದ್ರನು ಕಲಿಯನ್ನು ನೋಡಿ ಕಲಿಯೇ ದ್ವಾಪರನ ಜೊತೆಯಲ್ಲಿ ನೀನು ಎಲ್ಲಿಗೆ ಹೋಗುತ್ತಿರುವೆ ಎಂದು ಪ್ರಶ್ನಿಸಿದನು.
ತತೋಽಬ್ರವೀತ್ ಕಲಿಃ ಶಕ್ರಂ ದಮಯಂತ್ಯಾಃ ಸ್ವಯಂವರಮ್ |
ಗತ್ವಾಽಹಂ ವರಯಿಷ್ಯೇ ತಾಂ ಮನೋ ಹಿ ಮಮ ತದ್ಗತಮ್ ॥3॥
ಆಗ ಕಲಿಯು ಇಂದ್ರನನ್ನು ಕುರಿತು ನಾನು ದಮಯಂತಿಯ ಸ್ವಯಂವರಕ್ಕೆ ಹೋಗಿ ಅವಳನ್ನು ವರಿಸುವೆನು. ನನ್ನ ಮನಸ್ಸು ಅವಳಲ್ಲಿ ನೆಟ್ಟಿದೆ ಎಂದು ಹೇಳಿದನು.
ತತೋಽಬ್ರವೀತ್ ಪ್ರಹಸ್ಯೇಂದ್ರೋ ನಿವೃತ್ತಃ ಸ ಸ್ವಯಂವರಃ |
ವೃತಸ್ತಯಾ ನಳೋ ರಾಜಾ ಪತಿತ್ವೇಽಸ್ಮತ್ಸಮೀಪತಃ ॥4॥
ಆಗ ಇಂದ್ರನು ನಕ್ಕು ಸ್ವಯಂವರವು ಮುಗಿದು ಹೋಯಿತು. ನಮ್ಮ ಸನ್ನಿಧಿಯಲ್ಲಿ ಅವಳು ರಾಜನಾದ ನಳನನ್ನು ಪತಿಯಾಗಿ ವರಿಸಿದಳು ಎಂದು ಹೇಳಿದನು.
ಏವಮುಕ್ತಸ್ತು ಶಕ್ರೇಣ ಕಲಿಃ ಕೋಪಸಮನ್ವಿತಃ |
ದೇವಾನಾಮಂತ್ರ್ಯ ತಾನ್ ಸರ್ವಾನ್ ಉವಾಚೇದಂ ವಚಸ್ತದಾ ॥5॥
ಇಂದ್ರನಿಂದ ಹೀಗೆ ಹೇಳಲ್ಪಟ್ಟ ಕಲಿಯು ಕೋಪಾವಿಷ್ಟನಾಗಿ ದೇವತೆಗಳನ್ನು ಆಹ್ವಾನಿಸಿ ಅವರೆಲ್ಲರಿಗೂ ಈ ಮಾತನ್ನು ಹೇಳಿದನು.
ದೇವಾನಾಂ ಮಾನುಷಂ ಮಧ್ಯೇ ಯತ್ ಸಾ ಪತಿಮವಿಂದತ |
ನನು ತಸ್ಯಾ ಭವೇನ್ನ್ಯಾಯ್ಯಂ ವಿಪುಲಂ ದಂಡಧಾರಣಮ್ |
ಏವಮುಕ್ತಾಸ್ತು ಕಲಿನಾ ಪ್ರತ್ಯೂಚುಸ್ತೇ ದಿವೌಕಸಃ ॥6॥
ದೇವತೆಗಳ ಮಧ್ಯೆ ಅವಳು ಮನುಷ್ಯನನ್ನು ವರಿಸಿದುದಕ್ಕೆ ಅವಳಿಗೆ ವಿಪುಲವಾದ ಶಿಕ್ಷೆಯನ್ನು ಕೊಡುವುದೇ ನ್ಯಾಯವಾಗುತ್ತದೆ. ಕಲಿಯಿಂದ ಈ ಮಾತನ್ನು ಕೇಳಿದ ಆ ದೇವತೆಗಳು ಅವನಿಗೆ ಉತ್ತರವನ್ನು ಕೊಟ್ಟರು.
ಅಸ್ಮಾಭಿಃ ಸಮನುಜ್ಞಾತೋ ದಮಯಂತ್ಯಾ ನಳೋ ವೃತಃ |
ಯೋ ವೇದ ಧರ್ಮಾನಖಿಲಾನ್ ಯಥಾವಚ್ಚರಿತವ್ರತಃ ॥7॥
ಯಾವ ನಳನು ಎಲ್ಲ ಧರ್ಮಗಳನ್ನೂ ತಿಳಿದಿದ್ದಾನೆಯೋ ಎಲ್ಲ ವ್ರತಗಳನ್ನೂ ಸಾಂಗವಾಗಿ ಆಚರಿಸಿದ್ದಾನೆಯೋ ಅಂತಹ ನಳನನ್ನು ವರಿಸಲು ನಾವು ದಮಯಂತಿಗೆ ಅನುಮತಿಯನ್ನು ಕೊಟ್ಟಿದ್ದೇವೆ.
ಕಶ್ಚ ಸರ್ವಗುಣೋಪೇತಂ ನಾಶ್ರಯೇತ ನಳಂ ನೃಪಮ್ |
ಯೋಽಧೀತೇ ಚತುರೋ ವೇದಾನ್ ಸರ್ವಾನಾಖ್ಯಾನಪಂಚಮಾನ್ ॥
ನಿತ್ಯಂ ತೃಪ್ತಾ ಗೃಹೇ ವಿಪ್ರಾ ದೇವಾ ಯಜ್ಞೇಷು ಧರ್ಮತಃ |
ಅಹಿಂಸಾಪರಮೋ ಯಶ್ಚ ಸತ್ಯವಾದೀ ದೃಢವ್ರತಃ ॥9॥
ಯಾವ ನಳನು ನಾಲ್ಕು ವೇದಗಳನ್ನೂ ಮತ್ತು ಎಲ್ಲಾ ಪಂಚರಾತ್ರಾದಿಗಳನ್ನೂ ಅಧ್ಯಯನಮಾಡುತ್ತಾನೆಯೋ ಸರ್ವಗುಣಯುಕ್ತನಾದ ರಾಜನಾದ ಆ ನಳನನ್ನು ಯಾರು ಆಶ್ರಯಿಸುವುದಿಲ್ಲ? ಅವನ ಮನೆಯಲ್ಲಿ ಬ್ರಾಹ್ಮಣರು ಯಾವಾಗಲೂ ತೃಪ್ತರಾಗಿದ್ದಾರೆ. ಯಜ್ಞಗಳಲ್ಲಿ ದೇವತೆಗಳು ತೃಪ್ತರಾಗಿದ್ದಾರೆ. ಅವನು ಅಹಿಂಸಾವ್ರತಧಾರಿಯಾದವನು ಸತ್ಯವಾದಿ ಮತ್ತು ದೃಢವ್ರತ.
ಯಸ್ಮಿನ್ ಸತ್ಯಂ ಧೃತಿರ್ದಾನಂ ತಪಃ ಶೌಚಂ ತಥಾ ಕ್ಷಮಾ |
ಗುಣಾ ಹಿ ಪುರುಷವ್ಯಾಘ್ರೇ ಲೋಕಪಾಲಸಮೇ ನಳೇ ॥10॥
ಆತ್ಮಾನಂ ಸ ಶಪೇನ್ಮೂಢೋ ಹನ್ಯಾಚ್ಚಾತ್ಮಾನಮಾತ್ಮನಾ |
ಏವಂಗುಣಂ ನಳಂ ಯೋ ಹಿ ಕಾಮಯೇಚ್ಛಾಪಿತುಂ ಕಲೇ |
ಅಸಕೃನ್ನರಕೇ ಮಜ್ಜೇದ್ ಅಗಾಧೇ ವಿಪುಲೇಽಪ್ಲವೇ ॥11॥
ಲೋಕಪಾಲರಿಗೆ ಸದೃಶನಾದ ಪುರುಷವ್ಯಾಘ್ರನಾದ ಯಾವ ನಳನಲ್ಲಿ ಸತ್ಯ ಧೈರ್ಯ ದಾನ ತಪಸ್ಸು ಶೌಚ ಸಹನೆ ಈ ಎಲ್ಲಾಗುಣಗಳೂ ಇವೆಯೋ ಅವನು ತಾನು ಮೌಢ್ಯದಿಂದ ಅಪರಾಧವನ್ನು ಮಾಡಿದರೆ ತನ್ನನ್ನೇ ಶಪಿಸಿಕೊಳ್ಳುತ್ತಾನೆಯೋ ಅಥವಾ ತನ್ನನ್ನೇ ತಾನು ಹನನ- ಮಾಡಿಕೊಳ್ಳುತ್ತಾನೆಯೋ ಇಂತಹ ಗುಣವುಳ್ಳ ನಳನನ್ನು ಯಾರಾದರೂ ಶಿಕ್ಷಿಸಲು ಬಯಸಿದರೆ ಎಲೈ ಕಲಿಯೇ, ಅವನು ಅಗಾಧವಾದ ಪರಿಹಾರವಿಲ್ಲದ ನರಕದಲ್ಲಿ ಬಹಳ ಕಾಲ ಮುಳುಗುತ್ತಾನೆ.
ಏವಮುಕತ್ತ್ವ ಕಲಿಂ ದೇವಾ ದ್ವಾಪರಂ ಚ ದಿವಂ ಯಯುಃ |
ತತೋ ಗತೇಷು ದೇವೇಷು ಕಲಿರ್ದ್ವಾಪರಮಬ್ರವೀತ್ ॥12॥
ಸಂಯಂತುಂ ನೋತ್ಸಹೇ ಕೋಪಂ ನಳೇ ವತ್ಸ್ಯಾಮಿ ದ್ವಾಪರ |
ಭ್ರಂಶಯಿಷ್ಯಾಮಿ ತಂ ರಾಜ್ಯಾನ್ನ ಭೈಮ್ಯಾ ಸಹ ರಂಸ್ಯತೇ ॥13॥
ತ್ವಮಪ್ಯಕ್ಷಾನ್ ಸಮಾವಿಶ್ಯ ಕರ್ತುಂ ಮೇ ಸಾಹ್ಯಮರ್ಹಸಿ |

ಮಮ ಪ್ರಿಯೇಕೃತೇ ತಸ್ಮಿನ್ ಕೃತವಾಂಶ್ಚ ಭವಿಷ್ಯಸಿ ॥14॥
ಕಲಿ ಮತ್ತು ದ್ವಾಪರರನ್ನು ಕುರಿತು ಹೀಗೆ ಹೇಳಿ ದೇವತೆಗಳು ಸ್ವರ್ಗಕ್ಕೆ ಹೋದರು. ದೇವತೆಗಳು ಹೋದ ಮೇಲೆ ಕಲಿಯು ದ್ವಾಪರನನ್ನು ಕುರಿತು ನನಗೆ ಕೋಪವನ್ನು ತಡೆಯಲು ಸಾಧ್ಯವಿಲ್ಲ. ದ್ವಾಪರನೇ ನಾನು ನಳನಲ್ಲಿ ವಾಸಮಾಡಿ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ದಮಯಂತಿಯ ಜೊತೆಯಲ್ಲಿ ಸುಖದಿಂದ ಇರದಂತೆ ಮಾಡುತ್ತೇನೆ. ನೀನೂ ಸಹ ದಾಳಗಳನ್ನು ಆಶ್ರಯಿಸಿ ನನಗೆ ಸಹಾಯವನ್ನು ಮಾಡು. ನನಗೆ ಸಹಾಯವನ್ನು ಮಾಡಿದರೆ ನೀನು ಕೃತಕೃತ್ಯನಾಗುವಿ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
*****
ಐವತ್ತೊಂದನೆಯ ಅಧ್ಯಾಯ
(ಅಕ್ಷದ್ಯೂತ ಮತ್ತು ನಳನ ಪರಾಜಯ.)
ಬೃಹದಶ್ವಃ
ಏವಂ ಸ ಸಮಯಂ ಕೃತ್ವಾ ದ್ವಾಪರೇಣ ಕಲಿಸ್ತದಾ |
ಆಜಗಾಮ ತತಸ್ತತ್ರ ಯತ್ರ ರಾಜಾ ಸ ನೈಷಧಃ ॥1॥
ಸ ನಿತ್ಯಮಂತರಪ್ರೇಕ್ಷೀ ನಿಷಧೇಷ್ವವಸಚ್ಚಿರಮ್ |
ಅಥಾಸ್ಯ ದ್ವಾದಶೇ ವರ್ಷೇ ದದರ್ಶ ಕಲಿರಂತರಮ್ ॥2॥
ಹೀಗೆ ಕಲಿಯು ದ್ವಾಪರನ ಜೊತೆಯಲ್ಲಿ ಒಪ್ಪಂದವನ್ನು ಮಾಡಿಕೊಂಡು ನೈಷಧರಾಜನಾದ ನಳನಿದ್ದಲ್ಲಿಗೆ ಬಂದನು. ಅವನು ನಿತ್ಯವೂ ನಳನನ್ನು ಪ್ರವೇಶಿಸುವುದಕ್ಕೆ ಅವನ ಒಂದು ಧರ್ಮಲೋಪವನ್ನು ನಿರೀಕ್ಷಿಸುತ್ತಾ ನಿಷಧ ದೇಶದಲ್ಲಿ ಬಹುಕಾಲ ವಾಸಿಸಿದನು. ಅನಂತರ ಹನ್ನೆರಡನೆಯ ವರ್ಷದಲ್ಲಿ ಅವನಿಗೆ ಅಂತಹ ಒಂದು ಅವಕಾಶವು ದೊರೆಯಿತು.
ಕೃತ್ವಾ ಮೂತ್ರಮುಪಸ್ಪೃಶ್ಯ ಸಂಧ್ಯಾಮಾಸ್ತೇ ಸ್ಮ ನೈಷಧಃ |
ಅಕೃತ್ವಾ ಪಾದಯೋಃ ಶೌಚಂ ತತ್ರೈನಂ ಕಲಿರಾವಿಶತ್ ॥3॥
ನಳನು ಮೂತ್ರೋತ್ಸರ್ಗವನ್ನು ಮಾಡಿ ಕೈಗಳನ್ನು ತೊಳೆದು ಪಾದಗಳನ್ನು ಸರಿಯಾಗಿ ತೊಳೆದುಕೊಳ್ಳದೆ ಸಂಧ್ಯೋಪಾಸನೆಯನ್ನು ಮಾಡುತ್ತಿದ್ದನು. ಆಗ ಕಲಿಯು ಅವನನ್ನು ಪ್ರವೇಶಿಸಿದನು.
ಸ ಸಮಾವಿಶ್ಯ ಚ ನಳಂ ಸಮೀಪಂ ಪುಷ್ಕರಸ್ಯ ಹ |
ಗತ್ವಾ ಪುಷ್ಕರಮಾಹೇದಮೇಹಿ ದೀವ್ಯ ನಳೇನ ವೈ ॥4॥
ಅವನು ನಳನನ್ನು ಪ್ರವೇಶಿಸಿ ಅವನ ತಮ್ಮನಾದ ಪುಷ್ಕರನ ಬಳಿಗೆ ಹೋಗಿ ಪುಷ್ಕರನನ್ನು ಕುರಿತು ಬಾ ನಳನ ಜೊತೆಯಲ್ಲಿ ದ್ಯೂತವಾಡು ಎಂದು ಕರೆದನು.
ಅಕ್ಷದ್ಯೂತೇ ನಳಂ ಜೇತಾ ಭವಾನ್ ಹಿ ಸಹಿತೋ ಮಯಾ |
ನಿಷಧಾನ್ ಪ್ರತಿಪದ್ಯಸ್ವ ಜಿತ್ವಾ ರಾಜನ್ ನಳಂ ನೃಪಮ್ ॥5॥
ರಾಜನೇ! ಅಕ್ಷದ್ಯೂತದಲ್ಲಿ ನಳನೃಪನನ್ನು ಗೆದ್ದು ನೀನು ನನ್ನ ಜೊತೆಯಲ್ಲಿ ನಿಷಧ ರಾಜ್ಯವನ್ನು ಹೊಂದುವವನಾಗು.
ಏವಮುಕ್ತಸ್ತು ಕಲಿನಾ ಪುಷ್ಕರೋ ನಳಮಭ್ಯಗಾತ್ |
ಕಲಿಶ್ಚೈವ ವೃಷೋ ಭೂತ್ವಾ ಗವಾಂ ಪುಷ್ಕರಮಮಬ್ರವೀತ್ ॥6॥
ಕಲಿಯಿಂದ ಹೇಳಲ್ಪಟ್ಟ ಪುಷ್ಕರನು ನಳನ ಸಮೀಪಕ್ಕೆ ಹೋದನು. ಕಲಿಯೂ ಸಹ ಒಂದು ಎತ್ತಾಗಿ ಪುಷ್ಕರನನ್ನು ಕುರಿತು ಮಾತನಾಡಿದನು.
( ತನ್ನ ಬಳಿ ಪಣಕ್ಕಿಡಲು ಯಾವ ಧನವೂ ಇಲ್ಲ ಎಂದು ಪುಷ್ಕರನು ಹೇಳಲು ನಾನು ಒಳ್ಳೆಯ ವೃಷಭನಾಗುತ್ತೇನೆ. ನನ್ನನ್ನೇ ಪಣಕ್ಕಿಡು ಎಂದು ಹೇಳಿ ಕಲಿಯು ವೃಷಭನಾದನು ಎಂದು ಪಾಠಾಂತರಗಳಲ್ಲಿ ದೊರೆಯುತ್ತದೆ. ಗವಾಧಿಪತಿಯಾದ ದ್ವಾಪರನಿಗೂ ಪುಷ್ಕರನೆಂದು ಹೆಸರು ಎಂದು ಲಕ್ಷಾಲಂಕಾರದಲ್ಲಿ ಹೇಳಿದ್ದಾರೆ. ಆದ್ದರಿಂದ ಕಲಿಯು ದ್ವಾಪರನ ಜೊತೆಯಲ್ಲಿ ಮಾತನಾಡುವಾಗಲೇ ಧನವಿಲ್ಲದ ನಳನ ತಮ್ಮನಾದ ಪುಷ್ಕರನಿಗೆ ನಾನು ಪಣಕ್ಕಿಡುವ ಶ್ರೇಷ್ಠ ವೃಷಭನಾಗುತ್ತೇನೆ ಎಂದು ಕಲಿಯು ಹೇಳಿದನೆಂದು ಅರ್ಥವನ್ನು ಮಾಡಬೇಕೆಂದು ತೋರುತ್ತದೆ.)
ಆಸಾದ್ಯ ತು ನಳಂ ವೀರಂ ಪುಷ್ಕರಃ ಪರವೀರಹಾ |
ದೀವ್ಯಾವೇತ್ಯಬ್ರವೀದ್ ಭ್ರಾತಾ ವೃಷೇಣೇತಿ ಪುನಃ ಪುನಃ ॥7॥
ಪರವೀರಘಾತಕನಾದ ಪುಷ್ಕರನು ವೀರನಾದ ನಳನನ್ನು ಸಮೀಪಿಸಿ ಈ ವೃಷಭಶ್ರೇಷ್ಠವನ್ನು ಪಣವಾಗಿಟ್ಟು ದ್ಯೂತವನ್ನು ಆಡೋಣ ಎಂದು ಮತ್ತೆ ಮತ್ತೆ ಹೇಳಿದನು.
ನ ಚಕ್ಷಮೇ ತತೋ ರಾಜಾ ಸಮಾಹ್ವಾನಂ ಮಹಾಯಶಾಃ |
ವೈದರ್ಭ್ಯಾಃ ಪ್ರೇಕ್ಷಮಾಣಾಯಾಃ ಪ್ರಾಪ್ತಕಾಲಮಮನ್ಯತ |
ತತಃ ಸ ರಾಜಾ ಸಹಸಾ ದೇವಿತುಂ ಸಂಪ್ರಚಕ್ರಮೇ ॥8॥
ಮಹಾಕೀರ್ತಿವಂತನಾದ ರಾಜನು ತನ್ನ ಈ ಆಹ್ವಾನವನ್ನು ಸಹಿಸಲಿಲ್ಲ. ವೈದರ್ಭಿಯು ನೋಡುತ್ತಿರುವಂತೆಯೇ ಅವನು ದ್ಯೂತವನ್ನು ಆಡುವುದು ಯೋಗ್ಯವೆಂದು ಭಾವಿಸಿದನು. ರಾಜನು ತಕ್ಷಣವೇ ದ್ಯೂತವನ್ನು ಆಡಲು ಉಪಕ್ರಮಿಸಿದನು.
ಭ್ರಾತ್ರಾ ದೈವಾಭಿಭೂತೇನ ದೈವಾವಿಷ್ಟೋ ಜನಾಧಿಪಃ |
ಹಿರಣ್ಯಸ್ಯ ಸುವರ್ಣಸ್ಯ ಯಾನಯುಗ್ಯಸ್ಯ ವಾಸಸಾಮ್ ॥9॥

ದೈವಾಭಿಭೂತನಾದ ತಮ್ಮನ ಜೊತೆಯಲ್ಲಿ ದೇವತಾ ಸನ್ನಿಧಾನ ಪಾತ್ರನಾಗಿದ್ದರೂ ಕಲಿಯಿಂದ ಆವಿಷ್ಟವಾದ ನಳನು ದ್ಯೂತವನ್ನು ಆಡಿ ಶ್ರೇಷ್ಠವಾದ ಸುವರ್ಣಗಳು ರಥದ ಕುದುರೆಗಳು ಶ್ರೇಷ್ಠವಾದ ವಸ್ತ್ರಗಳು ಎಲ್ಲವನ್ನೂ ಸೋತು ಕಳೆದುಕೊಂಡನು.
ಆವಿಷ್ಟಃ ಕಲಿನಾ ದ್ಯೂತೇ ಜೀಯತೇ ಸ್ಮ ನಳಸ್ತದಾ ॥10॥
ತಮಕ್ಷಮದಸಮ್ಮತ್ತಂ ಸುಹೃದಾಂ ನತು ಕಶ್ಚನ |
ನಿವಾರಣೇಽಭವಚ್ಛಕ್ತೋ ದೀವ್ಯಮಾನಮಚೇತಸಮ್ ॥11॥
ಕಲಿಯಿಂದ ಆವಿಷ್ಟನಾಗಿ ನಳನು ಪ್ರತಿಯೊಂದು ಆಟದಲ್ಲಿಯೂ ಸೋಲುತ್ತಿದ್ದನು. ಅಕ್ಷಮದಕ್ಕೆ ಒಳಗಾಗಿ ಎಚ್ಚರಿಕೆಯಿಲ್ಲದೆ ದ್ಯೂತವನ್ನು ಆಡುವ ಆ ನಳನನ್ನು ನಿವಾರಿಸಲು ಹಿತೈಷಿಗಳಲ್ಲಿ ಯಾರೂ ಶಕ್ತರಾಗಲಿಲ್ಲ.
ತತಃ ಪೌರಜನಾಃ ಸರ್ವೇ ಮಂತ್ರಿಭಿಃ ಸಹ ಭಾರತ |
ರಾಜಾನಂ ದ್ರಷ್ಟುಮಾಗಚ್ಛನ್ ನಿವಾರಯಿತುಮಾತುರಮ್ |
ತತಃ ಸೂತ ಉಪಾಗಮ್ಯ ದಮಯಂತ್ಯೈ ನ್ಯವೇದಯತ್ ॥12॥
ಭಾರತನೇ! ಆಗ ಪೌರಜನರೆಲ್ಲರೂ ಮಂತ್ರಿಗಳ ಜೊತೆಯಲ್ಲಿ ಈ ಚಟದಲ್ಲಿ ಬಿದ್ದ ರಾಜನನ್ನು ತಡೆಯುವ ಉದ್ದೇಶದಿಂದ ರಾಜನನ್ನು ನೋಡಲು ಬಂದರು. ನಂತರ ಸೂತನು ದಮಯಂತಿಯ ಹತ್ತಿರ ಹೋಗಿ ನಡೆದಿದ್ದನ್ನು ಅವಳಿಗೆ ತಿಳಿಸಿದನು.
ಪೌರಜಾನಪದಃ ಸರ್ವೋ ದ್ವಾರಿ ತಿಷ್ಠತಿ ಕಾರ್ಯವಾನ್ ॥13॥
ನಿವೇದ್ಯತಾಂ ನೈಷಧಾಯ ಸರ್ವಾಃ ಪ್ರಕೃತಯಃ ಸ್ಥಿತಾಃ |
ಅಮೃಷ್ಯಮಾಣಾ ವ್ಯಸನಂ ರಾಜ್ಞೋ ಧರ್ಮಾರ್ಥದರ್ಶಿನಃ ॥14॥
ಪೌರಜಾನಪದರೆಲ್ಲರೂ ನಳನನ್ನು ನೋಡುವ ಉದ್ದೇಶದಿಂದ ಬಾಗಿಲಿನಲ್ಲಿ ನಿಂತಿದ್ದಾರೆ. ಎಲ್ಲಾ ಪ್ರಜೆಗಳು ಧರ್ಮಾರ್ಥದರ್ಶಿಯಾದ ರಾಜನ ಈ ವ್ಯಸನವನ್ನು ಸಹಿಸಲಾಗದೆ ಬಾಗಿಲಿನಲ್ಲಿ ನಿಂತಿದ್ದಾರೆ ಎಂದು ನಳನಿಗೆ ನಿವೇದಿಸು ಎಂದು ಹೇಳಿದರು.
ತತಃ ಸಾ ಬಾಷ್ಪಕಲಯಾ ವಾಚಾ ದುಃಖೇನ ಕರ್ಶಿತಾ |
ಉವಾಚ ನೈಷಧಂ ಭೈಮೀ ಶೋಕೋಪಹತಚೇತನಾ ॥15॥
ಆಗ ದುಃಖದಿಂದ ಕರ್ಶಿತಳಾದ ಆ ದಮಯಂತಿಯು ಕಣ್ಣೀರಿನಿಂದ ಕೂಡಿದ ಮಾತುಗಳಲ್ಲಿ ಶೋಕದಿಂದ ಉಪದ್ರುತವಾದ ಮನಸ್ಸಿನಿಂದ ಕೂಡಿದವಳಾಗಿ ನಳನನ್ನು ಕುರಿತು ಹೇಳಿದಳು.
ರಾಜನ್ ಪೌರಜನೋ ದ್ವಾರಿ ತ್ವಾಂ ದಿದೃಕ್ಷುರುಪಸ್ಥಿತಃ |
ಮಂತ್ರಿಭಿಃ ಸಹಿತಃ ಸರ್ವೈ ರಾಜಭಕ್ತಿಪುರಸ್ಕೃತಃ ॥16॥
ವೃದ್ಧೈರ್ಬ್ರಾಹ್ಮಣಮುಖ್ಯೈಶ್ಚ ವಣಿಗ್ಭಿಶ್ಚ ಸಮನ್ವಿತಃ |
ಆಗತಾಃ ಸಹಿತಾ ರಾಜನ್ ತ್ವತ್ಪ್ರಸಾದಾವಲಂಬಿನಃ |
ತಾನ್ ದ್ರಷ್ಟುಮರ್ಹಸೀತ್ಯೇವಂ ಪುನಃ ಪುನರಭಾಷತ ॥17॥
ರಾಜನೇ! ಪೌರಜಾನಪದರೆಲ್ಲರೂ ರಾಜಭಕ್ತಿಯಿಂದ ಕೂಡಿದವರಾಗಿ ಎಲ್ಲಾ ಮಂತ್ರಿಗಳಿಂದಲೂ ವೃದ್ಧರಾದ ಶ್ರೇಷ್ಠ ಬ್ರಾಹ್ಮಣರಿಂದಲೂ ವೈಶ್ಯರಿಂದಲೂ ಸಹಿತರಾಗಿ ಎಲ್ಲರೂ ಜೊತೆಯಲ್ಲಿ ಬಂದು ನಿನ್ನನ್ನು ನೋಡಲು ಬಾಗಿಲಿನಲ್ಲಿ ನಿಂತಿದ್ದಾರೆ. ರಾಜನೇ ನಿನ್ನ ಅನುಗ್ರಹೋಪಜೀವಿಗಳಾದ ಅವರನ್ನು ನೀನು ನೋಡಬೇಕು ಎಂದು ಪುನಃಪುನಃ ಹೇಳಿದಳು.
ತಾಂ ತಥಾ ರುಚಿರಾಪಾಂಗೀಂ ವಿಲಪಂತೀಂ ಶುಚಿಸ್ಮಿತಾಮ್ |
ಆವಿಷ್ಟಃ ಕಲಿನಾ ರಾಜಾ ನೈವ ಕಿಂಚಿದಭಾಷತ ॥18॥
ಆ ರುಚಿರಕಟಾಕ್ಷವುಳ್ಳ ಶುಚಿಸ್ಮಿತೆಯಾದ ದಮಯಂತಿಯು ಹೀಗೆ ವಿಲಾಪವನ್ನು ಮಾಡುತ್ತಿದ್ದರೂ ಕಲಿಯಿಂದ ಆವಿಷ್ಟನಾದ ರಾಜನು ಏನನ್ನೂ ಮಾತನಾಡಲಿಲ್ಲ.
ತತಸ್ತೇ ಮಂತ್ರಿಣಃ ಸರ್ವೇ ತೇ ಚೈವ ಪುರವಾಸಿನಃ |
ನಾಯಮಸ್ತೀತಿ ದುಃಖಾರ್ತಾ ವ್ರೀಡಿತಾ ಜಗ್ಮುರಾಲಯಮ್ ॥19॥
ಆಗ ಆ ಮಂತ್ರಿಗಳು ಮತ್ತು ಪೌರಜನರೆಲ್ಲರೂ ರಾಜನು ಮಾಡಬೇಕಾದ ಕಾರ್ಯವು ಇದಲ್ಲ ಎಂದು ಹೇಳುತ್ತಾ ದುಃಖದಿಂದ ಆರ್ತರಾಗಿ ನಾಚಿಕೆಯಿಂದ ಕೂಡಿದವರಾಗಿ ತಮ್ಮ ಮನೆಗಳಿಗೆ ಹಿಂದಿರುಗಿದರು.
ತಥಾ ತದಭವದ್ ದ್ಯೂತಂ ಪುಷ್ಕರಸ್ಯ ನಳಸ್ಯ ಚ |
ಯುಧಿಷ್ಠಿರ ಬಹೂನ್ ಮಾಸಾನ್ ಪುಣ್ಯಶ್ಲೋಕಸ್ತ್ವಜೀಯತ ॥20॥
ಯುಧಿಷ್ಠಿರನೇ, ಹೀಗೆ ಪುಷ್ಕರನಿಗೂ ಮತ್ತು ನಳನಿಗೂ ಅನೇಕ ತಿಂಗಳುಗಳವರೆಗೆ ದ್ಯೂತವು ಜರುಗಿತು. ಪುಣ್ಯಶ್ಲೋಕನಾದ ನಳನು ಎಲ್ಲದರಲ್ಲೂ ಸೋತನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
*****
ಐವತ್ತೆರಡನೆಯ ಅಧ್ಯಾಯ
(ದ್ಯೂತದಲ್ಲಿ ನಳನ ಪರಾಜಯವನ್ನು ನೋಡಿ ದಮಯಂತಿಯಿಂದ ತನ್ನ ತೌರುಮನೆಗೆ ಯಮಳರ ಪ್ರೇಷಣ.)
ಬೃಹದಶ್ವಃ
ದಮಯಂತೀ ತು ತಂ ದೃಷ್ಟ್ವಾ ಪುಣ್ಯಶ್ಲೋಕಂ ನರಾಧಿಪಮ್ |
ಉನ್ಮತ್ತವದನುನ್ಮತ್ತಾ ದೈವೇನ ಗತಚೇತಸಮ್ ॥1॥

ಭಯಶೋಕಸಮಾವಿಷ್ಟಾ ರಾಜನ್ ಭೀಮಸುತಾ ತತಃ |
ಚಿಂತಯಾಮಾಸ ತತ್ ಕಾರ್ಯಂ ಸುಮಹಾಪಾರ್ಥಿವಂ ಪ್ರತಿ ॥2॥
ಎಲೈ ರಾಜನೇ! ಭೀಮಸುತೆಯಾದ ದಮಯಂತಿಯು ಪುಣ್ಯಶ್ಲೋಕನಾದ ಆ ರಾಜನು ದೈವದಿಂದ ಪ್ರಜ್ಞಾಹೀನನಾಗಿ ಉನ್ಮತ್ತನಂತೆ ಇರುವುದನ್ನು ನೋಡಿ ತಾನು ಅನುನ್ಮತ್ತಳಾಗಿ ಭಯಶೋಕಗಳಿಂದ ಕೂಡಿದವಳಾಗಿ ಆ ದೊಡ್ಡ ರಾಜನ ವಿಷಯದಲ್ಲಿ ಪ್ರಕೃತದಲ್ಲಿ ಮಾಡಬೇಕಾದ ಕಾರ್ಯವನ್ನು ಚಿಂತಿಸಿದಳು.
ಸಾ ಶಂಕಮಾನಾ ತತ್ಪಾಪಂ ಚಿಕೀರ್ಷಂತೀ ಚ ತತ್ಪ್ರಿಯಮ್ |
ನಳಂ ಚ ಹೃತಸರ್ವಸ್ವಮುಪಲಭ್ಯೇದಮಬ್ರವೀತ್ ॥3॥
ಬೃಹತ್ಸೇನೇ ವ್ರಜಾಮಾತ್ಯಮಾನಾಯ್ಯ ನಳಶಾಸನಾತ್ |
ಆಚಕ್ಷ್ವ ಯದ್ ಹೃತಂ ದ್ರವ್ಯಮವಶಿಷ್ಟಂ ಚ ಯದ್ವಸು ॥4॥
ಅವಳು ನಳನು ಮಾಡಬಹುದಾದ ಪಾಪವನ್ನು ಶಂಕಿಸಿ ಅವನಿಗೆ ಪ್ರಿಯವನ್ನು ಉಂಟುಮಾಡಲು ಬಯಸಿ ನಳನು ಸರ್ವಸ್ವವನ್ನೂ ಕಳೆದುಕೊಂಡುದನ್ನು ನೋಡಿ ಧಾತ್ರಿಯಾದ ಬೃಹತ್ಸೇನೆಯನ್ನು ಕರೆದು ಬೃಹತ್ಸೇನೆಯೇ ಹೋಗಿ ನಳಶಾಸನದಂತೆ ಅಮಾತ್ಯನನ್ನು ಕರೆದುಕೊಂಡು ಬಂದು ಎಷ್ಟು ಧನವು ನಷ್ಟವಾಗಿದೆ ಎಷ್ಟುಧನವು ಉಳಿದಿದೆ ಎಂದು ಹೇಳು.
ಇತ್ಯೇವಂ ಸಾ ಸಮಾದಿಷ್ಟಾ ಬೃಹತ್ಸೇನಾ ನರೇಶ್ವರ |
ಉವಾಚ ದೇವ್ಯಾ ವಚನಂ ಮಂತ್ರಿಣಾಂ ಸಾ ಸಮೀಪತಃ ॥5॥
ರಾಜನೇ! ಹೀಗೆ ದಮಯಂತಿಯ ಆದೇಶವನ್ನು ಪಡೆದ ಬೃಹತ್ಸೇನೆಯು ಅವಳ ಮಾತುಗಳನ್ನು ಮಂತ್ರಿಗಳ ಎದುರಿನಲ್ಲಿ ಹೇಳಿದಳು.
ತತಸ್ತೇ ಮಂತ್ರಿಣಃ ಸರ್ವೇ ವಿಜ್ಞಾಯ ನಳಶಾಸನಮ್ |
ಅಪಿ ನೋ ಭಾಗಧೇಯಂ ಸ್ಯಾದಿತ್ಯುಕ್ತ್ವಾ ಪುನರಾವ್ರಜನ್ ॥6॥
ಆಗ ಆ ಮಂತ್ರಿಗಳೆಲ್ಲರೂ ನಳನ ಆಜ್ಞೆಯನ್ನು ತಿಳಿದು ನಮಗಿನ್ನೂ ಪುಣ್ಯಶೇಷವಿದೆ ಎಂದು ಹೇಳುತ್ತಾ ಪುನಃ ಬಂದರು.
ಪ್ರಕೃತೀಸ್ತಾಸ್ತಥಾ ದೃಷ್ಟ್ವಾ ದ್ವಿತೀಯಮುಪಸಂಸ್ಥಿತಾಃ |
ನ್ಯವೇದಯದ್ ಭೀಮಸುತಾ ನ ಚ ಸ ಪ್ರತ್ಯನಂದತ ॥7॥
ವಾಕ್ಯಮಪ್ರತಿನಂದಂತಂ ಭರ್ತಾರಮಭಿವೀಕ್ಷ್ಯ ಸಾ |
ದಮಯಂತೀ ಪುನರ್ವೇಶ್ಮ ವ್ರೀಡಿತಾ ಪ್ರವಿವೇಶ ಹ ॥8॥
ಪ್ರಜೆಗಳು ಹಾಗೆ ಬಂದುದನ್ನು ನೋಡಿದ ಭೀಮಸುತೆಯಾದ ದಮಯಂತಿಯು ಎರಡನೆಯಬಾರಿಗೆ ನಳನ ಬಳಿಯಲ್ಲಿ ನಿಂತು ನಿವೇದಿಸಿದಳು. ರಾಜನು ಅವಳನ್ನು ಗಮನಿಸಲೇ ಇಲ್ಲ. ತನ್ನ ವಾಕ್ಯವನ್ನು ಪ್ರತಿನಂದಿಸದಿರುವ ಪತಿಯನ್ನು ನೋಡಿ ಆ ದಮಯಂತಿಯು ನಾಚಿಕೆಗೊಂಡವಳಾಗಿ ಪುನಃ ತನ್ನ ನಿವಾಸವನ್ನು ಪ್ರವೇಶಿಸಿದಳು.
ನಿಶಾಮ್ಯ ಸತತಂ ಚಾಕ್ಷಾನ್ ಪುಣ್ಯಶ್ಲೋಕಪರಾಙ್ಮುಖಾನ್ |
ನಳಂ ಚ ಹೃತಸರ್ವಸ್ವಂ ಧಾತ್ರೀಂ ಪುನರುವಾಚ ಹ ॥9॥
ಬೃಹತ್ಸೇನೇ ಪುನರ್ಗಚ್ಛ ವಾರ್ಷ್ಣೇಯಂ ನಳಶಾಸನಾತ್ |
ಸೂತಮಾನಯ ಕಲ್ಯಾಣಿ ಮಹತ್ ಕಾರ್ಯಮುಪಸ್ಥಿತಮ್ ॥10॥
ದಾಳಗಳು ಪುಣ್ಯಶ್ಲೋಕನಾದ ನಳನಿಗೆ ವಿಮುಖವಾಗಿರುವುದನ್ನೂ ಮತ್ತು ನಳನು ತನ್ನ ಸರ್ವಸ್ವವನ್ನೂ ಕಳೆದುಕೊಂಡಿದ್ದನ್ನೂ ನೋಡಿದ ಅವಳು ಪುನಃ ಧಾತ್ರಿಯನ್ನು ಕುರಿತು ಬೃಹತ್ಸೇನೇಯೇ ಪುನಃ ಹೋಗಿ ವೃಷ್ಣಿಕುಲದಲ್ಲಿ ಹುಟ್ಟಿದ ನಳನ ಸಾರಥಿಯನ್ನು ನಳನ ಶಾಸನದಂತೆ ಕರೆದುಕೊಂಡು ಬಾ. ಕಲ್ಯಾಣಿಯೇ, ದೊಡ್ಡ ಕರ್ತವ್ಯವು ಉಪಸ್ಥಿತವಾಗಿದೆ (ಕರ್ತವ್ಯವನ್ನು ಮಾಡಬೇಕಾಗಿದೆ.) ಎಂದು ಹೇಳಿದಳು.
ಬೃಹತ್ಸೇನಾ ತು ಸಾ ಶ್ರುತ್ವಾ ದಮಯಂತ್ಯಾಃ ಪ್ರಭಾಷಿತಮ್ |
ವಾರ್ಷ್ಣೇಯಮಾನಯಾಮಾಸ ಪುರುಷೈರಾಪ್ತಕಾರಿಭಿಃ ॥11॥
ಬೃಹತ್ಸೇನೆಯಾದರೂ ದಮಯಂತಿಯ ಆ ಮಾತುಗಳನ್ನು ಕೇಳಿ ತನ್ನ ಆಪ್ತಪುರುಷರ ಮೂಲಕ ವಾರ್ಷ್ಣೇಯನಾದ ಸೂತನನ್ನು ಕರೆತರಿಸಿದಳು.
ವಾರ್ಷ್ಣೇಯಂ ಚ ತತೋ ಭೈಮೀ ಶ್ಲಕ್ಷ್ಣಯಾ ಮಧುರಂ ಗಿರಾ |
ಉವಾಚ ದೇಶಕಾಲಜ್ಞಾ ಪ್ರಾಪ್ತಕಾಲಮನಿಂದಿತಾ ॥12॥
ಅನಂತರ ದೇಶಕಾಲಗಳನ್ನು ತಿಳಿದ ಅನಿಂದಿತಳಾದ ದಮಯಂತಿಯು ತನ್ನ ವಿವೇಕದ ಮಾತುಗಳಿಂದ ಆ ಸೂತನನ್ನು ಕುರಿತು ಆ ಕಾಲಕ್ಕೆ ಯೋಗ್ಯವಾದ ಕರ್ತವ್ಯವನ್ನು ಮಧುರವಾಗಿ ಹೇಳಿದಳು.
ಜಾನೀಷೇ ತ್ವಂ ಯಥಾ ರಾಜಾ ಸಮ್ಯಗ್ವೃತ್ತಃ ಸದಾ ತ್ವಯಿ |
ತಸ್ಯ ತ್ವಂ ವಿಷಮಸ್ಥಸ್ಯ ಸಾಹಾಯ್ಯಂ ಕರ್ತುಮರ್ಹಸಿ ॥13॥
ರಾಜನು ನಿನ್ನ ವಿಷಯದಲ್ಲಿ ಯಾವಾಗಲೂ ಹೇಗೆ ಚೆನ್ನಾಗಿ ನಡೆದುಕೊಂಡಿದ್ದಾನೆಂದು ನೀನೇ ತಿಳಿದಿರುತ್ತೀಯೆ. ಈಗ ಸಂಕಟದಲ್ಲಿ ಸಿಲುಕಿದ ಅವನಿಗೆ ಸಹಾಯವನ್ನು ಮಾಡಬೇಕು.
ಯಥಾ ಯಥಾ ಹಿ ನೃಪತಿಃ ಪುಷ್ಕರೇಣ ಹಿ ಜೀಯತೇ |
ತಥಾ ತಥಾಽಸ್ಯ ದ್ಯೂತೇ ವೈ ರಾಗೋ ಭೂಯೋಽಭಿವರ್ಧತೇ ॥14॥
ರಾಜನು ಪುಷ್ಕರನಿಂದ ಸೋತಂತೆ ಸೋತಂತೆ ಅವನಿಗೆ ದ್ಯೂತದ ಅಭಿಲಾಷೆಯು ಇನ್ನೂ ಹೆಚ್ಚಾಗುತ್ತಿದೆ.
ಯಥಾ ಹಿ ಪುಷ್ಕರಸ್ಯಾಕ್ಷಾಃ ವರ್ತಂತೇ ವಶವರ್ತಿನಃ |
ತಥಾ ವಿಪರ್ಯಯಶ್ಚಾಪಿ ನಳಸ್ಯಾಕ್ಷೇಷು ದೃಶ್ಯತೇ ॥15॥

ಸುಹೃತ್ಸ್ವಜನವಾಕ್ಯಾನಿ ಯಥಾಽಯಂ ನ ಶೃಣೋತಿ ಚ |
ಮಮಾಪಿ ಚ ತಥಾ ವಾಕ್ಯಂ ನಾಭಿನಂದತಿ ಮೋಹಿತಃ ॥16॥
ಪುಷ್ಕರನಿಗೆ ಹೇಗೆ ದಾಳಗಳು ವಶವರ್ತಿಗಳಾಗಿವೆಯೋ ಹಾಗೆ ನಳನಿಗೆ ದಾಳಗಳ ವಿಷಯದಲ್ಲಿ ಅವು ವಿರುದ್ಧವಾಗಿರುವುದು ಕಂಡುಬರುತ್ತಿವೆ. ಹಿತೈಷಿಗಳ ಮತ್ತು ಸ್ವಜನರ ಹಿತವಾದ ವಾಕ್ಯಗಳನ್ನು ಅವನು ಕೇಳುತ್ತಿಲ್ಲ. ಅವನು ಮೋಹಕ್ಕೆ ಒಳಗಾದವನಾಗಿ ನನ್ನ ಮಾತುಗಳನ್ನೂ ಸ್ವೀಕರಿಸುತ್ತಿಲ್ಲ.
ತಥಾ ಹಿ ರಾಜ್ಞೋಃ ಭಾಗ್ಯಾನಾಂ ದೀಪ್ತಾನಾಮದ್ಯ ಸಾರಥೇ |
ನೂನಂ ಮನ್ಯೇ ನ ಶೇಷೋಽಸ್ತಿ ನೈಷಧಸ್ಯ ಮಹಾತ್ಮನಃ ॥17॥
ಸಾರಥಿಯೇ ಅದರಂತೆ ಮಹಾತ್ಮನಾದ ನೈಷಧರಾಜನ ಉಜ್ಜ್ವಲವಾದ ಭಾಗ್ಯಗಳಲ್ಲಿ ಇನ್ನು ಏನೂ ಉಳಿದಿಲ್ಲವೆಂದು ಭಾವಿಸುತ್ತೇನೆ.
ತತ್ರ ಮೇ ವಚನಂ ರಾಜಾ ನಾಭಿನಂದತಿ ಮೋಹಿತಃ |
ಶರಣಂ ತ್ವಾಂ ಪ್ರಪನ್ನಾಽಸ್ಮಿ ಸಾರಥೇ ಕುರುಮೇವಚಃ |
ನಹಿ ಮೇ ಶುಧ್ಯತೇ ಭಾವೋ ವಿನಾಶಂ ಪ್ರತಿ ಸಾರಥೇ ॥18॥
ಈಗ ನನ್ನ ಮಾತುಗಳನ್ನು ಮೋಹಿತನಾದ ರಾಜನು ಅಭಿನಂದಿಸುತ್ತಿಲ್ಲ. ಸಾರಥಿಯೇ ನಿನಗೆ ಶರಣಾಗತಳಾಗಿದ್ದೇನೆ. ನನ್ನ ಮಾತನ್ನು ನಡೆಸಿಕೊಡು. ಸಾರಥಿಯೇ ವಿನಾಶದ ವಿಷಯದಲ್ಲಿ ನನ್ನ ಮನಸ್ಸಿಗೆ ಶುದ್ಧಿಯೇ ಇಲ್ಲ. (ಇನ್ನೂ ಹೆಚ್ಚು ವಿನಾಶವನ್ನು ಶಂಕಿಸುತ್ತದೆ.)
ನಳಸ್ಯ ದಯಿತಾನಶ್ವಾನ್ ಯೋಜಯಿತ್ವಾ ಮಹಾಜವಾನ್ |
ರಥಮಾರೋಪ್ಯ ಮಿಥುನಂ ಕುಂಡಿನಂ ಯಾತುರ್ಮಹಸಿ ॥19॥
ನೀನು ನಳನಿಗೆ ಪ್ರಿಯವಾದ ಮಹಾವೇಗವುಳ್ಳ ಅಶ್ವಗಳನ್ನು ರಥಕ್ಕೆ ಹೂಡಿ ನಮ್ಮ ಅವಳಿಮಕ್ಕಳನ್ನು ಕುಂಡಿನ ಪುರಕ್ಕೆ ಕರೆದುಕೊಂಡು ಹೋಗು.
ಮಮ ಜ್ಞಾತಿಷು ನಿಕ್ಷಿಪ್ಯ ದಾರಕೌ ಸ್ಯಂದನಂ ತಥಾ |
ಅಶ್ವಾಂಶ್ಚೈವ ಯಥಾಕಾಮಂ ವಸ ವಾಽನ್ಯತ್ರ ಗಚ್ಛ ವಾ ॥20॥
ನನ್ನ ತವರುಮನೆಯ ಬಂಧುಗಳಲ್ಲಿ ಮಕ್ಕಳನ್ನು ರಥವನ್ನು ಮತ್ತು ಅಶ್ವಗಳನ್ನು ಇಟ್ಟು ನಿನ್ನ ಮನಸ್ಸಿಗೆ ಬಂದಂತೆ ಆಲ್ಲಿಯೇ ಇರು ಅಥವಾ ಬೇರ ಕಡೆಗೆ ಹೋಗು (ಎಂದು ಹೇಳಿದಳು)
ದಮಯಂತ್ಯಾಸ್ತು ತಚ್ಛ್ರುತ್ವಾ ವಾರ್ಷ್ಣೇಯೋ ನಳಸಾರಥಿಃ |
ನ್ಯವೇದಯದಶೇಷೇಣ ನಳಾಮಾತ್ಯೇಷು ಮುಖ್ಯಶಃ ॥21॥
ನಳಸಾರಥಿಯಾದ ವಾರ್ಷ್ಣೇಯನು ದಮಯಂತಿಯ ಆ ಮಾತುಗಳನ್ನೂ ಕೇಳಿ ಎಲ್ಲವನ್ನೂ ಅಮಾತ್ಯಮುಖ್ಯರಿಗೆ ತಿಳಿಸಿದನು.
ತೈಃ ಸಮೇತ್ಯ ವಿನಿಶ್ಚಿತ್ಯ ಸೋಽನುಜ್ಞಾತೋ ಮಹೀಪತೇ |
ಯಯೌ ಮಿಥುನಮಾರೋಪ್ಯ ವಿದರ್ಭಾಂಸ್ತೇನ ವಾಹಿನಾ ॥22॥
ಸೂತನು ಅವರ ಜೊತೆಯಲ್ಲಿ ಸೇರಿ ವಿಷಯವನ್ನು ನಿಶ್ಚಯಿಸಿ ಅವರ ಅನುಜ್ಞೆಯನ್ನು ಪಡೆದು ಅವಳಿಮಕ್ಕಳನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಆ ರಥದಿಂದ ವಿದರ್ಭದೇಶಕ್ಕೆ ಹೋದನು.
ಹಯಾಂಸ್ತತ್ರ ವಿನಿಕ್ಷಿಪ್ಯ ಸೂತೋ ರಥವರಂ ಚ ತಮ್ |
ಇಂದ್ರಸೇನಾಂ ಚ ತಾಂ ಕನ್ಯಾಮಿಂದ್ರಸೇನಂ ಚ ಬಾಲಕಮ್ ॥23॥
ಆಮಂತ್ರ್ಯ ಭೀಮಂ ರಾಜಾನಮಾರ್ತಃ ಶೋಚನ್ ನಳಂ ನೃಪಮ್|
ಅಟಮಾನಸ್ತತೋಽಯೋಧ್ಯಾಂ ಜಗಾಮ ನಗರೀಂ ತದಾ ॥24॥
ಸೂತನು ಕುದುರೆಗಳನ್ನೂ ಶ್ರೇಷ್ಠವಾದ ರಥವನ್ನೂ ಕುಮಾರನಾದ ಇಂದ್ರಸೇನನನ್ನೂ ಕುಮಾರಿಯಾದ ಇಂದ್ರಸೇನೆಯನ್ನೂ ಅಲ್ಲಿ ಬಿಟ್ಟು ರಾಜನಾದ ಭೀಮನ ಅನುಮತಿಯನ್ನು ಪಡೆದು ದುಃಖಯುಕ್ತನಾಗಿ ನಳನನ್ನು ಕುರಿತು ಶೋಕಪಡುತ್ತಾ ಅಲ್ಲಿಂದ ಹೊರಟು ಆಗ ಅಯೋಧ್ಯಾನಗರವನ್ನು ಸೇರಿದನು.
ಋತುಪರ್ಣಂ ಸ ರಾಜಾನಮುಪತಸ್ಥೇ ಸುದುಃಖಿತಃ |
ಭೃತಿಂ ಚ ಸ ದದೌ ಚಾಸ್ಯ ಸಾರಥ್ಯೇನ ನಿಯೋಜಿತಃ ॥25॥
ಬಹಳ ದುಃಖದಿಂದ ಕೂಡಿದ ಸೂತನು ಋತುಪರ್ಣರಾಜನನ್ನು ಸಮೀಪಿಸಿದನು. ಅವನು ಸೂತನನ್ನು ತನ್ನ ಸಾರಥಿಯನ್ನಾಗಿ ಮಾಡಿಕೊಂಡು ಅವನಿಗೆ ವೇತನವನ್ನು ನೀಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಐವತ್ತೂರನೆಯ ಅಧ್ಯಾಯ
(ನಳದಮಯಂತಿಯರ ವನಗಮನ, ದಿಗಂಬರನಾದ ನಳನಜೊತೆಯಲ್ಲಿ ದಮಯಂತಿಯ ಸಂವಾದ.)
ಬೃಹದಶ್ವಃ
ತತಸ್ತು ಯಾತೇ ವಾರ್ಷ್ಣೇಯೇ ಪುಣ್ಯಶ್ಲೋಕಸ್ಯ ದೀವ್ಯತಃ |
ಪುಷ್ಕರೇಣ ಹೃತಂ ರಾಜ್ಯಂ ಯಚ್ಚಾಪಿ ವಸು ಕಿಂಚನ ॥1॥
ಅನಂತರ ಸೂತನು ಹೊರಟುಹೋದ ಮೇಲೆ ಪುಣ್ಯ ಶ್ಲೋಕನಾದ ನಳನು ಇನ್ನೂ ದ್ಯೂತವಾಡುತ್ತಿರಲು ಪುಷ್ಕರನು ನಳನ ರಾಜ್ಯವನ್ನೂ ಮತ್ತು ಅಳಿದುಳಿದ ಧನವನ್ನೂ ಅಪಹರಿಸಿದನು.

ಹೃತರಾಜ್ಯಂ ನಳಂ ರಾಜನ್ ಪ್ರಹಸನ್ ಪುಷ್ಕರೋಽಬ್ರವೀತ್ |
ದ್ಯೂತಂ ಪ್ರವರ್ತತಾಂ ಭೂಯಃ ಪ್ರತಿಪಾಣೋಽಸ್ತಿ ಕಸ್ತವ ॥2॥
ಶಿಷ್ಟಾ ತೇ ದಮಯಂತ್ಯೇಕಾ ಸರ್ವಮನ್ಯದ್ ಹೃತಂ ಮಯಾ |
ದಮಯಂತ್ಯಾಃ ಪಣಃ ಸಾಧು ವರ್ತತಾಂ ಯದಿ ಮನ್ಯಸೇ ॥3॥
ರಾಜನೇ ರಾಜ್ಯವನ್ನು ಕಳೆದುಕೊಂಡ ರಾಜನನ್ನು ಕುರಿತು ಪುಷ್ಕರನು ನಗುತ್ತಾ ದ್ಯೂತವು ಪುನಃ ಮುಂದುವರಿಯಲಿ. ಇನ್ನು ನಿನ್ನ ಬಳಿ ಪಣಕ್ಕಿಡುವವಸ್ತು ಯಾವುದು? ದಮಯಂತಿ ಒಬ್ಬಳು ಉಳಿದಿದ್ದಾಳೆ. ಉಳಿದೆಲ್ಲವನ್ನೂ ನಾನು ಗೆದ್ದಿದ್ದೇನೆ. ನಿನ್ನ ಅಭಿಪ್ರಾಯವಿದ್ದರೆ ದಮಯಂತಿಯನ್ನು ಪಣವಾಗಿ ಇಡು ಎಂದು ಹೇಳಿದನು.
ಪುಷ್ಕರೇಣೈವಮುಕ್ತಸ್ಯ ಪುಣ್ಯಶ್ಲೋಕಸ್ಯ ಮನ್ಯುನಾ |
ವ್ಯದೀರ್ಯತೇವ ಹೃದಯಂ ನ ಚೈನಂ ಕಿಂಚಿದಬ್ರವೀತ್ ॥4॥
ಪುಷ್ಕರನಿಂದ ಹೀಗೆ ಹೇಳಲ್ಪಟ್ಟ ಪುಣ್ಯಶ್ಲೋಕನಾದ ನಳನ ಹೃದಯವು ಕೋಪದಿಂದ ಬಿರಿಯುವಂತೆ ಕಂಡಿತು. ನಳನು ಪುಷ್ಕರನನ್ನು ಕುರಿತು ಏನೂ ಮಾತನಾಡಲಿಲ್ಲ.
ತತಃ ಪುಷ್ಕರಮಾಲೋಕ್ಯ ನಳಃ ಪರಮಮನ್ಯುಮಾನ್ |
ಉತ್ತರೀಯಂ ತಥಾ ವಸ್ತ್ರಂ ತಸ್ಯಾಶ್ಚಾಭರಣಾನಿ ಚ ॥5॥
ಉದ್ಧೃತ್ಯ ಸರ್ವಗಾತ್ರೇಭ್ಯೋ ಭೂಷಣಾನಿ ಮಹಾಯಶಾಃ |
ಏಕವಾಸಃ ಪರೀಧಾನೋ ಸುಹೃದಾಂ ಶೋಕವರ್ಧನಃ ॥6॥
ನಿಶ್ಚಕ್ರಾಮ ನಳೋ ರಾಜಾ ತ್ಯಕ್ತ್ವಾ ತು ವಿಪುಳಾಂ ಶ್ರಿಯಮ್ |
ದಮಯಂತ್ಯೇಕವಸನಾತ್ರ ತಂ ಗಚ್ಛಂತಂ ಪೃಷ್ಠತೋಽನ್ವಗಾನ್ ॥7॥
ಸ ತಯಾ ನಗರಾಭ್ಯಾಶೇ ತ್ರಿರಾತ್ರಂ ನೈಷಧೋಽವಸನ್ ॥8॥
ಅನಂತರ ಪುಷ್ಕರನನ್ನು ನೋಡಿ ಪರಮಕೋಪವನ್ನು ಹೊಂದಿದ ನಳನು ತನ್ನ ಉತ್ತರೀಯವನ್ನೂ ವಸ್ತ್ರವನ್ನೂ ದಮಯಂತಿಯ ಆಭರಣಗಳನ್ನೂ ಉಳಿದ ಅಲಂಕಾರ ಸಾಮಾಗ್ರಿಗಳನ್ನೂ ತನ್ನ ದೇಹದ ಎಲ್ಲಾ ಕಡೆಗಳಿಂದಲೂ ತೆಗೆದು ಒಂದೇ ವಸ್ತ್ರವನ್ನು ಉತ್ತರೀಯವನ್ನಾಗಿಯೂ ಮಾಡಿಕೊಂಡು ಅವನ ಪ್ರೀತಿಪಾತ್ರರಿಗೆಲ್ಲಾ ಶೋಕವನ್ನು ಹೆಚ್ಚಿಸುವವನಾಗಿ ವಿಪುಲವಾದ ಸಂಪತ್ತನ್ನು ತೊರೆದು ಮಹಾಕೀರ್ತಿವಂತನಾದ ಅವನು ಪಟ್ಟಣದಿಂದ ಹೊರಗೆ ನಡೆದನು. ಹಾಗೆ ಹೊರಟ ಅವನನ್ನು ಏಕವಸ್ತ್ರವನ್ನು ಉಟ್ಟ ದಮಯಂತಿಯು ಹಿಂಬಾಲಿಸಿದಳು. ನಳನು ಅವಳ ಜೊತೆಯಲ್ಲಿ ನಗರದ ಸಮೀಪದಲ್ಲಿ ಮೂರು ರಾತ್ರಿಗಳನ್ನು ಕಳೆದನು.
ಪುಷ್ಕರಸ್ತು ಮಹಾರಾಜ ಘೋಷಯಾಮಾಸ ವೈ ಪುರೇ |
ನಳೇ ಯಃ ಸಮ್ಯಗಾತಿಷ್ಠೇತ್ ಸ ಗಚ್ಛೇದ್ ವಧ್ಯತಾಮಿತಿ ॥9॥
ಮಹಾರಾಜನೇ, ಪುಷ್ಕರನು ನಳನಲ್ಲಿ ಯಾರು ನಿಷ್ಠೆಯನ್ನು ಹೊಂದಿದ್ದಾರೆಯೋ ಅವರನ್ನು ನಾನು ಕೊಲ್ಲುತ್ತೇನೆ ಎಂದು ಪಟ್ಟಣದಲ್ಲಿ ಘೋಷಣೆಯನ್ನು ಮಾಡಿಸಿದನು.
ಪುಷ್ಕರಸ್ಯ ತು ವಾಕ್ಯೇನ ತಸ್ಯ ವಿದ್ವೇಷಣೇನ ಚ |
ಪೌರಾ ನಾಸ್ಮಿನ್ ಧರ್ಮಕಾರಂ ಕೃತವಂತೋ ಯುಧಿಷ್ಠಿರ ॥10॥
ಯುಧಿಷ್ಠಿರನೇ, ಪುಷ್ಕರನ ವಾಕ್ಯವನ್ನು ಮತ್ತು ಅವನಿಗೆ ನಳನ ಮೇಲೆ ಇದ್ದ ದ್ವೇಷವನ್ನು ಗಮನಿಸಿ ಪೌರರು ಯಾರೂ ನಳನಿಗೆ ಧರ್ಮಯುಕ್ತವಾದ ಸತ್ಕಾರವನ್ನು ಮಾಡಲಿಲ್ಲ.
ಸ ತದಾ ನಗರಾಭ್ಯಾಶೇ ಸತ್ಕಾರಾರ್ಹೋ ನ ಸತ್ಕೃತಃ |
ತ್ರಿರಾತ್ರಮುಷಿತೋ ರಾಜಾ ಜಲಮಾತ್ರೇಣ ವರ್ತಯನ್ ॥11॥
ಕ್ಷುಧಯಾ ಪೀಡ್ಯಮಾನಸ್ತು ನಳೋ ಬಹುತಿಥೇಽಹನಿ |
ಅಪಶ್ಯಚ್ಛಕುನಾನ್ ಕಾಂಶ್ಚಿದ್ಧಿರಣ್ಯಸದೃಶಚ್ಛದಾನ್॥12॥
ಸತ್ಕಾರಾರ್ಹನಾದ ರಾಜನು ನಗರಸಮೀಪದಲ್ಲಿ ಮೂರು ದಿನಗಳು ಇದ್ದು ಸತ್ಕೃತನಾಗದೆ ಹಸಿವಿನಿಂದ ಬಳಲಿ ಕೇವಲ ನೀರನ್ನು ಕುಡಿದು ಮೂರು ರಾತ್ರಿಗಳನ್ನು ಕಳೆದನು. ಅನಂತರ ಎಷ್ಟೋದಿನಗಳಾದ ಮೇಲೆ ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಪಕ್ಷಿಗಳನ್ನು ನೋಡಿದನು.
ಸ ಚಿಂತಯಾಮಾಸ ತದಾ ನಿಷಧಾಧಿಪತಿರ್ಬಲೀ |
ಅಸ್ತಿ ಭಕ್ಷ್ಯೋ ಮಮಾದ್ಯಾಪಿ ವಸು ಚೇದಂ ಭವಿಷ್ಯತಿ ॥13॥
ನಿಷಧಾಧಿಪತಿಯೂ ಬಲಿಷ್ಠನೂ ಆದ ಆ ರಾಜನು ಈ ದಿನ ನನಗೆ ಭಕ್ಷದ ಯೋಗವಿದೆ. ಈ ಪಕ್ಷಿಗಳ ರೆಕ್ಕೆಯಲ್ಲಿರುವ ಚಿನ್ನವು ನನಗೆ ಧನವೂ ಆಗುವುದು ಎಂದು ಚಿಂತಿಸಿದನು.
ತತಸ್ತಾನುತ್ತರೀಯೇಣ ವಾಸಸಾ ಸಮವಾಸ್ತೃಣೋತ್ |
ತಸ್ಯೋತ್ತರೀಯಮಾದಾಯ ಸರ್ವೇ ಜಗ್ಮುರ್ವಿಹಾಯಸಾ ॥14॥
ಉತ್ಪತಂತಃ ಖಗಾಸ್ತೇ ತು ವಾಕ್ಯಮಾಹುಸ್ತದಾ ನಳಮ್ |
ದೃಷ್ಟ್ವಾ ದಿಗ್ವಾಸಸಂ ಭೂಮೌ ಸ್ಥಿತಂ ದೀನಮಧೋಮುಖಮ್ ॥15॥
ವಯಮಕ್ಷಾಃ ಸುದುರ್ಬುದ್ಧೇ ತವ ವಾಸೋ ಜಿಹೀರ್ಷವಃ |
ಆಗತಾ ನ ಹಿ ನಃ ಪ್ರೀತಿಃ ಸವಾಸಸಿ ಗತೇ ತ್ವಯಿ ॥16॥
ಅನಂತರ ಅವನು ತನ್ನ ಏಕವಸ್ತ್ರದಲ್ಲಿ ಉತ್ತರೀಯವಾಗಿ ಮಾಡಿಕೊಂಡಿದ್ದ ಭಾಗವನ್ನು ಆ ಪಕ್ಷಿಗಳ ಮೇಲೆ ಬೀಸಿದನು. ಆ ಪಕ್ಷಿಗಳು ಅವನ ಉತ್ತರೀಯವನ್ನು ಎಳೆದುಕೊಂಡು ಆಕಾಶಮಾರ್ಗದಲ್ಲಿ ಹಾರಿಹೋದವು. ಹಾಗೆ ಹಾರಿಹೋಗುತ್ತಾ ಆ ಪಕ್ಷಿಗಳು

ಭೂಮಿಯಲ್ಲಿ ದಿಗಂಬರನಾಗಿ ಮುಖವನ್ನು ಕೆಳಗೆಮಾಡಿ ದೀನನಾಗಿ ನಿಂತ ನಳನನ್ನು ನೋಡಿ ದುರ್ಬುದ್ಧಿಯೇ ನಾವೇ ದಾಳಗಳು. ನಿನ್ನ ವಸ್ತ್ರವನ್ನು ಅಪಹರಿಸುವ ಇಚ್ಛೆಯಿಂದ ಬಂದಿದ್ದೆವು. ನೀನು ವಸ್ತ್ರ ಸಹಿತನಾಗಿ ಕಾಡಿಗೆ ಹೋದರೆ ನಮಗೆ ಸಂತೋಷವಿಲ್ಲ ಎಂದು ಹೇಳಿದವು.
ಬೃಹದಶ್ವಃ
ತಾನ್ ಸಮೀಕ್ಷ್ಯ ಗತಾನಕ್ಷಾನಾತ್ಮಾನಂ ಚ ವಿವಾಸಸಮ್ |
ಪುಣ್ಯಶ್ಲೋಕಸ್ತದಾ ರಾಜಾ ದಮಯಂತೀಮಥಾಬ್ರವೀತ್ ॥17॥
ಯೇಷಾಂ ಪ್ರಕೋಪಾದೈಶ್ವರ್ಯಾತ್ ಪ್ರಚ್ಯುತೋಽಹಮನಿಂದಿತೇ |
ಪ್ರಾಣಯಾತ್ರಾಂ ನ ವಿಂದೇ ಚ ದುಃಖಿತಃ ಕ್ಷುಧಿತೋಽರ್ದಿತಃ ॥18॥
ಯೇಷಾಂ ಕೃತೇ ನ ಸತ್ಕಾರಮಕುರ್ವನ್ ಮಮ ನೈಷಧಾಃ |
ತ ಇಮೇ ಶಕುನಾ ಭೂತ್ವಾ ವಾಸಶ್ಚಾಪಹರಂತಿ ಮೇ ॥19॥
ಆ ಅಕ್ಷಗಳು ಹಾಗೆ ಹೋದುದನ್ನೂ ತಾನು ದಿಗಂಬರನಾಗಿರುವುದನ್ನೂ ಗಮನಿಸಿದ ಪುಣ್ಯಶ್ಲೋಕನಾದ ರಾಜನು ದಮಯಂತಿಯನ್ನು ಅನಿಂದಿತೆಯೇ, ಯಾರ ಪ್ರಕೋಪದಿಂದ ನಾನು ಐಶ್ಚರ್ಯದಿಂದ ಭ್ರಂಶಿತನಾಗಿದ್ದೇನೋ ಮತ್ತು ಹಸಿವಿನಿಂದ ಬಳಲಿ ದುಃಖಿತನಾಗಿ ಜೀವನೋಪಾಯದ ಅಹಾರವನ್ನು ಹೊಂದುತ್ತಿಲ್ಲವೋ ಮತ್ತು ಯಾರಸಲುವಾಗಿ ನನ್ನ ಪ್ರಜೆಗಳು ನನಗೆ ಸತ್ಕಾರವನ್ನು ಮಾಡಲಿಲ್ಲವೋ ಅಂತಹ ಈ ದಾಳಗಳು ಪಕ್ಷಿಗಳಾಗಿ ನನ್ನ ವಸ್ತ್ರವನ್ನು ಅಪಹರಿಸುತ್ತಿವೆ ಎಂದು ಹೇಳಿದನು.
ವೈಷಮ್ಯಂ ಪರಮಂ ಪ್ರಾಪ್ತೋ ದುಃಖಿತೋ ಗತಚೇತನಃ |
ಭರ್ತಾ ತೇ ಸನ್ನಿಬೋಧೇದಂ ವಚನಂ ಹಿತಮಾತ್ಮನಃ ॥20॥
ನಿನ್ನ ಪತಿಯು ಪರಮವಿಷಮಸ್ಥಿತಿಯನ್ನು ಹೊಂದಿ ದುಃಖಿತನಾಗಿ ಪ್ರಜ್ಞೆಯನ್ನು ಕಳೆದುಕೊಂಡಿದ್ದಾನೆ. ನಿನಗೆ ಹಿತವಾದ ಈ ಮಾತುಗಳನ್ನು ಕೇಳಿ ತಿಳಿ.
ಏತೇ ಗಚ್ಛಂತಿ ಬಹವಃ ಪಂಥಾನೋ ದಕ್ಷಿಣಾಪಥಮ್ |
ಅವಂತೀಮೃಕ್ಷವಂತಂ ಚ ಸಮತಿಕ್ರಮ್ಯ ಪರ್ವತಮ್ ॥21॥
ಈ ಅನೇಕ ದಾರಿಹೋಕರು ಅವಂತಿದೇಶವನ್ನು ಋಕ್ಷವಂತ ಪರ್ವತವನ್ನು ದಾಟಿ ದಕ್ಷಿಣಾಪಥಕ್ಕೆ ಹೋಗುತ್ತಿದ್ದಾರೆ.
ಏಷ ವಿಂಧ್ಯೋ ಮಹಾಶೈಲಃ ಪಯೋಷ್ಣೀ ಚ ಸಮುದ್ರಗಾ |
ಆಶ್ರಮಾಶ್ಚ ಮಹರ್ಷೀಣಾಂ ಬಹುಮೂಲಫಲಾನ್ವಿತಾಃ ॥22॥
ಇದು ವಿಂಧ್ಯಮಹಾಪರ್ವತ. ಇದು ಸಮುದ್ರವನ್ನು ಸೇರುವ ಪಯೋಷ್ಣೀನದಿ. ಇವು ಅನೇಕ ಹಣ್ಣು ಮತ್ತು ಗೆಣಸುಗಳಿರುವ ಮಹರ್ಷಿಗಳ ಆಶ್ರಮಗಳು.
ಏಷ ಪಂಥಾ ವಿದರ್ಭಾಣಾಮೇಷ ಗಚ್ಛತಿ ಕೋಸಲಾನ್ |
ತತಃ ಪರಮದೇಶೋಽಯಂ ದಕ್ಷಿಣೋ ದಕ್ಷಿಣಾಪಥಃ ॥23॥
ಇದು ವಿದರ್ಭಕ್ಕೆ ಹೋಗುವ ಮಾರ್ಗ. ಈ ಮಾರ್ಗವು ಕೋಸಲ ದೇಶಕ್ಕೆ ಹೋಗುತ್ತದೆ. ಅಲ್ಲಿಂದ ದಕ್ಷಿಣಕ್ಕೆ ಇರುವುದು ಪರಮ ಶ್ರೇಷ್ಠವಾದ ದಕ್ಷಿಣಾಪಥ.(ಎಂದು ಹೇಳಿದನು,)
ತತಃ ಸಾ ಬಾಷ್ಪಕಲಯಾ ವಾಚಾ ದುಃಖೇನ ಕರ್ಶಿತಾ |
ಉವಾಚ ದಮಯಂತೀ ತಂ ನೈಷಧಂ ಕರುಣಂ ವಚಃ ॥24॥
ಆಗ ಆ ದಮಯಂತಿಯು ದುಃಖದಿಂದ ಕರ್ಶಿತಳಾಗಿ ಕಣ್ಣುಗಳಲ್ಲಿ ನೀರುಗಳನ್ನು ತುಂಬಿಕೊಂಡು ನಳನನ್ನು ಕುರಿತು ಕರುಣಾಮಯವಾದ ಮಾತುಗಳನ್ನು ಆಡಿದಳು.
ಉದ್ವೇಪತೇ ಮೇ ಹೃದಯಂ ಸೀದಂತ್ಯಂಗಾನಿ ಸರ್ವಶಃ |
ತವ ಪಾರ್ಥಿವ ಸಂಕಲ್ಪಂ ಚಿಂತಯಂತ್ಯಾಃ ಪುನಃ ಪುನಃ ॥25॥
ರಾಜನೇ! ನಿನ್ನ ಸಂಕಲ್ಪವನ್ನು ಪುನಃಪುನಃ ಚಿಂತಿಸಿ ನನಗೆ ಹೃದಯವು ನಡುಗುತ್ತಿದೆ. ನನ್ನ ಅವಯವಗಳು ಎಲ್ಲ ಕಡೆಗಳಲ್ಲಿ ಕುಸಿಯುತ್ತಿವೆ.
ಹೃತರಾಜ್ಯಂ ಹೃತದ್ರವ್ಯಂ ವಿವಸ್ತ್ರಂ ಕ್ಷುಚ್ಛ್ರಮಾನ್ವಿತಮ್ |
ಕಥಮುತ್ಸೃಜ್ಯ ಗಚ್ಛೇಯಮಹಂ ತ್ವಾಂ ವಿಜನೇ ವನೇ ॥26॥
ರಾಜ್ಯವನ್ನು ಕಳೆದುಕೊಂಡು ದ್ರವ್ಯವನ್ನು ಕಳೆದುಕೊಂಡು ವಸ್ತ್ರವನ್ನು ಕಳೆದುಕೊಂಡು ಹಸಿವು ಮತ್ತು ಶ್ರಮದಿಂದ ಕೂಡಿರುವ ನಿನ್ನನ್ನು ನಿರ್ಜನವಾದ ಕಾಡಿನಲ್ಲಿ ಬಿಟ್ಟು ನಾನು ಹೇಗೆ ಹೋಗಲಿ?
ಶ್ರಾಂತಸ್ಯ ತೇ ಕ್ಷುಧಾರ್ತಸ್ಯ ಚಿಂತಯಾನಸ್ಯ ತತ್ಸುಖಮ್ |
ವನೇ ಘೋರೇ ಮಹಾರಾಜ ಶಮಯಿಷ್ಯಾಮಿ ತೇ ಕ್ಲಮಮ್ ॥27॥
ಹಸಿವೆಯಿಂದ ಬಳಲಿ ದಣಿದು ಹಿಂದಿನ ಸುಖವನ್ನು ಸ್ಮರಿಸುವ ನಿನಗೆ ಎಲೈ ಮಹಾರಾಜನೇ! ನಾನು ಈ ಘೋರವಾದ ವನದಲ್ಲಿ ನಿನ್ನ ಆಯಾಸವನ್ನು ಪರಿಹರಿಸುವೆನು.
ನಚ ಭಾರ್ಯಾಸಮಂ ಕಿಂಚಿದ್ ವಿದ್ಯತೇ ಭೈಷಜಂ ಮತಮ್ |
ನಿತ್ಯಂ ಹಿ ಸರ್ವದುಃಖೇಷು ಸತ್ಯಮೇತದ್ ಬ್ರವೀಮಿ ತೇ ॥28॥
ಎಲ್ಲ ದುಃಖಗಳಲ್ಲಿಯೂ ಭಾರ್ಯೆಗೆ ಸಮಾನವಾದ ಇನ್ನೊಂದು ಔಷಧವಿಲ್ಲವೆಂದು ಎಲ್ಲ ಸಜ್ಜನರಿಗೂ ಅಭಿಪ್ರೇತವಾಗಿದೆ. ಈ ಮಾತು ಸತ್ಯವೆಂದು ನಿನಗೆ ಹೇಳುತ್ತಿದ್ದೇನೆ.
ನಳ

ಏವಮೇತದ್ಯಥಾಽಽತ್ಥ ತ್ವಂ ದಮಯಂತಿ ಸುಮಧ್ಯಮೇ |
ನಾಸ್ತಿ ಭಾರ್ಯಾಸಮಂ ಮಿತ್ರಂ ನರಸ್ಯಾರ್ತಸ್ಯ ಭೇಷಜಮ್ ||29||
ಸುಮಧ್ಯಮೆಯಾದ ದಮಯಂತಿಯೇ, ನೀನು ಹೇಳುತ್ತಿರುವಂತೆಯೇ ಎಲ್ಲವೂ ಸರಿ. ದುಃಖಿತನಾದ ಮನುಷ್ಯನಿಗೆ ಭಾರ್ಯೆಗೆ ಸಮಾನರಾದ ಮಿತ್ರರೂಪವಾದ ಔಷಧವು ಯಾವುದೂ ಇಲ್ಲ.
ನ ಚಾಹಂ ತ್ಯಕ್ತುಕಾಮಸ್ತ್ವಂ ಕಿಮೇತದ್ ಭೀರು ಶಂಕಸೇ |
ತ್ಯಜೇಯಮಹಮಾತ್ಮಾನಂ ನ ಚೈವ ತ್ವಾಮನಿಂದಿತೇ ||30||
ನಾನು ನಿನ್ನನ್ನು ತೊರೆಯುವ ಅಪೇಕ್ಷೆಯುಳ್ಳವನಲ್ಲ. ಭೀರುವೆ ಏಕೆ ಹೀಗೆ ಶಂಕಿಸುತ್ತಿದ್ದೀಯೆ? ನಾನು ನನ್ನನ್ನು ಬೇಕಾದರೂ ತೊರೆಯಬಹುದು ಆದರೆ ಅನಿಂದಿತೆಯೇ ನಿನ್ನನ್ನು ಮಾತ್ರ ತೊರೆಯಲಾರೆ.
ದಮಯಂತೀ
ಯದಿ ಮಾಂ ತ್ವಂ ಮಹಾರಾಜ ನ ವಿಹಾತುಮಿಹೇಚ್ಛಸಿ |
ತತ್ಕಿಮರ್ಥಂ ವಿದರ್ಭಾಣಾಂ ಪಂಥಾಃ ಸಮುಪದಿಶ್ಯತೇ ||31||
ಮಹಾರಾಜನೇ! ನೀನು ನನ್ನನ್ನು ಪರಿತ್ಯಾಗಮಾಡಲು ಬಯಸದಿದ್ದರೆ ವಿದರ್ಭದೇಶದ ಮಾರ್ಗವನ್ನು ಏಕೆ ಉಪದೇಶಮಾಡುತ್ತಿದ್ದೀಯೆ?
ಅವೈಮಿ ಚಾಹಂ ನೃಪತೇ ನತು ಮಾಂ ತ್ಯಕ್ತುಮರ್ಹಸಿ |
ಚೇತಸಾ ತ್ವಪಹೃಷ್ಟೇನ ಮಾಂ ತ್ಯಜೇಥಾ ಮಹೀಪತೇ ||32||
ರಾಜನೇ ನೀನು ನನ್ನನ್ನು ಪರಿತ್ಯಜಿಸಲಾರೆ ಎಂದು ನಾನು ತಿಳಿದಿದ್ದೇನೆ. ಮಹೀಪತಿಯೇ ದುಃಖಕ್ಕೆ ಒಳಗಾದ ಮನಸ್ಸಿನಿಂದ ನೀನು ನನ್ನನ್ನು ತ್ಯಜಿಸಬಹುದು. (ಎಂದು ಶಂಕಿಸುತ್ತೇನೆ.)
ಪಂಥಾನಂ ಹಿ ಮಮಾಭೀಕ್ಷ್ಣಮಾಖ್ಯಾಸಿ ನರಸತ್ತಮ |
ಅತೋ ನಿಮಿತ್ತಂ ಶೋಕಂ ಮೇ ವರ್ಧಯಸ್ಯಮರಪ್ರಭ ||33||
ಎಲೈ ನರಶ್ರೇಷ್ಠನೇ ನನಗೆ ಸತತವಾಗಿ ನೀನು ದಾರಿಗಳನ್ನು ಹೇಳುತ್ತಿದ್ದೀಯೆ. ದೇವತಾ ಸದೃಶನೇ, ಆ ನಿಮಿತ್ತದಿಂದ ನನ್ನ ದುಃಖವನ್ನು ಹೆಚ್ಚಿಸುತ್ತಿದ್ದೀಯೆ.
ಯದಿ ಚಾಯಮಭಿಪ್ರಾಯಸ್ತವ ರಾಜನ್ ಭವಿಷ್ಯತಿ |
ಸಹಿತಾವೇವ ಗಚ್ಛಾವೋ ವಿದರ್ಭಾನ್ ಯದಿ ಮನ್ಯಸೇ ||34||
ರಾಜನೇ! ನಿನಗೆ ಹೀಗೆ ಅಭಿಪ್ರಾಯವಿರುವುದಾದರೆ ನಿನ್ನ ಸಮ್ಮತಿಯಿದ್ದರೆ ನಾವಿಬ್ಬರೂ ಜೊತೆಯಲ್ಲಿಯೇ ವಿದರ್ಭಕ್ಕೆ ಹೋಗೋಣ.
ತತಃ ಸ ರಾಜಾ ತ್ವಾಂ ದೃಷ್ಟ್ವಾ ಪೂಜಯಿಷ್ಯತಿ ಮಾನದ |
ತೇನ ತ್ವಂ ಪೂಜಿತೋ ರಾಜನ್ ಸುಖಂ ವತ್ಸ್ಯಸಿ ನೋ ಗೃಹೇ ||33||
ಎಲೈ ಮಾನದನೇ! ಅನಂತರ ಆ ರಾಜನು ನಿನ್ನನ್ನು ನೋಡಿ ಪೂಜಿಸುವನು. ರಾಜನೇ! ಅವನಿಂದ ಪೂಜಿತನಾಗಿ ನಮ್ಮ ಮನೆಯಲ್ಲಿ ಸುಖವಾಗಿ ವಾಸಮಾಡುವಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಪಂಚಾಶೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ಮೂರನೆಯ ಅಧ್ಯಾಯ ಮುಗಿಯಿತು.
*****
ಐವತ್ನಾಲ್ಕನೆಯ ಅಧ್ಯಾಯ
(ನಿದ್ರಿಸುತ್ತಿದ್ದ ದಮಯಂತಿಯನ್ನು ಬಿಟ್ಟು ನಳನ ಗಮನ.)
ಬೃಹದಶ್ವಃ
ಇತ್ಯುಕ್ತಃ ಸ ತದಾ ದೇವ್ಯಾ ನಳೋ ವಚನಮಬ್ರವೀತ್ ||1||
ದಮಯಂತಿಯಿಂದ ಹೀಗೆ ಹೇಳಲ್ಪಟ್ಟ ನಳನು ಆಗ ಅವಳನ್ನು ಕುರಿತು ಮಾತನಾಡಿದನು.
ಯಥಾ ರಾಜ್ಯಂ ಪಿತುಸ್ತೇ ತತ್ ತಥಾ ಮಮ ನ ಸಂಶಯಃ |
ನತು ತತ್ರ ಗಮಿಷ್ಯಾಮಿ ವಿಷಮಸ್ಥಃ ಕಥಂಚನ ||2||
ಕಥಂ ಸಮೃದ್ಧೋ ಗತ್ವಾಽಹಂ ತವ ಹರ್ಷವಿವರ್ಧನಃ |
ಕೃಪಣೋಽದ್ಯ ಗಮಿಷ್ಯಾಮಿ ತವ ಶೋಕವಿವರ್ಧನಃ ||3||
ನಿನ್ನ ತಂದೆಯ ರಾಜ್ಯವು ನಿನ್ನ ತಂದೆಗೆ ಹೇಗೆ ಸೇರಿದುದೋ ಹಾಗೆಯೇ ನನಗೂ ಸೇರಿದುದು. ಇದರಲ್ಲಿ ಸಂಶಯವಿಲ್ಲ. ಆದರೆ ಸಂಕಟಕ್ಕೆ ಒಳಗಾದ ನಾನು ಮಾತ್ರ ಅಲ್ಲಿಗೆ ಹೋಗುವುದಿಲ್ಲ. ಐಶ್ವರ್ಯಸಂಪನ್ನನಾಗಿ ನಿನಗೆ ಸಂತೋಷವುಂಟುಮಾಡುವವನಾಗಿ ಹಿಂದೆ ಹೋಗಿದ್ದ ನಾನು ಈಗ ಕೃಪಣನಾಗಿ ನಿನ್ನ ಶೋಕವನ್ನು ಹೆಚ್ಚಿಸುತ್ತಾ ಹೇಗೆ ಅಲ್ಲಿಗೆ ಹೋಗಲಿ?
ಇತಿ ಬ್ರುವನ್ನಳೋ ರಾಜಾ ದಮಯಂತೀಂ ಪುನಃ ಪುನಃ |
ಸಾಂತ್ವಯಾಮಾಸ ಕಲ್ಯಾಣೀಂ ವಾಸಸೋಽರ್ಧೇನ ಸಂವೃತಃ ||4||
ಹೀಗೆ ಹೇಳುತ್ತಾ ನಳನು ಅರ್ಧವಸ್ತ್ರದಿಂದ ಆವೃತನಾಗಿ ಪುನಃಪುನಃ ಕಲ್ಯಾಣಿಯಾದ ಆ ದಮಯಂತಿಯನ್ನು ಸಮಾಧಾನಮಾಡಿದನು.
ತಾವೇಕವಸ್ತ್ರಸಂವೀತಾವಟಮಾನಾವಿತಸ್ತತಃ |
ಕ್ಷುತ್ಪಿಪಾಸಾಪರಿಶ್ರಾಂತೌ ಸಭಾಂ ಕಾಂಚಿದುಪೇಯತುಃ ||5||

ಒಂದೇ ವಸ್ತ್ರವನ್ನು ಇಬ್ಬರೂ ಸುತ್ತಿಕೊಂಡು ಕಾಡಿನಲ್ಲಿ ಅಲ್ಲಿಂದಿಲ್ಲಿಗೆ ಸಂಚರಿಸುತ್ತಾ ಹಸಿವು ಮತ್ತು ನೀರಡಿಕೆಗಳಿಂದ ಬಳಲಿ ಅವರು ಅಲ್ಲಿ ಒಂದು ಮಂಟಪದ ಸಮೀಪಕ್ಕೆ ಬಂದರು.
ತಾಂ ಸಭಾಮುಪಸಂಪ್ರಾಪ್ಯ ವನಮಧ್ಯೇ ಖಿಲೀಕೃತಾಮ್ |
ವೈದರ್ಭ್ಯಾ ಸಹಿತೋ ರಾಜಾ ನಿಷಸಾದ ಮಹೀತಳೇ ॥6॥
ಸ ವೈ ವಿವಸೊತ್ರೀ ವಿಕಚೋ ಮಲಿನಃ ಪಾಂಸುಗುಂಠಿತಃ |
ದಮಯಂತ್ಯಾ ಸಹ ಶ್ರಾಂತಃ ಸುಷ್ವಾಪ ಧರಣೀತಳೇ ॥7॥
ದಮಯಂತಿಯಿಂದ ಸಹಿತನಾದ ನಳನು ಕಾಡಿನ ಮಧ್ಯದಲ್ಲಿ ಆ ಮುರಿದ ಮಂಟಪಕ್ಕೆ ಬಂದು ನೆಲದ ಮೇಲೆ ಕುಳಿತುಕೊಂಡನು. ವಿವಸ್ತ್ರನಾಗಿ ತಲೆಯ ಕೂದಲುಗಳನ್ನು ಕೆದರಿಕೊಂಡು ಮೈಯೆಲ್ಲಾ ಕೊಳೆಯಾಗಿ ಧೂಳಿನಿಂದ ಆವೃತನಾಗಿದ್ದ ಅವನು ದಣಿದು ದಮಯಂತಿಯ ಜೊತೆಯಲ್ಲಿ ಭೂಮಿಯ ಮೇಲೆ ಮಲಗಿ ನಿದ್ರಿಸಿದನು.
ದಮಯಂತ್ಯಪಿ ಕಲ್ಯಾಣೀ ನಿದ್ರಯಾಽಪಹೃತಾ ತತಃ |
ಸಹಸಾ ದುಃಖಮಾಸಾದ್ಯ ಸುಕುಮಾರೀ ತಪಸ್ವಿನೀ ॥8॥
ಕಲ್ಯಾಣಿಯಾದ ದಮಯಂತಿಯೂ ಸಹ ಸುಕುಮಾರಿಯಾಗಿ ಬೆಳೆದ ಅವಳು ಈಗ ಇದ್ದಕ್ಕಿಂದ್ದಂತೆ ದುಃಖವನ್ನು ಹೊಂದಿ ಶೋಚನೀಯಳಾಗಿ ಅಲ್ಲಿ ನಿದ್ರಾವಶಳಾದಳು.
ಸುಪ್ತಾಯಾಂ ದಮಯಂತ್ಯಾಂ ತು ನಳೋ ರಾಜಾ ವಿಶಾಂಪತೇ |
ಶೋಕೋನ್ಮಥಿತಚಿತ್ತಃ ಸನ್ ನ ಸ್ಮ ಶೇತೇ ಯಥಾ ಪುರಾ ॥9॥
ಎಲೈ ರಾಜನೇ ದಮಯಂತಿಯು ನಿದ್ರಿಸಿದ ಮೇಲೆ ನಳರಾಜನು ದುಃಖದಿಂದ ವ್ಯಗ್ರವಾದ ಮನಸ್ಸುಳ್ಳವನಾಗಿ ಮೊದಲಿನಂತೆ ನಿದ್ರೆಯನ್ನು ಮಾಡಲಿಲ್ಲ.
ಸ ತದ್ರಾಜ್ಯಾಪಹರಣಂ ಸುಹೃತ್ತ್ಯಾಗಂ ಚ ಸರ್ವಶಃ |
ವನೇ ಚ ತಂ ಪರಿಧ್ವಂಸಂ ಪ್ರೇಕ್ಷ್ಯ ಚಿಂತಾಮುಪೇಯಿವಾನ್ ॥10॥
ಅವನು ತನ್ನ ರಾಜ್ಯಾಪಹರಣವನ್ನೂ ಬಂದುತ್ಯಾಗವನ್ನೂ ಎಲ್ಲಾ ಐಶ್ಚರ್ಯತ್ಯಾಗವನ್ನೂ ಕಾಡಿನಲ್ಲಿ ಉಂಟಾದ ಈ ವಿನಾಶವನ್ನೂ ನೋಡಿ ಚಿಂತಾಕ್ರಾಂತನಾದನು.
ಕಿಂ ನು ಮೇ ಸ್ಯಾದಿದಂ ಕೃತ್ವಾ ಕಿಂ ನು ಮೇ ಸ್ಯಾದಕುರ್ವತಃ |
ಕಿಂ ನು ಮೇ ಮರಣಂ ಶ್ರೇಯಃ ಪರಿತ್ಯಾಗೋ ಜನಸ್ಯ ವಾ ॥11॥
ನಾನು ಹೀಗೆ ಮಾಡಿದರೆ ಏನಾಗುತ್ತದೆ ನಾನು ಹೀಗೆ ಮಾಡದಿದ್ದರೆ ಏನಾಗುತ್ತದೆ? ನಾನು ಮರಣ ಹೊಂದುವುದೇ ಒಳ್ಳೆಯದೇ ಅಥವಾ ದಮಯಂತಿಯ ಪರಿತ್ಯಾಗಮಾಡುವುದು ಒಳ್ಳೆಯದೆ?
ಮಾಮಿಯಂ ಹ್ಯನುರಕ್ತಾ ವೈ ದುಃಖಮಾಪ್ನೋತಿ ಮತ್ಕೃತೇ |
ಮದ್ವಿಹೀನಾ ತ್ವಿಯಂ ಗಚ್ಛೇತ್ ಕದಾಚಿತ್ ಸ್ವಜನಂ ಪ್ರತಿ ॥12॥
ನನ್ನಲ್ಲಿ ಅನುರಕ್ತಳಾದ ಇವಳು ನನ್ನ ನಿಮಿತ್ತದಿಂದ ದುಃಖವನ್ನು ಅನುಭವಿಸುತ್ತಾಳೆ. ನಾನಿಲ್ಲದಿದ್ದರೆ ಇವಳು ಒಂದುಪಕ್ಷ ತನ್ನ ತವರು ಮನೆಗಾದರೂ ಹೋಗಬಹುದು.
ಮಯಾ ನಿಃಸಂಶಯಂ ದುಃಖಮಿಯಂ ಪ್ರಾಪ್ಸ್ಯತ್ಯನಿಂದಿತಾ |
ಉತ್ಸರ್ಗೇ ಸಂಶಯಃ ಸ್ಯಾತ್ತು ವಿಂದೇತಾಪಿ ಸುಖಂ ಕ್ವಚಿತ್ ॥13॥
ನನ್ನ ಜೊತೆಯಲ್ಲಿ ಇದ್ದರೆ ಅನಿಂದಿತಳಾದ ಇವಳು ದುಃಖವನ್ನು ಹೊಂದುವ ವಿಷಯದಲ್ಲಿ ಸಂಶಯವಿಲ್ಲ. ನಾನು ಪರಿತ್ಯಾಗವನ್ನು ಮಾಡಿದರೆ ದುಃಖವನ್ನು ಹೊಂದುವುದರಲ್ಲಿ ಸಂಶಯವು ಉಂಟಾಗುತ್ತದೆ. ಒಂದು ಪಕ್ಷದಲ್ಲಿ ಸುಖವನ್ನೂ ಹೊಂದಬಹುದು.
ಸ ವಿನಿಶ್ಚಿತ್ಯ ಬಹುಧಾ ವಿಚಾರ್ಯ ಚ ಪುನಃ ಪುನಃ |
ಉತ್ಸರ್ಗೇಽಮನ್ಯತ ಶ್ರೇಯೋ ದಮಯಂತ್ಯಾ ನರಾಧಿಪಃ ॥14॥
ಆ ರಾಜನು ಪುನಃಪುನಃ ವಿಚಾರಮಾಡಿ ಒಂದು ನಿಶ್ಚಯಕ್ಕೆ ಬಂದನು. ದಮಯಂತಿಯನ್ನು ಪರಿತ್ಯಾಗಮಾಡುವುದೇ ಶ್ರೇಷ್ಠವೆಂದು ನಿರ್ದರಿಸಿದನು.
ಸೋಽವಸ್ತ್ರತಾಮಾತ್ಮನಶ್ಚ ತಸ್ಯಾಶ್ಚಾಪ್ಯೇಕವಸ್ತ್ರತಾಮ್ |
ಚಿಂತಯಿತ್ವಾಽಧ್ಯಗಾದ್ ರಾಜಾ ವಸತ್ರಸ್ಯಾರ್ಧಸ್ಯಾವಕರ್ತನಮ್ ॥15॥
ಆ ರಾಜನು ತನ್ನ ಶರೀರದ ಮೇಲೆ ವಸ್ತ್ರವಿಲ್ಲದಿರುವುದನ್ನೂ ದಮಯಂತಿಯ ಶರೀರದ ಮೇಲೆ ಒಂದೇ ವಸ್ತ್ರವಿರುವುದನ್ನೂ ನೋಡಿ ವಸ್ತ್ರವನ್ನು ಅರ್ಧಕ್ಕೆ ಕತ್ತರಿಸಲು ನಿಶ್ಚಯಿಸಿದನು.
ಕಥಂ ವಾಸೋಽವಕರ್ತೇಯಂ ನ ಚ ಬುದ್ಧ್ಯೇತ ಮೇ ಪ್ರಿಯಾ |
ಚಿಂತ್ಯೈವಂ ನೈಷಧೋ ರಾಜಾ ಸಭಾಂ ಪರ್ಯಚರನ್ನೃಪಃ ॥16॥
ನಾನು ವಸ್ತ್ರವನ್ನು ಹೇಗೆ ಕತ್ತರಿಸಲಿ? ನನ್ನ ಪ್ರಿಯೆಯು ಎಚ್ಚರ ಗೊಳ್ಳಬಾರದು ಹೀಗೆ ಚಿಂತಿಸಿ ನೈಷಧರಾಜನು ಆ ಮಂಟಪದಲ್ಲಿ ತಿರುಗಾಡಿದನು.
ಪರಿಧಾವನ್ನಥ ನಳ ಇತಶ್ಚೇತಶ್ಚ ಭಾರತ |
ಆಸಸಾದ ಸಭೋದ್ದೇಶೇ ವಿಕೋಶಂ ಖಡ್ಗಮುತ್ತಮಮ್ ॥17॥
ಎಲೈ ಭಾರತನೇ! ನಳನು ಆ ಮಂಟಪದಲ್ಲಿ ಅಲ್ಲಿಂದಿಲ್ಲಿಗೆ ತಿರುಗಾಡುತ್ತಾ ಮಂಟಪ ಒಂದು ಎತ್ತರ ಪ್ರದೇಶದಲ್ಲಿ ಒರೆಯಿಂದ ತೆಗೆದ ಒಂದು ಶ್ರೇಷ್ಠವಾದ ಖಡ್ಗವು ಬಿದ್ದಿರುವುದನ್ನು ನೋಡಿದನು.

ತೇನಾರ್ಧಂ ವಾಸಸಶ್ಛಿತ್ತ್ವಾ ನಿವಸ್ಯ ಚ ಪರಂತಪಃ |
ಸುಪ್ತಾಮುತ್ಸೃಜ್ಯ ವೈದರ್ಭೀಂ ಪ್ರಾದ್ರವದ್ ಗತಚೇತನಃ ॥18॥
ಪರಂತಪನಾದ ರಾಜನು ಆ ಖಡ್ಗದಿಂದ ವಸ್ತ್ರವನ್ನು ಅರ್ಧಕ್ಕೆ ಕತ್ತರಿಸಿ ಅದನ್ನು ತಾನು ಉಟ್ಟುಕೊಂಡು ನಿದ್ರಿಸುತ್ತಿದ್ದ ದಮಯಂತಿಯನ್ನು ಬಿಟ್ಟು ಪ್ರಜ್ಞಾಹೀನನಾಗಿ ಓಡಿದನು.
ತತೋ ನಿಬದ್ಧಹೃದಯಃ ಪುನರಾಗಮ್ಯ ತಾಂ ಸಭಾಮ್ |
ದಮಯಂತೀಂ ತಥಾ ದೃಷ್ಟ್ವಾ ರುರೋದ ಸ ನರಾಧಿಪಃ ॥19॥
ಅನಂತರ ಅವಳಲ್ಲಿ ನೆಟ್ಟ ಮನಸ್ಸುಳ್ಳವನಾಗಿ ಪುನಃ ಆ ಮಂಟಪಕ್ಕೆ ಬಂದು ನಿದ್ರಿಸುತ್ತಿದ್ದ ದಮಯಂತಿಯನ್ನು ನೋಡಿ ರಾಜನು ರೋದಿಸಿದನು.
ಯಾಂ ನ ವಾಯುರ್ನ ಚಾದಿತ್ಯಃ ಪುರಾ ಪಶ್ಯತಿ ಮೇ ಪ್ರಿಯಾಮ್ |
ಸೇಯಮದ್ಯ ಸಭಾಮಧ್ಯೇ ಶೇತೇ ಭೂಮಾವನಾಥವತ್ ॥20॥
ಯಾವ ನನ್ನ ಪ್ರಿಯೆಯನ್ನು ವಾಯುವಾಗಲೀ ಆದಿತ್ಯನಾಗಲೀ ಹಿಂದೆ ನೋಡಿರಲಿಲ್ಲವೋ ಅಂತಹ ಇವಳು ಈ ಮಂಟಪದ ಮಧ್ಯದಲ್ಲಿ ನೆಲದ ಮೇಲೆ ಅನಾಥಳಂತೆ ಮಲಗಿದ್ದಾಳೆ.
ಇಯಂ ವಸ್ತ್ರಾವಕರ್ತೇನ ಸಂವೀತಾ ಚಾರುಹಾಸಿನೀ |
ಉನ್ಮತ್ತೇವ ಮಯಾ ಹೀನಾ ಕಥಂ ಬುದ್ಧ್ವಾ ಭವಿಷ್ಯತಿ ॥21॥
ಅರ್ಧವಸ್ತ್ರದಿಂದ ಆವೃತಳಾದ ಈ ಚಾರುಹಾಸಿನಿಯು ನಾನಿಲ್ಲದೆ ಎಚ್ಚರಗೊಂಡು ಹುಚ್ಚಳಂತೆ ಹೇಗಿರಬಹುದು?
ಕಥಮೇಕಾಕಿನೀ ಭೈಮೀ ಮಯಾ ವಿರಹಿತಾ ಶುಭಾ |
ಚರಿಷ್ಯತಿ ವನೇ ಘೋರೇ ಮೃಗವ್ಯಾಲಸಮಾಕುಲೇ ॥22॥
ಏಕಾಕಿನಿಯೂ ಭೀಮರಾಜಕುಮಾರಿಯೂ ಶುಭಳೂ ಆದ ಇವಳು ನಾನಿಲ್ಲದೆ ಈ ಘೋರವಾದ ಮೃಗಸರ್ಪಗಳು ತುಂಬಿರುವ ಕಾಡಿನಲ್ಲಿ ಹೇಗೆ ಸಂಚರಿಸುವಳು?
ಬೃಹದಶ್ವಃ
ಗತ್ವಾ ಗತ್ವಾ ನಳೋ ರಾಜಾ ಮುಹುರೇತಿ ಸಭಾಂ ಪ್ರತಿ |
ಆಕೃಷ್ಯಮಾಣಃ ಕಲಿನಾ ಸೌಹೃದೇನಾಪಕೃಷ್ಯತೇ ॥23॥
ರಾಜನಾದ ನಳನು ಪುನಃಪುನಃ ಹೋಗಿ ಪುನಃಪುನಃ ಮಂಟಪಕ್ಕೆ ಹಿಂದಿರುಗಿ ಬರುತ್ತಾನೆ. ಒಂದುಕಡೆ ಕಲಿಯಿಂದ ಮಂಟಪದ ಹೊರಗೆ ಎಳೆಯಲ್ಪಡುತ್ತಾನೆ. ದಮಯಂತಿಯ ಮೇಲಿನ ಪ್ರೀತಿಯಿಂದ ಪುನಃ ಒಳಗೆ ಎಳೆಯಲ್ಪಡುತ್ತಾನೆ.
ದ್ವಿಧೇವ ಹೃದಯಂ ತಸ್ಯ ದುಃಖಿತಸ್ಯಾಭವತ್ ತದಾ |
ದೋಲೇವ ಮುಹುರಾಯಾತಿ ಯಾತಿ ಚೈವ ಸಭಾಂ ಮುಹುಃ ॥24॥
ದುಃಖಿತನಾದ ಆ ನಳನ ಹೃದಯವು ಆಗ ಎರಡು ಭಾಗವಾದಂತಾಯಿತು.ತೊಟ್ಟಿಲಿನಂತೆ ಅವನು ಆ ಮಂಟಪದ ಹತ್ತಿರ ಬರುತ್ತಾನೆ. ಮತ್ತು ಪುನಃ ದೂರಹೋಗುತ್ತಾನೆ.
ಸೋಽಪಕೃಷ್ಟಸ್ತು ಕಲಿನಾ ಮೋಹಿತಃ ಪ್ರಾದ್ರವನ್ ನಳಃ |
ಸುಪ್ತಾಮುತ್ಸೃಜ್ಯ ತಾಂ ಭಾರ್ಯಾಂ ವಿಲಪ್ಯ ಕರುಣಂ ಬಹು ॥25॥
ಕೊನೆಗೆ ಕಲಿಯಿಂದ ಎಳೆಯಲ್ಪಟ್ಟ ಆ ನಳನು ಮೋಹಿತನಾಗಿ ಬಹಳ ಕರುಣಾಜನಕವಾಗಿ ವಿಲಾಪವನ್ನು ಮಾಡಿ ನಿದ್ರಿಸುತ್ತಿದ್ದ ತನ್ನ ಪತ್ನಿಯನ್ನು ಬಿಟ್ಟು ಅಲ್ಲಿಂದ ಓಡಿದನು.
ನಷ್ಟಾತ್ಮಾ ಕಲಿನಾಽಽವಿಷ್ಟಃ ತತ್ತದ್ವಿಗಣಯನ್ ಮುಹುಃ |
ಜಗಾಮೈವ ವನೇ ಶೂನ್ಯೇ ಭಾರ್ಯಾಮುತ್ಸೃಜ್ಯ ದುಃಖಿತಃ ॥26॥
ಕಲಿಯಿಂದ ಆವಿಷ್ಟನಾಗಿ ತನ್ನ ಮನಸ್ಸಿನ ನಿಯಂತ್ರಣವನ್ನೇ ಕಳೆದುಕೊಂಡು ಹಿಂದೆ ನಡೆದ ಘಟನೆಗಳನ್ನು ಮತ್ತೆ ಮತ್ತೆ ಎಣಿಸುತ್ತಾ ದುಃಖದಿಂದ ಕೂಡಿದವನಾಗಿ ನಿರ್ಜನವಾದ ಕಾಡಿನಲ್ಲಿ ತನ್ನ ಭಾರ್ಯೆಯನ್ನು ಬಿಟ್ಟು ಅವನು ಹೊರಟೇ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಃಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಐವತ್ತೈದನೆಯ ಅಧ್ಯಾಯ
(ದಮಯಂತಿಯ ರೋದನ. ಅಜಗರದಿಂದ ಅವಳ ಗ್ರಹಣ. ವ್ಯಾಧನಿಂದ ಮೋಚನ ಮತ್ತು ವ್ಯಾಧನ ಮರಣ.)
ಬೃಹದಶ್ವಃ
ಅಪಕ್ರಾಂತೇ ನಳೇ ರಾಜನ್ ದಮಯಂತೀ ಗತಕ್ಲಮಾ |
ಅಬುಧ್ಯತ ವರಾರೋಹಾ ಸಂತ್ರಸ್ತಾ ವಿಜನೇ ವನೇ ॥1॥
ಎಲೈ ರಾಜನೇ! ನಳನು ಹೊರಟು ಹೋದಮೇಲೆ ಸುಂದರಿಯಾದ ದಮಯಂತಿಯು ಆಯಾಸ ಪರಿಹಾರಗೊಂಡವಳಾಗಿ ಎಚ್ಚರಗೊಂಡು ನಿರ್ಜನವಾದ ವನದಲ್ಲಿ ಹೆದರಿದಳು.
ಭರ್ತಾರಂ ಸಾ ತ್ವಪಶ್ಯಂತೀ ಶೋಕದುಃಖಸಮನ್ವಿತಾ |
ಪ್ರಾಕ್ರೋಶದುಚ್ಚೈಃ ಸಂತ್ರಸ್ತಾ ಹಾ ರಾಜನ್ನಿತಿ ಭಾರತ ॥2॥
ಎಲೈ ಭಾರತನೇ! ಅವಳು ತನ್ನ ಪತಿಯನ್ನು ಕಾಣದೆ ದುಃಖಶೋಕಸಮನ್ವಿತಳಾಗಿ ಹೆದರಿಕೆಯಿಂದ ಹಾ ರಾಜನೇ! ಎಂದು ಗಟ್ಟಿಯಾಗಿ

ಕಿರುಚಿದಳು.
ಹಾ ನಾಥ ಹಾ ಮಹಾರಾಜ ಹಾ ಸ್ವಾಮಿನ್ ಕಿಂ ಜಹಾಸಿ ಮಾಮ್|
ಹಾ ಹತಾಽಸ್ಮಿ ವಿನಷ್ಟಾಽಸ್ಮಿ ಭೀತಾಽಸ್ಮಿ ವಿಜನೇ ವನೇ ॥3॥
ಹಾ ನಾಥನೇ, ಹಾ ಮಹಾರಾಜನೇ ಹಾ ಸ್ವಾಮಿಯೇ ಏತಕ್ಕೆ ನನ್ನನ್ನು ಬಿಡುತ್ತಿದ್ದೀಯೆ? ಅಯ್ಯೋ ನಾನು ಸತ್ತೆ. ನಾನು ನಾಶವನ್ನು ಹೊಂದಿದೆ. ಈ ನಿರ್ಜನವಾದ ಅರಣ್ಯದಲ್ಲಿ ಭೀತಳಾಗಿದ್ದೇನೆ.
ನನು ನಾಮ ಮಹಾರಾಜ ಧರ್ಮಜ್ಞ ಇತಿ ವಿಶ್ರುತಃ |
ಕಥಂ ತಥಾವಿಧಸ್ತ್ವಂ ಹಿ ಸುಪ್ತಾಮುತ್ಸೃಜ್ಯ ಮಾಂ ಗತಃ ॥4॥
ಎಲೈ ಮಹಾರಾಜನೇ, ನೀನು ಧರ್ಮಜ್ಞನೆಂದು ಪ್ರಖ್ಯಾತನಾಗಿದ್ದೀಯಷ್ಟೆ? ಅಂತಹ ನೀನು ನಿದ್ರಿಸುತ್ತಿದ್ದ ನನ್ನನ್ನು ಬಿಟ್ಟು ಹೇಗೆ ಹೋದೆ?
ಕಥಮುತ್ಸೃಜ್ಯ ಗಂತಾಸಿ ವಶ್ಯಾಂ ಭಾರ್ಯಾಮನುವ್ರತಾಮ್ |
ವಿಶೇಷತೋ ನಾಪಕೃತಃ ಪರೇಣಾಪಕೃತೇ ಸತಿ ॥5॥
ನನ್ನಿಂದ ನಿನಗೆ ಯಾವ ಅಪಕಾರವೂ ಇಲ್ಲದೆ ಬೇರೆಯವರಿಂದ ಅಪಕೃತನಾದ ನೀನು ನಿನಗೆ ಅಧೀನಳೂ ನೀನು ಹೇಳಿದಂತೆ ನಡೆಯುವವಳೂ ಆದ ಪತ್ನಿಯಾದ ನನ್ನನ್ನು ತೊರೆದು ಹೇಗೆ ಹೋದೆ?
ವದಸ್ವ ತಾ ಗಿರಃ ಸತ್ಯಾಃ ಸಾಂಪ್ರತಂ ಚ ಮಯಾ ಸಹ |
ಶಕ್ಯಸೇ ತಾ ಗಿರಃ ಸತ್ಯಾಃ ಕರ್ತುಂ ಮಯಿ ನರೇಶ್ವರ |
ಯಾಸ್ತ್ವಯಾ ಲೋಕಪಾಲಾನಾಂ ಸನ್ನಿಧೌ ಕಥಿತಾಃ ಪುರಾ ॥6॥
ಎಲೈ ನರೇಶ್ವರನೇ ನೀನು ಹಿಂದೆ ಲೋಕಪಾಲಕರ ಸನ್ನಿಧಿಯಲ್ಲಿ ಯಾವ ಮಾತುಗಳನ್ನು ಆಡಿದ್ದೀಯೋ ಆ ಮಾತುಗಳನ್ನು ನನ್ನ ಜೊತೆಯಲ್ಲಿ ಇನ್ನೊಮ್ಮೆ ಆಡು. ನರೇಶ್ವರನೇ, ನನ್ನ ವಿಷಯದಲ್ಲಿ ಆಡಿದ ನಿನ್ನ ಮಾತುಗಳನ್ನು ಸತ್ಯವನ್ನಾಗಿ ಮಾಡಲು ನೀನು ಸಮರ್ಥನಾಗಿದ್ದೀಯೆ.
ಪರ್ಯಾಪ್ತಃ ಪರಿಹಾಸೋಽಯಮೇತಾವಾನ್ ಪುರುಷರ್ಷಭ |
ಭೀತಾಽಹಮಸ್ಮಿ ದುರ್ಧರ್ಷ ದರ್ಶಯಾತ್ಮಾನಮೀಶ್ವರ ॥7॥
ಪುರುಷಶ್ರೇಷ್ಠನೇ, ಇಷ್ಟು ವಿನೋದವು ಸಾಕು. ನಾನು ಹೆದರಿದ್ದೇನೆ. ಎಲೈ ದುರ್ಧರ್ಷನೇ ಪ್ರಭುವೇ ನಿನ್ನನ್ನು ನನಗೆ ತೋರಿಸು.
ದೃಶ್ಯಸೇ ದೃಶ್ಯಸೇ ರಾಜನ್ ಏಷ ತಿಷ್ಠಸಿ ನೈಷಧ |
ಆವಾರ್ಯ ಗುಲ್ಮೈರಾತ್ಮಾನಂ ಕಿಂ ಮಾಂ ನ ಪ್ರತಿಭಾಷಸೇ ॥8॥
ಎಲೈ ರಾಜನೇ, ಕಾಣುತ್ತಿದ್ದೀಯೆ ಕಾಣುತ್ತಿದ್ದೀಯೆ ನೈಷಧನೇ, ಲತೆಗಳಿಂದ ನಿನ್ನನ್ನು ಮುಚ್ಚಿಕೊಂಡು ಇಲ್ಲಿಯೇ ನಿಂತಿದ್ದೀಯೆ. ನನಗೆ ಏಕೆ ಉತ್ತರವನ್ನು ಕೊಡುವುದಿಲ್ಲ?
ನೃಶಂಸಂ ಬತ ರಾಜೇಂದ್ರ ಯನ್ಮಾಮೇವಂಗತಾಮಿಹ |
ವಿಲಪಂತೀಂ ಸಮಾಲಿಂಗ್ಯ ನಾಶ್ವಾಸಯಸಿ ಪಾರ್ಥಿವ ॥9॥
ಎಲೈ ರಾಜೇಂದ್ರನೇ ಇಂತಹ ದುರವಸ್ಥೆಗೆ ತುತ್ತಾಗಿ ವಿಲಾಪಮಾಡುತ್ತಿರುವ ನನ್ನನ್ನು ಆಲಿಂಗಿಸಿ ಸಮಾಧಾನ ಪಡಿಸದೆ ಇರುವುದು ಬಹಳ ಕ್ರೂರವಾದುದು.
ನ ಶೋಚಾಮ್ಯಹಮಾತ್ಮಾನಂ ನ ಚಾನ್ಯದಪಿ ಕಿಂಚನ |
ಕಥಂ ನು ಭವಿತಾಸ್ಯೇಕ ಇತಿ ತ್ವಾಂ ನೃಪ ಶೋಚಯೇ ॥10॥
ಎಲೈ ರಾಜನೇ ನನ್ನ ವಿಷಯದಲ್ಲಿ ನಾನು ಏನೂ ಶೋಕಪಡುತ್ತಿಲ್ಲ. ಅಥವಾ ಬೇರೆ ಚಿಂತೆಯೂ ಇಲ್ಲ. ನನ್ನನ್ನು ಬಿಟ್ಟು ನೀನು ಒಬ್ಬನೇ ಹೇಗೆ ಇರುತ್ತೀಯೆ ಎಂದು ನಿನ್ನನ್ನೇ ಕುರಿತು ಶೋಕಿಸುತ್ತಿದ್ದೇನೆ.
ಕಥಂ ನು ರಾಜಂಸ್ತೃಷಿತಃ ಕ್ಷುಧಿತಃ ಶ್ರಮಕರ್ಶಿತಃ |
ಸಾಯಾಹ್ನೇ ವೃಕ್ಷಮೂಲೇಷು ಮಾಮಪಶ್ಯನ್ ನಿವತ್ಸ್ಯಸಿ ॥11॥
ರಾಜನೇ ಹಸಿದು ನೀರಡಿಕೆಯಿಂದಲೂ ಬಳಲಿಕೆಯಿಂದಲೂ ಶ್ರಮದಿಂದಲೂ ಬಳಲಿ ಸಾಯಂಕಾಲದಲ್ಲಿ ನನ್ನನ್ನು ಕಾಣದೆ ನೀನು ಒಂದು ವೃಕ್ಷ ಮೂಲದಲ್ಲಿ ಕುಳಿತು ಹೇಗೆ ವಾಸಿಸುವಿ?
ಬೃಹದಶ್ವಃ
ಏವಂ ಸಾಽತೀವಶೋಕಾರ್ತಾ ಪ್ರದೀಪ್ತೇವ ಚ ಮನ್ಯುನಾ |
ಇತಶ್ಚೇತಶ್ಚ ರುದತೀ ಪರ್ಯಧಾವತ ದುಃಖಿತಾ ॥12॥
ಹೀಗೆ ಬಹಳ ಶೋಕಕ್ಕೆ ಒಳಗಾಗಿ ಸಿಟ್ಟಿನಿಂದ ಉರಿಯುತ್ತಿರುವಂತೆ ದುಃಖಿತಳಾದ ದಮಯಂತಿಯು ಅಳುತ್ತಾ ಅಲ್ಲಿಂದಿಲ್ಲಿಗೆ ಓಡಿದಳು.
ಮುಹುರುತ್ಪತತೇ ಬಾಲಾ ಮುಹುಃ ಪತತಿ ವಿಹ್ವಲಾ |
ಮುಹುರಾಲೀಯತೇ ಭೀತಾ ಮುಹುಃ ಕ್ರೋಶತಿ ರೋದಿತಿ ॥13॥
ಬಾಲೆಯು ಮತ್ತೆ ಏಳುತ್ತಾಳೆ. ದುಃಖದಿಂದ ವಿಹ್ವಲಳಾಗಿ ಮತ್ತೆ ಬೀಳುತ್ತಾಳೆ. ಭಯದಿಂದ ಮತ್ತೆ ಅಡಗಿಕೊಳ್ಳುತ್ತಾಳೆ ಮತ್ತು ಮತ್ತೆ ಮತ್ತೆ ಕಿರುಚುತ್ತಾಳೆ ಮತ್ತು ಅಳುತ್ತಾಳೆ.
ಸಾಽತೀವ ಶೋಕಸಂತಪ್ತಾ ಮುಹುರ್ನಿಶ್ವಸ್ಯ ವಿಹ್ವಲಾ |
ಉವಾಚ ಭೈಮೀ ನಿಷ್ಕ್ರಮ್ಯ ರೋದಮಾನಾ ಪತಿವ್ರತಾ ॥14॥
ಬಹಳ ಶೋಕಸಂತಪ್ತಳಾದ ಪತಿವ್ರತೆಯಾದ ಆ ದಮಯಂತಿಯು ದುಃಖದಿಂದ ವಿಹ್ವಲಳಾಗಿ ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತಾ ಆ ಮಂಟಪದಿಂದ ಹೊರಗೆ ಬಂದು ಅಳುತ್ತಾ ಮಾತನಾಡಿದಳು.

ಯಸ್ಯಾಭಿಶಾಪಾದ್ ದುಃಖಾರ್ತೋ ದುಃಖಂ ವಿಂದತಿ ನೈಷಧಃ |
ತಸ್ಯ ಭೂತಸ್ಯತದ್ದುಃಖಾದ್ ದುಃಖಮಭ್ಯಧಿಕಂ ಭವೇತ್ ॥15॥
ಅಪಾಪಚೇತಸಂ ಪಾಪೋ ಯ ಏವಂ ಕೃತವಾನ್ ನಳಮ್ |
ತಸ್ಮಾದ್ ದುಃಖತರಂ ಪ್ರಾಪ್ಯ ಜೀವತ್ವಸುಖಜೀವಿಕಾಮ್ ॥16॥
ಯಾರ ಅಭಿಶಾಪದಿಂದ ನಳನು ದುಃಖಾರ್ತನಾಗಿ ಇಷ್ಟು ದುಃಖವನ್ನು ಅನುಭವಿಸುತ್ತಿದ್ದಾನೋ ಆ ವ್ಯಕ್ತಿಗೆ ನಳನ ದುಃಖಕ್ಕಿಂತ ಅಧಿಕವಾದ ದುಃಖವಾಗಲಿ. ಪಾಪಬುದ್ಧಿಯಿಲ್ಲದ ನಳನನ್ನು ಯಾವ ಪಾಪಿಯು ಇಂತಹ ದುರವಸ್ಥೆಗೆ ತಂದನೋ ಅವನು ಇದಕ್ಕಿಂತ ಹೆಚ್ಚಿನ ದುಃಖವನ್ನು ಹೊಂದಿ ದುಃಖಜೀವನವನ್ನು ನಡೆಸಲಿ.
ಏವಂ ತು ವಿಲಪಂತೀ ಸಾ ರಾಜ್ಞೋ ಭಾರ್ಯಾ ಮಹಾತ್ಮನಃ |
ಅನ್ವೇಷತಿ ಸ್ಮ ಭರ್ತಾರಂ ವನೇ ಶ್ವಾಪದಸೇವಿತೇ ॥17॥
ಹೀಗೆ ವಿಲಾಪವನ್ನು ಮಾಡುತ್ತಾ ಮಹಾತ್ಮನಾದ ನಳಮಹಾರಾಜನ ಭಾರ್ಯೆಯಾದ ದಮಯಂತಿಯು ಕ್ರೂರಮೃಗಗಳಿಂದ ಸೇವಿತವಾದ ಆ ಕಾಡಿನಲ್ಲಿ ತನ್ನ ಪತಿಯನ್ನು ಹುಡುಕಿದಳು.
ಉನ್ಮತ್ತವದ್ ಭೀಮಸುತಾ ವಿಲಪಂತೀ ತತಸ್ತತಃ |
ಹಾಹಾ ರಾಜನ್ನಿತಿ ಮುಹುರಿತಶ್ಚೇತಶ್ಚ ಧಾವತಿ ॥18॥
ಭೀಮಸುತೆಯಾದ ದಮಯಂತಿಯು ಹುಚ್ಚಿಯಂತೆ ಮಾತನಾಡುತ್ತಾ ಅಯ್ಯೋ ರಾಜನೇ ಎಂದು ಮತ್ತೆ ಮತ್ತೆ ಕಿರುಚುತ್ತಾ ಇಲ್ಲಿಂದಲ್ಲಿಗೆ ಓಡಾಡಿದಳು.
ಸಂಶುಷ್ಯಮಾಣಾಮತ್ಯರ್ಥಂ ಕುರರೀಮಿವ ವಾಶತೀಮ್ |
ಕರುಣಂ ಬಹು ಶೋಚಂತೀಂ ವಿಲಪಂತೀಂ ಸುಮಧ್ಯಮಾಮ್ ॥19॥
ಸಹಸೈವಾನವದ್ಯಾಂಗೀಮಭ್ಯಾಶೇ ಪರಿವರ್ತಿನೀಮ್ |
ಜಗ್ರಾಹಾಜಗರೋ ಗ್ರಾಹೋ ಮಹಾಕಾಯಃ ಕ್ಷುಧಾಽನ್ವಿತಃ ॥20॥
ಹೀಗೆ ಒಣಗಿ ಹೋಗುತ್ತಿದ್ದ ಮತ್ತು ಕುರರಿಯಂತೆ ಕಿರುಚುತ್ತಿದ್ದ ಕರುಣಾಜನಕವಾಗಿ ಬಹಳವಾಗಿ ಶೋಕಪಡುತ್ತಿದ್ದ ಬಾಯಿಂದ ಬಹಳ ಮಾತನಾಡುತ್ತಿದ್ದ ತನ್ನ ಸಮೀಪದಲ್ಲೇ ಇದ್ದ ಅನವದ್ಯಾಂಗಿಯಾದ ಆ ಸುಂದರಿಯನ್ನು ದೊಡ್ಡ ಶರೀರವನ್ನು ಹೊಂದಿದ್ದ ಒಂದು ಅಜಗರವು ಹಸಿವೆಯಿಂದ ಕೂಡಿದುದಾಗಿ ಇದ್ದಕ್ಕಿದ್ದಂತೆ ಹಿಡಿಯಿತು.
ಸಾ ಗೃಹ್ಯಮಾಣಾ ಗ್ರಾಹೇಣ ಶೋಕೇನ ಚ ಪರಾಜಿತಾ |
ನಾತ್ಮಾನಂ ಶೋಚತಿ ತಥಾ ಯಥಾ ಶೋಚತಿ ನೈಷಧಮ್ ॥21॥
ಶೋಕದಿಂದ ಪರಾಜಿತಳಾಗಿ ಹೆಬ್ಬಾವಿನಿಂದ ಹಿಡಿಯಲ್ಪಟ್ಟಿದ್ದರೂ ದಮಯಂತಿಯು ನಳನನ್ನು ಕುರಿತು ಶೋಕಪಟ್ಟಳೇ ಹೊರತು ತನ್ನನ್ನು ಕುರಿತು ಹಾಗೆ ಶೋಕವನ್ನು ಪಡಲಿಲ್ಲ.
ಹಾ ನಾಥ ಮಾಮಿಹ ವನೇ ಗೃಹ್ಯಮಾಣಾಮನಾಗಸೀಮ್ |
ಗ್ರಾಹೇಣಾನೇನ ವಿಪಿನೇ ಕಿಮರ್ಥಂ ನಾಭಿಧಾವಸಿ ॥22॥
ಅಯ್ಯೋ ಸ್ವಾಮಿಯೇ ಈ ಕಾಡಿನಲ್ಲಿ ನಿರಪರಾಧಿಯಾಗಿ ನನ್ನನ್ನು ಈ ಅಜಗರವು ಹಿಡಿಯುತ್ತಿರುವಾಗ ನೀನು ಏಕೆ ನನ್ನ ರಕ್ಷಣೆಗೆ ಓಡಿಬರುತ್ತಿಲ್ಲ?
ಕಥಂ ಭವಾನ್ ಜಗಾಮಾಥ ಮಾಮಿಹೋತ್ಸೃಜ್ಯ ನೈಷಧ |
ಕಥಂ ಭವಿಷ್ಯಸಿ ಪುನರ್ಮಾಮನುಸ್ಮೃತ್ಯ ನೈಷಧ |
ಶಾಪಾನ್ಮುಕ್ತಃ ಪುನರ್ಲಬ್ಧ್ವಾ ಬುದ್ಧಿಂ ಚೇತೋ ಧನಾನಿ ಚ ॥23॥
ನೈಷಧನೇ ನನ್ನನ್ನು ಇಲ್ಲಿ ತೊರೆದು ನೀನು ಹೇಗೆ ಹೊರಟುಹೋದೆ? ನೀನು ಶಾಪದಿಂದ ಮುಕ್ತನಾಗಿ ಪುನಃ ನಿನ್ನ ಪ್ರಜ್ಞೆಯನ್ನು ಮನಸ್ಸನ್ನು ಮತ್ತು ಸಂಪತ್ತನ್ನು ಪಡೆದ ಮೇಲೆ ನನ್ನನ್ನು ಸ್ಮರಿಸಿ ಹೇಗೆ ಇರುತ್ತೀಯೆ?
ಶ್ರಾಂತಸ್ಯ ತೇ ಕ್ಷುಧಾರ್ತಸ್ಯ ಪರಿಗ್ಲಾನಸ್ಯ ನೈಷಧ |
ಕಾ ಶ್ರಮಂ ರಾಜಶಾರ್ದೂಲ ನಾಶಯಿಷ್ಯತಿ ತೇಽನಘ ॥24॥
ಎಲೈ ನೈಷಧನೇ ಹಸಿವೆಯಿಂದ ಬಳಲಿ ಸೊರಗಿದ ನಿನಗೆ ಎಲೈ ರಾಜಶಾರ್ದೂಲನೇ ಎಲೈ ಅನಘನೇ ಯಾವಳು ನಿನ್ನ ಶ್ರಮವನ್ನು ಪರಿಹಾರಮಾಡುತ್ತಾಳೆ?
ತಾಮಕಸ್ಮಾನ್ಮೃಗವ್ಯಾಧೋ ವಿಚರನ್ ಗಹನೇ ವನೇ |
ಆಕ್ರಂದತೀಮುಪಶ್ರುತ್ಯ ಜವೇನಾಭಿಸಸಾರ ಹ ॥25॥
ಆ ದಟ್ಟವಾದ ಕಾಡಿನಲ್ಲಿ ಆಕಸ್ಮಿಕವಾಗಿ ಸಂಚರಿಸುತ್ತಿದ್ದ ಒಬ್ಬ ಮೃಗವ್ಯಾಧನು ಹೀಗೆ ಗೋಳಾಡುತ್ತಿದ್ದ ದಮಯಂತಿಯ ಮಾತುಗಳನ್ನು ಕೇಳಿ ಶೀಘ್ರವಾಗಿ ಅವಳ ಬಳಿಗೆ ಬಂದನು.
ತಾಂ ಸ ದೃಷ್ಟ್ವಾ ತಥಾ ಗ್ರಸ್ತಾಮುರಗೇಣಾಯತೇಕ್ಷಣಾಮ್ |
ತ್ವರಮಾಣೋ ಮೃಗವ್ಯಾಧಃ ಸಂಚರನ್ ಗಹನೇ ವನೇ ॥26॥
ಸಮತಿಕ್ರಮ್ಯ ವೇಗೇನ ಸತ್ವರಃ ಸ ವನೇಚರಃ |
ಮುಖತಃ ಪಾಟಯಾಮಾಸ ಶಸ್ತ್ರೇಣ ನಿಶಿತೇನ ಚ ॥27॥
ಆ ವಿಶಾಲನೇತ್ರೆಯು ಹಾಗೆ ಸರ್ಪದಿಂದ ಹಿಡಿಯಲ್ಪಟ್ಟಿದ್ದನ್ನು ನೋಡಿದ ಆ ಮೃಗವ್ಯಾಧನು ಆ ದಟ್ಟವಾದ ಅರಣ್ಯದಲ್ಲಿ ಶೀಘ್ರವಾಗಿ ಆ ಸರ್ಪವನ್ನು ಮೆಟ್ಟಿ ತನ್ನ ಬಳಿಯಲ್ಲಿದ್ದ ಹರಿತವಾದ ಶಸ್ತ್ರದಿಂದ ಅದರ ಬಾಯಿಯನ್ನು ಸೀಳಿದನು.
ನಿರ್ವಿಚೇಷ್ಟಂ ಭುಜಂಗಂ ತಂ ವಿಶಸ್ಯ ಮೃಗಜೀವಿಕಃ |

ಮೋಕ್ಷಯಿತ್ವಾ ಚ ತಾಂ ವ್ಯಾಧಃ ಪ್ರಕ್ಷಾಲ್ಯ ಸಲಿಲೇನ ಚ |
ಸಮಾಶ್ವಾಸ್ಯ ಕೃತಾಹಾರಾಮಥ ಪಪ್ರಚ್ಛ ಭಾರತ ॥28॥
ಎಲೈ ಭಾರತನೇ ಆ ಮೃಗಜೀವನವನ್ನು ಮಾಡುವ ವ್ಯಾಧನು ಆ ಸರ್ಪವನ್ನು ಸೀಳಿಹಾಕಿ ನಿಷ್ಕ್ರಿಯವನ್ನಾಗಿ ಮಾಡಿ ದಮಯಂತಿಯನ್ನು ಬಿಡಿಸಿ ತಾನು ನೀರಿನಿಂದ ತೊಳೆದುಕೊಂಡು ದಮಯಂತಿಗೆ ಸಮಾದಾನವನ್ನು ಮಾಡಿ ಅವಳು ಸ್ವಲ್ಪ ಆಹಾರವನ್ನು ಸ್ವೀಕರಿಸಿದ ಮೇಲೆ ಅವಳನ್ನು ಕೇಳಿದನು.
ಕಸ್ಯ ತ್ವಂ ಮೃಗಶಾವಾಕ್ಷಿ ಕಥಂ ಚಾಸ್ಯಾಗತಾ ವನಮ್ |
ಕಥಂ ಚೇದಂ ಮಹತ್ ಕೃಚ್ಛ್ರಂ ಪ್ರಾಪ್ತವತ್ಯಸಿ ಭಾಮಿನಿ ॥29॥
ಎಲೌ ಹರಿಣಾಕ್ಷಿಯೇ ನೀನು ಯಾರಿಗೆ ಸೇರಿದವಳು? ಈ ಕಾಡಿಗೆ ಹೇಗೆ ಬಂದೆ? ಭಾಮಿನಿಯೇ ನಿನಗೆ ಇಂತಹ ದೊಡ್ಡ ಕಷ್ಟವು ಹೇಗೆ ಪ್ರಾಪ್ತವಾಯಿತು?
ಬೃಹದಶ್ವಃ
ದಮಯಂತೀ ತಥಾ ತೇನ ಪೃಚ್ಛ್ಯಮಾನಾ ವಿಶಾಂಪತೇ |
ಸರ್ವಮೇತದ್ಯಥಾವೃತ್ತಮಾಚಚಕ್ಷೇಽಸ್ಯ ಭಾರತ ॥30॥
ಎಲೈ ರಾಜನೇ ಭಾರತನೇ ಹಾಗೆ ಅವನಿಂದ ಕೇಳಲ್ಪಟ್ಟ ದಮಯಂತಿಯು ಅವನಿಗೆ ಎಲ್ಲಾ ವೃತ್ತಾಂತವನ್ನೂ ಯಥಾರ್ಥವಾಗಿ ಹೇಳಿದಳು.
ತಾಮರ್ಧವಸ್ತ್ರಸಂವೀತಾಂ ಪೀನಶ್ರೋಣಿಪಯೋಧರಾಮ್ |
ಸುಕುಮಾರಾನವದ್ಯಾಂಗೀಂ ಪೂರ್ಣಚಂದ್ರನಿಭಾನನಾಮ್ ॥31॥
ಮೃಣಾಳಪತ್ರನಯನಾಂ ತಥಾ ಮಧುರಭಾಷಿಣೀಮ್ |
ಲಕ್ಷಯಿತ್ವಾ ಮೃಗವ್ಯಾಧಃ ಕಾಮಸ್ಯ ವಶಮೇಯಿವಾನ್ ॥32॥
ಅರ್ಧವಸ್ತ್ರವನನ್ನು ಸುತ್ತಿಕೊಂಡಿದ್ದ ಪೀನವಾದ ನಿತಂಬ ಮತ್ತು ಸ್ತನಗಳನ್ನು ಹೊಂದಿದ್ದ ಸುಕುಮಾರವಾದ ಮತ್ತು ನಿರ್ದುಷ್ಟವಾದ ಅವಯವಗಳನ್ನು ಹೊಂದಿದ್ದ ಪೂರ್ಣಚಂದ್ರನಂತೆ ಮುಖವನ್ನು ಹೊಂದಿದ್ದ ಕಮಲಪತ್ರದಂತೆ ಆಯತ ಲೋಚನೆಯಾದ ಮಧುರಭಾಷಿಣಿಯಾದ ಅವಳನ್ನು ಗಮನಿಸಿ ಮೃಗವ್ಯಾಧನು ಕಾಮವಶನಾದನು.
ತಾಮಥ ಶ್ಲಕ್ಷ್ಣಯಾ ವಾಚಾ ಲುಬ್ಧಕೋ ಮೃದುಪೂರ್ವಯಾ |
ಸಾಂತ್ವಯಾಮಾಸ ಕಾಮಾರ್ತಃ ತದಬುಧ್ಯತ ಭಾಮಿನೀ ॥33॥
ಆನಂತರ ಆ ಬೇಡನು ಕಾಮಾರ್ತನಾಗಿ ಮೃದುಪೂರ್ವವಾದ ಮಧುರಮಾತುಗಳಿಂದ ಅವಳನ್ನು ಸಮಾಧಾನಗೊಳಿಸಿದನು. ದಮಯಂತಿಯು ಅವನ ಇಂಗಿತವನ್ನು ತಿಳಿದಳು.
ದಮಯಂತೀ ಚ ತಂ ದುಷ್ಟಂ ವಿಜ್ಞಾಯಾಥ ಪತಿವ್ರತಾ |
ತೀವ್ರರೋಷಸಮಾವಿಷ್ಟಾ ಪ್ರಜಜ್ವಾಲೇವ ಮನ್ಯುನಾ ॥34॥
ಪತಿವ್ರತೆಯಾದ ದಮಯಂತಿಯು ಅವನನ್ನು ದುಷ್ಟನೆಂದು ತಿಳಿದು ಆಗ ತೀವ್ರಕೋಪದಿಂದ ಕೂಡಿದವಳಾಗಿ ಸಿಟ್ಟಿನಿಂದ ಉರಿದಳು.
ಸ ತು ಪಾಪಮತಿಃ ಕ್ಷುದ್ರಃ ಪ್ರಧರ್ಷಯಿತುಮಾತುರಃ |
ದುರ್ಧರ್ಷಾಂ ತರ್ಕಯಾಮಾಸ ದೀಪ್ತಾಮಗ್ನಿಶಿಖಾಮಿವ ॥35॥
ಪಾಪಮತಿಯೂ ಕ್ಷುದ್ರಮತಿಯೂ ಆದ ಆ ವ್ಯಾಧನು ಅವಳ ಮೇಲೆ ಎರಗಲು ಆತುರನಾಗಿದ್ದರೂ. ಅವಳು ಉರಿಯುವ ಅಗ್ನಿಯ ಶಿಖೆಯಂತೆ ಮುಟ್ಟಲು ಅಸಾಧ್ಯಳೆಂದು ಚಿಂತಿಸಿದನು.
ದಮಯಂತೀ ತು ದುಃಖಾರ್ತಾ ಪತಿರಾಜ್ಯವಿನಾಕೃತಾ |
ಅತೀತವಾಕ್ಪಥೇ ಕಾಲೇ ಶಶಾಪೈನಂ ರುಷಾ ಕಿಲ ॥36॥
ಪತಿಯನ್ನೂ ರಾಜ್ಯವನ್ನೂ ಕಳೆದುಕೊಂಡು ದುಃಖದಿಂದ ಕೂಡಿದ್ದ ದಮಯಂತಿಯು ಮಾತುಗಳಿಗೂ ಮೀರಿದ ದುಃಖದ ಆ ಕಾಲದಲ್ಲಿ ಕೋಪದಿಂದ ಅವನಿಗೆ ಶಾಪವನ್ನು ಕೊಟ್ಟಳಷ್ಟೆ.
ಯಥಾಽಹಂ ನೈಷಧಾದನ್ಯಂ ಮನಸಾಽಪಿ ನ ಚಿಂತಯೇ |
ತಥಾಽಯಂ ಪತತಾಂ ಕ್ಷುದ್ರಃ ಪರಾಸುರ್ಮೃಗಜೀವನಃ ॥37॥
ನಾನು ನೈಷಧನನ್ನು ಬಿಟ್ಟು ಮನಸ್ಸಿನಲ್ಲಿಯೂ ಸಹ ಇನ್ನೊಬ್ಬನನ್ನು ಚಿಂತಿಸದಿದ್ದರೆ ಈ ಕ್ಷುದ್ರನಾದ ಮೃಗವ್ಯಾಧನು ಸತ್ತು ಬೀಳಲಿ.
ಬೃಹದಶ್ವಃ
ಉಕ್ತಮಾತ್ರೇ ತು ವಚನೇ ತಯಾ ಸ ಮೃಗಜೀವನಃ |
ವ್ಯಸುಃ ಪಪಾತ ಮೇದಿನ್ಯಾಮಗ್ನಿದಗ್ಧ ಇವ ದ್ರುಮಃ ॥38॥
ದಮಯಂತಿಯು ಆ ಮಾತುಗಳನ್ನು ಹೇಳುತ್ತಿರುವಂತೆಯೇ ಆ ಮೃಗಜೀವನನು ಅಗ್ನಿಯಲ್ಲಿ ದಗ್ಧವಾದ ವೃಕ್ಷದಂತೆ ಪ್ರಾಣವನ್ನು ಕಳೆದುಕೊಂಡು ಭೂಮಿಯಮೇಲೆ ಬಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
*****
ಐವತ್ತಾರನೆಯ ಅಧ್ಯಾಯ
(ಅರಣ್ಯದಲ್ಲಿ ದಮಯಂತಿಯ ವಿಲಾಪ. ತಾಪಸಾಶ್ರಮ ದರ್ಶನ.

ವರ್ತಕರ ಗುಂಪಿನಲ್ಲಿ ಪ್ರವೇಶ.)
ಬೃಹದಶ್ವಃ
ಸಾ ನಿಹತ್ಯ ಮೃಗವ್ಯಾಧಂ ಪ್ರತಸ್ಥೇ ಕಮಲೇಕ್ಷಣಾ |
ವನಂ ಪ್ರತಿಭಯಂ ಶೂನ್ಯಂ ಝಿಲ್ಲಿಕಾಗಣನಾದಿತಮ್ ||1||
ಸಿಂಹಾವ್ಯಾಘ್ರಮೃಗದ್ವೀಪಿವರಾಹರ್ಕ್ಷಮೃಗಾಯುತಮ್ |
ನಾನಾಪಕ್ಷಿಸಮಾಕೀರ್ಣಂ ಮ್ಲೇಚ್ಛತಸ್ಕರಸೇವಿತಮ್ ||2||
ಸಾಲವೇಣುಧರಾಶ್ವತ್ಥತಿಂದುಕೇಂದುಕಕಿಂಶುಕೈಃ |
ಅರ್ಜುನಾರಿಷ್ಟಸಂಛನ್ನಂ ಸ್ಯಂದನೈಶ್ಚ ಸಶಾಲ್ಮಲೈಃ ||3||
ಜಂಬ್ವಾಮ್ರಲೋಧ್ರಖದಿರಶಾಕವೇತ್ರಸಮಾಕುಲಮ್ |
ಕಾಶ್ಮರ್ಯಾಮಲಕಪ್ಲಕ್ಷಕದಂಬೋದುಂಬರಾವೃತಮ್ ||4||
ಕಮಲಲೋಚನೆಯಾದ ಅವಳು ಮೃಗವ್ಯಾಧನನ್ನು ಸಂಹರಿಸಿ ಮುಂದೆ ಹೊರಟಳು. ಆ ಕಾಡು ಭಯಂಕರವಾಗಿ ನಿರ್ಜನವಾಗಿ ಅನೇಕ ಕ್ರಿಮಿಕೀಟಗಳ ನಾದಗಳಿಂದ ಕೂಡಿದ್ದಿತು. ಸಿಂಹ ವ್ಯಾಘ್ರ ಜಿಂಕೆ ಹುಲಿ ವರಾಹ ಕರಡಿ ಮೊದಲಾದ ಮೃಗಗಳಿಂದ ಕೂಡಿದ್ದಿತು. ನಾನಾ ಪಕ್ಷಿಗಳಿಂದ ನಿಬಿಡವಾಗಿ ಮ್ಲೇಚ್ಛರಿಗೂ ಮತ್ತು ಚೋರರಿಗೂ ಅವಾಸಸ್ಥಾನವಾಗಿದ್ದಿತು. ತಾಲ ವೇಣು ಧರ ಅಶ್ವತ್ಥ ಇಂದುಕ ಕಿಂಶುಕ ಅರ್ಜುನ ಅರಿಷ್ಟ ಈ ವೃಕ್ಷಗಳಿಂದಲೂ ಚಂದನ ಶಾಲ್ಮಲ ಜಂಬು ಆಮ್ರ ಲೋಧ್ರ ಖದಿರ ಶಾಕ ವೇತ್ರ ಕಾಶ್ಮರಿ ಆಮಲಕ ಪ್ಲಕ್ಷ ಕದಂಬ ಉದುಂಬರ ಮೊದಲಾದ ವೃಕ್ಷಗಳಿಂದಲೂ ತುಂಬಿಹೋಗಿದ್ದಿತು.
ಬದರೀಬಿಲ್ವಸಂಛನ್ನಂ ನ್ಯಗ್ರೋಧೈಶ್ಚ ಸಮಾಕುಲಮ್ |
ಪ್ರಿಯಾಲತಾಲಖರ್ಜೂರಹರೀತಕವಿಭೀತಕೈಃ ||5||
ನಾನಾಧಾತುಶತೈರ್ನದ್ಧಾನ್ ವಿವಿಧಾನಪಿ ಚಾಚಲಾನ್ |
ಸಿಂಹರ್ಕ್ಷವ್ಯಾಘ್ರಸಂಘುಷ್ಟಾನ್ ದರೀಶ್ಚಾದ್ಭುತದರ್ಶನಾಃ ||6||
ನದೀಃ ಸರಾಂಸಿ ವಾಪೀಶ್ಚ ವಿವಿಧಾಂಶ್ಚ ಮೃಗದ್ವಿಜಾನ್ |
ಸುಬಹೂನ್ ಭೀಮರೂಪಾಂಶ್ಚ ಪಿಶಾಚೋರಗರಾಕ್ಷಸಾನ್ ||7||
ಪಲ್ವಲಾನಿ ತಟಾಕಾನಿ ಗಿರಿಕೂಟಾನಿ ಸರ್ವಶಃ |
ಸರಿತ್ಸರಾಂಸಿ ಚ ತಥಾ ದದರ್ಶಾದ್ಭುತದರ್ಶನಾನ್ ||8||
ಬದರಿ, ಬಿಲ್ವವೃಕ್ಷಗಳಿಂದಲೂ ನ್ಯಗ್ರೋಧವೃಕ್ಷಗಳಿಂದಲೂ ಪ್ರಿಯಾಲ ತಾಲ ಖರ್ಜೂರ ಹರೀತಕ ವಿಭೀತಕ ಮೊದಲಾದ ವೃಕ್ಷಗಳಿಂದಲೂ ಸಂಕುಲವಾಗಿದ್ದಿತು. ದಮಯಂತಿಯು ಅನೇಕ ಧಾತುಗಳಿಂದ ಕೂಡಿದ ವಿವಿಧ ಪರ್ವತಗಳನ್ನೂ ಅದ್ಭುತವಾಗಿ ತೋರುವ ಸಿಂಹ ಕರಡಿ ವ್ಯಾಘ್ರಗಳ ನಾದದಿಂದ ಕೂಡಿದ ಗುಹೆಗಳನ್ನೂ ನದೀ ಸರೋವರ ಭಾವಿಗಳನ್ನೂ ಅನೇಕ ವಿಧವಾದ ಮೃಗಪಕ್ಷಿಗಳನ್ನೂ ಭಯಂಕರರೂಪವುಳ್ಳ ಅನೇಕ ಪಿಶಾಚೋಗ ರಾಕ್ಷಸರನ್ನೂ ಜೌಗುಪ್ರದೇಶಗಳನ್ನೂ ಕೆರೆಗಳನ್ನೂ ಪರ್ವತ ಶಿಖರಗಳನ್ನೂ ಮತ್ತು ಅದ್ಭುತವಾಗಿ ಕಾಣುವ ನದಿ ಮತ್ತು ಸರೋವರಗಳನ್ನೂ ನೋಡಿದಳು.
ಯೂಥಶೋ ದದೃಶೇ ಚಾತ್ರ ವಿದರ್ಭಾಧಿಪನಂದಿನೀ |
ಮಹಿಷಾನ್ ವರಾಹಾನ್ ಗೋಮಾಯೂನ್ ಋಕ್ಷಪನ್ನಗವಾನರಾನ್ ||
ವಿದರ್ಭರಾಜ ನಂದಿನಿಯಾದ ದಮಯಂತಿಯು ಅಲ್ಲಿ ಮಹಿಷಗಳು ವರಾಹಗಳು ನರಿಗಳು ಕರಡಿಗಳು ಸರ್ಪಗಳು ಕಪಿಗಳು ಇವುಗಳನ್ನು ಗುಂಪುಗಟ್ಟಲೆಯಲ್ಲಿ ನೋಡಿದಳು.
ತೇಜಸಾ ಚೈವ ಲಕ್ಷ್ಮ್ಯಾ ಚ ಕಾಂತ್ಯಾ ಚ ಪರಯಾ ವೃತಾ |
ವೈದರ್ಭೀ ವಿಚಚಾರೈಕಾ ನಳಮನ್ವೇಷತೀ ತದಾ ||10||
ತೇಜಸ್ಸಿನಿಂದಲೂ ಸೌಭಾಗ್ಯದಿಂದಲೂ ಶ್ರೇಷ್ಠವಾದ ಕಾಂತಿಯಿಂದಲೂ ಕೂಡಿದ ವಿದರ್ಭ ರಾಜಕುಮಾರಿಯು ನಳನನ್ನು ಹುಡುಕುತ್ತಾ ಆಗ ಒಬ್ಬಳೇ ತಿರುಗಾಡಿದಳು.
ನಾಬಿಭ್ಯತ್ ಸಾ ನೃಪಸುತಾ ಭೈಮೀ ತತ್ರಾಥ ಕಸ್ಯಚಿತ್ |
ದಾರುಣಾಮಟವೀಂ ಪ್ರಾಪ್ಯ ಭರ್ತೃವ್ಯಸನಕರ್ಶಿತಾ ||11||
ರಾಜಕುಮಾರಿಯಾದ ಆ ದಮಯಂತಿಯು ಪತಿಯ ವ್ಯಸನದಿಂದ ಪೀಡಿತಳಾಗಿ ಭಯಂಕರವಾದ ಕಾಡನ್ನು ಸೇರಿದರೂ ಅಲ್ಲಿ ಯಾವುದಕ್ಕೂ ಹೆದರಲಿಲ್ಲ.
ವಿದರ್ಭರಾಜತನಯಾ ವಿಲಲಾಪ ಸುದುಃಖಿತಾ |
ಭರ್ತೃಶೋಕಪರೀತಾಂಗೀ ಶಿಲಾತಳಸಮಾಶ್ರಿತಾ ||12||
ವಿದರ್ಭರಾಜಕುಮಾರಿಯಾದ ದಮಯಂತಿಯು ದುಃಖದಿಂದ ಕೂಡಿದವಳಾಗಿ ಭರ್ತೃಶೋಕದಿಂದ ತುಂಬಿಹೋದ ಅವಯವಗಳುಳ್ಳವಳಾಗಿ ಒಂದು ಶಿಲಾತಳದಲ್ಲಿ ಕುಳಿತು ವಿಲಾಪವನ್ನು ಮಾಡಿದಳು.
ಸಿಂಹೋರಸ್ಕ ಮಹಾಬಾಹೋ ನಿಷಧಾಧಿಪತೇ ಪ್ರಭೋ |
ಕ್ವನು ರಾಜನ್ ಗತೋಽಸಿ ತ್ವಂ ಮಾಂ ನಿರ್ಜನೇ ವನೇ ||13||
ಅಶ್ವಮೇಧಾದಿಭಿರ್ವೀರ ಕ್ರತುಭಿಶ್ಚಾಪ್ತದಕ್ಷಿಣೈಃ |
ಕಥಮಿಷ್ಟ್ವಾ ನರವ್ಯಾಘ್ರ ಮಯಿ ಮಿಥ್ಯಾ ಪ್ರವರ್ತಸೇ ||14||
ಸಿಂಹೋರಸ್ಕನಾದ ಮಹಾಬಾಹುವೇ ನಿಷಧಾಧಿಪತಿಯಾದ ಪ್ರಭುವೇ ರಾಜನೇ ನಿರ್ಜನವಾದ ವನದಲ್ಲಿ ನನ್ನನ್ನು ಬಿಟ್ಟು ಎಲ್ಲಿಗೆ ಹೋಗಿದ್ದೀಯೆ? ಎಲೈ ನರವ್ಯಾಘ್ರನೇ ಎಲೈ ವೀರನೇ ಬಹಳ ದಕ್ಷಿಣೆಗಳಿಂದಕೂಡಿದ ಅಶ್ವಮೇಧಯಾಗಗಳನ್ನು ಮಾಡಿ ನನ್ನ

ವಿಷಯದಲ್ಲಿ ಏಕೆ ಅನುಚಿತವಾಗಿ ನಡೆದುಕೊಳ್ಳುತ್ತಿದ್ದೀಯೆ?
ಯತ್ತ್ವಯೋಕ್ತಂ ಮಹಾರಾಜ ಮತ್ಸಮಕ್ಷಂ ಮಹಾದ್ಯುತೇ |
ಸ್ಮರ್ತುಮರ್ಹಸಿ ಕಲ್ಯಾಣ ತತ್ ಸರ್ವಂ ಪಾರ್ಥಿವರ್ಷಭ ॥15॥
ಯಥೋಕ್ತಂ ವಿಹಗೈರ್ಹಂಸೈಃ ಸಮೀಪೇ ತವ ಭೂಮಿಪ |
ಮತ್ಸಕಾಶೇ ಚ ತೈರುಕ್ತಂ ತದವೇಕ್ಷಿತುಮರ್ಹಸಿ ॥16॥
ಮಹಾರಾಜನೇ, ಮಹಾದ್ಯುತಿಯೇ, ಕಲ್ಯಾಣರೂಪನೇ, ಪಾರ್ಥಿವಶ್ರೇಷ್ಠನೇ, ನನ್ನ ಎದುರಿನಲ್ಲಿ ನೀನು ಏನು ಮಾತನಾಡಿದ್ದೀಯೋ ಅವೆಲ್ಲವನ್ನು ಈಗ ಸ್ಮರಿಸಿಕೋ. ಎಲೈ ರಾಜನೇ, ನಿನ್ನ ಸಮೀಪದಲ್ಲಿ ಹಂಸಪಕ್ಷಿಗಳು ಏನನ್ನು ಹೇಳಿದವೋ ಮತ್ತು ನನ್ನ ಸಮೀಪಕ್ಕೆ ಬಂದು ಏನನ್ನು ಹೇಳಿದವೋ ಅದೆಲ್ಲವನ್ನೂ ನೀನು ಗಮನಿಸು.
ಏಕತಶ್ಚತುರೋ ವೇದಾಃ ಸಾಂಗೋಪಾಂಗಾಃ ಸವಿಸ್ತರಾಃ |
ಅಧೀತಾಃ ಪುರಷವ್ಯಾಘ್ರ ಸತ್ಯಮೇಕಂ ಕಿಲೈಕತಃ ॥17॥
ತಸ್ಮಾದರ್ಹಸಿ ಶತ್ರುಘ್ನ ಸತ್ಯಂ ಕರ್ತುಂ ನರೇಶ್ವರ |
ಉಕ್ತವಾನಸಿ ಯದ್ವೀರ ಮತ್ಸಕಾಶೇ ಪುರಾ ವಚಃ ॥18॥
ಪುರುಷವ್ಯಾಘ್ರನೇ ಒಂದುಕಡೆ ಅಧ್ಯಯನಮಾಡಿದ ನಾಲ್ಕುವೇದಗಳು ಮತ್ತು ಅವುಗಳ ವಿಸ್ತಾರವಾದ ವೇದಾಂಗಗಳು ಮತ್ತು ಉಪಾಂಗಗಳು ಇನ್ನೊಂದುಕಡೆ ಸತ್ಯವೊಂದೇ ಅದಕ್ಕೆ ಸಮನಾಗಿರುತ್ತದೆಯಷ್ಟೆ. ಆದ್ದರಿಂದ ಎಲೈ ಶತ್ರುಘ್ನನೇ ನರೇಶ್ವರನೇ ವೀರನೇ ನನ್ನ ಸಮೀಪದಲ್ಲಿ ಹಿಂದೆ ಏನು ಮಾತನಾಡಿದ್ದೆಯೋ ಅದನ್ನು ಸತ್ಯವನ್ನಾಗಿ ಮಾಡು.
ಹಾ ವೀರ ನನು ನಾಮಾಹಮಿಷ್ಟಾ ಕಿಲ ತವಾನಘ |
ಅಸ್ಯಾಮಟವ್ಯಾಂ ಘೋರಾಯಾಂ ಕಿಂ ಮಾಂ ನ ಪ್ರತಿಭಾಷಸೇ ॥19॥
ಭಕ್ಷಯತ್ಯೇಷ ಮಾಂ ರೌದ್ರೋ ವ್ಯಾತ್ತಾಸ್ಯೋ ದಾರುಣಾಕೃತಿಃ |
ಅರಣ್ಯರಾಟ್ ಕ್ಷುಧಾವಿಷ್ಟಃ ಕಿಂ ಮಾಂ ನ ತ್ರಾತುಮರ್ಹಸಿ ॥20॥
ನ ಮೇ ತ್ವದನ್ಯಾ ಸುಭಗೇ ಪ್ರಿಯಾ ಇತ್ಯಬ್ರುವೀಸ್ತದಾ |
ತಾಮೃತಾಂ ಕುರು ಕಲ್ಯಾಣ ಪುರೋಕ್ತಾಂ ಭಾರತೀಂ ನಳ ॥21॥
ಉನ್ಮತ್ತವದ್ವಿಲಪತೀಂ ಭಾರ್ಯಾಮಿಷ್ಟಾಂ ನರಾಧಿಪ |
ಈಪ್ಸಿತಾಮೀಪ್ಸಿತೇನಾಥ ಕಿಂ ಮಾಂ ನ ಪ್ರತಿನಂದಸೇ ॥22॥
ಕೃಶಾಂ ದೀನಾಂ ವಿವರ್ಣಾಂ ಮಾಂ ಮಲಿನಾಂ ವಸುಧಾಧಿಪ |
ವಸಾತ್ರರ್ಧಪ್ರಾವೃತಾಮೇಕಾಂ ವಿಲಪಂತೀಮನಾಥವತ್ ॥23॥
ಯೂಥಭ್ರಷ್ಟಾಮಿವೈಕಾಂ ಮಾಂ ಹರಿಣೀಂ ಪೃಥುಲೋಚನ |
ನ ಮಾನಯಸಿ ಮಾಂ ನಾಥ ರುದಂತೀಮರಿಕರ್ಶನ ॥24॥
ಮಹಾರಾಜ ಮಹಾರಣ್ಯೇ ಮಾಮಿಹೈಕಾಕಿನೀಂ ಸತೀಮ್ |
ತ್ವತ್ಪತ್ನೀಮಭಿಭಾಷಂತೀಂ ಕಿಂ ಮಾಂ ನ ಪ್ರತಿಭಾಷಸೇ ॥25॥
ಅನುವ್ರತಾಂ ಮಹಾರಾಜ ಕಿಂ ಮಾಂ ನ ಪ್ರತಿಭಾಷಸೇ |
ಕುಲಶೀಲೋಪಸಂಪನ್ನಾಂ ಚಾರುಸರ್ವಾಂಗಶೋಭನಾಮ್ ॥26॥
ನಾದ್ಯ ತ್ವಾಮನುಪಶ್ಯಾಮಿ ಗಿರಾವಸ್ಮಿನ್ ನರೋತ್ತಮ |
ವನೇ ಚಾಸ್ಮಿನ್ ಮಹಾಘೋರೇ ಸಿಂಹವ್ಯಾಘ್ರನಿಷೇವಿತೇ ॥27॥
ಶಯಾನಮುಪವಿಷ್ಟಂ ವಾ ಸ್ಥಿತಂ ವಾ ಮನುಜಾಧಿಪ |
ಪ್ರಸ್ಥಿತಂ ವಾ ನರಶ್ರೇಷ್ಠ ಮಮ ಶೋಕವಿವರ್ಧನ ॥28॥
ಅಯ್ಯೋ ವೀರನೇ ಅನಘನೇ ನಾನು ನಿನಗೆ ತುಂಬಾ ಇಷ್ಟಳಾದವಳಲ್ಲವೆ? ಈ ಘೋರವಾದ ಅರಣ್ಯದಲ್ಲಿ ಏಕೆ ನನಗೆ ಉತ್ತರವನ್ನು ಕೊಡುತ್ತಿಲ್ಲ? ಈ ಉಗ್ರವಾದ ಭಯಂಕರ ಆಕೃತಿಯನ್ನು ಹೊಂದಿದ ಅರಣ್ಯರಾಜನಾದ ಸಿಂಹವು ಹಸಿವಿನಿಂದ ಕೂಡಿರುವುದಾಗಿ ಬಾಯಿಯನ್ನು ದೊಡ್ಡದಾಗಿ ತೆರೆದು ನನ್ನನ್ನು ತಿನ್ನಲು ಬರುತ್ತಿದೆ. ನೀನು ಏಕೆ ನನ್ನನ್ನು ರಕ್ಷಿಸುವುದಿಲ್ಲ? ಕಲ್ಯಾಣನೇ, ಸುಂದರಿಯೇ, ನಿನ್ನನ್ನು ಬಿಟ್ಟು ನನಗೆ ಬೇರೆ ಪ್ರಿಯಳಾದ ಯಾವ ಸ್ತ್ರೀಯೂ ಇಲ್ಲ ಎಂದು ಆಗ ಹೇಳಿದ್ದೆಯಷ್ಟೆ. ಎಲೈ ನಳನೇ ಹಿಂದೆ ಹೇಳಿದ ಆ ಮಾತನ್ನು ನಿಜವನ್ನಾಗಿಮಾಡು ಎಲೈ ನರಾಧಿಪನೇ ಎಲೈ ಸ್ವಾಮಿಯೇ ಹುಚ್ಚಿಯಂತೆ ಬಡಬಡಿಸುತ್ತಿರುವ ನೀನು ಬಯಸಿದ ನಿನಗೆ ಇಷ್ಟಳಾದ ಪತ್ನಿಯನ್ನು ಅವಳಿಗೆ ಇಷ್ಟವಾದ ರೀತಿಯಲ್ಲಿ ಈಗ ಏಕೆ ಅಭಿನಂದಿಸುತಿತಲ್ಲ? ಎಲೈ ವಸುಧಾಧಿಪನೇ, ವಿಶಾಲನೇತ್ರನೇ ನಾಥನೇ ಅರಿಕರ್ಶನನೇ ಕೃಶಳೂ ದೀನಳೂ ಕಾಂತಿಹೀನಳೂ ಮಲಿನಳೂ ಅರ್ಧವಸ್ತ್ರವನ್ನು ಸುತ್ತಿಕೊಂಡಿರುವವಳೂ ಅನಾಥಳಂತೆ ಏಕಾಕಿಯಾಗಿ ವಿಲಾಪವನ್ನು ಮಾಡುತ್ತಿರುವವಳೂ, ಗುಂಪಿನಿಂದ ಚದುರಿದ ಹೆಣ್ಣು ಜಿಂಕೆಯಂತೆ ಇರುವವಳೂ ಆದ ನನ್ನನ್ನು ನಾನು ಅಳುತ್ತಿದ್ದರೂ ನೀನು ಏಕೆ ಸನ್ಮಾನಿಸುತ್ತಿಲ್ಲ? ಮಹಾರಾಜನೇ! ಈ ಮಹಾರಣ್ಯದಲ್ಲಿ ಏಕಾಕಿಯಾಗಿ ನಿನ್ನನ್ನು ಮಾತನಾಡಿಸುತ್ತಿರುವ ಸಾಧ್ವಿಯಾದ ನಿನ್ನ ಪತ್ನಿಗೆ ಏಕೆ ಉತ್ತರವನ್ನು ಕೊಡುತ್ತಿಲ್ಲ? ಕುಲಶೀಲಸಂಪನ್ನಳಾದ ಸುಂದರವಾದ ಸರ್ವಾಂಗಗಳಿಂದ ಶೋಭಿತಳಾದ ನಿನ್ನನ್ನೇ ಅನುಸರಿಸಿ ನಡೆಯುವ ನನಗೆ, ಮಹಾರಾಜನೇ ಏಕೆ ಉತ್ತರವನ್ನು ಕೊಡುತ್ತಿಲ್ಲ? ಎಲೈ ನರೋತ್ತಮನೇ ಸಿಂಹವ್ಯಾಘ್ರಗಳಿಂದ ತುಂಬಿದ ಈ ಮಹಾಘೋರವಾದ ಕಾಡಿನಲ್ಲಿ ಮಲಗಿರುವ ಅಥವಾ ಕುಳಿತಿರುವ ಅಥವಾ ನಿಂತಿರುವ ಅಥವಾ ನಡೆಯುತ್ತಿರುವ ನಿನ್ನನ್ನು ನಾನು ಕಾಣುತ್ತಿಲ್ಲ. ಎಲೈ ಮನುಜಾಧಿಪನೇ ನರಶ್ರೇಷ್ಠನೇ ನೀನು ನನ್ನ ಶೋಕವನ್ನು ಪರಿಹರಿಸು.(ನಿನ್ನನ್ನು ನಾನು ಕಾಣುತಿತಲ್ಲ.)
ಕಿಂ ನು ಪೃಚ್ಛಾಮಿ ದುಃಖಾರ್ತಾ ತ್ವದರ್ಥೇ ಶೋಕಕರ್ಶಿತಾ |

ಕಚ್ಚಿದ್ದೃಷ್ಟಸ್ತ್ವಯಾऽರಣ್ಯೇ ಸಂಗಮ್ಯೇಹ ನಳೋ ನೃಪಃ ॥29॥
ನೀನು ಈ ಅರಣ್ಯದಲ್ಲಿ ನಳನನ್ನು ಸಂಧಿಸಿ ಆ ರಾಜನನ್ನು ನೋಡಿದ್ದೀಯಾ ಎಂದು ನಿನ್ನ ಸಲುವಾಗಿ ದುಃಖದಿಂದಲೂ ಮತ್ತು ಶೋಕದಿಂದಲೂ ಪೀಡಿತಳಾದ ನಾನು ಯಾರನ್ನು ಕೇಳಲಿ?
ಕೋ ನು ಮೇ ಕಥಯೇದದ್ಯ ವನೇऽಸ್ಮಿನ್ ವಿಷ್ಠಿತಂ ನಳಮ್ |
ಮಹಾಬಲಂ ಮಹಾತ್ಮಾನಂ ಪರವ್ಯೂಹವಿನಾಶನಮ್ ॥30॥
ಯಮನ್ವೇಷಸಿ ರಾಜಾನಂ ಬಾಲೇ ಪದ್ಮನಿಭೇಕ್ಷಣಮ್ |
ಅಯಂ ನು ಇತಿ ಕಸ್ಯಾದ್ಯ ಶ್ರೋಷ್ಯಾಮಿ ಮಧುರಾಂ ಗಿರಮ್ ॥31॥
ಅರಣ್ಯರಾಡಯಂ ಶ್ರೀಮಾನ್ ಚತುರ್ದಂಷ್ಟ್ರೋ ಮಹಾಹನುಃ |
ಶಾರ್ದೂಲೋऽಭಿಮುಖೋ ಯಾತಿ ಪೃಚ್ಛಾಮ್ಯೇನಮಶಂಕಿತಾ ॥32॥
ಈ ದಿನ ಮಹಾಬಲನೂ ಮಹಾತ್ಮನೂ ಪರವ್ಯೂಹನಾಶಕನೂ ಆದ ಪದ್ಮನೇತ್ರನಾದ ರಾಜನಾದ ಯಾವ ನಳನನ್ನು ಹುಡುಕುತ್ತಿದ್ದೆಯೋ ಎಲೌ ಬಾಲೆಯೇ ಅವನೇ ಇವನು ಎಂದು ಮಧುರವಾದ ಮಾತುಗಳನ್ನು ಆಡಿ ಈ ಅರಣ್ಯದಲ್ಲಿರುವ ನಳನನ್ನು ನನಗೆ ಈ ದಿನ ಯಾರು ಹೇಳುತ್ತಾರೆ? (ತೋರಿಸುತ್ತಾರೆ?)ಅರಣ್ಯರಾಜನಾದ ನಾಲ್ಕು ಕೋರೆಯ ಹಲ್ಲುಗಳನ್ನು ಹೊಂದಿದ ದೊಡ್ಡ ಹನುವನ್ನು ಹೊಂದಿದ ಕಾಂತಿಯುಕ್ತನಾದ ಈ ಶಾರ್ದೂಲನು ನನ್ನ ಎದುರಿಗೆ ಬರುತ್ತಿದ್ದಾನೆ. ಯಾವ ಹೆದರಿಕೆಯೂ ಇಲ್ಲದೆ ಇವನನ್ನು ಕೇಳುತ್ತೇನೆ.
ಭವಾನ್ ಮೃಗಾಣಾಮಧಿಪಃ ತ್ವಮಸ್ಮಿನ್ ಕಾನನೇ ಪ್ರಭುಃ |
ವಿದರ್ಭರಾಜತನಯಾಂ ದಮಯಂತೀತಿ ವಿದ್ಧಿ ಮಾಮ್ ॥33॥
ನಿಷಧಾಧಿಪತೇರ್ಭಾರ್ಯಾಂ ನಳಸ್ಯಾಮಿತ್ರಘಾತಿನಃ |
ಪತಿಮನ್ವೇಷಣೀಮೇಕಾಂ ಕೃಪಣಾಂ ಶೋಕಕರ್ಶಿತಾಮ್ ॥34॥
ಆಶ್ವಾಸಯ ಮೃಗೇಂದ್ರೇಹ ಯದಿ ದೃಷ್ಟಸ್ತ್ವಯಾ ನಳಃ |
ಸಿಂಹಸ್ಕಂಧೋ ಮಹಾಬಾಹುಃ ಪದ್ಮಪತ್ರನಿಭೇಕ್ಷಣಃ ॥35॥
ನೀನು ಮೃಗಗಳಿಗೆ ಒಡೆಯ. ಈ ಕಾನನಕ್ಕೆ ಪ್ರಭುವಾದವನು. ನನ್ನನ್ನು ವಿದರ್ಭರಾಜ ಕುಮಾರಿಯಾದ ದಮಯಂತಿ ಎಂದು ತಿಳಿ. ನಿಷಧಾಧಿಪತಿಯಾದ ಶತ್ರುಘಾತಿಯಾದ ನಳನ ಭಾರ್ಯೆಯಾದ , ಪತಿಯನ್ನು ಹುಡುಕುತ್ತಿರುವ ಏಕಾಕಿನಿಯಾದ, ಶೋಕ ಕರ್ಶಿತಳಾದ, ಕಾರ್ಪಣ್ಯದಿಂದ ಕೂಡಿದ ನನ್ನನ್ನು ಸಮಾಧಾನಪಡಿಸು. ಮೃಗೇಂದ್ರನೇ ಸಿಂಹಸ್ಕಂಧನೂ ಮಹಾಬಾಹುವೂ ಪದ್ಮಪತ್ರನೇತ್ರನೂ ಆದ ನಳನನ್ನು ಈ ಕಾಡಿನಲ್ಲಿ ನೀನೇನಾದಾರೂ ನೋಡಿದೆಯಾ?
ಅಥವಾऽರಣ್ಯನೃಪತೇ ನಳಂ ಯದಿ ನ ಪಶ್ಯಸಿ |
ಮಾಂ ಭಕ್ಷಯಿತ್ವಾ ಶಾರ್ದೂಲ ವಿಶೋಕಾಂ ಕುರು ದುಃಖಿತಾಮ್ ॥
ಅಥವಾ ಅರಣ್ಯರಾಜನೇ ನೀನು ನಳನನ್ನು ನೋಡದಿದ್ದರೆ ನನ್ನನ್ನಾದರೂ ಭಕ್ಷಿಸು. ಎಲೈ ಶಾರ್ದೂಲನೇ ದುಃಖಿತಳಾದ ನನ್ನನ್ನು ದುಃಖದಿಂದ ಬಿಡುಗಡೆಮಾಡು.
ಶ್ರುತ್ವಾ ರಣ್ಯೇ ವಿಲಪಿತಾಂ ಮಾಮೇವಂ ಮೃಗರಾಟ್ ಸ್ವಯಮ್ |
ಯಾತ್ಯೇತಾಂ ಮೃಷ್ಟಸಲಿಲಾಮಾಪಗಾಂ ಸಾಗರೋಪಮಾಮ್ ॥37॥
ಈ ಅರಣ್ಯದಲ್ಲಿ ಮೃಗರಾಜನಾದ ಶಾರ್ದೂಲನು ನನ್ನ ಈ ವಿಲಾಪವನ್ನು ಕೇಳಿ ಸಾಗರದಂತೆ ಇರುವ ಸ್ವಚ್ಛ ನೀರಿರುವ ಈ ನದಿಯ ಕಡೆಗೆ ಹೋಗುತ್ತಿದ್ದಾನೆ.
ಇಮಂ ಶಿಲೋಚ್ಚಯಂ ಪುಣ್ಯಂ ಶೃಂಗೈರ್ಬಹುಭಿರುಚ್ಛ್ರಿತೈಃ |
ವಿರಾಜದ್ಭಿರ್ದಿವಿಸ್ಪೃಗ್ಭಿರ್ನೈಕವರ್ಣೈರ್ಮನೋಹರೈಃ ॥38॥
ನಾನಾಧಾತುಸಮಾಕೀರ್ಣಂ ವಿವಿಧೋಪಲಶೋಭಿತಮ್ |
ಅಸ್ಯಾರಣ್ಯಸ್ಯ ಮಹತಃ ಕೇತುಭೂತಮಿವ ಸ್ಥಿತಮ್ ॥39॥
ಸಿಂಹಶಾರ್ದೂಲಮಾತಂಗವರಾಹರ್ಕ್ಷಸಮಾಕುಲಮ್ |
ಪತತ್ರಿಭಿರ್ಬಹುವಿಧೈಃ ಸಮಂತಾದನುನಾದಿತಮ್ ॥40॥
ಕಿಂಶುಕಾಶೋಕಬಕುಳೈಃ ಪುನ್ನಾಗೈರುಪಶೋಭಿತಮ್ |
ಸರಿದ್ಭಿಃ ಸವಿಹಂಗಾಭಿಃ ಶಿಖರೈಶ್ಚಾಪಿ ಶೋಭಿತಮ್ |
ಪೃಥಿವ್ಯಾಂ ರುಚಿರಾಕಾರಂ ಚೂಡಾಮಣಿರಿವ ಸ್ಥಿತಮ್ ॥41॥
ಗಿರಿರಾಜಮಿಮಂ ತಾವತ್ ಪೃಚ್ಛಾಮಿ ನೃಪತಿಂ ಪ್ರತಿ ॥42॥
ಈ ಪರ್ವತವು ಎತ್ತರವಾದ ಕಂಗೊಳಿಸುವ ಆಕಾಶವನ್ನು ಮುಟ್ಟುವ ಅನೇಕವರ್ಣದ ಮನೋಹರವಾದ ಅನೇಕ ಶಿಖರಗಳಿಂದ ಕೂಡಿ ಪವಿತ್ರವಾಗಿದೆ. ಅನೇಕ ಧಾತುಗಳಿಂದ ಕೂಡಿ ಅನೇಕ ವಿಧವಾದ ಶಿಲೆಗಳಿಂದ ಶೋಭಿತವಾಗಿ ಈ ದೊಡ್ಡ ಅರಣ್ಯಕ್ಕೆ ಧ್ವಜರೂಪದಲ್ಲಿದೆ. ಸಿಂಹ ಶಾರ್ದೂಲ ಮಾತಂಗ ವರಾಹ ಋಕ್ಷ ಮೊದಲಾದ ಪ್ರಾಣಿಗಳಿಂದ ಕೂಡಿ ಅನೇಕ ವಿಧವಾದ ಪಕ್ಷಿಗಳ ನಾದದಿಂದ ಎಲ್ಲ ಕಡೆಗಳಿಂದಲೂ ತುಂಬಿದೆ. ಕಿಂಶುಕ ಅಶೋಕ ಬಕುಳ ಪುನ್ನಾಗ ಮೊದಲಾದ ವೃಕ್ಷಗಳಿಂದ ಶೋಭಿತವಾಗಿದೆ. ಪಕ್ಷಿಗಳಿಂದ ನದಿಗಳಿಂದ ಮತ್ತು ಅನೇಕ ಶಿಖರಗಳಿಂದಲೂ ಶೋಭಿತವಾಗಿದೆ. ಭೂಮಿಯಲ್ಲಿ ಮನೋಹರವಾಗಿದ್ದ ಆಕಾಶವನ್ನುಹೊಂದಿ ಚೂಡಾಮಣಿಯಂತೆ ನಿಂತಿದೆ. ನಳನ ವಿಷಯದಲ್ಲಿ ಈಗ ಈ ಗಿರಿರಾಜನನ್ನು ಕೇಳುತ್ತೇನೆ.
ಭಗವನ್ನಚಲಶ್ರೇಷ್ಠ ದಿವ್ಯದರ್ಶನವಿಶ್ರುತ |
ಶರಣ್ಯ ಬಹುಕಲ್ಯಾಣ ನಮಸ್ತೇऽಸ್ತು ಮಹೀಧರ ॥43॥

ಪ್ರಣಮೇ ತ್ವಾಽಭಿಗಮ್ಯಾಹಂ ರಾಜಪುತ್ರೀಂ ನಿಬೋಧ ಮಾಮ್ |
ರಾಜಸ್ನುಷಾಂ ರಾಜಭಾರ್ಯಾಂ ದಮಯಂತೀತಿ ವಿಶ್ರುತಾಮ್ ॥44॥
ಪೂಜ್ಯನಾದ ಪರ್ವತಶ್ರೇಷ್ಠನೇ, ದಿವ್ಯದರ್ಶನನೇ, ಪ್ರಖ್ಯಾತನಾದವನೇ, ಶರಣ್ಯನಾದವನೇ, ಬಹುಕಲ್ಯಾಣರೂಪನಾದ ಎಲೈ ಪರ್ವತನೇ, ನಿನಗೆ ಸಮಸ್ಕಾರ. ನಿನ್ನನ್ನು ಸಮೀಪಿಸಿ ನಾನು ನಮಸ್ಕರಿಸುತ್ತೇನೆ. ನಾನು ದಮಯಂತಿಯೆಂದೂ ಪ್ರಸಿದ್ಧಳಾದ ರಾಜಕುಮಾರಿ ರಾಜನ ಸೊಸೆ ಮತ್ತು ರಾಜನ ಪತ್ನಿಯೆಂದೂ ನನ್ನನ್ನು ತಿಳಿ.
ರಾಜಾ ವಿದರ್ಭಾಧಿಪತಿಃ ಪಿತಾ ಮಮ ಮಹಾರಥಃ |
ಭೀಮೋ ನಾಮ ಕ್ಷಿತಿಪತಿಃ ಚಾತುರ್ವರ್ಣ್ಯಸ್ಯ ರಕ್ಷಿತಾ ॥45॥
ರಾಜಸೂಯಾಶ್ವಮೇಧಾನಾಂ ಕ್ರತೂನಾಂ ದಕ್ಷಿಣಾವತಾಮ್ |
ಆಹರ್ತಾ ಪಾರ್ಥಿವಶ್ರೇಷ್ಠಃ ಪೃಥುಚಾರ್ವಂಚಿತೇಕ್ಷಣಃ ॥46॥
ಬ್ರಹ್ಮಣ್ಯಃ ಸಾಧುವೃತ್ತಶ್ಚ ಸತ್ಯವಾಗನಸೂಯಕಃ |
ಶೀಲವಾನ್ ಸತ್ಯವಾನ್ ಶೂರಃ ಪೃಥುಶ್ರೀರ್ಧರ್ಮವಿಚ್ಛುಚಿಃ ॥47॥
ಸಮ್ಯಗ್ಗೋಪ್ತಾ ವಿದರ್ಭಾಣಾಂ ನಿರ್ಜಿತಾರಿಗಣಃ ಪ್ರಭುಃ |
ತಸ್ಯ ಮಾಂ ವಿದ್ಧಿ ತನಯಾಂ ಭಗವನ್ ಸಮುಪಸ್ಥಿತಾಮ್ ॥48॥
ವಿದರ್ಭಾಧಿಪತಿಯಾದ ಮಹಾರಥನಾದ ಭೀಮನೆಂಬ ರಾಜನು ನನ್ನ ತಂದೆ. ಅವನು ಚಾತುರ್ವರ್ಣ್ಯವನ್ನು ರಕ್ಷಿಸುವವನು. ರಾಜಸೂಯ ಅಶ್ವಮೇಧ ಮೊದಲಾದ ಪೂರ್ಣದಕ್ಷಿಣೆಯಿಂದ ಕೂಡಿದ ಅನೇಕ ಯಾಗಗಳನ್ನು ಮಾಡಿದವನು. ರಾಜರಲ್ಲಿ ಶ್ರೇಷ್ಠನಾದವನು. ವಿಸ್ತಾರವಾದ ಮನೋಹರವಾದ ನೇತ್ರವುಳ್ಳವನು. ಬ್ರಾಹ್ಮಣರಿಗೆ ಶರಣ್ಯನಾದವನು. ಸಾಧುಸ್ವಭಾವವನ್ನು ಹೊಂದಿದವನು. ಸತ್ಯವಂತನು. ಧರ್ಮಜ್ಞನು. ಶುಚಿಯು. ವಿದರ್ಭವನ್ನು ಚೆನ್ನಾಗಿ ರಕ್ಷಿಸುವವನು. ಶತ್ರುಗಳನ್ನು ಗೆದ್ದವನು. ಸ್ವಾಮಿಯೂ ಆಗಿದ್ದಾನೆ. ಪೂಜ್ಯನೇ ನನ್ನನ್ನು ನಿನ್ನ ಬಳಿಗೆ ಬಂದಿರುವ ಅವನ ಮಗಳೆಂದು ತಿಳಿ.
ನಿಷಧೇಷು ಮಹೀಪಾಲಃ ಶ್ವಶುರೋ ಮೇ ನೃಪೋತ್ತಮಃ |
ಗೃಹೀತನಾಮಾ ವಿಖ್ಯಾತೋ ವೀರಸೇನ ಇತಿ ಸ್ಮ ಹ ॥49॥
ತಸ್ಯ ರಾಜ್ಞಃ ಸುತೋ ವೀರಃ ಶ್ರೀಮಾನ್ ಸತ್ಯಪರಾಕ್ರಮಃ |
ಕ್ರಮಪ್ರಾಪ್ತಂ ತು ಯೋ ರಾಜ್ಯಂ ಪಿತುಃ ಸಮುಪಶಾಸತಿ ॥50॥
ನಳೋ ನಾಮಾರಿದಮನಃ ಪುಣ್ಯಶ್ಲೋಕ ಇತಿ ಶ್ರುತಃ |
ಬ್ರಹ್ಮಣ್ಯೋ ವೇದವಿದ್ ವಾಗ್ಮೀ ಪುಣ್ಯಕೃತ್ ಸೋಮಪೋಽಗ್ನಿಚಿತ್ ॥
ಯಷ್ಟಾ ದಾತಾ ಚ ಯೋದ್ಧಾ ಚ ಸಮ್ಯಕ್ಚೈವ ಪ್ರಶಾಸಿತಾ |
ತಸ್ಯ ಮಾಮಚಲಶ್ರೇಷ್ಠ ವಿದ್ಧಿ ಭಾರ್ಯಾಮುಪಸ್ಥಿತಾಮ್ ॥52॥
ತ್ಯಕ್ತಾಂ ಶ್ರಿಯಾ ಭರ್ತೃಹೀನಾಮನಾಥಾಂ ವ್ಯಸನಾನ್ವಿತಾಮ್ |
ಅನ್ವೇಷಮಾಣಾಂ ಭರ್ತಾರಂ ನಳಂ ನರವರೋತ್ತಮಮ್ ॥53॥
ನಿಷಧದೇಶಾಧಿಪತಿಯಾದ ಸುಗೃಹೀತನಾಮನಾದ ಪ್ರಖ್ಯಾತನಾದ ವೀರಸೇನನು ನನ್ನ ಮಾವ. ಅವನ ಪುತ್ರನಾದ ನಳನು ವೀರನಾದವನು ಸಂಪದ್ಯುಕ್ತನಾದವನು ಸತ್ಯಪರಾಕ್ರಮನು. ತಂದೆಯಿಂದ ಕ್ರಮವಾಗಿ ಬಂದ ರಾಜ್ಯವನ್ನು ಆಳುತ್ತಿದ್ದಾನೆ. ಶತ್ರು ಸಂಹಾರಕನಾದ ಅವನಿಗೆ ಪುಣ್ಯಶ್ಲೋಕನೆಂದೂ ಹೆಸರು ಅವನು ಬ್ರಾಹ್ಮಣರಿಗೆ ಶರಣ್ಯನಾದವನು ವೇದವನ್ನು ತಿಳಿದವನು. ವಾಗ್ಮಿ. ಪುಣ್ಯವನ್ನು ಮಾಡುವವನು. ಸೋಮಪಾನ ಮಾಡಿದವನು. ಅಗ್ನಿಯನ್ನು ಚಯನಮಾಡಿ ಅನೇಕ ಯಜ್ಞಗಳನ್ನು ಮಾಡಿದವನು. ದೊಡ್ಡದಾನಿ. ಯೋಧ. ಚೆನ್ನಾಗಿ ರಾಜ್ಯವಾಳುವವನು. ಎಲೈ ಪರ್ವತ ಶ್ರೇಷ್ಠನೇ ನಿನ್ನನ್ನು ಸಮೀಪಿಸಿರುವ ನನ್ನನ್ನು ಅವನ ಭಾರ್ಯೆಯೆಂದು ತಿಳಿ. ಸಂಪತ್ತನ್ನು ಕಳೆದುಕೊಂಡು ಪತಿಹೀನಳಾಗಿ ಅನಾಥಳಾಗಿ ವ್ಯಸನದಿಂದ ಕೂಡಿ ನರಶ್ರೇಷ್ಠರಲ್ಲಿ ಶ್ರೇಷ್ಠನಾದ ಪತಿಯನ್ನು ಹುಡುಕುತ್ತಿರುವ ಅವನ ಪತ್ನಿ ಎಂದು ತಿಳಿ.
ಖಮುಲ್ಲಿಖದ್ಭಿರೇತೈರ್ಹಿ ತ್ವಯಾ ಶೃಂಗಶತೈರ್ನೃಪಃ |
ಕಚ್ಚಿದ್ದೃಷ್ಟೋಽಚಲಶ್ರೇಷ್ಠ ವನೇಽಸ್ಮಿನ್ ದಾರುಣೇ ನಳಃ ॥54॥
ಆಕಾಶವನ್ನು ಮುಟ್ಟುವಂತೆ ಉನ್ನತವಾದ ನೂರಾರು ಶೃಂಗಗಳಿಂದ ಕೂಡಿದ ಎಲೈ ಪರ್ವತಶ್ರೇಷ್ಠನೇ ಈ ದಾರುಣವಾದ ವನದಲ್ಲಿ ನಳನನ್ನು ನೀನೇನಾದರೂ ನೋಡಿದೆಯಾ?
ಗಜೇಂದ್ರವಿಕ್ರಮೋ ಧೀಮಾನ್ ದೀರ್ಘಬಾಹುರರಿಂದಮಃ |
ವಿಕ್ರಾಂತಃ ಸತ್ಯವಾನ್ ಧೀರೋ ಭರ್ತಾ ಮಮ ಮಹಾಯಶಾಃ ॥55॥
ಮಹೀಧರಸಮೋ ಧೈರ್ಯೇ ಮಹೀಧರ ಮಹೀಪತಿಃ |
ನಿಷಧಾನಾಮಧಿಪತಿಃ ಕಚ್ಚಿದ್ ದೃಷ್ಟಸ್ತ್ವಯಾ ನಳಃ ॥56॥
ನನ್ನ ಪತಿಯಾದ ನಳನು ಗಜರಾಜನ ವಿಕ್ರಮವುಳ್ಳವನು ಮೇಧಾವಿಯಾದವನು ದೀರ್ಘಬಾಹುವು ಅರಿಂದಮನು ವಿಕ್ರಮವುಳ್ಳವನು ಸತ್ಯವುಳ್ಳವನು ಧೀರನಾದವನು ಮಹಾಕೀರ್ತಿಶಾಲಿಯಾದವನು. ಎಲೈ ಪರ್ವತಶ್ರೇಷ್ಠನೇ ಆ ರಾಜನು ಧೈರ್ಯದಲ್ಲಿ ಪರ್ವತಕ್ಕೆ ಸಮಾನಾದವನು. ನಿಷದದೇಶದ ಅಧಿಪತಿಯಾದ ಅಂತಹ ನಳನನ್ನು ನೀನೇನಾದರೂ ನೋಡಿದೆಯಾ?
ಕಿಂ ಮಾಂ ವಿಲಪತೀಮೇಕಾಂ ಪರ್ವತಶ್ರೇಷ್ಠ ದುಃಖಿತಾಮ್ |
ಗಿರಾ ನಾಶ್ವಾಸಯಸ್ಯದ್ಯ ಸ್ವಾಂ ಸುತಾಮಿವ ಮಾನದ ॥57॥
ಎಲೈ ಪರ್ವತಶ್ರೇಷ್ಠನೇ ಎಲೈ ಮಾನದನೇ, ಏಕಾಕಿನಿಯಾದ ದುಃಖದಿಂದ ವಿಲಾಪವನ್ನು ಮಾಡುತ್ತಿರುವ ನನ್ನನ್ನು ನಿನ್ನ ಮಗಳನ್ನು ಸಂತೈಸಿದಂತೆ ನಿನ್ನ ಮಾತುಗಳಿಂದ ಈಗ ಏಕೆ ಸಂತೈಸುತ್ತಿಲ್ಲ?

ವೀರ ವಿಕ್ರಾಂತ ಧರ್ಮಜ್ಞ ಸತ್ಯಸಂಧ ಮಹೀಪತೇ |
ಯದ್ಯಸ್ಮಿನ್ ವೈ ವನೇ ರಾಜನ್ ದರ್ಶಯಾತ್ಮಾನಮಾತ್ಮನಾ ॥58॥
ವೀರನಾದ ವಿಕ್ರಾಂತನಾದ ಧರ್ಮಜ್ಞನಾದ ಸತ್ಯಸಂಧನಾದ ರಾಜನೇ, ನೀನು ಈ ಕಾಡಿನಲ್ಲಿ ಇದ್ದರೆ ನಿನ್ನನ್ನು ನೀನೇ ನನಗೆ ತೋರಿಸು.
ಕದಾ ನು ಸ್ನಿಗ್ಧಗಂಭೀರಾಂ ಜೀಮೂತಸ್ವನಸನ್ನಿಭಾಮ್ |
ಶ್ರೋಷ್ಯಾಮಿ ನೈಷಧಸ್ಯಾಹಂ ವಾಚಂ ತಾಮಮೃತೋಪಮಾಮ್ ॥59॥
ಸ್ನಿಗ್ಧಗಂಭೀರವಾದ, ಮೇಘನಾದಕ್ಕೆ ಸದೃಶನಾದ ಅಮೃತಸದೃಶವಾದ ನಳನ ವಾಣಿಯನ್ನು ನಾನು ಯಾವಾಗ ಕೇಳುವೆನು.
ವೈದರ್ಭೀತ್ಯೇವ ಕಥಿತಾಂ ಶುಭಾಂ ರಾಜ್ಞೋ ಮಹಾತ್ಮನಃ |
ಆತ್ಮಾಭಿಸಾರಿಣೀಮೃದ್ಧಾಂ ಮಮ ಶೋಕನಿಬರ್ಹಣೀಮ್ ॥60॥
ವೈದರ್ಭಿ ಎಂದು ಕರೆಯುತ್ತಾ ನನ್ನ ಬಳಿಗೆ ಬರುತ್ತಿರುವ ಮಹಾತ್ಮನಾದ ಆ ರಾಜನ ಶುಭವಾದ ನನ್ನ ಶೋಕವಿನಾಶಕವಾದ ಸಮೃದ್ಧವಾದ ವಾಣಿಯನ್ನು ಯಾವಾಗ ಕೇಳುವೆನು?
ಬೃಹದಶ್ವಃ
ಇತಿ ಸಾ ತಂ ಗಿರಿಶ್ರೇಷ್ಠಮುಕತ್ವಾ ಪಾರ್ಥಿವನಂದಿನೀ |
ದಮಯಂತೀ ತತೋ ಭೂಯೋ ಜಗಾಮ ದಿಶಮುತ್ತರಾಮ್ ॥61॥
ಆ ರಾಜಕುಮಾರಿಯಾದ ದಮಯಂತಿಯು ಆ ಪರ್ವತಶ್ರೇಷ್ಠನಿಗೆ ಹೀಗೆ ಹೇಳಿ ಪುನಃ ಅಲ್ಲಿಂದ ಉತ್ತರದಿಕ್ಕಿಗೆ ಹೊರಟಳು.
ಸಾ ಗತ್ವಾ ತ್ರೀನಹೋರಾತ್ರಾನ್ ದದರ್ಶ ಪರಮಾಂಗನಾ |
ತಾಪಸಾರಣ್ಯಮತುಲಂ ದಿವ್ಯಕಾನನಶೋಭಿತಮ್ ॥62॥
ವಸಿಷ್ಠಭೃಗ್ವತ್ರಿಸಮೈಃ ತಾಪಸೈರುಪಶೋಭಿತಮ್ |
ನಿಯತೈರ್ನಿಯತಾಹಾರೈರ್ದಮಶೌಚಸಮನ್ವಿತೈಃ ॥63॥
ಅಬ್ಭಕ್ಷೈರ್ವಾಯುಭಕ್ಷೈಶ್ಚ ಪತ್ರಾಹಾರೈಸ್ತಥೈವ ಚ |
ಜಿತೇಂದ್ರಿಯೈರ್ಮಹಾಭಾಗೈಃ ಸ್ವರ್ಗಮಾರ್ಗದಿದೃಕ್ಷುಭಿಃ ॥64॥
ವಲ್ಕಲಾಜಿನಸಂವೀತೈರ್ಮುನಿಭಿಃ ಸಂಯತೇಂದ್ರಿಯೈಃ |
ತಾಪಸಾಧ್ಯುಷಿತಂ ರಮ್ಯಂ ದದರ್ಶಾಶ್ರಮಮಂಡಲಮ್ ॥65॥
ಸಾ ಚ ದೃಷ್ಟ್ವಾಽಽಶ್ರಮಪದಂ ನಾನಾಮೃಗನಿಷೇವಿತಮ್ |
ಶಾಖಾಮೃಗಗಣೈಶ್ಚೈವ ತಾಪಸೈಶ್ಚ ಸಮನ್ವಿತಮ್ ॥66॥
ಸುಭ್ರೂಃ ಸುಕೇಶೀ ಸುಶ್ರೋಣೀ ಸುಕುಚಾ ಸುದ್ವಿಜಾನನಾ |
ವರ್ಚಸ್ವಿನೀ ಸುಪ್ರತಿಷ್ಠಾ ಸ್ವಂಚಿತೋದ್ಯತಗಾಮಿನೀ ॥67॥
ಸಾ ದೃಷ್ಟ್ವೈವಾಶ್ರಮಪದಂ ವೀರಸೇನಸುತಪ್ರಿಯಾ |
ಯೋಷಿದ್ರತ್ನಂ ಮಹಾಭಾಗಾ ದಮಯಂತೀ ತಪಸ್ವಿನೀ ॥68॥
ತಾಪಸೈಃ ಸಮುಪೇತಂ ಚ ಸಾ ದೃಷ್ಟ್ವೈವ ಸಮಾಶ್ವಸತ್ |
ಸಾಽಭಿವಾದ್ಯ ತಪೋವೃದ್ಧಾನ್ ವಿನಯಾವನತಾ ಸ್ಥಿತಾ ॥69॥
ಆ ಸುಂದರಿಯು ಮೂರುದಿವಸ ಹಗಲೂ ರಾತ್ರಿಯೂ ಪ್ರಯಾಣವನ್ನು ಮಾಡಿ ದಿವ್ಯಕಾನನದಿಂದ ಶೋಭಿತವಾದ ನಿಯಮಗಳನ್ನು ಅನುಷ್ಠಾನಮಾಡುವ ನಿಯತಾಹಾರರಾದ ದಮ ಮತ್ತು ಶೌಚಗಳಿಂದ ಕೂಡಿದ ಅಬ್ಭಕ್ಷರೂ ವಾಯುಭಕ್ಷರೂ ಮತ್ತು ಪರ್ಣಭಕ್ಷರೂ, ಸ್ವರ್ಗಮಾರ್ಗವನ್ನು ಸೇರುವ ಇಚ್ಛೆಯುಳ್ಳವರೂ, ಮಹಾನುಭಾವರೂ, ನಾರುಮಡಿಯನ್ನೂ ಕೃಷ್ಣಾಜಿನವನ್ನೂ ಧರಿಸಿದವರೂ ಜಿತೇಂದ್ರಿಯರೂ ಆದ ತಪಸ್ವಿಗಳುವಾಸಿಸುವ ಒಂದು ಸುಂದರವಾದ ಅಸದೃಶವಾದ ದಿವ್ಯಕಾನನ ಶೋಭಿತವಾದ ತಪೋವನವನ್ನು ನೋಡಿದಳು. ಒಳ್ಳೆಯ ಹುಬ್ಬುಗಳನ್ನು ಕೇಶಗಳನ್ನು ಕಟಿಪ್ರದೇಶವನ್ನು ಸ್ತನಗಳನ್ನು ದಂತಪಂಕ್ತಿಗಳನ್ನು ಮುಖವನ್ನು ಕಾಂತಿಯನ್ನು ಪ್ರತಿಷ್ಠೆಯನ್ನು ಮತ್ತು ಒಳ್ಳೆಯ ನಡಿಗೆಯನ್ನು ಹೊಂದಿದ್ದ ವೀರಸೇನ ಸುತನಾದ ನಳನಿಗೆ ಪ್ರಿಯಳಾದ, ಯೋಶಿದ್ರತ್ನಳೂ, ಮಹಾನುಭಾವಳೂ, ಶೋಚನೀಯಳೂ ಆದ ಆ ದಮಯಂತಿಯು ನಾನಾ ತಾಪಸರಿಂದಲೂ ಕೂಡಿದ ಆ ಆಶ್ರಮ ಸ್ಥಳವನ್ನು ನೋಡಿದ ತಕ್ಷಣವೇ ಸ್ವಲ್ಪ ಸಮಾಧನಾವನ್ನು ತಂದು ಕೊಂಡಳು. ಅವಳು ವಿನಯದಿಂದ ಆ ತಪೋವೃದ್ಧರಿಗೆ ಬಾಗಿ ನಮಸ್ಕಾರವನ್ನು ಮಾಡಿ ನಿಂತಳು.
ಸ್ವಾಗತಂ ತ ಇತಿ ಪ್ರೋಕ್ತಾ ತೈಃ ಪ್ರಯತೇಂದ್ರಿಯಮಾನಸಾಃ |
ಪೂಜಾಂ ಚಕ್ರೇ ಯಥಾನ್ಯಾಯಮೃಷೀಣಾಂ ಸಾ ಮನಸ್ವಿನೀ ॥70॥
ಆ ಎಲ್ಲ ಜಿತಮನಸ್ಕರೂ, ಜಿತೇಂದ್ರಿಯರೂ ಆದ ತಾಪಸರಿಂದಲೂ ನಿನಗೆ ಸ್ವಾಗತವೆಂದು ಹೇಳಲ್ಪಟ್ಟವಳಾಗಿ ಧೈರ್ಯಶಾಲಿನಿಯಾದ ಆವಳು ಆ ಋಷಿಗಳಿಗೆ ವಿಧಿವತ್ತಾಗಿ ಪೂಜೆಯನ್ನು ಮಾಡಿದಳು.
ತತಸ್ತೇ ಪೂಜಿತಾ ವಿಪ್ರಾಃ ಪ್ರಯತೇಂದ್ರಿಯಮಾನಸಾಃ
ಆಸ್ಯತಾಮಿತ್ಯಥೋಚುಸ್ತೇ ಬ್ರೂಹಿ ಕಿಂ ಕರವಾಮಹೇ ॥71॥
ಅವಳಿಂದ ಪೂಜಿತರಾದ ಜಿತೇಂದ್ರಿಯರೂ ಜಿತಮನಸ್ಕರೂ ಆದ ಆ ವಿಪ್ರರು ಕುಳಿತುಕೋ ನಮ್ಮಿಂದ ಏನು ಆಗಬೇಕಾಗಿದೆ ಎಂದು ಅವಳನ್ನು ಕೇಳಿದರು.
ತಾನುವಾಚ ವರಾರೋಹಾ ಕಚ್ಚಿದ್ ಭಗವತಾಮಿಹ |
ತಪಃಸ್ವಗ್ನಿಷು ಧರ್ಮೇ ಚ ಸರ್ವೇಷು ಮೃಗಪಕ್ಷಿಷು ॥72॥

ಅಪಿ ಸ್ವಾಧ್ಯಾಯಯೋಗೇಷು ಧರ್ಮಯೋಗೇಷು ವಾ ಪುನಃ |
ಕುಶಲಂ ವಃ ಪ್ರಿಯತಪಾಃ ಸ್ವಧರ್ಮಾಚರಣೇಷು ಚ ॥73॥
ಅವರನ್ನು ಕುರಿತು ಪೂಜ್ಯರಾದ ತಮಗೆ ಇಲ್ಲಿ ತಪಸ್ಸು ಅಗ್ನಿಕಾರ್ಯಗಳು ಎಲ್ಲಾ ಧರ್ಮಗಳು ಸ್ವಾಧ್ಯಾಯ ಪ್ರವಚನಗಳು ಯೋಗಾಭ್ಯಾಸಗಳು ಮೃಗಪಕ್ಷಿಗಳು ಎಲ್ಲವೂ ಕುಶಲವೇ? ತಪಸ್ಸಿನಲ್ಲೇ ಪ್ರೀತಿಯುಳ್ಳ ಎಲೈ ಋಷಿಗಳೇ ನಿಮ್ಮ ಧರ್ಮಾಚರಣೆಗಳೆಲ್ಲಾ ನಿರ್ವಿಘ್ನವಾಗಿ ನಡೆಯುತ್ತಿವೆಯೇ ಎಂದು ಕೇಳಿದಳು.
ತೈಶ್ಚೋಕ್ತಂ ಕುಶಲಂ ಭದ್ರೇ ಸರ್ವತ್ರೇತಿ ತಪಸ್ವಿಭಿಃ |
ಬ್ರೂಹಿ ಸರ್ವಾನವದ್ಯಾಂಗಿ ಕಾ ತ್ವಂ ಕಿಂಚ ಚಿಕೀರ್ಷಸಿ ॥74॥
ಆ ತಪಸ್ವಿಗಳೂ ಸಹ ಮಂಗಳಸ್ವರೂಪಳೇ ಎಲ್ಲವೂ ಕ್ಷೇಮವಾಗಿದೆ. ಸರ್ವಾಂಗಸುಂದರಿಯೇ ನೀನು ಯಾರು ಏತಕ್ಕೆ ಇಲ್ಲಿಗೆ ಬಂದಿದ್ದೀಯೆ ಎಂದು ಹೇಳು ಎಂದು ಹೇಳಿದರು.
ದೃಷ್ಟ್ವೈವ ತೇ ಪರಂ ರೂಪಂ ದ್ಯುತಿಂ ಚ ಪರಮಾಮಿಹ |
ವಿಸ್ಮಯೋ ನಃ ಸಮುತ್ಪನ್ನಃ ಸಮಾಶ್ವಾಸಿಹಿ ಮಾ ಶುಚಃ ॥75॥
ನಿನ್ನ ಶ್ರೇಷ್ಠವಾದ ರೂಪವನ್ನು ಮತ್ತು ಶ್ರೇಷ್ಠವಾದ ಕಾಂತಿಯನ್ನು ನೋಡಿ ನಮಗೆ ವಿಸ್ಮಯವುಂಟಾಗಿದೆ. ಸಮಾಧಾನವನ್ನು ತಂದುಕೋ ಶೋಕಪಡಬೇಡ.
ಅಸ್ಯಾರಣ್ಯಸ್ಯ ಮಹತೀ ದೇವತಾ ವಾ ಮಹೀಭೃತಃ |
ಅಸ್ಯಾ ಹಿ ನದ್ಯಾಃ ಕಲ್ಯಾಣಿ ವದ ಸತ್ಯಮನಿಂದಿತೇ ॥76॥
ಕಲ್ಯಾಣಿಯೇ ನೀನು ಈ ಅರಣ್ಯದ ದೊಡ್ಡ ದೇವತೆಯೇ ಅಥವಾ ಪರ್ವತದ ಅಥವಾ ಈ ನದಿಯ ದೇವತೆಯೇ, ಅನಿಂದಿತೆಯೇ, ಸತ್ಯವನ್ನು ಹೇಳು ಎಂದು ಹೇಳಿದರು.
ಸಾಽಬ್ರವೀತ್ ತಾನೃಷೀನ್ ನಾಹಮರಣ್ಯಸ್ಯಾಸ್ಯ ದೇವತಾ |
ನ ಚಾಪ್ಯಸ್ಯ ಗಿರೇರ್ವಿಪ್ರಾ ನ ನದ್ಯಾ ದೇವತಾಽಪ್ಯಹಮ್ ॥77॥
ಮಾನುಷೀಂ ಮಾಂ ವಿಜಾನೀತ ಯೂಯಂ ಸರ್ವೇ ತಪೋಧನಾಃ |
ವಿಸ್ತರೇಣಾಭಿಧಾಸ್ಯಾಮಿ ತನ್ಮೇ ಶೃಣುತ ಸರ್ವಶಃ ॥78॥
ನಾನು ಈ ಅರಣ್ಯದ ದೇವತೆಯಲ್ಲ. ಎಲೈ ಬ್ರಾಹ್ಮಣರೇ, ನದಿಯ ದೇವತೆಯೂ ಅಲ್ಲ. ಪರ್ವತದೇವತೆಯೂ ಅಲ್ಲ. ತಪೋಧನರೇ ನಾನೊಬ್ಬ ಮನುಷ್ಯಳು ಎಂದು ನೀವೆಲ್ಲರೂ ತಿಳಿಯಿರಿ. ನನ್ನ ಕಥೆಯನ್ನು ವಿಸ್ತಾರವಾಗಿ ಹೇಳುತ್ತೇನೆ. ಕೇಳಿ.
ದಮಯಂತೀ
ವಿದರ್ಭೇಷು ಮಹೀಪಾಲೋ ಭೀಮೋ ನಾಮ ಮಹಾದ್ಯುತಿಃ |
ತಸ್ಯ ಮಾಂ ತನಯಾಂ ಸರ್ವೇ ಜಾನೀತ ದ್ವಿಜಸತ್ತಮಾಃ ॥79॥
ವಿದರ್ಭದೇಶದಲ್ಲಿ ಮಹಾತೇಜಸ್ವಿಯಾದ ಭೀಮನೆಂದು ರಾಜನಿದ್ದಾನೆ. ಎಲೈ ದ್ವಿಜಶ್ರೇಷ್ಠರೇ ನೀವೆಲ್ಲರೂ ನನ್ನನ್ನು ಅವನ ಮಗಳೆಂದು ತಿಳಿಯಿರಿ.
ನಿಷಧಾಧಿಪತಿಃ ಶ್ರೀಮಾನ್ ನಳೋ ನಾಮ ಮಹಾಯಶಾಃ |
ವೀರಃ ಸಂಗ್ರಾಮಜಿದ್ ವಿದ್ವಾನ್ ಮಮ ಭರ್ತಾ ವಿಶಾಂಪತಿಃ ॥80॥
ದೇವತಾಭ್ಯರ್ಚನಪರೋ ದ್ವಿಜಾತಿಜನವತ್ಸಲಃ |
ಗೋಪ್ತಾ ನಿಷಧವಂಶಸ್ಯ ಮಹಾಭಾಗೋ ಮಹಾದ್ಯುತಿಃ ॥81॥
ಸತ್ಯವಾಗ್ ಧರ್ಮವಿತ್ ಪ್ರಾಜ್ಞೋ ವಿಕ್ರಾಂತಃ ಶತ್ರುಸೂದನಃ |
ಬ್ರಹ್ಮಣ್ಯೋ ದೈವತಪರಃ ಶ್ರೀಮಾನ್ ಪರಪುರಂಜಯಃ ॥82॥
ನಿಷಧದೇಶಾಧಿಪತಿಯಾದ ಸಂಪದ್ಯುಕ್ತನಾದ ಮಹಾಯಶಸ್ವಿಯಾದ ಧೀರನೂ ಯುದ್ಧಗಳನ್ನು ಗೆಲ್ಲುವವನೂ ಮೇಧಾವಿಯೂ ಆದ ನಳನು ನನ್ನ ಪತಿ. ಅವನು ದೇವತಾರ್ಚನಶೀಲವುಳ್ಳವನು ಬ್ರಾಹ್ಮಣರಿಗೆ ವತ್ಸಲನಾದವನು ನಿಷಧವಂಶವನ್ನು ರಕ್ಷಿಸುವವನು ಮಹಾನುಭಾವನು ಮಹಾತೇಜಸ್ವಿ ಸತ್ಯವಚನವುಳ್ಳವನು ಧರ್ಮಜ್ಞನು ಪ್ರಾಜ್ಞನು ವಿಕ್ರಮಶಾಲಿಯು ಶತ್ರು ಸಂಹಾರಕನು. ಇಂದ್ರನಿಗೆ ಸಮಾನವಾದ ಕಾಂತಿಯುಳ್ಳವನು. ಅಂತಹ ನೃಪಶ್ರೇಷ್ಠನಾದ ನಳನು ನನ್ನ ಪತಿ
ನಳೋ ನಾಮ ನೃಪಶ್ರೇಷ್ಠೋ ದೇವರಾಜಸಮದ್ಯುತಿಃ |
ಮಮ ಭರ್ತಾ ವಿಶಾಲಾಕ್ಷಃ ಪೂರ್ಣೇಂದುವದನೋಽರಿಹಾ ॥83॥
ಆಹರ್ತಾ ಕ್ರತುಮುಖ್ಯಾನಾಂ ವೇದವೇದಾಂಗಪಾರಗಃ |
ಸಪತ್ನಾನಾಂ ಮೃಧೇ ಹಂತಾ ರವಿಸೋಮಸಮಪ್ರಭಃ ॥84॥
ಸ ಕೈಶ್ಚಿನ್ನಿಕೃತಿಪ್ರಜ್ಞೈರಕಲ್ಯಾಣೈರ್ನರಾಧಮೈಃ |
ಆಹೂಯ ಪೃಥಿವೀಪಾಲಃ ಸತ್ಯಧರ್ಮಪರಾಯಣಃ ॥85॥
ದೇವನೇ ಕುಶಲೈರ್ಜಿಹ್ಮೈರ್ಜಿತೋ ರಾಜ್ಯಂ ವಸೂನಿ ಚ |
ವಿವಾಸಿತಶ್ಚ ನಗರಾದ್ ವನವಾಸಮುಪೇಯಿವಾನ್॥86॥
ಶ್ರೇಷ್ಠವಾದ ಯಾಗಗಳನ್ನು ಆಚರಿಸುವವನೂ ವೇದ ವೇದಾಂಗ ಪಾರಂಗತನಾದವನೂ ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸುವವನೂ ಸೂರ್ಯಚಂದ್ರರಿಗೆ ಸಮಾನವಾದ ಕಾಂತಿಯುಳ್ಳವನೂ. ರಾಜನೂ ಸತ್ಯಧರ್ಮಪರಾಯಣನೂ ಆದ ಅವನನ್ನು ಮೋಸದ ಬುದ್ಧಿಯುಳ್ಳ ಅಶುಭರಾದ ಕೆಲವು ನರಾಧಮರು ಅಕ್ಷ ಕ್ರೀಡೆಯಲ್ಲಿ ಕುಶಲರಾದ ಕೆಲವು ಮೋಸಗಾರರು ದ್ಯೂತಕ್ಕೆ ಕರೆದು ಅವನನ್ನು ಸೋಲಿಸಿದರು. ಅವರು ಅವನ ರಾಜ್ಯವನ್ನೂ ಸಂಪತ್ತನ್ನೂ ಕಸಿದುಕೊಂಡು ನಗರದಿಂದ ಹೊರಗೆ ಕಳುಹಿಸಿದರು. ಅವನು

ಈಗ ವನವಾಸವನ್ನು ಹೊಂದಿದ್ದಾನೆ.
ತಸ್ಯ ಮಾಮವಗಚ್ಛಧ್ವಂ ಭಾರ್ಯಾಂ ರಾಜರ್ಷಭಸ್ಯ ವೈ |
ದಮಯಂತೀತಿ ವಿಖ್ಯಾತಾಂ ಭರ್ತುರ್ದರ್ಶನಲಾಲಸಾಮ್ ॥87॥
ನನ್ನನ್ನು ದಮಯಂತಿಯೆಂದೂ ಪ್ರಸಿದ್ಧಳಾದ ಪತಿಯನ್ನು ನೋಡುವ ಮಹದಾಸೆಯನ್ನು ಹೊಂದಿರುವ ಆ ರಾಜಶ್ರೇಷ್ಠನ ಪತ್ನಿಯೆಂದೂ ನೀವು ತಿಳಿಯಿರಿ.
ಸಾ ವನಾನಿ ಗಿರೀಂಶ್ಚೈವ ಸರಾಂಸಿ ಸರಿತಸ್ತಥಾ |
ಪಲ್ವಲಾನಿ ಚ ಸರ್ವಾಣಿ ತಥಾಽರಣ್ಯಾನಿ ಸರ್ವಶಃ ॥88॥
ಅನ್ವೇಷಂತೀ ಸ್ವಭರ್ತಾರಂ ನಳಂ ರಣವಿಶಾರದಮ್ |
ಮಹಾತ್ಮಾನಂ ಕೃತಾಸ್ತ್ರಂ ಚ ವಿಚರಾಮೀಹ ದುಃಖಿತಾ ॥89॥
ಅಂತಹ ನಾನು ರಣವಿಶಾರದನಾದ ಮಹಾತ್ಮನಾದ ಅಸ್ತ್ರವಿದ್ಯೆಗಳನ್ನು ಬಲ್ಲ ನನ್ನ ಪತಿಯನ್ನು ಹುಡುಕುತ್ತಾ ದುಃಖಿತಳಾಗಿ ವನಗಳನ್ನು ಪರ್ವತಗಳನ್ನೂ ಸರೋವರಗಳನ್ನೂ ನದಿಗಳನ್ನೂ ಜೌಗುಗಳನ್ನೂ ಎಲ್ಲ ಅರಣ್ಯಗಳನ್ನೂ ಸಂಚರಿಸುತ್ತಿದ್ದೇನೆ.
ಕಚ್ಚಿದ್ ಭಗವತಾಂ ಪುಣ್ಯಂ ತಪೋವನಮಿದಂ ಮಹತ್ |
ಭವೇತ್ ಪ್ರಾಪ್ತೋ ನಳೋ ನಾಮ ನಿಷಧಾನಾಂ ಜನಾಧಿಪಃ ॥90॥
ಯತ್ಕೃತೇಽಹಮಿದಂ ದುರ್ಗಂ ಪ್ರಪನ್ನಾ ಭೃಶದಾರುಣಮ್ |
ವನಂ ಪ್ರತಿಭಯಂ ಘೋರಂ ಶಾರ್ದೂಲಮೃಗಸೇವಿತಮ್ ॥91॥
ಯಾವ ನಳನ ಸಲುವಾಗಿ ನಾನು ದುರ್ಗಮವಾದ ಬಹಳ ದಾರುಣವಾದ ಭಯಜನಕವಾದ ಶಾರ್ದೂಲ ಮೊದಲಾದ ಮೃಗಗಳಿಂದ ಕೂಡಿದ ಈ ಅರಣ್ಯಕ್ಕೆ ಬಂದಿದ್ದೇನೆಯೋ ಅಂತಹ ನಿಷಧಾಧಿಪತಿಯಾದ ನಳನು ಪೂಜ್ಯರಾದ ತಮ್ಮ ಈ ಶ್ರೇಷ್ಠವಾದ ಮತ್ತು ಪವಿತ್ರವಾದ ತಪೋವನಕ್ಕೆ ಎಂದಾದರೂ ಪ್ರಾಪ್ತನಾಗಿದ್ದಾನೆಯೇ?
ಯದಿ ಕೈಶ್ಚಿದಹೋರಾತ್ರೈರ್ನ ದ್ರಕ್ಷ್ಯಾಮಿ ನಳಂ ನೃಪಮ್ |
ಆತ್ಮಾನಂ ಶ್ರೇಯಸಾ ಯೋಕ್ಷ್ಯೇ ದೇಹಸ್ಯಾಸ್ಯ ವಿಮೋಕ್ಷಣಾತ್ ॥92॥
ಕೋ ನು ಮೇ ಜೀವಿತೇನಾರ್ಥಸ್ತಮೃತೇ ಪುರುಷರ್ಷಭಮ್ |
ಕಥಂ ಭವಿಷ್ಯಾಮ್ಯದ್ಯಾಹಂ ಭರ್ತೃಶೋಕಾಭಿಪೀಡಿತಾ ॥93॥
ಇನ್ನು ಕೆಲವು ಹಗಲು ರಾತ್ರಿಗಳಲ್ಲಿ ನಾನು ರಾಜನಾದ ನಳನನ್ನು ನೋಡದಿದ್ದರೆ ದೇಹತ್ಯಾಗವನ್ನುಮಾಡಿ ನನಗೆ ಶ್ರೇಯಸ್ಸನ್ನು ಮಾಡಿಕೊಳ್ಳುವೆನು. ಆ ಪುರುಷಶ್ರೇಷ್ಠನಿಲ್ಲದೆ ನಾನು ಬದುಕಿರುವುದಕ್ಕೆ ಏನು ಪ್ರಯೋಜನವಿದೆ? ಭರ್ತೃಶೋಕದಿಂದ ಪೀಡಿತಳಾದ ನಾನು ಈ ದಿನ ಹೇಗೆ ಬದುಕುವೆನು?
ತಥಾ ವಿಲಪತೀಮೇಕಾಮರಣ್ಯೇ ಭೀಮನಂದಿನೀಮ್ |
ದಮಯಂತೀಮಥೋಚುಸ್ತೇ ತಾಪಸಾಃ ಸತ್ಯವಾದಿನಃ ॥94॥
ಹೀಗೆ ಅರಣ್ಯದಲ್ಲಿ ಏಕಾಕಿಯಾಗಿ ವಿಲಾಪವನ್ನು ಮಾಡುತ್ತಿದ್ದ ಭೀಮರಾಜಕುಮಾರಿಯಾದ ದಮಯಂತಿಯನ್ನು ಕುರಿತು ಸತ್ಯವಾದಿಗಳಾದ ಆ ತಪಸ್ವಿಗಳು ಮಾತನಾಡಿದರು.
ಉದರ್ಕಸ್ತವ ಕಲ್ಯಾಣಿ ಕಲ್ಯಾಣೋ ಭವಿತಾ ಶುಭೇ |
ವಯಂ ಪಶ್ಯಾಮ ತಪಸಾ ಕ್ಷಿಪ್ರಂ ದ್ರಕ್ಷ್ಯಸಿ ನೈಷಧಮ್ ॥95॥
ನಿಷಧಾನಾಮಧಿಪತಿಂ ನಳಂ ರಿಪುನಿಘಾತಿನಮ್ |
ಭೈಮಿ ಧರ್ಮಭೃತಾಂ ಶ್ರೇಷ್ಠಂ ದ್ರಷ್ಟಾಸಿ ವಿಗತಜ್ವರಮ್ ॥96॥
ಕಲ್ಯಾಣಿಯೇ ಶುಭಳಾದವಳೇ ನಿನಗೆ ಶ್ರೇಷ್ಠವಾದ ಕಲ್ಯಾಣವು ಉಂಟಾಗುವುದನ್ನು ತಪೋದೃಷ್ಟಿಯಿಂದ ನಾವು ನೋಡುತ್ತಿದ್ದೇವೆ. ನೀನು ಬೇಗ ನೈಷಧನನ್ನು ನೋಡುವಿ. ಎಲೌ ಭೀಮರಾಜಕುಮಾರಿಯೇ ನಿಷಧದೇಶಾಧಿಪತಿಯಾದ ಶತ್ರುಸಂಹಾರಕನಾದ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ನಳನು ನಿಶ್ಚಿಂತೆಯಿಂದ ಇರುವುದನ್ನು ನೀನು ನೋಡುವಿ.
ವಿಮುಕ್ತಂ ಸರ್ವಪಾಪೇಭ್ಯಃ ಸರ್ವರತ್ನವಿಭೂಷಿತಮ್ |
ತದೇವ ನಗರಂ ಶ್ರೇಷ್ಠಂ ಪ್ರಶಾಸಂತಮರಿಂದಮಮ್ ॥97॥
ದ್ವಿಷತಾಂ ಭಯಕರ್ತಾರಂ ಸುಹೃದಾಂ ಶೋಕನಾಶನಮ್ |
ಪತಿಮೇಷ್ಯಸಿ ಕಲ್ಯಾಣಿ ಕಲ್ಯಾಣಾಭಿಜನಂ ನೃಪಮ್ ॥98॥
ಎಲ್ಲ ಪಾಪಗಳಿಂದ ಮತ್ತು ದುಃಖಗಳಿಂದ ಮುಕ್ತನಾಗಿ ಸರ್ವರತ್ನವಿಭೂಷಿತನಾಗಿ ಶತ್ರುಗಳಿಗೆ ಭಯಂಕರನಾಗಿ ಹಿತೈಷಿಗಳಿಗೆ ಶೋಕನಾಶಕನಾಗಿ ಅದೇ ಶ್ರೇಷ್ಠವಾದ ನಗರವನ್ನು ಆಳುವ ಅರಿಂದಮನಾದ ಕಲ್ಯಾಣಕುಲದಲ್ಲಿ ಪ್ರಸೂತನಾದ ರಾಜನಾದ ನಿನ್ನ ಪತಿಯನ್ನು ಎಲೌ ಕಲ್ಯಾಣಿಯೇ, ನೀನು ಬೇಗ ಸೇರುವಿ.
ಏವಮುಕತ್ವ ನಳಸ್ಯೇಷ್ಟಾಂ ಮಹಿಷೀಂ ಪಾರ್ಥಿವಾತ್ಮಜಾಮ್ |
ಅಂತರ್ಹಿತಾಸ್ತಾಪಸಾಸ್ತೇ ಸಾಗ್ನಿಹೋತ್ರಾಶ್ರಮಾಸ್ತಥಾ ॥99॥
ಆ ತಾಪಸರು ನಳನಿಗೆ ಪ್ರೀತಿಪಾತ್ರಳಾದ ರಾಜಕುಮಾರಿಯಾದ ಆ ರಾಣಿಗೆ ಹೀಗೆ ಹೇಳಿ ತಮ್ಮ ಅಗ್ನಿಹೋತ್ರ ಮತ್ತು ಆಶ್ರಮಗಳ ಜೊತೆಯಲ್ಲಿ ಅಂತರ್ಧಾನವನ್ನು ಹೊಂದಿದರು.
ಸಾ ದೃಷ್ಟ್ವಾ ಮಹದಾಶ್ಚರ್ಯಂ ವಿಸ್ಮಿತಾ ತ್ವಭವತ್ ತತಃ |
ದಮಯಂತ್ಯನವದ್ಯಾಂಗೀ ವೀರಸೇನನೃಪಸ್ನುಷಾ ॥100॥
ವೀರಸೇನನ ಸೊಸೆಯಾದ ಸುಂದರಾಂಗಿಯಾದ ಆ ದಮಯಂತಿಯು ಆ ಮಹದಾಶ್ಚರ್ಯವನ್ನು ನೋಡಿ ವಿಸ್ಮಿತಳಾದಳು.

ಚಿಂತಯಾಮಾಸ ವೈದರ್ಭೀ ಕಿಮೇತದ್ ದೃಷ್ಟವತ್ಯಹಮ್ |
ಕಿಂ ನು ಸ್ವಪ್ನೋ ಮಯಾ ದೃಷ್ಟಃ ಕೋಽಯಂ ವಿಧಿರಿಹಾಗತಃ |
ಕ್ವ ನು ತೇ ತಾಪಸಾಃ ಸರ್ವೇ ಕ್ವ ತದಾಶ್ರಮಮಂಡಲಮ್ ॥101॥
ಕ್ವ ಸಾ ಪುಣ್ಯಜಲಾ ರಮ್ಯಾ ನಾನಾದ್ವಿಜನಿಷೇವಿತಾ |
ನದೀ ತೇ ಚ ನಗಾ ಹೃದ್ಯಾಃ ಫಲಪುಷ್ಪೋಪಶೋಭಿತಾಃ ॥102॥
ದಮಯಂತಿಯು ನಾನು ಏನನ್ನು ನೋಡಿದೆ? ನಾನು ನೋಡಿದುದು ಇದೇನು ಸ್ವಪ್ನವೋ? ಇದು ಎಂತಹ ಒಂದು ಸಂದರ್ಭವಿಲ್ಲಿ ಬಂದಿತು? ಆ ತಪಸ್ವಿಗಳೆಲ್ಲಾ ಎಲ್ಲಿ? ಆ ತಪೋವನವೆಲ್ಲಿ? ನಾನಾ ಪಕ್ಷಿಗಳಿಂದ ಕೂಡಿದ ಪವಿತ್ರವಾದ ಜಲದಿಂದ ಕೂಡಿದ ಮನೋಹರವಾದ ನದಿಯೆಲ್ಲಿ? ಫಲಪುಷ್ಪಗಳಿಂದ ಭರಿತವಾದ ಮನೋಹರವಾದ ಆ ಪರ್ವತಗಳೆಲ್ಲಿ? ಎಂದು ಚಿಂತಿಸಿದಳು.
ಇತ್ಯೇತನ್ನರಶಾರ್ದೂಲ ವಿಸ್ಮಿತಾ ಕಮಲೇಕ್ಷಣಾ |
ಧ್ಯಾತ್ವಾ ಚಿರಂ ಭೀಮಸುತಾ ದಮಯಂತೀ ಶುಚಿಸ್ಮಿತಾ |
ಭರ್ತೃಶೋಕಕೃಶಾ ದೀನಾ ವಿವರ್ಣವದನಾಽಭವತ್ ॥103॥
ಎಲೈ ರಾಜಶಾರ್ದೂಲನೇ ಆ ಕಮಲನೇತ್ರೆಯಾದ ಭೀಮಸುತೆಯಾದ ಶುಚಿಸ್ಮಿತೆಯಾದ ಭರ್ತೃಶೋಕದಿಂದ ಕೃಶಳಾದ ದಮಯಂತಿಯು ವಿಸ್ಮಯಗೊಂಡು ಬಹಳ ಸಮಯದವರೆಗೆ ಇದನ್ನೇ ಚಿಂತಿಸಿ ಪುನಃ ದೈನ್ಯದಿಂದಲೂ ಮತ್ತು ಕಾಂತಿಹೀನ ಮುಖದಿಂದಲೂ ಕೂಡಿದವಳಾದಳು.
ಸಾ ಗತಾ ಚಾರಾಂ ಭೂಮಿಂ ಬಾಷ್ಪಸಂದಿಗ್ಧಯಾ ಗಿರಾ |
ವಿಲಲಾಪಾಶ್ರುಪೂರ್ಣಾಕ್ಷೀ ದೃಷ್ಟ್ವಾಽಶೋಕತರುಂ ತತಃ ॥104॥
ಅವಳು ಇನ್ನೊಂದು ದಿಕ್ಕಿಗೆ ಹೋಗಿ ಒಂದು ಅಶೋಕವೃಕ್ಷವನ್ನು ನೋಡಿ ಕಣ್ಣುಗಳಲ್ಲಿ ನೀರುತುಂಬಿಕೊಂಡು ಕಣ್ಣೀರಿನಿಂದ ಗದ್ಗದವಾದ ಕಂಠದಿಂದ ವಿಲಾಪವನ್ನು ಮಾಡಿದಳು.
ಉಪಗಮ್ಯ ತರುಶ್ರೇಷ್ಠಮಶೋಕಂ ಪುಷ್ಪಿತಂ ವನೇ |
ಪಲ್ಲವಾಪೀಡಿತಂ ಹೃದ್ಯಂ ವಿಹಂಗೈರಪಿ ನಾದಿತಮ್ ॥105॥
ಆ ಕಾಡಿನಲ್ಲಿ ಪುಷ್ಪಗಳು ಮತ್ತು ಚಿಗುರುಗಳಿಂದ ಕೂಡಿದ್ದ ಪಕ್ಷಿಗಳನಾದದಿಂದ ಕೂಡಿದ್ದ ಮನೋಹರವಾದ ಮತ್ತು ಶ್ರೇಷ್ಠವಾದ ಒಂದು ಅಶೋಕವೃಕ್ಷವನ್ನು ಸಮೀಪಿಸಿದಳು. (ವಿಲಾಪವನ್ನು ಮಾಡಿದಳು.)
ದಮಯಂತೀ
ಅಹೋ ವನತರುಃ ಶ್ರೀಮಾನ್ ಶೋಭತೇಽಸ್ಮಿನ್ ವನಾಂತರೇ |
ಆಪೀಡೈರ್ಬಹುಭಿರ್ಭಾತಿ ಶ್ರೀಮಾನ್ ದ್ರುಮಿಳರಾಡಿವ ॥106॥
ಓಹೋ ಈ ವನವೃಕ್ಷವು ಈ ವನಪ್ರದೇಶದಲ್ಲಿ ಅನೇಕ ಅಲಂಕಾರಗಳಿಂದ ಕೂಡಿದ ಸಂಪದ್ಯುಕ್ತನಾದ ದ್ರುಮಿಳರಾಜನಂತೆ ಶೋಭಿಸುತ್ತಿದೆ.
ಅಶೋಕ ಶೋಕಾಪನುದ ಶೋಕೋಪಹತಚೇತಸಮ್ |
ತ್ವನ್ನಾಮ್ನೀಂ ವೈ ಕುರು ಕ್ಷಿಪ್ರಂ ಪ್ರಿಯಸಂದರ್ಶನಾದ್ಧಿ ಮಾಮ್ ॥107॥
ಅಶೋಕಾಂ ಕುರು ಮಾಂ ಕ್ಷಿಪ್ರಮಶೋಕ ಪ್ರಿಯದರ್ಶನ |
ವೀತಶೋಕಭಯಾಬಾಧಂ ಕಚ್ಚಿತ್ತ್ವಂ ದೃಷ್ಟವಾನ್ ನೃಪಮ್ ॥108॥
ಎಲೈ ಅಶೋಕವೃಕ್ಷವೇ, ಶೋಕನಾಶಕನೇ, ಶೋಕದಿಂದ ಪೀಡಿತವಾದ ಮನಸ್ಸುಳ್ಳ ನನಗೆ ನನ್ನ ಪ್ರಿಯನಾದ ನಳನನ್ನು ಬೇಗ ತೋರಿಸಿ ನನ್ನನ್ನು ನಿನ್ನ ಹೆಸರನ್ನೇ ಉಳ್ಳವಳನ್ನಾಗಿ ಮಾಡು. ಎಲೈ ಅಶೋಕನೇ ಎಲೈ ಪ್ರಿಯದರ್ಶನನೇ ಬೇಗ ನನ್ನ ಶೋಕವನ್ನು ಪರಿಹರಿಸು. ಶೋಕಭಯ ಮುಕ್ತನಾದ ರಾಜನನ್ನು ನೀನೇನಾದರೂ ನೋಡಿದೆಯಾ!
ನಳಂ ನಾಮಾರಿದಮನಂ ದಮಯಂತ್ಯಾಃ ಪ್ರಿಯಂ ಪತಿಮ್ |
ನಿಷಧಾನಾಮಧಿಪತಿಂ ದೃಷ್ಟವಾನಸಿ ಮೇ ಪ್ರಿಯಮ್ ॥109॥
ಏಕವಸ್ತ್ರಾರ್ಧಸಂವೀತಂ ಸುಕುಮಾರತನುತ್ವಚಮ್ |
ವ್ಯಸನೇನಾರ್ದಿತಂ ವೀರಮರಣ್ಯಮಿದಮಾಗತಮ್ ॥110॥
ಒಂದು ವಸ್ತ್ರದ ತುಂಡನ್ನು ಸುತ್ತಿಕೊಂಡು ಸುಕುಮಾರ ಶರೀರವನ್ನು ಹೊಂದಿರುವ ದುಃಖದಿಂದ ಪೀಡಿತನಾದ ಈ ಅರಣ್ಯಕ್ಕೆ ಬಂದಂತಹ ವೀರನೂ ಪ್ರಿಯನೂ ಶತ್ರುದಮನನೂ ದಮಯಂತಿಯ ಪ್ರಿಯಪತಿಯೂ ಆದ ನಿಷಧರಾಜನಾದ ನಳನನ್ನು ನೀನು ನೋಡಿದೆಯಾ?
ಯಥಾ ವಿಶೋಕಾ ಗಚ್ಛೇಯಮಶೋಕವರ ತತ್ ಕುರು |
ಸತ್ಯನಾಮಾ ಭವಾಶೋಕ ಮಮ ಶೋಕವಿನಾಶನಾತ್ ॥111॥
ಎಲೈ ಅಶೋಕಶ್ರೇಷ್ಠನೇ ನಾನು ಇಲ್ಲಿಂದ ಶೋಕರಹಿತಳಾಗಿ ಹೋಗುವಂತೆ ಮಾಡು. ನನ್ನ ಶೋಕವನ್ನು ನಾಶಮಾಡಿ ನಿನ್ನ ಅಶೋಕವೆಂಬ ಹೆಸರನ್ನು ಸಾರ್ಥಕವನ್ನಾಗಿ ಮಾಡಿಕೋ.
ಏವಂ ಸಾಽಶೋಕವೃಕ್ಷಂ ತಮಾರ್ತಾ ತ್ರಿರುಪಗಮ್ಯ ಸಾ |
ಜಗಾಮ ದಾರುಣಂ ದೇಶಂ ವೈದರ್ಭೀ ಕಮಲೇಕ್ಷಣಾ ॥112॥
ಹೀಗೆ ಕಮಲನೇತ್ರೆಯಾದ ಆ ವೈದರ್ಭಿಯು ಆರ್ತಳಾಗಿ ಆ ಅಶೋಕವೃಕ್ಷಕ್ಕೆ ಮೂರು ಪ್ರದಕ್ಷಿಣೆಯನ್ನು ಮಾಡಿ ಅಲ್ಲಿಂದ ದಾರುಣವಾದ ಇನ್ನೊಂದು ದೇಶಕ್ಕೆ ಹೊರಟಳು.
ಸಾ ದದರ್ಶ ನಗಾನ್ ನೈಕಾನ್ ಸರಾಂಸಿ ಸರಿತಸ್ತಥಾ |

ನೈಕಾಂಶ್ಚ ಪರ್ವತಾನ್ ರಮ್ಯಾನ್ ನೈಕಾಂಶ್ಚ ಮೃಗಪಕ್ಷಿಣಃ ॥113॥
ಕಂದರಾಂಶ್ಚ ನಿತಂಬಾಂಶ್ಚ ಪರ್ವತಾಂಶ್ಚ ಸಕಿಂಶುಕಾನ್ |
ದದರ್ಶ ಸಾ ಭೀಮಸುತಾ ಪತಿಮನ್ವೇಷತೀ ತದಾ ॥114॥
ಪತಿಯನ್ನು ಹುಡುಕುತ್ತಾ ಹೊರಟ ಆ ಭೀಮಸುತೆಯು ಅನೇಕ ಪರ್ವತಗಳನ್ನೂ ಸರೋವರಗಳನ್ನೂ ನದಿಗಳನ್ನೂ ಸುಂದರವಾದ ಅನೇಕ ಮೃಗಪರ್ವತಗಳನ್ನೂ ಅನೇಕ ಮೃಗಪಕ್ಷಿಗಳನ್ನೂ ಗುಹೆಗಳನ್ನೂ ಪರ್ವತದ ತಪ್ಪಲು ಪ್ರದೇಶಗಳನ್ನೂ ಕಿಂಶುಕ ವೃಕ್ಷಗಳಿಂದ ಕೂಡಿದ ಅನೇಕ ಭೂಪ್ರದೇಶಗಳನ್ನೂ ನೋಡಿದಳು.
ಸಾ ಗತ್ವಾ ದೂರಮಧ್ವಾನಂ ದಮಯಂತೀ ಶುಚಿಸ್ಮಿತಾ |
ದದರ್ಶಾಥ ಮಹಾಸಾರ್ಥಂ ಹಸ್ತ್ಯಶ್ವರಥಸಂಕುಲಮ್ ॥115॥
ಉತ್ತರಂತಂ ನದೀಂ ರಮ್ಯಾಂ ಪ್ರಸನ್ನಸಲಿಲಾಂ ಶುಭಾಮ್ |
ಸುಶೀತತೋಯಾಂ ವಿಸ್ತೀರ್ಣಾಂ ಹ್ಲಾದಿನೀಂ ಪಾದಪೈರ್ವೃತಾಮ್ ॥
ಪ್ರೋದ್ಘುಷ್ಟಾಂ ಕ್ರೌಂಚಕುರರೈಶ್ಚಕ್ರವಾಕೈಶ್ಚ ಶೋಭಿತಾಮ್ |
ಕೂರ್ಮಗ್ರಾಹಝಷಾಕೀರ್ಣಾಂ ಪುಲಿನದ್ವೀಪಶೋಭಿತಾಮ್ ॥117॥
ಆ ಶುಚಿಸ್ಮಿತೆಯಾದ ದಮಯಂತಿಯು ಬಹಳ ದೂರನಡೆದು ಹಸ್ತ್ಯಶ್ವರಥಗಳಿಂದ ಕೂಡಿದ್ದ ಒಂದು ವರ್ತಕರ ಸಮುದಾಯವನ್ನು ನೋಡಿದಳು ಆ ಗುಂಪು ಸ್ವಚ್ಛವಾದ ಶುಭವಾದ ಶೀತಲವಾದ ನೀರಿನಿಂದ ಕೂಡಿದ ವಿಸ್ತಾರವಾದ ಹರಿಯುವ ನೀರಿನ ಘೋಷದಿಂದ ಶೋಭಿತವಾದ, ಕೀರವೃಕ್ಷಗಳಿಂದ ಆವೃತವಾದ, ಆಮೆ ಮೀನು ಮೊಸಳೆಗಳಿಂದ ತುಂಬಿದ, ಮಧ್ಯದಲ್ಲಿ ಮರಳಿನ ಸಣ್ಣ ದ್ವೀಪಗಳಿರುವ, ನದಿಯನ್ನು ದಾಟುತ್ತಿತ್ತು.
ಸಾ ದೃಷ್ಟ್ವೈವ ಮಹಾಸಾರ್ಥಂ ದಮಯಂತೀ ಯಶಸ್ವಿನೀ |
ಉಪಸರ್ಪ್ಯ ವರಾರೋಹಾ ಜನಮಧ್ಯಂ ವಿವೇಶ ಹ ॥118॥
ಉನ್ಮತ್ತರೂಪಾ ಶೋಕಾರ್ತಾ ತಥಾ ವಸತ್ರಾರ್ಧಸಂವೃತಾ |
ಕೃಶಾ ವಿವರ್ಣವದನಾ ಪಾಂಸುಧ್ವಸ್ತಶಿರೋರುಹಾ ॥119॥
ಆ ಸಮುದಾಯವನ್ನು ನೋಡಿದ ಕೂಡಲೇ ಹುಚ್ಚಿಯಂತಿದ್ದ ಶೋಕಾರ್ತಳಾದ ಅರ್ಧವಸ್ತ್ರವನ್ನು ಧರಿಸಿದ್ದ ಕೃಶಳೂ ಕಾಂತಿಹೀನಳೂ ಧೂಳಿನಿಂದ ತುಂಬಿಸ ಕೇಶಪಾಶವುಳ್ಳವಳೂ ಸುಂದರಿಯೂ ಕೀರ್ತಿವಂತಳೂ ಆದ ದಮಯಂತಿಯು ಅದನ್ನು ಸಮೀಪಿಸಿ ಜನಗಳ ಮಧ್ಯದಲ್ಲಿ ಸೇರಿದಳು.
ತಾಂ ದೃಷ್ಟ್ವಾ ತತ್ರ ಮನುಜಾಃ ಕೇಚಿದ್ ಭೀತಾಃ ಪ್ರದುದ್ರುವುಃ |
ಕೇಚಿಚ್ಚಿಂತಾಪರಾಸ್ತಸ್ಥುಃ ಕೇಚಿತ್ ತತ್ರ ವಿಚುಕ್ರುಶುಃ ॥120॥
ಪ್ರಹಸಂತಿ ಸ್ಮ ತಾಂ ಕೇಚಿನ್ನ ಹ್ಯಸೂಯಂತಿ ಚಾಪರೇ |
ಕುರ್ವಂತ್ಯಸ್ಯಾಂ ದಯಾಂ ಕೇಚಿತ್ ಪಪ್ರಚ್ಛುಶ್ಚಾಪಿ ಭಾರತ ॥121॥
ಅವಳನ್ನು ನೋಡಿ ಅಲ್ಲಿದ್ದ ಕೆಲವು ಜನರು ಭಯದಿಂದ ಓಡಿ ಹೋದರು. ಕೆಲವರು ಚಿಂತಾಕ್ರಾಂತರಾಗಿ ಅಲ್ಲಿಯೇ ನಿಂತರು. ಕೆಲವರು ಕಿರುಚಿಕೊಂಡರು. ಕೆಲವರು ಗಟ್ಟಿಯಾಗಿ ನಕ್ಕರು. ಇನ್ನು ಕೆಲವರು ಅವಳನ್ನು ನೋಡಿ ಅಸೂಯೆಯನ್ನು ಪಡಲಿಲ್ಲ. ಇನ್ನು ಕೆಲವರು ಅವಳಲ್ಲಿ ದಯೆಯನ್ನು ಮಾಡಿದರು ಎಲೈ ಭಾರತನೇ ಕೆಲವರು ಅವಳನ್ನು ಕುರಿತು ಹೀಗೆ ಕೇಳಿದರು.
ಕಾऽಸಿ ಕಸ್ಯಾಸಿ ಕಲ್ಯಾಣಿ ಕಿಂ ವಾ ಮೃಗಯಸೇ ವನೇ |
ತ್ವಾಂ ದೃಷ್ಟ್ವಾ ವ್ಯಥಿತಾಶ್ಚೈಕೇ ನರಾಃ ಸಾರ್ಥನಿವಾಸಿನಃ ॥122॥
ಕಲ್ಯಾಣಿಯೇ, ನೀನು ಯಾರು? ಯಾರಪತ್ನಿ? ಈ ಕಾಡಿನಲ್ಲಿ ಏನನ್ನು ಹುಡುಕುತ್ತಿದ್ದೀಯೆ? ನಿನ್ನನ್ನು ನೋಡಿ ಈ ಗುಂಪಿನಲ್ಲಿರುವ ಜನರು ವ್ಯಥಿತರಾಗಿದ್ದಾರೆ.
ವದ ಸತ್ಯಂ ವನಸ್ಯಾಸ್ಯ ಪರ್ವತಸ್ಯಾಥವಾ ದಿಶಃ |
ದೇವತಾ ತ್ವಂ ಹಿ ಕಲ್ಯಾಣಿ ತ್ವಾಂ ವಯಂ ಶರಣಂ ಗತಾಃ ॥123॥
ಕಲ್ಯಾಣಿಯೇ, ಸತ್ಯವನ್ನು ಹೇಳು ನೀನು ಈ ವನದ ದೇವತೆಯೆ ಅಥವಾ ಪರ್ವತದ ದೇವತೆಯೆ ಅಥವಾ ದಿಗ್ದೇವತೆಯೇ? ನಾವು ನಿನಗೆ ಶರಣಾಗತರಾಗಿದ್ದೇವೆ.
ಯಕ್ಷೀ ವಾ ರಾಕ್ಷಸೀ ವಾ ತ್ವಮುತಾಹೋऽಸಿ ಸುರಾಂಗನಾ |
ಸರ್ವಥಾ ಕುರು ನಃ ಸ್ವಸ್ತಿ ರಕ್ಷ ಚಾಸ್ಮಾನನಿಂದಿತೇ ॥124॥
ಎಲೈ ಅನಿಂದಿತೆಯೇ ನೀನು ಯಕ್ಷಿಯಾಗಿದ್ದರೂ ರಾಕ್ಷಸಿಯಾಗಿದ್ದರೂ ಅಥವಾ ದೇವತಾ ಸ್ತ್ರೀಯಾಗಿದ್ದರೂ ಸರ್ವಥಾ ನಮಗೆ ಕ್ಷೇಮವನ್ನುಂಟುಮಾಡಿ ನಮ್ಮನ್ನು ರಕ್ಷಿಸು.
ಯಥಾऽಯಂ ಸರ್ವಥಾ ಸಾರ್ಥಃ ಕ್ಷೇಮೀ ಶೀಘ್ರಮಿತೋ ವ್ರಜೇತ್ |
ತಥಾ ವಿಧತ್ಸ್ವ ಕಲ್ಯಾಣಿ ಯಥಾ ಶ್ರೇಯೋ ಹಿ ನೋ ಭವೇತ್ ॥125॥
ಎಲೌ ಕಲ್ಯಾಣಿಯೇ ಈ ವರ್ತಕರ ಸಮುದಾಯವು ಕ್ಷೇಮದಿಂದ ಇಲ್ಲಿಂದ ಬೇಗ ಹೋಗುವಂತೆ ಮತ್ತು ನಮಗೆ ಶ್ರೇಯಸ್ಸುಂಟಾಗುವಂತೆ ನೀನು ಅನುಗ್ರಹಿಸು.
ಯಥೋಕ್ತಾ ತೇನ ಸಾರ್ಥೇನ ದಮಯಂತೀ ನೃಪಾತ್ಮಜಾ |
ಪ್ರತ್ಯುವಾಚ ತತಃ ಸಾಧ್ವೀ ಭರ್ತೃಶೋಕೇನ ಪೀಡಿತಾ ॥126॥
ಆ ಗುಂಪಿನಿಂದ ಹೀಗೆ ಹೇಳಲ್ಪಟ್ಟ ಸಾಧ್ವಿಯಾದ ಭರ್ತೃಶೋಕದಿಂದ ಪೀಡಿತಳಾದ ರಾಜಕುಮಾರಿಯಾದ ದಮಯಂತಿಯು ಆಗ ಅವರಿಗೆ ಉತ್ತರವನ್ನು ಕೊಟ್ಟಳು.

ಸಾರ್ಥವಾಹಶ್ಚ ಸಾರ್ಥಶ್ಚ ಜನಾ ಯೇ ಚಾತ್ರ ಕೇಚನ |
ಯುವಸ್ಥವಿರಬಾಲಾಶ್ಚ ಸಾರ್ಥಸ್ಯಾಸ್ಯ ಪುರೋಗಮಾಃ ॥127॥
ಮಾನುಷೀಂ ಮಾಂ ವಿಜಾನೀತ ಮನುಜಾಧಿಪತೇಃ ಸುತಾಮ್ |
ನೃಪಸ್ನುಷಾಂ ರಾಜಭಾರ್ಯಾಂ ಭರ್ತೃದರ್ಶನಲಾಲಸಾಮ್ ॥128॥
ಈ ಗುಂಪಿನನಾಯಕರು ಮತ್ತು ಇಲ್ಲಿರುವ ಗುಂಪಿನ ಮುಂದೆ ಹೋಗುವ ಯುವಕರು ವೃದ್ಧರು ಬಾಲಕರು ಆದ ಜನರೆಲ್ಲರೂ ತಿಳಿಯಿರಿ. ಎಲ್ಲರೂ ನನ್ನನ್ನು ರಾಜಕುಮಾರಿ ಎಂದೂ ರಾಜನ ಸೊಸೆಯೆಂದೂ ರಾಜನ ಭಾರ್ಯೆಯೆಂದೂ ಪತಿಯದರ್ಶನದ ಹೆಬ್ಬಯಕೆಯನ್ನು ಹೊಂದಿರುವ ಮನುಷ್ಯಸ್ತ್ರೀಯೆಂದೂ ತಿಳಿಯಿರಿ.
ವಿದರ್ಭರಾಣ್ಮಮ ಪಿತಾ ಭರ್ತಾ ರಾಜಾ ಚ ನೈಷಧಃ |
ನಳೋ ನಾಮ ಮಹಾಭಾಗಸ್ತಂ ಮಾರ್ಗಾಮ್ಯಪರಾಜಿತಮ್ ॥129॥
ವಿದರ್ಭರಾಜನು ನನ್ನ ತಂದೆ. ನೈಷಧರಾಜನು ನನ್ನ ಪತಿ. ಅಪರಾಜಿತನಾದ ಮಹಾನುಭಾವನಾದ ನಳನನ್ನು ಹುಡುಕುತ್ತಿದ್ದೇನೆ.
ಯದಿ ಜಾನೀತ ನೃಪತಿಂ ಕ್ಷಿಪ್ರಂ ಶಂಸತ ಮೇ ಪ್ರಿಯಮ್ |
ನಳಂ ಪುರುಷಶಾರ್ದೂಲಮಮಿತ್ರಗಣಸೂದನಮ್ ॥130॥
ಒಂದು ಪಕ್ಷ ನನ್ನ ಪ್ರಿಯನೂ ಪುರುಷಶಾರ್ದೂಲನೂ ಶತ್ರುಗಳ ಸಂಹಾರಕನೂ ಆದ ನಳನನ್ನು ನೋಡಿದ್ದರೆ ಬೇಗ ನನಗೆ ಹೇಳಿ.
ತಾಮುವಾಚಾನವದ್ಯಾಂಗೀಂ ಸಾರ್ಥಸ್ಯ ಚ ಮಹಾಪ್ರಭುಃ |
ಸಾರ್ಥವಾಹಃ ಶುಚಿರ್ನಾಮ ದಮಯಂತೀಂ ನರಾಧಿಪ ॥131॥
ಎಲೈ ರಾಜನೇ, ಆ ಗುಂಪಿನ ನಾಯಕನಾದ ಶುಚಿ ಎಂಬ ಪುರುಷನು ಸುಂದರಿಯಾದ ಆ ದಮಯಂತಿಯನ್ನು ಕುರಿತು ಹೇಳಿದನು.
ಅಹಂ ಸಾರ್ಥಸ್ಯ ನೇತಾ ವೈ ಸಾರ್ಥವಾಹಃ ಶುಚಿಸ್ಮಿತೇ |
ಮನುಷ್ಯಂ ನಳನಾಮಾನಂ ನ ಪಶ್ಯಾಮಿ ಯಶಸ್ವಿನಿ ॥132॥
ಗೋಮಾಯುಕುಂಜರದ್ವೀಪಿಮಹಿಷರ್ಕ್ಷಮೃಗಾನಪಿ |
ಪಶ್ಯಾಮ್ಯಸ್ಮಿನ್ ವನೇ ದುರ್ಗೇ ಹ್ಯಮನುಷ್ಯನಿಷೇವಿತೇ ॥133॥
ಶುಚಿಸ್ಮಿತೆಯೇ, ನಾನು ಈ ಗುಂಪಿನ ನಾಯಕನಾದ ಸಾರ್ಥವಾಹ. ಯಶಸ್ವಿನಿಯೇ ನಳನೆಂಬ ಮನುಷ್ಯನನ್ನು ನಾನು ನೋಡಲಿಲ್ಲ. ಈ ದುರ್ಗಮವಾದ ಮನುಷ್ಯವರ್ಜಿತವಾದ ಕಾಡಿನಲ್ಲಿ ನರಿಗಳನ್ನು ಆನೆಗಳನ್ನು ದ್ವೀಪಿಗಳನ್ನು ಕಾಡೆಮ್ಮೆಗಳನ್ನು ಕರಡಿಗಳನ್ನು ಮತ್ತು ಜಿಂಕೆಗಳನ್ನು ಮಾತ್ರ ನೋಡುತ್ತಿದ್ದೇನೆ.
ಯಥಾ ವಯಂ ತಂ ಪಶ್ಯಾಮೋ ನಳಂ ಪಾರ್ಥಿವಮತ್ರ ವೈ |
ತತೋ ವೈ ಯಕ್ಷರಾಜಃ ಸ ಮಣಿಭದ್ರಃ ಪ್ರಸೀದತು ॥134॥
ನಾವು ಇಲ್ಲಿಯೇ ಆ ಪಾರ್ಥಿವನಾದ ರಾಜನಾದ ನಳನನ್ನು ನೋಡುವಂತೆ ಯಕ್ಷರಾಜನಾದ ಮಣಿಭದ್ರನು ನಮ್ಮನ್ನು ಅನುಗ್ರಹಿಸಲಿ.
ಸಾಽಬ್ರವೀದ್ ವಣಿಜಃ ಸರ್ವಾನ್ ಸಾರ್ಥವಾಹಂ ಚ ತಂ ತತಃ|
ಕ್ವನು ಯಾಸ್ಯತಿ ಸಾರ್ಥೋಽಯಮೇತದಾಖ್ಯಾತುಮರ್ಹಥ ॥135॥
ಆಗ ದಮಯಂತಿಯು ಆ ವರ್ತಕರನ್ನು ಮತ್ತು ಆ ವರ್ತಕರ ಗುಂಪಿನಲ್ಲಿದ್ದ ಎಲ್ಲರನ್ನು ಕುರಿತು ಈ ಗುಂಪು ಎಲ್ಲಿಗೆ ಹೋಗುತ್ತಿದೆಯೆಂದು ನನಗೆ ಹೇಳಿ ಎಂದು ಕೇಳಿದಳು.
ಸಾರ್ಥವಾಹಃ
ಸಾರ್ಥೋಽಯಂ ಚೇದಿರಾಜಸ್ಯ ಸುಬಾಹೋಃ ಸತ್ಯವಾದಿನಃ |
ಕ್ಷಿಪ್ರಂ ಜನಪದಂ ಗಂತಾ ಲಾಭಾಯ ಮನುಜಾತ್ಮಜೇ ॥135॥
ಎಲೌ ಕುಮಾರಿಯೇ, ಈ ಗುಂಪು ಸತ್ಯವಾದಿಯಾದ ಚೇದಿರಾಜನಾದ ಸುಬಾಹುವಿನ ದೇಶಕ್ಕೆ ಲಾಭವನ್ನು ಗಳಿಸುವುದಕ್ಕೋಸ್ಕರ ಶೀಘ್ರವಾಗಿ ಹೋಗುವುದು ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.
*****
ಐವತ್ತೇಳನೆಯ ಅಧ್ಯಾಯ
(ವರ್ತಕರ ಗುಂಪಿನ ಮೇಲೆ ರಾತ್ರಿಯಲ್ಲಿ ಆನೆಗಳ ದಾಳಿ. ದಮಯಂತಿಯಮೇಲೆ ಆ ವರ್ತಕರ ಆಕ್ರೋಶ.
ಅಲ್ಲಿಂದ ದಮಯಂತಿಯ ಪಲಾಯನ.)
ಬೃಹದಶ್ವ
ಸಾ ತಚ್ಛ್ರುತ್ವಾನವದ್ಯಾಂಗೀ ಸಾರ್ಥವಾಹವಚಸ್ತದಾ |
ಅಗಚ್ಛದ್ ರಾಜಶಾರ್ದೂಲ ವಿದ್ಯುಲ್ಲೇಖೇವ ಶಾರದೀ |
ಸಾರ್ಥೇ ಮಹತಿ ದುಃಖಾರ್ತಾ ಭರ್ತೃದರ್ಶನಲಾಲಸಾ ॥1॥
ರಜಸಾ ಸಮವಚ್ಛನ್ನಾ ಸಾರ್ಥಜೇನ ಶುಚಿಸ್ಮಿತಾ |
ಅನಭಿಜ್ಞಾಯಮಾನೈವ ಗಚ್ಛಂತೀ ಸುಮಹದ್ವನಮ್ ॥2॥
ಆಸಸಾದ ಸರೋ ರಮ್ಯಂ ಭಾಸ್ಕರಸ್ಯಾಸ್ತಸಂಗಮೇ |
ಶೀತತೋಯಂ ಸುವಿಪುಳಂ ನಿರ್ಮಲಂ ನೈಕಯೋಜನಮ್ ॥3॥

ಎಲೈ ರಾಜಶಾರ್ದೂಲನೇ! ಸುಂದರಾಂಗಿಯಾದ ಅವಳು ಆ ಸಾರ್ಥನಾಯಕನ ಮಾತನ್ನು ಕೇಳಿ ಪತಿಯನ್ನು ನೋಡುವ ಹೆಬ್ಬಯಕೆಯಿಂದ ದುಃಖಾರ್ತಳಾಗಿ ದೊಡ್ಡಗುಂಪಿನ ಮಧ್ಯದಲ್ಲಿ ಶರತ್ಕಾಲದ ಮಿಂಚಿನ ಬಳ್ಳಿಯಂತೆ ನಡೆದಳು. ಶುಚಿಸ್ಮಿತೆಯಾದ ಅವಳು ಗುಂಪಿನಿಂದ ಎದ್ದು ಧೂಳಿನಿಂದ ಆವೃತಳಾಗಿ ಯಾರಿಂದಲೂ ತಿಳಿಯಲ್ಪಡದೆ ಕಾಡಿನಲ್ಲಿ ನಡೆದು ಸೂರ್ಯನು ಅಸ್ತಂಗತನಾಗುವ ಸಮಯದಲ್ಲಿ ಶೀತಲಜಲವಿದ್ದ ಅನೇಕ ಯೋಜನ ವಿಸ್ತಾರವಾದ ಒಂದು ನಿರ್ಮಲವಾದ ಮತ್ತು ಮನೋಹರವಾದ ಸರೋವರವನ್ನು ತಲುಪಿದಳು.

ಕಲ್ಹಾರೈಃ ಸಮವಚ್ಛನ್ನಂ ಪದ್ಮೋತ್ಪಲವಿರಾಜಿತಮ್ |
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಮ್ ॥4॥
ತೀರಜೈಸ್ತರುಭಿರ್ಹೃದ್ಯೈಃ ಫಲಪುಷ್ಪೋಪಶೋಭಿತೈಃ |
ವ್ಯರಾಜತ ಯಥಾ ರಾಜಾ ಸುಭೃತ್ಯೈಃ ಪರಿವಾರಿತಃ ॥5॥

ಸರೋವರವು ಕಲ್ಹಾರ ಕಮಲ ಉತ್ಪಲಪುಷ್ಪಗಳಿಂದ ವಿರಾಜಿತವಾಗಿ ಹಂಸ ಕಾರಂಡವಾದಿ ಪಕ್ಷಿಗಳಿಂದ ನಿಬಿಡವಾಗಿ ಚಕ್ರವಾಕಾದಿ ಪಕ್ಷಿಗಳಿಂದ ಶೋಭಿತವಾಗಿ ತೀರದಲ್ಲಿ ಫಲಪುಷ್ಪ ಭರಿತವಾದ ಮನೋಹರವಾದ ಅನೇಕ ವೃಕ್ಷಗಳಿಂದ ಸುತುತವರಿಯಲ್ಪಟ್ಟು ಒಳ್ಳೆಯ ಸೇವಕರಿಂದ ಸುತ್ತುವರಿಯಲ್ಪಟ್ಟ ರಾಜನಂತೆ ಕಂಗೊಳಿಸುತ್ತಿದ್ದಿತು.

ತದಾಶ್ರಿತ್ಯ ಸ ಸಾರ್ಥಸ್ತು ನಿವಾಸಾಯೋಪಜಗ್ಮಿವಾನ್ |
ಭಾರಾರ್ತಾಃ ಸೌರಭೇಯಾಶ್ಚ ಕ್ಷುತ್ತೃಷಾ ಚ ಪ್ರಪೀಡಿತಾಃ |
ಅವರೋಪಿತಭಾರಾಸ್ತು ಲೇಭಿರೇ ಪರಮಂ ಸುಖಮ್ ॥6॥

ಆ ಸರೋವರವನ್ನು ಆಶ್ರಯಿಸಿ ಆ ವರ್ತಕರ ಗುಂಪು ಅಲ್ಲಿಯೇ ಬೀಡುಬಿಡಲು ಸಮೀಪಕ್ಕೆ ಬಂದಿತು. ಭಾರವನ್ನು ಹೊತ್ತಿದ್ದ ವೃಷಭಗಳು ಹಸಿವೆ ಮತ್ತು ನೀರಡಿಕೆಗಳಿಂದ ಬಳಲಿದ್ದವು. ಭಾರಗಳನ್ನು ಇಳಿಸಿದ ಮೇಲೆ ಅವುಗಳಿಗೆ ಸಂತೋಷವಾಯಿತು.

ತಥಾಶ್ವಾ ವಾರಣಾಶ್ಚೈವ ರಾಸಭಾಃ ಕಳಭೈಃ ಸಹ |
ದೃಷ್ಟ್ವೈವ ತತ್ಸರೋ ರಮ್ಯಮಾಶ್ವಾಸಂ ಪರಮಂ ಯಯುಃ ॥7॥

ಹಾಗೆಯೇ ಅಶ್ವಗಳು, ಭಾರವನ್ನು ಹೊರಲು ಸಾಕಿದ ಆನೆಗಳು, ರಾಸಭಗಳು ಮತ್ತು ಮರಿಯಾನೆಗಳು ಆ ಸುಂದರವಾದ ಸರೋವರವನ್ನು ನೋಡಿದ ತಕ್ಷಣವೇ ಬಹಳ ಸಮಾಧಾನವನ್ನು ಹೊಂದಿದವು.

ಅಥಾನಂತರಮೇವೇಹ ವಣಿಜಃ ಪಥಿಕಾಸ್ತಥಾ |
ಯಥಾಯೋಗಂ ಯಥಾಸ್ಥಾನಂ ಸ್ವಾವಾಸಂ ಪ್ರತಿಪೇದಿರೇ ॥8॥

ಅನಂತರ ವರ್ತಕರು ಮತ್ತು ಪಥಿಕರು ತಮ್ಮ ತಮಗೆ ಯೋಗ್ಯವಾದ ರೀತಿಯಲ್ಲಿ ಅಲ್ಲಿ ತಮ್ಮ ಬಿಡಾರಗಳನ್ನು ಕಲ್ಪಿಸಿಕೊಂಡರು.

ಯಥಾಸ್ಥಿತಿಸಮಾಚಾರಮಾಹಾರಂ ಸ್ಥಾನಮೇವ ಚ |
ಅವತೀರ್ಯಾವಸನ್ನಾನಾಂ ಚಕ್ರುಶ್ಚೈವ ಪ್ರವೇಕ್ಷಣಮ್ ॥9॥

ಆ ಕಾಲಕ್ಕೆ ಯೋಗ್ಯವಾದ ಆಹಾರವನ್ನು ಸೇವಿಸಿ ತಮ್ಮ ತಮ್ಮ ಸ್ಥಾನಗಳನ್ನು ಕಲ್ಪಿಸಿ ಸಮೀಪದಲ್ಲಿದ್ದ ಇನ್ನೊಬ್ಬರ ಬಿಡಾರವನ್ನು ಸಮೀಪಿಸಿ ಅವುಗಳನ್ನು ನೋಡಿದರು.

ಚಕ್ರುಃ ಕಥಾಶ್ಚ ವಿವಿಧಾಃ ಕ್ರಯವಿಕ್ರಯಸಂಶ್ರಿತಾಃ |
ಪ್ರಶಂಸಂತ್ಯಪರೇ ಕಷ್ಟಾಮಟವೀಂ ಶ್ವಾಪದಾವೃತಮ್ |
ಸ್ಮರಂತೋ ಗೃಹಭೋಗಾಂಶ್ಚ ಜ್ಞಾತೀನಾಂ ಚ ಸಮಾಗಮಮ್ ॥10॥
ಪುತ್ರಮಿತ್ರಕಲತ್ರಾಣಿ ಸರ್ವೇ ನಿದ್ರಾವಶಂ ಯಯುಃ |
ಸಂವಾಹನೇನ ಭಾರಾಣಾಂ ಬಹುವಾಸರಜೇನ ತೇ ॥11॥

ಕೆಲವರು ಕ್ರಮವಿಕ್ರಯಗಳಿಗೆ ಸಂಬಂಧಿಸಿದ ಅನೇಕ ಮಾತುಗಳನ್ನು ಆಡಿದರು. ಇನ್ನು ಕೆಲವರು ಮನೆಯ ಸುಖವನ್ನೂ ಬಂಧುಗಳ ಸಮಾಗಮವನ್ನೂ ಪುತ್ರಮಿತ್ರಕಲತ್ರರನ್ನೂ ಸ್ಮರಿಸುತ್ತಾ ಕ್ರೂರಮೃಗಗಳಿಂದ ಆವೃತವಾದ ಈ ಅಡವಿಯು ಕಷ್ಟಕರವಾದುದು ಎಂದು ಮಾತನಾಡಿದರು. ಅನೇಕ ದಿನಗಳವರೆಗೆ ಭಾರವನ್ನು ಹೊತ್ತ ಕಾರಣದಿಂದ ಎಲ್ಲರೂ ನಿದ್ರಾವಶರಾದರು.

ಖಿನ್ನಾಃ ಪತಿತಗಾತ್ರಾಸ್ತು ನಿದ್ರಯಾಪಹೃತಾ ಭೃಶಮ್ |
ಪ್ರಸಾರಿತಾಂಗಾಃ ಖಿನ್ನಾಶ್ಚ ಮೃತಕಲ್ಪಾ ಇವಾಸತೇ ॥12॥

ಎಲ್ಲರೂ ಖಿನ್ನರಾಗಿ ದಣಿದ ಶರೀರವುಳ್ಳವರಾಗಿ ಕೈಕಾಲುಗಳನ್ನು ಚಾಚಿ ದಣಿವಿನಿಂದ ನಿದ್ರಾವಶರಾಗಿ ಶವಗಳಂತೆ ಇದ್ದರು.

ಅಥಾರ್ಧರಾತ್ರಸಮಯೇ ಗಜಯೂಥಂ ಮಹತ್ತದಾ |
ಆಜಗಾಮ ಸರೋ ಯತ್ರ ಪಿಪಾಸುಸ್ತತ್ಸರೋಜಲಮ್ ॥13॥
ಅಥಾಪಶ್ಯತ ತಂ ಸಾರ್ಥಂ ಸಾರ್ಥಜಾನ್ ಸುಬಹೂನ್ ಗಜಾನ್ |
ತೇ ತಾನ್ ಗ್ರಾಮ್ಯಗಜಾನ್ ದೃಷ್ಟ್ವಾ ಸರ್ವೇ ವನಗಜಾಸ್ತದಾ |
ಸಮಾದ್ರವಂತ ವೇಗೇನ ಜಿಘಾಂಸಂತೋ ಮದೋತ್ಕಟಾಃ ॥14॥

ಅನಂತರ ಅರ್ಧರಾತ್ರಿಯ ಸಮಯದಲ್ಲಿ ಆನೆಗಳ ದೊಡ್ಡಹಿಂಡು ಆ ಸರೋವರದ ನೀರನ್ನು ಕುಡಿಯಲು ಬಯಸಿ ಆ ಸರೋವರಕ್ಕೆ ಬಂದಿತು. ಆ ಕಾಡಾನೆಗಳು ಆ ಜನರ ಗುಂಪನ್ನೂ ಆ ಗುಂಪಿನಲ್ಲಿದ್ದ ಅನೇಕ ಪಳಗಿದ ಆನೆಗಳನ್ನೂ ನೋಡಿದವು. ವರ್ತಕರ ಆ ಗ್ರಾಮ್ಯಗಜಗಳನ್ನು ನೋಡಿ ಆ ಎಲ್ಲಾ ವನಗಜಗಳು ಆಗ ಮದೋತ್ಕಟವಾಗಿ ಅವುಗಳನ್ನು ಕೊಲ್ಲಲು ವೇಗದಿಂದ ಮುನ್ನುಗ್ಗಿದವು.

ತೇಷಾಮಾಪತತಾಂ ವೇಗಃ ಕರೀಣಾಂ ದುಃಸಹೋಽಭವತ್ |
ನಗಾಗ್ರಾದಿವ ಶೀರ್ಣಾನಾಂ ಶೃಂಗಾಣಾಂ ಪತತಾಂ ಕ್ಷಿತೌ ॥15॥
ನದತಾಮಪಿ ನಾಗಾನಾಂ ನಾಲಂ ಸ್ಥಾತುಂ ವನೋದ್ಭವೈಃ |

ಕರಿಭಿಃ ಕರಿಣಃ ಸರ್ವೇ ನೀತಾ ಮೃತ್ಯುವಶಂ ಕ್ಷಣಾತ್ ॥16॥
ಗ್ರಾಮ್ಯಗಜಗಳ ಮೇಲೆ ಎರಗುವ ವನಗಜಗಳ ವೇಗವು ಪರ್ವತದ ಉರುಳಿ ತುದಿಯಿಂದ ಭೂಮಿಯ ಮೇಲೆ ಬೀಳುವ ಶಿಖರಗಳಂತೆ ದುಃಸಹವಾಗಿದ್ದಿತು. ಆಗ ಗರ್ಜಿಸುವ ಆನೆಗಳ ಸಮೀಪದಲ್ಲಿ ವನಚಾರಿಗಳು ನಿಲ್ಲಲು ಸಾಧ್ಯವಿರಲಿಲ್ಲ. ಆ ವನಗಜಗಳಿಂದ ಗ್ರಾಮ್ಯಗಜಗಳೆಲ್ಲವೂ ಒಂದೇ ಕ್ಷಣದಲ್ಲಿ ಕೊಲ್ಲಲ್ಪಟ್ಟವು.
ಸ ಚ ಸಾರ್ಥೋ ವಿಮಥಿತಃ ಸಸ್ತ್ರೀಬಾಲಗಜಾನ್ವಿತಃ |
ಆರಾವಃ ಸುಮಹಾನಾಸೀತ್ ತ್ರೈಲೋಕ್ಯಭಯಕಾರಕಃ ॥17॥
ಸ್ತ್ರೀಯರು ಬಾಲರು ಮತ್ತು ಗ್ರಾಮ್ಯಗಜಗಳಿಂದ ಕೂಡಿದ ವರ್ತಕರ ಸಮುದಾಯವು ಗಜಗಳಿಂದ ಮರ್ದನಕ್ಕೆ ಒಳಗಾಯಿತು. ಮೂರುಲೋಕಗಳಿಗೂ ಭಯವನ್ನು ಉಂಟುಮಾಡುವಂತೆ ದೊಡ್ಡ ಆರ್ತನಾದವು ಅಲ್ಲಿ ಹೊರ ಹೊಮ್ಮಿತು.
ವಾಜಿಭಿಃ ಪ್ರದ್ರುತೈಶ್ಚೈವ ಮಹಾದಂಷ್ಟ್ರೈಶ್ಚ ರಾಸಭೈಃ |
ಅನ್ಯೋನ್ಯಂ ನಾಭಿರಕ್ಷಂತ ಮಥ್ಯಮಾನಾ ವನದ್ವಿಪೈಃ ॥18॥
ಅಶ್ವಗಳು ಮತ್ತು ಮಹಾದಂಷ್ಟ್ರಗಳುಳ್ಳ ರಾಸಭಗಳು ಓಡಿ ಹೋಗುತ್ತಿರಲು ವನಗಜಗಳ ತುಳಿತಕ್ಕೆ ಸಿಕ್ಕಿದ ವರ್ತಕರು ಒಬ್ಬರನೊಬ್ಬರು ರಕ್ಷಿಸಲು ಸಾಧ್ಯವಾಗಲಿಲ್ಲ.
ಹತೋ ಭ್ರಾತಾ ಹತಃ ಪುತ್ರೋ ಹತಃ ಸ್ವಾಮೀ ಹತೋ ಗುರುಃ |
ಏಷೋಽಗ್ನಿರುತ್ಥಿತಃ ಕಷ್ಟಂ ತ್ರಾಯಧ್ವಂ ಧಾವತಾಧುನಾ ॥19॥
ರತ್ನರಾಶಿರ್ವಿಶೀರ್ಣೋಽಯಂ ಗೃಹ್ಣೀಧ್ವಂ ಕಿಂ ಪ್ರಧಾವತ |
ಸಾಮಾನ್ಯಮೇತದ್ ದ್ರವಿಣಂ ನ ಮಿಥ್ಯಾ ವಚನಂ ಮಮ ॥20॥
ಏವಮೇವಾಭಿಭಾಷಂತೋ ವಿದ್ರವಂತಿ ಭಯಾತ್ತತಃ |
ಪುನರೇವಾಭಿಧಾವಂತಿ ವಿತ್ತಪ್ರಧ್ವಂಸಕಾತರಾಃ ॥21॥
ನನ್ನ ತಮ್ಮನು ಹತನಾದನು ನನ್ನ ಪುತ್ರನು ಹತನಾದನು ನನ್ನ ಸ್ವಾಮಿಯು ಹತನಾದನು. ನನ್ನ ಗುರುವು ಹತನಾದನು ಇಲ್ಲಿ ಅಗ್ನಿಯು ಮೇಲೆ ಬೀಳುತ್ತಿದೆ. ದೊಡ್ಡ ಕಷ್ಟವು ಉಂಟಾಯಿತು. ಯಾರಾದರೂ ರಕ್ಷಿಸಿ. ಈಗ ಓಡಿಹೋಗಿ. ಈ ರತ್ನರಾಶಿಯು ಚಲ್ಲಾಪಿಲ್ಲಿಯಾಗಿದೆ. ಅದನ್ನು ತೆಗೆದು ಕೊಳ್ಳಿ. ಏಕೆ ಓಡುತ್ತಿದ್ದೀರಿ? ಈ ಧನವು ಎಲ್ಲರಿಗೂ ಸೇರಿದುದು. ನನ್ನ ಮಾತುಸುಳ್ಳಲ್ಲ. ಹೀಗೆಲ್ಲಾ ಮಾತನಾಡುತ್ತಾ ಜನಗಳು ಅಲ್ಲಿಂದ ಓಡುತ್ತಾರೆ. ತಮ್ಮ ಧನವು ನಾಶವಾಯಿತೆಂಬ ಕಾತುರದಿಂದ ಪುನಃ ಅಲ್ಲಿಗೆ ಓಡಿಬರುತ್ತಾರೆ.
ತಸ್ಮಿಂಸ್ತಥಾ ವರ್ತಮಾನೇ ದಾರುಣೇ ಜನಸಂಕ್ಷಯೇ |
ದಮಯಂತೀ ಚ ಬುಬುಧೇ ಭಯಸಂತ್ರಸ್ತಮಾನಸಾ ॥22॥
ಹೀಗೆ ಅಲ್ಲಿ ಘೋರವಾದ ಜನನಾಶವು ಉಂಟಾಗುತ್ತಿರಲು ಭಯದಿಂದ ಕೂಡಿದ ಮನಸ್ಸನ್ನು ಹೊಂದಿದ್ದ ದಮಯಂತಿಯು ಎಚ್ಚರಗೊಂಡಳು.
ಅಪಶ್ಯದ್ ವೈಶಸಂ ತಚ್ಚ ಸರ್ವಲೋಕಭಯಂಕರಮ್ |
ಅದೃಷ್ಟಪೂರ್ವಂ ತದ್ ದೃಷ್ಟ್ವಾ ಬಾಲಾ ಪದ್ಮನಿಭೇಕ್ಷಣಾ |
ಸಂತ್ರಸ್ತಮನಸಾ ತಸ್ಮಿಂಸ್ತಸ್ಥೌ ಶಶಿನಿಭಾನನಾ ॥23॥
ಸರ್ವಲೋಕಭಯಂಕರವಾದ ಆ ಹಿಂಸೆಯನ್ನು ಅವಳು ನೋಡಿದಳು. ಪದ್ಮಲೋಚನೆಯಾದ ಚಂದ್ರಮುಖಿಯಾದ ಬಾಲೆಯಾದ ಅವಳು ಹಿಂದೆಂದೂ ನೋಡದಿದ್ದ ಅಂತಹ ದುರ್ಘಟನೆಯನ್ನು ನೋಡಿ ಮನಸ್ಸಿನಲ್ಲಿ ಹೆದರಿ ಅಲ್ಲಿ ನಿಂತಳು.
ಸರ್ವೈರ್ವಿಧ್ವಂಸಿತೈರ್ಭಗ್ನೈಸ್ತರುಭಿಶ್ಚಂದನಾದಿಭಿಃ |
ವಿಕ್ಷಿಪ್ತೈರ್ಭಾತಿ ಭೂಃ ಸರ್ವಾ ದ್ಯೌರ್ಋಕ್ಷೈರಿವ ಶಾರದೀ ॥24॥
ಪತದ್ಭಿಃ ಪಾತ್ಯಮಾನೈಶ್ಚ ಪತಿತೈಶ್ಚ ತತಸ್ತತಃ |
ಭೀಷಣೀಯಂ ವನಂ ತದ್ಧಿ ಬಭೌ ತತ್ರ ಸಮಂತತಃ ॥25॥
ವಿಮುಕ್ತನಾದಸಂತ್ರಸ್ತಂ ಹಾಹಾಕಾರವಿನಾದಿತಮ್ |
ಬಭೌ ತತ್ಸತ್ತ್ವಸಂಬಾಧಂ ಮಹಾರಣಮಿವಾಪರಮ್ ॥26॥
ಮುರಿದು ನಾಶಗೊಳಿಸಲ್ಪಟ್ಟ ಭೂಮಿಯ ಮೇಲೆ ಬಿದ್ದ ಚಂದನಾದಿ ವೃಕ್ಷಗಳಿಂದ ಕೂಡಿದ ಭೂಮಿಯು ಶರತ್ಕಾಲದಲ್ಲಿ ನಕ್ಷತ್ರಗಳಿಂದ ಕೂಡಿದ ಆಕಾಶದಂತೆ ಇದ್ದಿತು. ಅಲ್ಲಲ್ಲಿ ಬೀಳುತ್ತಿರುವ, ಇನ್ನೊಬ್ಬರಿಂದ ಬೀಳಿಸಲ್ಪಡುವ, ಮತ್ತು ಬೀಳುತ್ತಿರುವ ಗಜಗಳಿಂದ ಬೀಳಿಸಲ್ಪಡುತ್ತಿರುವ, ಮತ್ತು ಬಿದ್ದಿರುವ ವೃಕ್ಷಗಳಿಂದ ಆ ಕಾನನವು ಎಲ್ಲ ಕಡೆಗಳಲ್ಲಿಯೂ ಭಯಂಕರವಾಗಿ ಕಾಣುತ್ತಿತ್ತು ಕಿರುಚುವ ಧ್ವನಿಗಳಿಂದಲೂ ಹಾಹಾಕಾರಗಳಿಂದಲೂ ಕೂಡಿದ ಆ ಜನಸಮೂಹವು ಇನ್ನೊಂದು ದೊಡ್ಡ ಯುದ್ಧದಂತೆ ಇದ್ದಿತು.
ಯೇ ತು ತತ್ರ ವಿನಿರ್ಮುಕ್ತಾಃ ಸಾರ್ಥಾಃ ಕೇಚಿದವಿಕ್ಷತಾಃ |
ತೇಽಬ್ರುವನ್ ಸಹಿತಾಃ ಸರ್ವೇ ಕಸ್ಯೇದಂ ಕರ್ಮಣಃ ಫಲಮ್ ॥27॥
ಯಾವ ಕೆಲವರು ಗಾಯಗೊಳ್ಳದೆ ಆ ವಿಮರ್ದದಿಂದ ಮುಕ್ತರಾದರೋ ಅವರು ಒಟ್ಟಿಗೆ ಸೇರಿ ಇದು ಯಾವ ಕರ್ಮದ ಫಲ ಎಂದು ಚಿಂತಿಸಿದರು.
ನೂನಂ ನ ಪೂಜಿತೋಽಸ್ಮಾಭಿರ್ಮಾಣಿಭದ್ರೋ ಮಹಾಯಶಾಃ|
ತಥಾ ಯಕ್ಷಾಧಿಪಃ ಶ್ರೀಮಾನ್ ಸ ಚ ವೈಶ್ರವಣಃ ಪ್ರಭುಃ ॥28॥
ಖಂಡಿತವಾಗಿ ನಾವು ಮಹಾಕೀರ್ತಿವಂತನಾದ ಮಣಿಭದ್ರನನ್ನಾಗಲೀ ಅಥವಾ ಯಕ್ಷಾಧಿಪತಿಯಾದ ಕಾಂತಿಯುಕ್ತನಾದ ಪ್ರಭುವಾದ ಕುಬೇರನನ್ನಾಗಲೀ ಪೂಜಿಸಲಿಲ್ಲ.

ನ ಪೂಜಾ ವಿಘ್ನಕರ್ತೄಣಾಮಥ ವಾ ಸಾರ್ಥಿಕೈಃ ಕೃತಾ |
ಶಕುನಾನಾಂ ಫಲಂ ಚಾಥ ವಿಪರೀತಮಿದಂ ಧ್ರುವಮ್ ॥29॥
ವಿಘ್ನವನ್ನು ಮಾಡುವ ಶಕ್ತಿಗಳಿಗೆ ವರ್ತಕರಾದ ನಾವು ಪೂಜೆಯನ್ನು ಮಾಡಲಿಲ್ಲ. ಶಕುನಗಳ ಫಲವು ವಿಪರೀತವಾಗಿದೆ.
ಗ್ರಹಾ ವಾ ವಿಪರೀತಾಸ್ತು ಕಿಮನ್ಯದಿದಮಾಗತಮ್ |
ಅಪರೇ ತ್ವಬ್ರುವನ್ ದೀನಾ ಜ್ಞಾತಿದ್ರವ್ಯವಿನಾಕೃತಾಃ ॥30॥
ಅಥವಾ ಗ್ರಹಗಳೇ ನಮಗೆ ವಿರುದ್ಧವಾಗಿವೆ. ಇಲ್ಲದಿದ್ದರೆ ಈ ವಿಪತ್ತು ಹೇಗೆ ಬರುತ್ತದೆ? ಇನ್ನು ಕೆಲವರು ಬಂಧುಗಳನ್ನೂ ದ್ರವ್ಯವನ್ನೂ ಕಳೆದುಕೊಂಡು ದೀನರಾಗಿ ಹೀಗೆ ಮಾತನಾಡಿದರು.
ಯಾಸಾವದ್ಯ ಮಹಾಸಾರ್ಥೇ ನಾರೀ ಹ್ಯುನ್ಮತ್ತದರ್ಶನಾ |
ಪ್ರವಿಷ್ಟಾ ವಿಹಿತಾಕಾರಾ ಕೃತ್ವಾ ರೂಪಮಮಾನುಷಮ್ |
ತಯೇಯಂ ವಿಹಿತಾ ಪೂರ್ವಂ ಮಾಯಾ ಪರಮದಾರುಣಾ ॥31॥
ರಾಕ್ಷಸೀ ವಾ ಧ್ರುವಂ ಯಕ್ಷೀ ಪಿಶಾಚೀ ವಾ ಭಯಂಕರೀ |
ತಸ್ಯಾಃ ಸರ್ವಮಿದಂ ಪಾಪಂ ನಾತ್ರ ಕಾರ್ಯಾ ವಿಚಾರಣಾ ॥32॥
ಈ ದೊಡ್ಡಗುಂಪಿನಲ್ಲಿ ಈ ದಿನ ಹುಚ್ಚಿಯಂತಿರುವ ಆಕಾರವನ್ನು ಧರಿಸಿದ ಮತ್ತು ಅಮಾನುಷರೂಪವನ್ನು ಧರಿಸಿದ ಒಬ್ಬ ನಾರಿಯು ಪ್ರವೇಶಿಸಿದಳಷ್ಟೇ. ಅವಳು ಪರಮಘೋರವಾದ ಮಾಯಾವಿನಿ. ಇದು ಅವಳು ಮಾಡಿದ ಕೆಲಸ. ಅವಳು ರಾಕ್ಷಸಿ ಇರಬಹುದು ಅಥವಾ ಯಕ್ಷಿಯಿರಬಹುದು. ಅಥವಾ ಭಯಂಕರವಾದ ಪಿಶಾಚಿ ಇರಬಹುದು. ಈ ಪಾಪಕಾರ್ಯವೆಲ್ಲ ಅವಳದೇ. ಬೇರೆ ವಿಚಾರಮಾಡುವ ಅಗತ್ಯವಿಲ್ಲ.
ಯದಿ ಪಶ್ಯಾಮ ತಾಂ ಪಾಪಾಂ ಸಾರ್ಥಘ್ನೀಂ ನೈಕದುಷ್ಕೃತಾಮ್ |
ಲೋಷ್ಟಭಿಃ ಪಾಂಸುಭಿಶ್ಚೈವ ತೃಣೈಃ ಕಾಷ್ಠೈಶ್ಚ ಮುಷ್ಟಿಭಿಃ |
ಅವಶ್ಯಮೇವ ಹಿಂಸ್ಯಾಮಃ ಸಾ ತು ಸಾರ್ಥಸ್ಯ ಕೃತ್ಯದಾ ॥33॥
ಈಗ ಆ ಪಾಪಿಯಾದ ನಮ್ಮ ಸಮುದಾಯವನ್ನು ನಾಶಮಾಡಿದಂತಹ ಅನೇಕ ದುಷ್ಕರ್ಮಗಳನ್ನು ಮಾಡಿದ ಅವಳನ್ನು ನೋಡಿದರೆ ಅವಳನ್ನು ಮಣ್ಣಿನ ಹೆಂಟೆಗಳಿಂದಲೂ ಕೋಲುಗಳಿಂದಲೂ ತೃಣಗಳಿಂದಲೂ ಮುಷ್ಟಿಗಳಿಂದಲೂ ಹೊಡೆದು ಅವಶ್ಯವಾಗಿ ಹಿಂಸಿಸುವೆವು. ಅವಳೇ ಈ ವರ್ತಕ ಸಮೂದಾಯಕ್ಕೆ ಅನ್ಯಾಯವನ್ನು ಮಾಡಿದವಳು.
ದಮಯಂತೀ ತು ತಚ್ಛ್ರುತ್ವಾ ವಾಕ್ಯಂ ತೇಷಾಂ ಸುದಾರುಣಮ್ |
ಭೀತಾ ತ್ರಸ್ತಾ ಚ ಸಂವಿಗ್ನಾ ಪ್ರಾದ್ರವದ್ ಯತ್ರ ಕಾನನಮ್ ॥34॥
ದಮಯಂತಿಯು ಅವರ ಘೋರವಾದ ವಾಕ್ಯವನ್ನು ಕೇಳಿ ಹೆದರಿಕೆಯಿಂದ ನಡುಗುತ್ತಾ ಅಲ್ಲಿಂದ ಕಾಡಿನಕಡೆಗೆ ಓಡಿದಳು.
ಆಶಂಕಮಾನಾ ತತ್ಪಾಪಮಾತ್ಮಾನಂ ಪರ್ಯದೇವಯತ್ |
ಅಹೋ ಮಮೋಪರಿ ವಿಧೇಃ ಸಂರಂಭೋ ದಾರುಣೋ ಮಹಾನ್ |
ನಾನುಬಧ್ನಾತಿ ಕುಶಲಂ ಕಸ್ಯೇದಂ ಕರ್ಮಣಃ ಫಲಮ್ ॥35॥
ಆ ಪಾಪವನ್ನು ತನ್ನ ನಿಮಿತ್ತದಿಂದ ಉಂಟಾದುದೆಂದು ಶಂಕಿಸಿ ಅವಳು ಗೋಳಾಡಿದಳು. ಅಯ್ಯೋ ನನ್ನ ಮೇಲೆ ವಿಧಿಗೆ ಎಂತಹ ಪರಮಕೋಪ? ವಿಧಿಯು ನನಗೆ ಯಾವ ಕ್ಷೇಮವನ್ನೂ ಉಂಟುಮಾಡುವುದಿಲ್ಲ. ಇದು ಯಾವ ಕರ್ಮದ ಫಲ?
ನ ಸ್ಮರಾಮ್ಯಶುಭಂ ಕಿಂಚಿತ್ಕೃತಂ ಕಸ್ಯಚಿದಣ್ವಪಿ |
ಕರ್ಮಣಾ ಮನಸಾ ವಾಚಾ ಕಸ್ಯೇದಂ ಕರ್ಮಣಃ ಫಲಮ್ ॥36॥
ನಾನು ಎಂದೂ ಯಾರಿಗೂ ಮನಸ್ಸಿನಿಂದಲಾಗಲೀ ಮಾತಿನಿಂದಲಾಗಲೀ ಅಥವಾ ದೇಹದಿಂದಲಾಗಲೀ ಯಾವ ಅನ್ಯಾಯವನ್ನು ಮಾಡಿರುವುದನ್ನೂ ಸ್ಮರಿಸಲಾರೆ. ಇದು ಯಾವ ಕರ್ಮದ ಫಲ?
ನೂನಂ ಜನ್ಮಾಂತರಕೃತಂ ಪಾಪಮಾಪತಿತಂ ಮಹತ್ |
ಅಪಶ್ಚಿಮಾಮಿಮಾಂ ಕಷ್ಟಾಮಾಪದಂ ಪ್ರಾಪ್ತವತ್ಯಹಮ್ ॥37॥
ಖಂಡಿತವಾಗಿ ಇದು ಜನ್ಮಾಂತರದಲ್ಲಿ ಮಾಡಿದ ದೊಡ್ಡ ಪಾಪದಫಲ. ಹಿಂದೆಂದೂ ಅನುಭವಿಸದ ಇಂತಹ ಘೋರವಾದ ಅಪತ್ತನ್ನು ನಾನು ಹೊಂದಿದ್ದೇನೆ.
ಭರ್ತೃರಾಜ್ಯಾಪಹರಣಂ ಸ್ವಜನಾಚ್ಚ ಪರಾಭವಃ |
ಭರ್ತ್ರಾ ಸಹ ವಿಯೋಗಂ ಚ ತನಯಾಭ್ಯಾಂ ಚ ವಿಚ್ಯುತಿಃ |
ವಿವಸ್ತ್ರತಾ ವನೇ ವಾಸೋ ಬಹುವ್ಯಾಳನಿಷೇವಿತೇ ॥38॥
ಪತಿಯ ರಾಜ್ಯದ ಅಪಹಾರ, ಸ್ವಜನರ ಪರಾಭವ, ಪತಿಯಿಂದ ಮತ್ತು ಮಕ್ಕಳಿಂದ ವಿಯೋಗ, ವಿವಸ್ತ್ರತೆ, ಕ್ರೂರಮೃಗಗಳಿರುವ ಕಾಡಿನಲ್ಲಿವಾಸ, (ಇವೆಲ್ಲವೂ ಪೂರ್ವಜನ್ಮದ ಪಾಪದ ಫಲ.)
ಯೋಽಪ್ಯಕಸ್ಮಾನ್ಮಯಾ ಪ್ರಾಪ್ತೋ ನಿರ್ಜನೇ ಗಹನೇ ವನೇ |
ಸೋಽಪಿ ಸಾರ್ಥಃ ಪರಾಭೂತೋ ದೈವೇನ ವಿಧಿನಾ ಧ್ರುವಮ್ ॥37॥
ನಾನು ಅಕಸ್ಮಾತ್ತಾಗಿ ಈ ನಿರ್ಜನವಾದ ಮತ್ತು ದಟ್ಟವಾದ ಅರಣ್ಯದಲ್ಲಿ ಸೇರಿಕೊಂಡವರ್ತಕರ ಸಮೂಹವೂ ಖಂಡಿತವಾಗಿಯೂ ದೈವಸಂಕಲ್ಪದಿಂದಲೇ ಪರಾಭವವನ್ನು ಹೊಂದಿತು.
ಆಶಂಕತೇ ಚ ಮಾಂ ಪಾಪಾಂ ಕೃತ್ಯಾಂ ವೈ ರಾಕ್ಷಸೀಮಪಿ |
ಸಾಹಮೇವಂವಿಧಾ ನೂನಂ ಧ್ರುವಂ ನಾಸ್ತ್ಯತ್ರ ಸಂಶಯಃ ॥40॥
ನನ್ನನ್ನು ಪಾಪಿ ಎಂದೂ ಪಿಶಾಚಿಯೆಂದೂ ರಾಕ್ಷಸಿಯೆಂದೂ ಶಂಕಿಸುತ್ತಾರೆ. ನಾನು ಅಂತಹವಳೇ ಆಗಿದ್ದೇನೆ. ಈ ವಿಷಯದಲ್ಲಿ

ಸಂಶಯವಿಲ್ಲ.
ಮಂದಾಯಾ ಹಿ ಮಮಾಭಾಗ್ಯೈಃ ಸಾರ್ಥೋ ನೂನಂ ನಿಪಾತಿತಃ |
ಕುತ್ರಾತ್ಮಾನಂ ಪಾತಯೇಯಂ ಯಾಮಿ ಕಂ ಶರಣಂ ವನೇ |
ಮರಣೇನ ಭವೇಚ್ಛಾಂತಿರ್ಧಿಗಿದಂ ದುಃಖಜೀವಿತಮ್ ॥41॥
ದುರದೃಷ್ಟಶಾಲಿಯಾದ ನನ್ನ ದುಷ್ಕರ್ಮದಿಂದ ಈ ವರ್ತಕರ ಗುಂಪು ಹೊಡೆದುರುಳಿಸಿಲ್ಪಟ್ಟಿತು. ನಾನು ಎಲ್ಲಿ ಹೋಗಿ ಬೀಳಲಿ? ಯಾರನ್ನು ಶರಣುಹೊಂದಲಿ? ಈ ದುಃಖಜೀವನಕ್ಕೆ ಧಿಕ್ಕಾರವಿರಲಿ. ಮರಣದಿಂದ ಶಾಂತಿಯುಂಟಾದೀತು.
ಹಾ ನಾಥ ಹಾ ಮಹಾರಾಜ ಹಾ ಸ್ವಾಮಿನ್ ಜೀವಿತೇಶ್ವರ |
ಕಿಂ ಮಾಂ ವಿಲಪತೀಮೇವಂ ನಾಭಿಜಲ್ಪಸಿ ಮಾನದ ॥42॥
ಹಾ ನಾಥ ಹಾ ಮಹಾರಾಜ ಹಾ ರಾಜ ಹಾ ಸ್ವಾಮಿ ಹಾ ಜೀವಿತೇಶ್ವರ ಮಾನದನೇ ಹೀಗೆ ಗೋಳಾಡುತ್ತಿರುವ ನನ್ನನ್ನು ಕುರಿತು ನೀನು ಏಕೆ ಮಾತನಾಡುವುದಿಲ್ಲ?
ಏವಮಾದಿ ಬಹೂನನ್ಯಾನ್ವಿಲಾಪಾನ್ ಬಾಷ್ಪವಿಹ್ವಲಾ |
ಕುರ್ವತೀ ಪರ್ಯಧಾವಚ್ಚ ವಿಜನಂ ಗಹನಂ ವನಮ್ ॥43॥
ಹೀಗೆ ಮತ್ತು ಇನ್ನೂ ಅನೇಕ ರೀತಿಯಲ್ಲಿ ವಿಲಾಪವನ್ನು ಮಾಡುತ್ತಾ ಕಣ್ಣೀರಿನಿಂದ ಕೂಡಿದವಳಾಗಿ ಆ ನಿರ್ಜನವಾದ ಅರಣ್ಯದಲ್ಲಿ ಅವಳು ಓಡಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
*****
ಐವತ್ತೆಂಟನೆಯ ಅಧ್ಯಾಯ
(ವ್ಯಾಪಾರಿಜನಗಳ ಜೊತೆಯಲ್ಲಿ ದಮಯಂತಿಯ ಗಮನ. ರಾತ್ರಿಯಲ್ಲಿ ಗಜಗಳಿಂದ ಉಪದ್ರವ. ಚೇದಿರಾಜ ಪುರಕ್ಕೆ ಹೋಗಿ ಅಂತಃಪುರದಲ್ಲಿ ನಿವಾಸ.)
ಬೃಹದಶ್ವ
ಸಾ ತಚ್ಛ್ರುತ್ವಾಽನವದ್ಯಾಂಗೀ ಸಾರ್ಥವಾಹವಚಸ್ತದಾ |
ಜಗಾಮ ತೇನ ಸಾರ್ಥೇನ ಭರ್ತೃದರ್ಶನಲಾಲಸಾ ॥1॥
ಆ ಸುಂದರಾಂಗಿಯು ಆ ಗುಂಪಿನಗಾಯಕನ ಮಾತನ್ನು ಕೇಳಿ ಪತಿಯನ್ನು ನೋಡಲು ಆಸೆಯನ್ನು ಹೊತ್ತುಕೊಂಡು ಆ ಗುಂಪಿನ ಜೊತೆಯಲ್ಲಿ ಹೋದಳು.
ಅಥ ಕಾಲೇ ಬಹುತಿಥೇ ವನೇ ಮಹತಿ ದಾರುಣೇ |
ತಟಾಕಂ ಸರ್ವತೋಭದ್ರಂ ಪದ್ಮಸೌಗಂಧಿಕಾಯುತಮ್ ॥2॥
ದದೃಶುರ್ವಣಿಜೋ ರಮ್ಯಂ ಪ್ರಭೂತಯವಸೇಂಧನಮ್ |
ಬಹುಮೂಲಫಲೋಪೇತಂ ನಾನಾಪಕ್ಷಿಗಣೈರ್ವೃತಮ್ ॥3॥
ಎಷ್ಟೋದಿನಗಳು ಕಳೆದ ಮೇಲೆ ಆ ದಾರುಣವಾದ ಕಾಡಿನ ಮಧ್ಯದಲ್ಲಿ ಆ ವರ್ತಕರು ಪದ್ಮ ಮತ್ತು ಸೌಗಂಧಿಕಪುಷ್ಪಗಳ ಸೌರಭದಿಂದ ಯುಕ್ತವಾದ ಸುತ್ತಲೂ ಬಹಳ ಹುಲ್ಲು ಮತ್ತು ಕಟ್ಟಿಗೆಗಳಿದ್ದ ಸುತ್ತಲೂ ಅನೇಕ ಫಲಮೂಲಗಳನ್ನು ಹೊಂದಿದ್ದ ಅನೇಕ ಪಕ್ಷಿಗಳ ಸಮೂಹದಿಂದ ಆವೃತವಾದ ಒಂದು ಸುಂದರವಾದ ಸರೋವರವನ್ನು ನೋಡಿದರು.
ತಂ ದೃಷ್ಟ್ವಾ ಮೃಷ್ಟಸಲಿಲಂ ಮನೋಹರಸುಖಾವಹಮ್ |
ಸುಪರಿಶ್ರಾಂತವಾಹಾಸ್ತೇ ನಿವೇಶಾಯ ಮನೋ ದಧುಃ ॥4॥
ಸ್ವಚ್ಛವಾದ ನೀರನ್ನು ಹೊಂದಿದ್ದ ಮನಸ್ಸಿಗೆ ಸುಖವನ್ನು ಕೊಡುವ ಆ ಸರೋವರವನ್ನು ನೋಡಿ ದಣಿದ ವಾಹನಗಳುಳ್ಳ ಅವರು ಅಲ್ಲಿ ತಂಗಲು ನಿರ್ದರಿಸಿದರು.
ಸಮ್ಮತೇ ಸಾರ್ಥವಾಹಸ್ಯ ವಿವಿಶುರ್ವನಮುತ್ತಮಮ್ |
ಉವಾಸ ಸಾರ್ಥಃ ಸುಮಹಾನ್ ನಿಶಾಮಾಸಾದ್ಯ ಪದ್ಮಿನೀಮ್ ॥5॥
ಆ ಗುಂಪಿನ ನಾಯಕನ ಸಮ್ಮತಿಯನ್ನು ಪಡೆದು ಶ್ರೇಷ್ಠವಾದ ವನವನ್ನು ಪ್ರವೇಶಿಸಿ ಆ ದೊಡ್ಡ ಸಮುದಾಯವು ರಾತ್ರಿಯವೇಳೆಗೆ ಆ ಪದ್ಮಸರೋವರದ ಬಳಿಯಲ್ಲಿ ಬೀಡುಬಿಟ್ಟಿತು.
ಅಥಾರ್ಧರಾತ್ರಸಮಯೇ ನಿಃಶಬ್ದೇ ಸ್ತಿಮಿತೇ ತದಾ |
ಸುಪ್ತೇ ಸಾರ್ಥೇ ಪರಿಶ್ರಾಂತೇ ಹಸ್ತಿಯೂಥಮುಪಾಗಮತ್ ॥6॥
ಪಾನೀಯಾರ್ಥಂ ಗಿರಿತಟಾನ್ಮದಪ್ರಸ್ರವಣಾವಿಲಮ್ |
ಅನಂತರ ಅರ್ಧರಾತ್ರಿಯ ಸಮಯದಲ್ಲಿ ಎಲ್ಲವೂ ನಿಶಬ್ದವೂ ನಿಶ್ಚಲವೂ ಆಗಿರಲು ದಣಿದ ಎಲ್ಲಾ ವರ್ತಕರು ನಿದ್ರಿಸುತ್ತಿರಲು ಮದಿಸಿದ ಗಜಗಳ ಒಂದು ಹಿಂಡು ಪರ್ವತದ ಮೇಲ್ಭಾಗದಿಂದ ನೀರನ್ನು ಕುಡಿಯಲು ಅಲ್ಲಿಗೆ ಬಂದಿತು.
ಮಾರ್ಗಂ ಸಂರುದ್ಧ್ಯ ಸಂಸುಪ್ತಂ ಪದ್ಮಿನ್ಯಾಃ ಸಾರ್ಥಮುತ್ತಮಮ್ |
ಸುಪ್ತಂ ಮಮರ್ದ ಸಹಸಾ ವೇಷ್ಟಮಾನಂ ಮಹೀತಳೇ ॥7॥
ತಮ್ಮ ಮಾರ್ಗಕ್ಕೆ ಅಡ್ಡವಾಗಿ ಸರೋವರದ ಸುತ್ತಲೂ ನಿದ್ರಿಸುತ್ತಿದ್ದ ಆ ಶ್ರೇಷ್ಠವಾದ ಸಮುದಾಯವು ಭೂಮಿಯಲ್ಲಿ ಹೊರಳಾಡುತ್ತಿರುವುದನ್ನು ನೋಡಿ ಇದ್ದಕ್ಕಿದಂತೆ ಅವು ನಿದ್ರಿಸುತ್ತಿದ್ದವರನ್ನು ತುಳಿದವು.

ಮಹಾರವಂ ಪ್ರಮುಂಚಂತೋ ವಧ್ಯಂತೇ ಶರಣಾರ್ಥಿನಃ |
ವನಗುಲ್ಮಾಂಶ್ಚ  ಧಾವಂತೋ ನಿದ್ರಯಾ ಮಹತೋ ಭಯಾತ್ |
ಕೇಚಿದ್ದಂತೈಃ ಕರೈಃ ಕೇಚಿತ್ ಕೇಚಿತ್ ಪದ್ಭ್ಯಾಂ ನರಾ ಹತಾಃ ॥8॥
ರಕ್ಷಣೆಯನ್ನು ಬಯಸುವವರು ದೊಡ್ಡ ಆರ್ತನಾದವನ್ನು ಉಚ್ಛರಿಸುತ್ತಾ ಕೊಲ್ಲಲ್ಪಟ್ಟರು. ದೊಡ್ಡ ಭಯದಿಂದ ಕೆಲವರು ಅಲ್ಪನಿದ್ರೆಯಿಂದಲೇ ಯುಕ್ತರಾಗಿ ಕಾಡಿನ ಪೊದೆಗಳ ಕಡೆಗೆ ಓಡಿದರು. ಕೆಲವರು ದಂತಗಳಿಂದಲೂ ಕೆಲವರು ಸೊಂಡಿಲುಗಳಿಂದಲೂ ಕೆಲವರು ಅವುಗಳ ಪಾದಗಳಿಂದಲೂ ಹತರಾದರು.
ಗೋಖರೋಷ್ಟ್ರಾಶ್ವ ಬಹುಲಂ ಪದಾತಿಜನಸಂಕುಲಮ್ |
ಭಯಾರ್ತಂ ಧಾವಮಾನಂ ಚ ಪರಸ್ಪರಹತಂ ತಥಾ ॥9॥
ಘೋರಂ ನಾದಂ ವಿಮುಂಚಂತೋ ನಿಪೇತುರ್ಧರಣೀತಳೇ |
ಪದಾತಿಸಂಕುಲಗಳಿಂದ ಕೂಡಿದ್ದ ಗೋವುಗಳು ರಾಸಭಗಳು ಮತ್ತು ಒಂಟೆಗಳಿಂದ ಕೂಡಿದ್ದ ಆ ಸಮೂಹವು ಭಯದಿಂದ ಓಡುತ್ತಾ ಪರಸ್ಪರವಾಗಿ ಹತವಾಗಿ ಘೋರವಾದ ನಾದವನ್ನು ಮಾಡುತ್ತಾ ಭೂಮಿಯಮೇಲೆ ಉರುಳಿತು.
ವೃಕ್ಷೇಷ್ವಾಸಜ್ಯ ಸಂಭಗ್ನಾಃ ಪತಿತಾ ವಿಷಮೇಷು ಚ |
ತಥಾ ವಿನಿಹತಂ ಸರ್ವಂ ಸಮೃದ್ಧಂ ಸಾರ್ಥಮಂಡಲಮ್ ॥10॥
ಕೆಲವರು ಮರಗಳನ್ನು ಹಿಡಿದುಕೊಂಡು ಆ ಮರಗಳು ಮುರಿಯುತ್ತಿರಲು ವಿಷಮಪ್ರದೇಶಗಳಲ್ಲಿ ಬಿದ್ದರು. ಹಾಗೆ ಆ ಸಮೃದ್ಧವಾದ ವರ್ತಕರ ಮತ್ತು ಪಥಿಕರ ಸಮೂಹವೆಲ್ಲವೂ ಆಘಾತಕ್ಕೆ ಈಡಾಯಿತು.
ಅಥಾಪರೇದ್ಯುಃ ಸಂಪ್ರಾಪ್ತೇ ಹತಶಿಷ್ಟಾ ಜನಾಸ್ತದಾ |
ಬಹುಗುಲ್ಮಾದ್ ವಿನಿಷ್ಕ್ರಮ್ಯ ಶೋಚಂತೇ ವೈಶಸಂ ಕೃತಮ್ |
ಭ್ರಾತರಂ ಪಿತರಂ ಪುತ್ರಂ ಸಖಾಯಂ ಚ ಜನಾಧಿಪ ॥11॥
ಎಲೈ ರಾಜನೇ ಅನಂತರ ಮರುದಿನವು ಬರುತ್ತಿರಲು ಅಳಿದುಳಿದ ಜನಗಳು ಪೊದೆಗಳಿಂದ ಹೊರಗೆಬಂದು ರಾತ್ರಿನಡೆದ ಹಿಂಸೆಯನ್ನು ನೋಡಿ  ತಮ್ಮ ಸಹೋದರರನ್ನೂ ಪಿತೃಗಳನ್ನೂ ಪುತ್ರರನ್ನೂ  ಮತ್ತು ಸ್ನೇಹಿತರನ್ನೂ ಕುರಿತು ಶೋಕಪಟ್ಟರು.
ಹನ್ಯಮಾನೇ ತಥಾ ಸಾರ್ಥೇ ದಮಯಂತೀ ಶುಚಿಸ್ಮಿತಾ |
ಬ್ರಾಹ್ಮಣೈಃ ಸಹಿತಾ ತತ್ರ ವನೇ ತು ನ ವಿನಾಶಿತಾ |
ಅಶೋಚತ್ ತತ್ರ ವೈದರ್ಭೀ ಕಿಂನು ಮೇ ದುಷ್ಕೃತಂ ಕೃತಮ್ ॥12॥
ಸೋಽಪಿ ಮೇ ನಿರ್ಜನೇಽರಣ್ಯೇ ಸಂಪ್ರಾಪ್ತೋಽಯಂ ಜನಾರ್ಣವಃ |
ಹತೋಽಯಂ ಹಸ್ತಿಯೂಥೇನ ಮಂದಭಾಗ್ಯಾನ್ಮಮೈವ ತು |
ಪ್ರಾಪ್ತವ್ಯಂ ಸುಚಿರಂ ದುಃಖಂ ಮಯಾ ನೂನಮಸಂಶಯಮ್ ॥13॥
ಹಾಗೆ ಆ ಗುಂಪು ಅಪಘಾತಕ್ಕೆ ಸಿಕ್ಕುತ್ತಿರಲು ಆ ವನದಲ್ಲಿ ಬ್ರಾಹ್ಮಣರಿಂದ ಸಹಿತಳಾದ ಶುಚಿಸ್ಮಿತೆಯಾದ ದಮಯಂತಿಯು ಯಾವ ಅಪಾಯಕ್ಕೂ ಸಿಗಲಿಲ್ಲ.  ನಾನು ಎಂತಹ ಪಾಪವನ್ನು ಮಾಡಿದ್ದೇನೆ ಎಂದು ಚಿಂತಿಸುತ್ತಾ ಅವಳು ಶೋಕಪಟ್ಟಳು. ನಾನಾದರೋ  ಈ ನಿರ್ಜನವಾದ ಅರಣ್ಯದಲ್ಲಿ ಈ ಜನರಗುಂಪನ್ನು ಸೇರಿದೆ ನನ್ನ ದೌರ್ಭಾಗ್ಯದಿಂದ  ಈ ಜನ ಸಮೂಹವು ಗಜಗಳ ಹಿಂಡಿನಿಂದ ತುಳಿಯಲ್ಪಟ್ಟಿತು. ನಾನು ನಿಸ್ಸಂಶಯವಾಗಿ ಇನ್ನೂ ಬಹುಕಾಲ ದುಃಖವನ್ನು ಅನುಭವಿಸಬೇಕೆಂದು ತೋರುತ್ತದೆ.
ನಾನಾಪ್ತಕಾಲೋ ಮ್ರಿಯತೇ ಶ್ರುತಂ ವೃದ್ಧಾನುಶಾಸನಮ್ |
ಯಾ ನಾಹಮದ್ಯ ಮೃದಿತಾ ಹಸ್ತಿಯೂಥೇನ ದುಃಖಿತಾ |
ನಾದ್ಯ ದೈವಕೃತಂ ಕಿಂಚಿನ್ನರಾಣಾಮಿಹ ವಿದ್ಯತೇ ॥14॥
ಆಯುಷ್ಯವು ಪೂರ್ಣವಾಗದೆ ಮೃತ್ಯುವುಂಟಾಗುವುದಿಲ್ಲವೆಂದು ನಾನು ದೊಡ್ಡವರ ಉಪದೇಶವನ್ನು ಕೇಳಿದ್ದೇನೆ. ಏಕೆಂದರೆ ಇಷ್ಟು ದುಃಖಿತಳಾದ ನಾನು ಈ ದಿನ ಆ ಗಜಮರ್ದನಕ್ಕೆ ಒಳಗಾಗಲಿಲ್ಲ. ಮನುಷ್ಯರಿಗೆ ವಿಧಿ ವಿಹಿತವಾದುದಲ್ಲದೆ ಇಲ್ಲಿ ಬೇರೆ ಏನೂ ಉಂಟಾಗುವುದಿಲ್ಲ.
ನ ಚ ಮೇ ಬಾಲಭಾವೇಽಪಿ ಕಿಂಚಿತ್ ಪಾಪಕೃತಂ ಕೃತಮ್ |
ಕರ್ಮಣಾ ಮನಸಾ ವಾಚಾ ಯದಿದಂ ದುಃಖಮಾಗತಮ್ ॥15॥
ನಾನು ಈಗ ಒದಗಿರುವ ದುಃಖಕ್ಕೆ ಕಾರಣವಾಗಿ ಬಾಲ್ಯದಲ್ಲಿಯೂ ಸಹ ಮನಸ್ಸಿನಿಂದ ಆಗಲೀ ಮಾತಿನಿಂದಲಾಗಲೀ ಆಥವಾ ಕಾರ್ಯದಿಂದಲಾಗಲೀ ಯಾವ ಪಾಪಕಾರ್ಯವನ್ನೂ ಮಾಡಿಲ್ಲ.
ಮನ್ಯೇ ಸ್ವಯಂವರಕೃತೇ ಲೋಕಪಾಲಾಃ ಸಮಾಗತಾಃ |
ಪ್ರತ್ಯಾಖ್ಯಾತಾ ಮಯಾ ತತ್ರ ನಳಸ್ಯಾರ್ಥಾಯ ದೇವತಾಃ |
ನೂನಂ ತೇಷಾಂ ಪ್ರಭಾವೇಣ ವಿಯೋಗಂ ಪ್ರಾಪ್ತವತ್ಯಹಮ್ ॥16॥
ನಾನು ಸ್ವಯಂವರದ ಸಂದರ್ಭದಲ್ಲಿ ನಳನನ್ನು ವರಿಸಬೇಕೆಂಬ ಇಚ್ಛೆಯಿಂದ ಆಗಮಿಸಿದ ಲೋಕಪಾಲಕರಾದ ದೇವತೆಗಳನ್ನು ನಿರಾಕರಿಸಿದೆ. ನಿಶ್ಚಯವಾಗಿ ಅವರ ಪ್ರಭಾವದಿಂದಲೇ ನಾನು ಪತಿವಿಯೋಗವನ್ನು ಪಡೆದಿದ್ದೇನೆ.
ಏವಮಾದೀನಿ ದುಃಖಾರ್ತಾ ಸಾ ವಿಲಪ್ಯ ವರಾಂಗನಾ |
ಹತಶೇಷೈಃ ಸಹ ತದಾ ಬ್ರಾಹ್ಮಣೈರ್ವೇದಪಾರಗೈಃ |
ಅಗಚ್ಛದ್ ರಾಜಶಾರ್ದೂಲ ದುಃಖಶೋಕಸಮನ್ವಿತಾ ॥17॥
ಎಲೈ ರಾಜಶಾರ್ದೂಲನೇ ದುಃಖಾರ್ತಳಾದ ಆ ಸುಂದರಿಯು ಹೀಗೆಲ್ಲಾ ಬಹಳವಾಗಿ ವಿಲಾಪವನ್ನು ಮಾಡಿ ಅಳಿದುಳಿದ ವೇದಪಾರಂಗತರಾದ ಬ್ರಾಹ್ಮಣರ ಜೊತೆಯಲ್ಲಿ ದುಃಖಶೋಕ ಸಮನ್ವಿತಳಾಗಿ ಮುಂದೆ ನಡೆದಳು.

ಗಚ್ಛಂತೀ ಸಾ ಚಿರಾತ್ ಬಾಲಾ ಪುರಮಾಸಾದಯನ್ಮಹತ್ |
ಸಾಯಾಹ್ನೇ ಚೇದಿರಾಜಸ್ಯ ಸುಬಾಹೋಃ ಸತ್ಯವಾದಿನಃ ॥18॥
ಹೀಗೆ ಬಹಳ ದೂರನಡೆದ ಆ ಬಾಲೆಯು ಸಾಯಂಕಾಲದವೇಳೆಗೆ ಚೇದಿರಾಜನಾದ ಸತ್ಯವಾದಿಯಾದ ಸುಬಾಹುವಿನ ದೊಡ್ಡ ನಗರವನ್ನು ತಲುಪಿದಳು.
ಸಾ ತು ತಚ್ಚಾರುಸರ್ವಾಂಗೀ ಸುಬಾಹೋಸ್ತುಂಗಗೋಪುರಮ್ |
ನಿಕೃತ್ತವಸ್ತ್ರಸಂವೀತಾ ಪ್ರವಿವೇಶ ಪುರೋತ್ತಮಮ್ ॥19॥
ತಾಂ ವಿವರ್ಣಾಂ ಕೃಶಾಂ ದೀನಾಂ ಮಲಿನಾಂ ಮುಕ್ತಮೂರ್ಧಜಾಮ್|
ಉನ್ಮತ್ತಾಮಿವ ಗಚ್ಛಂತೀಂ ದದೃಶುಃ ಪುರವಾಸಿನಃ ॥20॥
ಪ್ರವಿಶಂತೀಂ ತು ತಾಂ ದೃಷ್ಟ್ವಾ ಚೇದಿರಾಜಪುರೀಂ ತದಾ |
ಅನುಜಗ್ಮುಸ್ತತೋ ಬಾಲಾ ರಾಜಪುತ್ರ್ಯಾಃ ಕುತೂಹಲಾತ್ ॥21॥
ಸರ್ವಾವಯವ ಸುಂದರಿಯಾದ ಅವಳು ಕತ್ತರಿಸಿದ ಅರ್ಧವಸ್ತ್ರದಿಂದ ತನ್ನನ್ನು ಮುಚ್ಚಿಕೊಂಡು ಎತ್ತರವಾದ ಗೋಪುರಗಳಿದ್ದ ಸುಬಾಹುವಿನ ಶ್ರೇಷ್ಠವಾದ ಪಟ್ಟಣವನ್ನು ಪ್ರವೇಶಿಸಿದಳು. ವರ್ಣಹೀನಳೂ ಕೃಶಳೂ ದೀನಳೂ ಮಲಿನಳೂ ತಲೆಯನ್ನು ಕೆದರಿಕೊಂಡಿರುವವಳೂ ಆದ ಹುಚ್ಚಿಯಂತೆ ನಡೆಯುತ್ತಿರುವ ಅವಳನ್ನು ಪುರವಾಸಿಜನರು ನೋಡಿದರು. ಚೇದಿರಾಜ ಪುರವನ್ನು ಪ್ರವೇಶಿಸುತ್ತಿದ್ದ ಅವಳನ್ನು ನೋಡಿ ಆಗ ಆ ರಾಜಕುಮಾರಿಯ ಮೇಲಿನ ಕುತೂಹಲದಿಂದ ಬಾಲಕರು ಅವಳನ್ನು ಹಿಂಬಾಲಿಸಿದರು.
ಸಾ ತೈಃ ಪರಿವೃತಾಽಗಚ್ಛತ್ ಸಮೀಪಂ ರಾಜವೇಶ್ಮನಃ |
ತಾಂ ಪ್ರಾಸಾದಗತಾಽಪಶ್ಯದ್ ರಾಜಮಾತಾ ಜನೈರ್ವೃತಾಮ್ ॥22॥
ಅವಳು ಆ ಬಾಲಕರಿಂದ ಪರಿವೃತಳಾಗಿ ಅರಮನೆಯ ಸಮೀಪಕ್ಕೆ ಬಂದಳು. ರಾಜಮಾತೆಯು ಅರಮನೆಯ ಉಪ್ಪರಿಗೆಯಿಂದ ಅವಳು ಜನಗಳಿಂದ ಸುತ್ತುವರಿಯಲ್ಪಟ್ಟಿದ್ದನ್ನು ನೋಡಿದಳು.
ಸಾ ಜನಂ ವಾರಯಿತ್ವಾ ತಂ ಪ್ರಾಸಾದತಳಮುತ್ತಮಮ್ |
ಆರೋಪ್ಯ ವಿಸ್ಮಿತಾ ರಾಜನ್ ದಮಯಂತೀಮಪೃಚ್ಛತ ॥23॥
ಎಲೈ ರಾಜನೇ ರಾಜಮಾತೆಯು ಆ ಜನಗಳನ್ನು ದೂರಕಳುಹಿಸಿ ಉಪ್ಪರಿಗೆಯ ಮೇಲೆ ದಮಯಂತಿಯನ್ನು ಕರೆಸಿ ದಮಯಂತಿಯನ್ನು ವಿಸ್ಮಯದಿಂದ ಪ್ರಶ್ನಿಸಿದಳು.
ಏವಮಪ್ಯಸುಖಾವಿಷ್ಟಾ ಬಿಭರ್ಷಿ ಪರಮಂ ವಪುಃ |
ಭಾಸಿ ವಿದ್ಯುದಿವಾಭ್ರೇಷು ಶಂಸ ಮೇ ಕಾಽಸಿ ಕಸ್ಯ ವಾ ॥24॥
ಇಷ್ಟು ದುಃಖದಲ್ಲಿ ಮುಳುಗಿದ್ದರೂ ನೀನು ಶ್ರೇಷ್ಠವಾದ ಸುಂದರವಾದ ಶರೀರವನ್ನು ಧರಿಸಿದ್ದೀಯೆ. ಮೋಡಗಳ ಮಧ್ಯದಲ್ಲಿರುವ ಮಿಂಚಿನಂತೆ ಕಂಗೊಳಿಸುತ್ತಿದ್ದೀಯೆ. ನೀನು ಯಾರು? ಯಾರಿಗೆ ಸೇರಿದವಳು ಎಂದು ನನಗೆ ಹೇಳು.
ನ ಚ ತೇ ಮಾನುಷಂ ರೂಪಂ ಭೂಷಣೈರಪಿ ವರ್ಜಿತಾ |
ಅಸಹಾಯಾ ನರೇಭ್ಯಶ್ಚ ನೋದ್ವಿಜಸ್ಯಮರಪ್ರಭೇ |
ಸ್ತ್ರಿಯೋ ಹಿ ದೃಷ್ಟ್ವಾ ಕಾಮಾರ್ತಾಃ ಕಾ ನ ಪುಂಸೋ ರತಿರ್ಭವೇತ್ ॥
ನೀನು ಭೂಷಣಗಳಿಂದ ರಹಿತಳಾಗಿದ್ದರೂ ಈ ನಿನ್ನ ರೂಪವು ಮಾನುಷರೂಪವಲ್ಲ. ಎಲೌ ದೇವತೆಯಕಾಂತಿಯುಳ್ಳವಳೇ ಯಾವ ಮನುಷ್ಯರ ಸಹಾಯವಿಲ್ಲದಿದ್ದರೂ ನೀನು ಉದ್ವೇಗ ಪಡುತ್ತಿಲ್ಲ. ಕಾಮಾರ್ತರಾದ ಸ್ತ್ರೀಯರನ್ನು ನೋಡಿ ಪುರುಷರಿಗೆ ಏಕೆ ಸಂತೋಷವುಂಟಾಗುವುದಿಲ್ಲ?
ತಚ್ಛ್ರುತ್ವಾ ವಚನಂ ತಸ್ಯಾ ಭೈಮೀ ವಚನಮಬ್ರವೀತ್ |
ಮಾನುಷೀಂ ಮಾಂ ವಿಜಾನೀಹಿ ಭರ್ತಾರಂ ಮಾಮನುವ್ರತಾಮ್ |
ಸೈರಂಧ್ರೀಜಾತಿಸಂಪನ್ನಾಂ ಭುಜಿಷ್ಯಾಂ ಕಾಮವಾಸಿನೀಮ್ ॥26॥
ಆ ಮಾತುಗಳನ್ನು ಕೇಳಿದ ದಮಯಂತಿಯು ಉತ್ತರವನ್ನು ಕೊಟ್ಟಳು. ನನ್ನನ್ನು ಒಬ್ಬ ಮನುಷ್ಯಳೆಂದು ತಿಳಿ. ನಾನು ನನ್ನ ಪತಿಗೆ ಅನುವ್ರತಳಾದವಳು. ಸೈರಂಧ್ರಿಜಾತಿಯಲ್ಲಿ ಹುಟ್ಟಿ ನಾನು ಭುಜಿಷ್ಯೆ (ಸೇವಕಿಯಾಗಿದ್ದೇನೆ) ನಾನು ನನ್ನ ಮನಸ್ಸಿಗೆ ಬಂದಕಡೆ ಇರುತ್ತೇನೆ.
ಫಲಮೂಲಾಶನಾಮೇಕಾಂ ಯತ್ರಸಾಯಂಪ್ರತಿಶ್ರಯಾಮ್ |
ಅಸಂಖ್ಯೇಯಗುಣೋ ಭರ್ತಾ ಮಾಂ ಚ ನಿತ್ಯಮನುವ್ರತಃ |
ಭರ್ತಾರಂ ಪಿತರಂ ವೀರಂ ಛಾಯೇವಾನಪಗಾ ಸದಾ ॥27॥
ನಾನು ಏಕಾಕಿಯಾಗಿದ್ದೇನೆ. ಫಲಮೂಲಗಳನ್ನು ಅಹಾರವಾಗಿ ಸ್ವೀಕರಿಸಿ ಎಲ್ಲಿ ಸಾಯಂಕಾಲವಾಗುತ್ತದೆಯೊ ಅಲ್ಲಿಯೇ ವಾಸಮಾಡುತ್ತೇನೆ. ನನ್ನ ಗಂಡನು ಬಹಳ ಗುಣಗಳನ್ನು ಹೊಂದಿದ್ದಾನೆ. ನನ್ನನ್ನು ಹಿಂಬಾಲಿಸುತ್ತಾನೆ. ನನ್ನ ಮಕ್ಕಳಿಗೆ ತಂದೆಯಾದ ವೀರನಾದ ನನ್ನ ಪತಿಯನ್ನು ನೆರಳಿನಂತೆ ಯಾವಾಗಲೂ ಹಿಂಬಾಲಿಸುತ್ತೇನೆ.
ತಸ್ಯ ದೈವಾತ್ ಪ್ರಸಂಗೋಽಭೂದತಿಮಾತ್ರಂ ಹಿ ದೇವನೇ |
ಸ ಕೇನಚಿದಮೇಯಾತ್ಮಾ ಕಾರಣೇನ ವರಾನನೇ |
ದುಃಖಿತಃ ಸರ್ವಮುತ್ಸೃಜ್ಯ ಪ್ರವಿವೇಶ ಮಹಾವನಮ್ ॥28॥
ಅಂತಹ ನನ್ನ ಪತಿಗೆ ದೈವಪ್ರೇರಣೆಯಿಂದ ಅಕ್ಷದ್ಯೂತದಲ್ಲಿ ಬಹಳ ಆಸಕ್ತಿಯುಂಟಾಯಿತು. ಎಲೌ ಸುಂದರಾನನೆಯೇ ಆ ಮಹಾತ್ಮನಾದ ಅವನು ಯಾವುದೋ ಒಂದು ಕಾರಣದಿಂದ ದುಃಖಿತನಾಗಿ ಎಲ್ಲವನ್ನು ತೊರೆದು ದೊಡ್ಡ ಕಾಡನ್ನು ಪ್ರವೇಶಿಸಿದನು.
ದ್ಯೂತೇಽಯಂ ನಿರ್ಜಿತಶ್ಚೈವ ವನಮೇಕೋಽಭ್ಯುಪೇಯಿವಾನ್ |

ತಂ ಚೈಕವಸನಂ ವೀರಂ ಉನ್ಮತ್ತ ಇವ ವಿಹ್ವಲಮ್ ॥29॥
ಅವನು ದ್ಯೂತದಲ್ಲಿ ಸೋತು ಒಬ್ಬನೇ ವನವನ್ನು ಪ್ರವೇಶಿಸಿದನು. ಒಂದೇ ವಸ್ತ್ರವನ್ನು ಧರಿಸಿ ಉನ್ಮತ್ತನಂತೆ ವಿಹ್ವಲನಾದ ಆ ವೀರನನ್ನು ನಾನು ಛಾಯೆಯಂತೆ ಸದಾ ಅನುಸರಿಸುತ್ತೇನೆ.
ತತಸ್ತಂ ದುಃಖಿತಂ ದೃಷ್ಟ್ವಾ ಪ್ರವಿಶಂತಂ ಚ ಕಾನನಮ್ |
ಆಶ್ವಾಸಯಂತೀ ಭರ್ತಾರಮಹಮನ್ವಗಮಂ ತದಾ ॥30॥
ಆಗ ದುಃಖಿತನಾದ ಅವನು ಕಾಡಿಗೆ ಹೋಗುತ್ತಿರುವುದನ್ನು ನೋಡಿ ಆ ನನ್ನ ಪತಿಯನ್ನು ಸಮಾಧಾನಪಡಿಸುತ್ತಾ ನಾನು ಅವನ ಹಿಂದೆ ಅನುಸರಿಸಿ ಬಂದೆನು.
ಸ ಕದಾಚಿತ್ ಪುನರ್ವೀರಃ ಕಸ್ಮಿಂಶ್ಚಿತ್ ಕಾರಣಾಂತರೇ |
ಕ್ಷುತ್ಪರೀತಶ್ಚ ವಿಮನಾ ವಾಸಶ್ಚೈಕಂ ವ್ಯಸರ್ಜಯತ್ ॥31॥
ಪುನಃ ಆ ವೀರನು ಒಮ್ಮೆ ಯಾವುದೋ ಒಂದುಕಾರಣಕ್ಕಾಗಿ ಹಸಿವಿನಿಂದ ಬಳಲಿ ಬೇಸರಗೊಂಡು ಇದ್ದ ಒಂದು ವಸ್ತ್ರವನ್ನು ತೊರೆದನು.
ತಮೇಕವಸನಂ ನಗ್ನಮುನ್ಮತ್ತಗತಚೇತಸಮ್ |
ಅನುವ್ರಜಂತೀ ಬಹುಲಾ ನ ಸ್ವಪಾಮಿ ನಿಶಾಃ ಸದಾ ॥32॥
ಏಕವಸ್ತ್ರವನ್ನು ಧರಿಸಿ ಹೊರಟ ಅವನು ನಗ್ನನೂ ಉನ್ಮತ್ತನಂತೆ ಪ್ರಜ್ಞಾಶೂನ್ಯನೂ ಆಗಿರುವುದನ್ನು ನೋಡಿ ಅವನನ್ನೇ ಹಿಂಬಾಲಿಸುತ್ತಾ ನಾನು ಎಷ್ಟು ರಾತ್ರಿಗಳಾದರೂ ನಿದ್ರೆಯನ್ನೇ ಮಾಡುವುದಿಲ್ಲ.
ತತೋ ಬಹುತಿಥೇ ಕಾಲೇ ಸುಪ್ತಾಮುತ್ಸೃಜ್ಯ ಮಾಂ ಕ್ವಚಿತ್ |
ವಾಸಸೋಽರ್ಧಂ ಪರಿಚ್ಛಿದ್ಯ ತ್ಯಕ್ತವಾನ್ ಮಾಮನಾಗಸೀಮ್ ॥33॥
ತಂ ಮಾರ್ಗಮಾಣಾ ಭರ್ತಾರಂ ದಹ್ಯಮಾನಾ ದಿನಕ್ಷಪಮ್ |
ನ ವಿಂದಾಮ್ಯಮರಪ್ರಖ್ಯಂ ಪ್ರಿಯಂ ಪ್ರಾಣೇಶ್ವರಂ ಪ್ರಭುಮ್ ॥34॥
ಅನಂತರ ಎಷ್ಟೋದಿನಗಳು ಕಳೆದ ಮೇಲೆ ಒಮ್ಮೆ ನಾನು ನಿದ್ರಿಸುತ್ತಿದಾಗ ನನ್ನ ವಸ್ತ್ರದ ಅರ್ಧಭಾಗವನ್ನು ಕತ್ತರಿಸಿ ನಿರಪರಾಧಿಯಾದ ನನ್ನನ್ನು ಪರಿತ್ಯಜಿಸಿದನು. ಅವನನ್ನು ಹುಡುಕುತ್ತಿದ್ದರೂ. ಹಗಲೂ ರಾತ್ರಿಯೂ ದುಃಖದಿಂದ ಬೆಂದುಹೋಗುತ್ತಾ ದೇವತೆಗಳ ಸಮಾನವಾದ ಕಾಂತಿಯುಳ್ಳ ಪ್ರಿಯನಾದ ನನ್ನ ಪ್ರಾಣೇಶ್ವರನಾದ ಪ್ರಭುವಾದ ಆ ಪತಿಯನ್ನು ನಾನು ಕಾಣುತ್ತಿಲ್ಲ.
ಬೃಹದಶ್ವಃ
ಇತ್ಯುಕತ್ವ ಸಾಽನವದ್ಯಾಂಗೀ ರಾಜಮಾತರಮಪ್ಯುತ |
ಸ್ಥಿತಾಽಕ್ಷಿಪರಿಪೂರ್ಣಾಶ್ರುರ್ವೇಪಮಾನಾ ಸುದುಃಖಿತಾ ॥35॥
ಆ ಸುಂದರಾಂಗಿಯು ರಾಜಮಾತೆಯನ್ನು ಕುರಿತು ಹೀಗೆ ಮಾತನಾಡಿ ಕಣ್ಣುಗಳಲ್ಲಿ ನೀರುಗಳನ್ನು ತುಂಬಿಕೊಂಡು ಬಹಳ ದುಃಖದಿಂದ ನಡುಗುತ್ತಾ ಅವಳೆದುರಿಗೆ ನಿಂತಳು.
ತಾಮಶ್ರುಪರಿಪೂರ್ಣಾಕ್ಷೀಂ ವಿಲಪಂತೀಮನಾಥವತ್ |
ರಾಜಮಾತಾಽಬ್ರವೀದಾರ್ತಾ ಭೈಮೀಮಾರ್ತಸ್ವರಾ ಸ್ವಯಮ್ ॥36॥
ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅನಾಥಳಂತೆ ಬಹಳವಾಗಿ ಮಾತನಾಡುವ ಆ ಆರ್ತಳಾದ ದಮಯಂತಿಯನ್ನು ನೋಡಿ ರಾಜಮಾತೆಯು ತಾನೇ ಆರ್ತಸ್ವರದಿಂದ ಕೂಡಿದವಳಾಗಿ ದಮಯಂತಿಯನ್ನು ಕುರಿತು ಮಾತನಾಡಿದಳು.
ವಸ ತ್ವಮಿಹ ಕಲ್ಯಾಣಿ ಪ್ರೀತಿರ್ಮೇ ತ್ವಯಿ ವರ್ತತೇ |
ಮೃಗಯಿಷ್ಯಂತಿ ತೇ ಭದ್ರೇ ಭರ್ತಾರಂ ಪುರುಷಾ ಮಮ ॥37॥
ಕಲ್ಯಾಣಿಯೇ ನೀನು ಇಲ್ಲಿ ವಾಸಮಾಡು. ನಿನ್ನಲ್ಲಿ ನನಗೆ ಪ್ರೀತಿಯಿದೆ. ಭದ್ರೆಯೇ ನಿನ್ನ ಪತಿಯನ್ನು ನನ್ನ ಪುರುಷರು ಹುಡುಕುವರು.
ಅಪಿ ವಾ ಸ್ವಯಮಾಗಚ್ಛೇತ್ ಪರಿಧಾವನ್ನಿತಸ್ತತಃ |
ಇಹೈವ ವಸತೀ ಭದ್ರೇ ಭರ್ತಾರಮುಪಲಪ್ಸ್ಯತೇ |
ರಾಜಮಾತುರ್ವಚಃ ಶ್ರುತ್ವಾ ದಮಯಂತೀ ವಚೋಽಬ್ರವೀತ್ ॥36॥
ಅಥವಾ ಅಲ್ಲಿಂದಿಲ್ಲಿಗೆ ಓಡಾಡುತ್ತಾ ನಿನ್ನ ಪತಿಯು ತಾನಾಗಿಯೇ ಇಲ್ಲಿಗೆ ಬರಬಹುದು. ಭದ್ರೆಯೇ ನೀನು ಇಲ್ಲಿಯೇ ವಾಸವನ್ನುಮಾಡುತ್ತಾ ಪತಿಯನ್ನು ಹೊಂದುವಿ. ರಾಜಮಾತೆಯ ಮಾತುಗಳನ್ನು ಕೇಳಿ ದಮಯಂತಿಯು ಮಾತನಾಡಿದಳು.
ಸಮಯೇನೋತ್ಸಹೇ ವಸ್ತುಂ ತ್ವಯಿ ವೀರಪ್ರಜಾಯಿನಿ |
ಉಚ್ಛಿಷ್ಟಂ ನೈವ ಭುಂಜೀಯಾಂ ನ ಕುರ್ಯಾಂ ಪಾದಧಾವನಮ್ ॥37॥
ನ ಚಾಹಂ ಪುರುಷಾನನ್ಯಾನ್ ಸಂಭಾಷೇಯಂ ಕದಾಚನ |
ಪ್ರಾರ್ಥಯೇದ್ಯದಿ ಮಾಂ ಕಶ್ಚಿದ್ ದಂಡ್ಯಸ್ತೇ ಸ ಪುಮಾನ್ ಭವೇತ್ |
ಭರ್ತುರನ್ವೇಷಣಾರ್ಥಂ ತು ಪಶ್ಯೇಯಂ ಬ್ರಾಹ್ಮಣಾನಹಮ್ ॥40॥
ಎಲೌ ವೀರಸುತರನ್ನು ಪಡೆದವಳೇ ಒಂದು ಶರತ್ತಿನ ಮೇರೆಗೆ (ಒಪ್ಪಂದದ ಮೇರೆಗೆ) ನಾನು ನಿನ್ನಲ್ಲಿ ವಾಸಮಾಡುತ್ತೇನೆ. ನಾನು ಉಚ್ಛಿಷ್ಟವನ್ನು ಎಂದೂ ಭುಂಜಿಸುವುದಿಲ್ಲ. ನನ್ನ ಪಾದಗಳನ್ನು ನಾನೇ ತೊಳೆದುಕೊಳ್ಳುವುದಿಲ್ಲ. ನಾನು ಅನ್ಯಪುರುಷನ ಜೊತೆಯಲ್ಲಿ ಎಂದೂ ಮಾತನಾಡುವುದಿಲ್ಲ. ನನ್ನನ್ನು ಯಾವನಾದರೂ ಪುರುಷನು ಅಪೇಕ್ಷಿಸಿದರೆ ನೀನು ಅವನಿಗೆ ಶಿಕ್ಷೆಯನ್ನು ಕೊಡಬೇಕು. ಪತಿಯನ್ನು ಹುಡುಕುವ ಸಲುವಾಗಿ ನಾನು ಬ್ರಾಹ್ಮಣರನ್ನು ಮಾತ್ರ ನೋಡುವೆನು.
ಯದ್ಯೇವಮಿಹ ವಸ್ತವ್ಯಂ ವತ್ಸ್ಯಾಮ್ಯಹಮಸಂಶಯಮ್ |
ಅತೋಽನ್ಯಥಾ ನ ಮೇ ವಾಸೋ ವರ್ತತೇ ಹೃದಯೇ ಕ್ವಚಿತ್ ॥41॥

ಹೀಗೆ ಇಲ್ಲಿ ವಾಸಮಾಡಲು ಸಾಧ್ಯವಾಗುವುದಾದರೆ ಖಂಡಿತವಾಗಿ ನಾನು ವಾಸಮಾಡುವೆನು. ಹಾಗಿಲ್ಲದಿದ್ದರೆ ನನಗೆ ಇಲ್ಲಿ ವಾಸಮಾಡಬೇಕೆಂಬ ಅಭಿಪ್ರಾಯವಿಲ್ಲ.
ಇತ್ಯುಕ್ತಾ ದಮಯಂತ್ಯಾ ತು ರಾಜಮಾತೇದಮಬ್ರವೀತ್ |
ಸರ್ವಮೇತತ್ ಕರಿಷ್ಯಾಮಿ ದಿಷ್ಟ್ಯಾ ತೇ ವ್ರತಮೀದೃಶಮ್ ॥42॥
ಹೀಗೆ ದಮಯಂತಿಯಿಂದ ಹೇಳಲ್ಪಟ್ಟವಳಾಗಿ ಆ ರಾಜಮಾತೆಯು ದೇವರ ದಯೆಯಿಂದ ನಿನಗೆ ಇಂತಹ ವ್ರತವಿದೆ. ನೀನು ಹೇಳುವುದೆಲ್ಲವನ್ನೂ ಮಾಡುವೆನು ಎಂದು ಅವಳಿಗೆ ಹೇಳಿದಳು.
ಏವಮುಕ್ತ್ವಾ ತತೋ ಭೈಮೀಂ ರಾಜಮಾತಾ ವಿಶಾಂಪತೇ |
ಉವಾಚೇದಂ ದುಹಿತರಂ ಸುನಂದಾಂ ನಾಮ ಭಾರತ ॥43॥
ಎಲೈ ರಾಜನೇ ರಾಜಮಾತೆಯು ದಮಯಂತಿಯನ್ನು ಕುರಿತು ಹೀಗೆ ಹೇಳಿ ಅನಂತರ ತನ್ನ ಮಗಳಾದ ಸುನಂದೆಯನ್ನು ಕುರಿತು ಹೀಗೆ ಮಾತನಾಡಿದಳು.
ಸೈರಂಧ್ರೀಮಭಿಜಾನೀಷ್ವ ಸುನಂದೇ ದೇವರೂಪಿಣೀಮ್ |
ಅನಯಾ ಸಹ ಮೋದಸ್ವ ನಿರುದ್ವಿಗ್ನಮನಾಃ ಸ್ವಯಮ್ |
ವಯಸಾ ತುಲ್ಯತಾಂ ಪ್ರಾಪ್ತಾ ಸಖೀ ತವ ಭವತ್ವಿಯಮ್ ॥44॥
ಸುನಂದೆಯೇ ಇವಳು ದೇವತೆಯ ರೂಪವನ್ನು ಧರಿಸಿರುವ ಸೈರಂಧ್ರಿಯೆಂದು ತಿಳಿ. ಇವಳ ಜೊತೆಯಲ್ಲಿ ನಿರಾತಂಕವಾಗಿ ಸಂತೋಷದಿಂದಿರು. ನಿನಗೆ ಸಮಾನವಾದ ವಯಸ್ಸುಳ್ಳ ಇವಳು ನಿನ್ನ ಸಖಿಯಾಗುವಳು.
ತತಃ ಪರಮಸಂಹೃಷ್ಟಾ ಸುನಂದಾ ಸಾ ಮನಸ್ವಿನೀ |
ದಮಯಂತೀಮುಪಾದಾಯ ಸಖೀಭಿಃ ಪರಿವಾರಿತಾ ॥45॥
ಆಗ ಪರಮ ಸಂತುಷ್ಟಳಾದ ಮನಸ್ವಿನಿಯಾದ ಆ ಸುನಂದೆಯು ದಮಯಂತಿಯನ್ನು ಕರೆದುಕೊಂಡು ತನ್ನ ಸಖಿಯರಿಂದ ಸುತ್ತುವರಿಯಲ್ಪಟ್ಟಳು.
ಸಹಸಾ ನ್ಯವಸದ್ರಾಜನ್ ರಾಜಪುತ್ರ್ಯಾ ಸುನಂದಯಾ |
ಚಿಂತಯಂತೀ ನಳಂ ವೀರಮನಿಶಂ ವಾಮಲೋಚನಾ ॥46॥
ಆ ವಾಮಲೋಚನೆಯಾದ ದಮಯಂತಿಯೂ ಸಹ ರಾಜಪುತ್ರಿಯಾದ ಸುನಂದೆಯ ಜೊತೆಯಲ್ಲಿ ವೀರನಾದ ನಳನನ್ನು ಯಾವಾಗಲೂ ಚಿಂತಿಸುತ್ತಾ ವಾಸಮಾಡಿದಳು.
ಸಾ ತತ್ರ ಪೂಜ್ಯಮಾನಾ ವೈ ದಮಯಂತ್ಯಾವಸತ್ ಸುಖಮ್ |
ಸರ್ವಕಾಮೈಃ ಸಮುದಿತಾ ನಿರುದ್ವಿಗ್ನಾ ಹ್ಯನಾಮಯಾ ॥47॥
ಅಲ್ಲಿ ದಮಯಂತಿಯು ಎಲ್ಲ ಕಾಮಗಳಿಂದಲೂ ಸತ್ಕರಿಸಲ್ಪಟ್ಟು ಉದ್ವೇಗರಹಿತಳಾಗಿ ಕ್ಷೇಮದಿಂದ ಸುಖವಾಗಿ ವಾಸಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ಐವತ್ತೊಂಬತ್ತನೆಯ ಅಧ್ಯಾಯ
(ನಳನಿಗೆ ಕಾರ್ಕೋಟಕನ ದಂಶನ. ಕಾರ್ಕೋಟಕನಿಂದ
ಆಶ್ವಾಸನ ಮತ್ತು ವಸ್ತ್ರ ಪ್ರದಾನ.)
ಬೃಹದಶ್ವಃ
ಉತ್ಸೃಜ್ಯ ದಮಯಂತೀಂ ತು ನಳೋ ರಾಜಾ ವಿಶಾಂಪತೇ |
ದದರ್ಶ ದಾವಂ ದಹ್ಯಂತಂ ಮಹಾಂತಂ ವಿಜನೇ ವನೇ ॥1॥
ಎಲೈ ರಾಜನೇ, ರಾಜನಾದ ನಳನು ದಮಯಂತಿಯನ್ನು ಬಿಟ್ಟು ಹೋಗುತ್ತಾ ನಿರ್ಜನವಾದ ಅರಣ್ಯದಲ್ಲಿ ಒಂದು ದೊಡ್ಡ ಕಾಡ್ಗಿಚ್ಚನ್ನು ಕಂಡನು.
ತತ್ರ ಶುಶ್ರಾವ ಮಧ್ಯೇಽಗ್ನೇಃ ಶಬ್ದಂ ಭೂತಸ್ಯ ಕಸ್ಯಚಿತ್ |
ಅಭಿಧಾವ ನಳೇತ್ಯುಚ್ಚೈಃ ಪುಣ್ಯಶ್ಲೋಕೇತಿ ಚಾಸಕೃತ್ ॥2॥
ಆ ಅಗ್ನಿಯ ಮಧ್ಯದಿಂದ ಪುಣ್ಯಶ್ಲೋಕನಾದ ನಳನೇ ಬೇಗ ನನ್ನ ಬಳಿಗೆ ಬಾ ಎಂದು ಅನೇಕಬಾರಿ ಹೇಳಿದ ಯಾವುದೋ ಒಂದು ಪ್ರಾಣಿಯ ಮಾತನ್ನು ಕೇಳಿದನು.
ಮಾ ಭೈರಿತಿ ನಳಶ್ಚೋಕ್ತ್ವಾ ಮಧ್ಯಮಗ್ನೇಃ ಪ್ರವಿಶ್ಯ ಸಃ |
ದದರ್ಶ ನಾಗರಾಜಾನಂ ಶಯಾನಂ ಕುಂಡಲೀಕೃತಮ್ ॥3॥
ಹೆದರಬೇಡ ಎಂದು ಹೇಳಿ ನಳನು ಅಗ್ನಿಯ ಮಧ್ಯವನ್ನು ಪ್ರವೇಶಮಾಡಿ ಅಲ್ಲಿ ಕುಂಡಲಾಕಾರವಾಗಿ ಮಲಗಿದ್ದ ನಾಗರಾಜನನ್ನು ನೋಡಿದನು.
ತಂ ನಾಗಃ ಪ್ರಾಂಜಲಿರ್ಭೂತ್ವಾ ವೇಪಮಾನೋ ನಳಂ ತದಾ |
ಉವಾಚ ವಿದ್ಧಿ ಮಾಂ ನಾಮ್ನಾ ನಾಗಂ ಕಾರ್ಕೋಟಕಂ ನೃಪ ॥4॥
ಆ ನಾಗನು ನಳನಿಗೆ ಕೈಗಳನ್ನು ಮುಗಿದು ನಡುಗುತ್ತಾ ಆಗ ಎಲೈರಾಜನೇ ನನ್ನನ್ನು ಕಾರ್ಕೋಟಕ ನಾಗನೆಂದು ತಿಳಿ ಎಂದು ಹೇಳಿದನು.

ಮಯಾ ಪ್ರಲಬ್ಧೋ ಬ್ರಹ್ಮರ್ಷಿರನಾಗಾಃ ಸುಮಹಾತಪಾಃ |
ತೇನ ಮನ್ಯುಪರೀತೇನ ಶಪ್ತೋಽಸ್ಮಿ ಮನುಜಾಧಿಪ ॥5॥
ನಾನು ಮಹಾತಪಸ್ವಿಗಳಾದ ನಿರಪರಾಧಿಗಳಾದ ಒಬ್ಬ ಬ್ರಹ್ಮರ್ಷಿಗಳಿಗೆ ವಂಚನೆಯನ್ನು ಮಾಡಿದೆ. ಎಲೈ ಮನುಜಾಧಿಪನೇ ಅವರು ಕೋಪವಶರಾಗಿ ನನಗೆ ಶಾಪವನ್ನು ಕೊಟ್ಟರು.
ತಸ್ಯ ಶಾಪಾನ್ನ ಶಕ್ನೋಮಿ ಪದಾದ್ಧಿ ಚಲಿತುಂ ಪದಮ್ |
ಉಪದೇಕ್ಷ್ಯಾಮಿ ತೇ ಶ್ರೇಯಃ ತ್ರಾತುಮರ್ಹತಿ ಮಾಂ ಭವಾನ್ ॥6॥
ಆ ಶಾಪದ ಪ್ರಭಾವದಿಂದ ನನಗೆ ಒಂದು ಹೆಜ್ಜೆಯನ್ನೂ ಚಲಿಸಲು ಸಾಧ್ಯವಿಲ್ಲ. ನಿನಗೆ ನಾನು ಶ್ರೇಯಸ್ಸನ್ನು ಉಪದೇಶಿಸುವೆನು. ನೀನು ನನ್ನನ್ನು ರಕ್ಷಿಸು.
ಸಖಾಽಹಂ ತೇ ಭವಿಷ್ಯಾಮಿ ಮತ್ಸಮೋ ನಾಸ್ತಿ ಪನ್ನಗಃ |
ಲಘುಶ್ಚ ತೇ ಭವಿಷ್ಯಾಮಿ ಶೀಘ್ರಮಾದಾಯ ಗಚ್ಛ ಮಾಮ್ ॥7॥
ನಾನು ನಿನಗೆ ಸ್ನೇಹಿತನಾಗುತ್ತೇನೆ. ನನಗೆ ಸಮಾನನಾದ ನಾಗನು ಇಲ್ಲ. ನಾನು ಹಗುರವಾಗುತ್ತೇನೆ. ನನ್ನನ್ನು ತೆಗೆದುಕೊಂಡು ಬೇಗ ಹೊರಗೆ ಹೋಗು.
ಏವಮುಕ್ತ್ವಾ ಸ ನಾಗೇಂದ್ರೋ ಬಭೂವಾಂಗುಷ್ಠಮಾತ್ರಕಃ |
ತಂ ಗೃಹೀತ್ವಾ ನಳಃ ಪ್ರಾಯಾದ್ ದೇಶಂ ದಾವವಿವರ್ಜಿತಮ್ ॥8॥
ಹೀಗೆ ಹೇಳಿ ಆ ನಾಗೇಂದ್ರನು ಒಂದು ಅಂಗುಷ್ಠಪರಿಮಾಣದಷ್ಟೇ ಹ್ರಸ್ವವಾದನು. ಅವನನ್ನು ಕೈಯಲ್ಲಿ ತೆಗೆದುಕೊಂಡು ನಳನು ಅಗ್ನಿರಹಿತವಾದ ಪ್ರದೇಶಕ್ಕೆ ಬಂದನು.
ಶೀತಳಂ ದೇಶಮಾಸಾದ್ಯ ವಿಮುಕ್ತಂ ಕೃಷ್ಣವರ್ತ್ಮನಾ |
ಉತ್ಸ್ರಷ್ಟುಕಾಮಂ ನೃಪತಿಂ ನಾಗೋ ವಚನಮಬ್ರವೀತ್ ॥9॥
ಅಗ್ನಿರಹಿತವಾದ ಒಂದು ತಂಪಾದ ಪ್ರದೇಶಕ್ಕೆ ಬಂದು ತನ್ನನ್ನು ಬಿಡಲು ಉದ್ಯುಕ್ತನಾದ ರಾಜನನ್ನು ಕುರಿತು ನಾಗನು ಹೀಗೆ ಹೇಳಿದನು.
ಪದಾನಿ ಗಣಯನ್ ಗಚ್ಛ ಸ್ವಾನಿ ನೈಷಧ ಕಾನಿ ಚಿತ್ |
ತತ್ರ ತೇಽಹಂ ಮಹಾರಾಜ ಶ್ರೇಯೋ ಧಾಸ್ಯಾಮಿ ವೈ ಪರಮ್ ॥10॥
ನೈಷಧನೇ, ನೀನು ಹೆಜ್ಜೆಗಳನ್ನು ಎಣಿಸುತ್ತಾ ಕೆಲವು ಹೆಜ್ಜೆಗಳನ್ನು ಹಾಕು. ಮಹಾರಾಜನೇ ನಾನು ನಿನಗೆ ಶ್ರೇಷ್ಠವಾದ ಶ್ರೇಯಸ್ಸನ್ನು ಉಂಟುಮಾಡುವೆನು.
ತತಃ ಸಂಖ್ಯಾತುಮಾರಬ್ಧಮದಶದ್ ದಶಮೇ ಪದೇ |
ತಸ್ಯ ದಷ್ಟಸ್ಯ ತದ್ರೂಪಂ ಕ್ಷಿಪ್ರಮಂತರಧೀಯತ ॥11॥
ನಳನು ಎಣಿಸಿ ಹೆಜ್ಜೆ ಇಡುತ್ತಿರುವಷ್ಟರಲ್ಲಿ ಹತ್ತನೆಯ ಹೆಜ್ಜೆಯಲ್ಲಿ ಕಾರ್ಕೋಟಕನು ಅವನನ್ನು ಕಡಿದನು. ಕಾರ್ಕೋಟಕದಂಶಕ್ಕೆ ಒಳಗಾದ ನಳನ ಆ ರೂಪವು ತಕ್ಷಣದಲ್ಲಿ ಅದೃಶ್ಯವಾಯಿತು.
ಸ ದೃಷ್ಟ್ವಾ ವಿಸ್ಮಿತಸ್ತಸ್ಥಾವಾತ್ಮಾನಂ ವಿಕೃತಂ ನಳಃ |
ಸ್ವರೂಪಧಾರಿಣಂ ನಾಗಂ ದದರ್ಶ ಸ ಮಹೀಪತಿಃ ॥12॥
ತನ್ನ ವಿಕೃತರೂಪವನ್ನು ನೋಡಿ ಆಶ್ಚರ್ಯಗೊಂಡ ನಳಮಹಾರಾಜನು ತನ್ನ ನಿಜವಾದ ರೂಪವನ್ನು ಧರಿಸಿದ ಆ ನಾಗನನ್ನು ನೋಡಿದನು.
ತತಃ ಕರ್ಕೋಟಕೋ ನಾಗಃ ಸಾಂತ್ವಯನ್ ನಳಮಬ್ರವೀತ್ |
ಮಯಾ ತೇಽಂತರ್ಹಿತಂ ರೂಪಂ ನ ತ್ವಾಂ ವಿದ್ಯುರ್ಜನಾ ಇತಿ ॥13॥
ಆಗ ಕಾರ್ಕೋಟಕನಾಗನು ನಳನನ್ನು ಸಮಾಧಾನಪಡಿಸುತ್ತಾ ಮಾತನಾಡಿದನು. ನಿನ್ನನ್ನು ಜನರು ಗುರುತಿಸದಿರಲಿ ಎಂದು ನಾನು ನಿನ್ನ ರೂಪವನ್ನು ಅಂತರ್ಧಾನಮಾಡಿದ್ದೇನೆ.
ಯತ್ಕೃತೇ ಚಾಸಿ ವಿಕೃತೋ ದುಃಖೇನ ಮಹತಾ ನಳಃ |
ವಿಷೇಣ ತು ಮದೀಯೇನ ದುಃಖಂ ತ್ವಯಿ ನಿವತ್ಸ್ಯತಿ ॥14॥
ಎಲೈ ನಳನೇ, ಯಾರ ನಿಮಿತ್ತದಿಂದ ನೀನು ಬಹಳ ದುಃಖದಿಂದ ಈ ವಿಕಾರವನ್ನು ಹೊಂದಿದೆಯೋ ಅವನು (ಕಲಿಯು) ನನ್ನ ವಿಷದಿಂದ ಬಹಳ ದುಃಖವನ್ನು ಅನುಭವಿಸುತ್ತಾ ನಿನ್ನ ಶರೀರದಲ್ಲಿ ವಾಸಿಸುವನು.
ವಿಷೇಣ ಸಂವೃತೈರ್ಗಾತ್ರೈರ್ಯಾವತ್ತ್ವಾಂ ನ ವಿಮೋಕ್ಷ್ಯತಿ |
ತಾವತ್ಸ ತು ಮಹಾರಾಜ ಕ್ಲೇಶೇಽಸ್ಮಿನ್ನ ಸ ಮೋಕ್ಷ್ಯತೇ ॥15॥
ಎಲೈ ಮಹಾರಾಜನೇ, ವಿಷದಿಂದಪೂರ್ಣವಾದ ನಿನ್ನ ಶರೀರವನ್ನು ಎಲ್ಲಿಯವರೆಗೆ ಅವನು ಬಿಡುವುದಿಲ್ಲವೋ ಅಲ್ಲಿಯವರೆಗೆ ಅವನು ನನ್ನ ವಿಷದಬಾಧೆಯಿಂದಲೂ ಮುಕ್ತನಾಗುವುದಿಲ್ಲ.
ಅನಾಗಾ ಯೇನ ನಿಕೃತಃ ತ್ವಮನೇನ ನರಾಧಿಪ |
ಕ್ರೋಧಾದಸೂಯಯಿತ್ವಾ ತ್ವಾಂ ರಕ್ಷಾ ಮೇ ಭವತಃ ಕೃತಾ ॥16॥
ಎಲೈ ರಾಜನೇ, ನಿರಪರಾಧಿಯಾದ ನಿನ್ನನ್ನು ಅವನು ಕ್ರೋಧದಿಂದಲೂ ಅಸೂಯೆಯಿಂದಲೂ ವಂಚಿಸಿದ್ದಾನೆ. ನಾನು ನಿನಗೆ ರಕ್ಷಣೆಯನ್ನು ನೀಡಿದ್ದೇನೆ.
ನ ತೇ ಭಯಂ ನರವ್ಯಾಘ್ರ ದಂಷ್ಟ್ರಿಭ್ಯಃ ಶತ್ರುತೋಽಪಿ ವಾ |
ಬ್ರಹ್ಮವಿದ್ಭ್ಯಶ್ಚ (ಚೈವ) ಭವಿತಾ ಮತ್ಪ್ರಸಾದಾನ್ನರಾಧಿಪ ॥17॥

ಎಲೈ ನರವ್ಯಾಘ್ರನೇ, ನಿನಗೆ ಕ್ರೂರಮೃಗಗಳಿಂದಲಾಗಲೀ ಅಥವಾ ಶತ್ರುಗಳಿಂದಲಾಗಲೀ ಭಯವುಂಟಾಗುವುದಿಲ್ಲ. ಎಲೈ ನರಾಧಿಪನೇ ನನ್ನ ಅನುಗ್ರಹದಿಂದ ನೀನು ಬ್ರಹ್ಮಜ್ಞಾನಿಯಾಗುವಿ.
ರಾಜನ್ ವಿಷನಿಮಿತ್ತಾ ಚ ನ ತೇ ಪೀಡಾ ಭವಿಷ್ಯತಿ |
ಸಂಗ್ರಾಮೇಷು ಚ ರಾಜೇಂದ್ರ ಶಶ್ವಜ್ಜಯಮವಾಪ್ಸ್ಯಸಿ ॥18॥
ಎಲೈ ರಾಜನೇ, ನನ್ನ ವಿಷದ ನಿಮಿತ್ತವಾಗಿ ನಿನಗೆ ಯಾವ ಪೀಡೆಯೂ ಉಂಟಾಗುವುದಿಲ್ಲ. ರಾಜೇಂದ್ರನೇ ಯುದ್ಧಗಳಲ್ಲಿ ಯಾವಾಗಲೂ ಜಯವನ್ನು ಹೊಂದುವವನಾಗು.
ಗಚ್ಛ ರಾಜನ್ನಿತಃ ಸೂತೋ ಬಾಹುಕೋಽಹಮಿತಿ ಬ್ರುವನ್ |
ಸಮೀಪಮೃತುಪರ್ಣಸ್ಯ ಸ ಹಿ ವೇದಾಕ್ಷನೈಪುಣಮ್ ॥19॥
ಅಯೋಧ್ಯಾಂ ನಗರೀಂ ರಮ್ಯಾಮದ್ಯೈವ ನಿಷಧಾಧಿಪ |
ಸ ತೇಽಕ್ಷಹೃದಯಂ ದಾತಾ ರಾಜಾಽಶ್ವಹೃದಯೇನ ವೈ ॥20॥
ಎಲೈ ರಾಜನೇ, ನೀನು ಇಲ್ಲಿಂದ ನಾನು ಬಾಹುಕನೆಂಬ ಸೂತ ಎಂದು ಹೇಳಿಕೊಂಡು ಋತುಪರ್ಣನ ಸಮೀಪಕ್ಕೆ ಹೋಗು. ಅವನು ಅಕ್ಷಹೃದಯವನ್ನು ಬಲ್ಲವನು. ಎಲೈ ನಿಷಧಾಧಿಪನೇ ನೀನು ಈ ದಿನವೇ ಅವನ ರಾಜಧಾನಿಯಾದ ಮನೋಹರವಾದ ಅಯೋಧ್ಯೆನಗರಿಗೆ ಹೋಗು. ಅವನು ನಿನ್ನಿಂದ ಅಶ್ವವಿದ್ಯೆಯನ್ನು ಪಡೆದು ನಿನಗೆ ಅಕ್ಷವಿದ್ಯೆಯನ್ನು ಕೊಡುತ್ತಾನೆ.
ಇಕ್ಷ್ವಾಕುಕುಲಜಃ ಶ್ರೀಮಾನ್ ಸ ತೇ ಮಿತ್ರೋ ಭವಿಷ್ಯತಿ |
ಭವಿಷ್ಯಸಿ ಯದಾಽಕ್ಷಜ್ಞಃ ಶ್ರೇಯಸಾ ಯೋಕ್ಷ್ಯಸೇ ಭವಾನ್ ॥21॥
ಇಕ್ಷ್ವಾಕುಕುಲದಲ್ಲಿ ಹುಟ್ಟಿದ ಸಂಪದ್ಯುಕ್ತನಾದ ಅವನು ನಿನಗೆ ಮಿತ್ರನಾಗುವನು. ನೀನು ಯಾವಾಗ ಅಕ್ಷಹೃದಯವನ್ನು ತಿಳಿದವನಾಗುವೆಯೋ ಆಗ ನಿನಗೆ ಶ್ರೇಯಸ್ಸುಂಟಾಗುವುದು.
ಸಮೇಷ್ಯಸಿ ಚ ದಾರೈಸ್ತ್ವಂ ಮಾ ಚ ಶೋಕೇ ಮನಃ ಕೃಥಾಃ |
ರಾಜ್ಯೇನ ತನಯಾಭ್ಯಾಂ ಚ ಸತ್ಯಮೇತದ್ ಬ್ರವೀಮಿ ತೇ ॥22॥
ನೀನು ನಿನ್ನ ಪತ್ನಿಯ ಜೊತೆಯಲ್ಲಿಯೂ ಮಕ್ಕಳ ಜೊತೆಯಲ್ಲಿಯೂ ಸಮಾಗಮವನ್ನು ಹೊಂದಿ ರಾಜ್ಯವನ್ನು ಮರಳಿಪಡೆಯುವಿ. ಮನಸ್ಸಿನಲ್ಲಿ ಶೋಕವನ್ನು ಮಾಡಬೇಡ. ನಾನು ಸತ್ಯವಾದ ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ.
ಸ್ವಂ ರೂಪಂ ಚ ಯದಾ ದ್ರಷ್ಟುಮಿಚ್ಛೇಥಾಸ್ತ್ವಂ ನರಾಧಿಪ |
ಸಂಸ್ಮರ್ತವ್ಯಸ್ತ್ವಯಾ ಚಾಹಂ ವಾಸಶ್ಚೇದಂ ನಿವಾಸಯ |
ಅನೇನ ವಾಸಸಾ ಚ್ಛನ್ನಃ ಸ್ವಂ ರೂಪಂ ಪ್ರತಿಪತ್ಸ್ಯಸೇ ॥23॥
ಎಲೈ ರಾಜನೇ ನಿನ್ನ ಮೊದಲಿನ ರೂಪವನ್ನು ಪಡೆಯಲು ಇಚ್ಛಿಸಿದಾಗ ನನ್ನನ್ನು ಸ್ಮರಿಸಿ ಈ ವಸ್ತ್ರವನ್ನು ಹೊದ್ದುಕೋ. ಈ ವಸ್ತ್ರವನ್ನು ಹೊದ್ದ ತಕ್ಷಣ ನಿನಗೆ ನಿನ್ನ ಮೊದಲಿನ ರೂಪವು ಉಂಟಾಗುವುದು.
ಇತ್ಯುಕ್ತ್ವಾ ಪ್ರದದೌ ತಸ್ಮೈ ದಿವ್ಯಂ ವಾಸೋಯುಗಂ ತದಾ |
ಏವಂ ನಳಂ ಸಮಾದಿಶ್ಯ ವಾಸೋ ದತ್ತ್ವಾ ಚ ಕೌರವ |
ನಾಗರಾಜಸ್ತತೋ ರಾಜನ್ ತತ್ರೈವಾಂತರಧೀಯತ ॥24॥
ಹೀಗೆ ಹೇಳಿ ಕಾರ್ಕೋಟಕನು ಅವನಿಗೆ ದಿವ್ಯವಾದ ಒಂದು ವಸ್ತ್ರದ ಜೊತೆಯನ್ನು ಕೊಟ್ಟನು. ಎಲೈ ಕೌರವನೇ ನಾಗರಾಜನಾದ ಕಾರ್ಕೋಟಕನು ಹೀಗೆ ನಳನನ್ನು ಸಮಾಧಾನಮಾಡಿ ವಸ್ತ್ರಗಳನ್ನು ಕೊಟ್ಟು ಅಲ್ಲಿಯೇ ಅದೃಶ್ಯನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****

ಅರವತ್ತನೆಯ ಅಧ್ಯಾಯ
(ಕಾರ್ಕೋಟಕವಚನದಂತೆ ನಳನಿಂದ ಋತುಪರ್ಣಸಾರಥ್ಯ ಸ್ವೀಕಾರ.)
ಬೃಹದಶ್ವಃ
ತಸ್ಮಿನ್ನಂತರ್ಹಿತೇ ನಾಗೇ ಪ್ರಯಯೌ ನೈಷಧೋ ನಳಃ |
ಋತುಪರ್ಣಸ್ಯ ನಗರಂ ಪ್ರಾವಿಶದ್ ದಶಮೇಽಹನಿ ॥1॥
ಕಾರ್ಕೋಟಕನು ಅಂತರ್ಧಾನವನ್ನು ಹೊಂದುತ್ತಿರಲು ನಿಷಧಾಧಿಪತಿಯಾದ ನಳನು ಹತ್ತನೆಯ ದಿವಸದಲ್ಲಿ ಋತುಪರ್ಣನಗರವನ್ನು ಪ್ರವೇಶಿಸಿದನು.
ಸ ರಾಜಾನಮುಪಾತಿಷ್ಠದ್ ಬಾಹುಕೋಽಹಮಿತಿ ಬ್ರುವನ್ |
ಅಶ್ವಾನಾಂ ವಾಹನೇ ಯುಕ್ತಃ ಪೃಥಿವ್ಯಾಂ ನಾಸ್ತಿ ಮತ್ಸಮಃ ॥2॥
ಅವನು ನಾನು ಬಾಹುಕನೆಂಬ ಸೂತ. ರಥಗಳಿಗೆ ಹೂಡಿದ ಅಶ್ವಗಳನ್ನು ನಡೆಸುವುದರಲ್ಲಿ ನನಗೆ ಸಮಾನನಾದವನು ಭೂಮಿಯಲ್ಲಿ ಯಾವನೂ ಇಲ್ಲ ಎಂದು ಹೇಳುತ್ತಾ ರಾಜನನ್ನು ಸಮೀಪಿಸಿದನು.
ಅರ್ಥಕೃಚ್ಛ್ರೇಷು ಚೈವಾಹಂ ಪ್ರಷ್ಟವ್ಯೋ ನೈಪುಣೇಷು ಚ |
ಅನ್ನಸಂಸ್ಕಾರಮಪಿ ಚ ಜಾನಾಮ್ಯನ್ಯೈರ್ವಿಶೇಷತಃ ॥3॥
ಅರ್ಥಸಂಕಟದಲ್ಲಿಯೂ ಮತ್ತು ಕುಶಲಕರ್ಮದ ವಿಷಯದಲ್ಲಿಯೂ ನನ್ನ ಸಲಹೆಯನ್ನು ಪಡೆಯಬಹುದು. ಉಳಿದೆಲ್ಲರಿಗಿಂತಲೂ

ಅನ್ನವನ್ನು ಸಂಸ್ಕಾರಮಾಡುವ ವಿಷಯವನ್ನು ಎಂದರೆ ಪಾಕವಿದ್ಯೆಯನ್ನು ಚೆನ್ನಾಗಿ ತಿಳಿದಿದ್ದೇನೆ.
ಯಾನಿ ಶಿಲ್ಪಾನಿ ಲೋಕೇಸ್ಮಿನ್ ಯಚ್ಚಾಪ್ಯನ್ಯೈಃ ಸುದುಷ್ಕರಮ್ |
ಸರ್ವಂ ಯತಿಷ್ಯೇ ತತ್ ಕರ್ತುಮೃತುಪರ್ಣ ಭರಸ್ವ ಮಾಮ್ ॥4॥
ಎಲೈ ಋತುಪರ್ಣನೇ ಲೋಕದಲ್ಲಿ ಎಷ್ಟು ಕುಶಲ ಕಲೆಗಳಿವೆಯೋ ಅಥವಾ ಉಳಿದವರು ಎಂತಹ ದುಷ್ಕರವಾದ ಕಾರ್ಯಗಳನ್ನು ಮಾಡುತ್ತಾರೋ ಅವೆಲ್ಲವನ್ನೂ ನಾನು ಮಾಡಲು ಪ್ರಯತ್ನಿಸುವೆನು. ನನ್ನನ್ನು ಪೋಷಿಸು.
ಇತ್ಯುಕ್ತಃ ಸ ನಳೇನಾಥ ಋತುಪರ್ಣೋ ನರಾಧಿಪಃ |
ಉವಾಚ ಸುಪ್ರೀತಮನಾ ನಳಂ ಪ್ರೇಕ್ಷ್ಯ ಮಹೀಪತೇ ॥5॥
ಎಲೈ ರಾಜನೇ ನಳನಿಂದ ಹೀಗೆ ಹೇಳಲ್ಪಟ್ಟ ಋತುಪರ್ಣರಾಜನು ಸಂತುಷ್ಟ ಮನಸ್ಸುಳ್ಳವನಾಗಿ ನಳನನ್ನು ನೋಡಿ ಹೀಗೆ ಮಾತನಾಡಿದನು.
ವಸ ಬಾಹುಕ ಭದ್ರಂ ತೇ ಸರ್ವಮೇತತ್ ಕರಿಷ್ಯಸಿ |
ಶೀಘ್ರಯಾನೇ ಸದಾ ಬುದ್ಧಿರ್ಧ್ರಿಯತೇ ಮೇ ವಿಶೇಷತಃ ॥6॥
ಎಲೈ ಬಾಹುಕನೇ ನಿನಗೆ ಮಂಗಳವಾಗಲೀ ನನ್ನಲ್ಲಿ ವಾಸಮಾಡು. ನೀನು ಹೇಳುದೆಲ್ಲವನ್ನೂ ನೀನು ಮಾಡುವಿ. ನನಗೆ ವಿಶೇಷವಾಗಿ ವೇಗವಾಗಿ ರಥವನ್ನು ನಡೆಸುವುದರಲ್ಲಿ ಯಾವಾಗಲೂ ಬುದ್ಧಿಯು ಓಡುತ್ತದೆ.
ಸ ತ್ವಮಾತಿಷ್ಠ ಯೋಗಂ ತಂ ಯೇನ ಶೀಘ್ರಾ ಹಯಾ ಮಮ |
ಭವೇಯುರಶ್ವಾಧ್ಯಕ್ಷೋಽಸಿ ವೇತನಂ ತೇ ಶತಂ ಶತಮ್ ॥7॥
ನೀನು ನನ್ನ ಅಶ್ವಾಧ್ಯಕ್ಷನಾಗು. ಯಾವ ಮಾರ್ಗವನ್ನು ಅನುಸರಿಸಿದರೆ ನನ್ನ ಅಶ್ವಗಳು ಶೀಘ್ರಗಾಮಿಗಳಾಗುತ್ತವೆಯೋ ಅಂತಹ ಉಪಾಯವನ್ನು ಮಾಡು. ನಿನಗೆ ಹತ್ತು ಸಹಸ್ರ ಸುವರ್ಣಗಳು ವೇತನ.
ತ್ವಾಮುಪಸ್ಥಾಸ್ಯತಶ್ಚೇಮೌ ನಿತ್ಯಂ ವಾರ್ಷ್ಣೇಯಜೀವಲೌ |
ಏತಾಭ್ಯಾಂ ರಂಸ್ಯಸೇ ಸಾರ್ಧಂ ವಸ ವೈ ಮಯಿ ಬಾಹುಕ ॥8॥
ಈ ವಾರ್ಷ್ಣೇಯ ಮತ್ತು ಜೀವಲ ಇವರಿಬ್ಬರು ನಿನಗೆ ಯಾವಾಗಲೂ ಸಹಾಯಕರಾಗಿರುತ್ತಾರೆ. ಇವರ ಜೊತೆಯಲ್ಲಿ ನೀನು ಸಂತೋಷಪಡುವಿ. ಬಾಹುಕನೇ ನನ್ನಲ್ಲಿ ವಾಸಮಾಡು.
ಏವಮುಕ್ತೋ ನಳಸ್ತೇನ ನ್ಯವಸತ್ ತತ್ರ ಪೂಜಿತಃ |
ಋತುಪರ್ಣಸ್ಯ ನಗರೇ ಸಹವಾರ್ಷ್ಣೇಯಜೀವಲಃ ॥9॥
ಋತುಪರ್ಣನಿಂದ ಹೀಗೆ ಹೇಳಲ್ಪಟ್ಟ ನಳನು ಅವನಿಂದ ಸತ್ಕೃತನಾಗಿ ವಾರ್ಷ್ಣೇಯ ಜೀವಲರ ಜೊತೆಯಲ್ಲಿ ಆ ನಗರದಲ್ಲಿ ವಾಸವನ್ನು ಮಾಡಿದನು.
ಸ ತತ್ರ ಸ್ಮ ವಸನ್ ರಾಜಾ ವೈದರ್ಭೀಮನುಚಿಂತಯನ್ |
ಸಾಯಂಸಾಯಂ ಸದಾ ಸ್ಮೈನಂ ಶ್ಲೋಕಮೇಕಂ ಜಗಾದ ಹ ॥10॥
ಆ ರಾಜನು ಅಲ್ಲಿ ವಾಸಮಾಡಿ ದಮಯಂತಿಯನ್ನು ಚಿಂತಿಸುತ್ತಾ ಪ್ರತಿರಾತ್ರಿಯಲ್ಲಿ ಯಾವಾಗಲೂ ಈ ಶ್ಲೋಕವನ್ನು ಹಾಡುತ್ತಿದ್ದನು.
ಕ್ವ ನು ಸಾ ಕ್ಷುತ್ಪಿಪಾಸಾರ್ತಾ ಶ್ರಾಂತಾ ಶೇತೇ ತಪಸ್ವಿನೀ |
ಸ್ಮರಂತೀ ತಸ್ಯ ಮಂದಸ್ಯ ಕಂ ವಾಸಾಯೋಪತಿಷ್ಠತೇ ॥11॥
ಹಸಿವು ಮತ್ತು ಬಾಯಾರಿಕೆಯಿಂದ ಬಳಲಿದ ಆ ಶೋಚನೀಯ ವನಿತೆಯು ಆ ಮಂದನನ್ನು ಸ್ಮರಿಸುತ್ತಾ ಎಲ್ಲಿ ಮಲಗಿದ್ದಾಳೆ? ತನ್ನ ವಾಸಕ್ಕಾಗಿ ಯಾರನ್ನು ಸಮೀಪಿಸುತ್ತಾಳೆ?
ಏವಂ ಬ್ರುವಂತಂ ರಾಜಾನಂ ನಿಶಾಯಾಂ ಜೀವಲೋಽಬ್ರವೀತ್ |
ಕಾಮೇನಾಂ ಶೋಚಸೇ ನಿತ್ಯಂ ಶ್ರೋತುಮಿಚ್ಛಾಮಿ ಬಾಹುಕ ॥12॥
ಹೀಗೆ ರಾತ್ರಿಯ ವೇಳೆಯಲ್ಲಿ ಹೇಳುತ್ತಿದ್ದ ರಾಜನನ್ನು ಕುರಿತು ಜೀವಲನು ಬಾಹುಕನೇ, ಯಾವ ಈ ವನಿತೆಯನ್ನು ಕುರಿತು ನಿತ್ಯವೂ ಶೋಕಪಡುತ್ತಿದ್ದೀಯೆ ಅದನ್ನು ಕೇಳಲು ಇಚ್ಛಿಸುತ್ತೇನೆ ಎಂದು ಹೇಳಿದನು.
ತಮುವಾಚ ತತೋ ರಾಜಾ ಮಂದಪ್ರಜ್ಞಸ್ಯ ಕಸ್ಯಚಿತ್ |
ಆಸೀದ್ ಬಹುಮತಾ ನಾರೀ ತಸ್ಯಾಃ ಪ್ರಿಯತಮಶ್ಚ ಸಃ ॥13॥
ಅವನನ್ನು ಕುರಿತು ನಳನು ಹೀಗೆ ಹೇಳಿದನು. ಮಂದಪ್ರಜ್ಞನಾದ ಒಬ್ಬ ಪುರುಷನಿಗೆ ಬಹಳ ಗೌರವಪಾತ್ರಳಾದ ಒಬ್ಬ ಪತ್ನಿಯಿದ್ದಳು. ಆ ಪುರುಷನೂ ಸಹ ಅವಳಿಗೆ ಅತ್ಯಂತ ಪ್ರಿಯನಾಗಿದ್ದನು.
ಸ ವೈ ಕೇನಚಿದರ್ಥೇನ ತಯಾ ಮಂದೋ ವ್ಯಯುಜ್ಯತ |
ವಿಪ್ರಯುಕ್ತಶ್ಚ ಮಂದಾತ್ಮಾ ಭ್ರಮತ್ಯಸುಖಪೀಡಿತಃ ॥14॥
ಆ ಮಂದನು ಯಾವುದೋ ಒಂದು ನಿಮಿತ್ತದಿಂದ ಅವಳಿಂದ ವಿಯೋಗವನ್ನು ಹೊಂದಿದನು. ವಿಯುಕ್ತನಾದ ಆ ಮಂದಾತ್ಮನು ದುಃಖದಿಂದ ಪೀಡಿತನಾಗಿ ಅಲೆದಾಡುತ್ತಿದ್ದಾನೆ.
ದಹ್ಯಮಾನಃ ಸ ಶೋಕೇನ ದಿವಾರಾತ್ರಮತಂದ್ರಿತಃ |
ನಿಶಾಕಾಲೇ ಸ್ಮರಂಸ್ತಸ್ಯಾಃ ಶ್ಲೋಕಮೇಕಂ ಸ್ಮ ಗಾಯತಿ ॥15॥
ಆ ತೀವ್ರವಾದ ಶೋಕದಿಂದ ಬೆಂದುಹೋಗುತ್ತಾ ಹಗಲೂ ರಾತ್ರಿಯೂ ಆಲಸ್ಯವಿಲ್ಲದೆ ಅವಳನ್ನು ಸ್ಮರಿಸುತ್ತಾ ಅವಳನ್ನು ಕುರಿತು ಈ ಒಂದು ಶ್ಲೋಕವನ್ನು ಗಾನಮಾಡುತ್ತಾನೆ.
ಸ ವೈ ಭ್ರಮನ್ ಮಹೀಂ ಕೃತ್ಸ್ನಾಂ ಕ್ವಚಿನ್ನಾಸಾದ್ಯ ಕಿಂಚನ |
ವಸತ್ಯನರ್ಹಸ್ತದ್ದುಃಖಂ ಭೂಯ ಏವಾಭಿಸಂಸ್ಮರನ್ ॥16॥

ಅಂತಹ ದುಃಖಕ್ಕೆ ಅನರ್ಹನಾದ ಅವನು ಭೂಮಿಯಲ್ಲೆಲ್ಲಾ ಸಂಚರಿಸುತ್ತಾ ಎಲ್ಲೂ ಏನನ್ನೂ ಹೊಂದದೆ ಅವಳ ವಿಯೋಗದ ದುಃಖವನ್ನೇ ಮತ್ತೆಮತ್ತೆ ಚಿಂತಿಸುತ್ತಾ ವಾಸಿಸುತ್ತಿದ್ದಾನೆ.
ಸಾ ತು ತಂ ಪುರುಷಂ ನಾರೀ ಕೃಚ್ಛ್ರೇಽಪ್ಯನುಗತಾ ವನೇ |
ತ್ಯಕ್ತಾ ತೇನಾಲ್ಪಪುಣ್ಯೇನ ದುಷ್ಕರಂ ಯದಿ ಜೀವತಿ ||17||
ಆ ನಾರಿಯಾದರೋ ವಿಷಮಪರಿಸ್ಥಿತಿಯಲ್ಲೂ ಕಾಡಿನಲ್ಲಿ ಆ ಪುರುಷನನ್ನು ಅನುಸರಿಸಿದವಳು. ಅಲ್ಪಪುಣ್ಯನಾದ ಅವನಿಂದ ಪರಿತ್ಯಜಿಸಲ್ಪಟ್ಟಿದ್ದಾಳೆ. ಅವಳು ಜೀವಿಸುವುದೇ ದುಷ್ಕರವಾಗಿದೆ.
ಏಕಾ ಬಾಲಾಽನಭಿಜ್ಞಾ ಚ ಮಾರ್ಗಮಾಣಾಽತಥೋಚಿತಾ |
ಕ್ಷುತ್ಪಿಪಾಸಾಪರೀತಾ ಚ ದುಷ್ಕರಂ ಯದಿ ಜೀವತಿ ||18||
ಏಕಾಕಿನಿಯಾದ ಆ ಬಾಲೆಯು ಏನೂ ತಿಳಿಯದವಳು. ಅಂತಹ ದುಃಖಕ್ಕೆ ಅನರ್ಹಳಾದವಳು ಆ ಪತಿಯನ್ನು ಹುಡುಕುತ್ತಾ ಹಸಿವು ನೀರಡಿಕೆಗಳಿಂದ ಬಳಲಿದ್ದಾಳೆ. ಅವಳು ಬದುಕಿರುವುದು ಕಷ್ಟವೇ ಸರಿ.
ಶ್ವಾಪದಾಚರಿತೇ ನಿತ್ಯಂ ವನೇ ಮಹತಿ ದಾರುಣೇ |
ತ್ಯಕ್ತಾ ತೇನಾಲ್ಪಪುಣ್ಯೇನ ಮಂದಪ್ರಜ್ಞೇನ ಮಾರಿಷ||19||
ಎಲೈ ಸ್ನೇಹಿತನೇ, ನಿತ್ಯವೂ ಕ್ರೂರಪ್ರಾಣಿಗಳು ಸಂಚರಿಸುವ ದೊಡ್ಡದಾದ ಮತ್ತು ಘೋರವಾದ ಕಾಡಿನಲ್ಲಿ ಅಲ್ಪಪುಣ್ಯನೂ ಮಂದಪ್ರಜ್ಞನೂ ಆದ ಪುರುಷನು ಅವಳನ್ನು ಪರಿತ್ಯಜಿಸಿದನು.
ಇತ್ಯೇವಂ ನೈಷಧೋ ರಾಜಾ ದಮಯಂತೀಮನುಸ್ಮರನ್ |
ಅಜ್ಞಾತವಾಸಮವಸದ್ ರಾಜ್ಞಸ್ತಸ್ಯ ನಿವೇಶನೇ ||20||
ಹೀಗೆ ನೈಷಧರಾಜನು ದಮಯಂತಿಯನ್ನು ಸ್ಮರಿಸುತ್ತಾ ಋತುಪರ್ಣರಾಜನ ಮನೆಯಲ್ಲಿ ಅಜ್ಞಾತವಾಸವನ್ನು ಆಚರಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಷ್ಟಿತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಷೋಡಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
*****
ಅರವತ್ತೊಂದನೆಯ ಅಧ್ಯಾಯ
(ನಳದಮಯಂತಿರನ್ನು ಹುಡುಕಲು ಭೀಮರಾಜನಿಂದ ಬ್ರಾಹ್ಮಣರ ಪ್ರೇಷಣ. ಅಯೋಧ್ಯೆಯಲ್ಲಿ ಸುದೇವನಿಂದ ದಮಯಂತಿಯ ದರ್ಶನ
ಮತ್ತು ಅವರ ಸಂವಾದ.)
ಬೃಹದಶ್ವಃ
ಹೃತರಾಜ್ಯೇ ನಳೇ ಭೀಮಃ ಸಭಾರ್ಯೇಽದರ್ಶನಂ ಗತೇ |
ದ್ವಿಜಾನ್ ಪ್ರಸ್ಥಾಪಯಾಮಾಸ ನಳದರ್ಶನಕಾಂಕ್ಷಯಾ ||1||
ನಳನು ರಾಜ್ಯವನ್ನು ಕಳೆದುಕೊಂಡು ತನ್ನ ಪತ್ನಿಯ ಜೊತೆಯಲ್ಲಿ ಕಣ್ಣಿಗೆ ಕಾಣಿಸದಿರಲು ಭೀಮರಾಜನು ನಳನನ್ನು ಹುಡುಕುವ ಸಲುವಾಗಿ ಬ್ರಾಹ್ಮಣರನ್ನು ಕಳುಹಿಸಿದನು.
ಸಂದಿದೇಶ ಚ ತಾನ್ ಭೀಮೋ ವಸು ದತ್ತ್ವಾ ಚ ಪುಷ್ಕಲಮ್ |
ಮೃಗಯಧ್ವಂ ನಳಂ ಚೈವ ದಮಯಂತೀಂ ಚ ಮೇ ಸುತಾಮ್ ||2||
ಭೀಮನು ಅವರಿಗೆ ಪುಷ್ಕಲವಾದ ಧನವನ್ನು ಕೊಟ್ಟು ನಳನನ್ನು ಮತ್ತು ನನ್ನ ಮಗಳಾದ ದಮಯಂತಿಯನ್ನು ಹುಡುಕಿ. ಎಂದು ಸಂದೇಶವನ್ನು ನೀಡಿದನು.
ಅಸ್ಮಿನ್ ಕರ್ಮಣಿ ನಿಷ್ಪನ್ನೇ ವಿಜ್ಞಾತೇ ನಿಷಧಾಧಿಪೇ |
ಗವಾಂ ಸಹಸ್ರಂ ದಾಸ್ಯಾಮಿ ಯೋ ವಸ್ತಾವಾನಯಿಷ್ಯತಿ ||3||
ನಳನು ದೊರೆತು ಈ ಕಾರ್ಯವು ಕೈಗೂಡಿದರೆ ಯಾರು ಅವರಿಬ್ಬರನ್ನು ಹಿಂದಕ್ಕೆ ಕರೆತರುವರೋ ಅವರಿಗೆ ಒಂದು ಸಹಸ್ರಗೋವುಗಳನ್ನು ಕೊಡುವೆನು.
ಅಗ್ರಹಾರಾಂಶ್ಚ ದಾಸ್ಯಾಮಿ ನದ್ಯಾಸ್ತೀರೇ ದ್ವಿಜೋತ್ತಮಾಃ |
ಹಿರಣ್ಯಂ ಚ ಸುವರ್ಣಂ ಚ ದಾಸೀದಾಸಂ ತಥೈವ ಚ ||4||
ಎಲೈ ಬ್ರಾಹ್ಮಣಶ್ರೇಷ್ಠರೇ ನದಿಯ ತೀರದಲ್ಲಿ ಅಗ್ರಹಾರಗಳನ್ನೂ ಒಳ್ಳೆಯ ಬಣ್ಣದ ಚಿನ್ನವನ್ನೂ ದಾಸರನ್ನೂ ಮತ್ತು ದಾಸಿಯರನ್ನೂ ಕೊಡುವೆನು.
ನ ಚೇಚ್ಛಕ್ಯಾವಿಹಾನೇತುಂ ದಮಯಂತೀ ನಳೋಽಪಿ ವಾ |
ಜ್ಞಾತಮಾತ್ರೇಽಪಿ ದಾಸ್ಯಾಮಿ ಗವಾಂ ದಶಶತಂ ಧನಮ್ ||5||
ಒಂದುಪಕ್ಷ ದಮಯಂತಿಯನ್ನಾಗಲೀ ನಳನನ್ನಾಗಲೀ ಇಲ್ಲಿಗೆ ಕರೆತರುವುದು ಸಾಧ್ಯವಿಲ್ಲದಿದ್ದರೂ ಅವರನ್ನು ಗುರುತಿಸಿದವರಿಗೆ ಒಂದು ಸಹಸ್ರ ಗೋವುಗಳನ್ನು ಕೊಡುವೆನು.
ಇತ್ಯುಕ್ತಾಸ್ತೇ ಯಯುರ್ಹೃಷ್ಟಾ ಬ್ರಾಹ್ಮಣಾಃ ಸರ್ವತೋದಿಶಮ್ |
ಪುರರಾಷ್ಟ್ರಾಣಿ ಚಿನ್ವಂತೋ ನೈಷಧಂ ಸಹ ಭಾರ್ಯಯಾ ||6||
ಹೀಗೆ ಹೇಳಲ್ಪಟ್ಟ ಆ ಬ್ರಾಹ್ಮಣರು ಪರಮಸಂತೋಷದಿಂದ ನೈಷಧನನ್ನು ಮತ್ತು ದಮಯಂತಿಯನ್ನು ಹುಡುಕಲು ಎಲ್ಲ ದಿಕ್ಕುಗಳಿಗೂ ಹೋಗಿ ಪಟ್ಟಣಗಳಲ್ಲಿಯೂ ಮತ್ತು ರಾಷ್ಟ್ರಗಳಲ್ಲಿಯೂ ಹುಡುಕುತ್ತಾ ಹೋದರು.

ಯಾತಶ್ಚೇದಿಪುರೀಂ ತಸ್ಯಾಂ ಸುದೇವೋ ನಾಮ ವೈ ದ್ವಿಜಃ |
ವಿಚಿನ್ವಾನೋಽಥ ವೈದರ್ಭೀಮಪಶ್ಯದ್ ರಾಜವೇಶ್ಮನಿ ॥7॥
ಕೃಶಾಂ ವಿವರ್ಣಾಂ ಮಲಿನಾಂ ಭರ್ತೃಶೋಕಪರಾಯಣಾಮ್ |
ಪುಣ್ಯಾಹವಾಚನೇ ರಾಜ್ಞಃ ಸುನಂದಾಸಹಿತಾಂ ಸ್ಥಿತಾಮ್ ॥8॥
ಮಂದಂ ಪ್ರಖ್ಯಾಯಮಾನೇನ ರೂಪೇಣಾಪ್ರತಿಮೇನ ತಾಮ್ |
ಪಿನದ್ಧಾಂ ಧೂಮಜಾಲೇನ ಪ್ರಭಾಮಿವ ವಿಭಾವಸೋಃ ॥9॥
ಅವರಲ್ಲಿ ಸುದೇವನೆಂಬ ಬ್ರಾಹ್ಮಣನು ಅವರಿಬ್ಬರನ್ನೂ ಹುಡುಕುತ್ತಾ ಚೇದಿಪುರಕ್ಕೆ ಹೋಗಿ ರಾಜನ ಅರಮನೆಯಲ್ಲಿ ದಮಯಂತಿಯನ್ನು ನೋಡಿದನು. ಕೃಶಳೂ ವರ್ಣಹೀನಳೂ ಮಲಿನಳೂ ಪತಿಶೋಕಪರಾಯಣಳೂ ಆದ ಅವಳು ಸುನಂದೆಯ ಜೊತೆಯಲ್ಲಿ ಇರುವುದನ್ನು ರಾಜನ ಪುಣ್ಯಹವಾಚನ ಸಮಯದಲ್ಲಿ ನೋಡಿದನು. ಅಲ್ಪವಾಗಿ ತೋರುತ್ತಿದ್ದ ಅಪ್ರತಿಮರೂಪಳಾದ ಅವಳು ಧೂಮಜಾಲದಿಂದ ಆವೃತವಾದ ಅಗ್ನಿಶಿಖೆಯಂತೆ ಇರುವುದನ್ನು ನೋಡಿದನು.
ತಾಂ ಸಮೀಕ್ಷ್ಯ ವಿಶಾಲಾಕ್ಷೀಮಧಿಕಂ ಮಲಿನಾಂ ಕೃಶಾಮ್ |
ತರ್ಕಯಾಮಾಸ ಭೈಮೀತಿ ಕಾರಣೈರುಪಪಾದಯನ್ ॥10॥
ಅಧಿಕವಾಗಿ ಮಲಿನಳೂ ಕೃಶಳೂ ಆದ ಆ ವಿಶಾಲಾಕ್ಷಿಯನ್ನು ನೋಡಿ ಅವಳು ದಮಯಂತಿಯೆಂದು ಅನೇಕ ಕಾರಣಗಳಿಂದ ಊಹಿಸಿದನು.
ಸುದೇವಃ
ಯಥೇಯಂ ಮೇ ಪುರಾ ದೃಷ್ಟಾ ತಥಾರೂಪೇಯಮಂಗನಾ |
ಕೃತಾರ್ಥೋಽಸ್ಮ್ಯದ್ಯ ದೃಷ್ಟ್ವೇಮಾಂ ಲೋಕಕಾಂತಾಮಿವ ಶ್ರಿಯಮ್ ॥
ನಾನು ಹಿಂದೆ ಇವಳನ್ನು ಹೇಗೆ ನೋಡಿದ್ದೆನೊ ಈ ಅಂಗನೆಯು ಅಂತಹ ರೂಪವನ್ನೇ ಹೊಂದಿದ್ದಾಳೆ. ಲೋಕಕ್ಕೆ ಪ್ರಿಯಳಾದ ಲಕ್ಷ್ಮಿಯಂತೆ ಇರುವ ಇವಳನ್ನು ನೋಡಿ ನಾನು ಈ ದಿನ ಕೃತಾರ್ಥನಾಗಿದ್ದೇನೆ.
ಪೂರ್ಣಚಂದ್ರಾನನಾಂ ಶ್ಯಾಮಾಂ ಚಾರುವೃತ್ತಪಯೋಧರಾಮ್ |
ಕುರ್ವಂತೀಂ ಪ್ರಭಯಾ ದೇವೀಂ ಸರ್ವಾ ವಿತಿಮಿರಾ ದಿಶಃ ॥12॥
ಇವಳು ಪೂರ್ಣಚಂದ್ರನಂತೆ ಮುಖವುಳ್ಳವಳೂ ಶ್ಯಾಮವರ್ಣದವಳೂ ಸುಂದರವಾದ ಮತ್ತು ಸುವೃತ್ತವಾದ ಸ್ತನಗಳುಳ್ಳವಳೂ ಆಗಿ ತನ್ನ ಕಾಂತಿಯಿಂದ ಎಲ್ಲ ದಿಕ್ಕುಗಳನ್ನೂ ತನ್ನ ಪ್ರಭೆಯಿಂದ ಬೆಳಗುತ್ತಿದ್ದಾಳೆ.
ಚಾರುಪದ್ಮವಿಶಾಲಾಕ್ಷೀಂ ಮನ್ಮಥಸ್ಯೇವ ತಾಂ ರತಿಮ್ |
ಇಷ್ಟಾಂ ಸರ್ವಸ್ಯ ಜಗತಃ ಪೂರ್ಣಚಂದ್ರಪ್ರಭಾಮಿವ ॥13॥
ಮನ್ಮಥನಿಗೆ ರತಿಯಂತೆ ಎಲ್ಲಾ ಜನರಿಗೂ ಇಷ್ಟವಾದ ಈ ಚಾರುಪದ್ಮ ವಿಶಾಲನೇತ್ರೆಯು ಪೂರ್ಣಚಂದ್ರನ ಪ್ರಭೆಯಂತೆ ಇದ್ದಾಳೆ.
ವಿದರ್ಭಸರಸಸ್ತಸ್ಮಾದ್ ದೈವದೋಷಾದಿವೋದ್ಧೃತಾಮ್ |
ಮಲಪಂಕಾನುಲಿಪ್ತಾಂಗೀಂ ವ್ಯಾಕುಲಾಂ ಪದ್ಮಿನೀಮಿವ ॥14॥
ದೈವದೋಷದಿಂದ ವಿದರ್ಭಕುಲವೆಂಬ ಸರೋವರದಲ್ಲಿ ಮಲಪಂಕಾನುಲಿಪ್ತಳಾಗಿ ವ್ಯಾಕುಲಳಾದ ಲಕ್ಷ್ಮಿಯೇ ಉದಿಸಿದಂತೆ ಕಾಣುತ್ತಿದ್ದಾಳೆ.
ಪೌರ್ಣಮಾಸ್ಯಾಮಿವ ನಿಶಾಂ ರಾಹುಗ್ರಸ್ತನಿಶಾಕರಾಮ್ |
ಪತಿಶೋಕಾಕುಲಾಂ ದೀನಾಂ ಶುಷ್ಕಸ್ರೋತಾಂ ನದೀಮಿವ ॥15॥
ಪೌರ್ಣಮಾಸಿಯ ರಾತ್ರಿಯಲ್ಲಿ ರಾಹುಗ್ರಸ್ತನಾದ ಚಂದ್ರನಂತೆಮ ಮೂಲವು ಬತ್ತಿಹೋದ ನದಿಯಂತೆ, ಪತಿಶೋಕದಿಂದ ಪೀಡಿತಳಾಗಿ ದೀನಳಾಗಿದ್ದಾಳೆ.
ವಿಧ್ವಸ್ತಪತ್ರಕಮಲಾಂ ವಿತ್ರಾಸಿತವಿಹಂಗಮಾಮ್ |
ಹಸ್ತಿಹಸ್ತಪರಿಕ್ಲಿಷ್ಟಾಂ ವ್ಯಾಕುಲಾಮಿವ ಪದ್ಮಿನೀಮ್ ॥16॥
ಆನೆಗಳ ಸೊಂಡಿಲಿನ ಆಘಾತಕ್ಕೆ ಸಿಕ್ಕಿನಾಶವನ್ನು ಹೊಂದಿದ ಪದ್ಮಪತ್ರ ಮತ್ತು ಪದ್ಮಪುಷ್ಪಗಳಿರುವ ಪಕ್ಷಿಗಳು ಚದುರಿಹೋದ ಅಸ್ತವ್ಯಸ್ತವಾದ ಪದ್ಮಸರೋವರದಂತೆ ಇದ್ದಾಳೆ.
ಸುಕುಮಾರೀಂ ಸುಜಾತಾಂಗೀಂ ರತ್ನಗರ್ಭಗೃಹೋಚಿತಾಮ್ |
ದಹ್ಯಮಾನಾಮಿವೋಷ್ಣೇನ ಮೃಣಾಲೀಮಚಿರೋದ್ಧೃತಾಮ್ ॥17॥
ಸುಕುಮಾರಿಯೂ ಚೆನ್ನಾಗಿ ಹೊರಹೊಮ್ಮಿದ ಅವಯವಯುಳ್ಳವಳೂ ಆದ ಇವಳು ರತ್ನಗರ್ಭಗೃಹದಲ್ಲಿ ವಾಸಿಸಲು ಯೋಗ್ಯವಾಗಿದ್ದಾಳೆ. ಆಗ ತಾನೇ ಕಿತ್ತು ಉಷ್ಣದ ಮೇಲೆ ಇಟ್ಟ ಕಮಲದಂತೆ ಬೆಂದು ಹೋಗುತ್ತಿದ್ದಾಳೆ.
ರೂಪೌದಾರ್ಯಗುಣೋಪೇತಾಂ ಮಂಡನಾರ್ಹಾಮಮಂಡಿತಾಮ್ |
ಚಂದ್ರಲೇಖಾಮಿವ ನವಾಂ ವ್ಯೋಮ್ನಿ ನೀಲಾಭ್ರಸಂವೃತಾಮ್ ॥18॥
ರೂಪ ಔದಾರ್ಯಗುಣಗಳಿಂದ ಕೂಡಿ ಅಲಂಕಾರಕ್ಕೆ ಅರ್ಹಳಾದ ಏನೂ ಅಲಂಕಾರಮಾಡಿಕೊಳ್ಳದೆ ಆಕಾಶದಲ್ಲಿ ನೀಲಮೇಘಗಳ ಜೊತೆಯಲ್ಲಿ ಬೆರೆತ ಚಂದ್ರಲೇಖೆಯಂತೆ ಕಾಣುತ್ತಿದ್ದಾಳೆ.
ಕಾಮಭೋಗೈಃ ಪ್ರಿಯೈರ್ಹೀನಾಂ ಹೀನಾಂ ಬಂಧುಜನೇನ ಚ |
ದೇಹಂ ಧಾರಯತೀಂ ದೀನಂ ಭರ್ತೃದರ್ಶನಕಾಂಕ್ಷಯಾ ॥19॥
ತನಗೆ ಪ್ರಿಯವಾದ ಕಾಮಭೋಗಗಳಿಂದ ರಹಿತಳಾಗಿ ಬಂಧುಜನರಿಂದಲೂ ರಹಿತಳಾಗಿ ಪತಿಯನ್ನು ನೋಡುವ ಆಸೆಯಿಂದ ದೀನಳಾಗಿ ಶರೀರವನ್ನು ಧರಿಸಿದ್ದಾಳೆ.

ಭರ್ತಾ ನಾಮ ಪರಂ ನಾರ್ಯಾ ಭೂಷಣಂ ಭೂಷಣಾದಪಿ |
ಏಷಾ ವಿರಹಿತಾ ತೇನ ಶೋಭನಾಽಪಿ ನ ಶೋಭತೇ ||20||
ಪತಿಯೆಂದರೆ ನಾರಿಯರಿಗೆ ಎಲ್ಲ ಭೂಷಣಗಳಿಂತಲೂ ಶ್ರೇಷ್ಠವಾದ ಭೂಷಣವಷ್ಟೇ. ಅಂತಹ ಪತಿಯಿಂದ ವಿರಹಿತಳಾದ ಇವಳು ಸುಂದರಿಯಾಗಿದ್ದರೂ ಶೋಭಿಸುತ್ತಿಲ್ಲ.
ದುಷ್ಕರಂ ಕುರುತೇಽತ್ಯರ್ಥಂ ಹೀನೋ ಯದನಯಾ ನಳಃ |
ಧಾರಯತ್ಯಾತ್ಮನೋ ದೇಹಂ ನ ಶೋಕೇನಾವಸೀದತಿ ||21||
ಇವಳನ್ನು ತೊರೆದ ನಳನು ದೊಡ್ಡ ದುಸ್ಸಾಹಸವನ್ನು ಮಾಡುತ್ತಿದ್ದಾನೆ. ಅವನು ಶೋಕದಿಂದ ನಾಶವನ್ನು ಹೊಂದದೆ ಶರೀರವನ್ನು ಧರಿಸಿರುವುದೇ ದೊಡ್ಡದು.
ಇಮಾಮಸಿತಕೇಶಾಂತಾಂ ಶತಪತ್ರಾಯತೇಕ್ಷಣಾಮ್ |
ಸುಖಾರ್ಹಾಂ ದುಃಖಿತಾಂ ದೃಷ್ಟ್ವಾ ಮಮಾಪಿ ವ್ಯಥತೇ ಮನಃ ||22||
ಕೃಷ್ಣಕೇಶಗಳಿಂದ ಕೂಡಿರುವ ಕಮಲದಲಾಯತಾಕ್ಷಿಯಾದ ಸುಖೋಚಿತಳಾದ ಇವಳು ದುಃಖದಿಂದ ಕೂಡಿರುವುದನ್ನು ನೋಡಿ ನನ್ನ ಮನಸ್ಸಿಗೂ ವ್ಯಥೆಯಾಗುತ್ತಿದೆ.
ಕದಾ ನು ಖಲು ದುಃಖಸ್ಯ ಪಾರಂ ಯಾಸ್ಯತಿ ವೈ ಶುಭಾ |
ಭರ್ತುಃ ಸಮಾಗಮಾತ್ ಸಾಧ್ವೀ ರೋಹಿಣೀ ಶಶಿನೋ ಯಥಾ ||23||
ಈ ಸಾಧ್ವಿಯೂ ಮತ್ತು ಪವಿತ್ರಳಾದವಳೂ ಯಾವಾಗ ಪತಿಯ ಸಮಾಗಮವನ್ನು ಹೊಂದಿ ರೋಹಿಣಿಯು ಚಂದ್ರನ ಜೊತೆಯಲ್ಲಿ ಬೆರೆತಂತೆ ದುಃಖದದಡವನ್ನು ದಾಟಿ ಸುಖವಾಗಿರುತ್ತಾಳೆ?
ಅಸ್ಯಾ ನೂನಂ ಪುನರ್ಲಾಭಾನ್ನೈಷಧಃ ಪ್ರೀತಿಮೇಷ್ಯತಿ |
ರಾಜಾ ರಾಜ್ಯಪರಿಭ್ರಷ್ಟಃ ಪುನರ್ಲಬ್ಧ್ವೇವ ಮೇದಿನೀಮ್ ||24||
ರಾಜ್ಯಪರಿಭ್ರಷ್ಟನಾದ ರಾಜನು ಪುನಃ ರಾಜ್ಯವನ್ನು ಮರಳಿಪಡೆದಂತೆ ಇವಳನ್ನು ಪಡೆದತಕ್ಷಣ ಖಂಡಿತವಾಗಿ ನಳನು ಸಂತೋಷವನ್ನು ಹೊಂದುವನು.
ತುಲ್ಯಶೀಲವಯೋರೂಪಾಂ ತುಲ್ಯಾಭಿಜನಸಂಯುತಾಮ್ |
ನೈಷಧೋಽರ್ಹತಿ ವೈದರ್ಭೀಂ ತಂ ಚೇಯಮಸಿತೇಕ್ಷಣಾ ||25||
ಸಮಾನವಾದ ಶೀಲವಯೋರೂಪಗಳುಳ್ಳ ಮತ್ತು ಸಮಾನವಾದ ಉತ್ಕೃಷ್ಟಕುಲದಲ್ಲಿ ಜನಿಸಿದ ದಮಯಂತಿಯನ್ನು ಪಡೆಯಲು ನೈಷಧನು ಅರ್ಹನಾಗಿದ್ದಾನೆ. ನೈಷಧನನ್ನು ಪಡೆಯಲು ಈ ಕೃಷ್ಣನೇತ್ರೆಯಾದ ದಮಯಂತಿಯೂ ಅರ್ಹಳಾಗಿದ್ದಾಳೆ.
ಯುಕ್ತಂ ತ್ವದ್ಯಾಪ್ರಮೇಯಸ್ಯ ವೀರ್ಯಸತ್ತ್ವವತೋ ಮಯಾ |
ಸಮಾಶ್ವಾಸಯಿತುಂ ಭಾರ್ಯಾಂ ಪತಿದರ್ಶನಲಾಲಸಾಮ್ ||26||
ಈದಿನ ಅಪ್ರಮೇಯನಾದ ಬಲಪರಾಕ್ರಮಗಳನ್ನು ಹೊಂದಿದ ನಳನ ಪತ್ನಿಯಾದ ಪತಿದರ್ಶನಾಕಾಂಕ್ಷಿಯಾದ ದಮಯಂತಿಯನ್ನು ಸಮಾಧಾನಪಡಿಸುವುದು ಯುಕ್ತವಾಗುತ್ತದೆ.
ಅಹಮಾಶ್ವಾಸಯಾಮ್ಯೇನಾಂ ಪೂರ್ಣಚಂದ್ರನಿಭಾನನಾಮ್ |
ಅದೃಷ್ಟಪೂರ್ವಾಂ ದುಃಖಸ್ಯ ದುಃಖಾರ್ತಾಂ ಧ್ಯಾನತತ್ಪರಾಮ್ ||27||
ಏವಂ ವಿಮೃಶ್ಯ ವಿವಿಧೈಃ ಕಾರಣೈರ್ಲಕ್ಷಣೈಶ್ಚ ತಾಮ್ |
ಉಪಗಮ್ಯ ತತೋ ಭೈಮೀಂ ಸುದೇವೋ ವಾಕ್ಯಮಬ್ರವೀತ್ ||28||
ಹಿಂದೆ ಎಂದೂ ದುಃಖವನ್ನು ಕಾಣದೆ ಈಗ ದುಃಖಾರ್ತಳಾಗಿ ಚಿಂತಾಕ್ರಾಂತಳಾಗಿರುವ ಈ ಪೂರ್ಣಚಂದ್ರಮುಖಿಯಾದ ದಮಯಂತಿಯನ್ನು ನಾನು ಸಮಾಧಾನಪಡಿಸುತ್ತೇನೆ. ಸುದೇವನು ಹೀಗೆ ಅನೇಕ ಕಾರಣಗಳಿಂದಲೂ ಮತ್ತು ಅವಳ ಲಕ್ಷಣಗಳಿಂದಲೂ ವಿಮರ್ಶೆಯನ್ನು ಮಾಡಿ ಅನಂತರ ಅವಳನ್ನು ಸಮೀಪಿಸಿ ಅವಳನ್ನು ಕುರಿತು ಮಾತನಾಡಿದನು.
ಅಹಂ ಸುದೇವೋ ವೈದರ್ಭಿ ಭ್ರಾತುಸ್ತೇ ದಯಿತಃ ಸಖಾ |
ಭೀಮಸ್ಯ ವಚನಾದ್ ರಾಜ್ಞಃ ತ್ವಾಮನ್ವೇಷ್ಟುಮಿಹಾಗತಃ ||29||
ಎಲೌ ದಮಯಂತಿಯೇ ನಾನು ಸುದೇವ. ನಿನ್ನ ಸಹೋದರನಿಗೆ ಪ್ರಿಯನಾದ ಸ್ನೇಹಿತ. ಭೀಮರಾಜನ ವಚನದಂತೆ ನಿನ್ನನ್ನು ಹುಡುಕಲು ಇಲ್ಲಿಗೆ ಬಂದಿದ್ದೇನೆ.
ಕುಶಲೀ ತೇ ಪಿತಾ ರಾಜಾ ಜನಿತ್ರೀ ಭ್ರಾತರಶ್ಚ ತೇ |
ಆಯುಷ್ಮಂತೌ ಕುಶಲಿನೌ ತತ್ರಸ್ಥೌ ದಾರಕೌ ಚ ತೇ ||30||
ನಿನ್ನ ತಂದೆಯಾದ ರಾಜನು ಕ್ಷೇಮದಿಂದ ಇದ್ದಾನೆ. ನಿನ್ನ ತಾಯಿಯು ನಿನ್ನ ಸಹೋದರರು ಕ್ಷೇಮದಿಂದ ಇದ್ದಾರೆ. ಅಲ್ಲಿರುವ ಚಿರಂಜೀವಿಗಳಾದ ನಿನ್ನ ಮಕ್ಕಳು ಕ್ಷೇಮದಿಂದ ಇದ್ದಾರೆ.
ಕಿಂತು ರಾಜಾ ದೃಢೋ ಭೀಮೋ ಜನನೀ ಭ್ರಾತರಶ್ಚ ತೇ |
ತ್ವತ್ಕೃತೇ ಬಂಧುವರ್ಗಶ್ಚ ಗತಸತ್ತ್ವಾ ಇವಾಸತೇ ||31||
ಆದರೆ ನಿನ್ನ ಸಲುವಾಗಿ ಭೀಮರಾಜನೂ ನಿನ್ನ ತಾಯಿಯೂ ನಿನ್ನ ಸಹೋದರರೂ ಮತ್ತು ಬಂಧುವರ್ಗಗಳೂ ಪ್ರಾಣಹೋದವರಂತೆ ಇದ್ದಾರೆ.
ಅಭಿಜ್ಞಾಯ ಸುದೇವಂ ತು ದಮಯಂತೀ ಯುಧಿಷ್ಠಿರ |
ಪರ್ಯಪೃಚ್ಛತ ತಾನ್ ಸರ್ವಾನ್ ಕ್ರಮೇಣ ಸುಹೃದಃ ಸ್ವಕಾನ್ ||32||
ಎಲೈ ಯುಧಿಷ್ಠಿರನೇ, ದಮಯಂತಿಯು ಸುದೇವನನ್ನು ಗುರುತಿಸಿ ಕ್ರಮವಾಗಿ ತನ್ನ ಆ ಎಲ್ಲ ಬಂಧುಗಳ ವಿಷಯದಲ್ಲಿ

ಕುಶಲಪ್ರಶ್ನೆಯನ್ನು ಮಾಡಿದಳು.
ರುರೋದ ಚ ಭೃಶಂ ರಾಜನ್ ವೈದರ್ಭೀ ಶೋಕಕರ್ಶಿತಾ |
ದೃಷ್ಟ್ವಾ ಸುದೇವಂ ಸಹಸಾ ಭ್ರಾತುರಿಷ್ಟಂ ದ್ವಿಜೋತ್ತಮಮ್ ॥33॥
ಎಲೈ ರಾಜನೇ, ತನ್ನ ಸಹೋದರನಿಗೆ ಪ್ರಿಯನಾದ ದ್ವಿಜಶ್ರೇಷ್ಠನಾದ ಸುದೇವನನ್ನು ಇದ್ದಕ್ಕಿದ್ದಂತೆ ನೋಡಿ ಶೋಕಕರ್ಶಿತಳಾದ ದಮಯಂತಿಯು ಬಹಳವಾಗಿ ಅತ್ತಳು.
ರುದಂತೀಂ ತಾಂ ತಥಾ ದೃಷ್ಟ್ವಾ ಸುನಂದಾ ಶೋಕಕರ್ಶಿತಾ |
ಸುದೇವೇನ ಸಹೈಕಾಂತೇ ಕಥಯಂತೀಂ ಚ ಭಾರತ ॥34॥
ಜನಿತ್ರ್ಯೈ ಕಥಯಾಮಾಸ ಸೈರಂಧ್ರೀಂ ರುದತೀಂ ಭೃಶಮ್ |
ಬ್ರಾಹ್ಮಣೇನ ಸಹಾಗಮ್ಯ ತಾಂ ವಿದ್ಧಿ ಯದಿ ಮನ್ಯಸೇ ॥35॥
ಎಲೈ ಭಾರತನೇ, ದಮಯಂತಿಯು ಏಕಾಂತದಲ್ಲಿ ಸುದೇವನ ಜೊತೆಯಲ್ಲಿ ಮಾತನಾಡುತ್ತಿರುವುದನ್ನು ಮತ್ತೆ ಹಾಗೆ ಅಳುತ್ತಿರುವುದನ್ನು ಗಮನಿಸಿದ ಸುನಂದೆಯು ದುಃಖಪೀಡಿತಳಾಗಿ ರಾಜಮಾತೆಗೆ ಸೈರಂಧ್ರಿಯು ಬ್ರಾಹ್ಮಣನ ಜೊತೆಯಲ್ಲಿ ಬಹಳವಾಗಿ ಅಳುತ್ತಿದ್ದಾಳೆ. ಇಲ್ಲಿಗೆ ಬಂದು ಆ ವಿಷಯವು ಏನೆಂದು ತಿಳಿ ಎಂದು ಹೇಳಿದಳು.
ಅಥ ಚೇದಿಪತೇರ್ಮಾತಾ ರಾಜ್ಞಶ್ಚಾಂತಃಪುರಾತ್ ತದಾ |
ಜಗಾಮ ಯತ್ರ ಸಾ ಬಾಲಾ ಬ್ರಾಹ್ಮಣೇನ ಸಹಾಭವತ್ ॥36॥
ಆಗ ಚೇದಿರಾಜನ ಮಾತೆಯು ರಾಜನ ಅಂತಃಪುರದಿಂದ ಹೊರಗೆ ಬಂದು ಆ ಬ್ರಾಹ್ಮಣನ ಜೊತೆಯಲ್ಲಿ ದಮಯಂತಿಯು ಇದ್ದಲ್ಲಿಗೆ ಬಂದಳು.
ತತಃ ಸುದೇವಮಾನಾಯ್ಯ ರಾಜಮಾತಾ ವಿಶಾಂಪತೇ |
ಪಪ್ರಚ್ಛ ಭಾರ್ಯಾ ಕಸ್ಯೇಯಂ ಸುತಾ ವಾ ಕಸ್ಯ ಭಾಮಿನೀ ॥37॥
ಕಥಂ ಚ ನಷ್ಟಾ ಜ್ಞಾತಿಭ್ಯೋ ಭರ್ತುರ್ಬಾಲಾ ಸುಲೋಚನಾ |
ತ್ವಯಾ ಚ ವಿದಿತಾ ವಿಪ್ರ ಕಥಮೇವಂಗತಾ ಸತೀ ॥38॥
ಏತದಿಚ್ಛಾಮ್ಯಹಂ ತ್ವತ್ತೋ ಜ್ಞಾತುಂ ಸರ್ವಮಶೇಷತಃ |
ತತ್ತ್ವೇನ ಹಿ ಮಮಾಚಕ್ಷ್ವ ಪೃಚ್ಛಂತ್ಯಾ ದೇವರೂಪಿಣೀಮ್ ॥39॥
ರಾಜನೇ ಅನಂತರ ರಾಜಮಾತೆಯು ಸುದೇವನನ್ನು ಕರೆಸಿ ಇವಳು ಯಾರ ಪತ್ನಿ ಈ ಭಾಮಿನಿಯು ಯಾರ ಮಗಳು ಇಂತಹ ಸುಲೋಚನೆಯು ಚಿಕ್ಕವಯಸ್ಸಿನವಳಾದ ಇವಳು ಪತಿಯಿಂದಲೂ ಮತ್ತು ಬಂಧುಗಳಿಂದಲೂ ಹೇಗೆ ವಿಯೋಗವನ್ನು ಹೊಂದಿದಳು? ಎಲೈ ಬ್ರಾಹ್ಮಣನೇ ಈ ಅವಸ್ಥೆಯಲ್ಲಿರುವ ಇವಳನ್ನು ನೀನು ಹೇಗೆ ಗುರುತಿಸಿದೆ? ಇವುಗಳನ್ನು ನಾನು ಸಂಪೂರ್ಣವಾಗಿ ಯಥಾರ್ಥವಾಗಿ ನಿನ್ನಿಂದ ತಿಳಿಯಲು ಅಪೇಕ್ಷಿಸುತ್ತೇನೆ. ನಿನ್ನನ್ನು ಕೇಳುತ್ತಿರುವ ನನಗೆ ದೇವರೂಪಿಣಿಯಾದ ಇವಳು ಯಾರೆಂದುತಿಳಿಸು ಎಂದು ಹೇಳಿದಳು.
ಏವಮುಕ್ತಸ್ತತೋ ರಾಜನ್ ಸುದೇವೋ ದ್ವಿಜಸತ್ತಮಃ |
ಸುಖೋಪವಿಷ್ಟ ಆಚಷ್ಟ ದಮಯಂತೀಂ ಯಥಾತಥಮ್ ॥40॥
ಎಲೈ ರಾಜನೇ ಹೀಗೆ ಹೇಳಲ್ಪಟ್ಟ ಆ ದ್ವಿಜಶ್ರೇಷ್ಠನಾದ ಸುದೇವನು ಸುಖಾಸನದಲ್ಲಿ ಕುಳಿತು ದಮಯಂತಿಯ ನಿಜ ಸ್ವರೂಪವನ್ನು ತಿಳಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
*****
ಅರವತ್ತೆರಡನೆಯ ಅಧ್ಯಾಯ
(ರಾಜಮಾತೆಗೆ ಸುದೇವನಿಂದ ದಮಯಂತಿಯ ಸ್ವರೂಪಕಥನ.)
ಸುದೇವಃ
ವಿದರ್ಭರಾಜೋ ಧರ್ಮಾತ್ಮಾ ಭೀಮೋ ಭೀಮಪರಾಕ್ರಮಃ |
ಸುತೇಯಂ ತಸ್ಯ ಕಲ್ಯಾಣೀ ದಮಯಂತೀತಿ ವಿಶ್ರುತಾ ॥1॥
ವಿದರ್ಭರಾಜನಾದ ಧರ್ಮಾತ್ಮನಾದ ಭೀಮನು ಮಹಾಪರಾಕ್ರಮಶಾಲಿಯಾಗಿದ್ದಾನೆ. ಈ ಸುಂದರಿಯು ದಮಯಂತಿಯೆಂದು ಪ್ರಖ್ಯಾತಳಾದ ಅವನ ಮಗಳು.
ರಾಜಾ ತು ನೈಷಧೋ ಧೀಮಾನ್ ಸಾರ್ವಭೌಮಶ್ಚ ವೈ ನಳಃ |
ವೀರಸೇನಸುತಃ ಸೋಽಪಿ ಯದಿ ತೇ ಶ್ರೋತ್ರಮಾಗತಃ |
ಭಾರ್ಯೇಯಂ ತಸ್ಯ ಕಲ್ಯಾಣೀ ಪುಣ್ಯಶ್ಲೋಕಸ್ಯ ವಿಶ್ರುತಾ ॥2॥
ಸ ದ್ಯೂತೇ ನಿರ್ಜಿತೋ ಭ್ರಾತ್ರಾ ಹೃತರಾಜ್ಯೋ ಮಹಾಮನಾಃ |
ದಮಯಂತ್ಯಾ ಚ ಸಹಿತೋ ಗತೋ ನ ಜ್ಞಾಯತೇ ನಳಃ ॥3॥
ನಿಷಧರಾಜನೂ ಸಾರ್ವಭೌಮನೂ ಮೇಧಾವಿಯೂ ವೀರಸೇನನ ಪುತ್ರನೂ ಆದ ನಳನನ್ನು ನೀನು ಕೇಳಿದ್ದರೆ ಈ ಕಲ್ಯಾಣಿಯು ಆ ಪುಣ್ಯಶ್ಲೋಕನ ಪ್ರಖ್ಯಾತಳಾದ ಪತ್ನಿ. ಆ ಉದಾರಿಯಾದ ನಳನು ತಮ್ಮನ ಜೊತೆಯಲ್ಲಿ ದ್ಯೂತದಲ್ಲಿ ನಿರ್ಜಿತನಾಗಿ ರಾಜ್ಯವನ್ನು ಕಳೆದುಕೊಂಡು ದಮಯಂತಿಯ ಜೊತೆಯಲ್ಲಿ ಹೋಗಿ ಈಗ ಎಲ್ಲಿದ್ದಾನೆಂದು ತಿಳಿಯುವುದಿಲ್ಲ.

ತೇ ವಯಂ ದಮಯಂತ್ಯರ್ಥೇ ಚರಾಮಃ ಪೃಥಿವೀಮಿಮಾಮ್ |
ಸೇಯಮಾಸಾದಿತಾ ಬಾಲಾ ತವ ದೇವಿ ನಿವೇಶನೇ ॥4॥
ಅಂತಹ ನಾವು ದಮಯಂತಿಯ ಸಲುವಾಗಿ ಈ ಭೂಮಿಯಲ್ಲಿ ಸಂಚರಿಸುತ್ತಿದ್ದೇವೆ. ದೇವಿಯೇ ನಿನ್ನ ಮನೆಯಲ್ಲಿ ಈ ಬಾಲೆಯು ದೊರೆತಳು.
ತಸ್ಯಾ ರೂಪೇಣ ಸದೃಶೀ ಮಾನುಷೀ ನೈವ ವಿದ್ಯತೇ |
ಅಸ್ಯಾಶ್ಚೈವ ಭ್ರುವೋರ್ಮಧ್ಯೇ ಸಹಜಾ ವಿಪ್ಲುಡುತ್ತಮಾ ॥5॥
ಅವಳ ರೂಪಕ್ಕೆ ಸಮಾನವಾದ ರೂಪವುಳ್ಳವಳು ಮನುಷ್ಯಲೋಕದಲ್ಲಿ ಯಾರೂ ಇಲ್ಲ. ಇವಳ ಹುಬ್ಬುಗಳ ಮಧ್ಯದಲ್ಲಿ ಹುಟ್ಟಿನಿಂದಲೇ ಇರುವ ತಿಲಕಾಕಾರದ ಒಂದು ಸಣ್ಣ ಕೆಂಪು ಮಚ್ಚೆಯಿದೆ.
ಶ್ಯಾಮಾಯಾಃ ಪದ್ಮಸಂಕಾಶೋ ಲಕ್ಷಿತೋಽಂತರ್ಹಿತೋ ಮಯಾ |
ಮಲೇನ ಸಂವೃತೋ ಹ್ಯಸ್ಯಾಃ ಛನ್ನೋಽಭ್ರೇಣೇವ ಚಂದ್ರಮಾಃ ॥6॥
ಮಧ್ಯವಯಸ್ಸಿನ ಈ ಯುವತಿಯ ಪದ್ಮದಂತೆ ಹೊಳೆಯುವ ಮುಚ್ಚಿಕೊಂಡಿರುವ ಆ ಚಿಹ್ನೆಯು ನನ್ನಿಂದ ಗಮನಿಸಲ್ಪಟ್ಟಿತು. ಮೋಡದಿಂದ ಚಂದ್ರನು ಮರೆಯಾದಂತೆ ಆ ಚಿಹ್ನೆಯು ದೇಹದ ಮೇಲಿನ ಕೊಳೆಯಿಂದ ಮರೆಯಾಗಿದೆ.
ಚಿಹ್ನಭೂತೋ ವಿಭೂತ್ಯರ್ಥಮಿಯಂ ಧಾತ್ರಾ ವಿನಿರ್ಮಿತಾ |
ಪ್ರತಿಪತ್ಕಲುಷಾ ಚೇಂದೋರ್ಲೇಖೇವ ನ ವಿರಾಜತೇ ॥7॥
ಇವಳ ಸೌಭಾಗ್ಯದ ಸಲುವಾಗಿ ಈ ಮಚ್ಚೆಯು ದೇವರಿಂದ ನಿರ್ಮಿಸಲ್ಪಟ್ಟಿದೆ. ಪ್ರತಿಪದ್ ದಿವಸ ಮಲಿನವಾದ ಚಂದ್ರಲೇಖೆಯಂತೆ ಇದು ಪ್ರಕಾಶಿಸುತ್ತಿಲ್ಲ.
ನ ಚಾಸ್ಯಾ ದೃಶ್ಯತೇ ರೂಪಂ ವಪುರ್ಮಲಸಮಾಚಿತಮ್ |
ಅಸಂಸ್ಕೃತಮಿವ ವ್ಯಕ್ತಂ ಭಾತಿ ಕಾಂಚನಸನ್ನಿಭಮ್ ॥8॥
ಕೊಳೆಯಿಂದ ಕೂಡಿದ ಇವಳ ದೇಹದ ರೂಪವೂ ಸಹ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. ಚಿನ್ನದ ಕಾಂತಿಯುಳ್ಳ ಇವಳ ದೇಹವು ಉಪಚಾರವನ್ನು ಹೊಂದಿಲ್ಲವೆಂದು ಸ್ಪಷ್ಟವಾಗಿ ಕಾಣುತ್ತಿದೆ.
ಅನಯಾ ವಿಪ್ಲುಷಾ ಬಾಲಾ ವಪುಷಾಽನೇನ ಚೈವ ಹಿ |
ಲಕ್ಷಿತೇಯಂ ಮಯಾ ದೇವೀ ಪಿಹಿತೋಽಗ್ನಿರಿವೋಷ್ಮಣಾ ॥9॥
ಮುಚ್ಚಿದ ಅಗ್ನಿಯನ್ನು ಶಾಖದಿಂದ ತಿಳಿಯುವಂತೆ ನಾನು ಈ ದೇವಿಯನ್ನು ಈ ಮಚ್ಚೆ ಮತ್ತು ದೇಹಗಳಿಂದ ಗಮನಿಸಿದೆ.
ತಚ್ಛ್ರುತ್ವಾ ವಚನಂ ತಸ್ಯ ಸುದೇವಸ್ಯ ವಿಶಾಂಪತೇ |
ಸುನಂದಾ ಶೋಧಯಾಮಾಸ ವಿಪ್ಲುಡಾಚ್ಛಾದನಂ ಮಲಮ್ ॥10॥
ಎಲೈ ರಾಜನೇ ಸುದೇವನ ಆ ಮಾತುಗಳನ್ನು ಕೇಳಿ ಸುನಂದೆಯು ಆ ಮಚ್ಚೆಗೆ ಆವರಕವಾಗಿದ್ದ ಕಶ್ಮಲವನ್ನು ಶೋಧಿಸಿದಳು.
ಸ ಮಲೇನಾಪಕೃಷ್ಟೇನ ವಿಪ್ಲುಡಸ್ಯಾ ವ್ಯರೋಚತ |
ದಮಯಂತ್ಯಾಸ್ತಥಾ ವ್ಯಭ್ರೇ ನಭಸೀವ ನಿಶಾಕರಃ ॥11॥
ಕೊಳೆಯು ಹೋಗುತ್ತಿದ್ದಂತೆಯೇ ದಮಯಂತಿಯ ಆ ಮಚ್ಚೆಯು ಮೋಡವಿಲ್ಲದ ಆಕಾಶದಲ್ಲಿ ಚಂದ್ರನು ಪ್ರಕಾಶಿಸುವಂತೆ ಪ್ರಕಾಶಿಸಿತು.
ಸುನಂದಾ ವಿಪ್ಲುಷಂ ದೃಷ್ಟ್ವಾ ರಾಜಮಾತಾ ಚ ಭಾರತ |
ರುದಂತ್ಯೌ ತಾಂ ಪರಿಷ್ವಜ್ಯ ಮುಹೂರ್ತಮಿವ ತಸ್ಥತುಃ ॥12॥
ಎಲೈ ಭಾರತನೇ! ರಾಣಿಯಾದ ಸುನಂದೆಯು ಮತ್ತು ರಾಜಮಾತೆಯು ಸಹ ಆ ಮಚ್ಚೆಯನ್ನು ನೋಡಿ ಅಳುತ್ತಾ ದಮಯಂತಿಯನ್ನು ಆಲಿಂಗಿಸಿ ಒಂದು ಮುಹೂರ್ತಕಾಲ ಹಾಗೆಯೇ ಇದ್ದರು.
ಉತ್ಸೃಜ್ಯ ಬಾಷ್ಪಂ ಶನಕೈ ರಾಜಮಾತೇದಮಬ್ರವೀತ್ |
ಭಗಿನ್ಯಾ ದುಹಿತಾ ಮೇಽಸಿ ಸೂಚಿತಾ ವಿಪ್ಲುಷಾಽನಯಾ ॥13॥
ಅನಂತರ ಆ ರಾಜಮಾತೆಯು ಕಣ್ಣೀರನ್ನು ಒರೆಸಿಕೊಂಡು ನಿಧಾನವಾಗಿ ಈ ಮಾತನ್ನು ಆಡಿದಳು. ನೀನು ನನ್ನ ತಂಗಿಯ ಮಗಳು ಈ ಮಚ್ಚೆಯಿಂದ ನಾನು ನಿನ್ನನ್ನು ಗುರುತಿಸಿದೆ.
ಅಹಂ ತು ತವ ಮಾತಾ ಚ ರಾಜನ್ಯಸ್ಯ ಮಹಾತ್ಮನಃ |
ಸುತೇ ದಶಾರ್ಣಾಧಿಪತೇಃ ಸುದಾಮ್ನಶ್ಚಾರುಲೋಚನೇ ॥14॥
ಎಲೌ ಚಾರುಲೋಚನೆಯೇ ನಾನು ಮತ್ತು ನಿನ್ನ ತಾಯಿ ದಶಾರ್ಣಾಧಿಪತಿಯಾದ ಮಹಾತ್ಮನಾದ ಸುದಾಮರಾಜನ ಮಕ್ಕಳು.
ಭೀಮಸ್ಯ ರಾಜ್ಞಃ ಸಾ ದತ್ತಾ ವೀರಬಾಹೋರಹಂ ಪುನಃ |
ತ್ವಂ ತು ಜಾತಾ ಮಯಾ ದೃಷ್ಟಾ ದಶಾರ್ಣೇಷು ಗೃಹೇ ಪಿತುಃ ॥15॥
ಅವಳನ್ನು ಭೀಮರಾಜನಿಗೆ ಕೊಡಲಾಯಿತು. ನನ್ನನ್ನು ವೀರಬಾಹುವಿಗೆ ಕೊಟ್ಟರು. ನೀನು ದಶಾರ್ಣದಲ್ಲಿ ನಮ್ಮ ತಂದೆಯ ಮನೆಯಲ್ಲಿ ಜನಿಸಿದಾಗ ನಾನು ನಿನ್ನನ್ನು ನೋಡಿದ್ದೆ.
ಯಥೈವ ತೇ ಪಿತುರ್ಗೇಹಂ ತಥೇದಮಪಿ ಭಾಮಿನಿ |
ಯಥೈವ ಚ ಮಮೈಶ್ವರ್ಯಂ ದಮಯಂತಿ ತಥಾ ತವ ॥17॥
ಭಾಮಿನಿಯೇ ಈ ಮನೆಯೂ ನಿನ್ನ ತಂದೆಯ ಮನೆ ಇದ್ದಂತೆಯೇ. ದಮಯಂತಿಯೇ ಈ ಐಶ್ವರ್ಯವು ನನ್ನದಾದಂತೆ ನಿನ್ನದೂ ಆಗಿದೆ.
ಸಂಪ್ರಹೃಷ್ಟೇನ ಮನಸಾ ದಮಯಂತೀ ವಿಶಾಂಪತೇ |

ಪ್ರಣಮ್ಯ ಮಾತುರ್ಭಗಿನೀಮಿದಂ ವಚನಮಬ್ರವೀತ್ ॥18॥
ಎಲೈ ರಾಜನೇ! ಆಗ ದಮಯಂತಿಯು ಮನಸ್ಸಿನಲ್ಲಿ ಹರ್ಷಗೊಂಡವಳಾಗಿ ತಾಯಿಯ ಸಹೋದರಿಗೆ ನಮಸ್ಕಾರವನ್ನು ಮಾಡಿ ಈ ಮಾತನ್ನು ಆಡಿದಳು.
ಅಜ್ಞಾಯಮಾನಾಽಪಿ ಸತೀ ಸುಖಮಧ್ಯುಷಿತೇಹ ವೈ |
ಸರ್ವಕಾಮೈಃ ಸುವಿಹಿತಾ ರಕ್ಷ್ಯಮಾಣಾ ಸದಾ ತ್ವಯಾ ॥19॥
ನಾನು ಯಾರೆಂದು ತಿಳಿಯದಿದ್ದರೂ ಈ ಮನೆಯಲ್ಲಿ ಸುಖವಾಗಿ ವಾಸಿಸಿದ್ದೇನೆ. ನಿನ್ನಿಂದ ಯಾವಾಗಲೂ ರಕ್ಷಿತಳಾಗಿ ಎಲ್ಲ ಕಾಮಗಳನ್ನೂ ಅನುಭವಿಸಿದ್ದೇನೆ.
ಸುಖಾತ್ ಸುಖತರೋ ವಾಸೋ ಭವಿಷ್ಯತಿ ನ ಸಂಶಯಃ |
ಚಿರವಿಪ್ರೋಷಿತಾಂ ಮಾತರ್ಮಾಮನುಜ್ಞಾತುಮರ್ಹಸಿ ॥20॥
ತಾಯಿಯೇ ಅತ್ಯಂತ ಸುಖಕರವಾದ ವಾಸವು ನಿನ್ನ ಮನೆಯಲ್ಲಿ ನನಗೆ ಉಂಟಾಗಿದೆ. ಅದರಲ್ಲಿ ಸಂಶಯವಿಲ್ಲ. ನಾನು ನನ್ನ ತಂದೆಯ ಮನೆಯನ್ನು ಬಿಟ್ಟು ಬಹಳ ಸಮಯವಾಗಿದೆ. ಹೊರಡಲು ಅನುಮತಿಯನ್ನು ಕೊಡಬೇಕು.
ದಾರಕೌ ಚೈವ ಮೇ ನೀತೌ ವಸತಸ್ತತ್ರ ಬಾಲಕೌ |
ಪಿತ್ರಾ ವಿಹೀನೌ ಶೋಕಾರ್ತೌ ಮಯಾ ಚಾಪಿ ಕಥಂ ನು ತೌ ॥21॥
ನನ್ನ ಎರಡು ಚಿಕ್ಕ ಮಕ್ಕಳು ನನ್ನ ಸೂತನಿಂದ ಅಲ್ಲಿಗೆ ಕರೆದೊಯ್ಯಲ್ಪಟ್ಟು ಅಲ್ಲಿ ವಾಸಮಾಡುತ್ತಿದ್ದಾರೆ. ತಂದೆಯನ್ನು ಕಳೆದುಕೊಂಡು ನಾನೂ ಇಲ್ಲದೆ ಶೋಕಾರ್ತರಾಗಿ ಅವರು ಹೇಗಿರಬಹುದು?
ಯದಿ ವಾಪಿ ಪ್ರಿಯಂ ಕಿಂಚಿತ್ ಮಮ ಕರ್ತುಮಿಹೇಚ್ಛಸಿ |
ವಿದರ್ಭಾನ್ ಯಾತುಮಿಚ್ಛಾಮಿ ಯಾನಂ ಮೇ ಶೀಘ್ರಮಾದಿಶ ॥22॥
ನನಗೆ ಏನಾದರೂ ಹಿತವನ್ನು ಮಾಡುವ ಅಭಿಪ್ರಾಯವಿದ್ದರೆ ನಾನು ವಿದರ್ಭಕ್ಕೆ ಹೊಗಲು ಬಯಸುತ್ತೇನೆ. ನನಗೆ ಶೀಘ್ರವಾಗಿ ಒಂದು ಯಾನದ ವ್ಯವಸ್ಥೆಯನ್ನು ಮಾಡು.
ಬಾಢಮಿತ್ಯೇವಮುಕಕ್ತ್ವ ತಾಂ ಹೃಷ್ಟಾ ಮಾತೃಷ್ವಸಾ ನೃಪ |
ಗುಪ್ತಾಂ ಬಲೇನ ಮಹತಾ ಪುತ್ರಸ್ಯಾನುಮತೇ ತತಃ ॥23॥
ಪ್ರಾಸ್ಥಾಪಯದ್ ರಾಜಮಾತಾ ಶ್ರೀಮತಾ ನರವಾಹಿನಾ |
ಯಾನೇನ ಭರತಶ್ರೇಷ್ಠ ಸ್ವನ್ನಪಾನಪರಿಚ್ಛದಾಮ್ ॥24॥
ಎಲೈ ಭರತಶ್ರೇಷ್ಠನೇ, ರಾಜನೇ, ತಾಯಿಯ ಸೋದರಿಯಾದ ರಾಜಮಾತೆಯು ಸಂತೋಷಗೊಂಡವಳಾಗಿ ಹಾಗೆಯೇ ಆಗಲಿ ಎಂದು ಹೇಳಿ ಮಗನ ಅನುಮತಿಯನ್ನು ಪಡೆದು ಒಂದು ಒಳ್ಳೆಯ ನರವಾಹನದಲ್ಲಿ (ಪಲ್ಲಕ್ಕಿಯಲ್ಲಿ) ಸೈನ್ಯದಿಂದ ರಕ್ಷಿತಳನ್ನಾಗಿ ಮಾಡಿ ಅನ್ನಪಾನಾದಿ ಪಾಥೇಯಗಳನ್ನು ಕೊಟ್ಟು ಕಳುಹಿಸಿಕೊಟ್ಟಳು.
ತತಃ ಸಾ ನಚಿರಾದೇವ ವಿದರ್ಭಾನಗಮತ್ಶುಭಾ |
ತಾಂ ತು ಬಂಧುಜನಸಃ ಸರ್ವೋ ಪ್ರಹೃಷ್ಟಃ ಪ್ರತ್ಯಪೂಜಯತ್ ॥25॥
ಅನಂತರ ಶುಭಳಾದ ಆ ದಮಯಂತಿಯು ಅಲ್ಪಕಾಲದಲ್ಲಿಯೇ ವಿದರ್ಭವನ್ನು ತಲುಪಿದಳು. ಬಂಧುಜನರೆಲ್ಲರೂ ಅವಳನ್ನು ನೋಡಿ ಸಂತೋಷಗೊಂಡು ಸತ್ಕರಿಸಿದರು.
ಸರ್ವಾನ್ ಕುಶಲಿನೋ ದೃಷ್ಟ್ವಾ ಬಾಂಧವಾನ್ ದಾರಕೌ ಚ ತೌ |
ಮಾತರಂ ಪಿತರಂ ಚೋಭೌ ಸರ್ವಂ ಚೈವ ಸಖೀಗಣಮ್ ॥26॥
ದೇವತಾಃ ಪೂಜಯಾಮಾಸ ಬ್ರಾಹ್ಮಣಾಂಶ್ಚ ಯಶಸ್ವಿನೀ |
ವಿಧಿನಾಽನೇನ ಕಲ್ಯಾಣೀ ದಮಯಂತೀ ವಿಶಾಂಪತೇ ॥27॥
ತಮ್ಮ ಬಂಧುಗಳೆಲ್ಲರೂ ಮಕ್ಕಳೂ ತಂದೆತಾಯಿಯರೂ ತನ್ನ ಸಖೀಗಣವು ಎಲ್ಲರೂ ಕ್ಷೇಮದಿಂದ ಇರುವುದನ್ನು ನೋಡಿ ಯಶಸ್ವಿನಿಯೂ ಕಲ್ಯಾಣಿಯೂ ಆದ ದಮಯಂತಿಯು ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ವಿಧಿಪೂರ್ವಕವಾಗಿ ಪೂಜಿಸಿದಳು.
ಅತರ್ಪಯತ್ ಸುದೇವಂ ಚ ಗೋಸಹಸ್ರೇಣ ಪಾರ್ಥಿವಃ |
ಪ್ರೀತೋ ದೃಷ್ಟ್ವೈವ ತನಯಾಂ ಗ್ರಾಮೇಣ ದ್ರವಿಣೇನ ಚ ॥28॥
ಭೀಮರಾಜನಾದರೋ ಮಗಳನ್ನು ನೋಡಿದುದರಿಂದಲೇ ಸಂತೋಷಗೊಂಡು ಸುದೇವನಿಗೆ ಸಹಸ್ರಗೋವುಗಳನ್ನೂ ಗ್ರಾಮವನ್ನೂ ಮತ್ತು ಧನವನ್ನೂ ಕೊಟ್ಟು ಅವನನ್ನು ತೃಪ್ತಿಪಡಿಸಿದನು.
ಸಾ ವ್ಯುಷ್ಟಾ ರಜನೀಂ ತತ್ರ ಪಿತುರ್ವೇಶ್ಮನಿ ಭಾಮಿನೀ |
ವಿಶ್ರಾಂತಾ ಮಾತರಂ ರಾಜನ್ನಿದಂ ವಚನಮಬ್ರವೀತ್ ॥29॥
ಎಲೈ ರಾಜನೇ ಆ ರಾತ್ರಿಯು ದಮಯಂತಿಗೆ ತಂದೆಯ ಮನೆಯಲ್ಲಿ ಕಳೆಯಿತು. ವಿಶ್ರಾಂತಿಯನ್ನು ಪಡೆದ ದಮಯಂತಿಯು (ಪ್ರಾತಃಕಾಲದಲ್ಲಿ) ತಾಯಿಯನ್ನು ಕುರಿತು ಮಾತನಾಡಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಅರವತ್ಮೂರನೆಯ ಅಧ್ಯಾಯ
(ತಾಯಿಯನ್ನು ಸಮಾಧಾನ ಪಡಿಸಿ ದಮಯಂತಿಯಿಂದ ಸ್ವಯಂವರವನ್ನು ಘೋಷಣೆಮಾಡುವಂತೆ ಪ್ರಾರ್ಥನೆ.)

ದಮಯಂತೀ
ಮಾಂ ಚೇದಿಚ್ಛಸಿ ಜೀವಂತೀಂ ಮಾತಃ ಸತ್ಯಂ ಬ್ರವೀಮಿ ತೇ |
ನಳಸ್ಯಾನ್ವೇಷಣೇ ಯತ್ನಃ ಕ್ರಿಯತಾಮಿತಿ ಸಾಂಪ್ರತಮ್ ||1||
ತಾಯಿಯೇ ನಾನು ಬದುಕಿರುವುದನ್ನು ನೀನು ಬಯಸುವುದಾದರೆ ತಕ್ಷಣವೇ ನಳನನ್ನು ಹುಡುಕುವ ಪ್ರಯತ್ನವನ್ನುಮಾಡು. ನಾನು ಸತ್ಯವಾಗಿ ಈ ಮಾತನ್ನು ಹೇಳುತ್ತಿದ್ದೇನೆ.
ಬೃಹದಶ್ವಃ
ದಮಯಂತ್ಯಾ ತಥೋಕ್ತಾ ತು ಸಾ ದೇವೀ ಭೃಶದುಃಖಿತಾ |
ಬಾಷ್ಪೇಣಾಪಿಹಿತಾ ರಾಜನ್ ನೋತ್ತರಂ ಕಿಂಚಿದಬ್ರವೀತ್ ||2||
ದಮಯಂತಿಯಿಂದ ಹೀಗೆ ಹೇಳಲ್ಪಟ್ಟ ಅವಳ ತಾಯಿಯು ಬಹಳ ದುಃಖಿತಳಾಗಿ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಉತ್ತರರೂಪವಾಗಿ ಏನನ್ನೂ ಮಾತನಾಡಲಿಲ್ಲ.
ತದವಸ್ಥಾಂ ತು ತಾಂ ದೃಷ್ಟ್ವಾ ಸರ್ವಮಂತಃಪುರಂ ತದಾ |
ಹಾಹಾಭೂತಮತೀವಾಸೀದ್ ಭೃಶಂ ತತ್ರ ರುರೋದ ಹ |
ತತೋ ಭೀಮಂ ಮಹಾರಾಜಂ ಭಾರ್ಯಾ ವಚನಮಬ್ರವೀತ್ ||3||
ಆ ಅವಸ್ಥೆಯಲ್ಲಿರುವ ರಾಣಿಯನ್ನು ನೋಡಿ ಅಂತಃಪುರದಲ್ಲಿ ಆಗ ಹಾಹಾಕಾರವು ಉಂಟಾಯಿತು. ಅಂತಃಪುರಜನರೆಲ್ಲರೂ ಬಹಳವಾಗಿ ರೋದನಮಾಡಿದರು. ಅನಂತರ ಭಾರ್ಯೆಯಾದ ಅವಳು ಭೀಮಮಹಾರಾಜನನ್ನು ಕುರಿತು ಮಾತನಾಡಿದಳು.
ದಮಯಂತೀ ತವ ಸುತಾ ಭರ್ತಾರಮನುಶೋಚತಿ |
ಅಪಕೃತ್ಯ ಚ ಲಜ್ಜಾಂ ಮಾಂ ಸ್ವಯಮುಕ್ತವತೀ ನೃಪ |
ಪ್ರಯತಂತಾಂ ತವ ಪ್ರೇಷ್ಯಾಃ ಪುಣ್ಯಶ್ಲೋಕಸ್ಯ ದರ್ಶನೇ ||4||
ತಯಾ ಪ್ರಚೋದಿತೋ ರಾಜಾ ಬ್ರಾಹ್ಮಣಾನ್ ವಶವರ್ತಿನಃ |
ಪ್ರಾಸ್ಥಾಪಯದ್ ದಿಶಃ ಸರ್ವಾ ಯತಧ್ವಂ ನಳದರ್ಶನೇ ||5||
ರಾಜನೇ, ನಿನ್ನ ಮಗಳಾದ ದಮಯಂತಿಯು ಪತಿಯನ್ನು ಕುರಿತು ಶೋಕಪಡುತ್ತಿದ್ದಾಳೆ. ನಾಚಿಕೆಯನ್ನು ಬಿಟ್ಟು ನನ್ನ ಜೊತೆಯಲ್ಲಿ ತಾನೇ ಈ ಮಾತುಗಳನ್ನು ಹೇಳಿದಳು. ನಿನ್ನ ಸೇವಕರು ಪುಣ್ಯಶ್ಲೋಕನಾದ ನಳನನ್ನು ಹುಡುಕಲು ಪ್ರಯತ್ನವನ್ನು ಮಾಡಲಿ. (ಎಂದು ಹೇಳಿದಳು) ಅವಳಿಂದ ಪ್ರೇರಿಸಲ್ಪಟ್ಟ ರಾಜನು ತನ್ನ ವಶವರ್ತಿಗಳಾದ ಬ್ರಾಹ್ಮಣರನ್ನು ಕರೆದು ನಳನನ್ನು ಹುಡುಕುವುದಕ್ಕೆ ಪ್ರಯತ್ನಪಡಿ ಎಂದು ಹೇಳಿ ಅವರನ್ನು ಎಲ್ಲ ದಿಕ್ಕುಗಳಿಗೂ ಕಳುಹಿಸಿದನು.
ತತೋ ವಿದರ್ಭಾಧಿಪತೇರ್ನಿಯೋಗಾದ್ ಬ್ರಾಹ್ಮಣಾಸ್ತು ತೇ |
ದಮಯಂತೀಮಥಾಪೃಚ್ಛ್ಯ ಪ್ರಸ್ಥಿತಾಃಸ್ಮೇತ್ಯಥಾಬ್ರುವನ್ ||6||
ಆಗ ಆ ಬ್ರಾಹ್ಮಣರು ವಿದರ್ಭರಾಜನ ಆಜ್ಞೆಯಂತೆ ದಮಯಂತಿಯ ಅನುಜ್ಞೆಯನ್ನು ಪಡೆದು ನಾವು ಹೊರಟಿದ್ದೇವೆ ಎಂದು ಹೇಳಿದರು.
ಅಥ ತಾನಬ್ರವೀದ್ ಭೈಮೀ ಸರ್ವರಾಷ್ಟ್ರೇಷ್ವಿದಂ ವಚಃ |
ಬ್ರೂತ ವೈ ಜನಸಂಸತ್ಸು ತತ್ರ ತತ್ರ ಪುನಃ ಪುನಃ ||7||
ಆಗ ಅವರನ್ನು ಕುರಿತು ದಮಯಂತಿಯು ಎಲ್ಲ ರಾಷ್ಟ್ರಗಳಲ್ಲಿಯೂ ಮತ್ತು ಅಲ್ಲಲ್ಲಿ ಜನಸಮುದಾಯವಿರುವಕಡೆಯಲ್ಲಿಯೂ ಮತ್ತೆಮತ್ತೆ ಈ ಮಾತುಗಳನ್ನು ಹೇಳಿ.
ಕ್ವನು ತ್ವಂ ಕಿತವ ಚ್ಛಿತ್ತ್ವಾ ವಸ್ತ್ರಾರ್ಧಂ ಪ್ರಸ್ಥಿತೋ ಮಮ |
ಉತ್ಸೃಜ್ಯ ವಿಪಿನೇ ಸುಪ್ತಾಮನುರಕ್ತಾಂ ಪ್ರಿಯಾಂ ಪ್ರಿಯ ||8||
ಪ್ರಿಯನೇ ಮೋಸಗಾರನೇ ನಿದ್ದೆಮಾಡುತ್ತಿದ್ದ, ನಿನ್ನಲ್ಲಿ ಅನುರಕ್ತಳಾದ, ಪ್ರಿಯೆಯಾದ ನನ್ನನ್ನು ಬಿಟ್ಟು ಅರ್ಧವಸ್ತ್ರವನ್ನು ಹರಿದು ಎಲ್ಲಿಗೆ ಹೋದೆ?
ಸಾ ವೈ ಯಥಾ ಸಮಾದಿಷ್ಟಾ ತಥಾಽಽಸ್ತೇ ತ್ವತ್ಪ್ರತೀಕ್ಷಣೇ |
ದಹ್ಯಮಾನಾ ಭೃಶಂ ಬಾಲಾ ವಸ್ತ್ರಾರ್ಧೇನಾಭಿಸಂವೃತಾ ||9||
ಆ ಬಾಲೆಯಾದರೂ ನೀನು ಆದೇಶಮಾಡಿದಂತೆ ದುಃಖದಿಂದ ಬೇಯುತ್ತಾ ಅರ್ಧವಸ್ತ್ರದಿಂದ ಆವೃತಳಾಗಿ ನಿನ್ನ ನಿರೀಕ್ಷಣೆಯಲ್ಲಿಯೇ ಇದ್ದಾಳೆ.
ತಸ್ಯಾ ರುದಂತ್ಯಾಃ ಸತತಂ ತೇನ ಶೋಕೇನ ಪಾರ್ಥಿವ |
ಪ್ರಸಾದಂ ಕುರು ವೈ ವೀರ ಪ್ರತಿವಾಕ್ಯಂ ಪ್ರಯಚ್ಛ ಚ ||10||
ಎಲೈ ರಾಜನೇ, ಶೋಕದಿಂದ ಸತತವಾಗಿ ಅಳುತ್ತಿರುವ ಅವಳಿಗೆ ಅನುಗ್ರಹವನ್ನುಮಾಡು. ವೀರನೇ, ಪ್ರತ್ಯುತ್ತರವನ್ನು ಕೊಡು.
ಏತದನ್ಯಚ್ಚ ವಕ್ತವ್ಯಂ ಕೃಪಾಂ ಕುರ್ಯಾದ್ಯಥಾ ಮಯಿ |
ವಾಯುನಾ ಧೂಯಮಾನೋ ಹಿ ವನಂ ದಹತಿ ಪಾವಕಃ ||11||
ಈ ಮಾತುಗಳನ್ನೂ ಮತ್ತು ಅವನು ನನ್ನ ಮೇಲೆ ಕೃಪೆಯನ್ನು ಮಾಡುವಂತೆ ಇನ್ನೂ ಹೆಚ್ಚಿನ ಮಾತುಗಳನ್ನೂ ನೀವು ಆಡಬೇಕು. ವಾಯುವಿನಿಂದ ಪ್ರೇರಿತವಾದ ಅಗ್ನಿಯು ವನವನ್ನು ಸುಡುತ್ತಿದೆ.
ಭರ್ತವ್ಯಾ ರಕ್ಷಿತವ್ಯಾ ಚ ಪತ್ನೀ ಹಿ ಪತಿನಾ ಸದಾ |
ತನ್ನಷ್ಟಮುಭಯಂ ಕಸ್ಮಾದ್ ಧರ್ಮಜ್ಞಸ್ಯ ಸತಸ್ತವ ||12||
ಪತಿಯಾದವನು ಪತ್ನಿಯನ್ನು ಯಾವಾಗಲೂ ರಕ್ಷಿಸಬೇಕು. ಮತ್ತು ಪೋಷಿಸಬೇಕು. ಧರ್ಮಜ್ಞನಾದ ನಿನಗೆ ಪತ್ನಿಯ ರಕ್ಷಣೆ ಮತ್ತು

ಘೋಷಣೆ ಈ ಎರಡು ಏಕೆ ನಷ್ಟವಾಯಿತು?
ಖ್ಯಾತಃ ಪ್ರಾಜ್ಞಃ ಕುಲೀನಶ್ಚ ಸಾನುಕ್ರೋಶಶ್ಚ ವೈ ಸದಾ |
ಸಂವೃತ್ತೋ ನಿರನುಕ್ರೋಶಃ ಶಂಕೇ ಮದ್ಭಾಗ್ಯಸಂಕ್ಷಯಾತ್ ॥13॥
ಯಾವಾಗಲೂ ದಯಾಪರನೆಂದೂ ಸತ್ಕುಲಪ್ರಸೂತನೆಂದೂ ಪ್ರಾಜ್ಞನೆಂದೂ ಪ್ರಸಿದ್ಧನಾದ ನೀನು ನನ್ನ ದೌರ್ಭಾಗ್ಯದಿಂದ ನಿರ್ದಯನಾಗಿರುವಿಯೆಂದು ಭಾವಿಸುತ್ತೇನೆ.
ಪ್ರಕುರುಷ್ವ ಮಹೇಷ್ವಾಸ ದಯಾಂ ಮಯಿ ನರರ್ಷಭ |
ಅನೃಶಂಸ್ಯಂ ಪರೋ ಧರ್ಮಃ ತ್ವತ್ತ ಏವ ಶ್ರುತೋ ಮಯಾ ॥14॥
ಎಲೈ ಮಹಾಧನುರ್ಧಾರಿಯೇ, ಎಲೈ ನರಶ್ರೇಷ್ಠನೇ, ನನ್ನಲ್ಲಿ ದಯೆಯನ್ನು ಮಾಡು. ದಯೆಯು (ಮಾರ್ದವವು) ದೊಡ್ಡ ಧರ್ಮವೆಂದು ನಿನ್ನಿಂದಲೇ ನಾನು ಕೇಳಿ ತಿಳಿದಿದ್ದೇನೆ. (ಹೀಗೆಲ್ಲಾ ಹೇಳಬೇಕು.)
ಏವಂ ಬ್ರುವಾಣಾನ್ ಯದಿ ವಃ ಪ್ರತಿಬ್ರೂಯಾಚ್ಚ ಕಶ್ಚನ |
ಸ ನರಃ ಸರ್ವಥಾ ಜ್ಞೇಯಃ ಕಶ್ಚಾಸೌ ಕ್ವ ಚ ವರ್ತತೇ ॥15॥
ಹೀಗೆ ಮಾತನಾಡುವ ನಿಮಗೆ ಯಾವನಾದರೂ ಪ್ರತ್ಯುತ್ತರವನ್ನು ಕೊಟ್ಟರೆ ಅವನು ಯಾರು ಅವನು ಎಲ್ಲಿದ್ದಾನೆ ಎಂದು ಅವನ ವಿಷಯವನ್ನು ಎಲ್ಲ ರೀತಿಯಲ್ಲಿ ತಿಳಿಯಬೇಕು.
ಯಚ್ಚ ವೋ ವಚನಂ ಶ್ರುತ್ವಾ ಬ್ರೂಯಾತ್ ಪ್ರತಿವಚೋ ನರಃ |
ತದಾದಾಯ ವಚಸ್ತಸ್ಯ ಮಮಾವೇದ್ಯಂ ದ್ವಿಜೋತ್ತಮಾಃ ॥16॥
ಎಲೈ ಬ್ರಾಹ್ಮಣಶ್ರೇಷ್ಠರೇ, ನಿಮಗೆ ಅವನು ಏನಾದರೂ ಪ್ರತಿವಚನವನ್ನು ಕೊಟ್ಟರೆ ಆ ಮಾತುಗಳನ್ನು ನನಗೆ ಒಪ್ಪಿಸಬೇಕು.
ಯಥಾ ಚ ವೋ ನ ಜಾನೀಯಾತ್ ಚರತೋ ಭೀಮಶಾಸನಾತ್ |
ಪುನರಾಗಮನಂ ಚೇಹ ತಥಾ ಕಾರ್ಯಮತಂದ್ರಿತೈಃ ॥17॥
ನೀವು ಭೀಮಶಾಸನದಂತೆ ಸಂಚರಿಸುತ್ತಿದ್ದೀರೆಂದು ಮತ್ತು ಅವನು ಸಿಕ್ಕಿದ ಸ್ಥಳದಿಂದ ಪುನಃ ವಿದರ್ಭದೇಶಕ್ಕೆ ಬರುತ್ತಿದ್ದೀರೆಂದು ಅವನಿಗೆ ತಿಳಿಯದಂತೆ ಎಚ್ಚರಿಕೆಯಿಂದ ಕಾರ್ಯವನ್ನು ಮಾಡಬೇಕು.
ಯದಿ ವಾಽಸೌ ಸಮೃದ್ಧಃ ಸ್ಯಾದ್ ಯದಿ ವಾಽಪ್ಯಧನೋ ಭವೇತ್ |
ಯದಿವಾಽಪ್ಯರ್ಥಕಾಮಃಸ್ಯಾತ್ ಜ್ಞೇಯಮಸ್ಯ ಚಿಕೀರ್ಷಿತಮ್ ॥18॥
ಅವನು ಧನಸಮೃದ್ಧನಾಗಿದ್ದಾನೆಯೇ ಅಥವಾ ನಿರ್ಧನನಾಗಿದ್ದಾನೆಯೆ ಅಥವಾ ಧನವನ್ನು ಬಯಸುತ್ತಿದ್ದಾನೆಯೇ? ಅವನು ಏನುಮಾಡಬೇಕೆಂದು ಯೋಚಿಸಿದ್ದಾನೆ ಎಲ್ಲವನ್ನೂ ನೀವು ತಿಳಿಯಬೇಕು.
ಏವಮುಕ್ತಾಸ್ತ್ವಗಚ್ಛಂಸ್ತೇ ಬ್ರಾಹ್ಮಣಾಃಸರ್ವತೋದಿಶಮ್ |
ನಳಂ ಮೃಗಯಿತುಂ ರಾಜನ್ ತದಾ ವ್ಯಸನಿನಂ ತಥಾ ॥19॥
ಎಲೈ ರಾಜನೇ ಹೀಗೆ ಹೇಳಲ್ಪಟ್ಟ ಆ ಬ್ರಾಹ್ಮಣರು ವ್ಯಸನಕ್ಕೆ ಸಿಲುಕಿದ ಆ ನಳನನ್ನು ಹುಡುಕಲು ಎಲ್ಲದಿಕ್ಕುಗಳಿಗೂ ಹೊರಟರು.
ತೇ ಪುರಾಣಿ ಸರಾಷ್ಟ್ರಾಣಿ ಗ್ರಾಮಾನ್ ಘೋಷಾಂಸ್ತಥಾಽಽಶ್ರಮಾನ್ |
ಅನ್ವೇಷಂತೋ ನಳಂ ರಾಜನ್ ನಾಧಿಜಗ್ಮುರ್ದ್ವಿಜಾತಯಃ ॥20॥
ಎಲೈ ರಾಜನೇ ಆ ಬ್ರಾಹ್ಮಣರು ಪಟ್ಟಣಗಳನ್ನೂ ರಾಷ್ಟ್ರಗಳನ್ನೂ ಗ್ರಾಮಗಳನ್ನೂ ಘೋಷಗಳನ್ನೂ ಆಶ್ರಮಗಳನ್ನೂ ಹುಡುಕಿದರು. ನಳನನ್ನು ಎಲ್ಲಿಯೂ ಕಾಣಲಿಲ್ಲ.
ತಚ್ಚ ವಾಕ್ಯಂ ತಥಾ ಸರ್ವೇ ತತ್ರ ತತ್ರ ವಿಶಾಂಪತೇ |
ಶ್ರಾವಯಾಂಚಕ್ರಿರೇ ಸರ್ವೇ ದಮಯಂತ್ಯಾ ಯಥೋದಿತಮ್ ॥21॥
ಎಲೈ ರಾಜನೇ ದಮಯಂತಿಯು ಹೇಳಿದ ಆ ಮಾತುಗಳನ್ನು ಇನ್ನೊಬ್ಬರಿಗೆ ಕೇಳುವಂತೆ ಅವರೆಲ್ಲರೂ ಅಲ್ಲಲ್ಲಿ ಆಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತಮೂರನೆಯ ಅಧ್ಯಾಯ ಮುಗಿಯಿತು.
*****
ಅರವತ್ತನಾಲ್ಕನೆಯ ಅಧ್ಯಾಯ
(ಪರ್ಣಾದನೆಂಬ ಬ್ರಾಹ್ಮಣನಿಂದ ದಮಯಂತಿಗೆ ನಳನ ವಾರ್ತಾಕಥನ.)
ಬೃಹದಶ್ವಃ
ಅಥ ದೀರ್ಘಸ್ಯ ಕಾಲಸ್ಯ ಪರ್ಣಾದೋ ನಾಮ ವೈ ದ್ವಿಜಃ |
ಪ್ರತ್ಯೇತ್ಯ ನಗರಂ ಭೈಮೀಮಿದಂ ವಚನಮಬ್ರವೀತ್ ॥1॥
ಅನಂತರ ಎಷ್ಟೋಕಾಲವು ಕಳೆದ ಮೇಲೆ ಪರ್ಣಾದನೆಂಬ ಬ್ರಾಹ್ಮಣನು ಕುಂಡಿನಪುರಕ್ಕೆ ಹಿಂದಿರುಗಿ ದಮಯಂತಿಯನ್ನು ಕುರಿತು ಹೀಗೆ ಮಾತನಾಡಿದನು.
ನೈಷಧಂ ಮೃಗಯಾನೇನ ದಮಯಂತಿ ದಿವಾನಿಶಮ್ |
ಅಯೋಧ್ಯಾಂ ನಗರೀಂ ಗತ್ವಾ ಭಾರ್ಗಸ್ವರಿರುಪಸ್ಥಿತಃ ॥2॥
ಎಲೌ ದಮಯಂತಿಯೇ, ಹಗಲೂ ರಾತ್ರಿಯೂ ನಳನನ್ನು ಹುಡುಕುತ್ತಾ ಅಯೋಧ್ಯಾನಗರಕ್ಕೆ ಹೋಗಿ ಭರ್ಗಸ್ವರರಾಜನ ಮಗನಾದ ಋತುಪರ್ಣನನ್ನು ನೋಡಿದೆನು.
ಶ್ರಾವಿತಂ ಚ ಮಯಾ ವಾಕ್ಯಂ ತ್ವದೀಯಂ ಭೀಮನಂದಿನಿ |

ಸಭಾಯಾಮೃತುಪರ್ಣಸ್ಯ ಚಾತುರ್ವರ್ಣ್ಯಸಮಾಗಮೇ |
ಶ್ರಾವಿತಂ ಚ ಮಯಾ ವಾಕ್ಯಂ ತ್ವದೀಯಂ ಚ ಮಹಾಜನೇ ||3||
ಭೀಮನಂದಿನಿಯೇ, ನಾನು ನಿನ್ನ ಮಾತುಗಳನ್ನು ಋತುಪರ್ಣನ ಸಭೆಯಲ್ಲಿ ಎಲ್ಲರೂ ಕೇಳುವಂತೆ ಹೇಳಿದೆ ಮತ್ತು ನಾಲ್ಕು ವರ್ಣದ ಜನರು ಸೇರುವ ಕಡೆಗಳಲ್ಲೆಲ್ಲಾ ಮತ್ತು ಬಹಳ ಜನಗಳು ಇರುವಲ್ಲೆಲ್ಲಾ ನಿನ್ನವಾಕ್ಯಗಳನ್ನು ಹೇಳಿದೆ.
ತಚ್ಛ್ರುತ್ವಾ ನಾಬ್ರವೀತ್ ಕಿಂಚಿದ್ ಋತುಪರ್ಣೋ ನರಾಧಿಪಃ |
ನ ಚ ಪಾರಿಷದಃ ಕಶ್ಚಿದ್ ಭಾಷ್ಯಮಾಣೋ ಮಯಾಽಸಕೃತ್ ||4||
ನನ್ನ ಮಾತುಗಳನ್ನು ಕೇಳಿದ ಋತುಪರ್ಣನು ಏನನ್ನೂ ಮಾತನಾಡಲಿಲ್ಲ. ನಾನು ಋತುಪರ್ಣನ ಸಭಾಸದರನ್ನು ಮತ್ತೆಮತ್ತೆ ಮಾತನಾಡಿಸಿದರೂ ಅವರೂ ಸಹ ಏನೂ ಮಾತನಾಡಲಿಲ್ಲ.
ಅನುಜ್ಞಾತಂ ತು ಮಾಂ ರಾಜ್ಞಾ ವಿಜನೇ ಕಶ್ಚಿದಬ್ರವೀತ್ |
ಋತುಪರ್ಣಸ್ಯ ಪುರುಷೋ ಬಾಹುಕೋ ನಾಮ ನಾಮತಃ ||5||
ರಾಜನ ಅಪ್ಪಣೆಯನ್ನು ಪಡೆದು ನಾನು ಹೊರಗೆ ಬಂದಮೇಲೆ ಋತುಪರ್ಣನ ಸೇವಕನಾದ ಬಾಹುಕ ಎಂಬ ಪುರುಷನು ಏಕಾಂತದಲ್ಲಿ ನನ್ನ ಬಳಿಗೆ ಬಂದು ಈ ಮಾತನಾಡಿದನು.
ಸೂತಸ್ತಸ್ಯ ನರೇಂದ್ರಸ್ಯ ವಿರೂಪೋ ಹ್ರಸ್ವಬಾಹುಕಃ |
ದೀರ್ಘಯಾನೇ ಸುಕುಶಲೋ ಮೃಷ್ಟಕರ್ತಾ ಚ ಭೋಜನೇ ||6||
ಅವನು ಋತುಪರ್ಣನ ಸೂತ. ಕುರೂಪಿಯಾದವನು ಮತ್ತು ಗಿಡ್ಡಬಾಹುಗಳುಳ್ಳವನು. ಒಳ್ಳೆಯ ಅಡುಗೆಯನ್ನುಮಾಡುವುದರಲ್ಲಿಯೂ ಮತ್ತು ರಥವನ್ನು ದೀರ್ಘವಾಗಿ ನಡೆಸುವುದರಲ್ಲಿಯೂ ಬಹಳ ಕುಶಲನಾದವನು.
ಸ ವಿನಿಃಶ್ವಸ್ಯ ಬಹುಶೋ ರುದಿತ್ವಾ ಚ ಮುಹುರ್ಮುಹುಃ |
ಕುಶಲಂ ಸ ಚ ಮಾಂ ಪೃಷ್ಟ್ವಾ ಪಶ್ಚಾದಿದಮಭಾಷತ ||7||
ವೈಷಮ್ಯಮಪಿ ಸಂಪ್ರಾಪ್ತಾ ಗೋಪಾಯಂತಿ ಕುಲಸ್ತ್ರಿಯಃ |
ಆತ್ಮಾನಮಾತ್ಮನಾ ಸತ್ಯೋ ಜಿತಃಸ್ವರ್ಗೋ ನ ಸಂಶಯಃ ||8||
ಅವನು ಬಹಳ ನಿಟ್ಟುಸಿರನ್ನು ಬಿಟ್ಟು ಮತ್ತೆಮತ್ತೆ ರೋದನವನ್ನು ಮಾಡಿ ನನ್ನ ಕುಶಲಪ್ರಶ್ನೆಯನ್ನುಮಾಡಿ ಅನಂತರ ಹೀಗೆ ಹೇಳಿದನು. ಸಂಕಟಕ್ಕೆ ಸಿಲುಕಿದ ಪತಿವ್ರತೆಯಾದ ಕುಲಸ್ತ್ರೀಯರು ತಮ್ಮನ್ನು ತಾವೇ ರಕ್ಷಿಸಿಕೊಳ್ಳುತ್ತಾರೆ. ಅವರಿಂದ ಸ್ವರ್ಗವು ಜಿತವಾಗುತ್ತದೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ರಹಿತಾ ಭರ್ತೃಭಿಃ ಸಾಧ್ವ್ಯೋ ನ ಕ್ರುದ್ಧ್ಯಂತಿ ಕದಾಚನ |
ಪ್ರಾಣಾಶ್ಚಾರಿತ್ರಕವಚಾ ಧಾರಯಂತೀಹ ಸತ್ ಸ್ತ್ರಿಯಃ ||9||
ಪತಿಯಿಂದ ವಿವಿಕ್ತರಾದರೂ ಸಾಧ್ವಿಯರು ಎಂದೂ ಕ್ರೋಧವನ್ನು ಮಾಡುವುದಿಲ್ಲ. ಪತಿವ್ರತೆಯಾದವರು ತಮ್ಮ ಚಾರಿತ್ರ್ಯದಿಂದ ತಾವೇ ರಕ್ಷಿತರಾಗಿ ಪ್ರಾಣವನ್ನು ಧರಿಸುತ್ತಾರೆ.
ವಿಷಮಸ್ಥೇನ ಮೂಢೇನ ಪರಿಭ್ರಷ್ಟಸುಖೇನ ಚ |
ಯತ್ ಸಾ ತೇನ ಪರಿತ್ಯಕ್ತಾ ತತ್ರ ನ ಕ್ರೋದ್ಧುಮರ್ಹತಿ ||10||
ಸಂಕಟಕ್ಕೆ ಸಿಲುಕಿದ ಸುಖಭ್ರಷ್ಟನಾದ ಬುದ್ಧಿಹೀನನಾದ ಅವನಿಂದ ಅವಳು ಪರಿತ್ಯಜಿಸಲ್ಪಟ್ಟಿದ್ದಾಳೆ. ಆ ವಿಷಯದಲ್ಲಿ ಕೋಪವನ್ನು ಮಾಡಬಾರದು.
ಪ್ರಾಣಯಾತ್ರಾಂ ಪರಿಪ್ರೇಪ್ಸೋಃ ಶಕುನೈರ್ಹೃತವಾಸಸಃ |
ಆಧಿಭಿರ್ದಹ್ಯಮಾನಸ್ಯ ಶ್ಯಾಮಾ ನ ಕ್ರೋದ್ಧುಮರ್ಹತಿ ||11||
ಪ್ರಾಣವನ್ನು ಉಳಿಸಿಕೊಳ್ಳುವುದಕ್ಕೆ ಪಕ್ಷಿಗಳನ್ನು ಹಿಡಿಯಲು ಹೋಗಿ ಅರ್ಧವಸ್ತ್ರವನ್ನು ಕಳೆದುಕೊಂಡು ಮನಃಕ್ಲೇಶಕ್ಕೆ ಗುರಿಯಾಗಿರುವ ಅವನ ಮೇಲೆ ಮಧ್ಯಯೌವನ ಸುಂದರಿಯಾದ ಅವಳು ಕ್ರೋಧಗೊಳ್ಳಬಾರದು.
ಸತ್ಕೃತಾಽಸತ್ಕೃತಾ ವಾಽಪಿ ಪತಿಂ ದೃಷ್ಟ್ವಾ ತಥಾಗತಮ್ |
ಭ್ರಷ್ಟರಾಜ್ಯಂ ಶ್ರಿಯಾ ಹೀನಂ ಶ್ಯಾಮಾ ನ ಕ್ರೋದ್ಧುಮರ್ಹತಿ ||12||
ಅವಳು ಸತ್ಕರಿಸಲ್ಪಡಲಿ ಇಲ್ಲದಿರಲಿ, ರಾಜ್ಯವನ್ನು ಕಳೆದುಕೊಂಡು ಧನಹೀನನಾಗಿ ಸಂಕಟಕ್ಕೆ ಸಿಲುಕಿರುವ ಪತಿಯನ್ನು ಗಮನಿಸಿ ಆ ಸುಂದರಿಯು ಕೋಪವನ್ನು ಮಾಡಬಾರದು.
ತಸ್ಯ ತದ್ವಚನಂ ಶ್ರುತ್ವಾ ತ್ವರಿತೋಽಹಮಿಹಾಗತಃ |
ಶ್ರುತ್ವಾ ಪ್ರಮಾಣಂ ಭವತೀ ರಾಜ್ಞಶ್ಚೈವ ನಿವೇದಯ ||13||
ಅವನ ಆ ಮಾತುಗಳನ್ನು ಕೇಳಿ ನಾನು ಶೀಘ್ರವಾಗಿ ಇಲ್ಲಿಗೆ ಬಂದೆ. ಈ ಮಾತುಗಳನ್ನು ಕೇಳಿದ ಮೇಲೆ ಮುಂದಿನ ಕಾರ್ಯವು ನಿನ್ನನ್ನು ಅವಲಂಬಿಸಿದೆ. ರಾಜನಿಗೂ ಈ ವಿಷಯಗಳನ್ನು ತಿಳಿಸು.
ಏವಂ ಶ್ರುತ್ವಾಽಶ್ರುಪೂರ್ಣಾಕ್ಷೀ ಪರ್ಣಾದಸ್ಯ ವಚಸ್ತದಾ |
ದಮಯಂತೀ ರಹೋಽಭ್ಯೇತ್ಯ ಮಾತರಂ ಪ್ರತ್ಯಭಾಷತ ||14||
ಹೀಗೆ ಪರ್ಣಾದನ ಈ ಮಾತುಗಳನ್ನು ಕೇಳಿದ ದಮಯಂತಿಯು ಕಣ್ಣುತುಂಬಾ ನೀರನ್ನು ತುಂಬಿಕೊಂಡು ಏಕಾಂತದಲ್ಲಿ ತಾಯಿಯನ್ನು ಸಮೀಪಿಸಿ ಮಾತನಾಡಿದಳು.
ದಮಯಂತೀ
ಅಯಮರ್ಥೋ ನ ಸಂವೇದ್ಯಃ ಪಿತ್ರೇ ಮಾತಃ ಕಥಂಚನ |
ತ್ವತ್ಸನ್ನಿಧೌ ಸಮಾದೇಕ್ಷ್ಯೇ ಸುದೇವಂ ದ್ವಿಜಸತ್ತಮಮ್ ||15||

ತಾಯಿಯೇ ಈ ವಿಷಯವನ್ನು ರಾಜನಿಗೆ ಹೇಳಬಾರದು ನಿನ್ನ ಸನ್ನಿಧಿಯಲ್ಲಿ ದ್ವಿಜಶ್ರೇಷ್ಠನಾದ ಸುದೇವನಿಗೆ ನಾನು ಒಂದು ಆದೇಶವನ್ನು ನೀಡುವೆನು.
ಯಥಾ ನ ನೃಪತಿರ್ಭೀಮಃ ಪ್ರತಿಪದ್ಯೇತ ಮೇ ಮತಮ್ |
ತಥಾ ತ್ವಯಾ ಚ ಕರ್ತವ್ಯಂ ಮಮ ಚೇದಿಚ್ಛಸಿ ಪ್ರಿಯಮ್ ॥16॥
ನನಗೆ ನೀನು ಪ್ರಿಯವಾದುದನ್ನು ಬಯಸುವುದಾದರೆ ನನ್ನ ಈ ಸೂಚನೆಯನ್ನು ರಾಜನಾದ ಭೀಮನು ತಿಳಿಯದಂತೆ ನೀನು ಮಾಡಬೇಕು.
ಯಥಾ ಚಾಹಂ ಸಮಾನೀತಾ ಸುದೇವೇನೇಹ ಬಾಂಧವಾನ್ |
ತೇನೈವ ಮಂಗಲೇನ ಶ್ವಃ ಸುದೇವೋ ಯಾತು ಮಾಚಿರಮ್ ॥17॥
ಸಮಾನೇತುಂ ನಳಂ ಮಾತರಯೋಧ್ಯಾಂ ನಗರೀಂ ಪ್ರತಿ |
ಋತುಪರ್ಣಸ್ಯ ಭವನೇ ನಿವಸಂತಮರಿಂದಮಮ್ ॥18॥
ಯಾವ ರೀತಿಯಲ್ಲಿ ನಾನು ಸುದೇವನಿಂದ ಬಾಂಧವರ ಬಳಿಗೆ ಇಲ್ಲಿಗೆ ಕರೆತರಲ್ಪಟ್ಟೆನೋ ಅದೇ ಮಂಗಳದಿಂದ ಸುದೇವನು ಶೀಘ್ರವಾಗಿ ಋತುಪರ್ಣನ ಮನೆಯಲ್ಲಿ ವಾಸಿಸುತ್ತಿರುವ ಅರಿಂದಮನಾದ ನಳನನ್ನು ಕರೆತರಲು ಅಯೋಧ್ಯಾನಗರಕ್ಕೆ ಹೋಗಲಿ.
ವಿಶ್ರಾಂತಂ ತು ತತಃ ಪಶ್ಚಾತ್ ಪರ್ಣಾದಂ ದ್ವಿಜಸತ್ತಮಮ್ |
ಅರ್ಚಯಾಮಾಸ ವೈದರ್ಭೀ ಧನೇನಾತೀವ ಭಾಮಿನೀ ॥19॥
ಅನಂತರ ದ್ವಿಜಶ್ರೇಷ್ಠನಾದ ಪರ್ಣಾದನು ವಿಶ್ರಾಂತಿಯನ್ನು ಪಡೆದಮೇಲೆ ಭಾಮಿನಿಯಾದ ದಮಯಂತಿಯು ಅವನನ್ನು ಬಹಳ ಧನಗಳಿಂದ ಸತ್ಕರಿಸಿದಳು.
ನಳೇ ಚೇಹಾಗತೇ ವಿಪ್ರ ಭೂಯೋ ದಾಸ್ಯಾಮಿ ತೇ ವಸು |
ತ್ವಯಾ ಹಿ ಮೇ ಬಹುಕೃತಂ ಯಥಾ ನಾನ್ಯಃ ಕರಿಷ್ಯತಿ ॥20॥
ಯದ್ಭರ್ತ್ರಾಽಹಂ ಸಮೇಷ್ಯಾಮಿ ಶೀಘ್ರಮೇವ ದ್ವಿಜೋತ್ತಮ ॥21॥
ಬ್ರಾಹ್ಮಣರೇ, ನಳನು ಇಲ್ಲಿಗೆ ಬಂದಮೇಲೆ ಪುನಃ ನಿಮಗೆ ಇನ್ನೂ ಹೆಚ್ಚು ಧನವನ್ನು ಕೊಡುವೆನು. ಯಾರೂಮಾಡದಿದ್ದ ಉಪಕಾರವನ್ನು ನೀವು ನನಗೆ ಮಾಡಿದ್ದೀರಿ. ದ್ವಿಜೋತ್ತಮರೇ, ನಿಮ್ಮ ಅನುಗ್ರಹದಿಂದ ನಾನು ಶೀಘ್ರವಾಗಿ ನನ್ನ ಪತಿಯ ಜೊತೆಯಲ್ಲಿ ಸಮಾಗಮವನ್ನು ಹೊಂದುವೆನು.
ಸ ಏವಮುಕ್ತಶ್ಚಾಶ್ವಾಸ್ಯ ಹ್ಯಾಶೀರ್ವಾದೈಃ ಸಮಂಗಳೈಃ |
ಗೃಹಾನಥ ಯಯೌ ಸೋಽಪಿ ಕೃತಾರ್ಥಶ್ಚ ಮಹಾಮನಾಃ ॥22॥
ಹೀಗೆ ದಮಯಂತಿಯಿಂದ ಹೇಳಲ್ಪಟ್ಟ ಪರ್ಣಾದನು ಅವಳನ್ನು ಅನೇಕ ಮಂಗಳ ಆಶೀರ್ವಾದಗಳಿಂದ ಸಮಾಧಾನಪಡಿಸಿ ಕೃತಾರ್ಥನಾಗಿ ಸಂತೋಷದಿಂದ ತನ್ನ ಮನೆಗೆ ಹಿಂದಿರುಗಿದನು.
ತತಃ ಸುದೇವಮಾನಾಯ್ಯ ದಮಯಂತೀ ಯುಧಿಷ್ಠಿರ |
ಅಬ್ರವೀತ್ ಸನ್ನಿಧೌ ಮಾತುರ್ದುಃಖಶೋಕಸಮನ್ವಿತಾ ॥23॥
ಎಲೈ ಯುಧಿಷ್ಠಿರನೇ, ಅನಂತರ ದಮಯಂತಿಯು ಸುದೇವನನ್ನು ಕರೆಸಿ ತಾಯಿಯ ಸನ್ನಿಧಿಯಲ್ಲಿ ದುಃಖಶೋಕಸಮನ್ವಿತಳಾಗಿ ಈ ಮಾತನ್ನು ಆಡಿದಳು.
ಗತ್ವಾ ಸುದೇವ ನಗರೀಮಯೋಧ್ಯಾವಾಸಿನಂ ನೃಪಮ್ |
ಋತುಪರ್ಣಂ ವಚೋ ಬ್ರೂಹಿ ಪತಿಮನ್ಯಂ ಚಿಕೀರ್ಷತೀ ॥24॥
ಆಸ್ಥಾಸ್ಯತಿ ಪುನರ್ಭೈಮೀ ದಮಯಂತೀ ಸ್ವಯಂವರಮ್ |
ತತ್ರ ಗಚ್ಛಂತಿ ರಾಜಾನೋ ರಾಜಪುತ್ರಾಶ್ಚ ಸರ್ವಶಃ ॥25॥
ಎಲೈ ಸುದೇವನೇ, ಅಯೊಧ್ಯಾನಗರಿಗೆ ಹೋಗಿ ಅಲ್ಲಿವಾಸಿಸುವ ಋತುಪರ್ಣರಾಜನಿಗೆ ಹೀಗೆ ಹೇಳು. ದಮಯಂತಿಯು ಇನ್ನೊಬ್ಬ ಪತಿಯನ್ನು ಹೊಂದಲು ಬಯಸುತ್ತಿದ್ದಾಳೆ. ಆ ಕಾರಣದಿಂದ ಪುನಃ ದಮಯಂತಿಯು ಸ್ವಯಂವರವನ್ನು ಮಾಡಿಕೊಳ್ಳುತ್ತಿದ್ದಾಳೆ. ಅಲ್ಲಿಗೆ ಎಲ್ಲಾ ರಾಜರೂ ಮತ್ತು ರಾಜಕುಮಾರರೂ ಬರುತ್ತಿದ್ದಾರೆ.
ತಥಾ ಚ ಗಣಿತಃ ಕಾಲಃ ಶ್ವೋಭೂತೇ ಸ ಭವಿಷ್ಯತಿ |
ಯದಿ ಸಂಭಾವನೀಯೂ ತೇ ಗಚ್ಛ ಶೀಘ್ರಮರಿಂದಮ ॥26॥
ಸ್ವಯಂವರಕ್ಕಾಗಿ ನಿರ್ದಿಷ್ಟವಾದ ಕಾಲವು ನಾಳೆಯ ಪ್ರಾತಃಕಾಲದಲ್ಲಿ ಇದೆ. ಅರಿಂದಮನೆ ನಿನಗೆ ಅವಳ ಮೇಲೆ ಏನಾದರೂ ಆಸೆಯಿದ್ದರೆ ನೀನು ಶೀಘ್ರವಾಗಿ ಹೋಗು.
ಸೂರ್ಯೋದಯೇ ದ್ವಿತೀಯಂ ಸಾ ಭರ್ತಾರಂ ವರಯಿಷ್ಯತಿ |
ನ ಹಿ ಸ ಜ್ಞಾಯತೇ ವೀರೋ ನಳೋ ಜೀವನ್ಮೃತೋಽಪಿ ವಾ ॥27॥
ನಾಳೆ ಸೂರ್ಯೋದಯಕ್ಕೆ ಸರಿಯಾಗಿ ಅವಳು ಇನ್ನೊಬ್ಬ ಪತಿಯನ್ನು ವರಿಸುವಳು. ವೀರನಾದ ನಳನು ಜೀವಿಸಿದ್ದಾನೆಯೋ ಇಲ್ಲವೋ ಎಂದು ತಿಳಿಯುವುದಿಲ್ಲ.
ಏವಂ ತಯಾ ಯಥೋಕ್ತಂ ವೈ ಗತ್ವಾ ರಾಜಾನಮಬ್ರವೀತ್ |
ಋತುಪರ್ಣಂ ಮಹಾರಾಜ ಸುದೇವೋ ಬ್ರಾಹ್ಮಣಸ್ತದಾ ॥28॥
ಎಲೈ ಮಹಾರಾಜನೇ ಹೀಗೆ ದಮಯಂತಿಯಿಂದ ಹೇಳಲ್ಪಟ್ಟ ಆ ಬ್ರಾಹ್ಮಣನು ಋತುಪರ್ಣನ ಸಮೀಪಕ್ಕೆ ಹೋಗಿ ರಾಜನನ್ನು ಕುರಿತು ಎಲ್ಲವನ್ನೂ ಹಾಗೆಯೇ ನಿವೇದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥

॥ ತೀರ್ಥಯಾತ್ರಾಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಅರವತ್ತೈದನೆಯ ಅಧ್ಯಾಯ
(ಸುದೇವನ ಮಾತುಗಳನ್ನು ಕೇಳಿ ನಳಸಾರಥ್ಯದಲ್ಲಿ ಋತುಪರ್ಣನಿಂದ ವಿದರ್ಭದೇಶಕ್ಕೆ ಆಗಮನ.)
ಬೃಹದಶ್ವಃ
ಶ್ರುತ್ವಾ ವಚಃ ಸುದೇವಸ್ಯ ಋತುಪರ್ಣೋ ಜನಾಧಿಪಃ |
ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಬಾಹುಕಂ ಪ್ರತ್ಯಭಾಷತ ॥1॥
ಸುದೇವನ ಮಾತುಗಳನ್ನು ಕೇಳಿ ರಾಜನಾದ ಋತುಪರ್ಣನು ಮಧುರವಾದ ಮಾತುಗಳಿಂದ ಬಾಹುಕನನ್ನು ಸಮಾಧಾನಪಡಿಸುತ್ತಾ ಅವನನ್ನು ಕುರಿತು ಮಾತನಾಡಿದನು.
ವಿದರ್ಭಾನ್ ಯಾತುಮಿಚ್ಛಾಮಿ ದಮಯಂತ್ಯಾಃ ಸ್ವಯಂವರಮ್ |
ಏಕಾಹ್ನಾ ಹಯತತ್ತ್ವಜ್ಞ ಮನ್ಯಸೇ ಯದಿ ಬಾಹುಕ ॥2॥
ಅಶ್ವವಿದ್ಯೆಯನ್ನು ಹೊಂದಿದ ಎಲೈ ಬಾಹುಕನೇ ನಿನ್ನ ಸಹಾಯವಿದ್ದರೆ ನಾನು ದಮಯಂತಿಯ ಸ್ವಯಂವರಕ್ಕಾಗಿ ಒಂದೇ ದಿನದಲ್ಲಿ ವಿದರ್ಭದೇಶಕ್ಕೆ ಹೋಗಲು ಬಯಸುತ್ತೇನೆ.
ಏವಮುಕ್ತಸ್ಯ ಕೌಂತೇಯ ತೇನ ರಾಜ್ಞಾ ನಳಸ್ಯ ಹ |
ವ್ಯದೀರ್ಯತ ಮನೋ ದುಃಖಾತ್ ಪ್ರದಧ್ಯೌ ಚ ಮಹಾಯಶಾಃ ॥3॥
ಎಲೈ ಕೌಂತೇಯನೇ ರಾಜನಿಂದ ಹೀಗೆ ಹೇಳಲ್ಪಟ್ಟ ನಳನ ಹೃದಯವು ದುಃಖದಿಂದ ಬಿರಿಯಿತು. ಮಹಾಕೀರ್ತಿಶಾಲಿಯಾದ ಅವನು ಚಿಂತಿಸಿದನು.
ನಳಃ
ದಮಯಂತೀ ಭವೇದೇತತ್ ಕುರ್ಯಾದ್ ದುಃಖೇನ ಮೋಹಿತಾ |
ಅಸ್ಮದರ್ಥಂ ಭವೇದ್ವಾಽಯಮುಪಾಯಶ್ಚಿಂತಿತೋ ಮಹಾನ್ ॥4॥
ಇದೇನು? ದುಃಖದಿಂದ ಮೋಹಿತಳಾಗಿ ದಮಯಂತಿಯು ಇಂತಹ ಕಾರ್ಯವನ್ನು ಮಾಡುತ್ತಾಳೆಯೇ? ಅಥವಾ ನನ್ನನ್ನು ಹೊಂದಲು ಅವಳು ಮಾಡಿದ ದೊಡ್ಡ ಉಪಾಯವಿರಬಹುದೆ?
ನೃಶಂಸಂ ಸಾ ತು ವೈದರ್ಭೀ ಕರ್ತುಕಾಮಾ ಯಶಸ್ವಿನೀ |
ಮಯಾ ಕ್ಷುದ್ರೇಣ ನಿಕೃತಾ ಪಾಪೇನಾಕೃತಬುದ್ಧಿನಾ |
ಸ್ತ್ರೀಸ್ವಭಾವಶ್ಚಲೋ ಲೋಕೇ ಮಮ ದೋಷಶ್ಚ ದಾರುಣಃ ॥5॥
ಕೀರ್ತಿಶಾಲಿನಿಯಾದ ವಿದರ್ಭರಾಜಕುಮಾರಿಯಾದ ದಮಯಂತಿಯು ಕ್ಷುದ್ರನಾದ ಪಾಪಿಯಾದ ಮತ್ತು ಬುದ್ಧಿಹೀನನಾದ ನನ್ನಿಂದ ವಂಚನೆಗೆ ಒಳಗಾಗಿ ಇಂತಹ ಕ್ರೂರವಾದ ಕರ್ಮವನ್ನು ಮಾಡುತ್ತಾಳೆಯೇ? ಲೋಕದಲ್ಲಿ ಸ್ತ್ರೀಯರ ಸ್ವಭಾವವು ಚಂಚಲವಾದುದು ಮತ್ತು ನನ್ನ ಅಪರಾಧವು ಘೋರವಾದುದು.
ಸ್ಯಾದೇವಮಪಿ ಕುರ್ಯಾತ್ ಸಾ ವಿವಶಾ ಗತಸೌಹೃದಾ |
ಮಮ ದೋಷೇಣ ಸಂವಿಗ್ನಾ ನೈರಾಶ್ಯಾತ್ ತನುಮಧ್ಯಮಾ ॥6॥
ನ ಚೈವಂ ಕರ್ಹಿಚಿತ್ ಕುರ್ಯಾತ್ ಸಾಪತ್ಯಾ ಚ ವಿಶೇಷತಃ ॥7॥
ಇರಬಹುದು. ನನ್ನ ಅಪರಾಧದಿಂದ ಸಂವಿಗ್ನಳಾದ ಆ ಸುಂದರಿಯು ನಿರಾಶೆಯನ್ನು ಹೊಂದಿದವಳಾಗಿ ನನ್ನಲ್ಲಿ ಸ್ನೇಹವನ್ನು ಕಳೆದುಕೊಂಡು ವಿವಶಳಾಗಿ ಹೀಗೆಯೂ ಮಾಡಬಹುದು. ಆದರೆ ಮಕ್ಕಳನ್ನು ಹೊಂದಿದವಳು ವಿಶೇಷವಾಗಿ ಈ ರೀತಿಯಿಂದ ಯಾವ ಕಾರಣದಿಂದಲೂ ಮಾಡದೆಯೂ ಇರಬಹುದು.
ಯದತ್ರ ತಥ್ಯಂ ಚ ಪುನರ್ಗತ್ವಾ ವೇತ್ಸ್ಯಾಮಿ ನಿಶ್ಚಯಮ್ |
ಋತುಪರ್ಣಸ್ಯ ವೈ ಕಾಮಮಾತ್ಮಾರ್ಥಂ ಚ ಕರೋಮ್ಯಹಮ್ ॥8॥
ಇವೆರಡರಲ್ಲಿ ಯಾವುದು ನಿಜವೆಂದು ಅಲ್ಲಿಗೆ ಹೋಗಿಯೇ ನಿಶ್ಚಯವನ್ನು ಮಾಡುವೆನು. ನನ್ನ ಸ್ವಾರ್ಥದ ಸಲುವಾಗಿ ಋತುಪರ್ಣನ ಈ ಆಸೆಯನ್ನು ಈಡೇರಿಸುತ್ತೇನೆ.
ಇತಿ ನಿಶ್ಚಿತ್ಯ ಮನಸಾ ಬಾಹುಕೋ ದೀನಮಾನಸಃ |
ಕೃತಾಂಜಲಿರುವಾಚೇದಮೃತುಪರ್ಣಂ ನರಾಧಿಪಮ್ ॥9॥
ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿ ದೀನಮನಸ್ಸಿನಿಂದ ಕೂಡಿದಬಾಹುಕನು ಕೈಗಳನ್ನು ಮುಗಿದು ಋತುಪರ್ಣರಾಜನನ್ನು ಕುರಿತು ಹೀಗೆ ಮಾತನಾಡಿದನು.
ಪ್ರತಿಜಾನಾಮಿ ತೇ ಸತ್ಯಂ ಗಮಿಷ್ಯಸಿ ನರಾಧಿಪ |
ಏಕಾಹ್ನಾ ಪುರುಷವ್ಯಾಘ್ರ ವಿದರ್ಭನಗರೀಂ ಧ್ರುವಮ್ ॥10॥
ಎಲೈ ರಾಜನೇ, ನೀನು ಒಂದೇದಿನದಲ್ಲಿ ವಿದರ್ಭನಗರಕ್ಕೆ ಖಂಡಿತವಾಗಿ ಹೋಗುವಿ. ಪುರುಷವ್ಯಾಘ್ರನೇ, ಇದನ್ನು ನಾನು ಪ್ರಮಾಣಮಾಡಿ ಹೇಳುತ್ತಿದೇನೆ.
ಏವಮುಕ್ತೋಽಬ್ರವೀದ್ ರಾಜಾ ಬಾಹುಕಂ ಹೃಷ್ಟಮಾನಸಃ |
ಯದ್ಯೇವಂ ಭವಿತಾ ಶ್ವೋ ವೈ ಕಂ ತೇ ಕಾಮಂ ಕರೋಮ್ಯಹಮ್ |
ಪ್ರತಿಗೃಹ್ಣಾಮಿ ತೇ ವಾಕ್ಯಂ ಸರ್ವಂ ಕಾಮಂ ಕರೋಮ್ಯಹಮ್ ॥11॥

ಹೀಗೆ ಹೇಳಲ್ಪಟ್ಟರಾಜನು ಮನಸ್ಸಿನಲ್ಲಿ ಸಂತೋಷವನ್ನು ಹೊಂದಿದವನಾಗಿ ಬಾಹುಕನನ್ನು ಕುರಿತು ನೀನು ಹೇಳಿದಂತೆಯೇ ನಾಳೆ ನಡೆಯುವುದಾದರೆ ನಿನ್ನ ಯಾವ ಇಚ್ಛೆಯನ್ನು ನಾನು ಪೂರೈಸಲಿ? ನಿನ್ನ ಮಾತನ್ನು ನಾನು ಸ್ವೀಕರಿಸುತ್ತೇನೆ (ನಂಬುತೆತೇನೆ) ನಿನಗೆ ಅಪೇಕ್ಷಿತವಾದುದೆಲ್ಲವನ್ನೂ ಕೊಡುತ್ತೇನೆ ಎಂದು ಹೇಳಿದನು.
ತತಃ ಪರೀಕ್ಷಾ ಮಶ್ವಾನಾಂ ಚಕ್ರೇ ರಾಜ್ಞಃ ಸ ಬಾಹುಕಃ|
ಅಶ್ವಶಾಲಾಮುಪಾಗಮ್ಯ ಭಾರ್ಗಸ್ವರಿನೃಪಾಜ್ಞಯಾ ॥12॥
ಆಗ ಋತುಪರ್ಣನ ಆಜ್ಞೆಯಿಂದ ಬಾಹುಕನು ಅಶ್ವಶಾಲೆಗೆ ಹೋಗಿ ರಾಜನ ಅಶ್ವಗಳ ಪರೀಕ್ಷೆಯನ್ನು ಮಾಡಿದನು.
ಸ ತ್ವರ್ಯಮಾಣೋ ಬಹುಶ ಋತುಪರ್ಣೇನ ಬಾಹುಕಃ|
ಅಧ್ಯಗಚ್ಛತ್ ಕೃಶಾನಶ್ವಾನ್ ಸುವೇಗಾನಧ್ವನಿ ಕ್ಷಮಾನ್ ॥13॥
ಅನೇಕಬಾರಿ ಋತುಪರ್ಣನಿಂದ ತ್ವರೆಮಾಡಲ್ಪಡುತ್ತಿದ್ದ ಆ ಬಾಹುಕನು ಅಲ್ಲಿದ್ದ ಕೃಶವಾದ ಅಶ್ವಗಳನ್ನು ಒಳ್ಳೆಯವೇಗವುಳ್ಳವುಗಳೆಂದೂ ದೂರದಾರಿಯನ್ನು ಹೋಗುವ ಸಾಮರ್ಥ್ಯವುಳ್ಳವುಗಳೆಂದೂ ನಿಶ್ಚಯಿಸಿದನು.
ತೇಜೋಬಲಸಮಾಯುಕ್ತಾನ್ ಕುಲಶೀಲಸಮನ್ವಿತಾನ್|
ವರ್ಜಿತಾಂಲ್ಲಕ್ಷಣೈರ್ಹೀನೈಃ ಪೃಥುಪ್ರೋಥಾನ್ ಮಹಾಹನೂನ್ ॥14॥
ಶುದ್ಧಾನ್ ದಶಭಿರಾವರ್ತೈಃ ಸಿಂಧುಜಾನ್ ವಾತರಂಹಸಃ|
ದೃಶ್ಯಮಾನಾನ್ ಕೃಶಾನಂಗೈರ್ಜವೇನಾಪ್ರತಿಮಾನ್ ಪಥಿ ॥15॥
ತೇಜೋಬಲಸಮಾಯುಕ್ತವಾದ ಕುಲಶೀಲಗಳಿಂದ ಕೂಡಿದ ಹೀನಲಕ್ಷಣಗಳಿಂದ ರಹಿತವಾದ ವಿಸ್ತಾರವಾದ ಕಟಿಯನ್ನು ಮತ್ತು ದೊಡ್ಡ ಹನುವನ್ನು ಹೊಂದಿದ ಹತ್ತು ಸುಳಿಗಳಿಂದಕೂಡಿದ ಸಿಂಧುದೇಶದ ವಾತವೇಗವುಳ್ಳ ಶುದ್ಧವಾದ ಅಂಗಗಳು ಕೃಶವಾದರೂ ವೇಗದಲ್ಲಿಯೂ ಮತ್ತು ಮಾರ್ಗದಲ್ಲಿಯೂ ಅಸದೃಶವಾದ ಕುದುರೆಗಳನ್ನು ಆರಿಸಿದನು.
ದೃಷ್ಟ್ವಾ ತಾನಬ್ರವೀದ್ ರಾಜಾ ಕಿಂಚಿತ್ ಕೋಪಸಮಾನ್ವಿತಃ|
ಕಿಮಿದಂ ಪ್ರಾರ್ಥಿತಂ ಕರ್ತುಂ ಪ್ರಲಬ್ಧವ್ಯಾ ಹಿ ತೇ ವಯಮ್ ॥16॥
ಕಥಮಲ್ಪಬಲಪ್ರಾಣಾ ವಕ್ಷ್ಯಂತೀಮೇ ಹಯಾ ರಥಮ್|
ಮಹಾಂತಮಪಿ ಚಾಧ್ವಾನಂ ಗಂತವ್ಯಂ ಕಥಮೀದೃಶೈಃ ॥17॥
ಅವುಗಳನ್ನು ನೋಡಿದ ರಾಜನು ಸ್ವಲ್ಪಕೋಪದಿಂದ ಕೂಡಿದವನಾಗಿ ನೀನು ಏನು ಮಾಡಲು ಹೊರಟಿರುವೆ? ನನಗೆ ಮೋಸಮಾಡಲು ಉದ್ಯುಕ್ತನಾಗಿಲ್ಲವಷ್ಟೇ? ಅಲ್ಪಬಲಪ್ರಾಣವುಳ್ಳ ಈ ಕುದುರೆಗಳು ಬಹಳ ದೂರ ಹೇಗೆ ರಥವನ್ನು ಹೊರುತ್ತವೆ? ಇಂತಹ ಕುದುರೆಗಳು ದೀರ್ಘವಾದ ಮಾರ್ಗವನ್ನು ಹೇಗೆ ಪ್ರಯಾಣಮಾಡುತ್ತವೆ? ಎಂದು ಕೇಳಿದನು.
ಬಾಹುಕಃ
ಏತೇ ಹಯಾ ಗಮಿಷ್ಯಂತಿ ವಿದರ್ಭಾನ್ ನಾತ್ರ ಸಂಶಯಃ|
ಅಶ್ವಾನ್ಯಾನ್ ಮನ್ಯಸೇ ರಾಜನ್ ಬ್ರೂಹಿ ತಾನ್ ಯೋಜಯಾಮಿ ತೇ ॥
ಈ ಅಶ್ವಗಳು ವಿದರ್ಭವನ್ನು ತಲುಪುತ್ತವೆ ಇದರಲ್ಲಿ ಸಂಶಯವಿಲ್ಲ. ರಾಜನೇ ಇಲ್ಲದಿದ್ದರೆ ಯಾವ ಅಶ್ವಗಳು ನಿನಗೆ ಸರಿಯಾಗಿ ತೋರುತ್ತವೆ ಎಂದು ಹೇಳು ಅವುಗಳನ್ನೇ ರಥಕ್ಕೆ ಹೂಡುತ್ತೇನೆ.
ತ್ವಮೇವ ಹಯತತ್ತ್ವಜ್ಞಃ ಕುಶಲಶ್ಚಾಸಿ ಬಾಹುಕ|
ಯಾನ್ ಮನ್ಯಸೇ ಸಮರ್ಥಾನ್ ತ್ವಂ ಕ್ಷಿಪ್ರಂ ತಾನೇವ ಯೋಜಯ ॥
ನೀನೇ ಹಯತತ್ವವನ್ನು ತಿಳಿದವನೂ ಕುಶಲನೂ ಆಗಿದ್ದೀಯೆ. ಬಾಹುಕನೇ, ಯಾವ ಅಶ್ವಗಳು ಸಮರ್ಥವಾಗಿವೆಯೆಂದು ನೀನು ಭಾವಿಸುವಿಯೋ ಅವುಗಳನ್ನು ಬೇಗ ರಥಕ್ಕೆ ಹೂಡು ಎಂದು ಋತುಪರ್ಣನು ಹೇಳಿದನು.
ತತಸ್ಸದಶ್ವಾಂಶ್ಚತುರಃ ಕುಲಶೀಲಸಮನ್ವಿತಾನ್|
ಯೋಜಯಾಮಾಸ ಕುಶಲೋ ಜವಯುಕ್ತಾನ್ ರಥೇ ನಳಃ ॥20॥
ಆಗ ಕುಶಲನಾದ ನಳನು ಕುಲಶೀಲಸಮನ್ವಿತವಾದ ವೇಗಯುಕ್ತವಾದ ನಾಲ್ಕುಕುದುರೆಗಳನ್ನು ರಥದಲ್ಲಿ ಹೂಡಿದನು.
ತತೋ ಯುಕ್ತಂ ರಥಂ ರಾಜಾ ಸಮಾರೋಹತ್ ತ್ವರಾನ್ವಿತಃ|
ಅತಃ ಪರ್ಯಪತನ್ ರಾಜನ್ ಜಾನುಭಿಸ್ತೇ ಹಯೋತ್ತಮಾಃ ॥21॥
ಆಗ ರಾಜನು ತ್ವರೆಯಿಂದ ಹೂಡಿದ ರಥವನ್ನು ಏರಿದನು. ರಾಜನೇ ಆ ಶ್ರೇಷ್ಠವಾದ ಅಶ್ವಗಳು ತಮ್ಮ ಮಂಡಿಯಿಂದ ಭೂಮಿಯನ್ನು ಮುಟ್ಟುತ್ತಾ ನೆಗೆದವು.
ತತೋ ನರವರಃಶ್ರೀಮಾನ್ ನಳೋ ರಾಜಾ ವಿಶಾಂಪತೇ|
ಸಾಂತ್ವಯಾಮಾಸ ತಾನಶ್ವಾನ್ ತೇಜೋಬಲಸಮನ್ವಿತಾನ್ ॥22॥
ಎಲೈ ರಾಜನೇ, ಆಗ ಪುರುಷಶ್ರೇಷ್ಠನೂ ಶ್ರೀಮಂತನೂ ರಾಜನೂ ಆದ ನಳನು ತೇಜೋಬಲಸಮನ್ವಿತವಾದ ಆ ಕುದುರೆಗಳನ್ನು ಸಮಾಧಾನ ಪಡಿಸಿದನು.
ರಶ್ಮಿಭಿಶ್ಚ ಸಮುದ್ಯಮ್ಯ ನಳೋ ಯಾತುಮಿಯೇಷ ಸಃ|
ಸೂತಮಾರೋಪ್ಯ ವಾರ್ಷ್ಣೇಯಂ ಜವಮಾಸ್ಥಾಯ ವೈ ಪರಮ್॥23॥
ನಳನು ಕಡಿವಾಣಗಳನ್ನು ಹಿಡಿದು ವೃಷ್ಣಿಕುಲದಲ್ಲಿ ಜನಿಸಿದ ಇನ್ನೊಬ್ಬ ಮನುಷ್ಯನನ್ನು (ವಾರ್ಷ್ಣೇಯನನ್ನು) ಸೂತನನ್ನಾಗಿ ಮಾಡಿಕೊಂಡು ಶ್ರೇಷ್ಠವಾದ ಜವವನ್ನುಹೊಂದಿ ರಥವನ್ನು ನಡೆಸಲು ಉದ್ಯುಕ್ತನಾದನು.
ತೇ ಚೋದ್ಯಮಾನಾ ಬಹುಧಾ ಬಾಹುಕೇನ ಹಯೋತ್ತಮಾಃ|
ಸಮುತ್ಪೇತುರಿವಾಕಾಶಂ ರಥಿನಂ ಮೋಹಯಂತಿ ಚ ॥24॥

ಬಾಹುಕನಿಂದ ಅನೇಕರೀತಿಯಿಂದ ಪ್ರೇರಿಸಲ್ಪಟ್ಟ ಆ ಶ್ರೇಷ್ಠವಾದ ಅಶ್ವಗಳು ರಥಿಕನಾದ ಋತುಪರ್ಣನಿಗೆ ಮೋಹವನ್ನು ಉಂಟುಮಾಡುತ್ತಾ ಆಕಾಶದಲ್ಲಿ ನೆಗೆದಂತೆ ಓಡಿದವು.
ತಥಾ ತು ದೃಷ್ಟ್ವಾ ತಾನಶ್ವಾನ್ ವಹತೋ ವಾತರಂಹಸಃ |
ಅಯೋಧ್ಯಾಧಿಪತಿಃ ಶ್ರೀಮಾನ್ ವಿಸ್ಮಯಂ ಪರಮಂ ಯಯೌ ॥25॥
ಅಯೋಧ್ಯಾಧಿಪತಿಯಾದ ಶ್ರೀಮಂತನಾದ ಋತುಪರ್ಣನು ವಾಯುವೇಗದಿಂದ ಹಾಗೆ ರಥವನ್ನು ಎಳೆಯುವ ಆ ಅಶ್ವಗಳನ್ನು ನೋಡಿ ಬಹಳ ವಿಸ್ಮಯವನ್ನು ಹೊಂದಿದನು.
ರಥಘೋಷಂ ಚ ತಂ ಶ್ರುತ್ವಾ ಹಯಾನಾಂ ಗ್ರಹಣಂ ಚ ತತ್ |
ವಾರ್ಷ್ಣೇಯಶ್ಚಿಂತಯಾಮಾಸ ಬಾಹುಕಸ್ಯ ಹಯಜ್ಞತಾಮ್ ॥26॥
ರಥಘೋಷವನ್ನು ಕೇಳಿ ಮತ್ತು ಅಶ್ವಗಳ ಕಡಿವಾಣಗಳನ್ನು ಹಿಡಿಯುವ ಸಾಮಾರ್ಥ್ಯವನ್ನು ನೋಡಿ ವಾರ್ಷ್ಣೇಯನಾದ ಸೂತನು ಬಾಹುಕನ ಅಶ್ವವಿದ್ಯಾಪರಿಣತಿಯನ್ನು ಕುರಿತು ಚಿಂತಿಸಿದನು.
ಕಿಂ ನು ಸ್ಯಾನ್ಮಾತಲಿರಯಂ ದೇವರಾಜಸ್ಯ ಸಾರಥಿಃ |
ತಥಾ ಹಿ ಲಕ್ಷಣಂ ವೀರೇ ಬಾಹುಕೇ ದೃಶ್ಯತೇ ಮಹತ್ ॥27॥
ಇವನೇನು ದೇವರಾಜನಾದ ಇಂದ್ರನ ಮಾತಲಿಯೇ? ವೀರನಾದ ಈ ಬಾಹುಕನಲ್ಲಿ ಅಂತಹ ಲಕ್ಷಣವು ಕಂಡುಬರುತ್ತಿದೆ.
ಶಾಲಿಹೋತ್ರೋಽಪಿ ಕಿಂನು ಸ್ಯಾದ್ಧಯಾನಾಂ ಕುಲತತ್ತ್ವವಿತ್ |
ಮಾನುಷಂ ಪರಮಂ ಪ್ರಾಪ್ತೋ ವಪುಃ ಪರಮಶೋಭನಮ್ ॥28॥
ಅಥವಾ ಹಯಗಳ ಕುಲಗಳ ವಿಷಯದಲ್ಲಿ ಪರಿಣತನಾದ ಪರಮ ಶೋಭನವಾದ ಮನುಷ್ಯದೇಹವನ್ನು ಧರಿಸಿದ ಶಾಲಿಹೋತ್ರ ಋಷಿಯಿರಬಹುದೆ?
ಉತಾಹೋಸ್ವಿದ್ ಭವೇದ್ರಾಜಾ ನಳಃ ಪರಪುರಂಜಯಃ |
ಸೋಽಯಂ ನೃಪತಿರಾಯಾತ ಇತ್ಯೇವಂ ಸಮಚಿಂತಯತ್ ॥29॥
ಅಥವಾ ಇವನು ಪರಪುರಂಜಯನಾದ ನಳನಾಗಿ ಇಲ್ಲಿಗೆ ಬಂದಿರಬಹುದೆ ಎಂದೂ ಈ ರೀತಿಯಾಗಿ ಆಲೋಚಿಸಿದನು.
ಅಥವಾಽಯಂ ನಳಾದ್ ವೇದ ವಿದ್ಯಾಂ ತಾಮೇವ ಬಾಹುಕಃ |
ತುಲ್ಯಂ ಹಿ ಲಕ್ಷಯೇ ಜ್ಞಾನಂ ಬಾಹುಕಸ್ಯ ನಳಸ್ಯ ಚ ॥30॥
ಅಥವಾ ಈ ಬಾಹುಕನು ನಳನಿಂದ ಅವನು ತಿಳಿದಿರುವ ಅಶ್ವವಿದ್ಯೆಯನ್ನೇ ಸಂಪಾದಿಸಿದ್ದಾನೆಯೇ? ಬಾಹುಕ ಮತ್ತು ನಳ ಇವರಿಬ್ಬರ ಅಶ್ವಜ್ಞಾನವು ಸಮಾನವೆಂದು ತೋರುತ್ತಿದೆ.
ಅಪಿ ಚೇದಂ ವಚಸ್ತುಲ್ಯಮಸ್ಯ ಮನ್ಯೇ ನಳಸ್ಯ ಚ |
ನಾಯಂ ನಳೋ ಮಹಾವೀರ್ಯಃ ತದ್ವಿದ್ಯಶ್ಚ ಭವಿಷ್ಯತಿ ॥31॥
ಪ್ರಚ್ಛನ್ನಾ ಹಿ ಮಹಾತ್ಮಾನಃ ಚರಂತಿ ಪೃಥಿವೀಮಿಮಾಮ್ |
ದೈವೇನ ವಿಧಿನಾ ಯುಕ್ತಾಃ ಶಕ್ತಾಶ್ಚೈವ ವಿರೂಪಿಣಃ ॥32॥
ಮತ್ತು ಬಾಹುಕನು ಆಡುವ ಮಾತುಗಳೂ ಸಹ ನಳನಮಾತುಗಳಿಗೆ ಸಮಾನವಾಗಿವೆ. ಇವನು ಮಹಾಪರಾಕ್ರಮಿಯಾದ ನಳನಲ್ಲ. ಆದರೆ ನಳನ ವಿದ್ಯೆಯನ್ನು ಮಾತ್ರ ಹೊಂದಿದ್ದಾನೆ. ಮಹಾತ್ಮರು ದೈವವಿಧಿಗೆ ವಶರಾಗಿ ಶಕ್ತರಾಗಿದ್ದರೂ ಸಹ ವಿರೂಪವನ್ನು ಧರಿಸಿ ಈ ಭೂಮಿಯಲ್ಲಿ ಪ್ರಚ್ಛನ್ನರಾಗಿ ಸಂಚರಿಸುತ್ತಾರೆ.
ಭವೇತ್ತು ಮತಿಭೇದೋ ಮೇ ಗಾತ್ರವೈರೂಪ್ಯಕಂ ಪ್ರತಿ |
ಪ್ರಮಾಣಾತ್ ಪರಿಹೀನಸ್ತು ಭವೇದಿತಿ ಹಿ ಮೇ ಮತಿಃ ॥33॥
ವಯಃಪ್ರಮಾಣಂ ತತ್ತುಲ್ಯಂ ರೂಪೇಣ ತು ವಿಪರ್ಯಯಃ |
ನಳಂ ಸರ್ವಗುಣೈರ್ಯುಕ್ತಂ ಮನ್ಯೇ ಬಾಹುಕಮಂತತಃ ॥34॥
ಏವಂ ವಿಚಾರ್ಯ ಬಹುಶೋ ವಾರ್ಷ್ಣೇಯಃ ಪರ್ಯಚಿಂತಯತ್ |
ಹೃದಯೇನ ಮಹಾರಾಜ ಪುಣ್ಯಶ್ಲೋಕಸ್ಯ ಸಾರಥಿಃ ॥35॥
ಈ ಶರೀರದ ವ್ಯತ್ಯಾಸವನ್ನು ನೋಡಿ ನನಗೆ ಏನಾದರೂ ಬುದ್ಧಿಭೇದ ಉಂಟಾಗಿರಬಹುದು. ಇವನು ಪ್ರಮಾಣದಿಂದ ಹೀನನಾದ (ಎತ್ತರದಲ್ಲಿ ಕಡಿಮೆಯಾದ ) ನಳನೇ ಇರಬಹುದು ಎಂದು ನನ್ನ ಬುದ್ಧಿ. ವಯಸ್ಸಿನ ಪ್ರಮಾಣವು ನಳನ ವಯಸ್ಸಿಗೆ ಸಮಾನವಾಗಿದೆ. ರೂಪವು ಮಾತ್ರ ವಿಪರೀತವಾಗಿದೆ. ಎಷ್ಟು ಯೋಚಿಸಿದರೂ ಈ ಬಾಹುಕನನ್ನು ಸರ್ವಗುಣಯುಕ್ತನಾದ ನಳನೆಂದೇ ನಾನು ಭಾವಿಸುತ್ತೇನೆ. ಹೀಗೆ ಎಲೈ ಮಹಾರಾಜನೇ! ಪುಣ್ಯಶ್ಲೋಕನಾದ ಋತುಪರ್ಣನ ಸಾರಥಿಯಾದ ವಾರ್ಷ್ಣೇಯನು ಮನಸ್ಸಿನಲ್ಲಿಯೇ ಹೀಗೆ ಅನೇಕಬಾರಿ ವಿಚಾರಮಾಡಿದನು.
ಋತುಪರ್ಣಸ್ತು ದೃಷ್ಟ್ವೈವ ಬಾಹುಕಸ್ಯ ಹಯಜ್ಞತಾಮ್ |
ಚಿಂತಯನ್ ಮುಮುದೇ ವೀರಃ ಸಹವಾರ್ಷ್ಣೇಯಸಾರಥಿಃ ॥36॥
ವೀರನಾದ ಋತುಪರ್ಣನಾದರೋ ಬಾಹುಕನ ಅಶ್ವಕೌಶಲವನ್ನು ನೋಡಿಯೇ ಅವನ ವಿದ್ಯೆಯನ್ನು ಚಿಂತಿಸುತ್ತಾ ಆ ಸೂತ ಮತ್ತು ಸಾರಥಿಯ ಜೊತೆಯಲ್ಲಿ ಸಂತೋಷಪಟ್ಟನು.
ಬಲಂ ಶೌರ್ಯಂ ತಥೋತ್ಸಾಹಂ ಹಯಾನಾಂ ಗ್ರಹಣಂ ಚ ತತ್ |
ಪರಂ ಯತ್ನಂ ಚ ಸಂಪ್ರೇಕ್ಷ್ಯ ಪರಾಂ ಮುದಮವಾಪ ಸಃ ॥37॥
ಅವನು ಬಾಹುಕನ ಬಲವನ್ನೂ ಶೌರ್ಯವನ್ನೂ ಉತ್ಸಾಹವನ್ನೂ ಅಶ್ವಗಳನ್ನು ಹಿಡಿಯುವ ಶ್ರೇಷ್ಠವಾದ ಪ್ರಯತ್ನವನ್ನೂ ನೋಡಿ ಬಹಳ ಸಂತೋಷವನ್ನು ಹೊಂದಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
*****
ಅರವತ್ತಾರನೆಯ ಅಧ್ಯಾಯ
(ಬಾಹುಕನ ಸಾರಥ್ಯ. ಋತುಪರ್ಣನಿಂದ ಅಶ್ವಹೃದಯಪ್ರಾಪ್ತಿ. ನಳದೇಹದಿಂದ ಕಲಿಯ ನಿರ್ಗಮನ ನಳನ ಪ್ರಕೃತಿಸ್ಥಿತಿ.)
ಬೃಹದಶ್ವಃ
ಸ ನದೀಃ ಪರ್ವತಾಂಶ್ಚೈವ ವನಾನಿ ಚ ಸರಾಂಸಿ ಚ |
ಅತಿಚಕ್ರಾಮ ವೇಗೇನ ಖೇಚರಃ ಖೇ ಚರನ್ನಿವ ॥1॥
ಗಗನಚರನಾದವನು ಗಗನದಲ್ಲಿ ಸಂಚರಿಸುವಂತೆ ಬಾಹುಕನು ನದಿಗಳನ್ನು ಪರ್ವತಗಳನ್ನು ವನಗಳನ್ನು ಮತ್ತು ಸರೋವರಗಳನ್ನು ದಾಟಿ ಸಾಗಿದನು.
ತಥಾ ಪ್ರಯಾತೇ ತು ರಥೇ ತದಾ ಭಾರ್ಗಸ್ವರಿರ್ನೃಪಃ |
ಉತ್ತರೀಯಮಥಾಪಶ್ಯದ್ ಭ್ರಷ್ಟಂ ಪರಪುರಂಜಯಃ ॥2॥
ತತಃ ಸ ತ್ವರಮಾಣಸ್ತು ಪಟೇ ನಿಪತಿತೇ ತದಾ |
ಗೃಹೀಷ್ಯಾಮೀತಿ ತಂ ರಾಜನ್ ನಳಮಾಹ ಮಹಾಮನಾಃ ॥3॥
ರಥವು ಹಾಗೆ ಸಾಗುತ್ತಿರಲು ಆಗ ಪರಪುರಂಜಯನಾದ ಋತುಪರ್ಣರಾಜನು ತನ್ನ ಉತ್ತರೀಯವು ಬಿದ್ದು ಹೋದುದನ್ನು ಗಮನಿಸಿದನು. ಮಹಾಮನನಾದ ಅವನು ಉತ್ತರೀಯವು ಬಿದ್ದು ಹೋಗುತ್ತಿರಲು ಅದನ್ನು ತೆಗೆದುಕೊಳ್ಳುವೆನೆಂದು ತ್ವರೆಯಿಂದ ನಳನನ್ನು ಕುರಿತು ಹೇಳಿದನು.
ನಿಗೃಹ್ಣೀಷ್ವ ಮಹಾಬುದ್ಧೇ ಹಯಾನೇತಾನ್ ಮಹಾಜವಾನ್ |
ವಾರ್ಷ್ಣೇಯೋ ಯಾವದೇತನ್ಮೇ ಪಟಮಾನಯತಾಮಿತಿ ॥4॥
ಎಲೈ ಮಹಾಬುದ್ಧಿಯುಳ್ಳವನೇ, ಈ ಮಹಾವೇಗವನ್ನು ಹೊಂದಿರುವ ಅಶ್ವಗಳನ್ನು ನಿಲ್ಲಿಸು ಅಷ್ಟರಲ್ಲಿ ವಾರ್ಷ್ಣೇಯನು ನನ್ನ ಉತ್ತರೀಯವನ್ನು ತರಲಿ.
ನಳಸ್ತಂ ಪ್ರತ್ಯುವಾಚಾಥ ದೂರೇ ಭ್ರಷ್ಟಃ ಪಟಸ್ತವ |
ಯೋಜನಂ ಸಮತಿಕ್ರಾಂತೋ ನ ಚ ಶಕ್ಯಸ್ತ್ವಯಾ ಪುನಃ ॥5॥
ನಳನು ಅವನನ್ನು ಕುರಿತು ನಿನ್ನ ಉತ್ತರೀಯವು ಬಹಳ ದೂರದಲ್ಲಿ ಬಿದ್ದುಹೋಯಿತು. ನಾವು ಅದನ್ನು ದಾಟಿ ಒಂದುಯೋಜನ ಬಂದಿದ್ದೇವೆ. ನೀನು ಅದನ್ನು ಪುನಃತೆಗೆದುಕೊಳ್ಳಲು ಸಾಧ್ಯವಿಲ್ಲ ಎಂದು ಉತ್ತರವನ್ನು ಕೊಟ್ಟನು.
ಏವಮುಕ್ತೋ ನಳೇನಾಥ ತಥಾ ಭಾರ್ಗಸ್ವರಿರ್ನೃಪಃ |
ಆಸಸಾದ ವನೇ ರಾಜನ್ ಫಲವಂತಂ ವಿಭೀತಕಮ್ ॥6॥
ನಳನಿಂದ ಹೀಗೆ ಹೇಳಲ್ಪಟ್ಟ ಋತುಪರ್ಣರಾಜನು ಮುಂದೆ ಹಣ್ಣುಗಳನ್ನು ಬಿಟ್ಟಿರುವ ಒಂದು ತಾರಿಯ ಮರವನ್ನು ಸಮೀಪಿಸಿದನು.
ತಂ ದೃಷ್ಟ್ವಾ ಬಾಹುಕಂ ರಾಜಾ ತ್ವರಮಾಣೋಽಭ್ಯಭಾಷತ |
ಮಮಾಪಿ ಸೂತ ಪಶ್ಯ ತ್ವಂ ಸಂಖ್ಯಾನೇ ಪರಮಂ ಬಲಮ್ ॥7॥
ಅದನ್ನು ನೋಡಿ ಆ ರಾಜನು ಶೀಘ್ರವಾಗಿ ಬಾಹುಕನನ್ನು ಕುರಿತು ಸೂತನೇ ಎಣಿಸುವುದರಲ್ಲಿ ನನ್ನ ಶ್ರೇಷ್ಠಸಾಮರ್ಥ್ಯವನ್ನು ನೋಡು ಎಂದು ಹೇಳಿದನು.
ಸರ್ವಃ ಸರ್ವಂ ನ ಜಾನಾತಿ ಸರ್ವಜ್ಞೋ ನಾಸ್ತಿ ಕಶ್ಚನ |
ನೈಕತ್ರ ಪರಿನಿಷ್ಠಾಽಸ್ತಿ ಜ್ಞಾನಸ್ಯ ಪುರುಷೇ ಕ್ವಚಿತ್ ॥8॥
ಎಲ್ಲರೂ ಎಲ್ಲವನ್ನೂ ತಿಳಿದಿರುವುದಿಲ್ಲ. ಯಾವನೂ ಸರ್ವಜ್ಞನಲ್ಲ. ಜ್ಞಾನವು ಯಾವುದೇ ಪುರುಷನಲ್ಲಿ ಪರಿಪೂರ್ಣವಾಗಿರುವುದಿಲ್ಲ.

ವೃಕ್ಷೇಽಸ್ಮಿನ್ ಯಾನಿ ಪರ್ಣಾನಿ ಫಲಾನ್ಯಪಿ ಚ ಬಾಹುಕ |
ಪತಿತಾನಿ ಚ ಯಾನ್ಯತ್ರ ತತ್ರೈಕಮಧಿಕಂ ಕೃತಮ್ ॥9॥
ಏಕಪತ್ರಾಧಿಕಂ ಪತ್ರಂ ಫಲಮೇಕಂ ಚ ಬಾಹುಕ |
ಪಂಚಕೋಟ್ಯೋಥ ಪತ್ರಾಣಾಂ ದ್ವಯೋರಪಿ ಚ ಶಾಖಯೋಃ ॥10॥
ಬಾಹುಕನೇ, ಈ ವೃಕ್ಷದಲ್ಲಿ ಎಷ್ಟು ಎಲೆಗಳು ಮತ್ತು ಫಲಗಳಿವೆಯೋ ಮತ್ತು ವೃಕ್ಷದಿಂದ ನೆಲದ ಮೇಲೆ ಎಷ್ಟು ಎಲೆಗಳು ಮತ್ತು ಫಲಗಳು ಬಿದ್ದಿವೆಯೋ ಅದರಲ್ಲಿ ನೆಲದಮೇಲೆ ಬಿದ್ದಿರುವುದಕ್ಕಿಂತ ವೃಕ್ಷದಲ್ಲಿ ಒಂದು ಪತ್ರವು ಮತ್ತು ಒಂದು ಫಲವೂ ಅಧಿಕವಾಗಿದೆ. ಈ ಎರಡು ಕೊಂಬೆಗಳಲ್ಲಿ ಒಟ್ಟು (ಐದುಕೋಟಿ ಪತ್ರಗಳಿವೆ)
ಪ್ರಚಿನುಹ್ಯಸ್ಯ ಶಾಖೇ ದ್ವೇ ಯಾಶ್ಚಾನ್ಯಾಃ ಪ್ರತಿಶಾಖಿಕಾಃ |
ಆಭ್ಯಾಂ ಫಲಸಹಸ್ರೇ ದ್ವೇ ಪಂಚಾನಾಂ ಶತಮೇವ ಚ |
ತತೋ ರಥಾದವಪ್ಲುತ್ಯ ರಾಜಾನಂ ಬಾಹುಕೋಽಬ್ರವೀತ್ ॥11॥
ಈ ಎರಡು ಶಾಖೆಗಳಲ್ಲಿ ಮತ್ತು ಅವುಗಳಿಗೆ ಇರುವ ರೆಂಬೆಗಳಲ್ಲಿ ಇರುವ ಫಲಗಳನ್ನು ಕಿತ್ತುಕೋ ಅವು ಒಟ್ಟು ಎರಡುಸಾವಿರದ ಐದುನೂರು ಫಲಗಳಾಗುತ್ತವೆ. (ಎಂದು ಹೇಳಿದನು.)
ಪರೋಕ್ಷಮಿವ ಮೇ ರಾಜನ್ ಕತ್ಥಸೇ ಶತ್ರುಕರ್ಶನ |

ಅಥ ತೇ ಗಣಿತೇ ರಾಜನ್ ವಿಜಾನಾಮ್ಯಪರೋಕ್ಷತಾಮ್ ॥12॥
ಆಗ ಬಾಹುಕನು ರಥದಿಂದ ಕೆಳಗೆ ಹಾರಿ ರಾಜನನ್ನು ಕುರಿತು ಹೇಳಿದನು ಶತ್ರುಕರ್ಶನನಾದ ರಾಜನೇ ನನಗೆ ಏನೂ ತಿಳಿಯುವುದಿಲ್ಲವೆಂಬಂತೆ ಮಾತನಾಡುತ್ತಿದ್ದೀಯೆ, ಈಗ ನಾನು ಆ ಫಲಗಳನ್ನು ಎಣಿಸಿ ಪ್ರತ್ಯಕ್ಷವಾಗಿ ತಿಳಿಯುತ್ತೇನೆ.
ಪ್ರತ್ಯಕ್ಷಂ ತೇ ಮಹಾರಾಜ ಗಣಯಿಷ್ಯೇ ವಿಭೀತಕಮ್ |
ಅಹಂ ಹಿ ನಾಭಿಜಾನಾಮಿ ಭವೇದೇವಂ ನವೇತಿ ಚ ॥13॥
ಮಹಾರಾಜನೇ ನೀನು ಹೇಳಿದುದು ಸರಿಯೋ ಅಲ್ಲವೋ ಎಂದು ನನಗೆ ತಿಳಿದಿಲ್ಲ. ನಿನ್ನ ಎದುರಿಗೆ ಆ ತಾರಿಯ ಫಲಗಳನ್ನು ಎಣಿಸುವೆನು.
ಸಂಖ್ಯಾಸ್ಯಾಮಿ ಫಲಾನ್ಯಸ್ಯ ಪಶ್ಯತಸ್ತೇ ಜನಾಧಿಪ |
ಮುಹೂರ್ತಮಿವ ವಾರ್ಷ್ಣೇಯೋ ರಶ್ಮೀನ್ ಯಚ್ಛತು ವಾಜಿನಾಮ್ ॥
ಎಲೈ ಜನಾಧಿಪನೇ, ನೀನು ನೋಡುತ್ತಿರುವಂತೆಯೇ ಈ ಕೊಂಬೆಯ ಫಲಗಳನ್ನು ಎಣಿಸುತ್ತೇನೆ. ಈ ವಾರ್ಷ್ಣೇಯನು ಒಂದು ಮುಹೂರ್ತಕಾಲ ಕುದುರೆಗಳ ಕಡಿವಾಣವನ್ನು ಹಿಡಿದುಕೊಂಡಿರಲಿ.
ತಮಬ್ರುವೀನ್ನೃಪಃ ಸೂತಂ ನಾಯಂ ಕಾಲೋ ವಿಲಂಬಿತುಮ್ |
ಬಾಹುಕಸ್ತ್ವಬ್ರುವೀದೇನಂ ಪರಂ ಯತ್ನಂ ಸಮಾಸ್ಥಿತಃ ॥15॥
ಪ್ರತೀಕ್ಷಸ್ವ ಮುಹೂರ್ತಂ ತ್ವಮಥವಾ ತ್ವರತೇ ಭವಾನ್ |
ಏಷ ಯಾತಿ ಶಿವಃ ಪಂಥಾ ಯಾಹಿ ವಾರ್ಷ್ಣೇಯಸಾರಥಿಃ ॥16॥
ಅವನನ್ನು ಕುರಿತು ರಾಜನು ಇದು ವಿಳಂಬಮಾಡುವುದಕ್ಕೆ ಸಮಯವಲ್ಲ ಎಂದು ಹೇಳಿದನು. ಬಾಹುಕನಾದರೋ ಅವನನ್ನು ಕುರಿತು ಮಹಾಪ್ರಯತ್ನವನ್ನು ಮಾಡುತ್ತಲೇ ಒಂದು ಮುಹೂರ್ತನಿರೀಕ್ಷಿಸು. ಇಲ್ಲದಿದ್ದರೆ ನೀನು ತ್ವರೆಮಾಡುತ್ತಿದ್ದೀಯೆ, ಈ ಮಂಗಳವಾದ ಮಾರ್ಗವು ಮುಂದೆ ಹೋಗುತ್ತದೆ. ವಾರ್ಷ್ಣೇಯನನ್ನು ಸಾರಥಿಯನ್ನಾಗಿ ಮಾಡಿಕೊಂಡು ಮುಂದೆಹೋಗು ಎಂದು ಹೇಳಿದನು.
ಬೃಹದಶ್ವಃ
ಅಬ್ರುವೀದೃತುಪರ್ಣಸ್ತಂ ಸಾಂತ್ವಯನ್ ಕುರುನಂದನ ॥17॥
ತ್ವಮೇವ ಯಂತಾ ನಾನ್ಯೋಽಸ್ತಿ ಪೃಥಿವ್ಯಾಮಪಿ ಬಾಹುಕ |
ತ್ವತ್ಕೃತೇ ಯಾತುಮಿಚ್ಛಾಮಿ ವಿದರ್ಭಾನ್ ಹಯಕೋವಿದ |
ಶರಣಂ ತ್ವಾಂ ಪ್ರಪನ್ನೋಽಸ್ಮಿ ನ ವಿಘ್ನಂ ಕರ್ತುಮರ್ಹಸಿ ॥18॥
ಕುರುನಂದನನನೇ, ಆಗ ಋತುಪರ್ಣನು ಅವನನ್ನು ಸಮಾಧಾನಪಡಿಸುತ್ತಾ ಬಾಹುಕನೇ ನೀನೇ ಶ್ರೇಷ್ಠನಾದ ಸಾರಥಿ. ನಿನ್ನಂತಹ ಇನ್ನೊಬ್ಬ ಸಾರಥಿಯು ಭೂಮಿಯಲ್ಲಿಲ್ಲ. ಅಶ್ವಕೋವಿದನೇ ನಿನ್ನ ನಿಮಿತ್ತದಿಂದ ನಾನು ವಿದರ್ಭವನ್ನು ಸೇರಲು ಬಯಸುತ್ತೇನೆ. ನಿನಗೆ ಶರಣಾಗತನಾಗಿದ್ದೇನೆ. ನನಗೆ ವಿಘ್ನವನ್ನು ಮಾಡಬೇಡ ಎಂದು ಹೇಳಿದನು.
ಕಾಮಂ ಚ ತೇ ಕರಿಷ್ಯಾಮಿ ಯನ್ಮಾಂ ವಕ್ಷ್ಯಸಿ ಬಾಹುಕ |
ವಿದರ್ಭಾನ್ ಯದಿ ಯಾತ್ವಾಽದ್ಯ ಸೂರ್ಯಂ ದರ್ಶಯಿತಾಸಿ ಮೇ ॥
ಬಾಹುಕನೇ, ನೀನು ಈ ದಿನ ಪ್ರಯಾಣವನ್ನುಮಾಡಿ ವಿದರ್ಭದೇಶದಲ್ಲಿ ನನಗೆ ಸೂರ್ಯಾಸ್ತದ ವೇಳೆಯಲ್ಲಿ ಸೂರ್ಯನನ್ನು ತೋರಿಸಿದರೆ ನೀನು ಕೇಳಿದ ಕಾಮವನ್ನು ನಿನಗೆ ಪೂರೈಸುವೆನು ಎಂದು ಹೇಳಿದನು.
ಅಥಾಬ್ರುವೀದ್‌ಬಾಹುಕಸ್ತಂ ಸಂಖ್ಯಾಯೇಮಂ ವಿಭೀತಕಮ್ |
ತತೋ ವಿದರ್ಭಾನ್ ಯಾಸ್ಯಾಮಿ ನತೇ ವಿಘ್ನೋ ಭವಿಷ್ಯತಿ ॥20॥
ಅಕಾಮ ಇವ ತಂ ರಾಜಾ ಗಣಯಸ್ವೇತ್ಯುವಾಚ ಹ ॥21॥
ಸೋಽವತೀರ್ಯ ರಥಾತ್ ತೂರ್ಣಂ ಗಣಯಾಮಾಸ ವೈ ದ್ರುತಮ್ |
ತತಃ ಸ ವಿಸ್ಮಯಾವಿಷ್ಟೋ ರಾಜಾನಮಿದಮಬ್ರುವೀತ್ ॥22॥
ಗಣಯಿತ್ವಾ ಯಥೋಕ್ತಾನಿ ತಾವಂತ್ಯೇವ ಫಲಾನಿ ತು |
ಅತ್ಯದ್ಭುತಮಿದಂ ರಾಜನ್ ದೃಷ್ಟವಾನಸ್ಮಿ ತೇ ಬಲಮ್ |
ಶ್ರೋತುಮಿಚ್ಛಾಮಿ ತಾಂ ವಿದ್ಯಾಂ ಯಯೈತಜ್‌ಜ್ಞಾಯತೇ ನೃಪ ॥23॥
ಆಗ ಬಾಹುಕನು ಅವನನ್ನು ಕುರಿತು ಈ ತಾರಿಯಫಲಗಳನ್ನು ಎಣಿಸಿ ಅನಂತರ ವಿದರ್ಭವನ್ನು ತಲುಪುವೆನು ನಿನಗೆ ವಿಘ್ನವುಂಟಾಗುವುದಿಲ್ಲ ಎಂದು ಹೇಳಿದನು. ರಾಜನು ಇಷ್ಟವಿಲ್ಲದೆಯೇ ಎಣಿಸು ಎಂದು ಹೇಳಿದನು. ಬಾಹುಕನು ಬೇಗ ರಥದಿಂದ ಇಳಿದು ಶೀಘ್ರವಾಗಿ ಎಣಿಸಿದನು. ಅನಂತರ ವಿಸ್ಮಯಾವಿಷ್ಟನಾದ ಆಬಾಹುಕನು ರಾಜನನ್ನು ಕುರಿತು ಹೀಗೆ ಹೇಳಿದನು. ಎಲೈ ರಾಜನೇ ನಾನು ಫಲಗಳನ್ನು ಎಣಿಸಿ ನೀನು ಹೇಳಿದಷ್ಟೇ ಇವೆ ಎಂದು ನೋಡಿ ಈ ನಿನ್ನ ಅತ್ಯದ್ಭುತವಾದ ಸಾಮರ್ಥ್ಯವನ್ನು ನೋಡುತ್ತಿದ್ದೇನೆ. ರಾಜನೇ ಯಾವ ವಿದ್ಯೆಯಿಂದ ಇದು ತಿಳಿಯುತ್ತದೆಯೋ ಅಂತಹ ವಿದ್ಯೆಯನ್ನು ನಿನ್ನಿಂದ ಉಪದೇಶಪಡೆಯಲು ಬಯಸುತ್ತೇನೆ.
ತಮುವಾಚ ತತೋ ರಾಜಾ ತ್ವರಿತೋ ಗಮನೇ ತದಾ |
ವಿದ್ಧ್ಯಕ್ಷಹೃದಯಜ್ಞಂ ಮಾಂ ಸಂಖ್ಯಾನೇ ಚ ವಿಶಾರದಮ್ ॥24॥
ಆಗ ರಾಜನು ಅವನಿಗೆ ತ್ವರೆಮಾಡುತ್ತಾ ನನ್ನನ್ನು ಅಕ್ಷವಿದ್ಯಾವಿಶಾರದನೆಂದೂ ಮತ್ತು ಸಂಖ್ಯಾವಿದ್ಯಾವಿಶಾರದನೆಂದೂ ತಿಳಿ ಎಂದು ಹೇಳಿದನು.
ಬಾಹುಕಸ್ತಮುವಾಚಾಥ ದೇಹಿ ವಿದ್ಯಾಮಿಮಾಂ ಮಮ |
ಮತ್ತೋಽಪಿ ಚಾಶ್ವಹೃದಯಂ ಗೃಹಾಣ ಪುರುಷರ್ಷಭ ॥25॥

ಋತುಪರ್ಣಸ್ತತೋ ರಾಜಾ ಬಾಹುಕಂ ಕಾರ್ಯಗೌರವಾತ್ |
ಹಯಜ್ಞಾನಸ್ಯ ಲೋಭಾಚ್ಚ ತಂ ತಥೇತ್ಯಬ್ರವೀದ್ ವಚಃ ॥26॥
ಆಗ ಬಾಹುಕನು ಅವನನ್ನು ಕುರಿತು ಎಲೈ ಪುರುಷರ್ಷಭನೇ ಈ ವಿದ್ಯೆಯನ್ನು ನನಗೆ ಕೊಡು ಮತ್ತು ನನ್ನಿಂದ ಅಶ್ವವಿದ್ಯೆಯನ್ನು ಸ್ವೀಕರಿಸು ಎಂದು ಹೇಳಿದನು. ಆಗ ಋತುಪರ್ಣನು ಕಾರ್ಯಗೌರವದಿಂದಲೂ ಮತ್ತು ಅಶ್ವವಿದ್ಯೆಯ ಮೇಲಿನ ಮಹದಾಸೆಯಿಂದಲೂ ಬಾಹುಕನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು.
ಯಥೋಕ್ತಂ ವೈ ಗೃಹಾಣೇದಮಕ್ಷಾಣಾಂ ಹೃದಯಂ ಪರಮ್ |
ನಿಕ್ಷೇಪೋ ಮೇಽಶ್ವಹೃದಯಂ ತ್ವಯಿ ತಿಷ್ಠತು ಬಾಹುಕ ॥27॥
ದದಾಮ್ಯೇಕಮನಾ ಭೂಯಾಃ ಶುಚಿಃ ಪುರುಷಸತ್ತಮ |
ಏವಮುಕ್ತ್ವಾ ದದೌ ವಿದ್ಯಾಮ್ ಋತುಪರ್ಣೋ ನಳಾಯ ವೈ ॥
ತಸ್ಯಾಕ್ಷಹೃದಯಜ್ಞಸ್ಯ ಶರೀರಾನ್ನಿಃಸೃತಃ ಕಲಿಃ |
ಕರ್ಕೋಟಕವಿಷಂ ತೀಕ್ಷ್ಣಂ ಮುಖಾತ್ ಸ ತು ಸಮುದ್ವಮನ್ ॥29॥
ಬಾಹುಕನೇ ನಾನು ಹೇಳಿದಂತೆ ಈ ಶ್ರೇಷ್ಠವಾದ ಅಕ್ಷಹೃದಯವನ್ನು ನನ್ನಿಂದ ಸ್ವೀಕರಿಸು. ಅಶ್ವಹೃದಯವು (ನನಗೆ ಕೊಡಬೇಕಾದ ಅಶ್ವವಿದ್ಯೆಯು) ಸದ್ಯಕ್ಕೆ ನಿನ್ನಲ್ಲಿ ನಿಕ್ಷೇಪವಾಗಿರಲಿ. ಪುರುಷಶ್ರೇಷ್ಠನೇ ಶುಚಿಯಾಗಿ ಏಕಾಗ್ರ ಮನಸ್ಸುಳ್ಳವನಾಗು. ನಿನಗೆ ವಿದ್ಯೆಯನ್ನು ಉಪದೇಶಿಸುತ್ತೇನೆ ಎಂದು ಹೇಳಿ ಋತುಪರ್ಣನು ನಳನಿಗೆ ಅಕ್ಷವಿದ್ಯೆಯನ್ನು (ಮತ್ತು ಸಂಖ್ಯಾವಿದ್ಯೆಯನ್ನು) ನೀಡಿದನು. ಬಾಹುಕನು ಅಕ್ಷವಿದ್ಯೆಯನ್ನು ಸ್ವೀಕರಿಸಿದ ತಕ್ಷಣ ಅವನ ಶರೀರದಿಂದ ಕಲಿಯು ಹೊರಗೆಬಂದನು. ಮತ್ತು ಬಾಹುಕನು ತನ್ನ ಮುಖದಿಂದ ತೀಕ್ಷ್ಣವಾದ ಕಾರ್ಕೋಟಕ ವಿಷವನ್ನು ವಮನ ಮಾಡಿದನು.
ಕಲೇಸ್ತತಸ್ತದಾರ್ತಸ್ಯ ಶಾಪಾಗ್ನಿಃಸ ವಿನಿಃಸೃತಃ |
ಸ ತೇನ ಕರ್ಶಿತೋ ರಾಜಾ ದೀರ್ಘಕಾಲಮನಾತ್ಮವಾನ್ ॥30॥
ಆಗ ಆರ್ತನಾದ ಕಲಿಯಿಂದ ಆ ಶಾಪಾಗ್ನಿಯು ಹೊರಬಂದಿತು. ದುಷ್ಟನಾದ ಅವನು ನಳಶರೀರದಲ್ಲಿ ಇದ್ದು ದೀರ್ಘಕಾಲದವರೆಗೆ ಆ ವಿಷದ ಬಾಧೆಯಿಂದ ದುಃಖಿತನಾಗಿದ್ದನು.
ತತೋ ವಿಷಾದ್ವಿಮುಕ್ತಾತ್ಮಾ ಸ್ವಂ ರೂಪಮಕರೋತ್ ಕಲಿಃ |
ತಂ ಶಪ್ತುಮೈಚ್ಛತ್ ಕುಪಿತೋ ನಿಷಧಾಧಿಪತಿರ್ನಳಃ ॥31॥
ಅನಂತರ ವಿಷದಿಂದ ವಿಮೋಚನೆಗೊಂಡ ಕಲಿಯು ತನ್ನ ನಿಜವಾದ ರೂಪವನ್ನು ಧರಿಸಿದನು. ನಿಷಧಾಧಿಪತಿಯಾದ ನಳನು ಕೋಪಗೊಂಡು ಅವನಿಗೆ ಶಾಪವನ್ನು ಕೊಡಲು ಬಯಸಿದನು.
ತಮುವಾಚ ಕಲಿರ್ಭೀತೋ ವೇಪಮಾನಃ ಕೃತಾಂಜಲಿಃ |
ಕೋಪಂ ಸಂಯಚ್ಛ ನೃಪತೇ ಪ್ರತಿದಾಸ್ಯಾಮಿ ತೇ ವರಮ್ ॥32॥
ಆ ಕಲಿಯು ಭಯದಿಂದ ನಡುಗುತ್ತಾ ಕೈಗಳನ್ನು ಮುಗಿದು ಎಲೈರಾಜನೇ ನಿನ್ನ ಕೋಪವನ್ನು ಶಮನಮಾಡಿಕೋ. ನಾನು ನಿನಗೆ ಪ್ರತಿಯಾಗಿ ವರವನ್ನು ಕೊಡುವೆನು ಎಂದು ಹೇಳಿದನು.
ಇಂದ್ರಸೇನಸ್ಯ ಜನನೀ ಕುಪಿತಾ ಮಾಽಶಪತ್ ಪುರಾ |
ಯದಾ ತ್ವಯಾ ಪರಿತ್ಯಕ್ತಾ ತೇನಾಹಂ ಭೃಶಪೀಡಿತಃ ॥33॥
ಇಂದ್ರಸೇನನ ತಾಯಿಯಾದ ದಮಯಂತಿಯು ನೀನು ಅವಳನ್ನು ಪರಿತ್ಯಜಿಸಿದಾಗ ಹಿಂದೆ ನನಗೆ ಕೋಪದಿಂದ ಶಾಪವನ್ನು ಕೊಟ್ಟಳು ಆ ಶಾಪದಿಂದ ನಾನು ಬಹಳ ಪೀಡಿತನಾಗಿದ್ದೆ.
ಅವಸಂ ತ್ವಯಿ ರಾಜೇಂದ್ರ ಸುದುಃಖಮಪರಾಜಿತ |
ವಿಷೇಣ ನಾಗರಾಜಸ್ಯ ದಹ್ಯಮಾನೋ ದಿವಾನಿಶಮ್ ॥34॥
ಎಲೈ ರಾಜೇಂದ್ರನೇ ಎಲೈ ಅಪರಾಜಿತನೇ ಆ ಸರ್ಪರಾಜನ ವಿಷದ ಬಾಧೆಯಿಂದ ಹಗಲೂ ರಾತ್ರಿಯು ಉರಿಯುತ್ತಾ ಮತ್ತು ದುಃಖವನ್ನು ಅನುಭವಿಸುತ್ತಾ ನಾನು ನಿನ್ನಲ್ಲಿ ವಾಸವಾಗಿದ್ದನು.
ಯೇ ಚ ತ್ವಾಂ ಮನುಜಾ ಲೋಕೇ ಕೀರ್ತಯಿಷ್ಯಂತ್ಯತಂದ್ರಿತಾಃ |
ಮತ್ಪ್ರಸೂತಂ ಭಯಂ ತೇಷಾಂ ನ ಕದಾಚಿದ್ ಭವಿಷ್ಯತಿ ॥35॥
ನ ಚೈಷಾಂ ಮಾನಸಂ ಕಿಂಚಿತ್ ಶಾರೀರಂ ವಾ ನೃಪೋತ್ತಮ |
ಭವಿಷ್ಯತಿ ನೃಣಾಂ ರಾಜನ್ ಕೀರ್ತಯಿಷ್ಯಂತಿ ಯೇ ನಳಮ್ |
ಭಯಾರ್ತಂ ಶರಣಂ ಯಾತಂ ಯದಿ ಮಾಂ ತ್ವಂ ನ ಶಪ್ಸ್ಯಸೇ ॥36॥
ಯಾವ ಮನುಷ್ಯರು ಲೋಕದಲ್ಲಿ ಆಲಸ್ಯವಿಲ್ಲದೆ ನಿನ್ನ ಹೆಸರನ್ನು ಕೀರ್ತಿಸುತ್ತಾರೋ ಅವರಿಗೆ ನನ್ನಿಂದ ಉಂಟಾಗುವ ಯಾವ ಭಯವೂ ಇರುವುದಿಲ್ಲ. ಎಲೈ ರಾಜಶ್ರೇಷ್ಠನೇ ಭಯಾರ್ತನಾಗಿ ಶರಣಾಗತನಾದ ನನಗೆ ನೀನು ಶಾಪವನ್ನು ಕೊಡದಿದ್ದರೆ ರಾಜನೇ ನೃಪೋತ್ತಮನೇ ಯಾರು ನಳನನ್ನು ಕೀರ್ತಿಸುವರೋ ಅವರಿಗೆ ಶಾರೀರಕವಾದ ಅಥವಾ ಮಾನಸಿಕವಾದ ಪೀಡೆಯು ಉಂಟಾಗದಿರಲಿ. (ಎಂದು ವರವನ್ನು ಕೊಡುತ್ತೇನೆ.)
ಏವಮುಕ್ತೋ ನಳೋ ರಾಜಾ ನ್ಯಯಚ್ಛತ್ ಕ್ರೋಧಮಾತ್ಮನಃ |
ತತೋ ಭೀತಃ ಕಲಿಃ ಕ್ಷಿಪ್ರಂ ಪ್ರವಿವೇಶ ವಿಭೀತಕಮ್ ॥37॥
ಕಲಿಸ್ತ್ವನ್ಯೈಷ ಸೋಽದೃಶ್ಯಃ ಕಥಯನ್ ನೈಷಧೇನ ವೈ ॥38॥
ಹೀಗೆ ಹೇಳಲ್ಪಟ್ಟ ನಳರಾಜನು ತನ್ನ ಕೋಪವನ್ನು ತಡೆದುಕೊಂಡನು. ಕಲಿಯು ನೈಷಧನಜೊತೆಯಲ್ಲಿ ಮಾತನಾಡುತ್ತಲೇ ಅದೃಶ್ಯನಾಗಿ ಅಲ್ಲಿಯೇ ಭಯದಿಂದ ಶೀಘ್ರವಾಗಿ ಆ ತಾರಿಯಮರವನ್ನು ಪ್ರವೇಶಿಸಿದನು.

ತತೋ ಗತಜ್ವರೋ ರಾಜಾ ನೈಷಧಃ ಪರವೀರಹಾ |
ಸಂಪ್ರನಷ್ಟೇ ಕಲೌ ರಾಜಾ ಸಂಖ್ಯಾಯಾಥ ಫಲಾನ್ಯುತ ॥39॥
ಮುದಾ ಪರಮಯಾ ಯುಕ್ತಃ ತೇಜಸಾಽಥ ಬಲೇನ ಚ |
ರಥಮಾರುಹ್ಯ ತೇಜಸ್ವೀ ಪ್ರಯಯೌ ಜವನೈರ್ಹಯೈಃ |
ವಿಭೀತಕಶ್ಚಾಪ್ರಶಸ್ತಃ ಸಂವೃತ್ತಃ ಕಲಿಸಂಶ್ರಯಾತ್ ॥40॥
ಆಗ ಕಲಿಯು ನಾಶವನ್ನು ಹೊಂದುತ್ತಿರಲು ಪರವೀರಘಾತಕನಾದ ನಳಮಹಾರಾಜನು ಸ್ವಸ್ಥಮನಸ್ಸಿನಿಂದ ಕೂಡಿದವನಾದನು. ರಾಜನು ಆ ಹಣ್ಣುಗಳನ್ನು ಎಣಿಸಿ ಬಹಳ ಸಂತೋಷದಿಂದ ಕೂಡಿದವನಾಗಿ ತನ್ನ ಸಾಮರ್ಥ್ಯದಿಂದಲೂ ಮತ್ತು ಬಲದಿಂದಲೂ ಬೆಳಗುತ್ತಿದ್ದ ಅವನು ರಥವನ್ನು ಏರಿ ವೇಗಯುಕ್ತವಾದ ಹಯಗಳಿಂದ ಹೊರಟನು. ಮತ್ತು ವಿಭೀತಕ ವೃಕ್ಷವಾದರೂ (ತಾರಿಮರ) ಕಲಿಯ ಪ್ರವೇಶದಿಂದಾಗಿ ಅಮಂಗಳವಾಯಿತು.
ಹಯೋತ್ತಮಾನುತ್ಪತತೋ ದ್ವಿಜಾನಿವ ಪುನಃಪುನಃ |
ನಳಃ ಸಂಚೋದಯಾಮಾಸ ಪ್ರಹೃಷ್ಟೇನಾಂತರಾತ್ಮನಾ ॥41॥
ಪಕ್ಷಿಗಳಂತೆ ಪುನಃಪುನಃ ಹಾರುತ್ತಿದ್ದ ಆ ಶ್ರೇಷ್ಠವಾದ ಅಶ್ವಗಳನ್ನು ನಳನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಮುಂದೆ ನಡೆಸಿದನು.
ವಿದರ್ಭಾಭಿಮುಖೋ ರಾಜಾ ಪ್ರಯಯೌ ಸ ಮಹಾಮನಾಃ |
ನಳೇ ತು ಸಮತಿಕ್ರಾಂತೇ ಕಲಿರಪ್ಯಗಮದ್ ಗೃಹಾನ್ ॥42॥
ಮಹಾಮನನಾದ ಆ ರಾಜನು ವಿದರ್ಭಾಭಿಮುಖವಾಗಿ ಹೊರಟನು ನಳನು ಮುಂದೆ ಹೋದ ಮೇಲೆ ಕಲಿಯು ಸಹ ತನ್ನ ಮನೆಗೆ ಹೋದನು.
ತತೋ ಗತಜ್ವರೋ ರಾಜಾ ನಳೋ ವೈ ಪೃಥಿವೀಪತಿಃ |
ವಿಮುಕ್ತಃ ಕಲಿನಾ ರಾಜನ್ ರೂಪಮಾತ್ರವಿಯೋಜಿತಃ ॥43॥
ರಾಜನೇ ಅನಂತರ ಪೃಥ್ವಿಯಪತಿಯಾದ ನಳನು ಕಲಿಯಿಂದ ವಿಮುಕ್ತನಾಗಿಸ್ವಸ್ತ ಚಿತ್ತನಾದನು. ನಳನ ಮೊದಲಿನ ರೂಪವು ಮಾತ್ರ ಇನ್ನೂ ಉಂಟಾಗಿರಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.
*****
ಅರವತ್ತೇಳನೆಯ ಅಧ್ಯಾಯ
(ಋತುಪರ್ಣನ ಕುಂಡಿನ ಪ್ರವೇಶ. ನಳರಥಘೋಷದಂತೆ ಇದ್ದ ರಥಘೋಷವನ್ನು ಕೇಳಿ ದಮಯಂತಿಯ ಊಹೆ.)
ಬೃಹದಶ್ವಃ
ತತೋ ವಿದರ್ಭಾನ್ ಸಂಪ್ರಾಪ್ತಂ ಸಾಯಾಹ್ನೇ ಸತ್ಯವಿಕ್ರಮ |
ಋತುಪರ್ಣಂ ಜನಾ ರಾಜನ್ ಭೀಮಾಯ ಪ್ರತ್ಯವೇದಯನ್ ॥1॥
ಎಲೈ ಸತ್ಯವಿಕ್ರಮನಾದ ರಾಜನೇ ಅನಂತರ ಸಾಯಾಂಕಾಲದ ಸಮಯಕ್ಕೆ ವಿದರ್ಭಕ್ಕೆ ಆಗಮಿಸಿದ ಋತುಪರ್ಣನನ್ನು ರಾಜಭಟರು ಭೀಮನಿಗೆ ನಿವೇದಿಸಿದರು.
ಸ ಭೀಮವಚನಾದ್ ರಾಜಾ ಕುಂಡಿನಂ ಪ್ರಾವಿಶತ್ ಪುರೀಮ್ |
ನಾದಯನ್ ರಥಘೋಷೇಣ ಸರ್ವಾಶ್ಚಾಪಿ ದಿಶೋ ದಶ ॥2॥
ಋತುಪರ್ಣರಾಜನು ಭೀಮನ ಅನುಮತಿಯಿಂದ ತನ್ನ ರಥಘೋಷದಿಂದ ಎಲ್ಲ ದಿಕ್ಕುಗಳನ್ನು ಪ್ರತಿಧ್ವನಿಸುತ್ತಾ ಕುಂಡಿನ ಪುರವನ್ನು ಪ್ರವೇಶಮಾಡಿದನು.
ತತಸ್ತಂ ರಥನಿರ್ಘೋಷಂ ನಳಾಶ್ವಾಸ್ತತ್ರ ಶುಶ್ರುವುಃ |
ಶ್ರುತ್ವಾ ಚ ಸಮಹೃಷ್ಯಂತ ಪುರೇವ ನಳಸನ್ನಿಧೌ ॥3॥
ಆಗ ಅಲ್ಲಿದ್ದ ನಳನ ಅಶ್ವಗಳು ಆ ರಥಘೋಷವನ್ನು ಕೇಳಿದವು ಮತ್ತು ಕೇಳಿ ಹಿಂದೆ ನಳನ ಸನ್ನಿಧಿಯಲ್ಲಿ ಸಂತೋಷಪಟ್ಟಂತೆ ಸಂತೋಷಪಟ್ಟವು.
ದಮಯಂತೀ ಚ ಶುಶ್ರಾವ ರಥಘೋಷಂ ನಳಸ್ಯ ವೈ |
ಯಥಾ ಮೇಘಸ್ಯ ನದತೋ ಗಂಭೀರಂ ಜಲದಾಗಮೇ ॥4॥
ದಮಯಂತಿಯೂ ಕೂಡ ಮಳೆಗಾಲದಲ್ಲಿ ಮೇಘಗಳ ನಾದದಂತೆ ಗಂಭೀರವಾಗಿದ್ದ ನಳನ ಆ ರಥಘೋಷವನ್ನು ಕೇಳಿದಳು.
ಪರಂ ವಿಸ್ಮಯಮಾಪನ್ನಾ ಶ್ರುತ್ವಾ ನಾದಂ ಮಹಾಸ್ವನಮ್ |
ನಳೇನ ಸಂಗೃಹೀತೇಷು ಪುರೇವ ನಳವಾಜಿಷು |
ಸದೃಶಂ ರಥನಿರ್ಘೋಷಂ ಮೇನೇ ಭೈಮೀ ತಥಾ ಹಯಾಃ ॥5॥
ಪ್ರಾಸಾದಸ್ಥಾಶ್ಚ ಶಿಖಿನಃ ಶಾಲಾಸ್ಥಾಶ್ಚೈವ ವಾರಣಾಃ |
ಹಯಾಶ್ಚ ಶುಶ್ರುವುಸ್ತಸ್ಯ ರಥಘೋಷಂ ಮಹೀಪತೇಃ ॥6॥
ಹಿಂದೆ ನಳನು ತನ್ನ ಅಶ್ವಗಳನ್ನು ಹಿಡಿದಾಗ ಉಂಟಾಗುವ ರಥನಿರ್ಘೋಷಕ್ಕೆ ಸದೃಶವಾದ ಆ ಮಹಾಶಬ್ದವನ್ನು ಕೇಳಿ ದಮಯಂತಿಯ ಮತ್ತು ಅಶ್ವಗಳೂ ನಳನ ನಿರ್ಘೋಷವೆಂದೇ ತಿಳಿದರು. ಉಪ್ಪರಿಗೆಯಲ್ಲಿದ್ದ ನವಿಲುಗಳು ಗಜಶಾಲೆಯಲ್ಲಿದ್ದ ಗಜಗಳು

ಮತ್ತು ಅಶ್ವಶಾಲೆಯಲ್ಲಿದ್ದ ಅಶ್ವಗಳು ಆ ರಾಜನ ರಥಘೋಷವನ್ನು ಕೇಳಿದವು.
ತಚ್ಛ್ರುತ್ವಾ ರಥನಿರ್ಘೋಷಂ ವಾರಣಾಃ ಶಿಖಿನೋ ಹಯಾಃ |
ಪ್ರಣೇದುರುನ್ಮುಖಾ ರಾಜನ್ ಮೇಘನಾದಮವೇಕ್ಷ್ಯ ವಾ ॥7॥
ರಾಜನೇ ರಥನಿರ್ಘೋಷವನ್ನು ಕೇಳಿ ಗಜಗಳು ಅಶ್ವಗಳು ಮತ್ತು ನವಿಲುಗಳು ಗುಡುಗಿನ ಶಬ್ದವನ್ನು ಕೇಳಿದಂತೆ ಮುಖವನ್ನು ಮೇಲಕ್ಕೆ ಎತ್ತಿ ನಾದವನ್ನುಮಾಡಿದವು.
ದಮಯಂತೀ
ತಥೈವ ರಥನಿರ್ಘೋಷಂ ಪೂರಯನ್ನಿವ ಮೇದಿನೀಮ್ |
ಮಮಾಹ್ಲಾದಯತೇ ಚೇತೋ ನಳ ಏಷ ಮಹೀಪತಿಃ ॥8॥
ಈ ನಳಮಹಾರಾಜನು ಭೂಮಿಯನ್ನೆಲ್ಲಾ ತುಂಬುವಂತೆ ಮೊದಲಿನಂತೆಯೇ ರಥನಿರ್ಘೋಷವನ್ನು ಮಾಡಿ ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿದ್ದಾನೆ.
ಅಥ ಚಂದ್ರಾಭವಕ್ತ್ರಂ ತಂ ನ ಪಶ್ಯಾಮಿ ನಳಂ ಯದಿ |
ಅಸಂಖ್ಯೇಯಗುಣಂ ವೀರಂ ವಿನಶ್ಯಾಮಿ ನಸಂಶಯಃ ॥9॥
ಇನ್ನು ಆ ಚಂದ್ರವದನನಾದ ಅಪರಿಮಿತವಾದ ಗುಣಗಳನ್ನು ಹೊಂದಿರುವ ವೀರನಾದ ನಳನನ್ನು ನಾನು ನೋಡದಿದ್ದರೆ ನಾನು ಖಂಡಿತವಾಗಿ ನಾಶವನ್ನು ಹೊಂದುವೆನು.
ಯದಿ ವೈ ತಸ್ಯ ವೀರಸ್ಯ ಬಾಹ್ವೋರ್ನಾದ್ಯಾಹಮಂತರಮ್ |
ಪ್ರವಿಶಾಮಿ ಸುಖಸ್ಪರ್ಶಂ ವಿನಶಿಷ್ಯಾಮ್ಯಸಂಶಯಮ್ ॥10॥
ಈ ದಿನ ಆ ವೀರನಾದ ನಳನ ಸುಖಸ್ಪರ್ಶವುಳ್ಳ ಬಾಹುಗಳ ಮಧ್ಯವನ್ನು ಸೇರದಿದ್ದರೆ ನಿಸ್ಸಂಶಯವಾಗಿ ನಾಶವನ್ನು ಹೊಂದುವೆನು.
ಯದಿ ಮಾಂ ಮೇಘನಿರ್ಘೋಷೋ ನೋಪಗಚ್ಛತಿ ನೈಷಧ ಃ |
ಅದ್ಯ ಚಾಮೀಕರಪ್ರಖ್ಯೋ ಪ್ರವೇಕ್ಷ್ಯಾಮಿ ಹುತಾಶನಮ್ ॥11॥
ಮೇಘಗಂಭೀರಸ್ವರವುಳ್ಳ ಸುವರ್ಣವರ್ಣನಾದ ನೈಷಧನು ಈ ದಿನ ನನ್ನ ಬಳಿಗೆ ಬರದಿದ್ದರೆ ನಾನು ಅಗ್ನಿಯನ್ನು ಪ್ರವೇಶಿಸುವೆನು.
ಯದಿ ಮಾಂ ಸಿಂಹವಿಕ್ರಾಂತೋ ಮತ್ತವಾರಣವಾರಣಃ |
ನಾಭಿಗಚ್ಛತಿ ರಾಜೇಂದ್ರೋ ವಿನಶಿಷ್ಯಾಮ್ಯಸಂಶಯಮ್ ॥12॥
ಸಿಂಹವಿಕ್ರಮನಾಗಿ ಮದಗಜವನ್ನು ತಡೆಯುವ ಸಾಮರ್ಥ್ಯವುಳ್ಳ ಆ ರಾಜೇಂದ್ರನು ನನ್ನ ಎದುರಿಗೆ ಬರದಿದ್ದರೆ ನಿಸ್ಸಂಶಯವಾಗಿ ನಾಶವನ್ನು ಹೊಂದುವೆನು.
ನ ಸ್ಮರಾಮ್ಯನೃತಂ ಕಿಂಚಿನ್ನ ಸ್ಮರಾಮ್ಯನುಪಾಕೃತಮ್ |
ನ ಚ ಪರ್ಯುಷಿತಂ ವಾಕ್ಯಂ ಸ್ವೈರೇಷ್ವಪಿ ಮಹಾತ್ಮನಃ ॥13॥
ಆ ಮಹಾತ್ಮನು ವಿನೋದದಲ್ಲಿಯೂ ಕೂಡ ಒಂದು ಸುಳ್ಳುಮಾತನ್ನಾಗಲೀ ಅಥವಾ ಅಸಂಗತವಾದ ಮಾತನ್ನಾಗಲೀ ಅಥವಾ ವ್ಯರ್ಥವಾದ ಮಾತನ್ನಾಗಲೀ ಆಡಿದುದು ನನ್ನ ಸ್ಮರಣೆಯಲ್ಲಿಲ್ಲ.
ಪ್ರಭುಃ ಕ್ಷಮಾವಾನ್ ವೀರಶ್ಚ ಮೃದುರ್ದಾಂತೋ ಜಿತೇಂದ್ರಿಯಃ |
ಅಹೋ ನೀಚಾನುವರ್ತೀ ಚ ಕ್ಲೀಬವನ್ಮಮ ನೈಷಧಃ ॥14॥
ನೈಷಧನು ಪ್ರಭು, ಕ್ಷಮೆಯುಳ್ಳವನು, ವೀರ, ಮೃದು, ಆತ್ಮಸಂಯಮವುಳ್ಳವನು, ಜಿತೇಂದ್ರಿಯನಾದವನು, ನನ್ನ ಬಳಿಯಂತೂ ನಪುಂಸಕನಂತೆ ನನ್ನನ್ನು ಅನುಸರಿಸುವವನು.
ಗುಣಾಂಸ್ತಸ್ಯ ಸ್ಮರಂತ್ಯಾ ಮೇ ತತ್ಪರಾಯಾ ದಿವಾನಿಶಮ್ |
ಹೃದಯಂ ದೀರ್ಯತ ಇದಂ ಶೋಕಾತ್ ಪ್ರಿಯವಿನಾಕೃತಮ್ ॥15॥
ಹಗಲೂ ರಾತ್ರಿಯೂ ಅವನಲ್ಲೇ ಮನೋನಿಷ್ಠೆಯುಳ್ಳವಳಾಗಿ ಅವನ ಗುಣಗಳನ್ನು ಸ್ಮರಿಸುವ ನನಗೆ ಪ್ರಿಯನಾದ ಅವನ ವಿಯೋಗದಿಂದ ಈ ನನ್ನ ಹೃದಯವು ಶೋಕದಿಂದ ಬಿರಿಯುತ್ತಿದೆ.
ಏವಂ ವಿಲಪಮಾನಾ ಸಾ ನಷ್ಟಸಂಜ್ಞೇವ ಭಾರತ |
ಆರುರೋಹ ಮಹದ್ವೇಶ್ಮ ಪುಣ್ಯಶ್ಲೋಕದಿದೃಕ್ಷಯಾ ॥16॥
ಭಾರತನೇ ಹೀಗೆ ಪ್ರಜ್ಞೆಯಿಲ್ಲದವಳಂತೆ ವಿಲಾಪವನ್ನು ಮಾಡುತ್ತಾ ಅವಳು ಪುಣ್ಯಶ್ಲೋಕನಾದ ನಳನನ್ನು ನೋಡುವ ಆಸೆಯಿಂದ ಆ ದೊಡ್ಡಮನೆಯ ಉಪ್ಪರಿಗೆಯನ್ನು ಏರಿದಳು.
ಆಲೋಕಯಂತೀ ದದೃಶೇ ಭೈಮೀ ರಾಜನ್ ಮನಸ್ವಿನೀ |
ತತೋ ಮಧ್ಯಮಕಕ್ಷ್ಯಾಯಾಂ ದದರ್ಶ ರಥಮಾಸ್ಥಿತಮ್ |
ಋತುಪರ್ಣಂ ಮಹೀಪಾಲಂ ಸವಾರ್ಷ್ಣೇಯಂ ಸಬಾಹುಕಮ್ ॥17॥
ರಾಜನೇ ಆ ಧೈರ್ಯಶಾಲಿನಿಯಾದ ದಮಯಂತಿಯು ಎಲ್ಲಕಡೆಯೂ ನೋಡುತ್ತಾ ಆಗ ಮಧ್ಯಪ್ರಾಕಾರದಲ್ಲಿ ನಿಂತ ರಥವನ್ನೂ ಬಾಹುಕ ಮತ್ತು ಸೂತರಿಂದ ಸಹಿತನಾದ ಋತುಪರ್ಣರಾಜನನ್ನೂ ನೋಡಿದಳು.
ತತೋಽವತೀರ್ಯ ವಾರ್ಷ್ಣೇಯೋ ಬಾಹುಕಶ್ಚ ರಥೋತ್ತಮಾತ್|
ಹಯಾಂಸ್ತಾನವಮುಚ್ಯಾಥ ಸ್ಥಾಪಯಾಮಾಸ ತಂ ರಥಮ್ ॥18॥
ಅನಂತರ ಸೂತ ಮತ್ತು ವಾರ್ಷ್ಣೇಯರು ಆ ಶ್ರೇಷ್ಠವಾದ ರಥದಿಂದ ಇಳಿದು ಕುದುರೆಗಳನ್ನು ಬಿಚ್ಚಿ ಆ ರಥವನ್ನು ನಿಲ್ಲಿಸಿದರು.
ಸೋಽವತೀರ್ಯ ರಥೋಪಸ್ಥಾದ್ ಋತುಪರ್ಣೋ ನರಾಧಿಪಃ|
ಉಪತಸ್ಥೇ ಮಹಾರಾಜಂ ಭೀಮಂ ಭೀಮಪರಾಕ್ರಮಮ್ ॥19॥

ಆ ಋತುಪರ್ಣರಾಜನು ರಥದ ಪೀಠದಿಂದ ಇಳಿದು ಮಹಾಪರಾಕ್ರಮವುಳ್ಳ ಭೀಮಮಹಾರಾಜನನ್ನು ಸಮೀಪಿಸಿದನು.
ತಂ ಭೀಮಃ ಪ್ರತಿಜಗ್ರಾಹ ಪೂಜಯಾ ಪರಯಾ ತತಃ |
ಅಕಸ್ಮಾತ್ ಸಹಸಾ ಪ್ರಾಪ್ತಂ ಸ್ತ್ರೀಮಂತ್ರಂ ನಾಭ್ಯವಿಂದತ ॥20॥
ಆ ಭೀಮಮಹಾರಾಜನು ಏನೂ ಕಾರಣವಿಲ್ಲದೆ ಇದ್ದಕ್ಕಿದ್ದಂತೆಯೇ ಬಂದ ಆ ಋತುಪರ್ಣನನ್ನು ಶ್ರೇಷ್ಠವಾದ ಪೂಜೆಯಿಂದ ಸ್ವೀಕರಿಸಿದನು. ಸ್ತ್ರೀಯರು ಮಾಡಿದ ಮಂತ್ರಾಲೋಚನೆಯು ಅವನಿಗೆ ತಿಳಿದಿರಲಿಲ್ಲ.
ಕಿಂ ಕಾರ್ಯಂ ಸ್ವಾಗತಂ ತೇऽಸ್ತು ರಾಜ್ಞಾ ಪೃಷ್ಟಶ್ಚ ಭಾರತ |
ನಾಭಿಜಜ್ಞೇ ಸ ನೃಪತಿರ್ದುಹಿತ್ರರ್ಥೇ ಸಮಾಗತಮ್ ॥21॥
ಎಲೈ ಭಾರತನೇ ನಿನಗೆ ಸ್ವಾಗತ, ಯಾವ ಉದ್ದೇಶದಿಂದ ಬಂದಿದ್ದೀಯೆ ಎಂದು ಕೇಳಿದನು. ತನ್ನ ಮಗಳಸಲುವಾಗಿ ಅವನು ಬಂದಿದ್ದಾನೆಂದು ಭೀಮನಿಗೆ ತಿಳಿಯಲಿಲ್ಲ.
ಋತುಪರ್ಣೋऽಪಿ ರಾಜಾ ಸ ಧೀಮಾನ್ ಸತ್ಯಪರಾಕ್ರಮಃ |
ರಾಜಾನಂ ರಾಜಪುತ್ರಂ ವಾ ನ ಸ್ಮ ಪಶ್ಯತಿ ಕಂಚನ ॥22॥
ಮೇಧಾವಿಯೂ ಸತ್ಯಪರಾಕ್ರಮನೂ ಆದ ಋತುಪರ್ಣರಾಜನೂ ಸಹ ಅಲ್ಲಿ ಬೇರೆಯಾವ ರಾಜನನ್ನಾಗಲೀ ಅಥವಾ ರಾಜಪುತ್ರನನ್ನಾಗಲೀ ಕಾಣಲಿಲ್ಲ.
ನೈವ ಸ್ವಯಂವರಕಥಾಂ ನ ಚ ವಿಪ್ರಸಮಾಗಮಮ್ |
ನ ಚಾನ್ಯಂ ಕಂಚಿದಾರಂಭಂ ಸ್ವಯಂವರವಿಧಿಂ ಪ್ರತಿ ॥23॥
ಅಲ್ಲಿ ಸ್ವಯಂವರವಾರ್ತೆಯನ್ನಾಗಲೀ ಬ್ರಾಹ್ಮಣರ ಸಮಾಗಮವನ್ನಾಗಲೀ ಅಥವಾ ಸ್ವಯಂವರದ ವಿಧಾನವನ್ನು ಕುರಿತು ಯಾವುದೇ ಸಿದ್ಧತೆಯನ್ನಾಗಲೀ ಅಲ್ಲಿ ಅವನು ಕಾಣಲಿಲ್ಲ.
ತತೋ ವಿಗಣಯನ್ ರಾಜಾ ಮನಸಾ ಕೋಸಲಾಧಿಪಃ |
ಆಗತೋऽಸ್ಮೀತ್ಯುವಾಚೈನಂ ಭವಂತಮಭಿವಾದಕಃ॥24॥
ಆಗ ಕೋಸಲಾಧಿಪತಿಯಾದ ಋತುಪರ್ಣನು ಮನಸ್ಸಿನಲ್ಲಿ ಅದಾವುದನ್ನೂ ಚಿಂತಿಸದೆ ನಿನಗೆ ನಮಸ್ಕಾರವನ್ನುಮಾಡಲು ಬಂದಿದ್ದೇನೆ ಎಂದು ಭೀಮರಾಜನನ್ನು ಕುರಿತು ಹೇಳಿದನು.
ರಾಜಾಪಿ ಚ ಸ್ವಯಂ ಭೀಮೋ ಮನಸಾ ಸಮಚಿಂತಯತ್ |
ಅಧಿಕಂ ಯೋಜನಶತಂ ತಸ್ಯಾಗಮನಕಾರಣಮ್ |
ಗ್ರಾಮಾನ್ ಬಹೂನತಿಕ್ರಮ್ಯ ನಾಧ್ಯಗಚ್ಛದ್ಯಥಾತಥಮ್ ॥25॥
ಭೀಮರಾಜನೂ ಸಹ ಮನಸ್ಸಿನಲ್ಲಿಯೇ ಅವನ ಆಗಮನದ ಕಾರಣವನ್ನು ಚಿಂತಿಸಿದನು. ಅನೇಕ ಗ್ರಾಮಗಳನ್ನು ದಾಟಿ ನೂರುಯೋಜನಗಳಿಗಿಂತಲೂ ಹೆಚ್ಚು ಪ್ರಯಾಣಮಾಡಿ ಬರುವುದಕ್ಕೆ ಸರಿಯಾದ ಕಾರಣವನ್ನು ಅವನು ತಿಳಿಯಲಿಲ್ಲ.
ಅಲ್ಪಕಾರ್ಯಂ ವಿನಿರ್ದಿಷ್ಟಂ ತಸ್ಯಾಗಮನಕಾರಣಮ್ |
ನೈತದೇವಂ ಸಂಭವತಿ ತಂ ಸತ್ಕೃತ್ಯ ವ್ಯಸರ್ಜಯತ್ ॥26॥
ವಿಶ್ರಾಮ್ಯತಾಮಿತಿ ತದಾ ಶ್ರಾಂತೋऽಸೀತಿ ಪುನಃಪುನಃ |
ಅವನು ತಾನು ಇಲ್ಲಿಗೆ ಬಂದ ಉದ್ದೇಶವನ್ನು ತಿಳಿಸಲು ಒಂದು ಸಣ್ಣ ಕಾರ್ಯವನ್ನು ಹೇಳಿದ್ದಾನೆ. ಅದು ಹೀಗಿರಲು ಸಾಧ್ಯವಿಲ್ಲ. ಎಂದು ಯೋಚಿಸಿ ಅವನನ್ನು ಸತ್ಕರಿಸಿ ಮತ್ತೆಮತ್ತೆ ಬಹಳದಣಿದಿದ್ದೀರಿ ವಿಶ್ರಮಿಸಿಕೊಳ್ಳಿ ಎಂದು ಹೇಳಿ ಅವನನ್ನು ಬೀಳ್ಕೊಟ್ಟನು.
ಸ ಸತ್ಕೃತಃ ಪ್ರಹೃಷ್ಟಾತ್ಮಾ ಪ್ರೀತಃ ಪ್ರೀತೇನ ಪಾರ್ಥಿವಃ |
ರಾಜಪ್ರೇಷ್ಯೈರನುಗತೋ ದಿಷ್ಟಂ ವೇಶ್ಮ ಸಮಾವಿಶತ್ ॥27॥
ತನ್ನ ಆಗಮನದಿಂದ ಸಂತೋಷಗೊಂಡ ಭೀಮನಿಂದ ಸತ್ಕೃತನಾಗಿ ಸಂತೋಷಗೊಂಡ ಋತುಪರ್ಣನು ರಾಜಸೇವಕರಿಂದ ಹಿಂಬಾಲಿಸಲ್ಪಟ್ಟು ತನ್ನ ನಿರ್ದಿಷ್ಟವಾದ ವಾಸಸ್ಥಾನಕ್ಕೆ ಹೋದನು.
ಋತುಪರ್ಣೇ ಗತೋ ರಾಜಾ ವಾರ್ಷ್ಣೇಯಸಹಿತಸ್ತದಾ |
ಬಾಹುಕೋ ರಥಮಾದಾಯ ರಥಶಾಲಾಮುಪಾಗಮತ್ ॥28॥
ಋತುಪರ್ಣರಾಜನು ವಾರ್ಷ್ಣೇಯನ ಜೊತೆಯಲ್ಲಿ ಹೋದಮೇಲೆ ಬಾಹುಕನು ರಥವನ್ನು ರಥಶಾಲೆಯ ಸಮೀಪಕ್ಕೆ ತೆಗೆದುಕೊಂಡು ಬಂದನು.
ಸ ಮೋಕ್ಷಯಿತ್ವಾ ತಾನಶ್ವಾನ್ ಪರಿಚರ್ಯ ಯಥಾವಿಧಿ |
ಸ್ವಯಂ ಚೈತಾನ್ ಸಮಾಶ್ವಾಸ್ಯ ರಥೋಪಸ್ಥ ಉಪಾವಿಶತ್ ॥29॥
ಅವನು ಆ ಕುದುರೆಗಳನ್ನು ಬಿಚ್ಚಿ ಶಾಸ್ತ್ರವಿಧಾನದಂತೆ ಅವುಗಳನ್ನು ಉಪಚರಿಸಿ ತಾನೇ ಸ್ವತಃ ಅವುಗಳಿಗೆ ಸಮಾಧಾನವನ್ನು ಮಾಡಿ ರಥಪೀಠದಲ್ಲಿ ಕುಳಿತನು.
ದಮಯಂತೀ ತು ಶೋಕಾರ್ತಾ ದೃಷ್ಟ್ವಾ ಭಾರ್ಗಸ್ವರಿಂ ನೃಪ |
ಸೂತಪುತ್ರಂ ಚ ವಾಷ್ಣ ರ್ೇಯಂ ಬಾಹುಕಂ ಚ ತಥಾವಿಧಮ್ ॥30॥
ಚಿಂತಯಾಮಾಸ ವೈದರ್ಭೀ ಕಸ್ಯೈಷ ರಥನಿಃಸ್ವನಃ |
ನಳಸ್ಯೇವ ಮಹಾನಾಸೀನ್ನ ಪಶ್ಯಾಮಿ ಚ ನೈಷಧಮ್ ॥31॥
ಶೋಕಾರ್ತಳಾದ ದಮಯಂತಿಯು ಋತುಪರ್ಣರಾಜನನ್ನೂ ಸೂತಪುತ್ರನಾದ ವಾರ್ಷ್ಣೇಯನನ್ನೂ ಮತ್ತು ಅಂತಹ ವೇಶದಲ್ಲಿದ್ದ ಬಾಹುಕನನ್ನೂ ನೋಡಿ ನಳನ ರಥದ ಘೋಷದಂತೆ ಇದ್ದ ಈ ರಥಘೋಷವು ಯಾರದು? ನಳನ ರಥಘೋಷದಂತೆ ಇದ್ದಿತು. ಆದರೆ ನಾನು ನಳನನ್ನು ಕಾಣುತ್ತಿಲ್ಲ. ಎಂದು ಚಿಂತಿಸಿದಳು.

ವಾರ್ಷ್ಣೇಯೇನ ಭವೇನ್ನೂನಂ ವಿದ್ಯಾ ಸೈವೋಪಪಾದಿತಾ |
ತೇನಾಸ್ಯ ರಥನಿರ್ಘೋಷೋ ನಳಸ್ಯೇವ ಮಹಾನಭೂತ್ ॥32॥
ಬಹುಶಃ ವಾರ್ಷ್ಣೇಯನು ಆ ನಳನ ವಿದ್ಯೆಯನ್ನೇ ಸಂಪಾದಿಸಿರಬಹುದು. ಆದ್ದರಿಂದ ಈ ರಥದ ನಿರ್ಘೋಷವು ನಳರಥದ ನಿರ್ಘೋಷದಂತೆಯೇ ದೊಡ್ಡದಾಗಿದ್ದಿತು.
ಆಹೋಸ್ವಿದ್ ಋತುಪರ್ಣೋಽಪಿ ಯಥಾ ರಾಜಾ ನಳಸ್ತಥಾ |
ತಥಾಽಯಂ ರಥನಿರ್ಘೋಷೋ ನೈಷಧಸ್ಯೇವ ಲಕ್ಷ್ಯತೇ ॥33॥
ಅಥವಾ ಋತುಪರ್ಣನು ಸಹ ನಳನಂತೆಯೇ ಆ ವಿದ್ಯೆಯನ್ನುಕಲಿತಿರಬಹುದು. ಆದ್ದರಿಂದ ಈ ರಥನಿರ್ಘೋಷವು ನಳನ ರಥನಿರ್ಘೋಷದಂತೆಯೇ ಇದೆ.
ಏವಂ ಚ ತರ್ಕಯಿತ್ವಾ ತು ದಮಯಂತೀ ವಿಶಾಂಪತೇ |
ದೂತೀಂ ಪ್ರಸ್ಥಾಪಯಾಮಾಸ ನೈಷಧಾನ್ವೇಷಣೇ ನೃಪ ॥34॥
ಹೀಗೆ ಊಹಿಸಿ ಎಲೈ ರಾಜನೇ ದಮಯಂತಿಯು ತನ್ನ ದೂತಿಯನ್ನು ನಳನನ್ನು ಹುಡುಕುವ ಉದ್ದೇಶದಿಂದ ಬಾಹುಕನ ಎಡೆಗೆ ಕಳುಹಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
*****
ಅರವತ್ತೆಂಟನೆಯ ಅಧ್ಯಾಯ
(ಕೇಶಿನಿ ಬಾಹುಕರ ಸಂವಾದ)
ದಮಯಂತೀ
ಗಚ್ಛ ಕೇಶಿನಿ ಜಾನೀಹಿ ಕ ಏಷ ರಥಸಾರಥಿಃ |
ಉಪವಿಷ್ಟೋ ರಥೋಪಸ್ಥೇ ವಿಕೃತೋ ಹ್ರಸ್ವ ಬಾಹುಕಃ ॥1॥
ಅಭ್ಯೇತ್ಯ ಕುಶಲಂ ಭದ್ರೇ ಮೃದುಪೂರ್ವಂ ಸಮಾಹಿತಾ |
ಪೃಚ್ಛೇಥಾಃ ಪುರುಷಂ ಹ್ಯೇನಂ ಯಥಾತತ್ತ್ವಮನಿಂದಿತೇ ॥2॥
ಎಲೌ ಕೇಶಿನಿಯೇ, ಈ ವಿಕೃತ ಶರೀರವುಳ್ಳವನೂ ಹ್ರಸ್ವಬಾಹುವುಳ್ಳವನೂ ಆದ ರಥಸಾರಥಿಯು ರಥಪೀಠದಲ್ಲಿ ಕುಳಿತಿದ್ದಾನಷ್ಟೇ. ಶುಭಳೇ, ನೀನು ಅವನ ಬಳಿಗೆ ಹೋಗಿ ಸಮಾಧಾನದಿಂದ ಮೃದುವಾಗಿ ಮಾತನಾಡಿ ಎಲೌ ಅವನು ಯಾರೆಂದು ಸರಿಯಾಗಿ ಕೇಳಿ ತಿಳಿ.
ಅತ್ರ ಮೇ ಮಹತೀ ಶಂಕಾ ಭವೇದೇಷ ನಳೋ ನೃಪಃ |
ತಥಾ ಮನಸಿ ಮೇತುಷ್ಟಿರ್ಹೃದಯಸ್ಯ ಚ ನಿರ್ವೃತಿಃ॥3॥
ಇವನು ನಳನಿರಬಹುದೆಂದು ನನಗೆ ದೊಡ್ಡ ಶಂಕೆಯಿದೆ. ಹಾಗೆ ಮನಸ್ಸಿನಲ್ಲಿ ತೃಪ್ತಿಯೂ ಮತ್ತು ಹೃದಯದಲ್ಲಿ ಆನಂದವೂ ಉಂಟಾಗುತ್ತಿದೆ.
ಬ್ರೂಯಾಶ್ಚೈನಂ ಕಥಾಂತೇ ತ್ವಂ ಪರ್ಣಾದವಚನಂ ಯಥಾ |
ಪ್ರತಿವಾಕ್ಯಂ ಚ ಸುಶ್ರೋಣಿ ಬುದ್ಧ್ಯೇಥಾಸ್ತ್ವಮನಿಂದಿತೇ ॥4॥
ಎಲೌ ಸುಶ್ರೋಣಿಯೇ, ಸ್ವಲ್ಪಮಾತನಾಡಿದ ಮೇಲೆ ನೀನು ಪರ್ಣಾದವಚನಗಳನ್ನು ಅವನ ಎದುರಿಗೆ ಹೇಳು ಅನಿಂದಿತೆಯೇ ಪ್ರತಿವಾಕ್ಯದಲ್ಲಿಯೂ ಅವನ ಪ್ರತಿಕ್ರಿಯೆಯನ್ನು ಗಮನಿಸು.
ಏವಂ ಸಮಾಹಿತಾ ಗತ್ವಾ ದೂತೀ ವಾಕ್ಯಮಥಾಬ್ರವೀತ್ |
ದಮಯಂತ್ಯಪಿ ಕಲ್ಯಾಣೀ ಪ್ರಾಸಾದಸ್ಥಾಽನ್ವವೈಕ್ಷತ ॥5॥
ಹೀಗೆ ಸಮಾಧಾನ ಪಡಿಸಲ್ಪಟ್ಟ ದೂತಿಯು ಬಾಹುಕನ ಬಳಿಗೆ ಹೋಗಿ ಅವನನ್ನು ಮಾತನಾಡಿಸಿದಳು. ಕಲ್ಯಾಣಿಯಾದ ದಮಯಂತಿಯೂ ಸಹ ಉಪ್ಪರಿಗೆಯನ್ನು ಏರಿ ಅವರನ್ನು ನೋಡಿದಳು.
ಸ್ವಾಗತಂ ತೇ ಮನುಷ್ಯೇಂದ್ರ ಕುಶಲಂ ತೇ ಬ್ರವೀಮ್ಯಹಮ್ |
ದಮಯಂತ್ಯಾ ವಚಃ ಸೌಮ್ಯ ನಿಬೋಧ ಭರತರ್ಷಭ ॥6॥
ಮನುಷ್ಯೇಂದ್ರನೇ, ನಿನಗೆ ಸ್ವಾಗತ. ನಿನಗೆ ನಾನು ಕುಶಲವನ್ನು ಕೋರುತ್ತಿದ್ದೇನೆ. ಭರತರ್ಷಭನೇ ಸಜ್ಜನನೇ ದಮಯಂತಿಯ ಮಾತುಗಳನ್ನು ಕೇಳು.
ಕದಾ ವೈ ಪ್ರಸ್ಥಿತಾ ಯೂಯಂ ಕಿಮರ್ಥಮಿಹ ಚಾಗತಾಃ |
ತತ್ತ್ವಂ ಬ್ರೂಹಿ ಯಥಾನ್ಯಾಯಂ ವೈದರ್ಭೀ ಶ್ರೋತುಮಿಚ್ಛತಿ ॥7॥
ನೀವು ಯಾವಾಗ ಹೊರಟಿರಿ ಏತಕ್ಕಾಗಿ ಇಲ್ಲಿಗೆ ಬಂದಿರಿ? ನಿಜವನ್ನು ಹೇಳು. ದಮಯಂತಿಯು ಕೇಳಲು ಬಯಸುತ್ತಾಳೆ.(ಎಂದು ಹೇಳಿದಳು.)
ಶ್ರುತಃ ಸ್ವಯಂವರೋ ರಾಜ್ಞಾ ಕೌಸಲೇನ ಯಶಸ್ವಿನಾ |
ದ್ವಿತೀಯೋ ದಮಯಂತ್ಯಾ ವೈ ಶ್ವೋಭೂತ ಇತಿ ಭಾಮಿನಿ ॥8॥
ಶ್ರುತ್ವಾ  ತಂ ಪ್ರಸ್ಥಿತೋ ರಾಜಾ ಶತಯೋಜನಯಾಯಿಭಿಃ |
ಹಯೈರ್ವಾತಜವೈರ್ಮುಖ್ಯೈರಹಮಸ್ಯ ಚ ಸಾರಥಿಃ ॥9॥
ಕೀರ್ತಿಶಾಲಿಯಾದ ಕೋಸಲಾಧಿಪತಿಯಾದ ಋತುಪರ್ಣನು ನಾಳೆಯ ದಿವಸ ದಮಯಂತಿಯ ಎರಡನೆಯ ಸ್ವಯಂವರವೆಂಬ

ವಾರ್ತೆಯನ್ನು ಕೇಳಿದನು. ಎಲೌ ಭಾಮಿನಿಯೇ ಅದನ್ನು ಕೇಳಿ ರಾಜನು ನೂರು ಯೋಜನ ಹೋಗಬಲ್ಲ ವಾಯುವೇಗವುಳ್ಳ ಅಶ್ವಗಳನ್ನು ಹೂಡಿದ ರಥದಲ್ಲಿ ಇಲ್ಲಿಗೆ ಬಂದಿದ್ದಾನೆ. ನಾನು ಅವನ ಸಾರಥಿ(ಎಂದು ಬಾಹುಕನು ಹೇಳಿದನು.)
ಕೇಶಿನೀ
ಅಥ ಯೋಽಸೌ ತೃತೀಯೋ ವಃ ಸ ಕೃತಃ ಕಸ್ಯ ವಾ ಪುನಃ |
ತ್ವಂ ಚ ಕಸ್ಯ ಕುತಶ್ಚೇದಂ ತ್ವಯಿ ಕರ್ಮ ಸಮಾಹಿತಮ್ ॥10॥
ನಿಮ್ಮ ಜೊತೆಯಲ್ಲಿದ್ದ ಮೂರನೆಯನಾದ ವ್ಯಕ್ತಿಯು ಎಲ್ಲಿಂದ ಬಂದಿದ್ದಾನೆ ಮತ್ತು ಅವನು ಯಾರ ಪುತ್ರ ನೀನು ಸಹಯಾರ ಪುತ್ರ ಎಲ್ಲಿಂದ ಬಂದಿದ್ದೀಯೆ? ನೀನು ಏಕೆ ಈ ಸಾರಥ್ಯವನ್ನು ಮಾಡುತ್ತಿದ್ದೀಯೆ?
ಬಾಹುಕಃ
ಪುಣ್ಯಶ್ಲೋಕಸ್ಯ ವೈ ಸೂತೋ ವಾರ್ಷ್ಣೇಯ ಇತಿ ವಿಶ್ರುತಃ |
ಸ ನಳೇ ವಿದ್ರುತೇ ಭದ್ರೇ ಭಾರ್ಗಸ್ವರಿಮುಪಸ್ಥಿತಃ ॥11॥
ಮೂರನೆಯ ವ್ಯಕ್ತಿಯು ಪುಣ್ಯಶ್ಲೋಕನಾದ ನಳನ ಸೂತ. ಅವನು ವಾರ್ಷ್ಣೇಯನೆಂದು ಪ್ರಖ್ಯಾತನಾದ್ದಾನೆ. ಭದ್ರೆಯೇ ನಳನು ಓಡಿಹೋದಮೇಲೆ ಅವನು ಋತುಪರ್ಣನನ್ನು ಆಶ್ರಯಿಸಿದ್ದಾನೆ.
ಅಹಮಪ್ಯನ್ನಕುಶಲಃ ಸೂತತ್ವೇ ಚ ವಿನಿಷ್ಠಿತಃ |
ಋತುಪರ್ಣೇನ ಸಾರಥ್ಯೇ ಭೋಜನೇ ಚ ವೃತಃ ಸ್ವಯಮ್ ॥12॥
ನಾನು ಸಹ ಪಾಕವನ್ನು ಮಾಡುವುದರಲ್ಲಿಯೂ ಮತ್ತು ಸೂತಕಾರ್ಯದಲ್ಲಿಯೂ ಪರಿಣತನಾದವನು. ಋತುಪರ್ಣನು ತಾನಾಗಿಯೇ ನನ್ನನ್ನು ತನ್ನ ಸಾರಥ್ಯದಲ್ಲಿಯೂ ಮತ್ತು ಭೋಜನದಲ್ಲಿಯೂ ನಿಯೋಜಿಸಿದ್ದಾನೆ.
ಕೇಶಿನೀ
ಅಥ ಜಾನಾತಿ ವಾರ್ಷ್ಣೇಯಃ ಕ್ವನು ರಾಜಾ ಗತೋ ನಳಃ |
ಕಥಂ ಚ ತ್ವಯಿ ವೈ ತೇನ ಕಥಿತಂ ಸ್ಯಾತ್ ತು ಬಾಹುಕ ॥13॥
ಆ ವಾರ್ಷ್ಣೇಯನಿಗಾದರೂ ನಳಮಹಾರಾಜನು ಎಲ್ಲಿಗೆ ಹೋದನೆಂದು ತಿಳಿದಿದಿಯೇ? ಬಾಹುಕನೇ ನಿನಗಾದರೂ ಆ ವಾರ್ಷ್ಣೇಯನು ಈ ವಿಷಯವನ್ನು ಹೇಗೆ ತಿಳಿಸಿದ್ದಾನೆ?
ಬಾಹುಕಃ
ಇಹೈವ ಪುತ್ರೌ ನಿಕ್ಷಿಪ್ಯ ನಳಸ್ಯ ಶುಭಕರ್ಮಣಃ |
ಗತಸ್ತತೋ ಯಥಾಕಾಮಂ ನೈಷ ಜಾನಾತಿ ನೈಷಧಮ್ ॥14॥
ಶುಭಕರ್ಮನಾದ ನಳನ ಇಬ್ಬರು ಮಕ್ಕಳನ್ನು ಇಲ್ಲಿಯೇ ಬಿಟ್ಟು ವಾರ್ಷ್ಣೇಯನು ತನಗೆ ಇಷ್ಟ ಬಂದಂತೆ ಹೊರಟುಹೋದನು. ಅವನಿಗೆ ನಳನ ಪರಿಸ್ಥಿತಿಯು ತಿಳಿದಿಲ್ಲ.
ನ ಚಾನ್ಯಃ ಪುರುಷಃ ಕಶ್ಚಿತ್ ನಳಂ ವೇತ್ತಿ ಯಶಸ್ವಿನಿ |
ಗೂಢಶ್ಚರತಿ ಲೋಕೇಶಸ್ಮಿನ್ ನಷ್ಟರೂಪೋ ಮಹೀಪತಿಃ ॥15॥
ಯಶಸ್ವಿನಿಯೇ ಬೇರೆ ಯಾವ ಪುರುಷನೂ ಈ ನಳನನ್ನು ತಿಳಿದಿಲ್ಲ. ಆ ರಾಜನು ತನ್ನ ರೂಪವನ್ನು ಕಳೆದುಕೊಂಡು ಈ ಲೋಕದಲ್ಲಿ ಯಾರಿಗೂ ತಿಳಿಯದಂತೆ ಸಂಚರಿಸುತ್ತಿದ್ದಾನೆ.
ಆತ್ಮೈವ ತು ನಳಂ ವೇತ್ತಿ ಯಾ ಚ ಸಾ ತದನಂತರಾ |
ನ ಚೈವ ತಾನಿ ಲಿಂಗಾನಿ ನಳಂ ಶಂಸಂತಿ ಕರ್ಹಿಚಿತ್ ॥16॥
ನಳನು ತಾನೇ ತನ್ನನ್ನು ತಿಳಿದಿದ್ದಾನೆ. ನಳನ ಆಂತರಿಕವಾದ ಬುದ್ಧಿಯು ನಳನನ್ನು ತಿಳಿದಿದೆ. ನಳನ ಚಿಹ್ನೆಗಳು ಅವನು ನಳನೆಂದು ಯಾವ ರೀತಿಯಿಂದಲೂ ತೋರಿಸಿಕೊಡುವುದಿಲ್ಲ.
ಕೇಶಿನೀ
ಯೋಽಸಾವಯೋಧ್ಯಾಂ ಗತವಾನ್ ಪ್ರಥಮಂ ಬ್ರಾಹ್ಮಣಸ್ತದಾ |
ಇಮಾನಿ ನಾರೀವಾಕ್ಯಾನಿ ಕಥಯಾನಃ ಪುನಃ ಪುನಃ ॥17॥
ಮೊದಲು ಅಯೋಧ್ಯೆಗೆ ಬಂದ ಬ್ರಾಹ್ಮಣನು ಈ ನಾರೀ ವಾಕ್ಯಗಳನ್ನು ಪುನಃಪುನಃ ಹೇಳುತ್ತಿದ್ದನಷ್ಟೆ.
ಕ್ವನು ತ್ವಂ ಕಿತವಚ್ಛಿತ್ತ್ವಾ ವಸ್ತ್ರಾರ್ಧಂ ಪ್ರಸ್ಥಿತೋ ಮಮ |
ಉತ್ಸೃಜ್ಯ ವಿಪಿನೇ ಸುಪ್ತಾಮನುರಕ್ತಾಂ ಪ್ರಿಯಾಂ ಪ್ರಿಯ ॥18॥
ಎಲೈ ಪ್ರಿಯನೇ ವಂಚಕನೇ ನನ್ನ ಅರ್ಧವಸ್ತ್ರವನ್ನು ಹರಿದುಕೊಂಡು ನಿನ್ನಲ್ಲಿ ಅನುರಕ್ತಳಾದ ನಿದ್ರಿಸುತ್ತಿದ್ದ ನನ್ನನ್ನು ಕಾಡಿನಲ್ಲಿ ಬಿಟ್ಟು ಎಲ್ಲಿಗೆ ಹೋದೆ?
ಸಾ ವೈ ಯಥಾ ಸಮಾದಿಷ್ಟಾ ತತ್ರಾಽಽಸ್ತೇ ತ್ವತ್ಪ್ರಿಯೈಷಿಣೀ |
ದಹ್ಯಮಾನಾ ದಿವಾರಾತ್ರಂ ವಸ್ತ್ರಾರ್ಧೇನಾಭಿಸಂವೃತಾ ॥19॥
ಅವಳಾದರೋ ನಿನ್ನ ಆದೇಶದಂತೆ ನಿನ್ನ ಪ್ರಿಯವನ್ನೇ ಬಯಸುತ್ತಾ ಅರ್ಧವಸ್ತ್ರದಿಂದ ಆವೃತಳಾಗಿ ಹಗಲೂ ರಾತ್ರಿಯೂ ದುಃಖದಿಂದ ಬೇಯುತ್ತಾ ನೀನು ಹೇಳಿದ ಕಡೆಯಲ್ಲಿಯೇ ಇದ್ದಾಳೆ.
ತಸ್ಯಾ ರುದಂತ್ಯಾಃ ಸತತಂ ತೇನ ದುಃಖೇನ ಪಾರ್ಥಿವ |
ಪ್ರಸಾದಂ ಕುರು ವೈ ವೀರ ಪ್ರತಿವಾಕ್ಯಂ ಪ್ರಯಚ್ಛ ಚ ॥20॥
ಎಲೈ ರಾಜನೇ ಯಾವಾಗಲೂ ದುಃಖದಿಂದ ಅಳುತ್ತಿರುವ ಅವಳಿಗೆ ಅನುಗ್ರಹವನ್ನುಮಾಡು. ಎಲೈ ವೀರನೇ ಉತ್ತರವನ್ನು ನೀಡು.
ತಸ್ಯಾಸ್ತತ್ಪ್ರಿಯಮಾಖ್ಯಾನಂ ಪ್ರಬ್ರುವೀಹಿ ಮಹಾಮತೇ |

ತದೇವ ವಾಕ್ಯಂ ವೈದರ್ಭೀ ಶ್ರೋತುಮಿಚ್ಛತ್ಯನಿಂದಿತಾ ॥21॥
ಮಹಾಮೇಧಾವಿಯೇ ಅವಳಿಗೆ ಪ್ರಿಯವಾದ ಆ ಮಾತುಗಳನ್ನು ಹೇಳು. ಅನಿಂದಿತಳಾದ ವೈದರ್ಭಿಯು ಆ ಮಾತುಗಳನ್ನೇ ಕೇಳಲು ಇಷ್ಟಪಡುತ್ತಾಳೆ.
ಏತಚ್ಛ್ರುತ್ವಾ ಪ್ರತಿವಚಸ್ತಸ್ಯ ದತ್ತಂ ತ್ವಯಾ ಕಿಲ ।
ಯತ್ಪುರಾ ತತ್ಪುನಸ್ತ್ವತ್ತೋ ವೈದರ್ಭೀ ಶ್ರೋತುಮಿಚ್ಛತಿ ॥22॥
ಎಲೈ ಬಾಹುಕನೇ ಈ ನಾರೀವಾಕ್ಯಗಳನ್ನು ಕೇಳಿ ನೀನು ಉತ್ತರವನ್ನು ಕೊಟ್ಟೆಯಷ್ಟೆ? ಆ ಉತ್ತರವನ್ನು ದಮಯಂತಿಯು ಇನ್ನೊಮ್ಮೆ ನಿನ್ನಿಂದ ಕೇಳಲು  ಬಯಸುತ್ತಾಳೆ.
ಬೃಹದಶ್ವಃ
ಏವಮುಕ್ತಸ್ಯ ಕೇಶಿನ್ಯಾ ನಳಸ್ಯ ಕುರುನಂದನ ।
ಹೃದಯಂ ವ್ಯಥಿತಂ ಚಾಸೀದ್ ಅಶ್ರುಪೂರ್ಣೇ ಚ ಲೋಚನೇ ॥23॥
ಎಲೈ ಕುರುನಂದನನೇ ಕೇಶಿನಿಯಿಂದ  ಹೀಗೆ ಹೇಳಲ್ಪಟ್ಟ ನಳನ ಹೃದಯವು ದುಃಖದಿಂದ ತುಂಬಿತು. ಅವನ ಕಣ್ಣುಗಳು ಕಣ್ಣೀರಿನಿಂದ ತುಂಬಿದವು.
ಸ ನಿಗೃಹ್ಯಾತ್ಮನೋ ದುಃಖಂ ದಹ್ಯಮಾನೋ ಮಹೀಪತಿಃ ।
ಬಾಷ್ಪಸಂದಿಗ್ಧಯಾ ವಾಚಾ ಪುನರೇವೇದಮಬ್ರವೀತ್ ॥24॥
ಆ ರಾಜನು ತನ್ನ ದುಃಖವನ್ನು ನಿಗ್ರಹಿಸಿಕೊಂಡು ಮನಸ್ಸಿನಲ್ಲಿಯೇ ದುಃಖದಿಂದ ಬೇಯುತ್ತಾ ಬಾಷ್ಪಸಂದಿಗ್ಧವಾದ ಮಾತುಗಳಿಂದ ಪುನಃ ಹೀಗೆ ಮಾತನಾಡಿದನು.
ಬಾಹುಕಃ
ವೈಷಮ್ಯಮಪಿ ಸಂಪ್ರಾಪ್ತಾ ಗೋಪಯಂತಿ ಕುಲಸ್ತ್ರಿಯಃ ।
ಆತ್ಮಾನಮಾತ್ಮನಾ ಸತ್ಯೋ ಜಿತಃ ಸ್ವರ್ಗೋ ನ ಸಂಶಯಃ ॥25॥
ಕುಲಸ್ತ್ರೀಯರಾದ ಸಾಧ್ವಿಯರು ಸಂಕಟದಲ್ಲಿ ಸಿಲುಕಿದರೂ ತಮ್ಮನ್ನು ತಾವೇ ರಕ್ಷಿಸಿಕೊಳ್ಳುತ್ತಾರೆ. ಅವರು ಸ್ವರ್ಗವನ್ನು ಜಯಸಿದ್ದಾರೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ರಹಿತಾ ಭರ್ತೃಭಿಶ್ಚಾಪಿ ನ ಕ್ರುಧ್ಯಂತಿ ಕದಾಚನ ।
ಪ್ರಾಣಾಂಶ್ಚಾರಿತ್ರಕವಚಾ ಧಾರಯಂತೀಹ ಸತ್‌ಸ್ತ್ರಿಯಃ ॥26॥
ಅವರು ತಮ್ಮ ಪತಿಗಳಿಂದ ವಿಯೋಗವನ್ನು ಪಡೆದರೂ ಎಂದೂ ಸಿಟ್ಟುಮಾಡುವುದಿಲ್ಲ. ಸಾಧ್ವಿಸ್ತ್ರೀಯರು ತಮ್ಮ ಶೀಲದಿಂದಲೇ ರಕ್ಷಿತರಾಗಿ ಇಲ್ಲಿ ಪ್ರಾಣವನ್ನು ಧರಿಸಿರುತ್ತಾರೆ.
ವಿಷಮಸ್ಥೇನ ಮೂಢೇನ ಪರಿಭ್ರಷ್ಟಸುಖೇನ ಚ ।
ಯತ್ ಸಾ ತೇನ ಪರಿತ್ಯಕ್ತಾ ತತ್ರ ನ ಕ್ರೋದ್ಧುಮರ್ಹತಿ ॥27॥
ಸಂಕಟಕ್ಕೆ ಸಿಲುಕಿದವನೂ ಮೂಢನೂ ಸುಖಭ್ರಷ್ಟನೂ ಆದ ಅವನಿಂದ ಪರಿತ್ಯಕ್ತಳಾದ ಅವಳು ಆ ವಿಷಯದಲ್ಲಿ ಕೋಪವನ್ನು ಮಾಡಬಾರದು.
ಪ್ರಾಣಯಾತ್ರಾಂ ಪರಿಪ್ರೇಪ್ಸೋಃ ಶಕುನೈರ್ಹೃತವಾಸಸಃ ।
ಆಧಿಭಿರ್ದಹ್ಯಮಾನಸ್ಯ ಶ್ಯಾಮಾ ನ ಕ್ರೋದ್ಧುಮರ್ಹತಿ ॥28॥
ಶರೀರಯಾತ್ರೆಯನ್ನು ಪರಿರಕ್ಷಿಸಲು ಪ್ರಯತ್ನಪಟ್ಟು,ಹೊಂದಿದ್ದ ವಸ್ತ್ರವನ್ನು ಪಕ್ಷಿಗಳಿಂದ ಕಳೆದುಕೊಂಡು ಮನೋವ್ಯಥೆಯಿಂದ ಬೆಂದುಹೋಗುತ್ತಿರುವ ಅವನ ಮೇಲೆ ಮಧ್ಯವಯಸ್ಸಿನ  ಯುವತಿಯಾದ ಅವಳು ಕ್ರೋಧವನ್ನು ಮಾಡಬಾರದು.
ಸತ್ಕೃತಾಽಸತ್ಕೃತಾ ವಾಽಪಿ ಪತಿಂ ದೃಷ್ಟ್ವಾ ತಥಾಗತಮ್ ।
ಭ್ರಷ್ಟರಾಜ್ಯಂ ಶ್ರಿಯಾ ಹೀನಂ ಕ್ಷುಧಿತಂ ವ್ಯಸನಾಪ್ಲುತಮ್ ॥29॥
ಸತ್ಕೃತಳಾಗಲಿ ಅಥವಾ ಇಲ್ಲದಿರಲಿ, ರಾಜ್ಯವನ್ನು ಕಳೆದುಕೊಂಡು ಸಂಪತ್ತಿನಿಂದ ಹೀನನಾಗಿ ಹಸಿವಿನಿಂದ ಬಳಲಿ ವ್ಯಸನದಲ್ಲಿ ಮುಳುಗಿಹೋದ ಅಂತಹ ಪತಿಯನ್ನು  ನೋಡಿ ಎಂದೂ ಕ್ರೋಧವನ್ನು ಮಾಡಬಾರದು.
ಏವಂ ಬ್ರುವಾಣಸ್ತದ್ವಾಕ್ಯಂ ನಳಃ ಪರಮದುಃಖಿತಃ ।
ನ ಬಾಷ್ಪಮಶಕತ್ ಸೋಢುಂ ಪ್ರುರುರೋದ ಚ ಭಾರತ ॥30॥
ಎಲೈ ಭಾರತನೇ ಪರಮದುಃಖಿತನಾದ ನಳನು ಹೀಗೆ ಮಾತನಾಡುತ್ತಾ ತನ್ನ ಕಣ್ಣೀರನ್ನು ತಡೆಯಲು ಶಕ್ತನಾಗದೆ ಗಟ್ಟಿಯಾಗಿ ಅತ್ತನು.
ತತಃ ಸಾ ಕೇಶೀನೀ ಗತ್ವಾ  ದಮಯಂತ್ಯೈ ನ್ಯವೇದಯತ್ ।
ತತ್ ಸರ್ವಂ ಕಥಿತಂ ಚೈವ ವಿಕಾರಂ ಚೈವ ಭಾಮಿನೀ ॥31॥
ಅನಂತರ ಆ ಭಾಮಿನಿಯಾದ ಕೇಶಿನಿಯು ಹೋಗಿ ದಮಯಂತಿಗೆ ನಡೆದ ಎಲ್ಲಾ ವಿಷಯವನ್ನು ಮತ್ತು ಬಾಹುಕನ ಪ್ರತಿಕ್ರಿಯೆಯನ್ನು (ವಿಕಾರವನ್ನು) ತಿಳಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ಅರವತ್ತೊಂಬತ್ತನೆಯ ಅಧ್ಯಾಯ
(ದಮಯಂತಿಯಿಂದ ಕೇಶಿನಿಯ ಮೂಲಕ ಬಾಹುಕನ ಪರೀಕ್ಷೆ)

ಬೃಹದಶ್ವಃ
ದಮಯಂತೀ ತು ತಚ್ಛ್ರುತ್ವಾ  ಭೃಶಂ ಶೋಕಪರಾಯಣಾ |
ಶಂಕಮಾನಾ ನಳಂ ತಂ ವೈ ಕೇಶಿನೀಮಿದಮಬ್ರವೀತ್ ॥1॥
ದಮಯಂತಿಯು ಆ ಮಾತುಗಳನ್ನು ಕೇಳಿ ಬಹಳ ಶೋಕದಿಂದ ಕೂಡಿದವಳಾಗಿ ಬಾಹುಕನು ನಳನೆಂದು ಶಂಕಿಸಿತ್ತಾ ಪುನಃ ಕೇಶಿನಿಯನ್ನು ಕುರಿತು ಹೀಗೆ ಮಾತಮಾಡಿದಳು.
ಗಚ್ಛ ಕೇಶಿನಿ ಭೂಯಸ್ತ್ವಂ ಪರೀಕ್ಷಾಂ ಕುರು ಬಾಹುಕೇ |
ಅಬ್ರುವಾಣಾ ಸಮೀಪಸ್ಥಾ ಚರಿತಾನ್ಯಸ್ಯ ಲಕ್ಷಯ ॥2॥
ಕೇಶಿನಿಯೆ ನೀನು ಮತ್ತೆ ಹೋಗಿ ಬಾಹುಕನ ಸಮೀಪದಲ್ಲಿ ಇದ್ದು ಏನೂ ಮಾತನ್ನಾಡದೆ ಅವನ ಚೇಷ್ಟೆಗಳನ್ನು ಗಮನಿಸಿ ಅವನನ್ನು ಗಮನಿಸು.
ಯದಾ ಚ ಕಿಂಚಿತ್ ಕುರ್ಯಾತ್ ಸ ಕಾರಣಂ ತತ್ರ ಭಾಮಿನಿ |
ತತ್ರ ಸಂಚೇಷ್ಟಮಾನಸ್ಯ ಸಂಲಕ್ಷ್ಯಂ ತೇ ಹಿ ಚೇಷ್ಟಿತಮ್ ॥3॥
ಎಲೌ ಭಾಮಿನಿಯೇ, ಅವನು ಏನು ಮಾಡಿದರೂ ಅದಕ್ಕೆ ಕಾರಣವನ್ನು ತಿಳಿ. ಮತ್ತು ಅವನು ಏನೇನು ಮಾಡುತ್ತಾನೆಂದು ಎಲ್ಲವನ್ನೂ ಗಮನಿಸು.
ನ ಚಾಸ್ಯ ಪ್ರತಿಬಂಧೇನ ದೇಯೋಽಗ್ನಿರಪಿ ಭಾಮಿನಿ |
ಯಾಚತೇ ನ ಜಲಂ ದೇಯಂ ಸತ್ಯಮತ್ವರಮಾಣಯಾ ॥4॥
ಭಾಮಿನಿಯೇ ಅವನು ಒತ್ತಾಯಮಾಡಿದರೂ ಅವನಿಗೆ ಅಗ್ನಿಯನ್ನು ಕೊಡಬಾರದು.  ಮತ್ತು  ಅವನು ಜಲವನ್ನು ಯಾಚಿಸಿದರೂ ಶೀಘ್ರವಾಗಿ ಅವನಿಗೆ ಜಲವನ್ನು ಕೊಡಬಾರದು.
ಏತತ್ ಸರ್ವಂ ಸಮೀಕ್ಷ್ಯ ತ್ವಂ ಚರಿತಂ ಮೇ ನಿವೇದಯ |
ಯಚ್ಚಾನ್ಯದಪಿ ಪಶ್ಯೇಥಾಃ ತಚ್ಚಾಖ್ಯೇಯಂ ತ್ವಯಾ ಮಮ ॥5॥
ಇವೆಲ್ಲವನ್ನೂ ಗಮನಿಸಿ ನನಗೆ ಅವನಚೇಷ್ಟೆಗಳನ್ನು ನಿವೇದಿಸು ಮತ್ತು ಬೇರೆ ಏನನ್ನು ನೋಡುತ್ತೀಯೋ ಅದನ್ನು ನನಗೆ ತಿಳಿಸಬೇಕು.
ದಮಯಂತ್ಯೈವಮುಕ್ತಾ ಸಾ ಜಗಾಮಾಥಾಶು ಕೇಶಿನೀ |
ನಿಶಾಮ್ಯ ಚ ಹಯಜ್ಞಸ್ಯ ಲಿಂಗಾನಿ ಪುನರಾಗಮತ್ ॥6॥
ದಮಯಂತಿಯಿಂದ ಹೀಗೆ ಹೇಳಲ್ಪಟ್ಟ ಆ ಕೇಶಿನಿಯು ಅವನಬಳಿಗೆ ಹೋಗಿ ಅಶ್ವವಿದ್ಯೆಯನ್ನು ಬಲ್ಲ  ಅವನ ಚೇಷ್ಟೆಗಳನ್ನು ಗಮನಿಸಿ ಪುನಃ ದಮಯಂತಿಯ ಬಳಿಗೆ ಬಂದಳು.
ಸಾ ತತ್ ಸರ್ವಂ ಯಥಾವೃತ್ತಂ ದಮಯಂತ್ಯೈ ನ್ಯವೇದಯತ್ |
ನಿಮಿತ್ತಂ ಯತ್ತದಾದಿಷ್ಟಂ ಬಾಹುಕೇ ದಿವ್ಯಮಾನುಷಮ್ ॥7॥
ಅವಳು  ತನಗೆ ಕೊಟ್ಟ ಆದೇಶಕ್ಕೆ ಅನುಗುಣವಾಗಿ ಬಾಹುಕನಲ್ಲಿ ದಿವ್ಯ ಮತ್ತು ಮಾನುಷ ಚೇಷ್ಟೆಗಳನ್ನು ಗಮನಿಸಿ ದಮಯಂತಿಗೆ ನಡೆದುದೆಲ್ಲವನ್ನೂ ಯಥಾರ್ಥವಾಗಿ ಹೇಳಿದಳು.
ದೃಢಂ ಶುಚ್ಯುಪಚಾರೋಽಸೌ ನ ಮಯಾ ಮಾನುಷಃ ಕ್ವಚಿತ್ |
ದೃಷ್ಟಪೂರ್ವಃ ಶ್ರುತೋ ವಾಽಪಿ ದಮಯಂತಿ ತಥಾವಿಧಃ ॥8॥
ಅವನು ದಿವ್ಯವಾದ ಸಲಕರಣೆಗಳಿಂದ ಕೂಡಿದವನು. ದಮಯಂತಿಯೇ ನಾನು ಅಂತಹ ಮನುಷ್ಯನನ್ನು ಹಿಂದೆ ನೋಡಲೂ ಇಲ್ಲ ಅಥವಾ ಕೇಳಲೂ ಇಲ್ಲ.
ಹ್ರಸ್ವಮಾಸಾದ್ಯ ಸಂಚಾರಂ ನಾಸೌ ವಿನಮತೇ ಕ್ವಚಿತ್ |
ತಂ ತು ದೃಷ್ಟ್ವಾ ಯಥಾಸಂಗಮುತ್ಸರ್ಪತಿ ಯಥಾಸುಖಮ್ |
ಸಂಕಟೇಽಪ್ಯಸ್ಯ ಸುಮಹದ್ ವಿವರಂ ಕುರುತೇಽಧಿಕಮ್ ॥9॥
ಅವನು ಸಣ್ಣಬಾಗಿಲಿನ ಬಳಿಗೆ ಹೋದರೂ ಬಗ್ಗುವುದಿಲ್ಲ. ಅವನು ಹತ್ತಿರಕ್ಕೆ ಬಂದತಕ್ಷಣ ಅವನು ಸುಖವಾಗಿ ಪ್ರವೇಶಿಸುವಂತೆ ಬಾಗಿಲಿನ ಮೇಲ್ಭಾಗವೇ ಮೇಲಕ್ಕೆ ಹೋಗಿ ಅವನು ಪ್ರವೇಶಿಸುವುದಕ್ಕೆ ಬೇಕಾದಷ್ಟು ದೊಡ್ಡ ವಿವರವನ್ನು ಕೊಡುತ್ತದೆ.
ಋತುಪರ್ಣಸ್ಯ ಚಾರ್ಥಾಯ ಭೋಜನೀಯಮನೇಕಶಃ |
ಪ್ರೇಷಿತಂ ತತ್ರ ಚಾಜ್ಞಾಯ ಮಾಂಸಂ ಸುಬಹು ಪಾಶವಮ್ ॥10॥
ಋತುವರ್ಣನಿಗೆ ಅನೇಕ ವಿಧವಾದ ಭೋಜನವನ್ನು ತಯಾರಿಸಲು ಆಜ್ಞಾಪಿಸಲ್ಪಟ್ಟು ಅವನಿಗೆ ಅನೇಕ ವಿಧವಾದ ಪಶುಗಳಮಾಂಸವು ಕಳುಹಿಸಲ್ಪಟ್ಟಿತು.
ತಸ್ಯ ಪ್ರಕ್ಷಾಲನಾರ್ಥಾಯ ಕುಂಭಸ್ತತ್ರೋಪಕಲ್ಪಿತಃ |
ಸ ತೇನಾವೇಕ್ಷಿತಃ ಕುಂಭಃ ಪೂರ್ಣ ಏವಾಭವತ್ ತದಾ ॥11॥
ಅವನಿಗೆ ಅಲ್ಲಿ ಮಾಂಸವನ್ನು ತೊಳೆಯಲು ಒಂದು ಕುಂಭವು ಇಡಲ್ಪಟ್ಟಿತ್ತು. ಅವನು ನೋಡಿದ ತಕ್ಷಣವೇ ಆಕುಂಭವು ಜಲದಿಂದ ಪೂರ್ಣವಾಯಿತು.
ತತಃ ಪ್ರಕ್ಷಾಲನಂ ಕೃತ್ವಾ ಸಮಧಿಶ್ರಿತ್ಯ ಬಾಹುಕಃ |
ತೃಣಮುಷ್ಟಿಂ ಸಮಾದಾಯ ಆವಿದ್ಯೈನಂ ಸಮಾದಧತ್ ॥12॥
ಅನಂತರ ಮಾಂಸವನ್ನು ತೊಳೆದು ಬಾಹುಕನು ಅದನ್ನು ಪಾತ್ರೆಯಲ್ಲಿ ಒಲೆಯಮೇಲೆ ಇಟ್ಟು ಒಂದು  ಹಿಡಿಹುಲ್ಲನ್ನು ತೆಗೆದುಕೊಂಡು ಅವನ್ನು ಕೊಡವಿ ಒಲೆಯಲ್ಲಿಟ್ಟನು.

ಅಥ ಪ್ರಜ್ವಲಿತಸ್ತತ್ರ ಸಹಸಾ ಹವ್ಯವಾಹನಃ |
ಏತಾನ್ಯದ್ಭುತಲಿಂಗಾನಿ ದೃಷ್ಟ್ವಾಽಹಂ ಭೃಶವಿಸ್ಮಿತಾ ॥13॥
ಆಗ ತಕ್ಷಣ ಅಲ್ಲಿ ಅಗ್ನಿಯು ಪ್ರಜ್ವಲಿಸಿದನು. ಇಂತಹ ಅದ್ಭುತ ಚಿಹ್ನೆಗಳನ್ನು ನೋಡಿ ನಾನು ಬಹಳ ಆಶ್ಚರ್ಯಗೊಂಡೆನು.
ಚೇಷ್ಟಿತಾನಿ ವಿಶಾಲಾಕ್ಷಿ ಬಾಹುಕಸ್ಯ ವಿಶೇಷತಃ |
ತಮದ್ಭುತತಮಂ ದೃಷ್ಟ್ವಾ ವಿಸ್ಮಿತಾಽಹಮಿಹಾಗತಾ ॥14॥
ಎಲೌ ವಿಶಾಲಾಕ್ಷಿಯೇ ಆ ಬಾಹುಕನ ವಿಶೇಷವಾದ ಅತ್ಯದ್ಭುತವಾದ ಚೇಷ್ಟೆಗಳನ್ನೂ ಅವನನ್ನೂ ಗಮನಿಸಿ ವಿಸ್ಮಯಗೊಂಡು ನಾನು ಇಲ್ಲಿಗೆ ಬಂದೆನು.
ಅನ್ಯಚ್ಚ ತಸ್ಮಿನ್ ಸುಮಹದಾಶ್ಚರ್ಯಂ ಲಕ್ಷಿತಂ ಮಯಾ |
ಯದಗ್ನಿಮಪಿ ಸಂಸ್ಪೃಶ್ಯ ನೈವ ದಹ್ಯತ್ಯಸೌ ಶುಭೇ ॥15॥
ಅವನಲ್ಲಿ ಇನ್ನೊಂದು ಮಹಾಶ್ಚರ್ಯವನ್ನು ಗಮನಿಸಿದೆನು. ಎಲೌ ಶುಭಳಾದವಳೇ ಅವನು ಕೈಯಿಂದ ಅಗ್ನಿಯನ್ನು ಮುಟ್ಟಿದರೂ ಅಗ್ನಿಯು ಅವನನ್ನು ಸುಡುವುದಿಲ್ಲ.
ಛಂದೇನ ಚೋದಕಂ ತಸ್ಯ ಭವತ್ಯಾವರ್ಜಿತಂ ಧ್ರುವಮ್ |
ಅತೀವ ಚಾನ್ಯತ್ ಸುಮಹದಾಶ್ಚರ್ಯಂ ದೃಷ್ಟವತ್ಯಹಮ್ ॥16॥
ಒಂದು ಹನಿಯೂ ನೀರಿಲ್ಲದ ಪಾತ್ರೆಯು ಅವನ ಸಂಕಲ್ಪದಿಂದಲೇ ನೀರಿನಿಂದ ಪೂರ್ಣವಾಗುತ್ತದೆ. ನಾನು ಇನ್ನೂ ಒಂದು ಮಹದಾಶ್ಚರ್ಯವನ್ನು ನೋಡಿದೆ.
ಯತ್ ಸ ಪುಷ್ಪಾಣ್ಯುಪಾದಾಯ ಹಸ್ತಾಭ್ಯಾಂ ಮಮೃದೇ ಶನೈಃ |
ಮೃದ್ಯಮಾನಾನಿ ಪುಷ್ಪಾಣಿ ಪಾಣಿಭ್ಯಾಂ ತೇನ ಭಾಮಿನಿ ॥17॥
ಭೂಯ ಏವ ಸುಗಂಧೀನಿ ಹೃಷಿತಾನಿ ಭವಂತಿ ಚ ॥18॥
ಅವನು ಪುಷ್ಪಗಳನ್ನು ತೆಗೆದುಕೊಂಡು ಎರಡು ಕೈಗಳಿಂದಲೂ ನಿಧಾನವಾಗಿ ಉಜ್ಜಿದರೂ ಸಹ ಎಲೌ ಭಾಮಿನಿಯೇ, ಅವನು ಕೈಗಳಿಂದ ಉಜ್ಜಿದ ಪುಷ್ಪಗಳು ಇನ್ನೂ ಹೆಚ್ಚು ಸುಗಂಧಯುಕ್ತವಾಗುತ್ತವೆ. ಮತ್ತು ಅರಳುತ್ತವೆ.
ದಮಯಂತೀ ತು ತಚ್ಛ್ರುತ್ವಾ ಪುಣ್ಯಶ್ಲೋಕಸ್ಯ ಚೇಷ್ಟಿತಮ್ |
ಅಮನ್ಯತ ನಳಂ ಪ್ರಾಪ್ತಂ ಕರ್ಮಚೇಷ್ಟಾಭಿಸೂಚಿತಮ್ ॥19॥
ದಮಯಂತಿಯಾದರೋ ಆ ಪುಣ್ಯಶ್ಲೋಕನ ಚೇಷ್ಟೆಗಳನ್ನು ಕೇಳಿ ಆ ಕರ್ಮಗಳಿಂದ ಮತ್ತು ಚೇಷ್ಟೆಗಳಿಂದ ಸೂಚಿತವಾದಂತೆ ನಳನೇ ಬಂದಿದ್ದಾನೆ ಎಂದು ಭಾವಿಸಿದಳು.
ಸಾ ಶಂಕಮಾನಾ ಭರ್ತಾರಂ ನಳಂ ಬಾಹುಕರೂಪಿಣಮ್ |
ಕೇಶಿನೀಂ ಶ್ಲಕ್ಷ್ಣಯಾ ವಾಚಾ ರುದಂತೀ ಪುನರಬ್ರವೀತ್ ॥20॥
ಅವಳು ತನ್ನ ಪತಿಯಾದ ನಳನೇ ಬಾಹುಕರೂಪದಲ್ಲಿ ಬಂದಿದ್ದಾನೆಂದು ಶಂಕಿಸುತ್ತಾ ಕೇಶಿನಿಯನ್ನು ಕುರಿತು ಅಳುತ್ತಾ ಮಧುರವಾದ ಮಾತುಗಳಿಂದ ಪುನಃ ಹೀಗೆ ಮಾತನಾಡಿದಳು.
ಪುನರ್ಗಚ್ಛ ಪ್ರಮತ್ತಸ್ಯ ಬಾಹುಕಸ್ಯ ಸುಸಂಸ್ಕೃತಮ್ |
ಮಹಾನಸಾಚ್ಛೃತಂ ಮಾಂಸಂ ಸಮಾದಾಯೈಹಿ ಭಾಮಿನಿ ॥21॥
ಎಲೌ ಭಾಮಿನಿಯೇ ಪುನಃ ಹೋಗಿ ಬಾಹುಕನು ಅಡುಗೆಯ ಮನೆಯಲ್ಲಿ ಬೇಯಿಸಿರುವ ಮಾಂಸವನ್ನು ಅವನಿಗೆ ತಿಳಿಯದಂತೆ ತೆಗೆದುಕೊಂಡು ಇಲ್ಲಿಗೆ ಬಾ.
ಸಾ ಗತ್ವಾ ಬಾಹುಕೇ ವ್ಯಗ್ರೇ ತನ್ಮಾಂಸಮಪಕೃಷ್ಯ ಚ |
ಅತ್ಯುಷ್ಣಮೇವ ತ್ವರಿತಾ ತತ್ಕ್ಷಣಂ ಪ್ರಿಯಕಾರಿಣೀ |
ದಮಯಂತ್ಯೈ ತತಃ ಪ್ರಾದಾತ್ ಕೇಶಿನೀ ಕುರುನಂದನ ॥22॥
ಎಲೈ ಕುರುನಂದನನನೇ, ಕೇಶಿನಿಯಾದರೋ ಅಡುಗೆ ಮನೆಗೆ ಹೋಗಿ ಬಾಹುಕನು ಅನ್ಯಮನಸ್ಕನಾಗಿದ್ದಾಗ ಬಿಸಿಯಾದ ಆ ಮಾಂಸದ ಸ್ವಲ್ಪಭಾಗವನ್ನು ತೆಗೆದುಕೊಂಡು ಶೀಘ್ರವಾಗಿ ದಮಯಂತಿಗೆ ಪ್ರಿಯವನ್ನು ಮಾಡುವವಳಾಗಿ ತಕ್ಷಣದಲ್ಲಿಯೇ ಬಂದು ದಮಯಂತಿಗೆ ಕೊಟ್ಟಳು.
ಸೋಚಿತಾ ನಳಸಿದ್ಧಸ್ಯ ಮಾಂಸಸ್ಯ ಬಹುಶಃ ಪುರಾ |
ಪ್ರಾಶ್ಯ ಮತ್ವಾ ನಳ ಸೂತಂ ಪ್ರಾಕ್ರೋಶದ್ ಭೃಶದುಃಖಿತಾ ॥23॥
ನಳನು ಮಾಡಿದ ಪಾಕವನ್ನು ಹಿಂದೆ ಅನೇಕ ಬಾರಿ ಸವಿದಿದ್ದ ಅವಳು ಆ ಮಾಂಸವನ್ನು ತಿಂದು ಆ ಬಾಹುಕನೇ ನಳನೆಂದು ನಿಶ್ಚಯಿಸಿ ದುಃಖದಿಂದ ವಿಲಾಪವನ್ನು ಮಾಡಿದಳು.
ವೈಕ್ಲಬ್ಯಂ ಪರಮಂ ಗತ್ವಾ ಪ್ರಕ್ಷಾಲ್ಯ ಚ ಮುಖಂ ತತಃ |
ಮಿಥುನಂ ಪ್ರೇಷಯಾಮಾಸ ಕೇಶಿನ್ಯಾ ಸಹ ಭಾರತ॥24॥
ಎಲೈ ಭಾರತನೇ ಬಹಳ ಸಂಕಟವನ್ನು ಹೊಂದಿ ಅನಂತರ ಮುಖವನ್ನು ತೊಳೆದುಕೊಂಡು ಕೇಶಿನಿಯ ಜೊತೆಯಲ್ಲಿ ತನ್ನ ಅವಳಿ ಮಕ್ಕಳನ್ನು ಬಾಹುಕನ ಬಳಿಗೆ ಕಳುಹಿಸಿದಳು.
ಇಂದ್ರಸೇನಾಂ ಸಹ ಭ್ರಾತ್ರಾ ಸಮಭಿಜ್ಞಾಯ ಬಾಹುಕಃ |
ಅಭಿದ್ರುತ್ಯ ತತೋ ರಾಜಾ ಪರಿಷ್ವಜ್ಯಾಂಕಮಾನಯತ್ ॥25॥
ಬಾಹುಕನು ಇಂದ್ರಸೇನನನ್ನು ಮತ್ತು ಇಂದ್ರಸೇನೆಯನ್ನು ಗುರುತಿಸಿ ಓಡಿಬಂದು ಅವರನ್ನು ಆಲಿಂಗಿಸಿ ತನ್ನ ತೊಡೆಯಮೇಲೆ ಕೂಡಿಸಿಕೊಂಡನು.

ಬಾಹುಕಸ್ತು ಸಮಾಸಾದ್ಯ ಸುತೌ ಸುರಸುತೋಪಮೌ |
ಭೃಶಂ ದುಃಖಪರೀತಾತ್ಮಾ ಸುಸ್ವರಂ ಪ್ರರುರೋದ ಹ ॥26॥
ಬಾಹುಕನು ದೇವತೆಯ ಮಕ್ಕಳಂತೆ ಇದ್ದ ಆ ಮಕ್ಕಳನ್ನು ಹೊಂದಿ ಬಹಳ ದುಃಖದಿಂದ ಪೀಡಿತನಾಗಿ ಸುಸ್ವರದಿಂದ ಅತ್ತನು.
ನೈಷಧೋ ದರ್ಶಯಿತ್ವಾ ತು ವಿಕಾರಮಸಕೃತ್ ತದಾ |
ಉತ್ಸೃಜ್ಯ ಸಹಸಾ ಪುತ್ರೌ ಕೇಶಿನೀಮಿದಮಬ್ರವೀತ್ ॥27॥
ನಳನು ಹೀಗೆ ತನ್ನ ವಿಕಾರಗಳನ್ನು ಅನೇಕಬಾರಿ ತೋರಿಸಿ ತನ್ನು ಮಕ್ಕಳನ್ನು ತಕ್ಷಣ ದೂರನಿಲ್ಲಿಸಿ ಕೇಶಿನಿಯನ್ನು ಕುರಿತು ಹೀಗೆ ಹೇಳಿದನು.
ಇದಂ ಸುಸದೃಶಂ ಭದ್ರೇ ಮಿಥುನಂ ಮಮ ಪುತ್ರಯೋಃ |
ತತೋ ದೃಷ್ಟ್ವೈವ ಸಹಸಾ ಬಾಷ್ಪಮುತ್ಸೃಷ್ಟವಾನಹಮ್ ॥28॥
ಭದ್ರೆಯೇ ಈ ಅವಳಿ ಮಕ್ಕಳು ನನ್ನ ಮಕ್ಕಳನ್ನು ಬಹುವಾಗಿ ಹೋಲುತ್ತಾರೆ. ಆದ್ದರಿಂದ ಅವರನ್ನು ನೋಡಿದ ತಕ್ಷಣ ನಾನು ಬಾಷ್ಪವನ್ನು ಸುರಿಸಿದೆ.
ಬಹುಶಃ ಸಂಪತಂತೀಂ ತ್ವಾಂ ಜನಃ ಶಂಕೇತ ದೋಷತಃ |
ವಯಂ ಚ ದೇಶಾತಿಥಯೋ ಗಚ್ಛ ಭದ್ರೇ ಯಥಾಸುಖಮ್ ॥29॥
ನೀನು ಪುನಃಪುನಃ ನನ್ನ ಬಳಿಗೆ ಬರುತ್ತಿದ್ದೀಯೆ.  ಜನರು ನಮ್ಮಲ್ಲಿ ದೋಷ ಶಂಕೆಯನ್ನು ಮಾಡಬಹುದು. ನಾವು ದೇಶಾತಿಥಿಗಳಾಗಿ ಬಂದವರು. ಆದ್ದರಿಂದ ಇಲ್ಲಿರಬೇಡ ಹೊರಟು ಹೋಗು. (ಎಂದು ಹೇಳಿದನು.)
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಅರವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತನೆಯ ಅಧ್ಯಾಯ
(ದಮಯಂತಿಯ ಮರ್ಮವಚನಗಳು, ಬಾಹುಕ ದಮಯಂತಿ ಸಮಾಗಮ.)
ಬೃಹದಶ್ವಃ
ಸರ್ವಂ ವಿಕಾರಂ ದೃಷ್ಟ್ವಾ ತು ಪುಣ್ಯಶ್ಲೋಕಸ್ಯ ಧೀಮತಃ |
ಆಗತ್ಯ ಕೇಶಿನೀ ಕ್ಷಿಪ್ರಂ ದಮಯಂತ್ಯೈ ನ್ಯವೇದಯತ್ ॥1॥
ಕೇಶಿನಿಯು ಪುಣ್ಯಶ್ಲೋಕನೂ ಮತ್ತು ಮೇಧಾವಿಯೂ ಆದ ಬಾಹುಕನ ಆ ಎಲ್ಲಾ ವಿಕಾರಗಳನ್ನೂ ನೋಡಿ ಬೇಗ ಹಿಂದಿರುಗಿ ಬಂದು ದಮಯಂತಿಗೆ ಎಲ್ಲವನ್ನೂ ತಿಳಿಸಿದಳು.
ದಮಯಂತೀ ತತೋ ಭೂಯಃ ಪ್ರೇಷಯಾಮಾಸ ಕೇಶಿನೀಮ್ |
ಮಾತುಃ ಸಕಾಶಂ ದುಃಖಾರ್ತಾ ನಳಶಂಕಾಸಮುತ್ಸುಕಾ ॥2॥
ಅನಂತರ ದಮಯಂತಿಯು ನಳನೆಂಬ ಆಶಂಕೆಯಿಂದ ಸಮುತ್ಸುಕಳಾಗಿ ದುಃಖದಿಂದ ಕೂಡಿದವಳಾಗಿ ಕೇಶಿನಿಯನ್ನು  ತನ್ನ ತಾಯಿಯಬಳಿಗೆ ಕಳುಹಿಸಿದಳು.
ಪರೀಕ್ಷಿತೋ ಮೇ ಬಹುಶೋ ಬಾಹುಕೋ ನಳಶಂಕಯಾ |
ರೂಪೇಮೇ ಸಂಶಯಸ್ತ್ವೇಕಃ ಸ್ವಯಮಿಚ್ಛಾಮಿ ವೇದಿತುಮ್ ॥3॥
ಬಾಹುಕನು ನಳನೆಂಬ ಶಂಕೆಯಿಂದ ನಾನು ಅನೇಕ ರೀತಿಯಿಂದ ಪರೀಕ್ಷೆಮಾಡಿದೆ. ನನಗೆ ರೂಪದ ವಿಷಯದಲ್ಲಿ ಮಾತ್ರ ಸಂಶಯವಿದೆ. ನಾನೇ ಹೋಗಿ ತಿಳಿದುಕೊಳ್ಳಲು ಬಯಸುತ್ತೇನೆ.
ಸ ವಾ ಪ್ರವೇಶ್ಯತಾಂ ಮಾತರ್ಮಾಂ ವಾಽನುಜ್ಞಾತುಮರ್ಹಸಿ |
ವಿದಿತಂ ವಾಽಥವಾಽಜ್ಞಾತಂ ಪಿತುರ್ಮೇ ಸಂವಿಧೀಯತಾಮ್ ॥4॥
ತಾಯಿಯೇ ಅವನಾದರೂ ನನ್ನ ಬಳಿಗೆ ಬರುವಂತೆಮಾಡು ಅಥವಾ ನನಗಾದರೂ ಅವನ ಬಳಿಗೆ ಹೋಗುವಂತೆ ಅನುಮತಿಯನ್ನು ಕೊಡು. ಇದು ನನ್ನ ತಂದೆಗೆ ತಿಳಿಯದಂತೆ ಅಥವಾ ತಿಳಿಯುವಂತೆ ಬೇಕಾದರೂ ಇದರ ವ್ಯವಸ್ಥೆಯನ್ನು ಮಾಡು.
ಏವಮುಕ್ತಾ ತು ವೈದರ್ಭ್ಯಾ ಸಾ ದೇವೀ ಭೀಮಮಬ್ರವೀತ್ |
ದುಹಿತುಸ್ತಮಭಿಪ್ರಾಯಮನ್ವಜಾನಾಚ್ಚ ಪಾರ್ಥಿವಃ ॥5॥
ಹೀಗೆ ದಮಯಂತಿಯಿಂದ ಹೇಳಲ್ಪಟ್ಟ ಅವಳ ತಾಯಿಯು ಭೀಮರಾಜನಿಗೆ ತಮ್ಮ ಮಗಳ ಅಭಿಪ್ರಾಯವನ್ನು ತಿಳಿಸಿದಳು. ರಾಜನು ಅದಕ್ಕೆ ತಮ್ಮ ಅನುಮತಿಯನ್ನು ನೀಡಿದನು.
ಸಾ ವೈ ಪಿತ್ರಾಽಭ್ಯನುಜ್ಞಾತಾ ಮಾತ್ರಾ ಚ ಕುರುನಂದನ |
ನಳಂ ಪ್ರವೇಶಯಾಮಾಸ ಯತ್ರ ತಸ್ಯಾಃ ಪ್ರತಿಶ್ರಯಃ ॥6॥
ಕುರುನಂದನನೇ ತಂದೆಯಿಂದಲೂ ಮತ್ತು ತಾಯಿಯಿಂದಲೂ ಅನುಮತಿಯನ್ನು ಪಡೆದ ದಮಯಂತಿಯು ತಾನು ಇರುವ ಸ್ಥಳಕ್ಕೆ ನಳನು ಪ್ರವೇಶಿಸುವಂತೆ ಮಾಡಿದಳು.
ತಾಂ ಚ ದೃಷ್ಟ್ವೈವ ಸಹಸಾ ದಮಯಂತೀಂ ನಳೋ ನೃಪಃ |
ಆವಿಷ್ಟೋ ದುಃಖಶೋಕಾಭ್ಯಾಂ ಬಭೂವಾಶ್ರುಪರಿಪ್ಲುತಃ ॥7॥
ದಮಯಂತಿಯನ್ನು ನೋಡಿದ ತಕ್ಷಣವೇ ನಳಮಹಾರಾಜನು ಒಮ್ಮೆಯೇ ದುಃಖಶೋಕಗಳಿಂದ ಕೂಡಿದವನಾಗಿ ಅಶ್ರುಗಳಿಂದ ತುಂಬಿದ ಕಣ್ಣುಗಳುಳ್ಳವನಾದನು.

ತತಃ ಕಾಷಾಯವಸನಾ ಜಟಿಲಾ ಮಲಪಂಕಿನೀ |
ದಮಯಂತೀ ಮಹಾರಾಜ ಬಾಹುಕಂ ವಾಕ್ಯಮಬ್ರವೀತ್ ॥8॥
ಎಲೈ ಮಹಾರಾಜನೇ ಆಗ ಕಾಷಾಯವನ್ನು ಧರಿಸಿದ ಜಟಿಲಳಾದ ಕಶ್ಮಲಸಹಿತ ಶರೀರದಿಂದ ಕೂಡಿದ್ದ ದಮಯಂತಿಯು ಬಾಹುಕನನ್ನು ಕುರಿತು ಮಾತನಾಡಿದಳು.
ದೃಷ್ಟಪೂರ್ವಸ್ತ್ವಯಾ ಕಶ್ಚಿದ್ ಧರ್ಮಜ್ಞೋ ನಾಮ ಬಾಹುಕ |
ಸುಪ್ತಾಮುತ್ಸೃಜ್ಯ ವಿಪಿನೇ ಗತೋ ಯಃ ಪುರುಷಃ ಸ್ತ್ರಿಯಮ್ ॥9॥
ಎಲೈ ಬಾಹುಕನೇ ನೀನು ಕಾಡಿನಲ್ಲಿ ಮಲಗಿದ ತನ್ನ ಹೆಂಡತಿಯನ್ನು ತೊರೆದು ಹೊರಟ ಧರ್ಮಜ್ಞನೆಂಬ ಪುರುಷನನ್ನು ಹಿಂದೆ ಎಂದಾದರೂ ನೋಡಿರುವೆಯಾ?
ಅನಾಗಸೀಂ ಪ್ರಿಯಾಂ ಭಾರ್ಯಾಂ ವಿಪಿನೇ ಶೋಕಕರ್ಶಿತಾಮ್ |
ಅಪಹಾಯ ತು ಕೋ ಗಚ್ಛೇತ್ ಪುಣ್ಯಶ್ಲೋಕಾದೃತೇ ನಳಾತ್ ॥10॥
ನಿರಪರಾಧಿನಿಯಾದ ಪ್ರಿಯಳಾದ ಶೋಕಕರ್ಶಿತಳಾದ ಪತ್ನಿಯನ್ನು ಕಾಡಿನಲ್ಲಿ ಬಿಟ್ಟು ಪುಣ್ಯಶೋಕನಾದ ನಳನಲ್ಲದೆ ಬೇರೆ ಯಾರು ಹೋಗಬಹುದು?
ಕಿಂನು ತಸ್ಯ ಮಯಾ ಬಾಲ್ಯಾದಪರಾದ್ಧಂ ಮಹೀಪತೇಃ |
ಯೋ ಮಾಮುತ್ಸೃಜ್ಯ ವಿಪಿನೇ ಗತವಾನ್ ನಿದ್ರಯಾ ಹೃತಾಮ್ ॥11॥
ನಿದ್ದೆ ಮಾಡುತ್ತಿದ್ದ ನನ್ನನ್ನು ಕಾಡಿನಲ್ಲಿ ತೊರೆದು ಹೋದ ಆ ರಾಜನಿಗೆ ನಾನು ಬಾಲ್ಯದಿಂದಲಾದರೂ ಏನು ಅಪರಾಧವನ್ನು ಮಾಡಿದ್ದೆ?
ಸಾಕ್ಷಾದ್ ದೇವಾನಪಾಹಾಯ ವೃತೋ ಯಃ ಸ ಮಯಾ ಕಿಲ |
ಅನುವ್ರತಾಂ ಪತಿಪ್ರಾಣಾಂ ಪುತ್ರಿಣೀಂ ತ್ಯಕ್ತವಾನ್ ಕಥಮ್ ॥12॥
ಸಾಕ್ಷಾದ್ ದೇವತೆಗಳನ್ನು ತಿರಸ್ಕರಿಸಿ ನಾನು ಅವನನ್ನು ವರಿಸಿದೆನಷ್ಟೇ. ಅನುವ್ರತಳಾಗಿದ್ದ ಅವನಲ್ಲಿಯೇ ಪ್ರಾಣಗಳನ್ನು ಇಟ್ಟುಕೊಂಡಿದ್ದ ಅವನಿಂದ ಮಕ್ಕಳನ್ನು ಪಡೆದ ನನ್ನನ್ನು ಅವನು ಹೇಗೆ ತ್ಯಜಿಸಿದನು?
ಅಗ್ನೌ ಪಾಣಿಗೃಹೀತಾಂ ಚ ಹಂಸಾನಾಂ ವಚನೇ ಸ್ಥಿತಾಮ್ |
ಭರಿಷ್ಯಾಮೀತಿ ಸತ್ಯಂ ಚ ಪ್ರತಿಶ್ರುತ್ಯ ಕ್ವ ತದ್ಗತಮ್ ॥13॥
ಹಂಸಗಳ ವಚನದಂತೆ ಅಗ್ನಿಯ ಸನ್ನಿಧಿಯಲ್ಲಿ ಪಾಣಿಗ್ರಹಣವನ್ನು ಮಾಡಿ ನಿನ್ನನ್ನು ಬಿಡುವುದಿಲ್ಲವೆಂದು ಸತ್ಯಪ್ರತಿಜ್ಞೆಯನ್ನು ಮಾಡಿದ ಆ ಅವನು ಎಲ್ಲಿಗೆ ಹೋದನು?
ಬೃಹದಶ್ವಃ
ದಮಯಂತ್ಯಾ ಬ್ರುವಂತ್ಯಾಸ್ತು ಸರ್ವಮೇತದರಿಂದಮ |
ಶೋಕಜಂ ವಾರಿ ನೇತ್ರಾಭ್ಯಾಮತ್ಯುಷ್ಣಂ ಪ್ರಾಸ್ರವದ್‌ಬಹು ॥14॥
ಎಲೈ ಅರಿಂದಮನೇ, ದಮಯಂತಿಯು ಹೀಗೆಲ್ಲಾ ಮಾತನಾಡುತ್ತಿರಲು ಬಾಹುಕನ ಕಣ್ಣಿನಿಂದ ಶೋಕದಿಂದ ಉತ್ಪನ್ನವಾದ ಉಷ್ಣವಾದ ಕಣ್ಣೀರು ಬಹುವಾಗಿ ಸುರಿಯಿತು.
ಅತೀವ ಕೃಷ್ಣತಾರಾಭ್ಯಾಂ ರಕ್ತಾಭ್ಯಾಂ ಸಲಿಲಂ ತು ತತ್ |
ಪರಿಸ್ರುವನ್ನಳೋ ದೃಷ್ಟ್ವಾ ಶೋಕಾರ್ತ ಇದಮಬ್ರವೀತ್ ॥15॥
ತನ್ನ ಕಪ್ಪಾದ ಮತ್ತು ತುದಿಯಲ್ಲಿ ಕೆಂಪಾದ ಕಣ್ಣುಗಳಿಂದ ಬಹಳವಾಗಿ ಸುರಿಯುತ್ತಿದ್ದ ಆ ಕಣ್ಣೀರನ್ನು ಗಮನಿಸಿ ಶೋಕಾರ್ತನಾದ ನಳನು ಹೀಗೆ ಮಾತನಾಡಿದನು.
ನಳಃ
ಮಮ ರಾಜ್ಯಂ ಪ್ರನಷ್ಟಂ ಯನ್ನಾಹಂ ತತ್ ಕೃತವಾನ್ ಸ್ವಯಮ್ |
ಕಲಿನಾಽಪ ಕೃತಂ ಭೀರು ಯಚ್ಚ ತ್ವಾಮಹಮತ್ಯಜಮ್ ॥16॥
ನನ್ನ ರಾಜ್ಯವು ನಷ್ಟವಾಯಿತು. ಅದನ್ನು ನಾನು ಸ್ವತಃ ಮಾಡಲಿಲ್ಲ. ಎಲೌ ಭೀರುವೇ ಅದು ಕಲಿಯಿಂದ ಮಾಡಲ್ಪಟ್ಟಿತು. ನಾನು ನಿನ್ನನ್ನು ತೊರೆದುದು ಸಹ ಕಲಿಯ ಪ್ರಭಾವದಿಂದಲೇ.
ತ್ವಯಾ ತು ಧರ್ಮಕೃಚ್ಛ್ರೇ ತು ಶಾಪೇನಾಭಿಹತಃ ಪುರಾ |
ವನಸ್ಥಯಾ ದುಃಖಿತಯಾ ಶೋಚಂತ್ಯಾ ಮಾಂ ವಿವಾಸಸಮ್ ॥17॥
ನೀನು ಧರ್ಮಸಂಕಟಕ್ಕೆ ಸಿಲುಕಿದಾಗ ಕಾಡಿನಲ್ಲಿ ದಿಗಂಬರನಾದ ನನ್ನನ್ನು ನೋಡುತ್ತಾ ದುಃಖದಿಂದ ಹಿಂದೆ ಅವನಿಗೆ ಶಾಪವನ್ನು ಕೊಟ್ಟೆಯಷ್ಟೇ?
ಸ ಮಚ್ಛರೀರೇ ತ್ವಚ್ಛಾಪಾದ್ ದಹ್ಯಮಾನೋಽವಸತ್ ಕಲಿಃ |
ತ್ವಚ್ಛಾಪದಗ್ಧಃ ಸತತಮಗ್ನಾವಿವ ಸಮಾಹಿತಃ ॥18॥
ಅವನು ನಿನ್ನ ಶಾಪದಿಂದ ಬೆಂದು ಹೋಗುತ್ತಾ ನನ್ನ ಶರೀರದಲ್ಲಿ ವಾಸವಾಗಿದ್ದನು. ಅಗ್ನಿಯಲ್ಲಿ ಹಾಕಿದ ವಸ್ತುವು ಸುಡುವಂತೆ ಸತತವಾಗಿ ಅವನು ಶಾಪದ ದಾಹವನ್ನು ಅನುಭವಿಸುತ್ತಿದ್ದನು.
ಮಮ ಚ ವ್ಯವಸಾಯೇನ ತಪಸಾ ಚೈವ ನಿರ್ಜಿತಃ |
ದುಃಖಸ್ಯಾಂತೇನ ಚಾನೇನ ಭವಿತವ್ಯಂ ಹಿ ಶೋಭನೇ ॥19॥
ನನ್ನ ದೃಢನಿಶ್ಚಯದಿಂದಲೂ ಮತ್ತು ತಪಸ್ಸಿನಿಂದಲೂ ಅವನು ನಿರ್ಜಿತನಾಗಿದ್ದಾನೆ. ಎಲೌ ಶೋಭನೆಯೇ ಈ ದುಃಖಕ್ಕೆ ಖಂಡಿತವಾಗಿಯೂ ಒಂದು ಅಂತ್ಯವು ಉಂಟಾಗಬೇಕು.

ವಿಮುಚ್ಯ ಮಾಂ ಗತಃ ಪಾಪಃ ತತೋಽಹಮಿಹ ಚಾಗತಃ |
ತ್ವದರ್ಥಂ ವಿಪುಲಶ್ರೋಣಿ ನ ಹಿ ಮೇಽನ್ಯತ್ ಪ್ರಯೋಜನಮ್ ॥20॥
ಆ ಪಾಪಿಯಾದ ಕಲಿಯು ನನ್ನನ್ನು ಬಿಟ್ಟು ಹೋದನು. ಎಲೌ ವಿಪುಲಶ್ರೋಣಿಯೇ ನಾನು ನಿನ್ನ ಸಲುವಾಗಿ ಆ ಕಾರಣದಿಂದ ಇಲ್ಲಿಗೆ ಬಂದಿದ್ದೇನೆ. ಇದನ್ನು ಬಿಟ್ಟು ನನಗೆ ಬೇರೆ ಪ್ರಯೋಜನವಿಲ್ಲ.
ಕಥಂ ನು ನಾರೀ ಭರ್ತಾರಮನುರಕ್ತಮನುವ್ರತಮ್ |
ಉತ್ಸೃಜ್ಯ ವರಯೇದನ್ಯಂ ಯಥಾ ತ್ವಂ ಭೀರು ಕರ್ಹಿಚಿತ್ ॥21॥
ಎಲೌ ಭೀರುವೇ, ತನ್ನಲ್ಲೇ ಅನುರಕ್ತನಾದ ಮತ್ತು ತನ್ನನ್ನು ಅನುಸರಿಸುವ ಪತಿಯನ್ನು ಬಿಟ್ಟು ನಿನ್ನಂತೆ ಯಾವ ನಾರಿಯು ಯಾವ ಕಾರಣದಿಂದಲಾದರೂ ಇನ್ನೊಬ್ಬ ಪತಿಯನ್ನು ಹೇಗೆ ವರಿಸುತ್ತಾಳೆ?
ದೂತಾಶ್ಚರಂತಿ ಪೃಥಿವೀಂ ಕೃತ್ಸ್ನಾಂ ನೃಪತಿಶಾಸನಾತ್ |
ಭೈಮೀ ಕಿಲಾದ್ಯ ಭರ್ತಾರಂ ದ್ವಿತೀಯಂ ವರಯಿಷ್ಯತಿ ॥22॥
ದಮಯಂತಿಯು ಎರಡನೆಯ ಸ್ವಯಂವರವನ್ನು ಮಾಡಿಕೊಳ್ಳುತ್ತಿದ್ದಾಳೆ ಎಂದು ಹೇಳುತ್ತಾ ರಾಜಶಾಸನಕ್ಕೆ ಅನುಗುಣವಾಗಿ ದೂತರು ಭೂಮಿಯಲ್ಲೆಲ್ಲಾ ಸಂಚರಿಸುತ್ತಿದ್ದಾರೆ.
ಸ್ವೈರವೃತ್ತ್ಯಾ ಯಥಾಕಾಮಮನುರೂಪಮಿವಾತ್ಮನಃ |
ಶ್ರುತ್ವೈವ ಚೈವಂ ತ್ವರಿತೋ ಭಾರ್ಗಸ್ವರಿರುಪಸ್ಥಿತಃ ॥23॥
ಋತುಪರ್ಣನು ತನ್ನ ಸ್ವಚ್ಛಂದವೃತ್ತಿಗೆ ಅನುಗುಣವಾಗಿ ನಿನ್ನನ್ನು ತನಗೆ ಅನುರೂಪಳೆಂದು ಭಾವಿಸಿ ಈ ವಾರ್ತೆಯನ್ನು ಕೇಳಿದ ತಕ್ಷಣ ಇಲ್ಲಿಗೆ ಬಂದಿದ್ದಾನೆ.
ದಮಯಂತೀ ತು ತಚ್ಛ್ರುತ್ವಾ ನಳಸ್ಯ ಪರಿದೇವಿತಮ್ |
ಪ್ರಾಂಜಲಿರ್ವೇಪಮಾನಾ ಚ ಭೀತಾ ವಚನಮಬ್ರವೀತ್ ॥24॥
ದಮಯಂತಿಯು ಆ ನಳನ ಶೋಕವನ್ನು ಕೇಳಿ ಕೈಗಳನ್ನು ಮುಗಿದು ನಡುಗುತ್ತಾ ಭಯದಿಂದ ಮಾತನಾಡಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಷಡ್‌ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * *
ಎಪ್ಪತ್ತೊಂದನೆಯ ಅಧ್ಯಾಯ
(ನಳದಯಮಯಂತಿಯರ ಸಮಾಗಮ)
ದಮಯಂತೀ
ನ ಮಾಮರ್ಹಸಿ ಕಲ್ಯಾಣ ಪಾಪೇನ ಪರಿಶಂಕಿತುಮ್ |
ಮಯಾ ಹಿ ದೇವಾನುತ್ಸೃಜ್ಯ ವೃತಸ್ತ್ವಂ ನಿಷಧಾಧಿಪ ॥1॥
ಎಲೌ ಕಲ್ಯಾಣನೇ ನಾನು ಪಾಪವನ್ನು ಮಾಡುವೆನೆಂದು ನನ್ನನ್ನು ಶಂಕಿಸಬೇಡ. ಎಲೈ ನಿಷಧಾಧಿಪನೇ ನಾನು ದೇವತೆಗಳನ್ನು ತಿರಸ್ಕರಿಸಿ ನಿನ್ನನ್ನು ವರಿಸಿದೆ.
ತವಾಭಿಗಮನಾರ್ಥಾಯ ಸರ್ವತೋ ಬ್ರಾಹ್ಮಣಾ ಗತಾಃ |
ವಾಕ್ಯಾನಿ ಮಮ ಗಾಥಾಭಿರ್ಗಾಯಮಾನಾ ದಿಶೋ ದಶ ॥2॥
ನಿನ್ನನ್ನು ತಿಳಿಯುವುದಕೋಸ್ಕರ ನಾನು ರಚಿಸಿದ ಗೀತೆಗಳನ್ನು ಹಾಡುವಂತೆ ಹೇಳಿ ಎಲ್ಲ ಹತ್ತುದಿಕ್ಕುಗಳಿಗೂ ಬ್ರಾಹ್ಮಣರನ್ನು ಕಳುಹಿಸಿದೆ.
ತತಸ್ತ್ವಾಂ ಬ್ರಾಹ್ಮಣೋ ವಿದ್ವಾನ್ ಪರ್ಣಾದೋ ನಾಮ ಪಾರ್ಥಿವ |
ಅಭ್ಯಗಚ್ಛತ್ ಕೋಸಲಾಯಾಮೃತುಪರ್ಣನಿವೇಶನೇ ॥3॥
ಎಲೈ ಪಾರ್ಥಿವನೇ ಅನಂತರ ಪರ್ಣಾದನೆಂಬ ಮೇಧಾವಿಯಾದ ಬ್ರಾಹ್ಮಣನು ಕೋಸಲದೇಶದಲ್ಲಿ ಋತುವರ್ಣನ ಮನೆಯಲ್ಲಿ ನಿನ್ನನ್ನು ಗುರುತಿಸಿದನು.
ತೇನ ವಾಕ್ಯೇ ಹೃತೇ ಸಮ್ಯಕ್ ಪ್ರತಿವಾಕ್ಯೇ ತು ವ್ಯಾಹೃತೇ |
ಉಪಾಯೋಽಯಂ ಮಯಾ ದೃಷ್ಟೋ ನೈಷಧಾನಯನೇ ತವ ॥4॥
ಅವನು ನನ್ನ ವಾಕ್ಯವನ್ನು ಸರಿಯಾಗಿ ನಿನ್ನ ಮುಂದೆ ಹೇಳಿ ನಿನ್ನ ಉತ್ತರವನ್ನು ನನಗೆ ತಲುಪಿಸಿದ ಮೇಲೆ ಎಲೈ ನೈಷಧನೇ, ಇದೇ ನಿನ್ನನ್ನು ಕರೆತರಲು ಉಪಾಯವೆಂದು ನಾನು ಭಾವಿಸಿದೆ.
ತ್ವದೃತೇ ನ ಹಿ ಲೋಕೇಽನ್ಯ ಏಕಾಹ್ನಾ ಪೃಥಿವೀಪತೇ |
ಸಮರ್ಥೋ ಯೋಜನಶತಂ ಗಂತುಮಶ್ವೈರ್ನರಾಧಿಪ ॥5॥
ಎಲೈ ನರಾಧಿಪನೇ, ನಿನ್ನನ್ನು ಬಿಟ್ಟು ಈ ಲೋಕದಲ್ಲಿ ಬೇರೆ ಯಾವನೂ ಒಂದು ಹಗಲಿನಲ್ಲಿ ನೂರುಯೋಜನ ದೂರವನ್ನು ಅಶ್ವಹೂಡಿದ ರಥದಲ್ಲಿ ಕ್ರಮಿಸಲು ಸಮರ್ಥನಲ್ಲ.
ಸ್ಪೃಶೇಯಂ ತೇನ ಸತ್ಯೇನ ಪಾದಾವೇತೌ ಮಹೀಪತೇ |
ಯಥಾ ನಾಸತ್ಕೃತಂ ಕಿಂಚಿನ್ ಮನಸಾಽಪಿ ಚರಾಮ್ಯಹಮ್ ॥6॥
ಎಲೈ ಮಹೀಪತಿಯೇ, ನಿನ್ನ ಈ ಪಾದವನ್ನು ಮುಟ್ಟಿ ನಾನು ಪ್ರಮಾಣಮಾಡಿ ಹೇಳುತ್ತೇನೆ. ನಾನು ಮನಸ್ಸಿನಿಂದಲೂ ಸಹ ಸ್ವಲ್ಪವಾದರೂ ಅಸತ್ಕಾರ್ಯವನ್ನು ಮಾಡಿಲ್ಲ.

ಅಯಂ ಚರತಿ ಲೋಕೇಽಸ್ಮಿನ್ ಭೂತಸಾಕ್ಷೀ ಸದಾಗತಿಃ |
ಸ ವಿಮುಂಚತು ಮೇ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ||
ಈ ಸರ್ವಜೀವ ಸಾಕ್ಷಿಯಾದ ವಾಯುವು ಈ ಲೋಕದಲ್ಲಿ ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತಿದ್ದಾನೆ. ನಾನೇನಾದರೂ ಪಾಪವನ್ನು ಮಾಡಿದ್ದರೆ ವಾಯುವು ನನಗೆ ಪ್ರಾಣವಿಯೋಗವನ್ನು ಉಂಟುಮಾಡಲಿ.
ತಥಾ ಚರತಿ ತಿಗ್ಮಾಂಶುಃ ಕರೇಣ ಭುವನಂ ಸದಾ |
ಸ ವಿಮುಂಚತು ಮೇ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ||
ಈ ಚಂಡಕಿರಣನಾದ ಸೂರ್ಯನು ತನ್ನ ಕಿರಣಗಳಿಂದ ಭೂಮಿಯನ್ನು ಪವಿತ್ರೀಕರಿಸುತ್ತಾ ಯಾವಾಗಲೂ ತಿರುಗುತ್ತಿದ್ದಾನೆ. ನಾನೇನಾದರೂ ಅನ್ಯಾಯವನ್ನು ಮಾಡಿದ್ದರೆ ನನಗೆ ಅವನು ಪ್ರಾಣವಿಯೋಗವನ್ನು ಉಂಟುಮಾಡಲಿ.
ಚಂದ್ರಮಾಃ ಸರ್ವಭೂತಾನಾಮಂತಶ್ಚರತಿ ಸಾಕ್ಷಿವತ್ |
ಸ ವಿಮುಂಚತು ಮೇ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ||
ಎಲ್ಲ ಜೀವರೊಳಗೆ ಚಂದ್ರನು ಸಾಕ್ಷಿಯಂತೆ ತಿರುಗುತ್ತಿದ್ದಾನೆ. ನಾನೇನಾದರೂ ಪಾಪವನ್ನು ಮಾಡಿದ್ದರೆ ಅವನು ನನಗೆ ಪ್ರಾಣವಿಯೋಗವನ್ನು ಉಂಟುಮಾಡಲಿ.
ಏತೇ ದೇವಾಸ್ತ್ರಯಃ ಕೃತ್ಸ್ನಂ ತ್ರೈಲೋಕ್ಯಂ ಧಾರಯಂತಿ ವೈ |
ವಿಬ್ರುವಂತು ಯಥಾ ಸತ್ಯಮೇತದ್ದೇವಾಸ್ತ್ಯಜಂತು ಮಾಂ ||10||
ಈ ಮೂರುದೇವತೆಗಳು ಸಮಸ್ತವಾದ ಈ ಮೂರು ಲೋಕಗಳನ್ನು ಧರಿಸಿದ್ದಾರೆ. ಈ ದೇವತೆಗಳು ನಾನು ಹೇಳಿದುದು ಸತ್ಯವೇ ಅಲ್ಲವೇ ಎಂದು ಹೇಳಲಿ. ನಾನು ಸುಳ್ಳನ್ನು ಮಾತನಾಡಿದ್ದರೆ ಆ ದೇವತೆಗಳು ನನ್ನನ್ನು ತ್ಯಜಿಸಲಿ.
ಬೃಹದಶ್ವಃ
ಏವಮುಕ್ತೇ ತತೋ ವಾಯುರಂತರಿಕ್ಷಾದಭಾಷತ ||11||
ನೈಷಾ ಕೃತವತೀ ಪಾಪಂ ನಳ ಸತ್ಯಂ ಬ್ರವೀಮಿ ತೇ |
ರಾಜನ್‌ಶೀಲನಿಧಿಃ ಸ್ಫೀತೋ ದಮಯಂತ್ಯಾ ಸುರಕ್ಷಿತಃ ||12||
ದಮಯಂತಿಯು ಹೀಗೆ ಹೇಳುತ್ತಿರಲು ಆಗ ವಾಯುವು ಅಂತರಿಕ್ಷದಿಂದ ಹೀಗೆ ಮಾತನಾಡಿದನು. ಎಲೈ ನಳನೇ ನಾನು ನಿನಗೆ ಸತ್ಯವನ್ನು ಹೇಳುತ್ತಿದ್ದೇನೆ. ಇವಳು ಯಾವ ಪಾಪವನ್ನೂ ಮಾಡಿಲ್ಲ. ರಾಜನೇ ದಮಯಂತಿಯ ಪರಿಶುದ್ಧವಾದ ಶೀಲನಿಧಿಯು ಚೆನ್ನಾಗಿ ರಕ್ಷಿಸಲ್ಪಟ್ಟಿದೆ.
ಸಾಕ್ಷಿಣೋ ರಕ್ಷಿಣಶ್ಚಾಸ್ಯಾ ವಯಂ ತ್ರೀನ್ ಪರಿವತ್ಸರಾನ್ |
ಉಪಾಯೋ ವಿಹಿತಶ್ಚಾಯಂ ತ್ವದರ್ಥಮತುಲೋಽನಯಾ ||13||
ಈ ಮೂರುವರ್ಷಗಳಕಾಲದಲ್ಲಿ ನಾವು ಅವಳ ಶೀಲಕ್ಕೆ ರಕ್ಷಕರೂ ಮತ್ತು ಸಾಕ್ಷಿಗಳೂ ಆಗಿದ್ದೇವೆ. ನಿನ್ನನ್ನು ಪಡೆಯುವ ಸಲುವಾಗಿ ಅವಳು ಈ ಅಸದೃಶವಾದ ಉಪಾಯವನ್ನು ಚಿಂತಿಸಿದಳು.
ನ ಹ್ಯೇಕಾಹ್ನಾ ಶತಂ ಗಂತಾ ತ್ವದೃತೇಽನ್ಯಃ ಪುಮಾನಿಹ |
ಉಪಪನ್ನಾ ತ್ವಯಾ ಭೈಮೀ ತ್ವಂ ಚ ಭೈಮ್ಯಾ ಮಹೀಪತೇ |
ನಾತ್ರ ಶಂಕಾ ತ್ವಯಾ ಕಾರ್ಯಾ ಸಂಗಚ್ಛ ಸಹ ಭಾರ್ಯಯಾ ||14||
ಒಂದೇ ಒಂದು ಹಗಲಿನಲ್ಲಿ ನಿನ್ನನ್ನು ಬಿಟ್ಟು ಯಾರೂ ಈ ಭೂಮಿಯಲ್ಲಿ ನೂರು ಯೋಜನಗಳನ್ನು ಪ್ರಯಾಣವನ್ನು ಮಾಡಲಾರರು. ಮಹೀಪತಿಯೇ ದಮಯಂತಿಯು ನಿನ್ನ ಜೊತೆಯಲ್ಲಿ ಸೇರಿದ್ದಾಳೆ. ನೀನೂ ಸಹ ದಮಯಂತಿಯ ಜೊತೆಯಲ್ಲಿ ಸೇರಿದ್ದೀಯೇ. ನೀನು ಅವಳನ್ನು ಶಂಕಿಸಬಾರದು. ನಿನ್ನ ಪತ್ನಿಯ ಜೊತೆಯಲ್ಲಿ ಸಮಾಗಮವನ್ನು ಹೊಂದು.
ತಥಾ ಬ್ರುವತಿ ವಾಯೌ ತು ಪುಷ್ಪವೃಷ್ಟಿಃ ಪಪಾತ ಹ |
ದೇವದುಂದುಭಯೋ ನೇದುರ್ವವೌ ಚ ಪವನಃ ಶುಭಃ ||15||
ವಾಯುವು ಹಾಗೆ ಮಾತನಾಡುತ್ತಿರಲು ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದವು. ಸುಖಸ್ಪರ್ಶವುಳ್ಳ ವಾಯುವು ಮಂದವಾಗಿ ಬೀಸಿತು.
ತದದ್ಭುತತಮಂ ದೃಷ್ಟ್ವಾ ನಳೋ ರಾಜಾಽಥ ಭಾರತ |
ದಮಯಂತ್ಯಾಂ ವಿಶಂಕಾಂ ತಾಂ ವ್ಯಪಾಕರ್ಷದರಿಂದಮಃ ||16||
ಎಲೈ ಭಾರತನೇ ಈ ಅತ್ಯದ್ಭುತವಾದ ಘಟನೆಯನ್ನು ನೋಡಿ ಅರಿಂದಮನಾದ ನಳಮಹಾರಾಜನು ಆಗ ತನಗೆ ದಮಯಂತಿಯಲ್ಲಿದ್ದ ಶಂಕೆಯನ್ನು ತೊರೆದನು.
ತತಸ್ತದ್ವಸ್ತ್ರಮರಜಃ ಪ್ರಾವೃಣೋದ್ವಸುಧಾಧಿಪಃ |
ಸಂಸ್ಮೃತ್ಯ ನಾಗರಾಜಾನಂ ತತೋ ಲೇಭೇ ವಪುಃ ಸ್ವಕಮ್ ||17||
ಆಗ ಆ ರಾಜನು ನಾಗರಾಜನಾದ ಕಾರ್ಕೋಟಕನನ್ನು ಸ್ಮರಿಸಿ ಅವನು ಕೊಟ್ಟಿದ್ದ ಶುಭ್ರವಾದ ವಸ್ತ್ರವನ್ನು ಹೊದ್ದುಕೊಂಡನು. ತಕ್ಷಣ ನಳನ ಹಿಂದಿನ ರೂಪವು ಅವನಿಗೆ ಮರಳಿಬಂದಿತು.
ಸ್ವರೂಪೇಣ ತು ಭರ್ತಾರಂ ದೃಷ್ಟ್ವಾ ಭೀಮಸುತಾ ತತಃ |
ಪ್ರಾಕ್ರೋಶದುಚ್ಚೈರಾಲಿಂಗ್ಯ ಪುಣ್ಯಶ್ಲೋಕಮನಿಂದಿತಾ ||18||
ಹಿಂದಿನ ರೂಪದಲ್ಲಿಯೇ ಇದ್ದ ತನ್ನ ಪತಿಯನ್ನು ನೋಡಿದ ಅನಿಂದಿತಳಾದ ದಮಯಂತಿಯು ಆ ಪುಣ್ಯಶ್ಲೋಕನನ್ನು ಆಲಿಂಗಿಸಿ ಗಟ್ಟಿಯಾಗಿ ಕಿರುಚಿದಳು.
ಭೈಮೀಮಪಿ ನಳೋ ರಾಜಾ ಭ್ರಾಜಮಾನೋ ಯಥಾ ರವಿಃ |

ಸಸ್ವಜೇ ಸ್ವಸುತೌ ಚಾಪಿ ಯಥಾವತ್ ಪ್ರತ್ಯನಂದತ ॥19॥
ನಳಮಹಾರಾಜನೂ ಸಹ ಸೂರ್ಯನಂತೆ ಕಂಗೊಳಿಸುತ್ತಾ ದಮಯಂತಿಯನ್ನು ಮತ್ತು ತನ್ನ ಎರಡು ಮಕ್ಕಳನ್ನು ಆಲಿಂಗಿಸಿದನು. ಯಥಾಯೋಗ್ಯವಾಗಿ ಅವರನ್ನು ಅಭಿನಂದಿಸಿದನು.
ತತಃ ಸ್ವೋರಸಿ ವಿನ್ಯಸ್ಯ ವಕ್ತ್ರಂ ತಸ್ಯ ಶುಭಾನನಾ |
ಪರಿಶ್ರಾಂತೇವ ದುಃಖೇನ ನಿಶಶ್ವಾಸಾಯತೇಕ್ಷಣಾ ॥20॥
ಅನಂತರ ಆ ವಿಶಾಲನೇತ್ರೆಯೂ ಸುಂದರಮುಖಿಯೂ ಆದ ದಮಯಂತಿಯು ತನ್ನ ಎದೆಯಲ್ಲಿ ನಳನ ಮುಖವನ್ನು ಇಟ್ಟುಕೊಂಡು ಬಹಳ ದಣಿದವಳಂತೆ ದುಃಖದಿಂದ ನಿಟ್ಟುಸಿರನ್ನು ಬಿಟ್ಟಳು.
ತಥೈವ ಮಲದಿಗ್ಧಾಂಗೀ ಪರಿಷ್ವಜ್ಯ ಶುಚಿಸ್ಮಿತಾ |
ಸುಚಿರಂ ಪುರುಷವ್ಯಾಘ್ರಂ ತಸ್ಥೌ ಶೋಕಪರಿಪ್ಲುತಾ ॥21॥
ಆ ಶುಚಿಸ್ಮಿತೆಯಾದ ದಮಯಂತಿಯು ಅಸಂಸ್ಕೃತ ದೇಹದಿಂದ ಶೋಕಪೂರ್ಣಳಾಗಿ ಪುರುಷವ್ಯಾಘ್ರನಾದ ನಳನನ್ನು ಆಲಿಂಗಿಸಿ ಬಹಳ ಸಮಯ ಹಾಗೆಯೇ ಇದ್ದಳು.
ತತಸ್ಸರ್ವಂ ಯಥಾವೃತ್ತಂ ದಮಯಂತ್ಯಾ ನಳಸ್ಯ ಚ |
ಭೀಮಾಯಾಕಥಯತ್ ಪ್ರೀತ್ಯಾ ವೈದರ್ಭ್ಯಾ ಜನನೀ ನೃಪ ॥22॥
ಆಗ ಎಲೈ ರಾಜನೇ ದಮಯಂತಿಯ ತಾಯಿಯು ದಮಯಂತಿಗೂ ಮತ್ತು ನಳನಿಗೂ ನಡೆದ ಎಲ್ಲಾ ವೃತ್ತಾಂತವನ್ನೂ ಸಂತೋಷದಿಂದ ಭೀಮರಾಜನಿಗೆ ತಿಳಿಸಿದಳು.
ತತೋಽಬ್ರವೀನ್ಮಹಾರಾಜಃ ಕೃತಶೌಚಮಹಂ ನಳಮ್ |
ದಮಯಂತ್ಯಾ ಸಹೋಪೇತಂ ಕಾಲ್ಯಂ ದ್ರಷ್ಟಾ ಸುಖೋಷಿತಮ್ ॥23॥
ಆಗ ಮಹಾರಾಜನಾದ ಭೀಮನು ಶುಭ್ರನಾಗಿ ಈ ರಾತ್ರಿ ಸುಖವಾಗಿ ಕಾಲವನ್ನು ಕಳೆದ ನಳನನ್ನು ನಾಳೆಯ ಪ್ರಾತಃಕಾಲ ದಮಯಂತಿಯ ಜೊತೆಯಲ್ಲಿ ನಾನು ನೋಡುವೆನು ಎಂದು ಹೇಳಿದನು.
ತತಸ್ತೌ ಸಹಿತೌ ರಾತ್ರಿಂ ಕಥಯಂತೌ ಪುರಾತನಮ್ |
ವನೇ ವಿಚರಿತಂ ಸರ್ವಮೂಷತುರ್ಮುದಿತೌ ನೃಪ ॥24॥
ಎಲೈ ರಾಜನೇ ಅನಂತರ ನಳದಮಯಂತಿಯರು ಒಂದಾಗಿ ರಾತ್ರಿಯಲ್ಲಿ ಹಿಂದೆ ಕಾಡಿನಲ್ಲಿ ನಡೆದ ಘಟನೆಗಳನ್ನೆಲ್ಲಾ ಪರಸ್ಪರವಾಗಿ ಹೇಳುತ್ತಾ ಸುಖದಿಂದ ಕಳೆದರು.
ಸ ಚತುರ್ಥೇ ತತೋ ವರ್ಷೇ ಸಂಗಮ್ಯ ಸಹ ಭಾರ್ಯಯಾ |
ಸರ್ವಕಾಮಸಮೃದ್ಧಾರ್ಥೋ ಲಬ್ಧವಾನ್ ಪರಮಾಂ ಮುದಮ್ ॥
ನಳನು ವಿಯೋಗವಾದ ನಾಲ್ಕನೆಯ ವರ್ಷದಲ್ಲಿ ತನ್ನ ಪತ್ನಿಯ ಸಮಾಗಮವನ್ನು ಹೊಂದಿ ಸರ್ವಕಾಮಪೂರ್ಣನಾಗಿ ಶ್ರೇಷ್ಠವಾದ ಆನಂದವನ್ನು ಹೊಂದಿದನು.
ದಮಯಂತ್ಯಪಿ ಭರ್ತಾರಮವಾಪ್ಯಾಪ್ಯಾಯಿತಾ ಭೃಶಮ್ |
ಅರ್ಧಸಂಜಾತಸಸ್ಯೇವ ತೋಯಂ ಪ್ರಾಪ್ಯ ವಸುಂಧರಾ ॥26॥
ದಮಯಂತಿಯೂ ಕೂಡ ಅರ್ಧಸಸ್ಯವು ಬೆಳೆದ ಭೂಮಿಯು ಮಳೆಯನ್ನು ಪಡೆದು ಸಂತೋಷಪಡುವಂತೆ ಪತಿಯನ್ನು ಪಡೆದು ಬಹಳ ಸಂತೋಷಗೊಂಡಳು.
ಸಾ ತಂ ಸಮೇತ್ಯ ವ್ಯಪನೀತನಿದ್ರಾ
ಶಾಂತಜ್ವರಾ ಹರ್ಷವಿವೃದ್ಧಸತತ್ವ |
ರರಾಜ ಭೈಮೀ ಸುಸಮಾಪ್ತಕಾಮಾ
ಶೀತಾಂಶುನಾ ರಾತ್ರಿರಿವೋದಿತೇನ ॥27॥
ಅವಳು ಅವನನ್ನು ಹೊಂದಿ ನಿದ್ರೆಯನ್ನು ತೊರೆದು ಮನಸ್ಸಿನ ಆತಂಕಗಳನ್ನೆಲ್ಲಾ ನಾಶಮಾಡಿ ಸಂತೋಷದಿಂದ ಹೆಚ್ಚಾದ ಸತ್ವಗುಣವುಳ್ಳವಳಾಗಿ ತನ್ನ ಎಲ್ಲಾ ಕಾಮಗಳನ್ನೂ ಪಡೆದು ರಾತ್ರಿಯು ಉದಯಿಸಿದ ಚಂದ್ರನ ಜೊತೆಯಲ್ಲಿ ವಿರಾಜಿಸುವಂತೆ ನಳನ ಜೊತೆಯಲ್ಲಿ ವಿರಾಜಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತೆರಡನೆಯ ಅಧ್ಯಾಯ
(ಭೀಮನಿಂದ ನಳನಿಗೆ ಸತ್ಕಾರ. ಪ್ರೀತಿಯ ಮಾತುಗಳನ್ನಾಡಿ
ಋತುಪರ್ಣನ ಪ್ರಯಾಣ.)
ಬೃಹದಶ್ವಃ
ಅಥ ರಾತ್ರ್ಯಾಂ ವ್ಯತೀತಾಯಾಂ ನಳೋ ರಾಜಾ ವಿಶಾಂಪತೇ |
ವೈದರ್ಭ್ಯಾ ಸಹಿತಃ ಕಾಲ್ಯಂ ದದರ್ಶ ವಸುಧಾಧಿಪಮ್ ॥1॥
ತತೋಽಭಿವಾದಯಾಮಾಸ ಪ್ರಯತಃ ಶ್ವಶುರಂ ನಳಃ |
ತಸ್ಯಾನು ದಮಯಂತೀ ಚ ವವಂದೇ ಪಿತರಂ ಶುಭಾ ॥2॥

ಎಲೈ ರಾಜನೇ ಆ ರಾತ್ರಿಯು ಕಳೆಯುತ್ತಿರಲು ನಳರಾಜನು ದಮಯಂತಿಯ ಜೊತೆಯಲ್ಲಿ ಪ್ರಾತಃಕಾಲದಲ್ಲಿ ಭೀಮರಾಜನನ್ನು ನೋಡಿದನು. ಅನಂತರ ನಳನು ವಿನಯದಿಂದ ಮಾವನಿಗೆ ನಮಸ್ಕಾರವನ್ನು ಮಾಡಿದನು. ಅವನ ಅನಂತರ ಶುಭಳಾದ ದಮಯಂತಿಯೂ ಸಹ ತಂದೆಯನ್ನು ನಮಸ್ಕರಿಸಿದಳು.
ತಂ ಭೀಮಃ ಪ್ರತಿಜಗ್ರಾಹ ಪುತ್ರವತ್ ಪರಯಾ ಮುದಾ |
ಯಥಾರ್ಹಂ ಪೂಜಯಿತ್ವಾ ತಂ ಸಮಾಶ್ವಾಸಯತ ಪ್ರಭುಮ್ ॥3॥
ಭೀಮನು ನಳನನ್ನು ತನ್ನ ಮಗನಂತೆ ಬಹಳ ಸಂತೋಷದಿಂದ ಸ್ವೀಕರಿಸಿದನು. ಯಥಾಯೋಗ್ಯವಾಗಿ ಅವನನ್ನು ಸತ್ಕರಿಸಿ ಪ್ರಭುವಾದ ಅವನಿಗೆ ಸಮಾಧಾನವನ್ನು ಮಾಡಿದನು.
ನಳೇನ ಸಹಿತಾಂ ತತ್ರ ದಮಯಂತೀಂ ಪತಿವ್ರತಾಮ್ |
ಅನುಜಗ್ರಾಹ ಮಹತಾ ಸತ್ಕಾರೇಣ ಕ್ಷಿತೀಶ್ವರಃ ॥4॥
ಆ ಕ್ಷಿತೀಶ್ವರನು ಪತಿಯ ಜೊತೆಯಲ್ಲಿದ್ದ ಪತಿವ್ರತೆಯಾದ ದಮಯಂತಿಗೂ ಬಹಳ ಸತ್ಕಾರವನ್ನು ಮಾಡಿ ಅನುಗ್ರಹಿಸಿದನು.
ತಾಮರ್ಹಣಾಂ ನಳೋ ರಾಜಾ ಪ್ರತಿಗೃಹ್ಯ ಯಥಾವಿಧಿ |
ಪರಿಚರ್ಯಾಂ ಸ್ವಕಾಂ ತಸ್ಮೈ ಯಥಾವತ್ ಪ್ರತ್ಯವೇದಯತ್ ॥5॥
ನಳರಾಜನು ಮಾವನು ತನಗೆ ಕೊಟ್ಟ ಸತ್ಕಾರವನ್ನು ವಿಧಿವತ್ತಾಗಿ ಸ್ವೀಕರಿಸಿ ಅವನಿಗೆ ತಾನು ಮಾಡಬೇಕಾದ ಪರಿಚರ್ಯೆಯನ್ನು ವಿಧಿಪೂರ್ವಕವಾಗಿ ಮಾಡಿದನು.
ತತೋ ಬಭೂವ ನಗರೇ ಸುಮಹಾನ್ ಹರ್ಷನಿಸ್ವನಃ |
ಜನಸ್ಯ ಸಂಪ್ರಹೃಷ್ಟಸ್ಯ ನಳಂ ದೃಷ್ಟ್ವಾ ತಥಾಽಗತಮ್ ॥6॥
ಅನಂತರ ಹಾಗೆ ಹಿಂದಿರುಗಿ ಬಂದ ನಳನನ್ನು ನೋಡಿ ಸಂತೋಷಗೊಂಡ ಪ್ರಜೆಗಳು ನಗರದಲ್ಲಿ ದೊಡ್ಡ ಹರ್ಷೋದ್ಗಾರಗಳನ್ನು ಮಾಡಿದರು.
ಅಶೋಭಯಚ್ಚ ನಗರೀಂ ಪತಾಕಾಧ್ವಜಮಾಲಿನೀಮ್ |
ಸಿಕ್ತಾಃ ಸುಮೃಷ್ಟಪುಷ್ಪಾಢ್ಯಾ ರಾಜಮಾರ್ಗಾಸ್ತಥಾಕೃತಾಃ ॥7॥
ದ್ವಾರಿದ್ವಾರಿ ಚ ಪೌರಾಣಾಂ ಪುಷ್ಪಭಂಗಃ ಪ್ರಕಲ್ಪಿತಃ |
ಅರ್ಚಿತಾನಿ ಚ ವೇಶ್ಮಾನಿ ದೈವತಾಯತಾನಿ ಚ ॥8॥
ಆ ನಗರವನ್ನೆಲ್ಲಾ ಪತಾಕೆಗಳಿಂದಲೂ ಧ್ವಜಗಳಿಂದಲೂ ಮತ್ತು ಪುಷ್ಪಮಾಲೆಗಳಿಂದಲೂ ಅಲಂಕರಿಸಿದರು. ರಾಜಮಾರ್ಗಗಳೆಲ್ಲವೂ ಸುಗಂಧಯುಕ್ತವಾದ ಜಲದಿಂದ ಸಿಂಪಡಿಸಲ್ಪಟ್ಟು ಪುಷ್ಪಗಳು ಹರಡಿ ಸುಂದರವಾಗಿ ಮಾಡಲ್ಪಟ್ಟವು. ಪೌರರ ಪ್ರತಿಯೊಂದು ಮನೆಯಬಾಗಿಲುಗಳಲ್ಲಿ ಪುಷ್ಪವಿನ್ಯಾಸಗಳು ಮಾಡಲ್ಪಟ್ಟವು. ಮನೆಗಳು ಮತ್ತು ದೇವಾಲಯಗಳು ಅಲಂಕರಿಸಲ್ಪಟ್ಟವು.
ಋತುಪರ್ಣೋಽಪಿ ಶುಶ್ರಾವ ಬಾಹುಕಚ್ಛದ್ಮಿನಂ ನಳಮ್ |
ದಮಯಂತ್ಯಾ ಸಮಾಯುಕ್ತಂ ಜಹೃಷೇ ಚ ಪರಂತಪಃ ॥9॥
ಪರಂತಪನಾದ ಋತುಪರ್ಣನೂ ಕೂಡ ಬಾಹುಕನ ಛದ್ಮವೇಷದಲ್ಲಿದ್ದ ನಳನು ದಮಯಂತಿಯ ಸಮಾಗಮವನ್ನು ಹೊಂದಿದನೆಂದು ಕೇಳಿ ಸಂತೋಷಪಟ್ಟನು.
ತಮಾನಾಯ್ಯ ನಳಂ ರಾಜಾ ಕ್ಷಮಯಾಮಾಸ ಪಾರ್ಥಿವಮ್ |
ಸ ಚ ತಂ ಕ್ಷಮಯಾಮಾಸ ಹೇತುಭಿರ್ಬುದ್ಧಿಸಮ್ಮತೈಃ ॥10॥
ಋತುಪರ್ಣರಾಜನು ನಳನನ್ನು ಕರೆಸಿ ಅವನ ಕ್ಷಮೆಯನ್ನು ಕೇಳಿದನು. ನಳನೂ ಸಹ ಬುದ್ಧಿಗೆ ಒಪ್ಪುವಕಾರಣಗಳನ್ನು ಹೇಳಿ ಅವನನ್ನು ಕ್ಷಮಿಸಿದನು.
ಸ ಸತ್ಕೃತೋ ಮಹೀಪಾಲೋ ನೈಷಧಂ ವಿಸ್ಮಿತಾನನಃ |
ದಿಷ್ಟ್ಯಾ ಸಮೇತೋ ದಾರೈಸ್ತ್ವಮಿತ್ಯುವಾಚ ನಳಂ ನೃಪಃ ॥11॥
ಹೀಗೆ ಸತ್ಕೃತನಾದ ಆ ಋತುಪರ್ಣರಾಜನು ವಿಸ್ಮಯದಿಂದ ಕೂಡಿದ ಮುಖವುಳ್ಳವನಾಗಿ ನೈಷಧರಾಜನಾದ ನಳನನ್ನು ಕುರಿತು ದೇವರ ದಯೆಯಿಂದ ನೀನು ನಿನ್ನ ಪತ್ನಿಯನ್ನು ಸೇರಿದೆ ಎಂದು ಹೇಳಿದನು.
ಕಚ್ಚಿನ್ನ ನಾಪರಾಧಂ ತೇ ಕೃತವಾನಸ್ಮಿ ನೈಷಧ |
ಅಜ್ಞಾತವಾಸಂ ವಸತೋ ಮದ್ಗೃಹೇ ನಿಷಧಾಧಿಪ ॥12॥
ಎಲೈ ನೈಷಧನೇ, ನೀನು ನನ್ನ ಮನೆಯಲ್ಲಿ ಅಜ್ಞಾತವಾಸವನ್ನು ಮಾಡುವಾಗ ನಾನು ನಿನಗೆ ಯಾವ ಅಪರಾಧವನ್ನೂ ಮಾಡಿಲ್ಲವಷ್ಟೇ?
ಯದಿ ವಾಽಬುದ್ಧಿಪೂರ್ವಾಣಿ ಯದಿ ಬುದ್ಧ್ಯಾಽಪಿ ಕರ್ಹಿಚಿತ್|
ಮಯಾ ಕೃತಾನ್ಯಕಾರ್ಯಾಣಿ ತಾನಿ ತ್ವಂ ಕ್ಷಂತುಮರ್ಹಸಿ ॥13॥
ನಾನು ತಿಳಿದಾಗಲೀ ಅಥವಾ ತಿಳಿಯದೇ ಆಗಲೀ ಏನಾದರೂ ಅಪರಾಧವನ್ನು ಮಾಡಿದ್ದರೆ ನೀನು ಆ ಅಪರಾಧಗಳನ್ನು ಕ್ಷಮಿಸಬೇಕು ಎಂದು ಹೇಳಿದನು.
ನಳಃ
ನ ಮೇಽಪರಾಧಂ ಕೃತವಾನ್ ತ್ವಂ ಸ್ವಲ್ಪಮಪಿ ಪಾರ್ಥಿವ |
ಕೃತೇಽಪಿ ಚ ನ ಮೇ ಕೋಪಃ ಕ್ಷಂತವ್ಯಂ ಹಿ ಮಯಾ ತವ ॥14॥
ಎಲೈ ರಾಜನೇ ನೀನು ನನಗೆ ಅಲ್ಪವಾದ ಅಪರಾಧವನ್ನೂ ಮಾಡಿಲ್ಲ. ಮಾಡಿದ್ದರೂ ಸಹ ನನಗೆ ಕೋಪವು ಬರುತ್ತಿರಲಿಲ್ಲ. ನೀನು ಯಾವಾಗಲೂ ನನ್ನಿಂದ ಕ್ಷಮಿಸಲ್ಪಡಬೇಕಾದವನು.

ಪೂರ್ವಂ ಹ್ಯಪಿ ಸಖಾ ಚಾಸಿ ಸಂಬಂಧೀ ಚ ನರಾಧಿಪ |
ಅತ ಊರ್ಧ್ವಂ ಚ ಭೂಯಸ್ತ್ವಂ ಪ್ರೀತಿಮಾಹರ್ತುಮರ್ಹಸಿ ॥15॥
ಎಲೈ ರಾಜನೇ ನೀನು ಮೊದಲೇ ನನ್ನ ಸ್ನೇಹಿತನೂ ಮತ್ತು ಬಂಧುವೂ ಆಗಿದ್ದಿ. ಇನ್ನು ಮುಂದೆ ನೀನು ನನ್ನ ಮೇಲೆ ಮೊದಲಿಗಿಂತಲೂ ಹೆಚ್ಚು ಪ್ರೀತಿಯನ್ನು ಮಾಡಬೇಕು.
ಸರ್ವಕಾಮೈಃ ಸುವಿಹಿತಃ ಸುಖಮಸ್ಮ್ಯುಷಿತಸ್ತ್ವಯಿ |
ನ ತಥಾ ಸ್ವಗೃಹೇ ರಾಜನ್ ಯಥಾ ತವ ಗೃಹೇ ಸದಾ ॥16॥
ನಾನು ನಿನ್ನ ಮನೆಯಲ್ಲಿ ಎಲ್ಲ ಕಾಮಗಳಿಂದಲೂ ಪೂರ್ಣನಾಗಿ ಸುಖವಾಗಿ ವಾಸಮಾಡಿದೆ. ಎಲೈ ರಾಜನೇ ನಿನ್ನ ಮನೆಯಲ್ಲಿ ಎಷ್ಟು ಸೌಖ್ಯವನ್ನು ನೀಡಿದೆಯೋ ಅಷ್ಟು ನನ್ನ ಮನೆಯಲ್ಲಿಯೇ ಇಲ್ಲ.
ಇದಂ ಚೈವ ಹಯಜ್ಞಾನಂ ತ್ವದೀಯಂ ಮಮ ತಿಷ್ಠತಿ |
ತದುಪಾಕರ್ತುಮಿಚ್ಛಾಮಿ ಮನ್ಯಸೇ ಯದಿ ಪಾರ್ಥಿವ ॥17॥
ನೀನು ನನ್ನಲ್ಲಿ ನ್ಯಾಸವಾಗಿ ಇಟ್ಟಿದ್ದ ಅಶ್ವವಿದ್ಯೆಯು ನನ್ನಲ್ಲಿಯೇ ಇದೆ. ಎಲೈ ರಾಜನೇ ನೀನು ಇಚ್ಛಿಸುವುದಾದರೆ ಅದನ್ನು ನಿನಗೆ ಹಿಂದಿರುಗಿಸಲು ಬಯಸುತ್ತೇನೆ.
ಏವಮುಕ್ತ್ವಾ ದದೌ ವಿದ್ಯಾಮೃತುಪರ್ಣಾಯ ನೈಷಧಃ |
ಸ ಚ ತಾಂ ಪ್ರತಿಜಗ್ರಾಹ ವಿಧಿದೃಷ್ಟೇನ ಕರ್ಮಣಾ ॥18॥
ಹೀಗೆ ಹೇಳಿ ನಳನು ಋತುಪರ್ಣನಿಗೆ ಅಶ್ವವಿದ್ಯೆಯನ್ನು ಉಪದೇಶಿಸಿದನು. ಆ ಋತುಪರ್ಣನಾದರೂ ವಿಧಿಪೂರ್ವಕವಾಗಿ ಕರ್ಮವನ್ನು ಮಾಡಿ ಆ ವಿದ್ಯೆಯನ್ನು ಸ್ವೀಕರಿಸಿದನು.
ತತೋ ಗೃಹ್ಯಾಶ್ವಹೃದಯಂ ಪ್ರೀತೋ ಭಾರ್ಗಸ್ವರಿರ್ನೃಪ |
ಸೂತಮನ್ಯಮುಪಾದಾಯ ಪ್ರಯಯೌ ಸ್ವಾಂ ಪುರೀಂ ಪ್ರತಿ ॥19॥
ಎಲೈ ರಾಜನೇ ಅಶ್ವಹೃದಯವನ್ನು ಸ್ವೀಕರಿಸಿ ಸಂತೋಷಗೊಂಡ ಋತುಪರ್ಣನು ಇನ್ನೊಬ್ಬ ಸೂತನನ್ನು ಕರೆದುಕೊಂಡು ತನ್ನ ಪಟ್ಟಣಕ್ಕೆ ಪ್ರಯಾಣಮಾಡಿದನು.
ಋತುಪರ್ಣೇ ಪ್ರತಿಗತೇ ನಳೋ ರಾಜಾ ವಿಶಾಂಪತೇ |
ನಗರೇ ಕುಂಡಿನೇ ಕಾಲಂ ನಾತಿದೀರ್ಘಮಿವಾವಸತ್ ॥20॥
ಎಲೈ ರಾಜನೇ ಋತುಪರ್ಣನು ಹಿಂದಿರುಗಿದ ಮೇಲೆ ನಳಮಹಾರಾಜನು ಕುಂಡಿನಿ ನಗರದಲ್ಲಿ ಸ್ವಲ್ಪಕಾಲದವರೆಗೆ ವಾಸಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ಮೂರನೆಯ ಅಧ್ಯಾಯ
(ತನ್ನ ಪಟ್ಟಣಕ್ಕೆ ಹಿಂದಿರುಗಿ ಪುಷ್ಕರನನ್ನು ದ್ಯೂತದಲ್ಲಿ ಸೋಲಿಸಿ ಅವನಿಗೆ ನಳನಿಂದ ಪ್ರಾಣದಾನ.)
ಬೃಹದಶ್ವಃ
ಸ ಮಾಸಮುಷ್ಯ ಕೌಂತೇಯ ಭೀಮಮಾಮಂತ್ರ್ಯ ನೈಷಧಃ |
ಪುರಾದಲ್ಪಪರೀವಾರೋ ಜಗಾಮ ನಿಷಧಾನ್ ಪ್ರತಿ ॥1॥
ಎಲೈ ಕೌಂತೇಯನೇ, ನೈಷಧನು ಒಂದುತಿಂಗಳಕಾಲ ವಿದರ್ಭದೇಶದಲ್ಲಿ ವಾಸಮಾಡಿ ಭೀಮರಾಜನ ಅನುಮತಿಯನ್ನು ಪಡೆದು ಅಲ್ಪಪರಿವಾರ ಸಹಿತನಾಗಿ ಅಲ್ಲಿಂದ ನಿಷಧ ದೇಶಕ್ಕೆ ಬಂದನು.
ರಥೇನೈಕೇನ ಶುಭ್ರೇಣ ದಂತಿಭಿಃ ಪರಿಷೋಡಶೈಃ |
ಪಂಚಾಶದ್ಭಿರ್ಹಯೈಶ್ಚಾಪಿ ಷಟ್‌ಶತೈಶ್ಚ ಪದಾತಿಭಿಃ ॥2॥
ಸ ಕಂಪಯನ್ನಿವ ಮಹೀಂ ತ್ವರಮಾಣೋ ಮಹೀಪತಿಃ |
ಪ್ರವಿವೇಶಾತಿಸಂರಬ್ಧಸ್ತರಸೈವ ಮಹಾಮನಾಃ ॥3॥
ಒಂದು ಶುಭ್ರವಾದ ರಥ ಹದಿನಾರು ಆನೆಗಳು ಐವತ್ತು ಕುದುರೆಗಳು ಮತ್ತು ಆರುನೂರು ಪದಾತಿಗಳೊಡನೆ ಮಹಾಮನನಾದ ಆ ಮಹೀಪತಿಯು ಭೂಮಿಯನ್ನು ನಡುಗಿಸುತ್ತಾ ಶೀಘ್ರವಾಗಿ ಬಹಳ ಕೋಪದಿಂದಲೇ ತನ್ನ ಪಟ್ಟಣವನ್ನು ಪ್ರವೇಶಿಸಿದನು.
ತತಃ ಪುಷ್ಕರಮಾಸಾದ್ಯ ವೀರಸೇನಸುತೋ ಬಲೀ |
ಉವಾಚ ದೀವ್ಯಾವ ಪುನರ್ಬಹುವಿತ್ತಂ ಮಯಾಽಽರ್ಜಿತಮ್ ॥4॥
ಅನಂತರ ಬಲಿಷ್ಠನೂ ವೀರಸೇನಸುತನೂ ಆದ ಅವನು ಪುಷ್ಕರನನ್ನು ಸಮೀಪಿಸಿ ನಾನು ಬಹಳ ಧನವನ್ನು ಗಳಿಸಿದ್ದೇನೆ ಪುನಃ ದ್ಯೂತವನ್ನು ಆಡೋಣ ಎಂದು ಹೇಳಿದನು.
ದಮಯಂತೀ ಚ ಯಚ್ಚಾನ್ಯನ್ ಮಯಾ ವಸು ಸಮಾರ್ಜಿತಮ್ |
ಏಷ ವೈ ಮಮ ಸಂನ್ಯಾಸಸ್ತವ ರಾಜ್ಯಂ ತು ಪುಷ್ಕರ ॥5॥
ಪುಷ್ಕರನೇ ದಮಯಂತಿ ಮತ್ತು ನಾನು ಸಂಪಾದಿಸಿದ ಧನ ಇದು ನಾನು ಪಣಕ್ಕಿಡುವ ವಸ್ತು. ನೀನು ರಾಜ್ಯವನ್ನು ಪಣಕ್ಕಿಡಬೇಕು.
ಪುನಃ ಪ್ರವರ್ತತಾಂ ದ್ಯೂತಮಿತಿ ಮೇ ನಿಶ್ಚಿತಾ ಮತಿಃ |
ಏಕಪಾಣೇನ ಭದ್ರಂ ತೇ ಪಣಯೋಶ್ಚ ಪಣಾವಹೇ ॥6॥

ಪುನಃ ದ್ಯೂತವನ್ನು ಆಡಬೇಕೆಂದು ನನ್ನ ನಿಶ್ಚಿತವಾದ ಅಭಿಪ್ರಾಯ. ನಿನಗೆ ಮಂಗಳವಾಗಲಿ ಈ ಪಣಗಳನ್ನು ಇಟ್ಟು ಒಂದೇ ಬಾರಿಗೆ ದ್ಯೂತವಾಡೋಣ.
ಜಿತ್ವಾ ಪರಸ್ವಮಾಹೃತ್ಯ ರಾಜ್ಯಂ ವಾ ಯದಿ ವಾ ವಸು |
ಪ್ರತಿಪಾಣಃ ಪ್ರದಾತವ್ಯಃ ವರಂ ಹಿ ಧನುಮುಚ್ಯತೇ ॥7॥
ಗೆದ್ದವರು ಇನ್ನೊಬ್ಬರ ಪಣವನ್ನು ಸ್ವೀಕರಿಸುತ್ತಾರೆ. ರಾಜ್ಯವಾಗಲೀ ಅಥವಾ ಧನವಾಗಲೀ ಪಣವಷ್ಟೇ. ಪಣಕ್ಕೆ ಇಟ್ಟ ವಸ್ತುಗಳನ್ನು ಕೊಡಲೇಬೇಕು. ಅದರಲ್ಲಿ ಧನವೇ ಶ್ರೇಷ್ಠವೆಂದು ಹೇಳಲ್ಪಡುತ್ತದೆ.
ನ ಚೇದ್ವಾಂಛಸಿ ತದ್ದ್ಯೂತಂ ಯುದ್ಧದ್ಯೂತಂ ಪ್ರವರ್ತತಾಮ್|
ದ್ವೈರಥೇನಾಪಿ ವೈ ಶಾಂತಿಸ್ತವ ವಾ ಮಮ ವಾ ನೃಪ ॥8॥
ಈ ಅಕ್ಷದ್ಯೂತವನ್ನು ನೀನು ಬಯಸದಿದ್ದರೆ ಯುದ್ಧದ್ಯೂತವೇ ನಡೆಯಲಿ. ಎಲೈ ರಾಜನೇ, ದ್ವೈರಥಯುದ್ಧದಲ್ಲಿ (ಇಬ್ಬರು ರಥದಲ್ಲಿ ಕುಳಿತು ಯುದ್ಧಮಾಡುವುದು) ನಿನ್ನ ಅಥವಾ ನನ್ನ ಅವಸಾನವಾಗಲಿ.
ವಂಶಭೋಜ್ಯಮಿದಂ ರಾಜ್ಯಮಾರ್ಜಿತವ್ಯಂ ಯಥಾಗತಮ್ |
ಯೇನ ಕೇನಾಪ್ಯುಪಾಯೇನ ವೃದ್ಧಾನಾಮಿತಿ ಶಾಸನಮ್ ॥9॥
ನಮ್ಮ ವಂಶದವರಿಂದ ಭೋಗಿಸಲ್ಪಡಬೇಕಾದ ಈ ರಾಜ್ಯವನ್ನು ಯಾವುದಾದರೂ ಉಪಾಯದಿಂದ ಚೆನ್ನಾಗಿ ಸಂಪಾದಿಸಬೇಕೆಂಬುದು ದೊಡ್ಡವರ ಅನುಶಾಸನ.
ದ್ವಯೋರೇಕತರೇ ಬುದ್ಧಿಃ ಕ್ರಿಯತಾಮದ್ಯ ಪುಷ್ಕರ |
ಕೈತವೇನಾಕ್ಷವತ್ಯಾಂ ವಾ ಯುದ್ಧೇ ವಾ ನಮ್ಯತಾಂ ಧನುಃ ॥10॥
ಪುಷ್ಕರನೇ ಈ ದಿನ ಈ ಎರಡರಲ್ಲಿ ಒಂದನ್ನು ನಿಶ್ಚಯಿಸು. ಪಣವನ್ನು ಒಡ್ಡಿ ದ್ಯೂತವನ್ನು ಆಡು. ಅಥವಾ ಯುದ್ಧದಲ್ಲಿ ಬಿಲ್ಲನ್ನು ಬಗ್ಗಿಸು.
ನೈಷಧೇನೈವಮುಕ್ತಸ್ತು ಪುಷ್ಕರಃ ಪ್ರಹಸನ್ನಿವ |
ಧ್ರುವಮಾತ್ಮಜಯಂ ಮತ್ವಾ ಪ್ರತ್ಯಾಹ ಪೃಥಿವೀಪತಿಮ್ ॥11॥
ದಿಷ್ಟ್ಯಾ ತ್ವಯಾಽಽರ್ಜಿತಂ ದ್ರವ್ಯಂ ಪ್ರತಿಪಾಣಾಯ ನೈಷಧ |
ದಿಷ್ಟ್ಯಾ ಚ ದುಷ್ಕೃತಂ ಕರ್ಮ ದಮಯಂತ್ಯಾಃ ಕ್ಷಯಂ ಗತಮ್ ॥12॥
ನಳನಿಂದ ಹೀಗೆ ಹೇಳಲ್ಪಟ್ಟ ಪುಷ್ಕರನು ನಗುತ್ತಾ ತನ್ನ ಜಯವು ನಿಶ್ಚಯವೆಂದು ತಿಳಿದು ರಾಜನನ್ನು ಕುರಿತು ಹೇಳಿದನು. ನೈಷಧನೇ ಅದೃಷ್ಟವಶಾತ್ ನೀನು ಪಣವನ್ನು ಇಡುವುದಕ್ಕಾಗಿ ಧನವನ್ನುಗಳಿಸಿದ್ದೀಯೆ. ಅದೃಷ್ಟವಶದಿಂದಲೇ ದಮಯಂತಿಯ ಪಾಪಕರ್ಮವು (ದುರವಸ್ಥೆಯು) ನಾಶವನ್ನು ಹೊಂದಿದೆ.
ದಿಷ್ಟ್ಯಾ ವೈ ಪ್ರೀಯಸೇ ರಾಜನ್ ಸದಾರೋಽರಿನಿಬರ್ಹಣ |
ಪುನರ್ದ್ಯೂತೇ ಚ ತೇ ಬುದ್ಧಿರ್ದಿಷ್ಟ್ಯಾ ಪುರುಷಸತ್ತಮ ॥13॥
ರಾಜನೇ ಅದೃಷ್ಟವಶದಿಂದಲೇ ನೀನು ಪತ್ನಿಯ ಜೊತೆಯಲ್ಲಿ ಸುಖವಾಗಿದ್ದೀಯೆ ಶತ್ರುಸಂಹಾರಕನಾದ ಪುರುಷಶ್ರೇಷ್ಠನೇ ಅದೃಷ್ಟವಶವಾಗಿಯೇ ನಿನಗೆ ಪುನಃ ದ್ಯೂತವನ್ನು ಆಡುವ ಬುದ್ಧಿಯುಂಟಾಗಿದೆ.
ಜಿತೇನಾನೇನ ವೈದರ್ಭೀ ಧನೇನ ಸಮಲಂಕೃತಾ |
ಮಾಮುಪಸ್ಥಾಸ್ಯತಿ ವ್ಯಕ್ತಂ ದಿವಿ ಶಕ್ರಂ ಶಚೀ ಯಥಾ ॥14॥
ನಿತ್ಯಶೋ ಹಿ ಸ್ಮರಾಮಿ ತ್ವಾಂ ಪ್ರತೀಕ್ಷಾಮಿ ಚ ನೈಷಧ |
ದೇವನೇ ಚ ಮಮ ಪ್ರೀತಿರ್ನ ಭವತ್ಯಸುಹೃದ್ಗಣೈಃ ॥15॥
ನಾನು ಈ ದ್ಯೂತವನ್ನು ಗೆದ್ದರೆ ನೀನು ಗಳಿಸಿದ ಧನದಿಂದ ಚೆನ್ನಾಗಿ ಅಲಂಕೃತಳಾದ ದಮಯಂತಿಯು ಸ್ವರ್ಗದಲ್ಲಿ ಶಚಿಯು ಇಂದ್ರನನ್ನು ಓಲೈಸಿದಂತೆ ಸ್ಪಷ್ಟವಾಗಿ ನನ್ನನ್ನು ಓಲೈಸುತ್ತಾಳೆ. ನೈಷಧನೇ ನಾನು ಯಾವಾಗಲೂ ನಿನ್ನನ್ನೇ ಸ್ಮರಿಸುತ್ತಾ ನಿರೀಕ್ಷಿಸುತ್ತಿದ್ದೇನೆ. ನನಗೆ ಅಕ್ಷದ್ಯೂತದಲ್ಲಿಯೇ ಪ್ರೀತಿ. ಶತ್ರುಗಳ ಜೊತೆಯಲ್ಲಿ ಯುದ್ಧಮಾಡುವುದರಲ್ಲಿ ಪ್ರೀತಿಯಿಲ್ಲ.
ಜಿತ್ವಾಽದ್ಯೈವ ವರಾರೋಹಾಂ ದಮಯಂತೀಮನಿಂದಿತಾಮ್ |
ಕೃತಕೃತ್ಯೋ ಭವಿಷ್ಯಾಮಿ ಸಾ ಹಿ ಮೇ ನಿತ್ಯಶೋ ಹೃದಿ ॥16॥
ಈ ದಿನವೇ ಅನಿಂದಿತಳಾದ ಸುಂದರಿಯಾದ ದಮಯಂತಿಯನ್ನು ಗೆದ್ದು ನಾನು ಕೃತಕೃತ್ಯನಾಗುವೆನು. ಅವಳೇ ಯಾವಾಗಲೂ ನನ್ನ ಮನಸ್ಸಿನಲ್ಲಿ ಇದ್ದಾಳಷ್ಟೆ?
ಶ್ರುತ್ವಾ ತು ತಸ್ಯ ತಾಂ ವಾಚಂ ಬಹ್ವಬದ್ಧಪ್ರಲಾಪಿನಃ |
ಇಯೇಷ ಸ ಶಿರಶ್ಛೇತ್ತುಂ ಖಡ್ಗೇನ ಕುಪಿತೋ ನಳಃ ॥17॥
ಹೀಗೆ ಬಹಳ ಅಬದ್ಧವಾಗಿ ಬಡಬಡಿಸುತ್ತಿದ್ದ ಅವನ ಆ ಮಾತುಗಳನ್ನು ಕೇಳಿ ಕೋಪಗೊಂಡ ನಳನು ಅವನ ಶಿರಸ್ಸನ್ನು ಖಡ್ಗದಿಂದ ಕತ್ತರಿಸಲು ಬಯಸಿದನು.
ಸ್ಮಯಂಸ್ತು ಕ್ರೋಧತಾಮ್ರಾಕ್ಷಸ್ತಮುವಾಚ ನಳೋ ನೃಪಃ |
ಪಣಾವಃ ಕಿಂ ವ್ಯಾಹರಸೇ ಜಿತೋ ನ ವ್ಯಾಹರಿಷ್ಯಸಿ ॥18॥
ಕೋಪಗೊಂಡ ನಳಮಹಾರಾಜನು ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ಅವನನ್ನು ಕುರಿತು ನಗುತ್ತಲೇ ದ್ಯೂತವನ್ನು ಆಡೋಣ ಏಕೆ ಮಾತನಾಡುತ್ತಿದ್ದೀಯೆ? ನೀನು ಪರಾಜಿತನಾಗುವಿ. ಅನಂತರ ಮಾತನಾಡುವುದಿಲ್ಲ ಎಂದು ಹೇಳಿದನು.
ತತಃ ಪ್ರಾವರ್ತತ ದ್ಯೂತಂ ಪುಷ್ಕರಸ್ಯ ನಳಸ್ಯ ಚ |
ಏಕಪಾಣೇನ ಭದ್ರಂ ತೇ ನಳೇನ ಸ ಪರಾಜಿತಃ ॥19॥

ಅನಂತರ ಪುಷ್ಕರನಿಗೂ ಮತ್ತು ನಳನಿಗೂ ದ್ಯೂತವು ಜರುಗಿತು. ಧರ್ಮರಾಜನೇ ನಿನಗೆ ಮಂಗಳವಾಗಲಿ ಒಂದೇ ಆಟದಲ್ಲಿ ಪುಷ್ಕರನು ನಳನಿಗೆ ಎಲ್ಲವನ್ನೂ ಸೋತನು.
ಸರತ್ನಕೋಶನಿಚಯಂ ಸಹ ಪ್ರಾಣೇನ ನೈಷಧಃ |
ಜಿತ್ವಾ ಚ ಪುಷ್ಕರಂ ರಾಜಾ ಪ್ರಹಸನ್ನಿದಮಬ್ರವೀತ್ ||20||
ನಳನು ಪುಷ್ಕರನನ್ನು ಅವನ ರಾಜ್ಯ ರತ್ನಕೋಶಗಳು ಮತ್ತು ಪ್ರಾಣಗಳ ಜೊತೆಯಲ್ಲಿ ಗೆದ್ದು ನಗುತ್ತಾ ಹೀಗೆ ಮಾತನಾಡಿದನು.
ಜಿತಂ ಸರ್ವಮಿದಂ ರಾಜ್ಯಮವ್ಯಗ್ರಂ ಹತಕಂಟಕಮ್ |
ವೈದರ್ಭೀ ನ ತ್ವಯಾ ಶಕ್ಯಾ ರಾಜಾಪಶದ ವೀಕ್ಷಿತುಮ್ |
ತಸ್ಯಾಸ್ತ್ವಂ ಸಪರೀವಾರೋ ಮೂಢ ದಾಸತ್ವಮಾಗತಃ ||21||
ಈ ನಿನ್ನ ರಾಜ್ಯವು ನಿರಾತಂಕವಾಗಿ ಶತ್ರುರಹಿತರಾಗಿರುವಂತೆ ನನ್ನಿಂದ ಗೆಲ್ಲಲ್ಪಟ್ಟಿದೆ. ರಾಜಾಧಮನೇ ನೀನು ದಮಯಂತಿಯನ್ನು ಕಣ್ಣಿನಿಂದಲೂ ನೋಡಲು ಶಕ್ತನಲ್ಲ. ಮೂಢನೇ ನೀನು ನಿನ್ನ ಪರಿವಾರದ ಜೊತೆಯಲ್ಲಿ ಅವಳಿಗೆ ದಾಸನಾಗಿದ್ದೀಯೆ.
ನ ತತ್ ತ್ವಯಾ ಕೃತಂ ಕರ್ಮ ಯೇನಾಹಂ ವಿಜಿತಸ್ತ್ವಯಾ |
ಕಲಿನಾ ತತ್ ಕೃತಂ ಕರ್ಮ ತ್ವಂ ತು ಮೂಢ ನ ಬುಧ್ಯಸೇ ||22||
ನೀನು ನನ್ನನ್ನು ದ್ಯೂತದಲ್ಲಿ ಜಯಿಸಿದುದು ನಿನ್ನ ಸಾಧನೆಯಲ್ಲ. ಕಲಿಯು ಆ ಕಾರ್ಯವನ್ನು ಮಾಡಿದನು. ಮೂಢನೇ, ನಿನಗೆ ಅದರ ಜ್ಞಾನವಿಲ್ಲ.
ನಾಹಂ ಪರಕೃತಂ ದೋಷಂ ತ್ವಯ್ಯಾಧಾಸ್ಯೇ ಕಥಂಚನ |
ಯಥಾಸುಖಂ ವೈ ತ್ವಂ ಜೀವ ಪ್ರಾಣಾನವಸೃಜಾಮಿ ತೇ ||23||
ಇನ್ನೊಬ್ಬರಿಂದ ಉಂಟಾದ ದೋಷವನ್ನು ನಾನು ಯಾವ ಕಾರಣದಿಂದಲೂ ನಿನ್ನ ಮೇಲೆ ಹೇರುವುದಿಲ್ಲ. ನಿನ್ನ ಪ್ರಾಣಗಳನ್ನು ಬಿಟ್ಟು ಕೊಟ್ಟಿದ್ದೇನೆ. ನೀನು ಸುಖವಾಗಿ ಜೀವನವನ್ನು ಮಾಡು.
ತಥೈವ ಚ ಮಮ ಪ್ರೀತಿಃ ತ್ವಯಿ ವೀರ ನ ಸಂಶಯಃ |
ಸೌಭ್ರಾತ್ರಂ ಚೈವ ಮೇ ತ್ವತ್ತೋ ನ ಕದಾಚಿತ್ ಪ್ರಹಾಸ್ಯತಿ ||24||
ಪುಷ್ಕರ ತ್ವಂ ಹಿ ಮೇ ಭ್ರಾತಾ ಸಂಜೀವ ಶರದಃ ಶತಂ ||25||
ಎಲೈ ವೀರನೇ, ನಿನಗೆ ನಾಶವಿಲ್ಲದ ಕೀರ್ತಿಯು ಇರಲಿ. ನನಗೆ ನಿನ್ನಲ್ಲಿ ಮೊದಲಿದ್ದಂತೆ ಪ್ರೀತಿಯಿರುತ್ತದೆ. ಇದರಲ್ಲಿ ಸಂಶಯವಿಲ್ಲ. ನಿನ್ನ ಜೊತೆಯಲ್ಲಿರುವ ಒಳ್ಳೆಯ ಸೋದರಸಂಬಂಧವು ಎಂದೂ ನಾಶವನ್ನು ಹೊಂದುವುದಿಲ್ಲ. ಪುಷ್ಕರನೇ, ನೀನು ನನ್ನ ತಮ್ಮ. ನೂರುವರ್ಷಗಳಕಾಲ ಬಾಳು.
ಏವಂ ನಳಃ ಸಾಂತ್ವಯಿತ್ವಾ ಭ್ರಾತರಂ ಸತ್ಯವಿಕ್ರಮಃ |
ಪುಷ್ಕರಂ ಕ್ಷಮಯಾಮಾಸ ಸಾಂತ್ವಯಿತ್ವಾ ಪುನಃ ಪುನಃ ||26||
ಹೀಗೆ ಸತ್ಯವಿಕ್ರಮನಾದ ನಳನು ತನ್ನ ತಮ್ಮನನ್ನು ಪುನಃಪುನಃ ಸಮಾಧಾನಪಡಿಸಿ ಅವನನ್ನು ಕ್ಷಮಿಸಿದನು.
ಸಾಂತ್ವಿತೋ ನೈಷಧೇನೈವಂ ಪುಷ್ಕರಃ ಪ್ರತ್ಯುವಾಚ ಹ |
ಪುಣ್ಯಶ್ಲೋಕಂ ತದಾ ರಾಜನ್ನಭಿವಾದ್ಯ ಕೃತಾಂಜಲಿಃ ||27||
ಎಲೈ ರಾಜನೇ ಹೀಗೆ ನೈಷಧನಿಂದ ಕ್ಷಮಿಸಿ ಸಮಾಧಾನಗೊಳಿಸಲ್ಪಟ್ಟ ಪುಷ್ಕರನು ಆ ಪುಣ್ಯಶ್ಲೋಕನನ್ನು ನಮಸ್ಕರಿಸಿ ಕೈಗಳನ್ನು ಮುಗಿದು ಮಾತನಾಡಿದನು.
ಕೀರ್ತಿರಸ್ತು ತವಾಕ್ಷಯ್ಯಾ ಜೀವ ವರ್ಷಾಯುತಂ ಸುಖೀ |
ಯೋ ಮೇ ವಿತರಸಿ ಪ್ರಾಣಾನ್ ಅಧಿಷ್ಠಾನಂ ಚ ಪಾರ್ಥಿವ ||28||
ಎಲೈ ರಾಜನೇ ನನಗೆ ಪ್ರಾಣಗಳನ್ನು ಮತ್ತು ವಾಸಸ್ಥಾನವನ್ನು ದಾನಮಾಡಿದ ನೀನು ಹತ್ತು ಸಾವಿರವರ್ಷ ಸುಖವಾಗಿ ಬದುಕು.
ಸ ತಥಾ ಸಾಂತ್ವಿತೋ ರಾಜ್ಞಾ ಮಾಸಮುಷ್ಯ ತದಾ ನೃಪಃ |
ಪ್ರಯಯೌ ಸ್ವಪುರೀಂ ಹೃಷ್ಟಃ ವಿನೀತೈಃ ಪರಿಚಾರಕೈಃ |
ಭ್ರಾಜಮಾನ ಇವಾದಿತ್ಯೋ ವಪುಷಾ ಕುರುನಂದನ ||29||
ಎಲೈ ಕುರುನಂದನನೇ ನಳನಿಂದ ಹೀಗೆ ಸಮಾಧಾನಮಾಡಲ್ಪಟ್ಟ ಪುಷ್ಕರನು ನಳನ ಜೊತೆಯಲ್ಲಿ ಒಂದು ತಿಂಗಳುವಾಸಮಾಡಿ ಸಂತೋಷದಿಂದ ತನ್ನ ಜನಗಳಿಂದ ಕೂಡಿಕೊಂಡು ದೊಡ್ಡ ಸೇನೆಯಿಂದಲೂ ವಿನಯಶಾಲಿಗಳಾದ ಪರಿಚಾರಕರಿಂದಲೂ ಕೂಡಿಕೊಂಡು ಸೂರ್ಯನಂತೆ ತನ್ನ ದೇಹಕಾಂತಿಯಿಂದ ಬೆಳಗುತ್ತಾ ತನ್ನ ಪಟ್ಟಣಕ್ಕೆ ಹಿಂದಿರುಗಿದನು.
ಪ್ರಸ್ಥಾಪ್ಯ ಪುಷ್ಕರಂ ರಾಜನ್ ವಿತ್ತವಂತಮನಾಮಯಮ್ |
ಪ್ರವಿವೇಶ ಪುರಂ ರಮ್ಯಮತ್ಯರ್ಥಮುಪಶೋಭಿತಮ್ ||30||
ರಾಜನೇ ಪುಷ್ಕರನನ್ನು ಅವನ ಧನದ ಜೊತೆಯಲ್ಲಿ ಏನೂ ಅಪಾಯವಾಗದಂತೆ ಹಿಂದಕ್ಕೆ ಕಳುಹಿಸಿ ನಳನು ಬಹಳವಾಗಿ ಅಲಂಕರಿಸಿಲ್ಪಟ್ಟಿದ್ದ ತನ್ನ ಸುಂದರವಾದ ಪಟ್ಟಣವನ್ನು ಪ್ರವೇಶಿಸಿದನು.
ಪ್ರವಿಶ್ಯ ಸಾಂತ್ವಯಾಮಾಸ ಪೌರಾನ್ ಸ ನಿಷಧಾಧಿಪಃ |
ಹಿತೇಷು ಚೈಷಾಂ ಸತತಂ ಪಿತೇವಾವಹಿತೋಽಭವತ್ ||31||
ಆ ನಿಷಧಾಧಿಪನು ತನ್ನ ಪಟ್ಟಣವನ್ನು ಪ್ರವೇಶಿಸಿ ಪೌರರನ್ನು ಸಮಾಧಾನಗೊಳಿಸಿದನು. ಮತ್ತು ತಂದೆಯಂತೆ ಸತತವಾಗಿ ಅವರ ಹಿತದಲ್ಲಿ ಆಸಕ್ತನಾಗಿದ್ದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಏಕೋನತ್ರಿಂಶೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ನಾಲ್ಕನೆಯ ಅಧ್ಯಾಯ
(ನಳಚರಿತೆಸಮಾಪ್ತಿ. ಯುಧಿಷ್ಠಿರನನ್ನು ಸಮಾಧಾನಪಡಿಸಿ ಬೃಹದಶ್ವಗಮನ. ಯುಧಿಷ್ಠಿರನಿಗೆ ಅರ್ಜುನನನ್ನು ನೋಡಿವ ತವಕ.)
ಬೃಹದಶ್ವಃ
ಪ್ರಯಾತೇ ಪುಷ್ಕರೇ ಹೃಷ್ಟೋ ವಸನ್ ಹೃಷ್ಟಮಹೋತ್ಸವೇ |
ಮಹತ್ಯಾ ಸೇನಯಾ ರಾಜಾ ಧನೇನ ಚ ಸುತ್ಯೈಃ ಸಹ ॥1॥
ಸುತಾಂ ಪ್ರಸ್ಥಾಪಯಾಮಾಸ ಪುಣ್ಯಶ್ಲೋಕಾಯ ಧೀಮತೇ |
ಪುಷ್ಕರನು ಪ್ರಯಾಣಮಾಡಿದ ಮೇಲೆ ಪುಷ್ಟವಾದ ನಗರದಲ್ಲಿ ನಳನು ಮಹೋತ್ಸವಗಳ ಜೊತೆಯಲ್ಲಿ ವಾಸಮಾಡುತ್ತಿರಲು,
ಮಹೋತ್ಸವಗಳ ಜೊತೆ ವಾಸ ಮಾಡುವವನು ಯಾರು? ಭೀಮರಾಜನು ಮೇಧಾವಿಯಾದ ಪುಣ್ಯಶ್ಲೋಕನಾದ ನಳನಿಗೆ
ದೊಡ್ಡಸೈನ್ಯದ ಜೊತೆಯಲ್ಲಿ ತನ್ನ ಮಕ್ಕಳನ್ನು ಜೊತೆಮಾಡಿ ದಮಯಂತಿಯನ್ನು ಕಳುಹಿಸಿಕೊಟ್ಟನು.
ದಮಯಂತೀಮಪಿ ಪಿತಾ ಸತ್ಕೃತ್ಯ ಪರವೀರಹಾ |
ಪ್ರಾಸ್ಥಾಪಯದಮೇಯಾತ್ಮಾ ಭೀಮೋ ಭೀಮಪರಾಕ್ರಮಃ ॥2॥
ಶತ್ರುಸಂಹಾರಕನೂ ಭಯಂಕರ ಪರಾಕ್ರಮವುಳ್ಳವನೂ ಅಮೇಯಾತ್ಮನೂ ಆದ ತಂದೆಯಾದ ಭೀಮನು ಮಗಳಾದ
ದಮಯಂತಿಯನ್ನು ಸತ್ಕರಿಸಿ ಕಳುಹಿಸಿಕೊಟ್ಟನು.
ಆಗತಾಯಾಂ ತು ವೈದರ್ಭ್ಯಾಂ ಸಪುತ್ರಾಯಾಂ ನಳೋ ನೃಪಃ |
ವರ್ತಯಾಮಾಸ ಮುದಿತೋ ದೇವರಾಡಿವ ನಂದನೇ ॥3॥
ದಮಯಂತಿಯು ಮಕ್ಕಳಜೊತೆಯಲ್ಲಿ ಹಿಂದಿರುಗಿದ ಮೇಲೆ ನಳಮಹಾರಾಜನು ನಂದನವನದಲ್ಲಿ ಇಂದ್ರನಂತೆ ಸಂತೋಷದಿಂದ
ಇದ್ದನು.
ತಥಾ ಪ್ರಕಾಶತಾಂ ಯಾತೋ ಜಂಬೂದ್ವೀಪೇ ಚ ರಾಜಸು |
ಪುನಃ ಸ್ವೇ ನ್ಯವಸದ್ರಾಜ್ಯೇ ಪ್ರತ್ಯಾಹೃತ್ಯ ಮಹಾಯಶಾಃ ॥4॥
ಜಂಬೂದ್ವೀಪದ ರಾಜರುಗಳಲ್ಲಿ ಪ್ರಸಿದ್ಧಿಯನ್ನು ಪಡೆದ ಮಹಾಕೀರ್ತಿಶಾಲಿಯಾದ ಅವನು ತನ್ನ ರಾಜ್ಯದಲ್ಲಿ
ಪುನಃವಾಸಮಾಡಿದನು.
ಈಜೇ ಚ ವಿವಿಧೈರ್ಯಜ್ಞೈರ್ವಿಧಿವತ್ ಸ್ವಾಪ್ತದಕ್ಷಿಣೈಃ |
ತಥಾ ತ್ವಮಪಿ ರಾಜೇಂದ್ರ ಸಸುಹೃದ್ದ್ರಕ್ಷ್ಯಸೇಽಚಿರಾತ್ ॥5॥
ಬಹಳ ದಕ್ಷಿಣೆಗಳನ್ನುಕೊಟ್ಟು ವಿಧಿಪೂರ್ವಕವಾಗಿ ಅನೇಕ ಯಜ್ಞಗಳನ್ನು ಆಚರಿಸಿದನು. ರಾಜೇಂದ್ರನಾದ ಯುಧಿಷ್ಠಿರನೇ ನೀನೂ
ಸಹ ಅಲ್ಪ ಸಮಯದಲ್ಲಿಯೇ ನಿನ್ನ ಆಪ್ತರ ಜೊತೆಯಲ್ಲಿ ಅರ್ಜುನನನ್ನು ನೋಡುವಿ.
ದುಃಖಮೇತಾದೃಶಂ ಪ್ರಾಪ್ತೋ ನಳಃ ಪರಪುರಂಜಯಃ |
ದೇವನೇನ ನರಶ್ರೇಷ್ಠಃ ಸಭಾರ್ಯೋ ಭರತರ್ಷಭ ॥6॥
ಭರತರ್ಷಭನೇ ನರಶ್ರೇಷ್ಠನೂ ಪರಪುರಂಜಯನೂ ಆದ ನಳನು ದ್ಯೂತವನ್ನು ಆಡಿ ತನ್ನ ಪತ್ನಿಯ ಜೊತೆಯಲ್ಲಿ ಇಂತಹ ದುಃಖಕ್ಕೆ
ಈಡಾದನು.
ಏಕಾಕಿನೈವ ಸುಮಹನ್ನಳೇನ ಪೃಥಿವೀಪತೇ |
ದುಃಖಮಾಸಾದಿತಂ ಘೋರಂ ಪ್ರಾಪ್ತಶ್ಚಾಭ್ಯುದಯಃ ಪುನಃ ॥7॥
ಪೃಥ್ವೀಪತಿಯೇ ನಳನು ಏಕಾಕಿಯಾಗಿಯೇ ಇಂತಹ ಘೋರವಾದ ಮತ್ತು ದೊಡ್ಡದಾದ ದುಃಖವನ್ನು ಹೊಂದಿ ಪುನಃ
ಅಭ್ಯುದಯವನ್ನು ಪಡೆದನು.
ತ್ವಂ ಪುನರ್ಭ್ರಾತೃಸಹಿತಃ ಕೃಷ್ಣಯಾ ಚೈವ ಪಾಂಡವ |
ರಮಸೇಽಸ್ಮಿನ್ ಮಹಾರಣ್ಯೇ ಧರ್ಮಮೇವಾನುಚಿಂತಯನ್ ॥8॥
ಎಲೈ ಪಾಂಡವನೇ ನೀನಾದರೂ ಈ ದೊಡ್ಡ ಅರಣ್ಯದಲ್ಲಿ ಸಹೋದರರಿಂದ ಸಹಿತನಾಗಿ ದ್ರೌಪದಿಯಿಂದ ಸಹಿತನಾಗಿ ಧರ್ಮವನ್ನೇ
ಆಚರಿಸುತ್ತಾ ಮತ್ತು ಚಿಂತಿಸುತ್ತಾ ಸುಖದಿಂದ ಇದ್ದೀಯೆ.
ಬ್ರಾಹ್ಮಣೈಶ್ಚ ಮಹಾಭಾಗೈರ್ವೇದವೇದಾಂಗಪಾರಗೈಃ |
ನಿತ್ಯಮನ್ವಾಸ್ಯಸೇ ರಾಜನ್ ತತ್ರ ಕಾ ಪರಿದೇವನಾ |
ಇತಿಹಾಸಮಿಮಂ ಚಾಪಿ ಕಲಿನಾಶನಮುಚ್ಯತೇ ॥9॥
ಎಲೈ ರಾಜನೇ, ವೇದವೇದಾಂಗಪಾರಂಗತರಾದ ಮಹಾನುಭಾವರಾದ ಬ್ರಾಹ್ಮಣರು ನಿತ್ಯವೂ ನಿನ್ನನ್ನು ಸೇವಿಸುತ್ತಿದ್ದಾರೆ. ನೀನು
ಸಂತಾಪಪಡುವುದಕ್ಕೆ ಏನು ಕಾರಣವಿದೆ? ಈ ನಳನ ಇತಿಹಾಸವನ್ನು ಕಲಿನಾಶನವೆಂದು ಹೇಳುತ್ತಾರೆ.
ಶಕ್ಯ ಮಾಶ್ವಸಿತುಂ ಶ್ರುತ್ವಾ ತ್ವದ್ವಿಧೇನ ವಿಶಾಂಪತೇ |
ಅಸ್ಥಿರತ್ವಂ ಚ ಸಂಚಿಂತ್ಯ ಪುರುಷಾರ್ಥಸ್ಯ ನಿತ್ಯದಾ ॥10॥
ತಸ್ಯಾಪಾಯೇ ವ್ಯಯೇ ಚೈವ ತದಾಶ್ವಾಸಿತುಮರ್ಹಸಿ |
ಎಲೈ ರಾಜನೇ, ಈ ಕಥೆಯನ್ನು ಕೇಳಿ ನಿನ್ನಂತಹವನು ಸಮಾಧಾನವನ್ನು ತಂದುಕೊಳ್ಳಬೇಕು. ಸಂಪತ್ತು ಯಾವಾಗಲೂ
ಅಸ್ಥಿರವೆಂದೂ ಅದು ನಾಶವಾದರೂ ಅಥವಾ ಹ್ರಾಸವಾದರೂ ಸಂತಾಪಕಾರಕವೆಂದೂ ತಿಳಿದು ಸಮಾಧಾನವನ್ನು
ತಂದುಕೊಳ್ಳಬೇಕು.

ಯೇ ಚೈತತ್ ಕಥಯಿಷ್ಯಂತಿ ನಳಸ್ಯ ಚರಿತಂ ಮಹತ್ |
ಶ್ರೋಷ್ಯಂತಿ ಚಾಪ್ಯಭೀಕ್ಷ್ಣಂ ಯೇ ನಾಲಕ್ಷ್ಮೀಸ್ತಾನ್ ಭಜಿಷ್ಯತಿ |
ಅರ್ಥಾಶ್ಚಾಸ್ಯೋಪಪದ್ಯಂತೇ ಧನ್ಯತಾಂ ಚ ಗಮಿಷ್ಯತಿ ॥11॥
ಯಾರು ಈ ನಳನ ದೊಡ್ಡ ಚರಿತ್ರೆಯನ್ನು ಹೇಳುವರೋ ಮತ್ತು ಯಾರು ಸತತವಾಗಿ ಕೇಳುವರೋ ಅವರಿಗೆ ಅಲಕ್ಷ್ಮಿಯು ಬಂದು ಸೇರುವುದಿಲ್ಲ. ಧನವು ಬಂದು ಅವರನ್ನು ಸೇರುತ್ತದೆ. ಅವರು ಧನ್ಯರಾಗುವರು.
ಕಾರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಳಸ್ಯ ಚ |
ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥12॥
ಕಾರ್ಕೋಟಕನಾಗನ ದಮಯಂತಿಯ ನಳನ ಮತು ರಾಜರ್ಷಿಯಾದ ಋತುಪರ್ಣನ ಕೀರ್ತನೆಯು ಕಲಿನಾಶನವಾದುದು.
ಇತಿಹಾಸಮಿಮಂ ಶ್ರುತ್ವಾ ಪುರಾಣಂ ಶಶ್ವದುತ್ತಮಮ್ |
ಪುತ್ರಾನ್ ಪೌತ್ರಾನ್ ಪಶೂಂಶ್ಚಾಪಿ ವೇತ್ಸ್ಯತೇ ನೃಷು ಚಾಗ್ರ್ಯತಾಮ್ ॥
ಅರೋಗಾಃ ಪ್ರೀತಿಮಂತಶ್ಚ ಭವಿಷ್ಯಂತಿ ನ ಸಂಶಯಃ ॥14॥
ಈ ಶ್ರೇಷ್ಠವಾದ ಪ್ರಾಚೀನವಾದ ಇತಿಹಾಸವನ್ನು ಯಾವಾಗಲೂ ಕೇಳಿದರೆ ಪುತ್ರರನ್ನೂ ಪೌತ್ರರನ್ನೂ ಪಶುಗಳನ್ನೂ ಮನುಷ್ಯರಲ್ಲಿ ಶ್ರೇಷ್ಠತ್ವವನ್ನೂ ಪಡೆಯುವನು. ಕೇಳುವವರು ರೋಗರಹಿತರೂ ಸಂತೋಷಯುಕ್ತರೂ ಆಗುವರು. ಇದರಲ್ಲಿ ಸಂಶಯವಿಲ್ಲ.
ಭಯಂ ಪಶ್ಯಸಿ ಯಚ್ಚ ತ್ವಮಾಹ್ವಯಿಷ್ಯಂತಿ ಮಾಂ ಪುನಃ |
ಅಕ್ಷಜ್ಞ ಇತಿ ತತ್ತೇಽಹಂ ನಾಶಯಿಷ್ಯಾಮಿ ಪಾರ್ಥಿವ ॥15॥
ಎಲೈ ರಾಜನೇ, ನೀನು ಅಕ್ಷಜ್ಞನಾದ ಶಕುನಿಯು ಪುನಃ ನನ್ನನ್ನು ದ್ಯೂತಕ್ಕೆ ಕರೆಯುವನು ಎಂದು ಯಾವ ಭಯವನ್ನು ಪಡುತ್ತಿದ್ದೀಯೊ ಅದನ್ನು ನಾನು ನಾಶಮಾಡುವೆನು.
ವೇದಾಕ್ಷಹೃದಯಂಕೃತ್ಸ್ನಮಹಂ ಸತ್ಯಪರಾಕ್ರಮ |
ಉಪಪದ್ಯಸ್ವ ಕೌಂತೇಯ ಪ್ರಸನ್ನೋಽಹಂ ವದಾನಿ ತೇ ॥16॥
ಎಲೈ ಸತ್ಯಪರಾಕ್ರಮನೇ, ನಾನು ಸಮಗ್ರವಾದ ಅಕ್ಷಹೃದಯವನ್ನು ತಿಳಿದಿದ್ದೇನೆ ಕೌಂತೇಯನೇ ಸಿದ್ಧನಾಗು ನಾನು ಪ್ರಸನ್ನನಾಗಿ ನಿನಗೆ ಅದನ್ನು ಉಪದೇಶಿಸುತ್ತೇನೆ.
ವೈಶಂಪಾಯನಃ
ತತೋ ಹೃಷ್ಟಮನಾ ರಾಜಾ ಬೃಹದಶ್ವಮುವಾಚ ಹ |
ಭಗವನ್ನಕ್ಷಹೃದಯಂ ಜ್ಞಾತುಮಿಚ್ಛಾಮಿ ತತ್ತ್ವತಃ ॥17॥
ಆಗ ಮನಸ್ಸಂತೋಷವನ್ನು ಹೊಂದಿದ ಯುಧಿಷ್ಠಿರನು ಬೃಹದಶ್ವರನ್ನು ಕುರಿತು ಪೂಜ್ಯರೇ ಅಕ್ಷಹೃದಯವನ್ನು ನಾನು ಚೆನ್ನಾಗಿ ತಿಳಿಯಲು ಇಷ್ಟಪಡುತ್ತೇನೆ ಎಂದು ಹೇಳಿದನು.
ತದಾಽಕ್ಷಹೃದಯಂ ಪ್ರಾದಾತ್ ಪಾಂಡವಾಯ ಮಹಾತ್ಮನೇ |
ಲಬ್ಧ್ವಾ ಚ ಪಾಂಡವೋ ರಾಜಾ ವಿಶೋಕಃ ಸಮಪದ್ಯತ ॥18॥
ಆಗ ಮಹಾತ್ಮನಾದ ಪಾಂಡವನಿಗೆ ಬೃಹದಶ್ವನು ಅಕ್ಷಹೃದಯವನ್ನು ಉಪದೇಶಿಸಿದನು. ಆ ಉಪದೇಶವನ್ನು ಪಡೆದ ಪಾಂಡವನಾದ ಧರ್ಮರಾಜನು ಶೋಕರಹಿತನಾದನು.
ಕಥಾಮೇವಂ ತಥಾ ಕೃತ್ವಾ ನಳಸ್ಯ ಚರಿತಾಶ್ರಯಾಮ್ |
ಆಮಂತ್ರ್ಯ ಪಾಂಡವಾನ್ ಸರ್ವಾನ್ ಬೃಹದಶ್ವೋ ಜಗಾಮ ಹ ॥
ನಳನಿಗೆ ಸಂಬಂಧಿಸಿದ ಈ ಚರಿತ್ರೆಯನ್ನು ಈ ರೀತಿಯಲ್ಲಿ ಹೇಳಿ ಬೃಹದಶ್ವರು ಎಲ್ಲಾ ಪಾಂಡವರ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟರು.
ಬೃಹದಶ್ವೇ ಗತೇ ಪಾರ್ಥಮಶ್ರೌಷೀತ್ ಸವ್ಯಸಾಚಿನಮ್ |
ವರ್ತಮಾನಂ ತಪಸ್ಯುಗ್ರೇ ವಾಯುಭಕ್ಷಂ ಮನೀಷಿಣಮ್ ॥20॥
ಬ್ರಾಹ್ಮಣೇಭ್ಯಸ್ತಪಸ್ವಿಭ್ಯಃ ಸಂಪತದ್ಭ್ಯಸ್ತತಸ್ತತಃ |
ತೀರ್ಥಶೈಲವರೇಭ್ಯಶ್ಚ ಸಮೇತೇಭ್ಯೋ ದೃಢವ್ರತಃ ॥21॥
ಬೃಹದಶ್ವರು ಹೊರಟು ಹೋದಮೇಲೆ ದೃಢವ್ರತನಾದ ಧರ್ಮರಾಜನು ಅಲ್ಲಲ್ಲಿ ಸಂಚರಿಸುವ ತೀರ್ಥ ಮತ್ತು ಪರ್ವತಗಳಲ್ಲಿ ಒಂದುಗೂಡುವ ತಪಸ್ವಿಗಳಾದ ಬ್ರಾಹ್ಮಣರಿಂದ ಮೇಧಾವಿಯಾದ ಅರ್ಜುನನು ಉಗ್ರವಾದ ತಪಸ್ಸಿನಲ್ಲಿ ನಿರತನಾಗಿದ್ದಾನೆ ಎಂದೂ ವಾಯುಭಕ್ಷನಾಗಿದ್ದಾನೆ ಎಂದೂ ಕೇಳಿ ತಿಳಿದನು.
ಇತಿ ಪಾರ್ಥೋ ಮಹಾಬಾಹುರುದಾರಂ ತಪ ಆಸ್ಥಿತಃ |
ತಥಾ ನ ದೃಷ್ಟಪೂರ್ವೋಽನ್ಯಃ ಕಶ್ಚಿದುಗ್ರತಪಾ ಇತಿ ॥22॥
ಮಹಾಬಾಹುವಾದ ಪಾರ್ಥನು ಹಿಂದೆ ಬೇರೆ ಯಾರೂ ಮಾಡದಿದ್ದಂತೆ ಉಗ್ರವಾದ ಮತ್ತು ಉತ್ಕೃಷ್ಟವಾದ ತಪಸ್ಸನ್ನು ಮಾಡುತ್ತಿದ್ದಾನೆ ಎಂದು ಕೇಳಿದನು.
ಯಥಾ ಧನಂಜಯಃ ಪಾರ್ಥಃ ತಪಸ್ವೀ ನಿಯತವ್ರತಃ |
ಮುನಿವೇಷಧರಃ ಶ್ರೀಮಾನ್ ಧರ್ಮೋ ವಿಗ್ರಹವಾನಿವ ॥23॥
ಹಾಗೆಯೇ ಧನಂಜಯನಾದ ಪಾರ್ಥನು ನಿಯತವ್ರತನಾಗಿ ತಪಸ್ವಿಯಾಗಿ ಕಾಂತಿಯುಕ್ತನಾಗಿ ಮುನಿವೇಷವನ್ನು ಧರಿಸಿ ಶರೀರವನ್ನು ಧರಿಸಿದ ಧರ್ಮದಂತೆಯೇ ಕಾಣುತ್ತಿದ್ದಾನೆ ಎಂದೂ ಕೇಳಿದನು.
ತಂ ಶ್ರುತ್ವಾ ಪಾಂಡವೋ ರಾಜನ್ ತಪ್ಯಮಾನಂ ಮಹಾವನೇ |

ಅನ್ವಶೋಚತ ಕೌಂತೇಯಃ ಪ್ರಿಯಂ ವೈ ಭ್ರಾತರಂ ಜಯಮ್ ॥24॥
ಎಲೈ ಜನಮೇಜಯನೇ ಮಹಾರಣ್ಯದಲ್ಲಿ ತಪಸ್ಸಿನಲ್ಲಿ ನಿರತನಾಗಿದ್ದ ಅರ್ಜುನನನ್ನು ಕೇಳಿ ಕುಂತೀಪುತ್ರನಾದ ಧರ್ಮರಾಜನು ತನ್ನ ಪ್ರಿಯ ಸಹೋದರನಾದ ಅರ್ಜುನನನ್ನು ಕುರಿತು ಚಿಂತಿಸಿ ಶೋಕಪಟ್ಟನು.
ದಹ್ಯಮಾನೇನ ತು ಹೃದಾ ಶರಣಾರ್ಥೀ ಮಹಾವನೇ |
ಬ್ರಾಹ್ಮಣಾನ್ ವಿವಿಧಜ್ಞಾನಾನ್ ಪರ್ಯಪೃಚ್ಛದ್ಯುಧಿಷ್ಠಿರಃ ॥25॥
ಮಹಾರಣ್ಯದಲ್ಲಿ ಶರಣಾರ್ಥಿಯಾದ ಧರ್ಮರಾಜನು ಭ್ರಾತೃಶೋಕದಿಂದ ದುಃಖಪಡುತ್ತಿದ್ದ ಮನಸ್ಸಿನಿಂದ ಕೂಡಿದವನಾಗಿ ಬಹುವಿಧಜ್ಞಾನವುಳ್ಳ ಬ್ರಾಹ್ಮಣರಲ್ಲಿ ಅರ್ಜುನನ ಕ್ಷೇಮವನ್ನು ವಿಚಾರಿಸಿದನು.
ಪ್ರತಿಗೃಹ್ಯಾಕ್ಷಹೃದಯಂ ಕುಂತೀಪುತ್ರೋ ಯುಧಿಷ್ಠಿರಃ |
ಆಸೀದ್ವ್ಯಪಷ್ಟಮನಾ ರಾಜಾ ಭೀಮಸೇನಾದಿಭಿರ್ಯುತಃ ॥26॥
ಕುಂತೀಪುತ್ರನಾದ ಯುಧಿಷ್ಠಿರರಾಜನು ಅಕ್ಷಹೃದಯವನ್ನು ಸ್ವೀಕರಿಸಿ ಭೀಮಸೇನಾದಿಗಳ ಜೊತೆಯಲ್ಲಿ ಸಂತೋಷದಿಂದ ಇದ್ದನು.
ಸ್ವಭ್ರಾತೄನ್ ಸಹಿತಾನ್ ಪಶ್ಯನ್ ಕುಂತೀಪುತ್ರೋ ಯುಧಿಷ್ಠಿರಃ |
ಅಪಶ್ಯನ್ನರ್ಜುನಂ ತತ್ರ ಬಭೂವಾಶ್ರುಪರಿಪ್ಲುತಃ |
ಸಂತಪ್ಯಮಾನಃ ಕೌಂತೇಯೋ ಭೀಮಸೇನಮುವಾಚ ಹ ॥27॥
ಕುಂತೀಪುತ್ರನಾದ ಯುಧಿಷ್ಠಿರನು ತನ್ನ ಉಳಿದ ತಮ್ಮಂದಿರನ್ನು ತನ್ನ ಜೊತೆಯಲ್ಲಿ ನೋಡಿ ಅರ್ಜುನನನ್ನು ಕಾಣದೆ ಅಶ್ರುಪೂರ್ಣನಯನನಾದನು. ಕೌಂತೇಯನಾದ ಧರ್ಮರಾಜನು ಸಂತಾಪವನ್ನು ಪಡುತ್ತಾ ಭೀಮಸೇನನನ್ನು ಕುರಿತು ಮಾತನಾಡಿದನು.
ಕದಾ ದ್ರಕ್ಷ್ಯಾಮಿ ವೈ ಭೀಮ ಕುಂತೀಪುತ್ರಂ ಧನಂಜಯಮ್ |
ಮತ್ಕೃತೇ ಹಿ ಕುರುಶ್ರೇಷ್ಠಃ ತಪ್ಯತೇ ದುಶ್ಚರಂ ತಪಃ ॥28॥
ಎಲೈ ಭೀಮನೇ ಕುಂತೀಪುತ್ರನಾದ ಧನಂಜಯನನ್ನು ನಾನು ಯಾವಾಗ ನೋಡುವೆನು? ಕುರುಶ್ರೇಷ್ಠನಾದ ಅವನು ನನ್ನ ಸಲುವಾಗಿ ದುಶ್ಚರವಾದ ತಪಸ್ಸನ್ನು ಆಚರಿಸುತ್ತಿದ್ದಾನೆ.
ತಸ್ಯಾಕ್ಷಹೃದಯಜ್ಞಾನಮಾಖ್ಯಾಸ್ಯಾಮಿ ಕದಾ ನ್ವಹಮ್ |
ಸ ಹಿ ಶ್ರುತ್ವಾಽಕ್ಷಹೃದಯಂ ಸಮುಪಾತ್ತಂ ಮಯಾ ಪ್ರಭುಃ |
ಪ್ರಹೃಷ್ಟಃ ಪುರುಷವ್ಯಾಘ್ರೋ ಭವಿಷ್ಯತಿ ನ ಸಂಶಯಃ ॥29॥
ನಾನು ಅಕ್ಷಹೃದಯವನ್ನು ಯಾವಾಗ ಅವನಿಗೆ ಹೇಳುವೆನು? ಪ್ರಭುವೂ ಪುರುಷವ್ಯಾಘ್ರನೂ ಆದ ಅವನು ಅಕ್ಷಹೃದಯವನ್ನು ನನ್ನಿಂದ ಕೇಳಿ ಚೆನ್ನಾಗಿಸ್ವೀಕರಿಸಿ ಸಂತೋಷಯುಕ್ತನಾಗುವನು ಎಂಬ ವಿಷಯದಲ್ಲಿ ಸಂಶಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತೈದನೆಯ ಅಧ್ಯಾಯ
(ಅರ್ಜುನವಿರಹಿತ ಕಾಮ್ಯಕವನದಲ್ಲಿ ವಾಸಮಾಡಲು
ಭೀಮಾದಿಗಳಿಂದ ತಮ್ಮ ಅಸಂತೋಷ ಕಥನ.)
ಜನಮೇಜಯಃ
ಭಗವಾನ್ ಕಾಮ್ಯಕಾತ್ ಪಾರ್ಥೇ ಗತೇ ಮೇ ಪ್ರಪಿತಾಮಹೇ |
ಕಿಮಕುರ್ವಂತ ಪಾರ್ಥಾಸ್ತೇ ತಮೃತೇ ಸವ್ಯಸಾಚಿನಮ್ ॥1॥
ಪೂಜ್ಯರೇ, ನಮ್ಮ ಮುತ್ತಜ್ಜನಾದ ಅರ್ಜುನನು ಕಾಮ್ಯಕವನದಿಂದ ಹೋಗುತ್ತಿರಲು ಆ ಅರ್ಜುನನಿಲ್ಲದೆ ಪಾಂಡವರು ಏನು ಮಾಡಿದರು?
ಸ ಹಿ ತೇಷಾಂ ಮಹೇಷ್ವಾಸೋ ಧೃತಿರಾಸೀದನೀಕಜಿತ್ |
ಆದಿತ್ಯಾನಾಂ ಯಥಾ ವಿಷ್ಣುಸ್ತಥೈವ ಪ್ರತಿಭಾತಿ ಮೇ ॥2॥
ಮಹಾಧನುರ್ಧಾರಿಯಾದ ಶತ್ರುಸೈನ್ಯವನ್ನು ಗೆಲ್ಲುವವನೂ ಆದ ಅವನು ಆದಿತ್ಯರಿಗೆ ವಿಷ್ಣುವಿನಂತೆ ಅವರಿಗೆ ಧೈರ್ಯಸ್ಥಾನವಾಗಿದ್ದನು ಎಂದು ನನಗೆ ತೋರುತ್ತದೆ.
ತೇನೇಂದ್ರಸಮವೀರ್ಯೇಣ ಸಂಗ್ರಾಮೇಷ್ವನಿವರ್ತಿನಾ |
ವಿನಾಭೂತಾಃ ಕಥಂ ಪಾರ್ಥಾಃ ಕಥಮಾಸನ್ ಪಿತಾಮಹಾಃ ॥3॥
ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಸಂಗ್ರಾಮಗಳಿಂದ ಎಂದೂ ಹಿಮ್ಮೆಟ್ಟದ ಅವನಿಂದ ರಹಿತರಾಗಿ ನನ್ನ ಪಿತಾಮಹರಾದ (ಪಾರ್ಥರು) ಪಾಂಡವರು ಕಾಡಿನಲ್ಲಿ ಹೇಗೆ ವಾಸಮಾಡಿದರು?
ವೈಶಂಪಾಯನಃ
ಗತೇ ತು ಕಾಮ್ಯಕಾತ್ ತಾತ ಪಾಂಡವೇ ಸವ್ಯಸಾಚಿನಿ |
ಬಭೂವುಃ ಕೌರವೇಯಾಸ್ತೇ ದುಃಖಶೋಕಪರಾಯಣಾಃ ॥4॥
ಪ್ರೀತಿಪಾತ್ರನೇ, ಪಾಂಡುಪುತ್ರನಾದ ಅರ್ಜುನನು ಕಾಮ್ಯಕವನದಿಂದ ಹೋಗುತ್ತಿರಲು ಕೌರವವಂಶದಲ್ಲಿ ಜನಿಸಿದ ಅವರೆಲ್ಲರೂ ದುಃಖಶೋಕಪರಾಯಣರಾದರು.

ಆಕ್ಷಿಪ್ತಸೂತ್ರಾ ಮಣಯಃ ಛಿನ್ನಪಕ್ಷಾ ಇವಾಂಡಜಾಃ |
ಅಪ್ರೀತಮನಸಃ ಸರ್ವೇ ಬಭೂವುಸ್ತತ್ರ ಪಾಂಡವಾಃ ||5||
ಸೂತ್ರದಿಂದ ತೆಗೆದ ಮಣಿಗಳಂತೆ ರೆಕ್ಕೆಗಳನ್ನು ಕತ್ತರಿಸಿದ ಹಕ್ಕಿಗಳಂತೆ ಪಾಂಡವರೆಲ್ಲರೂ ಅಲ್ಲಿ ಅಸಂತುಷ್ಟ ಮನಸ್ಸುಳ್ಳವರಾದರು.
ವನಂ ಚ ತದಭೂತ್ ತೇನ ಹೀನಮಕ್ಲಿಷ್ಟಕರ್ಮಣಾ |
ಕುಬೇರೇಣ ಯಥಾ ಹೀನಂ ವನಂ ಚೈತ್ರರಥಂ ತಥಾ ||6||
ಅನಾಯಾಸವಾಗಿ ಎಲ್ಲವನ್ನೂ ಸಾಧಿಸುವ ಅರ್ಜುನನಿಲ್ಲದೆ ಆ ವನವು ಕುಬೇರನಿಲ್ಲದ ಚೈತ್ರರಥವನದಂತಾಯಿತು.
ತಮೃತೇ ತೇ ನರವ್ಯಾಘ್ರಾಃ ಪಾಂಡವಾ ಜನಮೇಜಯ |
ಮುದಮಪ್ರಾಪ್ನುವಂತಸ್ತೇ ಕಾಮ್ಯಕೇ ನ್ಯವಸಂಸ್ತದಾ ||7||
ಎಲೈ ಜನಮೇಜಯನೇ, ಅರ್ಜುನನಿಲ್ಲದೆ ನರವ್ಯಾಘ್ರರಾದ ಪಾಂಡವರು ಸುಖವನ್ನು ಹೊಂದದೆ ಆಗ ಕಾಮ್ಯಕವನದಲ್ಲಿ ವಾಸವನ್ನು ಮಾಡಿದರು.
ಬ್ರಾಹ್ಮಣಾರ್ಥೇ ಪರಾಕ್ರಾಂತಾಃ ಶುದ್ಧೈರ್ಬಾಣೈರ್ಮಹಾರಥಾಃ |
ನಿಘ್ನಂತೋ ಭರತಶ್ರೇಷ್ಠಾ ಮೇಧ್ಯಾನ್ ಬಹುವಿಧಾನ್ ಮೃಗಾನ್ ||8||
ನಿತ್ಯಂ ಹಿ ಪುರುಷವ್ಯಾಘ್ರಾ ವನ್ಯಾಹಾರಮರಿಂದಮಾಃ |
ವಿನಿಹತ್ಯ ಸಮಾಹೃತ್ಯ ಬ್ರಾಹ್ಮಣೇಭ್ಯೋ ನ್ಯವೇದಯನ್ ||9||
ಮಹಾರಥರಾದ ಭರತಶ್ರೇಷ್ಠರಾದ ಅವರು ಬ್ರಾಹ್ಮಣರಿಗೋಸ್ಕರ ತಮ್ಮ ಪರಾಕ್ರಮವನ್ನು ತೋರಿಸಿ ಸ್ವೀಕಾರಾರ್ಹವಾದ ಅನೇಕ ವಿಧವಾದ ಮೃಗಗಳನ್ನು ಸಂಹಾರಮಾಡುತ್ತಾ ಅವುಗಳನ್ನು ತೆಗೆದುಹೊಂಡು ಬಂದು ಅರಿಂದಮರೂ ಪುರುಷವ್ಯಾಘ್ರರೂ ಆದ ಅವರು ಯಾವಾಗಲೂ ಬ್ರಾಹ್ಮಣರಿಗೆ ಆ ವನದಲ್ಲಿ ದೊರಕುವ ಆಹಾರವನ್ನು ಕೊಡುತ್ತಿದ್ದರು.
ಏವಂ ತೇ ನ್ಯವಸಂಸ್ತತ್ರ ಸೋತ್ಕಂಠಾಃ ಪುರುಷರ್ಷಭಾಃ |
ವಿಷಣ್ಣವದನಾಸ್ತತ್ರ ಗತೇ ರಾಜನ್ ಧನಂಜಯೇ ||10||
ಎಲೈ ರಾಜನೇ, ಅರ್ಜುನನು ಹೋದಮೇಲೆ ಪುರುಷರ್ಷಭರಾದ ಅವರು ವಿಷಣ್ಣವದನರಾಗಿ ಅರ್ಜುನನನ್ನು ನೋಡುವ ತೀವ್ರವಾದ ಬಯಕೆಯಿಂದ ಅಲ್ಲಿ ವಾಸಮಾಡಿದರು.
ಅಥೈನಂ ಪ್ರೋಷಿತಂ ವೀರಂ ಪಾಂಚಾಲೀ ಮಧ್ಯಮಂ ಪತಿಮ್ |
ಸ್ಮರಂತೀ ಪಾಂಡವಶ್ರೇಷ್ಠಮಿದಂ ವಚನಮಬ್ರವೀತ್ ||11||
ಆಗ ಪಾಂಚಾಲಿಯು ಕಾಮ್ಯಕವನ್ನು ಬಿಟ್ಟು ಪ್ರಯಾಣಮಾಡಿದ ಪಾಂಡವಶ್ರೇಷ್ಠನಾದ ವೀರನಾದ ತನ್ನ ಮಧ್ಯಮಪತಿಯನ್ನು ಸ್ಮರಿಸುತ್ತಾ ಮಾತನಾಡಿದಳು.
ಯೋಽರ್ಜುನೇನಾರ್ಜುನಸ್ತುಲ್ಯೋ ದ್ವಿಬಾಹುರ್ಬಹುಬಾಹುನಾ|
ತಮೃತೇ ಪಾಂಡವಶ್ರೇಷ್ಠಂ ವನಂ ನ ಪ್ರತಿಭಾತಿ ಮೇ ||12||
ಎರಡು ಬಾಹುಗಳುಳ್ಳ ಯಾವ ಅರ್ಜುನನು ಅನೇಕ ಬಾಹುಗಳುಳ್ಳ ಕಾರ್ತವೀರ್ಯಾರ್ಜುನನಿಗೆ ಸಮನಾಗಿದ್ದಾನೆಯೋ ಅಂತಹ ಪಾಂಡವಶ್ರೇಷ್ಠನಿಲ್ಲದ ಈ ವನವು ನನಗೆ ರುಚಿಸುವುದಿಲ್ಲ.
ಶೂನ್ಯಾಮಿವ ಪ್ರಪಶ್ಯಾಮಿ ತತ್ರ ತತ್ರ ಮಹೀಮಿಮಾಮ್ |
ಬಹ್ವಾಶ್ಚರ್ಯಮಿದಂ ಚಾಪಿ ವನಂ ಕುಸುಮಿತದ್ರುಮಮ್ ||13||
ಅನೇಕಾಶ್ಚರ್ಯಗಳಿಂದ ಕೂಡಿದ ಪುಷ್ಪಿತವೃಕ್ಷಗಳಿಂದ ಕೂಡಿದ್ದರೂ ಈ ವನಭೂಮಿಯು ನನಗೆ ಶೂನ್ಯವಾಗಿ ಕಾಣುತ್ತಿದೆ.
ನ ತಥಾ ರಮಣೀಯಂ ವೈ ತಮೃತೇ ಸವ್ಯಸಾಚಿನಮ್ |
ನೀಲಾಂಬುದಸಮಪ್ರಖ್ಯಂ ಮತ್ತಮಾತಂಗವಿಕ್ರಮಮ್ |
ತಮೃತೇ ಪುಂಡರೀಕಾಕ್ಷಂ ಕಾಮ್ಯಕಂ ನಾತಿಭಾತಿ ಮೇ ||14||
ನೀಲಮೇಘಶ್ಯಾಮನೂ ಮದಗಜವಿಕ್ರಮವುಳ್ಳವನೂ ಪುಂಡರೀಕಾಕ್ಷನೂ ಆದ ಆ ಸವ್ಯಸಾಚಿ ಇಲ್ಲದೆ ಈ ಕಾಮ್ಯಕವನವು ನನಗೆ ರಮಣೀಯವಾಗಿ ಕಾಣುತ್ತಿಲ್ಲ.
ಯಸ್ಯ ವಾ ಧನುಷೋ ಘೋಷಃ ಶ್ರೂಯತೇ ಚಾಶನಿಸ್ವನಃ |
ನ ಲಭೇ ಶರ್ಮ ತಂ ರಾಜನ್ ಸ್ಮರಂತೀ ಸವ್ಯಸಾಚಿನಮ್ ||15||
ಎಲೈ ರಾಜನೇ, ಯಾವನ ಧನುರ್ಘೋಷವು ಸಿಡಿಲಿನ ಧ್ವನಿಯಂತೆ ಕೇಳಿಬರುತ್ತದೆಯೋ ಅಂತಹ ಸವ್ಯಸಾಚಿಯನ್ನು ಸ್ಮರಿಸುತ್ತಾ ನಾನು ದುಃಖಪಡುತ್ತಿದ್ದೇನೆ.
ವೈಶಂಪಾಯನಃ
ತಥಾ ಲಾಲಪ್ಯಮಾನಾಂ ತಾಂ ನಿಶಾಮ್ಯ ಪರವೀರಹಾ |
ಭೀಮಸೇನೋ ಮಹಾರಾಜ ದ್ರೌಪದೀಮಿದಮಬ್ರವೀತ್ ||16||
ಎಲೈ ಮಹಾರಾಜನೇ, ಪರವೀರಘಾತಕನಾದ ಭೀಮಸೇನನು ಹಾಗೆ ವಿಲಾಪವನ್ನು ಮಾಡುತ್ತಿರುವ ದ್ರೌಪದಿಯನ್ನು ನೋಡಿ ಅವಳನ್ನು ಕುರಿತು ಹೀಗೆ ಮಾತನಾಡಿದನು.
ಮಮ ಪ್ರೀತಿಕರಂ ಮನ್ಯೇ ಯದ್ಬ್ರವೀಷಿ ಸುಮಧ್ಯಮೇ |
ತನ್ಮೇ ಪ್ರೀಣಾತಿ ಹೃದಯಮಮೃತಪ್ರಾಶನೋಪಮಮ್ ||17||
ಎಲೌ ಸುಮಧ್ಯಮೆಯೇ ನಿನ್ನ ಮಾತುಗಳು ನನಗೆ ಸಂತೋಷವನನ್ನು ಉಂಟುಮಾಡುತ್ತಿವೆ. ಆ ಮಾತುಗಳು ನನಗೆ ಅಮೃತವನ್ನು ಪಾನಮಾಡಿದಷ್ಟು ಸಂತೋಷವನ್ನು ಕೊಡುತ್ತವೆ.

ಯಸ್ಯ ದೀರ್ಘೌ ಸಮೌ ಪೀನೌ ಭುಜೌ ಪರಿಘಸನ್ನಿಭೌ |
ಮೌರ್ವೀಕೃತಕಿಣೌ ವೃತ್ತೌ ಖಡ್ಗಾಯುಧಗದಾಧರೌ ॥18॥
ನಿಷ್ಕಾಂಗದಕೃತಾಪೀಡೌ ಪಂಚಶೀರ್ಷಾವಿವೋರಗೌ |
ತಮೃತೇ ಪುರುಷವ್ಯಾಘ್ರಂ ನಷ್ಟಸೂರ್ಯನಿಭಂ ವನಮ್ ॥19॥
ಯಾವ ಅರ್ಜುನನ ಬಾಹುಗಳು ದೀರ್ಘವಾದ ಸಮಾನವಾದ ಪುಷ್ಟವಾದ ಒನಕೆಗಳನ್ನು ಹೋಲುವ, ಹೆದೆಯಿಂದ ಜಡ್ಡುಗಟ್ಟಿದ, ವರ್ತುಲಗಳಾಗಿ ಖಡ್ಗ ಅಯುಧ ಮತ್ತು ಗದೆಗಳನ್ನು ಹಿಡಿಯುವ ಸುವರ್ಣಮಯವಾದ ಅಂಗದಗಳಿಂದ ಅಲಂಕೃತವಾದ ಐದುಹೆಡೆಯನ್ನು ಹೊಂದಿದ ಸರ್ಪಗಳನ್ನು ಹೋಲುವ, ಬಾಹುಗಳೋ ಅಂತಹ ಪುರುಷವ್ಯಾಘ್ರನೇ ಇಲ್ಲದೆ ಈ ವನವು ಸೂರ್ಯನಿಲ್ಲದ ಜಗತಿತನಂತೆ ಅಗಿದೆ.
ಯಮಾಶ್ರಿತ್ಯ ಮಹಾಬಾಹುಂ ಪಾಂಚಾಲಾಃ ಕುರವಸ್ತಥಾ |
ಶೂರಾಣಾಮಪಿ ಯತ್ತಾನಾಂ ಪೃತನಾಸು ನ ಬಿಭ್ಯತಿ ॥20॥
ಯಸ್ಯ ಬಾಹೂ ಸಮಾಶ್ರಿತ್ಯ ವಯಂ ಸರ್ವೇ ಮಹಾತ್ಮನಃ |
ಮನ್ಯಾಮಹೇ ಜಿತಾನಾಜೌ ಪರಾನ್ ಪ್ರಾಪ್ತಾಂ ಚ ಮೇದಿನೀಮ್ ॥
ತಮೃತೇ ಫಲ್ಗುನಂ ವೀರಂ ನ ಲಭೇ ಕಾಮ್ಯಕೇ ರತಿಮ್ |
ಶೂನ್ಯಾಮಿವ ಚ ಪಶ್ಯಾಮಿ ತತ್ರ ತತ್ರ ಮಹೀಮಿಮಾಮ್ ॥22॥
ಯಾವ ಮಹಾಬಾಹುವಾದ ಅರ್ಜುನನನ್ನು ಆಶ್ರಯಿಸಿ ಪಾಂಚಾಲರು ಮತ್ತು ಕುರುಗಳು ಶೂರರು ಇರುವ ಸೈನ್ಯಕ್ಕೆ ಹೆದರುವುದಿಲ್ಲವೋ, ಯಾವ ಮಹಾತ್ಮನಾದ ಅವನ ಬಾಹುಬಲವನ್ನು ಆಶ್ರಯಿಸಿ ನಾವೆಲ್ಲರೂ ಶತ್ರುಗಳಾದ ಕೌರವರು ಯುದ್ಧದಲ್ಲಿ ಸೋತಿದ್ದಾರೆ ಮತ್ತು ನಾವು ಭೂಮಿಯನ್ನು ಪುನಃ ಪಡೆದಿದ್ದೇವೆ ಎಂದು ಭಾವಿಸಿದ್ದೇವೆಯೋ, ಅಂತಹ ಅರ್ಜುನನಿಲ್ಲದೆ ಕಾಮ್ಯಕವನದಲ್ಲಿ ನನಗೆ ಯಾವ ಸಂತೋಷವೂ ಉಂಟಾಗುವುದಿಲ್ಲ. ಈ ಭೂಮಿಯು ಅಲ್ಲಲ್ಲಿ ನನಗೆ ಶೂನ್ಯವಾಗಿ ಕಾಣುತ್ತಿದೆ.
ತತೋಽಬ್ರವೀತ್ ಸಾಶ್ರುಕಂಠೋ ನಕುಲಃ ಪಾಂಡುನಂದನಃ |
ಯ ಉದೀಚೀಂ ದಿಶಂ ಗತ್ವಾ ಯುಧಿ ಜಿತ್ವಾ ಮಹಾಬಲಾನ್ |
ಗಂಧರ್ವಮುಖ್ಯಾನ್ ಶತಶೋ ಹಯಾನ್ಲೇಭೇ ಸ ವಾಸವಿಃ ॥23॥
ರಾಜ್ಞೋ ತಿತ್ತಿರಿಕಲ್ಮಾಷಾನ್ ಶ್ರೀಮತೋಽನಿಲರಂಹಸಃ |
ಪ್ರಾದಾದ್ ಭ್ರಾತ್ರೇ ಪ್ರಿಯಃ ಪ್ರೇಮ್ಣಾ ರಾಜಸೂಯೇ ಮಹಾಕ್ರತೌ ॥24॥
ತಮೃತೇ ಭೀಮಧನ್ವಾನಂ ಭೀಮಾದವರಜಂ ವನೇ |
ಕಾಮಯೇ ಕಾಮ್ಯಕೇ ವಾಸಂ ನೇದಾನೀಮಮರೋಪಮ ॥25॥
ಅನಂತರ ಕಣ್ಣುಗಳಲ್ಲಿ ನೀರುತುಂಬಿದ ಪಾಂಡುನಂದನನಾದ ನಕುಲನು ಹೇಳಿದನು. ಎಲೈ ದೇವಸದೃಶನಾದವನೇ, ಯಾವ ಅರ್ಜುನನು ಉತ್ತರದಿಕ್ಕಿಗೆ ಹೋಗಿ, ಮಹಾಬಲರಾದ ಗಂಧರ್ವಶ್ರೇಷ್ಠರನ್ನು ಗೆದ್ದು, ನೂರಾರು ಸಂಖ್ಯೆಯಲ್ಲಿ ತಿತ್ತಿರಿ ಕಲ್ಮಾಷ ಬಣ್ಣವುಳ್ಳ ವಾಯುವೇಗವುಳ್ಳ ಅಶ್ವಗಳನ್ನು ಪಡೆದು, ತನ್ನ ಅಣ್ಣನಾದ ಧರ್ಮರಾಜನಿಗೆ ರಾಜಸೂಯಮಹಾಯಾಗದಲ್ಲಿ ಪ್ರೀತಿಪಾತ್ರನಾದ ಅವನು ಪ್ರೀತಿಯಿಂದ ತಂದೊಪ್ಪಿಸಿದನೋ, ಅಂತಹ ಉಗ್ರವಾದ ಧನುಸ್ಸನ್ನುಳ್ಳ ಭೀಮನ ತಮ್ಮನಾದ ಅರ್ಜುನನಿಲ್ಲದೆ ಈಗ ಕಾಮ್ಯಕವನದಲ್ಲಿ ನಾನು ವಾಸವನ್ನು ಬಯಸುವುದಿಲ್ಲ.
ಸಹದೇವಃ
ಯೋ ಧನಾನಿ ಚ ಕನ್ಯಾಶ್ಚ ಯುಧಿ ಜಿತ್ವಾ ಮಹಾರಥಾನ್ |
ಶತಶೋ ಘಾತಯಿತ್ವಾಽರೀನ್ ಪೃತನಾಮಧ್ಯಗಸ್ತದಾ ॥26॥
ಯಃ ಸಮೇತಾನ್ ಮೃಧೇ ಜಿತ್ವಾ ಯಾದವಾನಮಿತದ್ಯುತಿಃ |
ಏಕಃ ಸುಭದ್ರಾಮಾಜಹ್ರೇ ವಾಸುದೇವಸ್ಯ ಸಮ್ಮತೇ ॥27॥
ಯೇನಾರ್ಧರಾಜ್ಯಮಾಹೃತ್ಯ ದ್ರುಪದಸ್ಯ ಮಹಾತ್ಮನಃ |
ಆಚಾರ್ಯದಕ್ಷಿಣಾ ದತ್ತಾ ಗುರೋರ್ದ್ರೋಣಸ್ಯ ಭಾರತ ॥28॥
ತಸ್ಯ ಜಿಷ್ಣೋರ್ಬೃಸೀಂ ದೃಷ್ಟ್ವಾ ಶೂನ್ಯಾಮುಪನಿವೇಶನೇ |
ಹೃದಯಂ ಮೇ ಮಹಾರಾಜ ನ ಶಾಮ್ಯತಿ ಕದಾಚನ ॥29॥
ಯಾವನು ಯುದ್ಧದಲ್ಲಿ ಶತ್ರುಸೈನ್ಯದ ಮಧ್ಯದಲ್ಲಿದ್ದವನಾಗಿ ಮಹಾರಥರಾದ ಶತ್ರುಗಳನ್ನು ನೂರಾರು ಸಂಖ್ಯೆಯಲ್ಲಿ ಸಂಹಾರಮಾಡಿ ಸಂಪತ್ತನ್ನು ಮತ್ತು ಕನ್ಯೆಯರನ್ನು ಗೆದ್ದನೋ, ಯಾವ ಅಮಿತದ್ಯುತಿಯಾದ ಅವನು ಒಟ್ಟಾಗಿಬಂದ ಯಾದವರನ್ನು ಯುದ್ಧದಲ್ಲಿ ಸೋಲಿಸಿ ಕೃಷ್ಣನ ಸಮ್ಮತಿಯಿಂದ ಸುಭದ್ರೆಯನ್ನು ತಂದನೋ, ಎಲೈ ಭಾರತನೇ ಯಾವನು ಮಹಾತ್ಮನಾದ ದ್ರುಪದನ ಅರ್ಧರಾಜ್ಯವನ್ನು ತೆಗೆದುಕೊಂಡು ಗುರುಗಳಾದ ದ್ರೋಣರಿಗೆ ಆಚಾರ್ಯದಕ್ಷಿಣೆಯಾಗಿ ಕೊಟ್ಟನೋ, ಅಂತಹ ಅರ್ಜುನನ ಶೂನ್ಯವಾದ ಆಸನವನ್ನು ನೋಡಿ ಎಲೈ ಮಹಾರಾಜನೇ ನನ್ನ ಹೃದಯಕ್ಕೆ ಸಮಾಧಾನವೇ ಉಂಟಾಗುವುದಿಲ್ಲ.
ವನಾದಸ್ಮಾದ್ ವಿವಾಸಂ ತು ರೋಚಯೇಽಹಮರಿಂದಮ |
ನ ಹಿ ನಸ್ತಮೃತೇ ವೀರಂ ರಮಣೀಯಮಿದಂ ವನಮ್ ॥30॥
ಎಲೈ ಅರಿಂದಮನೇ ಅವನಿಲ್ಲದೆ ನಮಗೆ ಈ ವನವು ರಮಣೀಯವಾಗಿ ತೋರುವುದಿಲ್ಲ. ಈ ವನದಿಂದ ನಾವು ಹೊರಡಬೇಕೆಂದು ನಾನು ಇಷ್ಟಪಡುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕತ್ರಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತಾರನೆಯ ಅಧ್ಯಾಯ
(ಕಾಮ್ಯಕವನಕ್ಕೆ ನಾರದರ ಆಗಮನ.)
ವೈಶಂಪಾಯನಃ
ಧನಂಜಯೋತ್ಸುಕಾಸ್ತೇ ತು ವನೇ ತಸ್ಮಿನ್ ಮಹಾರಥಾಃ |
ನ್ಯವಸಂತ ಮಹಾಭಾಗಾ ದ್ರೌಪದ್ಯಾ ಸಹ ಕೃಷ್ಣಯಾ ||1||
ಮಹಾನುಭಾವರೂ ಮಹಾರಥರೂ ಆದ ಪಾಂಡವರು ಆ ಕಾಡಿನಲ್ಲಿ ಅರ್ಜುನನನ್ನು ನೋಡುವ ಉತ್ಸುಕತೆಯುಳ್ಳವರಾಗಿ ದ್ರೌಪದಿಯ ಜೊತೆಯಲ್ಲಿ ವಾಸಮಾಡಿದರು.
ಅಥಾಪಶ್ಯನ್ ಮಹಾತ್ಮಾನಂ ದೇವರ್ಷಿಂ ತತ್ರ ನಾರದಮ್ |
ದೀಪ್ಯಮಾನಂ ಶ್ರಿಯಾ ಬ್ರಾಹ್ಮ್ಯಾ ಸೂರ್ಯಾಗ್ನಿಸಮತೇಜಸಮ್ ||2||
ಆಗ ಅವರು ಅಲ್ಲಿ ಮಹಾತ್ಮರಾದ ದೇವರ್ಷಿಗಳಾದ ಸೂರ್ಯಾಗ್ನಿಗಳಿಗೆ ಸಮಾನವಾದ ಕಾಂತಿಯನ್ನು ಹೊಂದಿದ ತಮ್ಮ ಬ್ರಹ್ಮಜ್ಞಾನತೇಜಸ್ಸಿನಿಂದ ಬೆಳಗುವ ನಾರದರನ್ನು ನೋಡಿದರು.
ದ್ವಿಜೈಃ ಪರಿವೃತಃ ಶ್ರೀಮಾನ್ ಭ್ರಾತೃಭಿಃ ಕುರುನಂದನ |
ವಿಬಭಾವತಿದೀಪ್ತೌಜಾ ದೇವೈರಿವ ಶತಕ್ರತುಃ ||3||
ಎಲೈ ಕುರುನಂದನನೇ ತಮ್ಮಂದಿರಿಂದಲೂ ಮತ್ತು ಬ್ರಾಹ್ಮಣರಿಂದಲೂ ಸುತ್ತುವರಿಯಲ್ಪಟ್ಟ ಧರ್ಮರಾಜನು ಮಹಾಪರಾಕ್ರಮಶಾಲಿಯಾಗಿ ದೇವತೆಗಳಿಂದ ಸುತ್ತುವರಿಯಲ್ಪಟ್ಟ ಇಂದ್ರನಂತೆ ಕಂಗೊಳಿಸಿದನು.
ಯಥಾ ಚ ವೇದಾನ್ ಸಾವಿತ್ರೀ ಯಾಜ್ಞಸೇನೀ ತಥಾ ಸತೀ |
ನ ಜಹೌ ಧರ್ಮತಃ ಪಾರ್ಥಾನ್ ಮೇರುಮರ್ಕಪ್ರಭಾ ಯಥಾ ||4||
ಗಾಯತ್ರಿಯು ಎಂದೂ ವೇದವನ್ನು ಹೇಗೆ ಪರಿತ್ಯಜಿಸುವುದಿಲ್ಲವೋ ಸೂರ್ಯಪ್ರಭೆಯು ಹೇಗೆ ಮೇರುಪರ್ವತವನ್ನು ತ್ಯಜಿಸುವುದಿಲ್ಲವೋ ಹಾಗೆ ಸಾಧ್ವಿಯೂ ಧರ್ಮನಿಷ್ಠಳೂ ಆದ ದ್ರೌಪದಿಯು ಪಾಂಡವರನ್ನು ಎಂದೂ ತ್ಯಜಿಸಲಿಲ್ಲ.
ಅರ್ಘ್ಯಂ ಪಾದ್ಯಮಥಾನೀಯ ತ್ವಭ್ಯವಾದಯದಚ್ಯುತಃ |
ನಾರದಸ್ತು ಮಹಾತೇಜಾಃ ಸ್ವಸ್ತ್ಯ ಸ್ತಿತ್ವತ್ಯಭ್ಯಭಾಷತ ||5||
ಪ್ರತಿಗೃಹ್ಯ ಚ ತಾಂ ಪೂಜಾಂ ನಾರದೋ ಭಗವಾನೃಷಿಃ |
ಆಶ್ವಾಸಯದ್ ಧರ್ಮಸುತಂ ಯುಕ್ತರೂಪಮಿವಾನಘ ||6||
ಎಲೈ ಅನಘನೇ ತನ್ನ ಗುಣಗಳಿಂದ ಚ್ಯುತನಾಗದ ಧರ್ಮರಾಜನು ಅವರಿಗೆ ಅರ್ಘ್ಯಪಾದ್ಯಗಳನ್ನು ನೀಡಿ ನಮಸ್ಕಾರವನ್ನು ಮಾಡಿದನು. ಮಹಾತೇಜಸ್ವಿಗಳಾದ ನಾರದರಾದರೋ ಮಂಗಳವಾಗಲಿ ಎಂದು ಆಶೀರ್ವಾದ ಮಾಡಿದರು. ಪೂಜ್ಯರಾದ ನಾರದಮಹರ್ಷಿಗಳು ಧರ್ಮರಾಜನು ಸಲ್ಲಿಸಿದ ಆ ಪೂಜೆಯನ್ನು ಸ್ವೀಕರಿಸಿ ಆ ಸಂದರ್ಭಕ್ಕೆ ಯೋಗ್ಯವಾದ ಮಾತುಗಳನ್ನು ಆಡಿ ಧರ್ಮರಾಜನನ್ನು ಸಮಾಧಾನಗೊಳಿಸಿದರು.
ಉವಾಚ ಚ ಮಹಾಪ್ರಾಜ್ಞಂ ಧರ್ಮರಾಜಂ ಯುಧಿಷ್ಠಿರಮ್ |
ಬ್ರೂಹಿ ಧರ್ಮಭೃತಾಂ ಶ್ರೇಷ್ಠ ಕೇನಾರ್ಥಃ ಕಿಂ ದದಾಮಿ ತೇ ||7||
ಮಹಾಪ್ರಾಜ್ಞನೂ ಧರ್ಮರಾಜನೂ ಆದ ಯುಧಿಷ್ಠಿರನನ್ನು ಕುರಿತು ನಾರದರು ಧರ್ಮಿಷ್ಠರಲ್ಲಿ ಶ್ರೇಷ್ಠನೇ, ನಿನಗೆ ಏನು ಆಗಬೇಕಾಗಿದೆ? ನಾನು ನಿನಗೆ ಏನು ಕೊಡಲಿ ಎಂದು ಹೇಳು ಎಂದು ಹೇಳಿದರು.
ಅಥ ಧರ್ಮಸುತೋ ರಾಜಾ ಪ್ರಣಮ್ಯ ಭ್ರಾತೃಭಿಃಸಹ |
ಉವಾಚ ಪ್ರಾಂಜಲಿರ್ವಾಕ್ಯಂ ನಾರದಂ ದೇವಸಮ್ಮಿತಮ್ ||8||
ಅನಂತರ ಧರ್ಮರಾಜನು ತನ್ನ ತಮ್ಮಂದಿರ ಜೊತೆಯಲ್ಲಿ ದೇವತೆಗಳಿಗೆ ಸಮಾನರಾದ ಆ ನಾರದರಿಗೆ ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಈ ಮಾತುಗಳನ್ನು ಆಡಿದನು.
ತ್ವಯಿ ತುಷ್ಟೇ ಮಹಾಭಾಗ ಸರ್ವಲೋಕಾಭಿಪೂಜಿತೇ |
ಕೃತಮಿತ್ಯೇವ ಮನ್ಯೇಽಹಂ ಪ್ರಸಾದಾತ್ ತವ ಸುವ್ರತ ||9||
ಎಲೈ ಮಹಾನುಭಾವರೇ, ಸುವ್ರತರೇ, ಸರ್ವಲೋಕಪೂಜಿತರಾದ ತಾವು ಸಂತುಷ್ಟರಾದರೆ ತಮ್ಮ ಅನುಗ್ರಹದಿಂದ ನಾನು ಎಲ್ಲವನ್ನೂ ಪಡೆದಿದ್ದೇನೆ ಎಂದು ಭಾವಿಸುತ್ತೇನೆ.
ಯದಿ ತ್ವಹಮನುಗ್ರಾಹ್ಯೋ ಭ್ರಾತೃಭಿಃ ಸಹಿತೋಽನಘ |
ಸಂದೇಹಂ ಮೇ ಮುನಿಶ್ರೇಷ್ಠ ಹೃದಿಸ್ಥಂ ಛೇತ್ತುಮರ್ಹಸಿ ||10||
ಎಲೈ ಮುನಿಶ್ರೇಷ್ಠರೇ, ಪರಿಶುದ್ಧರಾದವರೆ ನೀವು ನನ್ನನ್ನು ಮತ್ತು ನನ್ನ ತಮ್ಮಂದಿರನ್ನು ಅನುಗ್ರಹಿಸುವುದಾದರೆ ನನ್ನ ಮನಸ್ಸಿನಲ್ಲಿರುವ ಒಂದು ಸಂಶಯವನ್ನು ಪರಿಹರಿಸಬೇಕು.
ಪ್ರದಕ್ಷಿಣಾಂ ಯಃ ಪೃಥಿವೀಂ ಕುರುತೇ ತೀರ್ಥತತ್ಪರಃ |
ಕಿಂ ಫಲಂ ತಸ್ಯ ಕಾರ್ತ್ಸ್ನ್ಯೇನ ತ್ವಂ ಬ್ರಹ್ಮನ್ ವಕ್ತುಮರ್ಹಸಿ ||11||
ಎಲೈ ಬ್ರಾಹ್ಮಣರೇ, ಯಾವನು ತೀರ್ಥಗಳಲ್ಲಿ ಸ್ನಾನಮಾಡುತ್ತಾ ಸಮಗ್ರವಾದ ಪೃಥಿವಿಯನ್ನು ಪ್ರದಕ್ಷಿಣೆಮಾಡುತ್ತಾನೆಯೋ ಅವನಿಗೆ ಏನು ಫಲವೆಂದು ತಾವು ಸಂಪೂರ್ಣವಾಗಿ ಹೇಳಬೇಕು.
ನಾರದಃ

ಶೃಣು ರಾಜನ್ನವಹಿತೋ ಯಥಾ ಭೀಷ್ಮೇಣ ಧೀಮತಾ |
ಪುಲಸ್ತ್ಯಸ್ಯ ಸಕಾಶಾದ್ ವೈ ಸರ್ವಮೇತದುಪಶ್ರುತಮ್ ॥12॥
ಎಲೈ ರಾಜನೇ ಹಿಂದೆ ಮೇಧಾವಿಯಾದ ಭೀಷ್ಮರು ಪುಲಸ್ತ್ಯರಿಂದ ಕೇಳಿದ ಈ ಎಲ್ಲ ವಿಷಯಗಳನ್ನೂ ನಾನು ಹೇಳುವೆನು ಸಾವಧಾನವಾಗಿ ಕೇಳು.
ಪುರಾ ಭಾಗೀರಥೀತೀರೇ ಭೀಷ್ಮೋ ಧರ್ಮಭೃತಾಂ ವರಃ |
ಪಿತ್ರ್ಯಂ ವ್ರತಂ ಸಮಾಸ್ಥಾಯ ನ್ಯವಸನ್ಮುನಿವತ್ ತದಾ ॥13॥
ಹಿಂದೆ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಭೀಷ್ಮನು ಭಾಗೀರಥೀತೀರದಲ್ಲಿ ಪಿತೃಶ್ರಾದ್ಧವನ್ನು ಮಾಡುತ್ತಾ ಋಷಿಯಂತೆ ವಾಸಿಸಿದನು.
ಶುಭೇ ದೇಶೇ ಮಹಾರಾಜ ಪುಣ್ಯೇ ದೇವರ್ಷಿಸೇವಿತೇ |
ಗಂಗಾದ್ವಾರೇ ಮಹಾತೇಜಾ ದೇವಗಂಧರ್ವಸೇವಿತೇ ॥14॥
ಸ ಪಿತ್ರೂಂಸ್ತರ್ಪಯಾಮಾಸ ದೇವಾಂಶ್ಚ ಪರಮದ್ಯುತಿಃ |
ಋಷೀಂಶ್ಚ ತೋಷಯಾಮಾಸ ವಿಧಿದೃಷ್ಟೇನ ಕರ್ಮಣಾ ॥15॥
ಎಲೈ ಮಹಾರಾಜನೇ, ಮಹಾತೇಜಸ್ವಿಯಾದ ಭೀಷ್ಮನು ದೇವರ್ಷಿಗಳಿಂದಲೂ ಮತ್ತು ದೇವಗಂಧರ್ವದಿಂದಲೂ ಸೇವಿತವಾದ ಹರಿದ್ವಾರದ ಒಂದು ಶುಭಪ್ರದೇಶದಲ್ಲಿ ವಾಸಿಸಿ ಪರಮಕಾಂತಿಯುಕ್ತನಾದ ಅವನು ಪಿತೃಗಳನ್ನು ಮತ್ತು ದೇವತೆಗಳನ್ನು ತೃಪ್ತಿಪಡಿಸಿದನು. ಶಾಸ್ತ್ರವಿಹಿತ ಕರ್ಮಗಳಿಂದ ಋಷಿಗಳನ್ನು ಸಂತೋಷಪಡಿಸಿದನು.
ಕಸ್ಯಚಿತ್ತ್ವಥ ಕಾಲಸ್ಯ ಜಪನ್ನೇವ ಮಹಾತಪಾಃ |
ದದರ್ಶಾದ್ಭುತಸಂಕಾಶಂ ಪುಲಸ್ತ್ಯಮೃಷಿಸತ್ತಮಮ್ ॥16॥
ಮಹಾತಪಸ್ವಿಯಾದ ಅವನು ಸ್ವಲ್ಪಸಮಯದವರೆಗೆ ಜಪವನ್ನು ಮಾಡುತ್ತಿರುವಾಗಲೇ ಅದ್ಭುತಪ್ರಕಾಶವುಳ್ಳ ಋಷಿಶ್ರೇಷ್ಠರಾದ ಪುಲಸ್ತ್ಯರನ್ನು ನೋಡಿದನು.
ಸ ತಂ ದೃಷ್ಟ್ವೋಗ್ರತಪಸಂ ದೀಪ್ಯಮಾನಮಿವ ಶ್ರಿಯಾ |
ಪ್ರಹರ್ಷಮತುಲಂ ಲೇಭೇ ವಿಸ್ಮಯಂ ಚ ಪರಂ ಯಯೌ ॥17॥
ಆ ಪುಲಸ್ತ್ಯರು ಉಗ್ರವಾದ ತಪಸ್ಸಿನಲ್ಲಿ ನಿರತನಾದ ಕಾಂತಿಯಿಂದ ಬೆಳಗುತ್ತಿರುವ ಭೀಷ್ಮನನ್ನು ನೋಡಿ ಅಸದೃಶವಾದ ಸಂತೋಷವನ್ನು ಮತ್ತು ಪರಮ ವಿಸ್ಮಯವನ್ನು ಹೊಂದಿದರು.
ಉಪಸ್ಥಿತಂ ಮಹಾಭಾಗಂ ಪೂಜಯಾಮಾಸ ಭಾರತ |
ಭೀಷ್ಮೋ ಧರ್ಮಭೃತಾಂ ಶ್ರೇಷ್ಠೋ ವಿಧಿದೃಷ್ಟೇನ ಕರ್ಮಣಾ ॥18॥
ಎಲೈ ಭಾರತನೇ, ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಭೀಷ್ಮನು ಆಗಮಿಸಿದ ಮಹಾನುಭಾವರಾದ ಆ ಋಷಿಗಳನ್ನು ವಿಧ್ಯುಕ್ತವಾದ ಕರ್ಮಗಳಿಂದ ಪೂಜಿಸಿದನು.
ಶಿರಸಾ ಚಾರ್ಘ್ಯಮಾದಾಯ ಶುಚಿಃ ಪ್ರಯತಮಾನಸಃ |
ನಾಮ ಸಂಕೀರ್ತಯಾಮಾಸ ತಸ್ಮಿನ್ ಬ್ರಹ್ಮರ್ಷಿಸತ್ತಮೇ ॥19॥
ಜಿತಮನಸ್ಕನೂ ಮತ್ತು ಶುಚಿಯೂ ಆದ ಭೀಷ್ಮನು ಆ ಬ್ರಹ್ಮರ್ಷಿಶ್ರೇಷ್ಠರಿಗೆ ಅರ್ಘ್ಯವನ್ನು ಕೊಟ್ಟು ಶಿರಸಾ ನಮಸ್ಕಾರವನ್ನು ಮಾಡಿ ತನ್ನ ಹೆಸರನ್ನು ಹೇಳಿದನು.
ಭೀಷ್ಮೋಽಹಮಸ್ಮಿ ಭದ್ರಂ ತೇ ದಾಸೋಽಸ್ಮಿ ತವ ಸುವ್ರತ |
ತವ ಸಂದರ್ಶನಾದೇವ ಮುಕ್ತೋಽಹಂ ಸರ್ವಕಿಲ್ಬಿಷೈಃ ॥20॥
ಸುವ್ರತರೇ, ತಮಗೆ ಮಂಗಳವಾಗಲಿ. ನಾನು ಭೀಷ್ಮ ತಮ್ಮ ದಾಸನಾದವನು. ಕೇವಲ ನಿಮ್ಮ ಸಂದರ್ಶನದಿಂದಲೇ ನನ್ನ ಎಲ್ಲ ಪಾಪಗಳೂ ನಾಶಹೊಂದಿವೆ.
ಏವಮುಕತತ್ವ ಮಹಾರಾಜ ಭೀಷ್ಮೋ ಧರ್ಮಭೃತಾಂ ವರಃ|
ವಾಗ್ಯತಃ ಪ್ರಾಂಜಲಿರ್ಭೂತ್ವಾ ತೂಷ್ಣೀಮಾಸೀದ್ ಯುಧಿಷ್ಠಿರ ॥21॥
ಎಲೈ ಯುಧಿಷ್ಠಿರನೇ, ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಭೀಷ್ಮನು ಹೀಗೆ ಮತನಾಡಿ ಅನಂತರ ಮಾತನ್ನು ನಿಯಂತ್ರಿಸಿ ಕೈಗಳನ್ನು ಮುಗಿದು ಅವರ ಎದುರಿನಲ್ಲಿ ಮೌನವಾಗಿ ನಿಂತನು.
ತಂ ದೃಷ್ಟ್ವಾ ನಿಯಮೇನಾಥ ಸ್ವಾಧ್ಯಾಯಾಮ್ನಾಯಕರ್ಶಿತಮ್ |
ಭೀಷ್ಮಂ ಕುರುಕುಲಶ್ರೇಷ್ಠಂ ಮುನಿಃ ಪ್ರೀತಮನಾಽಭವತ್ ॥22॥
ವ್ರತನಿಯಮಗಳಿಂದಲೂ ವೇದಾಧ್ಯಯನಗಳಿಂದಲೂ ದಣಿದ ಕುರುಕುಲಶ್ರೇಷ್ಠನಾದ ಭೀಷ್ಮನನ್ನು ನೋಡಿ ಆ ಋಷಿಗಳು ಮನಸ್ಸಿನಲ್ಲಿ ಬಹಳ ಸಂತೋಷವನ್ನು ಪಟ್ಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತೇಳನೆಯ ಅಧ್ಯಾಯ
(ಭೀಷ್ಮರನ್ನು ಕುರಿತು ಪುಲಸ್ತ್ಯರಿಂದ ಪುಷ್ಕರಾದಿ ತೀರ್ಥಮಾಹಾತ್ಮ್ಯವರ್ಣನೆ.)
ಪುಲಸ್ತ್ಯಃ
ಅನೇನ ತವ ಧರ್ಮಜ್ಞ ಪ್ರಶ್ರಯೇಣ ದಮೇನ ಚ |

ಸತ್ಯೇನ ಚ ಮಹಾಭಾಗ ಪರಿತುಷ್ಟೋಽಸ್ಮಿ ಸರ್ವಶಃ ॥1॥
ಎಲೈ ಧರ್ಮಜ್ಞನೇ, ಮಹಾನುಭಾವನೇ, ಈ ನಿನ್ನ ವಿನಯ ಮತ್ತು ಇಂದ್ರಿಯನಿಗ್ರಹ ಮತ್ತು ಸತ್ಯದಿಂದ ನಾನು ಪೂರ್ಣವಾಗಿ ಸಂತುಷ್ಟನಾಗಿದ್ದೇನೆ.
ಯಸ್ಯೇದೃಶಸ್ತೇ ಧರ್ಮೋಽಯಂ ಪಿತೃಭಕ್ತ್ಯಾಶ್ರಿತೋಽನಘ |
ತೇನ ಪಶ್ಯಸಿ ಮಾಂ ಪುತ್ರ ಪ್ರೀತಿಶ್ಚ ಪರಮಾ ತ್ವಯಿ ॥2॥
ಎಲೈ ಪರಿಶುದ್ಧನಾದವನೇ, ಪಿತೃಭಕ್ತಿಯಲ್ಲಿ ನಿರತನಾಗಿ ಹೀಗೆ ಧರ್ಮವನ್ನು ಆಚರಿಸುತಿತರುವುದರಿಂದಲೇ ನೀನು ನನ್ನನ್ನು ನೋಡುತ್ತಿರುವಿ. ಪುತ್ರನೇ ನನಗೆ ನಿನ್ನಲ್ಲಿ ಬಹಳ ಪ್ರೀತಿಯಿದೆ.
ಅಮೋಘದರ್ಶೀ ಭೀಷ್ಮಾಹಂ ಬ್ರೂಹಿ ಕಿಂ ಕರವಾಣಿ ತೇ |
ಯದ್ ವಕ್ಷ್ಯಸಿ ಕುರುಶ್ರೇಷ್ಠ ತಸ್ಯ ದಾತಾಸ್ಮಿ ತೇಽನಘ ॥3॥
ಎಲೈ ಭೀಷ್ಮನೇ, ನಾನು ಅಮೋಘದರ್ಶಿಯಾದವನು. ನಿನಗೆ ಏನು ಮಾಡಲಿ ಎಂದು ಹೇಳು. ಎಲೈ ಕುರುಶ್ರೇಷ್ಠನೇ ಎಲೈ ಪರಿಶುದ್ಧನಾದವನೇ ನೀನು ಕೇಳಿದುದನ್ನು ನಾನು ಕೊಡುವೆನು.
ಭೀಷ್ಮಃ
ಪ್ರೀತೇ ತ್ವಯಿ ಮಹಾಭಾಗ ಸರ್ವಲೋಕಾಭಿಪೂಜಿತೇ |
ಕೃತಮಿತ್ಯೇವ ಮನ್ಯೇಽಹಂ ಯದಹಂ ದೃಷ್ಟವಾನ್ ಪ್ರಭುಮ್ ॥4॥
ಎಲೈ ಮಹಾನುಭಾವರೇ ಸರ್ವಲೋಕಪೂಜಿತರಾದ ನೀವು ಪ್ರಸನ್ನರಾದರೆ ನಾನು ಎಲ್ಲವನ್ನೂ ಪಡೆದಿದ್ದೇನೆ ಎಂದು ತಿಳಿಯುತ್ತೇನೆ. ನಿಮ್ಮ ದರ್ಶನವೇ ಒಂದು ದೊಡ್ಡ ಭಾಗ್ಯ.
ಯದಿ ತ್ವಹಮನುಗ್ರಾಹ್ಯಸ್ತವ ಧರ್ಮಭೃತಾಂ ವರ |
ವಕ್ಷ್ಯಾಮಿ ಹೃತ್ಸ್ಥಂ ಸಂದೇಹಂ ತನ್ಮೇ ತ್ವಂ ವಕ್ತುಮರ್ಹಸಿ ॥5॥
ಧರ್ಮಿಷ್ಠರಲ್ಲಿ ಶ್ರೇಷ್ಠರಾದವರೆ ನನ್ನ ಮೇಲೆ ಅನುಗ್ರಹವನ್ನು ಮಾಡುವುದಿದ್ದರೆ ನನ್ನ ಮನಸ್ಸಿನಲ್ಲಿರುವ ಒಂದು ಸಂಶಯವನ್ನು ಹೇಳುತ್ತೇನೆ. ತಾವು ಅದನ್ನು ಪರಿಹರಿಸಬೇಕು.
ಅಸ್ತಿ ಮೇ ಭಗವನ್ ಕಶ್ಚಿತ್ ತೀರ್ಥಾನಿ ಪ್ರತಿ ಸಂಶಯಃ |
ತಮಹಂ ಶ್ರೋತುಮಿಚ್ಛಾಮಿ ಪೃಥಕ್ ಸಂಕೀರ್ತಿತಂ ತ್ವಯಾ ॥6॥
ಪೂಜ್ಯರೇ, ನನಗೆ ತೀರ್ಥಗಳ ಬಗ್ಗೆ (ತೀರ್ಥಕ್ಷೇತ್ರಗಳ ಬಗ್ಗೆ ) ಒಂದು ಸಂಶಯವಿದೆ. ತಾವು ಅದನ್ನು ಪ್ರತ್ಯೇಕವಾಗಿ ಹೇಳಬೇಕೆಂದು ಕೇಳಲು ನಾನು ಬಯಸುತ್ತೇನೆ.
ಪ್ರದಕ್ಷಿಣಂ ಯಃ ಪೃಥಿವೀಂ ಕರೋತ್ಯಮಿತವಿಕ್ರಮಃ |
ಕಿಂ ಫಲಂ ತಸ್ಯ ವಿಪ್ರರ್ಷೇ ತನ್ಮೇ ಬ್ರೂಹಿ ತಪೋಧನ ॥7॥
ಎಲೈ ತಪೋಧನರೇ, ಅಮಿತಪರಾಕ್ರಮಿಯಾದ ಯಾವನು ಭೂಮಿಯನ್ನು ಪ್ರದಕ್ಷಿಣೆಮಾಡುತ್ತಾನೆಯೋ ಎಲೈ ಬ್ರಹ್ಮರ್ಷಿಗಳೇ, ಅವನಿಗೆ ಏನು ಫಲವೆಂದು ನನಗೆ ಹೇಳಿ.
ಪುಲಸ್ತ್ಯಃ
ಹಂತ ತೇ ಕಥಯಿಷ್ಯಾಮಿ ಯದೃಷೀಣಾಂ ಪರಾಯಣಮ್ |
ತದೇಕಾಗ್ರಮನಾಸ್ತಾತ ಶೃಣು ತೀರ್ಥೇಷು ಯತ್ ಫಲಮ್ ॥8॥
ಪ್ರೀತಿಪಾತ್ರನೇ, ಋಷಿಗಳಿಗೆ ಬಹಳ ಪ್ರಿಯವಾದ ಈ ವಿಷಯವನ್ನು ಹೇಳುವೆನು. ತೀರ್ಥಸ್ನಾನಗಳಿಂದ ಉಂಟಾಗುವ ಫಲವನ್ನು ಹೇಳುವೆನು. ಪ್ರೀತಿಪಾತ್ರನೇ ಏಕಾಗ್ರವಾದ ಮನಸ್ಸಿನಿಂದ ಕೇಳು.
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಮ್ |
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥9॥
ಯಾವನಿಗೆ ಹಸ್ತಗಳು ಪಾದಗಳು ಮತ್ತು ಮನಸ್ಸು ನಿಯಂತ್ರಿತವಾಗಿರುತ್ತವೆಯೋ ಮತ್ತು ಯಾವನು ವಿದ್ಯೆಯನ್ನು ತಪಸ್ಸನ್ನು ಕೀರ್ತಿಯನ್ನು ಸಂಪಾದಿಸಿರುತ್ತಾನೆಯೋ ಅವನು ತೀರ್ಥಫಲವನ್ನು ಪಡೆಯುತ್ತಾನೆ.
ಪ್ರತಿಗ್ರಹಾದಪಾವೃತ್ತಃ ಸಂತುಷ್ಟೋ ಯೇನ ಕೇನ ಚಿತ್ |
ಅಹಂಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥10॥
ಯಾರಿಂದಲೂ ದಾನವನ್ನು ಸ್ವೀಕರಿಸಿದೆ ದೈವಲಬ್ಧವಾದುದರಿಂದ ಸಂತುಷ್ಟನಾಗಿ ನಿರಹಂಕಾರಿಯಾದವನು ತೀರ್ಥದ ಫಲವನ್ನು ಪಡೆಯುತ್ತಾನೆ.
ಅಕಲ್ಕಕೋ ನಿರಾರಂಭೋ ಲಘ್ವಾಹಾರೋ ಜಿತೇಂದ್ರಿಯಃ |
ವಿಮುಕ್ತಃ ಸರ್ವಪಾಪೇಭ್ಯಃ ಸ ತೀರ್ಥಫಲಮಶ್ನುತೇ ॥11॥
ಯಾವನು ಶ್ರಮಪರಿಹಾರಕ್ಕಾಗಿ ಔಷಧಿಯನ್ನಾಗಲೀ ಅಥವಾ ರಸಾಯನವನ್ನಾಗಲೀ ತೆಗೆದುಕೊಳ್ಳದೆ ತೀರ್ಥಯಾತ್ರೆಯ ಸಮಯದಲ್ಲಿ ಯಾವ ಉದ್ಯೋಗವನ್ನೂ ಮಾಡದೆ ಲಘುವಾದ ಅಹಾರವನ್ನು ಸೇವಿಸಿ ಜಿತೇಂದ್ರಿಯನಾಗಿ ಎಲ್ಲಾ ಪಾಪಾಚರಣೆಗಳಿಂದ ದೂರವಿರುತ್ತಾನೆಯೋ ಅವನಿಗೆ ತೀರ್ಥಫಲವು ಲಭಿಸುತ್ತದೆ.
ಅಕ್ರೋಧನಶ್ಚ ರಾಜೇಂದ್ರ ಸತ್ಯಶೀಲೋ ದೃಢವ್ರತಃ |
ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥12॥
ಎಲೈ ರಾಜೇಂದ್ರನೇ, ಯಾವನು ಕ್ರೋಧವನ್ನು ಬಿಟ್ಟು ಸತ್ಯಶೀಲನಾಗಿ ಒಳ್ಳೆಯ ವ್ರತವನ್ನು ಧರಿಸಿ ಇತರ ಪ್ರಾಣಿಗಳನ್ನು ತನ್ನಂತೆ ನೋಡುತ್ತಾನೆಯೋ ಅವನು ತೀರ್ಥಫಲವನ್ನು ಪಡೆಯುತ್ತಾನೆ.

ಋಷಿಭಿಃ ಕ್ರತವಃ ಪ್ರೋಕ್ತಾ ವೇದೇಷ್ವೇವ ಯಥಾಕ್ರಮಮ್|
ಫಲಂ ಚೈವ ಯಥಾತತ್ತ್ವಂ ಪ್ರೇತ್ಯ ಚೇಹ ಚ ಸರ್ವಶಃ ॥13॥
ಋಷಿಗಳು ವೇದದಲ್ಲಿ ಕ್ರಮಪೂರ್ವಕವಾದ ಅನೇಕ ಯಾಗ ಯಜ್ಞಗಳನ್ನು ಹೇಳಿದ್ದಾರೆ. ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಅದರಿಂದ ಉಂಟಾಗುವ ಎಲ್ಲರೀತಿಯ ಫಲಗಳನ್ನು ಯಥಾರ್ಥವಾಗಿ ತಿಳಿಸಿದ್ದಾರೆ.
ನ ತೇ ಶಕ್ಯಾ ದರಿದ್ರೇಣ ಯಜ್ಞಾಃ ಪ್ರಾಪ್ತುಂ ಮಹೀಪತೇ |
ಬಹೂಪಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ॥14॥
ಪ್ರಾಪ್ಯಂತೇ ಪಾರ್ಥಿವೈರೇತೈಃ ಸಮೃದ್ಧೈರ್ವಾ ನರೈಃ ಕ್ವಚಿತ್ |
ನಾರ್ಥನ್ಯೂನೋಪಕರಣೈರೇಕಾತ್ಮಭಿರಸಂಹತೈಃ ॥15॥
ಎಲೈ ರಾಜನೇ, ಆ ಯಜ್ಞಗಳು ಅನೇಕ ಉಪಕರಣಗಳನ್ನು ಅಪೇಕ್ಷಿಸುತ್ತವೆ. ಮತ್ತು ಅನೇಕ ಪದಾರ್ಥಗಳ ಸಿದ್ಧತೆಯನ್ನು ಅಪೇಕ್ಷಿಸುತ್ತವೆ, ದರಿದ್ರನಾದವನು ಅಂತಹ ಯಜ್ಞವನ್ನು ಮಾಡಲು ಸಾಧ್ಯವಿಲ್ಲ. ಆ ಯಜ್ಞಗಳು ಶ್ರೀಮಂತರಾದ ಮನುಷ್ಯರಿಂದಾಗಲೀ ಅಥವಾ ರಾಜರಿಂದಲಾಗಲೀ ಮಾಡಲ್ಪಡುತ್ತವೆ. ಧನದಿಂದಲೂ ಉಪಕರಣಗಳಿಂದಲೂ ಮತ್ತು ಬೇರೆ ಜನರ ಸಹಾಯದಿಂದಲೂ ಕೂಡಿಕೊಳ್ಳದವರು ಮತ್ತು ಏಕಾಕಿಗಳಾದವರು ಅಂತಹ ಯಜ್ಞಗಳನ್ನು ಆಚರಿಸಲು ಸಾಧ್ಯವಿಲ್ಲ.
ಯೋ ದರಿದ್ರೈರಪಿ ವಿಧಿಃ ಶಕ್ಯಃ ಪ್ರಾಪ್ತುಂ ನರೇಶ್ವರ |
ತುಲ್ಯೋ ಯಜ್ಞಫಲೈಃ ಪುಣ್ಯೈಃ ತಂ ನಿಬೋಧ ಯುಧಾಂವರ ॥16॥
ಎಲೈ ರಾಜನೇ, ಎಲೈ ಯೋಧರಲ್ಲಿ ಶ್ರೇಷ್ಠನೇ, ಯಾವ ವಿಧಿಯನ್ನು ದರಿದ್ರರಾದವರೂ ಆಚರಿಸಬಹುದೋ ಮತ್ತು ಏನನ್ನು ಆಚರಿಸಿದರೆ ಉಂಟಾಗುವ ಫಲವು ಯಜ್ಞಗಳ ಫಲಕ್ಕೆ ಸಮವಾಗಿರುತ್ತದೆಯೋ ಅವುಗಳನ್ನು ಹೇಳುತ್ತೇನೆ ತಿಳಿದುಕೋ.
ಋಷೀಣಾಂ ಪರಮಂ ಗುಹ್ಯಮಿದಂ ಭರತಸತ್ತಮ |
ತೀರ್ಥಾಭಿಗಮನಂ ಪುಣ್ಯಂ ಯಜ್ಞೈರಪಿ ವಿಶಿಷ್ಯತೇ ॥17॥
ಅನುಪೋಷ್ಯ ತ್ರಿರಾತ್ರಾಣಿ ತೀರ್ಥಾನ್ಯನವಗಾಹ್ಯ ಚ |
ಅದತ್ತ್ವಾ ಕಾಂಚನಂ ಗಾಶ್ಚ ದರಿದ್ರೋ ನಾಮ ಜಾಯತೇ ॥18॥
ಎಲೈ ಭರತಸತ್ತಮನೇ, ಇದು ಋಷಿಗಳು ತಿಳಿದಿರುವ ಪರಮರಹಸ್ಯ. ತೀರ್ಥಯಾತ್ರೆಯನ್ನು ಮಾಡುವುದರಿಂದ ಬರುವ ಪುಣ್ಯವು ಯಜ್ಞದಿಂದ ಉಂಟಾಗುವ ಪುಣ್ಯವನ್ನು ಮೀರಿರುತ್ತದೆ. ದಶಮಿ ಏಕಾದಶಿ ದ್ವಾದಶಿ ಈ ಮೂರುರಾತ್ರಿಗಳಲ್ಲಿ ಉಪವಾಸವನ್ನು ಮಾಡದ ತೀರ್ಥಗಳಲ್ಲಿ ಸ್ನಾನವನುನಮಾಡದ ಗೋದಾನವನ್ನು ಮಾಡದ ಮತ್ತು ಹಿರಣ್ಯದಾನವನ್ನು ಮಾಡದ ಜನರು ದರಿದ್ರರಾಗಿ ಹುಟ್ಟುತ್ತಾರೆ.
ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ |
ನ ತತ್ಫಲಮವಾಪ್ನೋತಿ ತೀರ್ಥಾಭಿಗಮನೇನ ಯತ್ ॥19॥
ತೀರ್ಥದಲ್ಲಿ ಸ್ನಾನಮಾಡುವುದರಿಂದ ಯಾವ ಫಲವು ಉಂಟಾಗುತ್ತದೆಯೋ ಆ ಫಲವು ಬಹಳ ದಕ್ಷಿಣೆಗಳನ್ನು ಕೊಟ್ಟು ಮಾಡಿದ ಅಗ್ನಿಷ್ಟೋಮಾದಿ ಯಜ್ಞಗಳಿಂದಲೂ ಆಗುವುದಿಲ್ಲ.
ತ್ರಿಲೋಕದೇವದೇವಸ್ಯ ತೀರ್ಥಂ ತ್ರೈಲೋಕ್ಯವಿಶ್ರುತಮ್ |
ಪುಷ್ಕರಂ ನಾಮ ವಿಖ್ಯಾತಂ ಮಹಾಭಾಗಃ ಸಮಾವಿಶೇತ್ ॥20॥
ಮೂರುಲೋಕಗಳಿಲ್ಲಯೂ ಶ್ರುತವಾದ ಮೂರು ಲೋಕಗಳ ದೇವದೇವನಾದ ವಿಷ್ಣುವಿನ ಪುಷ್ಕರವೆಂಬ ಪ್ರಸಿದ್ಧವಾದ ಸರೋವರವಿದೆ. ಪುಣ್ಯಶಾಲಿಯಾದವನು ಅಲ್ಲಿ ಸ್ನಾನವನ್ನು ಮಾಡಬೇಕು.
ದಶಕೋಟಿಸಹಸ್ರಾಣಿ ತೀರ್ಥಾನಾಂ ವೈ ಮಹೀಪತೇ |
ಸಾನ್ನಿಧ್ಯಂ ಪುಷ್ಕರೇ ಯೇಷಾಂ ತ್ರಿಸಂಧ್ಯಂ ಕುರುನಂದನ ॥21॥
ಎಲೈ ಕುರುನಂದನನೇ ಎಲೈ ರಾಜನೇ ಮೂರುಸಂಧ್ಯೆಗಳಲ್ಲಿಯೂ ಆ ಪುಷ್ಕರಕ್ಷೇತ್ರದಲ್ಲಿ ಹತ್ತು ಕೋಟಿ ಸಹಸ್ರತೀರ್ಥಗಳ ಸನ್ನಿಧಾನವಿರುತ್ತದೆ.
ಆದಿತ್ಯಾ ವಸವೋ ರುದ್ರಾಃ ಸಾಧ್ಯಾಶ್ಚ ಸಮರುದ್ಗಣಾಃ |
ಗಂಧರ್ವಾಪ್ಸರಸಶ್ಚೈವ ನಿತ್ಯಂ ಸನ್ನಿಹಿತಾ ವಿಭೋ ॥22॥
ಎಲೈ ವಿಭುವೇ ಆದಿತ್ಯರು ವಸುಗಳು ರುದ್ರರು ಮರುದ್ಗಣದಿಂದ ಕೂಡಿದ ಸಾಧ್ಯರು ಗಂಧರ್ವರು ಮತ್ತು ಅಪ್ಸರೆಯರು ಅಲ್ಲಿ ನಿತ್ಯವೂ ಸನ್ನಿಹಿತರಾಗಿರುತ್ತಾರೆ.
ಯತ್ರ ದೇವಾಸ್ತಪಸ್ತಪ್ತ್ವಾ ದೈತ್ಯಾ ಬ್ರಹ್ಮರ್ಷಯಸ್ತಥಾ |
ದಿವ್ಯಯೋಗಾ ಮಹಾರಾಜ ಪುಣ್ಯೇನ ಮಹತಾಽನ್ವಿತಾಃ |
ತಪೋವಿಶೇಷೈರ್ಬಹುಭಿಃ ಸ್ಥಾನಾನ್ಯಾಪುರ್ಮಹೌಜಸಃ ॥23॥
ಎಲೈ ಮಹಾರಾಜನೇ, ಅಲ್ಲಿ ದೇವತೆಗಳು ದೈತ್ಯರು ಬ್ರಹ್ಮರ್ಷಿಗಳು ತಪಸ್ಸನ್ನುಮಾಡಿ ಬಹಳ ಪುಣ್ಯವನ್ನು ಸಂಪಾದಿಸಿ ದಿವ್ಯಯೋಗವನ್ನು ಪಡೆದು ವಿಶೇಷವಾದ ಅನೇಕ ತಪಸ್ಸಿನಿಂದ ಆ ಮಹಾಸಾಮರ್ಥ್ಯಶಾಲಿಗಳಾದ ಅವರು ಶ್ರೇಷ್ಠವಾದ ಸ್ಥಾನಗಳನ್ನು ಪಡೆದರು.
ಮನಸಾಽಪ್ಯಭಿಕಾಮಸ್ಯ ಪುಷ್ಕರಾಣಿ ಮನಸ್ವಿನಃ |
ಪೂಯಂತೇ ಸರ್ವಪಾಪಾನಿ ನಾಕಪೃಷ್ಠೇ ಚ ಪೂಜ್ಯತೇ ॥24॥
ಯಾವ ಧೀರನಾದ ಪುರುಷನು ಮನಸ್ಸಿನಲ್ಲಾದರೂ ಸಹ ಮೂರು ಪುಷ್ಕರಗಳನ್ನು ಸ್ಮರಿಸುತ್ತಾನೆಯೋ ಅವನ ಪಾಪಗಳೆಲ್ಲವೂ ನಾಶಹೊಂದುತ್ತವೆ. ಅವನು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.

ತಸ್ಮಿಂಸ್ತೀರ್ಥೇ ಮಹಾಭಾಗ ನಿತ್ಯಮೇವ ಪಿತಾಮಹಃ |
ಉವಾಸ ಪರಮಪ್ರೀತೋ ದೇವದಾನವಸೇವಿತಃ ॥25॥
ಎಲೈ ಮಹಾನುಭಾವನೇ, ಆ ತೀರ್ಥದಲ್ಲಿ ದೇವತೆಗಳಿಂದಲೂ ದಾನವರಿಂದಲೂ ಪೂಜಿತನಾದ ಪಿತಾಮಹನಾದ ಬ್ರಹ್ಮನು ಬಹಳ ಸಂತೋಷದಿಂದ ನಿತ್ಯವೂ ವಾಸಮಾಡುತ್ತಾನೆ.
ಪುಷ್ಕರೇಷು ಮಹಾಭಾಗ ದೇವಾಃ ಸರ್ಷಿಗಣಾಃ ಪುರಾ |
ಸಿದ್ಧಿಂ ಸುಮಹತೀಂ ಪ್ರಾಪ್ತಾಃ ಪುಣ್ಯೇನ ಮಹತಾಽನ್ವಿತಾಃ ॥26॥
ಎಲೈ ಮಹಾನುಭಾವನೇ, ಹಿಂದೆ ದೇವತೆಗಳು ಮತ್ತು ಋಷಿಗಣಗಳು ಪುಷ್ಕರದಲ್ಲಿ ಸ್ನಾನವನ್ನು ಮಾಡಿ ಮಹಾಪುಣ್ಯವನ್ನು ಗಳಿಸಿದವರಾಗಿ ದೊಡ್ಡ ಸಿದ್ಧಿಯನ್ನು ಪಡೆದರು.
ತತ್ರಾಭಿಷೇಕಂ ಯಃ ಕುರ್ಯಾತ್ ಪಿತೃದೇವಾರ್ಚನೇ ರತಃ |
ಸೋಽಶ್ವಮೇಧಮವಾಪ್ನೋತಿ ಬ್ರಹ್ಮಲೋಕೇ ಚ ಪೂಜ್ಯತೇ ॥27॥
ಅಲ್ಲಿ ಯಾವ ಪುರುಷನು ಸ್ನಾನವನ್ನು ಮಾಡಿ ಪಿತೃದೇವತಾರ್ಚನೆಯನ್ನು ಮಾಡುತ್ತಾನೆಯೋ ಅವನಿಗೆ ಅಶ್ವಮೇಧ ಯಾಗದ ಫಲವುಂಟಾಗಿ ಅವನು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಅಪ್ಯೇಕಂ ಭೋಜಯೇದ್ ವಿಪ್ರಂ ಪುಷ್ಕರಾರಣ್ಯಮಾಶ್ರಿತಃ |
ತೇನಾಸೌ ಕರ್ಮಣಾ ಭೀಷ್ಮ ಪ್ರೇತ್ಯ ಚೇಹ ಚ ಮೋದತೇ ॥28॥
ಪುಷ್ಕರಾರಣ್ಯಕ್ಷೇತ್ರದಲ್ಲಿ ಒಬ್ಬ ಬ್ರಾಹ್ಮಣನಿಗಾದರೂ ಭೋಜನವನ್ನು ಮಾಡಿಸಬೇಕು. ಎಲೈ ಭೀಷ್ಮನೇ, ಆ ಕರ್ಮದಿಂದ ಅವನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾನೆ.
ಶಾಕೈರ್ಮೂಲೈಃ ಫಲೈರ್ವಾಽಪಿ ಯೇನ ವರ್ತಯತೇ ಸ್ವಯಮ್ |
ತದ್ವೈ ದದ್ಯಾದ್ ಬ್ರಾಹ್ಮಣಾಯ ಶ್ರದ್ಧಾವಾನನಸೂಯಕಃ |
ತೇನೈವ ಪ್ರಾಪ್ನುಯಾತ್ ಪ್ರಾಜ್ಞೋ ಹಯಮೇಧಫಲಂ ನರಃ ॥29॥
ಗೆಡ್ಡೆಯನ್ನಾಗಲೀ ಗೆಣಸುಗಳನ್ನಾಗಲೀ ಅಥವಾ ಫಲಗಳನ್ನಾಗಲೀ ತಾನು ಏನನ್ನು ಉಪಜೀವಿಸುತ್ತಾನೋ ಅದನ್ನೇ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಕೊಡಬೇಕು. ಅದರಿಂದ ಆ ಪ್ರಾಜ್ಞನಾದ ಪುರುಷನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ರಾಜಸತ್ತಮ |
ನ ವಿಯೋನಿಂ ವ್ರಜಂತ್ಯೇತೇ ಸ್ನಾತಾಸ್ತೀರ್ಥೇಷು ಭಾರತ ॥30॥
ಎಲೈ ರಾಜಶ್ರೇಷ್ಠನೇ, ಬ್ರಾಹ್ಮಣನಾಗಲೀ ಅಥವಾ ಕ್ಷತ್ರಿಯನಾಗಲೀ ಅಥವಾ ವೈಶ್ಯನಾಗಲೀ ಅಥವಾ ಶೂದ್ರನಾಗಲೀ ಯಾವನು ಪುಷ್ಕರತೀರ್ಥಗಳಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನಿಗೆ ದುಷ್ಟಯೋನಿಗಳು ಉಂಟಾಗುವುದಿಲ್ಲ.
ಕಾರ್ತ್ತಿಕ್ಯಾಂ ತು ವಿಶೇಷೇಣ ಯೋಽಭಿಗಚ್ಛತಿ ಪುಷ್ಕರಮ್ |
ಫಲಂ ತತ್ರಾಕ್ಷಯಂ ತಸ್ಯ ಲಭತೇ ಭರತರ್ಷಭ ॥31॥
ಎಲೈ ಭರತಶ್ರೇಷ್ಠನೇ, ಯಾವನು ಕಾರ್ತಿಕಮಾಸ ಅಮಾವಾಸ್ಯೆಯಂದು ಪುಷ್ಕರಕ್ಕೆ ಹೋಗಿ ಸಽನನಮಾಡುವನೋ ಅವನು ಅಕ್ಷಯ ಫಲವನ್ನು ಪಡೆಯುವನು.
ಸಾಯಂಪ್ರಾತಃ ಸ್ಮರೇದ್ಯಸ್ತು ಪುಷ್ಕರಾಣಿ ಕೃತಾಂಜಲಿಃ |
ಉಪಸ್ಪೃಷ್ಟಂ ಭವೇತ್ ತೇನ ಸರ್ವತೀರ್ಥೇಷು ಭಾರತ |
ಪ್ರಾಪ್ನುಯಾಚ್ಚ ನರೋ ಲೋಕಾನ್ ಬ್ರಹ್ಮಣಃ ಸದನೇಽಕ್ಷಯಾನ್ ॥32॥
ಎಲೈ ಭಾರತನೇ, ಯಾವನು ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಕೈಗಳನ್ನು ಜೋಡಿಸಿ ಪುಷ್ಕರಗಳನ್ನು ಸ್ಮರಿಸಿ ತಾನು ಇದ್ದಲ್ಲಿಯೇ ಸ್ನಾನವನ್ನು ಮಾಡುತ್ತಾನೆಯೋ ಅವನಿಗೆ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವು ದೊರೆಯುತ್ತದೆ. ಅವನು ಬ್ರಹ್ಮದೇವರ ಲೋಕದಲ್ಲಿ ಅಕ್ಷಯ ಸ್ಥಾನಗಳನ್ನು ಪಡೆಯುತ್ತಾನೆ.
ಜನ್ಮಪ್ರಭೃತಿ ಯತ್ ಪಾಪಂ ಸ್ತ್ರಿಯೋ ವಾ ಪುರುಷಸ್ಯ ವಾ |
ಪುಷ್ಕರೇ ಸ್ನಾತಮಾತ್ರಸ್ಯ ತದಶೇಷಂ ಪ್ರಣಶ್ಯತಿ ॥33॥
ಯಾವ ಪುರುಷನಾಗಲೀ ಅಥವಾ ಸ್ತ್ರೀಯೇ ಆಗಲಿ ಹುಟ್ಟಿದಾಗಿನಿಂದಲೂ ಮಾಡಿದ ಪಾಪಗಳು ಪುಷ್ಕರಕ್ಷೇತ್ರದಲ್ಲಿ ಕೇವಲ ಸ್ನಾನವನ್ನು ಮಾಡುವುದರಿಂದ ನಿಶ್ಶೇಷವಾಗಿ ನಾಶವನ್ನು ಹೊಂದುತ್ತವೆ.
ಯಥಾ ಸುರಾಣಾಂ ಸರ್ವೇಷಾಮಾದಿಸ್ತು ಮಧುಸೂದನಃ |
ತಥೈವ ಪುಷ್ಕರಂ ರಾಜನ್ ತೀರ್ಥಾನಾಮಾದಿರುಚ್ಯತೇ ॥34॥
ಎಲೈ ರಾಜನೇ ಹೇಗೆ ಎಲ್ಲ ದೇವತೆಗಳಿಗೂ ಮಧೂಸೂದನನೇ ಮೂಲವೋ ಹಾಗೆ ಎಲ್ಲತೀರ್ಥಗಳಿಗೂ ಪುಷ್ಕರವೇ ಮೂಲವೆಂದು ಹೇಳಲ್ಪಡುತ್ತದೆ.
ಉಷ್ಯ ದ್ವಾದಶವರ್ಷಾಣಿ ಪುಷ್ಕರೇ ನಿಯತಃ ಶುಚಿಃ |
ಕ್ರತೂನ್ ಸರ್ವಾನವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥35॥
ಯಾವನು ಪುಷ್ಕರಕ್ಷೇತ್ರದಲ್ಲಿ ಮನೋವಾಕ್‌ನಿಯಮಗಳಿಂದ ಶುಚಿಯಾಗಿ ಹನ್ನೆರಡುವರ್ಷಗಳ ಕಾಲ ವಾಸಮಾಡುತ್ತಾನೆಯೋ ಅವನು ಎಲ್ಲಾ ಯಾಗಗಳ ಫಲವನ್ನು ಪಡೆಯುತ್ತಾನೆ. ಮತ್ತು ಕೊನೆಯಲ್ಲಿ ಬ್ರಹ್ಮಲೋಕವನ್ನು ಪಡೆಯುತ್ತಾನೆ.
ಯಸ್ತು ವರ್ಷಶತಂ ಪೂರ್ಣಮಗ್ನಿಹೋತ್ರಮುಪಾಸತೇ |
ಕಾರ್ತ್ತಿಕೀಂ ವಾ ವಸೇದೇಕಾಂ ಪುಷ್ಕರೇ ಸಮಮೇವ ತತ್ ॥36॥
ಮತ್ತು ಯಾವನು ಒಂದು ನೂರು ವರ್ಷಕಾಲ ಪೂರ್ಣವಾಗಿ ಅಗ್ನಿಹೋತ್ರಾದಿಗಳನ್ನು ಮಾಡುತ್ತಾನೆಯೋ ಮತ್ತು ಯಾವನು

ಕಾರ್ತಿಕಮಾಸದ ಒಂದು ರಾತ್ರಿ ಪುಷ್ಕರದಲ್ಲಿ ಕಳೆಯುತ್ತಾನೆಯೋ ಅವರಿಬ್ಬರ ಪುಣ್ಯವೂ ಸಮಾನವಾದುದು.
ದುಷ್ಕರಂ ಪುಷ್ಕರೇ ಗಂತುಂ ದುಷ್ಕರಂ ಪುಷ್ಕರೇ ತಪಃ |
ದುಷ್ಕರಂ ಪುಷ್ಕರೇ ದಾನಂ ವಸ್ತುಂ ಚೈವ ಸುದುಷ್ಕರಮ್ ॥37॥
ಪುಷ್ಕರಕ್ಕೆ ಪ್ರಯಾಣಮಾಡುವುದು ಕಷ್ಟಸಾಧ್ಯ. ಪುಷ್ಕರದಲ್ಲಿ ತಪಸ್ಸನ್ನು ಆಚರಿಸುವುದು ಕಷ್ಟಸಾಧ್ಯ. ಪುಷ್ಕರದಲ್ಲಿ ದಾನವನ್ನು ಮಾಡುವುದು ಕಷ್ಟಸಾಧ್ಯ. ಆದರೆ ಪುಷ್ಕರದಲ್ಲಿ ವಾಸವನ್ನುಮಾಡುವುದು ಎಲ್ಲವುಗಳಿಗಿಂತ ಅಸಾಧ್ಯವಾದುದು.
ಉಷ್ಯ ದ್ವಾದಶರಾತ್ರಂ ತು ನಿಯತೋ ನಿಯತಾಶನಃ |
ಪ್ರದಕ್ಷಿಣಮುಪಾವೃತ್ತೋ ಜಂಬೂಮಾರ್ಗಂ ಸಮಾವಿಶೇತ್ ॥38॥
ಅಧಿಕಾರಿಯಾದ ಸಜ್ಜನನು ಪುಷ್ಕರದಲ್ಲಿ ನಿಯಮಬದ್ಧವಾಗಿ ಮತ್ತು ಯುಕ್ತ ಆಹಾರವುಳ್ಳವನಾಗಿ ಹನ್ನೆರಡುರಾತ್ರಿಗಳು ವಾಸಮಾಡಿ ಅಲ್ಲಿಂದ ಜಂಬೂಮಾರ್ಗಕ್ಕೆ ಹೋಗಬೇಕು.
ಜಂಬೂಮಾರ್ಗಂ ಸಮಾಸಾದ್ಯ ದೇವರ್ಷಿಪಿತೃಸೇವಿತಮ್ |
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥39॥
ದೇವತೆಗಳು ಋಷಿಗಳು ಪಿತೃಗಳಿಂದ ಸೇವಿತವಾದ ಜಂಬೂಮಾರ್ಗಕ್ಕೆ ಯಾವನು ಹೋಗುತ್ತಾನೆಯೋ ಅವನಿಗೆ ಅಶ್ವಮೇಧ ಫಲವುಂಟಾಗುತ್ತದೆ. ಮತ್ತು ಅವನು ಕೊನೆಯಲ್ಲಿ ವಿಷ್ಣುಲೋಕವನ್ನೇ ಸೇರುತ್ತಾನೆ.
ತತ್ರೋಷ್ಯ ರಜನೀಃ ಪಂಚ ಷಷ್ಠಕಾಲಕ್ಷಮೀ ನರಃ |
ನ ದುರ್ಗತಿಮವಾಪ್ನೋತಿ ಸ್ವರ್ಗಲೋಕೇ ಚ ಪೂಜ್ಯತೇ ॥40॥
ಯಾವ ಮನುಷ್ಯನು ಹಗಲಿನ ಕೊನೆಯ ಒಂದು ಭಾಗದಲ್ಲಿ ಅಹಾರವನ್ನು ಸೇವಿಸುತ್ತಾ ಅಲ್ಲಿ ಐದು ರಾತ್ರಿಗಳನ್ನು ಕಳೆಯುತ್ತಾನೆಯೋ ಅವನು ದುರ್ಗತಿಯನ್ನು ಹೊಂದುವುದಿಲ್ಲ. ಅವನು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.
ಜಂಬೂಮಾರ್ಗಾದುಪಾವೃತ್ತೋ ಗಚ್ಛೇತ್ ತಂಡುಲಿಕಾಶ್ರಮಮ್ |
ನ ದುರ್ಗತಿಮವಾಪ್ನೋತಿ ಬ್ರಹ್ಮಲೋಕೇ ಚ ಪೂಜ್ಯತೇ ॥41॥
ಜಂಜೂಮಾರ್ಗದಿಂದ ತಿರುಗಿ ತಂಡುಲಿಕಾ ಆಶ್ರಮಕ್ಕೆ ಬರಬೇಕು ಯಾವನು ತಂಡುಲಿಕಾಶ್ರಮದ ಯಾತ್ರೆಯನ್ನು ಮಾಡುತ್ತಾನೆಯೋ ಅವನಿಗೆ ದುರ್ಗತಿಯು ಉಂಟಾಗುವುದಿಲ್ಲ. ಮತ್ತು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಆಗಸ್ತ್ಯಂ ಸರ ಆಸಾದ್ಯ ಪಿತೃದೇವಾರ್ಚನೇ ರತಃ |
ತ್ರಿರಾತ್ರೋಪೋಷಿತೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥42॥
ಎಲೈ ರಾಜನೇ, ಅಗಸ್ತ್ಯರ ಸರೋವರಕ್ಕೆ ಹೋಗಿ ಪಿತೃದೇವತಾರ್ಚನೆಯನ್ನು ಮಾಡಿ ಮೂರು ರಾತ್ರಿಕಾಲ ಉಪವಾಸವನ್ನು ಮಾಡುವ ನರನು ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ.
ಶಾಕವೃತ್ತಿಃ ಫಲೈರ್ವಾಽಪಿ ಕೌಬೇರಂ ವಿಂದತೇ ಪದಮ್ |
ಕಣ್ವಾಶ್ರಮಂ ತತೋ ಗಚ್ಛೇತ್ ಶ್ರೀಜುಷ್ಟಂ ಲೋಕವಿಶ್ರುತಮ್ ॥43॥
ಕಾಯಿಪಲ್ಯವನ್ನು ಅಥವಾ ಹಣ್ಣುಗಳನ್ನು ಭಕ್ಷಣೆಮಾಡಿ ಪುಷ್ಕರದಲ್ಲಿ ವಾಸಿಸುವವನು ಕುಬೇರನ ಸ್ಥಾನವನ್ನು ಪಡೆಯುತ್ತಾನೆ. ಅನಂತರ ಲಕ್ಷ್ಮೀದೇವಿಯ ಸನ್ನಿಧಾನಕ್ಕೆ ಪಾತ್ರವಾಗಿರುವ (ಕಾಂತಿಯುಕ್ತವಾದ) ಲೋಕವಿಶ್ರುತವಾದ ಕಣ್ವಾಶ್ರಮಕ್ಕೆ ಅಲ್ಲಿಂದ ಹೋಗಬೇಕು.
ಧರ್ಮಾರಣ್ಯಂ ಮಹತ್ಪುಣ್ಯಮಾಸಾದ್ಯ ಭರತರ್ಷಭ |
ಯತ್ರ ಪ್ರವಿಷ್ಟಮಾತ್ರೋಽಸೌ ಪಾಪೇಭ್ಯೋ ವಿಪ್ರಮುಚ್ಯತೇ |
ಸರ್ವಕಾಮಸಮೃದ್ಧಃ ಸ್ಯಾದ್ ಯಜ್ಞಸ್ಯ ಫಲಮಶ್ನುತೇ ॥44॥
ಎಲೈ ಭರತರ್ಷಭನೇ, ಧರ್ಮಾರಣ್ಯವನ್ನು ಕೇವಲ ಪ್ರವೇಶಮಾಡುವುದರಿಂದಲೇ ಮನುಷ್ಯನು ಪಾಪಗಳಿಂದ ನಿರ್ಮುಕ್ತನಾಗಿ ಬಹಳ ಪುಣ್ಯವನ್ನು ಸಂಪಾದಿಸಿ ಎಲ್ಲ ಕಾಮಗಳಿಂದಲೂ ಸಮೃದ್ಧನಾಗುತ್ತಾನೆ. ಅವನಿಗೆ ಯಜ್ಞದ ಫಲವು ಉಂಟಾಗುತ್ತದೆ.
ಪ್ರದಕ್ಷಿಣಂ ತತಃ ಕೃತ್ವಾ ಯಯಾತಿಪತನಂ ವ್ರಜೇತ್ |
ಹಯಮೇಧಸ್ಯ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥45॥
ಅಲ್ಲಿಂದ ಪ್ರದಕ್ಷಿಣಾಕಾರವಾಗಿ ಯಯಾತಿಪತನವೆಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಗೆ ಹೋಗುವ ಮನುಷ್ಯನಿಗೆ ಅಶ್ವಮೇಧಯಾಗದ ಫಲವು ಉಂಟಾಗುತ್ತದೆ.
ಮಹಾಕಾಲಂ ತತೋ ಗಚ್ಛೇತ್ ನಿಯತೋ ನಿಯತಾಶನಃ |
ಕೋಟಿತೀರ್ಥಮುಪಸ್ಪೃಶ್ಯ ಹಯಮೇಧಫಲಂ ಲಭೇತ್ ॥46॥
ಅಲ್ಲಿಂದ ನಿಯಮಬದ್ಧನಾಗಿ ಮತ್ತು ಅಲ್ಪ ಆಹಾರವನ್ನು ಸೇವಿಸಿ ಕೋಟಿತೀರ್ಥದಲ್ಲಿ ಸ್ನಾನಮಾಡಿ ಮಹಾಕಾಲಕ್ಷೇತ್ರಕ್ಕೆ ಹೋದ ನರನಿಗೆ ಅಶ್ವಮೇಧಯಾಗದ ಫಲವು ಉಂಟಾಗುತ್ತದೆ.
ತತೋ ಗಚ್ಛೇತ ಧರ್ಮಜ್ಞಃ ಸ್ಥಾಣೋಸ್ತೀರ್ಥಮುಮಾಪತೇಃ |
ನಾಮ್ನಾ ರುದ್ರವಟಂ ನಾಮ ತ್ರಿಷು ಲೋಕೇಷು ವಿಶ್ರುತಮ್ ॥47॥
ತತ್ರಾಭಿಗಮ್ಯ ಚೇಶಾನಂ ಗೋಸಹಸ್ರಫಲಂ ಲಭೇತ್ |
ಮಹಾದೇವಪ್ರಸಾದಾಚ್ಚ ಗಾಣಪತ್ಯಮವಾಪ್ನುಯಾತ್ ॥48॥
ಸಮೃದ್ಧಮಸಪತ್ನಂ ಚ ಶ್ರಿಯಾ ಯುಕ್ತಂ ನರೋತ್ತಮಃ |
ರಾಜ್ಯಾಂ ಚೈವಾಧಿಪತ್ಯಂ ಹಿ ತತ್ರ ಗತ್ವಾ ಸಮಾಪ್ನುಯಾತ್ ॥49॥
ಧರ್ಮಜ್ಞನಾದ ಪುರುಷನು ಅಲ್ಲಿಂದ ಉಮಾಪತಿಯಾದ ಸ್ಥಾಣುವಿನ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ರುದ್ರವಟವೆಂಬ

ಕ್ಷೇತ್ರಕ್ಕೆ  ಹೋಗಬೇಕು. ಅಲ್ಲಿಗೆ ಹೋಗಿ ಈಶ್ವರನನ್ನು ಸ್ತೋತ್ರಮಾಡಿದರೆ ಗೋಸಹಸ್ರದ (ದಾನದ) ಫಲವು ಉಂಟಾಗುತ್ತದೆ. ರುದ್ರದೇವರ ಅನುಗ್ರಹದಿಂದ  ರುದ್ರದೇವರ ಗಣದ ಆಧಿಪತ್ಯವು ದೊರೆಯುತ್ತದೆ. ಅಲ್ಲಿಗೆ ಹೋಗುವ ಶ್ರೇಷ್ಠನಾದ ನರನು ಸಮೃದ್ಧವಾದ ಶತ್ರುರಹಿತವಾದ ಸಂಪತ್ತಿನಿಂದ ಕೂಡಿದ ರಾಜರುಗಳ ಆಧಿಪತ್ಯವನ್ನು ಹೊಂದುವನು.

ನರ್ಮದಾಮಥ ಸಂಪ್ರಾಪ್ಯ ನಿಯತೋ ನಿಯತಾಶನಃ |
ತರ್ಪಯಿತ್ವಾ ಪಿತೄನ್ ದೇವಾನಗ್ನಿಷ್ಟೋಮಫಲಂ ಲಭೇತ್     ॥50॥

ಅನಂತರ ಅಲ್ಲಿಂದ ನಿಯಮಬದ್ಧನಾಗಿ ಯುಕ್ತಾಹಾರವನ್ನು ಸೇವಿಸಿ ನರ್ಮದಾ ನದಿಗೆ ಬಂದು ಪಿತೃಗಳಿಗೂ ಮತ್ತು ದೇವತೆಗಳಿಗೂ ತರ್ಪಣವನ್ನು ನೀಡಿದರೆ ಅಗ್ನಿಷ್ಟೋಮಫಲವು ಉಂಟಾಗುತ್ತದೆ.

ದಕ್ಷಿಣಂ ಸಿಂಧುಮಾಸಾದ್ಯ ಬ್ರಹ್ಮಚಾರೀ ಜಿತೇಂದ್ರಿಯಃ |
ಅಗ್ನಿಷ್ಟೋಮಮವಾಪ್ನೋತಿ ವಿಮಾನಂ ಚಾಧಿರೋಹತಿ          ॥51॥

ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿದ್ದು ದಕ್ಷಿಣಸಿಂಧುನದಿಯ ಯಾತ್ರೆಯನ್ನು ಮಾಡಿದರೆ ಅಗ್ನಿಷ್ಟೋಮಫಲವನ್ನು ಹೊಂದಿ ಅನಂತರ ವಿಮಾನವನ್ನು ಏರುತ್ತಾನೆ.

ಚರ್ಮಣ್ವತೀಂ ಸಮಾಸಾದ್ಯ ನಿಯತೋ ನಿಯತಾಶನಃ |
ರಂತಿದೇವಾಭ್ಯನುಜ್ಞಾತಃ ಅಗ್ನಿಷ್ಟೋಮಫಲಂ ಲಭೇತ್          ॥52॥

ನಿಯಮವುಳ್ಳವನು ನಿಯತಆಹಾರವನ್ನು ಸೇವಿಸಿ ಚರ್ಮಣ್ವತೀ ಯಾತ್ರೆಯನ್ನು ಮಾಡಿದರೆ ರಂತಿದೇವನ ಅನುಗ್ರಹಕ್ಕೆ ಪಾತ್ರನಾಗಿ ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ.

ತತೋ ಗಚ್ಛೇತ ರಾಜೇಂದ್ರ ಹಿಮವತ್ಸುತಮರ್ಬುದಮ್ |
ಪೃಥಿವ್ಯಾಂ ಯತ್ರ ವೈ ಛಿದ್ರಂ ಪೂರ್ವಮಾಸೀದ್ ಯುಧಿಷ್ಠಿರ     ॥53॥

ರಾಜೇಂದ್ರನೇ, ಅನಂತರ ಅಲ್ಲಿಂದ ಹಿಮಾಲಯದ  ಸುತನಾದ  ಅರ್ಬುದ ಪರ್ವತಕ್ಕೆ ಹೋಗಬೇಕು. ಯುಧಿಷ್ಠಿರನೇ ಹಿಂದೆ ಅಲ್ಲಿ ಭೂಮಿಯಲ್ಲಿ (ಅಧೋಲೋಕಗಳಿಗೆ ಹೋಗುವ) ಒಂದು ದೊಡ್ಡ ಬಿಲವಿದ್ದಿತು.

ತತ್ರಾಶ್ರಮೋ ವಸಿಷ್ಠಸ್ಯ ತ್ರಿಷು ಲೋಕೇಷು ವಿಶ್ರುತಃ |
ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್          ॥54॥

ಅಲ್ಲಿ ಮೂರುಲೋಕಗಳಲ್ಲಿಯೂ ಪ್ರಖ್ಯಾತವಾದ ವಸಿಷ್ಠರ ಆಶ್ರಮವಿದೆ. ಅಲ್ಲಿ ಒಂದು ರಾತ್ರಿತಂಗಿದರೆ ಗೋಸಹಸ್ರದಾನದ ಫಲವು ಉಂಟಾಗುತ್ತದೆ.

ಪಿಂಗತೀರ್ಥಮುಪಸ್ಪೃಶ್ಯ ಬ್ರಹ್ಮಚಾರೀ ಜಿತೇಂದ್ರಿಯಃ |
ಕಪಿಲಾನಾಂ ನರಶ್ರೇಷ್ಠ ಶತಸ್ಯ ಫಲಮಶ್ನುತೇ       ॥55॥

ಎಲೈ ನರಶ್ರೇಷ್ಠನೇ, ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿ ಪಿಂಗತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ನೂರು ಕಪಿಲಗೋದಾನವನ್ನು ಮಾಡಿದ ಪುಣ್ಯವುಂಟಾಗುತ್ತದೆ.

ತತೋ ಗಚ್ಛೇತ ರಾಜೇಂದ್ರ ಪ್ರಭಾಸಂ ಲೋಕವಿಶ್ರುತಮ್ |
ತೀರ್ಥಂ ದೇವಗಣೈಃ ಪೂಜ್ಯಮ್ ಋಷಿಭಿಶ್ಚ ನಿಷೇವಿತಮ್       ॥56॥

ಎಲೈ ರಾಜೇಂದ್ರನೇ, ಅಲ್ಲಿಂದ ಲೋಕವಿಶ್ರುತವಾದ ಪ್ರಭಾಸಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ದೇವಗಣಗಳಿಂದ ಪೂಜಿತವಾದ  ಮತ್ತು ಋಷಿಗಳಿಂದ ಸೇವಿತವಾದ ತೀರ್ಥವಿದೆ.

ತತ್ರ ಸನ್ನಿಹಿತೋ ನಿತ್ಯಂ ಸ್ವಯಮೇವ ಹುತಾಶನಃ |
ದೇವತಾನಾಂ ಮುಖಂ ವೀರ ಜ್ವಲನೋಽನಿಲಸಾರಥಿಃ          ॥57॥
ತಸ್ಮಿಂಸ್ತೀರ್ಥವರೇ ಸ್ನಾತ್ವಾ ಶುಚಿಃ ಪ್ರಯತಮಾನಸಃ |
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ     ॥58॥

ಎಲೈ ವೀರನೇ, ಅಲ್ಲಿ ದೇವಮುಖನೆಂದು ಕರೆಸಿಕೊಳ್ಳಲ್ಪಡುವ ವಾಯುಸಾರಥಿಯಾದ ಅಗ್ನಿದೇವನು ನಿತ್ಯವೂ ಸನ್ನಿಹಿತನಾಗಿದ್ದಾನೆ. ಯಾವ ಮಾನವನು ಶುಚಿಯಾಗಿ ಮನೋನಿಗ್ರಹವುಳ್ಳವನಾಗಿ ಆ ಶ್ರೇಷ್ಠವಾದ ತೀರ್ಥದಲ್ಲಿ ಸ್ನಾನಮಾಡುತ್ತಾನೆಯೋ ಅವನು ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳ ಫಲವನ್ನು ಪಡೆಯುತ್ತಾನೆ.

ತತೋ ಗತ್ವಾ ಸರಸ್ವತ್ಯಾಃ ಸಾಗರಸ್ಯ ಚ ಸಂಗಮೇ |
ಗೋಸಹಸ್ರಫಲಂ ಪ್ರಾಪ್ಯ ಸ್ವರ್ಗಲೋಕೇ ಮಹೀಯತೇ |
ದೀಪ್ಯಮಾನೋಽಗ್ನಿವನ್ನಿತ್ಯಂ ಪ್ರಭಯಾ ಭರತರ್ಷಭ          ॥59॥

ಅಲ್ಲಿಂದ ಸರಸ್ವತೀ ಸಾಗರ ಸಂಗಮಕ್ಕೆ ಹೋಗಿ ಸ್ನಾನವನ್ನು ಮಾಡುವವನು ಸಹಸ್ರಗೋದಾನಗಳನ್ನು ಮಾಡಿದ ಪುಣ್ಯವನ್ನು ಹೊಂದಿ ಸ್ವರ್ಗಲೋಕದಲ್ಲಿ  ಪೂಜಿಸಲ್ಪಡುತ್ತಾನೆ. ಎಲೈ ಭರತಶ್ರೇಷ್ಠನೇ ಅವನು ಅಲ್ಲಿ ತನ್ನ ಕಾಂತಿಯಿಂದ ನಿತ್ಯವೂ ಅಗ್ನಿಯಂತೆ ಬೆಳಗುತ್ತಾನೆ.

ತತ್ರ ಸ್ನಾತ್ವಾಽಪಿ ರಾಜೇಂದ್ರ ವಿಮಲಾರ್ಕಸಮದ್ಯುತಿಃ |
ತ್ರಿರಾತ್ರಮುಷಿತಸ್ತತ್ರ ತರ್ಪಯನ್ ಪಿತೃದೇವತಾಃ |
ಪ್ರಭಾಸತೇ ಯಥಾ ಸೋಮೋ ವಾಜಿಮೇಧಂ ಚ ವಿಂದತಿ          ॥60॥

ಎಲೈ ರಾಜೇಂದ್ರನೇ, ಅಲ್ಲಿಸ್ನಾನವನ್ನು  ಮಾಡಿದವನು  ಪರಿಶುದ್ಧವಾದ ಸೂರ್ಯನ ಕಾಂತಿಗೆ  ಸಮಾನವಾದ ಕಾಂತಿಯನ್ನು ಹೊಂದುತ್ತಾನೆ. ಅಲ್ಲಿ ಮೂರು ರಾತ್ರಿಗಳು ವಾಸಮಾಡಿ ಪಿತೃದೇವತೆಗಳಿಗೆ ತರ್ಪಣವನ್ನು  ನೀಡಿದರೆ ಚಂದ್ರನಂತೆ ಕಾಂತಿಯುಕ್ತನಾಗುತ್ತಾನೆ. ಮತ್ತು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.

ವಿಷ್ಣೋರ್ದುರ್ವಾಸಸಾ ಯತ್ರ ವರೋ ದತ್ತೋ ಯುಧಿಷ್ಠಿರ |
ವರದಾನೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥61॥
ಯುಧಿಷ್ಠಿರನೇ, ವಿಷ್ಣುವಿಗೆ ದುರ್ವಾಸರು ವರವನ್ನು ಕೊಟ್ಟ ವರದಾನ ಎಂಬ ಕ್ಷೇತ್ರದಲ್ಲಿ ಸ್ನಾನವನ್ನು ಮಾಡಿದ ಮಾನವನು ಸಹಸ್ರಗೋದಾನವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.
ತತೋ ದ್ವಾರವತೀಂ ಗಚ್ಛೇನ್ನಿಯತೋ ನಿಯತಾಶನಃ |
ಪಿಂಡಾರಕೇ ನರಃ ಸ್ನಾತ್ವಾ ಲಭೇದ್ ಬಹುಸುವರ್ಣಕಮ್ ॥62॥
ಅನಂತರ ಅಲ್ಲಿಂದ ನಿಯಮಬದ್ಧನೂ ಮತ್ತು ನಿಯತಆಹಾರನೂ ಆಗಿ ದ್ವಾರವತಿಗೆ ಹೋಗಬೇಕು. ಪಿಂಡಾರಕದಲ್ಲಿ ಸ್ನಾನವನ್ನು ಮಾಡುವ ನರನು ಬಹಳ ಸಂಪತ್ತನ್ನು ಪಡೆಯುತ್ತಾನೆ.
ತಸ್ಮಿಂಸ್ತೀರ್ಥೇ ಮಹಾರಾಜ ಪದ್ಮಲಕ್ಷಣಲಕ್ಷಿತಾಃ |
ಅದ್ಯಾಪಿ ಮುದ್ರಾ ದೃಶ್ಯಂತೇ ತದದ್ಭುತಮರಿಂದಮ ॥63॥
ಎಲೈ ಮಹಾರಾಜನೇ, ಎಲೈ ಅರಿಂದಮನೇ, ಆ ತೀರ್ಥದಲ್ಲಿ ಈಗಲೂ ಕೂಡ ಪದ್ಮದ ಚಿಹ್ನೆಯಿಂದ ಚಿಹ್ನಿತವಾದ ಮುದ್ರೆಗಳು ಕಾಣುತ್ತವೆ. ಇದು ಅದ್ಭುತವಾದುದು.
ತ್ರಿಶೂಲಾಂಕಾನಿ ಪದ್ಮಾನಿ ದೃಶ್ಯಂತೇ ಕುರುನಂದನ |
ಮಹಾದೇವಸ್ಯ ಸಾನ್ನಿಧ್ಯಂ ತತ್ರೈವ ಭರತರ್ಷಭ ॥64॥
ಎಲೈ ಕುರುನಂದನನೇ, ಎಲೈ ಭರತರ್ಷಭನೇ, ಅಲ್ಲಿ ಪದ್ಮಗಳಲ್ಲಿ ತ್ರಿಶೂಲದ ಚಿಹ್ನೆಯು ಕಂಡುಬರುತ್ತದೆ. ಅಲ್ಲಿ ನಿತ್ಯವೂ ಮಹಾದೇವನ ಸನ್ನಿದಾನವಿದೆ.
ಸಾಗರಸ್ಯ ಚ ಸಿಂಧೋಶ್ಚ ಸಂಗಮಂ ಪ್ರಾಪ್ಯ ಭಾರತ |
ತೀರ್ಥೇ ಸಲಿಲರಾಜಸ್ಯ ಸ್ನಾತ್ವಾ ಪ್ರಯತಮಾನಸಃ ॥65॥
ತರ್ಪಯಿತ್ವಾ ಪಿತೄ ನ್ ದೇವಾನ್ ಋಷೀಂಶ್ಚ ಭರತರ್ಷಭ |
ಪ್ರಾಪ್ನೋತಿ ವಾರುಣಂ ಲೋಕಂ ದೀಪ್ಯಮಾನಂ ಸ್ವತೇಜಸಾ ॥66॥
ಎಲೈ ಭಾರತನೇ, ಭರತರ್ಷಭನೇ, ಸಾಗರಸಿಂಧುಸಂಗಮಕ್ಕೆ ಹೋಗಿ ಅಲ್ಲಿ ಜಿತಮನಸ್ಕನಾಗಿ ವರುಣತೀರ್ಥದಲ್ಲಿ ಸ್ನಾನಮಾಡಿ ದೇವತೆಗಳಿಗೂ ಮತ್ತು ಪಿತೃಗಳಿಗೂ ಮತ್ತು ಋಷಿಗಳಿಗೂ ತರ್ಪಣವನ್ನು ನೀಡುವ ಮನುಷ್ಯನು ತನ್ನ ಪ್ರಭೆಯಿಂದ ಬೆಳಗುತ್ತಿರುವ ವರುಣಲೋಕವನ್ನು ಹೊಂದುತ್ತಾನೆ.
ಶಂಕುಕರ್ಣೇಶ್ವರಂ ದೇವಮರ್ಚಯಿತ್ವಾ ಯುಧಿಷ್ಠಿರ |
ಅಶ್ವಮೇಧಾದ್ ದಶಗುಣಂ ಪ್ರವದಂತಿ ಮನೀಷಿಣಃ ॥67॥
ಎಲೈ ಯುಧಿಷ್ಠಿರನೇ, ಶಂಕುಕರ್ಣನ ಕ್ಷೇತ್ರಕ್ಕೆ ಹೋಗಿ ಶಂಕುಕರ್ಣೇಶ್ವರನನ್ನು ಪೂಜಿಸುವ ಮಾನವನು ಅಶ್ವಮೇಧಯಾಗದ ಹತ್ತು ಪಟ್ಟು ಫಲವನ್ನು ಪಡೆಯುವನೆಂದು ಜ್ಞಾನಿಗಳು ಹೇಳುತ್ತಾರೆ.
ಪ್ರದಕ್ಷಿಣಮುಪಾವೃತ್ಯ ಗಚ್ಛೇತ ಭರತರ್ಷಭ |
ತೀರ್ಥಂ ಕುರುಕುಲಶ್ರೇಷ್ಠ ತ್ರಿಷು ಲೋಕೇಷು ವಿಶ್ರುತಮ್ |
ದೃಮೀತಿ ನಾಮ್ನಾ ವಿಖ್ಯಾತಂ ಸರ್ವಪಾಪಪ್ರಮೋಚನಮ್ ॥68॥
ಎಲೈ ಭರತಶ್ರೇಷ್ಠನೇ, ಎಲೈ ಕುರುಕುಲಶ್ರೇಷ್ಠನೇ, ಅಲ್ಲಿಂದ ಪ್ರದಕ್ಷಿಣಾಕಾರವಾಗಿ ಹೊರಟು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಸರ್ವಪಾಪ ಪ್ರಣಾಶಕವಾದ ದೃಮಿ ಎಂಬ ತೀರ್ಥಕ್ಕೆ ಹೋಗಬೇಕು.
ಯತ್ರ ಬ್ರಹ್ಮಾದಯೋ ದೇವಾ ಉಪಾಸಂತೇ ಮಹೇಶ್ವರಮ್ |
ತತ್ರ ಸ್ನಾತ್ವಾರ್ಚಯಿತ್ವಾ ಚ ರುದ್ರಂ ದೇವಗಣೈರ್ವೃತಮ್ ॥69॥
ಜನ್ಮಪ್ರಭೃತಿ ಪಾಪಾನಿ ಕೃತಾನಿ ನುದತೇ ನರಃ |
ದೃಮೀ ಚಾತ್ರ ನರಶ್ರೇಷ್ಠ ಸರ್ವದೇವೈರಭಿಷ್ಟುತಾ |
ತತ್ರ ಸ್ನಾತ್ವಾ ನರವ್ಯಾಘ್ರ ಹಯಮೇಧಮವಾಪ್ನುಯಾತ್ ॥70॥
ಅಲ್ಲಿ ಬ್ರಹ್ಮಾದಿದೇವತೆಗಳು ಮಹೇಶ್ವರನನ್ನು ಉಪಾಸನೆಮಾಡುತ್ತಾರೆ. ಅಲ್ಲಿ ಸ್ನಾನವನ್ನು ಮಾಡಿ ದೇವಗಣಗಳಿಂದ ಕೂಡಿದ ರುದ್ರನ ಪೂಜೆಯನ್ನು ಮಾಡುವ ನರನು ಜನ್ಮಾರಂಭದಿಂದ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುತ್ತಾನೆ. ಎಲೈ ನರವ್ಯಾಘ್ರನೇ ಈ ದೃಮೀತೀರ್ಥವು ಎಲ್ಲ ದೇವತೆಗಳಿಂದಲೂ ಸ್ತೋತ್ರಮಾಡಲ್ಪಟ್ಟಿದೆ. ಅಲ್ಲಿ ಸ್ನಾನವನ್ನು ಮಾಡುವ ನರನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.
ಜಿತ್ವಾ ಯತ್ರ ಮಹಾಪ್ರಾಜ್ಞ ವಿಷ್ಣುನಾ ಪ್ರಭವಿಷ್ಣುನಾ |
ಪುರಾ ಶೌಚಂ ಕೃತಂ ರಾಜನ್ ಹತ್ವಾ ದೈವತಕಂಟಕಾನ್ ॥71॥
ಎಲೈ ಮಹಾಪ್ರಾಜ್ಞನೇ, ಎಲೈ ರಾಜನೇ, ಸರ್ವಸಮರ್ಥನಾದ ವಿಷ್ಣುವು ಹಿಂದೆ ದೇವಶತ್ರುಗಳಾದ ದೈತ್ಯರನ್ನು ಕೊಂದು ಅಲ್ಲಿ ಶುಚಿರ್ಭೂತನಾದನು.
ತತೋ ಗಚ್ಛೇತ ರಾಜೇಂದ್ರ ವಸೋರ್ಧಾರಾಮಭಿಷ್ಟುತಾಮ್ |
ಗಮನಾದೇವ ತಸ್ಯಾಂ ಹಿ ಹಯಮೇಧಮವಾಪ್ನುಯಾತ್ ॥72॥
ಎಲೈ ರಾಜೇಂದ್ರನೇ, ಅಲ್ಲಿಂದ ಪ್ರಸಿದ್ಧವಾದ ವಸುಧಾರಾ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಗೆ ಹೋಗುವುದರಿಂದಲೇ ಅಶ್ವಮೇಧಯಾಗದ ಫಲವು ಉಂಟಾಗುತ್ತದೆ.
ಸ್ನಾತ್ವಾ ಕುರುಕುಲಶ್ರೇಷ್ಠ ಪ್ರಯತಾತ್ಮಾ ತು ಮಾನವಃ |

ತರ್ಪ್ಯ ದೇವಾನ್ ಪಿತೄಂಶ್ಚೈವ ವಿಷ್ಣುಲೋಕೇ ಮಹೀಯತೇ ॥73॥
ಎಲೈ ಕುರುಕುಲಶ್ರೇಷ್ಠನೇ, ಯಾವ ಮನುಷ್ಯನು ಅಲ್ಲಿ ಜಿತಮನಸ್ಕನಾಗಿ ಹೋಗಿ ಸ್ನಾನಮಾಡಿ ದೇವತೆಗಳಿಗೂ ಮತ್ತು ಪಿತೃಗಳಿಗೂ ತರ್ಪಣವನ್ನು ಕೊಡುತ್ತಾನೆಯೋ ಅವನು ವಿಷ್ಣುಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ತೀರ್ಥೇ ಚಾತ್ರ ಸರಃ ಪುಣ್ಯಂ ವಸೂನಾಂ ಭರತರ್ಷಭ |
ತತ್ರ ಸ್ನಾತ್ವಾ ಚ ಪೀತ್ವಾ ಚ ವಸೂನಾಂ ಸಮ್ಮತೋ ಭವೇತ್ ॥74॥
ಅಲ್ಲಿ ವಸುಗಳ ಒಂದು ಪವಿತ್ರವಾದ ಸರೋವರವಿದೆ. ಅಲ್ಲಿ ಸ್ನಾನವನ್ನು ಮಾಡಿ ಆ ಜಲಪಾನವನ್ನು ಮಾಡುವವನು ವಸುಗಳಿಗೆ ಸಮ್ಮತನಾಗುತ್ತಾನೆ.
ಸಿಂಧೂತ್ತಮಮಿತಿ ಖ್ಯಾತಂ ಸರ್ವಪಾಪಪ್ರಣಾಶನಮ್ |
ತತ್ರ ಸ್ನಾತ್ವಾ ನರಶ್ರೇಷ್ಠ ಲಭೇದ್ಬಹುಸುವರ್ಣಕಮ್ ॥75॥
ಅಲ್ಲಿಯೇ ಸರ್ವಪಾಪಪರಿಹಾರಕವಾದ ಸಿಂಧೂತ್ತಮ ಎಂಬ ಪ್ರಖ್ಯಾತವಾದ ತೀರ್ಥವಿದೆ. ಎಲೈ ನರಶ್ರೇಷ್ಠನೇ, ಅಲ್ಲಿ ಸ್ನಾನಮಾಡುವ ಮಾನವನು ಬಹಳ ಸಂಪತ್ತನ್ನು ಹೊಂದುತ್ತಾನೆ.
ಬ್ರಹ್ಮತುಂಗಂ ಸಮಾಸಾದ್ಯ ಶುಚಿಃ ಪ್ರಯತಮಾನಸಃ |
ಬ್ರಹ್ಮಲೋಕಮವಾಪ್ನೋತಿ ಸುಕೃತೀ ವಿಜರೋ ನರಃ ॥76॥
ಶುಚಿತ್ವ ಮತ್ತು ಮನೋನಿಗ್ರಹವುಳ್ಳ ಯಾವ ಮನುಷ್ಯನು ಬ್ರಹ್ಮತುಂಗಯಾತ್ರೆಯನ್ನು ಮಾಡುತ್ತಾನೆಯೋ ಅವನು ಪುಣ್ಯಶಾಲಿಯಾಗಿ ಜರಾರಹಿತನಾಗಿ ಬ್ರಹ್ಮಲೋಕವನ್ನು ಪಡೆಯುತ್ತಾನೆ.
ಕುಮಾರಿಕಾಣಾಂ ಶಕ್ರಸ್ಯ ತೀರ್ಥಂ ಸಿದ್ಧನಿಷೇವಿತಮ್ |
ತತ್ರ ಸ್ನಾತ್ವಾ ನರಃ ಕ್ಷಿಪ್ರಂ ಸ್ವರ್ಗಲೋಕಮವಾಪ್ನುಯಾತ್ ॥77॥
ರೇಣುಕಾಯಾಶ್ಚ ತತ್ರೈವ ತೀರ್ಥಂ ದೇವರ್ಷಿಸೇವಿತಮ್ |
ತತ್ರ ಸ್ನಾತ್ವಾ ಭವೇದ್ ವಿಪ್ರೋ ನಿರ್ಮಲಶ್ಚಂದ್ರಮಾ ಯಥಾ ॥78॥
ಇಂದ್ರನ ಸನ್ನಿಧಾನವಿರುವ ಸಿದ್ಧಸೇವಿತವಾದ ಕೌಮಾರಿಕಾತೀರ್ಥದಲ್ಲಿ ಸ್ನಾನವನ್ನು ಮಾಡುವ ನರನು ಶೀಘ್ರವಾಗಿ ಸ್ವರ್ಗಲೋಕವನ್ನು ಪಡೆಯುತ್ತಾನೆ. ಅಲ್ಲಿಯೇ ದೇವತೆಗಳಿಂದ ಮತ್ತು ಋಷಿಗಳಿಂದ ಸೇವಿತವಾದ ರೇಣುಕಾತೀರ್ಥವಿದೆ. ಅಲ್ಲಿ ಸ್ನಾನವನ್ನು ಮಾಡುವ ಬ್ರಾಹ್ಮಣನು ಚಂದ್ರನಂತೆ ನಿರ್ಮಲನಾಗುತ್ತಾನೆ.
ಅಥ ಪಂಚನದಂ ಗತ್ವಾ ನಿಯತೋ ನಿಯತಾಶನಃ |
ಪಂಚ ಯಜ್ಞಾನವಾಪ್ನೋತಿ ಕ್ರಮಶೋ ಯೇಽನುಕೀರ್ತಿತಾಃ ॥79॥
ಅಲ್ಲಿಂದ ನಿಯಮಬದ್ಧನೂ ನಿಯತಾಹಾರವುಳ್ಳವನೂ ಆಗಿ ಪಂಚನದ ಕ್ಷೇತ್ರದಲ್ಲಿ ಕ್ರಮವಾಗಿ ಹೋಗುವ ಮಾನವನು ಶಾಸ್ತ್ರಗಳಲ್ಲಿ ಹೇಳಿದ ಪಂಚಯಜ್ಞಗಳ ಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ಭೀಮಾಯಾಃ ಸ್ಥಾನಮುತ್ತಮಮ್ |
ತತ್ರ ಸ್ನಾತ್ವಾ ನ ಯೋನ್ಯಾಂ ವೈ ಭವೇದ್ ಭರತಸತ್ತಮ ॥80॥
ದೇವ್ಯಾಃ ಪುತ್ರೋ ಭವೇದ್ರಾಜನ್ ತಪ್ತಕುಂಡಲಭೂಷಣಃ |
ಗವಾಂ ಶತಸಹಸ್ರಸ್ಯ ಫಲಂ ಚೈವಾಪ್ನುಯಾನ್ಮಹತ್ ॥81॥
ಎಲೈ ಧರ್ಮಜ್ಞನೇ, ಅಲ್ಲಿಂದ ಭೀಮಾನದಿಯ ಶ್ರೇಷ್ಠವಾದ ಸ್ಥಾನಕ್ಕೆ ಹೋಗಬೇಕು. ಎಲೈ ಭರತಸತ್ತಮನೇ, ಅಲ್ಲಿ ಸ್ನಾನವನ್ನು ಮಾಡುವವನು ಪುನಃ (ಭೂಮಿಯಲ್ಲಿ) ಜನ್ಮವನ್ನು ಪಡೆಯುವುದಿಲ್ಲ. ಎಲೈ ರಾಜನೇ ಅವನು ತಪ್ತಕುಂಡಲಧಾರಿಯಾಗಿ ದೇವತೆಗಳ ಉದರದಲ್ಲಿ ಜನಿಸುತ್ತಾನೆ ಮತ್ತು ಒಂದು ಲಕ್ಷ ಗೋದಾನದ ಶ್ರೇಷ್ಠವಾದ ಫಲವನ್ನು ಪಡೆಯುತ್ತಾನೆ.
ಗಿರಿಮುಂಜಂ ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಮ್ |
ಪಿತಾಮಹಂ ನಮಸ್ಕೃತ್ಯ ಗೋಸಹಸ್ರಫಲಂ ಲಭೇತ್ ॥82॥
ಮೂರುಲೋಕಗಳಲ್ಲಿಯೂ ಪ್ರಖ್ಯಾತವಾದ ಗಿರಿಮುಂಜ ಎಂಬ ಕ್ಷೇತ್ರಕ್ಕೆ ಹೋಗಿ ಬ್ರಹ್ಮದೇವರಿಗೆ ನಮಸ್ಕಾರವನ್ನು ಮಾಡುವ ಮನುಷ್ಯನು ಸಹಸ್ರಗೋದಾನದ ಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ವಿಮಲಂ ತೀರ್ಥಮುತ್ತಮಮ್ |
ಅದ್ಯಾಪಿ ಯತ್ರ ದೃಶ್ಯಂತೇ ಮತ್ಸ್ಯಾಃ ಸೌವರ್ಣರಾಜತಾಃ ॥83॥
ಎಲೈ ಧರ್ಮಜ್ಞನೇ, ಅಲ್ಲಿಂದ ಶ್ರೇಷ್ಠವಾದ ವಿಮಲತೀರ್ಥಕ್ಕೆ ಹೋಗಬೇಕು. ಅಲ್ಲಿ ಈಗಲೂ ಸುವಣರ್ಮಯವಾದ ಮತ್ತು ರಜತಮಯವಾದ ಮತ್ಸ್ಯಗಳು ಕಾಣುತ್ತವೆ.
ತತ್ರ ಸ್ನಾತ್ವಾ ನರಶ್ರೇಷ್ಠ ವಾಜಪೇಯಮವಾಪ್ನುಯಾತ್ |
ಸರ್ವಪಾಪವಿಶುದ್ಧಾತ್ಮಾ ಗಚ್ಛೇಚ್ಚ ಪರಮಾಂ ಗತಿಮ್ ॥84॥
ಎಲೈ ನರಶ್ರೇಷ್ಠನೇ, ಅಲ್ಲಿಸ್ನಾನವನ್ನು ಮಾಡಿದರೆ ವಾಜಪೇಯಯಾಗದ ಫಲವು ಉಂಟಾಗುತ್ತದೆ. ಮತ್ತು ಅವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.
ತತೋ ಗಚ್ಛೇತ ವಿಮಲಾಂ ತ್ರಿಷು ಲೋಕೇಷು ವಿಶ್ರುತಾಮ್ |
ಪಶ್ಚಿಮಾಯಾಂ ತು ಸಂಧ್ಯಾಯಾಮುಪಸ್ಪೃಶ್ಯ ಯಥಾವಿಧಿ ॥85॥
ಚರುಂ ನರೇಂದ್ರ ಸಪ್ತಾರ್ಚೇರ್ಯಥಾಶಕ್ತಿ ನಿವೇದಯೇತ್ |
ಪಿತೄಣಾಮಕ್ಷಯಂ ದಾನಂ ಪ್ರವದಂತಿ ಮನೀಷಿಣಃ ॥86॥
ಎಲೈ ರಾಜೇಂದ್ರನೇ, ಅಲ್ಲಿಂದ ಮೂರು ಲೋಕಗಳಲ್ಲಿ ಪ್ರಖ್ಯಾತವಾದ ವಿಮಲಾನದಿಗೆ ಹೋಗಬೇಕು. (ಮಲಾಪಹಾರಿಣೀ ನದಿ)

ಸಾಯಂಕಾಲದ ವೇಳೆಯಲ್ಲಿ ಅಲ್ಲಿವಿಧಿಪೂರ್ವಕವಾಗಿ ಸ್ನಾನವನ್ನು ಮಾಡಿ ಯಥಾಶಕ್ತಿ ಚರು ಹೋಮವನ್ನುಮಾಡಬೇಕು. ಅಲ್ಲಿ ಪಿತೃಗಳಿಗೆ ಮಾಡಿದ ದಾನವು ಅಕ್ಷಯವಾಗುವುದೆಂದು ಜ್ಞಾನಿಗಳು ಹೇಳುತ್ತಾರೆ.
ಋಷಯಃ ಪಿತರೋ ದೇವಾ ಗಂಧರ್ವಾಪ್ಸರಸಾಂ ಗಣಾಃ |
ಗುಹ್ಯಕಾ ಕಿನ್ನರಾ ಯಕ್ಷಾಃ ಸಿದ್ಧಾ ವಿದ್ಯಾಧರಾಸ್ತಥಾ ॥87॥
ರಾಕ್ಷಸಾ ದಿತಿಜಾ ರುದ್ರಾ ಬ್ರಹ್ಮಾ ಚ ಮನುಜಾಧಿಪ |
ನಿಯತಾಂ ಪರಮಾಂ ದೀಕ್ಷಾಮಾಸ್ಥಾಯಾಬ್ದಸಹಸ್ರಕೀಮ್ ॥88॥
ವಿಷ್ಣೋಃ ಪ್ರಸಾದನಂ ಕುರ್ವಂಶ್ಚರುಂ ಚ ಶ್ರಪಯಂಸ್ತಥಾ |
ಸಪ್ತಭಿಃ ಸಪ್ತಭಿರ್ಋಗ್ಭಿಸ್ತುಷ್ಟುವುಃ ಕೇಶಿಸೂದನಮ್ ॥89॥
ಎಲೈ ಮನುಜಾಧಿಪನೇ, ಋಷಿಗಳು ದೇವತೆಗಳು ಗಂಧರ್ವರು ಮತ್ತು ಅಪ್ಸರಗಣಗಳು ಗುಹ್ಯಕರು ಕಿನ್ನರರು ಯಕ್ಷರು ಸಿದ್ಧರು ವಿದ್ಯಾಧರರು ರಾಕ್ಷಸರು ದಿತಿಜರು ರುದ್ರರು ಬ್ರಹ್ಮದೇವರು ಇವರೆಲ್ಲರೂ ಒಂದು ಸಹಸ್ರ ವರ್ಷಗಳಕಾಲ ಶ್ರೇಷ್ಠವಾದ ದೀಕ್ಷೆಯನ್ನು ಹೊಂದಿ ವಿಷ್ಣುವಿನ ಸ್ತೋತ್ರವನ್ನುಮಾಡಿ ಪ್ರಸಾದವನ್ನು ಬಯಸಿ ಚರುವನ್ನು ಸಿದ್ಧಪಡಿಸಿ ಕೇಶಿಸೂದನನಾದ ಹರಿಯನ್ನು ಏಳುಏಳು ಮಂತ್ರಗಳಿಂದ ಸ್ತೋತ್ರಮಾಡಿದರು.
ದದಾವಷ್ಟಗುಣೈಶ್ವರ್ಯಂ ತೇಷಾಂ ತುಷ್ಟಸ್ತು ಕೇಶವಃ |
ಯಥಾಭಿಲಷಿತಾನನ್ಯಾನ್ ಕಾಮಾನ್ ದತ್ವಾ ಮಹೀಪತೇಃ ॥90॥
ತತ್ರೈವಾಂತರ್ದಧೇ ದೇವೋ ವಿದ್ಯುದಭ್ರೇಷು ವೈ ಯಥಾ |
ನಾಮ್ನಾ ಸಪ್ತಋಚಸ್ತೇನ ಖ್ಯಾತೋ ಭರತಸತ್ತಮ ॥91॥
ಗವಾಂ ಶತಸಹಸ್ರೇಣ ರಾಜಸೂಯಶತೇನ ಚ |
ಅಶ್ವಮೇಧಸಹಸ್ರೇಣ ಶ್ರೇಯಾನ್ ಸಪ್ತಋಚೇಶ್ಚರುಃ ॥92॥
ಕೇಶವನು ಅವರಿಗೆ ಸಂತುಷ್ಟನಾಗಿ ಅಷ್ಟೈಶ್ವರ್ಯವನ್ನೂ ಅವರಿಗೆ ಅಭೀಷ್ಟವಾದ ಬೇರೆವರಗಳನ್ನೂ ಕೊಟ್ಟು ಮೋಡಗಳಲ್ಲಿ ಮಿಂಚುಮಾಯವಾಗುವಂತೆ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಎಲೈ ಭರತಶ್ರೇಷ್ಠನೇ, ಆ ಕಾರಣದಿಂದ ಆ ಕ್ಷೇತ್ರವು ಸಪ್ತಋಚ ಎಂದು ಪ್ರಸಿದ್ಧವಾಗಿದೆ. ಆ ಕ್ಷೇತ್ರದಲ್ಲಿಮಾಡಿದ ಒಂದು ಚರುಹೋಮವು ಒಂದು ಲಕ್ಷ ಗೋದಾನಗಳಿಗಿಂತಲೂ ನೂರು ರಾಜಸೂಯಯಾಗಗಳಿಗಿಂತಲೂ ಮತ್ತು ಸಹಸ್ರ ಅಶ್ವಮೇಧ ಯಾಗಗಳಿಗಿಂತಲೂ ಶ್ರೇಷ್ಠವಾದುದು.
ತತೋ ನಿವೃತ್ತೋ ರಾಜೇಂದ್ರ ಭದ್ರಾಪದಮಥಾವಿಶೇತ್ |
ಅರ್ಚಯಿತ್ವಾ ಮಹಾದೇವಮಶ್ವಮೇಧಫಲಂ ಲಭೇತ್ ॥93॥
ಮಣಿಮಂತಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ |
ಏಕರಾತ್ರೋಷಿತೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥94॥
ರಾಜೇಂದ್ರನೇ, ಅಲ್ಲಿಂದ ಹಿಂದಿರುಗಿ ಭದ್ರಾಪದವೆಂಬ ಕ್ಷೇತ್ರಕ್ಕೆ ಬಂದು ಅಲ್ಲಿ ಮಹಾದೇವನನ್ನು ಅರ್ಚಿಸಿದರೆ ಅಶ್ವಮೇಧ ಫಲವುಂಟಾಗುತ್ತದೆ. ಎಲೈ ರಾಜನೇ ಬ್ರಹ್ಮಚರ್ಯದಿಂದಲೂ ಮನಸ್ಸಮಾದಾನದಿಂದಲೂ ಕೂಡಿದವನಾಗಿ ಮಣಿಮಾನ್ ಎಂಬ ಕ್ಷೇತ್ರಕ್ಕೆ ಬಂದು ಅಲ್ಲಿ ಒಂದು ರಾತ್ರಿವಾಸವನ್ನು ಮಾಡಿದರೆ ಅಗ್ನಿಷ್ಟೋಮಫಲವುಂಟಾಗುತ್ತದೆ.
ಅಥ ಗಚ್ಛೇತ ರಾಜೇಂದ್ರ ದೇವಿಕಾಂ ಲೋಕವಿಶ್ರುತಾಮ್ |
ಪ್ರಸೂತಿರ್ಯತ್ರ ವಿಪ್ರಾಣಾಂ ಶ್ರೂಯತೇ ಭರತರ್ಷಭ ॥95॥
ತ್ರಿಶೂಲಪಾಣೇಃ ಸ್ಥಾನಂ ಚ ತ್ರಿಷು ಲೋಕೇಷು ವಿಶ್ರುತಮ್ |
ದೇವಿಕಾಯಾಂ ನರಃ ಸ್ನಾತ್ವಾ ಅಥಾಭ್ಯರ್ಚ್ಯ ಮಹೇಶ್ವರಮ್ ॥96॥
ಯಥಾಶಕ್ತಿ ಚರುಂ ತತ್ರ ನಿವೇದ್ಯ ಭರತರ್ಷಭ |
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಲಭತೇ ಫಲಮ್ ॥97॥
ಎಲೈ ರಾಜೇಂದ್ರನೇ, ಎಲೈ ಭರತರ್ಷಭನೇ, ಅಲ್ಲಿಂದ ಲೋಕವಿಖ್ಯಾತವಾದ ದೇವಿಕಾ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಬ್ರಾಹ್ಮಣರ ಉತ್ಪತ್ತಿಯು ಕೇಳಿಬರುತ್ತದೆ. ಅದು ಮೂರು ಲೋಕಗಳಲ್ಲಿಯೂ ವಿಖ್ಯಾತವಾದ ತ್ರಿಶೂಲಪಾಣಿಯಾದ ರುದ್ರನ ಸ್ಥಾನ. ದೇವಿಕಾತೀರ್ಥದಲ್ಲಿ ಸ್ನಾನವನ್ನುಮಾಡಿ ಮಹೇಶ್ವರನನ್ನು ಪೂಜಿಸಿ ಯಥಾಶಕ್ತಿ ಚರುವನ್ನು ನೈವೇದ್ಯಮಾಡಿದ ನರನು ಸರ್ವಕಾಮ ಸಮೃದ್ಧವಾದ ಯಜ್ಞದ ಫಲವನ್ನು ಪಡೆಯುತ್ತಾನೆ.
ಕಾಮಾಖ್ಯಂ ತತ್ರ ರುದ್ರಸ್ಯ ತೀರ್ಥಂ ದೇವರ್ಷಿಸೇವಿತಮ್ |
ತತ್ರ ಸ್ನಾತ್ವಾ ನರಃ ಕ್ಷಿಪ್ರಂ ಸಿದ್ಧಿಂ ಪ್ರಾಪ್ನೋತಿ ಭಾರತ ॥98॥
ಎಲೈ ಭಾರತನೇ, ಅಲ್ಲಿ ದೇವತೆಗಳಿಂದಲೂ ಮತ್ತು ಋಷಿಗಳಿಂದಲೂ ಸೇವಿತವಾದ ಕಾಮತೀರ್ಥವೆಂಬ ರುದ್ರನ ಸರೋವರವಿದೆ. ಅಲ್ಲಿ ಸ್ನಾನವನ್ನು ಮಾಡುವ ನರನು ಬೇಗ ಸಿದ್ಧಿಯನ್ನು ಪಡೆಯುತ್ತಾನೆ.
ಯಜನಂ ಯಾಜನಂ ಗತ್ವಾ ತಥೈವ ಬ್ರಹ್ಮವಾಲುಕಾಮ್ |
ಪುಷ್ಪನ್ಯಾಸಮುಪಸ್ಪೃಶ್ಯ ನೈನಃ ಶ್ಶೋಮರಣಂ ತರೇತ್ ॥99॥
ಯಜನಯಾಜನ ಮತ್ತು ಬ್ರಹ್ಮವಾಲುಕ (ಪೃಥೂದಕ) ಕ್ಷೇತ್ರಗಳಿಗೆ ಯಾತ್ರೆಗಳನ್ನುಮಾಡುವ ಮನುಷ್ಯನು ಪುನಃ ಮರಣವನ್ನುಂಟುಮಾಡುವ ಪಾಪದಿಂದ ವಿಮುಕ್ತನಾಗುತ್ತಾನೆ. (ಪಾಪದಿಂದ ನಿವೃತ್ತನಾಗುವುದರಿಂದ ಪುನರ್ಜನ್ಮವೂ ಇಲ್ಲ ಪುನರ್ಮರಣವೂ ಇಲ್ಲ.)
ಅರ್ಧಯೋಜನವಿಸ್ತಾರಾ ಪಂಚಯೋಜನಮಾಯತಾ |
ಏತಾಂ ಹಿ ದೇವಿಕಾಮಾಹುಃ ಪುಣ್ಯಾಂ ದೇವರ್ಷಿಸೇವಿತಾಮ್ ॥100॥

ಅರ್ಧಯೋಜನ ಅಗಲ ಮತ್ತು ಐದು ಯೋಜನ ಉದ್ದವಿರುವ ಈ ತೀರ್ಥವನ್ನು ದೇವರ್ಷಿಸೇವಿತವಾದ ಪವಿತ್ರವಾದ ದೇವಿಕಾತೀರ್ಥವೆಂದು ಹೇಳುತ್ತಾರೆ.
ತತೋ ಗಚ್ಚೇತ ಧರ್ಮಜ್ಞ ದೀರ್ಘಸತ್ರಂ ಯಥಾಶ್ರುತಮ್ |
ಯತ್ರ ಬ್ರಹ್ಮಾದಯೋ ದೇವಾಃ ಸಿದ್ಧಾಶ್ಚ ಪರಮರ್ಷಯಃ |
ದೀರ್ಘಸತ್ರಮುಪಾಸಂತೇ ದೀಕ್ಷಿತಾ ನಿಯತವ್ರತಾಃ ॥101॥
ಎಲೈ ಧರ್ಮಜ್ಞನೇ, ಅಲ್ಲಿಂದ ದೀರ್ಘಸತ್ರಕ್ಷೇತ್ರಕ್ಕೆ ಹೋಗಬೇಕು. ಆ ಹೆಸರೇ ತಿಳಿಸುವಂತೆ ಅಲ್ಲಿ ಬ್ರಹ್ಮಾದಿದೇವತೆಗಳು ಸಿದ್ಧರು ಪರಮ ಋಷಿಗಳು ನಿಯತವ್ರತರಾಗಿ ದೀಕ್ಷಿತರಾಗಿ ದೀರ್ಘಸತ್ರವನ್ನು ನಡೆಸಿದರು.
ಗಮನಾದೇವ ರಾಜೇಂದ್ರ ದೀರ್ಘಸತ್ರಮರಿಂದಮ |
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥102॥
ಎಲೈ ರಾಜೇಂದ್ರನೇ, ಎಲೈ ಅರಿಂದಮನೇ, ದೀರ್ಘಸತ್ರಕ್ಕೆ ಹೋಗುವ ಮಾತ್ರದಿಂದಲೇ ಮನುಷ್ಯನಿಗೆ ರಾಜಸೂಯ ಅಶ್ವಮೇಧಯಾಗಗಳ ಫಲವು ದೊರಕುತ್ತದೆ.
ತತೋ ವಿನಶನಂ ಗಚ್ಛೇನ್ನಿಯತೋ ನಿಯತಾಶನಃ |
ಗಚ್ಛತ್ಯಂತರ್ಹಿತಾ ಯತ್ರ ಮೇರುಪೃಷ್ಠೇ ಸರಸ್ವತೀ ॥103॥
ಅಲ್ಲಿಂದ ನಿಯತಬದ್ಧನೂ ನಿಯತಾಹಾರನೂ ಆಗಿ ವಿನಶನಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಮೇರುಪೃಷ್ಠದಲ್ಲಿ ಸರಸ್ವತಿಯು ಅಂತರ್ಹಿತಳಾಗಿ ಹರಿಯುತ್ತಾಳೆ.
ಚಮಸೇ ಚ ಶಿವೋದ್ಭೇದೇ ನಾಗೋದ್ಭೇದೇ ಚ ದೃಶ್ಯತೇ |
ತತ್ರ ಸ್ನಾತ್ವಾ ನರವ್ಯಾಘ್ರ ದ್ಯೋತತೇ ಶಶಿವತ್ ಸದಾ ॥104॥
ಎಲೈ ನರವ್ಯಾಘ್ರನೇ ಆ ಸರಸ್ವತಿಯು ಚಮಸಕ್ಷೇತ್ರದಲ್ಲಿಯೂ ಶಿವೋದ್ಭೇದಕ್ಷೇತ್ರದಲ್ಲಿಯೂ ನಾಗೋದ್ಭೇದ ಕ್ಷೇತ್ರದಲ್ಲಿಯೂ ಪುನಃ ಕಾಣಿಸಿಕೊಳ್ಳುತ್ತಾಳೆ. ಅಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಚಂದ್ರನಂತೆ ಯಾವಾಗಲೂ ಕಾಂತಿಯುಕ್ತನಾಗುತ್ತಾನೆ.
ಗೋಸಹಸ್ರಫಲಂ ಚೈವ ಪ್ರಾಪ್ನುಯಾದ್ ಭರತರ್ಷಭ |
ನಾಗೋದ್ಭೇದೇ ನರಃ ಸ್ನಾತ್ವಾ ನಾಗಲೋಕಮವಾಪ್ನುಯಾತ್ |
ಶಿವೋದ್ಭೇದೇ ನರಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥105॥
ಎಲೈ ಭರತರ್ಷಭನೇ, ನಾಗೋದ್ಭೇದದಲ್ಲಿ ಸ್ನಾನವನ್ನುಮಾಡುವ ಮನುಷ್ಯನು ಗೋಸಹಸ್ರದ ಫಲವನ್ನುಪಡೆದು ನಾಗಲೋಕಕ್ಕೆ ಹೋಗುತ್ತಾನೆ. ಶಿವೋದ್ಭೇದದಲ್ಲಿ ಸ್ನಾನವನ್ನುಮಾಡುವ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ.
ಶತಹ್ರದಂ ಚ ರಾಜೇಂದ್ರ ತೀರ್ಥಮಾಸಾದ್ಯ ದುರ್ಲಭಮ್ |
ಶತರೂಪಪ್ರತಿಚ್ಛನ್ನಾಃ ಪುಷ್ಕರಾ ಯತ್ರ ಭಾರತ ॥106॥
ಸರಸ್ವತ್ಯಾಂ ಮಹಾರಾಜ ಅನುಸಂವತ್ಸರಂ ಹಿ ತೇ |
ಸ್ನಾಯಂತೇ ಭರತಶ್ರೇಷ್ಠ ವೃತ್ತಾಂ ವೈ ಕಾರ್ತಿಕೀಂ ತದಾ ॥107॥
ಕುಮಾರಕೋಟಿಮಾಸಾದ್ಯ ನಿಯತಃ ಕುರುನಂದನ |
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ |
ಗವಾಂ ಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥108॥
ಎಲೈ ರಾಜೇಂದ್ರನೇ, ಎಲೈ ಮಹಾರಾಜನೇ, ಎಲೈ ಕುರುನಂದನನೇ, ಯಾರು ಎಲ್ಲಿ ಸರಸ್ವತಿನದಿಯಲ್ಲಿ ಸುವರ್ಣವರ್ಣೋಪೇತವಾದ ಕಮಲಗಳು ಶೋಭಿಸುತ್ತವೆಯೋ ಅಂತಹ ಶತಹ್ರದ ತೀರ್ಥಕ್ಕೆ ಹೋಗಿ ಪ್ರತಿವರ್ಷವೂ ಕಾರ್ತಿಕಮಾಸದಲ್ಲಿ ಸ್ನಾನವನ್ನು ಮಾಡುತ್ತಾರೆಯೋ ಹಾಗೆಯೇ ಯಾರು ನಿಯತರಾಗಿ ಕುಮಾರಕೋಟಿ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೂ ಮತ್ತು ದೇವತೆಗಳಿಗೂ ತರ್ಪಣವನ್ನು ಕೊಡುತ್ತಾರೆಯೋ ಅವರು ಗೋಮೇಧಯಾಗದ ಫಲವನ್ನು ಪಡೆಯುತ್ತಾರೆ ಮತ್ತು ತಮ್ಮ ಕುಲವನ್ನು ಉದ್ಧರಿಸುತ್ತಾರೆ.
ತತೋ ಗಚ್ಛೇತ ರಾಜೇಂದ್ರ ರುದ್ರಕೋಟಿಂ ಸಮಾಹಿತಃ |
ಪುರಾ ಯತ್ರ ಮಹಾರಾಜ ಮುನಿಕೋಟಿಃ ಸಮಾಗತಾಃ |
ಪ್ರಹರ್ಷೇಣ ಚ ಸಂವಿಷ್ಟಾ ರುದ್ರದರ್ಶನಕಾಂಕ್ಷಯಾ ॥109॥
ಎಲೈ ರಾಜೇಂದ್ರನೇ, ಅಲ್ಲಿಂದ ಸಮಾಧಾನವುಳ್ಳ ಮನಸ್ಸಿನಿಂದ ರುದ್ರಕೋಟಿಗೆ ಹೋಗಬೇಕು. ಎಲೈ ಮಹಾರಾಜನೇ, ಅಲ್ಲಿ ಹಿಂದೆ ಒಂದು ಕೋಟಿಮುನಿಗಳು ರುದ್ರನನ್ನು ನೋಡುವ ಆಸೆಯಿಂದ ಬಂದು ಸಂತೋಷದಿಂದ ಕುಳಿತಿದ್ದರು.
ಅಹಂಪೂರ್ವಮಹಂಪೂರ್ವಂ ದ್ರಕ್ಷ್ಯಾಮಿ ವೃಷಭಧ್ವಜಮ್ |
ಏವಂ ಸಂಪ್ರಸ್ಥಿತಾ ರಾಜನ್ ಋಷಯಃ ಕಿಲ ಭಾರತ ॥110॥
ತತೋ ಯೋಗೇಶ್ವರೇಣಾಪಿ ಯೋಗಮಾಸ್ಥಾಯ ಭೂಪತೇ |
ತೇಷಾಂ ಮನ್ಯುಪ್ರಣಾಶಾರ್ಥಮೃಷೀಣಾಂ ಭಾವಿತಾತ್ಮನಾಮ್ ॥111॥
ಸೃಷ್ಟಾ ಕೋಟೀಸ್ತು ರುದ್ರಾಣಾಮೃಷೀಣಾಮಗ್ರತಃ ಸ್ಥಿತಾಃ |
ಮಯಾ ಪೂರ್ವತರಂ ದೃಷ್ಟ ಇತಿ ತೇ ಮೇನಿರೇ ಪೃಥಕ್ ॥112॥
ಎಲೈ ರಾಜನೇ, ಎಲೈ ಭಾರತನೇ, ನಾನು ರುದ್ರನನ್ನು ಮೊದಲು ನೋಡುವೆನು ನಾನು ರುದ್ರನನ್ನು ಮೊದಲು ನೋಡುವೆನು ಎನ್ನುತ್ತಾ ಎಲ್ಲ ಋಷಿಗಳೂ ಅಲ್ಲಿಗೆ ಹೊರಟುಬಂದಿದ್ದರು. ಆಗ ಯೋಗೇಶ್ವರನಾದ ರುದ್ರನೂ ಕೂಡ ಆ ಭಕ್ತಿಪೂತವಾದ ಮನಸ್ಸುಳ್ಳ ಅವರಿಗೆ ಕೋಪವುಂಟಾಗದಂತೆ ಮಾಡಲು ಒಂದು ಕೋಟಿರೂಪಗಳನ್ನು ತೆಗೆದುಕೊಂಡು ಆ ಋಷಿಗಳ ಎದುರಿಗೆ ನಿಂತನು. ಪ್ರತಿಯೊಬ್ಬ

ಋಷಿಯೂ ನಾನೇ ರುದ್ರನನ್ನು  ಮೊದಲು ನೋಡಿದೆ ಎಂದು ತಿಳಿದನು.
ತೇಷಾಂ ತುಷ್ಟೋ ಮಹಾದೇವೋ ಋಷೀಣಾಂ ಭಾವಿತಾತ್ಮನಾಮ್ |
ಭಕ್ತ್ಯಾ ಪರಮಯಾ ತೇಷಾಂ ವರಂ ರಾಜನ್ ಪ್ರದಿಷ್ಟವಾನ್ |
ಅದ್ಯಪ್ರಭೃತಿ ಯುಷ್ಮಾಕಂ ಧರ್ಮವೃದ್ಧಿರ್ಭವಿಷ್ಯತಿ ॥113॥
ಎಲೈ ರಾಜನೇ, ಆ ಶುದ್ಧಮನಸ್ಸಿನ ಋಷಿಗಳಿಗೆ ಅವರ ಶ್ರೇಷ್ಠವಾದ ಭಕ್ತಿಯಿಂದ ಪ್ರಸನ್ನನಾದ ರುದ್ರನು ಇಂದಿನಿಂದ ನಿಮಗೆ ಯಾವಾಗಲೂ ಧರ್ಮವೃದ್ಧಿಯಾಗುವುದು ಎಂದು ವರವನ್ನು ಕೊಟ್ಟನು.
ತತ್ರ ಸ್ನಾತ್ವಾ ನರವ್ಯಾಘ್ರ ರುದ್ರಕೋಟ್ಯಾಂ ನರಃ ಶುಚಿಃ |
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥114॥
ಎಲೈ ನರವ್ಯಾಘ್ರನೇ, ಯಾವ ಮಾನವನು ಶುಚಿಯಾಗಿ ರುದ್ರಕೋಟಿಯಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಸಂಗಮಂ ಲೋಕವಿಶ್ರುತಮ್ |
ಸರಸ್ವತ್ಯಾಂ ಮಹಾರಾಜ ಉಪಾಸಂತೇ ಜನಾರ್ದನಮ್ ॥115॥
ಯತ್ರ ಬ್ರಹ್ಮಾದಯೋ ದೇವಾ ಋಷಯಃ ಸಿದ್ಧಚಾರಣಾಃ |
ಅಭಿಗಚ್ಛಂತಿ ರಾಜೇಂದ್ರ ಚೈತ್ರಶುಕ್ಲಚತುರ್ದಶೀಮ್ ॥116॥
ತತ್ರ ಸ್ನಾತ್ವಾ ನರವ್ಯಾಘ್ರ ವಿಂದೇದ್ ಬಹುಸುವರ್ಣಕಮ್ |
ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕಂ ಸ ಗಚ್ಛತಿ ॥117॥
ಎಲೈ ರಾಜೇಂದ್ರನೇ, ಅಲ್ಲಿಂದ ಲೋಕವಿಖ್ಯಾತವಾದ ಸರಸ್ವತೀ ಸಂಗಮ ಕ್ಷೇತ್ರಕ್ಕೆ ಹೋಗಬೇಕು. ಎಲೈ ಮಹಾರಾಜನೇ ಅಲ್ಲಿ ಬ್ರಹ್ಮಾದಿದೇವತೆಗಳು ಋಷಿಗಳು ಮತ್ತು ಸಿದ್ಧಚಾರಣರು ಚೈತ್ರಶುದ್ಧ ಚತುರ್ದಶಿಯಂದು ಬಂದು ಜನಾರ್ದನನನ್ನು ಉಪಾಸನೆಮಾಡುತ್ತಾರೆ. ಎಲೈ ನರವ್ಯಾಘ್ರನೇ ಅಲ್ಲಿ ಸ್ನಾನಮಾಡಿದ ಮಾನವನು ಸುವರ್ಣಮಯವಾದ ಮಹಾ ಸಂಪತ್ತನ್ನು ಪಡೆಯುವನು. ಸರ್ವಪಾಪಗಳಿಂದ  ವಿನಿರ್ಮುಕ್ತನಾಗಿ ಬ್ರಹ್ಮಲೋಕವನ್ನು ಪಡೆಯುವನು.
ಋಷೀಣಾಂ ಯತ್ರ ಸತ್ರಾಣಿ ಸಮವಾಪ್ನೋತಿ ಮಾನವಃ |
ತತ್ರಾವಸಾನಮಾಸಾದ್ಯ ಗೋಸಹಸ್ರಫಲಂ ಲಭೇತ್ ॥118॥
ಋಷಿಗಳು ಎಲ್ಲಿ ಸತ್ರಯಾಗವನ್ನು ಸಮಾಪ್ತಿಮಾಡಿದ್ದರೋ ಅಂತಹ ಸತ್ರಾವಸಾನವೆಂಬ ಕ್ಷೇತ್ರಕ್ಕೆ ನರನು ಬಂದು ಒಂದು ಸಹಸ್ರ ಗೋದಾನದ ಫಲವನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ  ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತೆಂಟನೆಯ ಅಧ್ಯಾಯ
(ಪುಲಸ್ತ್ಯರಿಂದ ಭೀಷ್ಮರನ್ನು ಕುರಿತು ಕುರುಕ್ಷೇತ್ರಾದಿ ನಾನಾತೀರ್ಥಗಳ ವರ್ಣನೆ.)
ಪುಲಸ್ತ್ಯಃ
ತತೋ ಗಚ್ಛೇತ ರಾಜೇಂದ್ರ ಕುರುಕ್ಷೇತ್ರಮಭಿಷ್ಟುತಮ್ |
ಪಾಪೇಭ್ಯೋ ವಿಪ್ರಮುಚ್ಯಂತೇ ತದ್ಗತಾಃ ಸರ್ವಜಂತವಃ ॥1॥
ರಾಜೇಂದ್ರನೇ, ಅಲ್ಲಿಂದ ಬಹಳ ಪ್ರಶಂಸಿಲ್ಪಡುವ ಕುರುಕ್ಷೇತ್ರಕ್ಕೆ ಹೋಗಬೇಕು. ಕುರುಕ್ಷೇತ್ರದಲ್ಲಿ ಇರುವ ಎಲ್ಲ ಪ್ರಾಣಿಗಳೂ ಪಾಪಗಳಿಂದ ನಿರ್ಮುಕ್ತವಾಗುತ್ತವೆ.
ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ |
ಯ ಏವಂ ಸತತಂ ಬ್ರೂಯಾತ್ ಸೋಽಪಿ ಪಾಪೈಃ ಪ್ರಮುಚ್ಯತೇ ॥
ಯಾವನು ನಾನು ಕುರುಕ್ಷೇತ್ರಕ್ಕೆ ಹೋಗುವೆನು ಕುರುಕ್ಷೇತ್ರದಲ್ಲಿ ವಾಸಮಾಡುವೆನು ಎಂದು ಈ ರೀತಿಯಾಗಿ ಸತತವಾಗಿ ಹೇಳುತ್ತಾನೋ ಅವನೂ ಸಹ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಪಾಂಸವೋಪಿ ಕುರುಕ್ಷೇತ್ರಾದ್ ವಾಯುನಾ ಸಮುದೀರಿತಾಃ |
ಅಪಿ ದುಷ್ಕೃತಕರ್ಮಾಣಂ ನಯಂತಿ ಪರಮಾಂ ಗತಿಮ್ ॥3॥
ಕುರುಕ್ಷೇತ್ರದಿಂದ ಎಬ್ಬಿಸಿ ವಾಯುವುತಂದ ಧೂಳಿನಕಣಗಳು ಸಹ ದುಷ್ಕರ್ಮವನ್ನು ಮಾಡಿದವನಿಗೆ ಶ್ರೇಷ್ಠವಾದ ಗತಿಯನ್ನು ಕೊಡುತ್ತವೆ.
ದಕ್ಷಿಣೇನ ಸರಸ್ವತ್ಯಾಂ ದೃಷದ್ವತ್ಯುತ್ತರೇಣ ಚ |
ಯೇ ವಸಂತಿ ಕುರುಕ್ಷೇತ್ರೇ ತೇ ವಸಂತಿ ತ್ರಿವಿಷ್ಟಪೇ ॥4॥
ಯಾರು ಸರಸ್ವತೀನದಿಯ ದಕ್ಷಿಣದಲ್ಲಿ ಮತ್ತು ದೃಷದ್ವತೀನದಿಯ ಉತ್ತರದಲ್ಲಿ ಇರುವ ಕುರುಕ್ಷೇತ್ರದಲ್ಲಿ ವಾಸಮಾಡುತ್ತಾರೋ ಅವರು ಸ್ವರ್ಗದಲ್ಲಿಯೇ ವಾಸಮಾಡುತ್ತಾರೆ.
ತತ್ರ ಮಾಸಂ ವಸೇದ್ವೀರಃ ಸರಸ್ವತ್ಯಾಂ ಯುಧಾಂವರ |
ಯತ್ರ ಬ್ರಹ್ಮಾದಯೋ ದೇವಾ ಋಷಯಃ ಸಿದ್ಧಚಾರಣಾಃ ॥5॥
ಗಂಧರ್ವಾಪ್ಸರಸೋ ಯಕ್ಷಾಃ ಪನ್ನಗಾಶ್ಚ ಮಹೀಪತೇ |

ಬ್ರಹ್ಮಕ್ಷೇತ್ರಂ ಮಹಾಪುಣ್ಯಮಭಿಗಚ್ಛಂತಿ ಭಾರತ ॥6॥
ಎಲೈ ಯುದ್ಧಮಾಡುವವರಲ್ಲಿ ಶ್ರೇಷ್ಠನೇ, ಮಹೀಪತಿಯೇ, ಭಾರತನೇ, ಸರಸ್ವತೀನದಿಯ ಬಳಿ ಧೀರನಾದವನು ಒಂದು ತಿಂಗಳು ವಾಸವನ್ನು ಮಾಡಬೇಕು. ಆ ಮಹಾಪುಣ್ಯಪ್ರದವಾದ ಬ್ರಹ್ಮಕ್ಷೇತ್ರವೆಂದು ಕರೆಯಲ್ಪಡುವ ಸ್ಥಾನಕ್ಕೆ ಬ್ರಹ್ಮಾದಿದೇವತೆಗಳು ಋಷಿಗಳು ಸಿದ್ಧಚಾರಣರು ಗಂಧರ್ವರು  ಅಪ್ಸರೆಯರು ಯಕ್ಷರು ಮತ್ತು ಸರ್ಪಗಳು ಬರುತ್ತಾರೆ.
ಮನಸಾऽಪ್ಯಭಿಕಾಮಸ್ಯ ಕುರುಕ್ಷೇತ್ರಂ ಯುಧಾಂವರ |
ಪಾಪಾನಿ ವಿಪ್ರಣಶ್ಯಂತಿ ಸ್ವರ್ಗಲೋಕಂ ಚ ಗಚ್ಛತಿ ॥7॥
ಯೋಧರಲ್ಲಿ  ಶ್ರೇಷ್ಠನಾದವನೇ, ಕುರುಕ್ಷೇತ್ರವನ್ನು ಮನಸ್ಸಿನಲ್ಲಿಯೇ ಆಸೆಪಟ್ಟರೂ ಸಹ ಅವನ ಪಾಪಗಳು ನಾಶವಾಗುತ್ತವೆ. ಮತ್ತು ಅವನು ಸ್ವರ್ಗಲೋಕಕ್ಕೆ ಹೋಗುತ್ತಾನೆ.
ಗತ್ವಾ ಹಿ ಶ್ರದ್ಧಯಾ ಯುಕ್ತಃ ಕುರುಕ್ಷೇತ್ರಂ ಕುರೂದ್ವಹ |
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥8॥
ಎಲೈ ಕುರೂದ್ವಹನೇ, ಯಾವ ಮಾನವನು ಶ್ರದ್ಧೆಯಿಂದಲೇ ಕುರುಕ್ಷೇತ್ರಕ್ಕೆ ಹೋಗುತ್ತಾನೋ ಅವನಿಗೆ
ರಾಜಸೂಯಾಶ್ವಮೇಧಯಾಗಗಳ ಫಲವು ಉಂಟಾಗುತ್ತದೆ.
ತತಶ್ಚ ಮಂದುಕಂ ರಾಜನ್ ದ್ವಾರಪಾಲಂ ಮಹಾಬಲಮ್ |
ಯಕ್ಷಂ ಸಮಭಿವಾದ್ಯೈವ ಗೋಸಹಸ್ರಫಲಂ ಲಭೇತ್ ॥9॥
ಎಲೈ ರಾಜನೇ, ಅಲ್ಲಿಂದ ಮಂದುಕಕ್ಷೇತ್ರಕ್ಕೆ ಹೋಗಿ ಅಲ್ಲಿ ಮಹಾಬಲನಾದ ಯಕ್ಷನನ್ನು ನಮಸ್ಕರಿಸಿದರೆ ಸಹಸ್ರಗೋದಾನದ ಫಲವು ಉಂಟಾಗುತ್ತದೆ.
ತತೋ ಗಚ್ಛೇತ ಧರ್ಮಜ್ಞ  ವಿಷ್ಣೋಃ ಸ್ಥಾನಮನುತ್ತಮಮ್ |
ಸತತಂ ನಾಮ ಧರ್ಮಜ್ಞ ಯತ್ರ ಸನ್ನಿಹಿತೋ ಹರಿಃ ॥10॥
ಎಲೈ ಧರ್ಮಜ್ಞನೇ, ಅಲ್ಲಿಂದ ವಿಷ್ಣುವಿನ ಶ್ರೇಷ್ಠ ಸ್ಥಾನವಾದ ಸತತ ಎಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಹರಿಯ ಸನ್ನಿಧಾನವಿದೆ.
ತತ್ರ ಸ್ನಾತ್ವಾऽರ್ಚಯಿತ್ವಾ ಚ ತ್ರಿಲೋಕಪ್ರಭವಂ ಹರಿಮ್ |
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಸ ಗಚ್ಛತಿ ॥11॥
ಅಲ್ಲಿ ಸ್ನಾನವನ್ನು ಮಾಡಿ ತ್ರಿಲೋಕಸೃಷ್ಟಿಕರ್ತನಾದ ಹರಿಯನ್ನು ಪೂಜಿಸಿದವನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಅವನು ವಿಷ್ಣುಲೋಕವನ್ನು ಹೊಂದುತ್ತಾನೆ.
ತತಃ ಪರಿಪ್ಲವಂ ಗಚ್ಛೇತ್ ತೀರ್ಥಂ ತ್ರೈಲೋಕ್ಯವಿಶ್ರುತಮ್ |
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಮಾಪ್ನೋತಿ ಮಾನವಃ |
ಪೃಥಿವ್ಯಾಸ್ತೀರ್ಥಮಾಸಾದ್ಯ ಗೋಸಹಸ್ರಮವಾಪ್ನುಯಾತ್ ॥12॥
ಅನಂತರ ಮೂರುಲೋಕದಲ್ಲಿಯೂ ಪ್ರಸಿದ್ಧವಾದ ಪರಿಪ್ಲವತೀರ್ಥಕ್ಕೆ ಹೋಗಬೇಕು. ಅಲ್ಲಿ ಮನುಷ್ಯನು ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳ ಫಲವನ್ನು ಹೊಂದುತ್ತಾನೆ. ಪೃಥಿವೀತೀರ್ಥಕ್ಕೆ ಹೋದ ಮಾನವನು ಸಹಸ್ರಗೋದಾನದ ಫಲವನ್ನು ಹೊಂದುತ್ತಾನೆ.
ತತಃ ಶಾಲೂಕಿನೀಂ ಗತ್ವಾ ತೀರ್ಥಸೇವೀ ನರಾಧಿಪ |
ದಶಾಶ್ವಮೇಧೇ ಸ್ನಾತ್ವಾ ಚ ತದೇವ ಲಭತೇ ಫಲಮ್ ॥13॥
ಎಲೈ ರಾಜನೇ, ತೀರ್ಥಯಾತ್ರೆಯನ್ನು ಮಾಡುವ ಮನುಷ್ಯನು ಅಲ್ಲಿಂದ ಶಾಲೂಕಿನೀನದಿಗೆ  ಹೋಗಿ ದಶಾಶ್ವಮೇಧಘಟ್ಟದಲ್ಲಿ ಸ್ನಾನವನ್ನು ಮಾಡಿದರೆ ಅದೇ ದಶಾಶ್ವಮೇಧಗಳ ಫಲವನ್ನು ಪಡೆಯುತ್ತಾನೆ.
ಸರ್ಪದರ್ವೀಂ ಸಮಾಸಾದ್ಯ ನಾಗಾನಾಂ ತೀರ್ಥಮುತ್ತಮಮ್ |
ಅಗ್ನಿಷ್ಟೋಮಮವಾಪ್ನೋತಿ ನಾಗಲೋಕಂ ಚ ಗಚ್ಛತಿ ॥14॥
ನಾಗಗಳ ತೀರ್ಥವಾದ ಸರ್ಪದರ್ವೀತೀರ್ಥಕ್ಕೆ ಹೋದವನು ಅಗ್ನಿಷ್ಟೋಮಫಲವನ್ನು ಹೊಂದಿ ನಾಗಲೋಕವನ್ನು ಪಡೆಯುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ದ್ವಾರಪಾಲಮರಂದುಕಮ್ |
ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥15॥
ಎಲೈ ಧರ್ಮಜ್ಞನೇ, ಅಲ್ಲಿಂದ ಅರಂದುಕವೆಂಬ ದ್ವಾರಪಾಲಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ  ಒಂದು ರಾತ್ರಿಯಿದ್ದರೆ ಸಹಸ್ರಗೋದಾನದ ಫಲವು ಉಂಟಾಗುತ್ತದೆ.
ತತಃ ಪಂಚವಟಂ ಗತ್ವಾ ನಿಯತೋ ನಿಯತಾಶನಃ |
ಕೋಟಿತೀರ್ಥಮುಪಸ್ಪೃಶ್ಯ ಹಯಮೇಧಫಲಂ ಲಭೇತ್ |
ಅಶ್ವಿನೋಸ್ತೀರ್ಥಮಾಸಾದ್ಯ ರೂಪವಾನಭಿಜಾಯತೇ ॥16॥
ನಿಯಮಬದ್ಧನಾಗಿ ನಿಯತಆಹಾರವುಳ್ಳವನಾಗಿ ಅಲ್ಲಿಂದ ಪಂಚವಟಕ್ಕೆ ಹೋಗಿ ಕೋಟಿತೀರ್ಥದಲ್ಲಿ  ಸ್ನಾನವನ್ನು ಮಾಡಿದರೆ ಅಶ್ವಮೇಧಯಾಗದ ಫಲವು ಉಂಟಾಗುತ್ತದೆ. ಅಶ್ವಿನೀತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ಮನುಷ್ಯನು ರೂಪಸಂಪನ್ನನಾಗುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ವಾರಾಹಂ ತೀರ್ಥಮುತ್ತಮಮ್ |
ವಿಷ್ಣುರ್ವಾರಾಹರೂಪೇಣ ಪೂರ್ವಂ ಯತ್ರ ಸ್ಥಿತೋ ವಿಭುಃ |
ತತ್ರ ಸ್ನಾತ್ವಾ ನರವ್ಯಾಘ್ರ ಅಗ್ನಿಷ್ಟೋಮಫಲಂ ಲಭೇತ್ ॥17॥
ಎಲೈ ಧರ್ಮಜ್ಞನೇ, ಅಲ್ಲಿಂದ ಶ್ರೇಷ್ಠವಾದ ವರಾಹತೀರ್ಥಕ್ಕೆ ಹೋಗಬೇಕು. ಅಲ್ಲಿ ವಿಭುವಾದ ವಿಷ್ಣುವು ಹಿಂದೆ ವರಾಹರೂಪವನ್ನು ಧರಿಸಿ ವಾಸಿಸಿದ್ದನು. ನರವ್ಯಾಘ್ರನೇ ಅಲ್ಲಿ ಸ್ನಾನವನ್ನು ಮಾಡಿದರೆ ಅಗ್ನಿಷ್ಟೋಮಯಾಗದ ಫಲವು ಉಂಟಾಗುತ್ತದೆ.

ತತೋ ಜಯಂತ್ಯಾಂ ರಾಜೇಂದ್ರ ಸೋಮತೀರ್ಥಂ ಸಮಾವಿಶೇತ್ |
ಸ್ನಾತ್ವಾ ಫಲಮವಾಪ್ನೋತಿ ರಾಜಸೂಯಸ್ಯ ಮಾನವಃ |
ಏಕಹಂಸೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥18॥
ಎಲೈ ರಾಜೇಂದ್ರನೇ, ಅಲ್ಲಿಂದ ಜಯಂತಿಯಲ್ಲಿ (ಜಯಂತಿ ನದಿಯಲ್ಲಿ) ಇರುವ ಸೋಮತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನವನ್ನು ಮಾಡುವ ಮನುಷ್ಯನು ರಾಜಸೂಯಯಾಗದ ಫಲವನ್ನು ಹೊಂದುತ್ತಾನೆ. ಏಕಹಂಸತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ಮನುಷ್ಯನಿಗೆ ಸಹಸ್ರಗೋದಾನದ ಫಲವು ಉಂಟಾಗುತ್ತದೆ.
ಕೃತಶೌಚಂ ಸಮಾಸಾದ್ಯ ತೀರ್ಥಸೇವೀ ಕುರೂದ್ವಹ |
ಪೌಂಡರೀಕಮವಾಪ್ನೋತಿ ಕೃತಶೌಚೋ ಭವೇನ್ನರಃ ॥19॥
ಎಲೈ ಕುರೂದ್ವಹನೇ, ತೀರ್ಥಯಾತ್ರೆಯನ್ನು ಮಾಡುವ ಮಾನವನು ಕೃತಶೌಚಕ್ಷೇತ್ರಕ್ಕೆ ಹೋದರೆ ಪುಂಡರೀಕಯಾಗಫಲವನ್ನು ಹೊಂದುತ್ತಾನೆ. ತಾನೂ ಶುಚಿಯಾಗುತ್ತಾನೆ.
ತತೋ ಮುಂಜವಟಂ ನಾಮ ಮಹಾದೇವಸ್ಯ ಧೀಮತಃ |
ತತ್ರೋಷ್ಯ ರಜನೀಮೇಕಾಂ ಗಾಣಪತ್ಯಮವಾಪ್ನುಯಾತ್ ॥20॥
ಅಲ್ಲಿಂದ ಮೇಧಾವಿಯಾದ ಮಹಾದೇವನ ಕ್ಷೇತ್ರವಾದ ಮುಂಜವಟ ಎಂಬಲ್ಲಿಗೆ ಹೋಗಿ ಅಲ್ಲಿ ಒಂದು ರಾತ್ರಿವಾಸಿಸಿದರೆ ಈಶ್ವರನ ಗಣಗಳ ಒಡೆತನವನ್ನು ಹೊಂದುತ್ತಾನೆ.
ತತ್ರೈವ ಚ ಮಹಾರಾಜ ಯಕ್ಷೀ ಲೋಕಪರಿಶ್ರುತಾ |
ತಾಂ ಚಾಭಿಗಮ್ಯ ರಾಜೇಂದ್ರ ಪುಣ್ಯಲೋಕಾನವಾಪ್ನುಯಾತ್ ॥21॥
ಕುರುಕ್ಷೇತ್ರಸ್ಯ ತದ್ ದ್ವಾರಂ ವಿಶ್ರುತಂ ಭರತರ್ಷಭ |
ಮಹಾರಾಜನೇ, ಅಲ್ಲಿಯೇ ಲೋಕಪ್ರಸಿದ್ಧಳಾದ ಒಬ್ಬಯಕ್ಷಿಯಿದ್ದಾಳೆ. ರಾಜೇಂದ್ರನೇ, ಅವಳದರ್ಶನದಿಂದ ಪುಣ್ಯಲೋಕಗಳನ್ನು ಹೊಂದುತ್ತಾನೆ. ಭರತಶ್ರೇಷ್ಠನೇ, ಮುಂಜವಟವು ಕುರುಕ್ಷೇತ್ರದ ದ್ವಾರವೆಂದು ಪ್ರಸಿದ್ಧವಾಗಿದೆ.
ಪ್ರದಕ್ಷಿಣಮುಪಾವೃತ್ಯ ತೀರ್ಥಸೇವೀ ಸಮಾಹಿತಃ ॥22॥
ಸಮ್ಮಿತೇ ಪುಷ್ಕರಾಣಾಂ ಚ ಸ್ನಾತ್ವಾಽರ್ಚ್ಯ ಪಿತೃದೇವತಾಃ |
ಜಾಮದಗ್ನ್ಯೇನ ರಾಮೇಣ ಆಹೃತಾಃ ಸುಮಹಾತ್ಮನಾ ॥23॥
ಕೃತಕೃತ್ಯೋ ಭವೇದ್ ರಾಜನ್ನಶ್ವಮೇಧಂ ಚ ವಿಂದತಿ |
ತತೋ ರಾಮಹ್ರದಾನ್ ಗಚ್ಛೇತ್ ತೀರ್ಥಸೇವೀ ನರಾಧಿಪ ॥24॥
ತತ್ರ ರಾಮೇಣ ರಾಜೇಂದ್ರ ತಪಸಾ ದೀಪ್ತತೇಜಸಾ |
ಕ್ಷತ್ರಮುತ್ಸಾದ್ಯ ವೀರ್ಯೇಣ ಹ್ರದಾಃ ಪಂಚ ನಿವೇಶಿತಾಃ |
ಪೂರಯಿತ್ವಾ ನರವ್ಯಾಘ್ರ ರುಧಿರೇಣೇತಿ ನಃ ಶ್ರುತಿಃ ॥25॥
ತೀರ್ಥಯಾತ್ರೆಯನ್ನು ಮಾಡುವವನು ಅಲ್ಲಿಂದ ಪ್ರದಕ್ಷಿಣಾಕಾರವಾಗಿ ಬಂದು ಮನಸ್ಸಮಾಧಾನದಿಂದ ಕೂಡಿದವನಾಗಿ ಪುಷ್ಕರಗಳಿಗೆ ಸಮಾನವಾದ ಮಹಾತ್ಮನಾದ ಜಮದಗ್ನಿಪುತ್ರನಾದ ಪರಶುರಾಮನಿಂದ ಕೃತವಾದ ತೀರ್ಥದಲ್ಲಿ ಸ್ನಾನವನ್ನುಮಾಡಿ ಪಿತೃದೇವತೆಗಳನ್ನು ಅರ್ಚಿಸಿದರೆ ಕೃತಕೃತ್ಯನಾಗುತ್ತಾನೆ. ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ. ಎಲೈ ರಾಜನೇ ಅಲ್ಲಿಂದ ತೀರ್ಥಸೇವಿಯಾದ ಮಾನವನು ರಾಮಹ್ರದಗಳಿಗೆ (ಪರಶುರಾಮ ಸರೋವರಗಳಿಗೆ) ಹೋಗಬೇಕು. ಎಲೈ ರಾಜೇಂದ್ರನೇ, ಅಲ್ಲಿ ಮಹಾಪರಾಕ್ರಮದಿಂದಲೂ ತಪಸ್ಸಿನಿಂದಲೂ ಯುಕ್ತನಾಗಿದ್ದ ಪರಶುರಾಮನು ತನ್ನ ವೀರ್ಯದಿಂದ ಕ್ಷತ್ರಿಯ ಕುಲವನ್ನು ಸಂಹರಿಸಿ ಐದುಸರೋವರಗಳನ್ನು ಮಾಡಿ ಅವುಗಳನ್ನು ಕ್ಷತ್ರಿಯರಕ್ತದಿಂದ ತುಂಬಿದನೆಂದು ನಾವು ಕೇಳಿದ್ದೇವೆ.
ಪಿತರಸ್ತರ್ಪಿತಾಃ ಸರ್ವೇ ತಥೈವ ಚ ಪಿತಾಮಹಾಃ |
ತತಸ್ತೇ ಪಿತರಃ ಪ್ರೀತಾ ರಾಮಮೂಚುರ್ಮಹೀಪತೇ ॥26॥
ಆ ರಕ್ತದಿಂದ ಪರಶುರಾಮನು ತನ್ನ ಎಲ್ಲಾ ಪಿತೃಗಳಿಗೂ ಮತ್ತು ಪಿತಾಮಹರಿಗೂ ತರ್ಪಣವನ್ನು ಕೊಟ್ಟನು. ಎಲೈ ರಾಜನೇ ಸಂತುಷ್ಟರಾದ ಆ ಪಿತೃಗಳು ಆಗ ಪರಶುರಾಮನನ್ನು ಕುರಿತು ಹೇಳಿದರು.
ರಾಮ ರಾಮ ಮಹಾಭಾಗ ಪ್ರೀತಾಃ ಸ್ಮ ತವ ಭಾರ್ಗವ |
ಅನಯಾ ಪಿತೃಭಕ್ತ್ಯಾ ಚ ವಿಕ್ರಮೇಣ ಚ ತೇ ವಿಭೋ |
ವರಂ ವೃಣೀಷ್ವ ಭದ್ರಂ ತೇ ಯದೀಚ್ಛಸಿ ಮಹಾದ್ಯುತೇ ॥27॥
ಎಲೈ ಭಾರ್ಗವನಾದ ಮಹಾನುಭಾವನಾದ ಪರಶುರಾಮನೇ, ನಿನ್ನ ಈ ಪಿತೃಭಕ್ತಿಯಿಂದಲೂ ಮತ್ತು ನಿನ್ನ ಪರಾಕ್ರಮದಿಂದಲೂ ನಾವು ನಿನಗೆ ಸಂತುಷ್ಟರಾಗಿದ್ದೇವೆ. ವಿಭುವೇ, ನಿನಗೆ ಮಂಗಳವಾಗಲಿ. ಮಹಾಕಾಂತಿಯುಕ್ತನಾದವನೇ, ನಿನಗೆ ಬೇಕಾದ ವರವನ್ನು ಕೇಳು.
ಏವಮುಕ್ತಸ್ತು ರಾಜೇಂದ್ರ ರಾಮಃ ಪ್ರಹರತಾಂ ವರಃ |
ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಪಿತೄನ್ ಸ್ವಾನ್ ಗಗನೇ ಸ್ಥಿತಾನ್ ॥
ರಾಜೇಂದ್ರನೇ, ತನ್ನ ಪಿತೃಗಳಿಂದ ಹೀಗೆ ಹೇಳಲ್ಪಟ್ಟ ಪ್ರಹಾರವನ್ನು ಮಾಡುವವರಲ್ಲಿ ಶ್ರೇಷ್ಠನಾದ ಪರಶುರಾಮನು ಕೈಗಳನ್ನು ಮುಗಿದು ಗಗನದಲ್ಲಿರುವ ತನ್ನ ಪಿತೃಗಳನ್ನು ಕುರಿತು ಮಾತನಾಡಿದನು.
ಭವಂತೋ ಯದಿ ಮೇ ಪ್ರೀತಾ ಯದ್ಯನುಗ್ರಾಹ್ಯತಾ ಮಯಿ |
ಪಿತೃಪ್ರಸಾದಾದಿಚ್ಛೇಯಂ ತಪಸಾಪ್ಯಾಯನಂ ಪುನಃ ॥29॥
ನೀವು ನನಗೆ ಪ್ರಸನ್ನರಾಗಿದ್ದರೆ ನನಗೆ ಅನುಗ್ರಹಮಾಡುವ ಅಭಿಪ್ರಾಯವನ್ನು ಹೊಂದಿದ್ದರೆ ಪಿತೃಗಳಾದ ನಿಮ್ಮ ಅನುಗ್ರಹದಿಂದ

ನಾನು ಪುನಃ ನನ್ನ ತಪಸ್ಸಿನ ವೃದ್ಧಿಯನ್ನೇ ಬಯಸುತ್ತೇನೆ.
ಯಚ್ಚ ರೋಷಾಭಿಭೂತೇನ ಕ್ಷತ್ರಮುತ್ಸಾದಿತಂ ಮಯಾ |
ತತಸ್ತು ಪಾಪಾನ್ಮುಚ್ಯೇಯಂ ಯುಷ್ಮಾಕಂ ತೇಜಸಾ ಹ್ಯಹಮ್ |
ಹ್ರದಾಶ್ಚ ತೀರ್ಥಭೂತಾ ಮೇ ಭವೇಯುರ್ಭುವಿ ವಿಶ್ರುತಾಃ ॥30॥
ನಾನು ರೋಷಕ್ಕೆ ವಶನಾಗಿ ಕ್ಷತ್ರಿಯಕುಲವನ್ನು ಸಂಹರಿಸಿದೆ. ನಿಮ್ಮ ತಪೋಬಲದಿಂದ (ತೇಜಸ್ಸಿನಿಂದ)ನಾನು ಆ ಪಾಪದಿಂದ ಮುಕ್ತನಾಗಬೇಕು. ನಾನು ನಿರ್ಮಿಸಿದ ಈ ಸರೋವರಗಳು ಭೂಮಿಯಲ್ಲಿ ಪ್ರಖ್ಯಾತವಾದ ತೀರ್ಥಗಳಾಗಬೇಕು.
ತೇ ತಚ್ಛ್ರುತ್ವಾ ಶುಭಂ ವಾಕ್ಯಂ ರಾಮಸ್ಯ ಪಿತರಸ್ತದಾ |
ಪ್ರತ್ಯೂಚುಃ ಪರಮಪ್ರೀತಾ ರಾಮಂ ಹರ್ಷಸಮನ್ವಿತಾಃ ॥31॥
ಆಗ ಪರಶುರಾಮನ ಪಿತೃಗಳು ರಾಮನ ಆ ಶುಭವಾಕ್ಯವನ್ನು ಕೇಳಿ ಬಹಳ ಸಂತೋಷಗೊಂಡವರಾಗಿ ಪರಶುರಾಮನನ್ನು ಕುರಿತು ಹರ್ಷದಿಂದ ಮಾತನಾಡಿದರು.
ತಪಸ್ತೇ ವರ್ಧತಾಂ ಭೂಯಃ ಪಿತೃಭಕ್ತ್ಯಾ ವಿಶೇಷತಃ |
ಯಚ್ಚ ರೋಷಾಭಿಭೂತೇನ ಕ್ಷತ್ರಮುತ್ಸಾದಿತಂ ತ್ವಯಾ ॥32॥
ತತಶ್ಚ ಪಾಪಾನ್ಮುಕ್ತಸ್ತ್ವಂ ನಿಹತಾಸ್ತೇ ಸ್ವಕರ್ಮಭಿಃ |
ಹ್ರದಾಶ್ಚ ತವ ತೀರ್ಥತ್ವಂ ಗಮಿಷ್ಯಂತಿ ನ ಸಂಶಯಃ ॥33॥
ನಿನ್ನ ತಪಸ್ಸು ಪುನಃ ವೃದ್ಧಿಯನ್ನು ಹೊಂದಲಿ. ವಿಶೇಷವಾದ ಪಿತೃಭಕ್ತಿಯಿಂದ ನೀನು ರೋಷಕ್ಕೆ ವಶನಾಗಿ ಕ್ಷತ್ರಿಯರನ್ನು ಸಂಹಾರಮಾಡಿದ ಪಾಪದಿಂದ ನೀನು ಮುಕ್ತನಾಗಿದ್ದೀಯೆ. ಆ ಕ್ಷತ್ರಿಯರು ತಮ್ಮ ಕರ್ಮಗಳಿಂದಲೇ ಮೃತರಾಗಿದ್ದಾರೆ. ನೀನು ನಿರ್ಮಿಸಿದ ಸರೋವರಗಳು ನಿಸ್ಸಂಶಯವಾಗಿ ಪವಿತ್ರವಾದ ತೀರ್ಥಗಳಾಗುವವು.
ಹ್ರದೇಷ್ವೇತೇಷು ಯಃ ಸ್ನಾತ್ವಾ ಪಿತೄನ್ ಸಂತರ್ಪಯಿಷ್ಯತಿ |
ಪಿತರಸ್ತತ್ರ ವೈ ಪ್ರೀತಾ ದಾಸ್ಯಂತಿ ಭುವಿ ದುರ್ಲಭಮ್ |
ಸಮೀಪ್ಸಿತಂ ಮನಃಕಾಮಂ ಸ್ವರ್ಗಲೋಕಂ ಚ ಶಾಶ್ವತಮ್ ॥34॥
ಯಾವ ಮನುಷ್ಯನು ಈ ಸರೋವರಗಳಲ್ಲಿ ಸ್ನಾನಮಾಡಿ ತನ್ನ ಪಿತೃಗಳಿಗೆ ತರ್ಪಣವನ್ನು ಕೊಡುವನೋ ಅವನಿಗೆ ಅವನ ಪಿತೃಗಳು ಪ್ರಸನ್ನರಾಗಿ ಅವನಿಗೆ ಇಷ್ಟವಾದ ದುರ್ಲಭವಾದ ಮನೋಭೀಷ್ಟವನ್ನು ಕೊಡುವರು ಮತ್ತು ಅವನು ಶಾಶ್ವತವಾದ ಸ್ವರ್ಗಲೋಕವನ್ನು ಪಡೆಯುವನು.
ಏವಂ ದತ್ತ್ವಾ ವರಾನ್ ರಾಜನ್ ರಾಮಸ್ಯ ಪಿತರಸ್ತದಾ |
ಆಮಂತ್ರ್ಯ ಭಾರ್ಗವಂ ಪ್ರೀತ್ಯಾ ತತ್ರೈವಾಂತರ್ದಧುಸ್ತದಾ ॥35॥
ಎಲೈ ರಾಜನೇ, ಆ ಪಿತೃಗಳು ಪರಶುರಾಮನಿಗೆ ಹೀಗೆ ವರಗಳನ್ನು ಕೊಟ್ಟು ಅವನ ಅನುಜ್ಞೆಯನ್ನು ಪಡೆದು ಅಲ್ಲಿಯೇ ಅದೃಶ್ಯರಾದರು.
ಏವಂ ರಾಮಹ್ರದಾಃ ಪುಣ್ಯಾ ಭಾರ್ಗವಸ್ಯ ಮಹಾತ್ಮನಃ |
ಸ್ನಾತ್ವಾ ಹ್ರದೇಷು ರಾಮಸ್ಯ ಬ್ರಹ್ಮಚಾರೀ ಶುಚಿವ್ರತಃ |
ರಾಮಮಭ್ಯರ್ಚ್ಯ ರಾಜೇಂದ್ರ ಲಭೇದ್ ಬಹುಸುವರ್ಣಕಮ್ ॥36॥
ಹೀಗೆ ಮಹಾತ್ಮನಾದ ಭಾರ್ಗವರಾಮನು ನಿರ್ಮಿಸಿದ ಆ ಸರೋವರಗಳು ಪವಿತ್ರವಾದವುಗಳು. ಬ್ರಹ್ಮಾಚಾರಿಯೂ ಶುಚಿವ್ರತನೂ ಆದ ಮನುಷ್ಯನು ರಾಮ ಹ್ರದಗಳಲ್ಲಿ ಸ್ನಾನವನ್ನುಮಾಡಿ ಪರಶುರಾಮನನ್ನು ಪೂಜಿಸಿದರೆ ಎಲೈ ರಾಜೇಂದ್ರನೇ, ಸುವರ್ಣಸಹಿತವಾದ ಬಹುಸಂಪತ್ತನ್ನು ಪಡೆಯುವನು.
ವಂಶಮೂಲಕಮಾಸಾದ್ಯ ತೀರ್ಥಸೇವೀ ಕುರೂದ್ವಹ |
ಸ್ವವಂಶಮುದ್ಧರೇದ್ ರಾಜನ್ ಸ್ನಾತ್ವಾ ವೈ ವಂಶಮೂಲಕೇ ॥37॥
ಎಲೈ ಕುರೂದ್ವಹನೇ, ತೀರ್ಥಸೇವಿಯಾದ ಮಾನವನು ವಂಶಮೂಲಕ್ಷೇತ್ರಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿದರೆ ತನ್ನ ವಂಶವನ್ನು ಉದ್ಧರಿಸುತ್ತಾನೆ.
ಕಾಯಶೋಧನಮಾಸಾದ್ಯ ತೀರ್ಥಂ ಭರತಸತ್ತಮ |
ಶರೀರಶುದ್ಧಿಮಾಪ್ನೋತಿ ಸ್ನಾತ್ವಾ ತಸ್ಮಿನ್ ನ ಸಂಶಯಃ |
ಶುದ್ಧದೇಹಶ್ಚ ಸಂಯಾತಿ ಶುಭಾನ್ ಲೋಕಾನನುತ್ತಮಾನ್ ॥38॥
ಎಲೈ ಭರತಶ್ರೇಷ್ಠನೇ, ಕಾಯಶೋಧನತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನ್ನುಮಾಡುವವನು ನಿಸ್ಸಂಶಯವಾಗಿ ಶರೀರಶುದ್ಧಿಯನ್ನು ಪಡೆಯುತ್ತಾನೆ. ಶರೀರಶುದ್ಧಿಯನ್ನು ಪಡೆದು ಅವನು ಶುಭವಾದ ಮತ್ತು ಶ್ರೇಷ್ಠವಾದ ಲೋಕಗಳನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ತೀರ್ಥಂ ತ್ರೈಲೋಕ್ಯವಿಶ್ರುತಮ್ |
ಲೋಕಾ ಯತ್ರೋದ್ಧೃತಾಃ ಪೂರ್ವಂ ವಿಷ್ಣುನಾ ಪ್ರಭವಿಷ್ಣುನಾ ॥39॥
ಲೋಕೋದ್ಧಾರಂ ಸಮಾಸಾದ್ಯ ತೀರ್ಥಸೇವೀ ಕುರೂದ್ವಹ |
ಸ್ನಾತ್ವಾ ತೀರ್ಥವರೇ ರಾಜನ್ಲೋಕಾನುದ್ಧರತೇ ಸ್ವಕಾನ್ ॥40॥
ಎಲೈ ರಾಜೇಂಧ್ರನೇ, ಅನಂತರ ಎಲ್ಲಿ ಮಹಾಸಮರ್ಥನಾದ ವಿಷ್ಣುವು ಲೋಕಗಳನ್ನು ಮೇಲಕ್ಕೆ ಎತ್ತಿತದನೋ ಅಂತಹ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಲೋಕೋದ್ಧಾರತೀರ್ಥಕ್ಕೆ ಹೋಗಬೇಕು. ಎಲೈ ಕುರೂದ್ವಹನೇ, ತೀರ್ಥಸೇವಿಯಾದವನು ಲೋಕೋದ್ಧಾರ ಕ್ಷೇತ್ರಕ್ಕೆ ಹೋಗಿ ಆ ಶ್ರೇಷ್ಠವಾದ ತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ತನ್ನ ಜನರನ್ನು ಉದ್ಧರಿಸುತ್ತಾನೆ.
ಶ್ರೀತೀರ್ಥಂ ಚ ಸಮಾಸಾದ್ಯ ವಿಂದತೇ ಶ್ರಿಯಮುತ್ತಮಾಮ್ |

ಕಾಪಿಲಂ ತೀರ್ಥಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ॥41॥
ತತ್ರ ಸ್ನಾತ್ವಾರ್ಚಯಿತ್ವಾ ತು ದೇವತಾಶ್ಚ ಪಿತ್ರೂಂಸ್ತದಾ |
ಕಪಿಲಾನಾಂ ಸಹಸ್ರಸ್ಯ ಫಲಂ ವಿಂದತಿ ಮಾನವಃ ॥42॥
ಶ್ರೀತೀರ್ಥದಲ್ಲಿ ಸ್ನಾನವನ್ನುಮಾಡಿದ ಮನುಷ್ಯನು ಉತ್ತಮವಾದ ಸಂಪತ್ತನ್ನು ಪಡೆಯುತ್ತಾನೆ. ಬ್ರಹ್ಮಚಾರಿಯಾಗಿ ಸಮಾಧಾನವುಳ್ಳ ಮನಸ್ಸಿನಿಂದ ಕೂಡಿ ಕಪಿಲತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನಸನಮಾಡಿ ದೇವತೆಗಳನ್ನು ಮತ್ತು ಪಿತೃಗಳನ್ನು ಪೂಜಿಸುವ ಮಾನವನು ಸಹಸ್ರಕಪಿಲ ಗೋದಾನದ ಫಲವನ್ನು ಹೊಂದುತ್ತಾನೆ.
ಸೂರ್ಯತೀರ್ಥಂ ಸಮಾಸಾದ್ಯ ಸ್ನಾತ್ವಾ ನಿಯತಮಾನಸಃ |
ಅರ್ಚಯಿತ್ವಾ ಪಿತೄ ನ್ ದೇವಾನ್ ಉಪವಾಸಪರಾಯಣಃ |
ಅಗ್ನಿಷ್ಟೋಮಮವಾಪ್ನೋತಿ ಸೂರ್ಯಲೋಕಂ ಚ ವಿಂದತಿ ॥43॥
ಮಾನವನು ಜಿತಮನಸ್ಕನಾಗಿ ಸೂರ್ಯತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿ ಉಪವಾಸಪರನಾಗಿ ಪಿತೃಗಳನ್ನು ಮತ್ತು ದೇವತೆಗಳನ್ನು ಅರ್ಚಿಸಿದರೆ ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ. ಮತ್ತು ಸೂರ್ಯಲೋಕವನ್ನು ಹೊಂದುತ್ತಾನೆ.
ಗವಾಂ ಭವನಮಾಸಾದ್ಯ ತೀರ್ಥಸೇವೀ ಯಥಾಕ್ರಮಮ್ |
ತತ್ರಾಭಿಷೇಕಂ ಕುರ್ವಾಣೋ ಗೋಸಹಸ್ರಫಲಂ ಲಭೇತ್ ॥44॥
ತೀರ್ಥಸೇವಿಯಾದ ಮನುಷ್ಯನು ಕ್ರಮವಾಗಿ ಗೋಭವನಕ್ಷೇತ್ರಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿದರೆ ಸಹಸ್ರಗೋದಾನದ ಫಲವನ್ನು ಪಡೆಯುತ್ತಾನೆ.
ಶಂಖಿನೀಂ ತತ ಆಸಾದ್ಯ ತೀರ್ಥಸೇವೀ ಕುರೂದ್ವಹ |
ದೇವ್ಯಾಸ್ತೀರ್ಥೇ ನರಃ ಸ್ನಾತ್ವಾ ಲಭತೇ ರೂಪಮುತ್ತಮಮ್ ॥45॥
ಎಲೈ ಕುರೂದ್ವಹನೇ, ತೀರ್ಥಸೇವಿಯಾದ ನರನು ಅಲ್ಲಿಂದ ಶಂಖಿನೀತೀರ್ಥಕ್ಕೆ ಹೋಗಿ ಅಲ್ಲಿ ಸಣನನವನ್ನು ಮಾಡಿದರೆ ದೇವಿಯ ಅನುಗ್ರಹದಿಂದ ಉತ್ತಮವಾದ ರೂಪವನ್ನು ಪಡೆಯುತ್ತಾನೆ.
ತತೋ ಗಚ್ಛೇತ ರಾಜೇಂದ್ರ ದ್ವಾರಪಾಲಮರುಂತುಕಮ್ |
ತಸ್ಯ ತೀರ್ಥಂ ಸಮಾಸಾದ್ಯ ಯಕ್ಷೇಂದ್ರಸ್ಯ ಮಹಾತ್ಮನಃ |
ಯತ್ರ ಸ್ನಾತ್ವಾ ನರೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥46॥
ಎಲೈ ರಾಜೇಂದ್ರನೇ, ಅರುಂತುಕ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಹೋಗಿ ಮಹಾತ್ಮನಾದ ಯಕ್ಷಪತಿಯ ತೀರ್ಥದಲ್ಲಿ ಸ್ನಾನವನ್ನು ಮಾಡುವ ನರನು ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಬ್ರಹ್ಮಾವರ್ತಂ ನರಾಧಿಪ |
ಬ್ರಹ್ಮಾವರ್ತೇ ನರಃ ಸ್ನಾತ್ವಾ ಬ್ರಹ್ಮಲೋಕಮವಾಪ್ನುಯಾತ್ ॥47॥
ಎಲೈ ರಾಜೇಂದ್ರನೇ, ಅಲ್ಲಿಂದ ಬ್ರಹ್ಮಾವರ್ತಕ್ಷೇತ್ರಕ್ಕೆ ಹೋಗಬೇಕು. ಬ್ರಹ್ಮಾವರ್ತಕ್ಷೇತ್ರದಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಬ್ರಹ್ಮಲೋಕವನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಸುತೀರ್ಥಕಮನುತ್ತಮಮ್ |
ತತ್ರ ಸನ್ನಿಹಿತಾ ರಾಜನ್ ಪಿತರೋ ದೈವತೈಃ ಸಹ ॥48॥
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ |
ಅಶ್ವಮೇಧಮವಾಪ್ನೋತಿ ಪಿತೃಲೋಕಂ ಚ ಗಚ್ಛತಿ ॥49॥
ಎಲೈ ರಾಜೇಂದ್ರನೇ, ಅಲ್ಲಿಂದ ಶ್ರೇಷ್ಠವಾದ ಸುತೀರ್ಥಕವೆಂಬ ತೀರ್ಥಕ್ಕೆ ಹೋಗಬೇಕು. ರಾಜನೇ, ಅಲ್ಲಿ ದೇವತೆಗಳ ಜೊತೆಯಲ್ಲಿ ಪಿತೃಗಳು ಸನ್ನಿಹಿತರಾಗಿರುತ್ತಾರೆ. ಅಲ್ಲಿ ಸ್ನಾನವನ್ನು ಮಾಡಿ ಪಿತೃದೇವತೆಗಳ ಅರ್ಚನೆಯಲ್ಲಿ ರತನಾದವನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಮತ್ತು ಪಿತೃಲೋಕವನ್ನು ಹೊಂದುತ್ತಾನೆ.
ತತೋऽಂಬವಶ್ಯಂ ಧರ್ಮಜ್ಞ ಸಮಾಸಾದ್ಯ ಯಥಾಕ್ರಮಮ್ |
ಕೌಶೇಶ್ವರಸ್ಯ ತೀರ್ಥೇಷು ಸ್ನಾತ್ವಾ ಭರತಸತ್ತಮ |
ಸರ್ವವ್ಯಾಧಿವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥50॥
ಧರ್ಮಜ್ಞನೇ, ಅನಂತರ ಕ್ರಮವಾಗಿ ಕೌಶೇಶ್ವರತೀರ್ಥವಾದ ಅಂಬವಶ್ಯತೀರ್ಥಕ್ಕೆ ಹೋಗಿ ಅಲ್ಲಿ ಸಣನನವನ್ನು ಮಾಡಿದರೆ ಎಲೈ ಭರತಸತ್ತಮನೇ ಎಲ್ಲಾ ವ್ಯಾಧಿಗಳಿಂದಲೂ ನಿರ್ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಮಾತೃತೀರ್ಥಂ ಚ ತತ್ರೈವ ಯತ್ರ ಸ್ನಾತಸ್ಯ ಭಾರತ |
ಪ್ರಜಾ ವಿವರ್ಧತೇ ರಾಜನ್ನನಂತಾಂ ಚಾಶ್ನುತೇ ಶ್ರಿಯಮ್ ॥51॥
ಎಲೈ ಭಾರತನೇ, ಅಲ್ಲಿಯೇ ಮಾತೃತೀರ್ಥವು ಇದೆ. ಎಲೈ ರಾಜನೇ ಅಲ್ಲಿ ಸ್ನಾನವನ್ನು ಮಾಡಿದರೆ ಪ್ರಜೆಗಳು ಅಭಿವೃದ್ಧಿಯನ್ನು ಹೊಂದುತ್ತಾರೆ. ಮತ್ತು ಅನಂತವಾದ ಸಂಪತ್ತು ಉಂಟಾಗುತ್ತದೆ.
ತತಃ ಶೀತವನಂ ಗಚ್ಛೇತ್ ನಿಯತೋ ನಿಯತಾಶನಃ |
ತೀರ್ಥಂ ತತ್ರ ಮಹಾರಾಜ ಮಹದನ್ಯತ್ರ ದುರ್ಲಭಮ್ ॥52॥
ಪುನಾತಿ ದರ್ಶನಾದೇತದ್ ದಂಡೇನೈಕಂ ನರಾಧಿಪ |
ಕೇಶಾನಭ್ಯುಕ್ಷ್ಯ ವೈ ತಸ್ಮಿನ್ ಪೂತೋ ಭವತಿ ಭಾರತ ॥53॥
ಅಲ್ಲಿಂದ ನಿಯಮಬದ್ಧನಾಗಿ ನಿಯತ ಆಹಾರನಾಗಿ ಶೀತವನಕ್ಕೆ ಹೋಗಬೇಕು. ಮಹಾರಾಜನೇ, ಅಂತಹ ತೀರ್ಥವು ಇನ್ನೊಂದು ಕಡೆಯಲ್ಲಿ ದುರ್ಲಭವಾದುದು. ನರಾಧಿಪನೇ, ಈ ತೀರ್ಥವು ಕೇವಲ ದರ್ಶನದಿಂದಲೇ ಅಥವಾ ಒಂದು ದಂಡಪ್ರಮಾಣಾಮದಿಂದಲೇ

ಪವಿತ್ರೀಕರಿಸುತ್ತದೆ. ಎಲೈ ಭಾರತನೇ ಅಲ್ಲಿ ಶಿರಃಸ್ನಾನವನ್ನು ಮಾಡಿದ ಮನುಷ್ಯನು ಪವಿತ್ರನಾಗುತ್ತಾನೆ.
ತೀರ್ಥಂ ತತ್ರ ಮಹಾರಾಜ ಶ್ವಾನಲೋಮಾಪಹಂ ಸ್ಮೃತಮ್ |
ಯತ್ರ ವಿಪ್ರಾ ನರವ್ಯಾಘ್ರ ವಿದ್ವಾಂಸಸ್ತೀರ್ಥತತ್ಪರಾಃ |
ಗತಿಂ ಗಚ್ಛಂತಿ ಪರಮಾಂ ಸ್ನಾತ್ವಾ ಭರತಸತ್ತಮ ॥54॥
ಎಲೈ ಮಹಾರಾಜನೇ, ಅಲ್ಲಿಯೇ ಶ್ವಾನಲೋಮಾಪಹವೆಂಬ ತೀರ್ಥವೂ ಇದೆ. ಎಲೈ ಭರತಸತ್ತಮನೇ, ನರ ವ್ಯಾಘ್ರನೇ, ತೀರ್ಥಸೇವಿಗಳಾದ ವಿದ್ವಾಂಸರಾದ ಬ್ರಾಹ್ಮಣರು ಅಲ್ಲಿ ಸ್ನಾನವನ್ನು ಮಾಡಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ಶ್ವಾನಲೋಮಾಪನಯನೇ ತೀರ್ಥೇ ಭರತಸತ್ತಮ |
ಪ್ರಾಣಾಯಾಮೈರ್ನಿರ್ಭಾಯಾಂತಿ ಶ್ವಾನಲೋಮಾನ್ ದ್ವಿಜೋತ್ತಮಾಃ|
ಪೂತಾತ್ಮಾನಶ್ಚ ರಾಜೇಂದ್ರ ಪ್ರಯಾಂತಿ ಪರಮಾಂ ಗತಿಮ್ ॥55॥
ಎಲೈ ಭರತಸತ್ತಮನೇ, ಶ್ವಾನಲೋಮಾಪಹತೀರ್ಥದಲ್ಲಿ ಸ್ನಾನವನ್ನು ಮಾಡಿದ ಬ್ರಾಹ್ಮಣಶ್ರೇಷ್ಠರು ಆ ತೀರ್ಥದ ಮಹಿಮೆಯಿಂದ ಪ್ರಾಣಾಯಾಮಗಳಿಂದ ವಿಶೇಷಕಾಂತಿಯನ್ನು ಹೊಂದುತ್ತಾರೆ. ರಾಜೇಂದ್ರನೇ ಮತ್ತು ಪವಿತ್ರರಾಗಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ದಶಾಶ್ವಮೇಧಿಕಂ ಚೈವ ತಸ್ಮಿಂಸ್ತೀರ್ಥೇ ಮಹೀಪತೇ |
ತತ್ರ ಸ್ನಾತ್ವಾ ನರವ್ಯಾಘ್ರ ಗಚ್ಛೇತ ಪರಮಾಂ ಗತಿಮ್ ॥56॥
ಎಲೈ ರಾಜನೇ, ಅಲ್ಲಿಯೇ ಸಮೀಪದಲ್ಲಿ ದಶಾಶ್ವಮೇಧಿಕವೆಂಬ ತೀರ್ಥವು ಇದೆ. ನರವ್ಯಾಘ್ರನೇ, ಅಲ್ಲಿ ಸ್ನಾನಮಾಡಿದ ಮನುಷ್ಯನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಮಾನುಷಂ ಲೋಕವಿಶ್ರುತಮ್ |
ಯತ್ರ ಕೃಷ್ಣಮೃಗಾ ರಾಜನ್ ವ್ಯಾಧೇನ ಪರಿಪೀಡಿತಾಃ |
ವಗಾಹ್ಯ ತಸ್ಮಿನ್ ಸರಸಿ ಮಾನುಷತ್ವಮುಪಾಗತಾಃ ॥57॥
ರಾಜೇಂದ್ರನೇ, ಅಲ್ಲಿಂದ ಲೋಕವಿಶ್ರುತವಾದ ಮಾನುಷತೀರ್ಥಕ್ಕೆ ಹೋಗಬೇಕು. ರಾಜನೇ, ಅಲ್ಲಿ ವ್ಯಾಧನ ಬಾಣಗಳಿಂದ ಪೀಡಿತವಾದ ಕೃಷ್ಣಮೃಗಗಳು ಆ ಸರೋವರದಲ್ಲಿ ಸ್ನಾನವನ್ನು ಮಾಡಿ ಮಾನುಷತ್ವವನ್ನು ಪಡೆದವು.
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ |
ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕೇ ಮಹೀಯತೇ ॥58॥
ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ ಆ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಸರ್ವಪಾಪಗಳಿಂದ ವಿನಿರ್ಮುಕ್ತನಾಗಿ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಮಾನುಷಸ್ಯ ತು ಪೂರ್ವೇಣ ಕ್ರೋಶಮಾತ್ರೇಮಹೀಪತೇ |
ಆಗತಾ ನಾಮ ವಿಖ್ಯಾತಾ ನದೀ ಸಿದ್ಧನಿಷೇವಿತಾ ॥59॥
ಎಲೈ ಮಹಾರಾಜನೇ, ಮಾನುಷತೀರ್ಥಕ್ಕೆ ಪೂರ್ವದಲ್ಲಿ ಒಂದು ಕ್ರೋಶದೂರದಲ್ಲಿ ಆಗತಾ ಎಂಬ ಸಿದ್ಧರಿಂದ ಸೇವಿತವಾದ ಪ್ರಸಿದ್ಧವಾದ ನದಿಯಿದೆ.
ಶ್ಯಾಮಾಕಭೋಜನಂ ತತ್ರ ಯಃ ಪ್ರಯಚ್ಛತಿ ಮಾನವಃ |
ದೇವಾನ್ ಪಿತೄನ್ ಸಮುದ್ದಿಶ್ಯ ತಸ್ಯ ಧರ್ಮಫಲಂ ಮಹತ್ |
ಏಕಸ್ಮಿನ್ ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಃ ॥60॥
ಅಲ್ಲಿ ಯಾವನು ದೇವತೆಗಳನ್ನೂ ಪಿತೃಗಳನ್ನೂ ಉದ್ದೇಶಿಸಿ ಶ್ಯಾಮಾಕಬೋಜನವನ್ನು (ಸಾವೆ ಅಕ್ಕಿಯ ಭೋಜನವನ್ನು) ನಿವೇದಿಸುತ್ತಾನೆಯೋ ಅವನಿಗೆ ಬಹಳ ಧರ್ಮಫಲವು ಉಂಟಾಗುತ್ತದೆ. ಒಬ್ಬ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದರೆ ಕೋಟಿಬ್ರಾಹ್ಮಣರಿಗೆ ಮಾಡಿಸಿದಂತಾಗುತ್ತದೆ.
ತತ್ರ ಸ್ನಾತ್ವಾರ್ಽಚಯಿತ್ವಾ ಚ ಪಿತ್ರೂನ್ ಸ್ವಾನ್ ದೈವತಾನಿ ಚ |
ಉಷಿತ್ವಾ ರಜನೀಮೇಕಾಮ್ ಅಗ್ನಿಷ್ಟೋಮಫಲಂ ಲಭೇತ್ ॥61॥
ಅಲ್ಲಿ ಸ್ನಾನವನ್ನು ಮಾಡಿ ಒಂದು ರಾತ್ರಿಯಿದ್ದು ತನ್ನ ಪಿತೃಗಳನ್ನು ಮತ್ತು ದೇವತೆಗಳನ್ನು ಪೂಜಿಸುವ ಮನುಷ್ಯನು ಅಗ್ನಿಷ್ಟೋಮಫಲವನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಬ್ರಹ್ಮಣಃ ಸ್ಥಾನಮುತ್ತಮಮ್ |
ಬ್ರಹ್ಮೋದುಂಬರಮಿತ್ಯೇವ ಪ್ರಕಾಶಂ ಭರತರ್ಷಭ ॥62॥
ಎಲೈ ರಾಜೇಂದ್ರನೇ, ಭರತರ್ಷಭನೇ, ಅಲ್ಲಿಂದ ಬ್ರಹ್ಮನ ಕ್ಷೇತ್ರವಾದ ಬ್ರಹ್ಮೋದುಂಬರವೆಂದು ಪ್ರಸಿದ್ಧವಾದ ಪವಿತ್ರತೀರ್ಥಕ್ಕೆ ಹೋಗಬೇಕು.
ತತ್ರ ಸಪ್ತರ್ಷಿಕುಂಡೇಷು ಸ್ನಾತಸ್ಯ ಕುರುಪುಂಗವ |
ಕೇದಾರೇ ಚೈವ ರಾಜೇಂದ್ರ ಕಪಿಷ್ಠಲಮಹಾಮುನೇಃ ॥63॥
ಬ್ರಹ್ಮಾಣಮಧಿಗತ್ವಾ ಚ ಶುಚಿಃ ಪ್ರಯತಮಾನಸಃ |
ಸರ್ವಪಾಪವಿಶುದ್ಧಾತ್ಮಾ ಗಚ್ಛೇತ ಪರಮಾಂ ಗತಿಮ್ ॥64॥
ರಾಜೇಂದ್ರನೇ, ಕುರುಪುಂಗವನೇ, ಅಲ್ಲಿ ಸಪ್ತರ್ಷಿಕುಂಡಗಳಲ್ಲಿ ಮತ್ತು ಕಪಿಷ್ಠಲಮಹರ್ಷಿಗಳ ಸರೋವರಗಳಲ್ಲಿ ಶುಚಿಯಾಗಿ ಜಿತಮನಸ್ಕನಾಗಿ ಸ್ನಾನಮಾಡಿದವನು ಬ್ರಹ್ಮಜ್ಞಾನವನ್ನು ಹೊಂದಿ ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಶ್ರೇಷ್ಠವಾದಗತಿಯನ್ನು ಹೊಂದುತ್ತಾನೆ.

ಕಪಿಷ್ಠಲಸ್ಯ ಕೇದಾರಂ ಸಮಾಸಾದ್ಯ ಸುದುರ್ಲಭಮ್ |
ಅಂತರ್ಧಾನಮವಾಪ್ನೋತಿ ತಪಸಾ ದಗ್ಧಕಿಲ್ಬಿಷಃ |
ತತೋ ಗಚ್ಛೇತ ರಾಜೇಂದ್ರ ಶಂಕರಂ ಲೋಕವಿಶ್ರುತಮ್ ॥65॥
ಕೃಷ್ಣಪಕ್ಷೇ ಚತುರ್ದಶ್ಯಾಮ್ ಅಭಿಗಮ್ಯ ವೃಷಧ್ವಜಮ್ |
ಲಭೇತ ಸರ್ವಕಾಮಾನ್ ಹಿ ಸ್ವರ್ಗಲೋಕಂ ಚ ಗಚ್ಛತಿ ॥66॥
ಕೇದಾರವನ್ನು ತಲುಪಿಬಹಳ ದುರ್ಲಭವಾದ ಕಪಿಷ್ಠಲ ಋಷಿಗಳ ಸರೋವರದಲ್ಲಿ ಸ್ನಾನವನುನಮಾಡಿದವನು ತಪಸ್ಸಿನಿಂದ ತನ್ನ ಎಲ್ಲಾ ಪಾಪಗಳನ್ನು ಕಳೆದುಕೊಂಡು ಅಂತರ್ಧಾನ ಶಕ್ತಿಯನ್ನು ಪಡೆಯುತ್ತಾನೆ. ರಾಜೇಂದ್ರನೇ, ಅಲ್ಲಿಂದ ಲೋಕಪ್ರಸಿದ್ಧವಾದ ಶಂಕರತೀರ್ಥಕ್ಕೆ ಹೋಗಬೇಕು. ಕೃಷ್ಣಪಕ್ಷದ ಚತುರ್ದಶಿಯಂದು ಆ ತೀರ್ಥದಲ್ಲಿ ಸ್ನಾನವನ್ನು ಮಾಡುವವನು ಎಲ್ಲಾ ಕಾಮಗಳನ್ನೂ ಪಡೆಯುತ್ತಾನೆ ಮತ್ತು ಸ್ವರ್ಗಲೋಕವನ್ನು ಹೊಂದುತ್ತಾನೆ.
ತಿಸ್ರಃ ಕೋಟ್ಯಶ್ಚ ತೀರ್ಥಾನಾಂ ಶಂಕರೇ ಕುರುನಂದನ |
ರುದ್ರಕೋಟಿಸ್ತಥಾ ಕೂಪೇ ಹ್ರದೇಷು ಚ ಮಹೀಪತೇ |
ಇಡಾಸ್ಪದಂ ಚ ತತ್ರೈವ ತೀರ್ಥಂ ಭರತಸತ್ತಮ ॥67॥
ಎಲೈ ಕುರುನಂದನನೇ, ಶಂಕರತೀರ್ಥದಲ್ಲಿ ಮೂರುಕೋಟಿ ತೀರ್ಥಗಳಿವೆ. ಎಲೈ ರಾಜನೇ, ಅಲ್ಲಿಯೇ ಕೂಪ ಮತ್ತು ಹ್ರದಗಳಲ್ಲಿ ಒಂದು ಕೋಟಿ ರುದ್ರರೂಪಗಳಿವೆ. ಭರತಸತ್ತಮನೇ, ಇಡಾ ಎಂಬ ತೀರ್ಥವು ಅಲ್ಲಿಯೇ ಇದೆ.
ತತ್ರ ಸ್ನಾತ್ವಾರ್ಚಯಿತ್ವಾ ಚ ಪಿತೄನ್ ದೇವಾಂಶ್ಚ ಭಾರತ |
ನ ದುರ್ಗತಿಮವಾಪ್ನೋತಿ ವಾಜಪೇಯಂ ಚ ವಿಂದತಿ ॥68॥
ಎಲೈ ಭಾರತನೇ, ಅಲ್ಲಿ ಸ್ನಾನವನ್ನು ಮಾಡಿ ಪಿತೃಗಳನ್ನು ಮತ್ತು ದೇವತೆಗಳನ್ನು ಪೂಜಿಸುವವನು ದುರ್ಗತಿಯನ್ನು ಹೊಂದುವುದಿಲ್ಲ. ಮತ್ತು ವಾಜಪೇಯಯಾಗದ ಫಲವನ್ನು ಪಡೆಯುತ್ತಾನೆ.
ಕಿಂದಾನೇ ಚ ನರಃ ಸ್ನಾತ್ವಾ ಕಿಂಜಪ್ಯೇ ಚ ಮಹೀಪತೇ |
ಅಪ್ರಮೇಯಮವಾಪ್ನೋತಿ ದಾನಂ ಜಪ್ಯಂ ಚ ಭಾರತ ॥69॥
ಎಲೈ ರಾಜನೇ, ಕಿಂದಾನತೀರ್ಥದಲ್ಲಿಯೂ ಕಿಂಜಪ್ಯತೀರ್ಥದಲ್ಲಿಯೂ ಸ್ನಾನವನ್ನುಮಾಡುವ ಮನುಷ್ಯನು ಅಪರಿಮಿತವಾದ ದಾನವನ್ನು ಮತ್ತು ಜಪವನ್ನು ಮಾಡುವವನಾಗುತ್ತಾನೆ.
ಕಲಶ್ಯಾಂ ಚಾಪ್ಯುಪಸ್ಪೃಶ್ಯ ಶ್ರದ್ದಧಾನೋ ಜಿತೇಂದ್ರಿಯಃ |
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥70॥
ಕಲಶೀತೀರ್ಥದಲ್ಲಿ ಸ್ನಾನವನ್ನುಮಾಡುವ ಶ್ರದ್ಧಾಯುಕ್ತನಾದ ಜಿತೇಂದ್ರಿಯನು ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುತ್ತಾನೆ.
ಶಂಕರಸ್ಯ ತು ಪೂರ್ವೇಣ ನಾರದಸ್ಯ ಮಹಾತ್ಮನಃ |
ತೀರ್ಥಂ ಕುರುವರಶ್ರೇಷ್ಠ ಅನಾಜನ್ಮೇತಿ ವಿಶ್ರುತಮ್ ॥71॥
ತತ್ರ ತೀರ್ಥೇ ನರಸ್ಸ್ನಾತ್ವಾ ಪ್ರಾಣಾಂಶ್ಚೋತ್ಸೃಜ್ಯ ಭಾರತ |
ನಾರದೇನಾಭ್ಯನುಜ್ಞಾತೋ ಲೋಕಾನ್ ಪ್ರಾಪ್ನೋತಿ ದುರ್ಲಭಾನ್॥
ಎಲೈ ಕುರುಶ್ರೇಷ್ಠನೇ, ಶಂಕರತೀರ್ಥದ ಪೂರ್ವಭಾಗದಲ್ಲಿ ಮಹಾತ್ಮರಾದ ನಾರದರ ತೀರ್ಥವಾದ ಅನಾಜನ್ಮವೆಂಬ ಪ್ರಸಿದ್ಧತೀರ್ಥವಿದೆ. ಎಲೈ ಭಾರತನೇ, ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪ್ರಾಣಗಳನ್ನು ತ್ಯಜಿಸುವ ಮನುಷ್ಯನು ನಾರದರ ಅನುಗ್ರಹವನ್ನು ಪಡೆದು ದುರ್ಲಭವಾದ ಲೋಕಗಳನ್ನು ಹೊಂದುತ್ತಾನೆ.
ಶುಕ್ಲಪಕ್ಷೇ ದಶಮ್ಯಾಂ ತು ಪುಂಡರೀಕಂ ಸಮಾವಿಶೇತ್ |
ತತ್ರ ಸ್ನಾತ್ವಾ ನರೋ ರಾಜನ್ ಪೌಂಡರೀಕಫಲಂ ಲಭೇತ್ ॥73॥
ಎಲೈ ರಾಜನೇ, ಶುಕ್ಲಪಕ್ಷದ ದಶಮಿಯಂದು ಪುಂಡರೀಕತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿದ ಮನುಷ್ಯನು ಪುಂಡರೀಕಯಾಗದ ಫಲವನ್ನು ಹೊಂದುತ್ತಾನೆ.
ತತಃ ತ್ರಿವಿಷ್ಟಪಂ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಮ್ |
ತತ್ರ ವೈತರಣೀ ಪುಣ್ಯಾ ನದೀ ಪಾಪಪ್ರಣಾಶಿನೀ ॥74॥
ತತ್ರ ದೇವಾಃ ಸದಾ ರಾಜನ್ ಫಲಜೀವನಮಾಶ್ರಿತಾಃ |
ತಪಶ್ಚರಂತಿ ವಿಪುಲಂ ಬಹುವರ್ಷಸಹಸ್ರಕಮ್ ॥75॥
ಅನಂತರ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ತ್ರಿವಿಷ್ಟಪತೀರ್ಥಕ್ಕೆ ಹೋಗಬೇಕು. ಅಲ್ಲಿ ಪಾಪಪರಿಹಾರಕವಾದ ಪುಣ್ಯದಾಯಕವಾದ ವೈತರಣೀ ನದಿಯಿದೆ. ಅಲ್ಲಿ ಸ್ನಾನವನ್ನು ಮಾಡಿ ವೃಷಧ್ವಜನೂ ಶೂಲಪಾಣಿಯೂ ಆದ ಶಂಕರನನ್ನು ಪೂಜಿಸುವವನು ಸರ್ವಪಾಪಗಳಿಂದಲೂ ಶುದ್ಧನಾಗಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. ರಾಜೇಂದ್ರನೇ, ಅಲ್ಲಿಂದ ಶ್ರೇಷ್ಠವಾದ ಫಲಜೀವನತೀರ್ಥಕ್ಕೆ ಹೋಗಬೇಕು. ಎಲೈ ರಾಜನೇ, ಅಲ್ಲಿ ದೇವತೆಗಳು ಯಾವಾಗಲೂ ಫಲದಿಂದಲೇ ಜೀವನವನ್ನು ಮಾಡುವವರಾಗಿ ಅನೇಕ ಸಹಸ್ರ ವರ್ಷಗಳವರೆಗೆ ವಿಪುಲವಾದ ತಪಸ್ಸನ್ನು ಆಚರಿಸುತ್ತಾರೆ.
ದೃಷದ್ವತ್ಯಾಂ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ |
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ವಿಂದತಿ ಭಾರತ ॥76॥
ದೃಷದ್ವತೀ ನದಿಯಲ್ಲಿ ಸ್ನಾನವನ್ನುಮಾಡಿ ದೇವತೆಗಳಿಗೆ ತರ್ಪಣವನ್ನು ಕೊಟ್ಟ ಮನುಷ್ಯನು ಅಗ್ನಿಷ್ಟೋಮ ಅತಿರಾತ್ರಯಜ್ಞಗಳ ಫಲವನ್ನು ಪಡೆಯುತ್ತಾನೆ.
ತೀರ್ಥೇ ಚ ಸರ್ವದೇವಾನಾಂ ಸ್ನಾತ್ವಾ ಭರತಸತ್ತಮ |

ಗೋಸಹಸ್ರಸ್ಯ ರಾಜೇಂದ್ರ ಫಲಂ ವಿಂದತಿ ಮಾನವಃ ॥77॥
ಎಲೈ ಭರತಸತ್ತಮನೇ, ರಾಜೇಂದ್ರನೇ, ಸರ್ವದೇವ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಮಾನವನು ಸಹಸ್ರ ಗೋದಾನಗಳ ಫಲವನ್ನು ಪಡೆಯುತ್ತಾನೆ.
ಪಾಣಿಖಾತೇ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ।
ತತ್ರ ಸ್ನಾತ್ವಾ ನರೋ ರಾಜನ್ ಸರ್ವಯಜ್ಞಫಲಂ ಲಭೇತ್ ॥78॥
ಎಲೈ ರಾಜನೇ, ಪಾಣಿಖಾತತೀರ್ಥದಲ್ಲಿ ಸ್ನಾನವನ್ನು ಮಾಡಿ ದೇವತೆಗಳನ್ನು ಪೂಜಿಸುವ ನರನು ಎಲ್ಲಾ ಯಜ್ಞಗಳಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ಮಿಶ್ರಕಂ ತೀರ್ಥಮುತ್ತಮಮ್।
ಯತ್ರ ತೀರ್ಥಾನಿ ಸರ್ವಾಣಿ ಮಿಶ್ರಿತಾನಿ ಮಹಾತ್ಮನಾ ॥79॥
ವ್ಯಾಸೇನ ನರಶಾರ್ದೂಲ ದ್ವಿಜಾರ್ಥಮಿತಿ ನಃ ಶ್ರುತಮ್।
ಸರ್ವತೀರ್ಥೇಷು ಸ ಸ್ನಾತಿ ಮಿಶ್ರಕೇ ಸ್ನಾತಿ ಯೋ ನರಃ ॥80॥
ಎಲೈ ಧರ್ಮಜ್ಞನೇ, ಅಲ್ಲಿಂದ ಶ್ರೇಷ್ಠವಾದ ಮಿಶ್ರಕತೀರ್ಥಕ್ಕೆ ಹೋಗಬೇಕು. ಎಲೈ ನರಶಾರ್ದೂಲನೇ, ಅಲ್ಲಿ ದಧೀಚಿ ಋಷಿಗಳ ಸಲುವಾಗಿ ಮಹಾತ್ಮರಾದ ವೇದವ್ಯಾಸರು ಎಲ್ಲ ತೀರ್ಥಗಳನ್ನು ಮಿಶ್ರಮಾಡಿದರೆಂದು ನಾವು ಕೇಳಿದ್ದೇವೆ. ಯಾವ ಮನುಷ್ಯನು ಮಿಶ್ರಕತೀರ್ಥದಲ್ಲಿ ಸ್ನಾನಮಾಡುತ್ತಾನೆಯೋ ಅವನಿಗೆ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಉಂಟಾಗುತ್ತದೆ.
ತತೋ ವ್ಯಾಸವನಂ ಗಚ್ಛೇತ್ ನಿಯತೋ ನಿಯತಾಶನಃ।
ಮನೋಜವೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥81॥
ಅಲ್ಲಿಂದ ಮನುಷ್ಯನು ನಿಯತ ಆಹಾರನಾಗಿ ನಿಯಮಬದ್ಧನಾಗಿ ವ್ಯಾಸವನಕ್ಕೆ ಹೋಗಿ ಮನೋಜನತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ಸಹಸ್ರಗೋದಾನದ ಫಲವನ್ನು ಪಡೆಯುವನು.
ಗತ್ವಾ ಮಧುಮತೀಂ ಚೈವ ದೇವ್ಯಾಸ್ತೀರ್ಥೇ ನರಃ ಶುಚಿಃ।
ತತ್ರ ಸ್ನಾತ್ವಾಽರ್ಚಯಿತ್ವಾ ಚ ಪಿತೄನ್ ದೇವಾಂಶ್ಚ ಪೂರುಷಃ।
ಸ ದೇವ್ಯಾ ಸಮನುಜ್ಞಾತೋ ಗೋಸಹಸ್ರಫಲಂ ಲಭೇತ್ ॥82॥
ಮಧುಮತಿ ಎಂಬ ಸ್ಥಳಕ್ಕೆ ಹೋಗಿ ಅಲ್ಲಿ ದೇವಿಯ ತೀರ್ಥದಲ್ಲಿ ಸ್ನಾನವನ್ನುಮಾಡಿ ಶುಚಿಯಾದ ನರನು ದೇವತೆಗಳನ್ನು ಮತ್ತು ಪಿತೃಗಳನ್ನು ಪೂಜಿಸಿ ದೇವಿಯ ಅನುಗ್ರಹಕ್ಕೆ ಪಾತ್ರನಾಗಿ ಸಹಸ್ರಗೋದಾನದ ಫಲವನ್ನು ಪಡೆಯುವನು.
ಕೌಶಿಕ್ಯಾಃ ಸಂಗಮೇ ಯಸ್ತು ದೃಷದ್ವತ್ಯಾಶ್ಚ ಭಾರತ।
ಸ್ನಾತಿ ವೈ ನಿಯತಾಹಾರಃ ಸರ್ವಪಾಪೈಃ ಪ್ರಮುಚ್ಯತೇ ॥83॥
ಎಲೈ ಭಾರತನೇ, ಯಾವನು ನಿಯತ ಆಹಾರನಾಗಿ ಕೌಶಿಕೀ ಮತ್ತು ದೃಷದ್ವತೀ ನದಿಗಳ ಸಂಗಮದಲ್ಲಿ ಸ್ನಾನವನ್ನುಮಾಡುತ್ತಾನೆಯೋ ಅವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ತತೋ ವ್ಯಾಸಸ್ಥಲೀ ನಾಮ ಯತ್ರ ವ್ಯಾಸೇನ ಧೀಮತಾ।
ಪುತ್ರಶೋಕಾಭಿತಪ್ತೇನ ದೇಹತ್ಯಾಗಾರ್ಥನಿಶ್ಚಯಃ ॥84॥
ಕೃತೋ ದೇವೈಶ್ಚ ರಾಜೇಂದ್ರ ಪುನರುತ್ಥಾಪಿತಸ್ತದಾ।
ಅಭಿಗಮ್ಯ ಸ್ಥಲೀಂ ತತ್ರ ಗೋಸಹಸ್ರಫಲಂ ಲಭೇತ್ ॥85॥
ಎಲೈ ರಾಜೇಂದ್ರನೇ, ಅಲ್ಲಿಂದ ವ್ಯಾಸಸ್ಥಲೀ ಎಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಮೇಧಾವಿಗಳಾದ ವ್ಯಾಸರು ಪುತ್ರಶೋಕದಿಂದ ಬಳಲಿ ದೇಹವನ್ನು ತ್ಯಾಗಮಾಡಲು ನಿಶ್ಚಯಿಸಿ ಪುನಃ ದೇವತೆಗಳಿಂದ ಎಬ್ಬಿಸಲ್ಪಟ್ಟರು. ಆ ಕ್ಷೇತ್ರಕ್ಕೆ ಹೋದರೆ ಸಹಸ್ರಗೋದಾನಗಳ ಫಲವುಂಟಾಗುತ್ತದೆ.
ಕಿಂದತ್ತಂ ಕೂಪಮಾಸಾದ್ಯ ತಿಲಪ್ರಸ್ಥಂ ಪ್ರದಾಯ ಚ।
ಗಚ್ಛೇತ್ ಪಾರಮಿಕಾಂ ಸಿದ್ಧಿಮ್ ಋಣೈರ್ಮುಕ್ತಃ ಕುರುದ್ವಹ ॥86॥
ಎಲೈ ಕುರೂದ್ವಹನೇ, ಕಿಂದತ್ತವೆಂಬ ಕೂಪಕ್ಕೆ ಹೋಗಿ ಒಂದು ಹಿಡಿ ಎಳ್ಳನ್ನು ದಾನಮಾಡಿದರೆ ಆ ಮನುಷ್ಯನು ಋಣಮುಕ್ತನಾಗಿ ಶ್ರೇಷ್ಠವಾದ ಸಿದ್ಧಿಯನ್ನು ಪಡೆಯುತ್ತಾನೆ.
ಅಹಶ್ಚ ಸುದಿನಂ ಚೈವ ದ್ವೇ ತೀರ್ಥೇ ಚ ಸುದುರ್ಲಭೇ।
ತಯೋಃ ಸ್ನಾತ್ವಾ ನರವ್ಯಾಘ್ರ ಸೂರ್ಯಲೋಕಮವಾಪ್ನುಯಾತ್।
ವ್ಯಂಗಧೂಮಂ ತತೋ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಮ್ ॥
ತತ್ರ ಗಂಗಾಹ್ರದೇ ಸ್ನಾತ್ವಾ ಹ್ಯರ್ಚಯಿತ್ವಾ ಚ ಭಾರತ।
ಶೂಲಪಾಣಿಂ ಮಹಾದೇವಮಶ್ವಮೇಧಫಲಂ ಲಭೇತ್ ॥88॥
ಅಹಸ್ತೀರ್ಥ ಮತ್ತು ಸುದಿನತೀರ್ಥ ಎಂಬ ಎರಡುತೀರ್ಥಗಳು ಬಹಳ ದುರ್ಲಭವಾದವು. ಎಲೈ ನರವ್ಯಾಘ್ರನೇ, ಅವುಗಳಲ್ಲಿ ಸ್ನಾನವನ್ನು ಮಾಡಿದವನು ಸೂರ್ಯಲೋಕಕ್ಕೆ ಹೋಗುತ್ತಾನೆ. ಅಲ್ಲಿಂದ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ವ್ಯಂಗಧೂಮವೆಂಬ ಸ್ಥಳಕ್ಕೆ ಹೋಗಬೇಕು. ಎಲೈ ಭಾರತನೇ, ಅಲ್ಲಿ ಗಂಗಾಹ್ರದ ಎಂಬ ಮಡುವಿನಲ್ಲಿ ಸ್ನಾನಮಾಡಿ ಶೂಲಪಾಣಿಯಾದ ಮಹಾದೇವನನ್ನು ಅರ್ಚಿಸಿದರೆ ಅಶ್ವಮೇಧ- ಫಲವುಂಟಾಗುತ್ತದೆ.
ದೇವತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್।
ಅಥ ವಾಮನಕಂ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಮ್ ॥89॥
ದೇವತೀರ್ಥದಲ್ಲಿ ಸ್ನಾನಮಾಡಿದ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ. ಅನಂತರ ಮೂರುಲೋಕಗಳಲ್ಲಿ ಪ್ರಖ್ಯಾತವಾದ

ವಾಮನತೀರ್ಥಕ್ಕೆ ಹೋಗಬೇಕು.
ತತ್ರ ವಿಷ್ಣುಪದೇ ಸ್ನಾತ್ವಾ ಅರ್ಚಯಿತ್ವಾ ಚ ವಾಮನಮ್ |
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಮವಾಪ್ನುಯಾತ್ ॥90॥
ಅಲ್ಲಿ ವಿಷ್ಣುಪದತೀರ್ಥದಲ್ಲಿ ಸ್ನಾನವನ್ನು ಮಾಡಿ ವಾಮನನನ್ನು ಅರ್ಚಿಸಿದರೆ ಸರ್ವಪಾಪಗಳಿಂದಲೂ ನಿರ್ಮುಕ್ತನಾಗಿ ವಿಷ್ಣುಲೋಕವನ್ನು ಪಡೆಯುವನು.
ಅಮರಾಣಾಂ ಹ್ರದೇ ಸ್ನಾತ್ವಾ ಅಮರೇಷು ನರಾಧಿಪ |
ಅಮರಾಣಾಂ ಪ್ರಸಾದೇನ ಸ್ವರ್ಗಲೋಕೇ ಮಹೀಯತೇ ॥91॥
ಎಲೈ ರಾಜನೇ, ಅಮರಕ್ಷೇತ್ರಕ್ಕೆ ಹೋಗಿ ಅಮರಹ್ರದದಲ್ಲಿ ಸ್ನಾನವನ್ನು ಮಾಡಿದರೆ ದೇವತೆಗಳ ಅನುಗ್ರಹದಿಂದ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಶಾಲಿಹೋತ್ರಸ್ಯ ರಾಜೇಂದ್ರ ಶಾಲಿಶೂರ್ಪೇ ಯಥಾವಿಧಿ |
ಸ್ನಾತ್ವಾ ನರವರಶ್ರೇಷ್ಠ ಗೋಸಹಸ್ರಫಲಂ ಲಭೇತ್ |
ಕುಲಂಪುನೇ ನರಃ ಸ್ನಾತ್ವಾ ಪುನಾತಿ ಸ್ವಕುಲಂ ನರಃ ॥92॥
ರಾಜೇಂದ್ರನೇ, ಶಾಲಿಹೋತ್ರ ಋಷಿಗೆ ಸಂಬಂಧಿಸಿದ ಶಾಲಿಶೂರ್ಪತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಮಾಡಿದ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ. ರಾಜಶ್ರೇಷ್ಠನೇ, ಕುಲಂಪುನತೀರ್ಥದಲ್ಲಿ ಸ್ನಾನಮಾಡಿದ ನರನು ತನ್ನ ಕುಲವನ್ನು ಪವಿತ್ರಗೊಳಿಸುತ್ತಾನೆ.
ಪವನಸ್ಯ ಹ್ರದಂ ಗತ್ವಾ ಮರುತಾಂ ತೀರ್ಥಮುತ್ತಮಮ್ |
ತತ್ರ ಸ್ನಾತ್ವಾ ನರವ್ಯಾಘ್ರ ವಾಯುಲೋಕೇ ಮಹೀಯತೇ ॥93॥
ಎಲೈ ನರವ್ಯಾಘ್ರನೇ, ಮರುತ್‌ಗಳ ಶ್ರೇಷ್ಠತೀರ್ಥವಾದ ಪವನಹ್ರದದಲ್ಲಿ ಸ್ನಾನಮಾಡಿದ ನರನು ವಾಯುಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಶ್ರೀಕುಂಜಂ ಚ ಸರಸ್ವತ್ಯಾಃ ತೀರ್ಥಂ ಭರತಸತ್ತಮ |
ತತ್ರ ಸ್ನಾತ್ವಾ ನರೋ ರಾಜನ್ನಗ್ನಿಷ್ಟೋಮಮವಾಪ್ನುಯಾತ್ ॥94॥
ಎಲೈ ಭರತಸತ್ತಮನೇ, ಶ್ರೀಕುಂಜವೆಂಬುದು ಸರಸ್ವತಿಯತೀರ್ಥ. ರಾಜನೇ ಅಲ್ಲಿ ಸ್ನಾನಮಾಡಿದ ನರನು ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ.
ತತೋ ನೈಮಿಶಕುಂಜಂ ತು ಸಮಾಸಾದ್ಯ ಯಥಾಕ್ರಮಮ್ |
ಋಷಯಃ ಕಿಲ ರಾಜೇಂದ್ರ ನೈಮಿಶೇಯಾಸ್ತಪೋಧನಾಃ |
ತೀರ್ಥಯಾತ್ರಾಂ ಪುರಸ್ಕೃತ್ಯ ಕುರುಕ್ಷೇತ್ರಂ ಗತಾಃ ಪುರಾ ॥95॥
ತತಃ ಕುಂಜಃ ಸರಸ್ವತ್ಯಾಃ ಕೃತೋ ಭರತಸತ್ತಮ |
ಋಷೀಣಾಮವಕಾಶಃ ಸ್ಯಾದ್ ಯಥಾ ತುಷ್ಟಿಕರೋ ಭವೇತ್ ॥96॥
ಅಲ್ಲಿಂದ ಕ್ರಮವಾಗಿ ನೈಮಿಶಕುಂಜಕ್ಕೆ ಹೋಗಬೇಕು. ರಾಜೇಂದ್ರನೇ ಹಿಂದೆ ನೈಮಿಶಾರಣ್ಯವಾಸಿಗಳಾದ ತಪೋಧನರಾದ ಋಷಿಗಳು ಕುರುಕ್ಷೇತ್ರವನ್ನು ಉದ್ದೇಶಿಸಿ ತೀರ್ಥಯಾತ್ರೆಯನ್ನು ಮಾಡಲು ಬಯಸಿದರು. ಎಲೈ ಭರತಸತ್ತಮನೇ, ಆಗ ಎಲ್ಲ ಋಷಿಗಳಿಗೂ ಅವಕಾಶವಾಗುವಂತೆ ಮತ್ತು ಸಂತೋಷವಾಗುವಂತೆ ಈ ಸರಸ್ವತೀ ಕುಂಜವು ನಿರ್ಮಿಸಲ್ಪಟ್ಟಿತು.
ತಸ್ಮಿನ್ ಕುಂಜೇ ನರಃ ಸ್ನಾತ್ವಾ ಅಗ್ನಿಷ್ಟೋಮಫಲಂ ಲಭೇತ್ |
ಕನ್ಯಾತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥97॥
ಆ ಕುಂಜದಲ್ಲಿ ಸ್ನಾನಮಾಡಿದ ನರನು ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ. ಕನ್ಯಾತೀರ್ಥದಲ್ಲಿ ಸ್ನಾನಮಾಡಿದ ನರನು ಗೋಸಹಸ್ರ ಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇನ್ನರವ್ಯಾಘ್ರ ಬ್ರಹ್ಮಣಸ್ತೀರ್ಥಮುತ್ತಮಮ್ |
ತತ್ರ ವರ್ಣಾಂತರಃ ಸ್ನಾತ್ವಾ ಬ್ರಾಹ್ಮಣ್ಯಂ ಲಭತೇ ನರಃ |
ಬ್ರಾಹ್ಮಣಸ್ತು ವಿಶುದ್ಧಾತ್ಮಾ ಗಚ್ಛೇತ ಪರಮಾಂ ಗತಿಮ್ ॥98॥
ನರವ್ಯಾಘ್ರನೇ, ಅಲ್ಲಿಂದ ಶ್ರೇಷ್ಠವಾದ ಬ್ರಹ್ಮತೀರ್ಥಕ್ಕೆ ಹೋಗಬೇಕು. ಬೇರೆವರ್ಣಕ್ಕೆ ಸೇರಿದವನು ಅಲ್ಲಿ ಸ್ನಾನವನ್ನು ಮಾಡಿದರೆ ಬ್ರಾಹ್ಮಣ್ಯವನ್ನು ಪಡೆಯುತ್ತಾನೆ. ಬ್ರಾಹ್ಮಣನಾದವನು ಅಲ್ಲಿ ಸ್ನಾನವನ್ನು ಮಾಡಿದರೆ ಮನಃಶುದ್ಧಿಯನ್ನು ಹೊಂದಿ ಶ್ರೇಷ್ಠವಾದ ಗತಿಯನ್ನು ಪಡೆಯುತ್ತಾನೆ.
ತತೋ ಗಚ್ಛೇನ್ನರವ್ಯಾಘ್ರ ಸೋಮತೀರ್ಥಮನುತ್ತಮಮ್ |
ತತ್ರ ಸ್ನಾತ್ವಾ ನರೋ ರಾಜನ್ ಸೋಮಲೋಕಮವಾಪ್ನುಯಾತ್ ॥
ಎಲೈ ನರವ್ಯಾಘ್ರನೇ, ಅಲ್ಲಿಂದ ಶ್ರೇಷ್ಠವಾದ ಸೋಮತೀರ್ಥಕ್ಕೆ ಹೋಗಬೇಕು. ಎಲೈ ರಾಜನೇ, ಅಲ್ಲಿ ಸ್ನಾನಮಾಡಿದ ನರನು ಸೋಮಲೋಕವನ್ನು ಪಡೆಯುತ್ತಾನೆ.
ಸಪ್ತಸಾರಸ್ವತಂ ತೀರ್ಥಂ ತತೋ ಗಚ್ಛೇನ್ನರಾಧಿಪ |
ಯತ್ರ ಮಂಕಣಕಃ ಸಿದ್ಧೋ ಮಹರ್ಷಿರ್ಲೋಕವಿಶ್ರುತಃ ॥100॥
ಎಲೈ ರಾಜನೇ, ಅಲ್ಲಿಂದ ಸಪ್ತಸಾರಸ್ವತತೀರ್ಥಕ್ಕೆ ಹೋಗಬೇಕು ಅಲ್ಲಿ ಲೋಕವಿಖ್ಯಾತರಾದ ಮಂಕಣಕ ಮಹರ್ಷಿಗಳು ಸಿದ್ಧಿಯನ್ನು ಪಡೆದರು.
ಪುರಾ ಮಂಕಣಕೋ ರಾಜನ್ ಕುಶಾಗ್ರೇಣೇತಿ ನಃ ಶ್ರುತಮ್|

ಕ್ಷತಃ ಕಿಲ ಕರೇ ರಾಜನ್ ತಸ್ಯ ಶಾಕರಸೋऽಸ್ರುವತ್ ॥101॥
ಸ ವೈ ಶಾಕರಸಂ ದೃಷ್ಟ್ವಾ ಹರ್ಷಾವಿಷ್ಟೋ ಮಹಾತಪಾಃ |
ಪ್ರನೃತ್ತಃ ಕಿಲ ವಿಪ್ರರ್ಷಿರ್ವಿಸ್ಮಯೋತ್ಫುಲ್ಲಲೋಚನಃ ॥102॥
ಎಲೈ ರಾಜನೇ, ಹಿಂದೆ ಮಂಕಣಕ ಋಷಿಗಳ ಹಸ್ತಕ್ಕೆ ಒಂದು ದರ್ಭೆಯ ತುದಿಯು ಚುಚ್ಚಿಕೊಂಡಿತು. ಎಲೈ ರಾಜನೇ ಅವರ ಹಸ್ತದಿಂದ ಶಾಕರಸವು ಸುರಿಯಲು ಪ್ರಾರಂಭಿಸಿತು. ಮಹಾತಪಸ್ವಿಗಳಾದ ಬ್ರಹ್ಮರ್ಷಿಗಳಾದ ಅವರು ಆಶಾಕರಸವನ್ನು ನೋಡಿ ಹರ್ಷಾವಿಷ್ಟರಾಗಿ ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ನೃತ್ಯವನ್ನುಮಾಡಲು ಪ್ರಾರಂಭಿಸಿದರು.
ತತಸ್ತಸ್ಮಿನ್ ಪ್ರನೃತ್ತೇ ತು ಸ್ಥಾವರಂ ಜಂಗಮಂ ಚ ಯತ್ |
ಪ್ರನೃತ್ತಮುಭಯಂ ವೀರ ತೇಜಸಾ ತಸ್ಯ ಮೋಹಿತಮ್ ॥103॥
ಅವರು ನೃತ್ಯವನ್ನು ಮಾಡುತ್ತಿರಲು ಎಲೈ ವೀರನೇ, ಅಲ್ಲಿದ್ದ ಸ್ಥಾವರ ಜಂಗಮಗಳೆಲ್ಲವೂ ಅವರ ಪ್ರಭಾವದಿಂದ ಮೋಹಿತವಾಗಿ ತಾವೂ ನೃತ್ಯವನ್ನು ಮಾಡಿದರು.
ಬ್ರಹ್ಮಾದಿಭಿಃ ಸುರೈ ರಾಜನ್ ಋಷಿಭಿಶ್ಚ ತಪೋಧನೈಃ |
ವಿಜ್ಞಪ್ತೋ ವೈ ಮಹಾದೇವ ಋಷೇರರ್ಥೇ ನರಾಧಿಪ |
ಯಥಾ ನ ನೃತ್ಯತೇ ದೇವ ತಥಾ ತ್ವಂ ಕರ್ತುಮರ್ಹಸಿ ॥104॥
ಆಗ ಬ್ರಹ್ಮಾದಿದೇವತೆಗಳೂ ತಪೋಧನರಾದ ಋಷಿಗಳೂ ಮಹಾದೇವನನ್ನು ಸಮೀಪಿಸಿ ದೇವನೇ ಈ ಋಷಿಯು ನೃತ್ಯವನ್ನು ನಿಲ್ಲಿಸುವಂತೆ ನೀನು ಮಾಡಬೇಕು ಎಂದು ವಿಜ್ಞಾಪಿಸಿದರು.
ತತಃ ಪ್ರನೃತ್ತಮಾಸಾದ್ಯ ಹರ್ಷಾವಿಷ್ಟೇನ ಚೇತಸಾ |
ಸುರಾಣಾಂ ಹಿತಕಾಮಾರ್ಥಮೃಷಿಂ ದೇವೋऽಭ್ಯಭಾಷತ ॥105॥
ಆಗ ದೇವತೆಗಳಿಗೆ ಹಿತವನ್ನುಮಾಡುವ ದೃಷ್ಟಿಯಿಂದ ರುದ್ರದೇವರು ಸಂತೋಷದಿಂದ ಕೂಡಿದ ಮನಸ್ಸಿನಿಂದ ನೃತ್ಯವನ್ನು ಮಾಡುತ್ತಿದ್ದ ಆ ಋಷಿಯ ಬಳಿಗೆ ಬಂದು ಅವರನ್ನು ಕುರಿತು ಮಾತನಾಡಿದರು.
ಭೋಭೋ ಮಹರ್ಷೇ ಧರ್ಮಜ್ಞ ಕಿಮರ್ಥಂ ನೃತ್ಯತೇ ಭವಾನ್ |
ಹರ್ಷಸ್ಥಾನಂ ಕಿಮರ್ಥಂ ವಾ ತವಾದ್ಯ ಮುನಿಪುಂಗವ ॥106॥
ಎಲೈ ಮಹರ್ಷಿಯೇ, ಧರ್ಮಜ್ಞನೇ, ನೀನು ಏತಕ್ಕೆ ನೃತ್ಯವನ್ನು ಮಾಡುತ್ತಿದ್ದೀಯೆ? ಎಲೈ ಮುನಿಪುಂಗವನೇ, ಈ ದಿನ ನಿನ್ನ ಸಂತೋಷಕ್ಕೆ ಕಾರಣವಾದ ಅಂತಹ ವಿಷಯವೇನು?(ಎಂದು ಕೇಳಿದರು)
ಕಿಂ ನ ಪಶ್ಯಸಿ ಮೇ ದೇವ ಕರಾಚ್ಛಾಕರಸಂ ಸ್ರುತಮ್ |
ಯಂ ದೃಷ್ಟ್ವಾऽಹಂ ಪ್ರನೃತ್ತೋ ವೈ ಹರ್ಷೇಣ ಮಹತಾऽನ್ವಿತಃ ॥
ಎಲೈ ಮಹದೇವನೇ, ನನ್ನ ಹಸ್ತದಿಂದ ಶಾಕರಸವು ಸುರಿಯುತ್ತಿರುವುದು ನಿನಗೆ ಕಾಣಿಸುವುದಿಲ್ಲದೇ? ಅದನ್ನು ನೋಡಿ ನಾನು ಬಹಳ ಸಂತೋಷದಿಂದ ನೃತ್ಯವನ್ನುಮಾಡುತ್ತಿದ್ದೇನೆ.
ತಂ ಪ್ರಹಸ್ಯಾಬ್ರವೀದ್ ದೇವೋ ಮುನಿಂ ರಾಗೇಣ ಮೋಹಿತಮ್ |
ಅಹಂ ವೈ ವಿಸ್ಮಯಂ ವಿಪ್ರ ನ ಗಚ್ಛಾಮೀತಿ ಪಶ್ಯ ಮಾಮ್ ॥108॥
ಏವಮುಕ್ತೋ ನರಶ್ರೇಷ್ಠ ಮಹಾದೇವೇನ ವೈ ತದಾ |
ಅಂಗುಷ್ಠಾಗ್ರೇಣ ರಾಜೇಂದ್ರ ಸ್ವಾಂಗುಷ್ಠಸ್ತಾಡಿತೋऽಭವತ್ ॥109॥
ಆಗ ಮಹಾದೇವರು ನಕ್ಕು ಆ ರಾಗದಿಂದ ಮೋಹಿತರಾದ ಋಷಿಗಳನ್ನು ಕುರಿತು ಎಲೈ ಬ್ರಾಹ್ಮಣನೇ, ನನಗೆ ಅದರಲ್ಲಿ ಯಾವ ವಿಸ್ಮಯವೂ ಕಾಣುತ್ತಿಲ್ಲ. ನನ್ನನ್ನು ನೋಡು ಎಂದು ಹೇಳಿ ಮಹಾದೇವರು ತಮ್ಮ ಅಂಗುಷ್ಠದ ತುದಿಯಿಂದ ಋಷಿಗಳ ಅಂಗುಷ್ಠವನ್ನು ತಾಡನೆಮಾಡಿದರು.
ತತೋ ಭಸ್ಮ ಕ್ಷತಾದ್ರಾಜನ್ ನಿರ್ಗತಂ ಹಿಮಸನ್ನಿಭಮ್ |
ತದ್ದೃಷ್ಟ್ವಾ ವ್ರೀಡಿತೋ ರಾಜನ್ ಸ ಮುನಿಃ ಪಾದಯೋರ್ಗತಃ ॥
ಎಲೈ ರಾಜೇಂದ್ರನೇ, ಆಗ ಹಿಮದಂತಹ ಶುಭ್ರವಾದ ಭಸ್ಮವು ಆ ಗಾಯದಿಂದ ಹೊರಹೊಮ್ಮಿತು. ಅದನ್ನು ನೋಡಿ ನಾಚಿಕೆಗೊಂಡ ಆ ಋಷಿಗಳು ರುದ್ರದೇವರ ಪಾದಗಳಿಗೆ ನಮಸ್ಕರಿಸಿದರು.
ನಾನ್ಯಂ ದೇವಮಹಂ ಮನ್ಯೇ ರುದ್ರಾತ್ ಪರತರಂ ಮಹತ್ |
ಸುರಾಸುರಸ್ಯ ಜಗತೋ ಗತಿಸ್ತ್ವಮಸಿ ಶೂಲಧೃತ್ ॥111॥
ನಾನು ರುದ್ರನಿಗಿಂತ ಉತ್ತಮನಾದ ಯಾವ ದೇವತೆಯನ್ನೂ ಕಾಣುವುದಿಲ್ಲ. ಎಲೈ ಶೂಲಧಾರಿಯೇ, ಸುರಾಸುರ ಜಗತ್ತಿಗೆ ನೀನೇ ಗತಿಯಾದವನು.
ತ್ವಯಾ ಸೃಷ್ಟಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಮ್ |
ತ್ವಾಮೇವ ಭಗವನ್ ಸರ್ವೇ ಪ್ರವಿಶಂತ್ಯಕುತೋಭಯಾಃ |
ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ ॥112॥
ಭಗವಂತನೇ, ನೀನೇ ಚರಾಚರಾತ್ಮಕವಾದ ಈ ಮೂರುಲೋಕಗಳನ್ನೆಲ್ಲಾ ಸೃಷ್ಟಿಮಾಡಿದವನು. ಪ್ರಳಯದಲ್ಲಿ ಎಲ್ಲರೂ ನಿರ್ಭಯರಾಗಿ ನಿನ್ನನ್ನೇ ಪ್ರವೇಶಿಸುತ್ತಾರೆ. ದೇವತೆಗಳೂ ನಿನ್ನ ಸ್ವರೂಪವನ್ನು ತಿಳಿಯಲಾರರು. ಇನ್ನು ನಾನು ಹೇಗೆ ತಿಳಿಯಲು ಸಾಧ್ಯ?
ತ್ವಯಿ ಸರ್ವೇ ಸ್ಮ ದೃಶ್ಯಂತೇ ಸುರಾ ಬ್ರಹ್ಮಾದಯೋऽನಘ |
ಸರ್ವಸ್ತ್ವಮಸಿ ಲೋಕಾನಾಂ ಕರ್ತಾ ಕಾರಯಿತಾ ಚ ಹ |

ತ್ವತ್ಪ್ರಸಾದಾತ್ ಸುರಾಃ ಸರ್ವೇ ನಿವಸಂತ್ಯಕುತೋಭಯಾಃ ॥113॥
ಎಲೈ ಪರಿಶುದ್ಧನಾದವನೇ, ನಿನ್ನಲ್ಲಿ ಬ್ರಹ್ಮನೇ ಮೊದಲಾದ ಸಕಲದೇವತೆಗಳು ಕಾಣುತ್ತಿದ್ದಾರೆ. ನೀನು ಸರ್ವನೇ ಆಗಿದ್ದೀಯೆ. ನೀನು ಲೋಕಗಳನ್ನು ಸೃಷ್ಟಿಮಾಡುವವನೂ ಎಲ್ಲ ಜೀವರಿಂದ ಅವರವರ ಕಾರ್ಯಗಳನ್ನು ಮಾಡಿಸುವವನೂ ಆಗಿದ್ದೀಯೆ. ನಿನ್ನ ಅನುಗ್ರಹದಿಂದಲೇ ಎಲ್ಲ ದೇವತೆಗಳೂ ನಿರ್ಭಯವಾಗಿ ವಾಸಮಾಡುತ್ತಾರೆ.
ಏವಂ ಸ್ತುತ್ವಾ ಮಹಾದೇವಮ್ ಋಷಿಃ ಸ ಪ್ರಣತೋಽಭವತ್ ।
ತ್ವತ್ಪ್ರಸಾದಾನ್ಮಹಾದೇವ ತಪೋ ಮೇ ನ ಕ್ಷಯೇತ ವೈ ।
ತತೋ ದೇವಃ ಪ್ರಹೃಷ್ಟಾತ್ಮಾ ಬ್ರಹ್ಮರ್ಷಿಮಿದಮಬ್ರವೀತ್ ॥114॥
ಹೀಗೆ ಸ್ತೋತ್ರಮಾಡಿ ಆ ಋಷಿಗಳು, `ಎಲೈ ಮಹಾದೇವನೇ, ನಿನ್ನ ಅನುಗ್ರಹದಿಂದ ನನ್ನ ತಪಸ್ಸಿಗೆ ಕ್ಷಯವುಂಟಾಗದಿರಲಿ' ಎಂದು ಹೇಳಿ ಪ್ರಣಾಮವನ್ನು ಮಾಡಿದರು. ಆಗ ಪ್ರಸನ್ನರಾದ ಮಹಾದೇವರು ಆ ಬ್ರಹ್ಮರ್ಷಿಗಳನ್ನು ಕುರಿತು ಹೀಗೆ ಹೇಳಿದರು.
ತಪಸ್ತೇ ವರ್ಧತಾಂ ವಿಪ್ರ ಮತ್ಪ್ರಸಾದಾತ್ ಸಹಸ್ರಧಾ ।
ಆಶ್ರಮೇ ಚೇಹ ವತ್ಸ್ಯಾಮಿ ತ್ವಯಾ ಸಹ ಮಹಾಮುನೇ ॥115॥
ಎಲೈ ಬ್ರಾಹ್ಮಣರೇ, ನನ್ನ ಅನುಗ್ರಹದಿಂದ ನಿಮ್ಮ ತಪಸ್ಸು ಸಾವಿರಪಟ್ಟು ಹೆಚ್ಚಲಿ. ಮಹಾಮುನಿಯೇ. ಈ ಆಶ್ರಮದಲ್ಲಿ ನಿಮ್ಮ ಜೊತೆಯಲ್ಲಿ ನಾನು ವಾಸಮಾಡುವೆನು.
ಸಪ್ತಸಾರಸ್ವತೇ ಸ್ನಾತ್ವಾ ಯೋ ಮಾಮರ್ಚಯಿತಾ ದ್ವಿಜಃ ।
ನ ತಸ್ಯ ದುರ್ಲಭಂ ಕಿಂಚಿದಿಹ ಲೋಕೇ ಪರತ್ರ ಚ ॥116॥
ಯಾವ ದ್ವಿಜನು ಸಪ್ತಸಾರಸ್ವತತೀರ್ಥದಲ್ಲಿ ಸ್ನಾನವನ್ನುಮಾಡಿ ನನ್ನನ್ನು ಅರ್ಚಿಸುವನೋ ಅವನಿಗೆ ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ದುರ್ಲಭವಾದುದು ಯಾವುದೂ ಇಲ್ಲ.
ಸಾರಸ್ವತಂ ಚ ತೇ ಲೋಕಂ ಗಮಿಷ್ಯಂತಿ ನ ಸಂಶಯಃ ।
ಏವಮುಕತ್ವ ಮಹಾದೇವಃ ತತ್ರೈವಾಂತರಧೀಯತ ॥117॥
ಅಂತಹವರು ಸಾರಸ್ವತ ಲೋಕಕ್ಕೆ ಹೋಗುವರು ಎಂಬ ವಿಷಯದಲ್ಲಿ ಸಂಶಯವಿಲ್ಲ. ಹೀಗೆ ಹೇಳಿ ಮಹಾದೇವರು ಅಲ್ಲಿಯೇ ಅದೃಶ್ಯರಾದರು.
ತತಸ್ತ್ವೌಶನಸಂ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಮ್ ।
ಯತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ॥118॥
ಕಾರ್ತ್ತಿಕೇಯಶ್ಚ ಭಗವಾನ್ ತ್ರಿಸಂಧ್ಯಂ ಕಿಲ ಭಾರತ ।
ಸಾನ್ನಿಧ್ಯಮಕರೋನ್ನಿತ್ಯಂ ಭಾರ್ಗವಪ್ರಿಯಕಾಮ್ಯಯಾ ॥119॥
ಎಲೈ ಭಾರತನೇ, ಅನಂತರ ಅಲ್ಲಿಂದ ಮೂರುಲೋಕಗಳಲ್ಲಿ ಪ್ರಖ್ಯಾತವಾದ ಶುಕ್ರತೀರ್ಥಕ್ಕೆ ಹೋಗಬೇಕು. ಅಲ್ಲಿ ಶುಕ್ರಾಚಾರ್ಯರಿಗೆ ಹಿತವನ್ನು ಮಾಡುವ ಅಭಿಪ್ರಾಯದಿಂದ ಬ್ರಹ್ಮಾದಿದೇವತೆಗಳೂ ತಪೋಧನರಾದ ಋಷಿಗಳೂ ಪೂಜ್ಯನಾದ ಕಾರ್ತಿಕೇಯನೂ ನಿತ್ಯವೂ ಮೂರು ಸಂಧ್ಯಕಾಲಗಳಲ್ಲಿಯೂ ಸನ್ನಿಹಿತರಾಗಿರುತ್ತಾರೆ.
ಕಪಾಲಮೋಚನಂ ತೀರ್ಥಂ ಸರ್ವಪಾಪಪ್ರಮೋಚನಮ್ ।
ತತ್ರ ಸ್ನಾತ್ವಾ ನರವ್ಯಾಘ್ರ ಸರ್ವಪಾಪೈಃ ಪ್ರಮುಚ್ಯತೇ ॥120॥
ಕಪಾಲಮೋಚನವೆಂಬ ತೀರ್ಥವು ಸರ್ವಪಾಪ ಪರಿಹಾರಕವಾದುದು. ನರವ್ಯಾಘ್ರನೇ, ಅಲ್ಲಿ ಸ್ನಾನವನ್ನು ಮಾಡಿದವನು ಎಲ್ಲ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಅಗ್ನಿತೀರ್ಥಂ ತತೋ ಗಚ್ಛೇತ್ ತತ್ರ ಸ್ನಾತ್ವಾ ನರರ್ಷಭ ।
ಅಗ್ನಿಲೋಕಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥121॥
ನರರ್ಷಭನೇ, ಅಲ್ಲಿಂದ ಅಗ್ನಿತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದ ನರನು ಅಗ್ನಿಲೋಕವನ್ನು ಹೊಂದುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ವಿಶ್ವಾಮಿತ್ರಸ್ಯ ತತ್ರೈವ ತೀರ್ಥಂ ಭರತಸತ್ತಮ ।
ತತ್ರ ಸ್ನಾತ್ವಾ ನರವ್ಯಾಘ್ರ ಬ್ರಾಹ್ಮಣ್ಯಮಭಿಜಾಯತೇ ॥122॥
ಎಲೈ ಭರತಸತ್ತಮನೇ, ಅಲ್ಲಿಯೇ ವಿಶ್ವಾಮಿತ್ರತೀರ್ಥವಿದೆ. ಎಲೈ ನರವ್ಯಾಘ್ರನೇ, ಅಲ್ಲಿ ಸ್ನಾನವನ್ನು ಮಾಡಿದ ನರನು ಮುಂದೆ ಬ್ರಾಹ್ಮಣಯೋನಿಯಲ್ಲಿ ಜನಿಸುತ್ತಾನೆ.
ಬ್ರಹ್ಮಯೋನಿಂ ಸಮಾಸಾದ್ಯ ಶುಚಿಃ ಪ್ರಯತಮಾನಸಃ ।
ತತ್ರ ಸ್ನಾತ್ವಾ ನರವ್ಯಾಘ್ರ ಬ್ರಹ್ಮಲೋಕೇ ಮಹೀಯತೇ ॥123॥
ನರವ್ಯಾಘ್ರನೇ, ಶುಚಿಯಾಗಿ ಮನೋಜಯವನ್ನು ಹೊಂದಿ ಬ್ರಹ್ಮಯೋನಿತೀರ್ಥಕ್ಕೆ ಹೋಗಿ ಅಲ್ಲಿ ಸಽನನಮಾಡಿದ ನರನು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ತತೋ ಗಚ್ಛೇತ ರಾಜೇಂದ್ರ ತೀರ್ಥಂ ತ್ರೈಲೋಕ್ಯವಿಶ್ರುತಮ್ ।
ಪೃಥೂದಕಮಿತಿ ಖ್ಯಾತಂ ಕಾರ್ತ್ತಿಕೇಯಸ್ಯ ಧೀಮತಃ ।
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ॥124॥
ಅಜ್ಞಾನಾತ್ಜ್ಞಾನತೋ ವಾಽಪಿ ಸ್ತ್ರಿಯಾ ವಾ ಪುರುಷೇಣ ವಾ ।
ಯತ್ ಕಿಂಚಿದಶುಭಂ ಕರ್ಮ ಕೃತಂ ಮಾನುಷಬುದ್ಧಿನಾ ॥125॥
ತತ್ ಸರ್ವಂ ನಶ್ಯತೇ ತತ್ರ ಸ್ನಾತಮಾತ್ರಸ್ಯ ಭಾರತ ।

ಅಶ್ವಮೇಧಫಲಂ ಚಾಪಿ ಸ್ವರ್ಗಲೋಕಂ ಚ ಗಚ್ಛತಿ ॥126॥
ಎಲೈ ರಾಜೇಂದ್ರನೇ, ಅನಂತರ ಮೂರು ಲೋಕದಲ್ಲಿಯೂ ವಿಖ್ಯಾತವಾದ ಪೃಥೂದಕವೆಂಬ ಮೇಧಾವಿಯಾದ ಷಣ್ಮುಖನ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನವನ್ನು ಮಾಡಿ ಪಿತೃದೇವತಾರ್ಚನೆಯನ್ನು ಮಾಡಿದ ಪುರುಷನಾಗಲೀ ಸ್ತ್ರೀಯಾಗಲೀ ಜ್ಞಾನದಿಂದಲಾಗಲೀ ಅಥವಾ ಅಜ್ಞಾನದಿಂದಲಾಗಲೀ ಮನುಷ್ಯಬುದ್ಧಿಯಿಂದ ಯಾವ ಪಾಪವನ್ನು ಮಾಡಿದ್ದರೂ ಅವೆಲ್ಲವೂ ಅಲ್ಲಿ ಕೇವಲ ಸ್ನಾನದಿಂದ ನಾಶವನ್ನು ಹೊಂದುತ್ತವೆ. ಎಲೈ ಭಾರತನೇ, ಅವನು ಅಶ್ವಮೇಧಫಲವನ್ನು ಪಡೆದು ಸ್ವರ್ಗಲೋಕಕ್ಕೆ ಹೋಗುತ್ತಾನೆ.
ಪುಣ್ಯಮಾಹುಃ ಕುರುಕ್ಷೇತ್ರಂ ಕುರುಕ್ಷೇತ್ರಾತ್ ಸರಸ್ವತೀಮ್ |
ಸರಸ್ವತ್ಯಾಶ್ಚ ತೀರ್ಥಾನಿ ತೀರ್ಥೇಭ್ಯಶ್ಚ ಪೃಥೂದಕಮ್ ॥127॥
ಕುರುಕ್ಷೇತ್ರವನ್ನು ಪವಿತ್ರವೆಂದು ಹೇಳುತ್ತಾರೆ. ಕುರುಕ್ಷೇತ್ರಕ್ಕಿಂತಲೂ ಸರಸ್ವತಿಯು ಪವಿತ್ರವಾದುದು. ಸರಸ್ವತಿಗಿಂತಲೂ ತೀರ್ಥಗಳು ಪವಿತ್ರವಾದವು. ತೀರ್ಥಗಳಿಗಿಂತಲೂ ಪೃಥೂದಕವು ಪವಿತ್ರವಾದುದು.
ಪೃಥೂದಕೇ ಜಪ್ಯಪರೋ ನೈನಃ ಶ್ವೋಮರಣಂ ತರೇತ್ |
ಗೀತಂ ಸನತ್ಕುಮಾರೇಣ ವ್ಯಾಸೇನ ಚ ಮಹಾತ್ಮನಾ |
ವೇದೇ ಚ ನಿಯತಂ ರಾಜನ್ನಭಿಗಚ್ಛೇತ್ ಪೃಥೂದಕಮ್ ॥128॥
ಪೃಥೂದಕದಲ್ಲಿ ಜಪಶೀಲನಾದ ಮನುಷ್ಯನು ಪುನರ್ಜನ್ಮವನ್ನು ಮತ್ತು ಪುನರ್ಮರಣವನ್ನು ಹೊಂದಿಸುವ ಪಾಪಗಳನ್ನು ದಾಟುತ್ತಾನೆ. ರಾಜನೇ, ಪೃಥೂದಕದ ಮಹಿಮೆಯು ಸನತ್ಕುಮಾರರಿಂದಲೂ ಮಹಾತ್ಮರಾದ ವ್ಯಾಸರಿಂದಲೂ ಮತ್ತು ವೇದಗಳಲ್ಲಿಯೂ ಹೇಳಲ್ಪಟ್ಟಿದೆ. ಆದ್ದರಿಂದ ಖಂಡಿತವಾಗಿ ಪೃಥೂದಕಕ್ಕೆ ಹೋಗಬೇಕು.
ಪೃಥೂದಕಾತ್ ಪುಣ್ಯತರಂ ನಾನ್ಯತ್ ತೀರ್ಥಂ ನರೋತ್ತಮ |
ಏತನ್ಮೇಧ್ಯಂ ಪವಿತ್ರಂ ಚ ಪಾವನಂ ಚ ನ ಸಂಶಯಃ ॥129॥
ಎಲೈ ನರೋತ್ತಮನೇ, ಪೃಥೂದಕಕ್ಕಿಂತ ಅಧಿಕಪುಣ್ಯತೀರ್ಥವು ಇನ್ನೊಂದಿಲ್ಲ. ಇದು ಸೇವನೀಯವಾದುದು ಸ್ವತಃ ಪವಿತ್ರವಾದುದು ಮತ್ತು ಪವಿತ್ರೀಕರಿಸುವ ಶಕ್ತಿಯುಳ್ಳದುದು ಎಂಬ ವಿಷಯದಲ್ಲಿ ಸಂಶಯವಿಲ್ಲ.
ತತ್ರ ಸ್ನಾತ್ವಾ ದಿವಂ ಯಾಂತಿ ಅಪಿ ಪಾಪಕೃತೋ ಜನಾಃ |
ಪೃಥೂದಕೇ ನರಶ್ರೇಷ್ಠ ಪ್ರಾಹುರೇವಂ ಮನೀಷಿಣಃ ॥130॥
ನರಶ್ರೇಷ್ಠನೇ, ಪಾಪಿಗಳಾದ ಮನುಷ್ಯರೂ ಪೃಥೂದಕದಲ್ಲಿ ಸ್ನಾನಮಾಡಿದರೆ ಸ್ವರ್ಗಕ್ಕೆ ಹೋಗುತ್ತಾರೆ ಎಂದು ಜ್ಞಾನಿಗಳು ಹೇಳುತ್ತಾರೆ.

ಮಧುಸ್ರವಂ ಚ ತತ್ರೈವ ತೀರ್ಥಂ ಭರತಸತ್ತಮ |
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥131॥
ಭರತಸತ್ತಮನೇ, ಅಲ್ಲಿಯೇ ಮಧುಸ್ರವವೆಂಬ ತೀರ್ಥವಿದೆ. ರಾಜನೇ, ಅಲ್ಲಿ ಸ್ನಾನಮಾಡುವ ಮನುಷ್ಯನು ಗೋಸಹಸ್ರಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇನ್ನರಶ್ರೇಷ್ಠ ದೇವ್ಯಾಸ್ತೀರ್ಥಮನುತ್ತಮಮ್ |
ಸರಸ್ವತ್ಯಾರುಣಾಯಾಶ್ಚ ಸಂಗಮೇ ಲೋಕವಿಶ್ರುತೇ ॥132॥
ತ್ರಿರಾತ್ರೋಪೋಷಿತಃ ಸ್ನಾತ್ವಾ ಮುಚ್ಯತೇ ಬ್ರಹ್ಮಹತ್ಯಯಾ |
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ವಿಂದತಿ ಮಾನವಃ |
ಆಸಪ್ತಮಂ ಕುಲಂ ಚೈವ ಪುನಾತಿ ಭರತರ್ಷಭ ॥133॥
ನರಶ್ರೇಷ್ಠನೇ, ಅಲ್ಲಿಂದ ಸರಸ್ವತೀ ಮತ್ತು ಆರುಣಾ ನದಿಗಳ ಸಂಗಮದಲ್ಲಿರುವ ಲೋಕವಿಶ್ರುತವಾದ ದೇವೀತೀರ್ಥಕ್ಕೆ ಹೋಗಬೇಕು. ಅಲ್ಲಿ ಮೂರುರಾತ್ರಿ ಉಪವಾಸವನ್ನು ಮಾಡಿ ಸ್ನಾನವನ್ನು ಮಾಡುವವನು ಬ್ರಹ್ಮಹತ್ಯೆಯಿಂದಲೂ ನಿರ್ಮುಕ್ತನಾಗುತ್ತಾನೆ. ಅಗ್ನಿಷ್ಟೋಮ ಅತಿರಾತ್ರಯಾಗಗಳ ಫಲವನ್ನು ಪಡೆಯುತ್ತಾನೆ. ಮತ್ತು ಎಲೈ ಭರತರ್ಷಭನೇ ಏಳು ತಲೆಗಳವರೆಗೆ ತನ್ನ ಕುಲವನ್ನು ಪವಿತ್ರೀಕರಿಸುತ್ತಾನೆ.
ಅತೀವ ತೀರ್ಣಂ ತತ್ರೈವ ತೀರ್ಥಂ ಕುರುಕುಲೋದ್ವಹ |
ವಿಪ್ರಾಣಾಮನುಕಂಪಾರ್ಥಂ ಶಾರ್ಙ್ಗಿಣಾ ನಿರ್ಮಿತಂ ಪುರಾ ॥134॥
ಎಲೈ ಕುರುಕುಲೋದ್ವಹನೇ ಅಲ್ಲಿಯೇ ಅತಿತೀರ್ಣವೆಂಬ ತೀರ್ಥವಿದೆ. ಅದು ಬ್ರಾಹ್ಮಣರ ಮೇಲಿನ ಅನುಕಂಪದಿಂದ ಶಾರ್ಙ್ಗಧಾರಿಯಾದ ವಿಷ್ಣುವು ಹಿಂದೆ ನಿರ್ಮಿಸಿದ ತೀರ್ಥ.
ವ್ರತೋಪನಯನಾಭ್ಯಾಂ ವಾಽಪ್ಯುಪವಾಸೇನ ವಾ ದ್ವಿಜಃ |
ಕ್ರಿಯಾಮಂತ್ರೈಶ್ಚ ಸಂಯುಕ್ತೋ ಬ್ರಾಹ್ಮಣಃ ಸ್ಯಾನ್ನ ಸಂಶಯಃ ॥135॥
ಯಾವ ದ್ವಿಜನು ಅಲ್ಲಿ ಸ್ನಾನವನ್ನು ಮಾಡಿ ವ್ರತ ಉಪನಯನ ಉಪವಾಸ ಮತ್ತು ಮಂತ್ರಗಳ ಜಪಗಳನ್ನು ಮಾಡುತ್ತಾನೆಯೊ ಅವನು ಬ್ರಾಹ್ಮಣನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಕ್ರಿಯಾಮಂತ್ರವಿಹೀನೋಽಪಿ ತತ್ರ ಸ್ನಾತ್ವಾ ನರರ್ಷಭ |
ಚೀರ್ಣವ್ರತೋ ಭವೇದ್ ವಿಪ್ರೋ ದೃಷ್ಟಮೇತತ್ ಪುರಾತನೇ |
ಸಮುದ್ರಾಶ್ಚಾಪಿ ಚತ್ವಾರಃ ಶಾರ್ಙ್ಗಿಣಾಽತ್ರ ಸಮಾಹಿತಾಃ ॥136॥
ಎಲೈ ನರರ್ಷಭನೇ, ಕ್ರಿಯಾಹೀನನಾದವನು ಮತ್ತು ಮಂತ್ರ ಹೀನನಾದವನು ಸಹ ಅಲ್ಲಿ ಸ್ನಾನವನ್ನು ಮಾಡಿ ಎಲ್ಲ ವ್ರತಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆ. ಇದು ಹಿಂದಿನಿಂದಲೂ ನೋಡಲ್ಪಟ್ಟಿದೆ. ಶಾರ್ಙ್ಗಧರನಾದ ವಿಷ್ಣುವು ಇಲ್ಲಿ ನಾಲ್ಕು ಸಮುದ್ರಗಳ ಸನ್ನಿಧಾನವನ್ನು ಉಂಟುಮಾಡಿದ್ದಾನೆ.

ಯತ್ರ ಸ್ನಾತ್ವಾ ನರವ್ಯಾಘ್ರ ನ ದುರ್ಗತಿಮವಾಪ್ನುಯಾತ್ |
ಫಲಾನಿ ಗೋಸಹಸ್ರಾಣಾಂ ಚತುರ್ಣಾಂ ವಿಂದತೇ ಚ ಸಃ ॥137॥
ಅಲ್ಲಿ ಸ್ನಾನವನ್ನು ಮಾಡಿದವನಿಗೆ ದುರ್ಗತಿಯಾಗುವುದಿಲ್ಲ. ಮತ್ತು ನಾಲ್ಕು ಸಹಸ್ರ ಗೋದಾನವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇತ ರಾಜೇಂದ್ರ ತೀರ್ಥಂ ಶತಸಹಸ್ರಿಕಮ್ |
ಸಾಹಸ್ರಿಕಂ ಚ ತತ್ರೈವ ದ್ವೇ ತೀರ್ಥೇ ಲೋಕವಿಶ್ರುತೇ ॥138॥
ಉಭಯೋರ್ಹಿ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ |
ದಾನಂ ಚಾಪ್ಯುಪವಾಸೋ ವಾ ಸಹಸ್ರಗುಣಿತಂ ಭವೇತ್ ॥139॥
ರಾಜೇಂದ್ರನೇ, ಅಲ್ಲಿಯೆ ಶತಸಹಸ್ರಿಕ ಮತ್ತು ಸಾಹಸ್ರಿಕ ಎಂಬ ಲೋಕವಿಶ್ರುತವಾದ ಎರಡು ತೀರ್ಥಗಳಿವೆ. ಅಲ್ಲಿಗೆ ಹೋಗಬೇಕು. ಆ ಎರಡು ತೀರ್ಥಗಳಲ್ಲಿ ಸ್ನಾನಮಾಡಿದ ನರನು ಗೋಸಹಸ್ರ ಫಲವನ್ನು ಪಡೆಯುತ್ತಾನೆ. ಅಲ್ಲಿ ದಾನವಾಗಲೀ ಅಥವಾ ಉಪವಾಸವಾಗಲೀ ಸಾವಿರಪಟ್ಟು ಹೆಚ್ಚು ಫಲದಾಯಕವಾಗುತ್ತದೆ.
ತತೋ ಗಚ್ಛೇತ ರಾಜೇಂದ್ರ ರೇಣುಕಾತೀರ್ಥಮುತ್ತಮಮ್ |
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ |
ಸರ್ವಪಾಪವಿಶುದ್ಧಾತ್ಮಾ ಅಗ್ನಿಷ್ಟೋಮಫಲಂ ಲಭೇತ್ ॥140॥
ರಾಜೇಂದ್ರನೇ, ಅಲ್ಲಿಂದ ಶ್ರೇಷ್ಠವಾದ ರೇಣುಕಾತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನವನ್ನು ಮಾಡಿ ಪಿತೃದೇವತಾರ್ಚನೆಯಲ್ಲಿ ನಿರತನಾದವನು ಸರ್ವಪಾಪಗಳಿಂದ ಮುಕ್ತನಾಗಿ ಅಗ್ನಿಷ್ಟೋಮಫಲವನ್ನು ಹೊಂದುವನು.
ತತ್ರ ಬ್ರಹ್ಮಾ ಸ್ವಯಂ ನಿತ್ಯಂ ದೇವೈಃ ಸಹ ಮಹೀಪತೇ |
ಆಯಾಸ್ಯತೇ ಕುರುಶ್ರೇಷ್ಠ ನಾರಾಯಣಪುರೋಗಮೈಃ ॥141॥
ಕುರುಶ್ರೇಷ್ಠನೇ, ಆ ರೇಣುಕಾತೀರ್ಥಕ್ಕೆ ನಿತ್ಯವೂ ನಾರಾಯಣನೇ ಮೊದಲಾದ ಎಲ್ಲ ದೇವತೆಗಳ ಜೊತೆಯಲ್ಲಿ ಬ್ರಹ್ಮದೇವರು ಬರುತ್ತಾರೆ.
ಸಾನ್ನಿಧ್ಯಂ ಚೈವ ರಾಜೇಂದ್ರ ರುದ್ರಪತ್ನ್ಯಾಃ ಕುರೂದ್ವಹ |
ಅರ್ಚಯಿತ್ವಾ ನದೀಂ ದೇವೀಂ ನ ದುರ್ಗತಿಮವಾಪ್ನುಯಾತ್ ॥142॥
ಎಲೈ ರಾಜೇಂದ್ರನೇ, ಅಲ್ಲಿ ಪಾರ್ವತಿದೇವಿಯ ಸಾನ್ನಿಧ್ಯವಿದೆ. ಕುರೂದ್ವಹನೇ, ಆ ನದಿಯನ್ನು ಮತ್ತು ಪಾರ್ವತಿಯನ್ನು ಅರ್ಚಿಸಿದವನು ದುರ್ಗತಿಯನ್ನು ಹೊಂದುವುದಿಲ್ಲ.
ವಿಮೋಚನಮುಪಸ್ಪೃಶ್ಯ ಜಿತಮನ್ಯುರ್ಜಿತೇಂದ್ರಿಯಃ |
ಪುಣ್ಯೇನ ಮಹತಾ ಯುಕ್ತಃ ಸತಾಂ ಲೋಕೇ ಮಹೀಯತೇ |
ಪ್ರತಿಗ್ರಹಕೃತೈ ರ್ದೋಷೈಃ ಸರ್ವೈಃ ಸ ಪರಿಮುಚ್ಯತೇ ॥143॥
ಜಿತಕ್ರೋಧನಾಗಿ ಜಿತೇಂದ್ರಿಯನಾಗಿ ಯಾವ ಮನುಷ್ಯನು ವಿಮೋಚನತೀರ್ಥದಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನು ಮಹಾಪುಣ್ಯದಿಂದ ಕೂಡಿದವನಾಗಿ ಸಜ್ಜನರ ಲೋಕದಲ್ಲಿ ಪೂಜಿಸಲ್ಪಡುತ್ತಾನೆ. ಪ್ರತಿಗ್ರಹದಿಂದ ಉಂಟಾದ ಎಲ್ಲ ದೋಷಗಳಿಂದಲೂ ಪೂರ್ಣನಾಗಿ ಮುಕ್ತನಾಗುತ್ತಾನೆ.
ತತಃ ಪಂಚವಟಂ ಗತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ |
ಯತ್ರ ಯೋಗೇಶ್ವರಃ ಸ್ಥಾಣುಃ ಸ್ವಯಮೇವ ವೃಷಧ್ವಜಃ ॥144॥
ತಮರ್ಚಯಿತ್ವಾ ದೇವೇಶಂ ಗಮನಾದೇವ ಸಿದ್ಧ್ಯತಿ |
ಔಜಸಂ ಚಾರುಣಂ ತೀರ್ಥಂ ಸ್ನಾತ್ವಾ ದೀಪ್ಯತಿ ತೇಜಸಾ ॥145॥
ಅನಂತರ ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ ಪಂಚವಟತೀರ್ಥಕ್ಕೆ ಹೋಗಬೇಕು. ಅಲ್ಲಿ ಯೋಗೇಶ್ವರನಾದ ವೃಷಭಧ್ವಜನಾದ ಸ್ಥಾಣುವಾದ ಶಂಕರನು ತಾನೇ ಸನ್ನಿಹಿತನಾಗಿದ್ದಾನೆ. ದೇವೇಶನಾದ ಅವನನ್ನು ಅರ್ಚಿಸಿದರೆ ಪಂಚವಟಕ್ಕೆ ಹೋಗುವಮಾತ್ರದಿಂದಲೇ ಸಿದ್ಧಿಯಾಗುತ್ತದೆ. ಔಜಸ ಮತ್ತು ಅರುಣತೀರ್ಥಗಳಲ್ಲಿ ಸ್ನಾನಮಾಡಿದವನು ಕಾಂತಿಯಿಂದ ಬೆಳಗುತ್ತಾನೆ.
ಯತ್ರ ಬ್ರಹ್ಮಾದಿಭಿರ್ದೇವೈಃ ಋಷಿಭಿಶ್ಚ ತಪೋಧನೈಃ |
ಸೇನಾಪತ್ಯೇನ ದೇವಾನಾಮಭಿಷಿಕ್ತೋ ಗುಹಃ ಪುರಾ ॥146॥
ಅಲ್ಲಿ (ಔಜಸ ಅರುಣತೀರ್ಥಗಳಲ್ಲಿ) ಬ್ರಹ್ಮಾದಿದೇವತೆಗಳೂ ತಪೋಧನರಾದ ಋಷಿಗಳೂ ಸೇರಿ ಹಿಂದೆ ಷಣ್ಮುಖನಿಗೆ ದೇವತೆಗಳ ಸೇನಾನಾಯಕನೆಂದು ಅಭಿಷೇಕಮಾಡಿದರು.
ಔಜಸಸ್ಯ ತು ಪೂರ್ವೇಣ ಕುರುತೀರ್ಥಂ ಕುರೂದ್ವಹ |
ಕುರುತೀರ್ಥೇ ನರಃ ಸ್ನಾತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ |
ಸರ್ವಪಾಪವಿಶುದ್ಧಾತ್ಮಾ ಕುರುಲೋಕಂ ಪ್ರಪದ್ಯತೇ ॥147॥
ಕುರೂದ್ವಹನೇ, ಔಸಜತೀರ್ಥದ ಪೂರ್ವಭಾಗದಲ್ಲಿ ಕುರುತೀರ್ಥವಿದೆ. ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿ ಕುರುತೀರ್ಥದಲ್ಲಿ ಸ್ನಾನವನ್ನುಮಾಡಿದ ನರನು ಸರ್ವಪಾಪಗಳಿಂದ ನಿರ್ಮುಕ್ತನಾಗಿ ಕುರುಲೋಕವನ್ನು ಹೊಂದುತ್ತಾನೆ.
ಸ್ವರ್ಗದ್ವಾರಂ ತತೋ ಗಚ್ಛೇನ್ನಿಯತೋ ನಿಯತಾಶನಃ |
ಸ್ವರ್ಗಲೋಕಮವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥148॥
ಅಲ್ಲಿಂದ ನಿಯಮ ಬದ್ಧನಾಗಿ ಮತ್ತು ನಿಯತ ಆಹಾರನಾಗಿ ಸ್ವರ್ಗದ್ವಾರಕ್ಕೆ ಹೋಗಬೇಕು. ಅಂತಹ ಮನುಷ್ಯನು ಸ್ವರ್ಗಲೋಕವನ್ನು ಪಡೆಯುತ್ತಾನೆ. ಮತ್ತು ಬ್ರಹ್ಮಲೋಕಕ್ಕೂ ಹೋಗುತ್ತಾನೆ.

ತತೋ ಗಚ್ಛೇತ ನರಕಂ ತೀರ್ಥಸೇವೀ ಕುರೂದ್ವಹ |
ತತ್ರ ಸ್ನಾತ್ವಾ ನರವ್ಯಾಘ್ರ ನ ದುರ್ಗತಿಮವಾಪ್ನುಯಾತ್ ॥149॥
ಎಲೈ ಕುರೂದ್ವಹನೇ, ಅಲ್ಲಿಂದ ನರಕತೀರ್ಥಕ್ಕೆ ತೀರ್ಥಯಾತ್ರೆ ಮಾಡುವವನು ಹೋಗಬೇಕು. ನರವ್ಯಾಘ್ರನೇ, ಅಲ್ಲಿ ಸ್ನಾನವನ್ನು ಮಾಡಿದರೆ ದುರ್ಗತಿಯುಂಟಾಗುವುದಿಲ್ಲ.
ತತ್ರೈವ ಚ ಮಹಾರಾಜ ವಿಶ್ವೇಶ್ವರಮುಮಾಪತಿಮ್ |
ಅಭಿಗಮ್ಯ ಮಹಾದೇವಂ ಮುಚ್ಯತೇ ಸರ್ವಕಿಲ್ಬಿಷೈಃ ॥150॥
ನಾರಾಯಣಂ ಚಾಭಿಗಮ್ಯ ಪದ್ಮನಾಭಮರಿಂದಮ |
ಶೋಭಮಾನೋ ಮಹಾರಾಜ ವಿಷ್ಣುಲೋಕಂ ಪ್ರಪದ್ಯತೇ ॥151॥
ಎಲೈ ಮಹಾರಾಜನೇ, ಅಲ್ಲಿಯೇ ವಿಶ್ವೇಶ್ವರನಾದ ಉಮಾಪತಿಯಾದ ಮಹಾದೇವನನ್ನು ಸಮೀಪಿಸಿ ಅರ್ಚಿಸುವ ನರನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ. ಮಹಾರಾಜನೇ, ಅಲ್ಲಿಯೇ ನಾರಾಯಣನನ್ನು ಪದ್ಮನಾಭನನ್ನು ತಲುಪಿ ಅರ್ಚಿಸುವವನು ಶೋಭಮಾನನಾಗಿ ವಿಷ್ಣುಲೋಕವನ್ನು ಪಡೆಯುತ್ತಾನೆ.
ತೀರ್ಥೇಷು ಸರ್ವದೇವಾನಾಂ ಸ್ನಾತಃ ಸ ಪುರುಷರ್ಷಭ |
ಸರ್ವದುಃಖೈಃ ಪರಿತ್ಯಕ್ತೋ ದ್ಯೋತತೇ ಶಶಿವನ್ನರಃ ॥152॥
ಎಲೈ ಪುರುಷರ್ಷಭನೇ, ಸರ್ವದೇವತೀರ್ಥದಲ್ಲಿ ಸ್ನಾನವನ್ನು ಮಾಡಿದ ನರನು ಸರ್ವದುಃಖಗಳನ್ನು ಪರಿಹಾರಮಾಡಿಕೊಂಡು ಚಂದ್ರನಂತೆ ಕಂಗೊಳಿಸುತ್ತಾನೆ.
ತತಃ ಸ್ವಸ್ತಿಪುರಂ ಗಚ್ಛೇತ್ ತೀರ್ಥಸೇವೀ ನರಾಧಿಪ |
ಪ್ರದಕ್ಷಿಣಮುಪಾವೃತ್ಯ ಗೋಸಹಸ್ರಫಲಂ ಲಭೇತ್ ॥153॥
ಎಲೈ ನರಾಧಿಪನೇ, ತೀರ್ಥಸೇವಿಯಾದ ನರನು ಅಲ್ಲಿಂದ ಸ್ವಸ್ತಿಪುರಕ್ಕೆ ಹೋಗಬೇಕು. ಸ್ವಸ್ತಿಪುರವನ್ನು ಪ್ರದಕ್ಷಿಣೆಮಾಡುವುದರಿಂದ ಗೋಸಹಸ್ರ ಫಲವು ಉಂಟಾಗುತ್ತದೆ.
ಪಾವನಂ ತೀರ್ಥಮಾಸಾದ್ಯ ತರ್ಪಯೇತ್ ಪಿತೃದೇವತಾಃ |
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಭಾರತ ॥154॥
ಎಲೈ ಭಾರತನೇ, ಪಾವನತೀರ್ಥಕ್ಕೆ ಹೋಗಿ ಪಿತೃದೇವತೆಗಳಿಗೆ ತರ್ಪಣವನ್ನು ಕೊಡಬೇಕು. ಅದರಿಂದ ಅಗ್ನಿಷ್ಟೋಮಫಲವುಂಟಾಗುತ್ತದೆ.
ಗಂಗಾಹ್ರದಶ್ಚ ತತ್ರೈವ ಕೂಪಶ್ಚ ಭರತರ್ಷಭ |
ತಿಸ್ರಃ ಕೋಟ್ಯಶ್ಚ ತೀರ್ಥಾನಾಂ ತಸ್ಮಿನ್ ಕೂಪೇ ಮಹೀಪತೇ |
ತತ್ರ ಸ್ನಾತ್ವಾ ನರೋ ರಾಜನ್ ಸ್ವರ್ಗಲೋಕಂ ಪ್ರಪದ್ಯತೇ ॥155॥
ಎಲೈ ಭರತರ್ಷಭನೇ, ಅಲ್ಲಿಯೇ ಗಂಗಾಹ್ರದವೆಂಬ ಕೂಪವಿದೆ. ಎಲೈ ರಾಜನೇ, ಆ ಕೂಪದಲ್ಲಿ ಮೂರು ಕೋಟಿ ತೀರ್ಥಗಳ ಸನ್ನಿಧಾನವಿದೆ. ಎಲೈ ರಾಜನೇ, ಅಲ್ಲಿ ಸ್ನಾನಮಾಡಿದ ಮನುಷ್ಯನು ಸ್ವರ್ಗಲೋಕವನ್ನು ಪಡೆಯುತ್ತಾನೆ.
ಆಪಗಾಯಾಂ ನರಃ ಸ್ನಾತ್ವಾ ಅರ್ಚಯಿತ್ವಾ ಮಹೇಶ್ವರಮ್ |
ಗಾಣಪತ್ಯಮವಾಪ್ನೋತಿ ಕುಲಂ ಚೋದ್ಧರತೇ ಸ್ವಕಮ್ ॥156॥
ಆಪಗಾತೀರ್ಥದಲ್ಲಿ ಸ್ನಾನವನ್ನುಮಾಡಿ ಮಹೇಶ್ವರನನ್ನು ಅರ್ಚಿಸುವ ಮನುಷ್ಯನು ಈಶ್ವರನ ಗಣಾಧಿಪತ್ಯವನ್ನು ಪಡೆಯುತ್ತಾನೆ ಮತ್ತು ತನ್ನ ಕುಲವನ್ನು ಉದ್ಧಾರಮಾಡುತ್ತಾನೆ.
ತತಃ ಸ್ಥಾಣುವನಂ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಮ್ |
ತತ್ರ ಸ್ನಾತ್ವಾ ಸ್ಥಿತೋ ರಾತ್ರಿಂ ರುದ್ರಲೋಕಮವಾಪ್ನುಯಾತ್ ॥157॥
ಅಲ್ಲಿಂದ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಸ್ಥಾಣುವನಕ್ಕೆ ಹೋಗಬೇಕು. ಅಲ್ಲಿ ಸ್ನಾನವನ್ನು ಮಾಡಿ ಒಂದು ರಾತ್ರಿವಾಸವನ್ನು ಮಾಡುವವನು ರುದ್ರಲೋಕವನ್ನು ಪಡೆಯುತ್ತಾನೆ.
ಬದರೀಪತ್ತನಂ ಗಚ್ಛೇದ್ ವಸಿಷ್ಠಸ್ಯಾಶ್ರಮಂ ಗತಃ |
ಬದರೀಂ ಭಕ್ಷಯೇತ್ ತತ್ರ ತ್ರಿರಾತ್ರೋಪೋಷಿತೋ ನರಃ ॥158॥
ಬದರಿಪಟ್ಟಣಕ್ಕೆ ಹೋಗಿ ಅಲ್ಲಿ ವಸಿಷ್ಠಾಶ್ರಮಕ್ಕೆ ಹೋಗಬೇಕು. ಅಲ್ಲಿ ಮೂರು ರಾತ್ರಿಗಳು ಉಪವಾಸವನ್ನು ಮಾಡಿ ಬದರಿಫಲವನ್ನು ಭಕ್ಷಿಸಬೇಕು.
ಸಮ್ಯಗ್ದ್ವಾದಶವರ್ಷಾಣಿ ಬದರಾದಸ್ಯ ಯತ್ ಫಲಮ್ |
ತ್ರಿರಾತ್ರೋಪೋಷಿತಸ್ಯೈವ ಭವೇತ್ತುಲ್ಯಂ ನರಾಧಿಪ ॥159॥
ಎಲೈ ನರಾಧಿಪನೇ, ಹಾಗೆ ಮಾಡಿದರೆ ಹನ್ನೆರಡುವರ್ಷಗಳ ಕಾಲ ಕೇವಲ ಬದರಿಫಲದ ಭಕ್ಷಣದಿಂದ ಬರುವ ಫಲವು ಮೂರುರಾತ್ರಿ ಉಪವಾಸವನ್ನು ಮಾಡುವವನಿಗೂ ಉಂಟಾಗುತ್ತದೆ.
ಇಂದ್ರತೀರ್ಥಂ ಸಮಾಸಾದ್ಯ ತೀರ್ಥಸೇವೀ ನರಾಧಿಪ |
ಅಹೋರಾತ್ರೋಪವಾಸೇನ ಶಕ್ರಲೋಕೇ ಮಹೀಯತೇ ॥160॥
ಎಲೈ ನರಾಧಿಪನೇ, ತೀರ್ಥಸೇವಿಯಾದ ಮನುಷ್ಯನು ಇಂದ್ರತೀರ್ಥಕ್ಕೆ ಹೋಗಿ ಒಂದು ಹಗಲು ಮತ್ತು ರಾತ್ರಿ ಉಪವಾಸವನ್ನು ಮಾಡುವುದರಿಂದ ಇಂದ್ರಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಏಕರಾತ್ರಂ ಸಮಾಸಾದ್ಯ ಏಕರಾತ್ರೋಷಿತೋ ನರಃ |
ನಿಯತಃ ಸತ್ಯವಾದೀ ಚ ಬ್ರಹ್ಮಲೋಕೇ ಮಹೀಯತೇ ॥161॥

ಏಕರಾತ್ರತೀರ್ಥಕ್ಕೆ ಹೋಗಿ ಒಂದುರಾತ್ರಿಯ ಕಾಲ ನಿಯಮಬದ್ಧನಾಗಿ ವಾಸಮಾಡುವ ಸತ್ಯವಾದಿಯಾದ ಪುರುಷನು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ತೀರ್ಥಂ ತ್ರೈಲೋಕ್ಯವಿಶ್ರುತಮ್ |
ಆದಿತ್ಯಸ್ಯಾಶ್ರಮಂ ಗತ್ವಾ ತೇಜೋರಾಶೇರ್ಮಹಾತ್ಮನಃ ||162||
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಸ್ನಾನಂ ಮಹದವಾಪ್ನುಯಾತ್ |
ಆದಿತ್ಯಲೋಕಂ ವ್ರಜತಿ ಕುಲಂ ಚೈವ ಸಮುದ್ಧರೇತ್ ||163||
ಎಲೈ ಧರ್ಮಜ್ಞನೇ, ಅನಂತರ ಮೂರುಲೋಕಗಳಲ್ಲಿಯೂ ಪ್ರಖ್ಯಾತವಾದ ತೇಜೋರಾಶಿಯಾದ ಮಹಾನುಭಾವನಾದ ಆದಿತ್ಯನ ಆಶ್ರಮಕ್ಕೆ ಹೋಗಿ ಅಲ್ಲಿ ಆದಿತ್ಯತೀರ್ಥದಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಶ್ರೇಷ್ಠವಾದ ಸ್ಥಾನವನ್ನು ಪಡೆಯುತ್ತಾನೆ ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ ಮತ್ತು ಸೂರ್ಯಲೋಕಕ್ಕೆ ಹೋಗುತ್ತಾನೆ.
ಸೋಮತೀರ್ಥಂ ನರೋ ಗತ್ವಾ ತೀರ್ಥಸೇವೀ ಕುರೂದ್ವಹ |
ಸೋಮಲೋಕಮವಾಪ್ನೋತಿ ಸ ವೈ ನಾಸ್ತ್ಯತ್ರ ಸಂಶಯಃ ||164||
ಎಲೈ ಕುರೂದ್ವಹನೇ, ತೀರ್ಥಸೇವಿಯಾದ ನರನು ಸೋಮತೀರ್ಥಕ್ಕೆ ಹೋಗಿ ಸ್ನಾನವನ್ನು ಮಾಡಿದರೆ ಸೋಮಲೋಕವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.
ತತೋ ಗಚ್ಛೇತ ಧರ್ಮಜ್ಞ ದಧೀಚಸ್ಯ ಮಹಾತ್ಮನಃ |
ತೀರ್ಥಂ ಪುಣ್ಯತಮಂ ರಾಜನ್ ಪವಿತ್ರಂ ಪಾಪನಾಶನಮ್ ||165||
ಯತ್ರ ಸಾರಸ್ವತೋ ರಾಜನ್ ಸೋಽಂಗಿರಾಸ್ತಪಸೋ ನಿಧಿಃ |
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ವಾಜಪೇಯಫಲಂ ಲಭೇತ್ |
ಸಾರಸ್ವತೀಂ ಗತಿಂ ಚೈವ ಲಭತೇ ನಾತ್ರ ಸಂಶಯಃ ||166||
ಎಲೈ ಧರ್ಮಜ್ಞನೇ, ಅಲ್ಲಿಂದ ಮಹಾತ್ಮರಾದ ದಧೀಚಿ ಋಷಿಗಳ ಪವಿತ್ರವಾದ ಪುಣ್ಯಪ್ರದವಾದ ಮತ್ತು ಪಾಪನಾಶಕವಾದ ತೀರ್ಥಕ್ಕೆ ಹೋಗಬೇಕು. ಎಲೈ ರಾಜನೇ, ಅಲ್ಲಿ ಸರಸ್ವತೀತೀರನಿವಾಸಿಗಳಾದ ತಪೋನಿಧಿಗಳಾದ ಅಂಗಿರಸರು ಇರುತ್ತಾರೆ. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದ ನರನು ವಾಜಪೇಯಯಾಗದ ಫಲವನ್ನು ಹೊಂದಿ ಸಾರಸ್ವತ ಲೋಕವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.
ತತಃ ಕನ್ಯಾಶ್ರಮಂ ಗಚ್ಛೇನ್ ನಿಯತೋ ನಿಯತಾಶನಃ |
ತ್ರಿರಾತ್ರಮುಷಿತೋ ರಾಜನ್ನುಪವಾಸಪರಾಯಣಃ ||167||
ಲಭೇತ್ ಕನ್ಯಾಶತಂ ದಿವ್ಯಂ ಬ್ರಹ್ಮಲೋಕಂ ಚ ಗಚ್ಛತಿ |
ತತೋ ಗಚ್ಛೇತ ಧರ್ಮಜ್ಞ ತೀರ್ಥಂ ಸನ್ನಿಹತೀಮಪಿ ||168||
ತತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ |
ಮಾಸಿಮಾಸಿ ಸಮೇಷ್ಯಂತಿ ಪುಣ್ಯೇನ ಮಹತಾಽನ್ವಿತಾಃ ||169||
ಅಲ್ಲಿಂದ ನಿಯಮಬದ್ಧನಾಗಿ ನಿಯತ ಅಹಾರನಾಗಿ ಕನ್ಯಾಶ್ರಮಕ್ಕೆ ಹೋಗಿ ಮೂರುರಾತ್ರಿ ವಾಸವನ್ನು ಮಾಡಿ ಉಪವಾಸಪರಾಯಣನಾದ ನರನು ಶ್ರೇಷ್ಠವಾದ ನೂರು ಕನ್ಯೆಯರನ್ನು ಪಡೆಯುತ್ತಾನೆ. ದಿವ್ಯವಾದ ಬ್ರಹ್ಮಲೋಕವನ್ನು ಹೊಂದುತ್ತಾನೆ. ಎಲೈ ಧರ್ಮಜ್ಞನೇ, ಅಲ್ಲಿಂದ ಸನ್ನಿಹತೀ ತೀರ್ಥಕ್ಕೆ ಹೋಗಬೇಕು. ಅಲ್ಲಿ ಪ್ರತಿತಿಂಗಳೂ ಬ್ರಹ್ಮಾದಿದೇವತೆಗಳು ಮತ್ತು ತಪೋಧನರಾದ ಮಹಾಪುಣ್ಯಶಾಲಿಗಳಾದ ಋಷಿಗಳು ಬಂದು ಸೇರುತ್ತಾರೆ.
ಸನ್ನಿಹತ್ಯಾಮುಪಸ್ಪೃಶ್ಯ ರಾಹುಗ್ರಸ್ತೇ ದಿವಾಕರೇ |
ಅಶ್ವಮೇಧಶತಸ್ಯಾಗ್ರ್ಯಂ ಫಲಂ ಪ್ರಾಪ್ನೋತಿ ಮಾನವಃ ||170||
ಯಾರು ರಾಹುಗ್ರಸ್ತ ಸೂರ್ಯಗ್ರಹಣ ಸಮಯದಲ್ಲಿ ಸನ್ನಿಹತೀತೀರ್ಥದಲ್ಲಿ ಸ್ನಾನವನ್ನು ಮಾಡುತ್ತಾರೆಯೋ ಅಂತಹವರು ನೂರು ಅಶ್ವಮೇಧಗಳಿಗಿಂತ ಹೆಚ್ಚಿನ ಫಲವನ್ನು ಪಡೆಯುತ್ತಾರೆ.
ಪೃಥಿವ್ಯಾಂ ಯಾನಿ ತೀರ್ಥಾನಿ ಅಂತರಿಕ್ಷಚರಾಣಿ ಚ |
ನದ್ಯೋ ನದಾಸ್ತಟಾಕಾನಿ ಸರ್ವಪ್ರಸ್ರವಣಾಣಿ ಚ ||171||
ಉದಪಾನಾಶ್ಚ ವಪ್ರಾಶ್ಚ ಪುಣ್ಯಾನ್ಯಾಯತನಾನಿ ಚ |
ಮಾಸಿ ಮಾಸಿ ಸಮಾಯಾಂತಿ ಸನ್ನಿಹತ್ಯಾಂ ನ ಸಂಶಯಃ ||172||
ಭೂಮಿಯಲ್ಲಿ ಯಾವಯಾವ ತೀರ್ಥಗಳು ಇವೆಯೋ ಯಾವಯಾವ ನದಿಗಳು ನದಗಳು ತಟಾಕಗಳು ಮತ್ತು ಝರಿಗಳು ಇವೆಯೋ ಮತ್ತು ಅಂತರಿಕ್ಷದಲ್ಲಿ ಹರಿಯುವ ಯಾವ ನದಿಗಳು ಇವೆಯೋ ಮತ್ತು ಎಷ್ಟು ಸರೋವರಗಳು ಕೋಟೆಗಳು ಪುಣ್ಯಸ್ಥಾನಗಳು ಇವೆಯೋ ಅವುಗಳೆಲ್ಲವೂ (ಅವುಗಳ ಅಭಿಮಾನಿ ದೇವತೆಗಳೆಲ್ಲರೂ) ಪ್ರತಿಮಾಸದಲ್ಲಿಯೂ ಸನ್ನಿಹತೀತೀರ್ಥದಲ್ಲಿ ಸೇರುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಯತ್ ಕಿಂಚಿದ್ದುಷ್ಕೃತಂ ಕರ್ಮ ಸ್ತ್ರಿಯೋ ವಾ ಪುರುಷಸ್ಯ ವಾ |
ಸ್ನಾತಮಾತ್ರಸ್ಯ ತತ್ ಸರ್ವಂ ನಶ್ಯತೇ ನಾತ್ರ ಸಂಶಯಃ |
ಪದ್ಮವರ್ಣೇನ ಯಾನೇನ ಬ್ರಹ್ಮಲೋಕಂ ಸ ಗಚ್ಛತಿ ||173||
ಪುರುಷನಾಗಲೀ ಸ್ತ್ರೀಯಾಗಲೀ ಯಾವ ದುಷ್ಕರ್ಮವನ್ನು ಮಾಡಿದ್ದರೂ ಇಲ್ಲಿ ಕೇವಲ ಸ್ನಾನವನ್ನು ಮಾಡುವುದರಿಂದ ಅವೆಲ್ಲವೂ ನಿಸ್ಸಂಶಯವಾಗಿ ನಾಶವನ್ನು ಹೊಂದುತ್ತವೆ. ಮತ್ತು ಅವನು ಪದ್ಮವಣರ್ದ ಯಾನದಿಂದ ಬ್ರಹ್ಮಲೋಕಕ್ಕೆ ಹೋಗುತ್ತಾನೆ.
ಅಭಿವಾದ್ಯ ತತೋ ಯಕ್ಷಂ ದ್ವಾರಪಾಲಮರುಂದುಕಮ್ |

ಕೋಟಿತೀರ್ಥಮುಪಸ್ಪೃಶ್ಯ ಲಭೇದ್ಬಹು ಸುವರ್ಣಕಮ್ ॥174॥
ಅಲ್ಲಿಂದ ದ್ವಾರಪಾಲನಾದ ಅರುಂದುಕಯಕ್ಷನನ್ನು ನಮಸ್ಕರಿಸಿ ಕೋಟಿತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ಬಹುಸುವರ್ಣಮಯವಾದ ಸಂಪತ್ತು ಉಂಟಾಗುತ್ತದೆ.
ಗಂಗಾಹ್ರದಶ್ಚ ತತ್ರೈವ ತೀರ್ಥಂ ಭರತಸತ್ತಮ |
ತತ್ರ ಸ್ನಾತಸ್ತು ಧರ್ಮಜ್ಞ ಬ್ರಹ್ಮಚಾರೀ ಸಮಾಹಿತಃ |
ರಾಜಸೂಯಾಶ್ವಮೇಧಾಭ್ಯಾಂ ಫಲಂ ವಿಂದತಿ ಶಾಶ್ವತಮ್ ॥175॥
ಎಲೈ ಭರತಸತ್ತಮನೇ, ಗಂಗಾಹ್ರದವೆಂಬ ತೀರ್ಥವೂ ಅಲ್ಲಿಯೇ ಇದೆ. ಎಲೈ ಧರ್ಮಜ್ಞನೇ, ಬ್ರಹ್ಮಚಾರಿಯಾಗಿ ಮನಸ್ಸಮಾಧಾನದಿಂದ ಕೂಡಿ ಅಲ್ಲಿ ಸ್ನಾನಮಾಡಿದ ಮನುಷ್ಯನು ರಾಜಸೂಯ ಅಶ್ವಮೇಧಯಾಗಗಳ ಫಲವನ್ನು ಶಾಶ್ವತವಾಗಿ ಪಡೆಯುತ್ತಾನೆ.
ಪೃಥಿವ್ಯಾಂ ನೈಮಿಶಂ ಪುಣ್ಯಮಂತರಿಕ್ಷೇ ಚ ಪುಷ್ಕರಮ್ |
ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ ॥176॥
ಪೃಥಿವಿಯಲ್ಲಿ ನೈಮಿಶಾರಣ್ಯವು ಸ್ತೋತ್ರಮಾಡಲ್ಪಡುತ್ತದೆ. ದೇವರ್ಷಿಗಳಿಂದ ನಿಬಿಡವಾದ ಅಂತರಿಕ್ಷಲೋಕದಲ್ಲಿ ಪವಿತ್ರವಾದ ಪುಷ್ಕರವೂ ಸ್ತೋತ್ರಮಾಡಲ್ಪಡುತ್ತದೆ. ಕುರುಕ್ಷೇತ್ರವು ಮಾತ್ರ ಮೂರು ಲೋಕಗಳಲ್ಲಿಯೂ ಸ್ತೋತ್ರಮಾಡಲ್ಪಡುತ್ತದೆ.
ಪಾಂಸವೋಽಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ |
ಅಪಿ ದುಷ್ಕೃತಕರ್ಮಾಣಂ ನಯಂತಿ ಪರಮಾಂ ಗತಿಮ್ ॥177॥
ಕುರುಕ್ಷೇತ್ರದಿಂದ ವಾಯುವು ಹಾರಿಸಿಕೊಂಡುಬಂದ ಧೂಳಿನ ಕಣಗಳೂ ಸಹ ದುಷ್ಕರ್ಮಮಾಡಿದ ಮನುಷ್ಯನನ್ನು ಶ್ರೇಷ್ಠಗತಿಗೆ ಕರೆದುಕೊಂಡು ಹೋಗುತ್ತವೆ.
ದಕ್ಷಿಣೇನ ಸರಸ್ವತ್ಯಾ ಉತ್ತರೇಣ ದೃಷದ್ವತೀಮ್ |
ಯೇ ವಸಂತಿ ಕುರುಕ್ಷೇತ್ರೇ ತೇ ವಸಂತಿ ತ್ರಿವಿಷ್ಟಪೇ ॥178॥
ಸರಸ್ವತೀ ನದಿಯ ದಕ್ಷಿಣದಲ್ಲಿ ಮತ್ತು ದೃಷದ್ವತೀ ನದಿಯ ಉತ್ತರದಲ್ಲಿ ಇರುವ ಕುರುಕ್ಷೇತ್ರದಲ್ಲಿ ಯಾರು ವಾಸವನ್ನು ಮಾಡುತ್ತಾರೆಯೋ ಅವರು ಸ್ವರ್ಗದಲ್ಲಿ ವಾಸಮಾಡುತ್ತಾರೆ.
ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ |
ಅಪ್ಯೇಕಾಂ ವಾಚಮುತ್ಸೃಜ್ಯ ಸರ್ವಪಾಪೈಃ ಪ್ರಮುಚ್ಯತೇ ॥179॥
ಕುರುಕ್ಷೇತ್ರಕ್ಕೆ ಹೋಗುತ್ತೇನೆ ಕುರುಕ್ಷೇತ್ರದಲ್ಲಿಯೇ ವಾಸಮಾಡುತ್ತೇನೆ ಎಂದು ಒಂದುಬಾರಿ ಹೇಳಿದರೂ ಎಲ್ಲಾ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಬ್ರಾಹ್ಮೀ ವೇದಿಃ ಕುರುಕ್ಷೇತ್ರಂ ಬ್ರಹ್ಮರ್ಷಿಗಣಸೇವಿತಮ್ |
ಸದಾ ವಸಂತಿ ಯೇ ರಾಜನ್ ನ ತೇ ಶೋಚ್ಯಾಃ ಕಥಂಚನ ॥180॥
ಕುರುಕ್ಷೇತ್ರವೆಂಬುದು ಬ್ರಹ್ಮದೇವರ ವೇದಿ. ಅದು ಬ್ರಹ್ಮರ್ಷಿಗಣಸೇವಿತವಾಗಿದೆ. ರಾಜನೇ, ಅಲ್ಲಿ ಯಾರು ಯಾವಾಗಲೂ ವಾಸಮಾಡುತ್ತಾರೆಯೊ ಅವರು ಯಾವ ರೀತಿಯಲ್ಲಿಯೂ ಶೋಚ್ಯರಲ್ಲ.
ಅರಂದುಕಾರುಂದುಕಯೋರ್ಯದಂತರಂ
ರಾಮಹ್ರದಾನಾಂ ಚ ಮರುಂದುಕಸ್ಯ |
ಏತತ್ ಕುರುಕ್ಷೇತ್ರಸಮಂತಪಂಚಕಂ
ಪಿತಾಮಹಸ್ಯೋತ್ತರವೇದಿರುಚ್ಯತೇ ॥181॥
ಅರಂದುಕ ಅರುಂದುಕ ಮರುಂದುಕ ಮತ್ತು ಪರುಶುರಾಮ ಸರೋವರಗಳು ಇವುಗಳ ಮಧ್ಯದಲ್ಲಿರುವ ಕುರುಕ್ಷೇತ್ರ ಮತ್ತು ಸಮಂತ ಪಂಚಕವು ಬ್ರಹ್ಮದೇವರ ಉತ್ತರ ವೇದಿ ಎಂದು ಕರೆಯಲ್ಪಡುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ಎಪ್ಪತ್ತೊಂಬತ್ತನೆಯ ಅಧ್ಯಾಯ
(ಪುಲಸ್ತ್ಯರಿಂದ ಭೀಷ್ಮರನ್ನು ಕುರಿತು ನಾನಾ ತೀರ್ಥಮಹಿಮೆಯ ವರ್ಣನೆ.)
ಪುಲಸ್ತ್ಯಃ
ತತೋ ಗಚ್ಛೇನ್ಮಹಾಪ್ರಾಜ್ಞ ಧರ್ಮತೀರ್ಥಮನುತ್ತಮಮ್ |
ಯತ್ರ ಸ್ನಾತ್ವಾ ನರೋ ರಾಜನ್ ಧರ್ಮಶೀಲಃ ಸಮಾಹಿತಃ |
ಆಸಪ್ತಮಂ ಕುಲಂ ಚೈವ ಪುನೀತೇ ನಾತ್ರ ಸಂಶಯಃ ॥1॥
ಎಲೈ ಮಹಾಪ್ರಾಜ್ಞನೇ, ಅನಂತರ ಶ್ರೇಷ್ಠವಾದ ಧರ್ಮತೀರ್ಥಕ್ಕೆ ಹೋಗಬೇಕು ಎಲೈ ರಾಜನೇ, ಧರ್ಮಶೀಲನಾಗಿ ಸಮಾಧಿಯುಕ್ತನಾಗಿ ಅಲ್ಲಿ ಸ್ನಾನಮಾಡಿದ ಮನುಷ್ಯನು ಏಳು ತಲೆಗಳವರೆಗೆ ತನ್ನ ಕುಲವನ್ನು ಪವಿತ್ರಗೊಳಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ.
ತತೋ ಗಚ್ಛೇತ ಧರ್ಮಜ್ಞ ತಾರಾಪತನಮುತ್ತಮಮ್ |
ಅಗ್ನಿಷ್ಟೋಮಮವಾಪ್ನೋತಿ ಮುನಿಲೋಕಂ ಚ ಗಚ್ಛತಿ ॥2॥
ಎಲೈ ಧರ್ಮಜ್ಞನೇ, ಅಲ್ಲಿಂದ ಶ್ರೇಷ್ಠವಾದ ತಾರಾಪತನಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಗೆ ಹೋಗುವವನು ಅಗ್ನಿಷ್ಟೋಮಫಲವನ್ನು ಪಡೆದು ಮುನಿಲೋಕಕ್ಕೆ ಹೋಗುತ್ತಾನೆ.

ಸೌಗಂಧಿಕವನಂ ರಾಜನ್ ತತೋ ಗಚ್ಛೇತ ಮಾನವಃ |
ಯತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ॥3॥
ಸಿದ್ಧಚಾರಣಗಂಧರ್ವಕಿನ್ನರಾಃ ಸಮಹೋರಗಾಃ |
ತದ್ವನಂ ಪ್ರವಿಶನ್ನೇವ ಸರ್ವಪಾಪೈಃ ಪ್ರಮುಚ್ಯತೇ ॥4॥
ಎಲೈ ರಾಜನೇ ಅಲ್ಲಿಂದ ತೀರ್ಥಸೇವಿಯಾದ ನರನು ಸೌಗಂಧಿಕವನಕ್ಕೆ ಹೋಗಬೇಕು. ಅಲ್ಲಿ ಬ್ರಹ್ಮಾದಿದೇವತೆಗಳು ತಪೋಧನರಾದ ಋಷಿಗಳು ಸಿದ್ಧಚಾರಣಗಂಧರ್ವ ಕಿನ್ನರರು ಮಹೋರಗಗಳು ಸದಾ ಸನ್ನಿಹಿತರಾಗಿರುತ್ತಾರೆ. ಆ ವನವನ್ನು ಪ್ರವೇಶಮಾಡುವುದರಿಂದಲೇ ಮನುಷ್ಯನು ಎಲ್ಲ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ತತಶ್ಚಾಪಿ ಸರಿಚ್ಛ್ರೇಷ್ಠಾ ನದೀನಾಮುತ್ತಮಾ ನದೀ |
ಪ್ಲಕ್ಷಾ ದೇವೀ ಸ್ರುತಾ ಪೂರ್ವಂ ಮಹಾಪುಣ್ಯಾ ಸರಸ್ವತೀ ॥5॥
ತತ್ರಾಭಿಷೇಕಂ ಕುರ್ವೀತ ವಲ್ಮೀಕಾನ್ನಿಃಸೃತೇ ಜಲೇ |
ಅರ್ಚಯಿತ್ವಾ ಪಿತೄನ್ ದೇವಾನ್ ಅಶ್ವಮೇಧಫಲಂ ಲಭೇತ್ ॥6॥
ಅಲ್ಲಿಂದ ಮುಂದಕ್ಕೆ ನದಿಗಳಲ್ಲಿ ಉತ್ತಮವಾದ ಒಳ್ಳೆಯ ಜಲದಿಂದ ಕೂಡಿದ ಮಹಾಪುಣ್ಯಪ್ರದವಾದ ಪ್ಲಕ್ಷಾನದಿಯು ಹರಿಯುತ್ತದೆ. ವಲ್ಮೀಕದಿಂದ ಹೊರಹೊಮ್ಮುತ್ತಿರುವ ಆ ಜಲದಲ್ಲಿ ಸ್ನಾನವನ್ನುಮಾಡಿ ಪಿತೃಗಳನ್ನು ಮತ್ತು ದೇವತೆಗಳನ್ನು ಅರ್ಚಿಸಿದರೆ ಅಶ್ವಮೇಧ ಫಲ ಉಂಟಾಗುತ್ತದೆ.
ಈಶಾನಾಧ್ಯುಷಿತಂ ನಾಮ ತತ್ರ ತೀರ್ಥಂ ಸುದುರ್ಲಭಮ್ |
ಷಟ್ಸು ಶಮ್ಯಾನಿಪಾತೇಷು ವಲ್ಮೀಕಾದಿತಿ ನಿಶ್ಚಯಃ ॥7॥
ಕಪಿಲಾನಾಂ ಸಹಸ್ರಂ ಚ ವಾಜಿಮೇಧಂ ಚ ವಿಂದತಿ |
ತತ್ರ ಸ್ನಾತ್ವಾ ನರವ್ಯಾಘ್ರ ದೃಷ್ಟಮೇತತ್ ಪುರಾತನೈಃ ॥8॥
ಆ ವಲ್ಮೀಕದಿಂದ ಆರು ಶಮ್ಯಾಪ್ರಾಸಗಳ ದೂರದಲ್ಲಿ ಸುದುರ್ಲಭವಾದ ರುದ್ರದೇವರಿಂದ ಅಧಿಷ್ಠಿತವಾದ ಈಶಾನಾಧ್ಯುಷಿತ ಎಂಬ ತೀರ್ಥವಿದೆ. ಎಲೈ ನರವ್ಯಾಘ್ರನೇ, ಅಲ್ಲಿ ಸ್ನಾನಮಾಡುವ ಮನುಷ್ಯನು ಸಹಸ್ರಕಪಿಲ ಗೋದಾನದ ಫಲವನ್ನು ಮತ್ತು ಅಶ್ವಮೇಧಫಲವನ್ನು ನಿಸ್ಸಂಶಯವಾಗಿ ಪಡೆಯುತ್ತಾನೆ. ಇದು ಪ್ರಾಚೀನರು ತಿಳಿದಿರುವ ವಿಷಯ.
ಸುಗಂಧಾನ್ ಶಾತಕುಂಭಾಂಶ್ಚ ಪಂಚಯಜ್ಞಾಂಶ್ಚ ಭಾರತ |
ಅಭಿಗಮ್ಯ ನರಶ್ರೇಷ್ಠ ಸ್ವರ್ಗಲೋಕೇ ಮಹೀಯತೇ ॥9॥
ಎಲೈ ಭಾರತನೇ, ಸುಗಂಧ ಶಾತಕುಂಭ ಮತ್ತು ಪಂಚಯಜ್ಞ ಕ್ಷೇತ್ರಗಳಿಗೆ ಹೋಗುವ ನರನು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ತ್ರಿಶೂಲಖಾತಂ ತತ್ರೈವ ತೀರ್ಥಮಾಸಾದ್ಯ ಭಾರತ |
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ |
ಗಾಣಪತ್ಯಂ ಚ ಲಭತೇ ದೇಹಂ ತ್ಯಕ್ತ್ವಾ ನ ಸಂಶಯಃ ॥10॥
ಎಲೈ ಭಾರತನೇ, ಅಲ್ಲಿಯೇ ತ್ರಿಶೂಲಖಾತವೆಂಬ ತೀರ್ಥವಿದೆ. ಅಲ್ಲಿಗೆ ಹೋಗಿ ಸ್ನಾನವನ್ನು ಮಾಡಿ ಪಿತೃದೇವತೆಗಳನ್ನು ಅರ್ಚಿಸುವ ನರನು ದೇಹತ್ಯಾಗವನ್ನು ಮಾಡಿದ ಮೇಲೆ ಗಣಾಧಿಪತ್ಯವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ತತೋ ಗಚ್ಛೇತ ರಾಜೇಂದ್ರ ದೇವ್ಯಾಃ ಸ್ಥಾನಂ ಸುದುರ್ಲಭಮ್ |
ಶಾಕಂಭರೀತಿ ವಿಖ್ಯಾತಂ ತ್ರಿಷು ಲೋಕೇಷು ಭಾರತ ॥11॥
ಎಲೈ ರಾಜೇಂದ್ರನೇ, ಅಲ್ಲಿಂದ ಗೌರಿಯ ಸ್ಥಾನವಾದ ಸುದುರ್ಲಭವಾದ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಶಾಕಂಭರೀ ಎಂಬ ಕ್ಷೇತ್ರಕ್ಕೆ ಹೋಗಬೇಕು.
ದಿವ್ಯಂ ವರ್ಷಸಹಸ್ರಂ ತು ಶಾಕೇನ ಭರತರ್ಷಭ |
ಆಹಾರಂ ಸಾ ಕೃತವತೀ ಮಾಸಿಮಾಸಿ ನರಾಧಿಪ ॥12॥
ಎಲೈ ಭರತಶ್ರೇಷ್ಠನೇ, ಎಲೈ ರಾಜನೇ, ಅಲ್ಲಿ ದೇವಿಯು ಒಂದು ತಿಂಗಳಿಗೆ ಒಂದು ಬಾರಿಯಂತೆ ಶಾಕವನ್ನು ಮಾತ್ರ ಸೇವಿಸಿ ದಿವ್ಯಸಹಸ್ರವರ್ಷಗಳ ಕಾಲ ತಪಸ್ಸನ್ನು ಮಾಡಿದಳು.
ಋಷಯೋಽಭ್ಯಾಗತಾಸ್ತತ್ರ ದೇವ್ಯಾ ಭಕ್ತಾಸ್ತಪೋಧನಾಃ |
ಆತಿಥ್ಯಂ ಚ ಕೃತಂ ತೇಷಾಂ ಶಾಕೇನ ಕಿಲ ತರ್ಪಿತಮ್ |
ತತಃಶಾಕಂಭರೀತ್ಯೇವ ನಾಮ ತಸ್ಯಾಃ ಪ್ರತಿಷ್ಠಿತಮ್ ॥13॥
ದೇವಿಯ ಭಕ್ತರಾದ ತಪೋಧನರಾದ ಋಷಿಗಳು ಅಲ್ಲಿಗೆ ಬಂದರು ದೇವಿಯು ಅವರಿಗೆ ಶಾಕದಿಂದಲೇ ಅತಿಥ್ಯವನ್ನು ಮಾಡಿ ಸಂತೋಷಪಡಿಸಿದಳು ಆದ್ದರಿಂದ ಆ ಕ್ಷೇತ್ರಕ್ಕೆ ಶಾಕಂಭರೀ ಎಂಬ ನಾಮವೇ ಪ್ರತಿಷ್ಠಿತವಾಗಿದೆ.
ಶಾಕಂಭರೀಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ |
ತ್ರಿರಾತ್ರಮುಷಿತಃ ಶಾಕಂ ಭಕ್ಷಯೇನ್ನಿಯತಃ ಶುಚಿಃ ॥14॥
ಶಾಕಾಹಾರಸ್ಯ ಯತ್ಸಮ್ಯಗ್ ವರ್ಷೈರ್ದ್ವಾದಶಭಿಃ ಫಲಮ್ |
ತತ್ ಫಲಂ ತಸ್ಯ ಭವತಿ ದೇವ್ಯಾಶ್ಛಂದೇನ ಭಾರತ ॥15॥
ಎಲೈ ಭಾರತನೇ, ಶಾಕಂಭರೀ ಕ್ಷೇತ್ರಕ್ಕೆ ಹೋಗಿ ಬ್ರಹ್ಮಚಾರಿಯಾಗಿ ಸಮಾಹಿತಮನಸ್ಕನಾಗಿ ಮೂರುರಾತ್ರಿವಾಸವನ್ನು ಮಾಡಿ ಕೇವಲ ಶಾಕವನ್ನು ಮಾತ್ರ ಆಹಾರವಾಗಿ ಸ್ವೀಕರಿಸಿದರೆ ಅಂತಹ ನಿಯಮಬದ್ಧನಾದ ಶುಚಿಯಾದ ನರನು ಹನ್ನೆರಡುವರ್ಷಗಳ ಕಾಲ ಚೆನ್ನಾಗಿ ಶಾಕವ್ರತವನ್ನು ಮಾಡಿದ ಫಲವನ್ನು ದೇವಿಯ ಅನುಗ್ರಹದಿಂದ ಪಡೆಯುತ್ತಾನೆ.
ತತೋ ಗಚ್ಛೇತ್ ಸುವರ್ಣಾಕ್ಷಂ ತ್ರಿಷು ಲೋಕೇಷು ವಿಶ್ರುತಮ್ |

ತತ್ರ ವಿಷ್ಣುಃ ಪ್ರಸಾದಾರ್ಥಂ ರುದ್ರಮಾರಾಧಯತ್ ಪುರಾ ॥16॥
ವರಾಂಶ್ಚ ಸುಬಹೂನ್‌ಲೇಭೇ ದೈವತೇಷು ಸುದುರ್ಲಭಾನ್ ।
ಉಕ್ತಶ್ಚ ತ್ರಿಪುರ್ನೇನ ಪರಿತುಷ್ಟೇನ ಭಾರತ ॥17॥
ಅಪಿ ಚಾನ್ಯೈಃ ಪ್ರಿಯತಮೋ ಲೋಕೇ ಕೃಷ್ಣ ಭವಿಷ್ಯಸಿ ।
ತ್ವನ್ಮುಖಂ ಚ ಜಗತ್ ಸರ್ವಂ ಭವಿಷ್ಯತಿ ನ ಸಂಶಯಃ ॥18॥
ಅನಂತರ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಸುವರ್ಣಾಕ್ಷಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ವಿಷ್ಣುವು ರುದ್ರನನ್ನು ಸಂತೋಷಪಡಿಸಲು ಹಿಂದೆ ಅವನನ್ನು ಆರಾಧಿಸಿದನು ಮತ್ತು ಅವನಿಂದ ದೇವತೆಗಳಿಗೂ ದುರ್ಲಭವಾದ ಅನೇಕ ವರಗಳನ್ನು ಪಡೆದನು. ಎಲೈ ಭಾರತನೇ, ರುದ್ರನು ಪರಿತುಷ್ಟನಾಗಿ ಅವನನ್ನು ಕುರಿತು, `ಕೃಷ್ಣನೇ ನೀನು ನನಗೆ ಎಲ್ಲರಿಗಿಂತಲೂ ಹೆಚ್ಚು ಪ್ರಿಯತಮನಾಗಿದ್ದೀಯೆ. ಜಗತ್ತೆಲ್ಲವೂ ನಿನ್ನನೇನೇ ಪ್ರಧಾನವಾಗಿ ಹೊಂದಿರುತ್ತದೆ. ಇದರಲ್ಲಿ ಸಂಶಯವಿಲ್ಲ' ಎಂದು ಹೇಳಿದನು.
ತತ್ರಾಭಿಗಮ್ಯ ರಾಜೇಂದ್ರ ಪೂಜಯಿತ್ವಾ ವೃಷಧ್ವಜಮ್ ।
ಅಶ್ವಮೇಧಮವಾಪ್ನೋತಿ ಗಾಣಪತ್ಯಂ ಚ ವಿಂದತಿ ॥19॥
ಧೂಮಾವತೀಂ ತತೋ ಗಚ್ಛೇತ್ ತ್ರಿರಾತ್ರೋಪೋಷಿತೋ ನರಃ ।
ಮನಸಾ ಪ್ರಾರ್ಥಿತಾನ್ ಕಾಮಾನ್‌ಲಭತೇ ನಾತ್ರ ಸಂಶಯಃ ॥20॥
ಎಲೈ ರಾಜೇಂದ್ರನೇ, ಅಲ್ಲಿ ಹೋಗಿ ವೃಷಧ್ವಜನಾದ ಈಶ್ವರನನ್ನು ಪೂಜಿಸುವವನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಮತ್ತು ಗಣಾಧಿಪತ್ಯವನ್ನು ಪಡೆಯುತ್ತಾನೆ. ಅಲ್ಲಿಂದ ನರನು ಧೂಮಾವತಿ ಕ್ಷೇತ್ರಕ್ಕೆ ಹೋಗಿ ಮೂರು ರಾತ್ರಿಗಳು ಉಪವಾಸವನ್ನು ಮಾಡಬೇಕು. ಅವನು ತನ್ನ ಮನಸ್ಸಿನಲ್ಲಿ ಪ್ರಾರ್ಥಿಸಿದ ಎಲ್ಲ ವಸ್ತುಗಳನ್ನೂ ಪಡೆಯುತ್ತಾನೆ ಇದರಲ್ಲಿ ಸಂಶಯವಿಲ್ಲ.
ದೇವ್ಯಾಸ್ತದ್ ದಕ್ಷಿಣಾರ್ಧೇ ತು ರಥಾವರ್ತೋ ನರೋತ್ತಮ ।
ತತ್ರಾರೋಹೇನ ಧರ್ಮಜ್ಞ ಶ್ರದ್ಧಧಾನೋ ಜಿತೇಂದ್ರಿಯಃ ।
ಮಹಾದೇವಪ್ರಸಾದಾಚ್ಚ ಗಚ್ಛೇತ ಪರಮಾಂ ಗತಿಮ್ ॥21॥
ಧೂಮಾವತಿದೇವಿಯ ದಕ್ಷಿಣಭಾಗದಲ್ಲಿ ರಥಾವರ್ತವೆಂಬ ಎತ್ತರದ ಪ್ರದೇಶವಿದೆ. ಎಲೈ ಧರ್ಮಜ್ಞನೇ, ಎಲೈ ನರಶ್ರೇಷ್ಠನೇ, ಶ್ರದ್ಧೆಯಿಂದ ಕೂಡಿದವನೂ ಜಿತೇಂದ್ರಿಯನೂ ಆದ ಮಾನವನು ಅದನ್ನು ಹತ್ತಿದರೆ ರುದ್ರದೇವರ ಅನುಗ್ರಹದಿಂದ ಶ್ರೇಷ್ಠಗತಿಯನ್ನು ಹೊಂದುವನು.
ಪ್ರದಕ್ಷಿಣಮುಪಾವೃತ್ಯ ತತೋ ಗಚ್ಛೇತ ಭಾರತ ।
ಧಾರಾಂ ನಾಮ ಮಹಾಪ್ರಾಜ್ಞ ಸರ್ವಪಾಪಪ್ರಣಾಶಿನೀಮ್ ।
ತತ್ರ ಸ್ನಾತ್ವಾ ನರವ್ಯಾಘ್ರ ನ ಶೋಚತಿ ನರೋ ಭುವಿ ॥22॥
ಎಲೈ ಭಾರತನೇ, ಪ್ರದಕ್ಷಿಣಾಕಾರದಲ್ಲಿ ಹಿಂದಿರುಗಿ ಬಂದು ಅಲ್ಲಿ ಸರ್ವಪಾಪಪರಿಹಾರಕವಾದ ಧಾರಾತೀರ್ಥಕ್ಕೆ ಹೋಗಬೇಕು. ಎಲೈ ಮಹಾಪ್ರಾಜ್ಞನೇ, ನರವ್ಯಾಘ್ರನೇ, ಅಲ್ಲಿ ಸ್ನಾನವನ್ನು ಮಾಡಿದ ನರನು ಭೂಮಿಯಲ್ಲಿ ದುಃಖಕ್ಕೆ ಒಳಗಾಗುವುದಿಲ್ಲ.
ತತೋ ಗಚ್ಛೇತ ಧರ್ಮಜ್ಞ ನಮಸ್ಕೃತ್ಯ ಮಹಾಗಿರಿಮ್ ।
ಅಶೀತಿಯೋಜನಶತಂ ಪುಷ್ಕರಾತ್ ಸ್ವರ್ಗಮುಚ್ಯತೇ ॥23॥
ಅಶೀತಿಂ ಧರ್ಮಪೃಷ್ಠಾತ್ತು ಪ್ರವದಂತಿ ಮನೀಷಿಣಃ ।
ಷಷ್ಟಿಂ ಪ್ರಯಾಗಾದ್ರಾಜೇಂದ್ರ ಕುರುಕ್ಷೇತ್ರಾತ್ ತು ದ್ವಾದಶ ॥24॥
ಎಲೈ ಧರ್ಮಜ್ಞನೇ, ಅಲ್ಲಿಂದ ಸ್ವರ್ಗಗಿರಿ ಎಂಬ ದೊಡ್ಡ ಪರ್ವತಕ್ಕೆ ನಮಸ್ಕಾರವನ್ನು ಮಾಡಿ ಹೋಗಬೇಕು. ಪುಷ್ಕರದಿಂದ ಸ್ವರ್ಗಗಿರಿಯು ಎಂಟುನೂರು ಯೋಜನಗಳ ದೂರವಿದೆ. ಜ್ಞಾನಿಗಳಾದವರು ಧರ್ಮಪೃಷ್ಠದಿಂದ ಎಂಬತ್ತು ಯೋಜನದೂರದಲ್ಲಿ ಸ್ವರ್ಗಗಿರಿಯಿದೆ ಎಂದು ಹೇಳುತ್ತಾರೆ. ಎಲೈ ರಾಜೇಂದ್ರನೇ, ಪ್ರಯಾಗದಿಂದ ಅರವತ್ತು ಯೋಜನ ದೂರವೆಂತಲೂ ಕುರುಕ್ಷೇತ್ರದಿಂದ ಹನ್ನೆರಡು ಯೋಜನದೂರವೆಂತಲೂ ಹೇಳುತ್ತಾರೆ.
ಸಂಯುಕ್ತಮೇವ ರಾಜೇಂದ್ರ ಗಂಗಾದ್ವಾರಂ ತ್ರಿವಿಷ್ಟಪಮ್ ।
ಸ್ವರ್ಗದ್ವಾರೇಣ ತತ್ತುಲ್ಯಂ ಗಂಗಾದ್ವಾರಂ ನ ಸಂಶಯಃ ॥25॥
ಎಲೈ ರಾಜೇಂದ್ರನೇ, ಗಂಗಾದ್ವಾರವು ಮತ್ತು ಸ್ವರ್ಗವು ಹೊಂದಿಕೊಂಡೇ ಇವೆ. ಗಂಗಾದ್ವಾರವು ಸ್ವರ್ಗದ್ವಾರಕ್ಕೆ ಸಮವಾಗಿರುತ್ತದೆ. ಇದರಲ್ಲಿ ಸಂಶಯವಿಲ್ಲ.
ತತ್ರಾಭಿಷೇಕಂ ಕುರ್ವೀತ ಕೋಟಿತೀರ್ಥೇ ಸಮಾಹಿತಃ ।
ಪೌಂಡರೀಕಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥26॥
ಅಲ್ಲಿ ಕೋಟಿತೀರ್ಥದಲ್ಲಿ ಸಮಾಧಿಯಿಂದ ಸ್ನಾನಮಾಡಿದವನು ಪುಂಡರೀಕಯಾಗದ ಫಲವನ್ನು ಪಡೆಯುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ಸಪ್ತಗಂಗೇ ತ್ರಿಗಂಗೇ ಚ ಚಕ್ರಾವರ್ತೇ ಚ ತರ್ಪಯೇತ್ ।
ದೇವಾನ್ ಪಿತೄಂಶ್ಚ ವಿಧಿವತ್ ಪುಣ್ಯೇ ಲೋಕೇ ಮಹೀಯತೇ ॥27॥
ಸಪ್ತಗಂಗ ತ್ರಿಗಂಗ ಮತ್ತು ಚಕ್ರಾವರ್ತತೀರ್ಥಗಳಲ್ಲಿ ದೇವತೆಗಳಿಗೂ ಮತ್ತು ಋಷಿಗಳಿಗೂ ವಿಧಿವತ್ತಾಗಿ ತರ್ಪಣವನ್ನು ನೀಡಿದರೆ ಪುಣ್ಯಲೋಕದಲ್ಲಿ ಪೂಜಿತನಾಗುತ್ತಾನೆ.
ತತಃ ಕನಖಲೇ ಸ್ನಾತ್ವಾ ತ್ರಿರಾತ್ರೋಪೋಷಿತೋ ನರಃ ।
ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥28॥
ಅನಂತರ ಕನಖಲಕ್ಷೇತ್ರಕ್ಕೆ ಹೋಗಿ ಗಂಗೆಯಲ್ಲಿ ಸ್ನಾನವನ್ನು ಮಾಡಿ ಮೂರುರಾತ್ರಿ ಉಪವಾಸವನ್ನು ಮಾಡಿದ ಮನುಷ್ಯನು

ಅಶ್ವಮೇಧ ಫಲವನ್ನು ಪಡೆಯುತ್ತಾನೆ. ಮತ್ತು ಸ್ವರ್ಗಲೋಕವನ್ನು ಹೊಂದುತ್ತಾನೆ.
ಕಪಿಲಾವಟಂ ಚ ಗಚ್ಛೇತ ತೀರ್ಥಸೇವೀ ನರಾಧಿಪ |
ಕಪಿಲಾನಾಂ ಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥29॥
ಎಲೈ ನರಾಧಿಪನೇ, ತೀರ್ಥಸೇವಿಯಾದ ಮನುಷ್ಯನು ಕಪಿಲಾವಟಕ್ಕೆ ಹೋಗಬೇಕು. ಅಲ್ಲಿ ಸ್ನಾನವನುನಮಾಡಿದರೆ ಸಹಸ್ರಕಪಿಲಗೋವುಗಳ ದಾನದ ಫಲವು ಉಂಟಾಗುತ್ತದೆ.
ತತೋ ಗಚ್ಛೇತ ರಾಜೇಂದ್ರ ಶಂತನೋಸ್ತೀರ್ಥಮುತ್ತಮಮ್ |
ತತ್ರ ಸ್ನಾತ್ವಾ ನರವ್ಯಾಘ್ರ ನ ದುರ್ಗತಿಮವಾಪ್ನುಯಾತ್ ॥30॥
ಎಲೈ ರಾಜೇಂದ್ರನೇ, ಅಲ್ಲಿಂದ ಶ್ರೇಷ್ಠವಾದ ಶಂತನುತೀರ್ಥಕ್ಕೆ ಹೋಗಬೇಕು. ಎಲೈ ನರವ್ಯಾಘ್ರನೇ, ಅಲ್ಲಿ ಸ್ನಾನವನ್ನು ಮಾಡಿದವನಿಗೆ ದುರ್ಗತಿಯುಂಟಾಗುವುದಿಲ್ಲ.
ಗಂಗಾಯಮುನಯೋಶ್ಚೈವ ಸ್ನಾತಿ ಯಃ ಸಂಗಮೇ ನರಃ |
ದಶಾಶ್ವಮೇಧಾನಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥31॥
ಯಾವ ಮನುಷ್ಯನು ಗಂಗಾಯಮುನಾಸಂಗಮದಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನು ಹತ್ತು ಅಶ್ವಮೇಧ ಯಾಗಗಳ ಫಲವನ್ನು ಹೊಂದಿ ತನ್ನ ಕುಲವನ್ನು ಉದ್ಧರಿಸುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಸುಗಂಧಂ ಲೋಕವಿಶ್ರುತಮ್ |
ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕೇ ಮಹೀಯತೇ ॥32॥
ಎಲೈ ರಾಜೇಂದ್ರನೇ, ಅಲ್ಲಿಂದ ಲೋಕಪ್ರಖ್ಯಾತವಾದ ಸುಗಂಧಕ್ಷೇತ್ರಕ್ಕೆ ಹೋಗಬೇಕು. ಹಾಗೆ ಮಾಡುವ ಮನುಷ್ಯನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ರುದ್ರಾವರ್ತಂ ತತೋ ಗಚ್ಛೇತ್ ತೀರ್ಥಸೇವೀ ನರಾಧಿಪ |
ತತ್ರ ಸ್ನಾತ್ವಾ ನರೋ ರಾಜನ್ ಸ್ವರ್ಗಲೋಕೇ ಮಹೀಯತೇ ॥33॥
ಎಲೈ ನರಾಧಿಪನೇ, ತೀರ್ಥಸೇವಿಯಾದ ಮಾನವನು ಅಲ್ಲಿಂದ ರುದ್ರಾವರ್ತಕ್ಷೇತ್ರಕ್ಕೆ ಹೋಗಬೇಕು. ರಾಜನೇ, ಅಲ್ಲಿ ಸ್ನಾನವನ್ನು ಮಾಡುವ ಮನುಷ್ಯನು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಗಂಗಾಯಾಶ್ಚ ನರಶ್ರೇಷ್ಠ ಸರಸ್ವತ್ಯಾಶ್ಚ ಸಂಗಮೇ |
ಸ್ನಾತ್ವಾಽಶ್ವಮೇಧಂ ಪ್ರಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥34॥
ಎಲೈ ನರಶ್ರೇಷ್ಠನೇ, ಗಂಗಾಸರಸ್ವತೀಸಂಗಮದಲ್ಲಿ ಸ್ನಾನವನ್ನುಮಾಡುವ ಮನುಷ್ಯನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಮತ್ತು ಸ್ವರ್ಗಲೋಕಕ್ಕೂ ಹೋಗುತ್ತಾನೆ.
ಭದ್ರಕರ್ಣೇಶ್ವರಂ ಗತ್ವಾ ದೇವಮರ್ಚ್ಯ ಯಥಾವಿಧಿ |
ನ ದುರ್ಗತಿಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥35॥
ಭದ್ರಕರ್ಣೇಶ್ವರಕ್ಷೇತ್ರಕ್ಕೆ ಹೋಗಿ ಅಲ್ಲಿ ರುದ್ರದೇವರನ್ನು ಶಾಸೊತ್ರೇಕ್ತವಿಧಾನದಿಂದ ಪೂಜಿಸುವವನು ದುರ್ಗತಿಯನ್ನು ಹೊಂದುವುದಿಲ್ಲ. ಮತ್ತು ಶರೀರವನ್ನು ತ್ಯಾಗಮಾಡಿದ ಮೇಲೆ ಸ್ವರ್ಗಲೋಕವನ್ನು ಸೇರುತ್ತಾನೆ.
ತತಃ ಕುಬ್ಜಾಮ್ರಕಂ ಗಚ್ಛೇತ್ ತೀರ್ಥಸೇವೀ ಯಥಾಕ್ರಮಮ್ |
ಗೋಸಹಸ್ರಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥36॥
ಅನಂತರ ತೀರ್ಥಸೇವಿಯಾದ ಮನುಷ್ಯನು ಕ್ರಮವಾಗಿ ಕುಬ್ಜಾಮ್ರಕಕ್ಷೇತ್ರಕ್ಕೆ ಹೋಗಬೇಕು. ಅದರಿಂದ ಅವನು ಸಹಸ್ರಗೋದಾನದ ಫಲವನ್ನು ಪಡೆದು ಸ್ವರ್ಗಲೋಕಕ್ಕೆ ಹೋಗುತ್ತಾನೆ.
ಅರುಂಧತೀವಟಂ ಗಚ್ಛೇತ್ ತೀರ್ಥಸೇವೀ ನರಾಧಿಪ |
ಸಾಮುದ್ರಕಮುಪಸ್ಪೃಶ್ಯ ಬ್ರಹ್ಮಚಾರೀ ಸಮಾಹಿತಃ ॥37॥
ಅಶ್ವಮೇಧಮವಾಪ್ನೋತಿ ತ್ರಿರಾತ್ರೋಪೋಷಿತೋ ನರಃ |
ಗೋಸಹಸ್ರಫಲಂ ವಿಂದೇತ್ ಕುಲಂ ಚೈವ ಸಮುದ್ಧರೇತ್ ॥38॥
ಎಲೈ ರಾಜನೇ, ತೀರ್ಥಸೇವಿಯಾದ ಮಾನವನು ಅಲ್ಲಿಂದ ಅರುಂಧತೀವಟಕ್ಕೆ ಹೋಗಬೇಕು. ಅಲ್ಲಿ ಬ್ರಹ್ಮಚಾರಿಯಾದವನು ಮತ್ತು ಸಮಾಹಿತನಾದವನು ಸಮುದ್ರಜಲವನ್ನು ಮುಟ್ಟಿದ ತಕ್ಷಣವೇ ಅಶ್ವಮೇಧಫಲವನ್ನು ಪಡೆಯುತ್ತಾನೆ. ಮೂರುದಿವಸಗಳ ಕಾಲ ಅಲ್ಲಿ ಉಪವಾಸ ಮಾಡಿದ ನರನಾದರೋ ಸಹಸ್ರಗೋದಾನ ಫಲವನ್ನು ಹೊಂದಿ ತನ್ನ ಕುಲವನ್ನು ಉದ್ಧಾರಮಾಡುತ್ತಾನೆ.
ಬ್ರಹ್ಮಾವರ್ತಂ ತತೋ ಗಚ್ಛೇದ್ ಬ್ರಹ್ಮಚಾರೀ ಸಮಾಹಿತಃ |
ಅಶ್ವಮೇಧಮವಾಪ್ನೋತಿ ಸೋಮಲೋಕಂ ಚ ಗಚ್ಛತಿ ॥39॥
ಅನಂತರ ಮಾನವನು ಬ್ರಹ್ಮಚಾರಿಯಾಗಿ ಸಮಾಧಾನದಿಂದ ಕೂಡಿ ಬ್ರಹ್ಮಾವರ್ತಕ್ಷೇತ್ರಕ್ಕೆ ಹೋಗಬೇಕು. ಅವನು ಅಶ್ವಮೇಧಯಾಗದ ಫಲವನ್ನು ಪಡೆದು ಚಂದ್ರಲೋಕಕ್ಕೆ ಹೋಗುತ್ತಾನೆ.
ಯಮುನಾಪ್ರಭವಂ ಗತ್ವಾ ಸಮುಪಸ್ಪೃಶ್ಯ ಯಾಮುನಮ್ |
ಅಶ್ವಮೇಧಫಲಂ ಲಬ್ಧ್ವಾ ಸ್ವರ್ಗಲೋಕೇ ಮಹೀಯತೇ ॥40॥
ಎಲೈ ರಾಜನೇ, ಯಮುನೆಯ ಉದ್ಭವಸ್ಥಾನಕ್ಕೆ ಹೋಗಿ ಆಗತಾನೆ ಉದ್ಭವಿಸಿದ ಯಮುನೆಯ ನೀರಿನಲ್ಲಿ ಸ್ನಾನಮಾಡಿದವನು ಅಶ್ವಮೇಧಫಲವನ್ನು ಹೊಂದಿ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ದರ್ವೀಸಂಕ್ರಮಣಂ ಪ್ರಾಪ್ಯ ತೀರ್ಥಂ ತ್ರೈಲೋಕ್ಯಪೂಜಿತಮ್ |
ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥41॥

ತ್ರೈಲೋಕ್ಯಪೂಜಿತವಾದ ದರ್ವೀಸಂಕ್ರಮಣತೀರ್ಥಕ್ಕೆ ಹೋದವನು ಅಶ್ವಮೇಧಯಾಗದ ಫಲವನ್ನು ಪಡೆದು ಸ್ವರ್ಗಲೋಕಕ್ಕೆ ಹೋಗುತ್ತಾನೆ.
ಸಿಂಧೋಶ್ಚ ಪ್ರಭವಂ ಗತ್ವಾ ಸಿದ್ಧಗಂಧರ್ವಸೇವಿತಮ್ |
ತತ್ರೋಷಿತ್ವಾ ನಿಶಾಃ ಪಂಚ ವಿಂದೇದ್ ಬಹುಸುವರ್ಣಕಮ್ ॥42॥
ಸಿದ್ಧಗಂಧರ್ವರಿಂದ ಸೇವಿತವಾದ ಸಿಂಧುವಿನ ಉದ್ಭವಸ್ಥಾನಕ್ಕೆ ಹೋಗಿ ಅಲ್ಲಿ ಐದು ರಾತ್ರಿಗಳು ವಾಸವನ್ನು ಮಾಡಿದರೆ ಪ್ರಭೂತವಾದ ಸುವರ್ಣವನ್ನು ಪಡೆಯುತ್ತಾನೆ.
ಅಥ ವೇದಿಂ ಸಮಾಸಾದ್ಯ ನರಃ ಪರಮದುರ್ಗಮಮ್ |
ಅಶ್ವಮೇಧಮವಾಪ್ನೋತಿ ಗಚ್ಛೇಚ್ಚೌಶನಸೀಂ ಗತಿಮ್ ॥43॥
ಅನಂತರ ವೇದಿ ಎಂಬ ಪರಮದುರ್ಗಮವಾದ ಕ್ಷೇತ್ರವನ್ನು ತಲುಪಿದ ನರನು ಅಶ್ವಮೇಧಫಲವನ್ನು ಪಡೆಯುತ್ತಾನೆ ಮತ್ತು ಶುಕ್ರಲೋಕಪ್ರಾಪ್ತಿಯನ್ನೂ ಹೊಂದುತ್ತಾನೆ.
ಋಷಿಕುಲ್ಯಾಂ ಸಮಾಸಾದ್ಯ ವಾಸಿಷ್ಠಂ ಚೈವ ಭಾರತ |
ವಾಸಿಷ್ಠೀಂ ಸಮಭಿಕ್ರಮ್ಯ ಸರ್ವೇ ವರ್ಣಾ ದ್ವಿಜಾತಯಃ ॥44॥
ಎಲೈ ಭಾರತನೇ, ವಸಿಷ್ಠರಿಗೆ ಸಂಬಂಧಿಸಿದ ಋಷಿ ಕುಲ್ಯೆಯೆಂದು ಪ್ರಸಿದ್ಧವಾದ ವಾಸಿಷ್ಠೀ ಎಂದೇ ಕರೆಯಲ್ಪಡುವ ಒಂದು ಸರೋವರವನ್ನು ತಲುಪಿದ ಎಲ್ಲ ವರ್ಣದವರು ದ್ವಿಜರಾಗಿಬಿಡುತ್ತಾರೆ.
ನರಃ ಸ್ನಾತ್ವರ್ಷಿಕುಲ್ಯಾಯಾಮ್ ಋಷಿಲೋಕಂ ಪ್ರಪದ್ಯತೇ |
ಯದಿ ತತ್ರ ವಸೇನ್ಮಾಸಂ ಶಾಕಾಹಾರೋ ನರಾಧಿಪ ॥45॥
ಋಷಿಕುಲ್ಯೆವೆಂದು ಕರೆಯಲ್ಪಡುವ ಆ ವಾಸಿಷ್ಠತೀರ್ಥದಲ್ಲಿ ಸ್ನಾನಮಾಡುವ ನರನು ಅಲ್ಲಿ ಒಂದು ತಿಂಗಳು ಶಾಕಾಹಾರನಾಗಿ ವಾಸಮಾಡಿದರೆ ಋಷಿಲೋಕವನ್ನು ಪಡೆಯುತ್ತಾನೆ.
ಭೃಗುತುಂದಂ ಸಮಾಸಾದ್ಯ ವಾಜಿಮೇಧಫಲಂ ಲಭೇತ್ |
ಗತ್ವಾ ವೀರಪ್ರಮೋಕ್ಷಂ ಚ ಸರ್ವಪಾಪೈಃ ಪ್ರಮುಚ್ಯತೇ ॥46॥
ಭೃಗುತುಂದ (ಭೃಗುತುಂಗ) ಕ್ಷೇತ್ರಕ್ಕೆ ಹೋದರೆ ಅಶ್ವಮೇಧಫಲವುಂಟಾಗುತ್ತದೆ. ವೀರಪ್ರಮೋದಕ್ಷೇತ್ರಕ್ಕೆ ಹೋದರೆ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಕೃತ್ತಿಕಾಮಘಯೋಶ್ಚೈವ ತೀರ್ಥಮಾಸಾದ್ಯ ಭಾರತ |
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಮಾಪ್ನೋತಿ ಪುಣ್ಯಕಮ್ ॥47॥
ಎಲೈ ಭಾರತನೇ, ಕೃತ್ತಿಕಾತೀರ್ಥ ಮತ್ತು ಮಘತೀರ್ಥಕ್ಕೆ ಹೋದ ಮನುಷ್ಯನು ಅಗ್ನಿಷ್ಟೋಮ ಮತ್ತು ಅತಿರಾತ್ರ ಯಾಗಗಳಿಗೆ ಸಮಾನವಾದ ಪುಣ್ಯಫಲವನ್ನು ಹೊಂದುತ್ತಾನೆ.
ತತಃ ಸಂಧ್ಯಾಂ ಸಮಾಸಾದ್ಯ ವಿದ್ಯಾತೀರ್ಥಮನುತ್ತಮಮ್ |
ಉಪಸ್ಪೃಶ್ಯ ಚ ವಿದ್ಯಾನಾಂ ಸರ್ವಾಸಾಂ ಪಾರಗೋ ಭವೇತ್ ॥48॥
ಅನಂತರ ಸಂಧ್ಯಾತೀರ್ಥವೆಂದು ಕರೆಯಲ್ಪಡುವ ಶ್ರೇಷ್ಠವಾದ ವಿದ್ಯಾತೀರ್ಥಕ್ಕೆ ಹೋಗಿ ಆ ನೀರನ್ನು ಸೇವಿಸುವುದರಿಂದ ಎಲ್ಲ ವಿದ್ಯೆಯಗಳಲ್ಲಿ ಪಾರಂಗತನಾಗುತ್ತಾನೆ.
ಮಹಾಶ್ರಮೇ ವಸೇದ್ರಾತ್ರಿಂ ಸರ್ವಪಾಪಪ್ರಮೋಚನೇ |
ಏಕಕಾಲಂ ನಿರಾಹಾರೋ ಲೋಕಾನ್ ಪ್ರಾಪ್ನೋತಿ ಪುಷ್ಕಲಾನ್ ॥49॥
ಸರ್ವಪಾಪನಾಶಕವಾದ ಮಹಾಶ್ರಮದಲ್ಲಿ ದಿವಸಕ್ಕೆ ಒಂದು ಹೊತ್ತು ಉಪವಾಸವನ್ನು ಮಾಡುತ್ತಾ ರಾತ್ರಿಯನ್ನು ಕಳೆದರೆ ಪುಷ್ಕಲವಾದ ಲೋಕಗಳನ್ನು ಹೊಂದುತ್ತಾನೆ.
ಷಷ್ಠಕಾಲೋಪವಾಸೇನ ಮಾಸಮುಷ್ಯ ಮಹಾಲಯೇ |
ಸರ್ವಪಾಪವಿಶುದ್ಧಾತ್ಮಾ ವಿಂದೇದ್ ಬಹುಸುವರ್ಣಕಮ್ ॥50॥
ಅಲ್ಲಿ ಮಹಾಲಯದಲ್ಲಿ ಹಗಲಿನ ಕೊನೆಯ ಆರನೆಯ ಭಾಗದವರೆಗೂ ಉಪವಾಸವಿದ್ದು ಒಂದು ತಿಂಗಳ ಕಾಲ ದೇವರ ಆರಾಧನೆಯನ್ನು ಮಾಡುವವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಸುವರ್ಣಾದಿ ಬಹುಸಂಪತ್ತನ್ನು ಪಡೆಯುತ್ತಾನೆ.
ಅಥ ವೇತಸಿಕಂ ಗತ್ವಾ ಪಿತಾಮಹನಿಷೇವಿತಮ್ |
ಅಶ್ವಮೇಧಮವಾಪ್ನೋತಿ ಗಚ್ಛೇಚ್ಚೌಶನಸೀಂ ಗತಿಮ್ ॥51॥
ಅನಂತರ ಬ್ರಹ್ಮದೇವರ ಸನ್ನಿದಾನಕ್ಕೆ ಪಾತ್ರವಾದ ವೇತಸಿಕ ಕ್ಷೇತ್ರಕ್ಕೆ ಹೋದರೆ ಅಶ್ವಮೇಧಫಲವನ್ನು ಪಡೆಯುತ್ತಾನೆ. ಶುಕ್ರಾಚಾರ್ಯರ ಅದೃಶ್ಯಗತಿಯು ಅವನಿಗೆ ಲಭಿಸುತ್ತದೆ.
ಅಥ ಸುಂದರಕಾತೀರ್ಥಂ ಪ್ರಾಪ್ಯ ಸಿದ್ಧರ್ಷಿಸೇವಿತಮ್ |
ರೂಪಸ್ಯ ಭಾಗೀ ಭವತಿ ದೃಷ್ಟಮೇತತ್ ಪುರಾತನೈಃ ॥52॥
ತತೋ ವೈ ಬ್ರಾಹ್ಮಣಂ ಗಚ್ಛೇತ್ ಬ್ರಹ್ಮಚಾರೀ ಜಿತೇಂದ್ರಿಯಃ |
ಪದ್ಮವರ್ಣೇಣ ಯಾನೇನ ಬ್ರಹ್ಮಲೋಕಂ ಪ್ರಪದ್ಯತೇ ॥53॥
ಅಲ್ಲಿಂದ ಸಿದ್ಧರ್ಷಿಸೇವಿತವಾದ ಸುಂದರತೀರ್ಥಕ್ಕೆ ಹೋಗುವ ಮನುಷ್ಯನು ಒಳ್ಳೆಯ ರೂಪವನ್ನು ಹೊಂದುತ್ತಾನೆ. ಇದನ್ನು ಪ್ರಾಚೀನರು ನೋಡಿದ್ದಾರೆ. ಅಲ್ಲಿಂದ ಮಾನವನು ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿ ಬ್ರಹ್ಮಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಂದ ಮುಂದೆ ಅವನು (ಶರೀರತ್ಯಾಗವನ್ನು ಮಾಡಿದ ಮೇಲೆ) ಪದ್ಮವರ್ಣದ ವಿಮಾನದಲ್ಲಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ.
ತತಶ್ಚ ನೈಮಿಶಂ ಗಚ್ಛೇತ್ ಪುಣ್ಯಂ ಸಿದ್ಧನಿಷೇವಿತಮ್ |

ತತ್ರ ನಿತ್ಯಂ ನಿವಸತಿ ಬ್ರಹ್ಮಾ ದೇವಗಣೈರ್ವೃತಃ ॥54॥
ಅಲ್ಲಿಂದ ಸಿದ್ಧಗಣಸೇವಿತವಾದ ಪವಿತ್ರವಾದ ನೈಮಿಶಕ್ಷೇತ್ರಕ್ಕೆ ಹೋಗಬೇಕು. ಬ್ರಹ್ಮದೇವರು ದೇವತಾಗಣದಿಂದ ಯುಕ್ತರಾಗಿ ಅಲ್ಲಿಯೇ ಯಾವಾಗಲೂ ವಾಸವನ್ನು ಮಾಡುತ್ತಾರೆ.
ನೈಮಿಶಂ ಪ್ರಾರ್ಥಯಾನಸ್ಯ ಪಾಪಸ್ಯಾರ್ಧಂ ಪ್ರಣಶ್ಯತಿ |
ಪ್ರವಿಷ್ಟಮಾತ್ರಸ್ತು ನರಃ ಸರ್ವಪಾಪೈಃ ಪ್ರಮುಚ್ಯತೇ ॥55॥
ನೈಮಿಶಕ್ಕೆ ಹೋಗಬೇಕೆಂದು ಮನಸ್ಸಿನಲ್ಲಿ ಪ್ರಾರ್ಥಿಸಿದರೂ ಅರ್ಧಪಾಪವು ನಾಶವನ್ನು ಹೊಂದುತ್ತದೆ. ನೈಮಿಶವನ್ನು ಪ್ರವೇಶಮಾಡಿದರಂತೂ ಮನುಷ್ಯನಿಗೆ ಎಲ್ಲ ಪಾಪಗಳೂ ನಾಶವನ್ನು ಹೊಂದುತ್ತವೆ.
ತತ್ರ ಮಾಸಂ ವಸೇದ್ಧೀರೋ ನೈಮಿಶೇ ತೀರ್ಥತತ್ಪರಃ |
ಪೃಥಿವ್ಯಾಂ ಯಾನಿ ತೀರ್ಥಾನಿ ನೈಮಿಶೇ ತಾನಿ ಭಾರತ ॥56॥
ಎಲೈ ಭಾರತನೇ, ತೀರ್ಥಶ್ರದ್ಧೆಯುಳ್ಳ ಮನುಷ್ಯನು ನೈಮಿಶಾರಣ್ಯದಲ್ಲಿ ಧೀರನಾಗಿ ಒಂದು ತಿಂಗಳಕಾಲ ವಾಸವನ್ನು ಮಾಡಬೇಕು. ಎಲೈ ಭಾರತನೇ, ಭೂಮಿಯಲ್ಲಿ ಎಷ್ಟು ತೀರ್ಥಗಳು ಇವೆಯೋ ಅವೆಲ್ಲವೂ ನೈಮಿಶಾರಣ್ಯದಲ್ಲಿವೆ.
ಅಭಿಷೇಕಕೃತಸ್ತತ್ರ ನಿಯತೋ ನಿಯತಾಶನಃ |
ಗವಾಂ ಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ |
ಪುನಾತ್ಯಾಸಪ್ತಮಂ ಚೈವ ಕುಲಂ ಭರತಸತ್ತಮ ॥57॥
ನಿಯಮವನ್ನು ಅನುಸರಿಸುವವನಾಗಿ ಆಹಾರನಿಯಮದಿಂದ ಕೂಡಿ ಯಾರು ಅಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಆ ಮನುಷ್ಯನು ಗೋಮೇಧಯಜ್ಞದ ಫಲವನ್ನು ಪಡೆಯುತ್ತಾನೆ. ಮತ್ತು ಎಲೈ ಭರತಸತ್ತಮನೇ ಏಳು ತಲೆಗಳವರೆಗೆ ತನ್ನ ಕುಲವನ್ನು ಪವಿತ್ರೀಕರಿಸುತ್ತಾನೆ.
ಯಸ್ತ್ಯಜೇನ್ನೈಮಿಶೇ ಪ್ರಾಣಾನ್ ಉಪವಾಸಪರಾಯಣಃ |
ಸ ಮೋದೇತ್ ಸರ್ವಲೋಕಸ್ಥ ಏವಮಾಹುರ್ಮನೀಷಿಣಃ ॥58॥
ಯಾವನು ಉಪವಾಸ ಪರಾಯಣನಾಗಿ ನೈಮಿಶಾರಣ್ಯದಲ್ಲಿ ದೇಹತ್ಯಾಗವನ್ನು ಮಾಡುತ್ತಾನೆಯೋ ಅವನು ಎಲ್ಲ ಲೋಕಗಳಲ್ಲಿಯೂ ಇದ್ದು ಸುಖವನ್ನು ಅನುಭವಿಸುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ.
ಪೃಥಿವ್ಯಾಂ ನೈಮಿಶಂ ಪುಣ್ಯಮಂತರಿಕ್ಷೇತು ಪುಷ್ಕರಮ್ |
ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ |
ನಿತ್ಯಂ ಪುಣ್ಯಂ ಚ ಮೇಧ್ಯಂ ಚ ನೈಮಿಶಂ ಕುರುಸತ್ತಮ ॥59॥
ಭೂಮಿಯಲ್ಲಿ ನೈಮಿಶಾರಣ್ಯವು ಪವಿತ್ರವೆಂದು ಹೇಳಲ್ಪಡುತ್ತದೆ. ಅಂತರಿಕ್ಷದಲ್ಲಿ ದೇವರ್ಷಿಮೊದಲಾದವರು ಪುಷ್ಕರಕ್ಷೇತ್ರವನ್ನು ಪ್ರಶಂಸಿಸುತ್ತಾರೆ. ಮೂರು ಲೋಕಗಳಲ್ಲಿ ಕುರುಕ್ಷೇತ್ರವು ಎಲ್ಲದಕ್ಕಿಂತ ಶ್ರೇಷ್ಠವಾಗಿದೆ. ಎಲೈ ಕುರುಸತ್ತಮನೇ, ನೈಮಿಶಾರಣ್ಯವು ಯಾವಾಗಲೂ ಪುಣ್ಯಪ್ರದವೂ ಮತ್ತು ಪವಿತ್ರವಾದುದೂ ಆಗಿದೆ.
ಗಂಗೋದ್ಭೇದಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ |
ವಾಜಪೇಯಮವಾಪ್ನೋತಿ ಬ್ರಹ್ಮಭೂತಶ್ಚ ಜಾಯತೇ ॥60॥
ಯಾವ ಮನುಷ್ಯನು ಗಂಗೋತ್ಪತ್ತಿ ಸ್ಥಾನಕ್ಕೆ ಹೋಗಿ (ಗಂಗೋತ್ರಿ) ಮೂರುರಾತ್ರಿಗಳು ಉಪವಾಸವನ್ನು ಮಾಡುತ್ತಾನೆಯೋ ಅವನು ವಾಜಪೇಯಯಾಗದ ಫಲವನ್ನು ಪಡೆಯುತ್ತಾನೆ. ಮತ್ತು ಮುಂದಿನ ಜನ್ಮದಲ್ಲಿ ಬ್ರಹ್ಮನಾಗಿಯೇ ಅವತರಿಸುತ್ತಾನೆ. (ಬ್ರಹ್ಮನಲ್ಲಿ ಇರುವವನೇ ಆಗಿ ಹುಟ್ಟುತ್ತಾನೆ.)
ಸರಸ್ವತೀಂ ಸಮಾಸಾದ್ಯ ತರ್ಪಯೇತ್ ಪಿತೃದೇವತಾಃ |
ಸಾರಸ್ವತೇಷು ಲೋಕೇಷು ಮೋದತೇ ನಾತ್ರ ಸಂಶಯಃ ॥61॥
ಸರಸ್ವತಿನದಿಯನ್ನು ತಲುಪಿ ಪಿತೃದೇವತೆಗಳಿಗೆ ತರ್ಪಣವನ್ನು ಕೊಡುವವನು ಸಾರಸ್ವತಲೋಕಗಳಲ್ಲಿ ಸಂತೋಷಡುತ್ತಾನೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ತತಶ್ಚ ಬಾಹುದಾಂ ಗಚ್ಛೇದ್ ಬ್ರಹ್ಮಚಾರೀ ಸಮಾಹಿತಃ |
ದೇವಸತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥62॥
ಅನಂತರ ಬ್ರಹ್ಮಚಾರಿಯೂ ಸಮಾಧಾನಯುಕ್ತನೂ ಆದ ನರನು ಬಾಹುದಾ ನದಿಗೆ ಹೋಗಬೇಕು. ಅಲ್ಲಿ ದೇವಸತ್ರಯಾಗದ ಫಲವನ್ನು ಹೊಂದುತ್ತಾನೆ.
ತತಶ್ಚೀರವತೀಂ ಗಚ್ಛೇತ್ ಪುಣ್ಯಾಂ ಪುಣ್ಯತಮೈರ್ವೃತಾಮ್ |
ಪಿತೃದೇವಾರ್ಚನಪರೋ ವಾಜಿಮೇಧಮವಾಪ್ನುಯಾತ್ ॥63॥
ಅಲ್ಲಿಂದ ಪವಿತ್ರವಾದ ಪುಣ್ಯಜನರಿಂದ ಆವೃತವಾದ ಚೀರವತೀ ನದಿಗೆ ಹೋಗಬೇಕು. ನದಿಯಲ್ಲಿ ಪಿತೃದೇವತಾರ್ಚನೆಯನ್ನು ಮಾಡುವವನು ಅಶ್ವಮೇಧಫಲವನ್ನು ಹೊಂದುತ್ತಾನೆ.
ವಿಮಲಾಶೋಕಮಾಸಾದ್ಯ ವಿರಾಜತಿ ಯಥಾ ಶಶೀ |
ತತ್ರೋಷಿತ್ವಾ ನಿಶಾಮೇಕಾಂ ಸ್ವರ್ಗಲೋಕೇ ಮಹೀಯತೇ ॥64॥
ವಿಮಲಾಶೋಕತೀರ್ಥವನ್ನು ಸೇರಿದವನು ಚಂದ್ರನಂತೆ ಬೆಳಗುತ್ತಾನೆ. ಅಲ್ಲಿ ಒಂದುರಾತ್ರಿ ವಾಸವನ್ನು ಮಾಡಿದರೆ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಗೋಪ್ರತಾರಂ ತತೋ ಗಚ್ಛೇತ್ ಸರಯ್ವಾಸ್ತೀರ್ಥಮುತ್ತಮಮ್ |
ಯತ್ರ ರಾಮೋ ಗತಃ ಸ್ವರ್ಗಂ ಸಭೃತ್ಯಬಲವಾಹನಃ ॥65॥

ದೇಹಂ ತ್ಯಕ್ತ್ವಾ ದಿವಂ ಯಾತಃ ತಸ್ಯ ತೀರ್ಥಸ್ಯ ತೇಜಸಾ |
ರಾಮಸ್ಯ ಚ ಪ್ರಸಾದೇನ ವ್ಯವಸಾಯಾಚ್ಚ ಚಾನಘ ||66||
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಗೋಪ್ರತಾರೇ ನರಾಧಿಪ |
ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕೇ ಮಹೀಯತೇ ||67||
ಅಲ್ಲಿಂದ ಸರಯೂನದಿಯಲ್ಲಿರುವ ಗೋಪ್ರತಾರವೆಂಬ ಶ್ರೇಷ್ಠವಾದ ತೀರ್ಥಕ್ಕೆ ಹೋಗಬೇಕು. ಅಲ್ಲಿ ರಾಮನು ಆ ತೀರ್ಥದ ಮಹಿಮೆಯಿಂದ ತನ್ನ ಭೃತ್ಯಬಲವಾಹನ ಸಹಿತನಾಗಿ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋದನು. ಎಲೈ ಪರಿಶುದ್ಧನಾದವನೇ ಆ ತೀರ್ಥದಲ್ಲಿ ಸ್ನಾನಮಾಡಿದ ನರನು ರಾಮನ ಅನುಗ್ರಹದಿಂದಲೂ ಮತ್ತು ತನ್ನ ಆಚರಣೆಯಿಂದಲೂ ಸರ್ವಪಾಪಗಳಿಂದ ನಿರ್ಮುಕ್ತನಾಗಿ ಸ್ವರ್ಗಲೋಕದಲ್ಲಿ ವಾಸಿಸುತ್ತಾನೆ.
ರಾಮತೀರ್ಥೇ ನರಃ ಸ್ನಾತ್ವಾ ಗೋಮತ್ಯಾಂ ಕುರುನಂದನ |
ಅಶ್ವಮೇಧಮವಾಪ್ನೋತಿ ಪುನಾತಿ ಚ ಕುಲಂ ನರಃ ||68||
ಎಲೈ ಕುರುನಂದನನೇ, ಗೋಮತಿಯಲ್ಲಿ ರಾಮತೀರ್ಥದಲ್ಲಿ ಸ್ನಾನವನ್ನುಮಾಡಿದ ನರನು ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ. ಮತ್ತು ತನ್ನ ಕುಲವನ್ನು ಪಾವನಮಾಡುತ್ತಾನೆ.
ಶತಸಾಹಸ್ರಕಂ ತತ್ರ ತೀರ್ಥಂ ಭರತಸತ್ತಮ |
ತತ್ರೋಪಸ್ಪರ್ಶನಂ ಕೃತ್ವಾ ನಿಯತೋ ನಿಯತಾಶನಃ ||69||
ಗೋಸಹಸ್ರಫಲಂ ಪುಣ್ಯಂ ಪ್ರಾಪ್ನೋತಿ ಭರತರ್ಷಭ |
ತತೋ ಗಚ್ಛೇತ ರಾಜೇಂದ್ರ ಭರ್ತೃಸ್ಥಾನಮನುತ್ತಮಮ್ ||70||
ಎಲೈ ಭರತಶ್ರೇಷ್ಠನೇ, ಅಲ್ಲಿಯೇ ಶತಸಾಹಸ್ರಕವೆಂಬ ತೀರ್ಥವಿದೆ. ನಿಯಮಬದ್ಧನಾಗಿ ನಿಯತ ಆಹಾರನಾಗಿ ಅಲ್ಲಿ ಸ್ನಾನವನ್ನು ಮಾಡುವವನು ಸಹಸ್ರಗೋದಾನಫಲವಾದ ಪುಣ್ಯವನ್ನು ಪಡೆಯುತ್ತಾನೆ. ಎಲೈ ಭರತರ್ಷಭನಾದ ರಾಜೇಂದ್ರನೇ, ಅಲ್ಲಿಂದ ಭರ್ತೃಸ್ಥಾನವೆಂಬ ಶ್ರೇಷ್ಠವಾದ ತೀರ್ಥಕ್ಕೆ ಹೋಗಬೇಕು.
ಕೋಟಿತೀರ್ಥೇ ನರಃ ಸ್ನಾತ್ವಾ ಅರ್ಚಯಿತ್ವಾ ಗುಹಂ ನೃಪ |
ಗೋಸಹಸ್ರಫಲಂ ವಿದ್ಯಾತ್ ತೇಜಸ್ವೀ ಚ ಭವೇನ್ನರಃ ||71||
ಅಲ್ಲಿ ಕೋಟಿತೀರ್ಥದಲ್ಲಿ ಸ್ನಾನಮಾಡಿ ಗುಹನನ್ನು ಪೂಜಿಸುವ ನರನು ಗೋಸಹಸ್ರಫಲವನ್ನು ಹೊಂದುತ್ತಾನೆ. ತೇಜಸ್ವಿಯೂ ಆಗುತ್ತಾನೆ.
ಮಾರ್ಕಂಡೇಯಸ್ಯ ರಾಜೇಂದ್ರ ತೀರ್ಥಮಾಸಾದ್ಯ ದುರ್ಲಭಮ್ |
ಗೋಮತೀಗಂಗಯೋಶ್ಚೈವ ಸಂಗಮೇ ಲೋಕವಿಶ್ರುತೇ |
ಅಗ್ನಿಷ್ಟೋಮಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ||72||
ಎಲೈ ರಾಜೇಂದ್ರನೇ, ಗೋಮತಿಗಂಗಾನದಿಗಳ ಲೋಕವಿಶ್ರುತವಾದ ಸಂಗಮದಲ್ಲಿ ದುರ್ಲಭವಾದ ಮಾರ್ಕಂಡೇಯ ತೀರ್ಥವನ್ನು ಸೇವಿಸಿದರೆ ಅಗ್ನಿಷ್ಟೋಮಫಲವನ್ನು ಹೊಂದುತ್ತಾನೆ. ತನ್ನ ಕುಲವನ್ನು ಉದ್ಧರಿಸುತ್ತಾನೆ.
ತತೋ ವಾರಾಣಸೀಂ ಗತ್ವಾ ಅರ್ಚಯಿತ್ವಾ ವೃಷಧ್ವಜಮ್ |
ಕಪಿಲಾನಾಂ ಹ್ರದೇ ಸ್ನಾತ್ವಾ ರಾಜಸೂಯಫಲಂ ಲಭೇತ್ ||73||
ಅನಂತರ ವಾರಾಣಸಿಗೆ ಹೋಗಿ ಶಂಕರನನ್ನು ಪೂಜಿಸಿ ಕಪಿಲಹ್ರದದಲ್ಲಿ ಸ್ನಾನವನ್ನುಮಾಡಿದರೆ ರಾಜಸೂಯ ಫಲವು ಲಭಿಸುತ್ತದೆ.
ವಾರಾಣಸ್ಯಾಂ ವಿಶೇಷೇಣ ಯತ್ರ ವಿಶ್ವೇಶ್ವರಃ ಶಿವಃ |
ದೇವ್ಯಾ ಸಹ ಮಹಾದೇವೋ ಗಂಗಾಂ ಸಮವಗಾಹತೇ ||74||
ವಾರಾಣಸಿಯಲ್ಲಿ ವಿಶ್ವೇಶ್ವರನಾದ ಮಹಾದೇವನಾದ ಶಿವನು ವಿಶೇಷವಾಗಿ ಪಾರ್ವತಿಯ ಜೊತೆಯಲ್ಲಿ ಗಂಗೆಯಲ್ಲಿ ಸ್ನಾನವನ್ನು ಮಾಡುತ್ತಾನೆ.
ತತ್ರ ಮಾಸಂ ವಸೇದ್ಧೀರೋ ಬ್ರಹ್ಮಚಾರೀ ಸಮಾಹಿತಃ |
ಯಾವಜ್ಜೀವಕೃತಂ ಪಾಪಂ ಮಾಸೇನೈಕೇನ ಶುದ್ಧ್ಯತಿ ||75||
ತತೋ ಗಯಾಂ ಸಮಾಸಾದ್ಯ ಬ್ರಹ್ಮಚಾರೀ ಜಿತೇಂದ್ರಿಯಃ |
ಅಶ್ವಮೇಧಮವಾಪ್ನೋತಿ ಗಮನಾದೇವ ಭಾರತ ||76||
ಧೀರನಾದವನೂ ಬ್ರಹ್ಮಚಾರಿಯೂ ಶಾಂತಮನಸ್ಸಿನಿಂದ ಅಲ್ಲಿ ಒಂದುತಿಂಗಳು ವಾಸಿಸಿದರೆ ಒಂದು ಜನ್ಮದಲ್ಲಿ ಮಾಡಿದ ಪಾಪವು ಒಂದೇ ತಿಂಗಳಿನಲ್ಲಿ ಪರಿಹಾರವಾಗುತ್ತವೆ. ಎಲೈ ಭಾರತನೇ, ಅನಂತರ ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ ಗಯಾ ಕ್ಷೇತ್ರವನ್ನು ತಲುಪಿದರೆ ಕೇವಲ ಅಲ್ಲಿಗೆ ಹೋಗುವುದರಿಂದಲೇ ಅಶ್ವಮೇಧ ಫಲವನ್ನು ಪಡೆಯುತ್ತಾನೆ.
ಯತ್ರಾಕ್ಷಯವಟೋ ನಾಮ ತ್ರಿಷು ಲೋಕೇಷು ವಿಶ್ರುತಃ |
ತತ್ರ ದತ್ತಂ ಪಿತೃಣಾಂ ತು ಅಕ್ಷಯ್ಯಮುಪಪದ್ಯತೇ ||77||
ಅಲ್ಲಿ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಅಕ್ಷಯವಟವಿದೆ. ಅಲ್ಲಿ ಪಿತೃಗಳಿಗೆಕೊಟ್ಟ ದಾನವು ಅಕ್ಷಯವಾಗುತ್ತದೆ.
ಮಹಾನದ್ಯಾಮುಪಸ್ಪೃಶ್ಯ ತರ್ಪಯೇತ್ ಪಿತೃದೇವತಾಃ |
ಅಕ್ಷಯಾನ್ ಪ್ರಾಪ್ನುಯಾಲ್ಲೋಕಾನ್ ಕುಲಂ ಚೈವ ಸಮುದ್ಧರೇತ್ ||
ಮಹಾನದಿಯಲ್ಲಿ ಸ್ನಾನವನ್ನುಮಾಡಿ ಪಿತೃದೇವತೆಗಳನ್ನು ಅರ್ಚಿಸಬೇಕು. ಅಂತಹವನು ಅಕ್ಷಯ ಲೋಕಗಳನ್ನು ಹೊಂದಿ ತನ್ನ ಕುಲವನ್ನು ಉದ್ಧರಿಸುತ್ತಾನೆ.
ತತೋ ಬ್ರಹ್ಮಸರೋ ಗಚ್ಛೇದ್ ಬ್ರಹ್ಮಾರಣ್ಯೋಪಶೋಭಿತಮ್ |

ಪೌಂಡರೀಕಮವಾಪ್ನೋತಿ ಪ್ರಭಾತಾಮೇವ ಶರ್ವರೀಮ್ ॥79॥
ಅಲ್ಲಿಂದ ಬ್ರಹ್ಮಾರಣ್ಯದ ಮಧ್ಯೆ ಇರುವ ಬ್ರಹ್ಮಸರೋವರಕ್ಕೆ ಹೋಗಬೇಕು. ಅಲ್ಲಿ ಒಂದು ರಾತ್ರಿ ಕಳೆಯುವಷ್ಟರಲ್ಲಿ ಪುಂಡರೀಕಯಾಗದ ಫಲವು ಉಂಟಾಗುತ್ತದೆ.
ತಸ್ಮಿನ್ ಸರಸಿ ರಾಜೇಂದ್ರ ಬ್ರಹ್ಮಣೋ ಯೂಪ ಉದ್ಧೃತಃ |
ಯೂಪಂ ಪ್ರದಕ್ಷಿಣೀಕೃತ್ಯ ವಾಜಪೇಯಫಲಂ ಲಭೇತ್ ॥80॥
ಎಲೈ ರಾಜೇಂದ್ರನೇ, ಆ ಸರೋವರದಲ್ಲಿ ಬ್ರಹ್ಮದೇವರ ಯೂಪವು ಇಡಲ್ಪಟ್ಟಿದೆ. ಆ ಯೂಪವನ್ನು ಪ್ರದಕ್ಷಿಣೆ ಮಾಡಿದರೆ ವಾಜಪೇಯಫಲವು ದೊರಕುತ್ತದೆ.
ತತೋ ಗಚ್ಛೇತ ರಾಜೇಂದ್ರ ಧೇನುಕಂ ಲೋಕವಿಶ್ರುತಮ್ |
ಏಕರಾತ್ರೋಷಿತೋ ರಾಜನ್ ಪ್ರಯಚ್ಛೇತ್ ತಿಲಧೇನುಕಾಮ್ ॥81॥
ಸರ್ವಪಾಪವಿಶುದ್ಧಾತ್ಮಾ ಸೋಮಲೋಕಂ ವ್ರಜೇದ್ ಧ್ರುವಮ್|
ತತ್ರ ಚಿಹ್ನಂ ಮಹದ್ರಾಜನ್ನದ್ಯಾಪಿ ಹಿ ನ ಸಂಶಯಃ ॥82॥
ಕಪಿಲಾ ಸಹ ವತ್ಸೇನ ಪರ್ವತೇ ವಿಚರತ್ಯುತ |
ಸವತ್ಸಾಯಾಃ ಪದಾನಿ ಸ್ಮ ದೃಶ್ಯಂತೇಽದ್ಯಾಪಿ ತತ್ರ ವೈ ॥83॥
ರಾಜೇಂದ್ರನೇ, ಅಲ್ಲಿಂದ ಲೋಕವಿಶ್ರುತವಾದ ಧೇನುಕ ತೀರ್ಥಕ್ಕೆ ಹೋಗಿ ಒಂದುರಾತ್ರಿ ಇದ್ದು ಕಪಿಲಧೇನುವನ್ನು ದಾನಕೊಡಬೇಕು. ಅಂತಹವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಖಂಡಿತವಾಗಿಯೂ ಚಂದ್ರಲೋಕಕ್ಕೆ ಹೋಗುತ್ತಾನೆ. ರಾಜನೇ, ಅಲ್ಲಿ ಈಗಲೂ ಆ ವಿಶೇಷ ಚಿಹ್ನೆಗಳಿವೆ. ಒಂದು ಕಪಿಲಧೇನುವು ತನ್ನ ಕರುವಿನ ಜೊತೆಯಲ್ಲಿ ಆ ಪರ್ವತದಲ್ಲಿ ತಿರುಗಾಡುತ್ತದೆ. ಆ ಗೋವಿನ ಮತ್ತು ಕರುವಿನ ಹೆಜ್ಜೆಯ ಗುರುತುಗಳು ಈಗಲೂ ಅಲ್ಲಿ ಕಾಣುತ್ತವೆ.
ತೇಷೂಪಸ್ಪೃಶ್ಯ ರಾಜೇಂದ್ರ ಪದೇಷು ಕುರುನಂದನ |
ಯತ್ ಕಿಂಚಿದಶುಭಂ ಪುಂಸಃ ಪ್ರಣಶ್ಯತಿ ಭಾರತ ॥84॥
ಎಲೈ ರಾಜೇಂದ್ರನೇ, ಕುರುನಂದನನೇ, ಆ ಪಾದಚಿಹ್ನೆಗಳ ನೀರನ್ನು ಸ್ಪರ್ಶಮಾಡಿದರೆ ಮನುಷ್ಯನಿಗಿದ್ದ ಅಶುಭಗಳೆಲ್ಲವೂ ನಾಶವನ್ನು ಹೊಂದುತ್ತದೆ.
ತತೋ ಗೃಧ್ರವಟಂ ಗಚ್ಛೇತ್ ಸ್ಥಾನಂ ದೇವಸ್ಯ ಧೀಮತಃ |
ಸ್ನಾಯೀತ ಭಸ್ಮನಾ ತತ್ರ ಅಭಿವಾದ್ಯ ವೃಷಧ್ವಜಮ್ ॥85॥
ಅಲ್ಲಿಂದ ಮೇಧಾವಿಯಾದ ಮಹಾದೇವನ ಸ್ಥಾನವಾದ ರುದ್ರವಟಕ್ಕೆ ಹೋಗಬೇಕು. ಅಲ್ಲಿ ವೃಷಧ್ವಜನಿಗೆ ನಮಸ್ಕರಿಸಿ ಭಸ್ಮಸ್ನಾನವನ್ನು ಮಾಡಬೇಕು.
ಬ್ರಾಹ್ಮಣೇನ ವ್ರತಂ ಚೀರ್ಣಂ ಭವೇದ್ ದ್ವಾದಶವಾರ್ಷಿಕಮ್ |
ಇತರೇಷಾಂ ತು ವರ್ಣಾನಾಂ ಸರ್ವಪಾಪಂ ಪ್ರಣಶ್ಯತಿ ॥86॥
ಹಾಗೆ ಮಾಡಿದರೆ ಬ್ರಾಹ್ಮಣನಿಗೆ ಹನ್ನೆರಡುವರ್ಷವ್ರತವನ್ನು ಮಾಡಿದ ಫಲವು ದೊರೆಯುತ್ತದೆ. ಉಳಿದ ವರ್ಣದವರಿಗೆ ಎಲ್ಲ ಪಾಪಗಳೂ ನಾಶವನ್ನು ಹೊಂದುತ್ತವೆ.
ಉದಯಂ ತಂ ತತೋ ಗಚ್ಛೇತ್ ಪರ್ವತಂ ಗೀತನಾದಿತಮ್ |
ಸಾವಿತ್ರ್ಯಾಸ್ತು ಪದಂ ತತ್ರ ದೃಶ್ಯತೇ ಭರತರ್ಷಭ ॥87॥
ಎಲೈ ಭರತರ್ಷಭನೇ, ಅನಂತರ ಗೀತಶಬ್ದದಿಂದ ಕೂಡಿದ ಉದಯ ಪರ್ವತಕ್ಕೆ ಹೋಗಬೇಕು. ಅಲ್ಲಿ ಸಾವಿತ್ರಿಯ ಹೆಜ್ಜೆಗಳು ಕಾಣುತ್ತವೆ.

ತತ್ರ ಸಂಧ್ಯಾಮುಪಾಸೀತ ಬ್ರಾಹ್ಮಣಃ ಸಂಶಿತವ್ರತಃ |
ಉಪಾಸಿತಾ ಭವೇತ್ ಸಂಧ್ಯಾ ತೇನ ದ್ವಾದಶವಾರ್ಷಿಕೀ ॥88॥
ಅಲ್ಲಿ ವ್ರತಧಾರಿಯಾದ ಬ್ರಾಹ್ಮಣನು ಒಂದು ಬಾರಿ ಸಂಧ್ಯಾವಂದನೆಯನ್ನು ಮಾಡಿದರೆ ಹನೆನರಡುವರ್ಷಗಳ ಕಾಲ ಸಂಧ್ಯಾವಂದನೆಯ ಫಲವು ದೊರೆಯುತ್ತದೆ.
ಯೋನಿದ್ವಾರಂ ಚ ತತ್ರೈವ ವಿಶ್ರುತಂ ಭರತರ್ಷಭ |
ತತ್ರಾಭಿಗಮ್ಯ ಮುಚ್ಯೇತ ಪುರುಷೋ ಯೋನಿಸಂಸರಾತ್ ॥89॥
ಎಲೈ ಭರತರ್ಷಭನೇ, ಅಲ್ಲಿಯೇ ಯೋನಿದ್ವಾರವೆಂಬ ಪ್ರಖ್ಯಾತವಾದ ತೀರ್ಥವಿದೆ. ಅಲ್ಲಿಗೆ ಹೋಗಿ ಸ್ನಾನವನ್ನು ಮಾಡುವ ಪುರುಷನು ಯೋನಿಗಳ ಸಂಚಾರದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಕೃಷ್ಣಶುಕ್ಲಚತುರ್ದಶ್ಯಾಂ ಗಂಗಾಯಾಂ ಯೋ ವಸೇನ್ನರಃ |
ಪುನಾತ್ಯಾಸಪ್ತಮಂ ಚೈವ ಕುಲಂ ನಾಸ್ತ್ಯತ್ರ ಸಂಶಯಃ ॥90॥
ಯಾವ ಮನುಷ್ಯನು ಶುಕ್ಲಪಕ್ಷದ ಮತ್ತು ಕೃಷ್ಣಪಕ್ಷದ ಚತುರ್ದಶಿಯಂದು ಗಂಗಾನದಿಯ ದಡದಲ್ಲಿ ವಾಸಮಾಡುತ್ತಾನೋ ಅವನು ಏಳು ತಲೆಗಳವರೆಗೆ ತನ್ನ ಕುಲವನ್ನು ಉದ್ಧರಿಸುತ್ತಾನೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್|
ಗೌರೀಂ ವಾ ವರಯೇತ್ ಕನ್ಯಾಂ ನೀಲಂ ವಾ ವೃಷಮುತ್ಸೃಜೇತ್ ॥
ಒಬ್ಬನಾದರೂ ಗಯಾಯಾತ್ರೆಯನ್ನುಮಾಡಬಹುದು ಚಿಕ್ಕಕನ್ಯೆಯನ್ನು ವಿವಾಹವಾಗಬಹುದು ಅಥವಾ ನೀಲವೃಷೋತ್ಸರ್ಗವನ್ನು ಮಾಡಬಹುದು ಎಂದು ಅನೇಕ ಗಂಡು ಮಕ್ಕಳನ್ನು ಅಪೇಕ್ಷಿಸಬೇಕು.
ತತಃ ಫಲ್ಗುಂ ವ್ರಜೇದ್ರಾಜನ್ ತೀರ್ಥಸೇವೀ ನರಾಧಿಪ |

ಅಶ್ವಮೇಧಮವಾಪ್ನೋತಿ ಸಿದ್ಧಿಂ ಚ ಮಹತೀಂ ವ್ರಜೇತ್ ॥92॥
ಎಲೈ ರಾಜೇಂದ್ರನೇ, ಅಲ್ಲಿಂದ ತೀರ್ಥಸೇವಿಯಾದ ಮನುಷ್ಯನು ಫಲ್ಗುನದಿಗೆ ಹೋಗಬೇಕು. ಅಲ್ಲಿ ಅಶ್ವಮೇಧ ಫಲವನ್ನು ಮತ್ತು ದೊಡ್ಡ ಸಿದ್ಧಿಯನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಧರ್ಮಪೃಷ್ಠಂ ಸಮಾಹಿತಃ |
ಯತ್ರ ಧರ್ಮೋ ಮಹಾರಾಜ ನಿತ್ಯಮಾಸ್ತೇ ಯುಧಿಷ್ಠಿರ ॥93॥
ಎಲೈ ರಾಜೇಂದ್ರನೇ, ಮಹಾರಾಜನೇ, ಯುದ್ಧದಲ್ಲಿ ಸ್ಥಿರನಾದ ಭೀಷ್ಮನೇ, ಅಲ್ಲಿಂದ ಸಮಾಧಾನಯುಕ್ತನಾಗಿ ಧರ್ಮಪೃಷ್ಠಕ್ಕೆ ಹೋಗಬೇಕು. ಅಲ್ಲಿ ಯಮಧರ್ಮನು ನಿತ್ಯವೂ ಸನ್ನಿಹಿತನಾಗಿದ್ದಾನೆ.
ತತೋ ಗಚ್ಛೇತ ರಾಜೇಂದ್ರ ಬ್ರಹ್ಮಣಸ್ತೀರ್ಥಮುತ್ತಮಮ್ |
ತತ್ರಾರ್ಚಯಿತ್ವಾ ರಾಜೇಂದ್ರ ಬ್ರಹ್ಮಾಣಮಮಿತೌಜಸಮ್|
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥94॥
ರಾಜೇಂದ್ರನೇ, ಅನಂತರ ಶ್ರೇಷ್ಠವಾದ ಬ್ರಹ್ಮತೀರ್ಥಕ್ಕೆ ಹೋಗಬೇಕು. ರಾಜೇಂದ್ರನೇ ಅಲ್ಲಿ ಅಮಿತಸಾಮರ್ಥ್ಯವುಳ್ಳ ಬ್ರಹ್ಮದೇವರನ್ನು ಪೂಜಿಸಿ ರಾಜಸೂಯಾಶ್ವಮೇಧ ಯಾಗಗಳ ಫಲವನ್ನು ಹೊಂದುತ್ತಾನೆ.
ತತೋ ರಾಜಗೃಹಂ ಗಚ್ಛೇತ್ ತೀರ್ಥಸೇವೀ ನರಾಧಿಪ |
ಉಪಸ್ಪೃಶ್ಯ ತಪೋದೇಷು ಕಕ್ಷೀವಾನಿವ ಮೋದತೇ ॥95॥
ಎಲೈ ನರಾಧಿಪನೇ, ತೀರ್ಥಸೇವಿಯಾದವನು ಅಲ್ಲಿಂದ ರಾಜಗೃಹಕ್ಕೆ ಹೋಗಿ ಅಲ್ಲಿಯ ತಪೋದತೀರ್ಥಗಳಲ್ಲಿ ಸ್ನಾನವನ್ನುಮಾಡಿದರೆ ಕಕ್ಷೀವಂತ ಋಷಿಯಂತೆ ಸಂತೋಷಪಡುತ್ತಾನೆ.
ಯಕ್ಷಿಣ್ಯಾ ನೈತ್ಯಕಂ ತತ್ರ ಪ್ರಾಶ್ನೀತ ಪುರುಷಃ ಶುಚಿಃ |
ಯಕ್ಷಿಣ್ಯಾಸ್ತು ಪ್ರಸಾದೇನ ಮುಚ್ಯತೇ ಭ್ರೂಣಹತ್ಯಯಾ ॥96॥
ಅಲ್ಲಿ ಪುರುಷನು ಶುಚಿಯಾಗಿ ಯಕ್ಷಿಣಿಯ ಪ್ರಸಾದವನ್ನು ಸ್ವೀಕರಿಸಬೇಕು. ಯಕ್ಷಿಣಿಯ ಪ್ರಸಾದವನ್ನು ಸ್ವೀಕರಿಸಿದರೆ ಭ್ರೂಣಹತೆಯಯಿಂದ ಮುಕ್ತನಾಗುತ್ತಾನೆ.
ಮಣಿನಾಗಂ ತತೋ ಗತ್ವಾ ಗೋಸಹಸ್ರಫಲಂ ಲಭೇತ್ |
ನೈತ್ಯಕಂ ಭುಂಜತೇ ಯಸ್ತು ಮಣಿನಾಗಸ್ಯ ಮಾನವಃ |
ದಷ್ಟಸ್ಯಾಶೀವಿಷೇಣಾಶು ನ ತಸ್ಯ ಕ್ರಮತೇ ವಿಷಮ್ ॥97॥
ಅಲ್ಲಿಂದ ಮಣಿನಾಗ ಕ್ಷೇತ್ರಕ್ಕೆ ಹೋದರೆ ಸಹಸ್ರಗೋದಾನಫಲವು ಉಂಟಾಗುತ್ತದೆ. ಯಾವ ಮಾನವನು ಮಣಿನಾಗನ ಪ್ರಸಾದವನ್ನು ಭುಂಜಿಸುತ್ತಾನೆಯೋ ಅವನನ್ನು ಸರ್ಪವು ಕಡಿದರೂ ಅವನಿಗೆ ವಿಷವು ಏರುವುದಿಲ್ಲ.
ತತ್ರೋಷ್ಯ ರಜನೀಮೇಕಾಂ ಸರ್ವಪಾಪೈಃ ಪ್ರಮುಚ್ಯತೇ |
ತತೋ ಗಚ್ಛೇತ ಬ್ರಹ್ಮರ್ಷೇಃ ಗೌತಮಸ್ಯಾಶ್ರಮಂ ನರಃ ॥98॥
ಅಲ್ಲಿ ಒಂದು ರಾತ್ರಿವಾಸವನ್ನು ಮಾಡಿದರೆ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಅಲ್ಲಿಂದ ತೀರ್ಥಸೇವಿಯಾದ ನರನು ಬ್ರಹ್ಮರ್ಷಿಗಳಾದ ಗೌತಮರ ಆಶ್ರಮಕ್ಕೆ ಹೋಗಬೇಕು.
ಅಹಲ್ಯಾಯಾ ಹ್ರದೇ ಸ್ನಾತ್ವಾ ಗಚ್ಛೇತ ಪರಮಾಂ ಗತಿಮ್ |
ಅಭಿಗಮ್ಯ ಶ್ರಿಯಂ ರಾಜನ್ ವಿಂದತೇ ಶ್ರಿಯಮುತ್ತಮಾಮ್ ॥99॥
ತತ್ರೋದಪಾನಂ ಧರ್ಮಜ್ಞ ತ್ರಿಷು ಲೋಕೇಷು ವಿಶ್ರುತಮ್ |
ತತ್ರಾಭಿಷೇಕಂ ಕೃತ್ವಾ ತು ವಾಜಿಮೇಧಮವಾಪ್ನುಯಾತ್ ॥100॥
ಅಹಲ್ಯಾಹ್ರದದಲ್ಲಿ ಸ್ನಾನವನ್ನು ಮಾಡಿದರೆ ಶ್ರೇಷ್ಠವಾದ ಗತಿಯು ದೊರೆಯುತ್ತದೆ. ಎಲೈ ರಾಜನೇ ಅಲ್ಲಿ ಶ್ರೀತೀರ್ಥದಲ್ಲಿ ಸ್ನಾನವನ್ನುಮಾಡಿದರೆ ಉತ್ತಮವಾದ ಸಂಪತ್ತನ್ನು ಪಡೆಯುತ್ತಾನೆ. ಎಲೈ ಧರ್ಮಜ್ಞನೇ ಅಲ್ಲಿ ಮೂರು ಲೋಕದಲ್ಲಿಯೂ ಪ್ರಸಿದ್ಧವಾದ ಒಂದು ತಟಾಕವಿದೆ. ಅಲ್ಲಿ ಸ್ನಾನವನ್ನು ಮಾಡುವವನು ಅಶ್ವಮೇಧ ಫಲವನ್ನು ಹೊಂದುತ್ತಾನೆ.
ಜನಕಸ್ಯ ತು ರಾಜರ್ಷೇಃ ಕೂಪಸ್ತ್ರಿದಶಪೂಜಿತಃ |
ತತ್ರಾಭಿಷೇಕಂ ಕೃತ್ವಾ ತು ವಿಷ್ಣುಲೋಕಮವಾಪ್ನುಯಾತ್ ॥101॥
ರಾಜರ್ಷಿಯಾದ ಜನಕನ ಕೂಪವು ದೇವತೆಗಳಿಂದಲೂ ಪೂಜಿಸಲ್ಪಡುತ್ತದೆ. ಅಲ್ಲಿ ಸ್ನಾನವನ್ನು ಮಾಡಿದವನು ವಿಷ್ಣುಲೋಕವನ್ನು ಹೊಂದುತ್ತಾನೆ.
ತತೋ ವಿನಶನಂ ಗಚ್ಛೇತ್ ಸರ್ವಪಾಪಪ್ರಮೋಚನಮ್ |
ವಾಜಪೇಯಮವಾಪ್ನೋತಿ ಸೋಮಲೋಕಂ ಚ ಗಚ್ಛತಿ ॥102॥
ಅಲ್ಲಿಂದ ಸರ್ವಪಾಪನಾಶಕವಾದ ವಿನಶನಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ವಾಜಪೇಯಫಲವು ಉಂಟಾಗುತ್ತದೆ. ಮತ್ತು ಚಂದ್ರಲೋಕದ ಪ್ರಾಪ್ತಿಯು ಉಂಟಾಗುತ್ತದೆ.
ಗಂಡಕೀಯಂ ತತೋ ಗಚ್ಛೇತ್ ಸರ್ವತೀರ್ಥಜಲೋದ್ಭವಮ್ |
ವಾಜಪೇಯಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥103॥
ಅನಂತರ ಸರ್ವತೀರ್ಥಗಳ ಉಗಮಸ್ಥಾನವಾದ ಗಂಡಕೀತೀರ್ಥಕ್ಕೆ ಹೋಗಬೇಕು. ಅಂತಹ ಮನುಷ್ಯನು ವಾಜಪೇಯಫಲವನ್ನು ಪಡೆದು ಸೂರ್ಯಲೋಕಕ್ಕೆ ಹೋಗುತ್ತಾನೆ.
ತತೋ ವಿಪಾಶಾಂ ಧರ್ಮಜ್ಞ ಸಮಾವಿಶ್ಯ ತಪೋಧನ |
ಗುಹ್ಯಕೇಷು ಮಹಾರಾಜ ಮೋದತೇ ನಾತ್ರ ಸಂಶಯಃ ॥104॥

ಎಲೈ ಧರ್ಮಜ್ಞನೇ, ತಪೋಧನನೇ, ಅನಂತರ ವಿಪಾಶಾ ನದಿಗೆ ಹೋಗಿ ಸ್ನಾನವನ್ನು ಮಾಡುವವನು ಗುಹ್ಯಕರಲ್ಲಿ ಒಬ್ಬನಾಗಿ ಸಂತೋಷಪಡುತ್ತಾನೆ. ಮಹಾರಾಜನೇ ಇದರಲ್ಲಿ ಸಂಶಯವಿಲ್ಲ.
ಅಥ ಕಿಂಪುರಮಾಸಾದ್ಯ ನದಂ ಸಿದ್ಧನಿಷೇವಿತಮ್ |
ಪೌಂಡರೀಕಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥105॥
ಅಲ್ಲಿಂದ ಮುಂದೆ ಸಿದ್ಧನಿಷೇವಿತವಾದ ಕಿಂಪುರವೆಂಬ ನದವನ್ನು ಸೇವಿಸುವವನು ಪುಂಡರೀಕಯಾಗದ ಫಲವನ್ನು ಹೊಂದುತ್ತಾನೆ. ಮತ್ತು ಸೂರ್ಯಲೋಕಕ್ಕೆ ಹೋಗುತ್ತಾನೆ.
ತತೋ ವಿಶಲ್ಯಮಾಸಾದ್ಯ ನದಂ ತ್ರೈಲೋಕ್ಯವಿಶ್ರುತಮ್ |
ಅಗ್ನಿಷ್ಟೋಮಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥106॥
ಅಲ್ಲಿಂದ ಮೂರು ಲೋಕದಲ್ಲಿಯೂ ಪ್ರಖ್ಯಾತವಾದ ವಿಶಲ್ಯವೆಂಬ ನದಕ್ಕೆ ಹೋಗಿ ಸೇವಿಸುವವನು ಅಗ್ನಿಷ್ಟೋಮ ಫಲವನ್ನು ಪಡೆಯುತ್ತಾನೆ. ಮತ್ತು ಸ್ವರ್ಗಲೋಕಕ್ಕೂ ಹೋಗುತ್ತಾನೆ.
ಅಥ ಮಾಹೇಶ್ವರೀಂ ಧಾರಾಂ ಸಮಾಸಾದ್ಯ ನರಾಧಿಪ |
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥107॥
ಎಲೈ ನರಾಧಿಪನೇ, ಅನಂತರ ಮಹೇಶ್ವರೀ ಧಾರೆಯನ್ನು ತಲುಪಿದವನು ಅಶ್ವಮೇಧ ಫಲವನ್ನು ಹೊಂದುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ದಿವೌಕಸಾಂ ಪುಷ್ಕರಿಣೀಂ ಸಮಾಸಾದ್ಯ ನರಃ ಶುಚಿಃ |
ನ ದುರ್ಗತಿಮವಾಪ್ನೋತಿ ವಾಜಿಮೇಧಫಲಂ ಲಭೇತ್ ॥108॥
ಶುಚಿಯಾದ ನರನು ದೇವಪುಷ್ಕರಿಣಿಯನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡಿದರೆ ದುರ್ಗತಿಯನ್ನು ಹೊಂದುವುದಿಲ್ಲ. ಅಶ್ವಮೇಧಫಲವನ್ನು ಪಡೆಯುತ್ತಾನೆ.
ಮಾಹೇಶ್ವರಪದಂ ಗಚ್ಛೇದ್ ಬ್ರಹ್ಮಚಾರೀ ಸಮಾಹಿತಃ |
ಮಾಹೇಶ್ವರಪದೇ ಸ್ನಾತ್ವಾ ವಾಜಿಮೇಧಫಲಂ ಲಭೇತ್ |
ತತ್ರ ಕೋಟಿಸ್ತು ತೀರ್ಥಾನಾಂ ವಿಶ್ರುತಾ ಭರತರ್ಷಭ ॥109॥
ಬ್ರಹ್ಮಾಚಾರಿಯೂ ಸಮಾಹಿತನೂ ಆದ ಪುರುಷನು ಮಾಹೇಶ್ವರಪದಕ್ಕೆ ಹೋಗಬೇಕು. ಮಾಹೇಶ್ವರಪದದಲ್ಲಿ ಸ್ನಾನಮಾಡಿದರೆ ಅಶ್ವಮೇಧಫಲವು ಉಂಟಾಗುತ್ತದೆ. ಭರತರ್ಷಭನೇ, ಅಲ್ಲಿ ಒಂದು ಕೋಟಿ ತೀರ್ಥಗಳು ಪ್ರಖ್ಯಾತವಾಗಿವೆ.
ಕೂರ್ಮರೂಪೇಣಾಸುರೇಣ ರಜನ್ಯಾಂ ವೈ ದುರಾತ್ಮನಾ |
ಹ್ರಿಯಮಾಣಾ ಮಹೀ ಪೂರ್ವಮುದ್ಧೃತಾ ಪ್ರಭವಿಷ್ಣುನಾ ॥110॥
ಎಲೈ ರಾಜೇಂದ್ರನೇ, ದುರಾತ್ಮನಾದ ಅಸುರನು ರಾತ್ರಿಯ ವೇಳೆಯಲ್ಲಿ ಮಂದರಗಿರಿರೂಪವಾದ ಭೂಮಿಯನ್ನು ಕದ್ದೊಯ್ಯುತ್ತಿರುವಾಗ ಮಹಾತ್ಮನಾದ ಸಮರ್ಥನಾದ ಕೂರ್ಮರೂಪಿಯಾದ ವಿಷ್ಣುವು ಆ ಪರ್ವತವನ್ನು ಉದ್ಧರಿಸಿದನು.
ತತ್ರಾಭಿಷೇಕಂ ಕುರ್ವಾಣಃ ತೀರ್ಥಕೋಟ್ಯಾಂ ಯುಧಿಷ್ಠಿರ |
ಪೌಂಡರೀಕಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥111॥
ಯುದ್ಧದಲ್ಲಿ ಸ್ಥಿರನಾದ ಎಲೈ ಭೀಷ್ಮನೇ, ಆ ತೀರ್ಥಕೋಟಿಯಲ್ಲಿ ಸ್ನಾನವನ್ನುಮಾಡುವ ಪುರುಷನು ಪುಂಡರೀಕಯಾಗದ ಫಲವನ್ನು ಪಡೆಯುತ್ತಾನೆ. ಮತ್ತು ವಿಷ್ಣುಲೋಕವನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಸ್ಥಾನಂ ನಾರಾಯಣಸ್ಯ ವೈ |
ಸದಾ ಸನ್ನಿಹಿತೋ ಯತ್ರ ವಿಷ್ಣುರ್ವಸತಿ ಭಾರತ ॥112॥
ಸಾಲಗ್ರಾಮ ಇತಿ ಖ್ಯಾತೋ ವಿಷ್ಣೋರದ್ಭುತಕರ್ಮಣಃ |
ಅಭಿಗಮ್ಯ ತ್ರಿಲೋಕೇಶಂ ವರದಂ ವಿಷ್ಣುಮವ್ಯಯಮ್ |
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥113॥
ರಾಜೇಂದ್ರನೇ, ಅನಂತರ ವಿಷ್ಣುವು ನಿತ್ಯವೂ ಸನ್ನಿಹಿತನಾದ ನಾರಾಯಣನ ಕ್ಷೇತ್ರವಾದ ಸಾಲಗ್ರಾಮಕ್ಕೆ ಹೋಗಬೇಕು. ಎಲೈ ಭಾರತನೇ, ಅದ್ಭುತಕಾರ್ಯವುಳ್ಳ ವಿಷ್ಣುವಿನ ಪ್ರಖ್ಯಾತವಾದ ಆ ಕ್ಷೇತ್ರಕ್ಕೆ ಹೋಗಿ ಅವ್ಯಯನಾದ ವರಪ್ರದನಾದ ಸರ್ವಲೋಕೇಶನಾದ ವಿಷ್ಣುವನ್ನು ಪೂಜಿಸುವವನು ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ. ಮತ್ತು ವಿಷ್ಣುಲೋಕವನ್ನು ಪಡೆಯುತ್ತಾನೆ.
ತತ್ರೋದಪಾನಂ ಧರ್ಮಜ್ಞ ಸರ್ವಪಾಪಪ್ರಮೋಚನಮ್ |
ಸಮುದ್ರಾಸ್ತತ್ರ ಚತ್ವಾರಃ ಕೂಪೇ ಸನ್ನಿಹಿತಾಃ ಸದಾ |
ತತ್ರೋಪಸ್ಪೃಶ್ಯ ರಾಜೇಂದ್ರ ನ ದುರ್ಗತಿಮವಾಪ್ನುಯಾತ್ ॥114॥
ಎಲೈ ಧರ್ಮಜ್ಞನೇ, ಅಲ್ಲಿ ಸರ್ವಪಾಪಪರಿಹಾರಕವಾದ ಒಂದು ಕೂಪವಿದೆ. ಆ ಕೂಪದಲ್ಲಿ ನಾಲ್ಕುಸಮುದ್ರಗಳು ಯಾವಾಗಲೂ ಸನ್ನಿಹಿತವಾಗಿರುತ್ತವೆ. ರಾಜೇಂದ್ರನೇ, ಅಲ್ಲಿ ಸ್ನಾನವನ್ನು ಮಾಡುವವನು ದುರ್ಗತಿಯನ್ನು ಹೊಂದುವುದಿಲ್ಲ.
ಭರತಸ್ಯಾಶ್ರಮಂ ಗಚ್ಛೇತ್ ಸರ್ವಪಾಪಪ್ರಮೋಚನಮ್ |
ಅಭಿಗಮ್ಯ ತ್ರಿಲೋಕೇಶಂ ವರದಂ ವಿಷ್ಣುಮವ್ಯಯಮ್ |
ವಿರಾಜತಿ ಯಥಾ ಸೋಮ ಋಣೈರ್ಮುಕ್ತೋ ಯುಧಿಷ್ಠಿರ ॥115॥
ಯುಧಿಷ್ಠಿರನಾದ ಎಲೈ ಭೀಷ್ಮನೇ, ಸರ್ವಪಾಪಪರಿಹಾರಕವಾದ ಭರತನ ಆಶ್ರಮಕ್ಕೆ ಹೋಗಬೇಕು. ಅಲ್ಲಿ ತ್ರಿಲೋಕ ಪ್ರಭುವಾದ ವರಪ್ರದನಾದ ಅವ್ಯಯನಾದ ವಿಷ್ಣುವನ್ನು ಪೂಜಿಸುವವನು ಋಣಮುಕ್ತನಾಗಿ ಚಂದ್ರನಂತೆ ಪ್ರಕಾಶಿಸುತ್ತಾನೆ.

ಜಾತಿಸ್ಮರಮುಪಸ್ಪೃಶ್ಯ ಶುಚಿಃ ಪ್ರಯತಮಾನಸಃ |
ಜಾತಿಸ್ಮರತ್ವಮಾಪ್ನೋತಿ ಸ್ನಾತ್ವಾ ತತ್ರ ನ ಸಂಶಯಃ ॥116॥
ಶುಚಿಯಾದ ಮತ್ತು ಮನೋನಿಗ್ರಹವುಳ್ಳ ತೀರ್ಥಸೇವಿಯು ಜಾತಿಸ್ಮರ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪೂರ್ವಜನ್ಮಸ್ಮರಣೆಯನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.
ವಟೇಶ್ವರಪುರಂ ಗಚ್ಛೇದರ್ಚಯಿತ್ವಾ ತು ಕೇಶವಮ್ |
ಈಪ್ಸಿತಾನ್ಲಭತೇ ಕಾಮಾನ್ ಉಪವಾಸಾನ್ನ ಸಂಶಯಃ ॥117॥
ವಟೇಶ್ವರಪುರಕ್ಕೆ ಹೋಗಿ ಉಪವಾಸವನ್ನು ಮಾಡಿ ಕೇಶವನನ್ನು ಅರ್ಚಿಸುವವನು ತನಗೆ ಅಭೀಷ್ಟವಾದ ಎಲ್ಲ ಕಾಮಗಳನ್ನೂ ನಿಸ್ಸಂಶಯವಾಗಿ ಪಡೆಯುತ್ತಾನೆ.
ತತಸ್ತು ವಾಮನಂ ಗತ್ವಾ ಸರ್ವಪಾಪಪ್ರಮೋಚನಮ್ |
ಅಭಿಗಮ್ಯ ಹರಿಂ ದೇವಂ ನ ದುರ್ಗತಿಮವಾಪ್ನುಯಾತ್ ॥118॥
ಅನಂತರ ಸರ್ವಪಾಪಪರಿಹಾರಕವಾದ ವಾಮನಕ್ಷೇತ್ರಕ್ಕೆ ಹೋಗಿ ದೇವನಾದ ಹರಿಯನ್ನು ಅರ್ಚಿಸುವವನು ದುರ್ಗತಿಯನ್ನು ಹೊಂದುವುದಿಲ್ಲ.
ಕೌಶಿಕೀಮಭಿಸೇವೇತ ಮಹಾಪಾಪಪ್ರಣಾಶಿನೀಮ್ |
ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥119॥
ಮಹಾಪಾಪವನ್ನು ಪರಿಹರಿಸುವ ಕೌಶಿಕೀನದಿಯನ್ನು ಸೇವಿಸಿದ ಮಾನವನು ರಾಜಸೂಯಯಾಗದ ಫಲವನ್ನು ಪಡೆಯುತ್ತಾನೆ.
ತತೋ ಗಚ್ಛೇತ ಧರ್ಮಜ್ಞ ಚಂಪಕಾರಣ್ಯಮುತ್ತಮಮ್ |
ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥120॥
ಎಲೈ ಧರ್ಮಜ್ಞನೇ, ಶ್ರೇಷ್ಠವಾದ ಚಂಪಾರಣ್ಯಕ್ಕೆ ಹೋಗಬೇಕು. ಅಲ್ಲಿ ಒಂದು ರಾತ್ರಿ ವಾಸವನುನಮಾಡಿದರೆ ಗೋಸಹಸ್ರಫಲವು ದೊರೆಯುತ್ತದೆ.
ಅಥ ಜ್ಯೇಷ್ಠಿಲಮಾಸಾದ್ಯ ತೀರ್ಥಂ ಭರತಸತ್ತಮ |
ಉಪೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥121॥
ಭರತಶ್ರೇಷ್ಠನೇ, ಅನಂತರ ಜ್ಯೇಷ್ಠಿಲತೀರ್ಥಕ್ಕೆ ಹೋಗಿ ಒಂದು ರಾತ್ರಿ ಉಪವಾಸವನ್ನು ಮಾಡಿದರೆ ಗೋಹಸ್ರ ಫಲವು ದೊರೆಯುತ್ತದೆ.
ತತ್ರ ವಿಶ್ವೇಶ್ವರಂ ದೃಷ್ಟ್ವಾ ದೇವ್ಯಾ ಸಹ ಮಹಾದ್ಯುತಿಮ್ |
ಮಿತ್ರಾವರುಣಯೋರ್ಲೋಕಾನ್ ಆಪ್ನೋತಿ ಭರತರ್ಷಭ ॥122॥
ಎಲೈ ಭರತರ್ಷಭನೇ, ಅಲ್ಲಿ ಪಾರ್ವತೀಸಹಿತನಾದ ಮಹಾತೇಜಸ್ವಿಯಾದ ವಿಶ್ವೇಶ್ವರನ ದರ್ಶನವನ್ನು ಮಾಡಿದರೆ ಮಿತ್ರಾವರುಣರ ಲೋಕದ ಪ್ರಾಪ್ತಿಯಾಗುತ್ತದೆ.
ಕನ್ಯಾಸಂವೇದ್ಯಮಾಸಾದ್ಯ ನಿಯತೋ ನಿಯತಾಶನಃ |
ಮನೋಃ ಪ್ರಜಾಪತೇರ್ಲೋಕಾನ್ ಆಪ್ನೋತಿ ಭರತರ್ಷಭ ॥123॥
ಕನ್ಯಾಯಾಂ ಯೇ ಪ್ರಯಚ್ಛಂತಿ ಪಾನಮನ್ನಂ ಚ ಭಾರತ |
ತದಕ್ಷಯ್ಯಮಿತಿ ಪ್ರಾಹುಃ ಋಷಯಃ ಸಂಶಿತವ್ರತಾಃ |
ತ್ರಿರಾತ್ರೋಪೋಷಿತಸ್ತತ್ರ ಅಗ್ನಿಷ್ಟೋಮಮವಾಪ್ನುಯಾತ್ ॥124॥
ಎಲೈ ಭರತರ್ಷಭನೇ, ನಿಯಮಬದ್ಧನಾಗಿ ನಿಯತಆಹಾರನಾಗಿ ಕನ್ಯಾ ಸಂವೇದ್ಯಕ್ಕೆ ಹೋಗಿ ಸೇವಿಸುವವನು ಪ್ರಜಾಪತಿಯಾದ ಮನುವಿನ ಲೋಕವನ್ನು ಪಡೆಯುತ್ತಾನೆ. ಎಲೈ ಭಾರತನೇ, ಯಾರು ಕನ್ಯಾತೀರ್ಥದಲ್ಲಿ ಅನ್ನಪಾನಗಳ ದಾನಮಾಡುತ್ತಾರೋ ಅವರು ಅಕ್ಷಯ ಫಲವುಳ್ಳವರಾಗುತ್ತಾರೆಂದು ಶ್ರೇಷ್ಠವ್ರತವನ್ನು ಧರಿಸಿದ ಋಷಿಗಳು ಹೇಳುತ್ತಾರೆ. ಅಲ್ಲಿ ಮೂರು ರಾತ್ರಿಗಳು ಉಪವಾಸಗಳನ್ನು ಮಾಡಿದರೆ ಅಗ್ನಿಷ್ಟೋಮಫಲ ಉಂಟಾಗುತ್ತದೆ.
ನಿಶ್ಚೀರಾಂ ತು ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಾಮ್ |
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥125॥
ಯೇ ತು ದಾನಂ ಪ್ರಯಚ್ಛಂತಿ ನಿಶ್ಚೀರಾಸಂಗಮೇ ನರಾಃ |
ತೇ ಯಾಂತಿ ನರಶಾರ್ದೂಲ ಬ್ರಹ್ಮಲೋಕಂ ನ ಸಂಶಯಃ ॥126॥
ಮೂರುಲೋಕಗಳಲ್ಲಿ ಪ್ರಖ್ಯಾತವಾದ ನಿಶ್ಚೀರಾನದಿಗೆ ಹೋದರೆ ಅಶ್ವಮೇಧಫಲವುಂಟಾಗುತ್ತದೆ. ಮತ್ತು ವಿಷ್ಣುಲೋಕವನ್ನು ಪಡೆಯುತ್ತಾನೆ. ಎಲೈ ನರಶಾರ್ದೂಲನೇ, ಯಾವ ಮನುಷ್ಯರು ನಿಶ್ಚೀರಾನದಿಯ ಸಂಗಮದಲ್ಲಿ ದಾನವನ್ನು ಕೊಡುತ್ತಾರೆಯೋ ಅವರು ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಇದರಲ್ಲಿ ಸಂಶಯವಿಲ್ಲ.
ತತ್ರಾಶ್ರಮೋ ವಸಿಷ್ಠಸ್ಯ ತ್ರಿಷು ಲೋಕೇಷು ವಿಶ್ರುತಃ |
ತತ್ರಾಭಿಷೇಕಂ ಕುರ್ವಾಣೋ ವಾಜಪೇಯಮವಾಪ್ನುಯಾತ್ ॥127॥
ಅಲ್ಲಿ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ವಸಿಷ್ಠರ ಆಶ್ರಮವಿದೆ. ಅಲ್ಲಿ ಸ್ನಾನವನ್ನು ಮಾಡುವವನು ವಾಜಪೇಯ ಫಲವನ್ನು ಪಡೆಯುತ್ತಾನೆ.
ದೇವಕೂಟಂ ಸಮಾಸಾದ್ಯ ಬ್ರಹ್ಮರ್ಷಿಗಣಸೇವಿತಮ್ |
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥128॥
ಬ್ರಹ್ಮರ್ಷಿಗಣಗಳಿಂದ ಸೇವಿತವಾದ ದೇವಕೂಟಪರ್ವತವನ್ನು ಸೇರಿದವನು ಅಶ್ವಮೇಧ ಫಲವನ್ನು ಪಡೆಯುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.

ತತೋ ಗಚ್ಛೇತ ರಾಜೇಂದ್ರ ಕೌಶಿಕಸ್ಯ ಮುನೇರ್ಹ್ರದಮ್ |
ಯತ್ರ ಸಿದ್ಧಿಂ ಪರಾಂ ಪ್ರಾಪ್ತೋ ವಿಶ್ವಾಮಿತ್ರೋ ಮಹಾತಪಾಃ ॥129॥
ಎಲೈ ರಾಜೇಂದ್ರನೇ, ಅನಂತರ ಎಲ್ಲಿ ಮಹಾತಪಸ್ವಿಗಳಾದ ವಿಶ್ವಾಮಿತ್ರರು ಶ್ರೇಷ್ಠವಾದ ಸಿದ್ಧಿಯನ್ನು ಪಡೆದರೋ ಅಂತಹ ಕೌಶಿಕತೀರ್ಥಕ್ಕೆ ಹೋಗಬೇಕು.
ತತ್ರ ಮಾಸಂ ವಸೇದ್ವೀರಃ ಕೌಶಿಕ್ಯಾಂ ಭರತರ್ಷಭ |
ಅಶ್ವಮೇಧೇನ ಯತ್ ಪುಣ್ಯಂ ತನ್ಮಾಸೇನಾಧಿಗಚ್ಛತಿ ॥130॥
ಎಲೈ ಭರತರ್ಷಭನೇ, ಆ ಕೌಶಿಕತೀರ್ಥದಲ್ಲಿ ಒಂದು ತಿಂಗಳು ವಾಸಮಾಡುವ ಧೀರನು ಅಶ್ವಮೇಧಯಾಗದಿಂದ ಉಂಟಾಗುವ ಪುಣ್ಯವನ್ನು ಒಂದು ತಿಂಗಳಿನಲ್ಲಿಯೇ ಸಂಪಾದಿಸುತ್ತಾನೆ.
ಸರ್ವತೀರ್ಥವರೇ ಚೈವ ಯೋ ವಸೇತ ಮಹಾಹ್ರದೇ |
ನ ದುರ್ಗತಿಮವಾಪ್ನೋತಿ ವಿಂದೇದ್ಬಹು ಸುವರ್ಣಕಮ್ ॥131॥
ಸರ್ವತೀರ್ಥಗಳಲ್ಲಿ ಶ್ರೇಷ್ಠವಾದ ಮಹಾಹ್ರದತೀರ್ಥದಲ್ಲಿ ಯಾವನು ವಾಸಿಸುತ್ತಾನೆಯೋ ಅವನು ದುರ್ಗತಿಯನ್ನು ಹೊಂದುವುದಿಲ್ಲ. ಬಹಳ ಸುವರ್ಣವನ್ನು ಪಡೆಯುತ್ತಾನೆ.
ಕುಮಾರಮಭಿಗತ್ವಾ ಚ ವೀರಾಶ್ರಮನಿವಾಸಿನಮ್ |
ಅಶ್ವಮೇಧಮವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ॥132॥
ವೀರಾಶ್ರಮನಿವಾಸಿಯಾದ ಷಣ್ಮುಖನನ್ನು ಸಮೀಪಿಸಿದ ನರನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.
ಅಗ್ನಿಧಾರಾಂ ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಾಮ್ |
ಅಗ್ನಿಷ್ಟೋಮಮವಾಪ್ನೋತಿ ನ ಚ ಸ್ವರ್ಗಾನ್ನಿವರ್ತತೇ ॥133॥
ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಅಗ್ನಿಧಾರಾ ತೀರ್ಥಕ್ಕೆ ಹೋದವನು ಅಗ್ನಿಷ್ಟೋಮ ಫಲವನ್ನು ಪಡೆಯುತ್ತಾನೆ. ಮತ್ತು ಸ್ವರ್ಗದಿಂದ ಹಿಂದಿರುಗುವುದಿಲ್ಲ.
ಪಿತಾಮಹಸರೋ ಗತ್ವಾ ಶೈಲರಾಜಪ್ರತಿಷ್ಠಿತಮ್ |
ತತ್ರಾಭಿಷೇಕಂ ಕುರ್ವಾಣ ಅಗ್ನಿಷ್ಟೋಮಮವಾಪ್ನುಯಾತ್ ॥134॥
ಅಲ್ಲಿ ಶೈಲರಾಜನ ಮೇಲಿರುವ ಪಿತಾಮಹಸರೋವರ (ಬ್ರಹ್ಮ ಸರೋವರ)ವನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡುವವನು ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ.
ಪಿತಾಮಹಸ್ಯ ಸರಸಃ ಪ್ರಸೂತಾ ಲೋಕಪಾವನೀ |
ಕುಮಾರಧಾರಾ ತತ್ರೈವ ತ್ರಿಷು ಲೋಕೇಷು ವಿಶ್ರುತಾ ॥135॥
ಆ ಬ್ರಹ್ಮಸರೋವರದಿಂದ ಹುಟ್ಟಿದ ಲೋಕಪಾವನೆಯಾದ ಅಲ್ಲಿಯೇ ಹರಿಯುವ ಕುಮಾರಧಾರಾನದಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ.
ಯತ್ರ ಸ್ನಾತ್ವಾ ಕೃತಾರ್ಥೋಽಸ್ಮೀತ್ಯಾತ್ಮಾನಮವಗಚ್ಛತಿ |
ಷಷ್ಠಕಾಲೋಪವಾಸೇನ ಮುಚ್ಯತೇ ಬ್ರಹ್ಮಹತ್ಯಯಾ ॥136॥
ಅಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ತನ್ನನ್ನು ಧನ್ಯನೆಂದು ಭಾವಿಸುತ್ತಾನೆ. ಅಲ್ಲಿ ದಿನದ ಆರನೆಯ ಕಾಲದವರೆಗೆ ಉಪವಾಸಮಾಡುವುದರಿಂದ ಬ್ರಹ್ಮ ಹತ್ಯೆಯಿಂದ ನಿರ್ಮುಕ್ತನಾಗುತ್ತಾನೆ.
ಶಿಖರಂ ವೈ ಮಹಾದೇವ್ಯಾ ಗೌರ್ಯಾಸ್ತ್ರೈಲೋಕ್ಯವಿಶ್ರುತಮ್ |
ಸಮಾರುಹ್ಯ ನರಶ್ರೇಷ್ಠ ಸ್ತನಕುಂಡೇಷು ಸಂವಿಶೇತ್ ॥137॥
ಎಲೈ ನರಶ್ರೇಷ್ಠನೇ ಮಹಾದೇವಿಯಾದ ಗೌರಿಯ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಶಿಖರವನ್ನು ಏರಿ ಅಲ್ಲಿ ಸ್ತನ ಕುಂಡಗಳಲ್ಲಿ ವಾಸಿಸಬೇಕು.
ತತ್ರಾಭಿಷೇಕಂ ಕುರ್ವಾಣಃ ಪಿತೃದೇವಾರ್ಚನೇ ರತಃ |
ಹಯಮೇಧಮವಾಪ್ನೋತಿ ಶಕ್ರಲೋಕಂ ಚ ಗಚ್ಛತಿ ॥138॥
ಅಲ್ಲಿ ಸ್ನಾನವನ್ನುಮಾಡಿ ಪಿತೃದೇವಾರ್ಚನೆಯನ್ನು ಮಾಡಿದ ನರನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಮತ್ತು ಇಂದ್ರಲೋಕಕ್ಕೆ ಹೋಗುತ್ತಾನೆ.
ತಾಮ್ರಾರುಣಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ |
ಅಶ್ವಮೇಧಮವಾಪ್ನೋತಿ ಶಕ್ರಲೋಕಂ ಚ ಗಚ್ಛತಿ ॥139॥
ಬ್ರಹ್ಮಚಾರಿಯೂ ಸಮಾಹಿತನೂ ಆದ ತೀರ್ಥಸೇವಿಯು ತಾಮ್ರಾರುಣತೀರ್ಥವನ್ನು ಸೇವಿಸಿದರೆ ಅಶ್ವಮೇಧ ಫಲವನ್ನು ಪಡೆಯುತ್ತಾನೆ ಮತ್ತು ಇಂದ್ರಲೋಕಕ್ಕೆ ಹೋಗುತ್ತಾನೆ.
ನಂದಿನ್ಯಾಂ ಚ ಸಮಾಸಾದ್ಯ ಕೂಪಂ ತ್ರಿದಶಸೇವಿತಮ್ |
ನರಮೇಧಸ್ಯ ಯತ್ ಪುಣ್ಯಂ ತತ್ರಾಪ್ನೋತಿ ಕುರೂದ್ವಹ ॥140॥
ಎಲೈ ಕುರೂದ್ವಹನೇ ನಂದಿನೀ ನದಿಯ ಬಳಿ ಇರುವ ದೇವತೆಗಳಿಂದ ಸೇವಿಸಲ್ಪಟ್ಟ ಕೂಪವನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡುವವನು ನರಮೇಧಯಾಗದ ಪುಣ್ಯವನ್ನು ಪಡೆಯುತ್ತಾನೆ.
ಕಾಲಂಕ್ಯಾಃ ಸಂಗಮೇ ಸ್ನಾತ್ವಾ ಕೌಶಿಕ್ಯರುಣಯೋಸ್ತಥಾ |
ತ್ರಿರಾತ್ರೋಪೋಷಿತೋ ವಿದ್ವಾನ್ ಸರ್ವಪಾಪೈಃ ಪ್ರಮುಚ್ಯತೇ ॥141॥

ಕಾಲಂಕೀ ಸಂಗಮದಲ್ಲಿ ಹಾಗೆಯೇ ಕೌಶಿಕೀ ಮತ್ತು ಅರುಣಾ ಸಂಗಮದಲ್ಲಿ ಸ್ನಾನವನ್ನು ಮಾಡಿ ಮೂರು ರಾತ್ರಿಗಳು ಉಪವಾಸವನ್ನು ಮಾಡುವ ವಿದ್ವಾಂಸನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ಉರ್ವಶೀತೀರ್ಥಮಾಸಾದ್ಯ ತತಃ ಸೋಮಾಶ್ರಮಂ ವ್ರಜೇತ್ |
ಕುಂಭಕರ್ಣಾಶ್ರಮೇ ಗತ್ವಾ ಪೂಜ್ಯತೇ ದಿವಿ ಮಾನವಃ ||142||
ಅಲ್ಲಿಂದ ಉರ್ವಶೀತೀರ್ಥವನ್ನು ತಲುಪಿ ಅಲ್ಲಿಂದ ಸೋಮಾಶ್ರಮಕ್ಕೆ ಹೋಗಬೇಕು. ಅಲ್ಲಿಂದ ಕುಂಭಕರ್ಣಾಶ್ರಮಕ್ಕೆ ಹೋಗುವ ಮಾನವನು ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ಸ್ನಾತ್ವಾ ಕೋಲಮುಖೇ ಪುಣ್ಯೇ ಬ್ರಹ್ಮಚಾರೀ ಸಮಾಹಿತಃ |
ಜಾತಿಸ್ಮರತ್ವಂ ಪ್ರಾಪ್ನೋತಿ ದೃಷ್ಟಮೇತತ್ ಪುರಾತನಮ್ ||143||
ಪವಿತ್ರವಾದ ಕೋಲಮುಖತೀರ್ಥದಲ್ಲಿ ಸ್ನಾನವನ್ನು ಮಾಡುವ ಬ್ರಹ್ಮಾಚಾರಿಯೂ ಸಮಾಹಿತನೂ ಆದ ಮಾನವನು ಪೂರ್ವಜನ್ಮದ ಸ್ಮರಣೆಯನ್ನು ಪಡೆಯುತ್ತಾನೆ. ಇದು ಹಿಂದಿನಿಂದಲೂ ದೃಷ್ಟವಾಗಿದೆ.
ಭೃಗುತುಂದಂ ಸಮಾಸಾದ್ಯ ವಿಪಾಪ್ಮಾ ಭವತಿ ದ್ವಿಜಃ |
ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕಂ ಚ ಗಚ್ಛತಿ ||144||
ಭೃಂಗತುಂದಕ್ಕೆ ಹೋದ ದ್ವಿಜನು ಪಾಪರಹಿತನಾಗುತ್ತಾನೆ. ಸರ್ವಪಾಪವಿನಿರ್ಮುಕ್ತನಾಗಿ ಬ್ರಹ್ಮಲೋಕವನ್ನು ಪಡೆಯುತ್ತಾನೆ.
ಸಕೃನ್ನದ್ಯಾಂ ಸಮಾಸಾದ್ಯ ಪೂತಾತ್ಮಾ ಭವತಿ ದ್ವಿಜಃ |
ಸರ್ವಪಾಪವಿಶುದ್ಧಾತ್ಮಾ ಶಕ್ರಲೋಕಂ ಚ ಗಚ್ಛತಿ ||145||
ಸಕೃನ್ನದ್ಯಾ ನದಿಯಲ್ಲಿ ಸ್ನಾನವನ್ನು ಮಾಡಿದ ದ್ವಿಜನು ಪವಿತ್ರನಾಗುತ್ತಾನೆ. ಸರ್ವಪಾಪವಿನಿರ್ಮುಕ್ತನಾಗಿ ಇಂದ್ರಲೋಕಕ್ಕೆ ಹೋಗುತ್ತಾನೆ.
ಋಷಭದ್ವೀಪಮಾಸಾದ್ಯ ಮೇಧ್ಯಂ ಕ್ರೌಂಚನಿಷೂದನಮ್ |
ಸರಸ್ವತ್ಯಾಮುಪಸ್ಪೃಶ್ಯ ವಿಮಾನಸ್ಥೋ ವಿರಾಜತೇ ||146||
ತೀರ್ಥಸೇವಿಯಾದವನು ಋಷಭದ್ವೀಪವನ್ನು ಮತ್ತು ಪವಿತ್ರವಾದ ಕ್ರೌಂಚನಿಷೂದನದ್ವೀಪವನ್ನು ತಲುಪಿ ಅಲ್ಲಿಯ ನದಿಯಲ್ಲಿ ಸ್ನಾನವನ್ನು ಮಾಡಿದರೆ ವಿಮಾನಸ್ಥನಾಗಿ ಶೋಭಿಸುತ್ತಾನೆ.
ಔದ್ದಾಲಕಂ ಸಮಾಸಾದ್ಯ ತೀರ್ಥಂ ಮುನಿನಿಷೇವಿತಮ್ |
ತತ್ರಾಭಿಷೇಕಂ ಕುರ್ವೀತ ಸರ್ವಪಾಪೈಃ ಪ್ರಮುಚ್ಯತೇ ||147||
ಋಷಿಗಳಿಂದ ಸೇವಿತವಾದ ಔದ್ದಾಲಕತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನ್ನುಮಾಡುವವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ಧರ್ಮತೀರ್ಥಂ ಸಮಾಸಾದ್ಯ ಪುಣ್ಯಂ ಬ್ರಹ್ಮನಿಷೇವಿತಮ್ |
ವಾಜಪೇಯಮವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ||148||
ಬ್ರಹ್ಮಸನ್ನಿಧಾನವಿರುವ ಪವಿತ್ರವಾದ ಧರ್ಮತೀರ್ಥವನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡುವ ನರನು ವಾಜಪೇಯಫಲವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಅಥ ಪಂಪಾಂ ಸಮಾಸಾದ್ಯ ಭಾಗೀರಥ್ಯಾಂ ಕೃತೋದಕಃ |
ದಂಡಕಾನಭಿಗತ್ವೈವ ಗೋಸಹಸ್ರಫಲಂ ಲಭೇತ್ ||149||
ಅನಂತರ ಪಂಪಾದೇಶಕ್ಕೆ ಹೋಗಿ ಅಲ್ಲಿನ ಭಾಗೀರಥಿಯಲ್ಲಿ ಪಿತೃದೇವತೆಗಳಿಗೆ ಉತ್ತರಕ್ರಿಯೆಗಳನ್ನು ಮಾಡಿ ದಂಡಕಾರಣ್ಯಕ್ಕೆ ಹೋಗುವ ತೀರ್ಥಸೇವಿಯು ಗೋಸಹಸ್ರಫಲವನ್ನು ಪಡೆಯುತ್ತಾನೆ.
ತತೋ ಲವೀಲಿಕಾಂ ಗಚ್ಛೇತ್ ಪುಣ್ಯಾಂ ಪುಣ್ಯೋಪಸೇವಿತಾಮ್ |
ವಾಜಪೇಯಮವಾಪ್ನೋತಿ ವಿಮಾನಸ್ಥೋ ವಿರಾಜತೇ ||150||
ಅಲ್ಲಿಂದ ಪವಿತ್ರವಾದ ಮತ್ತು ಪರಿಶುದ್ಧರಾದ ಜನರಿಂದ ಸೇವಿತವಾದ ಲವೀಲಿಕಾಕ್ಷೇತ್ರಕ್ಕೆ ಹೋಗುವವನು ವಾಜಪೇಯಫಲವನ್ನು ಪಡೆಯುತ್ತಾನೆ. ಮತ್ತು ವಿಮಾನದಲ್ಲಿ ವಿರಾಜಿಸಿತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಶಿತಿತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಪಂಚತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತನೆಯ ಅಧ್ಯಾಯ
(ಭೀಷ್ಮರಿಗೆ ಪುಲಸ್ತ್ಯರು ಹೇಳಿದ ತೀರ್ಥಕ್ಷೇತ್ರಮಹಿಮಾ ವರ್ಣನೆಯನ್ನು ಯುಧಿಷ್ಠಿರನಿಗೆ ಹೇಳಿ ನಾರದರ ಪ್ರಯಾಣ.)
ಪುಲಸ್ತ್ಯಃ
ಅಥ ಸಂಧ್ಯಾಂ ಸಮಾಸಾದ್ಯ ಸಂವೇದ್ಯಂ ತೀರ್ಥಮುತ್ತಮಮ್ |
ಉಪಸ್ಪೃಶ್ಯ ನರೋ ವಿದ್ವಾನ್ ಭವೇನ್ನಾಸ್ತ್ಯತ್ರ ಸಂಶಯಃ ||1||
ಅನಂತರ ಶ್ರೇಷ್ಠವಾದ ಸಂಧ್ಯಾತೀರ್ಥವನ್ನು ಸಮೀಪಿಸಿ ಸ್ನಾನವನ್ನು ಮಾಡಿದ ನರನು ವಿದ್ವಾಂಸನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.
ರಾಮಸ್ಯ ಚ ಪ್ರಸಾದೇನ ತೀರ್ಥಂ ರಾಜನ್ ಕೃತಂ ಪುರಾ |
ತಲ್ಲೌಹಿತ್ಯಂ ಸಮಾಸಾದ್ಯ ವಿಂದ್ಯಾದ್ಬಹು ಸುವರ್ಣಕಮ್ ||2||

ಎಲೈ ರಾಜನೇ, ಪರಶುರಾಮನ ಪ್ರಸಾದದಿಂದ ಹಿಂದೆ ಲೌಹಿತ್ಯ ತೀರ್ಥವು ರಚಿಸಲ್ಪಟ್ಟಿತು. ಅಲ್ಲಿ ಸ್ನಾನವನ್ನು ಮಾಡುವ ಮಾನವನು ಬಹಳ ಸುವರ್ಣವನ್ನು ಪಡೆಯುತ್ತಾನೆ.
ಕರತೋಯಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ |
ಅಶ್ವಮೇಧಮವಾಪ್ನೋತಿ ಪಿತಾಮಹಕೃತೋ ವಿಧಿಃ ॥3॥
ಕರತೋಯ ನದಿಯನ್ನು ಸಮೀಪಿಸಿ ಮೂರುರಾತ್ರಿಯಲ್ಲಿ ಉಪವಾಸವನ್ನು ಮಾಡುವ ನರನು ಅಶ್ವಮೇಧ ಫಲವನ್ನು ಪಡೆಯುತ್ತಾನೆ. ಇದು ಬ್ರಹ್ಮದೇವರು ಮಾಡಿದ ವಿಧಿ.
ಗಂಗಾಯಾಸ್ತ್ವಥ ರಾಜೇಂದ್ರ ಸಾಗರಸ್ಯ ಚ ಸಂಗಮೇ |
ಅಶ್ವಮೇಧಂ ದಶಗುಣಂ ಪ್ರವದಂತಿ ಮನೀಷಿಣಃ ॥4॥
ರಾಜೇಂದ್ರನೇ, ಇನ್ನು ಗಂಗಾಸಾಗರಸಂಗಮದಲ್ಲಿ ಮಾಡಿದ ಸ್ನಾನಕ್ಕೆ ಅಶ್ವಮೇಧದ ಹತ್ತು ಪಟ್ಟು ಫಲವೆಂದು ಜ್ಞಾನಿಗಳು ಹೇಳುತ್ತಾರೆ.

ಗಂಗಾಯಾಸ್ತ್ವಪರಂ ತೀರಂ ಪ್ರಾಪ್ಯ ಯಃ ಸ್ನಾತಿ ಭಾರತ |
ತ್ರಿರಾತ್ರಮುಷಿತೋ ರಾಜನ್ ಸರ್ವಾನ್ ಕಾಮಾನವಾಪ್ನುಯಾತ್ ॥5॥
ಎಲೈ ಭಾರತನೇ, ಯಾವನು ಗಂಗಾನದಿಯ ಆಚೆಯ ದಡಕ್ಕೆ ಹೋಗಿ ಸ್ನಾನವನ್ನು ಮಾಡಿ ಮೂರುರಾತ್ರಿ ವಾಸವನ್ನು ಮಾಡುವನೋ ಅವನು ಎಲ್ಲಾ ಅಭೀಷ್ಟಗಳನ್ನು ಪಡೆಯುತ್ತಾನೆ.
ತತೋ ವೈತರಣೀಂ ಗಚ್ಛೇನ್ನದೀಂ ಪಾಪಪ್ರಮೋಚನೀಮ್ |
ವಿರಜಂ ತೀರ್ಥಮಾಸಾದ್ಯ ವಿರಾಜತಿ ಯಥಾ ಶಶೀ ॥6॥
ಪ್ರಭವೇಚ್ಚ ಕುಲೇ ಪುಣ್ಯೇ ಸರ್ವಪಾಪಂ ವ್ಯಪೋಹತಿ |
ಗೋಸಹಸ್ರಫಲಂ ಲಬ್ಧ್ವಾ ಪುನಾತಿ ಚ ಕುಲಂ ನರಃ ॥7॥
ಶೋಣಸ್ಯ ಜ್ಯೋತಿರಥ್ಯಾಶ್ಚ ಸಂಗಮೇ ನಿವಸನ್ ಶುಚಿಃ |
ತರ್ಪಯಿತ್ವಾ ಪಿತೄ ನ್ ದೇವಾನ್ ಅಗ್ನಿಷ್ಟೋಮಫಲಂ ಲಭೇತ್ ॥8॥
ಅಲ್ಲಿಂದ ಪಾಪಪರಿಹಾರಕವಾದ ವೈತರಣಿ ನದಿಗೆ ಹೋಗಬೇಕು. ಅಲ್ಲಿ ವಿರಜಾತೀರ್ಥದಲ್ಲಿ ಸ್ನಾನವನ್ನು ಮಾಡಿದವನು ಚಂದ್ರನಂತೆ ವಿರಾಜಿಸುತ್ತಾನೆ. ಪುಣ್ಯವಾದ ಕುಲದಲ್ಲಿ ನಾಯಕನಾಗುತ್ತಾನೆ. ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಗೋಸಹಸ್ರಫಲವನ್ನು ಹೊಂದಿ ತನ್ನ ಕುಲವನ್ನು ಉದ್ಧಾರಮಾಡುತ್ತಾನೆ. ಶೋಣ ಮತ್ತು ಜ್ಯೋತಿರಥೀ ನದಿಗಳ ಸಂಗಮದಲ್ಲಿ ವಾಸಿಸುವ ಶುದ್ಧನಾದ ತೀರ್ಥಸೇವಿಯು ಪಿತೃಗಳನ್ನು ಮತ್ತು ದೇವತೆಗಳನ್ನು ಆರಾಧಿಸಿ ಅಗ್ನಿಷ್ಟೋಮಫಲವನ್ನು ಪಡೆಯುತ್ತಾನೆ.
ಶೋಣಸ್ಯ ನರ್ಮದಾಯಾಶ್ಚ ಪ್ರಭವೇ ಕುರುನಂದನ |
ವಂಶಗುಲ್ಮ ಉಪಸ್ಪೃಶ್ಯ ವಾಜಿಮೇಧಫಲಂ ಲಭೇತ್ ॥9॥
ಎಲೈ ಕುರುನಂದನನೇ, ಶೋಣ ಮತ್ತು ನರ್ಮದಾ ನದಿಗಳ ಉದ್ಭವಸ್ಥಾನವಾದ ವಂಶಗುಲ್ಮದಲ್ಲಿ ಸ್ನಾನವನ್ನು ಮಾಡಿದರೆ ವಾಜಿಮೇಧಫಲವು ದೊರೆಯುತ್ತದೆ.
ಋಷಭಂ ತೀರ್ಥಮಾಸಾದ್ಯ ಕೋಸಲಾಯಾಂ ನರಾಧಿಪ |
ವಾಜಪೇಯಮವಾಪ್ನೋತಿ ತ್ರಿರಾತ್ರೋಪೋಷಿತೋ ನರಃ |
ಗೋಸಹಸ್ರಫಲಂ ವಿಂದ್ಯಾತ್ ಕುಲಂ ಚೈವ ಸಮುದ್ಧರೇತ್ ॥10॥
ಎಲೈ ನರಾಧಿಪನೇ, ಕೋಸಲದೇಶದಲ್ಲಿ ಋಷಭತೀರ್ಥಕ್ಕೆ ಹೋಗಿ ಸ್ನಾನವನ್ನು ಮಾಡಿದರೆ ವಾಜಪೇಯ ಫಲವನ್ನು ಪಡೆಯುತ್ತಾನೆ. ಅಲ್ಲಿ ಮೂರು ರಾತ್ರಿ ಉಪವಾಸವನ್ನು ಮಾಡಿದ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ಕೋಸಲಾಂ ತು ಸಮಾಸಾದ್ಯ ಕಲತೀರ್ಥಮುಪಸ್ಪೃಶೇತ್ |
ವೃಷಭೈಕಾದಶಫಲಂ ಲಭತೇ ನಾತ್ರ ಸಂಶಯಃ ॥11॥
ಕೋಸಲದೇಶಕ್ಕೆ ಹೋಗಿ ಕಲತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ಹಾಗೆ ಮಾಡುವವನು ಹನ್ನೊಂದು ವೃಷೋತ್ಸರ್ಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.
ಪುಷ್ಪವತ್ಯಾಮುಪಸ್ಪೃಶ್ಯ ತ್ರಿರಾತ್ರೋಪೋಷಿತೋ ನರಃ |
ಗೋಸಹಸ್ರಫಲಂ ವಿಂದೇತ್ ಕುಲಂ ಚೈವ ಸಮುದ್ಧರೇತ್ ॥12॥
ಪುಷ್ಪವತಿಯಲ್ಲಿ ಸ್ನಾನವನ್ನು ಮಾಡಿ ಮೂರು ರಾತ್ರಿ ಉಪವಾಸಮಾಡಿದ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ತತೋ ಬದರಿಕಾತೀರ್ಥೇ ಸ್ನಾತ್ವಾ ಪ್ರಯತಮಾನಸಃ |
ದೀರ್ಘಮಾಯುಷ್ಯಮಾಪ್ನೋತಿ ತ್ರಿರಾತ್ರೋಪೋಷಿತೋ ನರಃ ॥13॥
ಅನಂತರ ಜಿತಮನಸ್ಕನಾಗಿ ಬದರಿತೀರ್ಥದಲ್ಲಿ ಸ್ನಾನವನ್ನು ಮಾಡಿ ಮೂರು ರಾತ್ರಿ ಉಪವಾಸವನ್ನು ಮಾಡಿದ ನರನು ದೀರ್ಘಾಯುಷ್ಯವನ್ನು ಪಡೆಯುತ್ತಾನೆ.
ತತೋ ಮಹೇಂದ್ರಮಾಸಾದ್ಯ ಜಾಮದಗ್ನ್ಯನಿಷೇವಿತಮ್ |
ರಾಮತೀರ್ಥೇ ನರಃ ಸ್ನಾತ್ವಾ ವಾಜಿಮೇಧಫಲಂ ಲಭೇತ್ ॥14॥
ಪರಶುರಾಮನಿಂದ ವಾಸಿಸಲ್ಪಡುವ ಮಹೇಂದ್ರಪರ್ವತಕ್ಕೆ ಹೋಗಿ ರಾಮತೀರ್ಥದಲ್ಲಿ ಸ್ನಾನವನ್ನು ಮಾಡುವ ನರನು ಅಶ್ವಮೇಧಫಲವನ್ನು ಪಡೆಯುತ್ತಾನೆ.

ಮತಂಗಸ್ಯ ತು ಕೇದಾರಃ ತತ್ರೈವ ಕುರುನಂದನ |
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥15॥
ಎಲೈ ಕುರುನಂದನನೇ, ಅಲ್ಲಿಯೇ ಮತಂಗ ಋಷಿಗಳ ಸರೋವರವಿದೆ. ರಾಜನೇ ಅಲ್ಲಿ ಸ್ನಾನವನ್ನು ಮಾಡುವ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ.
ಶ್ರೀಪರ್ವತಂ ಸಮಾಸಾದ್ಯ ನದೀತೀರ್ಥ ಉಪಸ್ಪೃಶೇತ್ |
ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥16॥
ಶ್ರೀಶೈಲಕ್ಕೆ ಹೋಗಿ ನದೀತೀರ್ಥದಲ್ಲಿ ಸ್ನಾನವನ್ನುಮಾಡಬೇಕು. ಅಂತಹ ನರನು ಅಶ್ವಮೇಧ ಫಲವನ್ನು ಪಡೆಯುತ್ತಾನೆ. ಮತ್ತು ಸ್ವರ್ಗ ಲೋಕಕ್ಕೆ ಹೋಗುತ್ತಾನೆ.
ಶ್ರೀಪರ್ವತೇ ಮಹಾದೇವೋ ದೇವ್ಯಾ ಸಹ ಮಹಾದ್ಯುತಿಃ |
ವಸತೇ ಪರಮಪ್ರೀತೋ ಬ್ರಹ್ಮಾ ಚ ತ್ರಿದಶೈರ್ವೃತಃ ॥17॥
ತತ್ರ ದೇವಹ್ರದೇ ಸ್ನಾತ್ವಾ ಶುಚಿಃ ಪ್ರಯತಮಾನಸಃ |
ಅಶ್ವಮೇಧಮವಾಪ್ನೋತಿ ಪರಾಂ ಸಿದ್ಧಿಂ ಚ ಗಚ್ಛತಿ ॥18॥
ಶ್ರೀಶೈಲದಲ್ಲಿ ಮಹಾದ್ಯುತಿಯಾದ ಮಹಾದೇವನು ಪಾರ್ವತಿಯ ಜೊತೆಯಲ್ಲಿ ಪರಮ ಸಂತೋಷದಿಂದ ವಾಸಿಸುತ್ತಾನೆ. ದೇವತೆಗಳಿಂದ ಕೂಡಿದ ಬ್ರಹ್ಮದೇವರು ಸಹ ವಾಸಿಸುತ್ತಾರೆ. ಅಲ್ಲಿ ಶುಚಿಯಾಗಿ ಮನೋನಿಗ್ರಹವನ್ನು ಹೊಂದಿ ದೇವಹ್ರದದಲ್ಲಿ ಸ್ನಾನವನ್ನು ಮಾಡುವ ನರನು ಅಶ್ವಮೇಧಫಲವನ್ನು ಪಡೆಯುತ್ತಾನೆ. ಮತ್ತು ಶ್ರೇಷ್ಠವಾದ ಸಿದ್ಧಿಯನ್ನು ಪಡೆಯುತ್ತಾನೆ.
ಋಷಭಂ ಪರ್ವತಂ ಗತ್ವಾ ಪೌಂಡ್ರೇಷು ಸುರಪೂಜಿತಮ್ |
ವಾಜಪೇಯಮವಾಪ್ನೋತಿ ನಾಕಪೃಷ್ಠೇ ಚ ಮೋದತೇ ॥19॥
ತತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ |
ಸಿದ್ಧಚಾರಣಗಂಧರ್ವಾ ಋಷಿಸಂಘಾಪ್ಸರೋಗಣಾಃ ॥20॥
ಈಶಾನಂ ತತ್ರ ಚಾಭ್ಯರ್ಚ್ಯ ತ್ರಿರಾತ್ರೋಪೋಷಿತೋ ನರಃ |
ದಶಾಶ್ವಮೇಧಾನಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥21॥
ಪೌಂಡ್ರದೇಶದಲ್ಲಿ ದೇವತೆಗಳಿಂದ ಪೂಜಿತವಾದ ವೃಷಭಪರ್ವತಕ್ಕೆ ಹೋದರೆ ವಾಜಪೇಯಫಲ ಉಂಟಾಗುತ್ತದೆ. ಮತ್ತು ಆ ತೀರ್ಥಸೇವಿಯು ಸ್ವರ್ಗಲೋಕದಲ್ಲಿ ಮೋದಿಸುತ್ತಾನೆ. ಅಲ್ಲಿ ಬ್ರಹ್ಮಾದಿದೇವತೆಗಳು ತಪೋಧನರಾದ ಋಷಿಗಳು ಸಿದ್ಧಚಾರಣ ಗಂಧರ್ವರು ಋಷಿಸಂಘಗಳು ಮತ್ತು ಅಪ್ಸರೋಗಣಗಳು ಇವೆ. ಅಲ್ಲಿ ಮೂರು ರಾತ್ರಿ ಉಪವಾಸವನ್ನು ಮಾಡಿ ಈಶ್ವರನನ್ನು ಪೂಜಿಸುವ ನರನು ಹತ್ತು ಅಶ್ವಮೇಧಯಾಗಗಳ ಫಲವನ್ನು ಹೊಂದುತ್ತಾನೆ. ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ.
ತತೋ ಗಚ್ಛೇತ ಕಾವೇರೀಂ ವೃತಾಮಪ್ಸರಸಾಂ ಗಣೈಃ |
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥22॥
ರಾಜನೇ, ಅಲ್ಲಿಂದ ಅಪ್ಸರೆಯರ ಸಮೂಹದಿಂದ ಕೂಡಿದ ಕಾವೇರಿ ನದಿಗೆ ಹೋಗಬೇಕು. ಅಲ್ಲಿ ಸ೦ನನವನ್ನು ಮಾಡಿದರೆ ಗೋಸಹಸ್ರಫಲವುಂಟಾಗುತ್ತದೆ.
ಕಾವೇರ್ಯಾಃ ಸಂಗಮೇ ಚೈವ ಸ್ನಾತ್ವಾ ದಶಗುಣೋ ಭವೇತ್ |
ಸೇತುತೀರ್ಥಂ ಸಮಾಸಾದ್ಯ ಬ್ರಹ್ಮಹತ್ಯಾಂ ವ್ಯಪೋಹತಿ ॥23॥
ಕಾವೇರಿ ಸಮುದ್ರಸಂಗಮದಲ್ಲಿ ಸ್ನಾನವನ್ನು ಮಾಡಿದರೆ ಅದಕ್ಕಿಂತ ಹತ್ತು ಪಟ್ಟು ಹೆಚ್ಚಿನ ಫಲವು ಉಂಟಾಗುತ್ತದೆ. ಸೇತುತೀರ್ಥಕ್ಕೆ ಹೋಗಿ ಸ್ನಾನವನ್ನು ಮಾಡುವವನು ಬ್ರಹ್ಮಹತ್ಯೆಯನ್ನು ಪರಿಹರಿಸಿಕೊಳ್ಳುತ್ತಾನೆ.
ತತಸ್ತೀರೇ ಸಮುದ್ರಸ್ಯ ಕನ್ಯಾತೀರ್ಥಮುಪಸ್ಪೃಶೇತ್ |
ತತ್ರೋಪಸ್ಪೃಶ್ಯ ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ॥24॥
ಅಲ್ಲಿಂದ ಮುಂದೆ ಸಮುದ್ರತೀರದಲ್ಲಿ ಕನ್ಯಾ(ಕುಮಾರೀ)ತೀರ್ಥವಿದೆ. ಅಲ್ಲಿ ಸ್ನಾನವನ್ನು ಮಾಡಬೇಕು. ಎಲೈ ರಾಜೇಂದ್ರನೇ, ಅಲ್ಲಿ ಸ್ನಾನವನ್ನು ಮಾಡುವವನು ಎಲ್ಲ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ.
ಅಥ ಗೋಕರ್ಣಮಾಸಾದ್ಯ ತ್ರಿಷು ಲೋಕೇಷು ವಿಶ್ರುತಮ್ |
ಸಮುದ್ರಮಧ್ಯೇ ರಾಜೇಂದ್ರ ಸರ್ವಲೋಕನಮಸ್ಕೃತಮ್ ॥25॥
ತತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ |
ಭೂತಯಕ್ಷಪಿಶಾಚಾಶ್ಚ ಕಿನ್ನರಾಃ ಸಮಹೋರಗಾಃ ॥26॥
ಸಿದ್ಧಚಾರಣಗಂಧರ್ವಮಾನುಷಾಃ ಪನ್ನಗಾಸ್ತಥಾ |
ಸರಿತಃ ಸಾಗರಾಃ ಶೈಲಾ ಉಪಾಸಂತ ಉಮಾಪತಿಮ್ ॥27॥
ಎಲೈ ರಾಜೇಂದ್ರನೇ, ಅಲ್ಲಿಂದ ಮೂರು ಲೋಕಗಳಲ್ಲಿ ಪ್ರಸಿದ್ಧವಾದ ಎಲ್ಲ ಜನರಿಂದಲೂ ನಮಸ್ಕೃತವಾದ ಸಮುದ್ರಮಧ್ಯದಲ್ಲಿರುವ ಗೋಕರ್ಣಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಬ್ರಹ್ಮಾದಿದೇವತೆಗಳು ತಪೋಧನರಾದ ಋಷಿಗಳು ಭೂತಯಕ್ಷಪಿಶಾಚಿಗಳು ಕಿನ್ನರರು ಮತ್ತು ಮಹೋರಗಗಳು ಸಿದ್ಧಚಾರಣಗಂಧರ್ವರು ಮನುಷ್ಯರು ಸರ್ಪಗಳು ನದಿಗಳು ಸಾಗರಗಳು ಮತ್ತು ಪರ್ವತಗಳು ಉಮಾಪತಿಯನ್ನು ಉಪಾಸನೆಮಾಡುತ್ತಾರೆ.
ತತ್ರೇಶಾನಂ ಸಮಭ್ಯರ್ಚ್ಯ ತ್ರಿರಾತ್ರೋಪೋಷಿತೋ ನರಃ |
ದಶಾಶ್ವಮೇಧಾನಾಪ್ನೋತಿ ಗಾಣಪತ್ಯಂ ಚ ವಿಂದತಿ |
ಉಷ್ಯ ದ್ವಾದಶರಾತ್ರಂ ತು ಕೃತಾತ್ಮಾ ಭವತಿ ಪ್ರಭೋ ॥28॥

ಅಲ್ಲಿ ಈಶ್ವರನನ್ನು ಪೂಜಿಸಿ ಮೂರು ರಾತ್ರಿ ಉಪವಾಸವನ್ನು ಮಾಡುವ ನರನು ಹತ್ತು ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ. ಮತ್ತು ಗಣಾಧಿಪತ್ಯವನ್ನು ಪಡೆಯುತ್ತಾನೆ. ಪ್ರಭುವೇ ಹನ್ನೆರಡು ರಾತ್ರಿವಾಸವನ್ನು ಮಾಡುವವನು ಕೃತಾರ್ಥನಾಗುತ್ತಾನೆ.
ತತ ಏವ ಚ ಗಾಯತ್ರ್ಯಾಃ ಸ್ಥಾನಂ ತ್ರೈಲೋಕ್ಯವಿಶ್ರುತಮ್ |
ನಿದರ್ಶನಂ ಚ ಪ್ರತ್ಯಕ್ಷಂ ಬ್ರಾಹ್ಮಣಾನಾಂ ನರಾಧಿಪ ॥29॥
ಗಾಯತ್ರೀಂ ಪಠತೇ ಯತ್ರ ಯೋನಿಸಂಕರಸಂಭವಃ |
ಗಾಥಾ ವಾ ಗೀತಿಕಾ ವಾಪಿ ತಸ್ಯ ಸಂಪದ್ಯತೇ ನೃಪ ॥30॥
ಅಲ್ಲಿಯೇ ಮೂರುಲೋಕಗಳಲ್ಲಿ ಪ್ರಸಿದ್ಧವಾದ ಗಾಯತ್ರೀ ಸ್ಥಾನವಿದೆ. ಅಲ್ಲಿ ಮೂರು ರಾತ್ರಿ ಉಪವಾಸವನ್ನುಮಾಡುವವನು ಗೋಸಹಸ್ರಫಲವನ್ನು ಪಡೆಯುತ್ತಾನೆ. ಎಲೈ ನರಾಧಿಪನೇ, ಈ ಫಲವು ಬ್ರಾಹ್ಮಣರಿಗೆ ಪ್ರತ್ಯಕ್ಷನಿದರ್ಶನವಾಗಿದೆ. ಯೋನಿಸಂಕರದಿಂದ ಜನ್ಮವನ್ನು ಪಡೆದವನು ಗಾಯತ್ರಿಯನಠನಗಲೀ ಯಾವುದೇ ಗಾಥೆಯನ್ನಾಗಲಿ ಅಥವಾ ಗೀತೆಯನ್ನಾಗಲಿ ಪಠನವನ್ನು ಮಾಡಿದರೂ ಅವನಿಗೆ ಅಲ್ಲಿ ಅದರ ಸಿದ್ಧಿಯುಂಟಾಗುತ್ತದೆ.
ಸಂವರ್ತಸ್ಯ ತು ವಿಪ್ರರ್ಷೇರ್ವಾಪೀಮಾಸಾದ್ಯ ದುರ್ಲಭಾಮ್ |
ರೂಪಸ್ಯ ಭಾಗೀ ಭವತಿ ಸುಭಗಶ್ಚೈವ ಜಾಯತೇ ॥31॥
ತತೋ ವೇಣ್ಣಾಂ ಸಮಾಸಾದ್ಯ ತರ್ಪಯೇತ್ ಪಿತೃದೇವತಾಃ |
ಮಯೂರಹಂಸಸಂಯುಕ್ತಂ ವಿಮಾನಮಧಿರೋಹತಿ ॥32॥
ವಿಪ್ರರ್ಷಿಯಾದ ಸಂವರ್ತನ ದುರ್ಲಭವಾದ ವಾಪಿಯನ್ನು ಸೇರಿ ಸ್ನಾನವನ್ನು ಮಾಡುವವನು ಒಳ್ಳೆಯ ರೂಪವನ್ನು ಮತ್ತು ಸೌಂದರ್ಯವನ್ನು ಹೊಂದುತ್ತಾನೆ. ಅಲ್ಲಿಂದ ಮುಂದೆ ವೇಣ್ಣಾನದಿಗೆ ತಲುಪಿ ಯಾವನು ಪಿತೃದೇವತೆಗಳನ್ನು ಆರಾಧಿಸುತ್ತಾನೆಯೋ ಅವನು ಮಯೂರ ಮತ್ತು ಹಂಸಯುಕ್ತವಾದ ವಿಮಾನವನ್ನು ಏರುತ್ತಾನೆ.
ತತೋ ಗೋದಾವರೀಂ ಪ್ರಾಪ್ಯ ನದೀಂ ಸಿದ್ಧನಿಷೇವಿತಾಮ್ |
ಅವಾಪ್ಯ ಗೋಮೇಧಫಲಂ ವಾಸುಕೇರ್ಲೋಕಮಾಪ್ನುಯಾತ್ ॥33॥
ಅನಂತರ ಸಿದ್ಧಸೇವಿತವಾದ ಗೋದಾವರೀ ನದಿಯನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡುವವನು ಗೋಮೇಧಯಾಗದ ಫಲವನ್ನು ಪಡೆದು ವಾಸುಕಿಲೋಕವನ್ನು ಹೊಂದುತ್ತಾನೆ .
ವೇಣ್ಣಾಯಾಃ ಸಂಗಮೇ ಸ್ನಾತ್ವಾ ವಾಜಿಮೇಧಫಲಂ ಲಭೇತ್ |
ವರದಾಸಂಗಮೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥34॥
ಬ್ರಹ್ಮಸ್ಥಾನಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ |
ಗೋಸಹಸ್ರಫಲಂ ಗಚ್ಛೇತ್ ಸ್ವರ್ಗಲೋಕಂ ಚ ಗಚ್ಛತಿ ॥35॥
ವೇಣ್ಣಾನದಿಯ ಸಂಗಮದಲ್ಲಿ ಸ್ನಾನವನ್ನು ಮಾಡಿದರೆ ಅಶ್ವಮೇಧಫಲವು ದೊರೆಯುತ್ತದೆ. ವರದಾ ಸಂಗಮದಲ್ಲಿ ಸ್ನಾನವನ್ನು ಮಾಡಿದರೆ ಗೋಸಹಸ್ರಫಲವು ದೊರೆಯುತ್ತದೆ. ಬ್ರಹ್ಮಸ್ಥಾನವನ್ನು ಸೇರಿ ಅಲ್ಲಿ ಮೂರು ರಾತ್ರಿ ಉಪವಾಸವನ್ನು ಮಾಡುವ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ. ಮತ್ತು ಸ್ವರ್ಗಲೋಕವನ್ನು ಪಡೆಯುತ್ತಾನೆ.
ಕುಶಪ್ಲವನಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ |
ತ್ರಿರಾತ್ರಮುಷಿತಃ ಸ್ನಾತ್ವಾ ಹಯಮೇಧಫಲಂ ಲಭೇತ್ ॥36॥
ಯಾವ ಮನುಷ್ಯನು ಬ್ರಹ್ಮಚಾರಿಯಾಗಿ ಸಮಾಹಿತನಾಗಿ ಕುಶಪ್ಲವನತೀರ್ಥಕ್ಕೆ ಹೋಗಿ ಸ್ನಾನವನ್ನು ಮಾಡಿ ಮೂರು ರಾತ್ರಿಗಳು ವಾಸಿಸುತ್ತಾನೆಯೋ ಅವನು ಅಶ್ವಮೇಧ ಫಲವನ್ನು ಪಡೆಯುತ್ತಾನೆ.
ತತೋ ದೇವಹ್ರದೇ ಸ್ನಾತ್ವಾ ಕೃಷ್ಣವೇಣ್ಣಾಜಲೋದ್ಭವೇ |
ಪಿತಾಮಹಹ್ರದೇ ಚೈವ ತಥಾ ಕನ್ಯಾಹ್ರದೇ ನೃಪ ॥37॥
ಯತ್ರ ಕ್ರತುಶತೈರಿಷ್ಟ್ವಾ ದೇವರಾಜೋ ದಿವಂ ಗತಃ |
ಅಗ್ನಿಷ್ಟೋಮಶತಂ ವಿಂದೇದ್ ಗಮನಾದೇವ ಭಾರತ ॥38॥
ಅಲ್ಲಿಂದ ಮುಂದೆ ಕೃಷ್ಣವೇಣ್ಣಾ ಜಲದಲ್ಲಿ ಉದ್ಭವಿಸಿದ ದೇವಹ್ರದದಲ್ಲಿ ಮತ್ತು ಬ್ರಹ್ಮಹ್ರದದಲ್ಲಿ ಮತ್ತು ಕನ್ಯಾಹ್ರದದಲ್ಲಿಯೂ ಸ್ನಾನ ಮಾಡಬೇಕು. ಎಲ್ಲಿ ದೇವರಾಜನು ನೂರು ಯಾಗಗಳನ್ನುಮಾಡಿ ಸ್ವರ್ಗವನ್ನು ಪಡೆದನೋ ಅಂತಹ ಕನ್ಯಾಹ್ರದವನ್ನು ತಲುಪುವುದರಿಂದಲೇ ಮಾನವನಿಗೆ ನೂರು ಅಗ್ನಿಷ್ಟೋಮಫಲವು ದೊರೆಯುತ್ತದೆ.
ಸರ್ವದೇವಹ್ರದೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ |
ಜಾತಿಮಾತ್ರಹ್ರದೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ |
ಜಾತಿಸ್ಮರತ್ವಂ ಲಭತೇ ಸುಭಗಶ್ಚೈವ ಜಾಯತೇ ॥39॥
ಸರ್ವದೇವಹ್ರದದಲ್ಲಿ ಸ್ನಾನವನ್ನು ಮಾಡಿದರೆ ಗೋಸಹಸ್ರಫಲವು ದೊರೆಯುತ್ತದೆ. ಜಾತಿಮಾತ್ರಹ್ರದದಲ್ಲಿ ಸ್ನಾನವನ್ನು ಮಾಡಿದರೂ ಗೋಸಹಸ್ರಫಲವು ದೊರೆಯುತ್ತದೆ. ಅಲ್ಲದೆ ಪೂರ್ವಜನ್ಮದ ಸ್ಮರಣೆಯೂ ಉಂಟಾಗುತ್ತದೆ. ಮತ್ತು ಸೌಂದರ್ಯವನ್ನು ಪಡೆಯುತ್ತಾನೆ.
ತತಃ ಶೂರ್ಪಾಕರಂ ಗಚ್ಛೇತ್ ಜಾಮದಗ್ನ್ಯನಿಷೇವಿತಮ್ |
ರಾಮತೀರ್ಥೇ ನರಃ ಸ್ನಾತ್ವಾ ವಿಂದೇದ್ಬಹು ಸುವರ್ಣಕಮ್ ॥40॥
ಅಲ್ಲಿಂದ ಪರಶುರಾಮನಿಂದ ಸೇವಿತವಾದ ಶೂರ್ಪಾಕರ ಕ್ಷೇತ್ರಕ್ಕೆ ಹೋಗಿ ರಾಮತೀರ್ಥದಲ್ಲಿ ಸಣನನವನ್ನುಮಾಡಿದ ನರನು ಬಹಳ ಸುವರ್ಣವನ್ನು ಪಡೆಯುತ್ತಾನೆ.
ಸಪ್ತಗೋದಾವರೇ ಸ್ನಾತ್ವಾ ನಿಯತೋ ನಿಯತಾಶನಃ |

ಮಹತ್ ಪುಣ್ಯಮವಾಪ್ನೋತಿ ದೇವಲೋಕಂ ಚ ಗಚ್ಛತಿ ॥41॥
ನಿಯಮವುಳ್ಳವನೂ ನಿಯತಾಹಾರನೂ ಆದ ತೀರ್ಥಸೇವಿಯು ಸಪ್ತಗೋದಾವರದಲ್ಲಿ ಸ್ನಾನವನ್ನುಮಾಡಿದರೆ ಬಹಳ ಪುಣ್ಯವನ್ನು ಗಳಿಸುತ್ತಾನೆ. ಮತ್ತು ದೇವಲೋಕಕ್ಕೆ ಹೋಗುತ್ತಾನೆ.
ತತೋ ದೇವಪಥಂ ಗಚ್ಛೇತ್ ನಿಯತೋ ನಿಯತಾಶನಃ।
ದೇವಸತ್ರಸ್ಯ ಯತ್ ಪುಣ್ಯಂ ತದವಾಪ್ನೋತಿ ಮಾನವಃ ॥42॥
ನಿಯತನೂ ನಿಯತಾಶನನೂ ಆದ ಮಾನವನು ಅಲ್ಲಿಂದ ಮುಂದೆ ದೇವಸತ್ರಕ್ಕೆ ಹೋಗಬೇಕು. ಅಲ್ಲಿ ಸ್ನಾನವನ್ನುಮಾಡುವ ಮನುಷ್ಯನು ದೇವಸತ್ರಕ್ಕೆ ಸಮಾನವಾದ ಪುಣ್ಯವನ್ನು ಪಡೆಯುತ್ತಾನೆ.
ತತೋಽವಾಪ್ಯ ಮಹಾಪುಣ್ಯಾಂ ಪಯೋಷ್ಣೀಂ ಸರಿತಾಂ ವರಾಮ್।
ಪಿತೃದೇವಾರ್ಚನಪರೋ ಗೋಸಹಸ್ರಫಲಂ ಲಭೇತ್ ॥43॥
ಅಲ್ಲಿಂದ ಮುಂದೆ ಬಂದು ನದಿಗಳಲ್ಲಿ ಶ್ರೇಷ್ಠವಾದ ಮಹಾಪುಣ್ಯಪ್ರದವಾದ ಪಯೋಷ್ಣೀನದಿಯನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡಿ ಪಿತೃದೇವಾರ್ಚನಾಪರನಾದ ಮನುಷ್ಯನು ಗೋಸಹಸ್ರಫಲವನ್ನು ಪಡೆಯುತ್ತಾನೆ.
ದಂಡಕಾರಣ್ಯಮಾಸಾದ್ಯ ಮಹಾರಾಜ ಉಪಸ್ಪೃಶೇತ್।
ಗೋಸಹಸ್ರಫಲಂ ತತ್ರ ಸ್ನಾತಮಾತ್ರಸ್ಯ ಭಾರತ ॥44॥
ಎಲೈ ಮಹಾರಾಜನೇ ದಂಡಕಾರಣ್ಯವನ್ನು ತಲುಪಿ ಅಲ್ಲಿ ಸ್ನಾನವನ್ನು ಮಾಡಬೇಕು. ಭಾರತನೇ, ಅಲ್ಲಿ ಕೇವಲ ಸ್ನಾನವನ್ನು ಮಾಡುವುದರಿಂದ ಗೋಸಹಸ್ರಫಲವುಂಟಾಗುತ್ತದೆ.
ಶರಭಂಗಾಶ್ರಮಂ ಗತ್ವಾ ವಿಂದೇದ್ ಬಹು ಸುವರ್ಣಕಮ್ ॥45॥
ಶರಭಂಗಾಶ್ರಮಕ್ಕೆ ಹೋದ ತೀರ್ಥಸೇವಿಯು ಬಹಳ ಸುವರ್ಣವನ್ನು ಪಡೆಯುತ್ತಾನೆ.
ತುಂಗಕಾರಣ್ಯಮಾಸಾದ್ಯ ಬ್ರಹ್ಮಚಾರೀ ಜಿತೇಂದ್ರಿಯಃ।
ವೇದಾನಧ್ಯಾಪಯತ್ ತತ್ರ ಋಷಿಃ ಸಾರಸ್ವತಃ ಪುರಾ ॥46॥
ತತ್ರ ವೇದಾನ್ ಪ್ರನಷ್ಟಾಂಸ್ತು ಮುನೇರಂಗಿರಸಃ ಸುತಃ।
ಉಪವಿಷ್ಟೋ ಮಹರ್ಷೀಣಾಮುತ್ತರೀಯೇಷು ಭಾರತ ॥47॥
ಓಂಕಾರೇಣ ಯಥಾನ್ಯಾಯಂ ಸಮ್ಯಗುಚ್ಚಾರಿತೇನ ಚ।
ಯೇನ ಯತ್ ಪೂರ್ವಮಭ್ಯಸ್ತಂ ತಸ್ಯ ಸರ್ವಮುಪಸ್ಥಿತಮ್ ॥48॥
ಹಿಂದೆ ಸರಸ್ವತೀತೀರದ ಋಷಿಯೊಬ್ಬನು ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ ತುಂಗಕಾರಣ್ಯವನ್ನು ಸೇರಿ ವೇದಧ್ಯಾಯನವನ್ನು ಮಾಡಿಸಿದನು. ಎಲೈ ಭಾರತನೇ ಅಲ್ಲಿ ಅಂಗೀರಸ ಸುತನು (ಬೃಹಸ್ಪತಿಯು) ಋಷಿಗಳ ಉತ್ತರೀಯದಲ್ಲಿ ಕುಳಿತು ತನಗೆ ನಷ್ಟವಾದ ವೇದಗಳನ್ನು ಪುನಃ ಕಲಿತನು. ಓಂಕಾರದ ಜೊತೆಯಲ್ಲಿ ಎಲ್ಲಾ ವೇದಗಳನ್ನು ಸರಿಯಾಗಿ ಉಚ್ಚಾರಮಾಡುವುದನ್ನು ಕೇಳಿದ ತಕ್ಷಣವೇ ಅವನಿಗೆ ತಾನು ಹಿಂದೆ ಅಧ್ಯಯನ ಮಾಡಿದ ವೇದಗಳೆಲ್ಲವೂ ಸ್ಮರಣೆಗೆ ಬಂದವು.
ಋಷಯಸ್ತತ್ರ ದೇವಾಶ್ಚ ವರುಣೋಽಗ್ನಿಃ ಪ್ರಜಾಪತಿಃ।
ತಥಾ ನಾರಾಯಣೋ ದೇವೋ ಮಹಾದೇವಸ್ತಥೈವ ಚ ॥49॥
ಪಿತಾಮಹಶ್ಚ ಭಗವಾನ್ ದೇವೈಃ ಸಹ ಮಹಾದ್ಯುತಿಃ।
ಭೃಗುಂ ನಿವೇದಯಾಮಾಸ ಯಾಜನಾರ್ಥೇ ಮಹಾದ್ಯುತಿಮ್ ॥50॥
ತತಃ ಸ ಚಕ್ರೇ ಭಗವಾನ್ ಋಷೀಣಾಂ ವಿಧಿವತ್ ತದಾ।
ಸರ್ವೇಷಾಂ ಪುನರಾಧಾನಂ ವಿಧಿದೃಷ್ಟೇನ ಕರ್ಮಣಾ ॥51॥
ಅಲ್ಲಿ ಋಷಿಗಳು ವರುಣ ಅಗ್ನಿ ಪ್ರಜಾಪತಿ ಮೊದಲಾದ ದೇವತೆಗಳು ನಾರಾಯಣನು ಹಾಗೆಯೇ ಮಹದೇವರು ಪೂಜ್ಯನಾದ ದೇವತೆಗಳಿಂದ ಒಡಗೂಡಿದ ಮಹಾದ್ಯುತಿಯುಳ್ಳ ಪೂಜ್ಯನಾದ ಪಿತಾಮಹನಾದ ಬ್ರಹ್ಮನು ಎಲ್ಲರೂ ಮಹಾದ್ಯುತಿಯನ್ನು ಹೊಂದಿದ್ದ ಭೃಗು ಋಷಿಗಳಿಗೆ ಯಾಗವನ್ನು ಮಾಡಿಸುವಂತೆ ನಿವೇದಿಸಿದರು. ಆಗ ಪೂಜ್ಯರಾದ ಭೃಗು ಋಷಿಗಳು ಎಲ್ಲಾ ಋಷಿಗಳಿಗೆ ವಿಧ್ಯುಕ್ತರೀತಿಯಿಂದ ಪುನಃ ಆಧಾನವನ್ನು ಮಾಡಿಸಿದರು.
ಆಜ್ಯಭಾಗೇನ ವೈ ತತ್ರ ತರ್ಪಿತಾಸ್ತು ಯಥಾವಿಧಿ।
ದೇವಾಸ್ತ್ರಿಭುವನಂ ಯಾತಾ ಋಷಯಶ್ಚ ಯಥಾಸುಖಮ್ ॥52॥
ಅಲ್ಲಿ ವಿಧಿಪೂರ್ವಕವಾಗಿ ಸಮರ್ಪಿಸಿದ ಆಜ್ಯಭಾಗಗಳಿಂದ ತೃಪ್ತರಾದ ದೇವತೆಗಳು ಸ್ವರ್ಗಲೋಕಕ್ಕೆ ಹೋದರು ಋಷಿಗಳು ತಮ್ಮತಮ್ಮ ಸ್ಥಾನಗಳಿಗೆ ಹೋದರು.
ತದರಣ್ಯಂ ಪ್ರವಿಷ್ಟಸ್ಯ ತುಂಗಕಂ ರಾಜಸತ್ತಮ।
ಪಾಪಂ ಪ್ರಣಶ್ಯತೇ ಸರ್ವಂ ಸ್ತ್ರಿಯೋ ವಾ ಪುರುಷಸ್ಯ ವಾ ॥53॥
ಎಲೈ ರಾಜಶ್ರೇಷ್ಠನೇ, ಆ ತುಂಗಕಾರಣ್ಯವನ್ನು ಪ್ರವೇಶಮಾಡಿದ ಸ್ತ್ರೀಯರಿಗಾಗಲೀ ಅಥವಾ ಪುರುಷರಿಗಾಗಲೀ ಎಲ್ಲ ಪಾಪವೂ ನಾಶವನ್ನು ಹೊಂದುತ್ತದೆ.
ತತ್ರ ಮಾಸಂ ವಸೇದ್ಧೀರೋ ನಿಯತೋ ನಿಯತಾಶನಃ।
ಬ್ರಹ್ಮಲೋಕಂ ವ್ರಜೇದ್ರಾಜನ್ ಕುಲಂ ಚೈವ ಸಮುದ್ಧರೇತ್ ॥54॥
ಎಲೈ ರಾಜನೇ, ಅಲ್ಲಿ ನಿಯಮಬದ್ಧನೂ ನಿಯತ ಆಹಾರವುಳ್ಳವನೂ ಆಗಿ ಧೀರನಾಗಿ ಒಂದುತಿಂಗಳು ಕಾಲ ವಾಸವನ್ನು ಮಾಡಿದರೆ ಅವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಮತ್ತು ಕುಲವನ್ನು ಉದ್ಧರಿಸುತ್ತಾನೆ.
ಮೇಧಾವಿಕಂ ಸಮಾಸಾದ್ಯ ಪಿತೄನ್ ದೇವಾಂಶ್ಚ ತರ್ಪಯೇತ್।

ಅಗ್ನಿಷ್ಟೋಮಮವಾಪ್ನೋತಿ ಸ್ಮೃತಿಂ ಮೇಧಾಂ ಚ ವಿಂದತಿ ॥55॥
ತತಃ ಕಾಳಂಜರಂ ಗತ್ವಾ ಪರ್ವತಂ ಲೋಕವಿಶ್ರುತಮ್ ।
ತತ್ರ ದೇವಹ್ರದೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥56॥
ಮೇಧಾವಿಕತೀರ್ಥಕ್ಕೆ ಹೋಗಿ ಪಿತೃಗಳಿಗೂ ಮತ್ತು ದೇವತೆಗಳಿಗೂ ತರ್ಪಣವನ್ನು ನೀಡಿದರೆ ಅಗ್ನಿಷ್ಟೋಮ ಫಲವನ್ನು ಪಡೆಯುತ್ತಾನೆ. ಸ್ಮೃತಿಶಕ್ತಿಯನ್ನು ಮೇಧಾಶಕ್ತಿಯನ್ನು ಪಡೆಯುತ್ತಾನೆ. ಲೋಕವಿಶ್ರುತವಾದ ಕಾಳಂಜರ ಪರ್ವತಕ್ಕೆ ಹೋಗಿ ಸ್ನಾನವನ್ನುಮಾಡಿದರೆ ಗೋಸಹಸ್ರಫಲವು ದೊರೆಯುತ್ತದೆ.
ಯೋಽಽತ್ಮಾನಂ ಸಾಧಯೇತ್ ತತ್ರ ಗಿರೌ ಕಾರಂಜರೇ ನೃಪ ।
ಸ್ವರ್ಗಲೋಕೇ ಸ ಪೂಜ್ಯೇತ ನರೋ ನಾಸ್ತ್ಯತ್ರ ಸಂಶಯಃ ॥57॥
ಎಲೈ ರಾಜನೇ, ಯಾವನು ಕಾರಂಜರಗಿರಿಗೆ ಹೋಗಿ ತನ್ನ ಸಾಧನೆಯನ್ನು ಮಾಡುತ್ತಾನೆಯೋ ಅಂತಹ ಮನುಷ್ಯನು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ ಇದರಲ್ಲಿ ಸಂಶಯವಿಲ್ಲ.
ತತೋ ಗಿರಿವರಶ್ರೇಷ್ಠೇ ಚಿತ್ರಕೂಟೇ ವಿಶಾಂಪತೇ ।
ಮಂದಾಕಿನೀಂ ಸಮಾಸಾದ್ಯ ನದೀಂ ಪಾಪಪ್ರಮೋಚನೀಮ್ ॥58॥
ತತ್ರಾಭಿಷೇಕಂ ಕುರ್ವಾಣಃ ಪಿತೃದೇವಾರ್ಚನೇ ರತಃ ।
ಅಗ್ನಿಷ್ಟೋಮಮವಾಪ್ನೋತಿ ಗತಿಂ ಚ ಪರಮಾಂ ವ್ರಜೇತ್ ॥59॥
ಎಲೈ ರಾಜನೇ, ಅನಂತರ ಪರ್ವತಗಳಲ್ಲಿ ಶ್ರೇಷ್ಠವಾದ ಚಿತ್ರಕೂಟಪರ್ವತಕ್ಕೆ ಹೋಗಿ ಪಾಪವಿಮೋಚನೆಯಾದ ಮಂದಾಕಿನಿ ನದಿಯಲ್ಲಿ ಸ್ನಾನವನ್ನು ಮಾಡಿ ಪಿತೃದೇವಾರ್ಚನೆಯನ್ನು ಮಾಡುವುದರಲ್ಲಿ ರತನಾದವನು ಅಗ್ನಿಷ್ಟೋಮ ಫಲವನ್ನು ಪಡೆಯುತ್ತಾನೆ. ಮತ್ತು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.
ತತೋ ಗಚ್ಛೇತ ರಾಜೇಂದ್ರ ಭರ್ತೃಸ್ಥಾನಮನುತ್ತಮಮ್ ।
ಯತ್ರ ದೇವೋ ಮಹಾದೇವೋ ನಿತ್ಯಂ ಸನ್ನಿಹಿತೋ ನೃಪ ॥60॥
ಪುಮಾಂಸ್ತತ್ರ ನರಶ್ರೇಷ್ಠ ದರ್ಶನಾದೇವ ಸಿಧ್ಯತಿ ।
ಕೋಟಿತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥61॥
ಎಲೈ ರಾಜೇಂದ್ರನೇ, ಅಲ್ಲಿಂದ ಶ್ರೇಷ್ಠವಾದ ಭರ್ತೃಸ್ಥಾನಕ್ಕೆ ಹೋಗಬೇಕು. ಎಲೈ ರಾಜನೇ, ಅಲ್ಲಿ ಮಹಾದೇವನು ನಿತ್ಯವೂ ಸನ್ನಿಹಿತನಾಗಿದ್ದಾನೆ. ನರಶ್ರೇಷ್ಠನೇ ಭರ್ತೃಸ್ಥಾನದ ದರ್ಶನದಿಂದಲೇ ಮನುಷ್ಯನು ಸಿದ್ಧಿಯನ್ನು ಪಡೆಯುತ್ತಾನೆ. ಕೋಟಿತೀರ್ಥದಲ್ಲಿ ಸ್ನಾನವನ್ನು ಮಾಡಿದ ನರನು ಗೋಸಹಸ್ರಫಲವನ್ನು ಪಡೆಯುತ್ತಾನೆ.
ಪ್ರದಕ್ಷಿಣಮುಪಾವೃತ್ಯ ಜ್ಯೇಷ್ಠಸ್ಥಾನಂ ವ್ರಜೇನ್ನೃಪ ।
ಅಭಿಗಮ್ಯ ಮಹಾದೇವಂ ವಿರಾಜತಿ ಯಥಾ ಶಶೀ ॥62॥
ಎಲೈ ರಾಜನೇ, ಅಲ್ಲಿಂದ ಪ್ರದಕ್ಷಿಣಾಕಾರವಾಗಿ ಬಂದು ಜ್ಯೇಷ್ಠಸ್ಥಾನವನ್ನು ತಲುಪಿ ಮಹಾದೇವನ ಸಮೀಪಕ್ಕೆ ಬರುವವನು ಚಂದ್ರನಂತೆ ಪ್ರಕಾಶಿಸುತ್ತಾನೆ.
ತತ್ರ ಕೂಪೇ ಮಹಾರಾಜ ವಿಶ್ರುತಾ ಭರತರ್ಷಭ ।
ಸಮುದ್ರಾಸ್ತತ್ರ ಚತ್ವಾರೋ ನಿವಸಂತಿ ಯುಧಿಷ್ಠಿರ ॥63॥
ಎಲೈ ಭರತರ್ಷಭನೇ, ಯುದ್ಧದಲ್ಲಿ ಸ್ಥಿರನಾದವನೇ ಮಹಾರಾಜನೇ, ಅಲ್ಲಿ ಪ್ರಖ್ಯಾತವಾದ ನಾಲ್ಕು ಸಮುದ್ರಗಳು ಕೂಪದಲ್ಲಿ ಸನ್ನಿಹಿತವಾಗಿವೆ.
ತತ್ರೋಪಸ್ಪೃಶ್ಯ ರಾಜೇಂದ್ರ ಕೃತ್ವಾ ಚಾಪಿ ಪ್ರದಕ್ಷಿಣಮ್ ।
ನಿಯತಾತ್ಮಾ ನರಃ ಪೂತೋ ಗಚ್ಛೇತ ಪರಮಾಂ ಗತಿಮ್ ॥64॥
ರಾಜೇಂದ್ರನೇ, ಅಲ್ಲಿ ಸ್ನಾನವನ್ನು ಮಾಡಿ ನಿಯತನಾಗಿ ಪ್ರದಕ್ಷಿಣೆಯನ್ನು ಮಾಡುವ ನರನು ಪವಿತ್ರನಾಗಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.
ತತೋ ಗಚ್ಛೇತ್ ಕುರುಶ್ರೇಷ್ಠ ಶೃಂಗಿಬೇರಪುರಂ ಮಹತ್ ।
ತತ್ರ ತೀರ್ಣೋ ಮಹಾರಾಜ ರಾಮೋ ದಾಶರಥಿಃ ಪುರಾ ॥65॥
ಎಲೈ ಕುರುಶ್ರೇಷ್ಠನೇ, ಅಲ್ಲಿಂದ ಶ್ರೇಷ್ಠವಾದ ಶೃಂಗಿಬೇರಪುರಕ್ಕೆ ಹೋಗಬೇಕು. ಮಹಾರಾಜನೇ, ಅದು ಹಿಂದೆ ದಾಶರಥಿರಾಮನು ಗಂಗೆಯನ್ನು ದಾಟಿದ ಸ್ಥಳ.
ಗಂಗಾಯಾಂ ತು ನರಃ ಸ್ನಾತ್ವಾ ಬ್ರಹ್ಮಚಾರೀ ಸಮಾಹಿತಃ ।
ವಿಧೂತಪಾಪ್ಮಾ ಭವತಿ ವಾಜಪೇಯಂ ಚ ವಿಂದತಿ ॥66॥
ಬ್ರಹ್ಮಚಾರಿಯಾಗಿ ಸಮಾಹಿತನಾಗಿ ಗಂಗೆಯಲ್ಲಿ ಸ್ನಾನವನ್ನುಮಾಡಿದ ನರನು ಪಾಪರಹಿತನಾಗಿ ವಾಜಪೇಯಯಾಗದ ಫಲವನ್ನು ಪಡೆಯುತ್ತಾನೆ.
ಅಭಿಗಮ್ಯ ಮಹಾದೇವಮಭ್ಯರ್ಚ್ಯ ಚ ನರಾಧಿಪ ।
ಪ್ರದಕ್ಷಿಣಮುಪಾವೃತ್ಯ ಗಾಣಪತ್ಯಮವಾಪ್ನುಯಾತ್ ॥67॥
ಎಲೈ ನರಾಧಿಪನೇ, ಅಲ್ಲಿ ಮಹಾದೇವನನ್ನು ಅರ್ಚಿಸಿ ಪ್ರದಕ್ಷಿಣೆಯನ್ನು ಮಾಡುವವನು ಗಣಾಧಿಪತ್ಯವನ್ನು ಪಡೆಯುವನು.
ತತೋ ಗಚ್ಛೇತ ರಾಜೇಂದ್ರ ಪ್ರಯಾಗಮೃಷಿಭಿಃ ಸ್ತುತಮ್ ।
ಯತ್ರ ಬ್ರಹ್ಮಾದಯೋ ದೇವಾ ದಿಶಶ್ಚ ಸದಿಗೀಶ್ವರಾಃ ॥68॥
ಲೋಕಪಾಲಾಶ್ಚ ಸಾಧ್ಯಾಶ್ಚ ಪಿತರೋ ಲೋಕಸಮ್ಮತಾಃ ।

ಸನತ್ಕುಮಾರಪ್ರಮುಖಾಃ ತಥೈವ ಪರಮರ್ಷಯಃ ॥69॥
ಅಂಗಿರಃಪ್ರಮುಖಾಶ್ಚೈವ ತಥಾ ಬ್ರಹ್ಮರ್ಷಯೋಽಪರೇ |
ತಥಾ ನಾಗಾಃ ಸುಪರ್ಣಾಶ್ಚ ಸಿದ್ಧಾಶ್ಚ ಪರಮರ್ಷಯಃ ॥70॥
ಸರಿತಃ ಸಾಗರಾಶ್ಚೈವ ಗಂಧರ್ವಾಪ್ಸರಸಸ್ತಥಾ |
ಹರಿಶ್ಚ ಭಗವಾನಾಸ್ತೇ ಪ್ರಜಾಪತಿಪುರಸ್ಕೃತಃ ॥71॥
ರಾಜೇಂದ್ರನೇ ಅಲ್ಲಿಂದ ಋಷಿಗಳಿಂದ ಪ್ರಶಂಸಿಸಲ್ಪಡುವ ಪ್ರಯಾಗಕ್ಕೆ ಹೋಗಬೇಕು. ಅಲ್ಲಿ ಬ್ರಹ್ಮಾದಿದೇವತೆಗಳು ದಿಕ್ಕುಗಳು ದಿಕ್ಪಾಲಕರು ಲೋಕಪಾಲಕರು ಪಿತೃಗಳು ಸಾಧ್ಯರು ಲೋಕಸಮ್ಮತರಾದ ಸನತ್ಕುಮಾರ ಮೊದಲಾದ ಯೋಗಿಗಳು ಅದರಂತೆ ಪರಮ ಋಷಿಗಳು ಅಂಗಿರ ಮೊದಲಾದ ಬ್ರಹ್ಮರ್ಷಿಗಳು ಮತ್ತು ಉಳಿದ ನಾಗಗಳು ಸುಪರ್ಣರು ಸಿದ್ಧರು ನದಿಗಳು ಸಾಗರಗಳು ಗಂಧರ್ವರು ಅಪ್ಸರೆಯರು ಮತ್ತು ಭಗವಂತನಾದ ಹರಿಯು ಪ್ರಜಾಪತಿಗಳನ್ನು ಮುಂದೆಮಾಡಿಕೊಂಡು ಅಲ್ಲಿ ಇರುತ್ತಾರೆ.
ತ್ರೀಣಿ ಚಾಪ್ಯಗ್ನಿಕುಂಡಾನಿ ಯೇಷಾಂ ಮಧ್ಯೇ ಚ ಜಾಹ್ನವೀ |
ಪ್ರಯಾಗಾದಭಿನಿಷ್ಕ್ರಾಂತಾ ಸರ್ವತೀರ್ಥಪುರಸ್ಕೃತಾ ॥72॥
ಪ್ರಯಾಗದಲ್ಲಿ ಮೂರು ಅಗ್ನಿಕುಂಡಗಳಿವೆ ಅವುಗಳ ಮಧ್ಯದಿಂದ ಸರ್ವತೀರ್ಥಗಳಿಗಿಂತ ಶ್ರೇಷ್ಠವಾದ ಜಾಹ್ನವಿಯು ಪ್ರಯಾಗದಿಂದ ಹೊರಬಂದಿದ್ದಾಳೆ.
ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ |
ಗಂಗಾ ಯಮುನಯಾ ಸಾರ್ಧಂ ಸಂಗತಾ ಲೋಕವಿಶ್ರುತಾ ॥73॥
ಸೂರ್ಯನ ಮಗಳಾದ ಮೂರುಲೋಕದಲ್ಲಿ ವಿಶ್ರುತಳಾದ ಯಾವ ಯಮುನೆ ಇದ್ದಾಳೋ ಅವಳ ಜೊತೆಯಲ್ಲಿ ಲೋಕವಿಶ್ರುತಳಾದ ಗಂಗೆಯು ಅಲ್ಲಿ ಸಂಗತಳಾಗಿದ್ದಾಳೆ.
ಗಂಗಾಯಮುನಯೋರ್ಮಧ್ಯಂ ಪೃಥಿವ್ಯಾ ಜಘನಂ ಸ್ಮೃತಮ್ |
ಪ್ರಯಾಗಂ ಜಘನಸ್ಯಾಂತಮುಪಸ್ಥಂ ಮುನಯೋ ವಿದುಃ ॥74॥
ಗಂಗಾಯಮುನೆಯರ ಮಧ್ಯಪ್ರದೇಶವು ಭೂಮಿಯ ಜಘನವೆಂದು ಹೇಳಲ್ಪಡುತ್ತದೆ. ಪ್ರಯಾಗವನ್ನು ಜಘನದ ತುದಿಯಲ್ಲಿರುವ ಉಪಸ್ಥವೆಂದು ಋಷಿಗಳು ತಿಳಿಯುತ್ತಾರೆ.
ಪ್ರಯಾಗಂ ಸಪ್ರತಿಷ್ಠಾನಂ ಕಂಬಲಾಶ್ವತರೌ ತಥಾ |
ತೀರ್ಥಂ ಭೋಗವತೀ ಚೈವ ನದೀ ಪ್ರೋಕ್ತಾ ಪ್ರಜಾಪತೇಃ ॥75॥
ಪ್ರತಿಷ್ಠಾನನಗರದಿಂದ ಕೂಡಿದ ಪ್ರಯಾಗ ಕಂಬ ಅಶ್ವತರ ತೀರ್ಥಗಳು ಮತ್ತು ಭೋಗವತಿತೀರ್ಥಗಳು ಮತ್ತು ನದಿ ಇಷ್ಟು ಸೇರಿ ಪ್ರಜಾಪತಿಯ ವೇದಿ ಎಂದು ಹೇಳಲ್ಪಡುತ್ತದೆ.
ತತ್ರ ದೇವಾಶ್ಚ ಯಜ್ಞಾಶ್ಚ ಮೂರ್ತಿಮಂತೋ ಯುಧಾಂ ವರ |
ಪ್ರಜಾಪತಿಮುಪಾಸಂತೇ ಋಷಯಶ್ಚ ಮಹಾವ್ರತಾಃ |
ಯಜಂತೇ ಕ್ರತುಭಿರ್ದೇವಾಃ ತಥಾ ಶಕ್ರಪುರೋಗಮಾಃ ॥76॥
ಎಲೈ ಯುದ್ಧಮಾಡುವವಲ್ಲಿ ಶ್ರೇಷ್ಠನಾದವನೇ, ಅಲ್ಲಿ ದೇವತೆಗಳೂ ಶರೀರವನ್ನು ಧರಿಸಿದ ಯಜ್ಞಗಳೂ ಮಹಾವ್ರತರಾದ ಋಷಿಗಳೂ ಪ್ರಜಾಪತಿಯನ್ನು ಉಪಾಸನೆಮಾಡುತ್ತಾರೆ. ಹಾಗೆಯೇ ಇಂದ್ರನೇ ಮೊದಲಾದ ದೇವತೆಗಳು ಯಜ್ಞಗಳನ್ನು ಆಚರಿಸುತ್ತಾರೆ.
ತತಃ ಪುಣ್ಯತರಂ ನಾಸ್ತಿ ತ್ರಿಷು ಲೋಕೇಷು ಭಾರತ |
ಪ್ರಯಾಗೇ ಸರ್ವತೀರ್ಥಾನಿ ಸಂಭವಂತ್ಯಧಿಕಂ ಪ್ರಭೋ ॥77॥
ಎಲೈ ಭಾರತನೇ, ಪ್ರಯಾಗಕ್ಕಿಂತ ಪವಿತ್ರವಾದ ಕ್ಷೇತ್ರವು ಮೂರು ಲೋಕಗಳಲ್ಲಿ ಯಾವುದೂ ಇಲ್ಲ. ಪ್ರಭುವೇ ಪ್ರಯಾಗದಲ್ಲಿ ಸರ್ವತೀರ್ಥಗಳು ವಿಶೇಷವಾಗಿ ಸನ್ನಿಹಿತವಾಗಿರುತ್ತವೆ.
ಶ್ರವಣಾಚ್ಚ ಪ್ರಯಾಗಸ್ಯ ನಾಮಸಂಕೀರ್ತನಾದಪಿ |
ಮೃತ್ತಿಕಾಲಂಭನಾಚ್ಚಾಪಿ ನರಃ ಪಾಪಾತ್ ಪ್ರಮುಚ್ಯತೇ ॥78॥
ಪ್ರಯಾಗವೆಂಬ ಹೆಸರನ್ನು ಶ್ರವಣಮಾಡಿದರೂ ಅಥವಾ ಕೀರ್ತನೆಮಾಡಿದರೂ ಅಥವಾ ಪ್ರಯಾಗದ ಮೃತ್ತಿಕೆಯನ್ನು ಲೇಪಿಸಿಕೊಂಡರೂ ಮನುಷ್ಯನು ಪಾಪಗಳಿಂದ ವಿಮುಕ್ತನಾಗುತ್ತಾನೆ.
ತತ್ರಾಭಿಷೇಕಂ ಯಃ ಕುರ್ಯಾತ್ ಪ್ರಯಾಗೇ ಸಂಶಿತವ್ರತಃ |
ಪುಣ್ಯಂ ಫಲಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥79॥
ಒಳ್ಳೆಯ ವ್ರತವನ್ನು ಧರಿಸಿದ ಯಾವನು ಪ್ರಯಾಗದಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನು ರಾಜಸೂಯಾಶ್ವಮೇಧಗಳ ಪುಣ್ಯಫಲವನ್ನು ಪಡೆಯುತ್ತಾನೆ.
ಏಷಾ ಯಜನಭೂಮಿರ್ಹಿ ದೇವಾನಾಮಪಿ ಸತ್ಕೃತಾ |
ಅತ್ರ ದತ್ತಂ ಸುಸೂಕ್ಷ್ಮಂ ಚ ಮಹದ್ ಭವತಿ ಭಾರತ ॥80॥
ಇದು ದೇವತೆಗಳಿಂದ ಸಮ್ಮಾನಿಸಲ್ಪಟ್ಟ ಯಜ್ಞಭೂಮಿ. ಎಲೈ ಭಾರತನೇ ಇಲ್ಲಿ ದಾನಮಾಡಿದ ಅಲ್ಪವೂ ಸಹ ಬಹಳ ದೊಡ್ಡದಾಗುತ್ತದೆ.
ನ ವೇದವಚನಾತ್ತಾತ ನ ಲೋಕವಚನಾದಪಿ |
ಮತಿರುತ್ಕ್ರಮಣೀಯಾ ತೇ ಪ್ರಯಾಗಗಮನಂ ಪ್ರತಿ ॥81॥
ಎಲೈ ಪ್ರೀತಿಪಾತ್ರನೇ, ಯಾವುದೇ ವೇದವಾಕ್ಯದಿಂದ ಅಥವಾ ಯಾವುದೇ ಲೋಕವಾಕ್ಯದಿಂದ ಪ್ರಭಾವಿತನಾಗಿ ಪ್ರಯಾಗಕ್ಕೆ ಹೋಗಬೇಕೆಂಬ ನಿನ್ನ ಬುದ್ಧಿಯನ್ನು ಕಳೆದುಕೊಳ್ಳಬಾರದು.

ದಶತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾಽಪರಾಃ |
ಯೇಷಾಂ ಸಾನ್ನಿಧ್ಯಮತ್ರೈವ ವರ್ಣಿತಂ ಕುರುನಂದನ ॥82॥
ಎಲೈ ಕುರುನಂದನನೇ, ಈ ಪ್ರಯಾಗದಲ್ಲಿ ಹತ್ತು ಸಹಸ್ರತೀರ್ಥಗಳು ಹಾಗೆಯೇ ಬೇರೆ ಅರವತ್ತುಸತಕೋಟಿ ತೀರ್ಥಗಳು ಸನ್ನಿಹಿತವಾಗಿರುತ್ತವೆಯೆಂದು ಹೇಳಲ್ಪಟ್ಟಿದೆ.
ಚಾತುರ್ವೇದ್ಯೇ ಚ ಯತ್ ಪುಣ್ಯಂ ಸತ್ಯವಾದಿಷು ಚೈವ ಯತ್ |
ಸ್ನಾತ ಏವ ತದಾಪ್ನೋತಿ ಗಂಗಾಯಮುನಸಂಗಮೇ ॥83॥
ಚರ್ತುವೇದವನ್ನು ಅಧ್ಯಯನ ಮಾಡುವವನಿಗೆ ಯಾವ ಪುಣ್ಯವೋ ಸತ್ಯವಚನನಾದವನಿಗೆ ಯಾವ ಪುಣ್ಯವೋ ಅಂತಹ ಪುಣ್ಯವು ಗಂಗಾಯಮುನಾ ಸಂಗಮದಲ್ಲಿ ಕೇವಲ ಸ್ನಾನವನ್ನು ಮಾಡುವುದರಿಂದ ಉಂಟಾಗುತ್ತದೆ.
ತತ್ರ ಭೋಗವತೀ ನಾಮ ವಾಸುಕೇಸ್ತೀರ್ಥಮುತ್ತಮಮ್ |
ತತ್ರಾಭಿಷೇಕಂ ಯಃ ಕುರ್ಯಾತ್ ಸೋಽಶ್ವಮೇಧಫಲಂ ಲಭೇತ್ ॥
ಅಲ್ಲಿ ಭೋಗವತಿಯೆಂಬ ವಾಸುಕಿಯ ಶ್ರೇಷ್ಠವಾದ ತೀರ್ಥವಿದೆ ಅಲ್ಲಿ ಸ್ನಾನವನ್ನು ಮಾಡುವವನು ಅಶ್ವಮೇಧ ಫಲವನ್ನು ಪಡೆಯುತ್ತಾನೆ.
ತತ್ರ ಹಂಸಪ್ರಪತನಂ ತೀರ್ಥಂ ತ್ರೈಲೋಕ್ಯವಿಶ್ರುತಮ್ |
ದಶಾಶ್ವಮೇಧಿಕಂ ಚೈವ ಗಂಗಾಯಾಂ ಕುರುನಂದನ ॥85॥
ಎಲೈ ಕುರುನಂದನನೇ , ಅಲ್ಲಿ ಮೂರುಲೋಕದಲ್ಲಿಯೂ ಪ್ರಸಿದ್ಧವಾದ ಹಂಸ ಪ್ರಪತನವೆಂಬ ತೀರ್ಥವೂ ಮತ್ತು ಗಂಗೆಯಲ್ಲಿ ದಶಾಶ್ವಮೇಧಿಕವೆಂಬ ತೀರ್ಥವೂ ಇವೆ.
ಯತ್ರ ಗಂಗಾ ಮಹಾರಾಜ ಸ ದೇಶಸ್ತತ್ ತಪೋವನಮ್ |
ಸಿದ್ಧಿಕ್ಷೇತ್ರಂ ಚ ತಜ್ಜ್ಞೇಯಂ ಗಂಗಾತೀರಸಮಾಶ್ರಿತಮ್ ॥86॥
ಎಲೈ ಮಹಾರಾಜನೇ, ಎಲ್ಲಿ ಗಂಗೆಯಿದೆಯೋ ಅದೇ ಪವಿತ್ರವಾದ ದೇಶ. ಅದೇ ತಪೋವನ. ಗಂಗಾತೀರ ಸಂಬದ್ಧವಾದ ದೇಶವನ್ನು ಸಿದ್ಧಿಕ್ಷೇತ್ರವೆಂದು ತಿಳಿಯಬೇಕು.
ಇದಂ ಸತ್ಯಂ ದ್ವಿಜಾತೀನಾಂ ಸಾಧೂನಾಮಾತ್ಮನಶ್ಚ ಯತ್ |
ಸುಹೃದಾಂ ಚ ಸಮೇತಾನಾಂ ಶಿಷ್ಯಸ್ಯಾನುಗತಸ್ಯ ಚ ॥87॥
ಈ ತೀರ್ಥಕ್ಷೇತ್ರಮಹಿಮೆಯು ಬ್ರಾಹ್ಮಣರಿಗೂ ಸಜ್ಜನರಿಗೂ ನಿನಗೂ ಇಲ್ಲಿ ಸೇರಿರುವ ಎಲ್ಲಾ ಹಿತೈಷಿಗಳಿಗೂ ಶಿಷ್ಯರಿಗೂ ಮತ್ತು ಅನುಯಾಯಿಗಳಿಗೂ ಪರಮಮಂಗಳವಾದುದು.
ಇದಂ ಧರ್ಮ್ಯಮಿದಂ ಪುಣ್ಯಮ್ ಇದಂ ಮೇಧ್ಯಮಿದಂ ಸುಖಮ್ |
ಇದಂ ಸ್ವರ್ಗಮಿದಂ ರಮ್ಯಂ ಇದಂ ಪಾವನಮುತ್ತಮಮ್ ॥88॥
ಇದು ಧರ್ಮಸಾಧನವಾದುದು. ಪುಣ್ಯಪ್ರದವಾದುದು. ಸ್ವೀಕಾರಾರ್ಹವಾದುದು. ಸುಖಪ್ರದವಾದುದು. ಇದು ಸ್ವರ್ಗಪ್ರದವಾದುದು ಮನೋಹರವಾದುದು ಪವಿತ್ರವಾದುದು ಮತ್ತು ಶ್ರೇಷ್ಠವಾದುದು.
ಮಹರ್ಷೀಣಾಮಿದಂ ಪುಣ್ಯಂ ಸರ್ವಪಾಪಪ್ರಮೋಚನಮ್ |
ಅಧೀತ್ಯ ದ್ವಿಜಮಧ್ಯೇ ಚ ನಿರ್ಮಲತ್ವಮವಾಪ್ನುಯಾತ್ ॥89॥
ಇದು ಮಹರ್ಷಿಗಳಿಗೂ ಪುಣ್ಯಪ್ರದವಾದುದು. ಸಮಸ್ತಪಾಪಗಳ ಪರಿಹಾರಕವಾದುದು. ಬ್ರಾಹ್ಮಣರ ಮಧ್ಯದಲ್ಲಿ ಈ ಮಹಿಮೆಗಳ ಅಧ್ಯಯನವನ್ನು ಮಾಡುವವನು ತನ್ನ ದೋಷಗಳನ್ನು ನಾಶಮಾಡುತ್ತಾನೆ.
ಯಶ್ಚೇದಂ ಶೃಣುಯಾನ್ನಿತ್ಯಂ ತೀರ್ಥಪುಣ್ಯಂ ಸದಾ ಶುಚಿಃ |
ಜಾತೀಶ್ಚ ಬಹ್ವೀಃ ಸ್ಮರತೇ ನಾಕಪೃಷ್ಠೇ ಚ ಮೋದತೇ ॥90॥
ಯಾವನು ಶುಚಿರ್ಭೂತನಾಗಿ ಈ ತೀರ್ಥಕ್ಷೇತ್ರಗಳನ್ನು ಮತ್ತು ಅವುಗಳಿಂದ ಉಂಟಾಗುವ ಪುಣ್ಯಗಳನ್ನು ನಿತ್ಯವೂ ಶ್ರವಣಮಾಡುವನೋ ಅವನಿಗೆ ಹಿಂದಿನ ಅನೇಕ ಜನ್ಮಗಳ ಸ್ಮರಣೆ ಉಂಟಾಗುತ್ತದೆ. ಅನಂತರ ಸ್ವರ್ಗದಲ್ಲಿ ಸುಖಪಡುತ್ತಾನೆ.
ಅನ್ಯಾನ್ಯಪಿ ಚ ತೀರ್ಥಾನಿ ಕೀರ್ತಿತಾನ್ಯಗಮಾನಿ ಚ |
ಮನಸಾ ತಾನಿ ಗಚ್ಛೇತ ಸರ್ವತೀರ್ಥನಿಷೇವಯಾ ॥91॥
ಇನ್ನು ಹೋಗಲು ಅಸಾಧ್ಯವಾದ ತೀರ್ಥಗಳು ಹೇಳಲ್ಪಡುತ್ತವೆ. ಎಲ್ಲ ತೀರ್ಥಗಳನ್ನು ಸೇವಿಸಲು ಇಚ್ಛಿಸುವ ಮನುಷ್ಯನು ಅವುಗಳಿಗೆ ಮನಸ್ಸಿನಿಂದಲೇ ಸೇವಿಸಬೇಕು.
ಏತಾನಿ ವಸುಭಿಃ ಸಾಧ್ಯೈರಾದಿತ್ಯೈರ್ಮರುದಶ್ವಿಭಿಃ |
ಋಷಿಭಿರ್ದೇವಕಲ್ಪೈಶ್ಚ ಸ್ನಾತಾನಿ ಸುಕೃತೈಷಿಭಿಃ ॥92॥
ನಾನು ಹೇಳಿದ ಈ ತೀರ್ಥಗಳಲ್ಲಿ ಪುಣ್ಯವನ್ನು ಬಯಸುವ ವಸುಗಳು ಸಾಧ್ಯರು ಆದಿತ್ಯರು ಮರುತ್‌ಗಳು ಅಶ್ವಿನಿಗಳು ದೇವಸದೃಶರಾದ ಋಷಿಗಳು ಸ್ನಾನವನ್ನು ಮಾಡಿದ್ದಾರೆ.
ಏವಂ ತ್ವಮಪಿ ಕೌರವ್ಯ ವಿಧಿನಾಽನೇನ ಸುವ್ರತ |
ವ್ರಜ ತೀರ್ಥಾನಿ ನಿಯತಃ ಪುಣ್ಯಂ ಪುಣ್ಯೇನ ವರ್ಧತೇ ॥93॥
ಎಲೈ ಸುವ್ರತನಾದ ಕುರುಕುಲೋತ್ಪನ್ನನಾದ ಭೀಷ್ಮನೇ, ನೀನು ಸಹ ಈ ಪ್ರಕಾರದಿಂದ ನಿಯಮವನ್ನು ಧರಿಸಿ ತೀರ್ಥಯಾತ್ರೆಯನ್ನು ಮಾಡು. ಪುಣ್ಯವು ಪುಣ್ಯದಿಂದ ಹೆಚ್ಚುತ್ತದೆ.
ಭಾಷಿತೈಃ ಕಾರಣೈಃ ಪೂರ್ವಮಾಸ್ತಿಕ್ಯಾಚ್ಛ್ರುತಿದರ್ಶನಾತ್ |
ಪ್ರಾಪ್ಯಂತೇ ತಾನಿ ತೀರ್ಥಾನಿ ಸದ್ಭಿಸ್ತತ್ವಾರ್ಥದರ್ಶಿಭಿಃ |

ಸದ್ಭಿಃ ಶಾಸ್ತ್ರಾರ್ಥತತ್ವಜ್ಞೈಃ ಬ್ರಾಹ್ಮಣೈಃ ಸಹ ಗಮ್ಯತಾಮ್ ॥94॥
ನಾನು ಹಿಂದೆ ಹೇಳಿದ ಕಾರಣಗಳಿಂದ ಆಸ್ತಿಕ್ಯ ಬುದ್ಧಿಯಿಂದಲೂ ಶ್ರುತಿಗಳ ಬಲದಿಂದಲೂ ತತ್ವಾರ್ಥದರ್ಶಿಗಳಿಂದ ಆ ತೀರ್ಥಗಳು ಸೇವಿಸಲ್ಪಡುತ್ತವೆ. ಶಾಸ್ತ್ರಾರ್ಥತತ್ವವನ್ನು ತಿಳಿದ ಶ್ರೇಷ್ಠ ಬ್ರಾಹ್ಮಣರ ಜೊತೆಯಲ್ಲಿ ತೀರ್ಥಯಾತ್ರೆಯನ್ನು ಮಾಡು.
ನಾವ್ರತೋ ನಾಕೃತಾತ್ಮಾ ಚ ನಾಶುಚಿರ್ನ ಚ ತಸ್ಕರಃ |
ಸ್ನಾತಿ ತೀರ್ಥೇಷು ಕೌರವ್ಯ ನ ಚ ವಕ್ರಮತಿರ್ನರಃ ॥95॥
ಎಲೈ ಕೌರವ್ಯನೇ, ವ್ರತವನ್ನು ಧರಿಸದವನು ಮನಸ್ಸನ್ನು ನಿಯಂತ್ರಿಸದವನು ಅಶುಚಿಯಾದವನು ತಸ್ಕರನಾದವನು ಮತ್ತು ವಕ್ರಬುದ್ಧಿಯುಳ್ಳ ನರನು ತೀರ್ಥಗಳಲ್ಲಿ ಸ್ನಾನಮಾಡುವುದಿಲ್ಲ.
ತ್ವಯಾ ತು ಸತ್ಯವೃತ್ತೇನ ನಿತ್ಯಂ ಧರ್ಮಾರ್ಥದರ್ಶಿನಾ |
ಪಿತರಸ್ತಾರಿತಾಃ ಸರ್ವೇ ಸರ್ವೇ ಚ ಪ್ರಪಿತಾಮಹಾಃ ॥96॥
ನಿತ್ಯವೂ ಧರ್ಮಾರ್ಥದರ್ಶಿಯಾದ ನೀನು ನಿನ್ನ ಸತ್ಯವಾದ ನಡತೆಯಿಂದ ಎಲ್ಲಾ ಪಿತೃಗಳನ್ನು ಎಲ್ಲಾ ಪಿತಾಮಹರನ್ನು ಮತ್ತು ಪ್ರಪಿತಾಮಹರನ್ನು ದಾಟಿಸಿದ್ದೀಯೆ.
ಪಿತಾಮಹಪುರೋಗಾಶ್ಚ ದೇವಾಃ ಸರ್ಷಿಗಣಾ ನೃಪ |
ತವ ಧರ್ಮೇಣ ಧರ್ಮಜ್ಞ ನಿತ್ಯಮೇವಾಭಿತೋಷಿತಾಃ ॥97॥
ಎಲೈ ಧರ್ಮಜ್ಞನೇ, ಎಲೈ ರಾಜನೇ, ನಿನ್ನ ಧರ್ಮಾಚರಣೆಯಿಂದ ಬ್ರಹ್ಮದೇವರೇ ಮೊದಲಾದ ದೇವತೆಗಳು ಮತ್ತು ಋಷಿಗಣಗಳು ನಿನ್ನ ಮೇಲೆ ಬಹಳ ಸಂತೋಷಗೊಂಡಿದ್ದಾರೆ.
ಅವಾಪ್ಸ್ಯಸಿ ಚ ಲೋಕಾಂಸ್ತ್ವಂ ವಸೂನಾಂ ವಾಸವೋಪಮ |
ಕೀರ್ತಿಂ ಚ ಮಹತೀಂ ಭೀಷ್ಮ ಪ್ರಾಪ್ಸ್ಯಸೇ ಭುವಿ ಶಾಶ್ವತೀಮ್ ॥98॥
ಎಲೈ ಇಂದ್ರನಿಗೆ ಸದೃಶನಾದವನೇ, ಈ ತೀರ್ಥಯಾತ್ರೆಯನ್ನು ಮಾಡಿ ನೀನು ವಸುಲೋಕವನ್ನು ಪಡಿಯುತ್ತೀಯೇ. ಮತ್ತು ಎಲೈ ಭೀಷ್ಮನೇ, ಭೂಮಿಯಲ್ಲಿ ಶಾಶ್ವತವಾದ ಅಪಾರವಾದ ಕೀರ್ತಿಯನ್ನು ಪಡೆಯುವಿ.
ನಾರದಃ
ಏವಮುಕತ್ವಽಭ್ಯನುಜ್ಞಾತಃ ಪುಲಸ್ತ್ಯೋ ಭಗವಾನೃಷಿಃ |
ಪ್ರೀತಃ ಪ್ರೀತೇನ ಮನಸಾ ತತ್ರೈವಾಂತರಧೀಯತ ॥99॥
ಹೀಗೆ ಹೇಳಿ ಭೀಷ್ಮರ ಅನುಮತಿಯನ್ನು ಪಡೆದು ಪೂಜ್ಯರಾದ ಪುಲಸ್ತ್ಯ ಋಷಿಗಳು ಸಂತೋಷಗೊಂಡು ಸಂತುಷ್ಟವಾದ ಮನಸ್ಸಿನಿಂದ ಅಲ್ಲಿಯೇ ಅದೃಶ್ಯರಾದರು.
ಭೀಷ್ಮಸ್ತು ಕುರುಶಾರ್ದೂಲ ಶಾಸ್ತ್ರತತ್ತತ್ವರ್ಥದರ್ಶನಾತ್ |
ಪುಲಸ್ತ್ಯವಚನಾಚ್ಚೈವ ಪೃಥಿವೀಮನುಚಕ್ರಮೇ ॥100॥
ಕುರುಶಾರ್ದೂಲನಾದ ಎಲೈ ಧರ್ಮರಾಜನೇ, ಭೀಷ್ಮರಾದರೋ ಶಾಸ್ತ್ರತತ್ವಾರ್ಥವನ್ನು ತಿಳಿದವರಾಗಿ ಅದರ ಬಲದಿಂದಲೂ ಮತ್ತು ಪುಲಸ್ತ್ಯರ ವಚನ ಬಲದಿಂದಲೂ ಭೂಮಿಯಲ್ಲಿ ತೀರ್ಥಯಾತ್ರೆಯನ್ನು ಮಾಡಿದರು.
ಅನೇನ ವಿಧಿನಾ ಯಸ್ತು ಪೃಥಿವೀಂ ಸಂಚರಿಷ್ಯತಿ |
ಅಶ್ವಮೇಧಶತಸ್ಯಾಗ್ರಂ ಫಲಂ ಪ್ರೇತ್ಯ ಸ ಭೋಕ್ಷ್ಯತೇ ॥101॥
ಈ ಕ್ರಮದಿಂದ ಯಾವನು ತೀರ್ಥಯಾತ್ರೆಯನ್ನು ಮಾಡುವನೋ ಅವನು ನೂರು ಅಶ್ವಮೇಧಯಾಗಗಳಿಗಿಂತ ಹೆಚ್ಚಿನ ಪುಣ್ಯಗಳನ್ನು ಪಡೆದು ಮರಣಾನಂತರದಲ್ಲಿ ಸುಖವನ್ನು ಅನುಭವಿಸುತ್ತಾನೆ.
ಅತಶ್ಚಾಷ್ಟಗುಣಂ ಪಾರ್ಥ ಪ್ರಾಪ್ಸ್ಯಸೇ ಧರ್ಮಮುತ್ತಮಮ್ |
ಭೀಷ್ಮಃ ಕುರೂಣಾಂ ಪ್ರವರೋ ಯಥಾ ಪೂರ್ವಮವಾಪ್ತವಾನ್ |
ಋಷೀನ್ ನೇತಾಸಿ ಯಸ್ಮಾತ್ ತ್ವಮತಶ್ಚಾಷ್ಟಗುಣಂ ಫಲಮ್ ॥102॥
ಎಲೈ ಪಾರ್ಥನೇ, ಕುರುಶ್ರೇಷ್ಠನಾದ ಭೀಷ್ಮನು ಎಂತಹ ಪುಣ್ಯವನ್ನು ಹಿಂದೆ ಪಡೆದನೋ ಅದಕ್ಕಿಂತ ಎಂಟುಪಟ್ಟು ಅಧಿಕವಾದ ಶ್ರೇಷ್ಠವಾದ ಪುಣ್ಯವನ್ನು ನೀನು ಪಡೆಯುವಿ. ನೀನು ಜೊತೆಯಲ್ಲಿ ಋಷಿಗಳನ್ನು ಕರೆದುಕೊಂಡು ಹೋಗುವುದರಿಂದ ನಿನ್ನ ಪುಣ್ಯವು ಎಂಟುಪಟ್ಟು ಅಧಿಕವಾಗಿರುತ್ತದೆ.
ರಕ್ಷೋಗಣವಿಕೀರ್ಣಾನಿ ತೀರ್ಥಾನ್ಯೇತಾನಿ ಭಾರತ |
ಅಗಮ್ಯಾನಿ ಮನುಷ್ಯೇಂದ್ರೈಃ ತ್ವಾಮೃತೇ ಕುರುನಂದನ ॥103॥
ಎಲೈ ಕುರುನಂದನನೇ, ಎಲೈ ಭಾರತನೇ, ಈ ತೀರ್ಥಗಳೆಲ್ಲವೂ ರಾಕ್ಷಸರಿಂದ ತುಂಬಿರುತ್ತವೆ. ನಿನ್ನನ್ನು ಬಿಟ್ಟು ಶ್ರೇಷ್ಠರಾದ ಮನುಷ್ಯರೂ ಕೂಡ ಈ ತೀರ್ಥಗಳಿಗೆ ಹೋಗಲಾರರು.
ಇದಂ ದೇವರ್ಷಿಚರಿತಂ ಸರ್ವತೀರ್ಥಾನುಸಂಚಿತಮ್ |
ಯಃ ಪಠೇತ್ ಕಾಲ್ಯಮುತ್ಥಾಯ ಸರ್ವಪಾಪೈಃ ಪ್ರಮುಚ್ಯತೇ ॥104॥
ಎಲ್ಲ ತೀರ್ಥಗಳಿಗೆ ಸಂಬಂಧಿಸಿದ ಈ ದೇವರ್ಷಿಚರಿತೆಯನ್ನು ಪ್ರಾತಃಕಾಲದಲ್ಲಿ ಎದ್ದು ಯಾವನು ಪಠಿಸುತ್ತಾನೆಯೋ ಅವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಋಷಿಮುಖ್ಯಾಃ ಸದಾ ಯತ್ರ ವಾಲ್ಮೀಕಿಸ್ತ್ವಥ ಕಾಶ್ಯಪಃ |
ಆತ್ರೇಯಸ್ತ್ವಥ ಕೌಂಡಿನ್ಯೋ ವಿಶ್ವಾಮಿತ್ರೋಽಥ ಗೌತಮಃ ॥105॥
ಅಸಿತೋ ದೇವಲಶ್ಚೈವ ಮಾರ್ಕಂಡೇಯೋಽಥ ಗಾಲವಃ |
ವಸಿಷ್ಠಶ್ಚ ಮಹಾತೇಜಾ ಮುನಿರೌದ್ದಾಲಕಸ್ತಥಾ ॥106॥

ಶೌನಕಃ ಸಹ ಪುತ್ರೇಣ ವ್ಯಾಸಶ್ಚ ಜಪತಾಂ ವರಃ |
ಭಾರದ್ವಾಜೋ ಮುನಿಶ್ರೇಷ್ಠೋ ದುರ್ವಾಸಾಶ್ಚ ಮಹಾತಪಾಃ ॥107॥
ಏತೇ ಋಷಿವರಾಃ ಸರ್ವೇ ತ್ವತ್ಪ್ರತೀಕ್ಷಾಸ್ತಪೋಧನಾಃ |
ಏಭಿಃ ಸಹ ಮಹಾರಾಜ ತೀರ್ಥಾನ್ಯೇತಾನ್ಯನುವ್ರಜ ॥108॥
ಈ ಎಲ್ಲ ಋಷಿಶ್ರೇಷ್ಠರು ಮತ್ತು ವಾಲ್ಮೀಕಿ ಕಾಶ್ಯಪ ಆತ್ರೇಯ ಕೌಂಡಿನ್ಯ ವಿಶ್ವಾಮಿತ್ರ ಗೌತಮ ಅಸಿತ ದೇವಲ ಮಾರ್ಕಂಡೇಯ ಗಾಲವ ಮಹಾತೇಜಸ್ವಿಯಾದ ವಸಿಷ್ಠ ಔದ್ದಾಲಕ ಋಷಿ ಶೌನಕ ಪುತ್ರಸಹಿತರಾದ ತಪೋನಿಧಿಗಳಾದ ಜಪನಿಧಿಗಳಾದ ವ್ಯಾಸರು ಮುನಿಶ್ರೇಷ್ಠರಾದ ಭಾರದ್ವಾಜ ಮಹಾತಪಸ್ವಿಗಳಾದ ದೂರ್ವಾಸ ಈ ಎಲ್ಲ ತಪೋಧನರಾದ ಋಷಿಶ್ರೇಷ್ಠರು ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ. ಮಹಾರಾಜನೇ ಇವರ ಜೊತೆಯಲ್ಲಿ ನೀನು ಈ ತೀರ್ಥಗಳಿಗೆ ಹೋಗು.
ಏಷ ವೈ ಲೋಮಶೋ ನಾಮ ದೇವರ್ಷಿರಮಿತದ್ಯುತಿಃ |
ಸಮೇಷ್ಯತಿ ಮಹಾರಾಜ ತೇನ ಸಾರ್ಧಮನುವ್ರಜ ॥109॥
ಎಲೈ ಮಹಾರಾಜನೇ, ಮಹಾಕಾಂತಿಯುಳ್ಳ ದೇವರ್ಷಿಗಳಾದ ಈ ಲೋಮಶ ಋಷಿಗಳು ಸದ್ಯದಲ್ಲಿಯೇ ನಿನ್ನ ಬಳಿಗೆ ಬರುತ್ತಾರೆ. ಅವರ ಜೊತೆಯಲ್ಲಿ ತೀರ್ಥಯಾತ್ರೆಯನ್ನು ಮಾಡು.
ಮಯಾ ಚ ಸಹ ಧರ್ಮಜ್ಞ ತೀರ್ಥಾನ್ಯೇತಾನ್ಯನುವ್ರಜ |
ಪ್ರಾಪ್ಸ್ಯಸೇ ಮಹತೀಂ ಸಿದ್ಧಿಂ ಯಥಾ ರಾಜಾ ಮಹಾಭಿಷಕ್ ॥110॥
ಯಥಾ ಯಯಾತಿರ್ಧರ್ಮಾತ್ಮಾ ಯಥಾ ರಾಜಾ ಪುರೂರವಾಃ |
ತಥಾ ತ್ವಂ ಕುರುಶಾರ್ದೂಲ ಸ್ವೇನ ಧರ್ಮೇಣ ಶೋಭಸೇ ॥111॥
ಎಲೈ ಧರ್ಮಜ್ಞನೇ, ಈ ತೀರ್ಥಯಾತ್ರೆಯನ್ನುಮಾಡು. ಮಹಾಭಿಷಕ್ ರಾಜನು ಪಡೆದಂತೆ ದೊಡ್ಡ ಸಿದ್ಧಿಯನ್ನು ಪಡೆಯುವಿ. ಎಲೈ ಕುರುಶಾರ್ದೂಲನೇ, ಧರ್ಮಾತ್ಮನಾದ ಯಯಾತಿಯಂತೆ ಪುರೂರವರಾಜನಂತೆ ನೀನು ನಿನ್ನ ಧರ್ಮದಿಂದ ಶೋಭಿಸುತ್ತೀಯೆ.
ಯಥಾ ಭಗೀರಥೋ ರಾಜಾ ಯಥಾ ರಾಮಶ್ಚ ವಿಶ್ರುತಃ |
ತಥಾ ತ್ವಂ ಸರ್ವರಾಜಭ್ಯೋ ಭ್ರಾಜಸೇ ರಶ್ಮಿಮಾನಿವ ॥112॥
ಭಗೀರಥರಾಜನಂತೆ ಪ್ರಖ್ಯಾತನಾದ ರಾಮನಂತೆ ನೀನು ಎಲ್ಲ ರಾಜರ ಮೇಲೆ ಸೂರ್ಯನಂತೆ ಶೋಭಿಸುತ್ತೀಯೆ.
ಯಥಾ ಮನುರ್ಯಥೇಕ್ಷ್ವಾಕುರ್ಯಥಾ ಪೂರುರ್ಮಹಾಯಶಾಃ|
ಯಥಾ ವೈನ್ಯೋ ಮಹಾತೇಜಾಃ ತಥಾ ತ್ವಮಪಿ ವಿಶ್ರುತಃ ॥113॥
ಮನುವಿನಂತೆ ಇಕ್ಷ್ವಾಕುವಿನಂತೆ ಮಹಾಕೀರ್ತಿಶಾಲಿಯಾದ ಪೂರುವಿನಂತೆ ಮಹಾತೇಜಸ್ವಿಯಾದ ಪೃಥುಚಕ್ರವರ್ತಿಯಂತೆ ನೀನೂ ಸಹ ಪ್ರಖ್ಯಾತನಾಗುತ್ತೀಯೆ.
ಯಥಾ ಚ ವೃತ್ರಹಾ ಸರ್ವಾನ್ ಸಪತ್ನಾನದಹತ್ ಪುರಾ |
ತಥಾ ಶತ್ರುಕ್ಷಯಂ ಕೃತ್ವಾ ಪ್ರಜಾಸ್ತ್ವಂ ಪಾಲಯಿಷ್ಯಸಿ ॥114॥
ಹೇಗೆ ಹಿಂದೆ ಇಂದ್ರನು ಎಲ್ಲಾ ಶತ್ರುಗಳನ್ನೂ ದಹಿಸಿದನೋ ಅದರಂತೆ ನೀನೂ ಸಹ ಶತ್ರುಗಳನ್ನು ನಾಶಮಾಡಿ ಪ್ರಜೆಗಳನ್ನು ಪಾಲಿಸುವಿ.
ಸ್ವಧರ್ಮವಿಜಿತಾಮುರ್ವೀಂ ಪ್ರಾಪ್ಯ ರಾಜೀವಲೋಚನ |
ಖ್ಯಾತಿಂ ಪ್ರಾಪ್ಸ್ಯಸಿ ಧರ್ಮೇಣ ಕಾರ್ತವೀರ್ಯಾರ್ಜುನೋ ಯಥಾ ॥
ಎಲೈ ರಾಜೀವಲೋಚನನೇ, ನೀನು ಧರ್ಮದಿಂದಲೇ ಭೂಮಿಯನ್ನು ಗೆದ್ದು ಅದನ್ನು ಪಡೆದು ಕಾರ್ತವೀರ್ಯಾರ್ಜುನನಂತೆ ನಿನ್ನ ಧರ್ಮದ ನಿಮಿತ್ತದಿಂದಲೇ ಕೀರ್ತಿಯನ್ನು ಹೊಂದುವಿ.
ವೈಶಂಪಾಯನಃ
ಏವಮಾಶ್ವಾಸ್ಯ ರಾಜಾನಂ ನಾರದೋ ಭಗವಾನೃಷಿಃ |
ಅನುಜ್ಞಾಪ್ಯ ಮಹಾರಾಜ ತತ್ರೈವಾಂತರಧೀಯತ ॥116॥
ಎಲೈ ಜನಮೇಜಯ ಮಹಾರಾಜನೇ, ಪೂಜ್ಯರಾದ ನಾರದರು ಧರ್ಮರಾಜನನ್ನು ಹೀಗೆ ಸಮಾಧಾನಪಡಿಸಿ ಅವನ ಅನುಮತಿಯನ್ನು ಪಡೆದು ಅಲ್ಲಿಯೇ ಅದೃಶ್ಯರಾದರು.
ಯುಧಿಷ್ಠಿರೋಽಪಿ ಧರ್ಮಾತ್ಮಾ ತಮೇವಾರ್ಥಮಚಿಂತಯತ್ |
ತೀರ್ಥಯಾತ್ರಾಶ್ರಯಂ ಪುಣ್ಯಮ್ ಋಷೀಣಾಂ ಪ್ರತ್ಯವೇದಯತ್॥
ಧರ್ಮತ್ಮನಾದ ಯುಧಿಷ್ಠಿರನಾದರೂ ಅದೇ ಅರ್ಥವನ್ನು ಚಿಂತಿಸುತ್ತಾ ಸುತ್ತಲೂ ಇದ್ದ ಋಷಿಗಳಿಗೆ ತೀರ್ಥಯಾತ್ರೆಯಿಂದ ಉಂಟಾಗುವ ಪುಣ್ಯವನ್ನು ನಿವೇದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಶೀತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಭತ್ತನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೊಂದನೆಯ ಅಧ್ಯಾಯ
(ಅರ್ಜುನನಿಲ್ಲದೆ ಕಾಮ್ಯಕವನದಲ್ಲಿ ಇರಲು ತಮ್ಮ ಬೇಸರವನ್ನು ಸೂಚಿಸಿ ಬೇರೆವಾಸಸ್ಥಾನವನ್ನು ಸೂಚಿಸುವಂತೆ ಧೌಮ್ಯರಿಗೆ ಯುಧಿಷ್ಠಿರನ ಪ್ರಾರ್ಥನೆ.)
ವೈಶಂಪಾಯನಃ

ಭ್ರಾತೄಣಾಂ ಮತಮಾಜ್ಞಾಯ ನಾರದಸ್ಯ ಚ ಧೀಮತಃ |
ಪಿತಾಮಹಸಮಂ ಧೌಮ್ಯಂ ಪ್ರಾಹ ರಾಜಾ ಯುಧಿಷ್ಠಿರಃ ||1||
ರಾಜನಾದ ಯುಧಿಷ್ಠಿರನು ತನ್ನ ತಮ್ಮಂದಿರ ಅಭಿಪ್ರಾಯವನ್ನು ಮತ್ತು ಮೇಧಾವಿಗಳಾದ ನಾರದರ ಅಭಿಪ್ರಾಯವನ್ನು ತಿಳಿದು ಪಿತಾಮಹ ಸಮರಾದ ಧೌಮ್ಯರನ್ನು ಕುರಿತು ಮಾತನಾಡಿದನು.
ಮಯಾ ಸ ಪುರುಷವ್ಯಾಘ್ರೋ ಜಿಷ್ಣುಃ ಸತ್ಯಪರಾಕ್ರಮಃ |
ಅಸ್ತ್ರಹೇತೋರ್ಮಹಾಬಾಹುರಮಿತಾತ್ಮಾ ಪ್ರವಾಸಿತಃ ||2||
ನಾನು ಸತ್ಯಪರಾಕ್ರಮನಾದ ಮಹಾಬಾಹುವಾದ ಅಮಿತಾತ್ಮನಾದ ಪುರುಷವ್ಯಾಘ್ರನಾದ ಅರ್ಜುನನನ್ನು ಅಸ್ತ್ರವನ್ನು ಸಂಪಾದಿಸುವ ಸಲುವಾಗಿ ಕಳುಹಿಸಿದ್ದೇನೆ.
ಸ ಹಿ ವೀರೋಽನುರಕ್ತಶ್ಚ ಸಮರ್ಥಶ್ಚ ತಪೋಧನಃ |
ಕೃತೀ ಚ ಭೃಶಮತ್ಯರ್ಥಂ ವಾಸುದೇವ ಇವ ಪ್ರಭುಃ ||3||
ಅವನಾದರೂ ಪ್ರಭುವಾದ ವಾಸುದೇವನಂತೆ ವೀರನೂ ನಮ್ಮಲ್ಲಿ ಪ್ರೀತಿಯುಕ್ತನೂ ಸಮರ್ಥನೂ ತಪಸ್ವಿಯೂ ಮತ್ತು ಅತ್ಯಂತ ನಿಪುಣನೂ ಆಗಿದ್ದಾನೆ.
ಅಹಂ ಹ್ಯೇತಾವುಭೌ ಬ್ರಹ್ಮನ್ ಕೃಷ್ಣಾವರಿನಿಷೂದನೌ |
ಅಭಿಜಾನಾಮಿ ವಿಕ್ರಾಂತೌ ತಥಾ ವ್ಯಾಸಃ ಪರಂತಪೌ ||4||
ತ್ರಿಯುಗಂ ಪುಂಡರೀಕಾಕ್ಷೌ ವಾಸುದೇವಧನಂಜಯೌ |
ನಾರದೋಽಪಿ ತಥಾ ವೇದ ಯೋಽಪ್ಯಶಂಸತ್ ಸದಾ ಮಮ ||5||
ಎಲೈ ಬ್ರಾಹ್ಮಣರೇ, ನಾನೂ ಮತ್ತು ಹಾಗೆಯೇ ವ್ಯಾಸರೂ ಸಹ ಪರಂತಪರಾದ ವಿಕ್ರಮಶಾಲಿಗಳಾದ ಶತ್ರು ಸಂಹಾರಕರಾದ ಈ ಇಬ್ಬರು ಕೃಷ್ಣರಾದ ವಾಸುದೇವ ಮತ್ತು ಧನಂಜಯರನ್ನು ಮೂರು ಯುಗಗಳಲ್ಲಿ ಅವತರಿಸುವ ಪುಂಡರೀಕಾಕ್ಷರೆಂದು ತಿಳಿದಿದ್ದೇನೆ. ನಾರದರೂ ಹಾಗೆಯೇ ತಿಳಿದಿದ್ದಾರೆ. ಅವರು ನನಗೆ ಯಾವಾಗಲೂ ಹೀಗೆ ಹೇಳುತ್ತಿದ್ದಾರೆ.
ತಥಾಽಹಮಭಿಜಾನಾಮಿ ನರನಾರಾಯಣಾವೃಷೀ |
ಶಕ್ತೋಽಯಮಿತ್ಯತೋ ಮತ್ವಾ ಮಯಾ ಸಂಪ್ರೇಷಿತೋಽರ್ಜುನಃ ||6||
ಅದರಂತೆ ನಾನು ಇವರಿಬ್ಬರು ನರನಾರಾಯಣ ಋಷಿಗಳು ಎಂದು ತಿಳಿದಿದ್ದೇನೆ. ಇವನು ಸಮರ್ಥನಾಗಿದ್ದಾನೆ ಎಂಬ ಕಾರಣದಿಂದಲೇ ನಾನು ಅರ್ಜುನನನ್ನು ಕಳುಹಿಸಿದೆ.
ಇಂದ್ರಾದನವಮಃ ಶಕ್ರಂ ಸುರಸೂನುಃ ಸುರಾಧಿಪಮ್ |
ದ್ರಷ್ಟುಮಸ್ತ್ರಾಣಿ ಚಾದಾತುಮಿಂದ್ರಾದಿತಿ ವಿವಾಸಿತಃ ||7||
ಇಂದ್ರನಿಗಿಂತ ಕಡಿಮೆಯಿಲ್ಲದ ದೇವಪುತ್ರನಾದ ಅರ್ಜುನನು ದೇವರಾಜನಾದ ಇಂದ್ರನನ್ನು ನೋಡಲು ಮತ್ತು ಅವನಿಂದ ಅಸ್ತ್ರಗಳನ್ನು ಸ್ವೀಕರಿಸಲು ಸಮರ್ಥನಾಗಿದ್ದಾನೆ ಎಂದು ತಿಳಿದು ನಾನು ಅವನನ್ನು ಕಳುಹಿಸಿದೆ.
ಭೀಷ್ಮದ್ರೋಣಾವತಿರಥೌ ಕೃಪೋ ದ್ರೌಣಿಶ್ಚ ದುರ್ಜಯಃ |
ಧೃತರಾಷ್ಟ್ರಸ್ಯ ಪುತ್ರೇಣ ಧೃತಾ ಯುಧಿ ಮಹಾಬಲಾಃ ||8||
ಯುದ್ಧದಲ್ಲಿ ಮಹಾಬಲರಾದ ಅತಿರಥರಾದ ಭೀಷ್ಮದ್ರೋಣರನ್ನು ಕೃಪರನ್ನು ದುರ್ಜಯರಾದ ಅಶ್ವತ್ಥಾಮರನ್ನು ದುರ್ಯೋಧನನು ತನ್ನ ವಶದಲ್ಲಿ ಇಟ್ಟುಕೊಂಡಿದ್ದಾನೆ.
ಸರ್ವೇ ವೇದವಿದಃ ಶೂರಾಃ ಸರ್ವೇಽಸ್ತ್ರಕುಶಲಾ ರಣೇ |
ಯೋದ್ಧುಕಾಮಾಶ್ಚ ಪಾರ್ಥೇನ ಸತತಂ ವೈ ಮಹಾರಥಾಃ ||9||
ಎಲ್ಲರೂ ವೇದವೇತ್ತರು ಶೂರರು ಯುದ್ಧದಲ್ಲಿ ಅಸ್ತ್ರಕುಶಲರು ಎಲ್ಲರೂ ಮಹಾರಥರೆಂದು ಪ್ರಸಿದ್ಧರಾದವರು. ಎಲ್ಲರೂ ದಣಿವನ್ನು ಮೀರಿದವರು. ಆ ಮಹಾರಥರೆಲ್ಲರೂ ಪಾರ್ಥನ ಜೊತೆಯಲ್ಲಿ ಯುದ್ಧವನ್ನು ಮಾಡಲು ಸತತವಾಗಿ ಬಯಸುವವರು.
ಯೋಽಸ್ತ್ರವೇಗಾನಿಲಬಲಃ ಶರಾರ್ಚಿಸ್ತಲನಿಃಸ್ವನಃ |
ರಜೋಧೂಮೋಽಸ್ತ್ರಸಂಪಾತೋ ಧಾರ್ತರಾಷ್ಟ್ರಾನಿಲೋದ್ಧತಃ ||10||
ನಿಸೃಷ್ಟ ಇವ ಕಾಲೇನ ಯುಗಾಂತಜ್ವಲನೋ ಮಹಾನ್ |
ಮಮ ಸೈನ್ಯಮಯಂ ಕಕ್ಷಂ ಪ್ರಧಕ್ಷ್ಯತಿ ಮಹಾಬಲಃ ||11||
ಅಸ್ತ್ರವೇಗವೆಂಬ ವಾಯುಬಲವುಳ್ಳ, ಬಾಣಗಳೆಂಬ ಕಿಡಿಗಳುಳ್ಳ, ತಲಸ್ವನಗಳಿಂದ ಕೂಡಿದ, ಧೂಳಿನ ಧೂಮದಿಂದ ಕೂಡಿದ, ದುರ್ಯೋಧನಾನಿಲದಿಂದ ಪ್ರೇರಿಸಲ್ಪಟ್ಟ, ಕಾಲನಾಮಕ ಪರಮಾತ್ಮನಿಂದಲೂ ಪ್ರೇರಿಸಲ್ಪಟ್ಟ ಯಾವ ಅಸ್ತ್ರ ಸಂಪಾತವು ಪ್ರಳಯಕಾಲದ ಮಹಾಗ್ನಿಯಂತೆ ಮಹಾಬಲವುಳ್ಳದ್ದಾಗಿ ನನ್ನ ಸೈನ್ಯವೆಂಬ ಹುಲ್ಲುಗಾವಲನ್ನು ಸುಡುವುದೋ,
ತಂ ಸ ಕೃಷ್ಣಾನಿಲೋದ್ಧೂತೋ ದಿವ್ಯಾಸ್ತ್ರಜಲದೋ ಮಹಾನ್ |
ಶ್ವೇತವಾಜಿಬಲಾಕಾಭೃದ್ ಗಾಂಡೀವೇಂದ್ರಾಯುಧೋಜ್ಜ್ವಲಃ ||12||
ಸತತಂ ಶರಧಾರಾಭಿಃ ಪ್ರದೀಪ್ತಂ ಕರ್ಣಪಾವಕಮ್ |
ಉದೀರ್ಣೋಽರ್ಜುನಮೇಘೋಽಯಂ ಶಮಯಿಷ್ಯತಿ ಸಂಯುಗೇ ||
ಅಂತಹ ಅಗ್ನಿಯನ್ನು ಕೃಷ್ಣನೆಂಬ ವಾಯುವಿನಿಂದ ಪ್ರೇರಿಸಲ್ಪಟ್ಟ, ದಿವ್ಯಾಸ್ತ್ರಗಳೆಂಬ ಮಹಾಮೋಡಗಳು ಶ್ವೇತಾಶ್ವಗಳೆಂಬ ಬಲಾಕಪಕ್ಷಿಗಳಿಂದ ಕೂಡಿದ ಗಾಂಡೀವವೆಂಬ ಇಂದ್ರಧನುಸ್ಸಿನಿಂದ ಪ್ರಕಾಶಿಸುವ ಪ್ರದೀಪ್ತವಾದ ಕರ್ಣನೆಂಬ ಆ ಅಗ್ನಿಯನ್ನು ಈ ಅಭಿವೃದ್ಧವಾದ ಅರ್ಜುನಮೇಘವು ಸತತವಾದ ತನ್ನ ಶರಧಾರೆಯಿಂದ ಯುದ್ಧದಲ್ಲಿ ಶಾಂತಗೊಳಿಸುವುದು.
ಸ ಸಾಕ್ಷಾದೇವ ಸರ್ವಾಣಿ ಶಕ್ರಾತ್ ಪರಪುರಂಜಯಃ |

ದಿವ್ಯಾನ್ಯಸ್ತ್ರಾಣಿ ಬೀಭತ್ಸುರ್ಯಥಾವತ್ ಪ್ರತಿಪದ್ಯತೇ ॥14॥
ಪರಪುರಂಜಯನಾದ ಆ ಅರ್ಜುನನು ಇಂದ್ರನಿಂದ ಎಲ್ಲ ದಿವ್ಯಾಸ್ತ್ರಗಳನ್ನು ಸಾಕ್ಷಾತ್ತಾಗಿಯೇ ಪಡೆಯುತ್ತಾನೆ.
ಅಲಂ ಸ ತೇಷಾಂ ಸರ್ವೇಷಾಮಿತಿ ಮೇ ಧೀಯತೇ ಮತಿಃ |
ನಾಸ್ತಿ ತ್ವತಿಕ್ರಿಯಾ ತಸ್ಯ ರಣೇಽರೀಣಾಂ ಪ್ರತಿಕ್ರಿಯಾ ॥15॥
ಅವರೆಲ್ಲರನ್ನೂ ಎದುರಿಸಲು ಅರ್ಜುನನೊಬ್ಬನೇ ಸಮರ್ಥನೆಂದು ನನ್ನ ಅಭಿಪ್ರಾಯ. ಯುದ್ಧದಲ್ಲಿ ಶತ್ರುಗಳ ಯಾವ ಪ್ರತಿಕ್ರಿಯೆಯೂ ಅರ್ಜುನನ ಕೌಶಲವನ್ನು ಮೀರುವುದಿಲ್ಲ.
ತೇ ವಯಂ ಪಾಂಡವಂ ಸರ್ವೇ ಗೃಹೀತಾಸ್ತ್ರಂ ಧನಂಜಯಮ್|
ದ್ರಷ್ಟಾರೋ ನ ಹಿ ಬೀಭತ್ಸುರ್ಭಾರಮುದ್ಯಮ್ಯ ಸೀದತಿ ॥16॥
ಅಂತಹ ನಾವೆಲ್ಲರೂ ಅಸ್ತ್ರಗಳನ್ನು ಸಂಪಾದಿಸಿದ ಪಾಂಡುಪುತ್ರನಾದ ಧನಂಜಯನನ್ನು ನೋಡಲು ಕಾತರರಾಗಿದ್ದೇವೆ. ಅರ್ಜುನನು ಭಾರವು ಒದಗಿದಾಗ ವಿಷಾದವನ್ನು ಪಡುವವನಲ್ಲ.
ವಯಂ ತು ತಮೃತೇ ವೀರಂ ವನೇಽಸ್ಮಿನ್ ದ್ವಿಪದಾಂ ವರಮ್ |
ಅವಧಾನಂ ನ ಗಚ್ಛಾಮಃ ಕಾಮ್ಯಕೇ ಸಹ ಕೃಷ್ಣಯಾ ॥17॥
ನಾವಾದರೋ ನರಶ್ರೇಷ್ಠನಾದ ವೀರನಾದ ಅರ್ಜುನನಿಲ್ಲದೆ ಈ ಕಾಮ್ಯಕವನದಲ್ಲಿ ದ್ರೌಪದಿಯನ್ನೂ ಸೇರಿಸಿ ಮನಸ್ಸಿಗೆ ಸಮಾಧಾನವನ್ನೇ ಪಡೆಯುತ್ತಿಲ್ಲ.
ಭವಾನನ್ಯದ್ವನಂ ಸಾಧು ಬಹ್ವನ್ನಂ ಜಲವಚ್ಛುಚಿ |
ಆಖ್ಯಾತು ರಮಣೀಯಂ ಚ ಸೇವಿತಂ ಪುಣ್ಯಕರ್ಮಭಿಃ ॥18॥
ತಾವು ಬಹಳ ಅನ್ನ ಮತ್ತು ನೀರುಗಳಿರುವ ಪವಿತ್ರವಾದ ಪುಣ್ಯಕರ್ಮವುಳ್ಳ ಸಜ್ಜನರಿಂದ ಸೇವಿತವಾದ ಇನ್ನೊಂದು ರಮಣೀಯವಾದ ವನವನ್ನು ಹೇಳಬೇಕು.
ಯತ್ರ ಕಂಚಿದ್ವಯಂ ಕಾಲಂ ವಸಂತಃ ಸತ್ಯವಿಕ್ರಮಮ್ |
ಪ್ರತೀಕ್ಷಾಮೋಽರ್ಜುನಂ ವೀರಂ ವರ್ಷಕಾಮಾ ಇವಾಂಬುದಮ್ ॥19॥
ಬೀಜವನ್ನು ಬಿತ್ತುವವನು ಮಳೆಯನ್ನು ನಿರೀಕ್ಷಿಸುವಂತೆ ನಾವು ಸತ್ಯವಿಕ್ರಮನಾದ ವೀರನಾದ ಅರ್ಜುನನನ್ನು ನಿರೀಕ್ಷಿಸುತ್ತಾ ಅಲ್ಲಿ ಸ್ವಲ್ಪ ಸಮಯ ವಾಸಮಾಡುತ್ತೇವೆ.
ವಿವಿಧಾನಾಶ್ರಮಾನ್ ಕಾಂಶ್ಚಿದ್ ದ್ವಿಜಾತಿಭ್ಯಃ ಪರಿಶ್ರುತಾನ್ |
ಸರಾಂಸಿ ಸರಿತಶ್ಚೈವ ರಮಣೀಯಾಂಶ್ಚ ಪರ್ವತಾನ್ ॥20॥
ಆಚಕ್ಷ್ವ ನ ಹಿ ಮೇ ಬ್ರಹ್ಮನ್ ರೋಚತೇ ತಮೃತೇಽರ್ಜುನಮ್ |
ವನೇಽಸ್ಮಿನ್ ಕಾಮ್ಯಕೇ ವಾಸೋ ಗಚ್ಛಾಮೋಽನ್ಯಾಂ ದಿಶಂ ಪ್ರತಿ ॥21॥
ಎಲೈ ಬ್ರಾಹ್ಮಣರೇ, ಬ್ರಾಹ್ಮಣರಿಂದ ಆಶ್ರಿತವಾದ ಕೆಲವು ಬೇರೆಬೇರೆ ಆಶ್ರಮಗಳನ್ನು ಸರೋವರಗಳನ್ನು ನದಿಗಳನ್ನು ರಮಣೀಯವಾದ ಪರ್ವತಗಳನ್ನು ತಿಳಿಸಿ. ಅರ್ಜುನನಿಲ್ಲದೆ ಈ ಕಾಮ್ಯಕವನದಲ್ಲಿ ವಾಸವು ನಮಗೆ ಇಷ್ಟವಾಗುತ್ತಿಲ್ಲ. ಬೇರೆ ದಿಕ್ಕಿಗೆ ಹೋಗೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಾಶೀತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೆರಡನೆಯ ಅಧ್ಯಾಯ
(ಧೌಮ್ಯರಿಂದ ಯುಧಿಷ್ಠಿರನನ್ನು ಕುರಿತು ಪೂರ್ವದಿಕ್ಕಿನ ತೀರ್ಥಗಳ ವರ್ಣನೆ.)
ವೈಶಂಪಾಯನಃ
ತಾನ್ ಸರ್ವಾನುತ್ಸುಕಾನ್ ದೃಷ್ಟ್ವಾ ಪಾಂಡವಾನ್ ದೀನಚೇತಸಃ |
ಆಶ್ವಾಸಯಂಸ್ತತೋ ಧೌಮ್ಯೋ ಬೃಹಸ್ಪತಿಸಮೋಽಬ್ರವೀತ್ ॥1॥
ಅರ್ಜುನನನ್ನು ನೋಡಲು ಉತ್ಸುಕರಾಗಿ ದೀನಮನಸ್ಕರಾದ ಆ ಪಾಂಡವರನ್ನು ನೋಡಿ ಬೃಹಸ್ಪತಿಸಮಾನರಾದ ಧೌಮ್ಯರು ಅವರನ್ನು ಸಮಾಧಾನಪಡಿಸುತ್ತಾ ಮಾತನಾಡಿದರು.
ಬ್ರಾಹ್ಮಣಾನುಮತಾನ್ ಪುಣ್ಯಾನ್ ಆಶ್ರಮಾನ್ ಭರತರ್ಷಭ |
ಅಥ ತೀರ್ಥಾನಿ ಶೈಲಾಂಶ್ಚ ಶೃಣು ಮೇ ವದತೋ ನೃಪ ॥2॥
ಎಲೈ ಭರತರ್ಷಭನೇ, ಎಲೈ ರಾಜನೇ, ಬ್ರಾಹ್ಮಣರಿಗೆ ಸಮ್ಮತವಾದ ಪುಣ್ಯಾಶ್ರಮಗಳನ್ನು ತೀರ್ಥಗಳನ್ನು ಮತ್ತು ಪರ್ವತಗಳನ್ನು ಹೇಳುತ್ತೇನೆ. ಅದನ್ನು ಕೇಳು.
ಪೂರ್ವಂ ಪ್ರಾಚೀಂ ದಿಶಂ ಗಚ್ಛೇದ್ ಬ್ರಹ್ಮರ್ಷಿಗಣಸೇವಿತಾಮ್|
ರಮ್ಯಾಂ ತೇ ಕೀರ್ತಯಿಷ್ಯಾಮಿ ಯುಧಿಷ್ಠಿರ ಯಥಾಸ್ಮೃತಿ ॥3॥
ಮೊದಲು ಬ್ರಹ್ಮರ್ಷಿಗಣಸೇವಿತವಾದ ಪೂರ್ವದಿಕ್ಕಿಗೆ ಹೋಗಬೇಕು. ಯುಧಿಷ್ಠಿರನೇ ನನ್ನ ಸ್ಮರಣೆಯಿದ್ದಷ್ಟು ನಿನಗೆ ಆ ಸುಂದರವಾದ ಪೂರ್ವದಿಕ್ಕನ್ನು ತಿಳಿಸುವೆನು.
ತಸ್ಯಾಂ ದೇವರ್ಷಿಜುಷ್ಟಾಯಾಂ ನೈಮಿಶಂ ನಾಮ ಭಾರತ |
ಯತ್ರ ತೀರ್ಥಾನಿ ದೇವಾನಾಂ ಸುಪುಣ್ಯಾನಿ ಪೃಥಕ್ಪೃಥಕ್ ॥4॥

ಎಲೈ ಭಾರತನೇ, ಅಲ್ಲಿ ದೇವರ್ಷಿಗಳಿಂದ ಸೇವಿತವಾದ ನೈಮಿಶಾರಣ್ಯವಿದೆ. ಅಲ್ಲಿ ದೇವತೆಗಳ ಪವಿತ್ರವಾದ ಬೇರೆಬೇರೆ ತೀರ್ಥಗಳಿವೆ.
ಯತ್ರ ಸಾ ಗೋಮತೀ ನಾಮ ಪುಣ್ಯಾ ದೇವರ್ಷಿಸೇವಿತಾ |
ಯಜ್ಞಭೂಮಿಶ್ಚ ದೇವಾನಾಂ ಶಾಮಿತ್ರಂ ಚ ವಿವಸ್ವತಃ ||5||
ಅಲ್ಲಿ ದೇವರ್ಷಿಗಳಿಂದ ಸೇವಿತವಾದ ಪವಿತ್ರವಾದ ಗೋಮತಿಯಿದೆ. ದೇವತೆಗಳ ಯಜ್ಞಭೂಮಿ ಇದೆ. ಸೂರ್ಯನು ಅಲ್ಲಿ ಶಾಂತನಾಗಿರುತ್ತಾನೆ.
ಯಸ್ಯಾಂ ಗಿರಿವರಃ ಪುಣ್ಯೋ ಗಯೋ ರಾಜರ್ಷಿಸೇವಿತಃ |
ಶಿವಂ ಬ್ರಹ್ಮಸರೋ ಯತ್ರ ಸೇವಿತಂ ತ್ರಿದಶರ್ಷಿಭಿಃ ||6||
ಅಲ್ಲಿ ಪವಿತ್ರವಾದ ರಾಜರ್ಷಿಗಳಿಂದ ಸೇವಿತವಾದ ಗಯವೆಂಬ ಶ್ರೇಷ್ಠವಾದ ಪರ್ವತವಿದೆ. ಅಲ್ಲಿ ದೇವಋಷಿಗಳಿಂದ ಸೇವಿತವಾದ ಮಂಗಳವಾದ ಬ್ರಹ್ಮಸರೋವರವಿದೆ.
ಯದರ್ಥೇ ಪುರುಷವ್ಯಾಘ್ರ ಕೀರ್ತಯಂತಿ ಪುರಾತನಾಃ |
ಏಷ್ಟವ್ಯಾ ಬಹವಃ ಪುತ್ರಾ ಯದಿ ಕಶ್ಚಿದ್ ಗಯಾಂ ವ್ರಜೇತ್ ||7||
ಎಲೈ ಪುರುಷವ್ಯಾಘ್ರನೇ, ಆ ಗಯಾಕ್ಷೇತ್ರದ ಸಲುವಾಗಿಯೇ ಪ್ರಾಚೀನರು ಒಬ್ಬ ಮಗನಾದರೂ ಗಯಾಯಾತ್ರೆಯನ್ನು ಮಾಡಬಹುದೆಂಬ ಕಾರಣದಿಂದ ಅನೇಕ ಮಕ್ಕಳನ್ನು ಬಯಸಬೇಕು ಎಂದು ಹೇಳುತ್ತಾರೆ.
ಮಹಾನದೀ ಚ ತತ್ರೈವ ತಥಾ ಹಯಶಿರೋ ನೃಪ |
ಯತ್ರಾಸೌ ಕೀರ್ತ್ಯತೇ ವಿಪ್ರೈರಕ್ಷಯ್ಯಕರಣೋ ವಟಃ||8||
ಎಲೈ ರಾಜನೇ, ಅಲ್ಲಿ ಮಹಾನದಿಯೂ ಮತ್ತು ಹಯಶಿರವೂ ಇವೆ. ಅಕ್ಷಯಫಲವನ್ನು ಉಂಟುಮಾಡುವುದೆಂದು ಬ್ರಾಹ್ಮಣರು ಹೇಳುವ ವಟವೃಕ್ಷವೂ ಅಲ್ಲಿದೆ.
ಯತ್ರ ದತ್ತಂ ಪಿತೃಭ್ಯೋಽನ್ನಮಕ್ಷಯ್ಯಂ ಭವತಿ ಪ್ರಭೋ |
ಸಾ ಚ ಪುಣ್ಯಜಲಾ ತತ್ರ ಫಲ್ಗುನಾಮಾ ಮಹಾನದೀ ||9||
ಪಿತೃಗಳಿಗೆ ಕೊಡಲ್ಪಟ್ಟ ಅಲ್ಲಿಯ ಅನ್ನವು ಅಕ್ಷಯವಾಗುತ್ತದೆ. ಆ ಫಲ್ಗುವೆಂಬ ಮಹಾನದಿಯೂ ಸಹ ಪವಿತ್ರವಾದ ಜಲವುಳ್ಳದ್ದಾಗಿದೆ.

ಬಹುಮೂಲಫಲಾ ಚೈವ ಕೌಶಿಕೀ ಭರತರ್ಷಭ |
ವಿಶ್ವಾಮಿತ್ರೋಽಭ್ಯಗಾದ್ಯತ್ರ ಬ್ರಾಹ್ಮಣತ್ವಂ ತಪೋಧನಃ ||10||
ಎಲೈ ಭರತರ್ಷಭನೇ, ಬಹುಮೂಲಫಲಗಳಿರುವ ಕೌಶಿಕೀನದಿಯು ಅಲ್ಲಿದೆ. ಅಲ್ಲಿ ತಪೋಧನರಾದ ವಿಶ್ವಾಮಿತ್ರರು ಬ್ರಾಹ್ಮಣ್ಯವನ್ನು ಪಡೆದರು.
ಗಂಗಾ ಯತ್ರ ನದೀ ಪುಣ್ಯಾ ಯಸ್ಯಾಸ್ತೀರೇ ಭಗೀರಥಃ |
ಅಯಜತ್ ತಾತ ಬಹುಭಿಃ ಕ್ರತುಭಿರ್ಭೂರಿದಕ್ಷಿಣೈಃ ||11||
ಪ್ರೀತಿಪಾತ್ರನೇ, ಅಲ್ಲಿ ಪವಿತ್ರವಾದ ಗಂಗಾನದಿಯು ಇದೆ. ಅದರ ತೀರದಲ್ಲಿ ಭಗೀರಥನು ಬಹಳ ದಕ್ಷಿಣೆಗಳಿಂದ ಕೂಡಿದ ಅನೇಕ ಯಾಗಗಳನ್ನು ಮಾಡಿದನು.
ಪಾಂಚಾಲೇಷು ಚ ಕೌರವ್ಯ ಕಥಯಂತ್ಯುತ್ಪಲಾವತಮ್ |
ವಿಶ್ವಾಮಿತ್ರೋಽಯಜದ್ಯತ್ರ ಶಕ್ರೇಣ ಸಹ ಕೌಶಿಕಃ ||12||
ಎಲೈ ಕೌರವ್ಯನೇ, ಪಾಂಚಾಲದೇಶದಲ್ಲಿ ಉತ್ಪಲಾವತವೆಂಬ ಪ್ರದೇಶವನ್ನು ಎಲ್ಲರೂ ಹೇಳುತ್ತಾರೆ. ಅಲ್ಲಿ ಕೌಶಿಕನಾದ ವಿಶ್ವಾಮಿತ್ರರು ಇಂದ್ರನ ಜೊತೆಯಲ್ಲಿ ಯಾಗವನ್ನು ಮಾಡಿದರು.
ತತ್ರಾನುವಂಶಂ ಭಗವಾನ್ ಜಾಮದಗ್ನ್ಯಸ್ತಥಾ ಜಗೌ |
ವಿಶ್ವಾಮಿತ್ರಸ್ಯ ತಾಂ ದೃಷ್ಟ್ವಾ ವಿಭೂತಿಮತಿಮಾನುಷೀಮ್ ||13||
ವಿಶ್ವಾಮಿತ್ರರ ಅತಿಮಾನುಷವಾದ ಆ ಸಾಮರ್ಥ್ಯವನ್ನು ನೋಡಿ ಪೂಜ್ಯರಾದ ಪರಶುರಾಮರು ಅಲ್ಲಿ ಅವರ ಅನುವಂಶವನ್ನು ಕೀರ್ತಿಸಿದರು.
ಕನ್ಯಾಕುಬ್ಜೇಽಪಿಬತ್ ಸೋಮಮಿಂದ್ರೇಣ ಸಹ ಕೌಶಿಕಃ |
ತತಃ ಕ್ಷತ್ರಾದಪಾಕ್ರಾಮದ್ ಬ್ರಾಹ್ಮಣೋಽಸ್ಮೀತಿ ಚಾಬ್ರವೀತ್ ||14||
ಪವಿತ್ರಮೃಷಿಭಿರ್ಜುಷ್ಟಂ ಪುಣ್ಯಂ ಪಾವನಮುತ್ತಮಮ್ |
ಗಂಗಾಯಮುನಯೋರ್ವೀರ ಸಂಗಮಂ ಲೋಕವಿಶ್ರುತಮ್ ||15||
ಕನ್ಯಾಕುಬ್ಜದಲ್ಲಿ ವಿಶ್ವಾಮಿತ್ರರು ಇಂದ್ರನಜೊತೆಯಲ್ಲಿ ಸೋಮಪಾನವನ್ನುಮಾಡಿ ಕ್ಷತ್ರಿಯತ್ವವನ್ನು ತೊರೆದು ಬ್ರಾಹ್ಮಣನಾಗಿದ್ದೇನೆ ಎಂದು ಹೇಳುತ್ತಾ ಹೊರಗೆ ಬಂದರು. ಎಲೈ ವೀರನೇ, ಗಂಗಾಯಮುನಾಸಂಗಮವು ಪವಿತ್ರವಾದುದು. ಋಷಿಗಳಿಂದ ಸೇವಿತವಾದುದು. ಪುಣ್ಯಪ್ರದವಾದುದು ಶ್ರೇಷ್ಠವಾದುದು ಮತ್ತು ಲೋಕದಲ್ಲಿ ಪ್ರಖ್ಯಾತವಾದುದು.
ಯತ್ರಾಯಜತ ಭೂತಾತ್ಮಾ ಪೂರ್ವಮೇವ ಪಿತಾಮಹಃ |
ಪ್ರಯಾಗಮಿತಿ ವಿಖ್ಯಾತಂ ತಸ್ಮಾತ್ ಭರತಸತ್ತಮ ||16||
ಭರತಸತ್ತಮನೇ, ಅಲ್ಲಿ ಸರ್ವಜೀವಸ್ವಾಮಿಯಾದ ಬ್ರಹ್ಮದೇವರು ಮೊದಲೇ ಯಾಗವನ್ನು ಮಾಡಿದರು. ಆ ಕಾರಣದಿಂದ ಆದೇಶವು ಪ್ರಯಾಗವೆಂದು ಪ್ರಖ್ಯಾತವಾಗಿದೆ.
ಅಗಸ್ತ್ಯಸ್ಯ ಚ ರಾಜೇಂದ್ರ ತತ್ರಾಶ್ರಮಪದಂ ಮಹತ್ |
ಹಿರಣ್ಯಬಿಂದುಃ ಕಥಿತೋ ಗಿರೌ ಕಾಳಾಂಜರೇ ನೃಪ ||17||

ರಾಜೇಂದ್ರನೇ, ಅಲ್ಲಿ ಅಗಸ್ತ್ಯರ ಶ್ರೇಷ್ಠವಾದ ಆಶ್ರಮಸ್ಥಾನವಿದೆ. ಎಲೈ ರಾಜನೇ ಅಲ್ಲಿ ಕಾಳಾಂಜರ ಪರ್ವತವಿದೆ. ಅಲ್ಲಿ ಹಿರಣ್ಯಬಿಂದು ಎಂಬ ರಾಜರ್ಷಿಗಳು ಇದ್ದಾರೆ.
ಅತ್ಯನ್ಯಃ ಪರ್ವತೋ ರಾಜನ್ ಪುಣ್ಯೋ ಗಿರಿವರಃ ಶುಭಃ |
ಮಹೇಂದ್ರೋ ನಾಮ ಕೌರವ್ಯ ಭಾರ್ಗವಸ್ಯ ಮಹಾತ್ಮನಃ ॥18॥
ಎಲೈ ರಾಜನೇ, ಅಲ್ಲಿ ಎಲ್ಲ ಪರ್ವತಗಳನ್ನು ಮೀರಿಸಿದ ಶ್ರೇಷ್ಠವಾದ ಪುಣ್ಯಪ್ರದವಾದ ಪವಿತ್ರವಾದ ಮಹಾತ್ಮರಾದ ಪರಶುರಾಮದೇವರ ವಾಸಸ್ಥಾನವಾದ ಮಹೇಂದ್ರ ಪರ್ವತವಿದೆ.
ಅಯಜತ್ ತತ್ರ ಕೌಂತೇಯ ಪೂರ್ವಮೇವ ಪಿತಾಮಹಃ |
ಯತ್ರ ಭಾಗೀರಥೀ ಗಂಗಾ ಸದಸ್ಯಾಸೀದ್ ಯುಧಿಷ್ಠಿರ ॥19॥
ಕೌಂತೇಯನೇ, ಬ್ರಹ್ಮದೇವರು ಅಲ್ಲಿ ಮೊದಲೇ ಒಂದು ಯಜ್ಞವನ್ನು ಮಾಡಿದರು. ಯುಧಿಷ್ಠಿರನೇ, ಆಗ ಭಾಗೀರಥಿಯಾದ ಗಂಗೆಯು ಅಲ್ಲಿ ಸದಸ್ಸಿನಲ್ಲಿ ಸನ್ನಿಹಿತಳಾಗಿದ್ದಳು.
ಯತ್ರ ಸಾ ಬ್ರಹ್ಮಶಾಲೇತಿ ಪುಣ್ಯಾ ಖ್ಯಾತಾ ವಿಶಾಂಪತೇ |
ಧೂತಪಾಪ್ಮಭಿರಾಕೀರ್ಣಾ ಪುಣ್ಯಂ ತಸ್ಯಾಶ್ಚ ದರ್ಶನಮ್ ॥20॥
ರಾಜನೇ, ಅಲ್ಲಿ ಬ್ರಹ್ಮಶಾಲೆಯೆಂಬ ಪವಿತ್ರಸ್ಥಳವಿದೆ. ಪಾಪರಹಿತರಾದ ಸಜ್ಜನರಿಂದ ಸಹಿತವಾದ ಅದರ ದರ್ಶನವೂ ಸಹ ಪುಣ್ಯಪ್ರದವಾದುದು.
ಪವಿತ್ರೋ ಮಂಗಲೀಯಶ್ಚ ಖ್ಯಾತೋ ಲೋಕೇ ಸನಾತನಃ |
ಕೇದಾರಶ್ಚ ಮತಂಗಸ್ಯ ಮಹಾನಾಶ್ರಮ ಉತ್ತಮಃ ॥21॥
ಪವಿತ್ರವೂ ಮಂಗಳವೂ ಲೋಕದಲ್ಲಿ ಪ್ರಖ್ಯಾತವೂ ಪುರಾತನವೂ ಆದ ಶ್ರೇಷ್ಠವಾದ ಮತಂಗಋಷಿಗಳ ಸರೋವರವು ಮತ್ತು ದೊಡ್ಡ ಆಶ್ರಮವು ಅಲ್ಲಿದೆ.
ಕುಂಡೋದಃ ಪರ್ವತೋ ರಮ್ಯೋ ಬಹುಮೂಲಫಲೋದಕಃ |
ನೈಷಧಸ್ತೃಷಿತೋ ಯತ್ರ ಜಲಂ ಶರ್ಮ ಚ ಲಬ್ಧವಾನ್ ॥22॥
ಬಹುಮೂಲಫಲಜಲಗಳಿಂದ ಸುಂದರವಾದ ಕುಂಡೋದವೆಂಬ ಪರ್ವತವು ಅಲ್ಲಿದೆ. ಬಾಯಾರಿದ ನಳನು ಅಲ್ಲಿ ನೀರನ್ನು ಕುಡಿದು ಸಮಾಧಾನವನ್ನು ಹೊಂದಿದನು.
ಯತ್ರ ದೇವವನಂ ರಮ್ಯಂ ತಾಪಸೈರುಪಶೋಭಿತಮ್ |
ಬಾಹುಲಾ ಚ ನದೀ ಯತ್ರ ನಂದಾ ಚ ಗಿರಿಮೂರ್ಧನಿ ॥23॥
ಅಲ್ಲಿ ತಪಸ್ವಿಗಳಿಂದ ಶೋಭಿತವಾದ ರಮ್ಯವಾದ ದೇವವನವಿದೆ. ಆ ಪರ್ವತದ ಮೇಲ್ಭಾಗದಲ್ಲಿ ಬಾಹುಲಾ ಎಂಬ ನದಿಯೂ ಮತ್ತು ನಂದಾ ಎಂಬ ನದಿಯೂ ಹುಟ್ಟುತ್ತವೆ.
ತೀರ್ಥಾನಿ ಸರಿತಃ ಶೈಲಾಃ ಪುಣ್ಯಾನ್ಯಾಯತನಾನಿ ಚ |
ಪ್ರಾಚ್ಯಾಂ ದಿಶಿ ಮಹಾರಾಜ ಕೀರ್ತಿತಾನಿ ಮಯಾ ತವ ॥24॥
ಎಲೈ ಮಹಾರಾಜನೇ, ಪೂರ್ವದಿಕ್ಕಿನಲ್ಲಿರುವ ತೀರ್ಥಗಳನ್ನು ನದಿಗಳನ್ನು ಪರ್ವತಗಳನ್ನು ಪವಿತ್ರವಾದ ಆಶ್ರಮಗಳನ್ನು ನಾನು ನಿನಗೆ ಹೇಳಿದ್ದೇನೆ.
ತಿಸೃಷ್ವನ್ಯಾನಿ ರಾಜೇಂದ್ರ ದಿಕ್ಷು ತೀರ್ಥಾನಿ ಮೇ ಶೃಣು |
ಸರಿತಃ ಪರ್ವತಾಂಶ್ಚೈವ ಪುಣ್ಯಾನ್ಯಾಯತನಾನಿ ಚ ॥25॥
ರಾಜೇಂದ್ರನೇ, ಇನ್ನು ಉಳಿದ ಮೂರು ದಿಕ್ಕುಗಳಲ್ಲಿರುವ ತೀರ್ಥಗಳನ್ನು ನದಿಗಳನ್ನು ಪರ್ವತಗಳನ್ನು ಮತ್ತು ಪವಿತ್ರವಾದ ಆಶ್ರಮಗಳನ್ನು ಹೇಳುತ್ತೇನೆ. ಅವುಗಳನ್ನು ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೂರನೆಯ ಅಧ್ಯಾಯ
(ಧೌಮ್ಯರಿಂದ ಯುಧಿಷ್ಠಿರನನ್ನು ಕುರಿತು ದಕ್ಷಿಣದಿಕ್ಕಿನ
ನಾನಾ ತೀರ್ಥಗಳ ವರ್ಣನೆ.)
ಧೌಮ್ಯಃ
ದಕ್ಷಿಣಸ್ಯಾಂ ತು ಪುಣ್ಯಾನಿ ಶೃಣು ತೀರ್ಥಾನಿ ಭಾರತ |
ವಿಸ್ತರೇಣ ಯಥಾಬುದ್ಧಿ ಕೀರ್ತ್ಯಮಾನಾನಿ ಪಾಂಡವ ॥1॥
ಎಲೈ ಭಾರತನೇ, ಪಾಂಡುಪುತ್ರನೇ, ದಕ್ಷಿಣದಲ್ಲಿರುವ ಪುಣ್ಯತೀರ್ಥಗಳನ್ನು ನನ್ನ ಬುದ್ಧಿಗೆ ತೋರುವಷ್ಟು ವಿಸ್ತಾರವಾಗಿ ಹೇಳುತ್ತೇನೆ ಅದನ್ನು ಕೇಳು.
ಯಸ್ಯಾಮಾಖ್ಯಾಯತೇ ಪುಣ್ಯಾ ದಿಶಿ ಗೋದಾವರೀ ನದೀ |
ಬಹ್ವಾರಾಮಾ ಬಹುಜಲಾ ತಾಪಸಾಚರಿತಾ ಶುಭಾ ॥2॥
ವೇಣ್ಣಾ ಭೀಮರಥೀ ಚೋಭೇ ನದ್ಯೌ ಪಾಪಭಯಾಪಹೇ |
ಮೃಗದ್ವಿಜಸಮಾಕೀರ್ಣೇ ತಾಪಸಾಲಯಭೂಷಿತೇ ॥3॥

ಆ ದಿಕ್ಕಿನಲ್ಲಿ ಅನೇಕ ಆಶ್ರಮಗಳಿಂದ ಕೂಡಿರುವ ತಾಪಸಸಂಚಾರಗಳಿಂದ ಕೂಡಿರುವ ಬಹಳ ಜಲವನ್ನು ಹೊಂದಿದ ಶುಭವಾದ ಪುಣ್ಯಪ್ರದವಾದ ಗೋದಾವರಿನದಿ ಇದೆ. ಪಕ್ಷಿಗಳು ಮತ್ತು ಮೃಗಗಳಿಂದ ನಿಬಿಡವಾದ ಮತ್ತು ತಾಪಸಾಲಯದಿಂದ ಭೂಷಿತವಾದ ಪಾಪವನ್ನು ಮತ್ತು ಭಯವನ್ನು ಪರಿಹರಿಸುವ ವೇಣ್ಣಾ ಮತ್ತು ಭೀಮರಥಿ ಎಂಬ ಎರಡು ನದಿಗಳಿವೆ.
ರಾಜರ್ಷೇಸ್ತತ್ರ ಚ ಸರಿತ್ ನೃಗಸ್ಯ ಭರತರ್ಷಭ |
ರಮ್ಯತೀರ್ಥಾ ಬಹುಜಲಾ ತಾಪಸಾಚರಿತಾ ಶುಭಾ ॥4॥
ಭರತರ್ಷಭನೇ, ಅಲ್ಲಿ ರಾಜರ್ಷಿಯಾದ ನೃಗನ ನದಿಯಿದೆ. ಅದು ಮನೋಹರವಾದ ತೀರ್ಥಗಳಿಂದ ಕೂಡಿ ಬಹಳ ಜಲವುಳ್ಳದ್ದಾಗಿ ತಾಪಸರಿಂದ ಸಂಚರಿಸಲ್ಪಟ್ಟು ಶುಭವಾಗಿದೆ.
ಅಪಿ ಚಾತ್ರ ಮಹಾಯೋಗೀ ಮಾರ್ಕಂಡೇಯೋ ಮಹಾತಪಾಃ |
ಅನುವಂಶ್ಯಾಂ ಜಗೌ ಗಾಥಾಂ ನೃಗಸ್ಯ ವಸುಧಾಧಿಪ ॥5॥
ನೃಗಸ್ಯ ಯಜಮಾನಸ್ಯ ಪ್ರತ್ಯಕ್ಷಮಿತಿ ನಃ ಶ್ರುತಮ್ |
ಅಮಾದ್ಯದಿಂದ್ರಸ್ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ॥6॥
ಅಲ್ಲಿ ಮಹಾಯೋಗಿಗಳಾದ ಮಹಾತಪಸ್ವಿಗಳಾದ ಮಾರ್ಕಂಡೇಯರು ನೃಗನು ಯಾಗವನ್ನು ಮಾಡುವಾಗ ಅವನ ಎದುರಿಗೆ ಅವನ ವಂಶದ ಗೀತೆಯನ್ನು ಹಾಡಿದರೆಂದು ನಾವು ಕೇಳಿದ್ದೇವೆ. ಎಲೈ ವಸುಧಾಧಿಪನೇ ನೃಗನಯಾಗದಲ್ಲಿ ಇಂದ್ರನು ಸೋಮಪಾನದಿಂದಲೂ ಬ್ರಾಹ್ಮಣರು ದಕ್ಷಿಣೆಗಳಿಂದಲೂ ಸಂತೋಷಟ್ಟರು.
ಮಾಠರಸ್ಯ ವನಂ ಪುಣ್ಯಂ ಬಹುಮೂಲಫಲಂ ಶಿವಮ್ |
ಯೂಪಶ್ಚ ಭರತಶ್ರೇಷ್ಠ ವರುಣಸ್ರೋತಸೇ ಗಿರೌ ॥7॥
ಎಲೈ ಭರತಶ್ರೇಷ್ಠನೇ, ಅಲ್ಲಿ ಬಹುಮೂಲಫಲಗಳಿರುವ ಮಂಗಳವಾದ ಮತ್ತು ಪುಣ್ಯಪ್ರದವಾದ ಮಾಠರ ಋಷಿಗಳ ತಪೋವನವಿದೆ. ವರುಣ ಸ್ರೋತಸ್ ಎಂಬ ಪರ್ವತದಲ್ಲಿ ಒಂದು ಯೂಪವೂ ಇದೆ.
ಪ್ರವೇಣ್ಯುತ್ತರಪಾರ್ಶ್ವೇ ತು ಪುಣ್ಯೇ ಕಣ್ವಾಶ್ರಮೇ ತಥಾ |
ತಾಪಸಾನಾಮರಣ್ಯಾನಿ ಕೀರ್ತಿತಾನಿ ಯಥಾಶ್ರುತಿ ॥8॥
ಪ್ರವೇಣಿಯ ಉತ್ತರಭಾಗದಲ್ಲಿ ಮತ್ತು ಪವಿತ್ರವಾದ ಕಣ್ವಾಶ್ರಮದಬಳಿ ನಾನು ಕೇಳಿದಂತೆ ಅನೇಕ ತಪೋವನಗಳು ಹೇಳಲ್ಪಡುತ್ತವೆ.
ವೇದೀ ಶೂರ್ಪಾರಕೇ ತಾತ ಜಮದಗ್ನೇರ್ಮಹಾತ್ಮನಃ |
ರಮ್ಯಾ ಪಾಷಾಣತೀರ್ಥಾ ಚ ಪುರಶ್ಚಂದ್ರಾ ಚ ಭಾರತ ॥9॥
ಎಲೈ ಪ್ರೀತಿಪಾತ್ರನಾದ ಭಾರತನೇ, ಶೂರ್ಪಾರಕದಲ್ಲಿ ಮಹಾತ್ಮರಾದ ಜಮದಗ್ನಿಗಳ ಯಜ್ಞವೇದಿಯಿದೆ. ಅಲ್ಲಿ ಮನೋಹರವಾದ ಪಾಷಾಣತೀರ್ಥ ಮತ್ತು ಪುರಶ್ಚಂದ್ರವೆಂಬ ತೀರ್ಥಗಳಿವೆ.
ಅಶೋಕತೀರ್ಥಂ ಮರ್ತ್ಯೇಷು ಕೌಂತೇಯ ಬಹುಲಾಶ್ರಮಮ್ |
ಅಗಸ್ತ್ಯತೀರ್ಥಂ ಪಾಂಡ್ಯೇಷು ವಾರುಣಂ ಚ ಯುಧಿಷ್ಠಿರ ॥10॥
ಕೌಂತೇಯನೇ ಅನೇಕ ಆಶ್ರಮಗಳಿರುವ ಅಶೋಕತೀರ್ಥವು ಅಲ್ಲಿದೆ. ಪಾಂಡ್ಯದೇಶದಲ್ಲಿ ವರುಣನಿಂದ ಅಧಿಷ್ಠಿತವಾದ ಅಗಸ್ತ್ಯತೀರ್ಥವಿದೆ.
ಕುಮಾರ್ಯಃ ಕಥಿತಾಃ ಪುಣ್ಯಾಃ ಪುಣ್ಯೇಷು ಭರತರ್ಷಭ |
ತಾಮ್ರಪರ್ಣೀಂ ತು ಕೌಂತೇಯ ಕೀರ್ತಯಿಷ್ಯಾಮಿ ತಾಂ ಶೃಣು ॥11॥
ಭರತರ್ಷಭನೇ, ಪುಣ್ಯವಾದ ದಕ್ಷಿಣದೇಶದಲ್ಲಿ ಪುಣ್ಯಪ್ರದವಾದ ಕುಮಾರೀತೀರ್ಥಗಳನ್ನು ಹೇಳಿದ್ದೇನೆ. ಕೌಂತೇಯನೇ ತಾಮ್ರಪರ್ಣಿಯನ್ನು ಕುರಿತು ಹೇಳುತ್ತೇನೆ ಅದನ್ನು ಕೇಳು.
ಯತ್ರ ದೇವೈಸ್ತಪಸ್ತಪ್ತಂ ಮಹದಿಚ್ಛದ್ಭಿರಾಶ್ರಮೇ |
ಗೋಕರ್ಣಮಿತಿ ವಿಖ್ಯಾತಂ ತ್ರಿಷು ಲೋಕೇಶು ಭಾರತ ॥12॥
ಶೀತತೋಯೋ ಬಹುಜಲಃ ಪುಣ್ಯಸ್ತಾತ ಶಿವಶ್ಚ ಸಃ |
ಹ್ರದಃ ಪರಮದುಷ್ಪ್ರಾಪೋ ಮಾನವೈರಕೃತಾತ್ಮಭಿಃ ॥13॥
ಎಲೈ ಭಾರತನೇ, ದೇವತೆಗಳು ಸಹ ಮಹತ್ವವನ್ನು ಬಯಸಿ ತಪಸ್ಸನ್ನು ಮಾಡಿದ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಗೋಕರ್ಣವೆಂಬ ತೀರ್ಥವಿದೆ. ಶೀತಲವಾದ ಬಹುವಾದ ನೀರಿನಿಂದ ಕೂಡಿದ್ದು ಅದು ಮಂಗಳವೂ ಪುಣ್ಯಪ್ರದವೂ ಆಗಿದೆ. ಪ್ರೀತಿಪಾತ್ರನೇ ಪುಣ್ಯವನ್ನು ಮಾಡದಿದ್ದ ಮಾನವರು ಆ ಸರೋವರಕ್ಕೆ ಹೋಗಲು ಸಾಧ್ಯವಿಲ್ಲ.
ತತ್ರೈವ ತೃಣಸೋಮಾಗ್ನೇಃ ಸಂಪನ್ನಃ ಫಲಮೂಲವಾನ್ |
ಆಶ್ರಮೋಽಗಸ್ತ್ಯಶಿಷ್ಯಸ್ಯ ಪುಣ್ಯೋ ದೇವಸಹೇ ಗಿರೌ ॥14॥
ಅಲ್ಲಿಯೇ ದೇವಸಹಪರ್ವತದಲ್ಲಿ ಅಗಸ್ತ್ಯರ ಶಿಷ್ಯರಾದ ತೃಣಸೋಮಾಗ್ನಿ ಋಷಿಗಳ ಫಲಮೂಲಸಂಪತ್ತಿನಿಂದ ತುಂಬಿದ ಆಶ್ರಮವಿದೆ.
ವೈಡೂರ್ಯಪರ್ವತಸ್ತತ್ರ ಶ್ರೀಮಾನ್ ಮಣಿಮಯಃ ಶುಭಃ |
ಅಗಸ್ತ್ಯಸ್ಯಾಶ್ರಮಶ್ಚೈವ ಬಹುಮೂಲಫಲೋದಕಃ ॥15॥
ಅಲ್ಲಿಯೇ ಸಂಪದ್ಯುಕ್ತವಾದ ಶುಭವಾದ ಮಣಿಮಯವಾದ ವೈಡೂರ್ಯಪರ್ವತವಿದೆ. ಬಹುಮೂಲ ಉದಕಗಳನ್ನು ಹೊಂದಿರುವ ಅಗಸ್ತ್ಯರ ಆಶ್ರಮವು ಅಲ್ಲಿದೆ.
ಸುರಾಷ್ಟ್ರೇಷ್ವಪಿ ವಕ್ಷ್ಯಾಮಿ ಪುಣ್ಯಾನ್ಯಾಯತನಾನಿ ತೇ |
ಆಶ್ರಮಾನ್ ಸರಿತಃ ಶೈಲಾನ್ ಸರಾಂಸಿ ಚ ನರಾಧಿಪ ॥16॥

ಎಲೈ ನರಾಧಿಪನೇ, ಸುರಾಷ್ಟ್ರದೇಶದಲ್ಲಿರುವ ಪವಿತ್ರವಾದ ವಾಸಸ್ಥಾನಗಳನ್ನು ಆಶ್ರಮಗಳನ್ನು ನದಿಗಳನ್ನು ಪರ್ವತಗಳನ್ನು ಮತ್ತು ಸರೋವರಗಳನ್ನು ಹೇಳುತ್ತೇನೆ.
ತಮಸೋ ಮಜ್ಜನಂ ವಿಪ್ರಾಃ ತತ್ರಾಪಿ ಕಥಯಂತ್ಯುತ |
ಪ್ರಭಾಸಂ ಚೋದಧೇಸ್ತೀರ್ಥಂ ತ್ರಿದಶಾನಾಂ ಯುಧಿಷ್ಠಿರ ॥17॥
ಎಲೈ ಯುಧಿಷ್ಠಿರನೇ, ಬ್ರಾಹ್ಮಣರು ಅಲ್ಲಿಯೂ ಅಜ್ಞಾನದ ನಾಶವನ್ನು ಹೇಳುತ್ತಾರೆ. ದೇವತೆಗಳಿಂದ ಸೇವಿತವಾದ ಪ್ರಭಾಸತೀರ್ಥವು ಸಮುದ್ರದ ಸಮೀಪದಲ್ಲಿದೆ.
ತತ್ರ ಪಿಂಡಾರಕಂ ನಾಮ ತಾಪಸಾಚರಿತಂ ಶಿವಮ್ |
ಉಜ್ಜಯಂತಶ್ಚ ಶಿಖರೀ ಕ್ಷಿಪ್ರಂ ಸಿದ್ಧಿಕರೋ ಮಹಾನ್ ॥18॥
ಅಲ್ಲಿ ತಪಸ್ವಿಗಳಿಂದ ಕೂಡಿದ ಮಂಗಳವಾದ ಪಿಂಡಾರಕವೆಂಬ ಕ್ಷೇತ್ರವೂ ಬೇಗ ಸಿದ್ಧಿಯನ್ನು ಉಂಟುಮಾಡುವ ಶ್ರೇಷ್ಠವಾದ ಉಜ್ಜಯಂತ ಪರ್ವತವೂ ಇವೆ.
ತತ್ರ ದೇವರ್ಷಿವರ್ಯೇಣ ನಾರದೇನಾನುಕೀರ್ತಿತಃ |
ಪುರಾಣಃ ಶ್ರೂಯತೇ ಶ್ಲೋಕಃ ತಂ ನಿಬೋಧ ಯುಧಿಷ್ಠಿರ ॥19॥
ಎಲೈ ಯುಧಿಷ್ಠಿರನೇ, ದೇವರ್ಷಿಶ್ರೇಷ್ಠರಾದ ನಾರದರು ಆ ಪರ್ವತದ ವಿಷಯದಲ್ಲಿ ಹೇಳಿದ ಪ್ರಾಚೀನವಾದ ಒಂದು ಶ್ಲೋಕವಿದೆ ಅದನ್ನು ಕೇಳು.
ಪುಣ್ಯೇ ಗಿರೌ ಸುರಾಷ್ಟ್ರೇಷು ಮೃಗಪಕ್ಷಿನಿಷೇವಿತೇ |
ಉಜ್ಜಯಂತೇ ಸ್ಮ ತಪ್ತಾಂಗೋ ನಾಕಪೃಷ್ಠೇ ಮಹೀಯತೇ ॥20॥
ಮೃಗಪಕ್ಷಿಗಳಿಂದ ಸೇವಿತವಾದ ಸುರಾಷ್ಟ್ರದೇಶದ ಪುಣ್ಯಪರ್ವತವಾದ ಉಜ್ಜಯಂತ ಪರ್ವತದಲ್ಲಿ ತಪಸ್ಸನ್ನು ಮಾಡಿದವನು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಪುಣ್ಯಾ ದ್ವಾರವತೀ ತತ್ರ ಯತ್ರಾಸ್ತೇ ಮಧುಸೂದನಃ |
ಸಾಕ್ಷಾದ್ದೇವಃ ಪುರಾಣೋಽಸೌ ಸ ಹಿ ಧರ್ಮಃ ಸನಾತನಃ ॥21॥
ಅಲ್ಲಿ ಮಧುಸೂದನನು ಇರುವ ಪವಿತ್ರವಾದ ದ್ವಾರವತಿಯು ಇದೆ. ಅವನೇ ಪುರಾತನನಾದ ಸಾಕ್ಷಾತ್ ದೇವದೇವನು. ಅವನೇ ವೇದ ಪ್ರತಿಪಾದ್ಯನಾದ  ಸನಾತನ ಧರ್ಮರೂಪನಾದವನು.
ಯೇ ಚ ವೇದವಿದೋ ವಿಪ್ರಾ ಯೇ ಚಾಧ್ಯಾತ್ಮವಿದೋ ಜನಾಃ |
ತೇ ವದಂತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಮ್ ॥22॥
ವೇದವನ್ನು ತಿಳಿದ ವಿಪ್ರರು ಮತ್ತು ಅಧ್ಯಾತ್ಮವಿದ್ಯೆಯನ್ನು ಬಲ್ಲ ಜನರು ಮಹಾತ್ಮನಾದ ಕೃಷ್ಣನನ್ನು ಸನಾತನಧರ್ಮವೆಂದು ಹೇಳುತ್ತಾರೆ.
ಪವಿತ್ರಾಣಾಂ ಹಿ ಗೋವಿಂದಃ ಪವಿತ್ರಂ ಪರಮುಚ್ಯತೇ |
ಪುಣ್ಯಾನಾಮಪಿ ಪುಣ್ಯೋಽಸೌ ಮಂಗಲಾನಾಂ ಚ ಮಂಗಲಮ್ ॥23॥
ಆ ಗೋವಿಂದನು ಪವಿತ್ರವಾದ ವಸ್ತುಗಳಿಗಿಂತ ಇನ್ನೂ ಪವಿತ್ರನಾದವನು ಎಂದು ಹೇಳಲ್ಪಡುತ್ತಾನೆ. ಅವನು ಪುಣ್ಯವಸ್ತುಗಳಿಗೆ ಪುಣ್ಯಪ್ರದನು ಮತ್ತು  ಮಂಗಳವಸ್ತುಗಳಿಗೆ ಮಾಂಗಲ್ಯಪ್ರದನು.
ತ್ರೈಲೋಕ್ಯಂ ಪುಂಡರೀಕಾಕ್ಷೋ ದೇವದೇವಃ ಸನಾತನಃ |
ಅವ್ಯಯಾತ್ಮಾ ಮಹಾತ್ಮಾ ಚ ಕ್ಷೇತ್ರಕೃತ್ ಪರಮೇಶ್ವರಃ ॥24॥
ಪುಂಡರೀಕಾಕ್ಷನೂ ದೇವದೇವನೂ ಸನಾತನನೂ  ಅವ್ಯಯ- ಸ್ವರೂಪನೂ ಮಹಾತ್ಮನೂ ತ್ರೈಲೋಕ್ಯಸೃಷ್ಟಿಕರ್ತನೂ ಪರಮೇಶ್ವರನೂ ಅಚಿಂತ್ಯೈಶ್ವರ್ಯಸಂಪನ್ನನೂ ಆದ ಮಧುಸೂದನರೂಪನಾದ ಹರಿಯು ಅಲ್ಲಿಯೇ ಇರುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ಮೂರನೆಯ ಅಧ್ಯಾಯ ಮುಗಿಯಿತು.
*****
ಎಂಬತ್ನಾಲ್ಕನೆಯ ಅಧ್ಯಾಯ
(ಯುಧಿಷ್ಠಿರನನ್ನು ಕುರಿತು ಪಶ್ಚಿಮದಿಕ್ಕಿನ ಕ್ಷೇತ್ರಗಳ ವರ್ಣನೆ.)
ಧೌಮ್ಯಃ
ಅವಂತೀಷು ಪ್ರತೀಚ್ಯಾಂ ವೈ ಕೀರ್ತಯಿಷ್ಯಾಮಿ ತೇ ದಿಶಿ |
ಯಾನಿ ಯತ್ರ ಪವಿತ್ರಾಣಿ ಪುಣ್ಯಾನ್ಯಾಯತನಾನಿ ಚ ॥1॥
ಪಶ್ಚಿಮ ದಿಕ್ಕಿನಲ್ಲಿ  ಅವಂತಿದೇಶದಲ್ಲಿರುವ ಪವಿತ್ರವಾದ ಮತ್ತು ಪುಣ್ಯಪ್ರದವಾದ ಸ್ಥಳಗಳನ್ನು ಹೇಳುತೆತೇನೆ.
ಪ್ರಿಯಂಗ್ವಾಮ್ರವಣೋಪೇತಾ ವಾನೀರವನಮಾಲಿನೀ |
ಪ್ರತ್ಯಕ್ಸ್ರೋತಾ ನದೀ ಪುಣ್ಯಾ ನರ್ಮದಾ ತತ್ರ ಭಾರತ ॥2॥
ಎಲೈ ಭಾರತನೇ, ಅಲ್ಲಿ ಪ್ರಿಯಂಗು ಆಮ್ರ ಇವುಗಳ ವನದಿಂದ ಕೂಡಿದ ಸುತ್ತಲೂ ಬೆತ್ತದವನಗಳಿರುವ ಪಶ್ಚಿಮಾಭಿಮುಖವಾಗಿ ಹರಿಯುವ ಪುಣ್ಯಪ್ರದವಾದ ನರ್ಮದಾ ನದಿಯಿದೆ.
ನಿಕೇತಃ ಶ್ರೂಯತೇ ಪುಣ್ಯೋ ಯತ್ರ ವಿಶ್ರವಸೋ ಮುನೇಃ |
ಜಜ್ಞೇ ಧನಪತಿರ್ಯತ್ರ ಕುಬೇರೋ ನರವಾಹನಃ ॥3॥

ಅಲ್ಲಿ ವಿಶ್ರವಸ್ ಮುನಿಗಳ ಪವಿತ್ರವಾದ ಆಶ್ರಮವಿದೆ. ಧನವತಿಯಾದ ನರವಾಹನನಾದ ಕುಬೇರನು ಅಲ್ಲಿ ಜನಿಸಿದನು.
ವೈಡೂರ್ಯಶಿಖರೋ ನಾಮ ಪುಣ್ಯೋ ಗಿರಿವರಃ ಶುಭಃ |
ದಿವ್ಯಪುಷ್ಪಫಲಾಸ್ತತ್ರ ಪಾದಪಾ ಹರಿತಚ್ಛದಾಃ ॥4॥
ಅಲ್ಲಿ ವೈಡೂರ್ಯಶಿಖರವೆಂಬ ಪವಿತ್ರವಾದ ಮತ್ತು ಶ್ರೇಷ್ಠವಾದ ಪರ್ವತವಿದೆ. ಅದರಲ್ಲಿರುವ ಮರಗಳು ಹಸಿರು ಎಲೆಗಳಿಂದಲೂ ದಿವ್ಯವಾದ ಪುಷ್ಪಫಲಗಳಿಂದಲೂ ಕೂಡಿರುತ್ತವೆ.
ತಸ್ಯ ಶೈಲಸ್ಯ ಶಿಖರೇ ಸರಸ್ತಸ್ಯ ಚ ಧೀಮತಃ |
ಪ್ರಫುಲ್ಲನಲಿನಂ ರಾಜನ್ ದೇವಗಂಧರ್ವಸೇವಿತಮ್ ॥5॥
ಎಲೈ ರಾಜನೇ, ಆ ಪರ್ವತದ ಶಿಖರದಲ್ಲಿ ಮೇಧಾವಿಯಾದ ಕುಬೇರನ ಸರೋವರವಿದೆ. ಅರಳಿದ ಕಮಲಗಳಿಂದ ಕೂಡಿದ ಅದು ದೇವಗಂಧರ್ವಸೇವಿತವಾಗಿದೆ.
ಬಹ್ವಾಶ್ಚರ್ಯಂ ಮಹಾರಾಜ ದೃಶ್ಯತೇ ತತ್ರ ಪರ್ವತೇ |
ಪುಣ್ಯೇ ಸ್ವರ್ಗೋಪಮೇ ದಿವ್ಯೇ ನಿತ್ಯಂ ದೇವರ್ಷಿಸೇವಿತೇ ॥6॥
ಎಲೈ ಮಹಾರಾಜನೇ, ದೇವರ್ಷಿಸೇವಿತವಾದ ಸ್ವರ್ಗಸದೃಶವಾದ ದಿವ್ಯವಾದ ಮತ್ತು ಪುಣ್ಯಪ್ರದವಾದ ಆ ಪರ್ವತದಲ್ಲಿ ನಿತ್ಯವೂ ಅನೇಕಾಶ್ಚರ್ಯಗಳು ಕಂಡುಬರುತ್ತವೆ.
ಹ್ರಾದಿನೀ ಪುಣ್ಯತೀರ್ಥಾ ಚ ರಾಜರ್ಷೇಸ್ತತ್ರ ವೈ ಸರಿತ್ |
ವಿಶ್ವಾಮಿತ್ರೇಣ ತಪಸಾ ನಿರ್ಮಿತಾ ಸರ್ವಪಾವನೀ ॥7॥
ಅಲ್ಲಿ ರಾಜರ್ಷಿಯಾದ ಗಾಧಿಗೆ ವಿಶ್ವಾಮಿತ್ರರು ತಮ್ಮ ತಪಸ್ಸಿನಿಂದ ನಿರ್ಮಿಸಿದಂತಹ ಸರ್ವಪಾವನೆಯಾದ ಪುಣ್ಯಜನೋಪೇತವಾದ ಹ್ರಾದಿನೀ ಎಂಬ ನದಿಯಿದೆ.
ಯಸ್ಯಾಸ್ತೀರೇ ಸತಾಂ ಮಧ್ಯೇ ಯಯಾತಿರ್ನಹುಷಾತ್ಮಜಃ |
ಪಪಾತ ಸ ಪುನರ್ಲೋಕಾನ್ಲೇಭೇ ಧರ್ಮಾನ್ ಸುಶಾಶ್ವತಾನ್ ॥
ನಹುಷಪುತ್ರನಾದ ಯಯಾತಿಯು ಆ ನದಿಯ ತೀರದಲ್ಲಿ ಸಜ್ಜನರ ಮಧ್ಯದಲ್ಲಿ ಬಿದ್ದು ಪುನಃ ಶಾಶ್ವತವಾದ ಧರ್ಮಗಳನ್ನು ಮತ್ತು ಶುಭವಾದ ಲೋಕಗಳನ್ನು ಹೊಂದಿದನು.
ತತ್ರ ಪುಣ್ಯೋ ಹ್ರದಸ್ತಾತ ಮೈನಾಕಶ್ಚೈವ ಪರ್ವತಃ |
ಬಹುಮೂಲಫಲೋ ವೀರ ತ್ವಸಿತೋ ನಾಮ ಪರ್ವತಃ ॥9॥
ಎಲೈ ವೀರನೇ, ಅಲ್ಲಿ ಪುಣ್ಯಸರೋವರವೂ ಮೈನಾಕಪರ್ವತವೂ ಬಹುಮೂಲಫಲಗಳಿರುವ ಅಸಿತವೆಂಬ ಪರ್ವತವೂ ಇದೆ.
ಆಶ್ರಮಃ ಕಕ್ಷಸೇನಸ್ಯ ಪುಣ್ಯಸ್ತತ್ರ ಯುಧಿಷ್ಠಿರ |
ಚ್ಯವನಸ್ಯಾಶ್ರಮಶ್ಚೈವ ಖ್ಯಾತಃ ಸರ್ವತ್ರ ಪಾಂಡವ |
ತತ್ರಾಲ್ಪೇನೈವ ಸಿಧ್ಯಂತಿ ಮಾನವಾಸ್ತಪಸಾ ವಿಭೋ ॥10॥
ಎಲೈ ಯುಧಿಷ್ಠಿರನೇ, ಅಲ್ಲಿ ಕಕ್ಷಸೇನನ ಪವಿತ್ರವಾದ ಆಶ್ರಮವಿದೆ. ಎಲೈ ಪಾಂಡವನೇ, ಸರ್ವತ್ರ ಪ್ರಸಿದ್ಧವಾದ ಚ್ಯವನರ ಆಶ್ರಮವು ಅಲ್ಲಿಯೇ ಇದೆ. ಎಲೈ ವಿಭುವೇ ಅಲ್ಲಿ ಮಾನವರು ಅಲ್ಪ ತಪಸ್ಸಿನಿಂದಲೇ ಸಿದ್ಧಿಯನ್ನು ಪಡೆಯುತ್ತಾರೆ.
ಜಂಬೂಮಾರ್ಗೋ ಮಹಾರಾಜ ಋಷೀಣಾಂ ಭಾವಿತಾತ್ಮನಾಮ್ |
ಆಶ್ರಮಃ ಶ್ರಾವ್ಯತೇ ಶ್ರೇಷ್ಠೋ ಮೃಗದ್ವಿಜಗಣಾಯುತಃ ॥11॥
ಎಲೈ ಮಹಾರಾಜನೇ, ಮೃಗಪಕ್ಷಿಗಳ ಸಮೂಹದಿಂದ ಕೂಡಿದ ಶ್ರೇಷ್ಠವಾದ ಜಿತಮನಸ್ಕರಾದ ಋಷಿಗಳ ಜಂಬೂಮಾರ್ಗವೆಂಬ ಆಶ್ರಮವು ಅಲ್ಲಿ ಕೇಳಿ ಬರುತ್ತದೆ.
ಜಂಬೂಮಾರ್ಗೋ ಮಹಾರಾಜ ಸತತಂ ತಾಪಸೈರ್ಯುತಃ |
ಕೇತುಮಾಲಾ ಚ ಮೇಧ್ಯಾ ಚ ಗಂಗಾರಣ್ಯಂ ಚ ಭೂಮಿಪ |
ಖ್ಯಾತಂ ಚ ಸೈಂಧವಾರಣ್ಯಂ ಪುಣ್ಯಂ ದ್ವಿಜನಿಷೇವಿತಮ್ ॥12॥
ಮಹಾರಾಜನೇ, ಜಂಬೂಮಾರ್ಗ ಮಹಾಶ್ರಮವು ಯಾವಾಗಲೂ ತಪಸ್ವಿಗಳಿಂದ ಕೂಡಿರುತ್ತದೆ. ಎಲೈ ಭೂಮಿಪಾಲನೇ, ಅಲ್ಲಿ ಬ್ರಾಹ್ಮಣರಿಂದ ಸೇವಿತವಾದ ಪವಿತ್ರವಾದ ಕೇತುಮಾಲಾ ಮತ್ತು ಮೇಧ್ಯಾ ನದಿಗಳು ಮತ್ತು ಪ್ರಸಿದ್ಧವಾದ ಗಂಗಾರಣ್ಯ ಮತ್ತು ಸೈಂಧವಾರಣ್ಯಗಳು ಇವೆ.
ಪಿತಾಮಹಸರಃ ಪುಣ್ಯಂ ಪುಷ್ಕರಂ ನಾಮ ಭಾರತ |
ವೈಖಾನಸಾನಾಂ ಸಿದ್ಧಾನಾಮ್ ಋಷೀಣಾಮಾಶ್ರಮಃ ಪ್ರಿಯಃ ॥13॥
ಎಲೈ ಭಾರತನೇ, ಅಲ್ಲಿ ಬ್ರಹ್ಮದೇವರ ಸರೋವರವಾದ ಪವಿತ್ರವಾದ ಪುಷ್ಕರಕ್ಷೇತ್ರವಿದೆ. ವೈಖಾನಸರಿಗೆ ಸಿದ್ಧರಿಗೆ ಮತ್ತು ಋಷಿಗಳಿಗೆ ಪ್ರಿಯವಾದ ಆಶ್ರಮವು ಅಲ್ಲಿದೆ.
ಅಪ್ಯತ್ರ ಸಂಸ್ತವಾರ್ಥಾಯ ಪ್ರಜಾಪತಿರಥೋ ಜಗೌ |
ಪುಷ್ಕರೇಷು ನರಶ್ರೇಷ್ಠ ಗಾಥಾಂ ಸುಕೃತಿನಾಂ ಶೃಣು ॥14॥
ಎಲೈ ನರಶ್ರೇಷ್ಠನೇ, ಅದನ್ನು ಸೊತ್ರೇತ್ರಮಾಡುವುದಕ್ಕೋಸ್ಕರ ಪ್ರಜಾಪತಿಗಳಾದ ಬ್ರಹ್ಮದೇವರು ಒಂದು ಗಾಥೆಯನ್ನು ಹಾಡಿದ್ದಾರೆ. ಅದನ್ನು ಕೇಳು.
ಮನಸಾಪ್ಯಭಿಕಾಮಸ್ಯ ಪುಷ್ಕರಾಣಿ ಮನಸ್ವಿನಃ |
ಪಾಪಾನಿ ವಿಪ್ರಣಶ್ಯಂತಿ ನಾಕಪೃಷ್ಠೇ ಚ ಮೋದತೇ ॥15॥
ಯಾವ ಧೀರನು ಮನಸ್ಸಿನಿಂದಲಾದರೂ ಪುಷ್ಕರಗಳಿಗೆ ಹೋಗಲು ಬಯಸುತ್ತಾನೆಯೋ ಅವನ ಪಾಪಗಳು ನಾಶವನ್ನು

ಹೊಂದುತ್ತವೆ. ಅವನು ಸ್ವರ್ಗಲೋಕದಲ್ಲಿ ಸಂತೋಷಪಡುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರಶೀತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೈದನೆಯ ಅಧ್ಯಾಯ
ಧೌಮ್ಯರಿಂದ ಯುಧಿಷ್ಠಿರನನ್ನು ಕುರಿತು ಉತ್ತರದಿಕ್ಕಿನ ತೀರ್ಥಕ್ಷೇತ್ರಗಳ ವರ್ಣನೆ.
ಧೌಮ್ಯಃ
ಉದೀಚ್ಯಾಂ ರಾಜಶಾರ್ದೂಲ ದಿಶಿ ತೀರ್ಥಾನಿ ಯಾನಿ ವೈ |
ತಾನಿ ತೇ ಕೀರ್ತಯಿಷ್ಯಾಮಿ ಪುಣ್ಯಾನ್ಯಾಯತನಾನಿ ಚ ॥1॥
ಧೌಮ್ಯರು ಎಲ್ಲೈ ರಾಜಶಾರ್ದೂಲನೇ, ಉತ್ತರದಿಕ್ಕಿನಲ್ಲಿರುವ ತೀರ್ಥಗಳನ್ನು ಮತ್ತು ಪವಿತ್ರವಾದ ಕ್ಷೇತ್ರಗಳನ್ನು ನಿನಗೆ ಹೇಳುವೆನು.
ಸರಸ್ವತೀ ಪುಣ್ಯತಮಾ ಹ್ರಾದಿನೀ ವನಮಾಲಿನೀ |
ಸಮುದ್ರಗಾ ಮಹಾವೇಗಾ ಯಮುನಾ ಯತ್ರ ಪಾಂಡವ ॥2॥
ಎಲೈ ಪಾಂಡವನೇ, ಅಲ್ಲಿ ಪವಿತ್ರವಾದ ವನಗಳ ಮಧ್ಯದಲ್ಲಿ ನಿರ್ಘೋಷದಿಂದ ಹರಿಯುವ ಮಹಾವೇಗವುಳ್ಳ ಸಮುದ್ರಗಾಮಿಯಾದ ಸರಸ್ವತೀನದಿಯೂ ಮತ್ತು ಯಮುನಾ ನದಿಯೂ ಇವೆ.
ಯತ್ರ ಪುಣ್ಯತಮಂ ತೀರ್ಥಂ ಪ್ಲಕ್ಷಾವತರಣಂ ಶುಭಮ್ |
ಯತ್ರ ಸಾರಸ್ವತೈರಿಷ್ಟ್ವಾ ಗಚ್ಛಂತ್ಯವಭೃಥಂ ದ್ವಿಜಾಃ ॥3॥
ಅಲ್ಲಿ ಶುಭವು, ಪವಿತ್ರವು ಆದ ಲಕ್ಷಾವತರಣವೆಂಬ ತೀರ್ಥವಿದೆ. ಆ ತೀರ್ಥದಲ್ಲಿ ಸಾರಸ್ವತ ಬ್ರಾಹ್ಮಣರು ಯಜ್ಞವು ಮುಗಿದ ಮೇಲೆ ಮಾಡುವ ಅವಭೃಥ ಸ್ನಾನವನ್ನು ಮಾಡಿದರು.
ಪುಣ್ಯಂ ಚಾಖ್ಯಾಯತೇ ದಿವ್ಯಂ ಶಿವಮಗ್ನಿಶಿರೋ ನೃಪ |
ಸಹದೇವೋಽಯಜದ್ಯತ್ರ ಶಮ್ಯಾಕ್ಷೇಪೇಣ ಭಾರತ ॥4॥
ಎಲೈ ರಾಜನೇ, ಭಾರತನೇ, ಅಲ್ಲಿ ದಿವ್ಯವೂ ಮಂಗಳವೂ ಮತ್ತು ಪವಿತ್ರವೂ ಆದ ಅಗ್ನಿಶಿರ ಎಂಬ ಕ್ಷೇತ್ರವಿದೆ. ಸಹದೇವನು ಅಲ್ಲಿ ಯಜ್ಞಸಾಧನವಾದ ಶಮ್ಯ ಎಂಬ ಉಪಕರಣವನ್ನು ಎಸೆದು ಯಜ್ಞವನ್ನು ಮಾಡಿದನು.
ಏತಸ್ಮಿನ್ನೇವ ಚಾರ್ಥೇಽಸೌ ಇಂದ್ರಗೀತಾ ಯುಧಿಷ್ಠಿರ |
ಗಾಥಾ ಚರತಿ ಲೋಕೇಽಸ್ಮಿನ್ ಗೀಯಮಾನಾ ದ್ವಿಜಾತಿಭಿಃ ॥5॥
ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೇ ಇಂದ್ರನಿಂದ ಹಾಡಲ್ಪಟ್ಟ ಒಂದು ಗೀತೆಯಿದೆ. ಅದನ್ನು ಬ್ರಾಹ್ಮಣರು ಇಂದಿಗೂ ಗಾನಮಾಡಿ ಪ್ರಚಾರದಲ್ಲಿಟ್ಟಿದ್ದಾರೆ.
ಅಗ್ನಯಃ ಸಹದೇವೇನ ಯೇ ಚಿತಾ ಯಮುನಾಮನು |
ಶತಂ ಶತಸಹಸ್ರಾಣಿ ಸಹಸ್ರಶತದಕ್ಷಿಣಾಃ ॥6॥
ಯಮುನಾ ನದಿಯ ದಡದಲ್ಲಿ ಸಹದೇವನು ಅಗ್ನಿಚಯನವನ್ನು ಮಾಡಿದ ಯಾಗಗಳಲ್ಲಿ ಶತ, ಶತಸಹಸ್ರ ಮತ್ತು ಸಹಸ್ರಶತದಕ್ಷಿಣೆಯಿದ್ದಿತು.
ತತ್ರೈವ ಭರತೋ ರಾಜಾ ಚಕ್ರವರ್ತೀ ಮಹಾಯಶಾಃ |
ವಿಂಶತಿಂ ಸಪ್ತ ಚಾಷ್ಟೌ ಚ ಹಯಮೇಧಾನುಪಾಹರತ್ ॥7॥
ಅಲ್ಲಿಯೇ ಮಹಾಕೀರ್ತಿಶಾಲಿಯಾದ ಭರತಚಕ್ರವರ್ತಿಯು ಮೂವತ್ತೈದು ಅಶ್ವಗಳನ್ನು ಕಟ್ಟಿ ಅಶ್ವಮೇಧ ಯಾಗವನ್ನು ಮಾಡಿದನು.
ಕಾಮಕೃದ್ಯೋ ದ್ವಿಜಾತೀನಾಂ ಶ್ರುತಸ್ತಾತ ಮಯಾ ಪುರಾ |
ಅತ್ಯಂತಮಾಶ್ರಮಃ ಪುಣ್ಯಃ ಶಂಕರಸ್ತತ್ರ ವಿಶ್ರುತಃ ॥8॥
ಎಲೈ ಪ್ರೀತಿಪಾತ್ರನೇ, ಬ್ರಾಹ್ಮಣರಿಗೆ ಅಭೀಷ್ಟವನ್ನು ಪೂರೈಸುವುದೆಂದು ನಾನು ಹಿಂದೆ ಯಾವ ಕ್ಷೇತ್ರವನ್ನು ಕೇಳಿದ್ದೆನೋ ಅಂತಹ ಪವಿತ್ರವಾದ ಸುಖಕರವಾದ ಪ್ರಖ್ಯಾತವಾದ ಆಶ್ರಮವು ಅಲ್ಲಿ ಇದೆ.
ಸರಸ್ವತೀ ನದೀ ಸದ್ಭಿಃ ಸತತಂ ಪಾರ್ಥ ಪೂಜಿತಾ |
ವಾಲಖಿಲ್ಯೈರ್ಮಹಾರಾಜ ಯತ್ರೇಷ್ಟಮೃಷಿಭಿಃ ಪುರಾ ॥9॥
ಎಲೈ ಪಾರ್ಥನೇ, ಸಜ್ಜನರಿಂದ ಸತತವಾಗಿ ಪೂಜಿತವಾದ ಸರಸ್ವತೀ ನದಿಯು ಅಲ್ಲಿದೆ. ಮಹಾರಾಜನೇ, ಅದರ ತೀರದಲ್ಲಿ ವಾಲಖಿಲ್ಯಋಷಿಗಳು ಹಿಂದೆ ಯಜ್ಞವನ್ನು ಮಾಡಿದರು.
ದೃಷದ್ವತೀ ಪುಣ್ಯತಮಾ ಯತ್ರ ಖ್ಯಾತಾ ಯುಧಿಷ್ಠಿರ |
ತತ್ರ ವೈವರ್ಣ್ಯವರ್ಣೌ ಚ ಪುಣ್ಯೌ ಭರತಸತ್ತಮ ॥10॥
ವೇದಜ್ಞೌ ವೇದವಿದಿತೌ ವಿದ್ಯಾವೇದವಿದಾವುಭೌ |
ಯಜಂತೌ ಕ್ರತುಭಿರ್ನಿತ್ಯಂ ಪುಣ್ಯೈರ್ಭರತಸತ್ತಮ ॥11॥
ಸಮೇತ್ಯ ಬಹುಶೋ ದೇವಾಃ ಸೇಂದ್ರಾಃ ಸವರುಣಾಃ ಪುರಾ |
ವಿಶಾಖಯೂಪೇಽತಪ್ಯಂತ ತಸ್ಮಾತ್ ಪುಣ್ಯತಮಃ ಸ ಚ ॥12॥
ಎಲೈ ಯುಧಿಷ್ಠಿರನೇ, ಅಲ್ಲಿ ಪವಿತ್ರವಾದ ಮತ್ತು ಪ್ರಖ್ಯಾತವಾದ ದೃಷದ್ವತೀ ನದಿಯಿದೆ. ಅಲ್ಲಿ ವೈವರ್ಣ್ಯ ಮತ್ತು ವರ್ಣ ಎಂಬ ಪವಿತ್ರರಾದ ವೇದಜ್ಞರಾದ, ವೇದಪ್ರಸಿದ್ಧರಾದ, ವೇದವಿದ್ಯಾವಿಶಾರದರಾದ ಇಬ್ಬರು ಋಷಿಗಳು ಯಾವಾಗಲೂ ಪವಿತ್ರವಾದ

ಯಜ್ಞಗಳಿಂದ ಯಾಗವನ್ನು ಮಾಡುತ್ತಾರೆ. ಎಲೈ ಭರತಸತ್ತಮನೇ, ಇಂದ್ರ, ವರುಣ ಮೊದಲಾದ ದೇವತೆಗಳು ಹಿಂದೆ ಅನೇಕಬಾರಿ ಅಲ್ಲಿಗೆ ಬಂದು ವಿಶಾಖಯೂಪ ಎಂಬ ಆ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಿದರು. ಆದ್ದರಿಂದ ಆ ದೇಶವು ಬಹಳ ಪವಿತ್ರವಾಗಿದೆ.
ಋಷಿರ್ಮಹಾನ್ ಮಹಾಭಾಗೋ ಜಮದಗ್ನಿರ್ಮಹಾಯಶಾಃ |
ಪಲಾಶಕೇಷು ಪುಣ್ಯೇಷು ರಮ್ಯೇಷ್ವಯಜತಾಭಿಭೂಃ ॥13॥
ಮಹಾನುಭಾವರೂ, ಮಹಾಕೀರ್ತಿಶಾಲಿಗಳೂ, ಸರ್ವಾಭಿಭವ ಸಾಮರ್ಥ್ಯವುಳ್ಳವರೂ ಆದ ಜಮದಗ್ನಿಮಹರ್ಷಿಗಳು ಅಲ್ಲಿ ಸುಂದರವಾದ, ಪವಿತ್ರವಾದ ಫಲಾಶಷ ಎಂಬ ಪ್ರದೇಶಗಳಲ್ಲಿ ಯಜ್ಞವನ್ನು ಮಾಡಿದರು.
ಯತ್ರ ಸರ್ವಾಃ ಸರಿಚ್ಛ್ರೇಷ್ಠಾಃ ಸಾಕ್ಷಾತ್ ತಮೃಷಿಸತ್ತಮಮ್ |
ಸ್ವಂಸ್ವಂ ತೋಯಮುಪಾದಾಯ ಪರಿವಾರ್ಯೋಪತಸ್ಥಿರೇ ॥14॥
ಆಗ ಎಲ್ಲ ಶ್ರೇಷ್ಠವಾದ ನದಿಗಳು ಶರೀರವನ್ನು ಧರಿಸಿ ತಮ್ಮ ತಮ್ಮ ಜಲವನ್ನು ತೆಗೆದುಕೊಂಡು ಬಂದು ಆ ಋಷಿಶ್ರೇಷ್ಠರನ್ನು ಸುತ್ತುವರಿದು ಅವರ ಸೇವೆಯನ್ನು ಮಾಡಿದವು.
ಅಪಿ ಚಾತ್ರ ಮಹಾರಾಜ ಸ್ವಯಂ ವಿಶ್ವಾವಸುರ್ಜಗೌ |
ಇಮಂ ಶ್ಲೋಕಂ ತದಾ ವೀರ ಯಜ್ಞಂ ವೀಕ್ಷ್ಯ ಮಹಾತ್ಮನಃ ॥15॥
ಎಲೈ ಮಹಾರಾಜನೇ, ಆ ಮಹಾತ್ಮರ ಯಜ್ಞವನ್ನು ನೋಡಿದ ವಿಶ್ವಾವಸು ಗಂಧರ್ವನು ಸ್ವತಃ ಆಗ ಈ ಶ್ಲೋಕವನ್ನು ಹಾಡಿದನು.
ಯಜಮಾನಸ್ಯ ವೈ ದೇವಾಃ ಜಮದಗ್ನೇರ್ಮಹಾತ್ಮನಃ |
ಆಗಮ್ಯ ಸರಿತಃ ಸರ್ವಾನ್ ಮಧುನಾ ಸಮತರ್ಪಯನ್ ॥16॥
ಮಹಾತ್ಮರಾದ ಜಮದಗ್ನಿಗಳು ಯಜ್ಞವನ್ನು ಮಾಡುತ್ತಿರುವಾಗ ನದಿಗಳು ಶರೀರವನ್ನು ಧರಿಸಿಬಂದು ಎಲ್ಲ ದೇವತೆಗಳಿಗೂ ಮಧುವನ್ನು ಬಡಿಸಿದರು.
ಗಂಧರ್ವಯಕ್ಷರಕ್ಷೋಭಿರಪ್ಸರೋಭಿಶ್ಚ ಶೋಭಿತಮ್ |
ಕಿರಾತಕಿನ್ನರಾವಾಸಂ ಶೈಲಂ ಶಿಖರಿಣಾಂ ವರಮ್ ॥17॥
ಬಿಭೇದ ತರಸಾ ಗಂಗಾ ಗಂಗಾದ್ವಾರೇ ಯುಧಿಷ್ಠಿರ |
ಪುಣ್ಯಂ ತತ್ ಖ್ಯಾಯತೇ ರಾಜನ್ ಬ್ರಹ್ಮರ್ಷಿಗಣಸೇವಿತಮ್ ॥18॥
ಭೃಗುರ್ಯತ್ರ ತಪಸ್ತೇಪೇ ಮಹರ್ಷಿಗಣಸೇವಿತಃ |
ಸ ರಾಜನ್ನಾಶ್ರಮಃ ಖ್ಯಾತೋ ಭೃಗುತುಂದೋ ಮಹಾಗಿರಿಃ ॥19॥
ಎಲೈ ಯುಧಿಷ್ಠಿರನೇ, ಗಂಗೆಯು ತನ್ನ ವೇಗದಿಂದ ಗಂಧರ್ವ, ಯಕ್ಷ, ರಾಕ್ಷಸ ಮತ್ತು ಅಪ್ಸರೆಯರಿಂದ ಶೋಭಿತವಾದ ಕಿರಾತಕಿನ್ನರರಿಗೆ ಆವಾಸಸ್ಥಾನವಾದ ಶ್ರೇಷ್ಠವಾದ ಪರ್ವತವನ್ನು ಗಂಗಾದ್ವಾರದಲ್ಲಿ ಭೇದಿಸಿದಳು. ಆ ಕ್ಷೇತ್ರವು ಬ್ರಹ್ಮರ್ಷಿಗಣ ಸೇವಿತವಾಗಿ ಪವಿತ್ರವಾದುದೆಂದು ಪ್ರಸಿದ್ಧವಾಗಿದೆ. ಎಲೈ ರಾಜನೇ, ಮಹರ್ಷಿಗಳ ಸಮಗಮದಿಂದ ಸೇವಿತವಾದ ಆ ಸ್ಥಳದಲ್ಲಿ ಭೃಗು ಋಷಿಗಳು ತಪಸ್ಸನ್ನು ಮಾಡಿದರು. ಭೃಗುತುಂದ ಎಂಬ ಶ್ರೇಷ್ಠ ಪರ್ವತರೂಪವಾದ ಆ ಆಶ್ರಮವು ಪ್ರಖ್ಯಾತವಾಗಿದೆ.
ಯಚ್ಚ ಭೂತಂ ಭವಿಷ್ಯಚ್ಚ ಭವಚ್ಚ ಭರತರ್ಷಭ |
ನಾರಾಯಣಃ ಪ್ರಭುರ್ವಿಷ್ಣುಃ ಶಾಶ್ವತಃ ಪುರುಷೋತ್ತಮಃ ॥20॥
ತಸ್ಯಾತಿಯಶಸಃ ಪುಣ್ಯಾಂ ವಿಶಾಲಾಂ ಬದರೀಮನು |
ಆಶ್ರಮಃ ಖ್ಯಾಯತೇ ಪುಣ್ಯಂ ತ್ರಿಷು ಲೋಕೇಷು ಭಾರತ ॥21॥
ಎಲೈ ಭರತರ್ಷಭನೇ, ಭೂತಭವ್ಯಭವತ್ಪ್ರಭುವೆಂದು, ಪುರುಷೋತ್ತಮನೆಂದು, ಶಾಶ್ವತನೆಂದು, ವಿಷ್ಣುವೆಂದು ಕರೆಯಲ್ಪಡುವ ಮಹಾಕೀರ್ತಿವಂತನಾದ ನಾರಾಯಣನ ಆಶ್ರಮವು ವಿಶಾಲಾ ಎಂದು ಕರೆಯಲ್ಪಡುವ ಬದರೀಕ್ಷೇತ್ರದಲ್ಲಿದೆ. ಎಲೈ ಭಾರತನೇ, ಆ ಆಶ್ರಮವು ಬಹಳ ಪವಿತ್ರವಾದುದೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ.
ಉಷ್ಣಾತೋಯವಹಾ ಗಂಗಾ ಶೀತತೋಯವಹಾऽಪರಾ |
ಸುವರ್ಣಸಿಕತಾ ರಾಜನ್ ವಿಶಾಲಾಂ ಬದರೀಮನು ॥22॥
ಎಲೈ ರಾಜನೇ, ಬದರೀವಿಶಾಲಾಕ್ಷೇತ್ರದಲ್ಲಿ ಉಷ್ಣಜಲವನ್ನು ಹೊಂದಿರುವ ಉಷ್ಣಗಂಗೆಯೂ ಶೀತಜಲವನ್ನು ಹೊಂದಿರುವ ಇನ್ನೊಂದು ಶೀತಗಂಗೆಯೂ ಇದೆ. ಆ ಗಂಗೆಯ ಪಾರ್ಶ್ವದಲ್ಲಿ ಸುವಣರ್ಮಯವಾದ ಮರುಳಗಳು ಇವೆ.
ಋಷಯೋ ಯತ್ರ ದೇವಾಶ್ಚ ಮಹಾಭಾಗಾ ಮಹೌಜಸಃ |
ಪ್ರಾಪ್ಯ ನಿತ್ಯಂ ನಮಸ್ಯಂತೇ ದೇವಂ ನಾರಾಯಣಂ ಪ್ರಭುಮ್ ॥23॥
ಅಲ್ಲಿ ಮಹಾಸಾಮರ್ಥ್ಯೋಪೇತರಾದ ಮಹಾನುಭಾವರಾದ ದೇವತೆಗಳು ಮತ್ತು ಋಷಿಗಳು ಪ್ರತಿನಿತ್ಯವೂ ಬಂದು ಪ್ರಭುವಾದ ನಾರಾಯಣದೇವರಿಗೆ ನಮಸ್ಕಾರವನ್ನು ಸಲ್ಲಿಸುತ್ತಾರೆ.
ಯತ್ರ ನಾರಾಯಣೋ ದೇವಃ ಪರಮಾತ್ಮಾ ಸನಾತನಃ |
ತತ್ರ ಕೃತ್ಸ್ನಂ ಜಗತ್ ಪಾರ್ಥ ತೀರ್ಥಾನ್ಯಾಯತನಾನಿ ಚ ॥24॥
ಎಲೈ ಪಾರ್ಥನೇ, ಎಲ್ಲಿ ಸನಾತನನಾದ ಪರಮಾತ್ಮನಾದ, ದೇವನಾದ ನಾರಾಯಣನಿದ್ದಾನೆಯೋ ಅಲ್ಲಿ ಸಮಸ್ತವಾದ ಜಗತ್ತು, ಎಲ್ಲಾ ತೀರ್ಥಗಳು ಮತ್ತು ಎಲ್ಲಾ ಕ್ಷೇತ್ರಗಳೂ ಇರುತ್ತವೆ.
ತತ್ ಪುಣ್ಯಂ ತತ್ ಪರಂ ಬ್ರಹ್ಮ ತತ್ ತೀರ್ಥಂ ತತ್ ತಪೋವನಮ್|
ತತ್ರ ದೇವರ್ಷಯಃ ಸಿದ್ಧಾಃ ಸರ್ವೇ ಚೈವ ತಪೋಧನಾಃ ॥25॥
ಆದಿದೇವೋ ಮಹಾಯೋಗೀ ಯತ್ರಾಸ್ತೇ ಮಧುಸೂದನಃ |
ಪುಣ್ಯಾನಾಮಪಿ ತತ್ ಪುಣ್ಯಂ ಮಾ ಭೂತ್ ತೇ ಸಂಶಯೋऽತ್ರ ವೈ ॥

ಆದಿದೇವನೂ, ಮಹಾಯೋಗಿಯೂ ಆದ ಮಧುಸೂದನನು ಎಲ್ಲಿ ಇದ್ದಾನೆಯೋ ಅದೇ ಪವಿತ್ರವಾದ ಸ್ಥಳ; ಅವನೇ ಪರಂಬ್ರಹ್ಮ; ಅದೇ ತೀರ್ಥ; ಅದೇ ತಪೋವನ. ಅಲ್ಲಿ ಎಲ್ಲಾ ದೇವತೆಗಳು, ಋಷಿಗಳು, ಸಿದ್ಧರು ಮತ್ತು ತಪೋಧನರೂ ಇರುತ್ತಾರೆ. ಅದು ಪವಿತ್ರವಾದ ಕ್ಷೇತ್ರಗಳಿಗಿಂತ ಪರಮಪವಿತ್ರವಾದುದು. ಈ ವಿಷಯದಲ್ಲಿ ನಿನಗೆ ಸಂಶಯವು ಇಲ್ಲದಿರಲಿ.
ಏತಾನಿ ರಾಜನ್ ಪುಣ್ಯಾನಿ ಪೃಥಿವ್ಯಾಂ ಪೃಥಿವೀಪತೇ |
ಕೀರ್ತಿತಾನಿ ನರಶ್ರೇಷ್ಠ ತೀರ್ಥಾನ್ಯಾಯತನಾನಿ ಚ ॥27॥
ಎಲೈ ರಾಜನೇ, ಪೃಥಿವೀಪತಿಯೇ, ನರಶ್ರೇಷ್ಠನೇ, ಇವು ಭೂಮಿಯ ಮೇಲಿರುವ ಪವಿತ್ರವಾದ ತೀರ್ಥಕ್ಷೇತ್ರಗಳು. ಇವುಗಳನ್ನು ನಾನು ನಿನಗೆ ಹೇಳಿದ್ದೇನೆ.
ಏತಾನಿ ವಸುಭಿಃಸಾಧ್ಯೈರಾದಿತ್ಯೈರ್ಮರುದಶ್ವಿಭಿಃ |
ಋಷಿಭಿರ್ಬ್ರಹ್ಮಕಲ್ಪೈಶ್ಚ ಸೇವಿತಾನಿ ಮಹಾತ್ಮಭಿಃ ॥28॥
ಈ ತೀರ್ಥಕ್ಷೇತ್ರಗಳು ಮಹಾತ್ಮರಾದ ವಸುಗಳಿಂದಲೂ, ಸಾಧ್ಯರಿಂದಲೂ, ಆದಿತ್ಯರಿಂದಲೂ, ಮರುತುತಗಳಿಂದಲೂ, ಅಶ್ವಿನಿಗಳಿಂದಲೂ, ಬ್ರಹ್ಮಕಲ್ಪರಾದ ಋಷಿಗಳಿಂದಲೂ ಸೇವಿಸಲ್ಪಡುತ್ತವೆ.
ಚರನ್ನೇತಾನಿ ಕೌಂತೇಯ ಸಹಿತೋ ಬ್ರಾಹ್ಮಣರ್ಷಭೈಃ |
ಭ್ರಾತೃಭಿಶ್ಚ ಮಹಾಭಾಗೈರುತ್ಕಂಠಾಂ ವಿಜಹಿಷ್ಯಸಿ ॥29॥
ಎಲೈ ಕೌಂತೇಯನೇ, ನೀನು ಬ್ರಾಹ್ಮಣಶ್ರೇಷ್ಠರ ಮತ್ತು ಮಹಾನುಭಾವರಾದ ತಮ್ಮಂದಿರ ಜೊತೆಯಲ್ಲಿ ಈ ತೀರ್ಥಕ್ಷೇತ್ರಯಾತ್ರೆಯನ್ನು ಮಾಡಿದರೆ ನಿನ್ನ ಮನಸ್ಸಿನ ದುಗುಡವು ಪರಿಹಾರ ಹೊಂದುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಾಶೀತಿತಮೋಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತಾರನೆಯ ಅಧ್ಯಾಯ
ಇಂದ್ರನ ವಚನದಂತೆ ಲೋಮಶರಿಂದ ಯುಧಿಷ್ಠಿರನಿಗೆ
ಅರ್ಜುನನ ವೃತ್ತಾಂತ ಕಥನ.
ವೈಶಂಪಾಯನಃ
ಏವಂ ಸಂಭಾಷಮಾಣೇ ಚ ಧೌಮ್ಯೇ ಕೌರವನಂದನಮ್ |
ಲೋಮಶಃ ಸುಮಹಾತೇಜಾ ಋಷಿಸ್ತತ್ರಾಜಗಾಮ ಹ ॥1॥
ವೈಶಂಪಾಯನ ಹೀಗೆ ಧೌಮ್ಯರು ಕೌರವನಂದನನಾದ ಯುಧಿಷ್ಠಿರನನ್ನು ಕುರಿತು ಮಾತನಾಡುತಿತರುವಾಗ ಮಹಾತೇಜಸ್ವಿಗಳಾದ ಲೋಮಶ ಋಷಿಗಳು ಅಲ್ಲಿಗೆ ಬಂದರು.
ತಂ ಪಾಂಡವಾಗ್ರಜೋ ರಾಜಾ ಸಾನುಜೋ ಬ್ರಾಹ್ಮಣಾಶ್ಚ ತೇ |
ಉದತಿಷ್ಠನ್ಮಹಾಭಾಗಂ ದಿವಿ ಶಕ್ರಂ ಯಥಾಮರಾಃ ॥2॥
ಪಾಂಡವರಲ್ಲಿ ಅಗ್ರಜನಾದ ಧರ್ಮರಾಜನು ತಮ್ಮಂದಿರು ಮತ್ತು ಬ್ರಾಹ್ಮಣರ ಜೊತೆಯಲ್ಲಿ ಆ ಮಹಾನುಭಾವನನ್ನು ನೋಡಿ ಸ್ವರ್ಗದಲ್ಲಿ ಇಂದ್ರನನ್ನು ನೋಡಿದ ದೇವತೆಗಳಂತೆ ಎದ್ದುನಿಂತನು.
ತಮಭ್ಯರ್ಚ್ಯ ಯಥಾನ್ಯಾಯಂ ಧರ್ಮಪುತ್ರೋ ಯುಧಿಷ್ಠಿರಃ |
ಪಪ್ರಚ್ಛಾಗಮನೇ ಹೇತುಂ ಮಹರ್ಷಿಂ ಲೋಕವಿಶ್ರುತಮ್ ॥3॥
ಧರ್ಮಪುತ್ರನಾದ ಯುಧಿಷ್ಠಿರನು ವಿಧಿವತ್ತಾಗಿ ಅವರಿಗೆ ಪೂಜೆಯನ್ನು ಸಲ್ಲಿಸಿ ಲೋಕವಿಖ್ಯಾತರಾದ ಆ ಮಹರ್ಷಿಗಳನ್ನು ಕುರಿತು ಅವರ ಆಗಮನದ ಕಾರಣವನ್ನು ಕೇಳಿದನು.
ಸ ಪೃಷ್ಟಃ ಪಾಂಡುಪುತ್ರೇಣ ಪ್ರೀಯಮಾಣೋ ಮಹಾಮನಾಃ |
ಉವಾಚ ಶ್ಲಕ್ಷ್ಣಯಾ ವಾಚಾ ಹರ್ಷಯನ್ನಿವ ಪಾಂಡವಾನ್ ॥4॥
ಪಾಂಡುಪುತ್ರನಿಂದ ಹೀಗೆ ಕೇಳಲ್ಪಟ್ಟ ಉದಾತ್ತಮನಸ್ಸುಳ್ಳ ಲೋಮಶರು ಸಂತೋಷ ಪಡುತ್ತಾ ತಮ್ಮ ಮಧುರವಾದ ಮಾತುಗಳಿಂದ ಪಾಂಡವರಿಗೆ ಸಂತೋಷವನ್ನು ಉಂಟು ಮಾಡುತ್ತಾ ಮಾತನಾಡಿದರು.
ಸಂಚರನ್ನಸ್ಮಿ ಕೌಂತೇಯ ಸರ್ವಾಂಲ್ಲೋಕಾನ್ ಯದೃಚ್ಛಯಾ |
ಗತಃಶಕ್ರಸ್ಯ ಭವನಂ ತತ್ರಾಪಶ್ಯಂ ಸುರೇಶ್ವರಮ್ ॥5॥
ಎಲೈ ಕೌಂತೇಯನೇ, ನಾನು ಯದೃಚ್ಛೆಯಿಂದ ಎಲ್ಲಾ ಲೋಕಗಳನ್ನೂ ಸಂಚರಿಸುತ್ತಾ ಇಂದ್ರನ ಭವನಕ್ಕೆ ಹೋಗಿ ಅಲ್ಲಿ ಇಂದ್ರನನ್ನು ನೋಡಿದೆನು.
ತವ ಚ ಭ್ರಾತರಂ ವೀರಮಪಶ್ಯಂ ಸವ್ಯಸಾಚಿನಮ್ |
ಶಕ್ರಸ್ಯಾರ್ಧಾಸನಗತಂ ತತ್ರ ಮೇ ವಿಸ್ಮಯೋ ಮಹಾನ್ ॥6॥
ಆಸೀತ್ ಪುರುಷಶಾರ್ದೂಲ ದೃಷ್ಟ್ವಾ ಪಾರ್ಥಂ ತಥಾಗತಮ್ |
ಆಹ ಮಾಂ ತತ್ರ ದೇವೇಂದ್ರೋ ಗಚ್ಛ ಪಾಂಡುಸುತಾನಿತಿ ॥7॥
ಅಲ್ಲಿ ಶಕ್ರನ ಅರ್ಧಾಸನದಲ್ಲಿ ಕುಳಿತಿದ್ದ ನಿನ್ನ ತಮ್ಮನಾದ ವೀರನಾದ ಸವ್ಯಸಾಚಿಯನ್ನೂ ನೋಡಿದೆನು. ಪುರುಷಶಾರ್ದೂಲನೇ, ಆ ರೀತಿಯಲ್ಲಿದ್ದ ಅರ್ಜುನನನ್ನು ನೋಡಿ ನನಗೆ ಬಹಳ ಆಶ್ಚರ್ಯವುಂಟಾಯಿತು. ಆಗ ದೇವೇಂದ್ರನು ನೀನು ಪಾಂಡವರ ಬಳಿಗೆ ಹೋಗು ಎಂದು ನನಗೆ ಹೇಳಿದನು.

ಸೋಽಹಮಭ್ಯಾಗತಃ ಕ್ಷಿಪ್ರಂ ದಿದೃಕ್ಷುಸ್ತ್ವಾಂ ಸಹಾನುಜಮ್ |
ವಚನಾತ್ ಪುರುಹೂತಸ್ಯ ಪಾರ್ಥಸ್ಯ ಚ ಮಹಾತ್ಮನಃ ||8||
ಅಂತಹ ನಾನು ತಮ್ಮಂದಿರ ಸಹಿತನಾದ ನಿನ್ನನ್ನು ನೋಡುವ ಉದ್ದೇಶದಿಂದ ಇಂದ್ರನ ವಚನದಂತೆ ಮತ್ತು ಮಹಾತ್ಮನಾದ ಅರ್ಜುನನ ವಚನದಂತೆ ಇಲ್ಲಿಗೆ ಬಂದಿದ್ದೇನೆ.
ಆಖ್ಯಾಸ್ಯೇ ತೇ ಪ್ರಿಯಂ ತಾತ ಮಹತ್ ಪಾಂಡವನಂದನ |
ಭ್ರಾತೃಭಿಃ ಸಹಿತೋ ರಾಜನ್ ಕೃಷ್ಣಯಾ ಚೈವ ತಚ್ಛೃಣು ||9||
ಎಲ್ಲೈ ಪ್ರೀತಿಪಾತ್ರನಾದ ಪಾಂಡವನಂದನನೇ, ನಿನಗೆ ಬಹಳ ಪ್ರಿಯವಾದ ವಾರ್ತೆಯನ್ನು ಹೇಳುತ್ತೇನೆ. ರಾಜನೇ, ತಮ್ಮಂದಿರ ಮತ್ತು ದ್ರೌಪದಿಯ ಜೊತೆಯಲ್ಲಿ ಅದನ್ನು ಕೇಳು.
ಯಸ್ತ್ವಯೋಕ್ತೋ ಮಹಾಬಾಹುರಸ್ತ್ರಾರ್ಥಂ ಪಾಂಡವರ್ಷಭ |
ತದಸ್ತ್ರಮಾಪ್ತಂ ಪಾರ್ಥೇನ ರುದ್ರಾದಪ್ರತಿಮಂ ಮಹತ್ ||10||
ಎಲ್ಲೈ ಪಾಂಡವರ್ಷಭನೇ, ನೀನು ಮಹಾಬಾಹುವಾದ ಅರ್ಜುನನಿಗೆ ಯಾವ ಅಸ್ತ್ರವನ್ನು ಪಡೆಯಬೇಕೆಂದು ಹೇಳಿದ್ದೆಯೋ ಆ ಅಪ್ರತಿಮವಾದ ಮಹಾಸ್ತ್ರವನ್ನು ಅರ್ಜುನನು ರುದ್ರನಿಂದ ಪಡೆದಿದ್ದಾನೆ.
ಯತ್ತದ್ ಬ್ರಹ್ಮಶಿರೋ ನಾಮ ತಪಸಾ ರುದ್ರಮಾಗತಮ್ |
ಅಮೃತಾದುತ್ಥಿತಂ ರೌದ್ರಂ ತಲ್ಲಬ್ಧಂ ಸವ್ಯಸಾಚಿನಾ ||11||
ತತ್ ಸಮಂತ್ರಂ ಸಸಂಹಾರಂ ಸಪ್ರಾಯಶ್ಚಿತ್ತಮಂಗಲಮ್ |
ವಜ್ರಂ ಚಾನ್ಯಾನಿ ಚಾಸ್ತ್ರಾಣಿ ದಂಡಾದೀನಿ ಯುಧಿಷ್ಠಿರ ||12||
ಯಮಾತ್ ಕುಬೇರಾದ್ವರುಣಾದ್ ಇಂದ್ರಾಚ್ಚ ಕುರುನಂದನ |
ಅಸ್ತ್ರಾಣ್ಯಧೀತವಾನ್ ಪಾರ್ಥೋ ದಿವ್ಯಾನ್ಯಮಿತವಿಕ್ರಮಃ ||13||
ಅಮೃತದಿಂದ ಉತ್ಪನ್ನವಾದ, ಘೋರವಾದ ಯಾವ ಬ್ರಹ್ಮಶಿರೋಸ್ತ್ರವು ರುದ್ರದೇವರ ಬಳಿಯಲ್ಲಿದ್ದಿತೋ ಅದನ್ನು ಅರ್ಜುನನು ಮಂತ್ರ, ಉಪಸಂಹಾರ, ಪ್ರಾಯಶ್ಚಿತ್ತ ಮತ್ತು ಮಂಗಳವಿಧಿಗಳೊಡನೆ ಸಂಪಾದಿಸಿದ್ದಾನೆ. ಎಲ್ಲೈ ಯುಧಿಷ್ಠಿರನೇ, ಹಾಗೆಯೇ ವಜ್ರಾಯುಧವನ್ನೂ ಮತ್ತು ಉಳಿದ ದಂಡ ಮೊದಲಾದ ಅಸ್ತ್ರಗಳನ್ನು ಇಂದ್ರನಿಂದಲೂ, ಯಮನಿಂದಲೂ, ಕುಬೇರನಿಂದಲೂ, ವರುಣನಿಂದಲೂ ಪಡೆದಿದ್ದಾನೆ. ಎಲ್ಲೈ ಕುರುನಂದನನೇ, ಅಮಿತವಿಕ್ರಮನಾದ ಅರ್ಜುನನು ಅಂತಹ ದಿವ್ಯಾಸ್ತ್ರಗಳನ್ನು ಉಪದೇಶಪೂರ್ವಕವಾಗಿ ಸಂಪಾದಿಸಿದ್ದಾನೆ.
ವಿಶ್ವಾವಸೋಶ್ಚ ತನಯಾದ್ ಗೀತಂ ನೃತ್ತಂ ಚ ಸಾಮ ಚ |
ವಾದಿತ್ರಂ ಚ ಯಥಾನ್ಯಾಯಂ ಪ್ರತ್ಯವಿಂದದ್ ಯಥಾವಿಧಿ ||14||
ವಿಶ್ವಾವಸುವಿನ ಪುತ್ರನಿಂದ ಸಂಗೀತವನ್ನು, ನೃತ್ಯವನ್ನು, ಸಾಮವನ್ನು ಮತ್ತು ವಾದ್ಯಗಳನ್ನು ವಿಧಿಪೂರ್ವಕವಾಗಿ ಶಾಸ್ತ್ರೋಕ್ತರೀತಿಯಲ್ಲಿ ಸಂಪಾದಿಸಿದ್ದಾನೆ.
ಏವಂ ಕೃತಾಸ್ತ್ರಃ ಕೌಂತೇಯೋ ಗಾಂಧರ್ವಂ ವೇದಮಾಪ್ತವಾನ್ |
ಸುಖಂ ವಸತಿ ಬೀಭತ್ಸುರನುಜಸ್ಯಾನುಜಸ್ತವ ||15||
ಹೀಗೆ ಅಸ್ತ್ರಗಳನ್ನು ಕೃತಾರ್ಥನಾದ ಅರ್ಜುನನು ಗಾಂಧರ್ವವಿದ್ಯೆಯನ್ನೂ ಸಂಪಾದಿಸಿದ್ದಾನೆ. ನಿನ್ನ ತಮ್ಮನ ತಮ್ಮನಾದ ಅರ್ಜುನನು ಸುಖವಾಗಿ ಸ್ವರ್ಗದಲ್ಲಿ ವಾಸವಾಗಿದ್ದಾನೆ.
ಯದರ್ಥಂ ಮಾ ಸುರಶ್ರೇಷ್ಠ ಇದಂ ವಚನಮಬ್ರವೀತ್ |
ತಚ್ಚ ತೇ ಕಥಯಿಷ್ಯಾಮಿ ಯುಧಿಷ್ಠಿರ ನಿಬೋಧ ತತ್ ||16||
ಯುಧಿಷ್ಠಿರನೇ, ದೇವಶ್ರೇಷ್ಠನಾದ ಇಂದ್ರನು ಯಾವ ಉದ್ದೇಶದಿಂದ ನನ್ನನ್ನು ಇಲ್ಲಿಗೆ ಕಳುಹಿಸಿದನೋ ಅಂತಹ ಅವನ ಸಂದೇಶವನ್ನು ನಿನಗೆ ಹೇಳುವೆನು. ಅದನ್ನು ತಿಳಿ.
ಇಂದ್ರಃ
ಭವಾನ್ ಮನುಷ್ಯಲೋಕಾಯ ಗಮಿಷ್ಯತಿ ನ ಸಂಶಯಃ |
ಬ್ರೂಯಾದ್ ಯುಧಿಷ್ಠಿರಂ ತತ್ರ ವಚನಂ ಮೇ ದ್ವಿಜೋತ್ತಮ ||17||
ಇಂದ್ರ ಎಲ್ಲೈ ದ್ವಿಜಶ್ರೇಷ್ಠನೇ, ನೀನು ನಿಸ್ಸಂಶಯವಾಗಿ ಮನುಷ್ಯಲೋಕಕ್ಕೆ ಹೋಗುವಿ. ಅಲ್ಲಿ ನನ್ನ ವಚನದಂತೆ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳು.
ಆಗಮಿಷ್ಯತಿ ತೇ ಭ್ರಾತಾ ಕೃತಾಸ್ತ್ರಃ ಕ್ಷಿಪ್ರಮರ್ಜುನಃ |
ಸುರಕಾರ್ಯಂ ಮಹತ್ ಕೃತ್ವಾ ಯದಶಕ್ಯಂ ದಿವೌಕಸಾಮ್ ||18||
ನಿನ್ನ ತಮ್ಮನಾದ ಅರ್ಜುನನು ದೇವತೆಗಳಿಗೂ ಅಸಾಧ್ಯವಾದ ದೊಡ್ಡ ದೇವತಾ ಕಾರ್ಯವನ್ನು ಮಾಡಿ ಶೀಘ್ರದಲ್ಲಿಯೇ ಬರುವನು.
ತಪಸಾ ತು ತ್ವಮಾತ್ಮಾನಂ ಭ್ರಾತೃಭಿಃಸಹ ಯೋಜಯ |
ತಪಸೋ ಹಿ ಸಮಂ ನಾಸ್ತಿ ತಪಸಾ ವಿಂದತೇ ಮಹತ್ ||19||
ನೀನು ಮತ್ತು ನಿನ್ನ ತಮ್ಮಂದಿರು ತಪಸ್ಸನ್ನು ಆಚರಿಸಿ. ತಪಸ್ಸಿಗೆ ಸಮಾನವಾದುದು ಯಾವುದೂ ಇಲ್ಲ. ತಪಸ್ಸಿನಿಂದ ಯಾವ ದೊಡ್ಡ ಕಾರ್ಯವನ್ನೂ ಸಾಧಿಸಬಹುದು.
ಅಹಂ ಚ ಕರ್ಣಂ ಜಾನಾಮಿ ಯಥಾವತ್ ಪುರುಷರ್ಷಭ |
ನ ಸ ಪಾರ್ಥಸ್ಯ ಸಂಗ್ರಾಮೇ ಕಲಾಮರ್ಹತಿ ಷೋಡಶೀಮ್ ||20||
ಎಲ್ಲೈ ಪುರುಷರ್ಷಭನೇ, ನಾನು ಕರ್ಣನನ್ನು ಯಥಾರ್ಥವಾಗಿ ತಿಳಿದಿದ್ದೇನೆ. ಅವನು ಯುದ್ಧದಲ್ಲಿ ಅರ್ಜುನನ ಹದಿನಾರನೆಯ ಒಂದು

ಕಲೆಗೂ ಸಮಾನನಲ್ಲ.
ಯಚ್ಚಾಪಿ ತೇ ಭಯಂ ತಸ್ಮಾನ್ಮನಸಿಸ್ಥಮರಿಂದಮ |
ತಚ್ಚಾಪ್ಯಪಹರಿಷ್ಯಾಮಿ ಸವ್ಯಸಾಚಾವಿಹಾಗತೇ ||21||
ಎಲೈ ಅರಿಂದಮನೇ, ನಿನ್ನ ಮನಸ್ಸಿನಲ್ಲಿ ಯಾವ ಭಯವಿದೆಯೋ ಅದನ್ನೂ ಸಹ ಅರ್ಜುನನು ಇಲ್ಲಿ ಬಂದಾಗ ಪರಿಹರಿಸುವೆನು.
ಯಚ್ಚ ತೇ ಮಾನಸರಂ ವೀರ ತೀರ್ಥಯಾತ್ರಾಮಿಮಾಂ ಪ್ರತಿ |
ತಚ್ಚ ತೇ ಲೋಮಶಃಸರ್ವಂ ಕಥಯಿಷ್ಯತ್ಯಸಂಶಯಮ್ ||22||
ಎಲೈ ವೀರನೇ, ತೀರ್ಥಯಾತ್ರೆಯನ್ನು ಕುರಿತು ನಿನ್ನ ಮನಸ್ಸಿನಲ್ಲಿ ಯಾವ ಸಂಕಲ್ಪವಿದೆಯೋ ಆ ವಿಷಯದಲ್ಲಿ ಲೋಮಶರು ನಿನಗೆ ನಿಸ್ಸಂಶಯವಾಗಿ ಎಲ್ಲವನ್ನೂ ತಿಳಿಸುವರು.
ಯಚ್ಚ ಕಿಂಚಿತ್ ತಪೋಯುಕ್ತಂ ಫಲಂ ತೀರ್ಥೇಷು ಭಾರತ |
ಬ್ರಹ್ಮರ್ಷಿರೇಷ ಯದ್ಬ್ರೂಯಾತ್ ತಚ್ಛ್ರದ್ಧೇಯಂ ನ ಚಾನ್ಯಥಾ ||23||
ಎಲೈ ಭಾರತನೇ, ತೀರ್ಥಗಳಲ್ಲಿ ಮಾಡಿದ ತಪಸ್ಸುಗಳಿಗೆ ಈ ಬ್ರಹ್ಮರ್ಷಿಗಳು ಯಾವ ಯಾವ ಫಲವನ್ನು ಹೇಳುತ್ತಾರೆಯೋ ಅದರಲ್ಲಿ ಶ್ರದ್ಧೆಯನ್ನು ಮಾಡಬೇಕು. ಬೇರೆ ರೀತಿಯಲ್ಲಿ ಯೋಚನೆಯನ್ನು ಮಾಡಬಾರದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಡಶೀತಿಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ದ್ವಿಚತ್ವಾರಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೇಳನೆಯ ಅಧ್ಯಾಯ
ಲೋಮಶರ ವಚನದಂತೆ ಪರಿವಾರವನ್ನು ಅಲ್ಪೀಕರಿಸಿ ಯುಧಿಷ್ಠಿರನ ತೀರ್ಥಯಾತ್ರಾಗಮನ ಪ್ರಯತ್ನ.
ಲೋಮಶಃ
ಧನಂಜಯೇನ ಚಾಪ್ಯುಕ್ತಂ ಯತ್ ತಚ್ಛೃಣು ಯುಧಿಷ್ಠಿರ |
ಭ್ರಾತರಂ ಮೇ ಯೋಜಯೇಸ್ತ್ವಂ ತೀರ್ಥಪುಣ್ಯೇನ ಪಾಂಡವಮ್|
ಭ್ರಾತರಂ ಮೇಽನುಜೈಃಸಾರ್ಧಂ ಯೋಜಯೇರ್ಧರ್ಮ್ಯಯಾ ಧಿಯಾ ||
ಲೋಮಶರು ಯುಧಿಷ್ಠಿರನೇ, ಧನಂಜಯನು ಹೇಳಿದ ವಿಷಯವನ್ನೂ ನೀನು ಕೇಳು. ನನ್ನ ಅಣ್ಣನಾದ ಧರ್ಮರಾಜನನ್ನೂ ಮತ್ತು ಅವನ ಅನುಜರನ್ನೂ ತೀರ್ಥಯಾತ್ರಾ ಪುಣ್ಯದಿಂದಲೂ ಮತ್ತು ಧರ್ಮಬುದ್ಧಿಯಿಂದಲೂ ನೀವು ಸಂಯೋಜಿಸಬೇಕು.
ತ್ವಂ ಹಿ ಧರ್ಮಾನ್ ಪರಾನ್ ವೇತ್ಥ ತಪಾಂಸಿ ಚ ತಪೋಧನ |
ಶ್ರೀಮತಾಂ ಚಾಪಿ ಜಾನಾಸಿ ಧರ್ಮಂ ರಾಜ್ಞಾಂ ಸನಾತನಮ್ ||2||
ಎಲೈ ತಪೋಧನರೇ, ನೀವು ಶ್ರೇಷ್ಠವಾದ ಧರ್ಮಗಳನ್ನು ಮತ್ತು ತಪಸ್ಸುಗಳನ್ನು ತಿಳಿದಿದ್ದೀರಿ. ಶ್ರೀಮಂತರಾದ ರಾಜರ ಸನಾತನ ಧರ್ಮಗಳನ್ನೂ ತಿಳಿದಿದ್ದೀರಿ.
ಸ ಭವಾನ್ ಯತ್ ಪರಂ ವೇದ ಪಾವನಂ ಪುರುಷಾನ್ ಪ್ರತಿ |
ತೇನ ಸಂಯೋಜಯೇಥಾಸ್ತ್ವಂ ತೀರ್ಥಪುಣ್ಯೇನ ಪಾಂಡವಮ್ ||3||
ಅಂತಹ ನೀವು ಪುರುಷರಿಗೆ ಯಾವುದು ಶ್ರೇಷ್ಠವೆಂದು ತಿಳಿದಿದ್ದೀರೋ ಅಂತಹ ತೀರ್ಥಯಾತ್ರಾಪುಣ್ಯದಿಂದ ಪಾಂಡವನಾದ ನನ್ನ ಅಣ್ಣನನ್ನು ಯುಕ್ತನನ್ನಾಗಿ ಮಾಡಬೇಕು.
ಯಥಾ ತೀರ್ಥಾನಿ ಗಚ್ಛೇತ ಗಾಶ್ಚ ದದ್ಯಾತ್ ಸ ಪಾರ್ಥಿವಃ |
ತಥಾ ಸರ್ವಾತ್ಮನಾ ಕಾರ್ಯಮಿತಿ ಮಾಂ ವಿಜಯೋಽಬ್ರವೀತ್ ||4||
ಹೇಗೆ ರಾಜನಾದ ಯುಧಿಷ್ಠಿರನು ತೀರ್ಥಯಾತ್ರೆಗೆ ಹೋಗಿ ಗೋದಾನವನ್ನು ಮಾಡುತ್ತಾನೆಯೋ ಅದಕ್ಕೆ ಅನುಗುಣವಾಗಿ ಸರ್ವಥಾ ಮಾಡಬೇಕು ಎಂದು ನನ್ನನ್ನು ಕುರಿತು ಅರ್ಜುನನು ಹೇಳಿದನು.
ಭವತಾ ಚಾನುಗುಪ್ತೋಽಸೌ ಚರೇತ್ ತೀರ್ಥಾನಿ ಸರ್ವಶಃ |
ರಕ್ಷೋಭ್ಯೋ ರಕ್ಷಿತವ್ಯಶ್ಚ ದುರ್ಗೇಷು ವಿಷಮೇಷು ಚ ||5||
ನಿಮ್ಮಿಂದ ರಕ್ಷಿತನಾಗಿ ಧರ್ಮರಾಜನು ಎಲ್ಲಾ ತೀರ್ಥಯಾತ್ರೆಯನ್ನೂ ಮಾಡಲಿ. ದುರ್ಗಗಳಲ್ಲಿಯೂ ಮತ್ತು
ವಿಷಮಪ್ರದೇಶಗಳಲ್ಲಿಯೂ ನೀವು ಅವನನ್ನು ರಾಕ್ಷಸರಿಂದ ರಕ್ಷಿಸಬೇಕು.
ದಧೀಚಿರಿವ ದೇವೇಂದ್ರಂ ಯಥಾ ಚಾಪ್ಯಂಗಿರಾ ರವಿಮ್ |
ತಥಾ ರಕ್ಷಸ್ವ ಕೌಂತೇಯಂ ರಾಕ್ಷಸೇಭ್ಯೋ ದ್ವಿಜೋತ್ತಮ ||6||
ಎಲೈ ದ್ವಿಜೋತ್ತಮರೇ, ದಧೀಚಿಯು ದೇವೇಂದ್ರನನ್ನು ರಕ್ಷಿಸಿದಂತೆ, ಅಂಗಿರಸರು ಸೂರ್ಯನನ್ನು ರಕ್ಷಿಸಿದಂತೆ, ಧರ್ಮರಾಜನನ್ನು ನೀವು ರಾಕ್ಷಸರಿಂದ ರಕ್ಷಿಸಬೇಕು.
ಯಾತುಧಾನಾ ಹಿ ಬಹವೋ ರಾಕ್ಷಸಾಃ ಪರ್ವತೋಪಮಾಃ |
ತ್ವಯಾ ಹಿ ಗುಪ್ತಾನ್ ಕೌಂತೇಯಾನ್ ನಾತಿವರ್ತೇಯುರಂತಿಕಾತ್ ||7||
ಯಾತುಧಾನರು ಮತ್ತು ಪರ್ವತದಂತಹ ಶರೀರವುಳ್ಳ ಅನೇಕ ರಾಕ್ಷಸರು ಸಹ ನಿಮ್ಮಿಂದ ರಕ್ಷಿತರಾದ ಪಾಂಡವರ ಬಳಿಯಲ್ಲಿಯೂ ಸುಳಿಯಲಾರರು.
ಸೋಽಹಮಿಂದ್ರಸ್ಯ ವಚನಾನ್ನಿಯೋಗಾದರ್ಜುನಸ್ಯ ಚ |
ರಕ್ಷಮಾಣೋ ಭಯೇಭ್ಯಸ್ತ್ವಂ ಚರಿಷ್ಯಾಮಿ ತ್ವಯಾ ಸಹ ||8||

ಅಂತಹ ನಾನು ಇಂದ್ರನ ವಚನದಂತೆ ಮತ್ತು ಅರ್ಜುನನ ಆದೇಶದಂತೆ ನಿಮ್ಮನ್ನು ಎಲ್ಲಾ ಭಯಗಳಿಂದಲೂ ರಕ್ಷಿಸುತ್ತಾ ನಿಮ್ಮ ಜೊತೆಯಲ್ಲಿ ಸಂಚರಿಸುವೆನು.
ದ್ವಿಸ್ತೀರ್ಥಾನಿ ಮಯಾ ಪೂರ್ವಂ ದೃಷ್ಟಾನಿ ಕುರುನಂದನ |
ಇದಂ ತೃತೀಯಂ ದ್ರಕ್ಷ್ಯಾಮಿ ತಾನ್ಯೇವ ಭವತಾ ಸಹ ॥9॥
ಎಲೈ ಕುರುನಂದನನೇ, ನಾನು ಹಿಂದೆ ಎರಡುಬಾರಿ ತೀರ್ಥಯಾತ್ರೆಯನ್ನು ಮಾಡಿದ್ದೇನೆ. ಈಗ ಮೂರನೆಯ ಬಾರಿಗೆ ನಿನ್ನ ಜೊತೆಯಲ್ಲಿ ಅದೇ ತೀರ್ಥಕ್ಷೇತ್ರಗಳನ್ನು ನೋಡುವೆನು.
ಇಯಂ ರಾಜರ್ಷಿಭಿರ್ಯಾತಾ ಪುಣ್ಯಕೃದ್ಭಿರ್ಯುಧಿಷ್ಠಿರ |
ಮನ್ವಾದಿಭಿರ್ಮಹಾರಾಜ ತೀರ್ಥಯಾತ್ರಾ ಶುಭಾವಹಾ ॥10॥
ಎಲೈ ಯುಧಿಷ್ಠಿರ ಮಹಾರಾಜನೇ, ಈ ಶುಭಪ್ರದವಾದ ತೀರ್ಥಯಾತ್ರೆಯು ಪುಣ್ಯವಂತರಾದ, ಮನ್ವಾದಿರಾಜರ್ಷಿಗಳಿಂದ ನಡೆದು ಹೋದ ದಾರಿ.
ನಾನೃಜುರ್ನಾಕೃತಾತ್ಮಾ ಚ ನಾವೈದ್ಯೋ ನ ಚ ಪಾಪಕೃತ್ |
ಸ್ನಾತಿ ತೀರ್ಥೇಷು ಕೌರವ್ಯ ನ ಚ ವಕ್ರಮತಿರ್ನರಃ ॥11॥
ಆರ್ಜವವು ಇಲ್ಲದ, ಮನಶ್ಶುದ್ಧಿ ಇಲ್ಲದ, ವೇದಜ್ಞಾನವಿಲ್ಲದ, ಪಾಪಾಚಾರವನ್ನು ಮಾಡುವ, ವಕ್ರಮತಿಯಾದ ನರನು ಎಲೈ ಕೌರವನೇ, ಎಂದೂ ತೀರ್ಥಗಳಲ್ಲಿ ಸ್ನಾನವನ್ನು ಮಾಡುವುದಿಲ್ಲ.
ತ್ವಂ ತು ಧರ್ಮರತಿರ್ನಿತ್ಯಂ ಧರ್ಮಜ್ಞಃ ಸತ್ಯಸಂಗರಃ |
ವಿಮುಕ್ತಃ ಸರ್ವಪಾಪೇಭ್ಯೋ ಭೂಯ ಏವ ಭವಿಷ್ಯಸಿ ॥12॥
ನೀನಾದರೋ ಧರ್ಮಜ್ಞಾನ ಇರುವವನು, ಸತ್ಯಸಂಧನಾದವನು ಮತ್ತು ಯಾವಾಗಲೂ ಧರ್ಮರತಿಯುಳ್ಳವನು. ನೀನು ತೀರ್ಥಯಾತ್ರೆಯಿಂದ ಎಲ್ಲ ಪಾಪಗಳಿಂದಲೂ ಇನ್ನೂ ಬಹಳ ಚೆನ್ನಾಗಿ ವಿಮುಕ್ತನಾಗುವಿ.
ಯಥಾ ಭಗೀರಥೋ ರಾಜಾ ರಾಜಾನಶ್ಚ ಗಯಾದಯಃ |
ಯಥಾ ಯಯಾತಿಃ ಕೌಂತೇಯ ತಥಾ ತ್ವಮಪಿ ಪಾಂಡವ ॥13॥
ಕೌಂತೇಯನೇ, ಪಾಂಡವನೇ, ಹೇಗೆ ಭಗೀರಥರಾಜನೋ, ಹೇಗೆ ಗಯಾದಿ ರಾಜರುಗಳೋ, ಹೇಗೆ ಯಯಾತಿಯೋ ಹಾಗೆಯೇ ನೀನು ಇದ್ದೀಯೆ.
ಯುಧಿಷ್ಠಿರಃ
ನ ಹರ್ಷಾತ್ ಸಂಪ್ರಪಶ್ಯಾಮಿ ವಾಕ್ಯಸ್ಯಾಸ್ಯೋತ್ತರಂ ಮುನೇ |
ಸ್ಮರೇದ್ಧಿ ದೇವರಾಜೋ ಯಂ ಕಿಂ ನಾಮಾಭ್ಯಧಿಕಂ ತತಃ ॥14॥
ಯುಧಿಷ್ಠಿರ ಋಷಿಗಳೇ, ನನ್ನ ಸಂತೋಷದಿಂದ ನಿಮ್ಮ ಮಾತಿಗೆ ಉತ್ತರವನ್ನು ಕೊಡಲು ಸಾಧ್ಯವಾಗುತ್ತಿಲ್ಲ. ದೇವರಾಜನಾದ ಇಂದ್ರನು ಯಾವ ನನ್ನನ್ನು ಸ್ಮರಿಸುವನೆಂದ ಮೇಲೆ ಅದಕ್ಕಿಂತ ದೊಡ್ಡದು ಏನಿದೆ?
ಭವತಾ ಸಂಗಮೋ ಯಸ್ಯ ಭ್ರಾತಾ ಚೈವ ಧನಂಜಯಃ |
ವಾಸವಃ ಸ್ಮರತೇ ಯಸ್ಯ ಕೋ ನಾಮಾಭ್ಯಧಿಕಸ್ತತಃ ॥15॥
ಯಾವನಿಗೆ ನಿಮ್ಮಂತಹವರ ಸಂಗಮವಿದೆಯೋ, ಯಾವನಿಗೆ ಅರ್ಜುನನಂತಹ ತಮ್ಮನಿದ್ದಾನೆಯೋ, ಯಾವನನ್ನು ಇಂದ್ರನು ಸ್ಮರಿಸುತ್ತಾನೋ ಅವನಿಗೆ ಅದಕ್ಕಿಂತ ದೊಡ್ಡದು ಯಾವುದಿದೆ?
ಯಚ್ಚ ಮಾಂ ಭಗವಾನಾಹ ತೀರ್ಥಾನಾಂ ದರ್ಶನಂ ಪ್ರತಿ |
ಧೌಮ್ಯಸ್ಯ ವಚನಾದೇಷಾ ಬುದ್ಧಿಃ ಪೂರ್ವಂ ಕೃತೈವ ಮೇ ॥16॥
ಪೂಜ್ಯರಾದ ತಾವು ತೀರ್ಥದರ್ಶನವನ್ನು ಕುರಿತು ನನಗೆ ಹೇಳಿದಿರಷ್ಟೆ? ಧೌಮ್ಯರ ವಚನದಂತೆ ನಾನು ಮೊದಲೇ ತೀರ್ಥಯಾತ್ರೆಯನ್ನು ಮಾಡುವುದೆಂದು ಸಂಕಲ್ಪಿಸಿದ್ದೇನೆ.
ತದ್ಯದಾ ಮನ್ಯಸೇ ದೃಷ್ಟ್ವಾ ಗಮನೇ ತೀರ್ಥದರ್ಶನೇ |
ತದೈವ ಗಂತಾಸ್ಮಿ ದೃಢಮೇಷ ಮೇ ನಿಶ್ಚಯಃ ಪರಃ ॥17॥
ತಾವು ತೀರ್ಥದರ್ಶನಕ್ಕಾಗಿ ಹೊರಡಲು ಯಾವುದು ಉಚಿತವಾದ ಸಮಯವೆಂದು ಭಾವಿಸುತ್ತೀರೋ ಆಗಲೇ ಹೊರಡುವೆನು. ಈ ನನ್ನ ಶ್ರೇಷ್ಠವಾದ ನಿರ್ಧಾರವು ದೃಢವಾದುದು.
ವೈಶಂಪಾಯನಃ
ಗಮನೇ ಕೃತಬುದ್ಧಿಂ ತಂ ಪಾಂಡವಂ ಲೋಮಶೋಽಬ್ರವೀತ್ |
ಲಘುರ್ಭವ ಮಹಾರಾಜ ತತಃ ಸ್ವೈರಂ ಗಮಿಷ್ಯಸಿ ॥18॥
ವೈಶಂಪಾಯನ ಪ್ರಯಾಣಮಾಡಲು ನಿರ್ಧರಿಸಿದ್ದ ಆ ಧರ್ಮರಾಜನನ್ನು ಕುರಿತು ಲೋಮಶರು, ಮಹಾರಾಜನೇ, ಅಲ್ಪಪರಿವಾರವನ್ನು ಹೊಂದುವವನಾಗು. ಅನಂತರ ಸುಖವಾಗಿ ಪ್ರಯಾಣ ಮಾಡುವಿ ಎಂದು ಹೇಳಿದರು.
ಯುಧಿಷ್ಠಿರಃ
ಭಿಕ್ಷಾಭುಜೋ ನಿವರ್ತಂತಾಂ ಬ್ರಾಹ್ಮಣಾ ಯತಯಶ್ಚ ಯೇ |
ಯೇ ಚಾಪ್ಯನುಗತಾಃ ಪೌರಾ ರಾಜಭಕ್ತಿಪುರಸ್ಕೃತಾಃ ॥19॥
ಯುಧಿಷ್ಠಿರ ಭಿಕ್ಷೆಯನ್ನು ಸ್ವೀಕರಿಸುವ ಯತಿಗಳು, ಬ್ರಾಹ್ಮಣರು ಮತ್ತು ರಾಜಭಕ್ತಿಯನ್ನು ಹೊಂದಿ ನಮ್ಮನ್ನು ಹಿಂಬಾಲಿಸಿದ್ದ ಪೌರರೂ ಸಹ ಇಲ್ಲಿಂದ ಹಿಂದಿರುಗಲಿ.
ಧೃತರಾಷ್ಟ್ರಂ ಮಹಾರಾಜಮಭಿಗಚ್ಛಂತು ಚೈವ ತೇ |

ಸ ದಾಸ್ಯತಿ ಯಥಾಕಾಲಮುಚಿತಾ ಯಸ್ಯ ಯಾ ಭೃತಿಃ ॥20॥
ಅವರೆಲ್ಲರೂ ಧೃತರಾಷ್ಟ್ರಮಹಾರಾಜನನ್ನು ಸಮೀಪಿಸಲಿ. ಅವನು ಅವರವರಿಗೆ ಯೋಗ್ಯವಾದ ವೇತನವನ್ನು ಕಾಲಕ್ಕೆ ಸರಿಯಾಗಿ ಕೊಡುವನು.
ಸ ಚೇದ್ಯಥೋಚಿತಾಂ ವೃತ್ತಿಂ ನ ದದ್ಯಾನ್ಮನುಜೇಶ್ವರಃ|
ಅಸ್ಮತ್ಪ್ರಿಯಹಿತಾರ್ಥಾಯ ಪಾಂಚಾಲೋ ವಃ ಪ್ರದಾಸ್ಯತಿ ॥21॥
ಒಂದುಪಕ್ಷ ಆ ಮನುಜೇಶ್ವರನು ಯಥೋಚಿತವಾದ ಜೀವನವೃತ್ತಿಯನ್ನು ಕೊಡದಿದ್ದರೆ ನಮಗೆ ಪ್ರಿಯವನ್ನು ಮತ್ತು ಹಿತವನ್ನುಂಟುಮಾಡಲು ಪಾಂಚಾಲರಾಜನಾದ ದ್ರುಪದನು ನಿಮಗೆ ವೇತನವನ್ನು ಕೊಡುವನು.
ವೈಶಂಪಾಯನಃ
ತತೋ ಭೂಯಿಷ್ಠಶಃ ಪೌರಾ ಗುರುಭಾರಸಮಾಹಿತಾಃ|
ವಿಪ್ರಾಶ್ಚ ಯತಯೋ ಯುಕ್ತಾ ಜಗ್ಮುರ್ನಾಗಪುರಂ ಪ್ರತಿ ॥22॥
ವೈಶಂಪಾಯನ ಅನಂತರ ಬಹಳ ಭಾರವನ್ನು ಜೊತೆಯಲ್ಲಿ ತಂದಿದ್ದ ಪೌರರು, ಬ್ರಾಹ್ಮಣರು, ಯತಿಗಳು ಮತ್ತು ರಾಜನ ಪರಿವಾರದವರು ದೊಡ್ಡದೊಡ್ಡ ಗುಂಪುಗಳಲ್ಲಿ ನಾಗಪುರಕ್ಕೆ ಪ್ರಯಾಣ ಮಾಡಿದರು.
ತಾನ್ ಸರ್ವಾನ್ ಧರ್ಮರಾಜಸ್ಯ ಪ್ರೇಮ್ಣಾ ರಾಜಾಽಂಬಿಕಾಸುತಃ|
ಪ್ರತಿಜಗ್ರಾಹ ವಿಧಿವದ್ ಧನೈಶ್ಚ ಸಮತರ್ಪಯತ್ ॥23॥
ಅಂಬಿಕಾಸುತನಾದ ಧೃತರಾಷ್ಟ್ರರಾಜನು ಧರ್ಮರಾಜನ ಮೇಲಿನ ಪ್ರೇಮದಿಂದ ಅವರೆಲ್ಲರನ್ನೂ ವಿಧಿಪೂರ್ವಕವಾಗಿ ಸ್ವೀಕರಿಸಿ ಧನದಾನಗಳಿಂದ ತೃಪ್ತಿಪಡಿಸಿದನು.
ತತಃ ಕುಂತೀಸುತೋ ರಾಜಾ ಲಘುಭಿರ್ಬ್ರಾಹ್ಮಣೈಃ ಸಹ|
ಲೋಮಶೇನ ಚ ಸುಪ್ರೀತಃ ತ್ರಿರಾತ್ರಂ ಕಾಮ್ಯಕೇಽವಸತ್ ॥24॥
ಅನಂತರ ಕುಂತೀಪುತ್ರನಾದ ಧರ್ಮರಾಜನು ಅಲ್ಪಸಂಖ್ಯೆಯ ಬ್ರಾಹ್ಮಣರ ಮತ್ತು ಲೋಮಶರ ಜೊತೆಯಲ್ಲಿ ಬಹಳ ಸಂತೋಷದಿಂದ ಕಾಮ್ಯಕವನದಲ್ಲಿ ಮೂರು ರಾತ್ರಿಗಳನ್ನು ಕಳೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಿಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೆಂಟನೆಯ ಅಧ್ಯಾಯ
ಯುಧಿಷ್ಠಿರನಿಂದ ಲೋಮಶಾದಿ ಋಷಿಗಳ ಜೊತೆಯಲ್ಲಿ ತೀರ್ಥಯಾತ್ರೆಯ ಉಪಕ್ರಮ.
ವೈಶಂಪಾಯನಃ
ತತಃ ಪ್ರಯಾಂತಂ ಕೌಂತೇಯಂ ಬ್ರಾಹ್ಮಣಾ ವನವಾಸಿನಃ|
ಅಭಿಗಮ್ಯ ತದಾ ರಾಜನ್ನಿದಂ ವಚನಮಬ್ರುವನ್ ॥1॥
ವೈಶಂಪಾಯನ ಎಲೈ ರಾಜನೇ, ಆಗ ಹೊರಡಲು ನಿಶ್ಚಯಿಸಿದ ಧರ್ಮರಾಜನನ್ನು ಸಮೀಪಿಸಿ ವನವಾಸಿಗಳಾದ ಬ್ರಾಹ್ಮಣರಾದ ಋಷಿಗಳು ಈ ಮಾತನ್ನು ಆಡಿದರು.
ರಾಜಂಸ್ತೀರ್ಥಾನಿ ಗಂತಾಸಿ ಪುಣ್ಯಾನಿ ಭ್ರಾತೃಭಿಃ ಸಹ|
ದೇವರ್ಷಿಣಾ ಚ ಸಹಿತೋ ಲೋಮಶೇನ ಮಹಾತ್ಮನಾ ॥2॥
ಎಲೈ ರಾಜನೇ, ನಿನ್ನ ತಮ್ಮಂದಿರ ಜೊತೆಯಲ್ಲಿಯೂ ಮತ್ತು ಮಹಾತ್ಮರಾದ ದೇವಋಷಿಗಳಾದ ಲೋಮಶರ ಜೊತೆಯಲ್ಲಿಯೂ ನೀನು ಪುಣ್ಯತೀರ್ಥಗಳಿಗೆ ಹೋಗುವವನಾಗಿದ್ದೀಯೆ.
ಅಸ್ಮಾನಪಿ ಮಹಾರಾಜ ನೇತುಮರ್ಹಸಿ ಪಾಂಡವ|
ಅಸ್ಮಾಭಿರ್ಹಿ ನ ಶಕ್ಯಾನಿ ತ್ವಾಮೃತೇ ಕುರುನಂದನ ॥3॥
ಎಲೈ ಪಾಂಡವಮಹಾರಾಜನೇ, ನಮ್ಮನ್ನೂ ಸಹ ನಿನ್ನ ಜೊತೆಯಲ್ಲಿ ಕರೆದುಕೊಂಡು ಹೋಗು. ಎಲೈ ಕುರುನಂದನನೇ, ನೀನಿಲ್ಲದಿದ್ದರೆ ನಮ್ಮಿಂದ ಆ ತೀರ್ಥಕ್ಷೇತ್ರಗಳಿಗೆ ಹೋಗುವುದು ಸಾಧ್ಯವಿಲ್ಲ.
ಶ್ವಾಪದೈರುಪಸೃಷ್ಟಾನಿ ದುರ್ಗಾಣಿ ವಿಷಮಾಣಿ ಚ|
ಅಗಮ್ಯಾನಿ ನರೈರಲ್ಪೈಸ್ತೀರ್ಥಾನಿ ಮನುಜೇಶ್ವರ ॥4॥
ಎಲೈ ಮನುಜೇಶ್ವರನೇ, ಆ ತೀರ್ಥಗಳು ಕ್ರೂರಮೃಗಗಳಿಂದಲೂ, ದುರ್ಗಗಳಿಂದಲೂ, ವಿಷಮಪ್ರದೇಶದಿಂದಲೂ ಕೂಡಿ ಅಲ್ಪರಾದ ಮನುಷ್ಯರಿಗೆ ಅಗಮ್ಯವಾಗಿರುತ್ತವೆ.
ಭವತೋ ಭ್ರಾತರಃಶೂರಾ ಧನುರ್ಧರವರಾಸ್ತಥಾ|
ಭವದ್ಭಿಃ ಪಾಲಿತಾಃ ಶೂರೈರ್ಗಚ್ಛೇಮೋ ವಯಮಪ್ಯುತ ॥5॥
ನಿನ್ನ ತಮ್ಮಂದಿರಾದರೂ ಶೂರರು ಮತ್ತು ಧನುರ್ಧಾರಿಗಳಲ್ಲಿ ಶ್ರೇಷ್ಠರಾದವರು. ಶೂರರಾದ ನಿಮ್ಮಿಂದ ರಕ್ಷಿತರಾದ ನಾವೂ ಸಹ ತೀರ್ಥಯಾತ್ರೆಯನ್ನು ಮಾಡುತ್ತೇವೆ.
ಭವತ್ಪ್ರಸಾದಾದ್ಧಿ ವಯಂ ಪ್ರಾಪ್ನುಯಾಮ ಫಲಂ ಶುಭಮ್|
ತೀರ್ಥಾನಾಂ ಪೃಥಿವೀಪಾಲ ವನಾನಾಂ ಚ ವಿಶಾಂಪತೇ ॥6॥
ಎಲೈ ಪೃಥಿವೀಪಾಲನೇ, ಎಲೈ ವಿಶಾಂಪತಿಯೇ, ನಿನ್ನ ಅನುಗ್ರಹದಿಂದ ನಾವೂ ಸಹ ತೀರ್ಥಗಳ ಮತ್ತು ವನಗಳ ಪುಣ್ಯಫಲವನ್ನು

ಹೊಂದುವೆವು.
ತವ ವೀರ್ಯಪರಿತ್ರಾತಾಃ ಶುದ್ಧಾಸ್ತೀರ್ಥಪರಿಪ್ಲುತಾಃ |
ಭವೇಮ ಧೂತಪಾಪ್ಮಾನಃ ತೀರ್ಥಸಂದರ್ಶನಾನ್ನೃಪ ||7||
ಎಲ್ಲೈ ರಾಜನೇ, ನಿನ್ನ ಶೌರ್ಯದಿಂದ ರಕ್ಷಿತರಾಗಿ ತೀರ್ಥಸ್ನಾನದಿಂದ ಶುದ್ಧರಾಗಿ ತೀರ್ಥಸಂದರ್ಶನದಿಂದ ಪಾಪಗಳಿಂದ ನಿರ್ಮುಕ್ತರಾಗುವೆವು.
ಭವಾನಪಿ ನರೇಂದ್ರಸ್ಯ ಕಾರ್ತವೀರ್ಯಸ್ಯ ಚಾನಘ |
ಅಷ್ಟಕಸ್ಯ ಚ ರಾಜರ್ಷೇರ್ಲೋಮಪಾದಸ್ಯ ಚೈವ ಹ ||8||
ಭರತಸ್ಯ ಚ ವೀರಸ್ಯ ಸಾರ್ವಭೌಮಸ್ಯ ಪಾರ್ಥಿವ |
ತ್ವಂ ಹಿ ಪ್ರಾಪ್ಸ್ಯತಿ ದುಷ್ಪ್ರಾಪಾನ್ಲೋಕಾಂಸ್ತೀರ್ಥಪರಿಪ್ಲುತಃ ||9||
ಎಲ್ಲೈ ಅನಘನೇ, ಎಲ್ಲೈ ಪಾರ್ಥಿವನೇ, ನೀನೂ ಸಹ ಕಾರ್ತವೀರ್ಯರಾಜನಿಂದ, ಅಷ್ಟಕರಾಜರ್ಷಿಯಿಂದ, ಲೋಮಪಾದರಾಜನಿಂದ, ವೀರನಾದ ಭರತಸಾರ್ವಭೌಮನಿಂದ ಹೊಂದಲ್ಪಟ್ಟ ದುರ್ಲಭವಾದ ಲೋಕಗಳನ್ನು ತೀರ್ಥಸ್ನಾನದಿಂದ ಉಂಟಾದ ಪುಣ್ಯದಿಂದ ಪಡೆಯುವಿ.
ಪ್ರಭಾಸಾದೀನಿ ತೀರ್ಥಾನಿ ಮಹೇಂದ್ರಾದೀಂಶ್ಚ ಪರ್ವತಾನ್ |
ಗಂಗಾದ್ಯಾಃ ಸರಿತಶ್ಚೈವ ಪ್ಲಕ್ಷಾದೀಂಶ್ಚ ವನಸ್ಪತೀನ್ ||10||
ತ್ವಯಾ ಸಹ ಮಹೀಪಾಲ ದ್ರಷ್ಟುಮಿಚ್ಛಾಮಹೇ ವಯಮ್ |
ಭವದ್ಭಿಃ ಪಾಲಿತಾಃ ಶೂರೈಃ ತೀರ್ಥಾನ್ಯಾಯತನಾನಿ ಚ ||11||
ಶೂರರಾದ ನಿಮ್ಮಿಂದ ರಕ್ಷಿಸಲ್ಪಟ್ಟವರಾಗಿ ನಾವು ಪ್ರಭಾಸಾದಿ ತೀರ್ಥಗಳನ್ನೂ, ಮಹೇಂದ್ರಾದಿ ಪರ್ವತಗಳನ್ನೂ, ಗಂಗಾದಿ ನದಿಗಳನ್ನೂ, ಪ್ಲಕ್ಷಾದಿ ವನಸ್ಪತಿಗಳನ್ನೂ, ಇನ್ನೂ ಉಳಿದ ತೀರ್ಥಕ್ಷೇತ್ರಗಳನ್ನು ಎಲ್ಲೈ ಮಹೀಪಾಲನೇ, ನಿನ್ನ ಜೊತೆಯಲ್ಲಿ ನೋಡಲು ನಾವು ಬಯಸುತ್ತೇವೆ.
ಯದಿ ತೇ ಬ್ರಾಹ್ಮಣೇಷ್ವಸ್ತಿ ಕಾಚಿತ್ ಪ್ರೀತಿರ್ಜನಾಧಿಪ |
ಕುರು ಕ್ಷಿಪ್ರಂ ವಚೋಽಸ್ಮಾಕಂ ತತಃಶ್ರೇಯೋಽಭಿಪತ್ಸ್ಯಸೇ ||12||
ಎಲ್ಲೈ ಜನಾಧಿಪನೇ, ನಿನಗೆ ಬ್ರಾಹ್ಮಣರಲ್ಲಿ ಪ್ರೀತಿಯಿದ್ದರೆ ನಮ್ಮ ಮಾತನ್ನು ಶೀಘ್ರವಾಗಿ ನಡೆಸಿಕೊಡು. ಅದರಿಂದ ಶ್ರೇಯಸ್ಸನ್ನು ಪಡೆಯುವಿ.
ತೀರ್ಥಾನಿ ಹಿ ಮಹಾಬಾಹೋ ತಪೋವಿಘ್ನಕರೈಃ ಸದಾ |
ಅನುಕೀರ್ಣಾನಿ ರಕ್ಷೋಭಿಃ ತೇಭ್ಯೋ ನಸ್ತ್ರಾತುಮರ್ಹಸಿ ||13||
ಎಲ್ಲೈ ಮಹಾಬಾಹುವೇ, ತೀರ್ಥಗಳು ಯಾವಾಗಲೂ ತಪಸ್ಸಿಗೆ ವಿಘ್ನವನ್ನು ಉಂಟುಮಾಡುವ ರಾಕ್ಷಸರಿಂದ ನಿಬಿಡವಾಗಿರುತ್ತವೆ. ನೀನು ನಮ್ಮನ್ನು ಅವರಿಂದ ರಕ್ಷಿಸಬೇಕು.
ತೀರ್ಥಾನ್ಯುಕ್ತಾನಿ ಧೌಮ್ಯೇನ ನಾರದೇನ ಚ ಧೀಮತಾ |
ಯಾನ್ಯುವಾಚ ಚ ದೇವರ್ಷಿರ್ಲೋಮಶಃ ಸುಮಹಾತಪಾಃ ||14||
ವಿಧಿವತ್ ತಾನಿ ಸರ್ವಾಣಿ ಪರ್ಯಟಸ್ವ ನರಾಧಿಪ |
ಧೂತಪಾಪ್ಮಾ ಸಹಾಸ್ಮಾಭಿರ್ಲೋಮಶೇನಾಭಿಪಾಲಿತಃ ||15||
ಎಲ್ಲೈ ನರಾಧಿಪನೇ, ಧೌಮ್ಯರಿಂದ ಹೇಳಲ್ಪಟ್ಟ, ಮೇಧಾವಿಗಳಾದ ನಾರದರಿಂದ ಹೇಳಲ್ಪಟ್ಟ, ಮಹಾತಪಸ್ವಿಗಳಾದ ದೇವರ್ಷಿಗಳಾದ ಲೋಮಶರಿಂದ ಹೇಳಲ್ಪಟ್ಟ ತೀರ್ಥಗಳನ್ನು ನಮ್ಮ ಜೊತೆಯಲ್ಲಿ ಲೋಮಶರಿಂದ ರಕ್ಷಿತನಾಗಿ ನಿರ್ಮುಕ್ತಪಾಪನಾಗಿ ವಿಧಿಪೂರ್ವಕವಾಗಿ ಎಲ್ಲಕಡೆಗಳಲ್ಲಿಯೂ ಸಂಚರಿಸು.
ವೈಶಂಪಾಯನಃ
ಸ ತಥಾ ಪೂಜ್ಯಮಾನಸ್ತೈರ್ಹರ್ಷಾದಶ್ರುಪರಿಪ್ಲುತಃ |
ಭೀಮಸೇನಾದಿಭಿರ್ವೀರೈರ್ಭ್ರಾ2ತೃಭಿಃ ಪರಿವಾರಿತಃ ||16||
ಬಾಢಮಿತ್ಯಬ್ರವೀತ್ ಸರ್ವಾನ್ ತಾನೃಷೀನ್ ಪಾಂಡವರ್ಷಭಃ |
ಲೋಮಶಂ ಸಮನುಜ್ಞಾಪ್ಯ ಧೌಮ್ಯಂ ಚೈವ ಪುರೋಹಿತಮ್ ||17||
ವೈಶಂಪಾಯನ ಆ ಋಷಿಗಳಿಂದ ಹೀಗೆ ಹೇಳಲ್ಪಟ್ಟ ಯುಧಿಷ್ಠಿರನು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಭೀಮಸೇನ ಮೊದಲಾದ ವೀರಸಹೋದರರಿಂದ ಸುತ್ತುವರಿಯಲ್ಪಟ್ಟು ಲೋಮಶರ ಮತ್ತು ಪುರೋಹಿತರಾದ ಧೌಮ್ಯರ ಅನುಮತಿಯನ್ನು ಪಡೆದು ಆ ಪಾಂಡವರ್ಷಭನು ಆ ಎಲ್ಲಾ ಋಷಿಗಳನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು.
ತತಸ್ತ ಪಾಂಡವಶ್ರೇಷ್ಠೋ ಭ್ರಾತೃಭಿಃ ಸಹಿತೋ ವಶೀ |
ದ್ರೌಪದ್ಯಾ ಚಾನವದ್ಯಾಂಗ್ಯಾ ಗಮನಾಯ ಮನೋ ದಧೇ ||18||
ಅನಂತರ ಧೈರ್ಯಶಾಲಿಯಾದ ಆ ಪಾಂಡವಶ್ರೇಷ್ಠನು ತಮ್ಮಂದಿರಿಂದ ಮತ್ತು ಅನವದ್ಯಾಂಗಿಯಾದ ದ್ರೌಪದಿಯಿಂದ ಸಹಿತನಾಗಿ ಹೊರಡಲು ನಿರ್ಧರಿಸಿದನು.
ಅಥ ವ್ಯಾಸೋ ಮಹಾಭಾಗಃ ತಥಾ ನಾರದಪರ್ವತೌ |
ಕಾಮ್ಯಕೇ ಪಾಂಡವಂ ದ್ರಷ್ಟುಂ ಸಮಾಜಗ್ಮುರ್ಮನೀಷಿಣಃ ||19||
ಆ ಸಮಯಕ್ಕೆ ಸರಿಯಾಗಿ ಮಹಾನುಭಾವರಾದ ಮೇಧಾವಿಗಳಾದ ವ್ಯಾಸರು ಮತ್ತು ನಾರದ ಪರ್ವತರು ಕಾಮ್ಯಕವನದಲ್ಲಿ ಪಾಂಡವನನ್ನು ನೋಡಲು ಅಲ್ಲಿಗೆ ಬಂದರು.

ತೇಷಾಂ ಯುಧಿಷ್ಠಿರೋ ರಾಜಾ ಪೂಜಾಂ ಚಕ್ರೇ ಯಥಾವಿಧಿ |
ಸತ್ಕೃತಾಸ್ತೇ ಮಹಾಭಾಗಾ ಯುಧಿಷ್ಠಿರಮಥಾಬ್ರುವನ್ ॥20॥
ಅವರಿಗೆ ಯುಧಿಷ್ಠಿರ ರಾಜನು ವಿಧಿವತ್ತಾಗಿ ಪೂಜೆಯನ್ನು ಸಲ್ಲಿಸಿದನು. ಪೂಜಿತರಾದ ಆ ಮಹಾನುಭಾವರು ಅನಂತರ ಯುಧಿಷ್ಠಿರನನ್ನು ಕುರಿತು ಮಾತನಾಡಿದರು.
ಯುಧಿಷ್ಠಿರ ಯಮೌ ಭೀಮ ಮನಸಾ ಕುರುತಾರ್ಜವಮ್ |
ಮನಸಾ ಕೃತಶೌಚಾ ವೈ ಶುದ್ಧಾಸ್ತೀರ್ಥಾನಿ ಗಚ್ಛತ ॥21॥
ಯುಧಿಷ್ಠಿರನೇ, ನಕುಲಸಹದೇವರೇ ಮತ್ತು ಭೀಮಸೇನನೇ, ಮನಸ್ಸಿನಲ್ಲಿ ಆರ್ಜವವನ್ನು ಹೊಂದುವವರಾಗಿ. ಮನಸ್ಸಿನಲ್ಲಿ ಶುದ್ಧರಾಗಿ, ಅನಂತರ ತೀರ್ಥಗಳಿಗೆ ಹೊರಡಿ.
ಶರೀರನಿಯಮಂ ಪ್ರಾಹುರ್ಬ್ರಾಹ್ಮಣಾ ಮಾನುಷಂ ವ್ರತಮ್ |
ಮನೋವಿಶುದ್ಧಾಂ ಬುದ್ಧಿಂ ಚ ದೈವಮಾಹುರ್ವ್ರತಂ ದ್ವಿಜಾಃ ॥22॥
ಬ್ರಾಹ್ಮಣರು ಶರೀರನಿಯಮಗಳನ್ನು ಮಾನುಷವ್ರತವೆಂದು ಹೇಳುತ್ತಾರೆ. ಮನಃಶುದ್ಧಿಯನ್ನು ಮತ್ತು ಬುದ್ಧಿಶುದ್ಧಿಯನ್ನು ದೈವವ್ರತವೆಂದು ಹೇಳುತ್ತಾರೆ.
ಮನೋ ಹ್ಯದುಷ್ಟಂ ಶೌಚಾಯ ಪರ್ಯಾಪ್ತಂ ವೈ ನರಾಧಿಪ |
ಮೈತ್ರೀಂ ಬುದ್ಧಿಂ ಸಮಾಸ್ಥಾಯ ಶುದ್ಧಾಸ್ತೀರ್ಥಾನಿ ಗಚ್ಛತ ॥23॥
ಎಲೈ ನರಾಧಿಪನೇ, ಅದುಷ್ಟವಾದ ಮನಸ್ಸು ಶುದ್ಧಿಯನ್ನು ಹೊಂದಲು ಸಮರ್ಥವಾಗುತ್ತದೆ. ಸ್ನೇಹಬುದ್ಧಿಯನ್ನು ಹೊಂದಿ ಶುದ್ಧರಾಗಿ ತೀರ್ಥಗಳಿಗೆ ಹೊರಡಿ.
ತೇ ಯೂಯಂ ಮಾನಸೈಃ ಶುದ್ಧಾಃ ಶರೀರನಿಯಮವ್ರತೈಃ |
ದೈವಂ ವ್ರತಂ ಸಮಾಸ್ಥಾಯ ಯಥೋಕ್ತಂ ಫಲಮಾಪ್ಸ್ಯಥ ॥24॥
ಅಂತಹ ನೀವು ಮನಸ್ಸಿನಲ್ಲಿ ಶುದ್ಧರಾಗಿ ಶರೀರದ ನಿಯಮವ್ರತಗಳನ್ನು ಧರಿಸಿದವರಾಗಿ ದೈವವ್ರತವನ್ನು ಆಚರಿಸುವವರಾಗಿ ಶಾಸ್ತ್ರದಲ್ಲಿ ಹೇಳಿದ ಫಲವನ್ನು ಹೊಂದುವವರಾಗಿ.
ವೈಶಂಪಾಯನಃ
ತೇ ತಥೇತಿ ಪ್ರತಿಜ್ಞಾಯ ಕೃಷ್ಣಯಾ ಸಹ ಪಾಂಡವಾಃ |
ಕೃತಸ್ವಸ್ತ್ಯಯನಾಃ ಸರ್ವೇ ಮುನಿಭಿರ್ದಿವ್ಯಮಾನುಷೈಃ ॥25॥
ಲೋಮಶಸ್ಯೋಪಸಂಗೃಹ್ಯ ಪಾದೌ ದ್ವೈಪಾಯನಸ್ಯ ಚ |
ನಾರದಸ್ಯ ಚ ರಾಜೇಂದ್ರ ದೇವರ್ಷೇಃ ಪರ್ವತಸ್ಯ ಚ ॥26॥
ಧೌಮ್ಯೇನ ಸಹಿತಾ ವೀರಾಸ್ತಥಾ ತೈರ್ವನವಾಸಿಭಿಃ |
ಮಾರ್ಗಶೀರ್ಷ್ಯಾಮತೀತಾಯಾಂ ಪುಷ್ಯೇಣ ಪ್ರಯಯುಸ್ತತಃ ॥27॥
ವೈಶಂಪಾಯನ ಎಲೈ ರಾಜೇಂದ್ರನೇ, ಹಾಗೆಯೇ ಆಗಲಿ ಎಂದು ಹೇಳಿ ಆ ಪಾಂಡವರೆಲ್ಲರೂ ದ್ರೌಪದಿಯ ಜೊತೆಯಲ್ಲಿ ದೇವರ್ಷಿಗಳಿಂದ ಮತ್ತು ಮನುಷ್ಯ ಋಷಿಗಳಿಂದ ಆಶೀರ್ವಾದವನ್ನು ಪಡೆದು ಲೋಮಶರ ಪಾದಗಳಿಗೆ, ವ್ಯಾಸರ ಪಾದಗಳಿಗೆ, ದೇವರ್ಷಿಗಳಾದ ನಾರದರ ಮತ್ತು ಪರ್ವತರ ಪಾದಗಳಿಗೆ ನಮಸ್ಕರಿಸಿ ಧೌಮ್ಯರಿಂದಲೂ, ವನವಾಸಿಗಳಾದ ಋಷಿಗಳಿಂದಲೂ ಸಹಿತರಾಗಿ ಆ ವೀರರು ಮಾರ್ಗಶೀರ್ಷ ಮಾಸವು ಕಳೆಯುತ್ತಿರಲು ಪುಷ್ಯಮಾಸದಲ್ಲಿ ಅಲ್ಲಿಂದ ಹೊರಟರು.
ಕಠಿನಾನಿ ಸಮಾದಾಯ ಚೀರಾಜಿನಜಟಾಧರಾಃ |
ಪ್ರಯಯುಃ ಪಾಂಡವಾಃ ಸರ್ವೇ ಕಾಮ್ಯಕಾದ್ ಗುರುವತ್ಸಲಾಃ |
ಅಭೇದ್ಯೈಃ ಕವಚೈರ್ಯುಕ್ತಾಃ ತೀರ್ಥಾನ್ಯನ್ವಚರಂಸ್ತತಃ ॥28॥
ಗುರುಭಕ್ತಿಯುಳ್ಳ ಪಾಂಡವರೆಲ್ಲರೂ ದೃಢವಾದ ಚೀರಾಜಿನವನ್ನು ತೆಗೆದುಕೊಂಡು, ಜಟೆಗಳನ್ನು ಧರಿಸಿದವರಾಗಿ ಕಾಮ್ಯಕವನದಿಂದ ಹೊರಟರು. ಅಭೇದ್ಯವಾದ ಕವಚಗಳನ್ನು ತೊಟ್ಟು ಅವರು ಮುಂದೆ ತೀರ್ಥಯಾತ್ರೆಯನ್ನು ಮಾಡಿದರು.
ಇಂದ್ರಸೇನಾದಿಭಿರ್ಭೃತ್ಯೈ ರಥೈಃ ಪರಿಚತುರ್ದಶೈಃ |
ಮಹಾನಸವ್ಯಾಪೃತೈಶ್ಚ ತಥಾಽನ್ಯೈಃ ಪರಿಚಾರಕೈಃ |
ಸಾಯುಧಾ ಬದ್ಧನಿಸ್ತ್ರಿಂಶಾಃ ತೂಣವಂತಃ ಸಮಾರ್ಗಣಾಃ |
ಪ್ರಾಙ್ಮುಖಾಃ ಪ್ರಯಯುರ್ವೀರಾಃ ಪಾಂಡವಾ ಜನಮೇಜಯ ॥
ಎಲೈ ಜನಮೇಜಯನೇ, ವೀರರಾದ ಪಾಂಡವರು ಇಂದ್ರಸೇನ ಮೊದಲಾದ ಸಾರಥಿಗಳಿಂದ ಕೂಡಿದ ಹದಿನಾಲ್ಕು ರಥಗಳನ್ನು ತೆಗೆದುಕೊಂಡು ಬಾಣಸಿಗರನ್ನು ಮತ್ತು ಬೇರೆ ಪರಿಚಾರಕರನ್ನು ಕರೆದುಕೊಂಡು ಆಯುಧಗಳನ್ನು ಧರಿಸಿ ಸೊಂಟದಲ್ಲಿ ಕತ್ತಿಯನ್ನು ಕಟ್ಟಿ ಬಾಣಗಳನ್ನು ಮತ್ತು ಬತ್ತಳಿಕೆಗಳನ್ನು ತೆಗೆದುಕೊಂಡು ಪೂರ್ವಾಭಿಮುಖವಾಗಿ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಾಶೀತಿಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುಶ್ಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ಎಂಬತ್ತೊಂಬತ್ತನೆಯ ಅಧ್ಯಾಯ
ಲೋಮಶರಿಂದ ಯುಧಿಷ್ಠಿರನನ್ನು ಕುರಿತು ಧರ್ಮಾಧರ್ಮಗಳ
ವಿರುದ್ಧ ಫಲಗಳ ನಿರೂಪಣೆ

ಯುಧಿಷ್ಠಿರಃ
ನ ವೈ ನಿರ್ಗುಣಮಾತ್ಮಾನಂ ಮನ್ಯೇ ದೇವರ್ಷಿಸತ್ತಮ |
ಯಥಾಽಸ್ಮಿ ದುಃಖಸಂತಪ್ತೋ ಯಥಾ ನಾನ್ಯೋ ಮಹೀಪತಿಃ ॥1॥
ಪರಾಂಶ್ಚ ನಿರ್ಗುಣಾನ್ ಮನ್ಯೇ ನ ಚ ಧರ್ಮರತಾನಪಿ |
ತೇ ಚ ಲೋಮಶ ಲೋಕೇಽಸ್ಮಿನ್ನೃಧ್ಯಂತೇ ಕೇನ ಹೇತುನಾ ॥2॥
ಯುಧಿಷ್ಠಿರ ಎಲ್ಲೈ ದೇವರ್ಷಿಶ್ರೇಷ್ಠನೇ, ನಾನು ನನ್ನನ್ನು ಗುಣಹೀನನೆಂದು ತಿಳಿಯುವುದಿಲ್ಲ. ಆದರೂ ಇನ್ನೊಬ್ಬ ರಾಜನು ಅನುಭವಿಸದಷ್ಟು ದುಃಖವನ್ನು ಅನುಭವಿಸುತ್ತಿದ್ದೇನೆ. ನಮ್ಮ ಶತ್ರುಗಳಾದರೂ ಗುಣಶೂನ್ಯರು ಮತ್ತು ಧರ್ಮಶೂನ್ಯರು. ಎಲ್ಲೈ ಲೋಮಶರೇ, ಈ ಲೋಕದಲ್ಲಿ ಅವರು ಯಾವ ಕಾರಣದಿಂದ ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ?
ಲೋಮಶಃ
ನಾತ್ರ ದುಃಖಂ ತ್ವಯಾ ಕಾರ್ಯಂ ರಾಜನ್ ಪಾರ್ಥ ಕಥಂಚನ |
ಯದಧರ್ಮೇಣ ವರ್ಧೇರನ್ನಧರ್ಮರುಚಯೋ ನರಾಃ ॥3॥
ಲೋಮಶ ಎಲ್ಲೈ ಪಾರ್ಥನೇ, ರಾಜನೇ, ಅಧರ್ಮಾಸಕ್ತರಾದ ಮನುಷ್ಯರು ಅಧರ್ಮವನ್ನು ಮಾಡಿ ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆಂದು ನೀನು ಯಾವ ರೀತಿಯಿಂದಲೂ ದುಃಖಪಡಬಾರದು.
ವರ್ಧತ್ಯಧರ್ಮೇಣ ನರಸ್ತತೋ ಭದ್ರಾಣಿ ಪಶ್ಯತಿ |
ತತಃ ಸಪತ್ನಾಂಜಮತೀ ಸಮೂಲಸ್ತು ವಿನಶ್ಯತಿ ॥4॥
ಮನುಷ್ಯನು ಅಧರ್ಮದಿಂದ ಅಭಿವೃದ್ಧಿಯನ್ನು ಹೊಂದುತ್ತಾನೆ; ಸಂಪತ್ತನ್ನೂ ಬಯಸುತ್ತಾನೆ; ಶತ್ರುಗಳನ್ನು ಜಯಿಸುತ್ತಾನೆ; ಕೊನೆಗೆ ಮೂಲ ಸಹಿತವಾಗಿ ನಾಶವನ್ನು ಹೊಂದುತ್ತಾನೆ.
ಮಯಾ ಹಿ ದೃಷ್ಟಾ ದೈತೇಯಾ ದಾನವಾಶ್ಚ ಮಹೀಪತೇ |
ವರ್ಧಮಾನಾ ಹ್ಯಧರ್ಮೇಣ ಕ್ಷಯಂ ಚೋಪಗತಾಃ ಪುನಃ ॥5॥
ಎಲ್ಲೈ ಮಹಿಪತಿಯೇ, ನಾನು ಅಧರ್ಮದಿಂದ ಅಭಿವೃದ್ಧಿಯನ್ನು ಹೊಂದಿ ಪುನಃ ವಿನಾಶವನ್ನು ಹೊಂದಿದ ಅನೇಕ ದೈತೇಯರನ್ನೂ ಮತ್ತು ದಾನವರನ್ನೂ ನೋಡಿದ್ದೇನೆ.
ಪುರಾ ದೇವಯುಗೇ ಚೈವ ದೃಷ್ಟಂ ಸರ್ವಂ ಮಯಾ ವಿಭೋ |
ಅರೋಚಯನ್ ಸುರಾ ಧರ್ಮಂ ಧರ್ಮಂ ತತ್ಯಜಿರೇಽಸುರಾಃ ॥6॥
ಎಲ್ಲೈ ವಿಭುವೇ, ನಾನು ಹಿಂದೆ ದೇವಯುಗದಲ್ಲಿ ಎಲ್ಲವನ್ನೂ ನೋಡಿದ್ದೇನೆ. ದೇವತೆಗಳು ಧರ್ಮವನ್ನು ಬಯಸಿದರು. ಅಸುರರು ಧರ್ಮವನ್ನು ತ್ಯಜಿಸಿದರು.
ತೀರ್ಥಾನಿ ದೇವಾ ವಿವಿಶುಃ ತತ್ ಸಂತತ್ಯಜುರಾಸುರಾಃ |
ತಾನಧರ್ಮಕೃತೋ ದರ್ಪಃ ಪೂರ್ವಮೇವ ಸಮಾವಿಶತ್ ॥7॥
ದೇವತೆಗಳು ತೀರ್ಥಕ್ಷೇತ್ರಗಳಲ್ಲಿ ನೆಲೆಸಿದರು. ಅಸುರರು ಅವುಗಳನ್ನು ತ್ಯಜಿಸಿದರು. ಅಂತಹ ಅಧರ್ಮಶೀಲರಾದ ಅಸುರರನ್ನು ಮೊದಲೇ ದರ್ಪವು ಪ್ರವೇಶಿಸಿತು.
ದರ್ಪಾನ್ಮಾನಃ ಸಮಭವನ್ಮಾನಾತ್ ಕ್ರೋಧೋ ವ್ಯಜಾಯತ |
ಕ್ರೋಧಾದಹ್ರೀಸ್ತತೋಽಲಜ್ಜಾ ವೃತ್ತಂ ತೇಷಾಂ ತತೋಽನಶತ್ ॥8॥
ದರ್ಪದಿಂದ ಅಹಂಕಾರವೂ, ಅಹಂಕಾರದಿಂದ ಕ್ರೋಧವೂ ಉಂಟಾಯಿತು. ಕ್ರೋಧದಿಂದ ಸಂಕೋಚ ಸ್ವಭಾವವು ದೂರವಾಯಿತು. ಅನಂತರ ಲಜ್ಜೆಯೂ, ಅನಂತರ ಅವರ ಶೀಲವೂ ನಾಶವಾಯಿತು.
ನಿರ್ಲಜ್ಜಾನ್ ಹೀನವೃತ್ತಾಂಸ್ತಾನಕ್ಷಮಾನೀರ್ಷ್ಯಕಾನಥ |
ಜಹಾತಿ ಶ್ರೀಶ್ಚ ಧರ್ಮಶ್ಚ ಹ್ಯಕ್ಷಮಾನ್ ಪಾಪಚೇತಸಃ ॥9॥
ನಿರ್ಲಜ್ಜರೂ, ಕೆಟ್ಟನಡತೆಯುಳ್ಳವರೂ, ಸಹನೆ ಇಲ್ಲದವರೂ, ಅಸೂಯಾ ಪರರೂ ಆದ ಆ ಪಾಪ ಬುದ್ಧಿಯುಳ್ಳವರನ್ನು ಸಂಪತ್ತು ಮತ್ತು ಧರ್ಮಗಳು ತೊರೆದವು.
ಕ್ಷಮಾ ಲಕ್ಷ್ಮೀಶ್ಚ ಧರ್ಮಶ್ಚ ನಚಿರಾತ್ ಪ್ರಜಹುಸ್ತತಃ |
ಲಕ್ಷ್ಮೀಸ್ತು ದೇವಾನಗಮದ್ ಅಲಕ್ಷ್ಮೀರಸುರಾನ್ನೃಪ ॥10॥
ಅನಂತರ ಕ್ಷಮೆಯೂ ಸಂಪತ್ತು ಮತ್ತು ಧರ್ಮಗಳು ಶೀಘ್ರವಾಗಿ ಪೂರ್ಣವಾಗಿ ನಷ್ಟವಾದವು. ಎಲ್ಲೈ ರಾಜನೇ, ಲಕ್ಷ್ಮಿಯು ದೇವತೆಗಳನ್ನು ಸೇರಿದಳು. ಅಲಕ್ಷ್ಮಿಯು ಅಸುರರನ್ನು ಸೇರಿದಳು.
ತಾನಲಕ್ಷ್ಮೀಸಮಾವಿಷ್ಟಾನ್ ದರ್ಪೋಪಹತಚೇತಸಃ |
ದೈತೇಯಾನ್ ದಾನವಾಂಶ್ಚೈವ ಕಲಿರಭ್ಯಾವಿಶತ್ ತತಃ ॥11॥
ಅಲಕ್ಷ್ಮಿಯಿಂದ ಆವಿಷ್ಟರಾಗಿ ದರ್ಪದಿಂದ ಕೂಡಿದ ಮನಸ್ಸುಳ್ಳ ದೈತೇಯರನ್ನು ಮತ್ತು ದಾನವರನ್ನು ಆಗ ಕಲಿಯು ಚೆನ್ನಾಗಿ ಪ್ರವೇಶಿಸಿದನು.
ತಾನಲಕ್ಷ್ಮೀಸಮಾವಿಷ್ಟಾನ್ ದಾನವಾನ್ ಕಲಿನಾ ತಥಾ |
ದರ್ಪಾಭಿಭೂತಾನ್ ಕೌಂತೇಯ ಕ್ರಿಯಾಹೀನಾನಚೇತಸಃ ॥12॥
ಮಾನಾಭಿಭೂತಾನಚಿರಾದ್ ವಿನಾಶಃ ಪ್ರತ್ಯಪದ್ಯತ ॥13॥
ಎಲ್ಲೈ ಕೌಂತೇಯನೇ, ಅಲಕ್ಷ್ಮಿಯಿಂದಲೂ, ಕಲಿಯಿಂದಲೂ ಸಮಾವಿಷ್ಟರಾದ ದರ್ಪದಿಂದ ಕೂಡಿದ, ಸತ್ಕ್ರಿಯಾ ಹೀನರಾದ ದುಷ್ಟಬುದ್ಧಿಯುಳ್ಳ ಅಹಂಕಾರ ವಶರಾದ ದಾನವರಿಗೆ ಶೀಘ್ರವಾಗಿ ವಿನಾಶ ಉಂಟಾಯಿತು.

ನಿರ್ಯಶಸ್ಕಾಸ್ತತೋ ದೈತ್ಯಾಃ ಕೃತ್ಸ್ನಶೋ ವಿಲಯಂ ಗತಾಃ |
ಅಧರ್ಮರುಚಯೋ ರಾಜನ್ನಲಕ್ಷ್ಮ್ಯಾ ಸಮಾಧಿಷ್ಠಿತಾಃ ॥14॥
ಎಲೈ ರಾಜನೇ, ಅಲಕ್ಷ್ಮಿಯಿಂದ ಚೆನ್ನಾಗಿ ಆವರಿಸಲ್ಪಟ್ಟು ಅಧರ್ಮಾಭಿರುಚಿಯನ್ನು ಹೊಂದಿ ಕೀರ್ತಿಹೀನರಾದ ದೈತ್ಯರು ಸಮಗ್ರವಾಗಿ ನಾಶವನ್ನು ಹೊಂದಿದರು.
ತತೋ ದೇವಾಃ ಸಾಗರಾಂಶ್ಚ ಸರಿತಶ್ಚ ಸರಾಂಸಿ ಚ |
ಅಭ್ಯಾಗಚ್ಛನ್ ಧರ್ಮಶೀಲಾಃ ಪುಣ್ಯಾನ್ಯಾಯತನಾನಿ ಚ ॥15॥
ಅನಂತರ ಧರ್ಮಶೀಲರಾದ ದೇವತೆಗಳು ಸಾಗರಗಳಿಗೂ, ನದಿಗಳಿಗೂ, ಸರೋವರಗಳಿಗೂ, ಪುಣ್ಯಕ್ಷೇತ್ರಗಳಿಗೂ ಬಂದು ನೆಲೆಸಿದರು.
ತಪೋಭಿಃ ಕ್ರತುಭಿರ್ದಾನೈರಾಶೀರ್ವಾದೈಶ್ಚ ಪಾಂಡವ |
ಪ್ರಜಹುಃ ಸರ್ವಪಾಪಾನಿ ಶ್ರೇಯಶ್ಚ ಪ್ರತಿಪೇದಿರೇ ॥16॥
ಎಲೈ ಪಾಂಡವನೇ, ಅವರು ತಪಸ್ಸುಗಳಿಂದಲೂ, ಯಜ್ಞಗಳಿಂದಲೂ, ದಾನಗಳಿಂದಲೂ, ಹಿರಿಯ ಆಶೀರ್ವಾದಗಳಿಂದಲೂ ಎಲ್ಲ ಪಾಪಗಳನ್ನೂ ಕಳೆದುಕೊಂಡರು. ಶ್ರೇಯಸ್ಸನ್ನೂ ಸಂಪಾದಿಸಿದರು.
ಏವಂ ಹಿ ದಾನವಂತಶ್ಚ ಕ್ರಿಯಾವಂತಶ್ಚ ಸರ್ವಶಃ |
ತೀರ್ಥಾನ್ಯಗಚ್ಛನ್ವಿಬುಧಾಃ ತೇನಾಪುರ್ಭೂತಿಮುತ್ತಮಾಮ್ ॥17॥
ಹೀಗೆ ದಾನಶೀಲರಾದ, ಸತ್ಕರ್ಮಶೀಲರಾದ ದೇವತೆಗಳು ಎಲ್ಲಾ ತೀರ್ಥಯಾತ್ರೆಯನ್ನೂ ಮಾಡಿದರು. ಅದರಿಂದ ಶ್ರೇಷ್ಠವಾದ ಸಂಪತ್ತನ್ನು ಪಡೆದರು.
ತಥಾ ತ್ವಮಪಿ ರಾಜೇಂದ್ರ ಸ್ನಾತ್ವಾ ತೀರ್ಥೇಷು ಸಾನುಜಃ |
ಪುನರ್ಲಪ್ಸ್ಯಸಿ ತಾಂ ಲಕ್ಷ್ಮೀಮೇಷ ಪಂಥಾಃ ಸನಾತನಃ ॥18॥
ಎಲೈ ರಾಜೇಂದ್ರನೇ, ಅದರಂತೆ ನೀನೂ ಸಹ ತಮ್ಮಂದಿರ ಜೊತೆಯಲ್ಲಿ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ ಪುನಃ ಸಂಪತ್ತನ್ನು ಪಡೆಯುವಿ. ಇದು ಸನಾತನವಾದ ಸನ್ಮಾರ್ಗ.
ಯಥೈವ ಹಿ ನೃಗೋ ರಾಜಾ ಶಿಬಿರೌಶೀನರೋ ಯಥಾ |
ಭಗೀರಥೋ ವಸುಮನಾ ಗಯಃ ಪೂರುಃ ಪುರೂರವಾಃ ॥19॥
ಚರಮಾಣಾಸ್ತಪೋ ನಿತ್ಯಂ ಸ್ಪರ್ಶನಾದಂಭಸಶ್ಚ ತೇ |
ತೀರ್ಥಾನಾಂ ದರ್ಶನಾತ್ ಪೂತಾ ದರ್ಶನಾಚ್ಚ ಮಹಾತ್ಮನಾಮ್॥20॥
ಅಲಭಂತ ಯಶಃ ಪುಣ್ಯಂ ಧನಾನಿ ಚ ವಿಶಾಂಪತೇ |
ಹೇಗೆ ನೃಗರಾಜನೂ, ಔಶೀನರಾದ ಶಿಬಿಯೂ, ಭಗೀರಥನು, ವಸುಮನನೂ, ಗಯನೂ, ಪೂರುವೂ, ಪುರೂರವನೂ ಯಾವಾಗಲೂ ತಪಸ್ಸನ್ನು ಆಚರಿಸಿ ತೀರ್ಥಗಳ ದರ್ಶನವನ್ನು ಮಾಡಿ ಆ ಜಲಗಳಲ್ಲಿ ಸ್ನಾನವನ್ನು ಮಾಡಿ ಮಹಾತ್ಮರ ದರ್ಶನದಿಂದ ಪವಿತ್ರರಾಗಿ ಪವಿತ್ರವಾದ ಯಶಸ್ಸನ್ನೂ ಮತ್ತು ಸಂಪತ್ತನ್ನೂ ಗಳಿಸಿದರೋ;
ತಥಾ ತ್ವಮಪಿ ರಾಜೇಂದ್ರ ಲಬ್ಧಾಸುವಿಪುಲಾಂ ಶ್ರಿಯಮ್ ॥21॥
ಯಥಾ ಚೇಕ್ಷ್ವಾಕುರಚರತ್ ಸಪುತ್ರಜನಬಾಂಧವಃ |
ಮುಚುಕುಂದೋಽಥ ಮಾಂಧಾತಾ ಮರುತ್ತಶ್ಚ ವಿಶಾಂಪತಿಃ ॥22॥
ಕೀರ್ತಿಂ ಪುಣ್ಯಾಮವಿಂದಂತ ಯಥಾ ದೇವಾಸ್ತಪೋಬಲಾತ್|
ದೇವರ್ಷಯಶ್ಚ ಕಾತ್ಸ್ನ್ಯೇನ ತಥಾ ತ್ವಮಪಿ ವೇತ್ಸ್ಯಸಿ ॥23॥
ಎಲೈ ರಾಜೇಂದ್ರನೇ, ವಿಪುಲವಾದ ಸಂಪತ್ತನ್ನು ಹೊಂದಿ ಹೇಗೆ ಇಕ್ಷ್ವಾಕುವೂ, ಮುಚುಕುಂದನೂ, ಮಾಂಧಾತನೂ, ರಾಜನಾದ ಮರುತ್ತನೂ, ಪುತ್ರ-ಮಿತ್ರ ಬಾಂಧವರ ಜೊತೆಯಲ್ಲಿ ಪವಿತ್ರವಾದ ಕೀರ್ತಿಯನ್ನು ಪಡೆದರೋ, ಹೇಗೆ ದೇವತೆಗಳೂ ಮತ್ತು ದೇವರ್ಷಿಗಳೂ ತಪೋಬಲದಿಂದ ಸಮಗ್ರವಾದ ಕೀರ್ತಿಯನ್ನು ಪಡೆದರೋ ಅದರಂತೆ ನೀನೂ ಸಹ ಪಡೆಯುವಿ.
ಧಾರ್ತರಾಷ್ಟ್ರಾಸ್ತು ದರ್ಪೇಣ ಮೋಹೇನ ಚ ವಶೀಕೃತಾಃ |
ನಚಿರಾದ್ ವಿನಶಿಷ್ಯಂತಿ ದೈತ್ಯಾ ಇವ ನ ಸಂಶಯಃ ॥24॥
ಧೃತರಾಷ್ಟ್ರನ ಮಕ್ಕಳಾದರೂ ದೈತ್ಯರಂತೆ ದರ್ಪಕ್ಕೂ, ಮೋಹಕ್ಕೂ ವಶರಾಗಿ ಶೀಘ್ರವಾಗಿ ವಿನಾಶವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ನವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪಂಚಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ತನೆಯ ಅಧ್ಯಾಯ
ಬ್ರಹ್ಮಸರತೀರದಲ್ಲಿ ಶಮಠ ಋಷಿಗಳಿಂದ ಯುಧಿಷ್ಠಿರಾದಿಗಳಿಗೆ
ಗಯನ ಯಜ್ಞಗಳ ವರ್ಣನೆ.
ವೈಶಂಪಾಯನಃ
ತೇ ತಥಾ ಸಹಿತಾ ವೀರಾ ವಸಂತಸ್ತತ್ರಯತ್ರ ಹ |
ಕ್ರಮೇಣ ಪೃಥಿವೀಪಾಲ ನೈಮಿಶಾರಣ್ಯಮಾಗತಾಃ ॥1॥
ವೈಶಂಪಾಯನ ಎಲೈ ಪೃಥಿವೀಪಾಲನೇ ಆ ವೀರರು ಜೊತೆಯಲ್ಲಿ ಹೊರಟು ಅಲ್ಲಲ್ಲಿ ವಾಸಮಾಡುತ್ತಾ ಕ್ರಮವಾಗಿ

ನೈಮಿಶಾರಣ್ಯವನ್ನು ತಲುಪಿದರು.
ತತಸ್ತೀರ್ಥೇಷು ಪುಣ್ಯೇಷು ಗೋಮತ್ಯಾಂ ಪಾಂಡವಾ ನೃಪ |
ಕೃತಾಭಿಷೇಕಾಃ ಪ್ರದದುರ್ಗಾಶ್ಚ ವಿತ್ತಂ ಚ ಭಾರತ ॥2॥
ಎಲೈ ರಾಜನೇ, ಭಾರತನೇ, ಅನಂತರ ಪಾಂಡವರು ಪುಣ್ಯತೀರ್ಥಗಳಲ್ಲಿ ಮತ್ತು ಗೋಮತೀ ನದಿಯಲ್ಲಿ ಸ್ನಾನವನ್ನು ಮಾಡಿ ಗೋವುಗಳನ್ನು ಮತ್ತು ಸುವರ್ಣಗಳನ್ನು ದಾನಮಾಡಿದರು.
ತತ್ರ ದೇವಾನ್ ಪಿತೄನ್ ವಿಪ್ರಾನ್ ತರ್ಪಯಿತ್ವಾ ಪುನಃ ಪುನಃ |
ಕನ್ಯಾತೀರ್ಥೇಽಶ್ವತೀರ್ಥೇ ಚ ಗವಾಂ ತೀರ್ಥೇ ಚ ಕೌರವಾಃ ॥3॥
ಪಾಲಕೋಟ್ಯಾಂ ವೃಷಪ್ರಸ್ಥೇ ಗಿರಾವುಷ್ಯ ಚ ಪಾಂಡವಾಃ |
ಬಾಹುದಾಯಾಂ ಮಹೀಪಾಲ ಚಕ್ರುಃ ಸರ್ವೇಽಭಿಷೇಚನಮ್ ॥4॥
ಕೌರವರು ಅಲ್ಲಿ ದೇವತೆಗಳಿಗೂ, ಪಿತೃಗಳಿಗೂ ಆರಾಧನೆಯನ್ನು ಮಾಡಿ ಬ್ರಾಹ್ಮಣರನ್ನು ಮತ್ತೆಮತ್ತೆ ದಾನಗಳಿಂದ ತೃಪ್ತಿಪಡಿಸಿದರು. ಹಾಗೆಯೇ ಕನ್ಯಾತೀರ್ಥದಲ್ಲಿಯೂ, ಅಶ್ವತೀರ್ಥದಲ್ಲಿಯೂ ಮತ್ತು ಗೋತೀರ್ಥದಲ್ಲಿಯೂ ಅನುಷ್ಠಾನ ಮಾಡಿದರು. ಎಲೈ ರಾಜನೇ, ಪಾಂಡವರು ಪಾಲಕೋಟಿಯಲ್ಲಿ ವೃಷಪ್ರಸ್ಥ ಪರ್ವತದಲ್ಲಿ ವಾಸಮಾಡಿ ಬಾಹುದಾ ನದಿಯಲ್ಲಿ ಎಲ್ಲರೂ ಸ್ನಾನವನ್ನು ಮಾಡಿದರು.
ಪ್ರಯಾಗೇ ದೇವಯಜನೇ ದೇವಾನಾಂ ಪೃಥಿವೀಪತೇ |
ಊಷುರಾಪ್ಲಾವ್ಯ ಗಾತ್ರಾಣಿ ತಪಶ್ಚಾತಸ್ಥುರುತ್ತಮಮ್ ॥5॥
ಎಲೈ ರಾಜನೇ, ದೇವತೆಗಳ ಯಜ್ಞಭೂಮಿಯ ವೇದಿಕೆಯಾದ ಪ್ರಯಾಗದಲ್ಲಿ ಸ್ನಾನವನ್ನು ಮಾಡಿ, ವಾಸವನ್ನು ಮಾಡಿ ಶ್ರೇಷ್ಠವಾದ ತಪಸ್ಸನ್ನು ಆಚರಿಸಿದರು.
ಗಂಗಾಯಮುನಯೋಶ್ಚಾಪಿ ಸಂಗಮೇ ಸತ್ಯಸಂಗರಾಃ |
ವಿಪಾಪ್ಮಾನೋ ಮಹಾತ್ಮಾನೋ ವಿಪ್ರೇಭ್ಯಃ ಪ್ರದದುರ್ವಸು ॥6॥
ಸತ್ಯಸಂಧರಾದ, ಮಹಾನುಭಾವರಾದ ಅವರು ಗಂಗಾಯಮುನಾ ಸಂಗಮದಲ್ಲಿ ಸ್ನಾನವನ್ನು ಮಾಡಿ ಪಾಪರಹಿತರಾಗಿ ಬ್ರಾಹ್ಮಣರಿಗೆ ಬಹಳ ಧನವನ್ನು ದಾನಮಾಡಿದರು.
ತಪಸ್ವಿಜನಜುಷ್ಟಾಂ ಚ ತತೋ ವೇದೀಂ ಪ್ರಜಾಪತೇಃ |
ಜಗ್ಮುಃ ಪಾಂಡುಸುತಾ ರಾಜನ್ ಬ್ರಾಹ್ಮಣೈಃ ಸಹ ಭಾರತ ॥7॥
ತತ್ರ ತೇ ನ್ಯವಸನ್ ವೀರಾಃ ತಪಶ್ಚಾತಸ್ಥುರುತ್ತಮಮ್ |
ಸಂತರ್ಪಯಂತಃ ಸತತಂ ವನ್ಯೇನ ಹವಿಷಾ ದ್ವಿಜಾನ್ ॥8॥
ಎಲೈ ರಾಜನೇ, ಭಾರತನೇ, ಅನಂತರ ಪಾಂಡುಪುತ್ರರು ತಪಸ್ವಿಜನರಿಂದ ಸೇವಿತವಾದ ಪ್ರಜಾಪತಿಯ ವೇದಿಗೆ, ಬ್ರಾಹ್ಮಣರ ಜೊತೆಯಲ್ಲಿ ಪ್ರಯಾಣ ಮಾಡಿದರು. ಆ ವೀರರು ಅಲ್ಲಿ ಕಾಡಿನಲ್ಲಿ ದೊರೆಯುವ ಹವಿಷ್ಯವಸ್ತುಗಳಿಂದ ಬ್ರಾಹ್ಮಣರನ್ನು ಸತತವಾಗಿ ತೃಪ್ತಿಪಡಿಸುತ್ತಾ ಶ್ರೇಷ್ಠವಾದ ತಪಸ್ಸನ್ನು ಆಚರಿಸಿದರು.
ತತೋ ಮಹೀಧರಂ ಜಗ್ಮುರ್ಧರ್ಮಜ್ಞೇನಾಭಿಸತ್ಕೃತಮ್ |
ರಾಜರ್ಷಿಣಾ ಪುಣ್ಯಕೃತಾ ಗಯೇನಾನುಪಮದ್ಯುತಾ ॥9॥
ಅನಂತರ ಅನುಪಮದ್ಯುತಿಯಾದ, ಪುಣ್ಯಶಾಲಿಯಾದ, ರಾಜರ್ಷಿಯಾದ, ಧರ್ಮಜ್ಞನಾದ ಗಯನಿಂದ ಪೂಜಿತವಾದ ಪರ್ವತವನ್ನು ತಲುಪಿದರು.
ಸರೋ ಗಯಶಿರೋ ಯತ್ರ ಪುಣ್ಯಾ ಚೈವ ಮಹಾನದೀ |
ಋಷಿಜುಷ್ಟಂ ಸುಪುಣ್ಯಂ ತತ್ ತೀರ್ಥಂ ಬ್ರಹ್ಮಸರೋಽತುಲಮ್॥10॥
ಗಯಶಿರಾ ಎಂಬ ಸರೋವರವೂ ಮಹಾನದಿಯೆಂಬ ಪವಿತ್ರವಾದ ನದಿಯೂ ಋಷಿಗಳಿಂದ ಸೇವಿತವಾದ ಬ್ರಹ್ಮಸರ ಎಂಬ ಅಸದೃಶವಾದ ಪವಿತ್ರವಾದ ತೀರ್ಥವೂ ಅಲ್ಲಿ ಇವೆ.
ಅಗಸ್ತ್ಯೋ ಭಗವಾನ್ ಯತ್ರ ಗತೋ ವೈವಸ್ವತಂ ಪ್ರತಿ |
ಉವಾಸ ಚ ಸ್ವಯಂ ಯತ್ರ ಧರ್ಮರಾಜಃಸನಾತನಃ॥11॥
ಸರ್ವಾಸಾಂ ಸರಿತಾಂ ಚೈವ ಸಮುದ್ಭೇದೋ ವಿಶಾಂಪತೇ |
ಯತ್ರ ಸನ್ನಿಹಿತೋ ನಿತ್ಯಂ ಮಹಾದೇವಃ ಪಿನಾಕಧೃಕ್ ॥12॥
ತತ್ರ ತೇ ಪಾಂಡವಾ ರಾಜನ್ ಚಾತುರ್ಮಾಸ್ಯೈಸ್ತದೇಜಿರೇ |
ಋಷಿಯಜ್ಞೇನ ಮಹತಾ ತತ್ರಾಕ್ಷಯವಟೋ ಮಹಾನ್ ॥13॥
ಅಲ್ಲಿ ಪೂಜ್ಯರಾದ ಅಗಸ್ತ್ಯರು ಯಮದೇವರನ್ನು ಸಂಧಿಸಿದರು. ಸನಾತನನಾದ ಯಮಧರ್ಮರಾಜನು ಅಲ್ಲಿ ಸ್ವತಃ ವಾಸಮಾಡಿದನು. ಎಲೈ ರಾಜನೇ, ಅಲ್ಲಿ ಎಲ್ಲ ನದಿಗಳ ಉಗಮವಾಗುತ್ತದೆ. ಪಿನಾಕಧಾರಿಯಾದ ಮಹಾದೇವನು ಅಲ್ಲಿ ಯಾವಾಗಲೂ ಸನ್ನಿಹಿತನಾಗಿದ್ದಾನೆ. ಎಲೈ ರಾಜನೇ, ಅಲ್ಲಿ ಪಾಂಡವರು ಚಾತುರ್ಮಾಸ್ಯ ಯಾಗಗಳನ್ನು ಮತ್ತು ಶ್ರೇಷ್ಠವಾದ ಋಷಿಯಜ್ಞಗಳನ್ನು ಮಾಡಿದರು. ಅಲ್ಲಿ ಶ್ರೇಷ್ಠವಾದ ಅಕ್ಷಯವಟವಿದೆ.
ಬ್ರಾಹ್ಮಣಾಸ್ತತ್ರ ಶತಶಃ ಸಮಾಜಗ್ಮುಸ್ತಪೋಧನಾಃ |
ವರ್ತಮಾನೇಷು ವೈ ತಸ್ಯ ಚಾತುರ್ಮಾಸ್ಯೇಷು ಭಾರತ ॥14॥
ಎಲೈ ಭಾರತನೇ, ಧರ್ಮರಾಜನ ಈ ಚಾತುರ್ಮಾಸ್ಯಯಾಗಗಳು ಅಲ್ಲಿ ಜರುಗುತ್ತಿರುವಾಗ ತಪೋಧನರಾದ ಬ್ರಾಹ್ಮಣರು ನೂರಾರು ಸಂಖ್ಯೆಯಲ್ಲಿ ಅಲ್ಲಿಗೆ ಆಗಮಿಸಿದರು.
ತತ್ರ ವಿದ್ಯಾತಪೋವೃದ್ಧಾ ಬ್ರಾಹ್ಮಣಾ ವೇದಪಾರಗಃ |

ಕಥಾಃ ಪ್ರಚಕ್ರಿರೇ ಪುಣ್ಯಾಃ ಸದಸಿಸ್ಥಾ ಮಹಾತ್ಮನಾಮ್ ॥15॥
ಅಲ್ಲಿ ಆ ಮಹಾನುಭಾವರ ಸದಸ್ಸಿನಲ್ಲಿ ವಿದ್ಯಾತಪೋವೃದ್ಧರೂ, ವೇದಪಾರಂಗತರೂ ಆದ ಬ್ರಾಹ್ಮಣರು ಪುಣ್ಯವಾದ ಕಥೆಗಳನ್ನು ಹೇಳಿದರು.
ತತ್ರ ವಿದ್ಯಾವ್ರತಸ್ನಾತಃ ಕೌಮಾರಂ ವ್ರತಮಾಸ್ಥಿತಃ |
ಶಮಠೋಽಕಥಯದ್ ರಾಜನ್ನಾಧೂರ್ತರಜಸಂ ಗಯಮ್ ॥16॥
ಅಲ್ಲಿ ವಿದ್ಯಾವ್ರತಸ್ನಾತರಾದ, ನೈಷ್ಠಿಕ ಬ್ರಹ್ಮಚರ್ಯವನ್ನು ಧರಿಸಿದ, ಶಮಠರೆಂಬ ಋಷಿಗಳು ಆಧೂರ್ತರಜಸನ ಪುತ್ರನಾದ ಗಯನ ಮಹಿಮೆಯನ್ನು ಹೇಳಿದರು.
ಶಮಠಃ
ಆಧೂರ್ತರಜಸಃ ಪುತ್ರೋ ಗಯೋ ರಾಜರ್ಷಿಸತ್ತಮಃ |
ಪುಣ್ಯಾನಿ ತಸ್ಯ ಕರ್ಮಾಣಿ ತಾನಿ ಮೇ ಶೃಣು ಭಾರತ ॥17॥
ಶಮಠ ಎಲ್ಲೈ ಭಾರತನೇ, ಆಧೂರ್ತರಜತನ ಪುತ್ರನಾದ ಗಯನು ರಾಜರ್ಷಿ ಶ್ರೇಷ್ಠನಾಗಿದ್ದನು. ಅವನು ಪವಿತ್ರವಾದ ಕರ್ಮಗಳನ್ನು ಮಾಡಿದನು. ಅದನ್ನು ಕೇಳು.
ಯಸ್ಯ ಯಜ್ಞೋ ಬಭೂವೇಹ ಬಹ್ವನ್ನೋ ಬಹುದಕ್ಷಿಣಃ |
ಯತ್ರಾನ್ನಪರ್ವತಾ ರಾಜನ್ನಾಸನ್ ಶತಸಹಸ್ರಶಃ ॥18॥
ಘೃತಕುಲ್ಯಾಶ್ಚ ದಧ್ನಶ್ಚ ನದ್ಯೋ ಬಹುಶತಾಸ್ತಥಾ |
ವ್ಯಂಜನಾನಾಂ ಪ್ರವಾಹಾಶ್ಚ ಮಹಾರ್ಹಾಣಾಂ ಸಹಸ್ರಶಃ ॥19॥
ಇಲ್ಲಿ ಬಹಳ ಅನ್ನ ಮತ್ತು ದಕ್ಷಿಣೆಗಳಿಂದ ಕೂಡಿದ್ದ ಅವನ ಯಜ್ಞವು ಜರುಗಿತು. ಎಲ್ಲೈ ರಾಜನೇ, ಅಲ್ಲಿ ಪರ್ವತದಂತಹ ಅನ್ನದ ರಾಶಿಗಳು, ಹತ್ತಾರು ಸಾವಿರಗಟ್ಟಲೆ ಇದ್ದವು. ಘೃತದ ಸರೋವರಗಳು, ಮೊಸರಿನ ನದಿಗಳು ನೂರಾರುಗಟ್ಟಲೆಯಲ್ಲಿ ಇದ್ದವು. ಶ್ರೇಷ್ಠವಾದ ವ್ಯಂಜನಗಳ ಪ್ರವಾಹವು ಸಾವಿರಗಟ್ಟಲೆ ಇದ್ದಿತು.
ಅಹನ್ಯಹನಿ ಚಾಪ್ಯೇತದ್ ಯಾಚತಾಂ ಸಂಪ್ರದೀಯತೇ |
ಅನ್ಯತ್ತು ಬ್ರಾಹ್ಮಣಾ ರಾಜನ್ ಭುಂಜತೇಽನ್ನಂ ಸುಸಂಸ್ಕೃತಮ್ ॥20॥
ಪ್ರತಿದಿನವೂ ಇದನ್ನು ಯಾಚಕರಿಗೆ ಕೊಡುತ್ತಿದ್ದರು. ಎಲ್ಲೈ ರಾಜನೇ, ಬ್ರಾಹ್ಮಣರು ಸುಸಂಸ್ಕೃತನಾದ ಬೇರೆ ಅನ್ನವನ್ನೇ ಭುಂಜಿಸುತ್ತಿದ್ದರು.
ತತ್ರ ವೈ ದಕ್ಷಿಣಾಕಾಲೇ ಬ್ರಹ್ಮಘೋಷಾ ದಿವಂ ಗತಾಃ |
ನ ಚ ಪ್ರಜ್ಞಾಯತೇ ಕಿಂಚಿದ್ ಬ್ರಹ್ಮಘೋಷೇಣ ಭಾರತ ॥21॥
ಪುಣ್ಯೇನೋಚ್ಚರಿತಾ ರಾಜನ್ ಭೂರ್ದಿಶಃ ಖಂ ತಥಾ ನೃಪ |
ಆಪೂರ್ಣಮಾಸೀಚ್ಛಬ್ದೇನ ತದಪ್ಯಾಸೀನ್ಮಹಾದ್ಭುತಮ್ ॥22॥
ಅಲ್ಲಿ ದಕ್ಷಿಣೆಯನ್ನು ಕೊಡುವ ಸಮಾಪ್ತಿಕಾಲದಲ್ಲಿ ಉಂಟಾದ ವೇದಘೋಷವು ಅಂತರಿಕ್ಷವನ್ನು ಮುಟ್ಟಿತು. ಎಲ್ಲೈ ಭಾರತನೇ, ಆ ವೇದಘೋಷದ ಕಾರಣದಿಂದಾಗಿ ಬೇರೆ ಏನೂ ಕೇಳುತ್ತಿರಲಿಲ್ಲ. ಎಲ್ಲೈ ರಾಜನೇ, ಪುಣ್ಯಜನರಿಂದ ಉಚ್ಚರಿಸಲ್ಪಟ್ಟ ಆ ವೇದಘೋಷವು ಭೂಮಿಯನ್ನು, ದಿಕ್ಕುಗಳನ್ನು ಮತ್ತು ಆಕಾಶವನ್ನು ತನ್ನ ಶಬ್ದದಿಂದ ಪೂರ್ಣವಾಗಿ ತುಂಬಿತು. ಅದು ಅದ್ಭುತವಾಗಿದ್ದಿತು.
ತತ್ರ ಸ್ಮ ಗಾಥಾಂ ಗಾಯಂತಿ ಮನುಷ್ಯಾ ಭರತರ್ಷಭ |
ಅನ್ನಪಾನಗುಣೈಸ್ತೃಪ್ತಾ ದೇಶೇ ದೇಶೇ ಸುವರ್ಚಸಃ ॥23॥
ಎಲ್ಲೈ ಭರತರ್ಷಭನೇ, ಅಲ್ಲಿ ಅನ್ನಪಾನಗಳಿಂದಲೂ, ದಕ್ಷಿಣೆ ಮೊದಲಾದ ಗುಣಗಳಿಂದಲೂ ತೃಪ್ತರಾದ ಕಾಂತಿಯುಕ್ತರಾದ ಮನುಷ್ಯರು ದೇಶದೇಶಗಳಲ್ಲಿ ಗಯನ ಯಜ್ಞದ ಮಹಿಮೆಯನ್ನು ಹಾಡಿದರು.
ಗಯಸ್ಯ ಯಜ್ಞೇ ಕೇ ತ್ವದ್ಯ ಪ್ರಾಣಿನೋಽಭೋಕ್ತುಮೀಪ್ಸವಃ |
ಯತ್ರ ಭೋಜನಶೇಷಸ್ಯ ಪರ್ವತಾಃ ಪಂಚವಿಂಶತಿಃ ॥24॥
ನ ಸ್ಮ ಪೂರ್ವೇ ಜನಾಶ್ಚಕ್ರುರ್ನ ಕರಿಷ್ಯಂತಿ ಚಾಪರೇ |
ಗಯೋ ಯದಕರೋದ್ಯಜ್ಞೇ ರಾಜರ್ಷಿರಮಿತದ್ಯುತಿಃ ॥25॥
ಕಥಂ ತು ದೇವಾ ಹವಿಷಾ ಗಯೇನ ಪರಿತರ್ಪಿತಾಃ |
ಪುನಃಶಕ್ಷ್ಯಂತ್ಯುಪಾದಾತುಮನ್ಯೈರ್ದತ್ತಾನಿ ಕಾನಿಚಿತ್ ॥26॥
ಗಯನ ಯಜ್ಞದಲ್ಲಿ ಈ ದಿನ ಭೋಜನವನ್ನು ಮಾಡದೇ ಇರುವ ಮನುಷ್ಯರು ಯಾರು? ಅಲ್ಲಿ ಭೋಜನಶೇಷದ ಇಪ್ಪತ್ತೈದು ಪರ್ವತಗಳಿವೆ. ಅಮಿತದ್ಯುತಿಯಾದ ರಾಜರ್ಷಿಯಾದ ಗಯನು ಯಜ್ಞದಲ್ಲಿ ಏನನ್ನು ಮಾಡಿದನೋ ಅದನ್ನು ಹಿಂದಿನವರು ಯಾರೂ ಮಾಡಲಿಲ್ಲ ಮತ್ತು ಮುಂದಿನವರು ಮಾಡುವುದಿಲ್ಲ. ಗಯನ ಯಜ್ಞದಲ್ಲಿ ಹವಿಸ್ಸಿನಿಂದ ತೃಪ್ತಿಹೊಂದಿದ ದೇವತೆಗಳು ಬೇರೆಯವರು ಮಾಡುವ ಯಜ್ಞದಲ್ಲಿ ಕೊಡುವ ಹವಿಸ್ಸನ್ನು ಸ್ವೀಕರಿಸಲು ಹೇಗೆ ಸಮರ್ಥರಾಗುತ್ತಾರೆ?
ಏವಂವಿಧಾಃ ಸುಬಹವಃ ತಸ್ಯ ಯಜ್ಞೋ ಮಹಾತ್ಮನಃ |
ಬಭೂವುರಸ್ಯ ಸರಸಃ ಸಮೀಪೇ ಕುರುನಂದನ ॥27॥
ಎಲ್ಲೈ ಕುರುನಂದನನೇ, ಆ ಮಹಾತ್ಮನ ಇಂತಹ ಅನೇಕ ಯಜ್ಞಗಳು ಈ ಬ್ರಹ್ಮ ಸರೋವರದ ಸಮೀಪದಲ್ಲಿ ಜರುಗಿದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ನವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಷಟ್‌ಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * *
তೊಂಬತ್ತೊಂದನೆಯ ಅಧ್ಯಾಯ
ಲೋಮಶರಿಂದ ಯುಧಿಷ್ಠಿರನಿಗೆ ಅಗಸ್ತ್ಯರ ಚರಿತೆಯ ಕಥನ. ಇಲ್ವಲ ವಾತಾಪಿಗಳ ನಡತೆ ಮತ್ತು ಲೋಪಾಮುದ್ರೆಯ ಜನನ.
ವೈಶಂಪಾಯನಃ
ತತಃ ಸಂಪ್ರಸ್ಥಿತೋ ರಾಜಾ ಕೌಂತೇಯೋ ಭೂರಿದಕ್ಷಿಣಃ |
ಅಗಸ್ತ್ಯಾಶ್ರಮಮಾಸಾದ್ಯ ದುರ್ಜಯಾಯಾಮುವಾಸ ಹ ||1||
ವೈಶಂಪಾಯನ ಅನಂತರ ಬಹಳ ದಕ್ಷಿಣೆಗಳನ್ನು ಕೊಡುವ ಕೌಂತೇಯನಾದ ಧರ್ಮರಾಜನು ಅಲ್ಲಿಂದ ಹೊರಟು
ಅಗಸ್ತ್ಯಾಶ್ರಮವನ್ನು ತಲುಪಿ ದುರ್ಜಯಾ ಎಂಬ ಆ ಸ್ಥಳದಲ್ಲಿ ವಾಸಮಾಡಿದನು.
ತತ್ರೈವ ಲೋಮಶಂ ರಾಜಾ ಪಪ್ರಚ್ಛ ವದತಾಂ ವರಃ |
ಅಗಸ್ತ್ಯೇನೇಹ ವಾತಾಪಿಃ ಕಿಮರ್ಥಮುಪಶಾಮಿತಃ ||2||
ಆಸೀದ್ವಾ ಕಿಂಪ್ರಭಾವಶ್ಚ ಸ ದೈತ್ಯೋ ಮನುಜಾಂತಕಃ |
ಕಿಮರ್ಥಂ ಚೋದ್ಯತೋ ಮನ್ಯುರಗಸ್ತ್ಯಸ್ಯ ಮಹಾತ್ಮನಃ ||3||
ಮಾತಾಡುವವರಲ್ಲಿ ಅಗ್ರಗಣ್ಯನಾದ ಆ ರಾಜನು ಅಲ್ಲಿ ಲೋಮಶರನ್ನು ಇಲ್ಲಿ ಅಗಸ್ತ್ಯರಿಂದ ವಾತಾಪಿಯು ಏಕೆ ಸಂಹರಿಸಲ್ಪಟ್ಟನು?
ಮನುಜಾಂತಕನಾದ ಆ ದೈತ್ಯನ ಪ್ರಭಾವವು ಹೇಗಿದ್ದಿತು? ಮಹಾತ್ಮರಾದ ಅಗಸ್ತ್ಯರಿಗೆ ಏಕೆ ಕೋಪವು ಉಂಟಾಯಿತು? ಎಂದು
ಕೇಳಿದನು.
ಲೋಮಶಃ
ಇಲ್ವಲೋ ನಾಮ ದೈತ್ಯೋ ಯ ಆಸೀತ್ ಕೌರವನಂದನ |
ಮಣಿಮತ್ಯಾಂ ಪುರಿ ಪುರಾ ವಾತಾಪಿಸ್ತಸ್ಯ ಚಾನುಜಃ ||4||
ಲೋಮಶ ಎಲ್ಯೆ ಕೌರವನಂದನನೇ, ಇಲ್ವಲನೆಂಬ ದೈತ್ಯನು ಹಿಂದೆ ಮಣಿಮತಿ ಎಂಬ ಪಟ್ಟಣದಲ್ಲಿದ್ದನು. ವಾತಾಪಿಯು ಅವನ
ತಮ್ಮ.
ಸ ಬ್ರಾಹ್ಮಣಂ ತಪೋಯುಕ್ತಮುವಾಚ ದಿತಿನಂದನಃ |
ಪುತ್ರಂ ಮೇ ಭಗವಾನೇಕಮಿಂದ್ರತುಲ್ಯಂ ಪ್ರಯಚ್ಛತು ||5||
ಆ ದಿತಿನಂದನನಾದ ಇಲ್ವಲನು ಒಬ್ಬ ತಪೋಯುಕ್ತನಾದ ಬ್ರಾಹ್ಮಣನ್ನು ಸಮೀಪಿಸಿ ನನಗೆ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ
ಒಬ್ಬ ಪುತ್ರನನ್ನು ಕೊಡು ಎಂದು ಕೇಳಿದನು.
ಲೋಮಶಃ
ತಸ್ಮೈ ಸ ಬ್ರಾಹ್ಮಣೋ ನಾದಾತ್ ಪುತ್ರಂ ವಾಸವಸಮ್ಮಿತಮ್ |
ಚುಕ್ರೋಧ ಸೋಽಸುರಸ್ತಸ್ಯ ಬ್ರಾಹ್ಮಣಸ್ಯ ತತೋ ಭೃಶಮ್ ||6||
ಲೋಮಶ ಆ ಬ್ರಾಹ್ಮಣರು ಅವನಿಗೆ ಇಂದ್ರಸಮಾನನಾದ ಪುತ್ರನನ್ನು ಕೊಡಲಿಲ್ಲ. ಆಗ ಅಸುರನು ಆ ಬ್ರಾಹ್ಮಣರ ಮೇಲೆ ಬಹಳ
ಕ್ರೋಧವನ್ನು ಹೊಂದಿದನು.
ತದಾ ಪ್ರಭೃತಿ ರಾಜೇಂದ್ರ ಬ್ರಹ್ಮಹಾಽಸುರಸತ್ತಮಃ |
ಮನ್ಯುಮಾನ್ ಭ್ರಾತರಂ ಛಾಗಂ ಮಾಯಯಾ ಪ್ರಚಕಾರ ಹ ||7||
ಸಮಾಹ್ವಯತಿ ಯಂ ವಾಚಾ ಗತಂ ವೈವಸ್ವತಕ್ಷಯಮ್ |
ಸ ಪುನರ್ದೇಹಮಾಸ್ಥಾಯ ಜೀವನ್ ಸ್ಮ ಪ್ರತಿದೃಶ್ಯತೇ ||8||
ಎಲ್ಯೆ ರಾಜೇಂದ್ರನೇ, ಆಗಿನಿಂದ ಪ್ರಾರಂಭಿಸಿ ಆ ಅಸುರಶ್ರೇಷ್ಠನು ಬ್ರಹ್ಮಹತ್ಯೆಯನ್ನು ಮಾಡಲು ಪ್ರಾರಂಭಿಸಿದನು.
ಕ್ರೋಧಶಾಲಿಯಾದ ಅವನು ತನ್ನ ತಮ್ಮನಾದ ವಾತಾಪಿಯನ್ನು ತನ್ನ ಮಾಯಾಶಕಿತಯಿಂದ ಹೋತವನ್ನಾಗಿ ಮಾಡಿ
ಯಮಸದನಕ್ಕೆ ಹೋದ ಅವನನ್ನು ಕರೆಯುತ್ತಿದ್ದನು. ವಾತಾಪಿಯಾದರೂ ದೇಹವನ್ನು ಧರಿಸಿ ಜೀವ ಸಹಿತನಾಗಿ ಪುನಃ ಹಿಂದೆ ಬಂದು
ಕಾಣಿಸಿಕೊಳ್ಳುತಿತದ್ದನು.
ತತೋ ವಾತಾಪಿಮಸುರಂ ಛಾಗಂ ಕೃತ್ವಾ ಸುಸಂಸ್ಕೃತಮ್ |
ಬ್ರಾಹ್ಮಣಾನ್ ಭೋಜಯಿತ್ವಾಽಸೌ ಪುನರೇವ ಸಮಾಹ್ವಯತ್ ||9||
ಆಗ ಇಲ್ವಲನು ತನ್ನ ತಮ್ಮನಾದ ಅಸುರನಾದ ವಾತಾಪಿಯನ್ನು ಹೋತವನ್ನಾಗಿ ಮಾಡಿ ಅವನ ಮಾಂಸವನ್ನು ಚೆನ್ನಾಗಿ ಬೇಯಿಸಿ
ಅದರಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಪುನಃ ಅವನನ್ನು `ವಾತಾಪಿಯೇ ಬಾ' ಎಂದು ಕರೆಯುತ್ತಿದ್ದನು.
ತಸ್ಯ ಸ್ವನೇನ ಮಹತಾ ಸ್ವರೇಣ ಗಿರಮೀರಿತಾಮ್ |
ಶ್ರುತ್ವಾಽತಿಮಾಯೋ ಬಲವಾನ್ ಕ್ಷಿಪ್ರಂ ಬ್ರಾಹ್ಮಣಕಂಟಕಃ ||10||
ತಸ್ಯ ಪಾರ್ಶ್ವಂ ವಿನಿರ್ಭಿದ್ಯ ಬ್ರಾಹ್ಮಣಸ್ಯ ಮಹಾಸುರಃ |
ವಾತಾಪಿಃ ಪ್ರಹಸನ್ ರಾಜನ್ ನಿಶ್ಚಕ್ರಾಮ ವಿಶಾಂ ಪತೇ ||11||
ಎಲ್ಯೆ ರಾಜನೇ, ಆ ದೊಡ್ಡ ಘೋಷವುಳ್ಳ ಮಾತುಗಳನ್ನು ಕೇಳಿ ಬ್ರಾಹ್ಮಣಕಂಟಕನೂ, ಬಲಿಷ್ಠನೂ, ಮಾಯಾವಿಯೂ ಆದ ಆ
ವಾತಾಪಿಮಹಾಸುರನು ಭೋಜನವನ್ನು ಮಾಡಿದ ಆ ಬ್ರಾಹ್ಮಣರ ಪಾರ್ಶ್ವವನ್ನು ಸೀಳಿಕೊಂಡು ನಗುತ್ತಾ ಹೊರಗೆ ಬರುತ್ತಿದ್ದನು.
ಏವಂ ಸ ಬ್ರಾಹ್ಮಣಾನ್ ರಾಜನ್ ಭೋಜಯಿತ್ವಾ ಪುನಃ ಪುನಃ |
ಹಿಂಸಯಾಮಾಸ ದೈತೇಯ ಇಲ್ವಲೋ ದುಷ್ಟಚೇತನಃ ||12||
ಎಲ್ಯೆ ರಾಜನೇ, ಹೀಗೆ ಆ ದುಷ್ಟಚೇತನನಾದ, ದಿತಿಯ ಸುತನಾದ ಇಲ್ವಲನು ಬ್ರಾಹ್ಮಣರಿಗೆ ಪುನಃಪುನಃ ಭೋಜನವನ್ನು ಮಾಡಿಸಿ

ಅವರನ್ನು ಕೊಲ್ಲುತ್ತಿದ್ದನು.
ಅಗಸ್ತ್ಯಶ್ಚಾಪಿ ಭಗವಾನ್ ಏತಸ್ಮಿನ್ನಂತರೇವ ತು |
ಪಿತೄನ್ ದದರ್ಶ ಗರ್ತೇ ತು ಲಂಬಮಾನಾನವಾಙ್ಮುಖಾನ್ ॥13॥
ಪೂಜ್ಯರಾದ ಅಗಸ್ತ್ಯರೂ ಕೂಡ ಈ ಸಮಯದಲ್ಲಿ ತಮ್ಮ ಪಿತೃಗಳು ಒಂದು ಹಳ್ಳದಲ್ಲಿ ಕೆಳಮುಖವಾಗಿ ನೇತಾಡುವುದನ್ನು ನೋಡಿದರು.
ಸೋಽಪೃಚ್ಛಲ್ಲಂಬಮಾನಾನ್ ತಾನ್ ಭಗವಂತಶ್ಚ ಕಿಂಕರಾಃ |
ಕಿಮರ್ಥಂ ವೇಹ ಲಂಬಧ್ವಂ ಗರ್ತೇ ಯೂಯಮಧೋಮುಖಾಃ |
ಸಂತಾನಹೇತೋರಿತಿ ತೇ ತಮೂಚುರ್ಬ್ರಹ್ಮವಾದಿನಃ ॥14॥
ಅವರು ಹಾಗೆ ನೇತಾಡುತ್ತಿದ್ದ ಅವರನ್ನು ಕುರಿತು ಪೂಜ್ಯರಾದ ತಾವು ದಯಾಳುಗಳು. ಈ ಕತ್ತಲಲ್ಲಿ ಏಕೆ ಅಧೋಮುಖರಾಗಿ ಹೀಗೆ ನೇತಾಡುತ್ತಿದ್ದೀರಿ? ಎಂದು ಕೇಳಿದರು. ಬ್ರಹ್ಮವಾದಿಗಳಾದ ಅವರು ಅಗಸ್ತ್ಯರನ್ನು ಕುರಿತು ಸಂತಾನದ ಸಲುವಾಗಿ ಎಂದು ಉತ್ತರವನ್ನು ಕೊಟ್ಟರು.
ತೇ ತಸ್ಮೈ ಕಥಯಾಮಾಸುರ್ವಯಂ ತೇ ಪಿತರಃಸ್ವಕಾಃ |
ಗರ್ತಮೇತಮನುಪ್ರಾಪ್ತಾ ಲಂಬಾಮಃ ಪ್ರಸವಾರ್ಥಿನಃ ॥15॥
ಯದಿ ನೋ ಜನಯೇಥಾಸ್ತ್ವಮಗಸ್ತ್ಯಾಪತ್ಯಮುತ್ತಮಮ್ |
ಸ್ಯಾನ್ನೋಽಸ್ಮಾನ್ನಿರಯಾನ್ಮೋಕ್ಷಸ್ತ್ವಂ ಚಾಪಿ ಭಜ ನೋ ಗತಿಮ್ ॥16॥
ಅವರು ಅಗಸ್ತ್ಯರನ್ನು ಕುರಿತು ನಾವು ನಿನ್ನ ಸ್ವಂತ ಪಿತೃಗಳು; ನಮ್ಮ ವಂಶದಲ್ಲಿ ಸಂತಾನವಿಲ್ಲದಿರುವುದರಿಂದ ಈ ಗರ್ತದಲ್ಲಿ ನೇತಾಡುತ್ತಿದ್ದೇವೆ. ನೀನು ಒಬ್ಬ ಶ್ರೇಷ್ಠನಾದ ಪುತ್ರನನ್ನು ಪಡೆಯುವುದಾದರೆ ನಮಗೆ ಇಂತಹ ನರಕದಿಂದ ಬಿಡುಗಡೆಯಾಗುತ್ತದೆ. ಇಲ್ಲದಿದ್ದರೆ ನಿನಗೂ ನಮ್ಮ ಗತಿಯೇ ಆಗುತ್ತದೆ ಎಂದು ಹೇಳಿದರು.
ಸ ತಾನುವಾಚ ತೇಜಸ್ವೀ ಸತ್ಯಧರ್ಮಪರಾಯಣಃ |
ಕರಿಷ್ಯೇ ಪಿತರಃ ಕಾಮಂ ವ್ಯೇತು ವೋ ಮಾನಸೋ ಜ್ವರಃ ॥17॥
ತೇಜಸ್ವಿಗಳೂ, ಸತ್ಯಧರ್ಮಪರಾಯಣರೂ ಆದ ಅಗಸ್ತ್ಯರು ಅವರನ್ನು ಕುರಿತು ಎಲೈ ಪಿತೃಗಳೇ, ನಿಮ್ಮ ಆಸೆಯನ್ನು ನಾನು ಈಡೇರಿಸುತ್ತೇನೆ. ನಿಮ್ಮ ಮನಸ್ಸಿನ ಸಂತಾಪವನ್ನು ಬಿಡಿ ಎಂದು ಹೇಳಿದರು.
ಲೋಮಶಃ
ತತಃ ಪ್ರಸವಸಂತಾನಂ ಚಿಂತಯನ್ ಭಗವಾನೃಷಿಃ |
ಆತ್ಮನಃ ಪ್ರಸವಸ್ಯಾರ್ಥೇ ನಾವಿಂದತ್ ಸದೃಶೀಂ ಸ್ತ್ರಿಯಮ್ ॥18॥
ಲೋಮಶ ಅನಂತರ ಪೂಜ್ಯರಾದ ಅಗಸ್ತ್ಯ ಋಷಿಗಳು ತಮ್ಮ ಸಂತತಿಯ ವಿಸ್ತಾರಕ್ಕಾಗಿ ಒಬ್ಬ ಮಗನನ್ನು ಪಡೆಯುವ ಸಲುವಾಗಿ ಚಿಂತಿಸಿದರು. ಆದರೆ ಅವರಿಗೆ ಅನುರೂಪಳಾದ ಒಬ್ಬ ವನಿತೆಯು ದೊರೆಯಲಿಲ್ಲ.
ಸ ತಸ್ಯ ತಸ್ಯ ಸತ್ತ್ವಸ್ಯ ತತ್ತದಂಗಮನುತ್ತಮಮ್ |
ಸಂಗೃಹ್ಯ ತನ್ಮಯೈರಂಶೈರ್ನಿರ್ಮಮೇ ಸ್ತ್ರಿಯಮುತ್ತಮಾಮ್ ॥19॥
ಅವರು ಆಯಾ ಪ್ರಾಣಿಗಳ ಅವಯವಗಳಿಂದ ಶ್ರೇಷ್ಠವಾದ ಅಲ್ಪ ಅಲ್ಪ ಭಾಗಗಳನ್ನು ತೆಗೆದು ಅವುಗಳನ್ನು ಸಂಗ್ರಹಿಸಿ ಆ ಅಂಶಗಳಿಂದ ಶ್ರೇಷ್ಠವಾದ ಒಬ್ಬ ವನಿತೆಯನ್ನು ನಿರ್ಮಾಣ ಮಾಡಿದರು.
ಸ ತಾಂ ವಿದರ್ಭರಾಜಾಯ ಪುತ್ರಕಾಮಾಯ ಶ್ರಾಮ್ಯತೇ |
ನಿರ್ಮಿತಾಮಾತ್ಮನೋಽರ್ಥಾಯ ಮುನಿಃ ಪ್ರಾದಾನ್ಮಹಾತಪಾಃ ॥20॥
ಮಹಾತಪಸ್ವಿಗಳಾದ ಆ ಋಷಿಗಳು ತಮ್ಮ ಸಲುವಾಗಿ ನಿರ್ಮಾಣ ಮಾಡಿದ್ದ ಆ ವನಿತೆಯನ್ನು ಪುತ್ರಕಾಮನಾಗಿ ಬಳಲುತ್ತಿದ್ದ ವಿದರ್ಭರಾಜನಿಗೆ ಕೊಟ್ಟರು.
ಸಾ ತತ್ರ ಜಜ್ಞೇ ಸುಭಗಾ ವಿದ್ಯುತ್ಸೌದಾಮನೀ ಯಥಾ |
ವಿಭ್ರಾಜಮಾನಾ ವಪುಷಾ ವ್ಯವರ್ಧತ ಶುಭಾನನಾ ॥21॥
ಸೌಭಾಗ್ಯವತಿಯಾದ ಅವಳು ಮೋಡದಲ್ಲಿ ಮಿಂಚುಮೂಡಿದಂತೆ ಅಲ್ಲಿ ಅವತರಿಸಿ ತನ್ನ ಕಾಂತಿಯಿಂದ ಬೆಳಗುತ್ತಾ ಸುಂದರವಾಗಿ ಬೆಳೆದಳು.
ಜಾತಮಾತ್ರಂ ಚ ತಾಂ ದೃಷ್ಟ್ವಾ ವೈದರ್ಭಃ ಪೃಥಿವೀಪತಿಃ |
ಪ್ರಹರ್ಷೇಣ ದ್ವಿಜಾತಿಭ್ಯೋ ನ್ಯವೇದಯತ ಭಾರತ ॥22॥
ಎಲೈ ಭಾರತನೇ, ಅವಳು ಜನಿಸಿದ ತಕ್ಷಣ ಅವಳನ್ನು ನೋಡಿ ವಿದರ್ಭರಾಜನು ಸಂತೋಷದಿಂದ ಬ್ರಾಹ್ಮಣರಿಗೆ ನಿವೇದಿಸಿದನು.
ಅಭ್ಯನಂದತ ತಾಂ ಸರ್ವೇ ಬ್ರಾಹ್ಮಣಾ ವಸುಧಾಧಿಪ |
ಲೋಪಾಮುದ್ರೇತಿ ತಸ್ಯಾಶ್ಚ ಚಕ್ರಿರೇ ನಾಮ ತೇ ದ್ವಿಜಾಃ ॥23॥
ಎಲೈ ವಸುಧಾಧಿಪನೇ, ಆ ಎಲ್ಲ ಬ್ರಾಹ್ಮಣರು ಆ ವಾರ್ತೆಯನ್ನು ಕೇಳಿ ಅಭಿನಂದಿಸಿ ಅವಳಿಗೆ ಲೋಪಾಮುದ್ರಾ ಎಂದು ನಾಮಕರಣ ಮಾಡಿದರು.
ವವೃಧೇ ಸಾ ಮಹಾರಾಜ ಬಿಭ್ರತೀ ರೂಪಮುತ್ತಮಮ್ |
ಅಪ್ಸ್ವಿವೋತ್ಪಲಿನೀ ಶೀಘ್ರಮಗ್ನೇರಿವ ಶಿಖಾ ಶುಭಾ ॥24॥
ಎಲೈ ಮಹಾರಾಜನೇ, ಅವಳು ಉತ್ತಮವಾದ ರೂಪವನ್ನು ಹೊಂದಿದವಳಾಗಿ ಅಗ್ನಿಯ ಶಿಖೆಯಂತೆ ಶುದ್ಧಳಾಗಿ ನೀರಿನಲ್ಲಿ ನೈದಿಲೆಯಂತೆ ಶೀಘ್ರವಾಗಿ ಬೆಳೆದಳು.

ತಾಂ ಯೌವನಗತಾಂ ರಾಜನ್ ಶತಂ ಕನ್ಯಾಃಸ್ವಲಂಕೃತಾಃ |
ದಾಸೀಶತಂ ಚ ಕಲ್ಯಾಣೀಮುಪಾತಸ್ಥುರ್ವಶಾನುಗಾಃ ||25||
ಎಲೈ ರಾಜನೇ, ಯೌವನಸ್ಥಳಾದ ಆ ಲೋಪಾಮುದ್ರೆಯನ್ನು ಅಲಂಕೃತರಾದ ವಶವರ್ತಿಗಳಾದ ನೂರುಕನ್ಯೆಯರು ಮತ್ತು ನೂರು ದಾಸಿಯರು ಉಪಚರಿಸುತ್ತಿದ್ದರು.
ಸಾ ಸ್ಮ ದಾಸೀಶತವೃತಾ ಮಧ್ಯೇ ಕನ್ಯಾಶತಸ್ಯ ಚ |
ಆಸ್ತೇ ತೇಜಸ್ವಿನೀ ಕನ್ಯಾ ರೋಹಿಣೀವ ದಿವಿ ಪ್ರಭೋ ||26||
ಎಲೈ ಪ್ರಭುವೇ, ಆ ಲೋಪಾಮುದ್ರೆಯಾದರೂ ನೂರುದಾಸಿಯರ ಮತ್ತು ನೂರು ಕನ್ಯೆಯರ ಮಧ್ಯೆ ತನ್ನ ತೇಜಸ್ಸಿನಿಂದ ಬೆಳಗುತ್ತಾ ಆಕಾಶದಲ್ಲಿ ರೋಹಿಣಿಯಂತೆ ಕಂಗೊಳಿಸುತ್ತಿದ್ದಳು.
ಯೌವನಸ್ಥಾಮಪಿ ಚ ತಾಂ ಶೀಲಾಚಾರಸಮನ್ವಿತಾಮ್ |
ನ ವವ್ರೇ ಪುರುಷಃ ಕಶ್ಚಿದ್ ಭಯಾತ್ ತಸ್ಯ ಮಹಾತ್ಮನಃ ||27||
ಲೋಪಾಮುದ್ರೆಯು ಯೌವನಸ್ಥಳಾಗಿದ್ದರೂ, ಶೀಲಾಚಾರಸಂಪನ್ನಳಾಗಿದ್ದರೂ ಮಹಾತ್ಮನಾದ ವಿದರ್ಭರಾಜನ ಭಯದಿಂದ ಯಾರೂ ಅವಳನ್ನು ವರಿಸಲಿಲ್ಲ.
ಸಾ ತು ಸತ್ಯವತೀ ಕನ್ಯಾ ರೂಪೇಣಾಪ್ಸರಸೋಽಪ್ಯತಿ |
ತೋಷಯಾಮಾಸ ಪಿತರಂ ಶೀಲೇನ ಸ್ವಜನಂ ತಥಾ ||28||
ಸತ್ಯವತಿಯಾದ, ಅಪ್ಸರೆಯರನ್ನೂ ಮೀರಿದ ಸೌಂದರ್ಯವನ್ನು ಹೊಂದಿದ್ದ ಆ ಕನ್ಯೆಯು ತನ್ನ ಶೀಲದಿಂದ ತನ್ನ ತಂದೆಯನ್ನೂ ಮತ್ತು ಬಂಧುಗಳನ್ನೂ ಸಂತೋಷ ಪಡಿಸಿದಳು.
ವೈದರ್ಭೀ ತು ತಥಾಯುಕ್ತಾಂ ಯುವತೀಂ ಪ್ರೇಕ್ಷ್ಯ ವೈ ಪಿತಾ |
ಮನಸಾ ಚಿಂತಯಾಮಾಸ ಕಸ್ಮೈ ದದ್ಯಾಮಿಮಾಂ ಸುತಾಮ್ ||29||
ತನ್ನ ಮಗಳು ಯುವನಸ್ಥಳಾಗಿರುವುದನ್ನು ಗಮನಿಸಿದ ವಿದರ್ಭರಾಜನು ಇಂತಹ ಮಗಳನ್ನು ಯಾರಿಗೆ ಕೊಡಲಿ ಎಂದು ಮನಸ್ಸಿನಲ್ಲಿಯೇ ಚಿಂತಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕನವತಿತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಸಪ್ತಚತ್ವಾರಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
*****

ತೊಂಬತ್ತೆರಡನೆಯ ಅಧ್ಯಾಯ
ಲೋಪಾಮುದ್ರೆಯ ವಿವಾಹ ಮತ್ತು ಧರ್ಮಾಚರಣೆ.
ಯದಾ ತ್ವಮನ್ಯತಾಗಸ್ತ್ಯೋ ಗಾರ್ಹಸ್ಥ್ಯೇ ತಾಮನಿಂದಿತಾಮ್ |
ತದಾಽಭಿಗಮ್ಯ ಪ್ರೋವಾಚ ವೈಧರ್ಭಂ ಪೃಥಿವೀಪತಿಮ್ ||1||
ರಾಜನ್ನಿವೇಶೇ ಬುದ್ಧಿರ್ಮೇ ವರ್ತತೇ ಪುತ್ರಕಾರಣಾತ್ |
ವರಯೇ ತ್ವಾಂ ಮಹೀಪಾಲ ಲೋಪಾಮುದ್ರಾಂ ಪ್ರಯಚ್ಛ ಮೇ ||2||
ಲೋಮಶ ಅಗಸ್ತ್ಯರು ಆ ಪರಿಶುದ್ಧಳಾದ ಲೋಪಾಮುದ್ರೆಯನ್ನು ತಮ್ಮ ಗಾರ್ಹಸ್ಥ್ಯಕ್ಕೆ ಅನುಕೂಲವಾದ ಪತ್ನಿ ಎಂದು ತಿಳಿದು ವಿದರ್ಭರಾಜನನ್ನು ಸಮೀಪಿಸಿ, ರಾಜನೇ, ನಾನು ಪುತನನ್ನು ಪಡೆಯುವ ಸಲುವಾಗಿ ವಿವಾಹವನ್ನು ಮಾಡಿಕೊಳ್ಳುವ ಇಚ್ಛೆಯುಳ್ಳವನಾಗಿದ್ದೇನೆ. ಎಲೈ ರಾಜನೇ, ನಿನ್ನನ್ನು ಬೇಡುತ್ತಿದ್ದೇನೆ. ಲೋಪಾಮುದ್ರೆಯನ್ನು ನನಗೆ ಕೊಡು ಎಂದು ಕೇಳಿದರು.
ಏವಮುಕತತ್ವ ಸ ಮುನಿನಾ ಮಹೀಪಾಲೋ ವಿಚೇತನಃ |
ಪ್ರತ್ಯಾಖ್ಯಾನಾಯ ಚಾಶಕ್ತಃ ಪ್ರದಾತುಮಪಿ ನೇಚ್ಛತಿ ||3||
ಈ ಮಾತುಗಳನ್ನು ಕೇಳಿದ ರಾಜನು ನಿರಾಕರಿಸಲು ಸಾಮರ್ಥ್ಯವಿಲ್ಲದೆ, ಕೊಡಲು ಮನಸ್ಸಿಲ್ಲದೆ ನಿಚೇತನನಾದನು.
ತತಃ ಸ ಭಾರ್ಯಾಮಭ್ಯೇತ್ಯ ಪ್ರೋವಾಚ ಪೃಥಿವೀಪತಿಃ |
ಮಹರ್ಷಿರ್ವೀರ್ಯವಾನೇಷ ಕ್ರುದ್ಧಃ ಶಾಪಾಗ್ನಿನಾ ದಹೇತ್ ||4||
ಅನಂತರ ಆ ರಾಜನು ತನ್ನ ಪತ್ನಿಯನ್ನು ಸಮೀಪಿಸಿ ಈ ಮಹರ್ಷಿಗಳು ಪ್ರತಾಪಶಾಲಿಗಳು, ಅವರಿಗೆ ಕೋಪವುಂಟಾದರೆ ಶಾಪಾಗ್ನಿಯಿಂದ ನಮ್ಮನ್ನು ಸುಡಬಹುದು ಎಂದು ಹೇಳಿದನು.
ಲೋಮಶಃ
ತಂ ತಥಾ ದುಃಖಿತಂ ದೃಷ್ಟ್ವಾ ಸಭಾರ್ಯಂ ಪೃಥಿವೀಪತಿಮ್ |
ಲೋಪಾಮುದ್ರಾಽಭಿಗಮ್ಯೇದಂ ಕಾಲೇ ವಚನಮಬ್ರವೀತ್ ||5||
ಮತ್ಕೃತೇ ನ ಮಹೀಪಾಲ ಪೀಡಾಮಭ್ಯೇತುಮರ್ಹಸಿ |
ಪ್ರಯಚ್ಛ ಮಾಮಗಸ್ತ್ಯಾಯ ತ್ರಾಹ್ಯಾತ್ಮಾನಂ ಮಯಾ ಪಿತಃ ||6||
ಲೋಮಶ ತನ್ನ ತಂದೆಯಾದ ರಾಜನು ತನ್ನ ಪತ್ನಿಯ ಜೊತೆಯಲ್ಲಿ ಅಷ್ಟು ದುಃಖದಿಂದ ಇರುವುದನ್ನು ನೋಡಿದ ಲೋಪಾಮುದ್ರೆಯು ಯೋಗ್ಯವಾದ ಕಾಲದಲ್ಲಿ ತಂದೆಯನ್ನು ಸಮೀಪಿಸಿ ಎಲೈ ರಾಜನೇ, ನನ್ನ ಸಲುವಾಗಿ ಚಿಂತೆಯನ್ನು ಮಾಡಬೇಡ. ನನ್ನನ್ನು ಅಗಸ್ತ್ಯರಿಗೆ ಕೊಡು. ತಂದೆಯೇ, ನನ್ನನ್ನು ದಾನಮಾಡಿ ನೀನು ನಿನ್ನನ್ನು ರಕ್ಷಿಸಿಕೋ ಎಂದು ಹೇಳಿದಳು.
ಲೋಮಶಃ

ದುಹಿತುರ್ವಚನಾದ್ರಾಜಾ ಸೋಽಗಸ್ತ್ಯಾಯ ಮಹಾತ್ಮನೇ |
ಲೋಪಾಮುದ್ರಾಂ ತತಃ ಪ್ರಾದಾದ್ ವಿಧಿಪೂರ್ವಂ ವಿಶಾಂಪತೇ ॥7॥
ಲೋಮಶ ಎಲೈ ವಿಶಾಂಪತಿಯೇ, ಮಗಳ ಮಾತಿನಂತೆ ವಿದರ್ಭರಾಜನು ಮಹಾತ್ಮರಾದ ಅಗಸ್ತ್ಯರಿಗೆ ಲೋಪಾಮುದ್ರೆಯನ್ನು ವಿಧಿಪೂರ್ವಕವಾಗಿ ದಾನ ಮಾಡಿದನು.
ಪ್ರಾಪ್ಯ ಭಾರ್ಯಾಮಗಸ್ತ್ಯಸ್ತು ಲೋಪಮುದ್ರಾಮಭಾಷತ |
ಮಹಾರ್ಹಾಣ್ಯುತ್ಸೃಜೈತಾನಿ ವಾಸಾಂಸ್ಯಾಭರಣಾನಿ ಚ ॥8॥
ವಿವಾಹವನ್ನು ಮಾಡಿಕೊಂಡ ಅಗಸ್ತ್ಯರು ಲೋಪಾಮುದ್ರೆಯನ್ನು ಕುರಿತು ಈ ಬೆಲೆಬಾಳುವ ವಸ್ತ್ರಗಳನ್ನು ಮತ್ತು ಆಭರಣಗಳನ್ನು ಪರಿತ್ಯಜಿಸು ಎಂದು ಹೇಳಿದರು.
ಲೋಮಶಃ
ತತಃ ಸಾ ತಾನಿ ವಾಸಾಂಸಿ ತನೂನಿ ಚ ಮೃದೂನಿ ಚ |
ಸಮುತ್ಸ್ರಜತ್ಸ ರಂಭೋರೂಃ ದಿವ್ಯಾನ್ಯಾಭರಣಾನಿ ಚ ॥9॥
ಆಗ ಆ ರಂಭೋರುವಾದ ಲೋಪಾಮುದ್ರೆಯು ಸೂಕ್ಷ್ಮವೂ ಮತ್ತು ಮೃದುವೂ ಆದ ವಸ್ತ್ರವನ್ನೂ ಮತ್ತು ದಿವ್ಯವಾದ ಆಭರಣಗಳನ್ನೂ ತೆಗೆದಿಟ್ಟಳು.
ತತಶ್ಚೀರಾಣಿ ಜಗ್ರಾಹ ವಲ್ಕಲಾನ್ಯಜಿನಾನಿ ಚ |
ಸಮಾನವ್ರತಚರ್ಯಾ ಚ ಬಭೂವಾಯತಲೋಚನಾ ॥10॥
ಅನಂತರ ಚೀರಗಳನ್ನು ಮತ್ತು ನಾರುಮಡಿಗಳನ್ನು ಮತ್ತು ಕೃಷ್ಣಾಜಿನವನ್ನು ಧರಿಸಿ ವಿಶಾಲನೇತ್ರೆಯಾದ ಅವಳು ಪತಿಗೆ ಸಮಾನವಾದ ವ್ರತಚರ್ಯೆಯಲ್ಲಿ ತೊಡಗಿದಳು.
ಗಂಗಾದ್ವಾರಮುಪಾಗಮ್ಯ ಭಗವಾನ್ ಋಷಿಸತ್ತಮಃ |
ಉಗ್ರಮಾತಿಷ್ಠತ ತಪಃ ಸಹ ಪತ್ನ್ಯಾಽನುಕೂಲಯಾ ॥11॥
ಪೂಜ್ಯರಾದ ಆ ಋಷಿಶ್ರೇಷ್ಠರು ಹರಿದ್ವಾರಕ್ಕೆ ಬಂದು ಅನುಕೂಲಳಾದ ತಮ್ಮ ಪತ್ನಿಯ ಜೊತೆಯಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿದರು.
ಸಾ ಪ್ರೀತ್ಯಾ ಬಹುಮಾನಾಚ್ಚ ಪತಿಂ ಪರ್ಯಚರತ್ ತದಾ |
ಅಗಸ್ತ್ಯಶ್ಚ ಪರಾಂ ಪ್ರೀತಿಂ ಭಾರ್ಯಯಾಮಕರೋತ್ ಪ್ರಭುಃ ॥12॥
ಲೋಪಾಮುದ್ರೆಯು ಆಗ ಪತಿಯ ಮೇಲಿನ ಪ್ರೀತಿಯಿಂದಲೂ ಮತ್ತು ಬಹುಮಾನದಿಂದಲೂ ಅವರ ಸೇವೆಯನ್ನು ಮಾಡಿದಳು. ಸಮರ್ಥರಾದ ಅಗಸ್ತ್ಯರು ತಮ್ಮ ಪತ್ನಿಯಲ್ಲಿ ಬಹಳವಾದ ಪ್ರೀತಿಯನ್ನು ಹೊಂದಿದರು.
ತತೋ ಬಹುತಿಥೇ ಕಾಲೇ ಲೋಪಾಮುದ್ರಾಂ ವಿಶಾಂಪತೇ |
ತಪಸಾ ದ್ಯೋತಿತಾಂ ಸ್ನಾತಾಂ ದದರ್ಶ ಭಗವಾನ್ ಋಷಿಃ ॥13॥
ಎಲೈ ರಾಜನೇ, ಅನಂತರ ಬಹುಕಾಲವು ಕಳೆದಮೇಲೆ ಪೂಜ್ಯರಾದ ಅಗಸ್ತ್ಯ ಋಷಿಗಳು ತಪಸ್ಸಿನಿಂದ ಬೆಳಗುತ್ತಿದ್ದ, ಸ್ನಾನಮಾಡಿ ಶುದ್ಧಳಾಗಿದ್ದ ಲೋಪಾಮುದ್ರೆಯನ್ನು ನೋಡಿದರು.
ಸ ತಸ್ಯಾಃ ಪರಿಚಾರೇಣ ಶೀಲೇನ ಚ ದಮೇನ ಚ |
ಶ್ರಿಯಾ ರೂಪೇಣ ಚ ಪ್ರೀತೋ ಮೈಥುನಾಯಾಜುಹಾವ ತಾಮ್॥14॥
ಅವರು ಅವಳ ಪರಿಚಾರದಿಂದಲೂ, ಶೀಲದಿಂದಲೂ, ಇಂದ್ರಿಯನಿಗ್ರಹದಿಂದಲೂ, ಕಾಂತಿಯಿಂದಲೂ, ಸೌಂದರ್ಯದಿಂದಲೂ ಸಂತುಷ್ಟರಾಗಿ ಅವಳನ್ನು ಮೈಥುನಕ್ಕಾಗಿ ಕರೆದರು.
ತತಃ ಸಾ ಪ್ರಾಂಜಲಿರ್ಭೂತ್ವಾ ಲಜ್ಜಮಾನೇವ ಭಾಮಿನೀ |
ತದಾ ಸಪ್ರಣಯಂ ವಾಕ್ಯಂ ಭಗವಂತಮಥಾಬ್ರವೀತ್ ॥15॥
ಆಗ ಭಾಮಿನಿಯಾದ ಆ ಲೋಪಾಮುದ್ರೆಯು ಕೈಗಳನ್ನು ಮುಗಿದು ನಾಚಿಕೊಳ್ಳುತ್ತಾ ಪ್ರೀತಿಯಿಂದ ಪೂಜ್ಯರಾದ ಅಗಸ್ತ್ಯರನ್ನು ಕುರಿತು ಹೀಗೆ ಮಾತನಾಡಿದಳು.
ಅಸಂಶಯಂ ಪ್ರಜಾಹೇತೋರ್ಭಾರ್ಯಾಂ ಪತಿರವಿಂದತ |
ಯಾ ತು ತ್ವಯಿ ಮಮ ಪ್ರೀತಿಃ ತಾಮೃಷೇ ಕರ್ತುಮರ್ಹಸಿ ॥16॥
ಯಥಾ ಪಿತುರ್ಗೃಹೇ ವಿಪ್ರ ಪ್ರಾಸಾದೇ ಶಯನಂ ಮಮ |
ತಥಾವಿಧೇ ತ್ವಂ ಶಯನೇ ಮಾಮುಪೈತುಮಿಹಾರ್ಹಸಿ ॥17॥
ಇಚ್ಛಾಮಿ ತ್ವಾಂ ಸ್ರಗ್ವಿಣಂ ಚ ಭೂಷಣೈಶ್ಚ ವಿಭೂಷಿತಮ್ |
ಉಪಸರ್ತುಂ ಯಥಾಕಾಮಂ ದಿವ್ಯಾಭರಣಭೂಷಿತಾ ॥18॥
ಎಲೈ ಋಷಿಶ್ರೇಷ್ಠರೇ, ಖಂಡಿತವಾಗಿ ಮಕ್ಕಳನ್ನು ಪಡೆಯುವುದಕ್ಕಾಗಿ ಪತಿಯು ಪತ್ನಿಯನ್ನು ಸಂಪಾದಿಸುತ್ತಾನೆ. ನಿಮ್ಮಲ್ಲಿ ನನಗೆ ಎಂತಹ ಪ್ರೀತಿ ಇದೆಯೋ ಅದಕ್ಕೆ ಅನುಗುಣವಾಗಿ ನೀವು ನಡೆದುಕೊಳ್ಳಬೇಕು. ನಾನು ನನ್ನ ತಂದೆಯ ಮನೆಯಲ್ಲಿ ಹೇಗೆ ಉಪ್ಪರಿಗೆಯಲ್ಲಿ ಮಲಗುತ್ತಿದ್ದೆನೋ ಅಂತಹ ಶಯನದಲ್ಲಿ ನೀವು ನನ್ನ ಬಳಿಗೆ ಬರಬೇಕು. ನೀವು ಭೂಷಣಗಳಿಂದಲೂ, ಮಾಲೆಗಳಿಂದಲೂ ಅಲಂಕೃತರಾಗಿರುವಾಗ ನಾನೂ ನನ್ನ ಮನಸ್ಸಿಗೆ ಒಪ್ಪುವ ದಿವ್ಯಾಭರಣಗಳಿಂದ ಭೂಷಿತಳಾಗಿ ನಿಮ್ಮ ಬಳಿಗೆ ಬರಬೇಕೆಂದು ಬಯಸುತ್ತೇನೆ ಎಂದು ಹೇಳಿದಳು.
ಅಗಸ್ತ್ಯಃ
ನ ವೈ ಧನಾನಿ ವಿದ್ಯಂತೇ ಲೋಪಾಮುದ್ರೇ ತಥಾ ಮಮ |

ಯಥಾವಿಧಾನಿ ಕಲ್ಯಾಣಿ ಪಿತುಸ್ತವ ಸುಮಧ್ಯಮೇ ॥19॥
ಅಗಸ್ತ್ಯರು ಎಲೌ ಲೋಪಮುದ್ರೆಯೇ, ಎಲೌ ಸುಂದರಿಯೇ, ಕಲ್ಯಾಣಿಯೇ, ನಿನ್ನ ತಂದೆಯ ಬಳಿ ಇದ್ದಂತಹ ಧನಸಂಪತ್ತು ನನ್ನ ಬಳಿಯಲ್ಲಿಲ್ಲ.
ಲೋಪಾಮುದ್ರಾ
ಈಶೋಽಸಿ ತಪಸಾ ಸರ್ವಂ ಸಮಾಹರ್ತುಂ ಮಮೇಪ್ಸಿತಮ್ |
ಕ್ಷಣೇನ ಜೀವಲೋಕೇ ಯದ್ ವಸು ಕಿಂಚನ ವಿದ್ಯತೇ ॥20॥
ಲೋಪಾಮುದ್ರೆ ನೀವು ನಿಮ್ಮ ತಪಸ್ಸಿನಿಂದ ನನಗೆ ಇಷ್ಟವಾದ ಜೀವಲೋಕದಲ್ಲಿರುವ ಯಾವ ಸಂಪತ್ತನ್ನಾದರೂ ಒಂದುಕ್ಷಣದಲ್ಲಿ ತಂದುಕೊಡಲು ಸಮರ್ಥರಾಗಿದ್ದೀರಿ.
ಅಗಸ್ತ್ಯಃ
ಏವಮೇತದ್ಯಥಾಽಽತ್ಥ ತ್ವಂ ತಪೋವ್ಯಯಕರಂ ತು ಮೇ |
ಯಥಾ ತು ಮೇ ನ ಪ್ರಣಶ್ಯೇತ್ ತಪಸ್ತದುಪಧಾರಯ ॥21॥
ಅಗಸ್ತ್ಯರು ನೀನು ಹೇಳಿದುದು ಸರಿ. ಆದರೆ ಅದರಿಂದ ನನ್ನ ತಪಸ್ಸು ನಾಶವಾಗುತ್ತದೆ. ಹೇಗೆ ಮಾಡಿದರೆ ನನ್ನ ತಪಸ್ಸು ನಾಶ ಹೊಂದುವುದಿಲ್ಲವೋ ಅಂತಹ ಉಪಾಯವನ್ನು ಚಿಂತಿಸು.
ಲೋಪಾಮುದ್ರಾ
ಅಲ್ಪಾವಶಿಷ್ಟಃ ಕಾಲೋಽಯಮ್ ಋತೌ ಮಮ ತಪೋಧನ |
ನ ಚಾನ್ಯಥಾಽಹಮಿಚ್ಛೇಯಂ ತ್ವಾಮುಪೈತುಂ ಕಥಂಚನ ॥22॥
ನ ಚಾಪಿ ಧರ್ಮಮಿಚ್ಛಾಮಿ ವಿಲೋಪ್ತುಂ ತೇ ತಪೋಧನ |
ಏವಂ ತು ಮೇ ಯಥಾಕಾಮಂ ಸಂಪಾದಯಿತುಮರ್ಹಸಿ ॥23॥
ಲೋಪಾಮುದ್ರೆ ಎಲೈ ತಪೋಧನರೇ, ನನ್ನ ಋತುಕಾಲದಲ್ಲಿ ಅಲ್ಪಸಮಯವು ಮಾತ್ರ ಉಳಿದಿದೆ. ನಾನು ಬೇರೆ ರೀತಿಯಲ್ಲಿಯೂ ನಿಮ್ಮ ಬಳಿಗೆ ಬರಲು ಇಷ್ಟಪಡುವುದಿಲ್ಲ. ಎಲೈ ತಪೋಧನರೇ, ನಿಮ್ಮ ಧರ್ಮವನ್ನು ನಾಶಮಾಡಲು ನಾನು ಬಯಸುವುದಿಲ್ಲ. ಆದರೆ ನಾನು ಬಯಸಿದ ಈ ವಿಷಯವನ್ನು ಮಾತ್ರ ನೀವು ಸಂಪಾದಿಸಿಕೊಡಬೇಕು.
ಅಗಸ್ತ್ಯಃ
ಯದ್ಯೇಷ ಕಾಮಃ ಸುಭಗೇ ತವ ಬುದ್ಧ್ಯಾ ವಿನಿಶ್ಚಿತಃ |
ಹಂತ ಗಚ್ಛಾಮ್ಯಹಂ ಭದ್ರೇ ಚರ ಧರ್ಮಮಿಹ ಸ್ಥಿತಾ ॥24॥
ಅಗಸ್ತ್ಯರು ಎಲೌ ಸುಂದರಿಯೇ, ಮಂಗಳಸ್ವರೂಪಳೇ, ನೀನು ಬುದ್ಧಿಯಿಂದ ವಿಚಾರಮಾಡಿ ಇದೇ ಆಸೆಯನ್ನು ಹೊಂದಿರುವವಳಾದರೆ ನಾನು ಸಂಪಾದಿಸಿಕೊಂಡು ಬರಲು ಹೋಗುತ್ತೇನೆ. ನೀನು ಇಲ್ಲಿಯೇ ಇದ್ದು ಧರ್ಮವನ್ನು ಆಚರಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿನವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ಮೂರನೆಯ ಅಧ್ಯಾಯ
ಧನವನ್ನು ಯಾಚಿಸಲು ಶುತರ್ವಾದಿರಾಜರ ಬಳಿಗೆ ಅಗಸ್ತ್ಯರ ಗಮನ.
ಲೋಮಶಃ
ತತೋ ಜಗಾಮ ಕೌರವ್ಯ ಸೋಽಗಸ್ತ್ಯೋ ಭಿಕ್ಷಿತುಂ ವಸು |
ಶ್ರುತರ್ವಾಣಂ ಮಹೀಪಾಲಂ ಯಂ ವೇದಾಭ್ಯಧಿಕಂ ನೃಪೈಃ ॥1॥
ಲೋಮಶ ಎಲೈ ಕೌರವ್ಯನೇ, ಅನಂತರ ಅಗಸ್ತ್ಯರು ತಾವು ಉಳಿದ ಎಲ್ಲ ರಾಜರುಗಳಿಗಿಂತಲೂ ಶ್ರೇಷ್ಠನೆಂದು ತಿಳಿದಿದ್ದ ಶ್ರುತರ್ವರಾಜನಲ್ಲಿಗೆ ಧನವನ್ನು ಯಾಚಿಸಲು ಹೋದರು.
ಸ ವಿದಿತ್ವಾ ತು ನೃಪತಿಃ ಕುಂಭಯೋನಿಮುಪಾಗತಮ್ |
ವಿಷಯಾಂತೇ ಸಹಾಮಾತ್ಯಃ ಪ್ರತ್ಯಗೃಹ್ಣಾತ್ ಸುಸತ್ಕೃತಮ್ ॥2॥
ಆ ರಾಜನಾದರೂ ಕುಂಭಸಂಭವರಾದ ಅಗಸ್ತ್ಯರು ಬರುತ್ತಿರುವುದನ್ನು ತಿಳಿದು ತನ್ನ ಮಂತ್ರಿಗಳ ಜೊತೆಯಲ್ಲಿ ತನ್ನ ರಾಜ್ಯದ ಕೊನೆಯ ಭಾಗಕ್ಕೆ ಬಂದು ಸತ್ಕಾರದಿಂದ ಅವರನ್ನು ಸ್ವೀಕರಿಸಿದನು.
ತಸ್ಮೈ ಚಾರ್ಘ್ಯಂ ಯಥಾನ್ಯಾಯಮಾನೀಯ ಪೃಥಿವೀಪತಿಃ |
ಪ್ರಾಂಜಲಿಃ ಪ್ರಣತೋ ಭೂತ್ವಾ ಪಪ್ರಚ್ಛಾಗಮನಂ ಪ್ರತಿ ॥3॥
ಆ ರಾಜನು ಅವರಿಗೆ ಶಾಸ್ತ್ರೋಕ್ತರೀತಿಯಿಂದ ಅರ್ಘ್ಯವನ್ನು ಸಮರ್ಪಿಸಿ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿ ಆಗಮನವನ್ನು ಕುರಿತು ಕಾರಣವನ್ನು ಕೇಳಿದನು.
ಅಗಸ್ತ್ಯಃ
ವಿತ್ತಾರ್ಥಿನಮನುಪ್ರಾಪ್ತಂ ವಿದ್ಧಿ ಮಾಂ ಪೃಥಿವೀಪತೇ |
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛ ಮೇ ॥4॥
ಅಗಸ್ತ್ಯರು ಎಲೈ ಪೃಥಿವೀಪತಿಯೇ, ನಾನು ವಿತ್ತಾರ್ಥಿಯಾಗಿ ಬಂದಿದ್ದೇನೆಂದು ತಿಳಿ. ಬೇರೆ ಪ್ರಜೆಗಳಿಗೆ ಹಿಂಸೆಯಾಗದಂತೆ ನನಗೆ ನಿನ್ನ ಧನದ ಒಂದು ಭಾಗವನ್ನು ಕೊಡು.

ಲೋಮಶಃ
ತತ ಆಯವ್ಯಯೌ ಪೂರ್ಣೌ ತಸ್ಮೈ ರಾಜಾ ನ್ಯವೇದಯತ್ |
ಅತೋ ವಿದ್ವನ್ನುಪಾದತ್ಸ್ವ ಯದತ್ರಾಭ್ಯಧಿಕಂ ವಸು ||5||
ಲೋಮಶ ಆಗ ರಾಜನು ಅಗಸ್ತ್ಯರಿಗೆ ತನ್ನ ಆಯ-ವ್ಯಯಗಳು ಸಮವಾಗಿದೆ ಎಂದು ತಿಳಿಸಿ, ವಿದ್ವಾಂಸರೇ ಇಲ್ಲಿ ಯಾವುದು ಅಧಿಕವಾಗಿದೆಯೋ ಆ ಧನವನ್ನು ಸ್ವೀಕರಿಸಿ ಎಂದು ಹೇಳಿದನು.
ತತ ಆಯವ್ಯಯೌ ದೃಷ್ಟ್ವಾ ಸವೌ ಸಮಮತಿರ್ದ್ವಿಜಃ |
ಸರ್ವಥಾ ಪ್ರಾಣಿನಾಂ ಪೀಡಾಮುಪಾದಾನಾದಮನ್ಯತ ||6||
ಸಮಾಧಾನಚಿತ್ತರಾದ ಅಗಸ್ತ್ಯರು ರಾಜನ ಆಯ-ವ್ಯಯಗಳು ಸಮಾನವಾಗಿರುವುದನ್ನು ನೋಡಿ ತಾವು ಧನವನ್ನು ಸ್ವೀಕರಿಸಿದರೆ ಪ್ರಜೆಗಳಿಗೆ ಪೀಡೆಯಾಗುವುದೆಂದು ಭಾವಿಸಿದರು.
ಸ ಶ್ರುತರ್ವಾಣಮಾದಾಯ ವಾಧ್ರ್ಯಶ್ವಮಗಮತ್ ತತಃ |
ಸ ಚ ತೌ ವಿಷಯಸ್ಯಾಂತೇ ಪ್ರತ್ಯಗೃಹ್ಣಾದ್ಯಥಾವಿಧಿ ||7||
ಅವರು ಶ್ರುತರ್ವಾಣನನ್ನು ಕರೆದುಕೊಂಡು ವಾಧ್ರ್ಯಶ್ವರಾಜನ ಬಳಿಗೆ ಬಂದರು. ವಾಧ್ರ್ಯಶ್ವನಾದರೂ ತನ್ನ ರಾಜ್ಯದ ಕೊನೆಯ ಭಾಗದಲ್ಲಿ ಅವರನ್ನು ವಿಧಿಪೂರ್ವಕವಾಗಿ ಸ್ವೀಕರಿಸಿದನು.
ತಯೋರರ್ಘ್ಯಂ ಚ ಪಾದ್ಯಂ ಚ ವಾಧ್ರ್ಯಶ್ವಃ ಪ್ರತ್ಯವೇದಯತ್ |
ಅನುಜ್ಞಾಪ್ಯ ಚ ಪಪ್ರಚ್ಛ ಪ್ರಯೋಜನಮುಪಕ್ರಮೇ ||8||
ವಾಧ್ರ್ಯಶ್ವನು ಅವರಿಗೆ ಅರ್ಘ್ಯಪಾದ್ಯಗಳನ್ನು ಕೊಟ್ಟು ಅವರ ಅನುಮತಿಯನ್ನು ಪಡೆದು ಆಗಮನದ ಉದ್ದೇಶವನ್ನು ಕೇಳಿದನು.
ಅಗಸ್ತ್ಯಃ
ವಿತ್ತಕಾಮಾವಿಹ ಪ್ರಾಪ್ತೌ ವಾಧ್ರ್ಯಶ್ವ ಪೃಥಿವೀಪತೇ |
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛ ನೌ ||9||
ಅಗಸ್ತ್ಯರು ಎಲೈ ವಾಧ್ರ್ಯಶ್ವರಾಜನೇ ನಾವಿಬ್ಬರೂ ಧನಕಾಮರಾಗಿ ಬಂದಿದ್ದೇವೆ. ಬೇರೆ ಪ್ರಜೆಗಳಿಗೆ ಪೀಡೆಯಾಗದಂತೆ ನಮಗೆ ಯಥಾಶಕ್ತಿಯಾಗಿ ಧನವನ್ನು ಕೊಡು.
ಲೋಮಶಃ
ತತ ಆಯವ್ಯಯೌ ಪೂರ್ಣೌ ಜಾಮಾತ್ರಾಽಸ್ಯ ನ್ಯವೇದಯತ್ |
ತತೋ ಜ್ಞಾತ್ವಾ ಸಮಾದತ್ತಾಂ ಯದತ್ರಾಪ್ಯತಿರಿಚ್ಯತೇ ||10||
ಲೋಮಶ ಆಗ ವಾಧ್ರ್ಯಶ್ವನ ಅಳಿಯನು ಆಯ-ವ್ಯಯಗಳು ಸಮಾನವಾಗಿವೆ ಎಂದು ತಿಳಿಸಿದನು. ವಾಧ್ರ್ಯಶ್ವನು ಅವರಿಬ್ಬರನ್ನು ಕುರಿತು ಆಯ-ವ್ಯಯಗಳನ್ನು ನೋಡಿ ಇಲ್ಲಿ ಅಧಿಕವಾಗಿರುವ ಭಾಗವನ್ನು ಸ್ವೀಕರಿಸಿ ಎಂದು ಹೇಳಿದನು.
ತತ ಆಯವ್ಯಯೌ ದೃಷ್ಟ್ವಾ ಸವೌ ಸಮಮಿತಿರ್ದ್ವಿಜಃ |
ಸರ್ವಥಾ ಪ್ರಾಣಿನಾಂ ಪೀಡಾಮುಪಾದಾನಾದಮನ್ಯತ ||11||
ಅನಂತರ ಸಮಮತಿಗಳಾದ ಅಗಸ್ತ್ಯರು ಆಯ-ವ್ಯಯಗಳು ಸಮಾನವಾಗಿರುವುದನ್ನು ನೋಡಿ ಧನವನ್ನು ತೆಗೆದುಕೊಂಡರೆ ಪ್ರಜೆಗಳಿಗೆ ಸರ್ವಥಾ ಪೀಡೆಯುಂಟಾಗುವುದೆಂದು ಭಾವಿಸಿದರು.
ಪೌರುಕುತ್ಸಂ ತತೋ ಜಗ್ಮುಃ ತ್ರಸದಸ್ಯುಂ ಮಹಾಧನಮ್ |
ಅಗಸ್ತ್ಯಶ್ಚ ಶ್ರುತರ್ವಾ ಚ ವಾಧ್ರ್ಯಶ್ವಶ್ಚ ಮಹೀಪತಿಃ ||12||
ಅನಂತರ ಅಗಸ್ತ್ಯರು, ಶ್ರುತರ್ವ ಮತ್ತು ವಾಧ್ರ್ಯಶ್ವರಾಜರು ಪುರುಕುತ್ಸನ ಮಗನಾದ ಮಹಾಧನವಂತನಾದ ತ್ರಸದಸ್ಯುರಾಜನ ಬಳಿಗೆ ಹೋದರು.
ತ್ರಸದಸ್ಯುಸ್ತು ತಾನ್ ಸರ್ವಾನ್ ಪ್ರತ್ಯಗೃಹ್ಣಾದ್ಯಥಾವಿಧಿ |
ಅಭಿಗಮ್ಯ ಮಹಾರಾಜ ವಿಷಯಾಂತೇ ಸ ಚಾದೃತಃ ||13||
ಅರ್ಚಯಿತ್ವಾ ಯಥಾನ್ಯಾಯಮೈಕ್ಷ್ವಾಕೋ ರಾಜಸತ್ತಮಃ |
ಸಮಾಶ್ವಸ್ತಾಂಸ್ತತೋಽಪೃಚ್ಛತ್ ಪ್ರಯೋಜನಮುಪಕ್ರಮೇ ||14||
ಎಲೈ ಮಹಾರಾಜನೇ, ತ್ರಸದಸ್ಯುವಾದರೂ ತನ್ನ ರಾಜ್ಯದ ಕೊನೆಯ ಭಾಗಕ್ಕೆ ಬಂದು ಆ ಎಲ್ಲರನ್ನೂ ವಿಧಿಪೂರ್ವಕವಾಗಿ ಸ್ವೀಕರಿಸಿ ಆದರದಿಂದ ಶಾಸ್ತ್ರೋಕ್ತ ರೀತಿಯಲ್ಲಿ ಪೂಜಿಸಿದನು. ಇಕ್ಷ್ವಾಕುವಂಶದಲ್ಲಿ ಬಂದ ಆ ರಾಜಶ್ರೇಷ್ಠನು ಅವರು ವಿಶ್ರಮಿಸಿಕೊಂಡ ಮೇಲೆ ಆಗಮನದ ಉದ್ದೇಶವನ್ನು ಕುರಿತು ಕೇಳಿದನು.
ಅಗಸ್ತ್ಯಃ
ವಿತ್ತಕಾಮಾನಿಹ ಪ್ರಾಪ್ತಾನ್ ವಿದ್ಧಿ ನಃ ಪೃಥಿವೀಪತೇ |
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛ ನಃ ||15||
ಅಗಸ್ತ್ಯ ಎಲೈ ರಾಜನೇ, ನಾವೆಲ್ಲರೂ ಧನಕಾಮರಾಗಿ ಬಂದಿದ್ದೇವೆಂದು ತಿಳಿ. ಬೇರೆ ಪ್ರಜೆಗಳಿಗೆ ಹಿಂಸೆಯಾಗದಂತೆ ಯಥಾಶಕ್ತಿ ಧನವನ್ನು ದಾನಮಾಡು.
ಲೋಮಶಃ
ತತ ಆಯವ್ಯಯೌ ದೃಷ್ಟ್ವಾ ತೇಷಾಂ ರಾಜಾ ನ್ಯವೇದಯತ್ |
ತತೋ ಜ್ಞಾತ್ವಾ ಸಮಾದಧ್ವಂ ಯದತ್ರ ವ್ಯತಿರಿಚ್ಯತೇ ||16||
ಲೋಮಶ ಅನಂತರ ತನ್ನ ಆಯ-ವ್ಯಯಗಳನ್ನು ನೋಡಿ ರಾಜರನ್ನು, ಅವರನ್ನು ಕುರಿತು ನನ್ನ ಆಯ-ವ್ಯಯಗಳನ್ನು ತಿಳಿದು

ಇದರಲ್ಲಿ ಅಧಿಕವಾದ ಭಾಗವನ್ನು ಸ್ವೀಕರಿಸಿ ಎಂದು ಹೇಳಿದನು.
ತತ ಆಯವ್ಯಯೌ ದೃಷ್ಟ್ವಾ ತಸ್ಯಾಪಿ ಸ ಮುನಿಸ್ತದಾ |
ಸರ್ವಥಾ ಪ್ರಾಣಿನಾಂ ಪೀಡಾಮುಪಾದಾನಾದಮನ್ಯತ ॥17॥
ಆಗ ಅಗಸ್ತ್ಯ ಋಷಿಗಳು ಅವನ ಆಯ-ವ್ಯಯಗಳೂ ಸಮಾನವಾಗಿರುವುದನ್ನು ನೋಡಿ ಧನಸ್ವೀಕಾರದಿಂದ ಪ್ರಜೆಗಳಿಗೆ ಸರ್ವಥಾ ಪೀಡೆಯುಂಟಾಗುವುದೆಂದು ಭಾವಿಸಿದರು.
ತತಃ ಸರ್ವೇ ಸಮೇತ್ಯಾಥ ತೇ ನೃಪಾಸ್ತಂ ಮಹಾಮುನಿಮ್ |
ಇದಮೂಚುರ್ಮಹಾರಾಜ ಸಮವೇಕ್ಷ್ಯ ಪರಸ್ಪರಮ್ ॥18॥
ಎಲೈ ಮಹಾರಾಜನೇ, ಅನಂತರ ಆ ಮೂರು ರಾಜರೂ ಒಟ್ಟು ಸೇರಿ ಪರಸ್ಪರವಾಗಿ ನೋಡುತ್ತಾ ಶ್ರೇಷ್ಠ ಋಷಿಗಳಾದ ಅಗಸ್ತ್ಯರನ್ನು ಕುರಿತು ಹೀಗೆ ಹೇಳಿದರು.
ರಾಜಾನಃ
ಅಯಂ ವೈ ದಾನವೋ ಬ್ರಹ್ಮನ್ ವಸುಮಾನಿಲ್ವಲೋ ಭುವಿ |
ತಮಭಿಕ್ರಮ್ಯ ಸರ್ವೇಽದ್ಯ ವಯಂ ಯಾಚಾಮಹೇ ವಸು ॥19॥
ರಾಜರು ಎಲೈ ಬ್ರಾಹ್ಮಣರೇ, ಈ ದಾನವನಾದ ಇಲ್ವಲನು ಭೂಮಿಯಲ್ಲಿ ಎಲ್ಲರಿಗಿಂತ ಧನವಂತನಾಗಿದ್ದಾನೆ. ಅವನ ಬಳಿಗೆ ನಾವೆಲ್ಲರೂ ಹೋಗಿ ಧನವನ್ನು ಯಾಚಿಸೋಣ.
ಲೋಮಶಃ
ತೇಷಾಂ ತದಾಸೀದುಚಿತಮಿಲ್ವಲಸ್ಯಾರ್ಥಭಿಕ್ಷಣಮ್ |
ತತಸ್ತೇ ಸಹಿತಾ ರಾಜನ್ನಿಲ್ವಲಂ ಸಮುಪಾದ್ರವನ್ ॥20॥
ಲೋಮಶ ಅವರೆಲ್ಲರೂ ಇಲ್ವಲನ ಬಳಿಗೆ ಹೋಗಿ ಧನವನ್ನು ಯಾಚಿಸುವುದು ಯೋಗ್ಯವೆಂದು ಭಾವಿಸಿದರು. ಅನಂತರ ಎಲ್ಲರೂ ಜೊತೆಯಲ್ಲಿ ಇಲ್ವಲರಾಜನ ಬಳಿಗೆ ಶೀಘ್ರವಾಗಿ ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿನವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕೋನಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ಅಗಸ್ತ್ಯರಿಂದ ವಾತಾಪಿಯ ವಿನಾಶ.
ಲೋಮಶಃ
ಇಲ್ವಲಸ್ತಾನ್ ವಿದಿತ್ವಾ ತು ಮಹರ್ಷಿಸಹಿತಾನ್ ನೃಪಾನ್ |
ಉಪಸ್ಥಿತಾನ್ ಸಹಾಮಾತ್ಯೋ ವಿಷಯಾಂತೇ ಹ್ಯಪೂಜಯತ್ ॥1॥
ಲೋಮಶ ಇಲ್ವಲನು ಅಗಸ್ತ್ಯಮಹರ್ಷಿಗಳ ಜೊತೆಯಲ್ಲಿ ಆ ರಾಜರು ಬರುತ್ತಿದ್ದಾರೆಂದು ತಿಳಿದು ತನ್ನ ರಾಜಧಾನಿಯ ಹೊರಗೆ ಬಂದು ಅವರನ್ನು ಪೂಜಿಸಿದನು.
ತೇಷಾಂ ತತೋಽಸುರಶ್ರೇಷ್ಠಃ ತ್ವಾತಿಥ್ಯಮಕರೋತ್ ತದಾ |
ಸುಸಂಸ್ಕೃತೇನ ಕೌರವ್ಯ ಭ್ರಾತ್ರಾ ವಾತಾಪಿನಾ ನೃಪ ॥2॥
ಎಲೈ ರಾಜನೇ, ಅನಂತರ ಅಸುರಶ್ರೇಷ್ಠನಾದ ಅವನು ತನ್ನ ತಮ್ಮನಾದ ವಾತಾಪಿಯ ಸುಸಂಸ್ಕೃತವಾದ ಮಾಂಸದಿಂದ ಅವರಿಗೆ ಆತಿಥ್ಯವನ್ನು ಮಾಡಿದನು.
ತತೋ ರಾಜರ್ಷಯಃ ಸರ್ವೇ ವಿಷಣ್ಣಾ ಗತಚೇತಸಃ |
ವಾತಾಪಿಂ ಸಂಸ್ಕೃತಂ ದೃಷ್ಟ್ವಾ ಮೇಷಭೂತಂ ಮಹಾಸುರಮ್ ॥3॥
ಮೇಷನಾಗಿದ್ದ ವಾತಾಪಿಮಹಾಸುರನನ್ನು ಬೇಯಿಸುವುದನ್ನು ನೋಡಿದ ಆ ರಾಜರೆಲ್ಲರೂ ವಿಷಾದದಿಂದ ವಿಚೇತನರಾದರು.
ಅಥಾಬ್ರುವೀಖದಗಸ್ತ್ಯಸ್ತಾನ್ ರಾಜರ್ಷೀನ್ ಋಷಿಸತ್ತಮಃ |
ವಿಷಾದೋ ವೋ ನ ಕರ್ತವ್ಯೋ ಹ್ಯಹಂ ಭೋಕ್ಷ್ಯೇ ಮಹಾಸುರಮ್ ॥
ಆಗ ಋಷಿಶ್ರೇಷ್ಠರಾದ ಅಗಸ್ತ್ಯರು ಆ ರಾಜರ್ಷಿಗಳನ್ನು ಕುರಿತು ನೀವು ಚಿಂತಿಸಬೇಡಿ. ಆ ಮಹಾಸುರನನ್ನು ನಾನು ಭುಂಜಿಸುತ್ತೇನೆ ಎಂದು ಹೇಳಿದರು.
ಲೋಮಶಃ
ಧುರ್ಯಾಸನಮಥಾಕ್ರಮ್ಯ ನಿಷಸಾದ ಮಹಾಮುನಿಃ |
ತಂ ಪರ್ಯವೇಷದ್ ದೈತ್ಯೇಂದ್ರ ಇಲ್ವಲಃ ಪ್ರಹಸನ್ನಿವ ॥5॥
ಲೋಮಶ ಆ ಮಹಾಮುನಿಗಳು ಅಗ್ರಾಸನವನ್ನು ಏರಿ ಕುಳಿತರು. ದೈತ್ಯೇಂದ್ರನಾದ ಇಲ್ವಲನು ನಗುತ್ತಲೇ ಅವರಿಗೆ ಭೋಜನವನ್ನು ಬಡಿಸಿದನು.
ಅಗಸ್ತ್ಯ ಏವ ಕೃತ್ಸ್ನಂ ತು ವಾತಾಪಿಂ ಬುಭುಜೇ ತತಃ |
ಭುಕ್ತವತ್ಯಸುರೋಽಽಹ್ವಾನಮಕರೋತ್ ತಸ್ಯ ಚೇಲ್ವಲಃ ॥6॥
ವಾತಾಪೇ ಪ್ರತಿಬುಧ್ಯಸ್ವ ದರ್ಶಯನ್ ಬಲತೇಜಸೀ |
ತಪಸಾ ದುರ್ಜಯಂ ಯಾವದ್ ಏಷ ತ್ವಾಂ ನಾತಿವರ್ತತೇ ॥7॥

ಅಗಸ್ತ್ಯರೊಬ್ಬರೇ ಆ ವಾತಾಪಿಯ ಎಲ್ಲ ಮಾಂಸವನ್ನೂ ಭುಂಜಿಸಿದರು. ಅವರ ಭೋಜನವಾದ ಮೇಲೆ ಅಸುರನಾದ ಇಲ್ವಲನು ವಾತಾಪಿಯೇ ಎಚ್ಚರಗೊಂಡು ನಿನ್ನ ಬಲಪರಾಕ್ರಮವನ್ನು ತೋರಿಸುತ್ತಾ ಈ ಋಷಿಯು ತಪಸ್ಸಿನಿಂದ ದುರ್ಜಯನಾದ ನಿನ್ನನ್ನು ಮೀರುವುದಕ್ಕಿಂತ ಮೊದಲೇ ಹೊರಗೆ ಬಾ ಎಂದು ಆಹ್ವಾನಮಾಡಿದನು.
ಲೋಮಶಃ
ತತಸ್ತಸ್ಯೋದರಂ ಭೇತ್ತುಂ ವಾತಾಪಿರ್ವೇಗಮಾಹರತ್ |
ತಮಬುಧ್ಯತ ತೇಜಸ್ವೀ ಕುಂಭಯೋನಿರ್ಮಹಾತಪಾಃ |
ಸ ವೀರ್ಯಾತ್ ತಪಸೋಗ್ರಸ್ತು ನನರ್ದ ಭಗವಾನ್ ಋಷಿಃ ॥8॥
ಲೋಮಶ ಆಗ ಅಗಸ್ತ್ಯರ ಉದರವನ್ನು ಭೇದಿಸಲು ವಾತಾಪಿಯು ವೇಗವನ್ನು ಹೊಂದಿದನು. ಮಹಾತಪಸ್ವಿಗಳಾದ, ಪರಾಕ್ರಮಶಾಲಿಗಳಾದ, ಕುಂಭಸಂಭವರಾದ ಅಗಸ್ತ್ಯರು ಅದನ್ನು ತಿಳಿದರು. ತಪಸ್ಸಿನಿಂದ ಉಗ್ರರಾದ ಆ ಪೂಜ್ಯರಾದ ಋಷಿಗಳು ಒಮ್ಮೆ ತಮ್ಮ ಸಾಮರ್ಥ್ಯದಿಂದ ಗರ್ಜಿಸಿದರು.
ಅಗಸ್ತ್ಯಃ
ಏಷ ಜೀರ್ಣೋಽಸಿ ವಾತಾಪೇ ಮಯಾ ಲೋಕಸ್ಯ ಶಾಂತಯೇ ॥9॥
ಅಗಸ್ತ್ಯರು ವಾತಾಪಿಯೇ ಲೋಕದ ಶಾಂತಿಗೋಸ್ಕರ ನಾನು ನಿನ್ನನ್ನು ಜೀರ್ಣಿಸಿಕೊಂಡಿದ್ದೇನೆ.
ಲೋಮಶಃ
ಇತ್ಯುಕ್ತಸ್ತ್ವ ಸ್ವಕರಾಗ್ರೇಣ ಉದರಂ ಸಮತಾಡಯತ್ |
ತ್ರಿರೇವಂ ಪ್ರತಿಸಂರಬ್ಧಸ್ತೇಜಸಾ ಪ್ರಜ್ವಲನ್ನಿವ ॥10॥
ಲೋಮಶರು ಹೀಗೆ ಹೇಳಿ ಸಿಟ್ಟಿನಿಂದ ಕೂಡಿದವರಾಗಿ, ತೇಜಸ್ಸಿನಿಂದ ಉರಿಯುತ್ತಾ ತಮ್ಮ ಉದರವನ್ನು ಮೂರುಬಾರಿ ತಮ್ಮ ಕೈಯಿಂದ ಹೊಡೆದುಕೊಂಡರು.
ತತೋ ವಾಯುಃ ಪ್ರಾದುರಭೂದ್ ಅಗಸ್ತ್ಯಸ್ಯ ಮಹಾತ್ಮನಃ |
ಇಲ್ವಲಶ್ಚ ವಿಷಣ್ಣೋಽಭೂದ್ ದೃಷ್ಟ್ವಾ ಜೀರ್ಣಂ ಮಹಾಸುರಮ್ |
ಪ್ರಾಂಜಲಿಶ್ಚ ಸಹಾಮಾತ್ಯೈರಿದಂ ವಚನಮಬ್ರವೀತ್ ॥11॥
ಆಗ ಮಹಾತ್ಮರಾದ ಅಗಸ್ತ್ಯರಿಗೆ ಒಂದು ತೇಗು ಬಂದಿತು. ಇಲ್ವಲನಾದರೂ ಮಹಾಸುರನಾದ ವಾತಾಪಿಯು ಜೀರ್ಣವಾದುದನ್ನು ನೋಡಿ ವಿಷಾದವನ್ನು ಹೊಂದಿದನು. ಅವನು ಅಮಾತ್ಯರ ಜೊತೆಯಲ್ಲಿ ಅಗಸ್ತ್ಯರಿಗೆ ಕೈಗಳನ್ನು ಮುಗಿದು ಈ ಮಾತನ್ನು ಆಡಿದನು.
ಕಿಮರ್ಥಮುಪಯಾತಾಃ ಸ್ಥ ಬ್ರೂತ ಕಿಂ ಕರವಾಣಿ ವಃ |
ತಮಗಸ್ತ್ಯೋ ಹಸನ್ ವಾಕ್ಯಮಿಲ್ವಲಂ ಪ್ರತ್ಯಭಾಷತ ॥12॥
ನೀವು ಯಾವ ಉದ್ದೇಶದಿಂದ ಬಂದಿದ್ದೀರೆಂದು ಹೇಳಿ; ನಾನು ನಿಮಗೆ ಏನು ಮಾಡಲಿ. ಆಗ ಅಗಸ್ತ್ಯರು ಇಲ್ವಲನನ್ನು ನೋಡಿ ನಗುತ್ತಾ ಉತ್ತರವನ್ನು ಕೊಟ್ಟರು.
ಈಶೋಸ್ಯಸುರ ವಿದ್ಮಸ್ತ್ವಾಂ ವಯಂ ಸರ್ವೇ ಧನೇಶ್ವರಮ್ ॥13॥
ಇಮೇ ಚ ತಾತಾಧನಿನೋ ಧನಾರ್ಥಶ್ಚ ಮಹಾನ್ ಮಮ |
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛ ನಃ ॥14॥
ಎಲೈ ಅಸುರನೇ, ನೀನು ಪ್ರಭುವಾಗಿದ್ದೀಯೆ. ನೀನು ಧನಾಧಿಪತಿಯೆಂದು ನಾವೆಲ್ಲರೂ ತಿಳಿದಿದ್ದೇವೆ. ಪ್ರೀತಿಪಾತ್ರನೇ, ಈ ಮೂರು ರಾಜರೂ ಧನವಿಲ್ಲದವರು. ನನಗೂ ಸಹ ಧನದ ದೊಡ್ಡ ಅಪೇಕ್ಷೆಯಿದೆ. ಪ್ರಜೆಗಳಿಗೆ ಪೀಡೆಯಾಗದಂತೆ ಯಥಾಶಕ್ತಿ ನಮಗೆ ಧನವನ್ನು ದಾನಮಾಡು.
ಲೋಮಶಃ
ತತೋಽವಮತ್ಯ ತಮೃಷಿಮಿಲ್ವಲೋ ವಾಕ್ಯಮಬ್ರವೀತ್ |
ಈಪ್ಸಿತಂ ಯದಿಹ ಬ್ರೂಹಿ ತದ್ಧಿ ದಾಸ್ಯಾಮಿ ವೇ ವಸು ॥15॥
ಆಗ ಇಲ್ವಲನು ಆ ಋಷಿಗಳಿಗೆ ತಿರಸ್ಕಾರವನ್ನು ಮಾಡುತ್ತಾ ನಿಮಗೆ ಏನು ಬೇಕಾಗಿದೆ ಎಂದು ಹೇಳಿ. ನಾನು ನಿಮಗೆ ಆ ಧನವನ್ನು ಕೊಡುವೆನು ಎಂದು ಹೇಳಿದನು.
ಅಗಸ್ತ್ಯಃ
ಗವಾಂ ಶತಸಹಸ್ರಾಣಿ ರಾಜ್ಞಾಮೇಕೈಕಶೋಽಸುರ |
ತಾವದೇವ ಸುವರ್ಣಸ್ಯ ದಿತ್ಸಿತಂ ತೇ ಮಹಾಸುರ ॥16॥
ಮಹ್ಯಂ ತತೋ ವೈ ದ್ವಿಗುಣಂ ರಥಂ ಚೈವ ಹಿರಣ್ಮಯಮ್ |
ಮನೋಜವೌ ವಾಜಿನೌ ದ್ವೌ ದಿತ್ಸಿತಂ ತೇ ಮಹಾಸುರ ॥17॥
ಅಗಸ್ತ್ಯರು ಎಲೈ ಅಸುರನೇ, ಒಬ್ಬೊಬ್ಬ ರಾಜನಿಗೆ ಹತ್ತುಸಹಸ್ರ ಗೋವುಗಳನ್ನೂ ಮತ್ತು ಅಷ್ಟೇ ಸುವಣರ್ವನ್ನೂ ಕೊಡಬೇಕು. ಎಲೈ ಮಹಾಸುರನೇ, ನನಗೆ ಅದರ ಎರಡರಷ್ಟು ಗೋವುಗಳನ್ನು ಸುವಣರ್ವನ್ನು, ಸುವರ್ಣಮಯವಾದ ರಥವನ್ನೂ, ಮನೋಜವನ್ನು ಹೊಂದಿದ ಎರಡು ಅಶ್ವಗಳನ್ನೂ ಕೊಡಬೇಕು.
ಲೋಮಶಃ
ಇಲ್ವಲಸ್ತು ಮುನಿಂ ಪ್ರಾಹ ಸರ್ವಮಸ್ತಿ ಯಥಾಽಽತ್ಥ ಮಾಮ್ |
ರಥಂ ತು ಯದವೋಚೋ ಮಾಂ ನೈನಂ ವಿದ್ಮ ಹಿರಣ್ಮಯಮ್ ॥18॥
ಲೋಮಶ ಇಲ್ವಲನು ಆ ಋಷಿಗಳನ್ನು ಕುರಿತು ನೀವು ಹೇಳಿದ ಎಲ್ಲವೂ ನನ್ನ ಬಳಿಯಲ್ಲಿದೆ. ಆದರೆ ಸುವರ್ಣಮಯವಾದ ರಥವನ್ನು

ಹೇಳಿದಿರಷ್ಟೆ? ಅದು ನನಗೆ ತಿಳಿದಿಲ್ಲ.
ಅಗಸ್ತ್ಯಃ
ನ ಮೇ ವಾಗನೃತಾ ಕಾಚಿದ್ ಉಕ್ತಪೂರ್ವಾ ಮಹಾಸುರ |
ವಿಜ್ಞಾಯತಾಂ ರಥಃ ಸಾಧು ವ್ಯಕ್ತಮಸ್ತಿ ಹಿರಣ್ಮಯಃ ॥19॥
ಅಗಸ್ತ್ಯರು ಎಲೈ ಮಹಾಸುರನೇ, ನನ್ನ ಮಾತು ಹಿಂದೆ ಎಂದೂ ಸುಳ್ಳಾಗಿಲ್ಲ. ಆ ರಥವು ಎಲ್ಲಿದೆ ಎಂದು ಚೆನ್ನಾಗಿ ನೋಡು. ಖಂಡಿತವಾಗಿ ಸುವರ್ಣಮಯವಾದ ರಥವಿದೆ.
ಲೋಮಶಃ
ವಿಜ್ಞಾಯಮಾನಸ್ಸ ರಥಃ ಕೌಂತೇಯಾಸೀದ್ಧಿರಣ್ಮಯಃ |
ತತಃ ಸ ವ್ಯಥಿತೋ ದೈತ್ಯೋ ದದಾವಭ್ಯಧಿಕಂ ವಸು ॥20॥
ಲೋಮಶ ಕೌಂತೇಯನೇ, ಇಲ್ವಲನು ವಿಚಾರಮಾಡುತ್ತಿರಲು ಸುವರ್ಣ ರಥವು ಇದ್ದದ್ದು ತಿಳಿಯಿತು. ಆಗ ಆ ದೈತ್ಯನು ವ್ಯಥೆಯಿಂದ ಕೂಡಿದವನಾಗಿ ಅಗಸ್ತ್ಯರಿಗೆ ಬಹಳ ಧನವನ್ನು ಕೊಟ್ಟನು.
ವಿವಾಜೀ ಚ ಸುವಾಜೀ ಚ ತಸ್ಮಿನ್ ಯುಕ್ತೌ ರಥೇ ಹಯೌ |
ಊಹತುಸ್ತೌ ವಸೂನ್ಯಾಶು ತಾನ್ಯಗಸ್ತ್ಯಾಶ್ರಮಂ ಪ್ರತಿ |
ಸರ್ವಾನ್ ರಾಜ್ಞಃ ಸಹಾಗಸ್ತ್ಯಾನ್ ನಿಮೇಷಾದಿಹ ಭಾರತ ॥21॥
ವಿವಾಜಿ ಮತ್ತು ಸುವಾಜಿ ಎಂಬ ಎರಡು ಅಶ್ವಗಳು ಆ ರಥದಲ್ಲಿ ಹೂಡಲ್ಪಟ್ಟು ಅವನು ಕೊಟ್ಟ ಧನವನ್ನೂ, ಎಲ್ಲ ರಾಜರನ್ನೂ ಮತ್ತು ಅಗಸ್ತ್ಯ ಋಷಿಗಳನ್ನೂ ಒಂದೇ ನಿಮಿಷದಲ್ಲಿ ಅಗಸ್ತ್ಯಾಶ್ರಮಕ್ಕೆ ಕರೆದುಕೊಂಡು ಹೋದವು.
ಅಗಸ್ತ್ಯೇನಾಭ್ಯನುಜ್ಞಾತಾ ಜಗ್ಮೂ ರಾಜರ್ಷಯಸ್ತದಾ |
ಕೃತವಾಂಶ್ಚ ಮುನಿಃ ಸರ್ವಂ ಲೋಪಾಮುದ್ರಾಚಿಕೀರ್ಷಿತಮ್ ॥22॥
ಎಲೈ ಭಾರತನೇ, ಅಗಸ್ತ್ಯರ ಅಪ್ಪಣೆಯನ್ನು ಪಡೆದು ಆ ರಾಜರ್ಷಿಗಳು ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿದರು. ಅಗಸ್ತ್ಯರಾದರೂ ಲೋಪಾಮುದ್ರೆಯ ಎಲ್ಲಾ ಅಭೀಷ್ಟವನ್ನೂ ನೆರವೇರಿಸಿದರು.
ಲೋಪಾಮುದ್ರಾ
ಕೃತವಾನಸಿ ತತ್ ಸರ್ವಂ ಭಗವನ್ ಮಮ ಕಾಂಕ್ಷಿತಮ್ |
ಉತ್ಪಾದಯ ಸಕೃನ್ಮಹ್ಯಮಪತ್ಯಂ ವೀರ್ಯವತ್ತರಮ್ ॥23॥
ಲೋಪಾಮುದ್ರೆ ಪೂಜ್ಯರೇ, ನಾನು ಇಷ್ಟಪಟ್ಟಿದ್ದೆಲ್ಲವನ್ನೂ ನೀವು ಮಾಡಿದ್ದೀರಿ. ನನ್ನಲ್ಲಿ ಬಹಳ ವೀರ್ಯವಂತರಾದ ಒಬ್ಬ ಮಗನನ್ನು ಪಡೆಯಿರಿ.
ಅಗಸ್ತ್ಯಃ
ತುಷ್ಟೋಽಹಮಸ್ಮಿ ಕಲ್ಯಾಣಿ ತವ ವೃತ್ತೇನ ಶೋಭನೇ |
ವಿಚಾರಣಾಮಪತ್ಯೇ ತು ವಕ್ಷ್ಯಾಮಿ ಶೃಣು ತಾಂ ಮಮ ॥23॥
ಸಹಸ್ರಂ ತೇಽಸ್ತು ಪುತ್ರಾಣಾಂ ಶತಂ ವಾ ದಶಸಮ್ಮಿತಮ್ |
ದಶ ವಾ ಶತತುಲ್ಯಾಸ್ಸ್ಯುರೇಕೋ ವಾಽಪಿ ಸಹಸ್ರವತ್ ॥24॥
ಎಲೌ ಕಲ್ಯಾಣಿಯೇ, ಶೋಭನಳೇ, ನಾನು ನಿನ್ನ ನಡತೆಯಿಂದ ಸಂತುಷ್ಟನಾಗಿದ್ದೇನೆ. ಪುತ್ರನ ವಿಷಯದಲ್ಲಿ ಒಂದು ಮಾತು ಇದೆ. ಅದನ್ನು ನನ್ನಿಂದ ಕೇಳು. ನಿನಗೆ ಸಹಸ್ರ ಪುತ್ರರು ಬೇಕೋ ಅಥವಾ ಹತ್ತುಪುತ್ರರಿಗೆ ಸಮರಾದ ನೂರು ಪುತ್ರರು ಬೇಕೋ ಅಥವಾ ನೂರು ಪುತ್ರರಿಗೆ ಸಮಾನರಾದ ಹತ್ತು ಪುತ್ರರು ಬೇಕೋ, ಅಥವಾ ಸಹಸ್ರ ಪುತ್ರರಿಗೆ ಸಮಾನವಾದ ಒಬ್ಬ ಪುತ್ರನು ಬೇಕೋ ಎಂದು ಹೇಳು.
ಲೋಪಮುದ್ರಾ
ಸಹಸ್ರಸಮ್ಮಿತಃ ಪುತ್ರ ಏಕೋ ಮೇಽಸ್ತು ತಪೋಧನ |
ಏಕೋ ಹಿ ಬಹುಭಿಃ ಶ್ರೇಯಾನ್ ಪುತ್ರಃ ಸಾಧುರಸಾಧುಭಿಃ ॥25॥
ಎಲೈ ತಪೋಧನರೇ, ನನಗೆ ಸಹಸ್ರಪುತ್ರರಿಗೆ ಸಮರಾದ ಒಬ್ಬ ಪುತ್ರನೇ ಇರಲಿ. ವಿದ್ವಾಂಸನೂ, ಸಾಧುವೂ ಆದ ಒಬ್ಬ ಪುತ್ರನು ಅನೇಕ ಸಂಖ್ಯೆಯ ದುಷ್ಟಪುತ್ರರಿಗಿಂತ ಶ್ರೇಷ್ಠನಾದವನಷ್ಟೇ.
ಲೋಮಶಃ
ಸ ತಥೇತಿ ಪ್ರತಿಜ್ಞಾಯ ತಯಾ ಸಮಭವನ್ಮುನಿಃ |
ಸಮಯೇ ಸಮಶೀಲಿನ್ಯಾ ಶ್ರದ್ಧಾವಾನ್ ಶ್ರದ್ದಧಾನಯಾ ॥26॥
ಲೋಮಶ ಆ ಋಷಿಗಳು ಹಾಗೆಯೇ ಆಗಲಿ ಎಂದು ಪ್ರತಿಜ್ಞೆ ಮಾಡಿ ಶ್ರದ್ಧೆಯಿಂದ ಕೂಡಿದವರಾಗಿ ಶ್ರದ್ಧೆಯುಳ್ಳ ಮತ್ತು ಸಮಾನಶೀಲವುಳ್ಳ ತಮ್ಮ ಪತ್ನಿಯ ಸಮಾಗಮವನ್ನು ಯೋಗ್ಯವಾದ ಕಾಲದಲ್ಲಿ ಮಾಡಿದರು.
ತತ ಆಧಾಯ ಗರ್ಭಂ ತಮಗಚ್ಛದ್ವನಮೇವ ಸಃ |
ತಸ್ಮಿನ್ ವನಂ ಗತೇ ಗರ್ಭೋ ವವೃಧೇ ಸಪ್ತ ಶಾರದಾನ್ ॥27॥
ಗರ್ಭಾಧಾನವನ್ನು ಮಾಡಿ ಅನಂತರ ಅವರು ಕಾಡಿಗೇ ಹೊರಟುಹೋದರು. ಅವರು ಕಾಡಿಗೆ ಹೋಗುತ್ತಿರಲು ಗರ್ಭವು ಏಳುವರ್ಷಗಳ ಕಾಲ ಬೆಳೆಯಿತು.
ಸಪ್ತಮೇಽಬ್ದೇ ಗತೇ ಚಾಪಿ ಪ್ರಾಚ್ಯವತ್ ಸ ಮಹಾಕವಿಃ |
ಜ್ವಲನ್ನಿವ ಪ್ರಭಾವೇಣ ದೃಢಸ್ಯುರ್ನಾಮ ಭಾರತ ॥28॥

ಎಲೈ ಭಾರತನೇ, ಏಳನೇ ವರ್ಷವು ಪ್ರಾಪ್ತವಾಗುತ್ತಿರಲು ಮಹಾಜ್ಞಾನಿಗಳಾದ ದೃಢಸ್ಯು ಎಂಬ ಋಷಿಗಳು ತಮ್ಮ ಪ್ರಭಾವದಿಂದ ಜ್ವಲಿಸುತ ಗರ್ಭದಿಂದ ತಾವೇ ಹೊರಬಂದರು.
ಸಾಂಗೋಪನಿಷದಾನ್ ವೇದಾನ್ ಜಪನ್ನೇವ ಮಹಾತಪಾಃ।
ತಸ್ಯ ಪುತ್ರೋಽಭವದೃಷೇಃ ಸ ತೇಜಸ್ವೀ ಮಹಾನ್ ಋಷಿಃ ॥29॥
ಮಹಾತಪಸ್ವಿಗಳಾದ ಅವರು ವೇದಗಳನ್ನು ಮತ್ತು ಉಪನಿಷತ್ತುಗಳನ್ನು ಮತ್ತು ವೇದಾಂಗಗಳನ್ನು ಪಠಿಸುತ್ತಲೇ ಹೊರಗೆ ಬಂದರು. ಅಂತಹ ತೇಜಸ್ವಿಗಳಾದ ಮಹರ್ಷಿಗಳು ಅಗಸ್ತ್ಯರಿಗೆ ಪುತ್ರರಾಗಿ ಜನಿಸಿದರು.
ಸ ಬಾಲ ಏವ ತೇಜಸ್ವೀ ಪಿತುಸ್ತಸ್ಯ ನಿವೇಶನೇ।
ಇಧ್ಮಾನಾಂ ಭಾರಮಾಜಹ್ರೇ ಇಧ್ಮವಾಹಸ್ತತೋಽಭವತ್ ॥30॥
ಅವರು ಇನ್ನೂ ಬಾಲಕರಾಗಿರುವಾಗಲೇ ತೇಜಸ್ವಿಗಳಾಗಿ ತಂದೆಯ ಆಶ್ರಮದಲ್ಲಿ ಕಟ್ಟಿಗೆಯ ಹೊರೆಗಳನ್ನು ಹೊತ್ತುತರುತ್ತಿದ್ದರು. ಅದರಿಂದ ಅವರಿಗೆ ಇಧ್ಮವಾಹ ಎಂದು ಹೆಸರಾಯಿತು.
ತಥಾಯುಕ್ತಂ ತು ತಂ ದೃಷ್ಟ್ವಾ ಮುಮುದೇ ಸ ಮುನಿಸ್ತದಾ।
ಏವಂ ಸ ಜನಯಾಮಾಸ ಭಾರತಾಪತ್ಯಮುತ್ತಮಮ್ ॥31॥
ಅಂತಹ ಪುತ್ರನನ್ನು ನೋಡಿ ಅಗಸ್ತ್ಯ ಋಷಿಗಳು ಸಂತೋಷಪಟ್ಟರು. ಎಲೈ ಭಾರತನೇ, ಹೀಗೆ ಅಗಸ್ತ್ಯರು ಶ್ರೇಷ್ಠನಾದ ಪುತ್ರನನ್ನು ಪಡೆದರು.
ಲೇಭಿರೇ ಪಿತರಶ್ಚಾಸ್ಯ ಲೋಕಾನ್ ರಾಜನ್ ಯಥೇಪ್ಸಿತಾನ್ ॥32॥
ಎಲೈ ರಾಜನೇ, ಆಗ ಅಗಸ್ತ್ಯರ ಪಿತೃಗಳು (ಗರ್ತದಲ್ಲಿ ನೇತಾಡುತ್ತಿದ್ದವರು) ತಮಗೆ ಅಭೀಷ್ಟವಾದ ಲೋಕಗಳನ್ನು ಪಡೆದರು.
ಅಗಸ್ತ್ಯಸ್ಯಾಶ್ರಮಶ್ಚಾಯಮತ ಊರ್ಧ್ವಂ ವಿಶಾಂಪತೇ।
ಖ್ಯಾತೋ ಭುವಿ ಮಹಾರಾಜ ತೇಜಸಾ ತಸ್ಯ ಧೀಮತಃ ॥33॥
ಎಲೈ ರಾಜನೇ, ಇಲ್ಲಿಂದ ಮುಂದೆ ಇರುವುದೇ ಅಗಸ್ತ್ಯಾಶ್ರಮ. ಎಲೈ ಮಹಾರಾಜನೇ, ಅದು ಆ ಮೇಧಾವಿಗಳ ತೇಜಸ್ಸಿನಿಂದ ಭೂಮಿಯಲ್ಲಿ ಪ್ರಖ್ಯಾತವಾಗಿದೆ.
ಪ್ರಾಹ್ಲಾದಿಶ್ಚಾಪಿ ವಾತಾಪಿರ್ಬ್ರಹ್ಮಘ್ನೋ ದುಷ್ಟಚೇತನಃ।
ಏವಂ ವಿನಾಶಿತೋ ರಾಜನ್ನಗಸ್ತ್ಯೇನ ಮಹಾತ್ಮನಾ ॥34॥
ಎಲೈ ರಾಜನೇ, ಪ್ರಹ್ಲಾದರಾಜರ ವಂಶದಲ್ಲಿ ಬಂದ ದುಷ್ಟಚೇತನನೂ ಬ್ರಹ್ಮಹತ್ಯೆಯನ್ನು ಮಾಡುವವನೂ ಆದ ಆ ವಾತಾಪಿಯು ಮಹಾತ್ಮರಾದ ಅಗಸ್ತ್ಯರಿಂದ ಹೀಗೆ ವಿನಾಶ ಮಾಡಲ್ಪಟ್ಟನು.
ತಸ್ಯಾಯಮಾಶ್ರಮೋ ರಾಜನ್ ರಮಣೀಯೈರ್ಗುಣೈರ್ಯುತಃ।
ಏಷಾ ಭಾಗೀರಥೀ ಪುಣ್ಯಾ ಯಥೇಷ್ಟ ಮವಗಾಹ್ಯತಾಮ್ ॥35॥
ಎಲೈ ರಾಜನೇ, ಇದು ಮನೋಹರವಾದ ಗುಣಗಳಿಂದ ಕೂಡಿದ ಅವರ ಆಶ್ರಮ. ಇದೇ ಪವಿತ್ರವಾದ ಭಾಗೀರಥಿ ನದಿ. ಇಲ್ಲಿ ಯಥೇಷ್ಟವಾಗಿ ಸ್ನಾನವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರ್ನವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ತೈದನೆಯ ಅಧ್ಯಾಯ
ದಧೀಚಿ ಋಷಿಗಳ ಅಸ್ಥಿಯಿಂದ ವಜ್ರವನ್ನು ನಿರ್ಮಾಣ ಮಾಡಿ
ವೃತ್ರಾಸುರನನ್ನು ಕುರಿತು ಇಂದ್ರನ ಅಭಿಗಮನ.
ಯುಧಿಷ್ಠಿರಃ
ಭೂಯ ಏವಾಹಮಿಚ್ಛಾಮಿ ಮಹರ್ಷೇಸ್ತಸ್ಯ ಧೀಮತಃ।
ಕರ್ಮಣಾಂ ವಿಸ್ತರಂ ಶ್ರೋತುಮಗಸ್ತ್ಯಸ್ಯ ದ್ವಿಜೋತ್ತಮ ॥1॥
ಯುಧಿಷ್ಠಿರ ಎಲೈ ದ್ವಿಜೋತ್ತಮರೇ, ಮೇಧಾವಿಗಳಾದ ಅಗಸ್ತ್ಯ ಮಹರ್ಷಿಗಳ ಕರ್ಮಗಳನ್ನು ನಾನು ಇನ್ನೂ ವಿಸ್ತಾರವಾಗಿ ಕೇಳಬಯಸುತ್ತೇನೆ.
ಲೋಮಶಃ
ಶೃಣು ರಾಜನ್ ಕಥಾಂ ದಿವ್ಯಾಮದ್ಭುತಾಮತಿಮಾನುಷೀಮ್।
ಅಗಸ್ತ್ಯಸ್ಯ ಮಹಾಪ್ರಾಜ್ಞ ಪ್ರಭಾವಮಮಿತೌಜಸಃ ॥2॥
ಲೋಮಶ ಎಲೈ ರಾಜನೇ, ಮಹಾಪ್ರಾಜ್ಞನೇ, ದಿವ್ಯವಾದ ಅದ್ಭುತವಾದ ಮನುಷ್ಯರ ಸಾಮರ್ಥ್ಯವನ್ನು ಮೀರಿದ ಅಮಿತ ಸಾಮರ್ಥ್ಯೋಪೇತರಾದ ಅಗಸ್ತ್ಯರ ಪ್ರಭಾವವನ್ನು ಮತ್ತು ಕಥೆಯನ್ನು ಕೇಳು.
ಆಸನ್ ಕೃತಯುಗೇ ಘೋರಾ ದಾನವಾ ಯುದ್ಧದುರ್ಮದಾಃ।
ಕಾಲಕೇಯಾ ಇತಿ ಖ್ಯಾತಾ ಗಣಾಃ ಪರಮದಾರುಣಾಃ ॥3॥
ಕೃತಯುಗದಲ್ಲಿ ಯುದ್ಧದುರ್ಮದರಾದ, ಘೋರರಾದ ಕಾಲಕೇಯರೆಂಬ ಪರಮದಾರುಣರಾದ ದಾನವರ ಗಣಗಳಿದ್ದವು.
ತೇ ತು ವೃತ್ರಂ ಸಮಾಶ್ರಿತ್ಯ ನಾನಾಪ್ರಹರಣೋದ್ಯತಾಃ।
ಸಮಂತಾತ್ ಪರ್ಯಧಾವಂತ ಮಹೇಂದ್ರಪ್ರಮುಖಾನ್ ಸುರಾನ್ ॥4॥

ಅವರಾದರೂ ವೃತ್ರಾಸುರನನ್ನು ಆಶ್ರಯಿಸಿ ಅನೇಕ ಆಯುಧಗಳನ್ನು ಧರಿಸಿ ಎಲ್ಲಕಡೆಗಳಿಂದಲೂ ಇಂದ್ರನೇ ಮೊದಲಾದ ದೇವತೆಗಳ ಮೇಲೆ ಎರಗುತ್ತಿದ್ದರು.
ತತೋ ವೃತ್ರವಧೇ ಯತ್ನಮಕುರ್ವಂಸ್ತ್ರಿದಶಾಃ ಪುರಾ |
ಪುರಂದರಂ ಪುರಸ್ಕೃತ್ಯ ಬ್ರಹ್ಮಾಣಮುಪತಸ್ಥಿರೇ |
ಕೃತಾಂಜಲೀಂಸ್ತು ತಾನ್ ಸರ್ವಾನ್ ಪರಮೇಷ್ಠೀತ್ಯುವಾಚ ಹ ॥5॥
ಆಗ ಹಿಂದೆ ದೇವತೆಗಳೆಲ್ಲರೂ ವೃತ್ರವಧೆಗಾಗಿ ಪ್ರಯತ್ನವನ್ನು ಮಾಡಿದರು. ಅವರು ಇಂದ್ರನನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರ ಬಳಿಗೆ ಹೋದರು. ಕೈಮುಗಿದು ನಿಂತ ಅವರೆಲ್ಲರನ್ನು ಕುರಿತು ಬ್ರಹ್ಮದೇವರು ಹೀಗೆ ಹೇಳಿದರು.
ವಿದಿತಂ ಮೇ ಸುರಾಃ ಸರ್ವಂ ಯದ್ವೋ ಭಯಮುಪಸ್ಥಿತಮ್ |
ತಮುಪಾಯಂ ಪ್ರವಕ್ಷ್ಯಾಮಿ ಯಥಾ ವೃತ್ರಂ ವಧಿಷ್ಯಥ ॥6॥
ಎಲೈ ದೇವತೆಗಳೇ, ನಿಮಗೆ ಉಂಟಾಗಿರುವ ಭಯವೆಲ್ಲವೂ ನನಗೆ ತಿಳಿದಿದೆ. ನೀವು ವೃತ್ರನನ್ನು ಸಂಹರಿಸುವ ಉಪಾಯವನ್ನು ನಿಮಗೆ ಹೇಳುವೆನು.
ದಧೀಚ ಇತಿ ವಿಖ್ಯಾತೋ ಮಹಾನ್ ಋಷಿರುದಾರಧೀಃ |
ತಂ ಗತ್ವಾ ಸಹಿತಾಃ ಸರ್ವೇ ವರಂ ವೈ ಸಂಪ್ರಯಾಚತ ॥7॥
ದಧೀಚರೆಂಬ ಉದಾರಬುದ್ಧಿಯುಳ್ಳ ಪ್ರಖ್ಯಾತರಾದ ಮಹರ್ಷಿಗಳಿದ್ದಾರೆ. ನೀವೆಲ್ಲರೂ ಅವರ ಬಳಿಗೆ ಹೋಗಿ ಅವರಲ್ಲಿ ವರವನ್ನು ಯಾಚಿಸಿ. ಧರ್ಮಾತ್ಮರಾದ ಅವರು ಸಂತೋಷಗೊಂಡ ಮನಸ್ಸಿನಿಂದ ನಿಮಗೆ ವರವನ್ನು ಕೊಡುವರು.
ಸ ವೋ ದಾಸ್ಯತಿ ಧರ್ಮಾತ್ಮಾ ಸುಪ್ರೀತೇನಾಂತರಾತ್ಮನಾ ॥8॥
ಸ ವಾಚ್ಯಃ ಸಹಿತೈಃ ಸರ್ವೈರ್ಭವದ್ಭಿರ್ಜಯಕಾಂಕ್ಷಿಭಿಃ |
ಸ್ವಾನ್ಯಸ್ಥೀನಿ ಪ್ರಯಚ್ಛೇತಿ ತ್ರೈಲೋಕ್ಯಸ್ಯ ಹಿತಾಯ ವೈ ॥9॥
ವೃತ್ರನ ಮೇಲೆ ಜಯವನ್ನು ಗಳಿಸುವ ಆಸೆಯಿರುವ ನೀವೆಲ್ಲರೂ ಒಟ್ಟಾಗಿ ಅವರಿಗೆ ಮೂರುಲೋಕದ ಹಿತಕ್ಕಾಗಿ ನಿಮ್ಮ ಅಸ್ಥಿಗಳನ್ನು ಕೊಡಿ ಎಂದು ಕೇಳಬೇಕು.
ಸ ಶರೀರಂ ಸಮುತ್ಸೃಜ್ಯ ಸ್ವಾನ್ಯಸ್ಥೀನಿ ಪ್ರದಾಸ್ಯತಿ |
ತಸ್ಯಾಸ್ಥಿಭಿರ್ಮಹಾಘೋರಂ ವಜ್ರಂ ಸಂಕ್ರಿಯತಾಂ ದೃಢಮ್ ॥10॥
ಮಹಚ್ಛತ್ರುಹಣಂ ಭೀಮಂ ಷಡಶ್ರಂ ಭೀಮನಿಸ್ವನಮ್ |
ಅವರು ತಮ್ಮ ಶರೀರವನ್ನು ಪರಿತ್ಯಜಿಸಿ ತಮ್ಮ ಅಸ್ಥಿಗಳನ್ನು ಕೊಡುವರು. ಅವರ ಅಸ್ಥಿಗಳಿಂದ ಮಹಾಘೋರವಾದ, ದೃಢವಾದ, ಭಯಂಕರವಾದ ಆರು ಅಲಗುಗಳಿಂದ ಕೂಡಿದ, ಭಯಂಕರ ನಾದದಿಂದ ಕೂಡಿದ, ಶತ್ರುಸಂಹಾರಕವಾದ ವಜ್ರಾಯುಧವನ್ನು ನಿರ್ಮಾಣ ಮಾಡಿಸಿ.
ತೇನ ವಜ್ರೇಣ ವೈ ವೃತ್ರಂ ಹನಿಷ್ಯತಿ ಶತಕ್ರತುಃ |
ಏತದ್ವಃ ಸರ್ವಮಾಖ್ಯಾತಂ ತಸ್ಮಾಚ್ಛೀಘ್ರಂ ವಿಧೀಯತಾಮ್ ॥11॥
ಇಂದ್ರನು ಆ ವಜ್ರಾಯುಧದಿಂದ ವೃತ್ರನನ್ನು ಸಂಹರಿಸುವನು. ನಾನು ನಿಮಗೆ ಎಲ್ಲವನ್ನೂ ಹೇಳಿದ್ದೇನೆ. ಆದ್ದರಿಂದ ಶೀಘ್ರವಾಗಿ ಅನುಷ್ಠಾನ ಮಾಡಿ (ಎಂದು ಹೇಳಿದರು).
ಏವಮುಕ್ತಾಸ್ತತೋ ದೇವಾ ಅನುಜ್ಞಾಪ್ಯ ಪಿತಾಮಹಮ್ |
ಶತಕ್ರತುಂ ಪುರಸ್ಕೃತ್ಯ ದಧೀಚಸ್ಯಾಶ್ರಮಂ ಯಯುಃ ॥12॥
ಹೀಗೆ ಹೇಳಲ್ಪಟ್ಟ ದೇವತೆಗಳು ಪಿತಾಮಹರಾದ ಬ್ರಹ್ಮದೇವರ ಅಪ್ಪಣೆಯನ್ನು ಪಡೆದು ಇಂದ್ರನನ್ನು ಮುಂದೆ ಮಾಡಿಕೊಂಡು ದಧೀಚರ ಆಶ್ರಮಕ್ಕೆ ಬಂದರು.
ಸರಸ್ವತ್ಯಾಃ ಪರೇ ಪಾರೇ ನಾನಾದ್ರುಮಲತಾವೃತೇ |
ಷಟ್ಪದೋದ್ಗೀತನಿನದೈರ್ವಿಘುಷ್ಟಂ ಸಾಮಗೈರಿವ ॥13॥
ಪುಂಸ್ಕೋಕಿಲರವೋನ್ಮಿಶ್ರಂ ಕೋಕಿಲೈರ್ಜೀವಜೀವಕೈಃ |
ಮಹಿಷೈಶ್ಚ ವರಾಹೈಶ್ಚ ಛ್ರಮರೈರಮರೈರಪಿ ॥14॥
ತತ್ರ ತತ್ರಾನುಚರಿತಂ ಮೃಗೇಂದ್ರಭಯವೇದಿತೈಃ |
ಕರೇಣುಭಿರ್ವಾರಣೈಶ್ಚ ಪ್ರಭಿನ್ನಕರಟಾಮುಖೈಃ ॥15॥
ಸರೋವಗಾಢೈಃ ಕ್ರೀಡದ್ಭಿಃ ಸಮಂತಾದನುನಾದಿತಮ್ |
ಅಪರೈಶ್ಚಾಪಿ ಸಂಲೀನೈರ್ಮಹಾಕಂದರವಾಸಿಭಿಃ ॥16॥
ಸಿಂಹವ್ಯಾಘ್ರೈರ್ಮಹಾನಾದಾನ್ ನದದ್ಭಿರನುನಾದಿತಮ್ |
ತೇಷು ತೇಷ್ವವಕಾಶೇಷು ಶೋಭಿತಂ ಸುಮನೋರಹಮ್ ॥17॥
ತ್ರಿವಿಷ್ಟಪಸಮಪ್ರಖ್ಯಂ ದಧೀಚಾಶ್ರಮಮಾಗಮನ್ ॥18॥
ಸರಸ್ವತೀ ನದಿಯ ಆಚೆಯ ದಡದಲ್ಲಿ ಇದ್ದ ಅವರ ಆಶ್ರಮವು ನಾನಾ ದ್ರುಮಲತೆಗಳಿಂದ ಕೂಡಿ ಭ್ರಂಗಗಳ ಝೇಂಕಾರದಿಂದ ಸಾಮಗಾನ ಮಾಡುವವರ ಘೋಷದಂತೆ ಇದ್ದಿತು. ಪುಂಸ್ಕೋಕಿಲ ಧ್ವನಿಗಳಿಂದ ಕೂಡಿದ್ದುದಾಗಿ ಕೋಗಿಲೆಗಳು, ಚಕೋರಗಳು, ಮಹಿಷಗಳು, ವರಾಹಗಳಿಂದಲೂ, ಚಮರೀ ಮೃಗಗಳಿಂದಲೂ ಕೂಡಿದ್ದಿತು. ಅಲ್ಲಲ್ಲಿ ಮರಿ ಆನೆಗಳು ಮತ್ತು ದೊಡ್ಡ ಆನೆಗಳು ಮದೋದಕವನ್ನು ಸ್ರವಿಸುತ್ತಾ ಸಿಂಹಗಳ ಭಯವಿಲ್ಲದೇ ಸಂಚರಿಸುತ್ತಿದ್ದವು. ಸರೋವರದಲ್ಲಿ ಇಳಿದು ಆಟವಾಡುವ ಆನೆಗಳ ಭ್ರಮಣದಿಂದ ಆಶ್ರಮವು ಪ್ರತಿಧ್ವನಿಸುತ್ತಿದ್ದಿತು. ಇನ್ನೂ ಕೆಲವು ಆನೆಗಳು ಗುಹೆಗಳಲ್ಲಿ ಮತ್ತು ಕಂದರಗಳಲ್ಲಿ ವಾಸಿಸುತ್ತಿದ್ದವು. ಸಿಂಹ

ವ್ಯಾಘ್ರಗಳು ಮಾಡುವ ಮಹಾನಾದಗಳು ಪ್ರತಿಧ್ವನಿಸುತ್ತಿದ್ದವು. ಅಲ್ಲಲ್ಲಿ ಮಧ್ಯದ ಅವಕಾಶಗಳಲ್ಲಿ ಮನೋಹರವಾಗಿದ್ದು ಸ್ವರ್ಗಕ್ಕೆ ಸದೃಶವಾದ ಕಾಂತಿಯುಳ್ಳ ದಧೀಚರ ಆಶ್ರಮಕ್ಕೆ ದೇವತೆಗಳು ಬಂದರು.
ತತ್ರಾಪಶ್ಯನ್ ದಧೀಚಂ ತೇ ದಿವಾಕರಸಮದ್ಯುತಿಮ್ |
ಜಾಜ್ವಲ್ಯಮಾನಂ ವಪುಷಾ ಯಥಾ ಸಾಕ್ಷಾತ್ ಪಿತಾಮಹಮ್ ||19||
ಅವರು ಅಲ್ಲಿ ಸೂರ್ಯನಿಗೆ ಸಮಾನಯುಕ್ತವಾದ ತೇಜಸ್ಸುಳ್ಳ ಸಾಕ್ಷಾತ್ ಬ್ರಹ್ಮದೇವರಂತೆ ಶರೀರದಿಂದ ಬೆಳಗುತ್ತಿದ್ದ ದಧೀಚರನ್ನು ನೋಡಿದರು.
ತಸ್ಯ ಪಾದೌ ಸುರಾ ರಾಜನ್ನಭಿವಾದ್ಯ ಪ್ರಣಮ್ಯ ಚ |
ಅಯಾಚಂತ ವರಂ ಸರ್ವೇ ಯಥೋಕ್ತಂ ಪರಮೇಷ್ಠಿನಾ |
ತತೋ ದಧೀಚಃ ಪರಮಪ್ರೀತಃ ಸುರೋತ್ತಮಾಂಸ್ತಾನಿದಮಿತ್ಯುವಾಚ ||
ಎಲೈ ರಾಜನೇ, ದೇವತೆಗಳು ಅವರ ಪಾದಗಳಿಗೆ ನಮಸ್ಕರಿಸಿ ಎಲ್ಲರೂ ಬ್ರಹ್ಮದೇವರು ಹೇಳಿದಂತೆ ಅವರಿಂದ ವರವನ್ನು ಕೇಳಿದರು.
ಕರೋಮಿ ಯದ್ವೋ ಹಿತಮದ್ಯ ದೇವಾಃ
ಸ್ವಂ ಚಾಪಿ ದೇಹಂ ಸ್ವಯಮುತ್ಸೃಜಾಮಿ ||21||
ಆಗ ದಧೀಚರು ಪರಮಸಂತುಷ್ಟರಾಗಿ ಆ ಸುರಶ್ರೇಷ್ಠರನ್ನು ಕುರಿತು ಎಲೈ ದೇವತೆಗಳೇ, ನಿಮಗೆ ಯಾವುದು ಹಿತವೋ ಅದನ್ನು ಈ ದಿನ ಮಾಡುತ್ತೇನೆ. ನನ್ನ ದೇಹವನ್ನು ನಾನೇ ಪರಿತ್ಯಾಗಮಾಡುತೆತೇನೆ ಎಂದು ಹೇಳಿದರು.
ಸ ಏವಮುಕತ್ವ ದ್ವಿಪದಾಂ ವರಿಷ್ಠಃ
ಪ್ರಾಣಾನ್ ವಶೀ ಸ್ವಾನ್ ಸಹಸೋತ್ಸಸರ್ಜ ||22||
ಸುರಾಸ್ತತೋऽಸ್ಥೀನಿ ಗತಾಯುಷಸ್ತೇ
ಯಥೋಪಜೋಷಂ ಜಗೃಹುಃ ಸ್ಮ ತಸ್ಯ ||23||
ಮನುಷ್ಯರಲ್ಲಿ ಶ್ರೇಷ್ಠರಾದ ಸ್ವವಶರಾದ ಅವರು ಹೀಗೆ ಹೇಳಿ ತಮ್ಮ ಪ್ರಾಣವನ್ನು ತಕ್ಷಣದಲ್ಲಿ ತ್ಯಜಿಸಿದರು. ದೇವತೆಗಳು ಅವರು ಮರಣಹೊಂದಿದ ನಂತರ ತಮಗೆ ಇಷ್ಟಬಂದಂತೆ ಅವರ ಅಸ್ಥಿಗಳನ್ನು ಸಂಗ್ರಹಿಸಿದರು.
ಪ್ರಹೃಷ್ಟರೂಪಾಶ್ಚ ಜಯಾಯ ದೇವಾಃ
ತ್ವಷ್ಟಾರಮಾಗಮ್ಯ ತಮರ್ಚ್ಯ್ಯ ಚೋಚುಃ ||24||
ತ್ವಷ್ಟಾ ತು ತೇಷಾಂ ವಚನಂ ನಿಶಮ್ಯ
ಪ್ರಹೃಷ್ಟರೂಪಃ ಪ್ರಯತಃ ಪ್ರಯತ್ನಾತ್ ||25||
ಚಕಾರ ವಜ್ರಂ ಭೃಶಮುಗ್ರರೂಪಂ
ಕೃತ್ವಾ ಚ ಶಕ್ರಂ ತಮುವಾಚ ಹೃಷ್ಟಃ ||26||
ಅನೇನ ವಜ್ರಪ್ರವರೇಣ ದೇವ
ಭಸ್ಮೀಕುರುಷ್ವಾದ್ಯ ಸುರಾರಿಮುಗ್ರಮ್ |
ತತೋ ಹತಾರಿಃ ಸಗಣಃ ಸುಖಂ ವೈ
ಪ್ರಶಾಧಿ ಕೃತ್ಸ್ನಂ ತ್ರಿದಿವಂ ದಿವಿಷ್ಠಃ ||27||
ದೇವತೆಗಳು ಜಯವನ್ನು ಉದ್ದೇಶಿಸಿ ಸಂತೋಷಗೊಂಡವರಾಗಿ ತ್ವಷ್ಟೃವಿನ ಬಳಿಗೆ ಬಂದು ಅವನನ್ನು ಸತ್ಕರಿಸಿ ಹೇಳಿದರು. ತ್ವಷ್ಟೃವಾದರೂ ಅವರ ಮಾತನ್ನು ಕೇಳಿ ಸಂತೋಷಗೊಂಡವನಾಗಿ ಬಹಳ ಅವಧಾನದಿಂದ ಪ್ರಯತ್ನಪೂರ್ವಕವಾಗಿ ಬಹಳ ಉಗ್ರವಾದ ವಜ್ರಾಯುಧವನ್ನು ನಿರ್ಮಿಸಿದನು. ವಜ್ರಾಯುಧವನ್ನು ನಿರ್ಮಾಣ ಮಾಡಿ ಅವನು ಸಂತೋಷದಿಂದ ಇಂದ್ರನನ್ನು ಕುರಿತು ದೇವನೇ, ಈ ಶ್ರೇಷ್ಠವಾದ ವಜ್ರಾಯುಧದಿಂದ ಈ ದಿನ ಉಗ್ರವಾದ ದೇವಶತ್ರುವಾದ ವೃತ್ರಾಸುರನನ್ನು ಭಸ್ಮೀಕರಿಸು. ಅನಂತರ ಶತ್ರುವಿನ ನಾಶವಾಗುತ್ತಿರಲು ನಿನ್ನ ಪರಿವಾರದ ಜೊತೆಯಲ್ಲಿ ಸ್ವರ್ಗದಲ್ಲಿ ಇದ್ದು ಸಮಗ್ರವಾದ ಮೂರುಲೋಕಗಳನ್ನು ಆಳು ಎಂದು ಹೇಳಿದನು.
ತ್ವಷ್ಟ್ರಾ ತಥೋಕ್ತಃ ಸ್ಮ ಪುರಂದರಸ್ತು
ವಜ್ರಂ ಪ್ರಹೃಷ್ಟಃ ಪ್ರಯತೋ ಹ್ಯಗೃಹ್ಣಾತ್ ||28||
ತ್ವಷ್ಟೃವಿನಿಂದ ಹೀಗೆ ಹೇಳಲ್ಪಟ್ಟ ಪುರಂದರನು ಸಂತೋಷದಿಂದ ಅವಧಾನ ಪೂರ್ವಕವಾಗಿ ವಜ್ರಾಯುಧವನ್ನು ಸ್ವೀಕರಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚನವತಿತಮೋऽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಏಕಪಂಚಾಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ತಾರನೆಯ ಅಧ್ಯಾಯ
ವೃತ್ರವಧೆ. ಉಳಿದ ದೈತ್ಯರಿಂದ ಸಮುದ್ರದಲ್ಲಿ ಅಡಗಿ ದುರ್ಮಂತ್ರಣ.
ಲೋಮಶಃ
ತತಃ ಸ ವಜ್ರೀ ಬಲಭಿದ್ ದೈವತ್ಯೆರಭಿರಕ್ಷಿತಃ |
ಆಸಸಾದ ತತೋ ವೃತ್ರಂ ಸ್ಥಿತಮಾವೃತ್ಯ ರೋದಸೀ ||1||
ಕಾಲಕೇಯೈರ್ಮಹಾಕಾಯೈಃ ಸಮಂತಾದಭಿರಕ್ಷಿತಮ್ |
ಸಮುದ್ಯತಪ್ರಹರಣೈಃ ಸಶೃಂಗೈರಿವ ಪರ್ವತೈಃ ||2||

ಲೋಮಶ ಅನಂತರ ಬಲಸೂದನನಾದ ಮತ್ತು ದೇವತೆಗಳಿಂದ ರಕ್ಷಿತನಾದ ಇಂದ್ರನು ಆಯುಧಗಳನ್ನು ಧರಿಸಿ ಶೃಂಗವುಳ್ಳ ಪರ್ವತದಂತೆ ಮಹಾಕಾಯನಾದ ಕಾಲಕೇಯರಿಂದ ಎಲ್ಲ ಕಡೆಗಳಲ್ಲಿಯೂ ರಕ್ಷಿತನಾದಂತಹ ಭೂಮಿ ಮತ್ತು ಅಂತರಿಕ್ಷವನ್ನು ಆವರಿಸಿ ನಿಂತಂತಹ ವೃತ್ರನನ್ನು ಸಮೀಪಿಸಿದನು.
ತತೋ ಯುದ್ಧಂ ಸಮಭವದ್ ದೇವಾನಾಂ ಸಹ ದಾನವೈಃ |
ಮುಹೂರ್ತಂ ಭರತಶ್ರೇಷ್ಠ ಲೋಕತ್ರಾಸಕರಂ ಮಹತ್ ॥3॥
ಎಲೈ ಭರತಶ್ರೇಷ್ಠನೇ, ಅನಂತರ ಒಂದು ಮುಹೂರ್ತಕಾಲ ದೇವತೆಗಳಿಗೂ ಮತ್ತು ದಾನವರಿಗೂ ಲೋಕಭಯಂಕರವಾದ ದೊಡ್ಡ ಯುದ್ಧವಾಯಿತು.
ಉದ್ಯತಪ್ರತಿಪಿಷ್ಟಾನಾಂ ಖಡ್ಗಾನಾಂ ವೀರಬಾಹುಭಿಃ |
ಆಸೀತ್ ಸುತುಮುಲಃ ಶಬ್ದಃ ಶರೀರೇಷ್ವಭಿಪಾತಿತಃ ॥4॥
ವೀರರ ಬಾಹುಗಳಿಂದ ಎತ್ತಿಹೊಡೆಯಲ್ಪಟ್ಟು ಶರೀರಗಳನ್ನು ಪ್ರವೇಶಿಸುತ್ತಿದ್ದ ಖಡ್ಗಗಳ ಶಬ್ದವು ತೀವ್ರವಾಗಿದ್ದಿತು.
ಶಿರೋಭಿಃ ಪ್ರಪತದ್ಭಿಶ್ಚಾಪ್ಯಂತರಿಕ್ಷಾನ್ಮಹೀತಳಮ್ |
ತಾಳೈರಿವ ಮಹೀಪಾಲ ವೃಂತಾದ್ ಭ್ರಷ್ಟೈರದೃಶ್ಯತ ॥5॥
ಎಲೈ ಮಹೀಪಾಲನೇ, ಅಂತರಿಕ್ಷದಿಂದ ಭೂತಲದ ಮೇಲೆ ಬೀಳುತ್ತಿದ್ದ ಹೊಡೆದು ಉರುಳಿಸಲ್ಪಟ್ಟ ಶಿರಸ್ಸುಗಳು ತೊಟ್ಟನ್ನು ಕಳಚಿಕೊಂಡು ಬೀಳುವ ತಾಳಫಲಗಳಂತೆ ತೋರುತ್ತಿದ್ದವು.
ತೇ ಹೇಮಕವಚಾ ಭೂತ್ವಾ ಕಾಲೇಯಾಃ ಪರಿಘಾಯುಧಾಃ |
ತ್ರಿದಶಾನಭ್ಯಧಾವಂತ ದಾವದಗ್ಧಾ ಇವ ದ್ರುಮಾಃ ॥6॥
ಆ ಕಾಲೇಯರು ಹೇಮಕವಚಗಳನ್ನೂ ಪರಿಘಾಯುಧವನ್ನೂ ಧರಿಸಿ ಕಾಡ್ಗಿಚ್ಚಿನಿಂದ ಸುಟ್ಟ ವೃಕ್ಷಗಳಂತೆ ದೇವತೆಗಳ ಮೇಲೆ ಎರಗಿದರು.
ತೇಷಾಂ ವೇಗವತಾಂ ವೇಗಂ ಸಹಿತಾನಾಂ ಪ್ರಧಾವತಾಮ್ |
ನ ಶೇಕುಸ್ತ್ರಿದಶಾಃ ಸೋಢುಂ ತೇ ಭಗ್ನಾಃ ಪ್ರಾದ್ರವನ್ ಭಯಾತ್ ॥7॥
ಆ ದಾನವರು ಒಟ್ಟಾಗಿ ವೇಗದಿಂದ ತಮ್ಮ ಮೇಲೆ ಎರಗುವಾಗ ದೇವತೆಗಳು ಆ ವೇಗವನ್ನು ತಡೆಯಲಾರದೆ ಚೆಲ್ಲಾಪಿಲ್ಲಿಯಾಗಿ ಭಯದಿಂದ ಓಡಿದರು.
ತಾನ್ ದೃಷ್ಟ್ವಾ ದ್ರವತೋ ಭೀತಾನ್ ಸಹಸ್ರಾಕ್ಷಃ ಪುರಂದರಃ |
ವೃತ್ರೇ ವಿವರ್ಧಮಾನೇ ಚ ಕಶ್ಮಲಂ ಮಹದಾವಿಶತ್ ॥8॥
ದೇವತೆಗಳು ಭಯದಿಂದ ಓಡುತ್ತಿರುವುದನ್ನೂ ವೃತ್ರನು ಅಭಿವೃದ್ಧಿ ಹೊಂದುತ್ತಿರುವುದನ್ನೂ ನೋಡಿದ ಸಹಸ್ರಾಕ್ಷನಾದ ಇಂದ್ರನು ಮನಸ್ಸಿನಲ್ಲಿ ದೊಡ್ಡ ಗ್ಲಾನಿಯನ್ನು ಹೊಂದಿದನು.
ತಂ ಶಕ್ರಂ ಕಶ್ಮಲಾವಿಷ್ಟಂ ದೃಷ್ಟ್ವಾ ವಿಷ್ಣುಃ ಸನಾತನಃ |
ಸ್ವತೇಜೋ ವ್ಯದಧಾಚ್ಛಕ್ರೇ ಬಲಮಸ್ಯಾಭಿವರ್ಧಯನ್ ॥9॥
ಮನೋಗ್ಲಾನಿಗೆ ಒಳಗಾದ ಇಂದ್ರನನ್ನು ನೋಡಿ ಸನಾತನನಾದ ವಿಷ್ಣುವು ಅವನಿಗೆ ಬಲವನ್ನು ಅಭಿವೃದ್ಧಿಗೊಳಿಸಲು ತನ್ನ ತೇಜಸ್ಸನ್ನು ಅವನಲ್ಲಿ ಇಟ್ಟನು.
ವಿಷ್ಣುನಾಽಽಪ್ಯಾಯಿತಂ ದೃಷ್ಟ್ವಾ ಶಕ್ರಂ ದೇವಗಣಾಸ್ತತಃ |
ಸ್ವಂಸ್ವಂ ತೇಜಃ ಸಮಾದಧ್ಯುಃ ತಥಾ ಬ್ರಹ್ಮರ್ಷಯೋಽಮಲಾಃ ॥10॥
ವಿಷ್ಣುವಿನಿಂದ ತೇಜೋಭಿವೃದ್ಧಿಯನ್ನು ಹೊಂದಿದ ಶಕ್ರನನ್ನು ನೋಡಿ ಆಗ ದೇವತಾಗಣಗಳು ಮತ್ತು ಪರಿಶುದ್ಧರಾದ ಬ್ರಹ್ಮರ್ಷಿಗಳು ತಮ್ಮ ತಮ್ಮ ತೇಜಸ್ಸನ್ನು ಇಂದ್ರನಲ್ಲಿ ತುಂಬಿದರು.
ಸ ಸಮಾಪ್ಯಾಯಿತಃ ಶಕ್ರೋ ವಿಷ್ಣುನಾ ದೈವತೈಃ ಸಹ |
ಋಷಿಭಿಶ್ಚ ಮಹಾಭಾಗೈರ್ಬಲವಾನ್ ಸಮಪದ್ಯತ ॥11॥
ವಿಷ್ಣುವಿನಿಂದಲೂ, ದೇವತೆಗಳಿಂದಲೂ, ಮಹಾನುಭಾವರಾದ ಋಷಿಗಳಿಂದಲೂ ತೇಜೋಭಿವೃದ್ಧಿಯನ್ನು ಹೊಂದಿ ಶಕ್ರನು ಬಲಿಷ್ಠನಾದನು.
ಜ್ಞಾತ್ವಾ ಬಲಸ್ಥಂ ತ್ರಿದಶಾಧಿಪಂ ತು
ನನಾದ ವೃತ್ರೋ ಮಹತೋ ನಿನಾದಾನ್ |
ತಸ್ಯ ಪ್ರಣಾದೇನ ಧರಾ ದಿಶಶ್ಚ
ಖಂ ದ್ಯೌರ್ನಗಾಶ್ಚಾತಿಚಚಾಲ ಸರ್ವಮ್ ॥12॥
ತ್ರಿದಶಾಧ್ಯಕ್ಷನಾದ ಇಂದ್ರನು ಬಲದಿಂದ ಅಭಿವೃದ್ಧಿಯನ್ನು ಹೊಂದುವುದನ್ನು ನೋಡಿದ ವೃತ್ರಾಸುರನು ದೊಡ್ಡ ನಾದವನ್ನು ಮಾಡಿದನು. ಅವನ ಆ ನಾದಕ್ಕೆ ಭೂಮಿಯೂ, ದಿಕ್ಕುಗಳೂ, ಆಕಾಶವೂ, ಅಂತರಿಕ್ಷವೂ, ಪರ್ವತಗಳೂ ಎಲ್ಲವೂ ಬಹಳವಾಗಿ ಚಲಿಸಿದವು.
ತತೋ ಮಹೇಂದ್ರಃ ಪರಮಾಭಿತಪ್ತಃ
ಶ್ರುತ್ವಾಂ ಖಂ ಘೋರಮುದಗ್ರಕಲ್ಪಮ್ |
ಭಯೇ ನಿಮಗ್ನಸ್ತ್ವರಿತೋ ಮುಮೋಚ
ವಜ್ರಂ ಮಹತ್ ತಸ್ಯ ವಧಾಯ ರಾಜನ್ ॥13॥
ಎಲೈ ರಾಜನೇ, ಆ ಮಹೇಂದ್ರನು ಅತಿಭಯಂಕರವಾದ ಆ ಘೋರವಾದ ರವವನ್ನು ಕೇಳಿ ಬಹಳ ಸಂತಾಪಕ್ಕೆ ಒಳಗಾದವನಾಗಿ

ಭಯವನ್ನು ಹೊಂದಿ ಶೀಘ್ರವಾಗಿ ವೃತ್ರವಧೆಗಾಗಿ ಆ ದೊಡ್ಡ ವಜ್ರಾಯುಧವನ್ನು ಪ್ರಯೋಗಿಸಿದನು.
ಸ ಶಕ್ರವಜ್ರಾಭಿಹತಃ ಪಪಾತ
ಮಹಾಸುರಃ ಕಾಂಚನಮಾಲ್ಯಧಾರೀ |
ಯಥಾ ಮಹಾಶೈಲವರಃ ಪುರಸ್ತಾತ್
ಸ ಮಂದರೋ ವಿಷ್ಣುಕರಾತ್ ಪ್ರಮುಕ್ತಃ ||14||
ಶಕ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಕಾಂಚನಮಾಲೆಯ ಧಾರಿಯಾದ ಆ ಮಹಾಸುರನು ಹಿಂದೆ ವಿಷ್ಣುವಿನ ಕರದಿಂದ ಮುಕ್ತವಾದ ಮಂದರಪರ್ವತದಂತೆ ನೆಲಕ್ಕೆ ಉರುಳಿದನು.
ತಸ್ಮಿನ್ ಹತೇ ದೈತ್ಯವರೇ ಭಯಾರ್ತಃ
ಶಕ್ರಃ ಪ್ರದುದ್ರಾವ ಸರಃ ಪ್ರವೇಷ್ಟುಮ್ |
ವಜ್ರಂ ನ ಮೇನೇ ಸ್ವಕರಾತ್ ಪ್ರಮುಕ್ತಂ
ವೃತ್ರಂ ಭಯಾಚ್ಚಾಪಿಹತಂ ನ ಮೇನೇ ||15||
ಆ ದೈತ್ಯಶ್ರೇಷ್ಠನು ಹತನಾಗುತ್ತಿರಲು ಭಯಾರ್ತನಾದ ಇಂದ್ರನು ಒಂದು ಸರೋವರವನ್ನು ಪ್ರವೇಶಿಸಲು ಓಡಿದನು. ಅವನು ಭಯದಿಂದ ತಾನು ವಜ್ರಾಯುಧವನ್ನು ತನ್ನ ಹಸ್ತದಿಂದ ಪ್ರಯೋಗಿಸಿದ್ದೇನೆಂದೂ ವೃತ್ರನು ಹತನಾಗಿದ್ದಾನೆಂದೂ ತಿಳಿಯಲಿಲ್ಲ.
ಸರ್ವೇ ಚ ದೇವಾ ಮುದಿತಾಃ ಪ್ರಹೃಷ್ಟಾ
ಮಹರ್ಷಯಶ್ಚೇಂದ್ರಮಭಿದ್ರವಂತಃ |
ವೃತ್ರಂ ಹತಂ ಸಂದದೃಶುಃ ಪೃಥಿವ್ಯಾಂ
ವಜ್ರಾಹತಂ ಶೈಲಮಿವಾವಕೀರ್ಣಮ್ ||16||
ಎಲ್ಲ ದೇವತೆಗಳು ಮತ್ತು ಮಹರ್ಷಿಗಳು ಸಂತೋಷ ಮತ್ತು ಹರ್ಷಗಳಿಂದ ಕೂಡಿದವರಾಗಿ ಇಂದ್ರನ ಬಳಿಗೆ ಓಡಿಬಂದು ವಜ್ರಾಘಾತಕ್ಕೆ ಒಳಗಾದ ಪರ್ವತದಂತೆ ಭೂಮಿಯ ಮೇಲೆ ಚೂರುಚೂರಾಗಿ ಬಿದ್ದಿರುವ ಮೃತನಾದ ವೃತ್ರನನ್ನು ನೋಡಿದರು.
ಶೇಷಾಂಶ್ಚ ದೈತ್ಯಾಂಸ್ತ್ವರಿತಾಃ ಸಮೇತ್ಯ
ಜಘ್ನುಃ ಸುರಾ ವೃತ್ರವಧಾಭಿತಪ್ತಾನ್ |
ತೇ ವಧ್ಯಮಾನಾಸ್ತ್ರಿದಶೈಸ್ತದಾನೀಂ
ಸಮುದ್ರಮೇವಾವಿವಿಶುರ್ಭಯಾರ್ತಾಃ ||17||
ಆಗ ದೇವತೆಗಳು ಎಲ್ಲರೂ ಸೇರಿ ವೃತ್ರವಧೆಯಿಂದ ಸಂತಾಪಗೊಂಡ ಉಳಿದ ದೈತ್ಯರನ್ನು ಶೀಘ್ರವಾಗಿ ಸಂಹರಿಸಿದರು. ದೇವತೆಗಳ ಪ್ರಹಾರಕ್ಕೆ ಒಳಗಾದ ಆ ದೈತ್ಯರು ಆಗ ಭಯದಿಂದ ಕೂಡಿದವರಾಗಿ ಸಮುದ್ರವನ್ನು ಪ್ರವೇಶಿಸಿದರು.
ಪ್ರವಿಶ್ಯ ಚೈವೋದಧಿಮಪ್ರಮೇಯಂ
ಝಷಾಕುಲಂ ನಕ್ರಸಮಾಕುಲಂ ಚ |
ತದಾ ಸುಮಂತ್ರಂ ಸಹಿತಾಃ ಪ್ರಚಕ್ರುಃ
ತ್ರೈಲೋಕ್ಯನಾಶಾರ್ಥಮಭಿಪ್ರಯುಕ್ತಾಃ ||18||
ಅವರು ಮೀನು, ಮೊಸಳೆಗಳಿಂದ ನಿಬಿಡವಾದ ಅಪಾರವಾದ ಸಮುದ್ರವನ್ನು ಪ್ರವೇಶಿಸಿ ಆಗ ಮೂರುಲೋಕಗಳ ನಾಶವನ್ನು ಉದ್ದೇಶಿಸಿ ಎಲ್ಲರೂ ಒಟ್ಟಿಗೆ ಮಂತ್ರಾಲೋಚನೆಯನ್ನು ನಡೆಸಿದರು.
ತತ್ರ ಸ್ಮ ಕೇಚಿನ್ಮತಿನಿಶ್ಚಯಜ್ಞಾಃ
ತಾಂಸ್ತಾನುಪಾಯಾನುಪವರ್ಣಯಂತಿ |
ತೇಷಾಂ ತು ತತ್ರ ಕ್ಷಯಕಾಲಯೋಗಾದ್
ಘೋರಾ ಮತಿಶ್ಚಿಂತಯತಾಂ ಬಭೂವ ||19||
ಅಲ್ಲಿ ಕೆಲವು ದೃಢನಿಶ್ಚಯವುಳ್ಳ ದೈತ್ಯರು ಬೇರೆ ಬೇರೆ ಉಪಾಯಗಳನ್ನು ವರ್ಣಿಸಿದರು. ಅವರಿಗಾದರೂ ವಿನಾಶದ ಕಾಲವು ಸಮೀಪಿಸಿದ್ದರಿಂದ ಹೀಗೆ ಮಂತ್ರಾಲೋಚನೆ ಮಾಡುವಾಗ ಘೋರವಾದ ಬುದ್ಧಿಯುಂಟಾಯಿತು.
ಯೇ ಸಂತಿ ವಿದ್ಯಾತಪಸೋಪಪನ್ನಾಃ
ತೇಷಾಂ ತು ಕಾರ್ಯಃ ಪ್ರಥಮಂ ವಿನಾಶಃ |
ಲೋಕಾ ಹಿ ಸರ್ವೇ ತಪಸಾ ಧ್ರಿಯಂತೇ
ತಸ್ಮಾತ್ ತ್ವರಧ್ವಂ ತಪಸಃ ಕ್ಷಯಾಯ ||20||
ಯೇ ಸಂತಿ ಕೇಚಿಚ್ಚ ವಸುಂಧರಾಯಾಂ
ತಪಸ್ವಿನೋ ಧರ್ಮವಿದಶ್ಚ ತಜ್ಜ್ಞಾಃ |
ತೇಷಾಂ ವಧಃ ಕ್ರಿಯತಾಂ ಕ್ಷಿಪ್ರಮೇವ
ತೇಷು ಪ್ರನಷ್ಟೇಷು ಜಗದ್ವಿನಷ್ಟಮ್ ||21||
ಭೂಮಿಯಲ್ಲಿ ಯಾರು ವಿದ್ಯಾತಪಸ್ಸುಗಳಿಂದ ಸಂಪನ್ನರಾಗಿದ್ದಾರೆಯೋ ಅವರ ವಿನಾಶವನ್ನು ಮೊದಲು ಮಾಡಬೇಕು. ಎಲ್ಲ ಲೋಕಗಳು ತಪಸ್ಸನ್ನು ಆಧರಿಸಿವೆ. ಆದ್ದರಿಂದ ತಪಸ್ಸನ್ನು ವಿನಾಶಮಾಡಲು ಜಾಗ್ರತೆಯಾಗಿ ಪ್ರಯತ್ನವನ್ನು ಮಾಡಿ. ಭೂಮಿಯಲ್ಲಿ ಯಾವ ತಪಸ್ವಿಗಳು ಮತ್ತು ಧರ್ಮಜ್ಞರು ಇದ್ದಾರೆಯೋ ಶೀಘ್ರವಾಗಿ ಅವರ ವಧೆಯನ್ನು ಮಾಡಿ. ಅವರು ನಷ್ಟರಾದರೆ ಜಗತ್ತೇ ವಿನಾಶವನ್ನು ಹೊಂದುತ್ತದೆ.
ಏವಂ ಹಿ ಸರ್ವೇ ಕೃತಬುದ್ಧಿಭಾವಾ

ಜಗದ್ವಿನಾಶೇ ಪರಮಪ್ರಹೃಷ್ಟಾಃ |
ದುರ್ಗಂ ಸಮಾಶ್ರಿತ್ಯ ಮಹೋರ್ಮಿಮಂತಂ
ರತ್ನಾಕರಂ ವರುಣಸ್ಯಾಲಯಂ ಚ ॥22॥
ಹೀಗೆ ಆ ದಾನವರು ದೊಡ್ಡ ಅಲೆಗಳಿರುವ ರತ್ನಾಕರವಾದ ವರುಣಾಲಯವಾದ ಸಮುದ್ರವನ್ನು ಪ್ರವೇಶಿಸಿ ಜಗದ್ವಿನಾಶವನ್ನು ಉದ್ದೇಶಿಸಿ ಮಂತ್ರಾಲೋಚನೆಯನ್ನು ನಡೆಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಣ್ಣವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವಿಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ತೇಳನೆಯ ಅಧ್ಯಾಯ
ಕಾಲಕೇಯರಿಂದ ಉಪದ್ರುತವಾದ ಲೋಕಗಳನ್ನು ನೋಡಿ
ದೇವತೆಗಳಿಂದ ವಿಷ್ಣುವಿನಲ್ಲಿ ಶರಣಾಗತಿ.
ಲೋಮಶಃ
ಸಮುದ್ರಂ ತೇ ಸಮಾಸಾದ್ಯ ವಾರುಣಂ ನಿಧಿಮಂಭಸಾಮ್ |
ಕಾಲೇಯಾಃ ಸಂಪ್ರವರ್ತಂತೇ ತ್ರೈಲೋಕ್ಯಸ್ಯ ವಿನಾಶನೇ ॥1॥
ಲೋಮಶ ಕಾಲಕೇಯರು ವರುಣಪಾಲಿತವಾದ ಜಲನಿಧಿಯಾದ ಸಮುದ್ರವನ್ನು ಸೇರಿ ಮೂರುಲೋಕಗಳ ವಿನಾಶಕ್ಕಾಗಿ ಪ್ರವೃತ್ತಿಯನ್ನು ಮಾಡಿದರು.
ತೇ ರಾತ್ರೌ ಸಮಭಿಕ್ರುದ್ಧಾ ಭಕ್ಷಯಂತಿ ಸದಾ ಮುನೀನ್ |
ಆಶ್ರಮೇಷು ಚ ಯೇ ಸಂತಿ ಪುಣ್ಯೇಷ್ವಾಯತನೇಷು ಚ ॥2॥
ಅವರು ಕ್ರೋಧದಿಂದ ಕೂಡಿದವರಾಗಿ ಆಶ್ರಮದಲ್ಲಿ ಮತ್ತು ಪುಣ್ಯಕ್ಷೇತ್ರಗಳಲ್ಲಿ ವಾಸಿಸುವ ಮುನಿಗಳನ್ನು ಯಾವಾಗಲೂ ರಾತ್ರಿಯ ಕಾಲದಲ್ಲಿ ಭಕ್ಷಿಸುತ್ತಿದ್ದರು.
ವಸಿಷ್ಠಸ್ಯಾಶ್ರಮೇ ವಿಪ್ರಾ ಭಕ್ಷಿತಾಸ್ತೈರ್ದುರಾತ್ಮಭಿಃ |
ಅಶೀತಿಶ್ಶತಮಷ್ಟೌ ಚ ನವ ಚಾನ್ಯೇ ತಪಸ್ವಿನಃ ॥3॥
ಆ ದುರಾತ್ಮರು ವಸಿಷ್ಠರ ಆಶ್ರಮಕ್ಕೆ ಹೋಗಿ ನೂರತೊಂಭತ್ತೇಳು ತಪಸ್ವಿಗಳನ್ನು ಭಕ್ಷಿಸಿದರು.
ಚ್ಯವನಸ್ಯಾಶ್ರಮಂ ಗತ್ವಾ ಪುಣ್ಯಂ ದ್ವಿಜನಿಷೇವಿತಮ್ |
ಫಲಮೂಲಾಶನಾನಾಂ ಹಿ ಮುನೀನಾಂ ಭಕ್ಷಿತಂ ಶತಮ್ ॥4॥
ಬ್ರಾಹ್ಮಣರಿಂದ ಸೇವಿತವಾದ ಪವಿತ್ರವಾದ ಚ್ಯವನಾಶ್ರಮಕ್ಕೆ ಹೋಗಿ ಫಲ ಮೂಲ ಭಕ್ಷಕರಾದ ನೂರು ಮುನಿಗಳನ್ನು ಭಕ್ಷಿಸಿದರು.
ಏವಂ ರಾತ್ರೌ ವಿಕುರ್ವಂತಿ ವಿವಿಶುಶ್ಚಾರ್ಣವಂ ದಿವಾ |
ಕಾಲೇಯಾಶ್ಚ ದುರಾತ್ಮಾನೋ ಭಕ್ಷಯಂತಸ್ತಪೋಧನಾನ್ ॥5॥
ಹೀಗೆ ದುರಾತ್ಮರಾದ ಕಾಲೇಯರು ತಪೋಧನರನ್ನು ಭಕ್ಷಿಸುತ್ತಾ ರಾತ್ರಿಯ ವೇಳೆಯಲ್ಲಿ ಅಪಚಾರವನ್ನು ಮಾಡಿ ಹಗಲಿನಲ್ಲಿ ಸಮುದ್ರವನ್ನು ಸೇರುತ್ತಿದ್ದರು.
ಭಾರದ್ವಾಜಾಶ್ರಮೇ ಚೈವ ನಿಯತಾ ಬ್ರಹ್ಮಚಾರಿಣಃ |
ವಾಯ್ವಾಹಾರಾಂಬುಭಕ್ಷಾಶ್ಚ ವಿಂಶತಿಃ ಸ್ಮ ನಿಷೂದಿತಾಃ ॥6॥
ಭರದ್ವಾಜರ ಆಶ್ರಮದಲ್ಲಿಯೂ ಸಹ ನಿಯಮಬದ್ಧರಾದ ಅಬ್ಭಕ್ಷರು ಮತ್ತು ವಾಯುಭಕ್ಷರೂ ಆದ ಇಪ್ಪತ್ತು ಬ್ರಹ್ಮಚಾರಿಗಳು ಕೊಲ್ಲಲ್ಪಟ್ಟರು.
ಏವಂ ಕ್ರಮೇಣ ಸರ್ವಾಂಸ್ತಾನಾಶ್ರಮಾನ್ ದಾನವಾಸ್ತದಾ |
ನಿಶಾಯಾಂ ಪರಿಧಾವಂತಿ ಸಮುದ್ರಾಂಬುಬಲಾಶ್ರಯಾತ್ ॥7॥
ಹೀಗೆ ಆಗ ಆ ದಾನವರು ಸಮುದ್ರಜಲವನ್ನು ಆಶ್ರಯಿಸಿ ಕ್ರಮವಾಗಿ ರಾತ್ರಿಯ ವೇಳೆಯಲ್ಲಿ ಎಲ್ಲಾ ಆಶ್ರಮಗಳಿಗೂ ಬರುತ್ತಿದ್ದರು.
ಕಾಲೋಪಸೃಷ್ಟಾಃ ಕಾಲೇಯಾ ಘ್ನಂತೋ ದ್ವಿಜಗಣಾನ್ ಬಹೂನ್ |
ನ ಚೈನಾನನ್ವಬುಧ್ಯಂತ ಮನುಜಾ ಮನುಜೋತ್ತಮ ॥8॥
ಮೃತ್ಯುಸನ್ನಿಹಿತರಾದ ಕಾಲೇಯರು ಅನೇಕ ಬ್ರಾಹ್ಮಣ ಸಮೂಹಗಳನ್ನು ಕೊಲ್ಲುತ್ತಿದ್ದರು. ಎಲೈ ಮನುಜಶ್ರೇಷ್ಠನೇ, ಯಾವ ಮನುಷ್ಯರಿಗೂ ಇದು ತಿಳಿಯಲಿಲ್ಲ.
ಏವಂ ಪ್ರವೃತ್ತಾಸ್ತೇ ದೈತ್ಯಾಃ ತಾಪಸೇಷು ತರಸ್ವಿನಃ |
ಕ್ಷಯಾಯ ಜಗತಃ ಕ್ರೂರಾಃ ಪರಿಧಾವಂತಿ ಮೇದಿನೀಮ್ ॥9॥
ಹೀಗೆ ಕ್ರೂರರಾದ ದೈತ್ಯರು ತಪಸ್ವಿಗಳ ಆಶ್ರಮದಲ್ಲಿ ಜಗತ್ತಿನ ಕ್ಷಯವನ್ನುಂಟು ಮಾಡುವುದಕ್ಕೋಸ್ಕರ ಭೂಮಿಯಲ್ಲಿ ಸಂಚರಿಸುತ್ತಿದ್ದರು.
ಪ್ರಭಾತೇ ಸಮದೃಶ್ಯಂತ ನಿಯಮಾಹಾರಕರ್ಶಿತಾಃ |
ಮಹೀತಳಸ್ಥಾ ಮುನಯಃ ಶರೀರೈರ್ಗತಜೀವಿತೈಃ ॥10॥
ಕ್ಷೀಣಮಾಂಸೈರ್ವಿರುಧಿರೈರ್ವಿಮಜ್ಜಾಂತ್ರೈರ್ವಿಸಂಧಿಭಿಃ |
ಆಕೀರ್ಣೈರಾಚಿತಾ ಭೂಮಿಃ ಶಂಖಾನಾಮಿವ ರಾಶಿಭಿಃ ॥11॥

ಕಲಶೈರ್ವಿಪ್ರಭಗ್ನೈಶ್ಚ ಸ್ರುವೈರ್ಭಗ್ನೈಸ್ತಥೈವ ಚ |
ವಿಶೀರ್ಣೈರಗ್ನಿಹೋತ್ರೈಶ್ಚ ಭೂರ್ಬಭೂವ ಸಮಾವೃತಾ ॥12॥
ಬೆಳಗಾದಮೇಲೆ ವ್ರತನಿಯಮಗಳಿಂದ ಕರ್ಶಿತರಾದ ಋಷಿಗಳ ಮೃತಶರೀರಗಳು ಭೂಮಿಯ ಮೇಲೆ ಬಿದ್ದಿರುವುದು ಕಾಣುತ್ತಿದ್ದಿತು. ಮಾಂಸಗಳಿಲ್ಲದೆ ರಕ್ತ, ಮಜ್ಜ ಮತ್ತು ಕೀಲುಗಳಿಲ್ಲದೆ ಭೂಮಿಯ ಮೇಲೆ ಬಿದ್ದ ಅಸ್ಥಿಗಳ ರಾಶಿಯು ಶಂಖದ ರಾಶಿಗಳಂತೆ ಕಾಣುತ್ತಿದ್ದಿತು. ಭೂಮಿಯಲ್ಲಿ ಎಲ್ಲಕಡೆಗಳಲ್ಲಿಯೂ ಒಡೆದು ಹೋದ ಕಮಂಡಲಗಳು, ಮುರಿದ ಸ್ರುವಗಳು ವಿನಾಶವನ್ನು ಹೊಂದಿದ ಅಗ್ನಿಹೋತ್ರಗಳು ನಿಬಿಡವಾಗಿದ್ದವು.
ನಿಃಸ್ವಾಧ್ಯಾಯವಷಟ್ಕಾರಂ ನಷ್ಟಯಜ್ಞೋತ್ಸವಕ್ರಿಯಮ್ |
ಜಗದಾಸೀನ್ನಿರುತ್ಸಾಹಂ ಕಾಲೇಯಭಯಪೀಡಿತಮ್ ॥13॥
ಕಾಲೇಯರ ಭಯದಿಂದ ಪೀಡಿತವಾದ ಜಗತ್ತು ಸ್ವಾಧ್ಯಾಯವಷಕ್ಕಾದ ರಹಿತವಾಗಿ ಯಜ್ಞಾಹುತಿ ಮೊದಲಾದ ಕ್ರಿಯೆಗಳಿಂದ ರಹಿತವಾಗಿ ನಿರುತ್ಸಾಹವಾಗಿದ್ದಿತು.
ಏವಂ ತೇ ಕ್ಷೀಯಮಾಣಾಶ್ಚ ಮಾನವಾ ಮನುಜೇಶ್ವರ |
ಆತ್ಮತ್ರಾಣಪರಾ ಭೀತಾಃ ಪ್ರಾದ್ರವಂತ ದಿಶೋ ಭಯಾತ್ ॥14॥
ಎಲೈ ಮನುಜೇಶ್ವರನೇ, ಹೀಗೆ ಮಾನವರು ದಿನದಿನಕ್ಕೆ ಕ್ಷೀಣಿಸುತ್ತಾ ತಮ್ಮನ್ನು ಉಳಿಸಿಕೊಳ್ಳಲು ಭಯದಿಂದ ದಿಕ್ಕುದಿಕ್ಕುಗಳಿಗೆ ಓಡಿದರು.
ಕೇಚಿದ್ಗುಹಾಃ ಪ್ರವಿವಿಶುರ್ನಿರ್ಝರಾಂಶ್ಚಾಪರೇ ಶ್ರಿತಾಃ |
ಅಪರೇ ತದ್ಭಯಾದೇವ ಸಹಸಾಽಸೂನ್ ಸಮತ್ಯಜನ್ ॥15॥
ಕೆಲವರು ಗುಹೆಗಳನ್ನು ಪ್ರವೇಶಿಸಿದರು. ಕೆಲವರು ಸಣ್ಣ ತೊರೆಗಳನ್ನು ಆಶ್ರಯಿಸಿದರು. ಇನ್ನು ಕೆಲವರು ಕಾಲೇಯರ ಭಯದಿಂದ ಇದ್ದಕ್ಕಿದ್ದಂತೆಯೇ ಪ್ರಾಣಗಳನ್ನು ತ್ಯಜಿಸಿದರು.
ಕೇಚಿತ್ತತ್ರ ಮಹೇಷ್ವಾಸಾಃ ಶೂರಾಃ ಪರಮದರ್ಪಿತಾಃ |
ಮಾರ್ಗಮಾಣಾಃ ಪರಂ ಯತ್ನಂ ದಾನವಾನಾಂ ಪ್ರಚಕ್ರಿರೇ ॥16॥
ಅಲ್ಲಿ ಕೆಲವು ಶೂರರು ದರ್ಪದಿಂದ ಕೂಡಿದವರಾಗಿ ದೊಡ್ಡ ಧನುಸ್ಸುಗಳನ್ನು ಹಿಡಿದು ದಾನವರನ್ನು ಹುಡುಕುತ್ತಾ ದೊಡ್ಡ ಪ್ರಯತ್ನವನ್ನು ಮಾಡಿದರು.
ನ ಚೈತಾನಧಿಜಗ್ಮುಸ್ತೇ ಸಮುದ್ರಂ ಸಮುಪಾಶ್ರಿತಾನ್ |
ಶ್ರಮಂ ಜಗ್ಮುಶ್ಚ ಪರಮಂ ಸಂಜಗ್ಮುಃ ಕ್ಷಯಮೇವ ಚ ॥17॥
ಆದರೆ ಸಮುದ್ರವನ್ನು ಆಶ್ರಯಿಸಿದ್ದ ದಾನವರು ಅವರಿಗೆ ಸಿಗಲಿಲ್ಲ. ಆ ವೀರರು ದಾನವರನ್ನು ಹುಡುಕುತ್ತಾ ಬಹಳವಾಗಿ ದಣಿದು ವಿನಾಶವನ್ನೇ ಹೊಂದಿದರು.
ಜಗತ್ಯುಪಶಮಂ ಯಾತೇ ನಷ್ಟಯಜ್ಞೋತ್ಸವಕ್ರಿಯೇ |
ಆಜಗ್ಮುಃ ಪರಮಾಮಾರ್ತಿಂ ತ್ರಿದಶಾ ಮನುಜಾಧಿಪ ॥18॥
ಎಲೈ ಮನುಜಾಧಿಪನೇ, ಯಜ್ಞೋತ್ಸವಕ್ರಿಯೆಗಳನ್ನು ಕಳೆದುಕೊಂಡು ಜಗತ್ತು ವಿನಾಶವನ್ನು ಹೊಂದುತಿತರಲು ದೇವತೆಗಳು ಪರಮದುಃಖವನ್ನು ತಾಳಿದರು.
ಸಮೇತ್ಯ ಸಮಹೇಂದ್ರಾಶ್ಚ ಭಯಾನ್ಮಂತ್ರಂ ಪ್ರಚಕ್ರಿರೇ |
ನಾರಾಯಣಂ ಪುರಸ್ಕೃತ್ಯ ವೈಕುಂಠಮಪರಾಜಿತಮ್ ॥19॥
ದೇವತೆಗಳು ಭಯದಿಂದ ಕೂಡಿದವರಾಗಿ ಇಂದ್ರನ ಜೊತೆಯಲ್ಲಿ ಅಪರಾಜಿತನಾದ ವೈಕುಂಠನಾದ ನಾರಾಯಣನನ್ನು ಮುಂದೆ ಮಾಡಿಕೊಂಡು ಮಂತ್ರಾಲೋಚನೆಯನ್ನು ಮಾಡಿದರು.
ತತೋ ದೇವಾಃ ಸಮೇತಾಸ್ತೇ ತದೋಚುರ್ಮಧುಸೂದನಮ್ ॥20॥
ಆಗ ದೇವತೆಗಳು ಎಲ್ಲರೂ ಸೇರಿ ಮಧುಸೂದನನನ್ನು ಕುರಿತು ಹೀಗೆ ಹೇಳಿದರು.
ತ್ವಂ ನಃ ಸ್ರಷ್ಟಾ ಚ ಪಾತಾ ಚ ಭರ್ತಾ ಚ ಜಗತಃ ಪ್ರಭೋ |
ತ್ವಯೋತ್ಸೃಷ್ಟಮಿದಂ ಸರ್ವಂ ಸ್ಥಾವರಂ ಜಂಗಮಂ ಚಯತ್ ॥21॥
ತ್ವಯ್ಯೇವ ಪುಂಡರೀಕಾಕ್ಷ ಪುನಸ್ತತ್ ಪ್ರವಿಲೀಯತೇ ॥22॥
ನೀನು ನಮ್ಮನ್ನು ಸೃಷ್ಟಿಸುವವನು ಮತ್ತು ಪಾಲಿಸುವವನು. ಪ್ರಭುವೇ, ನೀನು ಜಗತ್ತಿಗೇ ರಕ್ಷಕನಾದವನು. ಎಲೈ ಪುಂಡರೀಕಾಕ್ಷನೇ, ಈ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲವೂ ನಿನ್ನಿಂದಲೇ ಸೃಷ್ಟವಾಗಿದೆ. ಪುನಃ ನಿನ್ನಲ್ಲಿಯೇ ಲಯವನ್ನು ಹೊಂದುತ್ತವೆ.
ತ್ವಯಾ ಭೂಮಿಃ ಪುರಾ ನಷ್ಟಾ ಸಮುದ್ರಾತ್ ಪುಷ್ಕರೇಕ್ಷಣ |
ವಾರಾಹಂ ರೂಪಮಾಸ್ಥಾಯ ಜಗದರ್ಥೇ ಸಮುದ್ಧೃತಾ ॥23॥
ಎಲೈ ಪುಷ್ಕರೇಕ್ಷಣನೇ, ನೀನು ಹಿಂದೆ ಸಮುದ್ರದಲ್ಲಿ ಮುಳುಗಿಹೋದ ಭೂಮಿಯನ್ನು ಜಗತ್ತಿನ ಹಿತಕ್ಕೋಸ್ಕರವಾಗಿ ವರಾಹರೂಪವನ್ನು ಧರಿಸಿ ಮೇಲಕ್ಕೆತ್ತಿದೆ.
ಆದಿದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುಸ್ತ್ವಯಾ |
ನಾರಸಿಂಹಂ ವಪುಃ ಕೃತ್ವಾ ಸೂದಿತಃ ಪುರುಷೋತ್ತಮ ॥24॥
ಎಲೈ ಪುರುಷೋತ್ತಮನೇ, ಆದಿದೈತ್ಯನೂ, ಮಹಾಪರಾಕ್ರಮಶಾಲಿಯೂ ಆದ ಹಿರಣ್ಯಕಶಿಪುವು ನರಸಿಂಹರೂಪವನ್ನು ಧರಿಸಿದ ನಿನ್ನಿಂದ ಸಂಹರಿಸಲ್ಪಟ್ಟನು.
ಅವಧ್ಯಃ ಸರ್ವಭೂತಾನಾಂ ಬಲಿಶ್ಚಾಪಿ ಮಹಾಸುರಃ |

ವಾಮನಂ ವಪುರಾಸ್ಥಾಯ ತ್ರೈಲೋಕ್ಯಾದ್ ಭ್ರಂಶಿತಃ ಪುರಾ ॥25॥
ಸರ್ವಭೂತರಿಂದಲೂ ಅವಧ್ಯನಾದ ಮಹಾಸುರನಾದ ಬಲಿಯೂ ಸಹ ವಾಮನರೂಪವನ್ನು ಧರಿಸಿದ ನಿನ್ನಿಂದಲೇ ತ್ರೈಲೋಕ್ಯದಿಂದ ಭ್ರಂಶಿತನಾದನು.
ಅಸುರಶ್ಚ ಮಹೇಷ್ವಾಸೋ ಜಂಭ ಇತ್ಯಭಿವಿಶ್ರುತಃ |
ಯಜ್ಞಕ್ಷೋಭಕರಃ ಶೂರಃ ತ್ವಯ್ಯೈವ ವಿನಿಪಾತಿತಃ ॥26॥
ಯಜ್ಞನಾಶಕನೂ, ಮಹಾಧನುರ್ಧಾರಿಯೂ, ಶೂರನೂ ಆದ ಪ್ರಖ್ಯಾತನಾದ ಜಂಭಾಸುರನು ನಿನಿನಂದಲೇ ನಾಶವನ್ನು ಹೊಂದಿದನು.
ಏವಮಾದೀನಿ ಕರ್ಮಾಣಿ ಯೇಷಾಂ ಸಂಖ್ಯಾ ನ ವಿದ್ಯತೇ |
ಅಸ್ಮಾಕಂ ಭಯಭೀತಾನಾಂ ತ್ವಂ ಗತಿರ್ಮಧುಸೂದನ ॥27॥
ಇಂತಹ ಅನೇಕ ಕರ್ಮಗಳನ್ನು ನೀನು ಮಾಡಿದ್ದೀಯೆ. ಅವುಗಳಿಗೆ ಗಣನೆಯೇ ಇಲ್ಲ. ಎಲೈ ಮಧುಸೂದನನೇ, ಭಯಭೀತರಾದ ನಮಗೆ ನೀನೇ ಗತಿಯಾಗಿದ್ದೀಯೆ.
ತಸ್ಮಾತ್ ತ್ವಾಮೇವದೇವೇಶ ಲೋಕಾರ್ಥಂ ಜ್ಞಾಪಯಾಮಹೇ |
ರಕ್ಷ ದೇವಾಂಶ್ಚ ಲೋಕಾಂಶ್ಚ ಶಕ್ರಂ ಚ ಮಹತೋ ಭಯಾತ್ |
ಶರಣಾಗತಸಂತ್ರಾಣೇ ತ್ವಮೇಕೋಽಸಿ ದೃಢವ್ರತಃ ॥28॥
ಆದ್ದರಿಂದ ಎಲೈ ದೇವೇಶನೇ, ಎಲ್ಲ ಲೋಕಗಳ ಹಿತದ ಸಲುವಾಗಿ ನಿನಗೆ ವಿಜ್ಞಾಪನೆಯನ್ನು ಮಾಡುತಿತದ್ದೇವೆ. ದೇವತೆಗಳನ್ನು, ಲೋಕಗಳನ್ನು ಮತ್ತು ಇಂದ್ರನನ್ನು ದೊಡ್ಡಭಯದಿಂದ ರಕ್ಷಿಸು. ನೀನೊಬ್ಬನೇ ಶರಣಾಗತರನ್ನು ರಕ್ಷಣೆ ಮಾಡುವ ದೃಢವಾದ ವ್ರತವನ್ನು ಹೊಂದಿರುವವನು (ಎಂದು ಸ್ತೋತ್ರ ಮಾಡಿದರು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತನವತಿತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಿಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ತೆಂಟನೆಯ ಅಧ್ಯಾಯ
ವಿಷ್ಣುವನ್ನು ಮುಂದೆ ಮಾಡಿಕೊಂಡು ದೇವತೆಗಳಿಂದ ಬ್ರಹ್ಮಸಮೀಪ ಗಮನ. ಬ್ರಹ್ಮದೇವರ ವಚನದಂತೆ ದೇವತೆಗಳಿಂದ ಅಗಸ್ತ್ಯರ ಸ್ತುತಿ.
ದೇವಾಃ
ಇತಃ ಪ್ರಸಾದಾದ್ ವರ್ತಂತೇ ಪ್ರಜಾಃ ಸರ್ವಾಶ್ಚತುರ್ವಿಧಾಃ |
ತಾ ಭಾವಿತಾ ಭಾವಯಂತಿ ಹವ್ಯಕವ್ಯೈರ್ದಿವೌಕಸಃ॥1॥
ದೇವತೆಗಳು ನಮ್ಮ ಅನುಗ್ರಹದಿಂದ ನಾಲ್ಕುವಿಧವಾದ ಎಲ್ಲಾ ಪ್ರಜೆಗಳು ಶರೀರಯಾತ್ರೆಯನ್ನು ನಡೆಸುತ್ತಾರೆ. ಸತ್ಕೃತರಾದ ಆ ಪ್ರಜೆಗಳು ಹವ್ಯಕವ್ಯಗಳಿಂದ ದೇವತೆಗಳನ್ನು ಸತ್ಕರಿಸುತ್ತಾರೆ.
ಲೋಕಾ ಹ್ಯೇವಂ ವರ್ತಯಂತಿ ಅನ್ಯೋನ್ಯಂ ಸಮುಪಾಶ್ರಿತಾಃ |
ತ್ವತ್ಪ್ರಸಾದಾನ್ನಿರುದ್ವಿಗ್ನಾಃ ತ್ವಯ್ಯೈವ ಪರಿರಕ್ಷಿತಾಃ ॥2॥
ಹೀಗೆ ಲೋಕಗಳು ಪರಸ್ಪರವಾಗಿ ಆಶ್ರಯಿಸಿಕೊಂಡು ಸಾಗುತ್ತವೆ. ನಿನ್ನಿಂದಲೇ ರಕ್ಷಿತವಾದ ಎಲ್ಲ ಪ್ರಜೆಗಳೂ ನಿನ್ನ ಅನುಗ್ರಹದಿಂದಲೇ ನಿರುದ್ವಿಗ್ನರಾಗಿರುತ್ತಾರೆ.
ಇದಂ ಚ ಸಮನುಪ್ರಾಪ್ತಂ ಲೋಕಾನಾಂ ಭಯಮುಚ್ಯುತ |
ರಾತ್ರೌ ವಧ್ಯಂತಿ ಸತತಂ ಕೇನೈತೇ ದ್ವಿಜಪುಂಗವಾಃ ॥3॥
ಎಲೈ ಅಚ್ಯುತನೇ, ಈಗ ಲೋಕಗಳಿಗೆ ಈ ಭಯವು ಉಂಟಾಗಿದೆ. ಬ್ರಾಹ್ಮಣ ಶ್ರೇಷ್ಠರೆಲ್ಲರೂ ರಾತ್ರಿಯ ವೇಳೆಯಲ್ಲಿ ಸತತವಾಗಿ ಯಾರಿಂದ ಕೊಲ್ಲಲ್ಪಡುತ್ತಿದ್ದಾರೆ?
ಕ್ಷೀಣೇಷು ಚ ಬ್ರಾಹ್ಮಣೇಷು ಪೃಥಿವೀ ಕ್ಷಯಮೇಷ್ಯತಿ |
ತತಃ ಪೃಥಿವ್ಯಾಂ ಕ್ಷೀಣಾಯಾಂ ತ್ರಿದಿವಂ ಕ್ಷಯಮೇಷ್ಯತಿ ॥4॥
ಬ್ರಾಹ್ಮಣರು ನಾಶವನ್ನು ಹೊಂದಿದರೆ ಭೂಮಿಯು ನಾಶವನ್ನು ಹೊಂದುವುದು. ಭೂಮಿಯು ನಾಶವನ್ನು ಹೊಂದಿದರೆ ಅನಂತರ ಸ್ವರ್ಗವು ನಾಶವನ್ನು ಹೊಂದುವುದು.
ತ್ವತ್ಪ್ರಸಾದಾನ್ಮಹಾಬಾಹೋ ಸರ್ವೇ ಲೋಕಾ ಜಗತ್ಪತೇ |
ವಿನಾಶಂ ನಾಭಿಗಚ್ಛೇಯುಃ ತ್ವಯ್ಯೈವ ಪರಿರಕ್ಷಿತಾಃ ॥5॥
ಎಲೈ ಜಗತ್ಪತಿಯೇ, ಮಹಾಬಾಹುವೇ, ನಿನ್ನಿಂದಲೇ ಪರಿರಕ್ಷಿತವಾದ ಎಲ್ಲ ಲೋಕಗಳು ನಿನ್ನ ಅನುಗ್ರಹದಿಂದಲೇ ನಾಶವನ್ನು ಹೊಂದದಿರುವಂತೆ ಆಗಬೇಕು.
ಶ್ರೀಭಗವಾನ್
ವಿದಿತಂ ಮೇ ಸುರಾಃ ಸರ್ವಂ ಪ್ರಜಾನಾಂ ಕ್ಷಯಕಾರಣಮ್ |
ಭವತಾಂ ಚಾಪಿ ವಕ್ಷ್ಯಾಮಿ ಶೃಣುಧ್ವಂ ವಿಗತಜ್ವರಾಃ ॥6॥
ಶ್ರೀಭಗವಾನ್- ಎಲೈ ದೇವತೆಗಳೇ, ಪ್ರಜೆಗಳ ವಿನಾಶಕ್ಕೆ ಕಾರಣವನ್ನೆಲ್ಲಾ ನಾನು ತಿಳಿದಿದ್ದೇನೆ. ನಿಮಗೂ ಅದನ್ನು ಹೇಳುವೆನು. ನಿರಾತಂಕವಾಗಿ ಕೇಳಿ.

ಕಾಲೇಯಾ ಇತಿ ವಿಖ್ಯಾತಾ ಗಣಾಃ ಪರಮದಾರುಣಾಃ |
ತೈಶ್ಚ ವೃತ್ರಂ ಸಮಾಶ್ರಿತ್ಯ ಜಗತ್ ಸರ್ವಂ ಪ್ರಬಾಧಿತಮ್ ॥7॥
ಕಾಲೇಯರೆಂದು ಪ್ರಸಿದ್ಧವಾದ ಪರಮಘೋರರಾದ ದಾನವರ ಒಂದು ಗಣವಿದೆ. ಅವರು ವೃತ್ರಾಸುರನನ್ನು ಆಶ್ರಯಿಸಿಕೊಂಡು ಎಲ್ಲಾ ಜಗತ್ತನ್ನೂ ಬಾಧಿಸುತ್ತಿದ್ದರು.
ವೃತ್ರಂ ತು ನಿಹತಂ ದೃಷ್ಟ್ವಾ ಸಹಸ್ರಾಕ್ಷೇಣ ಧೀಮತಾ |
ಜೀವಿತಂ ಪರಿರಕ್ಷಂತಃ ಪ್ರವಿಷ್ಟಾ ವರುಣಾಲಯಮ್ ॥8॥
ಮೇಧಾವಿಯಾದ ಇಂದ್ರನಿಂದ ವೃತ್ರನು ಹತನಾದುದನ್ನು ನೋಡಿ ಅವರು ತಮ್ಮ ಪ್ರಾಣವನ್ನು ಉಳಿಸಿಕೊಳ್ಳಲು ಸಮುದ್ರವನ್ನು ಪ್ರವೇಶಿಸಿದ್ದಾರೆ.
ತೇ ಪ್ರವಿಶ್ಯೋದಧಿಂ ಘೋರಂ ನಾನಾಗ್ರಾಹಸಮಾಕುಲಮ್ |
ಉತ್ಸಾದನಾರ್ಥಂ ಲೋಕಾನಾಂ ರಾತ್ರೌ ಘ್ನಂತಿ ಮುನೀನಿಹ ॥9॥
ಅವರು ಕ್ರೂರವಾದ ಅನೇಕ ಜಲಚರಪ್ರಾಣಿಗಳಿಂದ ನಿಬಿಡವಾದ ಘೋರವಾದ ಸಮುದ್ರವನ್ನು ಪ್ರವೇಶಿಸಿ ಜಗತ್ತನ್ನು ನಾಶಮಾಡುವುದಕ್ಕಾಗಿ ರಾತ್ರಿಯ ವೇಳೆಯಲ್ಲಿ ಋಷಿಗಳನ್ನು ಕೊಲ್ಲುತ್ತಿದ್ದಾರೆ.
ನ ಹಿ ಶಕ್ಯಾಃ ಕ್ಷಯಂ ನೇತುಂ ಸಮುದ್ರಾಶ್ರಯಿಣೋ ಹಿ ತೇ |
ಸಮುದ್ರಸ್ಯ ಕ್ಷಯೇ ಬುದ್ಧಿರ್ಭವದ್ಭಿಃ ಸಂವಿಧೀಯತಾಮ್ ॥10॥
ಸಮುದ್ರವನ್ನು ಆಶ್ರಯಿಸಿರುವ ಅವರನ್ನು ವಿನಾಶಮಾಡಲು ಸಾಧ್ಯವಿಲ್ಲ. ಸಮುದ್ರವನ್ನೇ ಬತ್ತಿಸುವ ವಿಷಯದಲ್ಲಿ ನೀವೆಲ್ಲರೂ ವಿಚಾರಮಾಡಿ.
ಅಗಸ್ತ್ಯೇನ ವಿನಾ ಕೋಹಿ ಶಕ್ತೋಽನ್ಯೋಽರ್ಣವಶೋಷಣೇ |
ಅನ್ಯಥಾ ನಹಿ ಶಕ್ಯಾಸ್ತೇ ವಿನಾ ಸಾಗರಶೋಷಣಮ್ ॥11॥
ಅಗಸ್ತ್ಯರನ್ನು ಬಿಟ್ಟು ಬೇರೆ ಯಾರು ಸಮುದ್ರವನ್ನು ಬತ್ತಿಸಲು ಸಮರ್ಥರಾಗುತ್ತಾರೆ? ಸಮುದ್ರವನ್ನು ಬತಿತಸುವುದನ್ನು ಬಿಟ್ಟು ಬೇರೆ ಯಾವ ಉಪಾಯದಿಂದಲೂ ನೀವು ಅವರನ್ನು ಸೋಲಿಸಲು ಸಾಧ್ಯವಿಲ್ಲ.
ಲೋಮಶಃ
ಏತಚ್ಛ್ರುತ್ವಾ ವಚೋ ದೇವಾ ವಿಷ್ಣುನಾ ಸಮುದಾಹೃತಮ್ |
ವಿಷ್ಣುಮೇವ ಪುರಸ್ಕೃತ್ಯ ಬ್ರಹ್ಮಾಣಂ ಸಮುಪಸ್ಥಿತಾಃ ॥12॥
ಲೋಮಶ ದೇವತೆಗಳು ವಿಷ್ಣುವಿನಿಂದ ಹೇಳಲ್ಪಟ್ಟ ಈ ಮಾತುಗಳನ್ನು ಕೇಳಿ ವಿಷ್ಣುವನ್ನೇ ಮುಂದೆ ಮಾಡಿಕೊಂಡು ಬ್ರಹ್ಮದೇವರ ಸಮೀಪಕ್ಕೆ ಹೋದರು.
ತೇ ನೀಚೈಃ ಪ್ರಣತಾ ಭೂತ್ವಾ ತಮೇವಾರ್ಥಂ ನ್ಯವೇದಯನ್ |
ಸರ್ವಲೋಕವಿನಾಶಾರ್ಥಂ ಕಾಲೇಯಾಃ ಕೃತನಿಶ್ಚಯಾಃ ॥13॥
ಅವರು ಬ್ರಹ್ಮದೇವರಿಗೆ ದಂಡಪ್ರಣಾಮವನ್ನು ಮಾಡಿ ಸರ್ವಲೋಕಗಳನ್ನು ವಿನಾಶಮಾಡಲು ಕಾಲೇಯರು ಸಂಕಲ್ಪಿಸಿದ್ದಾರೆ ಎಂಬ ಈ ವಿಷಯವನ್ನೇ ನಿವೇದಿಸಿದರು.
ತೇಷಾಂ ತದ್ವಚನಂ ಶ್ರುತ್ವಾ ಧರ್ಮಯೋನಿಃ ಪುರಾತನಃ |
ಉವಾಚ ಪರಮಪ್ರೀತಃ ತ್ರಿದಶಾನರ್ಥವದ್ವಚಃ ॥14॥
ಅವರ ಆ ಮಾತುಗಳನ್ನು ಕೇಳಿದ ಪದ್ಮಯೋನಿಯಾದ (ಧರ್ಮಯೋನಿಯಾದ) ಪುರಾತನರಾದ (ಸನಾತನರಾದ) ಬ್ರಹ್ಮದೇವರು ಬಹಳ ಸಂತೋಷದಿಂದ ದೇವತೆಗಳನ್ನು ಕುರಿತು ಪ್ರಯೋಜನಪೂರ್ಣವಾದ ಮಾತುಗಳನ್ನು ಆಡಿದರು.
ಪರಮೇಷ್ಠೀ
ವಿದಿತಂ ಮೇ ಸುರಾಃ ಸರ್ವಂ ದಾನವಾನಾಂ ವಿಚೇಷ್ಟಿತಮ್ |
ಮನುಷ್ಯಾದೇಶ್ಚ ನಿಧನಂ ಕಾಲೇಯೈಃ ಕಾಲಚೋದಿತೈಃ ॥15॥
ಪರಮೇಷ್ಠೀ ಎಲೈ ದೇವತೆಗಳೇ, ದಾನವರ ಎಲ್ಲಾ ವ್ಯಾಪಾರಗಳೂ ನನಗೆ ತಿಳಿದಿವೆ. ಕಾಲಚೋದಿತರಾದ ಕಾಲೇಯರಿಂದ ಮನುಷ್ಯಾದಿಗಳ ವಧೆಯು ನನಗೆ ತಿಳಿದಿದೆ.
ಕ್ಷಯಸ್ತೇಷಾಮನುಪ್ರಾಪ್ತಃ ಕಾಲೇನೋಪಹತಾಶ್ಚ ತೇ |
ಉಪಾಯಂ ಸಂಪ್ರವಕ್ಷ್ಯಾಮಿ ಸಮುದ್ರಸ್ಯ ವಿಶೋಷಣೇ ॥16॥
ಮೃತ್ಯುಗ್ರಸ್ತರಾದ ಅವರ ವಿನಾಶಕಾಲವು ಪ್ರಾಪ್ತವಾಗಿದೆ. ಸಮುದ್ರವನ್ನು ಬತ್ತಿಸುವುದಕ್ಕೆ ನಾನು ನಿಮಗೆ ಒಂದು ಉಪಾಯವನ್ನು ಹೇಳುವೆನು.
ಅಗಸ್ತ್ಯ ಇತಿ ವಿಖ್ಯಾತೋ ವಾರುಣಿಃ ಸುಮಹಾಮುನಿಃ |
ತಮುಪಾಗಮ್ಯ ಸಹಿತಾ ಇಮಮರ್ಥಂ ಪ್ರಯಾಚತ ॥17॥
ಅಗಸ್ತ್ಯರೆಂದು ಪ್ರಖ್ಯಾತರಾದ ವರುಣಪುತ್ರರಾದ ಒಳ್ಳೆಯ ಮಹರ್ಷಿಗಳಿದ್ದಾರೆ. ನೀವೆಲ್ಲರೂ ಒಟ್ಟಿಗೆ ಅವರ ಬಳಿಗೆ ಹೋಗಿ ಅವರಲ್ಲಿ ಈ ವಿಷಯವನ್ನು ಯಾಚಿಸಿ.
ಸ ಹಿ ಶಕ್ತೋ ಮಹಾಭಾಗಃ ಕ್ಷಣಾತ್ ಪಾತುಂ ಮಹೋದಧಿಮ್|
ಸಮುದ್ರೇ ಚ ಕ್ಷಯಂ ನೀತೇ ಕಾಲೇಯಾನ್ ನಿಹನಿಷ್ಯಥ ॥18॥
ಮಹಾನುಭಾವರಾದ ಅವರು ಒಂದೇ ಕ್ಷಣದಲ್ಲಿ ಸಮುದ್ರವನ್ನು ಪಾನಮಾಡಲು ಸಮರ್ಥರಾದವರು. ಸಮುದ್ರವು ಬತ್ತಿಹೋಗುತ್ತಿರಲು ನೀವು ಕಾಲೇಯರನ್ನು ಸಂಹರಿಸುವಿರಿ.

ಏವಂ ಶ್ರುತ್ವಾ ವಚೋ ದೇವಾ ಬ್ರಹ್ಮಣಃ ಪರಮೇಷ್ಠಿನಃ |
ಪರಮೇಷ್ಠ್ಯಭ್ಯನುಜ್ಞಾತಾ ಅಗಸ್ತ್ಯಸ್ಯಾಶ್ರಮಂ ಯಯುಃ ||19||
ಹೀಗೆ ದೇವತೆಗಳು ಪರಮೇಷ್ಠಿಯಾದ ಬ್ರಹ್ಮದೇವರ ಮಾತುಗಳನ್ನು ಕೇಳಿ ಅವರ ಅನುಮತಿಯನ್ನು ಪಡೆದು ಅಗಸ್ತ್ಯರ ಆಶ್ರಮಕ್ಕೆ ಹೋದರು.
ತತ್ರಾಪಶ್ಯನ್ ಮಹಾತ್ಮಾನಂ ವಾರುಣಿಂ ದೀಪ್ತತೇಜಸಮ್ |
ಉಪಾಸ್ಯಮಾನಮೃಷಿಭಿರ್ ದೇವೈರಿವ ಪಿತಾಮಹಮ್ ||20||
ಅಲ್ಲಿ ಅವರು ಬ್ರಹ್ಮದೇವರು, ದೇವತೆಗಳಿಂದ ಉಪಾಸ್ಯರಾದಂತೆ ಋಷಿಗಳಿಂದ ಉಪಾಸ್ಯರಾದ ದೀಪ್ತವಾದ ತೇಜಸುಳ್ಳ ಮಹಾನುಭಾವರಾದ ವರುಣಪುತ್ರರಾದ ಅಗಸ್ತ್ಯರನ್ನು ನೋಡಿದರು.
ತೇಽಭಿಗಮ್ಯ ಮಹಾತ್ಮಾನಂ ಮೈತ್ರಾವರುಣಿಮಚ್ಯುತಮ್ |
ಆಶ್ರಮಸ್ಥಂ ತಪೋರಾಶಿಂ ಕರ್ಮಭಿಸ್ಸ್ವೈಸ್ತು ತುಷ್ಟುವುಃ ||21||
ಅವರು ಮಹಾತ್ಮರಾದ ತಮ್ಮ ಗುಣಗಳಿಂದ ಚ್ಯುತರಾಗದ ಮಿತ್ರಾವರುಣಪುತ್ರರಾದ ತಪೋರಾಶಿಯಾದ ಆಶ್ರಮದಲ್ಲಿದ್ದ ಅಗಸ್ತ್ಯರನ್ನು ಸಮೀಪಿಸಿ ಅವರ ಕರ್ಮಗಳಿಂದ ಅವರನ್ನು ಸೊತೇತ್ರಮಾಡಿದರು.
ದೇವಾಃ
ನಹುಷೇಣಾಭಿತಪ್ತಾನಾಂ ತ್ವಂ ಲೋಕಾನಾಂ ಗತಿಃ ಪುರಾ |
ಭ್ರಂಶಿತಶ್ಚ ಸುರೈಶ್ವರ್ಯಾಲ್ಲೋಕಾರ್ಥಂ ಲೋಕಕಂಟಕಃ ||22||
ನಹುಷನಿಂದ ಸಂತಾಪಕ್ಕೆ ಒಳಗಾಗಿದ್ದ ಲೋಕಗಳಿಗೆ ಹಿಂದೆ ನೀವೇ ಗತಿಯಾದಿರಿ. ನಹುಷನು ಲೋಕವನ್ನು ರಕ್ಷಣೆಮಾಡುವ ಉದ್ದೇಶದಿಂದ ನಿಮ್ಮಿಂದ ಲೋಕಕಂಟಕನಾದ ದೇವಲೋಕದ ಐಶ್ವರ್ಯದಿಂದ ಭ್ರಂಶಿತನಾದನು.
ಕ್ರೋಧಾತ್ ಪ್ರವೃದ್ಧಸ್ತರಸಾ ಭಾಸ್ಕರಸ್ಯ ನಗೋತ್ತಮಃ |
ವಚಸ್ತವಾನತಿಕ್ರಾಮನ್ ವಿಂಧ್ಯಃಶೈಲೋ ನ ವರ್ಧತೇ ||23||
ಪರ್ವತಶ್ರೇಷ್ಠವಾದ ವಿಂಧ್ಯಪರ್ವತವು ಸೂರ್ಯನ ಮೇಲಿನ ಕೋಪದಿಂದ ಇದ್ದಕ್ಕಿದ್ದಂತೆಯೇ ಬೆಳೆಯುತ್ತಾ ನಿಮ್ಮ ಮಾತನ್ನು ಮೀರಲಾರದೆ ಈಗ ಬೆಳೆಯುವುದನ್ನು ನಿಲ್ಲಿಸಿದೆ.
ತಮಸಾ ಚಾವೃತೇ ಲೋಕೇ ಮೃತ್ಯುನಾಽಭ್ಯರ್ದಿತಾಃ ಪ್ರಜಾಃ |
ತ್ವಾಮೇವ ನಾಥಮಾಸಾದ್ಯ ನಿರ್ವೃತಿಂ ಪರಮಾಂ ಗತಾಃ ||24||
ಲೋಕವೆಲ್ಲವೂ ತಮಸ್ಸಿನಿಂದ ಆವೃತವಾದಾಗ ಮೃತ್ಯುವಿನ ಭಯದಿಂದ ಪೀಡಿತರಾದ ಪ್ರಜೆಗಳು ನಿಮ್ಮನ್ನೇ ನಾಥರನ್ನಾಗಿ ಪಡೆದು ಪರಮಸಂತೋಷವನ್ನು ಹೊಂದಿದರು.
ಅಸ್ಮಾಕಂ ಭಯಭೀತಾನಾಂ ನಿತ್ಯಶೋ ಹಿ ಭವಾನ್ ಗತಿಃ |
ತತಸಿತ್ವರ್ತಾಃ ಪ್ರಯಾಚಾಮಃ ತ್ವಾಂ ವರಂ ವರದೋ ಹ್ಯಸಿ ||25||
ಭಯಭೀತರಾದ ನಮಗೂ ಸಹ ನೀವೇ ಯಾವಾಗಲೂ ಗತಿಯಾಗಿದ್ದೀರಿ. ಆದ್ದರಿಂದ ಆರ್ತರಾದ ನಾವು ನಿಮ್ಮಲ್ಲಿ ವರವನ್ನು ಬೇಡುತ್ತಿದ್ದೇವೆ. ನೀವು ವರಪ್ರದರಷ್ಟೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟನವತಿತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಚತುಃಪಂಚಾಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ತೊಂಬತ್ತೊಂಬತ್ತನೆಯ ಅಧ್ಯಾಯ
ಅಗಸ್ತ್ಯರಿಂದ ವಿಂಧ್ಯಪರ್ವತದ ಸ್ತಂಭನ. ಅಗಸ್ತ್ಯರ ಜೊತೆಯಲ್ಲಿ
ದೇವತೆಗಳಿಂದ ಸಮುದ್ರ ಗಮನ.
ಯುಧಿಷ್ಠಿರಃ
ಕಿಮರ್ಥಂ ಸಹಸಾ ವಿಂಧ್ಯಃ ಪ್ರವೃದ್ಧಃ ಕ್ರೋಧಮೂರ್ಚ್ಛಿತಃ |
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಮಹಾಮುನೇ ||1||
ಯುಧಿಷ್ಠಿರ ಮಹಾಮುನಿಗಳೇ, ವಿಂಧ್ಯಪರ್ವತವು ಕ್ರೋಧಮೂರ್ಛಿತವಾಗಿ ಏಕೆ ಇದ್ದಕ್ಕಿದ್ದಂತೆಯೇ ಬೆಳೆಯಲು ಪ್ರಾರಂಭಿಸಿತು ಎಂಬುದನ್ನು ನಾನು ವಿಸ್ತಾರವಾಗಿ ಕೇಳಲು ಬಯಸುತ್ತೇನೆ.
ಲೋಮಶಃ
ಅದ್ರಿರಾಜಂ ಮಹಾಶೈಲಂ ಮೇರುಂ ಕನಕಪರ್ವತಮ್ |
ಉದಯಾಸ್ತಮಯೇ ಭಾನುಃ ಪ್ರದಕ್ಷಿಣಮವರ್ತತ |
ತಂ ತು ದೃಷ್ಟ್ವಾ ತಥಾ ವಿಂಧ್ಯಃ ಶೈಲಃ ಸೂರ್ಯಮಥಾಬ್ರವೀತ್ ||2||
ಯಥಾ ಹಿ ಮೇರುರ್ಭವತಾ ನಿತ್ಯಶಃ ಪರಿಗಮ್ಯತೇ |
ಪ್ರದಕ್ಷಿಣಂ ಚ ಕ್ರಿಯತೇ ಮಾಮೇವಂ ಕುರು ಭಾಸ್ಕರ ||3||
ಲೋಮಶ ಸೂರ್ಯನು ಉದಯಾಸ್ತಮಯ ಸಮಯದಲ್ಲಿ ಸುವರ್ಣ ಪರ್ವತವಾದ ಅದ್ರಿರಾಜನಾದ ಮಹಾಶೈಲವಾದ ಮೇರುವನ್ನು ಪ್ರದಕ್ಷಿಣೆಯನ್ನು ಮಾಡುತ್ತಿದ್ದನು. ಸೂರ್ಯನು ಹಾಗೆ ಮಾಡುತ್ತಿರುವುದನ್ನು ನೋಡಿ ವಿಂಧ್ಯಪರ್ವತವು ಸೂರ್ಯನನ್ನು ಕುರಿತು ನೀನು ಹೇಗೆ ನಿತ್ಯವೂ ಮೇರುವಿನ ಸುತ್ತಲೂ ಹೋಗಿ ಮೇರುವಿಗೆ ಪ್ರದಕ್ಷಿಣೆಯನ್ನು ಮಾಡುತ್ತೀಯೋ ಹಾಗೆಯೇ, ಎಲೈ ಭಾಸ್ಕರನೇ,

ನನಗೂ ಪ್ರದಕ್ಷಿಣೆಯನ್ನು ಮಾಡು ಎಂದು ಹೇಳಿದನು.
ಏವಮುಕ್ತಸ್ತತಸ್ಸೂರ್ಯಃ ಶೈಲೇಂದ್ರಂ ಪ್ರತ್ಯಭಾಷತ ॥4॥
ನಾಹಮಾತ್ಮೇಚ್ಛಯಾ ಶೈಲಂ ಕರೋಮ್ಯೇತಂ ಪ್ರದಕ್ಷಿಣಮ್ |
ಏಷ ಮಾರ್ಗಃ ಪ್ರದಿಷ್ಟೋ ಮೇ ಯೇನೇದಂ ನಿರ್ಮಿತಂ ಜಗತ್ ॥5॥
ಹೀಗೆ ಹೇಳಲ್ಪಟ್ಟ ಸೂರ್ಯನು ಶೈಲರಾಜನಾದ ವಿಂಧ್ಯನನ್ನು ಕುರಿತು ನಾನು ನನ್ನ ಇಚ್ಛೆಯಿಂದ ಮೇರುವಿಗೆ ಪ್ರದಕ್ಷಿಣೆಯನ್ನು ಮಾಡುತ್ತಿಲ್ಲ. ಈ ಜಗತ್ತನ್ನು ಸೃಷ್ಟಿಸಿದ ಪರಮಾತ್ಮನು ನನಗೆ ಅದನ್ನು ಮಾರ್ಗವಾಗಿ ಆದೇಶಿಸಿದ್ದಾನೆ ಎಂದು ಹೇಳಿದನು.
ಲೋಮಶಃ
ಏವಮುಕ್ತಸ್ತತಃ ಕ್ರೋಧಾತ್ ಪ್ರವೃದ್ಧಃ ಸಹಸಾಽಚಲಃ |
ಸೂರ್ಯಾಚಂದ್ರಮಸೋರ್ಮಾರ್ಗಂ ರೋದ್ಧುಮೈಚ್ಛತ್ ಪರಂತಪ ॥6॥
ಲೋಮಶ ಎಲೈ ಪರಂತಪನೇ, ಹೀಗೆ ಹೇಳಲ್ಪಟ್ಟ ವಿಂಧ್ಯಪರ್ವತನು ಕ್ರೋಧದಿಂದ ಇದ್ದಕ್ಕಿದ್ದಂತೆಯೇ ಬೆಳೆಯಲು ಪ್ರಾರಂಭಿಸಿ ಸೂರ್ಯಚಂದ್ರರ ಮಾರ್ಗವನ್ನು ತಡೆಯಲು ಇಚ್ಛಿಸಿದನು.
ತತೋ ದೇವಾಃ ಸಹಿತಾಃ ಸರ್ವ ಏವ
ಸೇಂದ್ರಾಃ ಸಮಾಗಮ್ಯ ಮಹಾದ್ರಿರಾಜಮ್ |
ನಿವಾರಯಾಮಾಸುರುಪಾಯತಸ್ತಂ
ನ ಚಾಪಿ ತೇಷಾಂ ವಚನಂ ಚಕಾರ ॥7॥
ಆಗ ಇಂದ್ರನೇ ಮೊದಲಾದ ಎಲ್ಲ ದೇವತೆಗಳು ಜೊತೆಯಲ್ಲಿ ಬಂದು ಅದ್ರಿರಾಜನಾದ ವಿಂಧ್ಯನನ್ನು ಕುರಿತು ಉಪಾಯದ ಮಾತುಗಳಿಂದ ಅವನನ್ನು ನಿವಾರಿಸಲು ಪ್ರಯತ್ನಪಟ್ಟರು. ವಿಂಧ್ಯನಾದರೂ ಅವರ ಮಾತನ್ನು ಕೇಳಲಿಲ್ಲ.
ಅಥಾಭಿಜಗ್ಮುರ್ಮುನಿಮಾಶ್ರಮಸ್ಥಂ
ತಪಸ್ವಿನಂ ಧರ್ಮಭೃತಾಂ ವರಿಷ್ಠಮ್ |
ಅಗಸ್ತ್ಯಮತ್ಯದ್ಭುತವೀರ್ಯಯುಕ್ತಂ
ತಂ ಚಾರ್ಥಮೂಚುಃ ಸಹಿತಾಃ ಸುರಾಸ್ತಮ್ ॥8॥
ಅನಂತರ ತಮ್ಮ ಆಶ್ರಮದಲ್ಲಿ ತಪಸ್ಸಿನಲ್ಲಿ ನಿರತರಾಗಿದ್ದಂತಹ ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಅದ್ಭುತ ಸಾಮರ್ಥ್ಯವುಳ್ಳ ಅಗಸ್ತ್ಯರ ಸಮೀಪಕ್ಕೆ ಬಂದು ಎಲ್ಲ ದೇವತೆಗಳೂ ಈ ವಿಷಯವನ್ನು ಹೇಳಿದರು.
ಸೂರ್ಯಾಚಂದ್ರಮಸೋರ್ಮಾರ್ಗಂ ನಕ್ಷತ್ರಾಣಾಂ ಗತಿಂ ತಥಾ |
ಶೈಲರಾಜೋ ವೃಣೋತ್ಯೇಷ ವಿಂಧ್ಯಃ ಕ್ರೋಧವಶಾನುಗಃ ॥9॥
ತಂ ನಿವಾರಯಿತುಂ ಶಕ್ತೋ ನಾನ್ಯಃ ಕಶ್ಚಿದ್ವಿಜೋತ್ತಮ |
ತ್ವದೃತೇ ಹಿ ಮಹಾಭಾಗ ತಸ್ಮಾದೇತನ್ನಿವಾರಯ ॥10॥
ಶೈಲರಾಜನಾದ ವಿಂಧ್ಯನು ಕ್ರೋಧಕ್ಕೆ ವಶನಾಗಿ ಸೂರ್ಯಚಂದ್ರರ ಮಾರ್ಗವನ್ನು ನಕ್ಷತ್ರಗಳ ಗಮನವನ್ನು ತಡೆಯುತ್ತಿದ್ದಾನೆ. ಎಲೈ ದ್ವಿಜೋತ್ತಮರೇ, ಮಹಾನುಭಾವರೇ, ನಿಮ್ಮನ್ನು ಬಿಟ್ಟು ವಿಂಧ್ಯನನ್ನು ತಡೆಯುವವರು ಬೇರೆ ಯಾರೂ ಇಲ್ಲ. ಆದ್ದರಿಂದ ಈ ತೊಂದರೆಯನ್ನು ನಿವಾರಿಸಿ.
ತಚ್ಛ್ರುತ್ವಾ ವಚನಂ ವಿಪ್ರಃ ಸುರಾಣಾಂ ಶೈಲಮಭ್ಯಗಾತ್ |
ಸೋಽಭಿಗಮ್ಯಾಬ್ರವೀದ್ ವಿಂಧ್ಯಂ ಸದಾರಃ ಸಮುಪಾಸ್ಥಿತಃ ॥11॥
ಮಾರ್ಗಮಿಚ್ಛಾಮ್ಯಹಂ ದತ್ತಂ ಭವತಾ ಪರ್ವತೋತ್ತಮ |
ದಕ್ಷಿಣಾಮಭಿಗಂತಾಸ್ಮಿ ದಿಶಂ ಕಾರ್ಯೇಣ ಕೇನಚಿತ್ ॥12॥
ಯಾವದಾಗಮನಂ ಮಹ್ಯಂ ತಾವತ್ ತ್ವಂ ಪ್ರತಿಪಾಲಯ |
ನಿವೃತ್ತೇ ಮಯಿ ಶೈಲೇಂದ್ರ ತತೋ ವರ್ಧಸ್ವ ಕಾಮತಃ ॥13॥
ಆ ದೇವತೆಗಳ ಮಾತುಗಳನ್ನು ಕೇಳಿದ ಬ್ರಾಹ್ಮಣರಾದ ಅಗಸ್ತ್ಯರು ವಿಂಧ್ಯ ಪರ್ವತದ ಸಮೀಪಕ್ಕೆ ಬಂದರು. ಅವರು ವಿಂಧ್ಯನ ಎದುರಿಗೆ ನಿಂತು ಅವನನ್ನು ಕುರಿತು ನಾನು ಪತ್ನಿಯ ಸಹಿತನಾಗಿ ಇಲ್ಲಿಗೆ ಬಂದಿದ್ದೇನೆ. ಎಲೈ ಪರ್ವತೋತ್ತಮನೇ, ನೀನು ನನಗೆ ಮಾರ್ಗವನ್ನು ಬಿಡಬೇಕೆಂದು ನಾನು ಬಯಸುತ್ತೇನೆ. ಯಾವುದೋ ಒಂದು ಕಾರ್ಯದ ಸಲುವಾಗಿ ನಾನು ದಕ್ಷಿಣ ದಿಕ್ಕಿಗೆ ಹೋಗುತ್ತಿದ್ದೇನೆ. ನಾನು ಹಿಂದಿರುಗಿ ಬರುವವರೆಗೆ ನನ್ನ ನಿರೀಕ್ಷಣೆಯನ್ನು ಮಾಡಿಕೊಂಡಿರು. ಎಲೈ ಶೈಲೇಂದ್ರನೇ, ನಾನು ಹಿಂದಿರುಗಿದ ಮೇಲೆ ನಿನ್ನ ಮನಸ್ಸಿಗೆ ಬಂದಂತೆ ನೀನು ಬೆಳೆಯಬಹುದು (ಎಂದು ಹೇಳಿದರು).
ಏವಂ ಸ ಸಮಯಂ ಕೃತ್ವಾ ವಿಂಧ್ಯೇನಾಮಿತ್ರಕರ್ಶನ |
ಅದ್ಯಾಪಿ ದಕ್ಷಿಣಾದ್'ದೇಶಾದ್ ವಾರುಣಿರ್ನ ನಿವರ್ತತೇ ॥14॥
ಎಲೈ ಶತ್ರುಕರ್ಶನನೇ, ವಿಂಧ್ಯನ ಜೊತೆಯಲ್ಲಿ ಹೀಗೆ ಒಪ್ಪಂದವನ್ನು ಮಾಡಿಕೊಂಡು ಹೊರಟ ವರುಣಪುತ್ರರಾದ ಅಗಸ್ತ್ಯರು ಈ ದಿನವೂ ಕೂಡ ದಕ್ಷಿಣದಿಕ್ಕಿನಿಂದ ಹಿಂದಿರುಗಿಲ್ಲ.
ಏತತ್ ತೇ ಸರ್ವಮಾಖ್ಯಾತಂ ಯಥಾ ವಿಂಧ್ಯೋ ನ ವರ್ಧತೇ |
ಅಗಸ್ತ್ಯಸ್ಯ ಪ್ರಭಾವೇಣ ಯನ್ಮಾಂ ತ್ವಂ ಪರಿಪೃಚ್ಛಸಿ॥15॥
ಅಗಸ್ತ್ಯರ ಪ್ರಭಾವದಿಂದ ವಿಂಧ್ಯೆಯು ಏಕೆ ಬೆಳೆಯುತ್ತಿಲ್ಲ ಎಂಬ ನಿನ್ನ ಪ್ರಶ್ನೆಗೆ ಅನುಗುಣವಾಗಿ ನಾನು ಎಲ್ಲವನ್ನೂ ಹೇಳಿದ್ದೇನೆ.
ಕಾಲೇಯಾಸ್ತು ಯಥಾ ರಾಜನ್ ಸುರೈಃ ಸರ್ವೈರ್ನಿಷೂದಿತಾಃ |
ಅಗಸ್ತ್ಯಾದ್'ವರಮಾಸಾದ್ಯ ತನ್ಮೇ ನಿಗದತಃ ಶೃಣು ॥16॥

ಎಲೈ ರಾಜನೇ, ದೇವತೆಗಳು ಅಗಸ್ತ್ಯರಿಂದ ವರವನ್ನು ಪಡೆದು ಹೇಗೆ ಎಲ್ಲಾ ಕಾಲೇಯರನ್ನು ಸಂಹಾರ ಮಾಡಿದರು ಎಂಬುದನ್ನು ಹೇಳುತ್ತೇನೆ; ಅದನ್ನೂ ಕೇಳು.
ತ್ರಿದಶಾನಾಂ ವಚಃ ಶ್ರುತ್ವಾ ಮೈತ್ರಾವರುಣಿರಬ್ರವೀತ್ |
ಕಿಮರ್ಥಮಭಿಯಾತಾಃ ಸ್ಥ ವರಂ ಮತ್ತಃ ಕಿಮಿಚ್ಛಥ ॥17॥
ದೇವತೆಗಳ ಮಾತನ್ನು ಕೇಳಿ ಮೈತ್ರಾವರುಣಿಗಳಾದ ಅಗಸ್ತ್ಯರು ಅವರನ್ನು ಕುರಿತು ಏತಕ್ಕೆ ಬಂದಿದ್ದೀರಿ? ನನ್ನಿಂದ ಯಾವ ವರವನ್ನು ಬಯಸುತ್ತೀರಿ ಎಂದು ಕೇಳಿದರು.
ಏವಮುಕ್ತಾಸ್ತತಸ್ತೇನ ದೇವತಾ ಮುನಿಮಬ್ರುವನ್ |
ಸರ್ವೇ ಪ್ರಾಂಜಲಯೋ ಭೂತ್ವಾ ಪುರಂದರಪುರೋಗಮಾಃ ॥18॥
ಏವಂ ತ್ವಯೇಚ್ಛಾಮ ಕೃತಂ ಹಿ ಕಾರ್ಯಂ
ಮಹಾರ್ಣವಂ ಪೀಯಮಾನಂ ಮಹಾತ್ಮನ್ |
ತತೋ ವಧಿಷ್ಯಾಮ ಸಹಾನುಬಂಧಾನ್
ಕಾಲೇಯದುಷ್ಟಾನ್ ಸುರವಿದ್ವಿಷಸ್ತಾನ್ ॥19॥
ಹೀಗೆ ಅಗಸ್ತ್ಯರಿಂದ ಕೇಳಲ್ಪಟ್ಟ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಕೈಗಳನ್ನು ಮುಗಿದು ಅಗಸ್ತ್ಯ ಋಷಿಗಳನ್ನು ಕುರಿತು ಎಲೈ ಮಹಾತ್ಮರೇ, ನೀವು ಮಹಾಸಮುದ್ರವನ್ನು ಪಾನಮಾಡಬೇಕೆಂದು ನಾವು ನಿಮ್ಮಿಂದ ಬಯಸುವ ಕಾರ್ಯ. ಅನಂತರ ನಾವು ಸುರದ್ವೇಷಿಗಳಾದ ದುಷ್ಟರಾದ ಕಾಲೇಯರನ್ನು ಅವರ ಪರಿವಾರ ಸಹಿತವಾಗಿ ಸಂಹರಿಸುವೆವು ಎಂದು ಹೇಳಿದರು.
ತ್ರಿದಶಾನಾಂ ವಚಃಶ್ರುತ್ವಾ ತಥೇತಿ ಮುನಿರಬ್ರವೀತ್ |
ಕರಿಷ್ಯೇ ಭವತಾಂ ಕಾಮಂ ಲೋಕಾನಾಂ ಚ ಹಿತಂ ಮಹತ್ ॥20॥
ದೇವತೆಗಳ ಮಾತನ್ನು ಕೇಳಿ ಅಗಸ್ತ್ಯಮುನಿಗಳು ನಿಮ್ಮ ಆಸೆಯನ್ನು ನಾನು ನೆರವೇರಿಸುವೆನು. ಅದು ಲೋಕಕ್ಕೆ ಬಹಳ ಹಿತವೂ ಆಗಿದೆಯಷ್ಟೆ? ಆದ್ದರಿಂದ ಹಾಗೆಯೇ ಆಗಲಿ ಎಂದು ಹೇಳಿದರು.
ಏವಮುಕತ್ವ ತತೋಽಗಚ್ಛತ್ ಸಮುದ್ರಂ ಸರಿತಾಂ ಪತಿಮ್ |
ಋಷಿಭಿಶ್ಚ ತಪಸ್ಸಿದ್ಧೈಃ ಸಾರ್ಧಂ ದೇವೈಶ್ಚ ಸುವ್ರತ ॥21॥
ಎಲೈ ಸುವ್ರತನೇ, ಹೀಗೆ ಹೇಳಿ ತಪಸ್ಸಿದ್ಧರಾದ ಋಷಿಗಳಿಂದಲೂ, ದೇವತೆಗಳಿಂದಲೂ ಕೂಡಿಕೊಂಡು ಅಗಸ್ತ್ಯರು ಸರಿತ್ಪತಿಯಾದ ಸಮುದ್ರನ ಬಳಿಗೆ ಹೋದರು.
ಮನುಷ್ಯೋರಗಗಂಧರ್ವಯಕ್ಷಕಿಂಪುರುಷಾಸ್ತಥಾ |
ಅನುಜಗ್ಮುರ್ಮಹಾತ್ಮಾನಂ ದ್ರಷ್ಟುಕಾಮಸ್ತದದ್ಭುತಮ್ ॥22॥
ಆ ಅದ್ಭುತವಾದ ಕಾರ್ಯವನ್ನು ನೋಡಲು ಬಯಸಿ ಮನುಷ್ಯರು, ಉರಗಗಳು, ಗಂಧರ್ವರು, ಯಕ್ಷರು ಮತ್ತು ಕಿಂಪುರುಷರೂ ಸಹ ಮಹಾನುಭಾವರಾದ ಅಗಸ್ತ್ಯರನ್ನು ಹಿಂಬಾಲಿಸಿದರು.
ತತೋಽಭ್ಯಗಚ್ಛನ್ ಸಹಿತಾಃ ಸಮುದ್ರಂ ಭೀಮನಿಸ್ಸ್ವನಮ್ |
ನೃತ್ಯಂತಮಿವ ಚೋರ್ಮಿಭಿರ್ವಲ್ಗಂತಮಿವ ವಾಯುನಾ ॥23॥
ಹಸಂತಮಿವ ಫೇನೌಘೈಃ ಸ್ಖಲಂತಂ ಮಂದರೇಷ್ವಥ |
ನಾನಾಗ್ರಾಹಸಮಾಕೀರ್ಣಂ ನಾನಾದ್ವಿಜಗಣಾಯುತಮ್ ॥24॥
ಅನಂತರ ಎಲ್ಲರೂ ಒಟ್ಟಾಗಿ ಅಲೆಗಳಿಂದ ನರ್ತನವನ್ನು ಮಾಡುವಂತೆ ತೋರುವ, ವಾಯುವಿನಿಂದ ಮಾತನಾಡುವಂತೆ ತೋರುವ, ನೊರೆಗಳ ಸಮೂಹದಿಂದ ನಗುವಂತೆ ತೋರುವ, ಮಂದರಪರ್ವತದ ತಪ್ಪಲಿನಲ್ಲಿ ಎಡವುವಂತೆ ತೋರುವ, ಭಯಂಕರವಾದ ಘೋಷವುಳ್ಳ ಅನೇಕ ಜಲಚರಪ್ರಾಣಿಗಳಿಂದ ನಿಬಿಡವಾದ, ಅನೇಕ ಪಕ್ಷಿಗಳ ಗಣದಿಂದ ಕೂಡಿದ, ಸಮುದ್ರವನ್ನು ಸಮೀಪಿಸಿದರು.
ಅಗಸ್ತ್ಯಸಹಿತಾ ದೇವಾಃ ಸಗಂಧರ್ವಮಹೋರಗಾಃ |
ಋಷಯಶ್ಚ ಮಹಾಭಾಗಾಃ ಸಮಾಸೇದುರ್ಮಹೋದಧಿಮ್ ॥25॥
ಅಗಸ್ತ್ಯಸಹಿತರಾದ ದೇವತೆಗಳು, ಗಂಧರ್ವರು, ಮಹೋರಗಗಳು, ಮತ್ತು ಮಹಾನುಭಾವರಾದ ಋಷಿಗಳು ಮಹಾಸಮುದ್ರವನ್ನು ತಲುಪಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನವಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪಂಚಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ನೂರನೆಯ ಅಧ್ಯಾಯ
ಅಗಸ್ತ್ಯರಿಂದ ಸಮುದ್ರಶೋಷಣ. ದೇವತೆಗಳಿಂದ ಕಾಲೇಯರ ಹನನ. ಸಮುದ್ರ ಜಲವು ಅಗಸ್ತ್ಯರಿಂದ ಜೀರ್ಣವಾಗಲು ದೇವತೆಗಳಿಂದ ಬ್ರಹ್ಮಸಮೀಪ ಗಮನ.
ಲೋಮಶಃ
ಸಮುದ್ರಂ ಸ ಸಮಾಸಾದ್ಯ ವಾರುಣಿರ್ಭಗವಾನೃಷಿಃ |
ಉವಾಚ ಸಹಿತಾನ್ ದೇವಾನ್ ಋಷೀಂಶ್ಚೈವ ಸಮಾಗತಾನ್ ॥1॥
ಏಷ ಲೋಕಹಿತಾರ್ಥಂ ವೈ ಪಿಬಾಮಿ ವರುಣಾಲಯಮ್ |
ಭವದ್ಭಿರ್ಯದನುಷ್ಠೇಯಂ ತಚ್ಛೀಘ್ರಂ ಸಂವಿಧೀಯತಾಮ್ ॥2॥

ಲೋಮಶ ಪೂಜ್ಯರಾದ ವಾರುಣಿಗಳಾದ ಅಗಸ್ತ್ಯ ಋಷಿಗಳು ಸಮುದ್ರವನ್ನು ತಲುಪಿ ಅಲ್ಲಿಗೆ ಬಂದ ದೇವತೆಗಳನ್ನು ಮತ್ತು ಋಷಿಗಳನ್ನು ಕುರಿತು ಲೋಕಹಿತಕ್ಕಾಗಿ ನಾನು ಸಮುದ್ರದ ನೀರನ್ನು ಪಾನಮಾಡುತ್ತೇನೆ. ನೀವು ಏನು ಮಾಡಬೇಕೋ ಅದನ್ನು ಶೀಘ್ರವಾಗಿ ಮಾಡಿ ಎಂದು ಹೇಳಿದರು.

ಏತಾವದುಕತ್ವ ವಚನಂ ಮೈತ್ರಾವರುಣಿರಚ್ಯುತಃ |
ಸಮುದ್ರಮಪಿಬತ್ ಕ್ರುದ್ಧಃ ಸರ್ವಲೋಕಸ್ಯ ಪಶ್ಯತಃ ॥3॥

ಮೈತ್ರಾವರುಣಿಗಳಾದ ತಮ್ಮ ಗುಣಗಳಿಂದ ಚ್ಯುತರಾಗದ ಅಗಸ್ತ್ಯರು ಇಷ್ಟು ಮಾತನ್ನು ಹೇಳಿ ಎಲ್ಲರೂ ನೋಡುತ್ತಿರುವಂತೆಯೇ ಕ್ರುದ್ಧರಾಗಿ ಸಮುದ್ರ ಜಲವನ್ನು ಪಾನಮಾಡಿದರು.

ಪೀಯಮಾನಂ ಸಮುದ್ರಂ ಚ ದೃಷ್ಟ್ವಾ ಸೇಂದ್ರಾಃ ಸಹಾಮರಾಃ |
ವಿಸ್ಮಯಂ ಪರಮಂ ಜಗ್ಮುಃ ಸ್ತುತಿಭಿಶ್ಚಾಪ್ಯಪೂಜಯನ್ ॥4॥

ಇಂದ್ರನೇ ಮೊದಲಾದ ದೇವತೆಗಳು ಅಗಸ್ತ್ಯರು ಸಮುದ್ರಜಲವನ್ನು ಪಾನ ಮಾಡುವುದನ್ನು ನೋಡಿ ವಿಸ್ಮಿತರಾದರು ಮತ್ತು ಸ್ತೋತ್ರಗಳಿಂದ ಅವರನ್ನು ಪೂಜಿಸಿದರು.

ತ್ವಂ ನಸಃತ್ರಾತಾ ವಿಧಾತಾ ಚ ಲೋಕಾನಾಂ ಲೋಕಭಾವನ |
ತ್ವತ್ಪ್ರಸಾದಾತ್ ಸಮುಚ್ಛೇದಂ ನ ಗಚ್ಛೇತ್ ಸಾಮರಂ ಜಗತ್ ॥5॥

ನೀವೇ ನಮ್ಮ ಪಾಲಕರು. ಎಲೈ ಲೋಕಪಾವನರೇ, ನೀವೇ ಲೋಕಗಳನ್ನು ಸರಿಯಾದ ಸ್ಥಿತಿಯಲ್ಲಿ ಇಡುವವರು. ನಿಮ್ಮ ಅನುಗ್ರಹದಿಂದಲೇ ದೇವತೆಗಳಿಂದ ಕೂಡಿದ ಜಗತ್ತು ವಿನಾಶವನ್ನು ಹೊಂದುವುದಿಲ್ಲ (ಎಂದು ಸ್ತೋತ್ರಮಾಡಿದರು).

ಸ ಪೂಜ್ಯಮಾನಸ್ತ್ರಿದಶೈರ್ಮಹಾತ್ಮಾ
ಗಂಧರ್ವತೂರ್ಯೇಷು ನದತ್ಸು ಸರ್ವಶಃ |
ದಿವ್ಯೈಶ್ಚ ಪುಷ್ಪೈರವಕೀರ್ಯಮಾಣೋ
ಮಹಾರ್ಣವಂ ನಿಸ್ಸಲಿಲಂ ಚಕಾರ ॥6॥

ಮಹಾತ್ಮರಾದ ಅಗಸ್ತ್ಯರು ದೇವತೆಗಳು ಹೀಗೆ ಅವರನ್ನು ಪೂಜಿಸುತ್ತಿರಲು ಗಂಧರ್ವ ವಾದ್ಯಗಳು ಎಲ್ಲಕಡೆಯಲ್ಲಿಯೂ ಮೊಳಗುತ್ತಿರಲು ದಿವ್ಯವಾದ ಪುಷ್ಪವೃಷ್ಟಿಯು ಅವರ ಮೇಲೆ ಬೀಳುತ್ತಿರಲು ಮಹಾಸಮುದ್ರದಲ್ಲಿ ಒಂದು ಹನಿಯೂ ಜಲವಿಲ್ಲದಂತೆ ಮಾಡಿದರು.

ದೃಷ್ಟ್ವಾ ಕೃತಂ ನಿಸ್ಸಲಿಲಂ ಮಹಾರ್ಣವಂ
ಸುರಾಃ ಸಮಸ್ತಾಃ ಪರಮಪ್ರಹೃಷ್ಟಾಃ |
ಪ್ರಗೃಹ್ಯ ದಿವ್ಯಾನಿ ವರಾಯುಧಾನಿ
ತಾನ್ ದಾನವಾನ್ ಜಘ್ನುರದೀನಸತ್ತ್ವಾಃ ॥7॥

ಮಹಾರ್ಣವವು ನಿರ್ಜಲವಾಗಿ ಮಾಡಲ್ಪಟ್ಟದ್ದನ್ನು ನೋಡಿದ ಎಲ್ಲಾ ದೇವತೆಗಳು ಪರಮ ಸಂತೋಷದಿಂದ ಕೂಡಿದವರಾಗಿ ದಿವ್ಯವಾದ ಮತ್ತು ಶ್ರೇಷ್ಠವಾದ ಆಯುಧಗಳನ್ನು ಹಿಡಿದು ಉತ್ಸಾಹವುಳ್ಳ ಮನಸ್ಸುಳ್ಳವರಾಗಿ ಆ ಕಾಲೇಯದಾನವರ ಮೇಲೆ ಪ್ರಹಾರ ಮಾಡಿದರು.

ತೇ ವಧ್ಯಮಾನಾಸ್ತ್ರಿದಶೈರ್ಮಹಾತ್ಮಭಿಃ
ಮಹಾಬಲೈರ್ವೇಗಯುತೈರ್ನದದ್ಭಿಃ |
ನ ಸೇಹಿರೇ ವೇಗವತಾಂ ಮಹಾತ್ಮನಾಂ
ವೇಗಂ ತದಾ ಧಾರಯಿತುಂ ದಿವೌಕಸಾಮ್ ॥8॥

ಮಹಾತ್ಮರೂ, ಮಹಾಬಲವುಳ್ಳವರೂ, ವೇಗವುಳ್ಳವರೂ ಆದ ದೇವತೆಗಳು ಗರ್ಜಿಸುತ್ತಾ ದಾನವರ ಮೇಲೆ ಪ್ರಹಾರವನ್ನು ಮಾಡುತ್ತಿರಲು ಆಗ ಕಾಲೇಯರು ಮಹಾತ್ಮರಾದ ವೇಗವುಳ್ಳ ದೇವತೆಗಳ ವೇಗವನ್ನು ಎದುರಿಸಲು ಸಾಧ್ಯವಾಗಲಿಲ್ಲ.

ತೇ ವಧ್ಯಮಾನಾಸ್ತ್ರಿದಶೈರ್ದಾನವಾ ಭೀಮನಿಸ್ವನಾಃ |
ಚಕ್ರುಃ ಸುತುಮುಲಂ ಯುದ್ಧಂ ಮುಹೂರ್ತಮಿವ ಭಾರತ ॥9॥

ಎಲೈ ಭಾರತನೇ, ದೇವತೆಗಳ ಪ್ರಹಾರಕ್ಕೆ ಒಳಗಾದ ದಾನವರು ಭಯಂಕರವಾದ ಗರ್ಜನೆಯನ್ನು ಮಾಡುತ್ತಾ ಒಂದು ಮುಹೂರ್ತದ ಕಾಲ ತೀವ್ರವಾದ ಯುದ್ಧವನ್ನು ಮಾಡಿದರು.

ತೇ ಪೂರ್ವಂ ತಪಸಾ ದಗ್ಧಾ ಮುನಿಭಿರ್ಭಾವಿತಾತ್ಮಭಿಃ |
ಯತಮಾನಾಃ ಪರಂ ಶಕ್ತ್ಯಾ ತ್ರಿದಶೈರ್ವಿನಿಷೂದಿತಾಃ ॥10॥

ಅವರು ಮೊದಲೇ ಭಾವಿತಾತ್ಮರಾದ ಋಷಿಗಳ ತಪಸ್ಸಿನಿಂದ ದಗ್ಧರಾಗಿದ್ದುದರಿಂದ ಎಷ್ಟೇ ಶಕ್ತಿಯಿಂದ ಪ್ರಯತ್ನಪಟ್ಟರೂ ದೇವತೆಗಳಿಂದ ಹತರಾದರು.

ತೇ ಹೇಮನಿಷ್ಕಾಭರಣಾಃ ಕುಂಡಲಾಂಗದದಾರಿಣಃ |
ನಿಹತಾ ಬಹ್ವಶೋಭಂತ ಪುಷ್ಪಿತಾ ಇವ ಕಿಂಶುಕಾಃ ॥11॥

ಹೇಮನಿಷ್ಕಾಭರಣಗಳನ್ನು ಧರಿಸಿ ಕುಂಡಲ ಮತ್ತು ಅಂಗದವನ್ನು ಧರಿಸಿದ ಅವರು ಹತರಾಗಿ ಅರಳಿದ ಕಿಂಶುಕ ವೃಕ್ಷಗಳಂತೆ ಬಹುವಾಗಿ ಶೋಭಿಸಿದರು.

ಹತಶೇಷಾಸ್ತತಃ ಕೇಚಿತ್ ಕಾಲೇಯಾ ಮನುಜೋತ್ತಮ |
ವಿದಾರ್ಯ ವಸುಧಾಂ ದೇವೀಂ ಪಾತಾಳತಳಮಾಶ್ರಿತಾಃ ॥12॥

ಎಲೈ ಮನುಜೋತ್ತಮನೇ, ಅಳಿದುಳಿದ ಕೆಲವು ಕಾಲೇಯರು ಆಗ ಭೂಮಿಯನ್ನು ಸೀಳಿಕೊಂಡು ಪಾತಾಳತಳಕ್ಕೆ ಹೋಗಿ ನೆಲೆಸಿದರು.

ನಿಹತಾನ್ ದಾನವಾನ್ ದೃಷ್ಟ್ವಾ ತ್ರಿದಶಾ ಮುನಿಪುಂಗವಮ್ |
ತುಷ್ಟುವುರ್ವಿವಿಧೈರ್ವಾಕ್ಯೈರಿದಂ ವಚನಮಬ್ರುವನ್ ॥13॥
ದಾನವರು ನಿಹತರಾದುದನ್ನು ನೋಡಿ ದೇವತೆಗಳು ಮುನಿಶ್ರೇಷ್ಠರಾದ ಅಗಸ್ತ್ಯರನ್ನು ಅನೇಕ ವಾಕ್ಯಗಳಿಂದ ಸ್ತೋತ್ರವನ್ನು ಮಾಡಿ ಹೀಗೆ ಮಾತನಾಡಿದರು;
ತ್ವತ್ಪ್ರಸಾದಾನ್ಮುನಿಶ್ರೇಷ್ಠ ಲೋಕೈಃ ಪ್ರಾಪ್ತಂ ಮಹತ್ ಸುಖಮ್ |
ತ್ವತ್ತೇಜಸಾ ಚ ನಿಹತಾಃ ಕಾಲೇಯಾಃ ಕ್ರೂರವಿಕ್ರಮಾಃ ॥14॥
ಪೂರಯಸ್ವ ಮಹಾಭಾಗ ಸಮುದ್ರಂ ಲೋಕಭಾವನ |
ಯತ್ ತ್ವಯಾ ಸಲಿಲಂ ಪೀತಂ ತದಸ್ಮಿನ್ ಪುನರುತ್ಸೃಜ ॥15॥
ಎಲೈ ಮುನಿಶ್ರೇಷ್ಠರೇ, ನಿಮ್ಮ ಅನುಗ್ರಹದಿಂದ ಲೋಕಗಳಿಗೆ ಬಹಳ ಸುಖವುಂಟಾಯಿತು. ಕ್ರೂರಪರಾಕ್ರಮಿಗಳಾದ ಕಾಲೇಯರು ನಿಮ್ಮ ತೇಜಸ್ಸಿನಿಂದಲೇ ಹತರಾದರು. ಎಲೈ ಲೋಕಭಾವನರಾದ ಮಹಾನುಭಾವರೇ, ನೀವು ಪಾನ ಮಾಡಿದ ಜಲವನ್ನು ಈ ಸಮುದ್ರಕ್ಕೆ ಪುನಃ ವಿಸರ್ಜಿಸಿ, ಸಮುದ್ರವನ್ನು ಪೂರ್ಣವನ್ನು ಮಾಡಿ.
ಏವಮುಕ್ತಃ ಪ್ರತ್ಯುವಾಚ ಭಗವಾನ್ ಮುನಿಪುಂಗವಃ |
ತಾಂಸ್ತದಾ ಸಹಿತಾನ್ ದೇವಾನ್ ಅಗಸ್ತ್ಯಃ ಸಪುರಂದರಾನ್ ॥16॥
ಜೀರ್ಣಂ ತದ್ಧಿ ಮಯಾ ತೋಯಮುಪಾಯೋಽನ್ಯಃ ಪ್ರಚಿಂತ್ಯತಾಮ್|
ಪೂರಣಾರ್ಥಂ ಸಮುದ್ರಸ್ಯ ಭವದ್ಭಿರ್ಯತ್ನಮಾಸ್ಥಿತೈಃ ॥17॥
ಹೀಗೆ ಹೇಳಲ್ಪಟ್ಟ ಪೂಜ್ಯರಾದ ಮುನಿಶ್ರೇಷ್ಠರಾದ ಅಗಸ್ತ್ಯರು ಇಂದ್ರನೇ ಮೊದಲಾದ ನೆರೆದ ಎಲ್ಲಾ ದೇವತೆಗಳನ್ನು ಕುರಿತು ಆಗ ನಾನು ಪಾನಮಾಡಿದ ಆ ಜಲವು ಜೀರ್ಣವಾಗಿದೆ. ಸಮುದ್ರಕ್ಕೆ ನೀರನ್ನು ತುಂಬಲು ಯತ್ನವನ್ನು ವಹಿಸಿದ ನೀವು ಬೇರೆ ಉಪಾಯವನ್ನು ಚಿಂತಿಸಬೇಕು ಎಂದು ಹೇಳಿದರು.
ಏತಚ್ಛ್ರುತ್ವಾ ಚ ವಚನಂ ಮಹರ್ಷೇರ್ಭಾವಿತಾತ್ಮನಃ |
ವಿಸ್ಮಿತಾಶ್ಚ ವಿಷಣ್ಣಾಶ್ಚ ಬಭೂವುಃ ಸಹಿತಾಃ ಸುರಾಃ ॥18॥
ಪರಿಶುದ್ಧ ಮಾತುಳ್ಳ ಮಹರ್ಷಿಗಳ ಈ ಮಾತನ್ನು ಕೇಳಿ ದೇವತೆಗಳು ವಿಸ್ಮಿತರೂ, ವಿಷಣ್ಣರೂ ಆದರು.
ಪರಸ್ಪರಮನುಜ್ಞಾಪ್ಯ ಪ್ರಣಮ್ಯ ಮುನಿಪುಂಗವಮ್ |
ಪ್ರಜಾಃ ಸರ್ವಾ ಮಹಾರಾಜ ವಿಪ್ರಜಗ್ಮುರ್ಯಥಾಗತಮ್ ॥19॥
ಎಲೈ ಮಹಾರಾಜನೇ, ಎಲ್ಲಾ ಪ್ರಜೆಗಳು ಪರಸ್ಪರವಾಗಿ ಅನುಮತಿಯನ್ನು ಪಡೆದು ಮುನಿಪುಂಗವರಾದ ಅಗಸ್ತ್ಯರಿಗೆ ನಮಸ್ಕಾರವನ್ನು ಮಾಡಿ ತಾವು ಬಂದ ದಾರಿಯಲ್ಲಿಯೇ ಹಿಂದಿರುಗಿದರು.
ತ್ರಿದಶಾ ವಿಷ್ಣುನಾ ಸಾರ್ಧಮ್ ಉಪಜಗ್ಮುಃ ಪಿತಾಮಹಮ್ |
ಪೂರಣಾರ್ಥಂ ಸಮುದ್ರಸ್ಯ ಮಂತ್ರಯಿತ್ವಾ ಪುನಃ ಪುನಃ ॥20॥
ದೇವತೆಗಳು ಸಮುದ್ರಪೂರಣವನ್ನು ಕುರಿತು ಮತ್ತೆಮತ್ತೆ ಮಂತ್ರಾಲೋಚನೆಯನ್ನು ಮಾಡಿ ವಿಷ್ಣುವಿನ ಜೊತೆಯಲ್ಲಿ ಬ್ರಹ್ಮದೇವರನ್ನು ಸಮೀಪಿಸಿದರು.
ತೇ ಧಾತಾರಮುಪಾಗಮ್ಯ ತ್ರಿದಶಾಃ ಸಹ ವಿಷ್ಣುನಾ |
ಊಚುಃ ಪ್ರಾಂಜಲಯಃ ಸರ್ವೇ ಸಾಗರಸ್ಯಾಭಿಪೂರಣಮ್ ॥21॥
ಆ ದೇವತೆಗಳು ವಿಷ್ಣುವಿನ ಜೊತೆಯಲ್ಲಿ ಬ್ರಹ್ಮದೇವರನ್ನು ಸಮೀಪಿಸಿ ಎಲ್ಲರೂ ಕೈಗಳನ್ನು ಜೋಡಿಸಿ ಸಾಗರವನ್ನು ಪೂರ್ಣಮಾಡುವಂತೆ ಕೇಳಿಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಷಟ್‌ಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
*****
ನೂರ ಒಂದನೆಯ ಅಧ್ಯಾಯ
ಬ್ರಹ್ಮದೇವರಿಂದ ದೇವತೆಗಳಿಗೆ ಆಶ್ವಾಸನೆ. ಸಗರ ಕಥೆ.
ಅರವತ್ತುಸಾವಿರ ಪುತ್ರರ ಜನನ.
ಲೋಮಶಃ
ತಾನುವಾಚ ಸಮೇತಾಂಸ್ತು ಬ್ರಹ್ಮಾ ಲೋಕಪಿತಾಮಹಃ |
ನಿರ್ಹ್ರಾದಿನ್ಯಾ ಗಿರಾ ರಾಜನ್ ದೇವಾನಾಶ್ವಾಸಯಂಸ್ತದಾ ॥1॥
ಗಚ್ಛಧ್ವಂ ವಿಬುಧಾಃ ಸರ್ವೇ ಯಥಾಕಾಮಂ ಯಥೇಪ್ಸಿತಮ್ |
ಮಹತಾ ಕಾಲಯೋಗೇನ ಪ್ರಕೃತಿಂ ಯಾಸ್ಯತೇಽರ್ಣವಃ ॥2॥
ಜ್ಞಾತೀನ್ ವೈ ಕಾರಣಂ ಕೃತ್ವಾ ಮಹಾರಾಜೋ ಭಗೀರಥಃ |
ಪೂರಯಿಷ್ಯತಿ ತೋಯೌಘೈಃ ಸಮುದ್ರಂ ನಿಧಿಮಂಭಸಾಮ್ ॥3॥
ಲೋಮಶ ಎಲೈ ರಾಜನೇ, ಒಟ್ಟಿಗೆ ಬಂದ ದೇವತೆಗಳನ್ನು ಕುರಿತು ಬ್ರಹ್ಮದೇವರು ತಮ್ಮ ಗಂಭೀರವಾದ ವಾಣಿಯಿಂದ ಎಲೈ ದೇವತೆಗಳೇ, ನೀವೆಲ್ಲರೂ ನಿಮಗೆ ಇಷ್ಟಬಂದಂತೆ ಹೊರಟುಹೋಗಿ. ಬಹಳ ಕಾಲದ ಮೇಲೆ ಸಮುದ್ರವು ತನ್ನ ಮೊದಲಿನ ಸ್ಥಿತಿಯನ್ನು ಪಡೆಯುವುದು. ಭಗೀರಥ ಮಹಾರಾಜನು ತನ್ನ ಬಂಧುಗಳನ್ನು ನಿಮಿತ್ತ ಮಾಡಿಕೊಂಡು ಜಲನಿಧಿಯಾದ ಸಮುದ್ರವನ್ನು

ಜಲರಾಶಿಗಳಿಂದ ತುಂಬುವನು ಎಂದು ಆಶ್ವಾಸನೆಯನ್ನು ನೀಡಿದರು.
ಯುಧಿಷ್ಠಿರಃ
ಕಥಂ ವೈ ಜ್ಞಾತಯೋ ಬ್ರಹ್ಮನ್ ಕಾರಣಂ ಚಾಭವನ್ ಮುನೇ |
ಕಥಂ ಸಮುದ್ರಃ ಪೂರ್ಣಶ್ಚ ಭಗೀರಥಪರಿಶ್ರಮಾತ್ ||4||
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ತಪೋಧನ |
ಕಥ್ಯಮಾನಂ ತ್ವಯಾ ವಿಪ್ರ ರಾಜ್ಞಾಂ ಚರಿತಮುತ್ತಮಮ್ ||5||
ಯುಧಿಷ್ಠಿರ ಬ್ರಾಹ್ಮಣರೇ, ಋಷಿಗಳೇ, ದಾಯಾದಿಗಳು ಹೇಗೆ ಕಾರಣರಾದರು? ಭಗೀರಥನ ಪ್ರಯತ್ನದಿಂದ ಸಮುದ್ರವು ಹೇಗೆ ತುಂಬಿತು? ತಪೋಧನರೇ, ನೀವು ಹೇಳುವ ರಾಜರ ಶ್ರೇಷ್ಠವಾದ ಚರಿತ್ರೆಯನ್ನು ನಾನು ವಿಸ್ತಾರವಾಗಿ ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಏವಮುಕ್ತಸ್ತು ವಿಪ್ರೇಂದ್ರೋ ಧರ್ಮರಾಜೇನ ಧೀಮತಾ |
ಕಥಯಾಮಾಸ ಮಾಹಾತ್ಮ್ಯಂ ಸಗರಸ್ಯ ಮಹಾತ್ಮನಃ ||6||
ವೈಶಂಪಾಯನ ಮೇಧಾವಿಯಾದ ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಬ್ರಾಹ್ಮಣಶ್ರೇಷ್ಠರಾದ ಲೋಮಶರು ಮಹಾತ್ಮನಾದ ಸಗರನ ಮಹಾತ್ಮ್ಯವನ್ನು ವರ್ಣಿಸಿದರು.
ಲೋಮಶಃ
ಇಕ್ಷ್ವಾಕೂಣಾಂ ಕುಲೇ ಜಾತಃ ಸಗರೋ ನಾಮ ಪಾರ್ಥಿವಃ |
ರೂಪಸತ್ತ್ವಬಲೋಪೇತಃ ಸ ಚಾಪುತ್ರಃ ಪ್ರತಾಪವಾನ್ ||7||
ಲೋಮಶ ಇಕ್ಷ್ವಾಕುವಿನ ವಂಶದಲ್ಲಿ ಸಗರನೆಂಬ ರಾಜನು ಜನಿಸಿದನು. ಅವನು ರೂಪಸತ್ತ್ವಬಲೋಪೇತನಾಗಿ ಪ್ರತಾಪಶಾಲಿಯಾಗಿದ್ದರೂ ಮಕ್ಕಳನ್ನು ಪಡೆದಿರಲಿಲ್ಲ.
ಸ ಹೈಹಯಾನ್ ಸಮುತ್ಸಾದ್ಯ ತಾಲಜಂಘಾಂಶ್ಚ ಭಾರತ |
ವಶೇ ಕೃತ್ವಾ ತು ರಾಜ್ಞೋಽನ್ಯಾನ್ ಸ್ವರಾಜ್ಯಮನುಶಿಷ್ಟವಾನ್ ||8||
ಎಲೈ ಭಾರತನೇ, ಅವನು ಹೈಹಯರನ್ನು, ತಾಳಜಂಘರನ್ನು ಸಂಹರಿಸಿ ಉಳಿದ ರಾಜರನ್ನು ತನ್ನ ವಶದಲ್ಲಿ ಇಟ್ಟುಕೊಂಡು ತನ್ನ ರಾಜ್ಯವನ್ನು ಆಳಿದನು.
ತಸ್ಯ ಭಾರ್ಯೇ ಹ್ಯಭವತಾಂ ರೂಪಯೌವನದರ್ಪಿತೇ |
ವೈದರ್ಭೀ ಭರತಶ್ರೇಷ್ಠ ಶೈಬ್ಯಾ ಚ ಕುರುನಂದನ ||9||
ಎಲೈ ಕುರುನಂದನನೇ, ಎಲೈ ಭರತಶ್ರೇಷ್ಠನೇ, ಅವನಿಗೆ ರೂಪಯೌವನ ದರ್ಪವನ್ನು ಹೊಂದಿದ ವಿದರ್ಭರಾಜಕುಮಾರಿ ಮತ್ತು ಶಿಬಿಯ ವಂಶದ ರಾಜಕುಮಾರಿ ಹೀಗೆ ಇಬ್ಬರು ಪತ್ನಿಯರಿದ್ದರು.
ಸ ಪುತ್ರಕಾಮೋ ನೃಪತಿಃ ತತಾಪ ಸುಮಹತ್ ತಪಃ |
ಪತ್ನೀಭ್ಯಾಂ ಸಹ ರಾಜೇಂದ್ರ ಕೈಲಾಸಂ ಗಿರಿಮಾಸ್ಥಿತಃ ||10||
ಎಲೈ ರಾಜೇಂದ್ರನೇ, ಪುತ್ರಕಾಮನಾದ ಆ ರಾಜನು ತನ್ನ ಪತ್ನಿಯರ ಜೊತೆಯಲ್ಲಿ ಕೈಲಾಸ ಪರ್ವತಕ್ಕೆ ಹೋಗಿ ದೊಡ್ಡ ತಪಸ್ಸನ್ನು ಆಚರಿಸಿದನು.
ಸ ತಪ್ಯಮಾನಃ ಸುಮಹತ್ತಪೋಯೋಗಸಮನ್ವಿತಃ |
ಆರಾಧಯನ್ಮಹಾತ್ಮಾನಂ ಶರ್ವಂ ತ್ರಿಭುವನೇಶ್ವರಮ್ ||11||
ಶಂಕರಂ ಭವಮೀಶಾನಂ ಶೂಲಪಾಣಿಂ ಪಿನಾಕಿನಮ್ |
ತ್ರ್ಯಂಬಕಂ ಚ ಶಿವಂ ಶ್ರೇಷ್ಠಂ ಬಹುರೂಪಮುಮಾಪತಿಮ್ ||12||
ಅವನು ತಪೋಯೋಗಸಮನ್ವಿತನಾಗಿ ದೊಡ್ಡ ತಪಸ್ಸನ್ನು ಮಾಡುತ್ತಾ ಮಹಾತ್ಮನೂ, ಶರ್ವನೂ, ತ್ರಿಭುವನೇಶ್ವರನೂ, ಶಂಕರನೂ, ಭವನೂ, ಈಶಾನನೂ, ಶೂಲಪಾಣಿಯೂ, ಪಿನಾಕಧಾರಿಯೂ, ತ್ರಿಲೋಚನನೂ, ಶಿವನೂ, ಶ್ರೇಷ್ಠನೂ, ಬಹುರೂಪನೂ ಆದ ಉಮಾಪತಿಯನ್ನು ಆರಾಧಿಸಿದನು.
ಸ ತಂ ದೃಷ್ಟ್ವೈವ ವರದಂ ಪತ್ನೀಭ್ಯಾಂ ಸಹಿತೋ ನೃಪಃ |
ಪ್ರಣಿಪತ್ಯ ಮಹಾಬಾಹುಃ ಪುತ್ರಾರ್ಥಂ ಸಮಯಾಚತ ||13||
ಆ ರಾಜನು ಪತ್ನಿಯರ ಜೊತೆಯಲ್ಲಿ ಶಿವನ ದರ್ಶನವನ್ನು ಮಾಡಿದ ತಕ್ಷಣ ಮಹಾಬಾಹುವಾದ ಅವನು ನಮಸ್ಕಾರವನ್ನು ಮಾಡಿ ಪುತ್ರನನ್ನು ಯಾಚಿಸಿದನು.
ತಂ ಪ್ರೀತಿಮಾನ್ ಹರಃ ಪ್ರಾಹ ಸಭಾರ್ಯಂ ನೃಪಸತ್ತಮಮ್ |
ಯಸ್ಮಿನ್ ವೃತೋ ಮುಹೂರ್ತೇಽಹಂ ತ್ವಯೇಹ ನೃಪತೇ ವರಮ್ ||
ಪುತ್ರಾಃ ಷಷ್ಟಿಸಹಸ್ರಾಣಿ ಶೂರಾಃ ಪರಮದರ್ಪಿತಾಃ |
ಏಕಸ್ಯಾಂ ಸಂಭವಿಷ್ಯಂತಿ ಪತ್ನ್ಯಾಂ ತವ ನರೋತ್ತಮ ||15||
ತೇ ಚಾಪಿ ಸಹಿತಾಃ ಸರ್ವೇ ಕ್ಷಯಂ ಯಾಸ್ಯಂತಿ ಪಾರ್ಥಿವ |
ಏಕೋ ವಂಶಧರಃ ಶೂರ ಏಕಸ್ಯಾಂ ಸಂಭವಿಷ್ಯತಿ ||16||
ಸಂತೋಷಗೊಂಡ ಶಂಕರನು ತನ್ನ ಭಾರ್ಯೆಯರಿಂದ ಕೂಡಿದ ಆ ಶ್ರೇಷ್ಠರಾಜನನ್ನು ಕುರಿತು ಎಲೈ ರಾಜನೇ, ನೀನು ಯಾವ ಮುಹೂರ್ತದಲ್ಲಿ ವರವನ್ನು ಕೇಳಿದ್ದೀಯೋ ಅದಕ್ಕೆ ಅನುಗುಣವಾಗಿ, ಎಲೈ ನರೋತ್ತಮನೇ, ನಿನಗೆ ಒಬ್ಬ ಪತ್ನಿಯಲ್ಲಿ ಶೂರರೂ ಮತ್ತು ಪರಮದರ್ಪಿಷ್ಠರೂ ಆದ ಅರವತ್ತುಸಾವಿರ ಪುತ್ರರು ಜನಿಸುವರು. ಎಲೈ ಪಾರ್ಥಿವನೇ, ಅವರೆಲ್ಲರೂ ಒಟ್ಟಿಗೆ ವಿನಾಶವನ್ನು

ಹೊಂದುವರು. ಇನೊಂದು ಪತ್ನಿಯಲ್ಲಿ ಶೂರನೂ, ವಂಶಧರನೂ ಆದ ಒಬ್ಬ ಪುತ್ರನು ಜನಿಸುವನು ಎಂದು ಹೇಳಿದನು.
ಏವಮುಕ್ತ್ವಾ ತು ತಂ ರುದ್ರಃ ತತ್ರೈವಾಂತರಧೀಯತ |
ಸ ಚಾಪಿ ಸಗರೋ ರಾಜಾ ಜಗಾಮ ಸ್ವಂ ನಿವೇಶನಮ್ ॥17॥
ಪತ್ನೀಭ್ಯಾಂ ಸಹಿತಸ್ತತ್ರ ಪ್ರಹೃಷ್ಟೇನಾಂತರಾತ್ಮನಾ |
ಕಾಲಂ ಶಂಭುವರಪ್ರಾಪ್ತಂ ಪ್ರತೀಕ್ಷನ್ ಸಗರೋಽನಯತ್ ॥18॥
ಹೀಗೆ ಹೇಳಿ ಶಂಕರನು ಅಲ್ಲಿಯೇ ಅದೃಶ್ಯನಾದನು. ಆ ಸಗರರಾಜನಾದರೂ ತನ್ನ ಮನೆಗೆ ಹಿಂದಿರುಗಿ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಪತ್ನಿಯರಿಂದ ಕೂಡಿಕೊಂಡು ರುದ್ರದೇವರು ಕೊಟ್ಟ ವರದ ಕಾಲವನ್ನು ನಿರೀಕ್ಷಣೆ ಮಾಡುತ್ತಾ ಕಾಲವನ್ನು ಕಳೆದನು.
ತಸ್ಯಾಥ ಭರತಶ್ರೇಷ್ಠ ತೇ ಭಾರ್ಯೇ ಕಮಲೇಕ್ಷಣೇ |
ವೈದರ್ಭೀ ಚೈವ ಶೈಬ್ಯಾ ಚ ಗರ್ಭಿಣ್ಯೌ ಸಂಬಭೂವತುಃ ॥19॥
ಎಲೈ ಭರತಶ್ರೇಷ್ಠನೇ, ಅನಂತರ ಕಮಲಲೋಚನೆಯರಾದ ಅವನ ಇಬ್ಬರು ಪತ್ನಿಯರಾದ ವೈದರ್ಭೀ ಮತ್ತು ಶೈಬ್ಯೆ ಇವರು ಗರ್ಭವನ್ನು ಧರಿಸಿದರು.
ತತಃ ಕಾಲೇನ ವೈದರ್ಭೀ ಗರ್ಭಾಲಾಬುಂ ವ್ಯಜಾಯತ |
ಶೈಬ್ಯಾ ಚ ಸುಷುವೇ ಪುತ್ರಂ ಕುಮಾರಂ ದೇವರೂಪಿಣಮ್ ॥20॥
ಅನಂತರ ಕಾಲಕ್ರಮದಲ್ಲಿ ವೈದರ್ಭಿಯು ಸೋರೆಕಾಯಿಯಂತಹ ಗರ್ಭವನ್ನು ಪ್ರಸವಿಸಿದಳು. ಶೈಬ್ಯೆಯಾದರೂ ದೇವರೂಪವನ್ನು ಧರಿಸಿದ ಕುಮಾರನನ್ನು ಪ್ರಸವಿಸಿದಳು.
ತದಾಽಲಾಬುಂ ಸಮುತ್ಸ್ರಷ್ಟುಂ ಮನಶ್ಚಕ್ರೇಽಥ ಪಾರ್ಥಿವಃ |
ಅಥಾಂತರಿಕ್ಷಾತ್ ಶುಶ್ರಾವ ವಾಚಂ ಗಂಭೀರನಿಸ್ಸ್ವನಾಮ್ ॥21॥
ಆಗ ರಾಜನು ವೈದರ್ಭಿಯ ಗರ್ಭವನ್ನು ಪರಿತ್ಯಾಗಮಾಡಲು ಮನಸ್ಸಿನಲ್ಲಿ ನಿರ್ಧರಿಸಿದನು. ಆಗ ಅಂತರಿಕ್ಷದಿಂದ ಗಂಭೀರಸ್ವರವುಳ್ಳ ಒಂದು ವಾಣಿಯು ಕೇಳಿಬಂದಿತು.
ರಾಜನ್ ಮಾ ಸಾಹಸಂ ಕಾರ್ಷೀಃ ಪುತ್ರಾನ್ ನ ತ್ಯಕ್ತುಮರ್ಹಸಿ |
ಅಲಾಬುಮಧ್ಯಾನ್ನಿಷ್ಕೃಷ್ಯ ಬೀಜಂ ಯತ್ನೇನ ಧಾರ್ಯತಾಮ್ ॥22॥
ಸೋಪಸ್ವೇದೇಷು ಭಾಂಡೇಷು ಘೃತಪೂರ್ಣೇಷು ಭಾಗಶಃ |
ತತಃ ಪುತ್ರಸಹಸ್ರಾಣಿ ಷಷ್ಟಿಂ ಪ್ರಾಪ್ಸ್ಯಸಿ ಪಾರ್ಥಿವ ॥23॥
ಮಹಾದೇವೇನ ದಿಷ್ಟಂ ತೇ ಪುತ್ರಜನ್ಮ ನರಾಧಿಪ |
ಅನೇನ ಕ್ರಮಯೋಗೇನ ಮಾ ತೇ ಬುದ್ಧಿರತೋಽನ್ಯಥಾ ॥24॥
ರಾಜನೇ, ಸಾಹಸವನ್ನು ಮಾಡಬೇಡ. ಪುತ್ರರನ್ನು ಪರಿತ್ಯಾಗಮಾಡಬೇಡ. ಆ ಸೋರೆಕಾಯಿಯಂತಹ ಗರ್ಭದ ಮಧ್ಯದಿಂದ ಬೀಜಗಳನ್ನು ತೆಗೆದು ಅದನ್ನು ಬಿಸಿಯಾಗಿರುವ ಘೃತಪೂರ್ಣವಾದ ಭಾಂಡಗಳಲ್ಲಿ ರಕ್ಷಿಸು. ಎಲೈ ಪಾರ್ಥಿವನೇ, ಅದರಿಂದ ನೀನು ಅರವತ್ತುಸಾವಿರ ಪುತ್ರರನ್ನು ಪಡೆಯುವಿ. ಎಲೈ ನರಾಧಿಪನೇ, ನಿನಗೆ ಪುತ್ರಜನ್ಮವು ಈ ರೀತಿಯಲ್ಲಿ ಮಹಾದೇವರಿಂದ ಹೇಳಲ್ಪಟ್ಟಿದೆ. ನಿನ್ನ ಬುದ್ಧಿಯು ಬೇರೆ ರೀತಿ ಆಗದೇ ಇರಲಿ (ಎಂದು ನುಡಿಯಿತು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋತ್ತರಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಒಂದನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಎರಡನೆಯ ಅಧ್ಯಾಯ

ಸಗರನ ಅಶ್ವಮೇಧಯಾಗ. ಅಶ್ವದ ಅದರ್ಶನ. ಸಗರ ಪುತ್ರರಿಂದ ಕಪಿಲಾಶ್ರಮದಲ್ಲಿ ಅಶ್ವದರ್ಶನ.
ಲೋಮಶಃ
ಏತಚ್ಛ್ರುತ್ವಾಽಂತರಿಕ್ಷಾದ್ವೈ ಸ ರಾಜಾ ರಾಜಸತ್ತಮಃ |
ಯಥೋಕ್ತಂ ತಚ್ಚಕಾರಾಥ ಶ್ರದ್ದಧದ್ ಭರತರ್ಷಭ ॥1॥
ಲೋಮಶ ಎಲೈ ಭರತರ್ಷಭನೇ, ಆ ರಾಜಶ್ರೇಷ್ಠನಾದ ಸಗರನು ಅಂತರಿಕ್ಷದಿಂದ ಈ ವಾಣಿಯನ್ನು ಕೇಳಿ ಅದನ್ನು ನಂಬಿ ಆ ವಾಣಿಯು ಹೇಳಿದಂತೆಯೇ ಮಾಡಿದನು.
ಷಷ್ಟಿಃ ಪುತ್ರಸಹಸ್ರಾಣಿ ತಸ್ಯಾಪ್ರತಿಮತೇಜಸಃ |
ರುದ್ರಪ್ರಸಾದಾದ್ರಾಜರ್ಷೇಃ ಸಮಜಾಯಂತ ಪಾರ್ಥಿವ ॥2॥
ಎಲೈ ಪಾರ್ಥಿವನೇ, ರುದ್ರದೇವರ ಅನುಗ್ರಹದಿಂದ ಆ ರಾಜರ್ಷಿಗೆ ಅಸದೃಶ ಪರಾಕ್ರಮವುಳ್ಳ ಅರವತ್ತು ಸಾವಿರ ಪುತ್ರರು ಜನಿಸಿದರು.
ತೇ ಘೋರಾಃ ಕ್ರೂರಕರ್ಮಾಣ ಆಕಾಶೇ ಪರಿಸರ್ಪಿಣಃ |
ಬಹುತ್ವಾಚ್ಚಾವಜಾನಂತಃ ಸರ್ವಾನ್‌ಲ್ಲೋಕಾನ್ ಸಹಾಮರಾನ್ ॥3॥
ತ್ರಿದಶಾಂಶ್ಚಾಪ್ಯಬಾಧಂತ ತಥಾ ಗಂಧರ್ವರಾಕ್ಷಸಾನ್ |
ಸರ್ವಾಣಿ ಚೈವ ಭೂತಾನಿ ಶೂರಾಃ ಸಮರಶಾಲಿನಃ ॥4॥
ಅವರು ಘೋರರರೂ, ಶೂರರೂ, ಸಮರಶೀಲರೂ, ಕ್ರೂರಕರ್ಮಗಳನ್ನು ಮಾಡುವವರೂ, ಆಕಾಶದಲ್ಲಿ ಸಂಚರಿಸುವವರೂ ಆಗಿ ತಮ್ಮ

ಸಂಖ್ಯಾಬಲದಿಂದ ದೇವತೆಗಳಿಂದ ಕೂಡಿದ ಎಲ್ಲಾ ಲೋಕಗಳನ್ನು ಅವಮಾನಗೊಳಿಸುತಾ ದೇವತೆಗಳನ್ನೂ, ಗಂಧರ್ವರನ್ನೂ, ರಾಕ್ಷಸರನ್ನೂ ಮತ್ತು ಎಲ್ಲಾ ಪ್ರಾಣಿಗಳನ್ನೂ ಬಾಧಿಸಿದರು.
ವಧ್ಯಮಾನಾಸ್ತದಾ ಲೋಕಾಃ ಸಾಗರೈರ್ಮಂದಬುದ್ಧಿಭಿಃ |
ಬ್ರಹ್ಮಾಣಂ ಶರಣಂ ಜಗ್ಮುಃ ಸಹಿತಾಃ ಸರ್ವದೈವತೈಃ ॥5॥
ಮಂದಬುದ್ಧಿಗಳಾದ ಸಗರಪುತ್ರರಿಂದ ಬಾಧಿಸಲ್ಪಟ್ಟವರೆಲ್ಲರೂ ದೇವತೆಗಳ ಜೊತೆಯಲ್ಲಿ ಹೋಗಿ ಬ್ರಹ್ಮದೇವರಿಗೆ ಶರಣಾಗತರಾದರು.
ತಾನುವಾಚ ಮಹಾಭಾಗಃ ಸರ್ವಲೋಕಪಿತಾಮಹಃ |
ಗಚ್ಛಧ್ವಂ ತ್ರಿದಶಾಃ ಸರ್ವೇ ಲೋಕೈಃ ಸಾರ್ಧಂ ಯಥಾಗತಮ್ ॥6॥
ನಾತಿದೀರ್ಘೇಣ ಕಾಲೇನ ಸಾಗರಾಣಾಂ ಕ್ಷಯೋ ಮಹಾನ್ |
ಭವಿಷ್ಯತಿ ಮಹಾಘೋರಃ ಸ್ವಕೃತೈಃ ಕರ್ಮಭಿಃ ಸುರಾಃ ॥7॥
ಮಹಾನುಭಾವರೂ, ಸರ್ವಲೋಕಪಿತಾಮಹರೂ ಆದ ಬ್ರಹ್ಮದೇವರು ಅವರನ್ನು ಕುರಿತು ಎಲೈ ದೇವತೆಗಳೇ, ನೀವೆಲ್ಲರೂ ಪ್ರಜೆಗಳ ಜೊತೆಯಲ್ಲಿ ನೀವು ಬಂದ ದಾರಿಯಲ್ಲಿಯೇ ನಿಮ್ಮ ನಿಮ್ಮ ಲೋಕಗಳಿಗೆ ಹಿಂದಿರುಗಿ. ಇನ್ನು ಸ್ವಲ್ಪಕಾಲದಲ್ಲಿಯೇ ಸಗರಪುತ್ರರಿಗೆ ಅವರ ಕರ್ಮದಿಂದಲೇ ಉಂಟಾದ ಮಹಾಘೋರವಾದ ವಿನಾಶವು ಉಂಟಾಗುವುದು ಎಂದು ಹೇಳಿದರು.
ಏವಮುಕ್ತಾಸ್ತು ತೇ ದೇವಾ ಲೋಕಾಶ್ಚ ಮನುಜೋತ್ತಮ |
ಪಿತಾಮಹಮನುಜ್ಞಾಪ್ಯ ವಿಪ್ರಜಗ್ಮುರ್ಯಥಾಗತಮ್ ॥8॥
ಎಲೈ ಮನುಜೋತ್ತಮನೇ, ಹೀಗೆ ಹೇಳಲ್ಪಟ್ಟ ದೇವತೆಗಳು ಮತ್ತು ಪ್ರಜೆಗಳು ಬ್ರಹ್ಮದೇವರ ಅಪ್ಪಣೆಯನ್ನು ಪಡೆದು ತಾವು ಬಂದ ದಾರಿಯಲ್ಲಿ ಹಿಂದಿರುಗಿದರು.
ತತಃ ಕಾಲೇ ಬಹುತಿಥೇ ವ್ಯತೀತೇ ಮನುಜೇಶ್ವರ |
ದೀಕ್ಷಿತಃ ಸಗರೋ ರಾಜಾ ಹಯಮೇಧೇನ ವೀರ್ಯವಾನ್ ॥9॥
ಎಲೈ ಮನುಜೇಶ್ವರನೇ, ಅನಂತರ ಬಹಳ ಕಾಲವು ಕಳೆದ ಮೇಲೆ ಪ್ರತಾಪಶಾಲಿಯಾದ ಸಗರರಾಜನು ಅಶ್ವಮೇಧ ಯಾಗಕ್ಕೆ ದೀಕ್ಷೆಯನ್ನು ಹೊಂದಿದನು.
ತಸ್ಯಾಶ್ವೋ ವ್ಯಚರದ್ ಭೂಮಿಂ ಪುತ್ರೈಃ ಸುಪರಿರಕ್ಷಿತಃ |
ಸರ್ವೈರೇವ ಮಹೋತ್ಸಾಹೈಃ ಸ್ವಚ್ಛಂದಪ್ರಚರೋ ನೃಪ ॥10॥
ಎಲೈ ರಾಜನೇ, ಸ್ವಚ್ಛಂದವಾಗಿ ಸಂಚರಿಸುವ ಅವನ ಯಜ್ಞಾಶ್ವವಾದರೂ ಮಹೋತ್ಸಾಹವುಳ್ಳ ಅವನ ಎಲ್ಲಾ ಮಕ್ಕಳಿಂದ ರಕ್ಷಿಸಲ್ಪಟ್ಟಿದ್ದಾಗಿ ಭೂಮಿಯಲ್ಲಿ ಸಂಚರಿಸಿತು.
ಸಮುದ್ರಂ ಸ ಸಮಾಸಾದ್ಯ ನಿಸ್ತೋಯಂ ಭೀಮದರ್ಶನಮ್ |
ರಕ್ಷ್ಯಮಾಣಃ ಪ್ರಯತ್ನೇನ ತತ್ರೈವಾಂತರಧೀಯತ ॥11॥
ಆ ಅಶ್ವವು ಭಯಂಕರವಾಗಿ ಕಾಣುತ್ತಿದ್ದ ಜಲವಿಲ್ಲದ ಸಮುದ್ರವನ್ನು ತಲುಪಿ ಸಗರ ಪುತ್ರರು ಪ್ರಯತ್ನಪೂರ್ವಕವಾಗಿ ರಕ್ಷಣೆ ಮಾಡುತ್ತಿದ್ದರೂ ಅಲ್ಲಿಯೇ ಅದೃಶ್ಯವಾಯಿತು.
ತತಸ್ತೇ ಸಾಗರಾಸ್ತಾತ ಹೃತಂ ಜ್ಞಾತ್ವಾ ಹಯೋತ್ತಮಮ್ |
ಆಗಮ್ಯ ಪಿತುರಾಚಖ್ಯುರದೃಶ್ಯಂ ತುರಗೋತ್ತಮಮ್ ॥12॥
ಎಲೈ ಪ್ರೀತಿಪಾತ್ರನೇ, ಅನಂತರ ಆ ಸಗರಪುತ್ರರು ಅಶ್ವಶ್ರೇಷ್ಠವು ಅಪಹೃತವಾಗಿದೆ ಎಂದು ತಿಳಿದು ತಂದೆಯ ಬಳಿಗೆ ಬಂದು ಶ್ರೇಷ್ಠವಾದ ಯಜ್ಞಾಶ್ವವು ಅದೃಶ್ಯವಾಗಿದೆ ಎಂದು ಹೇಳಿದರು.
ತೇನೋಕ್ತಾ ದಿಕ್ಷು ಸರ್ವಾಸು ಪುತ್ರಾ ಮಾರ್ಗತ ವಾಜಿನಮ್ |
ಸಸಮುದ್ರವನದ್ವೀಪಾಂ ವಿಚಿನ್ವಂತೋ ವಸುಂಧರಾಮ್ ॥13॥
ಸಗರನಾದರೂ ಎಲೈ ಮಕ್ಕಳೇ, ಸಮುದ್ರವನದ್ವೀಪಗಳಿಂದ ಸಹಿತವಾದ ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಹುಡುಕುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಅಶ್ವವನ್ನು ಹುಡುಕಿ ಎಂದು ಹೇಳಿದನು.
ತತಸ್ತೇ ಪಿತುರಾಜ್ಞಾಯ ದಿಕ್ಷು ಸರ್ವಾಸು ತಂ ಹಯಮ್ |
ಅಮಾರ್ಗಂತ ಮಹಾರಾಜ ಸಂಚೇರುಃ ಪೃಥಿವೀತಳಮ್ ॥14॥
ಎಲೈ ಮಹಾರಾಜನೇ, ಆಗ ಅವರು ತಂದೆಯ ಆಜ್ಞೆಯನ್ನು ಧರಿಸಿ ಎಲ್ಲಾ ದಿಕ್ಕುಗಳಲ್ಲಿಯೂ ಹಯವನ್ನು ಹುಡುಕುತ್ತಾ ಭೂಮಿಯಲ್ಲೆಲ್ಲಾ ಸಂಚರಿಸಿದರು.
ತತಸ್ತೇ ಸಾಗರಾಃ ಸರ್ವೇ ಸಮಾಸಾದ್ಯ ಪರಸ್ಪರಮ್ |
ನಾಧ್ಯಗಚ್ಛಂತ ತುರಗಮಶ್ವಹರ್ತಾರಮೇವ ಚ ॥15॥
ಆಗ ಆ ಸಗರಪುತ್ರರೆಲ್ಲರೂ ಪರಸ್ಪರವಾಗಿ ಸೇರಿ ಹುಡುಕಿದರೂ ಅಶ್ವವನ್ನಾಗಲೀ, ಅಶ್ವದ ಅಪಹರಣಕಾರರನ್ನಾಗಲೀ ಕಾಣಲಿಲ್ಲ.
ಆಗಮ್ಯ ಪಿತರಂ ಚೋಚುಃ ತತಃ ಪ್ರಾಂಜಲಯೋಽಗ್ರತಃ |
ಸ್ಥಿತಾಃ ಸರ್ವೇ ಮಹೀಪಾಲ ಸಾಗರಾಃ ಸಹಿತಾಸ್ತದಾ ॥16॥
ಸಸಮುದ್ರವನದ್ವೀಪಾ ಸನದೀನದಕಂದರಾ |
ಸಪರ್ವತವನೋದ್ದೇಶಾ ನಿಖಿಲೇನ ಮಹೀ ನೃಪ ॥17॥
ಅಸ್ಮಾಭಿರ್ವಿಚಿತಾ ರಾಜನ್ ಶಾಸನಾತ್ ತವ ಪಾರ್ಥಿವ |
ನ ಚಾಶ್ವಮಧಿಗಚ್ಛಾಮೋ ನಾಶ್ವಹರ್ತಾರಮೇವ ವಾ ॥18॥
ಎಲೈ ಮಹಿಪಾಲನೇ, ಸಗರನ ಪುತ್ರರೆಲ್ಲರೂ ಒಟ್ಟಾಗಿ ಬಂದು ತಂದೆಯ ಎದುರಿನಲ್ಲಿ ಕೈಗಳನು ಮುಗಿದು ನಿಂತು ಅವನನ್ನು ಕುರಿತು

ಸಮುದ್ರವನ ದ್ವೀಪಗಳನ್ನೂ ನದಿ ನದಗಳ ಕಂದರುಗಳನ್ನೂ, ಪರ್ವತವನೋದ್ದೇಶಗಳನ್ನೂ, ಸಮಗ್ರವಾದ ಪೃಥ್ವಿಯನ್ನು ನಿನ್ನ ಅಪ್ಪಣೆಯಂತೆ ನಾವು ಹುಡುಕಿದರೂ, ಎಲೈ ರಾಜನೇ, ಅಶ್ವವನ್ನಾಗಲೀ, ಅಶ್ವದ ಅಪಹರಣಕಾರರನ್ನಾಗಲೀ ನಾವು ಕಾಣಲಿಲ್ಲ ಎಂದು ಹೇಳಿದರು.
ಶ್ರುತ್ವಾ ತು ವಚನಂ ತೇಷಾಂ ಸ ರಾಜಾ ಕ್ರೋಧಮೂರ್ಚ್ಛಿತಃ|
ಉವಾಚ ವಚನಂ ಸರ್ವಾನ್ ತದಾ ದೈವವಶಾನ್ನೃಪ ॥19॥
ಅನಾಗಮಾಯ ಗಚ್ಛಧ್ವಂ ಭೂಯೋ ಮಾರ್ಗತ ವಾಜಿನಮ್|
ಯಾಜ್ಞಿಯಂ ತಂ ವಿನಾ ಹ್ಯಶ್ವಂ ನಾಗಂತವ್ಯಂ ಹಿ ಪುತ್ರಕಾಃ ॥20॥
ಎಲೈ ರಾಜನೇ, ಅವರ ವಚನವನ್ನು ಕೇಳಿದ ರಾಜನು ಕ್ರೋಧಮೂರ್ಛಿತನಾಗಿ ದೈವ ಪ್ರೇರಣೆಯಂತೆ ಅವರೆಲ್ಲರನ್ನು ಕುರಿತು ಹೋಗಿ ಹಿಂದಿರುಗಿ ಬರಬೇಡಿ; ಪುನಃ ಅಶ್ವವನ್ನು ಹುಡುಕಿ. ಪುತ್ರರೇ, ಯಜ್ಞಾಶ್ವವಿಲ್ಲದೇ ನೀವು ಹಿಂದಕ್ಕೆ ಬರಬೇಡಿ ಎಂದು ಹೇಳಿದನು.
ಪ್ರತಿಗೃಹ್ಯ ತು ಸಂದೇಶಂ ಪಿತುಸ್ತೇ ಸಗರಾತ್ಮಜಾಃ|
ಭೂಯ ಏವ ಮಹೀಂ ಕೃತ್ಸ್ನಾಂ ವಿಚೇತುಮುಪಚಕ್ರಮುಃ ॥21॥
ಆಗ ಸಗರಾತ್ಮಜರು ತಂದೆಯ ಸಂದೇಶವನ್ನು ಸ್ವೀಕರಿಸಿ ಪುನಃ ಭೂಮಿಯಲ್ಲೆಲ್ಲಾ ಅಶ್ವವನ್ನು ಹುಡುಕಲು ಪ್ರಾರಂಭಿಸಿದರು.
ಅಥಾಪಶ್ಯಂತ ತೇ ವೀರಾಃ ಪೃಥಿವೀಂ ತು ವಿದಾರಿತಾಮ್|
ಸಮುದ್ರೇ ಪೃಥಿವೀಪಾಲ ಪದಮಾರ್ಗಂ ಚ ವಾಜಿನಃ ॥22॥
ಎಲೈ ಪೃಥಿವೀಪಾಲನೇ, ಆಗ ವೀರರಾದ ಅವರು ಸಮುದ್ರದ ಸಮೀಪದಲ್ಲಿ ಭೂಮಿಯು ಸೀಳಿರುವುದನ್ನೂ ಮತ್ತು ಅಶ್ವದ ಹೆಜ್ಜೆಗಳ ದಾರಿಯನ್ನೂ ಗಮನಿಸಿದರು.
ಸಮಾಸಾದ್ಯ ಬಿಲಂ ತಚ್ಚಾಪ್ಯಖನನ್ ಸಗರಾತ್ಮಜಾಃ|
ಕುದ್ದಾಲೈರ್ಮುಸಲೈಶ್ಚೈವ ಸಮುದ್ರಂ ಯತ್ನಮಾಸ್ಥಿತಾಃ ॥23॥
ಸಗರಾತ್ಮಜರು ಆ ಭೂಮಿಯ ಬಿಲದ ಬಳಿಗೆ ಬಂದು ಹಾರೆಗಳಿಂದಲೂ ಮತ್ತು ಒನಕೆಗಳಿಂದ ಪ್ರಯತ್ನಪೂರ್ವಕವಾಗಿ ಆ ಸಮುದ್ರವನ್ನು ಅಗೆದರು.
ಸ ಖನ್ಯಮಾನಃ ಸಹಿತೈಃ ಸಾಗರೈರ್ವರುಣಾಲಯಃ|
ಅಗಚ್ಛತ್ ಪರಮಾಮಾರ್ತಿಂ ದಾರ್ಯಮಾಣಃ ಸಮಂತತಃ ॥24॥
ಸಗರ ಪುತ್ರರಿಂದ ಒಟ್ಟಾಗಿ ಅಗೆಯಲ್ಪಡುವ ಆ ಸಮುದ್ರವು ಎಲ್ಲಕಡೆಗಳಲ್ಲಿಯೂ ಸೀಳಲ್ಪಟ್ಟದ್ದಾಗಿ ಬಹಳ ದುಃಖವನ್ನು ಹೊಂದಿತು.
ಅಸುರೋರಗರಕ್ಷಾಂಸಿ ಸತ್ತ್ವಾನಿ ವಿವಿಧಾನಿ ಚ|
ಆರ್ತನಾದಮಕುರ್ವಂತ ವಧ್ಯಮಾನಾನಿ ಸಾಗರೈಃ ॥25॥
ಆ ಸಮುದ್ರದ ಖಾತದಲ್ಲಿದ್ದ ಅಸುರರು, ಉರಗ ರಾಕ್ಷಸರು, ವಿವಿಧ ಪ್ರಾಣಿಗಳು ಸಗರ ಪುತ್ರರಿಂದ ವಧೆಗೆ ಒಳಗಾಗಿ ಆರ್ತನಾದವನ್ನು ಮಾಡಿದರು.
ಭಿನ್ನಶೀರ್ಷಾ ವಿದೇಹಾಶ್ಚ ಭಿನ್ನಜಾನ್ವಸ್ಥಿಮಸ್ತಕಾಃ|
ಪ್ರಾಣಿನಃ ಸಮದೃಶ್ಯಂತ ಶತಶೋಽಥ ಸಹಸ್ರಶಃ ॥26॥
ತಲೆಯನ್ನು ಒಡೆದ ದೇಹರಹಿತವಾದ ಜಾನು, ಅಸ್ಥಿ ಮತ್ತು ಮಸ್ತಕಗಳು ಭಿನ್ನಭಿನ್ನವಾದ ಪ್ರಾಣಿಗಳು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಅಲ್ಲಿ ಕಂಡುಬಂದವು.
ಏವಂ ತು ಖನತಾಂ ತೇಷಾಂ ಸಮುದ್ರಂ ಮಕರಾಲಯಮ್|
ವ್ಯತೀತಃ ಸುಮಹಾನ್ ಕಾಲೋ ನ ಚಾಶ್ವಃ ಸಮದೃಶ್ಯತ ॥27॥
ಹೀಗೆ ಸಗರಪುತ್ರರು ಮಕರಾಲಯವಾದ ಸಮುದ್ರವನ್ನು ಅಗೆಯುತ್ತಿರಲು ಬಹಳ ಕಾಲವು ಕಳೆದು ಹೋಯಿತು. ಅಶ್ವವೂ ಕಾಣಲಿಲ್ಲ.
ತತಃ ಪೂರ್ವೋತ್ತರೇ ದೇಶೇ ಸಮುದ್ರಸ್ಯ ವಿಶಾಂಪತೇ|
ವಿದಾರ್ಯ ಪಾತಾಳಮುಖಂ ಸಂಕ್ರುದ್ಧಾಃ ಸಗರಾತ್ಮಜಾಃ ॥28॥
ಅಪಶ್ಯಂತ ಹಯಂ ತತ್ರ ವಿಚರಂತಂ ಮಹೀತಳೇ|
ಕಪಿಲಂ ಚ ಮಹಾತ್ಮಾನಂ ತೇಜೋರಾಶಿಮನುತ್ತಮಮ್ ॥29॥
ತೇಜಸಾ ದೀಪ್ಯಮಾನಂ ತಂ ಜ್ವಾಲಾಭಿರಿವ ಪಾವಕಮ್|
ದೃಷ್ಟ್ವಾ ಹಿ ಹೃಷಿತಾಃ ಸರ್ವೇ ಬಭೂವುಃ ಸಗರಾತ್ಮಜಾಃ ॥30॥
ಎಲೈ ರಾಜನೇ, ಅನಂತರ ಸಮುದ್ರದ ಈಶಾನ್ಯಭಾಗದಲ್ಲಿ ಭೂಮಿಯನ್ನು ಸೀಳಿಕೊಂಡು ಸಂಕ್ರುದ್ಧರಾದ ಸಗರಪುತ್ರರು ಪಾತಾಳಕ್ಕೆ ಹೋಗಿ ಅಲ್ಲಿ ನೆಲದ ಮೇಲೆ ಸಂಚರಿಸುತ್ತಿದ್ದ ತಮ್ಮ ಕುದುರೆಯನ್ನೂ, ತೇಜೋರಾಶಿಯಾದ ಪರಮಶ್ರೇಷ್ಠನಾದ ಮಹಾತ್ಮನಾದ ಕಪಿಲನನ್ನೂ ನೋಡಿದರು. ಜ್ವಾಲೆಗಳಿಂದ ಅಗ್ನಿಯು ಉರಿಯುವಂತೆ ತಮ್ಮ ತೇಜಸ್ಸಿನಿಂದ ಬೆಳಗುತ್ತಿದ್ದ ಕಪಿಲನನ್ನು ನೋಡಿ ಎಲ್ಲಾ ಸಗರಪುತ್ರರೂ ಸಂತುಷ್ಟರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವ್ಯಯತ್ತರಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.
*****
ನೂರ ಮೂರನೆಯ ಅಧ್ಯಾಯ
ನಾರದರಿಂದ ಸಗರನಿಗೆ ಪುತ್ರನಾಶವಾರ್ತೆ, ಅಂಶುಮಂತನಿಂದ ಯಜ್ಞಾಶ್ವವನ್ನು ತಂದು ಯಜ್ಞಸಮಾಪಿತ. ಭಗೀರಥನ ಜನನ.

ಲೋಮಶಃ
ತೇ ತಂ ದೃಷ್ಟ್ವಾ ಹಯಂ ರಾಜನ್ ಸಂಪ್ರಹೃಷ್ಟತನೂರುಹಾಃ |
ಅನಾದೃತ್ಯ ಮಹಾತ್ಮಾನಂ ಕಪಿಲಂ ಕಾಲಚೋದಿತಾಃ ||1||
ಸಂಕ್ರುದ್ಧಾಃ ಸಮಧಾವಂತ ವಾಜಿಗ್ರಹಣಕಾಂಕ್ಷಿಣಃ |
ಎಲೈ ರಾಜನೇ, ಆ ಸಗರನ ಪುತ್ರರು ಅಶ್ವವನ್ನು ನೋಡಿ ರೋಮಾಂಚ ಉಳ್ಳವರಾಗಿ ಮಹಾತ್ಮರಾದ ಕಪಿಲರನ್ನು ತಿರಸ್ಕರಿಸಿ ಕಾಲಚೋದಿತರಾಗಿ ಕ್ರೋಧವಶರಾಗಿ ಅಶ್ವವನ್ನು ಹಿಡಿದುಕೊಳ್ಳಲು ಬಯಸಿ ಓಡಿದರು.
ತತಃ ಕ್ರುದ್ಧೋ ಮಹಾಭಾಗಃ ಕಪಿಲೋ ಮುನಿಸತ್ತಮಃ ||2||
ವಾಸುದೇವೇತಿ ಯಂ ಪ್ರಾಹುಃ ಕಪಿಲಂ ಮುನಿಪುಂಗವಮ್ |
ಸ ಚಕ್ಷುರ್ವಿವೃತಂ ಕೃತ್ವಾ ತೇಜಸ್ತೇಷು ಸಮುತ್ಸೃಜನ್ ||3||
ದದಾಹ ಸುಮಹಾತೇಜಾ ಮಂದಬುದ್ಧೀನ್ ಸ ಸಾಗರಾನ್ |
ಷಷ್ಟಿಂ ತಾನಿ ಸಹಸ್ರಾಣಿ ಯುಗಪನ್ಮುನಿಸತ್ತಮಃ ||4||
ಮುನಿಶ್ರೇಷ್ಠರಾದ ಕಪಿಲರನ್ನು ವಾಸುದೇವನೆಂದು ಜ್ಞಾನಿಗಳು ಹೇಳುತ್ತಾರೆ. ಮಹಾನುಭಾವರಾದ, ಮುನಿಶ್ರೇಷ್ಠರಾದ ಕಪಿಲರು ಕೋಪದಿಂದ ಕಣ್ಣುಗಳನ್ನು ಅರಳಿಸಿ ತಮ್ಮ ತೇಜಸ್ಸನ್ನು ಸಗರಪುತ್ರರ ಮೇಲೆ ಬೀರಿದರು. ಮಹಾತೇಜಸ್ವಿಗಳೂ, ಮುನಿಶ್ರೇಷ್ಠರೂ ಆದ ಅವರು ಮಂದಬುದ್ಧಿಗಳಾದ ಅರವತ್ತುಸಾವಿರ ಸಗರಪುತ್ರರನ್ನು ಒಟ್ಟಿಗೆ ದಹಿಸಿದರು.
ತಾನ್ ದೃಷ್ಟ್ವಾ ಭಸ್ಮಸಾದ್ಭೂತಾನ್ ನಾರದಃ ಸುಮಹಾತಪಾಃ |
ಸಗರಾಂತಿಕಮಾಸಾದ್ಯ ತಚ್ಚ ತಸ್ಮೈ ನ್ಯವೇದಯತ್ ||5||
ಆ ಸಗರಪುತ್ರರು ಭಸ್ಮರಾಶಿಯಾಗಿ ಬಿದ್ದುದನ್ನು ನೋಡಿದ ಮಹಾತಪಸ್ವಿಗಳಾದ ನಾರದರು ಸಗರನ ಬಳಿಗೆ ಬಂದು ಆ ವಾರ್ತೆಯನ್ನು ಅವನಿಗೆ ತಿಳಿಸಿದರು.
ಸ ತಚ್ಛ್ರುತ್ವಾ ವಚೋ ರಾಜಾ ಘೋರಂ ಮುನಿಮುಖೋದ್ಗತಮ್ |
ಮುಹೂರ್ತಂ ವಿಮನಾ ಭೂತ್ವಾ ಸ್ಥಾಣೋರ್ವಾಕ್ಯಮಚಿಂತಯತ್ ||6||
ಋಷಿಗಳ ಮುಖದಿಂದ ಬಂದ ಆ ಘೋರವಾದ ಮಾತುಗಳನ್ನು ಕೇಳಿ ರಾಜನು ಒಂದು ಮುಹೂರ್ತಕಾಲ ವಿಮನಸ್ಕನಾಗಿ ಅನಂತರ ರುದ್ರದೇವರ ವಚನವನ್ನು ಸ್ಮರಿಸಿದನು.
ಸ ಪುತ್ರನಿಧನೋದ್ಭೂತದುಃಖೇನ ಸಮಭಿಪ್ಲುತಃ |
ಆತ್ಮಾನಮಾತ್ಮನಾಽಽಶ್ವಾಸ್ಯ ಹಯಮೇವಾನ್ವಚಿಂತಯತ್ ||7||
ಅವನು ಪುತ್ರನಾಶದಿಂದ ಉಂಟಾದ ದುಃಖದಿಂದ ಪೂರ್ಣವಾಗಿ ತುಂಬಿದವನಾಗಿ ತನ್ನನ್ನು ತಾನೇ ಸಮಾಧಾನಮಾಡಿಕೊಂಡು ಯಜ್ಞಾಶ್ವವನ್ನೇ ಕುರಿತು ಚಿಂತಿಸಿದನು.
ಅಂಶುಮಂತಂ ಸಮಾಹೂಯ ಅಸಮಂಜಸುತಂ ತದಾ |
ಪೌತ್ರಂ ಭರತಶಾರ್ದೂಲ ಇದಂ ವಚನಮಬ್ರವೀತ್ ||8||
ಷಷ್ಟಿಸ್ತಾನಿ ಸಹಸ್ರಾಣಿ ಪುತ್ರಾಣಾಮಮಿತೌಜಸಾಮ್ |
ಕಾಪಿಲಂ ತೇಜ ಅಸಾದ್ಯ ಮತ್ಕೃತೇ ನಿಧನಂ ಗತಾಃ ||9||
ತವ ಚಾಪಿ ಪಿತಾ ತಾತ ಪರಿತ್ಯಕ್ತೋ ಮಯಾಽನಘ |
ಧರ್ಮಂ ಸಂರಕ್ಷಮಾಣೇನ ಪೌರಾಣಾಂ ಹಿತಮಾಮ್ಯಯಾ ||10||
ಎಲೈ ಭರತಶಾರ್ದೂಲನೇ, ಅಸಮಂಜಸುತನಾದ ಪೌತ್ರನಾದ ಅಂಶುಮಂತನನ್ನು ಕರೆದು `ಪ್ರೀತಿಪಾತ್ರನೇ, ಪರಿಶುದ್ಧನಾದವನೇ, ಅಮಿತಪರಾಕ್ರಮಿಗಳಾದ ನನ್ನ ಅರವತ್ತುಸಾವಿರ ಪುತ್ರರು ಕಪಿಲ ಋಷಿಗಳ ತೇಜಸ್ಸಿನಿಂದ ನನ್ನ ಸಲುವಾಗಿ ನಿಧನವನ್ನು ಹೊಂದಿದರು. ನಿನ್ನ ತಂದೆಯನ್ನಾದರೂ ನಾನು ಪೌರರ ಹಿತವನ್ನು ಬಯಸಿ ಧರ್ಮವನ್ನು ರಕ್ಷಣೆ ಮಾಡುವ ಉದ್ದೇಶದಿಂದ ಮೊದಲೇ ಪರಿತ್ಯಜಿಸಿದೆ' ಎಂದು ಹೇಳಿದನು.
ಯುಧಿಷ್ಠಿರಃ
ಕಿಮರ್ಥಂ ರಾಜಶಾರ್ದೂಲಃ ಸಗರಃ ಪುತ್ರಮಾತ್ಮಜಮ್ |
ತ್ಯಕ್ತವಾನ್ ದುಸ್ತ್ಯಜಂ ವೀರಂ ತನ್ಮೇ ಬ್ರೂಹಿ ತಪೋಧನ ||11||
ಯುಧಿಷ್ಠಿರ ಎಲೈ ತಪೋಧನರೇ, ರಾಜಶಾರ್ದೂಲನಾದ ಸಗರನು ವೀರನಾದ, ತ್ಯಜಿಸಲು ಸಾಧ್ಯವಿಲ್ಲದ ತನ್ನ ಔರಸಪುತ್ರನನ್ನು ಏತಕ್ಕೆ ಪರಿತ್ಯಜಿಸಿದನು? ಈ ವಿಷಯವನ್ನು ನನಗೆ ಹೇಳಿ.
ಲೋಮಶಃ
ಅಸಮಂಜ ಇತಿ ಖ್ಯಾತಃ ಸಗರಸ್ಯ ಸುತೋಽಭವತ್ |
ಯಂ ಶೈಬ್ಯಾ ಜನಯಾಮಾಸ ಪೌರಾಣಾಂ ಸ ಹಿ ದಾರಕಾನ್ ||12||
ಕ್ರೀಡತಃ ಸಹಸಾಽಽಸಾದ್ಯ ತತ್ರತತ್ರ ಮಹೀಪತೇ |
ಚೂಡಾಸು ಕ್ರೋಶತೋ ಗೃಹ್ಯ ನದ್ಯಾಂ ಚಿಕ್ಷೇಪ ವೈ ಬಲಾತ್ ||13||
ಲೋಮಶರು ಅಸಮಂಜ ಎಂದು ಪ್ರಖ್ಯಾತನಾದ ಸಗರಪುತ್ರನು ಶೈಬ್ಯಳಾದ ಕೇಶಿನಿಯಲ್ಲಿ ಜನಿಸಿದನು. ಮಹೀಪತಿಯೇ, ಅವನು ಅಲ್ಲಲ್ಲಿ ಆಟವಾಡುವ ಪ್ರಜೆಗಳ ಮಕ್ಕಳ ತಲೆಗಳನ್ನು ಹಿಡಿದುಕೊಂಡು ಅವರು ಕಿರುಚುತ್ತಿದ್ದರೂ ಎತ್ತಿಕೊಂಡು ಹೋಗಿ ನದಿಯಲ್ಲಿ ಎಸೆಯುತ್ತಿದ್ದನು.
ತತಃ ಪೌರಾಃ ಸಮಾಜಗ್ಮುರ್ಭಯಶೋಕಪರಿಪ್ಲುತಾಃ |

ಸಗರಂ ಚಾಪ್ಯಯಾಚಂತ ಸರ್ವೇ ಪ್ರಾಂಜಲಯಃ ಸ್ಥಿತಾಃ ॥14॥
ತ್ವಂ ನಸ್ತ್ರಾತಾ ಮಹಾರಾಜ ಪರಚಕ್ರಾದಿಭಿರ್ಭಯಾತ್ |
ಅಸಮಂಜಭಯಾದ್ ಘೋರಾದಸ್ಮಾಂಸ್ತ್ರಾತುಂ ತ್ವಮರ್ಹಸಿ ॥15॥
ಆಗ ಪೌರರು ಭಯಶೋಕಗಳಿಂದ ತುಂಬಿದವರಾಗಿ ಸಗರನ ಬಳಿಗೆ ಬಂದು ಎಲ್ಲರೂ ಕೈಗಳನ್ನು ಮುಗಿದು `ಮಹಾರಾಜನೇ, ನೀನೇ ನಮ್ಮನ್ನು ಪರರಾಜರ ಭಯದಿಂದ ಸಂರಕ್ಷಿಸುವವನು. ಈಗ ಅಸಮಂಜನಿಂದ ಉಂಟಾದ ಘೋರವಾದ ಭಯದಿಂದಲೂ ನಮ್ಮನ್ನು ರಕ್ಷಿಸಬೇಕು' ಎಂದು ಯಾಚಿಸಿದರು.
ಪೌರಾಣಾಂ ವಚನಂ ಶ್ರುತ್ವಾ ಘೋರಂ ನೃಪತಿಸತ್ತಮಃ |
ಮುಹೂರ್ತಂ ವಿಮನಾ ಭೂತ್ವಾ ಸಚಿವಾನಿದಮಬ್ರವೀತ್ ॥16॥
ಅಸಮಂಜಃ ಕುಮಾರೋಽದ್ಯ ನಗರಾದ್ ವಿಪ್ರವಾಸ್ಯತಾಮ್ |
ಯದಿ ವೋ ಮತ್ಪ್ರಿಯಂ ಕಾರ್ಯಮೇತಚ್ಛೀಘ್ರಂ ವಿಧೀಯತಾಮ್ ॥17॥
ಪೌರರ ಘೋರವಾದ ವಚನವನ್ನು ಕೇಳಿ ನೃಪತಿಶ್ರೇಷ್ಠನು ಒಂದು ಮುಹೂರ್ತದ ಕಾಲ ವಿಷಣ್ಣನಾಗಿ ಅನಂತರ ಸಚಿವರನ್ನು ಕುರಿತು ನನ್ನ ಕುಮಾರನಾದ ಅಸಮಂಜನನ್ನು ನೀವು ನಗರದಿಂದ ಹೊರಗೆ ಕಳುಹಿಸಿ. ನೀವು ನನಗೆ ಪ್ರಿಯವನ್ನು ಮಾಡುವುದಿದ್ದರೆ ಇದನ್ನು ಶೀಘ್ರವಾಗಿ ನೆರವೇರಿಸಿ ಎಂದು ಹೇಳಿದನು.
ಏವಮುಕ್ತಾ ನರೇಂದ್ರೇಣ ಸಚಿವಾಸ್ತೇ ನರಾಧಿಪ |
ಯಥೋಕ್ತಂ ತ್ವರಿತಾಶ್ಚಕ್ರುರ್ಯಥಾಽಽಜ್ಞಾಪಿತವಾನ್ ನೃಪಃ ॥18॥
ಎಲ್ಲೈ ನರಾಧಿಪನೇ, ನರೇಂದ್ರನಿಂದ ಹೀಗೆ ಹೇಳಲ್ಪಟ್ಟ ಆ ಸಚಿವರು ಶೀಘ್ರವಾಗಿ ರಾಜನು ಅಪ್ಪಣೆ ಮಾಡಿದಂತೆಯೇ ನಡೆದುಕೊಂಡರು.
ಏತತ್ ತೇ ಸರ್ವಮಾಖ್ಯಾತಂ ಯಥಾ ಪುತ್ರೋ ಮಹಾತ್ಮನಾ |
ಪೌರಾಣಾಂ ವಿಪ್ರಿಯೇ ತಿಷ್ಠನ್ ಸಗರೇಣ ವಿವಾಸಿತಃ ॥19॥
ಮಹಾತ್ಮನಾದ ಸಗರನು ಪೌರರಿಗೆ ಅಪ್ರಿಯವನ್ನು ಉಂಟುಮಾಡುವ ಮಗನನ್ನು ಹೇಗೆ ತ್ಯಜಿಸಿದನು ಎಂಬ ಎಲ್ಲಾ ವಿಷಯವನ್ನು ನಿನಗೆ ಹೇಳಿದ್ದೇನೆ.
ಅಂಶುಮಾಂಸ್ತು ಮಹೇಷ್ವಾಸೋ ಯದುಕ್ತಃ ಸಗರೇಣ ಹ |
ತತ್ ತೇ ಸರ್ವಂ ಪ್ರವಕ್ಷ್ಯಾಮಿ ಕೀರ್ತ್ಯಮಾನಂ ನಿಬೋಧ ಮೇ ॥20॥
ಸಗರನು ಮಹಾಧನುರ್ಧಾರಿಯಾದ ಅಂಶುಮಂತನನ್ನು ಕುರಿತು ಏನು ಹೇಳಿದನೋ ಅದೆಲ್ಲವನ್ನೂ ನಿನಗೆ ಹೇಳುವೆನು. ನನ್ನ ಮಾತನ್ನು ಕೇಳು.
ಸಗರಃ
ತ್ಯಾಗಾತ್ ತವ ಪಿತುಶ್ಚಾಪಿ ಶೇಷಾಣಾಂ ನಿಧನೇನ ಚ |
ಅಲಾಭೇನ ತಥಾಽಶ್ವಸ್ಯ ಪರಿತಪ್ಸ್ಯಾಮಿ ಪುತ್ರಕ |
ಸುತಾನಾಮಶ್ವನಾಶಾಚ್ಚ ಮನೋ ಮೇ ತಾತ ಮೋಹಿತಮ್ ॥21॥
ತಸ್ಮಾದ್ ದುಃಖಾಭಿಸಂತಪ್ತಂ ಯಜ್ಞವಿಘ್ನಾಚ್ಚ ಮೋಹಿತಮ್ |
ಹಯಸ್ಯಾನಯನಾತ್ ಪೌತ್ರ ನರಕಾನ್ಮಾಂ ಸಮುದ್ಧರ ॥22॥
ಸಗರ ಎಲ್ಲೈ ಪುತ್ರಕನೇ, ನಿನ್ನ ತಂದೆಯನ್ನು ಪರಿತ್ಯಾಗಮಾಡಿದುದರಿಂದಲೂ, ಉಳಿದ ಮಕ್ಕಳ ನಿಧನದಿಂದಲೂ ಯಜ್ಞಾಶ್ವದ ಅದರ್ಶನದಿಂದಲೂ ಪರಿತಾಪವನ್ನು ಪಡುತ್ತಿದ್ದೇನೆ. ಪ್ರೀತಿಪಾತ್ರನೇ, ಪುತ್ರನಾಶದಿಂದ ಮತ್ತು ಅಶ್ವನಾಶದಿಂದ ನನ್ನ ಮನಸ್ಸು ಮೋಹಕ್ಕೆ ಒಳಗಾಗಿದೆ. ಆದ್ದರಿಂದ ಎಲ್ಲೈ ಪೌತ್ರನೇ, ದುಃಖದಿಂದ ಕೂಡಿರುವ ಮತ್ತು ಯಜ್ಞವಿಘ್ನದಿಂದ ಮೋಹಿತನಾದ ನನಗೆ ಅಶ್ವವನ್ನು ಮರಳಿ ತಂದು ನನ್ನನ್ನು ನರಕದಿಂದ ಉದ್ಧರಿಸು (ಎಂದು ಹೇಳಿದನು).
ಅಂಶುಮಾನೇವಮುಕ್ತಸ್ತು ಸಗರೇಣ ಮಹಾತ್ಮನಾ |
ಜಗಾಮ ದುಃಖಾತ್ ತಂ ದೇಶಂ ಯತ್ರ ವೈ ದಾರಿತಾ ಮಹೀ ॥23॥
ಮಹಾತ್ಮನಾದ ಸಗರನಿಂದ ಹೀಗೆ ಹೇಳಲ್ಪಟ್ಟ ಅಂಶುಮಂತನು ದುಃಖದಿಂದ ಕೂಡಿದವನಾಗಿ ಭೂಮಿಯು ಅಗೆಯಲ್ಪಟ್ಟಿದ್ದ ಆ ಸಮುದ್ರದೇಶಕ್ಕೆ ಹೋದನು.
ಸ ತು ತೇನೈವ ಮಾರ್ಗೇಣ ಸಮುದ್ರಂ ಪ್ರವಿವೇಶ ಹ |
ಅಪಶ್ಯಚ್ಚ ಮಹಾತ್ಮಾನಂ ಕಪಿಲಂ ತುರಗಂ ಚ ತಮ್ ॥24॥
ಅವನು ಅದೇ ಮಾರ್ಗದಿಂದ ಸಮುದ್ರವನ್ನು ಪ್ರವೇಶಮಾಡಿ ಮಹಾತ್ಮನಾದ ಕಪಿಲನನ್ನೂ ಮತ್ತು ಯಜ್ಞಾಶ್ವವನ್ನೂ ನೋಡಿದನು.
ದೃಷ್ಟ್ವಾ ತಂ ತೇಜಸಾಂ ರಾಶಿಂ ಪುರಾಣಮೃಷಿಸತ್ತಮಮ್ |
ಪ್ರಣಮ್ಯ ಶಿರಸಾ ಭೂಮೌ ಕಾರ್ಯಂ ತಸ್ಮೈ ನ್ಯವೇದಯತ್ ॥25॥
ತೇಜೋರಾಶಿಯೂ, ಪುರಾತನ ಋಷಿಶ್ರೇಷ್ಠನೂ ಆದ ಕಪಿಲನನ್ನು ನೋಡಿ ಅವನಿಗೆ ಭೂಮಿಯ ಮೇಲೆ ಶಿರಸಾ ನಮಸ್ಕರಿಸಿ ತಾನು ಬಂದ ಕಾರ್ಯವನ್ನು ಅವನಿಗೆ ತಿಳಿಸಿದನು.
ತತಃ ಪ್ರೀತೋ ಮಹಾತೇಜಾಃ ಕಪಿಲೋಽಂಶುಮತೋಽಭವತ್ |
ಉವಾಚ ಚೈನಂ ಧರ್ಮಾತ್ಮಾ ವರದೋಽಸ್ಮೀತಿ ಭಾರತ ॥26॥
ಎಲ್ಲೈ ಭಾರತನೇ, ಆಗ ಮಹಾತೇಜಸ್ವಿಯಾದ ಕಪಿಲನು ಅಂಶುಮಂತನಿಗೆ ಪ್ರಸನ್ನನಾಗಿ, ಅಂಶುಮಂತನನ್ನು ಕುರಿತು ನಾನು ನಿನಗೆ ವರವನ್ನು ಕೊಡುತ್ತೇನೆ ಎಂದು ಹೇಳಿದನು.

ಸ ವವ್ರೇ ತುರಗಂ ತತ್ರ ಪ್ರಥಮಂ ಯಜ್ಞಕಾರಣಾತ್ |
ದ್ವಿತೀಯಮುದಕಂ ವವ್ರೇ ಪಿತೄಣಾಂ ಪಾವನೇಪ್ಸಯಾ ॥27॥
ಆಗ ಅಂಶುಮಂತನು ಮೊದಲು ಯಜ್ಞವನ್ನು ನೆರವೇರಿಸಲು ಅಶ್ವವನ್ನೂ ಮತ್ತು ಎರಡನೆಯದಾಗಿ ಪಿತೃಗಳನ್ನು ಪವಿತ್ರೀಕರಿಸಲು ಉದಕವನ್ನೂ ವರವಾಗಿ ಬೇಡಿದನು.
ತಮುವಾಚ ಮಹಾತೇಜಾಃ ಕಪಿಲೋ ಮುನಿಪುಂಗವಃ |
ದದಾನಿ ತವ ಭದ್ರಂ ತೇ ಯದ್ಯತ್ ಪ್ರಾರ್ಥಯಸೇಽನಘ ॥28॥
ತ್ವಯಿ ಕ್ಷಮಾ ಚ ಧರ್ಮಶ್ಚ ಸತ್ಯಂ ಚಾಪಿ ಪ್ರತಿಷ್ಠಿತಮ್ |
ತ್ವಯಾ ಕೃತಾರ್ಥಃ ಸಗರಃ ಪುತ್ರವಾಂಶ್ಚ ತ್ವಯಾ ಪಿತಾ ॥29॥
ತವ ಚೈವ ಪ್ರಭಾವೇಣ ಸ್ವರ್ಗಂ ಯಾಸ್ಯಂತಿ ಸಾಗರಾಃ |
ಶಲಭತ್ವಂ ಗತಾ ಹ್ಯೇತೇ ಮಮ ಕ್ರೋಧಹುತಾಶನೇ ॥30॥
ಪೌತ್ರಶ್ಚ ತೇ ತ್ರಿಪಥಗಾಂ ತ್ರಿದಿವಾದಾನಯಿಷ್ಯತಿ |
ಪಾವನಾರ್ಥಂ ಸಾಗರಾಣಾಂ ತೋಷಯಿತ್ವಾ ಮಹೇಶ್ವರಮ್ ॥31॥
ಹಯಂ ನಯಸ್ವ ಭದ್ರಂ ತೇ ಯಾಜ್ಞಿಯಂ ನರಪುಂಗವ |
ಯಜ್ಞಃ ಸಮಾಪ್ಯತಾಂ ತಸ್ಯ ಸಗರಸ್ಯ ಮಹಾತ್ಮನಃ ॥32॥
ಆಗ ಮಹಾತೇಜಸ್ವಿಯೂ, ಮುನಿಶ್ರೇಷ್ಠನೂ ಆದ ಕಪಿಲನು ಅವನನ್ನು ಕುರಿತು `ಎಲೈ ಪರಿಶುದ್ಧನಾದವನೇ ನಿನಗೆ ಮಂಗಳವಾಗಲಿ. ನೀನು ಕೇಳಿದ ವರವನ್ನೆಲ್ಲಾ ಕೊಡುವೆನು. ನಿನ್ನಲ್ಲಿ ಕ್ಷಮೆಯೂ, ಧರ್ಮವೂ, ಸತ್ಯವೂ ಪ್ರತಿಷ್ಠಿತವಾಗಿದೆ. ಸಗರನು ನಿನ್ನಿಂದ ಕೃತಾರ್ಥನಾಗಿದ್ದಾನೆ. ಅಸಮಂಜನೂ ಸಹ ನಿನ್ನಂಥ ಮಗನನ್ನು ಪಡೆದು ಪುತ್ರವಂತನಾಗಿದ್ದಾನೆ. ನಿನ್ನ ಪ್ರಭಾವದಿಂದಲೇ ನನ್ನ ಕ್ರೋಧಾಗ್ನಿಯಲ್ಲಿ ಶಲಭದಂತೆ ಬೆಂದುಹೋದ ಸಗರಪುತ್ರರೆಲ್ಲರೂ ಸ್ವರ್ಗಕ್ಕೆ ಹೋಗುವರು. ನಿನ್ನ ಮೊಮ್ಮಗನು ಮಹೇಶ್ವರನನ್ನು ಸಂತೋಷಪಡಿಸಿ ಸಗರಪುತ್ರರನ್ನು ಪವಿತ್ರೀಕರಿಸಲು ಸ್ವರ್ಗದಿಂದ ಗಂಗೆಯನ್ನು ಭೂಮಿಗೆ ತರುವನು. ನಿನಗೆ ಮಂಗಳವಾಗಲಿ. ಎಲೈ ನರಶ್ರೇಷ್ಠನೇ, ಯಜ್ಞಾಶ್ವವನ್ನು ತೆಗೆದುಕೊಂಡು ಹೋಗಿ ಮಹಾತ್ಮನಾದ ಸಗರನ ಯಜ್ಞವನ್ನು ಪೂರ್ಣಗೊಳಿಸು' ಎಂದು ಹೇಳಿದನು.
ಅಂಶುಮಾನೇವಮುಕ್ತಸ್ತು ಕಪಿಲೇನ ಮಹಾತ್ಮನಾ |
ಆಜಗಾಮ ಹಯಂ ಗೃಹ್ಯ ಯಜ್ಞವಾಟಂ ಮಹಾತ್ಮನಃ ॥33॥
ಮಹಾತ್ಮನಾದ ಕಪಿಲನಿಂದ ಹೀಗೆ ಹೇಳಲ್ಪಟ್ಟ ಅಂಶುಮಂತನು ಯಜ್ಞಾಶ್ವವನ್ನು ತೆಗೆದುಕೊಂಡು ಮಹಾತ್ಮನಾದ ಸಗರನ ಯಜ್ಞಶಾಲೆಗೆ ಬಂದನು.
ಸೋಽಭಿವಾದ್ಯ ಪಿತುಃ ಪಾದೌ ಸಗರಸ್ಯ ಮಹಾತ್ಮನಃ |
ಮೂರ್ಧ್ನಿ ತೇನಾಪ್ಯುಪಾಘ್ರಾತಃ ತಸ್ಮೈ ಸರ್ವಂ ನ್ಯವೇದಯತ್ ॥34॥
ಯಥಾ ದೃಷ್ಟಂ ಶ್ರುತಂ ಚಾಪಿ ಸಾಗರಾಣಾಂ ಕ್ಷಯಂ ತಥಾ |
ತಂ ಚಾಸ್ಮೈ ಹಯಮಾಚಷ್ಟ ಯಜ್ಞವಾಟಮುಪಾಗತಮ್ ॥35॥
ಅವನು ಮಹಾತ್ಮನಾದ ತನ್ನ ತಾತನಾದ ಸಗರನ ಪಾದಗಳಿಗೆ ನಮಸ್ಕರಿಸಿ ಅವನಿಂದ ಶಿರಸ್ಸಿನಲ್ಲಿ ಆಘ್ರಾಣಿಸಲ್ಪಟ್ಟು ತಾನು ಕೇಳಿದ ಮತ್ತು ನೋಡಿದ ಸಗರಪುತ್ರರ ನಾಶವನ್ನೆಲ್ಲಾ ಅವನಿಗೆ ಹಾಗೆಯೇ ಹೇಳಿ ಯಜ್ಞಶಾಲೆಗೆ ಯಜ್ಞಾಶ್ವವು ಬಂದಿದೆ ಎಂದು ತಿಳಿಸಿದನು.
ತಚ್ಛ್ರುತ್ವಾ ಸಗರೋ ರಾಜಾ ಪುತ್ರಜಂ ದುಃಖಮತ್ಯಜತ್ |
ಅಂಶುಮಂತಂ ಚ ಸಂಪೂಜ್ಯ ಸಮಾಪಯತ ತಂ ಕ್ರತುಮ್ ॥36॥
ಅದನ್ನು ಕೇಳಿದ ಸಗರರಾಜನು ಪುತ್ರಶೋಕವನ್ನು ಮರೆತು ಅಂಶುಮಂತನನ್ನು ಸತ್ಕರಿಸಿ ಯಜ್ಞವನ್ನು ಸಮಾಪ್ತಿಗೊಳಿಸಿದನು.
ಸಮಾಪ್ತಯಜ್ಞಃ ಸಗರೋ ದೇವೈಃ ಸರ್ವೈಃ ಸಭಾಜಿತಃ |
ಪುತ್ರತ್ವೇ ಕಲ್ಪಯಾಮಾಸ ಸಮುದ್ರಂ ವರುಣಾಲಯಮ್ ॥37॥
ಯಜ್ಞವನ್ನು ಸಮಾಪ್ತಿಗೊಳಿಸಿದ ಸಗರನು ಎಲ್ಲಾ ದೇವತೆಗಳಿಂದಲೂ ಸತ್ಕೃತನಾಗಿ ವರುಣಾಲಯವಾದ ಸಮುದ್ರವನ್ನು ತನ್ನ ಪುತ್ರನನ್ನಾಗಿ ಮಾಡಿಕೊಂಡನು (ಆದ್ದರಿಂದ ಸಾಗರ ಎಂದು ಹೆಸರು).
ಪ್ರಶಾಸ್ಯ ಸುಚಿರಂ ಕಾಲಂ ರಾಜ್ಯಂ ರಾಜೀವಲೋಚನಃ |
ಪೌತ್ರೇ ಭಾರಂ ಸಮಾವೇಶ್ಯ ಜಗಾಮ ತ್ರಿದಿವಂ ನೃಪಃ ॥38॥
ರಾಜೀವಲೋಚನನಾದ ಅವನು ಬಹುಕಾಲದವರೆಗೆ ರಾಜ್ಯವನ್ನು ಆಳಿ ಮೊಮ್ಮಗನಿಗೆ ರಾಜ್ಯಭಾರವನ್ನು ವಹಿಸಿ ಸ್ವರ್ಗಸ್ಥನಾದನು.
ಅಂಶುಮಾನಪಿ ಧರ್ಮಾತ್ಮಾ ಮಹೀಂ ಸಾಗರಮೇಖಲಾಮ್ |
ಪ್ರಶಶಾಸ ಮಹಾರಾಜ ಯಥೈವಾಸ್ಯ ಪಿತಾಮಹಃ ॥39॥
ಎಲೈ ಮಹಾರಾಜನೇ, ಧರ್ಮಾತ್ಮನಾದ ಅಂಶುಮಂತನಾದರೂ ತನ್ನ ತಾತನಂತೆಯೇ ಸಮುದ್ರ ಮೇಖಲೆಯಾದ ಭೂಮಿಯನ್ನು ಆಳಿದನು.
ತಸ್ಯ ಪುತ್ರಃ ಸಮಭವದ್ ದಿಲೀಪೋ ನಾಮ ಧರ್ಮವಿತ್ |
ತಸ್ಮಿನ್ ರಾಜ್ಯಂ ಸಮಾಧಾಯ ಅಂಶುಮಾನಪಿ ಸ್ವರ್ಗತಃ ॥40॥
ಅವನಿಗೆ ದಿಲೀಪನೆಂಬ ಧರ್ಮಜ್ಞನಾದ ಮಗನಾದನು. ಅವನಿಗೆ ರಾಜ್ಯವನ್ನು ಒಪ್ಪಿಸಿ ಅಂಶುಮಂತನೂ ಸ್ವರ್ಗಸ್ಥನಾದನು.
ದಿಲೀಪಸ್ತು ತತಃ ಶ್ರುತ್ವಾ ಪಿತೄಣಾಂ ನಿಧನಂ ಮಹತ್ |
ಪರ್ಯತಪ್ಯತ ದುಃಖೇನ ಗತಿಂ ತೇಷಾಂ ವಿಚಿಂತಯನ್ ॥41॥
ದಿಲೀಪನೂ ಸಹ ತನ್ನ ಪಿತೃಗಳ ಮಹಾನಿಧನವನ್ನು ಕೇಳಿ ದುಃಖದಿಂದ ಪರಿತಪಿಸಿ ಅವರಿಗೆ ಸದ್ಗತಿಯಾಗುವ ಬಗೆಯನ್ನು

ಚಿಂತಿಸಿದನು.
ಗಂಗಾವತರಣೇ ಯತ್ನಂ ಮಹಾಂತಂ ಚಾಕರೋನ್ನೃಪಃ |
ನ ಚಾವತಾರಯಾಮಾಸ ಚೇಷ್ಟಮಾನೋ ಯಥಾಬಲಮ್ ॥42॥
ಆ ರಾಜನು ಗಂಗೆಯನ್ನು ಕೆಳಗೆ ತರುವ ವಿಷಯದಲ್ಲಿ ದೊಡ್ಡ ಪ್ರಯತ್ನವನ್ನು ಮಾಡಿ ತನ್ನ ಶಕ್ತಿ ಇದ್ದಷ್ಟು ಪ್ರಯತ್ನಪಟ್ಟರೂ ಗಂಗೆಯನ್ನು ಕೆಳಗೆ ತರಲು ಸಾಧ್ಯವಾಗಲಿಲ್ಲ.
ತಸ್ಯ ಪುತ್ರಃ ಸಮಭವತ್ ಶ್ರೀಮಾನ್ ಧರ್ಮಪರಾಯಣಃ |
ಭಗೀರಥ ಇತಿ ಖ್ಯಾತಃ ಸತ್ಯವಾಗನಸೂಯಕಃ ॥43॥
ಅವನಿಗೆ ಧರ್ಮಪರಾಯಣನೂ, ಸತ್ಯವಚನನೂ, ಅಸೂಯಾಹಿತನೂ, ಕಾಂತಿಯುಕ್ತನೂ ಆದ ಭಗೀರಥನೆಂದು ಪ್ರಸಿದ್ಧನಾದ ಪುತ್ರನು ಜನಿಸಿದನು.
ಅಭಿಷಿಚ್ಯ ತು ತಂ ರಾಜ್ಯೇ ದಿಲೀಪೋ ವನಮಾಶ್ರಿತಃ |
ಭಗೀರಥಂ ಮಹಾತ್ಮಾನಂ ಸತ್ಯಧರ್ಮಪರಾಯಣಮ್ ॥44॥
ದಿಲೀಪನು ಮಹಾತ್ಮನೂ, ಸತ್ಯಧರ್ಮಪರಾಯಣನೂ ಆದ ಭಗೀರಥನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿ ತಾನೂ ಕಾಡಿಗೆ ಹೋದನು.
ತಪಸ್ಸಿದ್ಧಿಸಮಾಯೋಗಾತ್ ಸ ರಾಜಾ ಮನುಜಾಧಿಪ |
ವನಾಜ್ಜಗಾಮ ತ್ರಿದಿವಂ ಕಾಲಯೋಗೇನ ಭಾರತ ॥45॥
ಎಲೈ ಮನುಜಾಧಿಪನೇ, ಎಲೈ ಭಾರತನೇ, ಆ ರಾಜನೂ ಸಹ ತಪಸ್ಸಿದ್ಧಿಗಳ ಸಂಯೋಗದಿಂದ ಕಾಲಕ್ರಮದಲ್ಲಿ ಆ ಕಾಡಿನಿಂದ ಸ್ವರ್ಗಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಯೋತ್ತರಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕೋನಷಷ್ಟಿತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂರನೆಯ ಅಧ್ಯಾಯ ಮುಗಿಯಿತು.
*****
ನೂರ ನಾಲ್ಕನೆಯ ಅಧ್ಯಾಯ
ಹಿಮಾಲಯದಲ್ಲಿ ಭಗೀರಥನ ತಪಸ್ಸು. ಗಂಗೆಯ ಮತ್ತು ಶಿವನ ಅನುಗ್ರಹ.
ಲೋಮಶಃ
ಸ ತು ರಾಜಾ ಮಹೇಷ್ವಾಸಃ ಚಕ್ರವರ್ತೀ ಮಹಾಮನಾಃ |
ಬಭೂವ ಸರ್ವಲೋಕಸ್ಯ ಮನೋನಯನನಂದನಃ ॥1॥
ಲೋಮಶ ಮಹಾಮನನೂ, ಮಹಾಧನುರ್ಧಾರಿಯೂ, ಚಕ್ರವರ್ತಿಯೂ ಆದ ಆ ಭಗೀರಥರಾಜನು ಎಲ್ಲ ಜನರಿಗೂ ಮನೋನಯನಗಳಿಗೆ ಸಂತೋಷವನ್ನು ಉಂಟು ಮಾಡುವವನಾಗಿದ್ದನು.
ಸ ಶುಶ್ರಾವ ಮಹಾಬಾಹುಃ ಕಪಿಲೇನ ಮಹಾತ್ಮನಾ |
ಪಿತೄಣಾಂ ನಿಧನಂ ಘೋರಮಪ್ರಾಪ್ತಿಂ ತ್ರಿದಿವಸ್ಯ ಚ ॥2॥
ಮಹಾಬಾಹುವಾದ ಅವನು ಮಹಾತ್ಮನಾದ ಕಪಿಲನಿಂದ ತನ್ನ ಪಿತೃಗಳು ಘೋರವಾದ ನಿಧನವನ್ನು ಹೊಂದಿದುದನ್ನೂ ಮತ್ತು ಅವರಿಗೆ ಸ್ವರ್ಗದ ಅಪ್ರಾಪ್ತಿಯನ್ನೂ ಕೇಳಿದನು.
ಸ ರಾಜ್ಯಂ ಸಚಿವೇ ನ್ಯಸ್ಯ ಹೃದಯೇನ ವಿದೂಯತಾ |
ಜಗಾಮ ಹಿಮವತ್ಪಾರ್ಶ್ವಂ ತಪಸ್ತಪ್ತುಂ ನರೇಶ್ವರಃ ॥3॥
ಆ ನರೇಶ್ವರನು ದುಃಖಪೂರ್ಣವಾದ ಹೃದಯವುಳ್ಳವನಾಗಿ ಸಚಿವರಿಗೆ ರಾಜ್ಯಭಾರವನ್ನು ಒಪ್ಪಿಸಿ ತಪಸ್ಸನ್ನು ಆಚರಿಸಲು ಹಿಮಾಲಯದ ಪಾರ್ಶ್ವಕ್ಕೆ ಹೋದನು.
ಆರಿರಾಧಯಿಷುರ್ಗಂಗಾಂ ತಪಸಾ ದಗ್ಧಕಿಲ್ಬಿಷಃ |
ಸೋಽಪಶ್ಯತ ಗಿರಿಶ್ರೇಷ್ಠಂ ಹಿಮವಂತಂ ನರೇಶ್ವರಃ ॥4॥
ಶೃಂಗೈರ್ಬಹುವಿಧಾಕಾರೈರ್ಧಾತುನದ್ಭಿರಲಂಕೃತಮ್ |
ಪವನಾಲಂಬಿಭಿರ್ಮೇಘೈಃ ಪರಿಷ್ವಕ್ತಂ ಸಮಂತತಃ ॥5॥
ನದೀಕುಂಜನಿತಂಬೈಶ್ಚ ಸೋದಕೈರುಪಶೋಭಿತಮ್ |
ಗುಹಾಕಂದರಸಂಲೀನೈಃ ಸಿಂಹವ್ಯಾಘ್ರೈರ್ನಿಷೇವಿತಮ್ ॥6॥
ಶಕುನೈಶ್ಚ ವಿಚಿತ್ರಾಂಗೈಃ ಕೂಜದ್ಭಿರ್ವಿವಿಧಾ ಗಿರಃ |
ಭೃಂಗರಾಜೈಸ್ತಥಾ ರಾಜನ್ ನತ್ಯೂಹೈರ್ಜಲಕುಕ್ಕುಟೈಃ ॥7॥
ತಪಸ್ಸಿನಿಂದ ಪಾಪನಿರ್ಮುಕ್ತನಾಗಿ ಗಂಗೆಯನ್ನು ಆರಾಧಿಸಲು ಬಯಸಿದ ಆ ನರೇಶ್ವರನು ಅನೇಕ ಆಕಾರಗಳನ್ನು ಹೊಂದಿದ ಶಿಖರಗಳಿಂದ ಕೂಡಿದ, ಅನೇಕ ಧಾತು ಲಗ್ನವಾದ ಶಿಖರಗಳಿಂದ ಅಲಂಕೃತವಾದ, ಗಾಳಿಯ ಮೇಲೆ ತೇಲುವ ಮೇಘಗಳಿಂದ ಸುತ್ತಲೂ ಆಲಿಂಗಿತವಾದ, ನೀರಿನಿಂದ ಪೂರ್ಣವಾದ ನದಿ ಕುಂಜ ಮತ್ತು ತಪ್ಪಲು ಪ್ರದೇಶಗಳಿಂದ ಉಪಶೋಭಿತವಾದ, ಗುಹೆಗಳಲ್ಲಿಯೂ ಹಳ್ಳಗಳಲ್ಲಿಯೂ ಅಡಗಿದ ಸಿಂಹವ್ಯಾಘ್ರಗಳಿಂದ ಸೇವಿಸಲ್ಪಡುವ, ವಿಚಿತ್ರವರ್ಣದ ಶರೀರಗಳುಳ್ಳ ಪಕ್ಷಿಗಳ ವಿವಿಧವಾದ ನಾದಗಳಿಂದ ಕೂಡಿದ, ಭೃಂಗರಾಜಗಳು, ನತ್ಯುಹಗಳು ಮತ್ತು ಜಲಕುಕ್ಕುಟಗಳ ಧ್ವನಿಗಳಿಂದ ಕೂಡಿದ, ಹಿಮಾಲಯ ಪರ್ವತಶ್ರೇಷ್ಠವನ್ನು ನೋಡಿದನು.

ಮಯೂರೈಃ ಶತಪತ್ರೈಶ್ಚ ಕೋಕಿಲೈರ್ಜೀವಜೀವಕೈಃ |
ಚಕೋರೈರಸಿತಾಪಾಂಗೈಃ ತಥಾ ಪುತ್ರಪ್ರಿಯೈರಪಿ ॥8॥
ಜಲಸ್ಥಾನೇಷು ಸರ್ವೇಷು ಪದ್ಮಿನೀಭಿಶ್ಚ ಸಂಕುಲಮ್ |
ಸಾರಸಾನಾಂ ಚ ಮಧುರೈರ್ವ್ಯಾಹೃತೈಃ ಸಮಲಂಕೃತಮ್ ॥9॥
ಕಿನ್ನರೈರಪ್ಸರೋಭಿಶ್ಚ ಗಂಧರ್ವೈಶ್ಚ ನಿಷೇವಿತಮ್ |
ದಿಗ್ಗಜೇಂದ್ರವಿಷಾಣಾಗ್ರೈಃ ಸಮಂತಾದ್ ಘೃಷ್ಟಪಾದಪಮ್ ॥10॥
ವಿದ್ಯಾಧರಾನುಚರಿತಂ ನಾನಾದ್ರುಮಲತಾಯುತಮ್ |
ವಿಷೋಲ್ಬಣೈರ್ಭುಜಂಗೈಶ್ಚ ದೀಪ್ತಜಿಹ್ವೈರ್ಭಯಾನಕಮ್ ॥11॥
ಕ್ವಚಿತ್ ಕನಕಸಂಕಾಶಂ ಕ್ವಚಿದ್ರಜತಸನ್ನಿಭಮ್ |
ಕ್ವಚಿದಂಜನಪುಂಜಾಭಂ ಹಿಮವಂತಮುಪಾಗಮತ್ ॥12॥
ಮಯೂರಗಳಿಂದಲೂ, ಶತಪತ್ರಗಳಿಂದಲೂ, ಕೋಕಿಲಗಳಿಂದಲೂ, ಚಕೋರಗಳಿಂದಲೂ ಹಾಗೆಯೇ ಕಪ್ಪಾದ ಕಣ್ಣುಗಳುಳ್ಳ ಚಕೋರಗಳಿಂದಲೂ, ಪುತ್ರಪ್ರಿಯಗಳಿಂದಲೂ ಎಲ್ಲಾ ಜಲಸ್ಥಾನಗಳಲ್ಲಿ ಪದ್ಮವನಗಳಿಂದಲೂ ನಿಬಿಡವಾಗಿದ್ದ, ಸಾರಸಪಕ್ಷಿಗಳ ಮಧುರ ಸ್ವರಗಳಿಂದ ಅಲಂಕೃತವಾಗಿದ್ದಂತಹ ಕಿನ್ನರರಿಂದಲೂ, ಅಪ್ಸರೆಯರಿಂದಲೂ, ಗಂಧರ್ವರಿಂದಲೂ ಸೇವಿತವಾದ, ದಿಗ್ಗಜಗಳ ದಂತಗಳ ತುದಿಯಿಂದ ಗಾಯಗೊಳಿಸಲ್ಪಟ್ಟ ವೃಕ್ಷಗಳನ್ನುಳ್ಳ ವಿದ್ಯಾಧರರ ಸಂಚಾರದಿಂದ ಕೂಡಿದ, ಅನೇಕ ಧೂಮಲತೆಗಳನ್ನು ಹೊಂದಿದ, ಪ್ರಕಾಶಿಸುವ ನಾಲಿಗೆಗಳಿಂದ ಭಯಂಕರವಾಗಿದ್ದ ವಿಷಸರ್ಪಗಳಿಂದ ಕೂಡಿದ್ದ, ಕೆಲವೆಡೆ ಸುವರ್ಣವರ್ಣದಿಂದಲೂ, ಕೆಲವೆಡೆ ರಜತಕಾಂತಿಯಿಂದಲೂ, ಕೆಲವೆಡೆ ಕಾಡಿಗೆಯ ರಾಶಿಯಂತೆಯೂ ಶೋಭಿಸುತ್ತಿದ್ದ ಹಿಮಾಲಯವನ್ನು ತಲುಪಿದನು.
ಸ ತು ತತ್ರ ನರಶ್ರೇಷ್ಠ ತಪೋ ಘೋರಂ ಸಮಾಶ್ರಿತಃ |
ಫಲಮೂಲಾಂಬುಭಕ್ಷೋಽಭೂತ್ ಸಹಸ್ರಪರಿವತ್ಸರಾನ್ ॥13॥
ಎಲೈ ನರಶ್ರೇಷ್ಠನೇ, ಅವನು ಅಲ್ಲಿ ಘೋರವಾದ ತಪಸ್ಸನ್ನು ಆಚರಿಸಿ ಫಲಮೂಲ ಜಲಭಕ್ಷನಾಗಿ ಒಂದು ಸಹಸ್ರವರ್ಷಗಳನ್ನು ಕಳೆದನು.
ಸಂವತ್ಸರಸಹಸ್ರೇ ತು ಗತೇ ದಿವ್ಯೇ ಮಹಾನದೀ |
ದರ್ಶಯಾಮಾಸ ತಂ ಗಂಗಾ ತದಾ ಮೂರ್ತಿಮತೀ ಸ್ವಯಮ್ ॥14॥
ದಿವ್ಯಮಾನದ ಒಂದುಸಹಸ್ರ ವರ್ಷಗಳು ಕಳೆಯುತ್ತಿರಲು ಮಹಾನದಿಯಾದ ಗಂಗೆಯು ಶರೀರವನ್ನು ಧರಿಸಿ ಅವನಿಗೆ ದರ್ಶನವನ್ನು ಕೊಟ್ಟಳು.
ಗಂಗಾ
ಕಿಮಿಚ್ಛಸಿ ಮಹಾರಾಜ ಮತ್ತಃ ಕಿಂಚಿದ್ ದದಾಮಿ ತೇ |
ತದ್ ಬ್ರೂಹಿ ನೃಪತಿಶ್ರೇಷ್ಠ ಕರಿಷ್ಯಾಮಿ ವಚಸ್ತವ ॥15॥
ಗಂಗೆ ಮಹಾರಾಜನೇ, ನನ್ನಿಂದ ನೀನು ಏನನ್ನು ಬಯಸುತ್ತೀಯೆ? ನಾನು ನಿನಗೆ ಏನನ್ನು ಕೊಡಲಿ? ಎಲೈ ನೃಪತಿಶ್ರೇಷ್ಠನೇ, ನೀನು ಏನು ಬೇಕೆಂದು ಹೇಳು. ನಿನ್ನ ವಚನವನ್ನು ನೆರವೇರಿಸುವೆನು.
ಏವಮುಕ್ತಃ ಪ್ರತ್ಯುವಾಚ ರಾಜಾ ಹೈಮವತೀಂ ತದಾ |
ನದೀಂ ಭಗೀರಥೋ ರಾಜನ್ ಪ್ರಣಿಪತ್ಯ ಕೃತಾಂಜಲಿಃ ॥16॥
ಎಲೈ ರಾಜನೇ, ಹೀಗೆ ಹೇಳಲ್ಪಟ್ಟ ಭಗೀರಥನು ಹಿಮಾಲಯಕನ್ಯೆಯಾದ ಆ ನದಿಯನ್ನು ಕುರಿತು ಕೈಗಳನ್ನು ಜೋಡಿಸಿ ನಮಸ್ಕಾರವನ್ನು ಮಾಡಿ ಉತ್ತರವನ್ನು ನೀಡಿದನು.
ಪಿತಾಮಹಾ ಮೇ ವರದೇ ಕಪಿಲೇನ ಮಹಾನದಿ |
ಅನ್ವೇಷಮಾಣಾಸ್ತುರಗಂ ನೀತಾ ವೈವಸ್ವತಕ್ಷಯಮ್ ॥17॥
ಷಷ್ಟಿಸ್ತಾನಿ ಸಹಸ್ರಾಣಿ ಸಾಗರಾಣಾಂ ಮಹಾತ್ಮನಾಮ್ |
ಕಾಪಿಲಂ ತೇಜ ಆಸಾದ್ಯ ಕ್ಷಣೇಣ ನಿಧನಂ ಗತಾಃ ॥18॥
ಏಷಾಮೇವಂ ವಿನಷ್ಟಾನಾಂ ಸ್ವರ್ಗೇ ವಾಸೋ ನ ವಿದ್ಯತೇ |
ಯಾವತ್ ತಾನಿ ಶರೀರಾಣಿ ತ್ವಂ ಜಲೈರ್ನಾಭಿಷಿಂಚಸಿ ॥19॥
ಸ್ವರ್ಗಂ ನಯ ಮಹಾಭಾಗೇ ಮತ್ಪಿತೄನ್ ಸಗರಾತ್ಮಜಾನ್ |
ತೇಷಾಮರ್ಥೇ ಹಿ ಯಾಚಾಮಿ ತ್ವಾಮಹಂ ವೈ ಮಹಾನದಿ ॥20॥
ಎಲೌ ಮಹಾನದಿಯೇ, ವರಪ್ರದಳೇ, ಯಜ್ಞಾಶ್ವವನ್ನು ಹುಡುಕುತ್ತಾ ನನ್ನ ಪಿತಾಮಹರು ಯಮಲೋಕವನ್ನು ಹೊಂದಿದರು. ಮಹಾತ್ಮರಾದ ಸಗರಪುತ್ರರಾದ ಅರವತ್ತುಸಾವಿರ ಪಿತೃಗಳು ಕಪಿಲನ ತೇಜಸ್ಸನ್ನು ಸಂಧಿಸಿ ಒಂದು ಕ್ಷಣದಲ್ಲಿ ನಿಧನರಾದರು. ಎಲ್ಲಿಯವರೆಗೆ ಅವರ ಶರೀರಗಳನ್ನು ನಿನ್ನ ಜಲದಿಂದ ನೀನು ತೋಯಿಸುವುದಿಲ್ಲವೋ ಅಲ್ಲಿಯವರೆಗೆ ಈ ರೀತಿಯಲ್ಲಿ ನಿಧನವನ್ನು ಹೊಂದಿದ ಅವರಿಗೆ ಸ್ವರ್ಗದಲ್ಲಿ ವಾಸವು ಉಂಟಾಗುವುದಿಲ್ಲ. ಎಲೌ ಮಹಾನುಭಾವಳೇ, ನನ್ನ ಪಿತೃಗಳಾದ ಸಗರಪುತ್ರರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗು. ಎಲೌ ಮಹಾನದಿಯೇ, ಅವರ ಸಲುವಾಗಿ ನಾನು ನಿನ್ನನ್ನು ಯಾಚಿಸುತ್ತಿದ್ದೇನೆ.
ಏತಚ್ಛ್ರುತ್ವಾ ವಚೋ ರಾಜ್ಞೋ ಗಂಗಾ ಲೋಕನಮಸ್ಕೃತಾ |
ಭಗೀರಥಮಿದಂ ವಾಕ್ಯಂ ಪ್ರೀತಾ ಪಶ್ಚಾದಭಾಷತ ॥21॥
ಲೋಕನಮಸ್ಕೃತಳಾದ ಗಂಗೆಯು ಭಗೀರಥರಾಜನ ಈ ಮಾತುಗಳನ್ನು ಕೇಳಿ ಅನಂತರ ಸಂತೋಷದಿಂದ ಅವನನ್ನು ಕುರಿತು ಮಾತನಾಡಿದಳು.

ಕರಿಷ್ಯಾಮಿ ಮಹಾರಾಜ ವಚಸ್ತೇ ನಾತ್ರ ಸಂಶಯಃ |
ವೇಗಂ ತು ಮಮ ದುರ್ಧಾರ್ಯಂ ಪತಂತ್ಯಾ ಗಗನಾಚ್ಚ್ಯುತಮ್ ||
ನ ಶಕ್ತಸ್ತ್ರಿಷು ಲೋಕೇಷು ಕಶ್ಚಿದ್ ಧಾರಯಿತುಂ ನೃಪ |
ಅನ್ಯತ್ರ ವಿಬುಧಶ್ರೇಷ್ಠಾನ್ನೀಲಕಂಠಾನ್ಮಹೇಶ್ವರಾತ್ ||23||
ತಂ ತೋಷಯ ಮಹಾಬಾಹೋ ತಪಸಾ ವರದಂ ಹರಮ್ |
ಸ ತು ಮಾಂ ಪ್ರಚ್ಯುತಾಂ ದೇವಃ ಶಿರಸಾ ಧಾರಯಿಷ್ಯತಿ ||24||
ಕರಿಷ್ಯತಿ ಚ ತೇ ಕಾಮಂ ಪಿತೄಣಾಂ ಹಿತಕಾಮ್ಯಯಾ |
ತಪಸಾಽರಾಧಿತಃ ಶಂಭುರ್ಭಗವಾನ್ಲೋಕಭಾವನಃ ||25||
ಎಲೈ ಮಹಾರಾಜನೇ, ನಿನ್ನ ವಚನವನ್ನು ನೆರವೇರಿಸುವೆನು. ಇದರಲ್ಲಿ ಸಂಶಯವಿಲ್ಲ. ಗಗನದಿಂದ ಬೀಳುವ ನನ್ನ ವೇಗವನ್ನು ಧರಿಸಲು ವಿಬುದಶ್ರೇಷ್ಠನಾದ ನೀಲಕಂಠನಾದ ಮಹೇಶ್ವರನನ್ನು ಬಿಟ್ಟು ಮೂರುಲೋಕಗಳಲ್ಲಿ ಬೇರೆ ಯಾರಿಗೂ ಸಾಮರ್ಥ್ಯವಿಲ್ಲ. ಎಲೈ ಮಹಾಬಾಹುವಾದ ರಾಜನೇ, ವರಪ್ರದನಾದ ಶಂಕರನನ್ನು ತಪಸ್ಸಿನಿಂದ ಸಂತೋಷಪಡಿಸು. ಆ ದೇವನು ಮೇಲಿನಿಂದ ಬೀಳುವ ನನ್ನನ್ನು ತನ್ನ ಶಿರಸ್ಸಿನಲ್ಲಿ ಧರಿಸುವನು. ತಪಸ್ಸಿನಿಂದ ಆರಾಧಿಸಲ್ಪಟ್ಟ ಲೋಕಭಾವನನಾದ ಭಗವಂತನಾದ ಶಂಭುವು ನಿನ್ನ ಪಿತೃಗಳಿಗೆ ಹಿತವನ್ನು ಮಾಡುವ ಇಚ್ಛೆಯಿಂದ ನಿನ್ನ ಸಂಕಲ್ಪವನ್ನು ನೆರವೇರಿಸುವನು (ಎಂದು ಹೇಳಿದಳು).
ಏತಚ್ಛ್ರುತ್ವಾ ವಚೋ ರಾಜನ್ ಮಹಾರಾಜೋ ಭಗೀರಥಃ |
ಕೈಲಾಸಂ ಪರ್ವತಂ ಗತ್ವಾ ತೋಷಯಾಮಾಸ ಶಂಕರಮ್ ||26||
ಎಲೈ ರಾಜನೇ, ಈ ಮಾತುಗಳನ್ನು ಕೇಳಿದ ಭಗೀರಥ ಮಹಾರಾಜನು ಕೈಲಾಸ ಪರ್ವತಕ್ಕೆ ಹೋಗಿ ಶಂಕರನನ್ನು (ತಪಸ್ಸಿನಿಂದ) ಸಂತೋಷಪಡಿಸಿದನು.
ತತಸ್ತೇನ ಸಮಾಗಮ್ಯ ಕಾಲಯೋಗೇನ ಕೇನಚಿತ್ |
ಗಂಗಾವತರಣಂ ರಾಜನ್ನಯಾಚತ ಮಹೀಪತಿಃ ||27||
ಎಲೈ ರಾಜನೇ, ಅನಂತರ ಕೆಲವು ಕಾಲದನಂತರ ಮಹೀಪತಿಯಾದ ಭಗೀರಥನು ಶಂಕರನ ಸಮಾಗಮವನ್ನು ಹೊಂದಿ ಗಂಗಾವತರಣವನ್ನು ಪ್ರಾರ್ಥಿಸಿದನು.
ಅಗೃಹ್ಣಾಚ್ಚ ವರಂ ತಸ್ಮಾದ್ ಗಂಗಾಯಾ ಧಾರಣೇ ನೃಪ |
ಸ್ವರ್ಗೇ ವಾಸಂ ಸಮುದ್ದಿಶ್ಯ ಪಿತೄಣಾಂ ಸ ನರೋತ್ತಮಃ ||28||
ಎಲೈ ರಾಜನೇ, ನರೋತ್ತಮನಾದ ಭಗೀರಥನು ತನ್ನ ಪಿತೃಗಳಿಗೆ ಸ್ವರ್ಗವಾಸವನ್ನು ಉದ್ದೇಶಿಸಿ ಶಂಕರನಿಂದ ಗಂಗೆಯ ಧಾರಣೆಯ ವಿಷಯದಲ್ಲಿ ವರವನ್ನು ಸ್ವೀಕರಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ನೂರ ಐದನೆಯ ಅಧ್ಯಾಯ
ಗಂಗೆಯಿಂದ ಸಗರಪುತ್ರರ ಅಸ್ಥಿಗಳ ಪ್ಲಾವನ ಮತ್ತು ಸಮುದ್ರ ಪೂರಣ.
ಲೋಮಶಃ
ಭಗೀರಥವಚಃ ಶ್ರುತ್ವಾ ಪ್ರಿಯಾರ್ಥಂ ಚ ದಿವೌಕಸಾಮ್ |
ಏವಮಸ್ತ್ವಿತಿ ರಾಜಾನಂ ಭಗವಾನ್ ಪ್ರತ್ಯಭಾಷತ ||1||
ಲೋಮಶ ಭಗವಂತನಾದ ಶಂಕರನು ಭಗೀರಥನ ಮಾತನ್ನು ಕೇಳಿ ದೇವತೆಗಳಿಗೂ ಪ್ರಿಯವನ್ನು ಉಂಟುಮಾಡುವ ಸಲುವಾಗಿ ರಾಜನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು.
ಧಾರಯಿಷ್ಯೇ ಮಹಾಬಾಹೋ ಗಗನಾತ್ ಪ್ರಚ್ಯುತಾಂ ಶಿವಾಮ್ |
ದಿವ್ಯಾಂ ದೇವನದೀಂ ಪುಣ್ಯಾಂ ತ್ವತ್ಕೃತೇ ರಾಜಸತ್ತಮ ||2||
ಏವಮುಕತ್ವ ಮಹಾದೇವೋ ಹಿಮವಂತಮುಪಾಗಮತ್ |
ಸಂವೃತಃ ಪಾರ್ಷದೈರ್ಘೋರೈರ್ನಾನಾಪ್ರಹರಣೋದ್ಯತೈಃ ||3||
ಎಲೈ ಮಹಾಬಾಹುವೇ, ರಾಜಸತ್ತಮನೇ, ಗಗನದಿಂದ ಕೆಳಗೆ ಬೀಳುವ ಪವಿತ್ರವಾದ ಮಂಗಳವಾದ ದಿವ್ಯವಾದ ದೇವನದಿಯನ್ನು ನಿನ್ನ ಸಲುವಾಗಿ ನಾನು ಧರಿಸುವೆನು. ಹೀಗೆ ಹೇಳಿ ಮಹಾದೇವನು ನಾನಾಪ್ರಹರಣಾಯುಧಗಳನ್ನು ಧರಿಸಿದ ತನ್ನ ಪರಿವಾರದಿಂದ ಕೂಡಿಕೊಂಡು ಹಿಮಾಲಯಕ್ಕೆ ಬಂದನು.
ತತ್ರ ಸ್ಥಿತ್ವಾ ನರಶ್ರೇಷ್ಠ ಭಗೀರಥಮುವಾಚ ಹ |
ಪ್ರಯಾಚಸ್ವ ಮಹಾಬಾಹೋ ಶೈಲರಾಜಸುತಾಂ ನದೀಮ್ ||4||
ಪಿತೄಣಾಂ ಪಾವನಾರ್ಥಾಯ ತಾಮಹಂ ಮನುಜಾಧಿಪ |
ಪತಮಾನಂ ಸರಿಚ್ಛ್ರೇಷ್ಠಾಂ ಧಾರಯಿಷ್ಯೇ ತ್ರಿವಿಷ್ಟಪಾತ್ ||5||
ಎಲೈ ನರಶ್ರೇಷ್ಠನೇ, ಅಲ್ಲಿ ನಿಂತು ಅವನು ಭಗೀರಥನನ್ನು ಕುರಿತು- `ಮಹಾಬಾಹುವೇ, ಪಿತೃಗಳನ್ನು ಪವಿತ್ರೀಕರಿಸುವುದಕ್ಕೋಸ್ಕರ ಶೈಲರಾಜಸುತೆಯಾದ ಗಂಗೆಯನ್ನು ಬೇಡಿಕೋ. ಎಲೈ ಮನುಜಾಧಿಪನೇ, ಸ್ವರ್ಗದಿಂದ ಕೆಳಗೆ ಬೀಳುವ ಆ ಶ್ರೇಷ್ಠವಾದ ನದಿಯನ್ನು ನಾನು ಧರಿಸುವೆನು' ಎಂದು ಹೇಳಿದನು.

ಏತಚ್ಛ್ರುತ್ವಾ ವಚೋ ರಾಜಾ ಶರ್ವೇಣ ಸಮುದಾಹೃತಮ್ |
ಪ್ರಯತಃ ಪ್ರಣತೋ ಭೂತ್ವಾ ಗಂಗಾಂ ತಾಂ ಸಮಚಿಂತಯತ್ ॥6॥
ರಾಜನು ಮಹಾದೇವನಿಂದ ಹೇಳಲ್ಪಟ್ಟ ಈ ಮಾತುಗಳನ್ನು ಕೇಳಿ ಮೌನವಾಗಿ ಮನಸ್ಸಿನಲ್ಲಿ ನಮಸ್ಕರಿಸಿ ಆ ಗಂಗೆಯನ್ನು ಚಿಂತಿಸಿದನು.
ತತಃ ಪುಣ್ಯಜಲಾ ರಮ್ಯಾ ರಾಜ್ಞಾ ಸಮನುಚಿಂತಿತಾ |
ಈಶಾನಂ ಚ ಸ್ಥಿತಂ ದೃಷ್ಟ್ವಾ ಗಗನಾತ್ ಸಹಸಾ ಚ್ಯುತಾ ॥7॥
ಅನಂತರ ರಾಜನಿಂದ ಚಿಂತಿತಳಾದ ಪುಣ್ಯಜಲವುಳ್ಳ ಮನೋಹರವಾದ ಆ ಗಂಗೆಯು ಮಹಾದೇವನು ಅಲ್ಲಿ ನಿಂತಿರುವುದನ್ನು ನೋಡಿ ತಕ್ಷಣವೇ ಗಗನದಿಂದ ಕೆಳಗೆ ಧುಮುಕಿದಳು.
ತಾಂ ಪ್ರಚ್ಯುತಾಂ ತತೋ ದೃಷ್ಟ್ವಾ ದೇವಾಃ ಸಾರ್ಧಂ ಮಹರ್ಷಿಭಿಃ |
ಗಂಧರ್ವೋರಗಯಕ್ಷಾಶ್ಚ ಸಮಾಜಗ್ಮುರ್ದಿದೃಕ್ಷಯಾ ॥8॥
ಹಾಗೆ ಕೆಳಗೆ ಬೀಳುತ್ತಿರುವ ಗಂಗೆಯನ್ನು ನೋಡಿ ಅವಳನ್ನು ಇನ್ನೂ ನೋಡಬೇಕೆಂಬ ಆಸೆಯಿಂದ ದೇವತೆಗಳು ಮಹರ್ಷಿಗಳ, ಗಂಧರ್ವರ, ಉರಗರ ಮತ್ತು ಯಕ್ಷರ ಜೊತೆಯಲ್ಲಿ ಅಲ್ಲಿಗೆ ಬಂದರು.
ತತಃ ಪಪಾತ ಗಗನಾದ್ ಗಂಗಾ ಹಿಮವತಃ ಸುತಾ |
ಸಮುದ್ಭ್ರಾಂತಮಹಾವರ್ತಾ ಮೀನಗ್ರಾಹಸಮಾಕುಲಾ ॥9॥
ಆಗ ಹಿಮಾಲಯನ ಮಗಳಾದ ಗಂಗೆಯು ತಿರುಗುತ್ತಿರುವ ದೊಡ್ಡ ಸುಳಿಗಳಿಂದ ಕೂಡಿದವಳಾಗಿ ಮೀನು, ಮೊಸಳೆಗಳಿಂದ ನಿಬಿಡಳಾಗಿ ಗಗನದಿಂದ ಕೆಳಗೆ ಬಿದ್ದಳು.
ತಾಂ ದಧಾರ ಹರೋ ರಾಜನ್ ಗಂಗಾಂ ಗಗನಮೇಖಲಾಮ್ |
ಲಲಾಟದೇಶೇ ಪತಿತಾಂ ಮಾಲಾಂ ಮುಕ್ತಾಮಯೀಮಿವ ॥10॥
ಎಲೈ ರಾಜನೇ, ಗಗನಮೇಖಲೆಯಾಗಿದ್ದ ಆ ಗಂಗೆಯನ್ನು ಮಹಾದೇವನು ತನ್ನ ಲಲಾಟದೇಶದಲ್ಲಿ ಒಂದು ಮುತ್ತಿನ ಮಾಲೆಯಂತೆ ಧರಿಸಿದನು.
ಬಭೌ ಸಾಽಥ ವಿಸರ್ಪಂತೀ ತ್ರಿಧಾ ರಾಜನ್ ಸಮುದ್ರಗಾ |
ಫೇನಪುಂಜಾಕುಲಜಲಾ ಹಂಸಾನಾಮಿವ ಪಂಕ್ತಯಃ ॥11॥
ಕ್ವಚಿದಾಭೋಗಕುಟಿಲಾ ಪ್ರಸ್ಖಲಂತೀ ಕ್ವಚಿತ್ ಕ್ವಚಿತ್ |
ಸ್ವಫೇನಪಟಸಂವೀತಾ ಮತ್ತೇವ ಪ್ರಮದಾಽವ್ರಜತ್ ॥12॥
ಎಲೈ ರಾಜನೇ, ಅನಂತರ ಗಂಗೆಯು ಮೂರು ಕವಲುಗಳಾಗಿ ಹರಿಯುತ್ತಾ ನೊರೆಯ ಸಮೂಹದಿಂದ ತುಂಬಿದ ಜಲವುಳ್ಳದ್ದಾಗಿ ಹಂಸಗಳ ಪಂಕ್ತಿಯಂತೆ ಕಾಣುತ್ತಿದ್ದಿತು. ಕೆಲವೊಮ್ಮೆ ವಕ್ರವಾದ ದೇಹವುಳ್ಳವಳಾಗಿ ಒಮ್ಮೊಮ್ಮೆ ಜಾರುತ್ತಾ ನೊರೆಯೆಂಬ ಬಿಳಿಯ ವಸ್ತ್ರವನ್ನು ಧರಿಸಿದ ಮತ್ತಳಾದ ವನಿತೆಯಂತೆ ಗಂಗೆಯು ಹರಿದಳು.
ಕ್ವಚಿತ್ ಸಾ ತೋಯನಿನದೈರ್ನದಂತೀ ನಾದಮುತ್ತಮಮ್ |
ಕ್ವಚಿಚ್ಚಾಕಾಶಮಾವರ್ತೈಃ ಸಂಕ್ಷಿಪಂತೀವ ಸರ್ವಶಃ ॥13॥
ಏವಂಪ್ರಕಾರಾನ್ ಸುಬಹೂನ್ ಕುರ್ವಂತೀ ಗಗನಾಚ್ಚ್ಯುತಾ |
ಪೃಥಿವೀತಳಮಾಸಾದ್ಯ ಭಗೀರಥಮಥಾಬ್ರವೀತ್ ॥14॥
ದರ್ಶಯಸ್ವ ಮಹಾಭಾಗ ಮಾರ್ಗಂ ಕೇನ ವ್ರಜಾಮ್ಯಹಮ್ |
ತ್ವದರ್ಥಮತೀರ್ಣಾಽಸ್ಮಿ ಪೃಥಿವೀಂ ಪೃಥಿವೀಪತೇ ॥15॥
ಒಮ್ಮೊಮ್ಮೆ ಅವಳು ಜಲದ ನಾದಗಳಿಂದ ಶ್ರೇಷ್ಠವಾದ ನಾದವನ್ನು ಉಂಟು ಮಾಡುತ್ತಾ, ಕೆಲವೊಮ್ಮೆ ಸುಳಿಗಳ ಮಧ್ಯೆ ಇರುವ ಪ್ರದೇಶಗಳನ್ನು ಬಹಳವಾಗಿ ಸಂಕೋಚ ಮಾಡುತ್ತಾ, ಹೀಗೆ ಇನ್ನೂ ಅನೇಕ ಪ್ರಕಾರಗಳನ್ನು ತೋರಿಸುತ್ತಾ ಗಗನದಿಂದ ಬಿದ್ದು ಭೂತಲವನ್ನು ಸೇರಿ ಭಗೀರಥನನ್ನು ಕುರಿತು `ಎಲೈ ಮಹಾಭಾಗನೇ, ನಿನ್ನ ಸಲುವಾಗಿ ನಾನು ಭೂಮಿಗೆ ಇಳಿದು ಬಂದಿದ್ದೇನೆ. ನಾನು ಯಾವ ಮಾರ್ಗದಲ್ಲಿ ಹೋಗಬೇಕೋ ಅದನ್ನು ತೋರಿಸು' ಎಂದು ಹೇಳಿದಳು.
ಏತಚ್ಛ್ರುತ್ವಾ ಮಹಾರಾಜ ಪ್ರಾತಿಷ್ಠತ ಭಗೀರಥಃ |
ಯತ್ರ ತಾನಿ ಶರೀರಾಣಿ ಸಾಗರಾಣಾಂ ಮಹಾತ್ಮನಾಮ್ ॥16॥
ಎಲೈ ಮಹಾರಾಜನೇ, ಇದನ್ನು ಕೇಳಿದ ಭಗೀರಥನು, ಎಲ್ಲಿ ಮಹಾತ್ಮರಾದ ಸಗರಪುತ್ರರ ಶರೀರಗಳು ಬಿದ್ದಿದ್ದವೋ ಅಲ್ಲಿಗೆ ಹೊರಡಲು ಉಪಕ್ರಮಿಸಿದನು.
ಪ್ಲಾವನಾರ್ಥಂ ನರಶ್ರೇಷ್ಠ ಪುಣ್ಯೇನ ಸಲಿಲೇನ ಚ |
ಗಂಗಾಯಾ ಧಾರಣಂ ಕೃತ್ವಾ ಹರೋ ಲೋಕನಮಸ್ಕೃತಃ |
ಕೈಲಾಸಂ ಪರ್ವತಶ್ರೇಷ್ಠಂ ಜಗಾಮ ತ್ರಿದಶೈಃ ಸಹ ॥17॥
ಎಲೈ ನರಶ್ರೇಷ್ಠನೇ, ಗಂಗೆಯ ಪವಿತ್ರವಾದ ಜಲದಿಂದ ತೋಯಿಸುವ ಸಲುವಾಗಿ ಲೋಕನಮಸ್ಕೃತನಾದ ಶಂಕರನು ಗಂಗೆಯ ಧಾರಣೆಯನ್ನು ಮಾಡಿ ಅನಂತರ ದೇವತೆಗಳ ಜೊತೆಯಲ್ಲಿ ಪರ್ವತಶ್ರೇಷ್ಠವಾದ ಕೈಲಾಸಕ್ಕೆ ಹೋದನು.
ಸಮಾಸಾದ್ಯ ಸಮುದ್ರಂ ಚ ಗಂಗಯಾ ಸಹಿತೋ ನೃಪಃ |
ಪೂರಯಾಮಾಸ ವೇಗೇನ ಸಮುದ್ರಂ ವರುಣಾಲಯಮ್ ॥18॥
ಭಗೀರಥರಾಜನು, ಗಂಗಾಸಹಿತನಾಗಿ ಸಮುದ್ರವನ್ನು ಸಮೀಪಿಸಿ ಆ ವರುಣಾಲಯವಾದ ಸಮುದ್ರವನ್ನು ಶೀಘ್ರವಾಗಿ ತುಂಬಿಸಿದನು.
ದುಹಿತೃತ್ವೇ ಚ ನೃಪತಿರ್ಗಂಗಾಂ ಸಮನುಕಲ್ಪಯತ್ |

ಪಿತೃಭ್ಯಶ್ಚೋದಕಂ ತತ್ರ ದದೌ ಪೂರ್ಣಮನೋರಥಃ ॥19॥
ಆ ರಾಜನು ಗಂಗೆಯನ್ನು ಮಗಳನ್ನಾಗಿ ಸ್ವೀಕರಿಸಿ ಗಂಗಾಜಲದಲ್ಲಿ ತನ್ನ ಪಿತೃಗಳಿಗೆ ಉದಕಕ್ರಿಯೆಯನ್ನು ಮಾಡಿ ತನ್ನ ಅಭಿಲಾಷೆಯನ್ನು ಪೂರೈಸಿಕೊಂಡನು.
ಏತತ್ ತೇ ಸರ್ವಮಾಖ್ಯಾತಂ ಗಂಗಾ ತ್ರಿಪಥಗಾ ಯಥಾ |
ಪೂರಣಾರ್ಥಂ ಸಮುದ್ರಸ್ಯ ಪೃಥಿವೀಮವತಾರಿತಾ ॥20॥
ಕಾಲೇಯಾಶ್ಚ ಯಥಾ ರಾಜನ್ ತ್ರಿದಶೈರ್ವಿನಿಪಾತಿತಾಃ |
ಸಮುದ್ರಶ್ಚ ಯಥಾ ಪೀತಃ ಕಾರಣಾರ್ಥೇ ಮಹಾತ್ಮನಾ ॥21॥
ವಾತಾಪಿಶ್ಚ ಯಥಾ ನೀತಃ ಕ್ಷಯಂ ಸ ಬ್ರಹ್ಮಹಾಽಸುರಃ |
ಅಗಸ್ತ್ಯೇನ ಮಹಾರಾಜ ಯನ್ಮಾಂ ತ್ವಂ ಪರಿಪೃಚ್ಛಸಿ ॥22॥
ಎಲೈ ಮಹಾರಾಜನೇ, ತ್ರಿಪಥಗೆಯಾದ ಗಂಗೆಯು ಸಮುದ್ರವನ್ನು ಪೂರ್ಣಮಾಡಲು ಹೇಗೆ ಭೂಮಿಗೆ ಇಳಿದು ಬಂದಳು, ಕಾಲೇಯ ದೈತ್ಯರು ದೇವತೆಗಳಿಂದ ಹೇಗೆ ವಿನಾಶಕ್ಕೆ ಒಳಗಾದರು, ಮಹಾತ್ಮರಾದ ಅಗಸ್ತ್ಯರು ದೊಡ್ಡ ಉದ್ದೇಶದ ಸಲುವಾಗಿ ಸಮುದ್ರ ಜಲವನ್ನು ಹೇಗೆ ಪಾನ ಮಾಡಿದರು, ಬ್ರಹ್ಮ ಹತ್ಯೆಯನ್ನು ಮಾಡುತ್ತಿದ್ದ ಅಸುರನಾದ ವಾತಾಪಿಯು ಅಗಸ್ತ್ಯರಿಂದ ಹೇಗೆ ವಿನಾಶ ಮಾಡಲ್ಪಟ್ಟನು, ಎಂದು ನೀನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ನಾನು ಉತ್ತರವನ್ನು ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.
*****
ನೂರ ಆರನೆಯ ಅಧ್ಯಾಯ
ಯುಧಿಷ್ಠಿರನ ತೀರ್ಥಯಾತ್ರೆ. ನಂದಾ-ಪರಮನಂದಾ ನದಿಗಳು
ಋಷಭಕೂಟ ಪರ್ವತದಲ್ಲಿ ಋಷಭ ಋಷಿಯ ಮಹಿಮೆ.
ವೈಶಂಪಾಯನಃ
ತತಃ ಪ್ರಯಾತಃ ಕೌಂತೇಯಃ ಕ್ರಮೇಣ ಭರತರ್ಷಭ |
ನಂದಾಂ ಪರಮನಂದಾಂ ಚ ನದ್ಯೌ ಪಾಪಭಯಾಪಹೇ ॥1॥
ವೈಶಂಪಾಯನ ಎಲೈ ಭರತರ್ಷಭನೇ, ಅನಂತರ ಕೌಂತೇಯನಾದ ಯುಧಿಷ್ಠಿರನು ಕ್ರಮವಾಗಿ ಪಾಪಪರಿಹಾರಕಗಳಾದ ನಂದಾ ಮತ್ತು ಪರಮನಂದಾ ನದಿಗಳನ್ನು ತಲುಪಿದನು.
ಸ ಪರ್ವತಂ ಸಮಾಸಾದ್ಯ ಹೇಮಕೂಟಮನಾಮಯಮ್ |
ಅಚಿಂತ್ಯಾನದ್ಭುತಾನ್ ಭಾವಾನ್ ದದರ್ಶ ಸುಬಹೂನ್ ನೃಪಃ ॥2॥
ಆ ರಾಜನು ನಿರ್ದುಷ್ಟವಾದ ಹೇಮಕೂಟಪರ್ವತವನ್ನು ತಲುಪಿ ಅಚಿಂತ್ಯವಾದ ಅನೇಕ ಅದ್ಭುತವಾದ ಘಟನೆಗಳನ್ನು ಅಲ್ಲಿ ನೋಡಿದನು.
ವರ್ಷಾಯಿತಾಽಭವನ್ ಮೇಘಾ ಉಪಲಾಶ್ಚ ಸಹಸ್ರಶಃ |
ನಾಶಕ್ನುವಂಸ್ತದಾರೋಢುಂ ವಿಷಣ್ಣಾಮನಸೋಽಪಿ ವಾ ॥3॥
ಮೇಘಗಳು ಯಾವಾಗಲೂ ಮಳೆಯನ್ನು ಸುರಿಸುತ್ತಿದ್ದವು. ಸಹಸ್ರಾರು ಸಣ್ಣ ಕಲ್ಲುಗಳು ಉದುರುತಿತದ್ದವು. ವಿಷಾದದಿಂದ ಕೂಡಿದ ಜನರು ಆ ಪರ್ವತವನ್ನು ಏರಲು ಸಾಧ್ಯವಾಗುತ್ತಿರಲಿಲ್ಲ.
ವಾಯುರ್ಯತ್ರ ವವೌ ನಿತ್ಯಂ ನಿತ್ಯಂ ದೇವಶ್ಚ ವರ್ಷತಿ |
ಸಾಯಂ ಪ್ರಾತಶ್ಚ ಭಗವಾನ್ ದೃಶ್ಯತೇ ಹವ್ಯವಾಹನಃ ॥4॥
ಆ ಪರ್ವತದಲ್ಲಿ ನಿತ್ಯವೂ ವಾಯುವು ಬೀಸುತ್ತದೆ. ನಿತ್ಯವೂ ಇಂದ್ರನು ಮಳೆಯನ್ನು ಸುರಿಸುತ್ತಾನೆ. ಪ್ರಾತಃಕಾಲದಲ್ಲಿ ಮತ್ತು ಸಾಯಂಕಾಲದಲ್ಲಿ ಅಗ್ನಿದೇವನು ಪ್ರತ್ಯಕ್ಷವಾಗಿ ಕಾಣುತ್ತಾನೆ.
ಏವಂ ಬಹುವಿಧಾನ್ ಭಾವಾನದ್ಭುತಾನ್ ವೀಕ್ಷ್ಯ ಪಾಂಡವಃ |
ಲೋಮಶಂ ಪುನರೇವ ಸ್ಮ ಪರ್ಯಪೃಚ್ಛತ್ ತದದ್ಭುತಮ್ ॥5॥
ಯದೇತದ್ ಭಗವಂಶ್ಚಿತ್ರಂ ಪರ್ವತೇಽಸ್ಮಿನ್ ಮಹೌಜಸಿ |
ಏತನ್ಮೇ ಸರ್ವಮಾಚಕ್ಷ್ವ ವಿಸ್ತರೇಣ ಮಹಾದ್ಯುತೇ ॥6॥
ಹೀಗೆ ಅನೇಕ ಅದ್ಭುತವಾದ ಘಟನೆಗಳನ್ನು ನೋಡಿದ ಪಾಂಡುಪುತ್ರನಾದ ಯುಧಿಷ್ಠಿರನು ಲೋಮಶರನ್ನು ಕುರಿತು `ಪೂಜ್ಯರೇ, ಈ ಮಹಾಸಾಮರ್ಥ್ಯವುಳ್ಳ ಪರ್ವತದಲ್ಲಿ ವಿಚಿತ್ರವಾದ ಅನೇಕ ಅದ್ಭುತ ಘಟನೆಗಳು ನಡೆಯುತ್ತಿವೆ. ಎಲೈ ಮಹಾದ್ಯುತಿಯೇ, ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳಿ' ಎಂದು ಕೇಳಿದನು.
ಲೋಮಶಃ
ಯಥಾಶ್ರುತಮಿದಂ ಪೂರ್ವಮಸ್ಮಾಭಿರರಿಕರ್ಶನ |
ತದೇಕಾಗ್ರಮನಾ ರಾಜನ್ ನಿಬೋಧ ವದತೋ ಮಮ ॥7॥
ಲೋಮಶ ಎಲೈ ರಾಜನೇ, ಶತ್ರುಕರ್ಶನನೇ, ಹಿಂದೆ ನಾನು ಹೇಮಕೂಟ ಪರ್ವತದ ಮಹಿಮೆಯನ್ನು ಕೇಳಿದಂತೆ ನಿನಗೆ ತಿಳಿಸುತ್ತೇನೆ. ಏಕಾಗ್ರಮನಸ್ಸಿನಿಂದ ಕೇಳು.
ಅಸ್ಮಿನ್ನೃಷಭಕೂಟೇ ತು ಋಷಭೋ ನಾಮ ತಾಪಸಃ |

ಅನೇಕಶತವರ್ಷಾಯುಃ ತಪಸ್ವೀ ಕೋಪನೋ ಭೃಶಮ್ ॥8॥
ಸ ವೈ ಸಂಭಾಷ್ಯಮಾಣೋಽನ್ಯೈಃ ಕೋಪಾದ್ ಗಿರಿಮುವಾಚ ಹ |
ಯ ಇಹ ವ್ಯಾಹರೇತ್ ಕಶ್ಚಿದ್ ಉಪಲಾನುತ್ಸೃಜೇಸ್ತಥಾ ॥9॥
ಈ ಋಷಭಕೂಟಪರ್ವತದಲ್ಲಿ ಹಿಂದೆ ಋಷಭ ಎಂಬ ಋಷಿಯು ಇದ್ದನು. ಅನೇಕ ನೂರುವರ್ಷಗಳ ಆಯುಸ್ಸನ್ನು ಹೊಂದಿದ ಅವನು ಒಳ್ಳೆಯ ತಪಸ್ವಿಯೂ, ಬಹಳ ಕೋಪಿಷ್ಠನೂ ಆಗಿದ್ದನು. ಅವನನ್ನು ಬೇರೆಯವರು ಮಾತನಾಡಿಸಲು ಯತ್ನಿಸಿದಾಗ ಅವನು ಕೋಪದಿಂದ ಪರ್ವತವನ್ನು ಕುರಿತು ಇಲ್ಲಿ ಯಾರಾದರೂ ಬಂದು ಮಾತಾಡಿದರೆ ಅವರ ಮೇಲೆ ಕಲ್ಲುಗಳ ಮಳೆಯನ್ನು ಸುರಿಸು ಎಂದು ಹೇಳಿದನು.
ವಾತಂ ಚಾಹೂಯ ಮಾ ಶಬ್ದಮಿತ್ಯುವಾಚ ಸ ತಾಪಸಃ |
ವ್ಯಾಹರಂಶ್ಚೈವ ಪುರುಷೋ ಮೇಘೇನ ವಿನಿವಾರ್ಯತೇ ॥10॥
ಆ ತಾಪಸನು ವಾಯುವನ್ನು ಕರೆದು ಇಲ್ಲಿ ಶಬ್ದಮಾಡಬೇಡ ಎಂದು ಹೇಳಿದನು. ಯಾವನಾದರೂ ಪುರುಷನು ಇಲ್ಲಿ ಮಾತನಾಡಲು ಪ್ರಯತ್ನಿಸಿದರೆ ಮೇಘಗಳ ಗರ್ಜನೆಯಿಂದ ಅವನು ನಿವಾರಿಸಲ್ಪಡುತ್ತಾನೆ.
ಏವಮೇತಾನಿ ಕರ್ಮಾಣಿ ರಾಜಂಸ್ತೇನ ಮಹರ್ಷಿಣಾ |
ಕೃತಾನಿ ಕಾನಿಚಿತ್ ಕೋಪಾತ್ ಪ್ರತಿಷಿದ್ಧಾನಿ ಕಾನಿಚಿತ್ ॥11॥
ಎಲೈ ರಾಜನೇ, ಹೀಗೆ ಆ ಮಹರ್ಷಿಯು ಇಲ್ಲಿ ಅನೇಕ ಕರ್ಮಗಳನ್ನು ಮಾಡಿದನು. ತಪಸ್ಸಿಗೆ ಅನುಕೂಲವಾದ ಅನೇಕ ವಿಷಯಗಳನ್ನು ಅಂಗೀಕರಿಸಿದನು. ತಪಸ್ಸಿಗೆ ವಿರುದ್ಧವಾದ ವಿಷಯಗಳನ್ನು ಕೋಪದಿಂದ ನಿರಾಕರಿಸಿದನು.
ನಂದಾಮಭಿಗತಾ ದೇವಾಃ ಪುರಾ ರಾಜನ್ನಿತಿ ಶ್ರುತಿಃ |
ಅನ್ವಪದ್ಯಂತ ಸಹಸಾ ಪುರುಷಾ ದೇವದರ್ಶಿನಃ ॥12॥
ಎಲೈ ರಾಜನೇ, ನಂದಾ ನದಿಗೆ ಬಂದ ದೇವತೆಗಳು ಹಿಂದೆ ಪುರುಷರ ದೃಷ್ಟಿಗೆ ತಕ್ಷಣವೇ ಗೋಚರವಾಗುತ್ತಿದ್ದರು ಎಂದು ನಾನು ಹೇಳಿದ್ದೇನೆ.
ತೇನಾದರ್ಶನಮಿಚ್ಛಂತೋ ದೇವಾಃ ಶಕ್ರಪುರೋಗಮಾಃ |
ದುರ್ಗಂ ಚಕ್ರುರಿಮಂ ದೇಶಂ ಗಿರಿಂ ಪ್ರತ್ಯೂಹರೂಪಕಮ್ ॥13॥
ಆ ಕಾರಣದಿಂದ ಇಂದ್ರ ಮೊದಲಾದ ದೇವತೆಗಳು ಮನುಷ್ಯರಿಂದ ದರ್ಶನವನ್ನು ಇಷ್ಟಪಡದೆ ಈ ಪರ್ವತ ಪ್ರದೇಶವನ್ನು ಮನುಷ್ಯ ದರ್ಶನಕ್ಕೆ ಪ್ರತಿಬಂಧಕವಾದ ದುರ್ಗವನ್ನಾಗಿ ಮಾಡಿಕೊಂಡರು.
ತದಾ ಪ್ರಭೃತಿ ಕೌಂತೇಯ ನರಾ ಗಿರಿಮಿಮಂ ಸದಾ |
ನಾಶಕ್ನುವನ್ನಭಿದ್ರಷ್ಟುಂ ಕುತ ಏವಾಧಿರೋಹಿತುಮ್ ॥14॥
ಎಲೈ ಕೌಂತೇಯನೇ, ಆಗಿನಿಂದ ಪ್ರಾರಂಭಿಸಿ ಮನುಷ್ಯರು ಈ ಪರ್ವತವನ್ನು ನೋಡುವುದಕ್ಕೂ ಸಾಧ್ಯವಾಗುವುದಿಲ್ಲ. ಇನ್ನು ಹತ್ತುವುದು ಹೇಗೆ ಸಾಧ್ಯವಾಗುತ್ತದೆ?
ನಾತಪ್ತತಪಸಾ ಶಕ್ಯೋ ದ್ರಷ್ಟುಮೇಷ ಮಹಾಗಿರಿಃ |
ಆರೋಢುಂ ವಾಽಪಿ ಕೌಂತೇಯ ತಸ್ಮಾನ್ನಿಯತವಾಗ್ಭವ ॥15॥
ಎಲೈ ಕೌಂತೇಯನೇ, ತಪಸ್ಸನ್ನು ಮಾಡದವನಿಂದ ಈ ಪರ್ವತವನ್ನು ನೋಡಲು ಅಥವಾ ಏರಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಾಙ್ನಿಯಮವನ್ನು ಧರಿಸು.
ಇಹ ದೇವಾಸ್ತದಾ ಸರ್ವೇ ಯಜ್ಞಾನಾಜಹ್ರುರುತ್ತಮಾನ್ |
ತೇಷಾಮೇತಾನಿ ಲಿಂಗಾನಿ ದೃಶ್ಯಂತೇ ಪುರುಷರ್ಷಭ ॥16॥
ಕುಶಾಂಕುರೇಣ ದೂರ್ವೇಯಂ ಸಂಸ್ತೀರ್ಣೇವ ಚ ಮೇದಿನೀ |
ಯೂಪಪ್ರಕಾರಾ ಬಹವೋ ವೃಕ್ಷಾಶ್ಚೇಮೇ ವಿಶಾಂ ಪತೇ ॥17॥
ಎಲೈ ಪುರುಷರ್ಷಭನೇ, ಆ ಕಾಲದಲ್ಲಿ ಇಲ್ಲಿ ಎಲ್ಲಾ ದೇವತೆಗಳೂ ಶ್ರೇಷ್ಠವಾದ ಯಜ್ಞಗಳನ್ನು ಆಚರಿಸಿದರು. ಆ ಯಜ್ಞದ ಈ ಚಿಹ್ನೆಗಳು ಇಂದಿಗೂ ಕಂಡುಬರುತ್ತವೆ. ಭೂಮಿಯ ಮೇಲಿರುವ ಈ ಗರಿಕೆಗಳು ಕುಶಾಂಕುರಗಳನ್ನು ಹರಡಿದಂತೆ ತೋರುತ್ತವೆ. ಎಲೈ ರಾಜನೇ, ಈ ವೃಕ್ಷಗಳು ಅನೇಕ ವಿಧವಾದ ಯೂಪಗಳನ್ನು ಹೋಲುತ್ತವೆ.
ದೇವಾಶ್ಚ ಋಷಯಶ್ಚಾಪಿ ವಸಂತ್ಯದ್ಯಾಪಿ ಭಾರತ |
ತೇಷಾಂ ಸಾಯಂ ತಥಾ ಪ್ರಾತರ್ದೃಶ್ಯತೇ ಹವ್ಯವಾಹನಃ ॥18॥
ಇಹಾಪ್ಲುತಾನಾಂ ಕೌಂತೇಯ ಪಾಪ್ಮಾ ಸದ್ಯೋ ವಿಹನ್ಯತೇ |
ಕುರುಶ್ರೇಷ್ಠಾಭಿಷೇಕಂ ತ್ವಮಸ್ಮಿನ್ ಕುರು ಸಹಾನುಜೈಃ ॥19॥
ತತೋ ನಂದಾಪ್ಲುತಾಂಗಸ್ತ್ವಂ ಕೌಶಿಕೀಮಭಿಯಾಸ್ಯಸಿ |
ವಿಶ್ವಾಮಿತ್ರೇಣ ವೈ ಯತ್ರ ತಪಸ್ತಪ್ತಮನುತ್ತಮಮ್ ॥20॥
ಎಲೈ ಭಾರತನೇ, ಇಲ್ಲಿ ಇಂದಿಗೂ ದೇವತೆಗಳು ಮತ್ತು ಋಷಿಗಳು ವಾಸ ಮಾಡುತ್ತಾರೆ. ಆ ಋಷಿಗಳಿಗೆ ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಅಗ್ನಿದೇವನ ದರ್ಶನವಾಗುತ್ತದೆ. ಎಲೈ ಕೌಂತೇಯನೇ, ಇಲ್ಲಿ ಸ್ನಾನವನ್ನು ಮಾಡಿದವರಿಗೆ ಪಾಪವು ತಕ್ಷಣ ವಿನಾಶವನ್ನು ಹೊಂದುತ್ತದೆ. ಎಲೈ ಕುರುಶ್ರೇಷ್ಠನೇ, ನೀನು ಇಲ್ಲಿ ತಮ್ಮಂದಿರ ಜೊತೆಯಲ್ಲಿ ಸ್ನಾನ ಮಾಡು. ನೀನು ನಂದಾನದಿಯಲ್ಲಿ ಸ್ನಾನಮಾಡಿ ಪವಿತ್ರವಾಗಿ ಅನಂತರ ಕೌಶಿಕೀ ನದಿಗೆ ಹೋಗುವಿ. ಅಲ್ಲಿ ವಿಶ್ವಾಮಿತ್ರರು ಶ್ರೇಷ್ಠವಾದ ತಪಸ್ಸು ಆಚರಿಸಿದರು.
ವೈಶಂಪಾಯನಃ
ತತಸ್ತತ್ರ ಸಮಾಪ್ಲುತ್ಯ ಗಾತ್ರಾಣಿ ಸಗಣೋ ನೃಪಃ |

ಜಗಾಮ ಕೌಶಿಕೀಂ ಪುಣ್ಯಾಂ ರಮ್ಯಾಂ ಶಿವಜಲಾಂ ನದೀಮ್ ॥21॥
ವೈಶಂಪಾಯನ ಅನಂತರ ಅಲ್ಲಿ ಧರ್ಮರಾಜನು ಪರಿವಾರ ಸಹಿತನಾಗಿ ಸ್ನಾನವನ್ನು ಮಾಡಿ ಅಲ್ಲಿಂದ ಪುಣ್ಯಪ್ರದವಾದ ಕೌಶಿಕೀ ನದಿಗೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಷ್ಠ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು.
*****
ನೂರ ಏಳನೆಯ ಅಧ್ಯಾಯ
ಯುಧಿಷ್ಠಿರನಿಂದ ವಿಭಾಂಡಕಾಶ್ರಮ ಪ್ರಾಪ್ತಿ. ಋಷ್ಯಶೃಂಗ ಕಥಾ.
ಲೋಮಶಃ
ಏಷಾ ದೇವೀ ನದೀ ಪುಣ್ಯಾ ಕೌಶಿಕೀ ಭರತರ್ಷಭ |
ವಿಶ್ವಾಮಿತ್ರಾಶ್ರಮೋ ರಮ್ಯ ಏಷ ಚಾತ್ರ ಪ್ರಕಾಶತೇ ॥1॥
ಲೋಮಶ ಎಲೈ ಭರತರ್ಷಭನೇ, ಇದು ಪವಿತ್ರವಾದ ಕೌಶಿಕೀ ನದಿ. ಇಲ್ಲಿಯೇ ಮನೋಹರವಾದ ವಿಶ್ವಾಮಿತ್ರರ ಆಶ್ರಮವು ಕಂಗೊಳಿಸುತ್ತಿದೆ.
ಆಶ್ರಮಶ್ಚೈವ ಪುಣ್ಯಾಖ್ಯಃ ಕಾಶ್ಯಪಸ್ಯ ಮಹಾತ್ಮನಃ |
ಋಶ್ಯಶೃಂಗಃ ಸುತೋ ಯಸ್ಯ ತಪಸ್ವೀ ಸಂಯತೇಂದ್ರಿಯಃ ॥2॥
ಇದು ಕಾಶ್ಯಪ ವಂಶದಲ್ಲಿ ಬಂದ ಮಹಾತ್ಮರಾದ ವಿಭಾಂಡಕ ಋಷಿಗಳ ಪುಣ್ಯವೆಂಬ ಹೆಸರಿನ ಆಶ್ರಮ. ತಪಸ್ವಿಗಳೂ, ಜಿತೇಂದ್ರಿಯರೂ ಆದ ಋಶ್ಯಶೃಂಗರು ಅವರ ಪುತ್ರರು.
ತಪಸೋ ಯಃ ಪ್ರಭಾವೇಣ ವರ್ಷಯಾಮಾಸ ಪಾಂಡವ |
ಅನಾವೃಷ್ಟ್ಯಾ ಭಯಾದ್ ಯಸ್ಯ ವವರ್ಷ ಬಲವೃತ್ರಹಾ ॥3॥
ಎಲೈ ಪಾಂಡವನೇ, ಅನಾವೃಷ್ಟಿ ಉಂಟಾದಾಗ ಅವರ ಭಯದಿಂದ ಮತ್ತು ಅವರ ತಪಸ್ಸಿನ ಪ್ರಭಾವದಿಂದ ಬಲವೃತ್ರಸೂದನನಾದ ದೇವೇಂದ್ರನು ಮಳೆಯನ್ನು ಸುರಿಸಿದನು.
ಮೃಗ್ಯಾಂ ಜಾತಃ ಸ ತೇಜಸ್ವೀ ಕಾಶ್ಯಪಸ್ಯ ಸುತಃ ಪ್ರಭುಃ |
ವಿಷಯೇ ರೋಮಪಾದಸ್ಯ ಯಶ್ಚಕಾರಾದ್ಭುತಂ ಮಹತ್ ॥4॥
ತೇಜಸ್ವಿಗಳೂ, ಪ್ರಭುಗಳೂ ಆದ ಆ ಋಷ್ಯಶೃಂಗರು ಕಾಶ್ಯಪರಿಗೆ ಒಂದು ಜಿಂಕೆಯಲ್ಲಿ ಜನಿಸಿದ ಪುತ್ರರು. ಅವರು ರೋಮಪಾದನ ರಾಜ್ಯದಲ್ಲಿ ಅದ್ಭುತವಾದ ಕಾರ್ಯವನ್ನು ಮಾಡಿದರು.
ಪ್ರವರ್ತಿತೇಷು ಸಸ್ಯೇಷು ಯಸ್ಮೈ ಶಾಂತಾಂ ದದೌ ನೃಪಃ |
ರೋಮಪಾದೋ ದುಹಿತರಂ ಸಾವಿತ್ರೀಂ ಸವಿತಾ ಯಥಾ ॥5॥
ರೋಮಪಾದನ ರಾಜ್ಯದಲ್ಲಿ ಮಳೆಯಿಂದ ಪುನಃ ಸಸ್ಯಗಳು ಬೆಳೆಯುತ್ತಿರಲು ರೋಮಪಾದ ರಾಜನು ಸೂರ್ಯನು ಸಾವಿತ್ರಿಯನ್ನು ಕೊಟ್ಟಂತೆ ತನ್ನ ಮಗಳಾದ ಶಾಂತಳನ್ನು ಅವರಿಗೆ ಕೊಟ್ಟನು.
ಯುಧಿಷ್ಠಿರಃ
ಋಶ್ಯಶೃಂಗಃ ಕಥಂ ಮೃಗ್ಯಾಮುತ್ಪನ್ನಃ ಕಾಶ್ಯಪಾತ್ಮಜಃ |
ವಿರುದ್ಧಯೋನಿಸಂಸರ್ಗೇ ಕಥಂ ಚ ತಪತಾಂ ವರಃ ॥6॥
ಯುಧಿಷ್ಠಿರ ಕಾಶ್ಯಪ ಪುತ್ರರಾದ ಋಶ್ಯಶೃಂಗರು ಹೇಗೆ ಜಿಂಕೆಯಲ್ಲಿ ಜನಿಸಿದರು? ವಿರುದ್ಧಯೋನಿ ಸಂಸರ್ಗದಿಂದ ಜನಿಸಿದ ಅವರು ಹೇಗೆ ತಪಸ್ಸುಗಳಲ್ಲಿ ಶ್ರೇಷ್ಠರಾದರು?
ಕಿಮರ್ಥಂ ಚ ಭಯಾತ್ ತಸ್ಯ ಕ್ರೋಧಾದ್ ಬಾಲಸ್ಯ ಧೀಮತಃ |
ಅನಾವೃಷ್ಟ್ಯಾಂ ಪ್ರವೃತ್ತಾಯಾಂ ವವರ್ಷ ಬಲವೃತ್ರಹಾ ॥7॥
ಕ್ರೋಧದಿಂದ ಅನಾವೃಷ್ಟಿಯನ್ನು ಉಂಟುಮಾಡಿದ್ದ ಬಲವೃತ್ರಸೂದನನಾದ ದೇವೇಂದ್ರನು ಏಕೆ ಮೇಧಾವಿಗಳೂ ಮತ್ತು ಬಾಲಕರೂ ಆದ ಅವರ ಭಯದಿಂದ ಮಳೆಯನ್ನು ಸುರಿಸಿದನು?
ಕಥಂರೂಪಾ ಚ ಸಾ ಶಾಂತಾ ರಾಜಪುತ್ರೀ ಯತವ್ರತಾ |
ಲೋಭಯಾಮಾಸ ಯಾ ಚೇತೋ ಮೃಗಸೂತಸ್ಯ ತಸ್ಯ ವೈ ॥8॥
ಮೃಗದಲ್ಲಿ ಜನಿಸಿದ ಅವರ ಮನಸ್ಸನ್ನು ಲೋಭಗೊಳಿಸಿದ ಪತಿವ್ರತೆಯಾದ ರಾಜಪುತ್ರಿಯಾದ ಶಾಂತಳು ಎಂತಹ ಸ್ವಭಾವದವಳು?
ರೋಮಪಾದಃ ಸ ರಾಜರ್ಷಿರ್ಯದಾಽಶ್ರೂಯತ ಧಾರ್ಮಿಕಃ |
ಕಥಂ ವೈ ವಿಷಯೇ ತಸ್ಯ ನಾವರ್ಷತ್ ಪಾಕಶಾಸನಃ ॥9॥
ರಾಜರ್ಷಿಯಾದ ರೋಮಪಾದನು ಧಾರ್ಮಿಕನೆಂದು ಕೇಳಿಬರುತ್ತಿರುವಾಗ ಅವನ ರಾಜ್ಯದಲ್ಲಿ ಇಂದ್ರನು ಏಕೆ ಮಳೆಯನ್ನು ಸುರಿಸಲಿಲ್ಲ?
ಏತನ್ಮೇ ಭಗವನ್ ಸರ್ವಂ ವಿಸ್ತರೇಣ ಯಥಾತಥಮ್ |
ವಕ್ತುಮರ್ಹಸಿ ಶುಶ್ರೂಷೋಃ ಋಶ್ಯಶೃಂಗಸ್ಯ ಚೇಷ್ಟಿತಮ್ ॥10॥
ಪೂಜ್ಯರೇ, ಋಶ್ಯಶೃಂಗರ ಈ ಎಲ್ಲಾ ಮಹಿಮೆಗಳನ್ನೂ ಕೇಳಬಯಸುವ ನನಗೆ ನೀವು ಎಲ್ಲವನ್ನೂ ವಿಸ್ತಾರವಾಗಿ ಯಥಾರ್ಥವಾಗಿ ಹೇಳಿ.

ಲೋಮಶಃ
ವಿಭಾಂಡಕಸ್ಯ ಬ್ರಹ್ಮರ್ಷೇಸ್ತಪಸಾ ಭಾವಿತಾತ್ಮನಃ |
ಅಮೋಘವೀರ್ಯಸ್ಯ ಸುತಃ ಪ್ರಜಾಪತಿಸಮದ್ಯುತಿಃ ॥11॥
ಶೃಣು ಪುತ್ರೋ ಯಥಾ ಜಾತ ಋಶ್ಯಶೃಂಗಃ ಪ್ರತಾಪವಾನ್ |
ಮಹಾಹ್ರದೇ ಮಹಾತೇಜಾ ಬಾಲಃ ಸ್ಥವಿರಸಮ್ಮತಃ ॥12॥
ಲೋಮಶರು ಬ್ರಹ್ಮರ್ಷಿಗಳಾದ ಮನೋಜಯವುಳ್ಳ ಅಮೋಘ ವೀರ್ಯರಾದ ಪ್ರಜಾಪತಿಗಳಿಗೆ ಸಮಾನವಾದ ಕಾಂತಿಯನ್ನು ಹೊಂದಿದ ವಿಭಾಂಡಕ ಋಷಿಗಳಿಗೆ ಮಹಾತೀರ್ಥದಲ್ಲಿ ಮಹಾತೇಜಸ್ವಿಯೂ, ಪ್ರತಾಪಶಾಲಿಯೂ, ಬಾಲಕನಾದರೂ ವೃದ್ಧಸಮ್ಮತರೂ ಆದ ಋಶ್ಯಶೃಂಗರು ಹೇಗೆ ಪುತ್ರರಾಗಿ ಜನಿಸಿದರೆಂದು ಹೇಳುತ್ತೇನೆ ಕೇಳು.
ಮಹಾಹ್ರದಂ ಸಮಾಸಾದ್ಯ ಕಾಶ್ಯಪಸ್ತಪಸಿ ಸ್ಥಿತಃ |
ದೀರ್ಘಕಾಲಂ ಪರಿಶ್ರಾಂತ ಋಷಿರ್ದೇವರ್ಷಿಸಮ್ಮಿತಃ |
ತಸ್ಯ ರೇತಃ ಪ್ರಚಸ್ಕಂದ ದೃಷ್ಟ್ವಾಪ್ಸರಸಮುರ್ವಶೀಮ್ ॥13॥
ಕಾಶ್ಯಪರಾದ ವಿಭಾಂಡಕರು ಮಹಾಹ್ರದವನ್ನು ತಲುಪಿ ಬಹುಕಾಲ ಅಲ್ಲಿ ತಪಸ್ಸನ್ನು ಮಾಡಿದರು. ದೇವರ್ಷಿಗಳಿಗೆ ಸಮಾನರಾದ ಆ ಋಷಿಗಳು ತಪಸ್ಸಿನಿಂದ ದಣಿದಿರುವಾಗ ಅಪ್ಸರೆಯಾದ ಊರ್ವಶಿಯನ್ನು ನೋಡಿ ಅವರಿಗೆ ವೀರ್ಯಸ್ಖಲನವಾಯಿತು.
ಅಪ್ಸೂಪಸ್ಪೃಶತೋ ರಾಜನ್ ತದ್ರೇತಃ ಪತಿತಂ ತದಾ |
ಸಹ ತೋಯೇನ ತೃಷಿತಾ ಮೃಗೀ ತಚ್ಚಾಪಿಬತ್ ತದಾ ॥14॥
ಎಲೈ ರಾಜನೇ, ಅವರು ನೀರಿನಲ್ಲಿ ಸ್ನಾನಮಾಡುತ್ತಿರುವಾಗ ಸ್ಖಲನಗೊಂಡ ವೀರ್ಯವು ನೀರಿನಲ್ಲಿ ಬಿದ್ದಿತು. ಆಗ ಬಾಯಾರಿಕೆಯಿಂದ ಬಂದ ಒಂದು ಹೆಣ್ಣು ಜಿಂಕೆಯು ನೀರಿನ ಜೊತೆಯಲ್ಲಿ ಆ ರೇತಸ್ಸನ್ನೂ ಕುಡಿಯಿತು.
ಅಮೋಘತ್ವಾದ್ ವಿಧೇಶ್ಚೈವ ಭಾವಿತ್ವಾದ್ ದೇವನಿರ್ಮಿತಾತ್ |
ತಸ್ಯಾಂ ಮೃಗ್ಯಾಂ ಸಮಭವತ್ ತಸ್ಯ ಪುತ್ರೋ ಮಹಾನೃಷಿಃ |
ಋಶ್ಯಶೃಂಗಸ್ತಪೋನಿತ್ಯೋ ವನ ಏವ ವ್ಯವರ್ಧತ ॥15॥
ವಿಭಾಂಡಕರು ಅಮೋಘವೀರ್ಯರಾದ್ದರಿಂದ ಮತ್ತು ದೈವಸಂಕಲ್ಪದಂತೆ ಮುಂದಿನ ಕಾರ್ಯವು ಆಗಬೇಕಾದುದರಿಂದ ಆ ಹೆಣ್ಣು ಜಿಂಕೆಯಲ್ಲಿ ಮಹರ್ಷಿಗಳಾದ ಋಶ್ಯಶೃಂಗರು ಜನಿಸಿದರು. ಋಶ್ಯಶೃಂಗರಾದರೂ ನಿತ್ಯವೂ ತಪೋನಿಷ್ಠರಾಗಿ ಕಾಡಿನಲ್ಲೇ ಬೆಳೆದರು.
ತಸ್ಯ ಶೃಂಗಂ ಶಿರಸಿ ವೈ ರಾಜನ್ನಾಸೀನ್ಮಹಾತ್ಮನಃ |
ತೇನರ್ಶ್ಯಶೃಂಗಂ ಇತ್ಯುಕ್ತ ತದಾ ಸ ಪ್ರಥಿತೋಽಭವತ್ ॥16॥
ಎಲೈ ರಾಜನೇ, ಆ ಮಹಾನುಭಾವರಿಗೆ ತಲೆಯಲ್ಲಿ ಎರಡು ಕೊಂಬುಗಳಿದ್ದವು. ಆದ್ದರಿಂದ ಅವರು ಋಶ್ಯಶೃಂಗ ಎಂಬ ಹೆಸರಿನಿಂದಲೇ ಪ್ರಖ್ಯಾತರಾದರು.
ನ ತೇನ ದೃಷ್ಟಪೂರ್ವೋಽನ್ಯಃ ಪಿತುರನ್ಯತ್ರ ಮಾನುಷಃ |
ತಸ್ಮಾತ್ ತಸ್ಯ ಮನೋ ನಿತ್ಯಂ ಬ್ರಹ್ಮಚರ್ಯೇಽಭವನ್ನೃಪ ॥17॥
ಅವರು ತಮ್ಮ ತಂದೆಯನ್ನು ಬಿಟ್ಟು ಬೇರೆ ಯಾವ ಮನುಷ್ಯರನ್ನೂ ನೋಡಿರಲಿಲ್ಲ. ಎಲೈ ರಾಜನೇ, ಆದ್ದರಿಂದ ಅವರ ಮನಸ್ಸು ಯಾವಾಗಲೂ ಬ್ರಹ್ಮಚರ್ಯದಲ್ಲಿಯೇ ಸ್ಥಿರವಾಗಿದ್ದಿತು.
ಏತಸ್ಮಿನ್ನೇವ ಕಾಲೇ ತು ಸಖಾ ದಶರಥಸ್ಯ ವೈ |
ರೋಮಪಾದ ಇತಿ ಖ್ಯಾತೋ ಹ್ಯಂಗಾನಾಮೀಶ್ವರೋಽಭವತ್ ॥18॥
ಆ ಸಮಯದಲ್ಲಿ ದಶರಥನ ಸ್ನೇಹಿತನಾದ ರೋಮಪಾದನೆಂದು ಪ್ರಖ್ಯಾತನಾದ ರಾಜನು ಅಂಗಾಧಿಪತಿಯಾಗಿದ್ದನು.
ತೇನ ಕಾಮಾತ್ ಕೃತಾ ಮಿಥ್ಯಾ ಬ್ರಾಹ್ಮಣೇಭ್ಯ ಇತಿ ಶ್ರುತಿಃ |
ದೈವೋಪಹತಸತ್ವೇನ ಧರ್ಮಜ್ಞೇನಾಪಿ ಭಾರತ ॥19॥
ಎಲೈ ಭಾರತನೇ, ಅವನು ಧರ್ಮಜ್ಞನಾಗಿದ್ದರೂ ದೈವಪ್ರೇರಣೆಯಿಂದ ಉಂಟಾದ ಚಿತ್ತದಿಂದ ಬ್ರಾಹ್ಮಣರಿಗೆ ಕೊಟ್ಟ ಆಶ್ವಾಸನೆಗಳನ್ನು ಸುಳ್ಳು ಮಾಡಿದನೆಂದು ನಾವು ಕೇಳಿದ್ದೇವೆ.
ಸ ಬ್ರಾಹ್ಮಣೈಃ ಪರಿತ್ಯಕ್ತ ತದಾ ಭರತಸತ್ತಮ |
ಪುರೋಹಿತಾಪಚಾರೇಣ ತಸ್ಯ ರಾಜ್ಞೋ ಯದೃಚ್ಛಯಾ |
ನ ವವರ್ಷ ಸಹಸ್ರಾಕ್ಷಃ ತತೋಽಪೀಡ್ಯಂತ ವೈ ಪ್ರಜಾಃ ॥20॥
ಎಲೈ ಭರತಸತ್ತಮನೇ, ಆಗ ಅವನು ಬ್ರಾಹ್ಮಣರಿಂದ ಪರಿತ್ಯಜಿಸಲ್ಪಟ್ಟನು. ಅವನು ಅಕಸ್ಮಾತ್ತಾಗಿ ಮಾಡಿದ ಪುರೋಹಿತರ ಅಪಚಾರದಿಂದಲೂ ಅವನ ರಾಜ್ಯದಲ್ಲಿ ಇಂದ್ರನು ಮಳೆಯನ್ನು ಸುರಿಸಲಿಲ್ಲ. ಅದರಿಂದ ಪ್ರಜೆಗಳು ಪೀಡೆಗೆ ಒಳಗಾದರು.
ಸ ಬ್ರಾಹ್ಮಣಾನ್ ಪರ್ಯಪೃಚ್ಛತ್ ತಪೋಯುಕ್ತಾನ್ ಮನೀಷಿಣಃ |
ಪ್ರವರ್ಷಣೇ ಸುರೇಂದ್ರಸ್ಯ ಸಮರ್ಥಾನ್ ಪೃಥಿವೀಪತಿಃ ॥21॥
ಆ ರಾಜನು ತಪೋಯುಕ್ತರಾದ ಮೇಧಾವಿಗಳಾದ ದೇವೇಂದ್ರನನ್ನು ಸಂತೋಷ ಪಡಿಸಿ ಮಳೆಯನ್ನು ತರಿಸಲು ಸಮರ್ಥರಾದ ಬ್ರಾಹ್ಮಣರನ್ನು ಈ ವಿಷಯದಲ್ಲಿ ಪ್ರಶ್ನೆ ಮಾಡಿದನು.
ಕಥಂ ಸ ವರ್ಷೇತ್ ಪರ್ಜನ್ಯ ಉಪಾಯಃ ಪರಿಮೃಶ್ಯತಾಮ್ |
ತಮೂಚುಶ್ಚೋದಿತಾಸ್ತೇ ತು ಸ್ವಮತಾನಿ ಮನೀಷಿಣಃ |
ತತ್ರ ತ್ವೇಕೋ ಮುನಿವರಃ ತಂ ರಾಜಾನಮುವಾಚ ಹ ॥22॥
ಅದರಲ್ಲಿ ಒಬ್ಬ ಋಷಿಶ್ರೇಷ್ಠರು ರಾಜನನ್ನು ಕುರಿತು ಹೀಗೆ ಮಾತನಾಡಿದರು. ಏನು ಮಾಡಿದರೆ ಪರ್ಜನ್ಯನು ಮಳೆಯನ್ನು

ಸುರಿಸುತ್ತಾನೆ. ಅದಕ್ಕೆ ಬೇಕಾದ ಉಪಾಯವನ್ನು ಚಿಂತಿಸಿ (ಎಂದು ಹೇಳಿದನು). ರಾಜನಿಂದ ಹೀಗೆ ಪ್ರೇರಿಸಲ್ಪಟ್ಟ ಮೇಧಾವಿಗಳಾದ ಬ್ರಾಹ್ಮಣರು ತಮ್ಮ ತಮ್ಮ ಅಭಿಪ್ರಾಯಗಳನ್ನು ಹೇಳಿದರು.

ಕುಪಿತಾಸ್ತವ ರಾಜೇಂದ್ರ ಬ್ರಾಹ್ಮಣಾ ನಿಷ್ಕೃತಿಂ ಚರ |
ಋಶ್ಯಶೃಂಗಂ ಮುನಿವರಮಾನಯಸ್ವ ಚ ಪಾರ್ಥಿವ |
ಐಣೇಯಮನಭಿಜ್ಞಂ ಚ ನಾರೀಣಾಮಾರ್ಜವೇ ರತಮ್ ॥23॥
ಸ ಚೇದವತರೇದ್ ರಾಜನ್ ವಿಷಯಂ ತೇ ಮಹಾತಪಾಃ |
ಸದ್ಯಃ ಪ್ರವರ್ಷೇತ್ ಪರ್ಜನ್ಯ ಇತಿ ಮೇ ನಾಸ್ತಿ ಸಂಶಯಃ ॥24॥
ಏತಚ್ಛ್ರುತ್ವಾ ತು ವಚನಂ ಕೃತ್ವಾ ನಿಷ್ಕೃತಿಮಾತ್ಮನಃ |
ಸ ಕೃತ್ವಾ ಪುನರಾಗಚ್ಛತ್ ಪ್ರಸನ್ನೇಷು ದ್ವಿಜಾತಿಷು ॥25॥

ರಾಜೇಂದ್ರನೇ, ಬ್ರಾಹ್ಮಣರು ನಿನ್ನ ಮೇಲೆ ಕೋಪಗೊಂಡಿದ್ದಾರೆ. ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೋ. ಎಲೈ ರಾಜನೇ, ಜಿಂಕೆಯಲ್ಲಿ ಜನಿಸಿ ನಾರಿಯರನ್ನೇ ನೋಡದಿರುವ ಆರ್ಜವವುಳ್ಳ ಮುನಿಶ್ರೇಷ್ಠರಾದ ಋಶ್ಯಶೃಂಗರನ್ನು ನಿನ್ನ ರಾಜ್ಯಕ್ಕೆ ಕರೆದುಕೊಂಡು ಬಾ. ಎಲೈ ರಾಜನೇ, ಮಹಾತಪಸ್ವಿಗಳಾದ ಅವರು ನಿನ್ನ ರಾಜ್ಯದಲ್ಲಿ ಪಾದವನ್ನು ಇಟ್ಟ ತಕ್ಷಣ ಪರ್ಜನ್ಯನು ಮಳೆಯನ್ನು ಸುರಿಸುತ್ತಾನೆ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ (ಎಂದು ಹೇಳಿದರು).

ಈ ಮಾತುಗಳನ್ನು ಕೇಳಿದ ರಾಜನು ರಾಜ್ಯದಿಂದ ಹೊರಗೆ ಹೋಗಿ ತನಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಬ್ರಾಹ್ಮಣರು ಪ್ರಸನ್ನರಾದಮೇಲೆ ಪುನಃ ರಾಜ್ಯಕ್ಕೆ ಹಿಂದಿರುಗಿದನು.

ರಾಜಾನಮಾಗತಂ ದೃಷ್ಟ್ವಾ ಪ್ರತಿಸಂಜಗೃಹುಃ ಪ್ರಜಾಃ |
ಸ ವೈ ತಾಃ ಪ್ರತಿಜಗ್ರಾಹ ಪಿತೇವ ಹಿತಕೃತ್ ಸದಾ ॥26॥

ರಾಜನು ಹಿಂದಿರುಗುವುದನ್ನು ನೋಡಿ ಪ್ರಜೆಗಳು ಅವನನ್ನು ಸ್ವೀಕರಿಸಿದರು. ತಂದೆಯಂತೆ ಯಾವಾಗಲೂ ಪ್ರಜೆಗಳಿಗೆ ಹಿತವನ್ನುಂಟುಮಾಡುತ್ತಿದ್ದ ಅವನೂ ಸಹ ಪ್ರಜೆಗಳನ್ನು ಸ್ವೀಕರಿಸಿದನು.

ತತೋಽಂಗಪತಿರಾಹೂಯ ಸಚಿವಾನ್ ಮಂತ್ರಕೋವಿದಾನ್ |
ಋಶ್ಯಶೃಂಗಾಗಮೇ ಯತ್ನಮಕರೋನ್ಮಂತ್ರನಿಶ್ಚಯೇ ॥27॥

ಅನಂತರ ಅಂಗಪತಿಯಾದ ರೋಮಪಾದನು ಮಂತ್ರನಿಪುಣರಾದ ಸಚಿವರನ್ನು ಕರೆದು ಮಂತ್ರಾಲೋಚನೆಯನ್ನು ಮಾಡಿ ಋಶ್ಯಶೃಂಗರನ್ನು ಕರೆತರುವ ಪ್ರಯತ್ನವನ್ನು ಮಾಡಿದನು.

ಸೋಽಧ್ಯಗಚ್ಛದುಪಾಯಂ ತು ತೈರಮಾತ್ಯೈಃ ಸಹಾಚ್ಯುತಃ |
ಶಾಸ್ತ್ರಜ್ಞೈರಲಮರ್ಥಜ್ಞೈರ್ನಿತ್ಯಂ ಚ ಪರಿನಿಷ್ಠಿತೈಃ ॥28॥

ಶಾಸ್ತ್ರಜ್ಞರಾದ ಅರ್ಥಜ್ಞರಾದ ನಿತ್ಯವೂ ತನ್ನಲ್ಲಿ ಶ್ರದ್ಧೆಯುಳ್ಳ ಮಂತ್ರಿಗಳ ಜೊತೆಯಲ್ಲಿ ತನ್ನ ಗುಣಗಳಿಂದ ಚ್ಯುತನಾಗದ ಆ ರಾಜನು ಮಂತ್ರಾಲೋಚನೆಯನ್ನು ಮಾಡಿ ಒಂದು ಉಪಾಯವನ್ನು ತಿಳಿದನು.

ತತಸ್ತಾ ಆನಯಾಮಾಸ ಚಾರಮುಖ್ಯಾನ್ ಮಹೀಪತಿಃ |
ವೇಶ್ಯಾಃ ಸರ್ವತ್ರ ನಿಷ್ಣಾತಾಸ್ತಾ ಉವಾಚ ಸ ಪಾರ್ಥಿವಃ ॥29॥
ಋಶ್ಯಶೃಂಗಮೃಷೇಃ ಪುತ್ರಮಾನಯಧ್ವಮುಪಾಯತಃ |
ಲೋಭಯಿತ್ವಾಽತಿವಿಶ್ವಸ್ತಂ ವಿಷಯಂ ಮಮ ಶೋಭನಾಃ ॥30॥

ಅನಂತರ ತನ್ನ ಮುಖ್ಯಚಾರರ ಮೂಲಕ ಮಹೀಪತಿಯು ಎಲ್ಲ ವಿಧದಲ್ಲಿಯೂ ನಿಷ್ಣಾತರಾದ ವೇಶ್ಯೆಯರನ್ನು ಕರೆಸಿ ಅವರನ್ನು ಕುರಿತು `ಎಲೌ ಶೋಭನೆಯರೇ, ಋಷಿಕುಮಾರರಾದ ಋಶ್ಯಶೃಂಗರನ್ನು ಅತಿವಿಶ್ವಾಸವುಂಟಾಗುವಂತೆ ಉಪಾಯದಿಂದ ಪ್ರಲೋಭಗೊಳಿಸಿ ನನ್ನ ದೇಶಕ್ಕೆ ಕರೆದುಕೊಂಡು ಬನ್ನಿ' ಎಂದು ಹೇಳಿದನು.

ತಾ ರಾಜಭಯಭೀತಾಶ್ಚ ಶಾಪಭೀತಾಶ್ಚ ಯೋಷಿತಃ |
ಅಶಕ್ಯಮೂಚುಸ್ತತ್ ಕಾರ್ಯಂ ವಿಷಣ್ಣಾ ಗತಚೇತಸಃ ॥32॥

ಆ ಸ್ತ್ರೀಯರಾದರೂ ರಾಜಭಯದಿಂದಲೂ, ಋಷಿಯ ಶಾಪದ ಭಯದಿಂದಲೂ ಭೀತರಾಗಿ ವಿಷಾದದಿಂದ ವಿಚೇತನರಾಗಿ ಈ ಕಾರ್ಯವು ಸಾಧ್ಯವಿಲ್ಲವೆಂದು ಹೇಳಿದರು.

ತಂ ಚೈಕಾ ಚ ಜರದ್ಯೋಷಾ ರಾಜಾನಮಿದಮಬ್ರವೀತ್ |
ಪ್ರಯತಿಷ್ಯೇ ಮಹಾರಾಜ ತಮಾನೇತುಂ ತಪೋಧನಮ್ ॥33॥
ಅಭಿಪ್ರೇತಾಂಶ್ಚ ಮೇ ಕಾಮಾನ್ ಸಮನುಜ್ಞಾತುಮರ್ಹಸಿ |
ತತಃ ಶಕ್ಷ್ಯೇ ಲೋಭಯಿತುಮ್ ಋಶ್ಯಶೃಂಗಮೃಷೇಃ ಸುತಮ್ ॥34॥

ಅವರಲ್ಲಿ ಒಬ್ಬ ವಯಸ್ಸಾದ ವನಿತೆಯು ರಾಜನನ್ನು ಕುರಿತು `ಮಹಾರಾಜನೇ, ಆ ತಪೋಧನರನ್ನು ಕರೆತರಲು ನಾನು ಪ್ರಯತ್ನಿಸುವೆನು. ನನಗೆ ಬೇಕಾದ ಸಲಕರಣೆಗಳೆಲ್ಲವನ್ನೂ ನೀನು ಒದಗಿಸಿಕೊಡಬೇಕು. ಹಾಗೆ ಮಾಡಿದರೆ ಋಷಿಪುತ್ರರಾದ ಋಶ್ಯಶೃಂಗರನ್ನು ಪ್ರಲೋಭಗೊಳಿಸಲು ಸಮರ್ಥಳಾಗುತ್ತೇನೆ' ಎಂದು ಹೇಳಿದಳು.

ತಸ್ಯಾಃ ಸರ್ವಮಭಿಪ್ರಾಯಮನ್ವಜಾನಾತ್ ಸ ಪಾರ್ಥಿವಃ |
ಧನಂ ಚ ಪ್ರದದೌ ಭೂರಿ ರತ್ನಾನಿ ವಿವಿಧಾನಿ ಚ ॥35॥

ಅವಳ ಅಭಿಪ್ರಾಯದಂತೆ ರಾಜನು ಅವಳಿಗೆ ಬೇಕಾದ ಎಲ್ಲ ಅನುಕೂಲಗಳನ್ನೂ ಕಲ್ಪಿಸಿ ಕೊಟ್ಟನು ಮತ್ತು ಅವಳಿಗೆ ಬಹಳವಾದ ಧನವನ್ನೂ ಮತ್ತು ವಿಧವಿಧವಾದ ರತ್ನಗಳನ್ನೂ ಕೊಟ್ಟನು.

ತತೋ ರೂಪೇಣ ಸಂಪನ್ನಾ ವಯಸಾ ಚ ವಿಶಾಂಪತೇ |

ಸ್ತ್ರಿಯ ಆದಾಯ ಕಾಶ್ಚಿತ್ ಸಾ ಜಗಾಮ ವನಮಂಜಸಾ ॥36॥
ಎಲೈ ರಾಜನೇ, ಆಗ ಅವಳು ಒಳ್ಳೆಯ ರೂಪ ಮತ್ತು ವಯಸ್ಸಿನಿಂದ ಕೂಡಿದ ಕೆಲವು ಸ್ತ್ರೀಯರನ್ನು ಕರೆದುಕೊಂಡು ಚೆನ್ನಾಗಿ ಆಶ್ರಮಕ್ಕೆ ಹೊರಟಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
*****
ನೂರ ಎಂಟನೆಯ ಅಧ್ಯಾಯ
ರೋಮಪಾದ ನಿರ್ದೇಶದಂತೆ ವರಾಂಗನೆಯರಿಂದ ಋಶ್ಯಶೃಂಗರ ಪ್ರಲೋಭನ.
ಲೋಮಶಃ
ತಾಸ್ತು ನಾವ್ಯಾಶ್ರಮಂ ಚಕ್ರೇ ರಾಜಕಾರ್ಯಾರ್ಥಸಿದ್ಧಯೇ |
ಸಂದೇಶಾಚ್ಚಾಪಿ ನೃಪತೇಃ ಸ್ವಬುದ್ಧ್ಯಾ ಚೈವ ಭಾರತ ॥1॥
ಎಲೈ ಭಾರತನೇ, ಆ ಸ್ತ್ರೀಯರಾದರೂ ರಾಜಕಾರ್ಯಾರ್ಥಸಿದ್ಧಿಗಾಗಿ ರಾಜನ ಸಂದೇಶದಿಂದಲೂ ಮತ್ತು ತಮ್ಮ ಬುದ್ಧಿಯಿಂದಲೂ ಪ್ರೇರಿತರಾಗಿ ನಾವೆಯಲ್ಲೇ ಒಂದು ಆಶ್ರಮವನ್ನು ನಿರ್ಮಾಣ ಮಾಡಿದರು.
ನಾನಾಪುಷ್ಪಫಲೈರ್ವೃಕ್ಷೈಃ ಕೃತ್ರಿಮೈರುಪಶೋಭಿತಮ್ |
ನಾನಾಗುಲ್ಮಲತೋಪೇತೈಃ ಸ್ವಾದುಕಾಮಫಲಪ್ರದೈಃ ॥2॥
ಅತೀವ ರಮಣೀಯಂ ತದತೀವ ಚ ಮನೋಹರಮ್ |
ಚಕ್ರೇ ನಾವ್ಯಾಶ್ರಮಂ ರಮ್ಯಮದ್ಭುತೋಪಮದರ್ಶನಮ್ ॥3॥
ರುಚಿಕರವಾದ ಬೇಡಿದ ಹಣ್ಣುಗಳನ್ನು ಕೊಡುವ ನಾನಾ ಪುಷ್ಪಫಲಗಳುಳ್ಳ ಕೃತ್ರಿಮ ವೃಕ್ಷಗಳಿಂದ ಸುಂದರವಾದ ಅನೇಕ ಗುಲ್ಮ ಮತ್ತು ಲತೆಗಳಿಂದ ಕೂಡಿದ ಬಹಳ ರಮಣೀಯವೂ, ಮನೋಹರವೂ, ಸುಂದರವೂ ಅದ್ಭುತವೂ ಆದ ಒಂದು ನಾವೆ ಆಶ್ರಮವನ್ನು ಮಾಡಿದರು.
ತತೋ ನಿಬಧ್ಯ ಸಾ ನಾವಮದೂರೇ ಕಾಶ್ಯಪಾಶ್ರಮಾತ್ |
ಚಾರಯಾಮಾಸ ಪುರುಷೈರ್ವಿಹಾರಂ ತಸ್ಯ ವೈ ಮುನೇಃ ॥4॥
ಅನಂತರ ಆ ವೇಶ್ಯೆಯು ಆ ನಾವೆಯನ್ನು ಕಾಶ್ಯಪರ ಆಶ್ರಮದ ಸಮೀಪದಲ್ಲಿ ನಿಲ್ಲಿಸಿ ತನ್ನ ಪುರುಷರಿಂದ ಆ ಋಷಿಗಳ ಆಶ್ರಮವನ್ನು ಸಂಚಾರ ಮಾಡಿಸಿದಳು.
ತತೋ ದುಹಿತರಂ ವೇಶ್ಯಾಂ ಸಮಧ್ಯಾಪ್ಯೇತಿಕೃತ್ಯತಾಮ್ |
ದೃಷ್ಟ್ವಾಽಽಶ್ರಮಂ ಕಾಶ್ಯಪಸ್ಯ ಪ್ರಾಹಿಣೋದ್ ಬುದ್ಧಿಸಮ್ಮತಾಮ್ ॥5॥
ಅನಂತರ ಕಾಶ್ಯಪರ ಆಶ್ರಮವನ್ನು ಚೆನ್ನಾಗಿ ತಿಳಿದು ಮೇಧಾವಿಯಾದ ವೇಶ್ಯೆಯಾದ ತನ್ನ ಮಗಳಿಗೆ ಮಾಡಬೇಕಾದ ಕಾರ್ಯದ ಬಗ್ಗೆ ಸರಿಯಾದ ಶಿಕ್ಷಣವನ್ನು ನೀಡಿ ಅವಳನ್ನು ಆಶ್ರಮಕ್ಕೆ ಕಳುಹಿಸಿಕೊಟ್ಟಳು.
ಸಾ ತತ್ರ ಗತ್ವಾ ಕುಶಲಾ ತಪೋನಿತ್ಯಸ್ಯ ಸನ್ನಿಧೌ |
ಆಶ್ರಮಂ ತಂ ಸಮಾಸಾದ್ಯ ದದರ್ಶ ತಮೃಷೇಃ ಸುತಮ್ ॥6॥
ಕುಶಲಳಾದ ಅವಳು ತಪೋನಿರತರಾದ ಆ ಋಷಿಗಳ ಸನ್ನಿಧಿಯಲ್ಲಿ (ಸಮೀಪದಲ್ಲಿ) ಆಶ್ರಮವನ್ನು ಪ್ರವೇಶಿಸಿ ಋಷಿಪುತ್ರರಾದ ಋಷ್ಯಶೃಂಗರನ್ನು ನೋಡಿದಳು.
ವೇಶ್ಯಾ
ಕಚ್ಚಿನ್ಮುನೇ ಕುಶಲಂ ತಾಪಸಾನಾಂ
ಕಚ್ಚಿಚ್ಚ ವೋ ಮೂಲಫಲಂ ಸಮೃದ್ಧಮ್ |
ಕಚ್ಚಿದ್ ಭವಾನ್ ಕುಶಲೀ ಚಾಶ್ರಮೇಽಸ್ಮಿನ್
ತ್ವಾಂ ವೈ ದ್ರಷ್ಟುಂ ಸಾಂಪ್ರತಮಾಗತಾಽಸ್ಮಿ ॥7॥
ವೇಶ್ಯಾ ಋಷಿಗಳೇ, ನಿಮ್ಮ ಆಶ್ರಮದಲ್ಲಿ ತಾಪಸರಿಗೆ ಕುಚಲವೇ? ಮೂಲಫಲಗಳು ಸಮೃದ್ಧವಾಗಿವೆಯೇ? ಈ ಆಶ್ರಮದಲ್ಲಿ ನೀವು ಕ್ಷೇಮದಿಂದ ಇದ್ದೀರಾ? ನಾನು ನಿಮ್ಮನ್ನು ನೋಡಲು ಈಗ ಇಲ್ಲಿಗೆ ಬಂದಿದ್ದೇನೆ.
ಕಚ್ಚಿತ್ ತಪೋ ವರ್ಧತೇ ತಾಪಸಾನಾಂ
ಪಿತಾ ಚ ತೇ ಕಚ್ಚಿದದೀನತೇಜಾಃ |
ಕಚ್ಚಿತ್ ತ್ವಯಾ ಪ್ರೀಯತೇ ಚೈವ ವಿಪ್ರ
ಕಚ್ಚಿತ್ ಸ್ವಾಧ್ಯಾಯಃ ಕ್ರಿಯತೇ ಋಶ್ಯಶೃಂಗ ॥8॥
ತಾಪಸರೂ ತಪಸ್ಸುಗಳೂ ಅಭಿವೃದ್ಧಿಯನ್ನು ಹೊಂದುತ್ತಿವೆಯೇ? ನಿಮ್ಮ ತಂದೆಯು ಒಳ್ಳೆಯ ತೇಜಸ್ವಿಗಳಾಗಿದ್ದಾರೆಯೇ? ಎಲೈ ಬ್ರಾಹ್ಮಣರೇ, ನೀವು ಸಂತೋಷವಾಗಿದ್ದೀರಾ? ಎಲೈ ಋಶ್ಯಶೃಂಗರೇ ನಿಮ್ಮ ಸ್ವಾಧ್ಯಾಯವು ಚೆನ್ನಾಗಿ ಜರುಗುತ್ತಿದೆಯೇ?
ಋಶ್ಯಶೃಂಗಃ
ಋದ್ಧೋ ಭವಾನ್ ಜ್ಯೋತಿರಿವ ಪ್ರಕಾಶತೇ
ಮನ್ಯೇ ಚಾಹಂ ತ್ವಾಮಭಿವಾದನೀಯಮ್ |
ಪಾದ್ಯಂ ತೇ ವೈ ಸಂಪ್ರದಾಸ್ಯಾಮಿ ಕಾಮಾದ್

ಯಥಾಧರ್ಮಂ ಫಲಮೂಲಾನಿ ಚೈವ ॥9॥
ಋಶ್ಯಶೃಂಗ ಚೆನ್ನಾಗಿ ಬೆಳೆದ ನೀನು ಜ್ಯೋತಿಯಂತೆ ಪ್ರಕಾಶಿಸುತ್ತಿದ್ದೀಯೆ. ನಾನು ನಿನಗೆ ನಮಸ್ಕಾರವನ್ನು ಮಾಡಬೇಕೆಂದು ಭಾವಿಸುತ್ತೇನೆ. ನನ್ನ ಇಚ್ಛೆಯಿಂದಲೇ ನಿನಗೆ ಪಾದ್ಯವನ್ನು ನೀಡುವೆನು. ನನ್ನ ಧರ್ಮಕ್ಕೆ ಅನುಗುಣವಾಗಿ ಫಲಮೂಲಗಳನ್ನೂ ನೀಡುವೆನು.
ಕೌಶ್ಯಾಂ ಬೃಸ್ಯಾಮಾಸ್ಸ್ವ ಯಥೋಪಜೋಷಂ
ಕೃಷ್ಣಾಜಿನೇನಾವೃತಾಯಾಂ ಶುಭಾಯಾಮ್ |
ಕ್ವ ಚಾಶ್ರಮಸ್ತವ ಕಿಂ ನಾಮ ಚೇದಂ
ವ್ರತಂ ಬ್ರಹ್ಮಂಶ್ಚರಸಿ ತೇ ಧ್ಯೇಯಂ ವದ ತ್ವಮ್ ॥10॥
ಕೃಷ್ಣಾಜಿನದಿಂದ ಆವೃತವಾದ ಪವಿತ್ರವಾದ ದರ್ಭಾಸನದಲ್ಲಿ ಸುಖವಾಗಿ ಕುಳಿತುಕೋ. ನಿನ್ನ ಆಶ್ರಮವು ಎಲ್ಲಿದೆ? ಎಲೈ ಬ್ರಾಹ್ಮಣನೇ, ನೀನು ಆಚರಿಸುವ ವ್ರತಕ್ಕೆ ಏನು ಹೆಸರು? ನಿನ್ನ ಧ್ಯೇಯವಸ್ತುವು ಯಾವುದು?
ವೇಶ್ಯಾ
ಮಮಾಶ್ರಮಃ ಕಾಶ್ಯಪಪುತ್ರ ರಮ್ಯಃ
ತ್ರಿಯೋಜನಂ ಶೈಲಮಿಮಂ ಪರೇಣ |
ತತ್ರ ಸ್ವಧರ್ಮೋಽನಭಿವಾದನಂ ನೋ
ನ ಚೋದಕಂ ಪಾದ್ಯಮುಪಸ್ಪೃಶಾಮಿ ॥11॥
ವೇಶ್ಯೆ ಕಾಶ್ಯಪಪುತ್ರರೇ ನನ್ನ ಸುಂದರವಾದ ಆಶ್ರಮವು ಈ ಪರ್ವತದ ಆಚೆಯ ಭಾಗದಲ್ಲಿ ಮೂರುಯೋಜನ ದೂರದಲ್ಲಿದೆ. ಅಲ್ಲಿ ನಮ್ಮ ಸ್ವಧರ್ಮವೆಂದರೆ ಯಾರಿಂದಲೂ ನಮಸ್ಕಾರವನ್ನು ಮಾಡಿಸಿಕೊಳ್ಳದಿರುವುದು ಮತ್ತು ಅರ್ಘ್ಯಪಾದ್ಯಗಳನ್ನು ಸ್ವೀಕರಿಸದಿರುವುದು.
ಋಶ್ಯಶೃಂಗಃ
ಫಲಾನಿ ಪಕ್ವಾನಿ ದದಾನಿ ತೇಽಹಂ
ಭಲ್ಲಾತಕಾನ್ಯಾಮಲಕಾನಿ ಚೈವ |
ಬಿಲ್ವಾನಿ ಚೈವೇಂಗುದಧನ್ವನಾನಿ
ಪ್ರಿಯಾಲಕಾನ್ ಕಾಮಕರಂ ಕುರುಷ್ವ ॥12॥
ಋಶ್ಯಶೃಂಗ ನಾನು ನಿನಗೆ ಮಾಗಿದ ಭಲ್ಲಾತಕ, ಆಮರಕ, ಬಿಲ್ವ, ಇಂಗುದ, ಧನ್ವನ, ಪ್ರಿಯಾಲಕ ಮೊದಲಾದ ಫಲಗಳನ್ನು ಕೊಡುವೆನು. ಅವುಗಳನ್ನು ನಿನ್ನ ಇಷ್ಟಬಂದಂತೆ ಸ್ವೀಕರಿಸು.
ಲೋಮಶಃ
ಸಾ ತಾನಿ ಸರ್ವಾಣಿ ವಿಸರ್ಜಯಿತ್ವಾ
ಭಕ್ಷಾನ್ ಮಹಾರ್ಹಾನ್ ಪ್ರದದೌ ಚ ತಸ್ಮೈ |
ತಾನ್ಯೃಶ್ಯಶೃಂಗಸ್ಯ ಮಹಾರಸಾನಿ
ಭೃಶಂ ಸುರೂಪಾಣಿ ರುಚಿಂ ದದುರ್ಹಿ ॥13॥
ಲೋಮಶ ಆ ವೇಶ್ಯೆಯು ಆ ಎಲ್ಲಾ ಫಲಗಳನ್ನೂ ದೂರಸರಿಸಿ ತಾನು ತಂದಿದ್ದ ಮಹಾರ್ಹವಾದ ಭಕ್ಷ್ಯಗಳನ್ನು ಅವರಿಗೆ ಕೊಟ್ಟಳು. ಮಹಾರಸವುಳ್ಳ ಒಳ್ಳೆಯ ರೂಪವನ್ನು ಹೊಂದಿದ್ದ ಆ ಭಕ್ಷಗಳು ಋಶ್ಯಶೃಂಗರಿಗೆ ಚೆನ್ನಾಗಿ ರುಚಿಸಿದವು.
ದದೌ ಚ ಮಾಲ್ಯಾನಿ ಸುಗಂಧವಂತಿ
ಚಿತ್ರಾಣಿ ವಾಸಾಂಸಿ ಚ ಭಾನುಮಂತಿ |
ಪಾನಾನಿ ಚಾಗ್ರ್ಯಾಣಿ ತತೋ ಮುಮೋದ
ಚಿಕ್ರೀಡ್ಯ ಚೋಚ್ಚೈಃ ಪ್ರಜಹಾಸ ಚೈವ ॥14॥
ಆ ವೇಶ್ಯೆಯು ಅವರಿಗೆ ಪರಿಮಳಯುಕ್ತವಾದ ಮಾಲೆಗಳನ್ನೂ, ಹೊಳೆಯುವ ವಿಚಿತ್ರವಾದ ವಸಚತಗಳನ್ನೂ, ಶ್ರೇಷ್ಠವಾದ ಪಾನೀಯಗಳನ್ನೂ ಕೊಟ್ಟು ಸಂತೋಷಪಟ್ಟಳು ಮತ್ತು ಆಟವನ್ನು ಆಡಿ ಗಟ್ಟಿಯಾಗಿ ನಗುತ್ತಿದ್ದಳು.
ಸಾ ಕಂದುಕೇನಾರಮತಾಸ್ಯ ಮೂಲೇ
ವಿಭಜ್ಯಮಾನಾ ಫಲಿತಾ ಲತೇವ |
ಗಾತ್ರೈಶ್ಚ ಗಾತ್ರಾಣಿ ನಿಷೇವಮಾಣಾ
ಸಮಾಶ್ಲಿಷಚ್ಚಾಸಕೃದೃಶ್ಯಶೃಂಗಮ್ ॥15॥
ಅವಳು ಅವನ ಸಮೀಪದಲ್ಲಿ ಕಂದುಕ ಕ್ರೀಡೆಯನ್ನು ಆಡುತ್ತಾ ಫಲಗಳ ಬಾರದಿಂದ ಬಾಗಿದ ಲತೆಯಂತೆ ಮುರಿದು ಹೋಗುವಂತೆ ಕಾಣುತ್ತಾ ಆಟವಾಡಿದಳು. ಅವಳು ತನ್ನ ದೇಹದಿಂದ ಋಶ್ಯಶೃಂಗರ ದೇಹವನ್ನು ಸೇವಿಸುತ್ತಾ ಪುನಃ ಪುನಃ ಋಶ್ಯಶೃಂಗರನ್ನು ಆಲಿಂಗಿಸಿದಳು.
ಸರ್ಜಾನಶೋಕಾಂಸ್ತಿಲಕಾಂಶ್ಚ ವೃಕ್ಷಾನ್
ಪ್ರಪುಷ್ಪಿತಾನವನಾಮ್ಯಾವಭಜ್ಯ |
ವಿಲಜ್ಜಮಾನೇವ ಮದಾಭಿಭೂತಾ
ಪ್ರಲೋಭಯಾಮಾಸ ಸುತಂ ಮಹರ್ಷೇಃ ॥16॥
ಸರ್ಜ, ಅಶೋಕ, ತಿಲಕ ಮೊದಲಾದ ಪುಷ್ಪಭರಿತವಾದ ವೃಕ್ಷಗಳನ್ನು ಬಗ್ಗಿಸಿ ಸಣ್ಣ ರೆಂಬೆಗಳನ್ನು ಕೀಳುತ್ತಾ ಮದಕ್ಕೆ ವಶಳಾದವಳಾಗಿ

ನಾಚಿಕೆಯನ್ನು ಪಡುವವಳಂತೆ ತೋರಿಸುತ್ತಾ ಆ ಮಹರ್ಷಿಗಳ ಪುತ್ರರನ್ನು ಪ್ರಲೋಭಿಸಿದಳು.
ಅಥರ್ಶ್ಯಶೃಂಗಂ ವಿಕೃತಂ ಸಮೀಕ್ಷ್ಯ
ಪುನಃಪುನಃ ಪೀಡ್ಯ ಚ ಗಾತ್ರಮಸ್ಯ |
ಅವೇಕ್ಷ್ಯಮಾಣಾ ಶನಕೈರ್ಜಗಾಮ
ಕೃತ್ವಾಽಗ್ನಿಹೋತ್ರಸ್ಯ ತದಾಽಪದೇಶಮ್ ॥17॥
ಅನಂತರ ಋಶ್ಯಶೃಂಗರು ಮನಸ್ಸಿನಲ್ಲಿ ವಿಕಾರವನ್ನು ಹೊಂದಿದುದನ್ನು ಗಮನಿಸಿ ಪುನಃಪುನಃ ಅವರ ದೇಹವನ್ನು ಒತ್ತಿ ಅಗ್ನಿಹೋತ್ರದ ಸಮಯವಾಯಿತೆಂದು ನೆಪವನ್ನು ಹೇಳಿ ಅವರನ್ನೇ ನೋಡುತ್ತಾ ನಿಧಾನವಾಗಿ ಆಶ್ರಮದಿಂದ ಹೊರಗೆ ಹೋದಳು.
ತಸ್ಯಾಂ ಗತಾಯಾಂ ಮದನೇನ ಮತ್ತೋ
ವಿಚೇತನಶ್ಚಾಭವದೃಶ್ಯಶೃಂಗಃ |
ತಾಮೇವ ಭಾವೇನ ಗತೇನ ಶೂನ್ಯೋ
ವಿನಿಃಶ್ವಸನ್ನಾರ್ತರೂಪೋ ಬಭೂವ ॥18॥
ಅವಳು ಹೊರಟು ಹೋದಮೇಲೆ ಋಶ್ಯಶೃಂಗರು ಕಾಮವಶರಾಗಿ ವಿಚೇತನರಾದರು. ಮನಸ್ಸಿನಲ್ಲಿ ಅವಳನ್ನೇ ಯೋಚಿಸುತ್ತಾ ಶೂನ್ಯದೃಷ್ಟಿಯಿಂದ ನಿಟ್ಟುಸಿರನ್ನು ಬಿಡುತ್ತಾ ಆರ್ತರೂಪವನ್ನು ಧರಿಸಿ ಕುಳಿತರು.
ತತೋ ಮುಹೂರ್ತಾದ್ಧರಿಪಿಂಗಲಾಕ್ಷಃ
ಪ್ರವೇಷ್ಟಿತೋ ರೋಮಭಿರಾನಖಾಗ್ರಮ್ |
ಸ್ವಾಧ್ಯಾಯವಾನ್ ವೃತ್ತಸಮಾಧಿಯುಕ್ತೋ
ವಿಭಾಂಡಕಃ ಕಾಶ್ಯಪಃ ಪ್ರಾದುರಾಸೀತ್ ॥19॥
ಅನಂತರ ಒಂದು ಮುಹೂರ್ತವು ಕಳೆದಮೇಲೆ ಹರಿಪಿಂಗಲಾಕ್ಷರಾದ ಶರೀರದಲ್ಲೆಲ್ಲಾ ರೋಮಗಳಿಂದ ತುಂಬಿದ ಸ್ವಾಧ್ಯಾಯಶೀಲರಾದ ಒಳ್ಳೆಯ ನಡತೆ ಮತ್ತು ಸಮಾಧಿಯನ್ನು ಹೊಂದಿದ ಕಾಶ್ಯಪರಾದ ವಿಭಾಂಡಕರು ಅಲ್ಲಿಗೆ ಬಂದರು.
ಸೋಽಪಶ್ಯದಾಸೀನಮುಪೇತ್ಯ ಪುತ್ರಂ
ಧ್ಯಾಯಂತಮೇಕಂ ವಿಪರೀತಚಿತ್ತಮ್ |
ವಿನಿಃಶ್ವಸಂತಂ ಮುಹುರೂರ್ಧ್ವದೃಷ್ಟಿಂ
ವಿಭಾಂಡಕಃ ಪುತ್ರಮುವಾಚ ದೀನಮ್ ॥20॥
ಅವರು ಪುತ್ರನನ್ನು ಸಮೀಪಿಸಿ ಒಬ್ಬನೇ ಕುಳಿತು ಏನನ್ನೋ ಚಿಂತಿಸುತಾ ವಿಪರೀತವಾದ ಮನಸ್ಸನ್ನು ಹೊಂದಿದವನಾಗಿ ನಿಟ್ಟುಸಿರನ್ನು ಬಿಡುತ್ತಾ ಮತ್ತೆ ಮತ್ತೆ ಊರ್ಧ್ವದೃಷ್ಟಿಯನ್ನು ಹೊಂದಿದ ತಮ್ಮ ದೀನನಾದ ಪುತ್ರನನ್ನು ನೋಡಿ ವಿಭಾಂಡಕರು ಮಾತನಾಡಿದರು.
ವಿಭಾಂಡಕಃ
ಕಲ್ಪ್ಯಂತೇ ವೈ ಸಮಿಧಃ ಕಿನ್ನು ತಾತ
ಕಚ್ಚಿದ್ಧುತಂ ಚಾಗ್ನಿಹೋತ್ರಂ ತ್ವಯಾಽದ್ಯ |
ಸುನಿರ್ಣಿಕ್ತಂ ಸ್ರುಕ್ಸ್ರುವಂ ಹೋಮಧೇನುಃ
ಕಚ್ಚಿತ್ ಸವತ್ಸಾ ಚ ಕೃತಾ ತ್ವಯಾ ಚ ॥21॥
ವಿಭಾಂಡಕ ಪುತ್ರನೇ, ಸಮಿತ್ತುಗಳು ಸಿದ್ಧವಾಗಿವೆಯೇ? ಈ ದಿನ ನೀನು ಅಗ್ನಿಹೋತ್ರವನ್ನು ಮಾಡಿದೆಯಾ? ಸ್ರುಕ್‌ಸ್ರುವವನ್ನು ಚೆನ್ನಾಗಿ ತೊಳೆದು ಆಗಿದೆಯೇ? ಹೋಮಧೇನುವಿನ ಸಮೀಪದಲ್ಲಿ ಕರುವನ್ನು ಬಿಟ್ಟು ಹಾಲುಕುಡಿಸಿದ್ದಾಗಿದೆಯೇ?
ನ ವೈ ಯಥಾಪೂರ್ವಮಿವಾಸಿ ಪುತ್ರ
ಚಿಂತಾಪರಶ್ಚಾಸಿ ವಿಚೇತನಶ್ಚ |
ದೀನೋಽತಿಮಾತ್ರಂ ಕಿಮಿವಾದ್ಯ ಖಿನ್ನಃ
ಪೃಚ್ಛಾಮಿ ತ್ವಾಂ ಕ ಇಹಾಭ್ಯಾಗತೋಽಭೂತ್ ॥22॥
ಪುತ್ರನೇ, ನೀನು ಮೊದಲಿನಂತೆ ಇಲ್ಲ. ಚಿಂತಾಪರನೂ, ವಿಚೇತನನೂ ಆಗಿದ್ದೀಯೆ. ಈ ದಿನ ಇಷ್ಟು ದೈನ್ಯವನ್ನು ಮತ್ತು ಖೇದವನ್ನು ಹೊಂದಿರುವುದಕ್ಕೆ ಏನು ಕಾರಣ? ನಾನು ಇಲ್ಲದಿರುವಾಗ ಇಲ್ಲಿಗೆ ಯಾರು ಬಂದಿದ್ದರು ಎಂದು ನಿನ್ನನ್ನು ಕೇಳುತ್ತಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಾಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಟನೆಯ ಅಧ್ಯಾಯ ಮುಗಿಯಿತು.
*****
ನೂರ ಒಂಭತ್ತನೆಯ ಅಧ್ಯಾಯ
ಋಶ್ಯಶೃಂಗರಿಂದ ತಂದೆಗೆ ವಾರಾಂಗನೆಯ ವಿಲಾಸ ಕಥನ.
ಋಶ್ಯಶೃಂಗಃ
ಇಹಾಗತೋ ಜಟಿಲೋ ಬ್ರಹ್ಮಚಾರೀ
ನ ವೈ ಹ್ರಸ್ವೋ ನಾತಿದೀರ್ಘೋ ಮನಸ್ವೀ |
ಸುವರ್ಣವರ್ಣಃ ಕಮಲಾಯತಾಕ್ಷಃ
ಸುತಃ ಸುರಾಣಾಮಿವ ಶೋಭಮಾನಃ ॥1॥

ಇಲ್ಲಿಗೆ ಒಬ್ಬ ಜಟಿಲನಾದ ಬ್ರಹ್ಮಚಾರಿಯು ಬಂದಿದ್ದನು. ಅವನು ಹ್ರಸ್ವವಾಗಿಯೂ ಇರಲಿಲ್ಲ. ಬಹಳ ಎತ್ತರವಾಗಿಯೂ ಇರಲಿಲ್ಲ. ಅವನು ಧೈರ್ಯಶಾಲಿ. ಸುವರ್ಣವರ್ಣವುಳ್ಳವನು. ಕಮಲಾಯತ ನೇತ್ರನು. ದೇವತೆಗಳ ಪುತ್ರನಂತೆ ಶೋಭಿಸುತ್ತಿದ್ದನು.

ಸಮೃದ್ಧರೂಪಃ ಸವಿತೇವ ದೀಪ್ತಃ
ಸ ಶುಕ್ಲ ಕೃಷ್ಣಾಕ್ಷತಾರಶ್ಚಕೋರಾತ್ |
ನೀಲಾಃ ಪ್ರಸನ್ನಾಕ್ಷ ಜಟಾಃ ಸುಗಂಧಾ
ಹಿರಣ್ಯರಜ್ಜುಗ್ರಥಿತಾಃ ಸುದೀರ್ಘಾಃ ॥2॥

ಚೆನ್ನಾಗಿ ಬೆಳೆದಿದ್ದ ಅವನು ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಮಧುರವಾದ ಮಾತುಗಳನ್ನು ಹೊಂದಿದ್ದ ಅವನ ಕಣ್ಣಿನ ತಾರೆಗಳು ಚಕೋರಕ್ಕಿಂತಲೂ ಕಪ್ಪಾಗಿದ್ದವು. ಅವನ ಸುದೀರ್ಘವಾದ ಸುಗಂಧಯುಕ್ತವಾದ ಪ್ರಸನ್ನವಾದ ಕಪ್ಪಾದ ಜಟೆಗಳು ಸುವರ್ಣರಜ್ಜುವಿನಿಂದ ಕಟ್ಟಲ್ಪಟ್ಟಿದ್ದವು.

ಆಶ್ಚರ್ಯಭೂತಃ ಪುನರಸ್ಯ ಕಂಠೇ
ವಿಭ್ರಾಜತೇ ವಿದ್ಯುದಿವಾಂತರಿಕ್ಷೇ |
ದ್ವೌ ಚಾಸ್ಯ ಪಿಂಡಾವಧರೇಣ ಕಂಠಮ್
ಅಜಾತರೋಮೌ ಸುಮನೋಹರೌ ಮೇ ॥3॥

ಆಕಾಶದಲ್ಲಿರುವ ಮಿಂಚಿನಂತೆ ಅವನ ಕಂಠದಲ್ಲಿ ಆಶ್ಚರ್ಯವಾದ ಒಂದು ವಸ್ತುವು ಶೋಭಿಸುತ್ತಿತ್ತು. ಅವನ ಕಂಠದ ಕೆಳಗೆ ಎರಡು ಮನೋಹರವಾದ ಪಿಂಡಗಳಿದ್ದವು. ಅವುಗಳ ಮೇಲೆ ರೋಮವು ಬೆಳೆದಿರಲಿಲ್ಲ.

ವಿಲಗ್ನಮಧ್ಯಶ್ಚ ಸ ನಾಭಿದೇಶಃ
ಕಟೀ ಚ ತಸ್ಯಾತಿಕೃತಪ್ರಮಾಣಾ |
ತಥಾಽಸ್ಯ ಚೀರಾಂತರಿತಾ ಪ್ರಭಾತಿ
ಹಿರಣ್ಮಯೀ ಮೇಖಲಾ ಮೇ ಯಥೇಯಮ್ ॥4॥

ಅವನ ನಾಭಿದೇಶವು ಬಹಳ ತೆಳುವಾಗಿದ್ದಿತು. ಅವನ ಕಟಿಯು ಅಲ್ಪಪ್ರಮಾಣ ಉಳ್ಳದ್ದಾಗಿದ್ದಿತು. ಅವನು ಉಟ್ಟ ನಾರುಮಡಿಯೊಳಗೆ ಈ ನನ್ನ ಮೇಖಲೆಯಂತೆ ಶೋಭಿಸುವ ಒಂದು ಸುವಣರ್ಮಯವಾದ ಮೇಖಲೆ ಇದ್ದಿತು.

ಅನ್ಯಚ್ಚ ತಸ್ಯಾದ್ಭುತದರ್ಶನೀಯಂ
ವಿಕೂಜಿತಂ ಪಾದಯೋಃ ಸಂಪ್ರಭಾತಿ |
ಪಾಣ್ಯೋಶ್ಚ ತದ್ವದ್ ಬಹುಭಿರ್ನಿಬದ್ಧೌ
ಕಲಾಪಕಾವಕ್ಷಮಾಲಾ ಯಥೇಯಮ್ ॥5॥

ಅವನ ಬಳಿ ಇನ್ನೊಂದು ಅದ್ಭುತವಾದ ಸುಂದರವಾದ ವಸ್ತುವಿದ್ದಿತು. ಅವನ ಪಾದಗಳಿಂದ ಒಳ್ಳೆಯ ನಾದವು ಕೇಳಿಬರುತ್ತಿದ್ದಿತು. ಅವನ ಹಸ್ತಗಳಲ್ಲಿಯೂ ಸಹ ನನ್ನ ಹಸ್ತಗಳಲ್ಲಿರುವ ಈ ಅಕ್ಷಮಾಲೆಯಂತೆ ಬಹಳವಾಗಿ ಪೋಣಿಸಿದ ಅನೇಕ ಮಣಿಗಳಿದ್ದವು.

ವಿಚೇಷ್ಟಮಾನಸ್ಯ ಚ ತಾನಿ ತಸ್ಯ
ಕೂಜಂತಿ ಹಂಸಾಃ ಸರಸೀವ ಮತ್ತಾಃ |
ಚೀರಾಣಿ ತಸ್ಯಾದ್ಭುತದರ್ಶನಾನಿ
ನೇಮಾನಿ ತದ್ವನ್ಮಮ ರೂಪವಂತಿ ॥6॥

ಅವನು ಅಲ್ಲಿಂದಿಲ್ಲಿಗೆ ತಿರುಗುವಾಗ ಅಥವಾ ಕೈಗಳನ್ನು ಅಲ್ಲಾಡಿಸುವಾಗ ಅವು ಸರೋವರದಲ್ಲಿರುವ ಮದಿಸಿದ ಹಂಸಗಳಂತೆ ಕೂಗುತ್ತಿದ್ದವು. ಅವನು ಉಟ್ಟ ನಾರುಮಡಿಗಳು ಅದ್ಭುತವಾಗಿ ತೋರುತ್ತಿದ್ದವು. ನನ್ನ ಈ ನಾರುಮಡಿಗಳು ಅಂತಹ ರೂಪವನ್ನು ಹೊಂದಿಲ್ಲ.

ವಕ್ತ್ರಂ ಚ ತಸ್ಯಾದ್ಭುತದರ್ಶನೀಯಂ
ಸುವ್ಯಾಹೃತಂ ಹ್ಲಾದಯತೇ ಚ ಚೇತಃ |
ಪುಂಸ್ಕೋಕಿಲಸ್ಯೇವ ಚ ತಸ್ಯ ವಾಣೀ
ತಾಂ ಶೃಣ್ವತೋ ಮೇ ವ್ಯಥಿತೋಽಂತರಾತ್ಮಾ ॥7॥

ಅವನ ಮುಖವು ಅದ್ಭುತವಾಗಿದ್ದಿತು. ಅವನ ಒಳ್ಳೆಯ ಮಾತುಗಳು ನನ್ನ ಮನಸ್ಸಿಗೆ ಸಂತೋಷವನ್ನು ಕೊಡುತ್ತಿದ್ದವು. ಅವನ ವಾಣಿಯಾದರೂ ಪುಂಸ್ಕೋಕಿಲ ವಾಣಿಯಂತೆ ಇದ್ದಿತು. ಅದನ್ನು ಕೇಳಿದ ನನ್ನ ಮನಸ್ಸು ವ್ಯಥೆಯಿಂದ ತುಂಬಿತು.

ಯಥಾ ವನಂ ಮಾಧವಮಾಸಿ ಮಧ್ಯೇ
ಸಮೀರಿತಂ ಶ್ವಸನೇನೇವ ಭಾತಿ |
ತಥಾ ಸ ಭಾತ್ಯುತ್ತಮಪುಣ್ಯಗಂಧೀ
ನಿಷೇವ್ಯಮಾಣಾ ಪವನೇನ ತಾತ ॥8॥

ಹೇಗೆ ವಸಂತಮಾಸದ ಮಧ್ಯದಲ್ಲಿ ವಾಯುವಿನಿಂದ ಪ್ರೇರಿಸಲ್ಪಟ್ಟ ವನವು ಸುಗಂಧವನ್ನು ಬೀರುತ್ತದೆಯೋ ಅದರಂತೆ ಅವನು ಹೋದಕಡೆಯಲ್ಲೆಲ್ಲಾ, ಎಲೈ ತಂದೆಯೇ, ಉತ್ತಮ ಪುಣ್ಯಗಂಧವುಳ್ಳ ವಾಯುವು ಅವನನ್ನು ಸೇವಿಸುವಂತೆ ತೋರುತ್ತಿದ್ದಿತು.

ಸುಸಂಯತಾ ಚಾಪಿ ಜಟಾ ವಿಭಕ್ತಾ
ದ್ವೈಧೀಕೃತಾ ಭಾತಿ ಲಲಾಟದೇಶೇ |
ಕರ್ಣೌ ಚ ಚಿತ್ರೈರಿವ ಚಕ್ರವಾಕ್ಯೈಃ
ಸಮಾವೃತೌ ತಸ್ಯ ಸುರೂಪವದ್ಭಿಃ ॥9॥

ಅವನು ಜಟೆಗಳನ್ನು ಕಟ್ಟಿದ್ದರೂ ಎಲ್ಲ ಜಟೆಗಳೂ ವಿರಳವಾಗಿದ್ದವು. ಅವನ ಲಲಾಟ ದೇಶದಲ್ಲಿ ಆ ಜಟೆಗಳನ್ನು ಎರಡು ಭಾಗವಾಗಿ ಮಾಡಲಾಗಿದ್ದಿತು. ಅವನ ಕರ್ಣಗಳಲ್ಲಿ ವಿಚಿತ್ರವಾದ ಚಕ್ರಪಕ್ಷಿಗಳಂತಿರುವ ಒಳ್ಳೆಯ ರೂಪವುಳ್ಳ ಎರಡು ವಸ್ತುಗಳಿದ್ದವು.

ತಥಾ ಫಲಂ ವೃತ್ತಮಥೋ ವಿಚಿತ್ರಂ
ಸಮಾಹತಂ ಪಾಣಿನಾ ದಕ್ಷಿಣೇನ |
ತದ್ಭೂಮಿಮಾಸಾದ್ಯ ಪುನಃಪುನಶ್ಚ
ಸಮುತ್ಪತತ್ಯದ್ಭುತರೂಪಮುಚ್ಚೈಃ ॥10॥

ಅವನು ಒಂದು ದುಂಡಾಗಿರುವ ಒಂದು ವಿಚಿತ್ರವಾದ ಫಲವನ್ನು ಬಲಗೈಯಿಂದ ಹೊಡೆಯುತ್ತಿದ್ದನು. ಅದು ಭೂಮಿಯನ್ನು ತಲುಪಿ ಪುನಃಪುನಃ ಅದ್ಭುತ ರೂಪವನ್ನು ತಾಳಿ ಎತ್ತರಕ್ಕೆ ಮೇಲೆ ಬರುತ್ತಿದ್ದಿತು.

ತಚ್ಚಾಭಿಹತ್ವಾ ಪರಿವರ್ತತೇಽಸೌ
ವಾತೇರಿತೋ ವೃಕ್ಷ ಇವಾವಘೂರ್ಣಃ |
ಸಂಪ್ರೇಕ್ಷ್ಯ ಮೇ ಪುತ್ರಮಿವಾಮರಾಣಾಂ
ಪ್ರೀತಿಃ ಪರಾ ತಾತ ರತಿಶ್ಚ ಜಾತಾ ॥11॥

ಆ ಫಲವನ್ನು ಕೈಯಿಂದ ಹೊಡೆದು ಅವನು ವಾಯುವಿನ ವೇಗಕ್ಕೆ ಸಿಲುಕಿದ ವೃಕ್ಷದಂತೆ ಎಲ್ಲ ಕಡೆಯಲ್ಲಿಯೂ ಬಾಗಿ ಸಂಚರಿಸುತ್ತಿದ್ದನು. ತಂದೆಯೇ, ದೇವಪುತ್ರನಂತಿರುವ ಅವನನ್ನು ನೋಡಿ ನನಗೆ ಅವನಲ್ಲಿ ತುಂಬಾ ಪ್ರೀತಿಯೂ ಮತ್ತು ರತಿಯೂ ಉಂಟಾಗಿದೆ.

ಸ ಮೇ ಸಮಾಶ್ಲಿಷ್ಯ ಪುನಃಶರೀರಂ
ಜಟಾಸು ಗೃಹ್ಯಾಭ್ಯವನಾಮ್ಯ ವಕ್ತ್ರಮ್ |
ವಕ್ತ್ರೇಣ ವಕ್ತ್ರಂ ಪ್ರಣಿಧಾಯ ಶಬ್ದಂ
ಚಕಾರ ತನ್ಮೇಽಜನಯತ್ ಪ್ರಹರ್ಷಮ್ ॥12॥

ಅವನು ಪುನಃ ನನ್ನ ಶರೀರವನ್ನು ಆಲಿಂಗಿಸಿ ನನ್ನ ಜಟೆಗಳನ್ನು ಹಿಡಿದು ಮುಖವನ್ನು ಬಗ್ಗಿಸಿ ನನ್ನ ವದನದಲ್ಲಿ ತನ್ನ ವದನವನ್ನು ಇಟ್ಟು ಶಬ್ದವನ್ನು ಮಾಡುತ್ತಿದ್ದನು. ಅದು ನನಗೆ ಬಹಳ ಸಂತೋಷವನ್ನು ಉಂಟುಮಾಡಿತು.

ನ ಚಾಪಿ ಪಾದ್ಯಂ ಬಹುಮನ್ಯತೇಽಸೌ
ಫಲಾನಿ ಚೇಮಾನಿ ಮಯಾ ಹೃತಾನಿ |
ಏವಂವ್ರತೋಽಸ್ಮೀತಿ ಚ ಮಾಮವೋಚತ್
ಫಲಾನಿ ಚಾನ್ಯಾನಿ ನವಾನ್ಯದಾನ್ಮೇ ॥13॥

ಅವನು ನಾವು ಕೊಡುವ ಪಾದ್ಯಗಳನ್ನೂ ಸ್ವೀಕರಿಸುವುದಿಲ್ಲ. ನಾವು ಕೊಡುವ ಹಣ್ಣುಗಳನ್ನೂ ಸ್ವೀಕರಿಸುವುದಿಲ್ಲ. ನನ್ನ ವ್ರತವು ಈ ರೂಪವಾದುದು ಎಂದು ನನಗೆ ಹೇಳಿದನು. ಅವನು ಬೇರೆ ಹೊಸ ಫಲಗಳನ್ನು ನನಗೆ ಕೊಟ್ಟನು.

ಮಯೋಪಯುಕ್ತಾನಿ ಫಲಾನಿ ತಾನಿ
ನೇಮಾನಿ ತುಲ್ಯಾನಿ ರಸೇನ ತೇಷಾಮ್ |
ನ ಚಾಪಿ ತೇಷಾಂ ತ್ವಗಿಯಂ ಯಥೈಷಾಂ
ಸಾರಾಣಿ ನೈಷಾಮಿವ ಸಂತಿ ತೇಷಾಮ್ ॥14॥

ನಾನು ಆ ಫಲಗಳನ್ನು ಭುಂಜಿಸಿದೆ. ನಮ್ಮ ಈ ಫಲಗಳು ಅವನು ಕೊಟ್ಟ ಫಲಗಳಿಗೆ ಸಮಾನವಾದ ರಸವನ್ನು ಹೊಂದಿಲ್ಲ. ಆ ಹಣ್ಣುಗಳ ಸಿಪ್ಪೆಯೂ ಸಹ ಆಶ್ರಮದ ಈ ಹಣ್ಣುಗಳ ಸಿಪ್ಪೆಯಂತೆ ಇಲ್ಲ. ಆ ಹಣ್ಣುಗಳ ತಿರುಳೂ ಸಹ ಈ ಹಣ್ಣಿನ ತಿರುಳಿನಂತಿಲ್ಲ.

ತೋಯಾನಿ ಚೈವಾತಿರಸಾನಿ ಮಹ್ಯಂ
ಪ್ರಾದಾತ್ ಸ ವೈ ಪಾತುಮುದಾರರೂಪಃ |
ಪೀತ್ವೈವ ಯಾನ್ಯಭ್ಯಧಿಕಂ ಪ್ರಹರ್ಷೋ
ಮಮಾಭವದ್ ಭೂಶ್ಚಲಿತೇವ ಚಾಸೀತ್ ॥15॥

ಉದಾರನಾದ ಅವನು ನನಗೆ ಕುಡಿಯಲು ಬಹಳ ರಸಭರಿತವಾದ ಅನೇಕ ಪಾನೀಯಗಳನ್ನು ಕೊಟ್ಟನು. ಅದನ್ನು ಕುಡಿದ ತಕ್ಷಣವೇ ನನಗೆ ಬಹಳ ಸಂತೋಷ ಉಂಟಾಯಿತು. ಮತ್ತು ಭೂಮಿಯೆಲ್ಲವೂ ತಿರುಗುತ್ತಿರುವಂತೆ ಭಾಸವಾಯಿತು.

ಇಮಾನಿ ಚಿತ್ರಾಣಿ ಚ ಗಂಧವಂತಿ
ಮಾಲ್ಯಾನಿ ತಸ್ಯೋದ್ಗ್ರಥಿತಾನಿ ಪಟ್ಟೈಃ |
ಯಾನಿ ಪ್ರಕೀರ್ಯೇಹ ಗತಃ ಸ್ವಮೇವ
ಸ ಆಶ್ರಮಂ ತಪಸಾ ದ್ಯೋತಮಾನಃ ॥16॥

ಈ ಸುಗಂಧಯುಕ್ತವಾದ ವಿಚಿತ್ರವಾದ ಮಾಲೆಗಳು ಅವನ ಬಟ್ಟೆಗಳಲ್ಲಿ ಕಟ್ಟಿದವಗಳು. ಅವನು ಇವುಗಳನ್ನು ಇಲ್ಲಿ ಹರಡಿ ತಪಸ್ಸಿನಿಂದ ಬೆಳಗುತ್ತಾ ತನ್ನ ಆಶ್ರಮಕ್ಕೆ ಹೊರಟುಹೋದನು.

ಗತೇನ ತೇನಾಸ್ಮಿ ಕೃತೋ ವಿಚೇತಾ
ಗಾತ್ರಂ ಚ ಮೇ ಸಂಪರಿತಪ್ಯತೇ ಚ |
ಇಚ್ಛಾಮಿ ತಸ್ಯಾಂತಿಕಮಾಶು ಗಂತುಂ
ತಂ ಚೇಹ ನಿತ್ಯಂ ಪರಿವರ್ತಮಾನಮ್ ॥17॥

ಅವನು ಹೊರಟು ಹೋದ ಮೇಲೆ ನಾನು ವಿಚೇತನನಾಗಿದ್ದೇನೆ. ನನ್ನ ದೇಹವೆಲ್ಲವೂ ಬಿಸಿಯಾಗಿವೆ. ನಾನು ಅವನ ಬಳಿಗೇ ಹೋಗಲು

ಬಯಸುತ್ತೇನೆ. ಅಥವಾ ಅವನಾದರೂ ಇಲ್ಲಿಯೇ ಯಾವಾಗಲೂ ಇರಬೇಕೆಂದು ಬಯಸುತ್ತೇನೆ.
ಗಚ್ಛಾಮಿ ತಸ್ಯಾಂತಿಕಮೇವ ತಾತ
ಕಾ ನಾಮ ಸಾ ಬ್ರಹ್ಮಚರ್ಯಾ ಚ ತಸ್ಯ |
ಇಚ್ಛಾಮ್ಯಹಂ ಚರಿತುಂ ತೇನ ಸಾರ್ಧಂ
ಯಥಾ ತಪಃ ಸ ಚರತ್ಯುಗ್ರಕರ್ಮಾ ||18||
ತಂದೆಯೇ, ನಾನು ಅವನ ಬಳಿಗೇ ಹೋಗುತ್ತೇನೆ. ಅವನು ಆಚರಿಸುವ ಬ್ರಹ್ಮಚರ್ಯಕ್ಕೆ ಏನು ಹೆಸರು? ನಾನೂ ಸಹ ಅವನ ಜೊತೆಯಲ್ಲಿಯೇ ಆ ವ್ರತವನ್ನು ಆಚರಿಸಲು ಬಯಸುತ್ತೇನೆ. ಉಗ್ರಕರ್ಮನಾದ ಅವನು ಹೇಗೆ ತಪಸ್ಸನ್ನು ಮಾಡುತ್ತಾನೆಯೋ ಹಾಗೆಯೇ ನಾನೂ ತಪಸ್ಸನ್ನು ಮಾಡಲು ಇಚ್ಛಿಸುತ್ತೇನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ನವಾಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
*****
ನೂರಹತ್ತನೆಯ ಅಧ್ಯಾಯ
ವೇಶ್ಯೆಯರಿಂದ ಋಶ್ಯಶೃಂಗರನ್ನು ಕರೆದುಕೊಂಡು ಅಂಗದೇಶಕ್ಕೆ ಗಮನ. ಅಂಗರಾಜ್ಯದಲ್ಲಿ ವೃಷ್ಟಿ. ಶಾಂತಾ ವಿವಾಹ. ವಿಭಾಂಡಕರ ಕೋಪಶಾಂತಿ. ಶಾಂತೆಯ ತಪಸ್ಸು ಮತ್ತು ಪಾತಿವ್ರತ್ಯ.
ವಿಭಾಂಡಕಃ
ರಕ್ಷಾಂಸಿ ಚೈತಾನಿ ಚರಂತಿ ಪುತ್ರ
ರೂಪೇಣ ತೇನಾದ್ಭುತದರ್ಶನೇನ |
ಅತುಲ್ಯವೀರ್ಯಾಣ್ಯತಿಘೋರವಂತಿ
ವಿಘ್ನಂ ಸದಾ ತಪಸಶ್ಚಿಂತಯಂತಿ ||1||
ವಿಭಾಂಡಕ ಪುತ್ರನೇ, ಇವರೆಲ್ಲರೂ ರಾಕ್ಷಸರು. ಅದ್ಭುತ ರೂಪವನ್ನು ಧರಿಸಿ ಅಸದೃಶ ಪರಾಕ್ರಮವನ್ನು ಹೊಂದಿ ಅತಿ ಘೋರ ಕರ್ಮವನ್ನು ಮಾಡುತ್ತಾ ಭೂಮಿಯಲ್ಲಿ ಸಂಚಾರವನ್ನು ಮಾಡಿ ಯಾವಾಗಲೂ ತಪಸ್ಸಿಗೆ ವಿಘ್ನವನ್ನು ಉಂಟು ಮಾಡಲು ಬಯಸುತ್ತಾರೆ.
ಸುರೂಪರೂಪಾಣಿ ಚ ತಾನಿ ಭೂತ್ವಾ
ವಿಲೋಭ್ಯ ಭೂಯೋ ವಿವಿಧೈರುಪಾಯೈಃ |
ಸುಖಾಚ್ಚ ಲೋಕಾಚ್ಚ ನಿಪಾತಯಂತಿ
ತಾನ್ಯುಗ್ರರೂಪಾಣಿ ಮುನೀನ್ ವನೇಷು ||2||
ಒಳ್ಳೆಯ ರೂಪಗಳನ್ನು ಧರಿಸಿ ಅನೇಕ ಉಪಾಯಗಳಿಂದ ಕಾಡಿನಲ್ಲಿರುವ ಋಷಿಗಳನ್ನು ಪುನಃ ಪುನಃ ಪ್ರಲೋಭನೆಗೊಳಿಸಿ ಉಗ್ರರೂಪವುಳ್ಳ ಆ ರಾಕ್ಷಸರು ಆ ಋಷಿಗಳು ಸುಖದಿಂದಲೂ, ಸುಖಲೋಕಗಳಿಂದಲೂ ಚ್ಯುತರಾಗುವಂತೆ ಮಾಡುತ್ತಾರೆ.
ನ ತಾನಿ ಸೇವೇವ ಮುನಿರ್ಯತಾತ್ಮಾ
ಸತಾಂ ಲೋಕಾನ್ ಪ್ರಾರ್ಥಯಾನಃ ಕಥಂಚಿತ್ |
ಕೃತ್ವಾ ವಿಘ್ನಂ ತಾಪಸಾನಾಂ ರಮಂತೇ
ಪಾಪಾಚಾರಾಸ್ತಪಸಃ ಪಾತಯಂತಿ ||3||
ಜಿತಮನಸ್ಸುಳ್ಳ ಮತ್ತು ಶುಭಲೋಕಗಳನ್ನು ಬಯಸುವ ಮುನಿಯು ಎಂದೂ ಅವುಗಳನ್ನು ಸೇವಿಸಬಾರದು. ಆ ರಾಕ್ಷಸರಾದರೂ ಪಾಪಾಚಾರವನ್ನು ಹೊಂದಿ ತಾಪಸಿಗರಿಗೆ ವಿಘ್ನವನ್ನು ಉಂಟುಮಾಡಿ ಸಂತೋಷಪಡುತ್ತಾರೆ ಮತ್ತು ಋಷಿಗಳನ್ನು ತಪಸ್ಸಿನಿಂದ ನಿವೃತ್ತಿಗೊಳಿಸುತ್ತಾರೆ.
ಅಸಜ್ಜನೇನಾಚರಿತಾನಿ ಪುತ್ರ
ಪಾನಾನ್ಯಪೇಯಾನಿ ಮಧೂನಿ ತಾನಿ |
ಮಾಲ್ಯಾನಿ ಚೈತಾನಿ ನ ವೈ ಮುನೀನಾಂ
ಸ್ಮೃತಾನಿ ಪುತ್ರೋತ್ತಮಗಂಧವಂತಿ ||4||
ಎಲೈ ಪುತ್ರನೇ, ಅವನು ಕೊಟ್ಟ ಪಾನೀಯಗಳು ದುಷ್ಟರು ಉಪಯೋಗಿಸುವಂತಹವು. ಅವು ಮದ್ಯಗಳು. ಎಲೈ ಪುತ್ರನೇ, ಇಂತಹ ಶ್ರೇಷ್ಠವಾದ ಗಂಧವುಳ್ಳ ಮಾಲೆಗಳು ಋಷಿಗಳಿಗೆ ಯೋಗ್ಯವೆಂದು ಹೇಳಲ್ಪಡುವುದಿಲ್ಲ.
ಲೋಮಶಃ
ರಕ್ಷಾಂಸಿ ತಾನೀತಿ ನಿವಾರ್ಯ ಪುತ್ರಂ
ವಿಭಾಂಡಕಸ್ತಂ ಮೃಗಯಾಂಬಭೂವ |
ನಾಸಾದಯಾಮಾಸ ಯದಾ ತ್ರ್ಯಹೇಣ
ತದಾ ಸ ಪರ್ಯಾವವೃತೇ ಶ್ರಮಾಯ ||5||
ಲೋಮಶ ಅವನು ರಾಕ್ಷಸರೆಂದು ಹೇಳಿ ವಿಭಾಂಡಕರು ಪುತ್ರನನ್ನು ನಿವಾರಿಸಿ ಅವರನ್ನು ಹುಡುಕಿದರು. ಮೂರುದಿನ ಹುಡುಕಿದರೂ ಯಾರೂ ಕಾಣದಿದ್ದುದರಿಂದ ಅವರು ಆಶ್ರಮಕ್ಕೆ ಹಿಂದಿರುಗಿದರು.
ಯದಾ ಪುನಃ ಕಾಶ್ಯಪೋ ವೈ ಜಗಾಮ

ಫಲಾನ್ಯಾಹರ್ತುಂ ವಿಧಿನಾಶ್ರಮೇ ಸಃ |
ತದಾ ಪುನರ್ಲೋಭಯಿತುಂ ಜಗಾಮ
ಸಾ ವೇಶಯೋಷಾ ಮುನಿಮೃಶ್ಯಶೃಂಗಮ್ ॥6॥
ಪುನಃ ಮತ್ತೊಮ್ಮೆ ಕಾಶ್ಯಪರು ವಿಧಿವತ್ತಾಗಿ ಫಲಗಳನ್ನು ತರಲು ಆಶ್ರಮದಿಂದ ಹೊರಗೆ ಹೋದಾಗ ಆ ವೇಶ್ಯಾವನಿತೆಯು ಪುನಃ ಋಶ್ಯಶೃಂಗರನ್ನು ಪ್ರಲೋಭಗೊಳಿಸಲು ಆಶ್ರಮಕ್ಕೆ ಬಂದಳು.
ದೃಷ್ಟ್ವೈವ ತಾಮೃಶ್ಯಶೃಂಗಃ ಪ್ರಹೃಷ್ಟಃ
ಸಂಭ್ರಾಂತರೂಪೋ ಹ್ಯಭವತ್ ತದಾನೀಮ್ |
ಪ್ರೋವಾಚ ಚೈನಾಂ ಭವದಾಶ್ರಮಾಯ
ಗಚ್ಛಾವ ಯಾವನ್ನ ಪಿತಾ ಮಮೈತಿ ॥7॥
ಅವಳನ್ನು ನೋಡಿದ ತಕ್ಷಣವೇ ಋಶ್ಯಶೃಂಗರು ಸಂತೋಷದಿಂದ ಹುಚ್ಚರಂತೆ ಆದರು. ಅವಳನ್ನು ಕುರಿತು ನಮ್ಮ ತಂದೆಯು ಬರುವುದಕ್ಕಿಂತ ಮೊದಲೇ ನನ್ನನ್ನು ನಿನ್ನ ಆಶ್ರಮಕ್ಕೆ ಕರೆದುಕೊಂಡು ಹೋಗು ಎಂದು ಹೇಳಿದರು.
ತತೋ ರಾಜನ್ ಕಾಶ್ಯಪಸ್ಯೈಕಪುತ್ರಂ
ಪ್ರವೇಶ್ಯ ವೇಗೇನ ವಿಮುಚ್ಯ ನಾವಮ್ |
ಪ್ರಲೋಭಯಂತ್ಯೋ ವಿವಿಧೈರುಪಾಯೈಃ
ಆಜಗ್ಮುರಂಗಾಧಿಪತೇಃ ಸಮೀಪಮ್ ॥8॥
ಎಲೈ ರಾಜನೇ, ಆಗ ಆ ಸ್ತ್ರೀಯರು ಕಾಶ್ಯಪರ ಏಕಮಾತ್ರಪುತ್ರನನ್ನು ಶೀಘ್ರವಾಗಿ ನಾವೆಯಲ್ಲಿ ಕೂಡಿಸಿ ಆ ನಾವೆಯನ್ನು ಬಿಚ್ಚಿ ಅನೇಕ ಉಪಾಯಗಳಿಂದ ಅವರನ್ನು ಪ್ರಲೋಭನೆಗೊಳಿಸುತ್ತಾ ಅಂಗಾಧಿಪತಿಯ ಸಮೀಪಕ್ಕೆ ಬಂದರು.
ಸಂಸ್ಥಾಪ್ಯ ತಾಮಾಶ್ರಮದರ್ಶನೇ ಸ
ಸಂತಾರಿತಂ ನಾವಮತೀವ ಶುಭ್ರಮ್ |
ತೀರಾದುಪಾದಾಯ ತಥೈವ ಚಕ್ರೇ
ರಾಜಾಶ್ರಮಂ ನಾಮ ವನಂ ವಿಚಿತ್ರಮ್ ॥9॥
ನದಿಯನ್ನು ದಾಟಿಸಿ ಆ ನಾವೆಯನ್ನು ತೀರದಲ್ಲಿಯೇ ನಿಲ್ಲಿಸಿ ಆಶ್ರಮವನ್ನು ನೋಡಲು (ನಾವೆಯ ಆಶ್ರಮವನ್ನು ನೋಡಲು) ಋಶ್ಯಶೃಂಗರಿಗೆ ಹೇಳಿ ತೀರದಿಂದ ಸ್ವಲ್ಪದೂರದಲ್ಲಿ ಅದರಂತೆಯೇ ಶುಭ್ರವಾದ, ವಿಚಿತ್ರವಾದ ರಾಜಾಶ್ರಮವೆಂಬ ಇನ್ನೊಂದು ವನವನ್ನು ನಿರ್ಮಿಸಿದರು.
ಅಂತಃಪುರೇ ತಂ ತು ನಿವೇಶ್ಯ ರಾಜಾ
ವಿಭಾಂಡಕಸ್ಯಾತ್ಮಜಮೇಕಪುತ್ರಮ್ |
ದದರ್ಶ ಮೇ◌ೖ◌ಃ ಸಹಸಾ ಪ್ರವೃಷ್ಟಮ್
ಆಪೂರ್ಯಮಾಣಂ ಚ ಜಗಜ್ಜಲೇನ ॥10॥
ರೋಮಪಾದ ರಾಜನಾದರೂ ವಿಭಾಂಡಕರ ಏಕಮಾತ್ರ ಪುತ್ರನನ್ನು ಅಂತಃಪುರದಲ್ಲಿ ಪ್ರವೇಶಮಾಡಿಸಿದ ತಕ್ಷಣ ಮೇಘಗಳು ಇದ್ದಕ್ಕಿದ್ದಂತೆಯೇ ಮಳೆಯನ್ನು ಸುರಿಸಲು ಪ್ರಾರಂಭಿಸಿ ಜಗತೆತಲ್ಲವೂ ಜಲದಿಂದ ತುಂಬಿಹೋದುದನ್ನು ನೋಡಿದನು.
ಸ ರೋಮಪಾದಃ ಪರಿಪೂರ್ಣಕಾಮಃ
ಸುತಾಂ ದದಾವೃಶ್ಯಶೃಂಗಾಯ ಶಾಂತಾಮ್ |
ಕ್ರೋಧಪ್ರತೀಕಾರಕರಂ ಚ ಚಕ್ರೇ
ಗೋಭಿಶ್ಚ ಮಾರ್ಗೇಷ್ವಭಿಕರ್ಷಣಂ ಚ ॥11॥
ತನ್ನ ಆಸೆಯು ನೆರವೇರಿದ ರೋಮಪಾದನು ತನ್ನ ಮಗಳಾದ ಶಾಂತಳನ್ನು ಋಶ್ಯಶೃಂಗನಿಗೆ ಕೊಟ್ಟನು. ವಿಭಾಂಡಕರ ಕೋಪವನ್ನು ಪರಿಹಾರ ಮಾಡುವುದಕ್ಕಾಗಿ ಅವರು ಬರುವ ಮಾರ್ಗದಲ್ಲಿ ಗೋವುಗಳಿಂದ ಕರ್ಷಣವನ್ನೂ ಮಾಡಿಸಿದನು.
ವಿಭಾಂಡಕಸ್ಯಾವ್ರಜತಃ ಸ ರಾಜಾ
ಪಶೂನ್ ಪ್ರಭೂತಾನ್ ಪಶುಪಾಂಶ್ಚ ವೀರಾನ್ |
ಸಮಾದಿಶತ್ ಪುತ್ರಗೃಧ್ನುರ್ಮಹರ್ಷಿಃ
ವಿಭಾಂಡಕಃ ಪರ್ಯಪೃಚ್ಛೇದ್ ಯದಾ ವಃ ॥12॥
ಸ ವಕ್ತವ್ಯಃ ಪ್ರಾಂಜಲಿಭಿರ್ಭವದ್ಭಿಃ
ಪುತ್ರಸ್ಯೈತೇ ಬಹವಃ ಕರ್ಷಣಾಶ್ಚ |
ಕಿಂ ತೇ ಪ್ರಿಯಂ ಕ್ರಿಯತಾಂ ಕಿಂ ಮಹರ್ಷೇ
ದಾಸಾಶ್ಚ ಸರ್ವೇ ತವ ವಾಚಿ ಬದ್ಧಾಃ ॥13॥
ವಿಭಾಂಡಕರು ಬರುವ ದಾರಿಯಲ್ಲಿ ಆ ರಾಜನು ಘೋಷಗಳನ್ನು ನಿರ್ಮಿಸಿ ಬಹಳ ಪಶುಗಳನ್ನು, ವೀರರಾದ ಗೋಪಾಲಕರನ್ನು ನಿಲ್ಲಿಸಿ ಅವರಿಗೆ ಹೀಗೆ ಹೇಳಿದನು `ಮಗನನ್ನು ನೋಡಲು ಬಯಸಿ ಬರುವ ಮಹರ್ಷಿಗಳಾದ ವಿಭಾಂಡಕರು ನಿಮ್ಮನ್ನೇನಾದರೂ ಕೇಳಿದರೆ ನೀವು ಅವರಿಗೆ ಕೈಗಳನ್ನು ಮುಗಿದು ಈ ಗೋ ಸಂಪತ್ತು ಮತ್ತು ಉತ್ತಕ್ಷೇತ್ರಗಳೆಲ್ಲವೂ ನಿಮ್ಮ ಪುತ್ರನಿಗೇ ಸೇರಿದುದು. ಮಹರ್ಷಿಗಳೇ ನಿಮಗೆ ಏನು ಪ್ರಿಯವನ್ನು ಮಾಡೋಣ? ನಾವೆಲ್ಲರೂ ನಿಮ್ಮ ದಾಸರು. ನಿಮ್ಮ ಆಜ್ಞಾಧಾರಕರು' ಎಂದು ಹೇಳಬೇಕೆಂದು ತಿಳಿಸಿದನು.
ಅಥೋಪಾಯಾತ್ ಸ ಮುನಿಶ್ಚಂಡಕೋಪಃ

ಸ್ವಮಾಶ್ರಮಂ ಫಲಮೂಲಂ ಪ್ರಗೃಹ್ಯ |
ಅನ್ವೇಷಮಾಣಶ್ಚ ನ ತತ್ರ ಪುತ್ರಂ
ದದರ್ಶ ಚುಕ್ರೋಧ ಭೃಶಂ ತತಃ ಸಃ ||14||
ಅನಂತರ ಚಂಡಕೋಪವುಳ್ಳ ವಿಭಾಂಡಕ ಋಷಿಗಳು ಫಲಮೂಲಗಳನ್ನು ತೆಗೆದುಕೊಂಡು ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ಹುಡುಕಿದರೂ ತಮ್ಮ ಪುತ್ರನು ದೊರೆಯದಿದ್ದಾಗ ಅವರು ಬಹಳವಾಗಿ ಕ್ರೋಧಗೊಂಡರು.
ತತಃ ಸ ಕೋಪೇನ ವಿದೀರ್ಯಮಾಣಃ
ಕರಿಷ್ಯಮಾಣೋ ನೃಪತೇರ್ವಿನಾಶಮ್ |
ಜಗಾಮ ಚಂಪಂ ಪ್ರತಿಧಕ್ಷ್ಯಮಾಣಃ
ತಮಂಗರಾಜಂ ವಿಷಯಂ ಚ ತಸ್ಯ ||15||
ಆಗ ಅವರು ಕೋಪದಿಂದ ಬಿರಿದುಹೋಗುತ್ತಾ ರಾಜನ ವಿನಾಶವನ್ನು ಮಾಡಲು ಬಯಸುವವರಾಗಿ ರಾಜಧಾನಿಯಾದ ಚಂಪವನ್ನೇ ಭಸ್ಮಮಾಡುವ ಇಚ್ಛೆಯಿಂದ ಅಂಗರಾಜ್ಯಕ್ಕೂ ಮತ್ತು ಅಂಗರಾಜನ ಬಳಿಗೂ ಬಂದರು.
ಸ ವೈ ಶ್ರಾಂತಃ ಕ್ಷುಧಿತಃ ಕಾಶ್ಯಪಸ್ತಾನ್
ಘೋಷಾನ್ ಸಮಾಸಾದಿತವಾನ್ ಸಮೃದ್ಧಾನ್ |
ಗೋಪೈಶ್ಚ ತೈರ್ವಿಧಿವತ್ ಪೂಜ್ಯಮಾನೋ
ರಾಜೇವ ತಾಂ ರಾತ್ರಿಮುವಾಸ ತತ್ರ ||16||
ದಣಿದು ಹಸಿವಿನಿಂದ ಕೂಡಿದವರಾದ ಆ ಕಾಶ್ಯಪರು ಮಾರ್ಗದಲ್ಲಿ ಸಮೃದ್ಧವಾದ ಆ ಘೋಷಗಳನ್ನು ತಲುಪಿದರು. ಗೋಪಾಲಕರಿಂದ ವಿಧಿಪೂರ್ವಕವಾಗಿ ಅವರು ಪೂಜಿಸಲ್ಪಟ್ಟು ಆ ರಾತ್ರಿಯನ್ನು ರಾಜನಂತೆ ಸುಖವಾಗಿ ಅಲ್ಲಿಯೇ ಕಳೆದರು. (ಗೋಪಾಲಕರು ವಾದಿಸುವ ಸ್ಥಳಕ್ಕೆಘೋಷವೆಂದು ಹೆಸರು).
ಸಂಪ್ರಾಪ್ಯ ಸತ್ಕಾರಮತೀವ ಹೃಷ್ಟಃ
ಪ್ರೋವಾಚ ಕಸ್ಯ ಪ್ರಥಿತಾಃ ಸ್ಥ ಸೌಮ್ಯಾಃ |
ಊಚುಸ್ತತಸ್ತೇಽಭ್ಯವನಮ್ಯ ಸರ್ವೇ
ಧನಂ ತವೇದಂ ವಿಹಿತಂ ಸುತಸ್ಯ ||17||
ಅಂತಹ ಸತ್ಕಾರವನ್ನು ಪಡೆದು ಬಹಳ ಸಂತೋಷಗೊಂಡ ಅವರು `ಪ್ರೀತಿಪಾತ್ರರೇ, ನೀವು ಯಾರಿಗೆ ಸೇರಿದವರು' ಎಂದು ಕೇಳಿದರು. ಆಗ ಆ ಗೋಪಾಲರೆಲ್ಲರೂ ಶರೀರವನ್ನು ಬಗ್ಗಿಸಿ ಈ ಎಲ್ಲಾ ಸಂಪತ್ತೂ ನಿಮ್ಮ ಪುತ್ರರಿಗೇ ಕೊಡಲ್ಪಟ್ಟದ್ದು ಎಂದು ಹೇಳಿದರು.
ಏವಂ ಸ ದೇಶೇಷ್ವಭಿಪೂಜ್ಯಮಾನಃ
ತಾಂಶ್ಚೈವ ಶೃಣ್ವನ್ ಮಧುರಾನ್ ಪ್ರಲಾಪಾನ್ |
ಪ್ರಶಾಂತಭೂಯಿಷ್ಠರಜಾಃ ಪ್ರಹೃಷ್ಟಃ
ಸಮಾಸಸಾದಾಂಗಪತಿಂ ಪುರಸ್ಥಮ್ ||18||
ಹೀಗೆ ಆ ವಿಭಾಂಡಕರು ಮಾರ್ಗದೇಶದಲ್ಲಿ ಮತ್ತೆ ಮತ್ತೆ ಪೂಜಿಸಲ್ಪಡುತ್ತಾ ಮಧುರವಾದ ಮಾತುಗಳನ್ನು ಕೇಳುತ್ತಾ ಕೋಪವನ್ನು ಕಳೆದುಕೊಂಡವರಾಗಿ ಸಂತೋಷದಿಂದ ಕೂಡಿ ರಾಜಧಾನಿಯಲ್ಲಿದ್ದ ಅಂಗಾಧಿಪತಿಯ ಬಳಿಗೆ ಬಂದರು.
ಸ ಪೂಜಿತಸ್ತೇನ ನರರ್ಷಭೇಣ
ದದರ್ಶ ಪುತ್ರಂ ತ್ರಿದಿವೇ ಯಥೇಂದ್ರಮ್ |
ಶಾಂತಾಂ ಸ್ನುಷಾಂ ತಾಂ ಚ ದದರ್ಶ ತತ್ರ
ಸೌದಾಮಿನೀಮುಚ್ಚರಂತೀಂ ಯಥೈವ ||19||
ಅವರು ನರಶ್ರೇಷ್ಠನಾದ ಅಂಗಾಧಿಪತಿಯಿಂದ ಪೂಜಿಸಲ್ಪಟ್ಟವರಾಗಿ ಸ್ವರ್ಗದಲ್ಲಿ ಇಂದ್ರನಂತಿರುವ ತಮ್ಮ ಪುತ್ರನನ್ನೂ ಮತ್ತು ಮೋಡದ ಮಧ್ಯದಿಂದ ಹೊರಗೆ ಬರುತ್ತಿರುವ ಮಿಂಚಿನಂತೆ ಪ್ರಕಾಶಿಸುತ್ತಿರುವ ಸೊಸೆಯಾದ ಶಾಂತಳನ್ನೂ ಅಲ್ಲಿ ನೋಡಿದರು.
ಗ್ರಾಮಾಂಶ್ಚ ಘೋಷಾಂಶ್ಚ ಸುತಂ ಚ ದೃಷ್ಟ್ವಾ
ಶಾಂತಾಂ ಚ ಶಾಂತಃ ಪರಮೋಽಸ್ಯ ಕೋಪಃ |
ಚಕಾರ ತಸ್ಮೈ ಚ ಪರಂ ಪ್ರಸಾದಂ
ವಿಭಾಂಡಕೋ ಭೂಪತಯೇ ನರೇಂದ್ರ ||20||
ಗ್ರಾಮಗಳನ್ನು, ಘೋಷಗಳನ್ನು, ಪುತ್ರನನ್ನು ಮತ್ತು ಶಾಂತಳನ್ನು ನೋಡಿ ಅವರ ಉಗ್ರವಾದ ಕೋಪವು ಶಾಂತವಾಯಿತು. ಎಲೈ ನರೇಂದ್ರನೇ, ವಿಭಾಂಡಕರು ಆಗ ರಾಜನಿಗೆ ಪರಮಾನುಗ್ರಹವನ್ನು ಮಾಡಿದರು.
ಸ ತತ್ರ ನಿಕ್ಷಿಪ್ಯ ಸುತಂ ಮಹರ್ಷಿಃ
ಉವಾಚ ಸೂರ್ಯಾಗ್ನಿಸಮಪ್ರಭಾವಃ |
ಜಾತೇ ಚ ಪುತ್ರೇ ವನಮೇವಾವ್ರಜೇಥಾ
ರಾಜ್ಞಃ ಪ್ರಿಯಾಣ್ಯಸ್ಯ ಸರ್ವಾಣಿ ಕೃತ್ವಾ ||21||
ಸೂರ್ಯಾಗ್ನಿ ಸಮಪ್ರಭಾವವುಳ್ಳ ಆ ಮಹರ್ಷಿಗಳು ತಮ್ಮ ಪುತ್ರನನ್ನು ಅಲ್ಲಿಯೇ ಇರಿಸಿ ಒಬ್ಬ ಪುತ್ರನು ಜನಿಸಿದ ಮೇಲೆ ರಾಜನಿಗೆ ಪ್ರಿಯವಾದ ಎಲ್ಲಾ ಕಾರ್ಯಗಳನ್ನು ಮಾಡಿ ಪುನಃ ಆಶ್ರಮಕ್ಕೇ ಬರಬೇಕೆಂದು ಹೇಳಿದರು.
ಲೋಮಶಃ
ಸ ತದ್ವಚಃ ಕೃತವಾನ್ ಋಶ್ಯಶೃಂಗೋ

ಯಯೌ ಚ ಯತ್ರಾಸ್ಯ ಪಿತಾ ಬಭೂವ |
ಶಾಂತಾ ಚೈನಂ ಪರ್ಯಚರದ್ ಯಥಾವತ್
ಖೇ ರೋಹಿಣೀ ಸೋಮಮಿವಾನುರಕ್ತಾ ||22||
ಋಶ್ಯಶೃಂಗರಾದರೂ ತಂದೆಯ ವಚನವನ್ನು ಪಾಲಿಸುತ್ತಾ ಪುನಃ ತಂದೆಯಿದ್ದ ಆಶ್ರಮಕ್ಕೇ ಹೋದರು. ಪತ್ನಿಯಾದ ಶಾಂತಳೂ ಕೂಡ ಆಕಾಶದಲ್ಲಿ ಚಂದ್ರನಲ್ಲಿ ಅನುರಕ್ತಳಾದ ರೋಹಿಣಿಯಂತೆ ಅವರನ್ನೂ ಪರಿಚರಿಸಿದಳು.
ಅರುಂಧತೀ ಚಾಪಿ ಯಥಾ ವಸಿಷ್ಠಂ
ಲೋಪಾಮುದ್ರಾ ಚಾಪಿ ಯಥಾ ಹ್ಯಗಸ್ತ್ಯಮ್ |
ನಳಸ್ಯ ವಾ ದಮಯಂತೀ ಯಥಾಽಭೂದ್
ಯಥಾ ಶಚೀ ವಜ್ರಧರಸ್ಯ ಚೈವ ||23||
ನಾಳಾಯನೀ ಚೇಂದ್ರಸೇನಾ ಬಭೂವ
ವಶ್ಯಾ ನಿತ್ಯಂ ಮುದ್ಗಲಸ್ಯಾಜಮೀಢ |
ಯಥಾ ಸೀತಾ ದಾಶರಥೇರ್ಮಹಾತ್ಮನೋ
ಯಥಾ ತವ ದ್ರೌಪದೀ ಪಾಂಡುಪುತ್ರ
ತಥಾ ಶಾಂತಾ ಋಷ್ಯಶೃಂಗಂ ವನಸ್ಥಂ
ಪ್ರೀತ್ಯಾ ಯುಕ್ತಾ ಪರ್ಯಚರನ್ನರೇಂದ್ರ ||24||
ಎಲೈ ನರೇಂದ್ರನೇ, ಅರುಂಧತಿಯು ವಸಿಷ್ಠರನ್ನು ಪರಿಚರಿಸಿದಂತೆ, ಲೋಪಾಮುದ್ರೆಯು ಅಗಸ್ತ್ಯರನ್ನು ಸೇವಿಸಿದಂತೆ, ನಳನಿಗೆ ದಮಯಂತಿ ಇದ್ದಂತೆ, ಇಂದ್ರನಿಗೆ ಶಚಿ ಇದ್ದಂತೆ; ಎಲೈ ಆಜಮೀಢನೇ, ನಳಕುಮಾರಿಯಾದ ಇಂದ್ರಸೇನೆಯು ಯಾವಾಗಲೂ ಮುದ್ಗಲನಿಗೆ ವಶವಾಗಿದ್ದಂತೆ; ಸೀತೆಯು ಮಹಾತ್ಮನಾದ ದಶರಥ ಪುತ್ರ ರಾಮನಿಗೆ ವಶವಾಗಿದ್ದಂತೆ; ಪಾಂಡುಪುತ್ರನೇ, ದ್ರೌಪದಿಯು ನಿನಗೆ ವಶಳಾದಂತೆ ಶಾಂತಳು ಋಶ್ಯಶೃಂಗರಿಗೆ ವಶಳಾಗಿ ಪ್ರೀತಿಯಿಂದ ಪರಿಚರಿಸಿದಳು.
ತಸ್ಯಾಶ್ರಮಃ ಪುಣ್ಯ ಏಷೋ ವಿಭಾತಿ
ಮಹಾಹ್ಲದಂ ಶೋಭಯನ್ ಪುಣ್ಯಕೀರ್ತೇಃ |
ಅತ್ರ ಸ್ನಾತಃ ಕೃತಕೃತ್ಯೋ ವಿಶುದ್ಧಃ
ತೀರ್ಥಾನ್ಯನ್ಯಾನ್ಯಭಿಸಂಯಾಹಿ ರಾಜನ್ ||25||
ಎಲೈ ರಾಜನೇ, ಅವರ ಪವಿತ್ರವಾದ ಈ ಆಶ್ರಮವು ಪುಣ್ಯತೀರ್ಥಗಳಾದ ಅವರ ಮಹಾಹ್ಲದ ತೀರ್ಥವನ್ನು ಶೋಭಿಸುತ್ತಾ ಇಲ್ಲಿಯೇ ಕಂಗೊಳಿಸುತ್ತಿದೆ. ಇಲ್ಲಿ ಸ್ನಾನವನ್ನು ಮಾಡಿ ವಿಶುದ್ಧನಾಗಿ ಕೃತಕೃತ್ಯನಾಗಿ ಬೇರೆ ತೀರ್ಥಗಳಿಗೆ ಪ್ರಯಾಣವನ್ನು ಮಾಡು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದಶಾಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಷಟ್‌ಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಹನ್ನೊಂದನೆಯ ಅಧ್ಯಾಯ
ಲೋಮಶರಿಂದ ಗಂಗಾಸಾಗರ ಸಂಗಮಾದಿ ತೀರ್ಥಮಹಿಮೆಗಳ ವರ್ಣನೆ.
ವೈಶಂಪಾಯನಃ
ತತಃ ಪ್ರಯಾತಃ ಕೌಶಿಕ್ಯಾಃ ಪಾಂಡವೋ ಜನಮೇಜಯ |
ಆನುಪೂರ್ವ್ಯೇಣ ಸರ್ವಾಣಿ ತೀರ್ಥಾನ್ಯಾಯತನಾನಿ ಚ ||1||
ವೈಶಂಪಾಯನ ಎಲೈ ಜನಮೇಜಯನೇ, ಕೌಶಿಕೀನದಿಯಿಂದ ಹೊರಟ ಪಾಂಡವನು ಕ್ರಮಬದ್ಧವಾಗಿ ಎಲ್ಲಾ ತೀರ್ಥಗಳಿಗೂ, ಕ್ಷೇತ್ರಗಳಿಗೂ ಹೋದನು.
ಸ ಸಾಗರಂ ಸಮಾಸಾದ್ಯ ಗಂಗಾಯಾಃ ಸಂಗಮೇ ನೃಪ |
ನದೀಶತಾನಾಂ ಪಂಚಾನಾಂ ಮಧ್ಯೇ ಚಕ್ರೇ ಸಮಾಪ್ಲವಮ್ ||2||
ಎಲೈ ರಾಜನೇ, ಅವನು ಗಂಗಾಸಾಗರ ಸಂಗಮವನ್ನು ತಲುಪಿ ಅಲ್ಲಿ ನೂರೈದು ನದಿಗಳ ಮಧ್ಯೆ ಸ್ನಾನವನ್ನು ಮಾಡಿದನು.
ತತಃ ಸಮುದ್ರತೀರೇಣ ಜಗಾಮ ವಸುಧಾಧಿಪಃ |
ಭ್ರಾತೃಭಿಃ ಸಹಿತೋ ವೀರಃ ಕಳಿಂಗಾನ್ ಪ್ರತಿ ಭಾರತ ||3||
ಎಲೈ ಭಾರತನೇ, ಅನಂತರ ವಸುಧಾಧಿಪನೂ ವೀರನೂ ಆದ ಯುಧಿಷ್ಠಿರನು ತಮ್ಮಂದಿರ ಜೊತೆಯಲ್ಲಿ ಸಮುದ್ರತೀರದಲ್ಲಿ ಪ್ರಯಾಣ ಮಾಡುತ್ತಾ ಕಳಿಂಗ ದೇಶವನ್ನು ತಲುಪಿದನು.
ಲೋಮಶಃ
ಏತೇ ಕಳಿಂಗಾ ಕೌಂತೇಯ ಯತ್ರ ವೈತರಣೀ ನದೀ |
ಯತ್ರಾಯಜತ ಧರ್ಮೋಽಪಿ ದೇವಾನ್ ಶರಣಮೇತ್ಯ ವೈ ||4||
ಲೋಮಶರು ಕೌಂತೇಯನೇ, ಇದು ಕಳಿಂಗದೇಶ. ಇಲ್ಲಿ ವೈತರಣೀ ನದಿ ಇದೆ. ಇಲ್ಲಿ ಯಮಧರ್ಮನು ದೇವತೆಗಳನ್ನು ಶರಣು ಹೊಂದಿ ಯಾಗವನ್ನು ಮಾಡಿದನು.
ತತ್ರರ್ಷಿಭಿಃ ಸಮಾಯುಕ್ತಂ ಯಜ್ಞಿಯಂ ಗಿರಿಶೋಭಿತಮ್ |
ಉತ್ತರಂ ತೀರಮೇತದ್ಧಿ ಸತತಂ ದ್ವಿಜಸೇವಿತಮ್ ||5||

ಈ ಕಳಿಂಗದೇಶದ ಉತ್ತರತೀರವು ಪರ್ವತದಿಂದ ಶೋಭಿತವಾಗಿ ದ್ವಿಜಸೇವಿತವಾಗಿದೆ. ಇದು ಋಷಿಗಳಿಂದ ಸೇವಿತವಾದ ಯಜ್ಞಭೂಮಿ.
ಸಮೇನ ದೇವಯಾನೇನ ಪಥಾ ಸ್ವರ್ಗಮುಪೇಯುಷಃ |
ಅತ್ರ ಚೈವರ್ಷಯೋ ನಿತ್ಯಂ ಪುರಾ ಕ್ರತುಭಿರೀಜಿರೇ ||6||
ಸಮವಾದ ದೇವಯಾನದ ಮಾರ್ಗದಿಂದ ಸ್ವರ್ಗವನ್ನು ಹೊಂದಲು ಬಯಸುವ ಋಷಿಗಳು ಇಲ್ಲಿ ಹಿಂದೆ ಯಾವಾಗಲೂ ಯಜ್ಞಗಳನ್ನು ಮಾಡಿದರು.
ಅತ್ರೈವ ರುದ್ರೋ ರಾಜೇಂದ್ರ ಪಶುಮಾದತ್ತವಾನ್ ಮಖೇ |
ರೌದ್ರಂ ಪಶುಂ ಮಾನವೇಂದ್ರ ಭಾಗೋಽಯಮಿತಿ ಚಾಬ್ರವೀತ್ ||7||
ಎಲೈ ರಾಜೇಂದ್ರನೇ, ಇಲ್ಲಿಯೇ ರುದ್ರನು ಯಜ್ಞದಲ್ಲಿ ಪಶುವನ್ನು ಸ್ವೀಕರಿಸಿದನು. ಎಲೈ ಮಾನವೇಂದ್ರನೇ, ರುದ್ರನು ಯಜ್ಞಪಶುವನ್ನು ಇದು ನನ್ನ ಭಾಗವೆಂದು ಹೇಳಿದನು.
ಹೃತೇ ಪಶೌ ತತೋ ದೇವಾಃ ತಮೂಚುರ್ಭರತರ್ಷಭ |
ಮಾ ಪರಸ್ವಮಭಿದ್ರೋಗ್ಧಾ ಮಾऽಧರ್ಮ್ಯಾನ್ನೀನಶಃ ಪಥಃ ||8||
ಎಲೈ ಭರತರ್ಷಭನೇ, ರುದ್ರನಿಂದ ಯಜ್ಞಪಶುವು ತೆಗೆದುಕೊಂಡು ಹೋಗಲ್ಪಡುತ್ತಿರಲು ದೇವತೆಗಳು ಅವನನ್ನು ಕುರಿತು ಇನ್ನೊಬ್ಬರ ಸ್ವತ್ತಿಗೆ ಆಸೆಯನ್ನು ಮಾಡಬೇಡ. ಅಧರ್ಮವನ್ನು ಮಾಡಿ ಧರ್ಮಪಥದಿಂದ ವಿನಾಶವನ್ನು ಹೊಂದಬೇಡ ಎಂದು ಹೇಳಿದರು.
ಲೋಮಶಃ
ತತಃ ಕಲ್ಯಾಣರೂಪಾಭಿಃ ವಾಗ್ಭಿಸ್ತೇ ರುದ್ರಮಸ್ತುವನ್ |
ಇಷ್ಟ್ಯಾ ಚೈನಂ ತರ್ಪಯಿತ್ವಾ ಮಾನಯಾಂಚಕ್ರಿರೇ ತದಾ ||9||
ಲೋಮಶರು ಅನಂತರ ಅವರು ಮಂಗಳವಾದ ಮಾತುಗಳಿಂದ ರುದ್ರನನ್ನು ಸ್ತೋತ್ರಮಾಡಿದರು. ಒಂದು ಇಷ್ಟಿಯನ್ನು ಮಾಡಿ ರುದ್ರನನ್ನು ತೃಪ್ತಿಪಡಿಸಿ ಆಗ ಅವನಿಗೆ ಸತ್ಕಾರವನ್ನೂ ಮಾಡಿದರು.
ತತಃ ಪಶುಂ ಸಮುತ್ಸೃಜ್ಯ ದೇವಯಾನೇನ ಜಗ್ಮಿವಾನ್ |
ಅತ್ರಾನುವಂಶೋ ರುದ್ರಸ್ಯ ತಂ ನಿಬೋಧ ಯುಧಿಷ್ಠಿರ ||10||
ಆಗ ರುದ್ರನು ಪಶುವನ್ನು ಬಿಟ್ಟು ದೇವಯಾನದಿಂದ ಹೊರಟು ಹೋದನು. ಎಲೈ ಯುಧಿಷ್ಠಿರನೇ, ಇಲ್ಲಿ ರುದ್ರನ ಆನುವಂಶಿಕವಾದ ಗೀತೆಯಿದೆ; ಅದನ್ನು ತಿಳಿ.
ಅಯಾತಯಾಮಂ ಸರ್ವೇಭ್ಯೋ ಭಾಗೇಭ್ಯೋ ಭಾಗಮುತ್ತಮಮ್ |
ದೇವಾಃ ಸಂಕಲ್ಪಯಾಮಾಸುರ್ಭಯಾದ್ ರುದ್ರಸ್ಯ ಶಾಶ್ವತಮ್ ||11||
ದೇವತೆಗಳು ರುದ್ರನ ಭಯದಿಂದ ಎಲ್ಲ ಭಾಗಗಳಿಗಿಂತಲೂ ಶ್ರೇಷ್ಠವಾದ ಅಯಾತಯಾಮವಾದ (ಮೀಸಲಾದ) ಶಾಶ್ವತವಾದ ಭಾಗವನ್ನು ರುದ್ರನಿಗಾಗಿ ಸಂಕಲ್ಪಿಸಿದರು.
ಇಮಾಂ ಗಾಥಾಮತ್ರ ಗಾಯನ್ನಪಃ ಸ್ಪೃಶತಿ ಯೋ ನರಃ |
ದೇವಯಾನಸ್ತಸ್ಯ ಪಂಥಾಃ ಚಕ್ಷುಶ್ಚೈವ ಪ್ರಕಾಶತೇ ||12||
ಈ ಗೀತೆಯನ್ನು ಹಾಡುತ್ತಾ ಯಾವ ನರನು ಇಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನ ಮಾರ್ಗವು ದೇವಯಾನವೇ ಆಗುತ್ತದೆ ಮತ್ತು ಅವನಿಗೆ ದಿವ್ಯದೃಷ್ಟಿಯು ಉಂಟಾಗುತ್ತದೆ.
ವೈಶಂಪಾಯನಃ
ತತೋ ವೈತರಣೀಂ ಗತ್ವಾ ಪಾಂಡವಾ ದ್ರೌಪದೀ ತಥಾ |
ಅವತೀರ್ಯ ಮಹಾಭಾಗಾಃ ತರ್ಪಯಾಂಚಕ್ರಿರೇ ಪಿತೄನ್ ||13||
ವೈಶಂಪಾಯನರು ಅನಂತರ ಮಹಾನುಭಾವರಾದ ಪಾಂಡವರು ಮತ್ತು ದ್ರೌಪದಿಯು ತಮ್ಮ ರಥಗಳಿಂದ ಇಳಿದು ವೈತರಣೀ ನದಿಗೆ ಹೋಗಿ ಪಿತೃಗಳಿಗೆ ತರ್ಪಣವನ್ನು ಕೊಟ್ಟರು.
ಯುಧಿಷ್ಠಿರಃ
ಉಪಸ್ಪೃಶ್ಯೈವ ಭಗವನ್ನಸ್ಯಾಂ ನದ್ಯಾಂ ತಪೋಧನ |
ಮಾನುಷಾದಸ್ಮಿ ವಿಷಯಾದ್ ಅಪೇತಃ ಪಶ್ಯ ಲೋಮಶ ||14||
ಯುಧಿಷ್ಠಿರ ತಪೋಧನರೇ, ಈ ನದಿಯ ನೀರಿನ ಸ್ಪರ್ಶಮಾತ್ರದಿಂದಲೇ ನಾನು ಮಾನುಷ ವಿಷಯದಿಂದ ದೂರವಾಗಿದ್ದೇನೆ. ಲೋಮಶರೇ ಇದನ್ನು ನೋಡಿ.
ದಿವ್ಯಾನ್ ಲೋಕಾನ್ ಪ್ರಪಶ್ಯಾಮಿ ಪ್ರಸಾದಾತ್ ತವ ಸುವ್ರತ |
ವೈಖಾನಸಾನಾಂ ಜಪತಾಮೇಷ ಶಬ್ದೋ ಮಹಾತ್ಮನಾಮ್ ||15||
ಎಲೈ ಸುವ್ರತರೇ, ನಿಮ್ಮ ಅನುಗ್ರಹದಿಂದ ನಾನು ದಿವ್ಯಲೋಕಗಳನ್ನು ನೋಡುತ್ತಿದ್ದೇನೆ. ಮಹಾತ್ಮರಾದ ವೈಖಾನಸರು ಜಪವನ್ನು ಮಾಡುವ ಈ ಶಬ್ದವು ಕೇಳಿಬರುತ್ತಿದೆ.
ಲೋಮಶಃ
ತ್ರಿಶಂದ್ ಭೂಮೇಃ ಸಹಸ್ರಾಣಿ ಯೋಜನಾನಾಂ ಯುಧಿಷ್ಠಿರ |
ಯತ್ರ ಧ್ವನಿಂ ಶೃಣೋಷ್ಯೇನಂ ತೂಷ್ಣೀಮಾಸ್ಸ್ವ ವಿಶಾಂಪತೇ ||16||
ಲೋಮಶರು ಎಲೈ ಯುಧಿಷ್ಠಿರನೇ, ಭೂಮಿಯ ಮೇಲೆ ಮೂವತ್ತು ಸಾವಿರ ಯೋಜನಗಳವರೆಗೆ ಈ ಧ್ವನಿಯನ್ನು ನೀನು ಕೇಳುವಿ. ರಾಜನೇ, ಮೌನವಾಗಿರು.

ಏತತ್ ಸ್ವಾಯಂಭುವಂ ರಾಜನ್ ವನಂ ದಿವ್ಯಂ ಪ್ರಕಾಶತೇ |
ಯತ್ರಾಯಜತ ಧರ್ಮಾತ್ಮಾ ವಿಶ್ವಕರ್ಮಾ ಪ್ರತಾಪವಾನ್ ||17||
ಎಲೈ ರಾಜನೇ, ಬ್ರಹ್ಮದೇವರ ಈ ದಿವ್ಯವಾದ ವನವು ಶೋಭಿಸುತ್ತಿದೆ. ಇಲ್ಲಿ ಪ್ರತಾಪಶಾಲಿಗಳಾದ ಜಗತ್ಕರ್ತೃಗಳಾದ ಧರ್ಮಾತ್ಮರಾದ ಬ್ರಹ್ಮದೇವರು ಯಾಗವನ್ನು ಮಾಡಿದರು.
ಯಸ್ಮಿನ್ ಯಜ್ಞೇ ಹಿ ಭೂರ್ದತ್ತಾ ಕಾಶ್ಯಪಾಯ ಮಹಾತ್ಮನೇ |
ಸಪರ್ವತವನೋದ್ದೇಶಾ ದಕ್ಷಿಣಾ ವೈ ಸ್ವಯಂಭುವಾ ||18||
ಆ ಯಜ್ಞದಲ್ಲಿ ಬ್ರಹ್ಮದೇವರು ಪರ್ವತವನೋದ್ದೇಶಗಳಿಂದ ಸಹಿತವಾದ ಭೂಮಿಯನ್ನು ಮಹಾನುಭಾವರಾದ ಕಾಶ್ಯಪರಿಗೆ ದಕ್ಷಿಣೆಯಾಗಿ ಕೊಟ್ಟರು.
ಅವಾಸೀದಚ್ಚ ಕೌಂತೇಯ ದತ್ತಮಾತ್ರಾ ಮಹೀ ತದಾ |
ಉವಾಚ ಚಾಪಿ ಕುಪಿತಾ ಲೋಕೇಶ್ವರಮಿದಂ ವಚಃ ||19||
ಎಲೈ ಕೌಂತೇಯನೇ, ಆಗ ತಕ್ಷಣದಲ್ಲಿಯೇ ಭೂಮಿಯು ಕೋಪದಿಂದ ಕೆಳಗೆ ಕುಸಿದು ಹೋಗಿ ಲೋಕೇಶ್ವರನಾದ ಬ್ರಹ್ಮದೇವರನ್ನು ಕುರಿತು ಈ ಮಾತನ್ನು ಹೇಳಿತು.
ನ ಮಾಂ ಮರ್ತ್ಯಾಯ ಭಗವನ್ ಕಸ್ಮೈಚಿದ್ ದಾತುಮರ್ಹಸಿ |
ಪ್ರದಾನಂ ಮೋಘಮೇತತ್ ತೇ ಯಾಸ್ಯಾಮ್ಯೇಷಾ ರಸಾತಳಮ್ ||20||
ಪೂಜ್ಯನೇ, ನನ್ನನ್ನು ಯಾವುದೋ ಒಬ್ಬ ಮನುಷ್ಯನಿಗೆ ನೀನು ಕೊಡಬಾರದು. ನಿನ್ನ ಈ ದಾನವು ವ್ಯರ್ಥವಾಗುತ್ತದೆ. ಇದೋ ನಾನು ರಸಾತಳ ಲೋಕಕ್ಕೆ ಹೋಗುವೆನು.
ಲೋಮಶಃ
ವಿಷೀದಂತೀಂ ತು ತಾಂ ದೃಷ್ಟ್ವಾ ಕಾಶ್ಯಪೋ ಭಗವಾನೃಷಿಃ |
ಪ್ರಸಾದಯಾಂಬಭೂವಾಥ ತತೋ ಭೂಮಿಂ ವಿಶಾಂಪತೇ ||21||
ಲೋಮಶರು ಎಲೈ ರಾಜನೇ, ಕೆಳಗೆ ಕುಸಿದುಹೋಗುತ್ತಿದ್ದ ಭೂಮಿಯನ್ನು ನೋಡಿ ಪೂಜ್ಯರಾದ ಕಾಶ್ಯಪ ಋಷಿಗಳು ಭೂಮಿಯನ್ನು ಪ್ರಸನ್ನೀಕರಿಸಿದರು.
ತತಃ ಪ್ರಸನ್ನಾ ಪೃಥಿವೀ ತಪಸಾ ತಸ್ಯ ಪಾಂಡವ |
ಪುನರುತ್ಸೃಜ್ಯ ಸಲಿಲಾ ವೇದಿಭೂರ್ತ್ವಾ ಸ್ಥಿತಾ ಬಭೌ ||22||
ಎಲೈ ಪಾಂಡವನೇ, ಅವರ ತಪಸ್ಸಿನಿಂದ ಪ್ರಸನ್ನಳಾದ ಭೂಮಿಯು ಪುನಃ ನೀರನ್ನು ಬಿಟ್ಟು ಮೇಲೆ ಬಂದು ವೇದಿಕೆಯಾಗಿ ನಿಂತಳು.
ಸೈಷಾ ಪ್ರಕಾಶತೇ ರಾಜನ್ ವೇದೀಸಂಸ್ಥಾನಲಕ್ಷಣಾ |
ಆರೋಹಾತ್ರ ಮಹಾರಾಜ ವೀರ್ಯವಾಂಸ್ತ್ವಂ ಭವಿಷ್ಯಸಿ ||23||
ಎಲೈ ರಾಜನೇ, ವೇದಿಕೆಯ ಆಕಾರದಲ್ಲಿರುವ ಈ ಭೂಮಿಯು ಇಲ್ಲಿ ಶೋಭಿಸುತ್ತಿದೆ. ಮಹಾರಾಜನೇ, ಇದನ್ನು ಏರು. ನೀನು ಪ್ರತಾಪಶಾಲಿಯಾಗುವಿ.
ಅಹಂ ಚ ತೇ ಸ್ವಸ್ತ್ಯಯನಂ ಪ್ರಯೋಕ್ಷ್ಯೇ
ಯಥಾ ತ್ವಮೇನಾಮಧಿರೋಕ್ಷ್ಯಸೇಽದ್ಯ |
ಸ್ಪೃಷ್ಟಾ ಹಿ ಮರ್ತ್ಯೇನ ತತಃ ಸಮುದ್ರಮ್
ಏಷಾ ವೇದಿಃ ಪ್ರವಿಶತ್ಯಾಜಮೀಢ ||24||
ನೀನು ಈ ವೇದಿಕೆಯನ್ನು ಈ ದಿನ ಏರುವಂತೆ ನಾನು ನಿನಗೆ ಮಂಗಳಾಶೀರ್ವಾದವನ್ನು ಮಾಡುವೆನು. ಎಲೈ ಆಜಮೀಢನೇ, ಮನುಷ್ಯರು ಸ್ಪರ್ಶಮಾಡಿದ ತಕ್ಷಣ ಈ ವೇದಿಕೆಯು ಸಮುದ್ರವನ್ನು ಪ್ರವೇಶಿಸುತ್ತದೆ.
ಅಗ್ನಿರ್ಮಿತ್ರೋ ಯೋನಿರಾಪೋಽಥ ದೇವ್ಯೋ
ವಿಷ್ಣೋ ರೇತಶ್ಚಾಸ್ಯ ಭೂಮಿಶ್ಚ ನಾಭಿಃ |
ಏವಂ ಬ್ರುವನ್ ಪಾಂಡವ ಸತ್ಯವಾಕ್ಯಂ
ವೇದೀಮಿಮಾ ತ್ವಂ ತರಸಾಽಧಿರೋಹ ||25||
ಎಲೈ ಪಾಂಡವನೇ, ನೀನು ಅಗ್ನಿ ಮಿತ್ರರು, ಜಗತ್ತಿನ ಯೋನಿ, ಆಪೋದೇವಿಯರು ವಿಷ್ಣುವಿನ ವೀರ್ಯ, ಭೂಮಿಯು ನಾಭಿ ಎಂಬ ಸತ್ಯವಾಕ್ಯವನ್ನು ಹೇಳುತ್ತಾ ಈ ವೇದಿಕೆಯನ್ನು ಶೀಘ್ರವಾಗಿ ಏರು.
ವೈಶಂಪಾಯನಃ
ತತಃ ಕೃತಸ್ವಸ್ತ್ಯಯನೋ ಮಹಾತ್ಮಾ
ಯುಧಿಷ್ಠಿರಃ ಸಾಗರಗಾಮಗಚ್ಛತ್ |
ಕೃತ್ವಾ ಚ ತಚ್ಛಾಸನಮಸ್ಯ ಸರ್ವಂ
ಮಹೇಂದ್ರಮಾಸಾದ್ಯ ನಿಶಾಮುವಾಸ ||26||
ವೈಶಂಪಾಯನ ಅನಂತರ ಲೋಮಶರಿಂದ ಮಂಗಳಾಶೀರ್ವಾದವನ್ನು ಪಡೆದ ಮಹಾತ್ಮನಾದ ಯುಧಿಷ್ಠಿರನು ಸಾಗರದಲ್ಲಿ ಮುಳುಗಿಹೋಗಲಿರುವ ವೇದಿಕೆಯನ್ನು ಏರಿದನು. ಲೋಮಶರ ಎಲ್ಲಾ ಆದೇಶವನ್ನೂ ನೆರವೇರಿಸಿ ಮಹೇಂದ್ರ ಪರ್ವತಕ್ಕೆ ಹೋಗಿ ರಾತ್ರಿಯನ್ನು ಕಳೆದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಾದಶಾಧಿಕಶತತಮೋಽಧ್ಯಾಯಃ ||

॥ ತೀರ್ಥಯಾತ್ರಾಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರಹನ್ನೊಂದನೆಯ ಅಧ್ಯಾಯ ಮುಗಿಯಿತು.
*****

ನೂರಾ ಹನ್ನೆರಡನೆಯ ಅಧ್ಯಾಯ
ಅಕೃತವ್ರಣನಿಂದ ಯುಧಿಷ್ಠಿರನಿಗೆ ಪರಶುರಾಮ ಚರಿತ್ರೆಯ ಕಥನ.
ವೈಶಂಪಾಯನಃ
ಸ ತತ್ರ ತಾಮುಷಿತ್ವೈಕಾಂ ರಜನೀಂ ಪೃಥಿವೀಪತಿಃ |
ತಾಪಸಾನಾಂ ಪರಂ ಚಕ್ರೇ ಸತ್ಕಾರಂ ಭ್ರಾತೃಭಿಃ ಸಹ ॥1॥
ವೈಶಂಪಾಯನ ರಾಜನಾದ ಆ ಯುಧಿಷ್ಠಿರನು ಅಲ್ಲಿ ಒಂದು ರಾತ್ರಿಯನ್ನು ಕಳೆದು ತಮ್ಮಂದಿರ ಜೊತೆಯಲ್ಲಿ ಅಲ್ಲಿದ್ದ ತಾಪಸರಿಗೆ ಪೂಜೆಯನ್ನು ಸಲ್ಲಿಸಿದನು.
ಲೋಮಶಶ್ಚಾತ್ರ ತಾನ್ ಸರ್ವಾನಾಚಖ್ಯೌ ತತ್ರ ತಾಪಸಾನ್ |
ಭೃಗೂನಂಗೀರಸಶ್ಚೈವ ವಾಸಿಷ್ಠಾನಥ ಕಾಶ್ಯಪಾನ್ ॥2॥
ಅಲ್ಲಿ ಲೋಮಶರು ಸಹ ಅಲ್ಲಿದ್ದ ಭೃಗುಗಳು, ಅಂಗೀರಸರು, ವಾಸಿಷ್ಠರು, ಕಾಶ್ಯಪರು ಮೊದಲಾದ ಎಲ್ಲಾ ಋಷಿಗಳನ್ನೂ ಪರಿಚಯ ಮಾಡಿಕೊಟ್ಟರು.
ತಾನ್ ಸಮೇತ್ಯ ಸ ರಾಜರ್ಷಿರಭಿವಾದ್ಯ ಕೃತಾಂಜಲಿಃ |
ರಾಮಸ್ಯಾನುಚರಂ ವೀರಮಪೃಚ್ಛದಕೃತವ್ರಣಮ್ ॥3॥
ಕದಾ ನು ರಾಮೋ ಭಗವಾನ್ ತಾಪಸಾನ್ ದರ್ಶಯಿಷ್ಯತಿ |
ತೇನೈವಾಹಂ ಪ್ರಸಂಗೇನ ದ್ರಷ್ಟುಮಿಚ್ಛಾಮಿ ಭಾರ್ಗವಮ್ ॥4॥
ರಾಜರ್ಷಿಯಾದ ಯುಧಿಷ್ಠಿರನು ಆ ಋಷಿಗಳನ್ನು ಸಂಧಿಸಿ ಅವರಿಗೆ ಪ್ರಣಾಮವನ್ನು ಸಲ್ಲಿಸಿ ಪರಶುರಾಮನ ಅನುಚರನಾದ ವೀರನಾದ ಅಕೃತವ್ರಣನನ್ನು ಕುರಿತು `ಪೂಜ್ಯನಾದ ಪರಶುರಾಮನು ಯಾವಾಗ ತಾಪಸರಿಗೆ ದರ್ಶನವನ್ನು ಕೊಡುವನು? ಆ ಪ್ರಸಂಗದಲ್ಲಿಯೇ ನಾನು ಅವನು ನೋಡಲು ಬಯಸುತ್ತೇನೆ' ಎಂದು ಹೇಳಿದನು.
ಅಕೃತವ್ರಣಃ
ಆಯಾನೇವಾಸಿ ವಿದಿತೋ ರಾಮಸ್ಯ ವಿದಿತಾತ್ಮನಃ |
ಪ್ರೀತಿಸ್ತ್ವಯಿ ಚ ರಾಮಸ್ಯ ಕ್ಷಿಪ್ರಂ ತ್ವಾಂ ದರ್ಶಯಿಷ್ಯತಿ ॥5॥
ಅಕೃತವ್ರಣ ನೀನು ಇಲ್ಲಿ ಬರುವಾಗಲೇ ಸರ್ವಜ್ಞನಾದ ಪರಶುರಾಮನಿಗೆ ಅದು ತಿಳಿದಿದೆ. ನಿನ್ನಲ್ಲಿ ಪರಶುರಾಮನಿಗೆ ಬಹಳ ಪ್ರೀತಿಯಿದೆ. ಬೇಗಲೇ ನಿನಗೆ ದರ್ಶನವನ್ನು ಕೊಡುವನು.
ಚತುರ್ದಶೀಮಷ್ಟಮೀಂ ಚ ರಾಮಂ ಪಶ್ಯಂತಿ ತಾಪಸಾಃ |
ಅಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಭವಿತ್ರೀ ಚ ಚತುರ್ದಶೀ |
ತತ್ರ ದ್ರಕ್ಷ್ಯಸಿ ರಾಮಂ ತ್ವಂ ಕೃಷ್ಣಾಜಿನಜಟಾಧರಮ್ ॥6॥
ಚತುರ್ದಶೀ ಮತ್ತು ಅಷ್ಟಮಿಯಂದು ತಾಪಸರು ರಾಮನನ್ನು ನೋಡುತ್ತಾರೆ. ಈ ರಾತ್ರಿಯು ಕಳೆದರೆ ಚತುರ್ದಶಿಯಾಗುತ್ತದೆ. ಆಗ ನೀನು ಕೃಷ್ಣಾಜಿನ ಜಟಾಧಾರಿಯಾದ ರಾಮನನ್ನು ನೋಡುವಿ.
ಯುಧಿಷ್ಠಿರಃ
ಭವಾನನುಗತೋ ರಾಮಂ ಜಾಮದಗ್ನ್ಯಂ ಮಹಾಬಲಮ್ |
ಪ್ರತ್ಯಕ್ಷದರ್ಶೀ ಸರ್ವಸ್ಯ ಪೂರ್ವವೃತ್ತಸ್ಯ ಕರ್ಮಣಃ ॥7॥
ಸ ಭವಾನ್ ಕಥಯತ್ವೇತದ್ ಯಥಾ ರಾಮೇಣ ನಿರ್ಜಿತಾಃ |
ಆಹವೇ ಕ್ಷತ್ರಿಯಾಃ ಸರ್ವೇ ಕಥಂ ಕೇನ ಚ ಹೇತುನಾ ॥8॥
ಯುಧಿಷ್ಠಿರ ನೀನು ಜಮದಗ್ನಿಯ ಪುತ್ರರಾದ ಮಹಾಬಲಿಷ್ಠರಾದ ಪರಶುರಾಮರಿಗೆ ಯಾವಾಗಲೂ ಜೊತೆಯಲ್ಲಿದ್ದೀಯೆ. ಹಿಂದಿನ ಎಲ್ಲಾ ಕರ್ಮಗಳನ್ನೂ ಪ್ರತ್ಯಕ್ಷವಾಗಿ ನೋಡಿದ್ದೀಯೆ. ಅಂತಹ ನೀನು ಪರಶುರಾಮರಿಂದ ಎಲ್ಲ ಕ್ಷತ್ರಿಯರು ಯಾವ ಕಾರಣದಿಂದ ಯುದ್ಧದಲ್ಲಿ ನಿರ್ಜಿತರಾದರೆಂಬ ವಿಷಯವನ್ನು ತಿಳಿಸು.
ಅಕೃತವ್ರಣಃ
ಕನ್ಯಾಕುಬ್ಜೇ ಮಹಾನಾಸೀತ್ ಪಾರ್ಥಿವಃ ಸುಮಹಾಬಲಃ |
ಗಾಧೀತಿ ವಿಶ್ರುತೋ ಲೋಕೇ ವನವಾಸಂ ಜಗಾಮ ಸಃ ॥9॥
ಅಕೃತವ್ರಣ ಕನ್ಯಾಕುಬ್ಜದಲ್ಲಿ ಮಹಾಬಲಿಷ್ಠನಾದ, ಮಹಾತ್ಮನಾದ ಗಾಧಿ ಎಂಬ ಲೋಕದಲ್ಲಿ ಪ್ರಖ್ಯಾತನಾದ ರಾಜನಿದ್ದನು. ಅವನು ವನವಾಸಕ್ಕೆ ಹೋದನು.
ವನೇ ತು ತಸ್ಯ ವಸತಃ ಕನ್ಯಾ ಜಜ್ಞೇಽಪ್ಸರೋಪಮಾ |
ಋಚೀಕೋ ಭಾರ್ಗವಸ್ತಾಂ ವೈ ವರಯಾಮಾಸ ಭಾರತ ॥10॥
ಅವನು ವನದಲ್ಲಿ ವಾಸಮಾಡುತ್ತಿರುವಾಗ ಅವನಿಗೆ ಅಪ್ಸರೆಯಂತಹ ಒಬ್ಬ ಮಗಳು (ಸತ್ಯವತಿ) ಜನಿಸಿದಳು. ಎಲೈ ಭಾರತನೇ, ಭೃಗುಪುತ್ರನಾದ ಋಚೀಕನು ಅವಳನ್ನು ಪ್ರಾರ್ಥಿಸಿದನು.
ತಮುವಾಚ ತತೋ ರಾಜಾ ಬ್ರಾಹ್ಮಣಂ ಸಂಶಿತವ್ರತಮ್ |

ಉಚಿತಂ ನಃ ಕುಲೇ ಕಿಂಚಿತ್ ಪೂರ್ವೈರ್ಯತ್ ಸಂಪರಿವರ್ತನಮ್ ॥
ಏಕತಃ ಶ್ಯಾಮಕರ್ಣಾನಾಂ ಪಾಂಡರಾಣಾಂ ತರಸ್ವಿನಾಮ್ |
ಸಹಸ್ರಂ ವಾಜಿನಾಂ ಶುಲ್ಕಮಿತಿ ವಿದ್ಧಿ ದ್ವಿಜೋತ್ತಮ ॥12॥
ನ ಚಾಪಿ ಭಗವಾನ್ ವಾಚ್ಯೋ ದೀಯತಾಮಿತಿ ಭಾರ್ಗವ |
ದೇಯಾ ಮೇ ದುಹಿತಾ ಚೈವ ತ್ವದ್ವಿಧಾಯ ದ್ವಿಜಾಯ ತೇ ॥13॥
ಗಾಧಿರಾಜನು ವ್ರತನಿಷ್ಠನಾದ ಆ ಬ್ರಾಹ್ಮಣನನ್ನು ಕುರಿತು `ನಮ್ಮ ಕುಲದಲ್ಲಿ ಹಿಂದಿನಿಂದ ನಡೆದುಬಂದ ಯೋಗ್ಯವಾದ ಒಂದು ಸಂಪ್ರದಾಯವಿದೆ. ಎಲೈ ದ್ವಿಜೋತ್ತಮನೇ, ಕಪ್ಪಾದ ಒಂದು ಕಿವಿಯುಳ್ಳ ಶುಭ್ರಬಿಳಿಯ ಬಣ್ಣದ ವೇಗವನ್ನು ಹೊಂದಿರುವ ಸಹಸ್ರ ಅಶ್ವಗಳನ್ನು ಕನ್ಯಾಶುಲ್ಕವೆಂದು ತಿಳಿ' ಎಂದು ಹೇಳಿದನು. `ಎಲೈ ಭಾರ್ಗವನೇ, ಪೂಜ್ಯನಾದ ನಿನಗೆ ನಾನು ಶುಲ್ಕವನ್ನು ಕೊಡು ಎಂದು ಹೇಳಬಾರದು. ನಿನ್ನಂತಹ ಬ್ರಾಹ್ಮಣನಿಗೇ ನಾನು ನನ್ನ ಮಗಳನ್ನು ಕೊಡಬೇಕಷ್ಟೆ' ಎಂದು ಹೇಳಿದನು.
ಋಚೀಕಃ
ಏಕತಃ ಶ್ಯಾಮಕರ್ಣಾನಾಂ ಪಾಂಡರಾಣಾಂ ತರಸ್ವಿನಾಮ್ |
ದಾಸ್ಯಾಮ್ಯಶ್ವಸಹಸ್ರಂ ತೇ ಮಮ ಭಾರ್ಯಾ ಸುತಾಽಸ್ತು ತೇ ॥14॥
ಋಚೀಕರು ಒಂದುಕಡೆ ಶ್ಯಾಮಕರ್ಣವುಳ್ಳ ವೇಗಶಾಲಿಗಳಾದ ಪಾಂಡುವರ್ಣದ ಅಶ್ವಸಹಸ್ರವನ್ನು ನಿನಗೆ ಕೊಡುವೆನು. ನಿನ್ನ ಪುತ್ರಿಯು ನನ್ನ ಪತ್ನಿಯಾಗಲಿ.
ವೈಶಂಪಾಯನಃ
ಸ ತಥೇತಿ ಪ್ರತಿಜ್ಞಾಯ ರಾಜನ್ ವರುಣಮಬ್ರವೀತ್ |
ಏಕತಃ ಶ್ಯಾಮಕರ್ಣಾನಾಂ ಪಾಂಡರಾಣಾಂ ತರಸ್ವಿನಾಮ್ |
ಸಹಸ್ರಂ ವಾಜಿನಾಮೇಕಂ ಶುಲ್ಕಾರ್ಥಂ ಮೇ ಪ್ರದೀಯತಾಮ್ ॥15॥
ವೈಶಂಪಾಯನ ಎಲೈ ರಾಜನೇ, ಅವನು ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ ಅನಂತರ ವರುಣನನ್ನು ಕುರಿತು ಒಂದುಕಡೆ ಶ್ಯಾಮಕರ್ಣವುಳ್ಳ ವೇಗಶಾಲಿಗಳಾದ ಪಾಂಡುವರ್ಣದ ಸಹಸ್ರ ಅಶ್ವಗಳನ್ನು ಶುಲ್ಕಾರ್ಥವಾಗಿ ನನಗೆ ಕೊಡು ಎಂದು ಕೇಳಿದನು.
ಅಕೃತವ್ರಣಃ
ತಸ್ಮೈ ಪ್ರಾದಾತ್ ಸಹಸ್ರಂ ವೈ ವಾಜಿನಾಂ ವರುಣಸ್ತದಾ |
ತದಶ್ವತೀರ್ಥಂ ವಿಖ್ಯಾತಮುತ್ಥಿತಾ ಯತ್ರ ತೇ ಹಯಾಃ ॥16॥
ಅಕೃತವರ್ಣ ಆಗ ವರುಣನು ಋಚೀಕರಿಗೆ ಒಂದು ಸಹಸ್ರ ಅಶ್ವಗಳನ್ನು ಕೊಟ್ಟನು. ಆ ಅಶ್ವಗಳು ನೀರಿನಿಂದ ಮೇಲೆದ್ದು ಬಂದ ಈ ಅಶ್ವತೀರ್ಥವು ಪ್ರಖ್ಯಾತವಾಗಿದೆ.
ಗಂಗಾಯಾಂ ಕಾನ್ಯಕುಬ್ಜೇ ವೈ ದದೌ ಸತ್ಯವತೀಂ ತದಾ |
ತತೋ ಗಾಧಿಃ ಸುತಾಂ ತಸ್ಮೈ ಕನ್ಯಾಂ ಚಾಪ್ಸರಸೋಪಮಾಮ್ ॥17॥
ನಂತರ ಗಾಧಿಯು ಕನ್ಯಾಕುಬ್ಜದಲ್ಲಿ ತನ್ನ ಮಗಳಾದ ಅಪ್ಸರೆಯರಿಗೆ ಸದೃಶಳಾದ ಸತ್ಯವತಿಯನ್ನು ಋಚೀಕರಿಗೆ ಕೊಟ್ಟನು.
ಲಬ್ಧಂ ಹಯಸಹಸ್ರಂ ತತ್ ತಾಂ ಚ ದೃಷ್ಟ್ವಾ ದಿವೌಕಸಃ |
ವಿಸ್ಮಯಂ ಪರಮಂ ಜಗ್ಮುಃ ತಮೇವ ದಿವಿ ಸಂಸ್ತುವನ್ ॥18॥
ಋಚೀಕರು ಸಹಸ್ರ ಅಶ್ವಗಳನ್ನೂ ಮತ್ತು ಭಾರ್ಯೆಯನ್ನೂ ಸಂಪಾದಿಸುದುದನ್ನು ನೋಡಿ ದೇವತೆಗಳು ಪರಮ ವಿಸ್ಮಿತರಾದರು. ದೇವಲೋಕದಲ್ಲಿಯೂ ಅವರನ್ನು ಸ್ತೋತ್ರಮಾಡಿದರು.
ಧರ್ಮೇಣ ಲಬ್ಧ್ವಾ ತಾಂ ಭಾರ್ಯಾಮ್ ಋಚೀಕೋ ದ್ವಿಜಸತ್ತಮಃ |
ಯಥಾಕಾಮಂ ಯಥಾಶ್ರದ್ಧಂ ತಯಾ ರೇಮೇ ಸುಮಧ್ಯಯಾ ॥19॥
ದ್ವಿಜಶ್ರೇಷ್ಠರಾದ ಋಚೀಕರು ಧರ್ಮದಿಂದ ಆ ಭಾರ್ಯೆಯನ್ನು ಪಡೆದು ತಮ್ಮ ಇಚ್ಛೆಗೆ ಮತ್ತು ಶ್ರದ್ಧೆಗೆ ಅನುಗುಣವಾಗಿ ಆ ಸುಂದರಿಯ ಜೊತೆಯಲ್ಲಿ ಸುಖವಾಗಿ ಕಾಲವನ್ನು ಕಳೆದರು.
ತಂ ವಿವಾಹೇ ಕೃತೇ ರಾಜನ್ ಸಭಾರ್ಯಮವಲೋಕಿತುಮ್ |
ಆಜಗಾಮ ಭೃಗುಶ್ರೇಷ್ಠಃ ಪುತ್ರಂ ದೃಷ್ಟ್ವಾ ನನಂದ ಚ ॥20॥
ಎಲೈ ರಾಜನೇ, ವಿವಾಹವು ಜರುಗಿದ ಮೇಲೆ ಭಾರ್ಯಾಸಹಿತರಾದ ತಮ್ಮ ಪುತ್ರನಾದ ಋಚೀಕನನ್ನು ನೋಡಲು ಶ್ರೇಷ್ಠರಾದ ಭೃಗುಋಷಿಗಳು ಬಂದು ನೋಡಿ ಸಂತೋಷಪಟ್ಟರು.
ಭಾರ್ಯಾಪತೀ ಸಮಾಸೀನಂ ಗುರುಂ ಸುರಗಣಾರ್ಚಿತಮ್ |
ಅರ್ಚಯಿತ್ವಾಭ್ಯುಪಾಸೀನೌ ಪ್ರಾಂಜಲೀ ತಸ್ಥತುಸ್ತದಾ ॥21॥
ದಂಪತಿಗಳು ದೇವತಾಸಮೂಹದಿಂದ ಪೂಜಿತರಾದ ಆಸೀನರಾದ ತಮ್ಮ ಹಿರಿಯರಾದ ಭೃಗುಗಳನ್ನು ಪೂಜಿಸಿ ಅವರ ಸಮೀಪದಲ್ಲಿ ಕೈಗಳನ್ನು ಮುಗಿದು ನಿಂತರು.
ತತಃ ಸ್ನುಷಾಂ ಸ ವಿಪ್ರರ್ಷಿಃ ಪ್ರಹೃಷ್ಟೋ ಭೃಗುರಬ್ರವೀತ್ |
ವರಂ ವೃಣೀಷ್ವ ಸುಭಗೇ ದಾತಾ ಹ್ಯಸ್ಮಿ ತವೇಪ್ಸಿತಮ್ ॥22॥
ಆಗ ಬ್ರಹ್ಮಋಷಿಗಳಾದ ಭೃಗುಋಷಿಗಳು ಸಂತೋಷದಿಂದ ಸೊಸೆಯನ್ನು ಕುರಿತು `ಸೌಭಾಗ್ಯವತಿಯೇ, ವರವನ್ನು ಕೇಳು; ನಿನಗೆ ಅಭೀಷ್ಟವಾದುದನ್ನು ನಾನು ಕೊಡುವೆನು' ಎಂದು ಹೇಳಿದರು.
ಸಾ ವೈ ಪ್ರಸಾದಯಾಮಾಸ ತಂ ಗುರುಂ ಪುತ್ರಕಾರಣಾತ್ |

ಆತ್ಮನಶ್ಚೈವ ಮಾತುಶ್ಚ ಪ್ರಸಾದಂ ಚ ಚಕಾರ ಸಃ ॥23॥
ಅವಳಾದರೂ ತನಗೂ ಮತ್ತು ತನ್ನ ತಾಯಿಗೂ ಮಕ್ಕಳು ಉಂಟಾಗುವ ಸಲುವಾಗಿ ತಮ್ಮ ಹಿರಿಯರಾದ ಆ ಭೃಗುಗಳನ್ನು ಪ್ರಾರ್ಥಿಸಿದಳು. ಭೃಗುಗಳು ಅವಳಿಗೆ ಅನುಗ್ರಹವನ್ನು ಮಾಡಿದರು.
ಋತೌ ತ್ವಂ ಚೈವ ಮಾತಾ ಚ ಸ್ನಾತೇ ಪುಂಸವನಾಯ ವೈ |
ಆಲಿಂಗೇತಾಂ ಪೃಥಗ್ ವೃಕ್ಷೌ ಸಾಽಶ್ವತ್ಥಂ ತ್ವಮುದುಂಬರಮ್ ॥24॥
ಋತುಕಾಲದಲ್ಲಿ ನೀನೂ ಮತ್ತು ನಿನ್ನ ತಾಯಿಯೂ ಸ್ನಾನವನ್ನು ಮಾಡಿ ಪುತ್ರನನ್ನು ಪಡೆಯುವುದಕ್ಕೋಸ್ಕರ ಬೇರೆ ಬೇರೆ ವೃಕ್ಷಗಳನ್ನು ಆಲಿಂಗಿಸಿ. ನಿನ್ನ ತಾಯಿಯು ಅಶ್ವತ್ಥ ವೃಕ್ಷವನ್ನೂ, ನೀನು ಮುದುಂಬರ ವೃಕ್ಷವನ್ನೂ ಆಲಿಂಗಿಸಬೇಕು ಎಂದು ಹೇಳಿದರು.
ಆಲಿಂಗನೇ ತು ರಾಜನ್ ವೈ ಚಕ್ರತುಸ್ತೇ ವಿಪರ್ಯಯಮ್ |
ಕದಾಚಿದ್ ಭೃಗುರಾಗಚ್ಛತ್ ತತ್ರ ವೇದ ವಿಪರ್ಯಯಮ್ ॥25॥
ಎಲೈ ರಾಜನೇ, ಆದರೆ ಅವರು ಆಲಿಂಗನ ಮಾಡುವ ವಿಷಯದಲ್ಲಿ ವ್ಯತ್ಯಾಸವನ್ನು ಮಾಡಿದರು. ಅನಂತರ ಒಮ್ಮೆ ಭೃಗುಋಷಿಗಳು ಬಂದು ಆ ವ್ಯತ್ಯಾಸವನ್ನು ತಿಳಿದರು.
ಅಥೋವಾಚ ಮಹಾತೇಜಾ ಭೃಗುಃ ಸತ್ಯವತೀಂ ಸ್ನುಷಾಮ್ |
ಬ್ರಾಹ್ಮಣಃ ಕ್ಷತ್ರವೃತ್ತಿರ್ವೈ ತವ ಪುತ್ರೋ ಭವಿಷ್ಯತಿ ॥26॥
ಕ್ಷತ್ರಿಯೋ ಬ್ರಾಹ್ಮಣಾಚಾರೋ ಮಾತುಸ್ತವ ಸುತೋ ಮಹಾನ್ |
ಭವಿಷ್ಯತಿ ಮಹಾವೀರ್ಯಃ ಸಾಧೂನಾಂ ಮಾರ್ಗಮಾಸ್ಥಿತಃ ॥27॥
ಆಗ ಮಹಾತೇಜಸ್ವಿಗಳಾದ ಭೃಗುಗಳು ಸೊಸೆಯಾದ ಸತ್ಯವತಿಯನ್ನು ಕುರಿತು `ಕ್ಷತ್ರಿಯ ಸ್ವಭಾವದ ಬ್ರಾಹ್ಮಣನು ನಿನಗೆ ಪುತ್ರನಾಗಿ ಜನಿಸುವನು. ಬ್ರಾಹ್ಮಣ ಸ್ವಭಾವದ ಮಹಾಕ್ಷತ್ರಿಯನು ನಿನ್ನ ತಾಯಿಗೆ ಪುತ್ರನಾಗಿ ಜನಿಸುವನು. ಅವನು ಮಹಾವೀರ್ಯ ಉಳ್ಳವನಾಗಿ ಸಜ್ಜನರ ಮಾರ್ಗವನ್ನು ಅನುಸರಿಸುವನು' ಎಂದು ಹೇಳಿದರು.
ಪ್ರಸಾದಯಾಮಾಸ ಚ ತಂ ಶ್ವಶುರಂ ಸಾ ಪುನಃ ಪುನಃ |
ನ ಮೇ ಪುತ್ರೋ ಭವೇದೀದೃಕ್ ಕಾಮಂ ಪೌತ್ರೋ ಭವೇದಿತಿ ॥28॥
ಸತ್ಯವತಿಯು ತಮ್ಮ ಮಾವನನ್ನು ಕುರಿತು ಮತ್ತೆಮತ್ತೆ ನನಗೆ ಅಂತಹ ಮಗನು ಬೇಡ. ಬೇಕಾದರೆ ಮೊಮ್ಮಗನು ಹಾಗಿರಲಿ ಎಂದು ಒತ್ತಾಯದಿಂದ ಬೇಡಿದಳು.
ಏವಮಸ್ತ್ವಿತಿ ಸಾ ತೇನ ಪಾಂಡವ ಪ್ರತಿನಂದಿತಾ |
ಕಾಲಂ ಪ್ರತೀಕ್ಷತೀ ಗರ್ಭಂ ಧಾರಯಾಮಾಸ ಯತ್ನತಃ ॥29॥
ಎಲೈ ಪಾಂಡವನೇ, ಹಾಗೆಯೇ ಆಗಲಿ ಎಂದು ಅವರಿಂದ ಆಶೀರ್ವಾದವನ್ನು ಪಡೆದು ಕಾಲವನ್ನು ನಿರೀಕ್ಷಿಸುತ್ತಾ ಅವಳು ಪ್ರಯತ್ನಪೂರ್ವಕವಾಗಿ ಗರ್ಭವನ್ನು ಧರಿಸಿದಳು.
ಜಮದಗ್ನಿಂತತಃ ಪುತ್ರಂ ಜಜ್ಞೇ ಸಾ ಕಾಲ ಆಗತೇ |
ತೇಜಸಾ ವರ್ಚಸಾ ಚೈವ ಯುಕ್ತಂ ಭಾರ್ಗವನಂದನಮ್ ॥30॥
ಯೋಗ್ಯವಾದ ಕಾಲದಲ್ಲಿ ಅವಳು ತೇಜಸ್ಸಿನಿಂದಲೂ, ಕಾಂತಿಯಿಂದಲೂ ಕೂಡಿದ ಭಾರ್ಗವನಂದನನಾದ ಜಮದಗ್ನಿಯನ್ನು ಪುತ್ರನನ್ನಾಗಿ ಪಡೆದಳು.
ಸ ವರ್ಧಮಾನಸ್ತೇಜಸ್ವೀ ವೇದಸ್ಯಾಧ್ಯಯನೇನ ಚ |
ಬಹೂನೃಷೀನ್ ಮಹಾತೇಜಾಃ ಪಾಂಡವೇಯಾತ್ಯವರ್ತತ ॥31॥
ಎಲೈ ಪಾಂಡುಪುತ್ರನೇ, ಅವನು ತೇಜಸ್ವಿಯಾಗಿ ಬೆಳೆಯುತ್ತಾ ಮಹಾತೇಜಸ್ಸನ್ನು ಹೊಂದಿ ತನ್ನ ವೇದಾಧ್ಯಯನದಿಂದ ಅನೇಕ ಋಷಿಗಳನ್ನು ಮೀರಿದನು.
ತಂ ತು ಕೃತ್ಸ್ನೋ ಧನುರ್ವೇದಃ ಪ್ರತ್ಯಭಾದ್ ಭರತರ್ಷಭ |
ಚತುರ್ವಿಧಾನಿ ಚಾಸ್ತ್ರಾಣಿ ಭಾಸ್ಕರೋಪಮವರ್ಚಸಮ್ ॥32॥
ಎಲೈ ಭರತರ್ಷಭನೇ, ಸೂರ್ಯನಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ ಅವನಿಗೆ ಸಮಗ್ರವಾದ ಧನುರ್ವೇದವೂ, ಚತುರ್ವಿಧವಾದ ಅಸ್ತ್ರಗಳೂ ಸ್ವತಃ ಪ್ರತಿಭಾತವಾದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾದಶಾಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
*****
ನೂರ ಹದಿಮೂರನೆಯ ಅಧ್ಯಾಯ
ಪರಶುರಾಮ ಕಥೆ. ಜಮದಗ್ನಿಯ ವಧೆ.
ಅಕೃತವ್ರಣಃ
ಸ ವೇದಾಧ್ಯಯನೇ ಯುಕ್ತೋ ಜಮದಗ್ನಿರ್ಮಹಾತಪಾಃ |
ತಪಸ್ತೇಪೇ ತತೋ ದೇವಾನ್ ನಿಯಮಾದ್ ವಶಮಾನಯತ್ ॥1॥
ಅಕೃತವ್ರಣ ಮಹಾತಪಸ್ವಿಗಳಾದ ಜಮದಗ್ನಿಗಳು ವೇದಾಧ್ಯಯನದಲ್ಲಿ ನಿರತರಾಗಿ ತಪಸ್ಸನ್ನು ಮಾಡಿ ತಮ್ಮ ವ್ರತನಿಯಮಗಳಿಂದ ದೇವತೆಗಳನ್ನು ವಶಪಡಿಸಿಕೊಂಡರು.

ಸ ಪ್ರಸೇನಜಿತಂ ರಾಜನ್ನಧಿಗಮ್ಯ ನರಾಧಿಪಮ್ |
ರೇಣುಕಾಂ ವರಯಾಮಾಸ ಸ ಚ ತಸ್ಮೈ ದದೌ ನೃಪಃ ॥2॥
ಎಲೈ ರಾಜನೇ, ಅವರು ಪ್ರಸೇನಜಿತ್‌ರಾಜನನ್ನು ಸಮೀಪಿಸಿ ಅವನ ಮಗಳಾದ ರೇಣುಕೆಯನ್ನು ವರಿಸಲು ಪ್ರಾರ್ಥಿಸಿದರು. ರಾಜನು ಅವರಿಗೆ ಅವಳನ್ನು ಕೊಟ್ಟನು.
ರೇಣುಕಾಂ ತ್ವಥ ಸಂಪ್ರಾಪ್ಯ ಭಾರ್ಯಾಂ ಭಾರ್ಗವನಂದನಃ |
ಆಶ್ರಮಸ್ಥಾಸ್ತಯಾ ಸಾರ್ಧಂ ತಪಸ್ತೇಪೇಽನುಕೂಲಯಾ ॥3॥
ಭಾರ್ಗವನಂದನರಾದ ಜಮದಗ್ನಿಗಳು ರೇಣುಕೆಯನ್ನು ಭಾರ್ಯೆಯಾಗಿ ಹೊಂದಿ ಅನಂತರ ಆಶ್ರಮಕ್ಕೆ ಬಂದು ಅನುಕೂಲಳಾಗಿದ್ದ ಅವಳ ಜೊತೆಯಲ್ಲಿ ತಪಸ್ಸನ್ನು ಮಾಡಿದರು.
ತಸ್ಯಾಃ ಕುಮಾರಾಶ್ಚತ್ವಾರೋ ಜಜ್ಞಿರೇ ರಾಮಪಂಚಮಾಃ |
ಸರ್ವೇಷಾಮಜಘನ್ಯಸ್ತು ರಾಮ ಆಸೀಜ್ಜಘನ್ಯಜಃ ॥4॥
ಅವಳಿಗೆ ನಾಲ್ಕು ಪುತ್ರರು ಜನಿಸಿದರು. ರಾಮನು ಐದನೆಯವನು. ಅವನು ಎಲ್ಲರಿಗಿಂತಲೂ ಕಿರಿಯನಾದರೂ (ಗುಣಗಳಿಂದ) ಎಲ್ಲರಿಗಿಂತ ಶ್ರೇಷ್ಠನಾದವನು.
ಫಲಾಹಾರೇಷು ಸರ್ವೇಷು ಗತೇಷ್ವಥ ಸುತೇಷು ವೈ |
ರೇಣುಕಾ ಸ್ನಾತುಮಗಮತ್ ಕದಾಚಿನ್ನಿಯತವ್ರತಾ ॥5॥
ಒಮ್ಮೆ ಫಲಗಳನ್ನು ತರಲು ತನ್ನ ಎಲ್ಲಾ ಮಕ್ಕಳೂ ಹೊರಗೆ ಹೋಗಿರುವಾಗ ನಿಯತವ್ರತಳಾದ ರೇಣುಕೆಯು ಸ್ನಾನಕ್ಕಾಗಿ ಹೊರಟಳು.
ಸ ತು ಚಿತ್ರರಥಂ ನಾಮ ಮಾರ್ತಿಕಾವತಕಂ ನೃಪಮ್ |
ದದರ್ಶ ರೇಣುಕಾ ರಾಜನ್ನಾಗಚ್ಛಂತೀ ಯದೃಚ್ಛಯಾ ॥6॥
ಎಲೈ ರಾಜನೇ, ಅವಳು ಹೋಗುತ್ತಾ ಅಕಸ್ಮಾತ್ತಾಗಿ ಮಾರ್ತಿಕಾವತರಾಜನಾದ ಚಿತ್ರರಥನನ್ನು ನೋಡಿದಳು. (ಮೂರ್ತಿಕಾವತವು ಮಗಧದ ರಾಜಧಾನಿ).
ಕ್ರೀಡಂತಂ ಸಲಿಲೇ ದೃಷ್ಟ್ವಾ ಸಭಾರ್ಯಂ ಹೇಮಮಾಲಿನಮ್ |
ಋದ್ಧಿಮತ್ತಾಂ ತತಸ್ತಸ್ಯ ಸ್ಪೃಹಯಾಮಾಸ ರೇಣುಕಾ ॥7॥
ರೇಣುಕೆಯು ಹೇಮಮಾಲೆಗಳನ್ನು ಧರಿಸಿ ತನ್ನ ಪತ್ನಿಯರೊಡನೆ ಜಲಕ್ರೀಡೆಯಾಡುತ್ತಿದ್ದ ಅವನ ಸಮೃದ್ಧಿಯನ್ನು ನೋಡಿ ಮನಸ್ಸಿನಲ್ಲಿ ಒಮ್ಮೆ ಬಯಸಿದಳು.
ವ್ಯಭಿಚಾರಾತ್ ತು ತಸ್ಮಾತ್ ಸಾ ಕ್ಲಿನ್ನಾಂಭಸಿ ವಿಚೇತನಾ |
ಪ್ರವಿವೇಶಾಶ್ರಮಂ ತ್ರಸ್ತಾ ತಾಂ ವೈ ಭರ್ತಾಽನ್ವಬುಧ್ಯತ ॥8॥
ಅವಳು ಆ ವ್ಯಭಿಚಾರದಿಂದ ವಿಚೇತನಳಾಗಿ ಜಲದಲ್ಲಿ ಸ್ನಾನವನ್ನು ಮಾಡಿ ಹೆದರಿ ಆಶ್ರಮಕ್ಕೆ ಬಂದಳು. ಪತಿಗಳಾದ ಜಮದಗ್ನಿಗಳಿಗೆ ಅವಳ ಮನೋವೃತ್ತಿಯು ತಿಳಿಯಿತು.
ಸ ತಾಂ ದೃಷ್ಟ್ವಾ ಚ್ಯುತಾಂ ಧೈರ್ಯಾದ್ ಬ್ರಾಹ್ಮ್ಯಾ ಲಕ್ಷ್ಮ್ಯಾ ಚ ವರ್ಜಿತಾಮ್
ಧಿಕ್‌ಶಬ್ದೇನ ಮಹಾತೇಜಾ ಗರ್ಹಯಾಮಾಸ ವೀರ್ಯವಾನ್ ॥9॥
ಧೈರ್ಯಚ್ಯುತಳಾಗಿ ಬ್ರಾಹ್ಮೀಕಾಂತಿಯಿಂದ ರಹಿತಳಾದ ಅವಳನ್ನು ನೋಡಿ ಮಹಾತೇಜಸ್ವಿಗಳೂ, ಸಾಮರ್ಥ್ಯವಂತರೂ ಆದ ಜಮದಗ್ನಿಗಳು ಧಿಕ್‌ಶಬ್ದದಿಂದ ಅವಳನ್ನು ನಿಂದಿಸಿದರು.
ತತೋ ಜ್ಯೇಷ್ಠೋ ಜಾಮದಗ್ನ್ಯೋ ರುಮಣ್ವಾನ್ನಾಮ ನಾಮತಃ |
ಆಜಗಾಮ ಸುಷೇಣಶ್ಚ ವಸುರ್ವಿಶ್ವಾವಸುಸ್ತದಾ ॥10॥
ಅನಂತರ ಜಮದಗ್ನಿಗಳ ಜ್ಯೇಷ್ಠಪುತ್ರರಾದ ರುಮಣ್ವಾನ್ ಎಂಬುವರು, ಅನಂತರ ಉಳಿದ ಮಕ್ಕಳಾದ ಸುಷೇಣ, ವಸು, ವಿಶ್ವಾವಸುಗಳು ಅಲ್ಲಿಗೆ ಬಂದರು.
ತಾನಾನುಪೂರ್ವ್ಯಾದ್ ಭಗವಾನ್ ವಧೇ ಮಾತುರಚೋದಯತ್ |
ನ ಚ ತೇ ಜಾತಸಮ್ಮೋಹಾಃ ಕಿಂಚಿದೂಚುರ್ವಿಚೇತಸಃ ॥11॥
ಪೂಜ್ಯರಾದ ಜಮದಗ್ನಿಗಳು ಕ್ರಮವಾಗಿ ಅವರನ್ನು ತಾಯಿಯನ್ನು ಸಂಹರಿಸುವಂತೆ ಪ್ರೇರಿಸಿದರು. ಆ ಮಕ್ಕಳಾದರೂ ದಿಗ್ಭ್ರಾಂತರಾಗಿ ವಿಚೇತನರಾಗಿ ಏನನ್ನೂ ಮಾತನಾಡಲಿಲ್ಲ.
ತತಃ ಶಶಾಪ ತಾನ್ ಕ್ರೋಧಾತ್ ತೇ ಶಪ್ತಾಶ್ಚೇತನಾಂ ಜಹುಃ |
ಮೃಗಪಕ್ಷಿಸಧರ್ಮಾಣಃ ಕ್ಷಿಪ್ರಮಾಸನ್ ಜಡೋಪಮಾಃ ॥12॥
ಆಗ ಜಮದಗ್ನಿಗಳು ಕ್ರೋಧದಿಂದ ಅವರಿಗೆ ಶಾಪವನ್ನು ಕೊಟ್ಟರು. ತಂದೆಯ ಶಾಪಕ್ಕೆ ಒಳಗಾದ ಅವರು ತಮ್ಮ ಬುದ್ಧಿಯನ್ನು ಕಳೆದುಕೊಂಡು ಮೃಗಪಕ್ಷಿಗಳ ಸಮಾನ ಧರ್ಮವುಳ್ಳವರಾಗಿ ಶೀಘ್ರವಾಗಿ ಜಡರಂತೆ ಆದರು.
ತತೋ ರಾಮೋಽಭ್ಯಗಾತ್ ಪಶ್ಚಾದಾಶ್ರಮಂ ಪರವೀರಹಾ |
ತಮುವಾಚ ಮಹಾಮನ್ಯುರ್ಜಮದಗ್ನಿರ್ಮಹಾತಪಾಃ ॥13॥
ಜಹೀಮಾಂ ಮಾತರಂ ಪಾಪಾಂ ಮಾ ಚ ಪುತ್ರ ವ್ಯಥಾಂ ಕೃಥಾಃ |
ತತ ಆದಾಯ ಪರಶುಂ ರಾಮೋ ಮಾತುಃ ಶಿರೋಽಹರತ್ ॥14॥
ಅನಂತರ ಪರವೀರಘಾತಕನಾದ ರಾಮನು ಆಶ್ರಮಕ್ಕೆ ಹಿಂದಿರುಗಿದನು. ಮಹಾಕೋಪವುಳ್ಳ, ಮಹಾತಪಸ್ವಿಗಳಾದ ಜಮದಗ್ನಿಗಳು ಅವನನ್ನು ಕುರಿತು `ಪುತ್ರನೇ, ಪಾಪವನ್ನು ಎಸಗಿದ ಈ ನಿನ್ನ ತಾಯಿಯನ್ನು ಕೊಲ್ಲು. ವ್ಯಥೆಯನ್ನು ಮಾಡಬೇಡ' ಎಂದು ಹೇಳಿದರು. ಆಗ ರಾಮನು ಪರಶುವನ್ನು ತೆಗೆದುಕೊಂಡು ತಾಯಿಯ ಶಿರಸ್ಸನ್ನು ಛೇದಿಸಿದನು.

ತತಸ್ತಸ್ಯ ಮಹಾರಾಜ ಜಮದಗ್ನೇರ್ಮಹಾತ್ಮನಃ |
ಕೋಪೋಽಭ್ಯಗಚ್ಛತ್ ಸಹಸಾ ಪ್ರಸನ್ನಶ್ಚಾಬ್ರವೀತ್ ಸುತಮ್ ||15||
ಮಮೇದಂ ವಚನಾದ್ ರಾಮ ಕೃತಂ ತೇ ಕರ್ಮ ದುಷ್ಕರಮ್ |
ವೃಣೀಷ್ವ ಕಾಮಾನ್ ಧರ್ಮಜ್ಞ ಯಾವತೋ ವಾಂಛಸೇ ಹೃದಿ ||16||
ಎಲೈ ಮಹಾರಾಜನೇ, ಆಗ ಮಹಾತ್ಮರಾದ ಜಮದಗ್ನಿಗಳ ಕೋಪವು ತಕ್ಷಣದಲ್ಲಿಯೇ ಶಾಂತವಾಗಿ ಅವರು ಪ್ರಸನ್ನಚಿತ್ತರಾಗಿ ಪುತ್ರನಾದ ಪರಶುರಾಮನನ್ನು ಕುರಿತು `ರಾಮನೇ, ನನ್ನ ವಚನದಂತೆ ನೀನು ದುಷ್ಕರವಾದ ಕರ್ಮವನ್ನು ಮಾಡಿದ್ದೀಯೆ. ಧರ್ಮಜ್ಞನೇ, ನಿನಗೆ ಎಷ್ಟು ವರಗಳು ಅಪೇಕ್ಷಿತವಾಗಿದೆಯೋ ಅಷ್ಟು ವರಗಳನ್ನು ಕೇಳು ಎಂದು ಹೇಳಿದರು.
ಸ ವವ್ರೇ ಮಾತುರುತ್ಥಾನಮಸ್ಮೃತಿಂ ಚ ವಧಸ್ಯ ವೈ |
ಪಾಪೇನ ತೇನ ಚಾಸ್ಪರ್ಶಂ ಭ್ರಾತೄಣಾಂ ಪ್ರಕೃತಿಂ ಪುನಃ ||17||
ಅಪ್ರತಿದ್ವಂದ್ವತಾಂ ಯುದ್ಧೇ ದೀರ್ಘಮಾಯುಶ್ಚ ಭಾರತ |
ದದೌ ಚ ಸರ್ವಾನ್ ಕಾಮಾಂಸ್ತಾನ್ ಜಮದಗ್ನಿರ್ಮಹಾತಪಾಃ ||18||
ಪರಶುರಾಮನಾದರೂ ತಾಯಿಯ ಉತ್ಥಾನವನ್ನೂ, ತಾನು ಮಾಡಿದ ವಧೆಯ ವಿಸ್ಮರಣೆಯನ್ನೂ ಆ ಪಾಪದ ಆಲೇಪವನ್ನೂ, ತನ್ನ ಅಣ್ಣಂದಿರಿಗೆ ಮೊದಲಿನ ಸ್ವಭಾವವನ್ನೂ, ತನಗೆ ಯುದ್ಧದಲ್ಲಿ ಅಪ್ರತಿದ್ವಂದ್ವತ್ವವನ್ನೂ ದೀರ್ಘವಾದ ಆಯುಷ್ಯವನ್ನೂ ವರವಾಗಿ ಕೇಳಿದನು. ಎಲೈ ಭಾರತನೇ, ಮಹಾತಪಸ್ವಿಗಳಾದ ಜಮದಗ್ನಿಗಳು ಆ ಎಲ್ಲಾ ವರಗಳನ್ನೂ ಅವನಿಗೆ ಕೊಟ್ಟರು.
ಕದಾಚಿತ್ ತು ತಥೈವಾಸ್ಯ ವಿನಿಷ್ಕ್ರಾಮನ್ ಸುತಾಃ ಪ್ರಭೋ |
ಅಥಾನೂಪಪತಿರ್ವೀರಃ ಕಾರ್ತವೀರ್ಯೋಽಭ್ಯವರ್ತತ ||19||
ಎಲೈ ಪ್ರಭುವೇ, ಒಮ್ಮೆ ಹಾಗೆಯೇ ಆ ಜಮದಗ್ನಿಯ ಮಕ್ಕಳೆಲ್ಲರೂ ವನಕ್ಕೆ ಹೋಗಿದ್ದರು. ಆಗ ಅನೂಪರಾಜನಾದ ವೀರನಾದ ಕಾರ್ತವೀರ್ಯನು ಆಶ್ರಮಕ್ಕೆ ಬಂದನು.
ತಮಾಶ್ರಮಮನುಪ್ರಾಪ್ತಮ್ ಋಷೇರ್ಭಾರ್ಯಾ ಸಮರ್ಚಯತ್ |
ಸ ಯುದ್ಧಮದಸಮ್ಮತ್ತೋ ನಾಭ್ಯನಂದನ್ನಥಾಽರ್ಚನಮ್ ||20||
ಪ್ರಮಥ್ಯ ಚಾಶ್ರಮಾತ್ ತಸ್ಮಾದ್ಧೋಮಧೇನೋಸ್ತದಾ ಬಲಾತ್ |
ಜಹಾರ ವತ್ಸಂ ಕ್ರೋಶಂತ್ಯಾ ಬಭಂಜ ಚ ಮಹಾದ್ರುಮಾನ್ ||21||
ಆಶ್ರಮಕ್ಕೆ ಪ್ರಾಪ್ತನಾದ ಅವನನ್ನು ಜಮದಗ್ನಿಯ ಪತ್ನಿಯು ಸತ್ಕರಿಸಿದಳು. ಆದರೆ ಯುದ್ಧಮದದಿಂದ ಮತ್ತನಾಗಿದ್ದ ಅವನು ಆ ಪೂಜೆಯನ್ನು ಅಭಿನಂದಿಸದೇ ತನ್ನ ಬಲದಿಂದ ಆ ಆಶ್ರಮದ ಕಾಮಧೇನುವಿನ ಕರುವನ್ನು ಅದರ ತಾಯಿಯು ಕಿರುಚುತ್ತಿದ್ದರೂ ಎಳೆದುಕೊಂಡು ಹೋಗಿ ಆ ಆಶ್ರಮದ ಮಹಾವೃಕ್ಷಗಳನ್ನು ಕಡಿದನು.
ಆಗತಾಯ ಚ ರಾಮಾಯ ಪಿತಾಽಽಚಷ್ಟ ತದಾ ಸ್ವಯಮ್ |
ಗಾಂ ಚ ರೋರೂಯತೀಂ ದೃಷ್ಟ್ವಾ ಕೋಪೋ ರಾಮಂ ಸಮಾವಿಶತ್ |
ಸ ಮನ್ಯುವಶಮಾಪನ್ನಃ ಕಾರ್ತವೀರ್ಯಮುಪಾದ್ರವತ್ ||22||
ಹಿಂದಿರುಗಿದ ರಾಮನಿಗೆ ತಂದೆಯು ಸ್ವತಃ ಎಲ್ಲಾ ವಿಷಯವನ್ನು ಹೇಳಿದರು. ಪುನಃಪುನಃ ರೋದನವನ್ನು ಮಾಡುತ್ತಿದ್ದ ಹೋಮಧೇನುವನ್ನು ನೋಡಿ ರಾಮನಿಗೆ ಕೋಪವು ಆವರಿಸಿತು. ಮನ್ಯುವಶನಾದ ರಾಮನು ಕಾರ್ತವೀರ್ಯನ ಮೇಲೆ ಎರಗಲು ಹೊರಟನು.
ತಸ್ಯಾಥ ಯುಧಿ ವಿಕ್ರಮ್ಯ ಭಾರ್ಗವಃ ಪರವೀರಹಾ |
ಚಿಚ್ಛೇದ ನಿಶಿತೈರ್ಭಲ್ಲೈರ್ಬಾಹೂನ್ ಪರಿಘಸನ್ನಿಭಾನ್ |
ಸಹಸ್ರಸಮ್ಮಿತಾನ್ ರಾಜನ್ ಪ್ರಗೃಹ್ಯ ರುಚಿರಂ ಧನುಃ ||23||
ಎಲೈ ರಾಜನೇ, ಪರವೀರಘಾತಕನಾದ ಪರಶುರಾಮನು ಸುಂದರವಾದ ಧನುಸ್ಸನ್ನು ತೆಗೆದುಕೊಂಡು ಯುದ್ಧದಲ್ಲಿ ಕಾರ್ತವೀರ್ಯನನ್ನು ಮೆಟ್ಟಿ ತನ್ನ ಹರಿತವಾದ ಭಲ್ಲಗಳಿಂದ ಪರಿಘದಂತಿದ್ದ ಅವನ ಸಹಸ್ರಬಾಹುಗಳನ್ನು ಛೇದಿಸಿದನು.
ಅರ್ಜುನಸ್ಯಾಥ ದಾಯಾದಾ ರಾಮೇಣ ಕೃತಮನ್ಯವಃ |
ಆಶ್ರಮಸ್ಥಂ ವಿನಾ ರಾಮಂ ಜಮದಗ್ನಿಮುಪಾದ್ರವನ್ ||24||
ತೇ ತಂ ಜಘ್ನುರ್ಮಹಾವೀರ್ಯಮಯುಧ್ಯಂತಂ ತಪಸ್ವಿನಮ್ |
ಅಸಕೃದ್ ರಾಮರಾಮೇತಿ ವಿಕ್ರೋಶಂತಮನಾಥವತ್ ||25||
ಕಾರ್ತವೀರ್ಯಾರ್ಜುನನ ಮಕ್ಕಳು ಪರಶುರಾಮನ ಜೊತೆಯಲ್ಲಿ ವೈರವನ್ನು ಸಂಪಾದಿಸಿ ರಾಮನು ಇಲ್ಲದ ಸಮಯದಲ್ಲಿ ಆಶ್ರಮದಲ್ಲಿದ್ದ ಜಮದಗ್ನಿಗಳ ಸಮೀಪಕ್ಕೆ ಬಂದರು. ಅವರು ಯುದ್ಧಮಾಡದೇ ಶಾಂತವಾಗಿ ತಪಸ್ಸನ್ನು ಮಾಡುತ್ತಿದ್ದ ಮಹಾ ಸಾಮರ್ಥ್ಯೋಪೇತರಾದ ಜಮದಗ್ನಿಗಳನ್ನು ಅವರು ಅನಾಥರಂತೆ `ರಾಮ, ರಾಮ' ಎಂದು ಅನೇಕ ಬಾರಿ ಕಿರುಚುತ್ತಿದ್ದರೂ ಅವರನ್ನು ಸಂಹರಿಸಿದರು.
ಕಾರ್ತವೀರ್ಯಸ್ಯ ಪುತ್ರಾಸ್ತು ಜಮದಗ್ನಿಂ ಯುಧಿಷ್ಠಿರ |
ಘಾತಯಿತ್ವಾ ಶರೈರ್ಜಗ್ಮುರ್ಯಥಾಗತಮರಿಂದಮಾಃ ||26||
ಎಲೈ ಯುಧಿಷ್ಠಿರನೇ, ಕಾರ್ತವೀರ್ಯನ ಅರಿಂದಮರಾದ ಪುತ್ರರಾದರೂ ಜಮದಗ್ನಿಗಳನ್ನು ತಮ್ಮ ಬಾಣಗಳಿಂದ ಸಂಹರಿಸಿ ಬಂದ ದಾರಿಯಲ್ಲಿ ಹಿಂದಿರುಗಿ ಹೊರಟುಹೋದರು.
ಅಪಕ್ರಾಂತೇಷು ಚೈತೇಷು ಜಮದಗ್ನೌ ತಥಾಗತೇ |
ಸಮಿತ್ಪಾಣಿರುಪಾಗಚ್ಛದಾಶ್ರಮಂ ಭೃಗುನಂದನಃ ||27||

ಅವರೆಲ್ಲರೂ ಹೊರಟುಹೋಗುತ್ತಿರಲು ಜಮದಗ್ನಿಗಳು ಮರಣವನ್ನು ಹೊಂದಿರಲು ಕೈಯಲ್ಲಿ ಸಮಿತ್ತನ್ನು ಹಿಡಿದು ಭೃಗುನಂದನನಾದ ಪರಶುರಾಮನು ಆಶ್ರಮಕ್ಕೆ ಬಂದನು.
ಸ ದೃಷ್ಟ್ವಾ ಪಿತರಂ ವೀರಃ ತದಾ ಮೃತ್ಯುವಶಂ ಗತಮ್ |
ಅನಾಗಸಂ ಮಹಾತ್ಮಾನಂ ವಿಲಲಾಪ ಸುದುಃಖಿತಃ ||28||
ವೀರನಾದ ಅವನು ನಿರಪರಾಧಿಯಾದ, ಮಹಾತ್ಮನಾದ ತನ್ನ ತಂದೆಯು ಮೃತ್ಯುವಶನಾಗಿರುವುದನ್ನು ನೋಡಿ ಬಹಳ ದುಃಖದಿಂದ ಕೂಡಿದವನಾಗಿ ವಿಲಾಪವನ್ನು ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಯೋದಶಾಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಏಕೋನಸಪ್ತತಿಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹದಿಮೂರನೆಯ ಅಧ್ಯಾಯ ಮುಗಿಯಿತು.
*****
ನೂರ ಹದಿನಾಲ್ಕನೆಯ ಅಧ್ಯಾಯ
ರಾಮನ ವಿಲಾಪ. ಕ್ಷತ್ರಿಯ ವಧೆ. ಋಚೀಕರ ವಚನದಂತೆ ಕ್ಷತ್ರಿಯ ವಧೆಯಿಂದ ನಿವೃತ್ತಿ. ಯಾಗದಲ್ಲಿ ಸರ್ವಸ್ವ ದಾನ ಮತ್ತು ತಪಶ್ಚರ್ಯಾ.
ಪರಶುರಾಮಃ
ಮಮಾಪರಾಧಾತ್ ತೈಃ ಕ್ಷುದ್ರೈರ್ಹತಸ್ತ್ವಂ ತಾತ ಬಾಲಿಶೈಃ |
ಕಾರ್ತವೀರ್ಯಸ್ಯ ದಾಯಾದೈರ್ವನೇ ಮೃಗ ಇವೇಷುಭಿಃ ||1||
ಪರಶುರಾಮ ತಂದೆಯೇ, ನನ್ನ ಅಪರಾಧದಿಂದ ಬಾಲಿಶರಾದ, ಕ್ಷುದ್ರರಾದ ಕಾರ್ತವೀರ್ಯನ ಪುತ್ರರಿಂದ ನೀನು ಕಾಡಿನಲ್ಲಿ ಬಾಣಗಳಿಂದ ಮೃಗವು ಹತವಾಗುವಂತೆ ಹತನಾಗಿದ್ದೀಯೆ.
ಧರ್ಮಜ್ಞಸ್ಯ ಕಥಂ ತಾತ ವರ್ತಮಾನಸ್ಯ ಸತ್ಪಥೇ |
ಮೃತ್ಯುರೇವಂವಿಧೋ ಯುಕ್ತಃ ಸರ್ವಭೂತೇಷ್ವನಾಗಸಃ ||2||
ಎಲೈ ತಂದೆಯೇ, ಧರ್ಮಜ್ಞನಾಗಿ ಸನ್ಮಾರ್ಗದಲ್ಲಿ ನಡೆದು ಯಾವ ಪ್ರಾಣಿಗೂ ಅಪರಾಧಮಾಡದಿದ್ದ ನಿನಗೆ ಈ ರೀತಿಯ ಮರಣವು ಹೇಗೆ ಉಚಿತವಾಗುತ್ತದೆ?
ಕಿಂ ನು ತೈರ್ನ ಕೃತಂ ಪಾಪಂ ಯೈರ್ಭವಾಂಸ್ತಪಸಿ ಸ್ಥಿತಃ |
ಅಯುಧ್ಯಮಾನೋ ವೃದ್ಧಃ ಸನ್ ಹತಃ ಶರಶತೈಃ ಶಿತೈಃ ||3||
ಯುದ್ಧವನ್ನು ಮಾಡದೇ ತಪಸ್ಸಿನಲ್ಲಿ ನಿರತನಾಗಿದ್ದ ವೃದ್ಧನಾದ ನಿನ್ನನ್ನು ನೂರಾರು ಹರಿತವಾದ ಬಾಣಗಳಿಂದ ಕೊಂದ ಅವರು ಯಾವ ಪಾಪವನ್ನು ಮಾಡಲಿಲ್ಲ?
ಅಕೃತವ್ರಣಃ
ಲಾಲಪ್ಯೈವಂ ಸಕರುಣಂ ಬಹು ನಾನಾವಿಧಂ ನೃಪ |
ಪ್ರೇತಕಾರ್ಯಾಣಿ ಸರ್ವಾಣಿ ಪಿತುಶ್ಚಕ್ರೇ ಮಹಾತಪಾಃ ||4||
ಅಕೃತವ್ರಣ ಎಲೈ ರಾಜನೇ, ಮಹಾತಪಸ್ವಿಯಾದ ರಾಮನು ಹೀಗೆ ಕರುಣಾಜನಕವಾಗಿ ನಾನಾ ವಿಧವಾಗಿ ಬಹಳವಾಗಿ ವಿಲಾಪವನ್ನು ಮಾಡಿ ತನ್ನ ತಂದೆಗೆ ಎಲ್ಲಾ ಪ್ರೇತಕಾರ್ಯಗಳನ್ನೂ ಮಾಡಿದನು.
ದದಾಹ ಪಿತರಂ ಚಾಗ್ನೌ ರಾಮಃ ಪರಪುರಂಜಯಃ |
ಪ್ರತಿಜಜ್ಞೇ ವಧಂ ಚಾಪಿ ಸರ್ವಕ್ಷತ್ರಸ್ಯ ಭಾರತ ||5||
ಎಲೈ ಭಾರತನೇ, ಪರಪುರಂಜಯನಾದ ರಾಮನು ತನ್ನ ತಂದೆಯ ಶರೀರವನ್ನು ದಹಿಸಿ ಸರ್ವಕ್ಷತ್ರಿಯರ ವಧೆಯನ್ನು ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದನು.
ಸಂಕ್ರುದ್ಧೋಽತಿಬಲಃ ಶೂರಃ ಶಸ್ತ್ರಮಾದಾಯ ವೀರ್ಯವಾನ್ |
ಜಘ್ನಿವಾನ್ ಕಾರ್ತವೀರ್ಯಸ್ಯ ಸುತಾನೇಕೋ ಮಹಾಬಲಃ ||6||
ಅತಿಬಲಿಷ್ಠನೂ, ಪರಾಕ್ರಮಶಾಲಿಯೂ, ಶೂರನೂ, ಮಹಾಬಲಿಷ್ಠನೂ, ಸಂಕ್ರುದ್ಧನೂ ಆದ ಅವನು ಶಸ್ತ್ರವನ್ನು ತೆಗೆದುಕೊಂಡು ಕಾರ್ತವೀರ್ಯನ ಮಕ್ಕಳನ್ನೆಲ್ಲಾ ಒಬ್ಬನೇ ಕೊಂದನು.
ತೇಷಾಂ ಯೇ ಚಾನುಗಾಃ ಕೇಚಿತ್ ಕ್ಷತ್ರಿಯಾಃ ಕ್ಷತ್ರಿಯರ್ಷಭ |
ತಾಂಶ್ಚ ಸರ್ವಾನವಾಮೃದ್ನಾದ್ ರಾಮಃ ಶಸ್ತ್ರಭೃತಾಂ ವರಃ ||7||
ಎಲೈ ಕ್ಷತ್ರಿಯರ್ಷಭನೇ, ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನಾದ ರಾಮನು ಕಾರ್ತವೀರ್ಯನ ಪುತ್ರರ ಅನುಚರರಾದ ಕ್ಷತ್ರಿಯರನ್ನೆಲ್ಲಾ ಒರೆಸಿಹಾಕಿದನು.
ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ |
ಸಮಂತಪಂಚಕೇ ಪಂಚ ಚಕಾರ ರುಧಿರಹ್ರದಾನ್ ||8||
ಪ್ರಭುವಾದ ಅವನು ಇಪ್ಪತ್ತೊಂದುಬಾರಿ ಭೂಮಿಯಲ್ಲಿ ಕ್ಷತ್ರಿಯರನ್ನು ಸಂಹರಿಸಿ ಸಮಂತಪಂಚಕದಲ್ಲಿ ಐದು ರಕ್ತಸರೋವರಗಳನ್ನು ಮಾಡಿದನು.
ಸ ತೇಷು ತರ್ಪಯಾಮಾಸ ಪಿತೄನ್ ಭೃಗುಕುಲೋದ್ವಹಃ |
ಸಾಕ್ಷಾದ್ ದದರ್ಶ ಚರ್ಚೀಕಂ ಸ ಚ ರಾಮಂ ನ್ಯವಾರಯತ್ ||9||

ಭೃಗುವಂಶೋದ್ಭವನಾದ ಅವನು ಅದರಲ್ಲಿ ತನ್ನ ಪಿತೃಗಳಿಗೆ ತರ್ಪಣವನ್ನು ನೀಡಿದನು. ಅಲ್ಲಿಗೆ ಬಂದ ಋಚೀಕರನ್ನು ನೋಡಿ ಅವರ ವಚನದಂತೆ ರಾಮನು ಕ್ಷತ್ರಿಯ ವಧೆಯಿಂದ ನಿವೃತ್ತನಾದನು.
ತತೋ ಯಜ್ಞೇನ ಮಹತಾ ಜಾಮದಗ್ನ್ಯಃ ಪ್ರತಾಪವಾನ್ |
ತರ್ಪಯಾಮಾಸ ದೇವೇಂದ್ರಮ್ ಋತ್ವಿಗ್ಭ್ಯಶ್ಚ ಮಹೀಂ ದದೌ ॥10॥
ಅನಂತರ ಪ್ರತಾಪಶಾಲಿಯಾದ ಪರಶುರಾಮನು ದೊಡ್ಡ ಯಜ್ಞವನ್ನು ಮಾಡಿ ದೇವೇಂದ್ರನನ್ನು ಸಂತೋಷಪಡಿಸಿದನು. ಋತ್ವಿಜರಿಗೆ ಭೂಮಿಯನ್ನು ದಾನವಾಗಿ ಕೊಟ್ಟನು.
ವೇದೀಂ ಚ ಪ್ರದದಾದ್ ಹೈಮೀಂ ಕಾಶ್ಯಪಾಯ ಮಹಾತ್ಮನೇ |
ದಶವ್ಯಾಮಾಯತಾಂ ಕೃತ್ವಾ ನವೋತ್ಸೇಧಾಂ ವಿಶಾಂ ಪತೇ ॥11॥
ಎಲೈ ರಾಜನ್, ಅವನು ಹತ್ತುಮಾರು ಉದ್ದ ಮತ್ತು ಒಂಭತ್ತು ಮಾರು ಎತ್ತರ ಇದ್ದ ಸುವಣರ್ಮಯವಾದ ಯಜ್ಞವೇದಿಕೆಯನ್ನು ಮಹಾತ್ಮರಾದ ಕಾಶ್ಯಪರಿಗೆ ಕೊಟ್ಟನು.
ತಾಂ ಕಾಶ್ಯಪಸ್ಯಾನುಮತೇ ಬ್ರಾಹ್ಮಣಾಃ ಖಂಡಶಸ್ತದಾ |
ವ್ಯಭಜಂಸ್ತೇನ ತೇ ರಾಜನ್ ಪ್ರಖ್ಯಾತಾಃ ಖಂಡವಾಹನಾಃ ॥12॥
ಕಾಶ್ಯಪರ ಅನುಮತಿಯಂತೆ ಬ್ರಾಹ್ಮಣರು ಆ ವೇದಿಕೆಯನ್ನು ತುಂಡು ತುಂಡು ಮಾಡಿ ಹಂಚಿಕೊಂಡರು. ಎಲೈ ರಾಜನೇ, ಆ ಬ್ರಾಹ್ಮಣರು ಖಂಡವಾಹನರೆಂದು ಪ್ರಸಿದ್ಧರಾದರು.
ಸ ಪ್ರದಾಯ ಮಹೀಂ ತಸ್ಮೈ ಕಾಶ್ಯಪಾಯ ಮಹಾತಪಾಃ |
ತಪಸ್ಸು ಮನ ಆಸ್ಥಾಯ ಮಹಾಬಲಪರಾಕ್ರಮಃ |
ಅಸ್ಮಿನ್ ವಸತಿ ಶೈಲೇಂದ್ರೇ ಮಹೇಂದ್ರೇಽಮಿತವಿಕ್ರಮಃ ॥13॥
ಮಹಾತಪಸ್ವಿಯಾದ ಪರಶುರಾಮನು, ಕಾಶ್ಯಪರಿಗೆ ಭೂಮಿಯನ್ನು ದಾನಮಾಡಿ ತಪಸ್ಸಿನಲ್ಲಿಯೇ ಮನಸ್ಸನ್ನು ಇಟ್ಟು ಮಹಾಬಲಪರಾಕ್ರಮವುಳ್ಳವನೂ, ಅಮಿತ ವಿಕ್ರಮವುಳ್ಳವನೂ ಆಗಿ ಈ ಮಹೇಂದ್ರಪರ್ವತದಲ್ಲಿ ವಾಸಮಾಡುತ್ತಾನೆ.
ಏವಂ ವೈರಮಭೂತ್ ತಸ್ಯ ಕ್ಷತ್ರಿಯೈರ್ಲೋಕವಾಸಿಭಿಃ |
ಪೃಥಿವೀ ಚಾಪಿ ವಿಜಿತಾ ರಾಮೇಣಾಮಿತತೇಜಸಾ ॥14॥
ಹೀಗೆ ರಾಮನಿಗೆ ಲೋಕವಾಸಿಗಳಾದ ಕ್ಷತ್ರಿಯರ ಜೊತೆಯಲ್ಲಿ ವೈರವು ಉಂಟಾಯಿತು ಮತ್ತು ಅಮಿತಪರಾಕ್ರಮಿಯಾದ ರಾಮನು ಭೂಮಿಯನ್ನು ಜಯಿಸಿದನು.
ವೈಶಂಪಾಯನಃ
ತತಶ್ಚತುರ್ದಶೀಂ ರಾಮಃ ಸಮಯೇನ ಮಹಾತಪಾಃ |
ದರ್ಶಯಾಮಾಸ ತಾನ್ ವಿಪ್ರಾನ್ ಧರ್ಮರಾಜಂ ಚ ಸಾನುಜಮ್ ॥
ವೈಶಂಪಾಯನ ಅನಂತರ ಚತುರ್ದಶೀಯಂದು ಮಹಾತಪಸ್ವಿಯಾದ ಪರಶುರಾಮನು ತನ್ನ ನಿಯಮದಂತೆ ಅಲ್ಲಿದ್ದ ಋಷಿಗಳಿಗೂ, ಧರ್ಮರಾಜನಿಗೂ ಮತ್ತು ಅವನ ಸಹೋದರರರಿಗೂ ತನ್ನ ದರ್ಶನವನ್ನು ನೀಡಿದನು.
ಸ ತಮಾನರ್ಚ ರಾಜೇಂದ್ರ ಭ್ರಾತೃಭಿಃ ಸಹಿತಃ ಪ್ರಭುಃ |
ಸ ತಸ್ಮೈ ಪರಮಾಂ ಪೂಜಾಂ ಚಕ್ರೇ ನೃಪತಿಸತ್ತಮಃ ॥16॥
ಎಲೈ ರಾಜೇಂದ್ರನೇ, ಪ್ರಭುವಾದ ಧರ್ಮರಾಜನು ತನ್ನ ತಮ್ಮಂದಿರ ಜೊತೆಯಲ್ಲಿ ಪರಶುರಾಮನನ್ನು ಪೂಜಿಸಿದನು. ನೃಪಶ್ರೇಷ್ಠನಾದ ಅವನು ಪರಶುರಾಮನಿಗೆ ಶ್ರೇಷ್ಠವಾದ ಪೂಜೆಯನ್ನು ಮಾಡಿದನು.
ಅರ್ಚಯಿತ್ವಾ ಜಾಮದಗ್ನ್ಯಂ ಪೂಜಿತಸ್ತೇನ ಚಾಭಿಭೂಃ |
ಮಹೇಂದ್ರ ಉಷ್ಯ ತಾಂ ರಾತ್ರಿಂ ಪ್ರಯಯೌ ದಕ್ಷಿಣಾಮುಖಃ ॥17॥
ಜಯಶೀಲನಾದ ಧರ್ಮರಾಜನು ಪರಶುರಾಮನನ್ನು ಪೂಜಿಸಿ ಅವನಿಂದ ಸತ್ಕೃತನಾಗಿ ಆ ರಾತ್ರಿಯನ್ನು ಮಹೇಂದ್ರಪರ್ವತದಲ್ಲಿ ಕಳೆದು ಅಲ್ಲಿಂದ ದಕ್ಷಿಣಾಭಿಮುಖವಾಗಿ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುರ್ದಶಾಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
*****
ನೂರ ಹದಿನೈದನೆಯ ಅಧ್ಯಾಯ
ತೀರ್ಥಯಾತ್ರಾಕ್ರಮದಿಂದ ಪ್ರಭಾಸಕ್ಕೆ ಬಂದ ಪಾಂಡವರಿಗೆ
ಕೃಷ್ಣಬಲರಾಮರಿಂದ ಸತ್ಕಾರ.
ವೈಶಂಪಾಯನಃ
ಗಚ್ಛನ್ ಸ ತೀರ್ಥಾನಿ ಮಹಾನುಭಾವಃ
ಪುಣ್ಯಾನಿ ರಮ್ಯಾಣಿ ದದರ್ಶ ರಾಜಾ |
ಸರ್ವಾಣಿ ವಿಪ್ರೈರುಪಶೋಭಿತಾನಿ
ಕ್ವಚಿತ್ ಕ್ವಚಿದ್ ಭಾರತ ಸಾಗರಸ್ಯ ॥1॥
ವೈಶಂಪಾಯನ ಎಲೈ ಭಾರತನೇ, ಮಹಾನುಭಾವನಾದ ಧರ್ಮರಾಜನು ತೀರ್ಥಯಾತ್ರೆಯನ್ನು ಮಾಡುತ್ತಾ ಸಮುದ್ರತೀರದಲ್ಲಿ

ಅಲ್ಲಲ್ಲಿ ಇರುವ ಬ್ರಾಹ್ಮಣರಿಂದ ಪರಿಶೋಭಿತವಾದ ಎಲ್ಲಾ ಮನೋಹರವಾದ ಮತ್ತು ಪವಿತ್ರವಾದ ತೀರ್ಥಗಳನ್ನೂ ನೋಡಿದನು.
ಸ ವೃತ್ತವಾಂಸ್ತೇಷು ಕೃತಾಭಿಷೇಕಃ
ಸಹಾನುಜಃ ಪಾರ್ಥಿವಪುತ್ರಪೌತ್ರಃ |
ಸಮುದ್ರಗಾಂ ಪುಣ್ಯತಮಾಂ ಪ್ರಶಸ್ತಾಂ
ಜಗಾಮ ಪಾರೀಕ್ಷಿತ ಪಾಂಡುಪುತ್ರಃ ॥2॥
ಎಲೈ ಜನಮೇಜಯನೇ, ಪಾಂಡುಪುತ್ರನೂ ಪಾರ್ಥಿವಪುತ್ರಪೌತ್ರನೂ ಆದ ಒಳ್ಳೆಯ ನಡತೆಯುಳ್ಳ ಯುಧಿಷ್ಠಿರನು ಆ ತೀರ್ಥಗಳಲ್ಲಿ ಸಹೋದರರ ಜೊತೆಯಲ್ಲಿ ಸ್ನಾನವನ್ನು ಮಾಡಿ ಪುಣ್ಯತಮವೂ ಪ್ರಶಸ್ತವೂ ಆದ ಸಮುದ್ರಗಾಮಿಯಾದ ನದಿಗೆ (ಗಂಗಾನದಿಗೆ) ಹೋದನು.
ತತ್ರಾಪಿ ಚಾಪ್ಲುತ್ಯ ಮಹಾನುಭಾವಃ
ಸಂತರ್ಪಯಾಮಾಸ ಸುರಾನ್ ಪಿತೄಂಶ್ಚ |
ದ್ವಿಜಾತಿಮುಖ್ಯೇಷು ಧನಂ ವಿಸೃಜ್ಯ
ಗೋದಾವರೀಂ ಸಾಗರಗಾಮಗಚ್ಛತ್ ॥3॥
ಮಹಾನುಭಾವನಾದ ಅವನು ಅಲಿಯೂ ಸ್ನಾನವನ್ನು ಮಾಡಿ ದೇವತೆಗಳಿಗೆ ಮತ್ತು ಪಿತೃಗಳಿಗೆ ತರ್ಪಣವನ್ನು ನೀಡಿದನು. ಬ್ರಾಹ್ಮಣಶ್ರೇಷ್ಠರಿಗೆ ಧನವನ್ನು ನೀಡಿ ಅಲ್ಲಿಂದ ಸಾಗರಗಾಮಿಯಾದ ಗೋದಾವರಿಯನ್ನು ತಲುಪಿದನು.
ತತೋ ವಿಪಾಪ್ಮಾ ದ್ರಮಿಳೇ ಸ ರಾಜಾ
ಸಮುದ್ರಮಾಸಾದ್ಯ ಚ ಲೋಕಪುಣ್ಯಮ್ |
ಅಗಸ್ತ್ಯತೀರ್ಥಂ ಚ ಪವಿತ್ರಮಾಹುಃ
ನಾರೀತೀರ್ಥಾನ್ಯಥ ವೀರೋ ದದರ್ಶ ॥4॥
ಆ ವೀರನಾದ ರಾಜನು ಪಾಪರಹಿತನಾಗಿ ಅನಂತರ ದ್ರವಿಡದೇಶಕ್ಕೆ ಬಂದು ಸಮುದ್ರದ ಬಳಿ ಲೋಕಪಾವನವಾದ ಅಗಸ್ತ್ಯತೀರ್ಥವನ್ನು ಮತ್ತು ಸಜ್ಜನರು ಪವಿತ್ರವೆಂದು ಹೇಳುವ ನಾರೀತೀರ್ಥಗಳನ್ನು ನೋಡಿದನು.
ತತ್ರಾರ್ಜುನಸ್ಯಾಗ್ರ್ಯಧನುರ್ಧರಸ್ಯ
ನಿಶಮ್ಯ ತತ್ ಕರ್ಮ ಪರೈರಸಹ್ಯಮ್ |
ಸಂಪೂಜ್ಯಮಾನಃ ಪರಮರ್ಷಿಸಂಘೈಃ
ಪರಾಂ ಮುದಂ ತತ್ರ ತದಾ ಸ ಲೇಭೇ ॥5॥
ಅಲ್ಲಿ ಶ್ರೇಷ್ಠ ಧನುರ್ಧಾರಿಯಾದ ಅರ್ಜುನನು ಮಾಡಿದ ಇನ್ನೊಬ್ಬರಿಂದ ಮಾಡಲು ಅಸಾಧ್ಯವಾದ ಆ ಕರ್ಮವನ್ನು ಕೇಳಿ ಶ್ರೇಷ್ಠವಾದ ಋಷಿ ಸಮೂಹಗಳಿಂದ ಪೂಜಿಸಲ್ಪಟ್ಟವನಾಗಿ ಆಗ ಅಲ್ಲಿ ಬಹಳ ಸಂತೋಷವನ್ನು ಹೊಂದಿದನು.
ಸ ತೇಷು ತೀರ್ಥೇಷ್ವಭಿಷಿಕ್ತಗಾತ್ರಃ
ಕೃಷ್ಣಾಸಹಾಯಃ ಸಹಿತೋಽನುಜೈಶ್ಚ |
ಸಂಪೂಜಯನ್ ವಿಕ್ರಮಮರ್ಜುನಸ್ಯ
ರೇಮೇ ಮಹೀಪಾಲಪತಿಃ ಪೃಥಿವ್ಯಾಮ್ ॥6॥
ಮಹೀಪಾಲರಿಗೆ ಪತಿಯಾದ ಅವನು ಆ ತೀರ್ಥಗಳಲ್ಲಿ ದ್ರೌಪದಿ ಮತ್ತು ಸಹೋದರರ ಜೊತೆಯಲ್ಲಿ ಸ್ನಾನವನ್ನು ಮಾಡಿ ಅರ್ಜುನನ ಪರಾಕ್ರಮವನ್ನು ಸಮ್ಮಾನಿಸುತ್ತಾ ಭೂಮಿಯಲ್ಲಿ ಸಂತೋಷಪಟ್ಟನು.
ತತಃ ಸಹಸ್ರಾಣಿ ಗವಾಂ ಪ್ರದಾಯ
ತೀರ್ಥೇಷು ತೇಷ್ವಂಬುಧರೋತ್ತಮಸ್ಯ |
ಹೃಷ್ಟಃ ಸಹ ಭ್ರಾತೃಭಿರರ್ಜುನಸ್ಯ
ಸಂಕೀರ್ತಯಾಮಾಸ ಗವಾಂ ಪ್ರದಾನಮ್ ॥7॥
ಅನಂತರ ಸಮುದ್ರಜಲಪಾನ ಮಾಡಿದವರಲ್ಲಿ ಶ್ರೇಷ್ಠರಾದ ಅಗಸ್ತ್ಯ ತೀರ್ಥಗಳಲ್ಲಿ ಸಹಸ್ರ ಗೋದಾನವನ್ನು ಮಾಡಿ ತಮ್ಮಂದಿರ ಜೊತೆಯಲ್ಲಿ ಸಂತೋಷಗೊಂಡು ಅರ್ಜುನನು ಮಾಡಿದ ಗೋದಾನವನ್ನು ಸಂಕೀರ್ತನೆ ಮಾಡಿದನು.
ಸ ತಾನಿ ತೀರ್ಥಾನಿ ಚ ಸಾಗರಸ್ಯ
ಪುಣ್ಯಾನಿ ಚಾನ್ಯಾನಿ ಬಹೂನಿ ರಾಜನ್ |
ಕ್ರಮೇಣ ಗಚ್ಛನ್ ಪರಿಪೂರ್ಣಕಾಮಃ
ಶೂರ್ಪಾರಕಂ ಪುಣ್ಯತಮಂ ದದರ್ಶ ॥8॥
ರಾಜನೇ, ಅವನು ಆ ಸಾಗರ ಸಮೀಪದ ಅನೇಕ ಪವಿತ್ರವಾದ ತೀರ್ಥಗಳಿಗೂ ಮತ್ತು ಬೇರೆ ತೀರ್ಥಗಳಿಗೂ ಕ್ರಮವಾಗಿ ಪ್ರಯಾಣ ಮಾಡುತ್ತಾ ಪರಿಪೂರ್ಣ ಕಾಮನಾಗಿ ಬಹಳ ಪವಿತ್ರವಾದ ಶೂರ್ಪಾರಕರ ಕ್ಷೇತ್ರವನ್ನು ನೋಡಿದನು.
ತತ್ರೋದಧೇಃ ಕಂಚಿದತೀತ್ಯ ದೇಶಂ
ಖ್ಯಾತಂ ಪೃಥಿವ್ಯಾಂ ವನಮಾಸಸಾದ |
ತಪ್ತಂ ಸುರೈರ್ಯತ್ರ ತಪಃ ಪುರಸ್ತಾತ್
ಪುಣ್ಯೋಪೇತಂ ಪುಣ್ಯತಮೈರ್ನರೇಂದ್ರೈಃ ॥9॥
ಅಲ್ಲಿ ಸಮುದ್ರ ಸಮೀಪದಿಂದ ಸ್ವಲ್ಪ ಪ್ರದೇಶವನ್ನು ದಾಟಿ ಹಿಂದೆ ದೇವತೆಗಳು ತಪಸ್ಸನ್ನು ಮಾಡಿದ್ದ, ಪವಿತ್ರತಮರಾದ ರಾಜರ ತಪಸ್ಸಿನ ಪುಣ್ಯದಿಂದ ಕೂಡಿದ, ಭೂಮಿಯಲ್ಲಿ ಪ್ರಖ್ಯಾತವಾದ ವನವನ್ನು ಸೇರಿದನು.

ಸ ತತ್ರ ತಾಮಗ್ರ್ಯಧನುರ್ಧರಸ್ಯ
ವೇದೀಂ ದದರ್ಶಾಯತಪೀನಬಾಹುಃ |
ಆರ್ಚೀಕಪುತ್ರಸ್ಯ ತಪಸ್ವಿಸ್ಯೈರೆಂಂಃ
ಸಮಾವೃತಾಂ ಪುಣ್ಯಕೃದರ್ಚನೀಯಾಮ್ ॥10॥
ದೀರ್ಘಪೀನಬಾಹುವಾದ ಅವನು ಶ್ರೇಷ್ಠಧನುರ್ಧರರಾದ ಜಮದಗ್ನಿಗಳ ಪುತ್ರರಾದ ಪರಶುರಾಮರ ತಪಸ್ವಿಸಂಘಗಳಿಂದ ಕೂಡಿದ ಮತ್ತು ಪುಣ್ಯವಂತರಿಂದ ಪೂಜಿಸಲ್ಪಡುವ ಯಜ್ಞವೇದಿಯನ್ನು ನೋಡಿದನು.
ತತೋ ವಸೂನಾಂ ವಸುಧಾಧಿಪಃ ಸ
ಮರುದ್ಗಣಾನಾಂ ಚ ತಥಾಽಶ್ವಿನೋಶ್ಚ |
ವೈವಸ್ವತಾದಿತ್ಯಧನೇಶ್ವರಾಣಾಮ್
ಇಂದ್ರಸ್ಯ ವಿಷ್ಣೋಃ ಸವಿತುರ್ವಿಭೋಶ್ಚ ॥11॥
ಭಗಸ್ಯ ಚಂದ್ರಸ್ಯ ದಿವಾಕರಸ್ಯ
ಪತೇರಪಾಂ ಸಾಧ್ಯಗಣಸ್ಯ ಚೈವ |
ಧಾತುಃ ಪಿತ್ರೂಣಾಂ ಚ ತಥಾ ಮಹಾತ್ಮಾ
ರುದ್ರಸ್ಯ ರಾಜನ್ ಸಗಣಸ್ಯ ಚಾಪಿ ॥12॥
ಸರಸ್ವತ್ಯಾಃ ಸಿದ್ಧಗಣಸ್ಯ ಚೈವ
ಪೂಷ್ಣಶ್ಚ ಯೇ ಚಾಪ್ಯಮರಾಸ್ತಥಾಽನ್ಯೇ |
ಪುಣ್ಯಾನಿ ತೀರ್ಥಾಯತನಾನಿ ತೇಷಾಂ
ದದರ್ಶ ರಾಜಾ ಸುಮನೋಹರಾಣಿ ॥13॥
ಎಲೈ ರಾಜನೇ, ಅನಂತರ ರಾಜನಾದ ಅವನು ವಸುಗಳ, ಮರುದ್ಗಣಗಳ, ಅಶ್ವಿನಿಗಳ, ಯಮನ, ಆದಿತ್ಯನ, ಕುಬೇರನ, ಇಂದ್ರನ, ವಿಷ್ಣುವಿನ, ಸವಿತೃವಿನ, ಭಗನ, ಚಂದ್ರನ, ಸೂರ್ಯನ, ವರುಣನ, ಸಾಧ್ಯಗಣದ, ಬ್ರಹ್ಮನ, ಪಿತೃಗಳ, ಪರಿವಾರ ಸಹಿತನಾದ ರುದ್ರನ, ಸರಸ್ವತಿಯ, ಸಿದ್ಧಗಣಗಳ, ಪೂಷನ ಮತ್ತು ಇನ್ನೂ ಬೇರೆ ದೇವತೆಗಳ ಬಹಳ ಮನೋಹರವಾದ ಮತ್ತು ಪವಿತ್ರವಾದ ತೀರ್ಥಗಳನ್ನೂ ಮತ್ತು ಕ್ಷೇತ್ರಗಳನ್ನೂ ನೋಡಿದನು.
ತೇಷೂಪವಾಸಾನ್ ವಿವಿಧಾನುಪೋಷ್ಯ
ದತ್ವಾ ಚ ರತ್ನಾನಿ ಮಹಾನುಭಾವಃ |
ತೀರ್ಥೇಷು ಸರ್ವೇಷು ಪರಿಪ್ಲುತಾಂಗಃ
ಪುನಃ ಸ ಶೂರ್ಪಾರಕರಮಾಜಗಾಮ ॥14॥
ಮಹಾನುಭಾವನಾದ ಅವನು ಆ ಕ್ಷೇತ್ರಗಳಲ್ಲಿ ಅನೇಕ ವಿಧವಾದ ಉಪವಾಸಗಳನ್ನು ಮಾಡಿ ರತ್ನಗಳನ್ನು ದಾನಮಾಡಿ ಎಲ್ಲ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿ ಪುನಃ ಶೂರ್ಪಾಕರ ಕ್ಷೇತ್ರಕ್ಕೆ ಬಂದನು.
ಸ ತೇನ ತೀರೇಣ ಚ ಸಾಗರಸ್ಯ
ಪುನಃ ಪ್ರಯಾತಃ ಸಹ ಸೋದರೀಯೈಃ |
ದ್ವಿಜೈಃ ಪೃಥಿವ್ಯಾಂ ಕಥಿತಂ ಮಹದ್ಭಿಃ
ತೀರ್ಥಂ ಪ್ರಭಾಸಂ ಚ ತತೋ ಜಗಾಮ ॥15॥
ಅವನು ತನ್ನ ಸಹೊದರರ ಜೊತೆಯಲ್ಲಿ ಪುನಃ ಸಾಗರದ ಅಂಚಿನ ತೀರ್ಥಗಳಿಗೆ ಹೊರಟು ಭೂಮಿಯಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಪ್ರಶಂಸಿಸುವ ಪ್ರಭಾಸ ಕ್ಷೇತ್ರಕ್ಕೆ ಬಂದನು.
ತತ್ರಾಭಿಷಿಕ್ತಃ ಪೃಥುಲೋಹಿತಾಕ್ಷಃ
ಸಹಾನುಜೈರ್ದೇವಗಣಾನ್ ಪಿತ್ರೂಂಶ್ಚ |
ಸಂತರ್ಪಯಾಮಾಸ ತಥೈವ ಕೃಷ್ಣಾ
ತೇ ಚಾಪಿ ವಿಪ್ರಾಃ ಸಹ ಲೋಮಶೇನ ॥16॥
ಪೃಥುಲೋಹಿತಾಕ್ಷನಾದ ಅವನು ಅಲ್ಲಿ ತಮ್ಮಂದಿರ ಜೊತೆಯಲ್ಲಿ ಸ್ನಾನವನ್ನು ಮಾಡಿ ದೇವಗಣಗಳಿಗೂ ಮತ್ತು ಪಿತೃಗಳಿಗೂ ತರ್ಪಣವನ್ನು ನೀಡಿದನು. ದ್ರೌಪದಿಯೂ ಹಾಗೆಯೇ ಮಾಡಿದಳು. ಲೋಮಶರ ಜೊತೆಯಲ್ಲಿದ್ದ ಬ್ರಾಹ್ಮಣರು ಸಹ ಹಾಗೆಯೇ ಮಾಡಿದರು.
ಸ ದ್ವಾದಶಾಹಂ ಜಲವಾಯುಭಕ್ಷಃ
ಕುರ್ವನ್ ಕ್ಷಪಾಹಸ್ಸು ತಥಾಽಭಿಷೇಕಮ್ |
ಸಮಂತತೋಽಗ್ನೀನುಪದೀಪಯಿತ್ವಾ
ತೇಪೇ ತಪೋ ಧರ್ಮಭೃತಾಂ ವರಿಷ್ಠಃ ॥17॥
ಧರ್ಮಾಚರಣೆ ಮಾಡುವವರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಅಲ್ಲಿ ಹನ್ನೆರಡು ದಿವಸ ಕೇವಲ ಜಲವಾಯುಭಕ್ಷನಾಗಿ ಹಗಲು-ರಾತ್ರಿಯೂ ಸ್ನಾನವನ್ನು ಮಾಡಿ ಸುತ್ತಲೂ ಅಗ್ನಿಯನ್ನು ಪ್ರಜ್ವಲಿಸಿ ತಪಸ್ಸನ್ನು ಮಾಡಿದನು.
ಸಮಾಗತಂ ತತ್ರ ತಪಶ್ಚರಂತಂ
ಶುಶ್ರಾವ ರಾಮಶ್ಚ ಜನಾರ್ದನಶ್ಚ |
ತೌ ಸರ್ವವೃಷ್ಣಿಪ್ರವರೌ ಸಸೈನ್ಯೌ

ಯುಧಿಷ್ಠಿರಂ ಜಗ್ಮತುರಾಜಮೀಢಮ್ ॥18॥
ಅಲ್ಲಿಗೆ ಬಂದು ತಪಸ್ಸನ್ನು ಮಾಡುತ್ತಿರುವ ಅವನ ವಾರ್ತೆಯನ್ನು ಕೃಷ್ಣ- ಬಲರಾಮರು ಕೇಳಿದರು. ಮತ್ತು ಎಲ್ಲಾ ವೃಷ್ಣಿಪ್ರಧಾನರಾದ ಅವರು ಸೈನ್ಯವನ್ನು ತೆಗೆದುಕೊಂಡು ಆಜಮೀಢನಾದ ಯುಧಿಷ್ಠಿರನ ಬಳಿಗೆ ಬಂದರು.
ತೇ ವೃಷ್ಣಯಃ ಪಾಂಡುಸುತಾನ್ ಸಮೀಕ್ಷ್ಯ
ಭೂಮೌ ಶಯಾನಾನ್ ಮಲದಿಗ್ಧಗಾತ್ರಾನ್ |
ಅನರ್ಹತೀಂ ದ್ರೌಪದೀಂ ಚಾಪಿ ದೃಷ್ಟ್ವಾ
ಸುದುಃಖಿತಾಶ್ಚುಕ್ರುಶುರಾರ್ತನಾದಾನ್ ॥19॥
ಆ ವೃಷ್ಣಿಗಳು ಭೂಮಿಯಲ್ಲಿ ಮಲಗಿ ಕಶ್ಮಲಗಾತ್ರರಾದ ಪಾಂಡುಪುತ್ರರನ್ನೂ, ದುಃಖಕ್ಕೆ ಅನರ್ಹಳಾದ ದ್ರೌಪದಿಯನ್ನೂ ನೋಡಿ ಬಹಳ ದುಃಖಿತರಾಗಿ ಆರ್ತನಾದವನ್ನು ಮಾಡಿದರು.
ರಾಜಾಽಥ ರಾಮಂ ಚ ಜನಾರ್ದನಂ ಚ
ಕಾರ್ಷ್ಣಿಂ ಚ ಸಾಂಬಂ ಚ ಶಿನೇಶ್ಚ ಪೌತ್ರಮ್ |
ಅನ್ಯಾಂಶ್ಚ ವೃಷ್ಣೀನುಪಗಮ್ಯ ಪೂಜಾಂ
ಚಕ್ರೇ ಯಥಾಧರ್ಮಮದೀನಸತ್ತ್ವಃ ॥20॥
ಅದೀನವಾದ ಮನಸ್ಸುಳ್ಳ ಧರ್ಮರಾಜನು ಬಲರಾಮ, ಕೃಷ್ಣ, ಪ್ರದ್ಯುಮ್ನ, ಸಾಂಬ, ಸಾತ್ಯಕಿ ಮತ್ತು ಬೇರೆಯ ವೃಷ್ಣಿಗಳನ್ನು ಸಮೀಪಿಸಿ ಅವರಿಗೆ ವಿಧಿವತ್ತಾಗಿ ಪೂಜೆಯನ್ನು ಸಲ್ಲಿಸಿದನು.
ತೇ ಚಾಪಿ ಸರ್ವೇ ಪ್ರತಿಪೂಜ್ಯ ಪಾರ್ಥಾನ್ |
ತೈಃ ಸತ್ಕೃತಾಃ ಪಾಂಡುಸುತೈಸ್ತಥೈವ |
ಯುಧಿಷ್ಠಿರಂ ಸಂಪರಿವಾರ್ಯ ರಾಜನ್
ಉಪಾವಿಶನ್ ದೇವಗಣಾ ಯಥೇಂದ್ರಮ್ ॥21॥
ಎಲೈ ರಾಜನೇ, ಅವರೆಲ್ಲರೂ ಸಹ ಪಾಂಡವರಿಗೆ ಸತ್ಕಾರವನ್ನು ಮಾಡಿ ಹಾಗೆಯೇ ಪಾಂಡುಪುತ್ರರಿಂದ ಸತ್ಕೃತರಾಗಿ ಯುಧಿಷ್ಠಿರನನ್ನು ಸುತ್ತುವರಿದು ಇಂದ್ರನನ್ನು ಸುತ್ತುವರಿದ ದೇವಗಣಗಳಂತೆ ಕುಳಿತುಕೊಂಡರು.
ತೇಷಾಂ ಸ ಸರ್ವಂ ಚರಿತಂ ಪರೇಷಾಂ
ವನೇ ಚ ವಾಸಂ ಪರಮಪ್ರತೀತಃ |
ಅಸ್ತ್ರಾರ್ಥಮಿಂದ್ರಂ ಚ ಗತಂ ಚ ಪಾರ್ಥಂ
ಕೃಷ್ಣೇ ಶಶಂಸಾಮರರಾಜಪುತ್ರಮ್ ॥22॥
ಪರಮಸಂತುಷ್ಟನಾದ ಧರ್ಮರಾಜನು ಅವರಿಗೆ ದುರ್ಯೋಧನಾದಿಗಳ ಎಲ್ಲಾ ನಡತೆಯನ್ನೂ, ತಮ್ಮ ವನವಾಸವನ್ನೂ, ದೇವೇಂದ್ರಪುತ್ರನಾದ ಅರ್ಜುನನು ಅಸ್ತ್ರವನ್ನು ಪಡೆಯುವ ಸಲುವಾಗಿ ಇಂದ್ರನ ಸಮೀಪಕ್ಕೆ ಹೋಗಿರುವುದನ್ನೂ ಕೃಷ್ಣನಿಗೆ ತಿಳಿಸಿದನು.
ಶ್ರುತ್ವಾ ತು ತೇ ತಸ್ಯ ವಚಃ ಪ್ರತೀತಾಃ
ತಾಂಶ್ಚಾಪಿ ದೃಷ್ಟ್ವಾ ಸುಕೃಶಾನತೀವ |
ನೇತ್ರೋದ್ಭವಂ ಸಮ್ಮುಮುಚುರ್ದಶಾರ್ಹಾ
ದುಃಖಾರ್ತಿಜಂ ವಾರಿ ಮಹಾನುಭಾವಾಃ ॥23॥
ಮಹಾನುಭಾವರಾದ ದಶಾರ್ಹರು ಅವನ ಮಾತುಗಳನ್ನು ಕೇಳಿ ಎಲ್ಲವನ್ನೂ ತಿಳಿದು ಅತ್ಯಂತ ಕೃಶರಾದ ಅವರನ್ನು ನೋಡಿ ದುಃಖದಿಂದ ಕಣ್ಣೀರನ್ನು ಸುರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚದಶಾಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.
*****

ನೂರ ಹದಿನಾರನೆಯ ಅಧ್ಯಾಯ
ಬಲರಾಮನಿಂದ ಕೃಷ್ಣನೆದುರಿನಲ್ಲಿ ಪಾಂಡವರನ್ನು ಕುರಿತು ಶೋಕ.
ಜನಮೇಜಯಃ
ಪ್ರಭಾಸತೀರ್ಥಂ ಸಂಪ್ರಾಪ್ಯ ವೃಷ್ಣಯಃ ಪಾಂಡವಾ ಅಪಿ |
ಕಿಮಕುರ್ವನ್ ಕಥಾಶ್ಚಾಪಿ ಕಾಸ್ತತ್ರಾಸಂಸ್ತಪೋಧನ ॥1॥
ತೇ ಹಿ ಸರ್ವೇ ಮಹಾತ್ಮಾನಃ ಸರ್ವಶಾಸ್ತ್ರವಿಶಾರದಾಃ |
ವೃಷ್ಣಯಃ ಪಾಂಡವಾಶ್ಚೈವ ಸುಹೃದಶ್ಚ ಪರಸ್ಪರಮ್ ॥2॥
ಜನಮೇಜಯ ಎಲೈ ತಪೋಧನರೇ, ಪ್ರಭಾಸತೀರ್ಥವನ್ನು ತಲುಪಿದ ವೃಷ್ಣಿಗಳು ಮತ್ತು ಪಾಂಡವರು ಏನು ಮಾಡಿದರು? ಅಲ್ಲಿ ಯಾವ ಮಾತುಕಥೆಗಳು ನಡೆದವು? ಪಾಂಡವರು ಮತ್ತು ವೃಷ್ಣಿಗಳು ಪರಸ್ಪರ ಸುಹೃದರು, ಸರ್ವಶಾಸ್ತ್ರವಿಶಾರದರು ಮತ್ತು ಎಲ್ಲರೂ ಮಹಾನುಭಾವರಷ್ಟೆ?

ವೈಶಂಪಾಯನಃ
ಪ್ರಭಾಸತೀರ್ಥಂ ಸಂಪ್ರಾಪ್ಯ ಪುಣ್ಯಂ ತೀರ್ಥಂ ಮಹೋದಧೇಃ |
ವೃಷ್ಣಯಃ ಪಾಂಡವಾನ್ ವೀರಾನ್ ಪರಿವಾರ್ಯೋಪತಸ್ಥಿರೇ ॥3॥
ವೈಶಂಪಾಯನ ಸಮುದ್ರದ ಪುಣ್ಯತೀರ್ಥವಾದ ಪ್ರಭಾಸತೀರ್ಥವನ್ನು ತಲುಪಿ ವೃಷ್ಣಿಗಳು ವೀರರಾದ ಪಾಂಡವರನ್ನು ಸುತ್ತುವರಿದು ಸಮೀಪದಲ್ಲಿ ಕುಳಿತರು.
ತತೋ ಗೋಕ್ಷೀರಕುಂದೇಂದುಮೃಣಾಲರಜತಪ್ರಭಃ |
ವನಮಾಲೀ ಹಲೀ ರಾಮೋ ಬಭಾಷೇ ಪುಷ್ಕರೇಕ್ಷಣಮ್ ॥4॥
ಅನಂತರ ಗೋಕ್ಷೀರದಂತೆ, ಕುಂದಪುಷ್ಪದಂತೆ, ಚಂದ್ರನಂತೆ, ಮೃಣಾಲದಂತೆ, ರಜತದಂತೆ ಶ್ವೇತಕಾಂತಿಯುಳ್ಳ ವನಮಾಲಿಯಾದ ಹಲಾಯುಧನಾದ ಬಲರಾಮನು ಪುಷ್ಕರಾಕ್ಷನಾದ ಕೃಷ್ಣನನ್ನು ಕುರಿತು ಮಾತನಾಡಿದನು.
ನ ಕೃಷ್ಣ ಧರ್ಮಶ್ಚರಿತೋ ಭವಾಯ
ಜಂತೋರಧರ್ಮಶ್ಚ ಪರಾಭವಾಯ |
ಯುಧಿಷ್ಠಿರೋ ಯತ್ರ ಜಟೀ ಮಹಾತ್ಮಾ
ವನಾಶ್ರಯಃ ಕ್ಲಿಶ್ಯತಿ ಚೀರವಾಸಾಃ ॥5॥
ಕೃಷ್ಣನೇ, ಮಹಾತ್ಮನಾದ ಯುಧಿಷ್ಠಿರನು ಜಟೆಗಳನ್ನು ಧರಿಸಿ ನಾರುಮಡಿಯನ್ನುಟ್ಟು ವನವಾಸದಲ್ಲಿ ಕ್ಲೇಶವನ್ನು ಪಡುವಾಗ ಧರ್ಮಾಚರಣೆಯು ಸಮೃದ್ಧಿಯನ್ನೂ, ಅಧರ್ಮಾಚರಣೆಯು ಜೀವರಿಗೆ ಪರಾಭವವನ್ನೂ ಉಂಟುಮಾಡುತ್ತದೆ ಎಂದು ತಿಳಿಯುವುದಿಲ್ಲ.
ದುರ್ಯೋಧನಶ್ಚಾಪಿ ಮಹೀಂ ಪ್ರಶಾಸ್ತಿ
ನ ಚಾಸ್ಯ ಭೂಮಿರ್ವಿವರಂ ದದಾತಿ |
ಧರ್ಮಾದಧರ್ಮಶ್ಚರಿತೋ ಗರೀಯಾನ್
ಇತೀವ ಮನ್ಯೇತ ನರೋಽಲ್ಪಬುದ್ಧಿಃ ॥6॥
ದುರ್ಯೋಧನನಾದರೂ ಭೂಮಿಯನ್ನು ಆಳುತ್ತಿದ್ದಾನೆ. ಭೂಮಿಯು ಬಾಯಿಬಿಟ್ಟು ಅವನನ್ನು ನುಂಗುವುದಿಲ್ಲ. ಅಲ್ಪಬುದ್ಧಿಯುಳ್ಳ ನರನು ಧರ್ಮಾಚರಣೆಗಿಂತ ಅಧರ್ಮವನ್ನು ಆಚರಿಸುವುದೇ ಶ್ರೇಷ್ಠವಾದುದು ಎಂದು ತಿಳಿಯಬಹುದು.
ದುರ್ಯೋಧನೇ ಚಾಪಿ ವಿವರ್ಧಮಾನೇ
ಯುಧಿಷ್ಠಿರೇ ಚಾಸುಖ ಆತ್ತಸಾರೇ |
ಹೃತಸ್ವರಾಜ್ಯಾಯತನಾರ್ಥಭಾರ್ಯೇ
ದುರ್ಯೋಧನೇನಾಲ್ಪಧನೇ ಚ ಪಾರ್ಥೇ |
ಕಿಂ ತ್ವದ್ಯ ಕರ್ತವ್ಯಮಿಹ ಪ್ರಜಾಭಿಃ
ಶಂಕಾ ಮಿಥಃ ಸಂಜನಿತಾ ನರಾಣಾಮ್ ॥7॥
ಒಂದುಕಡೆ ದುರ್ಯೋಧನನು ಅಭಿವೃದ್ಧಿಯನ್ನು ಹೊಂದುತ್ತಿರಲು, ಇನ್ನೊಂದು ಕಡೆ ದುರ್ಯೋಧನನಿಂದ ತನ್ನ ಸರ್ವಸ್ವವನ್ನೂ, ರಾಜ್ಯವನ್ನೂ, ಸ್ಥಾನವನ್ನೂ, ಸಂಪತ್ತನ್ನೂ ಮತ್ತು ಭಾರ್ಯೆಯನ್ನು ಕಳೆದುಕೊಂಡ ಅಲ್ಪಧನನಾದ ಕುಂತೀಪುತ್ರನಾದ ಯುಧಿಷ್ಠಿರನು ದುಃಖದಿಂದ ಕೂಡಿರಲು, ಪ್ರಜೆಗಳು ಇಲ್ಲಿ ಈಗ ಏನು ಮಾಡಬೇಕು? ಮನುಷ್ಯರಿಗೆ ಧರ್ಮದ ವಿಷಯದಲ್ಲಿ ಶಂಕೆಯುಂಟಾಗುವುದಷ್ಟೇ?
ಅಯಂ ಹಿ ಧರ್ಮಪ್ರಭವೋ ನರೇಂದ್ರೋ
ಧರ್ಮೇ ರತಃ ಸತ್ಯಧೃತಿಃ ಪ್ರದಾತಾ |
ಚಲೇದ್ಧಿ ರಾಜ್ಯಾದಿತಿ ಸಂಶಯೋ ಮೇ
ಧರ್ಮಾದಪೇತಶ್ಚ ಕಥಂ ವಿವರ್ಧೇತ್ ॥8॥
ಈ ನರೇಂದ್ರನಾದ ಯುಧಿಷ್ಠಿರನು ಯಮಧರ್ಮನಿಂದ ಜನಿಸಿದವನು (ಧರ್ಮದಿಂದಲೇ ಜನಿಸಿದವನು). ಧರ್ಮದಲ್ಲಿಯೇ ರತನಾದವನು; ಸತ್ಯಧೃತಿಯಾದವನು; ಬಹಳ ದಾನವನ್ನು ಮಾಡುವವನು. ಅವನು ರಾಜ್ಯವನ್ನು ಕಳೆದುಕೊಳ್ಳಬಹುದು. ಆದರೆ ಧರ್ಮವನ್ನು ಪರಿತ್ಯಜಿಸಿ ಅವನು ಅಭಿವೃದ್ಧಿಯನ್ನು ಹೊಂದಲಾರ ಎಂಬ ಶಂಕೆಯು ನನಗಿದೆ.
ಕಥಂ ಚ ಭೀಷ್ಮಶ್ಚ ಕೃಪಶ್ಚ ವಿಪ್ರೋ
ದ್ರೋಣಶ್ಚ ರಾಜಾ ಚ ಕುಲಸ್ಯ ವೃದ್ಧಃ |
ಪ್ರವ್ರಾಜ್ಯ ಪಾರ್ಥಾನ್ ಸುಖಮಾಪ್ನುವಂತಿ
ಧಿಕ್ ಪಾಪಬುದ್ಧೀನ್ ಭರತಪ್ರಧಾನಾನ್ ॥9॥
ಭೀಷ್ಮರು, ಕೃಪರು, ಬ್ರಾಹ್ಮಣರಾದ ದ್ರೋಣರು, ಕುಲವೃದ್ಧನಾದ ಧೃತರಾಷ್ಟ್ರ ಇವರೆಲ್ಲರೂ ಭರತಪ್ರಧಾನರಾದ ಪಾಂಡವರನ್ನು ಕಾಡಿಗೆ ಕಳುಹಿಸಿ ಹೇಗೆ ಸುಖವನ್ನು ಹೊಂದುತ್ತಾರೆ? ಪಾಪಬುದ್ಧಿಯುಳ್ಳ ಅವರಿಗೆ ಧಿಕ್ಕಾರವಿರಲಿ.
ಕಿಂ ನಾಮ ವಕ್ಷ್ಯತ್ಯವನಿಪ್ರಧಾನಾನ್
ಪಿತೄನ್ ಸಮಾಗಮ್ಯ ಪರತ್ರ ಪಾಪಃ |
ಪುತ್ರೇಷು ಸಮ್ಯಕ್ಚರಿತಂ ಮಯೇತಿ
ಪುತ್ರಾನಪಾಪಾನವರೋಪ್ಯ ರಾಜ್ಯಾತ್ ॥10॥
ನಿರಪರಾಧಿಗಳಾದ ಪುತ್ರರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿ ಪಾಪವನ್ನು ಆಚರಿಸಿದ ಧೃತರಾಷ್ಟ್ರನು ಪರಲೋಕದಲ್ಲಿ ಪಿತೃಗಳನ್ನು

ಸೇರಿ ರಾಜರಾದ ಅವರನ್ನು ಕುರಿತು ನಾನು ಮಕ್ಕಳ ವಿಷಯದಲ್ಲಿ ಸರಿಯಾಗಿ ನಡೆದುಕೊಂಡೆ ಎಂದು ಹೇಗೆ ಹೇಳುವನು?
ನಾಸೌ ಧಿಯಾ ಸಂಪ್ರತಿ ಪಶ್ಯತಿ ಸ್ಮ
ಕಿಂ ನಾಮ ಕೃತ್ವಾಽಹಮಚಕ್ಷುರೇವಮ್ |
ಜಾತಃ ಪೃಥಿವ್ಯಾಮಿಹ ಪಾರ್ಥಿವೇಷು
ಪ್ರವ್ರಾಜ್ಯ ಕೌಂತೇಯಮಥಾಧಿರಾಜ್ಯಾತ್ ॥11॥
ಕುಂತಿಯ ಪುತ್ರರನ್ನು ಶ್ರೇಷ್ಠವಾದ ರಾಜ್ಯದಿಂದ ಭ್ರಷ್ಟರನ್ನಾಗಿ ಮಾಡಿ ಕಾಡಿಗೆ ಕಳುಹಿಸಿ ಈ ಧೃತರಾಷ್ಟ್ರನು ನಾನು ರಾಜರ ಮಧ್ಯದಲ್ಲಿ ಭೂಮಿಯ ಮೇಲೆ ಏಕೆ ಅಂಧನಾಗಿ ಜನಿಸಿದೆ ಎಂದು ಸರಿಯಾಗಿ ಚಿಂತಿಸುವುದಿಲ್ಲ.
ನೂನಂ ಸಮೃದ್ಧಾನ್ ಪಿತೃಲೋಕಭೂಮೌ
ಚಾಮೀಕರಾಭಾನ್ ಕ್ಷಿತಿಜಾನ್ ಪ್ರಫುಲ್ಲಾನ್ |
ವಿಚಿತ್ರವೀರ್ಯಸ್ಯ ಸುತಃ ಸಪುತ್ರಃ
ಸಂಪಶ್ಯತೀದಂ ಹಿ ಕೃತಂ ನೃಶಂಸಮ್ ॥12॥
ಇಂತಹ ಕ್ರೂರಕರ್ಮವನ್ನು ಮಾಡಿದ ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರನು ಪರಲೋಕದಲ್ಲಿ ಸುವರ್ಣವರ್ಣವನ್ನು ಹೊಂದಿದ ಸಂತೋಷದಲ್ಲಿರುವ ರಾಜರನ್ನು ಪುತ್ರಸಹಿತನಾಗಿ ನೋಡುತ್ತಾನೆ! (ನೋಡುವುದಿಲ್ಲ ಎಂದು ಅಭಿಪ್ರಾಯ)
ವ್ಯೂಢೋತ್ತರಾಂಸಾನ್ ಪೃಥುಲೋಹಿತಾಕ್ಷಾನ್
ಇಮಾನ್ ಸ್ಮ ಪೃಚ್ಛನ್ ನ ಶೃಣೋತಿ ನೂನಮ್ |
ಪ್ರಸ್ಥಾಪಯತ್ಯತ್ರ ವನಂ ಸಶಂಕೋ
ಯುಧಿಷ್ಠಿರಂ ಸಾನುಜಮಾತ್ತಶಸ್ತ್ರಮ್ ॥13॥
ಸಹೋದರರಿಂದ ಸಹಿತನಾದ ಯುಧಿಷ್ಠಿರನನ್ನು ಶಸ್ತ್ರಸಹಿತನಾಗಿ ಆಶಂಕೆಯಿಂದ ವನಕ್ಕೆ ಕಳುಹಿಸಿ ವಿಶಾಲವಕ್ಷಸ್ಸುಳ್ಳ ಪೃಥುಲೋಹಿತಾಕ್ಷರಾದ ಇವರನ್ನು ವಿಚಾರಿಸಿದರೂ ಅಲ್ಲಿ ಯಾರಿಂದಲೂ ಇವರ ವಾರ್ತೆಯನ್ನು ಕೇಳುವುದಿಲ್ಲ.
ಯೋಽಯಂ ಪರೇಷಾಂ ಪೃತನಾಂ ಸಮೃದ್ಧಾಂ
ನಿರಾಯುಧೋ ದೀರ್ಘಭುಜೋ ನಿಹನ್ಯಾತ್ |
ಶ್ರುತ್ವೈವ ಶಬ್ದಂ ಚ ವೃಕೋದರಸ್ಯ
ಮುಂಚಂತಿ ಸೈನ್ಯಾನಿ ಶಕೃತ್ ಸಮೂತ್ರಮ್ ॥14॥
ಸ ಕ್ಷುತ್ಪಿಪಾಸಾಧ್ವಕೃಶಸ್ತರಸ್ವೀ
ಸಮೇತ್ಯ ನಾನಾಯುಧಬಾಣಪಾಣಿಃ |
ವನೇ ಸ್ಮರನ್ ವಾಸಮಿಮಂ ಸುಘೋರಂ
ಶೇಷಂ ನ ಕುರ್ಯಾದಿತಿ ನಿಶ್ಚಿತಂ ಮೇ ॥15॥
ಯಾವ ಈ ಭೀಮಸೇನನು ಆಯುಧವನ್ನೇ ಹಿಡಿಯದೇ ತನ್ನ ಭುಜಬಲದಿಂದಲೇ ಶತ್ರುಗಳ ಸಮೃದ್ಧವಾದ ಸೈನ್ಯವನ್ನು ಒಬ್ಬನೇ ಕೊಲ್ಲಬಲ್ಲನೋ, ಯಾವ ಈ ವೃಕೋದರನ ಸಿಂಹನಾದವನ್ನು ಕೇಳಿಯೇ ಸೈನ್ಯಗಳು ಮಲಮೂತ್ರಗಳನ್ನು ವಿಸರ್ಜಿಸುತ್ತವೆಯೋ, ಅಂತಹ ಇವನು ಹಸಿವು-ನೀರಡಿಕೆ ಮತ್ತು ಮಾರ್ಗಾಯಾಸಗಳಿಂದ ಕೃಶನಾಗಿ ಯುದ್ಧವು ಪ್ರಾಪ್ತವಾದಾಗ ನಾನಾಯುಧಗಳನ್ನೂ, ಬಾಣಗಳನ್ನೂ ಕೈಯಲ್ಲಿ ಹಿಡಿದವನಾಗಿ ವೇಗದಿಂದ ಶತ್ರುಗಳನ್ನು ಸಮೀಪಿಸಿ ಈ ಸುಘೋರವಾದ ವನವಾಸವನ್ನು ಸ್ಮರಿಸುತ್ತಾ ಶತ್ರುಸೈನ್ಯದಲ್ಲಿ ಯಾರನ್ನೂ ಉಳಿಸುವುದಿಲ್ಲವೆಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ನ ಹ್ಯಸ್ಯ ವೀರ್ಯೇ ಚ ಬಲೇ ಚ ಕಶ್ಚಿತ್
ಸಮಃ ಪೃಥಿವ್ಯಾಂ ಭವಿತಾ ನರೇಷು |
ಸ ಶೀತವಾತಾತಪಕರ್ಶಿತಾಂಗೋ
ನ ಶೇಷಮಾಜಾವಸುಹೃತ್ಸು ಕುರ್ಯಾತ್ ॥16॥
ಇವನ ಪರಾಕ್ರಮಕ್ಕೂ ಮತ್ತು ಬಲಕ್ಕೂ ಸಮನಾದವನು ಭೂಮಿಯಲ್ಲಿ ಯಾವನೂ ಇಲ್ಲ. ಅಂತಹ ಇವನು ಚಳಿ, ಮಳೆ, ಬಿಸಿಲುಗಳಿಂದ ಕೃಶತ್ವವನ್ನು ಉಳ್ಳವನಾಗಿ ಯುದ್ಧದಲ್ಲಿ ಶತ್ರುಗಳಲ್ಲಿ ಯಾರನ್ನೂ ಉಳಿಸುವುದಿಲ್ಲ.
ಪ್ರಾಚ್ಯಾಂ ನೃಪಾಸ್ತ್ವೇಕರಥೇನ ಜಿತ್ವಾ
ವೃಕೋದರಃ ಸಾನುಚರಾನ್ ರಣೇಷು |
ಸ್ವಸ್ತ್ಯಾಗಮದ್ ಯೋಽತಿರಥಸ್ತರಸ್ವೀ
ಸೋಽಯಂ ವನೇ ಕ್ಲಿಶ್ಯತಿ ಚೀರವಾಸಾಃ ॥17॥
ಯಾವ ಅತಿರಥನೂ, ವೇಗಶಾಲಿಯೂ ಆದ ವೃಕೋದರನು ಏಕರಥನಾಗಿ ಹೋಗಿ ಪೂರ್ವದಿಕ್ಕಿನ ರಾಜರುಗಳನ್ನೂ, ಅವರ ಅನುಚರರನ್ನೂ ಯುದ್ಧಗಳಲ್ಲಿ ಜಯಿಸಿ, ಶರೀರದಲ್ಲಿ ಒಂದು ವ್ರಣವೂ ಇಲ್ಲದೇ ಹಿಂದಿರುಗಿದನೋ ಅಂತಹ ಇವನು ನಾರುಮಡಿಯನ್ನುಟ್ಟು ಕಾಡಿನಲ್ಲಿ ಕ್ಲೇಶಪಡುತ್ತಿದ್ದಾನೆ.
ಯೋ ದಂತಕೂಪೇಷ್ವಜಯತ್ ಸಮೇತಾನ್
ಸಮಾಗತಾನ್ ದಾಕ್ಷಿಣಾತ್ಯಾನ್ ಮಹೀಪಾನ್ |
ತಂ ಪಶ್ಯತೈನಂ ಸಹದೇವಮದ್ಯ
ತರಸ್ವಿನಂ ತಾಪಸವೇಷಧಾರಿಣಮ್ ॥18॥
ಯಾವ ಸಹದೇವನು ದಕ್ಷಿಣದೇಶದಲ್ಲಿ ವರಾಹದಂಷ್ಟ್ರಗಳಿಂದ ಕೂಪವುಂಟಾದ ಸ್ಥಳದಲ್ಲಿ ಯುದ್ಧಕ್ಕೆ ಒಟ್ಟಿಗೆ ಬಂದ ಎಲ್ಲ

ದಕ್ಷಿಣದೇಶದ ರಾಜರುಗಳನ್ನು ಗೆದ್ದನೋ ಅಂತಹ ವೇಗಶಾಲಿಯಾದ ಈ ಸಹದೇವನು ಮುನಿವೇಷವನ್ನು ಧರಿಸಿರುವುದನ್ನು ನೋಡಿ;
ಯಃ ಪಾರ್ಥಿವಾನೇಕರಥೇನ ವೀರೋ
ದಿಶಂ ಪ್ರತೀಚೀಂ ಪ್ರತಿ ಯುದ್ಧಶೌಂಡಃ |
ಜಿಗ್ಯೇ ರಣೇ ತಂ ನಕುಲಂ ವನೇಽಸ್ಮಿನ್
ಸಂಪಶ್ಯತೈನಂ ಮಲದಿಗ್ಧಗಾತ್ರಮ್ ॥19॥
ಯಾವ ಯುದ್ಧನಿಪುಣನಾದ ವೀರನಾದ ನಕುಲನು ಪಶ್ಚಿಮದಿಕ್ಕಿನಲ್ಲಿ ಒಂದೇ ರಥದಿಂದ ಕೂಡಿದವನಾಗಿ ಅನೇಕ ರಾಜರನ್ನು ಯುದ್ಧದಲ್ಲಿ ಗೆದ್ದನೋ ಅಂತಹ ನಕುಲನು ಕಾಡಿನಲ್ಲಿ ಕಶ್ಮಲದಿಂದ ಕೂಡಿದ ಶರೀರವುಳ್ಳವನಾಗಿರುವುದನ್ನು ನೋಡಿ;
ಸತ್ರೇ ಸಮೃದ್ಧೇಽತಿರಥಸ್ಯ ರಾಜ್ಞೋ
ವೇದೀತಳಾದುತ್ಪತಿತಾ ಸುತಾ ಯಾ |
ಸೇಯಂ ವನೇ ವಾಸಮಿಮಂ ಸುದುಃಖಂ
ಕಥಂ ಸಹತ್ಯದ್ಯ ಸತೀ ಸುಖಾರ್ಹಾ ॥20॥
ಯಾವ ದ್ರೌಪದಿಯು ಅತಿರಥನಾದ ದ್ರುಪದನ ಸಮೃದ್ಧವಾದ ಯಾಗದಲ್ಲಿ ವೇದಿ ಮಧ್ಯದಿಂದ ಮೇಲೆದ್ದು ಬಂದಳೋ ಅಂತಹ ಪತಿವ್ರತೆಯಾದ, ಸುಖಾರ್ಹಳಾದ ಇವಳು ಈ ದಿನ ಈ ವನವಾಸದ ದುಃಖವನ್ನು ಹೇಗೆ ಸಹಿಸುತ್ತಾಳೆ?
ತ್ರಿವರ್ಗಮುಖ್ಯಸ್ಯ ಸಮೀರಣಸ್ಯ
ದೇವೇಶ್ವರಸ್ಯಾಪಿ ತಥಾಽಶ್ವಿನೋಶ್ಚ |
ತೇಷಾಂ ಸುರಾಣಾಂ ತನಯಾಃ ಕಥಂ ನು
ವನೇ ಚರಂತ್ಯಲ್ಪಸುಖಾಃ ಸುಖಾರ್ಹಾಃ ॥21॥
ತ್ರಿವರ್ಗಪ್ರಧಾನನಾದ ಧರ್ಮನ, ವಾಯುವಿನ, ದೇವೇಶ್ವರನಾದ ಇಂದ್ರನ ಹಾಗೆಯೇ ಅಶ್ವಿನೀದೇವತೆಗಳ ಕುಮಾರರಾದ ಸುಖೋಚಿತರಾದ ಈ ಪಾಂಡವರು ಈ ಕಾಡಿನಲ್ಲಿ ಹೇಗೆ ಅಲ್ಪಸುಖದಿಂದ ಜೀವಿಸುತ್ತಿದ್ದಾರೆ?
ಜಿತೇ ಹಿ ಧರ್ಮಸ್ಯ ಸುತೇ ಸಭಾರ್ಯೇ
ಸಭ್ರಾತೃಕೇ ಸಾನುಚರೇ ನಿರಸ್ತೇ |
ದುರ್ಯೋಧನೇ ಚಾಪಿ ವಿವರ್ಧಮಾನೇ
ಕಥಂ ನ ಸೀದತ್ಯವನಿಃ ಸಶೈಲಾ ॥22॥
ಯಮಧರ್ಮನ ಮಗನಾದ ಯುಧಿಷ್ಠಿರನು ತಮ್ಮಂದಿರ, ಪತ್ನಿ ಮತ್ತು ಅನುಚರರ ಜೊತೆಯಲ್ಲಿ ಪರಾಜಿತನಾಗಿ ವನವಾಸವನ್ನು ಮಾಡುತ್ತಿರಲು ದುರ್ಯೋಧನನಾದರೂ ಅಭಿವೃದ್ಧಿಯನ್ನು ಹೊಂದುತಿತರಲು ಈ ಭೂಮಿಯು ಪರ್ವತಗಳ ಜೊತೆಯಲ್ಲಿ ಏಕೆ ಮುಳುಗಿಹೋಗುವುದಿಲ್ಲ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಷ್ಠದಶಾಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವಾಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.
*****
ನೂರ ಹದಿನೇಳನೆಯ ಅಧ್ಯಾಯ
ಸಾತ್ಯಕಿಯ ವೀರ ವಚನಗಳು. ಯುಧಿಷ್ಠಿರನಿಂದ ಅವನ ಸಮಾಧಾನ. ವೃಷ್ಣಿಗಳನ್ನು ಪೂಜಿಸಿ ಪಾಂಡವರಿಂದ ಬೀಳ್ಕೊಡುಗೆ.
ಸಾತ್ಯಕಿಃ
ನ ರಾಮ ಕಾಲಃ ಪರಿದೇವನಸ್ಯ
ಯದುತ್ತರಂ ತ್ವತ್ರ ತದೇವ ಸರ್ವೇ |
ಸಮಾಚರಾಮೋ ಹ್ಯನತೀತಕಾಲಂ
ಯುಧಿಷ್ಠಿರೋ ಯದ್ಯಪಿ ನಾಹ ಕಿಂಚಿತ್ ॥1॥
ಸಾತ್ಯಕಿ ಬಲರಾಮನೇ, ಇದು ವಿಲಾಪವನ್ನು ಮಾಡುವ ಕಾಲವಲ್ಲ. ಈಗ ಏನು ಉತ್ತರವನ್ನು ನೀಡಬೇಕೋ ಅದನ್ನೇ ನಾವೆಲ್ಲರೂ ಮಾಡೋಣ. ಯದ್ಯಪಿ ಯುಧಿಷ್ಠಿರನು ಏನನ್ನೂ ಹೇಳಲಿಲ್ಲ. ಆದರೂ ಕಾಲವು ಮೀರಿಹೋಗುವುದಕ್ಕಿಂತ ಮುಂಚೆಯೇ ನಮ್ಮ ಕರ್ತವ್ಯವನ್ನು ಮಾಡೋಣ.
ತೇ ನಾಥವಂತೋಽದ್ಯ ಭವಂತಿ ಕಾಲೇ
ಯೇ ನಾತ್ಮನಾ ಕರ್ಮ ಸಮಾರಭಂತೇ |
ತೇಷಾಂ ತು ಕಾರ್ಯೇಷು ಭವಂತಿ ನಾಥಾಃ
ಶೈಬ್ಯಾದಯೋ ರಾಮ ಯಥಾ ಯಯಾತೇಃ ॥2॥
ಯಾರು ತಾವೇ ತಮ್ಮ ಕಾರ್ಯವನ್ನು ಆರಂಭಮಾಡುವುದಿಲ್ಲವೋ ಅವರು ಯೋಗ್ಯವಾದ ಇಂತಹ ಕಾಲದಲ್ಲಿ ಅನ್ಯನಾಥರನ್ನು ಉಳ್ಳವರಾಗುತ್ತಾರೆ. ಬಲರಾಮನೇ, ಶೈಬ್ಯಾದಿಗಳು ಯಯಾತಿಯ ಕಾರ್ಯವನ್ನು ಸಾಧಿಸಿದಂತೆ ಅವರ ಕಾರ್ಯವನ್ನು ಅವರ ನಾಥರು ಸಾಧಿಸುತ್ತಾರೆ.
ತೇಷಾಂ ತಥಾ ರಾಮ ಸಮಾಚರಂತಃ
ಕಾರ್ಯಾಣಿ ನಾಥಾಃ ಸ್ವಮತೇನ ಲೋಕೇ |

ತೇ ನಾಥವಂತಃ ಪುರುಷಪ್ರವೀರಾ
ನಾನಾಥವತ್ ಕೃಚ್ಛ್ರಮವಾಪ್ನುವಂತಿ ॥3॥
ಎಲೈ ರಾಮನೇ, ಯಾರು ಆಶ್ರಿತರ ಕಾರ್ಯಗಳನ್ನು ನಾಥರಾಗಿ ತಮ್ಮ ಬುದ್ಧಿಯಿಂದಲೇ ಯೋಚಿಸಿ ಆರಂಭಮಾಡುತ್ತಾರೆಯೋ ಅಂತಹ ನಾಥವಂತರಾದ ಪುರುಷಶ್ರೇಷ್ಠರು ಅನಾಥರಂತೆ ಕಷ್ಟವನ್ನು ಹೊಂದುವುದಿಲ್ಲ.
ಕಸ್ಮಾದಯಂ ರಾಮಜನಾರ್ದನೌ ಚ
ಪ್ರದ್ಯುಮ್ನಸಾಂಬೌ ಚ ಮಯಾ ಸಮೇತೌ |
ವಸಂತ್ಯರಣ್ಯೇ ಸಹ ಸೋದರೀಯೈಃ
ತ್ರೈಲೋಕ್ಯನಾಥಾನಭಿಗಮ್ಯ ನಾಥಾನ್ ॥4॥
ತ್ರೈಲೋಕ್ಯನಾಥರಾದ ರಾಮಕೃಷ್ಣರನ್ನು, ನನ್ನಿಂದ ಸಹಿತರಾದ ಪ್ರದ್ಯುಮ್ನ-ಸಾಂಬರನ್ನು ನಾಥರನ್ನಾಗಿ ಪಡೆದ ಈ ಧರ್ಮರಾಜನು ತನ್ನ ತಮ್ಮಂದಿರ ಜೊತೆಯಲ್ಲಿ ಏಕೆ ಅರಣ್ಯದಲ್ಲಿ ವಾಸಮಾಡುತ್ತಿದ್ದಾನೆ?
ನಿರ್ಯಾತು ಸಾ ತ್ವದ್ಯ ದಶಾರ್ಹಸೇನಾ
ಪ್ರಭೂತನಾನಾಯುಧಚಿತ್ರವರ್ಮಾ |
ಯಮಕ್ಷಯಂ ಗಚ್ಛತು ಧಾರ್ತರಾಷ್ಟ್ರಃ
ಸಬಾಂಧವೋ ವೃಷ್ಣಿಬಲಾಭಿಭೂತಃ ॥5॥
ಈ ದಿನವೇ ದಶಾರ್ಹಸೈನ್ಯವು ನಾನಾಯುಧಗಳನ್ನೂ, ವಿಚಿತ್ರಕವಚಗಳನ್ನೂ ಧರಿಸಿ ಯುದ್ಧಕ್ಕೆ ಹೊರಡಲಿ. ವೃಷ್ಣಿಗಳ ಬಲದಿಂದ ಅಭಿಭೂತನಾದ ದುರ್ಯೋಧನನು ತನ್ನ ಬಾಂಧವರಿಂದೊಡಗೂಡಿ ಯಮಲೋಕಕ್ಕೆ ಹೋಗಲಿ.
ತ್ವಂ ಹ್ಯೇವ ಕೋಪಾತ್ ಪೃಥಿವೀಮಪೀಮಾಂ
ಸಂವೇಷ್ಟಯೇಸ್ತಿಷ್ಠತು ಶಾರ್ಙ್ಗಧನ್ವಾ |
ಸ ಧಾರ್ತರಾಷ್ಟ್ರಂ ಜಹಿ ಸಾನುಬಂಧಂ
ವೃತ್ರಂ ಯಥಾ ದೇವಪತಿರ್ನರೇಂದ್ರ ॥6॥
ಎಲೈ ಬಲರಾಮನೇ, ನೀನೇ ನಿನ್ನ ಸಿಟ್ಟಿನಿಂದ ಸಮಗ್ರವಾದ ಈ ಭೂಮಿಯನ್ನು ಚಾಪೆಯನ್ನು ಸುತ್ತಲು ಸಮರ್ಥನಾಗಿದ್ದೀಯೆ. ಕೃಷ್ಣನ ಮಾತು ಹಾಗಿರಲಿ. ಅಂತಹ ನೀನು ದೇವೇಂದ್ರನು ವೃತ್ರಾಸುರನನ್ನು ಕೊಂದಂತೆ, ದುರ್ಯೋಧನನನ್ನು ಅವನ ಅನುಚರರ ಸಹಿತವಾಗಿ ಸಂಹಾರ ಮಾಡು.
ಭ್ರಾತಾ ಚ ಮೇ ಯಃ ಸ ಸಖಾ ಗುರುಶ್ಚ
ಜನಾರ್ದನಸ್ಯಾತ್ಮಸಮಶ್ಚ ಪಾರ್ಥಃ |
ತದರ್ಥಮೇಕೋ ಹಿ ಯ ಉದ್ಯಮಂ ವೈ
ಕರೋತಿ ಕರ್ಣೋಽಸ್ತ್ರಮವಾರಣೀಯಮ್ ॥7॥
ತಸ್ಯಾಸ್ತ್ರವರ್ಷಾಣ್ಯಹಮುತ್ತಮಾಸ್ತ್ರೈಃ
ನಿಹತ್ಯ ಸರ್ವಾಣಿ ರಣೇಽಭಿಭೂಯ |
ಕಾಯಾಚ್ಛಿರಃ ಸರ್ಪವಿಷಾಗ್ನಿಕಲ್ಪೈಃ
ಶರೋತ್ತಮೈರುನ್ಮಥಿತಾಸ್ಮಿ ರಾಮ ॥8॥
ಅರ್ಜುನನು ನನ್ನ ಸಹೋದರ, ನನ್ನ ಸ್ನೇಹಿತ, ಗುರು ಮತ್ತು ಜನಾರ್ದನನಿಗೆ ಪ್ರಾಣಸಮಾನನಾದವನು. ಅವನ ಸಲುವಾಗಿ ಅವಾರಣೀಯವಾದ ಅಸ್ತ್ರೋದ್ಯಮವನ್ನು ಮಾಡುತ್ತಿರುವವನು ಕರ್ಣನೊಬ್ಬನೇ. ಎಲೈ ರಾಮನೇ, ನಾನಾದರೂ ನನ್ನ ಉತ್ತಮಾಸ್ತ್ರಗಳಿಂದ ಕರ್ಣನ ಅಸ್ತ್ರದ ಮಳೆಯನ್ನು ನಿವಾರಿಸಿ ಯುದ್ಧದಲ್ಲಿ ಅವನನ್ನು ಮೆಟ್ಟಿ ಅವನನ್ನು ಸಂಹರಿಸಿ ಸರ್ಪವಿಷಕ್ಕೂ, ಅಗ್ನಿಗೂ ಸಮಾನವಾದ ನನ್ನ ಶ್ರೇಷ್ಠವಾದ ಬಾಣಗಳಿಂದ ಅವನ ದೇಹದಿಂದ ಶಿರಸ್ಸನ್ನು ಕತ್ತರಿಸುವವನಾಗುವೆನು.
ಖಡ್ಗೇನ ಚಾಹಂ ನಿಶಿತೇನ ಸಂಖೇ
ಕಾಯಾಚ್ಛಿರಸ್ತಸ್ಯ ಬಲಾತ್ ಪ್ರಮಥ್ಯ |
ತತೋಽಸ್ಯ ಸರ್ವಾನನುಗಾನ್ ಹನಿಷ್ಯೇ
ದುರ್ಯೋಧನಂ ಚಾಪಿ ಕುರೂಂಶ್ಚ ಸರ್ವಾನ್ ॥9॥
ನಾನು ನನ್ನ ಹರಿತವಾದ ಖಡ್ಗದಿಂದ ಯುದ್ಧದಲ್ಲಿ ಅವನನ್ನು ಪರಾಭವಗೊಳಿಸಿ ಅವನ ದೇಹದಿಂದ ಶಿರಸ್ಸನ್ನು ಕತ್ತರಿಸಿ ಅನಂತರ ಅವನ ಅನುಚರರನ್ನೂ, ದುರ್ಯೋಧನನನ್ನೂ ಮತ್ತು ಎಲ್ಲಾ ಕುರುಗಳನ್ನೂ ಸಂಹರಿಸುವೆನು.
ಆತ್ತಾಯುಧಂ ಮಾ ಯುಧಿ ರೌಹಿಣೇಯ
ಪಶ್ಯಂತು ಸರ್ವೇ ಯುಧಿ ಜಾತಹರ್ಷಾಃ |
ನಿಘ್ನಂತಮೇಕಂ ಕುರುಯೌಧಮುಖ್ಯಾನ್
ಅಗ್ನಿಂ ಮಹಾಕಕ್ಷಮಿವಾನಿಲೇನ ॥10॥
ಎಲೈ ಬಲರಾಮನೇ, ಕೈಯಲ್ಲಿ ಆಯುಧವನ್ನು ಹಿಡಿದ ನನ್ನನ್ನು ಯುದ್ಧದಲ್ಲಿ ಸಂತೋಷದಿಂದ ಎಲ್ಲರೂ ನೋಡಲಿ. ವಾಯುವಿನ ಸಹಾಯದಿಂದ ದೊಡ್ಡ ಹುಲ್ಲುಗಾವಲನ್ನು ಸುಡುವ ಅಗ್ನಿಯಂತೆ ಇರುವ, ಕುರುಸೈನ್ಯದಲ್ಲಿ ಪ್ರಧಾನರಾದವರನ್ನು ಒಬ್ಬನೇ ಕೊಲ್ಲುತ್ತಿರುವ, ನನ್ನನ್ನು ಸಂತೋಷದಿಂದ ನೋಡಲಿ.
ಪ್ರದ್ಯುಮ್ನಮುಕ್ತಾನ್ ನಿಶಿತಾನ್ನ ಶಕ್ತಾಃ
ಸೋಢುಂ ಕೃಪದ್ರೋಣವಿಕರ್ಣಕರ್ಣಾಃ |

ಜಾನಾಸಿ ವೀರ್ಯಂ ಹಿ ತವಾತ್ಮಜಸ್ಯ
　　ಕಾರ್ಷ್ಣಿರ್ಭವತ್ಯೇಷ ಯಥಾ ರಣಸ್ಯ ॥11॥
ಪ್ರದ್ಯುಮ್ನನು ಪ್ರಯೋಗಿಸಿದ ನಿಶಿತವಾದ ಬಾಣಗಳನ್ನು ಸಹಿಸಲು ಕೃಪ-ದ್ರೋಣ ವಿಕರ್ಣ-ಕರ್ಣರು ಸಮರ್ಥರಲ್ಲ. ಕೃಷ್ಣಸುತನಾದ ಈ ಪ್ರದ್ಯುಮ್ನನು ಯುದ್ಧದಲ್ಲಿ ಹೇಗೆ ಇರುತ್ತಾನೆ ಎಂದು ನಿನ್ನ ಪುತ್ರನ ಪರಾಕ್ರಮವನ್ನು ನೀನೇ ತಿಳಿದಿದ್ದೀಯೆ.
ಸಾಂಬಃ ಸಸೂತಂ ಸರಥಂ ಭುಜಾಭ್ಯಾಂ
　　ದುಃಶಾಸನಂ ಶಾಸ್ತು ಬಲಾತ್ ಪ್ರಮಥ್ಯ |
ನ ವಿದ್ಯತೇ ಜಾಂಬವತೀಸುತಸ್ಯ
　　ರಣೇಽವಿಷಹ್ಯಂ ಹಿ ರಣೋತ್ಕಟಸ್ಯ ॥12॥
ಸಾಂಬನು ತನ್ನ ಭುಜಬಲದಿಂದ ರಥಸೂತಸಹಿತನಾದ ದುಶ್ಶಾಸನನನ್ನು ಪರಾಭವಗೊಳಿಸಿ ಅವನನ್ನು ಶಾಸನಮಾಡಲಿ. ರಣೋತ್ಕಟನಾದ ಜಾಂಬವತೀ ಸುತನಾದ ಸಾಂಬನಿಗೆ ಯುದ್ಧದಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ.
ಏತೇನ ಬಾಲೇನ ಹಿ ಶಂಬರಸ್ಯ
　　ದೈತ್ಯಸ್ಯ ಸೈನ್ಯಂ ತರಸಾ ಪ್ರಣುದ್ಯ |
ಹತಃ ಸ ಪಾಪೋ ಯುಧಿ ಕೇವಲೇನ
　　ಯುದ್ಧೇಽದ್ವಿತೀಯೋಽತುಲಬಲವೀರ್ಯಃ ॥13॥
ಅವನು ಬಾಲನಾಗಿರುವಾಗಲೇ ಶಂಬರಾಸುರನ ಸೈನ್ಯವನ್ನು ತನ್ನ ಬಲದಿಂದ ಪರಾಭವಗೊಳಿಸಿ ತಾನೊಬ್ಬನೇ ಅತುಲಬಲವೀರ್ಯನಾಗಿ, ಅದ್ವಿತೀಯನಾಗಿ ಯುದ್ಧದಲ್ಲಿ ಅವನನ್ನು ಸಂಹರಿಸಿದನು.
ವೃತ್ತೋರುರತ್ಯಾಯತಪೀನಬಾಹುಃ |
　　ಏಕೇನ ಸಂಖೇ ನಿಹತೋಽಶ್ವಚಕ್ರಃ |
ಕೋ ನಾಮ ಸಾಂಬಸ್ಯ ರಣೇ ಮನುಷ್ಯೋ
　　ಗತ್ವಾಽಽಭಿಮುಖ್ಯಂ ಸಹಸಾ ಪ್ರಮುಚ್ಯೇತ್ ॥14॥
ಪುಷ್ಟವಾದ ಮತ್ತು ದೀರ್ಘವಾದ ವರ್ತುಲವಾದ ಬಾಹುಗಳುಳ್ಳ ಸಾಂಬನೊಬ್ಬನೇ ಯುದ್ಧದಲ್ಲಿ ಅಶ್ವಸಮೂಹವನ್ನು ನಾಶಮಾಡಿದನು. ಯಾವ ಮನುಷ್ಯನು ಯುದ್ಧದಲ್ಲಿ ಸಾಂಬನ ಎದುರಿಗೆ ನಿಂತು ಜೀವಸಹಿತವಾಗಿ ಹಿಂದೆ ಬರುತ್ತಾನೆ?
ಯಥೈವ ಯತ್ತಸ್ಯ ಪುರಂದರಸ್ಯ
　　ಹರಿಧ್ವಜಂ ಸ್ಯಂದನಮಾಸ್ಥಿತಸ್ಯ |
ಯಥಾ ಪ್ರವಿಶ್ಯಾಂತಿಕಮಂತಕಸ್ಯ
　　ಕಾಲೇ ಮನುಷ್ಯೋ ನ ಹಿ ವಿಕ್ರಮೇತ |
ತಥಾ ಪ್ರವಿಶ್ಯಾಂತರಮಸ್ಯ ಸಂಖೇ
　　ಕೋ ನಾಮ ಜೀವನ್ ಪುನರಾವ್ರಜೇತ ॥15॥
ಹೇಗೆ ಹರಿಧ್ವಜವನ್ನು ಹೊಂದಿದ ರಥದಲ್ಲಿ ಕುಳಿತು ಯುದ್ಧೋದ್ಯುಕ್ತನಾದ ದೇವೇಂದ್ರನ ಮುಂದೆ ನಿಂತವನು ಅಥವಾ ಯಮನ ಸಮ್ಮುಖದಲ್ಲಿ ಪ್ರವೇಶಿಸಿದ ಮನುಷ್ಯನು ತನ್ನ ವಿಕ್ರಮದಿಂದ ಹಿಂದೆ ಬರುವುದಿಲ್ಲವೋ ಹಾಗೆಯೇ ಯುದ್ಧದಲ್ಲಿ ಸಾಂಬನನ್ನು ಎದುರಿಸಿದ ಯಾವ ವೀರನೂ ಜೀವಸಹಿತವಾಗಿ ಹಿಂದೆ ಬರುವುದಿಲ್ಲ.
ದ್ರೋಣಂ ಚ ಭೀಷ್ಮಂ ಚ ಮಹಾರಥೌ ತೌ
　　ದ್ರೌಣಿಂ ಚ ವೀರಂ ಸಹಸೋಮದತ್ತಮ್ |
ಸರ್ವಾಣಿ ಸೈನ್ಯಾನಿ ಚ ವಾಸುದೇವಃ
　　ಪ್ರಧಕ್ಷ್ಯತೇ ಸಾಯಕವಹ್ನಿಜಾಲೈಃ ॥16॥
ಮಹಾರಥರಾದ ಆ ಭೀಷ್ಮದ್ರೋಣರು, ವೀರರಾದ ಅಶ್ವತ್ಥಾಮರು, ಸೋಮದತ್ತ ಮತ್ತು ಎಲ್ಲಾ ಸೈನ್ಯಗಳು ಇವೆಲ್ಲವನ್ನೂ ವಾಸುದೇವನೊಬ್ಬನೇ ತನ್ನ ಶರವಹ್ನಿ ಸಮೂಹಗಳಿಂದ ಸುಡಬಲ್ಲನು.
ಕಿಂ ನಾಮ ಲೋಕೇಷ್ವವಿಷಹ್ಯಮಸ್ತಿ
　　ಕೃಷ್ಣಸ್ಯ ಸರ್ವೇಷು ಚ ದೈವತೇಷು |
ಆತ್ತಾಯುಧಸ್ಯೋತ್ತಮಬಾಣಪಾಣೇಃ
　　ಚಕ್ರಾಯುಧಸ್ಯಾಪ್ರತಿಮಸ್ಯ ಯುದ್ಧೇ ॥17॥
ಕೈಯಲ್ಲಿ ಚಕ್ರವನ್ನು ಹಿಡಿದು ಬೇರೆ ಆಯುಧಗಳನ್ನೂ ಉತ್ತಮವಾದ ಬಾಣಗಳನ್ನೂ ಹಿಡಿದು, ಯುದ್ಧದಲ್ಲಿ ಅಪ್ರತಿಮನಾದ ಕೃಷ್ಣನ ಎದುರಿಗೆ ಲೋಕದಲ್ಲೇ ಆಗಲೀ, ಸರ್ವದೇವತೆಗಳಲ್ಲೇ ಆಗಲಿ ಅಸಾಧ್ಯವಾದುದು ಯಾವುದಿದೆ?
ತತೋಽನಿರುದ್ಧೋಽಪ್ಯಸಿಚರ್ಮಪಾಣಿಃ
　　ಮಹೀಮಿಮಾಂ ಧಾರ್ತರಾಷ್ಟ್ರೈರ್ವಿಸಂಜ್ಞೈಃ |
ಹೃತೋತ್ತಮಾಂಗೈರ್ನಿಹತೈಃ ಕರೋತು
　　ಕೀರ್ಣಾಂಕುಶೈರ್ವೇದಿಮಿವಾಧ್ವರೇಷು ॥18॥
ಅನಂತರ ಅನಿರುದ್ಧನು ಅಸಿಚರ್ಮಗಳನ್ನು ಕೈಯಲ್ಲಿ ಹಿಡಿದು ಯಜ್ಞದಲ್ಲಿ ವೇದಿಕೆಯನ್ನು ಕುಶಗಳಿಂದ ಹರಡಿದಂತೆ ಈ ಭೂಮಿಯನ್ನು ವಿಸಂಜ್ಞರಾಗಿ ಮೃತರಾದ ದುರ್ಯೋಧನಾದಿಗಳ ಶಿರಸ್ಸಿನಿಂದ ಹರಡಲಿ.
ಗದೋಲ್ಮುಕೌ ಬಾಹುಕಭಾನುನೀಥಾಃ

ಶೂರಶ್ಚ ಸಂಖೇ ನಿಶಠಃ ಕುಮಾರಃ |
ರಣೋತ್ಕಟೌ ಸಾರಣಚಾರುದೇಷ್ಣೌ
ಕುಲೋಚಿತಂ ವಿಪ್ರಥಯಂತು ಲೋಕೇ ॥19॥
ಗದೋಲ್ಮುಕರು, ಬಾಹುಕಭಾನುನೀಥರು, ಯುದ್ಧದಲ್ಲಿ ಶೂರನಾದ ನಿಶಠನು, ರಣೋತ್ಕಟರಾದ ಸಾರಣಚಾರುದೇಷ್ಣರು ನಮ್ಮ ಕುಲೊಚಿತವಾದುದನ್ನು ಲೋಕದಲ್ಲಿ ಯುದ್ಧದಲ್ಲಿ ಪ್ರಸಿದ್ಧಿಪಡಿಸಲಿ.
ಸವೃಷ್ಣಿಭೋಜಾಂಧಕಯೋಧಮುಖ್ಯಾ
ಸಮಾಗತಾ ಕ್ಷತ್ರಿಯಶೂರಸೇನಾ |
ಹತ್ವಾ ರಣೇ ತಾನ್ ಧೃತರಾಷ್ಟ್ರಪುತ್ರಾನ್
ಲೋಕೇ ಯಶಃ ಸ್ಫೀತಮುಪಾಕರೋತು ॥20॥
ವೃಷ್ಣಿಭೋಜಾಂಧಕರ ಯೋಧಮುಖ್ಯರಿಂದ ಕೂಡಿದ, ಕ್ಷತ್ರಿಯಶೂರರ ಸೇನೆಯು ಬಂದು ಯುದ್ಧದಲ್ಲಿ ಧೃತರಾಷ್ಟ್ರಪುತ್ರರನ್ನು ಸಂಹರಿಸಿ ಲೋಕದಲ್ಲಿ ನಿರ್ಮಲವಾದ ಯಶಸ್ಸನ್ನು ಪ್ರವರ್ತಿಸಲಿ.
ತತೋऽಭಿಮನ್ಯುಃ ಪೃಥಿವೀಂ ಪ್ರಶಾಸ್ತು
ಯಾವದ್ ವ್ರತಂ ಧರ್ಮಭೃತಾಂ ವರಿಷ್ಠಃ |
ಯುಧಿಷ್ಠಿರಃ ಪಾಲಯತೇ ಮಹಾತ್ಮಾ
ದ್ಯೂತೇ ಯಥೋಕ್ತಂ ಕುರುಸತ್ತಮೇನ ॥21॥
ಅನಂತರ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಮಹಾತ್ಮನಾದ ಕುರುಶ್ರೇಷ್ಠನಾದ ಧರ್ಮರಾಜನು ದ್ಯೂತದಲ್ಲಿ ಹೇಳಿದಂತೆ ತನ್ನ ಪ್ರತಿಜ್ಞೆಯನ್ನು ಪಾಲಿಸುವವರೆಗೆ ಅಭಿಮನ್ಯುವು ಭೂಮಿಯನ್ನು ಆಳಲಿ.
ಅಸ್ಮತ್ಪ್ರಮುಕ್ತೈರ್ವಿಶಿಖೈರ್ಜಿತಾರಿಃ
ತತೋ ಮಹೀಂ ಭೋಕ್ಷ್ಯತಿ ಧರ್ಮರಾಜಃ |
ನಿರ್ಧಾರ್ತರಾಷ್ಟ್ರಾಂ ಹತಸೂತಪುತ್ರಾಮ್
ಏತದ್ಧಿ ನಃ ಕೃತ್ಯತಮಂ ಯಶಸ್ಯಮ್ ॥22॥
ನಾವು ಪ್ರಯೋಗಿಸಿದ ನಿಶಿತವಾದ ಬಾಣಗಳಿಂದ ಶತ್ರುವು ನಾಶಮಾಡಲ್ಪಡುತ್ತಿರಲು ಅನಂತರ ಧರ್ಮರಾಜನು ಧಾರ್ತರಾಷ್ಟ್ರರಹಿತವಾದ, ಕರ್ಣರಹಿತವಾದ ಭೂಮಿಯನ್ನು ಆಳುವನು. ಇದು ನಾವು ಈ ದಿನ ಮಾಡಬೇಕಾದ ಯಶಸ್ಕರವಾದ ಶ್ರೇಷ್ಠವಾದ ಕರ್ತವ್ಯ.
ವಾಸುದೇವಃ
ಅಸಂಶಯಂ ಮಾಧವ ಸತ್ಯಮೇತದ್
ಗೃಹ್ಣೀಮ ತೇ ವಾಕ್ಯಮದೀನಸತ್ತ್ವ |
ಸ್ವಾಭ್ಯಾಂ ಭುಜಾಭ್ಯಾಮಜಿತಾಂ ತು ಭೂಮಿಂ
ನೇಚ್ಛೇತ್ ಕುರೂಣಾಮೃಷಭಃ ಕಥಂಚಿತ್ ॥23॥
ವಾಸುದೇವ ಎಲೈ ಮಧುಕುಲೋತ್ಪನ್ನನಾದ ಸಾತ್ಯಕಿಯೇ, ಅದೀನಸತ್ವನೇ, ನಿನ್ನ ಸತ್ಯವಾಕ್ಯಗಳನ್ನು ನಾವು ನಿಸ್ಸಂಶಯವಾಗಿ ಸ್ವೀಕರಿಸುತ್ತೇವೆ. ಆದರೆ ಕುರುಶ್ರೇಷ್ಠನಾದ ಧರ್ಮರಾಜನು ತನ್ನ ಭುಜಬಲದಿಂದ ಜಯಿಸದ ಭೂಮಿಯನ್ನು ಭೋಗಿಸಲು ಯಾವ ಕಾರಣದಿಂದಲೂ ಇಷ್ಟಪಡುವುದಿಲ್ಲ.
ನ ಹ್ಯೇಷ ಕಾಮಾನ್ನ ಭಯಾನ್ನ ಲೋಭಾದ್
ಯುಧಿಷ್ಠಿರೋ ಜಾತು ಜಹ್ಯಾತ್ ಸ್ವಧರ್ಮಮ್ |
ಭೀಮಾರ್ಜುನೌ ಚಾತಿರಥೌ ಯಮೌ ಚ
ಯಥೈವ ಕೃಷ್ಣಾ ದ್ರುಪದಾತ್ಮಜೇಯಮ್ ॥24॥
ಈ ಯುಧಿಷ್ಠಿರನು ಕಾಮದಿಂದಾಗಲೀ, ಭಯದಿಂದಾಗಲೀ, ಲೋಭದಿಂದಾಗಲೀ ಎಂದೂ ತನ್ನ ಧರ್ಮವನ್ನು ಬಿಡುವುದಿಲ್ಲ. ಅತಿರಥರಾದ ಭೀಮಾರ್ಜುನರಾಗಲೀ, ನಕುಲಸಹದೇವರಾಗಲೀ ದ್ರುಪದಾತ್ಮಜೆಯಾದ ಕೃಷ್ಣೆಯಾಗಲೀ ಎಂದೂ ತಮ್ಮ ಧರ್ಮವನ್ನು ಬಿಡುವುದಿಲ್ಲ.
ಉಭೌ ಹಿ ಯುದ್ಧೇऽಪ್ರತಿಮೌ ಪೃಥಿವ್ಯಾಂ
ವೃಕೋದರಶ್ಚೈವ ಧನಂಜಯಶ್ಚ |
ಕಸ್ಮಾನ್ನ ಕೃತ್ಸ್ನಾಂ ಪೃಥಿವೀಂ ಪ್ರಶಾಸೇತ್
ಮಾದ್ರೀಸುತಾಭ್ಯಾಂ ಚ ಪುರಸ್ಕೃತೋऽಸೌ ॥25॥
ವೃಕೋದರ-ಧನಂಜಯರಿಬ್ಬರೂ ಭೂಮಿಯಲ್ಲಿ ಯುದ್ಧದಲ್ಲಿ ಅಪ್ರತಿಮರಾದವರು. ಮಾದ್ರೀಸುತರಿಂದಲೂ ಪುರಸ್ಕೃತನಾದ ಈ ಧರ್ಮರಾಜನು ತಾನೇ ಭೂಮಿಯನ್ನು ಗೆದ್ದು ಏಕೆ ಆಳುವುದಿಲ್ಲ?
ಯದಾ ತು ಪಾಂಚಾಲಪತಿರ್ಮಹಾತ್ಮಾ
ಸಕೇಕಯಾಶ್ಚೇದಿಪತಿರ್ವಯಂ ಚ |
ಯೋತ್ಸ್ಯಾಮ ವಿಕ್ರಮ್ಯ ಪರಾಂಸ್ತದಾ ವೈ
ಸುಯೋಧನಸ್ತ್ಯಕ್ಷ್ಯತಿ ಜೀವಲೋಕಮ್ ॥26॥
ಯಾವಾಗ ಪಾಂಚಾಲರಾಜನೂ, ಮಹಾತ್ಮನಾದ ದ್ರುಪದನೂ, ಚೇದಿ ರಾಜನೂ ಮತ್ತು ನಾವೂ ಸಹ ಪರಾಕ್ರಮದಿಂದ ಯುದ್ಧವನ್ನು

ಮಾಡುವೆವೋ ಆಗ ಸುಯೋಧನನು ಮನುಷ್ಯಲೋಕವನ್ನು ತೊರೆಯುತ್ತಾನೆ.
ಯುಧಿಷ್ಠಿರಃ
ನ ತಚ್ಚಿತ್ರಂ ಮಾಧವ ಯದ್ ಬ್ರವೀಷಿ
ಸತ್ಯಂ ತು ಮೇ ರಕ್ಷಿತವ್ಯಂ ನ ರಾಜ್ಯಮ್ |
ಕೃಷ್ಣಶ್ಚ ಮಾಂ ವೇದ ಯಥಾವದೇಕಃ
ಕೃಷ್ಣಂ ಚ ವೇದಾಹಮಥೋ ಯಥಾವತ್ ||27||
ಯುಧಿಷ್ಠಿರ ಸಾತ್ಯಕಿಯೇ, ನೀನು ಮಾತನಾಡುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಆದರೆ ನಾನು ಸತ್ಯವನ್ನು ರಕ್ಷಿಸಬೇಕು. ರಾಜ್ಯವನ್ನಲ್ಲ. ಕೃಷ್ಣನೊಬ್ಬನೇ ನನ್ನನ್ನು ಸರಿಯಾಗಿ ತಿಳಿದಿದ್ದಾನೆ. ನಾನೂ ಸಹ ಕೃಷ್ಣನನ್ನು ಸರಿಯಾಗಿ ತಿಳಿದಿದ್ದೇನೆ.
ಯದೈವ ಕಾಲಂ ಪುರುಷಪ್ರವೀರೋ
ವೇತ್ಸ್ಯತ್ಯಯಂ ಮಾಧವ ವಿಕ್ರಮಸ್ಯ |
ತದಾ ರಣೇ ತ್ವಂ ಚ ಶಿನಿಪ್ರವೀರ
ಸುಯೋಧನಂ ಜೇಷ್ಯಸಿ ಕೇಶವಶ್ಚ ||28||
ಎಲೈ ಮಧುಕುಲೋತ್ಪನ್ನನಾದ ಸಾತ್ಯಕಿಯೇ, ಈ ಪುರುಷಪ್ರವೀರನಾದ ಕೃಷ್ಣನು ಯಾವಾಗ ಯುದ್ಧದ ಕಾಲವೆಂದು ತಿಳಿಯುವನೋ, ಎಲೈ ಶಿನಿಪ್ರವೀರನೇ, ಆಗ ನೀನೂ ಮತ್ತು ಕೃಷ್ಣನೂ ಯುದ್ಧದಲ್ಲಿ ಸುಯೋಧನನ್ನು ಗೆಲ್ಲುವಿರಿ.
ಪ್ರತಿಪ್ರಯಾಂತ್ವದ್ಯ ದಶಾರ್ಹವೀರ
ದೃಷ್ಟೋಽಸ್ಮಿ ನಾಥೈರ್ನರದೇವನಾಥೈಃ |
ಧರ್ಮೇಽಪ್ರಮಾದಂ ಕುರುತಾಪ್ರಮೇಯಾ
ದ್ರಷ್ಟಾಸ್ಮಿ ಭೂಯಃ ಸುಖಿನಃ ಸಮೇತಾನ್ ||29||
ದಶಾರ್ಹವೀರನೇ, ಈಗ ಹಿಂದಿರುಗಿ. ನರದೇವನಾಥರಾದ ನಿಮ್ಮಿಂದ ನೋಡಲ್ಪಟ್ಟಿದ್ದೇವೆ. ಅಪ್ರಮೇಯರಾದ ನೀವು ಧರ್ಮದ ವಿಷಯದಲ್ಲಿ ಪ್ರಮಾದವನ್ನು ಮಾಡಬೇಡಿ. ನಾನು ಪುನಃ ಸುಖದಿಂದ ಒಟ್ಟಿಗೆ ಇರುವ ನಿಮ್ಮನ್ನು ನೋಡುವೆನು.
ವೈಶಂಪಾಯನಃ
ತೇಽನ್ಯೋನ್ಯಮಾಮಂತ್ರ್ಯ ತಥಾಽಭಿವಾದ್ಯ
ವೃದ್ಧಾನ್ ಪರಿಷ್ವಜ್ಯ ಶಿಶೂಂಶ್ಚ ಸರ್ವಾನ್ |
ಯದುಪ್ರವೀರಾಃ ಸ್ವಗೃಹಾಣಿ ಜಗ್ಮೂ
ರಾಜಾಽಪಿ ತೀರ್ಥಾನ್ಯನುಸಂಚಚಾರ ||30||
ವೈಶಂಪಾಯನ ಆ ಯದುಪ್ರವೀರರು ಪರಸ್ಪರ ಅನುಮತಿಯನ್ನು ಪಡೆದು ಹಿರಿಯರನ್ನು ನಮಸ್ಕರಿಸಿ, ಚಿಕ್ಕವರನ್ನೆಲ್ಲಾ ಆಲಿಂಗಿಸಿ ತಮ್ಮ ಮನೆಗೆ ಹಿಂದಿರುಗಿದರು. ಯುಧಿಷ್ಠಿರನಾದರೂ ತನ್ನ ತೀರ್ಥಯಾತ್ರೆಯನ್ನು ಮುಂದುವರಿಸಿದನು.
ಸಮರ್ಚ್ಯ ಕೃಷ್ಣಂ ತ್ವಥ ಧರ್ಮರಾಜೋ
ವಿದರ್ಭರಾಜೋಪಚಿತಾಂ ಸುತೀರ್ಥಮ್ |
ಜಗಾಮ ಪುಣ್ಯಾಂ ಸರಿತಂ ಪಯೋಷ್ಣೀಂ
ಸಭ್ರಾತೃಬಂಧುಃ ಸಹ ಲೋಮಶೇನ ||31||
ಆಗ ಧರ್ಮರಾಜನು ಕೃಷ್ಣನನ್ನು ಪೂಜಿಸಿ ವಿದರ್ಭರಾಜನಿಂದ ಸೇವಿತವಾದ ಶ್ರೇಷ್ಠವಾದ ತೀರ್ಥವಾದ ಪವಿತ್ರವಾದ ಪಯೋಷ್ಣೀ ನದಿಯನ್ನು ತನ್ನ ಭ್ರಾತೃ ಬಂಧು ಮತ್ತು ಲೋಮಶರ ಜೊತೆಯಲ್ಲಿ ತಲುಪಿದನು.
ಸುತೇನ ಸೋಮೇನ ವಿಮಿಶ್ರಿತೋದಾಂ
ಪಯಃ ಪಯೋಷ್ಣೀಂ ಪ್ರತಿ ಸೋಽಧ್ಯುವಾಸ |
ದ್ವಿಜಾತಿಮುಖ್ಯೈರ್ಮುದಿತೈರ್ಮಹಾತ್ಮಾ
ಸಂಸ್ತೂಯಮಾನಃ ಸ್ತುತಿಭಿಃ ಪುಷ್ಕಲಾಭಿಃ ||32||
ಸೋಮರಸದಿಂದ ಮಿಶ್ರಿತವಾದ ಉದಕವನ್ನು ಹೊಂದಿದ ಪಯೋಷ್ಣೀ ನದಿಯ ತೀರದಲ್ಲಿ ಆ ಮಹಾತ್ಮನಾದ ಧರ್ಮರಾಜನು ಅನೇಕ ಸಂತೋಷಗೊಂಡ ಬ್ರಾಹ್ಮಣಶ್ರೇಷ್ಠರಿಂದ ಅನೇಕ ಪ್ರಶಂಸೆಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಸುಖವಾಗಿ ವಾಸಮಾಡಿದನು.

|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತದಶಾಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು.
*****
ನೂರ ಹದಿನೆಂಟನೆಯ ಅಧ್ಯಾಯ
ಪಯೋಷ್ಣಿಯಲ್ಲಿ ಗಯನು ಮಾಡಿದ ಯಾಗದ ವರ್ಣನೆ.
ಚ್ಯವನ ಕಥಾ ಪ್ರಸಕ್ತಿ.
ಲೋಮಶಃ
ಗಯೇನ ಯಜಮಾನೇನ ಸೋಮೇನೇಹ ಪುರಂದರಃ |

ತರ್ಪಿತಃ ಶ್ರೂಯತೇ ರಾಜನ್ ಸ ತೃಪ್ತೋ ಮುದಮಭ್ಯಗಾತ್ ॥1॥
ಲೋಮಶ ಎಲೈ ರಾಜನೇ, ಇಲ್ಲಿ ಗಯನು ಯಜ್ಞವನ್ನು ಮಾಡುತ್ತಾ ಇಂದ್ರನನ್ನು ಸೋಮರಸದಿಂದ ತೃಪ್ತಿಪಡಿಸಿದನು. ಇಂದ್ರನು ತೃಪ್ತನಾಗಿ ಸಂತೋಷವನ್ನು ಹೊಂದಿದನು ಎಂದು ಕೇಳಿದ್ದೇವೆ.
ಇಹ ದೇವೈಃ ಸಹೇಂದ್ರೈಸ್ತು ಪ್ರಜಾಪತಿಭಿರೇವ ಚ |
ಇಷ್ಟಂ ಬಹುವಿಧೈರ್ಯಜ್ಞೈರ್ಮಹದ್ಭಿರ್ಭೂರಿದಕ್ಷಿಣೈಃ ॥2॥
ಇಲ್ಲಿ ಇಂದ್ರನಿಂದಲೂ, ಪ್ರಜಾಪತಿಗಳಿಂದಲೂ ಸಹಿತರಾದ ದೇವತೆಗಳು ಅನೇಕ ದಕ್ಷಿಣೆಗಳುಳ್ಳ ಬಹುವಿಧವಾದ ಅನೇಕ ಯಜ್ಞಗಳನ್ನು ಮಾಡಿದ್ದಾರೆ.
ಆಧೂರ್ತರಯಸಶ್ಚೇಹ ರಾಜಾ ವಜ್ರಧರಂ ಪ್ರಭುಃ |
ತರ್ಪಯಾಮಾಸ ಸೋಮೇನ ಹಯಮೇಧೇಷು ಸಪ್ತಸು ॥3॥
ಆಧೂರ್ತರಯನ ಪುತ್ರನಾದ ಪ್ರಭುವಾದ ಗಯಮಹಾರಾಜನು ಇಲ್ಲಿ ಏಳು ಅಶ್ವಮೇಧ ಯಾಗಗಳಲ್ಲಿ ಮತ್ತು ಸೋಮಯಾಗಗಳಲ್ಲಿ ಇಂದ್ರನನ್ನು ತೃಪ್ತಿಪಡಿಸಿದನು.
ತಸ್ಯ ಸಪ್ತಸು ಯಜ್ಞೇಷು ಸರ್ವಮಾಸೀದ್ಧಿರಣ್ಮಯಮ್ |
ವಾನಸ್ಪತ್ಯಂ ಚ ಭೌಮಂ ಚ ಯದ್ ದ್ರವ್ಯಂ ನಿಯತಂ ಮಖೇ ॥4॥
ಅವನ ಏಳು ಯಜ್ಞಗಳಲ್ಲಿ ವನಸ್ಪತಿಗಳಿಂದ ಮತ್ತು ಮೃತ್ತಿಕೆಯಿಂದ ಮಾಡಲ್ಪಡುವ ದ್ರವ್ಯಗಳೆಲ್ಲವೂ ನಿಯಮೇನ ಸುವರ್ಣಮಯವಾಗಿದ್ದವು.
ತೇಷ್ವೇವ ಚಾಸ್ಯ ಯಜ್ಞೇಷು ಪ್ರಯೋಗಾಃ ಸಪ್ತ ವಿಶ್ರುತಾಃ |
ಸಪ್ತೈಕೈಕಸ್ಯ ಯಜ್ಞಸ್ಯ ಚಷಾಲಾಶ್ಚ ಪ್ರತಿಷ್ಠಿತಾಃ ॥5॥
ಅಲ್ಲಿ ಮಾಡಿದ ಅವನ ಯಜ್ಞಗಳಲ್ಲಿ ಒಂದೊಂದರಲ್ಲೂ ಏಳು ಪ್ರಯೋಗಗಳು (ಏಳುಪಟ್ಟು ಆಹುತಿ, ದಕ್ಷಿಣೆ, ದಾನ ಮೊದಲಾದವುಗಳು) ಪ್ರಖ್ಯಾತವಾಗಿವೆ. ಒಂದೊಂದು ಯಜ್ಞದಲ್ಲಿಯೂ ಏಳು ಚಷಾಲಗಳು (ಯೂಪಾಲಂಕಾರವಾದ ಚಿನ್ನದ ಬಳೆಗಳು) ಪ್ರತಿಷ್ಠಿತವಾಗಿದ್ದವು.
ತಸ್ಯ ಸ್ಮ ಯೂಪಾನ್ ಯಜ್ಞೇಷು ಭ್ರಾಜಮಾನಾನ್ ಹಿರಣ್ಮಯಾನ್ |
ಸ್ವಯಮುತ್ಥಾಪಯಾಮಾಸುರ್ದೇವಾಃ ಸೇಂದ್ರಾ ಯುಧಿಷ್ಠಿರ ॥6॥
ಎಲೈ ಯುಧಿಷ್ಠಿರನೇ, ಅಲ್ಲಿ ಅವನ ಯಜ್ಞಗಳಲ್ಲಿ ಇಂದ್ರ ಮೊದಲಾದ ದೇವತೆಗಳು ಸುವಣರ್ಮಯವಾದ ಪ್ರಕಾಶಿಸುವ ವ್ಯೂಹಗಳನ್ನು ತಾವೇ ಎತ್ತಿ ನಿಲ್ಲಿಸಿದರು.
ತೇಷು ತಸ್ಯ ಮಖಾಗ್ರ್ಯೇಷು ಗಯಸ್ಯ ಪೃಥಿವೀಪತೇಃ |
ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ॥7॥
ಪೃಥಿವೀಪತಿಯಾದ ಗಯನ ಶ್ರೇಷ್ಠವಾದ ಆ ಯಜ್ಞಗಳಲ್ಲಿ ಇಂದ್ರನು ಸೋಮದಿಂದಲೂ, ಬ್ರಾಹ್ಮಣರು ದಕ್ಷಿಣೆಗಳಿಂದಲೂ ಸಂತೋಷಪಟ್ಟರು.
ಸಿಕತಾ ವಾ ಯಥಾ ಲೋಕೇ ಯಥಾ ವಾ ದಿವಿ ತಾರಕಾಃ |
ಯಥಾ ವಾ ವರ್ಷತೋ ಧಾರಾ ಅಸಂಖ್ಯೇಯಾಶ್ಚ ಕೇನಚಿತ್ ॥8॥
ತಥೈವ ತದಸಂಖ್ಯೇಯಂ ಧನಂ ಯತ್ ಪ್ರದದೌ ಗಯಃ |
ಸದಸ್ಯೇಭ್ಯೋ ಮಹಾರಾಜ ತೇಷು ಯಜ್ಞೇಷು ಸಪ್ತಸು ॥9॥
ಭವೇತ್ ಸಂಖ್ಯೇಯಮೇತದ್ವೈ ಯದೇತತ್ ಪರಿಕೀರ್ತಿತಮ್ |
ನ ಸಾ ಶಕ್ಯಾ ತು ಸಂಖ್ಯಾತುಂ ದಕ್ಷಿಣಾ ದಕ್ಷಿಣಾವತಃ ॥10॥
ಪ್ರಪಂಚದಲ್ಲಿ ಮರಳಿನ ಕಣಗಳು, ಆಕಾಶದಲ್ಲಿರುವ ನಕ್ಷತ್ರಗಳು, ಮಳೆಯ ಧಾರೆಗಳು ಇವುಗಳನ್ನು ಹೇಗೆ ಯಾರೂ ಎಣಿಸಲು ಸಾಧ್ಯವಿಲ್ಲವೋ ಅದರಂತೆ ಎಲೈ ಮಹಾರಾಜನೇ, ಆ ಏಳು ಯಜ್ಞಗಳಲ್ಲಿ ಸದಸ್ಯರಿಗೆ ಗಯನು ಕೊಟ್ಟ ಧನವನ್ನೂ ಸಹ ಎಣಿಸಲು ಸಾಧ್ಯವಿಲ್ಲ. ಮೊದಲು ಹೇಳಿದ ವಸ್ತುಗಳು ಒಂದು ಪಕ್ಷ ಪರಿಗಣನೆಯನ್ನು ಪಡೆಯಬಹುದು, ಆದರೆ ದಕ್ಷಿಣೆಯನ್ನು ನೀಡಿದ ಗಯನ ದಕ್ಷಿಣೆಯು ಪರಿಗಣನೆಯನ್ನು ಪಡೆಯುವುದಿಲ್ಲ.
ಹಿರಣ್ಮಯೀಭಿರ್ಗೋಭಿಶ್ಚ ಸ ಯಜ್ಞೇಷು ವಿಶಾಂ ಪತೇ |
ಬ್ರಾಹ್ಮಣಾಂಸ್ತರ್ಪಯಾಮಾಸ ನಾನಾದಿಗ್ಭ್ಯಃ ಸಮಾಗತಾನ್ ॥11॥
ಎಲೈ ರಾಜನೇ, ಅವನು ಯಜ್ಞಗಳಲ್ಲಿ ಹಿರಣ್ಮಯವಾದ ಗೋವುಗಳಿಂದ ನಾನಾ ದೇಶದಿಂದ ಬಂದ ಬ್ರಾಹ್ಮಣರನ್ನು ತೃಪ್ತಿಪಡಿಸಿದನು.
ಅಲ್ಪಾವಶೇಷಾ ಪೃಥಿವೀ ಚೈತ್ಯೈರಾಸೀತ್ ಸಮಾಚಿತಾ |
ಗಯಸ್ಯ ಯಜಮಾನಸ್ಯ ತತ್ರತತ್ರ ವಿಶಾಂ ಪತೇ ॥12॥
ಎಲೈ ರಾಜನೇ, ಗಯನು ಅಲ್ಲಲ್ಲಿ ಯಜ್ಞವನ್ನು ಮಾಡುತ್ತಿರಲು ಭೂಮಿಯಲ್ಲಿ ಚೈತ್ಯ ಯೂಪಗಳು ನೆಡದಿದ್ದ ಪ್ರದೇಶವು ಅಲ್ಪವೇ ಉಳಿಯಿತು.
ಸ ಲೋಕಾನ್ ಪ್ರಾಪ್ತವಾನೈಂದ್ರಾನ್ ಕರ್ಮಣಾ ತೇನ ಭಾರತ |
ಸಲೋಕತಾಂ ತಸ್ಯ ಗಚ್ಛೇತ್ ಪಯೋಷ್ಣ್ಯಾಂ ಯ ಉಪಸ್ಪೃಶೇತ್ ॥
ಎಲೈ ಭಾರತನೇ, ಅವನು ತನ್ನ ಕರ್ಮದಿಂದ ಇಂದ್ರಲೋಕವನ್ನು ಹೊಂದಿದನು. ಈ ಪಯೋಷ್ಣೀ ನದಿಯಲ್ಲಿ ಯಾವನು ಸ್ನಾನಮಾಡುವನೋ ಅವನೂ ಸಹ ಗಯನ ಸಾಲೋಕ್ಯವನ್ನು ಹೊಂದುವನು.
ತಸ್ಮಾತ್ತ್ವಮಸ್ಯಾಂ ರಾಜೇಂದ್ರ ಭ್ರಾತೃಭಿಃ ಸಹಿತೋಽಚ್ಯುತ |

ಉಪಸ್ಪೃಶ್ಯ ಮಹೀಪಾಲ ಧೂತಪಾಪ್ಮಾ ಭವಿಷ್ಯಸಿ ||14||
ಎಲೈ ಅಚ್ಯುತನೇ, ಮಹೀಪಾಲನೇ, ರಾಜೇಂದ್ರನೇ, ಆದ್ದರಿಂದ ನೀನೂ ಸಹ ತಮ್ಮಂದಿರ ಜೊತೆಯಲ್ಲಿ ಇಲ್ಲಿ ಸ್ನಾನವನ್ನು ಮಾಡಿ ಪಾಪದಿಂದ ನಿರ್ಮುಕ್ತನಾಗುವಿ.
ವೈಶಂಪಾಯನಃ
ಸ ಪಯೋಷ್ಣ್ಯಾಂ ನರಶ್ರೇಷ್ಠಃ ಸ್ನಾತ್ವಾ ವೈ ಭ್ರಾತೃಭಿ ಸಹ |
ವೈಡೂರ್ಯಪರ್ವತಂ ಚೈವ ನರ್ಮದಾಂ ಚ ಮಹಾನದೀಮ್ ||15||
ಉದ್ದಿಶ್ಯ ಪಾಂಡವಶ್ರೇಷ್ಠಃ ಸ ಪ್ರತಸ್ಥೇ ಮಹೀಪತಿಃ |
ಸಮಾನವೇಷೈಸ್ತೇಜಸ್ವೀ ಭ್ರಾತೃಭಿಃ ಸಹಿತೋಽನಘಃ ||16||
ವೈಶಂಪಾಯನ ಆ ನರಶ್ರೇಷ್ಠನು ಪಯೋಷ್ಣೀ ನದಿಯಲ್ಲಿ ತಮ್ಮಂದಿರ ಜೊತೆಯಲ್ಲಿ ಸ್ನಾನವನ್ನು ಮಾಡಿ ಮಹೀಪತಿಯೂ, ಪಾಂಡವಶ್ರೇಷ್ಠನೂ, ಅನಘನೂ ಆದ ಅವನು ಸಮಾನವೇಷವನ್ನು ಧರಿಸಿದ ತಮ್ಮಂದಿರ ಜೊತೆಯಲ್ಲಿ ತೇಜಸ್ವಿಯಾಗಿ ವೈಢೂರ್ಯ ಪರ್ವತವನ್ನು ಮತ್ತು ನರ್ಮದಾ ಮಹಾನದಿಯನ್ನು ಉದ್ದೇಶಿಸಿ ಹೊರಟನು.
ತತೋಽಸ್ಯ ಸರ್ವಾಣ್ಯಾಚಖ್ಯೌ ಲೋಮಶೋ ಭಗವಾನೃಷಿಃ |
ತೀರ್ಥಾನಿ ರಮಣೀಯಾನಿ ತತ್ರ ತತ್ರ ವಿಶಾಂಪತೇ ||17||
ಎಲೈ ರಾಜನೇ, ಆಗ ಪೂಜ್ಯರಾದ ಲೋಮಶ ಋಷಿಗಳು ದಾರಿಯಲ್ಲಿ ಅಲ್ಲಲ್ಲಿ ಸಿಕ್ಕಿದ ಎಲ್ಲಾ ರಮಣೀಯವಾದ ತೀರ್ಥಗಳನ್ನೂ ಅವನಿಗೆ ತಿಳಿಸಿದರು.
ಯಥಾಯೋಗಂ ಯಥಾಪ್ರೀತಿ ಸ ಯಯೌ ಭ್ರಾತೃಭಿಃ ಸಹ |
ಸಂದದಾನೋಽಸಕೃದ್ ವಿತ್ತಂ ಬ್ರಾಹ್ಮಣೇಭ್ಯಃ ಸಹಸ್ರಶಃ ||18||
ಅವನು ತನ್ನ ಅವಕಾಶಕ್ಕೆ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ತಮ್ಮಂದಿರ ಜೊತೆಯಲ್ಲಿ ಬ್ರಾಹ್ಮಣರಿಗೆ ಸಹಸ್ರಸಂಖ್ಯೆಯಲ್ಲಿ ವಿತ್ತವನ್ನು ಅನೇಕಬಾರಿ ದಾನಮಾಡುತ್ತಾ ಮುಂದೆ ಹೊರಟನು.
ಲೋಮಶಃ
ದೇವಾನಾಮೇತಿ ಕೌಂತೇಯ ತಥಾ ರಾಜ್ಞಾಂ ಸಲೋಕತಾಮ್ |
ವೈಡೂರ್ಯಪರ್ವತಂ ದೃಷ್ಟ್ವಾ ನರ್ಮದಾಮತೀರ್ಯ ಚ ||19||
ಲೋಮಶ ಕೌಂತೇಯನೇ, ವೈಡೂರ್ಯಪರ್ವತವನ್ನು ನೋಡಿ ನರ್ಮದಾ ನದಿಯಲ್ಲಿ ಸ್ನಾನವನ್ನು ಮಾಡಿದವನು ಪೂರ್ವರಾಜರ ಮತ್ತು ದೇವತೆಗಳ ಸಾಲೋಕ್ಯವನ್ನು ಹೊಂದುತ್ತಾನೆ.
ಸಂಧಿರೇಷ ನರಶ್ರೇಷ್ಠ ತ್ರೇತಾಯಾ ದ್ವಾಪರಸ್ಯ ಚ |
ಏನಮಾಸಾದ್ಯ ಕೌಂತೇಯ ಸರ್ವಪಾಪೈಃ ಪ್ರಮುಚ್ಯತೇ ||20||
ಕೌಂತೇಯನೇ, ನರಶ್ರೇಷ್ಠನೇ, ತ್ರೇತಾ ಮತ್ತು ದ್ವಾಪರಯುಗಗಳ ಸಂಧಿಯಲ್ಲಿ ಈ ಪರ್ವತಕ್ಕೆ ಬಂದರೆ ಸರ್ವಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ಏಷ ಶರ್ಯಾತಿಯಜ್ಞಸ್ಯ ದೇಶಸ್ತಾತ ಪ್ರಕಾಶತೇ |
ಸಾಕ್ಷಾದ್ಯತ್ರಾಪಿಬತ್ ಸೋಮಮಶ್ವಿಭ್ಯಾಂ ಸಹ ವಾಸವಃ ||21||
ಎಲೈ ಪ್ರೀತಿಪಾತ್ರನೇ, ಶರ್ಯಾತಿಯು ಯಜ್ಞವನ್ನು ಮಾಡಿದ ಈ ಪ್ರದೇಶವು ಶೋಭಿಸುತ್ತಿದೆ. ಅಲ್ಲಿ ಇಂದ್ರನು ಸ್ವತಃ ಅಶ್ವಿನಿಗಳ ಜೊತೆಯಲ್ಲಿ ಬಂದು ಸೋಮಪಾನವನ್ನು ಮಾಡಿದನು.
ಚುಕೋಪ ಭಾರ್ಗವಶ್ಚಾಪಿ ಮಹೇಂದ್ರಾಯ ಮಹಾತಪಾಃ |
ಸಂಸ್ತಂಭಯಾಮಾಸ ಚ ತಂ ವಾಸವಂ ಚ್ಯವನಃ ಪ್ರಭುಃ ||22||
ಇಲ್ಲಿಯೇ ಪ್ರಭುಗಳೂ, ಮಹಾತಪಸ್ವಿಗಳೂ, ಭಾರ್ಗವರೂ ಆದ ಚ್ಯವನರು ಇಂದ್ರನ ಮೇಲೆ ಕ್ರೋಧವನ್ನು ಮಾಡಿ ಅವನ ಬಾಹುವನ್ನು ಸ್ತಂಭಗಳೂ ಮಾಡಿದರು.
ಸುಕನ್ಯಾಂ ಚಾಪಿ ಭಾರ್ಯಾಂ ಸ ರಾಜಪುತ್ರೀಮವಾಪ್ತವಾನ್ |
ನಾಸತ್ಯೌ ಚ ಮಹಾರಾಜ ಕೃತವಾನ್ ಸೋಮಪೀಥಿನೌ ||23||
ಎಲೈ ಮಹಾರಾಜನೇ, ಚ್ಯವನರು ರಾಜಪುತ್ರಿಯಾದ ಸುಕನ್ಯೆಯನ್ನು ಭಾರ್ಯೆಯಾಗಿ ಪಡೆದು ಅಶ್ವಿನೀದೇವತೆಗಳನ್ನು ಸೋಮಪಾನಾರ್ಹರನ್ನಾಗಿ ಮಾಡಿದರು.
ಯುಧಿಷ್ಠಿರಃ
ಕಥಂ ವಿಷ್ಟಂಭಿತಸ್ತೇನ ಭಗವಾನ್ ಪಾಕಶಾಸನಃ |
ಕಿಮರ್ಥಂ ಭಾರ್ಗವಶ್ಚಾಪಿ ಕೋಪಂ ಚಕ್ರೇ ಮಹಾತಪಾಃ ||24||
ನಾಸತ್ಯೌ ಚ ಕಥಂ ಬ್ರಹ್ಮನ್ ಕೃತವಾನ್ ಸೋಮಪೀಥಿನೌ |
ಏತತ್ ಸರ್ವಂ ಯಥಾವೃತ್ತಮಾಖ್ಯಾತು ಭಗವಾನ್ ಮಮ ||25||
ಯುಧಿಷ್ಠಿರ ಪೂಜ್ಯನಾದ ಇಂದ್ರನು ಅವರಿಂದ ಹೇಗೆ ಬಹುಸ್ತಂಭವನ್ನು ಹೊಂದಿದನು? ಮಹಾತಪಸ್ವಿಗಳಾದ ಭಾರ್ಗವರಾದ ಚ್ಯವನರೂ ಸಹ ಏಕೆ ಇಂದ್ರನ ಮೇಲೆ ಕೋಪವನ್ನು ಮಾಡಿದರು? ಚ್ಯವನರಾದರೂ ಅಶ್ವಿನೀದೇವತೆಗಳನ್ನು ಹೇಗೆ ಸೋಮಪಾನಾರ್ಹರನ್ನಾಗಿ ಮಾಡಿದರು? ಪೂಜ್ಯ ಬ್ರಾಹ್ಮಣರೇ, ಪೂಜ್ಯರಾದ ತಾವು ನನಗೆ ಇದೆಲ್ಲವನ್ನೂ ಯಥಾವತ್ತಾಗಿ ತಿಳಿಸಬೇಕು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟದಶಾಧಿಕಶತತಮೋಽಧ್ಯಾಯಃ ||

॥ ತೀರ್ಥಯಾತ್ರಾಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹದಿನೆಂಟನೆಯ ಅಧ್ಯಾಯ ಮುಗಿಯಿತು.
*****
ನೂರ ಹತ್ತೊಂಬತ್ತನೆಯ ಅಧ್ಯಾಯ
ಸುಕನ್ಯೆಯ ಅಪರಾಧ ಮತ್ತು ಚ್ಯವನರ ಜೊತೆಯಲ್ಲಿ ವಿವಾಹ.
ಲೋಮಶಃ
ಭೃಗೋರ್ಮಹರ್ಷೇಃ ಪುತ್ರೋಽಭೂತ್ ಚ್ಯವನೋ ನಾಮ ಭಾರತ |
ಸಮೀಪೇ ಸರಸಃ ಸೋಽಸ್ಯ ತಪಸ್ತೇಪೇ ಮಹಾಮತಿಃ ॥1॥
ಲೋಮಶ ಎಲ್ಲೈ ಭಾರತನೇ, ಭೃಗುಮಹರ್ಷಿಗಳ ಪುತ್ರರಾದ ಮಹಾಮತಿಗಳಾದ ಚ್ಯವನರು ಈ ಸರೋವರದ ಸಮೀಪದಲ್ಲಿ ತಪಸ್ಸನ್ನು ಮಾಡುತ್ತಿದರು.
ಸ್ಥಾಣುಭೂತೋ ಮಹಾತೇಜಾ ವೀರಸ್ಥಾನೇನ ಪಾಂಡವ |
ಅತಿಷ್ಠನ್ ಸ ಬಹೂನ್ ಕಾಲಾನ್ ಏಕದೇಶೇ ವಿಶಾಂಪತೇ ॥2॥
ಎಲ್ಲೈ ಪಾಂಡವನೇ, ಎಲ್ಲೈ ರಾಜನೇ, ಮಹಾತೇಜಸ್ವಿಗಳಾದ ಅವರು ಮರದ ತುಂಡಿನಂತೆ ವೀರಾಸನದಲ್ಲಿ ಅಲುಗಾಡದೇ ಒಂದೇ ಸ್ಥಳದಲ್ಲಿ ನಿಂತು ಬಹುಕಾಲದವರೆಗೆ ತಪಸ್ಸನ್ನು ಮಾಡಿದರು.
ಸ ವಲ್ಮೀಕೋಽಭವದೃಷಿರ್ಲತಾಭಿಶ್ಚ ಸುಸಂವೃತಃ |
ಕಾಲೇನ ಮಹತಾ ರಾಜನ್ ಸಮಾಕೀರ್ಣಂ ಪಿಪೀಲಿಕೈಃ ॥3॥
ಎಲ್ಲೈ ರಾಜನೇ, ಬಹಳ ಕಾಲವು ಕಳೆಯುವಷ್ಟರಲ್ಲಿ ಆ ಋಷಿಗಳು ಲತೆಗಳಿಂದ ಆವೃತವಾದ ಒಂದು ವಲ್ಮೀಕವಾದರು. ಆ ವಲ್ಮೀಕವು ಇರುವೆಗಳಿಂದ ತುಂಬಿಕೊಂಡಿತು.
ತಥಾ ಸ ಸಂವೃತೋ ಧೀಮಾನ್ ಮೃತ್ಪಿಂಡ ಇವ ಸರ್ವಶಃ |
ತಪ್ಯತೇ ಸ್ಮ ತಪೋ ರಾಜನ್ ವಲ್ಮೀಕೇನ ಸಮಾವೃತಃ ॥4॥
ಎಲ್ಲೈ ರಾಜನೇ, ಎಲ್ಲಕಡೆಯಲ್ಲಿಯೂ ಮುಚ್ಚಲ್ಪಟ್ಟು ಮೃತ್ಪಿಂಡದಂತೆ ಇದ್ದ ಅವರು ಆ ಹುತ್ತದಿಂದ ಮುಚ್ಚಲ್ಪಟ್ಟವರಾಗಿ ತಪಸ್ಸನ್ನು ಮುಂದುವರಿಸಿದರು.
ಅತಿದೀರ್ಘಸ್ಯ ಕಾಲಸ್ಯ ಶರ್ಯಾತಿರ್ನಾಮ ಪಾರ್ಥಿವಃ |
ಆಜಗಾಮ ಸರೋ ರಮ್ಯಂ ವಿಹರ್ತುಮಿದಮುತ್ತಮಮ್ ॥5॥
ಅನಂತರ ಬಹುಕಾಲ ಕಳೆದ ಮೇಲೆ ಶರ್ಯಾತಿ ಎಂಬ ರಾಜನು ವಿಹಾರವನ್ನು ಮಾಡಲು ಈ ಶ್ರೇಷ್ಠವಾದ ಮನೋಹರವಾದ ಸರೋವರಕ್ಕೆ ಬಂದನು.
ತಸ್ಯ ಸ್ತ್ರೀಣಾಂ ಸಹಸ್ರಾಣಿ ಚತ್ವಾರ್ಯಾಸನ್ ಪರಿಗ್ರಹಾಃ |
ಏಕೈವ ಚ ಸುತಾ ಶುಭ್ರಾ ಸುಕನ್ಯಾ ನಾಮ ಭಾರತ ॥6॥
ಅವನಿಗೆ ನಾಲ್ಕುಸಹಸ್ರ ಪತ್ನಿಯರಿದ್ದರು. ಎಲ್ಲೈ ಭಾರತನೇ, ಆದರೆ ಸುಕನ್ಯೆ ಎಂಬ ಶುಭ್ರವಾದ ಒಬ್ಬಳೇ ಮಗಳಿದ್ದಳು.
ಸಾ ಸಖೀಭಿಃ ಪರಿವೃತಾ ಸರ್ವಾಭರಣಭೂಷಿತಾ |
ಚಂಕ್ರಮ್ಯಮಾಣಾ ವಲ್ಮೀಕಂ ಭಾರ್ಗವಸ್ಯ ಸಮಾಸದತ್ ॥7॥
ಸರ್ವಾಭರಣಭೂಷಿತಳಾದ ಅವಳು ತನ್ನ ಸಖಿಯರ ಜೊತೆಯಲ್ಲಿ ಅಲ್ಲಿ ತಿರುಗಾಡುತ್ತಾ ಚ್ಯವನರ ವಲ್ಮೀಕದ ಸಮೀಪಕ್ಕೆ ಬಂದಳು.
ಸಾ ವೈ ವಸುಮತೀಂ ತತ್ರ ಪಶ್ಯಮಾನಾ ಮನೋರಮಾಮ್ |
ವನಸ್ಪತೀನ್ ಪ್ರಚಿನ್ವಾನಾ ವಿಜಹಾರ ಸಖೀವೃತಾ ॥8॥
ಅವಳು ಅಲ್ಲಿ ಮನೋರಮವಾದ ಕಾನನ ಭೂಮಿಯನ್ನು ನೋಡುತ್ತಾ ವನಸ್ಪತಿಗಳಿಂದ ಪುಷ್ಪಗಳನ್ನು ಕೀಳುತ್ತಾ ಸಖಿಯರಿಂದ ಕೂಡಿ ವಿಹರಿಸಿದಳು.
ರೂಪೇಣ ವಯಸಾ ಚೈವ ಸುರಾಪಾನಮದೇನ ಚ |
ಬಭಂಜ ವನವೃಕ್ಷಾಣಾಂ ಶಾಖಾಃ ಪರಮಪುಷ್ಪಿತಾಃ ॥9॥
ರೂಪದಿಂದಲೂ, ವಯಸ್ಸಿನಿಂದಲೂ, ಸುರಾಪಾನದಿಂದ ಉಂಟಾದ ಮದದಿಂದಲೂ ಕೂಡಿದವಳಾಗಿ ಕಾಡಿನ ವೃಕ್ಷಗಳ ಅರಳಿದ ಹೂಗಳುಳ್ಳ ಕೊಂಬೆಗಳನ್ನು ಮುರಿಯುತ್ತಿದ್ದಳು.
ತಾಂ ಸಖೀರಹಿತಾಮೇಕಾಮ್ ಏಕವಸತ್ರಮಲಂಕೃತಾಮ್ |
ದದರ್ಶ ಭಾರ್ಗವೋ ಧೀಮಾನ್ ಚರಂತೀಮಿವ ವಿದ್ಯುತಮ್ ॥10॥
ಒಮ್ಮೆ ಸಖಿಯರಿಲ್ಲದೆ ಒಬ್ಬಳೇ ಅಲಂಕೃತಳಾಗಿ ಏಕವಸ್ತ್ರವನ್ನು ಧರಿಸಿ ಮಿಂಚಿನ ಬಳ್ಳಿಯಂತೆ ತಿರುಗಾಡುತ್ತಿದ್ದ ಅವಳನ್ನು ಮೇಧಾವಿಗಳಾದ ಭಾರ್ಗವ ಚ್ಯವನರು ನೋಡಿದರು.
ತಾಂ ಪಶ್ಯಮಾನೋ ವಿಜನೇ ಸ ರೇಮೇ ಪರಮದ್ಯುತಿಃ |
ಕಾಮೋತ್ಕಂಠಶ್ಚ ಬ್ರಹ್ಮರ್ಷಿಃ ತಪೋಬಲಸಮನ್ವಿತಃ |
ತಾಮಾಬಭಾಷೇ ಕಲ್ಯಾಣೀಂ ಸಾ ಚಾಸ್ಯ ನ ಶೃಣೋತಿ ವೈ ॥11॥
ಪರಮಕಾಂತಿಯುಕ್ತರಾದ ಅವರು ಏಕಾಂತದಲ್ಲಿ ಅವಳನ್ನು ನೋಡುತ್ತಾ ಸಂತೋಷಪಟ್ಟರು. ತಪೋಬಲಸಮನ್ವಿತರಾದ ಬ್ರಹ್ಮರ್ಷಿಗಳಾದ ಅವರು ಕಾಮೋತ್ಕಂಠವನ್ನು ಹೊಂದಿದವರಾಗಿ ಆ ಕಲ್ಯಾಣಿಯನ್ನು ಕುರಿತು ಮಾತನಾಡಿದರು. ಆದರೆ ಅವಳಿಗೆ ಆ ಮಾತುಗಳು ಕೇಳಲಿಲ್ಲ.

ತತಃ ಸುಕನ್ಯಾ ವಲ್ಮೀಕೇ ದೃಷ್ಟ್ವಾ ಭಾರ್ಗವಚಕ್ಷುಷೀ |
ಕೌತೂಹಲಾತ್ ಕಂಟಕೇನ ಬುದ್ಧಿಮೋಹಬಲಾತ್ಕೃತಾ |
ಕಿಂ ನು ಖಲ್ವಿದಮಿತ್ಯುಕ್ತ್ವಾ ನಿರ್ಬಿಭೇದಾಸ್ಯ ಲೋಚನೇ ॥12॥
ಆಗ ಸುಕನ್ಯೆಯು ಹುತ್ತದಲ್ಲಿ ಚ್ಯವನರ ಕಣ್ಣುಗಳನ್ನು ನೋಡಿ ಕುತೂಹಲದಿಂದಲೂ ಬುದ್ಧಿಮೋಹದಿಂದಲೂ ಕೂಡಿದವಳಾಗಿ ಇವು ಏನಿರಬಹುದು ಎಂದು ಯೋಚಿಸುತ್ತಾ ಒಂದು ಮುಳ್ಳಿನಿಂದ ಆ ಕಣ್ಣುಗಳನ್ನು ಚುಚ್ಚಿದಳು.
ಅಕ್ರುದ್ಧ್ಯತ್ ಸ ತಯಾ ವಿದ್ಧೋ ನೇತ್ರೇ ಪರಮಮನ್ಯುಮಾನ್ |
ತತಃ ಶರ್ಯಾತಿಸೈನ್ಯಸ್ಯ ಶಕೃನ್ಮೂತ್ರೇ ಸಮಾವೃಣೋತ್ ॥13॥
ಪರಮಕೋಪಶೀಲರಾದ ಚ್ಯವನರು ಕಣ್ಣಿಗೆ ಅವಳು ಚುಚ್ಚಿದಾಗ ಕೋಪಗೊಂಡು ಶರ್ಯಾತಿ ಸೈನ್ಯದ ಮಲಮೂತ್ರಗಳನ್ನು ಬಂಧಿಸಿದರು.
ತತೋ ರುದ್ಧೇ ಶಕೃನ್ಮೂತ್ರೇ ಸೈನ್ಯಮಾಸೀತ್ ಸುದುಃಖಿತಮ್ |
ತಥಾಗತಮಭಿಪ್ರೇಕ್ಷ್ಯ ಪರ್ಯತಪ್ಯತ ಪಾರ್ಥಿವಃ ॥14॥
ಮಲಮೂತ್ರಗಳು ಬಂಧಿಸಲ್ಪಡುತ್ತಿರಲು ಸೈನ್ಯಕ್ಕೆ ಬಹಳ ದುಃಖವುಂಟಾಯಿತು. ಸೈನ್ಯದ ಆ ಸ್ಥಿತಿಯನ್ನು ನೋಡಿ ರಾಜನು ಬಹಳ ಪರಿತಪಿಸಿದನು.
ಶರ್ಯಾತಿಃ
ತಪೋನಿತ್ಯಸ್ಯ ವೃದ್ಧಸ್ಯ ಸರೋಷಸ್ಯ ವಿಶೇಷತಃ |
ಕೇನಾಪಕೃತಮದ್ಯೇಹ ಭಾರ್ಗವಸ್ಯ ಮಹಾತ್ಮನಃ |
ಜ್ಞಾತಂ ವಾ ಯದಿ ವಾಽಜ್ಞಾತಂ ತದ್ ದ್ರುತಂ ಬ್ರೂತ ಮಾಚಿರಮ್ ॥
ಶರ್ಯಾತಿ ತಪೋನಿರತರು, ವೃದ್ಧರು, ವಿಶೇಷವಾಗಿ ಕೋಪಿಷ್ಠರು, ಮಹಾನುಭಾವರು ಆದ ಭಾರ್ಗವರಿಗೆ ತಿಳಿದಾಗಲೀ, ತಿಳಿಯದೇ ಆಗಲಿ ಯಾರು ಈ ದಿನ ಇಲ್ಲಿ ಅಪಕಾರವನ್ನು ಮಾಡಿದ್ದೀರಿ? ತಡಮಾಡದೇ ಬೇಗ ಹೇಳಿ.
ಲೋಮಶಃ
ತಮೂಚುಃ ಸೈನಿಕಾಃ ಸರ್ವೇ ನ ವಿದ್ಮೋಽಪಕೃತಂ ವಯಮ್ |
ಸರ್ವೋಪಾಯೈರ್ಯಥಾಕಾಮಂ ಭವಾಂಸ್ತದಧಿಗಚ್ಛತು ॥16॥
ಲೋಮಶರು ಆಗ ಸೈನಿಕರೆಲ್ಲರೂ ನಾವು ಯಾವ ಅಪಕಾರವನ್ನೂ ಮಾಡಿಲ್ಲ. ಎಲ್ಲಾ ಉಪಾಯಗಳಿಂದಲೂ ನಿನ್ನ ಮನಸ್ಸಿಗೆ ಬಂದಂತೆ ನೀನು ಪರೀಕ್ಷಿಸಿ ತಿಳಿದುಕೊಳ್ಳಬಹುದು ಎಂದು ಹೇಳಿದರು.
ತತಃ ಸ ಪೃಥಿವೀಪಾಲಃ ಸಾಮ್ನಾ ಚೋಗ್ರೇಣ ಚ ಸ್ವಯಮ್ |
ಪರ್ಯಪೃಚ್ಛತ್ ಸುಹೃದ್ವರ್ಗಂ ಪ್ರತ್ಯಜಾನನ್ನ ಚೈವ ತೇ ॥17॥
ಅನಂತರ ಆ ರಾಜನು ಮೃದುವಾಗಿ ಮತ್ತು ಉಗ್ರವಾಗಿ ತನ್ನ ಬಂಧುವರ್ಗವನ್ನು ತಾನೇ ಕೇಳಿದನು. ಅವರಿಗೆ ಯಾರಿಗೂ ಈ ವಿಷಯವು ತಿಳಿದಿರಲಿಲ್ಲ.
ಸಾ ತದಾರ್ತಂ ತತೋ ದೃಷ್ಟ್ವಾ ತತ್ ಸೈನ್ಯಮಸುಖಾರ್ದಿತಮ್ |
ಪಿತರಂ ದುಃಖಿತಂ ಚಾಪಿ ಸುಕನ್ಯೇದಮಥಾಬ್ರವೀತ್ ॥18॥
ಮಯಾಽಟಂತ್ಯೇಹ ವಲ್ಮೀಕೇ ದೃಷ್ಟ್ವಾ ಸತ್ತ್ವಮಭಿಜ್ವಲತ್ |
ಖದ್ಯೋತವದಭಿಜ್ಞಾತಂ ತನ್ಮಯಾ ವಿದ್ಧಮಂತಿಕಾತ್ ॥19॥
ಆಗ ಸುಕನ್ಯೆಯು ದುಃಖಿತನಾದ ತಂದೆಯನ್ನೂ, ದುಃಖದಿಂದ ಕೂಡಿದ ಆರ್ತವಾದ ಸೈನ್ಯವನ್ನೂ ನೋಡಿ ತಂದೆಯನ್ನು ಕುರಿತು `ನಾನು ಇಲ್ಲಿ ತಿರುಗಾಡುತ್ತಾ ಒಂದು ಹುತ್ತದಲ್ಲಿ ಮಿಣುಕು ಹುಳಗಳಂತೆ ಪ್ರಕಾಶಿಸುತ್ತಿದ್ದ ಎರಡು ವಸ್ತುಗಳನ್ನು ನೋಡಿ ಒಂದು ಮುಳ್ಳಿನಿಂದ ಚುಚ್ಚಿದೆ.
ಏತಚ್ಛ್ರುತ್ವಾ ತು ಶರ್ಯಾತಿಃ ವಲ್ಮೀಕಂ ತೂರ್ಣಮಭ್ಯಗಾತ್|
ತತ್ರಾಪಶ್ಯತ್ ತಪೋವೃದ್ಧಂ ಚಂದ್ರಾದಿತ್ಯಸಮಪ್ರಭಮ್ ॥20॥
ಜ್ಞಾನವೃದ್ಧಂ ವಯೋವೃದ್ಧಂ ಯೋಗವೃದ್ಧಂ ಚ ಭಾರ್ಗವಮ್ |
ಅಯಾಚದಥ ಸೈನ್ಯಾರ್ಥಂ ಪ್ರಾಂಜಲಿಃ ಪೃಥಿವೀಪತಿಃ ॥21॥
ಅಜ್ಞಾನಾದ್ ಬಾಲಯಾ ಯತ್ ತೇ ಕೃತಂ ತತ್ ಕ್ಷಂತುಮರ್ಹಸಿ |
ಇದನ್ನು ಕೇಳಿದ ಶರ್ಯಾತಿಯು ಶೀಘ್ರವಾಗಿ ಹುತ್ತದ ಸಮೀಪಕ್ಕೆ ಬಂದು ತಪೋವೃದ್ಧರೂ, ವಯೋವೃದ್ಧರೂ, ಯೋಗವೃದ್ಧರೂ, ಸೂರ್ಯಚಂದ್ರರಿಗೆ ಸಮಾನವಾದ ಪ್ರಭೆಯುಳ್ಳವರೂ ಆದ ಚ್ಯವನರನ್ನು ನೋಡಿದನು. ಆಗ ರಾಜನು ಸೈನ್ಯದ ಸಲುವಾಗಿ ಕೈಗಳನ್ನು ಮುಗಿದು ನಮಸ್ಕರಿಸಿ ಅಜ್ಞಾನದಿಂದ ನನ್ನ ಮಗಳು ಮಾಡಿದ ಅಪರಾಧವನ್ನು ನೀವು ಕ್ಷಮಿಸಬೇಕು ಎಂದು ಬೇಡಿಕೊಂಡನು.
ತತೋಽಬ್ರವೀನ್ಮಹೀಪಾಲಂ ಚ್ಯವನೋ ಭಾರ್ಗವಸ್ತದಾ ॥22॥
ರೂಪೌದಾರ್ಯಗುಣೈರ್ಯುಕ್ತಾಂ ಲೋಭಮೋಹಬಲಾತ್ಕೃತಾಮ್ |
ತಾಮೇವ ಪ್ರತಿಗೃಹ್ಯಾಹಂ ರಾಜನ್ ದುಹಿತರಂ ತವ |
ಕ್ಷಮಿಷ್ಯಾಮಿ ಮಹೀಪಾಲ ಸತ್ಯಮೇತದ್ ಬ್ರವೀಮಿ ತೇ ॥23॥
ಆಗ ಭಾರ್ಗವ ಚ್ಯವನರು ಆ ರಾಜನನ್ನು ಕುರಿತು `ರೂಪದಿಂದಲೂ, ಔದಾರ್ಯ ಗುಣಗಳಿಂದಲೂ ಕೂಡಿದ ಲೋಭಮೋಹಗಳಿಗೆ ಒಳಗಾದ ನಿನ್ನ ಮಗಳನ್ನು ಪಾಣಿಗ್ರಹಣ ಮಾಡಿಕೊಂಡೇ ನಾನು ನಿನ್ನನ್ನು ಕ್ಷಮಿಸುವೆನು. ಎಲೈ ರಾಜನೇ, ನಾನು ಸತ್ಯವನ್ನು ಹೇಳುತ್ತಿದ್ದೇನೆ' ಎಂದು ಹೇಳಿದರು.

ಋಷೇರ್ವಚನಮಾಜ್ಞಾಯ ಶರ್ಯಾತಿರವಿಚಾರಯನ್ |
ದದೌ ದುಹಿತರಂ ತಸ್ಮೈ ಚ್ಯವನಾಯ ಮಹಾತ್ಮನೇ ||24||
ಋಷಿಗಳ ಮಾತನ್ನು ಕೇಳಿ ಶರ್ಯಾತಿಯು ಏನೂ ವಿಚಾರ ಮಾಡದೇ ತನ್ನ ಮಗಳನ್ನು ಮಹಾನುಭಾವರಾದ ಚ್ಯವನರಿಗೆ ಕೊಟ್ಟನು.
ಪ್ರತಿಗೃಹ್ಯ ಚ ತಾಂ ಕನ್ಯಾಂ ಚ್ಯವನಃ ಪ್ರಸಸಾದ ಹ |
ಪ್ರಾಪ್ತಪ್ರಸಾದೋ ರಾಜರ್ಷಿಃ ಸಸೈನ್ಯಃ ಪುರಮಾವ್ರಜತ್ ||25||
ಆ ಕನ್ಯೆಯನ್ನು ಸ್ವೀಕಾರವನ್ನು ಮಾಡಿದ ಚ್ಯವನರು ಪ್ರಸನ್ನರಾದರು. ರಾಜರ್ಷಿಯಾದ ಶರ್ಯಾತಿಯು ಅವರ ಅನುಗ್ರಹವನ್ನು ಪಡೆದು ಸೈನ್ಯದ ಜೊತೆಯಲ್ಲಿ ತನ್ನ ಪಟ್ಟಣಕ್ಕೆ ಹಿಂದಿರುಗಿದರು.
ಸುಕನ್ಯಾಽಪಿ ಪತಿಂ ಲಬ್ಧ್ವಾ ತಪಸ್ವಿನಮನಿಂದಿತಾ |
ನಿತ್ಯಂ ಪರ್ಯಚರತ್ ಪ್ರೀತ್ಯಾ ತಪಸಾ ನಿಯಮೇನ ಚ ||26||
ಪರಿಶುದ್ಧಳಾದ ಸುಕನ್ಯೆಯೂ ಕೂಡ ತಪಸ್ವಿಗಳನ್ನು ಪತಿಯನ್ನಾಗಿ ಪಡೆದು ನಿತ್ಯವೂ ಪ್ರೀತಿಯಿಂದಲೂ, ತಪಸ್ಸಿನಿಂದಲೂ ಮತ್ತು ನಿಯಮಗಳಿಂದಲೂ ಅವರನ್ನು ಪರಿಚರಿಸಿದಳು.
ಅಗ್ನೀನಾಮತಿಥೀನಾಂ ಚ ಶುಶ್ರೂಷುರನಸೂಯಕಾ |
ಸಮಾರಾಧಯತ ಕ್ಷಿಪ್ರಂ ಚ್ಯವನಂ ಸಾ ಶುಚಿಸ್ಮಿತಾ ||27||
ಶುಚಿಸ್ಮಿತಳಾದ ಅವಳು ಯಾವ ಅಸೂಯೆಯೂ ಇಲ್ಲದೇ ಅಗ್ನಿಗಳ ಮತ್ತು ಅತಿಥಿಗಳ ಶುಶ್ರೂಷೆಯನ್ನು ಮಾಡುತ್ತಾ ಬಹಳ ಬೇಗ ಚ್ಯವನರನ್ನು ಸಂತೋಷ ಪಡಿಸಿದಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತನೆಯ ಅಧ್ಯಾಯ
ಅಶ್ವಿನಿಗಳಿಂದ ಚ್ಯವನರಿಗೆ ವಯೋರೂಪದಾನ. ಅವರಿಗೆ ಸೋಮಪಾನವನ್ನು ಮಾಡಿಸಲು ಚ್ಯವನರ ಪ್ರತಿಜ್ಞೆ.
ಲೋಮಶಃ
ಕಸ್ಯ ಚಿತ್ತ್ವಥ ಕಾಲಸ್ಯ ತ್ರಿದಶಾವಶ್ವಿನೌ ನೃಪ |
ಕೃತಾಭಿಷೇಕಾಂ ವಿವೃತಾಂ ಸುಕನ್ಯಾಂ ತಾಪಮಶ್ಯತಾಮ್ ||1||
ಲೋಮಶರು ಎಲೈ ರಾಜನೇ, ಸ್ವಲ್ಪ ಕಾಲವು ಕಳೆದ ಮೇಲೆ ಅಶ್ವಿನೀದೇವತೆಗಳು ಸ್ನಾನವನ್ನು ಮಾಡಿ ಸ್ವಲ್ಪ ವಿವೃತವಾದ ಶರೀರವುಳ್ಳ ಆ ಸುಕನ್ಯೆಯನ್ನು ನೋಡಿದರು.
ತಾಂ ದೃಷ್ಟ್ವಾ ದರ್ಶನೀಯಾಂಗೀಂ ದೇವರಾಜಸುತಾಮಿವ |
ಊಚತುಃ ಸಮಭಿದ್ರುತ್ಯ ನಾಸತ್ಯಾವಶ್ವಿನಾವಿದಮ್ ||2||
ಕಸ್ಯ ತ್ವಮಸಿ ವಾಮೋರು ಕಿಂ ವನೇ ವೈ ಚಿಕೀರ್ಷಸಿ |
ಇಚ್ಛಾವ ಭದ್ರೇ ತ್ವಾಂ ಜ್ಞಾತುಂ ತತ್ತ್ವಮಾಖ್ಯಾಹಿ ಶೋಭನೇ |
ದೇವೇಂದ್ರನ ಪುತ್ರಿಯಂತಿರುವ ಸುಂದರವಾದ ಅವಯವಗಳುಳ್ಳ ಅವಳನ್ನು ನೋಡಿ ನಾಸತ್ಯರಾದ ಅಶ್ವಿನಿಗಳು ಬೇಗ ಅವಳ ಬಳಿಗೆ ಬಂದು `ಎಲೌ ವಾಮೋರುವೇ ನೀನು ಯಾರವಳು? ಈ ಕಾಡಿನಲ್ಲಿ ಏನು ಮಾಡುತ್ತಿದ್ದೀಯೇ? ಎಲೌ ಶೋಭನಳೇ, ನಿನ್ನನ್ನು ತಿಳಿಯಲು ನಾವು ಇಚ್ಛಿಸುತ್ತೇವೆ. ಮಂಗಳಸ್ವರೂಪಳೇ, ನಿಜವನ್ನು ಹೇಳು' ಎಂದು ಹೇಳಿದರು.
ತತಃ ಸುಕನ್ಯಾ ಸಂವೀತಾ ತಾಮುವಾಚ ಸುರೋತ್ತಮೌ ||3||
ಶರ್ಯಾತಿತನಯಾಂ ವಿತ್ತಂ ಭಾರ್ಯಾಂ ಚ ಚ್ಯವನಸ್ಯ ಮಾಮ್ |
ನಾಮ್ನಾ ಚಾಹಂ ಸುಕನ್ಯಾಽಸ್ಮಿ ನೃಲೋಕೇಽಸ್ಮಿನ್ ಪ್ರತಿಷ್ಠಿತಾ ||4||
ಸಾಽಹಂ ಸರ್ವಾತ್ಮನಾ ನಿತ್ಯಂ ಪತಿವ್ರತಸುನಿಷ್ಠಿತಾ |
ಆಗ ಸುಕನ್ಯೆಯು ವಸ್ತ್ರವನ್ನು ಸರಿಯಾಗಿ ಹೊದ್ದುಕೊಂಡು ದೇವಶ್ರೇಷ್ಠರಾದ ಅವರನ್ನು ಕುರಿತು ನನ್ನನ್ನು ಶರ್ಯಾತಿಯ ಮಗಳೆಂದು, ಚ್ಯವನರ ಪತ್ನಿಯೆಂದು ತಿಳಿಯಿರಿ. ನನ್ನ ಹೆಸರು ಸುಕನ್ಯಾ ಎಂದು ಈ ಭೂಲೋಕದಲ್ಲಿ ಪ್ರಸಿದ್ಧವಾಗಿದೆ. ಅಂತಹ ನಾನು ಯಾವಾಗಲೂ ಸರ್ವರೀತಿಯಿಂದಲೂ ಪತಿವ್ರತಪರಾಯಣಳಾಗಿದ್ದೇನೆ.
ಅಥಾಶ್ವಿನೌ ಪ್ರಹಸ್ಯೈನಾಮಬ್ರೂತಾಂ ಪುನರೇವ ತು ||5||
ಕಥಂ ತ್ವಮಸಿ ಕಲ್ಯಾಣಿ ಪಿತ್ರಾ ದತ್ತಾಽಽಗತಾ ವನೇ |
ಭ್ರಾಜಸೇ ವನಮಧ್ಯೇಽಸ್ಮಿನ್ ವಿದ್ಯುತ್ಸೌದಾಮಿನೀ ಯಥಾ ||6||
ಆಗ ಅಶ್ವಿನಿಗಳು ನಕ್ಕು ಅವಳನ್ನು ಕುರಿತು ಹೀಗೆ ಹೇಳಿದರು- `ಎಲೌ ಕಲ್ಯಾಣಿಯೇ, ನಿನ್ನ ತಂದೆಯು ನಿನ್ನನ್ನು ಕೊಟ್ಟು ಹೇಗೆ ನೀನು ಕಾಡಿಗೆ ಬಂದಿದ್ದೀಯೆ? ಈ ಕಾಡಿನ ಮಧ್ಯದಲ್ಲಿ ನೀನು ಮೋಡದ ಮಧ್ಯದಲ್ಲಿರುವ ಮಿಂಚಿನಂತೆ ಹೊಳೆಯುತ್ತಿದ್ದೀಯೆ.
ನ ದೇವೇಷ್ವಪಿ ತುಲ್ಯಾಂ ಹಿ ತವ ಪಶ್ಯಾವ ಭಾಮಿನಿ ||7||
ಅನಾಭರಣಸಂಪನ್ನಾ ಪರಮಾಂಬರವರ್ಜಿತಾ |
ಶೋಭಸೇ ಹ್ಯಧಿಕಂ ಭದ್ರೇ ಏವಮಪ್ಯನಲಂಕೃತಾ ||8||
ಭಾಮಿನಿಯೇ, ದೇವತೆಗಳಲ್ಲಿಯೂ ಸಹ ನಿನ್ನ ರೂಪಕ್ಕೆ ಸಮಾನವಾದ ರೂಪವನ್ನು ನಾವು ಕಾಣಲಾರೆವು. ಎಲೌ

ಮಂಗಳಸ್ವರೂಪಳೇ, ಆಭರಣಗಳನ್ನು ಧರಿಸದೇ, ಒಳ್ಳೆಯ ವಸ್ತ್ರಗಳನ್ನು ಉಡದೇ, ಅಲಂಕಾರ ಮಾಡಿಕೊಳ್ಳದೇ ಇದ್ದರೂ ನೀನು ಬಹಳವಾಗಿ ಬೆಳಗುತ್ತಿದ್ದೀಯೆ.
ಸರ್ವಾಭರಣಸಂಪನ್ನಾ ಪರಮಾಂಬರಧಾರಿಣೀ |
ಶೋಭಸೇ ತ್ವನವದ್ಯಾಂಗಿ ನ ತ್ವೇವ ಮಲಪಂಕಿನೀ ॥9॥
ಎಲೌ ಅನವದ್ಯಾಂಗಿಯೇ, ನೀನು ಸರ್ವಾಭರಣಭೂಷಿತಳಾಗಿ ಒಳ್ಳೆಯ ವಸ್ತ್ರಗಳನ್ನು ಧರಿಸಿದವಳಾಗಿ ಶೋಭಿಸುತ್ತೀಯೆ. ಹೀಗೆ ಕಶ್ಮಲವಾದ ಶರೀರವನ್ನು ಧರಿಸಿರುವುದು ನಿನಗೆ ಶೋಭಿಸುವುದಿಲ್ಲ.
ಕಸ್ಮಾದೇವಂವಿಧಾ ಭೂತ್ವಾ ಜರಯಾ ಜರ್ಝರಂ ಪತಿಮ್ |
ತ್ವಮುಪಾಸ್ಸೇ ಹ ಕಲ್ಯಾಣಿ ಕಾಮಭೋಗಬಹಿಷ್ಕೃತಮ್ ॥10॥
ಎಲೌ ಕಲ್ಯಾಣಿಯೇ, ಇಂತಹ ರೂಪವನ್ನು ಹೊಂದಿದವಳಾಗಿ ನೀನು ಮುಪ್ಪಿನಿಂದ ಮುದುಡಿಹೋದ ಶರೀರವುಳ್ಳ ಕಾಮಭೋಗವಿವರ್ಜಿತನಾದ ಪತಿಯನ್ನು ಏನು ಉಪಾಸನೆ ಮಾಡುತ್ತಿದ್ದೀಯೆ?
ಅಸಮರ್ಥಂ ಪರಿತ್ರಾಣೇ ಪೋಷಣೇ ಚ ಶುಚಿಸ್ಮಿತೇ |
ಸಾಧು ಚ್ಯವನಮುತ್ಸೃಜ್ಯ ವರಯಸ್ವೈಕಮಾವಯೋಃ |
ಪತ್ಯರ್ಥಂ ದೇವಗರ್ಭಾಭೇ ಮಾ ವೃಥಾ ಯೌವನಂ ಕೃಥಾಃ ॥11॥
ಎಲೌ ಶುಚಿಸ್ಮಿತೆಯೇ, ಅವನು ನಿನ್ನನ್ನು ರಕ್ಷಣೆ ಮಾಡುವುದಕ್ಕಾಗಲೀ, ಪೋಷಣೆ ಮಾಡುವುದಕ್ಕಾಗಲೀ ಸಮರ್ಥನಲ್ಲ. ಎಲೌ ದೇವಗರ್ಭಸದೃಶಳೇ, ಆದ್ದರಿಂದ ಒಳ್ಳೆಯ ರೀತಿಯಲ್ಲಿ ಚ್ಯವನನನ್ನು ಬಿಟ್ಟು ನಮ್ಮಲ್ಲಿ ಒಬ್ಬರನ್ನು ಪತಿಯಾಗಿ ವರಿಸು. ನಿನ್ನ ಯೌವನವನ್ನು ವ್ಯರ್ಥಮಾಡಿಕೊಳ್ಳಬೇಡ (ಎಂದು ಹೇಳಿದರು).
ಏವಮುಕ್ತಾ ಸುಕನ್ಯಾ ತು ಸುರೌ ತಾವಿದಮಬ್ರವೀತ್ |
ರತಾऽಹಂ ಚ್ಯವನೇ ಪತ್ಯೌ ಮೈವಂ ಮಾಂ ಪರಿಶಂಕತಮ್ ॥12॥
ಹೀಗೆ ಹೇಳಲ್ಪಟ್ಟ ಸುಕನ್ಯೆಯು ಆ ದೇವತೆಗಳನ್ನು ಕುರಿತು ನಾನು ನನ್ನ ಪತಿಯಾದ ಚ್ಯವನರಲ್ಲಿ ತುಂಬಾ ಪ್ರೀತಿಯುಳ್ಳವಳಾಗಿದ್ದೇನೆ. ನೀವು ನನ್ನನ್ನು ಹೀಗೆ ಶಂಕಿಸಬಾರದು ಎಂದು ಹೇಳಿದಳು.
ತಾವಬ್ರೂತಾಂ ಪುನಶ್ಚೈನಾಮಾವಾಂ ದೇವಭಿಷಗ್ವರೌ |
ಯುವಾನಂ ರೂಪಸಂಪನ್ನಂ ಕರಿಷ್ಯಾವಃ ಪತಿಂ ತವ ॥13॥
ತತಸ್ತ್ವಾವಯೋಶ್ಚೈವ ಪತಿಮನ್ಯತಮಂ ವೃಣು |
ಏತೇನ ಸಮಯೇನೈನಮಾಮಂತ್ರಯ ಸುಮಧ್ಯಮೇ ॥14॥
ಅವರಿಬ್ಬರೂ ಅವಳನ್ನು ಕುರಿತು ಪುನಃ ನಾವು ದೇವವೈದ್ಯರು. ನಿನ್ನ ಪತಿಯನ್ನು ಯುವಕನನ್ನಾಗಿಯೂ, ರೂಪಸಂಪನ್ನನಾಗಿಯೂ ಮಾಡುವೆವು. ಅನಂತರ ನೀನು ಚ್ಯವನ ಅಥವಾ ನಮ್ಮಿಬ್ಬರಲ್ಲಿ ಯಾವನನ್ನಾದರೂ ಒಬ್ಬರನ್ನು ಪತಿಯನ್ನಾಗಿ ವರಿಸು. ಎಲೌ ಸುಮಧ್ಯಮಳೇ, ಈ ನಿಯಮದಂತೆ ನಿನ್ನ ಪತಿಯನ್ನು ಆಮಂತ್ರಿಸು ಎಂದು ಹೇಳಿದರು.
ಸಾ ತಯೋರ್ವಚನಾದ್ ರಾಜನ್ನುಪಸಂಗಮ್ಯ ಭಾರ್ಗವಮ್ |
ಉವಾಚ ತಾಭ್ಯಾಂ ಯದ್ವಾಕ್ಯಮುಕ್ತಂ ಭೃಗುಸುತಂ ಪ್ರತಿ ॥15॥
ಎಲೈ ರಾಜನೇ, ಅವಳು ಅವರ ಮಾತಿನಂತೆ ಭಾರ್ಗವರನ್ನು ಸಮೀಪಿಸಿ ಅವರಿಬ್ಬರೂ ಚ್ಯವನರ ಬಗ್ಗೆ ಹೇಳಿದ ಮಾತನ್ನು ಅವರಿಗೆ ತಿಳಿಸಿದಳು.
ತಚ್ಛ್ರುತ್ವಾ ಚ್ಯವನೋ ಭಾರ್ಯಾಮುವಾಚ ಕ್ರಿಯತಾಮಿತಿ |
ಸ ಭರ್ತ್ರಾ ಸಮನುಜ್ಞಾತಾ ಕ್ರಿಯತಾಮಿತ್ಯಥಾಬ್ರವೀತ್ ॥16॥
ಅದನ್ನು ಕೇಳಿದ ಚ್ಯವನರು ಹೆಂಡತಿಯನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದರು. ಪತಿಯ ಅನುಜ್ಞೆಯನ್ನು ಪಡೆದ ಸುಕನ್ಯೆಯು ಅಶ್ವಿನೀದೇವತೆಗಳಿಗೆ ಹಾಗೆಯೇ ಮಾಡಿ ಎಂದು ಹೇಳಿದಳು.
ಶ್ರುತ್ವಾ ತದಶ್ವಿನೌ ವಾಕ್ಯಂ ತಸ್ಯಾಸ್ತತ್ಕ್ರಿಯತಾಮಿತಿ |
ಊಚತೂ ರಾಜಪುತ್ರೀಂ ತಾಂ ಪತಿಸ್ತವ ವಿಶತ್ವಪಃ ॥17॥
ಹಾಗೆಯೇ ಮಾಡಿ ಎಂದು ಹೇಳಿದ ಅವಳ ಮಾತುಗಳನ್ನು ಕೇಳಿದ ಅಶ್ವಿನೀ ದೇವತೆಗಳು ಆ ರಾಜಪುತ್ರಿಯನ್ನು ಕುರಿತು ನಿನ್ನ ಪತಿಯು ಈ ಸರೋವರದ ಜಲವನ್ನು ಪ್ರವೇಶಿಸಲಿ ಎಂದು ಹೇಳಿದರು.
ತತೋऽಂಭಶ್ಚ್ಯವನಃ ಶೀಘ್ರಂ ರೂಪಾರ್ಥೀ ಪ್ರವಿವೇಶ ತತ್ |
ಅಶ್ವಿನಾವಪಿ ತದ್ ರಾಜನ್ ಸರಃ ಪ್ರಾವಿಶತಾಂ ವಿಭೋ ॥18॥
ಆಗ ರೂಪಾರ್ಥಿಯಾದ ಚ್ಯವನರು ಶೀಘ್ರವಾಗಿ ಆ ಜಲವನ್ನು ಪ್ರವೇಶಿಸಿದರು. ಎಲೈ ರಾಜನೇ, ಎಲೈ ವಿಭುವೇ, ಅಶ್ವಿನಿಗಳೂ ಸಹ ಆ ಸರೋವರವನ್ನು ಪ್ರವೇಶಿಸಿದರು.
ತತೋ ಮುಹೂರ್ತಾದುತ್ತೀರ್ಣಾಃ ಸರ್ವೇ ತೇ ಸರಸಸ್ತ್ರಯಃ |
ದಿವ್ಯರೂಪಧರಾಃ ಸರ್ವೇ ಯುವಾನೋ ಮೃಷ್ಟಕುಂಡಲಾಃ |
ತುಲ್ಯರೂಪಧರಾಶ್ಚೈವ ಮನಸಃ ಪ್ರೀತಿವರ್ಧನಾಃ ॥19॥
ಒಂದು ಮುಹೂರ್ತವು ಕಳೆದ ಮೇಲೆ ಮೂರು ಜನರೂ ದಿವ್ಯರೂಪವನ್ನು ಧರಿಸಿ ಯುವಕರಾಗಿ, ಹೊಳೆಯುವ ಕುಂಡಲವನ್ನು ಧರಿಸಿ, ಸಮಾನರೂಪವನ್ನು ಧರಿಸಿ, ಮನಸ್ಸಿಗೆ ಸಂತೋಷವನ್ನು ಉಂಟುಮಾಡುವವರಾಗಿ ಆ ಸರೋವರದಿಂದ ಮೇಲೆದ್ದರು.
ತೇऽಬ್ರುವನ್ ಸಹಿತಾಃ ಸರ್ವೇ ವೃಣೀಷ್ವಾನ್ಯತಮಂ ಶುಭೇ |
ಅಸ್ಮಾಕಮೀಪ್ಸಿತಂ ಭದ್ರೇ ಪತಿತ್ವೇ ವರವರ್ಣಿನಿ ॥20॥

ತ್ವಮಶ್ವಿನೋರನ್ಯತಮಂ ಚ್ಯವನಂ ವಾ ಯಶಸ್ವಿನಿ |
ಯತ್ರ ವಾಽಪ್ಯಭಿಕಾಮಾಽಸಿ ತಂ ವೃಣೀಷ್ವ ಶುಭಾನನೇ ||21||
ಅವಳನ್ನು ಕುರಿತು ಎಲೌ ಶುಭಳೇ, ಸುಂದರಿಯೇ, ನಮ್ಮ ಮೂವರಲ್ಲಿ ನಿನಗೆ ಇಷ್ಟವಾದ ಒಬ್ಬನನ್ನು ಪತಿಯಾಗಿ ವರಿಸು. ಎಲೌ ಯಶಸ್ವಿನಿಯೇ, ನೀನು ಅಶ್ವಿನಿಗಳಲ್ಲಿ ಒಬ್ಬರನ್ನಾಗಲೀ ಅಥವಾ ಚ್ಯವನರನ್ನಾಗಲೀ ನಿನ್ನ ಮನಸ್ಸು ಹೇಗೆ ಆಸೆಪಡುತ್ತದೆಯೋ, ಅದರಂತೆ ಒಬ್ಬನನ್ನು ವರಿಸು ಎಂದು ಹೇಳಿದರು.
ಸಾ ಸಮೀಕ್ಷ್ಯ ತು ತಾನ್ ಸರ್ವಾನ್ ತುಲ್ಯರೂಪಧರಾನ್ ಸ್ಥಿತಾನ್ |
ನಿಶ್ಚಿತ್ಯ ಮನಸಾ ಬುದ್ಧ್ಯಾ ತತೋ ವವ್ರೇ ಸ್ವಕಂ ಪತಿಮ್ |
ತಸ್ಯೈ ದೇವಾಶ್ಚ ಸಂತುಷ್ಟಾಃ ಚ್ಯವನಂ ತಂ ಪತಿಂ ದದುಃ ||22||
ಅವಳು ಅವರೆಲ್ಲರೂ ಸಮಾನವಾದ ರೂಪವನ್ನು ಧರಿಸಿ ನಿಂತಿರುವುದನ್ನು ನೋಡಿ ಮನಸ್ಸಿನಿಂದಲೂ ಬುದ್ಧಿಯಿಂದಲೂ ನಿಶ್ಚಯಿಸಿ ತನ್ನ ನಿಜವಾದ ಪತಿಯನ್ನೇ ವರಿಸಿದಳು. ಅಶ್ವಿನೀದೇವತೆಗಳು ಸಂತುಷ್ಟರಾಗಿ ಅವಳಿಗೆ ಚ್ಯವನರನ್ನು ಪತಿಯನ್ನಾಗಿ ಕೊಟ್ಟರು.
ಲಬ್ಧ್ವಾ ತು ಚ್ಯವನೋ ಭಾರ್ಯಾಂ ವಯೋ ರೂಪಂ ಚ ವಾಂಛಿತಮ್
ಹೃಷ್ಟೋಽಬ್ರವೀನ್ಮಹಾತೇಜಾಃ ತೌ ನಾಸತ್ಯಾವಿದಂ ವಚಃ ||23||
ಯಥಾಽಹಂ ರೂಪಸಂಪನ್ನೋ ವಯಸಾ ಚ ಸಮನ್ವಿತಃ |
ಕೃತೋ ಭವದ್ಭ್ಯಾಂ ವೃದ್ಧಃ ಸನ್ ಭಾರ್ಯಾಂ ಚ ಪ್ರಾಪ್ತವಾನಿಮಾಮ್ ||
ತಸ್ಮಾದ್ ಯುವಾಂ ಕರಿಷ್ಯಾಮಿ ಪ್ರೀತೋಽಹಂ ಸೋಮಪೀಥಿನೌ |
ಮಿಷತೋ ದೇವರಾಜಸ್ಯ ಸತ್ಯಮೇತದ್ ಬ್ರವೀಮಿ ವಾಮ್ ||25||
ಚ್ಯವನರಾದರೂ ಭಾರ್ಯೆಯನ್ನೂ ಅಭೀಷ್ಟವಾದ ರೂಪಯೌವನಗಳನ್ನೂ ಪಡೆದು ಮಹಾತೇಜಸ್ವಿಗಳಾದ ಅವರು ಸಂತುಷ್ಟರಾಗಿ ಅಶ್ವಿನೀದೇವತೆಗಳನ್ನು ಕುರಿತು ನಾನು ವೃದ್ಧನಾಗಿದ್ದರೂ ನೀವು ನನ್ನನ್ನು ರೂಪಯೌವನಸಂಪನ್ನನಾಗಿರುವಂತೆ ಮಾಡಿದಿರಿ. ನಿಮ್ಮಿಂದ ಈ ನನ್ನ ಭಾರ್ಯೆಯನ್ನು ಪಡೆದಿದ್ದೇನೆ. ಆದ್ದರಿಂದ ನಾನು ದೇವರಾಜನ ಕಣ್ಣೆದುರಿಗೇ ನಿಮ್ಮನ್ನು ಸೋಮಪಾನಾರ್ಹರನ್ನಾಗಿ ಮಾಡುವೆನು. ನಾನು ನಿಮ್ಮಿಬ್ಬರನ್ನು ಕುರಿತು ಸತ್ಯವಾದ ಈ ಮಾತನ್ನು ಹೇಳುತಿತದ್ದೇನೆ.
ತಚ್ಛ್ರುತ್ವಾ ಹೃಷ್ಟಮನಸೌ ದಿವಂ ತೌ ಪ್ರತಿಜಗ್ಮತುಃ |
ಚ್ಯವನಶ್ಚ ಸುಕನ್ಯಾ ಚ ಸುರಾವಿವ ವಿಜಹ್ರತುಃ ||26||
ಅದನ್ನು ಕೇಳಿದ ಅಶ್ವಿನೀದೇವತೆಗಳು ಸಂತೋಷಗೊಂಡ ಮನಸ್ಸಿನಿಂದ ಸ್ವರ್ಗಕ್ಕೆ ಹೊರಟು ಹೋದರು. ಚ್ಯವನ ಮತ್ತು ಸುಕನ್ಯೆಯರು ದೇವತೆಗಳಿಂದ ವಿಹರಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ವಿಂಶತ್ಯಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತೊಂದನೆಯ ಅಧ್ಯಾಯ
ಶರ್ಯಾತಿಯ ಯಾಗದಲ್ಲಿ ಇಂದ್ರನ ಬಾಹುಸ್ತಂಭನ. ಕೃತ್ಯಾಸೃಷ್ಟಿ. ಚ್ಯವನರ ಅನುಗ್ರಹ ಮತ್ತು ಆರ್ಚೀಕಪರ್ವತದ ಮಹಿಮೆ.
ಲೋಮಶಃ
ತತಃ ಶ್ರುತ್ವಾ ತು ಶರ್ಯಾತಿರ್ವಯಸ್ಸ್ಥಂ ಚ್ಯವನಂ ಕೃತಮ್ |
ಪ್ರಹೃಷ್ಟಃ ಸೇನಯಾ ಸಾರ್ಧಮುಪಾಯಾದ್ ಭಾರ್ಗವಾಶ್ರಮಮ್ ||1||
ಲೋಮಶ ಅನಂತರ ಶರ್ಯಾತಿಯು ಚ್ಯವನರು ಯುವಕರಾಗಿ ಮಾಡಲ್ಪಟ್ಟಿದ್ದಾರೆಂದು ಕೇಳಿ ಸಂತುಷ್ಟನಾಗಿ ಸೈನ್ಯದ ಜೊತೆಯಲ್ಲಿ ಅವರ ಆಶ್ರಮಕ್ಕೆ ಬಂದನು.
ಚ್ಯವನಂ ಚ ಸುಕನ್ಯಾಂ ಚ ದೃಷ್ಟ್ವಾ ದೇವಸುತಾವಿವ |
ರೇಮೇ ಮಹೀಪಃ ಶರ್ಯಾತಿಃ ಕೃತ್ಸ್ನಾಂ ಪ್ರಾಪ್ಯ ಮಹೀಮಿವ ||2||
ಚ್ಯವನ ಮತ್ತು ಸುಕನ್ಯೆಯರು ದೇವಕುಮಾರರಂತಿರುವುದನ್ನು ನೋಡಿದ ಶರ್ಯಾತಿ ರಾಜನು ಸಮಗ್ರವಾದ ಭೂಮಿಯನ್ನು ಪಡೆದವನಂತೆ ಸಂತೋಷ ಪಟ್ಟನು.
ಋಷಿಣಾ ಸತ್ಕೃತಸ್ತೇನ ಸಭಾರ್ಯಃ ಪೃಥಿವೀಪತಿಃ |
ಉಪೋಪವಿಷ್ಟಃ ಕಲ್ಯಾಣೀಃ ಕಥಾಶ್ಚಕ್ರೇ ಮಹಾಮನಾಃ ||3||
ಚ್ಯವನರಿಂದ ಸತ್ಕೃತನಾದ ರಾಜನು ತನ್ನ ಭಾರ್ಯೆಯ ಜೊತೆಯಲ್ಲಿ ಋಷಿಗಳ ಸಮೀಪದಲ್ಲಿ ಕುಳಿತು ಉತ್ಸಾಹವುಳ್ಳ ಮನಸ್ಸಿನಿಂದ ಶುಭವಾದ ಮಾತುಗಳನ್ನು ಆಡಿದನು.
ಅಥೈನಂ ಭಾರ್ಗವೋ ರಾಜನ್ನುವಾಚ ಪರಿಸಾಂತ್ವಯನ್ |
ಯಾಜಯಿಷ್ಯಾಮಿ ರಾಜಂಸ್ತ್ವಂ ಸಂಭಾರಾನುಪಕಲ್ಪಯ ||4||
ಎಲೈ ರಾಜನೇ, ಆಗ ಭಾರ್ಗವ ಚ್ಯವನರು ಅವನನ್ನು ಸಮಾಧಾನ ಪಡಿಸುತ್ತಾ, ರಾಜನೇ, ನಿನಗೆ ಯಾಗವನ್ನು ಮಾಡಿಸುವೆನು. ಸಾಮಗ್ರಿಗಳನ್ನು ಅಣಿಗೊಳಿಸು ಎಂದು ಹೇಳಿದರು.
ತತಃ ಪರಮಸಂಹೃಷ್ಟಃ ಶರ್ಯಾತಿಃ ಪೃಥಿವೀಪತಿಃ |
ಚ್ಯವನಸ್ಯ ಮಹಾರಾಜ ತದ್ವಾಕ್ಯಂ ಪ್ರತ್ಯಪೂಜಯತ್ ||5||
ಎಲೈ ಮಹಾರಾಜನೇ, ಆಗ ಪರಮಸಂತೋಷದಿಂದ ಯುಕ್ತನಾದ ಶರ್ಯಾತಿ ರಾಜನು ಚ್ಯವನರ ಆ ವಾಕ್ಯವನ್ನು ಸಮ್ಮಾನಿಸಿದನು.

ಪ್ರಶಸ್ತೇಽಹನಿ ಯಾಜ್ಞೀಯೇ ಸರ್ವಕಾಮಸಮೃದ್ಧಿಮತ್ |
ಕಾರಯಾಮಾಸ ಶರ್ಯಾತಿರ್ಯಜ್ಞಾಯತನಮುತ್ತಮಮ್ ॥6॥
ಒಂದು ಪ್ರಶಸ್ತವಾದ ದಿನದಲ್ಲಿ ಶರ್ಯ್ಯಾತಿಯು ಸರ್ವಾಪೇಕ್ಷಿತ ಪದಾರ್ಥಗಳಿಂದ ತುಂಬಿದ್ದ ಶ್ರೇಷ್ಠವಾದ ಯಜ್ಞಶಾಲೆಯನ್ನು ನಿರ್ಮಾಣ ಮಾಡಿಸಿದನು.
ತತ್ರೈನಂ ಚ್ಯವನೋ ರಾಜನ್ ಯಾಜಯಾಮಾಸ ಭಾರ್ಗವಃ |
ಅತ್ಯದ್ಭುತಾನಿ ತತ್ರಾಸನ್ ಯಾನಿ ತಾನಿ ನಿಬೋಧ ಮೇ ॥7॥
ಎಲೈ ರಾಜನೇ, ಅಲ್ಲಿ ಭಾರ್ಗವರಾದ ಚ್ಯವನರು ಅವನಿಂದ ಯಾಗವನ್ನು ಮಾಡಿಸಿದರು. ಅಲ್ಲಿ ನಡೆದ ಅದ್ಭುತವಾದ ಘಟನೆಗಳನ್ನು ಹೇಳುತ್ತೇನೆ ಕೇಳು.
ಅಗೃಹ್ಣಾಚ್ಚ್ಯವನಃ ಸೋಮಮಶ್ವಿನೋರ್ದೇವಯೋಸ್ತದಾ |
ತಮಿಂದ್ರೋ ವಾರಯಾಮಾಸ ಗೃಹ್ಯಮಾಣಂ ತಯೋರ್ಗ್ರಹಮ್ ॥8॥
ಉಭಾವೇತೌ ನ ಸೋಮಾರ್ಹೌ ನಾಸತ್ಯಾವಿತಿ ಮೇ ಮತಿಃ |
ಭಿಷಜೌ ದೇವತಾನಾಂ ಹಿ ಪಾತುಂ ಸೋಮಂ ನಚಾರ್ಹತಃ ॥9॥
ಚ್ಯವನರು ಅಶ್ವಿನೀದೇವತೆಗಳಿಗೆ ಕೊಡಲು ಸೋಮವನ್ನು ಕೈಯಲ್ಲಿ ತೆಗೆದುಕೊಂಡರು. ಅವರು ಸೋಮಪಾತ್ರೆಯನ್ನು ತೆಗೆದುಕೊಳ್ಳುವಷ್ಟರಲ್ಲಿ ಇಂದ್ರನು ಅಶ್ವಿನೀದೇವತೆಗಳಿಬ್ಬರೂ ಸೋಮಪಾನಾರ್ಹರಲ್ಲವೆಂದು ನನ್ನ ಅಭಿಪ್ರಾಯ. ಅವರು ದೇವತೆಗಳ ವೈದ್ಯರು. ಆದ್ದರಿಂದ ಸೋಮಪಾನಕ್ಕೆ ಅರ್ಹರಲ್ಲ ಎಂದು ಚ್ಯವನರನ್ನು ತಡೆದನು.
ಚ್ಯವನಃ
ಮಾಽವಮಂಸ್ಥಾ ಮಹಾತ್ಮಾನೌ ರೂಪದ್ರವಿಣವತ್ತಮೌ |
ಯೌ ಚಕ್ರತುರ್ಮಾ ಮಘವನ್ ವೃಂದಾರಕಮಿವಾಜರಮ್ ॥10॥
ಋತೇ ತ್ವಾಂ ವಿಬುಧಾಂಶ್ಚಾನ್ಯಾನ್ ಕಥಂ ವೈ ನಾರ್ಹತಃ ಸ್ವಯಮ್ |
ಅಶ್ವಿನಾವಪಿ ದೇವೇಂದ್ರ ದೇವೌ ವಿದ್ಧಿ ಪುರಂದರ ॥11॥
ಚ್ಯವನರು ಎಲೈ ಇಂದ್ರನೇ, ಯಾವ ಮಹಾತ್ಮರಾದ ರೂಪದ್ರವಿಣ ಸಂಪನ್ನರಾದ ಅಶ್ವಿನಿಗಳು ನನ್ನನ್ನು ದೇವತೆಯಂತೆ ಅಜರನನ್ನಾಗಿ ಮಾಡಿದ್ದಾರೆಯೋ ಅವರನ್ನು ಅವಮಾನಗೊಳಿಸಬೇಡ. ನಿನ್ನನ್ನು ಮತ್ತು ಉಳಿದ ದೇವತೆಗಳನ್ನು ಬಿಟ್ಟ ಮೇಲೆ, ಎಲೈ ದೇವೇಂದ್ರನೇ, ಅಶ್ವಿನಿದೇವತೆಗಳು ಸ್ವತಃ ಸೋಮಪಾನಕ್ಕೆ ಅರ್ಹರಾಗುತ್ತಾರೆ. ಪುರಂದರನೇ ಈ ವಿಷಯವನ್ನು ತಿಳಿ.
ಇಂದ್ರಃ
ಚಿಕಿತ್ಸಕೌ ಕರ್ಮಕರೌ ಕಾಮರೂಪಸಮನ್ವಿತೌ |
ಲೋಕೇ ಚರಂತೌ ಮರ್ತ್ಯಾನಾಂ ಕಥಂ ಸೋಮಮಿಹಾರ್ಹತಃ ॥12॥
ಇಂದ್ರ ವೈದ್ಯರೂ, ಕರ್ಮಕಾರರೂ, ಮನಸ್ಸಿಗೆ ಬಂದ ರೂಪವನ್ನು ಸ್ವೀಕರಿಸುವವರೂ, ಮನುಷ್ಯಲೋಕದಲ್ಲಿ ಸಂಚರಿಸುವವರೂ ಆದ ಇವರು ಹೇಗೆ ಸೋಮಕ್ಕೆ ಅರ್ಹರಾಗುತ್ತಾರೆ?
ಲೋಮಶಃ
ಏತದೇವ ತದಾ ವಾಕ್ಯಮಾಮ್ರೇಡಯತಿ ವಾಸವೇ |
ಅನಾದೃತ್ಯ ತತಃ ಶಕ್ರಂ ಗ್ರಹಂ ಜಗ್ರಾಹ ಭಾರ್ಗವಃ ॥13॥
ಲೋಮಶ ಇಂದ್ರನು ಈ ಮಾತನ್ನು ಮತ್ತೆ ಮತ್ತೆ ಆಡುತ್ತಿರಲು ಚ್ಯವನರು ಆ ಮಾತುಗಳನ್ನು ಪರಿಗಣಿಸದೇ ತಮ್ಮ ಹಸ್ತದಿಂದ ಗ್ರಹವನ್ನು ಸ್ವೀಕರಿಸಿದರು.
ಗ್ರಹೀಷ್ಯಂತಂ ತು ತಂ ಸೋಮಮಶ್ವಿನೋರುತ್ತಮಂ ತದಾ |
ಸಮೀಕ್ಷ್ಯ ಬಲಭಿದ್ ದೇವ ಇದಂ ವಚನಮಬ್ರವೀತ್ ॥14॥
ಆಭ್ಯಾಮರ್ಥಾಯ ಸೋಮಂ ತ್ವಂ ಗ್ರಹೀಷ್ಯಸಿ ಯದಿ ಸ್ವಯಮ್ |
ವಜ್ರಂ ತೇ ಪ್ರಹರಿಷ್ಯಾಮಿ ಘೋರರೂಪಂ ಭೃಗೂದ್ವಹ ॥15॥
ಅಶ್ವಿನೀದೇವತೆಗಳಿಗೆ ಸೋಮವನ್ನು ಕೊಡಲು ಗ್ರಹವನ್ನು ತೆಗೆದುಕೊಳ್ಳುತ್ತಿದ್ದ ಚ್ಯವನರನ್ನು ನೋಡಿ ಬಲಸೂದನನಾದ ಇಂದ್ರನು ಭೃಗೂದ್ವಹರೇ, ಅಶ್ವಿನೀದೇವತೆಗಳಿಗಾಗಿ ನೀವು ಸೋಮಗ್ರಹಣವನ್ನು ಮಾಡುವುದಾದರೆ ನಾನು ಘೋರವಾದ ವಜ್ರಾಯುಧವನ್ನು ನಿಮ್ಮ ಮೇಲೆ ಪ್ರಹರಿಸುವೆನು ಎಂದು ಹೇಳಿದನು.
ಏವಮುಕ್ತಃ ಸ್ಮಯನ್ನಿಂದ್ರಮಭಿವೀಕ್ಷ್ಯ ಸ ಭಾರ್ಗವಃ |
ಜಗ್ರಾಹ ವಿಧಿವತ್ ಸೋಮಮಶ್ವಿಭ್ಯಾಮುತ್ತಮಂ ಗ್ರಹಮ್ ॥16॥
ಹೀಗೆ ಹೇಳಲ್ಪಟ್ಟ ಚ್ಯವನರು ಇಂದ್ರನನ್ನು ನೋಡಿ ನಗುತ್ತಾ ವಿಧಿಪೂರ್ವಕವಾಗಿ ಅಶ್ವಿನಿಗಳಿಗೆ ಉತ್ತಮವಾದ ಸೋಮವನ್ನು ಕೊಡಲು ಗ್ರಹ(ಸೋಮಪಾತ್ರೆ)ಯನ್ನು ಹಿಡಿದರು.
ತತೋಽಸ್ಮೈ ಪ್ರತಿಜಗ್ರಾಹ ಘೋರರೂಪಂ ಶಚೀಪತಿಃ |
ತಸ್ಯ ಪ್ರಹರತೋ ಬಾಹುಂ ಸ್ತಂಭಯಾಮಾಸ ಭಾರ್ಗವಃ ॥17॥
ಆಗ ಶಚೀಪತಿಯು ಘೋರವಾದ ಆಕಾರವುಳ್ಳ ತನ್ನ ವಜ್ರಾಯುಧವನ್ನು ಹಿಡಿದನು. ಚ್ಯವನರು ತಮ್ಮ ಮೇಲೆ ಪ್ರಯೋಗಿಸಲು ಉದ್ಯುಕ್ತವಾದ ಅವನ ಬಾಹುವನ್ನು ಸ್ತಂಭನ ಮಾಡಿದರು.
ಸಂಸ್ತಂಭಯಿತ್ವಾ ಚ್ಯವನೋ ಜುಹುವೇ ಮಂತ್ರತೋಽನಲಮ್ |
ಕೃತ್ಯಾರ್ಥೀ ಸುಮಹಾತೇಜಾ ದೇವಂ ಹಿಂಸಿತುಮುದ್ಯತಃ ॥18॥

ಚ್ಯವನರು ಅವನ ಬಾಹುವನ್ನು ಸ್ತಂಭಿಸಿ ಮಂತ್ರದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿ ಇಂದ್ರನನ್ನು ಹಿಂಸಿಸುವ ಮಹಾತೇಜಸ್ಸುಳ್ಳ ಒಂದು ಪಿಶಾಚಿಯನ್ನು ಸೃಷ್ಟಿಸಲು ಉದ್ಯುಕ್ತರಾದರು.
ತತಃ ಕೃತ್ಯಾ ಸಮಭವದ್ ಋಷೇಸ್ತಸ್ಯ ತಪೋಬಲಾತ್ |
ಮದೋ ನಾಮ ಮಹಾವೀರ್ಯೋ ಬೃಹತ್ಕಾಯೋ ಮಹಾಬಲಃ ||
ಆಗ ಆ ಋಷಿಗಳ ತಪೋಬಲದಿಂದ ಮದ ಎಂಬ ಹೆಸರಿನ ಮಹಾಸಾಮರ್ಥ್ಯವುಳ್ಳ, ಮಹಾಬಲವುಳ್ಳ, ದೊಡ್ಡ ಶರೀರವುಳ್ಳ ಒಂದು ಪಿಶಾಚಿಯು ಉತ್ಪನ್ನವಾಯಿತು.
ಶರೀರಂ ಯಸ್ಯ ನಿರ್ದೇಷ್ಟುಮಶಕ್ಯಂ ಹಿ ಸುರಾಸುರೈಃ |
ತಸ್ಯಾಸ್ಯಮಭವದ್ ಘೋರಂ ತೀಕ್ಷ್ಣಾಗ್ರದಶನಂ ಮಹತ್ ||20||
ಹನುರೇಕಾ ಸ್ಥಿತಾ ತ್ವಸ್ಯ ಭೂಮಾವೇಕಾ ದಿವಂ ಗತಾ |
ಚತಸ್ರ ಆಯತಾ ದಂಷ್ಟ್ರಾ ಯೋಜನಾನಾಂ ಶತಂಶತಮ್ ||21||
ಅದರ ಶರೀರವನ್ನು ಹೀಗಿದೆ ಎಂದು ಹೇಳಲು ಸುರಾಸುರರಿಗೂ ಸಾಧ್ಯವಾಗುತ್ತಿರಲಿಲ್ಲ. ಅದರ ವದನವು ತೀಕ್ಷ್ಣವಾದ, ಘೋರವಾದ ದಂತಗಳಿಂದ ಕೂಡಿದ್ದಿತು. ಅದರ ಒಂದು ದವಡೆಯು ಭೂಮಿಯಲ್ಲಿಯೂ, ಇನ್ನೊಂದು ದವಡೆಯು ಅಂತರಿಕ್ಷದಲ್ಲಿಯೂ ಇದ್ದಿತು. ನಾಲ್ಕು ಎತ್ತರವಾದ ಕೋರೆದಾಡೆಗಳು ನೂರು ನೂರು ಯೋಜನಗಳಷ್ಟು ಎತ್ತರವಿದ್ದವು.
ಇತರೇ ತಸ್ಯ ದಶನಾ ಬಭೂವುರ್ದಶಯೋಜನಾಃ |
ಪ್ರಾಕಾರಸದೃಶಾಕಾರಾಃ ಶೂಲಾಗ್ರಸಮದರ್ಶನಾಃ ||22||
ಬಾಹೂ ಪರಿಘಸಂಕಾಶಾವಾಯತಾವಯುತಂ ಶತಮ್ |
ನೇತ್ರೇ ರವಿಶಶಿಪ್ರಖ್ಯೇ ವಕ್ತ್ರಂ ಕಾಲಾಗ್ನಿಸನ್ನಿಭಮ್ ||23||
ಅದರ ಇತರ ದಂತಗಳು ಒಂದೊಂದೂ ಹತ್ತು ಯೋಜನ ಎತ್ತರವಿದ್ದವು. ಅವು ಒಟ್ಟಿಗೆ ಸೇರಿ ಶೂಲಗಳು ನೆಟ್ಟಿರುವ ಕೋಟೆಯ ಗೋಡೆಯಂತೆ ತೋರುತ್ತಿದ್ದವು. ಒನಕೆಗಳಂತಿದ್ದ ಬಾಹುಗಳು ದೀರ್ಘವಾಗಿ ನೂರು ಯೋಜನ ಉದ್ದವಾಗಿದ್ದವು. ಕಣ್ಣುಗಳು ಚಂದ್ರಸೂರ್ಯರಂತೆ ಹೊಳೆಯುತಿತದ್ದವು. ವದನವು ಕಾಲಾಗ್ನಿಯನ್ನು ಹೋಲುತ್ತಿದ್ದಿತು.
ಲೇಲಿಹನ್ ಜಿಹ್ವಯಾ ವಕ್ತ್ರಂ ವಿದ್ಯುಚ್ಚಪಲಲೋಲಯಾ |
ವ್ಯಾತ್ತಾನನೋ ಘೋರದೃಷ್ಟಿರ್ಗ್ರಸನ್ನಿವ ಜಗದ್ ಬಲಾತ್ ||24||
ಸ ಭಕ್ಷಯಿಷ್ಯನ್ ಸಂಕ್ರುದ್ಧಃ ಶತಕ್ರತುಮುಪಾದ್ರವತ್ |
ಮಹತಾ ಘೋರರೂಪೇಣ ಲೋಕಾನ್ ಶಬ್ದೇನ ಪೂರಯನ್ ||25||
ಅದು ಮಿಂಚಿನಂತೆ ಚಂಚಲವಾದ ತನ್ನ ನಾಲಿಗೆಯಿಂದ ತನ್ನ ಕಟಬಾಯಿಗಳನ್ನು ಸವರಿಕೊಳ್ಳುತ್ತಾ ಬಾಯಿಯನ್ನು ದೊಡ್ಡದಾಗಿ ತೆರೆದು ಘೋರದೃಷ್ಟಿಯಿಂದ ತನ್ನ ಸಾಮರ್ಥ್ಯದಿಂದ ಸಕಲ ಜಗತ್ತನ್ನೇ ನುಂಗುವಂತಿದ್ದಿತು. ಆ ಪಿಶಾಚಿಯು ಕೋಪದಿಂದ ಇಂದ್ರನನ್ನು ನುಂಗಲು ಬಯಸಿ ಘೋರವಾದ ದೊಡ್ಡ ನಾದದಿಂದ ಲೋಕಗಳನ್ನೆಲ್ಲಾ ತುಂಬುತ್ತಾ ಇಂದ್ರನ ಕಡೆಗೆ ಧಾವಿಸಿತು.
ಲೋಮಶಃ
ತಂ ದೃಷ್ಟ್ವಾ ಘೋರವದನಂ ಮದಂ ದೇವಃ ಶತಕ್ರತುಃ |
ಆಯಾಂತಂ ಭಕ್ಷಯಿಷ್ಯಂತಂ ವ್ಯಾತ್ತಾನನಮಿವಾಂತಕಮ್ ||26||
ಭಯಾತ್ ಸಂಸ್ತಂಭಿತಭುಜಃ ಸೃಕ್ಕಿಣೀ ಲೇಲಿಹನ್ ಮುಹುಃ |
ತತೋಽಬ್ರವೀದ್ ದೇವರಾಜಃ ಚ್ಯವನಂ ಭಯಪೀಡಿತಃ ||27||
ತನ್ನನ್ನು ಭಕ್ಷಿಸಲು ಬಾಯಿಯನ್ನು ತೆಗೆದು ಯಮನಂತೆ ಬರುತ್ತಿರುವ ಘೋರ ವದನವುಳ್ಳ ಆ ಮದಪಿಶಾಚಿಯನ್ನು ನೋಡಿದ ಇಂದ್ರದೇವನು ಬಾಹುಗಳು ಸ್ತಂಭಿತವಾಗಿರಲು ಭಯದಿಂದ ತನ್ನ ಕಟಬಾಯಿಗಳನ್ನು ನೆಕ್ಕುತ್ತಾ ಭಯಭೀತನಾಗಿ ಚ್ಯವನರನ್ನು ಕುರಿತು ಹೇಳಿದನು.
ಸೋಮಾರ್ಹಾವಶ್ವಿನಾವೇತಾವದ್ಯ ಪ್ರಭೃತಿ ಭಾರ್ಗವ |
ಭವಿಷ್ಯತಃ ಸತ್ಯಮೇತದ್ ವಚೋ ವಿಪ್ರ ಪ್ರಸೀದ ಮೇ ||28||
ಎಲೈ ಭಾರ್ಗವರೇ, ಇಂದಿನಿಂದ ಪ್ರಾರಂಭಿಸಿ ಅಶ್ವಿನೀದೇವತೆಗಳು ಸೋಮಪಾನಾರ್ಹರಾಗುವರು. ಈ ಮಾತು ಸತ್ಯವಾದುದು. ಬ್ರಾಹ್ಮಣರೇ, ನನಗೆ ಅನುಗ್ರಹವನ್ನು ಮಾಡಿ.
ನ ತೇ ಮಿಥ್ಯಾ ಸಮಾರಂಭೋ ಭವತ್ವೇಷ ತಪೋಧನ |
ಜಾನಾಮಿ ಚಾಹಂ ವಿಪ್ರರ್ಷೇ ನ ಮಿಥ್ಯಾ ತ್ವಂ ಕರಿಷ್ಯಸಿ ||29||
ಎಲೈ ತಪೋಧನರೇ, ನಿಮ್ಮ ಈ ಪ್ರಯತ್ನವು ಎಂದೂ ವ್ಯರ್ಥವಾಗುವುದಿಲ್ಲ. ಎಲೈ ಬ್ರಹ್ಮರ್ಷಿಗಳೇ, ನಿಮ್ಮ ಪ್ರಯತ್ನವು ಎಂದೂ ಸುಳ್ಳಾಗುವುದಿಲ್ಲವೆಂದು ನಾನು ತಿಳಿದಿದ್ದೇನೆ.
ಸೋಮಪಾವಶ್ವಿನಾವೇತೌ ಯಥಾ ವಾಽದ್ಯ ಕೃತೋ ತ್ವಯಾ |
ತಥೈವ ಮಾಮಪಿ ಬ್ರಹ್ಮನ್ ಶ್ರೇಯಸಾ ಯೋಕ್ತುಮರ್ಹಸಿ ||30||
ಎಲೈ ಬ್ರಾಹ್ಮಣರೇ, ನೀವು ಹೇಗೆ ಈ ದಿನ ಅಶ್ವಿನಿದೇವತೆಗಳನ್ನು ಸೋಮಪಾನಾರ್ಹರನ್ನಾಗಿ ಮಾಡಿದರೋ ಅದರಂತೆ ನನಗೂ ಶ್ರೇಯಸ್ಸನ್ನು ಉಂಟು ಮಾಡಿ.
ಭೂಯ ಏವ ತು ತೇ ವೀರ್ಯಂ ಪ್ರಕಾಶೇದಿತಿ ಭಾರ್ಗವ |
ಸುಕನ್ಯಾಯಾಃ ಪಿತುಶ್ಚಾಸ್ಯ ಕೀರ್ತಿರ್ಲೋಕೇ ಪ್ರಥೇದಿತಿ ||31||
ಅತೋ ಮಯೈತತ್ ಪ್ರಥಿತಂ ತವ ಕೀರ್ತಿಪ್ರಕಾಶನಮ್ |

ತಸ್ಮಾತ್ ಪ್ರಸಾದಂ ಕುರು ಮೇ ಭವತ್ವೇತದ್ ಯದಿಚ್ಛಸಿ ॥32॥
ಎಲ್ಲೈ ಭಾರ್ಗವರೇ, ನಿಮ್ಮ, ಸುಕನ್ಯೆಯ ಮತ್ತು ಅವಳ ತಂದೆಯಾದ ಶರ್ಯಾತಿಯ ಕೀರ್ತಿಯು ಲೋಕದಲ್ಲಿ ವಿಸ್ತಾರವಾಗಲಿ ಎಂದು ನಿಮ್ಮ ಕೀರ್ತಿಪ್ರಸಾರಕ್ಕಾಗಿ ನಾನು ಈ ಕಾರ್ಯವನ್ನು ಮಾಡಿದೆ. ಆದ್ದರಿಂದ ನೀವು ಏನು ಬಯಸುತ್ತೀರೋ ಅದರಂತೆ ಆಗಲಿ. ನನಗೆ ಅನುಗ್ರಹವನ್ನುಮಾಡಿ.
ಏವಮುಕ್ತಸ್ಯ ಶಕ್ರೇಣ ಚ್ಯವನಸ್ಯ ಮಹಾತ್ಮನಃ |
ಸ ಮನ್ಯುರ್ವ್ಯಗಮಚ್ಛೀಘ್ರಂ ಮುಮೋಚ ಚ ಪುರಂದರಮ್ ॥33॥
ಇಂದ್ರನಿಂದ ಹೀಗೆ ಹೇಳಲ್ಪಟ್ಟ ಮಹಾನುಭಾವರಾದ ಚ್ಯವನರಿಗೆ ಕೋಪವು ಶೀಘ್ರವಾಗಿ ಹೊರಟುಹೋಯಿತು. ಅವರು ಇಂದ್ರನನ್ನು ಬಿಡುಗಡೆಗೊಳಿಸಿದರು.
ಮದಂ ಚ ವ್ಯಭಜದ್ ರಾಜನ್ ಮದ್ಯೇ ಸ್ತ್ರೀಷು ಚ ವೀರ್ಯವಾನ್ |
ಅಕ್ಷೇಷು ಮೃಗಯಾಯಾಂ ಚ ಪೂರ್ವಸೃಷ್ಟಂ ಪುನಃ ಪುನಃ ॥34॥
ಎಲ್ಲೈ ರಾಜನೇ, ವೀರಶಾಲಿಗಳಾದ ಅವರು ಮದವನ್ನು ನಾಲ್ಕುಭಾಗವನ್ನಾಗಿ ಮಾಡಿ ಮದ್ಯದಲ್ಲಿ, ಸ್ತ್ರೀಯರಲ್ಲಿ, ದ್ಯೂತದಲ್ಲಿ ಮತ್ತು ಬೇಟೆಯಲ್ಲಿ ಮೊದಲೇ ಇದ್ದುದರ ಜೊತೆಗೆ ಪುನಃಪುನಃ ಇಟ್ಟರು.
ತದಾ ಮದಂ ವಿನಿಕ್ಷಿಪ್ಯ ಶಕ್ರಂ ಸಂತರ್ಪ್ಯ ಚೇಂದುನಾ |
ಅಶ್ವಿಭ್ಯಾಂ ಸಹಿತಾನ್ ದೇವಾನ್ ಯಾಜಯಿತ್ವಾ ಚ ತಂ ನೃಪಮ್ ॥
ವಿಖ್ಯಾಪ್ಯ ವೀರ್ಯಂ ಲೋಕೇಷು ಸರ್ವೇಷು ವದತಾಂ ವರಃ |
ಸುಕನ್ಯಯಾ ಮಹಾರಣ್ಯೇ ವಿಜಹಾರಾನುರಕ್ತಯಾ ॥36॥
ಅವರು ಮದವನ್ನು ವಿಭಾಗಮಾಡಿ ಬೇರೆ ಕಡೆಯಲ್ಲಿ ಇಟ್ಟು ಇಂದ್ರನನ್ನೂ ಸೋಮರಸದಿಂದ ತೃಪ್ತಪಡಿಸಿ, ಅಶ್ವಿನಿಗಳನ್ನು ಮತ್ತು ಉಳಿದ ದೇವತೆಗಳನ್ನು ಸೇರಿಸಿ ರಾಜನಿಂದ ಯಾಗವನ್ನು ಮಾಡಿಸಿ ವಾಗ್ಮಿಗಳಲ್ಲಿ ಶ್ರೇಷ್ಠರಾದ ಅವರು ಎಲ್ಲ ಲೋಕಗಳಲ್ಲಿಯೂ ತಮ್ಮ ಪ್ರತಾಪವನ್ನು ಅಭಿವೃದ್ಧಿಪಡಿಸಿ, ಅನುರಕ್ತಳಾದ ಸುಕನ್ಯೆಯ ಜೊತೆಯಲ್ಲಿ ಮಹಾರಣ್ಯದಲ್ಲಿ ವಿಹರಿಸಿದರು.
ತಸ್ಯೈತದ್ ದ್ವಿಜಸಂಘುಷ್ಟಂ ಸರೋ ದಿವ್ಯಂ ಪ್ರಕಾಶತೇ |
ಅತ್ರ ತ್ವಂ ಸಹ ಸೋದರ್ಯೈಃ ಪಿತೄನ್ ದೇವಾಂಶ್ಚ ತರ್ಪಯ ॥37॥
ಅವರ ದಿವ್ಯವಾದ ಈ ಸರೋವರವು ಪಕ್ಷಿಗಳ ನಾದಗಳಿಂದ ಕೂಡಿದುದಾಗಿ ಶೋಭಿಸುತ್ತಿದೆ. ಇಲ್ಲಿ ನೀನು ತಮ್ಮಂದಿರ ಜೊತೆಯಲ್ಲಿ ಪಿತೃಗಳಿಗೂ ಮತ್ತು ದೇವತೆಗಳಿಗೂ ತರ್ಪಣವನ್ನು ಕೊಡು.
ಏತದ್ ದೃಷ್ಟ್ವಾ ಮಹೀಪಾಲ ವಲ್ಮೀಕಾಗ್ರಂ ಚ ಭಾರತ |
ಸೈಂಧವಾರಣ್ಯಮಾಸಾದ್ಯ ಕುಲ್ಯಾನಾಂ ಕುರು ದರ್ಶನಮ್ |
ಪುಷ್ಕರೇಷು ಮಹಾರಾಜ ಸರ್ವೇಸು ಚ ಜಲಂ ಸ್ಪೃಶ ॥38॥
ಎಲ್ಲೈ ಭಾರತನೇ, ಎಲ್ಲೈ ರಾಜನೇ, ಈ ವಲ್ಮೀಕದ ತುದಿಯ ದರ್ಶನವನ್ನು ಮಾಡಿ ಸೈಂಧವಾರಣ್ಯವನ್ನು ತಲುಪಿ ಅಲ್ಲಿರುವ ಸರೋವರಗಳನ್ನು ದರ್ಶನಮಾಡು. ಎಲ್ಲೈ ಮಹಾರಾಜನೇ, ಎಲ್ಲ ಪುಷ್ಕರಗಳಲ್ಲಿಯೂ ಸ್ನಾನವನ್ನು ಮಾಡು.
ಆರ್ಚೀಕಪರ್ವತಶ್ಚೈವ ನಿವಾಸೋ ವೈ ಮನೀಷಿಣಾಮ್ |
ಸದಾಫಲಂ ಸದಾಸ್ರೋತೋ ಮರುತಾಂ ಸ್ಥಾನಮುತ್ತಮಮ್ ॥39॥
ಈ ಆರ್ಚೀಕಪರ್ವತವಾದರೂ ವಿವೇಕಿಗಳ ನಿವಾಸಸ್ಥಾನವಾಗಿದೆ. ಅಲ್ಲಿ ಯಾವಾಗಲೂ ಫಲಗಳು ಮತ್ತು ಜಲವು ಇರುತ್ತದೆ. ಅದು ಮರುತ್ತುಗಳ ಸನ್ನಿಧಾನವಿರುವ ಶ್ರೇಷ್ಠವಾದ ಸ್ಥಾನ.
ಚೈತ್ಯಾಶ್ಚೈತೇ ಬಹುವಿಧಾಃ ತ್ರಿದಶಾನಾಂ ಯುಧಿಷ್ಠಿರ |
ಏತಚ್ಚಂದ್ರಸರೋ ನಿತ್ಯಮರ್ಚಯನ್ನೃಷಯಃ ಸದಾ ॥40॥
ವೈಖಾನಸಾಶ್ಚ ಋಷಯೋ ವಾಲಖಿಲ್ಯಾಸ್ತಥೈವ ಚ ॥41॥
ಎಲ್ಲೈ ಯುಧಿಷ್ಠಿರನೇ, ಇವೆಲ್ಲವೂ ದೇವತೆಗಳು ನೆಟ್ಟಿರುವ ಬಹುವಿಧವಾದ ಯೂಪಗಳು. ಇದಕ್ಕೆ ಚಂದ್ರಸರೋವರವೆಂದು ಹೆಸರು. ಇಲ್ಲಿ ವೈಖಾನಸರು ಮತ್ತು ವಾಲಖಿಲ್ಯ ಋಷಿಗಳು ಅರ್ಚನೆಯನ್ನು ಮತ್ತು ತಪಸ್ಸನ್ನು ಮಾಡಿದರು.
ಶೃಂಗಾಣಿ ತ್ರೀಣಿ ಪುಣ್ಯಾನಿ ತ್ರೀಣಿ ಪ್ರಸ್ರವಣಾನಿ ಚ |
ಸರ್ವಾಣ್ಯನುಪರಿಕ್ರಮ್ಯ ಯಥಾಕಾಮಮುಪಸ್ಪೃಶ ॥42॥
ಇಲ್ಲಿರುವ ಮೂರು ಪವಿತ್ರವಾದ ಶಿಖರಗಳನ್ನು, ಮೂರು ಜಲಪಾತಗಳನ್ನು, ಸಮವಾಗಿ ಪ್ರದಕ್ಷಿಣೆಯನ್ನು ಮಾಡಿ ಎಲ್ಲದರಲ್ಲಿಯೂ ನಿನ್ನ ಮನಸ್ಸಿಗೆ ಬಂದಂತೆ ಸ್ನಾನವನ್ನು ಮಾಡು.
ಶಂತನುಶ್ಚಾತ್ರ ಕೌಂತೇಯ ಶುನಕಶ್ಚ ವಿಶಾಂಪತೇ |
ನರನಾರಾಯಣೌ ಚೋಭೌ ಸ್ಥಾನಂ ಪ್ರಾಪ್ತಾಃ ಸನಾತನಮ್ ॥43॥
ಎಲ್ಲೈ ಕೌಂತೇಯನೇ, ರಾಜನೇ, ಇಲ್ಲಿ ಶಂತನವೂ, ಶುನಕರೂ, ನರನಾರಾಯಣ ಋಷಿಗಳೂ ತಪಸ್ಸನ್ನು ಮಾಡಿ ಸನಾತನವಾದ ಸ್ಥಾನಗಳನ್ನು ಪಡೆದರು.
ಇಹ ನಿತ್ಯಾಶ್ರಯಾ ದೇವಾಃ ಪಿತರಶ್ಚ ಮಹರ್ಷಿಭಿಃ |
ಆರ್ಚೀಕಪರ್ವತೇ ಯೇ ತು ತಾನ್ ಯಜಸ್ವ ಯುಧಿಷ್ಠಿರ ॥44॥
ಎಲ್ಲೈ ಯುಧಿಷ್ಠಿರನೇ, ಈ ಆರ್ಚೀಕಪರ್ವತದಲ್ಲಿ ಯಾವ ಪಿತೃಗಳು, ದೇವತೆಗಳು ಮತ್ತು ಮಹರ್ಷಿಗಳು ಯಾವಾಗಲೂ ಸನ್ನಿಹಿತರಾಗಿರುತ್ತಾರೆಯೋ ಅವರನ್ನು ಪೂಜಿಸು.
ಇಹ ತೇ ವೈ ಚರೂನ್ ಪ್ರಾಶ್ನಂಸ್ತ್ರಿದಶಾಶ್ಚ ವಿಶಾಂಪತೇ |

ಯಮುನಾ ಚಾಕ್ಷಯಸ್ರೋತಾಃ ಕೃಷ್ಣಶ್ಚೇಹ ತಪೋಽಚರನ್ ॥45॥
ಎಲೈ ರಾಜನೇ, ಇಲ್ಲಿ ಆ ದೇವತೆಗಳೆಲ್ಲಾ ಚರುವನ್ನು ಪ್ರಾಶನಮಾಡಿದರು. ಅಕ್ಷಯ ಸ್ರೋತ್ರಳಾದ ಯಮುನೆಯು ಮತ್ತು ಕೃಷ್ಣನು ಇಲ್ಲಿ ತಪಸ್ಸನ್ನು ಆಚರಿಸಿದರು.
ಯಮೌ ಚ ಭೀಮಸೇನಶ್ಚ ಕೃಷ್ಣಾ ಚಾಮಿತ್ರಕರ್ಶನ |
ಸರ್ವೇ ಚಾತ್ರ ಗಮಿಷ್ಯಾಮಃ ತ್ವಯೈವ ಸಹ ಪಾಂಡವ |
ಏತತ್ ಪ್ರಸ್ರವಣಂ ಪುಣ್ಯಮಿಂದ್ರಸ್ಯ ಮನುಜಾಧಿಪ ॥46॥
ಎಲೈ ಪಾಂಡವನೇ, ಎಲೈ ಶತ್ರುನಾಶಕನೇ, ನಕುಲಸಹದೇವರು, ಭೀಮಸೇನ, ದ್ರೌಪದಿ ನಾವೆಲ್ಲರೂ ನಿನ್ನ ಜೊತೆಯಲ್ಲೇ ಮುಂದೆ ಹೋಗೋಣ. ಎಲೈ ಮನುಜಾಧಿಪನೇ, ಇದು ಪವಿತ್ರವಾದ ಇಂದ್ರನ ಪ್ರಸ್ರವಣ (ಜಲಪಾತ).
ಅತ್ರ ಧಾತಾ ವಿಧಾತಾ ಚ ವರುಣಶ್ಚೋರ್ಧ್ವಮಾಗತಾಃ |
ಅತ್ರ ತೇ ನ್ಯವಸನ್ ರಾಜನ್ ಕಾಂಕ್ಷಂತಃ ಸಹಧರ್ಮಿಣಃ |
ಮೈತ್ರಾಣಾಮೃಜುಬುದ್ಧೀನಾಮಯಂ ಗಿರಿವರಃ ಶಿವಃ ॥47॥
ಇಲ್ಲಿ ಧಾತೃ, ವಿಧಾತೃ ಮತ್ತು ವರುಣ ಈ ದೇವತೆಗಳು ಮೇಲಕ್ಕೆ ಬಂದರು. ಎಲೈ ರಾಜನೇ, ಇಲ್ಲಿ ಅವರು ಸಮಾನವಾದ ಧರ್ಮವನ್ನು ಆಚರಿಸುತ್ತಾ, ಶ್ರೇಯಸ್ಸನ್ನು ಬಯಸುತ್ತಾ ವಾಸವನ್ನು ಮಾಡಿದರು. ಸ್ನೇಹಬುದ್ಧಿಯುಳ್ಳ ಮತ್ತು ಋಜುಬುದ್ಧಿಯುಳ್ಳ ಜನರಿಗೆ ಈ ಪರ್ವತಶ್ರೇಷ್ಠವು ಬಹಳ ಸುಖಕರವಾದುದು.
ಏಷಾ ಸಾ ಯಮುನಾ ರಾಜನ್ ಮಹರ್ಷಿಗಣಸೇವಿತಾ |
ನಾನಾಯಜ್ಞಚಿತಾ ಪುಣ್ಯಾ ಸರ್ವಪಾಪಭಯಾಪಹಾ ॥48॥
ಎಲೈ ರಾಜನೇ, ಮಹರ್ಷಿಗಣಸೇವಿತವಾದ ಇದೇ ಆ ಯಮುನಾ ನದಿ. ತೀರದಲ್ಲಿ ಮಾಡಿದ ನಾನಾ ಯಜ್ಞಗಳಿಂದ ಕೂಡಿದ ಈ ಪವಿತ್ರವಾದ ನದಿಯು ಸರ್ವಪಾಪಗಳ ಮತ್ತು ಭಯಗಳ ಪರಿಹಾರಕವಾಗಿದೆ.
ಅತ್ರ ರಾಜಾ ಮಹೇಷ್ವಾಸೋ ಮಾಂಧಾತಾಽಯಜತ ಸ್ವಯಮ್ |
ಸಹದೇವಶ್ಚ ಕೌಂತೇಯ ಸೋಮಕೇ ವದತಾಂ ವರಃ ॥49॥
ಎಲೈ ಕೌಂತೇಯನೇ, ಇಲ್ಲಿ ರಾಜನಾದ ಮಹಾಧನುರ್ಧಾರಿಯಾದ ಮಾಂಧಾತನು ಯಜ್ಞವನ್ನು ಮಾಡಿದನು. ಹಾಗೆಯೇ, ಸಹದೇವನೂ ವಾಗ್ಮಿಗಳಲ್ಲಿ ಶ್ರೇಷ್ಠನಾದ ಸೋಮಕನೂ ಇಲ್ಲಿ ಯಜ್ಞವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತೆರಡನೆಯ ಅಧ್ಯಾಯ
ಲೋಮಶರಿಂದ ಮಾಂಧಾತೃ ಚರಿತ್ರ ಕಥನ.
ಯುಧಿಷ್ಠಿರಃ
ಮಾಂಧಾತಾ ರಾಜಾಶಾರ್ದೂಲಃ ತ್ರಿಷು ಲೋಕೇಷು ವಿಶ್ರುತಃ |
ಕಥಂ ಜಾತೋ ಮಹಾಬ್ರಹ್ಮನ್ ಯೌವನಾಶ್ವ ನೃಪೋತ್ತಮಃ ॥1॥
ಕಥಂ ಚೈತಾಂ ಪರಾಂ ಖ್ಯಾತಿಂ ಪ್ರಾಪ್ತವಾನಮಿತದ್ಯುತಿಃ |
ಯಸ್ಯ ಲೋಕಾಸ್ತ್ರಯೋ ವಶ್ಯಾ ವಿಷ್ಣೋರಿವ ಮಹಾತ್ಮನಃ ॥2॥
ಯುಧಿಷ್ಠಿರ ಮಹಾಬ್ರಾಹ್ಮಣರೇ, ಯುವನಾಶ್ವನ ಮಗನಾದ ರಾಜಶಾರ್ದೂಲನೂ ನೃಪೋತ್ತಮನೂ ಆದ ಮೂರುಲೋಕಗಳಲ್ಲಿಯೂ ಪ್ರಖ್ಯಾತನಾದ ಮಾಂಧಾತೃವು ಹೇಗೆ ಜನಿಸಿದನು? ಯಾವ ಮಹಾತ್ಮನಿಗೆ ವಿಷ್ಣುವಿಗೆ ವಶವಾದಂತೆ ಮೂರು ಲೋಕಗಳೂ ವಶವಾಗಿದ್ದವೋ ಅಂತಹ ಅಮಿತಪರಾಕ್ರಮಿಯಾದ ಅವನು ಇಂತಹ ಉತ್ತಮವಾದ ಖ್ಯಾತಿಯನ್ನು ಹೇಗೆ ಪಡೆದನು?
ಏತದಿಚ್ಛಾಮ್ಯಹಂ ಶ್ರೋತು ಚರಿತಂ ತಸ್ಯ ಧೀಮತಃ |
ಸತ್ಯಕೀರ್ತೇರ್ಹಿ ಮಾಂಧಾತುಃ ಕಥ್ಯಮಾನಂ ತ್ವಯಾಽನಘ ॥3॥
ಯಥಾ ಮಾಂಧಾತೃಶಬ್ದಶ್ಚ ತಸ್ಯ ಶಕ್ರಸಮದ್ಯುತೇಃ |
ಜನ್ಮ ಚಾಪ್ರತಿವೀರ್ಯಸ್ಯ ಕುಶಲೋ ಹ್ಯಸಿ ಭಾಷಿತುಮ್ ॥4॥
ಎಲೈ ಅನಘರೇ, ಸತ್ಯಕೀರ್ತಿಯಾದ ಮೇಧಾವಿಯಾದ ಆ ಮಾಂಧಾತೃವಿನ ಚರಿತ್ರೆಯನ್ನು ನಿಮ್ಮಿಂದ ಕೇಳಲು ಬಯಸುತ್ತೇನೆ. ಶಕ್ರನಿಗೆ ಸಮಾನವಾದ ತೇಜಸ್ಸುಳ್ಳ ಅವನಿಗೆ ಮಾಂಧಾತೃನಾಮವು ಹೇಗೆ ಬಂದಿತು? ಅಪ್ರತಿಮ ಪರಾಕ್ರಮಿಯಾದ ಅವನ ಜನನವು ಹೇಗೆ ಆಯಿತು? ಎಲ್ಲವನ್ನೂ ಹೇಳಿ. ನೀವು ಮಾತನಾಡುವುದರಲ್ಲಿ ಬಹಳ ಕುಶಲರಾಗಿದ್ದೀರಿ.
ಲೋಮಶಃ
ಶೃಣುಸ್ವಾವಹಿತೋ ರಾಜನ್ ರಾಜ್ಞಸ್ತಸ್ಯ ಮಹಾತ್ಮನಃ |
ಯಥಾ ಮಾಂಧಾತೃಶಬ್ದೋ ವೈ ಲೋಕೇಷು ಪರಿಗೀಯತೇ ॥5॥
ಲೋಮಶ ಎಲೈ ರಾಜನೇ, ಮಹಾತ್ಮನಾದ ಆ ರಾಜನ ಚರಿತ್ರೆಯನ್ನು ಸಾವಧಾನವಾಗಿ ಕೇಳು. ಮಾಂಧಾತೃ ಶಬ್ದವು ಹೇಗೆ ಲೋಕದಲ್ಲಿ ಪ್ರಸಿದ್ಧವಾಯಿತು ಎಂಬುದನ್ನೂ ಕೇಳು.
ಇಕ್ಷ್ವಾಕುವಂಶಪ್ರಭವೋ ಯುವನಾಶ್ವೋ ಮಹೀಪತಿಃ |

ಸೋಽಯಜತ್ ಪೃಥಿವೀಪಾಲಃ ಕ್ರತುಭಿರ್ಭೂರಿದಕ್ಷಿಣೈಃ ॥6॥
ಅಶ್ವಮೇಧಸಹಸ್ರಂ ಚ ಪ್ರಾಪ್ಯ ಧರ್ಮಭೃತಾಂ ವರಃ।
ಅನ್ಯೈಶ್ಚ ಕ್ರತುಭಿರ್ಮುಖ್ಯೈರ್ವಿವಿಧೈರಾಪ್ತದಕ್ಷಿಣೈಃ ॥7॥
ಇಕ್ಷ್ವಾಕುವಂಶದಲ್ಲಿ ಜನಿಸಿದ ಯುವನಾಶ್ವನೆಂಬ ರಾಜನಿದ್ದನು. ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಆ ರಾಜನು ಬಹಳ ದಕ್ಷಿಣೆಗಳುಳ್ಳ ಸಹಸ್ರ ಅಶ್ವಮೇಧಯಾಗಗಳನ್ನು ಮತ್ತು ಬಹಳ ದಕ್ಷಿಣಗಳುಳ್ಳ ಇನ್ನೂ ಅನೇಕ ವಿಧವಾದ ಕ್ರತುಗಳನ್ನು ಮಾಡಿದನು.
ಅನಪತ್ಯಸ್ತು ರಾಜರ್ಷಿಃ ಸ ಮಹಾತ್ಮಾ ದೃಢವ್ರತಃ।
ಮಂತ್ರಿಷ್ವಾಧಾಯ ತದ್ರಾಜ್ಯಂ ವನನಿತ್ಯೋ ಬಭೂವ ಹ ॥8॥
ಪುತ್ರಸಂತಾನವಿಲ್ಲದ ಆ ಮಹಾತ್ಮನಾದ ದೃಢವ್ರತನಾದ ರಾಜರ್ಷಿಯು ತನ್ನ ರಾಜ್ಯಭಾರವನ್ನು ಮಂತ್ರಿಗಳಿಗೆ ಒಪ್ಪಿಸಿ ನಿತ್ಯವೂ ವನದಲ್ಲಿ ವಾಸಮಾಡಿದನು.
ಶಾಸ್ತ್ರದೃಷ್ಟೇನ ವಿಧಿನಾ ಸಂಯೋಜ್ಯಾತ್ಮಾನಮಾತ್ಮನಾ।
ಪಿಪಾಸುಃ ಶುಷ್ಕಕಂಠಃ ಸ ಪ್ರವಿವೇಶಾಶ್ರಮಂ ಭೃಗೋಃ ॥9॥
ಶಾಸ್ತ್ರದೃಷ್ಟವಾದ ವಿಧಿಯಿಂದ ತನ್ನನ್ನು ತಾನು ತಪಸ್ಸಿನಲ್ಲಿ ತೊಡಗಿಸಿಕೊಂಡನು. ಒಮ್ಮೆ ಅವನು ರಾತ್ರಿಯ ವೇಳೆಯಲ್ಲಿ ಕಂಠವು ಒಣಗಿಹೋಗಿ ನೀರನ್ನು ಕುಡಿಯಲು ಬಯಸಿ ಭೃಗುಗಳ ಆಶ್ರಮವನ್ನು ಪ್ರವೇಶಿಸಿದನು.
ತಾಮೇವ ರಾತ್ರಿಂ ರಾಜೇಂದ್ರ ಮಹಾತ್ಮಾ ಭೃಗುನಂದನಃ।
ಇಷ್ಟಿಂ ಚಕಾರ ಸೌದ್ಯುಮ್ನೇಃ ಮಹರ್ಷಿಃ ಪುತ್ರಕಾರಣಾತ್ ॥10॥
ಎಲೈ ರಾಜೇಂದ್ರನೇ, ಅದೇ ರಾತ್ರಿಯೇ ಭೃಗುನಂದನರಾದ ಮಹಾನುಭಾವರಾದ ಮಹರ್ಷಿಗಳು (ಚ್ಯವನರು) ಸುದ್ಯುಮ್ನನ ಪುತ್ರನಾದ ಯುವನಾಶ್ವನಿಗೆ ಪುತ್ರಸಂತಾನವಾಗಬೇಕೆಂಬ ಉದ್ದೇಶದಿಂದ ಒಂದು ಇಷ್ಟಿಯನ್ನು ಮಾಡಿದ್ದರು.
ಸಂಭೃತೋ ಮಂತ್ರಪೂತೇನ ವಾರಿಣಾ ಕಲಶೋ ಮಹಾನ್।
ತತ್ರಾತಿಷ್ಠತ ರಾಜೇಂದ್ರ ಪೂರ್ವಮೇವ ಸಮಾಹಿತಃ ॥11॥
ಎಲೈ ರಾಜೇಂದ್ರನೇ, ಮಂತ್ರಪೂತವಾದ ಜಲದಿಂದ ಪೂರ್ಣವಾಗಿ ತುಂಬಿದ್ದ ಒಂದು ದೊಡ್ಡ ಕಲಶವು ಮೊದಲೇ ಅಲ್ಲಿ (ಹೋಮಕುಂಡದ ಬಳಿ) ಸ್ಥಾಪಿಸಲ್ಪಟ್ಟಿತ್ತು.
ಯತ್ ಪ್ರಾಶ್ಯ ಪ್ರಸವೇತ್ ಪತ್ನೀ ತಸ್ಯ ಶಕ್ರಸಮಂ ಸುತಮ್।
ತದ್ ವಾರಿ ವಿಧಿವದ್ ರಾಜನ್ ಯಸ್ಮಿನ್ನಾಸೀತ್ ಸುಸಂಸ್ಕೃತಮ್।
ತಂ ನ್ಯಸ್ಯ ವೇದ್ಯಾಂ ಕಲಶಂ ಸುಷುಪ್ಸ್ತೇ ಮಹರ್ಷಯಃ ॥12॥
ಯಾವ ಜಲವನ್ನು ರಾಜನ ಪತ್ನಿಯು ಪ್ರಾಶನಮಾಡಿ ಇಂದ್ರ ಸಮಾನನಾದ ಪುತ್ರನನ್ನು ಪಡೆಯಬೇಕೋ ಅಂತಹ ಸುಸಂಸ್ಕೃತವಾದ ಜಲವು ಆ ಕಲಶದಲ್ಲಿದ್ದಿತು. ಎಲೈ ರಾಜನೇ, ವೇದಿಕೆಯಲ್ಲಿ ಆ ಕಲಶವನ್ನಿಟ್ಟು ಆ ಎಲ್ಲ ಮಹರ್ಷಿಗಳೂ ನಿದ್ರೆಯನ್ನು ಮಾಡಿದ್ದರು.
ರಾತ್ರಜಾಗರಣಾಚ್ಛ್ರಾಂತಾನ್ ಸೌದ್ಯುಮ್ನಿಸ್ತತ್ರ ಪಾರ್ಥಿವಃ।
ಶುಷ್ಕಕಂಠಃ ಪಿಪಾಸಾರ್ತಃ ಪಾನೀಯಾರ್ಥೀ ಭೃಶಂ ನೃಪಃ।
ತಂ ಪ್ರವಿಶ್ಯಾಶ್ರಮಂ ಶ್ರಾಂತಃ ಪಾನೀಯಂ ಸೋಽಭ್ಯಯಾಚತ ॥13॥
ಆಶ್ರಮವನ್ನು ಪ್ರವೇಶಮಾಡಿದ ಶುಷ್ಕಕಂಠನೂ ಬಾಯಾರಿಕೆಯಿಂದ ಬಳಲಿದವನೂ, ಬಹಳವಾಗಿ ನೀರನ್ನು ಬಯಸುವವನೂ ಆದ ಆ ಯುವನಾಶ್ವರಾಜನು ರಾತ್ರಿಯ ಜಾಗರಣೆಯಿಂದ ದಣಿದಿದ್ದ ಆ ಮಹರ್ಷಿಗಳನ್ನು ತಾನೂ ದಣಿದು ನೀರನ್ನು ಯಾಚಿಸಿದನು.
ತಸ್ಯ ಶ್ರಾಂತಸ್ಯ ಶುಷ್ಕೇಣ ಕಂಠೇನ ಕ್ರೋಶತಃ ಶನೈಃ।
ನಾಶ್ರೌಷೀತ್ ಕಶ್ಚನ ಗಿರಂ ಶಕುನೇರಿವ ವಾಶಿತಮ್ ॥14॥
ತತಸ್ತಂ ಕಲಶಂ ದೃಷ್ಟ್ವಾ ಜಲಪೂರ್ಣಂ ಸ ಪಾರ್ಥಿವಃ।
ಅಭ್ಯಧಾವತ ವೇಗೇನ ಪೀತ್ವಾ ಚಾಂಭೋ ವ್ಯವಾಸೃಜತ್ ॥15॥
ದಣಿದು ಶುಷ್ಕಕಂಠದಿಂದ ಅವನು ಕಿರುಚುತ್ತಿದ್ದರೂ ಪಕ್ಷಿಸ್ವರದಂತೆ ದುರ್ಬಲವಾದ ಅವನ ಮಾತನ್ನು ಯಾರೂ ಕೇಳಲಿಲ್ಲ. ಆಗ ಆ ರಾಜನು ಜಲಪೂರ್ಣವಾದ ಆ ಕಲಶವನ್ನು ನೋಡಿ ಶೀಘ್ರವಾಗಿ ಅದರ ಬಳಿಗೆ ಹೋಗಿ ಅದರಲ್ಲಿದ್ದ ಜಲವನ್ನು ಕುಡಿದು ಆ ಕಲಶವನ್ನು ಎಸೆದನು.
ಸ ಪೀತ್ವಾ ಶೀತಲಂ ತೋಯಂ ಪಿಪಾಸಾರ್ತೋ ಮಹೀಪತಿಃ।
ನಿರ್ವಾಣಮಗಮದ್ ಧೀಮಾನ್ ಸುಸುಖೀ ಚಾಭವತ್ ತದಾ ॥16॥
ತತಸ್ತೇ ಪ್ರತ್ಯಬುಧ್ಯಂತ ಮುನಯಸ್ತು ನರಾಧಿಪ।
ನಿಸ್ತೋಯಂ ತಂ ಚ ಕಲಶಂ ದದೃಶುಃ ಸರ್ವ ಏವ ತೇ ॥17॥
ಬಾಯಾರಿಕೆಯಿಂದ ಆರ್ತನಾದ ಆ ಮೇಧಾವಿಯಾದ ರಾಜನು ಶೀತಲವಾದ ಆ ಜಲವನ್ನು ಪಾನಮಾಡಿ ಶ್ರಮಪರಿಹಾರವನ್ನು ಹೊಂದಿ ಆಗ ಸುಖದಿಂದ ಕೂಡಿದವನಾದನು. ಎಲೈ ರಾಜನೇ, ಆಗ ಆ ಮುನಿಗಳೆಲ್ಲರೂ ಎಚ್ಚರಗೊಂಡು ಕಲಶದ ಜಲವು ಬರಿದಾಗಿರುವುದನ್ನು ನೋಡಿದರು.
ಕಸ್ಯ ಕರ್ಮೇದಮಿತಿ ತೇ ಪರ್ಯತಪ್ಯನ್ ಸಮಾಗತಾಃ।
ಯುವನಾಶ್ವೋ ಮಯೇತ್ಯೇವಂ ಸತ್ಯಂ ಸಮಭಿಪದ್ಯತ ॥18॥
ಅವರೆಲ್ಲರೂ ಒಟ್ಟಿಗೆ ಸೇರಿ ಇದು ಯಾರ ಕೆಲಸವೆಂದು ಪರಿತಪಿಸಿದರು. ಯುವನಾಶ್ವನು ನನ್ನದು ಎಂದು ಸತ್ಯವನ್ನು ಹೇಳಿದನು.
ನ ಯುಕ್ತಮಿತಿ ತಂ ಪ್ರಾಹ ಭಗವಾನ್ ಭಾರ್ಗವಸ್ತದಾ।
ಪುತ್ರಾರ್ಥಂ ಸ್ಥಾಪಿತಾಶ್ಚಾಪಃ ತಪಸಾ ಚೈವ ಸಂಭೃತಾಃ ॥19॥

ಪೂಜ್ಯರಾದ ಭಾರ್ಗವರು ಇದು ಅಯೋಗ್ಯವಾದುದು. ನಾನು ನಿನ್ನ ಪುತ್ರ ಸಂತಾನದ ಸಲುವಾಗಿ ನನ್ನ ತಪಶ್ಶಕ್ತಿಯಿಂದ ಕೂಡಿದ ಜಲವನ್ನು ಆ ಕಲಶದಲ್ಲಿ ಇಟ್ಟಿದ್ದೆನು ಎಂದು ಹೇಳಿದರು.
ಮಯಾ ತತ್ರಾಹಿತಂ ಬ್ರಹ್ಮನ್ ತಪ ಆಸ್ಥಾಯ ದಾರುಣಮ್ |
ಪುತ್ರಾರ್ಥಂ ತವ ರಾಜರ್ಷೇ ಮಹಾಬಲಪರಾಕ್ರಮಃ ॥20॥
ಎಲೈ ರಾಜರ್ಷಿಯೇ, ನಿನಗೆ ಮಹಾಬಲಪರಾಕ್ರಮವುಳ್ಳ ಪುತ್ರನು ಜನಿಸಬೇಕೆಂದು ನಾನು ಗಹನವಾದ ತಪಸ್ಸನ್ನು ಮಾಡಿ ಮಂತ್ರಶಕ್ತಿಯನ್ನು ಆ ಜಲದಲ್ಲಿ ಆಧಾನ ಮಾಡಿದ್ದೆನು.
ಮಹಾಬಲೋ ಮಹಾವೀರ್ಯಃ ತಪೋಯೋಗಸಮನ್ವಿತಃ |
ಯಃ ಶಕ್ರಮಪಿ ವೀರ್ಯೇಣ ಗಮಯೇದ್ ಯಮಸಾದನಮ್ ॥21॥
ಅನೇನ ವಿಧಿನಾ ರಾಜನ್ ಮಯ್ಯೈತದುಪಪಾದಿತಮ್ |
ನಾನು ಮಹಾಬಲನೂ, ಮಹಾವೀರ್ಯನೂ, ತಪೋಯೋಗಸಮನ್ವಿತನೂ, ಇಂದ್ರನನ್ನೂ ತನ್ನ ಸಾಮರ್ಥ್ಯದಿಂದ ಯಮಲೋಕಕ್ಕೆ ಕಳುಹಿಸುವವನೂ ಆದ ಒಬ್ಬ ಪುತ್ರನನ್ನು ನಿನಗಾಗಿ ಈ ಮಂತ್ರವಿಧಾನದಿಂದ ಸಾಧಿಸಿದ್ದೆನು.
ಅಬ್ಭಕ್ಷಣಾತ್ ತ್ವಯಾ ರಾಜನ್ ನಯುಕ್ತಂ ಕೃತಮದ್ಯ ವೈ ॥22॥
ಎಲೈ ರಾಜನೇ, ನೀನು ಜಲವನ್ನು ಕುಡಿದು ಈ ದಿನ ಅಯುಕ್ತವಾದ ಕಾರ್ಯವನ್ನು ಮಾಡಿದ್ದೀಯೆ.
ನ ತ್ವದ್ಯ ಕ್ಷಮಮಸ್ಮಾಭಿರೇತತ್ ಕರ್ತುಮತೋಽನ್ಯಥಾ |
ನೂನಂ ದೈವಕೃತಂ ಹ್ಯೇತದ್ ಯದೇತತ್ ಕೃತವಾನಸಿ ॥23॥
ನಾವು ಈ ದಿನ ನೀನು ಮಾಡಿದ ಈ ಕಾರ್ಯವನ್ನು ವ್ಯತ್ಯಾಸ ಮಾಡಿ ಸರಿ ಮಾಡಲು ಸಾಧ್ಯವಿಲ್ಲ. ಖಂಡಿತವಾಗಿಯೂ ನೀನು ಮಾಡಿದ ಈ ಕಾರ್ಯವು ದೈವಕೃತವಾದುದೇ ಸರಿ.
ಪಿಪಾಸಿತೇನ ಯಾಃ ಪೀತಾ ವಿಧಿಮಂತ್ರಪುರಸ್ಕೃತಾಃ |
ಆಪಸ್ತ್ವಯಾ ಮಹಾರಾಜ ಮತ್ತಪೋವೀರ್ಯಸಂಭೃತಾಃ ॥24॥
ತಾಭ್ಯಸ್ತ್ವಮಾತ್ಮನಾ ಪುತ್ರಮೇವಂವೀರ್ಯಂ ಜನಿಷ್ಯಸಿ |
ವಿಧಾಸ್ಯಾಮೋ ವಯಂ ತತ್ರ ತವೇಷ್ಟಿಂ ಪರಮಾದ್ಭುತಾಮ್ ॥25॥
ಯಥಾ ಶಕ್ರಸಮಂ ಪುತ್ರಂ ಜನಯಿಷ್ಯಸಿ ವೀರ್ಯವಾನ್ |
ನಚ ಪ್ರಾಣೈರ್ಮಹಾರಾಜ ವಿಯೋಗಸ್ತೇ ಭವಿಷ್ಯತಿ ॥26॥
ಎಲೈ ಮಹಾರಾಜನೇ, ತೃಷೆಯಿಂದ ಬಳಲಿದ್ದ ನೀನು ವಿಧಿಮಂತ್ರ ಪುರಸ್ಕೃತವಾದ ನನ್ನ ತಪೋವಿಧಿಯಿಂದ ಪೂರ್ಣವಾದ ಯಾವ ಜಲವನ್ನು ಪಾನಮಾಡಿದೆಯೋ ಅದರಿಂದ ನೀನೇ ಅಂತಹ ಪರಾಕ್ರಮವುಳ್ಳ ಒಬ್ಬ ಪುತ್ರನನ್ನು ಪಡೆಯುತ್ತೀಯೆ. ಎಲೈ ಮಹಾರಾಜನೇ, ಪರಾಕ್ರಮಶಾಲಿಯಾದ ನೀನು ಶಕ್ರಸಮನಾದ ಪುತ್ರನನ್ನು ಪಡೆದರೂ ನಿನಗೆ ಪ್ರಾಣಹಾನಿಯಾಗದಿರುವಂತೆ ನಾವು ಅದ್ಭುತವಾದ ಒಂದು ಇಷ್ಟಿಯನ್ನು ಮಾಡುವೆವು (ಎಂದು ಹೇಳಿದರು).
ತತೋ ವರ್ಷಶತೇ ಪೂರ್ಣೇ ತಸ್ಯ ರಾಜ್ಞೋ ಮಹಾತ್ಮನಃ |
ವಾಮಂ ಪಾರ್ಶ್ವಂ ವಿನಿರ್ಭಿದ್ಯ ಸುತಃ ಸೂರ್ಯ ಇವಾಪರಃ ॥27॥
ನಿಶ್ಚಕ್ರಾಮ ಮಹಾತೇಜಾ ನಚ ತಂ ಮೃತ್ಯುರಾವಿಶತ್ |
ಯುವನಾಶ್ವಂ ನರಪತಿಂ ತದದ್ಭುತಮಿವಾಭವತ್ ॥28॥
ಲೋಮಶರು ಅನಂತರ ನೂರುವರ್ಷಗಳು ಪೂರ್ಣವಾಗುತ್ತಿರಲು ಆ ಮಹಾನುಭಾವನಾದ ರಾಜನ ವಾಮಕುಕ್ಷಿಯನ್ನು ಭೇದಿಸಿಕೊಂಡು ಇನ್ನೊಬ್ಬ ಸೂರ್ಯನಂತಿರುವ ಮಹಾತೇಜಸ್ವಿಯಾದ ಪುತ್ರನು ಹೊರಗೆ ಬಂದನು. ಆದರೂ ರಾಜನಾದ ಯುವನಾಶ್ವನಿಗೆ ಮರಣವುಂಟಾಗಲಿಲ್ಲ. ಅದೊಂದು ಅದ್ಭುತವಾದ ಘಟನೆಯಾಯಿತು.
ತತಃ ಶಕ್ರೋ ಮಹಾತೇಜಾಸ್ತಂ ದಿದೃಕ್ಷುರುಪಾಗಮತ್ |
ಪ್ರದೇಶಿನೀಂ ತತೋಽಸ್ಯಾಸ್ಯೇ ಶಕ್ರಃ ಸಮಭಿಸಂದಧೇ ॥29॥
ಮಾಮಯಂ ಧಾಸ್ಯತೀತ್ಯೇವಂ ಪರಿತುಷ್ಟ ಇವಾಬ್ರುವೀತ್ |
ಮಾಂಧಾತೇತಿ ಚ ನಾಮಾಽಸ್ಯ ಚಕ್ರುಃ ಸೇಂದ್ರಾ ದಿವೌಕಸಃ ॥30॥
ಅನಂತರ ಮಹಾತೇಜಸ್ವಿಯಾದ ಇಂದ್ರನು ಆ ಶಿಶುವನ್ನು ನೋಡಲು ಬಂದನು. ಅವನು ತನ್ನ ತೋರುಬೆರಳನ್ನು ಶಿಶುವಿನ ಬಾಯಿಯಲ್ಲಿಟ್ಟು ಇವನು ನನ್ನಿಂದ ಹಾಲು ಕುಡಿಯುತ್ತಾನೆ ಎಂದು ಪರಿತುಷ್ಟನಾದವನಂತೆ ಹೇಳಿದನು. ಆಗ ಇಂದ್ರ ಮೊದಲಾದ ದೇವತೆಗಳು ಆ ಶಿಶುವಿಗೆ ಮಾಂಧಾತೃ ಎಂದು ನಾಮಕರಣವನ್ನು ಮಾಡಿದರು.
ಪ್ರದೇಶಿನೀಂ ಶಕ್ರದತ್ತಾಮಾಸ್ವಾದ್ಯ ಸ ಶಿಶುಸ್ತದಾ |
ಅವರ್ಧತ ಮಹಾತೇಜಾಃ ಕಿಷ್ಕೂನಾಂ ಚ ತ್ರಯೋದಶ ॥31॥
ಇಂದ್ರನು ಬಾಯಿಯಲ್ಲಿಟ್ಟ ತೋರುಬೆರಳನ್ನು ಆಸ್ವಾದಿಸುತ್ತಾ ಮಹಾತೇಜಸ್ವಿಯಾದ ಆ ಶಿಶುವು ಹದಿಮೂರು ಕಿಷ್ಕುಗಳಷ್ಟು ಎತ್ತರ ಬೆಳೆಯಿತು.
ವೇದಾಸ್ತಂ ಸಧನುರ್ವೇದಾ ದಿವ್ಯಾನ್ಯಸತ್ರಾಣಿ ಚೇಶ್ವರಮ್ |
ಉಪತಸ್ಥುರ್ಮಹಾರಾಜಂ ಧ್ಯಾತಮಾತ್ರಾಣಿ ಸರ್ವಶಃ ॥32॥
ಎಲೈ ಮಹಾರಾಜನೇ, ಅವನು ಚಿಂತಿಸಿದ ತಕ್ಷಣವೇ ಎಲ್ಲ ವೇದಗಳು, ಧನುರ್ವೇದಗಳು, ದಿವ್ಯಾಸ್ತ್ರಗಳು ಪ್ರಭುವಾದ ಅವನನ್ನು ಬಂದು ಸೇರಿದವು.
ಧನುರಾಜಗವಂ ನಾಮ ಶರಾಃ ಶೃಂಗೋದ್ಭವಾಶ್ಚ ಯೇ |

ಅಭೇದ್ಯಂ ಕವಚಂ ಚೈವ ಸದ್ಯಸ್ತಮುಪಸಂಶ್ರಯನ್ ॥33॥
ಆಜಗವ ಧನುಸ್ಸು, ಶೃಂಗದಿಂದ ಮಾಡಿದ ಬಾಣಗಳು ಅಭೇದ್ಯವಾದ ಕವಚ ಎಲ್ಲವೂ ತಕ್ಷಣದಲ್ಲಿಯೇ ಅವನನ್ನು ಆಶ್ರಯಿಸಿದವು.
ಸೋಽಭಿಷಿಕ್ತೋ ಭಗವತಾ ಸ್ವಯಂ ಶಕ್ರೇಣ ಭಾರತ |
ಧರ್ಮೇಣೈವಾಜಯಲ್ಲೋಕಾನ್ ತ್ರೀನ್ ವಿಷ್ಣುರಿವ ವಿಕ್ರಮೈಃ ॥34॥
ಎಲೈ ಭಾರತನೇ, ಅವನು ಪೂಜ್ಯನಾದ ಇಂದ್ರನಿಂದ ಸ್ವಯಂ ಅಭಿಷಿಕ್ತನಾಗಿ ವಿಷ್ಣುವು ಮೂರು ವಿಕ್ರಮಗಳಿಂದ ಮೂರು ಲೋಕಗಳನ್ನು ಗೆದ್ದಂತೆ ಧರ್ಮದಿಂದಲೇ ಲೋಕಗಳನ್ನು ವಶಪಡಿಸಿಕೊಂಡನು.
ತಸ್ಯಾಪ್ರತಿಹತಂ ಚಕ್ರಂ ಪ್ರಾವರ್ತತ ಮಹಾತ್ಮನಃ |
ರತ್ನಾನಿ ಚೈವ ರಾಜರ್ಷಿಂ ಸ್ವಯಮೇವೋಪತಸ್ಥಿರೇ ॥35॥
ಮಹಾತ್ಮನಾದ ಅವನ ಚಕ್ರಾಧಿಪತ್ಯವು ಅಪ್ರತಿಹತವಾಗಿ ಸಾಗಿತು. ರತ್ನಗಳು ರಾಜರ್ಷಿಯಾದ ಅವನನ್ನು ತಾವಾಗಿಯೇ ಬಂದು ಸೇರಿದವು.
ತಸ್ಯೈವಂ ವಸುಸಂಪೂರ್ಣಾ ವಸುಧಾ ವಸುಧಾಧಿಪ |
ತೇನೇಷ್ಟಂ ವಿವಿಧೈರ್ಯಜ್ಞೈರ್ವಿಧಿವಚ್ಚಾಪ್ತದಕ್ಷಿಣೈಃ ॥36॥
ಎಲೈ ವಸುಧಾಧಿಪನೇ, ಹೀಗೆ ಅವನಿಗೆ ವಸುಧೆಯು ಧನರತ್ನದಿಂದ ಸಂಪೂರ್ಣವಾಯಿತು. ಅವನು ಬಹಳ ದಕ್ಷಿಣೆಗಳಿಂದ ಕೂಡಿದ ವಿವಿಧ ಯಜ್ಞಗಳನ್ನು ವಿಧಿಪೂರ್ವಕವಾಗಿ ಮಾಡಿದನು.
ಕೃತಕೃತ್ಯೋ ಮಹಾತೇಜಾ ಧರ್ಮಂ ಪ್ರಾಪ್ಯ ಸುಪುಷ್ಕಳಮ್ |
ಶಕ್ರಸ್ಯಾರ್ಧಾಸನಂ ರಾಜನ್ ಲಬ್ಧವಾನಮಿತದ್ಯುತಿಃ ॥37॥
ಕೃತಕೃತ್ಯನೂ, ಮಹಾತೇಜಸ್ವಿಯೂ, ಅಮಿತದ್ಯುತಿಯೂ ಆದ ಅವನು ಎಲೈ ರಾಜನೇ, ಬಹಳ ಪುಷ್ಕಳವಾದ ಧರ್ಮವನ್ನು ಸಂಪಾದಿಸಿ ಇಂದ್ರನ ಅರ್ಧಾಸನವನ್ನು ಪಡೆದನು.
ಏಕಾಹ್ನಾ ಪೃಥಿವೀ ತೇನ ಧರ್ಮನಿತ್ಯೇನ ಧೀಮತಾ |
ನಿರ್ಜಿತಾ ಶಾಸನಾದೇವ ಸರತ್ನಾಕರಪಟ್ಟಣಾ ॥38॥
ಮೇಧಾವಿಯೂ, ಧರ್ಮನಿತ್ಯನೂ ಆದ ಅವನು ಒಂದೇ ದಿನದಲ್ಲಿ ತನ್ನ ಶಾಸನದಿಂದಲೇ ಸಮುದ್ರ ಮತ್ತು ಪಟ್ಟಣಗಳಿಂದ ಕೂಡಿದ ಸಮಸ್ತವಾದ ಪೃಥಿವಿಯನ್ನು ಜಯಿಸಿದನು.
ತಸ್ಯ ಚೈತ್ಯೈರ್ಮಹಾರಾಜ ಕ್ರತೂನಾಂ ದಕ್ಷಿಣಾವತಾಮ್ |
ಚತುರಂತಾ ಮಹೀ ವ್ಯಾಪ್ತಾ ನಾಸೀತ್ ಕಿಂಚಿದಸಂವೃತಾ ॥39॥
ಎಲೈ ಮಹಾರಾಜನೇ, ಬಹಳ ದಕ್ಷಿಣೆಗಳಿಂದ ಕೂಡಿದ ಅವನ ಯಾಗಗಳ ಚೈತ್ಯರೂಪಗಳಿಂದ ಭೂಮಿಯು ನಾಲ್ಕುಕಡೆಗಳಲ್ಲಿಯೂ ತುಂಬಿಹೋಗಿ ಯಾವ ಭಾಗವೂ ಉಳಿದಿರಲಿಲ್ಲ.
ತೇನ ಪದ್ಮಸಹಸ್ರಾಣಿ ಗವಾಂ ದಶ ಮಹಾತ್ಮನಾ |
ಬ್ರಾಹ್ಮಣೇಭ್ಯೋ ಮಹಾರಾಜ ದತ್ತಾನೀತಿ ಪ್ರಚಕ್ಷತೇ ॥40॥
ಎಲೈ ಮಹಾರಾಜನೇ, ಆ ಮಹಾತ್ಮನು ಹತ್ತು ಪದ್ಮಸಹಸ್ರಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನೆಂದು ಹೇಳುತ್ತಾರೆ.
ತೇನ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ನರಾಧಿಪ |
ವೃಷ್ಟಂ ಸಸ್ಯಸಮೃದ್ಧ್ಯರ್ಥಂ ಮಿಷತೋ ವಜ್ರಪಾಣಿನಃ ॥41॥
ಎಲೈ ನರಾಧಿಪನೇ, ಹನ್ನೆರಡು ವರ್ಷ ಅನಾವೃಷ್ಟಿ ಉಂಟಾದಾಗ ಅವನು ಸಸ್ಯಸಮೃದ್ಧಿಯನ್ನು ಮಾಡಲು ವಜ್ರಪಾಣಿಯು ನೋಡುತ್ತಿರುವಂತೆಯೇ ಸ್ವತಃ ಮಳೆಯನ್ನು ಸುರಿಸಿದನು.
ತೇನ ಸೋಮಕುಲೋತ್ಪನ್ನೋ ಗಾಂಧಾರಾಧಿಪತಿರ್ಮಹಾನ್ |
ಗರ್ಜನ್ನಿವ ಮಹಾಮೇಘಃ ಪ್ರಮಥ್ಯ ನಿಹತಃ ಶರೈಃ ॥42॥
ಅವನು ಸೋಮಕುಲೋತ್ಪನ್ನನಾದ ಮಹಾಮೇಘದಂತೆ ಗರ್ಜನೆಯನ್ನು ಮಾಡುತ್ತಿದ್ದ ಬಲಿಷ್ಠನಾದ ಗಾಂಧಾರಾಧಿಪತಿಯನ್ನು ಯುದ್ಧದಲ್ಲಿ ಸೋಲಿಸಿ ಬಾಣಗಳಿಂದ ಸಂಹರಿಸಿದನು.
ಪ್ರಜಾಶ್ಚತುರ್ವಿಧಾಸ್ತೇನ ತ್ರಾತಾ ರಾಜನ್ ಮಹಾತ್ಮನಾ |
ತೇನಾತ್ಮತಪಸಾ ಲೋಕಾ ಧಾರಿತಾಶ್ಚಾತಿತೇಜಸಾ ॥43॥
ಎಲೈ ರಾಜನೇ, ಆ ಮಹಾತ್ಮನು ನಾಲ್ಕುವಿಧವಾದ ಪ್ರಜೆಗಳನ್ನೂ ರಕ್ಷಿಸಿದನು. ಅವನು ತನ್ನ ತಪಃಶಕ್ತಿಯಿಂದ ಮತ್ತು ಅತಿತೇಜಸ್ಸಿನಿಂದ ಲೋಕಗಳನ್ನು ಧರಿಸಿದನು.
ತಸ್ಯೈತದ್ ದೇವಯಜನಂ ಸ್ಥಾನಮಾದಿತ್ಯತೇಜಸಃ |
ಯಸ್ಯ ಪುಣ್ಯತಮೋ ದೇಶಃ ಕುರುಕ್ಷೇತ್ರಸ್ಯ ಮಧ್ಯತಃ ॥44॥
ಇದು ಸೂರ್ಯಸಮಾನವಾದ ಪರಾಕ್ರಮವನ್ನು ಹೊಂದಿದ್ದ ಅವನ ದೇವಯಜನ. ಅವನ ಪವಿತ್ರವಾದ ದೇಶವು ಕುರುಕ್ಷೇತ್ರದ ಮಧ್ಯದಲ್ಲಿದೆ.
ತಥಾ ತ್ವಮಪಿ ರಾಜೇಂದ್ರ ಮಾಂಧಾತೇವ ಮಹೀಪತಿಃ |
ಧರ್ಮಂ ಕೃತ್ವಾ ಮಹೀಂ ರಕ್ಷನ್ ಸ್ವರ್ಗಲೋಕಮವಾಪ್ಸ್ಯಸಿ ॥45॥
ರಾಜೇಂದ್ರನೇ, ನೀನೂ ಮಾಂಧಾತೃ ರಾಜನಂತೆ ಧರ್ಮವನ್ನು ಆಚರಿಸಿ ಭೂಮಿಯನ್ನು ರಕ್ಷಿಸಿ ಸ್ವರ್ಗಲೋಕವನ್ನು ಹೊಂದುವಿ.
ಏತತ್ತೇ ಸರ್ವಮಾಖ್ಯಾತಂ ಮಾಂಧಾತುಶ್ಚರಿತಂ ಮಹತ್ |
ಯಶಶ್ಚಾಗ್ರ್ಯಂ ಮಹೀಪಾಲ ಯನ್ಮಾಂ ತ್ವಂ ಪರಿಪೃಚ್ಛಸಿ ॥46॥

ಎಲೈ ರಾಜನೇ, ನೀನು ಕೇಳಿದ ಮಾಂಧಾತೃ ರಾಜನ ದೊಡ್ಡ ಚರಿತ್ರೆಯನ್ನು ಮತ್ತು ಅವನ ಶ್ರೇಷ್ಠವಾದ ಕೀರ್ತಿಯನ್ನು ನಿನಗೆ ಹೇಳಿದ್ದೇನೆ.
ವೈಶಂಪಾಯನಃ
ಏವಮುಕ್ತಸ್ತು ಕೌಂತೇಯೋ ಲೋಮಶೇನ ಮಹಾತ್ಮನಾ |
ಪಪ್ರಚ್ಛಾನಂತರಂ ಭೂಯಃ ಸೋಮಕಂ ಪ್ರತಿ ಭಾರತ ॥47॥
ವೈಶಂಪಾಯನ ಎಲೈ ಭಾರತನೇ, ಮಹಾತ್ಮರಾದ ಲೋಮಶರಿಂದ ಹೀಗೆ ಹೇಳಲ್ಪಟ್ಟ ಕೌಂತೇಯನು ಅನಂತರ ಪುನಃ ಸೋಮಕರಾಜನ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ಮೂರನೆಯ ಅಧ್ಯಾಯ
ಸೋಮಕ ಕಥಾ. ಋತ್ವಿಕ್ ವಚನದಂತೆ ಒಬ್ಬ ಪುತ್ರನನ್ನು ಹೋಮ ಮಾಡಿ ನೂರು ಪುತ್ರರನ್ನು ಪಡೆಯುವ ಆಸೆ.
ಯುಧಿಷ್ಠಿರಃ
ಕಥಂವೀರ್ಯಃ ಸ ರಾಜಾಽಭೂತ್ ಸೋಮಕೋ ವದತಾಂ ವರ |
ಕರ್ಮಾಣ್ಯಸ್ಯ ಪ್ರಭಾವಂ ಚ ಶ್ರೋತುಮಿಚ್ಛಾಮಿ ತತ್ತ್ವತಃ ॥1॥
ಎಲೈ ವಾಗ್ಮಿಶ್ರೇಷ್ಠರೇ, ಸೋಮಕರಾಜನು ಎಂತಹ ಪ್ರಭಾವವುಳ್ಳವನಾಗಿದ್ದನು? ಅವನ ಕರ್ಮಗಳನ್ನು ಮತ್ತು ಪ್ರಭಾವಗಳನ್ನು ಯಥಾರ್ಥವಾಗಿ ತಿಳಿಯಲು ಇಚ್ಛಿಸುತ್ತೇನೆ.
ಲೋಮಶಃ
ಯುಧಿಷ್ಠಿರಾಸೀನ್ನೃಪತಿಃ ಸೋಮಕೋ ನಾಮ ಧಾರ್ಮಿಕಃ |
ತಸ್ಯ ಭಾರ್ಯಾಶತಂ ರಾಜನ್ ಸದೃಶೀನಾಮಭೂತ್ತದಾ ॥2॥
ಲೋಮಶ ಎಲೈ ಯುಧಿಷ್ಠಿರನೇ, ಸೋಮಕನೆಂಬ ಧಾರ್ಮಿಕನಾದ ರಾಜನಿದ್ದನು. ಎಲೈ ರಾಜನೇ, ಅವನಿಗೆ ಅನುರೂಪರಾದ ನೂರುಜನ ಪತ್ನಿಯರಿದ್ದರು.
ಸ ವೈ ಯತ್ನೇನ ಮಹತಾ ತಾಸು ಪುತ್ರಂ ಮಹೀಪತಿಃ |
ಕಂಚಿನ್ನಾಸಾದಯಾಮಾಸ ಕಾಲೇನ ಮಹತಾಽಪಿ ಚ ॥3॥
ಆ ರಾಜನು ಬಹಳ ಕಾಲವಾದರೂ ಬಹಳ ಪ್ರಯತ್ನಪಟ್ಟರೂ ಅವರಲ್ಲಿ ಯಾರಲ್ಲಿಯೂ ಅವನಿಗೆ ಒಬ್ಬ ಪುತ್ರನು ಜನಿಸಲಿಲ್ಲ.
ಕದಾಚಿತ್ತಸ್ಯ ವೃದ್ಧಸ್ಯ ಯತಮಾನಸ್ಯ ಧೀಮತಃ |
ಜಂತುರ್ನಾಮ ಸುತಸ್ತಸ್ಯ ಜ್ಯೇಷ್ಠಾಯಾಂ ಸಮಜಾಯತ ॥4॥
ಒಮ್ಮೆ ಮೇಧಾವಿಯಾದ ವೃದ್ಧನಾದರೂ ಪ್ರಯತ್ನಶೀಲನಾದ ಅವನಿಗೆ ಜ್ಯೇಷ್ಠ ಪತ್ನಿಯಲ್ಲಿ ಜಂತು ಎಂಬ ಪುತ್ರನು ಜನಿಸಿದನು.
ತಂ ಜಾತಂ ಮಾತರಃ ಸರ್ವಾಃ ಪರಿವಾರ್ಯ ಸಮಾಸತೇ |
ಸತತಂ ಪೃಷ್ಠತಃ ಕೃತ್ವಾ ಕಾಮಭೋಗಾನ್ ವಿಶಾಂಪತೇ ॥5॥
ಎಲೈ ರಾಜನೇ, ಆ ಪುತ್ರನು ಹುಟ್ಟಿದ ಮೇಲೆ ಅವನ ಎಲ್ಲಾ ತಾಯಿಯರೂ ತಮ್ಮ ಇಷ್ಟವಾದ ಭೋಗಗಳನ್ನೆಲ್ಲಾ ತಿರಸ್ಕರಿಸಿ ಸತತವಾಗಿ ಆ ಶಿಶುವಿನ ಸುತ್ತಲೂ ಇರುತ್ತಿದ್ದರು.
ತತಃ ಪಿಪೀಲಿಕಾ ಜಂತುಂ ಕದಾಚಿದದಶತ್ ಸ್ಫಿಜಿ |
ಸ ದಷ್ಟೋ ಹ್ಯರುದದ್ ರಾಜನ್ ತೇನ ದುಃಖೇನ ಬಾಲಕಃ ॥6॥
ಅನಂತರ ಒಮ್ಮೆ ಒಂದು ಇರುವೆಯು ಆ ಶಿಶುವಿನ ಪೃಷ್ಠದಲ್ಲಿ ಕಚ್ಚಿತು. ಎಲೈ ರಾಜನೇ, ಇರುವೆಯಿಂದ ಕಚ್ಚಲ್ಪಟ್ಟ ಆ ಬಾಲಕನು ದುಃಖದಿಂದ ಅತ್ತನು.
ತತಸ್ತಾ ಮಾತರಃ ಸರ್ವಾಃ ಪ್ರಾಕ್ರೋಶನ್ ಭೃಶದುಃಖಿತಾಃ |
ಪರಿವಾರ್ಯ ಜಂತುಂ ಬಾಲಂ ತಂ ಸ ಶಬ್ದಸ್ತುಮುಲೋಽಭವತ್ ॥7॥
ಅನಂತರ ಆ ತಾಯಿಯರೆಲ್ಲರೂ ಬಾಲನಾದ ಜಂತುವನ್ನು ಸುತ್ತುವರಿದು ಬಹಳ ದುಃಖದಿಂದ ಗಟ್ಟಿಯಾಗಿ ಅತ್ತರು. ಆ ಶಬ್ದವು ಬಹಳ ತೀವ್ರವಾಗಿದ್ದಿತು.
ತಮಾರ್ತನಾದಂ ಸಹಸಾ ಶುಶ್ರಾವ ಸ ಮಹೀಪತಿಃ |
ಅಮಾತ್ಯಪರಿಷನ್ಮಧ್ಯೇ ಉಪವಿಷ್ಟಃ ಸಹ ದ್ವಿಜೈಃ ॥8॥
ಅಮಾತ್ಯಪರಿಷತ್ತಿನ ಮಧ್ಯದಲ್ಲಿ ಬ್ರಾಹ್ಮಣರ ಜೊತೆಯಲ್ಲಿ ಕುಳಿತಿದ್ದ ರಾಜನು ಇದ್ದಕ್ಕಿದ್ದಂತೆಯೇ ಉಂಟಾದ ಆ ಆರ್ತನಾದವನ್ನು ಕೇಳಿದನು.
ತತಃ ಪ್ರಸ್ಥಾಪಯಾಮಾಸ ಕಿಮೇತದಿತಿ ಪಾರ್ಥಿವಃ |
ತಸ್ಮೈ ಕ್ಷತ್ತಾ ಯಥಾವೃತ್ತಮಾಚಚಕ್ಷೇ ಸುತಂ ಪ್ರತಿ ॥9॥
ಆಗ ಆ ರಾಜನು ಇದೇನೆಂದು ತಿಳಿದುಕೊಳ್ಳಲು ತನ್ನ ಸೂತನನ್ನು ಕಳುಹಿಸಿದನು. ಆ ಸೂತನು ಹಿಂದಿರುಗಿ ಬಂದು ಅವನಿಗೆ ಶಿಶುವಿನ

ಯಥಾರ್ಥಸ್ಥಿತಿಯನ್ನು ತಿಳಿಸಿದನು.
ತ್ವರಮಾಣಃ ಸ ಚೋತ್ಥಾಯ ಸೋಮಕಃ ಸಹ ಮಂತ್ರಿಭಿಃ |
ಪ್ರವಿಶ್ಯಾಂತಃಪುರಂ ಪುತ್ರಮಾಶ್ವಾಸಯದರಿಂದಮಃ ॥10॥
ಸೋಮಕರಾಜನು ಮಂತ್ರಿಗಳ ಜೊತೆಯಲ್ಲಿ ಎದ್ದು ಶೀಘ್ರವಾಗಿ ಅಂತಃಪುರಕ್ಕೆ ಹೋಗಿ ಅರಿಂದಮನಾದ ಅವನು ತಾನೇ ಪುತ್ರನನ್ನು ಸಮಾಧಾನಪಡಿಸಿದನು.
ಸಾಂತ್ವಯಿತ್ವಾ ತು ತಂ ಪುತ್ರಂ ನಿಷ್ಕ್ರಮ್ಯಾಂತಃಪುರಾತ್ ತತಃ |
ಋತ್ವಿಜಾ ಸಹಿತೋ ರಾಜನ್ ಸಹಾಮಾತ್ಯ ಉಪಾವಿಶತ್ ॥11॥
ಎಲೈ ರಾಜನೇ, ಶಿಶುವನ್ನು ಸಮಾಧಾನಪಡಿಸಿ ಅಂತಃಪುರದಿಂದ ಹೊರಗೆ ಬಂದು ತನ್ನ ಪುರೋಹಿತನ ಜೊತೆಯಲ್ಲಿ ಅಮಾತ್ಯನ ಎದುರಿಗೆ ಕುಳಿತುಕೊಂಡನು.
ಸೋಮಕಃ
ಧಿಗಸ್ತ್ವಿಹೈಕಪುತ್ರತ್ವಮಪುತ್ರತ್ವಂ ವರಂ ಭವೇತ್ |
ಅನಿತ್ಯತ್ವಾಚ್ಚ ಭೂತಾನಾಂ ಶೋಕ ಏವೈಕಪುತ್ರತಾ ॥12॥
ಸೋಮಕಃ ಏಕಪುತ್ರತ್ವಕ್ಕೆ ಧಿಕ್ಕಾರವಿರಲಿ. ಅದಕ್ಕಿಂತ ಪುತ್ರನನ್ನು ಪಡೆಯದಿರುವುದೇ ಶ್ರೇಷ್ಠವಾದುದು. ಪ್ರಾಣಿಗಳ ಜೀವನವು ಅನಿತ್ಯವಾಗಿರುವುದರಿಂದ ಏಕಪುತ್ರತ್ವವು ಶೋಕವೇ ಸರಿ.
ಇದಂ ಭಾರ್ಯಾಶತಂ ಬ್ರಹ್ಮನ್ ಪರೀಕ್ಷ್ಯೋಪಚಿತಂ ಪ್ರಭೋ |
ಪುತ್ರಾರ್ಥಿನಾ ಮಯಾ ಚೋಢಂ ನ ಚಾಸಾಂ ವಿದ್ಯತೇ ಪ್ರಜಾ ॥13॥
ಎಲೈ ಬ್ರಾಹ್ಮಣರೇ (ಪುರೋಹಿತರೇ), ಪ್ರಭುಗಳೇ, ನಾನು ಪರೀಕ್ಷೆ ಮಾಡಿ ಈ ನೂರು ಪತ್ನಿಯರನ್ನು ಸಂಪಾದಿಸಿದೆನು. ಪುತ್ರಸಂತಾನವನ್ನು ಬಯಸಿ ಅವರನ್ನು ವಿವಾಹ ಮಾಡಿಕೊಂಡೆನು. ಆದರೆ ಯಾರಿಗೂ ಒಂದು ಮಗುವೂ ಜನಿಸಲಿಲ್ಲ.
ಏಕಃ ಕಥಂಚಿದುತ್ಪನ್ನಃ ಪುತ್ರೋ ಜಂತುರಯಂ ಮಮ |
ಯತಮಾನಾಸು ಸರ್ವಾಸು ಕಿಂ ನು ದುಃಖಮತಃ ಪರಮ್ ॥14॥
ಕೊನೆಗೆ ಹೇಗೋ ಕಷ್ಟಪಟ್ಟು ಎಲ್ಲರಲ್ಲಿಯೂ ಪ್ರಯತ್ನಪಡುತ್ತಿದ್ದ ನನಗೆ ಈ ಜಂತುವು ಪುತ್ರನಾಗಿ ಜನಿಸಿದನು. ಇದಕ್ಕಿಂತ ಹೆಚ್ಚು ದುಃಖಕರವಾದುದು ಏನಿದೆ?
ವಯಶ್ಚ ಸಮತೀತಂ ಮೇ ಸಭಾರ್ಯಸ್ಯ ದ್ವಿಜೋತ್ತಮ |
ಆಸಾಂ ಪ್ರಾಣಾಃ ಸಮಾಯತ್ತಾ ಮಮಾಸ್ಮಿನ್ನೇಕಪುತ್ರಕೇ ॥15॥
ಎಲೈ ದ್ವಿಜೋತ್ತಮರೇ, ನನಗೂ ಮತ್ತು ನನ್ನ ಭಾರ್ಯೆಯರಿಗೂ ವಯಸ್ಸು ಮೀರಿ ಹೋಗಿದೆ. ಇವರೆಲ್ಲರ ಪ್ರಾಣಗಳು ನನ್ನ ಆ ಒಂದು ಪುತ್ರನಲ್ಲಿ ಪ್ರತಿಷ್ಠಿತವಾಗಿವೆ.
ಸ್ಯಾತ್ತು ಕರ್ಮ ತಥಾಯುಕ್ತಂ ಯೇನ ಪುತ್ರಶತಂ ಭವೇತ್ |
ಮಹತಾ ಲಘುನಾ ವಾಽಪಿ ಕರ್ಮಣಾ ದುಷ್ಕರೇಣ ವಾ ॥16॥
ದೊಡ್ಡದಾಗಲೀ, ಚಿಕ್ಕದಾಗಲೀ ಅಥವಾ ದುಷ್ಕರವಾದುದಾಗಲೀ ಅಂತಹದ್ದನ್ನು ಮಾಡಿ ನೂರುಜನ ಪುತ್ರರನ್ನು ಪಡೆಯುವ ಯಾವುದಾದರೂ ಕರ್ಮವಿದೆಯೇ?
ಋತ್ವಿಕ್
ಅಸ್ತಿ ಚೈತಾದೃಶಂ ಕರ್ಮ ಯೇನ ಪುತ್ರಶತಂ ಭವೇತ್ |
ಯದಿ ಶಕ್ನೋಷಿ ತತ್ ಕರ್ತುಮಥ ವಕ್ಷ್ಯಾಮಿ ಸೋಮಕ ॥17॥
ಋತ್ವಿಕ್- ಪುತ್ರಶತವನ್ನು ಪಡೆಯುವ ಅಂತಹ ಒಂದು ಕರ್ಮವಿದೆ. ಎಲೈ ಸೋಮಕನೇ, ನಿನಗೆ ಅದನ್ನು ಮಾಡುವ ಶಕ್ತಿ ಇದ್ದರೆ ನಾನು ಅದನ್ನು ಹೇಳುವೆನು.
ಸೋಮಕಃ
ಕಾರ್ಯಂ ವಾ ಯದಿ ವಾಽಕಾರ್ಯಂ ಯೇನ ಪುತ್ರಶತಂ ಭವೇತ್ |
ಕೃತಮೇವೇತಿ ತದ್ ವಿದ್ಧಿ ಭಗವನ್ ತದ್ ಬ್ರವೀಹಿ ಮೇ ॥18॥
ಸೋಮಕ ಅದು ಕಾರ್ಯವಾಗಲೀ ಅಥವಾ ಅಕಾರ್ಯವಾಗಲೀ, ಯಾವ ಕರ್ಮದಿಂದ ನೂರು ಪುತ್ರರು ಜನಿಸುವರೋ ಅಂತಹ ಕರ್ಮವನ್ನು ನಾನು ಮಾಡಿದ್ದೇನೆಂದು ತಿಳಿಯಿರಿ. ಪೂಜ್ಯರೇ, ನನಗೆ ಅದನ್ನು ಹೇಳಿ.
ಋತ್ವಿಕ್
ಯಜಸ್ವ ಜಂತುನಾ ರಾಜನ್ ತ್ವಂ ಮಯಾ ವಿತತೇ ಕ್ರತೌ |
ತತಃ ಪುತ್ರಶತಂ ಶ್ರೀಮದ್ ಭವಿಷ್ಯತ್ಯಚಿರೇಣ ತೇ ॥19॥
ಋತ್ವಿಕ್- ಎಲೈ ರಾಜನೇ, ನಾನು ಮಾಡುವ ವಿಸ್ತಾರವಾದ ಯಜ್ಞದಲ್ಲಿ ಜಂತುವಿನಿಂದ ಯಾಗವನ್ನು ಮಾಡು. ಆಗ ನಿನಗೆ ಶೀಘ್ರದಲ್ಲಿಯೇ ಸಂಪದ್ಯುಕ್ತರಾದ ನೂರುಪುತ್ರರು ಜನಿಸುವರು.
ವಪಾಯಾಂ ಹೂಯಮಾನಾಯಾಂ ಧೂಮಮಾಘ್ರಾಂತು ಮಾತರಃ |
ತತಸ್ತಾಃ ಸುಮಹಾವೀರ್ಯಾನ್ ಜನಯಿಷ್ಯಂತಿ ತೇ ಸುತಾನ್ ॥20॥
ಜಂತುವಿನ ಹೋಮ ಮಾಡುವಾಗ ಆ ವಸೆಯ ಧೂಮವನ್ನು ನಿನ್ನ ಪತ್ನಿಯರು ಆಘ್ರಾಣಿಸಲಿ. ಅದರಿಂದ ಅವರೆಲ್ಲರೂ ಮಹಾಬಲಶಾಲಿಗಳಾದ ಪುತ್ರರನ್ನು ಪಡೆಯುವರು.
ತಸ್ಯಾಮೇವ ತು ತೇ ಜಂತುರ್ಭವಿತಾ ಪುನರಾತ್ಮಜಃ |

ಉತ್ತರೇ ಚಾಸ್ಯ ಸೌವರ್ಣಂ ಲಕ್ಷ್ಮ ಪಾರ್ಶ್ವೇ ಭವಿಷ್ಯತಿ ॥21॥
ಈ ಜಂತುವಾದರೂ ನಿನ್ನ ಜ್ಯೇಷ್ಠಪತ್ನಿಯಲ್ಲಿಯೇ ಇನ್ನೊಮ್ಮೆ ನಿನ್ನ ಮಗನಾಗಿ ಜನಿಸುವನು. ಅವನ ಎಡಭಾಗದಲ್ಲಿ ಒಂದು ಚಿನ್ನದ ಚಿಹ್ನೆಯು ಇರುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಏಕೋನಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ನಾಲ್ಕನೆಯ ಅಧ್ಯಾಯ
ಸೋಮಕನಿಗೆ ಪುತ್ರಶತ ಪ್ರಾಪ್ತಿ. ಪುರೋಹಿತರ ಜೊತೆಯಲ್ಲಿ ನರಕವನ್ನು ಅನುಭವಿಸಿ ಸ್ವರ್ಗಗಮನ.
ಸೋಮಕಃ
ಬ್ರಹ್ಮನ್ ಯದ್ಯದ್ಯಥಾ ಕಾರ್ಯಂ ತತ್ತತ್ ಕುರು ತಥಾತಥಾ |
ಪುತ್ರಕಾಮತಯಾ ಸರ್ವಂ ಕರಿಷ್ಯಾಮಿ ವಚಸ್ತವ ॥1॥
ಸೋಮಕ ಎಲ್ಲೈ ಬ್ರಾಹ್ಮಣರೇ, ಯಾವ ಯಾವ ಕಾರ್ಯವನ್ನು ಹೇಗೆ ಹೇಗೆ ಮಾಡಬೇಕೋ ಹಾಗೆಯೇ ಮಾಡಿ. ನಾನು ಪುತ್ರಕಾಮನಾದ ಕಾರಣದಿಂದ ನೀವು ಹೇಳಿದುದೆಲ್ಲವನ್ನೂ ಮಾಡುವೆನು.
ಲೋಮಶಃ
ತತಃ ಸ ಯಾಜಯಾಮಾಸ ಸೋಮಕಂ ತೇನ ಜಂತುನಾ |
ಮಾತರಃ ಸ್ಮ ಬಲಾತ್ ಪುತ್ರಮಪಾಕಾರ್ಷುಃ ಕೃಪಾನ್ವಿತಾಃ ॥2॥
ಲೋಮಶ ಅನಂತರ ಆ ಋತ್ವಿಜನು ಜಂತುವಿನಿಂದ ಸೋಮಕನಿಗೆ ಯಾಗವನ್ನು ಮಾಡಿಸಿದನು. ಕೃಪಾವಿಷ್ಟರಾದ ತಾಯಿಯರು ಆ ಶಿಶುವನ್ನು ಬಲಾತ್ಕಾರದಿಂದ ತಮ್ಮೆಡೆಗೆ ಎಳೆದುಕೊಂಡರು.
ಹಾ ಹತಾಃ ಸ್ಮೇತಿ ವಾಶಂತ್ಯಃ ತೀವ್ರಶೋಕಸಮನ್ವಿತಾಃ |
ತಂ ಮಾತರಃ ಪರ್ಯಕರ್ಷನ್ ಗೃಹೀತ್ವಾ ದಕ್ಷಿಣೇ ಕರೇ |
ಸವ್ಯೇ ಪಾಣೌ ಗೃಹೀತ್ವಾ ತು ಯಾಜಕೋಽಪಿ ಸ್ಮ ಕರ್ಷತಿ ॥3॥
ಅಯ್ಯೋ! ನಾವು ಸತ್ತೆವು ಎಂದು ಕಿರುಚುತ್ತಾ ಬಹಳ ಶೋಕದಿಂದ ಕೂಡಿದ ಆ ತಾಯಿಯರು ಶಿಶುವಿನ ಬಲಗೈಯನ್ನು ಹಿಡಿದು ಎಳೆದರು. ಪುರೋಹಿತನೂ ಸಹ ಶಿಶುವಿನ ಎಡಗೈಯನ್ನು ಹಿಡಿದು ಎಳೆದನು.
ಕುರರೀಣಾಮಿವಾರ್ತಾನಾಮಪಾಕೃಷ್ಯ ತು ತಂ ಸುತಮ್ |
ವಿಶಸ್ಯ ಚೈನಂ ವಿಧಿನಾ ವಪಾಮಸ್ಯ ಜುಹಾವ ಸಃ ॥4॥
ಕುರರೀ ಪಕ್ಷಿಗಳಂತೆ ಆರ್ತನಾದವನ್ನು ಮಾಡುತ್ತಿದ್ದ ಆ ತಾಯಿಯರಿಂದ ಆ ಮಗುವನ್ನು ಕಿತ್ತುಕೊಂಡು ಪುರೋಹಿತನು ಅವನನ್ನು ಸಂಹರಿಸಿ ಅವನ ವಪೆಯಿಂದ ಹೋಮವನ್ನು ಮಾಡಿದನು.
ಜಂತೋರ್ವಪಾಯಾಂ ಹೂಯಂತ್ಯಾಂ ಧೂಮಮಾಘ್ರಾಯ ಮಾತರಃ |
ಆರ್ತಾ ನಿಪೇತುಃ ಸಹಸಾ ಪೃಥಿವ್ಯಾಂ ಕುರುನಂದನ |
ಸರ್ವಾಶ್ಚ ಗರ್ಭಾನಲಭನ್ ತತಸ್ತಾಃ ಪಾರ್ಥಿವಾಂಗನಾಃ ॥5॥
ಜಂತುವಿನ ವಪೆಯು ಆಹುತಿಯಾಗಿ ಕೊಡಲ್ಪಡುತ್ತಿರಲು ಅವನ ತಾಯಿಯರು ಆ ಧೂಮವನ್ನು ಆಘ್ರಾಣಿಸಿ ಆರ್ತರಾಗಿ ಇದ್ದಕ್ಕಿದ್ದಂತೆಯೇ ಭೂಮಿಯ ಮೇಲೆ ಕುಸಿದು ಬಿದ್ದರು. ಎಲ್ಲೈ ಕುರುನಂದನನೇ, ಅನಂತರ ಆ ರಾಜಪತ್ನಿಯರೆಲ್ಲರೂ ಗರ್ಭಗಳನ್ನು ಧರಿಸಿದರು.
ತತೋ ದಶಸು ಮಾಸೇಷು ಸೋಮಕಸ್ಯ ವಿಶಾಂಪತೇ |
ಜಜ್ಞೇ ಪುತ್ರಶತಂ ಪೂರ್ಣಂ ತಾಸು ಸರ್ವಾಸು ಭಾರತ ॥6॥
ಎಲ್ಲೈ ಭಾರತನೇ, ಎಲ್ಲೈ ರಾಜನೇ, ಅನಂತರ ಹತ್ತುತಿಂಗಳುಗಳು ಕಳೆದಮೇಲೆ ಸೋಮಕನಿಗೆ ಆ ಎಲ್ಲ ಪತ್ನಿಯರಲ್ಲಿಯೂ ಸೇರಿ ಪುತ್ರಶತವು ಜನಿಸಿತು.
ಜಂತುರ್ಜ್ಯೇಷ್ಠಃ ಸಮಭವತ್ ಜನಿತ್ರ್ಯಾಮೇವ ಭಾರತ |
ಸ ತಾಸಾಮಿಷ್ಟ ಏವಾಸೀನ್ನ ತಥಾಽನ್ಯೇ ನಿಜಾಃ ಸುತಾಃ ॥7॥
ಎಲ್ಲೈ ಭಾರತನೇ, ಜಂತುವೂ ಸಹ ಅದೇ ತಾಯಿಯಲ್ಲಿಯೇ ಜ್ಯೇಷ್ಠಪುತ್ರನಾಗಿ ಜನಿಸಿದನು. ಅವನು ಎಲ್ಲರಿಗೂ ಇಷ್ಟವಾಗಿದ್ದನು. ತಮ್ಮ ತಮ್ಮ ಪುತ್ರರು ಆ ಸ್ತ್ರೀಯರಿಗೆ ಅಷ್ಟು ಇಷ್ಟವಾಗಿರಲಿಲ್ಲ.
ತಚ್ಚ ಲಕ್ಷಣಮಪ್ಯಾಸೀತ್ ಸೌವರ್ಣಂ ಪಾರ್ಶ್ವ ಉತ್ತರೇ |
ತಸ್ಮಿನ್ ಪುತ್ರಶತೇ ಚಾಗ್ರ್ಯಃ ಸ ಬಭೂವ ಗುಣೈರ್ಯುತಃ ॥8॥
ಅವನ ವಾಮಪಾರ್ಶ್ವದಲ್ಲಿ ಚಿನ್ನದ ಲಕ್ಷಣವೂ ಇದ್ದಿತು. ಆ ನೂರುಪುತ್ರರ ಮಧ್ಯದಲ್ಲಿ ಅವನು ಗುಣಗಳಿಂದ ಕೂಡಿದವನಾಗಿ ಶ್ರೇಷ್ಠನಾಗಿದ್ದನು.
ತತಃ ಸ ಕಾಲಮಗಮತ್ ಸೋಮಕಸ್ಯ ಗುರುರ್ನೃಪ |
ಅಥ ಕಾಲೇ ವ್ಯತೀತೇ ತು ಸೋಮಕೋಽಪ್ಯಗಮತ್ ಪರಮ್ ॥9॥
ಎಲ್ಲೈ ರಾಜನೇ, ಅನಂತರ ಕಾಲಕ್ರಮದಲ್ಲಿ ಸೋಮಕನ ಪುರೋಹಿತನು ಮೃತ್ಯುವಶನಾದನು. ಸ್ವಲ್ಪಕಾಲವು ಕಳೆದ ಮೇಲೆ

ಸೋಮಕನೂ ಮರಣವನ್ನು ಹೊಂದಿದನು.
ನರಕೇ ಪಚ್ಯಮಾನಂ ತು ದದರ್ಶ ಸ ತು ಸೋಮಕಃ |
ತಮಪೃಚ್ಛತ್ ಕಥಂ ನು ತ್ವಂ ನರಕೇ ಪಚ್ಯಸೇ ದ್ವಿಜ ||10||
ಸೋಮಕನು ತನ್ನ ಗುರುವು ನರಕದಲ್ಲಿ ಬೇಯಿಸಲ್ಪಡುತ್ತಿರುವುದನ್ನು ನೋಡಿ ಅವನನ್ನು ಕುರಿತು `ಎಲೈ ಬ್ರಾಹ್ಮಣರೇ, ನೀವು ಏಕೆ ನರಕದಲ್ಲಿ ಪಚನವನ್ನು ಹೊಂದುತ್ತಿದ್ದೀರಿ?' ಎಂದು ಕೇಳಿದನು.
ತಮಬ್ರವೀದ್ ಗುರುಃ ಸೋಽಥ ಪಚ್ಯಮಾನೋಽಗ್ನಿನಾ ಭೃಶಮ್ |
ತ್ವಂ ಮಯಾ ಯಾಜಿತೋ ರಾಜನ್ ತಸ್ಯೇದಂ ಕರ್ಮಣಃ ಫಲಮ್|
ಅದನ್ನು ಕೇಳಿದ ಅವನ ಗುರುವು ಅಗ್ನಿಯ ತಾಪದಿಂದ ತೀವ್ರಬಾಧೆಗೆ ಒಳಗಾಗಿ `ರಾಜನೇ, ನಾನು ನಿನಗೆ ಯಾಗವನ್ನು ಮಾಡಿಸಿದೆ; ಇದು ಅದರ ಫಲ' ಎಂದು ಹೇಳಿದನು.
ಏತಚ್ಛ್ರುತ್ವಾ ತು ರಾಜರ್ಷಿರ್ಧರ್ಮರಾಜಮಥಾಬ್ರವೀತ್ ||11||
ಅಹಂ ತತ್ರ ಪ್ರವೇಕ್ಷ್ಯಾಮಿ ಮುಚ್ಯತಾಂ ಮಮ ಯಾಜಕಃ |
ಮತ್ಕೃತೇ ಹಿ ಮಹಾಭಾಗಃ ಪಚ್ಯತೇ ನರಕಾಗ್ನಿನಾ |
ಸೋಽಹಮಾತ್ಮಾನಮಾಧಾಸ್ಯೇ ನರಕಾನ್ಮುಚ್ಯತಾಂ ಗುರುಃ ||12||
ಇದನ್ನು ಕೇಳಿದ ರಾಜರ್ಷಿಯು ಧರ್ಮರಾಜನನ್ನು ಕುರಿತು ನಾನು ಅಲ್ಲಿ ಪ್ರವೇಶ ಮಾಡುವೆನು. ನನ್ನ ಗುರುವನ್ನು ಬಿಟ್ಟುಬಿಡಿ. ಆ ಮಹಾನುಭಾವನು ನನ್ನ ನಿಮಿತ್ತದಿಂದ ನರಕಾಗ್ನಿಯಲ್ಲಿ ಬೇಯುತ್ತಿದ್ದಾನೆ. ಆದ್ದರಿಂದ ನಾನು ನನ್ನನ್ನೇ ಆ ತಾಪಕ್ಕೆ ಒಡ್ಡುತ್ತೇನೆ. ನರಕದಿಂದ ನನ್ನ ಗುರುವನ್ನು ಬಿಟ್ಟುಬಿಡಿ ಎಂದು ಹೇಳಿದನು.
ಧರ್ಮಃ
ನಾನ್ಯಃ ಕರ್ತುಃ ಫಲಂ ರಾಜನ್ನುಪಭುಂಕ್ತೇ ಕದಾಚನ |
ಇಮಾನಿ ತವ ದೃಶ್ಯಂತೇ ಫಲಾನಿ ವದತಾಂ ವರ ||13||
ಧರ್ಮ ರಾಜನೇ, ಒಬ್ಬನ ಕರ್ಮದ ಫಲವನ್ನು ಇನ್ನೊಬ್ಬನು ಎಂದೂ ಅನುಭವಿಸುವುದಿಲ್ಲ. ವಾಗ್ಮಿಗಳನ್ನು ಶ್ರೇಷ್ಠನಾದವನೇ, ನೀನು ಮಾಡಿದ ಕರ್ಮದ ಪುಣ್ಯಫಲಗಳು ಇಗೋ ಕಾಣುತ್ತಿವೆ.
ಸೋಮಕಃ
ಪುಣ್ಯಾನ್ನ ಕಾಮಯೇ ಲೋಕಾನ್ ಋತೇಽಹಂ ಬ್ರಹ್ಮವಾದಿನಮ್ |
ಇಚ್ಛಾಮ್ಯಹಮನೇನೈವ ಸಹ ವಸ್ತುಂ ಸುರಾಲಯೇ ||14||
ನರಕೇ ವಾ ಧರ್ಮರಾಜ ಕರ್ಮಣಾಽಸ್ಯ ಸಮೋ ಹ್ಯಹಮ್ |
ಪುಣ್ಯಾಪುಣ್ಯಫಲಂ ದೇವ ಸಮಮಸ್ತ್ವವಯೋರಿದಮ್ ||15||
ಸೋಮಕ ನಾನು ನನ್ನ ಪುರೋಹಿತರನ್ನು ಬಿಟ್ಟು ಪುಣ್ಯದಿಂದ ಸಂಪಾದಿಸಿದ ಲೋಕಗಳನ್ನು ಹೊಂದಲು ಇಷ್ಟಪಡುವುದಿಲ್ಲ. ನಾನು ಸ್ವರ್ಗದಲ್ಲಿರುವುದಾದರೆ ಈ ಗುರುಗಳ ಜೊತೆಯಲ್ಲೇ ಇರುತೆತೇನೆ ಎಂದು ಬಯಸುತ್ತೇನೆ. ಎಲೈ ಧರ್ಮರಾಜನೇ,
ನರಕದಲ್ಲಿರುವುದಾದರೂ ಇವರ ಜೊತೆಯಲ್ಲಿಯೇ ಇರುತ್ತೇನೆ. ನಾನು ಕರ್ಮದಿಂದ ಅವರ ಕರ್ಮಕ್ಕೆ ಸಮಾನನಾಗಿದ್ದೇನೆ. ಎಲೈ ದೇವನೇ, ಪುಣ್ಯಪಾಪಗಳ ಈ ಫಲಗಳು ನಮ್ಮಿಬ್ಬರಿಗೂ ಸಮಾನವಾಗಿಯೇ ಇರಲಿ.
ಧರ್ಮಃ
ಯದ್ಯೇವಮೀಪ್ಸಿತೋ ರಾಜನ್ ಭುಂಕ್ಷ್ವಾದ್ಯ ಸಹಿತಃ ಫಲಮ್ |
ತುಲ್ಯಕಾಲಂ ಸಹಾನೇನ ಪಶ್ಚಾತ್ ಪ್ರಾಪ್ಸ್ಯಸಿ ಸದ್ಗತಿಮ್ ||16||
ಧರ್ಮ ಎಲೈ ರಾಜನೇ, ನೀನು ಹೀಗೆ ಇಷ್ಟಪಡುವುದಾದರೆ ಈಗ ಗುರುವಿನ ಜೊತೆಯಲ್ಲಿಯೇ ಸಮಾನಕಾಲದವರೆಗೆ ಇಲ್ಲಿ ಫಲವನ್ನು ಅನುಭವಿಸು. ಅನಂತರ ಅವನ ಜೊತೆಯಲ್ಲಿಯೇ ಸದ್ಗತಿಯನ್ನು ಹೊಂದುವಿ.
ಲೋಮಶಃ
ಸ ಚಕಾರ ತಥಾ ಸರ್ವಂ ರಾಜಾ ರಾಜೀವಲೋಚನ ||17||
ಪುನಶ್ಚ ಲೇಭೇ ಲೋಕಾನ್ ಸ್ವಾನ್ ಕರ್ಮಣಾ ನಿರ್ಜಿತಾನ್ ಶುಭಾನ್ |
ಸಹ ತೇನೈವ ವಿಪ್ರೇಣ ಗುರುಣಾ ಸ ಗುರುಪ್ರಿಯಃ ||18||
ಲೋಮಶ ಎಲೈ ರಾಜೀವಲೋಚನನೇ, ಆ ರಾಜನು ಎಲ್ಲವನ್ನೂ ಹಾಗೆಯೇ ಮಾಡಿ ಪುನಃ ಗುರುಪ್ರಿಯನಾದ ಅವನು ತನ್ನ ಬ್ರಾಹ್ಮಣ ಗುರುವಿನ ಜೊತೆಯಲ್ಲಿಯೇ ತನ್ನ ಪುಣ್ಯದಿಂದ ಸಂಪಾದಿಸಿದ ಲೋಕಗಳನ್ನು ಹೊಂದಿದನು.
ಏಷ ತಸ್ಯಾಶ್ರಮಃ ಪುಣ್ಯೋ ಯ ಏಷೋಽತ್ರ ಪ್ರಕಾಶತೇ |
ಕ್ಷಾಂತ್ಯಾ ಉಷ್ಯಾತ್ರಂ ಷಡ್ರಾತ್ರಂ ಪ್ರಾಪ್ನೋತಿ ಸುಗತಿಂ ನರಃ ||19||
ಇಲ್ಲಿ ಎದುರಿಗೆ ಪ್ರಕಾಶಿಸುತ್ತಿರುವುದು ಅವನ ಪವಿತ್ರವಾದ ಆಶ್ರಮ. ಯಾವ ಮನುಷ್ಯನು ಇಲ್ಲಿ ಆರು ರಾತ್ರಿ ಕ್ಷಮೆಯಿಂದ ವಾಸಮಾಡುತ್ತಾನೆಯೋ ಅವನು ಸದ್ಗತಿಯನ್ನು ಹೊಂದುತ್ತಾನೆ.
ಏತಸ್ಮಿನ್ನೇವ ರಾಜೇಂದ್ರ ವತ್ಸ್ಯಾಮೋ ವಿಗತಜ್ವರಾಃ |
ಷಡ್ರಾತ್ರಂ ನಿಯತಾಹಾರಾಃ ಸಜ್ಜೀಭವ ಕುರೂತ್ತಮ ||20||
ಎಲೈ ರಾಜೇಂದ್ರನೇ, ನಾವೂ ಈ ಆಶ್ರಮದಲ್ಲಿಯೇ ನಿರಾತಂಕವಾಗಿ ಆರು ರಾತ್ರಿಗಳ ಕಾಲ ವಾಸಿಸೋಣ. ಎಲೈ ಕುರೂತ್ತಮನೇ, ನಿಯತಾಹಾರನಾಗಿ ನೀನು ಸಿದ್ಧನಾಗು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ

ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಅಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತೈದನೆಯ ಅಧ್ಯಾಯ
ಲೋಮಶರಿಂದ ಯುಧಿಷ್ಠಿರನಿಗೆ ನಾನಾ ತೀರ್ಥಗಳ ಮಹಿಮೆಗಳ ವರ್ಣನೆ.
ಲೋಮಶಃ
ಅಸ್ಮಿನ್ ಕಿಲ ಸ್ವಯಂ ರಾಜನ್ನಿಷ್ಟವಾನ್ ವೈ ಪ್ರಜಾಪತಿಃ |
ಸತ್ರಮಿಷ್ಟೀಕೃತಂ ನಾಮ ಪುರಾ ವರ್ಷಸಹಸ್ರಿಕಮ್ ॥1॥
ಲೋಮಶರು ಎಲ್ಲೈ ರಾಜನೇ, ಈ ಪ್ರದೇಶದಲ್ಲಿ ಪ್ರಜಾಪತಿಯು ಒಂದು ಸಹಸ್ರವರ್ಷ ನಡೆಯುವ ಇಷ್ಟೀಕೃತ ಎಂಬ ಸತ್ರಯಾಗವನ್ನು ಹಿಂದೆ ಮಾಡಿದನು.
ಅಂಬರೀಷಶ್ಚ ನಾಭಾಗ ಇಷ್ಟವಾನ್ ಯಮುನಾಮನು |
ಯಜ್ಞೈಶ್ಚ ತಪಸಾ ಚೈವ ಪರಾಂ ಸಿದ್ಧಿಮವಾಪ ಹ ॥2॥
ನಾಭಾಗನಾದ ಅಂಬರೀಷನು ಯಮುನಾ ತೀರದಲ್ಲಿ ಯಜ್ಞಗಳನ್ನು ಮತ್ತು ತಪಸ್ಸನ್ನು ಆಚರಿಸಿ ಉತ್ತಮವಾದ ಸಿದ್ಧಿಯನ್ನು ಪಡೆದನು.
ದೇಶೋ ನಾಹುಷಯಜ್ಞಸ್ಯ ಅಯಂ ಪುಣ್ಯತಮೋ ನೃಪ |
ಯತ್ರೇಷ್ಟ್ವಾ ದಶಪದ್ಮಾನಿ ಸದಸ್ಯೇಭ್ಯೋಽತಿಸೃಷ್ಟವಾನ್ ॥3॥
ಎಲ್ಲೈ ರಾಜನೇ, ಇದು ನಹುಷನ ಯಜ್ಞದ ಪುಣ್ಯತಮವಾದ ಪ್ರದೇಶ. ಇಲ್ಲಿ ಯಾಗವನ್ನು ಮಾಡಿ ಅವನು ಸದಸ್ಯರಿಗೆ ಹತ್ತು ಪದ್ಮಗಳನ್ನು ದಾನವಾಗಿ ಕೊಟ್ಟನು.
ಸಾರ್ವಭೌಮಸ್ಯ ಕೌಂತೇಯ ಯಯಾತೇರಮಿತದ್ಯುತೇಃ |
ಸ್ಪರ್ಧಮಾನಸ್ಯ ಶಕ್ರೇಣ ಪಶ್ಯೇದಂ ಯಜ್ಞವಾಸ್ತ್ವಿಹ ॥4॥
ಎಲ್ಲೈ ಕೌಂತೇಯನೇ, ಇಂದ್ರನ ಜೊತೆಯಲ್ಲಿ ಸ್ಪರ್ಧಿಸುವ ಅಮಿತದ್ಯುತಿಯಾದ ಸಾರ್ವಭೌಮನಾದ ಯಯಾತಿಯ ಈ ಯಜ್ಞವಾಸ್ತುವನ್ನು ನೋಡು.
ಪಶ್ಯ ನಾನಾವಿಧಾಕಾರೈರಗ್ನಿಭಿರ್ನಿಚಿತಂ ಮಹೀಮ್ |
ಮಜ್ಜಂತೀಮಿವ ಚಾಕ್ರಾಂತಾಂ ಯಯಾತೇರ್ನೃಪ ಕರ್ಮಭಿಃ ॥5॥
ಎಲ್ಲೈ ರಾಜನೇ, ನಾನಾವಿಧವಾದ ಚಿತಿಯ ಆಕಾರಗಳಿಂದ ಅಗ್ನಿಚಯನವನ್ನು ಮಾಡಿ ಭೂಮಿಯು ಅಲಂಕಾರವಾಗಿರುವುದನ್ನು ನೋಡು. ಯಯಾತಿಯ ಯಜ್ಞ ಕರ್ಮಗಳಿಂದ ಆಕ್ರಾಂತವಾಗಿ ಮುಳುಗಿಹೋಗುತ್ತಿರುವಂತೆ ಕಾಣುವ ಭೂಮಿಯನ್ನು ನೋಡು.
ಏಷಾ ಶಮ್ಯೇಕಪಾತ್ರಾ ಸಾ ಶಕಟಂ ಚೈತದುತ್ತಮಮ್ |
ಪಶ್ಯ ರಾಮಹ್ರದಾನೇತಾನ್ ಪಶ್ಯ ನಾರಾಯಣಾಶ್ರಮಾನ್ ॥6॥
ಇದು (ಚಿತಿಯು) ಶಮಿ ಆಕಾರವಾಗಿದೆ; ಇದು ಏಕಪತ್ರಾಕಾರವಾಗಿದೆ; ಇದು ಉತ್ತಮವಾದ ಶಕಟಾಕಾರವಾಗಿದೆ. ಈ ಪರಶುರಾಮನ ಸರೋವರಗಳನ್ನು ನೋಡು; ನಾರಾಯಣನ ಆಶ್ರಮವನ್ನು ನೋಡು.
ಏತದಾರ್ಚೀಕಪುತ್ರಸ್ಯ ಯೋಗೈರ್ವಿಚರತೋ ಮಹೀಮ್ |
ಉಪಸರ್ಪಣಮುರ್ವೀಶ ಪ್ರಖ್ಯಾತಮಮಿತೌಜಸಃ ॥7॥
ಎಲ್ಲೈ ರಾಜನೇ, ಇದು ಅಮಿತಪರಾಕ್ರಮಿಯಾದ ಯೋಗಶಕ್ತಿಯಿಂದ ಭೂಮಿಯನ್ನು ಸಂಚರಿಸುವ ಆರ್ಚೀಕಪುತ್ರನಾದ ಪರಶುರಾಮನು ನಡೆದಾಡುವ ದಾರಿ.
ಅತ್ರಾನುವಂಶ್ಯಾಃ ಪಠಿತಾಃ ಶೃಣು ಮೇ ಕುರುನಂದನ |
ಉಲೂಖಲೈರಾಭರಣೈಃ ಪಿಶಾಚೀ ಯದಭಾಷತ ॥8॥
ಇಲ್ಲಿ ವಂಶೋಚಿತವಾದ ಕಥೆಗಳನ್ನು ಹೇಳುತ್ತಾರೆ. ಕುರುನಂದನನೇ, ಪಿಶಾಚಿಯು ಕಂಠದಲ್ಲಿ ಉಲೂಖಲ (ಒರಳು) ಆಭರಣವನ್ನು ಧರಿಸಿ ಆಡಿದ ಮಾತನ್ನು ಕೇಳು.
ಯುಗಂಧರೇ ದಧಿ ಪ್ರಾಶ್ಯ ಉಷಿತ್ವಾ ಚಾಚ್ಯುತಸ್ಥಲೇ |
ತದ್ವದ್ ಭೂತಲಯೇ ಸ್ನಾತ್ವಾ ಸಪುತ್ರಾ ವಸ್ತುಮಿಚ್ಛಸಿ ॥9॥
ಏಕರಾತ್ರಮುಷಿತ್ವೇಹ ದ್ವಿತೀಯಂ ಯದಿ ವತ್ಸ್ಯಸಿ |
ಏತದ್ವಿ ಮೇ ದಿವಾವೃತ್ತಂ ರಾತ್ರೌ ವೃತ್ತಮತೋಽನ್ಯಥಾ ॥10॥
ಯುಗಂಧರದಲ್ಲಿ ದಧಿಯನ್ನು ಪ್ರಾಶನಮಾಡಿ ಅಚ್ಯುತಸ್ಥಳದಲ್ಲಿ ವಾಸವನ್ನು ಮಾಡಿ ಅದರಂತೆ ಭೂತಲಯದಲ್ಲಿ ಸ್ನಾನವನ್ನು ಮಾಡಿ ಒಂದು ರಾತ್ರಿ ಪುತ್ರಸಹಿತವಾಗಿ ವಾಸಮಾಡಬಹುದು. ಇಲ್ಲಿ ಒಂದು ರಾತ್ರಿ ವಾಸವನ್ನು ಮಾಡಿ, ಎರಡನೆಯ ರಾತ್ರಿ ವಾಸವನ್ನು ಮಾಡುವುದಾದರೆ ಇದು, ಇದು ನನ್ನ ಹಗಲಿನ ನಡತೆ. ರಾತ್ರಿಯ ನಡತೆಯು ಬೇರೆ ರೂಪವಾಗಿ ಎಂದರೆ ಕ್ರೋಧರೂಪವಾಗಿರುತ್ತದೆ.
ಅತ್ರಾದ್ಯಾಭಿನಿವತ್ಸ್ಯಾಮಃ ಕ್ಷಪಾಂ ಭರತಸತ್ತಮ |
ದ್ವಾರಮೇತತ್ ತು ಕೌಂತೇಯ ಕುರುಕ್ಷೇತ್ರಸ್ಯ ಭಾರತ ॥11॥
ಎಲ್ಲೈ ಭರತಸತ್ತಮನೇ, ನಾವು ಈ ರಾತ್ರಿ ಇಲ್ಲೇ ವಾಸವನ್ನು ಮಾಡೋಣ. ಎಲ್ಲೈ ಕೌಂತೇಯನೇ, ಭಾರತನೇ, ಇದು ಕುರುಕ್ಷೇತ್ರದ ಬಾಗಿಲು.

ಅತ್ರೈವ ನಾಹುಷೋ ರಾಜಾ ರಾಜನ್ ಕ್ರತುಭಿರಿಷ್ಟವಾನ್ |
ಯಯಾತಿರ್ಬಹುರತ್ನಾಢ್ಯೋ ಯತ್ರೇಂದ್ರೋ ಮುದಮಾಪ್ತವಾನ್ ||
ಎಲೈ ರಾಜನೇ, ಇಲ್ಲಿಯೇ ನಹುಷ ಪುತ್ರನಾದ ಯಯಾತಿಯು ಬಹುರತ್ನಗಳಿಂದ ಕೂಡಿದವನಾಗಿ ಯಾಗಗಳನ್ನು ಮಾಡಿದನು. ಅವುಗಳಲ್ಲಿ ಇಂದ್ರನು ಸಂತೋಷಗೊಂಡನು.
ಏತತ್ ಪ್ಲಕ್ಷವಟಂ ನಾಮ ಯಮುನಾತೀರ್ಥಮುಚ್ಯತೇ |
ಏತದ್ವೈ ನಾಕಪೃಷ್ಠಸ್ಯ ದ್ವಾರಮಾಹುರ್ಮನೀಷಿಣಃ ||13||
ಇದು ಪ್ಲಕ್ಷವಟ ಎಂಬ ಯಮುನಾತೀರ್ಥ. ಜ್ಞಾನಿಗಳು ಇದನ್ನು ಸ್ವರ್ಗದ ದ್ವಾರವೆಂದು ಹೇಳುತ್ತಾರೆ.
ಯತ್ರ ಸಾರಸ್ವತೈರ್ಯಜ್ಞೈರೀಜಾನಾಃ ಪರಮರ್ಷಯಃ |
ಯೂಪೋಲೂಖಲಿನಸ್ತತ್ರ ಗಚ್ಛಂತ್ಯವಭೃಥಪ್ಲವಮ್ |
ಅತ್ರೋಪಸ್ಪೃಶ್ಯ ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ||14||
ಇಲ್ಲಿ ಪರಮರ್ಷಿಗಳು ಸಾರಸ್ವತ ಯಜ್ಞಗಳನ್ನು ಆಚರಿಸಿ ಯಜ್ಞಸಾಧನವಾದ ಯೂಪಗಳನ್ನು, ಸುವರ್ಣಮಯವಾದ ಉಖಲನಗಳನ್ನು ತೆಗೆದುಕೊಂಡು ಅವಭೃಥ ಸ್ನಾನಕ್ಕೆ ಹೋಗುತ್ತಾರೆ. ಎಲೈ ರಾಜೇಂದ್ರನೇ, ಇಲ್ಲಿ ಸ್ನಾನವನ್ನು ಮಾಡಿದವನು ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಅತ್ರ ವೈ ಭರತೋ ರಾಜಾ ರಾಜನ್ ಕ್ರತುಭಿರಿಷ್ಟವಾನ್ |
ಅಸಕೃತ್ ಕೃಷ್ಣಸಾರಂಗಂ ಧರ್ಮೇಣಾವಾಪ್ಯ ಮೇದಿನೀಮ್ ||15||
ಎಲೈ ರಾಜನೇ, ಭರತನು ಧರ್ಮದಿಂದ ಭೂಮಿಯನ್ನು ಸಂಪಾದಿಸಿ ಇಲ್ಲಿಯೇ ಅನೇಕಬಾರಿ ಕೃಷ್ಣಸಾರಂಗ ಪಶುಗಳಿಂದ ಯಾಗವನ್ನು ಮಾಡಿದನು.
ಅತ್ರೈವ ಪುರುಷವ್ಯಾಘ್ರ ಮರುತ್ತಃ ಸತ್ರಮುತ್ತಮಮ್ |
ಚಕ್ರೇ ದೇವರ್ಷಿಮುಖ್ಯೇನ ಸಂವರ್ತೇನಾಭಿಪಾಲಿತಃ ||16||
ಎಲೈ ಪುರುಷವ್ಯಾಘ್ರನೇ, ಇಲ್ಲಿಯೇ ಮರುತ್ತನು ದೇವರ್ಷಿಶ್ರೇಷ್ಠರಾದ ಸಂವರ್ತರಿಂದ ರಕ್ಷಿತನಾಗಿ ಶ್ರೇಷ್ಠವಾದ ಸತ್ರವನ್ನು ಮಾಡಿದನು.

ಅತ್ರೋಪಸ್ಪೃಶ್ಯ ರಾಜೇಂದ್ರ ಸರ್ವಾನ್ಲ್ಲೋಕಾನ್ ಪ್ರಪಶ್ಯಸಿ |
ಪೂಯಸೇ ದುಷ್ಕೃತಾಚ್ಚೈವ ಸಮುಪಸ್ಪೃಶ್ಯ ಭಾರತ ||17||
ಎಲೈ ರಾಜೇಂದ್ರನೇ, ಇಲ್ಲಿ ಸ್ನಾನವನ್ನು ಮಾಡಿದರೆ ಎಲ್ಲಾ ಲೋಕಗಳನ್ನೂ ನೋಡುವಿ. ಎಲೈ ಭಾರತನೇ, ಇಲ್ಲಿ ಸ್ನಾನವನ್ನು ಮಾಡಿ ದುಷ್ಕರ್ಮಗಳನ್ನು ಕಳೆದುಕೊಂಡು ಪವಿತ್ರನಾಗುತ್ತೀಯೆ.
ವೈಶಂಪಾಯನಃ
ತತ್ರ ಸಭ್ರಾತೃಕಃ ಸ್ನಾತ್ವಾ ಸ್ತೂಯಮಾನೋ ಮಹರ್ಷಿಭಿಃ |
ಲೋಮಶಂ ಪಾಂಡವಶ್ರೇಷ್ಠ ಇದಂ ವಚನಮಬ್ರವೀತ್ ||18||
ಸರ್ವಾನ್ಲ್ಲೋಕಾನ್ ಪ್ರಪಶ್ಯಾಮಿ ತಪಸಾ ಸತ್ಯವಿಕ್ರಮ |
ಇಹಸ್ಥಃ ಪಾಂಡವಶ್ರೇಷ್ಠಂ ಪಶ್ಯಾಮಿ ಶ್ವೇತವಾಹನಮ್ ||19||
ವೈಶಂಪಾಯನ ಅನಂತರ ಪಾಂಡವಶ್ರೇಷ್ಠನಾದ ಧರ್ಮರಾಜನು ತಮ್ಮಂದಿರ ಜೊತೆಯಲ್ಲಿ ಸಽನನವನ್ನು ಮಾಡಿ ಮಹರ್ಷಿಗಳಿಂದ ಪ್ರಶಂಸಿಸಲ್ಪಟ್ಟವನಾಗಿ ಲೋಮಶರನ್ನು ಕುರಿತು ಸತ್ಯವಿಕ್ರಮರೇ, ಇಲ್ಲಿ ತಪಃಶಕ್ತಿಯಿಂದ ಎಲ್ಲ ಲೋಕಗಳನ್ನೂ ನೋಡುತ್ತಿದ್ದೇನೆ. ಇಲ್ಲಿದ್ದೇ ಪಾಂಡವಶ್ರೇಷ್ಠನಾದ ಶ್ವೇತವಾಹನನಾದ ಅರ್ಜುನನನ್ನು ನೋಡುತ್ತಿದ್ದೇನೆ ಎಂದು ಹೇಳಿದನು.
ಏವಮೇತನ್ಮಹಾಬಾಹೋ ಪಶ್ಯಂತಿ ಪರಮರ್ಷಯಃ |
ಇಹ ಸ್ನಾತ್ವಾ ತಪೋಯುಕ್ತಾಃ ತ್ರೀನ್ಲ್ಲೋಕಾನ್ ಸಚರಾಚರಾನ್ ||20||
ಎಲೈ ಮಹಾಬಾಹುವೇ, ಹೀಗೆಯೇ ಪರಮರ್ಷಿಗಳು ತಪೋಯುಕ್ತರಾಗಿ ಇಲ್ಲಿ ಸ್ನಾನವನ್ನು ಮಾಡಿ ಚರಾಚರಸಹಿತವಾದ ಮೂರುಲೋಕಗಳನ್ನೂ ನೋಡುತ್ತಾರೆ.
ಸರಸ್ವತೀಮಿಮಾಂ ಪುಣ್ಯಾಂ ಪುಣ್ಯೈಕಶರಣಾನ್ವಿತಾಮ್ |
ಅತ್ರ ಸ್ನಾತ್ವಾ ನರಶ್ರೇಷ್ಠ ಧೂತಪಾಪ್ಮಾ ಭವಿಷ್ಯಸಿ ||21||
ಇದು ಪುಣ್ಯಪುರುಷರ ನಿವಾಸಗಳಿಂದ ಮಾತ್ರ ಕೂಡಿದಂತಹ ಪವಿತ್ರವಾದ ಸರಸ್ವತೀ ನದಿ. ಎಲೈ ನರಶ್ರೇಷ್ಠನೇ, ಇಲ್ಲಿ ಸ್ನಾನವನ್ನು ಮಾಡಿ ಪಾಪದಿಂದ ವಿಮುಕ್ತನಾಗುವಿ.
ಇಹ ಸಾರಸ್ವತೈರ್ಯಜ್ಞೈರಿಷ್ಟವಂತಃ ಸುರರ್ಷಯಃ |
ಋಷಯಶ್ಚೈವ ಕೌಂತೇಯ ತಥಾ ರಾಜರ್ಷಯೋಽಪಿ ಚ ||22||
ಎಲೈ ಕೌಂತೇಯನೇ, ಇಲ್ಲಿ ದೇವರ್ಷಿಗಳು, ರಾಜರ್ಷಿಗಳು ಮತ್ತು ಉಳಿದ ಋಷಿಗಳು ಸಾರಸ್ವತ ಯಜ್ಞಗಳನ್ನು ಆಚರಿಸಿದ್ದಾರೆ.
ವೇದಿಃ ಪ್ರಜಾಪತೇರೇಷಾ ಸಮಂತಾತ್ ಪಂಚಯೋಜನಾ |
ಕುರೋಶ್ಚ ಯಜ್ಞಶೀಲಸ್ಯ ಕ್ಷೇತ್ರಮೇತನ್ಮಹಾತ್ಮನಃ ||23||
ಇದು ಪ್ರಜಾಪತಿಯ ಸುತ್ತಲೂ ಐದುಯೋಜನ ವಿಸ್ತಾರವಾದ ವೇದಿ. ಇದು ಮಹಾತ್ಮನಾದ ಯಜ್ಞಶೀಲನಾದ ಕುರುವಿನ ಕ್ಷೇತ್ರ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚವಿಂಶತ್ಯಧಿಕಶತತಮೋಽಧ್ಯಾಯಃ ||
|| ತೀರ್ಥಯಾತ್ರಾಪರ್ವಣಿ ಏಕೋಶೀತಿತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತಾರನೆಯ ಅಧ್ಯಾಯ
ಲೋಮಶರಿಂದ ನಾನಾ ತೀರ್ಥಕ್ಷೇತ್ರಗಳ ಮಹಿಮೆಯ ವರ್ಣನೆ.
ಶಿಬಿಯ ಕಥೋಪಾಖ್ಯಾನ ಪ್ರಾರಂಭ.
ಲೋಮಶಃ
ಇಹ ದೇವಾಸ್ತಪಸ್ತಪ್ತ್ವಾ ಸ್ವರ್ಗಂ ಗಚ್ಛಂತಿ ಭಾರತ |
ಮರ್ತುಕಾಮಾ ನರಾ ರಾಜನ್ನಿಹಾಯಾಂತಿ ಸಹಸ್ರಶಃ ॥1॥
ಲೋಮಶ ಎಲ್ಲೈ ಭಾರತನೇ, ದೇವತೆಗಳು ಇಲ್ಲಿ ತಪಸ್ಸನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾರೆ. ಎಲ್ಲೈ ರಾಜನೇ, ಮರಣವನ್ನು ಹೊಂದುವ ಮನುಷ್ಯರೂ ಸಹ ಸಹಸ್ರ ಸಂಖ್ಯೆಯಲ್ಲಿ ಇಲ್ಲಿಗೆ ಬರುತ್ತಾರೆ.
ಏವಮಾಶೀಃ ಪ್ರಯುಕ್ತಾ ಹಿ ದಕ್ಷೇಣ ಯಜತಾ ಪುರಾ |
ಇಹ ಯೇ ವೈ ಮರಿಷ್ಯಂತಿ ತೇ ವೈ ಸ್ವರ್ಗಜಿತೋ ನರಾಃ ॥2॥
ಇಲ್ಲಿ ಯಾರು ಮರಣವನ್ನು ಹೊಂದುವರೋ ಅಂತಹ ಮನುಷ್ಯರು ಸ್ವರ್ಗವನ್ನು ಜಯಿಸುತ್ತಾರೆ ಎಂದು ಹಿಂದೆ ಇಲ್ಲಿ ಯಾಗವನ್ನು ಮಾಡಿದ ದಕ್ಷನು ವರವನ್ನು ನೀಡಿದ್ದಾನೆ.
ಏಷಾ ಸರಸ್ವತೀ ಪುಣ್ಯಾ ದಿವ್ಯಾ ಚೌಘವತೀ ನದೀ |
ಏತದ್ವಿನಶನಂ ನಾಮ ಸರಸ್ವತ್ಯಾ ವಿಶಾಂಪತೇ ॥3॥
ಇದು ಬಹಳ ಪ್ರವಾಹದಿಂದ ಕೂಡಿದ ದಿವ್ಯವಾದ ಮತ್ತು ಪವಿತ್ರವಾದ ಸರಸ್ವತೀ ನದಿ. ಎಲ್ಲೈ ರಾಜನೇ, ಇದು ಸರಸ್ವತಿಯು ಅದೃಶ್ಯವಾದ ವಿನಶನವೆಂಬ ಕ್ಷೇತ್ರ.
ದ್ವಾರಂ ನಿಷಾದರಾಷ್ಟ್ರಸ್ಯ ಯೇಷಾಂ ದೋಷಾತ್ ಸರಸ್ವತೀ |
ಪ್ರವಿಷ್ಟಾ ಪೃಥಿವೀಂ ವೀರ ಮಾ ನಿಷಾದಾಸ್ತು ಮಾಂ ವಿದುಃ ॥4॥
ಎಲ್ಲೈ ವೀರನೇ, ಇದು ನಿಷಾದರಾಷ್ಟ್ರಕ್ಕೆ ದ್ವಾರದೇಶ. ನಿಷಾದರ ದೋಷವನ್ನು ಗಮನಿಸಿ ಸರಸ್ವತಿಯು ನಿಷಾದರು ನನ್ನನ್ನು ತಿಳಿಯುವುದು ಬೇಡವೆಂದು ಇಲ್ಲಿ ಭೂಮಿಯನ್ನು ಪ್ರವೇಶಿಸಿದಳು.
ಏಷ ವೈ ಚಮಸೋದ್ಭೇದೋ ಯತ್ರ ದೃಶ್ಯಾ ಸರಸ್ವತೀ |
ಯತ್ರೈನಾಮನ್ವವರ್ತಂತ ದಿವ್ಯಾಃ ಪುಣ್ಯಾಃ ಸಮುದ್ರಗಾಃ ॥5॥
ಇದು ಸರಸ್ವತಿಯು ಪುನಃ ಪ್ರತ್ಯಕ್ಷವಾದ ಚಮಸೋದ್ಭೇದ ಕ್ಷೇತ್ರ. ಇಲ್ಲಿ ಸರಸ್ವತಿಯನ್ನು ದಿವ್ಯವಾದ, ಪುಣ್ಯವಾದ ಸಮುದ್ರಗಾಮಿಗಳಾದ ನದಿಗಳು ಹಿಂಬಾಲಿಸಿದವು.
ಏತತ್ ಸಿಂಧೋರ್ಮಹತ್ತೀರ್ಥಂ ಯತ್ರಾಗಸ್ತ್ಯಮರಿಂದಮ |
ಲೋಪಾಮುದ್ರಾ ಸಮಾಗಮ್ಯ ಭರ್ತಾರಮವೃಣೀತ ವೈ ॥6॥
ಎಲ್ಲೈ ಅರಿಂದಮನೇ, ಇದು ಸಿಂಧುವಿನ ಮಹಾತೀರ್ಥ. ಇಲ್ಲಿ ಲೋಪಾಮುದ್ರೆಯು ಬಂದು ಅಗಸ್ತ್ಯರನ್ನು ಪತಿಯನ್ನಾಗಿ ವರಿಸಿದಳು.
ಏತತ್ ಪ್ರಭಾಸತೇ ತೀರ್ಥಂ ಪ್ರಭಾಸಂ ಭಾಸ್ಕರದ್ಯುತೇ |
ಚಂದ್ರಸ್ಯ ದಯಿತಂ ನಿತ್ಯಂ ಪವಿತ್ರಂ ಪಾಪನಾಶನಮ್ ॥7॥
ಎಲ್ಲೈ ಸೂರ್ಯಕಾಂತಿಯುಳ್ಳ ರಾಜನೇ, ಇದು ಕಂಗೊಳಿಸುತ್ತಿರುವ ಪ್ರಭಾಸ ಎಂಬ ಕ್ಷೇತ್ರ. ಇದು ನಿತ್ಯವೂ ಚಂದ್ರನಿಗೆ ಪ್ರಿಯವಾದುದು, ಪವಿತ್ರವಾದುದು ಮತ್ತು ಪಾಪವನ್ನು ನಾಶಮಾಡುವಂತಹದು.
ಏತದ್ ವಿಷ್ಣುಪದಂ ನಾಮ ದೃಶ್ಯತೇ ತೀರ್ಥಮುತ್ತಮಮ್ |
ಏಷಾ ಪುಣ್ಯಾ ವಿಪಾಶಾ ಚ ನದೀ ಪರಮಪಾವನೀ ॥8॥
ಈ ವಿಷ್ಣುಪದವೆಂಬ ಶ್ರೇಷ್ಠವಾದ ತೀರ್ಥವು ಇಲ್ಲಿ ಕಾಣುತ್ತಿದೆ. ಇದು ಪರಮಪಾವನಿಯಾದ ಪುಣ್ಯಪ್ರದವಾದ ವಿಪಾಶಾ ನದಿ.
ಅತ್ರೈವ ಪುತ್ರಶೋಕೇನ ವಸಿಷ್ಠೋ ಭಗವಾನೃಷಿಃ |
ಬದ್ಧ್ವಾऽऽತ್ಮಾನಂ ನಿಪತಿತೋ ವಿಪಾಶಃ ಪುನರುತ್ಥಿತಃ |
ವಿಪಾಶಾಂ ಪಶ್ಯ ರಾಜೇಂದ್ರ ಸರ್ವಪಾಪಪ್ರಮೋಚನೀಮ್ ॥9॥
ಇಲ್ಲಿಯೇ ಪುತ್ರಶೋಕದಿಂದ ಪೀಡಿತರಾದ ಪರಮಪೂಜ್ಯರಾದ ವಸಿಷ್ಠ ಋಷಿಗಳು ತಮ್ಮನ್ನು ತಾವು ಕಟ್ಟಿಕೊಂಡು ನದಿಯಲ್ಲಿ ಬಿದ್ದು ಪಾಶಗಳ ನಾಶವನ್ನು ಹೊಂದಿ ಪುನಃ ಮೇಲೆದ್ದರು. ರಾಜೇಂದ್ರನೇ, ಸರ್ವಪಾಪನಾಶಕವಾದ ವಿಪಾಶಾ ನದಿಯನ್ನು ನೋಡು.
ಕಾಶ್ಮೀರಮಂಡಲಂ ಚೈತತ್ ಸರ್ವಪುಣ್ಯಮರಿಂದಮ |
ಮಹರ್ಷಿಭಿಶ್ಚಾಧ್ಯುಷಿತಂ ಪಶ್ಯೇದಂ ಭ್ರಾತೃಭಿಃ ಸಹ ॥10॥
ಎಲ್ಲೈ ಅರಿಂದಮನೇ, ಇದು ಸರ್ವಪುಣ್ಯವಾದ ಕಾಶ್ಮೀರ ಕ್ಷೇತ್ರ. ಇದು ಮಹರ್ಷಿಗಳ ವಾಸಸ್ಥಾನವಾಗಿದೆ. ಇದನ್ನು ತಮ್ಮಂದಿರ ಜೊತೆಯಲ್ಲಿ ನೋಡು.
ಅತ್ರೋತ್ತಮಾನಾಂ ಸರ್ವೇಷಾಮೃಷೀಣಾಂ ನಾಹುಷಸ್ಯ ಚ |
ಅಗ್ನೇಶ್ಚಾಸೀದ್ಧಿ ಸಂವಾದಃ ಕಾಶ್ಯಪಸ್ಯ ಚ ಭಾರತ ॥11॥
ಎಲ್ಲೈ ಭಾರತನೇ, ಇದು ಉತ್ತಮರಾದ ಎಲ್ಲಾ ಋಷಿಗಳಿಗೂ, ನಹುಷ ಪುತ್ರನಿಗೂ, ಅಗ್ನಿಗೂ ಮತ್ತು ಕಾಶ್ಯಪರಿಗೂ ಸಂವಾದವು ನಡೆದ ಸ್ಥಳ.
ಏತದ್ ದ್ವಾರಂ ಮಹಾರಾಜ ಮಾನಸಸ್ಯ ಪ್ರಕಾಶತೇ |

ವರ್ಷಮಸ್ಯ ಗಿರೇರ್ಮಧ್ಯೇ ರಾಮೇಣ ಶ್ರೀಮತಾ ಕೃತಮ್ ॥12॥
ಮಹಾರಾಜನೇ, ಈ ಮಾನಸ ಪರ್ವತದ ದ್ವಾರವು ಇಲ್ಲಿ ಪ್ರಕಾಶಿಸುತ್ತಿದೆ. ಈ ಪರ್ವತದ ಮಧ್ಯದಲ್ಲಿ ಸಂಪದ್ಯುಕ್ತನಾದ ರಾಮನು ಒಂದು ಕ್ಷೇತ್ರವನ್ನು ನಿರ್ಮಿಸಿದ್ದಾನೆ.
ಏಷ ವಾತಿಕಷಂಡೋ ವೈ ವಿಖ್ಯಾತಃ ಸತ್ಯವಿಕ್ರಮಃ |
ನಾತ್ಯವರ್ತತ ಯದ್ ದ್ವಾರಂ ವಿದೇಹಾದುತ್ತರಂ ಚ ಯಃ ॥13॥
ಇದು ವಾತಿಕಶಂಡವೆಂಬ ವಿಖ್ಯಾತವಾದ ಕ್ಷೇತ್ರ. ದ್ವಾರವಾದ ಈ ಕ್ಷೇತ್ರವನ್ನು ಸತ್ಯವಿಕ್ರಮರಾದ ಯಾರೂ ದಾಟಲಿಲ್ಲ. ಇದು ವಿದೇಹದೇಶದ ಉತ್ತರಕ್ಕೆ ಇದೆ.
ಇದಮಾಶ್ಚರ್ಯಪರಮಂ ದೇಶೇಽಸ್ಮಿನ್ ಪುರುಷರ್ಷಭ |
ಕ್ಷೀಣೇ ಪುಣ್ಯೇಪಿ ಕೌಂತೇಯ ಸರ್ವಸ್ಯ ಸಹ ಪಾರ್ಷದೈಃ ॥14॥
ಸಹೋಮಯಾ ಚ ಭವತಿ ದರ್ಶನಂ ಕಾಮರೂಪಿಣಃ |
ಅಸ್ಮಿನ್ ಸರಸಿ ರಮ್ಯೇ ವೈ ಚೈತ್ರಮಾಸೇ ಪಿನಾಕಿನಃ |
ಯಜಂತಿ ಯಾಜಕಾಃ ಸಮ್ಯಕ್ ಪರಿವಾರಂ ಶುಭಾರ್ಥಿನಃ ॥15॥
ಎಲೈ ಪುರುಷಶ್ರೇಷ್ಠನೇ, ಈ ದೇಶದಲ್ಲಿ ಇದೊಂದು ಪರಮಾಶ್ಚರ್ಯವಾದುದು. ಕೌಂತೇಯನೇ, ಪುಣ್ಯವು ನಾಶವನ್ನು ಹೊಂದಿದ ಎಲ್ಲರಿಗೂ ಸಹ ಪಾರ್ವತಿಯ ಜೊತೆಯಲ್ಲಿ ಮತ್ತು ಪಾರ್ಷದರ ಜೊತೆಯಲ್ಲಿ ಕಾಮರೂಪವನ್ನು ಧರಿಸಿದ ಶಂಕರನ ದರ್ಶನವಾಗುತ್ತದೆ. ಈ ಮನೋಹರವಾದ ಸರೋವರದಲ್ಲಿ ಚೈತ್ರಮಾಸದಲ್ಲಿ ಶುಭವನ್ನು ಬಯಸುವ ಯಾಜಕರು ರುದ್ರದೇವರ ಪರಿವಾರವನ್ನು ಚೆನ್ನಾಗಿ ಪೂಜಿಸುತ್ತಾರೆ.
ಅತ್ರೋಪಸ್ಪೃಶ್ಯ ಸರಸಿ ಶ್ರದ್ದಧಾನೋ ಜಿತೇಂದ್ರಿಯಃ |
ಕ್ಷೀಣಪಾಪಃ ಶುಭಾನ್ ಲೋಕಾನ್ ಪ್ರಾಪ್ನುತೇ ನಾತ್ರ ಸಂಶಯಃ ॥16॥
ಜಿತೇಂದ್ರಿಯನಾಗಿ ಈ ಸರೋವರದಲ್ಲಿ ಶ್ರದ್ಧೆಯಿಂದ ಸ್ನಾನವನ್ನು ಮಾಡಿದವನು ಪಾಪಗಳನ್ನು ಕಳೆದುಕೊಂಡು ಶುಭಲೋಕಗಳನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.
ಏಷ ಉದ್ಯಾನಕೋ ನಾಮ ಯಮಕೀರ್ಯತ್ರ ಶಾಂತವಾನ್ |
ಅರುಂಧತೀಸಹಾಯಶ್ಚ ವಸಿಷ್ಠೋ ಭಗವಾನೃಷಿಃ ॥17॥
ಇದು ಉದ್ಯಾನಕವೆಂಬ ಕ್ಷೇತ್ರ. ಇಲ್ಲಿ ಪುತ್ರಶೋಕದಿಂದ ಯಮದೇವರನ್ನು ಕುರಿತು ಹೆಣ್ಣು ಗಿಣಿಯಂತೆ ಆರ್ತಸ್ವರವನ್ನು ಮಾಡಿದ ಅರುಂಧತೀ ಸಹಿತರಾದ ಪೂಜ್ಯ ಋಷಿಗಳಾದ ವಸಿಷ್ಠರು ಸಮಾಧಾನವನ್ನು ಪಡೆದರು (ಲಕ್ಷಾಲಂಕಾರ).
ಹ್ರದಶ್ಚ ಕುಶವಾನೇಷ ಯತ್ರ ಪದ್ಮಂ ಕುಶೋದಯಮ್ |
ಆಶ್ರಮಶ್ಚೈವ ರುಗ್ಮಿಣ್ಯಾ ಯತ್ರಾಶಾಮ್ಯತ ಕೋಪನಾ ॥18॥
ಇದು ಕುಶವಾನ್ ಎಂಬ ಸರೋವರ. ಇಲ್ಲಿ ಪದ್ಮವು ಕುಶಗಳಿಂದ ಉಂಟಾದಂತೆ ತೋರುತ್ತದೆ. ಇದು ರುಗ್ಮಿಣಿಯ ಆಶ್ರಮ. ಕೋಪಗೊಂಡಿದ್ದ ಅವಳು ಇಲ್ಲಿ ಶಾಂತಳಾದಳು.
ಸಮಾಸತಸ್ತು ತತ್ಸರ್ವಂ ಪಾಂಡವೇಯ ಶ್ರುತಸ್ತ್ವಯಾ |
ತಂ ದ್ರಕ್ಷ್ಯಸಿ ಮಹಾರಾಜ ಭೃಗುತುಂದಂ ಮಹಾಗಿರಿಮ್ ॥19॥
ಎಲೈ ಪಾಂಡವನೇ, ನೀನು ಸಂಕ್ಷೇಪವಾಗಿ ಎಲ್ಲವನ್ನೂ ಕೇಳಿದ್ದೀಯೆ. ಎಲೈ ಮಹಾರಾಜನೇ, ನೀನು ಭೃಗುತುಂದವೆಂಬ ಮಹಾಪರ್ವತವನ್ನು ನೋಡುವಿ.
ಜಲಾಂ ಚೋರ್ಧ್ವಜಲಾಂ ಚೈವ ಯಮುನಾಮಭಿತೋ ನದೀಮ್ |
ಔಶೀನರೋ ವೈ ಯತ್ರೇಷ್ಟ್ವಾ ವಾಸವಾದತ್ಯರಿಚ್ಯತ॥20॥
ಯಮುನೆಯ ಪಕ್ಕದಲ್ಲಿ ಹರಿಯುವ ಜಲ ಮತ್ತು ಊರ್ಧ್ವಜಲ ಎಂಬ ನದಿಗಳನ್ನು ನೋಡುವಿ. ಔಶೀನರನಾದ ಶಿಬಿಯು ಅಲ್ಲಿ ಯಾಗವನ್ನು ಮಾಡಿ ಇಂದ್ರನನ್ನು ಮೀರಿಸಿದನು.
ತಾಂ ದೇವಸಮಿತಿಂ ತಸ್ಯ ವಾಸವಶ್ಚ ವಿಶಾಂ ಪತೇ |
ಅಭ್ಯಗಚ್ಛತ ರಾಜಾನಂ ಜ್ಞಾತುಮಗ್ನಿಶ್ಚ ಭಾರತ ॥21॥
ಎಲೈ ರಾಜನೇ, ಆ ಶಿಬಿಯನ್ನು ಪರೀಕ್ಷಿಸಲು ಅವನ ದೇವಯಜನ ಭೂಮಿಗೆ ಅಗ್ನಿ ಮತ್ತು ಇಂದ್ರರು ಬಂದರು.
ಜಿಜ್ಞಾಸಮಾನೌ ವರದೌ ಮಹಾತ್ಮಾನಮುಶೀನರಮ್ |
ಇಂದ್ರಃ ಶ್ಯೇನಃ ಕಪೋತೋಽಗ್ನಿರ್ಭೂತ್ವಾ ಯಜ್ಞೇಽಭಿಜಗ್ಮತುಃ ॥22॥
ಅವನ ಸತ್ತ್ವವನ್ನು ಪರೀಕ್ಷೆ ಮಾಡಿ ಆ ಮಹಾತ್ಮನಾದ ಶಿಬಿಗೆ ವರವನ್ನು ಕೊಡಲು ಇಂದ್ರನು ಶ್ಯೇನವಾಗಿಯೂ, ಅಗ್ನಿಯು ಕಪೋತವಾಗಿಯೂ ಯಜ್ಞಕ್ಕೆ ಬಂದರು.
ಊರುಂ ರಾಜ್ಞಃ ಸಮಾಸಾದ್ಯ ಕಪೋತಃ ಶ್ಯೇನಜಾದ್ ಭಯಾತ್ |
ಶರಣಾರ್ಥೀ ತದಾ ರಾಜನ್ ನಿಲಿಲ್ಯೇ ಭಯಪೀಡಿತಃ ॥23॥
ಎಲೈ ರಾಜನೇ, ಕಪೋತವು (ಪಾರಿವಾಳವು) ಶ್ಯೇನ (ಗಿಡುಗ)ದ ಭಯದಿಂದ ರಾಜನನ್ನು ಸಮೀಪಿಸಿ ಶರಣಾರ್ಥಿಯಾಗಿ ಭಯದಿಂದ ಕೂಡಿ ರಾಜನ ತೊಡೆಯನ್ನು ಸೇರಿ ಅಡಗಿಕೊಂಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಡ್ವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
*****

ನೂರ ಇಪ್ಪತ್ತೇಳನೆಯ ಅಧ್ಯಾಯ
ಶ್ಯೇನ ಕಪೋತೋಪಾಖ್ಯಾನ
ಶ್ಯೇನಃ
ಧರ್ಮಾತ್ಮಾನಂ ತ್ವಾಹುರೇಕಂ ರಾಜನ್ ಸರ್ವೇ ಮಹೀಕ್ಷಿತಃ |
ಸ ತ್ವಂ ಧರ್ಮವಿರುದ್ಧಂ ಹಿ ಕಸ್ಮಾತ್ ಕರ್ಮ ಚಿಕೀರ್ಷಸಿ ॥1॥
ವಿಹಿತಂ ರಕ್ಷಣಂ ರಾಜನ್ ಪೀಡ್ಯಮಾನಸ್ಯ ಮೇ ಕ್ಷುಧಾ |
ಮಾ ಹಿಂಸೀರ್ಧರ್ಮಲೋಭೇನ ಧರ್ಮಮುತ್ಸೃಜ್ಯ ಮಾ ನಶೀಃ ॥2॥
ಶ್ಯೇನ ಎಲೈ ರಾಜನೇ, ಎಲ್ಲ ರಾಜರೂ ನಿನ್ನನ್ನು ಪ್ರಧಾನನಾದ ಧರ್ಮಾತ್ಮನೆಂದು ಹೇಳುತಾರೆ. ಅಂತಹ ನೀನು ಧರ್ಮವಿರುದ್ಧವಾದ ಕರ್ಮವನ್ನು ಮಾಡಲು ಏಕೆ ಬಯಸುತ್ತಿದ್ದೀಯೆ? ಎಲೈ ರಾಜನೇ, ಹಸಿವಿನಿಂದ ಪೀಡಿಸಲ್ಪಡುತ್ತಿರುವ ನನಗೆ ವಿಹಿತವಾದ ರಕ್ಷಣೆ ಎಂದರೆ ಕಪೋತದ ಭಕ್ಷಣೆ. ನಿನ್ನ ಧರ್ಮಲೋಭದಿಂದ ನನ್ನನ್ನು ಹಿಂಸಿಸಬೇಡ. ಧರ್ಮವನ್ನು ತೊರೆದು ನಾಶವನ್ನು ಹೊಂದಬೇಡ.
ರಾಜಾ
ಸಂತ್ರಸ್ತರೂಪಸತ್ರಾಣಾರ್ಥೀ ತ್ವತ್ತೋ ಭೀತೋ ಮಹಾದ್ವಿಜ |
ಮತ್ಸಕಾಶಮನುಪ್ರಾಪ್ತಃ ಪ್ರಾಣಗೃಧ್ನುರಯಂ ದ್ವಿಜಃ ॥3॥
ರಾಜ ಎಲೈ ಮಹಾಪಕ್ಷಿಯೇ, ನಿನ್ನಿಂದ ಭೀತನಾಗಿ ನಡುಗುತ್ತಾ ರಕ್ಷಣೆಯನ್ನು ಬಯಸಿ ಪ್ರಾಣವನ್ನು ಉಳಿಸಿಕೊಳ್ಳಲು ಬಯಸಿ ಈ ಕಪೋತವು ನನ್ನ ಬಳಿಗೆ ಬಂದಿದೆ.
ಏವಮಭ್ಯಾಗತಸ್ಯೇಹ ಕಪೋತಸ್ಯಾಭಯಾರ್ಥಿನಃ |
ಅಪ್ರದಾನೇ ಪರೋಽಧರ್ಮಃ ಕಿಂ ತ್ವಂ ಶ್ಯೇನ ಪ್ರಪಶ್ಯಸಿ ॥4॥
ಹೀಗೆ ಅಭಯಾರ್ಥಿಯಾಗಿ, ಅಭ್ಯಾಗತನಾಗಿ ನನ್ನ ಬಳಿಗೆ ಬಂದ ಕಪೋತಕ್ಕೆ ಅಭಯವನ್ನು ಕೊಡದಿದ್ದರೆ ದೊಡ್ಡ ಅಧರ್ಮವಾಗುತ್ತದೆ. ಎಲೈ ಶ್ಯೇನವೇ, ನೀನು ಹೇಗೆ ಯೋಚಿಸುತ್ತೀಯೆ?
ಪ್ರಸ್ಪಂದಮಾನಃ ಸಂಭ್ರಾಂತಃ ಕಪೋತಃ ಶ್ಯೇನ ಲಕ್ಷ್ಯತೇ |
ಮತ್ಸಕಾಶಂ ಜೀವಿತಾರ್ಥೇ ತಸ್ಯ ತ್ಯಾಗೋ ವಿಗರ್ಹಿತಃ ॥5॥
ಎಲೈ ಶ್ಯೇನವೇ, ಕಪೋತವು ದಿಗ್ಭ್ರಾಂತವಾಗಿ ಭಯದಿಂದ ನಡುಗುತ್ತಿರುವುದು ಕಾಣುತ್ತಿದೆ. ಜೀವನದ ಸಲುವಾಗಿ ಅದು ನನ್ನ ಬಳಿಗೆ ಬಂದಿದೆ. ಅದನ್ನು ಪರಿತ್ಯಾಗ ಮಾಡುವುದು ನಿಂದಿತವಾದುದು.
ಶ್ಯೇನಃ
ಆಹಾರಾತ್ ಸರ್ವಭೂತಾನಿ ಸಂಭವಂತಿ ಮಹೀಪತೇ |
ಆಹಾರೇಣ ವಿವರ್ಧಂತೇ ತೇನ ಜೀವಂತಿ ಸರ್ವಶಃ ॥6॥
ಶ್ಯೇನ ಎಲೈ ರಾಜನೇ, ಎಲ್ಲ ಪ್ರಾಣಿಗಳೂ ಆಹಾರದಿಂದ ಹುಟ್ಟುತ್ತವೆ; ಆಹಾರದಿಂದ ಬೆಳೆಯುತ್ತವೆ ಮತ್ತು ಆಹಾರದಿಂದಲೇ ಜೀವಿಸುತ್ತವೆ.
ಶಕ್ಯತೇ ದುಸ್ತ್ಯಜೇಽಪ್ಯರ್ಥೇ ಚಿರರಾತ್ರಾಯ ಜೀವಿತುಮ್ |
ನ ತು ಭೋಜನಮುತ್ಸೃಜ್ಯ ಶಕ್ಯಂ ವರ್ತಯಿತುಂ ಚಿರಮ್ ॥7॥
ಬಿಡಲು ಬಹಳ ಕಷ್ಟವಾದ ವಸ್ತುವನ್ನು ಬಿಟ್ಟು ಬಹುಕಾಲ ಜೀವಿಸಬಹುದು. ಆದರೆ ಅನ್ನವನ್ನು ತೊರೆದು ಬಹಳ ಸಮಯ ಬದುಕಲು ಸಾಧ್ಯವಿಲ್ಲ.
ಭಕ್ಷ್ಯಾದ್ವಿಲೋಪಿತಸ್ಯಾದ್ಯ ಮಮ ಪ್ರಾಣಾ ವಿಶಾಂಪತೇ |
ವಿಸೃಜ್ಯ ಕಾಯಮೇಷ್ಯಂತಿ ಪಂಥಾನಮಪುನರ್ಭವಮ್ ॥8॥
ಎಲೈ ರಾಜನೇ, ನನ್ನ ಆಹಾರದಿಂದ ವಂಚಿತನಾದ ನನಗೆ ಈ ದಿನ ನನ್ನ ಪ್ರಾಣಗಳು ನನ್ನ ದೇಹವನ್ನು ಬಿಟ್ಟು ಪುನರಾವರ್ತಿಯಿಲ್ಲದ ಮಾರ್ಗದಲ್ಲಿ ಹೊರಟು ಹೋಗುವವು.
ಪ್ರಮೃತೇ ಮಯಿ ಸರ್ವಂ ಮೇ ಪುತ್ರದಾರಂ ಮರಿಷ್ಯತಿ |
ರಕ್ಷನ್ ಕಪೋತಂ ರಾಜಂಸ್ತ್ವಂ ಬಹೂನ್ ಪ್ರಾಣಾನ್ ಹನಿಷ್ಯಸಿ ॥9॥
ನಾನು ಮೃತನಾದರೆ ನನ್ನ ಹೆಂಡತಿ, ಮಕ್ಕಳು ಮೃತರಾಗುವರು. ಎಲೈ ರಾಜನೇ, ನೀನು ಕಪೋತವನ್ನು ರಕ್ಷಿಸುತ್ತಾ ಅನೇಕ ಪ್ರಾಣಿಗಳನ್ನು ಕೊಲ್ಲುತ್ತಿದ್ದೀಯೆ.
ಬಹೂನ್ ಯೋ ಬಾಧತೇ ಧರ್ಮೋ ನ ಸ ಧರ್ಮಃ ಕುವರ್ತ್ಮ ತತ್ |
ಅವಿರೋಧೀ ತು ಯೋ ಧರ್ಮಃ ಸ ಧರ್ಮಃ ಸದ್ಭಿರುಚ್ಯತೇ ॥10॥
ಯಾವುದು ಬಹಳ ವ್ಯಕ್ತಿಗಳಿಗೆ ಬಾಧೆಯನ್ನು ಉಂಟುಮಾಡುವುದೋ ಅದು ಧರ್ಮವಲ್ಲ. ಅದು ಕುಮಾರ್ಗ. ಯಾವುದು ಬಹಳ ಜನರಿಗೆ ಅವಿರೋಧಿಯಾಗಿರುತ್ತದೆಯೋ ಅದೇ ಧರ್ಮವೆಂದು ಸಜ್ಜನರು ಹೇಳುತ್ತಾರೆ.
ವಿರೋಧಿಷು ಮಹೀಪಾಲ ನಿಶ್ಚಿತ್ಯ ಗುರುಲಾಘವಮ್ |
ನ ಬಾಧಾ ವಿದ್ಯತೇ ಯತ್ರ ತಂ ಧರ್ಮಂ ಸಮುಪಾಚರೇತ್ ॥11॥
ಎಲೈ ರಾಜನೇ, ಎರಡು ಧರ್ಮಗಳಲ್ಲಿ ವಿರೋಧವು ಬಂದಾಗ ಅವುಗಳ ಗುರುಲಾಘವವನ್ನು ವಿಚಾರಮಾಡಿ ಯಾವುದಕ್ಕೆ ಬಾಧೆ

ಬರುವುದಿಲ್ಲವೋ ಅಂತಹ ಧರ್ಮವನ್ನು ಆಚರಿಸಬೇಕು.
ಗುರುಲಾಘವಮಾಜ್ಞಾಯ ಧರ್ಮಾಧರ್ಮವಿನಿಶ್ಚಯೇ |
ಯತೋ ಭೂಯಸ್ತತೋ ರಾಜನ್ ಕುರು ಧರ್ಮವಿನಿಶ್ಚಯಮ್ ॥12॥
ಎಲೈ ರಾಜನೇ, ಧರ್ಮಾಧರ್ಮದ ವಿಷಯದಲ್ಲಿ ಗೌರವಲಾಘವವನ್ನು ಚೆನ್ನಾಗಿ ತಿಳಿದು ಯಾವುದು ಶ್ರೇಷ್ಠವೋ ಅಂತಹ ಧರ್ಮನಿಶ್ಚಯವನ್ನು ಮಾಡು.
ರಾಜಾ
ಬಹುಕಲ್ಯಾಣಸಂಯುಕ್ತಂ ಭಾಷಸೇ ವಿಹಗೋತ್ತಮ |
ಸುಪರ್ಣಃ ಪಕ್ಷಿರಾಟ್ ಕಿಂ ತ್ವಂ ಧರ್ಮಜ್ಞಸ್ತು ವಿಭಾವ್ಯಸೇ |
ಸ ತಥಾ ಧರ್ಮಸಂಯುಕ್ತಂ ಬಹುಚಿತ್ರಂ ಪ್ರಭಾಷಸೇ ॥13॥
ರಾಜಾ ಎಲೈ ವಿಹಗೋತ್ತಮನೇ, ನೀನು ಬಹಳ ಕಲ್ಯಾಣಯುಕ್ತವಾಗಿ ಮಾತನಾಡುತ್ತಿದ್ದೀಯೆ. ನೀನೇನು ಪಕ್ಷಿರಾಜನಾದ ಗರುಡನೇ? ನೀನಾದರೂ ಧರ್ಮಜ್ಞನಂತೆ ಕಾಣುತ್ತಿದ್ದೇನೆ. ಏಕೆಂದರೆ ಅಂತಹ ಧರ್ಮಯುಕ್ತವಾದ ಬಹಳ ವಿಚಿತ್ರವಾದ ಮಾತುಗಳನ್ನು ಆಡುತ್ತಿದ್ದೀಯೆ.
ನ ತೇಽಸ್ತ್ಯವಿದಿತಂ ಕಿಂಚಿದಿತಿ ತ್ವಾಂ ಲಕ್ಷಯಾಮ್ಯಹಮ್ |
ಶರಣಾಗತಸಂತ್ಯಾಗಂ ಕಥಂ ಸಾಧ್ವಿತಿ ಮನ್ಯಸೇ ॥14॥
ನಿನಗೆ ತಿಳಿಯದಿದ್ದ ವಿಷಯವು ಯಾವುದೂ ಇಲ್ಲ ಎಂದು ನಾನು ಗಮನಿಸುತ್ತಿದ್ದೀಯೆ. ಶರಣಾಗತರನ್ನು ಪರಿತ್ಯಾಗ ಮಾಡುವುದು ಹೇಗೆ ಸಾಧುವೆಂದು ನೀನು ತಿಳಿಯುತ್ತೀಯೆ?
ಆಹಾರಾರ್ಥಃ ಸಮಾರಂಭಃ ತವ ಚಾಯಂ ವಿಹಂಗಮ |
ಶಕ್ಯಶ್ಚಾಪ್ಯನ್ಯಥಾ ಕರ್ತುಮಾಹಾರೋಽಪ್ಯಧಿಕಸ್ತ್ವಯಾ ॥15॥
ಎಲೈ ಪಕ್ಷಿಯೇ, ಈ ನಿನ್ನ ಪ್ರಯತ್ನವು ನಿನ್ನ ಆಹಾರಕ್ಕಾಗಿ ಇದೆ. ಇದಕ್ಕಿಂತ ಹೆಚ್ಚಿನ ಆಹಾರವನ್ನು ನೀನು ಬೇರೆ ರೀತಿಯಲ್ಲಿಯೂ ಸಂಪಾದನೆ ಮಾಡಬಹುದು.
ಗೋವೃಷೋ ವಾ ವರಾಹೋ ವಾ ಮೃಗೋ ವಾ ಮಹಿಷೋಽಪಿ ವಾ |
ತ್ವದರ್ಥಮತ್ರ ಕ್ರಿಯತಾಂ ಯದನ್ಯದಭಿಕಾಂಕ್ಷಸೇ ॥16॥
ನಿನಗೆ ಯಾವುದು ಇಷ್ಟವಾಗಿದೆಯೋ ಅಂತಹ ಗೋವೃಷವನ್ನಾಗಲೀ, ವರಾಹವನ್ನಾಗಲೀ, ಮೃಗವನತನಗಲೀ ಅಥವಾ ಮಹಿಷವನ್ನಾಗಲೀ ನೀನು ನಿನ್ನ ಆಹಾರವಾಗಿ ಸ್ವೀಕರಿಸಬಹುದು.
ಶ್ಯೇನಃ
ನ ವರಾಹಂ ನ ಚೋಕ್ಷಾಣಂ ನ ಮೃಗಾಂಶ್ಚ ಪೃಥಗ್ವಿಧಾನ್ |
ಭಕ್ಷಯಾಮ ಮಹಾರಾಜ ಕಿಂ ಮಮಾನ್ಯೇನ ಕೇನಚಿತ್ ॥17॥
ಶ್ಯೇನ ಎಲೈ ಮಹಾರಾಜನೇ, ವರಾಹವನ್ನಾಗಲೀ, ಗೋವೃಷವನ್ನಾಗಲೀ ಅಥವಾ ಬೇರೆ ಬೇರೆ ಮೃಗಗಳನ್ನಾಗಲೀ ನಾವು ತಿನ್ನುವುದಿಲ್ಲ. ಬೇರೆ ಪ್ರಾಣಿಗಳಿಂದ ನನಗೆ ಏನಾಗಬೇಕಾಗಿದೆ?
ಯಸ್ತು ಮೇ ದೇವವಿಹಿತೋ ಭಕ್ಷಃ ಕ್ಷತ್ರಿಯಪುಂಗವ |
ತಮುತ್ಸೃಜ ಮಹಾರಾಜ ಕಪೋತಮಿಮಮೇವ ಮೇ ॥18॥
ಎಲೈ ಕ್ಷತ್ರಿಯಪುಂಗವನಾದ ಮಹಾರಾಜನೇ, ನನಗೆ ಈ ಕಪೋತವೇ ದೇವವಿಹಿತವಾದ ಆಹಾರ. ಆದ್ದರಿಂದ ಇದನ್ನು ನನಗೆ ಬಿಟ್ಟುಕೊಡು.
ಶ್ಯೇನಾಃ ಕಪೋತಾನ್ ಖಾದಂತಿ ಶ್ರುತಿರೇಷಾ ಸನಾತನೀ |
ಮಾ ರಾಜನ್ ಸಾರಮಜ್ಞಾತ್ವಾ ಕದಲೀಸ್ಕಂಧಮಾರುಹ ॥19॥
ಶ್ಯೇನಗಳು ಕಪೋತಗಳನ್ನು ತಿನ್ನುತ್ತವೆ ಎಂಬ ಈ ಶಾಶ್ವತವಾದ ಶ್ರುತಿಯಿದೆ. ರಾಜನೇ, ಅದನ್ನು ತಿಳಿಯದೆ ಬಾಳೆಯ ಮರವನ್ನು ಹತ್ತಬೇಡ.
ರಾಜಾ
ರಾಷ್ಟ್ರಂ ಶಿಬೀನಾಮೃದ್ಧಂ ವೈ ಶಾಧಿ ಪಕ್ಷಿಭಿರರ್ಚಿತಃ |
ಕೃತ್ಸ್ನಮೇತನ್ಮಯಾ ದತ್ತಂ ರಾಜವದ್ ವಿಹಗೋತ್ತಮ ॥20॥
ರಾಜಾ ಎಲೈ ವಿಹಗೋತ್ತಮನೇ, ನೀನು ಪಕ್ಷಿಗಳ ಜೊತೆಯಲ್ಲಿ ಶಿಬಿಗಳಾದ ನಮ್ಮ ಸಮೃದ್ಧವಾದ ರಾಷ್ಟ್ರವೆಲ್ಲವನ್ನು ರಾಜನಂತೆ ಆಳು. ನನ್ನ ಸಮಸ್ತವಾದ ರಾಷ್ಟ್ರವನ್ನು ನಿನಗೆ ಕೊಟ್ಟಿದ್ದೇನೆ.
ಯದ್ ವಾ ಕಾಮಯಸೇ ಕಿಂಚಿತ್ ಶ್ಯೇನ ಸರ್ವಂ ದದಾನಿ ತೇ |
ವಿನೇಮಂ ಪಕ್ಷಿಣಂ ಶ್ಯೇನ ಶರಣಾರ್ಥಿನಮಾಗತಮ್ ॥21॥
ಅಥವಾ ಎಲೈ ಶ್ಯೇನವೇ, ನಿನಗೆ ಏನು ಇಷ್ಟವೋ ಅದೆಲ್ಲವನ್ನೂ ಕೊಡುತ್ತೇನೆ. ಎಲೈ ಶ್ಯೇನವೇ, ಆದರೆ ಶರಣಾರ್ಥಿಯಾಗಿ ನನ್ನ ಬಳಿಗೆ ಬಂದ ಈ ಕಪೋತವನ್ನು ಮಾತ್ರ ಕೊಡುವುದಿಲ್ಲ.
ಯೇನೇಮಂ ಸ್ವಾಪಯೇಥಾಸ್ತ್ವಂ ಕರ್ಮಣಾ ಪಕ್ಷಿಸತ್ತಮ |
ತದಾಚಕ್ಷ್ವ ಕರಿಷ್ಯಾಮಿ ನ ಹಿ ದಾಸ್ಯೇ ಕಪೋತಕಮ್ ॥22॥
ಎಲೈ ಪಕ್ಷಿಶ್ರೇಷ್ಠನೇ, ನಾನು ಏನು ಮಾಡಿದರೆ ನೀನು ಈ ಕಪೋತವನ್ನು ಉಳಿಸುತ್ತೀಯೋ ಅಂತಹ ಉಪಾಯವನ್ನು ಹೇಳು. ಅದನ್ನು ನಾನು ಮಾಡುವೆನು. ಈ ಕಪೋತವನ್ನು ಮಾತ್ರ ಕೊಡುವುದಿಲ್ಲ.

ಶ್ಯೇನಃ
ಉಶೀನರ ಕಪೋತೇ ತೇ ಯದಿ ಸ್ನೇಹೋ ನರಾಧಿಪ |
ಆತ್ಮಾನಂ ಸುಸಮುತ್ಕೃತ್ಯ ಕಪೋತತುಲಯಾ ಧೃತಮ್ ॥23॥
ಯದಾ ಸಮಂ ಕಪೋತೇನ ತವ ಮಾಂಸಂ ನರಾಧಿಪ |
ತದಾ ಪ್ರದೇಯಂ ತನ್ಮಹ್ಯಂ ಸಾ ಮೇ ತುಷ್ಟಿರ್ಭವಿಷ್ಯತಿ ॥24॥
ಶ್ಯೇನ ಉಶೀನರನೇ, ರಾಜನೇ, ನಿನಗೆ ಕಪೋತದಲ್ಲಿ ಅಷ್ಟು ಸ್ನೇಹವಿದ್ದರೆ ನಿನ್ನ ಮಾಂಸವನ್ನು ಕತ್ತರಿಸಿ ಕಪೋತದ ಜೊತೆಯಲ್ಲಿ ತಕ್ಕಡಿಯಲ್ಲಿ ತೂಗಿ ಯಾವಾಗ ನಿನ್ನ ಮಾಂಸದ ತೂಕವು ಕಪೋತದ ತೂಕಕ್ಕೆ ಸಮವಾಗುತ್ತದೆಯೋ ಆಗ ಅದನ್ನು ನನಗೆ ಕೊಡು. ಅದರಿಂದ ನನಗೆ ಸಂತೋಷವುಂಟಾಗುವುದು.
ರಾಜಾ
ಅನುಗ್ರಹಮಿಮಂ ಮನ್ಯೇ ಯನ್ಮಾಂ ಶ್ಯೇನಾಭಿಯಾಚಸೇ |
ತಸ್ಮಾತ್ತೇಽದ್ಯ ಪ್ರದಾಸ್ಯಾಮಿ ಸ್ವಮಾಂಸಂ ತುಲಯಾ ಧೃತಮ್ ॥25॥
ರಾಜಾ ಎಲೈ ಶ್ಯೇನನನೇ, ನೀನು ಯಾವ ಈ ವಸ್ತುವನ್ನು ಬೇಡುತ್ತಿದ್ದೀಯೋ ಅದು ನನಗೆ ಮಾಡಿದ ದೊಡ್ಡ ಅನುಗ್ರಹವೆಂದು ಭಾವಿಸುತ್ತೇನೆ. ಆದ್ದರಿಂದ ಈ ದಿನ ನನ್ನ ಮಾಂಸವನ್ನು ತಕ್ಕಡಿಯಲ್ಲಿ ತೂಗಿ ನಿನಗೆ ಕೊಡುವೆನು.
ಲೋಮಶಃ
ಅಥೋತ್ಕೃತ್ಯ ಸ್ವಮಾಂಸಂ ತು ರಾಜಾ ಪರಮಧರ್ಮವಿತ್ |
ತುಲಯಾಮಾಸ ಕೌಂತೇಯ ಕಪೋತೇನ ಸಮಂ ವಿಭೋ ॥26॥
ಲೋಮಶ ಎಲೈ ಕೌಂತೇಯನೇ, ವಿಭುವೇ, ಅನಂತರ ಪರಮಧಾರ್ಮಿಕನಾದ ಆ ರಾಜನು ತನ್ನ ಮಾಂಸವನ್ನು ಕತ್ತರಿಸಿ ಕಪೋತದ ಎದುರಿಗೆ ತಕ್ಕಡಿಯಲ್ಲಿ ತೂಗಿದನು.
ಧ್ರಿಯಮಾಣಸ್ತು ತುಲಯಾ ಕಪೋತೋಽತ್ಯತಿರಿಚ್ಯತೇ |
ಪುನಶ್ಚೋತ್ಕೃತ್ಯ ಮಾಂಸಾನಿ ರಾಜಾ ಪ್ರಾದಾದುಶೀನರಃ ॥27॥
ತಕ್ಕಡಿಯಲ್ಲಿ ತೂಗಿದಾಗ ಕಪೋತದ ಭಾರವೇ ಹೆಚ್ಚಾಗುತ್ತದೆ. ಆಗ ಉಶೀನರ ರಾಜನು ತನ್ನ ಮಾಂಸವನ್ನು ದೇಹದಿಂದ ಪುನಃ ಕತ್ತರಿಸಿ ಕೊಟ್ಟನು (ತೂಗಿದನು).
ನ ವಿದ್ಯತೇ ಯದಾ ಮಾಂಸಂ ಕಪೋತೇನ ಸಮಂ ಧೃತಮ್ |
ತತಃ ಪ್ರಕ್ಷೀಣಮಾಂಸೋಽಸಾವಾರುರೋಹ ತುಲಾಂ ಸ್ವಯಮ್ ॥28॥
ಕಪೋತದ ತೂಕಕ್ಕೆ ಸಮವಾದ ಮಾಂಸವು ತನ್ನ ಶರೀರದಲ್ಲಿ ಇಲ್ಲದಿದ್ದಾಗ ರಾಜನು ತನ್ನ ಮಾಂಸವನ್ನೆಲ್ಲಾ ಕಳೆದುಕೊಂಡು ತಾನೇ ತಕ್ಕಡಿಯಲ್ಲಿ ಕುಳಿತುಕೊಂಡನು.
ಶ್ಯೇನಃ
ಇಂದ್ರೋಽಹಮಸ್ಮಿ ಧರ್ಮಜ್ಞ ಕಪೋತೋ ಹವ್ಯವಾಡಯಮ್ |
ಜಿಜ್ಞಾಸಮಾನೌ ಧರ್ಮಂ ತ್ವಾಂ ಯಜ್ಞವಾಟಮುಪಾಗತೌ ॥29॥
ಯತ್ತೇ ಮಾಂಸಾನಿ ಗಾತ್ರೇಭ್ಯಃ ಸಮುತ್ಕೃತ್ತಾನಿ ಪಾರ್ಥಿವ |
ಏಷಾ ತೇ ಶಾಶ್ವತೀ ಕೀರ್ತಿರ್ಲೋಕಾನಭಿಭವಿಷ್ಯತಿ ॥30॥
ಶ್ಯೇನ ಎಲೈ ಧರ್ಮಜ್ಞನೇ, ನಾನು ಇಂದ್ರ. ಈ ಕಪೋತವು ಅಗ್ನಿ. ನಿನ್ನ ಧರ್ಮವನ್ನು ಪರೀಕ್ಷೆ ಮಾಡುವ ಉದ್ದೇಶದಿಂದ ನಾವು ಯಜ್ಞಶಾಲೆಗೆ ಬಂದೆವು. ಎಲೈ ಪಾರ್ಥಿವನೇ, ನೀನು ನಿನ್ನ ಮಾಂಸವನ್ನು ಶರೀರದಿಂದ ಕತ್ತರಿಸಿಕೊಟ್ಟ ಕಾರಣದಿಂದ ನಿನಗೆ ಶಾಶ್ವತ ಕೀರ್ತಿಯು ಲೋಕದಲ್ಲಿ ಉಂಟಾಗಿ ಲೋಕವನ್ನೆಲ್ಲಾ ತುಂಬುತ್ತದೆ.
ಯಾವಲ್ಲೋಕೇ ಮನುಷ್ಯಾಸ್ತ್ವಾಂ ಕಥಯಿಷ್ಯಂತಿ ಪಾರ್ಥಿವ |
ತಾವತ್ ಕೀರ್ತಿಶ್ಚ ಲೋಕಾಶ್ಚ ಸ್ಥಾಸ್ಯಂತಿ ತವ ಸರ್ವದಾ ॥31॥
ಎಲೈ ರಾಜನೇ, ಎಲ್ಲಿಯವರೆಗೆ ಮನುಷ್ಯರು ನಿನ್ನ ಕಥೆಯನ್ನು ಹೇಳುವರೋ ಅಲ್ಲಿಯವರೆಗೆ ನಿನ್ನ ಕೀರ್ತಿಯೂ, ನಿನ್ನ ಶುಭಲೋಕಗಳೂ ಸರ್ವದಾ ಇರುತ್ತವೆ.
ಇತ್ಯುಕ್ತ್ವಾ ತಂ ದಾನಪತಿಮಿಂದ್ರಾಗ್ನೀ ತೌ ತದಾ ನೃಪಂ |
ಪೂರ್ವದೇಹಯುತಂ ಕೃತ್ವಾ ಜಗ್ಮತುಸ್ತ್ರಿದಶಾಲಯಮ್ ॥32॥
ಆ ಇಂದ್ರಾಗ್ನಿಗಳು ದಾನಪತಿಯಾದ ಆ ರಾಜನಿಗೆ ಹೀಗೆ ಹೇಳಿ ಅವನನ್ನು ಮೊದಲಿನ ದೇಹವುಳ್ಳವನನ್ನಾಗಿಯೇ ಮಾಡಿ ಸ್ವರ್ಗಕ್ಕೆ ಹೊರಟುಹೋದರು.
ತತ್ ಪಾಂಡವೇಯ ಯಜನಂ ರಾಜ್ಞಸ್ತಸ್ಯ ಮಹಾತ್ಮನಃ |
ಪಶ್ಯಸ್ವೈತನ್ಮಯಾ ಸಾರ್ಧಂ ಪುಣ್ಯಂ ಪಾಪಪ್ರಣಾಶನಮ್ ॥33॥
ಎಲೈ ಪಾಂಡುಪುತ್ರನೇ, ಇದು ಮಹಾತ್ಮನಾದ ಆ ಶಿಬಿರಾಜನ ಯಜ್ಞಭೂಮಿ. ಪಾಪಪ್ರಣಾಶನವಾದ ಪವಿತ್ರವಾದ ಈ ಭೂಮಿಯನ್ನು ನನ್ನ ಜೊತೆಯಲ್ಲಿ ನೋಡು.
ಅತ್ರೈವ ಸತತಂ ದೇವಾ ಮುನಯಶ್ಚ ತಪೋಧನಾಃ |
ದೃಶ್ಯಂತೇ ಬ್ರಾಹ್ಮಣಾ ರಾಜನ್ ಪುಣ್ಯವದ್ಭಿರ್ಮಹಾತ್ಮಭಿಃ ॥34॥
ಎಲೈ ರಾಜನೇ, ಪುಣ್ಯವಂತರಾದ ಮಹಾತ್ಮರಿಗೆ ಇಲ್ಲಿಯೇ ಸತತವಾಗಿ ದೇವತೆಗಳು, ತಪೋಧನರಾದ ಋಷಿಗಳು ಮತ್ತು ಶ್ರೇಷ್ಠರಾದ ಬ್ರಾಹ್ಮಣರು ಕಾಣುತ್ತಾರೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತೆಂಟನೆಯ ಅಧ್ಯಾಯ
ಅಷ್ಟಾವಕ್ರೋಪಾಖ್ಯಾನ
ಲೋಮಶಃ
ಯಃ ಕಥ್ಯತೇ ಮಂತ್ರದ್ಗ್ಯಬುದ್ಧಿಃ
ಔದ್ದಾಲಕಿಃ ಶ್ವೇತಕೇತುಃ ಪೃಥಿವ್ಯಾಮ್ ।
ತಸ್ಯಾಶ್ರಮಂ ಪಶ್ಯತ ಪಾಂವೇಯಾಃ
ಸದಾಫಲೈರುಪಪನ್ನಂ ಮಹೀಜೈಃ ॥1॥
ಲೋಮಶರು ಎಲೈ ಪಾಂಡವರೇ, ಭೂಮಿಯಲ್ಲಿ ಉದ್ದಾಲಕರ ಪುತ್ರರಾದ ಯಾವ ಶ್ವೇತಕೇತುವನ್ನು ಮಂತ್ರಜ್ಞರೆಂದು, ಶ್ರೇಷ್ಠಬುದ್ಧಿಯುಳ್ಳವರೆಂದು ಹೇಳುತ್ತಾರೆಯೋ ಅವರ ಯಾವಾಗಲೂ ಫಲಭರಿತ ವೃಕ್ಷಗಳಿಂದ ತುಂಬಿರುವ ಈ ಆಶ್ರಮವನ್ನು ನೋಡಿ.
ಸಾಕ್ಷಾದತ್ರ ಶ್ವೇತಕೇತುರ್ದದರ್ಶ
ಸರಸ್ವತೀಂ ಮಾನುಷದೇಹರೂಪಾಮ್ ।
ವೇತ್ಸ್ಯಾಮಿ ವಾಣೀಮಿತಿ ಸಂಪ್ರವೃತ್ತಾಂ
ಸರಸ್ವತೀಂ ಶ್ವೇತಕೇತುರ್ಬಭಾಷೇ ॥2॥
ಇಲ್ಲಿ ಶ್ವೇತಕೇತುವು ಮನುಷ್ಯರೂಪವನ್ನು ಧರಿಸಿದ ಸರಸ್ವತಿಯನ್ನು ಸಾಕ್ಷಾತ್ತಾಗಿ ನೋಡಿದರು. ಮತ್ತು ವಾಣಿಯನ್ನು ತಿಳಿದುಕೊಳ್ಳುವೆನು ಎಂದು ಯೋಚಿಸಿ ಅಲ್ಲಿ ಪ್ರವೃತ್ತಳಾದ ಸರಸ್ವತಿಯನ್ನು ಕುರಿತು ಶ್ವೇತಕೇತುವು ಮಾತನಾಡಿದರು (ಇದು ಅಂತಹ ಪವಿತ್ರವಾದ ಕ್ಷೇತ್ರ).
ತಸ್ಮಿನ್ ಕಾಲೇ ಬ್ರಹ್ಮವಿದಾಂ ವರಿಷ್ಠಾ-
ವಾಸ್ತಾಂ ತದಾ ಮಾತುಲಭಾಗಿನೇಯೌ ।
ಅಷ್ಟಾವಕ್ರಶ್ಚೈವ ಕಹೋಲಸೂನುಃ
ಔದ್ದಾಲಕಿಃ ಶ್ವೇತಕೇತುಶ್ಚ ರಾಜನ್ ॥3॥
ಎಲೈ ರಾಜನೇ, ಆ ಕಾಲದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ವಿಶಿಷ್ಟರಾದ ಸೋದರಮಾವ ಮತ್ತು ಸೋದರಳಿಯರಾದ ಕಹೋಲಪುತ್ರರಾದ ಅಷ್ಟಾವಕ್ರರು ಮತ್ತು ಉದ್ದಾಲಕರ ಪುತ್ರರಾದ ಶ್ವೇತಕೇತುವು ಇದ್ದರು.
ವಿದೇಹರಾಜಸ್ಯ ಸಮೀಪತಸ್ತೌ
ಧೀರಾವುಭೌ ಮಾತುಲಭಾಗಿನೇಯೌ ।
ಪ್ರವಿಶ್ಯ ಯಜ್ಞಾಯತನಂ ವಿವಾದೇ
ವಂದಿಂ ನಿಜಗ್ರಾಹತುರಪ್ರಮೇಯೌ ॥4॥
ಅಪ್ರಮೇಯರೂ, ಧೀರರೂ ಆದ ಆ ಮಾತುಲ-ಭಾಗಿನೇಯರು ವಿದೇಹರಾಜನ ಸಮೀಪಕ್ಕೆ ಹೋಗಿ ಅವನ ಯಜ್ಞಶಾಲೆಯನ್ನು ಪ್ರವೇಶಿಸಿ ವಿವಾದದಲ್ಲಿ ವಂದಿಯನ್ನು ನಿಗ್ರಹಿಸಿದರು.
ಯುಧಿಷ್ಠಿರಃ
ಕಥಂಪ್ರಭಾವಃ ಸ ಬಭೂವ ವಿಪ್ರಃ
ತಥಾವಿಧಂ ಯೋ ನಿಜಗ್ರಾಹ ವಂದಿಮ್ ।
ಕಿಂಚಾಧಿಕೃತ್ಯಾಥ ತಯೋರ್ವಿವಾದೋ
ವಿದೇಹರಾಜಸ್ಯ ಸಮೀಪ ಆಸೀತ್ ।
ಅಷ್ಟಾವಕ್ರಃ ಕೇನ ಚಾಸೌ ಬಭೂವ
ತತ್ ಸರ್ವಂ ನೋ ಲೋಮಶಾಚಕ್ಷ್ವ ಬ್ರಹ್ಮನ್ ॥5॥
ಯುಧಿಷ್ಠಿರ ಅಂತಹ ವಂದಿಯನ್ನು ನಿಗ್ರಹಿಸಿದ ಆ ಬ್ರಾಹ್ಮಣರು ಎಂತಹ ಪ್ರಭಾವವುಳ್ಳವರಾಗಿದ್ದರು? ಮತ್ತು ವಿದೇಹರಾಜನ ಸಮೀಪದಲ್ಲಿ ಅವರಿಬ್ಬರಿಗೂ ಯಾವ ವಿಷಯದಲ್ಲಿ ವಂದಿಯ ಜೊತೆಯಲ್ಲಿ ವಿವಾದ ಉಂಟಾಯಿತು? ಮತ್ತು ಯಾವ ಕಾರಣದಿಂದ ಅಷ್ಟಾವಕ್ರರು ಆ ಹೆಸರನ್ನು ಪಡೆದರು? ಎಲೈ ಬ್ರಾಹ್ಮಣರಾದ ಲೋಮಶರೇ, ಅದೆಲ್ಲವನ್ನೂ ನನಗೆ ಹೇಳಿ.
ಲೋಮಶಃ
ಉದ್ದಾಲಕಸ್ಯ ನಿಯತಃ ಶಿಷ್ಯ ಏಕೋ
ನಾಮ್ನಾ ಕಹೋಳೇತಿ ಬಭೂವ ರಾಜನ್ ।
ಶುಶ್ರೂಷುರಾಚಾರ್ಯವಶಾನುವರ್ತೀ
ದೀರ್ಘಂ ಕಾಲಂ ಸೋಽಧ್ಯಯನಂ ಚಕಾರ ॥6॥
ಲೋಮಶ ಎಲೈ ರಾಜನೇ, ಉದ್ದಾಲಕರಿಗೆ ನಿಯತನಾದ ಒಬ್ಬ ಕಹೋಳನೆಂಬ ಶಿಷ್ಯನಿದ್ದನು. ಅವನು ಆಚಾರ್ಯವಶವರ್ತಿಯಾಗಿ

ಅವರ ಸೇವೆಯನ್ನು ಮಾಡಿಕೊಂಡು ಬಹುಕಾಲದವರೆಗೆ ಅಧ್ಯಯನವನ್ನು ಮಾಡಿದನು.
ತಂ ವೈ ವಿಪ್ರಾಃ ಪರ್ಯಭವಂಸ್ತು ಶಿಷ್ಯಾಃ
ತಂ ಚ ಜ್ಞಾತ್ವಾ ವಿಪ್ರಕಾರಂ ಗುರುಃ ಸಃ |
ತಸ್ಮೈ ಪ್ರಾದಾತ್ ಸದ್ಯ ಏವ ಶ್ರುತಂ ಚ
ಭಾರ್ಯಾಂ ಚ ವೈ ದುಹಿತರಂ ಸ್ವಾಂ ಸುಜಾತಾಮ್ ॥7॥
ಅವನನ್ನು ಉದ್ದಾಲಕರ ಶಿಷ್ಯರಾದ ಉಳಿದ ಬ್ರಾಹ್ಮಣರು ಅವಮಾನ ಮಾಡಿದರು. ಆ ಅಪಕಾರವನ್ನು ತಿಳಿದ ಗುರುಗಳು ಅವರಿಗೆ ತಕ್ಷಣದಲ್ಲಿಯೇ ಜ್ಞಾನವನ್ನು ನೀಡಿ ತಮ್ಮ ಮಗಳಾದ ಸುಜಾತೆಯನ್ನು ಪತಿನಯಾಗಿಯೂ ಕೊಟ್ಟರು.
ತಸ್ಯಾಂ ಗರ್ಭಃ ಸಮಭವದಗ್ನಿಕಲ್ಪಃ
ಸೋಽಧೀಯಾನಂ ಪಿತರಮಥಾಭ್ಯುವಾಚ |
ಸರ್ವಾ ರಾತ್ರೀರಧ್ಯಯನಂ ಕರೋಷಿ
ನೇದಂ ಪಿತಃ ಸಮ್ಯಗಿತೀವ ವರ್ತತೇ ॥8॥
ಕಹೋಳರಿಗೆ ಅವಳಲ್ಲಿ ಅಗ್ನಿಸಮವಾದ ಒಂದು ಗರ್ಭವುಂಟಾಯಿತು. ಆ ಗರ್ಭದಲ್ಲಿದ್ದ ಶಿಶುವು ಯಾವಾಗಲೂ ಅಧ್ಯಯನ ಮಾಡುವ ತಂದೆಯನ್ನು ಕುರಿತು- `ತಂದೆಯೇ, ರಾತ್ರಿಯೆಲ್ಲಾ ಅಧ್ಯಯನವನ್ನು ಮಾಡುತ್ತಿದ್ದೀಯೆ. ಇದು ಸರಿಯಲ್ಲ' ಎಂದು ಹೇಳಿತು.
ಉಪಾಲಬ್ಧಃ ಶಿಷ್ಯಮಧ್ಯೇ ಮಹರ್ಷಿಃ
ಸ ತಂ ಕೋಪಾದುದರಸ್ಥಂ ಶಶಾಪ |
ಯಸ್ಮಾತ್ ಕುಕ್ಷೌ ವರ್ತಮಾನೋ ಬ್ರವೀಷಿ
ತಸ್ಮಾದ್ವಕ್ರೋ ಭವಿತಾಸ್ಯಷ್ಟಧಾ ತ್ವಮ್ ॥9॥
ಶಿಷ್ಯರ ಮಧ್ಯದಲ್ಲಿ ಹೀಗೆ ನಿಂದಿಸಲ್ಪಟ್ಟ ಮಹರ್ಷಿಗಳಾದ ಕಹೋಳರು ಕೋಪದಿಂದ ಉದರಸ್ಥಿತವಾದ ಆ ಶಿಶುವಿಗೆ ತಾಯಿಯ ಉದರದಲ್ಲಿದ್ದುಕೊಂಡೇ ಹೀಗೆ ಮಾತನಾಡುವುದರಿಂದ ನೀನು ಎಂಟು ರೀತಿಯಲ್ಲಿ ವಕ್ರನಾಗು ಎಂದು ಶಾಪವನ್ನು ಕೊಟ್ಟರು.
ಸ ವೈ ತಥಾ ವಕ್ರ ಏವೋಪಜಾತಃ
ತ್ವಷ್ಟಾವಕ್ರಃ ಪ್ರಥಿತೋ ಮಾನವೇಷು |
ತಸ್ಯಾಸೀದ್ ವೈಮಾತುಲಃ ಶ್ವೇತಕೇತುಃ
ಸ ತೇನ ತುಲ್ಯೋ ವಯಸಾ ಬಭೂವ ॥10॥
ಆ ಶಿಶುವು ಹಾಗೆಯೇ ವಕ್ರವಾಗಿಯೇ ಜನಿಸಿ ಮನುಷ್ಯರಲ್ಲಿ ಅಷ್ಟಾವಕ್ರನೆಂದು ಪ್ರಸಿದ್ಧವಾಯಿತು. ಶ್ವೇತಕೇತುವು ಅವನ ಸೋದರಮಾವನಾಗಿದ್ದನು. ಅವರಿಬ್ಬರೂ ವಯಸ್ಸಿನಲ್ಲಿ ಸಮಾನರಾಗಿದ್ದರು.
ಸಂಪೀಡ್ಯಮಾನಾ ತು ತದಾ ಸುಜಾತಾ
ವಿವರ್ಧಮಾನೇನ ಸುತೇನ ಕುಕ್ಷೌ |
ಉವಾಚ ಭರ್ತಾರಮಿದಂ ರಹೋ ವಚಃ
ಪ್ರಸಾದ್ಯ ಹೀನಾ ವಸುನಾ ಧನಾರ್ಥಿನೀ ॥11॥
ಕಥಂ ಕರಿಷ್ಯಾಮ್ಯಧುನಾ ಮಹರ್ಷೇ
ಮಾಸಶ್ಚಾಯಂ ದಶಮೋ ವರ್ತತೇ ಮೇ |
ನ ಚಾಸ್ತಿ ಮೇ ವಸು ಕಿಂಚಿತ್ ಪ್ರದಾತಾ
ಯೇನಾಹಮೇತಾಮಾಪದಂ ನಿಸ್ತರೇಯಮ್ ॥12॥
ಉದರದಲ್ಲಿ ಬೆಳೆಯುತ್ತಿದ್ದ ಗರ್ಭದಿಂದ ಪೀಡಿತಳಾದ ಸುಜಾತೆಯು ಆಗ ಧನಹೀನಳಾಗಿ ಧನವನ್ನು ಬಯಸಿ ಏಕಾಂತದಲ್ಲಿ ಪತಿಯನ್ನು ಕುರಿತು `ಮಹರ್ಷಿಗಳೇ, ಈ ಕಾರ್ಯವನ್ನು ನಾನು ಹೇಗೆ ಮಾಡುವೆನು? ಇದು ನನಗೆ ಹತ್ತನೆಯ ತಿಂಗಳು. ನನ್ನ ಬಳಿ ಧನವಿಲ್ಲ. ನನಗೆ ಧನವನ್ನು ಕೊಡುವವರೂ ಯಾರೂ ಇಲ್ಲ. ಈ ಆಪತ್ತನ್ನು ನಾನು ಹೇಗೆ ದಾಟುವೆನು?' ಎಂದು ಹೇಳಿದಳು.
ಉಕ್ತಸ್ತ್ವೇವಂ ಭಾರ್ಯಯಾ ವೈ ಕಹೋಳೋ
ವಿತ್ತಸ್ಯಾರ್ಥೇ ಜನಕಮಥಾಭ್ಯಧಾವತ್ |
ಸ ವೈ ತದಾ ವೇದವಿದಾ ನಿಗೃಹ್ಯ
ನಿಮಜ್ಜಿತೋ ವಂದಿನಾ ಹ್ಯಪ್ಸು ವಿಪ್ರಃ ॥13॥
ಪತ್ನಿಯಿಂದ ಹೀಗೆ ಹೇಳಲ್ಪಟ್ಟ ಕಹೋಳರು ಧನದ ಸಲುವಾಗಿ ಜನಕನ ಬಳಿಗೆ ಶೀಘ್ರವಾಗಿ ಹೋದರು. ಅವರು ಆಗ ವೇದಜ್ಞನಾದ ಜನಕನ ವಂದಿಯಿಂದ ವಾದದಲ್ಲಿ ನಿಗ್ರಹಿಸಲ್ಪಟ್ಟು ನೀರಿನಲ್ಲಿ ಮುಳುಗಿಸಲ್ಪಟ್ಟರು.
ಉದ್ದಾಲಕಸ್ತಂ ತು ತದಾ ನಿಶಮ್ಯ
ಸೂತೇನ ವಾದೇಽಪ್ಸು ತಂ ವೈ ನಿಮಜ್ಜಿತಂ |
ಉವಾಚ ತಾಂ ತತ್ರ ತತಃ ಸುಜಾತಾಮ್
ಅಷ್ಟಾವಕ್ರಂ ಗೂಹಿತವ್ಯೋಽಯಮರ್ಥಃ ॥14॥
ಉದ್ದಾಲಕರು ಜನಕನ ಸೂತನಿಂದ ವಾದದಲ್ಲಿ ಕಹೋಳರು ಮುಳುಗಿಸಲ್ಪಟ್ಟಿದ್ದನ್ನು ಕೇಳಿ ಆ ಸುಜಾತೆಯನ್ನು ಕುರಿತು ಈ ವಿಷಯವು ಅಷ್ಟಾವಕ್ರನಿಗೆ ತಿಳಿಯದಂತೆ ಮರೆಮಾಚಬೇಕು ಎಂದು ಹೇಳಿದರು.
ರರಕ್ಷ ಮಾತಾಽಪ್ಯನಿಶಂ ಸ್ಮ ಮಂತ್ರಂ
ಜಾತೋಽಪ್ಯೇವಂ ನ ಸ ಶುಶ್ರಾವ ವಿಪ್ರಃ |

ಉದ್ದಾಲಕಂ ಪಿತರಂ ಸೋಽಭಿಮೇನೇ
ತಥಾಽಷ್ಟಾವಕ್ರೋ ಭ್ರಾತರಂ ಶ್ವೇತಕೇತುಮ್ ॥15॥
ತಾಯಿಯು ಈ ರಹಸ್ಯವನ್ನು ಯಾವಾಗಲೂ ರಕ್ಷಿಸಿದಳು. ಅಷ್ಟಾವಕ್ರರು ಜನಿಸಿದರೂ ಅವರಿಗೆ ಈ ವಿಷಯವು ತಿಳಿಯಲಿಲ್ಲ. ಅವರು ಉದ್ದಾಲಕರನ್ನು ತಂದೆ ಎಂದೂ, ಶ್ವೇತಕೇತುವನ್ನು ಅಣ್ಣನೆಂದೂ ತಿಳಿದರು.
ತತೋ ವರ್ಷೇ ದ್ವಾದಶೇ ಶ್ವೇತಕೇತುಃ
ಅಷ್ಟಾವಕ್ರಂ ಪಿತುರಂಕೇ ನಿಷಣ್ಣಮ್ |
ಅಪಾಕರ್ಷದ್ ಗೃಹ್ಯ ಪಾಣೌ ರುದಂತಂ
ನಾಯಂ ತವಾಂಕಃ ಪಿತುರಿತ್ಯುಕ್ತವಾಂಶ್ಚ ॥16॥
ಅನಂತರ ಹನ್ನೆರಡನೆಯ ವರ್ಷದಲ್ಲಿ ಶ್ವೇತಕೇತುವು ತನ್ನ ತಂದೆಯ ತೊಡೆಯ ಮೇಲೆ ಕುಳಿತಿದ್ದ ಅಷ್ಟಾವಕ್ರನನ್ನು ಅವನು ಅಳುತ್ತಿದ್ದರೂ ಕೈಯಿಂದ ಹಿಡಿದು ಎಳೆದು ಇದು ನಿನ್ನ ತಂದೆಯ ತೊಡೆಯಲ್ಲ ಎಂದು ಹೇಳಿದನು.
ತತ್ತೇನೋಕ್ತಂ ರುದಿತಃ ಸೋಽಭಿವೀಕ್ಷ್ಯ
ಹೃದಿ ಸ್ಥಿತಂ ಶಲ್ಯಮಿವಾತಿದುಃಖಾತ್ |
ಗತ್ವಾ ಗೃಹಂ ರೋದಮಾನೋ ಜನಿತ್ರೀಂ
ಪಪ್ರಚ್ಛೈನಾಂ ಕ್ವ ನು ತಾತೋ ಮಮೇತಿ ॥17॥
ಅಳುತ್ತಿದ್ದ ಅಷ್ಟಾವಕ್ರರು ಶ್ವೇತಕೇತುವು ಹೇಳಿದ ಮಾತುಗಳನ್ನು ಗಮನಿಸಿ ಹೃದಯದಲ್ಲಿ ಶಲ್ಯವು ನಾಟಿದಷ್ಟು ದುಃಖದಿಂದ ಮನೆಗೆ ಹೋಗಿ ಅಳುತ್ತಾ ತಾಯಿಯನ್ನು ಕುರಿತು ಅವಳನ್ನು ನನ್ನ ತಂದೆ ಎಲ್ಲಿ ಎಂದು ಕೇಳಿದರು.
ತತಃ ಸುಜಾತಾ ಪರಮಾರ್ತರೂಪಾ
ಶಾಪಾದ್ ಭೀತಾ ತತ್ತ್ವಮಸ್ಯಾಚಚಕ್ಷೇ |
ತದ್ವೈ ತತ್ತ್ವಂ ಸರ್ವಮಾಜ್ಞಾಯ ರಾತ್ರಾ-
ವಿತ್ಯಬ್ರುವೀಚ್ಛ್ವೇತಕೇತುಂ ಸ ವಿಪ್ರಃ ॥18॥
ಗಚ್ಛಾವ ಯಜ್ಞಂ ಜನಕಸ್ಯ ರಾಜ್ಞೋ
ಬಹ್ವಾಶ್ಚರ್ಯಃ ಶ್ರೂಯತೇ ಯಸ್ಯ ಯಜ್ಞೇ |
ಶ್ರೋಷ್ಯಾವೋಽತ್ರ ಬ್ರಾಹ್ಮಣಾನಾಂ ವಿವಾದಮ್
ಅನ್ನಂ ಚಾಗ್ರ್ಯಂ ತತ್ರ ಭೋಕ್ಷ್ಯಾವಹೇ ಚ ॥19॥
ವಿಚಕ್ಷಣತ್ವಂ ಚ ಭವಿಷ್ಯತೇ ನೌ
ಶಿವಶ್ಚ ಸೌಮ್ಯಶ್ಚ ಹಿ ಬ್ರಹ್ಮಘೋಷಃ ॥20॥
ಆಗ ಸುಜಾತೆಯು ಬಹಳ ದುಃಖವನ್ನು ಹೊಂದಿದವಳಾಗಿ ಶಾಪಕ್ಕೂ ಹೆದರಿ ಅವರಿಗೆ ತತ್ತ್ವವನ್ನು ತಿಳಿಸಿದಳು. ಆ ತತ್ತ್ವವನ್ನೆಲ್ಲಾ ತಿಳಿದ ಅಷ್ಟಾವಕ್ರರು ರಾತ್ರಿಯಲ್ಲಿ ಶ್ವೇತಕೇತುವನ್ನು ಕುರಿತು ನಾವು ಜನಕರಾಜನ ಯಜ್ಞಕ್ಕೆ ಹೋಗೋಣ. ಯಜ್ಞದಲ್ಲಿ ಬಹಳ ಆಶ್ಚರ್ಯವಿದೆ ಎಂದು ಕೇಳಿಬರುತ್ತಿದೆ. ಅಲ್ಲಿ ಬ್ರಾಹ್ಮಣರ ವಿವಾದವನ್ನು ಕೇಳೋಣ. ಶ್ರೇಷ್ಠವಾದ ಅನ್ನವನ್ನೂ ಭಕ್ಷಿಸೋಣ. ಅಲ್ಲಿ ನಮ್ಮಿಬ್ಬರಿಗೂ ವಿಚಕ್ಷಣರೆಂಬ ಕೀರ್ತಿಯು ಬರುತ್ತದೆ. ಮಂಗಳವೂ ಸೌಮ್ಯವೂ ಆದ ವೇದಘೋಷವನ್ನೂ ಕೇಳಬಹುದು ಎಂದು ಹೇಳಿದರು.
ಲೋಮಶಃ
ತೌ ಜಗ್ಮತುರ್ಮಾತುಲಭಾಗಿನೇಯೌ
ಯಜ್ಞಂ ಸಮೃದ್ಧಂ ಜನಕಸ್ಯ ರಾಜ್ಞಃ |
ಅಷ್ಟಾವಕ್ರಃ ಪಥಿ ರಾಜ್ಞಾ ಸಮೇತ್ಯ
ಪ್ರೋತ್ಸಾರ್ಯಮಾಣೋ ವಾಕ್ಯಮಿದಂ ಜಗಾದ ॥21॥
ಲೋಮಶರು ಆ ಮಾತುಲ ಭಾಗಿನಿಯರು ಜನಕರಾಜನ ಸಮೃದ್ಧವಾದ ಯಜ್ಞವನ್ನು ಕುರಿತು ಹೊರಟರು. ಮಾರ್ಗದಲ್ಲಿ ಅಷ್ಟಾವಕ್ರರು ಒಬ್ಬ ರಾಜನನ್ನು ಸಂಧಿಸಿ ಅವನಿಂದ ದೂರಸರಿಸಲ್ಪಡುವವರಾಗಿ ಈ ಮಾತನ್ನು ಆಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟವಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಚತುರಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
*****
ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ
ಅಷ್ಟಾವಕ್ರ ಮತ್ತು ದ್ವಾರಪಾಲರ ಸಂವಾದ. ಅಷ್ಟಾವಕ್ರರಿಗೆ
ರಾಜಸಭೆಯನ್ನು ಪ್ರವೇಶಿಸಲು ಅನುಮತಿ.
ಅಷ್ಟಾವಕ್ರಃ
ಅಂಧಸ್ಯ ಪಂಥಾ ಬಧಿರಸ್ಯ ಪಂಥಾಃ
ಸ್ತ್ರಿಯಃ ಪಂಥಾ ಭಾರವಹಸ್ಯ ಪಂಥಾಃ |
ರಾಜ್ಞಃ ಪಂಥಾ ಬ್ರಾಹ್ಮಣೇನಾಸಮೇತ್ಯ

ಸಮೇತ್ಯ ತು ಬ್ರಾಹ್ಮಣಸ್ಯೈವ ಪಂಥಾಃ ॥1॥
ಅಷ್ಟಾವಕ್ರ ಕುರುಡನದೇ ಮಾರ್ಗ, ವನಿತೆಯದೇ ಮಾರ್ಗ, ಭಾರವನ್ನು ಹೊತ್ತವನದೇ ಮಾರ್ಗ, ಬ್ರಾಹ್ಮಣನನ್ನು ಸಂಧಿಸದಿದ್ದರೆ ರಾಜನದೇ ಮಾರ್ಗ. ಆದರೆ ಬ್ರಾಹ್ಮಣನನ್ನು ಸಂಧಿಸಿದರೆ ಬ್ರಾಹ್ಮಣನದೇ ಮಾರ್ಗ.
ರಾಜಾ
ಪಂಥಾ ಅಯಂ ತೇಽದ್ಯ ಮಯಾ ವಿಸೃಷ್ಟೋ
ಯೇನೇಚ್ಛಸೇ ತೇನ ಕಾಮಂ ವ್ರಜಸ್ವ |
ನ ಪಾವಕೋ ವಿದ್ಯತೇ ವೈ ಲಘೀಯಾನ್
ಇಂದ್ರೋಽಪಿ ನಿತ್ಯಂ ನಮತೇ ಬ್ರಾಹ್ಮಣಾನಾಮ್ ॥2॥
ರಾಜಾ ನಾನು ನಿನಗೆ ಮಾರ್ಗವನ್ನು ಬಿಟ್ಟಿದ್ದೇನೆ. ನಿನಗೆ ಇಷ್ಟವಾದ ಮಾರ್ಗದಿಂದ ಹೋಗು. ಅಗ್ನಿಯು ಅಲ್ಪವಾದುದು ಎಂಬುದಿಲ್ಲ. ಇಂದ್ರನೂ ಸಹ ನಿತ್ಯವೂ ಬ್ರಾಹ್ಮಣರಿಗೆ ನಮಸ್ಕರಿಸುತ್ತಾನೆ.
ಲೋಮಶಃ
ಸ ಏವಮುಕ್ತೋ ಮಾತುಲೇನೈನ ಸಾರ್ಧಂ
ಯಥೇಷ್ಟಮಾರ್ಗೋ ಯಜ್ಞನಿವೇಶನಂ ತತ್ |
ಸಂಪ್ರಾಪ್ಯ ಧರ್ಮೇಣ ನಿವಾರಿತಃ ಸನ್
ದ್ವಾರಿ ದ್ವಾಃಸ್ಥಂ ವಾಕ್ಯಮಿದಂ ಬಭಾಷೇ ॥3॥
ಲೋಮಶರು ಹೀಗೆ ಹೇಳಲ್ಪಟ್ಟ ಅಷ್ಟಾವಕ್ರರು ತಮ್ಮ ಸೋದರಮಾವನ ಜೊತೆಯಲ್ಲಿ ತಮಗೆ ಧರ್ಮದಿಂದಲೇ ಇಷ್ಟವಾದ ಮಾರ್ಗದಿಂದ ಯಜ್ಞಶಾಲೆಯನ್ನು ತಲುಪಿ ದ್ವಾರಪಾಲಕನಿಂದ ತಡೆಯಲ್ಪಟ್ಟು ಈ ಮಾತನ್ನು ಆಡಿದರು.
ಅಷ್ಟಾವಕ್ರಃ
ಯಜ್ಞಂ ದ್ರಷ್ಟುಂ ಪ್ರಾಪ್ತವಂತೌ ಸ್ಮ ತಾತ
ಕೌತೂಹಲಂ ಬಲವದ್ವೈ ವಿವೃದ್ಧಮ್ |
ಆವಾಂ ಪ್ರಾಪ್ತಾವತಿಥೀ ಸಂಪ್ರವೇಶಂ
ಕಾಂಕ್ಷಾವಹೇ ದ್ವಾರಪತೇ ತವಾಜ್ಞಾಮ್ ॥4॥
ಅಷ್ಟಾವಕ್ರ ಎಲೈ ಪ್ರೀತಿಪಾತ್ರನೇ, ನಾವಿಬ್ಬರೂ ಯಜ್ಞವನ್ನು ನೋಡಲು ಬಂದಿದ್ದೇವೆ. ನಮಗೆ ಯಜ್ಞವನ್ನು ನೋಡುವ ಕುತೂಹಲವು ದೊಡ್ಡದಾಗಿ ಬೆಳೆದಿದೆ. ನಾವಿಬ್ಬರೂ ಅತಿಥಿಗಳಾಗಿ ಬಂದಿದ್ದೇವೆ. ಎಲೈ ದ್ವಾರಪಾಲಕನೇ, ಸಭೆಯನ್ನು ಪ್ರವೇಶಿಸಲು ನಿನ್ನ ಆಜ್ಞೆಯನ್ನು ಬಯಸುತ್ತಿದ್ದೇವೆ.
ಐಂದ್ರದ್ಯುಮ್ನೇರ್ಯಜ್ಞದೃಶಾವಿಹಾವಾಂ
ವಿವಕ್ಷೂ ವೈ ಜನಕೇಂದ್ರಂ ದಿದೃಕ್ಷೂ |
ನ ವೈ ಕ್ರೋಧಾದ್ ವ್ಯಾಧಿನಾ ವೋತ್ತಮೇನ
ಸಂಯೋಜಯಾವಾಂ ದ್ವಾರಪಾಲ ಕ್ಷಣೇನ ॥5॥
ಇಂದ್ರದ್ಯುಮ್ನನ ಮಗನಾದ ಜನಕನ ಯಜ್ಞಶಾಲೆಯನ್ನು ಪ್ರವೇಶಿಸಿ ಜನಕರಾಜನನ್ನು ನೋಡಿ ಅವನ ಜೊತೆಯಲ್ಲಿ ಮಾತನಾಡುವ ಇಚ್ಛೆಯನ್ನು ಹೊಂದಿದ್ದೇವೆ. ಎಲೈ ದ್ವಾರಪಾಲಕನೇ, ನೀನು ನಮಗೆ ಕ್ರೋಧವನ್ನಾಗಲೀ ಅಥವಾ ಮನಸ್ತಾಪವನ್ನಾಗಲೀ ಶೀಘ್ರವಾಗಿ ಉಂಟುಮಾಡಬೇಡ.
ದ್ವಾರಪಾಲಃ
ವಂದೇಃ ಸಮಾದೇಶಕರಾ ವಯಂ ಸ್ಮ
ನಿಬೋಧ ಮದ್ವಾಕ್ಯಮಥೋಽಧಿಗಮ್ಯ |
ನ ವೈ ಬಾಲಾಃ ಪ್ರವಿಶಂತ್ಯತ್ರ ವೃದ್ಧಾ
ವಿಪ್ರಾ ಹ್ಯತ್ರ ಪ್ರವಿಶಂತಿ ದ್ವಿಜಾಗ್ರ್ಯಾಃ ॥6॥
ದ್ವಾರಪಾಲಕ ನಾವು ವಂದಿಯ ಆಜ್ಞಾಧಾರಕರು. ನನ್ನ ಮಾತನ್ನು ಕೇಳಿ ತಿಳಿ. ಈ ಸಭೆಯಲ್ಲಿ ಬಾಲಕರು ಪ್ರವೇಶಿಸುವುದಿಲ್ಲ. ವೃದ್ಧರಾದ ಬ್ರಾಹ್ಮಣಶ್ರೇಷ್ಠರಷ್ಟೇ ಇಲ್ಲಿ ಪ್ರವೇಶಿಸುತ್ತಾರೆ.
ಅಷ್ಟಾವಕ್ರಃ
ಯದ್ಯತ್ರ ವೃದ್ಧೇಷು ಕೃತಃ ಪ್ರವೇಶೋ
ಯುಕ್ತಂ ಮಯಾ ದ್ವಾರಪಾಲ ಪ್ರವೇಷ್ಟುಮ್ |
ವಯಂ ಹಿ ವೃದ್ಧಾಶ್ಚರಿತವ್ರತಾಶ್ಚ
ತಪಃಪ್ರಭಾವೇನ ನಿವೇಶನಾರ್ಹಾಃ ॥7॥
ಅಷ್ಟಾವಕ್ರ ದ್ವಾರಪಾಲಕನೇ, ಇಲ್ಲಿ ವೃದ್ಧರಿಗೇ ಪ್ರವೇಶವಿರುವುದಾದರೆ ನಾನು ಪ್ರವೇಶಿಸಲು ಯೋಗ್ಯನಾಗಿದ್ದೇನೆ. ನಾವು ನಮ್ಮ ತಪಸ್ಸಿನ ಪ್ರಭಾವದಿಂದ ವೃದ್ಧರೂ ಮತ್ತು ವ್ರತನಿಷ್ಠರೂ ಆಗಿದ್ದೇವೆ. ಆದ್ದರಿಂದ ಪ್ರವೇಶಕ್ಕೆ ಅರ್ಹರಾಗಿದ್ದೇವೆ.
ಶುಶ್ರೂಷವಶ್ಚಾತಿಜಿತೇಂದಿಯಾಶ್ಚ
ಜ್ಞಾನಾಗಮೇ ಚೈವ ಪರಂ ನಿವಿಷ್ಟಾಃ |
ನ ಬಾಲ ಇತ್ಯವಮಂತವ್ಯಮಾಹುಃ
ಬಾಲೋಽಪ್ಯಗ್ನಿರ್ದಹತೇ ಸ್ಪೃಶ್ಯಮಾನಃ ॥8॥

ನಾವು ಶಾಸ್ತ್ರಶ್ರವಣವನ್ನು ಮಾಡಿದವರು ಮತ್ತು ಜಿತೇಂದ್ರಿಯರಾದವರು ಮತ್ತು ಜ್ಞಾನಸಂಪಾದನೆಯಲ್ಲಿಯೇ ಬಹಳ ಪ್ರಯತ್ನವುಳ್ಳವರು. ಬಾಲಕರು ಎಂದು ಯಾರನ್ನೂ ತಿರಸ್ಕರಿಸಬಾರದು. ಅಗ್ನಿಯು ಸಣ್ಣದಾಗಿದ್ದರೂ ಮುಟ್ಟಿದರೆ ಸುಡುತ್ತದೆ.
ದ್ವಾರಪಾಲಃ
ಸರಸ್ವತೀಮೀರಯ ವೇದಜುಷ್ಟಾಮ್
ಏಕಾಕ್ಷರಾಂ ಬ್ರಹ್ಮರೂಪಾಂ ವಿರಾಜಾಮ್ |
ಅಂಗಾತ್ಮಾನಂ ಸಮವೇಕ್ಷಸ್ವ ಬಾಲಂ
ಕಿಂ ಶ್ಲಾಘಸೇ ದುರ್ಲಭಾ ವಾದಸಿದ್ಧಿಃ ॥9॥
ದ್ವಾರಪಾಲಕ ವೇದಗಳಲ್ಲಿರುವ ಬ್ರಹ್ಮಪ್ರತಿಪಾತ್ರವಾದ ಚೆನ್ನಾಗಿ ಪ್ರಕಾಶಿಸುವ ಏಕಾಕ್ಷರವಾದ ಓಂಕಾರವನ್ನು ಉಚ್ಚಾರಮಾಡು. ಪ್ರೀತಿಪಾತ್ರನೇ, ನೀನು ಬಾಲಕನೆಂದು ಗಮನಿಸು. ಏತಕ್ಕೆ ನಿನ್ನನ್ನು ಹೊಗಳಿಕೊಳ್ಳುತ್ತಿದ್ದೀಯೆ? ವಾದಸಿದ್ಧಿಯು ದುರ್ಲಭವಾದುದು.
ಅಷ್ಟಾವಕ್ರಃ
ನ ಜ್ಞಾಯತೇ ಕಾಯವೃದ್ಧ್ಯಾ ವಿವೃದ್ಧಿಃ
ಯಥಾಽಷ್ಠೀಲಾ ಶಾಲ್ಮಲೀ ಸಂಪ್ರವೃದ್ಧಾ |
ಹ್ರಸ್ವೋಽಲ್ಪಕಾಃ ಫಲತೇ ಸ್ಮ ವೃದ್ಧೋ
ಯಶ್ಚಾಫಲಸ್ತಸ್ಯ ನೋ ವೃದ್ಧಭಾವಃ ॥10॥
ಅಷ್ಟಾವಕ್ರ ದೇಹದ ವೃದ್ಧಿಯಿಂದ ಮನುಷ್ಯನ ವೃದ್ಧಿಯು ತಿಳಿಯುವುದಿಲ್ಲ. ಮುಳ್ಳುಗಳಿರುವ ಶಾಲ್ಮಲೀ ವೃಕ್ಷವು ದೊಡ್ಡದಾಗಿಯೇ ಇರುತ್ತದೆ (ಆದರೆ ಫಲವನ್ನು ಕೊಡುವುದಿಲ್ಲ). ಇನ್ನೊಂದು ವೃಕ್ಷವು ಚಿಕ್ಕದಾಗಿದ್ದರೂ ಫಲವನ್ನು ಕೊಡುತ್ತದೆ. ಫಲವನ್ನು ಕೊಡದಿದ್ದ ವೃದ್ಧನಿಗೆ ವೃದ್ಧತ್ವವು ಇರುವುದಿಲ್ಲ.
ದ್ವಾರಪಾಲಃ
ವೃದ್ಧೇಭ್ಯ ಏವೇಹ ಮತಿಂ ಸ್ಮ ಬಾಲಾ
ಗೃಹ್ಣಂತಿ ಕಾಲೇನ ಭವಂತಿ ವೃದ್ಧಾಃ |
ನ ಹಿ ತೇ ಜ್ಞಾತುಮಲ್ಪಕಾಲೇನ ಶಕ್ಯಂ
ಕಸ್ಮಾದ್ ಬಾಲ ಪ್ರಾಜ್ಞ ಇವಾವಭಾಷಸೇ ॥11॥
ದ್ವಾರಪಾಲಕ ಬಾಲಕರು ವೃದ್ಧರಿಂದಲೇ ಜ್ಞಾನವನ್ನು ಪಡೆದು ಕಾಲಕ್ರಮದಲ್ಲಿ ತಾವೂ ವೃದ್ಧರಾಗುತ್ತಾರೆ. ಅಲ್ಪಕಾಲದಲ್ಲಿ ಅಷ್ಟು ಜ್ಞಾನವನ್ನು ಸಂಪಾದಿಸುವುದು ಸಾಧ್ಯವಿಲ್ಲ. ಎಲೈ ಬಾಲಕನೇ, ಏಕೆ ಪ್ರಾಜ್ಞನಂತೆ ಮಾತನಾಡುತ್ತಿದ್ದೀಯೆ?
ಅಷ್ಟಾವಕ್ರಃ
ನ ತೇನ ಸ್ಥವಿರೋ ಭವತಿ ಯೇನಾಸ್ಯ ಪಲಿತಂ ಶಿರಃ |
ಬಾಲೋಽಪಿ ಯಃ ಪ್ರಜಾನಾತಿ ತಂ ದೇವಾಃ ಸ್ಥವಿರಂ ವಿದುಃ ॥12॥
ಅಷ್ಟಾವಕ್ರ ತಲೆಯು ನೆರೆಯುವುದರಿಂದ ವೃದ್ಧರಾಗುವುದಿಲ್ಲ. ಬಾಲಕನಾದರೂ ಯಾವನಿಗೆ ಜ್ಞಾನವಿದೆಯೋ ಅವನನ್ನು ದೇವತೆಗಳು ವೃದ್ಧನೆಂದು ತಿಳಿಯುತ್ತಾರೆ.
ನ ಹಾಯನೈರ್ನ ಪಲಿತೈರ್ನ ವಿತ್ತೈರ್ನ ಚ ಬಂಧುಭಿಃ |
ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥
ಋಷಿಗಳು ಸನಾತನವಾದ ಮಹಾಧರ್ಮವನ್ನು ಸಂವತ್ಸರಗಳಿಂದಾಗಲೀ ಅಥವಾ ದೇಹದ ನೆರೆಯಿಂದಾಗಲೀ, ಧನದಿಂದಾಗಲೀ ಅಥವಾ ಬಂಧುಗಳಿಂದಾಗಲೀ ಅನುಷ್ಠಾನ ಮಾಡಲಿಲ್ಲ.
ದಿದೃಕ್ಷುರಸ್ಮಿ ಸಂಪ್ರಾಪ್ತೋ ವಂದಿನಂ ರಾಜಸಂಸದಿ |
ನಿವೇದಯಸ್ವ ಮಾಂ ರಾಜ್ಞೇ ದ್ವಾಃಸ್ಥ ಪುಷ್ಕರಮಾಲಿನೇ ॥14॥
ನಾನು ರಾಜಸಭೆಯಲ್ಲಿ ವಂದಿಯನ್ನು ನೋಡಲು ಬಂದಿದ್ದೇನೆ. ಎಲೈ ದ್ವಾರಪಾಲಕನೇ, ಪುಷ್ಕರಮಾಲೆಯನ್ನು ಧರಿಸಿದ ರಾಜನಿಗೆ ನಾನು ಬಂದಿದ್ದೇನೆ ಎಂದು ನಿವೇದಿಸು.
ಶ್ವೇತಕೇತುಃ
ದೃಷ್ಟಾಸಿ ತೇ ದ್ವಾರಪಾಲ ಪ್ರವೇಶ್ಯ
ಮನೀಷಿಭಿಃ ಸಹ ವಾದೇ ಪ್ರವೃದ್ಧೇ |
ಉತಾಹೋ ವಾಽಪ್ಯುಚ್ಚತಾಂ ನೀಚತಾಂ ವಾ
ತೂಷ್ಣೀಂಭೂತೇಷ್ವೇಷು ಸರ್ವೇಷ್ವಥಾದ್ಯ ॥15॥
ಶ್ವೇತಕೇತು ಎಲೈ ದ್ವಾರಪಾಲಕನೇ, ನಮಗೆ ಪ್ರವೇಶವನ್ನು ನೀಡಿ ಮೇಧಾವಿಗಳ ಜೊತೆಯಲ್ಲಿ ವಾದವು ಬೆಳೆದು ಎಲ್ಲರೂ ಮೌನವಾಗಿ ಕುಳಿತಾಗ ನಾವು ಉಚ್ಚರೋ ಅಥವಾ ನೀಚರೋ ಎಂದು ನೀನೇ ನೋಡುವಿ.
ದ್ವಾರಪಾಲಃ
ಕಥಂ ಯಜ್ಞಂ ದಶವರ್ಷೋ ವಿಶೇಸ್ತ್ವಂ
ವಿನೀತಾನಾಂ ವಿದುಷಾಂ ಸಂಪ್ರವೇಶಮ್ |
ಉಪಾಯತಃ ಪ್ರಯತಿಷ್ಯೇ ತವಾಹಂ
ಪ್ರವೇಶನೇ ಕುರು ಯತ್ನಂ ಯಥಾವತ್ ॥16॥
ದ್ವಾರಪಾಲಕ ಅನೇಕ ಶಾಸ್ತ್ರಗಳನ್ನು ಬಲ್ಲ ವಿದ್ವಾಂಸರು ಪ್ರವೇಶಮಾಡುವ ಯಜ್ಞಶಾಲೆಯನ್ನು ಹತ್ತುತವರ್ಷದ ಬಾಲಕನಾದ ನೀನು

ಹೇಗೆ ಪ್ರವೇಶಮಾಡುತ್ತೀಯೆ? ನಾನು ಉಪಾಯದಿಂದ ನಿನ್ನ ಪ್ರವೇಶದಲ್ಲಿ ಪ್ರಯತ್ನವನ್ನು ಮಾಡುವೆನು. ನೀನು ನಿನ್ನ ಪ್ರಯತ್ನವನ್ನು ಮಾಡು.
ಏಷ ರಾಜಾ ಸಂಶ್ರವಣೇ ಸ್ಥಿತಃ ಸ್ಯಾತ್
ಶ್ರೋಷ್ಯತ್ಯೇವಂ ವಚಸಾ ಸಂಸ್ಕೃತೇನ |
ಸ ಚಾನುಜ್ಞಾಂ ದಾಸ್ಯತಿ ಪ್ರೀತಿಯುಕ್ತಃ
ಪ್ರವೇಶನೇ ಯಚ್ಚ ಕಿಂಚಿತ್ತವೇಷ್ಟಮ್ ॥17॥
ಈಗ ರಾಜನು ಪ್ರಜೆಗಳ ಅಥವಾ ಅತಿಥಿಗಳ ಮಾತನ್ನು ಕೇಳುವ ಸಮಯದಲ್ಲಿದ್ದಾನೆ. ಆದ್ದರಿಂದ ನಿನ್ನ ಸಂಸ್ಕೃತವಾದ ಮಾತನ್ನು ಅವನು ಕೇಳುವನು. ಅವನು ಸಂತೋಷಗೊಂಡು ನಿನಗೆ ಸಭೆಯನ್ನು ಪ್ರವೇಶಿಸುವುದಕ್ಕೆ ಅನುಮತಿಯನ್ನೂ ಮತ್ತು ನಿನಗೆ ಇಷ್ಟವಾದುದನ್ನೂ ಕೊಡುವನು.
ಅಷ್ಟಾವಕ್ರಃ
ಭೋ ಭೋ ರಾಜನ್ ಜನಕಾನಾಂ ವರಿಷ್ಠ
ತ್ವಂ ವೈ ಸಮ್ರಾಟ್ ತ್ವಯಿ ಸರ್ವಂ ಸಮೃದ್ಧಮ್ |
ತ್ವಂ ಹಿ ಕರ್ತಾ ಕರ್ಮಣಾಂ ಯಾಜ್ಞಿಯಾನಾಂ
ಯಯಾತಿರೇಕೋ ನೃಪತಿರ್ವಾ ಪುರಸ್ತಾತ್ ॥18॥
ಅಷ್ಟಾವಕ್ರ ಎಲೈ ಜನಕರಲ್ಲಿ ಶ್ರೇಷ್ಠನಾದ ರಾಜನೇ, ನೀನು ಸಮ್ರಾಜನಾದವನು. ನಿನ್ನಲ್ಲಿ ಎಲ್ಲವೂ ಸಮೃದ್ಧವಾಗಿದೆ. ಹಿಂದೆ ಯಯಾತಿರಾಜನು ಮಾಡಿದಂತೆ ಯಜ್ಞ ಕರ್ಮಗಳನ್ನು ಮಾಡುವುದರಲ್ಲಿ ನೀನೇ ಸಮರ್ಥನಾದವನು.
ವಿದ್ವಾನ್ ವಂದೀ ವಾದವಿದೋ ನಿಗೃಹ್ಯ
ವಾದೇ ಭಗ್ನಾನಪ್ರತಿಶಂಕಮಾನಃ |
ತ್ವಯಾ ನಿಸೃಷ್ಟೈಃ ಪುರುಷೈರಾಪ್ತಕೃದ್ಭಿಃ
ಜಲೇ ಸರ್ವಾನ್ ಮಜ್ಜಯತೀತಿ ನಃಶ್ರುತಮ್ ॥19॥
ವಿದ್ವಾಂಸನಾದ ನಿನ್ನ ವಂದಿಯು ವಾದಕ್ಕೆ ಬಂದವರನ್ನು ವಾದದಲ್ಲಿ ನಿಗ್ರಹಿಸಿ ಅವರನ್ನು ಸೋಲಿಸಿ ಯಾವ ಶಂಕೆಯೂ ಇಲ್ಲದೆ ನಿನ್ನ ಆಜ್ಞಾಧಾರಕರಾದ ಆಪ್ತಕಾರಿಗಳಾದ ನಿನ್ನ ಪುರುಷರಿಂದ ಅವರೆಲ್ಲರನ್ನೂ ನೀರಿನಲ್ಲಿ ಮುಳುಗಿಸುತ್ತಾನೆ ಎಂದು ನಾನು ಕೇಳಿದ್ದೇನೆ.
ಸ ತಚ್ಛ್ರುತ್ವಾ ಬ್ರಾಹ್ಮಣಾನಾಂ ಸಮೀಪಾದ್
ಬ್ರಹ್ಮೋದ್ಯಂ ವೈ ಕಥಯಿತುಮಾಗತೋಽಸ್ಮಿ |
ಕ್ವಾಸೌ ವಂದೀ ಯಾವದೇನಂ ಸಮೇತ್ಯ
ನಕ್ಷತ್ರಾಣೀವ ಸವಿತಾ ನಾಶಯಾಮಿ ॥20॥
ಬ್ರಾಹ್ಮಣರ ಮುಖದಿಂದ ಅದನ್ನು ಕೇಳಿದ ನಾನು ಬ್ರಹ್ಮೋದ್ಯವನ್ನು ಹೇಳಲು (ಅವನ ಜೊತೆಯಲ್ಲಿ ವಾಕ್ಯಾರ್ಥವನ್ನು ಮಾಡಲು) ಬಂದಿದ್ದೇನೆ. ಆ ವಂದಿಯು ಎಲ್ಲಿದ್ದಾನೆ? ನಾನು ಅವನನ್ನು ಸೇರಿ ಸೂರ್ಯನು ನಕ್ಷತ್ರಗಳನ್ನು ನಾಶಮಾಡಿದಂತೆ ಅವನನ್ನು ನಾಶಮಾಡುತ್ತೇನೆ.
ಜನಕಃ
ಆಶಂಸಸೇ ವಂದಿನಂ ತ್ವಂ ವಿಜೇತುಂ
ನ ಚ ಜ್ಞಾತ್ವಾ ವಾಕ್ಯಬಲಂ ತ್ವಮಸ್ಯ |
ವಿಜ್ಞಾತವೀರ್ಯೈಃ ಶಕ್ಯಮೇವಂ ಪ್ರವಕ್ತುಂ
ದೃಷ್ಟಶ್ಚಾಸೌ ಬ್ರಾಹ್ಮಣೈರ್ವಾದಶೀಲೈಃ ॥21॥
ಜನಕ ವಂದಿಯ ವಾಕ್ಯಗಳ ಬಲವನ್ನು ತಿಳಿಯದೆ ನೀನು ಅವನನ್ನು ಜಯಿಸಲು ಬಯಸುತ್ತಿದ್ದೀಯೆ. ಇನ್ನೊಬ್ಬರ ಬಲವನ್ನು ತಿಳಿದವರು ಹೀಗೆ ಮಾತನಾಡುವುದು ಯುಕ್ತವಾಗುತ್ತದೆ. ವಾದಶೀಲರಾದ ಬ್ರಾಹ್ಮಣರು ವಂದಿಯ ಬಲವನ್ನು ತಿಳಿದಿದ್ದಾರೆ.
ಆಶಂಸಮಾನಾ ವಂದಿನಂ ವೈ ಕುಮಾರಾ
ಅವಿಜ್ಞಾನಾತ್ತೇ ಹ್ಯಶಕ್ತಾ ವಿಜೇತುಮ್ |
ಸಮಾಗತಾ ಬ್ರಾಹ್ಮಣಾಸ್ತೇನ ಪೂರ್ವಂ
ನ ಶೋಭಂತೇ ಭಾಸ್ಕರೇಣೇವ ತಾರಾಃ ॥22॥
ವಂದಿಯನ್ನು ಜಯಿಸಲು ಬಯಸುವ ಬಾಲಕರು ಅಷ್ಟು ಜ್ಞಾನವಿಲ್ಲದವರಾದ್ದರಿಂದ ಅವರಿಂದ ಅವನನ್ನು ಜಯಿಸಲು ಸಾಧ್ಯವಿಲ್ಲ. ಮೊದಲು ಇಲ್ಲಿಗೆ ಬಂದ ಬ್ರಾಹ್ಮಣರು ಸೂರ್ಯನ ಎದುರಿಗೆ ನಕ್ಷತ್ರಗಳು ಮಂಕಾಗುವಂತೆ ಎಲ್ಲರೂ ಅವನ ಎದುರಿಗೆ ಮಂಕಾಗಿದ್ದಾರೆ.
ಆಶಾನುಬಂಧೋ ಹಿ ತವಾತ್ರ ಯತ್ತಮ್
ಸ ವಂದಿಮಾಸಾದ್ಯ ತಥಾ ವಿನಶ್ಯತಿ |
ವಿಜ್ಞಾನವಂತೋ ನಿಕೃತಾಸ್ತು ತಾತ
ಕಥಂ ಸದಸ್ತರ್ತುಮಿದಂ ಸಮರ್ಥಃ ॥23॥
ನಿನಗೆ ವಂದಿಯ ಜೊತೆಯಲ್ಲಿ ಚರ್ಚೆಯನ್ನು ಮಾಡಬೇಕೆಂಬ ಯಾವ ದೊಡ್ಡ ಆಸೆ ಇದೆಯೋ ಅದು ವಂದಿಯನ್ನು ಸಂಧಿಸಿ ವಿನಾಶವನ್ನು ಹೊಂದುವುದು. ಪ್ರೀತಿಪಾತ್ರನೇ, ಬಹಳ ಜ್ಞಾನವುಳ್ಳವರು ಅವನಿಗೆ ಸೋತುಹೋಗಿದ್ದಾರೆ. ನೀನು ಈ ಸಭೆಯನ್ನು ದಾಟಲು ಹೇಗೆ ಸಮರ್ಥನಾಗುತ್ತೀಯೆ?

ಅಷ್ಟಾವಕ್ರಃ
ವಿವಾದಿತೋಽಸೌ ನ ತು ಮಾದೃಶೈರ್ಹಿ
ಸಿಂಹೀಕೃತಸ್ತೇನ ವದತ್ಯಭೀತಃ |
ಸಮೇತ್ಯ ಮಾಂ ನಿಹತಃ ಶೇಷ್ಯತೇಽದ್ಯ
ಮಾರ್ಗೇ ಭಗ್ನಂ ಶಕಟಮಿವಾಬಲಾಕ್ಷಮ್ ॥24॥
ಅಷ್ಟಾವಕ್ರ ಅವನು ನನ್ನಂತಹವರ ಜೊತೆಯಲ್ಲಿ ವಿವಾದವನ್ನು ಮಾಡಿಲ್ಲ. ಆದ್ದರಿಂದ ತನ್ನನ್ನು ಸಿಂಹದಂತೆ ಎಂದು ತಿಳಿದುಕೊಂಡು ಅವನು ನಿರ್ಭಯವಾಗಿ ಮಾತನಾಡುತ್ತಿದ್ದಾನೆ. ಈ ದಿನ ಅವನು ನನ್ನ ಜೊತೆಯಲ್ಲಿ ವಾದ ಮಾಡಿ ಮಾರ್ಗದಲ್ಲಿ ದುರ್ಬಲವಾದ ತೂಬನ್ನು ಮುರಿದುಕೊಂಡು ಬಿದ್ದ ಗಾಡಿಯಂತೆ ಸೋತು ಮಲಗುತ್ತಾನೆ.
ರಾಜಾ
ಷಣ್ಣಾಭೇರ್ದ್ವಾದಶಾಕ್ಷಸ್ಯ ಚತುರ್ವಿಂಶತಿಪರ್ವಣಃ |
ಕಸ್ತ್ರಿಷಷ್ಟಿಶತಾರಸ್ಯ ವೇದಾರ್ಥಂ ಸ ಪರಃ ಕವಿಃ ॥25॥
ರಾಜಾ ಆರು ನಾಭಿಗಳುಳ್ಳ, ಹನ್ನೆರಡು ಅಕ್ಷಗಳುಳ್ಳ, ಇಪ್ಪತ್ತನಾಲ್ಕು ಪರ್ವಗಳುಳ್ಳ, ಮುನ್ನೂರ ಅರವತ್ತು ಅರಗಳುಳ್ಳ ವಸ್ತುವನ್ನು ಯಾವನು ತಿಳಿಯುತ್ತಾನೆಯೋ ಅವನು ಶ್ರೇಷ್ಠವಾದ ಜ್ಞಾನಿ (ಒಂದು ಸಂವತ್ಸರಕ್ಕೆ ಆರು ಋತುಗಳು ನಾಭಿಗಳು, ಹನ್ನೆರಡು ಮಾಸಗಳು ಅಕ್ಷಗಳು, ಹನ್ನೆರಡು ಪೂರ್ಣಿಮೆ ಮತ್ತು ಅಮಾವಾಸ್ಯೆಗಳು ಪರ್ವಗಳು, ಮುನ್ನೂರ ಅರವತ್ತು ದಿನಗಳು).
ಅಷ್ಟಾವಕ್ರಃ
ಚತುರ್ವಿಂಶತಿಪರ್ವ ತ್ವಾಂ ಷಣ್ಣಾಭಿ ದ್ವಾದಶಪ್ರಧಿ |
ತತ್ತ್ರಿಷಷ್ಟಿಶತಾರಂ ವೈ ಚಕ್ರಂ ಪಾತು ಸದಾಗತಿ ॥26॥
ಅಷ್ಟಾವಕ್ರ ಎಲೈ ರಾಜನೇ, ಇಪ್ಪತ್ತನಾಲ್ಕು ಪರ್ವಗಳುಳ್ಳ, ಆರು ನಾಭಿಗಳುಳ್ಳ, ಹನ್ನೆರಡು ಅಲಗುಗಳುಳ್ಳ, ಮುನ್ನೂರರವತ್ತು ಅರಗಳನ್ನುಳ್ಳ ಸದಾ ತಿರುಗುವ ಚಕ್ರವು ನಿನ್ನನ್ನು ರಕ್ಷಿಸಲಿ.
ರಾಜಾ
ಬಡಬೇ ಇವ ಸಂಪೃಕ್ತೇ ಶ್ಯೇನ್ಯೇ ಪಾತೇ ದಿವೌಕಸಾಮ್ |
ಕಸ್ತಯೋರ್ಗರ್ಭಮಾಧತ್ತೇ ಗರ್ಭಂ ಸುಷುವತುಶ್ಚ ಕಮ್ ॥27॥
ರಾಜಾ ಉತ್ತರಾಯಣ ಮತ್ತು ದಕ್ಷಿಣಾಯನದ ಎರಡು ದೇವತೆಗಳ ಸಂಧಿಗಳಲ್ಲಿ ಸಂಯುಕ್ತವಾಗಿರುವ ಎರಡು ಹೆಣ್ಣು ಕುದುರೆಗಳಲ್ಲಿ ಯಾರು ಗರ್ಭವನ್ನು ಆಧಾನ ಮಾಡುತ್ತಾರೆ? ಅವು ಏನನ್ನು ಪ್ರಸವಿಸುತ್ತವೆ?
ಅಷ್ಟಾವಕ್ರಃ
ಮಾ ಸ್ಮ ಭೂಃ ಸ್ವಗೃಹೇ ರಾಜನ್ ಶಾತ್ರವಾಣಾಮಪಿ ಧ್ರುವಮ್ |
ವಾತಸಾರಥಿರಾಧತ್ತೇ ಗರ್ಭಂ ಸುಷುವತುಶ್ಚ ಕಮ್ ॥28॥
ಅಷ್ಟಾವಕ್ರ ಎಲೈ ರಾಜನೇ, ನೀನು ಮನೆಯಲ್ಲಿ ಇರುವವನೇ ಆಗಬೇಡ. ಶತ್ರುವನ್ನು ಸಂಹರಿಸಿ ಶಾಶ್ವತವಾದ ಕೀರ್ತಿಯನ್ನು ಪಡೆ. ವಾತಸಾರಥಿಯಾದ ನಿದಾಘ ಕಾಲದ ಅಗ್ನಿಯು ಗರ್ಭಾಧಾನವನ್ನು ಮಾಡುತ್ತದೆ. ಎರಡು ಕುದುರೆಗಳೂ ಸೇರಿ ಮಳೆಯ ರೂಪವಾದ ನೀರನ್ನು ಪ್ರಸವಿಸುತ್ತವೆ. (ಲಕ್ಷ್ಯಾಲಂಕಾರ)
ರಾಜಾ
ಕಿಂ ಸ್ವಿತ್ ಸುಪ್ತೋ ನ ನಿಮಿಷೇತ್ ಕಿಂ ಸ್ವಿಜ್ಜಾತಂ ತ ಚೋತ್ಪತಿ |
ಕಸ್ಯ ಸ್ವಿದ್ ಹೃದಯಂ ನಾಸ್ತಿ ಕಿಂ ಸ್ವಿದ್ ವೇಗೇನ ವರ್ಧತೇ ॥29॥
ರಾಜಾ ಯಾವ ಪ್ರಾಣಿಯು ನಿದ್ರಿಸುವಾಗ ಕಣ್ಣುಮುಚ್ಚುವುದಿಲ್ಲ? ಯಾವುದು ಹುಟ್ಟಿದಾಗ ಮೇಲೆ ಹೋಗುವುದಿಲ್ಲ? ಯಾವುದಕ್ಕೆ ಹೃದಯವಿಲ್ಲ? ಯಾವುದು ವೇಗದಿಂದ ಹೆಚ್ಚುತ್ತದೆ?
ಅಷ್ಟಾವಕ್ರಃ
ಮತ್ಸ್ಯಃ ಸುಪ್ತೋ ನ ನಿಮಿಷತ್ಯಂಡಂ ಜಾತಂ ನ ಚೋತ್ಪತಿ |
ಅಶ್ಮನೋ ಹೃದಯಂ ನಾಸ್ತಿ ನದೀ ವೇಗೇನ ವರ್ಧತೇ ॥30॥
ಅಷ್ಟಾವಕ್ರ ನಿದ್ರಿಸುವ ಮತ್ಸ್ಯವು ಕಣ್ಣುಮುಚ್ಚುವುದಿಲ್ಲ. ಪಕ್ಷಿಕುಲೀನವಾದ ಮೊಟ್ಟೆಗಳು ಜನಿಸಿದಾಗ ಮೇಲೆ ಹೋಗುವುದಿಲ್ಲ. ಕಲ್ಲಿಗೆ ಹೃದಯವಿಲ್ಲ. ನದಿಯು ವೇಗದಿಂದ ಅಭಿವೃದ್ಧಿಯನ್ನು ಹೊಂದುತ್ತದೆ.
ರಾಜಾ
ನ ತ್ವಾಂ ಮನ್ಯೇ ಮಾನುಷಂ ದೇವಸತ್ತ್ವ
ನ ತ್ವಂ ಬಾಲಃ ಸ್ಥವಿರಸ್ತ್ವಂ ಮತೋ ಮೇ |
ನ ತೇ ತುಲ್ಯೋ ವಿದ್ಯತೇ ವಾಕ್ಪ್ರಲಾಪೇ
ತಸ್ಮಾದ್ ದ್ವಾರಂ ವಿತರಾಮುಷ್ಯ ವಂದಿನ್ ॥31॥
ರಾಜಾ ಎಲೈ ದೇವಸತ್ವನೇ, ನಿನ್ನನ್ನು ಮನುಷ್ಯನೆಂದು ನಾನು ತಿಳಿಯುವುದಿಲ್ಲ. ನೀನು ಬಾಲಕನಲ್ಲ. ವೃದ್ಧನೆಂದು ನನ್ನ ಅಭಿಪ್ರಾಯ. ಮಾತನಾಡುವವರಲ್ಲಿ ನಿನಗೆ ಸಮಾನರಾದವರು ಇಲ್ಲ. ಆದ್ದರಿಂದ ಎಲೈ ವಂದಿಯೇ, ಇವನಿಗೆ ಪ್ರವೇಶವನ್ನು ನೀಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ತೀರ್ಥಯಾತ್ರಾಪರ್ವಣಿ ಪಂಚಾಶೀತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
*****
ನೂರ ಮೂವತ್ತನೆಯ ಅಧ್ಯಾಯ
ಅಷ್ಟಾವಕ್ರ ವಂದಿ ಸಂವಾದ ಮತ್ತು ವಂದಿಯ ಪರಾಜಯ
ಅಷ್ಟಾವಕ್ರಃ
ಅತ್ರೋಗ್ರಸೇನಸಮಿತೇಷು ರಾಜನ್
ಸಮಾಗತೇಷ್ವಪ್ರತಿಮೇಷು ರಾಜಸು |
ನ ವೈ ತಿತಿಕ್ಷಾಮ್ಯಹಮದ್ಯ ವಾದಿನಾಂ
ಮಹಾಜನೇ ಹಂಸನಿನಾದಿನಾಮಿವ ||1||
ಅಷ್ಟಾವಕ್ರ ಎಲೈ ರಾಜನೇ, ಇಲ್ಲಿ ಉಗ್ರಸೇನನಿಗೆ ಸಮಾನವಾದ ಅದ್ವಿತೀಯರಾದ ರಾಜರುಗಳು ಬಂದು ಸೇರಿರುವಾಗ ಈ ಮಹಾಜನ ಸಮೂಹದಲ್ಲಿ ಈ ದಿನ ಹಂಸದಂತಾ ಮೃದು ಮಧುರ ಮಾತಿನಿಂದ ವಾದಿಗಳನ್ನು ನಾನು ಸಹಿಸುವುದಿಲ್ಲ.
ನ ಮೋಕ್ಷ್ಯಸೇ ವೈ ವದಮಾನೋ ನಿಮಜ್ಜನ್ |
ಜಲಂ ಪ್ರಪನ್ನಃ ಸರಿತಾಮಿವಾಧ್ವಗಃ |
ಹುತಾಶನಸ್ಯೇವ ಸಮಿದ್ಧತೇಜಸಃ
ಸ್ಥಿರೋ ಭವಸ್ವೇಹ ಮಮಾದ್ಯ ವಂದಿನ್ ||2||
ಎಲೈ ವಂದಿಯೇ, ವಾದವನ್ನು ಮಾಡಿ ವಾದದಲ್ಲಿ ಸೋತವರನ್ನು ನೀರಿನಲ್ಲಿ ಮುಳುಗಿಸುವ ನೀನು ದಾರಿಹೋಕನಿಗೆ ಅಡ್ಡಲಾಗಿ ನದಿಯ ಜಲವು ಸಿಕ್ಕಿದಂತೆ ಮತ್ತು ದೊಡ್ಡದಾಗಿ ಉರಿಯುತ್ತಿರುವ ಅಗ್ನಿಯನ್ನು ಸಮೀಪಿಸಿದಂತೆ ನನ್ನಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ಈ ದಿನ ಇಲ್ಲಿ ಸ್ಥಿರವಾಗಿ ನಿಲ್ಲು.
ವಂದೀ
ವ್ಯಾಘ್ರಂ ಶಯಾನಂ ಪ್ರತಿಬೋಧಯಿತ್ವಾ
ಆಶೀವಿಷಂ ಸೃಕ್ಕಿಣೀ ಲೇಲಿಹಾನಮ್ |
ಪದಾ ಹತಸ್ಯೇವ ಶಿರೋಽಭಿಹತ್ಯ
ನಾದಷ್ಟೋ ವೈ ಮೋಕ್ಷ್ಯಸೇ ತನ್ನಿಬೋಧ ||3||
ವಂದೀ ನಿದ್ರಿಸುತ್ತಿರುವ ವ್ಯಾಘ್ರವನ್ನು ಎಬ್ಬಿಸಿ ಕಟವಾಯಿಯನ್ನು ನಾಲಿಗೆಯನ್ನು ಸವರಿಕೊಳ್ಳುತ್ತಿರುವ ಆಶೀವಿಷ ಸರ್ಪವನ್ನು ಕಾಲಿನಿಂದ ಒದ್ದು, ತಲೆಯ ಮೇಲೆ ಹೊಡೆದಂತೆ ನೀನು ಕಚ್ಚಲ್ಪಡದೇ ನನ್ನಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ಅದನ್ನು ತಿಳಿ.
ಯೋ ವೈ ದರ್ಪಾತ್ ಸಂಹನನೋಪಪನ್ನಃ
ಸುದುರ್ಬಲಃ ಪರ್ವತಮಾವಿಹಂತಿ |
ತಸ್ಯೈವ ಪಾಣಿಃ ಸನಖೋ ವಿದೀರ್ಯತೇ
ನ ಚಾಪಿ ಶೈಲಸ್ಯ ತು ದೃಶ್ಯತೇ ವ್ರಣಃ ||4||
ಯಾವನು ಒಳ್ಳೆಯ ಶರೀರ ಸಂಪನ್ನನಾಗಿದ್ದರೂ, ಪರ್ವತಕ್ಕಿಂತ ದುರ್ಬಲನಾದರೂ ದರ್ಪದಿಂದ ಪರ್ವತವನ್ನೇ ಗುದ್ದುತ್ತಾನೆಯೋ ಅವನ ಹಸ್ತವೇ ನಖಸಹಿತವಾಗಿ ಬಿರಿದುಹೋಗುತ್ತದೆ. ಪರ್ವತಕ್ಕೆ ಯಾವ ವ್ರಣವೂ ಉಂಟಾಗುವುದಿಲ್ಲ.
ಅಷ್ಟಾವಕ್ರಃ
ಸರ್ವೇ ರಾಜ್ಞೋ ಮೈಥಿಲಸ್ಯ ಮೈನಾಕಸ್ಯೇವ ಪರ್ವತಾಃ |
ವಿಕರ್ಷಭೂತಾ ರಾಜಾನೋ ವತ್ಸಾ ಅನಡುಹೋ ಯಥಾ ||5||
ಅಷ್ಟಾವಕ್ರ ಎಲ್ಲ ಪರ್ವತಗಳೂ ಮೈನಾಕ ಪರ್ವತಕ್ಕಿಂತ ನಿಮ್ನವಾಗಿರುವಂತೆ, ಎಲ್ಲ ಕರುಗಳೂ ಎತ್ತುಗಳಿಗಿಂತ ನಿಮ್ನವಾಗಿರುವಂತೆ, ಎಲ್ಲ ರಾಜರೂ ಮೈಥಿಲ ರಾಜನಿಗಿಂತ ಕೆಳಗಿನ ದರ್ಜೆಯವರು.
ಲೋಮಶಃ
ಅಷ್ಟಾವಕ್ರಃ ಸಮಿತೌ ಗರ್ಜಮಾನೋ
ಜಾತಕ್ರೋಧೋ ವಂದಿನಮಾಹ ರಾಜನ್ |
ಉಕ್ತೇ ವಾಕ್ಯೇ ಚೋತ್ತರಂ ಮೇ ಬ್ರವೀಹಿ
ವಾಕ್ಯಸ್ಯ ಚಾಪ್ಯುತ್ತರಂ ತೇ ಬ್ರವೀಮಿ ||6||
ಲೋಮಶ ಎಲೈ ರಾಜನೇ, ಅಷ್ಟಾವಕ್ರನು ಕ್ರೋಧವನ್ನು ತಾಳಿದವನಾಗಿ ಆ ಸಭೆಯಲ್ಲಿ ಗರ್ಜನೆ ಮಾಡುತ್ತಾ ನನ್ನ ವಾಕ್ಯವನ್ನು ಉತ್ತರವನ್ನು ಕೊಡು. ನಿನ್ನ ವಾಕ್ಯಕ್ಕೆ ನಾನು ಉತ್ತರವನ್ನು ಕೊಡುತ್ತೇನೆ ಎಂದು ಹೇಳಿದನು.
ವಂದೀ
ಏಕ ಏವಾಗ್ನಿರ್ಬಹುಧಾ ಸಮಿಧ್ಯತೇ
ಏಕಃ ಸೂರ್ಯಃ ಸರ್ವಮಿದಂ ಪ್ರಭಾಸತೇ |
ಏಕೋ ವೀರೋ ದೇವರಾಜೋ ನಿಯಂತಾ
ಯಮಃ ಪಿತೄಣಾಮೀಶ್ವರಶ್ಚೈಕ ಏವ ||7||
ವಂದೀ ಒಬ್ಬನೇ ಅಗ್ನಿಯು ಅನೇಕ ವಿಧವಾಗಿ ಪ್ರಜ್ವಲಿಸುತ್ತಾನೆ. ಒಬ್ಬನೇ ಸೂರ್ಯನು ಈ ಜಗತ್ತೆಲ್ಲವನ್ನೂ ಬೆಳಗುತ್ತಾನೆ. ಮೂರುಲೋಕಗಳಿಗೂ ನಿಯಾಮಕನಾದ ವೀರನಾದ ದೇವರಾಜನು ಒಬ್ಬನೇ. ಪಿತೃಗಳಿಗೆ ಪ್ರಭುವಾದ ಯಮನೂ ಸಹ ಒಬ್ಬನೇ

ಆಗಿದ್ದಾನೆ.
ಅಷ್ಟಾವಕ್ರಃ
ದ್ವಾವಿಂದ್ರಾಗ್ನೀ ಚರತೋ ವೈ ಸಖಾಯೌ
ದ್ವೌ ದೇವರ್ಷೀ ನಾರದಃ ಪರ್ವತಶ್ಚ |
ದ್ವಾವಶ್ವಿನೌ ದ್ವೇ ಚ ರಥಸ್ಯ ಚಕ್ರೇ
ಭಾರ್ಯಾಪತೀ ದ್ವೌ ವಿಹಿತೌ ವಿಧಾತ್ರಾ ॥8॥
ಅಷ್ಟಾವಕ್ರ ಇಂದ್ರ ಮತ್ತು ಅಗ್ನಿ ಇಬ್ಬರು ಮಿತ್ರರಾಗಿ ಸಂಚರಿಸುತ್ತಾರೆ. ನಾರದ ಮತ್ತು ಪರ್ವತರು ಇಬ್ಬರು ದೇವರ್ಷಿಗಳು. ಅಶ್ವಿನೀದೇವತೆಗಳು ಇಬ್ಬರು. ರಥದ ಚಕ್ರಗಳು ಎರಡು. ಬ್ರಹ್ಮದೇವರು ಭಾರ್ಯಾಪತೀ ಎಂದು ಇಬ್ಬರನ್ನು ವಿಧಿಸಿದ್ದಾನೆ. (ಅದ್ವೈತ ಮತವನ್ನು ಅವಲಂಬಿಸಿ ಒಂದು ಎಂಬ ಪ್ರಾಶಸ್ತ್ಯವನ್ನು ವಂದಿಯು ಹೇಳಲು ಪ್ರಾರಂಭಿಸಿದಾಗ ಅಷ್ಟಾವಕ್ರನು ಅದನ್ನು ಸಹಿಸದೇ ದ್ವೈತಮತವನ್ನು ಅವಲಂಬಿಸಿ ಎರಡು ಎಂಬ ಸಂಖ್ಯೆಯ ಪ್ರಾಶಸ್ತ್ಯವನ್ನು ನಿರೂಪಿಸುತ್ತಿದ್ದಾನೆ).
ವಂದೀ
ತ್ರಿಃ ಸೂಯತೇ ಕರ್ಮಣಾ ವೈ ಪ್ರಜೇಯಂ
ತ್ರಯೋ ದೇವಾ ವಾಜಪೇಯಂ ವಹಂತಿ |
ಅಧ್ವರ್ಯವಸ್ತ್ರಿಸವನಾನಿ ತನ್ವತೇ
ತ್ರಯೋ ಲೋಕಾಸ್ತ್ರೀಣಿ ಜ್ಯೋತಿಂಷಿ ಚಾಹುಃ ॥9॥
ವಂದೀ ಧಾನ್ಯದಿಂದ, ಪಿತೃವಿನಿಂದ ಮತ್ತು ಮಾತೃವಿನಿಂದ ಮೂರು ಬಾರಿ ಮನುಷ್ಯನು ಪ್ರಸವಿಸಲ್ಪಡುತ್ತಾನೆ. ಮೂರು ವೇದಗಳು ಎಂದರೆ ಋಗ್, ಯಜುಸ್, ಸಾಮವೇದಗಳು ವಾಜಪೇಯ ಯಾಗವನ್ನು ನಿರ್ವಹಿಸುತ್ತವೆ. ಸೂರ್ಯ, ಚಂದ್ರ ಮತ್ತು ಅಗ್ನಿ ಎಂಬ ಮೂರು ಅಧ್ವರ್ಯಗಳು ಹಗಲು, ರಾತ್ರಿ ಮತ್ತು ಸಂಧ್ಯಾಕಾಲ ಎಂಬ ಮೂರು ಚವನಗಳನ್ನು ಉಂಟು ಮಾಡುತ್ತಾರೆ. ಲೋಕಗಳು ಮೂರು. ಜ್ಯೋತಿಷ್ಯಗಳನ್ನು ಮೂರು ಎಂದು ಹೇಳುತ್ತಾರೆ.
ಅಷ್ಟಾವಕ್ರಃ
ಚತುಷ್ಪಯಂ ಬ್ರಾಹ್ಮಣಾನಾಂ ನಿಕೇತಂ
ಚತ್ವಾರೋ ಯುಕ್ತಾ ಯಜ್ಞಮಿಮಂ ವಹಂತಿ |
ದಿಶಶ್ಚತಸ್ರಶ್ಚತುರಶ್ಚ ವೇದಾಃ
ಚತುಷ್ಪದಾ ಗೌರಪಿ ಶಶ್ವದುಕ್ತಾ ॥10॥
ಅಷ್ಟಾವಕ್ರ ನಾಲ್ಕು ವೇದಗಳು ಬ್ರಾಹ್ಮಣರ ಆವಾಸಸ್ಥಾನವಾಗಿದೆ. ಶ್ರೋತೃ, ಉದ್ಗಾತೃ, ಅಧ್ವರ್ಯು ಮತ್ತು ಬ್ರಹ್ಮ ಎಂಬ ನಾಲ್ಕು ಋತ್ವಿಕ್ಕುಗಳು ಈ ಯಜ್ಞವನ್ನು ನಿರ್ವಹಿಸುತ್ತಾರೆ. ದಿಕ್ಕುಗಳು ನಾಲ್ಕು, ವೇದಗಳೂ ನಾಲ್ಕು. ಗೋವಿಗೆ ನಾಲ್ಕು ಪಾದಗಳೆಂದು ಯಾವಾಗಲೂ ಪ್ರಸಿದ್ಧವಾಗಿದೆ.
ವಂದೀ
ಪಂಚಾಗ್ನಯಃ ಪಂಚಪದಾ ಚ ಪಂಕ್ತಿಃ
ಯಜ್ಞಾಃ ಪಂಚೈವಾಪ್ಯಥ ಪಂಚೇಂದ್ರಿಯಾಣಿ |
ದೃಷ್ಟಾ ಹ್ಯೇತೇ ಪಂಚಚೂಡಾಶ್ಚ ಪಂಚ
ಲೋಕೇ ಖ್ಯಾತಂ ಪಂಚನದಂ ಚ ಪುಣ್ಯಮ್ ॥11॥
ವಂದೀ ಅಗ್ನಿಗಳು ಐದು. ಪಂಕ್ತಿ ಛಂದಸ್ಸಿನ ಪಾದಗಳು ಐದು. ಯಜ್ಞಗಳು ಐದು ರೀತಿಗಳು ಮತ್ತು ಇಂದ್ರಿಯಗಳು ಐದು ಸಂಖ್ಯೆ ಉಳ್ಳವುಗಳು. ವೇದದಲ್ಲಿ ಪಂಚಚೂಡಾ ಎಂಬ ಅಕ್ಷರ್ಯವು ಹೇಳಲ್ಪಟ್ಟಿರುವುದು ಕಂಡುಬರುತ್ತದೆ. ಲೋಕದಲ್ಲಿ ಪಂಚನದ ಎಂಬ ಕ್ಷೇತ್ರವು ಪವಿತ್ರವೆಂದು ಪ್ರಸಿದ್ಧವಾಗಿದೆ.
ಅಷ್ಟಾವಕ್ರಃ
ಷಡಾಧಾನೇ ದಕ್ಷಿಣಾ ಆಹುರೇಕೇ
ಷಡೇತೇ ಋತವಃ ಕಾಲಚಕ್ರಂ ತಥೈವ |
ಷಡಿಂದ್ರಿಯಾಣ್ಯುತ ಷಟ್ ಕೃತ್ತಿಕಾಶ್ಚ
ಷಡೇವ ಯಜ್ಞಾಃ ಸರ್ವವೇದೇಷು ಸಿದ್ಧಾಃ ॥12॥
ಅಷ್ಟಾವಕ್ರ ಅಗ್ನ್ಯಾದಾನ ಮಾಡುವಾಗ ಆರು ದಕ್ಷಿಣೆಗಳನ್ನು ಕೊಡಬೇಕೆಂದು ಕೆಲವರು ಹೇಳುತ್ತಾರೆ. ಈ ಋತುಗಳು ಆರು. ಕಾಲಚಕ್ರವೂ ಸಹ ಅದರಂತೆ ಆರು ಋತುಗಳಿಂದ ಕೂಡಿದುದು. ಇಂದ್ರಿಯಗಳು ಆರು (ಪಂಚಜ್ಞಾನೇಂದ್ರಿಯಗಳ ಜೊತೆಯಲ್ಲಿ ಮನಸ್ಸನ್ನು ಆರನೆಯ ಇಂದ್ರಿಯವಾಗಿ ಸೇರಿಸಬೇಕು). ಮತ್ತು ಕೃತ್ತಿಕೆಯರು ಆರು ಮಂದಿ. ಸರ್ವವೇದಗಳಲ್ಲಿ ಪ್ರಸಿದ್ಧವಾದ ಯಜ್ಞಗಳೂ ಸಹ ಆರೇ ಆಗಿವೆ.
ವಂದೀ
ಸಪ್ತ ಗ್ರಾಮ್ಯಾಃ ಪಶವಃ ಸಪ್ತ ವನ್ಯಾಃ
ಸಪ್ತ ಚ್ಛಂಧಾಂಸಿ ಕ್ರತುಮೇಕಂ ವಹಂತಿ |
ಸಪ್ತರ್ಷಯಃ ಸಪ್ತ ಚಾಪ್ಯರ್ಹಣಾನಿ
ಸಪ್ತತಂತ್ರೀ ಪ್ರಥಿತಾ ಚೈವ ವೀಣಾ ॥13॥
ವಂದೀ ಗ್ರಾಮ್ಯ ಪಶುಗಳು ಏಳು ವಿಧವಾದವು. ಕಾಡಿನಲ್ಲಿರುವ ಪಶುಗಳೂ ಏಳು ವಿಧವಾದವು. ಏಳು ಛಂದಸ್ಸುಗಳು (ಗಾಯತ್ರೀ,

ಪುಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ) ಏಳು ಛಂದಸ್ಸುಗಳು ಒಂದು ಯಜ್ಞವನ್ನು ನಿರ್ವಹಿಸುತ್ತವೆ. ಸಪ್ತರ್ಷಿಗಳು ಏಳು ಮಂದಿ. ಪೂಜಾ ಪ್ರಕಾರಗಳೂ ಏಳು ರೀತಿಯಾದವು ಮತ್ತು ವೀಣೆಯು ಸಪ್ತ ತಂತಿಗಳನ್ನು ಉಳ್ಳದ್ದೆಂದು ಪ್ರಸಿದ್ಧವಾಗಿದೆ.
ಅಷ್ಟಾವಕ್ರಃ
ಅಷ್ಟೌ ದಿಗೀಶಾನನ್ಯತಯಮಾನ್ ವದಂತಿ
ತಥಾಽಷ್ಟಪಾದಃ ಶರಭಾಃ ಸಿಂಹಘಾತೀ |
ಅಷ್ಟೌ ವಸೂನ್ ಶುಶ್ರುಮೋ ದೇವತಾಸು
ಯೂಪೋಽಷ್ಟಾಶ್ರಃ ವಿಹಿತಶ್ಚ ಯಜ್ಞೇ ॥14॥
ಅಷ್ಟಾವಕ್ರ ಅಷ್ಟದಿಕ್ಪಾಲಕರು ಜಗತ್ತಿನ ಧಾರಣೆಯಲ್ಲಿ ಪ್ರಯತ್ನಪೂರ್ವಕವಾಗಿ ನಿರತರಾಗಿದ್ದಾರೆಂದು ಹೇಳುತ್ತಾರೆ. ಸಿಂಹವನ್ನು ಕೊಲ್ಲುವ ಶರಭ ಎಂಬ ಮೃಗವು ಅಷ್ಟಪಾದಗಳನ್ನುಳ್ಳದ್ದು. ದೇವತೆಗಳಲ್ಲಿ ವಸುಗಳು ಎಂಟು ಮಂದಿ ಎಂದು ಕೇಳುತ್ತೇವೆ. ಯಜ್ಞವಲ್ಲಿ ವಿಹಿತವಾದ ಯೂಪವು ಎಂಟು ಅಂಶಗಳಿಂದ ಕೂಡಿದುದು.
ವಂದೀ
ನ ವೈವೋಕ್ತಾಃ ಸಾಮಿಧೇನ್ಯಃ ಪಿತೄಣಾಂ
ತಥಾ ಪ್ರಾಹುರ್ನವಯೋಗಂ ವಿಸರ್ಗಮ್ |
ನವಾಕ್ಷರಾ ಬೃಹತೀ ಸಂಪ್ರದಿಷ್ಟಾ
ನವೈವ ಯೋಗೋ ಗಣನಾಮೇತಿ ಶಶ್ವತ್ ॥15॥
ವಂದೀ ಪಿತೃಗಳ ಸನ್ನಿಧಿ ಸ್ಥಾನವಾದದು ಒಂಬತ್ತು ಸ್ಥಾನಗಳು (ವಿಶಂತಸ್ವಾ ಹವಾಮಹೀ ಎಂದು ಒಂಬತ್ತು ಮಂತ್ರಗಳೆಂದು ಕೆಲವರ ಅಭಿಪ್ರಾಯ). ಸೃಷ್ಟಿಯೂ ಸಹ ಒಂಬತ್ತರ ಯೋಗದಿಂದ ಕೂಡಿದುದು ಎಂದು ಹೇಳುತ್ತಾರೆ (ಮಹತತ್ತ್ವ, ಅಹಂಕಾರ ತತ್ತ್ವದ ಮೂರು ಪ್ರಭೇದಗಳು ಮತ್ತು ಪಂಚಮಹಾಭೂತಗಳು ಇವುಗಳಿಂದ ಎಲ್ಲ ಸೃಷ್ಟಿಯೂ ಉಂಟಾಗುತ್ತದೆ). ಬೃಹತೀ ಛಂದಸ್ಸು ಒಂದೊಂದು ಪಾದದಲ್ಲಿ ಒಂಬತ್ತು ಅಕ್ಷ ಉಳ್ಳದ್ದು. ಒಂಬತ್ತು ಎಂಬ ಸಂಖ್ಯೆಯು ಪುನಃಪುನಃ ಗಣನೆಯನ್ನು ಹೊಂದುತ್ತದೆ (ಒಂಬತ್ತನ್ನು ಯಾವ ಸಂಖ್ಯೆಯಿಂದ ಗುಣಿಸಿದರೂ ಬರುವ ಗುಣಲಬ್ಧದ ಅಂಕೆಗಳನ್ನು ಸೇರಿಸಿದರೆ ಪುನಃ ಒಂಬತ್ತೇ ಬರುತ್ತದೆ).
ಅಷ್ಟಾವಕ್ರಃ
ದಶಾ ದಶೋಕ್ತಾಃ ಪರುಷಸ್ಯ ಲೋಕೇ
ಸಹಸ್ರಮಾಹುರ್ದಶ ಪೂರ್ಣಂ ಶತಾನಿ |
ದಶೈವ ಮಾಸಾನ್ ಬಿಭ್ರತಿ ಗರ್ಭವತ್ಯೋ
ದಶೈರಕಾ ದಶ ದಾಶಾ ದಶಾರ್ಣಾಃ ॥16॥
ಅಷ್ಟಾವಕ್ರ ಮನುಷ್ಯನಿಗೆ ಲೋಕದಲ್ಲಿ ಹತ್ತು ದೆಶೆಗಳು ಅವಸ್ಥೆಗಳು ಎಂದು ಪ್ರಸಿದ್ಧವಾಗಿವೆ (ಗರ್ಭವಾಸ, ಜನ್ಮ, ಬಾಲ್ಯ, ಕೌಮಾರ, ಪೌಗಂಡ, ಕೈಸೋರ, ಯೌವನ, ಪ್ರೌಢತ್ವ, ವಾರ್ದಕ್ಯ ಮತ್ತು ಮರಣ). ಹತ್ತುನೂರುಗಳು ಒಂದು ಸಹಸ್ರವಾಗುತ್ತವೆ. ಅದು ಪೂರ್ಣವು ಎಂದರೆ ಅನಂತವೂ ಆಗುತ್ತದೆ. ಗರ್ಭವನ್ನು ಧರಿಸಿದ ಸ್ತ್ರೀಯರು ಹತ್ತು ತಿಂಗಳ ಕಾಲ ಗರ್ಭವನ್ನು ಧರಿಸುತ್ತಾರೆ. ಶ್ರಾದ್ಧ ಕರ್ಮಗಳಲ್ಲಿ ಪಿತೃಗಳಿಗೆ ಆಸನವಾಗಿ ಅರ್ಪಿಸುವ ಏರಕವು ಹತ್ತುವಿಧವಾದುದು. ದಾಶರು (ಬೆಸ್ತರು) ಹತ್ತು ಮಂದಿ. ದಶಾರಣವೆಂಬ ದೇಶವು ಪ್ರಸಿದ್ಧವಾಗಿದೆ.
ವಂದೀ
ಏಕಾದಶೈಕಾದಶಿನಃ ಪಶೂನಾಮ್
ಏಕಾದಶೈವಾತ್ರ ಭವಂತಿ ಯೂಪಾಃ |
ಏಕಾದಶ ಪ್ರಾಣಭೃತಾಂ ವಿಕಾರಾ
ಏಕಾದಶೋಕ್ತಾ ದಿವಿ ದೇವೇಷು ರುದ್ರಾಃ ॥17॥
ವಂದೀ ಎಲ್ಲ ಪಶುಗಳೂ ಸಹ ಪಂಚಜ್ಞಾನೇಂದ್ರಿಯಗಳೂ, ಪಂಚ ಕರ್ಮೇಂದ್ರಿಯಗಳೂ ಮತ್ತು ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳನ್ನು ಹೊಂದಿರುವಂತಹವು. ಯಜ್ಞದಲ್ಲಿ ಉಪಯೋಗಿಸುವ ಯೂಪವು ಹನ್ನೊಂದು ರೀತಿಯದು. ಪ್ರಾಣಿಗಳಿಗೆ ಉಂಟಾಗುವ ವಿಕಾರವು ಹನ್ನೊಂದು ರೀತಿಯದು (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಹರ್ಷ, ಶೋಕ, ರಾಗ, ದ್ವೇಷ ಮತ್ತು ಅಹಂಕಾರ). ಸ್ವರ್ಗದಲ್ಲಿ ದೇವತೆಗಳಿಗೆ ರುದ್ರರು ಹನ್ನೊಂದು ಮಂದಿ ಎಂದು ಹೇಳಲ್ಪಡುತ್ತಾರೆ.
ಅಷ್ಟಾವಕ್ರಃ
ಸಂವತ್ಸರಂ ದ್ವಾದಶಮಾಸಮಾಹುಃ
ಜಗತ್ಯಾಃ ಪಾದೋ ದ್ವಾದಶೈವಾಕ್ಷರಾಣಿ |
ದ್ವಾದಶಾಹಃ ಪ್ರಾಕೃತೋ ಯಜ್ಞ ಉಕ್ತೋ
ದ್ವಾದಶಾದಿತ್ಯಾನ್ ಕಥಯಂತೀಹ ವಿಪ್ರಾಃ ॥18॥
ಅಷ್ಟಾವಕ್ರ ಒಂದು ಸಂವತ್ಸರವು ಹನ್ನೆರಡು ಮಾಸಗಳಿಂದ ಕೂಡಿದುದು ಎಂದು ಹೇಳುತ್ತಾರೆ. ಜಗತೀ ಛಂದಸ್ಸಿನ ಒಂದು ಪಾದದಲ್ಲಿ ಹನ್ನೆರಡು ಅಕ್ಷಗಳಿವೆ. ಪ್ರಾಕೃತವಾದ ಯಜ್ಞವು ಹನ್ನೆರಡು ದಿವಸಗಳ ಕಾಲ ನಡೆಯುತ್ತದೆ ಎಂದು ಹೇಳಲ್ಪಡುತ್ತದೆ (ಯಜ್ಞದಲ್ಲಿ ಪ್ರಾಕೃತ ಮತ್ತು ವೈಕೃತ ಎಂದು ಎರಡು ವಿಧ). ಬ್ರಾಹ್ಮಣರು ಆದಿತ್ಯರನ್ನು ಹನ್ನೆರಡು ಮಂದಿ ಎಂದು ಹೇಳುತ್ತಾರೆ.
ವಂದೀ
ತ್ರಯೋದಶೀ ತಿಥಿರುಕ್ತಾ ಪ್ರಶಸ್ತಾ ತ್ರಯೋದಶದ್ವೀಪವತೀ ಮಹೀ ಚ ॥
ವಂದೀ ತ್ರಯೋದಶೀ ತಿಥಿಯನ್ನು ಪ್ರಶಸ್ತವೆಂದು ಹೇಳುತ್ತಾರೆ. ಮತ್ತು ಭೂಮಿಯಲ್ಲಿ ಹದಿಮೂರು ದ್ವೀಪಗಳಿವೆ.

ಲೋಮಶಃ
ಏತಾವದುಕತ್ತ್ವ  ವಿರರಾಮ ವಂದೀ ಶ್ಲೋಕಸ್ಯಾರ್ಧಂ ವ್ಯಾಜಹಾರಾಷ್ಟವಕ್ರಃ॥
ತ್ರಯೋದಶಾಹಾನಿ ಸಸಾರ ಕೇಶೀ ತ್ರಯೋದಶಾದೀನ್ಯತಿಚ್ಛಂದಾಂಸಿ ಚಾಹುಃ॥
ತತೋ ಮಹಾನುದತಿಷ್ಠನ್ನಿನಾದಸ್ತೂಷ್ಣೀಂಭೂತಂ ಸೂತಪುತ್ರಂ ನಿಶಾಮ್ಯ।
ಅಧೋಮುಖಂ ಧ್ಯಾನಪರಂ ತದಾನೀಮಷ್ಟಾವಕ್ರಂ ಚಾಪ್ಯುದೀರ್ಯಂತಮೇವ
॥20॥
ಲೋಮಶ ವಂದಿಯು ಇಷ್ಟನ್ನು ಹೇಳಿ ನಿಲ್ಲಿಸಿದನು. ಶ್ಲೋಕದ ಉಳಿದ ಅರ್ಧವನ್ನು ಅಷ್ಟಾವರ್ಕರು ಹೇಳಿದರು. ದಮಯಂತಿಯ ಧೂತಿಯಾದ ಕೇಶಿಯು ಹದಿಮೂರು ದಿನಗಳ ಕಾಲ ಬಾಹುಕನನ್ನು ಪರೀಕ್ಷೆ ಮಾಡಿದಳು. ಒಂದೊಂದು ಪಾದದಲ್ಲಿ ಹದಿಮೂರು ಮತ್ತು ಅದಕ್ಕಿಂತ ಹೆಚ್ಚು ಅಕ್ಷರಗಳಿರುವ ಛಂದಸ್ಸುಗಳನ್ನು ಮುಖ್ಯವಾದ ಛಂದಸ್ಸು ಎಂದು ಹೇಳುತ್ತಾರೆ.
ಆಗ ಸೂತಪುತ್ರನಾದ ವಂದಿಯು ಅಧೋಮುಖನಾಗಿ ಧ್ಯಾನಪರನಾಗಿ ಸುಮ್ಮನೆ ಕುಳಿತಿರುವುದನ್ನು ಅಷ್ಟಾವಕ್ರನು ಶೋಭಿಸುತ್ತಿರುವುದನ್ನು ನೋಡಿದ ಸಭೆಯಲ್ಲಿ ದೊಡ್ಡ ಕೋಲಾಹಲ ಉಂಟಾಯಿತು.
ತಸ್ಮಿಂಸ್ತಥಾ ಸಂಕುಲೇ ವರ್ತಮಾನೇ
ಸ್ಫೀತೇ ಯಜ್ಞೇ ಜನಕಸ್ಯೋ ತ ರಾಜ್ಞಃ।
ಅಷ್ಟಾವಕ್ರಂ ಪೂಜಯಂತೋಽಭ್ಯುಪೇಯು
ರ್ವಿಪ್ರಾಃ ಸರ್ವೇ ಪ್ರಾಂಜಲಯಃ ಪ್ರತೀತಾಃ ॥21॥
ಆಗ ಜನಕರಾಜನ ಆ ಪರಿಶುದ್ಧವಾದ ಯಜ್ಞದಲ್ಲಿ ಇಂತಹ ಕೋಲಾಹಲವು ಜರುಗುತ್ತಿರಲು ಬ್ರಾಹ್ಮಣರೆಲ್ಲರು ಸಂತುಷ್ಟರಾಗಿ ಕೈಗಳನ್ನು ಮುಗಿದು ಅಷ್ಟಾವಕ್ರನನ್ನು ಪೂಜಿಸುತ್ತಾ ಅವರ ಸಮೀಪಕ್ಕೆ ಬಂದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಷಟ್ಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತೊಂದನೆಯ ಅಧ್ಯಾಯ
ನೀರಿನಲ್ಲಿ ಮುಳುಗಿಸಲ್ಪಟ್ಟ ಎಲ್ಲಾ ವಿಪ್ರರ ಸಮುತ್ಥಾನ; ತನ್ನ ತಂದೆ ಮತ್ತು ಸೋದರ ಮಾವನ ಜೊತೆಯಲ್ಲಿ ಅಷ್ಟಾವಕ್ರರಿಂದ ತಮ್ಮ ಆಶ್ರಮಕ್ಕೆ ಗಮನ.
ಅಷ್ಟಾವಕ್ರಃ
ಅನೇನೈವ ಬ್ರಾಹ್ಮಣಾಃ ಶುಶ್ರುವಾಂಸೋ
ವಾದೇ ಜಿತ್ವಾ ಸಲಿಲೇ ಮಜ್ಜಿತಾಃ ಪ್ರಾಕ್।
ತಾನೇವ ಧರ್ಮಾನಯಮದ್ಯ ವಂದೀ
ಪ್ರಾಪ್ನೋತು ಗೃಹ್ಯಾಪ್ಸು ನಿಮಜ್ಜಯ್ಯೆನಮ್ ॥1॥
ಅಷ್ಟಾವಕ್ರ ಎಲೈ ರಾಜನಾದ ಜನಕನೇ ವಾದಕ್ಕಾಗಿ ಬಂದ ವಿದ್ವಾಂಸರಾದ ಬ್ರಾಹ್ಮಣರು ಈ ವಂದಿಯಿಂದಲೇ ಜಯಿಸಲ್ಪಟ್ಟು ಹಿಂದೆ ನೀರಿನಲ್ಲಿ ಮುಳುಗಿಸಲ್ಪಟ್ಟರು. ಈ ವಂದಿಯೂ ಸಹ ಈ ದಿನ ಅದೇ ಗತಿಯನ್ನು ಹೊಂದಲಿ. ಇವನನ್ನು ಹಿಡಿದು ನೀರಿನಲ್ಲಿ ಮುಳುಗಿಸು.
ವಂದೀ
ಅಹಂ ಪುತ್ರೋ ವರುಣಸ್ಯೋತ ರಾಜ್ಞಸ್ತತ್ರಾಸ
ಸತ್ರಂ ದ್ವಾದಶವಾರ್ಷಿಕಂ ವೈ।
ಸತ್ರೇಣ ತೇ ಜನಕ ತುಲ್ಯಕಾಲಂ ತದರ್ಥಂ
ತೇ ಪ್ರಹಿತಾ ಮೇ ದ್ವಿಜಾಗ್ರ್ಯಾಃ ॥2॥
ವಂದೀ ನಾನು ರಾಜನಾದ ವರುಣನ ಪುತ್ರ. ಎಲೈ ಜನಕನೇ ವರುಣ ಲೋಕದಲ್ಲಿ ನಿನ್ನ ಸತ್ರವು ನಡೆಯುವ ಸಮಾನ ಕಾಲದಲ್ಲಿಯೇ ಹನ್ನೆರಡು ವರ್ಷದ ಒಂದು ಸತ್ರವು ನಡೆಯುತ್ತಿದೆ. ಅದಕ್ಕಾಗಿ ನಾನು ಬ್ರಾಹ್ಮಣ ಶ್ರೇಷ್ಠರನ್ನು ಅಲ್ಲಿಗೆ ಕಳುಹಿಸಿದೆ.
ತೇ ತು ಸರ್ವೇ ವರುಣಸ್ಯೋತ ಯಜ್ಞಂ
ದೃಷ್ಟುಂ ಗತಾ ಇಮ(ಇಹ) ಆಯಾಂತಿ ಭೂಯಃ।
ಅಷ್ಟಾವಕ್ರಂ ಪೂಜಯೇಃ ಪೂಜನೀಯಂ
ಯಸ್ಯ ಹೇತೋರ್ಜನಿತಾರಂ ಸಮೇಷ್ಯೇ ॥3॥
ಅವರೆಲ್ಲರೂ ವರುಣನ ಯಜ್ಞವನ್ನು ನೋಡಿ ಯಜ್ಞದಲ್ಲಿಯೇ ಇಲ್ಲಿಗೆ ಹಿಂದಿರುಗುತ್ತಾರೆ. ಎಲೈ ರಾಜನೇ! ಪೂಜನೀಯನಾದ ಅಷ್ಟಾವಕ್ರನನ್ನು ಪೂಜಿಸು ಅವರ ನಿಮಿತ್ತದಿಂದಾಗಿ ನಾನು ನನ್ನ ತಂದೆಯ ಸಮಾಗಮವನ್ನು ಹೊಂದುತ್ತೇನೆ.
ವಿಪ್ರಾಃ ಸಮುದ್ರಾಂಭಸಿ ಮಜ್ಜಿತಾ ಯೇ
ವಾಚಾ ಜಿತಾ ಮೇಧಯಾ ವಾ ವಿದಾನಾಃ।
ತಾಂ ಮೇಧಯಾ ವಾಚಮಥೋಜ್ಜಹಾರ
ಯಥಾ ವಾಚಮವಚಿನ್ವಂತಿ ಸಂತಃ ॥4॥
ಅಷ್ಟಾವಕ್ರ ವಿದ್ವಾಂಸರಾದ ವಿಪ್ರರು ಈ ವಂದಿಯಿಂದ ಉಚ್ಚ ಸ್ವರದಿಂದಲಾಗಲೀ ಅಥವಾ ಊಹಾಪೋಹ ಶಕ್ತಿಯಿಂದಲಾಗಲೀ

ಸೋಲಿಸಲ್ಪಟ್ಟು ಸಮುದ್ರದ ನೀರಿನಲ್ಲಿ ಮುಳುಗಿಸಲ್ಪಟ್ಟಿದ್ದಾರೆ. ಅಂತಹ ವಂದಿಯನ್ನು ನಾನು ಪ್ರಸಿದ್ಧವಾದ ವೇದವಾಕ್ಯಗಳನ್ನು ಉದಾಹರಿಸಿ ನನ್ನ ಪ್ರತಿಭಾ ಬಲದಿಂದ ಸೋಲಿಸಿದ್ದೇನೆ. ಸಜ್ಜನರಾದವರು ಬಾಲಕರ ಬಾಯಿಂದ ಬಂದರೂ ಒಳ್ಳೆಯ ಮಾತುಗಳನ್ನು ಸಂಗ್ರಹಿಸಬೇಕು.

ಅಗ್ನಿರ್ದಹಂಜಾತವೇದಾಃ ಸತಾಂ ಗೃಹಾನ್

ವಿಸರ್ಜಯಂಸ್ತೇಜಸಾ ನ ಸ್ಮ ಧಾಕ್ಷೀತ್ |

ಬಾಲೇಷು ಪುತ್ರೇಷು ಕೃಪಣಂ ವದತ್ಸು

ತಥಾ ವಾಚಮವಚಿನ್ವಂತಿ ಸಂತಃ ॥5॥

ಸತ್ಯಾಸತ್ಯಗಳನ್ನು ವಿವೇಚಿಸುವ ಅಗ್ನಿಯು ಸತ್ಯಪರೀಕ್ಷೆಯನ್ನು ಮಾಡುವಾಗ ಸಜ್ಜನರ ಗೃಹಗಳಂತಿರುವ ಶರೀರಗಳನ್ನು ತನ್ನ ತೇಜಸ್ಸಿನಿಂದ ಸುಡುವುದಿಲ್ಲ (ಸಜ್ಜನರಿಗೆ ಗೌರವವನ್ನು ತೋರಿಸುತ್ತಾನೆ). ಅದರಂತೆ ಬಾಲಕರಾಗಲಿ, ಪುತ್ರರಾಗಲಿ ವಿನಯದಿಂದ ಒಳ್ಳೆಯ ಮಾತುಗಳನ್ನಾಡುವಾಗ ಸಜ್ಜನರು ಆ ಮಾತುಗಳನ್ನು ಸಂಗ್ರಹಿಸುತ್ತಾರೆ.

ಶ್ಲೇಷ್ಮಾತಕಃ ಕ್ಷೀಣವರ್ಚಾಃ ಶೃಣೋಷಿ

ಉತಾಹೋ ತ್ವಾಂ ಸ್ತುತಯೋ ಮಾದಯಂತಿ |

ಹಸ್ತೀವ ತ್ವಂ ಜನಕ  ವಿನುದ್ಯಮಾನೋ ನ

ಮಾಮಿಕಾಂ ವಾಚಮಿಮಾಂ ಶೃಣೋಷಿ ॥6॥

ಎಲೈ ರಾಜನೇ! ಕಾಂತಿಹೀನವಾದ ಅಪವಿತ್ರವಾದ ಶ್ಲೇಷ್ಮಾತಕ ವೃಕ್ಷದಂತೆ ಉನ್ನತ ಸ್ಥಾನದಲ್ಲಿ ಕುಳಿತು ನನ್ನ ಮಾತುಗಳನ್ನು ಕೇಳುತ್ತಿದ್ದೀಯಾ? ಅಥವಾ ನಿನ್ನ ವಂದಿ ಮಾಗದರು ಮಾಡುವ ಸ್ತೋತ್ರವು ನಿನಗೆ ಮದವನ್ನು ತಂದುಕೊಟ್ಟಿದೆಯೇ? ಎಲೈ ಜನಕನೇ! ಆನೆಯನ್ನು ಅಂಕುಶದಿಂದ ಚುಚ್ಚುವಂತೆ ನಿನ್ನನ್ನು ಚುಚ್ಚುತ್ತಿದ್ದರೂ ನನ್ನ ಈ ಮಾತುಗಳನ್ನು ನೀನು ಕೇಳುತ್ತಿಲ್ಲ.

ಜನಕಃ

ಶೃಣೋಮಿ ವಾಚಂ ತವ ದಿವ್ಯರೂಪಾ

ಮಮಾನುಷೀಂ ದಿವ್ಯರೂಪೋಽಸಿ ಸಾಕ್ಷಾತ್ |

ಅಜೈಷೀರ್ಯದ್ ವಂದಿನಂ ತ್ವಂ ವಿವಾದೇ

ನಿಸೃಷ್ಟ ಏಷ ತವ ಕಾಮೋಽದ್ಯ ವಂದೀ ॥7॥

ಜನಕ ಎಲೈ ಅಷ್ಟಾವಕ್ರರೇ! ತಮ್ಮ ಅಮಾನುಷವಾದ ದಿವ್ಯವಾದ ಮಾತುಗಳನ್ನು ಕೇಳುತ್ತಿದ್ದೇನೆ. ನೀವೂ ಸಹ ದಿವ್ಯವಾದ ರೂಪವನ್ನು ಧರಿಸಿದ್ದೀರಿ. ನೀವು ಈ ವಂದಿಯನ್ನು ವಾದದಲ್ಲಿ ಜಯಿಸಿದ ಕಾರಣದಿಂದಾಗಿ ಈ ವಂದಿಯ ಇಷ್ಟಾರ್ಥವು ನೆರವೇರಿದೆ. ನಿಮ್ಮ ಮಾತನ್ನು ನಾನು ನೆರವೇರಿಸುತ್ತೇನೆ.

ಅಷ್ಟಾವಕ್ರಃ

ತಾನೇನ ಜೀವತಾ ಕಶ್ಚಿದರ್ಥೋ ಮೇ ವಂದಿನಾ ನೃಪ |

ಪಿತಾ ಯದ್ಯಸ್ಯ ವರುಣೋ ಮಜ್ಜಯೈನಂ ಜಲಾಶಯೇ ॥8॥

ಅಷ್ಟಾವಕ್ರ ಎಲೈ ರಾಜನೇ! ಈ ವಂದಿಯು ಜೀವಿಸಿರುವುದರಿಂದ ನನಗೆ ಯಾವ ಪ್ರಯೋಜನವೂ ಆಗಬೇಕಾಗಿಲ್ಲ. ಇವನ ತಂದೆಯು ವರುಣನಾದರೆ, ಇವನನ್ನು ಜಲಾಶಯದಲ್ಲಿ ಮುಳುಗಿಸು.

ವಂದೀ

ಅಹಂ ಪುತ್ರೋ ವರುಣಸ್ಯೋತ ರಾಜ್ಞೋ

ನ ಮೇ ಭಯಂ ವಿದ್ಯತೇ ಮಜ್ಜಿತಸ್ಯ |

ಶಮಂ ಮುಹೂರ್ತಂ ಪಿತರಂ ದ್ರಕ್ಷ್ಯತೇಽಯ

ಮಷ್ಟಾವಕ್ರಶ್ಚಿರನಷ್ಟಂ  ಕಹೋಳಮ್ ॥9॥

ನಾನು ರಾಜನಾದ ವರುಣನ ಮಗ. ನೀರಿನಲ್ಲಿ ಮುಳುಗಿಸುವುದರಿಂದ ನನಗೆ ಭಯವಿಲ್ಲ. ಈ ಅಷ್ಟಾವಕ್ರರು ಇದೇ ಮುಹೂರ್ತದಲ್ಲಿ ಬಹಳ ಹಿಂದೆ ನಷ್ಟವಾದ ತಮ್ಮ ತಂದೆಯನ್ನು ನೋಡುತ್ತಾರೆ.

ಲೋಮಶಃ

ತತಸ್ತೇ ಪೂಜಿತಾ ವಿಪ್ರಾ ವರುಣೇನ ಮಹಾತ್ಮನಾ |

ಉದತಿಷ್ಠಂಸ್ತತಃ ಸರ್ವೇ ಜನಕಸ್ಯ ಸಮೀಪತಃ ॥10

ಲೋಮಶ ಆಗ ಹಿಂದೆ ಮುಳುಗಿಸಲ್ಪಟ್ಟ ಆ ಎಲ್ಲಾ ಬ್ರಾಹ್ಮಣರು ಮಹಾತ್ಮನಾದ ವರುಣನಿಂದ ಪೂಜಿಸಲ್ಪಟ್ಟವರಾಗಿ ಜನಕನ ಸಮೀಪದಲ್ಲಿ ಮೇಲೆದ್ದು ಬಂದರು.

ಕಹೋಲಃ

ಇತ್ಯರ್ಥಮಿಚ್ಛಂತಿ ಸುತಾನ್ ಜನಾ ಜನಕ ಕರ್ಮಣಾ |

ಯದಹಂ ನಾಶಕಂ ಕರ್ತುಂ ತತ್ಪುತ್ರಃ ಕೃತವಾನ್ ಮಮ ॥11॥

ಕಹೋಲ ಎಲೈ ಜನಕನೇ! ಇದಕ್ಕಾಗಿ ಜನರು ಮಕ್ಕಳನ್ನು ಅಪೇಕ್ಷಿಸುತ್ತಾರೆ. ನಾನು ಯಾವುದನ್ನು ಮಾಡಲು ಸಾಧ್ಯವಾಗಲಿಲ್ಲವೋ ಅದನ್ನು ನನ್ನ ಪುತ್ರನು ಮಾಡಿದ್ದಾನೆ.

ಉತಾಬಲಸ್ಯ ಬಲವಾನುತ ಬಾಲಸ್ಯ ಪಂಡಿತಃ |

ಉತ ವಾಽವಿದುಷೋ ವಿದ್ವಾನ್ ಪುತ್ರೋ ಜನಕ ಜಾಯತೇ ॥12॥

ಎಲೈ ಜನಕನೇ! ದುರ್ಬಲನಾದವನಿಗೆ ಬಲಿಷ್ಠನಾದವನು ಬಾಲಕನಂತಿರುವವನಿಗೆ ಪಂಡಿತನಾದವನು ಮತ್ತು

ವಿದ್ಯಾಹೀನನಾದವನಿಗೆ ವಿದ್ಯಾವಂತನಾದವನು ಪುತ್ರನಾಗಿ ಜನಿಸುತ್ತಾನೆ.
ವಂದೀ
ಸಿತೇನ ತೇ ಪರಶುನಾ ಸ್ವಯಮೇವಾಂತಕೋ ನೃಪ |
ಶಿರಾಂಸ್ಯಪಹರನ್ನಾಜೌ ರಿಪೂಣಾಂ ಭದ್ರಮಸ್ತು ತೇ ||13
ವಂದೀ ಎಲೈ ರಾಜನೇ ನಿನ್ನ ಪುಣ್ಯಕೀರ್ತಿಯೆಂಬ ಪರಿಶುದ್ಧವಾದ ಪರ್ಶಮನಿಂದ ಯುದ್ಧದಲ್ಲಿ ಶತ್ರುಗಳ ತಲೆಯನ್ನು ಸವೆಯುತ್ತಾ ಮಂಗಳವನ್ನು ಹೊಂದುವವನಾಗು.
ಮಹದುಕ್ಥ್ಯಂ ಗೀಯತೇ ಸಾಮ ಚಾಗ್ರ್ಯಂ
ಸಮ್ಯಕ್ಸೋಮಃ ಪೀಯತೇ ಚಾತ್ರ ಸತ್ರೇ |
ಶುಚೀನ್ ಭಗಾನ್ ಪ್ರತಿಜಗೃಹುಶ್ಚ ಹೃಷ್ಟಾಃ
ಸಾಕ್ಷಾದ್ ದೇವಾ ಜನಕಸ್ಯೇವ ರಾಜ್ಞಃ ||14||
ಎಲೈ ಜನಕನೇ! ನಿನ್ನ ಸತ್ರದಲ್ಲಿ ಮುಖ್ಯಪ್ರಾಣನನ್ನು ಹೊಗಳುವ ಶ್ರೇಷ್ಠವಾದ ಸಾಮವು ಗಾನ ಮಾಡಲ್ಪಡುತ್ತದೆ. ಇಂದ್ರ ಮೊದಲಾದ ದೇವತೆಗಳು ಚೆನ್ನಾಗಿ ಸೋಮಪಾನ ಮಾಡುತ್ತಾರೆ. ಜನಕರಾಜನಾದ ನಿನ್ನ ಯಜ್ಞದಲ್ಲಿ ದೇವತೆಗಳು ಸಾಕ್ಷಾತ್ತಾಗಿ ಶುದ್ಧವಾದ ತಮ್ಮ ತಮ್ಮ ಭಾಗಗಳನ್ನು ಸಂತೋಷದಿಂದ ಸ್ವೀಕರಿಸಿದ್ದಾರೆ.
ಲೋಮಶಃ
ಸಮುತ್ಥಿತೇಷ್ವಥ ಸರ್ವೇಷು ರಾಜನ್
ವಿಪ್ರೇಷು ತೇಷ್ವಧಿಕಂ ಸುಪ್ರಭೇಷು |
ಅನುಜ್ಞಾತೋ ಜನಕೇನಾಥ ರಾಜ್ಞಾ
ವಿವೇಶ ತೋಯಂ ಸಾಗರಸ್ಯೋತ ವಂದೀ ||15||
ಲೋಮಶ ಎಲೈ ರಾಜನಾದ ಯುಧಿಷ್ಠಿರನೇ! ಆ ಬ್ರಾಹ್ಮಣರೆಲ್ಲರೂ ಮೊದಲಿಗಿಂತ ಹೆಚ್ಚು ಕಾಂತಿಯುಕ್ತರಾಗಿ ನೀರಿನಿಂದ ಮೇಲೆದ್ದು ಬರುತ್ತಿರಲು ವಂದಿಯು ಜನಕರಾಜನ ಅನುಮತಿಯನ್ನು ಪಡೆದು ಸಮುದ್ರದ ಜಲವನ್ನು ಪ್ರವೇಶಿಸಿದನು.
ಅಷ್ಟಾವಕ್ರಃ ಪಿತರಂ ಪೂಜಯಿತ್ವಾ
ಸಂಪೂಜಿತೋ ಬ್ರಾಹ್ಮಣೈಸ್ತೈರ್ಯಥಾವತ್ |
ಪ್ರತ್ಯಾಜಗಾಮಾಶ್ರಮಮೇವ ಚಾಗ್ರ್ಯಂ
ಜಿತ್ವಾ ಸೌತಿಂ ಸಹಿತೋ ಮಾತುಲೇನ ||16||
ಅಷ್ಟಾವಕ್ರರಾದರೂ ತಮ್ಮ ತಂದೆಯನ್ನು ಪೂಜಿಸಿ ಆ ಬ್ರಾಹ್ಮಣರಿಂದ ಚೆನ್ನಾಗಿ ಪೂಜಿಸಲ್ಪಟ್ಟು, ಸೂತಪುತ್ರನಾದ ವಂದಿಯನ್ನು ವಾದದಲ್ಲಿ ಸೋಲಿಸಿ ತಮ್ಮ ಸೋದರಮಾವನ ಜೊತೆಯಲ್ಲಿ ತಮ್ಮ ಶ್ರೇಷ್ಠವಾದ ಆಶ್ರಮಕ್ಕೆ ಹಿಂದಿರುಗಿದರು.
ತತೋಽಷ್ಟಾವಕ್ರಮಾತುರಥಾಂತಿಕೇ ಪಿತಾ
ನದೀಂ ಸಮಂಗಾಂ ಶೀಘ್ರಮಿಮಾಂ ವಿಶಸ್ವ
ಪ್ರೋವಾಚ ಚೈನಂ ಸ ತಥಾ ವಿವೇಶ
ಸಮೈರಂಗೈಶ್ಚಾಪಿ ಬಭೂವ ಸದ್ಯಃ ||17||
ಅನಂತರ ಅಷ್ಟಾವಕ್ರರನ್ನು ಕುರಿತು ಅವರ ತಾಯಿಯ ಸಮೀಪದಲ್ಲಿ ತಂದೆಯಾದ ಕಹೋಲರು ಈ ಸಮಂಗಾನದಿಯನ್ನು ಶೀಘ್ರವಾಗಿ ಪ್ರವೇಶಿಸಿ ಎಂದು ಹೇಳಿದರು. ಅಷ್ಟಾವಕ್ರರು ಹಾಗೆಯೇ ನೀರಿನಲ್ಲಿ ಪ್ರವೇಶ ಮಾಡಿ ಮುಳುಗಿ ತಕ್ಷಣದಲ್ಲಿಯೇ ತಮ್ಮ ಎಲ್ಲಾ ವಕ್ರತೆಯನ್ನು ಕಳೆದುಕೊಂಡು ಒಳ್ಳೆಯ ಅವಯವಗಳಿಂದ ಯುಕ್ತರಾದರು.
ನದೀ ಸಮಂಗಾ ಚ ಬಭೂವ ಪುಣ್ಯಾ
ಯಸ್ಯಾಂ ಸ್ನಾತೋ ಮುಚ್ಯತೇ ಕಿಲ್ಬಿಷಾದ್ಧಿ |
ತ್ವಮಪ್ಯೇನಾಂ ಸ್ನಾನಪಾನಾವಗಾಹೈಃ
ಸಭ್ರಾತೃಕಃ ಸಹ ಭಾರ್ಯೋ ವಿಶಸ್ವ ||18||
ಎಲೈ ರಾಜನೇ! ಅದರಿಂದಾಗಿ ಈ ಪವಿತ್ರವಾದ ನದಿಯು ಸಮಂಗಾ ಎಂಬ ಹೆಸರನ್ನು ಹೊಂದಿದ್ದು ಇದರಲ್ಲಿ ಸ್ನಾನವನ್ನು ಮಾಡಿದವರು ಪಾಪಗಳಿಂದ ಮುಕ್ತರಾಗುತ್ತಾರೆ. ನೀನೂ ಸಹ ತಮ್ಮಂದಿರು ಮತ್ತು ಪತ್ನಿಯ ಜೊತೆಯಲ್ಲಿ ಈ ನದಿಯಲ್ಲಿ ಸ್ನಾನ, ಪಾನ, ಅವಗಾಹಗಳನ್ನು ಮಾಡಲು ನದಿಯನ್ನು ಪ್ರವೇಶಿಸು.
ಅತ್ರ ಕೌಂತೇಯ ಸಹಿತೋ ಭ್ರಾತೃಭಿಸ್ತ್ವಂ
ಸುಖೋಷಿತಃ ಸಹ ವಿಪ್ರೈಃ ಪ್ರತೀತಃ |
ಪುಣ್ಯಾನ್ಯನ್ಯಾನಿ ಶುಚಿಕರ್ಮೈಕಭಕ್ತಿ
ರ್ಮಯಾ ಸಾರ್ಧಂ ಚರಿತಾಸ್ಯಾಜಮೀಢ ||19||
ಎಲೈ ಕೌಂತೇಯನಾದ ಯುಧಿಷ್ಠಿರನೇ! ನೀನು ಇಲ್ಲಿ ವಿಪ್ರರಿಂದ ಸನ್ಮಾನಿಸಲ್ಪಟ್ಟು ತಮ್ಮಂದಿರ ಜೊತೆಯಲ್ಲಿ ಸುಖವಾಗಿ ಕಾಲವನ್ನು ಕಳೆದಿದ್ದೀಯೇ. ಎಲೈ ಆಜಮೀಢನೇ! ಶ್ರೇಷ್ಠವಾದ ಭಕ್ತಿಯನ್ನು ಹೊಂದಿ ಶುದ್ಧವಾದ ಕರ್ಮಗಳನ್ನು ಆಚರಿಸುವ ನೀನು ನನ್ನ ಜೊತೆಯಲ್ಲಿ ಪವಿತ್ರವಾದ ಇನ್ನೂ ಕೆಲವು ತೀರ್ಥಕ್ಷೇತ್ರಗಳನ್ನು ಸಂಚರಿಸುವವನಾಗಿವಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕತ್ರಿಂಶತ್ಯಧಿಕಶತತಮೋಽಧ್ಯಾಯಃ ||
|| ಇತಿ ತೀರ್ಥಯಾತ್ರಾಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತೆರಡನೆಯ ಅಧ್ಯಾಯ
ಕರ್ದಮಿಲಾದಿ ತೀರ್ಥಗಳ ಮಹಾತ್ಮೆ. ರೈಭ್ಯ ಯವಕ್ರೀತರ ಕಥೆ.
ಯವಕ್ರೀತನ ದುರಾಗ್ರಹ ಮತ್ತು ಬಾಲದಿಯ ಉಪಾಖ್ಯಾನ.
ಲೋಮಶಃ
ಏಷಾ ಮಧುವಿಲಾ ರಾಜನ್ ಸಮಂಗಾ ಸಂಪ್ರಕಾಶತೇ |
ಏತದ್ ಕರ್ದಮಿಲಂ ನಾಮ ಭರತಸ್ಯಾಭಿಷೇಚನಮ್ ॥1॥
ಲೋಮಶ ಎಲೈ ರಾಜನೇ! ಇಲ್ಲಿ ಸಮಂಗಾನದಿಯು ಶೋಭಿಸುತ್ತಿದೆ. ಇದಕ್ಕೆ ಮೊದಲು ಮಧುವಿಲಾ ಎಂದು ಹೆಸರು. ಇಲ್ಲಿರುವುದು ಕರ್ದಮಿಲ ಎಂಬ ತೀರ್ಥ.ಇದು ಭರತನಿಗೆ ಅಭಿಷೇಕ ಮಾಡಿದ ಸ್ಥಳ.
ಅಲಕ್ಷ್ಮ್ಯಾ ಕಿಲ ಸಂಯುಕ್ತೋ ವೃತ್ರಂ ಹತ್ವಾ ಶಚೀಪತಿಃ |
ಆಪ್ಲುತಃ ಸರ್ವಪಾಪೇಭ್ಯಃ ಸಮಂಗಾಯಾಂ ವ್ಯಮುಚ್ಯತ ॥2॥
ಶಚೀಪತಿಯಾದ ಇಂದ್ರನು ವೃತ್ರನನ್ನು ಸಂಹಾರ ಮಾಡಿ ಅಲಕ್ಷ್ಮಿಯಿಂದ ಕೂಡಿದವನಾಗಿ ಈ ಸಮಂಗಾನದಿಯಲ್ಲಿ ಸ್ನಾನವನ್ನು ಮಾಡಿ ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾದನು.
ಏತದ್ ವಿನಶನಂ ಕುಕ್ಷೌ ಮೈನಾಕಸ್ಯ ನರರ್ಷಭ |
ಅದಿತಿರ್ಯತ್ರ ಪುತ್ರಾರ್ಥಂ ತದನ್ನಮಪಚತ್ ಪುರಾ ॥3॥
ಎಲೈ ಪುರುಷಶ್ರೇಷ್ಠನೇ! ಇದು ಮೈನಾಕಪರ್ವತದ ಒಳಭಾಗದಲ್ಲಿರುವ ವಿನಶನ ಎಂಬ ಕ್ಷೇತ್ರ. ಇಲ್ಲಿ ಹಿಂದೆ ಅದಿತಿಯು ಮಕ್ಕಳನ್ನು ಪಡೆಯುವ ಸಲುವಾಗಿ ಸಾಧ್ಯರನ್ನು ಉದ್ದೇಶಿಸಿ ಹವಿಷ್ಯಾನ್ನವನ್ನು ಮಾಡಿದಳು.
ಏನಂ ಪರ್ವತರಾಜಾನಮಾರುಹ್ಯ ಭರತರ್ಷಭಾಃ |
ಅಯಶಸ್ಯಾಮಸಂಶಬ್ದ್ಯಾಮಲಕ್ಷ್ಮೀಂ ವ್ಯಪನೋತ್ಸ್ಯಥ |
ಏತೇ ಕನಖಲಾ ರಾಜನ್ ಋಷೀಣಾಂ ದಯಿತಾ ನಗಾಃ ॥4॥
ಎಲೈ ಭರತಶ್ರೇಷ್ಠರೇ! ಈ ಮೈನಾಕಪರ್ವತವನ್ನು ಏರಿ ನೀವು ಅಪಕೀರ್ತಿಯನ್ನೂ ಶಬ್ದದಿಂದ ಹೇಳಲು ಸಾಧ್ಯವಿಲ್ಲದಂತಹ ಅಸಹ್ಯವಾದ ಅಲಕ್ಷ್ಮಿಯನ್ನೂ ಕಳೆದುಕೊಳ್ಳುವಿರಿ. ಎಲೈ ರಾಜನೇ! ಇವುಗಳು ಋಷಿಗಳಿಗೆ ಪ್ರಿಯವಾದ ಕನಖಲ ಎಂಬ ಪರ್ವತಗಳು.
ಏಷಾ ಪ್ರಕಾಶತೇ ಗಂಗಾ ಯುಧಿಷ್ಠಿರ ಮಹಾನದೀ |
ಸನತ್ಕುಮಾರೋ ಭಗವಾನತ್ರ ಸಿದ್ಧಿಮಗಾತ್ ಪುರಾ ॥5॥
ಆಜಮೀಢಾವಗಾಹ್ಯೈನಾಂ ಸರ್ವಪಾಪೈಃ ಪ್ರಮೋಕ್ಷ್ಯಸೇ ॥6॥
ಎಲೈ ಯುಧಿಷ್ಠಿರನೇ! ಈ ಮಹಾನದಿಯಾದ ಗಂಗೆಯು ಶೋಭಿಸುತ್ತಿದೆ. ಇಲ್ಲಿ ಹಿಂದೆ ಪೂಜ್ಯರಾದ ಸನತ್ಕುಮಾರರು ತಪಸ್ಸಿದ್ಧಿಯನ್ನು ಪಡೆದರು. ಎಲೈ ಆಜಮೀಢನೇ! ಇಲ್ಲಿ ಸ್ನಾನವನ್ನು ಮಾಡಿ ನೀನು ಸರ್ವಪಾಪಗಳಿಂದಲೂ ನಿರ್ಮುಕ್ತನಾಗುವಿ.
ಅಪಾಂ ಹ್ರದಂ ಚ ಪುಣ್ಯಾಖ್ಯಂ ಭೃಗುತುಂಗಂ ಚ ಪರ್ವತಮ್ |
ಉಷ್ಣೀಗಂಗೇ ಚ ಕೌಂತೇಯ ಸಾಮಾತ್ಯಃ ಸಮುಪಸ್ಪೃಶ ॥7॥
ಇದು ಪುಣ್ಯ ಎಂಬ ಹೆಸರಿನ ಆಳವಾದ ಸರೋವರ. ಇದು ಭೃಗುತುಂಗ ಎಂಬ ಪರ್ವತ. ಇವು ಉಷ್ಣ ಮತ್ತು ಶೀತಲ ಗಂಗೆಗಳು. ಎಲೈ ಕೌಂತೇಯನೇ! ಅಮಾತ್ಯರಿಂದ ಒಡಗೂಡಿ ಇಲ್ಲಿ ಸ್ನಾನವನ್ನು ಮಾಡು.
ಆಶ್ರಮಃ ಸ್ಥೂಲಶಿರಸೋ ರಮಣೀಯಃ ಪ್ರಕಾಶತೇ |
ಅತ್ರ ಮಾನಂ ಚ ಕೌಂತೇಯ ಕ್ರೋಧಂ ಚೈವ ವಿವರ್ಜಯ ॥8॥
ಸ್ಥೂಲಶಿರಸ್ ಋಷಿಗಳ ಸುಂದರವಾದ ಈಆಶ್ರಮವು ಶೋಭಿಸುತ್ತಿದೆ. ಎಲೈ ಕೌಂತೇಯನೇ! ಇಲ್ಲಿ ಗರ್ವವನ್ನು ಮತ್ತು ಕ್ರೋಧವನ್ನು ತ್ಯಜಿಸು.
ಏಷ ರೈಭ್ಯಾಶ್ರಮಃ ಶ್ರೀಮಾನ್ ಪಾಂಡವೇಯ ಪ್ರಕಾಶತೇ |
ಭಾರದ್ವಾಜೋ ಯತ್ರ ಕವಿರ್ಯವಕ್ರೀತೋ ವ್ಯನಶ್ಯತ ॥9॥
ಎಲೈ ಪಾಂಡವೇಯನೇ! ಇಲ್ಲಿ ಪ್ರಕಾಶಿಸುತ್ತಿರುವುದು ಕಾಂತಿಯುಕ್ತವಾದ ರೈಭ್ಯಾಶ್ರಮ. ಭರದ್ವಾಜರ ಪುತ್ರನಾದ ಕವಿಯಾದ ಯವಕ್ರೀತನು ಇಲ್ಲಿ ನಾಶವನ್ನು ಹೊಂದಿದನು.
ಈ ಆಶ್ರಮವು ಅನೇಕ ಫಲ-ಪುಷ್ಪಗಳಿಂದ ಶೋಭಿತವಾಗಿ, ಅನೇಕ ಪಕ್ಷಿಗಳ ಘೋಷದಿಂದ ಕೂಡಿದ್ದಾಗ ತಾಪಸರಿಗೆ ಆಶ್ರಯವಾಗಿ ಶ್ರೇಷ್ಠವಾಗಿದೆ.
ಯುಧಿಷ್ಠಿರಃ
ಕಥಂ ಯುಕ್ತೋಽಭವದೃಷಿರ್ಭರದ್ವಾಜಃ ಪ್ರತಾಪವಾನ್ |
ಕಿಮರ್ಥಂ ಚ ಯವಕ್ರೀತಃ ಪುತ್ರೋಽನಶ್ಯತ ವೈ ಮುನೇಃ ॥10॥
ಯುಧಿಷ್ಠಿರ ಪ್ರತಾಪಶಾಲಿಗಳಾದ ಭರದ್ವಾಜ ಋಷಿಗಳು ಇಲ್ಲಿ ಎಂತಹ ಯೋಗವನ್ನು ಮಾಡಿದರು? ಆ ಋಷಿಗಳ ಪುತ್ರನಾದ ಯವಕ್ರೀತನು ಏಕೆ ನಾಶವನ್ನು ಹೊಂದಿದನು?
ಏತತ್ ಸರ್ವಂ ಯಥಾವೃತ್ತಂ ಶ್ರೋತುಮಿಚ್ಛಾಮಿ ತತ್ತ್ವತಃ |
ಕರ್ಮಭಿರ್ದೇವಕಲ್ಪಾನಾಂ ಕೀರ್ತ್ಯಮಾನೈರ್ಭೃಶಂ ರಮೇ ॥11॥
ಈ ಎಲ್ಲಾ ವೃತ್ತಾಂತವನ್ನೂ ಯಥಾರ್ಥವಾಗಿ ಕೇಳಲು ಬಯಸುತ್ತೇನೆ. ದೇವತೆಗಳಿಗೆ ಸಮಾನರಾದ ಇಂತಹ ಋಷಿಗಳ ಕರ್ಮಗಳನ್ನು

ನೀನು ಕೀರ್ತಿಸುತ್ತಿರಲು ನಾನು ಅದನ್ನು ಕೇಳಿ ಬಹಳ ಸಂತೋಷಗೊಂಡಿದ್ದೇನೆ.
ಲೋಮಶಃ
ಭರದ್ವಾಜಶ್ಚ ರೈಭ್ಯಶ್ಚ ಸಖಾಯೌ ಸಂಬಭೂವತುಃ |
ತಾವೂಷತುರಿಹಾತ್ಯಂತಂ ಪ್ರೀಯಮಾಣಾವನಂತರಮ್ ॥12॥
ಲೋಮಶ ಭರದ್ವಾಜ ಮತ್ತು ರೈಭ್ಯರಿಬ್ಬರು ಸ್ನೇಹಿತರಾಗಿದ್ದರು. ಅವರಿಬ್ಬರೂ ಪರಸ್ಪರ ಪ್ರೀತಿಯಿಂದ ಒಬ್ಬರನ್ನೊಬ್ಬರು ಅಗಲದೆ ಇಲ್ಲಿ ವಾಸವನ್ನು ಮಾಡುತ್ತಿದ್ದರು.
ರೈಭ್ಯಸ್ಯ ತು ಸುತಾವಾಸ್ತಾಮರ್ವಾವಸುಪರಾವಸೂ |
ಆಸೀದ್ ಯವಕ್ರೀಃ ಪುತ್ರಸ್ತು ಭರದ್ವಾಜಸ್ಯ ಭಾರತ ॥13॥
ರೈಭ್ಯರಿಗೆ ಅರ್ವಾವಸು ಮತ್ತು ಪರಾವಸು ಎಂಬ ಇಬ್ಬರು ಮಕ್ಕಳು. ಭರದ್ವಾಜರಿಗಾದರೂ ಯವಕ್ರೀತನೆಂಬ ಒಬ್ಬನೇ ಮಗ.
ರೈಭ್ಯೋ ವಿದ್ವಾನ್ ಸಹಾಪತ್ಯಸ್ತಪಸ್ವೀ ಚೇತರೋಽಭವತ್ |
ತಯೋಶ್ಚಾಪ್ಯತುಲಾ ಪ್ರೀತಿರ್ಬಾಲ್ಯಾತ್ ಪ್ರಭೃತಿ ಭಾರತ ॥14॥
ರೈಭ್ಯರು ಮತ್ತು ಅವರ ಮಕ್ಕಳು ವಿದ್ವಾಂಸರಾಗಿದ್ದರು. ಭರದ್ವಾಜರು ಮಾತ್ರ ತಪಸ್ಸಿನಲ್ಲಿಯೇ ನಿರತರಾಗಿದ್ದರು. ಎಲ್ಲೈ ಭಾರತನೇ! ಅವರಿಬ್ಬರಿಗೂ ಬಾಲ್ಯದಿಂದಲೂ ಪರಸ್ಪರವಾಗಿ ಅಸದೃಶವಾದ ಪ್ರೀತಿಯಿದ್ದಿತು.
ಯವಕ್ರೀಃ ಪಿತರಂ ದೃಷ್ಟ್ವಾ ತಪಸ್ವಿನಮಸತ್ಕೃತಮ್ |
ದೃಷ್ಟ್ವಾ ಚ ಸತ್ಕೃತಂ ವಿಪ್ರೈ ರೈಭ್ಯಂ ಪುತ್ರೈಃ ಸಹಾನಘ ॥15॥
ಪರ್ಯತಪ್ಯತ ತೇಜಸ್ವೀ ಮನ್ಯುನಾಽಭಿಪರಿಪ್ಲುತಃ |
ತಪಸ್ತೇಪೇ ತತೋ ಘೋರಂ ವೇದಜ್ಞಾನಾಯ ಪಾಂಡವ ॥16॥
ಯವಕ್ರೀತನು ತನ್ನ ತಂದೆಯಾದ ಭರದ್ವಾಜರು ತಪಸ್ವಿಗಳಾಗಿ ಯಾವ ಸತ್ಕಾರವನ್ನು ಪಡೆಯದಿರುವುದನ್ನೂ, ರೈಭ್ಯರು ಮತ್ತು ಅವನ ಮಕ್ಕಳು ಎಲ್ಲ ಬ್ರಾಹ್ಮಣರಿಂದಲೂ ಸತ್ಕಾರವನ್ನು ಪಡೆಯುವುದನ್ನೂ ನೋಡಿ ಪರಿತಪಿಸಿದನು.
ಎಲ್ಲೈ ಅನಘನಾದ ಪಾಂಡವನೇ! ತೇಜಸ್ವಿಯಾದ ಅವನು ಕೋಪದಿಂದ ಕೂಡಿದವನಾಗಿ ವೇದಜ್ಞಾನವನ್ನು ಪಡೆಯುವ ಉದ್ದೇಶದಿಂದ ಘೋರವಾದ ತಪಸ್ಸನ್ನು ಆಚರಿಸಿದನು.
ಸ ಸಮಿದ್ಧೇ ಮಹತ್ಯಗ್ನೌ ಶರೀರಮುಪತಾಪಯನ್ |
ಜನಯಾಮಾಸ ಸಂತಾಪಮಿಂದ್ರಸ್ಯ ಸುಮಹಾತಪಾಃ ॥17॥
ಅವನು ಉರಿಯುತ್ತಿರುವ ದೊಡ್ಡ ಅಗ್ನಿಯ ಸಮೀಪದಲ್ಲಿ ತನ್ನ ಶರೀರವನ್ನು ಒಡ್ಡಿ ದೊಡ್ಡ ತಪಸ್ಸನ್ನು ಮಾಡುತ್ತಾ ಇಂದ್ರನಿಗೆ ಸಂತಾಪವನ್ನುಂಟು ಮಾಡಿದನು.
ತತ ಇಂದ್ರೋ ಯವಕ್ರೀತಮುಪಗಮ್ಯ ಯುಧಿಷ್ಠಿರ |
ಅಬ್ರುವೀತ್ ಕಸ್ಯ ಹೇತೋಸ್ತ್ವಮಾಸ್ಥಿತಸ್ತಪ ಉತ್ತಮಮ್ ॥18॥
ಎಲ್ಲೈ ಯುಧಿಷ್ಠಿರನೇ! ಆಗ ಇಂದ್ರನು ಯವಕ್ರೀತನ ಸಮೀಪಕ್ಕೆ ಬಂದು ಯಾವ ಉದ್ದೇಶದಿಂದ ಇಂತಹ ಶ್ರೇಷ್ಠವಾದ ತಪಸ್ಸನ್ನು ಆಚರಿಸುತ್ತಿದ್ದೀಯೆ ಎಂದು ಕೇಳಿದನು.
ಯವಕ್ರೀತಃ
ದ್ವಿಜಾನಾಮನಧೀತಾ ವೈ ವೇದಾಃ ಸುರಗಣಾರ್ಚಿತ |
ಪ್ರತಿಭಾಂತ್ವಿತಿ ತಪ್ಯೇಽಹಮಿದಂ ಪರಮಕಂ ತಪಃ ॥19॥
ಯವಕ್ರೀತ ಎಲ್ಲೈ ಸುರಗಣಾರ್ಚಿತನಾದ ಇಂದ್ರನೇ! ಬೇರೆ ಬ್ರಾಹ್ಮಣರು ಅಧ್ಯಯನ ಮಾಡದಿರುವ ವೇದವು ನನಗೆ ಪ್ರತಿಭಾತವಾಗಬೇಕೆಂಬ ಉದ್ದೇಶದಿಂದ ಈ ಶ್ರೇಷ್ಠವಾದ ತಪಸ್ಸನ್ನು ಮಾಡುತ್ತಿದ್ದೇನೆ.
ಸ್ವಾಧ್ಯಾಯಾರ್ಥಂ ಸಮಾರಂಭೋ ಮಮಾಯಂ ಪಾಕಶಾಸನ |
ತಪಸಾ ಜ್ಞಾತುಮಿಚ್ಛಾಮಿ ಸರ್ವಜ್ಞಾನಾನಿ ಕೌಶಿಕ ॥20॥
ಎಲ್ಲೈ ಪಾಕಶಾಸನನೇ! ವೇದಜ್ಞಾನವನ್ನು ಪಡೆಯುವ ಸಲುವಾಗಿ ನನ್ನ ಈ ಪ್ರಯತ್ನವಿದೆ. ಎಲ್ಲೈ ಕೌಶಿಕನೇ! ನಾನು ತಪಸ್ಸಿನ ಬಲದಿಂದ ಎಲ್ಲಾ ಜ್ಞಾನವನ್ನು ಪಡೆಯಲು ಇಚ್ಛಿಸುತ್ತೇನೆ.
ಕಾಲೇನ ಮಹತಾ ವೇದಾಃ ಶಕ್ಯಾ ಗುರುಮುಖಾದ್ ವಿಭೋ |
ಪ್ರಾಪ್ತುಂ ತಸ್ಮಾದಯಂ ಯತ್ನಃ ಪರಮೋ ಮೇ ಸಮಾಸ್ಥಿತಃ ॥21॥
ಎಲ್ಲೈ ವಿಭುವೇ! ಗುರುಮುಖದಿಂದ ವೇದಗಳನ್ನು ಅಧ್ಯಯನ ಮಾಡುವುದಕ್ಕೆ ಬಹಳ ಕಾಲವು ಬೇಕಾಗುತ್ತದೆ. ಆದ್ದರಿಂದ ಅದಿಲ್ಲದೇ ವೇದಜ್ಞಾನವನ್ನು ಪಡೆಯಲು ಇಂತಹ ಶ್ರೇಷ್ಠವಾದ ಪ್ರಯತ್ನವನ್ನು ಮಾಡುತ್ತಿದ್ದೇನೆ.
ಇಂದ್ರಃ
ಅಮಾರ್ಗ ಏಷ ವಿಪ್ರರ್ಷೇ ಯೇನ ತ್ವಂ ಯಾತುಮಿಚ್ಛಸಿ |
ಕಿಂ ವಿಘಾತೇನ ತೇ ವಿಪ್ರ ಗಚ್ಛಾಧೀಹಿ ಗುರೋರ್ಮುಖಾತ್ ॥22॥
ಇಂದ್ರ ಎಲ್ಲೈ ವಿಪ್ರರ್ಷಿಯೇ! ನೀನು ಯಾವ ಮಾರ್ಗದಿಂದ ಹೋಗಲು ಬಯಸುತ್ತೀಯೋ ಅದು ಸರಿಯಾದ ಮಾರ್ಗವಲ್ಲ. ಶರೀರವನ್ನು ಏಕೆ ವ್ಯರ್ಥವಾಗಿ ಘಾಸಿಗೊಳಿಸುತ್ತಿದ್ದೀಯೆ? ಎಲ್ಲೈ ವಿಪ್ರನೇ! ಹೋಗಿ ಗುರುಮುಖದಿಂದ ಅಧ್ಯಯನವನ್ನು ಮಾಡು.
ಲೋಮಶಃ
ಏವಮುಕತ್ವ ಗತಃ ಶಕ್ರೋ ಯವಕ್ರೀರಪಿ ಭಾರತ |
ಭೂಯ ಏವಾಕರೋದ್ ಯತ್ನಂ ತಪಸ್ಯಮಿತವಿಕ್ರಮಃ ॥23॥

ಲೋಮಶ ಎಲೈ ಭಾರತನೇ! ಹೀಗೆ ಹೇಳಿ ಇಂದ್ರನು ಹೊರಟು ಹೋದನು. ಅಮಿತವಿಕ್ರಮನಾದ ಯವಕ್ರೀತನಾದರೂ ಇನ್ನೂ ಉಗ್ರವಾದ ತಪಸ್ಸನ್ನು ಮಾಡಲು ಪ್ರಯತ್ನವನ್ನು ಮಾಡಿದನು.
ಘೋರೇಣ ತಪಸಾ ರಾಜಂಸ್ತಪ್ಯಮಾನೋ ಮಹತ್ತಪಃ |
ಸಂತಾಪಯಾಮಾಸ ಭೃಶಂ ದೇವೇಂದ್ರಮಿತಿ ನಃ ಶ್ರುತಮ್ ॥24॥
ತಂ ತಥಾ ತಪ್ಯಮಾನಂ ತು ತಪಸ್ತೀವ್ರಂ ಮಹಾಮುನಿಮ್ |
ಉಪೇತ್ಯ ಬಲಭಿದ್ ದೇವೋ ವಾರಯಾಮಾಸ ವೈ ಪುನಃ ॥25॥
ಅವನು ತನ್ನ ತಪಸ್ಸಿನಿಂದ ದೇವೇಂದ್ರನನ್ನೂ ಸಂತಾಪ ಪಡಿಸಿದನೆಂದು ನಾವು ಕೇಳಿದ್ದೇವೆ. ಹಾಗೆಯೇ ತೀವ್ರವಾದ ತಪಸ್ಸನ್ನು ಆಚರಿಸುತ್ತಿರುವ ಆ ಮಹಾಮುನಿಯ ಸಮೀಪಕ್ಕೆ ಇಂದ್ರನು ಪುನಃ ಬಂದು ಅವನ ತಪಸ್ಸನ್ನು ತಡೆಯುವ ಪ್ರಯತ್ನವನ್ನು ಮಾಡಿದನು.
ಇಂದ್ರಃ
ಅಶಕ್ಯೋಽರ್ಥಃ ಸಮಾರಬ್ಧೋ ನೈತದ್ ಬುದ್ಧಿಕೃತಂ ತವ |
ಪ್ರತಿಭಾಸ್ಯಂತಿ ವೈ ವೇದಾಸ್ತವ ಚೈವ ಪಿತುಶ್ಚ ತೇ ॥26॥
ಇಂದ್ರ ನೀನು ಅಸಾಧ್ಯವಾದುದನ್ನು ಸಾಧಿಸಲು ಹೊರಟಿದ್ದೀಯೆ. ನಿನ್ನ ಈ ಬುದ್ಧಿಯು ಸರಿಯಾದುದಲ್ಲ. ಈ ರೀತಿಯಲ್ಲಿ ನಿನಗಾಗಲೀ ಅಥವಾ ನಿನ್ನ ತಂದೆಗಾಗಲೀ ವೇದಗಳು ಪ್ರತಿಭಾತವಾಗುವುದಿಲ್ಲ.
ಯವಕ್ರೀತಃ
ನ ಚೈತದೇವಂ ಕ್ರಿಯತೇ ದೇವರಾಜ ಮಮೇಪ್ಸಿತಮ್ |
ಮಹತಾ ನಿಯಮೇನಾಹಂ ತಪ್ಸ್ಯೇ ಘೋರತರಂ ತಪಃ ॥27॥
ಯವಕ್ರೀತ ಎಲೈ ದೇವರಾಜನೇ! ನೀನು ನನ್ನ ಅಭೀಷ್ಟವನ್ನು ನೆರವೇರಿಸದಿದ್ದರೆ ಇನ್ನೂ ಹೆಚ್ಚು ನಿಯಮಗಳಿಂದ ಇದಕ್ಕಿಂತ ಘೋರವಾದ ತಪಸ್ಸನ್ನು ಆಚರಿಸುವೆನು.
ಸಮಿದ್ಧೇಽಗ್ನಾವುಪಕೃತ್ಯಾಂಗಮಂಗಂ
ಹೋಷ್ಯಾಮಿ ವಾ ಮಘವಂಸ್ತನ್ನಿಬೋಧ |
ಯದ್ಯೇತದೇವಂ ನ ಕರೋಷಿ ಕಾಮಂ
ಮಮೇಪ್ಸಿತಂ ದೇವರಾಜೇಹ ಸರ್ವಮ್ ॥28॥
ದೇವರಾಜನಾದ ಇಂದ್ರನೇ! ನನ್ನ ಅಭೀಷ್ಟವೆಲ್ಲವನ್ನೂ ನೀನು ಕೊಡುವುದಿಲ್ಲವಾದರೆ ನನ್ನ ದೇಹದ ಪ್ರತಿಯೊಂದು ಅಂಗವನ್ನು ಕತ್ತರಿಸಿ ಹೋಮವನ್ನು ಮಾಡುತ್ತೇನೆ. ಇದನ್ನು ತಿಳಿ.
ಲೋಮಶಃ
ನಿಶ್ಚಯಂ ತಮಭಿಜ್ಞಾಯ ಮುನೇಸ್ತಸ್ಯ ಮಹಾತ್ಮನಃ |
ಪ್ರತಿವಾರಣಹೇತ್ವರ್ಥಂ ಬುದ್ಧ್ಯಾ ಸಂಚಿಂತ್ಯ ಬುದ್ಧಿಮಾನ್ ॥29॥
ತತ ಇಂದ್ರೋಽಕರೋದ್ ರೂಪಂ ಬ್ರಾಹ್ಮಣಸ್ಯ ತಪಸ್ವಿನಃ |
ಅನೇಕಶತಷರ್ವಸ್ಯ ದುರ್ಬಲಸ್ಯ ಸಯಕ್ಷ್ಮಣಃ ॥30॥
ಲೋಮಶ ಆಗ ಇಂದ್ರನು ಆ ಮಹಾತ್ಮನಾದ ಋಷಿಯ ಆ ದುರಾಗ್ರಹ ಪೂರ್ವಕವಾದ ನಿಶ್ಚಯವನ್ನು ಪ್ರತಿಬಂಧಿಸುವ ಸಲುವಾಗಿ ಬುದ್ಧಿವಂತನಾದ ಅವನು ತನ್ನ ಬುದ್ಧಿಯಿಂದ ಆಲೋಚಿಸಿ, ನೂರಾರುವರ್ಷ ವಯಸ್ಸಿನ ಯಕ್ಷ್ಮರೋಗ ಪೀಡಿತನಾದ ದುರ್ಬಲನಾದ ಒಬ್ಬ ಶೋಚನೀಯನಾದ ಬ್ರಾಹ್ಮಣನ ರೂಪವನ್ನು ಧರಿಸಿದನು.
ಯವಕ್ರೀತಸ್ಯ ಯತ್ ತೀರ್ಥಮುಚಿತಂ ಶೌಚಕರ್ಮಣಿ |
ಭಾಗೀರಥ್ಯಾಂ ತತ್ರ ಸೇತುಂ ವಾಲುಕಾಭಿಶ್ಚಕಾರ ಸಃ ॥31॥
ಅನಂತರ ಅವನು ಯವಕ್ರೀತನು ಸ್ನಾನಾದಿಗಳನ್ನು ಮಾಡುವ ಭಾಗೀರಥಿಯ ತೀರ್ಥಕ್ಕೆ ಹೋಗಿ ಅಲ್ಲಿ ಮರಳಿನ ಕಣಗಳಿಂದ ಸೇತುವೆಯನ್ನು ಕಟ್ಟಲು ಆರಂಭಿಸಿದನು.
ಯದಾಽಸ್ಯ ವದತೋ ವಾಕ್ಯಂ ನ ಸ ಚಕ್ರೇ ದ್ವಿಜೋತ್ತಮಃ |
ವಾಲುಕಾಭಿಸ್ತತಃ ಶಕ್ರೋ ಗಂಗಾಂ ಸಮಭಿಪೂರಯನ್ |
ವಾಲುಕಾಮುಷ್ಟಿಮನಿಶಂ ಭಾಗೀರಥ್ಯಾಂ ವ್ಯಸರ್ಜಯನ್ ॥32॥
ಸೇತುಮಭ್ಯಾರಭಚ್ಛಕ್ರೋ ಯವಕ್ರೀತಂ ನಿದರ್ಶಯನ್ ॥33॥
ಯಾವಾಗ ದ್ವಿಜಶ್ರೇಷ್ಠನಾದ ಯವಕ್ರೀತನು ತನ್ನ ಮಾತುಗಳನ್ನು ಕೇಳಲಿಲ್ಲವೋ ಆಗ ಇಂದ್ರನು ಮರಳುಗಳಿಂದ ಗಂಗೆಯನ್ನು ತುಂಬಲು ಪ್ರಾರಂಭಿಸಿದನು. ಇಂದ್ರನು ಯವಕ್ರೀತನಿಗೆ ದೃಷ್ಟಾಂತಪೂರ್ವಕವಾಗಿ ಬುದ್ಧಿಯನ್ನು ಕಲಿಸುವ ಉದ್ದೇಶದಿಂದ ಭಾಗೀರಥಿಯಲ್ಲಿ ಒಂದೊಂದೇ ಮುಷ್ಟಿ ಪ್ರಮಾಣದ ಮರಳನ್ನು ಎಸೆಯುತ್ತಾ ಸೇತುವೆಯನ್ನು ಕಟ್ಟಲು ಪ್ರಾರಂಭಿಸಿದನು.
ತಂ ದದರ್ಶ ಯವಕ್ರೀತೋ ಯತ್ನವಂತಂ ನಿಬಂಧನೇ |
ಪ್ರಹಸಂಶ್ಚಾಬ್ರವೀದ್ ವಾಕ್ಯಮಿದಂ ಸ ಮುನಿಪುಂಗವಃ ॥34॥
ಸೇತುವೆಯನ್ನು ಕಟ್ಟಲು ಪ್ರಯತ್ನಪಡುತ್ತಿರುವ ಆ ಬ್ರಾಹ್ಮಣನನ್ನು ಯವಕ್ರೀತನು ನೋಡಿದನು. ಆ ಮುನಿಪುಂಗವನು ನಗುತ್ತಾ ಅವನನ್ನು ಕುರಿತು ಹೀಗೆ ಮಾತನಾಡಿದನು.
ಕಿಮಿದಂ ವರ್ತತೇ ಬ್ರಹ್ಮನ್ ಕಿಂ ಚ ತೇ ಹ ಚಿಕೀರ್ಷಿತಮ್ |
ಅತೀವ ಹಿ ಮಹಾನ್ ಯತ್ನಃ ಕ್ರಿಯತೇಽಯಂ ನಿರರ್ಥಕಃ

ಎಲೈ ಬ್ರಾಹ್ಮಣನೇ! ಇದೇನನ್ನು ನಡೆಸುತ್ತಿರುವಿ? ನೀನು ಏನು ಮಾಡಲು ಇಚ್ಛಿಸುತ್ತಿದ್ದಿಯೆ? ನೀನು ವ್ಯರ್ಥವಾದ ಈ ಮಹಾಪ್ರಯತ್ನವನ್ನು ಮಾಡುತ್ತಿದ್ದೀಯಷ್ಟೆ.
ಇಂದ್ರಃ
ಬಂಧಿಷ್ಯೇ ಸೇತುನಾ ಗಂಗಾಂ ಸುಖಃ ಪಂಥಾ ಭವಿಷ್ಯತಿ |
ಕ್ಲಿಶ್ಯತೇ ಹಿ ಜನಸ್ತಾತ ತರಮಾಣಃ ಪುನಃ ಪುನಃ ||36||
ಇಂದ್ರ ಎಲೈ ಪ್ರೀತಿಪಾತ್ರನೇ! ನಾನು ಸೇತುವೆಯನ್ನು ಕಟ್ಟಿ ಗಂಗೆಯನ್ನು ಬಂಧಿಸುತ್ತೇನೆ. ಆಗ ಸೇತುವೆಯ ಮೇಲೆ ಓಡಾಡುವವರಿಗೆ ಮಾರ್ಗವು ಸುಗಮವಾಗುತ್ತದೆ. ಗಂಗೆಯನ್ನು ದಾಟುವ ಜನರೆಲ್ಲರೂ ಪುನಃ ಪುನಃ ಕ್ಲೇಶಪಡುತ್ತಿದ್ದಾರಷ್ಟೆ?
ಯವಕ್ರೀತಃ
ನಾಯಂ ಶಕ್ಯಸ್ತ್ವಯಾ ಬದ್ಧುಂ ಮಹಾನೋಘಸ್ತಪೋಧನ |
ಅಶಕ್ಯಾದ್ ವಿನಿವರ್ತಸ್ವ ಶಕ್ಯಮರ್ಥಂ ಸಮಾರಭ ||37||
ಯವಕ್ರೀತ ಎಲೈ ತಪೋದನನೇ! ಈ ಮಹಾಪ್ರವಾಹವುಳ್ಳ ಗಂಗೆಯನ್ನು ನೀನು ಬಂಧಿಸಲು ಸಾಧ್ಯವಿಲ್ಲ. ಅಸಾಧ್ಯವಾದ ಈ ಪ್ರಯತ್ನವನ್ನು ಮಾಡುವುದನ್ನು ಬಿಟ್ಟು ಸಾಧ್ಯವಾದ ಬೇರೆ ಏನಾದರೂ ಕಾರ್ಯವನ್ನು ಪ್ರಾರಂಭಿಸು.
ಇಂದ್ರಃ
ಯಥೈವ ಭವತಾ ಚೇದಂ ತಪೋ ವೇದಾರ್ಥಮುದ್ಯತಮ್ |
ಅಶಕ್ಯಂ ತದ್ವದಸ್ಮಾಭಿರಯಂ ಭಾರಃ ಸಮಾಹಿತಃ ||38||
ಇಂದ್ರ ನೀನು ಹೇಗೆ ವೇದಾರ್ಥವನ್ನು ಪಡೆಯಲು ಈ ತಪಸ್ಸನ್ನು ಆಚರಿಸುತ್ತಿದ್ದೀಯೋ ಅದರಂತೆ ನಾನೂ ಸಹ ಅಶಕ್ಯವಾದ ಈ ಕಾರ್ಯವನ್ನು ಮಾಡಲು ಪ್ರಯತ್ನಪಡುತ್ತಿದ್ದೇನೆ.
ಯವಕ್ರೀತಃ
ಯಥಾ ತವ ನಿರರ್ಥೋಽಯಮಾರಂಭಸ್ತ್ರಿದಶೇಶ್ವರ |
ತಥಾ ಯದಿ ಮಮಾಪೀದಂ ಮನ್ಯಸೇ ಪಾಕಶಾಸನ ||39||
ಕ್ರಿಯತಾಂ ಯದ್ ಭವೇಚ್ಛಕ್ಯಂ ತ್ವಯಾ ಸುರಗಣೇಶ್ವರ |
ವರಾಂಶ್ಚ ಮೇ ಪ್ರಯಚ್ಛಾನ್ಯಾನ್ ಯೈರನ್ಯಾನ್ ಭವಿತಾಸ್ಮ್ಯತಿ ||40||
ಯವಕ್ರೀತ ಎಲೈ ಸುರೇಶ್ವರನೇ! ನಿನ್ನ ಈ ಪ್ರಯತ್ನವು ವ್ಯರ್ಥವಾದಂತೆ ನನ್ನ ತಪಸ್ಸೂ ಸಹ ವ್ಯರ್ಥವೆಂದು ನೀನು ತಿಳಿಯುವುದಾದರೆ, ಎಲೈ ಸುರಗಣೇಶ್ವರನಾದ ಪಾಕಶಾಸನವೇ! ನಿನಗೆ ಯಾವುದು ಸಾಧ್ಯವೋ ಅದನ್ನೇ ಮಾಡು ನನಗಾದರೂ ಉಳಿದವರನ್ನು ಅತಿಶಯಿಸಿ ನಾನು ಜೀವಿಸಿರುವಂತಹ ವರಗಳನ್ನು ಕೊಡು.
ಲೋಮಶಃ
ತಸ್ಮೈ ಪ್ರಾದಾದ್ ವರಾನಿಂದ್ರ ಉಕ್ತಾವಾನ್ ಯಾನ್ ಮಹಾತಪಾಃ |
ಪ್ರತಿಭಾಸ್ಯಂತಿ ತೇ ವೇದಾಃ ಪಿತ್ರಾ ಸಹ ಯಥೇಪ್ಸಿತಾಃ ||41||
ಯಚ್ಚಾನ್ಯತ್ಕಾಂಕ್ಷಸೇ ಕಾಮಂ ಯವಕ್ರೀರ್ಗಮ್ಯತಾಮಿತಿ |
ಸ ಲಬ್ಧಕಾಮಃ ಪಿತರಂ ಸಮೇತ್ಯಾಥೇಮಬ್ರುವೀತ್ ||42||
ಲೋಮಶ ಇಂದ್ರನು ಮಹಾತಪಸ್ವಿಯಾದ ಯವಕ್ರೀತನು ಕೇಳಿದ ವರಗಳನ್ನು ಕೊಟ್ಟನು. ನಿನಗೂ ನಿನ್ನ ತಂದೆಗೂ ನಿಮಗೆ ಅಭೀಷ್ಟವಾದ ವೇದಗಳು ಪ್ರತಿಭಾತವಾಗುತ್ತವೆ. ಮತ್ತು ನಿನ್ನ ಮನಸ್ಸಿನಲ್ಲಿ ಬೇರೆ ಏನು ಇಷ್ಟಾರ್ಥವಿದೆಯೋ ಅವೆಲ್ಲವನ್ನೂ ಕೊಟ್ಟಿದ್ದೇನೆ. ಯವಕ್ರೀತನೇ! ಇನ್ನು ನೀನು ಹೋಗು ಎಂದು ಹೇಳಿದನು. ಯವಕ್ರೀತನಾದರೂ ತನ್ನ ಆಸೆಯು ಇಡೇರಿದವನಾಗಿ ಹಿಂದಿರುಗಿ ಬಂದು ತಂದೆಯನ್ನು ಸಮೀಪಿಸಿ ಹೀಗೆ ಮಾತನಾಡಿದನು.
ಪ್ರತಿಭಾಸ್ಯಂತಿ ವೈ ವೇದಾ ಮಮ ತಾತಸ್ಯ ಚೋಭಯೋಃ |
ಅತಿ ಚಾನ್ಯಾನ್ ಭವಿಷ್ಯಾವೋ ವರಾ ಲಬ್ಧಾಸ್ತದಾ ಮಯಾ ||43||
ನನಗೂ ಮತ್ತು ತಂದೆಯಾದ ನಿನಗೂ ಇಬ್ಬರಿಗೂ ಎಲ್ಲ ವೇದಗಳು ಪ್ರತಿಭಾತವಾಗುತ್ತದೆ. ನಾನು ವರಗಳನ್ನು ಪಡೆದಿದ್ದೇನೆ. ನಾವಿಬ್ಬರೂ ಉಳಿದವರನ್ನು ಮೀರಿ ಶೋಭಿಸುವೆವು.
ಭರದ್ವಾಜಃ
ದರ್ಪಸ್ತೇ ಭವಿತಾ ತಾತ ವರಾಂಲ್ಲಬ್ಧ್ವಾ ಯಥೇಪ್ಸಿತಾನ್ |
ಸ ದರ್ಪಪೂರ್ಣಃ ಕೃಪಣಃ ಕ್ಷಿಪ್ರಮೇವ ವಿನಂಕ್ಷ್ಯಸಿ ||44||
ಭರದ್ವಾಜ ಎಲೈ ಪ್ರೀತಿಪಾತ್ರನೇ! ನೀನು ಅಭೀಷ್ಟವಾದ ವರಗಳನ್ನು ಪಡೆದಿರುವುದರಿಂದ ನಿನಗೆ ದರ್ಪವುಂಟಾಗುತ್ತದೆ. ದರ್ಪಪೂರ್ಣನಾದ ಕೃಪಣನಾದ ಅಂತಹ ನೀನು ಶೀಘ್ರವಾಗಿ ನಾಶವನ್ನು ಹೊಂದುವಿ.
ಅತ್ರಾಪ್ಯುದಾಹರಂತೀಮಾ ಗಾಥಾ ದೇವೈರುದಾಹೃತಾಃ |
ಮುನಿರಾಸೀತ್ ಪುರಾ ಪುತ್ರ ಬಾಲಧಿರ್ನಾಮ ವೀರ್ಯವಾನ್ ||45||
ಸ ಪುತ್ರಶೋಕಾದುದ್ವಿಗ್ನಸ್ತಪಸ್ತೇಪೇ ಸುದುಷ್ಕರಮ್ |
ಭೇವನ್ಮಮ ಸುತೋಽಮರ್ತ್ಯ ಇತಿ ತಂ ಲಬ್ಧವಾಂಶ್ಚ ಸಃ ||46||
ಈ ವಿಷಯದಲ್ಲಿ ದೇವತೆಗಳು ಹಾಡಿದ ಒಂದು ಗಾಥೆಯನ್ನು ದೊಡ್ಡವರು ಹೇಳುತ್ತಾರೆ. ಎಲೈ ಪುತ್ರನೇ! ಹಿಂದೆ ಪ್ರತಾಪಶಾಲಿಯಾದ ಬಾಲಧಿ ಎಂಬ ಋಷಿಯಿದ್ದನು. ಪುತ್ರಶೋಕದಿಂದ ಉದ್ವಿಗ್ನನಾದ ಅವನು ಸುದುಷ್ಕರವಾದ ತಪಸ್ಸನ್ನು ಮಾಡಿದನು. ನನ್ನ ಪುತ್ರನು ಮೃತ್ಯುಹೀನನಾಗಬೇಕು ಎಂದು ಉದ್ದೇಶಿಸಿ ಅವನು ಆ ವರವನ್ನು ದೇವತೆಗಳಿಂದ ಪಡೆದನು.

ತಸ್ಯ ಪ್ರಸಾದೋ ವೈ ದೇವೈಃ ಕೃತೋ ನ ತ್ವಮರ್ತ್ಯೈಃ ಸಮಃ |
ನಾಮರ್ತ್ಯೋಽರ್ವಿದ್ಯತೇ ಮರ್ತ್ಯೋಽರ್ಯೋ ನಿಮಿತ್ತಾಯುರ್ಭವಿಷ್ಯತಿ ॥47॥
ದೇವತೆಗಳು ಅವನಿಗೆ ಅನುಗ್ರಹವನ್ನು ಮಾಡಿದರು. ಆದರೆ ಅವನ ಪುತ್ರನನ್ನು ಅಮರನನ್ನಾಗಿ ಮಾಡಲಿಲ್ಲ. ಮರ್ತ್ಯನು ಎಂದೂ ಅಮರನಾಗಿರುವುದಿಲ್ಲ. ಒಂದು ನಿಮಿತ್ತವಿರುವವರೆಗೆ ಅವನಿಗೆ ಆಯಸ್ಸು ಇರುವುದು ಎಂದು ಹೇಳಿದರು.
ಬಾಲಧಿಃ
ಯಥೇಮೇ ಪರ್ವತಾಃ ಶಶ್ವತ್ ತಿಷ್ಠಂತಿ ಸುರಸತ್ತಮ |
ಅಕ್ಷಯಾಸ್ತನ್ನಿಮಿತ್ತಂ ಮೇ ಸುತಸ್ಯಾಯುರ್ಭವಿಷ್ಯತಿ ॥48॥
ಬಾಲಧಿ ಎಲೈ ದೇವಶ್ರೇಷ್ಠರೇ! ಎಲ್ಲಿಯವರೆಗೆ ಭೂಮಿಯ ಮೇಲೆ ಈ ಪರ್ವತಗಳು ನಾಶವನ್ನು ಹೊಂದದೇ ಇರುತ್ತವೆಯೋ, ನನ್ನ ಪುತ್ರನ ಆಯುಸ್ಸಿಗೆ ಅದು ನಿಮಿತ್ತವಾಗುವುದು.
ಭಾರದ್ವಾಜಃ
ತಸ್ಯ ಪುತ್ರಸ್ತದಾ ಜಜ್ಞೇ ಮೇಧಾವೀ ಕ್ರೋಧನಃ ಸದಾ |
ಸ ತಚ್ಛ್ರುತ್ವಾಽಕರೋದ್ ದರ್ಪಮೃಷೀಂಶ್ಚೈವಾವಮನ್ಯತ ॥49॥
ಅನಂತರ ಅವನಿಗೆ ಮೇಧಾವಿಯೂ, ಕ್ರೋಧಪರವಶನೂ ಆದ ಒಬ್ಬ ಪುತ್ರನು ಜನಿಸಿದನು. ಅವನು ತನ್ನ ತಂದೆಯು ತೆಗೆದುಕೊಂಡ ವರಗಳನ್ನು ಕೇಳಿ ದರ್ಪದಿಂದ ಕೂಡಿದವನಾಗಿ ಋಷಿಗಳಿಗೂ ಅವಮಾನವನ್ನು ಮಾಡಿದನು.
ವಿಕುರ್ವಾಣೋ ಮುನೀನಾಂ ಚ ವ್ಯಚರತ್ ಸ ಮಹೀಮಿಮಾಮ್ |
ಆಸಸಾದ ಮಹಾವೀರ್ಯಂ ಧನುಷಾಕ್ಷಂ ಮನೀಷಿಣಮ್ ॥50॥
ಅವನು ಹೀಗೆ ಋಷಿಗಳಿಗೆ ಅವಮಾನವನ್ನು ಮಾಡುತ್ತಾ ಭೂಮಿಯನ್ನೆಲ್ಲಾ ಸಂಚರಿಸಿ ಮಹಾವೀರ್ಯನೂ, ಮೇಧಾವಿಯೂ ಆದ ಧನುಷಾಕ್ಷನೆಂಬ ಋಷಿಯ ಸಮೀಪಕ್ಕೆ ಬಂದನು.
ತಸ್ಯಾಪಚಕ್ರೇ ಮೇಧಾವೀ ತಂ ಶಶಾಪ ಸ ವೀರ್ಯವಾನ್ |
ಭವ ಭಸ್ಮೇತಿ ಚೋಕ್ತಃ ಸ ನ ಭಸ್ಮ ಸಮಪದ್ಯತ ॥51॥
ಅವನು (ಅವನ ಹೆಸರು ಮೇಧಾವೀ ಎಂದು) ಧನುಷಾಕ್ಷರಿಗೂ ಅಪಚಾರವನ್ನು ಮಾಡಿದನು. ಆಗ ಪ್ರಭಾವಶಾಲಿಯಾದ ಧನುಷಾಕ್ಷರು ಭಸ್ಮವಾಗಿ ಹೋಗು ಎಂದು ಶಾಪವನ್ನು ಕೊಟ್ಟರು. ಆದರೂ ಮೇಧಾವಿಯು ಭಸ್ಮವಾಗಲಿಲ್ಲ.
ಧನುಷಾಕ್ಷಸ್ತು ತಂ ದೃಷ್ಟ್ವಾ ಮೇಧಾವಿನಮನಾಮಯಮ್ |
ನಿಮಿತ್ತಂ ಮಹಿಷೈರಸ್ಯ ಭೇದಯಾಮಾಸ ಪರ್ವತಾನ್ ॥52॥
ಧನುಷಾಕ್ಷರಾದರೂ ಆ ಮೇಧಾವಿಯು ಯಾವ ಹಾನಿಗೂ ಒಳಗಾದುದನ್ನು ನೋಡಿ ಅದರ ನಿಮಿತ್ತವನ್ನು ಚಿಂತಿಸಿ ಎಮ್ಮೆ ಕೋಣಗಳಿಂದ ಆ ಪರ್ವತಗಳನ್ನು ಭೇದಿಸಿ ನಾಶಮಾಡಿದರು (ಆ ಮಹೀತಲವು ಮತ್ತು ಆ ಪರ್ವತಗಳು ಇರುವಷ್ಟು ಕಾಲ ಅವನಿಗೆ ಆಯುಸ್ಸು ಇರಲೆಂದು ವರವಾಗಿದ್ದಿತು).
ಸ ನಿಮಿತ್ತೇ ವಿನಷ್ಟೇ ತು ಮಮಾರ ಸಹಸಾ ಶಿಶುಃ |
ತಂ ಮೃತಂ ಪುತ್ರಮಾದಾಯ ವಿಲಲಾಪ ತತಃ ಪಿತಾ ॥53॥
ತನ್ನ ಆಯುಸ್ಸಿನ ನಿಮಿತ್ತವು ನಷ್ಟವಾಗುತ್ತಿರಲು ಶಿಶುವಾದ ಆ ಮೇಧಾವಿಯು ತಕ್ಷಣ ಮರಣವನ್ನು ಹೊಂದಿದನು. ಮೃತನಾದ ಮಗನನ್ನು ಎತ್ತಿಕೊಂಡು ತಂದೆಯು ಆಗ ವಿಲಾಪವನ್ನು ಮಾಡಿದನು.
ಲಾಲಪ್ಯಮಾನಂ ತಂ ದೃಷ್ಟ್ವಾ ಮುನಯಃ ಪರಮಾರ್ತವತ್ |
ಊಚುರ್ವೇದವಿದಃ ಸರ್ವೇ ಗಾಥಾಂ ಯಾಂ ತಾಂ ನಿಬೋಧ ಮೇ ॥
ಬಹಳದುಃಖದಿಂದ ಪೀಡಿತನಾಗಿ ಪುನಃ ಪುನಃ ವಿಲಾಪವನ್ನು ಮಾಡುತ್ತಿರುವ ಅವನನ್ನು ನೋಡಿ ವೇದಜ್ಞರಾದ ಋಷಿಗಳೆಲ್ಲರೂ ಅವನನ್ನು ಕುರಿತು ಒಂದು ಗೀತೆಯನ್ನು ಹೇಳಿದರು. ಅದನ್ನು ನಾನು ಹೇಳುತ್ತೇನೆ, ನೀನು ಕೇಳು.
ನ ದಿಷ್ಟಮರ್ಥಮತ್ಯೇತುಮೀಶೋ ಮರ್ತ್ಯಃ ಕಥಂಚನ |
ಮಹಿಷೈರ್ಭೇದಯಾಮಾಸ ಧನುಷಾಕ್ಷೋ ಮಹೀಧರಾನ್ ॥55॥
ಮರ್ತ್ಯನಾದ ಯಾವನೂ, ಯಾವಕಾರಣದಿಂದಲೂ ತನಗೆ ದೈವವಿಹಿತವಾದುದನ್ನು ಮೀರಲು ಸಮರ್ಥನಾಗುವುದಿಲ್ಲ. ಧನುಷಾಕ್ಷ ಋಷಿಯು ಪರ್ವತಗಳನ್ನು ಮಹಿಷಗಳಿಂದ ಭೇದಿಸಿದನಷ್ಟೇ.
ಏವಂ ಲಬ್ಧ್ವಾ ವರಾನ್ ಬಾಲಾ ದರ್ಪಪೂರ್ಣಾಸ್ತಪಸ್ವಿನಃ |
ಕ್ಷಿಪ್ರಮೇವ ವಿನಶ್ಯಂತಿ ತಥಾ ನ ಸ್ಯಾತ್ ತಥಾ ಭವಾನ್ ॥56॥
ಹೀಗೆ ವರಗಳನ್ನು ಪಡೆದು ಅವಿವೇಕಿಗಳಾದವರು ದರ್ಪಪೂರ್ಣರಾಗಿ, ಶೋಚನೀಯರಾಗಿ ಶೀಘ್ರವಾಗಿ ನಾಶವನ್ನು ಹೊಂದುತ್ತಾರೆ. ನೀನು ಅವರಂತೆ ಆಗಬಾರದು.
ಏಷ ರೈಭ್ಯೋ ಮಹಾವೀರ್ಯಃ ಪುತ್ರೌ ಚಾಸ್ಯ ತಥಾವಿಧೌ |
ತಂ ಯಥಾ ಪುತ್ರ ನಾಭ್ಯೇಷಿ ತಥಾ ಕುರ್ಯಾಸ್ತ್ವತಂದ್ರಿತಃ ॥57॥
ಈ ರೈಭ್ಯರು ಮಹಾಪ್ರತಾಪಶಾಲಿಗಳು. ಅವರ ಮಕ್ಕಳೂ ಸಹ ಅಂತಹವರೇ. ಎಲೈ ಪುತ್ರನೇ! ನೀನು ಜಾಗರೂಕನಾಗಿದ್ದು ಅವರಿಗೆ ಅವಮಾನ ಮಾಡದಂತೆ ನಡೆದುಕೋ.
ಸ ಹಿ ಕ್ರುದ್ಧಃ ಸಮರ್ಥಶ್ಚ(ಸ್ತತ್ವಂ) ಪುತ್ರ ಪೀಡಯಿತುಂ ರುಷಾ |
ರೈಭ್ಯಶ್ಚಾಪಿ ತಪಸ್ವೀ ಚ ಕೋಪನಶ್ಚ ಮಹಾನೃಷಿಃ ॥58॥
ಎಲೈ ಪುತ್ರನೇ! ಆ ಮಹಾಋಷಿಗಳು ತಪಸ್ವಿಗಳು ಮತ್ತು ಕೋಪಿಷ್ಠರು ಎಂದು ಪ್ರಸಿದ್ಧರಾಗಿದ್ದಾರೆ. ಅವರಿಗೆ ಕೋಪವುಂಟಾದರೆ ತಮ್ಮ

ಸಿಟ್ಟಿನಿಂದ ನಿನ್ನನ್ನು ವಿನಾಶ ಮಾಡಬಹುದು.
ಯವಕ್ರೀತಃ
ಏವಂ ಕರಿಷ್ಯೇ ಮಾ ತಾಪಂ ತಾತ ಕಾರ್ಷೀಃ ಕಥಂಚನ |
ಯಥಾ ಹಿ ಮೇ ಭವಾನ್ ಮಾನ್ಯಸ್ತಥಾ ರೈಭ್ಯಃ ಪಿತಾ ಮಮ ॥59॥
ಯವಕ್ರೀತ ಎಲೈ ತಂದೆಯೇ! ನಾನು ಹಾಗೆಯೇ ಮಾಡುವೆನು. ನೀನು ಯಾವ ರೀತಿಯಿಂದಲೂ ಸಂತಾಪ ಪಡಬೇಡ. ನೀನು ನನಗೆ ಹೇಗೆ ಮಾನ್ಯನೋ, ಅದರಂತೆ ರೈಭ್ಯರೂ ಸಹ ನನಗೆ ತಂದೆಯಂತೆ ಮಾನ್ಯರು.
ಲೋಮಶಃ
ಉಕತ್ತ್ವ ಸ ಪಿತರಂ ಶ್ಲಕ್ಷ್ಣಂ ಯವಕ್ರೀರಕುತೋಭಯಃ |
ವಿಪ್ರುಕುರ್ವನ್ನೃಷೀನನ್ಯಾನತುಷ್ಯತ್ ಪರಯಾ ಮುದಾ ॥60॥
ಲೋಮಶ ಹೀಗೆ ಯವಕ್ರೀತನು ತಂದೆಯನ್ನು ಕುರಿತು ಮೃದುವಾಗಿ ಮಾತನಾಡಿ ಯಾವ ಭಯವೂ ಇಲ್ಲದೆ ಬೇರೆ ಋಷಿಗಳನ್ನು ಅವಮಾನ ಮಾಡುತ್ತಾ ಸಂತೋಷಪಟ್ಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ
ವನಪರ್ವಣಿ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಅಷ್ಟಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ಮೂರನೆಯ ಅಧ್ಯಾಯ
ರೈಭ್ಯಾಶ್ರಮದಲ್ಲಿ ಯವಕ್ರೀತನಿಂದ ಪರಾವಸುವಿನ ಪತ್ನಿಗೆ ಅವಮಾನ. ರೈಭ್ಯರಿಂದ ಪಿಶಾಚಿ ಮತ್ತು ರಾಕ್ಷಸರ ಸೃಷ್ಟಿ ಮತ್ತು ರಾಕ್ಷಸರಿಂದ ಯವಕ್ರೀತನ ವಧೆ.
ಲೋಮಶಃ
ಚಂಕ್ರಮ್ಯಮಾಣಃ ಸ ತದಾ ಯವಕ್ರೀರಕುತೋಭಯಃ |
ಜಗಾಮ ಮಾಧವೇ ಮಾಸಿ ರೈಭ್ಯಾಶ್ರಮಪದಂ ಪ್ರತಿ ॥1॥
ಲೋಮಶ ಆಗ ಯವಕ್ರೀತನು ನಿರ್ಭಯವಾಗಿ ಸಂಚಾರ ಮಾಡುತ್ತಾ ವೈಶಾಖ ಮಾಸದಲ್ಲಿ ರೈಭ್ಯಾಶ್ರಮದ ಸಮೀಪಕ್ಕೆ ಹೋದನು.
ಸ ದದರ್ಶಾಶ್ರಮೇ ರಮ್ಯೇ ಪುಷ್ಪಿತದ್ರುಮಭೂಷಿತೇ |
ವಿಚರಂತೀಂ ಸ್ನುಷಾಂ ತಸ್ಯ ಕಿನ್ನರೀಮಿವ ಭಾರತ ॥2॥
ಎಲೈ ಭಾರತನೇ! ಅರಳಿದ ಹೂಗಳುಳ್ಳ ಮರಗಳಿಂದ ಭೂಷಿತವಾದ ಆ ಸುಂದರವಾದ ಆಶ್ರಮದಲ್ಲಿ ಕಿನ್ನರಿಯಂತೆ ತಿರುಗಾಡುತ್ತಿದ್ದ ರೈಭ್ಯರ ಸೊಸೆಯಾದ ಪರಾವಸುವಿನ ಪತ್ನಿಯನ್ನು ನೋಡಿದನು.
ಯವಕ್ರೀಸ್ತಾಮುವಾಚೇದಮುಪಾತಿಷ್ಠಸ್ವ ಮಾಮಿತಿ |
ನಿರ್ಲಜ್ಜೋ ಲಜ್ಜಯಾ ಯುಕ್ತಾಂ ಕಾಮೇನ ಹೃತಚೇತನಃ ॥3॥
ಯವಕ್ರೀತನು ಅವಳನ್ನು ನೋಡಿ ಕಾಮದಿಂದ ಕೂಡಿದ ಮನಸ್ಸುಳ್ಳವನಾಗಿ ಲಜ್ಜೆಯನ್ನು ಬಿಟ್ಟು, ಲಜ್ಜಾಯುಕ್ತಳಾದ ಅವಳನ್ನು ಕುರಿತು ನನ್ನನ್ನು ಸೇವಿಸು ಎಂದು ಹೇಳಿದನು.
ಸಾ ತಸ್ಯ ಶೀಲಮಾಜ್ಞಾಯ ತಸ್ಮಾಚ್ಛಾಪಾಚ್ಚ ಬಿಭ್ಯತೀ |
ತೇಜಸ್ವಿತಾಂ ಚ ರೈಭ್ಯಸ್ಯ ತಥೇತ್ಯುಕತ್ತ್ವಾಽಽಜಗಾಮ ಹ ॥4॥
ಅವಳು ಅವನ ಶೀಲವನ್ನು ತಿಳಿದು ಅವನಿಂದ ಉಂಟಾಗಬಹುದಾದ ಶಾಪಕ್ಕೆ ಹೆದರಿ ತನ್ನ ಮಾವನಾದ ರೈಭ್ಯರ ಪರಾಕ್ರಮವನ್ನು ತಿಳಿದು ಹಾಗೆಯೇ ಆಗಲಿ ಎಂದು ಸಮೀಪಕ್ಕೆ ಬಂದಳು.
ತತ ಏಕಾಂತಮುನ್ನೀಯ ಲಜ್ಜಯಾಮಾಸ ಭಾರತ |
ಆಜಗಾಮ ತದಾ ರೈಭ್ಯಃ ಸ್ವಮಾಶ್ರಮಮರಿಂದಮ ॥5॥
ಎಲೈ ಭಾರತನೇ! ಯವಕ್ರೀತನು ಅವಳನ್ನು ಏಕಾಂತಕ್ಕೆ ಕರೆದುಕೊಂಡು ಹೋಗಿ ಅವಳಿಗೆ ನಾಚಿಕೆಯುಂಟಾಗುವಂತೆ ಕಾಮದ ಮಾತುಗಳನ್ನು ಆಡಿದನು. ಎಲೈ ಅರಿಂದಮನೇ! ಆ ವೇಳೆಗೆ ರೈಭ್ಯರು ತಮ್ಮ ಆಶ್ರಮಕ್ಕೆ ಹಿಂದಿರುಗಿದರು.
ರುದತೀಂ ಚ ಸ್ನುಷಾಂ ದೃಷ್ಟ್ವಾ ಭಾರ್ಯಾಮಾರ್ತಾಂ ಪರಾವಸೋಃ |
ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಪರ್ಯಪೃಚ್ಛದ್ ಯುಧಿಷ್ಠಿರ ॥6॥
ಎಲೈ ಯುಧಿಷ್ಠಿರನೇ! ಅವರು ಪರಾವಸುವಿನ ಪತ್ನಿಯಾದ ತಮ್ಮ ಸೊಸೆಯು ಅಳುತ್ತಿರುವುದನ್ನು ನೋಡಿ ಮಧುರವಾದ ಮಾತುಗಳಿಂದ ಅವಳನ್ನು ಸಮಾಧಾನ ಪಡಿಸುತ್ತಾ ಅವಳನ್ನು ಪ್ರಶ್ನಿಸಿದರು.
ಸಾ ತಸ್ಮೈ ಸರ್ವಮಾಚಷ್ಟ ಯವಕ್ರೀಭಾಷಿತಂ ಶುಭಾ |
ಪ್ರತ್ಯುಕ್ತಂ ಚ ಯವಕ್ರೀತಂ ಪ್ರೇಕ್ಷಾಪೂರ್ವಂ ತಥಾಽಽತ್ಮನಾ ॥7॥
ಪರಿಶುದ್ಧಳಾದ ಅವಳು ಅವರಿಗೆ ಯವಕ್ರೀತನು ಮಾತನಾಡಿದುದೆಲ್ಲವನ್ನೂ ಮತ್ತು ತಾನು ವಿವೇಕಪೂರ್ವಕವಾಗಿ ಅದನ್ನು ನಿರಾಕರಿಸಿದುದನ್ನೂ ತಿಳಿಸಿದಳು.
ಶೃಣ್ವಾನಸ್ಯೈವ ರೈಭ್ಯಸ್ಯ ಯವಕ್ರೀತವಿಚೇಷ್ಟಿತಮ್ |
ದಹನ್ನಿವ ತದಾ ಚೇತಃಕ್ರೋಧಃ ಸಮಭವನ್ಮಹಾನ್ ॥8॥
ಯವಕ್ರೀತನ ಕುಚೇಷ್ಟೆಯನ್ನು ಕೇಳುತ್ತಿದ್ದಂತೆಯೇ ರೈಭ್ಯರಿಗೆ ಮನಸ್ಸಿನಲ್ಲಿ ಯವಕ್ರೀತನನ್ನು ಸುಟ್ಟುಬಿಡುವಂತೆ ಮಹಾಕ್ರೋಧವು

ಉಂಟಾಯಿತು.
ಸ ತದಾ ಮನ್ಯುನಾऽऽವಿಷ್ಟಸ್ತಪಸ್ವೀ ಕೋಪನೋ ಭೃಶಮ್ |
ಅವಲುಚ್ಯ ಜಟಾಮೇಕಾಂ ಜುಹಾವಗ್ನೌ ಸುಸಂಸ್ಕೃತೇ ॥9॥
ಕೋಪಗೊಂಡ ತಪಸ್ವಿಗಳಾದ ಅವರು ಆಗ ತಮ್ಮ ಒಂದು ಜಟೆಯನ್ನು ಕಿತ್ತು ಸುಸಂಸ್ಕೃತವಾದ ಅಗ್ನಿಯಲ್ಲಿ ಹೋಮವನ್ನು ಮಾಡಿದರು.
ತತಃ ಸಮಭವನ್ನಾರೀ ತಸ್ಯಾ ರೂಪೇಣ ಸಮ್ಮಿತಾ |
ಅವಲುಚ್ಯಾಪರಾಂ ಚಾಪಿ ಜುಹಾವಾಗ್ನೌ ಜಟಾಂ ಪುನಃ ॥10॥
ಆಗ ತಮ್ಮ ಸೊಸೆಯ ರೂಪಕ್ಕೆ ಸದೃಶಳಾದ ಒಬ್ಬ ನಾರಿಯು ಆ ಹೋಮಕುಂಡದಿಂದ ಎದ್ದುಬಂದಳು. ಅನಂತರ ಇನ್ನೊಂದು ಜಟೆಯನ್ನು ಕಿತ್ತು ಪುನಃ ಅಗ್ನಿಯಲ್ಲಿ ಹೋಮವನ್ನು ಮಾಡಿದರು.
ತತಃ ಸಮಭವದ್ ರಕ್ಷೋ ಘೋರಾಕ್ಷಂ ಭೀಮದರ್ಶನಮ್ |
ಅಬ್ರೂತಾಂ ತೌ ತದಾ ರೈಭ್ಯಂ ಕಿಂ ಕಾರ್ಯಂ ಕರವಾವಹೈ ॥11॥
ಆಗ ಘೋರವಾದ ಕಣ್ಣುಳ್ಳ ಭಯಂಕರವಾದ ರೂಪವುಳ್ಳ ಒಬ್ಬ ರಾಕ್ಷಸನು ಎದ್ದುಬಂದನು. ಅವರಿಬ್ಬರೂ ರೈಭ್ಯರನ್ನು ಕುರಿತು ನಾವು ಏನು ಮಾಡಬೇಕೆಂದು ಕೇಳಿದರು.
ತಾವಬ್ರುವೀದೃಷಿಃ ಕ್ರುದ್ಧೋ ಯವಕ್ರೀರ್ವಧ್ಯತಾಮಿತಿ |
ಜಗ್ಮತುಸ್ತೌ ತಥೇತ್ಯುಕ್ತ್ವಾ ಯವಕ್ರೀತಜಿಘಾಂಸಯಾ ॥12॥
ಋಷಿಗಳಾದ ರೈಭ್ಯರು ಕೋಪದಿಂದ ಕೂಡಿದವರಾಗಿ ಅವರಿಬ್ಬರನ್ನು ಕುರಿತು ಯವಕ್ರೀತನನ್ನು ಕೊಂದುಬಿಡಿ ಎಂದು ಹೇಳಿದರು. ಅವರಿಬ್ಬರೂ ಹಾಗೆಯೇ ಆಗಲಿ ಎಂದು ಹೇಳಿ, ಯವಕ್ರೀತನನ್ನು ಕೊಲ್ಲುವ ಇಚ್ಛೆಯುಳ್ಳವರಾಗಿ ಹೊರಟರು.
ತತಃ ಸ್ನುಷಾಕೃತೀಕೃತ್ಯ ಯವಕ್ರೀತಮುಪಾಗಮತ್ |
ಯವಕ್ರೀತೋऽಪಿ ರೈಭ್ಯಸ್ಯ ಸ್ನುಷಾಂ ಮತ್ವಾ ಜಗಾಮ ತಾಮ್॥12.1॥
ಆಗ ನಾರಿಯು ರೈಭ್ಯರ ಸೊಸೆಯ ರೂಪವನ್ನು ಧರಿಸಿ ಯವಕ್ರೀತನ ಸಮೀಪಕ್ಕೆ ಬಂದಳು. ಯವಕ್ರೀತನಾದರೂ ರೈಭ್ಯರ ಸೊಸೆ ಎಂದು ತಿಳಿದು ಅವಳ ಗಮನವನ್ನು ಮಾಡಿದನು.
ತತಸ್ತಂ ಸಮುಪಾಸ್ಥಾಯ ಕೃತ್ಯಾ ಸೃಷ್ಟಾ ಮಹಾತ್ಮನಾ |
ಕಮಂಡಲುಂ ಜಹಾರಾಸ್ಯ ಮೋಹಯಿತ್ವೈವ ಭಾರತ ॥13॥
ಆಗ ಆ ಮಹಾತ್ಮರಿಂದ ನಾರೀರೂಪವಾದ ಪಿಶಾಚಿಯು ಯವಕ್ರೀತನನ್ನು ಸೇವಿಸಿ ಅವನಿಗೆ ಮೋಹವನ್ನು ಉಂಟುಮಾಡಿ ಅವನ ಕಮಂಡಲುವನ್ನು ಅಪಹರಿಸಿದಳು.
ಉಚ್ಛಿಷ್ಟಂ ತು ಯವಕ್ರೀತಮಪಕೃಷ್ಟಕಮಂಡಲಮ್ |
ತತ ಉದ್ಯತಶೂಲಃ ಸ ರಾಕ್ಷಸಃ ಸಮುಪಾದ್ರವತ್ ॥14॥
ಎಲೈ ಭಾರತನೇ! ಕಮಂಡಲವನ್ನು ಕಳೆದುಕೊಂಡು ಉಚ್ಛಿಷ್ಟನಾದ (ಅಪವಿತ್ರನಾದ) ಯವಕ್ರೀತನನ್ನು ಕೊಲ್ಲಲು ಆ ರಾಕ್ಷಸನು ಶೂಲವನ್ನು ಎತ್ತಿಹಿಡಿದು ಅವನ ಸಮೀಪಕ್ಕೆ ಓಡಿಬಂದನು.
ತಮಾದ್ರವಂತಂ(ಷತಂತಂ) ಸಂಪ್ರೇಕ್ಷ್ಯ ಶೂಲಹಸ್ತಂ ಜಿಘಾಂಸಯಾ |
ಯವಕ್ರೀಃ ಸಹಸೋತ್ಥಾಯ ಪ್ರಾದ್ರವದ್ ಯೇನ ವೈ ಸರಃ ॥15॥
ಶೂಲವನ್ನು ಕೈಯಲ್ಲಿ ಹಿಡಿದು ತನ್ನನ್ನು ಕೊಲ್ಲಲು ಓಡಿಬರುತ್ತಿರುವ ಆ ರಾಕ್ಷಸನನ್ನು ನೋಡಿ ಯವಕ್ರೀತನು ಬೇಗ ಎದ್ದು ಸರೋವರದ ಕಡೆಗೆ ಓಡಿದನು.
ಜಲಹೀನಂ ಸರೋ ದೃಷ್ಟ್ವಾ ಯವಕ್ರೀಸ್ತ್ವರಿತಃ ಪುನಃ |
ಜಗಾಮ ಸರಿತಃ ಸರ್ವಾಸ್ತಾಶ್ಚಾಪ್ಯಾಸನ್ ವಿಶೋಷಿತಾಃ ॥16॥
ಆ ಸರೋವರವು ಜಲಹೀನವಾಗಿರುವುದನ್ನು ನೋಡಿ ಯವಕ್ರೀತನು ಪುನಃ ಶೀಘ್ರವಾಗಿ ಬೇರೆ ನದಿಗಳ ಕಡೆಗೆ ಓಡಿದನು. ಆ ಎಲ್ಲಾ ನದಿಗಳೂ ಸಹ ಒಣಗಿ ಹೋಗಿದ್ದವು.
ಸ ಕಾಲ್ಯಮಾನೋ ಘೋರೇಣ ಶೂಲಹಸ್ತೇನ ರಕ್ಷಸಾ |
ಅಗ್ನಿಹೋತ್ರಂ ಪಿತುರ್ಭೀತಃ ಸಹಸಾ ಪ್ರವಿವೇಶ ಹ ॥17॥
ಕೈಯಲ್ಲಿ ಶೂಲವನ್ನು ಹಿಡಿದು ಅಟ್ಟಿಸಿಕೊಂಡು ಬರುವ ಆ ಘೋರರಾಕ್ಷಸನನ್ನು ನೋಡಿ ಹೆದರಿದ ಯವಕ್ರೀತನು ತನ್ನ ತಂದೆಯಾದ ಭರದ್ವಾಜರ ಅಗ್ನಿಹೋತ್ರ ಶಾಲೆಯನ್ನು ಶೀಘ್ರವಾಗಿ ಪ್ರವೇಶಿಸಿದನು.
ಸ ವೈ ಪ್ರವಿಶಮಾನಸ್ತು ಶೂದ್ರೇಣಾಂಧೇನ ರಕ್ಷಿಣಾ |
ನಿಗೃಹೀತೋ ಬಲಾದ್ ದ್ವಾರಿ ಸೋऽವಾತಿಷ್ಠತ ಪಾರ್ಥಿವ ॥18॥
ಎಲೈ ರಾಜನೇ! ಅವನು ಪ್ರವೇಶಿಸಲು ಪ್ರಯತ್ನ ಮಾಡುತ್ತಿರುವಂತೆಯೇ ಅಂಧನಾದ ಕಾವಲುಗಾರನಾದ ಒಬ್ಬ ಶೂದ್ರನು ಅವನನ್ನು ತಡೆದು ನಿಲ್ಲಿಸಲು ಅವನು ಬಾಗಿಲಿನಲ್ಲಿಯೇ ನಿಂತನು.
ನಿಗೃಹೀತಂ ತು ಶೂದ್ರೇಣ ಯವಕ್ರೀತಂ ಸ ರಾಕ್ಷಸಃ |
ತಾಡಯಾಮಾಸ ಶೂಲೇನ ಸ ಭಿನ್ನಹೃದಯೋऽಪತತ್ ॥19॥
ಶೂದ್ರರಕ್ಷಕನು ಯವಕ್ರೀತನನ್ನು ಬಾಗಿಲ ಬಳಿಯೇ ತಡೆಯುತ್ತಿರಲು ಆ ರಾಕ್ಷಸನು ಅವನನ್ನು ಶೂಲದಿಂದ ಇರಿದನು. ಯವಕ್ರೀತನು ಭಿನ್ನ ಹೃದಯನಾಗಿ ಕೆಳಗೆ ಬಿದ್ದನು.
ಯವಕ್ರೀತಂ ಸ ಹತ್ವಾ ತು ರಾಕ್ಷಸೋ ರೈಭ್ಯಮಾಗಮತ್ |

ಅನುಜ್ಞಾತಸ್ತು ರೈಭ್ಯೇಣ ತಯಾ ನಾರ್ಯಾ ಸಹಾವಸತ್ ॥20॥
ಆ ರಾಕ್ಷಸನು ಯವಕ್ರೀತನನ್ನು ಕೊಂದು ರೈಭ್ಯರ ಬಳಿಗೆ ಹೋದನು ಮತ್ತು ರೈಭ್ಯರ ಅನುಮತಿಯನ್ನು ಪಡೆದು ಆ ನಾರಿಯ ಜೊತೆಯಲ್ಲಿ ವಾಸ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ತ್ರಯತ್ರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಏಕೋನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತಮೂರನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತನಾಲ್ಕನೆಯ ಅಧ್ಯಾಯ
ಪುತ್ರಶೋಕದಿಂದ ಭರದ್ವಾಜರ ವಿಲಾಪ. ರೈಭ್ಯರಿಗೆ ಶಾಪದಾನ ಮತ್ತು ಮೃತದೇಹ ದಹನಪೂರ್ವಕವಾಗಿ ಅಗ್ನಿಪ್ರವೇಶ.
ಲೋಮಶಃ
ಭರದ್ವಾಜಸ್ತು ಕೌಂತೇಯ ಕೃತ್ವಾ ಸ್ವಾಧ್ಯಾಯಮಾಹ್ನಿಕಮ್ ।
ಸಮಿತ್ಕಲಾಪಮಾದಾಯ ಪ್ರವಿವೇಶ ಸ್ವಮಾಶ್ರಮಮ್ ॥1॥
ಲೋಮಶ ಎಲೈ ಕೌಂತೇಯನೇ! ಭರದ್ವಾಜರಾದರೂ ತಾವು ಪ್ರತಿದಿವಸ ಮಾಡುವ ಬ್ರಹ್ಮಯಜ್ಞಾದಿಗಳನ್ನು ಮಾಡಿ ಸಮಿತ್ತುಗಳ ಹೊರೆಯನ್ನು ತೆಗೆದುಕೊಂಡು ತಮ್ಮ ಆಶ್ರಮವನ್ನು ಪ್ರವೇಶಿಸಿದರು.
ತಂ ಸ್ಮ ದೃಷ್ಟ್ವಾ ಪುರಾ ಸರ್ವೇ ಪ್ರತ್ಯುತ್ತಿಷ್ಠಂತಿ ಪಾವಕಾಃ ।
ನ ತ್ವೇನಮುಪತಿಷ್ಠಂತಿ ಹತಪುತ್ರಂ ತದಾಽಗ್ನಯಃ ॥2॥
ಹಿಂದೆ ಅವರು ಆಶ್ರಮಕ್ಕೆ ಬಂದ ತಕ್ಷಣವೇ ಅಗ್ನಿಗಳು ತಾವಾಗಿಯೇ ಎದ್ದು ಉರಿಯುತ್ತಿದ್ದವು. ಆದರೆ ಈ ದಿನ ಪುತ್ರಮರಣದಿಂದ ಅಶುದ್ಧರಾಗಿರುವುದರಿಂದ ಅಗ್ನಿಗಳು ಮೇಲೇಳಲಿಲ್ಲ.
ಪುತ್ರಮೃತ್ಯುಜಮಾಶೌಚಂ ಭರದ್ವಾಜೋ ನ ಜಜ್ಞಿವಾನ್ ।
ವೈಕೃತಂ ತ್ವಗ್ನಿಹೋತ್ರೇ ಸ ಲಕ್ಷಯಿತ್ವಾ ಮಹಾತಪಾಃ ।
ತಮಂಧಂ ಶೂದ್ರಮಾಸೀನಂ ಗೃಹಪಾಲಮಥಾಬ್ರವೀತ್ ॥3॥
ಭರದ್ವಾಜರಿಗೆ ಪುತ್ರಮರಣದಿಂದ ಉಂಟಾದ ಆಶೌಚವು ತಿಳಿದಿರಲಿಲ್ಲ. ಮಹಾ ತಪಸ್ವಿಗಳಾದ ಅವರು ಅಗ್ನಿಹೋತ್ರ ಶಾಲೆಯಲ್ಲಿ ಉಂಟಾದ ಈ ವಿಕಾರವನ್ನು ಗಮನಿಸಿ ಅಲ್ಲಿ ಕುಳಿತಿದ್ದ ದ್ವಾರಪಾಲಕನಾದ ಅಂಧನಾದ ಶೂದ್ರನನ್ನು ಕುರಿತು ಹೀಗೆ ಹೇಳಿದರು.
ಕಿಂ ನು ಮೇ ನಾಗ್ನಯಃ ಶೂದ್ರ ಪ್ರತಿನಂದಂತಿ ದರ್ಶನಮ್ ।
ತ್ವಂ ಚಾಪಿ ನ ಯಥಾಪೂರ್ವಂ ಕಚ್ಚಿತ್ ಕ್ಷೇಮಮಿಹಾಶ್ರಮೇ ॥4॥
ಎಲೈ ಶೂದ್ರನೇ! ಈ ದಿನ ಏಕೆ ಅಗ್ನಿಗಳು ನನ್ನ ದರ್ಶನವನ್ನು ಅಭಿನಂದಿಸುತ್ತಿಲ್ಲ? ನೀನೂ ಸಹ ಮೊದಲಿನಂತೆ (ಎಂದಿನಂತೆ) ಇಲ್ಲ. ಇಲ್ಲಿ ಆಶ್ರಮದಲ್ಲಿ ಎಲ್ಲವೂ ಕ್ಷೇಮವಷ್ಟೆ?
ಕಚ್ಚಿನ್ನ ರೈಭ್ಯಂ ಪುತ್ರೋ ಮೇ ಗತವಾನಲ್ಪಚೇತನಃ ।
ಏತದಾಚಕ್ಷ್ವ ಮೇ ಶೀಘ್ರಂ ನ ಹಿ ಶುದ್ಧ್ಯತಿ ಮೇ ಮನಃ ॥5॥
ಅಲ್ಪಚೇತನನಾದ ನನ್ನ ಪುತ್ರನು ರೈಭ್ಯರ ಬಳಿಗೆ ಹೋಗಿಲ್ಲವಷ್ಟೆ? ಬೇಗ ನನಗೆ ಉತ್ತರವನ್ನು ಕೊಡು. ಏಕೆಂದರೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ.
ಶೂದ್ರಃ
ರೈಭ್ಯಂ ಯಾತೋ ನೂನಮಯಂ ಪುತ್ರಸ್ತೇ ಮಂದಚೇತನಃ ।
ತಥಾ ಹಿ ನಿಹತಃ ಶೇತೇ ರಾಕ್ಷಸೇನ ಬಲೀಯಸಾ ॥6॥
ಶೂದ್ರ ಮಂದಚೇತನನಾದ ನಿಮ್ಮ ಈ ಪುತ್ರನು ನಿಶ್ಚಿತವಾಗಿ ರೈಭ್ಯರ ಬಳಿಗೇ ಹೋದನು ಮತ್ತು ಬಲಿಷ್ಠನಾದ ರಾಕ್ಷಸನಿಂದ ಹತನಾಗಿ ಇಲ್ಲಿ ಮಲಗಿದ್ದಾನೆ.
ಪ್ರಕಾಲ್ಯಮಾನಸ್ತೇನಾಯಂ ಶೂಲಹಸ್ತೇನ ರಕ್ಷಸಾ ।
ಅಗ್ನ್ಯಾಗಾರಂ ಪ್ರತಿ ದ್ವಾರಿ ಮಯಾ ದೋರ್ಭ್ಯಾಮಯಂ ನಿವಾರಿತಃ ॥7॥
ಶೂಲಹಸ್ತನಾದ ರಾಕ್ಷಸನಿಂದ ಅಟ್ಟಿಸಿಕೊಂಡು ಬಂದ ಅವನನ್ನು ಅಗ್ನಿಶಾಲೆಯ ದ್ವಾರದ ಬಳಿಯಲ್ಲಿ ನಾನು ಕೈಗಳಿಂದ ತಡೆದೆನು.
ತತಃ ಸ ವಿಹತಾಶೋಽತ್ರ ಜಲಕಾಮೋಽಶುಚಿರ್ಧ್ರುವಮ್ ।
ನಿಹತಃ ಸೋಽತಿವೇಗೇನ ಶೂಲಹಸ್ತೇನ ರಕ್ಷಸಾ ॥8॥
ನಿಶ್ಚಿತವಾಗಿ ಅಶುಚಿಯಾಗಿದ್ದು, ಜಲಕಾಮನಾದ ಅವನ ಆಸೆಯು ಭಗ್ನವಾಗುತ್ತಿರಲು ಶೂಲಹಸ್ತನಾದ ರಾಕ್ಷಸನು ಬಹಳ ವೇಗದಿಂದ ಅವನನ್ನು ಕೊಂದನು.
ಲೋಮಶಃ
ಭರದ್ವಾಜಸ್ತು ತಚ್ಛ್ರುತ್ವಾ ಶೂದ್ರಸ್ಯ ವಿಪ್ರಿಯಂ ಮಹತ್ ।
ಗತಾಸುಂ ಪುತ್ರಮಾದಾಯ ವಿಲಲಾಪ ಸುದುಃಖಿತಃ॥9॥
ಲೋಮಶ ಶೂದ್ರನು ಮಾಡಿದ ಈ ದೊಡ್ಡ ಅಪ್ರಿಯವಾದ ಘಟನೆಯನ್ನು ಕೇಳಿ ಭರದ್ವಾಜರು ಮೃತನಾದ ಪುತ್ರನನ್ನು ತೊಡೆಯ ಮೇಲಿಟ್ಟುಕೊಂಡು ಬಹಳ ದುಃಖದಿಂದ ವಿಲಾಪವನ್ನು ಮಾಡಿದರು.
ಭರದ್ವಾಜಃ

ಬ್ರಾಹ್ಮಣಾನಾಂ ಕಿಲಾರ್ಥಾಯ ನನು ತ್ವಂ ತಪ್ತವಾಂಸ್ತಪಃ |
ದ್ವಿಜಾನಾಮನಧೀತಾ ವೈ ವೇದಾಃ ಸಂಪ್ರತಿ ಭಾಂತಿತ್ವತಿ ||10||
ಭರದ್ವಾಜ ದ್ವಿಜರು ಅಧ್ಯಯನ ಮಾಡದಿದ್ದ ವೇದವೂ ಅವರಿಗೆ ಈಗ ಪ್ರತಿಭಾತವಾಗಬೇಕೆಂಬ ಉದ್ದೇಶದಿಂದ ಬ್ರಾಹ್ಮಣರ ಹಿತಕ್ಕಾಗಿ ನೀನು ತಪಸ್ಸನ್ನು ಆಚರಿಸಿದೆಯಷ್ಟೆ?
ತಥಾ ಕಲ್ಯಾಣಶೀಲಸ್ತ್ವಂ ಬ್ರಾಹ್ಮಣೇಷು ಮಹಾತ್ಮಸು |
ಅನಾಗಾಃ ಸರ್ವಭೂತೇಷು ಕರ್ಕಶತ್ವಮುಪೇಯಿವಾನ್ ||11||
ಮಹಾತ್ಮರಾದ ಬ್ರಾಹ್ಮಣರ ವಿಷಯದಲ್ಲಿ ಅಷ್ಟು ಕಲ್ಯಾಣಶೀಲವುಳ್ಳ ನೀನು ಮತ್ತು ಯಾವ ಪ್ರಾಣಿಗೂ ಅಪರಾಧವನ್ನು ಮಾಡದಿದ್ದ ನೀನು ಬಹಳ ಕರ್ಕಶ ಸ್ವಭಾವವನ್ನು ಹೊಂದಿದೆ.
ಪ್ರತಿಷಿದ್ಧೋ ಮಯಾ ತಾತ ರೈಭ್ಯಾವಸಥದರ್ಶನಾತ್ |
ಗತವಾನೇವ ತಂ ದೃಷ್ಟ್ವಂ ಕಾಲಾಂತಕಯಮೋಪಮಮ್ ||12||
ಪ್ರೀತಿಪಾತ್ರನೇ! ರೈಭ್ಯರ ಆಶ್ರಮಕ್ಕೆ ಹೋಗಬಾರದೆಂದು ನಾನು ಪ್ರತಿಷೇಧ ಮಾಡಿದ್ದರೂ ನೀನು ಕಾಲಾಂತಕ ಯಮನಂತಿರುವ ಆ ರೈಭ್ಯರನ್ನು ನೋಡಲು ಅವರ ಆಶ್ರಮಕ್ಕೆ ಹೋಗಿಯೇ ಹೋಗಿದ್ದೀಯೆ.
ಯಃ ಸ ಜಾನನ್ ಮಹಾತೇಜಾ ವೃದ್ಧಸ್ಯೈಕಂ ಮಮಾತ್ಮಜಮ್ |
ಗತವಾನೇವ ಕೋಪಸ್ಯ ವಶಂ ಪರಮದುರ್ಮತಿಃ ||13||
ಮಹಾತೇಜಸ್ವಿಗಳೂ ಮತ್ತು ಬಹಳ ದುರ್ಬುದ್ಧಿಯುಳ್ಳವರೂ ಆದ ಅವರು ವೃದ್ಧನಾದ ನನಗೆ ನೀನೊಬ್ಬನೇ ಮಗನೆಂದು ತಿಳಿದಿದ್ದರೂ ಕ್ರೋಧಕ್ಕೆ ವಶರಾದರು.
ಪುತ್ರಶೋಕಮನುಪ್ರಾಪ್ತ ಏಷ ರೈಭ್ಯಸ್ಯ ಕರ್ಮಣಾ |
ತ್ಯಕ್ಷ್ಯಾಮಿ ತ್ವಾಮೃತೇ ಪುತ್ರ ಪ್ರಾಣಾನಿಷ್ಟತಮಾನ್ ಭುವಿ ||14||
ಎಲೈ ಪುತ್ರನೇ! ರೈಭ್ಯರ ಈ ಕರ್ಮದಿಂದ ಪುತ್ರಶೋಕಕ್ಕೆ ಒಳಗಾದ ನಾನು ನೀನು ನಿನ್ನನ್ನು ಬಿಟ್ಟು ಬದುಕಲು ಸಾಧ್ಯವಾಗದೇ ನನಗೆ ಅತ್ಯಂತ ಇಷ್ಟವಾದ ಪ್ರಾಣಗಳನ್ನು ತ್ಯಜಿಸುವೆನು.
ಯಥಾಽಹಂ ಪುತ್ರಶೋಕೇನ ದೇಹಂ ತ್ಯಕ್ಷ್ಯಾಮಿ ಕಿಲ್ಬಿಷೀ |
ತಥಾ ಜ್ಯೇಷ್ಠಃ ಸುತೋ ರೈಭ್ಯಂ ಹಿಂಸ್ಯಾಚ್ಛೀಘ್ರಮನಾಗಸಮ್ ||15||
ಹೇಗೆ ನಾನು ಪುತ್ರಶೋಕದಿಂದ ದುಃಖಕ್ಕೆ ಒಳಗಾಗಿ ದೇಹವನ್ನು ತೊರೆಯುವೆನು ಅದರಂತೆ ಶೀಘ್ರದಲ್ಲಿಯೇ ನಿರಪರಾಧಿಯಾದ ರೈಭ್ಯರನ್ನು ಅವರ ಜ್ಯೇಷ್ಠಪುತ್ರನು ವಧೆ ಮಾಡಲಿ.
ಸುಖಿನೋ ವೈ ನರಾ ಯೇಷಾಂ ಜಾತ್ಯಾ ಪುತ್ರೋ ನ ವಿದ್ಯತೇ |
ತೇ ಪುತ್ರಶೋಕಮಪ್ರಾಪ್ಯ ವಿಚರಂತಿ ಯಥಾಸುಖಮ್ ||16||
ಯಾರಿಗೆ ಗಂಡುಮಕ್ಕಳಿಲ್ಲವೋ ಅಂತಹ ಮನುಷ್ಯರು ನಿಜವಾಗಲೂ ಸುಖಿಗಳು. ಅವರು ಪುತ್ರನಾಶದಿಂದ ಉಂಟಾದ ಶೋಕವನ್ನು ಅನುಭವಿಸದೇ ಸುಖವಾಗಿ ಸಂಚರಿಸುತ್ತಾರೆ.
ಯೇ ತು ಪುತ್ರಕೃತಾಚ್ಛೋಕಾದ್ ಭೃಶಂ ವ್ಯಾಕುಲಚೇತಸಃ |
ಶಪಂತೀಷ್ಟಾನ್ ಸಖೀನಾರ್ತಸ್ತೇಭ್ಯಃ ಪಾಪತರೋ ನು ಕಃ ||17||
ಯಾರು ಪುತ್ರಶೋಕದಿಂದ ಬಹಳ ವ್ಯಥಿತವಾದ ಮನಸ್ಸುಳ್ಳವರಾಗಿ ಆರ್ಥರಾಗಿ ತಮಗೆ ಇಷ್ಟರಾದ ಮಿತ್ರರರನ್ನೂ ಶಪಿಸುತ್ತಾರೆಯೋ ಅದಕ್ಕಿಂತ ಪಾಪತರವಾದುದು ಯಾವುದಿದೆ?
ಪರಾಸುಶ್ಚ ಸುತೋ ದೃಷ್ಟಃ ಶಪ್ತಶ್ಚೇಷ್ಟಃ ಸಖಾ ಮಯಾ |
ಈದೃಶೀಮಾಪದಂ ಕೋಽತ್ರ ದ್ವಿತೀಯೋಽನುಭವಿಷ್ಯತಿ ||18||
ಮೃತನಾದ ಪುತ್ರನನ್ನು ನೋಡಿದ್ದಾಯಿತು. ಪ್ರೀತಿಪಾತ್ರನಾದ ನನ್ನ ಸ್ನೇಹಿತನಿಗೆ ತಾಪವನ್ನೂ ನೀಡಿದ್ದಾಯಿತು. ಇಂತಹ ವಿಪತ್ತನ್ನು ನನ್ನನ್ನು ಬಿಟ್ಟು ಯಾವ ಬೇರೆಯವರು ಅನುಭವಿಸುವರು.
ಲೋಮಶಃ
ವಿಲಪ್ಯೈವಂ ಬಹುವಿಧಂ ಭರದ್ವಾಜೋಽದಹತ್ ಸುತಮ್ |
ಸುಸಮಿದ್ಧಂ ತತಃ ಪಶ್ಚಾತ್ ಪ್ರವಿವೇಶ ಹುತಾಶನಮ್ ||19||
ಲೋಮಶ ಭರದ್ವಾಜರು ಹೀಗೆ ಬಹುವಿಧವಾಗಿ ವಿಲಾಪವನ್ನು ಮಾಡಿ ತಮ್ಮ ಸುತನ ದೇಹವನ್ನು ದಹನ ಮಾಡಿದರು. ಅನಂತರ ತಾವೂ ಸಹ ಚೆನ್ನಾಗಿ ಉರಿಯುತ್ತಿದ್ದ ಆ ಅಗ್ನಿಯನ್ನು ಪ್ರವೇಶ ಮಾಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಃತ್ರಿಂಶದಧಿಕಶತತಮೋಽಧ್ಯಾಯಃ ||
|| ಇತಿ ತೀರ್ಥಯಾತ್ರಾಪರ್ವಣಿ ನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತೈದನೆಯ ಅಧ್ಯಾಯ
ರೈಭ್ಯಶಿಷ್ಯನಾದ ಬೃಹದ್ಯುಮ್ನನ ಯಾಗಕ್ಕೆ ಅರ್ವಾವಸು ಮತ್ತು ಪರಾವಸುಗಳ ಗಮನ. ರಾತ್ರಿಯ ಕಾಲದಲ್ಲಿ ಅಜ್ಞಾನದಿಂದ ಪರಾವಸುವಿನಿಂದ ರೈಭ್ಯರ ವಧೆ. ದೇವತಾನುಗ್ರಹದಿಂದ ರೈಭ್ಯ, ಭರದ್ವಾಜ ಮತ್ತು ಯವಕ್ರೀತರ ಉಜ್ಜೀವನ.
ಲೋಮಶಃ

ಏತಸ್ಮಿನ್ನೇವ ಕಾಲೇ ತು ಬೃಹದ್ದ್ಯುಮ್ನೋ ಮಹೀಪತಿಃ |
ಸತ್ರಂ ತೇನೇ ಮಹಾಭಾಗೋ ರೈಭ್ಯಯಾಜ್ಯಃ ಪ್ರತಾಪವಾನ್ ॥1॥
ಲೋಮಶ ಈ ಕಾಲದಲ್ಲಿಯೇ ರೈಭ್ಯರ ಶಿಷ್ಯರಾದ ಮಹಾನುಭಾವನೂ ಮತ್ತು ಪ್ರತಾಪಶಾಲಿಯೂ ಆದ ಬೃಹದ್ದ್ಯುಮ್ನರಾಜನು ಒಂದು ಸತ್ರಯಾಗವನ್ನು ಆರಂಭಿಸಿದನು.
ತೇನ ರೈಭ್ಯಸ್ಯ ವೈ ಪುತ್ರಾವರ್ವಾವಸುಪರಾವಸೂ |
ವೃತೌ ಸಹಾಯೌ ಸತ್ರಾರ್ಥಂ ಬೃಹದ್ದ್ಯುಮ್ನೇನ ಧೀಮತಾ ॥2॥
ಮೇಧಾವಿಯಾದ ಬೃಹದ್ದ್ಯುಮ್ನನು ಸತ್ರದಲ್ಲಿ ತನಗೆ ಸಹಾಯ ಮಾಡಲು ರೈಭ್ಯರ ಮಕ್ಕಳಾದ ಅರ್ವಾವಸು ಮತ್ತು ಪರಾವಸುಗಳನ್ನು ಋತ್ವಿಕ್ಕುಗಳಾಗಿ ವರಣ ಮಾಡಿದನು.
ತತ್ರ ತೌ ಸಮನುಜ್ಞಾತೌ ಪಿತ್ರಾ ಕೌಂತೇಯ ಜಗ್ಮತುಃ |
ಆಶ್ರಮೇ ತ್ವಭವದ್ ರೈಭ್ಯೋ ಭಾರ್ಯಾ ಚೈವ ಪರಾವಸೋಃ ॥3॥
ಎಲೈ ಕೌಂತೇಯನೇ! ತಂದೆಯ ಅನುಮತಿಯನ್ನು ಪಡೆದು ಅವರಿಬ್ಬರೂ ಅಲ್ಲಿಗೆ ಹೋದರು. ಆಶ್ರಮದಲ್ಲಿ ರೈಭ್ಯರು ಮತ್ತು ಪರಾವಸುವಿನ ಪತ್ನಿಯು ಉಳಿದರು.
ಅಥಾವಲೋಕಕೋಽಗಚ್ಛದ್ ಗೃಹಾನೇಕಃ ಪರಾವಸುಃ |
ಕೃಷ್ಣಾಜಿನೇನ ಸಂವೀತಂ ದದರ್ಶ ಪಿತರಂ ವನೇ ॥4॥
ಅನಂತರ ಪರಾವಸುವು ತನ್ನ ಪತ್ನಿಯನ್ನು ನೋಡುವ ಸಲುವಾಗಿ ಒಬ್ಬನೇ ಹೊರಟು ಕಾಡಿನಲ್ಲಿ ಕೃಷ್ಣಾಜಿನದಿಂದ ಆಚ್ಛಾದಿತನಾದ ತನ್ನ ತಂದೆಯನ್ನು ನೋಡಿದನು.
ಜಘನ್ಯರಾತ್ರೇ ನಿದ್ರಾಂಧಃ ಸಾವಶೇಷೇ ತಮಸ್ಯಪಿ |
ಚರಂತಂ ಗಹನೇಽರಣ್ಯೇ ಮೇನೇ ಸ ಪಿತರಂ ಮೃಗಮ್ ॥5॥
ಪಶ್ಚಿಮರಾತ್ರಿಯಲ್ಲಿ ನಿದ್ರಾಜಡನಾಗಿ ಇನ್ನೂ ಕತ್ತಲೆ ಉಳಿದಿರಲು ದಟ್ಟವಾದ ಕಾಡಿನಲ್ಲಿ ತಿರುಗಾಡುತ್ತಿದ್ದ ತನ್ನ ತಂದೆಯನ್ನು ಮೃಗವೆಂದು ತಿಳಿದನು.
ಮೃಗಂ ತು ಮನ್ಯಮಾನೇನ ಪಿತಾ ವೈ ತೇನ ಹಿಂಸಿತಃ |
ಅಕಾಮಯಾನೇನ ತದಾ ಶರೀರತ್ರಾಣಮಿಚ್ಛತಾ ॥6॥
ಮೃಗವೆಂದು ತಿಳಿದ ಅವನು ತನ್ನ ಶರೀರ ಯಾತ್ರೆಯನ್ನು ಬಯಸಿ ತನ್ನ ಅರಿವಿಲ್ಲದೆಯೇ ತಂದೆಯನ್ನು ವಧೆಮಾಡಿದನು.
ತತಃ ಸಮೀಪಮಾಸಾದ್ಯ ಪಿತರಂ ದೃಷ್ಟವಾನ್ ಹತಮ್ |
ಅಜ್ಞಾನಾತ್ ಪಿತರಂ ಹತ್ವಾ ಮೃಗಬುದ್ಧ್ಯಾ ಪರಾವಸುಃ |
ವಿಲಪ್ಯ ಬಹುಧಾ ರಾಜನ್ ರೈಭ್ಯಸ್ಯ ಚ ಮಹಾತ್ಮನಃ ॥6.1॥
ಅನಂತರ ಸಮೀಪಕ್ಕೆ ಬಂದು ಅವನು ತನ್ನ ತಂದೆಯು ಹತನಾಗಿರುವುದನ್ನು ನೋಡಿದನು. ಪರಾವಸುವು ತನ್ನ ಅಜ್ಞಾನದಿಂದ ಮೃಗವೆಂದು ತಿಳಿದು ತನ್ನ ತಂದೆಯಾದ ಮಹಾತ್ಮರಾದ ರೈಭ್ಯರನ್ನು ವಧೆಮಾಡಿ ಬಹುವಾಗಿ ವಿಲಾಪವನ್ನು ಮಾಡಿ (ಮಾಡಿದನು).
ತಸ್ಯ ಸ ಪ್ರೇತಕಾರ್ಯಾಣಿ ಕೃತ್ವಾ ಸರ್ವಾಣಿ ಭಾರತ |
ಪುನರಾಗತ್ಯ ತತ್ಸತ್ರಮಬ್ರವೀದ್ ಭ್ರಾತರಂ ವಚಃ ॥7॥
ಎಲೈ ಭಾರತನೇ! ತನ್ನ ತಂದೆಗೆ ಎಲ್ಲಾ ಪ್ರೇತಕಾರ್ಯಗಳನ್ನೂ ನೆರವೇರಿಸಿ ಪುನಃ ಸತ್ರಕ್ಕೆ ಬಂದು ತನ್ನ ತಮ್ಮನನ್ನು ಕುರಿತು ಹೀಗೆ ಮಾತನಾಡಿದನು.
ಇದಂ ಕರ್ಮ ನ ಶಕ್ತಸ್ತ್ವಂ ವೋಢುಮೇಕಃ ಕಥಂಚನ |
ಮಯಾ ತು ಹಿಂಸಿತಸ್ತಾತೋ ಮನ್ಯಮಾನೇನ ತಂ ಮೃಗಮ್ ॥8॥
ಈ ಸತ್ರಯಾಗವನ್ನು ನೀನೊಬ್ಬನೇ ನಿರ್ವಹಿಸಲು ಯಾವ ರೀತಿಯಿಂದಲೂ ಸಾಧ್ಯವಾಗುವುದಿಲ್ಲ. ನಾನಾದರೂ ಮೃಗವೆಂದು ತಿಳಿದು ತಂದೆಯ ವಧೆಯನ್ನು ಮಾಡಿದ್ದೇನೆ.
ಸೋಽಸ್ಮದರ್ಥಂ ವ್ರತಂ ತಾತ ಚರ ತ್ವಂ ಬ್ರಹ್ಮಹಿಂಸನಮ್ |
ಸಮರ್ಥೋಽಪ್ಯಹಮೇಕಾಕೀ ಕರ್ಮ ಕರ್ತುಮಿದಂ ಮುನೇ ॥9॥
ಆದ್ದರಿಂದ ಎಲೈ ಪ್ರೀತಿಪಾತ್ರನೇ! ಅಂತಹ ನೀನು ನನ್ನ ಸಲುವಾಗಿ ಬ್ರಹ್ಮಹತ್ಯೆಯನ್ನು ಪರಿಹಾರ ಮಾಡುವ ವ್ರತವನ್ನು ಮಾಡು. ಎಲೈ ಮುನಿಯೇ! ನಾನೊಬ್ಬನೇ ಈ ಸತ್ರಯಾಗವನ್ನು ನಿರ್ವಹಿಸಲು ಸಮರ್ಥನಾಗಿದ್ದೇನೆ.
ಅರ್ವಾವಸುಃ
ಕರೋತು ವೈ ಭವಾನ್ ಸತ್ರಂ ಬೃಹದ್ದ್ಯುಮ್ನಸ್ಯ ಧೀಮತಃ |
ಬ್ರಹ್ಮವಧ್ಯಾಂ ಚರಿಷ್ಯೇಽಹಂ ತ್ವದರ್ಥಂ ನಿಯತೇಂದ್ರಿಯಃ ॥10॥
ಅರ್ವಾವಸು ನೀನು ಮೇಧಾವಿಯಾದ ಬೃಹದ್ಯುಮ್ನನ ಸತ್ರವನ್ನು ನಿರ್ವಹಿಸು. ನಾನು ನಿನ್ನ ಸಲುವಾಗಿ ನಿಯತೇಂದ್ರಿಯನಾಗಿ ಬ್ರಹ್ಮಹತ್ಯೆಯ ಪ್ರಾಯಶ್ಚಿತ್ತ ವ್ರತವನ್ನು ಆಚರಿಸುವೆನು.
ಲೋಮಶಃ
ಸೋಽಗಚ್ಛೇದ್ವನಮೇಕಾಗ್ರೋ ಬ್ರಹ್ಮಹತ್ಯಾವ್ರತಂ ಚರನ್ |
ತಚ್ಛ್ರುತ್ವಾರ್ವಾವಸುಃ ಪಶ್ಚಾತ್ಪ್ರಾಯಶ್ಚಿತ್ತಂ ವಿಧಾಯ ಚ ॥10.1॥
ಸ ತಸ್ಯ ಬ್ರಹ್ಮವಧ್ಯಾಯಾಃ ಪಾರಂ ಗತ್ವಾ ಯುಧಿಷ್ಠಿರ |
ಅರ್ವಾವಸುಸ್ತದಾ ಸತ್ರಮಾಜಗಾಮ ಪುನರ್ಮುನಿಃ ॥11॥

ಲೋಮಶ ಎಲೈ ಯುಧಿಷ್ಠಿರನೇ! ಆ ಅರ್ವಾವಸು ಋಷಿಯಾದರೂ ಸಹ ಬ್ರಹ್ಮಹತ್ಯೆಯನ್ನು ಪರಿಹರಿಸುವ ವ್ರತವನ್ನು ಸಂಪೂರ್ಣವಾಗಿ ನಿರ್ವಹಿಸಿ ಪುನಃ ಸತ್ರಕ್ಕೆ ಹಿಂದಿರುಗಿ ಬಂದನು.
ತತಃ ಪರಾವಸುರ್ದೃಷ್ಟ್ವಾ ಭ್ರಾತರಂ ಸಮುಪಸ್ಥಿತಮ್ |
ಬೃಹದ್ದ್ಯುಮ್ನಮುವಾಚೇದಂ ವಚನಂ ಹರ್ಷಗದ್ಗದಮ್ ॥12॥
ಆಗ ಪರಾವಸುವು ಹಿಂದಿರುಗಿದ ತಮ್ಮನನ್ನು ನೋಡಿ ಸಂತೋಷದಿಂದ ಗದ್ಗದವಾದ ಕಂಠದಿಂದ ಬೃಹದ್ದ್ಯುಮ್ನನನ್ನು ಕುರಿತು ಹೀಗೆ ಮಾತನಾಡಿದನು.
ಏಷ ತೇ ಬ್ರಹ್ಮಹಾ ಯಜ್ಞಂ ಮಾ ದೃಷ್ಟ್ವಾಂ ಪ್ರವಿಶೇದಿತಿ |
ಬ್ರಹ್ಮಹಾ ಪ್ರೇಕ್ಷಿತೇನಾಪಿ ಪೀಡಯೇತ್ ತ್ವಾಮಸಂಶಯಮ್ ॥13॥
ಈ ಬ್ರಹ್ಮಹತ್ಯಾ ದೋಷವನ್ನು ಹೊಂದಿರುವ ಅರ್ವಾವಸುವು ನಿನ್ನ ಯಜ್ಞ ಶಾಲೆಯನ್ನು ನೋಡಲು ಪ್ರವೇಶಿಸದಿರಲಿ. ಬ್ರಹ್ಮಹತ್ಯೆಯನ್ನು ಮಾಡಿದವನು ತನ್ನ ದೃಷ್ಟಿಯಿಂದಲೂ ನಿನಗೆ ಪೀಡೆಯನ್ನು ಉಂಟುಮಾಡುತ್ತಾನೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಲೋಮಶಃ
ತಚ್ಛ್ರುತ್ವೈವ ತದಾ ರಾಜಾ ಪ್ರೇಷ್ಯಾನಾಹ ಸ ವಿಟ್‌ಪತೇ |
ಪ್ರೇಷ್ಯೈರುತ್ಸಾರ್ಯಮಾಣಸ್ತು ರಾಜನ್ನರ್ವಾವಸುಸ್ತದಾ |
ನ ಮಯಾ ಬ್ರಹ್ಮಹತ್ಯೇಯಂ ಕೃತೇತ್ಯಾಹ ಪುನಃ ಪುನಃ ॥14॥
ಆ ಮಾತುಗಳನ್ನು ಕೇಳಿದ ತಕ್ಷಣವೇ ರಾಜನು ತನ್ನ ಸೇವಕರಿಗೆ ಅಪ್ಪಣೆಯನ್ನು ಮಾಡಿದನು. ಎಲೈ ರಾಜನೇ! ರಾಜಸೇವಕರು ಅರ್ವಾವಸುವನ್ನು ಹೊರಗೆ ನೂಕುತ್ತಿರಲು ಅವನು ನಾನು ಬ್ರಹ್ಮಹತ್ಯೆಯನ್ನು ಮಾಡಿಲ್ಲ ಎಂದು ಪುನಃ ಪುನಃ ಹೇಳಿದನು.
ಉಚ್ಯಮಾನೋಽಸಕೃತ್ ಪ್ರೇಷ್ಯೈರ್ಬ್ರಹ್ಮಹನ್ನಿತಿ ಭಾರತ |
ನೈವ ಸ್ಮ ಪ್ರತಿಜಾನಾಮಿ ಬ್ರಹ್ಮವಧ್ಯಾಂ ಸ್ವಯಂಕೃತಾಮ್ |
ಮಮ ಭ್ರಾತ್ರಾ ಕೃತಮಿದಂ ಮಯಾ ಸ ಪರಿಮೋಕ್ಷಿತಃ ॥15॥
ಎಲೈ ಭಾರತನೇ! ರಾಜಸೇವಕರಿಂದ ಅವನು ಪುನಃ ಪುನಃ ಬ್ರಹ್ಮಹತ್ಯಾಕಾರನೆಂದು ಕರೆಯಲ್ಪಟ್ಟರು, ನಾನು ಎಂದೂ ಬ್ರಹ್ಮಹತ್ಯವನ್ನು ಮಾಡಿಲ್ಲ (ಅಂತಹ ಯಾವ ನೆನಪೂ ನನಗೆ ಇಲ್ಲ). ನನ್ನ ಅಣ್ಣನಾದ ಪರಾವಸುವು ಬ್ರಹ್ಮಹತ್ಯೆಯನ್ನು ಮಾಡಿದವನು. ನಾನು ಅವನನ್ನು ಬ್ರಹ್ಮಹತ್ಯಾ ದೋಷದಿಂದ ಪಾರು ಮಾಡಿದ್ದೇನೆ ಎಂದು ಹೇಳಿದನು.
ಸ ತಥಾ ಪ್ರವದನ್ ಕ್ರೋಧಾತ್ ತೈಶ್ಚ ಪ್ರೇಷ್ಯೈಃ ಪ್ರಭಾಷಿತಃ |
ತೂಷ್ಣೀಂ ಜಗಾಮ ಬ್ರಹ್ಮರ್ಷಿರ್ವನಮೇವ ಮಹಾತಪಾಃ ॥16॥
ಅವನು ಹಾಗೆ ಹೇಳುತ್ತಿದ್ದರೂ ರಾಜಸೇವಕರು ಅವನನ್ನು ಕುರಿತು ಕ್ರೋಧದಿಂದ ಮಾತನಾಡಿದರು. ಆಗ ಬ್ರಹ್ಮರ್ಷಿಯೂ ಮತ್ತು ಮಹಾತಪಸ್ವಿಯೂ ಆದ ಅವನು ಮೌನದಿಂದ ಪುನಃ ಕಾಡಿಗೇ ನಡೆದನು.
ಉಗ್ರಂ ತಪಃ ಸಮಾಸ್ಥಾಯ ದಿವಾಕರಮಥಾಶ್ರಿತಃ |
ರಹಸ್ಯವೇದಂ ಕೃತವಾನ್ ಸೂರ್ಯಸ್ಯ ದ್ವಿಜಸತ್ತಮಃ ॥17॥
ಮೂರ್ತಿಮಾಂಸ್ತಂ ದದರ್ಶಾಥ ಸ್ವಯಮಗ್ರಭುಗವ್ಯಯಃ ॥18॥
ಅವನು ಉಗ್ರವಾದ ತಪಸ್ಸನ್ನು ಆರಂಭಿಸಿ ಸೂರ್ಯನನ್ನು ಉಪಾಸನೆ ಮಾಡಿದನು. ಆ ದ್ವಿಜಶ್ರೇಷ್ಠನು ಸೂರ್ಯಮಹಿಮಾ ಪ್ರಕಾಶಕವಾದ ರಹಸ್ಯವೇದಕ್ಕೆ ಋಷಿಯಾದನು. ಆಗ ಯಜ್ಞದಲ್ಲಿ ಅಗ್ರಪೂಜ್ಯನೂ ಅವ್ಯಯನೂ ಆದ ಸೂರ್ಯದೇವನು ಸ್ವತಃ ಶರೀರವನ್ನು ಧರಿಸಿ ಅವನಿಗೆ ಪ್ರತ್ಯಕ್ಷನಾದನು.
ಪ್ರೀತಾಸ್ತಸ್ಯಾಭವನ್ ದೇವಾಃ ಕರ್ಮಣಾಽರ್ವಾವಸೋರ್ನೃಪ |
ತಂ ತೇ ಪ್ರವರಯಾಮಾಸುರ್ನಿರಾಸುಶ್ಚ ಪರಾವಸುಮ್ ॥19॥
ಎಲೈ ರಾಜನೇ! ಅರ್ವಾವಸುವು ಮಾಡಿದ ತಪೋರೂಪವಾದ ಕರ್ಮದಿಂದ ದೇವತೆಗಳು ಅವನಿಗೆ ಪ್ರಸನ್ನರಾದರು. ಅವರು ವರವನ್ನು ಕೇಳು ಎಂದು ಅವನನ್ನು ಒತ್ತಾಯ ಮಾಡಿ ಪರಾವಸುವನ್ನು ನಿರಾಕರಿಸಿದರು.
ತತೋ ದೇವಾ ವರಂ ತಸ್ಮೈ ದದುರಗ್ನಿಪುರೋಗಮಾಃ |
ಸ ಚಾಪಿ ವರಯಾಮಾಸ ಪಿತುರುತ್ಥಾನಮಾತ್ಮನಃ ॥20॥
ಅನಾಗಸ್ತ್ವಂ ತತೋ ಭ್ರಾತುಃ ಪಿತುಶ್ಚಾಸ್ಮರಣಂ ವಧೇ |
ಭರದ್ವಾಜಸ್ಯ ಚೋತ್ಥಾನಂ ಯವಕ್ರೀತಸ್ಯ ಚೋಭಯೋಃ ॥21॥
ಪ್ರತಿಷ್ಠಾಂ ಚಾಪಿ ವೇದಸ್ಯ ಸೌರಸ್ಯ ದ್ವಿಜಸತ್ತಮಃ |
ಏವಮಸ್ತಿತ್ವತಿ ತಂ ದೇವಾಃ ಪ್ರೋಚುಶ್ಚಾಪಿ ವರಾನ್ ದದುಃ ॥21.1॥
ಆಗ ಅಗ್ನಿ ಮೊದಲಾದ ದೇವತೆಗಳು ಅವನಿಗೆ ವರವನ್ನು ಕೊಟ್ಟರು. ಅವನಾದರೂ ತನ್ನ ತಂದೆಯ ಪುನರುತ್ಥಾನವನ್ನೂ, ಅಣ್ಣನ ಬ್ರಹ್ಮಹತ್ಯಾ ಪರಿಹಾರವನ್ನೂ, ತಂದೆಗೆ ತನ್ನ ವಧೆಯ ಸ್ಮರಣೆ ಇಲ್ಲದಿರುವುದನ್ನೂ, ಭರದ್ವಾಜ ಮತ್ತು ಯವಕ್ರೀತ ಇವರಿಬ್ಬರ ಉತ್ಥಾನವನ್ನೂ, ಸೌರಮಂತ್ರ ಪ್ರಕಾಶಕವಾದ ವೇದಭಾಗದ ಸಂಪ್ರದಾಯ ಪ್ರವೃತ್ತಿಯನ್ನೂ ದ್ವಿಜಶ್ರೇಷ್ಠನಾದ ಅವನು ವರಗಳನ್ನಾಗಿ ಬೇಡಿದನು. ದೇವತೆಗಳು ಹಾಗೆಯೇ ಆಗಲಿ ಎಂದು ಹೇಳಿ ಅವನು ಕೇಳಿದ ವರಗಳನ್ನು ನೀಡಿದರು.
ತತಃ ಪ್ರಾದುರ್ಬಭೂವುಸ್ತೇ ಸರ್ವ ಏವ ಯುಧಿಷ್ಠಿರ |
ಅಥಾಬ್ರವೀದ್ ಯವಕ್ರೀತೋ ದೇವಾನಗ್ನಿಪುರೋಗಮಾನ್ ॥22॥
ಎಲೈ ಯುಧಿಷ್ಠಿರನೇ! ಆಗ ಅವರೆಲ್ಲರೂ ಪುನಃ ಎದ್ದು ಬಂದರು. ಆಗ ಯವಕ್ರೀತನು ಅಗ್ನಿ ಮೊದಲಾದ ದೇವತೆಗಳನ್ನು ಕುರಿತು ಹೀಗೆ

ಹೇಳಿದನು.
ಸಮಧೀತಂ ಮಯಾ ಬ್ರಹ್ಮ ವ್ರತಾನಿ ಚರಿತಾನಿ ಚ
ಕಥಂ ಚ ರೈಭ್ಯಃ ಶಕ್ತೋ ಮಾಮಧೀಯಾನಂ ತಪಸ್ವಿನಮ್ |
ತಥಾ ಯುಕ್ತೇನ ವಿಧಿನಾ ನಿಹಂತುಮಮರೋತ್ತಮಾಃ ॥23॥
ದೇವತೆಗಳೇ! ನಾನು ವೇದಾಧ್ಯಯನವನ್ನು ಮಾಡಿ ವ್ರತಗಳನ್ನು ಆಚರಿಸಿದ್ದೇನೆ. ಎಲೈ ದೇವಶ್ರೇಷ್ಠರೇ! ಅಂತಹ ಅಧ್ಯಯನಶೀಲನಾದ ತಪಸ್ವಿಯಾದ ನನ್ನನ್ನು ರೈಭ್ಯರು ಆ ಪ್ರಕಾರದಲ್ಲಿ ವಧೆ ಮಾಡಲು ಹೇಗೆ ಸಾಧ್ಯವಾಯಿತು?
ದೇವಾಃ
ಮೈವಂ ಕೃಥಾ ಯವಕ್ರೀತ ಯಥಾ ವದಸಿ ವೈ ಮುನೇ |
ಋತೇ ಗುರುಮಧೀತಾ ಹಿ ಸುಖಂ ವೇದಾಸ್ತ್ವಯಾ ಪುರಾ ॥24॥
ದೇವತೆಗಳು ಯವಕ್ರೀತ ಋಷಿಯೇ! ಹಾಗೆ ಹೇಳಬೇಡ. ನೀನು ಹಿಂದೆ ಗುರುವಿಲ್ಲದೇ ವೇದಗಳನ್ನು ಅನಾಯಾಸದಿಂದ ಅಧ್ಯಯನ ಮಾಡಿದಿ.
ಅನೇನ ತು ಗುರೂನ್ ದುಃಖಾತ್ ತೋಷಯಿತ್ವಾಽಽತ್ಮಕರ್ಮಣಾ |
ಕಾಲೇನ ಮಹತಾ ಕ್ಲೇಶಾತ್ ಬ್ರಹ್ಮಾಧಿಗತಮುತ್ತಮಮ್ ॥25॥
ನೀನು ಮಾಡಿದ ನಿನ್ನ ಕರ್ಮಗಳಿಂದ ಈ ದುಃಖಗಳನ್ನು ಅನುಭವಿಸಿ ಗುರುಗಳನ್ನು ಸಂತೋಷಪಡಿಸಿದ್ದೀಯೆ. ಬಹಳ ಕಾಲ ಕ್ಲೇಶವನ್ನು ಅನುಭವಿಸಿ ಈಗ ಶ್ರೇಷ್ಠವಾದ ವೇದಗಳನ್ನು ಪಡೆದಿದ್ದೀಯೆ.
ಲೋಮಶಃ
ಯವಕ್ರೀತಮಥೋಕ್ತ್ವೈವಂ ದೇವಾಃ ಸಾಗ್ನಿಪುರೋಗಮಾಃ |
ಸಂಜೀವಯಿತ್ವಾ ತಾನ್ ಸರ್ವಾನ್ ಪುನರ್ಜಗ್ಮುಸ್ತ್ರಿವಿಷ್ಟಪಮ್ ॥26॥
ಲೋಮಶ ಅಗ್ನಿ ಮೊದಲಾದ ದೇವತೆಗಳು ಯವಕ್ರೀತನನ್ನು ಕುರಿತು ಹೀಗೆ ಮಾತನಾಡಿ ಮೃತರಾದ ಅವರೆಲ್ಲರನ್ನೂ ಪುನಃ ಬದುಕಿಸಿ ಪುನಃ ಸ್ವರ್ಗಕ್ಕೆ ಹೊರಟು ಹೋದರು.
ತತೋ ವೈ ಸ ಯವಕ್ರೀತೋ ಬ್ರಹ್ಮಚರ್ಯಂ ಚಚಾರ ಹ |
ಅಷ್ಟಾದಶ ಚ ವರ್ಷಾಣಿ ತ್ರಿಂಶತಂ ಚ ಯುಧಿಷ್ಠಿರ ॥27॥
ಎಲೈ ಯುಧಿಷ್ಠಿರನೇ! ಅನಂತರ ಆ ಯವಕ್ರೀತನು ನಲವತ್ತೆಂಟು ವರ್ಷಗಳ ಕಾಲ ಬ್ರಹ್ಮಚರ್ಯವ್ರತವನ್ನು (ಗುರುಕುಲವಾಸವನ್ನು) ಆಚರಿಸಿದನು.
ಆಶ್ರಮಸ್ತಸ್ಯ ಪುಣ್ಯೋಽಯಂ ಸದಾ ಪುಷ್ಪಫಲದ್ರುಮಃ |
ಅತ್ರೋಷ್ಯ ರಾಜಶಾರ್ದೂಲ ಸರ್ವಂಪಾಪಂ ಪ್ರಮೋಕ್ಷ್ಯಸಿ ॥28॥
ಎಲೈ ರಾಜಶಾರ್ದೂಲನೇ! ಇದು ಯವಕ್ರೀತನ ಪವಿತ್ರವಾದ ಆಶ್ರಮ. ಸದಾ ಪುಷ್ಪಫಲಗಳಿಂದ ಭರಿತವಾದ ಈ ಆಶ್ರಮದಲ್ಲಿ ವಾಸ ಮಾಡಿ ನೀನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚತ್ರಿಂಶತ್ಯಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಏಕನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ 22 ನೇ ಅಧ್ಯಾಯ
ಏವಂ ವಸತ್ಯಮಿತಪೌರುಷವೀರ್ಯಸಾರೇ
ನಾರಾಯಣೇ ಸ್ವಪುರಿ ಶಕ್ರಧನಂಜಯೋಕ್ತಃ |
ಸಂಪ್ರಾಪ್ಯ ಲೋಮಶಮುನಿಃ ಸಕಲಾನಿ ತೀರ್ಥಾ-
ನ್ಯಾಪ್ತುಂ ಸ ಪಾಂಡುತನಯೇಷು ಸಹಾಯ ಆಸೀತ್ ॥257॥
ಹೀಗೆ ಅಮಿತ ಬಲ ವೀರ್ಯಗಳಿಂದ ತುಂಬಿದ ಶ್ರೀಕೃಷ್ಣ ತನ್ನ ನಗರದಲ್ಲಿ ವಾಸವಾಗಿದ್ದಾಗ ಇಂದ್ರಾರ್ಜುನರಿಂದ ಪ್ರಾರ್ಥಿತರಾದ ಲೋಮಶ ಮುನಿ ಪಾಂಡವರಿಗೆ ಎಲ್ಲ ತೀರ್ಥಗಳ ಯಾತ್ರೆ ಮಾಡುವಲ್ಲಿ ಸಹಾಯರಾದರು.
ಪೃಥ್ವೀಂ ಪ್ರದಕ್ಷಿಣತ ಏತ್ಯ ಸಮಸ್ತತೀರ್ಥ-
ಸ್ನಾನಂ ಯಥಾಕ್ರಮತ ಏವ ವಿಧಾಯ ಪಾರ್ಥಾಃ |
ಸಂಪೂಜ್ಯ ತೇಷು ನಿಖಿಲೇಷು ಹರಿಂ ಸುಭಕ್ತ್ಯಾ
ಕೃಷ್ಣೇ ಸಮರ್ಪಯಿತುಮಾಪುರಥ ಪ್ರಭಾಸಮ್ |
ಸಂಭಾವನಾಯ ಸಕಲೈರ್ಯದುಭಿಃ ಸಮೇತ
ಸ್ತೇಷಾಂ ಚ ರಾಮಸಹಿತೋ ಹರಿರಾಜಗಾಮ ॥258॥
ಪಾರ್ಥೈಃ ಸಂಪೂಜಿತಸ್ತತ್ರ ಕೃಷ್ಣೋ ಯದುಗಣೈಃ ಸಹ |
ಪಾರ್ಥಾನ್ ಸಂಪೂಜಯಾಮಾಸುರ್ವೃಷ್ಣಯಶ್ಚಾಜ್ಞಯಾ ಹರೇಃ ॥259॥
ಪಾಂಡವರು ಭೂಪ್ರದಕ್ಷಿಣೆ ಮಾಡುತ್ತ ಕ್ರಮವಾಗಿ ಸಕಲ ತೀರ್ಥಸ್ನಾನವನ್ನು ಮಾಡಿ ಅಲ್ಲಿ ಎಲ್ಲ ಕಡೆ ಹರಿಯನ್ನೇ ಒಳ್ಳೆಯ ಭಕ್ತಿಯಿಂದ ಆರಾಧಿಸಿ ಕೃಷ್ಣನಲ್ಲಿ ಸಮರ್ಪಿಸುವುದಕ್ಕಾಗಿ ಪ್ರಭಾಸ ಕ್ಷೇತ್ರಕ್ಕೆ ಬಂದರು. ಅವರನ್ನು ಸತ್ಕರಿಸಲು ಶ್ರೀಕೃಷ್ಣನೇ ಎಲ್ಲ

ಯಾದವರೊಂದಿಗೆ ಮತ್ತು ಬಲರಾಮನೊಂದಿಗೆ ಬಂದ. ಅಲ್ಲಿ ಯಾದವರೊಂದಿಗೆ ಕೃಷ್ಣನನ್ನು ಪಾಂಡವರು ಸತ್ಕರಿಸಿದರು. ಯಾದವರೂ ಕೃಷ್ಣನಾಜ್ಞೆಯಂತೆ ಪಾಂಡವರನ್ನು ಸತ್ಕರಿಸಿದರು.
ತತ್ರ ಭೀಮಂ ತಪೋವೇಷಂ ದೃಷ್ಟ್ವಾಽತಿಸ್ನೇಹಕಾರಣಾತ್ |
ದುರ್ಯೋಧನಂ ನಿಂದಯತಿ ರಾಮೇ ಸಾತ್ಯಕಿರಬ್ರವೀತ್ ॥260॥
ಸರ್ವೇ ವಯಂ ನಿಹತ್ಯಾದ್ಯ ಸಕರ್ಣಾನ್ ಧೃತರಾಷ್ಟ್ರಜಾನ್ |
ಅಭಿಮನ್ಯುಂ ಸ್ಥಾಪಯಾಮೋ ರಾಜ್ಯೇ ಯಾವತ್ ತ್ರಯೋದಶಮ್ ॥
ಸಂವತ್ಸರಂ ಸಮಾಪ್ಯೈವ ಪುರಂ ಯಾಸ್ಯಂತಿ ಪಾಂಡವಾಃ |
ತತೋ ಯುಧಿಷ್ಠಿರೋ ರಾಜಾ ರಾಜ್ಯಂ ಶಾಸತು ಪೂರ್ವವತ್ ॥262॥
ಪಾಂಡವರ ಮಧ್ಯದಲ್ಲಿ ಭೀಮನನ್ನು ತಪಸ್ಸಿನ ವೇಷದಲ್ಲಿ ಕಂಡು ಬಲರಾಮನ ಅತಿಪ್ರೀತಿಯಿಂದ ದುರ್ಯೋಧನನನ್ನು ನಿಂದಿಸಿದಾಗ ಸಾತ್ಯಕಿ ನುಡಿದ. `ನಾವೆಲ್ಲರೂ ಈಗಲೇ ಕರ್ಣನ ಸಮೇತ ಕೌರವರನ್ನು ಕೊಂದು ಅಭಿಮನ್ಯುವನ್ನು ರಾಜ್ಯದಲ್ಲಿ ಕುಳ್ಳಿರಿಸುವೆವು. ಹದಿಮೂರು ವರ್ಷಗಳನ್ನು ಕಳೆದು ಪಾಂಡವರು ಹಸ್ತಿನಾವತಿಗೆ ಹಿಂದಿರುಗಿ ಬಂದಾಗ ಧರ್ಮರಾಜನೇ ಹಿಂದಿನಂತೆ ರಾಜ್ಯವಾಳಲಿ.
ಏವಂ ವದತ್ಯೇವ ಶಿನಿಪ್ರವೀರೇ
ಜನಾರ್ದನಃ ಪಾರ್ಥಮುಖಾಂಯುದೀಕ್ಷ್ಯ |
ಉವಾಚ ಶೈನೇಯ ನ ಪಾಂಡುಪುತ್ರಾಃ
ಪರೇಣ ಸಂಸಾಧಿತರಾಜ್ಯಕಾಮಾಃ ॥263॥
ಸ್ವಬಾಹುವೀರ್ಯೇಣ ನಿಹತ್ಯ ಶತ್ರೂ-
ನಾಪ್ಸ್ಯಂತಿ ರಾಜ್ಯಂ ತ ಇತಿರಿತೇಽಮುನಾ |
ತಥೇತಿ ಪಾರ್ಥಾ ಅವದಂಸ್ತತಸ್ತೇ
ಕೃಷ್ಣಂ ಪುರಸ್ಕೃತ್ಯ ಯಯುರ್ದಶಾರ್ಹಾಃ ॥264॥
ಸಾತ್ಯಕಿ ಹೀಗೆ ಹೇಳಿದಾಗ ಶ್ರೀಕೃಷ್ಣ ಪಾಂಡವರ ಮುಖಗಳನ್ನು ನೋಡಿ ಹೇಳಿದ `ಸಾತ್ಯಕಿ, ಪಾಂಡವರು ಇತರರು ಸಂಪಾದಿಸಿ ಕೊಡುವ ರಾಜ್ಯವನ್ನು ಬಯಸುವುದಿಲ್ಲ. ತಮ್ಮ ಬಾಹುಬಲದಿಂದ ಶತ್ರುಗಳನ್ನು ಸಂಹರಿಸಿಯೇ ರಾಜ್ಯವನ್ನು ಸಂಪಾದಿಸುತ್ತಾರೆ'. ಕೃಷ್ಣ ಹೀಗೆ ಹೇಳಿದಾಗ ಪಾಂಡವರು `ಹೌದು ಹಾಗೇ ಮಾಡುತ್ತೇವೆ' ಎಂದರು. ಬಳಿಕ ಎಲ್ಲ ಯಾದವರೂ ಕೃಷ್ಣನನ್ನು ಮುಂದೆ ಮಾಡಿಕೊಂಡು ಹೋದರು.
* * * *
ನೂರ ಮೂವತ್ತಾರನೆಯ ಅಧ್ಯಾಯ
ಲೋಮಶರ ಆದೇಶದಂತೆ ಯುಧಿಷ್ಠಿರಾದಿಗಳ ಕೈಲಾಸಾದಿ ಗಿರಿ ಪ್ರವೇಶ. ಲೋಮಶರಿಂದ ಆ ಕ್ಷೇತ್ರಗಳ ದುರ್ಗಮತ್ವ ಕಥನ.
ಲೋಮಶಃ
ಉಶೀರಬೀಜಂ ಮೈನಾಕಂ ಗಿರಿಂ ಶ್ವೇತಂ ಚ ಭಾರತ |
ಸಮತೀತೋಽಸಿ ಕೌಂತೇಯ ಕಾಲಶೈಲಂ ಚ ಪಾರ್ಥಿವ ॥1॥
ಎಲೈ ಕೌಂತೇಯನಾದ ರಾಜನೇ! ಭಾರತನೇ, ನೀನು ಉಶೀರಬೀಜ ಪರ್ವತವನ್ನು ಮೈನಾಕ ಪರ್ವತವನ್ನು, ಶ್ವೇತಪರ್ವತವನ್ನು ಮತ್ತು ಕಾಲಶೈಲ ಪರ್ವತವನ್ನು ದಾಟಿದ್ದೀಯೆ.
ಏಷಾ ಗಂಗಾ ಸಪ್ತವಿಧಾ ರಾಜತೇ ಭರತರ್ಷಭ |
ಸ್ಥಾನಂ ವಿರಜಸಂ ಪುಣ್ಯಂ ಯತ್ರಾಗ್ನಿರ್ನಿತ್ಯಮಿಧ್ಯತೇ ॥2॥
ಎಲೈ ಭರತರ್ಷಭನೇ! ಇಲ್ಲಿ ಗಂಗೆಯು ಏಳು ಕವಲುಗಳಿಂದ ಶೋಭಿಸುತ್ತಿದ್ದಾಳೆ. ಇದು ವಿರಜಸವೆಂಬ ಪುಣ್ಯಕ್ಷೇತ್ರ. ಇಲ್ಲಿ ಅಗ್ನಿಯು ಯಾವಾಗಲೂ ಜ್ವಲಿಸುತ್ತಿರುತ್ತದೆ (ಇದು ಹರಿದ್ವಾರದಿಂದ ಆಚೆಗಿರುವ ವಿಯೋಗಿ ನಾರಾಯಣವೆಂಬ ಕ್ಷೇತ್ರ).
ಏತದ್ವೈ ಮಾನುಷೇಣಾದ್ಯ ನ ಶಕ್ಯಂ ದ್ರಷ್ಟುಮದ್ಭುತಮ್ |
ಸಮಾಧಿಂ ಕುರುತಾವ್ಯಗ್ರಾಸ್ತೀರ್ಥಾನ್ಯೇತಾನಿ ದ್ರಕ್ಷ್ಯಥ ॥3॥
ಏತದ್ದ್ರಕ್ಷ್ಯಸಿ ದೇವಾನಾಮಾಕ್ರೀಡಂ ಚರಣಾಂಕಿತಮ್ |
ಈ ಅದ್ಭುತವನ್ನು ಮನುಷ್ಯರು ನೋಡಲು ಸಾಧ್ಯವಿಲ್ಲ. ಬಹಳ ಎಚ್ಚರಿಕೆಯಿಂದ ಮನಸ್ಸಿನಲ್ಲಿ ಸಮಾಧಿಯನ್ನು ಮಾಡಿ, ಆಗ ಈ ಕ್ಷೇತ್ರಗಳನ್ನೆಲ್ಲಾ ನೋಡಬಹುದು. ದೇವತೆಗಳ ಪಾದಚಿಹ್ನೆಗಳಿಂದ ಅಲಂಕೃತವಾದ ದೇವತೆಗಳ ಈ ವಿಹಾರಸ್ಥಾನವನ್ನು ನೋಡುವಿ.
ಶ್ವೇತಂ ಗಿರಿಂ ಪ್ರವೇಕ್ಷ್ಯಾಮೋ ಮಂದರಂ ಚೈವ ಪರ್ವತಮ್ |
ಯತ್ರ ಮಾಣಿವರೋ ಯಕ್ಷಃ ಕುಬೇರಶ್ಚೈವ ಯಕ್ಷರಾಟ್ ॥4॥
ಇನ್ನು ಶ್ವೇತಗಿರಿಯನ್ನು ಮತ್ತು ಮಂದರಪರ್ವತವನ್ನು ಪ್ರವೇಶಿಸುವೆವು. ಅಲ್ಲಿ ಯಕ್ಷರಾಜನಾದ ಕುಬೇರನೂ ಮಾಣಿಭದ್ರನೆಂಬ ಅವನ ಸ್ನೇಹಿತನಾದ ಯಕ್ಷನೂ ಇರುತ್ತಾರೆ.
ಅಷ್ಟಾಶೀತಿಸಹಸ್ರಾಣಿ ಗಂಧರ್ವಾಃ ಶೀಘ್ರಗಾಮಿನಃ |
ತಥಾ ಕಿಂಪುರುಷಾ ರಾಜನ್ ಯಕ್ಷಾಶ್ಚೈವ ಚತುರ್ಗುಣಾಃ ॥5॥
ಅನೇಕರೂಪಸಂಸ್ಥಾನಾ ನಾನಾಪ್ರಹರಣಾಶ್ಚ ತೇ |
ಯಕ್ಷೇಂದ್ರಂ ಮನುಜಶ್ರೇಷ್ಠ ಮಾಣಿಭದ್ರಮುಪಾಸತೇ ॥6॥
ಎಲೈ ಮನುಜ ಶ್ರೇಷ್ಠನಾದ ರಾಜನೇ! ಎಂಭತ್ತೆಂಟು ಸಹಸ್ರ ಶೀಘ್ರಗಾಮಿಗಳಾದ ಅಶ್ವಗಳು ಅದರಂತೆ ಕಿಂಪುರುಷರು ಮತ್ತು ಅದರ

ನಾಲ್ಕುಪಟ್ಟು ಯಕ್ಷರು ಅನೇಕ ರೂಪಗಳನ್ನು, ಅನೇಕ ಆಯುಧಗಳನ್ನು ಧರಿಸಿ ಯಕ್ಷಪತಿಯಾದ ಮಾಣಿಭದ್ರುನನ್ನು ಉಪಾಸನೆ ಮಾಡುತ್ತಾರೆ.
ತೇಷಾಮೃದ್ಧಿರತೀವಾತ್ರ ಗತೌ ವಾಯುಸಮಾಶ್ಚ ತೇ |
ಸ್ಥಾನಾತ್ ಪ್ರಚ್ಯಾವಯೇಯುರ್ಯೇ ದೇವರಾಜಮಪಿ ಧ್ರುವಮ್ ॥7॥
ಅವರಿಗೆ ಇಲ್ಲಿ ಅತಿಶಯವಾದ ಸಂಪತ್ತು ಇದೆ. ಅವರಿಗೆ ವಾಯುಸಮಾನವಾದ ಗತಿಯಿದೆ. ಅವರು ದೇವರಾಜನಾದ ಇಂದ್ರನನ್ನೂ ಅವನ ಸ್ಥಾನದಿಂದ ಬೀಳಿಸಬಹುದು.
ತೈಸ್ತಾತ ಬಲಿಭಿರ್ಗುಪ್ತಾ ಯಾತುಧಾನೈಶ್ಚ ರಕ್ಷಿತಾಃ |
ದುರ್ಗಮಾಃ ಪರ್ವತಾಃ ಪಾರ್ಥ ಸಮಾಧಿಂ ಪರಮಂ ಕುರು ॥8॥
ಎಲೈ ಪ್ರೀತಿಪಾತ್ರನಾದ ಪಾರ್ಥನೇ! ಅಂತಹ ಯಕ್ಷಾದಿಗಳಿಂದಲೂ, ಮತ್ತು ಯಾತುಧಾನದಿಂದಲೂ (ರಾಕ್ಷಸರಿಂದಲೂ) ರಕ್ಷಿಸಲ್ಪಟ್ಟ ಈ ಪರ್ವತ ಪ್ರದೇಶಗಳು ದುರ್ಗಮವಾದವುಗಳು. ನೀನು ಶ್ರೇಷ್ಠವಾದ ಮನಸ್ಸಮಾಧಿಯನ್ನು ಮಾಡು.
ಕುಬೇರಸಚಿವಾಶ್ಚಾನ್ಯೇ ರೌದ್ರಾ ಮೈತ್ರಾಶ್ಚ ರಾಕ್ಷಸಾಃ |
ತೈಃ ಸಮೇಷ್ಯಾಮ ಕೌಂತೇಯ ಸಂಯತೋ ವಿಕ್ರಮೇಣ ಚ ॥9॥
ಎಲೈ ಕೌಂತೇಯನೇ! ಕುಬೇರನ ಮಂತ್ರಿಗಳಾದ ನೋಡಲು ಭಯಂಕರರೂ, ಸ್ನೇಹಪರರೂ ಆದ ಇನ್ನೂ ಅನೇಕ ರಾಕ್ಷಸರಿದ್ದಾರೆ. ಸಂಯಮ, ವಿಕ್ರಮಗಳನ್ನು ಅವಲಂಬಿಸಿ ಅವರ ಜೊತೆಯಲ್ಲಿ ಸೇರುವೆವು.
ಕೈಲಾಸಃ ಪರ್ವತೋ ರಾಜನ್ ಷಡ್ಯೋಜನಸಮುಚ್ಛ್ರಿತಃ |
ಯತ್ರ ದೇವಾ ಸಮಾಯಾಂತಿ ವಿಶಾಲಾ ಯತ್ರ ಭಾರತ ॥10॥
ಎಲೈ ರಾಜನೇ! ಕೈಲಾಸ ಪರ್ವತವು ಆರುಯೋಜನ ಎತ್ತರವಾಗಿದೆ. ಎಲೈ ಭಾರತನೇ! ಅಲ್ಲಿಗೆ ದೇವತೆಗಳು ಬರುತ್ತಾರೆ. ಮತ್ತು ಅಲ್ಲಿ ವಿಶಾಲಾ ಎಂದು ಕರೆಸಿಕೊಳ್ಳಲ್ಪಡುವ ಬದರೀ ಕ್ಷೇತ್ರವಿದೆ.
ಅಸಂಖ್ಯೇಯಾಸ್ತು ಕೌಂತೇಯ ಯಕ್ಷರಾಕ್ಷಸಕಿನ್ನರಾಃ |
ನಾಗಾಃ ಸುಪರ್ಣಾ ಗಂಧರ್ವಾಃ ಕುಬೇರಸದನಂ ಪ್ರತಿ ॥11॥
ಎಲೈ ಕೌಂತೇಯನೇ! ಕುಬೇರಸದನದ ಸುತ್ತಲೂ ಸಂಖ್ಯೆಯಿಲ್ಲದಷ್ಟು ಯಕ್ಷರಾಕ್ಷಸಕಿನ್ನರರು, ಸರ್ಪಗಳು, ಪಕ್ಷಿಗಳು ಮತ್ತು ಗಂಧರ್ವರು ರಕ್ಷಣೆ ಮಾಡುತ್ತಿರುತ್ತಾರೆ.
ತಾನ್ ವಿಗಾಹಸ್ವ ಪಾರ್ಥಾದ್ಯ ತಪಸಾ ಚ ದಮೇನ ಚ |
ರಕ್ಷ್ಯಮಾಣೋ ಮಯಾ ರಾಜನ್ ಭೀಮಸೇನಬಲೇನ ಚ ॥12॥
ಎಲೈ ರಾಜನೇ! ಪಾರ್ಥನೇ! ತಪಸ್ಸನ್ನು ಮತ್ತು ಇಂದ್ರಿಯ ನಿಗ್ರಹವನ್ನು ಆಶ್ರಯಿಸಿದವನಾಗಿ ನನ್ನಿಂದ ರಕ್ಷಿತನಾಗಿ ಭೀಮಸೇನನ ಬಲವನ್ನು ಅವಲಂಬಿಸಿ ಅವುಗಳನ್ನು ದಾಟಿ ಹೋಗುವವನಾಗು.
ಸ್ವಸ್ತಿ ತೇ ವರುಣೋ ರಾಜಾ ಯಮಶ್ಚ ಸಮಿತಿಂಜಯಃ |
ಗಂಗಾ ಚ ಯಮುನಾ ಚೈವ ಪರ್ವತಶ್ಚ ದಧಾತು ತೇ ॥13॥
ಮರುತಶ್ಚ ಸಹಾಶ್ವಿಭ್ಯಾಂ ಸರಿತಶ್ಚ ಸರಾಂಸಿ ಚ |
ಸ್ವಸ್ತಿ ದೇವಾಸುರೇಭ್ಯಶ್ಚ ವಸುಭ್ಯಶ್ಚ ಮಹಾದ್ಯುತೇ ॥13.1॥
ನಿನಗೆ ವರುಣರಾಜನು ಶುಭವನ್ನು ಮಾಡಲಿ. ಯುದ್ಧದಲ್ಲಿ ಜಯಶೀಲನಾದ ಯಮನು, ಗಂಗೆಯು, ಯಮುನೆಯು ಮತ್ತು ಪರ್ವತವು ನಿನಗೆ ಶುಭವನ್ನು ಅನುಗ್ರಹಿಸಳು. ಎಲೈ ಮಹಾದ್ಯುತಿಯೇ! ಮರುತ್ತುಗಳು, ಅಶ್ವಿನೀದೇವತೆಗಳು, ನದಿಗಳು, ಸರೋವರಗಳು, ದೇವಾಸುರರು ಮತ್ತು ವಸುಗಳು ನಿನಗೆ ಮಂಗಳವನ್ನು ಮಾಡಲಿ.
ಇಂದ್ರಸ್ಯ ಜಾಂಬೂನದಪರ್ವತಾದ್ವೈ
ಶೃಣೋಮಿ ಘೋಷಂ ತವ ದೇವಿ ಗಂಗೇ |
ಗೋಪಾಯ್ಯೆನಂ ತ್ವಂ ಸುಭಗೇ ಗಿರಿಭ್ಯಃ
ಸರ್ವಾಜಮೀಢಾಪಚಿತಂ ನರೇಂದ್ರಮ್ ॥14॥
ಎಲೌ ಗಂಗಾದೇವಿಯೇ! ಇಂದ್ರನ ಸಂಬಂಧಿಯಾದ ಸುವರ್ಣಮಯವಾದ ಮೇರುಪರ್ವತದಿಂದ ನಿನ್ನ ಘೋಷವನ್ನು ಕೇಳುತ್ತಿದ್ದೇನೆ. ಎಲೌ ಸೌಭಾಗ್ಯವತಿಯೇ! ಎಲ್ಲಾ ಆಜಮೀಢರಿಂದ ಪೂಜಿತನಾದ ಈ ನರೇಂದ್ರನನ್ನು ನೀನು ಈ ಪರ್ವತಗಳಲ್ಲಿ ರಕ್ಷಣೆಯನ್ನು ಮಾಡು.
ದದಸ್ವ ಶರ್ಮ ಪ್ರವಿವಿಕ್ಷತೋಽಸ್ಯ ಶೈಲಾನಿಮಾಂಛೈಲಸುತೇ ನೃಪಸ್ಯ |
ಶಿವಪ್ರದಾ ಸರ್ವಸರಿತ್ಪ್ರಧಾನೇ ಸಭ್ರಾತೃಕಸ್ಯೇಹ ಯುಧಿಷ್ಠಿರಸ್ಯ ॥15॥
ಎಲೌ ಶೈಲಸುತೆಯೇ! ಈ ಪರ್ವತಗಳನ್ನು ಪ್ರವೇಶಿಸುವ ರಾಜನಿಗೆ ಸುಖವನ್ನು ನೀಡುವವಳಾಗು. ಎಲ್ಲ ನದಿಗಳಲ್ಲಿ ಶ್ರೇಷ್ಠಳಾದವಳೇ! ತನ್ನ ತಮ್ಮಂದಿರಿಂದ ಕೂಡಿದ ಯುಧಿಷ್ಠಿರನಿಗೆ ಮಂಗಳವನ್ನು ನೀಡುವವಳಾಗು. (ಹೀಗೆ ಆ ಲೋಮಶರು ಗಂಗೆಯನ್ನು ಕುರಿತು ಪ್ರಾರ್ಥಿಸಿ ರಾಜನನ್ನು ಕುರಿತು ಎಚ್ಚರಿಕೆಯಿಂದ ಇರು ಎಂದು ಹೇಳಿದರು).
ಯುಧಿಷ್ಠಿರಃ
ಅಪೂರ್ವೋಽಯಂ ಸಂಭ್ರಮೋ ಲೋಮಶಸ್ಯ
ಕೃಷ್ಣಾಂ ಚ ಸರ್ವೇ ರಕ್ಷತ ಮಾ ಪ್ರಮಾದಮ್ |
ದೇಶೋ ಹ್ಯಯಂ ದುರ್ಗತಮೋ ಮತೋಽಸ್ಯ
ತಸ್ಮಾತ್ ಪರಂ ಶೌಚಮಚೀಚರಧ್ವಮ್ ॥16॥

ಯುಧಿಷ್ಠಿರ ಲೋಮಶರಲ್ಲಿ ಹಿಂದೆಂದೂ ಕಾಣಬರದ ಸಂಭ್ರಮವು ಕಂಡುಬರುತ್ತಿದೆ. ಎಲ್ಲರೂ ಎಚ್ಚರಿಕೆಯಿಂದ ದ್ರೌಪದಿಯನ್ನು ರಕ್ಷಿಸಿ. ಈ ಪ್ರದೇಶಗಳು ದುರ್ಗಮವಾದುದೆಂದು ಲೋಮಶರು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಹೆಚ್ಚಿನ ಕಾಯಿಕ, ಮಾನಸಿಕ, ವಾಚಿಕ ಶೌಚವನ್ನು ಎಲ್ಲರೂ ಆಶ್ರಯಿಸಿ.
ವೈಶಂಪಾಯನಃ
ತತೋಽಬ್ರವೀದ್ ಭೀಮಮುದಾರವೀರ್ಯಂ
ಕೃಷ್ಣಾಂ ಯತ್ತಃ ಪಾಲಯ ಭೀಮಸೇನ |
ಶೂನ್ಯೇಽರ್ಜುನೇಽಸನ್ನಿಹಿತೇ ಚ ತಾತ
ತ್ವಾಮೇವ ಕೃಷ್ಣಾ ಭಜತೇ ಭಯೇಷು ॥17॥
ಅನಂತರ ಉದಾರವೀರ್ಯನಾದ ಭೀಮಸೇನನನ್ನು ಕುರಿತು ಧರ್ಮರಾಜನು, ಭೀಮಸೇನನೇ! ಜಾಗರೂಕತೆಯಿಂದ ದ್ರೌಪದಿಯನ್ನು ರಕ್ಷಿಸು. ಪ್ರೀತಿಪಾತ್ರನೇ ನಿರ್ಜನ ಪ್ರದೇಶಗಳಲ್ಲಿ ಅರ್ಜುನನು ಇಲ್ಲದಿರುವಾಗ ಉಂಟಾಗುವ ಎಲ್ಲ ಭಯಗಳಲ್ಲಿಯೂ ದ್ರೌಪದಿಯು ನಿನ್ನನ್ನೇ ಆಶ್ರಯಿಸುತ್ತಾಳೆ ಎಂದು ಹೇಳಿದನು.
ತತೋ ಮಹಾತ್ಮಾ ಸ ಯಮೌ ಸಮೇತ್ಯ
ಮೂರ್ಧನ್ಯುಪಾಘ್ರಾಯ ವಿಮೃಜ್ಯ ಗಾತ್ರೇ |
ಉವಾಚ ತೌ ಬಾಷ್ಪಕಲಂ ಸ ರಾಜಾ
ಮಾ ಭೈಷ್ಟಮಾಗಚ್ಛತಮಪ್ರಮತ್ತೌ ॥18॥
ಅನಂತರ ಮಹಾತ್ಮನಾದ ಆ ಧರ್ಮರಾಜನು ನಕುಲ-ಸಹದೇವರನ್ನು ಸಮೀಪಿಸಿ ಶಿರಸ್ಸಿನಲ್ಲಿ ಆಘ್ರಾಣ ಮಾಡಿ ಅವರ ಶರೀರಗಳನ್ನು ಸವರಿ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಅವರಿಬ್ಬರನ್ನು ಕುರಿತು ಹೆದರಬೇಡಿ, ಎಚ್ಚರಿಕೆಯಿಂದ ಜೊತೆಯಲ್ಲಿ ಬನ್ನಿ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಷಟ್‌ತ್ರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ದ್ವಿನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತೇಳನೆಯ ಅಧ್ಯಾಯ
ಅಶಕ್ತರಾದ ದ್ರೌಪದ್ಯಾದಿಗಳನ್ನು ತಾನು ಎತ್ತಿಕೊಂಡು ಹೋಗುವುದಾಗಿ ಭೀಮಸೇನನ ಉತ್ಸಾಹದ ಆಶ್ವಾಸನೆ. ಸುಬಾಹುರಾಜನಿಂದ ಯುಧಿಷ್ಠರಾದಿಗಳ ಸತ್ಕಾರ. ಹೆಚ್ಚಿನ ಪರಿವಾರವನ್ನು ಹಿಂದೆ ಬಿಟ್ಟು ಗಂಧಮಾದನ ಮತ್ತು ಹಿಮಾಲಯವನ್ನು ಕುರಿತು ಪಾಂಡವರ ಪ್ರಯಾಣ.
ಯುಧಿಷ್ಠಿರಃ
ಅಂತರ್ಹಿತಾನಿ ಭೂತಾನಿ ಬಲವಂತಿ ಮಹಾಂತಿ ಚ |
ಅಗ್ನಿನಾ ತಪಸಾ ಚೈವ ಶಕ್ಯಂ ಗಂತುಂ ವೃಕೋದರ ॥1॥
ಯುಧಿಷ್ಠಿರ ಎಲೈ ವೃಕೋದರನೇ! ಬಲಿಷ್ಠವಾದ ಮಹಾಭೂತಗಳು ಅಂತರ್ಧಾನವನ್ನು ಹೊಂದಿವೆ. ಅಗ್ನಿಯನ್ನು ತೆಗೆದುಕೊಂಡು ತಪೋಬಲದಿಂದ ಮುಂದೆ ಹೋಗಲು ಸಾಧ್ಯವಾಗುತ್ತದೆ.
ಸನ್ನಿವರ್ತಯ ಕೌಂತೇಯ ಕ್ಷುತ್ಪಿಪಾಸೇ ಬಲಾಶ್ರಯಾತ್ |
ತತೋ ಬಲಂ ಚ ದಾಕ್ಷ್ಯಂ ಚ ಸಂಶ್ರಯಸ್ವ ವೃಕೋದರ ॥2॥
ಎಲೈ ಕೌಂತೇಯನಾದ ವೃಕೋದರನೇ ನಿನ್ನ ಬಲವನ್ನು ಅವಲಂಬಿಸಿ ಹಸಿವು, ನೀರಡಿಕೆಗಳನ್ನು ದೂರಮಾಡು. ದಕ್ಷತೆಯನ್ನು ಮತ್ತು ಬಲವನ್ನು ಅವಲಂಬಿಸುವವನಾಗು.
ಋಷೇಸ್ತ್ವಯಾ ಶ್ರುತಂ ವಾಕ್ಯಂ ಕೈಲಾಸಂ ಪರ್ವತಂ ಪ್ರತಿ |
ಬುದ್ಧ್ಯಾ ಪ್ರಪಶ್ಯ ಕೌಂತೇಯ ಕಥಂ ಕೃಷ್ಣಾ ಗಮಿಷ್ಯತಿ ॥3॥
ಕೌಂತೇಯನೇ, ಲೋಮಶ ಋಷಿಗಳು ಕೈಲಾಸ ಪರ್ವತವನ್ನು ಕುರಿತು ಆಡಿದ ಮಾತುಗಳನ್ನು ನೀನು ಕೇಳಿದ್ದೀಯೆ. ದ್ರೌಪದಿಯು ಆ ದುರ್ಗಮ ಪ್ರದೇಶದಲ್ಲಿ ಹೇಗೆ ಹೋಗುವಳು ಎಂದು ನಿನ್ನ ಬುದ್ಧಿಯಿಂದ ವಿಮರ್ಶೆಮಾಡು.
ಅಥವಾ ಸಹದೇವೇನ ಧೌಮ್ಯೇನ ಚ ಸಮಂ ವಿಭೋ |
ಸೂತೈಃ ಪೌರೋಗವೈಶ್ಚೈವ ಸರ್ವೈಶ್ಚ ಪರಿಚಾರಕೈಃ॥4॥
ರಥೈರಶ್ವೈಶ್ಚ ಯೇ ಚಾನ್ಯೇ ವಿಪ್ರಾಃ ಕ್ಲೇಶಾಸಹಾಃ ಪಥಿ |
ಸರ್ವೈಸ್ತ್ವಂ ಸಹಿತೋ ಭೀಮ ನಿವರ್ತಸ್ವಾಯತೇಕ್ಷಣ ॥5॥
ವಿಭುವಾದ ವಿಶಾಲನೇತ್ರನಾದ ಭೀಮಸೇನನೇ, ಅಥವಾ ನೀನು ಸಹದೇವ, ಧೌಮ್ಯರು, ಸೂತರು, ಮೇಲ್ವಿಚಾರಕರು, ಎಲ್ಲಾ ಪರಿಚಾರಕರು, ರಥಗಳು, ಅಶ್ವಗಳು, ಮಾರ್ಗದಲ್ಲಿ ಕಷ್ಟವನ್ನು ತಡೆಯದ ಬ್ರಾಹ್ಮಣರು ಇವರೆಲ್ಲರ ಜೊತೆಯಲ್ಲಿ ಹಿಂದಿರುಗಿ ಹೋಗು.
ತ್ರಯೋ ವಯಂ ಗಮಿಷ್ಯಾಮೋ ಲಘ್ವಾಹಾರಾ ಯತವ್ರತಾಃ |
ಅಹಂ ಚ ನಕುಲಶ್ಚೈವ ಲೋಮಶಶ್ಚ ಮಹಾತಪಾಃ ॥6॥
ನಾನು, ನಕುಲ ಮತ್ತು ಮಹಾತಪಸ್ವಿಗಳಾದ ಲೋಮಶರು ಈ ಮೂವರೇ ವ್ರತವನ್ನು ಧರಿಸಿ, ಅಲ್ಪಾಹಾರವನ್ನು ಸೇವಿಸಿ ಮುಂದೆ ಹೋಗುವೆವು.

ಮಮಾಗಮನಮಾಕಾಂಕ್ಷನ್ ಗಂಗಾದ್ವಾರೇ ಸಮಾಹಿತಃ।
ವಸೇಹ ದ್ರೌಪದೀಂ ರಕ್ಷನ್ ಯಾವದಾಗಮನಂ ಮಮ ॥7॥
ನನ್ನ ಆಗಮನವನ್ನು ನಿರೀಕ್ಷಿಸುತ್ತಾ ನಾನು ಹಿಂದಿರುಗಿ ಬರುವವರೆಗೆ ಈ ಗಂಗಾದ್ವಾರದಲ್ಲಿ ಸಮಾಧಾನದಿಂದ ದ್ರೌಪದಿಯನ್ನು ರಕ್ಷಿಸುತ್ತಾ ವಾಸ ಮಾಡು.
ಭೀಮಃ
ರಾಜಪುತ್ರೀ ಶ್ರಮೇಣಾರ್ತಾ ದುಃಖಾರ್ತಾ ಚೈವ ಭಾರತ।
ವ್ರಜತ್ಯೇವ ಹಿ ಕಲ್ಯಾಣೀ ಶ್ವೇತವಾಹದಿದೃಕ್ಷಯಾ ॥8॥
ಭೀಮ ಭಾರತನೇ, ರಾಜಪುತ್ರಿಯು ಶ್ರಮದಿಂದ ಮತ್ತು ದುಃಖದಿಂದ ಬಳಲಿದ್ದರೂ ಅರ್ಜುನನನ್ನು ನೋಡುವ ಆಸೆಯಿಂದ ಕಲ್ಯಾಣಿಯಾದ ಅವಳು ಮುಂದೆ ಹೋಗಿಯೇ ಹೋಗುತ್ತಾಳಷ್ಟೆ?
ಅಪಶ್ಯಂತೀಹ ತಂ ವೀರಮೇವಮೇಷಾ ಸುದುಃಖಿತಾ।
ಕಿಂ ಪುನರ್ನಕುಲಂ ತ್ವಾಂ ಚ ತಂ ಚ ವೀರಂ ಧನಂಜಯಮ್ ॥8.1॥
ತವ ಚಾಪ್ಯರತಿಸ್ತೀವ್ರಾ ವರ್ತತೇ ತಮಪಶ್ಯತಃ।
ಗುಡಾಕೇಶಂ ಮಹಾತ್ಮಾನಂ ಸಂಗ್ರಾಮೇಷ್ವಪಲಾಯಿನಮ್ ॥8.2॥
ಕಿಂ ಪುನಃ ಸಹದೇವಂ ಚ ಮಾಂ ಚ ಕೃಷ್ಣಾಂ ಚ ಭಾರತ।
ಇವಳು ಆ ಅರ್ಜುನನನ್ನು ಕಾಣದೆ ಬಹಳ ದುಃಖದಿಂದಿದ್ದಾಳೆ. ಇನ್ನು ನಿನ್ನನ್ನು, ನಕುಲನನ್ನು ಆ ವೀರನಾದ ಧನಂಜಯನನ್ನು ನೋಡದಿದ್ದರೆ ಅವಳ ಪಾಡು ಏನಾದೀತು? ನಿನಗಾದರೂ ಸಂಗ್ರಾಮದಲ್ಲಿ ಹಿಮ್ಮೆಟ್ಟದಿರುವ ಮಹಾತ್ಮನಾದ ಆ ಗುಡಾಕೇಶನನ್ನು ಕಾಣದೆ ತೀವ್ರವಾದ ಬೇಸರವು ಉಂಟಾಗಿದೆ.
ತವ ಚಾಪ್ಯರತಿಸ್ತೀವ್ರಾ ವರ್ತತೇ ತಮಪಶ್ಯತಃ।
ಗುಡಾಕೇಶಂ ಮಹಾತ್ಮಾನಂ ಸಂಗ್ರಾಮೇಷ್ವಪಲಾಯಿನಮ್ ॥9॥
ಎಲ್ಲೈ ಭಾರತನೇ, ಇನ್ನು ಸಹದೇವನನ್ನು, ನನ್ನನ್ನು ಮತ್ತು ದ್ರೌಪದಿಯನ್ನೂ ಸಹ ನೋಡದಿದ್ದರೆ ನಿನ್ನ ಪರಿಸ್ಥಿತಿ ಏನಾಗುತ್ತದೆ?
ದ್ವಿಜಾಃ ಕಾಮಂ ನಿವರ್ತಂತಾಂ ಸರ್ವೇ ಚ ಪರಿಚಾರಕಾಃ।
ಸೂತಾಃ ಪೌರೋಗವಾಶ್ಚೈವ ಯಂ ಚ ಮನ್ಯೇತ ನೋ ಭವಾನ್ ॥10॥
ಬ್ರಾಹ್ಮಣರು ಮತ್ತು ಎಲ್ಲಾ ಪರಿಚಾರಕರು, ಮತ್ತು ನೀನು ಯಾರನ್ನು ಅಭಿಪ್ರಾಯ ಪಡುತ್ತೀಯೋ ಅಂತಹ ಸೂತರು ಮತ್ತು ಮೇಲ್ವಿಚಾರಕರು ಸಂತೋಷದಿಂದ ಹಿಂದಿರುಗಲಿ.
ನ ಹ್ಯಹಂ ಹಾತುಮಿಚ್ಛಾಮಿ ಭವಂತಮಿಹ ಕರ್ಹಿಚಿತ್।
ಶೈಲೇಽಸ್ಮಿನ್ ರಾಕ್ಷಸಾಕೀರ್ಣೇ ದುರ್ಗೇಷು ವಿಷಮೇಷು ಚ ॥11॥
ಈ ರಾಕ್ಷಸರಿಂದ ತುಂಬಿದ ಪರ್ವತದಲ್ಲಿ ದುರ್ಗಮವಾದ ವಿಷಮವಾದ ಮಾರ್ಗಗಳಲ್ಲಿ ಯಾವ ಕಾರಣದಿಂದಲೂ ನಾನು ನಿನ್ನನ್ನು ಬಿಟ್ಟುಹೋಗಲು ಬಯಸುವುದಿಲ್ಲ.
ಇಯಂ ಚಾಪಿ ಮಹಾಭಾಗಾ ರಾಜಪುತ್ರೀ ಪತಿವ್ರತಾ।
ತ್ವಾಮೃತೇ ಪುರುಷವ್ಯಾಘ್ರ ನೋತ್ಸಹೇದ್ ವಿನಿವರ್ತಿತುಮ್ ॥12॥
ಎಲ್ಲೈ ಪುರುಷವ್ಯಾಘ್ರನೇ, ಈ ಮಹಾನುಭಾವಳೂ, ಪತಿವ್ರತೆಯೂ, ರಾಜಪುತ್ರಿಯೂ ಆದ ದ್ರೌಪದಿಯು ನೀನಿಲ್ಲದೆ ಹಿಂದಿರುಗಲು ಎಂದೂ ಬಯಸುವುದಿಲ್ಲ.
ತಥೈವ ಸಹದೇವೋಽಯಂ ಸತತಂ ತ್ವಾಮನುವ್ರತಃ।
ನ ಜಾತು ವಿನಿವರ್ತೇತ ಮನೋಜ್ಞೋ ಹ್ಯಹಮಸ್ಯ ವೈ ॥13॥
ಅದರಂತೆ ಸಹದೇವನೂ ಸಹ ಯಾವಾಗಲೂ ನಿನ್ನನ್ನು ಅನುಸರಿಸಿಕೊಂಡಿದ್ದಾನೆ. ನಿನ್ನನ್ನು ಬಿಟ್ಟು ಅವನು ಹಿಂದಿರುಗಲಾರ. ನಾನು ಅವನ ಮನಸ್ಸನ್ನು ಚೆನ್ನಾಗಿ ತಿಳಿದಿದ್ದೇನೆ.
ಅಪಿ ಚಾತ್ರ ಮಹಾರಾಜ ಸವ್ಯಸಾಚಿದಿದೃಕ್ಷಯಾ।
ಸರ್ವೇ ಲಾಲಸಭೂತಾಃ ಸ್ಮ ತಸ್ಮಾದ್ ಯಾಸ್ಯಾಮಹೇ ಸಹ ॥14॥
ಮತ್ತು ಮಹಾರಾಜನೇ, ಧನಂಜಯನನ್ನು ನೋಡಲು ನಾವೆಲ್ಲರೂ ಬಹಳ ಉತ್ಸುಕರಾಗಿದ್ದೇವೆ. ಆದ್ದರಿಂದ ಜೊತೆಯಲ್ಲಿಯೇ ಮುಂದೆ ಹೋಗೋಣ.
ಯದ್ಯಶಕ್ಯೋ ರಥೈರ್ಗಂತುಂ ಶೈಲೋಽಯಂ ಬಹುಕಂದರಃ।
ಪದ್ಭಿರೇವ ಗಮಿಷ್ಯಾಮೋ ಮಾ ರಾಜನ್ ವಿಮನಾ ಭವ ॥15॥
ಎಲ್ಲೈ ರಾಜನೇ, ಅನೇಕ ಕಣಿವೆಗಳುಳ್ಳ ಈ ಪರ್ವತದಲ್ಲಿ ರಥಗಳಿಂದ ಹೋಗಲು ಸಾಧ್ಯವಾಗದಿದ್ದರೆ ನಡೆದುಕೊಂಡೇ ಹೋಗೋಣ. ನೀನು ಬೇಸರವನ್ನು ಮಾಡಬೇಡ.
ಅಹಂ ವಹಿಷ್ಯೇ ಪಾಂಚಾಲೀಂ ಯತ್ರ ಯತ್ರ ನ ಶಕ್ಷ್ಯತಿ।
ಇತಿ ಮೇ ವರ್ತತೇ ಬುದ್ಧಿರ್ಮಾ ರಾಜನ್ ವಿಮನಾ ಭವ ॥16॥
ಈ ಪಾಂಚಾಲಿಯು ಎಲ್ಲೆಲ್ಲಿ ನಡೆಯುವುದಕ್ಕೆ ಸಾಧ್ಯವಾಗುವುದಿಲ್ಲವೋ ಅಲ್ಲಿ ನಾನು ಅವಳನ್ನು ಎತ್ತಿಕೊಂಡು ಹೋಗುತ್ತೇನೆ ಎಂದು ನಿರ್ಧರಿಸಿದ್ದೇನೆ. ರಾಜನೇ! ಬೇಸರಿಸಬೇಡ.
ಸುಕುಮಾರೌ ತಥಾ ವೀರೌ ಮಾದ್ರೀನಂದಿಕರಾವುಭೌ।
ದುರ್ಗೇ ಸಂತಾರಯಿಷ್ಯಾಮಿ ಯತ್ರಾಶಕ್ತೌ ಭವಿಷ್ಯತಃ ॥17॥

ಎಲೈ ರಾಜನೇ! ಈ ಮಾದ್ರಿಯ ಸಂತೋಷಕ್ಕೆ ಕಾರಣರಾದ ವೀರರಾದ ಈ ನಕುಲಸಹದೇವರು ಎಲ್ಲಿ ನಡೆಯಲು ಅಶಕ್ತರಾಗುತ್ತಾರೆಯೋ ಅಲ್ಲಿ ನಾನು ಅವರನ್ನು ದುರ್ಗಮವಾದ ಪ್ರದೇಶದಿಂದ ದಾಟಿಸುತ್ತೇನೆ.
ಯುಧಿಷ್ಠಿರಃ
ಏವಂ ತೇ ಭಾಷಮಾಣಸ್ಯ ಬಲಂ ಭೀಮಾಭಿವರ್ಧತಾಮ್ |
ಯತ್ ತ್ವಮುತ್ಸಹಸೇ ವೋಢುಂ ಪಾಂಚಾಲೀಂ ಚ ಯಶಸ್ವಿನೀಮ್ ||
ಯಮಜೌ ಚಾಪಿ ಭದ್ರಂ ತೇ ನೈತದನ್ಯತ್ರ ವಿದ್ಯತೇ |
ಬಲಂ ತವ ಯಶಶ್ಚೈವ ಧರ್ಮಃ ಕೀರ್ತಿಶ್ಚ ವರ್ಧತಾಮ್ ||19||
ಯುಧಿಷ್ಠಿರ ಎಲೈ ಭೀಮನೇ, ಯಶಸ್ವಿನಿಯಾದ ಪಾಂಚಾಲಿಯನ್ನು ಮತ್ತು ಅವಳಿಗಳಾದ ನಕುಲ-ಸಹದೇವರನ್ನು ಎತ್ತಿಕೊಂಡು ಹೋಗಲು ಉತ್ಸಾಹವನ್ನು ಸೂಚಿಸಿ ಮಾತನಾಡುತ್ತಿರುವ ನಿನ್ನ ಬಲವು ಅಭಿವೃದ್ಧಿಯನ್ನು ಹೊಂದಲಿ. ನಿನಗೆ ಮಂಗಳವಾಗಲಿ. ಇಂತಹ ಮಾತನ್ನು ಇನ್ನೊಂದು ಕಡೆ ಕೇಳಲು ಸಾಧ್ಯವಿಲ್ಲ. ನಿನ್ನ ಬಲವೂ, ಯಶಸ್ಸೂ, ಧರ್ಮವೂ ಮತ್ತು ಕೀರ್ತಿಯೂ ಅಭಿವೃದ್ಧಿಯನ್ನು ಹೊಂದಿಲ್ಲ.
ಯತ್ ತ್ವಮುತ್ಸಹಸೇ ನೇತುಂ ಭ್ರಾತರೌ ಸಹ ಕೃಷ್ಣಯಾ |
ಮಾ ತೇ ಗ್ಲಾನಿರ್ಮಹಾಬಾಹೋ ಮಾ ಚ ತೇಽಸ್ತು ಪರಾಭವಃ ||20||
ಪಾಂಚಾಲಿಯನ್ನು ಮತ್ತು ತಮ್ಮಂದಿರನ್ನು ಕರೆದುಕೊಂಡು ಹೋಗಲು ಉತ್ಸಾಹ ಪಡುತ್ತಿರುವ ನಿನಗೆ, ಎಲೈ ಮಹಾಬಾಹುವೇ, ಯಾವ ಗ್ಲಾನಿಯೂ ಅಥವಾ ಪರಾಭವವೂ ಆಗದಿರಲಿ.
ವೈಶಂಪಾಯನಃ
ತತಃ ಕೃಷ್ಣಾಽಬ್ರವೀದ್ ವಾಕ್ಯಂ ಪ್ರಹಸಂತೀ ಮನೋರಮಾ |
ಗಮಿಷ್ಯಾಮಿ ನ ಸಂತಾಪಃ ಕಾರ್ಯೋ ಮಾಂ ಪ್ರತಿ ಭಾರತ ||21||
ವೈಶಂಪಾಯನ ಆಗ ಸುಂದರಿಯಾದ ದ್ರೌಪದಿಯು ನಗುತ್ತಾ, ಭಾರತನೇ, ನಾನು ನಡೆದು ಬರುವೆನು. ನನ್ನ ಸಲುವಾಗಿ ನೀನು ಸಂತಾಪ ಪಡಬೇಡ ಎಂದು ಹೇಳಿದಳು.
ಲೋಮಶಃ
ತಪಸಾ ಶಕ್ಯತೇ ಗಂತುಂ ಪರ್ವತೋ ಗಂಧಮಾದನಃ |
ತಪಸಾ ಚೈವ ಕೌಂತೇಯ ಸರ್ವೇ ಯೋಕ್ಷ್ಯಾಮಹೇ ವಯಮ್ ||22||
ಲೋಮಶ ಕೌಂತೇಯನೇ, ತಪಸ್ಸಿನ ಬಲದಿಂದ ಗಂಧಮಾದನ ಪರ್ವತಕ್ಕೆ ಹೋಗಲು ಸಾಧ್ಯ. ಆದ್ದರಿಂದ ನಾವೆಲ್ಲರೂ ತಪಸ್ಸಿನಿಂದ ಯುಕ್ತರಾಗೋಣ.
ನಕುಲಃ ಸಹದೇವಶ್ಚ ಭೀಮಸೇನಶ್ಚ ಪಾರ್ಥಿವ |
ಅಹಂ ಚ ತ್ವಂ ಚ ಕೌಂತೇಯ ದ್ರಕ್ಷ್ಯಾಮಃ ಶ್ವೇತವಾಹನಮ್ ||23||
ಕೌಂತೇಯನೇ, ನಕುಲ-ಸಹದೇವ, ಭೀಮಸೇನ, ನಾನು ಮತ್ತು ನೀನೂ ಸಹ ಶ್ವೇತವಾಹನನಾದ ಅರ್ಜುನನನ್ನು ನೋಡುವೆವು.
ವೈಶಂಪಾಯನಃ
ಏವಂ ಸಂಭಾಷಣಮಾಣಾಸ್ತೇ ಸುಬಾಹುವಿಷಯಂ ಮಹತ್ |
ದದೃಶುರ್ಮುದಿತಾ ರಾಜನ್ ಪ್ರಭೂತಗಜವಾಜಿಮತ್ ||24||
ಕಿರಾತತಂಕಣಾಕೀರ್ಣಂ ಪುಳಿಂದಶತಸಂಕುಲಮ್ |
ಹಿಮವತ್ಯಮರೈರ್ಜುಷ್ಟಂ ಬಹ್ವಾಶ್ಚರ್ಯಸಮಾಕುಲಮ್ ||25||
ವೈಶಂಪಾಯನ ಹೀಗೆ ಮಾತನಾಡುತ್ತಾ ಅವರು ಮುಂದೆ ಸಾಗಿ ಅನೇಕ ಗಜಾಶ್ವಗಳಿಂದ ಕೂಡಿದ ಕಿರಾತ, ತಂಕಣ ಮತ್ತು ಸಾವಿರಾರು ಪುಳಿಂದರಿಂದ ಆವೃತವಾದ, ಹಿಮಾಲಯದಲ್ಲಿ ದೇವತೆಗಳಿಂದ ಸಹಿತವಾದ ಮತ್ತು ಅನೇಕ ಆಶ್ಚರ್ಯಗಳಿಂದ ಕೂಡಿದ ಸುಬಾಹುರಾಜನ ದೊಡ್ಡ ದೇಶವನ್ನು ಸಂತೋಷದಿಂದ ನೋಡಿದರು.
ಸುಬಾಹುಶ್ಚಾಪಿ ತಾನ್ ದೃಷ್ಟ್ವಾ ಪೂಜಯಾ ಪ್ರತ್ಯಗೃಹ್ಣತ |
ವಿಷಯಾಂತೇ ಕುಳಿಂದಾನಾಮೀಶ್ವರಃ ಪ್ರೀತಿಪೂರ್ವಕಮ್ ||26||
ಕುಳಿಂದಾಧಿಪತಿಯಾದ ಸುಬಾಹುರಾಜನಾದರೂ ತನ್ನ ದೇಶದ ಗಡಿಯಲ್ಲಿ ಅವರನ್ನು ನೋಡಿ ಪ್ರೀತಿ ಪೂರ್ವಕವಾಗಿ ಅವರನ್ನು ಸತ್ಕಾರದಿಂದ ಸ್ವೀಕರಿಸಿದನು.
ತತಸ್ತೇ ಪೂಜಿತಾಸ್ತೇನ ಸರ್ವ ಏವ ಸುಖೋಷಿತಾಃ |
ಪ್ರತಸ್ಥುರ್ವಿಮಲೇ ಸೂರ್ಯೇ ಹಿಮವಂತಂ ಗಿರಿಂ ಪ್ರತಿ ||27||
ಅನಂತರ ಅವರು ಅವರಿಂದ ಪೂಜಿತರಾಗಿ ಆ ರಾತ್ರಿ ಅಲ್ಲಿಯೇ ವಾಸವನ್ನು ಮಾಡಿದರು. ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುತ್ತಿರಲು ಹಿಮಾಲಯ ಪರ್ವತವನ್ನು ಕುರಿತು ಹೊರಟರು.
ಇಂದ್ರಸೇನಮುಖಾಂಶ್ಚಾಪಿ ಭೃತ್ಯಾನ್ ಪೌರೋಗವಾಂಸ್ತಥಾ |
ಸೂದಾಂಶ್ಚ ಪಾರಿಬರ್ಹಾಂಶ್ಚ ದ್ರೌಪದ್ಯಾಃ ಸರ್ವಶೋ ನೃಪ ||28||
ರಾಜ್ಞಃ ಕುಳಿಂದಾಧಿಪತೇಃ ಪರಿದಾಯ ಮಹಾರಥಾಃ |
ಪದ್ಭಿರೇವ ಮಹಾವೀರ್ಯಾ ಯಯುಃ ಕೌರವನಂದನಾಃ ||29||
ಇಂದ್ರಸೇನ ಮೊದಲಾದ ಭೃತ್ಯರನ್ನು, ಮೇಲ್ವಿಚಾರಕರನ್ನು, ಬಾಣಸಿಗರನ್ನು ಮತ್ತು ದ್ರೌಪದಿಯ ಎಲ್ಲಾ ವಸ್ತ್ರಾಲಂಕಾರಗಳನ್ನು ಮಹಾರಥರಾದ ಅವರು ಕುಳಿಂದಾಧಿ ಪತಿಯಾದ ಸುಬಾಹುವಿನ ವಶದಲ್ಲಿ ಒಪ್ಪಿಸಿ, ಮಹಾವೀರ್ಯರಾದ ಆ ಕೌರವ ನಂದನರು

ಕಾಲ್ನಡಿಗೆಯಿಂದಲೇ ಮುಂದೆ ಹೊರಟರು.
ತೇ ಶನೈಃ ಪ್ರಾದ್ರುವನ್ ಸರ್ವೇ ಕೃಷ್ಣಯಾ ಸಹ ಪಾಂಡವಾಃ |
ತಸ್ಮಾದ್ ದೇಶಾತ್ ಸುಸಂಹೃಷ್ಟಾ ದ್ರಷ್ಟುಕಾಮಾ ಧನಂಜಯಮ್ ॥30॥
ಅವರೆಲ್ಲರೂ ದ್ರೌಪದಿಯಿಂದ ಸಹಿತರಾಗಿ ಅರ್ಜುನನನ್ನು ನೋಡಲು ಬಯಸಿ ಸಂತೋಷದಿಂದ ನಿಧಾನವಾಗಿ ಆ ಪ್ರದೇಶದಿಂದ ಓಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ
ವನಪರ್ವಣಿ ಸಪ್ತತ್ರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ತ್ರಿನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತೆಂಟನೆಯ ಅಧ್ಯಾಯ
ಅರ್ಜುನನನ್ನು ಕಾಣದೆ ಪರಿತಪಿಸುವ ಯುಧಿಷ್ಠಿರನ ಜೊತೆಯಲ್ಲಿ ಪಾಂಡವರ ಪ್ರಯಾಣ. ಗಂಧಮಾದನ ಪರ್ವತವನ್ನು ಪ್ರವೇಶಿಸಲು ನಿರ್ಧಾರ.
ಯುಧಿಷ್ಠಿರಃ
ಭೀಮಸೇನ ಯಮೌ ಚೋಭೌ ಪಾಂಚಾಲಿ ಚ ನಿಬೋಧತ |
ನಾಸ್ತಿ ಭೂತಸ್ಯ ನಾಶೋ ವೈ ಪಶ್ಯತಾಸ್ಮಾನ್ ವನೇಚರಾನ್ ॥1॥
ಯುಧಿಷ್ಠಿರ ಭೀಮಸೇನನೇ, ನಕುಲಸಹದೇವರೇ, ಪಾಂಚಾಲಿಯೇ, ಕಾಡಿನಲ್ಲಿ ಸಂಚರಿಸುತ್ತಿರುವ ನಮ್ಮನ್ನು ನೋಡಿ ತಿಳಿಯಿರಿ, ಪ್ರಾಚೀನ ದುಷ್ಕರ್ಮಕ್ಕೆ ನಾಶವುಂಟಾಗುವುದಿಲ್ಲ.
ದುರ್ಬಲಾಃ ಕ್ಲೇಶಿತಾಃ ಸ್ಮೇತಿ ಯದ್ಬ್ರುವಾಮೇತರೇತರಮ್ |
ಅಶಕ್ಯೇಽಪಿ ವ್ರಜಾಮೋ ಯದ್ ಧನಂಜಯದಿದೃಕ್ಷಯಾ ॥2॥
ನಾವು ದುರ್ಬಲರು ಮತ್ತು ಕ್ಲೇಶಯುಕ್ತರು ಎಂದು ಪರಸ್ಪರವಾಗಿ ಹೇಳಿಕೊಂಡು ಸಾಧ್ಯವಾಗದಿದ್ದರೂ ಅರ್ಜುನನನ್ನು ನೋಡುವ ಆಸೆಯಿಂದ ಮುಂದೆ ಸಾಗುತ್ತಿದ್ದೇವಷ್ಟೆ?
ತನ್ಮೇ ದಹತಿ ಗಾತ್ರಾಣಿ ತೂಲರಾಶಿಮಿವಾನಲಃ |
ಯಚ್ಚ ವೀರಂ ನ ಪಶ್ಯಾಮಿ ಧನಂಜಯಮುಪಾಂತಿಕಾತ್ ॥3॥
ನಾನು ಸಮೀಪದಲ್ಲಿ ಅರ್ಜುನನ್ನು ನೋಡುತ್ತಿಲ್ಲ ಎಂಬ ವಿಷಯವು ತೂಲರಾಶಿಗೆ ಅಗ್ನಿಯು ಹೊಕ್ಕಂತೆ ನನ್ನ ದೇಹವನ್ನು ಸುಡುತ್ತಿದೆ.
ತಸ್ಯ ದರ್ಶನತೃಷ್ಣಂ ಮಾಂ ಸಾನುಜಂ ವನಮಾಸ್ಥಿತಮ್ |
ಯಾಜ್ಞಸೇನ್ಯಾಃ ಪರಾಮರ್ಶಃ ಸ ಚ ವೀರ ದಹತ್ಯುತ ॥4॥
ಎಲೈ ವೀರನೇ, ಅವನ ದರ್ಶನದ ಆಸೆಯಿಂದ ತಮ್ಮಂದಿರ ಜೊತೆಯಲ್ಲಿ ಕಾಡನ್ನು ಸೇರಿದ ನನ್ನನ್ನು ದ್ರೌಪದಿಗೆ ದುಶ್ಶಾಸನನು ಮಾಡಿದ ಆ ಪರಾಮರ್ಶವು ಮತ್ತೂ ಸುಡುತ್ತಿದೆ.
ನಕುಲಾತ್ ಪೂರ್ವಜಂ ಪಾರ್ಥಂ ನ ಪಶ್ಯಾಮ್ಯಮಿತೌಜಸಮ್ |
ಅಜೇಯಮುಗ್ರಧನ್ವಾನಂ ತೇನ ತಪ್ಯೇ ವೃಕೋದರ ॥5॥
ವೃಕೋದರನೇ, ನಕುಲನ ಅಣ್ಣನೂ ಅಮಿತಪರಾಕ್ರಮಿಯೂ, ಅಜೇಯನೂ, ಉಗ್ರಧನ್ವನೂ ಆದ ಅರ್ಜುನನನ್ನು ಕಾಣುತ್ತಿಲ್ಲ. ಆದ್ದರಿಂದ ತಾಪ ಪಡುತ್ತಿದ್ದೇನೆ.
ತೀರ್ಥಾನಿ ಚೈವ ರಮ್ಯಾಣಿ ವನಾನಿ ಚ ಸರಾಂಸಿ ಚ |
ಚರಾಮಿ ಸಹ ಯುಷ್ಮಾಭಿಸ್ತಸ್ಯ ದರ್ಶನಕಾಂಕ್ಷಯಾ ॥6॥
ಅವನನ್ನು ನೋಡುವ ಆಸೆಯಿಂದ ನಿಮ್ಮ ಜೊತೆಯಲ್ಲಿ ತೀರ್ಥಗಳನ್ನೂ, ಸುಂದರವಾದ ವನಗಳನ್ನೂ ಮತ್ತು ಸರೋವರಗಳನ್ನೂ ಸಂಚರಿಸುತ್ತಿದ್ದೇನೆ.
ಪಂಚವರ್ಷಾಣ್ಯಹಂ ವೀರಂ ಸತ್ಯಸಂಧಂ ಧನಂಜಯಮ್ |
ಯನ್ನ ಪಶ್ಯಾಮಿ ಬಿಭತ್ಸುಂ ತೇನ ತಪ್ಯೇ ವೃಕೋದರ ॥7॥
ವೃಕೋದರನೇ, ಐದುವರ್ಷಗಳ ಕಾಲ ವೀರನೂ, ಸತ್ಯಸಂಧನೂ ಆದ ಧನಂಜಯನನ್ನು ಕಾಣದೆ ನಾನು ತಾಪಪಡುತ್ತಿದ್ದೇನೆ.
ತಂ ವೈ ಶ್ಯಾಮಂ ಗುಡಾಕೇಶಂ ಸಿಂಹವಿಕ್ರಾಂತಗಾಮಿನಮ್ |
ನ ಪಶ್ಯಾಮಿ ಮಹಾಬಾಹುಂ ತೇನ ತಪ್ಯೇ ವೃಕೋದರ ॥8॥
ವೃಕೋದರನೇ, ಶ್ಯಾಮವರ್ಣದವನೂ, ನಿದ್ರೆಯನ್ನು ಗೆದ್ದವನೂ, ಸಿಂಹದ ವಿಕ್ರಮ ನಡಿಗೆಯುಳ್ಳವನು, ಮಹಾಬಾಹುವೂ ಆದ ಅವನನ್ನು ನೋಡದೆ ನಾನು ತಾಪ ಪಡುತ್ತಿದ್ದೇನೆ.
ಕೃತಾಸ್ತ್ರಂ ನಿಪುಣಂ ಯುದ್ಧೇಽಪ್ರತಿಮಾನಂ ಧನುಷ್ಮತಾಮ್ |
ನ ಪಶ್ಯಾಮಿ ಕುರುಶ್ರೇಷ್ಠ ತೇನ ತಪ್ಯೇ ವೃಕೋದರ ॥9॥
ಚರಂತಮರಿಸೇಂಷು ಕಾಲೇ ಕ್ರುದ್ಧಮಿವಾಂತಕಮ್ |
ಪ್ರಭಿನ್ನಮಿವ ಮಾತಂಗಂ ಸಿಂಹಸ್ಕಂಧಂ ಧನಂಜಯಮ್ ॥10॥
ಎಲೈ ಕುರುಶ್ರೇಷ್ಠನಾದ ವೃಕೋದರನೇ, ಅಸ್ತ್ರವಿದ್ಯೆಯನ್ನು ಬಲ್ಲವನೂ, ಯುದ್ಧದಲ್ಲಿ ನಿಪುಣನೂ, ಧನುರ್ಧಾರಿಗಳಲ್ಲಿ ಅಸದೃಶನೂ,

ಯುದ್ಧಕಾಲದಲ್ಲಿ ಮದಿಸಿದ ಆನೆಯಂತೆ, ಕ್ರುದ್ಧನಾದ ಯಮನಂತೆ, ಶತ್ರುಸಮೂಹದಲ್ಲಿ ಸಂಚರಿಸುವವನೂ, ಸಿಂಹಸ್ಕಂಧನೂ ಆದ ಧನಂಜಯನನ್ನು ಕಾಣದೆ ನಾನು ಪರಿತಪಿಸುತ್ತಿದ್ದೇನೆ.
ಯಃ ಸ ಶಕ್ರಾದನವರೋ ವೀರ್ಯೇಣ ದ್ರವಿಣೇನ ಚ |
ಯಮಯೋಃ ಪೂರ್ವಜಃ ಪಾರ್ಥಃ ಶ್ವೇತಾಶ್ವೋಽಮಿತವಿಕ್ರಮಃ ॥11॥
ನಾರಾಯಣಸಮೋ ಯುದ್ಧೇ ಸತ್ಯಸಂಧೋ ದೃಢವ್ರತಃ |
ತಂ ಮಮಾಪಶ್ಯತೋ ಭೀಮ ನ ಶಾಂತಿರ್ಹೃದಯಸ್ಯ ವೈ ॥12॥
ಅವನು ವೀರ್ಯದಲ್ಲೂ ಮತ್ತು ಸಂಪತ್ತಿನಲ್ಲಿಯೂ ಇಂದ್ರನಿಗಿಂತ ಏನೂ ಕಡಿಮೆ ಇಲ್ಲದವನು. ನಕುಲಸಹದೇವರಿಗೆ ಅಣ್ಣನಾದವನು. ಶ್ವೇತಾಶ್ವವುಳ್ಳವನು ಮತ್ತು ಅಮಿತವಿಕ್ರಮನಾದವನು. ಎಲೈ ಭೀಮನೇ, ಪಾರ್ಥನು ಯುದ್ಧದಲ್ಲಿ ನಾರಾಯಣನಿಗೆ ಸಮನಾದವನು. ಸತ್ಯಸಂಧನೂ ಮತ್ತು ದೃಢವ್ರತನೂ ಆಗಿರುವವನು. ಅವನನ್ನು ಕಾಣದೆ ನನ್ನ ಮನಸ್ಸಿಗೆ ಶಾಂತಿಯೇ ಉಂಟಾಗುತ್ತಿಲ್ಲ.
ದುಃಖೇನ ಮಹತಾಽಽವಿಷ್ಟಸ್ತಂ ನ ಪಶ್ಯಾಮಿ ಫಲ್ಗುನಮ್ |
ಅಜೇಯಮುಗ್ರಧನ್ವಾನಂ ತೇನ ತಪ್ಯೇ ವೃಕೋದರ ॥13॥
ನಾನು ಬಹಳ ದುಃಖದಿಂದ ಕೂಡಿದವನಾಗಿ ಅಜೇಯನೂ, ಉಗ್ರಧನ್ವನೂ ಆದ ಅರ್ಜುನನನ್ನು ಕಾಣುತ್ತಿಲ್ಲ. ವೃಕೋದರನೇ, ಅದರಿಂದ ಪರಿತಪಿಸುತ್ತಿದ್ದೇನೆ.
ಸತತಂ ಯಃ ಕ್ಷಮಾಶೀಲಃ ಕ್ಷಿಪ್ಯಮಾಣೋಽಪ್ಯಣೀಯಸಾ |
ಋಜುಮಾರ್ಗಪ್ರಪನ್ನಸ್ಯ ಶರ್ಮದಾತಾಽಭಯಸ್ಯ ಚ ॥14॥
ಅವನು ಬಹಳ ಚಿಕ್ಕವರು ನಿಂದಿಸಿದರೂ ಸಹ ಯಾವಾಗಲೂ ಅವರನ್ನು ಕ್ಷಮಿಸುವ ಸ್ವಭಾವವುಳ್ಳವನು. ಋಜುಮಾರ್ಗದಲ್ಲಿ ಅವನನ್ನು ಉಪಸತ್ತಿ ಮಾಡುವವರಿಗೆ ಸುಖವನ್ನು ಮತ್ತು ಅಭಯವನ್ನು ಕೊಡುವವನು.
ಸ ತು ಜಿಹ್ಮಪ್ರವೃತ್ತಸ್ಯ ಮಾಯಯಾಽಭಿಜಿಘಾಂಸತಃ |
ಅಪಿ ವಜ್ರಧರಸ್ಯಾಪಿ ಭವೇತ್ ಕಾಲವಿಷೋಪಮಃ ॥15॥
ಮೋಸ ವಂಚನೆಗಳಿಂದ ಮತ್ತು ಮಾಯೆಯಿಂದ ಅವನನ್ನು ಸಂಹರಿಸಲು ಬಂದರೆ ವಜ್ರಧರನಾದ ಇಂದ್ರನಿಗೂ ಸಹ ಅವನು ಕಾಲಕೂಟ ವಿಷದಂತೆ ಇರುವವನು.
ಶತ್ರೋರಪಿ ಪ್ರಪನ್ನಸ್ಯ ಸೋಽನೃಶಂಸಃ ಪ್ರತಾಪವಾನ್ |
ದಾತಾಽಭಯಸ್ಯ ಬೀಭತ್ಸುರಮಿತಾತ್ಮಾ ಮಹಾಬಲಃ ॥15.1॥
ಪ್ರತಾಪಶಾಲಿಯಾದ ಅವನು ಪ್ರಪನ್ನನಾದ ಶತ್ರುವಿಗೂ ಸಹ ಮಾರ್ದವವನ್ನು ತೋರಿಸುವವನು. ಮಹಾಬಲನೂ, ಅಮಿತಾತ್ಮನೂ ಆದ ಬೀಭತ್ಸುವು ಅವನಿಗೂ ಅಭಯವನ್ನು ನೀಡುವವನು.
ಸದಾ ಜಿಷ್ಣುರದೀನಾತ್ಮಾ ಮಹಾತ್ಮಾ ಪಾಕಶಾಸನಿಃ ॥16॥
ಸರ್ವೇಷಾಮಾಶ್ರಯೋಽಸ್ಮಾಕಂ ರಣೇಽರೀಣಾಂ ಪ್ರಮರ್ದಿತಾ |
ಆಹರ್ತಾ ಸರ್ವರತ್ನಾನಾಂ ಸರ್ವೇಷಾಂ ನಃ ಸುಖಾವಹಃ ॥17॥
ಮಹಾತ್ಮನಾದ ಪಾಕಶಾಸನನ ಪುತ್ರನಾದ ಅರ್ಜುನನು ಯಾವಾಗಲೂ ಜಯಶೀಲನಾದವನು. ಎಂದೂ ಮನೋಧೈನ್ಯವನ್ನು ಹೊಂದದವನು. ಯುದ್ಧದಲ್ಲಿ ಶತ್ರುಗಳನ್ನು ಭೇದಿಸುವವನು ಮತ್ತು ನಮಗೆಲ್ಲರಿಗೂ ಆಶ್ರಯನಾದವನು. ಎಲ್ಲ ರತ್ನಗಳನ್ನೂ ಸಂಪಾದಿಸುವವನು ಮತ್ತು ನಮಗೆಲ್ಲರಿಗೂ ಸುಖಪ್ರದನಾದವನು.
ರತ್ನಾನಿ ಯಸ್ಯ ವೀರ್ಯೇಣ ದಿವ್ಯಾನ್ಯಾಸನ್ ಪುರಾ ಮಮ |
ಬಹೂನಿ ಬಹುಜಾತೀನಿ ಯಾನಿ ಪ್ರಾಪ್ತಃ ಸುಯೋಧನಃ ॥18॥
ಅವನ ಪರಾಕ್ರಮದಿಂದಾಗಿ ಹಿಂದೆ ನನ್ನ ಬಳಿ ಅನೇಕ ಜಾತಿಯ ಅನೇಕ ರತ್ನಗಳು ಇದ್ದವು. ಅವೆಲ್ಲವೂ ಸುಯೋಧನನ ಕೈಸೇರಿದವು.
ಯಸ್ಯ ಬಾಹುಬಲಾದ್ವೀರ ಸಭಾ ಚಾಸೀತ್ ಪುರಾ ಮಮ |
ಸರ್ವರತ್ನಮಯೀ ಖ್ಯಾತಾ ತ್ರಿಷು ಲೋಕೇಷು ಪಾಂಡವ ॥19॥
ಎಲೈ ವೀರನಾದ ಪಾಂಡವನೇ, ಅವನ ಬಾಹುಬಲದಿಂದಲೇ ನನಗೆ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಸರ್ವರತ್ನಮಯವಾದ ಸಭೆಯು ಇದ್ದಿತು.
ವಾಸುದೇವಸಮಂ ವೀರ್ಯೇ ಕಾರ್ತವೀರ್ಯಸಮಂ ಯುಧಿ |
ಅಜೇಯಮಮಿತಂ ಯುದ್ಧೇ ತಂ ನ ಪಶ್ಯಾಮಿ ಫಲ್ಗುನಮ್ ॥20॥
ಅವನು ಪರಾಕ್ರಮದಲ್ಲಿ ಕೃಷ್ಣನಿಗೆ ಸಮನಾದವನು. ಯುದ್ಧದಲ್ಲಿ ಕಾರ್ತವೀರ್ಯನಿಗೆ ಸಮನಾದವನು. ಯುದ್ಧದಲ್ಲಿ ಅಜೇಯನಾದವನು ಮತ್ತು ಅಮಿತನಾದವನು. ಅಂತಹ ಅರ್ಜುನನನ್ನು ನಾನು ಕಾಣುತಿತಲ್ಲ.
ಸಂಕರ್ಷಣಂ ಮಹಾವೀರ್ಯಂ ತ್ವಾಂ ಚ ಭೀಮಾಪರಾಜಿತಮ್ |
ಅನುಯಾತಃ ಸ್ವವೀರ್ಯೇಣ ವಾಸುದೇವಂ ಚ ಶತ್ರುಹಾ ॥21॥
ಶತ್ರುಸೂದನನಾದ ಅವನು ಪರಾಕ್ರಮಶಾಲಿಯಾದ ಬಲರಾಮನನ್ನೂ, ಅಪರಾಜಿತನಾದ ನಿನ್ನನ್ನೂ ಮತ್ತು ತನ್ನ ಪರಾಕ್ರಮದಿಂದ ಕೃಷ್ಣನನ್ನೂ ಅನುಸರಿಸಿದ್ದಾನೆ.
ಯಸ್ಯ ಬಾಹುಬಲೇ ತುಲ್ಯಃ ಪ್ರಭಾವೇ ಚ ಪುರಂದರಃ |
ಜವೇ ವಾಯುರ್ಮುಖೇ ಸೋಮಃ ಕ್ರೋಧೇ ಮೃತ್ಯುಃ ಸನಾತನಃ ॥22॥
ಬಾಹುಬಲದಲ್ಲಿ ಮತ್ತು ಪ್ರಭಾವದಲ್ಲಿ ಅವನಿಗೆ ಇಂದ್ರನೇ ಸಮನಾದವನು. ವೇಗದಲ್ಲಿ ವಾಯುವನ್ನು, ಮುಖದಲ್ಲಿ ಚಂದ್ರನನ್ನು,

ಕ್ರೋಧದಲ್ಲಿ ಸನಾತನನಾದ ಮೃತ್ಯುವನ್ನು ಅವನು ಹೋಲುತ್ತಾನೆ.
ತೇ ವಯಂ ತಂ ನರವ್ಯಾಘ್ರಂ ಸರ್ವೇ ವೀರ ದಿದೃಕ್ಷವಃ |
ಪ್ರವೇಕ್ಷ್ಯಾಮೋ ಮಹಾಬಾಹೋ ಪರ್ವತಂ ಗಂಧಮಾದನಮ್ ॥23॥
ಎಲೈ ಮಹಾಬಾಹುವಾದ ವೀರನೇ, ನಾವೆಲ್ಲರೂ ಆ ವೀರನನ್ನು ನೋಡುವ ಆಸೆಯಿಂದ ಗಂಧಮಾದನ ಪರ್ವತವನ್ನು ಪ್ರವೇಶಿಸೋಣ.
ವಿಶಾಲಾ ಬದರೀ ಯತ್ರ ನರನಾರಾಯಣಾಶ್ರಮಃ |
ತಂ ಸದಾಽಧ್ಯುಷಿತಂ ಯಕ್ಷೈರ್ದ್ರಕ್ಷ್ಯಾಮೋ ಗಿರಿಮುತ್ತಮಮ್ ॥24॥
ಅಲ್ಲಿ ವಿಶಾಲಾ ಎಂದು ಕರೆಯಲ್ಪಡುವ ನರನಾರಾಯಣಾಶ್ರಮವಿರುವ ಬದರೀ ಕ್ಷೇತ್ರವಿದೆ. ಆ ಕ್ಷೇತ್ರದಲ್ಲಿ ಯಕ್ಷರು ಯಾವಾಗಲೂ ವಾಸಮಾಡುತ್ತಾರೆ. ಅಂತಹ ಶ್ರೇಷ್ಠವಾದ ಪರ್ವತವನ್ನು ನಾವು ನೋಡುವೆವು.
ಕುಬೇರನಳಿನೀಂ ರಮ್ಯಾಂ ರಾಕ್ಷಸೈರಭಿಸೇವಿತಾಮ್ |
ಪದ್ಭಿರೇವ ಗಮಿಷ್ಯಾಮಸ್ತಪ್ಯಮಾನಾ ಮಹತ್ತಪಃ ॥25॥
ದೊಡ್ಡ ತಪಸ್ಸನ್ನು ಆಚರಿಸುತ್ತಾ ಪಾದಗಳಿಂದಲೇ ನಡೆದು ನಾವು ರಾಕ್ಷಸರಿಂದ ಪಾಲಿತವಾದ ಮನೋಹರವಾದ ಕುಬೇರನ ಸರೋವರವನ್ನು ತಲುಪುವೆವು.
ನ ಚ ಯಾನವತಾ ಶಕ್ಯೋ ಗಂತುಂ ದೇಶೋ ವೃಕೋದರ |
ನ ನೃಶಂಸೇನ ಲುಬ್ಧೇನ ನಾಪ್ರಶಾಂತೇನ ಭಾರತ ॥26॥
ಎಲೈ ವೃಕೋದರನೇ, ಭಾರತನೇ, ಆ ದೇಶಕ್ಕೆ ಯಾನಗಳಿಂದ ಹೋಗಲು ಸಾಧ್ಯವಿಲ್ಲ. ಕ್ರೂರಿಗಳು, ಲೋಭಿಗಳು ಮತ್ತು ಮನಶ್ಶಾಂತಿಯಿಲ್ಲದವರು ಅಲ್ಲಿಗೆ ಹೋಗಲು ಸಾಧ್ಯವಿಲ್ಲ.
ತತ್ರ ಸರ್ವೇ ಗಮಿಷ್ಯಾಮೋ ಭೀಮಾರ್ಜುನಗವೇಷಿಣಃ |
ಸಾಯುಧಾ ಬದ್ಧನಿಸ್ತ್ರಿಂಶಾ ಸಾರ್ಧಂ ವಿಪ್ರೈರ್ಮಹಾವ್ರತೈಃ ॥27॥
ಎಲೈ ಭೀಮನೇ, ಅರ್ಜುನನನ್ನು ಕಾಣುವ ಸಲುವಾಗಿ ನಾವೆಲ್ಲರೂ ಆಯುಧಗಳನ್ನು ತೆಗೆದುಕೊಂಡು, ಕತ್ತಿಗಳನ್ನು ಕಟ್ಟಿಕೊಂಡು ಮಹಾವ್ರತರಾದ ಬ್ರಾಹ್ಮಣರ ಜೊತೆಯಲ್ಲಿ ಅಲ್ಲಿಗೆ ಹೋಗೋಣ.
ಮಕ್ಷಿಕಾದಂಶಮಶಕಾನ್ ಸಿಂಹಾನ್ ವ್ಯಾಘ್ರಾನ್ ಸರೀಸೃಪಾನ್ |
ಪ್ರಾಪ್ನೋತ್ಯನಿಯತಃ ಪಾರ್ಥ ನಿಯತಸ್ತಾನ್ ನ ಪಶ್ಯತಿ ॥28॥
ಎಲೈ ಪಾರ್ಥನೇ (ಪೃಥೆಯ ಮಗನಾದ ಭೀಮನೇ), ನಿಯಮವಿಲ್ಲದವರು ಅಲ್ಲಿಗೆ ಹೋದರೆ ನೊಣಗಳು, ಸೊಳ್ಳೆಗಳು, ಸಿಂಹಗಳು, ವ್ಯಾಘ್ರಗಳು ಮತ್ತು ಸರ್ಪಗಳನ್ನು ಕಾಣುತ್ತಾರೆ. ನಿಯಮಬದ್ಧವಾಗಿ ಹೋದವನು ಅದಾವುದನ್ನೂ ನೋಡುವುದಿಲ್ಲ.
ತೇ ವಯಂ ನಿಯತಾತ್ಮಾನಃ ಪರ್ವತಂ ಗಂಧಮಾದನಮ್ |
ಪ್ರವೇಕ್ಷ್ಯಾಮೋ ಮಿತಾಹಾರಾ ಧನಂಜಯದಿದೃಕ್ಷಯಾ(ವಃ) ॥29॥
ಅಂತಹ ನಾವು ಮನೋನಿಗ್ರಹವನ್ನು ಹೊಂದಿದವರಾಗಿ ಮಿತಾಹಾರದಿಂದ ಧನಂಜಯನನ್ನು ನೋಡುವ ಆಸೆಯಿಂದ ಗಂಧಮಾದನಪರ್ವತವನ್ನು ಪ್ರವೇಶಿಸೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಾತ್ರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಪರ್ವಣಿ ಚತುರ್ನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ನೂರ ಮೂವತ್ತೊಂಬತ್ತನೆಯ ಅಧ್ಯಾಯ
ಪಾಂಡವರಿಂದ ಗಂಗೆಯ ವಂದನ. ಲೋಮಶರಿಂದ ನರಕಾಸುರವಧೆಯ ಮತ್ತು ವರಾಹಾವತಾರದ ಕಥನ.
ಲೋಮಶಃ
ದೃಷ್ಟಾವರಃ ಪರ್ವತಾಃ ಸರ್ವೇ ನದ್ಯಃ ಸಪುರಕಾನನಾಃ |
ತೀರ್ಥಾನಿ ಚೈವ ಶ್ರೀಮಂತಿ ಸ್ಪೃಷ್ಟಂ ಚ ಸಲಿಲಂ ಕರೈಃ ॥1॥
ಎಲೈ ವೀಕ್ಷಕರಾದ ಪಾಂಡವರೇ, ಎಲ್ಲಾ ಪರ್ವತಗಳನ್ನು ಮತ್ತು ಪುರಕಾನನಗಳಿಂದ ಸಹಿತವಾದ ನದಿಗಳನ್ನು ನೋಡುವಿರಿ. ಎಲ್ಲ ವೈಭವಯುತ ತೀರ್ಥಗಳ ಜಲಗಳನ್ನು ಸ್ನಾನಪಾನಾದಿಗಳಿಂದ ಸ್ಪರ್ಶ ಮಾಡಿದಿರಿ.
ಪರ್ವತಂ ಮಂದರಂ ದಿವ್ಯಮೇಷ ಪಂಥಾಃ ಪ್ರಯಾಸ್ಯತಿ |
ಸಮಾಹಿತಾ ನಿರುದ್ವಿಗ್ನಾಃ ಸರ್ವೇ ಭವತ ಪಾಂಡವಾಃ ॥2॥
ಎಲೈ ಪಾಂಡವರೇ, ಈ ಮಾರ್ಗವು ದಿವ್ಯವಾದ ಮಂದರ ಪರ್ವತಕ್ಕೆ ಹೋಗುವುದು. ಎಲ್ಲರೂ ಸಮಾಧಾನದಿಂದ ಕೂಡಿದವರಾಗಿ ಉದ್ವೇಗವನ್ನು ತೊರೆಯಿರಿ.
ಅಯಂ ದೇವನಿವಾಸೋ ವೈ ಗಂತವ್ಯೋ ವೋ ಭವಿಷ್ಯತಿ |
ಋಷೀಣಾಂ ಚೈವ ದಿವ್ಯಾನಾಂ ನಿವಾಸಃ ಪುಣ್ಯಕರ್ಮಣಾಮ್ ॥3॥
ನಾವು ಇಲ್ಲಿಂದ ಮುಂದೆ ಈ ದೇವನಿವಾಸಕ್ಕೆ ಹೋಗಬೇಕು. ಅದರಂತೆಯೇ ಪುಣ್ಯಕರ್ಮಾಸಕ್ತರಾದ ಋಷಿಗಳ ದಿವ್ಯನಿವಾಸಕ್ಕೂ ಹೋಗಬೇಕು.

ಏಷಾ ಶಿವಜಲಾ ಪುಣ್ಯಾ ಯಾತಿ ಸೌಮ್ಯ ಮಹಾನದೀ |
ಬದರೀಪ್ರಭವಾ ರಾಜನ್ ದೇವರ್ಷಿಗಣಸೇವಿತಾ ||4||
ಎಲೈ ರಾಜನೇ, ಇದು ಮಂಗಳಕರವಾದ ಜಲವನ್ನುಳ್ಳ ಪವಿತ್ರವಾದ ಗಂಗಾನದಿ. ಎಲೈ ಸೌಮ್ಯನೇ, ದೇವರ್ಷಿಗಣಸೇವಿತವಾದ ಈ ನದಿಯು ಬದರಿಯಿಂದ ಹರಿಯುತ್ತದೆ.
ಏಷಾ ವೈಹಾಯಸೈರ್ನಿತ್ಯಂ ವಾಲಖಿಲ್ಯೈರ್ಮಹಾತ್ಮಭಿಃ |
ಅರ್ಚಿತಾ ಚೋಪಯಾತಾ ಚ ಗಂಧರ್ವೈಶ್ಚ ಮಹಾತ್ಮಭಿಃ ||5||
ಗಗನಸಂಚಾರಿಯಾದ ಮಹಾತ್ಮರಾದ ವಾಲಖಿಲ್ಯರು ಇವಳನ್ನು ಅರ್ಚಿಸುತ್ತಾರೆ. ಮಹಾತ್ಮರಾದ ಗಂಧರ್ವರೂ ಸಹ ಇಲ್ಲಿಗೆ ಬರುತ್ತಾರೆ.
ಅತ್ರ ಸಾಮ ಸ್ಮ ಗಾಯಂತಿ ಸಾಮಗಾಃ ಪುಣ್ಯನಿಸ್ವನಾಃ |
ಮರೀಚಿಃ ಪುಲಹಶ್ಚೈವ ಭೃಗುಶ್ಚೈವಾಂಗಿರಾಸ್ತಥಾ ||6||
ಮರೀಚಿ, ಪುಲಹ, ಭೃಗು ಮತ್ತು ಅಂಗಿರಸ್ ಮೊದಲಾದವರು ಇಲ್ಲಿಗೆ ಬಂದು ಪುಣ್ಯಶಬ್ದವಿರುವ ಸಾಮಗಾನವನ್ನು ಮಾಡುತ್ತಾರೆ.
ಅತ್ರಾಹ್ನಿಕಂ ಸುರಶ್ರೇಷ್ಠೋ ಜಪತೇ ಸಮರುದ್ಗಣಃ |
ಸಾಧ್ಯಾಶ್ಚೈವಾಶ್ವಿನೌ ಚೈವ ಪರಿಧಾವಂತಿ ತಂ ತದಾ ||7||
ಇಲ್ಲಿ ದೇವಶ್ರೇಷ್ಠನಾದ ಇಂದ್ರನು ಮರುದ್ಗಣಗಳ ಜೊತೆಯಲ್ಲಿ ಬಂದು ಆಹ್ನಿಕವನ್ನು ಮಾಡುತ್ತಾನೆ. ಸಾಧ್ಯರು ಮತ್ತು ಅಶ್ವಿನಿಗಳು ಆಗ ಅವನ ಸೇವೆಯನ್ನು ಮಾಡುತ್ತಾರೆ.
ಚಂದ್ರಮಾಃ ಸಹ ಸೂರ್ಯೇಣ ಜ್ಯೋತೀಂಷಿ ಚ ಗ್ರಹೈಃ ಸಹ |
ಅಹೋರಾತ್ರವಿಭಾಗೇನ ನದೀಮೇನಾಮನುವ್ರಜನ್ ||8||
ಚಂದ್ರನು, ಸೂರ್ಯನು, ನಕ್ಷತ್ರಗಳು ಮತ್ತು ಗ್ರಹಗಳೂ ಸಹ ಹಗಲು-ರಾತ್ರಿಗಳ ಪರ್ಯಾಯವನ್ನು ಮಾಡಿಕೊಂಡು ಈ ನದಿಗೆ ಬರುತ್ತಾರೆ.
ಏತಸ್ಯಾಃ ಸಲಿಲಂ ಮೂರ್ಧ್ನಾ(ರ್ಧ್ನಿ) ವೃಷಾಂಕಃ ಪರ್ಯಧಾರಯತ್ |
ಗಂಗಾದ್ವಾರೇ ಮಹಾಭಾಗ ಯೇನ ಲೋಕಸ್ಥಿತಿರ್ಭವೇತ್ ||9||
ಈ ನದಿಯ ಜಲವನ್ನು ವೃಷಾಂಕನಾದ ಶಿವನು ಗಂಗಾದ್ವಾರದಲ್ಲಿ ಶಿರಸ್ಸಿನಲ್ಲಿ ಧರಿಸಿದ್ದಾನೆ. ಮಹಾಭಾಗನೇ ಅದರಿಂದ ಲೋಕಕ್ಕೇ ಹಿತವುಂಟಾಗಿದೆ.
ಏತಾಂ ಭಗವತೀಂ ದೇವೀಂ ಭವಂತಃ ಸರ್ವ ಏವ ಹಿ |
ಪ್ರಯತೇನಾತ್ಮನಾ ತಾತ ಪ್ರತಿಗಮ್ಯಾಭಿವಾದತ ||10||
ಎಲೈ ಪ್ರೀತಿಪಾತ್ರನೇ, ನೀವೆಲ್ಲರೂ ಮನೋನಿಗ್ರಹವುಳ್ಳವರಾಗಿ ಈ ಪೂಜ್ಯಳಾದ ಗಂಗಾದೇವಿಯ ಬಳಿಗೆ ಬಂದು ಅವಳನ್ನು ನಮಸ್ಕರಿಸಿ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಲೋಮಶಸ್ಯ ಮಹಾತ್ಮನಃ |
ಆಕಾಶಗಂಗಾಂ ಪ್ರಯತಾಃ ಪಾಂಡವಾಸ್ತೇಽಭ್ಯವಾದಯನ್ ||11||
ವೈಶಂಪಾಯನ ಮಹಾತ್ಮರಾದ ಲೋಮಶರ ಆ ಮಾತುಗಳನ್ನು ಕೇಳಿ ಪಾಂಡವರೆಲ್ಲರೂ ವಾಗಾದಿನಿಗ್ರಹವುಳ್ಳವರಾಗಿ ಆಕಾಶಗಂಗೆಗೆ ನಮಸ್ಕಾರವನ್ನು ಮಾಡಿದರು.
ಅಭಿವಾದ್ಯ ಚ ತೇ ಸರ್ವೇ ಪಾಂಡವಾ ಧರ್ಮಚಾರಿಣಃ |
ಪುನಃ ಪ್ರಯಾತಾಃ ಸಂಹೃಷ್ಟಾಃ ಸರ್ವೈರ್ಋಷಿಗಣೈಃ ಸಹ ||12||
ಧರ್ಮಚಾರಿಗಳಾದ ಆ ಎಲ್ಲ ಪಾಂಡವರು ಗಂಗೆಯನ್ನು ನಮಸ್ಕರಿಸಿ ಸಂತೋಷಗೊಂಡು ಎಲ್ಲಾ ಋಷಿಗಳ ಸಮೂಹದ ಜೊತೆಯಲ್ಲಿ ತಮ್ಮ ಪ್ರಯಾಣವನ್ನು ಬೆಳೆಸಿದರು.
ತತೋ ದೂರಾತ್ ಪ್ರಕಾಶಂತಂ ಪಾಂಡರಂ ಮೇರುಸನ್ನಿಭಮ್ |
ದದೃಶುಸ್ತೇ ನರಶ್ರೇಷ್ಠಾ ವಿಕೀರ್ಣಂ ಸರ್ವತೋದಿಶಮ್ ||13||
ಅನಂತರ ಆ ನರಶ್ರೇಷ್ಠರು ದೂರದಲ್ಲಿ ಮೇರುವಿನಂತೆ ಶ್ವೇತವರ್ಣದಿಂದ ಹೊಳೆಯುತ್ತಿರುವ ಎಲ್ಲ ದಿಕ್ಕುಗಳಲ್ಲಿಯೂ ಹರಡಿಬಿದ್ದಿದ್ದ ಒಂದು ವಸ್ತುವನ್ನು ನೋಡಿದರು.
ತಾನ್ ಪ್ರಶ್ನಕಾಮಾನ್ ವಿಜ್ಞಾಯ ಪಾಂಡವಾನ್ ಸ ತು ಲೋಮಶಃ |
ಉವಾಚ ವಾಕ್ಯಂ ವಾಕ್ಯಜ್ಞಃ ಶೃಣುಧ್ವಂ ಪಾಂಡುನಂದನಾಃ ||14||
ಆ ಪಾಂಡವರು ಕುತೂಹಲದಿಂದ ಪ್ರಶ್ನೆಯನ್ನು ಮಾಡಲು ಉದ್ಯುಕ್ತರಾದುದನ್ನು ಗಮನಿಸಿ ವಾಕ್ಯವಿಶಾರದರಾದ ಲೋಮಶರು, ಎಲೈ ಪಾಂಡುನಂದರರೇ ಕೇಳಿ ಎಂದು ಮಾತನಾಡಲು ಪ್ರಾರಂಭಿಸಿದರು.
ಏತದ್ವಿಕೀರ್ಣಂ ಸುಶ್ರೀಮತ್ ಕೈಲಾಸಶಿಖರೋಪಮಮ್ |
ಯತ್ ಪಶ್ಯಸಿ ನರಶ್ರೇಷ್ಠ ಪರ್ವತಪ್ರತಿಮಂ ಸ್ಥಿತಮ್ ||15||
ಏತಾನ್ಯಸ್ಥೀನಿ ದೈತ್ಯಸ್ಯ ನರಕಸ್ಯ ಮಹಾತ್ಮನಃ |
ಪರ್ವತಪ್ರತಿಮಂ ಭಾತಿ ಪರ್ವತಪ್ರಸ್ತರಾಶ್ರಿತಮ್ ||16||
ಎಲೈ ನರಶ್ರೇಷ್ಠನೇ, ಕೈಲಾಸಶಿಖರದಂತೆ ಕಾಂತಿಯುಕ್ತವಾಗಿ ಎಲ್ಲ ಕಡೆಯಲ್ಲಿಯೂ ಹರಡಿ ಪರ್ವತದಂತೆ ತೋರುತ್ತಿರುವ ಯಾವ ಈ ವಸ್ತುವನ್ನು ನೋಡುತ್ತಿದ್ದೀಯೋ ಅದು ಮಹಾತ್ಮನಾದ ನರಕಾಸುರನ ಅಸ್ಥಿಗಳ ರಾಶಿ. ಅದು ಪರ್ವತದ ಶಿಲೆಯನ್ನು ಆಶ್ರಯಿಸಿ ತಾನೇ

ಒಂದು ಪರ್ವತದಂತೆ ಹೊಳೆಯುತ್ತಿದೆ.
ಪುರಾತನೇನ ದೇವೇನ ವಿಷ್ಣುನಾ ಪರಮಾತ್ಮನಾ |
ದೈತ್ಯೋ ವಿನಿಹತಸ್ತೇನ ಸುರರಾಜಹಿತೈಷಿಣಾ ॥17॥
ಅನಾದಿಯಾದ ಪರಮಾತ್ಮನಾದ ವಿಷ್ಣುವು ಇಂದ್ರುನಿಗೆ ಹಿತವನ್ನು ಉಂಟು ಮಾಡುವ ಸಲುವಾಗಿ ಆ ದೈತ್ಯನನ್ನು ಸಂಹರಿಸಿದನು.
ದಶವರ್ಷಸಹಸ್ರಾಣಿ ತಪಸ್ತಪ್ಯನ್ ಮಹಾಮನಾಃ |
ಐಂದ್ರಂ ಪ್ರಾರ್ಥಯತೇ ಸ್ಥಾನಂ ತಪಃಸ್ವಾಧ್ಯಾಯವಿಕ್ರಮಾತ್ ॥18॥
ಆ ದೈತ್ಯನಾದರೂ ತನ್ನ ತಪಸ್ಸು, ಸಾಮರ್ಥ್ಯ ಮತ್ತು ಪರಾಕ್ರಮಗಳಿಂದ ಮಹಾಮನಸ್ಸನ್ನು ಉಳ್ಳವನಾಗಿ ಇಂದ್ರನ ಸ್ಥಾನವನ್ನು ಪಡೆಯಲು ಹತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನು ಆಚರಿಸಿದನು.
ತಪೋಬಲೇನ ಮಹತಾ ಬಾಹುವೇಗಬಲೇನ ಚ |
ನಿತ್ಯಮೇವ ದುರಾಧರ್ಷೋ ಧರ್ಷಯನ್ ಸ ದಿತೇಃ ಸುತಃ ॥19॥
ದಿತಿಪುತ್ರನಾದ ಅವನು ತನ್ನ ದೊಡ್ಡ ತಪಸ್ಸಿನ ಬಲದಿಂದಲೂ, ಮತ್ತು ಬಾಹುವೇಗದ ಬಲದಿಂದಲೂ ಯಾವಾಗಲೂ ಅಜೇಯನಾಗಿದ್ದು ದೇವತೆಗಳನ್ನು ಬಾಧಿಸುತ್ತಿದ್ದನು.
ಸ ತು ತಸ್ಯ ಬಲಂ ಜ್ಞಾತ್ವಾ ಧರ್ಮೇ ಚ ಚರಿತವ್ರತಮ್ |
ಭಯಾಭಿಭೂತಃ ಸಂವಿಗ್ನಃ ಶಕ್ರ ಆಸೀತ್ ತದಾನಘ ॥20॥
ಎಲೈ ಅನಘನೇ, ಇಂದ್ರನಾದರೂ ಅವನ ಬಲವನ್ನು ಮತ್ತು ಧರ್ಮಾಚರಣೆಯನ್ನು ಮತ್ತು ವ್ರತಗಳನ್ನು ಗಮನಿಸಿ ಭಯದಿಂದ ಕೂಡಿ ದುಃಖಿತನಾದನು.
ತೇನ ಸಂಚಿಂತಿತೋ ದೇವೋ ಮನಸಾ ವಿಷ್ಣುರವ್ಯಯಃ |
ಸರ್ವತ್ರಗಃ ಪ್ರಭುಃ ಶ್ರೀಮಾನಾಗತಶ್ಚ ಸ್ಥಿತೋ ಬಭೌ |
ಋಷಯಶ್ಚಾಪಿ ತಂ ಸರ್ವೇ ತುಷ್ಟುವುಶ್ಚ ದಿವೌಕಸಃ ॥21॥
ಅವನು ಮನಸ್ಸಿನಲ್ಲಿ ಅವ್ಯಯನಾದ ವಿಷ್ಣುವನ್ನು ಚಿಂತಿಸಿದನು. ಸರ್ವತ್ರ ವ್ಯಾಪ್ತನಾದ ಪ್ರಭುವಾದ ಲಕ್ಷ್ಮೀಪತಿಯು ಅವನ ಎದುರಿಗೆ ಬಂದು ನಿಂತು ಕಂಗೊಳಿಸಿದನು. ಎಲ್ಲ ಋಷಿಗಳು ಮತ್ತು ದೇವತೆಗಳು ಅವನನ್ನು ಸ್ತೋತ್ರ ಮಾಡಿದರು.
ತಂ ದೃಷ್ಟ್ವಾ ಜ್ವಲಮಾನಶ್ರೀರ್ಭಗವಾನ್ ಹವ್ಯವಾಹನಃ |
ನಷ್ಟತೇಜಾಃ ಸಮಭವತ್ ತಸ್ಯ ತೇಜೋಽಭಿಭರ್ತ್ಸಿತಃ ॥22॥
ವಿಷ್ಣುವನ್ನು ನೋಡಿದ ಪೂಜ್ಯನಾದ ಅಗ್ನಿಯು ಅಲ್ಲಿಯವರೆಗೆ ಜ್ವಾಲೆಗಳಿಂದ ಶೋಭಿಸುತ್ತಿದ್ದರೂ ವಿಷ್ಣುವಿನ ತೇಜಸ್ಸಿನಿಂದ ಅಭಿಭೂತನಾಗಿ ತನ್ನ ತೇಜಸ್ಸನ್ನು ಕಳೆದುಕೊಂಡನು.
ತಂ ದೃಷ್ಟ್ವಾ ವರದಂ ದೇವಂ ವಿಷ್ಣುಂ ದೇವಗಣೇಶ್ವರಮ್ ॥23॥
ಪ್ರಾಂಜಲಿಃ ಪ್ರಣತೋ ಭೂತ್ವಾ ನಮಸ್ಕೃತ್ಯ ಚ ವಜ್ರಭೃತ್ |
ಪ್ರಾಹ ವಾಕ್ಯಂ ತತಸ್ತತ್ತ್ವಂ ಯತಸ್ತಸ್ಯ ಭಯಂ ಭವೇತ್ ॥24॥
ದೇವಗಣೇಶ್ವರನಾದ, ವರಪ್ರದನಾದ ವಿಷ್ಣುವನ್ನು ನೋಡಿ ವಜ್ರಧರನಾದ ಇಂದ್ರನು ಅವನಿಗೆ ದಂಡಪ್ರಣಾಮವನ್ನು ಮಾಡಿ ಕೈಗಳನ್ನು ಮುಗಿದು ತನಗೆ ಭಯವು ಉಂಟಾಗಲು ಕಾರಣವನ್ನು ಯಥಾರ್ಥವಾಗಿ ತಿಳಿಸಿದನು.
ವಿಷ್ಣುಃ
ಜಾನಾಮಿ ತೇ ಭಯಂ ಶಕ್ರ ದೈತ್ಯೇಂದ್ರಾನ್ನರಕಾತ್ ತತಃ |
ಐಂದ್ರಂ ಪ್ರಾರ್ಥಯತೇ ಸ್ಥಾನಂ ತಪಃಸಿದ್ಧೇನ ಕರ್ಮಣಾ ॥25॥
ವಿಷ್ಣು ಎಲೈ ಶಕ್ರನೇ, ದೈತ್ಯೇಂದ್ರನಾದ ನರಕಾಸುರನಿಂದ ನಿನಗೆ ಉಂಟಾಗಿರುವ ಭಯದಿಂದ ನಾನು ತಿಳಿದಿದ್ದೇನೆ. ತಪಸ್ಸಿನ ಸಿದ್ಧಿಯನ್ನು ಪಡೆದು ತನ್ನ ಕರ್ಮದಿಂದ ಅವನು ಇಂದ್ರನಾದ ನಿನ್ನ ಸ್ಥಾನವನ್ನು ಬಯಸುತ್ತಿದ್ದಾನೆ.
ಸೋಽಹಮೇನಂ ತವ ಪ್ರೀತ್ಯಾ ತಪಃಸಿದ್ಧಮಪಿ ಧ್ರುವಮ್ |
ವಿಯುನಜ್ಮಿ ದೇಹಾದ್ ದೇವೇಂದ್ರ ಮುಹೂರ್ತಂ ಪ್ರತಿಪಾಲಯ ॥26॥
ಅಂತಹ ನಾನು ನಿನ್ನ ಮೇಲಿನ ಪ್ರೀತಿಯಿಂದ ಅವನು ತಪಃಸಿದ್ಧನಾದರೂ ದೇಹವಿಯೋಗವನ್ನು ಹೊಂದುವಂತೆ ಮಾಡುವೆನು. ಎಲೈ ದೇವೇಂದ್ರನೇ, ಒಂದು ಮುಹೂರ್ತದ ಕಾಲ ನಿರೀಕ್ಷಿಸು.
ಲೋಮಶಃ
ತಸ್ಯ ವಿಷ್ಣುರ್ಮಹಾತೇಜಾಃ ಪಾಣಿನಾ ಚೇತನಾಂ ಹರತ್ |
ಸ ಪಪಾತ ತತೋ ಭೂಮೌ ಗಿರಿರಾಜ ಇವಾಹತಃ ॥27॥
ಲೋಮಶ ಆಗ ಮಹಾತೇಜಸ್ವಿಯಾದ ವಿಷ್ಣುವು ತನ್ನ ಹಸ್ತದಿಂದ ಅವನ ಆತ್ಮವನ್ನು ಹೊರಗೆ ಎಳೆದನು. ಆಗ ಅವನು ಮುರಿದುಬಿದ್ದ ದೊಡ್ಡ ಪರ್ವತದಂತೆ ಭೂಮಿಯ ಮೇಲೆ ಬಿದ್ದನು.
ತಸ್ಯೈತದಸ್ಥಿಸಂಘಾತಂ ಮಾಯಾವಿನಿಹತಸ್ಯ ವೈ |
ಇದಂ ದ್ವಿತೀಯಮಪರಂ ವಿಷ್ಣೋಃ ಕರ್ಮ ಪ್ರಕಾಶತೇ ॥28॥
ವಿಷ್ಣುವಿನ ಬಲದಿಂದ ಹತನಾದ ಅವನ ಅಸ್ಥಿಸಮೂಹವು ಇದು. ಇದಲ್ಲದೇ ವಿಷ್ಣುವು ಮಾಡಿದ ಇನ್ನೊನಂದು ದಿವ್ಯವಾದ ಕರ್ಮವು ಶೋಭಿಸುತ್ತದೆ (ಅದನ್ನೂ ಕೇಳು).
ನಷ್ಟಾ ವಸುಮತೀ ಕೃತ್ಸ್ನಾ ಪಾತಾಳೇ ಚೈವ ಮಜ್ಜಿತಾ |
ಪುನರುದ್ಧರಿತಾ ತೇನ ವಾರಾಹೇಣೈಕಶೃಂಗಿಣಾ ॥29॥

ಭೂಮಿಯು ಸಂಪೂರ್ಣವಾಗಿ ನಷ್ಟವಾಗಿ ಪಾತಾಳದಲ್ಲಿ ಮುಳುಗಿಸಲ್ಪಟ್ಟಿತು. ಆಗ ವಿಷ್ಣುವು ವರಾಹರೂಪವನ್ನು ಧರಿಸಿ ತನ್ನ ಒಂದು ಶೃಂಗದ ಮೇಲೆ ಭೂಮಿಯನ್ನು ಮೇಲಕ್ಕೆತ್ತಿದನು.
ಯುಧಿಷ್ಠಿರಃ
ಭಗವನ್ ವಿಸ್ತರೇಣೇಮಾಂ ಕಥಾಂ ಕಥಯ ತತ್ತ್ವತಃ |
ಕಥಂ ತೇನ ಸುರೇಶೇನ ನಷ್ಟಾ ವಸುಮತೀ ತದಾ ||30||
ಯೋಜನಾನಾಂ ಶತಂ ಬ್ರಹ್ಮನ್ ಪುನರುದ್ಧರಿತಾ ತದಾ |
ಕೇನ ಚೈವ ಪ್ರಕಾರೇಣ ಜಗತೋ ಧರಣೀ ಧ್ರುವಾ ||31||
ಯುಧಿಷ್ಠಿರ ಪೂಜ್ಯರೇ, ಈ ಕಥೆಯನ್ನು ವಿಸ್ತಾರವಾಗಿ ಯಥಾರ್ಥವಾಗಿ ಹೇಳಿ. ಎಲೈ ಬ್ರಾಹ್ಮಣರೇ, ನೂರುಯೋಜನ ಆಳದಲ್ಲಿ ಮುಳುಗಿದ್ದ ಭೂಮಿಯು ಆ ದೇವದೇವೇಶನಿಂದ ಹೇಗೆ ಪುನಃ ಮೇಲಕ್ಕೆ ಎತ್ತಲ್ಪಟ್ಟಿತು? ಎಲ್ಲ ಪ್ರಾಣಿಗಳನ್ನು ಧರಿಸುವ ಭೂಮಿಯು ಯಾವ ಪ್ರಕಾರದಿಂದ ಸ್ಥಿರವಾಯಿತು?
ಶಿವಾ ದೇವೀ ಮಹಾಭಾಗಾ ಸರ್ವಸಸ್ಯಪ್ರರೋಹಿಣೀ |
ಕಸ್ಯ ಚೈವ ಪ್ರಭಾವಾದ್ಧಿ ಯೋಜನಾನಾಂ ಶತಂ ಗತಾ ||32||
ಮಹಾನುಭಾವಳಾದ ಭೂದೇವಿಯು ಮಂಗಳಸ್ವರೂಪಳಾದವನು ಮತ್ತು ಎಲ್ಲ ಸಸ್ಯಗಳನ್ನೂ ಬೆಳೆಸುವವಳು. ಅಂತಹ ಅವಳು ಯಾವನ ಪ್ರಭಾವದಿಂದ ನೂರು ಯೋಜನ ಕೆಳಗೆ ಹೋದಳು?
ಕೇನ ತದ್ವೀರ್ಯಸರ್ವಸ್ವಂ ದರ್ಶಿತಂ ಪರಮಾತ್ಮನಃ |
ಏತತ್ಸರ್ವಂ ಯಥಾತತ್ತ್ವಮಿಚ್ಛಾಮಿ ದ್ವಿಜಸತ್ತಮ |
ಶ್ರೋತುಂ ವಿಸ್ತರಶಃ ಸರ್ವಂ ತ್ವಂ ಹಿ ತಸ್ಯ ಪ್ರತಿಶ್ರಯಃ ||33||
ಆ ಪರಮಾತ್ಮನ ಸಮಗ್ರವಾದ ಸಾಮರ್ಥ್ಯವು ಯಾರಿಂದ ನೋಡಲ್ಪಟ್ಟಿತು? ಎಲೈ ದ್ವಿಜಶ್ರೇಷ್ಠರೇ, ಇದೆಲ್ಲವನ್ನೂ ಯಥಾರ್ಥವಾಗಿ ಮತ್ತು ವಿಸ್ತಾರವಾಗಿ ಕೇಳಲು ಬಯಸುತ್ತೇನೆ. ಈ ವಿಷಯದಲ್ಲಿ ನೀವೇ ನಮಗೆ ಆಶ್ರಯರಾದವರು.
ಲೋಮಶಃ
ಯತ್ತೇಽಹಂ ಪರಿಪೃಷ್ಟೋಽಸ್ಮಿ ಕಥಾಮೇತಾಂ ಯುಧಿಷ್ಠಿರ |
ತತ್ಸರ್ವಮಖಿಲೇನೇಹ ಶ್ರೂಯತಾಂ ಮಮ ಭಾಷತಃ ||34||
ಲೋಮಶ ಯುಧಿಷ್ಠಿರನೇ, ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾನು ಈ ಕಥೆಯನ್ನು ಹೇಳುತ್ತೇನೆ. ನಾನು ಹೇಳುವಾಗ ಸಮಗ್ರವಾದ ಎಲ್ಲ ಕಥೆಯನ್ನು ಆಲಿಸು.
ಪುರಾ ಕೃತಯುಗೇ ತಾತ ವರ್ತಮಾನೇಽಭಯಂಕರೇ |
ಯಮತ್ವಂ ಕಾರಯಾಮಾಸ ಆದಿದೇವಃ ಪುರಾತನಃ||35||
ಹಿಂದೆ ಅಭಯಪ್ರದವಾದ ಕೃತಯುಗವು ನಡೆಯುತ್ತಿರಲು ಪುರಾತನನಾದ ಆದಿದೇವನಾದ ನಾರಾಯಣನೇ ಯಮನ ಕೆಲಸವನ್ನು ನಿರ್ವಹಿಸಿದನು.
ಯಮತ್ವಂ ಕುರ್ವತಸ್ತಸ್ಯ ದೇವದೇವಸ್ಯ ಧೀಮತಃ |
ನ ತತ್ರ ಮ್ರಿಯತೇ ಕಶ್ಚಿಜ್ಜಾಯತೇ ವಾ ತಥಾನ್ಯುತ ||36||
ಎಲೈ ನಿಯಮಾದಿ ಗುಣಗಳಿಂದ ಚ್ಯುತನಾಗದವನೇ, ಮೇಧಾವಿಯಾದ ಆ ದೇವದೇವನು ಯಮನಾಗಿ ಕೆಲಸವನ್ನು ಮಾಡುತ್ತಿರಲು ಯಾರೂ ಸಾಯುತ್ತಿರಲಿಲ್ಲ ಮತ್ತು ಪುನರ್ಜನ್ಮವನ್ನೂ ಪಡೆಯುತ್ತಿರಲಿಲ್ಲ.
ವರ್ಧಂತೇ ಪಕ್ಷಿಸಂಘಾಶ್ಚ ತಥಾ ಪಶುಗವೇಡಕಮ್ |
ಗವಾಶ್ವಂ ಚ ಮೃಗಾಶ್ಚೈವ ಸರ್ವೇ ತೇ ಪಿಶಿತಾಶನಾಃ ||37||
ಹುಟ್ಟಿದ ಪಕ್ಷಿಸಂಘಗಳೆಲ್ಲವೂ, ಪಶುಗಳು, ಗೋವುಗಳು ಮತ್ತು ಆಡು ಮೊದಲಾದವುಗಳೂ, ಅಶ್ವಗಳೂ, ಮಾಂಸಾಹಾರಿಗಳಾದ ಮೃಗಗಳೂ ಎಲ್ಲವೂ ಅಭಿವೃದ್ಧಿಯನ್ನೇ ಹೊಂದುತ್ತಿದ್ದವು.
ತಥಾ ಪುರುಷಶಾರ್ದೂಲ ಮಾನುಷಾಶ್ಚ ಪರಂತಪ |
ಸಹಸ್ರಶೋ ಹ್ಯಯುತಶೋ ವರ್ಧಂತೇ ಸಲಿಲಂ ಯಥಾ ||38||
ಎಲೈ ಪರಂತಪನೇ, ಪುರುಷಶಾರ್ದೂಲನೇ, ಅದರಂತೆ ಮನುಷ್ಯರೂ ಸಹ ಸಾವಿರಗಟ್ಟಲೆಯಲ್ಲಿ, ಹತ್ತುಸಾವಿರಗಟ್ಟಲೆಯಲ್ಲಿ ನೀರಿನಂತೆ ಅಭಿವೃದ್ಧಿಯನ್ನು ಹೊಂದಿದರು.
ಏತಸ್ಮಿನ್ ಸಂಕುಲೇ ತಾತ ವರ್ತಮಾನೇ ಭಯಂಕರೇ |
ಅತಿಭಾರಾದ್ ವಸುಮತೀ ಯೋಜನಾನಾಂ ಶತಂ ಗತಾ ||39||
ಪ್ರೀತಿಪಾತ್ರನೇ, ಇಂತಹ ಭಯಂಕರವಾದ ಸಮಾವೇಶವು ಉಂಟಾಗುತ್ತಿರಲು ಭೂಮಿಯು ಎಲ್ಲ ಪ್ರಾಣಿಗಳ ಮತ್ತು ಪ್ರಜೆಗಳ ಭಾರದಿಂದಾಗಿ ನೂರು ಯೋಜನ ಕೆಳಗೆ ಹೋದಳು.
ಸಾ ವೈ ವ್ಯಥಿತಸರ್ವಾಂಗೀ ಭಾರೇಣಾಕ್ರಾಂತಚೇತನಾ |
ನಾರಾಯಣಂ ವರಂ ದೇವಂ ಪ್ರಪನ್ನಾ ಶರಣಂ ಗತಾ ||40||
ಭಾರಾಕ್ರಾಂತಳಾದ ಅವಳು, ಸರ್ವಾಂಗಗಳಲ್ಲಿ ವ್ಯಥೆಯನ್ನು ಹೊಂದಿ ದೇವೋತ್ತಮನಾದ ನಾರಾಯಣನನ್ನು ಶರಣು ಹೊಂದಿದಳು.
ಪೃಥಿವೀ
ಭಗವಂಸ್ತ್ವತ್ಪ್ರಸಾದಾದ್ಧಿ ತಿಷ್ಠೇಯಂ ಸುಚಿರಂ ತ್ವಿಹ |
ಭಾರೇಣಾಸ್ಮಿ ಸಮಾಕ್ರಾಂತಾ ನ ಶಕ್ನೋಮಿ ಸ್ಮ ವರ್ತಿತುಮ್ ||41||

ಪೃಥಿವೀ ಭಗವಂತನೇ, ನಿನ್ನ ಅನುಗ್ರಹದಿಂದ ನಾನು ಇಲ್ಲಿ ಸ್ಥಿರವಾಗಿ ನಿಲ್ಲಲು ಬಯಸುತ್ತೇನೆ. ನಾನು ಭಾರಾಕ್ರಾಂತಳಾಂಗಿ ಇದ್ದ ಕಡೆಯಲ್ಲಿ ಇರಲು ಸಾಧ್ಯವಾಗುತ್ತಿಲ್ಲ.
ಮಮೇಮಂ ಭಗವನ್ ಭಾರಂ ವ್ಯಪನೇತುಂ ತ್ವಮರ್ಹಸಿ |
ಶರಣಾಗತಾಸ್ಮಿ ತೇ ದೇವ ಪ್ರಸಾದಂ ಕುರು ಮೇ ವಿಭೋ ||42||
ಭಗವಂತನೇ, ನನ್ನ ಈ ಭಾರವನ್ನು ನೀನು ಪರಿಹರಿಸಬೇಕು. ದೇವನೇ, ನಾನು ನಿನಗೆ ಶರಣಾಗತಳಾಗಿದ್ದೇನೆ. ವಿಭುವೇ, ನನಗೆ ಅನುಗ್ರಹವನ್ನು ಮಾಡು.
ತಸ್ಯಾಸ್ತದ್ವಚನಂ ಶ್ರುತ್ವಾ ಭಗವಾನಕ್ಷರಃ ಪ್ರಭುಃ |
ಪ್ರೋವಾಚ ವಚನಂ ಹೃಷ್ಟಃ ಶ್ರವ್ಯಾಕ್ಷರಸಮೀರಿತಮ್ ||43||
ಅವಳ ಆ ಮಾತುಗಳನ್ನು ಕೇಳಿ ಅಕ್ಷರನಾದ ಪ್ರಭುವಾದ ನಾರಾಯಣನು ಸಂತೋಷದಿಂದ ಮಧುರಾಕ್ಷರಗಳಿಂದ ಕೂಡಿದ ಮಾತುಗಳನ್ನು ಆಡಿದನು.
ನ ತೇ ಮಹಿ ಭಯಂ ಕಾರ್ಯಂ ಭಾರಾರ್ತೇ ವಸುಧಾರಿಣಿ |
ಅಹಮೇವಂ ತಥಾ ಕುರ್ಮಿ ಯಥಾ ಲಘ್ವೀ ಭವಿಷ್ಯಸಿ ||44||
ಭಾರಾಕ್ರಾಂತಳಾದ ವಸುಧಾರಿಣಿಯಾದ ಭೂಮಿಯೇ ನೀನು ಭಯಪಡುವ ಕಾರಣವಿಲ್ಲ. ನಿನಗೆ ಹಗುರವಾಗುವಂತೆ ನಾನು ಮಾಡುವೆನು.
ಲೋಮಶಃ
ಸ ತಾಂ ವಿಸರ್ಜಯಿತ್ವಾ ತು ವಸುಧಾಂ ಶೈಲಕುಂಡಲಾಮ್ |
ತತೋ ವರಾಹಃ ಸಂವೃತ್ತ ಏಕಶೃಂಗೋ ಮಹಾದ್ಯುತಿಃ ||45||
ಲೋಮಶ ಪರ್ವತಕುಂಡಲಳಾದ ಭೂಮಿಯನ್ನು ಕಳುಹಿಸಿಕೊಟ್ಟು ಮಹಾದ್ಯುತಿಯುಳ್ಳ ನಾರಾಯಣನು ಏಕಶೃಂಗವುಳ್ಳ ವರಾಹರೂಪನಾದನು.
ರಕ್ತಾಭ್ಯಾಂ ನಯನಾಭ್ಯಾಂ ತು ಭಯಮುತ್ಪಾದಯನ್ನಿವ |
ಧೂಮಂ ಚ ಜ್ವಲಯಂಲ್ಲಕ್ಷ್ಮ್ಯಾ ತತ್ರ ದೇಶೇ ವ್ಯವರ್ಧತ ||46||
ತನ್ನ ಕೆಂಪಾದಕಣ್ಣುಗಳ ಕಾಂತಿಯಿಂದ ಭಯವನ್ನು ಸೃಷ್ಟಿ ಮಾಡುವವನಂತೆ ತನ್ನ ಶರೀರ ಕಾಂತಿಯಿಂದ ಧೂಮವನ್ನೂ ಬೆಳಗುತ್ತಾ ಅವನು ಆ ಪ್ರದೇಶದಲ್ಲಿ ಬೆಳೆದನು.
ಸ ಗೃಹೀತ್ವಾ ವಸುಮತೀಂ ಶೃಂಗೇಣೈಕೇನ ಭಾಸ್ವತಾ |
ಯೋಜನಾನಾಂ ಶತಂ ವೀರ ಸಮುದ್ಧರತಿ ಸೋಽಕ್ಷರಃ ||47||
ಎಲೈ ವೀರನೇ, ಅವನು ನೀರಿನಲ್ಲಿ ಮುಳುಗಿ ಪ್ರಕಾಶಮಾನವಾದ ತನ್ನ ಒಂದು ಶೃಂಗದ ಮೇಲೆ ಭೂಮಿಯನ್ನು ಇಟ್ಟುಕೊಂಡು ಅವಳನ್ನು ನೂರುಯೋಜನ ಮೇಲಕ್ಕೆ ತಂದನು.
ತಸ್ಯಾಂ ಚೋದ್ಧಾರ್ಯಮಾಣಾಯಾಂ ಸಂಕ್ಷೋಭಃ ಸಮಜಾಯತ |
ದೇವಾಃ ಸಂಕ್ಷುಭಿತಾಃ ಸರ್ವೇ ಋಷಯಶ್ಚ ತಪೋಧನಾಃ ||48||
ಭೂಮಿಯನ್ನು ಹಾಗೆ ಮೇಲಕ್ಕೆ ಎತ್ತುತ್ತಿರುವಾಗ ಎಲ್ಲ ಕಡೆಯಲ್ಲಿಯೂ ಕ್ಷೋಭೆ ಉಂಟಾಯಿತು. ದೇವತೆಗಳು ಮತ್ತು ತಪೋಧನರಾದ ಋಷಿಗಳು ಬಹಳ ಕ್ಷೋಭೆಗೆ ಒಳಗಾದರು.
ಹಾಹಾಭೂತಮಭೂತ್ ಸರ್ವಂ ತ್ರಿದಿವಂ ವ್ಯೋಮ ಭೂಸ್ತಥಾ |
ನ ಪರ್ಯವಸ್ಥಿತಃ ಕಶ್ಚಿದ್ ದೇವೋ ವಾ ಮಾನುಷೋಽಪಿ ವಾ ||49||
ಸ್ವರ್ಗದಲ್ಲಿಯೂ, ಅಂತರಿಕ್ಷದಲ್ಲಿಯೂ ಮತ್ತು ಭೂಮಿಯಲ್ಲಿಯೂ ಎಲ್ಲೆಡೆಯಲ್ಲಿ ಹಾಹಾಕಾರವುಂಟಾಯಿತು. ಯಾವೊಬ್ಬ ದೇವತೆಯಾಗಲೀ, ಮನುಷ್ಯನಾಗಲೀ ಸಮಾಧಾನವನ್ನು ಹೊಂದಲಿಲ್ಲ.
ತತೋ ಬ್ರಹ್ಮಾಣಮಾಸೀನಂ ಜ್ವಲಮಾನಮಿವ ಶ್ರಿಯಾ |
ದೇವಾಃ ಸರ್ಷಿಗಣಾಶ್ಚೈವ ಉಪತಸ್ಥುರನೇಕಶಃ ||50||
ಆಗ ದೇವತೆಗಳು ತನ್ನ ಕಾಂತಿಯಿಂದ ಬೆಳಗುತ್ತಾ ಕುಳಿತಿದ್ದ ಬ್ರಹ್ಮದೇವರನ್ನು ಅನೇಕ ಋಷಿಗಣಗಳ ಜೊತೆಯಲ್ಲಿ ಸಮೀಪಿಸಿ ಸ್ತೋತ್ರವನ್ನು ಮಾಡಿದರು.
ಉಪಸರ್ಪ್ಯ ಚ ದೇವೇಶಂ ಬ್ರಹ್ಮಾಣಂ ಲೋಕಸಾಕ್ಷಿಕಮ್ |
ಭೂತ್ವಾ ಪ್ರಾಂಜಲಯಃ ಸರ್ವೇ ವಾಕ್ಯಮುಚ್ಚಾರಯಂಸ್ತದಾ ||51||
ಅವರು ಲೋಕಸಾಕ್ಷಿಯೂ, ದೇವತೆಗಳ ಪ್ರಭುವೂ ಆದ ಬ್ರಹ್ಮದೇವರನ್ನು ಸಮೀಪಿಸಿ ಕೈಗಳನ್ನು ಮುಗಿದು ಹೀಗೆ ಮಾತನಾಡಿದರು.
ಲೋಕಾಃ ಸಂಕ್ಷುಭಿತಾಃ ಸರ್ವೇ ವ್ಯಾಕುಲಂ ಚ ಚರಾಚರಮ್ |
ಸಮುದ್ರಾಣಾಂ ಚ ಸಂಕ್ಷೋಭಸ್ತ್ರಿದಶೇಶ ಪ್ರಕಾಶತೇ ||52||
ಎಲೈ ದೇವೇಶನೇ, ಎಲ್ಲ ಲೋಕಗಳು ಬಹಳ ಕ್ಷೋಭೆಗೆ ಒಳಗಾಗಿವೆ. ಚರಾಚರವಾದ ಸಮಸ್ತವಾದ ಜಗತ್ತು ಅಸ್ತವ್ಯಸ್ತವಾಗಿದೆ. ಸಮುದ್ರಗಳ ಕ್ಷೋಭೆಯೂ ಸಹ ಕಾಣಬರುತ್ತಿದೆ.
ಸೈಷಾ ವಸುಮತೀ ಕೃತ್ಸ್ನಾ ಯೋಜನಾನಾಂ ಶತಂ ಗತಾ |
ಕಿಮೇತದ್ ಕಿಂ ಪ್ರಭಾವೇಣ ಯೇನೇದಂ ವ್ಯಾಕುಲಂ ಜಗತ್ |
ಆಖ್ಯಾತು ನೋ ಭವಾನ್ಶೀಘ್ರಂ ವಿಸಂಜ್ಞಾಃ ಸ್ಮೇಹ ಸರ್ವಶಃ ||53||
ಈ ಸಮಗ್ರವಾದ ಭೂಮಿಯು ನೂರುಯೋಜನ ಕೆಳಗೆ ಹೋಗಿದೆ. ಇದು ಯಾರ ಪ್ರಭಾವದಿಂದ ಹೇಗೆ ಉಂಟಾಗಿದೆ? ಅದರಿಂದ ಜಗತ್ತು

ಹೀಗೆ ವ್ಯಾಕುಲಗೊಂಡಿದೆ. ಪೂಜ್ಯರಾದ ತಾವು ಇದನ್ನು ತಿಳಿಸಬೇಕು. ನಾವೆಲ್ಲರೂ ವಿಸಂಜ್ಞರಾಗಿದ್ದೇವೆ.
ಬ್ರಹ್ಮಾ
ಅಸುರೇಭ್ಯೋ ಭಯಂ ನಾಸ್ತಿ ಯುಷ್ಮಾಕಂ ಕುತ್ರಚಿತ್ ಕ್ವಚಿತ್ |
ಶ್ರೂಯತಾಂ ಯತ್ಕೃತೇ ತ್ವೇಷ ಸಂಕ್ಷೋಭೋ ಜಾಯತೇಽಮರಾಃ ||54||
ಬ್ರಹ್ಮ ಎಲೈ ದೇವತೆಗಳೇ, ನಿಮಗೆ ಅಸುರರಿಂದ ಎಲ್ಲಿಯೂ ಯಾವ ಭಯವೂ ಉಂಟಾಗಿಲ್ಲ. ಯಾವುದರ ಸಲುವಾಗಿ ಈ ಕ್ಷೋಭೆ ಉಂಟಾಗಿದೆ ಎಂಬುದನ್ನು ಕೇಳಿ.
ಯೋಽಸೌ ಸರ್ವತ್ರಗಃ ಶ್ರೀಮಾನಕ್ಷರಾತ್ಮಾ ವ್ಯವಸ್ಥಿತಃ |
ತಸ್ಯ ಪ್ರಭಾವಾತ್ ಸಂಕ್ಷೋಭಸ್ತ್ರಿದಿವಸ್ಯ ಪ್ರಕಾಶತೇ ||55||
ಯಾವ ಸರ್ವತ್ರವ್ಯಾಪ್ತನಾದ ಲಕ್ಷ್ಮೀಪತಿಯಾದ ಅಕ್ಷರನಾದ ನಾರಾಯಣನಿದ್ದಾನೆಯೋ ಅವನ ಪ್ರಭಾವದಿಂದ ಸ್ವರ್ಗಲೋಕದಲ್ಲಿ ಈ ಕ್ಷೋಭೆಯು ಕಂಡುಬರುತ್ತಿದೆ.
ಯೈಷಾ ವಸುಮತೀ ಕೃತ್ಸ್ನಾ ಯೋಜನಾನಾಂ ಶತಂ ಗತಾ |
ಸಮುದ್ಧೃತಾ ಪುನಸ್ತೇನ ವಿಷ್ಣುನಾ ಪರಮಾತ್ಮನಾ ||56||
ನೂರುಯೋಜನ ಕೆಳಗೆ ಹೋದ ಈ ಸಮಗ್ರವಾದ ಭೂಮಿಯನ್ನು ಪರಮಾತ್ಮನಾದ ವಿಷ್ಣುವು ಪುನಃ ಮೇಲಕ್ಕೆತ್ತಿದ್ದಾನೆ.
ತಸ್ಯಾಮುದ್ಧಾರ್ಯಮಾಣಾಯಾಂ ಸಂಕ್ಷೋಭಃ ಸಮಜಾಯತ |
ಏವಂ ಭವಂತೋ ಜಾನಂತು ಛಿದ್ಯತಾಂ ಸಂಶಯಶ್ಚ ವಃ ||57||
ಹೀಗೆ ಭೂಮಿಯನ್ನು ಮೇಲಕ್ಕೆತ್ತುತ್ತಿದ್ದಾಗ ಈ ಕ್ಷೋಭೆ ಉಂಟಾಗಿದೆ. ಇದನ್ನು ಹೀಗೆ ತಿಳಿಯಿರಿ. ಮತ್ತು ಮನಸ್ಸಿನ ಸಂಶಯವನ್ನು ದೂರಮಾಡಿಕೊಳ್ಳಿ.
ದೇವಾಃ
ಕ್ವ ತದ್ಭೂತಂ ವಸುಮತೀಂ ಸಮುದ್ಧರತಿ ಹೃಷ್ಟವತ್ |
ತಂ ದೇಶಂ ಭಗವನ್ ಬ್ರೂಹಿ ತತ್ರ ಯಾಸ್ಯಾಮಹೇ ವಯಮ್ ||58||
ಅಂತಹ ಮಹದ್ಭೂತವು ಎಲ್ಲಿ ಭೂಮಿಯನ್ನು ಸಂತೋಷದಿಂದ ಮೇಲಕ್ಕೆತ್ತುತ್ತಿದೆ? ಪೂಜ್ಯರೇ, ನಮಗೆ ಆ ಪ್ರದೇಶವನ್ನು ತಿಳಿಸಿ. ನಾವು ಅಲ್ಲಿಗೆ ಹೋಗುವೆವು.
ಬ್ರಹ್ಮಾ
ಹಂತ ಗಚ್ಛತ ಭದ್ರಂ ವೋ ನಂದನೇ ಪಶ್ಯತ ಸ್ಥಿತಮ್ |
ಏಷೋಽತ್ರ ಭಗವಾನ್ಶ್ರೀಮಾನ್ ಸುಪರ್ಣಃ ಸಂಪ್ರಕಾಶತೇ ||59||
ಬ್ರಹ್ಮಾ ಸಂತೋಷ. ನಿಮಗೆ ಮಂಗಳವಾಗಲಿ. ಈಗ ಅದು ಇಂದ್ರನ ನಂದನವನದಲ್ಲಿ ಇದೆ. ನೀವು ಹೋಗಿ ಅಲ್ಲಿ ನೋಡಿ. ಪೂರ್ಣಾನಂದರೂಪನಾದ ಭಗವಂತನಾದ ಶ್ರೀಮಾನ್ ನಾರಾಯಣನು ಅಲ್ಲಿ ಕಂಗೊಳಿಸುತ್ತಿದ್ದಾನೆ.
ವಾರಾಹೇಣೈವ ರೂಪೇಣ ಭಗವಾಂಲ್ಲೋಕಭಾವನಃ |
ಕಾಲಾನಲ ಇವಾಭಾತಿ ಪೃಥಿವೀತಳಮುದ್ಧರನ್ ||60||
ಲೋಕಭಾವನನಾದ ಆ ಭಗವಂತನು ವರಾಹರೂಪದಿಂದಲೇ ಭೂಮಿಯನ್ನು ಮೇಲಕ್ಕೆತ್ತುತ್ತಾ ಕಾಲಾನಲದಂತೆ (ಪ್ರಳಯಕಾಲದ ಅಗ್ನಿಯಂತೆ) ಶೋಭಿಸುತ್ತಿದ್ದಾನೆ.
ಏತಸ್ಯೋರಸಿ ಸುವ್ಯಕ್ತಂ ಶ್ರೀವತ್ಸಮಭಿರಾಜತೇ |
ಪಶ್ಯಧ್ವಂ ವಿಬುಧಾಃ ಸರ್ವೇ ಭೂತಮೇತದನಾಮಯಮ್ ||61||
ಎಲೈ ದೇವತೆಗಳೇ, ಅವನ ವಕ್ಷಸ್ಥಲದಲ್ಲಿ ಶ್ರೀವತ್ಸವು ಸ್ಪಷ್ಟವಾಗಿ ರಾರಾಜಿಸುತ್ತಿದೆ. ನೀವೆಲ್ಲರೂ ದೋಷಗಂಧವಿಧುರನಾದ ಆ ಮಹದ್ಭೂತವನ್ನು ಹೋಗಿ ನೋಡಿ.
ಲೋಮಶಃ
ತತೋ ದೃಷ್ಟ್ವಾ ಮಹಾತ್ಮಾನಂ ಶ್ರುತ್ವಾ ಚಾಮಂತ್ರ್ಯ ಚಾಮರಾಃ |
ಪಿತಾಮಹಂ ಪುರಸ್ಕೃತ್ಯ ಜಗ್ಮುರ್ದೇವಾ ಯಥಾಗತಮ್ ||62||
ಲೋಮಶ ಆಗ ದೇವತೆಗಳು ಮಹಾತ್ಮನಾದ ಬ್ರಹ್ಮದೇವರನ್ನು ನೋಡಿ ಅವರ ಅನುಮತಿಯನ್ನು ಪಡೆದು ಅವರನ್ನು ಮುಂದೆ ಮಾಡಿಕೊಂಡು ಬಂದದಾರಿಯಲ್ಲಿಯೇ ಹಿಂದಿರುಗಿದರು.
ವೈಶಂಪಾಯನಃ
ಶ್ರುತ್ವಾ ತು ತಾಂ ಕಥಾಂ ಸರ್ವೇ ಪಾಂಡವಾ ಜನಮೇಜಯ |
ಲೋಮಶಾದೇಶಿತೇನಾಶು ಪಥಾ ಜಗ್ಮುಃ ಪ್ರಹೃಷ್ಟವತ್ ||63||
ವೈಶಂಪಾಯನ ಎಲೈ ಜನಮೇಜಯನೇ, ಲೋಮಶರ ಉಪದೇಶದಿಂದ ಆ ಕಥೆಯನ್ನು ಕೇಳಿದ ಪಾಂಡವರೆಲ್ಲರೂ ಸಂತೋಷಭರಿತರಾಗಿ ತಮ್ಮ ಮಾರ್ಗದಲ್ಲಿ ಮುಂದೆ ಸಾಗಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಚತ್ವಾರಿಂಶದಧಿಕಶತತಮೋಽಧ್ಯಾಯಃ ||
|| ಇತಿ ತೀರ್ಥಯಾತ್ರಾಪರ್ವಣಿ ಪಂಚನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *

ನೂರ ನಲವತ್ತನೆಯ ಅಧ್ಯಾಯ
ಗಂಧಮಾದನ ಪರ್ವತಕ್ಕೆ ಹೊರಟ ಪಾಂಡವರಿಗೆ ಮಾರ್ಗಮಧ್ಯದಲ್ಲಿ ಮಳೆ. ಮಳೆಯು ನಿಂತ ನಂತರ ಪುನಃ ಅವರ ಪ್ರಯಾಣ.
ವೈಶಂಪಾಯನಃ
ತೇ ಶೂರಾಸ್ತತಧನ್ವಾನಸ್ತೂಣವಂತಃ ಸಮಾರ್ಗಣಾಃ |
ಬದ್ಧಗೋಧಾಂಗುಲೀತ್ರಾಣಾಃ ಖಡ್ಗವಂತೋಽಮಿತೌಜಸಃ ॥1॥
ಪರಿಗೃಹ್ಯ ದ್ವಿಜಶ್ರೇಷ್ಠಾನ್ ಜ್ಯೇಷ್ಠಾಃ ಸರ್ವಧನುಷ್ಮತಾಮ್ |
ಪಾಂಚಾಲೀಸಹಿತಾ ರಾಜನ್ ಪ್ರಯಯುರ್ಗಂಧಮಾದನಮ್ ॥2॥
ವೈಶಂಪಾಯನ ಎಲೈ ರಾಜನೇ, ಅಮಿತಪರಾಕ್ರಮಿಗಳೂ, ಸರ್ವಧನ್ವಿಗಳಲ್ಲಿ ಶ್ರೇಷ್ಠರೂ, ಶೂರರೂ ಆದ ಅವರು ವಿಸ್ತಾರವಾದ ಬಿಲ್ಲುಗಳನ್ನು ಹೊಂದಿ ಬಾಣಗಳಿಂದ ತುಂಬಿದ ಬತ್ತಳಿಕೆಗಳನ್ನು ಧರಿಸಿ ಹಸ್ತಗಳಿಗೆ ಚರ್ಮದ ರಕ್ಷೆಗಳನ್ನು ಹಾಕಿಕೊಂಡು ಖಡ್ಗವನ್ನು ಧರಿಸಿ ದ್ವಿಜಶ್ರೇಷ್ಠರನ್ನು ಜೊತೆಯಲ್ಲಿ ಕರೆದುಕೊಂಡು ಪಾಂಚಾಲೀ ಸಹಿತರಾಗಿ ಗಂಧಮಾದನ ಪರ್ವತಕ್ಕೆ ಹೊರಟರು.
ಸರಾಂಸಿ ಸರಿತಶ್ಚೈವ ಪರ್ವತಾಂಶ್ಚ ವನಾನಿ ಚ |
ವೃಕ್ಷಾಂಶ್ಚ ಬಹುಲಚ್ಛಾಯಾನ್ ದದೃಶುರ್ಗಿರಿಮೂರ್ಧನಿ ॥3॥
ಅವರು ಪರ್ವತ ದಾರಿಯಲ್ಲಿ ಅನೇಕ ಸರೋವರಗಳನ್ನು, ನದಿಗಳನ್ನು, ಕಾಡುಗಳನ್ನು ಮತ್ತು ಪರ್ವತಗಳನ್ನು ನೋಡಿದರು. ಪರ್ವತ ಶಿಖರಗಳಲ್ಲಿ ಬಹಳ ನೆರಳಿನಿಂದ ಕೂಡಿದ ಮರಗಳನ್ನೂ ನೋಡಿದರು.
ನಿತ್ಯಪುಷ್ಪಫಲಾನ್ ದೇಶಾನ್ ದೇವರ್ಷಿಗಣಸೇವಿತಾನ್ |
ಆತ್ಮನ್ಯಾತ್ಮಾನಮಾಧಾಯ ವೀರಾ ಮೂಲಫಲಾಶಿನಃ ॥4॥
ಚೇರುರುಚ್ಚಾವಚಾಕಾರಾನ್ ದೇಶಾನ್ ವಿಷಮಸಂಕಟಾನ್ |
ಪಶ್ಯಂತೋ ಮೃಗಜಾತಾನಿ ಬಹೂನಿ ವಿವಿಧಾನಿ ಚ ॥5॥
ಕಂದಫಲಾಹಾರರಾದ ವೀರರಾದ ಅವರು ಮನಸ್ಸನ್ನು ನಿಯಂತ್ರಣ ಮಾಡಿಕೊಂಡು, ನಿತ್ಯಪುಷ್ಪಫಲೋಪೇತವಾದ, ದೇವರ್ಷಿಗಣಸೇವಿತವಾದ ಪ್ರದೇಶಗಳನ್ನೂ ಬೇರೆ ಬೇರೆ ಆಕಾರದ ಸಮವಿಷಮ ಪ್ರದೇಶಗಳನ್ನೂ, ಬಹುವಿಧವಾದ ಅನೇಕ ಮೃಗಸಮೂಹಗಳನ್ನೂ ನೋಡುತ್ತಾ ಮುಂದೆ ಸಾಗಿದರು.
ಋಷಿಸಿದ್ಧಾಮರಯುತಂ ಗಂಧರ್ವಾಪ್ಸರಸಾಂ ಪ್ರಿಯಮ್ |
ವಿವಿಶುಸ್ತೇ ಮಹಾತ್ಮಾನಃ ಕಿನ್ನರಾಚರಿತಂ ಗಿರಿಮ್ ॥6॥
ಮಹಾನುಭಾವರಾದ ಅವರು ಋಷಿಗಳು, ಸಿದ್ಧರು ಮತ್ತು ದೇವತೆಗಳಿಂದ ಕೂಡಿದ, ಕಿನ್ನರರು ಸಂಚರಿಸುವ, ಗಂಧರ್ವರು ಮತ್ತು ಅಪ್ಸರೆಯರಿಗೆ ಪ್ರಿಯವಾದ ಆ ಪರ್ವತವನ್ನು ಪ್ರವೇಶಿಸಿದರು.
ಪ್ರವಿಶತ್ಸ್ವಥ ವೀರೇಷು ಪರ್ವತಂ ಗಂಧಮಾದನಮ್ |
ಚಂಡವಾತಂ ಮಹದ್ವರ್ಷಂ ಪ್ರಾದುರಾಸೀತ್ ವಿಶಾಂಪತೇ ॥7॥
ಎಲೈ ರಾಜನೇ, ಆ ವೀರರು ಗಂಧಮಾದನ ಪರ್ವತವನ್ನು ಪ್ರವೇಶಿಸುತ್ತಿದ್ದಂತೆಯೇ ಅಲ್ಲಿ ಚಂಡವಾತವು ಮತ್ತು ಮಹಾವರ್ಷವು ಉಂಟಾಯಿತು.
ತತೋ ರೇಣುಃ ಸಮುದ್ಭೂತಃ ಸಪತ್ರಬಹುಲೋ ಮಹಾನ್ |
ಪೃಥಿವೀಂ ಚಾಂತರಿಕ್ಷಂ ಚ ದ್ಯಾಂ ಚೈವ ಸಹಸಾಽಽವೃಣೋತ್ ॥8॥
ಆಗ ಉಂಟಾದ ಚಂಡವಾಯುವು ಧೂಳಿನ ಕಣಗಳನ್ನು ಮತ್ತು ಎಲೆಗಳನ್ನು ಎತ್ತಿಕೊಂಡು ಬೀಸುತ್ತಾ ಭೂಮಿಯನ್ನು, ಅಂತರಿಕ್ಷವನ್ನು ಮತ್ತು ಮೇಲಿನ ಸ್ವರ್ಗ ಲೋಕವನ್ನು ಇದ್ದಕ್ಕಿದ್ದಂತೆಯೇ ಆವರಿಸಿತು.
ನ ಸ್ಮ ಪ್ರಜ್ಞಾಯತೇ ಕಿಂಚಿದಾವೃತೇ ವ್ಯೋಮ್ನಿ ರೇಣುನಾ |
ನ ಚಾಪಿ ಶೇಕುಸ್ತತ್ಕರ್ತುಮನ್ಯೋನ್ಯಸ್ಯಾಭಿಭಾಷಣಮ್ ॥9॥
ಆಕಾಶವು ಧೂಳಿನಿಂದ ತುಂಬಿಹೋಗುತ್ತಿರಲು ಯಾವುದೂ ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಆ ವಾತ ರಭಸದಲ್ಲಿ ಒಬ್ಬರ ಜೊತೆಯಲ್ಲಿ ಇನ್ನೊಬ್ಬರು ಮಾತನಾಡಲೂ ಸಾಧ್ಯವಾಗಲಿಲ್ಲ.
ನ ಚಾಪಶ್ಯಂಸ್ತತೋಽನ್ಯೋನ್ಯಂ ತಮಸಾಽಽವೃತಚಕ್ಷುಷಃ |
ಆಕೃಷ್ಯಮಾಣಾ ವಾತೇನ ಸಾಶ್ಮಚೂರ್ಣೇನ ಭಾರತ ॥10॥
ಎಲೈ ಭಾರತನೇ, ಧೂಳು ಮತ್ತು ಕಲ್ಲಿನ ಕಣಗಳಿಂದ ಅವರು ನಷ್ಟದೃಷ್ಟಿ ಉಳ್ಳವರಾಗಿ ಚಂಡವಾತದಿಂದ ಎಳೆದಾಡಲ್ಪಟ್ಟವರಾಗಿ ಪರಸ್ಪರವಾಗಿ ಒಬ್ಬರನ್ನೊಬ್ಬರು ನೋಡಲೂ ಸಾಧ್ಯವಾಗಲಿಲ್ಲ.
ದ್ರುಮಾಣಾಂ ವಾತಭಗ್ನಾನಾಂ ಪತತಾಂ ಭೂತಲೇಽನಿಶಮ್ |
ಅನ್ಯೇಷಾಂ ಚ ಮಹೀಜಾನಾಂ ಶಬ್ದಃ ಸಮಭವನ್ಮಹಾನ್ ॥11॥
ಸತತವಾಗಿ ಚಂಡವಾತದಿಂದ ಮುರಿದುಬೀಳುವ ಮರಗಳಿಂದ ಮತ್ತು ಇತರ ಮರಗಳಿಂದ ದೊಡ್ಡ ಶಬ್ದವು ಉಂಟಾಯಿತು.
ದ್ಯೌಃ ಸ್ವಿತ್ ಪತತಿ ಕಿಂ ಭೂಮಿರ್ದೀರ್ಯತೇ ಪರ್ವತೋ ನು ಕಿಮ್|
ಇತಿ ತೇ ಮೇನಿರೇ ಸರ್ವೇ ಪವನೇನಾಪಿ ಮೋಹಿತಾಃ ॥12॥
ಆ ವಾತದಿಂದ ಮೋಹಿತರಾಗಿ ಅವರು ಇದೇನು ಆಕಾಶವೇ ಬೀಳುತ್ತಿದೆಯೋ ಅಥವಾ ಭೂಮಿಯು, ಪರ್ವತವು ಬಿರಿಯುತ್ತಿದೆಯೋ ಎಂದು ತಿಳಿದರು.
ತೇ ಪಥಾನಂತರಾನ್ ವೃಕ್ಷಾನ್ ವಲ್ಮೀಕಾನ್ ವಿಷಮಾಣಿ ಚ |
ಪಾಣಿಭಿಃ ಪರಿಮಾರ್ಗಂತೋ ಭೀತಾ ವಾಯೋರ್ನಿಲಿಲ್ಯಿರೇ ॥13॥

ಅವರು ತಮ್ಮ ಮಾರ್ಗಕ್ಕೆ ಸಮೀಪದಲ್ಲಿ ಇರುವ ಮರಗಳನ್ನು, ಹುತ್ತಗಳನ್ನು, ಉಬ್ಬುತಗ್ಗಿನ ಪ್ರದೇಶಗಳನ್ನು ಕೈಯಿಂದ ತಡಕಿ ಹುಡುಕುತ್ತಾ ವಾಯುವಿನಿಂದ ಭೀತರಾಗಿ ಅಡಗಿಕೊಂಡರು.
ತತಃ ಕಾರ್ಮುಕಮಾದಾಯ ಭೀಮಸೇನೋ ಮಹಾಬಲಃ |
ಕೃಷ್ಣಾಮಾದಾಯ ಸಂಗಮ್ಯ ತಸ್ಥಾವಾಶ್ರಿತ್ಯ ಪಾದಪಮ್ ॥
ಧರ್ಮರಾಜಶ್ಚ ಧೌಮ್ಯಶ್ಚ ನಿಲಿಲ್ಯಾತೇ ಮಹಾವನೇ ॥14॥
ಆಗ ಮಹಾಬಲನಾದ ಭೀಮಸೇನನು ಬಿಲ್ಲನ್ನು ತೆಗೆದುಕೊಂಡು ದ್ರೌಪದಿಯನ್ನು ಸಮೀಪಿಸಿ ಅವಳನ್ನು ಕರೆದುಕೊಂಡು ಒಂದು ವೃಕ್ಷವನ್ನು ಆಶ್ರಯಿಸಿ ನಿಂತನು. ಧರ್ಮರಾಜ ಮತ್ತು ಧೌಮ್ಯರೂ ಸಹ ಆ ಕಾಡಿನಲ್ಲಿ ಅಡಗಿಕೊಂಡರು.
ಅಗ್ನಿಹೋತ್ರಾಣ್ಯುಪಾದಾಯ ಸಹದೇವಸ್ತು ಪರ್ವತೇ |
ನಕುಲೋ ಬ್ರಾಹ್ಮಣಾಶ್ಚಾನ್ಯೇ ಲೋಮಶಶ್ಚ ಮಹಾತಪಾಃ ॥15॥
ವೃಕ್ಷಾನಾಸಾದ್ಯ ಸಂತ್ರಸ್ತಾಸ್ತತ್ರ ತತ್ರ ನಿಲಿಲ್ಯಿರೇ ॥16॥
ಸಹದೇವನು ಆ ಪರ್ವತದಲ್ಲಿ ಅಗ್ನಿಹೋತ್ರವನ್ನು ಕೈಯಲ್ಲಿ ಹಿಡಿದು ಅಡಗಿಕೊಂಡನು. ಅದರಂತೆ ನಕುಲನು, ಉಳಿದ ಬ್ರಾಹ್ಮಣರು, ಮಹಾತಪಸ್ವಿಗಳಾದ ಲೋಮಶರು ಹೆದರಿ ದೊಡ್ಡ ವೃಕ್ಷಗಳನ್ನು ಸೇರಿ ಅಲ್ಲಿ ಅಡಗಿಕೊಂಡರು.
ಮಂದೀಭೂತೇ ತು ಪವನೇ ತಸ್ಮಿನ್ ರಜಸಿ ಶಾಮ್ಯತಿ |
ಮಹದ್ಭಿಃಪೃಷತ್ಯೈಃ ಓ್ಯರ್ವರ್ಷಮಭ್ಯಾಜಗಾಮ ಹ ॥17॥
ವಾಯುವಿನ ವೇಗವು ಕಡಿಮೆಯಾಗಿ ಧೂಳೆಲ್ಲವೂ ಶಾಂತವಾಗುತ್ತಿರಲು, ದೊಡ್ಡ ಆಲಿಕಲ್ಲುಗಳಿಂದ ಕೂಡಿದ ಪ್ರವಾಹದಂತಿರುವ ಮಳೆಯು ಉಂಟಾಯಿತು.
ಭೃಶಂ ಚಟಚಟಾಶಬ್ದೋ ವಜ್ರಾಣಾಂ ಕ್ಷಿಪ್ಯತಾಮಿವ |
ತತಸ್ತಾಶ್ಚಂಚಲಾಭಾಸಶ್ಚೇರುರಭ್ರೇಷು ವಿದ್ಯುತಃ ॥17.1॥
ಆಗ ವಜ್ರಾಯುಧವನ್ನು ಎಸೆದಂತೆ ದೊಡ್ಡ ಚಟಚಟ ಶಬ್ದವು ಮತ್ತು ಆಕಾಶದಲ್ಲಿ ಚಂಚಲವಾದ ಮಿಂಚುಗಳು ತೋರಿಬಂದವು.
ತತೋಽಶ್ಮಸಹಿತಾ ಧಾರಾಃ ಸಂವೃಣ್ವಂತ್ಯಃ ಸಮಂತತಃ |
ಪ್ರಪೇತುರನಿಶಂ ತತ್ರ ಶೀಘ್ರವಾತಸಮೀರಿತಾಃ ॥18॥
ಅನಂತರ ಆಲಿಕಲ್ಲುಗಳಿಂದ ಸಹಿತವಾದ ಮಳೆಯು ಶೀಘ್ರವಾತದಿಂದ ಪ್ರೇರಿತವಾಗಿ ಎಲ್ಲಕಡೆಯಲ್ಲಿಯೂ ಎಲ್ಲವನ್ನೂ ಆವರಿಸುತ್ತಾ ಸತತವಾಗಿ ಬೀಳಲು ಪ್ರಾರಂಭಿಸಿತು.
ತತ್ರ ಸಾಗರಗಾ ಹ್ಯಾಪಃ ಕೀರ್ಯಮಾಣಾಃ ಸಮಂತತಃ |
ಪ್ರಾದುರಾಸನ್ ಸಕಲುಷಾಃ ಫೇನವತ್ಯೋ ವಿಶಾಂಪತೇ ॥19॥
ಎಲೈ ರಾಜನೇ, ಆ ಚಂಡವಾತದಿಂದ ಸಾಗರದ ನೀರುಗಳು ಹಾರಿಸಲ್ಪಟ್ಟು ಎಲ್ಲಕಡೆಯಲ್ಲಿಯೂ ನೊರೆಯಿಂದ ಕೂಡಿದ ಕಲುಷವಾದ ಆ ನೀರು ಕಾಣಬಂದಿತು.
ವಹಂತ್ಯೋ ವಾರಿ ಬಹುಲಂ ಫೇನೋಡುಪಪರಿಪ್ಲುತಮ್ |
ಪರಿಸಸ್ರುರ್ಮಹಾಶಬ್ದಾಃ ಪ್ರಕರ್ಷಂತ್ಯೋ ಮಹೀರುಹಾನ್ ॥20॥
ಆ ನೀರುಗಳು ಪ್ರವಾಹರೂಪವನ್ನು ಪಡೆದು ಮರಗಳನ್ನು ಎಳೆದುಕೊಂಡು ದೊಡ್ಡ ನೊರೆಗಳೆಂಬ ದೋಣಿಗಳಿಂದ ಆವೃತವಾಗಿ ಮಹಾಶಬ್ದವನ್ನು ಮಾಡುತ್ತಾ ಹರಿಯಲು ಆರಂಭಿಸಿದವು.
ತಸ್ಮಿನ್ನುಪರತೇ ಶಬ್ದೇ ವಾತೇ ಚ ಸಮತಾಂ ಗತೇ |
ಗತೇ ಹ್ಯಂಭಸಿ ನಿಮ್ನಾನಿ ಪ್ರಾದುರ್ಭೂತೇ ದಿವಾಕರೇ ॥
ನಿರ್ಜಗ್ಮುಸ್ತೇ ಶನೈಃ ಸರ್ವೇ ಸಮಾಜಗ್ಮುಶ್ಚ ಭಾರತ |
ಪ್ರತಿಸ್ಥಿರೇ ಪುನರ್ವೀರಾಃ ಪರ್ವತಂ ಗಂಧಮಾದನಮ್ ॥21॥
ಆ ಶಬ್ದವು ಶಾಂತವಾಗಿ ವಾಯುವು ನಿಧಾನವಾಗಿ ಬೀಸುತ್ತಾ ನೀರೆಲ್ಲವೂ ಹರಿದು ಹೋಗಿ ಸೂರ್ಯನು ಉದಯಿಸಿದ ಮೇಲೆ ಅವರೆಲ್ಲರೂ ನಿಧಾನವಾಗಿ ತಮ್ಮ ಸ್ಥಳಗಳಿಂದ ಹೊರಗೆ ಬಂದರು. ಎಲೈ ಭಾರತನೇ, ಆ ವೀರರು ಪುನಃ ಗಂಧಮಾದನ ಪರ್ವತವನ್ನು ಕುರಿತು ತಮ್ಮ ಪ್ರಯಾಣವನ್ನು ಮುಂದುವರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಷಣ್ಣವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಅತೀತ್ಯ ಶರ್ವಶ್ವಶುರಂ ಗಿರಿಂ ತೇ
ಸುವರ್ಣಕೂಟಂ ನಿಷಧಂ ಗಿರಿಂ ಚ |
ಮೇರೋಃ ಪ್ರಾಚ್ಯಾಂ ಗಂಧಮಾದೇ ಗಿರೌ ಚ ಪ್ರಾಪುರ್ಬದರ್ಯಾಶ್ರಮಮುತ್ತಮ್ಂ ಭುವಿ ॥236॥
ಸುವರ್ಣಕೂಟ ನಿಷಧ ಪರ್ವತಗಳನ್ನೂ ದಾಟಿ ಮೇರುವಿಗೆ ಪೂರ್ವದಲ್ಲಿ ಗಂಧಮಾದನ ಪರ್ವತದಲ್ಲಿ ಇರುವ, ಭೂಲೋಕದಲ್ಲಿಯೇ ಉತ್ತಮವಾದ ಇನ್ನೊಂದು ಬದರಿಕಾಶ್ರಮವನ್ನು ಸೇರಿದರು.
ತಸ್ಮಿನ್ ಮುನೀಂದ್ರೈರಭಿಪೂಜ್ಯಮಾನಾ

ನಾರಾಯಣಂ ಪೂಜಯಂತಃ ಸದೈವ |
ಚಕ್ರುಸ್ತಪೋ ಜ್ಞಾನಸಮಾಧಿಯುಕ್ತಂ
ಸುತತ್ತ್ವವಿದ್ಯಾಂ ಪ್ರತಿಪಾದಯಂತಃ ॥238॥
ಆ ಬದರಿಕಾಶ್ರಮದಲ್ಲಿ ಪಾಂಡವರು ಮುನೀಂದ್ರರಿಂದ ಸತ್ಕೃತರಾಗಿ ನರ ಸೋದರನಾದ ನಾರಾಯಣನನ್ನು ಪೂಜಿಸುತ್ತ ಸದಾ ಅಪರೋಕ್ಷಜ್ಞಾನಧ್ಯಾನಗಳಿಂದ ಯುಕ್ತವಾದ ತಪಸ್ಸನ್ನಾಚರಿಸಿದರು. ಶಿಷ್ಯರಿಗೆ ಬ್ರಹ್ಮಸೂತ್ರಾದಿ ಉತ್ತಮ ತತ್ವಜ್ಞಾನವನ್ನೂ ಉಪದೇಶಿಸಿದರು.
* * * *
ನೂರ ನಲವತ್ತೊಂದನೆಯ ಅಧ್ಯಾಯ
ಗಂಧಮಾದನಪರ್ವತಮಾರ್ಗದಲ್ಲಿ ಸುಕುಮಾರಿಯಾದ ದ್ರೌಪದಿಯ ಪತನ. ಪಾಂಡವರಿಂದ ಆಶ್ವಾಸನ. ಧರ್ಮರಾಜನ ವಿಲಾಪ ಮತ್ತು
ಭೀಮಸೇನನ ಪ್ರೋತ್ಸಾಹನ.
ವೈಶಂಪಾಯನಃ
ಕ್ರೋಶಮಾತ್ರಂ ಪ್ರಯಾತೇಷು ಪಾಂಡವೇಷು ಮಹಾತ್ಮಸು |
ಪದ್ಭ್ಯಾಮನುಚಿತಾ ಗಂತುಂ ದ್ರೌಪದೀ ಸಮುಪಾವಿಶತ್ ॥1॥
ವೈಶಂಪಾಯನ ಮಹಾತ್ಮರಾದ ಪಾಂಡವರು ಕೇವಲ ಒಂದು ಕ್ರೋಶಮಾರ್ಗವನ್ನು ನಡೆದುಹೋಗುತ್ತಿರಲು, ಬರಿಗಾಲಿನಲ್ಲಿ ನಡೆಯಲು ಅನರ್ಹಳಾದ ದ್ರೌಪದಿಯು ಒಂದೆಡೆ ನೆಲದ ಮೇಲೆ ಕುಳಿತಳು.
ಶ್ರಾಂತಾ ದುಃಖಪರೀತಾ ಚ ವಾತವರ್ಷೇಣ ತೇನ ಚ |
ಸೌಕುಮಾರ್ಯಾಚ್ಚ ಪಾಂಚಾಲೀ ಸಂಮುಮೋಹ ತಪಸ್ವಿನೀ ॥2॥
ದಣಿದು ವಾತವರ್ಷಗಳಿಂದ ಬಳಲಿ ದುಃಖಭರಿತಳಾಗಿದ್ದ ಸುಕುಮಾರಿಯಾದ ತಪಸ್ವಿನಿಯಾದ ಪಾಂಚಾಲಿಯು ಮೂರ್ಛಾಕ್ರಾಂತಳಾದಳು.
ಸಾ ಕಂಪಮಾನಾ ಮೋಹೇನ ಬಾಹುಭ್ಯಾಮಸಿತೇಕ್ಷಣಾ |
ವೃತ್ತಾಭ್ಯಾಮನುರೂಪಾಭ್ಯಾಮೂರೂ ಸಮವಲಂಬತ ॥3॥
ಕೃಷ್ಣನೇತ್ರೆಯಾದ ಅವಳು ಮೋಹದಿಂದ ನಡುಗುತ್ತಾ ತನ್ನ ವೃತ್ತವಾದ ತೊಡೆಗಳ ಮೇಲೆ ಕೈಯನ್ನಿಟ್ಟು ಸ್ವಲ್ಪ ಆಶ್ರಯವನ್ನು ಪಡೆದಳು.
ಆಲಂಬಮಾನಾ ಸಹಿತಾವೂರೂ ಗಜಕರೋಪಮೌ |
ಪಪಾತ ಸಹಸಾ ಭೂಮೌ ವೇಪಂತೀ ಕದಳೀ ಯಥಾ ॥4॥
ಆನೆಯ ಸೊಂಡಿಲಿನಂತಿದ್ದ ತನ್ನ ತೊಡೆಯನ್ನು ಆಶ್ರಯಿಸಿದರೂ ಕದಳೀ ವೃಕ್ಷದಂತೆ ನಡುಗುತ್ತಾ ತಕ್ಷಣವೇ ಭೂಮಿಯ ಮೇಲೆ ಬಿದ್ದಳು.
ತಾಂ ಪತಂತೀಂ ವರಾರೋಹಾಂ ಭಜ್ಯಮಾನಾಂ ಲತಾಮಿವ |
ನಕುಲಃ ಸಮಭಿದ್ರುತ್ಯ ಪರಿಜಗ್ರಾಹ ವೀರ್ಯವಾನ್ ॥5॥
ಮುರಿದುಹೋದ ಲತೆಯಂತೆ ಭೂಮಿಯ ಮೇಲೆ ಬೀಳುತ್ತಿದ್ದ ಆ ಸುಂದರಿಯನ್ನು ಪರಾಕ್ರಮಶಾಲಿಯಾದ ನಕುಲನು ಓಡಿಬಂದು ಹಿಡಿದುಕೊಂಡನು.
ನಕುಲಃ
ರಾಜನ್ ಪಾಂಚಾಲರಾಜಸ್ಯ ಸುತೇಯಮಸಿತೇಕ್ಷಣಾ |
ಶ್ರಾಂತಾ ನಿಪತಿತಾ ಭೂಮೌ ತಾಮವೇಕ್ಷಸ್ವ ಭಾರತ ॥6॥
ನಕುಲ ಎಲೈ ರಾಜನೇ, ಭಾರತನೇ, ಈ ಅಸಿತೇಕ್ಷಣೆಯಾದ ಸುಂದರಿಯು ಪಾಂಚಾಲರಾಜನ ಮಗಳು. ಅವಳು ದಣಿದು ಭೂಮಿಯ ಮೇಲೆ ಬಿದ್ದಿದ್ದಾಳೆ. ಅವಳನ್ನು ನೋಡು.
ಅದುಃಖಾರ್ಹಾ ಪರಂ ದುಃಖಂ ಪ್ರಾಪ್ತೇಯಂ ಮೃದುಗಾಮಿನೀ |
ಆಶ್ವಾಸಯ ಮಹಾರಾಜ ತಾಮಿಮಾಂ ಶ್ರಮಕರ್ಶಿತಾಮ್ ॥7॥
ದುಃಖಕ್ಕೆ ಯೋಗ್ಯಳಲ್ಲದವಳೂ, ಮೃದುಗಾಮಿನಿಯೂ ಆದ ಇವಳು ಇಂತಹ ದುಃಖವನ್ನು ಹೊಂದಿದ್ದಾಳೆ. ಮಹಾರಾಜನೇ ಶ್ರಮದಿಂದ ಬಳಲಿದ ಇವಳನ್ನು ಸಮಾಧಾನಪಡಿಸು.
ವೈಶಂಪಾಯನಃ
ರಾಜಾ ತು ವಚನಾತ್ ತಸ್ಯ ಭೃಶಂ ದುಃಖಸಮನ್ವಿತಃ |
ಭೀಮಶ್ಚ ಸಹದೇವಶ್ಚ ಸಹಸಾ ಸಮುಪಾದ್ರವನ್ ॥8॥
ವೈಶಂಪಾಯನ ರಾಜನಾದರೂ ನಕುಲನ ಮಾತುಗಳಿಂದ ಬಹಳ ದುಃಖದಿಂದ ಕೂಡಿದವನಾದನು. ಭೀಮ ಮತ್ತು ಸಹದೇವರು ಬೇಗ ಓಡಿಬಂದರು.
ತಾಮವೇಕ್ಷ್ಯ ತು ಕೌಂತೇಯೋ ವಿವರ್ಣವದನಾಂ ಕೃಶಾಮ್ |
ಅಂಕಮಾನೀಯ ಧರ್ಮಾತ್ಮಾ ಪರ್ಯದೇವಯದಾತುರಃ ॥9॥
ಕೌಂತೇಯನಾದ ಧರ್ಮಾತ್ಮನಾದ ಯುಧಿಷ್ಠಿರನು ಅವಳನ್ನು ನೋಡಿ ಕಾಂತಿಹೀನಳೂ, ಕೃಶಳೂ ಆದ ಅವಳನ್ನು ತೊಡೆಯ ಮೇಲೆ ಮಲಗಿಸಿಕೊಂಡು ಆತುರನಾಗಿ ಗೋಳಾಡಿದನು.

ಯುಧಿಷ್ಠಿರಃ
ಕಥಂ ವೇಶ್ಮಸು ಗುಪ್ತೇಷು ಸ್ವಾಸ್ತೀರ್ಣಶಯನೋಚಿತಾ |
ಭೂಮೌ ನಿಪತಿತಾ ಶೇತೇ ಸುಖಾರ್ಹಾ ವರವರ್ಣಿನೀ ||10||
ಯುಧಿಷ್ಠಿರ ಸೈನಿಕರಿಂದ ರಕ್ಷಿತಳಾದ ಗೃಹಗಳಲ್ಲಿ ಒಳ್ಳೆಯ ಆಸ್ತರ್ಣಗಳನ್ನು ಹೊಂದಿದ ಹಾಸಿಗೆಯ ಮೇಲೆ ಮಲಗಿ ಸುಖವನ್ನು ಪಡಬೇಕಾದ ಈ ಸುಂದರಿಯು ಹೇಗೆ ಭೂಮಿಯ ಮೇಲೆ ಬಿದ್ದಿದ್ದಾಳೆ!
ಸುಕುಮಾರೌ ಕಥಂ ಪಾದೌ ಮುಖಂ ಚ ಕಮಲಪ್ರಭಮ್ |
ಮತ್ಕೃತೇಽದ್ಯ ವರಾರ್ಹಾಯಾಃ ಶ್ಯಾಮತಾಂ ಸಮುಪಾಗತಮ್ ||11||
ಅವಳ ಪಾದಗಳು ಎಷ್ಟು ಕೋಮಲವಾಗಿವೆ? ಕಮಲದಂತಿರುವ ಈ ಸುಂದರಿಯ ಮುಖವು ನನ್ನ ನಿಮಿತ್ತದಿಂದಾಗಿ ಈ ದಿನ ಕಪ್ಪಾಗಿಹೋಗಿದೆ.
ಕಿಮಿದಂ ದ್ಯೂತಕಾಮೇನ ಮಯಾ ಕೃತಮಬುದ್ಧಿನಾ |
ಆದಾಯ ಕೃಷ್ಣಾಂ ಚರತಾ ವನೇ ಮೃಗಗಣಾಯುತೇ ||12||
ದ್ರೌಪದಿಯನ್ನು ಕರೆದುಕೊಂಡು ಮೃಗಗಣಗಳಿಂದ ಕೂಡಿದ ಕಾಡಿನಲ್ಲಿ ಸಂಚರಿಸುವ ನಾನು ದ್ಯೂತಕಾಮನಾಗಿ ಬುದ್ಧಿಯಿಲ್ಲದೆ ಎಂತಹ ಕೆಲಸವನ್ನು ಮಾಡಿದೆ!
ಸುಖಂ ಪ್ರಾಪ್ಸ್ಯಸಿ ಕಲ್ಯಾಣಿ ಪಾಂಡವಾನ್ ಪ್ರಾಪ್ಯ ವೈ ಪತೀನ್ |
ಇತಿ ದ್ರುಪದರಾಜೇನ ಪಿತ್ರಾ ದತ್ತಾಽಽಯತೇಕ್ಷಣಾ ||13||
ಕಲ್ಯಾಣಿಯೇ, ನೀನು ಪಾಂಡವರನ್ನು ಪತಿಗಳನ್ನಾಗಿ ಪಡೆದು ಸುಖವನ್ನು ಅನುಭವಿಸುವಿ ಎಂದು ಹೇಳಿ ತಂದೆಯಾದ ದ್ರುಪದರಾಜನು ಈ ಸುಂದರಿಯನ್ನು ನಮಗೆ ಕೊಟ್ಟನು.
ತತ್ಸರ್ವಮನವಾಪ್ಯೇಯಂ ಶ್ರಮಶೋಕಾಧ್ವಕರ್ಶಿತಾ |
ಶೇತೇ ನಿಪತಿತಾ ಭೂಮೌ ಪಾಪಸ್ಯ ಮಮ ಕರ್ಮಭಿಃ||14||
ಅಂತಹ ಯಾವ ಸುಖವನ್ನೂ ಕಾಣದೆ ಈ ಸುಂದರಿಯು ಶ್ರಮದಿಂದಲೂ, ಶೋಕದಿಂದಲೂ ಮತ್ತು ಮಾರ್ಗದಿಂದಲೂ ಕರ್ಶಿತಳಾಗಿ ಪಾಪಿಯಾದ ನನ್ನ ದುಷ್ಕರ್ಮಗಳಿಂದ ಭೂಮಿಯ ಮೇಲೆ ಬಿದ್ದು ಮಲಗಿದ್ದಾಳೆ.
ವೈಶಂಪಾಯನಃ
ತಥಾ ಲಾಲಪ್ಯಮಾನೇ ತು ಧರ್ಮರಾಜೇ ಯುಧಿಷ್ಠಿರೇ |
ಧೌಮ್ಯಪ್ರಭೃತಯಃ ಸರ್ವೇ ತತ್ರಾಜಗ್ಮುರ್ದ್ವಿಜೋತ್ತಮಾಃ ||15||
ವೈಶಂಪಾಯನ ಧರ್ಮರಾಜನಾದ ಯುಧಿಷ್ಠಿರನು ಹೀಗೆ ವಿಲಾಪವನ್ನು ಮಾಡುತ್ತಿರಲು ಧೌಮ್ಯ ಮೊದಲಾದ ಬ್ರಾಹ್ಮಣಶ್ರೇಷ್ಠರೆಲ್ಲರೂ ಅಲ್ಲಿಗೆ ಬಂದರು.
ತೇ ಸಮಾಶ್ವಾಸಯಾಮಾಸುರಾಶೀರ್ಭಿಶ್ಚಾಪ್ಯಪೂಜಯನ್ |
ರಕ್ಷೋಘ್ನಾಂಶ್ಚ ತಥಾ ಮಂತ್ರಾನ್ ಜೇಪುಶ್ಚಕ್ರುಶ್ಚ ತೇ ಕ್ರಿಯಾಃ ||16||
ಅವರು ದ್ರೌಪದಿಯನ್ನು ಸಮಾಧಾನಪಡಿಸಿ ತಮ್ಮ ಆಶೀರ್ವಾದಗಳಿಂದ ಅವಳನ್ನು ಸತ್ಕರಿಸಿದರು. ಅವರು ರಕ್ಷೋಘ್ನಮಂತ್ರಗಳನ್ನು ಜಪಿಸಿ ಅವಳಿಗೆ ಉಚಿತವಾದ ಕ್ರಿಯೆಗಳನ್ನು ಮಾಡಿದರು.
ಪಠ್ಯಮಾನೇಷು ಮಂತ್ರೇಷು ಶಾಂತ್ಯರ್ಥಂ ಪರಮರ್ಷಿಭಿಃ |
ಸ್ಪೃಶ್ಯಮಾನಾ ಕರೈಃ ಶೀತೈಃ ಪಾಂಡವೈಶ್ಚ ಮುಹುರ್ಮುಹುಃ ||17||
ಸೇವ್ಯಮಾನಾ ಚ ಶೀತೇನ ಜಲಮಿಶ್ರೇಣ ವಾಯುನಾ |
ಪಾಂಚಾಲೀ ಸುಖಮಾಸಾದ್ಯ ಲೇಭೇ ಚೇತಃ ಶನೈಃ ಶನೈಃ ||18||
ಆ ಶ್ರೇಷ್ಠರಾದ ಋಷಿಗಳು ಶಾಂತಿಮಂತ್ರಗಳನ್ನು ಜಪಿಸುತ್ತಿರಲು ಮತ್ತು ಪಾಂಡವರು ತಮ್ಮ ಶೀತಲವಾದ ಹಸ್ತಗಳಿಂದ ಅವಳನ್ನು ಮತ್ತೆ ಮತ್ತೆ ನೇವರಿಸುತ್ತಿರಲು ಮತ್ತು ಜಲಮಿಶ್ರಿತವಾಯುವು ನಿಧಾನವಾಗಿ ಬೀಸುತ್ತಿರಲು ಪಾಂಚಾಲಿಯು ಮೆಲ್ಲಮೆಲ್ಲನೆ ಸ್ವಲ್ಪ ಸುಖವನ್ನು ಹೊಂದಿ ಮರಳಿ ಸಂಜ್ಞೆಯನ್ನು ಪಡೆದಳು.
ಪರಿಗೃಹ್ಯ ಚ ತಾಂ ದೀನಾಂ ಕೃಷ್ಣಾಮಜಿನಸಂಸ್ತರೇ |
ಪಾರ್ಥಾ ವಿಶ್ರಾಮಯಾಮಾಸುರ್ಲಬ್ಧಸಂಜ್ಞಾಂ ತಪಸ್ವಿನೀಮ್ ||19||
ಶೋಚನೀಯಳಾದ, ದೀನಳಾದ ದ್ರೌಪದಿಯು ಮರಳಿ ಸಂಜ್ಞೆಯನ್ನು ಪಡೆಯುತ್ತಿರಲು, ಪಾಂಡವರು ಒಂದು ಕೃಷ್ಣಾಜಿನ ಚಾಪೆಯ ಮೇಲೆ ಅವಳನ್ನು ಮಲಗಿಸಿದರು.
ತಸ್ಯಾ ಯಮೌ ರಕ್ತತಳೌ ಪಾದೌ ಪೂಜಿತಲಕ್ಷಣೌ |
ಕರಾಭ್ಯಾಂ ಕಿಣಜಾತಾಭ್ಯಾಂ ಶನಕೈಃ ಸಂವವಾಹತುಃ ||20||
ನಕುಲಸಹದೇವರು ಜಡ್ಡುಕಟ್ಟಿದ ತಮ್ಮಕೈಗಳಿಂದ ಅವಳ ರಕ್ತತಳಗಳುಳ್ಳ ಲಕ್ಷಣೋಪೇತವಾದ ಸುಕೋಮಲವಾದ ಪಾದಗಳನ್ನು ಮೆಲ್ಲನೆ ಒತ್ತಿದರು.
ಪರ್ಯಾಶ್ವಾಸಯದಪ್ಯೇನಾಂ ಧರ್ಮರಾಜೋ ಯುಧಿಷ್ಠಿರಃ |
ಉವಾಚ ಚ ಕುರುಶ್ರೇಷ್ಠೋ ಭೀಮಸೇನಮಿದಂ ವಚಃ ||21||
ಧರ್ಮರಾಜನಾದ ಯುಧಿಷ್ಠಿರನು ಅವಳನ್ನು ಸಮಾಧಾನಪಡಿಸಿದನು. ಕುರುಶ್ರೇಷ್ಠನಾದ ಅವನು ಭೀಮಸೇನನನ್ನು ಕುರಿತು ಹೀಗೆ ಮಾತನಾಡಿದನು.
ಬಹವಃ ಪರ್ವತಾ ಭೀಮ ವಿಷಮಾ ಹಿಮದುರ್ಗಮಾಃ |

ತೇಷು ಕೃಷ್ಣಾ ಮಹಾಬಾಹೋ ಕಥಂ ನು ವಿಚರಿಷ್ಯತಿ ॥22॥
ಭೀಮನೇ, ಅನೇಕ ಪರ್ವತಗಳು ವಿಷಮವಾಗಿದ್ದು, ಹಿಮಪಾತದಿಂದ ದುರ್ಗಮಗಳಾಗಿವೆ. ಮಹಾಬಾಹುವೇ, ದ್ರೌಪದಿಯು ಅಲ್ಲಿ ಹೇಗೆ ನಡೆಯುತ್ತಾಳೆ?
ತ್ವಾಂ ರಾಜನ್ ರಾಜಪುತ್ರೀಂ ಚ ಯವೌ ಚ ಪುರುಷರ್ಷಭ |
ಸ್ವಯಂ ನೇಷ್ಯಾಮಿ ರಾಜೇಂದ್ರ ಮಾ ವಿಷಾದೇ ಮನಃ ಕೃಥಾಃ ॥23॥
ಹೈಡಿಂಬಶ್ಚ ಮಹಾವೀರ್ಯೋ ವಿಹಗೋ ಮದ್ವಲೋಪಮಃ |
ವಹೇದನಘ ಸರ್ವಾನ್ ನೋ ವಚನಾತ್ ತೇ ಘಟೋತ್ಕಚಃ ॥24॥
ಭೀಮಸೇನ ಎಲೈ ರಾಜನೇ, ಪುರುಷಶ್ರೇಷ್ಠನೇ, ನಾನು ನಿನ್ನನ್ನೂ, ಈ ರಾಜಕುಮಾರಿಯನ್ನೂ, ನಕುಲಸಹದೇವರನ್ನೂ ಒಬ್ಬನೇ ಎತ್ತಿಕೊಂಡು ಹೋಗುವೆನು. ರಾಜೇಂದ್ರನೇ, ಮನಸ್ಸಿಗೆ ವಿಷಾದವನ್ನು ತಂದುಕೊಳ್ಳಬೇಡ. ಹಿಡಿಂಬೆಯ ಮಗನಾದ ಘಟೋತ್ಕಚನು ನನಗೆ ಸಮನಾದ ಬಲವುಳ್ಳವನು. ಅವನು ಮಹಾವೀರ್ಯನೂ, ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವನ್ನು ಹೊಂದಿದವನೂ ಆಗಿದ್ದಾನೆ. ಎಲೈ ಅನಘನೇ, ಅವನು ನಿನ್ನ ಆದೇಶದಂತೆ ನಮ್ಮೆಲ್ಲರನ್ನೂ ಎತ್ತಿಕೊಂಡು ಹೋಗಲು ಸಮರ್ಥನಾಗಿದ್ದಾನೆ.
ಏತಚ್ಛ್ರುತ್ವಾ ತು ವಚನಂ ಭೀಮಸೇನಸ್ಯ ಧರ್ಮರಾಟ್ |
ಭೀಮಂ ಸಂಪೂಜಯಂಸ್ತುಷ್ಟ ಏವಮಸ್ತ್ವಿತ್ಯಭಾಷತ ॥24.1॥
ಭೀಮಸೇನನ ಈ ಮಾತುಗಳನ್ನು ಕೇಳಿದ ಧರ್ಮರಾಜನು ಸಂತೋಷದಿಂದ ಭೀಮನನ್ನು ಪೂಜಿಸುತ್ತಾ ಹಾಗೆಯೇ ಆಗಲಿ ಎಂದು ಹೇಳಿದನು.
ಸೋನುಜ್ಞಾತೋ ಧರ್ಮರಾಜ್ಞಾ ಪುತ್ರಂ ಸಸ್ಮಾರ ರಾಕ್ಷಸಮ್ |
ಘಟೋತ್ಕಚಶ್ಚ ಧರ್ಮಾತ್ಮಾ ಸ್ಮೃತಮಾತ್ರಃ ಪಿತೄನ್ತದಾ ॥24.2॥
ಕೃತಾಂಜಲಿರುಪಾತಿಷ್ಠದಭಿವಾದ್ಯ ಚ ಪಾಂಡವಾನ್ |
ಬ್ರಾಹ್ಮಣಾಂಶ್ಚ ಮಹಾಬಾಹುಃ ಸರ್ವಂ ಕರ್ತಾಸ್ಮ್ಯಸಂಶಯಃ |
ತಚ್ಛ್ರುತ್ವಾ ಭೀಮಸೇನಸ್ತು ರಾಕ್ಷಸಂ ಪರಿಷಸ್ವಜೇ ॥24.3॥
ಧರ್ಮರಾಜನ ಅನುಮತಿಯನ್ನು ಪಡೆದು ಭೀಮಸೇನನು ತನ್ನ ರಾಕ್ಷಸಪುತ್ರನನ್ನು ಸ್ಮರಿಸಿದನು. ಹಾಗೆ ಸ್ಮರಿಸಿದ ತಕ್ಷಣವೇ ಮಹಾಬಾಹುವಾದ ಧರ್ಮಾತ್ಮನಾದ ಘಟೋತ್ಕಚನು ಬಂದು ಪಿತೃಗಳಾದ ಪಾಂಡವರಿಗೂ ಮತ್ತು ಬ್ರಾಹ್ಮಣರಿಗೂ ಕೈಗಳನ್ನು ಮುಗಿದು ನಮಸ್ಕರಿಸಿ ನೀವು ಹೇಳಿದುದೆಲ್ಲವನ್ನೂ ನಿಸ್ಸಂಶಯವಾಗಿ ಮಾಡುವೆನು ಎಂದು ಹೇಳಿದನು. ಆ ಮಾತನ್ನು ಕೇಳಿದ ಭೀಮಸೇನನು ಪುತ್ರನಾದ ಘಟೋತ್ಕಚನನ್ನು ಆಲಿಂಗಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಸಪ್ತನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಕ್ರಮೇಣ ಪಾರ್ಥಾ ಅಪಿ ಶೈಶಿರಂ ಗಿರಿಂ
ಸಮಾಸದಂಸ್ತತ್ರ ಕೃಷ್ಣಾಂ ಸುದುರ್ಗೇ |
ವಿಷಜ್ಜಂತೀಮೀಕ್ಷ್ಯ ತೈಃ ಸಂಸ್ಮೃತೋಽಥ
ಹೈಡಿಂಬ ಆಯಾತ್ ಸಹಿತೋ ನಿಶಾಚರೈಃ ॥265॥
ಪಾಂಡವರು ಕ್ರಮವಾಗಿ ಹಿಮಾಲಯ ಪರ್ವತವನ್ನು ಸೇರಿದರು. ಅಲ್ಲಿ ಬಹಳ ದುರ್ಗಮವಾದ ದಾರಿಯಲ್ಲಿ ದ್ರೌಪದಿ ಅಶಕ್ತಿಯಿಂದ ಬಳಲಿದಂತೆ ತೋರಿಕೊಂಡಳು. ಅದನ್ನು ಕಂಡು ಪಾಂಡವರು ಘಟೋತ್ಕಚನನ್ನು ಸ್ಮರಿಸಿದರು. ಒಡನೆ ಅವನು ರಾಕ್ಷಸರ ಸಮೇತ ಬಂದ.
ಉವಾಹ ಕೃಷ್ಣಾಂ ಸ ತು ತಸ್ಯ ಭೃತ್ಯಾ ಊಹುಃ
ಪಾರ್ಥಾಸ್ತೇ ಬದರ್ಯಾಶ್ರಮಂ ಚ |
ಪ್ರಾಪ್ಯಾತ್ರ ನಾರಾಯಣಪೂಜಯಾ
ಕೃತಸ್ವಕೀಯಕಾರ್ಯಾ ಯಯುರುತ್ತರಾಂ ದಿಶಮ್ ॥266॥
ಘಟೋತ್ಕಚ ದ್ರೌಪದಿಯನ್ನು ಹೊತ್ತುಕೊಂಡ. ಅವನ ಭೃತ್ಯರು ಪಾಂಡವರನ್ನು ಹೊತ್ತರು. ಅವರು ಬದರಿಕಾಶ್ರಮವನ್ನು ಸೇರಿ ನಾರಾಯಣನ ಆರಾಧನಾ ರೂಪವಾಗಿ ತಮಗೆ ವಿಹಿತವಾದ ಪಿತೃಶ್ರಾದ್ಧಾದಿ ಕರ್ಮಗಳನ್ನು ಮಾಡಿ ಹಿಮಾಲಯವನ್ನೂ ದಾಟಿ ಇನ್ನೂ ಉತ್ತರದಿಕ್ಕಿಗೆ ಹೋದರು.
* * * *
ನೂರ ನಲವತ್ತೆರಡನೆಯ ಅಧ್ಯಾಯ
ಭೀಮಸೇನನು ಸ್ಮರಣೆಮಾಡಿದ ತಕ್ಷಣ ಘಟೋತ್ಕಚನ ಆಗಮನ.
ಅವನಿಂದ ಮತ್ತು ರಾಕ್ಷಸರಿಂದ ದ್ರೌಪದಿಯ ಮತ್ತು ವಿಪ್ರರ ವಹನ. ನರನಾರಾಯಣಾಶ್ರಮ ಪ್ರಾಪ್ತಿ.
ಯುಧಿಷ್ಠಿರ
ಧರ್ಮಜ್ಞೋ ಬಲವಾನ್ ಶೂರಃ ಸತ್ಯೋ ರಾಕ್ಷಸಪುಂಗವಃ |

ಭಕ್ತೋಽಸ್ಮಾನೌರಸಃ ಪುತ್ರೌ ನೇತುಮರ್ಹತಿ ಮಾತರಮ್ ॥1॥
ತವ ಭೀಮ ಸುತೇನಾಹಂ ನೀತೋ ಭೀಮಪರಾಕ್ರಮ |
ಅಕ್ಷತಃ ಸಹ ಪಾಂಚಾಲ್ಯಾ ಗಚ್ಛೇಯಂ ಗಂಧಮಾದನಮ್ ॥2॥
ಎಲೈ ಭೀಮಸೇನನೇ, ಧರ್ಮಜ್ಞನೂ ಬಲಿಷ್ಠನೂ, ಶೂರನೂ, ಸತ್ಯವಂತನೂ, ನಮ್ಮಲ್ಲಿ ಭಕ್ತಿಯುಳ್ಳವನೂ ಆದ ನಿನ್ನ ಔರಸಪುತ್ರನಾದ, ರಾಕ್ಷಸಶ್ರೇಷ್ಠನಾದ ಘಟೋತ್ಕಚನು ತಾಯಿಯಾದ ದ್ರೌಪದಿಯನ್ನು ಎತ್ತಿಕೊಂಡು ಹೋಗಲು ಸಮರ್ಥನಾಗಿದ್ದಾನೆ. ಎಲೈ ಭಯಂಕರ ಪರಾಕ್ರಮಶಾಲಿಯೇ, ನಾನು ನಿನ್ನ ಮಗನಿಂದ ಕರೆದೊಯ್ಯಲ್ಪಟ್ಟು ಯಾವ ಘಾಸಿಯನ್ನೂ ಹೊಂದದೆ ಪಾಂಚಾಲಿಯ ಜೊತೆಯಲ್ಲಿ ಗಂಧಮಾದನವನ್ನು ಸೇರುವೆನು.
ವೈಶಂಪಾಯನಃ
ಭ್ರಾತುರ್ವಚನಮಾಜ್ಞಾಯ ಭೀಮಸೇನೋ ಘಟೋತ್ಕಚಮ್ |
ಚಿಂತಯಾಮಾಸ ಬಲವಾನ್ ಮಹಾಬಲಪರಾಕ್ರಮಮ್ ॥3॥
ವೈಶಂಪಾಯನ ಮಹಾಬಲಿಷ್ಠನಾದ ಭೀಮಸೇನನು ಅಣ್ಣನ ಮಾತುಗಳನ್ನು ತಿಳಿದು ಮಹಾಬಲಪರಾಕ್ರಮವುಳ್ಳ ಘಟೋತ್ಕಚನನ್ನು ಸ್ಮರಿಸಿದನು.
ಘಟೋತ್ಕಚಶ್ಚ ಧರ್ಮಾತ್ಮಾ ಸ್ಮೃತಮಾತ್ರಃ ಪಿತುಸ್ತದಾ |
ಕೃತಾಂಜಲಿರುಪಾತಿಷ್ಠದಭಿವಾದ್ಯಾಥ ಪಾಂಡವಾನ್ ॥4॥
ಧರ್ಮಾತ್ಮನಾದ ಘಟೋತ್ಕಚನಾದರೂ ತಂದೆಯು ಸ್ಮರಣೆ ಮಾಡಿದ ತಕ್ಷಣವೇ ಎದುರಿಗೆ ಬಂದು ಪಾಂಡವರಿಗೆ ಅಭಿವಂದಿಸಿ ನಿಂತುಕೊಂಡನು.
ಉವಾಚ ಭೀಮಸೇನಂ ಸ ಪಿತರಂ ಸತ್ಯವಿಕ್ರಮಃ |
ಆಜ್ಞಾಪಯ ಮಹಾಬಾಹೋ ಸರ್ವಂ ಕರ್ತಾಸ್ಮ್ಯಸಂಶಯಮ್ ॥5॥
ಸತ್ಯವಿಕ್ರಮನಾದ ಅವನು ತಂದೆಯಾದ ಭೀಮಸೇನನನ್ನು ಕುರಿತು ಮಹಾಬಾಹುವೇ ಅಪ್ಪಣೆಯನ್ನು ಮಾಡು. ನಾನು ನಿನ್ನ ಅಪ್ಪಣೆಯನ್ನು ನಿಸ್ಸಂಶಯವಾಗಿ ನೆರವೇರಿಸುವೆನು ಎಂದು ಹೇಳಿದನು.
ವೈಶಂಪಾಯನಃ
ತಚ್ಛ್ರುತ್ವಾ ಭೀಮಸೇನಸ್ತು ರಾಕ್ಷಸಂ ಪರಿಷಸ್ವಜೇ |
ಚಿಂತಯಾ ಸಮನುಪ್ರಾಪ್ತಮಿತ್ಯುವಾಚ ವೃಕೋದರಃ ॥6॥
ವೈಶಂಪಾಯನ ಅದನ್ನು ಕೇಳಿದ ಭೀಮಸೇನನಾದರೂ ಘಟೋತ್ಕಚನನ್ನು ಆಲಂಗಿಸಿದನು. ತಾನು ಚಿಂತಿಸಿದ ತಕ್ಷಣವೇ ಸಂಪ್ರಾಪ್ತನಾದ ಅವನನ್ನು ಕುರಿತು ವೃಕೋದರನು ಹೀಗೆ ಹೇಳಿದನು;
ಹೈಡಿಂಬೇಯ ಪರಿಶ್ರಾಂತಾ ತವ ಮಾತಾಽಪರಾಜಿತ |
ತ್ವಂ ಚ ಕಾಮಗಮಸ್ತಾತ ಬಲವಾನ್ ವಹ ತಾಂ ಖಗ ॥7॥
ಹಿಂಡಿಬಾ ಪುತ್ರನೇ, ಅಪರಾಜಿತಳಾದ ನಿನ್ನ ತಾಯಿಯು ತುಂಬಾ ದಣಿದಿದ್ದಾಳೆ. ನೀನಾದರೋ ಇಚ್ಛಾಸಂಚಾರಿಯಾಗಿ ಆಕಾಶದಲ್ಲಿಯೂ ಹೋಗುವವನಾಗಿ ಬಲಿಷ್ಠನಾಗಿದ್ದೀಯೆ. ಅವಳನ್ನು ಎತಿತಕೊಂಡು ಬಾ.
ಸ್ಕಂಧಮಾರೋಪ್ಯ ಭದ್ರಂ ತೇ ಮಧ್ಯೇಽಸ್ಮಾಕಂ ವಿಹಾಯಸಾ |
ಗಚ್ಛ ನೀಚಿಕಯಾ ಗತ್ಯಾ ಯಥಾ ಚೈನಾಂ ನ ಪೀಡಯೇಃ ॥8॥
ನಿನಗೆ ಮಂಗಳವಾಗಲಿ. ಅವಳನ್ನು ನಿನ್ನ ಹೆಗಲಿನ ಮೇಲೆ ಕೂಡಿಸಿಕೊಂಡು ನಮ್ಮ ಮಧ್ಯದಲ್ಲಿ ಅವಳಿಗೆ ತೊಂದರೆಯಾಗದಂತೆ ಆಕಾಶದಲ್ಲಿ ಕೆಳಗಿನ ಮಟ್ಟದಲ್ಲಿಯೇ ಎತ್ತಿಕೊಂಡು ನಿಧಾನವಾಗಿ ಹೋಗು.
ಘಟೋತ್ಕಚಃ
ಧರ್ಮರಾಜಂ ಚ ಧೌಮ್ಯಂ ಚ ಕೃಷ್ಣಾಂ ಚ ಯಮಜೌ ತಥಾ |
ಏಕೋಪ್ಯಹಮಲಂ ವೋಢುಂ ಕಿಮುತಾದ್ಯ ಸಹಾಯವಾನ್ |
ಮಂದಂಮಂದಂ ಗಮಿಷ್ಯಾಮಿ ವಹನ್ ದ್ರುಪದನಂದಿನೀಮ್ ॥9॥
ಘಟೋತ್ಕಚ ನಾನೊಬ್ಬನೇ ಧರ್ಮರಾಜನನ್ನು, ಧೌಮ್ಯರನ್ನು, ದ್ರೌಪದಿಯನ್ನು ಮತ್ತು ನಕುಲ-ಸಹದೇವರನ್ನು ಎತ್ತಿಕೊಂಡು ಹೋಗಲು ಸಮರ್ಥನಾಗಿದ್ದೇನೆ. ಇನ್ನು ಈ ದಿನ ಪರಿವಾರದ ಜೊತೆಯಲ್ಲಿ ಬಂದಿರುವ ನನಗೆ ಹೇಳತಕ್ಕದ್ದೇನಿದೆ? ದ್ರುಪದನಂದಿನಿಯನ್ನು ಎತ್ತಿಕೊಂಡು ನಿಧಾನಗತಿಯಿಂದ ಚಲಿಸುವೆನು.
ಅನ್ಯೇ ಚ ಶತಶಃ ಶೂರಾ ವಿಹಂಗಾಃ ಕಾಮರೂಪಿಣಃ |
ಸರ್ವಾನ್ವೋ ಬ್ರಾಹ್ಮಣೈಃ ಸಾರ್ಧಂ ವಕ್ಷ್ಯಂತಿ ಸಹಿತಾನಥ ॥9.1॥
ನನ್ನ ಜೊತೆಯಲ್ಲಿ ಇರುವ ಶೂರರೂ, ಕಾಮರೂಪಿಗಳೂ, ಆಕಾಶಸಂಚಲನಾ ಶೀಲರೂ ಆದ ನೂರಾರು ರಾಕ್ಷಸರು ಬ್ರಾಹ್ಮಣರನ್ನೂ ಮತ್ತು ನಿಮ್ಮೆಲ್ಲರನ್ನೂ ಎತ್ತಿಕೊಂಡು ಹೋಗುವರು.
ವೈಶಂಪಾಯನಃ
ಏವಮುಕತ್ವ ತತಃ ಕೃಷ್ಣಾಮುವಾಹ ಸ ಘಟೋತ್ಕಚಃ |
ಪಾಂಡೂನಾಂ ಮಧ್ಯಗೋ ವೀರಃ ಪಾಂಡವಾನಪಿ ಚಾಪರೇ ॥10॥
ವೈಶಂಪಾಯನ ಹೀಗೆ ಹೇಳಿ ಘಟೋತ್ಕಚನು ಆಗ ದ್ರೌಪದಿಯನ್ನು ಎತ್ತಿಕೊಂಡು ಪಾಂಡವರ ಮಧ್ಯದಲ್ಲಿ (ಆಕಾಶದಲ್ಲಿ) ಹೊರಟನು. ಉಳಿದ ರಾಕ್ಷಸರು ಪಾಂಡವರನ್ನು ಎತ್ತಿಕೊಂಡರು.
ಲೋಮಶಃ ಸಿದ್ಧಮಾರ್ಗೇಣ ಜಗಾಮಾನುಪಮದ್ಯುತಿಃ |

ಸ್ವೇನೈವ ಸ ಪ್ರಭಾವೇಣ ದ್ವಿತೀಯ ಇವ ಭಾಸ್ಕರಃ ॥11॥
ಅನುಪಮಕಾಂತಿಯುಕ್ತರಾದ ಲೋಮಶರು ತಮ್ಮ ಪ್ರಭಾವದಿಂದಲೇ ಎರಡನೆಯ ಸೂರ್ಯನಂತೆ ಸಿದ್ಧಮಾರ್ಗದಲ್ಲಿ (ಆಕಾಶದಲ್ಲಿ) ಹೊರಟರು.
ಬ್ರಾಹ್ಮಣಾಂಶ್ಚಾಪಿ ತಾನ್ ಸರ್ವಾನ್ ಸಮುಪಾದಾಯ ರಾಕ್ಷಸಾಃ।
ನಿಯೋಗಾದ್ ರಾಕ್ಷಸೇಂದ್ರಸ್ಯ ಜಗ್ಮುರ್ಭೀಮಪರಾಕ್ರಮಾಃ ॥12॥
ಭೀಮಪರಾಕ್ರಮವುಳ್ಳ ಆ ರಾಕ್ಷಸರೆಲ್ಲರೂ ಘಟೋತ್ಕಚನ ಅಪ್ಪಣೆಯಂತೆ ಆ ಬ್ರಾಹ್ಮಣರೆಲ್ಲರನ್ನೂ ಎತ್ತಿಕೊಂಡು ಹೊರಟರು.
ಏವಂ ಸುರಮಣೀಯಾನಿ ವನಾನ್ಯುಪವನಾನಿ ಚ।
ಆಲೋಕಯಂತಸ್ತೇ ಜಗ್ಮುರ್ವಿಶಾಲಾಂ ಬದರೀಂ ಪ್ರತಿ ॥13॥
ಹೀಗೆ ಅವರು ಅತ್ಯಂತ ಮನೋಹರವಾದ ವನಗಳನ್ನು ಮತ್ತು ಉಪವನಗಳನ್ನು ನೋಡುತ್ತಾ ವಿಶಾಲಾ ಬದರಿಯನ್ನು ತಲುಪಿದರು.
ತೇ ತ್ವಾಶುಗತಿಭಿರ್ವೀರಾ ರಾಕ್ಷಸೈಸ್ತೈರ್ಮಹಾಜವೈಃ।
ಉಹ್ಯಮಾನಾ ಯಯುಃ ಶೀಘ್ರಂ ದೀರ್ಘಮಧ್ವಾನಮಲ್ಪವತ್ ॥14॥
ಮಹಾವೇಗವುಳ್ಳ ಮತ್ತು ಶೀಘ್ರಗಮನವುಳ್ಳ ರಾಕ್ಷಸರಿಂದ ಒಯ್ಯಲ್ಪಟ್ಟವರಾಗಿ ಆ ವೀರರೆಲ್ಲರೂ ದೀರ್ಘವಾದ ಮಾರ್ಗವನ್ನು ಅಲ್ಪಮಾರ್ಗವೆಂಬಂತೆ ಶೀಘ್ರವಾಗಿ ದಾಟಿದರು.
ದೇಶಾನ್ ಮ್ಲೇಚ್ಛಜನಾಕೀರ್ಣಾನ್ ನಾನಾರತ್ನಾಕರಾಯುತಾನ್।
ದದೃಶುರ್ಗಿರಿಪಾದಾಂಶ್ಚ ನಾನಾಧಾತುಸಮಾಚಿತಾನ್ ॥15॥
ಅವರು ಹೀಗೆ ಹೋಗುತ್ತಾ ಮ್ಲೇಚ್ಛಜನರಿಂದ ತುಂಬಿದ ದೇಶಗಳನ್ನೂ, ನಾನಾ ರತ್ನಾಕರಗಳಿಂದ ಕೂಡಿದ ನಾನಾಧಾತುಗಳಿಂದ ವಿಚಿತ್ರವಾದ ಪರ್ವತದ ತಪ್ಪಲು ಪ್ರದೇಶಗಳನ್ನೂ ನೋಡಿದರು.
ಆಸೇವಿತಾನ್ ಕಿಂಪುರುಷೈರ್ಗಂಧರ್ವೈಶ್ಚ ಸಮಂತತಃ।
ವಿದ್ಯಾಧರಸಮಾಕೀರ್ಣಾನ್ ಯುತಾನ್ ವಾನರಕಿನ್ನರೈಃ ॥16॥
ಎಲ್ಲಕಡೆಗಳಲ್ಲಿಯೂ ಕಿಂಪುರುಷರಿಂದಲೂ, ಗಂಧರ್ವರಿಂದಲೂ, ವಿದ್ಯಾಧರರಿಂದಲೂ, ವಾನರಕಿನ್ನರರಿಂದಲೂ ತುಂಬಿದ ಪರ್ವತಗಳನ್ನು ಅವರು ನೋಡಿದರು.
ಮಯೂರೈಶ್ಚಮರೈಶ್ಚೈವ ವಾನರೈ ರುರುಭಿಸ್ತಥಾ।
ವರಾಹೈರ್ಗವಯೈಶ್ಚೈವ ಮಹಿಷೈಶ್ಚ ಸಮಾವೃತಾನ್ ॥17॥
ನದೀಜಲಸಮಾಕೀರ್ಣಾನ್ ನಾನಾಪಕ್ಷಿಯುತಾನ್ ಬಹೂನ್।
ನಾನಾವಿಧಮೃಗೈರ್ಜುಷ್ಟಾನ್ ವಾನರೈಶ್ಚೋಪಶೋಭಿತಾನ್ ॥18॥
ಸಮದೈಶ್ಚಾಪಿ ವಿಹಗೈಃ ಪಾದಪೈರನ್ವಿತಾಂಸ್ತಥಾ।
ಅವರು ಮಯೂರಗಳಿಂದಲೂ, ಚಮರಿಮೃಗಗಳಿಂದಲೂ, ವಾನರರಿಂದಲೂ, ರುರು, ವರಾಹ, ಗವಯ, ಮಹಿಷಗಳಿಂದ ತುಂಬಿದ ಪರ್ವತಪ್ರದೇಶಗಳನ್ನೂ ನದಿಯ ಜಲಸಮೂಹಗಳಿಂದ ತುಂಬಿದ ನಾನಾ ಪಕ್ಷಿಗಳಿಂದ ಯುತವಾದ ನಾನಾವಿಧವಾದ ಮೃಗಗಳಿಂದಲೂ ಮತ್ತು ವಾನರಗಳಿಂದಲೂ ಶೋಭಿತವಾದ ಮದಿಸಿದ ಪಕ್ಷಿಗಳಿಂದಲೂ ಮತ್ತು ಅನೇಕ ವೃಕ್ಷಗಳಿಂದಲೂ ಯುತವಾದ ಪರ್ವತ ಪ್ರದೇಶಗಳನ್ನೂ ನೋಡಿದರು.
ತೇಽವತೀರ್ಯ ಬಹೂನ್ ದೇಶಾನುತ್ತರಾಂಶ್ಚ ಕುರೂನಪಿ ॥19॥
ದದೃಶುರ್ವಿವಿಧಾಶ್ಚರ್ಯಂ ಕೈಲಾಸಂ ಪರ್ವತೋತ್ತಮಮ್ ॥20॥
ಅವರು ಅನೇಕ ದೇಶಗಳನ್ನೂ, ಉತ್ತರಕುರು ಖಂಡವನ್ನೂ ದಾಟಿ ಅನೇಕ ಆಶ್ಚರ್ಯಗಳಿಂದ ಕೂಡಿರುವ ಕೈಲಾಸಪರ್ವತಶ್ರೇಷ್ಠವನ್ನು ನೋಡಿದರು.
ತಸ್ಯಾಭ್ಯಾಶೇ ತು ದದೃಶುರ್ನರನಾರಾಯಣಾಶ್ರಮಮ್।
ಉಪೇತಂ ಪಾದಪೈರ್ದಿವ್ಯೈಃ ಸದಾಪುಷ್ಪಫಲೋಪಗೈಃ ॥21॥
ಅದರ ಸಮೀಪದಲ್ಲಿ ಸದಾಪುಷ್ಪಫಲಭರಿತವಾದ ದಿವ್ಯವೃಕ್ಷಗಳಿಂದ ಕೂಡಿದ ನರನಾರಾಯಣಾಶ್ರಮವನ್ನು ನೋಡಿದರು.
ದದೃಶುಸ್ತಾಂ ಚ ಬದರೀಂ ವೃತ್ತಸ್ಕಂಧಾಂ ಮನೋರಮಾಮ್।
ಸ್ನಿಗ್ಧಾಮವಿರಳಚ್ಛಾಯಾಂ ಶ್ರಿಯಾ ಪರಮಯಾ ಯುತಾಮ್ ॥22॥
ಅವರು ಮನೋಹರವಾದ ಒಳ್ಳೆಯ ದುಂಡಾದ ಶಾಖೆಗಳಿಂದ ಕೂಡಿದ ಸ್ನಿಗ್ಧವಾದ ಮತ್ತು ನಿಬಿಡವಾದ ಛಾಯೆಯನ್ನು ಕೊಡುವ ಪರಮಕಾಂತಿಯುತವಾದ ಆ ಪ್ರಸಿದ್ಧವಾದ ಬದರೀವೃಕ್ಷವನ್ನೂ ನೋಡಿದರು.
ಪತ್ರೈಃ ಸ್ನಿಗ್ಧೈರವಿರಳೈರುಪೇತಾಂ ಮೃದುಭಿಃ ಶುಭಾಮ್।
ವಿಶಾಲಶಾಖಾಂ ವಿಸ್ತೀರ್ಣಾಮತಿದ್ಯುತಿಸಮನ್ವಿತಾಮ್ ॥23॥
ಫಲೈರುಪಚಿತೈರ್ದಿವ್ಯೈರಾಚಿತಾಂ ಸ್ವಾದುಭಿರ್ಭೃಶಮ್।
ಮಧುಸ್ರವೈಃ ಸದಾ ದಿವ್ಯಾಂ ಮಹರ್ಷಿಗಣಸೇವಿತಾಮ್ ॥24॥
ಅದು ನಿಬಿಡವಾದ ಮತ್ತು ಮೃದುವಾದ ಎಲೆಗಳಿಂದಲೂ, ವಿಶಾಲವಾದ ಶಾಖೆಗಳಿಂದಲೂ ಕೂಡಿ ವಿಸ್ತೀರ್ಣವು, ಶುಭಪ್ರದವೂ ಆಗಿದ್ದು ಬಹಳ ಕಾಂತಿಯಿಂದ ಕೂಡಿದ್ದಿತು. ಅದರಲ್ಲಿ ಸ್ವಾದುರಸದಿಂದ ಕೂಡಿದ ದಿವ್ಯವಾದ ಅನೇಕ ಫಲಗಳು ಬಹಳವಾಗಿ ತುಂಬಿಕೊಂಡಿದ್ದವು. ಆ ಫಲಗಳು ಯಾವಾಗಲೂ ಮಧುವನ್ನು ಸುರಿಸುತ್ತಿದ್ದವು. ಮಹರ್ಷಿಗಣಸೇವಿತವಾದ ಆ ದಿವ್ಯವೃಕ್ಷವನ್ನು ಅವರು ನೋಡಿದರು.
ಮದಪ್ರಮುದಿತೈರ್ನಿತ್ಯಂ ನಾನಾದ್ವಿಜಗಣೈರ್ಯುತಾಮ್।

ಅದಂಶಮಶಕೇ ದೇಶೇ ಬಹುಮೂಲಫಲೋದಕೇ ॥25॥
ಆ ವೃಕ್ಷವು ಮದಿಸಿದ ಅನೇಕ ಪಕ್ಷಿಗಣಗಳಿಂದ ಕೂಡಿದ್ದಿತು. ಅದು ಅನೇಕ ಮೂಲಗಳು, ಫಲಗಳು ಮತ್ತು ಉದಕವು ಇರುವ ನೊಣ, ಸೊಳ್ಳೆ ಮೊದಲಾದ ಕ್ರಿಮಿಗಳಿಂದ ರಹಿತವಾದ ದೇಶದಲ್ಲಿ ಬೆಳೆದಿದ್ದಿತು.
ನೀಲಶಾದ್ವಲಸಂಛನ್ನೇ ದೇವಗಂಧರ್ವಸೇವಿತೇ |
ಸುಸಮೀಕೃತಭೂಭಾಗೇ ಸ್ವಭಾವವಿಹಿತೇ ಶುಭೇ ॥26॥
ಜಾತಾಂ ಹಿಮಮೃದುಸ್ಪರ್ಶೇ ದೇಶೇಽಪಹತಕಂಟಕೇ |
ತಾಮುಪೇತ್ಯ ಮಹಾತ್ಮಾನಃ ಸಹ ತೈರ್ಬ್ರಾಹ್ಮಣರ್ಷಭೈಃ |
ಅವತೇರುಸ್ತತಃ ಸರ್ವೇ ರಾಕ್ಷಸಸ್ಕಂಧತಃ ಶನೈಃ ॥27॥
ದೇವಗಂಧರ್ವಸೇವಿತವಾದ ಕಪ್ಪಾದ ಶೀತಲಪ್ರದೇಶವನ್ನು ಹೊಂದಿದ ಸಮತಟ್ಟಾದ ಸ್ವಾಭಾವಿಕವಾದ ಭೂಪ್ರದೇಶದಲ್ಲಿ ಅದು ಬೆಳೆದಿದ್ದಿತು. ಮುಳ್ಳುಗಳಿಲ್ಲದಿರುವ ಮೃದುಸ್ಪರ್ಶವುಳ್ಳ ಶೀತಲ ಪ್ರದೇಶದಲ್ಲಿ ಬೆಳೆದಿದ್ದ ಆ ವೃಕ್ಷವನ್ನು ಬ್ರಾಹ್ಮಣರ ಜೊತೆಯಲ್ಲಿ ತಲುಪಿದ ಆ ಮಹಾತ್ಮರೆಲ್ಲರೂ ನಿಧಾನವಾಗಿ ರಾಕ್ಷಸರ ಹೆಗಲುಗಳಿಂದ ಇಳಿದರು.
ತತಸ್ತಮಾಶ್ರಮಂ ರಮ್ಯಂ ನರನಾರಾಯಣಾಶ್ರಿತಮ್ |
ದದೃಶುಃ ಪಾಂಡವಾ ರಾಜನ್ ಸಹಿತಾ ದ್ವಿಜಪುಂಗವೈಃ ॥28॥
ಎಲೈ ರಾಜನೇ, ಅನಂತರ ಬ್ರಾಹ್ಮಣಶ್ರೇಷ್ಠರ ಜೊತೆಯಲ್ಲಿ ಪ್ರೀತರಾದ ಪಾಂಡವರು ನರನಾರಾಯಣರಿಂದ ಆಶ್ರಿತವಾದ ಆ ಮನೋಹರವಾದ ಆಶ್ರಮವನ್ನು ನೋಡಿದರು.
ತಮಸಾ ರಹಿತಂ ಪುಣ್ಯಮನಾಮೃಷ್ಟಂ ರವೇಃ ಕರೈಃ |
ಕ್ಷುತ್ತೃಟ್‌ಶೀತೋಷ್ಣದೋಷೈಶ್ಚ ವರ್ಜಿತಂ ಶೋಕನಾಶನಮ್ ॥29॥
ಮಹರ್ಷಿಗಣಸಂಬಾಧಂ ಬ್ರಾಹ್ಮ್ಯಾ ಲಕ್ಷ್ಮ್ಯಾ ಸಮನ್ವಿತಮ್ |
ದುಷ್ಪ್ರವೇಶಂ ಮಹಾರಾಜ ನರೈರ್ಧರ್ಮಬಹಿಷ್ಕೃತೈಃ ॥30॥
ಅದು ಪವಿತ್ರವೂ, ತಾಮಸಗುಣಗಳಿಂದ ರಹಿತವೂ, ಹಸಿವು ನೀರಡಿಕೆ, ಶೀತೋಷ್ಣ ಮೊದಲಾದ ದೋಷಗಳಿಂದ ರಹಿತವೂ, ಶೋಕನಾಶನವೂ, ಸೂರ್ಯಕಿರಣ ಸ್ಪರ್ಶ ರಹಿತವೂ ಆಗಿದ್ದಿತು. ಮಹರ್ಷಿಗಳ ಸಮೂಹದಿಂದ ನಿಬಿಡವಾಗಿ ಬ್ರಹ್ಮಕಾಂತಿಯಿಂದ ಶೋಭಿಸುತ್ತಿತ್ತು. ಎಲೈ ಮಹಾರಾಜನೇ, ಧರ್ಮಶೂನ್ಯರಾದ ಮನುಷ್ಯರು ಅಲ್ಲಿ ಪ್ರವೇಶ ಮಾಡುವುದು ಅಸಾಧ್ಯವಾಗಿದ್ದಿತು.
ಬಲಿಹೋಮಾರ್ಚಿತಂ ದಿವ್ಯಂ ಸುಸಂಮೃಷ್ಟಾನುಲೇಪನಮ್ |
ದಿವ್ಯಪುಷ್ಪೋಪಹಾರೈಶ್ಚ ಸರ್ವತೋಽಭಿವಿರಾಜಿತಮ್ ॥31॥
ವಿಶಾಲೈರಗ್ನಿಶರಣೈಃ ಸ್ರುಗ್ಭಾಂಡೈರಾಚಿತಂ ಶುಭೈಃ |
ಮಹದ್ಭಿಸ್ತೋಯಕಲಶೈಃ ಕಠಿನೈಶ್ಚೋಪಶೋಭಿತಮ್ ॥32॥
ಎಲ್ಲಕಡೆಯಲ್ಲಿಯೂ ಸಾರಿಸಿ ರಂಗೋಲಿಗಳನ್ನು ಇಟ್ಟು ಬಲಿಹೋಮಗಳಿಂದ ಪೂಜಿತವಾಗಿ ದಿವ್ಯವಾಗಿದ್ದಿತು. ದಿವ್ಯವಾದ ಪುಷ್ಪಗಳಿಂದ ಮಾಡಿದ ಪೂಜೆಗಳಿಂದ ಎಲ್ಲಕಡೆಗಳಲ್ಲಿಯೂ ಶೋಭಿಸುತಿತತ್ತು. ಶುಭವಾದ ದ್ರವ್ಯಗಳಿಂದಲೂ ಮತ್ತು ಪಾತ್ರೆಗಳಿಂದಲೂ ತುಂಬಿದ ವಿಶಾಲವಾದ ಅಗ್ನಿಶಾಲೆಗಳಿಂದಲೂ, ದೊಡ್ಡದಾದ ನೀರಿನ ಕಲಶಗಳಿಂದಲೂ ಮತ್ತು ಬುಟ್ಟಿಗಳಿಂದಲೂ ಶೋಭಿಸುತ್ತಿತ್ತು.
ಶರಣ್ಯಂ ಸರ್ವಭೂತಾನಾಂ ಬ್ರಹ್ಮಘೋಷನಿನಾದಿತಮ್ |
ದಿವ್ಯಮಾಶ್ರಯಣೀಯಂ ತಮಾಶ್ರಮಂ ಶ್ರಮನಾಶನಮ್ ॥33॥
ಶ್ರಿಯಾ ಯುತಮನಿರ್ದೇಶ್ಯಂ ದೇವಚರ್ಯೋಪಶೋಭಿತಮ್ |
ಎಲ್ಲ ಪ್ರಾಣಿಗಳಿಗೂ ಆಶ್ರಯವನ್ನು ನೀಡುವಂತಹದಾಗಿದ್ದಿತು. ವೇದಘೋಷದಿಂದ ಪ್ರತಿಧ್ವನಿಸುತ್ತಿತ್ತು. ದಿವ್ಯವಾಗಿ ಆಶ್ರಯಣೀಯವಾದ ಶ್ರಮನಾಶಕವಾದ ಆ ಆಶ್ರಮವನ್ನು ನೋಡಿದರು.
ಫಲಮೂಲಾಶನೈರ್ದಾಂತೈಶ್ಚಾರುಕೃಷ್ಣಾಜಿನಾಂಬರೈಃ ॥34॥
ಸೂರ್ಯವೈಶ್ವಾನರಸಮೈಸ್ತಪಸಾ ಭಾವಿತಾತ್ಮಭಿಃ |
ಮಹರ್ಷಿಭಿರ್ಮೋಕ್ಷಪರೈರ್ಯತಿಭಿರ್ನಿಯತೇಂದ್ರಿಯೈಃ ॥35॥
ಬ್ರಹ್ಮಭೂತೈರ್ಮಹಾಭಾಗೈರುಪೇತಂ ಬ್ರಹ್ಮವಾದಿಭಿಃ ॥36॥
ಕಂದಮೂಲ ಆಶನಲಾದ, ಇಂದ್ರಿಯನಿಗ್ರಹವುಳ್ಳ, ಮನೋಹರವಾದ ಕೃಷ್ಣಾಜಿನ ವಸ್ತ್ರವನ್ನು ಧರಿಸಿದ, ಅಗ್ನಿಸೂರ್ಯರಿಗೆ ಸಮಾನರಾದ, ತಪಸ್ಸಿನಿಂದ ಪರಿಶುದ್ಧವಾದ ಮನಸ್ಸುಳ್ಳ ಮುಮುಕ್ಷುಗಳಾದ ಮಹರ್ಷಿಗಳಿಂದಲೂ, ಇಂದ್ರಿಯಜಯವುಳ್ಳ ಯತಿಗಳಿಂದಲೂ, ಯಾವಾಗಲೂ ಬ್ರಹ್ಮನನ್ನೇ ಧ್ಯಾನಿಸುವ ಮಹಾನುಭಾವರಾದ ಬ್ರಹ್ಮವಾದಿಗಳಿಂದಲೂ ಅದು ಕೂಡಿದ್ದಿತು.
ಸೋಽಭ್ಯಗಚ್ಛನ್ಮಹಾತೇಜಾಸ್ತಾನೃಷೀನ್ ಪ್ರಯತಃ ಶುಚಿಃ |
ಭ್ರಾತೃಭಿಃ ಸಹಿತೋ ಧೀಮಾನ್ ಧರ್ಮಪುತ್ರೋ ಯುಧಿಷ್ಠಿರಃ ॥37॥
ಧರ್ಮಪುತ್ರನಾದ ಮಹಾತೇಜಸ್ವಿಯಾದ ಯುಧಿಷ್ಠಿರನು ತಮ್ಮಂದಿರಿಂದ ಒಡಗೂಡಿ ನಿಯಮದಿಂದ ಕೂಡಿದವನಾಗಿ ಶುಚಿಯಾಗಿ ಆ ಋಷಿಗಳನ್ನು ಸಮೀಪಿಸಿದನು.
ದಿವ್ಯಜ್ಞಾನೋಪಪನ್ನಾಸ್ತೇ ದೃಷ್ಟ್ವಾ ಪ್ರಾಪ್ತಂ ಯುಧಿಷ್ಠಿರಮ್ |
ಅಭ್ಯಗಚ್ಛಂತ ಸುಪ್ರೀತಾಃ ಸರ್ವ ಏವ ಮಹರ್ಷಯಃ ॥38॥
ದಿವ್ಯಜ್ಞಾನದಿಂದ ಕೂಡಿದ ಆ ಎಲ್ಲ ಮಹರ್ಷಿಗಳು ಅಲ್ಲಿಗೆ ಪ್ರಾಪ್ತನಾದ ಯುಧಿಷ್ಠಿರನನ್ನು ನೋಡಿ ಸಂತೋಷದಿಂದ ಅವನೆಡೆಗೆ ತಾವೇ ಬಂದರು.

ಆಶೀರ್ವಾದಾನ್ ಪ್ರಯುಂಜಾನಾಃ ಸಾಧ್ಯಾಯನಿರತಾ ಭೃಶಮ್ |
ಪ್ರೀತಾಸ್ತೇ ತಸ್ಯ ಸತ್ಕಾರಂ ವಿಧಿನಾ ಪಾವಕೋಪಮಾಃ |
ಉಪಾಜಹ್ರುಶ್ಚ ಸಲಿಲಂ ಪುಷ್ಪಮೂಲಫಲಂ ಶುಚಿ ||39||
ಸಾಧ್ಯಾಯನಿರತರಾದ, ಅಗ್ನಿಸದೃಶರಾದ ಅವರು ಅವನಿಗೆ ಒಳ್ಳೆಯ ಆಶೀರ್ವಾದಗಳನ್ನು ಮಾಡಿ ವಿಧಿಪೂರ್ವಕವಾಗಿ ಸಂತೋಷದಿಂದ ಸತ್ಕಾರವನ್ನು ಮಾಡಿದರು. ಅವನಿಗೆ ನೀರನ್ನೂ, ಶುಚಿಯಾದ ಪುಷ್ಪಕಂದಫಲಗಳನ್ನೂ ಅರ್ಪಿಸಿದರು.
ಸ ತೈಃ ಪ್ರೀತ್ಯಾಽಥ ಸತ್ಕಾರಮುಪನೀತಂ ಮಹರ್ಷಿಭಿಃ |
ಪ್ರಯತಃ ಪ್ರತಿಗೃಹ್ಯಾಥ ಧರ್ಮಪುತ್ರೋ ಯುಧಿಷ್ಠಿರಃ ||40||
ಧರ್ಮರಾಜನಾದ ಯುಧಿಷ್ಠಿರನು ಆ ಮಹರ್ಷಿಗಳು ಪ್ರೀತಿಯಿಂದ ಮಾಡಿದ ಸತ್ಕಾರವನ್ನು ವಿನಯದಿಂದ ಸ್ವೀಕರಿಸಿದನು.
ತಂ ಶಕ್ರಸದನಪ್ರಖ್ಯಂ ದಿವ್ಯಗಂಧಂ ಮನೋರಮಮ್ |
ಪ್ರೀತಃ ಸ್ವರ್ಗೋಪಮಂ ಪುಣ್ಯಂ ಪಾಂಡವಃ ಸಹ ಕೃಷ್ಣಯಾ ||41||
ವಿವೇಶ ಶೋಭಯಾ ಯುಕ್ತಂ ಭ್ರಾತೃಭಿಶ್ಚ ಸಹಾನಘ |
ಬ್ರಾಹ್ಮಣೈರ್ವೇದವೇದಾಂಗಪಾರಗೈಶ್ಚ ಸಹಸ್ರಶಃ ||42||
ಅನಂತರ ಸಂತೋಷಗೊಂಡ ಆ ಪಾಂಡವನು ದ್ರೌಪದಿಯ ಮತ್ತು ತಮ್ಮಂದಿರ ಜೊತೆಯಲ್ಲಿ ಮತ್ತು ವೇದವೇದಾಂತ ಪಾರಂಗತರಾದ ಸಹಸ್ರಾರು ಬ್ರಾಹ್ಮಣರ ಜೊತೆಯಲ್ಲಿ ಇಂದ್ರನ ಸದನಕ್ಕೆ ಸಮಾನವಾದ ದಿವ್ಯಗಂಧದಿಂದ ಕೂಡಿದ್ದ ಸ್ವರ್ಗದಂತಿದ್ದ, ಪವಿತ್ರವಾದ, ಮನೋಹರವಾದ, ಕಾಂತಿಯುಕ್ತವಾದ ಆ ಆಶ್ರಮವನ್ನು ಪ್ರವೇಶಿಸಿದನು.
ತತ್ರಾಪಶ್ಯತ ಧರ್ಮಾತ್ಮಾ ದೇವದೇವರ್ಷಿಪೂಜಿತಮ್ |
ನರನಾರಾಯಣಸ್ಥಾನಂ ಭಾಗೀರಥ್ಯೋಪಶೋಭಿತಮ್ ||43||
ಧರ್ಮಾತ್ಮನಾದ ಅವನು ಅಲ್ಲಿ ಭಾಗೀರಥಿಯಿಂದ ಶೋಭಿತವಾದ ದೇವತೆಗಳಿಂದಲೂ ಮತ್ತು ದೇವರ್ಷಿಗಳಿಂದ ಪೂಜಿತವಾದ ನರನಾರಾಯಣ ಸ್ಥಾನವನ್ನು ನೋಡಿದನು.
ಮಧುಸ್ರವಫಲಂ ದಿವ್ಯಂ ಬ್ರಹ್ಮರ್ಷಿಗಣಸೇವಿತಮ್ |
ತದುಪೇತ್ಯ ಮಹಾತ್ಮಾನಸ್ತೇಽವಸನ್ ಬ್ರಾಹ್ಮಣೈಃ ಸಹ ||44||
ಜೇನನ್ನು ಸುರಿಸುವಂತಹ ಫಲಗಳಿಂದ ಕೂಡಿದ ಬ್ರಹ್ಮರ್ಷಿಗಣಸೇವಿತವಾದ ದಿವ್ಯವಾದ ಆ ಆಶ್ರಮವನ್ನು ಆ ಮಹಾತ್ಮರಾದ ಪಾಂಡವರು ಪ್ರವೇಶಿಸಿ ಬ್ರಾಹ್ಮಣರ ಜೊತೆಯಲ್ಲಿ ಅಲ್ಲಿ ವಾಸಮಾಡಿದರು.
ಮುದಾ ಯುಕ್ತಾ ಮಹಾತ್ಮಾನೋ ರೇಮಿರೇ ತತ್ರ ತೇ ತದಾ |
ಆಲೋಕಯಂತೋ ಮೈನಾಕಂ ನಾನಾದ್ವಿಜಗಣಾಯುತಮ್ ||45||
ಹಿರಣ್ಯಶಿಖರಂ ಚೈವ ತಚ್ಚ ಬಿಂದುಸರಃ ಶಿವಮ್ |
ಭಾಗೀರಥೀಂ ಸುತೀರ್ಥಂ ಚ ಶೀತಾಮಲಜಲಾಂ ಶಿವಾಮ್ ||46||
ಸಂತೋಷದಿಂದ ಕೂಡಿದ ಆ ಮಹಾನುಭಾವರು ಅಲ್ಲಿ ಅನೇಕ ಪಕ್ಷಿಗಣಗಳಿಂದ ಕೂಡಿದ, ಸುವಣಶೃಂಗಗಳಿಂದ ಕೂಡಿದ, ಮೈನಾಕ ಪರ್ವತವನ್ನೂ, ಮಂಗಳವಾದ ಬಿಂದು ಸರೋವರವನ್ನೂ, ಶೀತ ಮತ್ತು ಸ್ವಚ್ಛ ಜಲದಿಂದ ಕೂಡಿದ ಮಂಗಳಕರವಾದ ಭಾಗೀರಥಿ ತೀರ್ಥವನ್ನೂ ನೋಡುತ್ತಾ ಸಂತೋಷಪಟ್ಟರು.
ದಿವ್ಯಪುಷ್ಪಸಮಾಕೀರ್ಣಾಂ ಮನಃಪ್ರೀತಿವಿವರ್ಧನೀಮ್ ||47||
ವೀಕ್ಷಮಾಣಾ ಮಹಾತ್ಮಾನೋ ವಿಶಾಲಾಂ ಬದರೀಮನು ||48||
ತಸ್ಮಿನ್ ದೇವರ್ಷಿಚರಿತೇ ದೇಶೇ ಪರಮದುರ್ಗಮೇ |
ಭಾಗೀರಥೀಪುಣ್ಯಜಲೇ ತರ್ಪಯಾಂಚಕ್ರಿರೇ ತದಾ ||49||
ದೇವಾನೃಷೀಂಶ್ಚ ಕೌಂತೇಯಾಃ ಪರಮಂ ಶೌಚಮಾಸ್ಥಿತಾಃ |
ದಿವ್ಯಪುಷ್ಪಗಳಿಂದ ಕೂಡಿದಂತಹ, ಮನಸ್ಸಂತೋಷಜನಕವಾದ, ಬದರೀ ವಿಶಾಲಾ ಕ್ಷೇತ್ರವನ್ನು ಆ ಮಹಾನುಭಾವರು ನೋಡುತ್ತಾ ದೇವರ್ಷಿಗಳ ಸಂಚಾರದಿಂದ ಕೂಡಿದ ಆ ಪರಮದುರ್ಗಮವಾದ ಪುಣ್ಯದೇಶದಲ್ಲಿ ಭಾಗೀರಥಿಯ ಪವಿತ್ರವಾದ ಜಲದಿಂದ ದೇವತೆಗಳಿಗೂ ಮತ್ತು ಋಷಿಗಳಿಗೂ ಆ ಕೌಂತೇಯರು ಪರಮ ಶೌಚವನ್ನು ಹೊಂದಿದವರಾಗಿ ತರ್ಪಣವನ್ನು ನೀಡಿದರು.
ತತ್ರ ತೇ ತರ್ಪಯಂತಶ್ಚ ಜಪಂತಶ್ಚ ಕುರೂದ್ವಹಾಃ |
ಬ್ರಾಹ್ಮಣೈಃ ಸಹಿತಾ ವೀರಾ ಹ್ಯವಸನ್ ಪುರುಷರ್ಷಭಾಃ ||50||
ಕುರುಕುಲಶ್ರೇಷ್ಠರಾದ ವೀರರಾದ ಆ ಪುರುಷವೃಷಭರು ಹೀಗೆ ತರ್ಪಣವನ್ನು ಕೊಡುತ್ತಾ ಮತ್ತು ಜಪವನ್ನು ಮಾಡುತ್ತಾ ಅಲ್ಲಿ ಬ್ರಾಹ್ಮಣರ ಜೊತೆಯಲ್ಲಿ ವಾಸಮಾಡಿದರು.
ಕೃಷ್ಣಾಯಾಸ್ತತ್ರ ಪಶ್ಯಂತಃ ಕ್ರೀಡಿತಾನ್ಯಮರಪ್ರಭಾಃ |
ವಿಚಿತ್ರಾಣಿ ನರವ್ಯಾಘ್ರಾ ರೇಮಿರೇ ತತ್ರ ಪಾಂಡವಾಃ||51||
ದೇವತೆಗಳ ಕಾಂತಿಯನ್ನು ಹೊಂದಿದ್ದ ಪುರುಷವ್ಯಾಘ್ರರಾದ ಆ ಪಾಂಡವರು ಅಲ್ಲಿ ದ್ರೌಪದಿಯ ವಿಲಾಸಗಳನ್ನು ನೋಡುತ್ತಾ ಸಂತೋಷಪಟ್ಟರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ ||
|| ಇತಿ ತೀರ್ಥಯಾತ್ರಾಪರ್ವಣಿ ಅಷ್ಟನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತೆರಡನೆಯ ಅಧ್ಯಾಯ ಮುಗಿಯಿತು.

* * * *

ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ

ಏವಂ ಬದರ್ಯಾ ವಿಹರತ್ಸು ತೇಷು
ಕ್ವಚಿದ್ ರಹಃ ಕೃಷ್ಣಯಾ ವಾಯುಸೂನೌ |
ಸ್ಥಿತೇ ಗರುತ್ಮಾನುರಗಂ ಜಹಾರ
ಮಹಾಹ್ರದಾದ್ ವಾಸುದೇವಾಸನಾಗ್ರ್ಯಃ ॥269॥

ಹೀಗೆ ಪಾಂಡವರು ಬದರಿಕಾಶ್ರಮದಲ್ಲಿ ವಿಹರಿಸುತ್ತಿದ್ದಾಗ, ಒಂದುಕಡೆ ಏಕಾಂತ ಸ್ಥಳದಲ್ಲಿ ದ್ರೌಪದಿಯೊಡನೆ ಭೀಮನಿದ್ದಾಗ ಶ್ರೀಹರಿಯ ಉತ್ತಮ ಆಸನವೆನಿಸಿದ ಗರುಡ ಒಂದು ದೊಡ್ಡ ಸರೋವರದಿಂದ ಹಾವನ್ನು ಒಯ್ದ.

ತತ್ಪಕ್ಷಪಾತೇನ ವಿಚಾಲಿತೇ ತು
ತಸ್ಮಿನ್ ಗಿರೌ ಕಮಲಂ ಹೈಮಮಗ್ರ್ಯಮ್ |
ಪಪಾತ ಕೃಷ್ಣಾಭೀಮಯೋಃ ಸನ್ನಿಧಾನೇ
ಉದ್ಯದ್ಭಾನೋರ್ಮಂಡಲಾಭಂ ಸುಗಂಧಮ್ ॥270॥

ಗರುಡನ ರೆಕ್ಕೆಗಳ ಗಾಳಿಯಿಂದ ಆ ಗಂಧಮಾದನ ಪರ್ವತ ನಡುಗುತ್ತಿದ್ದಾಗ ಬಂಗಾರದ ಶ್ರೇಷ್ಠವಾದ ಒಂದು ಕಮಲ ದ್ರೌಪದೀ ಭೀಮರ ಬಳಿಯಲ್ಲಿ ಬಿದ್ದಿತು. ಅದು ಉದಿಸುವ ಸೂರ್ಯಮಂಡಲದಂತೆ ಹೊಳೆಯುತ್ತಿತ್ತು. ಸುಗಂಧಭರಿತವಾಗಿತ್ತು.

ದೃಷ್ಟ್ವಾsತಿಗಂಧಂ ವರಹೇಮಕಂಜಂ
ಕುತೂಹಲಾದ್ ದ್ರೌಪದೀ ಭೀಮಸೇನಮ್ |
ಬಹೂನ್ಯಯಾಚತ್ ತಾದೃಶಾನ್ಯಾನುಭಾವ-
ಮವಿಷಹ್ಯಂ ಜಾನತೀ ದೇವದೈತ್ಯೈಃ ॥271॥

ಅತಿ ಸುಗಂಧಯುಕ್ತವಾದ ಉತ್ತಮವಾದ ಆ ಬಂಗಾರದ ಕಮಲವನ್ನು ಕಂಡು ದ್ರೌಪದಿ ಕುತೂಹಲದಿಂದ ಅಂಥ ಅನೇಕ ಹೂಗಳನ್ನು ನನಗೆ ತಾ ಎಂದು ಬೇಡಿದಳು. ದೇವತೆಗಳಿಗಾಗಲಿ ದೈತ್ಯರಿಗಾಗಲಿ ಸಹಿಸಲಸಾಧ್ಯವಾದ ಬಲ ಭೀಮನದೆಂದು ಅವಳು ಬಲ್ಲವಳಾಗಿದ್ದಳು.

ತಯಾऽರ್ಥಿತಃ ಸಗದಸ್ತುಂಘಮೇನಂ ಗಿರಿಂ
ವೇಗಾದಾರುಹದ್ ವಾಯುಸೂನುಃ |
ಪ್ರಶಸ್ಯಮಾನಃ ಸುರಸಿದ್ಧಸ್ಸಂಘೈಃ ಮೃತ್ನನ್
ದೈತ್ಯಾನ್ ಸಿಂಹಶಾರ್ದೂಲರೂಪಾನ್ ॥272॥

ಆಸೇದಿವಾಂಸ್ತತ್ರ ಹನೂಮದಾಖ್ಯಂ ನಿಜಂ
ರೂಪಂ ಪ್ರೋದ್ಯದಾದಿತ್ಯಭಾಸಮ್ |
ಜಾನನ್ನಪ್ಯೇನಂ ಸ್ವೀಯರೂಪಂ ಸ ಭೀಮ-
ಶ್ಚಿಕ್ರೀಡ ಏತೇನ ಯಥಾ ಪರೇಣ ॥273॥

ಅವಳು ಬೇಡಿದಳೆಂದು ಭೀಮ ಗದಾಪಾಣಿಯಾಗಿ ವೇಗದಿಂದ ಆ ಉನ್ನತ ಪರ್ವತವನ್ನು ಏರಿದ. ಭೀಮ ಸಿಂಹ ಹುಲಿಗಳ ರೂಪದಿಂದ ಇದಿರಾದ ದೈತ್ಯರನ್ನು ಮರ್ದಿಸುತ್ತ, ದೇವತೆಗಳಿಂದಲೂ ಸಿದ್ಧರಿಂದಲೂ ಸ್ತುತಿಸಿಕೊಳ್ಳುತ್ತ ತನ್ನದೇ ಆದ ಉದಿಸುವ ಸೂರ್ಯನಂತೆ ಹೊಳೆವ ಹನುಮಂತನೆಂಬ ಹೆಸರಿನ ಇನ್ನೊಂದು ರೂಪವನ್ನು ಸೇರಿದ. ಭೀಮ ಹನುಮಂತನನ್ನು ತನ್ನ ರೂಪವೇ ಎಂದು ತಿಳಿದಿದ್ದರೂ ಬೇರೆಯವನೆಂಬಂತೆ ಅವನೊಡನೆ ಆಟವಾಡಿದ.

* * * *

ನೂರ ನಲವತ್ನೂರನೆಯ ಅಧ್ಯಾಯ

ಭೀಮನ ಸಮೀಪದಲ್ಲಿ ದ್ರೌಪದಿಯ ಮುಂದೆ ವಾಯುವಿನಿಂದ ಬೀಳಿಸಲ್ಪಟ್ಟ ಸೌಗಂಧಿಕ ಪುಷ್ಪದ ದರ್ಶನ. ಇನ್ನೂ ಅನೇಕ ಪುಷ್ಪಗಳನ್ನು ತರುವಂತೆ
ಅವಳ ಪ್ರಾರ್ಥನೆ. ಅಲ್ಲಿಂದ ಹೊರಟ ಭೀಮಸೇನನಿಗೆ ಕದಳೀ
ವನದಲ್ಲಿ ಹನುಮಂತನ ದರ್ಶನ ಮತ್ತು ಅವರ ಸಂವಾದ.

ವೈಶಂಪಾಯನಃ

ತತ್ರ ತೇ ಪುರುಷವ್ಯಾಘ್ರಾಃ ಪರಮಂ ಶೌಚಮಾಸ್ಥಿತಾಃ |
ಷಡ್ರಾತ್ರಮವಸನ್ ವೀರಾ ಧನಂಜಯದಿದೃಕ್ಷವಃ ॥1॥

ವೈಶಂಪಾಯನ ಪುರುಷವ್ಯಾಘ್ರರಾದ ವೀರರಾದ ಆ ಪಾಂಡವರು ಪರಮ ಶೌಚವನ್ನು ಹೊಂದಿದವರಾಗಿ ಧನಂಜಯನನ್ನು ನೋಡುವ ಆಸೆಯಿಂದ ಅಲ್ಲಿ ಆರು ರಾತ್ರಿಗಳನ್ನು ಕಳೆದರು.

ತಸ್ಮಿನ್ ವಿಹರಮಾಣಾಶ್ಚ ರಮಮಾಣಾಶ್ಚ ಪಾಂಡವಾಃ |
ಮನೋಜ್ಞೇ ಕಾನನವರೇ ಸರ್ವಭೂತಮನೋರಮೇ ॥2॥
ಪಾದಪೈಃ ಪುಷ್ಪವಿಕಚೈಃ ಫಲಭಾರಾವನಾಮಿತೈಃ |
ಶೋಭಿತಂ ಸರ್ವತೋ ರಮ್ಯಂ ಪುಂಸ್ಕೋಕಿಲವಿರಾಜಿತಮ್ |
ಸ್ನಿಗ್ಧಪತ್ರೈರವಿರಳೈಃ ಶೀತಚ್ಛಾಯೈರ್ಮನೋರಮೈಃ ॥3॥

ಆ ಮನೋಜ್ಞವಾದ ಎಲ್ಲ ಪ್ರಾಣಿಗಳಿಗೂ ಸುಖಕರವಾದ, ಹೂವು ಹಣ್ಣುಗಳಿಂದ ಬಾಗಿದ ಮರಗಳನುನಳ್ಳ, ಎಲ್ಲ ಕಡೆಗಳಲ್ಲಿಯೂ

ಕೋಕಿಲ ಧ್ವನಿಗಳಿಂದ ಶೋಭಿತವಾದ ನಿಬಿಡವಾದ ಪತ್ರಗಳಿಂದ ಶೀತಲವಾದ ಛಾಯೆಯನ್ನು ಕೊಡುವ ಮನೋಹರವಾದ ವೃಕ್ಷಗಳಿಂದ ಕೂಡಿದ ಆ ಶ್ರೇಷ್ಠವಾದ ಕಾನನದಲ್ಲಿ ಪಾಂಡವರು ವಿಹರಿಸಿದರು.
ಸರಾಂಸಿ ಚ ವಿಚಿತ್ರಾಣಿ ಪ್ರಸನ್ನಸಲಿಲಾನಿ ಚ |
ಕಮಲೈಃ ಸೋತ್ಪಲೈಸ್ತತ್ರ ಭ್ರಾಜಮಾನಾನಿ ಸರ್ವಶಃ ||4||
ಪಶ್ಯಂತಶ್ಚಾರುರೂಪಾಣಿ ರೇಮಿರೇ ತತ್ರ ಪಾಂಡವಾಃ ||5||
ಅಲ್ಲಿ ಪಾಂಡವರು ಪ್ರಸನ್ನಜಲದಿಂದ ಕೂಡಿದ, ಕಮಲ ಮತ್ತು ಉತ್ಪಲಪುಷ್ಪಗಳಿಂದ ಶೋಭಿತವಾದ ಮನೋಹರವಾದ ಸರೋವರಗಳನ್ನು ಎಲ್ಲ ಕಡೆಗಳಲ್ಲಿಯೂ ನೋಡುತ್ತಾ ಸಂತೋಷಪಟ್ಟರು.
ಪುಣ್ಯಗಂಧಃ ಸುಖಸ್ಪರ್ಶೋ ವವೌ ತತ್ರ ಸಮೀರಣಃ |
ಹ್ಲಾದಯನ್ ಪಾಂಡವಾನ್ ಸರ್ವಾನ್ ಸಕೃಷ್ಣಾನ್ ಸದ್ವಿಜರ್ಷಭಾನ್ ||
ವಾಯುವು ಪುಣ್ಯಗಂಧದಿಂದ ಕೂಡಿ ಸುಖಸ್ಪರ್ಶವುಳ್ಳದ್ದಾಗಿ ಬ್ರಾಹ್ಮಣಶ್ರೇಷ್ಠರಿಂದ ಮತ್ತು ದ್ರೌಪದಿಯಿಂದ ಸಹಿತರಾದ ಎಲ್ಲ ಪಾಂಡವರಿಗೂ ಮುದವನ್ನು ಕೊಡುತ್ತಾ ಬೀಸುತ್ತಿತ್ತು.
ತತಃ ಪೂರ್ವೋತ್ತರೇ ವಾಯುಃ ಪ್ಲವಮಾನೋ ಯದೃಚ್ಛಯಾ |
ಸಹಸ್ರಪತ್ರಮರ್ಕಾಭಂ ದಿವ್ಯಂ ಪದ್ಮಮುಪಾಹರತ್ ||7||
ಅಲ್ಲಿ ಈಶಾನ್ಯದಿಕ್ಕಿನಲ್ಲಿ ಒಮ್ಮೆ ವಾಯುವು ಬೀಸುತ್ತಾ ಸಹಸ್ರದಳಗಳುಳ್ಳ ಸೂರ್ಯನಂತೆ ಕಂಗೊಳಿಸುವ ದಿವ್ಯವಾದ ಒಂದು ಪದ್ಮವನ್ನು ತಂದು ಹಾಕಿತು.
ತದಪಶ್ಯತ ಪಾಂಚಾಲೀ ದಿವ್ಯಗಂಧಂ ಮನೋರಮಮ್ |
ಅನಿಲೇನಾಹೃತಂ ಭೂಮೌ ಪತಿತಂ ಜಲಜಂ ಶುಚಿ ||8||
ವಾಯುವಿನಿಂದ ತರಲ್ಪಟ್ಟು ಭೂಮಿಯ ಮೇಲೆ ಬಿದ್ದಿದ್ದ ಆ ಶುದ್ಧವಾದ ದಿವ್ಯಗಂಧದಿಂದ ಕೂಡಿದ್ದ, ಮನೋಹರವಾದ ಕಮಲವನ್ನು ದ್ರೌಪದಿಯು ನೋಡಿದಳು.
ತಚ್ಛುಭಾ ಶುಭಮಾಸಾದ್ಯ ಸೌಗಂಧಿಕಮನುತ್ತಮಮ್ |
ಅತೀವ ಮುದಿತಾ ರಾಜನ್ ಭೀಮಸೇನಮಥಾಬ್ರವೀತ್ ||9||
ಎಲೈ ರಾಜನೇ, ಶುಭಳಾದ ದ್ರೌಪದಿಯು ಶ್ರೇಷ್ಠವಾದ ಆ ಸೌಗಂಧಿಕ ಪುಷ್ಪದ ಸಮೀಪಕ್ಕೆ ಬಂದು ಬಹಳ ಸಂತುಷ್ಟಳಾಗಿ ಭೀಮಸೇನನನ್ನು ಕುರಿತು ಹೀಗೆ ಹೇಳಿದಳು;
ಪಶ್ಯ ದಿವ್ಯಂ ಸುರುಚಿರಂ ಭೀಮ ಪುಷ್ಪಮನುತ್ತಮಮ್ |
ಗಂಧಸಂಸ್ಥಾನಸಂಪನ್ನಂ ಮನಸೋ ಮಮ ನಂದನಮ್ ||10||
ಭೀಮಸೇನನೇ, ಈ ಶ್ರೇಷ್ಠವಾದ ಮನೋಹರವಾದ ದಿವ್ಯಪುಷ್ಪವನ್ನು ನೋಡು. ಇದರ ಗಂಧವಿಶೇಷವು ನನ್ನ ಮನಸ್ಸಿಗೆ ಬಹಳ ಸಂತೋಷವನ್ನು ಕೊಡುತ್ತಿದೆ.
ಇದಂ ಚ ಧರ್ಮರಾಜಾಯ ಪ್ರದಾಸ್ಯಾಮಿ ಪರಂತಪ |
ಹರೇದಂ ಮಮ ಕಾಮಾಯ ಕಾಮ್ಯಕೇ ಪುನರಾಶ್ರಮೇ |
ಗೃಹ್ಯಾಪರಾಣಿ ಪುಷ್ಪಾಣಿ ಬಹೂನಿ ಪುರುಷರ್ಷಭ ||11||
ಪರಂತಪನೇ, ನಾನು ಈ ಪುಷ್ಪವನ್ನು ಧರ್ಮರಾಜನಿಗೆ ಕೊಡುವೆನು. ಪುರುಷರ್ಷಭನೇ, ಪುನಃ ಕಾಮ್ಯಕವನದ ಆಶ್ರಮಕ್ಕೆ ತೆಗೆದುಕೊಂಡು ಹೋಗುವ ನನ್ನ ಆಸೆಯನ್ನು ಈಡೇರಿಸಲು ಇಂತಹ ಅನೇಕ ಪುಷ್ಪಗಳನ್ನು ತೆಗೆದುಕೊಂಡು ಬಾ.
ಯದಿ ತೇಽಹಂ ಪ್ರಿಯಾ ಪಾರ್ಥ ಬಹೂನೀಮಾನ್ಯುಪಾಹರ |
ತಾನ್ಯಹಂ ನೇತುಮಿಚ್ಛಾಮಿ ಕಾಮ್ಯಕಂ ಪುನರಾಶ್ರಮಮ್ ||12||
ಎಲೈ ಪಾರ್ಥನೇ, ನನ್ನ ಮೇಲೆ ನಿನಗೆ ಪ್ರೀತಿಯಿದ್ದರೆ ಇಂತಹ ಅನೇಕ ಪುಷ್ಪಗಳನ್ನು ತೆಗೆದುಕೊಂಡು ಬಾ. ನಾನು ಪುನಃ ಅವುಗಳನ್ನು ಕಾಮ್ಯಕವನದ ಆಶ್ರಮಕ್ಕೆ ತೆಗೆದುಕೊಂಡು ಹೋಗಲು ಬಯಸುತ್ತೇನೆ.
ವೈಶಂಪಾಯನಃ
ಏವಮುಕತ್ವ ಶುಭಾಪಾಂಗೀ ಭೀಮಸೇನಮನಿಂದಿತಾ |
ಜಗಾಮ ಪುಷ್ಪಮಾದಾಯ ಧರ್ಮರಾಜಾಯ ತತ್ ತದಾ ||13||
ವೈಶಂಪಾಯನ ಶುಭಾಂಗಿಯೂ, ಪರಿಶುದ್ಧಳೂ ಆದ ದ್ರೌಪದಿಯು ಭೀಮಸೇನನನ್ನು ಕುರಿತು ಹೀಗೆ ಹೇಳಿ ಧರ್ಮರಾಜನಿಗೆ ಆ ಪುಷ್ಪವನ್ನು ಕೊಡಲು ಅದನ್ನು ತೆಗೆದುಕೊಂಡು ಹೋದಳು.
ಅಭಿಪ್ರಾಯಂ ತು ವಿಜ್ಞಾಯ ಮಹಿಷ್ಯಾಃ ಪುರುಷರ್ಷಭಃ |
ಪ್ರಿಯಾಯಾಃ ಪ್ರಿಯಕಾಮಃ ಸ ಪ್ರಾಯಾದ್ ಭೀಮೋ ಮಹಾಬಲಃ ||
ಪುರುಷರ್ಷಭನೂ, ಮಹಾಬಲನೂ ಆದ ಭೀಮಸೇನನು ತನ್ನ ರಾಣಿಯ ಅಭಿಪ್ರಾಯವನ್ನು ತಿಳಿದವನಾಗಿ ಪ್ರಿಯೆಯಾದ ಅವಳಿಗೆ ಸಂತೋಷವನ್ನು ಉಂಟುಮಾಡಲು ಅಲ್ಲಿಂದ ಹೊರಟನು.
ವಾತಂ ತಮೇವಾಭಿಮುಖೋ ಯತಸ್ತತ್ಪುಷ್ಪಮಾಗತಮ್ |
ಆಜಿಹೀರ್ಷುರ್ಜಗಾಮಾಶು ಸ ಪುಷ್ಪಾಣ್ಯಪರಾಣ್ಯಪಿ ||15||
ಯಾವ ದಿಕ್ಕಿನಿಂದ ವಾಯುವು ಪುಷ್ಪವನ್ನು ತಂದಿದ್ದಿತೋ, ಅದೇ ದಿಕ್ಕಿಗೆ ಅಭಿಮುಖವಾಗಿ ಇನ್ನೂ ಹೆಚ್ಚು ಪುಷ್ಪಗಳನ್ನು ತರಲು ಶೀಘ್ರವಾಗಿ ಹೊರಟನು.
ರುಕ್ಮಪೃಷ್ಠಂ ಧನುರ್ಗೃಹ್ಯ ಶರಾಂಶ್ಚಾಶೀವಿಷೋಪಮಾನ್ |

ಮೃಗರಾಡಿವ ಸಂಕ್ರುದ್ಧಃ ಪ್ರಭಿನ್ನ ಇವ ಕುಂಜರಃ ॥16॥
ಚಿನ್ನದ ಹಿಡಿಯಿರುವ ಧನುಸ್ಸನ್ನೂ, ಸರ್ಪದಂತಿರುವ ಬಾಣಗಳನ್ನೂ ತೆಗೆದುಕೊಂಡು ಕ್ರೋಧಗೊಂಡ ಸಿಂಹದಂತೆ ಮದಿಸಿದ ಆನೆಯಂತೆ ಹೊರಟನು.
ವ್ಯನದತ್ ಸ ಮಹಾನಾದಂ ಭೀಮಸೇನೋ ಮಹಾಬಲಃ |
ದದೃಶುಃ ಸರ್ವಭೂತಾನಿ ಮಹಾಬಾಣಧನುರ್ಧರಮ್ |
ನ ಗ್ಲಾನಿರ್ನ ಚ ವೈಕ್ಲವ್ಯಂ ನ ಭಯಂ ನ ಚ ಸಂಭ್ರಮಃ |
ಕದಾಚಿಜ್ಜುಷತೇ ಪಾರ್ಥಮಾತ್ಮಜಂ ಮಾತರಿಶ್ವನಃ ॥16.1॥
ಮಹಾಬಲನಾದ ಆ ಭೀಮಸೇನನು ಮಹಾನಾದವನ್ನು ಮಾಡಿದನು. ಎಲ್ಲ ಪ್ರಾಣಿಗಳೂ, ಮಹಾಬಾಣಗಳನ್ನು ಮತ್ತು ಧನುಸ್ಸನ್ನು ಹೊಂದಿದ್ದ ಅವನನ್ನು ನೋಡಿದವು. ವಾಯುದೇವನ ಪುತ್ರನಾದ ಆ ಪಾರ್ಥನಿಗೆ ಎಂದೂ ಆಯಾಸವಾಗಲೀ, ಮನೋವಿಷಾದವಾಗಲೀ, ಭಯವಾಗಲೀ, ಗಾಬರಿಯಾಗಲೀ ಹತ್ತಿರ ಸುಳಿಯುವುದಿಲ್ಲ.
ದ್ರೌಪದ್ಯಾಃ ಪ್ರಿಯಮನ್ವಿಚ್ಛನ್ ಸ ಬಾಹುಬಲಮಾಶ್ರಿತಃ |
ವ್ಯಪೇತಭಯಸಮ್ಮೋಹಃ ಶೈಲಮಭ್ಯಪತದ್ ಬಲೀ ॥17॥
ಬಲಿಷ್ಠನಾದ ಭೀಮಸೇನನು ತನ್ನ ಬಾಹುಬಲವನ್ನು ಆಶ್ರಯಿಸಿದವನಾಗಿ, ಭಯವನ್ನಾಗಲೀ, ಮೋಹವನ್ನಾಗಲೀ ಹೊಂದದೆ ದ್ರೌಪದಿಗೆ ಪ್ರಿಯವನ್ನು ಉಂಟುಮಾಡಲು ಆ ಪರ್ವತಕಾನನವನ್ನು ಪ್ರವೇಶಿಸಿದನು.
ಲತಾಗುಲ್ಮತೃಣಚ್ಛನ್ನಮ್ ಇಂದ್ರನೀಶಿಲತಳಮ್ |
ಗಿರಿಂ ಚಚಾರಾರಿಹರಃ ಕಿನ್ನರಾಚರಿತಂ ಶುಭಮ್ ॥18॥
ಶತ್ರುಸಂಹಾರಕನಾದ ಅವನು ಇಂದ್ರನೀಲದಂತಹ ಶಿಲೆಗಳಿಂದ ಕೂಡಿದ್ದ, ಲತಾಗುಲ್ಮಗಳಿಂದಲೂ ಮತ್ತು ತೃಣಗಳಿಂದಲೂ ಅಚ್ಛಾದಿತವಾದ, ಕಿನ್ನರರು ಸಂಚರಿಸುವ ಆ ಶುಭವಾದ ಪರ್ವತದಲ್ಲಿ ಸಂಚರಿಸಿದನು.
ನಾನಾವರ್ಣಧರೈಶ್ಚಿತ್ರಂ ಧಾತುದ್ರುಮಮೃಗಾಂಡಜೈಃ |
ಸರ್ವಭೂಷಣಸಂಪೂರ್ಣಂ ಭೂಮೇರ್ಭುಜಮಿವೋಚ್ಛ್ರಿತಮ್ ॥19॥
ಸರ್ವತ್ರ ರಮಣೀಯೇಷು ಗಂಧಮಾದನಸಾನುಷು |
ಸಕ್ತಚಕ್ಷುರಭಿಪ್ರಾಯಾನ್ ಹೃದಯೇನಾನುಚಿಂತಯನ್ ॥20॥
ಅನೇಕ ಬಣ್ಣಗಳಿಂದ ಕೂಡಿದ ವಿಚಿತ್ರವಾದ ಧಾತುಗಳಿಂದಲೂ, ವೃಕ್ಷಗಳಿಂದಲೂ, ಮೃಗಗಳಿಂದಲೂ, ಪುಷ್ಪಗಳಿಂದಲೂ ಸರ್ವರೀತಿಯಲ್ಲಿ ಅಲಂಕೃತವಾದ, ಭೂಮಿಯ ಭುಜದಂತೆ ಉನ್ನತವಾದ ಆ ಗಂಧಮಾದನ ಪರ್ವತದ ಮನೋಹರವಾದ ಎಲ್ಲಾ ಶಿಖರಪ್ರದೇಶಗಳಲ್ಲಿ ನೆಟ್ಟದೃಷ್ಟಿಯುಳ್ಳವನಾಗಿ, ದ್ರೌಪದಿಯ ಅಭಿಪ್ರಾಯವನ್ನು ಮನಸ್ಸಿನಲ್ಲಿಯೇ ಸ್ಮರಿಸುತ್ತಾ ಅವನು ಸಂಚರಿಸಿದನು.
ಪುಂಸ್ಕೋಕಿಲನಿನಾದೇಷು ಷಟ್ಪದಾಚರಿತೇಷು ಚ |
ಬದ್ಧಶ್ರೋತ್ರಮನಶ್ಚಕ್ಷುರ್ಜಗಾಮಾಮಿತವಿಕ್ರಮಃ ॥21॥
ಗಂಡುಕೋಗಿಲೆಗಳ ನಿನಾದದಿಂದ ಕೂಡಿದ, ದುಂಬಿಗಳ ಝೇಂಕಾರದಿಂದ ಕೂಡಿದ ಆ ಕಾಡಿನಲ್ಲಿ ಅಮಿತವಿಕ್ರಮನಾದ ಅವನು ತನ್ನ ಶ್ರೋತ್ರ ಮನಸ್ಸು ಮತ್ತು ಚಕ್ಷುಸ್ಸುಗಳನ್ನು ಅವಧಾನದಿಂದ ನೆಟ್ಟು ಮುಂದೆ ಸಾಗಿದನು.
ಆಜಿಘ್ರನ್ ಸ ಮಹಾತೇಜಾಃ ಸರ್ವರ್ತುಕುಸುಮೋದ್ಭವಮ್ |
ಗಂಧಮುದ್ಧತಮುದ್ದಾಮೋ ವನೇ ಮತ್ತ ಇವ ದ್ವಿಪಃ ॥22॥
ಹೀಗೆ ಮದಗಜದಂತೆ ಮುಂದೆ ಸಾಗುತ್ತಿದ್ದ ಉದ್ದಾಮನೂ, ಮಹಾತೇಜಸ್ವಿಯೂ ಆದ ಅವನು ಎಲ್ಲ ಋತುಗಳಲ್ಲಿಯೂ ಅರಳುವ ಪುಷ್ಪಗಳಿಂದ ಉಂಟಾದ ಶ್ರೇಷ್ಠವಾದ ಗಂಧವನ್ನು ಆಘ್ರಾಣಿಸಿದನು.
ಪಿತುಃ ಸಂಸ್ಪರ್ಶಶೀತೇನ ಗಂಧಮಾದನವಾಯುನಾ |
ಹ್ರಿಯಮಾಣಶ್ರಮಃ ಪಿತ್ರಾ ಸಂಪ್ರಹೃಷ್ಟತನೂರುಹಃ ॥23॥
ಸ ಯಕ್ಷಗಂಧರ್ವಸುರಬ್ರಹ್ಮರ್ಷಿಗಣಸೇವಿತಮ್ |
ವಿಲೋಕಯಾಮಾಸ ತದಾ ಪುಷ್ಪಹೇತೋರರಿಂದಮಃ ॥24॥
ತನ್ನ ತಂದೆಯಾದ ವಾಯುವಿನ ಶೀತಲ ಸ್ಪರ್ಶದಿಂದ ಆ ಗಂಧಮಾದನ ಪರ್ವತದಲ್ಲಿ ತನ್ನ ಶ್ರಮವನ್ನು ಕಳೆದುಕೊಂಡು ರೋಮಾಂಚಗೊಂಡ ಆ ಅರಿಂದಮನಾದ ಭೀಮಸೇನನು, ಯಕ್ಷರಿಂದಲೂ, ಗಂಧರ್ವರಿಂದಲೂ, ದೇವತೆಗಳಿಂದಲೂ, ಬ್ರಹ್ಮರ್ಷಿಗಣಗಳಿಂದಲೂ ಸೇವಿತವಾದ ಆ ಪರ್ವತವನ್ನು ಪುಷ್ಪದ ಸಲುವಾಗಿ ನೋಡಿದನು.
ವಿಷಮಛದೈರಚಿತೈರನುಲಿಪ್ತ ಇವಾಂಗುಲ್ಯೈಃ |
ವಲಿಭಿರ್ಧಾತುವಿಚ್ಛೇದೈಃ ಕಾಂಚನಾಂಜನರಾಜತೈಃ ॥25॥
ಸಪಕ್ಷಮಿವ ನೃತ್ಯಂತಂ ಪಾರ್ಶ್ವಲಗ್ನೈಃ ಪಯೋಧರೈಃ |
ಮುಕ್ತಾಹಾರೈರಿವ ಚಿತಂ ಚ್ಯುತೈಃ ಪ್ರಸ್ರವಣೋದಕೈಃ ॥26॥
ಆ ಪರ್ವತವು ಅನೇಕ ಬಣ್ಣದ ಎಲೆಗಳಿಂದ ಕೂಡಿ, ಸುವರ್ಣವರ್ಣದ, ಅಂಜನವರ್ಣದ ಮತ್ತು ರಜತವರ್ಣದ ಅನೇಕ ವಿಧವಾದ ಧಾತುವಿಶೇಷಗಳಿಂದಲೂ ಮತ್ತು ಬಲಿಹಾರಗಳಿಂದಲೂ ಕೂಡಿ ಬಣ್ಣದಿಂದ ಅನುಲೇಪನಗೊಂಡಂತೆ ಇದ್ದಿತು. ಪಾರ್ಶ್ವಲಗ್ನಗಳಾದ ಮೋಡಗಳಿಂದ ಅದು ರೆಕ್ಕೆಗಳನ್ನು ಹೊಂದಿ ನರ್ತನ ಮಾಡುವಂತೆ ತೋರುತ್ತಿತ್ತು. ಮೇಲಿನಿಂದ ಹರಿಯುವ ಝರಿಗಳ ನೀರಿನಿಂದ ಅದು ಮುತ್ತಿನ ಹಾರಗಳಿಂದ ಅಲಂಕೃತವಾದಂತೆ ತೋರುತ್ತಿತ್ತು.
ಅಭಿರಾಮದರೀಕುಂಜನಿರ್ಝರೋದಕಕಂದರಮ್ |

ಅಪ್ಸರೋನೂಪುರರವೈಃ ಪ್ರನೃತ್ತವರಬರ್ಹಿಣಮ್ ॥27॥
ಮನೋಹರವಾದ ಗುಹೆಗಳು, ಲತಾಕುಂಜಗಳು, ಝರಿಗಳ ನೀರು ಮತ್ತು ಕಣಿವೆಗಳಿಂದ ಶೋಭಿತವಾಗಿದ್ದಿತು. ಅಪ್ಸರೆಯರ ನೂಪುರ ಶಬ್ದಗಳನ್ನು ಕೇಳಿ ಶ್ರೇಷ್ಠವಾದ ನವಿಲುಗಳು ನರ್ತನ ಮಾಡುತ್ತಿದ್ದವು.
ದಿಗ್ವಾರಣವಿಷಾಣಾಗ್ರೈರ್ಘೃಷ್ಟೋಪಲಶಿಲಾತಳಮ್ |
ಸ್ರಸ್ತಾಂಶುಕಮಿವಾಕ್ಷೋಭ್ಯೈರ್ನಿಮ್ನಗಾನಿಃಸೃತೈರ್ಜಲೈಃ ॥28॥
ದಿಗ್ಗಜಗಳ ದಂತದ ತುದಿಗಳಿಂದ ಅಲ್ಲಿದ್ದ ಶಿಲಾತಲೆಗಳು ಘರ್ಷಣೆಯನ್ನು ಹೊಂದಿದ್ದವು. ನದಿಗಳಿಂದ ಹರಿಯುವ ಅಕ್ಷೋಭ್ಯವಾದ ಜಲಗಳು ಆ ಪರ್ವತದಿಂದ ಜಾರಿದ ವಸ್ತ್ರಗಳಂತೆ ತೋರುತ್ತಿದ್ದವು.
ಸಶಷ್ಪಕವಲೈಃ ಸ್ವಸ್ಥೈರದೂರಪರಿವರ್ತಿಭಿಃ |
ಭಯಾನಭಿಜ್ಞೈರ್ಹರಿಣೈಃ ಕೌತೂಹಲನಿರೀಕ್ಷಿತಃ ॥29॥
ಬಾಯಲ್ಲಿ ಎಳೆಯ ಹುಲ್ಲಿನ ಗರಿಕೆಗಳನ್ನು ಧರಿಸಿದ ಭಯವನ್ನೇ ತಿಳಿಯದ, ಸಮಾಧಾನದಿಂದ ಹತ್ತಿತರದಲ್ಲೇ ಇರುವ ಜಿಂಕೆಗಳಿಂದ ಅವನು ಕುತೂಹಲದಿಂದ ನೋಡಲ್ಪಟ್ಟನು.
ಚಾಲಯಾನಃ ಸ್ವ (ಯನ್ನೂರು)ವೇಗೇನ ಲತಾಜಾಲಾನ್ಯನೇಕಶಃ |
ಆಕ್ರೀಡಮಾನೋ ಹೃಷ್ಟಾತ್ಮಾ ಶ್ರೀಮಾನ್ ವಾಯುಸುತೋ ಯಯೌ ॥
ತನ್ನ ತೊಡೆಗಳ ವೇಗದಿಂದ ಲತಾಜಾಲಗಳನ್ನು ಭೇದಿಸುತ್ತಾ ಮನಸ್ಸಿನಲ್ಲೇ ಸಂತೋಷಗೊಂಡ ಕಾಂತಿಯುಕ್ತನಾದ ವಾಯುಸುತನಾದ ಆ ಭೀಮಸೇನನು ಹೀಗೆ ಆಟವಾಡುತ್ತಾ ಮುಂದೆ ಸಾಗಿದನು.
ಪ್ರಿಯಾಮನೋರಥಂ ಕರ್ತುಮುದ್ಯತಶ್ಚಾರುಲೋಚನಃ |
ಪ್ರಾಂಶುಃ ಕನಕವರ್ಣಾಭಃ ಸಿಂಹಸಂಹನನೋ ಯುವಾ ॥31॥
ಎತ್ತರವಾದವನೂ, ಸುವರ್ಣವರ್ಣವುಳ್ಳವನೂ, ಸಿಂಹದ ಮೈಕಟ್ಟುಳ್ಳವನೂ, ಯುವಕನೂ, ಚಾರುನೇತ್ರನೂ ಆದ ಅವನು ಪ್ರಿಯೆಯಾದ ದ್ರೌಪದಿಯ ಮನೋರಥವನ್ನು ಪೂರೈಸಲು ಉದ್ಯುಕ್ತನಾಗಿದ್ದನು.
ಮತ್ತವಾರಣವಿಕ್ರಾಂತೋ ಮತ್ತವಾರಣವೇಗವಾನ್ |
ಮತ್ತವಾರಣತಾಮ್ರಾಕ್ಷೋ ಮತ್ತವಾರಣವಾರಣಃ ॥32॥
ಅವನು ಮದಿಸಿದ ಆನೆಯ ಪರಾಕ್ರಮವನ್ನು, ವೇಗವನ್ನು ಹೊಂದಿದ್ದನು. ಮದಿಸಿದ ಆನೆಯಂತೆ ಕೆಂಪಾದ ಕಣ್ಣುಳ್ಳವನಾಗಿ, ಮದ್ದಾನೆಯನ್ನು ತಡೆದು ಓಡಿಸುವ ಸಾಮರ್ಥ್ಯವನ್ನು ಹೊಂದಿದವನಾಗಿದ್ದನು.
ಪ್ರಿಯಪಾರ್ಶ್ವೋಪವಿಷ್ಟಾಭಿರ್ವ್ಯಾವೃತ್ತಾಭಿರ್ವಿಚೇಷ್ಟಿತೈಃ |
ಯಕ್ಷಗಂಧರ್ವಯೋಷಾಭಿರದೃಶ್ಯಾಭಿರ್ನಿರೀಕ್ಷಿತಃ ॥33॥
ಪ್ರಿಯರ ಪಕ್ಕದಲ್ಲಿ ಕುಳಿತು ಇನ್ನೊಬ್ಬರಿಗೆ ಕಾಣದಂತೆ ರಹಸ್ಯಚೇಷ್ಟೆಗಳಲ್ಲಿ ತೊಡಗಿದ್ದ ಯಕ್ಷಗಂಧರ್ವ ವನಿತೆಯರಿಂದ ಅವನು ನೋಡಲ್ಪಟ್ಟನು.
ನವಾವತಾರೋ ರೂಪಸ್ಯ ವಿಕ್ರೀಡನ್ನಿವ ಪಾಂಡವಃ |
ಚಚಾರ ರಮಣೀಯೇಷು ಗಂಧಮಾದನಸಾನುಷು ॥34॥
ಸೌಂದರ್ಯದ ಹೊಸ ಅವತಾರದಂತಿದ್ದ ಪಾಂಡವನಾದ ಭೀಮಸೇನನು ಆಟವಾಡುವವನಂತೆ ಮನೋಹರವಾದ ಗಂಧಮಾದನ ಪರ್ವತದ ತಪ್ಪಲುಗಳಲ್ಲಿ ಸಂಚರಿಸಿದನು.
ಸಂಸ್ಮರನ್ ವಿವಿಧಾನ್ ಕ್ಲೇಶಾನ್ ದುರ್ಯೋಧನಕೃತಾನ್ ಬಹೂನ್ |
ದ್ರೌಪದ್ಯಾ ವನವಾಸಿನ್ಯಾಃ ಪ್ರಿಯಂ ಕರ್ತುಂ ಸಮುದ್ಯತಃ ॥35॥
ಅವನು ದುರ್ಯೋಧನನು ಒಡ್ಡಿದ ವಿವಿಧ ಕ್ಲೇಶಗಳನ್ನು ಸ್ಮರಿಸುತ್ತಾ ವನವಾಸಿನಿಯಾದ ದ್ರೌಪದಿಗೆ ಹಿತವನ್ನು ಮಾಡಲು ಬಯಸಿದನು.
ಸೋಽಚಿಂತಯದ್ ಗತೇ ಸ್ವರ್ಗಮರ್ಜುನೇ ಮಯಿ ಚಾಗತೇ |
ಪುಷ್ಪಹೇತೋಃ ಕಥಂ ತ್ವಾರ್ಯಃ ಕರಿಷ್ಯತಿ ಯುಧಿಷ್ಠಿರಃ ॥36॥
ಒಂದುಕಡೆ ಅರ್ಜುನನು ಸ್ವರ್ಗಕ್ಕೆ ಹೋಗಿರಲು, ಇನ್ನೊಂದು ಕಡೆ ಪುಷ್ಪದ ಸಲುವಾಗಿ ನಾನು ಇಲ್ಲಿಗೆ ಬಂದಿರಲು ಪೂಜ್ಯನಾದ ಯುಧಿಷ್ಠಿರನು ಹೇಗೆ ನಿರ್ವಹಿಸುವನು ಎಂದು ಚಿಂತಿಸಿದನು.
ಸ್ನೇಹಾನ್ ನರವರೋ ನೂನಮವಿಶ್ವಾಸಾದ್ ಬಲಸ್ಯ ಚ |
ನಕುಲಂ ಸಹದೇವಂ ಚ ನ ಮೋಕ್ಷ್ಯತಿ ಯುಧಿಷ್ಠಿರಃ ॥37॥
ನರಶ್ರೇಷ್ಠನಾದ ಯುಧಿಷ್ಠಿರನು ನಕುಲಸಹದೇವರ ಮೇಲೆ ಇರುವ ಸ್ನೇಹದಿಂದಲೂ ಮತ್ತು ಅವರ ಬಲದಲ್ಲಿ ವಿಶ್ವಾಸವಿಲ್ಲದಿರುವುದರಿಂದಲೂ ಅವರನ್ನು ಬಿಟ್ಟುಕೊಡುವುದಿಲ್ಲ.
ಕಥಂ ನು ಕುಸುಮಾವಾಪ್ತಿಃ ಸ್ಯಾಚ್ಛೀಘ್ರಮಿತಿ ಚಿಂತಯನ್ |
ಪ್ರತಸ್ಥೇ ನರಶಾರ್ದೂಲಃ ಪಕ್ಷಿರಾಡಿವ ವೇಗಿತಃ ॥38॥
ಪುಷ್ಪದ ಪ್ರಾಪ್ತಿಯು ಹೇಗೆ ಶೀಘ್ರವಾಗಿ ಉಂಟಾಗುತ್ತದೆ ಎಂದು ಚಿಂತಿಸುತ್ತಾ ನರಶಾರ್ದೂಲನಾದ ಭೀಮಸೇನನು ವೇಗವುಳ್ಳ ಪಕ್ಷಿರಾಜ ಗರುಡನಂತೆ ಹೊರಟನು.
ಸಜ್ಜಮಾನಮನೋದೃಷ್ಟಿಃ ಫುಲ್ಲೇಷು ಗಿರಿಸಾನುಷು |
ದ್ರೌಪದೀವಾಕ್ಯಪಾಥೇಯೋ ಭೀಮಃ ಶೀಘ್ರತರಂ ಯಯೌ ॥39॥
ಅರಳಿನಿಂತ ಪರ್ವತ ತಪ್ಪಲುಗಳಲ್ಲಿ ತನ್ನ ಮನಸ್ಸು ಮತ್ತು ದೃಷ್ಟಿಯನ್ನು ನೆಟ್ಟವನಾಗಿ ದ್ರೌಪದಿಯ ವಚನವನ್ನೇ ಪಾಥೇಯವನ್ನಾಗಿ

ಹೊಂದಿ ಭೀಮನು ವೇಗವಾಗಿ ನಡೆದನು.
ಕಂಪಯನ್ ಮೇದಿನೀಂ ಪದ್ಭ್ಯಾಂ ನಿರ್ಘಾತ ಇವ ಪರ್ವಸು |
ತ್ರಾಸಯನ್ ಗಜಯೂಥಾನಿ ವಾತರಂಹಾ ವೃಕೋದರಃ ||40||
ಆ ವೃಕೋದರನು ತನ್ನ ಪದಾಘಾತಗಳಿಂದ ಭೂಮಿಯನ್ನು ಪರ್ವಕಾಲದ ಸಿಡಿಲಿನಂತೆ ಕಂಪಿಸುತ್ತಾ ಗಜಸಮೂಹಗಳಿಗೆ ಭಯವನ್ನು ಉಂಟುಮಾಡುತ್ತಾ ವಾಯುವೇಗದಿಂದ ನಡೆದನು.
ಸಿಂಹವ್ಯಾಘ್ರಮೃಗಾಂಶ್ಚೈವ ಮರ್ದಯಾನೋ ಮಹಾಬಲಃ |
ಉನ್ಮೂಲಯನ್ ಮಹಾವೃಕ್ಷಾನ್ಪೋಥಯಂಸ್ತರಸಾ ಬಲೀ ||40.1||
ಮಹಾಬಲನಾದ ಅವನು ಸಿಂಹವ್ಯಾಘ್ರಮೃಗಗಳನ್ನು ಮರ್ದಿಸುತ್ತಾ ತನ್ನ ಮಾರ್ಗದಲ್ಲಿ ಸಿಕ್ಕಿದ ಮರಗಳನ್ನು ಗುದ್ದಿ ಉರುಳಿಸುತ್ತಾ ನಡೆದನು.
ಲತಾವಲ್ಲೀಶ್ಚ ವೇಗೇನ ವಿಕರ್ಷನ್ ಪಾಂಡುನಂದನಃ |
ಉಪರ್ಯುಪರಿ ಶೈಲಾಗ್ರಮಾರುರುಕ್ಷುರಿವ ದ್ವಿಪಃ ||41||
ಪಾಂಡುನಂದನನು ಪರ್ವತದ ಶಿಖರವನ್ನು ಏರುವ ಒಂದು ಆನೆಯಂತೆ ತನ್ನ ವೇಗದಿಂದ, ತನ್ನ ಕಾಲುಗಳಿಗೆ ಸಿಕ್ಕಿದ ಲತಾಬಳ್ಳಿಗಳನ್ನು ಎಳೆದುಕೊಂಡು ಹೊರಟನು.
ಜಲಾವಲಂಬೋ(ವಿನರ್ದಮಾನೋ)ಽತಿಭೃಶಂ ಸವಿದ್ಯುದಿವ ತೋಯದಃ |
ವ್ಯನದತ್ ಸುಮಹಾನಾದಂ ಭೀಮಸೇನೋ ಮಹಾಬಲಃ ||42||
ಮಹಾಬಲನಾದ ಭೀಮಸೇನನು ಜಲಾಶ್ರಯವಾದ ಮತ್ತು ಮಿಂಚುಗಳಿಂದ ಕೂಡಿದ ಮೇಘದಂತೆ ಮಹಾನಾದವನ್ನು ಮಾಡಿದನು.
ತೇನ ಶಬ್ದೇನ ಮಹತಾ ಭೀಮಸ್ಯ ಪ್ರತಿಬೋಧಿತಾಃ |
ಗುಹಾಃ ಸಂತತ್ಯಜುರ್ವ್ಯಾಘ್ರಾ ನಿಲಿಲ್ಯುರ್ಬಿಲವಾಸಿನಃ ||43||
ಭೀಮಸೇನನ ಆ ದೊಡ್ಡ ಶಬ್ದದಿಂದ ಎಚ್ಚರಗೊಂಡ ವ್ಯಾಘ್ರಗಳು ತಮ್ಮ ಗುಹೆಗಳನ್ನು ತ್ಯಜಿಸಿದವು. ಬಿಲವಾಸಿಗಳಾದ ಪ್ರಾಣಿಗಳು ಅಲ್ಲಿಯೇ ಅಡಗಿಕೊಂಡವು.
ಸಮುತ್ಪೇತುಃ ಖಗಾಸ್ತ್ರಸ್ತಾ ಮೃಗಯೂಥಾನಿ ದುದ್ರುವುಃ |
ಋಕ್ಷಾಶ್ಚೋತ್ಸಸೃಜುರ್ವೃಕ್ಷಾಂಸ್ತತ್ಯಜುರ್ಹರಯೋ ಗುಹಾಮ್ ||44||
ವ್ಯಜೃಂಭಂತ ಮಹಾಸಿಂಹಾ ಮಹಿಷಾಶ್ಚಾವಲೋಕಯನ್ ||45||
ಪಕ್ಷಿಗಳು ಭಯಗೊಂಡು ಆಕಾಶಕ್ಕೆ ಹಾರಿದವು. ಜಿಂಕೆಯ ಸಮೂಹಗಳು ಓಡಿಹೋದವು. ಕರಡಿಗಳು ತಮ್ಮ ಆವಾಸವೃಕ್ಷಗಳನ್ನು ತ್ಯಜಿಸಿದವು. ಸಿಂಹಗಳು ತಮ್ಮ ಗುಹೆಗಳನ್ನು ತ್ಯಜಿಸಿದವು. ಮಹಾಸಿಂಹಗಳು ಮೈಮುರಿದವು. ಕಾಡುಕೋಣಗಳು ಸುತ್ತಲೂ ನೋಡಿದವು.
ತೇನ ವಿತ್ರಾಸಿತಾ ನಾಗಾಃ ಕರೇಣುಪರಿವಾರಿತಾಃ |
ತದ್ವನಂ ತೇ ಪರಿತ್ಯಜ್ಯ ಜಗ್ಮುರನ್ಯನ್ಮಹಾವನಮ್ ||46||
ಭೀಮನಾದದಿಂದ ಹೆದರಿದ ಹೆಣ್ಣಾನೆಗಳಿಂದ ಪರಿವೃತವಾದ ಗಂಡಾನೆಗಳು ಆ ವನವನ್ನು ತ್ಯಜಿಸಿ ಇನ್ನೊಂದು ಮಹಾವನಕ್ಕೆ ಹೋದವು.
ವರಾಹಮೃಗಸಂಘಾಶ್ಚ ಮಹಿಷಾಶ್ಚ ವನೇಚರಾಃ |
ವ್ಯಾಘ್ರಗೋಮಾಯುಸಂಘಾಶ್ಚ ಪ್ರಣೇದುರ್ಗವಯೈಃ ಸಹ ||47||
ವರಾಹಮೃಗಸಮೂಹಗಳು, ಕಾಡಿನಲ್ಲಿ ಸಂಚರಿಸುವ ಕಾಡುಕೋಣಗಳು, ವ್ಯಾಘ್ರ ಮತ್ತು ನರಿಗಳ ಸಮೂಹಗಳು ಮತ್ತು ಗವಯಗಳೂ ಸಹ ಗರ್ಜಿಸಿದವು.
ರಥಾಂಗಸಾಹ್ವದಾತ್ಯೂಹಾ ಹಂಸಕಾರಂಡವಪ್ಲವಾಃ |
ಶುಕಾಃ ಪುಂಸ್ಕೋಕಿಲಾಃ ಕ್ರೌಂಚಾ ವಿಸಂಜ್ಞಾ ಭೇಜಿರೇ ದಿಶಃ ||48||
ರಥಾಂಗ, ಸಾಹ್ವ, ದಾತ್ಯೂಹ, ಹಂಸ, ಕಾರಂಡವ, ಪ್ಲವ, ಶುಕ, ಪುಂಸ್ಕೋಕಿಲ, ಕ್ರೌಂಚ ಮೊದಲಾದ ಪಕ್ಷಿಗಳು ಪ್ರಜ್ಞಾಹೀನಗಳಾಗಿ ಬೇರೆ ದಿಕ್ಕನ್ನು ಆಶ್ರಯಿಸಿದವು.
ತಥಾನ್ಯೇ ದರ್ಪಿತಾ ನಾಗಾಃ ಕರೇಣುಶರಪೀಡಿತಾಃ |
ಸಿಂಹವ್ಯಾಘ್ರಾಶ್ಚ ಸಂಕ್ರುದ್ಧಾ ಭೀಮಸೇನಮಥಾದ್ರವನ್ |
ಶಕೃನ್ಮೂತ್ರಂ ಚ ಮುಂಚಾನಾ ಭಯವಿಭ್ರಾಂತಮಾನಸಾಃ |
ವ್ಯಾದಿತಾಸ್ಯಾ ಮಹಾರೌದ್ರಾ ವ್ಯನದನ್ ಭೀಷಣಾನ್ ರವಾನ್ ||49||
ಅದರಂತೆ ಹೆಣ್ಣಾನೆಗಳ ಪ್ರೋತ್ಸಾಹನದಿಂದ ದರ್ಪವನ್ನು ಹೊಂದಿದ ಇನ್ನೂ ಕೆಲವು ಗಂಡಾನೆಗಳು ಮತ್ತು ಸಿಂಹವ್ಯಾಘ್ರಗಳು ಭೀಮಸೇನನ ಕಡೆಗೆ ಸಿಟ್ಟಿನಿಂದ ಓಡಿ ಬಂದವು. ಮಹಾಭಯಂಕರವಾದ ಆ ಪ್ರಾಣಿಗಳು ಮನಸ್ಸಿನಲ್ಲಿ ಭಯದಿಂದ ತುಂಬಿ ಮಲಮೂತ್ರಗಳ ವಿಸರ್ಜನೆಯನ್ನು ಮಾಡುತ್ತಾ ಬಾಯಿಗಳನ್ನು ತೆಗೆದು ಮಹಾಭಯಂಕರವಾಗಿ ಶಬ್ದಗಳನ್ನು ಮಾಡಿದವು.
ತತೋ ವಾಯುಸುತಃ ಕ್ರೋಧಾತ್ ಸ್ವಬಾಹುಬಲಮಾಶ್ರಿತಃ |
ಗಜೇನಾನ್ಯಾನ್ ಗಜಾಂಛ್ರೀಮಾನ್ ಸಿಂಹಂ ಸಿಂಹೇನ ವಾ ವಿಭುಃ ||
ತಳಪ್ರಹಾರೈರನ್ಯಾಂಶ್ಚ ವ್ಯಹನತ್ ಪಾಂಡವೋ ಬಲೀ ||51||
ಆಗ ಬಲಿಷ್ಠನಾದ ವಾಯುಸುತನಾದ ಭೀಮಸೇನನು ಕ್ರೋಧಗೊಂಡು ತನ್ನ ಬಾಹುಬಲವನ್ನೇ ಆಶ್ರಯಿಸಿ ಆನೆಯಿಂದ ಆನೆಗಳನ್ನೂ, ಸಿಂಹದಿಂದ ಸಿಂಹಗಳನ್ನೂ, ಹಸ್ತತಳಪ್ರಹಾರದಿಂದಲೇ ಬೇರೆ ಪ್ರಾಣಿಗಳನ್ನೂ ಸಂಹಾರ ಮಾಡಿದನು.

ತೇ ವಧ್ಯಮಾನಾ ಭೀಮೇನ ಸಿಂಹವ್ಯಾಘ್ರತರಕ್ಷವಃ |
ಭಯಾದ್ ವಿಸಸೃಪುಃ ಸರ್ವೇ ಶಕೃನ್ಮೂತ್ರಂ ಸ ಸುಸ್ರುವುಃ ||52||
ಭೀಮಸೇನನಿಂದ ಹೀಗೆ ಪ್ರಹಾರಕ್ಕೆ ಒಳಗಾದ ಸಿಂಹ, ವ್ಯಾಘ್ರ, ಚಿರತೆ ಮೊದಲಾದ ಪ್ರಾಣಿಗಳು ಭಯದಿಂದ ಸಂಚರಿಸಿದವು ಮತ್ತು ಮಲಮೂತ್ರಗಳನ್ನು ವಿಸರ್ಜಿಸಿದವು.
ಪ್ರವಿವೇಶ ತತಃ ಕ್ಷಿಪ್ರಂ ತಾನಪಾಸ್ಯ ಮಹಾಬಲಃ |
ವನಂ ಪಾಂಡುಸುತಃ ಶ್ರೀಮಾನ್ ಶಬ್ದೇನಾಪೂರಯನ್ ದಿಶಃ ||53||
ಮಹಾಬಲನಾದ ಆ ಪಾಂಡುಸುತನು ಆ ಮೃಗಗಳನ್ನು ಅಲ್ಲಿಯೇ ಬಿಟ್ಟು ತನ್ನ ಸಿಂಹನಾದಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬುತ್ತಾ ಇನ್ನೊಂದು ವನವನ್ನು ಪ್ರವೇಶಿಸಿದನು.
ಅಥಾಪಶ್ಯನ್ಮಹಾಬಾಹುರ್ಗಂಧಮಾದನಸಾನುಷು |
ಸುರಮ್ಯಂ ಕದಳೀಷಂಡಂ ಬಹುಯೋಜನವಿಸ್ತೃತಮ್ ||54||
ಅನಂತರ ಆ ಮಹಾಬಾಹುವು ಗಂಧಮಾದನಪರ್ವತದ ಇಳಿಜಾರು ಪ್ರದೇಶಗಳಲ್ಲಿ ಅತ್ಯಂತ ಮನೋಹರವಾದ ಮತ್ತು ಅನೇಕ ಯೋಜನ ವಿಸ್ತಾರವದ ಕದಳೀ ವನವನ್ನು ನೋಡಿದನು.
ತಮಭ್ಯಾಗಚ್ಛದ್ ವೇಗೇನ ಕ್ಷೋಭಯಿಷ್ಯನ್ ಮಹಾಬಲಃ |
ಮಹಾಗಜ ಇವಾಸ್ರಾವೀ ಪ್ರಭಂಜನ್ ವಿವಿಧಾನ್ ದ್ರುಮಾನ್ ||55||
ಮಹಾಬಲನಾದ ಅವನು ಮದವನ್ನು ಸುರಿಸುವ ಮಹಾಗಜದಂತೆ ಅನೇಕ ಮರಗಳನ್ನು ಮುರಿಯುತ್ತಾ ಆ ವನವನ್ನು ಅಲ್ಲೋಲಕಲ್ಲೋಲ ಮಾಡುತ್ತಾ ಆ ಕದಳೀ ವನದ ಕಡೆಗೆ ಬಂದನು.
ಉತ್ಪಾಟ್ಯ ಕದಲೀಸ್ತಂಭಾನ್ ಬಹುತಾಳಸಮುಚ್ಛ್ರಯಾನ್ |
ಚಿಕ್ಷೇಪ ತರಸಾ ಭೀಮಃ ಸಮಂತಾದ್ ಬಲಿನಾಂ ವರಃ ||56||
ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮಸೇನನು ಅನೇಕ ತಾಳವೃಕ್ಷಗಳಷ್ಟು ಎತ್ತರವಾಗಿದ್ದ ಕದಲೀಸ್ತಂಭಗಳನ್ನು ಶೀಘ್ರವಾಗಿ ಕಿತ್ತು ಎಲ್ಲ ದಿಕ್ಕುಗಳಲ್ಲೂ ಎಸೆದನು.
ಮಹಾಂತಮಕರೋತ್ ತತ್ರ ಕುರೂಣಾಮೃಷಭೋ ಬಲೀ |
ವಿಮರ್ದಂ ಸುಮಹಾತೇಜಾ ನೃಸಿಂಹ ಇವ ದರ್ಪಿತಃ ||57||
ಕುರುಶ್ರೇಷ್ಠನಾದ, ಬಲಿಷ್ಠನಾದ ಅವನು ದರ್ಪದಿಂದಲೂ, ಮಹಾತೇಜಸ್ಸಿನಿಂದಲೂ ಕೂಡಿದವನಾಗಿ ನರಸಿಂಹನಂತೆ ಆ ವನದಲ್ಲಿ ದೊಡ್ಡ ವಿಮರ್ದವನ್ನು ಮಾಡಿದನು.
ತತಃ ಸಂನ್ಯಪತಂಸ್ತತ್ರ ಸುಹೂನಿ ಸುಮಹಾಂತಿ ಚ |
ರುರುವಾನಭಸಿಂಹಾಂಶ್ಚ ಮಹಿಷಾಂಶ್ಚ ಜಲಾಶ್ರಯಾಃ ||58||
ಆಗ ಅನೇಕ ಬೃಹದ್ಗಾತ್ರದ ರುರು, ಗಜ, ಸಿಂಹಗಳು ನೀರನ್ನು ಆಶ್ರಯಿಸಿಕೊಂಡಿದ್ದ ಮಹಿಷಗಳು ಅಲ್ಲಿ ನೆಲದ ಮೇಲೆ ಉರುಳಿದವು.
ಪ್ರವಿವೇಶ ತತಃ ಕ್ಷಿಪ್ರಂ ತಾನಪಾಸ್ಯ ಮಹಾಬಲಃ |
ವನಂ ಪಾಂಡುಸುತಃ ಶ್ರೀಮಾನ್ ನಾದೇನಾಪೂರಯನ್ ದಿಶಃ ||59||
ಮಹಾಬಲನಾದ ಪಾಂಡುಸುತನಾದ, ಕಾಂತಿಯುಕ್ತನಾದ ಭೀಮಸೇನನು ಆ ಪ್ರಾಣಿಗಳನ್ನು ಅಲ್ಲಿಯೇ ಬಿಟ್ಟು ತನ್ನ ನಾದದಿಂದ ಎಲ್ಲ ದಿಕ್ಕುಗಳನ್ನೂ ತುಂಬುತ್ತಾ ಮುಂದೆ ಇನ್ನೊಂದು ವನವನ್ನು ಪ್ರವೇಶಿಸಿದನು.
ತೇನ ಶಬ್ದೇನ ಚೈವಾಥ ಭೀಮಸೇನರವೇಣ ಚ |
ವಾನಾಂತರಗತಾಶ್ಚಾಪಿ ವಿತ್ರೇಸುರ್ಮೃಗಪಕ್ಷಿಣಃ ||60||
ಭೀಮಸೇನನ ನಾದದಿಂದಲೂ ಮತ್ತು ಬೇರೆ ಪ್ರಾಣಿಗಳ ಭಯಮೂಲವಾದ ಗರ್ಜನದಿಂದಲೂ ಸಹ ಬೇರೆ ವನದಲ್ಲಿದ್ದ ಮೃಗಪಕ್ಷಿಗಳೆಲ್ಲವೂ ಹೆದರಿ ಹೋದವು.
ತಂ ಶಬ್ದಂ ಸಹಸಾ ಶ್ರುತ್ವಾ ಮೃಗಪಕ್ಷಿಸಮೀರಿತಮ್ |
ಜಲಾರ್ದ್ರಪಕ್ಷಾ ವಿಹಗಾಃ ಸಮುತ್ಪೇತುಃ ಸಹಸ್ರಶಃ ||61||
ಮೃಗಗಳೂ, ಪಕ್ಷಿಗಳೂ ಉಂಟುಮಾಡಿದ ಆ ಆರ್ತನಾದವನ್ನು ಇದ್ದಕ್ಕಿದ್ದಂತೆಯೇ ಕೇಳಿದ ಜಲಪಕ್ಷಿಗಳು ಒದ್ದೆಯಾದ ತಮ್ಮ ರೆಕ್ಕೆಗಳಿಂದಲೇ ಸಾವಿರ ಸಂಖ್ಯೆಯಲ್ಲಿ ಹಾರಿ ಹೋದವು.
ತಾನೌದಕಾನ್ ಪಕ್ಷಿಗಣಾನ್ ನಿರೀಕ್ಷ್ಯ ಭರತರ್ಷಭಃ |
ತಾನೇವಾನುಸರನ್ ರಮ್ಯಂ ದದರ್ಶ ಸುಮಹತ್ಸರಃ ||62||
ಆ ಭರತರ್ಷಭನು ಆ ಜಲಪಕ್ಷಿಗಳನ್ನು ನಿರೀಕ್ಷಿಸಿ ಅವುಗಳನ್ನೇ ಅನುಸರಿಸಿಕೊಂಡು ಹೋಗಿ ದೊಡ್ಡ ಸರೋವರವನ್ನು ನೋಡಿದನು.
ಕಾಂಚನೈಃ ಕದಲೀಷಂಡೈರ್ಮಂದಮಾರುತಕಂಪಿತೈಃ |
ವೀಜ್ಯಮಾನಮಿವಾಕ್ಷೋಭ್ಯಂ ತೀರಾತ್ತೀರವಿಸರ್ಪಿಭಿಃ ||63||
ಮಂದಮಾರುತದಿಂದ ತಂಪಿತವಾದ ಒಂದು ತೀರದಿಂದ ಇನ್ನೊಂದು ತೀರದ ಕಡೆಗೆ ಬಾಗುವ ಸುವರ್ಣಮಯವಾದ ಕದಲೀಸ್ತಂಭಗಳಿಂದ ಗಾಳಿಯನ್ನು ಬೀಸಿದಂತೆ ತೋರುತ್ತಿರುವ ಅಕ್ಷೋಭ್ಯವಾದ ಆ ಸರೋವರವನ್ನು ನೋಡಿದನು.
ತತ್ಸರೋಽಥಾವತೀರ್ಯೈವ ಪ್ರಭೂತನಳಿನೋತ್ಪಲಮ್ |
ಮಹಾಗಜ ಇವೋದ್ದಾಮಶ್ಚಿಕ್ರೀಡ ಬಲವದ್ ಬಲೀ ||64||
ಅನೇಕ ಕಮಲಗಳು ಮತ್ತು ನೈದಿಲೆಗಳು ಇದ್ದ ಆ ಸರೋವರಕ್ಕೆ ಬಲಿಷ್ಠನಾದ ಆ ಭೀಮಸೇನನು ಇಳಿದು ಶ್ರೇಷ್ಠನಾದ ಮಹಾಗಜದಂತೆ ಆಟವಾಡಿದನು.

ವಿಕ್ರೀಡ್ಯ ತಸ್ಮಿನ್ ಸುಚಿರಮುತ್ತತಾರಾಮಿತದ್ಯುತಿಃ |
ಕ್ಷೋಭಯನ್ ಸಲಿಲಂ ಭೀಮಃ ಪ್ರಭಿನ್ನ ಇವ ವಾರಣಃ ॥65॥
ಅಮಿತದ್ಯುತಿಯಾದ ಆ ಭೀಮಸೇನನು ಬಹಳ ಸಮಯದವರೆಗೆ ಆ ಸರೋವರದಲ್ಲಿ ಆಡಿ ಮದ್ದಾನೆಯಂತೆ ನೀರನ್ನು ಕ್ಷೋಭೆಗೊಳಿಸುತ್ತಾ ನೀರಿನಿಂದ ಮೇಲೆದ್ದನು.
ತತೋ ಜಗಾಹೇ ವೇಗೇನ ತದ್ವನಂ ಬಹುಪಾದಪಮ್ |
ದಧ್ಮೌ ಚ ಶಂಖಂ ಸ್ವನವತ್ ಸರ್ವಪ್ರಾಣೇನ ಪಾಂಡವಃ ॥66॥
ಆಸ್ಫೋಟಯಚ್ಚ ಬಲವಾನ್ ಭೀಮಃ ಸಂನಾದಯನ್ ದಿಶಃ |
ಅನಂತರ ತನ್ನ ಎಲ್ಲಾ ಪ್ರಾಣಬಲದಿಂದ ಶಂಖವನ್ನು ಊದುತ್ತಾ ಆ ಪಾಂಡವನು ಅನೇಕ ವೃಕ್ಷಗಳಿಂದ ಆ ವನವನ್ನು ಪ್ರವೇಶಿಸಿದನು. ಬಲಿಷ್ಠನಾದ ಭೀಮನು ತನ್ನ ಭುಜಗಳನ್ನು ತಟ್ಟಿ ಆ ನಾದದಿಂದ ಎಲ್ಲ ದಿಕ್ಕುಗಳನ್ನೂ ತುಂಬಿದನು.
ತಸ್ಯ ಶಂಖಸ್ಯ ಶಬ್ದೇನ ಭೀಮಸೇನವರೇಣ ಚ |
ಬಾಹುಶಬ್ದೇನ ಚೋಗ್ರೇಣ ನಂದತೀವ ಗಿರೇರ್ಗುಹಾಃ ॥67॥
ಅವನ ಶಂಖಧ್ವನಿಯಿಂದಲೂ ಮತ್ತು ಗರ್ಜನಗಳಿಂದಲೂ ಮತ್ತು ಭಯಂಕರವಾದ ಭುಜದ ತಟ್ಟುವಿಕೆಯಿಂದಲೂ ಆ ಪರ್ವತದ ಗುಹೆಗಳು ಗರ್ಜಿಸುವಂತೆ ತೋರುತ್ತಿದ್ದವು.
ತತಃ ಶಂಖಸ್ವನಂ ಶ್ರುತ್ವಾ ನರ್ದಿತಂ ಚ ಮುಹುರ್ಮುಹುಃ
ವೃಕ್ಷಾಣಾಂ ಭಜ್ಯಮಾನಾನಾಂ ಶಬ್ದಂ ಶ್ರುತ್ವಾ ತದಾ ಗಿರೌ |
ಗಂಧಮಾದನಪಾರ್ಶ್ವಸ್ಥೋ ರಾಮಸ್ಯಾಭಿಮತಃ ಸರವಾ |
ಹನೂಮಾನ್ನಾಮ ಸ ಕಪಿರ್ಲಾಂಗೂಲಮಧುನೋತ್ತತಃ |
ಆಗ ಆ ಶಂಖಸ್ವನವನ್ನು, ಮತ್ತೆ ಮತ್ತೆ ಉಂಟಾಗುತ್ತಿದ್ದ ಗರ್ಜನೆಯನ್ನು, ಮುರಿಯುತ್ತಿರುವ ವೃಕ್ಷಗಳ ಶಬ್ದವನ್ನು ಕೇಳಿ ಗಂಧಮಾದನ ಪರ್ವತದ ಪಾರ್ಶ್ವದಲ್ಲಿದ್ದ ರಾಮನಿಗೆ ಅಭಿಮತವಾದ ಮತ್ತು ಸೆನೇಹಿತನಾದ ಹನುಮಾನ್ ಎಂಬ ಕಪಿಯು ತನ್ನ ಬಾಲವನ್ನು ಅಲ್ಲಾಡಿಸಿದನು.
ತಸ್ಯ ದೋಧೂಯಮಾನಸ್ಯ ಲಾಂಗೂಲಂ ಲೀಲಯಾ ಮುಹುಃ |
ತೇನ ಲಾಂಗೂಲಶಬ್ದೇನ ಸ್ವನಂತೀವ ದಿಶೋ ದಶ |
ತತಃ ಪೃಥ್ವೀ ಚ ಶೈಲಾಶ್ಚ ಪ್ರಕಂಪಿತಮಿವಾಭವತ್ ॥
ಅವನು ತನ್ನ ಬಾಲವನ್ನು ಹಾಗೆ ಲೀಲೆಯಿಂದ ಅಲ್ಲಾಡಿಸುತ್ತಿರಲು ಆ ಶಬ್ದದಿಂದ ಹತ್ತು ದಿಕ್ಕುಗಳು ಪ್ರತಿಧ್ವನಿಸುವಂತೆ ತೋರಿದವು. ಮತ್ತು ಭೂಮಿಯು ಮತ್ತು ಪರ್ವತಗಳು ಅಲುಗಾಡುವಂತೆ ತೋರಿದವು.
ತಂ ವಜ್ರನಿಷ್ಪೇಷಸಮಮಾಸ್ಫೋಟಿತಮಹಾರವಮ್ |
ಶ್ರುತ್ವಾ ಶೈಲಗುಹಾಸುಪ್ತೈಃ ಸಿಂಹೈರ್ಮುಕ್ತೋ ಮಹಾಸ್ವನಃ ॥68॥
ವಜ್ರನಿರ್ಘಾತಕ್ಕೆ ಸಮನಾದ ಭುಜಶಬ್ದಗಳನ್ನು ಮತ್ತು ಗರ್ಜನೆಗಳನ್ನು ಕೇಳಿದ ಪರ್ವತದ ಗುಹೆಗಳಲ್ಲಿ ಮಲಗಿದ ಸಿಂಹಗಳು ತಾವೂ ದೊಡ್ಡ ಪ್ರತಿಗರ್ಜನೆಯನ್ನು ಮಾಡಿದವು.
ಸಿಂಹನಾದಭಯತ್ರಸ್ತೈಃ ಕುಂಜರೈರಪಿ ಭಾರತ |
ಮುಕ್ತೋ ವಿರಾವಃ ಸುಮಹಾನ್ ಪರ್ವತೋ ಯೇನ ಪೂರಿತಃ ॥69॥
ಎಲೈ ಭಾರತನೇ, ಈ ಸಿಂಹಗರ್ಜನೆಗಳಿಂದ ಉಂಟಾದ ಭಯದಿಂದ ಆನೆಗಳು ಗೀಳಿಟ್ಟವು. ಆ ದೊಡ್ಡ ಪರ್ವತವೆಲ್ಲವೂ ಆನೆಗಳ ಬೃಮಣ ಸ್ವರದಿಂದ ತುಂಬಿಹೋಯಿತು.
ತಂ ತು ನಾದಂ ತತಃ ಶ್ರುತ್ವಾ ಮುಕ್ತಂ ವಾನರಪುಂಗವಃ |
ಪ್ರಾಜೃಂಭತ ಮಹಾಕಾಯೋ ಹನೂಮಾನ್ನಾಮ ವಾನರಃ ॥70॥
ಈ ಹೊರಹೊಮ್ಮಿದ ಗರ್ಜನೆಗಳನ್ನು ಕೇಳಿದ ಹನುಮಂತನೆಂಬ ಮಹಾಕಾಯನಾದ ಕಪಿಶ್ರೇಷ್ಠನು ಮೈಮುರಿದನು.
ದಿವಂಗಮಂ ರುರೋಧಾಥ ಮಾರ್ಗಂ ಭೀಮಸ್ಯ ಕಾರಣಾತ್ |
ಅನೇನ ಹಿ ಪಥಾ ಮಾ ವೈ ಗಚ್ಛೇದಿತಿ ವಿಚಾರ್ಯ ಸಃ |
ಆಸ್ತ ಏಕಾಯನೇ ಮಾರ್ಗೇ ಕದಲೀಷಂಡಮಂಡಿತೇ ॥
ಭ್ರಾತುರ್ಭೀಮಸ್ಯ ರಕ್ಷಾರ್ಥಂ ತಂ ಮಾರ್ಗಮವರುಧ್ಯ ವೈ |
ಮಾಽತ್ರ ಪ್ರಾಪ್ಸ್ಯತಿ ಶಾಪಂ ವಾ ಧರ್ಷಣಾಂ ವೇತಿ ಪಾಂಡವಃ |
ಹನುಮಂತನು ಭೀಮನು ಈ ಮಾರ್ಗದಿಂದ ಮುಂದೆ ಹೋಗಬಾರದು ಎಂದು ವಿಚಾರ ಮಾಡಿ ತಮ್ಮನಾದ ಭೀಮನ ರಕ್ಷಣೆಗೋಸ್ಕರ ಮಾರ್ಗವನ್ನು ತಡೆದು ಕದಲೀಷಂಡದ ಮಧ್ಯದಲ್ಲಿ ಒಬ್ಬರೇ ನಡೆದು ಹೋಗುವ ಹಾದಿಯನ್ನು (ಕಾಲುದಾರಿಯನ್ನು) ತಡೆದನು. ಭೀಮನಿಗೆ ಇಲ್ಲಿ ಯಾವ ಶಾಪವಾಗಲೀ ಅಥವಾ ಅವಮಾನವಾಗಲೀ ಉಂಟಾಗದಿರಲಿ ಎಂದು ಅವನು ದಾರಿಯನ್ನು ತಡೆದನು.
ಕದಲೀಷಂಡಮಧ್ಯಸ್ಥೋ ಹ್ಯೇವಂ ಸಂಚಿಂತ್ಯ ವಾನರಃ |
ಭ್ರಾತರಂ ಭೀಮಸೇನಂ ತು ವಿಜ್ಞಾಯ ಹನುಮಾನ್ ಕಪಿಃ ॥71॥
ಜೃಂಭಮಾಣಃ ಸುವಿಪುಲಂ ಶಕ್ರಧ್ವಜಮಿವೋಚ್ಛ್ರಿತಮ್ |
ಆಸ್ಫೋಟಯಚ್ಚ ಲಾಂಗೂಲಮಿಂದ್ರಾಶನಸಮಸ್ವನಮ್ ॥72॥
ಕದಲೀಷಂಡಮಧ್ಯದಲ್ಲಿದ್ದ ಕಪಿಯಾದ ಹನುಮಂತನು ತನ್ನ ತಮ್ಮನಾದ ಭೀಮಸೇನನನ್ನು ತಿಳಿದು ಈ ರೀತಿಯಲ್ಲಿ ವಿಚಾರವನ್ನು ಮಾಡಿ ತನ್ನ ಮೈಯನ್ನು ಮುರಿಯುತ್ತಾ ಚಕ್ರಧ್ವಜದಂತೆ ಎತ್ತರವಾದ ತನ್ನ ಬಾಲವನ್ನು ಇಂದ್ರಾಯುಧವಾದ ವಜ್ರಕ್ಕೆ ಸಮಾನವಾದ

ಕಠೋರ ಶಬ್ದವನ್ನು ಮಾಡುವಂತೆ ನೆಲಕ್ಕೆ ಅಪ್ಪಳಿಸಿದನು.
ತಸ್ಯ ಲಾಂಗೂಲನಿನದಂ ಪರ್ವತಃ ಸುಗುಹಾಮುಖೈಃ |
ಹುಂಕಾರಮಿವ ಗೌರ್ನರ್ದನ್ನುತ್ಸಸರ್ಜ ಸಮಂತತಃ ॥73॥
ಆ ಬಾಲದ ಶಬ್ದವನ್ನು ಪರ್ವತವು ವೃಷಭದ ಉದ್ಗಾರದಂತೆ ತನ್ನ ಗುಹಾಮುಖಗಳಿಂದ ಎಲ್ಲ ಕಡೆಯಲ್ಲಿಯೂ ಹೊರಚೆಲ್ಲಿತು.
ಸ ಲಾಂಗೂಲರವಸ್ತಸ್ಯ ಮತ್ತವಾರಣನಿಸ್ವನಮ್ |
ಅಂತರ್ಧಾಯ ವಿಚಿತ್ರೇಷು ಚಚಾರ ಗಿರಿಸಾನುಷು ॥74॥
ಮದಿಸಿದ ಆನೆಯ ಗರ್ಜನೆಯಂತಿದ್ದ ಆ ಲಾಂಗೂಲಶಬ್ದವು ಆ ವಿಚಿತ್ರವಾದ ಪರ್ವತದ ತಪ್ಪಲುಗಳಲ್ಲಿ ಎಲ್ಲ ಕಡೆಯಲ್ಲಿಯೂ ಸಂಚರಿಸಿತು.
ತಸ್ಯ ಶ್ರುತ್ವಾ ತು ನಿನದಂ ಮಹಾಮೇಘರವಸ್ವನಮ್ |
ಪ್ರತಿನೇದುರ್ಗಜಾಃ ಸಿಂಹಾ ವಿತ್ರೇಸುಶ್ಚ ಮೃಗದ್ವಿಜಾಃ ॥74.5॥
ಸ ಭೀಮಸೇನಸ್ತಚ್ಛ್ರುತ್ವಾ ಸಂಪ್ರಹೃಷ್ಟತನೂರುಹಃ |
ಶಬ್ದಪ್ರಭವಮನ್ವಿಚ್ಛಂಶ್ಚಚಾರ ಕದಲೀವನಮ್ ॥75॥
ಮಹಾಮೇಘ ಗರ್ಜನೆಯಂತಿದ್ದ ಆ ನಾದವನ್ನು ಕೇಳಿ ಆನೆಗಳು ಮತ್ತು ಸಿಂಹಗಳು ಪ್ರತಿಯಾಗಿ ಗರ್ಜಿಸಿದುವು. ಜಿಂಕೆಗಳು ಮತ್ತು ಪಕ್ಷಿಗಳು ಹೆದರಿ ಹೋದವು. ಭೀಮಸೇನನಾದರೂ ಆ ಶಬ್ದವನ್ನು ಕೇಳಿ ರೋಮಾಂಚಿತನಾಗಿ ಶಬ್ದದ ಉತ್ಪತ್ತಿ ಸ್ಥಾನವನ್ನು ಹುಡುಕುತ್ತಾ ಕದಳೀ ವನದಲ್ಲಿ ಸಂಚರಿಸಿದನು.
ಲಾಂಗೂಲಾಸ್ಫೋಟಶಬ್ದಾಚ್ಚ ಚಲಿತಃ ಸ ಮಹಾಗಿರಿಃ |
ವಿಘೂರ್ಣಮಾನಃ ಸಹಸಾ ಸಮಂತಾಚ್ಚ ವ್ಯಶೀರ್ಯತ ॥76॥
ಆ ಲಾಂಗೂಲಶಬ್ದದಿಂದ ಆ ಪರ್ವತವು ಕಂಪಿಸಿ ಇದ್ದಕ್ಕಿದ್ದಂತೆಯೇ ಎಲ್ಲ ಕಡೆಯಲ್ಲಿಯೂ ಬಿರಿಯಿತು.
ಕದಲೀವನಮಧ್ಯಸ್ಥವಿಪಿನೇ ಸ ಶಿಲಾತಳೇ |
ದದರ್ಶ ಸುಮಹಾಬಾಹುರ್ವಾನರಾಧಿಪತಿಂ ತದಾ ॥77॥
ಆಗ ಮಹಾಬಾಹುವಾದ ಭೀಮಸೇನನು ಕದಳೀವನದ ಮಧ್ಯದಲ್ಲಿ ಒಂದು ಎತ್ತರವಾದ ಶಿಲಾತಳದಲ್ಲಿ ಕುಳಿತಿದ್ದ ವಾನರಾಧಿಪತಿಯಾದ ಹನುಮಂತನನ್ನು ನೋಡಿದನು.
ವಿದ್ಯುತ್ಸಂಪಾತನಿನದಂ ವಿದ್ಯುತ್ಸಂಪಾತಚಂಚಲಮ್ ॥78॥
ಬಾಹುಸ್ವಸ್ತಿಕವಿನ್ಯಸ್ತಪೀನಹ್ರಸ್ವಶಿರೋಧರಮ್ |
ಸ್ಕಂಧಭೂಯಿಷ್ಠಕಾಯತ್ವಾತ್ ತನುಮಧ್ಯಕಟೀತಟಮ್ ॥79॥
ವಿದ್ಯುತ್ತಿನ ಪ್ರಹಾರದಂತೆ ನಾದವುಳ್ಳ, ವಿದ್ಯುತ್ತಿನಂತೆ ಚಂಚಲವಾದ, ಕಟ್ಟಿದ ಬಾಹುಗಳ ಮೇಲೆ ಇರಿಸಲ್ಪಟ್ಟ ವೃತ್ತವಾದ ಮತ್ತು ಹ್ರಸ್ವವಾದ ಕತ್ತುಳ್ಳ, ಬಲಿಷ್ಠವಾದ ಭುಜಗಳಿಂದ ಕೂಡಿದ ಕಾರಣದಿಂದ ಅಲ್ಪವಾದ ಉದರ ಮತ್ತು ಕಟಿಪ್ರದೇಶವುಳ್ಳ, ಹನುಮಂತನನ್ನು ನೋಡಿದನು.
ಕಿಂಚಿಚ್ಚಾಭುಗ್ನಶೀರ್ಷೇಣ ದೀರ್ಘರೋಮಾಂಚಿತೇನ ಚ |
ಲಾಂಗೂಲೇನೋರ್ಧ್ವಗತಿನಾ ಧ್ವಜೇನೇವ ವಿರಾಜಿತಮ್ ॥80॥
ಹ್ರಸ್ವೌಷ್ಠಂ ತಾಮ್ರಜಿಹ್ವಾಸ್ಯಂ ರಕ್ತಕರ್ಣಂ ಚಲದ್‌ಭ್ರುವಮ್ |
ಅಪಶ್ಯದ್ ವದನಂ ತಸ್ಯ ರಶ್ಮಿವಂತಮಿವೋಡುಪಮ್ ॥81॥
ತಗ್ಗಿಸಿದ ತಲೆಯನ್ನು ಉಳ್ಳವನಾಗಿದ್ದಂತಹ, ಉದ್ದವಾದ ರೋಮಗಳಿಂದ ಕೂಡಿದಂತಹ ಮೇಲ್ಮುಖವಾಗಿ ನಿಂತ ಇಂದ್ರಧ್ವಜದಂತೆ ಶೋಭಿಸುವ ಬಾಲದಿಂದ ವಿರಾಜಿತನಾದಂತಹ, ಸಣ್ಣ ತುಟಿಗಳನ್ನು ಉಳ್ಳಂತಹ, ಕೆಂಪಾದ ನಾಲಿಗೆ, ಮುಖ ಮತ್ತು ಕರ್ಣಗಳನ್ನು ಉಳ್ಳಂತಹ, ಚಲಿಸುವ ಹುಬ್ಬುಗಳನ್ನು ಉಳ್ಳಂತಹ ಮತ್ತು ಕಿರಣಗಳಿಂದ ಕೂಡಿದ ಚಂದ್ರನಂತೆ ಶೋಭಿಸುವ ಮುಖವನ್ನು ಉಳ್ಳಂತಹ ಹನುಮಂತನನ್ನು ನೋಡಿದನು.
ವದನಾಭ್ಯಂತರಗತೈಃ ಶುಕ್ಲೈರ್ದಂತೈರಲಂಕೃತಮ್ |
ಕೇಸರೋತ್ಕರಸಮ್ಮಿಶ್ರಮಶೋಕಾನಾಮಿವೋತ್ಕರಮ್ ॥82॥
ಹಿರಣ್ಮಯೀನಾಂ ಮಧ್ಯಸ್ಥಂ ಕದಲೀನಾಂ ಮಹಾದ್ಯುತಿಮ್ |
ದೀಪ್ಯಮಾನೇನ ವಪುಷಾ ಸ್ವರ್ಚಿಷ್ಮಂತಮಿವಾನಲಮ್ ॥83॥
ನಿರೀಕ್ಷಂತಮಮಿತ್ರಘ್ನಂ ಲೋಚನೈರ್ಮಧುಪಿಂಗಲೈಃ ॥84॥
ತಂ ವಾನರವರಂ ಧೀಮಾನತಿಕಾಯಂ ಮಹಾಬಲಮ್ ॥85॥
ವದನದೊಳಗೆ ತೋರಿಬರುತ್ತಿದ್ದ ಶುಕ್ಲದಂತಗಳಿಂದ ಅಲಂಕೃತನಾಗಿದ್ದಂತಹ, ಅಶೋಕ ಪುಷ್ಪದ ಕೇಸರಗಳಂತೆ ಶೋಭಿಸುವ ಕೇಸರಗಳಿಂದ ಕೂಡಿದ್ದಂತಹ, ಸುವರ್ಣಮಯವಾದ ಕದಲೀವೃಕ್ಷಗಳ ಮಧ್ಯದಲ್ಲಿದ್ದಂತಹ, ಮಹಾಕಾಂತಿಯುಳ್ಳಂತಹ ಹೊಳೆಯುವ ತನ್ನ ದೇಹದಿಂದ ಕಿಡಿಗಳಿಂದ ಕೂಡಿದ ಅಗ್ನಿಯಂತಿದ್ದಂತಹ, ತನ್ನ ಕಂದು ಕೆಂಪು ಬಣ್ಣಗಳಿಂದ ಕಣ್ಣುಗಳಿಂದ ನೋಡುತ್ತಿದ್ದಂತಹ, ಶತ್ರುಸಂಹಾರಕನಾಗಿದ್ದಂತಹ, ಮಹಾಬಲಿಷ್ಠನಾಗಿದ್ದಂತಹ, ದೊಡ್ಡ ಶರೀರವನ್ನು ಹೊಂದಿದ್ದಂತಹ, ಸ್ವರ್ಗದ ಮಾರ್ಗವನ್ನು ಆವರಿಸಿ ಕುಮಾರಪರ್ವತದಂತೆ ಇದ್ದಂತಹ ಆ ಕಪಿಶ್ರೇಷ್ಠನನ್ನು ಮೇಧಾವಿಯಾದ ಭೀಮಸೇನನು ನೋಡಿದನು.
ಭೀಮೋ ಭೀಮಬಲಸ್ತತ್ರ ಪ್ರವಿಷ್ಟಃ ಕದಲೀವನಮ್ |
ಅಪಶ್ಯದ್ ವಾನರಂ ಸುಪ್ತಮೇಕಾಯನಗತೇ ಪಥಿ |
ತಸ್ಯ ಪ್ರಬೋಧನಾರ್ಥಾಯ ಸಿಂಹನಾದಮಥಾಕರೋತ್ ॥86॥

ಅಥೋಪಸೃತ್ಯ ತರಸಾ ವಿಭೀರ್ಭೀಮಸ್ತತೋ ಬಲೀ |
ಸಿಂಹನಾದಂ ಚಕಾರೋಗ್ರಂ ವಜ್ರಾಶನಿಸಮಂ ಬಲೀ |
ತೇನ ಶಬ್ದೇನ ಭೀಮಸ್ಯ ವಿತ್ರೇಸುರ್ಮೃಗಪಕ್ಷಿಣಃ ॥87॥
ಮಹಾಬಲಶಾಲಿಯಾದ ಭೀಮನು ಕದಳೀವನವನ್ನು ಪ್ರವೇಶಿಸಿ ಒಬ್ಬರು ಮಾತ್ರ ನಡೆಯಬಹುದಾದ ಕಾಲುದಾರಿಯಲ್ಲಿ ನಿದ್ರಿಸುತ್ತಿದ್ದ ಹನುಮಂತನನ್ನು ನೋಡಿದನು. ಅನಂತರ ಬಲಿಷ್ಠನಾದ ಭೀಮಸೇನನು ಯಾವ ಭಯವೂ ಇಲ್ಲದೆ ಶೀಘ್ರವಾಗಿ ಅವನನ್ನು ಸಮೀಪಿಸಿ ವಜ್ರದಂತೆ ಸಿಡಿಲಿನಂತೆ ಕಠೋರವಾದ ಮತ್ತು ಭಯಂಕರವಾದ ಸಿಂಹನಾದವನ್ನು ಮಾಡಿದನು. ಭೀಮನ ಆ ಸಿಂಹನಾದಕ್ಕೆ ಮೃಗಪಕ್ಷಿಗಳು ಹೆದರಿ ಹೋದವು.
ಹನೂಮಾಂಶ್ಚ ಮಹಾಸತ್ತ್ವ ಈಷದುನ್ಮೀಲ್ಯ ಲೋಚನೇ |
ದೃಷ್ಟ್ವಾ ತಮಥ ಸಾವಜ್ಞಂ ಲೋಚನೈರ್ಮಧುಪಿಂಗಲೈಃ ॥88॥
ತತಃ ಪವನಜಃ ಶ್ರೀಮಾನಂತಿಕಸ್ಥಂ ಮಹೌಜಸಮ್ |
ಸ್ಮಿತೇನ ಚೈನಮಾಸಾದ್ಯ ಹನೂಮಾನಿದಮಬ್ರವೀತ್ ॥88.1॥
ಮಹಾಬಲಶಾಲಿಯಾದ ಹನುಮಂತನಾದರೂ ತನ್ನ ಕಣ್ಣುಗಳನ್ನು ಸ್ವಲ್ಪ ತೆರೆದು ತನ್ನ ಕಪ್ಪುಮಿಶ್ರಿತವಾದ ಕೆಂಪುಕಣ್ಣುಗಳಿಂದ ಭೀಮನನ್ನು ತಿರಸ್ಕಾರಪೂರ್ವಕವಾಗಿ (ಲೀಲೆಯಿಂದ) ನೋಡಿ ಹತ್ತಿರದಲ್ಲಿದ್ದ ಕಾಂತಿಯುಕ್ತನಾದ ಆ ಬಲಶಾಲಿಯನ್ನು ಗಮನಿಸಿ ಮುಗುಳ್ನಗೆಯಿಂದ ಅವನನ್ನು ಸ್ವೀಕರಿಸಿ ಪವನಸುತನಾದ ಹನುಮಂತನು ಹೀಗೆ ಮಾತನಾಡಿದನು.
ಕಿಮರ್ಥಂ ಸರುಜಸ್ತೇಽಹಂ ಸುಖಸುಪ್ತಃ ಪ್ರಬೋಧಿತಃ |
ನನು ನಾಮ ತ್ವಯಾ ಕಾರ್ಯಾ ದಯಾ ಭೂತೇಷು ಜಾನತಾ ॥89॥
ರೋಗಗ್ರಸ್ತನಾಗಿ ಸುಖವಾಗಿ ಮಲಗಿದ್ದ ನನ್ನನ್ನು ಏಕೆ ಎಬ್ಬಿಸಿದೆ? ತಿಳಿದವನಾದ ನೀನು ಎಲ್ಲ ಪ್ರಾಣಿಗಳಲ್ಲಿಯೂ ದಯೆಯನ್ನು ಮಾಡಬೇಕಷ್ಟೆ?
ವಯಂ ಧರ್ಮಂ ನ ಜಾನೀಮಸ್ತಿರ್ಯಗ್ಯೋನಿಮುಪಾಶ್ರಿತಾಃ |
ನರಾಸ್ತು ಬುದ್ಧಿಸಂಪನ್ನಾ ದಯಾಂ ಕುರ್ವಂತಿ ಜಂತುಷು ॥90॥
ನಾವು ನೀಚಯೋನಿಯಲ್ಲಿ ಜನಿಸಿ ಧರ್ಮಜ್ಞಾನಶೂನ್ಯರಾಗಿದ್ದೇವೆ. ಆದರೆ ಬುದ್ಧಿಸಂಪನ್ನರಾದ ಮನುಷ್ಯರು ಮಾತ್ರ ಎಲ್ಲ ಜಂತುಗಳಲ್ಲಿಯೂ ದಯೆಯನ್ನು ತೋರಿಸುತ್ತಾರೆ.
ಕ್ರೂರೇಷು ಕರ್ಮಸು ಕಥಂ ದೇಹವಾಕ್ಚಿತ್ತದೂಷಿಷು |
ಧರ್ಮಘಾತಿಷು ಸಜ್ಜಂತೇ ಬುದ್ಧಿಮಂತೋ ಭವದ್ವಿಧಾಃ ॥91॥
ನಿನ್ನಂತಹ ಬುದ್ಧಿವಂತರು ದೇಹವಾಕ್ಚಿತ್ತಗಳನ್ನು ಕೆಡಿಸುವ ಧರ್ಮನಾಶಕವಾದ ಕ್ರೂರ ಕರ್ಮಗಳಲ್ಲಿ ಹೇಗೆ ತೊಡಗುತ್ತಾರೆ?
ನ ತ್ವಂ ಧರ್ಮಂ ವಿಜಾನಾಸಿ ಬುಧಾ ನೋಪಾಸಿತಾಸ್ತ್ವಯಾ |
ಅಲ್ಪಬುದ್ಧಿತಯಾ ಬಾಲ್ಯಾದುತ್ಸಾದಯಸಿ ಯನ್ಮೃಗಾನ್ ॥92॥
ನೀನು ಧರ್ಮವನ್ನು ತಿಳಿದಿಲ್ಲ ಮತ್ತು ಜ್ಞಾನಿಗಳ ಸೇವೆಯನ್ನು ಮಾಡಿಲ್ಲ. ಏಕೆಂದರೆ ಅಲ್ಪಬುದ್ಧಿಯುಳ್ಳವನಾಗಿ ಹುಡುಗಾಟದಿಂದ ಎಲ್ಲಾ ಪ್ರಾಣಿಗಳನ್ನೂ ನಾಶಮಾಡುತ್ತಿದ್ದೀಯೆ.
ಬ್ರೂಹಿ ಕಸ್ತ್ವಂ ಕಿಮರ್ಥಂ ವಾ ಕಿಮಿದಂ ವನಮಾಗತಃ |
ವರ್ಜಿತಂ ಮಾನುಷೈರ್ಭಾವೈಸ್ತಥೈವ ಪುರುಷೈರಪಿ ॥93॥
ನೀನು ಯಾರು, ಮತ್ತು ಮಾನುಷಭಾವದಿಂದಲೂ ಮತ್ತು ಮನುಷ್ಯರಿಂದಲೂ ರಹಿತವಾದ ಈ ವನಕ್ಕೆ ಏತಕ್ಕೆ ಬಂದೆ ಎಂದು ಹೇಳು.
ಕ್ವ ಚ ತ್ವಯಾದ್ಯ ಗಂತವ್ಯಂ ಪ್ರಬ್ರೂಹಿ ಪುರುಷರ್ಷಭ |
ಅತಃ ಪರಮಗಮ್ಯೋಽಯಂ ಪರ್ವತಃ ಸುದುರಾರುಹಃ ॥94॥
ಎಲೈ ಪುರುಷಶ್ರೇಷ್ಠನೇ, ಈ ದಿನ ನೀನು ಎಲ್ಲಿಗೆ ಹೋಗಲು ಉದ್ದೇಶಿಸಿದ್ದೀಯೆ ಎಂದು ಹೇಳು. ಇಲ್ಲಿಂದ ಮುಂದೆ ಈ ಪರ್ವತವು ಅಗಮ್ಯವಾದುದು ಮತ್ತು ಬಹಳ ಕಷ್ಟದಿಂದ ಮಾತ್ರ ಏರಲು ಸಾಧ್ಯವಾದುದು.
ವಿನಾ ಸಿದ್ಧಗತಿಂ ವೀರ ಗತಿರತ್ರ ನ ವಿದ್ಯತೇ |
ದೇವಲೋಕಸ್ಯ ಮಾರ್ಗೋಽಯಮಗಮ್ಯೋ ಮಾನುಷೈಃ ಸದಾ |
ಕಾರುಣ್ಯಾತ್ ತ್ವಾಮಹಂ ವೀರ ವಾರಯಾಮಿ ನಿಬೋಧ ಮೇ ॥95॥
ಇಲ್ಲಿ ಸಿದ್ಧರಿಗೆ ಮಾತ್ರ ಒಂದು ಮಾರ್ಗವಿದೆ. ಬೇರೆಯವರಿಗೆ ಮಾರ್ಗವಿಲ್ಲ. ಎಲೈ ವೀರನೇ, ನಿನ್ನ ಮೇಲಿನ ಕರುಣೆಯಿಂದ ನಾನು ನಿನ್ನನ್ನು ತಡೆಯುತ್ತಿದ್ದೇನೆ. ಇದನ್ನು ನನ್ನಿಂದ ತಿಳಿ.
ನಾತಃ ಪರಂ ತ್ವಯಾ ಶಕ್ಯಂ ಗಂತುಮಾಶ್ವಸಿಹಿ ಪ್ರಭೋ |
ಸ್ವಾಗತಂ ಸರ್ವಥೈವೇಹ ತವಾದ್ಯ ಮನುಜರ್ಷಭ ॥96॥
ಪ್ರಭುವೇ, ಇಲ್ಲಿಂದ ಮುಂದೆ ನೀನು ಹೋಗಲು ಸಾಧ್ಯವಿಲ್ಲ. ಇಲ್ಲಿಯೇ ವಿಶ್ರಮಿಸು. ಎಲೈ ಪುರುಷಶ್ರೇಷ್ಠನೇ, ನಾನು ಈ ದಿನ ನಿನಗೆ ಇಲ್ಲಿ ಸರ್ವರೀತಿಯಿಂದಲೂ ಸ್ವಾಗತವನ್ನು ಕೋರುತ್ತೇನೆ.
ಇಮಾನ್ಯಮೃತಕಲ್ಪಾನಿ ಮೂಲಾನಿ ಚ ಫಲಾನಿ ಚ
ಭಕ್ಷಯಿತ್ವಾ ನಿವರ್ತಸ್ವ ಮಾ ವೃಥಾ ಪ್ರಾಪ್ಸ್ಯಸೇ ವಧಮ್ ॥97॥
ಗ್ರಾಹ್ಯಂ ಯದಿ ವಚೋ ಮಹ್ಯಂ ಹಿತಂ ಮನುಜಪುಂಗವ |
ನೀನು ನನ್ನ ಹಿತವಾದ ಮಾತನ್ನು ಕೇಳುವುದಾದರೆ ಅಮೃತಕ್ಕೆ ಸಮಾನವಾದ ಈ ಮೂಲಗಳನ್ನು ಮತ್ತು ಫಲಗಳನ್ನು ಸ್ವೀಕರಿಸಿ ಇಲ್ಲಿಂದ ಹಿಂದಿರುಗು. ವ್ಯರ್ಥವಾಗಿ ಮರಣವನ್ನು ಹೊಂದಬೇಡ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಏಕೋನಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಧರ್ಮೋ ದೇವಾನಾಂ ಪರಮೋ ಮಾನುಷತ್ವೇ
ಸ್ವೀಯೇ ರೂಪೇಽಪ್ಯನ್ಯವದೇವ ವೃತ್ತಿಃ |
ಅನಾದಾನಂ ದಿವ್ಯಶಕ್ತೇರ್ವಿಶೇಷಾ-
ನ್ನರಸ್ವಭಾವೇ ಸರ್ವದಾ ಚೈವ ವೃತ್ತಿಃ |
ತಸ್ಮಾದ್ ಭೀಮೋ ಹನುಮಾಂಶ್ಚೈಕ ಏವ ಜ್ಯಾಯಃಕನೀಯೋವೃತ್ತಿಮಾತ್ರಾಭಿಪೇದೇ ॥274॥
ಮನುಷ್ಯರಾಗಿ ಅವತರಿಸಿದಾಗ ತಮ್ಮ ರೂಪದೊಡನೆಯೂ ಪರಕೀಯವೆಂಬಂತೆ ವರ್ತಿಸುವುದು, ವಿಶೇಷ ಬಲದಿಂದ ಮೂಲರೂಪದ ದಿವ್ಯಶಕ್ತಿಯನ್ನು ಅವತಾರರೂಪದಲ್ಲಿ ಸ್ವೀಕರಿಸದಿರುವುದು, ಮನುಷ್ಯ ಸ್ವಭಾವಾನುಸಾರವಾಗಿಯೇ ಸದಾ ವರ್ತಿಸುವುದು ದೇವತೆಗಳಿಗೆ ಮುಖ್ಯ ಧರ್ಮವಾಗಿರುತ್ತದೆ. ಅದರಿಂದ ಹನುಮಭೀಮರೊಬ್ಬರೇ ಆದರೂ ಹಿರಿಯ ಕಿರಿಯರಂತೆ ವರ್ತನೆ ತೋರಿದರು.
ಸರ್ವೇ ಗುಣಾ ಆವೃತ್ತಾ ಮಾನುಷತ್ವೇ ಯುಗಾನುಸಾರಾನ್ಮೂಲರೂಪಾನುಸಾರಾತ್ |
ಕ್ರಮಾತ್ ಸುರಾಣಾಂ ಭಾಗತೋಽವ್ಯಕ್ತರೂಪಾ
ಆದಾನತೋ ವ್ಯಕ್ತಿಮಾಯಾಂತ್ಯುರೂಣಾಮ್ ॥275॥
ದೇವತೆಗಳು ಮನುಷ್ಯರಾಗಿ ಹುಟ್ಟಿದಾಗ ಅವರ ಎಲ್ಲ ಗುಣಗಳೂ ಯುಗಾನುಸಾರವಾಗಿ ಆವೃತವಾಗಿರುತ್ತವೆ. ಮೂಲರೂಪಾನುಸಾರ ಕ್ರಮದಿಂದ ಭಾಗಶಃ ವ್ಯಕ್ತವಾಗುತ್ತದೆ. ಉತ್ತಮ ದೇವತೆಗಳಿಗೆ ಮೂಲರೂಪದ ಗುಣಗಳು ಆದಾನ ಮಾಡುವುದರಿಂದಲೂ ವ್ಯಕ್ತವಾಗುತ್ತದೆ.
ನೈವಾವ್ಯಕ್ತಿಃ ಕಾಚಿದಸ್ತೀಹ ವಿಷ್ಣೋಃ ಪ್ರಾದುರ್ಭಾವೇಷ್ವತಿಸುವ್ಯಕ್ತಶಕ್ತೇಃ |
ಇಚ್ಛಾವ್ಯಕ್ತಿಃ ಪ್ರಾಯಶೋ ಮಾರುತಸ್ಯ ತದನ್ಯೇಷಾಂ ವ್ಯಕ್ತತಾ ಕಾರಣೇನ ॥
ಅವತಾರಗಳಲ್ಲಿಯೂ ಬಲು ಚೆನ್ನಾಗಿ ವ್ಯಕ್ತವೇ ಆದ ಗುಣಗಳುಳ್ಳವ ಶ್ರೀಹರಿ. ಅದರಿಂದ ಅವನ ಗುಣಗಳಿಗೆ ಸ್ವಲ್ಪವೂಅವ್ಯಕ್ತತೆ ಎಂಬುದಿಲ್ಲ. ವಾಯುದೇವನಿಗೆ ಅವತಾರಗಳಲ್ಲಿ ಗುಣಗಳು ಪ್ರಾಯ ಇಚ್ಛೆಯಿಂದ ವ್ಯಕ್ತವಾಗುತ್ತವೆ. ಬೇರೆ ದೇವತೆಗಳಿಗೆ ಅವತಾರಗಳಲ್ಲಿ ಗುಣಗಳು ವಿಶೇಷ ಕಾರಣವಿದ್ದಾಗ ವ್ಯಕ್ತವಾಗುತ್ತವೆ.
ತಸ್ಮಾದ್ ಭೀಮೋ ಧರ್ಮವೃದ್ಅರ್ಥಮೇವ
ಸ್ವೀಯೇ ರೂಪೇಽಪ್ಯನ್ಯವದ್ ವೃತ್ತಿಮೇವ |
ಪ್ರದರ್ಶಯಾಮಾಸ ತಥಾಽಸುರಾಣಾಂ
ಮೋಹಾಯೈವಾಶಕ್ತವಚ್ಛಕ್ತಿರೂಪಃ ॥267॥
ಅದರಿಂದ ಭೀಮ ಪುಣ್ಯವೃದ್ಧಿಗಾಗಿಯೇ ತನ್ನ ರೂಪದೊಡನೆ ಪರಕೀಯವೆನ್ನುವಂತೆ ವರ್ತನೆಯನ್ನು ಪ್ರದರ್ಶಿಸಿದ. ಅಸುರರಿಗೆ ಮೋಹ ಉಂಟು ಮಾಡುವುದಕ್ಕಾಗಿಯೂ ಶಕ್ತಿಸ್ವರೂಪನಾದ ಆತ ಅಶಕ್ತನಂತೆ ವರ್ತನೆಯನ್ನು ಪ್ರದರ್ಶಿಸಿದ.
ತದ್ರೂಪವೃದ್ಧಿಂ ಭೀಮಸೇನೋಽಥ ದೃಷ್ಟ್ವಾ
ಶ್ರುತ್ವಾ ಹನೂಮನ್ಮುಖತಃ ಕಥಾಶ್ಚ |
ರಾಮಸ್ಯ ತಚ್ಚಾತುರಾತ್ಮ್ಯಂ ಚ ದಿವ್ಯಂ
ಚಾತುರ್ಯುಗಂ ಧರ್ಮಮಪ್ಯಗ್ರ್ಯಮೇವ ॥278॥
ಧ್ವಜಾದ್ ಬೀಭತ್ಸೋರ್ಗರ್ಜನೇನೈವ
ಶತ್ರುಪರಾಭವೇ ತೇನ ದತ್ತೇಽರ್ಜುನಸ್ಯ |
ಯಯೌ ಪ್ರಣಮ್ಯೈನಮಾಶ್ವೇವ ಭೀಮಃ
ಸೌಗಂಧಿಕಂ ವನಮತ್ಯುಗ್ರರೂಪಮ್ ॥279॥
ಹನುಮಂತನ ಆಕಾರ ಬೆಳೆದುದನ್ನು ಭೀಮಸೇನ ನೋಡಿ ಹನುಮಂತನ ಮುಖದಿಂದ ರಾಮನ ಕಥೆಗಳನ್ನೂ ರಾಮನ ಚಾತುರ್ಯವನ್ನೂ ನಾಲ್ಕು ಯುಗಗಳ ಉತ್ತಮ ಧರ್ಮವನ್ನೂ ಕೇಳಿ, ಅರ್ಜುನನ ಧ್ವಜದಲ್ಲಿ ಕುಳಿತು ಗರ್ಜನೆಯಿಂದಲೇ ಅವನ ಶತ್ರುಗಳ ಪರಾಭವ ಉಂಟುಮಾಡುವ ವರವನ್ನು ಹನುಮಂತ ಕೊಟ್ಟ ಬಳಿಕ ಅವನನ್ನು ನಮಿಸಿ ಬೇಗನೆ ಸುಂದರಾಕಾರದ ಸೌಗಂಧಿಕವನಕ್ಕೆ ನಡೆದ.
* * * *
ನೂರ ನಲವತ್ನಾಲ್ಕನೆಯ ಅಧ್ಯಾಯ
ಹನುಮಂತನಿಂದ ತನ್ನ ಅಶಕ್ತಿಕಥನದ ವಿಡಂಬನೆ. ಹನುಮಂತನ ಮತ್ತು ಭೀಮಸೇನನ ಸಂವಾದ.
ವೈಶಂಪಾಯನಃ
ಏತತ್ಶ್ರುತ್ವಾ ವಚಸ್ತಸ್ಯ ವಾನರೇಂದ್ರಸ್ಯ ಧೀಮತಃ |
ಭೀಮಸೇನಸ್ತದಾ ವೀರಃ ಪ್ರೋವಾಚಾಮಿತ್ರಕರ್ಷಣಃ ॥1॥
ವೈಶಂಪಾಯನ ಮೇಧಾವಿಯಾದ ವಾನರೇಂದ್ರನ ಈ ಮಾತುಗಳನ್ನು ಕೇಳಿ, ವೀರನೂ ಶತ್ರುಸೂದನನೂ ಆದ ಭೀಮಸೇನನು ಆಗ

ಮಾತನಾಡಿದನು.
ಕೋ ಭವಾನ್ ಕಿನ್ನಿಮಿತ್ತಂ ವಾ ವಾನರಂ ವಪುರಾಸ್ಥಿತಃ |
ಬ್ರಾಹ್ಮಣಾನಂತರೋ ವರ್ಣಃ ಕ್ಷತ್ರಿಯಸ್ತ್ವಂ ತು ಪೃಚ್ಛತಿ ॥2॥
ಕೌರವಃ ಸೋಮವಂಶೀಯಃ ಕುಂತ್ಯಾ ಗರ್ಭೇಣ ಧಾರಿತಃ |
ಪಾಂಡವೋ ವಾಯುತನಯೋ ಭೀಮಸೇನ ಇತಿ ಶ್ರುತಃ ॥3॥
ನೀನು ಯಾರು? ಏಕೆ ವಾನರ ರೂಪವನ್ನು ಧರಿಸಿದ್ದೀಯೆ? ಸೋಮವಂಶದಲ್ಲಿ ಕುರುಕುಲದಲ್ಲಿ ಕುಂತಿಯು ಗರ್ಭದಲ್ಲಿ ಧರಿಸಿದ ಪಾಂಡವನಾದ ವಾಯುದೇವರ ಮಗನಾದ ಭೀಮಸೇನನಾದ ನಾನು ಬ್ರಾಹ್ಮಣವರ್ಣದ ನಂತರದ ಕ್ಷತ್ರಿಯ ವರ್ಣಕ್ಕೆ ಸೇರಿದವನಾಗಿ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ.
ವೈಶಂಪಾಯನಃ
ಸ ವಾಕ್ಯಂ ಕುರುವೀರಸ್ಯ ಸ್ಮಿತೇನ ಪ್ರತಿಗೃಹ್ಯ ತತ್ |
ಹನೂಮಾನ್ ವಾಯುತನಯೋ ವಾಯುಪುತ್ರಮಭಾಷತ ॥4॥
ವೈಶಂಪಾಯನ ವಾಯುತನಯನಾದ ಹನುಮಂತನು ಕುರುವೀರನ ಈ ಮಾತುಗಳನ್ನು ಮುಗುಳ್ನಗೆಯಿಂದ ಸ್ವೀಕರಿಸಿ ವಾಯುತನಯನಾದ ಭೀಮಸೇನನನ್ನು ಕುರಿತು ಮಾತನಾಡಿದನು.
ವಾನರೋಽಹಂ ನ ತೇ ಮಾರ್ಗಂ ಪ್ರದಾಸ್ಯಾಮಿ ಯಥೇಪ್ಸಿತಮ್ |
ಸಾಧು ಗಚ್ಛ ನಿವರ್ತಸ್ವ ಮಾ ತ್ವಂ ಪ್ರಾಪ್ಸ್ಯಸಿ ವೈಶಸಮ್ ॥5॥
ನಾನು ಒಬ್ಬ ಕಪಿ. ನೀನು ಮನಸ್ಸಿಗೆ ಬಂದಂತೆ ಹೋಗಲು ಮಾರ್ಗವನ್ನು ಬಿಡುವುದಿಲ್ಲ. ತೊಂದರೆ ಮಾಡಿಕೊಳ್ಳದೆ ಹಿಂದಿರುಗು. ಹಿಂಸೆಗೆ ಒಳಗಾಗಬೇಡ.
ಭೀಮಸೇನಃ
ವೈಶಸಂ ವಾಽಸ್ತು ಯದ್ವಾಽನ್ಯನ್ನ ತ್ವಾಂ ಪೃಚ್ಛಾಮಿ ವಾನರ |
ಪ್ರಯಚ್ಛ ಮಾರ್ಗಮುತ್ತಿಷ್ಠ ಮಾ ಮತ್ತಃ ಪ್ರಾಪ್ಸ್ಯಸೇ ವ್ಯಥಾಮ್ ॥6॥
ಭೀಮಸೇನ ಎಲೈ ವಾನರನೇ, ಹಿಂಸೆಯಾಗಲೀ ಅಥವಾ ಇನ್ನೊಂದಾಗಲೀ ಅದನ್ನು ನಾನು ನಿನ್ನನ್ನು ಕೇಳುತ್ತಿಲ್ಲ. ನೀನು ಎದ್ದು ನನಗೆ ದಾರಿಯನ್ನು ಬಿಡು. ನನ್ನಿಂದ ಪೀಡೆಗೆ ಒಳಗಾಗಬೇಡ.
ಹನೂಮಾನ್
ನಾಸ್ತಿ ಶಕ್ತಿರ್ಮಮೋತ್ಥಾತುಂ ವ್ಯಾಧಿನಾ ಕ್ಲೇಶಿತೋ ಹ್ಯಹಮ್ |
ಯದ್ಯವಶ್ಯಂ ಪ್ರಯಾತವ್ಯಂ ಲಂಘಯಿತ್ವಾ ಪ್ರಯಾಹಿ ಮಾಮ್ ॥7॥
ಹನುಮಾನ್- ನಾನು ರೋಗದಿಂದ ಬಳಲುತ್ತಿದ್ದೇನೆ. ನನಗೆ ಏಳಲು ಶಕ್ತಿಯಿಲ್ಲ. ನೀನು ಅವಶ್ಯವಾಗಿ ಹೋಗಲೇಬೇಕಾದರೆ ನನ್ನನ್ನು ದಾಟಿಕೊಂಡು ಹೋಗು.
ಭೀಮಃ
ನಿರ್ಗುಣಃ ಪರಮಾತ್ಮಾ ತು ದೇಹಂ ವ್ಯಾಪ್ಯಾವತಿಷ್ಠತೇ |
ತಮಹಂ ಜ್ಞಾನವಿಜ್ಞೇಯಂ ನಾವಮನ್ಯೇ ನ ಲಂಘಯೇ ॥8॥
ಭೀಮ ನಿರ್ಗುಣನಾದ ಪರಮಾತ್ಮನು ಎಲ್ಲ ದೇಹಗಳಲ್ಲಿಯೂ ವ್ಯಾಪಿಸಿಕೊಂಡು ನೆಲೆಸಿದ್ದಾನೆ. ಜ್ಞಾನವಿಜ್ಞೇಯನಾದ ಅವನಿಗೆ ನಾನು ಅವಮಾನವನ್ನು ಮಾಡುವುದಿಲ್ಲ. ಆದ್ದರಿಂದ ನಿನ್ನನ್ನು ದಾಟುವುದಿಲ್ಲ.
ಯದ್ಯಾಗಮೈರ್ನ ವಿದ್ಯಾಂ ಚ ತಮಹಂ ಭೂತಭಾವನಮ್ |
ಕ್ರಮೇಯಂ ತ್ವಾಂ ಗಿರಿಂ ಚೈವ ಹನೂಮಾನಿವ ಸಾಗರಮ್ ॥9॥
ಜಗತ್ಸೃಷ್ಟಿಕರ್ತನಾದ ಅವನನ್ನು ವೇದಗಳಿಂದ ತಿಳಿಯದಿದ್ದರೆ ನಾನು ಹನುಮಂತನು ಸಾಗರವನ್ನು ದಾಟಿದಂತೆ ನಿನ್ನನ್ನೂ ಈ ಪರ್ವತವನ್ನೂ ದಾಟುತ್ತಿದ್ದೆ.
ಹನೂಮಾನ್
ಕ ಏಷ ಹನುಮಾನ್ನಾಮ ಸಾಗರೋ ಯೇನ ಲಂಘಿತಃ |
ಪೃಚ್ಛಾಮಿ ತ್ವಾಂ ನರಶ್ರೇಷ್ಠ ಕಥ್ಯತಾಂ ಯದಿ ಶಕ್ಯತೇ ॥10॥
ಹನುಮಾನ್- ಎಲೈ ನರಶ್ರೇಷ್ಠನೇ, ಸಾಗರವನ್ನು ದಾಟಿದ ಈ ಹನುಮಂತನೆಂಬುವನು ಯಾರು? ನಾನು ನಿನ್ನನ್ನು ಕೇಳುತ್ತಿದ್ದೇನೆ. ಸಾಧ್ಯವಾದರೆ ಉತ್ತರವನ್ನು ಹೇಳು.
ಭೀಮಃ
ಭ್ರಾತಾ ಮಮ ಗುಣಶ್ಲಾಘ್ಯೋ ಬುದ್ಧಿಸತ್ತ್ವಬಲಾನ್ವಿತಃ |
ರಾಮಾಯಣೇಽತಿವಿಖ್ಯಾತಃ ಶ್ರೀಮಾನ್ ವಾನರಪುಂಗವಃ ॥11॥
ಭೀಮ ಅವನು ನನ್ನ ಅಣ್ಣನಾದ, ಕಾಂತಿಯುಕ್ತನಾದ ವಾನರಶ್ರೇಷ್ಠನಾದವನು. ಅವನು ಗುಣಗಳಿಂದ ಯಾವಾಗಲೂ ಶ್ಲಾಘಿಸಲ್ಪಡುವವನು. ಬುದ್ಧಿ ಸದ್ಗುಣಗಳು ಮತ್ತು ಬಲಗಳಿಂದ ಕೂಡಿದವನು. ರಾಮಾಯಣದಲ್ಲಿ ಬಹಳ ಪ್ರಖ್ಯಾತನಾದವನು.
ರಾಮಪತ್ನೀಕೃತೇ ಯೇನ ಶತಯೋಜನವಿಸ್ತೃತಃ |
ಸಾಗರಃ ಪ್ಲವಗೇಂದ್ರೇಣ ಕ್ರಮೇಣೈಕೇನ ಲಂಘಿತಃ ॥12॥
ರಾಮಪತ್ನಿಯ ಸಲುವಾಗಿ ಕಪಿಶ್ರೇಷ್ಠನಾದ ಅವನು ಶತಯೋಜನವಿಸ್ತಾರವಾದ ಸಾಗರವನ್ನು ಒಂದೇ ದಾಪಿನಲ್ಲಿ ದಾಟಿದನು.
ಸ ಮೇ ಭ್ರಾತಾ ಮಹಾವೀರ್ಯಸ್ತುಲ್ಯೋಽಹಂ ತಸ್ಯ ತೇಜಸಾ |

ಬಲೇ ಪರಾಕ್ರಮೇ ಯುದ್ಧೇ ಶಕ್ತೋಽಹಂ ತವ ನಿಗ್ರಹೇ ॥13॥
ಅವನು ನನ್ನ ಅಣ್ಣ. ಮಹಾಬಲಶಾಲಿಯಾದವನು. ನಾನು ತೇಜಸ್ಸಿನಲ್ಲಿಯೂ, ಬಲದಲ್ಲಿಯೂ, ಪರಾಕ್ರಮದಲ್ಲಿಯೂ ಮತ್ತು ಯುದ್ಧದಲ್ಲಿಯೂ ಅವನಿಗೆ ಸಮಾನನಾದವನು. ನಾನು ನಿನ್ನ ನಿಗ್ರಹವನ್ನು ಮಾಡಲು ಶಕ್ತನಾಗಿದ್ದೇನೆ.
ಇಮಂ ದೇಶಮನುಪ್ರಾಪ್ತಃ ಕಾರಣೇನಾಸ್ಮಿ ಕೇನಚಿತ್ |
ಉತ್ತಿಷ್ಠ ದೇಹಿ ಮೇ ಮಾರ್ಗಂ ಪಶ್ಯ ಮೇ ಚಾದ್ಯ ಪೌರುಷಮ್ |
ಮಚ್ಚಾಸನಮಕುರ್ವಾಣಂ ತ್ವಾಂ ವಾ ನೇಷ್ಯೇ ಯಮಕ್ಷಯಮ್ ॥14॥
ಯಾವುದೋ ಒಂದು ಕಾರಣದಿಂದ ಈ ದೇಶಕ್ಕೆ ಬಂದಿದ್ದೇನೆ. ನೀನು ಎದ್ದು ನನಗೆ ಮಾರ್ಗವನ್ನು ಬಿಡು. ಇಲ್ಲದಿದ್ದರೆ ನನ್ನ ಪರಾಕ್ರಮವನ್ನು ಈ ದಿನ ನೋಡು. ನನ್ನ ಆದೇಶವನ್ನು ನೆರವೇರಿಸದಿದ್ದ ನಿನ್ನನ್ನು ಬೇಕಾದರೂ ನಾನು ಯಮಲೋಕಕ್ಕೆ ಕಳುಹಿಸುವೆನು.
ವೈಶಂಪಾಯನಃ
ವಿಜ್ಞಾಯ ತಂ ಬಲೋನ್ಮತ್ತಂ ಬಾಹುವೀರ್ಯೇಣ ದರ್ಪಿತಮ್ |
ಹೃದಯೇನಾವಹಸ್ಯೈನಂ ಹನೂಮಾನ್ ವಾಕ್ಯಮಬ್ರವೀತ್ ॥15॥
ವೈಶಂಪಾಯನ ಅವನು ಬಲೋನ್ಮತ್ತನೆಂದೂ ಬಾಹುಬಲದಿಂದ ದರ್ಪ ಉಳ್ಳವನೆಂದೂ ತಿಳಿದು ಹನುಮಂತನು ಮನಸ್ಸಿನಲ್ಲಿಯೇ ಅವನನ್ನು ಅಪಹಾಸ ಮಾಡಿ ಅವನನ್ನು ಕುರಿತು ಈ ಮಾತನ್ನು ಆಡಿದನು.
ಪ್ರಸೀದ ನಾಸ್ತಿ ಮೇ ಶಕ್ತಿರುತ್ಥಾತುಂ ಜರಯಾಽನಘ |
ಮಮಾನುಕಂಪನಯಾ ತ್ವೇತತ್ ಪುಚ್ಛಮುತ್ಸಾರ್ಯ ಗಮ್ಯತಾಮ್ ॥16॥
ಅನಘನೇ, ನನ್ನ ಮೇಲೆ ಪ್ರಸನ್ನನಾಗು. ಮುಪ್ಪಿನಿಂದ ಕೂಡಿದ ನನಗೆ ಮೇಲೆ ಏಳಲು ಶಕ್ತಿಯಿಲ್ಲ. ನನ್ನ ಮೇಲಿನ ಅನುಕಂಪದಿಂದ ಈ ಬಾಲವನ್ನು ಸ್ವಲ್ಪ ಸರಿಸಿ ಮುಂದಕ್ಕೆ ಹೋಗು.
ವೈಶಂಪಾಯನಃ
ಏವಮುಕ್ತಸ್ತು ಬಲವಾನ್ ಭೀಮೋ ಭೀಮಪರಾಕ್ರಮಃ |
ಸಾವಜ್ಞಮಥ ವಾಮೇನ ಸ್ಮಯನ್ ಜಗ್ರಾಹ ಪಾಣಿನಾ ॥17॥
ನ ಚಾಶಕಚ್ಚಾಲಯಿತುಂ ಭೀಮಃ ಪುಚ್ಛಂ ಮಹಾಕಪೇಃ ॥18॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಮಹಾಪರಾಕ್ರಮಶಾಲಿಯಾದ ಭೀಮನು ತಿರಸ್ಕಾರದಿಂದ ನಗುತ್ತಾ ತನ್ನ ಎಡಗೈಯಿಂದ ಆ ಬಾಲವನ್ನು ಎತ್ತಲು ಹೋದನು. ಆದರೆ ಭೀಮನಿಗೆ ಆ ಮಹಾಕಪಿಯ ಬಾಲವನ್ನು ಅಲುಗಾಡಿಸಲೂ ಸಾಧ್ಯವಾಗಲಿಲ್ಲ.
ಉಚ್ಚಿಕ್ಷೇಪ ಪುನರ್ದೋರ್ಭ್ಯಾಮಿಂದ್ರಾಯುಧಮಿವೋಚ್ಛ್ರಿತಮ್ |
ನೋದ್ಧರ್ತುಮಶಕದ್ ಭೀಮೋ ದೋರ್ಭ್ಯಾಮಪಿ ಬಹಾಬಲಃ ॥19॥
ಮಹಾಬಲನಾದ ಭೀಮಸೇನನು ಇಂದ್ರಾಯುಧದಂತೆ ಉನ್ನತವಾಗಿದ್ದ ಆ ಬಾಲವನ್ನು ಎರಡು ಬಾಹುಗಳಿಂದಲೂ ಹಿಡಿದು ಮೇಲಕ್ಕೆ ಎತ್ತಲು ಪ್ರಯತ್ನಪಟ್ಟನು. ಆದರೆ ಎತ್ತಲು ಸಾಧ್ಯವಾಗಲಿಲ್ಲ.
ಉತ್ಕ್ಷಿಪ್ತಭ್ರೂರ್ವಿವೃತ್ತಾಕ್ಷಃ ಸಂಹತಭ್ರುಕುಟೀಮುಖಃ |
ಸ್ವಿನ್ನಗಾತ್ರೋಽಭವದ್ ಭೀಮೋ ನ ಚೋದ್ಧರ್ತುಂ ಶಶಾಕ ತಮ್ ॥
ಅವನು ಹುಬ್ಬುಗಳನ್ನು ಮೇಲಕ್ಕೆತ್ತಿ, ಕಣ್ಣುಗಳನ್ನು ಅರಳಿಸಿ, ಹುಬ್ಬುಗಳನ್ನು ಗಂಟುಕಟ್ಟಿ ಮೈಯೆಲ್ಲಾ ಬೆವರಿ ಪ್ರಯತ್ನಪಟ್ಟನು. ಆದರೆ ಬಾಲವನ್ನು ಎತ್ತಲು ಸಾಧ್ಯವಾಗಲಿಲ್ಲ
ಯತ್ನವಾನಪಿ ತು ಶ್ರೀಮಾಂಲ್ಲಾಂಗೂಲೋದ್ಧರಣೇ ತತಃ(ಣೋದ್ಧುರಃ)|
ಕಪೇಃ ಪಾರ್ಶ್ವಗತೋ ಭೀಮಸ್ತಸ್ಥೌ ವ್ರೀಡಾನತಾನನಃ |
ಪ್ರಣಿಪತ್ಯ ಚ ಕೌಂತೇಯಃ ಪ್ರಾಂಜಲಿರ್ವಾಕ್ಯಮಬ್ರವೀತ್ ॥21॥
ಕಾಂತಿಯುಕ್ತನಾದ ಭೀಮಸೇನನು ಎಷ್ಟು ಪ್ರಯತ್ನಪಟ್ಟರೂ ಬಾಲವನ್ನು ಎತ್ತಲು ಸಾಧ್ಯವಾಗದಿರಲು ಅವನು ನಾಚಿಕೆಯಿಂದ ಮುಖವನ್ನು ತಗ್ಗಿಸಿ ಕಪಿಯ ಪಾರ್ಶ್ವದಲ್ಲಿ ಬಂದು ನಿಂತನು. ಅವನಿಗೆ ನಮಸ್ಕಾರವನ್ನು ಮಾಡಿ ಕೌಂತೇಯನು ಕೈಗಳನ್ನು ಮುಗಿದು ಈ ಮಾತನ್ನು ಆಡಿದನು.
ಪ್ರಸೀದ ಕಪಿಶಾರ್ದೂಲ ದುರುಕ್ತಂ ಕ್ಷಮ್ಯತಾಂ ಮಮ ॥22॥
ಸಿದ್ಧೋ ವಾ ಯದಿ ವಾ ದೇವೋ ಗಂಧರ್ವೋ ವಾಽಥ ಗುಹ್ಯಕಃ |
ಪೃಷ್ಟಃ ಸನ್ ಕಾಮ್ಯಯಾ ಬ್ರೂಹಿ ಕಸ್ತ್ವಂ ವಾನರರೂಪಧೃಕ್ ॥23॥
ಶಿಷ್ಯವತಶತ್ವಂ ತು ಪೃಚ್ಛಾಮಿ ಉಪಪನ್ನೋಽಸ್ಮಿ ತೇಽನಘ |
ಕಪಿಶಾರ್ದೂಲನೇ, ನನಗೆ ಅನುಗ್ರಹವನ್ನು ಮಾಡು. ನಾನು ಆಡಿದ ಕೆಟ್ಟ ಮಾತುಗಳನ್ನು ಕ್ಷಮಿಸು. ವಾನರ ರೂಪವನ್ನು ಧರಿಸಿದ ನೀನು ಸಿದ್ಧನೇ? ದೇವತೆಯೇ? ಗಂಧರ್ವನೇ? ಅಥವಾ ಗುಹ್ಯಕನೇ? ಎಂದು ಕೇಳುತ್ತಿದ್ದೇನೆ. ಸರಿಯಾದ ಉತ್ತರವನ್ನು ಹೇಳು. ಅನಘನೇ, ನಾನು ನಿನಗೆ ಶರಣಾಗತನಾಗಿದ್ದೇನೆ. ಶಿಷ್ಯನಂತೆ ನಿನ್ನನ್ನು ಕೇಳುತ್ತಿದ್ದೇನೆ.
ಹನುಮಾನ್
ಗಂಧರ್ವೋ ಗುಹ್ಯಕೋ ವಾ ತ್ವಂ ಕಥಯಸ್ವ ಮಮಾನಘ |
ಕಾಮೇನ ಪೃಚ್ಛತೋ ಬ್ರೂಹಿ ಕಸ್ತ್ವಂ ವಾನರರೂಪ ಧೃಕ್ ॥
ನ ಚೇದ್ಗುಹ್ಯಂ ಮಹಾಭಾಗ ಶ್ರೋತವ್ಯಂ ಸ್ಯಾನ್ಮಯಾ ಯದಿ |
ಯತ್ ತೇ ಮಮ ಪರಿಜ್ಞಾನೇ ಕೌತೂಹಲಮರಿಂದಮ |

ತತ್ಸರ್ವಮಖಿಲೇನ ತ್ವಂ ಶೃಣು ಪಾಂಡವನಂದನ ॥24॥
ಹನುಮಾನ್- ಎಲೈ ಅರಿಂದಮನೇ, ಎಲೈ ಪಾಂಡವನಂದನನೇ, ನನ್ನನ್ನು ತಿಳಿಯಲು ನಿನಗೆ ಕುತೂಹಲವಿರುವುದರಿಂದ ಎಲ್ಲವನ್ನೂ ಸಂಪೂರ್ಣವಾಗಿ ಕೇಳು.
ಅಹಂ ಕೇಸರಿಣಃ ಕ್ಷೇತ್ರೇ ವಾಯುನಾ ಜಗದಾಯುಷಾ |
ಜಾತಃ ಕಮಲಪತ್ರಾಕ್ಷ ಹನೂಮಾನ್ನಾಮ ವಾನರಃ ॥25॥
ಎಲೈ ಕಮಲಪತ್ರಾಕ್ಷನೇ, ನಾನು ಕೇಸರಿಯ ಪತ್ನಿಯಲ್ಲಿ ಜಗತ್ತಿಗೆ ಆಯುಸ್ಸನ್ನು ಕೊಡುವ ವಾಯುದೇವರಿಂದ ಜನಿಸಿದ ಹನುಮಂತನೆಂಬ ಕಪಿ.
ಸೂರ್ಯಪುತ್ರಂ ಚ ಸುಗ್ರೀವಂ ಶಕ್ರಪುತ್ರಂ ಚ ವಾಲಿನಮ್ |
ಸರ್ವೇ ವಾನರರಾಜಾನಸ್ತಥಾ ವಾನರಯೂಥಪಾಃ ॥26॥
ಉಪತಸ್ಥುರ್ಮಹಾಶವೀರ್ಯಾ ಮಮ ಚಾಮಿತ್ರಕರ್ಷಣ |
ಸುಗ್ರೀವೇಣಾಭವತ್ ಪ್ರೀತಿರನಿಲಸ್ಯಾಗ್ನಿನಾ ಯಥಾ ॥27॥
ಸೂರ್ಯಪುತ್ರನಾದ ಸುಗ್ರೀವನನ್ನು, ಇಂದ್ರಪುತ್ರನಾದ ವಾಲಿಯನ್ನು ಎಲ್ಲ ಮಹಾಬಲರಾದ ವಾನರ ರಾಜರು ಮತ್ತು ವಾನರ ಮುಖ್ಯರು ಆಶ್ರಯಿಸಿದರು. ಎಲೈ ಶತ್ರುಕರ್ಷಣನೇ, ನನಗೆ ವಾಯುವಿಗೆ ಅಗ್ನಿಯಲ್ಲಿರುವಂತೆ ಸುಗ್ರೀವನಲ್ಲಿ ಪ್ರೀತಿ ಉಂಟಾಯಿತು.
ನಿಕೃತಃ ಸ ತತೋ ಭ್ರಾತ್ರಾ ಕಸ್ಮಿಂಶ್ಚಿತ್ ಕಾರಣಾಂತರೇ |
ಋಷ್ಯಮೂಕೇ ಮಯಾ ಸಾರ್ಧಂ ಸುಗ್ರೀವೋ ನ್ಯವಸಚ್ಚಿರಮ್ ॥28॥
ಆ ಸುಗ್ರೀವನಾದರೂ, ಯಾವುದೋ ಒಂದು ಕಾರಣದಿಂದ ತನ್ನ ಅಣ್ಣನಾದ ವಾಲಿಯಿಂದ ಅವಮಾನಿತನಾಗಿ ಋಷ್ಯಮೂಕ ಪರ್ವತದಲ್ಲಿ ನನ್ನ ಜೊತೆಯಲ್ಲಿ ಬಹುಕಾಲ ವಾಸವಾಗಿದ್ದನು.
ಅಥ ದಾಶರಥಿರ್ವೀರೋ ರಾಮೋ ನಾಮ ಮಹಾಬಲಃ |
ವಿಷ್ಣುರ್ಮಾನುಷರೂಪೇಣ ಚಚಾರ ವಸುಧಾತಳಮ್ ॥29॥
ಆಗ ವಿಷ್ಣುವು ಮನುಷ್ಯರೂಪವನ್ನು ಧರಿಸಿ ದಶರಥನ ಮಗನಾಗಿ ಮಹಾಬಲಿಷ್ಠನಾಗಿ ರಾಮನೆಂಬ ಹೆಸರಿನಿಂದ ಭೂತಳವನ್ನು ಸಂಚಾರ ಮಾಡುತ್ತಿದ್ದನು.
ಸ ಪಿತುಃ ಪ್ರಿಯಮನ್ವಿಚ್ಛನ್ ಸಹಭಾರ್ಯಃ ಸಹಾನುಜಃ |
ಸಧನುರ್ಧನ್ವಿನಾಂ ಶ್ರೇಷ್ಠೋ ದಂಡಕಾರಣ್ಯಮಾಶ್ರಿತಃ ॥30॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅವನು ತಂದೆಗೆ ಪ್ರಿಯವನ್ನು ಉಂಟುಮಾಡುವುದಕ್ಕೋಸ್ಕರ ಧನುಸ್ಸನ್ನು ತೆಗೆದುಕೊಂಡು ಪತ್ನಿ ಮತ್ತು ತಮ್ಮನ ಜೊತೆಯಲ್ಲಿ ದಂಡಕಾರಣ್ಯವನ್ನು ಆಶ್ರಯಿಸಿದನು.
ತಸ್ಯ ಭಾರ್ಯಾ ಜನಸ್ಥಾನಾಚ್ಛಲೇನಾಪಹೃತಾ ಬಲಾತ್ |
ವಂಚಯಿತ್ವಾ ನರವ್ಯಾಘ್ರಂ ಮಾರೀಚೇನ ತದಾಽನಘ ॥31॥
ರಾಕ್ಷಸೇಂದ್ರೇಣ ಬಲಿನಾ ರಾವಣೇನ ದುರಾತ್ಮನಾ |
ಸುವರ್ಣರತ್ನಚಿತ್ರೇಣ ಮೃಗರೂಪೇಣ ರಕ್ಷಸಾ ॥32॥
ಎಲೈ ಅನಘನೇ, ಸುವರ್ಣರತ್ನಚಿತ್ರವಾದ ಮೃಗರೂಪವನ್ನು ಧರಿಸಿದ ರಾಕ್ಷಸನಾದ ಮಾರೀಚನಿಂದ ಆ ನರವ್ಯಾಘ್ರನು ವಂಚಿಸಲ್ಪಡುತ್ತಿರಲು ಆಗ ಬಲಿಷ್ಠನೂ, ದುರಾತ್ಮನೂ, ರಾಕ್ಷಸೇಂದ್ರನೂ ಆದ ರಾವಣನು ರಾಮಪತ್ನಿಯಾದ ಸೀತೆಯನ್ನು ಅಪಹರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ನೂರ ನಲವತ್ತೈದನೆಯ ಅಧ್ಯಾಯ
ಹನುಮಂತನಿಂದ ಅವಶಿಷ್ಟ ರಾಮಚರಿತೆಯ ಕಥನ.
ಹನೂಮಾನ್
ಹೃತದಾರಃ ಸಹ ಭ್ರಾತ್ರಾ ಪತ್ನೀಂ ಮಾರ್ಗನ್ ಸ ರಾಘವಃ |
ದೃಷ್ಟವಾನ್ ಶೈಲಶಿಖರೇ ಸುಗ್ರೀವಂ ವಾನರರ್ಷಭಮ್ ॥1॥
ಹನುಮಾನ್- ಪತ್ನಿಯನ್ನು ಕಳೆದುಕೊಂಡ ರಾಮನು ತಮ್ಮನ ಜೊತೆಯಲ್ಲಿ ಪತ್ನಿಯನ್ನು ಹುಡುಕುತ್ತಾ ಋಷ್ಯಮೂಕ ಪರ್ವತದ ಶಿಖರದಲ್ಲಿ ವಾನರಶ್ರೇಷ್ಠನಾದ ಸುಗ್ರೀವನನ್ನು ನೋಡಿದನು.
ತೇನ ತಸ್ಯಾಭವತ್ ಸಖ್ಯಂ ರಾಘವಸ್ಯ ಮಹಾತ್ಮನಃ |
ಸ ಹತ್ವಾ ವಾಲಿನಂ ರಾಜ್ಯೇ ಸುಗ್ರೀವಮಭಿಷಿಕ್ತವಾನ್ ॥2॥
ಮಹಾತ್ಮನಾದ ರಾಘವನಿಗೂ ಮತ್ತು ಸುಗ್ರೀವನಿಗೂ ಸಖ್ಯವುಂಟಾಯಿತು. ರಾಮನು ವಾಲಿಯನ್ನು ಸಂಹರಿಸಿ ರಾಜ್ಯದಲ್ಲಿ ಸುಗ್ರೀವನಿಗೆ ಅಭಿಷೇಕವನ್ನು ಮಾಡಿದನು.
ಸ ರಾಜ್ಯಂ ಪ್ರಾಪ್ಯ ಸುಗ್ರೀವಃ ಸೀತಾಯಾಃ ಪರಿಮಾರ್ಗಣೇ |
ವಾನರಾನ್ ಪ್ರೇಷಯಾಮಾಸ ಶತಶೋಽಥ ಸಹಸ್ರಶಃ ॥3॥

ರಾಜ್ಯವನ್ನು ಪಡೆದ ಸುಗ್ರೀವನು ಸೀತೆಯನ್ನು ಹುಡುಕಲು ನೂರರಗಟ್ಟಲೆ ಮತ್ತು ಸಾವಿರಗಟ್ಟಲೆ ಕಪಿಗಳನ್ನು ಎಲ್ಲಕಡೆಗಳಿಗೂ ಕಳುಹಿಸಿದನು.
ತತೋ ವಾನರಕೋಟೀಭಿಃ ಸಹಿತೋಽಹಂ ನರರ್ಷಭ |
ಸೀತಾಂ ಮಾರ್ಗನ್ ಮಹಾಬಾಹೋ ಪ್ರಯಾತೋ ದಕ್ಷಿಣಾಂ ದಿಶಮ್ ॥
ಎಲೈ ನರಶ್ರೇಷ್ಠನೇ, ಎಲೈ ಮಹಾಬಾಹುವೇ, ಆಗ ನಾನು ಕೋಟಿವಾನರರಿಂದ ಸಹಿತನಾಗಿ ಸೀತೆಯನ್ನು ಹುಡುಕಲು ದಕ್ಷಿಣದಿಕ್ಕಿಗೆ ಹೊರಟೆನು.
ತತ್ರ ಪ್ರವೃತ್ತಿಃ ಸೀತಾಯಾ ಗೃಧ್ರೇಣೈವ ಮಹಾತ್ಮನಾ |
ಸಂಪಾತಿನಾ ಸಮಾಖ್ಯಾತಾ ರಾವಣಸ್ಯ ನಿವೇಶನೇ ॥5॥
ಅಲ್ಲಿ ಮಹಾತ್ಮನಾದ ಗೃಧ್ರನಾದ ಸಂಪಾತಿಯು ರಾವಣನ ಮನೆಯಲ್ಲಿ ಸೀತೆಯಿದ್ದಾಳೆಂಬ ವಾರ್ತೆಯನ್ನು ತಿಳಿಸಿದನು.
ತತೋಽಹಂ ಕಾರ್ಯಸಿದ್ಧ್ಯರ್ಥಂ ರಾಮಸ್ಯಾಕ್ಲಿಷ್ಟಕರ್ಮಣಃ |
ಶತಯೋಜನವಿಸ್ತೀರ್ಣಮರ್ಣವಂ ಸಹಸಾಽಽಪ್ಲುತಃ |
ಸಂಪಾತಿಗೃಧ್ರಾಧಿಗತಪ್ರವೃತ್ತಿಃ ಪಾಂಡುನಂದನ ॥6॥
ಅಹಂ ಸ್ವವೀರ್ಯಾದುತ್ತೀರ್ಯ ಸಾಗರಂ ಮಕರಾಲಯಮ್ |
ಸುತಾಂ ಜನಕರಾಜಸ್ಯ ಸೀತಾಂ ಸುರಸುತೋಪಮಾಮ್ ॥7॥
ದೃಷ್ಟವಾನ್ ಭರತಶ್ರೇಷ್ಠ ರಾವಣಸ್ಯ ನಿವೇಶನೇ ॥8॥
ಅನಂತರ ನಾನು ಅಕ್ಲಿಷ್ಟಕಾರಿಯಾದ ರಾಮನ ಕಾರ್ಯಸಿದ್ಧಿಗಾಗಿ ಸಂಪಾತಿಯಿಂದ ಸೀತೆಯ ವೃತಾತಂತವನ್ನು ತಿಳಿದವನಾಗಿ ಎಲೈ ಪಾಂಡುನಂದನನೇ, ನನ್ನ ಪರಾಕ್ರಮದಿಂದಲೇ ಮಕರಾಲಯವಾದ ಸಾಗರವನ್ನು ದಾಟಿ, ಎಲೈ ಭರತಶ್ರೇಷ್ಠನೇ, ರಾವಣನ ನಿವೇಶನದಲ್ಲಿ ದೇವಕುಮಾರಿಯಂತಿದ್ದ ಜನಕರಾಜನ ಮಗಳಾದ ಸೀತೆಯನ್ನು ನೋಡಿದೆನು.
ಸಮೇತ್ಯ ತಾಮಹಂ ದೇವೀಂ ವೈದೇಹೀಂ ರಾಘವಪ್ರಿಯಾಮ್ |
ದಗ್ಧ್ವಾ ಲಂಕಾಮಶೇಷೇಣ ಸಾಟ್ಟಪ್ರಾಕಾರತೋರಣಾಮ್ |
ಪ್ರತ್ಯಾಗತಃ ಪುನಶ್ಚಾಪಿ ನಾಮ ತತ್ರ ಪ್ರಕಾಶ್ಯ ವೈ ॥9॥
ನಾನು ರಾಘವಪ್ರಿಯೆಯಾದ ವಿದೇಹರಾಜಕುಮಾರಿಯಾದ ಆ ದೇವಿಯ ಜೊತೆಯಲ್ಲಿ ಸಂವಾದವನ್ನು ಮಾಡಿ ಕೋಟೆ ಕೊತ್ತಲಗಳಿಂದ ಕೂಡಿದ್ದ ಲಂಕಾ ಪಟ್ಟಣವನ್ನು ಸಂಪೂರ್ಣವಾಗಿ ಭಸ್ಮವಾಗಿ ಮಾಡಿ ನನ್ನ ಹೆಸರನ್ನು ಅಲ್ಲಿ ಸ್ಥಾಪಿಸಿ ಪುನಃ ಹಿಂದಿರುಗಿದೆನು.
ಮದ್ವಾಕ್ಯಂ ಚಾವಧಾರ್ಯಾಶು ರಾಮೋ ರಾಜೀವಲೋಚನಃ ॥10॥
ಅಬದ್ಧಪೂರ್ವಮನ್ಯೈಶ್ಚ ಬದ್ಧ್ವಾ ಸೇತುಂ ಮಹೋದಧೌ |
ವೃತೋ ವಾನರಕೋಟೀಭಿಃ ಸಮುತ್ತೀರ್ಣೋ ಮಹಾರ್ಣವಮ್ ॥11॥
ರಾಜೀವಲೋಚನನಾದ ರಾಮನು ನನ್ನ ವಚನವನ್ನು ಸ್ವೀಕರಿಸಿ ಅಲ್ಲಿಯವರೆಗೆ ಇನ್ನೊಬ್ಬರೂ ಕಟ್ಟದಿದ್ದ ಸೇತುವೆಯನ್ನು ಸಮುದ್ರಕ್ಕೆ ಕಟ್ಟಿ ಕೋಟಿವಾನರರ ಜೊತೆಯಲ್ಲಿ ಸಮುದ್ರವನ್ನು ದಾಟಿದನು.
ರಣೇ ಸ ರಾಕ್ಷಸಗಣಂ ರಾವಣಂ ಲೋಕರಾವಣಮ್ |
ನಿಶಾಚರೇಂದ್ರಂ ಹತ್ವಾ ತು ಸಭ್ರಾತೃಸುತಬಾಂಧವಮ್ ॥12॥
ರಾಜ್ಯೇಽಭಿಷಿಚ್ಯ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್ |
ಧಾರ್ಮಿಕಂ ಭಕ್ತಿಮಂತಂ ಚ ಭಕ್ತಾನುಗತವತ್ಸಲಮ್ ॥13॥
ಪ್ರತ್ಯಾಹೃತ್ಯ ತತಃ ಸೀತಾಂ ನಷ್ಟಾಂ ವೇದಶ್ರುತೀಮಿವ |
ತಯೈವ ಸಹಿತಃ ಸಾಧ್ವ್ಯಾ ಪತ್ನ್ಯಾ ರಾಮೋ ಮಹಾಯಶಾಃ ॥14॥
ಗತ್ವಾ ತತೋಽತಿತ್ವರಿತಃ ಸ್ವಾಂ ಪುರೀಂ ರಘುನಂದನಃ |
ಅಧ್ಯಾವಸತ್ ತತೋಽಯೋಧ್ಯಾಮಯೋಧ್ಯಾಂ ದ್ವಿಷತಾಂ ಪ್ರಭುಃ ॥
ಅವನು ಯುದ್ಧದಲ್ಲಿ ನಿಶಾಚರೇಂದ್ರನಾದ, ಲೋಕಕಂಟಕನಾದ ರಾವಣನನ್ನು ಅವನ ತಮ್ಮ, ಪುತ್ರರು ಮತ್ತು ಬಾಂಧವರು ಮತ್ತು ರಾಕ್ಷಸಗಣಗಳ ಜೊತೆಯಲ್ಲಿ ಸಂಹಾರ ಮಾಡಿ ಧಾರ್ಮಿಕನೂ, ಭಕಿತವಂತನೂ ಶರಣಾಗತವತ್ಸಲನೂ, ಆದ ರಾಕ್ಷಸೇಂದ್ರನಾದ ವಿಭೀಷಣನಿಗೆ ಲಂಕೆಯಲ್ಲಿ ರಾಜ್ಯಾಭಿಷೇಕವನ್ನು ಮಾಡಿ ನಷ್ಟವಾದ ವೇದಗಳನ್ನು ಹಿಂದೆ ತಂದಂತೆ ಸೀತೆಯನ್ನು ಮರಳಿ ಪಡೆದು ಮಹಾಯಶಸ್ವಿಯಾದ ರಘುನಂದನನಾದ ರಾಮನು ಆ ಪತಿವ್ರತೆಯಾದ ಪತ್ನಿಯಿಂದ ಸಹಿತನಾಗಿ ಬೇಗ ಹಿಂದಿರುಗಿ ಬಂದು ಶತ್ರುಗಳಿಂದ ಮುತ್ತಿಗೆ ಹಾಕಲು ಸಾಧ್ಯವಿಲ್ಲದ ಅಯೋಧ್ಯಾಪಟ್ಟಣದಲ್ಲಿ ಶತ್ರುದಮನವನ್ನು ಮಾಡುತ್ತಾ ವಾಸವನ್ನು ಮಾಡಿದನು.
ತತಃ ಪ್ರತಿಷ್ಠಿತೋ ರಾಜ್ಯೇ ರಾಮೋ ನೃಪತಿಸತ್ತಮಃ |
ವರಂ ಮಯಾ ಯಾಚಿತೋಽಸೌ ರಾಮೋ ರಾಜೀವಲೋಚನಃ ॥16॥
ರಾಮನು ರಾಜ್ಯದಲ್ಲಿ ಪ್ರತಿಷ್ಠಿತನಾಗುತ್ತಿರಲು ಆ ನೃಪತಿಶ್ರೇಷ್ಠನಾದ ರಾಜೀವ ಲೋಚನನಾದ ರಾಮನನ್ನು ನಾನು ವರವನ್ನು ಬೇಡಿದೆನು.
ಯಾವದ್ರಾಮಕಥೇಯಂ ತೇ ಭವೇಲ್ಲೋಕೇಷು ಶತ್ರುಹನ್ |
ತಾವಜ್ಜೀವೇಯಮಿತ್ಯೇವಂ ತಥಾಸ್ತ್ವಿತಿ ಚ ಸೋಽಬ್ರವೀತ್ ॥17॥
ಎಲೈ ಶತ್ರುಸೂದನನೇ, ಎಲ್ಲಿಯವರೆಗೆ ಲೋಕಗಳಲ್ಲಿ ರಾಮಕಥೆಯು ಪ್ರಚಲಿತವಾಗಿರುತ್ತದೆಯೋ ಅಲ್ಲಿಯವರೆಗೆ ನಾನು ಜೀವಿಸಿರುವೆನು ಎಂದು ಬೇಡಿದೆನು. ಅವನು ಹಾಗೆಯೇ ಆಗಲಿ ಎಂದು ಹೇಳಿದನು.

ಸೀತಾಪ್ರಸಾದಾಚ್ಚ ಸದಾ ಮಾಮಿಹಸ್ಥಮರಿಂದಮ |
ಉಪತಿಷ್ಠಂತಿ ದಿವ್ಯಾ ಹಿ ಭೋಗಾ ಭೀಮ ಯಥೇಪ್ಸಿತಾಃ ॥18॥
ಎಲೈ ಅರಿಂದಮನೇ, ಸೀತೆಯ ಅನುಗ್ರಹದಿಂದ ನನಗೆ ಯಾವಾಗಲೂ ಇಷ್ಟವಾದ ದಿವ್ಯಭೋಗಗಳೆಲ್ಲವೂ ಇಲ್ಲಿಯೇ ಒದಗುತ್ತವೆ.
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ |
ರಾಜ್ಯಂ ಕಾರಿತವಾನ್ ರಾಮಸ್ತತಃ ಸ್ವಭವನಂ ಗತಃ ॥19॥
ರಾಮನು ಹನ್ನೊಂದುಸಾವಿರ ವರ್ಷಗಳ ಕಾಲ ರಾಜ್ಯವನ್ನು ಆಳಿ ಅನಂತರ ತನ್ನ ಭವನವಾದ ವೈಕುಂಠಕ್ಕೆ ಹಿಂದಿರುಗಿದನು.
ತದಿಹಾಪ್ಸರಸಸ್ತಾತ ಗಂಧರ್ವಾಶ್ಚ ಸದಾನಘ |
ತಸ್ಯ ವೀರಸ್ಯ ಚರಿತಂ ಗಾಯಂತೋ ರಮಯಂತಿ ಮಾಮ್ ॥20॥
ಎಲೈ ಪ್ರೀತಿಪಾತ್ರನೇ, ಎಲೈ ಅನಘನೇ, ಇಲ್ಲಿ ಗಂಧರ್ವರು ಮತ್ತು ಅಪ್ಸರೆಯರು ಆ ರಾಮನ ಚರಿತ್ರೆಯನ್ನು ಗಾನಮಾಡುತ್ತಾ ನನ್ನನ್ನು ಸಂತೋಷಪಡಿಸುತ್ತಾರೆ.
ಅಯಂ ಚ ಮಾರ್ಗೋ ಮರ್ತ್ಯಾನಾಮಗಮ್ಯಃ ಕುರುನಂದನ |
ತತೋಽಹಂ ರುದ್ಧವಾನ್ ಮಾರ್ಗಂ ತವೇಮಂ ದೇವಸೇವಿತಮ್ ॥
ಎಲೈ ಕುರುನಂದನನೇ, ಈ ಮಾರ್ಗವು ಮನುಷ್ಯರಿಂದ ಅಗಮ್ಯವಾದುದು. ಆದ್ದರಿಂದ ದೇವತೆಗಳಿಂದ ಸೇವಿತವಾದ ಈ ಮಾರ್ಗವನ್ನು ನಾನು ನಿನಗೆ ತಡೆದೆ.
ತ್ವಾಮನೇನ ತಥಾ ಯಾಂತಂ ಯಕ್ಷೋ ವಾ ರಾಕ್ಷಸೋಽಪಿ ವಾ |
ಧರ್ಷಯೇದ್ವಾ ಶಪೇದ್ವಾಪಿ ಮಾ ಕಶ್ಚಿದಿತಿ ಭಾರತ ॥22॥
ಎಲೈ ಭಾರತನೇ, ನೀನು ಈ ಮಾರ್ಗದಲ್ಲಿ ಹೋಗುವಾಗ ಯಾವುದಾದರೂ ಯಕ್ಷನಿಂದಾಗಲೀ, ರಾಕ್ಷಸನಿಂದಾಗಲೀ ಅವಮಾನವು ಅಥವಾ ಶಾಪವು ಆಗದಿರಲಿ ಎಂದು ನಾನು ನಿನ್ನನ್ನು ತಡೆದೆ.
ದಿವ್ಯೋ ದೇವಪಥೋ ಹ್ಯೇಷ ನಾತ್ರ ಗಚ್ಛಂತಿ ಮಾನುಷಾಃ |
ಯದರ್ಥಮಾಗತಶ್ಚಾಸಿ ಅತ ಏವ ಸರಶ್ಚ ತತ್ ॥23॥
ನೀನು ಯಾವ ಉದ್ದೇಶದಿಂದ ಬಂದಿದ್ದೀಯೋ ಆ ಸರೋವರವು ಇಲ್ಲಿಯೇ ಸಮೀಪದಲ್ಲಿದೆ. ಇದು ದಿವ್ಯವಾದ ದೇವಮಾರ್ಗ. ಮನುಷ್ಯರು ಈ ಮಾರ್ಗದಲ್ಲಿ ಹೋಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಏಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ನೂರ ನಲವತ್ತಾರನೆಯ ಅಧ್ಯಾಯ
ಭೀಮಸೇನನಿಂದ ಹನುಮಂತನ ಸಮುದ್ರಲಂಘನ ರೂಪದ ಪ್ರದರ್ಶನದ ಪ್ರಾರ್ಥನೆ. ಹನುಮಂತನಿಂದ ಯುಗಧರ್ಮಗಳ ಉಪದೇಶ.

ವೈಶಂಪಾಯನಃ
ಏಮುಕ್ತೋ ಮಹಾಬಾಹುರ್ಭೀಮಸೇನಃ ಪ್ರತಾಪವಾನ್ |
ಪ್ರಣಿಪತ್ಯ ತತಃ ಪ್ರೀತ್ಯಾ ಭ್ರಾತರಂ ಹೃಷ್ಟಮಾನಸಃ |
ಉವಾಚ ಶ್ಲಕ್ಷ್ಣಯಾ ವಾಚಾ ಹನೂಮಂತಂ ಕಪೀಶ್ವರಮ್ ॥1॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಮಹಾಬಾಹುವಾದ ಪ್ರತಾಪಶಾಲಿಯಾದ ಭೀಮಸೇನನು ಸಂತೋಷಗೊಂಡ ಮನಸ್ಸುಳ್ಳವನಾಗಿ ಅಣ್ಣನಾದ ಹನುಮಂತನಿಗೆ ನಮಸ್ಕರಿಸಿ ಕಪೀಶ್ವರನಾದ ಹನುಮಂತನನ್ನು ಕುರಿತು ಪ್ರೀತಿಯಿಂದ ಮಧುರವಾದ ಮಾತುಗಳನ್ನು ಆಡಿದನು.
ಮಯಾ ಧನ್ಯತರೋ ನಾಸ್ತಿ ಯದಾರ್ಯಂ ದೃಷ್ಟವಾನಹಮ್ |
ಅನುಗ್ರಹೋ ಮೇ ಸುಮಹಾಂಸ್ತೃಪ್ತಿಶ್ಚ ತವ ದರ್ಶನಾತ್ ॥2॥
ನಾನು ಪೂಜ್ಯನಾದ ನಿನ್ನನ್ನು ನೋಡಿದ ಕಾರಣದಿಂದ ನನಗಿಂತ ಧನ್ಯರಾದವರು ಯಾರೂ ಇಲ್ಲವೆಂದು ಭಾವಿಸುತ್ತೇನೆ. ನೀನು ನನಗೆ ಮಾಡಿದ ಅನುಗ್ರಹವು ಬಹಳ ದೊಡ್ಡದು. ನಿನ್ನ ದರ್ಶನದಿಂದ ನನಗೆ ತೃಪ್ತಿ ಉಂಟಾಗಿದೆ.
ಏಕಂ ತು ಕೃತಮಿಚ್ಛಾಮಿ ತ್ವಯಾಽದ್ಯ ಪ್ರಿಯಮಾತ್ಮನಃ |
ಯತ್ತೇ ತದಾಽಽಸೀತ್ ಪ್ಲವತಃ ಸಾಗರಂ ಮಕರಾಲಯಮ್ ॥3॥
ರೂಪಮಪ್ರತಿಮಂ ವೀರ ತದಿಚ್ಛಾಮಿ ನಿರೀಕ್ಷಿತುಮ್ |
ಏವಂ ತುಷ್ಟೋ ಭವಿಷ್ಯಾಮಿ ಶ್ರದ್ಧಾಸ್ಯಾಮಿ ಚ ತೇ ವಚಃ ॥4॥
ನನಗೆ ಪ್ರಿಯವಾದ ಇದೊಂದು ಕೆಲಸವನ್ನು ಈ ದಿನ ನೀನು ಮಾಡಬೇಕೆಂದು ನಾನು ಬಯಸುತ್ತೇನೆ. ಮಕರಾಲಯವಾದ ಸಮುದ್ರವನ್ನು ದಾಟುವಾಗ ನಿನ್ನ ಅಸದೃಶವಾದ ಯಾವ ರೂಪವಿದ್ದಿತೋ ಅದನ್ನು ನೋಡಲು ಬಯಸುತ್ತೇನೆ. ಎಲೈ ವೀರನೇ, ಹಾಗೆ ಮಾಡಿದರೆ ನಾನು ಸಂತುಷ್ಟನಾಗುವೆನು ಮತ್ತು ನಿನ್ನ ಮಾತುಗಳನ್ನು ನಂಬುವೆನು.
ವೈಶಂಪಾಯನಃ
ಏವಮುಕ್ತಃ ಸ ತೇಜಸ್ವೀ ಪ್ರಹಸ್ಯ ಹರಿರಬ್ರವೀತ್ ॥5॥

ನ ತಚ್ಛಕ್ಯಂ ತ್ವಯಾ ದ್ರಷ್ಟುಂ ರೂಪಂ ನ್ಯಾಯೇನ ಕೇನಚಿತ್ |
ಕಾಲಾವಸ್ಥಾ ತದಾ ಹ್ಯನ್ಯಾ ವರ್ತತೇ ಸಾ ನ ಸಾಂಪ್ರತಮ್ |
ತತೋಽದ್ಯ ದುಷ್ಕರಂ ದ್ರಷ್ಟುಂ ಮಮ ರೂಪಂ ನರೋತ್ತಮ ॥6॥
ಹೀಗೆ ಹೇಳಲ್ಪಟ್ಟ ತೇಜಸ್ವಿಯಾದ ಆ ಕಪಿಯಾದ ಹನುಮಂತನು, ನಗುತ್ತಾ ಹೇಳಿದನು. ನೀನಾಗಲೀ ಅಥವಾ ಇನ್ನೊಬ್ಬನಾಗಲೀ ಆ ರೂಪವನ್ನು ನೋಡಲು ಸಾಧ್ಯವಿಲ್ಲ. ಆಗ ಇದ್ದ ಕಾಲಸ್ಥಿತಿಯೇ ಬೇರೆ. ಅದು ಈಗ ಇಲ್ಲ. ಆದ್ದರಿಂದ ಎಲೈ ನರೋತ್ತಮನೇ, ಆ ರೂಪವನ್ನು ಈ ದಿನ ನೀನು ನೋಡಲು ಸಾಧ್ಯವಿಲ್ಲ.
ಅನ್ಯಃ ಕೃತಯುಗೇ ಕಾಲಸ್ತ್ರೇತಾಯಾಂ ದ್ವಾಪರೇ ಪರಃ |
ಅಯಂ ಪ್ರಧ್ವಂಸನಃ ಕಾಲೋ ನಾದ್ಯ ತದ್ರೂಪಮಸ್ತಿ ಮೇ ॥7॥
ಕೃತಯುಗದ ಕಾಲವು ಬೇರೆ. ತ್ರೇತಾಯುಗದ ಕಾಲವು ಬೇರೆ. ಇದು (ದ್ವಾಪರ ಯುಗವು) ಎಲ್ಲವೂ ನಾಶವನ್ನು ಹೊಂದುವ ಕಾಲ. ಈಗ ನನಗೆ ಆ ರೂಪವಿಲ್ಲ.
ಭೂಮಿರ್ನದ್ಯೋ ನಗಾಃ ಶೈಲಾಃ ಸಿದ್ಧಾ ದೇವಾ ಮಹರ್ಷಯಃ |
ಕಾಲಂ ಸಮನುವರ್ತಂತೇ ಯಥಾ ಭಾವಾ ಯುಗೇ ಯುಗೇ ॥8॥
ಬೇರೆ ಬೇರೆ ಪದಾರ್ಥಗಳು ಯುಗಯುಗಗಳಲ್ಲಿ ಕಾಲವನ್ನು ಅನುಸರಿಸುವಂತೆ ಭೂಮಿ, ನದಿಗಳು, ವೃಕ್ಷಗಳು, ಪರ್ವತಗಳು, ಸಿದ್ಧರು, ದೇವತೆಗಳು, ಮಹರ್ಷಿಗಳು ಎಲ್ಲರೂ ಕಾಲವನ್ನು ಅನುಸರಿಸುತ್ತಾರೆ.
ಕಾಲಂ ಕಾಲಂ ಸಮಾಸಾದ್ಯ ನರಾಣಾಂ ನರಪುಂಗವ |
ಬಲವರ್ಷ್ಮಪ್ರಭಾವಾ ಹಿ ಪ್ರಹೀಯಂತ್ಯುದ್ಭವಂತಿ ಚ ॥9॥
ಎಲೈ ನರಶ್ರೇಷ್ಠನೇ, ಆಯಾ ಕಾಲವನ್ನು ಅನುಸರಿಸಿ ಮನುಷ್ಯರಿಗೆ ಶರೀರ, ಬಲ, ಸಾಮರ್ಥ್ಯಗಳು ಹೆಚ್ಚಾಗುತ್ತವೆ ಮತ್ತು ಕಡಿಮೆಯಾಗುತ್ತವೆ.
ತದಲಂ ಬತ ತದ್ರೂಪಂ ದ್ರಷ್ಟುಂ ಕುರುಕುಲೋದ್ವಹ |
ಯುಗಂ ಸಮನುವರ್ತಾಮಿ ಕಾಲೋ ಹಿ ದುರತಿಕ್ರಮಃ ॥10॥
ಎಲೈ ಕುರುಕುಲೋದ್ವಹನೇ, ಆದ್ದರಿಂದ ಆ ರೂಪವನ್ನು ನೋಡುವ ಆಸೆಯನ್ನು ಬಿಡು. ನಾನು ಯುಗವನ್ನು ಅನುಸರಿಸುತ್ತೇನೆ. ಕಾಲವನ್ನು ಮೀರಲು ಸಾಧ್ಯವಿಲ್ಲವಷ್ಟೆ?
ಭೀಮಃ
ಯುಸಂಖ್ಯಾಂ ಸಮಾಚಕ್ಷ್ವ ಆಚಾರಂ ಚ ಯುಗೇ ಯುಗೇ |
ಧರ್ಮಕಾಮಾರ್ಥಭಾವಾಂಶ್ಚ ಕರ್ಮವೀರ್ಯೇ ಭವಾಭವೌ ॥11॥
ಭೀಮ ಯುಗಸಂಖ್ಯೆಯನ್ನು ಮತ್ತು ಪ್ರತಿಯುಗದಲ್ಲಿ ಉಂಟಾಗುವ ಆಚಾರವನ್ನು ಧರ್ಮ, ಕಾಮ, ಅರ್ಥ ಮತ್ತು ಉಳಿದ ಪದಾರ್ಥಗಳನ್ನು ಶುಭಾಶುಭ ಕರ್ಮಗಳನ್ನು, ಕಾರ್ಯಕಾರಣ ಶಕ್ತಿಯನ್ನು, ಮಂಗಳಾಮಂಗಳಗಳನ್ನು ನನಗೆ ತಿಳಿಸು.
ಹನೂಮಾನ್
ಕೃತಂ ನಾಮ ಯುಗಂ ತಾತ ಯತ್ರ ಧರ್ಮಃ ಸನಾತನಃ |
ಕೃತಮೇವ ನ ಕರ್ತವ್ಯಂ ತಸ್ಮಿನ್ ಕಾಲೇ ಯುಗೋತ್ತಮೇ ॥12॥
ಹನುಮಾನ್- ಪ್ರೀತಿಪಾತ್ರನೇ, ಹಿಂದೆ ಕೃತಯುಗವಿದ್ದಿತು. ಅಲ್ಲಿ ಸನಾತನ ಧರ್ಮವು ನಡೆಯುತ್ತಿದ್ದಿತು. ಆ ಶ್ರೇಷ್ಠವಾದ ಯುಗದಲ್ಲಿ ಎಲ್ಲರೂ ಕೃತಕೃತ್ಯರಾಗಿದ್ದರು. ಯಾರಿಗೂ ಮಾಡಬೇಕಾಗಿ ಉಳಿದ ಒಂದು ಕಾರ್ಯವು ಇರಲಿಲ್ಲ.
ನ ತತ್ರ ಧರ್ಮಾಃ ಸೀದಂತಿ ಕ್ಷೀಯಂತೇ ನ ಚ ವೈ ಪ್ರಜಾಃ |
ತತಃ ಕೃತಯುಗಂ ನಾಮ ಕಾಲೇನ ಗುಣತಾಂ ಗತಮ್ ॥13॥
ಆಗ ಧರ್ಮಗಳು ಅವಸಾನವನ್ನು ಹೊಂದುತ್ತಿರಲಿಲ್ಲ. ಪ್ರಜೆಗಳು ಲಯವನ್ನು ಹೊಂದುತ್ತಿರಲಿಲ್ಲ. ಆದ್ದರಿಂದ ಕೃತಯುಗ ಎಂಬ ಹೆಸರು ಬಂದು ಕಾಲದಲ್ಲಿ ಶ್ರೇಷ್ಠವಾದ ಕಾಲ ಎನಿಸಿತು.
ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾಃ |
ನಾಸನ್ ಕೃತಯುಗೇ ತಾತ ತದಾ ನ ಕ್ರಯವಿಕ್ರಯಃ ॥14॥
ಎಲೈ ಪ್ರೀತಿಪಾತ್ರನೇ, ಆಗ ದೇವದಾನವಗಂಧರ್ವಯಕ್ಷರಾಕ್ಷಸ ಸರ್ಪಗಳು ಇರಲಿಲ್ಲ. ಕ್ರಯವಿಕ್ರಯಗಳು ನಡೆಯುತ್ತಿರಲಿಲ್ಲ.
ನ ಸಾಮಋಗ್ಯಜುರ್ವರ್ಣಾಃ ಕ್ರಿಯಾ ನಾಸೀಚ್ಚ ಮಾನವೀ |
ಅಭಿಧ್ಯಾಯ ಫಲಂ ತತ್ರ ಧರ್ಮಃ ಸನ್ನ್ಯಾಸ ಏವ ಚ ॥15॥
ಧರ್ಮದ ಸಲುವಾಗಿ ಋಗಾದಿ ವೇದಗಳನ್ನು ಬಳಸುತ್ತಿರಲಿಲ್ಲ. ಎಲ್ಲವೂ ಸಂಕಲ್ಪದಿಂದಲೇ ಸಿದ್ಧವಾಗುತಿತದ್ದರಿಂದ ಮನುಷ್ಯರಿಗೆ ಕೃಷಿ ಮೊದಲಾದ ಕ್ರಿಯೆಗಳೂ ಇರಲಿಲ್ಲ. ಫಲವನ್ನು ಉದ್ದೇಶಿಸಿ ಯಾರೂ ಧರ್ಮಾಚರಣೆಯನ್ನು ಮಾಡುತ್ತಿರಲಿಲ್ಲ. ಅಥವಾ ಸಂನ್ಯಾಸವನ್ನು ಸ್ವೀಕರಿಸುತ್ತಿರಲಿಲ್ಲ.
ನ ತಸ್ಮಿನ್ ಯುಗಸಂಸರ್ಗೇ ವ್ಯಾಧಯೋ ನೇಂದ್ರಿಯಕ್ಷಯಃ |
ನಾಸೂಯಾ ನಾಪಿ ರುದಿತಂ ನ ದರ್ಪೋ ನಾಪಿ ವೈಕೃತಮ್ ॥16॥
ಆ ಯುಗದ ಕಾಲದಲ್ಲಿ ವ್ಯಾಧಿಗಳಾಗಲೀ ಇಂದ್ರಿಯಕ್ಷಯವಾಗಲೀ ಇರಲಿಲ್ಲ. ಅಸೂಯೆಯಾಗಲೀ ರೋಧನವಾಗಲೀ, ದರ್ಪವಾಗಲೀ, ವಂಚನೆಯಾಗಲೀ ಇರಲಿಲ್ಲ.
ನ ವಿಗ್ರಹಃ ಕೃತಸ್ತಂದ್ರೀ ನ ದ್ವೇಷೋ ನ ಚ ಪೈಶುನಮ್ |
ನ ಭಯಂ ನಾಪಿ ಸಂತಾಪೋ ನ ಚೇರ್ಷ್ಯಾ ನ ಚ ಮತ್ಸರಃ ॥17॥

ಕಲಹಗಳು ಇರಲಿಲ್ಲ. ಆಗ ಆಲಸ್ಯ ಎಲ್ಲಿಂದ ಬರಬೇಕು? ಆಗ ದ್ವೇಷವಾಗಲೀ, ಚಾಡಿಯ ಮಾತುಗಳಾಗಲೀ ಇರಲಿಲ್ಲ. ಆಗ ಭಯವಾಗಲೀ, ಸಂತಾಪವಾಗಲೀ, ಹೊಟ್ಟೇಕಿಚ್ಚಾಗಲೀ ಅಥವಾ ಮಾತ್ಸರ್ಯವಾಗಲೀ ಇರಲಿಲ್ಲ.
ತತಃ ಪರಮಕಂ ಬ್ರಹ್ಮ ಸಾ ಗತಿರ್ಯೋಗಿನಾಂ ಪರಾ |
ಆತ್ಮಾ ಚ ಸರ್ವಭೂತಾನಾಂ ಶುಕ್ಲೋ ನಾರಾಯಣಸ್ತದಾ ||18||
ಆಗ ಯೋಗಿಗಳಿಗೆ ಪರಮಗತಿಯಾದ ನಾರಾಯಣನೇ ಸರ್ವೋತ್ತಮನೆಂದು, ಸರ್ವಜೀವರ ಅಂತರ್ಯಾಮಿ ಎಂದು ಪೂಜಿಸಲ್ಪಡುತ್ತಿದ್ದನು. ಅವನಿಗೆ ಆಗ ಶುಕ್ಲ ವರ್ಣವಿದ್ದಿತು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ಕೃತಲಕ್ಷಣಾಃ |
ಕೃತೇ ಯುಗೇ ಸಮಭವನ್ ಸ್ವಕರ್ಮನಿರತಾಃ ಪ್ರಜಾಃ ||19||
ಸಮಾಶ್ರಯಂ ಸಮಾಚಾರಂ ಸಮಜ್ಞಾನಂ ಚ ಕೇವಲಮ್ |
ತದಾ ಹಿ ಸಮಕರ್ಮಾಣೋ ವರ್ಣಾ ಧರ್ಮವಪ್ನುವನ್ ||20||
ಏಕದೇವಸದಾಯುಕ್ತಾ ಏಕಮಂತ್ರವಿಧಿಕ್ರಿಯಾಃ |
ಪೃಥಗ್ದರ್ಮಾಸ್ತ್ವೇಕವೇದಾ ಧರ್ಮಮೇಕಮನುವ್ರತಾಃ ||21||
ಕೃತಯುಗದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಪ್ರಜೆಗಳೆಲ್ಲರೂ ಶಂಖ ಚಕ್ರಾದಿ ಚಿಹ್ನೆಗಳನ್ನು ಧರಿಸಿ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾಗಿದ್ದರು. ಎಲ್ಲ ವರ್ಣದವರೂ ಸಮಾನವಾದ ಆಶ್ರಯವನ್ನು ಹೊಂದಿ ಸಮಾನವಾದ ಆಚಾರವನ್ನು, ಸಮಾನವಾದ ಜ್ಞಾನವನ್ನು ಹೊಂದಿ ಸಮಾನವಾದ ಕರ್ಮಗಳನ್ನು ಮಾಡಿ ಧರ್ಮವನ್ನು ಸಂಪಾದಿಸುತ್ತಿದ್ದರು. ಆಗ ಸರ್ವೋತ್ತಮನಾದ ಒಬ್ಬ ದೇವನನ್ನೇ ಯಾವಾಗಲೂ ಪೂಜಿಸುತ್ತಿದ್ದರು. ಒಂದೇ ಮಂತ್ರ ಒಂದೇ ವಿಧಿ ಅವನನ್ನು ಪೂಜಿಸುವ ಒಂದೇ ಕ್ರಿಯೆಗಳು ಇದ್ದವು. ಬೇರೆ ಬೇರೆ ಧರ್ಮಗಳು ಇದ್ದರೂ ಅವಿಭಕ್ತವಾದ ಒಂದೇ ವೇದವಿದ್ದಿತು. ಎಲ್ಲರೂ ಒಂದೇ ವೈಷ್ಣವ ಧರ್ಮವನ್ನು ಅನುಸರಿಸುತ್ತಿದ್ದರು.
ಚಾತುರಾಶ್ರಮ್ಯಯುಕ್ತೇನ ಕರ್ಮಣಾ ಕಾಲಯೋಗಿನಾ |
ಅಕಾಮಫಲಸಂಯೋಗಾತ್ ಪ್ರಾಪ್ನುವಂತಿ ಪರಾಂ ಗತಿಮ್ ||22||
ನಾಲ್ಕು ಆಶ್ರಯಗಳಿಗೆ ಯೋಗ್ಯವಾದ ಆ ಕಾಲಕ್ಕೆ ಉಚಿತವಾದ ಕರ್ಮಗಳನ್ನು ನಿಷ್ಕಾಮವಾಗಿ ಫಲೋದ್ದೇಶರಹಿತವಾಗಿ ಆಚರಿಸಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಿದ್ದರು.
ಏತತ್ಕೃತಯುಗಂ ನಾಮ ತ್ರೈಗುಣ್ಯಪರಿವರ್ಜಿತಮ್ ||24||
ಇದಕ್ಕೆ ಕೃತಯುಗ ಎಂದು ಹೆಸರು. ಅದು ಮೂರುಗುಣಗಳಿಂದ ರಹಿತವಾಗಿದ್ದಿತು (ಸತ್ವಗುಣವೇ ಪ್ರಧಾನವಾಗಿದ್ದಿತು. ರಜೋಗುಣ ಮತ್ತು ತಮೋಗುಣಗಳು ಅಲ್ಪವಾಗಿದ್ದವು).
ಆತ್ಮಯೋಗಸಮಾಯುಕ್ತೋ ಧರ್ಮೋಽಯಂ ಕೃತಲಕ್ಷಣಃ |
ಕೃತೇ ಯುಗೇ ಚತುಷ್ಪಾದಶ್ಚಾತುರ್ವರ್ಣ್ಯಸ್ಯ ಶಾಶ್ವತಃ ||23||
ಕೃತಯುಗದಲ್ಲಿ ಎಲ್ಲರೂ ಆತ್ಮಯೋಗದಲ್ಲಿ ನಿರತರಾಗಿದ್ದರು. ಚಾತುರ್ವರ್ಣ್ಯಕ್ಕೆ ಸಂಬಂಧಿಸಿದ ಶಾಶ್ವತವಾದ ಧರ್ಮವು (ಧರ್ಮ, ಶೌಚ, ದಯಾ, ಸತ್ಯವೆಂಬ) ನಾಲ್ಕು ಪಾದಗಳ ಮೇಲೆ ಭದ್ರವಾಗಿ ನೆಲೆಸಿದ್ದಿತು.
ತ್ರೇತಾಮಪಿ ನಿಬೋಧ ತ್ವಂ ಯಸ್ಮಿನ್ ಸತ್ರಂ ಪ್ರವರ್ತತೇ |
ಪಾದೇನ ಹ್ರಸತೇ ಧರ್ಮೋ ರಕ್ತತಾಂ ಯಾತಿ ಚಾಚ್ಯುತಃ ||25||
ತ್ರೇತಾಯುಗವನ್ನು ಹೇಳುತ್ತೇನೆ ಕೇಳು. ಅಲ್ಲಿ ಸತ್ರ ಮೊದಲಾದ ಯಾಗಗಳು ಜರುಗುತ್ತವೆ. ಧರ್ಮವು ಒಂದು ಪಾದದಿಂದ ಊನವಾಗುತ್ತವೆ. ಅಚ್ಯುತನು ರಕ್ತವರ್ಣೋಪೇತನಾಗುತ್ತಾನೆ.
ಸತ್ಯಪ್ರವೃತ್ತಾಶ್ಚ ನರಾಃ ಕ್ರಿಯಾಧರ್ಮಪರಾಯಣಾಃ |
ತತೋ ಯಜ್ಞಾಃ ಪ್ರವರ್ತಂತೇ ಧರ್ಮಾಶ್ಚ ವಿವಿಧಾಃ ಕ್ರಿಯಾಃ ||26||
ಮನುಷ್ಯರು ಸತ್ಯಪ್ರವೃತ್ತರಾಗಿ ಕ್ರಿಯಾಪರಾಯಣರೂ, ಧರ್ಮಪರಾಯಣರೂ ಆಗುತ್ತಾರೆ. ಯಜ್ಞಗಳು ಜರುಗುತ್ತವೆ. ಧರ್ಮಗಳು ಮತ್ತು ವಿವಿಧವಾದ ಕ್ರಿಯೆಗಳು ಆಚರಿಸಲ್ಪಡುತ್ತವೆ.
ತ್ರೇತಾಯಾಂ ಭಾವಸಂಕಲ್ಪಾಃ ಕ್ರಿಯಾದಾನಫಲೋಪಗಾಃ |
ಸ್ವಧರ್ಮಸ್ಥಾಃ ಕ್ರಿಯಾವಂತೋ ನರಾಸ್ತ್ರೇತಾಯುಗೇಽಭವನ್ ||27||
ತ್ರೇತಾಯುಗದಲ್ಲಿ ಫಲವನ್ನು ಸಂಕಲ್ಪಿಸಿ ಅಂತಹ ಫಲವನ್ನು ಕೊಡುವ ಕ್ರಿಯಾ ಮತ್ತು ದಾನಗಳನ್ನು ಮಾಡುತ್ತಾರೆ. ತಪೋದಾನ ಪರಾಯಣರಾದವರು ಧರ್ಮ ಮಾರ್ಗವನ್ನು ಬಿಟ್ಟು ಚಲಿಸುವುದಿಲ್ಲ. ತ್ರೇತಾಯುಗದಲ್ಲಿ ಮನುಷ್ಯರು ತಮ್ಮ ತಮ್ಮ ಧರ್ಮಗಳನ್ನು ಮತ್ತು ತಮಗೆ ಉಚಿತವಾದ ಕ್ರಿಯೆಗಳನ್ನು ಆಚರಿಸುವವರಾಗುತ್ತಾರೆ.
ದ್ವಾಪರೇ ಚ ಯುಗೇ ಧರ್ಮೋ ದ್ವಿಭಾಗೋನಃ ಪ್ರವರ್ತತೇ |
ವಿಷ್ಣುರ್ವೈ ಪೀತತಾಂ ಯಾತಿ ಚತುರ್ಧಾ ವೇದ ಏವ ಚ ||28||
ದ್ವಾಪರಯುಗದಲ್ಲಿ ಧರ್ಮವು ಎರಡು ಪಾದಗಳಿಂದ ಕಡಿಮೆಯಾಗುತ್ತದೆ. ವಿಷ್ಣುವು ಪೀತರೂಪವುಳ್ಳವನಾಗುತ್ತಾನೆ. ವೇದವು ನಾಲ್ಕುವೇದಗಳಾಗಿ ವಿಭಾಗವನ್ನು ಹೊಂದುತ್ತವೆ.
ತತೋಽನ್ಯೇ ಚ ಚತುರ್ವೇದಾಸ್ತ್ರಿವೇದಾಶ್ಚ ತಥಾಪರೇ |
ದ್ವಿವೇದಾಶ್ಚೈಕವೇದಾಶ್ಚಾಪ್ಯನೃಚಶ್ಚ ತಥಾಪರೇ ||29||
ಕೆಲವರು ನಾಲ್ಕು ವೇದಗಳನ್ನು, ಕೆಲವರು ಮೂರುವೇದಗಳನ್ನು, ಕೆಲವರು ಎರಡು ವೇದಗಳನ್ನು, ಕೆಲವರು ಒಂದು ವೇದವನ್ನು ಅಧ್ಯಯನ ಮಾಡುತ್ತಾರೆ. ಇನ್ನು ಕೆಲವರು ಯಾವ ವೇದವನ್ನಾಗಲೀ ಅಥವಾ ಮಂತ್ರವನ್ನಾಗಲೀ ಅಧ್ಯಯನ ಮಾಡುವುದಿಲ್ಲ.
ಏವಂ ಶಾಸ್ತ್ರೇಷು ಭಿನ್ನೇಷು ಬಹುಧಾ ನೀಯತೇ ಕ್ರಿಯಾ |

ತಪೋದಾನಪ್ರವೃತ್ತಾ ಚ ರಾಜಸೀ ಭವತಿ ಪ್ರಜಾ ॥30॥
ಹೀಗೆ ಶಾಸ್ತ್ರಗಳು ವಿಭಾಗವನ್ನು ಹೊಂದುತ್ತಿರಲು, ಕ್ರಿಯೆಗಳು ಅನೇಕ ರೂಪವನ್ನು ತಾಳುತ್ತವೆ. ತಪೋದಾನಗಳಲ್ಲಿ ಪ್ರವೃತ್ತರಾದ ಪ್ರಜೆಗಳು ರಾಜಸದೃಷ್ಟಿಯಿಂದಲೇ (ಎಂದರೆ ಫಲೋದ್ದೇಶದಿಂದಲೇ) ಪ್ರವೃತ್ತರಾಗುತ್ತಾರೆ.
ಏಕವೇದಸ್ಯ ಚಾಜ್ಞಾನಾದ್ ವೇದಾಸ್ತೇ ಬಹವಃ ಕೃತಾಃ।
ಸತ್ತ್ವಸ್ಯ ಚೇಹ ವಿಭ್ರಂಶಾತ್ ಸತ್ಯೇ ಕಶ್ಚಿತದವಸ್ಥಿತಃ ॥31॥
ಒಂದು ವೇದವು (ವೇದಪ್ರತಿಪಾದ್ಯವಾದ ಒಂದು ವಿಷಯವನ್ನು) ತಿಳಿಯದಿರುವುದರಿಂದ ಅನೇಕ ವೇದಗಳಾಗುತ್ತವೆ. ಸತ್ತ್ವವು ಇಲ್ಲಿ ನಾಶವನ್ನು ಹೊಂದುವುದರಿಂದ ಯಾರೋ ಒಬ್ಬರು ಸತ್ಯಶೀಲರಾಗಿರುತ್ತಾರೆ.
ಸತ್ಯಾತ್ ಪ್ರಚ್ಯವಮಾನಾನಾಂ ವ್ಯಾಧಯೋ ಬಹವೋಽಭವನ್।
ಕಾಮಾಶ್ಚೋಪದ್ರವಾಶ್ಚೈವ ತದಾ ವೈ ದೈವಕಾರಿತಾಃ ॥32॥
ಪ್ರಜೆಗಳು ಸತ್ಯದಿಂದ ಚ್ಯುತರಾಗುವುದರಿಂದ ಅನೇಕ ವ್ಯಾಧಿಗಳು ಉಂಟಾಗುತ್ತವೆ. ಅವರಿಗೆ ಅನೇಕ ಕಾಮಗಳು (ದುರಾಸೆಗಳು) ಮತ್ತು ದೈವಕೃತವಾದ ಉಪದ್ರವಗಳು ಉಂಟಾಗುತ್ತವೆ.
ಯೈರರ್ದ್ಯಮಾನಾಃ ಸುಭೃಶಂ ತಪಸ್ತಪ್ಯಂತಿ ಮಾನವಾಃ।
ಕಾಮಕಾಮಾಃ ಸ್ವರ್ಗಕಾಮಾ ಯಜ್ಞಾಂಸ್ತನ್ವಂತಿ ಚಾಪರೇ ॥33॥
ಅಂತಹ ದೇವಕೃತವಾದ ಅತಿವೃಷ್ಟ್ಯಾದಿಗಳಿಂದ ಚೆನ್ನಾಗಿ ಪೀಡಿತರಾದ ಮಾನವರು ಐಹಿಕ ಕಾಮ್ಯಗಳ ಕಾಮನೆಯಿಂದ ಮತ್ತು ಸ್ವರ್ಗದ ಕಾಮನೆಯಿಂದ ತಪಸ್ಸನ್ನು ಆಚರಿಸುತ್ತಾರೆ. ಇನ್ನು ಕೆಲವರು ಯಜ್ಞಗಳನ್ನು ಆಚರಿಸುತ್ತಾರೆ.
ಏವಂ ದ್ವಾಪರಮಾಸಾದ್ಯ ಪ್ರಜಾಃ ಕ್ಷೀಯಂತ್ಯಧರ್ಮತಃ।
ಪಾದೇನೈಕೇನ ಕೌಂತೇಯ ಧರ್ಮಃ ಕಲಿಯುಗೇ ಸ್ಥಿತಃ ॥34॥
ತಾಮಸಂ ಯುಗಮಾಸಾದ್ಯ ಕೃಷ್ಣೋ ಭವತಿ ಕೇಶವಃ ॥35॥
ಹೀಗೆ ದ್ವಾಪರದಲ್ಲಿ ಪ್ರಜೆಗಳು ಅಧರ್ಮದಿಂದ ನಾಶವನ್ನು ಹೊಂದುತ್ತಾರೆ. ಕಲಿಯುಗದಲ್ಲಿ ಧರ್ಮವು ಸತ್ಯವೆಂಬ ಒಂದೇ ಪಾದದಿಂದ ನಿಲ್ಲುತ್ತದೆ. ಎಲೈ ಕೌಂತೇಯನೇ, ಆ ತಾಮಸ ಯುಗದಲ್ಲಿ ಕೇಶವನು ಕೃಷ್ಣವರ್ಣೋಪೇತನಾಗುತ್ತಾನೆ.
ವೇದಾಚಾರಾಃ ಪ್ರಶಾಮ್ಯಂತಿ ಧರ್ಮಯಜ್ಞಕ್ರಿಯಾಸ್ತಥಾ।
ಈತಯೋ ವ್ಯಾಧಯಸ್ತಂದ್ರೀ ದೋಷಾಃ ಕ್ರೋಧಾದಯಸ್ತಥಾ।
ಉಪದ್ರವಾ ಪ್ರವರ್ತಂತೇ ಆಧಯಃ ಕ್ಷುದ್ಭಯಂ ತಥಾ ॥36॥
ವೇದಾಚಾರಗಳು, ಧರ್ಮಯಜ್ಞಾದಿ ಕ್ರಿಯೆಗಳು ನಾಶವನ್ನು ಹೊಂದುತ್ತವೆ. ಅತಿವೃಷ್ಟ್ಯಾದಿ ಈತಿಗಳು, ದೇಹದ ರೋಗಗಳು, ಆಲಸ್ಯಾದಿಗಳು, ಕ್ರೋಧಗಳು ಉಂಟಾಗುತ್ತವೆ. ಅನೇಕ ರೀತಿಯ ಉಪದ್ರವಗಳು, ಮಾನಸ ವ್ಯಥೆಗಳು ಮತ್ತು ಹಸಿವಿನ ಭಯವು ಉಂಟಾಗುತ್ತದೆ.
ಯುಗೇಷ್ವಾವರ್ತಮಾನೇಷು ಧರ್ಮೋ ವ್ಯಾವರ್ತತೇ ಪುನಃ।
ಧರ್ಮೇ ವ್ಯಾವರ್ತಮಾನೇ ತು ಲೋಕೋ ವ್ಯಾವರ್ತತೇ ಪುನಃ ॥37॥
ಯುಗಗಳು ಹೀಗೆ ಚಕ್ರದಂತೆ ತಿರುಗುವಾಗ ಧರ್ಮವೂ ತಿರುಗುತ್ತದೆ. ಧರ್ಮವು ತಿರುಗುವಂತೆ ಪ್ರಜೆಗಳು ತಿರುಗುತ್ತಾರೆ (ಯುಗಗಳು ಹೀಗೆ ತಿರುಗುತ್ತಾ ಕಲಿಯುಗವು ಬಂದಾಗ ಧರ್ಮವು ನಾಶವಾಗುತ್ತದೆ. ಧರ್ಮವು ನಾಶವಾಗುತ್ತಿರಲು ಪ್ರಜೆಗಳು ನಾಶವನ್ನು ಹೊಂದುತ್ತಾರೆ).
ಲೋಕೇ ಕ್ಷೀಣೇ ಕ್ಷಯಂ ಯಾಂತಿ ಭಾವಾ ಲೋಕಪ್ರವರ್ತಕಾಃ।
ಯುಗಕ್ಷಯಕೃತಾ ಧರ್ಮಾಃ ಪ್ರಾರ್ಥನಾನಿ ವಿಕುರ್ವತೇ ॥38॥
ಲೋಕವು ಮತ್ತು ಪ್ರಜೆಗಳು ನಾಶಹೊಂದುತ್ತಿರಲು ಲೋಕಪ್ರವರ್ತಕವಾದ ಧರ್ಮಜ್ಞಾನಾದಿ ಭಾವಗಳು ನಾಶವನ್ನು ಹೊಂದುತ್ತವೆ. ಯುಗಕ್ಷಯದ ನಿಮಿತ್ತದಿಂದಾಗಿ ಧರ್ಮಗಳು ಮತ್ತು ಪ್ರಾರ್ಥನೆಗಳು ವ್ಯರ್ಥವಾಗುತ್ತವೆ (ಅಥವಾ ವಿರುದ್ಧವಾದ ಫಲಗಳನ್ನು ಕೊಡುತ್ತದೆ).
ಏತತ್ ಕಲಿಯುಗಂ ನಾಮ ಅಚಿರಾದ್ಯತ್ ಪ್ರವರ್ತತೇ।
ಯುಗಾನುವರ್ತನಂ ತ್ವೇತತ್ ಕುರ್ವಂತಿ ಚಿರಜೀವಿನಃ ॥39॥
ಅಂತಹ ಈ ಕಲಿಯುಗವು ಸದ್ಯದಲ್ಲಿಯೇ ಬರಲಿದೆ. ಚಿರಜೀವಿಗಳಾದವರು ಆಯಾ ಯುಗದ ಧರ್ಮಗಳನ್ನು ಅನುಸರಿಸುತ್ತಾರೆ.
ಯಚ್ಚ ತೇ ಮತ್ಪರಿಜ್ಞಾನೇ ಕೌತೂಹಲಮರಿಂದಮ।
ಅನರ್ಥಕೇಷು ಕೋ ಭಾವಃ ಪುರುಷಸ್ಯ ವಿಜಾನತಃ ॥40॥
ಎಲೈ ಅರಿಂದಮನೇ, ನನ್ನನ್ನು ತಿಳಿದುಕೊಳ್ಳಲು ನಿನಗೆ ಕುತೂಹಲವಿದೆಯಷ್ಟೆ? ನಿಷ್ಪ್ರಯೋಜನವಾದ ವಿಷಯಗಳಲ್ಲಿ ವಿವೇಕಿಯಾದವನು ಹಠವನ್ನು ಮಾಡಬಾರದು.
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ।
ಯುಗಸಾಂಖ್ಯಾಂ ಮಹಾಬಾಹೋ ಸ್ವಸ್ತಿ ಪ್ರಾಪ್ನುಹಿ ಗಮ್ಯತಾಮ್ ॥41॥
ಮಹಾಬಾಹುವೇ, ನೀನು ಕೇಳಿದ ವಿಷಯಗಳೆಲ್ಲವನ್ನೂ ಮತ್ತು ಯುಗಗಳ ಸಂಖ್ಯೆಯನ್ನೂ ಹೇಳಿದ್ದೇನೆ. ನಿನಗೆ ಮಂಗಳವಾಗಲಿ, ಇಲ್ಲಿಂದ ಹೊರಟುಹೋಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ದ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತಾರನೆಯ

ಅಧ್ಯಾಯ ಮುಗಿಯಿತು.
* * * *
ನೂರ ನಲವತ್ತೇಳನೆಯ ಅಧ್ಯಾಯ
ಭೀಮಸೇನನೆದುರಿಗೆ ಹನುಮಂತನ ಸಮುದ್ರಲಂಘನ ಮಾಡಿದ ರೂಪದ ಆವಿಷ್ಕಾರ ಮತ್ತು ಚಾತುರ್ವರ್ಣ್ಯ ಧರ್ಮೋಪದೇಶ.
ಭೀಮಸೇನಃ
ಪೂರ್ವರೂಪಮದೃಷ್ಟ್ವಾ ತೇ ನ ಯಾಸ್ಯಾಮಿ ಕಥಂಚನ |
ಯದಿ ತೇಽಹಮನುಗ್ರಾಹ್ಯೋ ದರ್ಶಯಾತ್ಮಾನಮಾತ್ಮನಾ ॥1॥
ಭೀಮಸೇನ ನಿನ್ನ ಹಿಂದಿನ ಆ ರೂಪವನ್ನು ನೋಡದೆ ನಾನು ಏನಾದರೂ ಇಲ್ಲಿಂದ ಹೋಗುವುದಿಲ್ಲ. ನನ್ನ ಮೇಲೆ ಅನುಗ್ರಹವಿರುವುದಾದರೆ ಆ ನಿನ್ನ ರೂಪವನ್ನು ನೀನೇ ತೋರಿಸು.
ವೈಶಂಪಾಯನಃ
ಏವಮುಕ್ತಸ್ತು ಭೀಮೇನ ಸ್ಮಿತಂ ಕೃತ್ವಾ ಪ್ಲವಂಗಮಃ |
ತದ್ರೂಪಂ ದರ್ಶಯಾಮಾಸ ಯದ್ವೈ ಸಾಗರಲಂಘನೇ ॥2॥
ವೈಶಂಪಾಯನ ಹೀಗೆ ಭೀಮನಿಂದ ಹೇಳಲ್ಪಟ್ಟ ಕಪೀಶ್ವರನಾದ ಹನುಮಂತನು ಮುಗುಳ್ನಗೆಯನ್ನು ನಕ್ಕು ಸಾಗರವನ್ನು ದಾಟುವಾಗ ತೆಗೆದುಕೊಂಡ ರೂಪವನ್ನು ತೋರಿಸಿದನು.
ಭ್ರಾತುಃ ಪ್ರಿಯಮಭೀಪ್ಸನ್ ವೈ ಚಕಾರ ಸುಮಹದ್ವಪುಃ |
ತದ್ರೂಪಂ ಯತ್ ಪುರಾ ತಸ್ಯ ಬಭೂವೋದಧಿಲಂಘನೇ ॥3॥
ಉದದಿಲಂಘನ ಸಮಯದಲ್ಲಿ ಯಾವ ರೂಪವಿದ್ದಿತೋ ಅಂತಹ ದೊಡ್ಡ ರೂಪವನ್ನು ತನ್ನ ತಮ್ಮನಾದ ಭೀಮನಿಗೆ ಪ್ರಿಯವನ್ನು ಉಂಟುಮಾಡುವ ಸಲುವಾಗಿ ಹನುಮಂತನು ತೆಗೆದುಕೊಂಡನು.
ದೇಹಸ್ತಸ್ಯ ತತೋಽತೀವ ವರ್ಧತ್ಯಾಯಾಮವಿಸ್ತರೈಃ |
ಸದ್ರುಮಂ ಕದಲೀಷಂಡಂ ಛಾದಯನ್ನಮಿತದ್ಯುತಿಃ ॥4॥
ಅಮಿತಕಾಂತಿಯುಳ್ಳ ಅವನ ದೇಹವು ವೃಕ್ಷಗಳನ್ನು ಮತ್ತು ಕದಲೀವನವನ್ನು ಆವರಿಸುತ್ತಾ ಎತ್ತರ ಮತ್ತು ಗಾತ್ರದಲ್ಲಿ ಬೆಳೆಯಿತು.
ಗಿರೇಶ್ಚೋಚ್ಛ್ರಯಮಾಕ್ರಮ್ಯ ತಸ್ಥೌ ತತ್ರ ಚ ವಾನರಃ |
ಸಮುಚ್ಛ್ರಿತಮಹಾಕಾಯೋ ದ್ವಿತೀಯ ಇವ ಪರ್ವತಃ ॥5॥
ಪರ್ವತದಷ್ಟು ಎತ್ತರವಾದ ಆಕಾರವನ್ನು ಧರಿಸಿ ಉನ್ನತ ಮತ್ತು ಸ್ಥೂಲವಾದ ಮಹಾಕಾಯವುಳ್ಳವನಾಗಿ ಎರಡನೇ ಪರ್ವತದಂತೆ ಆ ವಾನರನು ನಿಂತನು.
ತಾಮ್ರೇಕ್ಷಣಸ್ತೀಕ್ಷ್ಣದಂಷ್ಟ್ರೋ ಭ್ರುಕುಟೀಕುಟಿಲಾನನಃ |
ದೀರ್ಘಲಾಂಗೂಲಮಾವಿಧ್ಯ ದಿಶೋ ವ್ಯಾಪ್ಯ ಸ್ಥಿತಃ ಕಪಿಃ ॥6॥
ಕೆಂಪಾದ ಕಣ್ಣುಳ್ಳವನೂ, ತೀಕ್ಷ್ಣವಾದ ಕೋರೆದಾಡೆವುಳ್ಳವನೂ, ಹುಬ್ಬುಗಂಟಿಕ್ಕಿದ ಮುಖವುಳ್ಳವನೂ ಆದ ಆ ಕಪಿಯು ತನ್ನ ದೀರ್ಘವಾದ ಬಾಲವನ್ನು ಬಡಿದು ದಿಕ್ಕುಗಳನ್ನು ವ್ಯಾಪಿಸಿ ನಿಂತನು.
ತದ್ರೂಪಂ ಮಹದಾಲಕ್ಷ್ಯ ಭ್ರಾತುಃ ಕೌರವನಂದನಃ |
ವಿಸಿಸ್ಮಿಯೇ ತದಾ ಭೀಮೋ ಜಹೃಷೇ ಚ ಪುನಃ ಪುನಃ ॥7॥
ಕೌರವನಂದನನಾದ ಭೀಮಸೇನನು ತನ್ನ ಅಣ್ಣನ ಆ ಬೃಹದ್ರೂಪವನ್ನು ನೋಡಿ ವಿಸ್ಮಯವನ್ನು ಹೊಂದಿದನು ಮತ್ತು ಪುನಃಪುನಃ ಸಂತೋಷಪಟ್ಟನು.
ತಮರ್ಕಮಿವ ತೇಜೋಭಿಃ ಸೌವರ್ಣಮಿವ ಪರ್ವತಮ್ |
ಪ್ರದೀಪ್ತಮಿವ ಚಾಕಾಶಂ ದೃಷ್ಟ್ವಾ ಭೀಮೋ ನ್ಯಮೀಲಯತ್ ॥8॥
ತೇಜಸ್ಸಿನಿಂದ ಉರಿಯುತ್ತಿರುವ ಸೂರ್ಯನಂತೆ ಸುವರ್ಣಮಯವಾದ ಪರ್ವತದಂತೆ, ಉರಿಯುತಿತರುವ ಆಕಾಶದಂತೆ ನಿಂತ ಹನುಮಂತನನ್ನು ನೋಡಿ ಭೀಮಸೇನನು ಕಣ್ಣುಮುಚ್ಚಿದನು.
ಆಬಭಾಷೇ ಚ ಹನೂಮಾನ್ ಭೀಮಸೇನಂ ಸ್ಮಯನ್ನಿವ |
ಏತಾವದಿಹ ಶಕ್ತಸ್ತ್ವಂ ದ್ರಷ್ಟುಂ ರೂಪಂ ಮಮಾನಘ ॥9॥
ಆಗ ಹನುಮಂತನು ಭೀಮಸೇನನನ್ನು ಕುರಿತು ಮುಗುಳ್ನಗುತ್ತಾ ಮಾತನಾಡಿದನು. ಎಲೈ ಅನಘನೇ, ನೀನು ನನ್ನ ರೂಪವನ್ನು ಇಷ್ಟುಮಾತ್ರ ನೋಡಲು ಸಾಧ್ಯ.
ವರ್ಧೇಽಹಂ ಚಾಪ್ಯತೋ ಭೂಯೋ ಯಾವನ್ಮೇ ಮನಸಿ ಸ್ಥಿತಮ್ |
ಭೀಮ ಶತ್ರುಷು ಚಾತ್ಯರ್ಥಂ ವರ್ಧತೇ ಮೂರ್ತಿರೋಜಸಾ ॥10॥
ನಾನು ಇದಕ್ಕಿಂತಲೂ ನನ್ನ ಮನಸ್ಸಿಗೆ ಬಂದಷ್ಟು ಎತ್ತರವಾಗಿ ಬೆಳೆಯಬಲ್ಲೆ. ಭೀಮಸೇನನೇ, ಶತ್ರುಗಳ ಸಮ್ಮುಖದಲ್ಲಿ ನನ್ನ ಶರೀರವು ಆಕಾರ ಮತ್ತು ಶಕ್ತಿಗಳಿಂದ ಬಹಳವಾಗಿ ಬೆಳೆಯುತ್ತದೆ.
ವೈಶಂಪಾಯನಃ
ತದದ್ಭುತಂ ಮಹಾರೌದ್ರಂ ವಿಂಧ್ಯಪರ್ವತಸನ್ನಿಭಮ್ |
ದೃಷ್ಟ್ವಾ ಹನೂಮತೋ ವರ್ಷ್ಮ ಸಂಭ್ರಾಂತಃ ಪವನಾತ್ಮಜಃ ॥11॥
ವೈಶಂಪಾಯನ ಪವನಾತ್ಮಜನಾದ ಭೀಮಸೇನನು ಅದ್ಭುತವಾದ ಮಹಾ ಭಯಂಕರವಾದ ವಿಂದ್ಯಪರ್ವತ ಸದೃಶವಾದ ಹನುಮಂತನ ಶರೀರವನ್ನು ನೋಡಿ ದಿಗ್ಭ್ರಾಂತನಾದನು.

ಪ್ರತ್ಯುವಾಚ ತತೋ ಭೀಮಃ ಸಂಪ್ರಹೃಷ್ಟತನೂರುಹಃ |
ಕೃತಾಂಜಲಿರದೀನಾತ್ಮಾ ಹನೂಮಂತಮವಸ್ಥಿತಮ್ ॥12॥
ರೋಮಾಂಚಗೊಂಡ ಧೈರ್ಯಶಾಲಿಯಾದ ಭೀಮಸೇನನು ಆಗ ಕೈಗಳನ್ನು ಮುಗಿದು ಮುಂದೆ ನಿಂತಿದ್ದ ಹನುಮಂತನನ್ನು ಕುರಿತು ಮಾತನಾಡಿದನು.
ದೃಷ್ಟಂ ಪ್ರಮಾಣಂ ವಿಪುಲಂ ಶರೀರಸ್ಯಾಸ್ಯ ತೇ ವಿಭೋ |
ಸಂಹರಸ್ವ ಮಹಾವೀರ್ಯ ಸ್ವಯಮಾತ್ಮಾನಮಾತ್ಮನಾ ॥13॥
ಎಲೈ ವಿಭುವೇ, ಈ ನಿನ್ನ ಶರೀರದ ವಿಪುಲಪ್ರಮಾಣವನ್ನು ನೋಡಿದೆನು. ಮಹಾಪರಾಕ್ರಮಿಯೇ, ನಿನ್ನ ರೂಪವನ್ನು ನೀನೇ ಸಂಕೋಚಗೊಳಿಸು.
ನ ಹಿ ಶಕ್ನೋಮಿ ತ್ವಾಂ ದ್ರಷ್ಟುಂ ದಿವಾಕರಮಿವೋದಿತಮ್ |
ಅಪ್ರಮೇಯಮನಾಧೃಷ್ಯಂ ಮೈನಾಕಮಿವ ಪರ್ವತಮ್ ॥14॥
ಉದಯಿಸಿದ ಸೂರ್ಯನಂತೆ ಅಪ್ರಮೇಯನಾದ ಎಂದೂ ಸೋಲನ್ನು ಅನುಭವಿಸದ, ಮೈನಾಕಪರ್ವತದಂತಿರುವ ಈ ನಿನ್ನ ರೂಪವನ್ನು ನೋಡಲು ನನಗೆ ಸಾಧ್ಯವಾಗುತ್ತಿಲ್ಲ.
ವಿಸ್ಮಯಶ್ಚೈವ ಮೇ ವೀರ ಸುಮಹಾನ್ ಮನಸೋಽದ್ಯ ವೈ |
ಯದ್ ರಾಮಸ್ತ್ವಯಿ ಪಾರ್ಶ್ವಸ್ಥೇ ಸ್ವಯಂ ರಾವಣಮಭ್ಯಗಾತ್ ॥15॥
ಎಲೈ ವೀರ್ಯನೇ, ನಿನ್ನಂತಹವನು ಪಾರ್ಶ್ವದಲ್ಲಿರುವಾಗ ರಾವಣನನ್ನು ಯುದ್ಧದಲ್ಲಿ ಎದುರಿಸಲು ಸ್ವತಃ ರಾಮನೇ ಹೋದನೆಂಬ ವಿಷಯವು ನನ್ನ ಮನಸ್ಸಿಗೆ ಬಹಳ ವಿಸ್ಮಯವನ್ನು ಉಂಟುಮಾಡುತ್ತಿದೆ.
ತ್ವಮೇವ ಶಕ್ತಸ್ತಾಂ ಲಂಕಾಂ ಸಯೋಧಾಂ ಸಹವಾಹನಾಮ್ |
ಸ್ವಬಾಹುಬಲಮಾಶ್ರಿತ್ಯ ವಿನಾಶಯಿತುಮಂಜಸಾ ॥16॥
ನೀನೇ ನಿನ್ನ ಬಾಹುಬಲವನ್ನು ಆಶ್ರಯಿಸಿ ಸೈನಿಕರಿಂದಲೂ ಮತ್ತು ವಾಹನದಿಂದಲೂ ತುಂಬಿದ ಆ ಲಂಕೆಯನ್ನು ಪೂರ್ಣವಾಗಿ ನಾಶಮಾಡಲು ಸಮರ್ಥನಾಗಿದ್ದಿ.
ನ ಹಿ ತೇ ಕಿಂಚಿದಪ್ರಾಪ್ಯಂ ಮಾರುತಾತ್ಮಜ ವಿದ್ಯತೇ |
ತವ ನೈಕಸ್ಯ ಪರ್ಯಾಪ್ತೋ ರಾವಣಃ ಸಗಣೋ ಯುಧಿ ॥17॥
ಮಾರುತಾತ್ಮಜನೇ, ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲ. ರಾವಣ ಮತ್ತು ಅವನ ಗಣಗಳು ಯುದ್ಧದಲ್ಲಿ ನಿನಗೊಬ್ಬನಿಗೆ ಸಾಕಾಗುತ್ತಿರಲಿಲ್ಲ.
ವೈಶಂಪಾಯನಃ
ಏವಮುಕ್ತಸ್ತು ಭೀಮೇನ ಹನೂಮಾನ್ ಪ್ಲವಗೋತ್ತಮಃ |
ಪ್ರತ್ಯುವಾಚ ತತೋ ವಾಕ್ಯಂ ಸ್ನಿಗ್ಧಗಂಭೀರಯಾ ಗಿರಾ ॥18॥
ವೈಶಂಪಾಯನ ಹೀಗೆ ಭೀಮನಿಂದ ಹೇಳಲ್ಪಟ್ಟ ಕಪಿಶ್ರೇಷ್ಠನಾದ ಹನುಮಂತನು ಸ್ನಿಗ್ಧಗಂಭೀರವಾದ ವಾಣಿಯಿಂದ ಮಾತನ್ನಾಡಿ ಉತ್ತರವನ್ನು ಕೊಟ್ಟನು.
ಏವಮೇತನ್ ಮಹಾಬಾಹೋ ಯಥಾ ವದಸಿ ಭಾರತ |
ಭೀಮಸೇನ ನ ಪರ್ಯಾಪ್ತೋ ಮಮಾಸೌ ರಾಕ್ಷಸಾಧಮಃ ॥19॥
ಎಲೈ ಭಾರತನೇ, ಮಹಾಬಾಹುವೇ, ನೀನು ಹೇಳಿದುದು ಹಾಗೆಯೇ ಸತ್ಯವಾದುದು. ಭೀಮಸೇನನೇ, ಆ ರಾಕ್ಷಸಾಧಮನಾದ ರಾವಣನು ನನಗೊಬ್ಬನಿಗೇ ಈಡಾಗುತ್ತಿರಲಿಲ್ಲ.
ಮಯಾ ತು ನಿಹತೇ ತಸ್ಮಿನ್ ರಾವಣೇ ಲೋಕಕಂಟಕೇ |
ಕೀರ್ತಿರ್ನಶ್ಯೇದ್ ರಾಘವಸ್ಯ ತತ ಏತದುಪೇಕ್ಷಿತಮ್ ॥20॥
ನಾನೇ ಲೋಕಕಂಟಕನಾದ ಆ ರಾವಣನನ್ನು ಕೊಂದರೆ ರಾಮನ ಕೀರ್ತಿಯು ನಾಶವಾಗುತ್ತಿತ್ತು. ಆದ್ದರಿಂದ ಈ ವಿಷಯದಲ್ಲಿ ನಾನು ಉದಾಸೀನ ಮಾಡಿದೆ.
ತೇನ ವೀರೇಣ ತಂ ಹತ್ವಾ ಸಗಣಂ ರಾಕ್ಷಸಾಧಮಮ್ |
ಆನೀತಾ ಸ್ವಪುರಂ ಸೀತಾ ಕೀರ್ತಿಶ್ಚಾಖ್ಯಾಪಿತಾ ನೃಷು ॥21॥
ಆ ವೀರನಾದ ರಾಮನು ಪರಿವಾರ ಸಹಿತನಾದ ಆ ರಾಕ್ಷಸಾಧಮನನ್ನು ಕೊಂದು ಸೀತೆಯನ್ನು ಮರಳಿ ಕರೆದುಕೊಂಡು ಬಂದು ಎಲ್ಲ ಮನುಷ್ಯರಲ್ಲಿಯೂ ತನ್ನ ಕೀರ್ತಿಯನ್ನು ಪ್ರಸಿದ್ಧಿ ಪಡಿಸಿದನು.
ತದ್ ಗಚ್ಛ ವಿಪುಲಪ್ರಜ್ಞ ಭ್ರಾತುಃ ಪ್ರಿಯಹಿತೇ ರತಃ |
ಅರಿಷ್ಟಂ ಕ್ಷೇಮಮಧ್ವಾನಂ ವಾಯುನಾ ಪರಿರಕ್ಷಿತಃ ॥22॥
ಆದ್ದರಿಂದ ವಿಪುಲ ಬುದ್ಧಿಯುಳ್ಳ ಭೀಮಸೇನನೇ, ನೀನು ಅಣ್ಣನ ಪ್ರಿಯದಲ್ಲಿಯೂ ಹಿತದಲ್ಲಿಯೂ ರತನಾಗಿ ವಾಯುದೇವರಿಂದ ರಕ್ಷಿತನಾಗಿ ನಿರ್ವಿಘ್ನವಾಗಿ ಕ್ಷೇಮದಿಂದ ಈ ದಾರಿಯಲ್ಲಿ ಹೊರಡು.
ಏಷ ಪಂಥಾಃ ಕುರುಶ್ರೇಷ್ಠ ಸೌಗಂಧಿಕವನಾಯ ತೇ |
ದ್ರಕ್ಷ್ಯಸೇ ಧನದೋದ್ಯಾನಂ ರಕ್ಷಿತಂ ಯಕ್ಷರಾಕ್ಷಸೈಃ ॥23॥
ಕುರುಶ್ರೇಷ್ಠನೇ, ಇದು ಸೌಗಂಧಿಕವನಕ್ಕೆ ಹೋಗುವ ಮಾರ್ಗ. ಅಲ್ಲಿ ನೀನು ಯಕ್ಷರಾಕ್ಷಸರಿಂದ ಪಾಲಿತವಾದ ಕುಬೇರನ ಉದ್ಯಾನವನವನ್ನು ನೋಡುವಿ.
ನ ಚ ತೇ ತರಸಾ ಕಾರ್ಯಃ ಕುಸುಮಾವಚಯಃ ಸ್ವಯಮ್ |

ದೈವತಾನಿ ಹಿ ಮಾನ್ಯಾನಿ ಪುರುಷೇಣ ವಿಶೇಷತಃ ॥24॥
ಅಲ್ಲಿ ನೀನು ತಕ್ಷಣದಲ್ಲಿ ಕುಸುಮಗಳನ್ನು ಬಿಡಿಸಬಾರದು. ಮನುಷ್ಯನಾದವನು ವಿಶೇಷವಾಗಿ ದೇವತೆಗಳಿಗೆ ಮರ್ಯಾದೆಯನ್ನು ಕೊಡಬೇಕು.
ಬಲಿಹೋಮನಸ್ಕಾರೈರ್ಮಂತ್ರೈಶ್ಚ ಭರತರ್ಷಭ |
ದೈವತಾನಿ ಪ್ರಸಾದಂ ಹಿ ಭಕ್ತ್ಯಾ ಕುರ್ವಂತಿ ಭಾರತ ॥25॥
ಎಲೈ ಭಾರತನೇ, ಭರತರ್ಷಭನೇ, ಭಕ್ತಿಯಿಂದ ಮಾಡಿದ ಬಲಿ ಹೋಮ ನಮಸ್ಕಾರಗಳಿಂದ ಮತ್ತು ಮಂತ್ರಪಾಠಗಳಿಂದ ದೇವತೆಗಳು ಅನುಗ್ರಹವನ್ನು ಮಾಡುತ್ತಾರೆ.
ಮಾ ತಾತ ಸಾಹಸಂ ಕಾರ್ಷೀಃ ಸ್ವಧರ್ಮಂ ಪರಿಪಾಲಯ |
ಸ್ವಧರ್ಮಸ್ಥಃ ಪರಂ ಧರ್ಮಂ ಬುಧ್ಯಸ್ವ ಗಮಯಸ್ವ ಚ ॥26॥
ಪ್ರೀತಿಪಾತ್ರನೇ, ಸಾಹಸವನ್ನು ಮಾಡಬೇಡ. ನಿನ್ನ ಧರ್ಮವನ್ನು ಪರಿಪಾಲಿಸು. ನಿನ್ನ ಧರ್ಮವನ್ನು ಪರಿಪಾಲಿಸುವವನಾಗಿ ಪರಧರ್ಮವನ್ನೂ ತಿಳಿ. ಪರಧರ್ಮಾಚರಣೆಗೆ ಅನುಕೂಲವಾಗುವಂತೆ ನಡೆದುಕೋ.
ನ ಹಿ ಧರ್ಮಮವಿಜ್ಞಾಯ ವೃದ್ಧಾನನುಪಸೇವ್ಯ ಚ |
ಧರ್ಮಾರ್ಥೌ ವಿ(ವೇ)ದಿತುಂ ಶಕ್ಯೌ ಬೃಹಸ್ಪತಿಸಮೈರಪಿ ॥27॥
ಧರ್ಮವನ್ನು ತಿಳಿಯದೆ ಹಿರಿಯರ ಸೇವೆಯನ್ನು ಮಾಡದೆ ಬೃಹಸ್ಪತಿಗೆ ಸಮಾನರಾದವರಿಂದಲೂ ಧರ್ಮಾರ್ಥಗಳನ್ನು ಸಂಪಾದಿಸುವುದು ಅಸಾಧ್ಯವಾಗುತ್ತದೆ.
ಅಧರ್ಮೋ ಯತ್ರ ಧರ್ಮಾಖ್ಯೋ ಧರ್ಮಶ್ಚಾಧರ್ಮಸಂಜ್ಞಿತಃ |
ಸ ವಿಜ್ಞೇಯೋ ವಿಭಾಗೇನ ಯತ್ರ ಮುಹ್ಯಂತ್ಯಬುದ್ಧಯಃ ॥28॥
ಎಲ್ಲಿ ಅಧರ್ಮವು ಧರ್ಮದ ಹೆಸರನ್ನು ಪಡೆಯುತ್ತದೆಯೋ, ಎಲ್ಲಿ ಧರ್ಮವು ಅಧರ್ಮದ ಹೆಸರನ್ನು ಪಡೆಯುತ್ತದೆಯೋ ಅಂತಹ ಸ್ಥಳಗಳನ್ನು ವಿವೇಕದಿಂದ ವಿಭಾಗ ಮಾಡಿ ತಿಳಿಯಬೇಕು. ಬುದ್ಧಿಶೂನ್ಯರಾದವರು ಅಂತಹ ಸ್ಥಳದಲ್ಲಿ ಭ್ರಾಂತಿಗೆ ಒಳಗಾಗುತ್ತಾರೆ (ಹಿಂಸೆಯು ಅಧರ್ಮವಾದರೂ ಅಸುರರ ವಧೆಯು ಧರ್ಮವಾಗುತ್ತದೆ. ಮಿಥ್ಯಾವಚನವು ಅಧರ್ಮವಾದರೂ ಸಜ್ಜನರ ಹಿತಕ್ಕಾಗಿ ಹಾಗೆ ಮಾಡಿದರೆ ಅದು ಧರ್ಮವಾಗುತ್ತದೆ).
ಆಚಾರಸಂಭವೋ ಧರ್ಮೋ ಧರ್ಮೇ ವೇದಾಃ ಪ್ರತಿಷ್ಠಿತಾಃ |
ವೇದೈರ್ಯಜ್ಞಾಃ ಸಮುತ್ಪನ್ನಾ ಯಜ್ಞೈರ್ದೇವಾಃ ಪ್ರತಿಷ್ಠಿತಾಃ ॥29॥
ಸದಾಚಾರದಿಂದ ಧರ್ಮವು ಉಂಟಾಗುತ್ತದೆ. ಧರ್ಮದಲ್ಲಿ ವೇದಗಳು ಪ್ರತಿಷ್ಠಿತವಾಗಿವೆ. ವೇದಗಳಿಂದ ಯಜ್ಞಗಳು ಉಂಟಾಗುತ್ತದೆ. ಮತ್ತು ಯಜ್ಞಗಳಿಂದ ದೇವತೆಗಳು ಪ್ರತಿಷ್ಠಿತರಾಗುತ್ತಾರೆ.
ವೇದಾಚಾರವಿಧಾನೋಕ್ತೈರ್ಯಜ್ಞೈರ್ಧಾರ್ಯಂತಿ ದೇವತಾಃ |
ಬೃಹಸ್ಪತ್ಯುಶನಃಪ್ರೋಕ್ತೈರ್ನಯೈರ್ಧಾರ್ಯಂತಿ ಮಾನವಾಃ ॥30॥
ವೇದದಲ್ಲಿ ಹೇಳಿದ ಆಚಾರ ಮತ್ತು ವಿಧಾನಕ್ಕೆ ಅನುಗುಣವಾದ ಯಜ್ಞಗಳಿಂದ ದೇವತೆಗಳು ಜೀವಿಸುತ್ತಾರೆ (ಬಲಿಷ್ಠರಾಗುತ್ತಾರೆ). ಶುಕ್ರಾಚಾರ್ಯರು ಮತ್ತು ಬೃಹಸ್ಪತ್ಯಾಚಾರ್ಯರು ಹೇಳಿದ ನೀತಿಗಳಿಂದ ಮನುಷ್ಯರು ಜೀವಿಸುತ್ತಾರೆ.
ಪಣ್ಯಾಕರವಣಿಜ್ಯಾಭಿಃ ಕೃಷ್ಯಾಗೋಜಾವಿಪೋಷಣೈಃ |
ವಿದ್ಯಯಾ ಧಾರ್ಯತೇ ಸರ್ವಂ ಧರ್ಮೈರೇತೈರ್ದ್ವಿಜಾತಿಭಿಃ ॥31॥
ಕಪ್ಪ (ಸುಂಕ) ವಾಣಿಜ್ಯಗಳಿಂದಲೂ ಕೃಷಿಗವಾದಿ ಪಶುರಕ್ಷಣ ಪೋಷಣೆಗಳಿಂದಲೂ ಮತ್ತು ವಿದ್ಯೆಯಿಂದಲೂ ದ್ವಿಜರು ಧರ್ಮದಿಂದ ಈ ಜಗತ್ತನ್ನು ಧರಿಸುತ್ತಾರೆ.
ತ್ರಯೀ ವಾರ್ತಾ ದಂಡನೀತಿಸ್ತಿಸ್ರೋ ವಿದ್ಯಾ ವಿಜಾನತಾಮ್ |
ತಾಭಿಃ ಸಮ್ಯಕ್‌ಪ್ರಯುಕ್ತಾಭಿರ್ಲೋಕಯಾತ್ರಾ ವಿಧೀಯತೇ ॥32॥
ವೇದವಿದ್ಯಾ ವ್ಯಾಪಾರ ಮತ್ತು ದಂಡನೀತಿ ಇವು ಮೂರು ಜ್ಞಾನಿಗಳ ದೃಷ್ಟಿಯಲ್ಲಿ ಇರುವ ವಿದ್ಯೆಗಳು. ಈ ಮೂರನ್ನು ಸರಿಯಾಗಿ ಪ್ರಯೋಗಿಸಿದರೆ ಲೋಕ ಯಾತ್ರೆಯು ಉಂಟಾಗುತ್ತದೆ.
ಸಾ ಚೇದ್ ಧರ್ಮಕೃತಾ ನ ಸ್ಯಾತ್ ತ್ರಯೀಧರ್ಮಮೃತೇ ಭುವಿ |
ದಂಡನೀತಿಮೃತೇ ಚಾಪಿ ನಿರ್ಮರ್ಯಾದಮಿದಂ ಭವೇತ್ ॥33॥
ವೇದಧರ್ಮಗಳಿಲ್ಲದೆ, ದಂಡನೀತಿಯಿಲ್ಲದೆ ಲೋಕಯಾತ್ರೆಯು ಧರ್ಮವಿಲ್ಲದೆ ನಡೆಯುವುದಾದರೆ ಈ ಜಗತ್ತು ಮರ್ಯಾದಾ ರಹಿತವಾಗುತ್ತದೆ.
ವಾರ್ತಾಧರ್ಮೇ ಹ್ಯವರ್ತಿನ್ಯೋ ವಿನಶ್ಯೇಯುರಿಮಾಃ ಪ್ರಜಾಃ |
ಸುಪ್ರವೃತ್ತೈಸ್ತ್ರಿಭಿರ್ಹ್ಯೇತೈರ್ಧರ್ಮಂ ಸಂಯಂತಿ ವೈ ಪ್ರಜಾಃ ॥34॥
ವಾರ್ತಾ ಧರ್ಮದಲ್ಲಿ (ವ್ಯಾಪಾರ ಧರ್ಮದಲ್ಲಿ) ಸರಿಯಾಗಿ ನಡೆದುಕೊಳ್ಳದಿದ್ದರೆ ಈ ಪ್ರಜೆಗಳು ನಾಶವನ್ನು ಹೊಂದುವರು. ಈ ಮೂರುಧರ್ಮಗಳನ್ನು ಸರಿಯಾಗಿ ಆಚರಿಸಿದರೆ ಪ್ರಜೆಗಳು ಅದರಿಂದ ಧರ್ಮವನ್ನು ಪಡೆಯುತ್ತಾರೆ.
ದ್ವಿಜಾನಾಮಮೃತಂ ಧರ್ಮೋ ಹ್ಯೇಕಶ್ಚೈವೈಕವರ್ಣಕಃ |
ಯಜ್ಞಾಧ್ಯಯನದಾನಾನಿ ತ್ರಯಃ ಸಾಧಾರಣಾಃ ಸ್ಮೃತಾಃ ॥35॥
ಬ್ರಾಹ್ಮಣರಿಗೆ ಅಯಾಚಿತವೃತ್ತಿಯು ಮುಖ್ಯವಾದ ಧರ್ಮ. ಇದು ಬ್ರಾಹ್ಮಣ ವರ್ಣಕ್ಕೆ ಮಾತ್ರ ಸಂಬಂಧಿಸಿದೆ. ಯಜ್ಞ, ಅಧ್ಯಯನ ಮತ್ತು ದಾನ ಈ ಮೂರು ಧರ್ಮಗಳು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಈ ಮೂವರಿಗೂ ಸಮಾನವಾಗಿದೆ.
ಯಾಜನಾಧ್ಯಾಪನಂ ವಿಪ್ರೇ ಧರ್ಮಶ್ಚೈವ ಪ್ರತಿಗ್ರಹಃ |

ಪಾಲನಂ ಕ್ಷತ್ರಿಯಾಣಾಂ ವೈ ವೈಶ್ಯಧರ್ಮಶ್ಚ ಪೋಷಣಮ್ ॥36॥
ಬ್ರಾಹ್ಮಣನಿಗೆ ಯಾಜನ, ಅಧ್ಯಾಪನ ಮತ್ತು ಪ್ರತಿಗ್ರಹವು ಧರ್ಮವಾಗುತ್ತದೆ. ಕ್ಷತ್ರಿಯರಿಗೆ ರಕ್ಷಣೆಯೂ, ವೈಶ್ಯರಿಗೆ ಪೋಷಣೆಯೂ ಧರ್ಮವಾಗುತ್ತದೆ.
ಶುಶ್ರೂಷಾ ಚ ದ್ವಿಜಾತೀನಾಂ ಶೂದ್ರಾಣಾಂ ಧರ್ಮ ಉಚ್ಯತೇ |
ಭೈಕ್ಷ್ಯಹೋಮವ್ರತೈರ್ಹೀನಾಸ್ತಥೈವ ಗುರುವಾಸಿತಾಃ ॥37॥
ಶೂದ್ರರಿಗೆ ದ್ವಿಜರ ಸೇವೆಯೇ ಧರ್ಮವೆಂದು ಹೇಳಲ್ಪಡುತ್ತದೆ. ಅವರಿಗೆ ಭಿಕ್ಷೆಯಾಗಲೀ, ಹೋಮವಾಗಲೀ, ವ್ರತಗಳಾಗಲೀ, ಗುರುಕುಲವಾಸವಾಗಲೀ ಇರುವುದಿಲ್ಲ.
ಕ್ಷತ್ರಧರ್ಮೋಽತ್ರ ಕೌಂತೇಯ ತವ ಧರ್ಮೋಽತ್ರ ರಕ್ಷಣಮ್ |
ಸ್ವಧರ್ಮಂ ಪ್ರತಿಪದ್ಯಸ್ವ ವಿನೀತೋ ನಿಯತೇಂದ್ರಿಯಃ ॥38॥
ಎಲೈ ಕೌಂತೇಯನೇ, ನೀನು ಕ್ಷತ್ರಿಯನಾದವನು. ಕ್ಷತ್ರಿಯನಾದ ನಿನ್ನ ಧರ್ಮವು ರಕ್ಷಣೆ ಮಾಡುವುದು. ನೀನು ವಿನಯದಿಂದಲೂ, ಇಂದ್ರಿಯಜಯದಿಂದಲೂ ಕೂಡಿದವನಾಗಿ ನಿನ್ನ ಧರ್ಮವನ್ನು ಆಚರಿಸು.
ವೃದ್ಧೈಃ ಸಂಮಂತ್ರ್ಯ ಸದ್ಭಿಶ್ಚ ಬುದ್ಧಿಮದ್ಭಿಃ ಶ್ರುತಾನ್ವಿತೈಃ |
ಆಸ್ಥಿತಃ ಶಾಸ್ತಿ ದಂಡೇನ ವ್ಯಸನೀ ಪರಿಭೂಯತೇ ॥39॥
ಬುದ್ಧಿವಂತರಾದ, ವಿದ್ಯಾವಂತರಾದ, ವೃದ್ಧರಾದ ಸಜ್ಜನರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ದಂಡನೀತಿಯನ್ನು ಆಚರಿಸಬೇಕು. ಯಾವುದಾದರೂ ಚಟವುಳ್ಳ ಕ್ಷತ್ರಿಯನು ಸೋಲನ್ನು (ವಿನಾಶವನ್ನು) ಹೊಂದುತ್ತಾನೆ.
ನಿಗ್ರಹಾನುಗ್ರಹೈಃ ಸಮ್ಯಗ್ ಯದಾ ರಾಜಾ ಪ್ರವರ್ತತೇ |
ತದಾಭವಂತಿ ಲೋಕಸ್ಯ ಮರ್ಯಾದಾಃ ಸುವ್ಯವಸ್ಥಿತಾಃ ॥40॥
ರಾಜನಾದವನು ಸಜ್ಜನರಿಗೆ ಅನುಗ್ರಹವನ್ನು ಮತ್ತು ದುರ್ಜನರಿಗೆ ನಿಗ್ರಹವನ್ನು ಮಾಡಿ ಶಾಸನದಲ್ಲಿ ಪ್ರವೃತ್ತನಾಗಬೇಕು. ಆಗ ಲೋಕಮರ್ಯಾದೆಗಳು ಸುವ್ಯವಸ್ಥಿತವಾಗುತ್ತವೆ.
ತಸ್ಮಾದ್ ದೇಶೇ ಚ ದುರ್ಗೇ ಚ ಶತ್ರುಮಿತ್ರಬಲೇಷು ಚ |
ನಿತ್ಯಂ ಚಾರೇಣ ಬೋದ್ಧವ್ಯಂ ಸ್ಥಾನಂ ವೃದ್ಧಿಃ ಕ್ಷಯಸ್ತಥಾ ॥41॥
ಆದ್ದರಿಂದ ಪಟ್ಟಣಗಳಲ್ಲಿಯೂ, ಕೋಟೆಗಳಲ್ಲಿಯೂ, ಶತ್ರುಸೈನ್ಯ ಮತ್ತು ಮಿತ್ರ ಸೈನ್ಯಗಳಲ್ಲಿಯೂ ನಡೆಯುವ ಸಮಾಚಾರಗಳನ್ನು ಚಾರರಿಂದ ತಿಳಿಯಬೇಕು. ಹಾಗೆಯೇ ಶತ್ರು-ಮಿತ್ರ ಬಲಗಳ ವೃದ್ಧಿಕ್ಷಯಗಳನ್ನು ಮತ್ತು ಸಂರಕ್ಷಣೆಗಳನ್ನು ತಿಳಿಯಬೇಕು.
ರಾಜ್ಞಾಮುಪಾಯಶ್ಚಾರಶ್ಚ ಬುದ್ಧಿಮಂತ್ರಪರಾಕ್ರಮಃ |
ನಿಗ್ರಹಪ್ರಗ್ರಹೌ ಚೈವ ದಾಕ್ಷ್ಯಂ ವೈ ಕಾರ್ಯಸಾಧಕಮ್ ॥42॥
ರಾಜನಿಗೆ ಇರುವ ಸಾಧನಗಳಿಂದಲೇ ಚಾರರು, ಬುದ್ಧಿ, ಮಂತ್ರಾಲೋಚನೆ, ಪರಾಕ್ರಮ, ನಿಗ್ರಹಾನುಗ್ರಹಗಳು ಮತ್ತು ದಕ್ಷತೆ. ಇವು ಕಾರ್ಯವನ್ನು ಸಾಧಿಸುತ್ತವೆ.
ಸಾಮ್ನಾ ದಾನೇನ ಭೇದೇನ ದಂಡೇನೋಪೇಕ್ಷಣೇನ ಚ |
ಸಾಧನೀಯಾನಿ ಕರ್ಮಾಣಿ ಸಮಾಸವ್ಯಾಸಯೋಗತಃ ॥43॥
ಸಾಮ, ದಾನ, ಭೇದ, ದಂಡ ಮತ್ತು ಉಪೇಕ್ಷೆ ಇವುಗಳಿಂದ ಕಾರ್ಯಗಳನ್ನು ಸಂಕ್ಷೇಪವಾಗಿ ಮತ್ತು ವಿಸ್ತಾರವಾಗಿ ಸಾಧಿಸಬೇಕು.
ಮಂತ್ರಮೂಲಾ ನಯಾಃ ಸರ್ವೇ ಚಾರಾಶ್ಚ ಭರತರ್ಷಭ |
ಸುಮಂತ್ರಿತೇನ ಯಾ ಸಿದ್ಧಿಸ್ತಾಂ ದ್ವಿಜೈಃ ಸಹ ಮಂತ್ರಯೇತ್ ॥44॥
ಎಲೈ ಭರತರ್ಷಭನೇ, ರಾಜನೀತಿಯು ಮಂತ್ರಾಲೋಚನೆ ಮತ್ತು ಚಾರರನ್ನು ಅವಲಂಬಿಸಿದೆ. ಒಳ್ಳೆಯ ಮಂತ್ರಾಲೋಚನೆಯಿಂದ ಎಲ್ಲಿ ಕಾರ್ಯಸಿದ್ಧಿಯಾಗುತ್ತದೆಯೋ ಅಲ್ಲಿ ದ್ವಿಜರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಬೇಕು.
ಸ್ತ್ರಿಯಾ ಮೂಢೇನ ಬಾಲೇನ ಲುಬ್ಧೇನ ಲಘುನಾಪಿ ವಾ |
ನ ಮಂತ್ರಯೀತ ಗುಹ್ಯಾನಿ ಯೇಷು ಚೋನ್ಮಾದಲಕ್ಷಣಮ್ ॥45॥
ಸ್ತ್ರೀಯರ ಜೊತೆಯಲ್ಲಿ, ಮೂಢರ ಜೊತೆಯಲ್ಲಿ, ಬಾಲಕರ ಜೊತೆಯಲ್ಲಿ, ಲೋಭಿಯ ಜೊತೆಯಲ್ಲಿ, ಅಲ್ಪಮನುಷ್ಯನ ಜೊತೆಯಲ್ಲಿ ಅಥವಾ ಉನ್ಮಾದಲಕ್ಷಣವಿರುವವರ ಜೊತೆಯಲ್ಲಿ ರಹಸ್ಯ ವಿಷಯಗಳ ಮಂತ್ರಾಲೋಚನೆಯನ್ನು ಮಾಡಬಾರದು.
ಮಂತ್ರಯೇತ್ ಸಹ ವಿದ್ವದ್ಭಿಃ ಶಕ್ತೈಃ ಕರ್ಮಾಣಿ ಕಾರಯೇತ್ |
ಸ್ನಿಗ್ಧೈಶ್ಚ ನೀತಿವಿನ್ಯಾಸಾನ್ ಮೂರ್ಖಾನ್ ಸರ್ವತ್ರ ವರ್ಜಯೇತ್ ॥
ವಿದ್ವಾಂಸರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಬೇಕು. ಸಮರ್ಥರಾದವರಿಂದ ಕಾರ್ಯಗಳನ್ನು ಮಾಡಿಸಬೇಕು. ಸ್ನೇಹವುಳ್ಳವರಿಂದ ನೀತಿಯನ್ನು ಅನುಷ್ಠಾನ ಮಾಡಿಸಬೇಕು. ಮೂರ್ಖರನ್ನು ಸರ್ವತ್ರ ದೂರವಿಡಬೇಕು.
ಧಾರ್ಮಿಕಾನ್ ಧರ್ಮಕಾರ್ಯೇಷು ಅರ್ಥಕಾರ್ಯೇಷು ಪಂಡಿತಾನ್ |
ಸ್ತ್ರೀಷು ಕ್ಲೀಬಾನ್ ನಿಯುಂಜೀತ ಕ್ರೂರಾನ್ ಕ್ರೂರೇಷು ಕರ್ಮಸು ॥
ಧರ್ಮಕಾರ್ಯಗಳಲ್ಲಿ ಧಾರ್ಮಿಕರನ್ನೂ, ಅರ್ಥಕಾರ್ಯಗಳಲ್ಲಿ ಪಂಡಿತರನ್ನೂ, ಸ್ತ್ರೀಯರಲ್ಲಿ ನಪುಂಸಕರನ್ನೂ, ಕ್ರೂರಕರ್ಮಗಳಲ್ಲಿ ಕ್ರೂರರನ್ನೂ ನಿಯೋಜಿಸಬೇಕು.
ಸ್ವೇಭ್ಯಶ್ಚೈವ ಪರೇಭ್ಯಶ್ಚ ಕಾರ್ಯಾಕಾರ್ಯಸಮುದ್ಭವಾ |
ಬುದ್ಧಿಃ ಕರ್ಮಸು ವಿಜ್ಞೇಯಾ ರಿಪೂಣಾಂ ಚ ಬಲಾಬಲಮ್ ॥48॥
ಮಾಡುತ್ತಿರುವ ಕಾರ್ಯಗಳಲ್ಲಿ ಮಾಡಬೇಕಾದ ಮತ್ತು ಮಾಡಬಾರದ ಅಂಶಗಳನ್ನು ತನ್ನವರಿಂದ ಮತ್ತು ಪರರಿಂದ ತಿಳಿಯಬೇಕು. ಅದರಂತೆ ಶತ್ರುಗಳ ಬಲಾಬಲಗಳನ್ನು ತಿಳಿಯಬೇಕು.

ಬುದ್ಧ್ಯಾ ಸ್ವಪ್ರತಿಪನ್ನೇಷು ಕುರ್ಯಾತ್ ಸಾಧುಷ್ವನುಗ್ರಹಮ್ |
ನಿಗ್ರಹಂ ಚಾಪ್ಯಶಿಷ್ಟೇಷು ನಿರ್ಮರ್ಯಾದೇಷು ಕಾರಯೇತ್ ॥49॥
ಮನಃಪೂರ್ವಕವಾಗಿ ತನ್ನನ್ನು ಆಶ್ರಯಿಸಿದ ಸಜ್ಜನರಿಗೆ ಅನುಗ್ರಹವನ್ನು ಮಾಡಬೇಕು. ಮರ್ಯಾದಾಶೂನ್ಯರಾಗಿ ದುರಾಚಾರರಿಂದ ಕೂಡಿದವರಿಗೆ ತನ್ನ ದೂತರಿಂದ ನಿಗ್ರಹವನ್ನೂ ಮಾಡಿಸಬೇಕು.
ನಿಗ್ರಹೇ ಪ್ರಗ್ರಹೇ ಸಮ್ಯಗ್ಯದಾ ರಾಜಾ ಪ್ರವರ್ತತೇ |
ತದಾ ಭವತಿ ಲೋಕಸ್ಯ ಮರ್ಯಾದಾ ಸುವ್ಯವಸ್ಥಿತಾ ॥50॥
ರಾಜನು ನಿಗ್ರಹಾನುಗ್ರಹಗಳಲ್ಲಿ ಸರಿಯಾಗಿ ಪ್ರವೃತ್ತನಾದರೆ ಆಗ ಲೋಕಮರ್ಯಾದೆಯು ಸುವ್ಯವಸ್ಥಿತವಾಗುತ್ತದೆ.
ಏಷ ತೇಽಭಿಹಿತಃ ಪಾರ್ಥ ಘೋರೋ ಧರ್ಮೋ ದುರನ್ವಯಃ |
ತಂ ಸ್ವಧರ್ಮಂ ವಿಭಾಗೇನ ವಿನಯಸ್ಥೋಽನುಪಾಲಯ ॥51॥
ಪಾರ್ಥನೇ, ನಿನಗೆ ಅನುಷ್ಠಾನಾಅಡಲು ಕಷ್ಟವಾದ ಕ್ರೂರವಾದ ಈ ರಾಜಧರ್ಮವನ್ನು ಹೇಳಿದ್ದೇನೆ. ಅಂತಹ ನಿನ್ನ ಸ್ವಧರ್ಮವನ್ನು ವಿಭಾಗ ಮಾಡಿ ವಿನಯದಿಂದ ಪಾಲಿಸು.
ಸಾಮ್ನಾ ಮಿತ್ರಾಣಿ ದಾನೇನ ಬ್ರಾಹ್ಮಣಂ ಕೃತ್ರಿಮಾನಿ ಚ |
ಭೇದೇನಾರೀನ್ ಪ್ರದಮಯೇತ್ ಕುಂಡೇನ ಸಾಧಯೇತ್ಪ್ರಜಾಃ ॥
ತಪೋಧರ್ಮದಮೇಜ್ಯಾಭಿರ್ವಿಪ್ರಾ ಯಾಂತಿ ಯಥಾ ದಿವಮ್ |
ಕ್ಷತ್ರಿಯಾ ಹಿ ತಥಾ ಸ್ವರ್ಗಂ ಭುವಿ ಬಂಧನಪಾಲನೈಃ ॥52॥
ಬ್ರಾಹ್ಮಣರು ತಪಸ್ಸು, ಧರ್ಮ, ಇಂದ್ರಿಯ ನಿಗ್ರಹ ಮತ್ತು ಪೂಜೆಗಳಿಂದ ಸ್ವರ್ಗವನ್ನು ಹೇಗೆ ಸಂಪಾದಿಸುತ್ತಾರೆಯೋ ಹಾಗೆ ಕ್ಷತ್ರಿಯರು ಭೂಮಿಯಲ್ಲಿ ನಿಗ್ರಹಾನುಗ್ರಹಗಳನ್ನು ಮಾಡುವುದರಿಂದ ಸ್ವರ್ಗವನ್ನು ಸಂಪಾದಿಸುತ್ತಾರೆ.
ದಾನಾತಿಥ್ಯಕ್ರಿಯಾಧರ್ಮೈರ್ಯಾಂತಿ ವೈಶ್ಯಾಶ್ಚ ಸದ್ಗತಿಮ್ |
ದ್ವಿಜಶುಶ್ರೂಷಯಾ ಶೂದ್ರಾ ಲಭಂತೇ ಗತಿಮುತ್ತಮಾಮ್ ॥53॥
ವೈಶ್ಯರು ದಾನ, ಅತಿಥಿಪೂಜೆ ಮತ್ತು ಧರ್ಮಾಚರಣೆಗಳಿಂದ ಸದ್ಗತಿಯನ್ನು ಹೊಂದುತ್ತಾರೆ. ಶೂದ್ರರು ದ್ವಿಜಶುಶ್ರೂಷೆಯಿಂದ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ಸಮ್ಯಕ್ಪ್ರಣೀತದಂಡಾ ಹಿ ಕಾಮದ್ವೇಷವಿವರ್ಜಿತಾಃ |
ಅಲುಬ್ಧಾ ವಿಗತಕ್ರೋಧಾಃ ಸತಾಂ ಯಾಂತಿ ಸಲೋಕತಾಮ್ ॥54॥
ಕಾಮ, ಕ್ರೋಧ, ದ್ವೇಷಗಳಿಂದ ವರ್ಜಿತರಾಗಿ ಲೋಭರಹಿತರಾಗಿ ಸರಿಯಾಗಿ ದಂಡನೀತಿಯನ್ನು ಪ್ರಯೋಗಿಸುವ ಕ್ಷತ್ರಿಯರು ಸಜ್ಜನರು ಹೋಗುವ ಲೋಕಕ್ಕೇ ಹೋಗುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ತ್ರ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತೇಳನೆಯ
ಅಧ್ಯಾಯ ಮುಗಿಯಿತು.
* * * *
ನೂರ ನಲವತ್ತೆಂಟನೆಯ ಅಧ್ಯಾಯ
ಹನುಮಂತನಿಂದ ಪೂರ್ವರೂಪವನ್ನು ಉಪಸಂಹಾರ ಮಾಡಿ ಭೀಮಸೇನನ ಆಲಿಂಗನ ಮತ್ತು ವರದಾನ. ಭೀಮಸೇನನ ಸೌಗಂಧಿಕ ಸರೋವರ ದರ್ಶನ.
ವೈಶಂಪಾಯನಃ
ತತಃ ಸಂಹೃತ್ಯ ವಿಪುಲಂ ತದ್ವಪುಃ ಕಾಮತಃ ಕೃತಮ್ |
ಭೀಮಸೇನಂ ಪುನರ್ದೋರ್ಭ್ಯಾಂ ಪರ್ಯಷ್ವಜತ ವಾನರಃ ॥1॥
ಆಗ ಆ ಕಪಿಯು ತನ್ನ ಇಚ್ಛೆಯಿಂದ ತೆಗೆದುಕೊಂಡಿದ್ದ ಆ ಬೃಹತ್ತಾದ ಶರೀರವನ್ನು ಉಪಸಂಹಾರ ಮಾಡಿ ಪುನಃ ಭೀಮಸೇನನನ್ನು ಆಲಿಂಗಿಸಿದನು.
ಪರಿಷ್ವಕ್ತಸ್ಯ ತಸ್ಯಾಶು ಭ್ರಾತ್ರಾ ಭೀಮಸ್ಯ ಭಾರತ |
ಶ್ರಮೋ ನಾಶಮುಪಾಗಚ್ಛತ್ ಸರ್ವಂ ಚಾಸೀತ್ ಪ್ರದಕ್ಷಿಣಮ್ ॥2॥
ಭಾರತನೇ, ಹನುಮಂತನು ಆಲಿಂಗಿಸಿದ ತಕ್ಷಣವೇ ಭೀಮಸೇನನಿಗೆ ಎಲ್ಲಾ ಶ್ರಮವೂ ನಾಶವಾಯಿತು ಮತ್ತು ಎಲ್ಲವೂ ಅನುಕೂಲವಾಯಿತು.
ತತಃ ಪುನರಥೋವಾಚ ಪರ್ಯಶ್ರುನಯನೋ ಹರಿಃ |
ಭೀಮಮಾಭಾಷ್ಯ ಸೌಹಾರ್ದಾದ್ ಬಾಷ್ಪಗದ್ಗದಯಾ ಗಿರಾ ॥3॥
ಆಗ ಪುನಃ ಆ ಕಪೀಶ್ವರನು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಬಾಷ್ಪಗದ್ಗದವಾದ ಮಾತುಗಳಿಂದ ಪ್ರೀತಿಯಿಂದ ಭೀಮಸೇನನನ್ನು ಉದ್ದೇಶಿಸಿ ಮಾತನಾಡಿದನು.
ಗಚ್ಛ ವೀರ ಸ್ವಮಾವಾಸಂ ಸ್ಮರ್ತವ್ಯೋಽಸ್ಮಿ ಕಥಾಂತರೇ |
ಇಹಸ್ಥಶ್ಚ ಕುರುಶ್ರೇಷ್ಠ ನ ನಿವೇದ್ಯೋಽಸ್ಮಿ ಕರ್ಹಿಚಿತ್ ॥4॥
ವೀರನೇ, ನಿನ್ನ ಆವಾಸಸ್ಥಾನಕ್ಕೆ ಹಿಂದಿರುಗು. ಬೇರೆ ಬೇರೆ ಕಾರ್ಯದಲ್ಲಿ ನನ್ನನ್ನು ಸ್ಮರಿಸಿಕೋ. ಕುರುಶ್ರೇಷ್ಠನೇ, ನಾನು ಇಲ್ಲಿದ್ದೇನೆಂದು

ಯಾವ ಕಾರಣದಿಂದಲೂ ಯಾರಿಗೂ ತಿಳಿಸಬಾರದು.
ಶೀಘ್ರಂ ತು ಕಾರ್ಯಸಿದ್ಧ್ಯರ್ಥಂ ಗಚ್ಛ ತ್ವಂ ಪಾಂಡುನಂದನ |
ಸ್ಮರ್ತವ್ಯೋಽಸ್ಮಿ ತ್ವಯಾ ವೀರ ಕಥಾಸ್ವಮಿತಾವಿಕ್ರಮ ॥
ಧನದಸ್ಯಾಲಯಾಚ್ಚಾಪಿ ವಿಸೃಷ್ಟಾನಾಂ ಮಹಾಬಲ |
ದೇಶಕಾಲ ಇಹಾಯಾತುಂ ದೇವಗಂಧರ್ವಯೋಷಿತಾಮ್ ॥5॥
ಪಾಂಡುನಂದನನೇ, ನಿನ್ನ ಕಾರ್ಯಸಿದ್ಧಿಗಾಗಿ ಶೀಘ್ರವಾಗಿ ಇಲ್ಲಿಂದ ಹೊರಡು. ಅಮಿತವಿಕ್ರಮನಾದ ವೀರನೇ, ನೀನು ಬೇರೆ ಬೇರೆ ಮಾತುಕಥೆಗಳಲ್ಲಿ ನನ್ನನ್ನು ಸ್ಮರಿಸು. ಎಲ್ಲೈ ಮಹಾಬಲನೇ, ಈಗ ಕುಬೇರನ ಮನೆಯಿಂದ ಬೀಳ್ಕೊಡಲ್ಪಟ್ಟು ಹೊರಟ ದೇವಗಂಧರ್ವವನಿತೆಯರು ಇಲ್ಲಿಗೆ ಬರುವ ಸಮಯವಾಗಿದೆ.
ಮಮಾಪಿ ಸಫಲಂ ಚಕ್ಷುಃ ಸ್ಮಾರಿತಶ್ಚಾಸ್ಮಿ ರಾಘವಮ್ |
ರಾಮಾಭಿಧಾನಂ ವಿಷ್ಣುಂ ಹಿ ಜಗದ್ಧೃದಯನಂದನಮ್ |
ಸೀತಾವಕ್ತ್ರಾರವಿಂದಾರ್ಕಂ ದಶಾಸ್ಯಧ್ವಾಂತಭಾಸ್ಕರಮ್ |
ಮಾನುಷಂ ಗಾತ್ರಸಂಸ್ಪರ್ಶಂ ಗತ್ವಾ ಭೀಮ ತ್ವಯಾ ಸಹ ॥6॥
ನಿನ್ನನ್ನು ನೋಡಿ ನನ್ನ ಕಣ್ಣುಗಳೂ ಸಫಲವಾಗಿವೆ. ಎಲ್ಲೈ ಭೀಮನೇ, ಮನುಷ್ಯನಾದ ನಿನ್ನ ಶರೀರವನ್ನು ಆಲಿಂಗಿಸಿ ನಾನು ಜಗತ್ತಿನ ಮನೋನಂದನನೂ, ಸೀತಾ ಮುಖಾರವಿಂದಕ್ಕೆ ಸೂರ್ಯನೂ, ದಶಾಸ್ಯವೆಂಬ ಕತ್ತಲಿಗೆ ಭಾಸ್ಕರನೂ ಆದ ರಘುಕುಲದಲ್ಲಿ ಅವತಾರ ಮಾಡಿದ ರಾಮಾಭಿದಾನವುಳ್ಳ ವಿಷ್ಣುವನ್ನು ಸ್ಮರಣೆ ಮಾಡಿಸಿದೆ.
ತದಸ್ಮದ್ದರ್ಶನಂ ವೀರ ಕೌಂತೇಯಾಮೋಘಮಸ್ತು ತೇ |
ಭ್ರಾತೃತ್ವಂ ತ್ವಂ ಪುರಸ್ಕೃತ್ಯ ವರಂ ವರಯ ಭಾರತ ॥7॥
ಎಲ್ಲೈ ವೀರನಾದ ಕೌಂತೇಯನೇ, ನನ್ನ ದರ್ಶನವು ನಿನಗೆ ವ್ಯರ್ಥವಾಗದಿರಲಿ. ಭಾರತನೇ, ನನ್ನ ತಮ್ಮನಾದುದರಿಂದ ಅದನ್ನು ಮುಂದೆ ಮಾಡಿಕೊಂಡು ವರವನ್ನು ಕೇಳು.
ಯದಿ ತಾವನ್ಮಯಾ ಕ್ಷುದ್ರಾ ಗತ್ವಾ ವಾರಣಸಾಹ್ವಯಮ್ |
ಧಾರ್ತರಾಷ್ಟ್ರಾ ನಿಹಂತವ್ಯಾ ಯಾವದೇತತ್ ಕರೋಮ್ಯಹಮ್ ॥8॥
ನಾನು ಹಸ್ತಿನಪುರಕ್ಕೆ ಹೋಗಿ ಆ ಕ್ಷುದ್ರರಾದ ಧೃತರಾಷ್ಟ್ರಪುತ್ರರನ್ನು ಕೊಲ್ಲಬೇಕಾದರೆ ಹೇಳು, ಅದನ್ನು ಈಗ ಮಾಡುತ್ತೇನೆ.
ಶಿಲಯಾ ನಗರಂ ವಾಪಿ ಮರ್ದಿತವ್ಯಂ ಮಯಾ ಯದಿ |
ಬದ್ಧ್ವಾ ದುರ್ಯೋಧನಂ ಚಾದ್ಯ ಆನಯಾಮಿ ತವಾಂತಿಕಮ್ |
ಯಾವದೇತತ್ ಕರೋಮ್ಯದ್ಯ ಕಾಮಂ ತವ ಮಹಾಬಲ ॥9॥
ಅಥವಾ ಶಿಲೆಯಿಂದ ಹಸ್ತಿನಪುರವನ್ನು ಮರ್ದಿಸಿ ದುರ್ಯೋಧನನನ್ನು ಬಂಧಿಸಿ ನಿನ್ನ ಬಳಿಗೆ ತರಬೇಕಾದರೆ ಹೇಳು. ಎಲ್ಲೈ ಮಹಾಬಲನೇ, ನಿನ್ನ ಕಾಮವನ್ನು ಈ ದಿನ ಈಗ ನೆರವೇರಿಸುವೆನು.
ವೈಶಂಪಾಯನಃ
ಭೀಮಸೇನಸ್ತು ತದ್ವಾಕ್ಯಂ ಶ್ರುತ್ವಾ ತಸ್ಯ ಮಹಾತ್ಮನಃ |
ಪ್ರತ್ಯುವಾಚ ಹನೂಮಂತಂ ಪ್ರಹೃಷ್ಟೇನಾಂತರಾತ್ಮನಾ ॥10॥
ವೈಶಂಪಾಯನ ಭೀಮಸೇನನಾದರೋ ಮಹಾತ್ಮನಾದ ಹನುಮಂತನ ಮಾತುಗಳನ್ನು ಕೇಳಿ ಮನಸ್ಸಿನಲ್ಲಿ ಸಂತೋಷಭರಿತನಾಗಿ ಅವನಿಗೆ ಉತ್ತರವನ್ನು ಕೊಟ್ಟನು.
ಕೃತಮೇವ ತ್ವಯಾ ಸರ್ವಂ ಮಮ ವಾನರಪುಂಗವ |
ಸ್ವಸ್ತಿ ತೇಽಸ್ತು ಮಹಾಬಾಹೋ ಕಾಮಯೇ ತ್ವಾಂ ಪ್ರಸೀದ ಮೇ ॥11॥
ವಾನರಶ್ರೇಷ್ಠನೇ, ನೀನು ನನಗೆ ಹೇಳಿದುದೆಲ್ಲವನ್ನೂ ಮಾಡಿದಂತೆಯೇ ಆಗಿದೆ. ಮಹಾಬಾಹುವೇ, ನಿನಗೆ ಮಂಗಳವಾಗಲಿ. ನಾನು ಯಾವಾಗಲೂ ನಿನ್ನನ್ನು ಬಯಸುತ್ತೇನೆ. ನನ್ನನ್ನು ಅನುಗ್ರಹಿಸು.
ಸನಾಥಾಃ ಪಾಂಡವಾಃ ಸರ್ವೇ ತ್ವಯಾ ನಾಥೇನ ವೀರ್ಯವನ್ |
ತವೈವ ತೇಜಸಾ ಸರ್ವಾನ್ ವಿಜೇಷ್ಯಾಮೋ ವಯಂ ಪರಾನ್ ॥12॥
ಎಲ್ಲೈ ಪರಾಕ್ರಮಶಾಲಿಯೇ, ನಿನ್ನಂಥ ಸ್ವಾಮಿಯನ್ನು ಪಡೆದ ಪಾಂಡವರಾದ ನಾವೆಲ್ಲರೂ ಸನಾಥರು ಮತ್ತು ಧನ್ಯರು. ನಿನ್ನ ಬಲದಿಂದಲೇ ನಾವು ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವೆವು.
ವೈಶಂಪಾಯನಃ
ಏವಮುಕ್ತಸ್ತು ಹನುಮಾನ್ ಭೀಮಸೇನಮಭಾಷತ |
ಭ್ರಾತೃತ್ವಾತ್ ಸೌಹೃದಾಚ್ಚೈವ ಕರಿಷ್ಯಾಮಿ ಪ್ರಿಯಂ ತವ ॥13॥
ವೈಶಂಪಾಯನ ಹೀಗೆ ಭೀಮಸೇನನಿಂದ ಹೇಳಲ್ಪಟ್ಟ ಹನುಮಂತನು ಭೀಮಸೇನನನ್ನು ಕುರಿತು ನೀನು ನನಗೆ ತಮ್ಮನೂ ಮತ್ತು ಪ್ರಿಯನೂ ಆಗಿರುವುದರಿಂದ ನಿನಗೆ ಹಿತವನ್ನು ಮಾಡುವೆನು ಎಂದು ಹೇಳಿದನು.
ಚಮೂಂ ವಿಗಾಹ್ಯ ಶತ್ರೂಣಾಂ ಶರಶಕ್ತಿಸಮಾಕುಲಾಮ್ |
ಯದಾ ಸಿಂಹರವಂ ವೀರ ಕರಿಷ್ಯಸಿ ಮಹಾಬಲ ॥14॥
ತದಾಹಂ ಬೃಂಹಯಿಷ್ಯಾಮಿ ಸ್ವರವೇಣ ರವಂ ತವ |
ಯಂ ಶ್ರುತ್ವೈವ ಭವಿಷ್ಯಂತಿ ವ್ಯಸವಸ್ತೇಽರಯೋ ರಣೇ ॥15॥
ಎಲ್ಲೈ ಮಹಾಬಲನಾದ ವೀರನೇ, ನೀನು ಶರಶಕ್ತಿಗಳಿಂದ ತುಂಬಿದ ಶತ್ರುಗಳ ಸೈನ್ಯವನ್ನು ಪ್ರವೇಶಿಸಿ ಸಿಂಹನಾದವನ್ನು ಮಾಡುವಾಗ

ನನ್ನ ಸ್ವರವನ್ನು ನಿನ್ನ ಸ್ವರದ ಜೊತೆಯಲ್ಲಿ ಸೇರಿಸಿ ದೊಡ್ಡದನ್ನಾಗಿ ಮಾಡುವೆನು. ಆ ಸ್ವರವನ್ನು ಕೇಳಿ ಯುದ್ಧದಲ್ಲಿ ನಿನ್ನ ಶತ್ರುಗಳು ಮರಣವನ್ನು ಹೊಂದುವರು.
ವಿಜಯಸ್ಯ ಧ್ವಜಸ್ಥಶ್ಚ ನಾದಾನ್ ಮೋಕ್ಷ್ಯಾಮಿ ದಾರುಣಾನ್ |
ಶತ್ರೂಣಾಂ ಯೇ ಪ್ರಾಣಹರಾಃ ಸುಖಂ ಯೇನ ಹನಿಷ್ಯಥ ॥16॥
ಅರ್ಜುನನ ರಥದ ಧ್ವಜದಲ್ಲಿ ಕುಳಿತು ಭಯಂಕರವಾದ ನಾದವನ್ನು ಮಾಡುವೆನು. ಆ ನಾದಗಳು ಶತ್ರುಗಳ ಪ್ರಾಣಹಾರಕವಾಗುವವು. ಆಗ ನೀವು ಅನಾಯಾಸವಾಗಿ ಶತ್ರುಗಳನ್ನು ಸಂಹಾರ ಮಾಡುವಿರಿ.
ಏವಮಾಭಾಷ್ಯ ಹನೂಮಾಂಸ್ತದಾ ಪಾಂಡವನಂದನಮ್ |
ಮಾರ್ಗಮಾಖ್ಯಾಯ ಭೀಮಾಯ ತತ್ರೈವಾಂತರಧೀಯತ ॥17॥
ಹೀಗೆ ಹನುಮಂತನು ಪಾಂಡವನಂದನನಾದ ಭೀಮಸೇನನನಿಗೆ ಹೇಳಿ ಅವನಿಗೆ ಮುಂದಿನ ಮಾರ್ಗವನ್ನು ತೋರಿಸಿ ಅಲ್ಲಿಯೇ ಅದೃಶ್ಯನಾದನು.
ವೈಶಂಪಾಯನಃ
ಗತೇ ತಸ್ಮಿನ್ ಹರಿವರೇ ಭೀಮೋಽಪಿ ಬಲಿನಾಂ ವರಃ |
ತೇನ ಮಾರ್ಗೇಣ ವಿಪುಲಂ ವ್ಯಚರದ್ ಗಂಧಮಾದನಮ್ |
ಅನುಸ್ಮರನ್ ವಪುಸ್ತಸ್ಯ ಶ್ರಿಯಂ ಚಾಪ್ರತಿಮಾಂ ಭುವಿ |
ಮಾಹಾತ್ಮ್ಯಮನುಭಾವಂ ಚ ಸ್ಮರನ್ ದಾಶರಥೇರ್ಯಯೌ ॥18॥
ಆ ಹರೀಶ್ವರನು ಅಂತರ್ದಾನವನ್ನು ಹೊಂದಿದಮೇಲೆ, ಬಲಿಷ್ಠರಲ್ಲಿ ಅಗ್ರಗಣ್ಯನಾದ ಭೀಮಸೇನನು ಹನುಮಂತನು ತೋರಿಸಿದ ಮಾರ್ಗದಲ್ಲಿಯೇ ಗಂಧಮಾದನ ಪರ್ವತದಲ್ಲಿ ಸಂಚರಿಸಿದನು. ಹನುಮಂತನ ಆ ಶರೀರವನ್ನು, ಅದರ ಅಪ್ರತಿಮ ಕಾಂತಿಯನ್ನು ಭೂಮಿಯಲ್ಲಿ ದಶರಥ ರಾಮನ ಮಹಿಮೆಯನ್ನು ಮತ್ತು ಸಾಮರ್ಥ್ಯವನ್ನು ಸ್ಮರಿಸುತ್ತಾ ಮುಂದೆ ಸಾಗಿದನು.
ಸ ತಾನಿ ರಮಣೀಯಾನಿ ವನಾನ್ಯುಪವನಾನಿ ಚ |
ವಿಲೋಕಯಾಮಾಸ ತದಾ ಸೌಗಂಧಿಕವನೇಪ್ಸಯಾ ॥19॥
ಅವನು ಸೌಗಂಧಿಕವನವನ್ನು ಕಾಣುವ ಸಲುವಾಗಿ ಸುತ್ತಲೂ ಇದ್ದ ಮನೋಹರವಾದ ವನಗಳನ್ನು ಮತ್ತು ಉಪವನಗಳನ್ನು ನೋಡಿದನು.
ಫುಲ್ಲದ್ರುಮವಿಚಿತ್ರಾಣಿ ಸರಾಂಸಿ ಸರಿತಸ್ತಥಾ |
ನಾನಾಕುಸುಮಚಿತ್ರಾಣಿ ಪುಷ್ಪಿತಾನಿ ವನಾನಿ ಚ |
ನಾನಾವಿಹಗಜುಷ್ಟಾನಿ ಪಶ್ಯತಿ ಸ್ಮ ಸಮಂತತಃ ॥20॥
ತೀರದಲ್ಲಿ ಅರಳಿದ ಮರಗಳಿಂದ, ವಿಚಿತ್ರವಾದ ಅನೇಕ ಪಕ್ಷಿಗಳಿಂದ, ಸೇವಿತವಾದ ಸರೋವರಗಳನ್ನು ಮತ್ತು ನದಿಗಳನ್ನು ಅಂತಹ ವೃಕ್ಷಗಳಿಂದ ವಿಚಿತ್ರವಾದ ಅನೇಕ ವನಗಳನ್ನು ಎಲ್ಲಕಡೆಯಲ್ಲಿಯೂ ನೋಡಿದನು.
ಮತ್ತವಾರಣಯೂಥಾನಿ ಪಂಕಕ್ಲಿನ್ನಾನಿ ಭಾರತ |
ವರ್ಷತಾಮಿವ ಮೇಘಾನಾಂ ವೃಂದಾನಿ ದದೃಶೇ ತದಾ ॥21॥
ಎಲೈ ಭಾರತನೇ, ಮಳೆಯನ್ನು ಸುರಿಸುವ ಮೇಘಸಮೂಹದಂತೆ ಕಾಣುತ್ತಿದ್ದ ಕೆಸರಿನಿಂದ ಎದ್ದುಬಂದ ಮದ್ದಾನೆಗಳ ಸಮೂಹಗಳನ್ನು ಆಗ ಅಲ್ಲಿ ನೋಡಿದನು.
ಹರಿಣೈಶ್ಚಪಲಾಪಾಂಗೈರ್ಹರಿಣೀಸಹಿತೈರ್ವನಮ್ |
ಸಶಷ್ಪಕವಲೈಃ ಶ್ರೀಮಾನ್ ಪಥಿ ದೃಷ್ಟ್ವಾ ದ್ರುತಂ ಯಯೌ ॥22॥
ಹೆಣ್ಣು ಜಿಂಕೆಗಳಿಂದ ಕೂಡಿದ, ಬಾಯಿಯಲ್ಲಿ ಎಳೆಯ ಹುಲ್ಲಿನ ಕವಳವನ್ನು ಹೊಂದಿದ್ದಂತಹ ಚಂಚಲದೃಷ್ಟಿಯುಳ್ಳ, ಜಿಂಕೆಗಳಿಂದ ನಿರೀಕ್ಷಿಸಲ್ಪಟ್ಟವನಾಗಿ ಕಾಂತಿಯುಕ್ತನಾದ ಅವನು ಬೇಗ ಸಾಗಿದನು.
ಮಹಿಷೈಶ್ಚ ವರಾಹೈಶ್ಚ ಶಾರ್ದೂಲೈಶ್ಚ ನಿಷೇವಿತಮ್ |
ವ್ಯಪೇತಭೀರ್ಗಿರಿಂ ಶೌರ್ಯಾದ್ ಭೀಮಸೇನೋ ವ್ಯಗಾಹತ ॥23॥
ಮಹಿಷಗಳಿಂದಲೂ, ವರಾಹಗಳಿಂದಲೂ ಮತ್ತು ವ್ಯಾಘ್ರಗಳಿಂದಲೂ ಸೇವಿತವಾದ ಆ ಪರ್ವತವನ್ನು ನಿರ್ಭಯನಾದ ಭೀಮಸೇನನು ತನ್ನ ಶೌರ್ಯದಿಂದ ಪ್ರವೇಶಿಸಿದನು.
ಕುಸುಮಾನಂತಗಂಧೈಶ್ಚ ತಾಮ್ರಪಲ್ಲವಕೋಮಲೈಃ |
ಯಾಚ್ಯಮಾನ ಇವಾರಣ್ಯೇ ದ್ರುಮೈರ್ಮಾರುತಕಂಪಿತೈಃ ॥24॥
ಕೃತಪದ್ಮಾಂಜಲಿಪುಟಾ ಮತ್ತಷಟ್ಪದಸೇವಿತಾಃ |
ಪ್ರಿಯತೀರ್ಥವನಾ ಮಾರ್ಗೇ ಪದ್ಮಿನೀಃ ಸಮತಿಕ್ರಮನ್ ॥25॥
ತಮ್ಮ ಕುಸುಮಗಳ ಅನೇಕ ಪರಿಮಳಗಳಿಂದ ಮತ್ತು ಕೋಮಲವಾದ ಚಿಗುರುಗಳ ತಾಮ್ರಹಸ್ತತಳಗಳಿಂದ ವಾಯುವಿನಿಂದ ಅಲ್ಲಾಡುವ ವೃಕ್ಷಗಳಿಂದ ಯಾಚಿಸಲ್ಪಟ್ಟವನಂತೆ ಅವನು ಅರಣ್ಯದಲ್ಲಿ ಮುಂದೆ ಸಾಗಿ ಮದಿಸಿದ ಭೃಂಗಗಳಿಂದ ಸೇವಿತವಾದ ಪದ್ಮಗಳೆಂಬ ಅಂಜಲಿಪುಟಗಳಿಂದ ಪ್ರಾರ್ಥಿಸುವಂತಿದ್ದ ಮನೋಹರವಾದ ತೀರ್ಥಗಳನ್ನು ಮತ್ತು ವನಗಳನ್ನು ಹೊಂದಿದ್ದ ಪದ್ಮಸರೋವರಗಳನ್ನು ಮಾರ್ಗದಲ್ಲಿ ದಾಟಿ ಮುಂದೆ ನಡೆದನು.
ಸಜ್ಜಮಾನಮನೋದೃಷ್ಟಿಃ ಫುಲ್ಲೇಷು ಗಿರಿಸಾನುಷು |
ದ್ರೌಪದೀವಾಕ್ಯಪಾಥೇಯೋ ಭೀಮಃ ಶೀಘ್ರತರಂ ಯಯೌ ॥26॥
ಅರಳಿದ ಮರಗಳುಳ್ಳ ಪರ್ವತದ ಶಿಖರಗಳಲ್ಲಿ ಮನಸ್ಸು ಮತ್ತು ದೃಷ್ಟಿಯನ್ನು ನೆಟ್ಟವನಾಗಿ ದ್ರೌಪದಿಯ ವಚನವನ್ನೇ

ಪಾಥೇಯವನ್ನಾಗಿ ಹೊಂದಿ ಭೀಮಸೇನನು ಶೀಘ್ರವಾಗಿ ಮುಂದೆ ನಡೆದನು.
ಪರಿವೃತ್ತೇಽಹನಿ ತತಃ ಪ್ರಕೀರ್ಣಹರಿಣೇ ವನೇ |
ಕಾಂಚನೈರ್ವಿಮಲೈಃ ಪದ್ಮೈರ್ದದರ್ಶ ವಿಪುಲಾಂ ನದೀಮ್ ॥27॥
ಹಗಲಿನಲ್ಲಿ ಸೂರ್ಯನು, ಪಶ್ಚಿಮಾಭಿಮುಖವಾಗಿ ತಿರುಗುತ್ತಿರಲು ಮತ್ತು ಕಾಡಿನಲ್ಲಿ ಜಿಂಕೆಗಳು ಅಲ್ಲಲ್ಲಿ ಚದುರಿರಲು ಸುವರ್ಣಮಯವಾದ ಸ್ವಚ್ಛ ಪದ್ಮಗಳಿಂದ ತುಂಬಿದ ಒಂದು ವಿಸ್ತಾರವಾದ ನದಿಯನ್ನು ಅವನು ನೋಡಿದನು.
ಹಂಸಕಾರಂಡವಯುತಾಂ ಚಕ್ರವಾಕೋಪಶೋಭಿತಾಮ್ |
ರಚಿತಾಮಿವ ತಸ್ಯಾದ್ರೇರ್ಮಾಲಾಂ ವಿಮಲಪಂಕಜಾಮ್ ॥28॥
ಆ ನದಿಯು ಹಂಸಕಾರಂಡವ ಚಕ್ರವಾಕ ಮೊದಲಾದ ಜಲಪಕ್ಷಿಗಳಿಂದ ಶೋಭಿತವಾಗಿದ್ದು, ಆ ಪರ್ವತಕ್ಕೆ ಪರಿಶುದ್ಧವಾದ ಪದ್ಮಗಳಿಂದ ಮಾಡಿದ ಮಾಲೆಯಂತಿದ್ದಿತು.
ತಸ್ಯಾಂ ನದ್ಯಾಂ ಮಹಾಸತ್ತ್ವಃ ಸೌಗಂಧಿಕವನಂ ಮಹತ್ |
ಅಪಶ್ಯತ್ ಪ್ರೀತಿಜನನಂ ಬಾಲಾರ್ಕಸದೃಶದ್ಯುತಿ ॥29॥
ಮಹಾಸತ್ತ್ವನಾದ ಅವನು ಆ ನದಿಯಲ್ಲಿ ಬಾಲಸೂರ್ಯನಂತೆ ಕಾಂತಿಯುಳ್ಳ, ಸಂತೋಷಜನಕವಾದ ವಿಸ್ತಾರವಾದ ಸೌಗಂಧಿಕವನವನ್ನು (ಸೌಗಂಧಿಕ ಪುಷ್ಪವಿದ್ದ ಸರೋವರವನ್ನು) ನೋಡಿದನು.
ತದ್ ದೃಷ್ಟ್ವಾ ಲಬ್ಧಕಾಮಃ ಸ ಮನಸಾ ಪಾಂಡುನಂದನಃ |
ವನವಾಸಪರಿಕ್ಲಿಷ್ಟಾಂ ಜಗಾಮ ಮನಸಾ ಪ್ರಿಯಾಮ್ ॥30॥
ಆ ಪಾಂಡುನಂದನನು ಆ ಸರೋವರವನ್ನು ನೋಡಿ ಮನಸ್ಸಿನಲ್ಲಿ ತನ್ನ ಆಸೆಯು ಪೂರ್ಣವಾಗಿರಲು ವನವಾಸದ ಕ್ಲೇಶವನ್ನು ಅನುಭವಿಸುತ್ತಿದ್ದ ತನ್ನ ಪ್ರಿಯೆಯಾದ ದ್ರೌಪದಿಯನ್ನು ಮನಸ್ಸಿನಲ್ಲಿ ಸ್ಮರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಾಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಚತುರಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22
ನರಾಗಮ್ಯಾಂ ನಲಿನೀಮೇತ್ಯ ತತ್ರ
ದೃಷ್ಟ್ವಾ ಪದ್ಮಾನ್ಯದ್ಭುತಾಕಾರವಂತಿ |
ಹೈಮಾನಿ ದಿವ್ಯಾನ್ಯತಿಗಂಧವಂತಿ ಸಮಾಸದದ್
ವಾರ್ಯಮಾಣೋ ನರಾಶ್ಯೈಃ ॥280॥
ಭೀಮಸೇನ ಮಾನವರಿಗೆ ಅಗಮ್ಯವಾದ ಕಮಲವನಕ್ಕೆ ಹೋಗಿ ಅದರಲ್ಲಿ ಅದ್ಭುತ ರೂಪದ ದಿವ್ಯ ಸುಗಂಧಭರಿತ ಬಂಗಾರದ ಕಮಲಗಳನ್ನು ಕಂಡು ರಾಕ್ಷಸರು ತಡೆಯುತ್ತಿದ್ದಂತೆಯೇ ಪ್ರವೇಶಿಸಿದ.
ತೇ ಭೀಮಮತಾತ್ಯುಧಮುಗ್ರರೂಪಂ
ಮಹಾಬಲಂ ರೂಪನವಾವತಾರಮ್ |
ನ್ಯವಾರಯನ್ ಕ್ರೋಧವಶಾಃ ಸಮೇತಾಃ ಶತಂ
ಸಹಸ್ರಾಣ್ಯಯುತಾನಿ ಸಂಖ್ಯೇ ॥281॥
ಆ ಕ್ರೋಧವಶ ರಾಕ್ಷಸರು ಎಲ್ಲರೂ ಸೇರಿ ಅನುಪಮ ಅತಿ ಸುಂದರಾಕಾರದ ಮಹಾಬಲನಾದ, ಉಗ್ರರೂಪನಾಗಿ ಆಯುಧ ಹಿಡಿದಿರುವ ಭೀಮನನ್ನು ತಡೆದರು. ಅವರು ಸಂಖ್ಯೆಯಲ್ಲಿ ನೂರು ಕೋಟಿ ಇದ್ದರು.
* * * *
ನೂರ ನಲವತ್ತೊಂಬತ್ತನೆಯ ಅಧ್ಯಾಯ
ಸೌಗಂಧಿಕ ಸರೋವರವನ್ನು ಪ್ರವೇಶಿಸಲಿರುವ ಭೀಮಸೇನನಿಗೆ
ಕಾವಲುಗಾರರ ಪ್ರಶ್ನೆ.
ವೈಶಂಪಾಯನಃ
ಸ ಗತ್ವಾ ನಳಿನೀಂ ರಮ್ಯಾಂ ರಾಕ್ಷಸೈರಭಿರಕ್ಷಿತಾಮ್ |
ಕೈಲಾಸಶಿಖರಾಭ್ಯಾಶೇ ದದರ್ಶ ಶುಭಕಾನನಾಮ್ ॥1॥
ನೀಲಶಾದ್ವಲಪರ್ಯಂತಾಂ ಚಿತ್ರದ್ರುಮಪರಿಚ್ಛದಾಮ್ |
ವೈಶಂಪಾಯನ ಭೀಮಸೇನನು ಮುಂದೆ ಹೋಗಿ ಕೈಲಾಸ ಪರ್ವತದ ಶಿಖರದ ಸಮೀಪದಲ್ಲಿ ಶುಭಕಾನನದಿಂದ ಸುತ್ತುವರಿಯಲ್ಪಟ್ಟಿದ್ದ ಹಸಿರುಬಣ್ಣದ ಶೀತವಾದ ತೀರಗಳಿಂದ ಸುತುತವರಿಯಲ್ಪಟ್ಟಿದ್ದಂತಹ ವಿಚಿತ್ರವಾದ ಮರಗಳಿಂದ ಆವೃತವಾದಂತಹ ಮನೋಹರವಾದ ಸರೋವರವನ್ನು ನೋಡಿದನು.
ಕುಬೇರಭವನಾಭ್ಯಾಶೇ ಜಾತಾಂ ಪರ್ವತನಿರ್ಝರೈಃ |
ಸುರಮ್ಯಾಂ ವಿಪುಲಚ್ಛಾಯಾಂ ನಾನಾದ್ರುಮಲತಾಕುಲಮ್ ॥2॥
ಆ ಸರೋವರವು ಕುಬೇರನ ಭವನದ ಸಮೀಪದಲ್ಲಿ ಪರ್ವತದ ಝರಿಗಳಿಂದ ಮಾಡಲ್ಪಟ್ಟು ವಿಪುಲ ಛಾಯೆಯನ್ನು ಕೊಡುವ ಅನೇಕ

ವೃಕ್ಷಗಳು ಮತ್ತು ಲತೆಗಳಿಂದ ನಿಬಿಡವಾಗಿದ್ದು ಮನೋಹರವಾಗಿದ್ದಿತು.
ಹರಿತಾಂಬುಜಸಂಚ್ಛನ್ನಾಂ ದಿವ್ಯಾಂ ಕನಕಪುಷ್ಕರಾಮ್ |
ವಿಚಿತ್ರಭೂತಾಂ ಲೋಕಸ್ಯ ಶುಭಾಮದ್ಭುತದರ್ಶನಾಮ್ ॥3॥
ನಾನಾಪಕ್ಷಿಗಣಾಕೀರ್ಣಾಂ ಸೂಪತೀರ್ಥಾಮಕರ್ದಮಾಮ್ |
ಅತೀವ ರಮ್ಯಾಂ ಸುಜಲಾಂ ಜಾತಾಂ ಪರ್ವತಸಾನುಷು |
ಆ ಸರೋವರವು ಹರಿದ್ವರ್ಣದ ಕಮಲಗಳಿಂದಲೂ, ಸುವರ್ಣವರ್ಣದ ಕಮಲಗಳಿಂದಲೂ ತುಂಬಿಹೋಗಿ ಅದ್ಭುತವಾದ ದೃಶ್ಯವನ್ನು ಕೊಡುವುದಾಗಿ ಲೋಕಕ್ಕೆ ವಿಚಿತ್ರವೂ ಮತ್ತು ಶುಭಪ್ರದವೂ ಆಗಿದ್ದಿತು. ಆ ಸರೋವರವು ಅನೇಕ ಪಕ್ಷಿಗಣಗಳಿಂದ ತುಂಬಿದ್ದು ತೀರದ ಸಮೀಪದಲ್ಲಿ ಕೆಸರಿಲ್ಲದ ಪ್ರದೇಶಗಳಿಂದ ಕೂಡಿದ್ದು ಶುದ್ಧವಾದ ನೀರಿನಿಂದ ಪರ್ವತಶಿಖರದಲ್ಲಿ ಬಹಳ ಮನೋಹರವಾಗಿದ್ದಿತು.
ತತ್ರಾಮೃತರಸಂ ಶೀತಂ ಲಘು ಕುಂತೀಸುತಃ ಶುಭಮ್ |
ದದರ್ಶ ವಿಮಲಂ ತೋಯಂ ಪಿಬಂಶ್ಚ ಬಹು ಪಾಂಡವಃ ॥4॥
ಪಾಂಡವನಾದ ಕುಂತೀಪುತ್ರನಾದ ಭೀಮಸೇನನು ಆ ಸರೋವರದ ಅಮೃತರಸತುಲ್ಯವಾದ ತಂಪಾದ ಮತ್ತು ಹಗುರವಾದ ಶುಭಜಲವನ್ನು ನೋಡಿ ಅದನ್ನು ಬಹಳವಾಗಿ ಪಾನಮಾಡಿದನು.
ತಾಂ ತು ಪುಷ್ಕರಿಣೀಂ ರಮ್ಯಾಂ ದಿವ್ಯಸೌಗಂಧಿಕಾವೃತಾಮ್ |
ಜಾತರೂಪಮಯ್ಯೈಃ ಪದ್ಮೈಶ್ಛನ್ನಾಂ ಪರಮಗಂಧಿಭಿಃ ॥5॥
ವೈಡೂರ್ಯವರನಾಳೈಶ್ಚ ಬಹುಚಿತ್ರೈರ್ಮನೋರಮ್ಯೈಃ |
ಹಂಸಕಾರಂಡವೋದ್ಧೂತೈಃ ಸೃಜದ್ಭಿರಮಲಂ ರಜಃ ॥6॥
ಆ ಮನೋಹರವಾದ ಪುಷ್ಕರಿಣಿಯಾದರೂ ದಿವ್ಯಸೌಗಂಧಿಕಪುಷ್ಪಗಳಿಂದಲೂ, ಅತ್ಯಂತ ಸುಗಂಧಯುಕ್ತವಾದ ಸುವರ್ಣಮಯವಾದ ಪದ್ಮಗಳಿಂದಲೂ ತುಂಬಿಹೋಗಿದ್ದಿತು. ಆ ಪದ್ಮಪುಷ್ಪಗಳಿಗೆ ವೈಢೂರ್ಯವರ್ಣದ ನಾಳಗಳಿದ್ದವು. ಅವು ವಿಚಿತ್ರವಾಗಿಯೂ ಮತ್ತು ಮನೋಹರವಾಗಿಯೂ ಕಾಣುತ್ತಿದ್ದವು. ಹಂಸಕಾರಂಡವ ಮೊದಲಾದ ಜಲಪಕ್ಷಿಗಳ ಸಂಚಾರದಿಂದ ಪುಷ್ಪಗಳ ಕೇಸರದ ರಜವು ಮೇಲೆದ್ದು ಬರುತ್ತಿತ್ತು.
ಆಕ್ರೀಡಂ ರಾಜರಾಜಸ್ಯ ಕುಬೇರಸ್ಯ ಮಹಾತ್ಮನಃ |
ಗಂಧರ್ವೈರಪ್ಸರೋಭಿಶ್ಚ ದೇವೈಶ್ಚ ಪರಮಾರ್ಚಿತಾಮ್ ॥7॥
ಆ ಸರೋವರವು ಮಹಾತ್ಮನಾದ ರಾಜರಾಜನಾದ ಕುಬೇರನ ವಿಹಾರ ಸ್ಥಾನವಾಗಿದ್ದಿತು. ಗಂಧರ್ವರಿಂದಲೂ ಅಪ್ಸರೆಯರಿಂದಲೂ ಮತ್ತು ದೇವತೆಗಳಿಂದಲೂ ಪೂಜಿತವಾಗಿದ್ದಿತು.
ಸೇವಿತಾಮೃಷಿಭಿರ್ದಿವ್ಯೈರ್ಯಕ್ಷೈಃ ಕಿಂಪುರುಷೈಸ್ತಥಾ |
ರಾಕ್ಷಸೈಃ ಕಿನ್ನರೈಶ್ಚಾಪಿ ಗುಪ್ತಾಂ ವೈಶ್ರವಣೇನ ಚ ॥8॥
ಅದು ದೇವಋಷಿಗಳಿಂದಲೂ, ಯಕ್ಷರಿಂದಲೂ, ಕಿಂಪುರುಷರಿಂದಲೂ ಸೇವಿತವಾಗಿದ್ದಿತು. ಮತ್ತು ರಾಕ್ಷಸರಿಂದಲೂ, ಕಿನ್ನರರಿಂದಲೂ ಮತ್ತು ಸ್ವತಃ ಕುಬೇರನಿಂದಲೂ ರಕ್ಷಿತವಾಗಿದ್ದಿತು.
ತಾಂ ಚ ದೃಷ್ಟ್ವೈವ ಕೌಂತೇಯೋ ಭೀಮಸೇನೋ ಮಹಾಬಲಃ |
ಬಭೂವ ಪರಮಪ್ರೀತೋ ದಿವ್ಯಂ ಸಂಪ್ರೇಕ್ಷ್ಯ ತತ್ಸರಃ ॥9॥
ಆ ದಿವ್ಯಸರೋವರವನ್ನು ನೋಡಿದ ಕೂಡಲೇ ಕುಂತೀಪುತ್ರನಾದ ಮಹಾಬಲನಾದ ಭೀಮಸೇನನಿಗೆ ಬಹಳ ಸಂತೋಷವುಂಟಾಯಿತು.
ತಚ್ಚ ಕ್ರೋಧವಶಾ ನಾಮ ರಾಕ್ಷಸಾ ರಾಜಶಾಸನಾತ್ |
ರಕ್ಷಂತಿ ಶತಸಹಸ್ರಾಶ್ಚಿತ್ರಾಯುಧಪರಿಚ್ಛದಾಃ ॥10॥
ಆ ಸರೋವರವನ್ನು ಶತಸಹಸ್ರಸಂಖ್ಯೆಯಲ್ಲಿದ್ದ ಕ್ರೋಧವಶ ನಾಮಕರಾದ ರಾಕ್ಷಸರು ಕೈಯಲ್ಲಿ ಆಯುಧವನ್ನು ಹಿಡಿದು ರಾಜನಾದ ಕುಬೇರನ ಶಾಸನದಂತೆ ರಕ್ಷಿಸುತ್ತಿದ್ದರು.
ತೇ ತು ದೃಷ್ಟ್ವೈವ ಕೌಂತೇಯಮಜಿನೈಃ ಪ್ರತಿವಾಸಿತಮ್ |
ರುಗ್ಮಾಂಗದಧರಂ ವೀರಂಭೀಮಂ ಭೀಮಪರಾಕ್ರಮಮ್ ॥11॥
ಸಾಯುಧಂ ಬದ್ಧನಿಸ್ತ್ರಿಶಂಮಶಂಕಿತಮರಿಂದಮಮ್ |
ಪುಷ್ಕರೇಪ್ಸುಮುಪಾಯಾಂತಮನ್ಯೋನ್ಯಮಭಿಚುಕ್ರುಶುಃ ॥12॥
ಅವರಾದರೂ ಕೃಷ್ಣಾಜಿನವನ್ನು ಧರಿಸಿದ, ಸುವರ್ಣಮಯವಾದ ಅಂಗದವನ್ನು ಧರಿಸಿದ, ಸೊಂಟದಲ್ಲಿ ಕತ್ತಿಯನ್ನು ಕಟ್ಟಿದ, ಕೈಯಲ್ಲಿ ಆಯುಧವನ್ನು ಹಿಡಿದ ಅರಿಂದಮನಾದ ಮಹಾಪರಾಕ್ರಮಿಯಾದ ಕೌಂತೇಯನಾದ ಭೀಮನು ಕಮಲ ಪುಷ್ಪಗಳನ್ನು ತೆಗೆದುಕೊಳ್ಳಲು ಸರೋವರದ ಕಡೆಗೆ ನಿರ್ಭಯವಾಗಿ ಬರುತ್ತಿರುವುದನ್ನು ನೋಡಿ ಪರಸ್ಪರವಾಗಿ ಗಟ್ಟಿಯಾದ ಸ್ವರದಲ್ಲಿ ಮಾತನಾಡಿಕೊಂಡರು.
ಅಯಂ ಪುರುಷಶಾರ್ದೂಲಃ ಸಾಯುಧೋಽಜಿನಸಂವೃತಃ |
ಯಚ್ಚಿಕೀರ್ಷುರಿಹ ಪ್ರಾಪ್ತಸ್ತತ್ ಸಂಪ್ರಷ್ಟುಮಿಹಾರ್ಹಥ ॥13॥
ಕೃಷ್ಣಾಜಿನವನ್ನು ಧರಿಸಿ ಕೈಯಲ್ಲಿ ಆಯುಧವನ್ನು ಹಿಡಿದು ಇಲ್ಲಿಗೆ ಬರುತ್ತಿರುವ ಈ ಪುರುಷಶಾರ್ದೂಲನು ಏನು ಮಾಡಲು ಇಲ್ಲಿಗೆ ಬರುತ್ತಿದ್ದಾನೆ ಎಂದು ಅವನನ್ನು ಎಲ್ಲರೂ ಪ್ರಶ್ನೆಮಾಡಬೇಕು (ಎಂದು ಮಾತನಾಡಿಕೊಂಡರು).
ತತಃ ಸರ್ವೇ ಮಹಾಬಾಹುಂ ಸಮಾಸಾದ್ಯ ವೃಕೋದರಮ್ |

ತೇಜೋಯುಕ್ತಮಪೃಚ್ಛಂತ ಕಸ್ತ್ವಮಾಖ್ಯಾತುಮರ್ಹಸಿ ॥14॥
ಮುನಿವೇಷಧರಶ್ಚೈವ ಸಾಯುಧಶ್ಚೈವ ಲಕ್ಷ್ಯತೇ |
ಯದರ್ಥಮಭಿಸಂಪ್ರಾಪ್ತಸ್ತದಾಚಕ್ಷ್ವ ಮಹಾಮತೇ ॥15॥
ಅನಂತರ ಅವರೆಲ್ಲರೂ ಮಹಾಬಾಹುವು, ತೇಜಸ್ವಿಯೂ ಆದ ವೃಕೋದರನನ್ನು ಸಮೀಪಿಸಿ, ಎಲೈ ಮಹಾಮತಿಯೇ, ನೀನು ಯಾರು ಎಂದು ಹೇಳು? ಮುನಿವೇಷವನ್ನು ಧರಿಸಿ ಕೈಯಲ್ಲಿ ಆಯುಧವನ್ನು ಹಿಡಿದು ಬರುವುದು ಕಾಣುತ್ತಿದೆ. ಯಾವ ಉದ್ದೇಶದಿಂದ ಇಲ್ಲಿಗೆ ಬರುತ್ತಿದ್ದೀಯೆ ಎಂದು ಹೇಳು ಎಂದು ಪ್ರಶ್ನೆ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನವಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಪಂಚಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ನಲವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ನೂರ ಐವತ್ತನೆಯ ಅಧ್ಯಾಯ
ಭೀಮನಿಂದ ಸೌಗಂಧಿಕ ಸರೋವರ ಪ್ರವೇಶ. ರಾಕ್ಷಸರ ವಿರೋಧ ಮತ್ತು ಯುದ್ಧ. ಕುಬೇರನಿಂದ ಭೀಮಸೇನನ ಕಾರ್ಯದ ಅನುಮೋದನೆ.
ಭೀಮಃ
ಪಾಂಡವೋ ಭೀಮಸೇನೋಽಹಂ ಧರ್ಮರಾಜಾದನಂತರಃ |
ವಿಶಾಲಾಂ ಬದರೀಂ ಪ್ರಾಪ್ತೋ ಭ್ರಾತೃಭಿಃ ಸಹ ರಾಕ್ಷಸಾಃ ॥1॥
ಭೀಮ ಎಲೈ ರಾಕ್ಷಸರೇ, ನಾನು ಪಾಂಡುಪುತ್ರನಾದ ಭೀಮಸೇನ. ಧರ್ಮರಾಜನ ತಮ್ಮ. ಅಣ್ಣತಮ್ಮಂದಿರ ಜೊತೆಯಲ್ಲಿ ಬದರೀಕ್ಷೇತ್ರಕ್ಕೆ ಬಂದಿದ್ದೇನೆ.
ಅಪಶ್ಯತ್ ತತ್ರ ಪಾಂಚಾಲೀ ಸೌಗಂಧಿಕಮನುತ್ತಮಮ್ |
ಅನಿಲೋಢಮಿತೋ ನೂನಂ ಸಾ ಬಹೂನಿ ಪರೀಪ್ಸತಿ ॥2॥
ದ್ರೌಪದಿಯು ಪ್ರಾಯಶಃ ಇಲ್ಲಿಂದ ಗಾಳಿಯು ಹೊಡೆದುಕೊಂಡು ಬಂದು ಬಿದ್ದ ಶ್ರೇಷ್ಠವಾದ ಸೌಗಂಧಿಕಪುಷ್ಪವನ್ನು ನೋಡಿದಳು. ಅವಳು ಅಂತಹ ಅನೇಕ ಪುಷ್ಪಗಳನ್ನು ಹೊಂದಲು ಬಯಸುತ್ತಾಳೆ.
ತಸ್ಯ ಮಾಮನವದ್ಯಾಂಗ್ಯಾ ಧರ್ಮಪತ್ನ್ಯಾಃ ಪ್ರಿಯೇ ಸ್ಥಿತಮ್ |
ಪುಷ್ಪಾಹರಮಿಹ ಪ್ರಾಪ್ತಂ ನಿಬೋಧತ ನಿಶಾಚರಾಃ॥3॥
ಎಲೈ ರಾಕ್ಷಸರೇ, ಆ ಅನವದ್ಯಾಂಗಿಯು ನನ್ನ ಧರ್ಮಪತ್ನಿ. ಅವಳ ಹಿತದಲ್ಲಿ ರತನಾದ ನಾನು ಅವಳಿಗೋಸ್ಕರ ಸೌಗಂಧಿಕಪುಷ್ಪವನ್ನು ತೆಗೆದುಕೊಂಡು ಹೋಗಲು ಇಲ್ಲಿಗೆ ಬಂದಿರುವೆನೆಂದು ತಿಳಿಯಿರಿ.
ರಾಕ್ಷಸಾಃ
ಆಕ್ರೀಡೋಽಯಂ ಕುಬೇರಸ್ಯ ದಯಿತಃ ಪುರುಷರ್ಷಭ |
ನೇಹ ಶಕ್ಯಂ ಮನುಷ್ಯೇಣ ವಿಹರ್ತುಂ ಮರ್ತ್ಯಧರ್ಮಣಾ ॥4॥
ರಾಕ್ಷಸ ಎಲೈ ಪುರುಷರ್ಷಭನೇ, ಇದು ಕುಬೇರನಿಗೆ ಪ್ರಿಯವಾದ ವಿಹಾರಸ್ಥಾನ. ಮರಣಧರ್ಮವುಳ್ಳ ಮನುಷ್ಯನು ಇಲ್ಲಿ ವಿಹಾರ ಮಾಡಲು ಸಾಧ್ಯವಿಲ್ಲ.
ದೇವರ್ಷಯಸ್ತಥಾ ಯಕ್ಷಾ ದೇವಾಶ್ಚಾತ್ರ ವೃಕೋದರ |
ಆಮಂತ್ರ್ಯ ಯಕ್ಷಪ್ರವರಂ ಪಿಬಂತಿ ರಮಯಂತಿ ಚ ॥5॥
ವೃಕೋದರನೇ, ಇಲ್ಲಿ ದೇವರ್ಷಿಗಳು ಯಕ್ಷರು ಮತ್ತು ದೇವತೆಗಳೂ ಸಹ ಯಕ್ಷಾಧಿಪತಿಯಾದ ಕುಬೇರನ ಅನುಮತಿಯನ್ನು ಪಡೆದು ನೀರನ್ನು ಕುಡಿಯುತ್ತಾರೆ ಮತ್ತು ವಿಹರಿಸುತ್ತಾರೆ.
ಗಂಧರ್ವಾಪ್ಸರಸಶ್ಚೈವ ವಿಹರಂತ್ಯತ್ರ ಪಾಂಡವ |
ಯಕ್ಷಾಧಿಪಸ್ಯಾನುಮತೇ ಕುಬೇರಸ್ಯ ಮಹಾತ್ಮನಃ ॥6॥
ಎಲೈ ಪಾಂಡವನೇ, ಗಂಧರ್ವರು ಮತ್ತು ಅಪ್ಸರೆಯರು ಸಹ ಇಲ್ಲಿ ಯಕ್ಷರಾಜನಾದ ಮಹಾತ್ಮನಾದ ಕುಬೇರನ ಅನುಮತಿಯನ್ನು ಪಡೆದು ವಿಹರಿಸುತ್ತಾರೆ.
ಅನ್ಯಾಯೇನೇಹ ಯಃ ಕಶ್ಚಿದವಮಾನ್ಯ ಧನೇಶ್ವರಮ್ |
ವಿಹರ್ತುಮಿಚ್ಛೇದ್ ದುರ್ವೃತ್ತಃ ಸ ವಿನಶ್ಯೇನ್ನ ಸಂಶಯಃ ॥7॥
ಯಾವನಾದರೂ ದುರ್ನಡತೆಯುಳ್ಳವನು ಅನ್ಯಾಯದಿಂದ ಇಲ್ಲಿಗೆ ಬಂದು ಧನೇಶ್ವರನಾದ ಕುಬೇರನಿಗೆ ಅವಮಾನವನ್ನು ಮಾಡಿ ವಿಹಾರವನ್ನು ಮಾಡಲು ಬಯಸಿದರೆ ಅವನು ನಿಸ್ಸಂಶಯವಾಗಿ ವಿನಾಶವನ್ನು ಹೊಂದುವನು.
ತಮನಾದೃತ್ಯ ಪದ್ಮಾನಿ ಜಿಹೀರ್ಷಸಿ ಬಲಾದ್ಭುತಃ (ಬಲಾದಿಹ) |
ಧರ್ಮರಾಜಸ್ಯ ಚಾತ್ಮಾನಂ ಬ್ರವೀಷಿ ಭ್ರಾತರಂ ಕಥಮ್ ॥8॥
ಆಮಂತ್ರ್ಯ ಯಕ್ಷರಾಜಂ ವೈ ತತಃ ಪಿಬ ಹರಸ್ವ ಚ |
ನಾತೋಽನ್ಯಥಾ ತ್ವಯಾ ಶಕ್ಯಂ ಕಿಂಚಿತ್ಪುಷ್ಕರಮೀಕ್ಷಿತಮ್ |
ನೀನಾದರೋ ನಿನ್ನ ಬಲದಿಂದ ದರ್ಪಿತನಾಗಿ ಆ ಕುಬೇರನಿಗೆ ಅವಮಾನವನ್ನು ಮಾಡಿ ಪದ್ಮಗಳನ್ನು ತೆಗೆದುಕೊಂಡು ಹೋಗಲು

ಬಯಸುತ್ತಿದ್ದೀಯೆ. ನೀನು ಹೇಗೆ ನಿನ್ನನ್ನು ಧರ್ಮರಾಜನ ತಮ್ಮ ಎಂದು ಹೇಳಿಕೊಳ್ಳುತ್ತೀಯೆ? ಯಕ್ಷರಾಜನ ಅನುಮತಿಯನ್ನು ಪಡೆದು ಅನಂತರ ನೀರನ್ನು ಕುಡಿ ಮತ್ತು ಪುಷ್ಪಗಳನ್ನು ತೆಗೆದುಕೊಂಡು ಹೋಗು. ಹಾಗೆ ಮಾಡದಿದ್ದರೆ ನೀನು ಈ ಪುಷ್ಪಗಳನ್ನು ನೋಡಲೂ ಸಹ ಸಾಧ್ಯವಿಲ್ಲ.
ಭೀಮಸೇನಃ
ರಾಕ್ಷಸಾಸ್ತಂ ನ ಪಶ್ಯಾಮಿ ಧನೇಶ್ವರಮಿಹಾಂತಿಕೇ |
ದೃಷ್ಟ್ವಾಪಿ ಚ ಮಹಾರಾಜಂ ನಾಹಂ ಯಾಚಿತುಮುತ್ಸಹೇ ॥9॥
ಭೀಮಸೇನ ಎಲೈ ರಾಕ್ಷಸರೇ, ಆ ಧನೇಶ್ವರನನ್ನು ನಾನು ಇಲ್ಲೆಲ್ಲಿಯೂ ಕಾಣುತ್ತಿಲ್ಲ. ಅಥವಾ ಒಂದುಪಕ್ಷ ಆ ಮಹಾರಾಜನನ್ನು ನೋಡಿದರೂ ನಾನು ಅವನನ್ನು ಯಾಚಿಸುವವನಲ್ಲ.
ನ ಹಿ ಯಾಚಂತಿ ರಾಜಾನ ಏಷ ಧರ್ಮಃ ಸನಾತನಃ |
ನ ಚಾಹಂ ಹಾತುಮಿಚ್ಛಾಮಿ ಕ್ಷಾತ್ರಧರ್ಮಂ ಕಥಂಚನ ॥10॥
ರಾಜರು ಯಾಚಿಸುವುದಿಲ್ಲ. ಇದು ಸನಾತನವಾದ ಧರ್ಮ. ನಾನಾದರೂ ಯಾವ ಕಾರಣದಿಂದಲೂ ಕ್ಷತ್ರಿಯಧರ್ಮವನ್ನು ತ್ಯಜಿಸುವುದಿಲ್ಲ.
ಇಯಂ ಚ ನಳಿನೀ ರಮ್ಯಾ ಜಾತಾ ಪರ್ವತನಿರ್ಝರೇ |
ನೇಯಂ ಭವನಮಾಸಾದ್ಯ ಕುಬೇರಸ್ಯ ಮಹಾತ್ಮನಃ ॥11॥
ಈ ಮನೋಹರವಾದ ಸರೋವರವಾದರೂ ಪರ್ವತದ ಝರಿಗಳಿಂದ ನಿರ್ಮಿಸಲ್ಪಟ್ಟಿದೆ. ಇದು ಮಹಾತ್ಮನಾದ ಕುಬೇರನ ಅರಮನೆಯ ಬಳಿ ಇಲ್ಲ.
ತುಲ್ಯಾ ಹಿ ಸರ್ವಭೂತಾನಾಮಿಯಂ ವೈಶ್ರವಣಸ್ಯ ಚ |
ಏವಂ ಗತೇಷು ದ್ರವ್ಯೇಷು ಕಃ ಕಂ ಯಾಚಿತುಮರ್ಹತಿ ॥12॥
ಆದ್ದರಿಂದ ಈ ಸರೋವರವು ಎಲ್ಲ ಪ್ರಾಣಿಗಳಿಗೂ ಹಾಗೆಯೇ ಕುಬೇರನಿಗೂ ಸಹ ಸೇರಿದುದು. ವಸುತವಿನ ಪರಿಸ್ಥಿತಿಯು ಹೀಗಿರುವಾಗ ಯಾರು ಯಾರನ್ನು ಯಾಚಿಸಬೇಕು?
ವೈಶಂಪಾಯನಃ
ಇತ್ಯುಕತ್ವ ರಾಕ್ಷಸಾನ್ ಸರ್ವಾನ್ ಭೀಮಸೇನೋ ಹ್ಯಮರ್ಷಣಃ |
ತಾಂ ತು ಪುಷ್ಕರಿಣೀಂ ವೀರಃ ಪ್ರಭಿನ್ನ ಇವ ಕುಂಜರಃ ॥13॥
ವ್ಯಗಾಹತ ಮಹಾಬಾಹುರ್ನಳಿನೀಂ ತಾಂ ಮಹಾಬಲಃ |
ವೈಶಂಪಾಯನ ಕ್ರೋಧ ಪರವಶನಾದ ಭೀಮಸೇನನು ಆ ಎಲ್ಲಾ ರಾಕ್ಷಸರನ್ನು ಕುರಿತು ಈ ರೀತಿ ಮಾತನಾಡಿ ವೀರನಾದ ಮಹಾಬಾಹುವೂ, ಮಹಾಬಲನೂ ಆದ ಅವನು ಮದಿಸಿದ ಆನೆಯಂತೆ ಆ ಪುಷ್ಕರಿಣಿಯನ್ನು ಪ್ರವೇಶಿಸಿದನು.
ತತಃ ಸ ರಾಕ್ಷಸೈರ್ವಾಚಾ ಪ್ರತಿಷಿದ್ಧಃ ಪ್ರತಾಪವಾನ್ |
ಮಾ ಮೈವಮಿತಿ ಸಕ್ರೋಧೈರ್ಭರ್ತ್ಸ್ಯಯದ್ಭಿಃ ಸಮಂತತಃ ॥14॥
ಕದರ್ಥೀಕೃತ್ಯ ತು ಸ ತಾನ್ ರಾಕ್ಷಸಾನ್ ಭೀಮವಿಕ್ರಮಃ |
ವ್ಯಗಾಹತ ಮಹಾತೇಜಾಸ್ತೇ ತಂ ಸರ್ವೇ ನ್ಯವಾರಯನ್ ॥15॥
ಆಗ ಪ್ರತಾಪಶಾಲಿಯಾದ ಭೀಮನು ಸಿಟ್ಟುಗೊಂಡ ರಾಕ್ಷಸರಿಂದ ಎಲ್ಲ ಕಡೆಗಳಿಂದಲೂ ಹೀಗೆ ಮಾಡಬೇಡ ಎಂದು ನಿಷೇಧಿಸಲ್ಪಡುತ್ತಿದ್ದರೂ ಆ ರಾಕ್ಷಸರನ್ನು ತುಚ್ಛೀಕರಿಸಿ ಭೀಮವಿಕ್ರಮನೂ, ಮಹಾತೇಜಸ್ವಿಯೂ ಆದ ಅವನು ಜಲವನ್ನು ಪ್ರವೇಶಿಸಿದನು. ರಾಕ್ಷಸರೆಲ್ಲರೂ ಅವನನ್ನು ತಡೆದರು.
ಬಲವಜ್ಜಗ್ರಾಹ ಪದ್ಮಾನಿ ರಕ್ಷಸಾಂ ಪಶ್ಯತಾಂ ತದಾ |
ತೇ ತಂ ನ ಮಮೃಷುರ್ವೀರಾ ಗೃಹ್ಣಂತಂ ಕಮಲೋತ್ತಮಾನ್ ॥
ಅಗಣಯ್ಯ ಸ ತಾನ್ ಸರ್ವಾನ್ ಭೀಮಸೇನಃ ಪ್ರತಾಪವಾನ್ |
ಪದ್ಮಾನ್ಯಗೃಹ್ಣಾತ್ ಸಹಸಾ ಪೌರುಷೇ ಸ್ವೇ ವ್ಯವಸ್ಥಿತಃ ॥15.2॥
ಅವನು ಆ ರಾಕ್ಷಸರು ನೋಡುತ್ತಿರುವಂತೆ ತನ್ನ ಬಲದಿಂದ ಪದ್ಮಗಳನ್ನು ಕಿತ್ತುಕೊಂಡನು. ಶ್ರೇಷ್ಠವಾದ ಕಮಲಗಳನ್ನು ಕೀಳುತ್ತಿರುವುದನ್ನು ನೋಡಿ ಆ ರಾಕ್ಷಸರು ಸಹಿಸಲಿಲ್ಲ. ಪ್ರತಾಪಶಾಲಿಯಾದ ಭೀಮಸೇನನು ತನ್ನ ಪೌರುಷದಲ್ಲಿ ತಾನು ವ್ಯವಸ್ಥಿತನಾಗಿ ಆ ರಾಕ್ಷಸರನ್ನು ಲೆಕ್ಕಿಸದೆ ಪದ್ಮಗಳನ್ನು ತೆಗೆದುಕೊಂಡನು.
ಗೃಹ್ಣೀತ ಬಧ್ನೀತ ಪ್ರ(ವಿ)ಕರ್ತತೇಮಂ
ಪಚಾಮ ಖಾದಾಮ ಚ ಭೀಮಸೇನಮ್ |
ಕ್ರುದ್ಧಾ ಬ್ರುವಂತೋಽಭಿಯಯುರ್ದ್ರುತಂ ತೇ
ಶಸತ್ರಾಣಿ ಚೋದ್ಯಮ್ಯ ವಿವೃತ್ತನೇತ್ರಾಃ ॥16॥
ಈ ಭೀಮಸೇನನನ್ನು ಹಿಡಿಯಿರಿ, ಕಟ್ಟಿ, ಕತ್ತರಿಸಿ. ಅವನನ್ನು ಬೇಯಿಸಿ ತಿನ್ನೋಣ ಎಂದು ಕ್ರೋಧದಿಂದ ಹೇಳುತ್ತಾ ಅವರು ಕಣ್ಣುಗಳನ್ನು ಅರಳಿಸಿ ಕೈಗಳಲ್ಲಿ ಆಯುಧಗಳನ್ನು ಎತ್ತಿ ಬೇಗ ಭೀಮಸೇನನ ಕಡೆಗೆ ಬಂದರು.
ತತಃ ಸ ಗುರ್ವೀಂ ಯಮದಂಡಕಲ್ಪಾಂ
ಮಹಾಗದಾಂ ಕಾಂಚನಪಟ್ಟನದ್ಧಾಮ್ |
ಪ್ರಗೃಹ್ಯ ತಾನಭ್ಯಪತತ್ ತರಸ್ವೀ
ತತೋಽಬ್ರವೀತ್ ತಿಷ್ಠತ ತಿಷ್ಠತೇತಿ ॥17॥

ಆಗ ವೇಗಶಾಲಿಯೂ ಕ್ಷಿಪ್ರಕಾರಿಯೂ ಆದ ಭೀಮಸೇನನು ಸುವರ್ಣಪಟ್ಟಿಯಿಂದ ಕೂಡಿದ್ದಂತಹ ಯಮದಂಡದಂತೆ ಇದ್ದಂತಹ ದೊಡ್ಡ ಗದೆಯನ್ನು ತೆಗೆದುಕೊಂಡು ಅವರ ಮೇಲೆ ಎರಗಿ ನಿಲ್ಲಿ ನಿಲ್ಲಿ ಎಂದು ಹೇಳಿದನು.
ತೇ ತಂ ತದಾ ತೋಮರಪಟ್ಟಿಸಾದ್ಯೈ
ವ್ಯಾವಿದ್ಧಶಸ್ತ್ರೈಃ ಸಹಸಾ ನಿಪೇತುಃ |
ಜಿಘಾಂಸವಃ ಕ್ರೋಧವಶಾಃ ಸುಭೀಮಾ
ಭೀಮಂ ಸಮಂತಾತ್ ಪರಿವವ್ರುರುಗ್ರಾಃ ॥18॥
ಆ ಕ್ರೋಧವಶ ರಾಕ್ಷಸರು ಕೈಗಳಲ್ಲಿ ತೋಮರ ಪಟ್ಟಿಸ ಮೊದಲಾದ ಆಯುಧಗಳನ್ನು ಹಿಡಿದು ಭೀಮನನ್ನು ಕೊಲ್ಲುವ ಉದ್ದೇಶದಿಂದ ಭಯಂಕರರೂ, ಕ್ರೋಧವಶರೂ ಆದ ಅವರೆಲ್ಲರೂ ಭೀಮನ ಮೇಲೆ ಎರಗಿ ಅವನನ್ನು ಸುತ್ತುವರಿದರು.
ವಾತೇನ ಕುಂತ್ಯಾಂ ಬಲವಾನ್ ಸುಜಾತಃ
ಶೂರಸ್ತರಸ್ವೀ ದ್ವಿಷತಾಂ ನಿಹಂತಾ |
ಸತ್ಯೇ ಚ ಧರ್ಮೇ ಚ ರತಃ ಸದೈವ
ಪರಾಕ್ರಮೇ ಶತ್ರುಭಿರಪ್ರಧೃಷ್ಯಃ ॥19॥
ಭೀಮನಾದರೂ ಕುಂತಿಯಲ್ಲಿ ವಾಯುದೇವರಿಂದ ಒಳ್ಳೆಯ ಜನ್ಮವನ್ನು ಪಡೆದವನು. ಬಲಿಷ್ಠ, ಶೂರ, ವೇಗವುಳ್ಳವನು, ಶತ್ರುಸಂಹಾರಕನಾದವನು, ಯಾವಾಗಲೂ ಸತ್ಯದಲ್ಲಿಯೂ ಮತ್ತು ಧರ್ಮದಲ್ಲಿಯೂ ರತನಾದವನು ಮತ್ತು ತನ್ನ ಪರಾಕ್ರಮದಲ್ಲಿ ಎಂದೂ ಸೋಲದವನು.
ತೇಷಾಂ ಸ ಮಾರ್ಗಾನ್ ವಿವಿಧಾನ್ ಮಹಾತ್ಮಾ
ವಿಹತ್ಯ ಶಸ್ತ್ರಾಣಿ ಚ ಶಾತ್ರವಾಣಾಮ್ |
ಯಥಾ ಪ್ರವೀರಾನ್ ನಿಜಘಾನ ಭೀಮಃ
ಪರಂ ಶತಂ ಪುಷ್ಕರಿಣೀಸಮೀಪೇ ॥20॥
ಆ ಮಹಾತ್ಮನಾದ ಭೀಮಸೇನನು ಶತ್ರುಗಳ ಶಸ್ತ್ರಗಳನ್ನು ಮತ್ತು ಯುದ್ಧಮಾರ್ಗಗಳನ್ನು ತಡೆದು ಪುಷ್ಕರಿಣಿಯ ಸಮೀಪದಲ್ಲಿ ಅವರಲ್ಲಿ ನೂರಕ್ಕಿಂತಲೂ ಹೆಚ್ಚು ರಾಕ್ಷಸರನ್ನು ಸಂಹರಿಸಿದನು.
ತೇ ತಸ್ಯ ವೀರ್ಯಂ ಚ ಬಲಂ ಚ ದೃಷ್ಟ್ವಾ
ವಿದ್ಯಾಬಲಂ ಬಾಹುಬಲಂ ತಥೈವ |
ಅಶಕ್ನುವಂತಃ ಸಹಿತಂ ಸಮಂತಾದ್
ದ್ರುತಂ ಪ್ರವೀರಾಃ ಸಹಸಾ ನಿವೃತ್ತಾಃ ॥21॥
ಆ ವೀರರಾದ ರಾಕ್ಷಸರು ಅವನ ವೀರ್ಯವನ್ನು, ಬಲವನ್ನು, ವಿದ್ಯಾಬಲವನ್ನು ಮತ್ತು ಬಾಹುಬಲಗಳನ್ನು ನೋಡಿ ಎಲ್ಲರೂ ಸೇರಿ ತಡೆಯಲು ಸಾಧ್ಯವಾಗದೆ ಬೇಗ ಹಿಂದಕ್ಕೆ ಹೊರಟುಹೋದರು.
ವಿದೀರ್ಯಮಾಣಾಸ್ತತ ಏವ ತೂರ್ಣ-
ಮಾಕಾಶಮಾಸ್ಥಾಯ ವಿಮೂಢಸಂಜ್ಞಾಃ |
ಕೈಲಾಸಶೃಂಗಾಣ್ಯಭಿದುದ್ರುವುಸ್ತೇ
ಭೀಮಾರ್ದಿತಾಃ ಕ್ರೋಧವಶಾಃ ಪ್ರಭಗ್ನಾಃ ॥22॥
ಭೀಮನಿಂದ ಪೀಡಿತರಾಗಿ ಭಗ್ನರಾದ ಕ್ರೋಧವಶರಾಕ್ಷಸರು ತಮ್ಮ ಸಂಜ್ಞೆಯನ್ನು ಕಳೆದುಕೊಂಡು ಚದುರಿಹೋಗಿ ಬೇಗ ಆಕಾಶಮಾರ್ಗವನ್ನು ಸೇರಿ ಕೈಲಾಸ ಶಿಖರಗಳ ಕಡೆಗೆ ಓಡಿಹೋದರು.
ಸ ಶಕ್ರವದ್ ದಾನವದೈತ್ಯಸಂಘಾನ್
ವಿಕ್ರಮ್ಯ ಜಿತ್ವಾ ಚ ರಣೇಽರಿಸಂಘಾನ್ |
ವಿಗಾಹ್ಯ ತಾಂ ಪುಷ್ಕರಿಣೀಂ ಜಿತಾರಿಃ
ಕಾಮಾಯ ಜಗ್ರಾಹ ತತೋಽಂಬುಜಾನಿ ॥23॥
ಆ ಭೀಮಸೇನನು ಇಂದ್ರನಂತೆ ದೇವದಾನವ ಸಂಘದ ಮೇಲೆ ತನ್ನ ಪರಾಕ್ರಮವನ್ನು ತೋರಿಸಿ ಯುದ್ಧದಲ್ಲಿ ಆ ಶತ್ರುಗಳ ಸಮೂಹವನ್ನು ಗೆದ್ದು ಆ ಪುಷ್ಕರಿಣಿಯನ್ನು ಪ್ರವೇಶಿಸಿ ಶತ್ರುವಿರೋಧವಿಲ್ಲದೆ ತನ್ನ ಮನಸ್ಸಿಗೆ ಬಂದಷ್ಟು ಅಂಬುಜಗಳನ್ನು ಕಿತ್ತುಕೊಂಡನು.
ತತಃ ಸ ಪೀತ್ವಾಽಮೃತಕಲ್ಪಮಂಭೋ
ಭೂಯೋ ಬಭೂವೋತ್ತಮವೀರ್ಯತೇಜಾಃ |
ಉತ್ಪಾಟ್ಯ ಜಗ್ರಾಹ ಚ ಸೋಽಂಬುಜಾನಿ
ಸೌಗಂಧಿಕಾನ್ಯುತ್ತಮಗಂಧವಂತಿ ॥24॥
ಅನಂತರ ಅವನು ಅಮೃತಕಲ್ಪವಾದ ಆ ಸರೋವರದ ನೀರನ್ನು ಕುಡಿದು ಮತ್ತೂ ಉತ್ತಮವಾದ ತೇಜಸ್ಸನ್ನು ಮತ್ತು ವೀರ್ಯವನ್ನು ಹೊಂದಿದನು. ಅವನು ಉತ್ತಮ ಗಂಧವುಳ್ಳ ಸೌಗಂಧಿಕ ಕಮಲಗಳನ್ನು ಕಿತ್ತು ಕೈಯಲ್ಲಿ ತೆಗೆದುಕೊಂಡನು.
ತತಸ್ತು ತೇ ಕ್ರೋಧವಶಾಃ ಸಮೇತ್ಯ
ಧನೇಶ್ವರಂ ಭೀಮಬಲಪ್ರಣುನ್ನಾಃ |
ಭೀಮಸ್ಯ ವೀರ್ಯಂ ಚ ಬಲಂ ಸ ಸಂಖ್ಯೇ
ಯಥಾವದಾಚಖ್ಯುರತೀವ ಭೀತಾಃ |

ತೇಷಾಂ ವಚಸ್ತತ್ ತು ನಿಶಮ್ಯ ದೇವಃ
ಪ್ರಹಸ್ಯ ರಕ್ಷಾಂಸಿ ತತೋಽಭ್ಯುವಾಚ ॥25॥
ಅನಂತರ ಆ ಕ್ರೋಧವಶದೈತ್ಯರು ಭೀಮಬಲದಿಂದ ಪೀಡಿತರಾಗಿ ಧನೇಶ್ವರನಾದ ಕುಬೇರನ ಬಳಿಗೆ ಹೋಗಿ ಬಹಳ ಭಯದಿಂದ ಯುದ್ಧದಲ್ಲಿ ಅವನ ಪರಾಕ್ರಮವನ್ನೂ ಮತ್ತು ಬಲವನ್ನೂ ಯಥಾವತ್ತಾಗಿ ವರ್ಣಿಸಿದರು. ಅವರ ಮಾತುಗಳನ್ನು ಕೇಳಿದ ಕುಬೇರನು ನಕ್ಕು ಆ ರಾಕ್ಷಸರನ್ನು ಕುರಿತು ಹೀಗೆ ಮಾತನಾಡಿದನು.
ಗೃಹ್ಣಾತು ಭೀಮೋ ಜಲಜಾನಿ ಕಾಮಾತ್
ಕೃಷ್ಣಾನಿಮಿತ್ತಂ ವಿದಿತಂ ಮಮೈತತ್ ॥26॥
ಭೀಮನು ದ್ರೌಪದಿಯ ಸಲುವಾಗಿ ಅವನ ಮನಸ್ಸಿಗೆ ಬಂದಷ್ಟು ಕಮಲಗಳನ್ನು ತೆಗೆದುಕೊಳ್ಳಲಿ. ನಾನು ಇದನ್ನು ಮೊದಲೇ ತಿಳಿದಿದ್ದೇನೆ.
ತತೋಽಭ್ಯನುಜ್ಞಾಪ್ಯ ಧನೇಶ್ವರಂ ತೇ
ಜಗ್ಮುಃ ಕುರೂಣಾಂ ಪ್ರವರಂ ವಿರೋಷಾಃ ।
ಭೀಮಂ ಚ ತಸ್ಯಾಂ ದದೃಶುರ್ನಳಿನ್ಯಾಂ
ಯಥೋಪಜೋಷಂ ವಿಹರಂತಮೇಕಮ್ ॥27॥
ಆಗ ಅವರು ಕುಬೇರನ ಅನುಮತಿಯನ್ನು ಪಡೆದು ತಮ್ಮ ಕ್ರೋಧವನ್ನು ಕಳೆದುಕೊಂಡು ಕುರುಪ್ರವೀರನಾದ ಭೀಮನ ಬಳಿಗೆ ಬಂದು ಆ ಸರೋವರದಲ್ಲಿ ತನಗೆ ಇಷ್ಟವಾದಂತೆ ಒಬ್ಬನೇ ವಿಹರಿಸುತ್ತಿದ್ದ ಭೀಮಸೇನನನ್ನು ನೋಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಷಡಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ವರಾಚ್ಛಿವಸ್ಯೈವ ಪರೈರಜೇಯಾಃ
ಶಸ್ತ್ರಾಸ್ತ್ರವೃಷ್ಟಿಂ ಮುಮುಚುಃ ಸುಭೀಮಾಮ್ ।
ಭೀಮೇಽಖಿಲಜ್ಞೇ ತಪಸಾಂ ನಿಧಾನೇ
ಬಲೋದಧೌ ಶೈವಶಾಸ್ತ್ರಂ ವದಂತಃ ॥282॥
ಶಿವನ ವರದಿಂದ ಶತ್ರುಗಳಿಗೆ ಅಜೇಯರಾಗಿದ್ದ ಕ್ರೋಧವಶ ರಾಕ್ಷಸರು ಶಿವಶಾಸ್ತ್ರವನ್ನು ಹೇಳುತ್ತ ತಪಸ್ಸಿನ ಖನಿ ಸರ್ವಜ್ಞ ಬಲಸಾಗರನಾದ ಭೀಮನ ಮೇಲೆ ಬಲು ಭಯಂಕರವಾದ ಶಸಾತ್ರಸ್ತ್ರಗಳ ಮಳೆಗರೆದರು.
ತಾನ್ ವೈಷ್ಣವೈರೇವ ಶಾಸ್ತ್ರೈಃ ಸ ಭೀಮೋ
ವಿಜಿತ್ಯ ಪೂರ್ವ ವಾಙ್ಮಯೇ ಸಂಘರೇ ತು ।
ಶಸಾತ್ರಸ್ತ್ರವರ್ಷಸ್ಯ ಕುರ್ವನ್ ಪ್ರತೀಪಂ
ಜಘ್ನೇಽಖಿಲಾನ್ ಗದಯಾ ತೇಷು ವೀರಾನ್ ॥283॥
ಭೀಮ ಆ ರಾಕ್ಷಸರನ್ನು ಮೊದಲಿಗೆ ವಾಙ್ಮಯ ಯುದ್ಧದಲ್ಲಿ ವೈಷ್ಣವ ಶಾಸ್ತ್ರಗಳಿಂದ ಪರಾಭವಗೊಳಿಸಿ ಅವರ ಶಸಾತ್ರಸ್ತ್ರಗಳ ಮಳೆಯನ್ನು ತಡೆಯುತ್ತ ಅವರಲ್ಲಿ ವೀರರಾದ ಎಲ್ಲರನ್ನೂ ಗದೆಯಿಂದ ಸಂಹರಿಸಿದ.
ವಾತೇನ ಕುಂತ್ಯಾಂ ಬಲವಾನ್ ಸ ಜಾತಃ
ಶೂರಸ್ತಪಸ್ವೀ ದ್ವಿಷತಾಂ ನಿಹಂತಾ ।
ಸತ್ಯೇ ಚ ಧರ್ಮೇ ಚ ರತಃ ಸದೈವ
ಪರಾಕ್ರಮೇ ಶತ್ರುಭಿರಪ್ರಧೃಷ್ಯಃ ॥284॥
ವಾಯುದೇವನಿಂದ ಕುಂತಿಯಲ್ಲಿ ಜನಿಸಿದ ಭೀಮ ಬಲಿಷ್ಠ ಶೂರ ತಪಸ್ವಿ ಶತ್ರುನಾಶಕ ಸತ್ಯಧರ್ಮಗಳಲ್ಲಿ ಸದಾ ನಿರತ. ಪರಾಕ್ರಮದಲ್ಲಿ ಶತ್ರುಗಳಿಗೆ ಎಂದೂ ಮಣಿಯದವ.
ತತ್ರಾಪರಾಂಶ್ಚೈವ ಬಹೂನಸತ್ಯಂ
ನಿರೀಶ್ವರಂ ಚಾಪ್ರತಿಷ್ಠಂ ಚ ಲೋಕಮ್ ।
ಸಿದ್ಧೋಽಹಮೀಶೋಽಹಮಿತಿ ಬ್ರುವಾಣಾನ್
ಗುಣಾನ್ ವಿಷ್ಣೋಃ ಖ್ಯಾಪಯನ್ ವಾದತೋಽಜೈತ್ ॥285॥
ಅಲ್ಲಿ ಪ್ರಪಂಚ ಅಸತ್ಯ, ಭಗವಂತನಿಂದ ನಿರ್ಮಿತವಲ್ಲ, ಜ್ಞಾನಬಾಧ್ಯ ಎಂದೂ ನಾನು ಮುಕ್ತ ನಾನು ಭಗವಂತ ಎಂದೂ ಹೇಳುವ ಬೇರೆ ಬಹುಮಂದಿ ರಾಕ್ಷಸರನ್ನೂ ಭೀಮ ವಿಷ್ಣುವಿನ ಗುಣಗಳನ್ನು ಸಾಧಿಸುವ ಮೂಲಕ ವಾದದಲ್ಲಿ ಗೆದ್ದ.
ಭಿನ್ನಂ ವಿಷ್ಣುಮಧಿಕಂ ಸರ್ವತಶ್ಚ
ಬ್ರುವನ್ ಪ್ರವೀರಾನ್ ಲಕ್ಷಮೇಷಾಂ ನಿಜಘ್ನೇ ।
ತೇ ತಸ್ಯ ವೀರ್ಯ ಚ ಬಲಂ ದೃಷ್ಟ್ವಾ
ವಿದ್ಯಾಬಲಂ ಬಾಹುಬಲಂ ತಥೈವ ।
ಅಶಕ್ನುವಂತಃ ಸಹಿತಾಃ ಸಮಸ್ತಾ

ಹತಪ್ರವೀರಾಃ ಸಹಸಾ ನಿವೃತ್ತಾಃ ॥286॥
ವಿಷ್ಣುವನ್ನು ಸರ್ವವಿಲಕ್ಷಣ ಸರ್ವೋತ್ತಮನೆಂದು ಸಾಧಿಸಿ ಕ್ರೋಧವಶರಲ್ಲಿ ಒಂದು ಲಕ್ಷ ಮಹಾವೀರರನ್ನು ಸಂಹರಿಸಿದ, ಭೀಮಸೇನ. ಆಗ ಭೀಮನ ವೀರ್ಯವನ್ನೂ ವಿದ್ಯಾಬಲ ಬಾಹುಬಲಗಳೆಂಬ ಎರಡು ಬಗೆಯ ಬಲಗಳನ್ನೂ ನೋಡಿ ಅವರು ಎಲ್ಲರೂ ಜೊತೆಗೂಡಿದರೂ ಅವನನ್ನು ಇದಿರಿಸಲು ಶಕ್ತರಾಗದೆ. ತಮ್ಮ ಕಡೆಯ ಮಹಾವೀರರು ಹತರಾದಾಗ ಬೇಗನೆ ಪಲಾಯನ ಮಾಡತೊಡಗಿದರು.
ವಿಕ್ರಮ್ಯ ತಾನ್ ಗದಯಾಽಸೌ ನಿಹತ್ಯ
ವಿದ್ರಾವ್ಯ ಸರ್ವಾನ್ ನಲಿನೀಂ ಪ್ರವಿಶ್ಯ |
ಪೀತ್ವಾಽಮೃತಾಂಭಶ್ಚ ತತೋಽಂಬುಜಾನಿ
ದಿವ್ಯಾನಿ ಜಗ್ರಾಹ ಕುರುಪ್ರವೀರಃ ॥287॥
ಕುರುಕುಲ ಶ್ರೇಷ್ಠನಾದ ಭೀಮ ತನ್ನ ಪರಾಕ್ರಮವನ್ನು ಮೆರೆದು, ಪಲಾಯನಕ್ಕೆ ತೊಡಗಿದ್ದ ಎಲ್ಲ ಕ್ರೋಧವಶರನ್ನೂ ಗದೆಯಿಂದ ಹೊಡೆದು ಓಡಿಸಿ ಕಮಲವನವನ್ನು ಹೊಕ್ಕು ಅಮೃತದಂಥ ನೀರನ್ನು ಕುಡಿದ. ಅಲ್ಲಿಯ ದಿವ್ಯ ಕಮಲಗಳನ್ನು ಎತ್ತಿಕೊಂಡ.
ಅಥೋ ಕಲಹಶಂಸೀನಿ ನಿಮಿತ್ತಾನಿ ಯುಧಿಷ್ಠಿರಃ |
ದೃಷ್ಟ್ವಾ ಕೃಷ್ಣಾಮಪೃಚ್ಛಚ್ಚ ಕ್ವ ಭೀಮ ಇತಿ ದೀನಧೀಃ ॥288॥
ಯುದ್ಧ ಸೂಚಕವಾದ ಉತ್ಪಾತಗಳನ್ನು ಕಂಡು ಯುಧಿಷ್ಠಿರ ಕಳವಳಗೊಂಡು ದ್ರೌಪದಿಯನ್ನು ಕೇಳಿದ, `ಎಲ್ಲಿ ಭೀಮ?'
ಸೌಗಂಧಿಕಾರ್ಥಂ ಯಾತಂ ತಂ ಶ್ರುತ್ವಾ ಕೃಷ್ಣಾಮುಖಾನ್ನೃಪಃ |
ಆರುಹ್ಯ ರಾಕ್ಷಸಶ್ರೇಷ್ಠಾನ್ ಕೃಷ್ಣಯಾ ಭ್ರಾತೃಭಿಃ ಸಹ ॥289॥
ಯಯೌ ವೃಕೋದರೋ ಯತ್ರ ದೃಷ್ಟ್ವಾ ಚೈನಮವಸ್ಥಿತಮ್ |
ಉವಾಚ ಮೈವಮಿತ್ಯೇನಂ ಭೀತೋ ಗಿರಿಶಕೋಪತಃ ॥290॥
ಸೌಗಂಧಿಕ ಕಮಲಕ್ಕಾಗಿ ಭೀಮ ಹೋದುದನ್ನು ದ್ರೌಪದಿಯ ಮುಖದಿಂದ ಕೇಳಿ ರಾಜಾ ಯುಧಿಷ್ಠಿರ ರಾಕ್ಷಸ ಶ್ರೇಷ್ಠರ ಹೆಗಲೇರಿ ದ್ರೌಪದಿ ಮತ್ತು ಸೋದರರೊಂದಿಗೆ ಭೀಮನಿದ್ದಲ್ಲಿಗೆ ಹೋದ. ಅಲ್ಲಿ ಭೀಮನಿದ್ದುದನ್ನು ನೋಡಿ ಶಿವನ ಕೋಪಕ್ಕೆ ಅಂಜಿ `ಹೀಗೆ ಮಾಡಬೇಡ' ಎಂದು ಭೀಮನಿಗೆ ಹೇಳಿದ.
ದೇವೇಭ್ಯೋಃ ಮರಣಾದ್ ಭೀತಾ ರಾಕ್ಷಸಾ ವಿತ್ತಪಾಜ್ಞಯಾ |
ತದೀಯಾಂ ನಲಿನೀಂ ತೇ ಹಿ ರಕ್ಷಂತ್ಯಸ್ಯಾಽಶ್ರಯೋ ಹರಃ |
ಜಾನನ್ ವಿತ್ತೇಶ್ವರೋ ಭೀಮಮಾಹಾತ್ಮ್ಯಂ ನ ಚುಕೋಪ ಹ ॥291॥
ದೇವತೆಗಳಿಂದ ತಮಗೆ ಮರಣ ಬಂದೀತೆಂದು ಹೆದರಿ ಈ ರಾಕ್ಷಸರು ಕುಬೇರನ ಅನುಮತಿಯಿಂದ ಅವನ ಕಮಲವನ್ನು ರಕ್ಷಿಸುತ್ತಿದ್ದರು. ಕುಬೇರನಿಗೆ ಆಶ್ರಯದಾತ ರುದ್ರ. ಅದರಿಂದ ಧರ್ಮರಾಜನಿಗೆ ರುದ್ರನ ಭಯ. ಆದರೆ ಕುಬೇರ ಭೀಮನ ಮಹಾತ್ಮೆಯನ್ನು ಬಲ್ಲವನಾದ್ದರಿಂದ ಕೋಪಮಾಡಲಿಲ್ಲ.
* * * *
ನೂರ ಐವತ್ತೊಂದನೆಯ ಅಧ್ಯಾಯ
ಅಪಶಕುನಗಳನ್ನು ನೋಡಿದ ಧರ್ಮರಾಜನ ದ್ರೌಪದಿಯ ಮಾತಿನಂತೆ ಭೀಮಸೇನನ ಅನ್ವೇಷಣ. ಸೌಗಂಧಿಕ ವನಕ್ಕೆ ಬಂದು ಅವನ ಸಾಂತ್ವನ. ಅಲ್ಲಿಯೇ ಸ್ವಲ್ಪ ಸಮಯ ಎಲ್ಲರ ವಿಹಾರ.
ವೈಶಂಪಾಯನಃ
ತತಸ್ತಾನಿ ಮಹಾರ್ಹಾಣಿ ದಿವ್ಯಾನಿ ಭರತರ್ಷಭ |
ಬಹೂನಿ ಬಹುರೂಪಾಣಿ ವಿರಜಾಂಸಿ ಸಮಾದದೇ ॥1॥
ವೈಶಂಪಾಯನ ಎಲೈ ಭರತರ್ಷಭನೇ, ಅನಂತರ ಭೀಮಸೇನನು ಶುದ್ಧವಾದ ಅನೇಕ ಬಣ್ಣಗಳಿಂದ ಕೂಡಿದ ಅನರ್ಘ್ಯವಾದ ದಿವ್ಯವಾದ ಅನೇಕ ಕಮಲಗಳನ್ನು ತೆಗೆದುಕೊಂಡನು.
ಏತಸ್ಮಿನ್ನಂತರೇ ರಾಜನ್ ಯುಧಿಷ್ಠಿರಸಮೀಪತಃ |
ತತೋ ವಾಯುರ್ಮಹಾನ್ ಶೀಘ್ರೋ ನೀಚೈಃ ಶರ್ಕರಕರ್ಷಣಃ |
ಪ್ರಾದುರಾಸೀತ್ ಖರಸ್ಪರ್ಶಃ ಸಂಗ್ರಾಮಮಭಿಚೋದಯನ್ ॥2॥
ಎಲೈ ರಾಜನೇ, ಆ ಸಮಯಕ್ಕೆ ಸರಿಯಾಗಿ ಯುಧಿಷ್ಠಿರನ ಸಮೀಪದಲ್ಲಿ ವಾಯುವು ನೆಲವನ್ನು ಹಿಡಿದು ಧೂಳಿನ ಕಣಗಳನ್ನು ಎತ್ತಿಕೊಂಡು ಒರಟಾದ ಸ್ಪರ್ಶವನ್ನು ಉಂಟು ಮಾಡಿ ಬೀಸುತ್ತಾ ಯುದ್ಧದ ಲಕ್ಷಣಗಳನ್ನು ತೋರಿಸುತ್ತಾ ಅಭಿವ್ಯಕ್ತವಾಯಿತು.
ಪಪಾತ ಮಹತೀ ಚೋಲ್ಕಾ ಸನಿರ್ಘಾತಾ ಮಹಾಭಯಾ |
ನಿಷ್ಪ್ರಭಶ್ಚಾಭವತ್ ಸೂರ್ಯಶ್ಛನ್ನರಶ್ಮಿಸ್ತಮೋವೃತಃ ॥3॥
ಮಹಾಭಯವನ್ನು ಉಂಟುಮಾಡುವ, ಸಿಡಿಲಿನಿಂದ ಕೂಡಿದ ದೊಡ್ಡ ಉಲ್ಕಾಪಾತವಾಯಿತು. ಸೂರ್ಯನು ಕತ್ತಲಿನಿಂದ ಕಿರಣಗಳು ಮುಚ್ಚಲ್ಪಟ್ಟು ನಿಷ್ಪ್ರಭನಾದನು.
ನಿರ್ಘಾತಶ್ಚಾಭವದ್ ಭೀಮೋ ಭೀಮೇ ವಿಕ್ರಮಮಾಸ್ಥಿತೇ |
ಚಚಾಲ ಪೃಥಿವೀ ಚಾಪಿ ಪಾಂಸುವರ್ಷಂ ಪಪಾತ ಚ ॥4॥
ಭೀಮನು ವಿಕ್ರಮವನ್ನು ಆಶ್ರಯಿಸಿರಲು ನಿರ್ಘಾತವುಂಟಾಯಿತು. ಭೂಮಿಯು ಕಂಪಿಸಿತು ಮತ್ತು ಧೂಳಿನ ಮಳೆಯು ಬಿದ್ದಿತು.
ಸಲೋಹಿತಾ ದಿಶಶ್ಚಾಸನ್ ಖರವಾಚೋ ಮೃಗದ್ವಿಜಾಃ |
ತಮೋವೃತಮಭೂತ್ ಸರ್ವಂ ನ ಪ್ರಾಜ್ಞಾಯತ ಕಿಂಚನ ॥5॥

ಅನ್ಯೇ ಚ ಬಹವೋ ಭೀಮಾ ಉತ್ಪಾತಾಸ್ತತ್ರ ಜಜ್ಞಿರೇ |
ದಿಕ್ಕುಗಳು ಕೆಂಪಾದವು. ಪಶುಗಳು ಮತ್ತು ಪಕ್ಷಿಗಳು ಕರ್ಕಶವಾದ ಧ್ವನಿಯನ್ನು ಮಾಡಿದವು. ಆ ಪ್ರದೇಶವೆಲ್ಲಾ ಕತ್ತಲಿನಿಂದ ಆವರಿಸಲ್ಪಟ್ಟು ಏನೂ ಕಾಣಿಸಲಿಲ್ಲ. ಇನ್ನೂ ಅನೇಕ ಭಯಂಕರವಾದ ಅಪಶಕುನಗಳು ಅಲ್ಲಿ ಉಂಟಾದವು.
ತದದ್ಭುತಮಭಿಪ್ರೇಕ್ಷ್ಯ ಧರ್ಮಪುತ್ರೋ ಯುಧಿಷ್ಠಿರಃ |
ಉವಾಚ ವದತಾಂ ಶ್ರೇಷ್ಠಃ ಕೋಽಸ್ಮಾನಭಿಭವಿಷ್ಯತಿ ||6||
ಧರ್ಮಪುತ್ರನಾದ ಮಾತಾಡುವವರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಈ ಅಪೂರ್ವವಾದ ಅಪಶಕುನಗಳನ್ನು ನೋಡಿ ನಮ್ಮನ್ನು ಯಾರು ಪರಾಭವಗೊಳಿಸುವವರು ಎಂದು ಕೇಳಿದನು.
ಸಜ್ಜೀಭವತ ಭದ್ರಂ ವಃ ಪಾಂಡವಃ ಯುದ್ಧದುರ್ಮದಾಃ |
ಯಥಾರೂಪಾಣಿ ಪಶ್ಯಾಮಿ ಸ್ವಭ್ಯಗ್ರೋ ನಃ ಪರಾಕ್ರಮಃ ||7||
ಯುದ್ಧದುರ್ಮದರಾದ ಪಾಂಡವರಾದ ನೀವೆಲ್ಲರೂ ಸನ್ನದ್ಧರಾಗಿ. ನಿಮಗೆ ಮಂಗಳವಾಗಲಿ. ಈ ಸೂಚನೆಗಳನ್ನು ನೋಡುತ್ತಿರುವಂತೆ ಸದ್ಯದಲ್ಲಿಯೇ ನಮ್ಮ ಪರಾಕ್ರಮದ ಅವಶ್ಯಕತೆಯು ತೋರುತ್ತದೆ.
ಏವಮುಕತ್ವ ತತೋ ರಾಜಾ ವೀಕ್ಷಾಂಚಕ್ರೇ ಸಮಂತತಃ |
ಅಪಶ್ಯಮಾನೋ ಭೀಮಂ ತು ಧರ್ಮಪುತ್ರೋ ಯುಧಿಷ್ಠಿರಃ ||8||
ತತಃ ಕೃಷ್ಣಾಂ ಯವೌ ಚಾಪಿ ಸಮೀಪಸ್ಥಾವರಿಂದಮಃ |
ಪಪ್ರಚ್ಛ ಭ್ರಾತರಂ ಭೀಮಂ ಭೀಮಕರ್ಮಾಣಮಾಹವೇ ||9||
ಹೀಗೆ ಹೇಳಿ ರಾಜನು ಸುತ್ತಲೂ ನೋಡಿದನು. ಧರ್ಮಪುತ್ರನೂ, ಅರಿಂದಮನೂ ಆದ ಯುಧಿಷ್ಠಿರನು ಅಲ್ಲಿ ಭೀಮಸೇನನನ್ನು ಕಾಣದೆ ಆಗ ಸಮೀಪದಲ್ಲಿದ್ದ ನಕುಲ ಸಹದೇವರನ್ನು ಮತ್ತು ದ್ರೌಪದಿಯನ್ನು ಕುರಿತು ಯುದ್ಧದಲ್ಲಿ ಭಯಂಕರ ಕರ್ಮವನ್ನು ಮಾಡುವ ತಮ್ಮನಾದ ಭೀಮನ ಬಗ್ಗೆ ಪ್ರಶ್ನೆ ಮಾಡಿದನು.
ಕಚ್ಚಿತ್ ಕ್ವ ಭೀಮಃ ಪಾಂಚಾಲಿ ಕಿಂಚಿತ್ಕೃತ್ಯಂ ಚಿಕೀರ್ಷತಿ |
ಕೃತವಾನಪಿ ವಾ ವೀರಃ ಸಾಹಸಂ ಸಾಹಸಪ್ರಿಯಃ ||10||
ದ್ರೌಪದಿಯೇ, ಭೀಮನು ಎಲ್ಲಿದ್ದಾನೆ? ಯಾವುದಾದರೂ ಸಾಹಸ ಕಾರ್ಯವನ್ನು ಮಾಡಲು ಹೊರಟಿದ್ದಾನೆಯೇ? ಅಥವಾ ಆಗಲೇ ಮಾಡಿದ್ದಾನೆಯೇ? ಆ ವೀರನು ಯಾವಾಗಲೂ ಸಾಹಸಪ್ರಿಯನಾದವನು.
ಇಮೇ ಹ್ಯಕಸ್ಮಾದುತ್ಪಾತಾ ಮಹಾಸಮರದರ್ಶನಾಃ |
ದರ್ಶಯಂತೋ ಭಯಂ ತೀವ್ರಂ ಪ್ರಾದುರ್ಭೂತಾ ಸಮಂತತಃ ||11||
ಈ ದೊಡ್ಡ ಅಪಶಕುನಗಳು ನಮ್ಮ ಸುತ್ತಲೂ ಕಾಣಿಸಿಕೊಂಡು ದೊಡ್ಡ ಯುದ್ಧವನ್ನು ಮತ್ತು ತೀವ್ರವಾದ ಭಯವನ್ನು ಸೂಚಿಸುತ್ತಿವೆ.

ವೈಶಂಪಾಯನಃ
ತಂ ತಥಾವಾದಿನಂ ಕೃಷ್ಣಾ ಪ್ರತ್ಯುವಾಚ ಮನಸ್ವಿನೀ |
ಪ್ರಿಯಾ ಪ್ರಿಯಂ ಚಿಕೀರ್ಷಂತೀ ಮಹಿಷೀ ಚಾರುಹಾಸಿನೀ ||12||
ವೈಶಂಪಾಯನ ಹಾಗೆ ಮಾತನಾಡುತ್ತಿದ್ದ ಧರ್ಮರಾಜನನ್ನು ಕುರಿತು ಚಾರುಹಾಸಿನಿಯೂ, ಧೈರ್ಯಶಾಲಿನಿಯೂ, ರಾಣಿಯೂ ಆದ ದ್ರೌಪದಿಯು ಧರ್ಮರಾಜನಿಗೆ ಪ್ರಿಯವನ್ನು ಉಂಟುಮಾಡಲು ಬಯಸಿ ಮಾತನಾಡಿದಳು.
ಯತ್ತತ್ ಸೌಗಂಧಿಕಂ ರಾಜನ್ನಾಹೃತಂ ಮಾತರಿಶ್ವನಾ |
ತನ್ಮಯಾ ಭೀಮಸೇನಸ್ಯ ಪ್ರೀತಯಾಽದ್ಯೋಪಪಾದಿತಮ್ ||13||
ಎಲೈ ರಾಜನೇ, ಗಾಳಿಯು ಹೊಡೆದುಕೊಂಡು ಬಂದಿದ್ದ ಆ ಸೌಗಂಧಿಕ ಪುಷ್ಪವನ್ನು ನೋಡಿ ಸಂತೋಷಗೊಂಡು ನಾನು ಅದನ್ನು ಭೀಮನಿಗೆ ಕೊಟ್ಟೆ.
ಅಪಿ ಚೋಕ್ತೋ ಮಯಾ ವೀರೋ ಯದಿ ಪಶ್ಯೇರ್ಬಹೂನ್ಯಪಿ |
ತಾನಿ ಸರ್ವಾಣ್ಯುಪಾದಾಯ ಶೀಘ್ರಮಾಗಮ್ಯತಾಮಿತಿ ||14||
ಮತ್ತು ಇಂತಹ ಹೆಚ್ಚು ಪುಷ್ಪಗಳನ್ನು ನೋಡಿದರೆ ಅವೆಲ್ಲವನ್ನೂ ತೆಗೆದುಕೊಂಡು ಬೇಗ ಹಿಂದಿರುಗು ಎಂದೂ ಆ ವೀರನಿಗೆ ಹೇಳಿದೆ.
ಸ ತು ನೂನಂ ಮಹಾಬಾಹುಃ ಪ್ರಿಯಾರ್ಥಂ ಮಮ ಪಾಂಡವಃ |
ಪ್ರಾಗುದೀಚೀಂ ದಿಶಂ ರಾಜಂಸ್ತಾನ್ಯಾಹರ್ತುಮಿತೋ ಗತಃ ||15||
ರಾಜನೇ, ಆ ಮಹಾಬಾಹುವಾದ ಪಾಂಡವನು ನನಗೆ ಪ್ರಿಯವನ್ನು ಉಂಟು ಮಾಡಲು ಆ ಪುಷ್ಪವನ್ನು ತರಲು ಈಶಾನ್ಯದಿಕ್ಕಿಗೆ ಹೋಗಿದ್ದಾನೆ.
ವೈಶಂಪಾಯನಃ
ಉಕ್ತಸ್ತ್ವೇವಂ ತಯಾ ರಾಜಾ ಯಮಾವಿದಮಥಾಬ್ರುವೀತ್ |
ಗಚ್ಛಾಮ ಸಹಿತಾಸ್ತೂರ್ಣಂ ಯೇನ ಯಾತೋ ವೃಕೋದರಃ ||16||
ವೈಶಂಪಾಯನ ಹೀಗೆ ಹೇಳಲ್ಪಟ್ಟ ರಾಜನು ನಕುಲ ಸಹದೇವರನ್ನು ಕುರಿತು ಭೀಮಸೇನನು ಹೋದ ಮಾರ್ಗದಲ್ಲಿಯೇ ನಾವು ಶೀಘ್ರವಾಗಿ ಹೋಗೋಣ ಎಂದು ಹೇಳಿದನು.
ವಹಂತು ರಾಕ್ಷಸಾ ವಿಪ್ರಾನ್ ಯಥಾಶ್ರಾಂತಾನ್ ಯಥಾಕೃಶಾನ್ |
ತ್ವಮಪ್ಯಮರಸಂಕಾಶ ವಹ ಕೃಷ್ಣಾಂ ಘಟೋತ್ಕಚ ||17||
ರಾಕ್ಷಸರು, ಚೆನ್ನಾಗಿ ದಣಿದ ಮತ್ತು ಕೃಶರಾದ ಬ್ರಾಹ್ಮಣರನ್ನು ಎತ್ತಿಕೊಳ್ಳಲಿ. ದೇವಕಾಂತಿಯುಳ್ಳ ಘಟೋತ್ಕಚನೇ ನೀನು

ದ್ರೌಪದಿಯನ್ನು ಎತ್ತಿಕೋ.
ವ್ಯಕ್ತಂ ದೂರಮಿತೋ ಭೀಮಃ ಪ್ರವಿಷ್ಟ ಇತಿ ಮೇ ಮತಿಃ |
ಚಿರಂ ಚ ತಸ್ಯ ಕಾಲೋಽಯಂ ಸ ಚ ವಾಯುಸಮೋ ಜವೇ ॥18॥
ಭೀಮನು ಇಲ್ಲಿಂದ ಬಹಳ ದೂರಹೋಗಿದ್ದಾನೆ ಎಂದು ನನ್ನ ಅಭಿಪ್ರಾಯ. ಏಕೆಂದರೆ ಅವನು ವೇಗದಲ್ಲಿ ವಾಯುಸಮನಾದವನು ಮತ್ತು ಹೋಗಿ ಬಹಳ ಸಮಯವಾಯಿತು.
ತರಸ್ವೀ ವೈನತೇಯಸ್ಯ ಸದೃಶೋ ಭುವಿ ಲಂಘನೇ |
ಉತ್ಪತೇದಪಿ ವಾ(ಚಾ)ಕಾಶಂ ನಿಪತೇಚ್ಚ ಯಥೇಚ್ಛಕಮ್ ॥19॥
ಅವನು ವೇಗಶಾಲಿಯಾದವನು. ಭೂಮಿಯನ್ನು ಹಾರುವ ವಿಷಯದಲ್ಲಿ ಗರುಡನಿಗೆ ಸಮಾನನಾದವನು. ಅವನು ತನ್ನ ಇಚ್ಛೆ ಬಂದಂತೆ ಆಕಾಶಕ್ಕೆ ಹಾರಿ ಕೆಳಗೆ ಇಳಿಯಲು ಸಮರ್ಥನಾದವನು.
ತಮನ್ವಿಯಾಮ ಭವತಾಂ ಪ್ರಭಾವಾದ್ ರಜನೀಚರಾಃ |
ಪುರಾಽಸೌ ನಾಪರಾಧ್ನೋತಿ ಸಿದ್ಧಾನಾಂ ಬ್ರಹ್ಮವಾದಿನಾಮ್ ॥20॥
ಎಲೈ ರಾಕ್ಷಸರೇ, ಅವನು ಸಿದ್ಧರಿಗೂ ಮತ್ತು ಬ್ರಹ್ಮವಾದಿಗಳಿಗೂ ಅಪರಾಧವನ್ನು ಮಾಡುವುದಕ್ಕಿಂತ ಮುಂಚೆಯೇ ನಿಮ್ಮ ಸಹಾಯದಿಂದ ನಾವು ಅವನ ಬಳಿಗೆ ಹೋಗೋಣ.
ವೈಶಂಪಾಯನಃ
ತಥೇತ್ಯುಕ್ತಾಸ್ತು ತೇ ಸರ್ವೇ ಹೈಡಿಂಬಪ್ರಮುಖಾಸ್ತದಾ |
ಉದ್ದೇಶಜ್ಞಾಃ ಕುಬೇರಸ್ಯ ನಳಿನ್ಯಾ ಭರತರ್ಷಭ ॥21॥
ಆದಾಯ ಪಾಂಡವಾಂಶ್ಚೈವ ತಾಂಶ್ಚ ವಿಪ್ರಾನನೇಕಶಃ |
ಲೋಮಶೇನೈವ ಸಹಿತಾಃ ಪ್ರಯಯುಃ ಪ್ರೀತಮಾನಸಾಃ ॥22॥
ವೈಶಂಪಾಯನ ಎಲೈ ಭರತರ್ಷಭನೇ, ಕುಬೇರನ ಸರೋವರದ ಮೇಲ್ಭಾಗದ ಪ್ರದೇಶವನ್ನೆಲ್ಲಾ ತಿಳಿದ ಆ ಘಟೋತ್ಕಚ ಮೊದಲಾದವರೆಲ್ಲರೂ ಹಾಗೆಯೇ ಆಗಲಿ ಎಂದು ಹೇಳಿ ಪಾಂಡವರನ್ನೂ, ಆ ಬ್ರಾಹ್ಮಣರನ್ನೂ ಎತ್ತಿಕೊಂಡು ಲೋಮಶರಿಂದ ಒಡಗೂಡಿ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಹೊರಟರು.
ತೇ ಸರ್ವೇ ತ್ವರಿತಾ ಗತ್ವಾ ದದೃಶುಃ ಶುಭಕಾನನಾಮ್ |
ಪದ್ಮಸೌಗಂಧಿಕವತೀಂ ನಳಿನೀಂ ಸುಮನೋರಮಾಮ್ ॥23॥
ತಂ ಚ ಭೀಮಂ ಮಹಾತ್ಮಾನಂ ತಸ್ಯಾಸ್ತೀರೇ ಮನಸ್ವಿನಮ್ |
ದದೃಶುರ್ನಿಹತಾಂಶ್ಚೈವ ಯಕ್ಷಾಂಶ್ಚ ವಿಪುಲೇಕ್ಷಣಾನ್ ॥24॥
ಅವರೆಲ್ಲರೂ ಶೀಘ್ರವಾಗಿ ಹೋಗಿ ಆ ಶುಭವಾದ ವನವನ್ನೂ, ಸೌಗಂಧಿಕ ಪುಷ್ಪಗಳಿರುವ ಮನೋಹರವಾದ ಆ ಪದ್ಮಸರೋವರವನ್ನೂ ಅದರ ತೀರದಲ್ಲಿ ಧೈರ್ಯಶಾಲಿಯಾಗಿ ನಿಂತಿದ್ದ ಮಹಾತ್ಮನಾದ ಭೀಮನನ್ನೂ ಮತ್ತು ಅಲ್ಲಿ ಸಂಹಾರ ಮಾಡಲ್ಪಟ್ಟ ವಿಶಾಲನೇತ್ರರಾದ ಯಕ್ಷರನ್ನೂ ನೋಡಿದರು.
ಭಿನ್ನಕಾಯಾಕ್ಷಿಬಾಹೂರೂನ್ ಸಂಚೂರ್ಣಿತಶಿರೋಧರಾನ್ |
ತಂ ಚ ಭೀಮಂ ಮಹಾತ್ಮಾನಂ ತಸ್ಯಾಸ್ತೀರೇ ವ್ಯವಸ್ಥಿತಮ್ ॥25॥
ಸಕ್ರೋಧಂ ಸ್ತಬ್ಧನಯನಂ ಸಂದಷ್ಟದಶನಚ್ಛದಮ್ |
ಉದ್ಯಮ್ಯ ಚ ಗದಾಂ ದೋರ್ಭ್ಯಾಂ ನದೀತೀರೇಷ್ವವಸ್ಥಿತಮ್ ॥
ಪ್ರಜಾಸಂಕ್ಷೇಪಸಮಯೇ ದಂಡಹಸ್ತಮಿವಾಂತಕಮ್ ॥25.1॥
ಶರೀರ, ನೇತ್ರಬಾಹುಗಳನ್ನು ಕಳೆದುಕೊಂಡು ಸಂಚೂರ್ಣಿತವಾದ ಕತ್ತುಗಳನ್ನು ಹೊಂದಿ ಹತರಾದ ಯಕ್ಷರನ್ನೂ, ಗದೆಯನ್ನು ಎತ್ತಿಹಿಡಿದು ನದೀತೀರದಲ್ಲಿ ಪ್ರಜಾ ಸಂಹಾರದ ಸಮಯದಲ್ಲಿ ದಂಡಹಸ್ತನಾದ ಯಮನಂತೆ ಹಲ್ಲುಮುಡಿಯನ್ನು ಕಚ್ಚಿ ಕ್ರೋಧದಿಂದ ಸ್ತಬ್ಧಾಕ್ಷನಾಗಿ ನಿಂತಿದ್ದ ಭೀಮನನ್ನೂ ನೋಡಿದರು.
ತಂ ದೃಷ್ಟ್ವಾ ಧರ್ಮರಾಜಸ್ತು ಪರಿಷ್ವಜ್ಯ ಪುನಃ ಪುನಃ |
ಉವಾಚ ಶ್ಲಕ್ಷ್ಣಯಾ ವಾಚಾ ಕೌಂತೇಯ ಕಿಮಿದಂ ಕೃತಮ್ ॥26॥
ಸಾಹಸಂ ಬತ ಭದ್ರಂ ತೇ ದೇವಾನಾಮಥ ಚಾಪ್ರಿಯಮ್ |
ಪುನರೇವಂ ನ ಕರ್ತವ್ಯಂ ಮಮ ಚೇದಿಚ್ಛಸಿ ಪ್ರಿಯಮ್ ॥27॥
ಧರ್ಮರಾಜನು ಅವನನ್ನು ನೋಡಿ ಪುನಃ ಪುನಃ ಆಲಿಂಗಿಸಿ ಮಧುರವಾದ ಮಾತುಗಳಿಂದ ಕೌಂತೇಯನೇ, ಇದೇನು ಸಾಹಸ ಕಾರ್ಯವನ್ನು ಮಾಡಿದ್ದೀಯೆ? ನಿನಗೆ ಮಂಗಳವಾಗಲಿ. ಇದು ದೇವತೆಗಳಿಗೆ ಅಪ್ರಿಯವಾದುದು. ನನಗೆ ನೀನು ಪ್ರಿಯವನ್ನು ಬಯಸುವುದಾದರೆ ಪುನಃ ಇಂತಹ ಕಾರ್ಯವನ್ನು ಮಾಡಬಾರದು ಎಂದು ಹೇಳಿದನು.
ಅನುಶಿಷ್ಯ ತು ಕೌಂತೇಯಂ ಪದ್ಮಾನಿ ಪರಿಗೃಹ್ಯ ಚ |
ತಸ್ಯಾಮೇವ ನಳಿನ್ಯಾಂ ತು ವಿಜಹ್ರುರಮರೋಪಮಾಃ ॥28॥
ಧರ್ಮರಾಜನು ಭೀಮಸೇನನಿಗೆ ಹೀಗೆ ಅನುಶಾಸನವನ್ನು ಮಾಡಿದ ಮೇಲೆ ದೇವತಾ ಕಾಂತಿಯುಳ್ಳ ಆ ಪಾಂಡವರು ಪದ್ಮಗಳನ್ನು ತೆಗೆದುಕೊಂಡು ಅದೇ ಸರೋವರದಲ್ಲಿ ವಿಹಾರವನ್ನು ಮಾಡಿದರು.
ಏತಸ್ಮಿನ್ನೇವ ಕಾಲೇ ತು ಪ್ರಗೃಹೀತಶಿಲಾಯುಧಾಃ |
ಪ್ರಾದುರಾಸನ್ ಮಹಾಕಾಯಾಸ್ತಸ್ಯೋದ್ಯಾನಸ್ಯ ರಕ್ಷಿಣಃ ॥29॥
ಆ ಸಮಯಕ್ಕೆ ಸರಿಯಾಗಿ ಮಹಾಕಾಯರಾದ ಉದ್ಯಾನದ ಕಾವಲುಗಾರರು ಕೈಯಲ್ಲಿ ಶಿಲಾಯುಧಗಳನ್ನು ಹಿಡಿದು ಅಲ್ಲಿಗೆ ಬಂದರು.

ತೇ ದೃಷ್ಟ್ವಾ ಧರ್ಮರಾಜಾನಂ ಮಹರ್ಷಿಂ ಚಾಪಿ ಲೋಮಶಮ್ |
ನಕುಲಂ ಸಹದೇವಂ ಚ ತಥಾನ್ಯಾನ್ ಬ್ರಾಹ್ಮಣರ್ಷಭಾನ್ ॥30॥
ವಿನಯೇನ ನತಾಃ ಸರ್ವೇ ಪ್ರಣಿಪೇತುಶ್ಚ ಭಾರತ |
ಸಾಂತ್ವಿತಾ ಧರ್ಮರಾಜೇನ ಪ್ರಸೇದುಃ ಕ್ಷಣದಾಚರಾಃ ॥31॥
ಅವರು ಧರ್ಮರಾಜನನ್ನೂ, ಲೋಮಶಮಹರ್ಷಿಗಳನ್ನೂ, ನಕುಲ ಸಹದೇವರನ್ನೂ ಮತ್ತು ಬೇರೆ ಬ್ರಾಹ್ಮಣಶ್ರೇಷ್ಠರನ್ನೂ ನೋಡಿ ವಿನಯದಿಂದ ತಲೆಯನ್ನು ಬಗ್ಗಿಸಿ ಎಲ್ಲರಿಗೂ ನಮಸ್ಕಾರವನ್ನು ಮಾಡಿದರು. ಎಲೈ ಭಾರತನೇ, ಧರ್ಮರಾಜನಿಂದ ಸಮಾಧಾನಗೊಳಿಸಲ್ಪಟ್ಟ ಆ ರಾತ್ರಿಚರರಾದ ರಾಕ್ಷಸರು ಪ್ರಸನ್ನರಾದರು.
ವಿದಿತಾಶ್ಚ ಕುಬೇರಸ್ಯ ತತ್ರ ತೇ ಕುರುಪುಂಗವಾಃ |
ಊಷುರ್ನಾತಿಚಿರಂ ಕಾಲಂ ರಮಮಾಣಾಃ ಕುರೂದ್ವಹಾಃ ॥
ಪ್ರತೀಕ್ಷಮಾಣಾ ಬೀಭತ್ಸುಂ ಗಂಧಮಾದನಸಾನುಷು ॥32॥
ಆ ಕುರುಪುಂಗವರು ಕುಬೇರನಿಗೆ ತಿಳಿದೇ ಅಲ್ಲಿ ಸ್ವಲ್ಪಕಾಲ ಸಂತೋಷದಿಂದ ವಿಹಾರವನ್ನು ಮಾಡಿ ಗಂಧಮಾದನಪರ್ವತ ಶಿಖರದಲ್ಲಿ ಅರ್ಜುನನನ್ನು ನಿರೀಕ್ಷೆ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಸಪ್ತಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ನೂರ ಐವತ್ತೆರಡನೆಯ ಅಧ್ಯಾಯ
ಗಂಧಮಾದನ ಪರ್ವತದಿಂದ ಉತ್ತರದಿಕ್ಕಿಗೆ ಹೋಗಲು ಧರ್ಮರಾಜನ ಪ್ರಯತ್ನ. ಆಕಾಶವಾಣಿಯಿಂದ ನಿಷೇಧ ಮತ್ತು ಪುನಃ ನರನಾರಾಯಣಾಶ್ರಮಕ್ಕೆ ಪ್ರತಿನಿವೃತ್ತಿ.
ವೈಶಂಪಾಯನಃ
ತಸ್ಮಿನ್ ನಿವಸಮಾನೋಽಥ ಧರ್ಮರಾಜೋ ಯುಧಿಷ್ಠಿರಃ |
ಕೃಷ್ಣಯಾ ಸಹಿತಾನ್ ಭ್ರಾತೄನಿತ್ಯುವಾಚ ಸಹದ್ವಿಜಾನ್ ॥1॥
ವೈಶಂಪಾಯನ ಧರ್ಮರಾಜನಾದ ಯುಧಿಷ್ಠಿರನು ಅಲ್ಲಿ ವಾಸವನ್ನು ಮಾಡುತ್ತಾ ದ್ರೌಪದಿಯಿಂದ ಮತ್ತು ಬ್ರಾಹ್ಮಣರಿಂದ ಒಡಗೂಡಿದ ತನ್ನ ತಮ್ಮಂದಿರನ್ನು ಕುರಿತು ಹೀಗೆ ಹೇಳಿದನು.
ದೃಷ್ಟಾನಿ ತೀರ್ಥಾನ್ಯಸ್ಮಾಭಿಃ ಪುಣ್ಯಾನಿ ಚ ಶಿವಾನಿ ಚ |
ಮನಸೋ ಹ್ಲಾದನೀಯಾನಿ ವನಾನಿ ಚ ಪೃಥಕ್ಪೃಥಕ್ ॥2॥
ದೇವೈಃ ಪೂರ್ವಂ ವಿಚೀರ್ಣಾನಿ ಮುನಿಭಿಶ್ಚ ಮಹಾತ್ಮಭಿಃ |
ಯಥಾಕ್ರಮಂ ವಿಶೇಷೇಣ ದ್ವಿಜೈಃ ಸಂಪೂಜಿತಾನಿ ಚ ॥3॥
ನಾವು ಪುಣ್ಯವಾದ, ಮಂಗಳಪ್ರದವಾದ ತೀರ್ಥಗಳನ್ನೂ ಮನಸ್ಸಿಗೆ ಸಂತೋಷವನ್ನು ಕೊಡುವ ಬೇರೆ ಬೇರೆ ವನಗಳನ್ನೂ ನೋಡಿದ್ದೇವೆ. ಮಹಾತ್ಮರಾದ ಮುನಿಗಳಿಂದಲೂ ದೇವತೆಗಳಿಂದಲೂ ಹಿಂದೆ ಸಂಚರಿಸಲ್ಪಟ್ಟಂತಹ ಮತ್ತು ಬ್ರಾಹ್ಮಣರಿಂದ ವಿಶೇಷವಾಗಿ ಪೂಜಿಸಲ್ಪಟ್ಟಂತಹ ಪ್ರದೇಶಗಳನ್ನು ಕ್ರಮವಾಗಿ ನೋಡಿದ್ದೇವೆ.
ಋಷೀಣಾಂ ಪೂರ್ವಚರಿತಂ ತಥಾ ಕರ್ಮ ವಿಚೇಷ್ಟಿತಮ್ |
ರಾಜರ್ಷೀಣಾಂ ಚ ಚರಿತಂ ಕಥಾಶ್ಚ ವಿವಿಧಾಃ ಶುಭಾಃ ॥4॥
ಶೃಣ್ವಾನಾಸ್ತತ್ರ ತತ್ರ ಸ್ಮ ಆಶ್ರಮೇಷು ಶಿವೇಷು ಚ |
ಅಭಿಷೇಕಂ ದ್ವಿಜೈಃ ಸಾರ್ಧಂ ಕೃತವಂತೋ ವಿಶೇಷತಃ ॥5॥
ಹಿಂದಿನ ಋಷಿಗಳ ಚರಿತ್ರೆಯನ್ನೂ, ಅವರು ಮಾಡಿದ ಕರ್ಮಗಳನ್ನೂ ಮತ್ತು ವಿಶೇಷವಾದ ಚೇಷ್ಟೆಗಳನ್ನೂ ಅದರಂತೆಯೇ ರಾಜರ್ಷಿಗಳ ಅನೇಕ ವಿಧವಾದ ಶುಭವಾದ ಚರಿತ್ರೆಯನ್ನೂ ಅಲ್ಲಲ್ಲಿ ಕೇಳುತ್ತಾ ಮಂಗಳಪ್ರದವಾದ ಆಶ್ರಮಗಳಲ್ಲಿ ಬ್ರಾಹ್ಮಣರ ಜೊತೆಯಲ್ಲಿ ವಿಶೇಷವಾಗಿ ಸ್ನಾನವನ್ನು ಮಾಡಿದ್ದೇವೆ.
ಅರ್ಚಿತಃ ಸತತಂ ದೇವಾಃ ಪುಷ್ಪೈರದ್ಭಿಃ ಸದಾ ಚ ವಃ |
ಯಥಾಲಬ್ಧೈರ್ಮೂಲಫಲೈಃ ಪಿತರಶ್ಚಾಪಿ ತರ್ಪಿತಾಃ ॥6॥
ದೇವತೆಗಳನ್ನು ಪುಷ್ಪಗಳಿಂದಲೂ, ನೀರಿನಿಂದಲೂ ನೀವು ಸತತವಾಗಿ ಪೂಜಿಸಿದ್ದೀರಿ. ಅಲ್ಲಲ್ಲಿ ದೊರಕಿದ ಮೂಲಫಲಗಳಿಂದ ಪಿತೃಗಳೂ ತೃಪ್ತಿಗೊಳಿಸಲ್ಪಟ್ಟಿದ್ದಾರೆ.
ಯಥಾಕ್ರಮಂ ವಿಶೇಷೇಣ ಲೋಮಶೇನ ಪ್ರಭಾಷಿತಮ್ |
ಪರ್ವತೇಷು ಚ ರಮ್ಯೇಷು ಸರ್ವೇಷು ಚ ಸರಸ್ಸು ಚ |
ಉದಧೌ ಚ ಮಹಾಪುಣ್ಯೇ ಸೂಪಸ್ಪೃಷ್ಟಂ ಮಹಾತ್ಮಭಿಃ ॥7॥
ವಿಶೇಷವಾಗಿ ಲೋಮಶರು ಸುಂದರವಾದ ಪರ್ವತ, ಸರೋವರ ಎಲ್ಲಕಡೆಗಳಲ್ಲಿಯೂ ಅಲ್ಲಿಯ ಮಹಿಮೆಗಳನ್ನು ಹೇಳಿದ್ದಾರೆ. ಮಹಾತ್ಮರಾದ ನೀವೆಲ್ಲರೂ ಮಹಾಪುಣ್ಯಪ್ರದವಾದ ಸಮುದ್ರದಲ್ಲಿ ಸ್ನಾನವನ್ನು ಮಾಡಿದ್ದೀರಿ.
ಇಲಾ ಸರಸ್ವತೀ ಸಿಂಧುರ್ಯಮುನಾ ನರ್ಮದಾ ತಥಾ |

ನಾನಾತೀರ್ಥೇಷು ರಮ್ಯೇಷು ಸೂಪಸ್ಪೃಷ್ಟಂ ಸಹ ದ್ವಿಜೈಃ ॥8॥
ಇಳಾ, ಸರಸ್ವತೀ, ಸಿಂಧು, ಯಮುನಾ, ನರ್ಮದಾ ಮೊದಲಾದ ಮನೋಹರವಾದ ನಾನಾ ತೀರ್ಥಗಳಲ್ಲಿ ಬ್ರಾಹ್ಮಣರ ಜೊತೆಯಲ್ಲಿ ಚೆನ್ನಾಗಿ ಸ್ನಾನವನ್ನು ಮಾಡಿದ್ದೀರಿ.
ಗಂಗಾದ್ವಾರಮತಿಕ್ರಮ್ಯ ಬಹವಃ ಪರ್ವತಾಃ ಶುಭಾಃ |
ಹಿಮವಾನ್ ಪರ್ವತಶ್ಚೈವ ನಾನಾದ್ವಿಜಗಣಾಯುತಃ ॥9॥
ವಿಶಾಲಾ ಬದರೀ ದೃಷ್ಟ್ವಾ ನರನಾರಾಯಣಾಶ್ರಮಃ |
ದಿವ್ಯಾ ಪುಷ್ಕರಿಣೀ ದೃಷ್ಟ್ವಾ ಸಿದ್ಧದೇವರ್ಷಿಪೂಜಿತಾ ॥10॥
ಗಂಗಾದ್ವಾರವನ್ನು ದಾಟಿ ಶುಭವಾದ ಅನೇಕ ಪರ್ವತಗಳನ್ನೂ, ಅನೇಕ ಪಕ್ಷಿ ಸಂಕುಲದಿಂದ ಕೂಡಿದ ಹಿಮಾಲಯ ಪರ್ವತವನ್ನೂ, ವಿಶಾಲ ಬದರೀಕ್ಷೇತ್ರವನ್ನೂ, ನರನಾರಾಯಣಾಶ್ರಮವನ್ನೂ, ಸಿದ್ಧರಿಂದಲೂ ದೇವರ್ಷಿಗಳಿಂದಲೂ ಪೂಜಿತವಾದ ದಿವ್ಯವಾದ ಪುಷ್ಕರಿಣಿಯನ್ನೂ ನೋಡಿದ್ದೀರಿ.
ಯಥಾಕ್ರಮವಿಶೇಷೇಣ ಸರ್ವಾಣ್ಯಾಯತನಾನಿ ಚ |
ದರ್ಶಿತಾನಿ ದ್ವಿಜಶ್ರೇಷ್ಠಾ ಲೋಮಶೇನ ಮಹಾತ್ಮನಾ ॥11॥
ಎಲೈ ಬ್ರಾಹ್ಮಣಶ್ರೇಷ್ಠರೇ, ಮಹಾತ್ಮರಾದ ಲೋಮಶರು ಕ್ರಮವಾಗಿ ವಿಶೇಷವಾಗಿ ಎಲ್ಲಾ ಕ್ಷೇತ್ರಗಳನ್ನೂ ತೋರಿಸಿದ್ದಾರೆ.
ಇಮಂ ವೈಶ್ರವಣಾವಾಸಂ ಪುಣ್ಯಂ ಸಿದ್ಧನಿಷೇವಿತಮ್ |
ಕಥಂ ಭೀಮ ಗಮಿಷ್ಯಾಮೋ ಗತಿರತ್ರ ವಿಧೀಯತಾಮ್ ॥12॥
ಭೀಮಸೇನನೇ, ನಾವು ಇಲ್ಲಿಂದ ಸಿದ್ಧಸೇವಿತವಾದ ಪುಣ್ಯಪ್ರದವಾದ ಕುಬೇರನ ಆವಾಸಸ್ಥಾನಕ್ಕೆ ಯಾವ ಮಾರ್ಗದಿಂದ ಹೋಗುವೆವು ಎಂದು ವಿಚಾರ ಮಾಡು.
ವೈಶಂಪಾಯನಃ
ಏವಂ ಬ್ರುವತಿ ರಾಜೇಂದ್ರೇ ವಾಗುವಾಚಾಶರೀರಿಣೀ |
ನ ಶಕ್ಯೋ ದುರ್ಗಮೋ ಗಂತುಮಿತೋ ವೈಶ್ರವಣಾಶ್ರಮಃ ॥13॥
ವೈಶಂಪಾಯನ ರಾಜೇಂದ್ರನು ಹೀಗೆ ಹೇಳುತ್ತಿರಲು ಅಶರೀರವಾಣಿಯಾಯಿತು. ದುರ್ಗಮವಾದ ಕುಬೇರನ ಆಶ್ರಮಕ್ಕೆ ಈ ಮಾರ್ಗದಿಂದ ಹೋಗಲು ಸಾಧ್ಯವಿಲ್ಲ.
ಅನೇನೈವ ಪಥಾ ರಾಜನ್ ಪ್ರತಿಗಚ್ಛ ಯಥಾಗತಮ್ |
ನರನಾರಾಯಣಸ್ಥಾನಂ ಬದರೀತ್ಯಭಿವಿಶ್ರುತಮ್ ॥14॥
ಎಲೈ ರಾಜನೇ, ನೀನು ಬಂದ ಈ ಮಾರ್ಗದಿಂದಲೇ ಬದರಿ ಎಂದು ವಿಖ್ಯಾತವಾದ ನರನಾರಾಯಣಸ್ಥಾನಕ್ಕೆ ಹಿಂದಿರುಗು.
ತಸ್ಮಾದ್ ಯಾಸ್ಯಸಿ ಕೌಂತೇಯ ಸಿದ್ಧಚಾರಣಸೇವಿತಮ್ |
ಬಹುಪುಷ್ಪಫಲಂ ರಮ್ಯಮಾಶ್ರಮಂ ವೃಷಪರ್ವಣಃ ॥15॥
ಕೌಂತೇಯನೇ, ನೀನು ಅಲ್ಲಿಂದ ಮುಂದಕ್ಕೆ ಸಿದ್ಧಚಾರಣಸೇವಿತವಾದ ಬಹಳವಾದ ಪುಷ್ಪಫಲಗಳನ್ನು ಹೊಂದಿರುವ ವೃಷಪರ್ವನ ಮನೋಹರವಾದ ಆಶ್ರಮಕ್ಕೆ ಹೋಗುವಿ.
ಅತಿಕ್ರಮ್ಯ ಚ ತಂ ಪಾರ್ಥ ಚಾರ್ಷ್ಟಿಷೇಣಾಶ್ರಮೇ ವಸೇಃ |
ತತೋ ದ್ರಕ್ಷ್ಯಸಿ ಕೌಂತೇಯ ನಿವೇಶಂ ಧನದಸ್ಯ ಚ ॥16॥
ಎಲೈ ಪಾರ್ಥನೇ, ಅದನ್ನು ದಾಟಿ ಮುಂದೆ ಹೋಗಿ ನೀನು ಅರ್ಷ್ಟಿಷೇಣನ ಆಶ್ರಮದಲ್ಲಿ ವಾಸಮಾಡು. ಕೌಂತೇಯನೇ, ಅಲ್ಲಿಂದ ನೀನು ಕುಬೇರನ ವಾಸಸ್ಥಾನವನ್ನು ನೋಡುವಿ.
ಏತಸ್ಮಿನ್ನಂತರೇ ವಾಯುರ್ದಿವ್ಯಗಂಧವಹಃ ಶುಚಿಃ |
ಸುಖಪ್ರಹ್ಲಾದನಃ ಶೀತಃ ಪುಷ್ಪವರ್ಷಂ ವವರ್ಷ ಚ ॥17॥
ಆ ಸಮಯಕ್ಕೆ ಸರಿಯಾಗಿ ಶುದ್ಧವಾದ ವಾಯುವು ಸುಖವನ್ನು ಕೊಡುವಂತೆ ಶೀತಸ್ಪರ್ಶದಿಂದ ಬೀಸಿತು. ಪುಷ್ಪವರ್ಷವೂ ಉಂಟಾಯಿತು.
ಶ್ರುತ್ವಾ ತು ದಿವ್ಯಾಮಾಕಾಶಾದ್ ವಾಚಂ ಸರ್ವೇ ವಿಸಿಸ್ಮಯುಃ |
ಋಷೀಣಾಂ ಬ್ರಾಹ್ಮಣಾನಾಂ ಚ ಪಾರ್ಥಿವಾನಾಂ ವಿಶೇಷತಃ ॥18॥
ಶ್ರುತ್ವಾ ತನ್ಮಹದಾಶ್ಚರ್ಯಂ ದ್ವಿಜೋ ಧೌಮ್ಯೋಽಬ್ರವೀತ್ ತದಾ |
ನ ಶಕ್ಯಮುತ್ತರಂ ವಕ್ತುಮೇವಂ ಭವತು ಭಾರತ ॥19॥
ಆ ದಿವ್ಯವಾದ ಅಶರೀರವಾಣಿಯನ್ನು ಕೇಳಿ ಎಲ್ಲರಿಗೂ ವಿಸ್ಮಯ ಉಂಟಾಯಿತು. ಋಷಿಗಳಿಗೆ, ಬ್ರಾಹ್ಮಣರಿಗೆ ಮತ್ತು ರಾಜರಿಗೆ ವಿಶೇಷವಾಗಿ ವಿಸ್ಮಯ ಉಂಟಾಯಿತು. ಮಹದಾಶ್ಚರ್ಯಕರವಾದ ಆ ಮಾತುಗಳನ್ನು ಕೇಳಿ ಆಗ ಧೌಮ್ಯರು ಭಾರತನೇ, ಈ ಮಾತಿಗೆ ಪ್ರತ್ಯುತ್ತರವನ್ನು ಹೇಳಲು ಸಾಧ್ಯವಿಲ್ಲ. ಹಾಗೆಯೇ ಆಗಲಿ ಎಂದು ಹೇಳಿದರು.
ತತೋ ಯುಧಿಷ್ಠಿರೋ ರಾಜಾ ಪ್ರತಿಜಗ್ರಾಹ ತದ್ವಚಃ |
ಪ್ರತ್ಯಾಗಮ್ಯ ಪುನಸ್ತಂ ತು ನರನಾರಾಯಣಾಶ್ರಮಮ್ ॥20॥
ಭೀಮಸೇನಾದಿಭಿಃ ಸರ್ವೈರ್ಭ್ರಾತೃಭಿಃ ಪರಿವಾರಿತಃ |
ಪಾಂಚಾಲ್ಯಾ ಬ್ರಾಹ್ಮಣೈಶ್ಚೈವ ನ್ಯವಸಂತ ಸುಖಂ ತದಾ ॥21॥
ಆಗ ರಾಜನಾದ ಯುಧಿಷ್ಠಿರನು ಆ ಮಾತನ್ನು ಸ್ವೀಕರಿಸಿದನು. ಅವನು ಭೀಮಸೇನಾದಿ ಎಲ್ಲ ಸಹೋದರರಿಂದ ಪರಿವಾರಿತನಾಗಿ ದ್ರೌಪದಿಯ ಜೊತೆಯಲ್ಲಿ ನರನಾರಾಯಣಾಶ್ರಮಕ್ಕೆ ಪುನಃ ಹಿಂದಿರುಗಿದನು. ಜೊತೆಯಲ್ಲಿ ಬಂದ ಬ್ರಾಹ್ಮಣರೂ ಸಹ ಅಲ್ಲಿ ಸುಖವಾಗಿ

ವಾಸಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ದ್ವಿಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ತೀರ್ಥಯಾತ್ರಾಪರ್ವಣಿ ಅಷ್ಟಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಜಟಾಸುರವಧಪರ್ವ
ನೂರ ಐವತ್ಮೂರನೆಯ ಅಧ್ಯಾಯ
ಬ್ರಾಹ್ಮಣ ವೇಷದಿಂದ ಪಾಂಡವರಿದ್ದಲ್ಲಿ ಜಟಾಸುರನ ಪ್ರವೇಶ.
ವಂಚನೆಯಿಂದ ಪಾಂಡವ, ಮತ್ತು ದ್ರೌಪದಿಯ ಹರಣ.
ಮಾರ್ಗಮಧ್ಯದಲ್ಲಿ ಭೀಮಸೇನನಿಂದ ಅವನ ವಧೆ.
ವೈಶಂಪಾಯನಃ
ತತಸ್ತಾನ್ ಪರಿವಿಶ್ವಸ್ತಾನ್ ವಸತಸ್ತತ್ರ ಪಾಂಡವಾನ್ |
ಗತೇಷು ತೇಷು ರಕ್ಷಃಸು ಭೀಮಸೇನಾತ್ಮಜೇಽಪಿ ಚ ॥1॥
ಪರ್ವತೇಂದ್ರೇ ದ್ವಿಜೈಃ ಸಾರ್ಧಂ ಪಾರ್ಥಾಗಮನಕಾಂಕ್ಷಯಾ |
ಆಜಗಾಮ ತದಾ ರಕ್ಷೋ ನಾಮ್ನಾ ಖ್ಯಾತೋ ಜಟಾಸುರಃ ॥1.1॥
ವೈಶಂಪಾಯನ ಅನಂತರ ಭೀಮಸೇನ ಪುತ್ರನಾದ ಘಟೋತ್ಕಚನೂ, ಅವನ ಅನುಚರರಾದ ರಾಕ್ಷಸರೂ ಅಲ್ಲಿಂದ ಹೊರಟು ಹೋಗಿ ಪಾಂಡವರು ವಿಶ್ವಾಸದಿಂದ ಆ ಪರ್ವತದಲ್ಲಿ ಅರ್ಜುನನ ನಿರೀಕ್ಷೆಯಲ್ಲಿ ವಾಸಮಾಡುತ್ತಿರಲು ಜಟಾಸುರನೆಂಬ ಹೆಸರಿನ ರಾಕ್ಷಸನು ಅಲ್ಲಿಗೆ ಬಂದನು.
ರಹಿತಾನ್ ಭೀಮಸೇನೇನ ಕದಾಚಿತ್ತಾನ್ ಯದೃಚ್ಛಯಾ |
ಜಹಾರ ಧರ್ಮರಾಜಾನಂ ಯಮೌ ಕೃಷ್ಣಾಂ ಚ ರಾಕ್ಷಸಃ ॥2॥
ಒಮ್ಮೆ ಆಕಸ್ಮಿಕವಾಗಿ ಭೀಮಸೇನನು ಹೊರಗೆ ಹೋಗಿರುವಾಗ ಆ ರಾಕ್ಷಸನು ನಕುಲಸಹದೇವರನ್ನೂ, ಧರ್ಮರಾಜನನ್ನೂ ಮತ್ತು ದ್ರೌಪದಿಯನ್ನೂ ಅಪಹರಿಸಿದನು.
ಜನಮೇಜಯಃ
ಬ್ರಹ್ಮನ್ ಕಥಂ ಧರ್ಮರಾಜಂ ಯಮೌ ಕೃಷ್ಣಾಂ ಚ ರಾಕ್ಷಸಃ |
ಜಹಾರ ಕುತ್ರ ಭೀಮಶ್ಚ ಗತೋ ರಾಕ್ಷಸಕಂಟಕಃ |
ವಕ್ತುಮರ್ಹಸಿ ವಿಪ್ರಾಗ್ರ್ಯ ವೃತ್ತಮೇತನ್ಮಮಾನಘ ॥2.1.॥
ಜನಮೇಜಯ ಬ್ರಾಹ್ಮಣರೇ, ರಾಕ್ಷಸನು ಹೇಗೆ ಧರ್ಮರಾಜ, ನಕುಲ ಸಹದೇವರು ಮತ್ತು ದ್ರೌಪದಿಯನ್ನು ಹೇಗೆ ಅಪಹರಿಸಿದನು? ರಾಕ್ಷಸ ಕಂಟಕನಾದ ಭೀಮಸೇನನು ಎಲ್ಲಿಗೆ ಹೋಗಿದ್ದನು? ಅನಘರಾದ ಬ್ರಾಹ್ಮಣಶ್ರೇಷ್ಠರೇ, ಈ ವೃತ್ತಾಂತವನ್ನು ನನಗೆ ಹೇಳಬೇಕು.
ವೈಶಂಪಾಯನಃ
ಬ್ರಾಹ್ಮಣೋ ಮಂತ್ರಕುಶಲಃ ಸರ್ವಶಶಾಸ್ತ್ರವಿದುತ್ತಮಃ |
ಇತಿ ಬ್ರುವನ್ ಪಾಂಡವೇಯಾನ್ ಪರ್ಯುಪಾಸ್ತೇ ಸ್ಮ ನಿತ್ಯದಾ ॥3॥
ಜಾಮದಗ್ನ್ಯಸ್ಯ ಶಿಷ್ಯೋಽಹಂ ರಾಮಸ್ಯಾಕ್ಲಿಷ್ಟಕರ್ಮಣಃ |
ಆ ರಾಕ್ಷಸನು ನಾನು ಬ್ರಾಹ್ಮಣ, ಮಂತ್ರಕುಶಲನಾದವನು, ಸರ್ವಶಾಸ್ತ್ರವನ್ನೂ ತಿಳಿದಿದ್ದೇನೆ. ಅಕ್ಲಿಷ್ಟಕಾರಿಯಾದ ಪರಶುರಾಮನ ಶಿಷ್ಯ ಎಂದು ಹೇಳಿಕೊಂಡು ಪಾಂಡವರ ಜೊತೆಯಲ್ಲಿ ಇರುತಿತದ್ದನು.
ಪರೀಪ್ಸಮಾನಃ ಪಾರ್ಥಾನಾಂ ಕಲಾಪಾಶ್ಚ(ನಿ) ಧನೂಂಷಿ ಚ |
ಅಂತರಂ ಸಂಪರಿಪ್ರೇಪ್ಸುರ್ದ್ರೌಪದ್ಯಾ ಹರಣಂ ಪ್ರತಿ ॥4॥
ಅವನು ಪಾಂಡವರ ಶಸ್ತ್ರಗಳನ್ನೂ, ಧನುಸ್ಸುಗಳನ್ನೂ ಪರೀಕ್ಷೆ ಮಾಡಿಕೊಂಡು ದ್ರೌಪದಿಯನ್ನು ಅಪಹರಿಸಲು ಸಮಯವನ್ನು ಕಾಯುತ್ತಿದ್ದನು.
ಪೋಷಣಂ ತಸ್ಯ ರಾಜೇಂದ್ರ ಚಕ್ರೇ ಪಾಂಡವನಂದನಃ |
ಬುಬುಧೇ ನ ಚ ತಂ ಪಾಪಂ ಭಸ್ಮಚ್ಛನ್ನಮಿವಾನಲಮ್ ॥4.1॥
ರಾಜೇಂದ್ರನೇ, ಧರ್ಮರಾಜನು ಭಸ್ಮಮುಚ್ಚಿದ ಕೆಂಡದಂತಿದ್ದ ಆ ಪಾಪಿಷ್ಠನನ್ನು ತಿಳಿಯಲಿಲ್ಲ. ಅವನ ಪೋಷಣೆಯನ್ನು ಮಾಡಿದನು.
ಸ ಭೀಮಸೇನೇ ನಿಷ್ಕ್ರಾಂತೇ ಮೃಗಯಾರ್ಥಮರಿಂದಮ |
ಅನ್ಯದ್ ರೂಪಂ ಸಮಾಸ್ಥಾಯ ವಿಕೃತಂ ಭೈರವಂ ಮಹತ್ ॥5॥
ಘಟೋತ್ಕಚಂ ಸಾನುಚರಂ ದೃಷ್ಟ್ವಾ ವಿಪ್ರದ್ರುತಂ ದಿಶಃ
ಲೋಮಶಪ್ರಭೃತೀಂಸ್ತಾಂಸ್ತು ಮಹರ್ಷೀಂಶ್ಚ ಸಮಾಹಿತಾನ್ |
ಸ್ನಾತುಂ ವಿನಿರ್ಗತಾನ್ ದೃಷ್ಟ್ವಾ ಪುಷ್ಪಾರ್ಥಂ ಚ ತಪೋಧನಾನ್ ॥8॥
ಗೃಹೀತ್ವಾ ಸರ್ವಶಾಸ್ತ್ರಾಣಿ ದ್ರೌಪದೀಂ ಪರಿಗೃಹ್ಯ ಚ |
ಪ್ರಾತಿಷ್ಠತ ಸ ದುಷ್ಟಾತ್ಮಾ ತ್ರೀನ್ ಗೃಹೀತ್ವಾ ಚ ಪಾಂಡವಾನ್ ॥6॥

ಎಲೈ ಅರಿಂದಮನೇ, ಒಮ್ಮೆ ಭೀಮಸೇನನು ಬೇಟೆಯಾಡಲು ಹೊರಗೆ ಹೋಗಿರುವಾಗ ಘಟೋತ್ಕಚ ಮತ್ತು ಅವನ ಅನುಚರರೆಲ್ಲರೂ ಹೊರಟು ಹೋಗಿದ್ದಾರೆ ಎಂಬುದನ್ನು ಗಮನಿಸಿ ಲೋಮಶ ಮೊದಲಾದ ತಪೋಧನರಾದ ಮಹರ್ಷಿಗಳು ಸ್ನಾನವನ್ನು ಮಾಡಿ ಪುಷ್ಪಾದಿಗಳನ್ನು ತರಲು ಹೊರಗೆ ಹೋಗಿರುವುದನ್ನು ಗಮನಿಸಿ, ಆ ರಾಕ್ಷಸನು ಭಯಂಕರವಾದ ಒಂದು ದೊಡ್ಡ ವಿಕೃತರೂಪವನ್ನು ಧರಿಸಿ ದುಷ್ಟಾತ್ಮನಾದ ಅವನು ಪಾಂಡವರ ಎಲ್ಲಾ ಶಸ್ತ್ರಗಳನ್ನೂ, ಧರ್ಮರಾಜ, ನಕುಲಸಹದೇವ, ದ್ರೌಪದಿಯನ್ನೂ ಎತ್ತಿಕೊಂಡು ಓಡಲು ಪ್ರಾರಂಭಿಸಿದನು.

ಸಹದೇವಸ್ತು ಯತ್ನೇನ ತತೋಽಪಕ್ರಮ್ಯ ಪಾಂಡವ |
ಆಕ್ರಂದದ್ ಭೀಮಸೇನಂ ವೈ ಯೇನ ಯಾತೋ ಮಹಾಬಲಃ |
ವಿಕ್ರಮ್ಯ ಕೌಶಿಕಂ ಖಡ್ಗಂ ಮೋಕ್ಷಯಿತ್ವಾ ಗ್ರಹಂ ರಿಪೋಃ |
ತಮಬ್ರವೀದ್ ಧರ್ಮರಾಜೋ ಹ್ರಿಯಮಾಣೋ ಯುಧಿಷ್ಠಿರಃ ॥7॥

ಸಹದೇವನಾದರೂ ತನ್ನ ಒರೆಯಿಂದ ಕತ್ತಿಯನ್ನು ಹಿರಿದು ಆ ಶತ್ರುವಿನ ಹಿಡಿತದಿಂದ ತಪ್ಪಿಸಿಕೊಂಡು ಅಲ್ಲಿಂದ ಹೊರಟುಬಂದು ಮಹಾಬಲನಾದ ಭೀಮಸೇನನು ಹೋದ ಮಾರ್ಗದಲ್ಲಿ ನಿಂತು ಭೀಮಸೇನ ಎಂದು ಗಟ್ಟಿಯಾಗಿ ಕಿರುಚಿದನು. ಯುಧಿಷ್ಠಿರನು ಅಪಹರಿಸಿಕೊಂಡು ಹೋಗುತ್ತಿದ್ದ ಜಟಾಸುರನನ್ನು ಕುರಿತು ಹೀಗೆ ಮಾತನಾಡಿದನು.

ಧರ್ಮಸ್ತೇ ಹೀಯತೇ ಮೂಢ ನ ತತ್ತ್ವಂ ಸಮವೇಕ್ಷಸೇ |
ಯೇಽನ್ಯೇ ಕ್ವಚಿನ್ಮನುಷ್ಯೇಷು ತಿರ್ಯಗ್ಯೋನಿಗತಾಶ್ಚ ಯೇ ॥8॥
ಗಂಧರ್ವೋರಗರಕ್ಷಾಂಸಿ ವಯಾಂಸಿ ಪಶವಸ್ತಥಾ |
ಮನುಷ್ಯಾನುಪಜೀವಂತಿ ತತಸ್ತ್ವಮಪಿ ಜೀವಸಿ ॥9॥

ಮೂಢನೇ, ನೀನು ತತ್ತ್ವವನ್ನು ಗಮನಿಸುತ್ತಿಲ್ಲ. ನಿನ್ನ ಧರ್ಮವು ನಾಶವನ್ನು ಹೊಂದುತ್ತದೆ. ಬೇರೆ ಮನುಷ್ಯರು ಹೀನ ಯೋನಿಗತ ಪ್ರಾಣಿಗಳು, ಗಂಧರ್ವೋರಗ ರಾಕ್ಷಸರು ಮತ್ತು ಪಶುಪಕ್ಷಿಗಳು ಮನುಷ್ಯರನ್ನು ಉಪಜೀವಿಸುತ್ತವೆ. ಆದ್ದರಿಂದಲೇ ನೀನು ಬದುಕಿದ್ದೀಯೆ.

ಧರ್ಮಂ ತೇ ಸಮವೇಕ್ಷಂತೇ ರಕ್ಷಾಂಸಿ ಚ ವಿಶೇಷತಃ |
ಧರ್ಮಸ್ಯ ರಾಕ್ಷಸಾ ಮೂಲಂ ಧರ್ಮಂ ತೇ ವಿದುರುತ್ತಮಮ್ ॥
ಏತತ್ಪರೀಕ್ಷ್ಯ ಸರ್ವಂ ತ್ವಂ ಸಮೀಪೇ ಸ್ಥಾತುಮರ್ಹಸಿ ॥9.1॥

ರಾಕ್ಷಸರೂ ಸಹ ವಿಶೇಷವಾಗಿ ಧರ್ಮವನ್ನು ಗಮನಿಸುತ್ತಾರೆ. ಧರ್ಮಕ್ಕೆ ರಾಕ್ಷಸರೇ ಮೂಲ. ಅವರು ಧರ್ಮವನ್ನು ಚೆನ್ನಾಗಿ ತಿಳಿದಿರುತ್ತಾರೆ. ಇವೆಲ್ಲವನ್ನೂ ಗಮನಿಸಿ ನಮ್ಮ ಸಮೀಪದಲ್ಲಿ ಸುಮ್ಮನೆ ವಾಸಮಾಡು.

ಸಮೃದ್ಧ್ಯಾ ಹ್ಯಸ್ಯ ಲೋಕಸ್ಯ ಲೋಕೋ ಯುಷ್ಮಾಕಮೃಧ್ಯತಿ |
ಇಮಂ ತು (ಚ) ಲೋಕೇ ಶೋಚಂತಮನುಶೋಚಂತಿ ದೇವತಾಃ ॥
ಪೂಜ್ಯಮಾನಾಶ್ಚ ವರ್ಧಂತೇ ಹವ್ಯಕವ್ಯೈರ್ಯಥಾವಿಧಿ ॥11॥

ಈ ಲೋಕವು ಸಮೃದ್ಧವಾಗಿದ್ದರೆ ನಿಮ್ಮ ಲೋಕವೂ ಸಮೃದ್ಧವಾಗಿರುತ್ತದೆ. ಈ ಲೋಕವು ಶೋಕಪಟ್ಟರೆ ದೇವತೆಗಳೂ ಶೋಕಪಡುತ್ತಾರೆ. ಹವ್ಯಕವ್ಯಗಳಿಂದ, ಶಾಸ್ತ್ರೋಕ್ತವಿಧಾನದಿಂದ ಪೂಜಿಸಿದರೆ ದೇವತೆಗಳು ಅಭಿವೃದ್ಧಿಯನ್ನು ಹೊಂದುತ್ತಾರೆ.

ವಯಂ ರಾಷ್ಟ್ರಸ್ಯ ಗೋಪ್ತಾರೋ ರಕ್ಷಿತಾರಶ್ಚ ರಾಕ್ಷಸ |
ರಾಷ್ಟ್ರಸ್ಯಾರಕ್ಷ್ಯಮಾಣಸ್ಯ ಕುತೋ ಭೂತಿಃ ಕುತಃ ಸುಖಮ್ ॥12॥

ರಾಕ್ಷಸನೇ ನಾವು ರಾಷ್ಟ್ರವನ್ನು ಕಾಪಾಡುವವರು. ರಾಷ್ಟ್ರವನ್ನು ಪಾಲಿಸದಿದ್ದರೆ ಐಶ್ವರ್ಯವಾಗಲೀ, ಸುಖವಾಗಲೀ ಎಲ್ಲಿಂದ ಬರಬೇಕು?

ನ ಚ ರಾಜಾಽವಮಂತವ್ಯೋ ರಕ್ಷಸಾ ಜಾತ್ವನಾಗಸಿ |
ಅಣುರಪ್ಯಪಚಾರಶ್ಚ ನಾಸ್ತ್ಯಸ್ಮಾಕಂ ನರಾಶನ ॥13॥

ಅಪರಾಧ ಮಾಡದಿರುವ ರಾಜನಿಗೆ ರಾಕ್ಷಸರು ಎಂದೂ ಅವಮಾನವನ್ನು ಮಾಡಬಾರದು. ಎಲೈ ನರಾಶನನೇ, ನಾವು ನಿನಗೆ ಅಣುವಿನಷ್ಟು ಅಪಚಾರವನ್ನೂ ಮಾಡಿಲ್ಲ.

ವಿಘಸಾಶಾನ್ ಯಥಾಶಕ್ತ್ಯಾ ಕುರ್ಮಹೇ ದೇವತಾದಿಷು |
ಗುರೂಂಶ್ಚ ಬ್ರಾಹ್ಮಣಾಂಶ್ಚೈವ ಪ್ರಾಣಾಮಪ್ರವಣಾಃ ಸದಾ ॥13.1॥

ನಾವು ದೇವತೆಗಳಿಗೆ ಯೋಗ್ಯವಾದ ಅನ್ನವನ್ನು ಸಮರ್ಪಿಸಿ ಯಾವಾಗಲೂ ಗುರುಗಳು ಮತ್ತು ಬ್ರಾಹ್ಮಣರಿಗೆ ನಮಸ್ಕಾರ ಮಾಡಿ ಪ್ರವಣರಾಗಿ ಇದ್ದೇವೆ.

ದ್ರೋಗ್ಧವ್ಯಂ ನ ಚ ಮಿತ್ರೇಷು ನ ವಿಶ್ವಸ್ತೇಷು ಕರ್ಹಿಚಿತ್ |
ಯೇಷಾಂ ಚಾನ್ನಾನಿ ಭುಂಜೀತ ಯತ್ರ ಚ ಸ್ಯಾತ್ ಪ್ರತಿಶ್ರಯಃ ॥14॥

ಮಿತ್ರರಿಗೆ, ವಿಶ್ವಾಸಪಾತ್ರರಿಗೆ, ಯಾರ ಅನ್ನವನ್ನು ಊಟಮಾಡುತ್ತಿರುವೆಯೋ ಅವರಿಗೆ ಮತ್ತು ಯಾರು ಆಶ್ರಯವನ್ನು ಕೊಡುತ್ತಾರೋ ಅವರಿಗೆ, ಎಂದೂ ದ್ರೋಹವನ್ನು ಮಾಡಬಾರದು.

ಸ ತ್ವಂ ಪ್ರತಿಶ್ರಯೇಽಸ್ಮಾಕಂ ಪೂಜ್ಯಮಾನಃ ಸುಖೋಷಿತಃ |
ಭುಕ್ತ್ವಾ ಚಾನ್ನಾನಿ ದುಷ್ಪ್ರಜ್ಞ ಕಥಮಸ್ಮಾನ್ ಜಿಹೀರ್ಷಸಿ ॥15॥

ಎಲೈ ದುಷ್ಪ್ರಜ್ಞನೇ, ನೀನು ನಮ್ಮ ಆಶ್ರಯದಲ್ಲಿ ಸುಖವಾಗಿ ವಾಸಮಾಡಿದ್ದು, ನಮ್ಮಿಂದ ಸತ್ಕರಿಸಲ್ಪಟ್ಟು, ನಮ್ಮ ಅನ್ನವನ್ನೇ ತಿಂದು ಹೇಗೆ ನಮ್ಮನ್ನೇ ಅಪಹರಿಸುತ್ತಿರುವಿ?

ಏವಮೇವ ವೃಥಾಚಾರೋ ವೃಥಾವೃದ್ಧೋ ವೃಥಾಮತಿಃ |

ವೃಥಾಮರಣಮರ್ಹಶ್ಚ ವೃಥಾऽದ್ಯ ನ ಭವಿಷ್ಯಸಿ ॥16॥
ಇದರಂತೆಯೇ ವ್ಯರ್ಥವಾದ ಆಚಾರವುಳ್ಳವನ್ನಾಗಿ, ವ್ಯರ್ಥವಾದ ವಯಸ್ಸುಳ್ಳವನಾಗಿ, ವ್ಯರ್ಥವಾದ ಬುದ್ಧಿಯುಳ್ಳ ನೀನು, ವ್ಯರ್ಥವಾದ ಮರಣಕ್ಕೆ ಯೋಗ್ಯನಾಗಿದ್ದೀಯೆ. ಈ ದಿನ ನೀನು ವ್ಯರ್ಥವಾಗಿ ಜೀವಿಸುವುದಿಲ್ಲ.
ಅಥ ಚೇದ್ ದುಷ್ಟಬುದ್ಧಿಸ್ತ್ವಂ ಸರ್ವೈರ್ಧರ್ಮೈರ್ವಿವರ್ಜಿತಃ |
ಪ್ರದಾಯ ಶಸತ್ರಣ್ಯಸ್ಮಾಕಂ ಯುದ್ಧೇನ ದ್ರೌಪದೀಂ ಹರ ॥17॥
ಅಥವಾ ದುಷ್ಟಬುದ್ಧಿಯುಳ್ಳ ನೀನು ಎಲ್ಲ ಧರ್ಮಗಳನ್ನೂ ತ್ಯಜಿಸಿದ್ದರೆ ನಮ್ಮ ಶಸ್ತ್ರಗಳನ್ನು ನಮಗೆ ಕೊಟ್ಟು ಯುದ್ಧವನ್ನು ಮಾಡಿ ದ್ರೌಪದಿಯನ್ನು ಕರೆದುಕೊಂಡು ಹೋಗು.
ಅಥ ಚೇತ್ ತ್ವಮವಿಜ್ಞಾನಾದಿದಂ ಕರ್ಮ ಕರಿಷ್ಯಸಿ |
ಅಧರ್ಮಂ ಚಾಪ್ಯಕೀರ್ತಿಂ ಚ ಲೋಕೇ ಪ್ರಾಪ್ಸ್ಯಸಿ ಕೇವಲಮ್ ॥18॥
ಅಥವಾ ನೀನು ಅಜ್ಞಾನದಿಂದ ಈ ಕರ್ಮವನ್ನು ಮಾಡುವುದಾದರೆ ಲೋಕದಲ್ಲಿ ನೀನು ಕೇವಲ ಅಧರ್ಮವನ್ನೂ, ಅಪಕೀರ್ತಿಯನ್ನೂ ಸಂಪಾದಿಸುವಿ.
ಏತಾಮದ್ಯ ಪರಾಮೃಶ್ಯ ಸ್ತ್ರಿಯಂ ರಾಕ್ಷಸ ಮಾನುಷೀಮ್ |
ವಿಷಮೇತತ್ ಸಮಾಲೋಡ್ಯ ಕುಂಭೇನ ಪ್ರಾಶಿತಂ ತ್ವಯಾ ॥19॥
ಎಲೈ ರಾಕ್ಷಸನೇ, ಈ ಮನುಷ್ಯವನಿತೆಯನ್ನು ಇಂದು ನೀನು ಮುಟ್ಟಿ ಒಂದು ಕೊಡದಲ್ಲಿ ವಿಷವನ್ನು ಕದರಿ ಕುಡಿದಿದ್ದೀಯೆ.
ವೈಶಂಪಾಯನಃ
ತತೋ ಯುಧಿಷ್ಠಿರಸ್ತಸ್ಯ ಭಾರಿಕಃ ಸಮಪದ್ಯತ |
ಸ ತು ಭಾರಾಭಿಭೂತಾತ್ಮಾ ನ ತಥಾ ಶೀಘ್ರಗೋऽಭವತ್ |
ಅಥಾಬ್ರವೀದ್ ದ್ರೌಪದೀಂ ಚ ನಕುಲಂ ಚ ಯುಧಿಷ್ಠಿರಃ ॥20॥
ವೈಶಂಪಾಯನ ಆಗ ಯುಧಿಷ್ಠಿರನು ಅವನಿಗೆ ಹೆಚ್ಚು ಭಾರವನ್ನು ಕೊಡುವವನಾದನು. ಇದ್ದಕ್ಕಿದ್ದಂತೆಯೇ ಹೆಚ್ಚು ಭಾರವನ್ನು ಅನುಭವಿಸಿದ ಆ ರಾಕ್ಷಸನಿಗೆ ಶೀಘ್ರವಾಗಿ ಹೋಗಲು ಸಾಧ್ಯವಾಗಲಿಲ್ಲ. ಆಗ ಯುಧಿಷ್ಠಿರನು ನಕುಲನನ್ನು ಮತ್ತು ದ್ರೌಪದಿಯನ್ನು ಕುರಿತು ಹೇಳಿದನು.
ಮಾ ಭೈಷ್ಟ ರಾಕ್ಷಸಾನ್ಮೂಢಾದ್ ಗತಿರಸ್ಯ ಮಯಾ ಹೃತಾ ॥21॥
ನಾತಿದೂರೇ ಮಹಾಬಾಹುರ್ಭವಿತಾ ಪವನಾತ್ಮಜಃ |
ಅಸ್ಮಿನ್ ಮುಹೂರ್ತೇ ಸಂಪ್ರಾಪ್ತೇ ನ ಭವಿಷ್ಯತಿ ರಾಕ್ಷಸಃ ॥22॥
ಈ ಮೂಢರಾಕ್ಷಸನಿಗೆ ಹೆದರಬೇಡಿ. ನಾನು ಅವನ ಗಮನವನ್ನು ತಡೆದಿದ್ದೇನೆ. ಪವನಾತ್ಮಜನಾದ ಮಹಾಬಾಹುವಾದ ಭೀಮಸೇನನು ಇಲ್ಲಿಗೆ ಹತ್ತಿರದಲ್ಲಿಯೇ ಇರುವನು. ಈ ಮುಹೂರ್ತದಲ್ಲಿ ಭೀಮಸೇನನು ಪ್ರಾಪ್ತನಾದರೆ ರಾಕ್ಷಸನು ಜೀವಿಸಿರುವುದಿಲ್ಲ.
ಸಹದೇವಸ್ತು ತಂ ದೃಷ್ಟ್ವಾ ರಾಕ್ಷಸಂ ಮೂಢಚೇತಸ(ನ)ಮ್ |
ಉವಾಚ ವಚನಂ ರಾಜನ್ ಕುಂತೀಪುತ್ರಂ ಯುಧಿಷ್ಠಿರಮ್ ॥23॥
ಎಲೈ ರಾಜನೇ, ಸಹದೇವನಾದರೂ ಆ ಮೂಢಚೇತನನಾದ ರಾಕ್ಷಸನನ್ನು ನೋಡಿ ಕುಂತೀಪುತ್ರನಾದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿದನು.
ರಾಜನ್ ಕಿನ್ನಾಮ ಸತ್ಕೃತ್ಯಂ ಕ್ಷತ್ರಿಯಸ್ಯಾಸ್ತ್ಯತೋऽಧಿಕಮ್ |
ಯದ್ ಯುದ್ಧೇऽಭಿಮುಖಃ ಪ್ರಾಣಾಂಸ್ತ್ಯಜೇಚ್ಛತ್ರುಂ ಜಯೇತ ವಾ ॥
ರಾಜನೇ, ಕ್ಷತ್ರಿಯನಾದವನಿಗೆ ಯುದ್ಧದಲ್ಲಿ ಶತ್ರುವಿಗೆ ಅಭಿಮುಖವಾಗಿ ಪ್ರಾಣವನ್ನು ಬಿಡುವುದು ಅಥವಾ ಶತ್ರುವನ್ನು ಜಯಿಸುವುದನ್ನು ಬಿಟ್ಟು ಅದಕ್ಕಿಂತ ದೊಡ್ಡದಾದ ಸತ್ಕಾರವು ಯಾವುದಿದೆ?
ಏಷ ಚಾಸ್ಮಾನ್ ವಯಂ ಚೈನಂ ಯುಧ್ಯಮಾನಾಃ ಪರಂತಪ |
ಸೂದಯೇಮ ಮಹಾಬಾಹೋ ದೇಶಕಾಲೋ ಹ್ಯಯಂ ನೃಪ ॥25॥
ಎಲೈ ಪರಂತಪನಾದ ರಾಜನೇ, ನಾವು ಅವನ ಜೊತೆಯಲ್ಲಿ ಮತ್ತು ಅವನು ನಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಸಂಹರಿಸೋಣ. ಮಹಾಬಾಹುವೇ, ಅದಕ್ಕೆ ಸೂಕ್ತವಾದ ದೇಶಕಾಲಗಳು ಈಗ ಬಂದೊದಗಿವೆ.
ಕ್ಷತ್ರಧರ್ಮಸ್ಯ ಸಂಪ್ರಾಪ್ತಃ ಕಾಲಃ ಸತ್ಯಪರಾಕ್ರಮ |
ಜಯಂತೋ ಹನ್ಯಮಾನಾ ವಾ ಪ್ರಾಪ್ತುಮರ್ಹಾಮ ಸದ್ಗತಿಮ್ ॥26॥
ಎಲೈ ಸತ್ಯಪರಾಕ್ರಮನೇ, ಕ್ಷತ್ರಿಯ ಧರ್ಮವನ್ನು ಅನುಷ್ಠಾನ ಮಾಡುವ ಕಾಲವು ಬಂದೊದಗಿದೆ. ನಾವು ಅವನನ್ನು ಜಯಿಸಿ ಅಥವಾ ಅವನಿಂದ ಕೊಲ್ಲಲ್ಪಟ್ಟು ಸದ್ಗತಿಯನ್ನು ಪಡೆಯುವುದು ಉಚಿತವಾಗಿದೆ.
ರಾಕ್ಷಸೇ ಜೀವಮಾನೇऽದ್ಯ ರವಿರಸ್ತಮಿಯಾದ್ ಯದಿ |
ನಾಹಂ ಬ್ರೂಯಾಂ ಪುನರ್ಜಾತು ಕ್ಷತ್ರಿಯೋऽಸ್ಮೀತಿ ಭಾರತ ॥27॥
ಎಲೈ ಭಾರತನೇ, ಈ ರಾಕ್ಷಸನು ಬದುಕಿರುವಂತೆಯೇ ಈ ದಿನ ರವಿಯು ಅಸ್ತಂಗತವಾಗುವುದಾದರೆ ಇನ್ನೆಂದೂ ನಾನು ಕ್ಷತ್ರಿಯನೆಂದು ಹೇಳಿಕೊಳ್ಳುವುದಿಲ್ಲ.
ಭೋ ಭೋ ರಾಕ್ಷಸ ತಿಷ್ಠಸ್ವ ಸಹದೇವೋऽಸ್ಮಿ ಪಾಂಡವಃ |
ಹತ್ವಾ ವಾ ಮಾಂ ನಯಸ್ವೈನಾಂ ಹತೋ ವಾऽದ್ಯೇಹ ಸ್ವಪ್ಸ್ಯಸಿ ॥28॥
ಎಲೈ ರಾಕ್ಷಸನೇ, ನಿಲ್ಲು. ನಾನು ಪಾಂಡುಪುತ್ರನಾದ ಸಹದೇವನಾಗಿದ್ದೇನೆ. ನನ್ನನ್ನು ಕೊಂದು ದ್ರೌಪದಿಯನ್ನು ಕರೆದುಕೊಂಡು ಹೋಗು. ಅಥವಾ ನನ್ನಿಂದ ಹತನಾಗಿ ಇಲ್ಲಿ ಮಲಗು.

ವೈಶಂಪಾಯನಃ
ತಥಾ ಬ್ರುವತಿ ಮಾದ್ರೇಯೇ ಭೀಮಸೇನೋ ಯದೃಚ್ಛಯಾ |
ಪ್ರತ್ಯದೃಶ್ಯದ್ ಗದಾಹಸ್ತಃ ಸವಜ್ರ ಇವ ವಾಸವಃ ॥29॥
ವೈಶಂಪಾಯನ ಮಾದ್ರಿಯ ಮಗನಾದ ಸಹದೇವನು ಹಾಗೆ ಮಾತನಾಡುತ್ತಿರಲು ಆಕಸ್ಮಿಕವಾಗಿ ಭೀಮಸೇನನು ವಜ್ರಾಯುಧವನ್ನು ಹಿಡಿದ ಇಂದ್ರನಂತೆ ಗದಾಪಾಣಿಯಾಗಿ ಕಣ್ಣಿಗೆ ಬಿದ್ದನು.
ಸೋಽಪಶ್ಯದ್ ಭ್ರಾತರೌ ತತ್ರ ದ್ರೌಪದೀಂ ಚ ಯಶಸ್ವಿನೀಮ್ |
ಕ್ಷಿತಿಸ್ಥಂ ಸಹದೇವಂ ಚ ಕ್ಷಿಪಂತಂ ರಾಕ್ಷಸಂ ತದಾ ॥30॥
ಅವನು ತನ್ನ ಸಹೋದರರನ್ನೂ, ಯಶಸ್ವಿನಿಯಾದ ದ್ರೌಪದಿಯನ್ನೂ ಮತ್ತು ಭೂಮಿಯಲ್ಲಿ ನಿಂತು ರಾಕ್ಷಸನನ್ನು ನಿಂದಿಸುತ್ತಿದ್ದ ಸಹದೇವನನ್ನೂ ನೋಡಿದನು.
ಮಾರ್ಗಾಚ್ಚ ರಾಕ್ಷಸಂ ಮೂಢಂ ಕಾಲೋಪಹತಚೇತಸಮ್ |
ಭ್ರಮಂತಂ ತತ್ರತತ್ರೈವ ದೈವೇನ ವಿನಿವಾರಿತಮ್ ॥31॥
ಕಾಲೋಪಹತಚೇತನವುಳ್ಳವನಾಗಿ ದೇವತೆಗಳಿಂದ ತಡೆಯಲ್ಪಟ್ಟು, ಮಾರ್ಗವನ್ನು ತಿಳಿಯದೆ ಅಲ್ಲಲ್ಲಿಯೇ ತಿರುಗಾಡುತ್ತಿದ್ದ ರಾಕ್ಷಸನ ಬಳಿಗೆ ಹೋದನು.
ಭ್ರಾತೄಂಸ್ತಾನ್ ಹ್ರಿಯತೋ ದೃಷ್ಟ್ವಾ ದ್ರೌಪದೀಂ ಚ ಮಹಾಬಲಃ |
ಕ್ರೋಧಮಾಹಾರಯದ್ ಭೀಮೋ ರಾಕ್ಷಸಂ ಚೇದಮಬ್ರವೀತ್ ॥32॥
ಮಹಾಬಲನಾದ ಭೀಮಸೇನನು ತನ್ನ ಮೂವರು ಸಹೋದರರು ಮತ್ತು ದ್ರೌಪದಿಯು ಅವನಿಂದ ಅಪಹರಿಸಲ್ಪಡುತ್ತಿರುವುದನ್ನು ನೋಡಿ ಕ್ರೋಧವನ್ನು ತಂದುಕೊಂಡು ರಾಕ್ಷಸನನ್ನು ಕುರಿತು ಹೀಗೆ ಹೇಳಿದನು.
ವಿಜ್ಞಾತೋಽಸಿ ಮಯಾ ಪೂರ್ವಂ ಪಾಪ ಶಸ್ತ್ರಪರೀಕ್ಷಣೇ
ಆಸ್ಥಾನಂ ತ್ವಯಿ ಮೇ ನಾಸ್ತಿ ಯತೋಽಸಿ ನ ಹತಸ್ತದಾ ॥33॥
ಎಲೈ ಪಾಪಿಯೇ, ನೀನು ಹಿಂದೆ ನಮ್ಮ ಶಸ್ತ್ರವನ್ನು ಪರೀಕ್ಷೆ ಮಾಡುವ ಸಮಯದಲ್ಲಿಯೇ ನಿನ್ನ ಸ್ವರೂಪವನ್ನು ನಾನು ತಿಳಿದಿದ್ದೆ. ನಿನ್ನಲ್ಲಿ ನನಗೆ ವಿಶ್ವಾಸವಿಲ್ಲ. ಆದರೂ ಆ ಕಾರಣದಿಂದ ನಿನ್ನನ್ನು ನಾನು ಕೊಲ್ಲಲಿಲ್ಲ
ಬ್ರಹ್ಮರೂಪಪ್ರತಿಚ್ಛನ್ನೋ ನ ನೋ ವದಸಿ ಚಾಪ್ರಿಯಮ್ |
ಪ್ರಿಯೇಷು ರಮಮಾಣಂ ತ್ವಾಂ ನ ಚೈವಾಪ್ರಿಯಕಾರಿಣಮ್ ॥34॥
ಏಕೆಂದರೆ ನೀನು ಬ್ರಾಹ್ಮಣರೂಪವನ್ನು ಧರಿಸಿ ನಮಗೆ ಯಾವ ಅಪ್ರಿಯವನ್ನೂ ಮಾತನಾಡುತ್ತಿರಲಿಲ್ಲ. ನಮಗೆ ಪ್ರಿಯವಾದುದರಲ್ಲಿ ನೀನು ಸಂತೋಷವನ್ನು ಪಡುತ್ತಿದ್ದೆ ಮತ್ತು ನಮಗೆ ಯಾವ ಅಪ್ರಿಯವನ್ನೂ ಮಾಡುತ್ತಿರಲಿಲ್ಲ.
ಅತಿಥಿಂ ಬ್ರಹ್ಮರೂಪಂ ಚ ಕಥಂ ಹನ್ಯಾಮನಾಗಸಮ್ |
ರಾಕ್ಷಸಂ ಜಾನಮಾನೋಽಪಿ ಯೋ ಹನ್ಯಾನ್ನರಕಂ ವ್ರಜೇತ್ |
ಅಪಕ್ವಸ್ಯ ಚ ಕಾಲೇನ ವಧಸ್ತವ ನ ವಿದ್ಯತೇ ॥35॥
ನೀನು ರಾಕ್ಷಸನೆಂದು ತಿಳಿದಿದ್ದರೂ, ನೀನು ಅತಿಥಿಯಾಗಿಯೂ ಬ್ರಾಹ್ಮಣ ರೂಪವನ್ನು ಧರಿಸಿದವನಾಗಿಯೂ ಆಗಿ, ನಮಗೆ ಯಾವ ಅಪ್ರಿಯವನ್ನೂ ಮಾಡದೇ, ಯಾವ ಅಪರಾಧವನ್ನೂ ಮಾಡದಿದ್ದಾಗ ನಾನು ಹೇಗೆ ಕೊಲ್ಲಲಿ? ಕಾಲವು ಪಕ್ವವಾಗಿರಲಿಲ್ಲವಾದ್ದರಿಂದ ನಿನ್ನ ವಧೆಯು ಪ್ರಾಪ್ತವಾಗಿರಲಿಲ್ಲ.
ಬ್ರಹ್ಮರೂಪೇಣ ವಿಹಿತಂ ನೈವ ವಾಣ್ಯಾಮನಾಗಸಮ್ |
ನೂನಮದ್ಯಾಸಿ ಸಂಪಕ್ವೋ ಯಥಾ ತೇ ಮತಿರೀದೃಶೀ ॥36॥
ದತ್ತಾ ಕೃಷ್ಣಾಪಹರಣೇ ಕಾಲೇನಾದ್ಭುತಕರ್ಮಣಾ |
ಸೋಽಪಿ ಕಾಲಂ ಸಮಾಸಾದ್ಯ ತದಾದ್ಯ ನ ಭವಿಷ್ಯತಿ ॥37॥
ಬ್ರಾಹ್ಮಣರೂಪವನ್ನು ಧರಿಸಿ ಮಾತಿನಿಂದ ಅಪರಾಧವನ್ನು ಮಾಡದಿದ್ದ ನಿನಗೆ ಈ ದಿನ ಚೆನ್ನಾಗಿ ಪಕ್ವವಾದ ಕಾಲವು ಪ್ರಾಪ್ತವಾಗಿದೆ. ಏಕೆಂದರೆ ಅದ್ಭುತ ಪರಾಕ್ರಮವುಳ್ಳ ಕಾಲವು ನಿನಗೆ ದ್ರೌಪದಿಯನ್ನು ಅಪಹರಿಸಬೇಕೆಂಬ ಇಂತಹ ಬುದ್ಧಿಯನ್ನು ನೀಡಿದೆ. ಅಂತಹ ಪಕ್ವವಾದ ಕಾಲವು ಒದಗಿರುವಾಗ ನೀನು ಈ ದಿನ ಬದುಕುವುದಿಲ್ಲ.
ಬಡಿಶೋಽಯಂ ತ್ವಯಾ ಗ್ರಸ್ತಃ ಕಾಲಸೂತ್ರೇಣ ಲಂಬಿತಃ |
ಮತ್ಸ್ಯೋಽಂಭಸೀವ ಸ್ಯೂತಾಸ್ಯಃ ಕಥಮದ್ಯ ಭವಿಷ್ಯಸಿ ॥38॥
ನೂಲಿದಿಂದ ಇಳಿಬಿದ್ದಿರುವ ಗಾಣವನ್ನು ನುಂಗಿದ ಮೀನು ನೀರಿನಲ್ಲಿ ಹೇಗೆ ಬದುಕುವುದಿಲ್ಲವೋ ಅದರಂತೆ ಕಾಲದಿಂದ ದುರ್ಬುದ್ಧಿಯನ್ನು ಕೊಡಲ್ಪಟ್ಟಿರುವ ನೀನು ಈ ದಿನ ಬದುಕುವುದಿಲ್ಲ.
ಯಂ ಚಾಸಿ ಪ್ರಸ್ಥಿತೋ ದೇಶಂ ಮನಃಪೂರ್ವಂ ಗತಂ ಚ ತೇ |
ನ ತಂ ಗಂತಾಸಿ ಗಂತಾಸಿ ಮಾರ್ಗಂ ಬಕಹಿಡಿಂಬಯೋಃ ॥39॥
ನೀನು ಯಾವ ಪ್ರದೇಶಕ್ಕೆ ಹೋಗಬೇಕೆಂದು ಮನಸ್ಸಿನಲ್ಲಿ ಮೊದಲು ಬಯಸಿದ್ದೆಯೋ ಅಲ್ಲಿಗೆ ಹೋಗುವುದಿಲ್ಲ. ಅದರ ಬದಲು ಬಕಹಿಡಿಂಬರು ಹೋದ ಮಾರ್ಗಕ್ಕೆ ಹೋಗುವಿ.
ವೈಶಂಪಾಯನಃ
ಏವಮುಕ್ತಸ್ತು ಭೀಮೇನ ರಾಕ್ಷಸಃ ಕಾಲಚೋದಿತಃ |
ಭೀತ ಉತ್ಸೃಜ್ಯ ತಾನ್ ಸರ್ವಾನ್ ಯುದ್ಧಾಯ ಸಮುಪಸ್ಥಿತಃ |
ಅಬ್ರವೀಚ್ಚ ಪುನರ್ಭೀಮಂ ರೋಷಾತ್ ಪ್ರಸ್ಫುರಿತಾಧರಃ ॥40॥

ವೈಶಂಪಾಯನ ಭೀಮನಿಂದ ಹೀಗೆ ಹೇಳಲ್ಪಟ್ಟ ಆ ಕಾಲಚೋದಿತನಾದ ರಾಕ್ಷಸನು ಭೀತನಾಗಿ ಅವರೆಲ್ಲರನ್ನೂ ಬಿಟ್ಟು ಯುದ್ಧಕ್ಕೆ ಸನ್ನದ್ಧನಾದನು ಮತ್ತು ರೋಷದಿಂದ ತುಟಿಗಳು ಅದುರುತ್ತಾ ಭೀಮಸೇನನನ್ನು ಕುರಿತು ಕೋಪದಿಂದ ಹೀಗೆ ಮಾತನಾಡಿದನು.
ನ ಮೇ ಮೂಢಾ ದಿಶಃ ಪಾಪ ತ್ವದರ್ಥಂ ಮೇ ವಿಲಂಬಿತಮ್ ||41||
ಶ್ರುತಾ ಮೇ ರಾಕ್ಷಸಾ ಯೇ ಯೇ ತ್ವಯಾ ವಿನಿಹತಾ ರಣೇ |
ತೇಷಾಮದ್ಯ ಕರಿಷ್ಯಾಮಿ ತವಾಸ್ರೇಣೋದಕಕ್ರಿಯಾಮ್ ||42||
ಎಲೈ ಪಾಪಿಯೇ, ನಾನು ದಿಕ್ಕುಗಳನ್ನೇನೂ ತಪ್ಪಿಸಿಕೊಂಡಿಲ್ಲ. ನಿನ್ನ ಸಲುವಾಗಿ ನಾನು ವಿಳಂಬವನ್ನು ಮಾಡಿದೆ. ನೀನು ಯುದ್ಧದಲ್ಲಿ ಯಾವ ಯಾವ ರಾಕ್ಷಸರನ್ನು ಕೊಂದಿದ್ದೀಯೆ ಎಂದು ನಾನು ಕೇಳಿದ್ದೇನೆ. ನಾನು ಅವರೆಲ್ಲರಿಗೆ ಈ ದಿನ ನಿನ್ನ ರಕ್ತದಿಂದ ತರ್ಪಣವನ್ನು ಕೊಡುವೆನು.
ವೈಶಂಪಾಯನಃ
ಏವಮುಕತ್ವ ತದಾ ಭೀಮಂ ರಾಕ್ಷಸೋ ಯೋದ್ಧುಮಾಯಯೌ |
ಸ್ಮಯಮಾನ ಇವ ಕ್ರೋಧಾತ್ ಸಾಕ್ಷಾತ್ ಕಾಲಾಂತಕೋಪಮಃ ||43||
ವೈಶಂಪಾಯನ ಭೀಮಸೇನನನ್ನು ಕುರಿತು ಹೀಗೆ ಹೇಳಿ ಆ ರಾಕ್ಷಸನು ನಗುತ್ತಾ ಕಾಲಾಂತಕ ಯಮನಂತೆ ಕೋಪವನ್ನು ತಂದುಕೊಂಡು ಯುದ್ಧಮಾಡಲು ಮುಂದಾದನು.
ಬ್ರುವನ್ನೇವ ತಿಷ್ಠ ತಿಷ್ಠೇತಿ ಕ್ರೋಧಸಂರಕ್ತಲೋಚನಃ |
ಬಾಹುಸಂರಂಭಮೇವೇಚ್ಛನ್ನಭಿದುದ್ರಾವ ರಾಕ್ಷಸಮ್ ||44||
ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಭೀಮಸೇನನು ನಿಲ್ಲು, ನಿಲ್ಲು ಎಂದು ಹೇಳುತ್ತಾ ಬಾಹುಯುದ್ಧವನ್ನೇ ಬಯಸುವವನಾಗಿ ರಾಕ್ಷಸನ ಕಡೆಗೆ ಓಡಿದನು.
ರಾಕ್ಷಸೋಽಪಿ ತದಾ ಭೀಮಂ ಯುದ್ಧಾರ್ಥಿನಮವಸ್ಥಿತಮ್ |
ಅಭಿದುದ್ರಾವ ಸಂರಬ್ಧೋ ಬಲಿರ್ವಜ್ರಧರಂ ಯಥಾ ||45||
ಮುಹುರ್ಮುಹುರ್ವ್ಯಾದದಾನಃ ಸೃಕ್ಕಿಣೀ ಪರಿಸಂಲಿಹನ್ |
ಆ ರಾಕ್ಷಸನಾದರೂ ಮತ್ತೆ ಮತ್ತೆ ಆಕಳಿಸುತ್ತಾ ತನ್ನ ಕಟಬಾಯಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ಯುದ್ಧದಲ್ಲಿ ಎದುರಿಗೆ ನಿಂತ ಭೀಮಸೇನನ ಕಡೆಗೆ ಬಲಿಯು ಇಂದ್ರನ ಕಡೆಗೆ ಓಡಿಬಂದಂತೆ ಸಿಟ್ಟಿನಿಂದ ಓಡಿಬಂದನು.
ಭೀಮಸೇನೋಽಪ್ಯವಷ್ಟಬ್ಧೋ ನಿಯುದ್ಧಾಯಾಭವತ್ ಸ್ಥಿತಃ |
ರಾಕ್ಷಸೋಽಪಿ ಚ ವಿಸ್ರಬ್ಧೋ ಬಾಹುಯುದ್ಧಮಕಾಂಕ್ಷತ ||46||
ಭೀಮಸೇನನೂ ಸಹ ನಿಂತಲ್ಲಿಯೇ ನಿಂತು ಬಾಹುಯುದ್ಧಕ್ಕೇ ಸಿದ್ಧನಾದನು. ರಾಕ್ಷಸನೂ ಸಹ ತನ್ನ ಮೇಲಿನ ಭರವಸೆಯಿಂದ ಬಾಹುಯುದ್ಧವನ್ನೇ ಬಯಸಿದನು.
ವರ್ತಮಾನೇ ತದಾ ತಾಭ್ಯಾಂ ಬಾಹುಯುದ್ಧೇ ಸುದಾರುಣೇ |
ಮಾದ್ರೀಪುತ್ರಾವತಿಕ್ರುದ್ಧಾವುಭಾವಪ್ಯಭ್ಯಧಾವತಾಮ್ ||47||
ಅವರಿಬ್ಬರಿಗೂ ಭಯಂಕರವಾದ ಬಾಹುಯುದ್ಧವು ನಡೆಯುತ್ತಿರುವಾಗ ಬಹಳ ಸಿಟ್ಟಿನಿಂದ ಕೂಡಿದ ಮಾದ್ರೀಪುತ್ರರಿಬ್ಬರೂ ಭೀಮಸೇನನ ಕಡೆಗೆ ಓಡಿಬಂದರು.
ನ್ಯವಾರಯತ್ ತೌ ಪ್ರಹಸನ್ ಕುಂತೀಪುತ್ರೋ ವೃಕೋದರಃ |
ಶಕ್ತೋಽಹಂ ರಾಕ್ಷಸಸ್ಯೇತಿ ಪ್ರೇಕ್ಷಧ್ವಮಿತಿ ಚಾಬ್ರವೀತ್ ||48||
ಕುಂತೀಪುತ್ರನಾದ ವೃಕೋದರನು ಅವರಿಬ್ಬರನ್ನೂ ನಿವಾರಿಸಿದನು. ಈ ರಾಕ್ಷಸನನ ಜೊತೆಯಲ್ಲಿ ಯುದ್ಧಮಾಡಲು ನಾನು ಸಮರ್ಥನಾಗಿದ್ದೇನೆ; ನೀವು ಸುಮ್ಮನೆ ನೋಡಿ ಎಂದು ಹೇಳಿದನು.
ಆತ್ಮನಾ ಭ್ರಾತೃಭಿಶ್ಚೈವ ಧರ್ಮೇಣ ಸುಕೃತೇನ ಚ |
ಇಷ್ಟೇನ ಚ ಶಪೇ ರಾಜನ್ ಸೂದಯಿಷ್ಯಾಮಿ ರಾಕ್ಷಸಮ್ ||49||
ಭೀಮಸೇನನು ಧರ್ಮರಾಜನನ್ನು ಕುರಿತು ರಾಜನೇ, ನನ್ನ ಮೇಲೆ, ಸಹೋದರರಾದ ನಿಮ್ಮ ಮೇಲೆ, ಧರ್ಮದ ಮೇಲೆ, ನನ್ನ ಪುಣ್ಯದ ಮೇಲೆ ಮತ್ತು ನಾನು ಮಾಡಿದ ದಾನದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ಈ ದಿನ ರಾಕ್ಷಸನನ್ನು ಕೊಲ್ಲುವೆನು.
ವೈಶಂಪಾಯನಃ
ಇತ್ಯೇವಮುಕತ್ವ ತೌ ವೀರೌ ಸ್ಪರ್ಧಮಾನೌ ಪರಸ್ಪರಮ್ |
ಬಾಹುಭ್ಯಾಂ ಸಮಸಜ್ಜೇತಾಮುಭೌ ರಕ್ಷೋವೃಕೋದರೌ ||50||
ತಯೋರಾಸೀತ್ ಸಂಪ್ರಹಾರಃ ಕ್ರುದ್ಧಯೋರ್ಭೀಮರಕ್ಷಸೋಃ |
ಅಮೃಷ್ಯಮಾಣಯೋಃ ಸಂಖ್ಯೇ ದೇವದಾನವಯೋರಿವ ||51||
ವೈಶಂಪಾಯನ ಹೀಗೆ ಹೇಳಿ ವೀರರಾದ ಆ ರಾಕ್ಷಸ ಮತ್ತು ವೃಕೋದರರಿಬ್ಬರೂ ಪರಸ್ಪರವಾಗಿ ಸ್ಪರ್ಧಿಸುತ್ತಾ ಬಾಹುಗಳಿಂದ ಒಬ್ಬರನ್ನೊಬ್ಬರು ತಡವಿದರು. ಕ್ರುದ್ಧರಾದ ಭೀಮರಾಕ್ಷಸರು ಒಬ್ಬರನ್ನೊಬ್ಬರು ಸಹಿಸದೇ ಮಾಡುವ ಆ ಪ್ರಹಾರಗಳು ದೇವ ದಾನವ ಯುದ್ಧದಲ್ಲಿನ ಪ್ರಹಾರದಂತಿದ್ದವು.
ಆರುಜ್ಯಾರುಜ್ಯ ತೌ ವೃಕ್ಷಾನನ್ಯೋನ್ಯಮಭಿಜಘ್ನತುಃ |
ಜೀಮೂತಾವಿವ ಗರ್ಜಂತೌ ನಿನದಂತೌ ಮಹಾಬಲೌ ||52||
ಮಹಾಬಲರಾದ ಅವರಿಬ್ಬರು ವೃಕ್ಷಗಳನ್ನು ಕಿತ್ತುಕಿತ್ತು ಗುಡುಗುವ ಮೋಡಗಳಂತೆ ಗರ್ಜಿಸುತ್ತಾ ಪರಸ್ಪರವಾಗಿ ಹೊಡೆದಾಡಿದರು.
ಬಭಂಜತುರ್ಮಹಾವೃಕ್ಷಾನೂರುಭಿರ್ಬಲಿನಾಂ ವರೌ |

ಅನ್ಯೋನ್ಯೇನಾಭಿಸಂರಬ್ಧೌ ಪರಸ್ಪರವಧೈಷಿಣೌ ॥53॥
ಪರಸ್ಪರವಾಗಿ ಸಿಟ್ಟಿನಿಂದ ಕೂಡಿದವರಾಗಿ ಪರಸ್ಪರ ವಧೆಯನ್ನು ಅಪೇಕ್ಷಿಸುತ್ತಾ ಬಲಿಷ್ಠರಲ್ಲಿ ಶ್ರೇಷ್ಠರಾದ ಅವರಿಬ್ಬರೂ ತಮ್ಮ ತೊಡೆಗಳ ವೇಗದಿಂದ ದೊಡ್ಡ ಮರಗಳನ್ನು ಮುರಿದರು.
ತದ್ವೃಕ್ಷಯುದ್ಧಮಭವನ್ಮಹೀರುಹವಿನಾಶನಮ್ |
ವಾಲಿಸುಗ್ರೀವಯೋರ್ಭ್ರಾತ್ರೋಃ ಪುರಾ ಸ್ತ್ರೀಕಾಂಕ್ಷಿಣೋರ್ಯಥಾ ॥54॥
ಹಿಂದೆ ಸಹೋದರರಾದ ವಾಲಿಸುಗ್ರೀವರಿಗೆ ಸ್ತ್ರೀ ವಿಷಯದಲ್ಲಿ (ಸುಗ್ರೀವ ಪತ್ನಿಯಾದ ರುಮೆಯ ವಿಷಯದಲ್ಲಿ) ಹೇಗೆ ನಡೆಯಿತೋ ಅದರಂತೆ ವೃಕ್ಷ ನಾಶಕವಾದ, ವೃಕ್ಷ ಯುದ್ಧವು ಅವರಿಬ್ಬರಿಗೆ ನಡೆಯಿತು.
ಆವಿದ್ಯಾವಿಧ್ಯ ತೌ ವೃಕ್ಷಾನ್ಮುಹೂರ್ತಮಿತರೇತರಮ್ |
ತಾಡಯಾಮಾಸತುರುಭೌ ವಿನದಂತೌ ಮುಹುರ್ಮುಹುಃ ॥55॥
ಅವರಿಬ್ಬರೂ ವೃಕ್ಷಗಳನ್ನು ಕಿತ್ತು ಕಿತ್ತು ಮತ್ತೆ ಮತ್ತೆ ಗರ್ಜಿಸುತ್ತಾ ಪರಸ್ಪರವಾಗಿ ಒಂದು ಮುಹೂರ್ತದವರೆಗೆ ಹೊಡೆದಾಡಿದರು.
ತಸ್ಮಿನ್ ದೇಶೇ ಯದಾ ವೃಕ್ಷಾಃ ಸರ್ವ ಏವ ನಿಪಾತಿತಾಃ |
ಪುಂಜೀಕೃತಾಶ್ಚ ಶತಶಃ ಪರಸ್ಪರವಧೇಪ್ಸಯಾ ॥56॥
ತತಃ ಶಿಲಾಃ ಸಮಾದಾಯ ಮುಹೂರ್ತಮಿವ ಭಾರತ |
ಮಹಾಭ್ರೈರಿವ ಶೈಲೇಂದ್ರೌ ಯುಯುಧಾತೇ ಮಹಾಬಲೌ ॥57॥
ಎಲೈ ಭಾರತನೇ, ಅಲ್ಲಿದ್ದ ಮರಗಳೆಲ್ಲವೂ ನೂರರ ಗಟ್ಟಲೆಯಲ್ಲಿ ಸಮೂಹದಿಂದಲೇ ಪರಸ್ಪರ ವಧೆಯ ಇಚ್ಛೆಯಿಂದ ಕೀಳಲ್ಪಡುತ್ತಿರಲು ಮಹಾಬಲರಾದ ಅವರಿಬ್ಬರೂ ದೊಡ್ಡದೊಡ್ಡ ಬಂಡೆಗಳನ್ನು ತೆಗೆದುಕೊಂಡು ಎರಡು ಪರ್ವತಗಳು ಮಹಾಮೇಘಗಳಿಂದ ಹೊಡೆದಾಡಿದಂತೆ ಹೊಡೆದಾಡಿದರು.
ಶಿಲಾಭಿರುಗ್ರರೂಪಾಭಿರ್ಬೃಹತೀಭಿಃ ಪರಸ್ಪರಮ್ |
ವಜ್ರೈರಿವ ಮಹಾವೇಗೈರಾಜಘ್ನತುರಮರ್ಷಣೌ ॥58॥
ಸಿಟ್ಟಿನಿಂದ ಕೂಡಿದ ಅವರು ಭಯಂಕರವಾದ ಆಕಾರವುಳ್ಳ ದೊಡ್ಡದೊಡ್ಡ ಬಂಡೆಗಳಿಂದ ಮಹಾವೇಗವುಳ್ಳ ವಜ್ರಾಯುಧದಿಂದೆಂಬಂತೆ ಹೊಡೆದಾಡಿದರು.
ಅಭಿದ್ರುತ್ಯ ತು(ಚ) ಭೂಯಸ್ತಾವನ್ಯೋನ್ಯಂ ಬಲದರ್ಪಿತೌ |
ಭುಜಾಭ್ಯಾಂ ಪರಿಗೃಹ್ಯಾಥ ಚಕರ್ಷಾತೇ ಗಜಾವಿವ ॥59॥
ಬಲದರ್ಪಿತರಾದ ಅವರು ಸ್ವಲ್ಪದೂರದಲ್ಲಿ ನಿಂತು ಪರಸ್ಪರವಾಗಿ ಓಡಿಬಂದು ಒಬ್ಬರ ಭುಜಗಳನ್ನು ಇನ್ನೊಬ್ಬರು ಹಿಡಿದು ಗಜಗಳಂತೆ ಎಳೆದಾಡಿದರು.
ಮುಷ್ಟಿಭಿಶ್ಚ ಮಹಾಘೋರೈರನ್ಯೋನ್ಯಮಭಿಜಘ್ನತುಃ |
ತತಃ ಕಟಕಟಾಶಬ್ದೋ ಬಭೂವ ಸುಮಹಾತ್ಮನೋಃ ॥60॥
ಅವರು ತಮ್ಮ ಘೋರವಾದ ಮುಷ್ಟಿಗಳಿಂದ ಪರಸ್ಪರವಾಗಿ ಹೊಡೆದಾಡಿದರು. ಮಹಾಬಲಶಾಲಿಗಳಾದ ಅವರು ಹಾಗೆ ಹೊಡೆದಾಡುವಾಗ ದೊಡ್ಡ ಕಟಕಟ ಶಬ್ದ ಉಂಟಾಯಿತು.
ತತಃ ಸಂಹತ್ಯ ಮುಷ್ಟಿಂ ತು ಪಂಚಶೀರ್ಷಮಿವೋರಗಮ್ |
ವೇಗೇನಾಭ್ಯಹನದ್ ಭೀಮೋ ರಾಕ್ಷಸಸ್ಯ ಶಿರೋಧರಮ್ ॥61॥
ಆಗ ಭೀಮಸೇನನು ಐದು ಹೆಡೆಯ ಸರ್ಪದಂತಿರುವ ತನ್ನ ಹಸ್ತವನ್ನು ಮುಚ್ಚಿ ಮುಷ್ಟಿಯನ್ನು ಬಿಗಿದು ವೇಗವಾಗಿ ರಾಕ್ಷಸನ ಕತ್ತಿಗೆ ಹೊಡೆದನು.
ತತಃ ಶ್ರಾಂತಂ ತು ತದ್ರಕ್ಷೋ ಭೀಮಸೇನಭುಜಾಹತಮ್ |
ಸುಪರಿಶ್ರಾಂತಮಾಲಕ್ಷ್ಯ ಭೀಮಸೇನೋಽಭ್ಯವರ್ತತ ॥62॥
ತನ್ನ ಭುಜದ ಹೊಡೆತಕ್ಕೆ ಸಿಕ್ಕಿ ಆ ರಾಕ್ಷಸನು ಬಹಳ ಬಳಲುತ್ತಿರುವುದನ್ನು ಕಂಡು ಭೀಮಸೇನನ ಬಲವು ಅಭಿವೃದ್ಧಿಯನ್ನು ಹೊಂದಿತು.
ತತ ಏನಂ ಮಹಾಬಾಹುರ್ಬಾಹುಭ್ಯಾಮಮರೋಪಮಃ |
ಸಮುತ್ಕ್ಷಿಪ್ಯ ಬಲಾತ್ ಭೀಮೋ ವಿನಿಷ್ಪಿಷ್ಯ ಮಹೀತಳೇ ॥63॥
ತತಃ ಸಂಪೀಡ್ಯ ಬಲಬದ್ ಭುಜಾಭ್ಯಾಂ ಕ್ರೋಧಮೂರ್ಛಿತಃ |
ತಸ್ಯ ಗಾತ್ರಾಣಿ ಸರ್ವಾಣಿ ಚೂರ್ಣಯಾಮಾಸ ಪಾಂಡವಃ ॥64॥
ಆಗ ದೇವತೆಯಂತಿದ್ದ, ಕ್ರೋಧಮೂರ್ಚ್ಛಿತನಾದ ಮಹಾಬಾಹುವಾದ ಭೀಮಸೇನನು ತನ್ನ ಬಾಹುಗಳಿಂದ ಅವನನ್ನು ಎಸೆದು ಭೂಮಿಯ ಮೇಲೆ ಕೆಡವಿ ಅವನನ್ನು ಭೂಮಿಯ ಮೇಲೆ ಅರೆದು ತನ್ನ ಭುಜಗಳಿಂದ ಪೀಡಿಸಿ ಅವನ ಶರೀರವನ್ನೆಲ್ಲಾ ಮುರಿಯುವಂತೆ ಘಾಸಿಗೊಳಿಸಿದನು.
ಅರತ್ನಿನಾ ಚಾಭಿಹತ್ಯ ಶಿರಃ ಕಾಯಾದಪಾಹರತ್ |
ಸಂದಷ್ಟೌಷ್ಠಂ ವಿವೃತ್ತಾಕ್ಷಂ ಫಲಂ ವೃಕ್ಷಾದಿವ ಚ್ಯುತಮ್ ॥65॥
ಮತ್ತು ತನ್ನ ಮೊಣಕೈಯಿಂದ ಹೊಡೆದು ಹಲ್ಲುಡಿಯನ್ನು ಕಚ್ಚಿ ಕಣ್ಣುಗಳನ್ನು ಅಗಲವಾಗಿ ತೆಗೆದಿದ್ದ ಆ ರಾಕ್ಷಸನ ಶಿರಸ್ಸನ್ನು ಮರದಿಂದ ಹಣ್ಣನ್ನು ಕೀಳುವಂತೆ ಅವನ ಶರೀರದಿಂದ ಬೇರ್ಪಡಿಸಿದನು.
ಜಟಾಸುರಸ್ಯ ತು ಶಿರೋ ಭೀಮಸೇನಬಲಾದ್ಧೃತಮ್ |
ಪಪಾತ ರುಧಿರಾದಿಗ್ಧಂ ಸಂದಷ್ಟದಶನಚ್ಛದಮ್ ॥66॥

ಭೀಮಸೇನನ ಬಲದಿಂದ ಹತನಾದ ಹಲ್ಲುಮುಡಿಯನ್ನು ಕಚ್ಚಿದ ಆ ಜಟಾಸುರನ ಶಿರಸ್ಸು ರಕ್ತಸಿಕ್ತವಾಗಿ ಭೂಮಿಯ ಮೇಲೆ ಬಿದ್ದಿತು.
ತಂ ನಿಹತ್ಯ ಮಹೇಷ್ವಾಸೋ ಯುಧಿಷ್ಠಿರಮುಪಾಗಮತ್ |
ಸ್ತೂಯಮಾನೋ ದ್ವಿಜಾಗ್ರ್ಯೈಸ್ತು ಮರುದ್ಭಿರಿವ ವಾಸವಃ |
ಬಭೂವ ಪುರುಷ್ಯವ್ಯಾಘ್ರಃ ಪ್ರಹೃಷ್ಟ ಇವ ಪಾಂಡವಃ ॥67॥
ಮಹಾಧನುರ್ಧಾರಿಯಾದ ಭೀಮಸೇನನು ಮರುದ್ಗಣದಿಂದ ಹೊಗಳಲ್ಪಡುವ ಇಂದ್ರನಂತೆ ಬ್ರಾಹ್ಮಣಶ್ರೇಷ್ಠರಿಂದ ಪ್ರಶಂಸಿಸಲ್ಪಟ್ಟವನಾಗಿ ಯುಧಿಷ್ಠಿರನ ಬಳಿಗೆ ಬಂದನು. ಪುರುಷವ್ಯಾಘ್ರನಾದ ಪಾಂಡುಪುತ್ರನಾದ ಭೀಮಸೇನನು ಬಹಳ ಸಂತುಷ್ಟನಾದನು.
ತತೋ ಯುಧಿಷ್ಠಿರೋ ರಾಜಾ ಧೌಮ್ಯಃ ಕೃಷ್ಣಾ ಯಮೌ ತಥಾ |
ಭೀಮಸೇನಮುಪಾಯಾಂತಂ ದದೃಶುಸ್ತೇ ಚ ಪಾಂಡವಮ್ ॥68॥
ಆಗ ಯುಧಿಷ್ಠಿರನೂ, ನಕುಲಸಹದೇವರೂ, ಧೌಮ್ಯರೂ ಮತ್ತು ದ್ರೌಪದಿಯೂ ಪಾಂಡುಪುತ್ರನಾದ ಭೀಮಸೇನನು ತಮ್ಮ ಬಳಿಗೆ ಬರುವುದನ್ನು ನೋಡಿದರು.
ಉಪಸಂಗತ್ಯ ಧೌಮ್ಯಂ ಚ ಪಾಂಡವಂ ಚ ಯುಧಿಷ್ಠಿರಮ್ |
ಪರ್ಯಷ್ವಜತ ದುರ್ಧರ್ಷೋ ಯಮೌ ಚಾಪಿ ವೃಕೋದರಃ ॥69॥
ದುರ್ಧರ್ಷನಾದ ವೃಕೋದರನು ಧೌಮ್ಯರನ್ನೂ, ಮತ್ತು ಯುಧಿಷ್ಠಿರನನ್ನೂ ಸಮೀಪಿಸಿ (ನಮಸ್ಕರಿಸಿ) ನಕುಲಸಹದೇವರನ್ನು ಆಲಿಂಗಿಸಿದನು.
ಹತಂ ಜಾಟಸುರಂ ದೃಷ್ಟ್ವಾ ಪಾಂಚಾಲೀ ಚ ವೃಕೋದರಂ |
ಮುದಿತಂ ಪೂಜಯಾಮಾಸ ಪೌಲೋಮೀವ ಪುರಂದರಮ್ ॥70॥
ಜಟಾಸುರನನ್ನು ಸಂಹರಿಸಿ ಹಿಂದಿರುಗಿ ಬಂದ ಭೀಮಸೇನನನ್ನು ನೋಡಿ ದ್ರೌಪದಿಯು ಶಚಿಯು ಇಂದ್ರನನ್ನು ಅರ್ಚಿಸಿದಂತೆ ಅವನನ್ನು ಅರ್ಚಿಸಿದಳು.
ಸಂಪೂಜಿತಃ ಸ ಸದ್ಭಿರ್ಬ್ರಾಹ್ಮಣಾನಭಿವಾದ್ಯ ಚ |
ಜಿತಾರಿರ್ಮುದಿತೋ ಭೀಮೋ ಬಭೂವ ಭರತರ್ಷಭಃ ॥71॥
ಹೀಗೆ ಸಜ್ಜನರಿಂದ ಸತ್ಕರಿಸಲ್ಪಟ್ಟ ಭರತಶ್ರೇಷ್ಠನಾದ ಭೀಮಸೇನನು ಬ್ರಾಹ್ಮಣರಿಗೆ ನಮಸ್ಕರಿಸಿ ಶತ್ರುಗಳನ್ನು ಜಯಿಸಿದವನಾಗಿ ಸಂತೋಷದಿಂದ ಇದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ತ್ರಿಪಂಚಾಶದಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೂರನೆಯ
ಅಧ್ಯಾಯ ಮುಗಿಯಿತು.
॥ ಇತಿ ಜಟಾಸುರವಧಪರ್ವ ಸಮಾಪ್ತಂ ॥
* * * *
ಯಕ್ಷಯುದ್ಧಪರ್ವ
ನೂರ ಐವತ್ನಾಲ್ಕನೆಯ ಅಧ್ಯಾಯ
ಜಟಾಸುರ ವಧೆಯ ನಂತರ ಯುಧಿಷ್ಠಿರನಿಂದ ನರನಾರಾಯಣಾಶ್ರಮದಲ್ಲಿ ವಾಸ. ಅಲ್ಲಿಂದ ವೃಷಪರ್ವಾಶ್ರಮಕ್ಕೂ ಮತ್ತು ಆರ್ಷ್ಟಿಷೇಣಾಶ್ರಮಕ್ಕೂ ಗಮನ.
ವೈಶಂಪಾಯನಃ
ನಿಹತೇ ರಾಕ್ಷಸೇ ತಸ್ಮಿನ್ ಪುನರ್ನಾರಾಯಣಾಶ್ರಮಮ್ |
ಅಭ್ಯೇತ್ಯ ರಾಜಾ ಕೌಂತೇಯೋ ನಿವಾಹಸಮಕರೋತ್ ಪ್ರಭುಃ ॥1॥
ವೈಶಂಪಾಯನ ಆ ರಾಕ್ಷಸನಾದ ಜಟಾಸುರನು ಹತನಾಗುತ್ತಿರಲು ಪ್ರಭುವಾದ ಕುಂತೀಪುತ್ರನಾದ ಧರ್ಮರಾಜನು
ನರನಾರಾಯಣಾಶ್ರಮಕ್ಕೆ ಬಂದು ಅಲ್ಲಿ ವಾಸವನ್ನು ಮಾಡಿದನು.
ಸ ಸಮಾನೀಯ ತಾನ್ ಸರ್ವಾನ್ ಭ್ರಾತೄನಿತ್ಯಬ್ರವೀದ್ ವಚಃ |
ದ್ರೌಪದ್ಯಾ ಸಹಿತಾನ್ ಕಾಲೇ ಸಂಸ್ಮರನ್ ಭ್ರಾತರಂ ಜಯಮ್ ॥2॥
ಅವನು ದ್ರೌಪದೀ ಸಹಿತವಾಗಿ ಎಲ್ಲಾ ತಮ್ಮಂದಿರನ್ನೂ ಕರೆದು ತಮ್ಮನಾದ ಅರ್ಜುನನನ್ನು ಸ್ಮರಿಸಿಕೊಂಡು ಉಚಿತವಾದ ಕಾಲದಲ್ಲಿ ಹೀಗೆ ಮಾತನಾಡಿದನು.
ಸಮಾಶ್ಚತಸ್ರೋಽಭಿಗತಾಃ ಶಿವೇನ ಚರತಾಂ ವನೇ |
ಕೃತೋದ್ದೇಶಸ್ತು(ಶಃ ಸ) ಬೀಭತ್ಸುಃ ಪಂಚಮೀಮಭಿತಃ ಸಮಾಮ್ ॥3॥
ಪ್ರಾಪ್ಯ ಪರ್ವತರಾಜಾನಂ ಶ್ವೇತಂ ಶಿಖರಿಣಾಂ ವರಮ್ |
ತತ್ರಾಪಿ ಚ ಕೃತೋದ್ದೇಶಃ ಸಮಾಗಮದಿದೃಕ್ಷುಭಿಃ ॥4॥
ಕಾಡಿನಲ್ಲಿ ಕ್ಷೇಮದಿಂದ ವಾಸಿಸುತ್ತಾ ನಾಲ್ಕುವರ್ಷಗಳು ಕಳೆದವು. ಅರ್ಜುನನು ತನ್ನ ಸಂಕಲ್ಪಕ್ಕೆ ಅನುಗುಣವಾಗಿ ಐದನೆಯ ವರ್ಷವನ್ನು ಕಳೆಯುತ್ತಿದ್ದಾನೆ. ಪರ್ವತಶ್ರೇಷ್ಠವಾದ ಶ್ವೇತಪರ್ವತಕ್ಕೆ ಬಂದು ಅಲ್ಲಿ ಅವನನ್ನು ನೋಡಲು ಹಂಬಲಿಸುವ ನಮ್ಮ ಜೊತೆಯಲ್ಲಿ ಅವನು ನಮ್ಮನ್ನು ಸಂಧಿಸುತ್ತಾನೆ.
ಕೃತಶ್ಚ ಸಮಯಸ್ತೇನ ಪಾರ್ಥೇನಾಮಿತತೇಜಸಾ |

ಪಂಚವರ್ಷಾಣಿ ವತ್ಸ್ಯಾಮಿ ವಿದ್ಯಾರ್ಥೀತಿ ಪುರಾ ಮಯಿ ॥5॥
ಅಮಿತಪರಾಕ್ರಮಿಯಾದ ಪಾರ್ಥನು ನಾನು ವಿದ್ಯಾರ್ಥಿಯಾಗಿ ಐದು ವರ್ಷ ವಾಸಮಾಡುವೆನು ಎಂದು ನನ್ನ ಬಳಿಯಲ್ಲಿ ಹಿಂದೆ ಪ್ರತಿಜ್ಞೆಮಾಡಿದ್ದಾನೆ.
ತ(ಅ)ತ್ರ ಗಾಂಡೀವಧನ್ವಾನಮವಾಪ್ತಾಸ್ತ್ರಮರಿಂದಮಮ್ |
ದೇವಲೋಕಾದಿಮಂ ಲೋಕಂ ದ್ರಕ್ಷ್ಯಾಮಃ ಪುನರಾಗತಮ್ ॥6॥
ಅಲ್ಲಿ ಆ ಶ್ವೇತಪರ್ವತದಲ್ಲಿ ಅಸ್ತ್ರಗಳನ್ನು ಸಂಪಾದಿಸಿ ದೇವಲೋಕದಿಂದ ಹಿಂದಿರುಗಿ ಬಂದ ಶತ್ರುದಮನನಾದ ಗಾಂಡೀವ ಧನುರ್ಧಾರಿಯಾದ ಆ ಅರ್ಜುನನನ್ನು ನಾವು ಪುನಃ ನೋಡುವೆವು.
ವೈಶಂಪಾಯನಃ
ಇತ್ಯುಕ್ತ್ವಾ ಬ್ರಾಹ್ಮಣಾನ್ ಸರ್ವಾನಾಮಂತ್ರಯತ ಪಾಂಡವಃ |
ಕಾರಣಂ ಚೈವ ತತ್ ತೇಷಾಮಾಚಚಕ್ಷೇ ತಪಸ್ವಿನಾಮ್ ॥7॥
ತಾನುಗ್ರತಪಸಃ ಪ್ರೀತಾನ್ ಕೃತ್ವಾ ಪಾರ್ಥಾಃ ಪ್ರದಕ್ಷಿಣಮ್ |
ಬ್ರಾಹ್ಮಣಾಸ್ತೇಽನ್ವಮೋದಂತ ಶಿವೇನ ಕುಶಲೇನ ಚ ॥8॥
ವೈಶಂಪಾಯನ ಹೀಗೆ ಹೇಳಿ ಪಾಂಡವನಾದ ಧರ್ಮರಾಜನು ತಪಸ್ವಿಗಳಾದ ಬ್ರಾಹ್ಮಣರಿಗೆ ಅಲ್ಲಿಗೆ ಹೋಗುತ್ತಿರುವ ಕಾರಣವನ್ನು ತಿಳಿಸಿದನು. ಉಗ್ರತಪಸ್ವಿಗಳಾದ ಪ್ರಸನ್ನರಾದ ಆ ಬ್ರಾಹ್ಮಣರಿಗೆ ಅಲ್ಲಿದ್ದ ಪಾಂಡವರೆಲ್ಲರೂ ನಮಸ್ಕಾರವನ್ನು ಮಾಡಿದರು. ಆ ಬ್ರಾಹ್ಮಣರು ನಿಮಗೆ ಮಂಗಳವಾಗಲಿ ಮತ್ತು ನಿರ್ವಿಘ್ನವಾಗಲಿ ಎಂದು ಅವರ ಪ್ರಯಾಣಕ್ಕೆ ಅನುಮತಿಯನ್ನು ಕೊಟ್ಟರು.
ಬ್ರಾಹ್ಮಣಾಃ
ಸುಖೋದರ್ಕಮಿಮಂ ಕ್ಲೇಶಮಚಿರಾದ್ ಭರತರ್ಷಭ |
ಕ್ಷತ್ರಧರ್ಮೇಣ ಧರ್ಮಜ್ಞ ತೀರ್ತ್ವಾ ಗಾಂ ಪಾಲಯಿಷ್ಯಸಿ ॥9॥
ಬ್ರಾಹ್ಮಣ ಎಲೈ ಭರತರ್ಷಭನೇ, ನೀನು ಸುಖಕ್ಕಿಂತ ಉತ್ಕೃಷ್ಟವಾದ ಈ ಕ್ಲೇಶವನ್ನು ಬೇಗ ಕಳೆದು, ಧರ್ಮಜ್ಞನೇ, ನೀನು ಕ್ಷತ್ರಿಯ ಧರ್ಮಕ್ಕೆ ಅನುಗುಣವಾಗಿ ಭೂಮಿಯನ್ನು ಪಾಲಿಸುವಿ.
ವೈಶಂಪಾಯನಃ
ತತ್ ತು ರಾಜಾ ವಚಸ್ತೇಷಾಂ ಪ್ರತಿಗೃಹ್ಯ ತಪಸ್ವಿನಾಮ್ |
ಪ್ರತಸ್ಥೇ ಸಹ ವಿಪ್ರೈಸ್ತೈರ್ಭ್ರಾತೃಭಿಶ್ಚ ಪರಂತಪಃ ॥10॥
ದ್ರೌಪದ್ಯಾ ಸಹಿತಃ ಶ್ರೀಮಾನ್ ಹೈಡಿಂಬೇಯಾದಿಭಿಸ್ತದಾ |
ರಾಕ್ಷಸೈರನುಯಾತೋ ವೈ ಲೋಮಶೇನಾಭಿರಕ್ಷಿತಃ ॥11॥
ವೈಶಂಪಾಯನ ಪರಂತಪನಾದ ಧರ್ಮರಾಜನಾದರೂ ತಪಸ್ವಿಗಳ ಆ ಮಾತನ್ನು ಸ್ವೀಕರಿಸಿ ಕಾಂತಿಯುಕ್ತನಾದ ಅವನು ದ್ರೌಪದಿಯಿಂದ ಸಹಿತನಾಗಿ ಘಟೋತ್ಕಚ ಮೊದಲಾದ ರಾಕ್ಷಸರಿಂದ ಅನುಗತನಾಗಿ ಲೋಮಶರಿಂದ ರಕ್ಷಿತನಾಗಿ ತಮ್ಮಂದಿರೊಡನೆ ಅಲ್ಲಿಂದ ಹೊರಟನು.
ಕ್ವಚಿತ್ ಪದ್ಭ್ಯಾಂ ತತೋಽಗಚ್ಛದ್ ರಾಕ್ಷಸೈರುಹ್ಯತೇ ಕ್ವಚಿತ್ |
ತತ್ರ ತತ್ರ ಮಹಾತೇಜಾ ಭ್ರಾತೃಭಿಃ ಸಹ ಸುವ್ರತಃ ॥12॥
ಮಹಾತೇಜಸ್ವಿಯೂ ಒಳ್ಳೆಯ ವ್ರತವನ್ನು ಧರಿಸಿದವನೂ ಆದ ಧರ್ಮರಾಜನು ತಮ್ಮಂದಿರ ಜೊತೆಯಲ್ಲಿ ಕೆಲವು ಕಡೆ ಕಾಲಿನಿಂದಲೇ ನಡೆದನು. ಇನ್ನು ಕೆಲವು ಕಡೆ ರಾಕ್ಷಸರು ಅವನನ್ನು ಎತಿತಕೊಂಡು ನಡೆಯುತ್ತಿದ್ದರು.
ತತೋ ಯುಧಿಷ್ಠಿರೋ ರಾಜಾ ಬಹೂನ್ ಕ್ಲೇಶಾನ್ ವಿಚಿಂತಯನ್ |
ಸಿಂಹವ್ಯಾಘ್ರಗಜಾಕೀರ್ಣಾಮುದೀಚೀಂ ಪ್ರಯಯೌ ದಿಶಮ್ ॥13॥
ಆಗ ರಾಜನಾದ ಯುಧಿಷ್ಠಿರನು ಅನುಭವಿಸಿದ ಅನೇಕ ಕ್ಲೇಶಗಳನ್ನು ಸ್ಮರಿಸುತ್ತಾ ಸಿಂಹ, ವ್ಯಾಘ್ರ, ಗಜಗಳಿಂದ ತುಂಬಿದ ಈಶಾನ್ಯದಿಕ್ಕನ್ನು ಕುರಿತು ಹೊರಟನು.
ಅವೇಕ್ಷಮಾಣಃ ಕೈಲಾಸಂ ಮೈನಾಕಂ ಚೈವ ಪರ್ವತಮ್ |
ಗಂಧಮಾದನಪಾದಾಂಶ್ಚ ಶ್ವೇತಂ ಚಾಪಿ ಶಿಲೋಚ್ಚಯಮ್ ॥14॥
ಕೈಲಾಸಪರ್ವತವನ್ನೂ, ಮೈನಾಕಪರ್ವತವನ್ನೂ, ಗಂಧಮಾದನ ಪರ್ವತದ ತಪ್ಪಲು ಪ್ರದೇಶವನ್ನೂ, ಶ್ವೇತಪರ್ವತದ ಶಿಲಾರಾಶಿಯನ್ನೂ ನೋಡುತ್ತಾ ಮುಂದೆ ನಡೆದನು.
ಉಪರ್ಯುಪರಿ ಶೈಲಸ್ಯ ಬಹ್ವೀಶ್ಚ ಸರಿತಃ ಶಿವಾಃ |
ಪೃಷ್ಠಂ ಹಿಮವತಃ ಪುಣ್ಯಂ ಯಯೌ ಸಪ್ತದಶೇಽಹನಿ ॥15॥
ಪರ್ವತದ ಮೇಲ್ಭಾಗಗಳಲ್ಲಿ ಶುಭಪ್ರದವಾದ ಅನೇಕ ನದಿಗಳನ್ನು ನೋಡುತ್ತಾ ಹದಿನೇಳನೆಯ ದಿವಸ ಪವಿತ್ರವಾದ ಹಿಮಾಲಯದ ತಪ್ಪಲನ್ನು ಸೇರಿದನು.
ದದೃಶುಃ ಪಾಂಡವಾ ರಾಜನ್ ಗಂಧಮಾದನಮಂತಿಕಾತ್ |
ಪೃಷ್ಠೇ ಹಿಮವತಃ ಪುಣ್ಯೇ ನಾನಾದ್ರುಮಲತಾವೃತೇ ॥16॥
ಪಾಂಡವರು ಹಿಮಾಲಯದ ತಪ್ಪಲಿನ ಸಮೀಪದಲ್ಲಿದ್ದ ಅನೇಕ ವೃಕ್ಷಗಳಿಂದ ಮತ್ತು ಲತೆಗಳಿಂದ ಕೂಡಿದ ಗಂಧಮಾದನ ಪರ್ವತವನ್ನು ನೋಡಿದರು.
ಸಲಿಲಾವರ್ತಸಂಜಾತೈಃ ಪುಷ್ಪಿತೈಶ್ಚ ಮಹೀರುಹೈಃ |
ಸಮಾವೃತಂ ಪುಣ್ಯತಮಮಾಶ್ರಮಂ ವೃಷಪರ್ವಣಃ ॥17॥

ಅನೇಕ ನದಿಗಳ ಸುಳಿಗಳಿಂದಲೂ ಮತ್ತು ಪುಷ್ಪಿತವಾದ ವೃಕ್ಷಗಳ ಸಮೂಹದಿಂದಲೂ ಸುತ್ತುವರಿಯಲ್ಪಟ್ಟಂತಹ ವೃಷಪರ್ವ ರಾಜರ್ಷಿಯ ಆಶ್ರಮವನ್ನು ನೋಡಿದರು.
ತಮುಪಾಗಮ್ಯ ರಾಜರ್ಷಿಂ ಧರ್ಮಾತ್ಮಾನಮರಿಂದಮಾಃ |
ಪಾಂಡವಾ ವೃಷಪರ್ವಾಣಮವಂದಂತ ಗತಕ್ಲಮಾಃ ||18||
ಅರಿಂದಮರಾದ ಪಾಂಡವರು ಆಶ್ರಮದರ್ಶನದಿಂದಲೇ ತಮ್ಮ ಶ್ರಮವನ್ನು ಕಳೆದುಕೊಂಡವರಾಗಿ ಆಶ್ರಮಕ್ಕೆ ಬಂದು ರಾಜರ್ಷಿಯಾದ ವೃಷಪರ್ವನಿಗೆ ನಮಸ್ಕಾರವನ್ನು ಮಾಡಿದರು.
ಅಭ್ಯನಂದತ್ ಸ ರಾಜರ್ಷಿಃ ಪುತ್ರವದ್ ಭರತರ್ಷಭಾನ್ |
ಪೂಜಿತಾಶ್ಚಾವಸಂಸ್ತತ್ರ ಸಪ್ತರಾತ್ರಮರಿಂದಮಾಃ ||19||
ಆ ರಾಜರ್ಷಿಯು ತನ್ನ ಮಕ್ಕಳಂತೆ ಭರತಶ್ರೇಷ್ಠರನ್ನು ಅಭಿನಂದಿಸಿದನು. ಅರಿಂದಮರಾದ ಪಾಂಡವರು ಅವನಿಂದ ಪೂಜಿತರಾಗಿ ಅಲ್ಲಿ ಏಳು ರಾತ್ರಿಗಳ ಕಾಲ ವಾಸಮಾಡಿದರು.
ಅಷ್ಟಮೇಽಹನಿ ಸಂಪ್ರಾಪ್ತೇ ತಮೃಷಿಂಲೋಕವಿಶ್ರುತಮ್ |
ಆಮಂತ್ರ್ಯ ವೃಷಪರ್ವಾಣಂ ಪ್ರಸ್ಥಾನಂ ಪ್ರತ್ಯರೋಚಯನ್ ||20||
ಎಂಟನೆಯ ದಿವಸವು ಪ್ರಾಪ್ತವಾದಾಗ ಅವರು ಲೋಕವಿಖ್ಯಾತನಾದ ಆ ವೃಷಪರ್ವ ಋಷಿಯ ಅನುಮತಿಯನ್ನು ಪಡೆದು ಮುಂದೆ ಪ್ರಯಾಣ ಮಾಡಲು ಬಯಸಿದರು.
ಏಕೈಕಶಶ್ಚ ತಾನ್ ವಿಪ್ರಾನ್ ನಿವೇದ್ಯ ವೃಷಪರ್ವಣಿ |
ನ್ಯಾಸಭೂತಾನ್ ಯಥಾಕಾಲಂ ಬಂಧೂನಿವ ಸುಸತ್ಕೃತಾನ್ ||21||
ಅವರು ತಮ್ಮ ಬಳಿಯಲ್ಲಿ ರಕ್ಷಣೆಗಾಗಿ ನ್ಯಾಸವಾಗಿದ್ದ, ತಮ್ಮಿಂದ ಆಯಾ ಕಾಲದಲ್ಲಿ ಬಂಧುಗಳಂತೆ ಸುಸತ್ಕೃತರಾದ ಒಬ್ಬೊಬ್ಬ ಬ್ರಾಹ್ಮಣರನ್ನೂ ವೃಷಪರ್ವನಿಗೆ ಪರಿಚಯ ಮಾಡಿಕೊಟ್ಟರು.
ಪಾರಿಬರ್ಹಂ ಚ ತಂ ಶೇಷಂ ಪರಿದಾಯ ಮಹಾತ್ಮನೇ |
ತತಸ್ತೇ ಯಜ್ಞಪಾತ್ರಾಣಿ ರತ್ನಾನ್ಯಾಭರಣಾನಿ ಚ |
ನ್ಯದಧುಃ ಪಾಂಡವಾ ರಾಜನ್ನಾಶ್ರಮೇ ವೃಷಪರ್ವಣಃ ||22||
ಅನಂತರ ಪಾಂಡವರು ತಮ್ಮಲ್ಲಿದ್ದ ಹೆಚ್ಚಿನ ವಸ್ತ್ರಗಳನ್ನೂ, ಯಜ್ಞಪಾತ್ರೆಗಳನ್ನೂ, ರತ್ನಗಳನ್ನೂ ಮತ್ತು ಆಭರಣಗಳನ್ನೂ ವೃಷಪರ್ವನ ಆಶ್ರಮದಲ್ಲಿಯೇ ಇಟ್ಟರು.
ಅತೀತಾನಾಗತೇ ವಿದ್ವಾನ್ ಕುಶಲಃ ಸರ್ವಧರ್ಮವಿತ್ |
ಅನ್ವಶಾಸತ್ ಸ ಧರ್ಮಜ್ಞಃ ಪುತ್ರವದ್ ಭರತರ್ಷಭಾನ್ ||23||
ಅತೀತಾನಾಗತ ಜ್ಞಾನಿಯಾದ, ಧರ್ಮಜ್ಞನಾದ, ಸರ್ವಧರ್ಮವನ್ನೂ ತಿಳಿದ, ವಿದ್ವಾಂಸನಾದ, ನಿಪುಣನಾದ ವೃಷಪರ್ವನು ಆ ಭರತರ್ಷಭರಿಗೆ ತನ್ನ ಮಕ್ಕಳಂತೆ ಉಪದೇಶ ಮಾಡಿದನು.
ತೇಽನುಜ್ಞಾತಾ ಮಹಾತ್ಮಾನಃ ಪ್ರಯಯುರ್ದಿಶಮುತ್ತರಾಮ್ |
ಕೃಷ್ಣಯಾ ಸಹಿತಾ ವೀರಾ ಬ್ರಾಹ್ಮಣೈಶ್ಚ ಮಹಾತ್ಮಭಿಃ ||24||
ವೃಷಪರ್ವನಿಂದ ಅನುಮತಿಯನ್ನು ಪಡೆದ ಆ ಮಹಾತ್ಮರಾದ ವೀರರು, ಮಹಾತ್ಮರಾದ ಬ್ರಾಹ್ಮಣರೊಡಗೂಡಿ ದ್ರೌಪದಿಯಿಂದ ಸಹಿತರಾಗಿ ಉತ್ತರ ದಿಕ್ಕಿಗೆ ಹೊರಟರು.
ತಾನ್ ಪ್ರಸ್ಥಿತಾನಭ್ಯಗಚ್ಛದ್ ವೃಷಪರ್ವಾ ಮಹೀಪತಿಃ |
ಉಪನ್ಯಸ್ಯ ಮಹಾತೇಜಾ ವಿಪ್ರೇಭ್ಯಃ ಪಾಂಡವಾಂಸ್ತದಾ ||25||
ರಾಜರ್ಷಿಯೂ, ಮಹಾತೇಜಸ್ವಿಯೂ ಆದ ವೃಷಪರ್ವನು ಪಾಂಡವರನ್ನು ಜೊತೆಯಲ್ಲಿ ಹೊರಟ ಬ್ರಾಹ್ಮಣರಿಗೆ ಒಪ್ಪಿಸಿ ಅವರ ಜೊತೆಯಲ್ಲಿ ಹೊರಟನು.
ಅನುಸಂಸಾರ್ಯ ಕೌಂತೇಯಾನಾಶೀರ್ಭಿರಭಿನಂದ್ಯ ಚ |
ವೃಷಪರ್ವಾ ನಿವವೃತೇ ಪಂಥಾನಮುಪದಿಶ್ಯ ಚ ||26||
ವೃಷಪರ್ವನು ಕೌಂತೇಯರ ಜೊತೆಯಲ್ಲಿ ಸ್ವಲ್ಪ ದೂರ ಹೋಗಿ ಅವರನ್ನು ಆಶೀರ್ವಾದಗಳಿಂದ ಅಭಿನಂದಿಸಿ ಅವರಿಗೆ ಮಾರ್ಗವನ್ನು ಉಪದೇಶ ಮಾಡಿ ಅಲ್ಲಿಂದ ಹಿಂದಿರುಗಿದನು.
ನಾನಾಮೃಗಗಣೈರ್ಜುಷ್ಟಂ ಕೌಂತೇಯಃ ಸತ್ಯವಿಕ್ರಮಃ |
ಪದಾತಿರ್ಭ್ರಾತೃಭಿಃ ಸಾರ್ಧಂ ಪ್ರಾತಿಷ್ಠತ ಯುಧಿಷ್ಠಿರಃ ||27||
ಸತ್ಯವಿಕ್ರಮನಾದ ಕುಂತೀಪುತ್ರನಾದ ಯುಧಿಷ್ಠಿರನು ನಾನಾ ಮೃಗಗಳಿಂದ ಕೂಡಿದ ಮಾರ್ಗದಲ್ಲಿ ತಮ್ಮಂದಿರಿಂದ ಸಹಿತನಾಗಿ ಕಾಲುನಡಿಗೆಯಿಂದಲೇ ಮುಂದೆ ಹೊರಟನು.
ನಾನಾದ್ರುಮನಿರೋಧೇಷು ವಸಂತಃ ಶೈಲಸಾನುಷು |
ಪರ್ವತಂ ವಿವಿಶುಃ ಶ್ವೇತಂ ಚತುರ್ಥೇಽಹನಿ ಪಾಂಡವಾಃ ||28||
ಪರ್ವತದ ಪ್ರದೇಶಗಳಲ್ಲಿ ಅನೇಕ ಮರಗಳ ಸಮೂಹದಲ್ಲಿ ಪಾಂಡವರು ವಾಸವನ್ನು ಮಾಡುತ್ತಾ ನಾಲ್ಕನೆಯ ದಿವಸ ಶ್ವೇತಪರ್ವತವನ್ನು ತಲುಪಿದರು.
ಮಹಾಭ್ರಘನಸಂಕಾಶಂ ಸಲಿಲೋಪಹಿತಂ ಶುಭಮ್ |
ಮಣಿಕಾಂಚನರೂಪ್ಯಸ್ಯ ಶಿಲಾನಾಂ ಚ ಸಮುಚ್ಚಯಮ್ ||29||
ರೂಪಂ ಹಿಮವತಃ ಪ್ರಸ್ಥಂ ಬಹುಕಂದರನಿರ್ಝರಮ್ |

ಶಿಲಾವಿಭಂಗವಿಕಟಂ ಲತಾಪಾದಪಸಂಕುಲಮ್ ॥30॥
ಅವರು ದೊಡ್ಡ ಮೋಡಗಳ ರಾಶಿಯಂತಿದ್ದ, ಎಲ್ಲ ಕಡೆಯಿಂದಲೂ ಜಲದಿಂದ ತುಂಬಿದ, ಶುಭಪ್ರದವಾದ ಮಣಿ, ಸುವರ್ಣ, ರಜತಮಯವಾದ ಶಿಲೆಗಳ ರಾಶಿಗಳನ್ನು ಹೊಂದಿದ್ದ, ಹಿಮದಿಂದ ಕೂಡಿದ, ಅನೇಕ ಗುಹೆಗಳುಳ್ಳ, ಲತಾ ಸಂಕುಲವಾದ, ಅನೇಕವಿಧವಾದ ಶಿಲೆಗಳಿಂದ ಮನೋಹರವಾದ ಆ ಎತ್ತರದ ಪ್ರದೇಶವನ್ನು ಪ್ರವೇಶಿಸಿದರು.
ತೇ ಸಮಾಸಾದ್ಯ ಪಂಥಾನಂ ಯಥೋಕ್ತಂ ವೃಷಪರ್ವಣಾ |
ಅನುಸಸ್ರುರ್ಯಥೋದ್ದೇಶಂ ಪಶ್ಯಂತೋ ವಿವಿಧಾನ್ನಗಾನ್ ॥31॥
ಅವರು ವೃಷಪರ್ವನಿಂದ ಉಪದಿಷ್ಟವಾದ ಮಾರ್ಗದಲ್ಲಿ ಎತ್ತರ ಎತ್ತರಗಳಲ್ಲಿ ಅನೇಕ ಪರ್ವತಗಳನ್ನು ನೋಡುತ್ತಾ ಮುಂದೆ ನಿಧಾನವಾಗಿ ಸಾಗಿದರು.
ಉಪರ್ಯುಪರಿ ಶೈಲಸ್ಯ ಗುಹಾಃ ಪರಮದುರ್ಗಮಾಃ |
ಸುದುರ್ಗಮಾಂಸ್ತೇ ಸುಬಹೂನ್ ಸುಖೇನೈವಾಭಿಚಕ್ರಮುಃ ॥32॥
ಪರ್ವತದ ಮೇಲ್ಭಾಗಗಳಲ್ಲಿ ಅತ್ಯಂತ ದುರ್ಗಮವಾದ ಗುಹೆಗಳಿದ್ದವು. ಅವರು ಅಂತಹ ಅನೇಕ ಗುಹೆಗಳನ್ನು ಅನಾಯಾಸದಿಂದ ದಾಟಿ ಮುಂದೆ ಹೋದರು.
ಧೌಮ್ಯಃ ಕೃಷ್ಣಾ ಚ ಪಾರ್ಥಾಶ್ಚ ಲೋಮಶಶ್ಚ ಮಹಾನೃಷಿಃ |
ಅಗಚ್ಛನ್ ಸಹಿತಾಸ್ತತ್ರ ನ ಕಶ್ಚಿದವಹೀಯತೇ ॥33॥
ಧೌಮ್ಯರು, ದ್ರೌಪದಿ, ಪಾಂಡವರು ಮತ್ತು ಮಹರ್ಷಿಗಳಾದ ಲೋಮಶರು ಎಲ್ಲರೂ ಜೊತೆಯಲ್ಲಿಯೇ ಹೋದರು. ಯಾರೂ ಹಿಂದೆ ಉಳಿಯಲಿಲ್ಲ.
ತೇ ಮೃಗದ್ವಿಜಸಂಘುಷ್ಟಂ ನಾನಾದ್ರುಮಲತಾಯುತಮ್ |
ಶಾಖಾಮೃಗಗಣೈಶ್ಚೈವ ಸೇವಿತಂ ಸುಮನೋರಮಮ್ ॥34॥
ಪುಣ್ಯಂ ಪದ್ಮಸರೋಯುಕ್ತಂ ಸಪಲ್ವಲಮಹಾವನಮ್ |
ಉಪತಸ್ಥುರ್ಮಹಾಭಾಗಾ ಮಾಲ್ಯವಂತಂ ಮಹಾಗಿರಿಮ್ ॥35॥
ಆ ಮಹಾನುಭಾವರು ನಾನಾ ಮೃಗಪಕ್ಷಿಗಳಿಂದ ತುಂಬಿದ, ನಾನಾ ವೃಕ್ಷ ಲತೆಗಳಿಂದ ತುಂಬಿದ, ಅನೇಕ ಕಪಿಗಳಿಂದ ಸೇವಿತವಾದ, ಪದ್ಮಸರೋವರದಿಂದ ಯುಕ್ತವಾದ, ಶೀತಲ ಭೂಪ್ರದೇಶದಿಂದ ಯುಕ್ತವಾದ, ಅತ್ಯಂತ ಮನೋಹರವಾದ ಪವಿತ್ರವಾದ ಮಾಲ್ಯವಾನ್ ಮಹಾಪರ್ವತವನ್ನು ತಲುಪಿದರು.
ತತಃ ಕಿಂಪುರುಷಾವಾಸಂ ಸಿದ್ಧಚಾರಣಸೇವಿತಮ್ |
ದದೃಶುರ್ಹೃಷ್ಟರೋಮಾಣಃ ಪರ್ವತಂ ಗಂಧಮಾದನಮ್ ॥36॥
ವಿದ್ಯಾಧರಾನುಚರಿತಂ ಕಿನ್ನರೀಭಿಸ್ತಥೈವ ಚ |
ಗಜಸಂಘಸಮಾವಾಸಂ ಸಿಂಹವ್ಯಾಘ್ರಗಣಾಯುತಮ್ |
ಶರಭೋನ್ನಾದಸಂಘುಷ್ಟಂ ನಾನಾಮೃಗನಿಷೇವಿತಮ್ ॥37॥
ಅಲ್ಲಿಂದ ಮುಂದೆ ಕಿಂಪುರುಷರ ವಾಸಸ್ಥಾನವಾದ, ಸಿದ್ಧಚಾರಣರಿಂದ ಸೇವಿತರಾದ ವಿದ್ಯಾಧರ ಮತ್ತು ಕಿನ್ನರಿಯರ ಸಂಚಾರವಿರುವ, ಆನೆಯ ಸಮೂಹಗಳಿಂದಲೂ, ಸಿಂಹ ವ್ಯಾಘ್ರಗಳ ಸಮೂಹದಿಂದಲೂ ಕೂಡಿದ, ನಾನಾ ಮೃಗಗಳಿಂದ ನಿಶೇವಿತವಾದ, ಶರಭ ಮೃಗಗಳ ಗರ್ಜನೆಗಳಿಂದ ಕೂಡಿದ, ಗಂಧಮಾದನ ಪರ್ವತವನ್ನು ರೋಮಾಂಚಿತರಾಗಿ ನೋಡಿದರು.
ತೇ ಗಂಧಮಾದನವನಂ ತನ್ನಂದನವನೋಪಮಮ್ |
ಮುದಿತಾಃ ಪಾಂಡುತನಯಾ ಮನೋಹೃದಯನಂದನಮ್ ॥38॥
ವಿವಿಶುಃ ಕ್ರಮಶೋ ವೀರಾಃ ಶರಣ್ಯಂ ಶುಭಕಾನನಮ್ ॥39॥
ವೀರರಾದ ಪಾಂಡುತನಯರು ಸಂತೋಷದಿಂದ ಕೂಡಿದವರಾಗಿ ನಂದನ ವನದಂತಿದ್ದ ಮನೋಹೃದಯ ಸಂತೋಷಕಾರಿಯಾದ, ಶುಭವಾದ, ಎಲ್ಲರಿಗೂ ಆಶ್ರಯವನ್ನು ಕೊಡುವ. ಆ ಗಂಧಮಾದನ ಪರ್ವತದ ವನವನ್ನು ಕ್ರಮವಾಗಿ ಪ್ರವೇಶಿಸಿದರು.
ದ್ರೌಪದೀಸಹಿತಾ ವೀರಾಸ್ತೈಶ್ಚ ವಿಪ್ರೈರ್ಮಹಾತ್ಮಭಿಃ |
ಶೃಣ್ವಂತಃ ಪ್ರೀತಿಜನನಾನ್ ವಲ್ಗೂನ್ ಮದಕಾಲಾಂಘುಭಾನ್ ॥40॥
ದ್ರೌಪದಿಯಿಂದಲೂ ಮತ್ತು ಮಹಾತ್ಮರಾದ ಬ್ರಾಹ್ಮಣರಿಂದಲೂ ಸಹಿತರಾದ ಆ ವೀರರು ಮನಸ್ಸಿಗೆ ಸಂತೋಷವನ್ನು ಕೊಡುವ ಮಧುರವಾದ ಪಕ್ಷಿಗಳ ಸ್ವರವನ್ನು ಕೇಳುತ್ತಾ ಮುಂದೆ ನಡೆದರು.
ಶ್ರೋತ್ರರಮ್ಯಾನ್ ಸುಮಧುರಾನ್ ಶಬ್ದಾನ್ ಖಗಮುಖೇರಿತಾನ್ |
ಸರ್ವರ್ತುಫಲಭಾರಾಢ್ಯಾನ್ ಸರ್ವರ್ತುಕುಸುಮೋಜ್ಜ್ವಲಾನ್ ॥41॥
ಪಶ್ಯಂತಃ ಪಾದಪಾಂಶ್ಚಾಪಿ ಫಲಭಾರಾವನಾಮಿತಾನ್ |
ಆಮ್ರಾನಾಮ್ರಾತಕಾನ್ ಭವ್ಯಾನ್ ನಾರಿಕೇಲಾನ್ ಸತಿಂದುಕಾನ್ ॥42॥
ಅನೇಕ ಪಕ್ಷಿಗಳಿಂದ ಉಚ್ಚರಿಸಲ್ಪಟ್ಟ ಶ್ರೋತ್ರ ಮಧುರವಾದ ಶಬ್ದಗಳನ್ನು ಕೇಳುತ್ತಾ ಎಲ್ಲ ಋತುಗಳಲ್ಲಿಯೂ ಫಲಪುಷ್ಪಗಳನ್ನು ಕೊಡುವ ಫಲಭಾರದಿಂದ ಬಗ್ಗಿರುವ ಆಮ್ರ ಆಮ್ರಾಂತಕ, ನಾರಿಕೇಳ, ತಿಂಧುಕ ಮೊದಲಾದ ಭವ್ಯವಾದ ಮರಗಳನ್ನು ನೋಡುತ್ತಾ ಅವರು ಪ್ರವೇಶಿಸಿದರು.
ಮುಂಜಾತಕಾಂಸ್ತಥಾಂಜೀರಾನ್ ದಾಡಿಮಾನ್ ಬೀಜಪೂರಕಾನ್ |
ಪನಸಾಂಲ್ಲಕುಚಾನ್ ಮೋಚಾನ್ ಖರ್ಜೂರಾನಾಮ್ಲವೇತಸಾನ್ ॥
ಪಾರಾವತಾಂಸ್ತಥಾ ಕ್ಷೌದ್ರ್ಯಾನ್ ನೀಪಾಂಶ್ಚಾಪಿ ಮನೋರಮಾನ್ |

ಬಿಲ್ವಾನ್ ಕಪಿತ್ಥಾನ್ ಜಂಬೂಂಶ್ಚ ಕಾಶ್ಮಿರೀರ್ಬದರೀಸ್ತಥಾ ॥44॥
ಮುಂಜಾತಕ ಅಂಜೀರ ದಾಡಿಮ ಬೀಜಪೂರಕ ಪನಸ ಲಕುಚ ಮೋಚ ಖರ್ಜೂರ ಅನಾಮ್ಲವೇತಸ ಪಾರಾವತ ಕ್ಷೌದ್ರ
ಮನೋಹರವಾದ ನೀಪ ಬಿಲ್ವ ಕಪಿತ್ಥಾ ಜಂಬೂ ಕಾಶ್ಮಿರೀ ಬದರೀ;
ಪ್ಲಕ್ಷಾನುದುಂಬರಾವಟಾನಶ್ವತ್ಥಾನ್ ಕ್ಷೀರಿಕಾಂಸ್ತಥಾ |
ಭಲ್ಲಾತಕಾನಾಮಲಕೀರ್ಹರೀತಕವಿಭೀತಕಾನ್ ॥45॥
ಪ್ಲಕ್ಷ, ಉದುಂಬರ, ವಟ, ಅಶ್ವತ್ಥ, ಕ್ಷೀರಿಕ, ಭಲ್ಲಾತಕ, ಆಮಲಕ, ಹರೀತಕ, ವಿಭೀತಕ;
ಇಂಗುದಾನ್ ಕರಮರ್ದಾಂಶ್ಚ ತಿಂದುಕಾಂಶ್ಚ ಮಹಾಫಲಾನ್ |
ಏತಾನನ್ಯಾಂಶ್ಚ ವಿವಿಧಾನ್ ಗಂಧಮಾದನಸಾನುಷು |
ಫಲೈರಮೃತಕಲ್ಪೈಸ್ತಾನಾಚಿತಾನ್ ಸ್ವಾದುಭಿಸ್ತರೂನ್ ॥46॥
ಇಂಗುದ, ಕರಮರ್ದ, ತಿಂದುಕ ಮೊದಲಾದ ಇನ್ನೂ ಅನೇಕ ಫಲಭರಿತವಾದ ವೃಕ್ಷಗಳನ್ನು ಗಂಧಮಾದನ ಪರ್ವತದ ಶಿಖರಗಳಲ್ಲಿ ಅವರು ನೋಡಿದರು. ಆ ವೃಕ್ಷಗಳು ಅಮೃತಕಲ್ಪವಾದ ರಸಗಳನ್ನು ಹೊಂದಿದ ಫಲಗಳಿಂದ ತುಂಬಿ ಸೂಸುತ್ತಿದ್ದವು.
ತಥೈವ ಚಂಪಕಾಶೋಕಾನ್ ಕೇತಕಾನ್ ಬಕುಲಾಂಸ್ತಥಾ ॥47॥
ಪುನ್ನಾಗಾನ್ ಸಪ್ತಪರ್ಣಾಂಶ್ಚ ಕರ್ಣಿಕಾರಾನ್ ಸಕೇತಕಾನ್ |
ಪಾಟಲಾನ್ ಕುಟಜಾನ್ ರಮ್ಯಾನ್ ಮಂದಾರೇಂದೀವರಾಂಸ್ತಥಾ |
ಪಾರಿಜಾತಾನ್ ಕೋವಿದಾರಾನ್ ದೇವದಾರುದ್ರುಮಾಂಸ್ತಥಾ |
ಶಾಲಾಂಸ್ತಾಲಾಂಸ್ತಮಾಲಾಂಶ್ಚ ಪಿಪ್ಪಲಾನ್ ಹಿಂಗುಕಾಂಸ್ತಥಾ |
ಶಾಲ್ಮಲೀಃ ಕಿಂಶುಕಾಶೋಕಾನ್ಶಿಂಶಪಾಃ ಸರಲಾಂಸ್ತಥಾ ॥49॥
ಅದರಂತೆ; ಪುನ್ನಾಗ, ಸಪ್ತಪರ್ಣ, ಕರ್ಣಿಕಾರ, ಕೇತಕ, ಪಾಟಲ, ಕುಟಜ, ರಮ್ಯ, ಮಂದಾರ, ಇಂದೀವರ, ಪಾರಿಜಾತ, ಕೋವಿದಾರ, ದೇವದಾರು, ಶಾಲ, ತಾಲ, ತಮಾಲ, ಪಿಪ್ಪಲ, ಹಿಂಗುಕ, ಶಾಲ್ಮಲಿ, ಕಿಂಶುಕ, ಅಶೋಕ, ಶಿಂಶಪ, ಸರಳ ಮೊದಲಾದ ಪುಷ್ಪವಲ್ಲಿಗಳಿಂದ ಕೂಡಿದ ವೃಕ್ಷಗಳಿಂದ ಕೂಡಿದ ವನವನ್ನು ನೋಡಿದರು.
ಚಕೋರೈಃ ಶತಪತ್ರೈಶ್ಚ ಭೃಂಗರಾಜೈಸ್ತಥಾ ಶುಕೈಃ ॥50॥
ಕೋಕಿಲೈಃ ಕಲವಿಂಕೈಶ್ಚ ಹಾರೀತೈರ್ಜೀವಜೀವಿಕೈಃ |
ಪ್ರಿಯಕೈಶ್ಚಾತಕೈಶ್ಚೈವ ತಥಾನ್ಯೈರ್ವಿವಿಧೈಃ ಖಗೈಃ |
ಶ್ರೋತ್ರರಮ್ಯಂ ಸುಮಧುರಂ ಕೂಜದ್ಭಿಶ್ಚಾಪ್ಯಧಿಷ್ಠಿತಾನ್ ॥51॥
ಚಕೋರ, ಶತಪತ್ರ, ಭೃಂಗರಾಜ, ಶುಕ, ಕೋಕಿಲ, ಕಲವಿಂಕ, ಹಾರೀತ, ಚಕೋರ, ಪ್ರಿಯಕ, ಚಾತಕ ಮತ್ತು ಇನ್ನೂ ಅನೇಕ ವಿಧವಿಧವಾದ ಕರ್ಣಮನೋಹರವಾದ ಸುಮಧುರವಾದ ಗಾನವನ್ನು ಮಾಡುವ ಪಕ್ಷಿಗಳಿಂದ ಅಧಿಷ್ಠಿತವಾದ ವನಪ್ರದೇಶವನ್ನು ನೋಡಿದರು.
ಸರಾಂಸಿ ಚ ಮನೋಜ್ಞಾನಿ ಸಮಂತಾಜ್ಜಲಚಾರಿಭಿಃ ॥52॥
ಕುಮುದೈಃ ಪುಂಡರೀಕೈಶ್ಚ ತಥಾ ಕೋಕನದೋತ್ಪಲೈಃ |
ಕಲ್ಹಾರೈಃ ಕಮಲೈಶ್ಚೈವ ಆಚಿತಾನಿ ಸಮಂತತಃ ॥53॥
ಕುಮುದ, ಪುಂಡರೀಕ, ಕೋಕನದ, ಉತ್ಪಲ, ಕಲ್ಹಾರ, ಕಮಲ ಮೊದಲಾದ ಪುಷ್ಪಗಳಿಂದಲೂ, ಜಲಚರ ಪಕ್ಷಿಗಳಿಂದಲೂ ಅಲಂಕೃತವಾದ ಸರೋವರಗಳನ್ನು ನೋಡಿದರು.
ಕಾದಂಬೈಶ್ಚಕ್ರವಾಕೈಶ್ಚ ಕುರರೈರ್ಜಲಕುಕ್ಕುಟೈಃ |
ಕಾರಂಡವೈಃ ಪ್ಲವೈರ್ಹಂಸೈರ್ಬಕೈರ್ಮದ್ಗುಭಿರೇವ ಚ ॥54॥
ಏತೈಶ್ಚಾನ್ಯೈಶ್ಚ ಕೀರ್ಣಾನಿ ಸಮಂತಾಜ್ಜಲಚಾರಿಭಿಃ |
ಕಾದಂಬ, ಚಕ್ರವಾಕ, ಕುರರ, ಜಲಕುಕ್ಕುಟ, ಕಾರಂಡವ, ಪ್ಲವ, ಹಂಸ, ಬಕ, ಮದ್ಗು ಮೊದಲಾದ ಜಲಪಕ್ಷಿಗಳಿಂದಲೂ ಕೂಡಿದ ಸರೋವರಗಳನ್ನು ನೋಡಿದರು.
ಹೃಷ್ಟೈಸ್ತಥಾ ತಾಮರಸರಸಾಸವಮದಾಲಸೈಃ ॥55॥
ಪದ್ಮೋದರಚ್ಯುತರಜಃಕಿಂಜಲ್ಕಾರುಣರಂಜಿತೈಃ |
ಮಂಜುಸ್ವರೈರ್ಮಧುಕರೈರ್ವಿರುತಾನ್ ಕಮಲಾಕರಾನ್ |
ಅಪಶ್ಯಂಸ್ತೇ ನರವ್ಯಾಘ್ರಾ ಗಂಧಮಾದನಸಾನುಷು ॥56॥
ಕಮಲದ ಹೂವಿನ ಮಕರಂದವನ್ನು ಪಾನಮಾಡಿ ಮದಿಸಿ ಸಂತುಷ್ಟವಾದ, ಪದ್ಮದ ಮಧ್ಯಭಾಗದಿಂದ ಚೆಲ್ಲಿದ ಕೇಸರಗಳ ಕೆಂಪುಬಣ್ಣದಿಂದ ರಂಜಿತವಾದ, ದುಂಬಿಗಳ ಝೇಂಕಾರದಿಂದ ತುಂಬಿದ ಸರೋವರಗಳನ್ನು ನರವ್ಯಾಘ್ರರಾದ ಅವರು ಗಂಧಮಾದನ ಪರ್ವತದ ಶಿಖರಗಳಲ್ಲಿ ನೋಡಿದರು.
ತಥೈವ ಪದ್ಮಷಂಡೈಶ್ಚ ಮಂಡಿತಾಂಶ್ಚ ಸಮಂತತಃ ॥57॥
ಶಿಖಂಡಿನೀಭಿಃ ಸಹಿತಾಂಲ್ಲತಾಮಂಡಲಕೇಷು ಚ |
ಮೇಘತೂರ್ಯರವೋದ್ದಾಮಮದನಾಕುಲಿತಾನ್ ಭೃಶಮ್ ॥58॥
ಪದ್ಮಲತೆಗಳಿಂದ ಎಲ್ಲಕಡೆಯಲ್ಲಿಯೂ ಅಲಂಕೃತವಾದ ಲತಾ ಸಮೂಹಗಳಲ್ಲಿ ಹೆಣ್ಣು ನವಿಲು ಪಕ್ಷಿಗಳಿಂದ ಸಹಿತವಾದ, ಮೇಘದಂತೆ ತೂರ್ಯದಂತೆ ಶ್ರೇಷ್ಠವಾಗಿ ಮಧುರಸ್ವರಗಳನ್ನು ಮಾಡುವ ಗಂಡುನವಿಲುಗಳ ಮಧುರವಾದ ಝೇಂಕಾರರವದಿಂದ ಶೋಭಿತವಾದಂತಹ;

ಕೃತ್ವೈವ ಕೇಕಾಮಧುರಂ ಸಂಗೀತಂ ಮಧುರಸ್ವರಮ್ |
ಚಿತ್ರಾನ್ ಕಲಾಪಾನ್ ವಿಸ್ತೀರ್ಯ ಸವಿಲಾಸಾನ್ ಮದಾಲಸಾನ್ ||
ಮಯೂರಾನ್ ದದೃಶುರ್ಹೃಷ್ಟಾನ್ ನೃತ್ಯತೋ ವನಲಾಲಸಾನ್ |
ಕಾಂತಾಭಿಃ ಸಹಿತಾನನ್ಯಾನಪಶ್ಯನ್ ರಮತಸ್ಸುಖಮ್ ||60||
ತಮ್ಮ ಸುಂದರವಾದ ಗರಿಗಳನ್ನು ಕೆದರಿಕೊಂಡು ವಿಲಾಸದಿಂದ ಮತ್ತು ಮದದಿಂದ ನರ್ತನವನ್ನು ಮಾಡುತ್ತಾ ಕಾಡಿನ ಅಧಿಕ ಪ್ರೇಮದಿಂದ ತಮ್ಮ ಕಾಂತೆಯರ ಜೊತೆಯಲ್ಲಿ ಸಹಿತರಾದಂತಹ ಸಂತೋಷದಲ್ಲಿರುವ ನವಿಲುಗಳನ್ನು ನೋಡಿದರು.
ವಲ್ಲೀಲತಾಸಂಕಟೇಷು ಕುಟಜೇಷು ಸ್ಥಿತಾಂಸ್ತಥಾ |
ಕಾಂಶ್ಚಿತ್ ಪ್ರಿಯಾಭಿಃ ಸಹಿತಾನ್ ರಮಮಾಣಾನ್ ಕಲಾಪಿನಃ ||61||
ಕಲಾಪರುಚಿರಾಟೋಪನಿಚಿತಾನ್ ಮುಕುಟಾನಿವ |
ವಿವರೇಷು ತರೂಣಾಂ ಚ ರುಚಿರಾನ್ ದದೃಶುಶ್ಚ ತೇ ||62||
ಲತಾಗುಲ್ಮಗಳ ನಿಬಿಡ ಪ್ರದೇಶಗಳಲ್ಲಿಯೂ ಮತ್ತು ಪರ್ಣಕುಟಿಗಳಂತಿರುವ ಸ್ಥಳಗಳಲ್ಲಿಯೂ ತಮ್ಮ ಪ್ರಿಯೆಯಿಂದ ಸಹಿತವಾದ ತಲೆಯ ಮೇಲೆ ಕಿರೀಟದಂತಿರುವ ಶಿಖೆಯನ್ನು ಹೊತ್ತಿರುವ ಶ್ರೇಷ್ಠವಾದ ನವಿಲುಗರಿಗಳಿಂದ ಸುಂದರವಾದ ನವಿಲುಗಳನ್ನು ಅಲ್ಲಿಯೂ ಮತ್ತು ವೃಕ್ಷಗಳ ಪೊಟರೆಗಳಲ್ಲಿಯೂ ನೋಡಿದರು.
ಸಿಂಧುವಾರಾಂಸ್ತಥೋದಾರಾನ್ ಮನ್ಮಥಸ್ಯೇವ ತೋಮರಾನ್ |
ಸುವರ್ಣವರ್ಣಕುಸುಮಾನ್ ಗಿರೀಣಾಂ ಶಿಖರೇಷು ಚ |
ಕರ್ಣಿಕಾರಾನ್ ವಿಕಸಿತಾನ್ ಕರ್ಣಪೂರಾನಿವೋತ್ತಮಾನ್ ||63||
ತಥಾಪಶ್ಯನ್ ಕುರಬಕಾನ್ ವನರಾಜಿಷು ಪುಷ್ಪಿತಾನ್ |
ಕಾಮವಶ್ಯೌತ್ಸುಕ್ಯಕರಾನ್ ಕಾಮಸ್ಯೇವ ಶರೋತ್ಕರಾನ್ ||64||
ಸಿಂಧುವಾರ, ಉದಾರ ಮೊದಲಾದ ಮನ್ಮಥನ ಆಯುಧದಂತೆ ತೋರುತ್ತಿದ್ದ, ಸುವರ್ಣವರ್ಣದ ಕುಸುಮಗಳಿಂದ ಕರ್ಣಾಭರಣದಂತೆ ಶೋಭಿಸು, ಅರಳಿದ ಕರ್ಣಿಕಾರ ಪುಷ್ಪಗಳ ವೃಕ್ಷಗಳನ್ನು ಮತ್ತು ಕುರಬಕ ಪುಷ್ಪ ವೃಕ್ಷಗಳನ್ನೂ ಮನ್ಮಥನ ಬಾಣಗಳ ಸಮೂಹದಂತೆ ತೋರುತ್ತಿದ್ದ ಕಾಮವರ್ಧಕವಾದ ಅನೇಕ ಸುಂದರವಾದ ಮರಗಳನ್ನೂ ಅವರು ನೋಡಿದರು.
ತಥೈವ ವನರಾಜೀನಾಮುದಾರಾನ್ ರಚಿತಾನಿವ |
ವಿರಾಜಮಾನಾಂಸ್ತೇಽಪಶ್ಯಂಸ್ತಿಲಕಾಂಸ್ತಿಲಕಾನಿವ ||65||
ಅದರಂತೆ ವನಶ್ರೇಣಿಗೆ ತಿಲಕವಿಟ್ಟಂತೆ ಕಾಣುವ ಉದಾರವಾದ ತಿಲಕ ವೃಕ್ಷಗಳ ಶ್ರೇಣಿಗಳನ್ನು ನೋಡಿದರು.
ತಥಾನಂಗಶರಾಕಾರಾನ್ ಸಹಕಾರಾನ್ ಮನೋರಮಾನ್ |
ಅಪಶ್ಯನ್ ಭ್ರಮರಾರಾವಾನ್ ಮಂಜರೀಭಿರ್ವಿರಾಜಿತಾನ್ ||66||
ಅದರಂತೆ ಮನ್ಮಥನ ಬಾಣದಂತಿರುವ ಭ್ರಮರಗಳ ಝೇಂಕಾರದಿಂದ ಕೂಡಿರುವ ಪುಷ್ಪಮಂಜರಿಗಳಿಂದ ವಿರಾಜಿತವಾದ ಸುಂದರವಾದ ಸಹಕಾರ ವೃಕ್ಷಗಳನ್ನೂ ನೋಡಿದರು.
ಹಿರಣ್ಯಸದೃಶೈಃ ಪುಷ್ಪೈರ್ದಾವಾಗ್ನಿಸದೃಶೈರಪಿ |
ಲೋಹಿತೈರಂಜನಾಭೈಶ್ಚ ವೈದೂರ್ಯಸದೃಶೈರಪಿ ||67||
ತಥಾ ಶಾಲಾಂಸ್ತಮಾಲಾಂಶ್ಚ ಪಾಟಲಾನ್ ಬಕುಲಾನಪಿ |
ಮಾಲಾ ಇವ ಸಮಾಸಕ್ತಾಃ ಶೈಲಾನಾಂ ಶಿಖರೇಷು ಚ ||68||
ಚಿನ್ನದ ಬಣ್ಣವನ್ನು ಹೋಲುವ ಮತ್ತು ದಾವಾಗ್ನಿಯ ಬಣ್ಣವನ್ನು ಹೋಲುವ ಕೆಂಪು, ಕಪ್ಪು ಮತ್ತು ವೈಢೂರ್ಯ ಸದೃಶವಾದ ಪುಷ್ಪಗಳಿಂದ ಕೂಡಿದ ಪರ್ವತ ಶಿಖರಗಳಿಗೆ ಹಾಕಿದ ಮಾಲೆಗಳಂತೆ ತೋರುವ ಶಾಲ, ತಮಾಲ, ಪಾಟಲ, ಬಕುಲ ಮೊದಲಾದ ವೃಕ್ಷಶ್ರೇಣಿಗಳನ್ನು ನೋಡಿದರು.
ಏವಂ ಕ್ರಮೇಣ ತೇ ವೀರಾ ವೀಕ್ಷಮಾಣಾಃ ಸಮಂತತಃ |
ಗಜಸಂಘಸಮಾಕೀರ್ಣಂ ಸಿಂಹವ್ಯಾಘ್ರಸಮಾಕುಲಮ್ ||69||
ಹೀಗೆ ಆ ವೀರರು ಕ್ರಮವಾಗಿ ಸುತ್ತಲೂ ಇದ್ದ ಸಿಂಹವ್ಯಾಘ್ರಗಜಗಳ ಸಮೂಹದಿಂದ ಆಕ್ರಾಂತವಾದ ಪ್ರದೇಶಗಳನ್ನು ನೋಡುತ್ತಾ ಮುಂದೆ ಸಾಗಿದರು.
ಪೀತಾ ಭಾಸ್ಕರವರ್ಣಾಭಾ ಬಭೂವುರ್ವನರಾಜಯಃ ||70||
ನಾತ್ರ ಕಂಟಕಿನಃ ಕೇಚಿನ್ನ ಚ ವಿದ್ಯಂತ್ಯಪುಷ್ಪಿತಾಃ |
ಸ್ನಿಗ್ಧಪತ್ರಫಲಾ ವೃಕ್ಷಾ ಗಂಧಮಾದನಸಾನುಷು ||70.1||
ಸರ್ವರ್ತುಫಲಪುಷ್ಪಾಢ್ಯಾಂ ಗಂಧಮಾದನಸಾನುಷು ||
ಭ್ರಮರಾರಾವಮಧುರಾ ನಳಿನೀಃ ಫುಲ್ಲಪಂಕಜಾ ||70.2||
ಆ ವನರಾಜಿಗಳು ಹಳದಿಯಾಗಿ ಸಾಯಂಕಾಲದ ಸೂರ್ಯನ ಬಣ್ಣವನ್ನು ಹೋಲುತ್ತಿದ್ದವು. ಅಲ್ಲಿ ಮುಳ್ಳಿದ್ದ ಮರಗಳಾಗಲೀ, ಪುಷ್ಪವಿಲ್ಲದ ಮರಗಳಾಗಲೀ ಯಾವುವೂ ಇರಲಿಲ್ಲ. ಗಂಧಮಾದನ ಶಿಖರಗಳಲ್ಲಿ ಎಲ್ಲ ವೃಕ್ಷಗಳೂ ಒಳ್ಳೆಯ ನೆರಳನ್ನು ಕೊಡುವ ಎಲ್ಲ ಋತುಗಳಲ್ಲೂ ಫಲಪುಷ್ಪಗಳನ್ನು ಬಿಡುವ ಮತ್ತು ನಿಬಿಡವಾದ ಛಾಯೆಯನ್ನು ಕೊಡುವ ವೃಕ್ಷಗಳಿಂದ ತುಂಬಿದ್ದಿತು. ಸರೋವರಗಳು ಭ್ರಮರಗಳ ಝೇಂಕಾರದಿಂದ ಕೂಡಿದ ಅರಳಿದ ಪಂಕಜಗಳಿಂದ ತುಂಬಿದ್ದವು.
ಪಶ್ಯಂತೀ ವಿವಿಧಾನ್ವೃಕ್ಷಾಂಸ್ತತ್ರ ಕೃಷ್ಣಾ ಮನೋಹರಾನ್ |
ಅಂತಿಕಸ್ಥಮಥ ಪ್ರೀತ್ಯಾ ಭೀಮಸೇನಮುವಾಚ ಹ |

ವಿಲೋಡ್ಯಮಾನಾಃ ಪಶ್ಯೇಮಾಃ ಕರಿಭಿಃ ಸಕರೇಣುಭಿಃ |
ಪಶ್ಯೇಮಾಂ ನಳಿನೀಂ ಚಾನ್ಯಾಂ ಕಮಲೋತ್ಪಲಮಾಲಿನೀಮ್ ॥70.3॥
ಸ್ರಗ್ವರಾಂ ವಿಗ್ರಹವತೀಂ ಸಾಕ್ಷಾತ್ಶ್ರಿಯಮಿವಾಪರಮ್ |
ನಾನಾಕುಸುಮಗಂಧಾಢ್ಯಾನ್ ಪತಸ್ಯೇಮಾಃ ಕಾನನೋತ್ತಮೇ |
ಉಪಗೀಯಮಾನಾ ಭ್ರಮರೈ ರಾಜಂತೇ ವನರಾಜಯಃ ॥70.4॥
ಅನೇಕ ವಿಧವಾದ ಸುಂದರವಾದ ಸಮೀಪದಲ್ಲಿದ್ದ ವೃಕ್ಷಗಳನ್ನು ನೋಡುತ್ತಾ ಸಂತೋಷದಿಂದ ದ್ರೌಪದಿಯು ಭೀಮಸೇನನನ್ನು ಕುರಿತು ಮಾತನಾಡಿದಳು. ಗಜಗಳಿಂದಲೂ ಮತ್ತು ಹೆಣ್ಣಾನೆಗಳಿಂದಲೂ ಕಲಕಲ್ಪಡುವ ಈ ಸರೋವರಗಳನ್ನು ನೋಡು. ಕಮಲ ಮತ್ತು ಉತ್ಪಲ ಪುಷ್ಪಗಳ ಮಾಲೆಯನ್ನು ಧರಿಸಿದ ಶರೀರವನ್ನು ಧರಿಸಿದ ಲಕ್ಷ್ಮಿಯಂತೆ ಕಂಗೊಳಿಸುತ್ತಿರುವ ಈ ಸರೋವರವನ್ನು ನೋಡು. ಈ ಶ್ರೇಷ್ಠವಾದ ಕಾಡಿನಲ್ಲಿ ಒಳ್ಳೆಯ ಪುಷ್ಪ ಪರಿಮಳಗಳಿಂದ ಕೂಡಿದ ಈ ಸರೋವರಗಳನ್ನು ನೋಡು. ಈ ವನಶ್ರೇಣಿಗಳು ಭ್ರಮರಗಳ ಮಧುರ ಝೇಂಕಾರದಿಂದ ಶೋಭಿಸುವುದನ್ನು ನೋಡು ಎಂದು ಒಬ್ಬರಿಗೊಬ್ಬರು ಹೇಳುತ್ತಾ ಅವರು ಸಾಗಿದರು.
ವಿಮಲಸ್ಫಟಿಕಾಭಾನಿ ಪಾಂಡರಚ್ಛದನೈರ್ದ್ವಿಜೈಃ |
ಕಲಹಂಸೈರುಪೇತಾನಿ ಸಾರಸಾಭಿರುತಾನಿ ಚ ॥71॥
ಸರಾಂಸಿ ಸರಿತಃ ಪಾರ್ಥಾಃ ಪಶ್ಯಂತಃ ಶೈಲಸಾನುಷು |
ವಿವಿಶುಃ ಕ್ರಮಶೋ ವೀರಾ ಅನನ್ಯಂ ಶುಭಕಾನನಮ್ |
ವಿಮಲಸ್ಫಟಿಕದಂತೆ ಇರುವ ಬಿಳಿಯ ಬಣ್ಣದ ರೆಕ್ಕೆಗಳಿಂದ ಕೂಡಿರುವ ಕಲ ಹಂಸಗಳು ಮತ್ತು ಸಾರಸ ಪಕ್ಷಿಗಳಿಂದ ಕೂಡಿದ್ದ ಸರೋವರಗಳನ್ನೂ ಮತ್ತು ನದಿಗಳನ್ನೂ ನೋಡುತ್ತಾ ಪರ್ವತಶಿಖರಗಳಲ್ಲಿ ಮುಂದೆ ಸಾಗಿದರು. ಅಸಾಧಾರಣವಾದ ಆ ಶುಭ ಕಾನನವನ್ನು ನೋಡುತ್ತಾ ಆ ವೀರರು ಕ್ರಮವಾಗಿ ಮುಂದೆ ಸಾಗಿದರು.
ಪದ್ಮೋತ್ಪಲವಿಮಿಶ್ರಾಣಿ ಸುಖಶೀತಜಲಾನಿ ಚ ॥72॥
ಗಂಧವಂತಿ ಚ ಮಾಲ್ಯಾನಿ ರಸವಂತಿ ಫಲಾನಿ ಚ |
ಅತೀವ ವೃಕ್ಷಾ ರಾಜಂತೇ ಪುಷ್ಪಿತಾಃ ಶೈಲಸಾನುಷು ॥73॥
ವಿವಿಶುಃ ಪಾಂಡವಾಃ ಸರ್ವೇ ವಿಸ್ಮಯೋತ್ಫುಲ್ಲಲೋಚನಾಃ |
ಪದ್ಮೋದ್ಪಲಗಳಿಂದ ಮಿಶ್ರಿತವಾದ ಸುಖಶೀತಜಲದಿಂದ ಕೂಡಿದ ಸರೋವರಗಳು ಒಳ್ಳೆಯ ಪುಷ್ಪಗಳಿಂದ ಮತ್ತು ರಸಪರಿಮಳಭರಿತವಾದ ಫಲಗಳಿಂದ ಕೂಡಿದ ವೃಕ್ಷಗಳು, ಪರ್ವತಶಿಖರಗಳಲ್ಲಿ ರಾರಾಜಿಸುತ್ತಿದ್ದವು. ಅಂತಹ ಪ್ರದೇಶವನ್ನು ಪಾಂಡವರೆಲ್ಲರೂ ವಿಸ್ಮಯದಿಂದ ಅರಳಿದ ಕಣ್ಣುಳ್ಳವರಾಗಿ ಪ್ರವೇಶಿಸಿದರು.
ಕಮಲೋತ್ಪಲಕಲ್ಹಾರಪುಂಡರೀಕಸುಗಂಧಿನಾ |
ಸರಾಂಸಿ ಚ ಮನೋಜ್ಞಾನಿ ವೃಕ್ಷಾಂಶ್ಚಾತಿಮನೋರಮಾನ್ |
ಸೇವ್ಯಮಾನಾ ವನೇ ತಸ್ಮಿನ್ ಸುಖಸ್ಪರ್ಶೇನ ವಾಯುನಾ |
ತತೋ ಯುಧಿಷ್ಠಿರೋ ಭೀಮಮಾಹೇದಂ ಪ್ರೀತಿಮದ್ವಚಃ |
ಕಮಲ ಉತ್ಪಲ ಕಲ್ಹಾರ ಪುಂಡರೀಕಗಳ ಸುಗಂಧದಿಂದ ಕೂಡಿದ ಸರೋವರಗಳನ್ನೂ ಅತಿ ಮನೋಹರವಾದ ವೃಕ್ಷಗಳನ್ನೂ ನೋಡುತ್ತಾ ಆ ಕಾನನದಲ್ಲಿ ಸುಖಸ್ಪರ್ಶವುಳ್ಳ ಶೀತಲವಾಯುವಿನಿಂದ ಸೇವಿಸಲ್ಪಡುತ್ತಾ ಸಂತೋಷಗೊಂಡ ಯುಧಿಷ್ಠಿರನು ಭೀಮಸೇನನನ್ನು ಕುರಿತು ಸಂತೋಷದಿಂದ ಹೀಗೆ ಹೇಳಿದನು.
ಯುಧಿಷ್ಠಿರಸ್ತು ತಾನ್ ವೃಕ್ಷಾನ್ ಪಶ್ಯಮಾನೋ ನಗೋತ್ತಮೇ |
ಭೀಮಸೇನಮಿದಂ ವಾಕ್ಯಮಬ್ರವೀದ್ ಮಧುರಾಕ್ಷರಮ್ ॥74॥
ಪಶ್ಯ ಭೀಮ ಶುಭಾನ್ ದೇಶಾನ್ ದೇವಾಕ್ರೀಡಾನ್ ಸಮಂತತಃ |
ಅಮಾನುಷಗತಿಂ ಪ್ರಾಪ್ತಾಃ ಸಂಸಿದ್ಧಾಃ ಸ್ಮ ವೃಕೋದರ ॥75॥
ಎಲೈ ವೃಕೋದರನೇ ಭೀಮಸೇನನೇ, ದೇವತೆಗಳ ವಿಹಾರಸ್ಥಾನವಾದ ಸುತ್ತಲೂ ಇರುವ ಈ ಶುಭಪ್ರದೇಶಗಳನ್ನು ನೋಡು. ನಾವು ಮನುಷ್ಯಗತಿ ಇಲ್ಲದಿರುವ ಪ್ರದೇಶಕ್ಕೆ ಬಂದು ಸಿದ್ಧರಾಗಿದ್ದೇವೆ.
ಲತಾಭಿಃ ಪುಷ್ಪಿತಾಗ್ರಾಭಿಃ ಪುಷ್ಪಿತಾಃ ಪಾದಪೋತ್ತಮಾಃ |
ಸಂಶ್ಲಿಷ್ಟಾಃ ಪಾರ್ಥ ಶೋಭಂತೇ ಗಂಧಮಾದನಸಾನುಷು ॥76॥
ಎಲೈ ಭೀಮನೇ, ತುದಿಯಲ್ಲಿ ಅರಳಿದ ಪುಷ್ಪಗಳ ಲತೆಗಳಿಂದ ಆಲಿಂಗಿತವಾದ ಶ್ರೇಷ್ಠವಾದ ಪುಷ್ಪಿತವಾದ ವೃಕ್ಷಗಳು ಈ ಗಂಧಮಾದನ ಶಿಖರದಲ್ಲಿ ಶೋಭಿಸುತ್ತಿವೆ.
ಶಿಖಂಡಿನೀಭಿಶ್ಚರತಾಂ ಸಹಿತಾನಾಂ ಶಿಖಂಡಿನಾಮ್ |
ನದತಾಂ ಶೃಣು ನಿರ್ಘೋಷಂ ಭೀಮ ಪರ್ವತಸಾನುಷು ॥77॥
ಎಲೈ ಭೀಮನೇ, ಪರ್ವತ ಶಿಖರಗಳಲ್ಲಿ ಹೆಣ್ಣು ನವಿಲುಗಳ ಜೊತೆಯಲ್ಲಿ ಕೇಕೆ ಹಾಕುತ್ತಾ ಸಂಚರಿಸುತಿತರುವ ಈ ನವಿಲುಗಳ ಕೇಕಾರವನ್ನು ಕೇಳು.
ಚಕೋರಾಃ ಶತಪತ್ರಾಶ್ಚ ಮತ್ತಕೋಕಿಲಸಾರಿಕಾಃ |
ಪತ್ರಿಣಃ ಪುಷ್ಪಿತಾನೇತಾನ್ ಸಂಪತಂತಿ ಮಹಾದ್ರುಮಾನ್ ॥78॥
ಚಕೋರ, ಶತಪತ್ರ, ಮತ್ತಕೋಕಿಲ, ಸಾರಿಕ ಮೊದಲಾದ ಪಕ್ಷಿಗಳು ಈ ಪುಷ್ಪಿತವಾದ ಮಹಾವೃಕ್ಷಗಳಲ್ಲಿ ಹಾರಾಡುತ್ತಿರುವುದನ್ನು ನೋಡು.
ರಕ್ತಪೀತಾರುಣಾಃ ಪಾರ್ಥ ಪಾದಪಾಗ್ರಗತಾಃ ಖಗಾಃ |

ಪರಸ್ಪರಮುದೀಕ್ಷಂತೇ ಬಹವೋ ಜೀವಜೀವಿಕಾಃ ॥79॥
ಎಲೈ ಪಾರ್ಥನೇ, ರಕ್ತ, ಪೀತ ಮತ್ತು ಅರುಣವರ್ಣದ ಅನೇಕ ಪಕ್ಷಿಗಳು ಮತ್ತು ಚಕೋರ ಪಕ್ಷಿಗಳು ವೃಕ್ಷದ ತುದಿಯಲ್ಲಿ ಕುಳಿತು ಪರಸ್ಪರವಾಗಿ ನೋಡುತ್ತಿವೆ.
ಹರಿತಾರುಣವರ್ಣಾನಾಂ ಶಾದ್ವಲಾನಾಂ ಸಮೀಪತಃ |
ಸಾರಸಾಃ ಪ್ರತಿದೃಶ್ಯಂತೇ ಶೈಲಪ್ರಸ್ರವಣೇಷ್ವಪಿ ॥80॥
ಹಸಿರು ಮತ್ತು ಕೆಂಪುಬಣ್ಣದಿಂದ ಕೂಡಿದ ಜೌಗು ಪ್ರದೇಶಗಳ ಸಮೀಪದಲ್ಲಿ ಮತ್ತು ಪರ್ವತದ ಝರಿಗಳ ಸಮೀಪದಲ್ಲಿ ಸಾರಸ ಪಕ್ಷಿಗಳು ಕಾಣುತ್ತಿವೆ.
ವದಂತಿ ಮಧುರಾ ವಾಚಃ ಸರ್ವಭೂತಮನೋರಮಾಃ |
ಭೃಂಗರಾಜೋಪಚಕ್ರಾಶ್ಚ ಲೋಹಪೃಷ್ಠಾಃ ಪತತ್ರಿಣಃ ॥81॥
ಭೃಂಗರಾಜ, ಉಪಚಕ್ರ, ಲೋಹಪೃಷ್ಟ ಮೊದಲಾದ ಪಕ್ಷಿಗಳು ಸರ್ವಪ್ರಾಣಿಗಳಿಗೂ ಮನೋಹರವಾದ ಮಧುರವಾದ ಸ್ವರವನ್ನು ಉಂಟುಮಾಡುತ್ತಿವೆ.
ಚತುರ್ವಿಷಾಣಾಃ ಪದ್ಮಾಭಾಃ ಕುಂಜರಾಃ ಸಕರೇಣವಃ |
ಏತೇ ವೈದೂರ್ಯವರ್ಣಾಭಂ ಕ್ಷೋಭಯಂತಿ ಮಹತ್ಸರಃ ॥82॥
ನಾಲ್ಕು ದಂತಗಳುಳ್ಳ ಪದ್ಮದ ಕಾಂತಿಯುಳ್ಳ ಹೆಣ್ಣಾನೆಗಳಿಂದ ಸಹಿತವಾದ ಈ ಆನೆಗಳು ವೈಢೂರ್ಯವರ್ಣದಿಂದ ಕೂಡಿದ ಈ ದೊಡ್ಡ ಸರೋವರವನ್ನು ಕದಡುತ್ತಿವೆ.
ಬಹುತಾಲಸಮುತ್ಸೇಧಾಃ ಶೈಲಶೃಂಗಪರಿಚ್ಯುತಾಃ |
ನಾನಾಪ್ರಸ್ರವಣೇಭ್ಯಶ್ಚ ವಾರಿಧಾರಾಃ ಪತಂತಿ ಚ ॥83॥
ಅನೇಕ ತಾಳವೃಕ್ಷಗಳಷ್ಟು ಎತ್ತರವಾದ ಪರ್ವತಶಿಖರಗಳಿಂದ ಕೆಳಗೆ ಉರುಳಿದ ಅನೇಕ ಜಲಧಾರೆಗಳು, ಅನೇಕ ಝರಿಗಳಲ್ಲಿ ಕೆಳಗೆ ಬಿದ್ದು ಹರಿಯುತ್ತಿವೆ.
ಭಾಸ್ಕರಾಭಾಃ ಪ್ರಭಾಭೀಮಾಃ(ಭಿಶ್ಚ) ಶಾರದಾಭ್ರಘನೋಪಮಾಃ |
ಶೋಭಯಂತಿ ಮಹಾಶೈಲಂ ನಾನಾರಜತಧಾತವಃ ॥84॥
ಸೂರ್ಯನ ಕಾಂತಿಯುಳ್ಳ ತಮ್ಮ ಪ್ರಭೆಯಿಂದ ಭಯಂಕರವಾಗಿ ತೋರುವ, ಶರತ್ಕಾಲದ ಮೋಡದಂತೆ ಇರುವ, ಅನೇಕ ವಿಧವಾದ ರಜತಧಾತುಗಳು ಈ ಮಹಾ ಪರ್ವತಕ್ಕೆ ಶೋಭೆಯನ್ನು ತಂದುಕೊಡುತ್ತಿವೆ.
ಕ್ವಚಿದಂಜನವರ್ಣಾಭಾಃ ಕ್ವಚಿತ್ಕಾಂಚನಸನ್ನಿಭಾಃ |
ಧಾತವೋ ಹರಿತಾಲಸ್ಯ ಕ್ವಚಿದ್ಧಿಂಗುಲಕಸ್ಯ ಚ ॥85॥
ಈ ಪರ್ವತದಲ್ಲಿರುವ ಧಾತುಗಳು ಕೆಲವು ಸ್ಥಳಗಳಲ್ಲಿ ಕಾಡಿಗೆ ಬಣ್ಣದಿಂದಲೂ, ಕೆಲವು ಸ್ಥಳಗಳಲ್ಲಿ ಸುವರ್ಣದ ಬಣ್ಣದಿಂದಲೂ, ಇನ್ನು ಕೆಲವು ಸ್ಥಳಗಳಲ್ಲಿ ಹರಿತಾಳ ಮತ್ತು ಹಿಂಗುಲಿಕ ವರ್ಣಗಳಿಂದಲೂ ಕೂಡಿದುದಾಗಿದೆ.
ಮನಃಶಿಲಾಗೃಹಾಶ್ಚೈವ ಸಂಧ್ಯಾಭ್ರನಿಕರೋಪಮಾಃ |
ಶಶಲೋಹಿತವರ್ಣಾಭಾಃ ಕ್ವಚಿದ್ ಗೈರಿಕಧಾತವಃ ॥86॥
ಸಂಧ್ಯಾಕಾಲದ ಮೋಡಗಳ ರಾಶಿಗಳಂತಿರುವ ಮನೋಹರವಾದ ಗುಹೆಗಳೂ ಮೊಲದ ರಕ್ತದಂತೆ ಶೋಭಿಸುವ ಗೈರಿಕಾದಿ ಧಾತುಗಳೂ ಇಲ್ಲಿ ಇವೆ.
ಸಿತಾಸಿತಾಭ್ರಪ್ರತಿಮಾ ಬಾಲಸೂರ್ಯಸಮಪ್ರಭಾಃ |
ಏತೇ ಬಹುವಿಧಾಃ ಶೈಲಂ ಶೋಭಯಂತಿ ಮಹಾಪ್ರಭಾಃ ॥87॥
ಬಿಳಿಯ ಮತ್ತು ಕಪ್ಪು ಮೋಡದ ಬಣ್ಣಗಳನ್ನು ಹೊಂದಿರುವ ಬಾಲ ಸೂರ್ಯನ ಕಾಂತಿಯನ್ನು ಹೊಂದಿರುವ ಮಹಾಕಾಂತಿಯಿಂದ ಕೂಡಿದ ಈ ಬಹುವಿಧವಾದ ಧಾತುಗಳು ಈ ಪರ್ವತಕ್ಕೆ ಶೋಭೆಯನ್ನುಂಟು ಮಾಡುತ್ತವೆ.
ಗಂಧರ್ವಾಃ ಸಹ ಕಾಂತಾಭಿರ್ಯಥೋಕ್ತಂ ವೃಷಪರ್ವಣಾ |
ದೃಶ್ಯಂತೇ ಶೈಲಶೃಂಗೇಷು ಪಾರ್ಥ ಕಿಂಪುರುಷೈಃ ಸಹ ॥88॥
ಎಲೈ ಪಾರ್ಥನೇ, ವೃಷಪರ್ವನು ಹೇಳಿದಂತೆ ಈ ಪರ್ವತ ಶಿಖರಗಳಲ್ಲಿ ಕಾಂತೆಯಂದೊಡಗೂಡಿದ ಗಂಧರ್ವರು ಮತ್ತು ಕಿಂಪುರುಷರು ಕಾಣುತ್ತಿದ್ದಾರೆ.
ಗೀತಾನಾಂ ಸಮತಾಲಾನಾಂ ತಥಾ ಸಾಮ್ನಾಂ ಚ ನಿಸ್ವನಃ |
ಶ್ರೂಯತೇ ಬಹುಧಾ ಭೀಮಸರ್ವಭೂತ ಮನೋಹರಃ ॥89॥
ಎಲೈ ಭೀಮಸೇನನೇ, ಸರ್ವಪ್ರಾಣಿ ಮನೋಹರವಾದ ಸಮತಾಳವುಳ್ಳ ಗೀತೆಗಳು ಮತ್ತು ಸಾಮವೇದದ ಮಧುರ ಸ್ವನವು ಇಲ್ಲಿ ಬಹುವಿಧವಾಗಿ ಕೇಳಿ ಬರುತ್ತಿದೆ.
ಮಹಾಗಂಗಾಮುದೀಕ್ಷಸ್ವ ಪುಣ್ಯಾಂ ದೇವನದೀಂ ಶುಭಾಮ್ |
ಕಲಹಂಸಗಣೈರ್ಜುಷ್ಟಾಮೃಷಿಕಿನ್ನರಸೇವಿತಾಮ್ ॥90॥
ಕಲಹಂಸ ಗಣಗಳಿಂದಲೂ ಋಷಿಕಿನ್ನರರಿಂದಲೂ ಸೇವಿತವಾದ ಪುಣ್ಯಪ್ರದವಾದ ಪವಿತ್ರವಾದ ದೇವನದಿಯಾದ ಈ ಮಹಾಗಂಗೆಯನ್ನು ನೋಡು.
ಧಾತುಭಿಶ್ಚ ಸರಿದಿಭಶ್ಚ ಕಿನ್ನರೈರ್ಮೃಗಪಕ್ಷಿಭಿಃ |
ಗಂಧರ್ವೈರಪ್ಸರೋಭಿಶ್ಚ ಕಾನನೈಶ್ಚ ಮನೋರಮೈಃ ॥91॥
ವ್ಯಾಲೈಶ್ಚ ವಿವಿಧಾಕಾರೈಃ ಶತಶೀರ್ಷೈಃ ಸಮಂತತಃ |

ಉಪೇತಂ ಪಶ್ಯ ಕೌಂತೇಯ ಶೈಲರಾಜಮರಿಂದಮ ॥92॥
ಎಲೈ ಕೌಂತೇಯನೇ, ಅರಿಂದಮನೇ, ಧಾತುಗಳಿಂದಲೂ, ನದಿಗಳಿಂದಲೂ, ಕಿನ್ನರರಿಂದಲೂ, ಮೃಗಪಕ್ಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಮನೋಹರವಾದ ಕಾಡುಗಳಿಂದಲೂ ಅನೇಕವಿಧವಾದ ಆಕಾರವನ್ನು ಹೊಂದಿದ ನೂರು ಹೆಡೆಗಳನ್ನು ಹೊಂದಿರುವ ಮಹಾಸರ್ಪಗಳಿಂದಲೂ ಎಲ್ಲ ಕಡೆಯಲ್ಲಿಯೂ ಶೋಭಿತವಾದ ಈ ಪರ್ವತರಾಜನನ್ನು ನೋಡು.
ವೈಶಂಪಾಯನಃ
ತೇ ಪ್ರೀತಮನಸಃ ಶೂರಾಃ ಪ್ರಾಪ್ತಾ ಗತಿಮನುತ್ತಮಾಮ್ ।
ನಾತೃಪ್ಯನ್ ಪರ್ವತೇಂದ್ರಸ್ಯ ದರ್ಶನೇನ ಪರಂತಪಾಃ ॥93॥
ವೈಶಂಪಾಯನ ಉತ್ತಮವಾದ ಗತಿಯನ್ನು ಹೊಂದಿದ ಪರಂತಪರಾದ ಆ ಶೂರರು ದ್ರೌಪದಿಯಿಂದಲೂ ಮತ್ತು ಮಹಾತ್ಮರಾದ ಬ್ರಾಹ್ಮಣರಿಂದಲೂ ಸಹಿತರಾಗಿ ಆ ಶ್ರೇಷ್ಠಪರ್ವತವನ್ನು ನೋಡಿ ಯುಕ್ತಿಯನ್ನೇ ಹೊಂದಲಿಲ್ಲ.
ಉಪೇತಮಥ ಮಾಲ್ಯೈಶ್ಚ ಫಲವದ್ಭಿಶ್ಚ ಪಾದಪೈಃ ।
ಆರ್ಷ್ಟಿಷೇಣಸ್ಯ ರಾಜರ್ಷೇರಾಶ್ರಮಂ ದದೃಶುಸ್ತದಾ ॥94॥
ಅನಂತರ ಅವರು ಪುಷ್ಪಮಾಲೆಗಳಿಂದಲೂ, ಫಲಭರಿತ ವೃಕ್ಷಗಳಿಂದಲೂ ಶೋಭಿತವಾದ ರಾಜರ್ಷಿಯಾದ ಆರ್ಷ್ಟಿಷೇಣನ ಆಶ್ರಮವನ್ನು ನೋಡಿದರು.
ತತಸ್ತೇ ತಿಗ್ಮತಪಸಂ ಕೃಶಂ ಧಮನಿಸಂತತಮ್ ।
ಪಾರಗಂ ಸರ್ವಧರ್ಮಾಣಾಮಾರ್ಷ್ಟಿಷೇಣಮುಪಾಗಮನ್ ॥95॥
ಅನಂತರ ಅವರು ಉಗ್ರತಪಸ್ವಿಯಾದ, ಕೃಶನಾದ ಶರೀರದಲ್ಲಿ ನರಗಳು ಎದ್ದು ಕಾಣುತ್ತಿರುವ, ಸರ್ವಧರ್ಮಪಾರಂಗತನಾದ, ಆರ್ಷ್ಟಿಷೇಣನನ್ನು ಸಮೀಪಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಷ್ಪಂಚಾಶದಧಿಕಶತತಮೋಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *
ನೂರ ಐವತ್ತೈದನೆಯ ಅಧ್ಯಾಯ
ಅರ್ಜುನನ ಆಗಮನದವರೆಗೆ ತನ್ನ ಆಶ್ರಮದಲ್ಲಿಯೇ ಇರುವಂತೆ ಆರ್ಷ್ಟಿಷೇಣನ ಒತ್ತಾಯ. ಕುಶಲ ಪ್ರಶ್ನೆಯ ನೆಪದಲ್ಲಿ ಯುಧಿಷ್ಠಿರನಿಗೆ ಧರ್ಮೋಪದೇಶ.
ವೈಶಂಪಾಯನಃ
ಯುಧಿಷ್ಠಿರಸ್ತಮಾಸಾದ್ಯ ತಪಸಾ ದಗ್ಧಕಿಲ್ಬಿಷಮ್ ।
ಅಭ್ಯವಾದಯತ ಪ್ರೀತಃ ಶಿರಸಾ ನಾಮ ಕೀರ್ತಯನ್ ॥1॥
ವೈಶಂಪಾಯನ ತಪಸ್ಸಿನಿಂದ ಪಾಪನಿರ್ಮುಕ್ತನಾದ ಆರ್ಷ್ಟಿಷೇಣನ ಸಮೀಪಕ್ಕೆ ಹೋಗಿ ಯುಧಿಷ್ಠಿರನು ಸಂತೋಷಗೊಂಡು ತನ್ನ ಹೆಸರನ್ನು ಹೇಳುತ್ತಾ ಶಿರಸಾಷ್ಟಾಂಗ ಪ್ರಣಾಮವನ್ನು ಮಾಡಿದರು.
ತತಃ ಕೃಷ್ಣಾ ಚ ಭೀಮಶ್ಚ ಯಮೌ ಚ ಸುತಪಸ್ವಿನೌ ।
ಶಿರೋಭಿಃ ಪ್ರಾಪ್ಯ ರಾಜರ್ಷಿಪರಿವಾರ್ಯೋಪತಸ್ಥಿರೇ ॥2॥
ದ್ರೌಪದಿ, ಭೀಮಸೇನ ಮತ್ತು ತಪಸ್ವಿಗಳಾದ ನಕುಲಸಹದೇವರು ಆ ರಾಜರ್ಷಿಗೆ ಶಿರಸ್ಸಿನಿಂದ ನಮಸ್ಕಾರವನ್ನು ಮಾಡಿ ಅವನ ಸುತ್ತಲೂ ಸೇರಿದರು.
ತಥೈವ ಧೌಮ್ಯೋ ಧರ್ಮಜ್ಞಃ ಪಾಂಡವಾನಾಂ ಪುರೋಹಿತಃ ।
ಯಥಾನ್ಯಾಯಮುಪಾಕ್ರಾಂತಸ್ತಮೃಷಿಂ ಸಂಶಿತವ್ರತಮ್ ॥3॥
ಅದರಂತೆ ಪಾಂಡವರ ಪುರೋಹಿತರಾದ ಧರ್ಮಜ್ಞರಾದ ಧೌಮ್ಯರೂ ಸಹ ಶ್ರೇಷ್ಠವ್ರತಧಾರಿಯಾದ ಆರ್ಷ್ಟಿಷೇಣನ ಜೊತೆಯಲ್ಲಿ ಯೋಗ್ಯವಾದ ರೀತಿಯಲ್ಲಿ ಸಮಾಗಮವನ್ನು ಹೊಂದಿದರು.
ಅನ್ವಜಾನಾತ್ ಸ ಧರ್ಮಜ್ಞೋ ಮುನಿರ್ದಿವ್ಯೇನ ಚಕ್ಷುಷಾ ।
ಪಾಂಡೋಃ ಪುತ್ರಾನ್ ಕುರುಶ್ರೇಷ್ಠಾನಾಸ್ಯತಾಮಿತಿ ಚಾಬ್ರವೀತ್ ॥4॥
ಧರ್ಮಜ್ಞನಾದ ಆರ್ಷ್ಟಿಷೇಣ ಋಷಿಯು ತನ್ನ ದಿವ್ಯಚಕ್ಷುಸ್ಸಿನಿಂದ ಇವರು ಪಾಂಡುವಿನ ಮಕ್ಕಳಾದ ಕುರುಶ್ರೇಷ್ಠರೆಂದು ತಿಳಿದು ಕುಳಿತುಕೊಳ್ಳಿ ಎಂದು ಹೇಳಿದನು.
ಕುರೂಣಾಮೃಷಭಂ ಪಾರ್ಥಂ ಪೂಜಯಿತ್ವಾ ಮಹಾತಪಾಃ ।
ಸಹ ಭ್ರಾತೃಭಿರಾಸೀನಂ ಪರ್ಯಪೃಚ್ಛದನಾಮಯಮ್ ॥5॥
ಮಹಾತಪಸ್ವಿಯಾದ ಅವನು ಕುರುಶ್ರೇಷ್ಠನಾದ ಯುಧಿಷ್ಠಿರನನ್ನು ಸತ್ಕರಿಸಿ ತಮ್ಮಂದಿರ ಜೊತೆಯಲ್ಲಿ ಕುಳಿತಿದ್ದ ಅವನಿಗೆ ಕುಶಲಪ್ರಶ್ನೆಯನ್ನು ಮಾಡಿದನು.
ನಾನೃತೇ ಕುರುಷೇ ಭಾವಂ ಕಚ್ಚಿದ್ಧರ್ಮೇ ಪ್ರವರ್ತಸೇ ।
ಮಾತಾಪಿತ್ರೋಶ್ಚ ತೇ ವೃತ್ತಿಃ ಕಚ್ಚಿತ್ ಪಾರ್ಥ ನ ಸೀದತಿ ॥6॥
ಎಲೈ ಪಾರ್ಥನೇ, ನೀನು ಕೆಟ್ಟವಿಷಯದಲ್ಲಿ ಮನಸ್ಸನ್ನು ಹಾಕುವುದಿಲ್ಲವಷ್ಟೆ? ಧರ್ಮದಲ್ಲಿಯೇ ಪ್ರವೃತ್ತನಾಗುವಿಯಷ್ಟೆ?

ತಂದೆತಾಯಿಯರ ವಿಷಯದಲ್ಲಿ ನಿನ್ನ ನಡತೆಯು ದುಷ್ಟವಾಗಿಲ್ಲವಷ್ಟೆ?
ಕಚ್ಚಿತ್ ತೇ ಗುರವಃ ಸರ್ವೇ ವೃದ್ಧಾ ವೈದ್ಯಾಶ್ಚ ಪೂಜಿತಾಃ |
ಕಚ್ಚಿನ್ನ ಕುರುಷೇ ಭಾವಂ ಪಾರ್ಥ ಪಾಪೇಷು ಕರ್ಮಸು ||7||
ಸುಕೃತಂ ಪ್ರತಿಕರ್ತುಂ ಚ ಕಚ್ಚಿದ್ ಹಾತುಂ ಚ ದುಷ್ಕೃತಮ್ |
ಯಥಾನ್ಯಾಯಂ ಕುರುಶ್ರೇಷ್ಠ ಜಾನಾಸಿ ನ ವಿಕತ್ಥಸೇ ||8||
ಎಲೈ ಪಾರ್ಥನೇ, ವೇದವಿದ್ಯಾವಿಶಾರದರಾದ ವೃದ್ಧರಾದ ನಿನ್ನ ಗುರುಗಳೆಲ್ಲರೂ ನಿನ್ನಿಂದ ಪೂಜಿಸಲ್ಪಡುತ್ತಾರಷ್ಟೆ? ನೀನು ಪಾಪಕರ್ಮಗಳಲ್ಲಿ ಮನಸ್ಸು ಮಾಡುವುದಿಲ್ಲವಷ್ಟೆ? ಎಲೈ ಕುರುಶ್ರೇಷ್ಠನೇ ಪುಣ್ಯವನ್ನು ಸಂಪಾದಿಸಲು ಅಥವಾ ದುಷ್ಕೃತನವನ್ನು ಬಿಡಲು ಯಥಾಯೋಗ್ಯವಾಗಿ ತಿಳಿದಿರುವಿಯಷ್ಟೆ? (ಒಳ್ಳೆಯ ಕೆಲಸಕ್ಕೆ ಪ್ರತ್ಯುಪಕಾರವನ್ನು ಮಾಡಲು ಮತ್ತು ಕೆಟ್ಟ ಕೆಲಸ ಮಾಡುವವರನ್ನು ತ್ಯಜಿಸಲು ನೀನು ಯೋಗ್ಯವಾಗಿ ತಿಳಿದಿರುವೆಯಷ್ಟೆ?) ನಿನ್ನನ್ನು ನೀನು ಹೊಗಳಿಕೊಳ್ಳುವುದಿಲ್ಲವಷ್ಟೆ?
ಯಥಾರ್ಹಂ ಮಾನಿತಾಃ ಕಚ್ಚಿತ್ ತ್ವಯಾ ನಂದಂತಿ ಸಾಧವಃ |
ವನೇಷ್ವಪಿ ವಸನ್ ಕಚ್ಚಿತ್ ಧರ್ಮಮೇವಾನುವರ್ತಸೇ |
ಕಚ್ಚಿದ್ ಧೌಮ್ಯಸ್ತ್ವದಾಚಾರೈರ್ನ ಪಾರ್ಥ ಪರಿತಪ್ಯತೇ ||9||
ಪಾರ್ಥನೇ, ಸಜ್ಜನರು ನಿನ್ನಿಂದ ಯಥೋಚಿತವಾಗಿ ಸತ್ಕರಿಸಲ್ಪಟ್ಟು ಸಂತೋಷದಿಂದ ಇದ್ದಾರಷ್ಟೆ? ನೀನು ಕಾಡಿನಲ್ಲಿದ್ದರೂ ಧರ್ಮವನ್ನೇ ಆಚರಿಸುವಿಯಷ್ಟೆ? ನಿನ್ನ ನಡತೆಯಿಂದ ಧೌಮ್ಯರಿಗೆ ಪರಿತಾಪವುಂಟಾಗುವುದಿಲ್ಲವಷ್ಟೆ?
ದಾನಧರ್ಮತಪಃಶೌಚೈರಾರ್ಜವೇನ ತಿತಿಕ್ಷಯಾ |
ಪಿತೃಪೈತಾಮಹಂ ವೃತ್ತಂ ಕಚ್ಚಿತ್ ಪಾರ್ಥಾನುವರ್ತಸೇ ||10|
ಕಚ್ಚಿದ್ ರಾಜರ್ಷಿಯಾತೇನ ಪಥಾ ಗಚ್ಛಸಿ ಪಾಂಡವ ||11||
ಪಾರ್ಥನೇ, ತಂದೆ ತಾತಂದಿರ ನಡತೆಯನ್ನು ನೀನು ಅನುಸರಿಸುತ್ತಿರುವಿಯಷ್ಟೆ? ಎಲೈ ಪಾಂಡವನೇ, ರಾಜರ್ಷಿಗಳು ನಡೆದ ಮಾರ್ಗದಲ್ಲಿ ನಡೆಯುತ್ತಿರುವಿಯಷ್ಟೆ?
ಸ್ವೇ ಸ್ವೇ ಕಿಲ ಕುಲೇ ಜಾತೇ ಪುತ್ರೇ ನಪ್ತರಿ ವಾ ಪುನಃ |
ಪಿತರಃ ಪಿತೃಲೋಕಸ್ಥಾಃ ಶೋಚಂತಿ ಚ ಹಸಂತಿ ಚ ||12||
ಕಿಂ ತಸ್ಯ ದುಷ್ಕೃತೇಽಸ್ಮಾಭಿಃ ಸಂಪ್ರಾಪ್ತವ್ಯಂ ಭವಿಷ್ಯತಿ |
ಕಿಂಚಾಸ್ಯ ಸುಕೃತೇಽಸ್ಮಾಭಿಃ ಪ್ರಾಪ್ತವ್ಯಮಿತಿ ಶೋಭನಮ್ ||13||
ತಮ್ಮ ತಮ್ಮ ಕುಲದಲ್ಲಿ ಹುಟ್ಟಿದ ಮಕ್ಕಳು ಮತ್ತು ಮೊಮ್ಮಕ್ಕಳುಗಳನ್ನು ಗಮನಿಸಿ ಪಿತೃಲೋಕದಲ್ಲಿರುವ ಪಿತೃಗಳು ಇವನ ಪಾಪದಿಂದ ನಾವು ಏನು ಅನುಭವಿಸಬೇಕಾಗುವುದು ಮತ್ತು ಇವನ ಪುಣ್ಯದಿಂದ ನಾವು ಯಾವ ಸುಖಫಲವನ್ನು ಹೊಂದಬಹುದು ಎಂದುದುಃಖಪಡುತ್ತಾರೆ ಮತ್ತು ಸಂತೋಷದಿಂದ ನಗುತ್ತಾರೆ.
ಪಿತಾ ಮಾತಾ ತಥೈವಾಗ್ನಿರ್ಗುರುರಾತ್ಮಾ ಚ ಪಂಚಮಃ |
ಯಸ್ಯೈತೇ ಪೂಜಿತಾಃ ಪಾರ್ಥ ತಸ್ಯ ಲೋಕಾವುಭೌ ಜಿತೌ ||14||
ಎಲೈ ಪಾರ್ಥನೇ, ಮಾತಾಪಿತೃಗಳು, ಅಗ್ನಿ, ಗುರು ಮತ್ತು ತಾನು ಈ ಐದುಜನರು ಯಾರಿಂದ ಸತ್ಕರಿಸಲ್ಪಡುತ್ತಾರೋ ಅವರಿಗೆ ಉಭಯಲೋಕಗಳ ಜಯವುಂಟಾಗುತ್ತದೆ.
ಅಬ್ಭಕ್ಷಾ ವಾಯುಭಕ್ಷಾಶ್ಚ ಪ್ಲವಮಾನಾ ವಿಹಾಯಸಾ |
ಜುಷಂತೇ ಪರ್ವತಶ್ರೇಷ್ಠಮೃಷಯಃ ಪರ್ವಸಂಧಿಷು ||15||
ಅಬ್ಭಕ್ಷರಾದ ಮತ್ತು ವಾಯುಭಕ್ಷರಾದ ಋಷಿಗಳು ಆಕಾಶದಲ್ಲಿ ಸಂಚಾರ ಮಾಡುತ್ತಾ ಪರ್ವಕಾಲದಲ್ಲಿ ಈ ಶ್ರೇಷ್ಠಪರ್ವತವನ್ನು ಸೇವಿಸುತ್ತಾರೆ.
ಕಾಮಿನಃ ಸಹ ಕಾಂತಾಭಿಃ ಪರಸ್ಪರಮನುವ್ರತಾಃ |
ದೃಶ್ಯಂತೇ ಶೈಲಶೃಂಗಸ್ಥಾ ಯಥಾ ಕಿಂಪುರುಷಾ ನೃಪ ||16||
ಎಲೈ ರಾಜನೇ, ಕಾಮಿಗಳಾದ ಪುರುಷರು ತಮ್ಮ ಕಾಂತೆಯರ ಜೊತೆಯಲ್ಲಿ ಪರಸ್ಪರವಾಗಿ ಅನುಸರಿಸಿಕೊಂಡು ಈ ಪರ್ವತಶಿಖರದಲ್ಲಿ ಕಿಂಪುರುಷರಂತೆ ಕಾಣುತ್ತಾರೆ.
ಅರಜಾಂಸಿ ಚ ವಾಸಾಂಸಿ ವಸಾನಾಃ ಕೌಶಿಕಾನಿ ಚ |
ದೃಶ್ಯಂತೇ ಬಹವಃ ಪಾರ್ಥ ಗಂಧರ್ವಾಪ್ಸರಸಾಂ ಗಣಾಃ ||17||
ವಿದ್ಯಾಧರಗಣಾಶ್ಚೈವ ಸ್ರಗ್ವಿಣಃ ಪ್ರಿಯದರ್ಶನಾಃ |
ಮಹೋರಗಗಣಾಶ್ಚೈವ ಸುಪರ್ಣಾಶ್ಚಾರಣಾದಯಃ ||18||
ಎಲೈ ಪಾರ್ಥನೇ, ಶುಭ್ರವಾದ ರೇಷ್ಮೆಯ ವಸ್ತ್ರಗಳನ್ನು ಉಟ್ಟುಕೊಂಡ ಅನೇಕ ಗಂಧರ್ವರ ಮತ್ತು ಅಪ್ಸರೆಯರ ಗಣಗಳೂ, ಹೂಮಾಲೆಯನ್ನು ಧರಿಸಿದ ಪ್ರಿಯ ದರ್ಶನರಾದ ವಿದ್ಯಾಧರ ಗಣಗಳೂ, ಮಹಾಸರ್ಪಗಳ ಗಣಗಳೂ ಮತ್ತು ಚಾರಣರೂ ಮತ್ತು ಪಕ್ಷಿಗಳೂ ಇಲ್ಲಿ ಕಾಣಬರುತ್ತವೆ.
ಅಸ್ಯ ಚೋಪರಿ ಶೈಲಸ್ಯ ಶ್ರೂಯತೇ ಪರ್ವಸಂಧಿಷು |
ಭೇರೀಪಣವಶಂಖಾನಾಂ ಮೃದಂಗಾನಾಂ ಚ ನಿಸ್ವನಃ ||19||
ಈ ಪರ್ವತದ ಮೇಲ್ಭಾಗದಲ್ಲಿ ಪರ್ವಸಂಧಿಗಳಲ್ಲಿ ಭೇರೀಪಣವಶಂಖಗಳ ಮತ್ತು ಮೃದಂಗಗಳ ಶಬ್ದವು ಕೇಳಿಬರುತ್ತದೆ.
ಇಹಸ್ಥೈರೇವ ತತ್ಸರ್ವಂ ಶ್ರೋತವ್ಯಂ ಭರತರ್ಷಭಾಃ |
ನ ಕಾರ್ಯಾ ವಃ ಕಥಂಚಿತ್ ಸ್ಯಾತ್ ತತ್ರಾಭಿಗಮನೇ ಮತಿಃ ||20||

ಎಲ್ಲೈ ಭರತಶ್ರೇಷ್ಠರೇ, ಇಲ್ಲಿಯೇ ನಿಂತು ಆ ಶಬ್ಧಗಳನ್ನೆಲ್ಲಾ ಕೇಳತಕ್ಕದ್ದು. ಯಾವ ಕಾರಣದಿಂದಲೂ ಅಲ್ಲಿಗೆ ಹೋಗಬೇಕೆಂಬ ಬುದ್ಧಿಯನ್ನು ಮಾಡಬಾರದು.
ನ ಚಾಪ್ಯತಃ ಪರಂ ಶಕ್ಯಂ ಗಂತುಂ ಭರತಸತ್ತಮಾಃ |
ವಿಹಾರೋ ಹ್ಯತ್ರ ದೇವಾನಾಮಮಾನುಷಗತಿಸ್ತು ಸಾ ||21||
ಎಲ್ಲೈ ಭರತಸತ್ತಮರೇ, ಇಲ್ಲಿಂದ ಆಚೆಗೆ ಹೋಗಲು ಸಾಧ್ಯವೂ ಇಲ್ಲ. ಅದು ದೇವತೆಗಳ ವಿಹಾರಸ್ಥಾನ. ಮನುಷ್ಯರಿಗೆ ಅಗಮ್ಯವಾದುದು.
ಈಷಚ್ಚಪಲಕರ್ಮಾಣಂ ಮನುಷ್ಯಮಿಹ ಭಾರತ |
ದ್ವಿಷಂತಿ ಸರ್ವಭೂತಾನಿ ತಾಡಯಂತಿ ಚ ರಾಕ್ಷಸಾಃ ||22||
ಎಲ್ಲೈ ಭಾರತನೇ, ಇಲ್ಲಿ ಚಪಲತೆಯಿಂದ ಉದ್ಯುಕ್ತನಾಗುವ ಮನುಷ್ಯನನ್ನು ಎಲ್ಲ ಭೂತಗಳೂ ದ್ವೇಷಿಸುತ್ತವೆ ಮತ್ತು ರಾಕ್ಷಸರು ತಾಡನ ಮಾಡುತ್ತಾರೆ.
ಅಸ್ಯಾತಿಕ್ರಮ್ಯ ಶಿಖರಂ ಕೈಲಾಸಸ್ಯ ಯುಧಿಷ್ಠಿರ |
ಗತಿಃ ಪರಮಸಿದ್ಧಾನಾಂ ದೇವರ್ಷೀಣಾಂ ಪ್ರಕಾಶತೇ ||23||
ಎಲ್ಲೈ ಯುಧಿಷ್ಠಿರನೇ, ಈ ಕೈಲಾಸ ಪರ್ವತದ ಶಿಖರವನ್ನು ದಾಟಿದರೆ ಪರಮ ಸಿದ್ಧರಾದ ದೇವರ್ಷಿಗಳ ಗತಿಯು ಕಾಣುತ್ತದೆ.
ಚಾಪಲಾದಿಹ ಗಚ್ಛಂತಂ ಪಾರ್ಥ ಯಾನಮಿತಃ ಪರಮ್ |
ಅಯಃಶೂಲಾದಿಭಿರ್ಘ್ನಂತಿ ರಾಕ್ಷಸಾಃ ಶತ್ರುಸೂದನ ||24||
ಎಲ್ಲೈ ಶತ್ರುಸೂದನನಾದ ಪಾರ್ಥನೇ, ಚಾಪಲ್ಯದಿಂದ ಇಲ್ಲಿಂದ ಮುಂದಿನ ಮಾರ್ಗದಲ್ಲಿ ಹೋಗುವ ಮನುಷ್ಯರನ್ನು ರಾಕ್ಷಸರು ಕಬ್ಬಿಣದ ಶೂಲಗಳಿಂದ ಹೊಡೆಯುತ್ತಾರೆ.
ಅಪ್ಸರೋಭಿಃ ಪರಿವೃತಃ ಸಮೃದ್ಧ್ಯಾ ನರವಾಹನಃ |
ಇಹ ವೈಶ್ರವಣಸ್ತಾತ ಪರ್ವಸಂಧಿಷು ದೃಶ್ಯತೇ ||25||
ಎಲ್ಲೈ ಪ್ರೀತಿಪಾತ್ರನೇ, ಅಪ್ಸರೆಯರಿಂದ ಕೂಡಿದ ನರವಾಹನನಾದ ಕುಬೇರನು ತನ್ನ ವೈಭವದಿಂದ ಕೂಡಿ ಇಲ್ಲಿ ಪರ್ವಸಂಧಿಗಳಲ್ಲಿ ಕಾಣಿಸುತ್ತಾನೆ.
ಶಿಖರಸ್ಥಂ ಸಮಾಸೀನಮಧಿಪಂ ಯಕ್ಷರಾಕ್ಷಸಾಮ್ |
ಪ್ರೇಕ್ಷಂತೇ ಸರ್ವಭೂತಾನಿ ಭಾನುಮಂತಮಿವೋದಿತಮ್ ||26||
ಶಿಖರದಲ್ಲಿ ಕುಳಿತ ಯಕ್ಷ ಮತ್ತು ರಾಕ್ಷಸಾಧಿಪತಿಯಾದ ಕುಬೇರನನ್ನು ಸರ್ವಭೂತಗಳೂ ಕಿರಣಗಳ ಜೊತೆಯಲ್ಲಿ ಉದಿಸಿದ ಸೂರ್ಯನಂತೆ ನೋಡುತ್ತವೆ.
ದೇವದಾನವಸಿದ್ಧಾನಾಂ ತಥಾ ವೈಶ್ರವಣಸ್ಯ ಚ |
ಗಿರೇಃ ಶಿಖರಮುದ್ಯಾನಮಿದಂ ಭರತಸತ್ತಮ ||27||
ಎಲ್ಲೈ ಭರತಸತ್ತಮನೇ, ಈ ಗಿರಿಶಿಖರವು ದೇವದಾನವ ಸಿದ್ಧರ ಮತ್ತು ಕುಬೇರನ ಉದ್ಯಾನವಾಗಿದೆ.
ಉಪಾಸೀನಸ್ಯ ಧನದಂ ತುಂಬುರೋಃ ಪರ್ವಸಂಧಿಷು |
ಗೀತಸಾಮಸ್ವನಸ್ತಾತ ಶ್ರೂಯತೇ ಗಂಧಮಾದನೇ ||28||
ಪರ್ವಸಂಧಿಗಳಲ್ಲಿ ಕುಬೇರನನ್ನು ಸ್ತೋತ್ರಮಾಡುವ ತುಂಬುರುವಿನ ಸಂಗೀತ ಮತ್ತು ಸಾಮಗಾನದ ಶಬ್ಧಗಳು ಈ ಗಂಧಮಾದನ ಪರ್ವತದಲ್ಲಿ ಕೇಳಿಬರುತ್ತವೆ.
ಏತದೇವಂವಿಧಂ ಚಿತ್ರಮಿಹ ತಾತ ಯುಧಿಷ್ಠಿರ |
ಪ್ರೇಕ್ಷಂತೇ ಸರ್ವಭೂತಾನಿ ಬಹುಶಃ ಪರ್ವಸಂಧಿಷು ||29||
ಎಲ್ಲೈ ಪ್ರೀತಿಪಾತ್ರನಾದ ಯುಧಿಷ್ಠಿರನೇ, ಇದನ್ನು ಮತ್ತು ಇಂತಹ ಅನೇಕ ವಿಚಿತ್ರಗಳನ್ನು ಪರ್ವಸಂಧಿಗಳಲ್ಲಿ ಎಲ್ಲ ಭೂತಗಳೂ ಇಲ್ಲಿ ಬಹಳವಾಗಿ ನೋಡುತ್ತವೆ.
ಭುಂಜಾನಾ ಮುನಿಭೋಜ್ಯಾನಿ ರಸವಂತಿ ಫಲಾನಿ ಚ |
ವಸಧ್ವಂ ಪಾಂಡವಶ್ರೇಷ್ಠಾ ಯಾವದರ್ಜುನದರ್ಶನಾತ್ ||30||
ಎಲ್ಲೈ ಪಾಂಡವಶ್ರೇಷ್ಠರೇ, ಮುನಿಭೋಜ್ಯವಾದ ರುಚಿಯಾದ ಫಲಗಳನ್ನು ಭುಂಜಿಸುತ್ತಾ ಅರ್ಜುನನನ್ನು ನೋಡುವವರೆಗೆ ಇಲ್ಲಿ ವಾಸವನ್ನು ಮಾಡಿ.
ನ ತಾತ ಚಪಲೈರ್ಭಾವ್ಯಮಿಹ ಪ್ರಾಪ್ತೈಃ ಕಥಂಚನ |
ಚಪಲಃ ಸರ್ವಭೂತಾನಾಂ ದ್ವೇಷ್ಯೋ ಭವತಿ ಮಾನವಃ ||31||
ಎಲ್ಲೈ ಪ್ರೀತಿಪಾತ್ರನೇ, ಇಲ್ಲಿಗೆ ಬಂದ ಯಾವನೂ ಸಹ ಚಪಲತೆಯಿಂದ ವರ್ತಿಸಬಾರದು. ಚಪಲತೆಯಿಂದ ನಡೆದುಕೊಳ್ಳುವ ಮನುಷ್ಯನು ಎಲ್ಲಾ ಭೂತಗಳ ದ್ವೇಷಕ್ಕೆ ಪಾತ್ರನಾಗುತ್ತಾನೆ.
ಇಹೋಷಿತ್ವಾ ಯಥಾಕಾಮಂ ಯಥಾಶ್ರದ್ಧಂ ವಿಹೃತ್ಯ ಚ |
ತತಃ ಶಸ್ತ್ರಭೃತಾಂ ಶ್ರೇಷ್ಠ ಪೃಥಿವೀಂ ಪಾಲಯಿಷ್ಯಸಿ ||32||
ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಎಲ್ಲೈ ಧರ್ಮರಾಜನೇ, ಇಲ್ಲಿ ನಿಮ್ಮ ಇಚ್ಛೆಗೆ ತಕ್ಕಂತೆ ಮತ್ತು ಶ್ರದ್ಧೆಗೆ ತಕ್ಕಂತೆ ವಿಹಾರವನ್ನು ಮಾಡುತ್ತಾ ವಾಸಿಸಿ ಅನಂತರ ನೀನು ಪೃಥಿವಿಯನ್ನು ಪಾಲಿಸುವಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚಪಂಚಾಶದಧಿಕಶತತಮೋಽಧ್ಯಾಯಃ ||

॥ ಇತಿ ಯಕ್ಷಯುದ್ಧಪರ್ವಣಿ ದ್ವಿತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೈದನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ವಸತ್ಸು ತತ್ರ ಪಾರ್ಥೇಷು ಪುನಃ ಕತಿಪಯೈರ್ದಿನೈಃ |
ಉವಾಚ ಭೀಮಸೇನಸ್ಯ ಯಶೋಧರ್ಮಾಭಿವೃದ್ಧಯೇ ॥292॥
ಪಂಚವರ್ಣಾನಿ ಪುಷ್ಪಾಣಿ ಕೃಷ್ಣಾ ವೀಕ್ಷ್ಯ ಹೃತಾನಿ ತು |
ಮಾರುತೇನ ಕುಬೇರಸ್ಯ ಗೃಹಾನ್ನೃಭಿರಗಮ್ಯತಃ ॥293॥
ಪಾಂಡವರು ಗಂಧಮಾದನದಲ್ಲಿ ವಾಸಮಾಡುತ್ತಿದ್ದಾಗಲೆ ಪುನಃ ಕೆಲವೇ ದಿನಗಳಲ್ಲಿ ಮಾನವರಿಗೆ ಅಗಮ್ಯವಾದ ಕುಬೇರನ ಕಮಲ ವನದಿಂದ ಗಾಳಿ ತಂದು ಬೀಳಿಸಿದ ಪಂಚವರ್ಣದ ಪುಷ್ಪಗಳನ್ನು ದ್ರೌಪದಿ ಕಂಡು ಭೀಮಸೇನನಿಗೆ ಯಶಸ್ಸೂ ಪುಣ್ಯವೂ ಹೆಚ್ಚಲಿ ಎಂಬ ಉದ್ದೇಶದಿಂದ ನುಡಿದಳು.
ಅಗಮ್ಯೋऽಯಂ ಗಿರಿಃ ಸರ್ವೈಃ ಕುಬೇರಾಣಭಿಪಾಲಿತಃ |
ಅದ್ಯ ತ್ವಯೈವ ಗಂತವ್ಯೊಯೇ ವಿಧೂಯಾಖಿಲರಾಕ್ಷಸಾನ್ ॥294॥
ಈ ಪರ್ವತ ಕುಬೇರನಿಂದ ರಕ್ಷಿತವಾಗಿದ್ದು ಎಲ್ಲರಿಗೂ ದುರ್ಗಮವಾಗಿದೆ. ಅದರಿಂದ ನೀನೆ ಎಲ್ಲ ರಾಕ್ಷಸರನ್ನೂ ಧಿಃಕರಿಸಿ ಈಗ ಹೋಗಬೇಕು.
ಇತ್ಯುಕ್ತ ಆಶು ಸಗದಃ ಸಧನುಃ ಸಬಾಣೋ
ಭೀಮೋ ಗಿರೀಂದ್ರಮಜಿತೋರುಬಲೋ ವಿಗಾಹೇ |
ಪ್ರಾಪ್ತಂ ನಿಶಮ್ಯ ಬಲದೈವತಸೂನುಮತ್ರ
ಪದ್ಮತ್ರಯಂ ನ್ಯರುಗದುದ್ಧತರಾಕ್ಷಸಾನಾಮ್ ॥295॥
ಅಗ್ರೋ ನಿಧಾಯ ಮಣಿಮಂತಮಜೇಯಮುಗ್ರಂ
ಶಂಭೋರ್ವರಾದ್ ವಿವಿಧಶಸ್ತ್ರಮಹಾಭಿವೃಷ್ಟ್ಯಾ |
ತಾನ್ ಸರ್ವರಾಕ್ಷಸಗಣಾನ್ ಮಣಿಮತ್ಸಮೇತಾನ್ |
ಭೀಮೋ ಜಘಾನ ಸಪದಿ ಪ್ರವರೈಃ ಶರೌಘೈಃ ॥296॥
ದ್ರೌಪದಿ ಹೀಗೆ ಹೇಳಿದೊಡನೆ ಅಜೇಯನಾದ ಮಹಾಬಲಶಾಲಿ ಭೀಮ ಗದೆ ಧನುರ್ಬಾಣಗಳನ್ನು ಹಿಡಿದು ಬೆಟ್ಟವನ್ನೇರಿದ. ಅವನು ಬಂದುದನ್ನು ಕೇಳಿ ಮೂರು ಪದ್ಮಸಂಖ್ಯೆಯಲ್ಲಿದ್ದ ಬಲೋನ್ಮತ್ತರಾದ ರಾಕ್ಷಸರು ಶಿವನ ವರದಿಂದ ಅಜೇಯನಾದ ಮಣಿಮಂತನೆಂಬ ಕ್ರೂರ ರಾಕ್ಷಸನನ್ನು ಮುಂದೆ ಮಾಡಿಕೊಂಡು ನಾನಾ ಬಗೆಯ ಶಸ್ತ್ರ ಮಹಾಸ್ತ್ರಗಳ ಮಳೆಗರೆಯುತ್ತ ಬಂದು ತಡೆದರು. ಭೀಮ ಮಣಿಮಂತನ ಸಮೇತವಾಗಿ ಆ ಎಲ್ಲ ರಾಕ್ಷಸ ಸಮೂಹಗಳನ್ನು ಶ್ರೇಷ್ಠ ಬಾಣ ಸಮೂಹಗಳಿಂದ ಬೇಗನೆ ಸಂಹರಿಸಿದ.
ಅವಧ್ಯಾಂಸ್ತಾನ್ ಕ್ಷಣೇನೈವ ಹತ್ವಾ ಭೀಮೋ ಮಹಾಬಲಃ |
ರಣೇ ಕ್ರೋಧವಶಾನ್ ಸರ್ವಾನತಿಷ್ಠದ್ ಗಿರಿಮೂರ್ಧನಿ ॥297॥
ತೇ ಹತಾ ಭೀಮಸೇನೇ ಪ್ರಾಪುರಂಧಂತಮೋऽಖಿಲಾಃ ॥298॥
ಅವಧ್ಯರಾದ ಕ್ರೋಧವಶ ರಾಕ್ಷಸರನ್ನು ಯುದ್ಧದಲ್ಲಿ ಕ್ಷಣದಲ್ಲಿ ಕೊಂದು ಮಹಾ ಬಲಿಷ್ಠನಾದ ಭೀಮ ಪರ್ವತದ ತುದಿಯಲ್ಲಿ ನಿಂತ. ಭೀಮಸೇನನಿಂದ ಹತರಾದ ಆ ರಾಕ್ಷಸರೆಲ್ಲರೂ ಅಂಧಂತಮಸ್ಸಿಗೆ ಹೋದರು.
ಹತಾಃ ಸೌಗಂಧಿಕವನೇ ಮಣಿಮಾಂಶ್ಚ ಪುನಃ ಕಲೌ |
ಜಾತೋ ಮಿಥ್ಯಾಮತಿಂ ಸಮ್ಯಗಾಸ್ತೀರ್ಯಾऽಪಸ್ತಮೋऽಧಿಕಮ್ ॥
ಸೌಗಂಧಿಕ ವನದಲ್ಲಿ ಹತನಾದ ಮಣಿಮಂತ ಪುನಃ ಕಲಿಯುಗದಲ್ಲಿ ಹುಟ್ಟಿ ಮಿಥ್ಯಾಜ್ಞಾನವನ್ನು ಚೆನ್ನಾಗಿ ಹರಡಿ ಮಹಾತಮಸ್ಸನ್ನು ಹೊಂದಿದ.
* * * *
ನೂರ ಐವತ್ತಾರನೆಯ ಅಧ್ಯಾಯ
ಆರ್ಷ್ಟಿಷೇಣಾಶ್ರಮದಲ್ಲಿ ಪಾಂಡವರ ವಾಸ. ಗರುಡ ಮತ್ತು ವಾಯುವೇಗದಿಂದ ದ್ರೌಪದಿಯ ಎದುರಿನಲ್ಲಿ ಪಂಚವರ್ಣ ಪುಷ್ಪಗಳ ಪತನ. ಅವಳ ಪ್ರಾರ್ಥನೆಯಂತೆ ಅಂತಹ ಪುಷ್ಪಗಳನ್ನು ತರಲು ಹೋದ ಭೀಮಸೇನನ ಜೊತೆಯಲ್ಲಿ ಮಣಿಮಂತ ಮೊದಲಾದವರ ಯುದ್ಧ.
ಜನಮೇಜಯಃ
ಪಾಂಡೋಃ ಪುತ್ರಾ ಮಹಾತ್ಮಾನಃ ಸರ್ವೇ ದಿವ್ಯಪರಾಕ್ರಮಾಃ |
ಕಿಯಂತಂ ಕಾಲಮವಸನ್ ಪರ್ವತೇ ಗಂಧಮಾದನೇ ॥1॥
ಜನಮೇಜಯ ಎಲೈ ಬ್ರಾಹ್ಮಣಶ್ರೇಷ್ಠರಾದ ವೈಶಂಪಾಯನರೇ, ಮಹಾತ್ಮರಾದ ದಿವ್ಯಪರಾಕ್ರಮಶಾಲಿಗಳಾದ ಎಲ್ಲಾ ಪಾಂಡುಪುತ್ರರು ಎಷ್ಟು ಸಮಯದವರೆಗೆ ಗಂಧಮಾದನಪರ್ವತದಲ್ಲಿ ವಾಸಿಸಿದರು?
ಆರ್ಷ್ಟಿಷೇಣಾಶ್ರಮೇ ತಸ್ಮಿನ್ ಮಮ ಪೂರ್ವಪಿತಾಮಹಾಃ |
ಕಿಂ ಚ ಚಕ್ರುರ್ಮಹಾವೀರ್ಯಾಃ ಸರ್ವೇತಿಬಲಪೌರುಷಾಃ |
ಅತಿಬಲಪರಾಕ್ರಮಗಳನ್ನು ಹೊಂದಿದ ಮಹಾಶೂರರಾದ ನನ್ನ ಪೂರ್ವಪಿತಾಮಹರೆಲ್ಲರೂ ಆರ್ಷ್ಟಿಷೇಣಾಶ್ರಮದಲ್ಲಿ ಇನ್ನೂ

ಏನನ್ನು ಮಾಡಿದರು?
ಕಾನಿ ಚಾಭ್ಯವಹಾರ್ಯಾಣಿ ತತ್ರ ತೇಷಾಂ ಮಹಾತ್ಮನಾಮ್ |
ವಸತಾಂ ಲೋಕವೀರಾಣಾಮಾಸಂಸ್ತದ್ ಬ್ರೂಹಿ ಸತ್ತಮ ॥2॥
ಎಲೈ ಸಜ್ಜನಾಗ್ರಣಿಯೇ, ಅಲ್ಲಿ ವಾಸಿಸುವ ಲೋಕವೀರರಾದ ಆ ಮಹಾತ್ಮರು ಯಾವ ಆಹಾರವನ್ನು ಸ್ವೀಕರಿಸಿದರು? ಅದನ್ನು ಹೇಳಿ.
ವಿಸ್ತರೇಣ ಚ ಮೇ ಶಂಸ ಭೀಮಸೇನಪರಾಕ್ರಮಮ್ |
ಯದ್ಯಚ್ಚಕ್ರೇ ಮಹಾಬಾಹುಸ್ತಸ್ಮಿನ್ ಹೈಮವತೇ ಗಿರೌ ॥3॥
ಮಹಾಬಾಹುವಾದ ಭೀಮಸೇನನು ಆ ಪರ್ವತದಲ್ಲಿ ಏನೇನನ್ನು ಮಾಡಿದನು ಎಂದು ಅವನ ಪರಾಕ್ರಮವನ್ನು ನನಗೆ ವಿಸ್ತಾರವಾಗಿ ಹೇಳಿ.
ನ ಖಲ್ವಾಸೀತ್ ಪುನರ್ಯುದ್ಧಂ ತಸ್ಯ ಯಕ್ಷೈರ್ದ್ವಿಜೋತ್ತಮ |
ಧನದಾಧ್ಯುಷಿತೇ ನಿತ್ಯಂ ವಸತಸ್ತತ್ರ ಪರ್ವತೇ ॥4॥
ಎಲೈ ದ್ವಿಜೋತ್ತಮರೇ, ಕುಬೇರನ ಆವಾಸಸ್ಥಾನವಾದ ಆ ಪರ್ವತದಲ್ಲಿ ಭೀಮಸೇನನಿಗೂ ಮತ್ತು ಯಕ್ಷರಿಗೂ ಪುನಃ ಯುದ್ಧವಾಗಲಿಲ್ಲವಷ್ಟೆ?
ಕಚ್ಚಿತ್ ಸಮಾಗಮಸ್ತೇಷಾಮಾಸೀದ್ ವೈಶ್ರವಣಸ್ಯ ಚ |
ತತ್ರ ಹ್ಯಾಯಾತಿ ಧನದ ಆರ್ಷ್ಟಿಷೇಣೋ ಯಥಾಽಬ್ರವೀತ್ ॥5॥
ಆರ್ಷ್ಟಿಷೇಣನು ಹೇಳಿದಂತೆ ಅಲ್ಲಿಗೆ ಕುಬೇರನು ಆಗಾಗ ಬರುತ್ತಾನಷ್ಟೆ? ಪಾಂಡವರಿಗೂ ಮತ್ತು ಕುಬೇರನಿಗೂ ಸಮಾಗಮವೇನಾದರೂ ಉಂಟಾಯಿತೆ?
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ತಪೋಧನ |
ನ ಹಿ ಮೇ ಶೃಣ್ವತಸ್ತೃಪ್ತಿರಸ್ತಿ ತೇಷಾಂ ವಿಚೇಷ್ಟಿತಮ್ ॥6॥
ತಪೋಧನರೇ, ಇದನ್ನು ನಾನು ವಿಸ್ತಾರವಾಗಿ ಕೇಳಲು ಬಯಸುತ್ತೇನೆ. ಅವರ ಚರ್ಯೆಗಳನ್ನು ಕೇಳುತಿತರುವ ನನಗೆ ತೃಪ್ತಿಯೇ ಉಂಟಾಗುತ್ತಿಲ್ಲ.
ವೈಶಂಪಾಯನಃ
ಏತದಾತ್ಮಹಿತಂ ಶ್ರುತ್ವಾ ತಸ್ಯಾಪ್ರತಿಮತೇಜಸಃ |
ಶಾಸನಂ ಸತತಂ ಚಕ್ರುಸ್ತಥೈವ ಭರತರ್ಷಭಾಃ ॥7॥
ವೈಶಂಪಾಯನ ಅಪ್ರತಿಮ ಪರಾಕ್ರಮಿಯಾದ ಆ ಆರ್ಷ್ಟಿಷೇಣನ ತಮಗೆ ಹಿತವಾದ ಶಾಸನವನ್ನು ಕೇಳಿ. ಭರತರ್ಷಭರು ಸತತವಾಗಿ ಅದನ್ನು ಆಚರಿಸಿದರು.
ಭುಂಜಾನಾ ಮುನಿಭೋಜ್ಯಾನಿ ರಸವಂತಿ ಫಲಾನಿ ಚ |
ಶುದ್ಧಬಾಣಹತಾನಾಂ ಚ ಮೃಗಾಣಾಂ ಪಿಶಿತಾನಿ ಚ ॥8॥
ಮೇಧ್ಯಾನಿ ಹಿಮವತ್ಪೃಷ್ಠೇ ಮಧೂನಿ ವಿವಿಧಾನಿ ಚ |
ರಸಾಯನಸಮೃದ್ಧಾನಿ ತತ್ರೋಷುಸ್ತೇ ಸ್ಮ ಭಾರತಾಃ ॥9॥
ಆ ಭರತರ್ಷಭರು ಮುನಿಯೋಗ್ಯವಾದ ರಸಯುಕ್ತವಾದ ಫಲಗಳನ್ನು ಸೇವಿಸುತ್ತಾ ಶುದ್ಧವಾದ ಬಾಣಗಳಿಂದ ಹತವಾದ ಮೃಗಗಳ ಮಾಂಸವನ್ನು ಸೇವಿಸುತ್ತಾ ಹಿಮಾಲಯ ಪರ್ವತದಲ್ಲಿ ವಿವಿಧವಾದ ರಸಾಯನ ಸಮೃದ್ಧವಾದ ಮಧುಗಳನ್ನು ಸೇವಿಸುತ್ತಾ ಅಲ್ಲಿ ವಾಸಮಾಡಿದರು.
ತಥಾ ನಿವಸತಾಂ ತೇಷಾಂ ಪಂಚಮಂ ವರ್ಷಮಭ್ಯಗಾತ್ |
ಶೃಣ್ವತಾಂ ಲೋಮಶೋಕ್ತಾನಿ ವಾಕ್ಯಾನಿ ವಿವಿಧಾನ್ಯುತ ॥10॥
ಲೋಮಶರು ಹೇಳಿದ ದಿವ್ಯವಾದ ಕಥೆಗಳನ್ನು ಕೇಳಿ ಅಲ್ಲಿ ವಾಸಿಸುತ್ತಿದ್ದ ಅವರಿಗೆ ಐದನೆಯ ವರ್ಷವು ಪ್ರಾಪ್ತವಾಯಿತು.
ಕೃತ್ಯಕಾಲ ಉಪಸ್ಥಾಸ್ಯ ಇತಿ ಚೋಕ್ತತ್ವ ಘಟೋತ್ಕಚಃ |
ರಾಕ್ಷಸೈಃ ಸಹ ಸರ್ವೈಶ್ಚ ಪೂರ್ವಮೇವ ಗತಃ ಪ್ರಭೋ ॥11॥
ಪ್ರಭುವೇ, ನನ್ನ ಅವಶ್ಯಕತೆ ಇರುವ ಕಾಲದಲ್ಲಿ ನಾನು ಪುನಃ ಬರುವೆನು ಎಂದು ಹೇಳಿ ರಾಕ್ಷಸರ ಜೊತೆಯಲ್ಲಿ ಘಟೋತ್ಕಚನು ಮೊದಲೇ ಹೊರಟುಹೋಗಿದ್ದನು.
ಆರ್ಷ್ಟಿಷೇಣಾಶ್ರಮೇ ತೇಷಾಂ ವಸತಾಂ ವೈ ಮಹಾತ್ಮನಾಮ್ |
ಅಗಚ್ಛನ್ ಬಹವೋ ಮಾಸಾಃ ಪಶ್ಯತಾಂ ಮಹದದ್ಭುತಮ್ ॥12॥
ಅನೇಕ ಅದ್ಭುತಗಳನ್ನು ನೋಡುತ್ತಾ ಆರ್ಷ್ಟಿಷೇಣನ ಆಶ್ರಮದಲ್ಲಿ ವಾಸ ಮಾಡುವ ಅವರಿಗೆ ಅನೇಕ ಮಾಸಗಳು ಕಳೆದವು.
ತೈಸ್ತತ್ರ ವಿಹರದ್ಭಿಶ್ಚ ರಮಮಾಣೈಶ್ಚ ಪಾಂಡವೈಃ |
ಪ್ರೀತಿಮಂತೋ ಮಹಾಭಾಗಾ ಮುನಯಶ್ಚಾರಣಾಸ್ತಥಾ ॥13॥
ಆಜಗ್ಮುಃ ಪಾಂಡವಾನ್ ದ್ರಷ್ಟುಂ ಶುದ್ಧಾತ್ಮಾನೋ ಯತವ್ರತಾಃ |
ತೇ ತೈಃ ಸಹ ಕಥಾಂ ಚಕ್ರುರ್ದಿವ್ಯಾಂ ಭರತಸತ್ತಮಾಃ ॥14॥
ಪಾಂಡವರು ಅಲ್ಲಿ ಸಂತೋಷದಿಂದ ವಾಸಮಾಡಿ ವಿಹಾರವನ್ನು ಮಾಡುತ್ತಿದ್ದಾಗ ಮಹಾನುಭಾವರಾದ ಶುದ್ಧಮನಸ್ಸುಳ್ಳ ವ್ರತನಿಯಮ ಪರರಾದ ಮುನಿಗಳು ಮತ್ತು ಚಾರಣರು ಪಾಂಡವರ ಮೇಲಿನ ಪ್ರೀತಿಯಿಂದ ಪಾಂಡವರನ್ನು ನೋಡಲು ಅಲ್ಲಿಗೆ ಬಂದರು. ಭರತಶ್ರೇಷ್ಠರು ಅವರ ಜೊತೆಯಲ್ಲಿ ದಿವ್ಯವಾದ ಸಂವಾದಗಳನ್ನು ಮಾಡಿದರು.
ತತಃ ಕತಿಪಯಾಹಸ್ಸು ಮಹಾಹ್ರದನಿವಾಸಿನಮ್ |

ಋದ್ಧಿಮಂತಂ ಮಹಾನಾಗಂ ಸುಪರ್ಣಃ ಸಹಸಾಽಽಹರತ್ ॥15॥
ಅನಂತರ ಕೆಲವು ದಿನಗಳು ಕಳೆದ ಮೇಲೆ ಒಂದು ದೊಡ್ಡ ಮಡುವಿನಲ್ಲಿದ್ದ ಸಮೃದ್ಧ ಶರೀರವುಳ್ಳ ಒಂದು ಮಹಾನಾಗನನ್ನು ಗರುಡನು ಇದ್ದಕ್ಕಿದ್ದಂತೆಯೇ ಹಾರಿಸಿಕೊಂಡು ಹೋದನು.
ಪ್ರಾಕಂಪತ ಮಹಾಶೈಲಃ ಪ್ರಾಮೃದ್ಯಂತ ಮಹಾದ್ರುಮಾಃ |
ದದೃಶುಃ ಸರ್ವಭೂತಾನಿ ಪಾಂಡವಾಶ್ಚ ತದದ್ಭುತಮ್ ॥16॥
ಗರುಡನ ಮಹಾವೇಗಕ್ಕೆ ಆ ಮಹಾಪರ್ವತವು ಕಂಪಿಸಿತು. ದೊಡ್ಡದೊಡ್ಡ ವೃಕ್ಷಗಳು ಮುರಿದವು. ಬೇರೆ ಎಲ್ಲಾ ಪ್ರಾಣಿಗಳು ಮತ್ತು ಪಾಂಡವರು ಆ ಅದ್ಭುತವಾದ ದೃಶ್ಯವನ್ನು ನೋಡಿದರು.
ತತಃ ಶೈಲೋತ್ತಮಸ್ಯಾಗ್ರಾತ್ ಪಾಂಡವಾನ್ ಪ್ರತಿ ಮಾರುತಃ |
ಅವಹತ್ ಸರ್ವಮಾಲ್ಯಾನಿ ಗಂಧವಂತಿ ಶುಭಾನಿ ಚ ॥17॥
ಅನಂತರ ಉಂಟಾದ ದೊಡ್ಡ ಮಾರುತವು ಪಾಂಡವರ ಸಮೀಪದಲ್ಲಿ ಒಳ್ಳೆಯ ಸುಗಂಧವಿರುವ ಎಲ್ಲಾ ಪುಷ್ಪಗಳನ್ನು ಪರ್ವತಶ್ರೇಷ್ಠದ ಅಗ್ರಭಾಗದಿಂದ ತಂದು ಹಾಕಿತು.
ತತ್ರ ಪುಷ್ಪಾಣಿ ದಿವ್ಯಾನಿ ಸುಹೃದ್ಭಿಃ ಸಹ ಪಾಂಡವಾಃ |
ದದೃಶುಃ ಪಂಚವರ್ಣಾನಿ ದ್ರೌಪದೀ ಚ ಯಶಸ್ವಿನೀ ॥18॥
ವಿಶ್ವಾಸಪಾತ್ರರ ಜೊತೆಯಲ್ಲಿ ಇದ್ದ ಪಾಂಡವರು ಮತ್ತು ಯಶಸ್ವಿನಿಯಾದ ದ್ರೌಪದಿಯೂ ಸಹ ಪಂಚವರ್ಣವುಳ್ಳ ಆ ದಿವ್ಯವಾದ ಪುಷ್ಪಗಳನ್ನು ಅಲ್ಲಿ ನೋಡಿದರು.
ಭೀಮಸೇನಂ ತತಃ ಕೃಷ್ಣಾ ಕಾಲೇ ವಚನಮಬ್ರವೀತ್ |
ವಿವಿಕ್ತೇ ಪರ್ವತೋದ್ದೇಶೇ ಸುಖಾಸೀನಂ ಮಹಾಭುಜಮ್ ॥19॥
ಅನಂತರ ಯೋಗ್ಯವಾದ ಕಾಲದಲ್ಲಿ ಮಹಾಭುಜನಾದ ಭೀಮಸೇನನು ಪರ್ವತದ ಒಂದು ಎತ್ತರವಾದ ಪ್ರದೇಶದಲ್ಲಿ ಸುಖವಾಗಿ ಕುಳಿತಿರುವಾಗ ದ್ರೌಪದಿಯು ಅವನನ್ನು ಸಮೀಪಿಸಿ ಮಾತನಾಡಿದಳು.
ಸುಪರ್ಣಾನಿಲವೇಗೇನ ಶ್ವಸನೇನ ಮಹಾಚಲಾತ್ |
ಪಂಚವರ್ಣಾನಿ ಪಾತ್ಯಂತೇ ಪುಷ್ಪಾಣಿ ಭರತರ್ಷಭ ॥20॥
ಭರತರ್ಷಭನೇ, ಗರುಡನ ರೆಕ್ಕೆಗಳ ವೇಗದಿಂದ ಮತ್ತು ವಾಯುವೇಗದಿಂದ ಮಹಾಪರ್ವತದ ಅಗ್ರಭಾಗದಿಂದ ಪಂಚವರ್ಣದ ಪುಷ್ಪಗಳು ಬೀಳುತ್ತಿವೆ.
ದಿವ್ಯವರ್ಣಾನಿ ದಿವ್ಯಾನಿ ದಿವ್ಯಗಂಧವಹಾನಿ ಚ |
ಮದಯಂತೀವ ಗಂಧೇನ ಮನೋ ಮೇ ಭರತರ್ಷಭ ॥21॥
ಎಲೈ ಭರತರ್ಷಭನೇ, ದಿವ್ಯವರ್ಣವುಳ್ಳ, ದಿವ್ಯವಾದ ಗಂಧವುಳ್ಳ ಈ ಪುಷ್ಪಗಳು ತಮ್ಮ ಗಂಧದಿಂದ ನನ್ನ ಮನಸ್ಸಿಗೆ ಮುದವನ್ನು (ಸುಖವನ್ನು) ಉಂಟುಮಾಡುತ್ತಿವೆ.
ಯೇಷಾಂ ತು ದರ್ಶನಾತ್ಸ್ಪರ್ಶಾತ್ ಸೌರಭ್ಯಾಚ್ಚ ತಥೈವ ಚ |
ನಶ್ಯತೀವ ಮನೋದುಃಖಂ ಮಮೇದಂ ಶತ್ರುತಾಪನ ॥22॥
ಎಲೈ ಶತ್ರುತಾಪನನೇ, ಆ ಪುಷ್ಪಗಳ ದರ್ಶನದಿಂದ, ಸ್ಪರ್ಶನದಿಂದ ಹಾಗೂ ಗಂಧದ ಆಘ್ರಾಣದಿಂದ ನನ್ನ ಈ ಮನೋದುಃಖವೆಲ್ಲವೂ ನಾಶವಾಗುವಂತೆ ತೋರುತ್ತದೆ.
ಈದೃಶೈಃ ಕುಸುಮೈರ್ದಿವ್ಯೈಃ ದಿವ್ಯಗಂಧವಹೈಃ ಶುಭೈಃ |
ದೇವತಾನ್ಯರ್ಚಯಿತ್ವಾಹಮಿಚ್ಛೇಯಂ ಸಂಗಮಂ ತ್ವಯಾ ॥23॥
ಇಂತಹ ದಿವ್ಯಗಂಧೋಪೇತವಾದ ಶುಭವಾದ ದಿವ್ಯಪುಷ್ಪಗಳಿಂದ ದೇವತೆಗಳನ್ನು ಪೂಜಿಸಿ ನಾನು ನಿನ್ನ ಸಂಗವನ್ನು ಬಯಸುತ್ತೇನೆ.
ಇದಂ ತು ಪುರುಷವ್ಯಾಘ್ರ ವಿಶೇಷೇಣಾಂಬುಜಂ ಶುಭಮ್ |
ಗಂಧಸಂಸ್ಥಾನಸಂಪನ್ನಂ ಮಮ ಮಾನಸವರ್ಧನಮ್ ॥24॥
ಪುರುಷವ್ಯಾಘ್ರನೇ, ಇದೊಂದು ಶುಭವಾದ ಕಮಲ ಪುಷ್ಪವು ದಿವ್ಯಗಂಧದಿಂದ ಯುಕ್ತವಾಗಿ ನನ್ನ ಮನಸ್ಸಿನ ಕಾಮವನ್ನು ಹೆಚ್ಚಿಸುತ್ತಿದೆ.
ವಾಸುದೇವಸಹಾಯೇನ ವಾಸುದೇವಪ್ರಿಯೇಣ ಚ |
ಖಾಂಡವೇ ಸತ್ಯಸಂಧೇನ ಭ್ರಾತ್ರಾ ತವ ಮಹಾತ್ಮನಾ ॥25॥
ಗಂಧರ್ವೋರಗರಕ್ಷಾಂಸಿ ವಾಸವಶ್ಚ ನಿವಾರಿತಃ |
ಹತಾ ಮಾಯಾವಿನಶ್ಚೋಗ್ರಾ ಧನುಃ ಪ್ರಾಪ್ತಂ ಚ ಗಾಂಡಿವಮ್ ॥26॥
ನಿನ್ನ ತಮ್ಮನಾದ ಮಹಾತ್ಮನಾದ ಕೃಷ್ಣಪ್ರಿಯನಾದ ಸತ್ಯಸಂಧನಾದ ಅರ್ಜುನನು ಕೃಷ್ಣನ ಸಹಾಯದಿಂದ ಖಾಂಡವವನದಲ್ಲಿ ಗಂಧರ್ವೋರಗರಾಕ್ಷಸರನ್ನು ಮತ್ತು ಇಂದ್ರನನ್ನು ತಡೆದನು. ಅನೇಕ ಭಯಂಕರರಾದ ಮಾಯಾವಿಗಳು ಕೊಲ್ಲಲ್ಪಟ್ಟರು. ಗಾಂಡೀವ ಧನುಸ್ಸು ಅವನಿಗೆ ಪ್ರಾಪ್ತವಾಯಿತು.
ತವಾಪಿ ಸುಮಹತ್ ತೇಜೋ ಮಹದ್ ಬಾಹುಬಲಂ ಚ ತೇ |
ಅವಿಷಹ್ಯಮನಾಧೃಷ್ಯಂ ಶಕ್ರತುಲ್ಯಬಲೋಪಮಮ್(ಪರಾಕ್ರಮ) ॥27॥
ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನೇ, ನಿನಗೂ ಸಹ ಇನ್ನೊಬ್ಬರು ತಡೆಯಲಾರದಂತಹ, ಯಾರೂ ಸೋಲಿಸಲು ಸಾಧ್ಯವಿಲ್ಲದಂತಹ, ಅತ್ಯಂತ ದೊಡ್ಡದಾದ ತೇಜಸ್ಸು ಮತ್ತು ದೊಡ್ಡದಾದ ಬಾಹುಬಲವು ಇದೆ.
ತ್ವದ್ಬಾಹುಬಲವೇಗೇನ ತ್ರಾಸಿತಾಃ ಸರ್ವರಾಕ್ಷಸಾಃ |

ಹಿತ್ವಾ ಶೈಲಂ ಪ್ರಪದ್ಯಂತಾಂ ಭೀಮಸೇನ ದಿಶೋ ದಶ ॥28॥
ಎಲೈ ಭೀಮಸೇನನೇ, ನಿನ್ನ ಬಾಹುಬಲದ ವೇಗದಿಂದ ಭಯಕ್ಕೆ ಒಳಗಾದ ಎಲ್ಲಾ ರಾಕ್ಷಸರೂ ಈ ಪರ್ವತವನ್ನು ಬಿಟ್ಟು ಹತ್ತು ದಿಕ್ಕುಗಳಿಗೆ ಹೊರಟು ಹೋಗಲಿ.
ತತಃ ಶೈಲೋತ್ತಮಸ್ಯಾಗ್ರಂ ಚಿತ್ರಮಾಲ್ಯಧರಂ ಶಿವಮ್ |
ವ್ಯಪೇತಭಯಸಮ್ಮೋಹಾಃ ಪಶ್ಯಂತು ಸುಹೃದಸ್ತವ ॥29॥
ಅನಂತರ ನಿನ್ನ ವಿಶ್ವಾಸಪಾತ್ರರು, ವಿಚಿತ್ರವಾದ ಪುಷ್ಪವನ್ನು ಧರಿಸಿರುವ ಮಂಗಳಕರವಾದ ಈ ಪರ್ವತಶ್ರೇಷ್ಠದ ಅಗ್ರಭಾಗವನ್ನು ಯಾವುದೇ ಭಯ ಮತ್ತು ಗಾಬರಿಗಳಿಲ್ಲದೆ ನೋಡುವವರಾಗಲಿ.
ಏವಂ ಪ್ರಣಿಹಿತಂ ಭೀಮ ಚಿರಾತ್ ಪ್ರಭೃತಿ ಮೇ ಮನಃ |
ದ್ರಷ್ಟುಮಿಚ್ಛಾಮಿ ಶೈಲಾಗ್ರಂ ತ್ವದ್ಬಾಹುಬಲಪಾಲಿತಾ ॥30॥
ಎಲೈ ಭೀಮಸೇನನೇ, ಈ ಒಂದು ಆಸೆಯನ್ನು ನಾನು ಮನಸ್ಸಿನಲ್ಲಿ ಬಹಳ ಕಾಲದಿಂದ ಇಟ್ಟುಕೊಂಡಿದ್ದೇನೆ. ನಿನ್ನ ಬಾಹುಬಲದಿಂದ ರಕ್ಷಿತಳಾಗಿ ಶೈಲಾಗ್ರಗಣ್ಯವನ್ನು ನೋಡಲು ಬಯಸುತ್ತೇನೆ.
ಇಚ್ಛಾಮಿ ಚ ನರವ್ಯಾಘ್ರ ಪುಷ್ಪಂ ಪ್ರತ್ಯಕ್ಷಮೀದೃಶಮ್ |
ಆನೀಯಮಾನಂ ಕ್ಷಿಪ್ರಂ ವೈ ತ್ವಯಾ ಭರತಸತ್ತಮ ॥31॥
ಎಲೈ ನರವ್ಯಾಘ್ರನೇ, ಭರತಸತ್ತಮನೇ, ನೀನು ಇಂತಹ ಪುಷ್ಪವನ್ನು ಬೇಗ ತಂದು ನನಗೆ ಕೊಡಬೇಕೆಂದು ನಾನು ಬಯಸುತ್ತೇನೆ.
ವೈಶಂಪಾಯನಃ
ತತಃ ಕ್ಷಿಪ್ತಮಿವಾತ್ಮಾನಂ ದ್ರೌಪದ್ಯಾ ಸ ಪರಂತಪಃ |
ನಾಮೃಷ್ಯತ ಮಹಾಬಾಹುಃ ಪ್ರಹಾರಮಿವ ಸದ್ಗವಃ ॥32॥
ವೈಶಂಪಾಯನ ಆಗ ಪರಂತಪನಾದ ಮಹಾಬಾಹುವಾದ ಭೀಮಸೇನನು ದ್ರೌಪದಿಯಿಂದ ನಿಂದಿಸಲ್ಪಟ್ಟವನಂತೆ ತನ್ನನ್ನು ತಿಳಿದು ಒಳ್ಳೆಯ ವೃಷಭವು ಪ್ರಹಾರವನ್ನು ಸಹಿಸದಿರುವಂತೆ ಆ ಮಾತುಗಳನ್ನು ಸಹಿಸಲಿಲ್ಲ.
ಸಿಂಹರ್ಷಭಗತಿಃ ಶ್ರೀಮಾನುದಾರಃ ಕನಕಪ್ರಭಃ |
ಮನಸ್ವೀ ಬಲವಾನ್ ದೃಪ್ತೋ ಮಾನೀ ಶೂರಶ್ಚ ಪಾಂಡವಃ ॥33॥
ಲೋಹಿತಾಕ್ಷಃ ಪೃಥುವ್ಯಂಸೋ ಮತ್ತವಾರಣವಿಕ್ರಮಃ |
ಸಿಂಹದಂಷ್ಟ್ರೋ ಬೃಹತ್ಸ್ಕಂಧಃ ಶಾಲಪೋತ ಇವೋದ್ಗತಃ ॥34॥
ಮಹಾತ್ಮಾ ಚಾರುಸರ್ವಾಂಗಃ ಕಂಬುಗ್ರೀವೋ ಮಹಾಭುಜಃ |
ರುಗ್ಮಪೃಷ್ಠಂ ಧನುಃ ಖಡ್ಗಂ ತೂಣಾಂಶ್ಚಾಪಿ ಪರಾಮೃಶತ್ ॥35॥
ಸಿಂಹರ್ಷಭಗತಿಯನ್ನು ಹೊಂದಿದ ಕಾಂತಿಯುಕ್ತನಾದ, ಸುವರ್ಣವರ್ಣವನ್ನು ಹೊಂದಿದ, ಉದಾರನಾದ, ಧೈರ್ಯಶಾಲಿಯಾದ, ಬಲಿಷ್ಠನಾದ, ದರ್ಪಿಷ್ಟನಾದ, ಅಭಿಮಾನಶಾಲಿಯಾದ, ಶೂರನಾದ, ಲೋಹಿತಾಕ್ಷನಾದ, ವಿಸ್ತಾರವಾದ ವಕ್ಷಸ್ಸ್ಥಳವನ್ನು ಹೊಂದಿದ, ಮದ್ದಾನೆಯ ಪರಾಕ್ರಮವನ್ನು ಹೊಂದಿದ, ಸಿಂಹದಂಷ್ಟ್ರನಾದ ವಿಸ್ತಾರವಾದ ಭುಜವನ್ನು ಹೊಂದಿದ, ಚಿಕ್ಕಸಾಲವೃಕ್ಷದಂತೆ ಎತ್ತರನಾದ, ಸರ್ವಾಂಗದಲ್ಲಿ ಸುಂದರನಾದ, ಕಂಬುಗ್ರೀವನಾದ, ಮಹಾತ್ಮನಾದ, ಪಾಂಡವನಾದ ಭೀಮಸೇನನು ಚಿನ್ನದ ಹಿಡಿಯುಳ್ಳ ಧನುಸ್ಸನ್ನು, ಖಡ್ಗವನ್ನು ಮತ್ತು ಬತ್ತಳಿಕೆಗಳನ್ನು ತೆಗೆದುಕೊಂಡನು.
ಸ ಕೇಸರೀವ ಚೋತ್ಸಿಕ್ತಃ ಪ್ರಭಿನ್ನ ಇವ ವಾರಣಃ |
ವ್ಯಪೇತಭಯಸಮ್ಮೋಹಃ ಶೈಲಮಭ್ಯಪತದ್ ಬಲೀ ॥36॥
ಬಲಿಷ್ಠನಾದ ಅವನು ಸಿಟ್ಟುಗೊಂಡ ಸಿಂಹದಂತೆ ಮದಿಸಿದ ಆನೆಯಂತೆ, ಭಯಭ್ರಾಂತಿಗಳಿಂದ ರಹಿತನಾಗಿ ಪರ್ವತವನ್ನು ಪ್ರವೇಶಿಸಿದನು.
ತಂ ಮೃಗೇಂದ್ರಮಿವಾಯಾಂತಂ ಪ್ರಭಿನ್ನಮಿವ ವಾರಣಮ್ |
ದದೃಶುಃ ಸರ್ವಭೂತಾನಿ ಬಾಣಕಾರ್ಮುಕಧಾರಿಣಮ್ ॥37॥
ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು ಮೃಗರಾಜನಾದ ಸಿಂಹದಂತೆ, ಮದೋನ್ಮತ್ತವಾದ ಆನೆಯಂತೆ, ಬರುತ್ತಿರುವ ಅವನನ್ನು ಎಲ್ಲ ಪ್ರಾಣಿಗಳೂ ನೋಡಿದವು.
ದ್ರೌಪದ್ಯಾ ವರ್ಧಯನ್ ಹರ್ಷಂ ಗದಾಮಾದಾಯ ಪಾಂಡವಃ |
ವ್ಯಪೇತಭಯಸಮ್ಮೋಹಃ ಶೈಲರಾಜಂ ಸಮಾಶ್ರಿತಃ ॥38॥
ದ್ರೌಪದಿಗೆ ಹರ್ಷವನ್ನು ಉಂಟುಮಾಡುತ್ತಾ ಪಾಂಡವನಾದ ಭೀಮಸೇನನು ಭಯಭ್ರಾಂತಿರಹಿತನಾಗಿ ಗದೆಯನ್ನು ತೆಗೆದುಕೊಂಡು ಶೈಲರಾಜನ ಮೇಲೆ ನಿಂತನು.
ನ ಗ್ಲಾನಿರ್ನ ಚ ಕಾತರ್ಯಂ ನ ವೈಕ್ಲವ್ಯಂ ನ ಮತ್ಸರಃ |
ಕದಾಚಿಜ್ಜುಷತೇ ಪಾರ್ಥಮಾತ್ಮಜಂ ಮಾತರಿಶ್ವನಃ ॥39॥
ವಾಯುದೇವರ ಮಗನಾದ ಭೀಮಸೇನನಿಗೆ ಯಾವಾಗಲಾದರೂ ಗ್ಲಾನಿಯಾಗಲೀ, ಕಾತರತೆಯಾಗಲೀ, ಅಧೈರ್ಯವಾಗಲೀ, ಮಾತ್ಸರ್ಯವಾಗಲೀ ಉಂಟಾಗುವುದಿಲ್ಲ.
ತದೇಕಾಯನಮಾಸಾದ್ಯ ವಿಷಮಂ ಭೀಮದರ್ಶನಮ್ |
ಬಹುತಾಲೋಚ್ಛ್ರಯಂ ಶೃಂಗಮಾರುರೋಹ ಮಹಾಬಲಃ ॥40॥
ಮಹಾಬಲನಾದ ಭೀಮಸೇನನು ಭಯಂಕರವಾಗಿ ಕಾಣುತ್ತಿದ್ದ ಒಬ್ಬನೇ ಹೋಗಬಹುದಾದ ಮಾರ್ಗವನ್ನು ಹಿಡಿದು ಅನೇಕ ತಾಲವೃಕ್ಷಗಳಷ್ಟು ಎತ್ತರವಾದ ಪರ್ವತ ಶೃಂಗವನ್ನು ಏರಿದನು.

ಸಕಿನ್ನರಮಹಾನಾಗಮುನಿಗಂಧರ್ವರಾಕ್ಷಸಾನ್ |
ಹರ್ಷಯನ್ ಪರ್ವತಸ್ಯಾಗ್ರಮಾರುಹ್ಯ ಸ ಮಹಾಬಲಃ ||41||
ತತೋ ವೈಶ್ರವಣಾವಾಸಂ ದದರ್ಶ ಭರತರ್ಷಭಃ |
ಮಹಾಬಲನಾದ ಭರತರ್ಷಭನಾದ ಅವನು ಕಿನ್ನರರಿಗೂ ಮಹಾನಾಗಗಳಿಗೂ ಮುನಿಗಂಧರ್ವರಾಕ್ಷಸರಿಗೂ ಹರ್ಷವನ್ನು ಉಂಟುಮಾಡುತ್ತಾ ಪರ್ವತಶಿಖರವನ್ನು ಏರಿ ಅಲ್ಲಿಂದ ಕುಬೇರನ ಆವಾಸಸ್ಥಾನವನ್ನು ನೋಡಿದನು.
ಕಾಂಚನೈಃ ಸ್ಫಾಟಿಕೈಶ್ಚೈವ ವೇಶ್ಮಭಿಃ ಸಮಲಂಕೃತಮ್ ||42||
ಪ್ರಾಕಾರೇಣ ಪರಿಕ್ಷಿಪ್ತಂ ಸೌವರ್ಣೇನ ಸಮಂತತಃ |
ಸರ್ವರತ್ನದ್ಯುತಿಮತಾ ಸರ್ವೋದ್ಯಾನವತಾ ತಥಾ ||43||
ಅದು ಸುವರ್ಣಮಯವಾದ ಮತ್ತು ಸ್ಪಟಿಕಮಯವಾದ ಗೃಹಗಳಿಂದ ಅಲಂಕೃತವಾಗಿದ್ದಿತು. ಸರ್ವರತ್ನಗಳ ಕಾಂತಿಯನ್ನು ಹೊಂದಿದ, ಸರ್ವೋದ್ಯಾನಗಳಿಂದ ಸುತ್ತುವರಿಯಲ್ಪಟ್ಟ ಸುವರ್ಣಮಯವಾದ ಕೋಟೆಯಿಂದ ಸುತ್ತಲೂ ಆವೃತವಾಗಿದ್ದಿತು.
ಶೈಲಾದಭ್ಯುಚ್ಛ್ರಯವತಾ ಚಯಾಟ್ಟಾಲಕಶೋಭಿನಾ |
ದ್ವಾರತೋರಣನಿರ್ವ್ಯೂಹಧ್ವಜಸಂವಾಹಶೋಭಿನಾ |
ವಿಲಾಸಿನೀಭಿರತ್ಯರ್ಥಂ ನೃತ್ಯಂತೀಭಿಃ ಸಮಂತತಃ |
ವಾಯುನಾ ಧೂಯಮಾನಾಭಿಃ ಪತಾಕಾಭಿರಲಕೃಂತಮ್ |
ಪರ್ವತಕ್ಕಿಂತಲೂ ಎತ್ತರವಾದ ಅಡಿಪಾಯಗಳಿಂದಲೂ ಮತ್ತು ಉಪ್ಪರಿಗೆಗಳಿಂದಲೂ ಮಹಾದ್ವಾರದ ತೋರಣಗಳಿಂದಲೂ, ಆನೆಯ ದಂತಗಳಿಂದ ನಿರ್ಮಿತವಾದ ಅಲಂಕೃತಗಳಿಂದಲೂ, ಆ ಗೃಹಗಳು ಶೋಭಿಸುತ್ತಿದ್ದವು. ವಿಲಾಸಿನಿಯರು ಆ ಗೃಹದಲ್ಲಿ ಎಲ್ಲಕಡೆಯಿಂದಲೂ ನರ್ತನವನ್ನು ಮಾಡುತ್ತಿದ್ದರು. ಆ ಗೃಹಗಳು ವಾಯುವಿನಿಂದ ಕಂಪಿಸುವ ಪತಾಕೆಗಳಿಂದ ಅಲಂಕೃತವಾಗಿದ್ದಿತು.
ಧನುಷ್ಕೋಟಿಮವಷ್ಟಭ್ಯ ವಕ್ರಭಾವೇನ ಬಾಹುನಾ |
ಪಶ್ಯಮಾನಃ ಸ ಖೇದೇನ ದ್ರವಿಣಾಧಿಪತೇಃ ಪುರಮ್ ||
ಮೋದಯನ್ ಸರ್ವಭೂತಾನಿ ಗಂಧಮಾದನಸಂಭವಃ |
ಸರ್ವಗಂಧವಹಸ್ತತ್ರ ಮಾರುತಃ ಸುಸುಖೋ ವವೌ |
ಧನುಷ್ಕೋಟಿಯನ್ನು ಅವಲಂಬಿಸಿ ತನ್ನ ಎಡಬಾಹುವನ್ನು ಅದರ ಮೇಲಿಟ್ಟು ಭೀಮಸೇನನು ಖೇದದಿಂದ ದ್ರವ್ಯಾಧಿಪತಿಯಾದ ಕುಬೇರನ ಪಟ್ಟಣವನ್ನು ನೋಡಿದನು. ಅಲ್ಲಿ ಗಂಧಮಾದನ ಪರ್ವತದಲ್ಲಿ ಉಂಟಾದ ಮಾರುತನು ಎಲ್ಲ ಪರಿಮಳಗಳನ್ನೂ ತೆಗೆದುಕೊಂಡು, ಎಲ್ಲ ಪ್ರಾಣಿಗಳಿಗೂ ಸಂತೋಷವನ್ನುಂಟು ಮಾಡುತ್ತಾ ಸುಖವಾಗಿ ಬೀಸುತ್ತಿತ್ತು.
ಚಿತ್ರಾ ವಿವಿಧವರ್ಣಾಭಾಶ್ಚಿತ್ರಮಂಜರಿಧಾರಿಣಃ |
ಅಚಿಂತ್ಯಾ ವಿವಿಧಾಸ್ತತ್ರ ದ್ರುಮಾಃ ಪರಮಶೋಭಿನಃ ||44||
ಅಲ್ಲಿ ವಿಚಿತ್ರವಾದ ವಿವಿಧ ವರ್ಣಗಳಿಂದ ಕೂಡಿದ ವಿಚಿತ್ರವಾದ ಹೂಗೊಂಚಲುಳ್ಳ ಅಚಿಂತ್ಯವಾದ ವಿವಿಧವಾದ, ಕಾಂತಿಯುಕ್ತವಾದ ವೃಕ್ಷಗಳಿದ್ದವು.
ರತ್ನಜಾಲಪರಿಕ್ಷಿಪ್ತಂ ಚಿತ್ರಮಾಲ್ಯವಿಭೂತಿಷಿತಮ್ |
ರಾಕ್ಷಸಾಧಿಪತೇಃ ಸ್ಥಾನಂ ದದೃಶೇ ಭರತರ್ಷಭಃ ||45||
ಭರತರ್ಷಭನಾದ ಭೀಮಸೇನನು ರತ್ನಜಾಲಗಳಿಂದ ಸುತ್ತಲೂ ಅಲಂಕೃತವಾದ ವಿಚಿತ್ರಪುಷ್ಪಗಳಿಂದ ಭೂಷಿತವಾದ ರಾಕ್ಷಸಾಧಿಪತಿಯಾದ ಕುಬೇರನ ಸ್ಥಾನವನ್ನು ನೋಡಿದನು.
ಗದಾಖಡ್ಗಧನುಷ್ಪಾಣಿಃ ಸಮಭಿತ್ಯಕ್ತಜೀವಿತಃ |
ಭೀಮಸೇನೋ ಮಹಾಬಾಹುಸ್ತಸ್ಥೌ ಗಿರಿರಿವಾಚಲಃ ||46||
ಮಹಾಬಾಹುವಾದ ಭೀಮಸೇನನು ಕೈಯಲ್ಲಿ ಗದಾಖಡ್ಗ ಧನುಸ್ಸುಗಳನ್ನು ಹಿಡಿದು ಯಾವ ಪ್ರಾಣಭಯವೂ ಇಲ್ಲದೇ ಇನ್ನೊಂದು ಪರ್ವತದಂತೆ ಪರ್ವತಶಿಖರದಲ್ಲಿ ಅಚಲನಾಗಿ ನಿಂತನು.
ತತಃ ಶಂಖಮುಪಾಧ್ಮಾಸೀದ್ ದ್ವಿಷತಾಂ ಲೋಮಹರ್ಷಣಮ್ |
ಜ್ಯಾಘೋಷತಳಶಬ್ದಂ ಚ ಕೃತ್ವಾ ಭೂತಾನ್ಯಮೋಹಯತ್ ||47||
ಅನಂತರ ಶತ್ರುಗಳಿಗೆ ರೋಮಾಂಚವನ್ನು ಉಂಟುಮಾಡುವ ತನ್ನ ಶಂಖವನ್ನು ಊದಿದನು. ಧನುಸ್ಸಿನ ಹೆದೆಯ ಝೇಂಕಾರವನ್ನು ಮತ್ತು ತನ್ನ ಹಸ್ತಗಳ (ಚಪ್ಪಾಳೆ) ಶಬ್ದವನ್ನು ಮಾಡಿ ಎಲ್ಲ ಭೂತಗಳನ್ನು ದಿಗ್ಭ್ರಾಂತಗೊಳಿಸಿದನು.
ತತಃ ಪ್ರಹೃಷ್ಟರೋಮಾಣಸ್ತಂ ಶಬ್ದಮಭಿದುದ್ರುವುಃ |
ಯಕ್ಷರಾಕ್ಷಸಗಂಧರ್ವಾಃ ಪಾಂಡವಸ್ಯ ಸಮೀಪತಃ ||48||
ಆ ಶಬ್ದವನ್ನು ಕೇಳಿ ರೋಮಾಂಚಗೊಂಡ ಯಕ್ಷರಾಕ್ಷಸಗಂಧರ್ವರು ಪಾಂಡವನ ಬಳಿಗೆ ಬಂದರು.
ಗದಾಪರಿಘನಿಸ್ತ್ರಿಂಶಶೂಲಶಕ್ತಿಪರಶ್ವಧಾಃ |
ಪ್ರಗೃಹೀತಾ ವ್ಯರೋಚಂತ ಯಕ್ಷರಾಕ್ಷಸಬಾಹುಭಿಃ ||49||
ಆ ಯಕ್ಷರಾಕ್ಷಸರು ತಮ್ಮ ಬಾಹುಗಳಲ್ಲಿ ಹಿಡಿದ ಗದಾ ಪರಿಘ ಖಡ್ಗ ಶೂಲ ಶಕ್ತಿ ಪರಶ್ವಧ ಮೊದಲಾದ ಆಯುಧಗಳು ಶೋಭಿಸಿದವು.
ತತಃ ಪ್ರವವೃತ್ತೇ ಯುದ್ಧಂ ತೇಷಾಂ ತಸ್ಯ ಚ ಭಾರತ |
ಸಂರಬ್ಧಾನಾಂ ಮಹಾಘೋಷಂ ಸಿಂಹಾನಾಮಿವ ನರ್ದತಾಮ್ ||50||
ಎಲೈ ಭಾರತನೇ, ಅನಂತರ ಸಿಂಹದಂತೆ ಗರ್ಜಿಸುವ ಕ್ರೋಧದಿಂದ ಕೂಡಿದ ಅವರಿಗೂ ಮತ್ತು ಭೀಮಸೇನನಿಗೂ ಮಹಾಘೋಷವನ್ನು

ಉಂಟುಮಾಡುವ ಯುದ್ಧವು ಪ್ರಾರಂಭವಾಯಿತು.
ತೈಃ ಪ್ರಯುಕ್ತಾನ್ ಮಹಾಮಾಯೈಃ ಶೂಲಶಕ್ತಿಪರಶ್ವಧಾನ್ |
ಭಲ್ಲೈರ್ಭೀಮಃ ಪ್ರಚಿಚ್ಛೇದ ಭೀಮವೇಗತರೈಸ್ತತಃ ॥51॥
ಮಹಾಮಾಯಿಗಳಾದ ಅವರು ಪ್ರಯೋಗಿಸಿದ ಶೂಲಶಕ್ತಿಪರಶ್ವಧ ಮೊದಲಾದ ಆಯುಧಗಳನ್ನು ಅದಕ್ಕಿಂತ ಭಯಂಕರ ವೇಗವುಳ್ಳ ತನ್ನ ಆಯುಧಗಳಿಂದ ಭೀಮಸೇನನು ಕತ್ತರಿಸಿದನು.
ಅಂತರಿಕ್ಷಗತಾನಾಂ ಚ ಭೂಮಿಷ್ಠಾನಾಂ ಚ ಗರ್ಜತಾಮ್ |
ಶರೈರ್ವಿವ್ಯಾಧ ಗಾತ್ರಾಣಿ ರಾಕ್ಷಸಾನಾಂ ಮಹಾಬಲಃ ॥52॥
ಅಂತರಿಕ್ಷದಲ್ಲಿದ್ದು ಮತ್ತು ಭೂಮಿಯ ಮೇಲೆ ನಿಂತು ಗರ್ಜಿಸುವ ಆ ರಾಕ್ಷಸರ ಶರೀರಗಳನ್ನು ಮಹಾಬಲನಾದ ಭೀಮಸೇನನು ಬಾಣಗಳಿಂದ ಪೀಡಿಸಿದನು.
ಶೋಣಿತಸ್ಯ ತತಃ ಪೇತುರ್ಘನಾನಾಮಿವ ಭಾರತ |
ಗಾತ್ರೇಭ್ಯಃ ಪ್ರಚ್ಯುತಾ ಧಾರಾಃ ರಾಕ್ಷಸಾನಾಂ ಸಮಂತತಃ ॥53॥
ಎಲೈ ಭಾರತನೇ, ಆಗ ಮೋಡಗಳು ಮಳೆಯನ್ನು ಸುರಿಸುವಂತೆ ಎಲ್ಲ ಕಡೆಗಳಲ್ಲಿಯೂ ರಾಕ್ಷಸರ ದೇಹದಿಂದ ಹೊರಟ ರಕ್ತದ ಧಾರೆಗಳು ಭೂಮಿಯ ಮೇಲೆ ಬಿದ್ದು ಹರಿದವು.
ಸಾ ಲೋಹಿತಮಹಾವೃಷ್ಟಿರಭ್ಯವರ್ಷನ್ಮಹಾಬಲಮ್ |
ಕಾಯೇಭ್ಯಃ ಪ್ರಚ್ಯುತಾ ಧಾರಾ ರಾಕ್ಷಸಾನಾಂ ಸಮಂತತಃ ॥54॥
ಗದಾಪರಿಘಪಾಣೀನಾಂ ರಕ್ಷಸಾಂ ಕಾಯಸಂಭವಾಃ॥55॥
ಗದಾಪರಿಘವನ್ನು ಹಿಡಿದ ರಾಕ್ಷಸರ ಶರೀರದಿಂದ ಹೊರಹೊಮ್ಮಿದ ಆ ಸುತ್ತಲೂ ಇದ್ದ ರಾಕ್ಷಸರ ರಕ್ತದ ಮಹಾವೃಷ್ಟಿಯು ಆ ಮಹಾಬಲನಾದ ಭೀಮಸೇನನ ಮೇಲೆ ಬಿದ್ದಿತು.
ಭೀಮಬಾಹುಬಲೋತ್ಸೃಷ್ಟೈರಾಯುಧೈರ್ಯಕ್ಷರಕ್ಷಸಾಮ್ |
ವಿನಿಕೃತ್ತಾನಿ ದೃಶ್ಯಂತೇ ಶರೀರಾಣಿ ಶಿರಾಂಸಿ ಚ ॥56॥
ಭೀಮಸೇನನ ಬಾಹುಬಲದಿಂದ ಪ್ರಯೋಗಿಸಲ್ಪಟ್ಟ ಆಯುಧಗಳಿಂದ ಕತ್ತರಿಸಲ್ಪಟ್ಟ ಯಕ್ಷರಾಕ್ಷಸರ ಶರೀರಗಳು ಮತ್ತು ಶಿರಸ್ಸುಗಳು ಅಲ್ಲಿ ಕಾಣುತ್ತಿದ್ದವು.
ಪ್ರಚ್ಛಾದ್ಯಮಾನಂ ರಕ್ಷೋಭಿಃ ಪಾಂಡವಂ ಪ್ರಿಯದರ್ಶನಮ್ |
ದದೃಶುಃ ಸರ್ವಭೂತಾನಿ ಸೂರ್ಯಮಭ್ರಗಣೈರಿವ ॥57॥
ಸೂರ್ಯನನ್ನು ಮೋಡಗಳ ಸಮೂಹವು ಮುಚ್ಚಿದಂತೆ ಪ್ರಿಯದರ್ಶನನಾದ ಪಾಂಡವನನ್ನು ರಾಕ್ಷಸರು (ತಮ್ಮ ತಪ್ಪುಗಳಿಂದ) ಮುಚ್ಚುವುದನ್ನು ಎಲ್ಲ ಭೂತಗಳೂ ನೋಡಿದವು.
ಸ ರಶ್ಮಿಭಿರಿವಾದಿತ್ಯಃ ಶರೈರರಿನಿಘಾತಿಭಿಃ |
ಸರ್ವಾನಾರ್ಚ್ಛನ್ಮಹಾಬಾಹುರ್ಬಲವಾನ್ ಸತ್ಯವಿಕ್ರಮಃ ॥58॥
ಮಹಾಬಾಹುವೂ, ಸತ್ಯವಿಕ್ರಮನೂ, ಬಲಿಷ್ಠನೂ ಆದ ಭೀಮಸೇನನು ಆದಿತ್ಯನು ತನ್ನ ಕಿರಣಗಳಿಂದ ಎಲ್ಲರನ್ನೂ ತಲುಪುವಂತೆ ಶತ್ರುಸಂಹಾರಕವಾದ ತನ್ನ ಬಾಣಗಳಿಂದ ಎಲ್ಲರನ್ನೂ ಸ್ಪರ್ಶಿಸಿದನು.
ಅಭಿತರ್ಜಯಮಾನಾಶ್ಚ ರುವಂತಶ್ಚ ಮಹಾರವಾನ್ |
ನ ಮೋಹಂ ಭೀಮಸೇನಸ್ಯ ದದೃಶುಃ ಸರ್ವರಾಕ್ಷಸಾಃ ॥59॥
ಎಲ್ಲಾ ರಾಕ್ಷಸರು ಭೀಮಸೇನನನ್ನು ಬೆದರಿಸಿ ಮಹಾನಾದಗಳನ್ನು ಮಾಡುತ್ತಿದ್ದರೂ ಅದರಿಂದ ಭೀಮಸೇನನಿಗೆ ಯಾವ ವಿಕಾರವೂ ಉಂಟಾಗುತ್ತಿಲ್ಲವೆಂದು ಅವರು ಗಮನಿಸಿದರು.
ಯಕ್ಷಾ ವಿಕೃತಸರ್ವಾಂಗಾ ಭೀಮಸೇನಭಯಾರ್ದಿತಾಃ |
ಭೀಮಮಾರ್ತಸ್ವರಂ ಚಕ್ರುರ್ವಿಪ್ರಕೀರ್ಣಮಹಾಯುಧಾಃ ॥60॥
ಯಕ್ಷರು ಸರ್ವಾಂಗಗಳ ವಿಕಾರವನ್ನು ಹೊಂದಿ ಭೀಮಸೇನನ ಭಯದಿಂದ ಪೀಡಿತರಾಗಿ ತಮ್ಮ ಮಹಾಯುಧಗಳನ್ನು ಎಲ್ಲಕಡೆಗಳಲ್ಲಿಯೂ ಎಸೆದು ಭಯಂಕರವಾದ ಆರ್ತನಾದವನ್ನು ಮಾಡಿದರು.
ಉತ್ಸೃಜ್ಯ ತೇ ಗದಾಶೂಲಾಸಿಸಶಕ್ತಿಪರಶ್ವಧಾನ್ |
ದಕ್ಷಿಣಾಂ ದಿಶಮಾಜಗ್ಮುಸ್ತ್ರಸಿತಾ ದೃಢಧನ್ವನಾ ॥61॥
ಅವರು ದೃಢಧನ್ವನಾದ ಭೀಮಸೇನನಿಗೆ ಹೆದರಿ ತಮ್ಮ ಗದಾ, ಶೂಲ, ಕತ್ತಿ, ಶಕ್ತಿ, ಪರಶ್ವಧ ಮೊದಲಾದ ಆಯುಧಗಳನ್ನು ಅಲ್ಲಿಯೇ ಬಿಟ್ಟು ದಕ್ಷಿಣದಿಕ್ಕಿಗೆ ಬಂದರು.
ತತ್ರ ಶೂಲಗದಾಪಾಣಿರ್ವ್ಯೂಢೋರಸ್ಕೋ ಮಹಾಭುಜಃ |
ಸಖಾ ವೈಶ್ರವಣಸ್ಯಾಸೀನ್ಮಣಿಮಾನ್ನಾಮ ರಾಕ್ಷಸಃ ॥62॥
ಅವರಲ್ಲಿ ಶೂಲಗದಾಪಾಣಿಯಾದ ಮಹಾಭುಜನಾದ ವಿಸ್ತಾರವಾದ ವಕ್ಷಸ್ಥಳವುಳ್ಳ ವೈಶ್ರವಣನ ಮಿತ್ರನಾದ ಮಣಿಮಂತನೆಂಬ ರಾಕ್ಷಸನಿದ್ದನು.
ಆದರ್ಶಯತ್ ಪ್ರತೀಕಾರಂ (ಅದರ್ಶಯದಧೀಕಾರಂ) ಪೌರುಷಂ ಚ ಮಹಾಬಲಃ
ಸ ತಾನ್ ದೃಷ್ಟ್ವಾ ಪರಾವೃತ್ತಾನ್ ಸ್ಮಯಮಾನ ಇವಾಬ್ರವೀತ್ ॥63॥
ಮಹಾಬಲನಾದ ಅವನು ತನ್ನ ಅಧಿಕಾರವನ್ನು ಮತ್ತು ಪೌರುಷವನ್ನು ಎಲ್ಲರಿಗೂ ತೋರಿಸಿದನು. ಅವನು ಯುದ್ಧದಿಂದ ಹಿಮ್ಮೆಟ್ಟಿದ ಆ ರಾಕ್ಷಸರನ್ನು ನೋಡಿ ನಗುತ್ತಾ ಹೀಗೆ ಮಾತನಾಡಿದನು.

ಏಕೇನ ಬಹವಃ ಸಂಖ್ಯೇ ಮಾನುಷೇಣ ಪರಾಜಿತಾಃ |
ಪ್ರಾಪ್ಯ ವೈಶ್ರವಣಾವಾಸಂ ಕಿಂ ವಕ್ಷ್ಯಥ ಧನೇಶ್ವರಮ್ ॥64॥
ಒಬ್ಬ ಮನುಷ್ಯನಿಂದ ಅನೇಕ ರಾಕ್ಷಸರು ಪರಾಜಿತರಾಗಿದ್ದೀರಿ. ಕುಬೇರನ ಮನೆಗೆ ಹಿಂದಿರುಗಿ ಅವನನ್ನು ಕುರಿತು ಏನು ಹೇಳುವಿರಿ?
ವೈಶಂಪಾಯನಃ
ಏವಮಾಭಾಷ್ಯ ತಾನ್ ಸರ್ವಾನಭ್ಯವರ್ತತ ರಾಕ್ಷಸಃ |
ಶಕ್ತಿಶೂಲಗದಾಪಾಣಿರಭ್ಯಧಾವತ್ ಸ ಪಾಂಡವಮ್ ॥65॥
ವೈಶಂಪಾಯನ ಹೀಗೆ ಅವರೆಲ್ಲರಿಗೂ ಹೇಳಿ ಆ ರಾಕ್ಷಸನು ಶಕ್ತಿಶೂಲಗದೆಗಳನ್ನು ಹಿಡಿದು ಪಾಂಡವನ ಕಡೆಗೆ ಧಾವಿಸಿ ಬಂದನು.
ತಮಾಪತಂತಂ ವೇಗೇನ ಪ್ರಭಿನ್ನಮಿವ ವಾರಣಮ್ |
ವತ್ಸದಂತೈಸ್ತ್ರಿಭಿಃ ಪಾರ್ಶ್ವೇ ಭೀಮಸೇನಃ ಸಮಾರ್ದಯತ್ ॥66॥
ಮದಿಸಿದಾನೆಯಂತೆ ವೇಗದಿಂದ ತನ್ನ ಕಡೆಗೆ ಬರುತ್ತಿರುವ ಅವನ ಪಕ್ಕೆಗೆ ಭೀಮಸೇನನು ಮೂರು ವತ್ಸದಂತ ಬಾಣಗಳನ್ನು ಹೊಡೆದು ಅವನನ್ನು ಪೀಡಿಸಿದನು.
ಮಣಿಮಾನಪಿ ಸಂಕ್ರುದ್ಧಃ ಪ್ರಗೃಹ್ಯ ಮಹತೀಂ ಗದಾಮ್ |
ಪ್ರಾಹಿಣೋದ್ ಭೀಮಸೇನಾಯ ಪರಿಗೃಹ್ಯ ಮಹಾಬಲಃ ॥67॥
ಕೋಪಗೊಂಡ ಹಾಬಲನಾದ ಮಣಿಮಂತನೂ ಸಹ ದೊಡ್ಡ ಗದೆಯನ್ನು ತೆಗೆದುಕೊಂಡು ಅದನ್ನು ಭೀಮಸೇನನ ಮೇಲೆ ಎಸೆದನು.
ವಿದ್ಯುದ್ರೂಪಾಂ ಮಹಾಘೋರಾಮಾಕಾಶೇ ಮಹತೀಂ ಗದಾಮ್ |
ಶರೈರ್ಬಹುಭಿರಭ್ಯಾರ್ಚ್ಛದ್ ಭೀಮಸೇನಃ ಶಿಲಾಶಿತೈಃ ॥68॥
ಭೀಮಸೇನನು ಮಿಂಚಿನಂತೆ ಮಹಾಘೋರವಾದ ಆಕಾಶದಲ್ಲಿ ಬರುತ್ತಿರುವ ಆ ಗದೆಯನ್ನು ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ತನ್ನ ಅನೇಕ ಬಾಣಗಳಿಂದ ಪೀಡಿಸಿದನು.
ಪ್ರತ್ಯಹನ್ಯಂತ ತೇ ಸರ್ವೇ ಗದಾಮಾಸಾದ್ಯ ಸಾಯಕಾಃ |
ನ ವೇಗಂ ಧಾರಯಾಮಾಸುರ್ಗದಾವೇಗಸ್ಯ ವೇಗಿತಾಃ ॥69॥
ಗದೆಯನ್ನು ತಲುಪಿದ ಆ ಬಾಣಗಳೆಲ್ಲವೂ ಗದಾವೇಗದಿಂದ ಪ್ರತಿಹತವಾದವು. ಆ ಬಾಣಗಳು ಗದೆಯ ವೇಗವನ್ನು ಎದುರಿಸಲು ಸಾಧ್ಯವಾಗಲಿಲ್ಲ.
ಗದಾಯುದ್ಧಸಮಾಚಾರಂ ಬುಧ್ಯಮಾನಃ ಸ ವೀರ್ಯವಾನ್ |
ವ್ಯಂಸಯಮಾಸ ತಂ ತಸ್ಯ ಪ್ರಹಾರಂ ಭೀಮವಿಕ್ರಮಃ ॥70॥
ಗದಾಯುದ್ಧದ ಪರಿಸ್ಥಿತಿಯನ್ನು ಚೆನ್ನಾಗಿ ತಿಳಿದ ಭೀಮಪರಾಕ್ರಮಿಯಾದ ವೀರ್ಯಶಾಲಿಯಾದ ಭೀಮಸೇನನು ಮಣಿಮಂತನ ಗದಾಪ್ರಹಾರವನ್ನು ವಂಚಿಸಿ ವ್ಯರ್ಥವನ್ನಾಗಿ ಮಾಡಿದನು.
ತತಃ ಶಕ್ತಿಂ ಮಹಾಘೋರಾಂ ರುಗ್ಮದಂಡಾಮಯಸ್ಮಯೀಮ್ |
ತಸ್ಮಿನ್ನೇವಾಂತರೇ ಧೀಮಾನ್ ಪ್ರಜಹಾರಾಥ ರಾಕ್ಷಸಃ ॥71॥
ಅನಂತರ ಅದೇ ಸಮಯದಲ್ಲಿ ಚಿನ್ನದ ಹಿಡಿಯುಳ್ಳ ಕಬ್ಬಿಣದಿಂದ ಮಾಡಿದ ಮಹಾಘೋರವಾದ ಶಕ್ತ್ಯಾಯುಧವನ್ನು ಮೇಧಾವಿಯಾದ ರಾಕ್ಷಸನು ಭೀಮಸೇನನ ಮೇಲೆ ಪ್ರಯೋಗಿಸಿದನು.
ಸಾ ಭುಜಂ ಭೀಮನಿರ್ಹ್ರಾದಾ ಭಿತ್ತ್ವಾ ಭೀಮಸ್ಯ ದಕ್ಷಿಣಮ್ |
ಸಾಗ್ನಿಜ್ವಾಲಾ ಮಹಾರೌದ್ರಾ ಪಪಾತ ಸಹಸಾ ಭುವಿ ॥72॥
ಆ ಶಕ್ತ್ಯಾಯುಧವು ಭಯಂಕರವಾದ ನಾದವನ್ನು ಮಾಡುತ್ತಾ ಭೀಮನ ಬಲಭುಜವನ್ನು ಭೇದಿಸಿ ಅಗ್ನಿಜ್ವಾಲೆಗಳ ಸಹಿತವಾಗಿ ಮಹಾಭಯಂಕರವಾಗಿ ಭೂಮಿಯಲ್ಲಿ ಬಿದ್ದಿತು.
ಸೋಽತಿವಿದ್ಧೋ ಮಹೇಷ್ವಾಸಃ ಶಕ್ತ್ಯಾಽಮಿತಪರಾಕ್ರಮಃ |
ಗದಾಂ ಜಗ್ರಾಹ ಕೌಂತೇಯಃ ಕ್ರೋಧಪರ್ಯಾಕುಲೇಕ್ಷಣಃ ॥73॥
ಅಮಿತಪರಾಕ್ರಮಿಯೂ ಮಹೇಷ್ವಾಸನೂ ಆದ ಕೌಂತೇಯನು ಆ ಗದಾ ಪ್ರಹಾರದಿಂದ ಬಹಳ ಏಟನ್ನು ತಿಂದವನಾಗಿ ಸಿಟ್ಟಿನಿಂದ ತುಂಬಿದ ಕಣ್ಣುಳ್ಳವನಾಗಿ ತನ್ನ ಗದೆಯನ್ನು ಕೈಯಲ್ಲಿ ತೆಗೆದುಕೊಂಡನು.
ರುಗ್ಮಪಟ್ಟಪಿನದ್ಧಾಂ ತಾಂ ಶತ್ರೂಣಾಂ ಭಯವರ್ಧಿನೀಮ್ |
ಪ್ರಗೃಹ್ಯಾಥ ನದನ್ ಭೀಮಃ ಸರ್ವಶೈಕ್ಯಾಯಸೀಂ ಗದಾಮ್ |
ತರಸಾ ಚಾಭಿದುದ್ರಾವ ಮಣಿಮಂತಂ ಮಹಾಬಲಮ್ ॥74॥
ಚಿನ್ನದ ಪಟ್ಟಿಗಳಿಂದ ಅಲಂಕೃತವಾದ, ಶತ್ರುಗಳ ಭಯವನ್ನು ಹೆಚ್ಚಿಸುವ, ಯಾವಾಗಲೂ ನಿಲುವಿನಲ್ಲಿಯೇ ಪೂರ್ಣವಾಗಿಟ್ಟಿರುವ, ತನ್ನ ಕಬ್ಬಿಣದ ಗದೆಯನ್ನು ತೆಗೆದುಕೊಂಡು ಗರ್ಜನೆಯನ್ನು ಮಾಡುತ್ತಾ ಭೀಮಸೇನನು ಮಹಾಬಲನಾದ ಮಣಿಮಂತನ ಕಡೆಗೆ ವೇಗದಿಂದ ಧಾವಿಸಿದನು.
ದೀಪ್ಯಮಾನಂ ಮಹಾಶೂಲಂ ಪ್ರಗೃಹ್ಯ ಮಣಿಮಾನಪಿ |
ಪ್ರಾಹಿಣೋದ್ ಭೀಮಸೇನಾಯ ವೇಗೇನ ಮಹತಾ ನದನ್ ॥75॥
ಮಣಿಮಂತನೂ ಸಹ ಉರಿಯುತ್ತಿರುವ ಮಹಾಶೂಲವನ್ನು ತೆಗೆದುಕೊಂಡು ದೊಡ್ಡದಾಗಿ ಗರ್ಜಿಸುತ್ತಾ ವೇಗದಿಂದ ಅದನ್ನು ಭೀಮಸೇನನ ಮೇಲೆ ಎಸೆದನು.
ಭಂಕ್ತ್ವಾ ಶೂಲಂ ಗದಾಗ್ರೇಣ ಗದಾಯುದ್ಧವಿಶಾರದಃ |
ಅಭಿದುದ್ರಾವ ತಂ ಹಂತುಂ ಗರುತ್ಮಾನಿವ ಪನ್ನಗಮ್ ॥76॥

ಗದಾಯುದ್ಧ ವಿಶಾರದನಾದ ಭೀಮಸೇನನು ತನ್ನ ಗದೆಯ ತುದಿಯಿಂದ ಆ ಶೂಲವನ್ನು ಮುರಿದು ಗರುಡನು ಸರ್ಪವನ್ನು ಕೊಲ್ಲಲು ಸಾಗಿದಂತೆ ಆ ರಾಕ್ಷಸನನ್ನು ಕೊಲ್ಲಲು ಅವನ ಕಡೆಗೆ ಓಡಿದನು.
ಸೋಽಂತರಿಕ್ಷಮವಪ್ಲುತ್ಯ ವಿಧೂಯ ಸಹಸಾ ಗದಾಮ್ |
ಪ್ರಚಿಕ್ಷೇಪ ಮಹಾಬಾಹುರ್ವಿನದ್ಯ ರಣಮೂರ್ಧನಿ ॥77॥
ಆ ರಾಕ್ಷಸನಾದರೂ ಅಂತರಿಕ್ಷಕ್ಕೆ ಹಾರಿ ತನ್ನ ಗದೆಯನ್ನು ಅಲ್ಲಾಡಿಸಿ (ತಿರುಗಿಸಿ) ಯುದ್ಧಭೂಮಿಯಲ್ಲಿ ಗರ್ಜನೆಯನ್ನು ಮಾಡುತ್ತಾ ಮಹಾಬಾಹುವಾದ ಅವನು ಭೀಮಸೇನನ ಮೇಲೆ ಎಸೆದನು.
ತತಸ್ತಂ ಗದಯಾ ಭೀಮೋ ಮಣಿಮಂತಂ ನಿಶಾಚರಮ್ |
ಜಘಾನ ಸಹಸಾ ಮೂರ್ಧ್ನಿ ಸ ಪಪಾತ ಮಮಾರ ಚ |
ಆಗ ಆ ರಾಕ್ಷಸನಾದ ಮಣಿಮಂತನ ತಲೆಯ ಮೇಲೆ ಭೀಮಸೇನನು ತನ್ನ ಗದೆಯಿಂದ ಹೊಡೆದನು. ರಾಕ್ಷಸನು ಬಿದ್ದು ಮೃತನಾದನು.
ಸೇಂದ್ರಾಶನಿರಿವೇಂದ್ರಣ ವಿಸೃಷ್ಟಾ ವಾತರಂಹಸಾ |
ಹತ್ವಾ ರಕ್ಷಃ ಕ್ಷಿತಿಂ ಪ್ರಾಪ್ಯ ಕೃತ್ಯೇವ ನಿಪಪಾತ ಹ ॥78॥
ಇಂದ್ರನ ವಜ್ರಾಯುಧದಂತೆ ವಾಯುವೇಗದಿಂದ ಪ್ರಯೋಗಿಸಲ್ಪಟ್ಟ ಆ ಭೀಮಸೇನನ ಗದೆಯು ರಾಕ್ಷಸನನ್ನು ಕೊಂದು ಭೂಮಿಯ ಮೇಲೆ ಬಂದು ಬಿದ್ದಿತು.
ತಂ ರಾಕ್ಷಸಂ ಭೀಮಬಲಂ ಭೀಮಸೇನೇನ ಪಾತಿತಮ್ |
ದದೃಶುಃ ಸರ್ವಭೂತಾನಿ ಸಿಂಹೇನೇವ ಗವಾಂ ಪತಿಮ್ ॥79॥
ಸಿಂಹದಿಂದ ಹತವಾದ ವೃಷಭದಂತೆ ಭೀಮಸೇನನ ಭಯಂಕರವಾದ ಬಲದಿಂದ ಹತನಾಗಿ ಭೂಮಿಯ ಮೇಲೆ ಬಿದ್ದ ಆ ರಾಕ್ಷಸನನ್ನು ಎಲ್ಲ ಪ್ರಾಣಿಗಳೂ ನೋಡಿದವು.
ತಂ ಪ್ರೇಕ್ಷ್ಯ ನಿಹತಂ ಭೂಮೌ ಹತಶೇಷಾ ನಿಶಾಚರಾಃ |
ಭೀಮಮಾರ್ತಸ್ವರಂ ಕೃತ್ವಾ ಜಗ್ಮುಃ ಪ್ರಾಚೀಂ ದಿಶಂ ಪ್ರತಿ ॥80॥
ಮೃತನಾಗಿ ಭೂಮಿಯ ಮೇಲೆ ಬಿದ್ದ ಆ ಮಣಿಮಂತನನ್ನು ನೋಡಿ ಅಳಿದುಳಿದ ನಿಶಾಚರರು ಭಯಂಕರವಾದ ಆರ್ತನಾದವನ್ನು ಮಾಡುತ್ತಾ ಪೂರ್ವದಿಕ್ಕಿಗೆ ಹೊರಟು ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಷಟ್‌ಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತಾರನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ತತೋ ವೈಶ್ರವಣೋ ರಾಜಾ ಮಹಾಪದ್ಮತ್ರಯೇ ಹತೇ |
ರಾಕ್ಷಸಾನಾಮವಧ್ಯಾನಾಂ ಸಖಾಯೇ ಮಣಿಮತ್ಯಪಿ |
ಆರುರೋಹ ರಥಂ ದಿವ್ಯಂ ಯೋದ್ಧುಕಾಮೋ ವೃಕೋದರಮ್ ॥299॥
ಬಳಿಕ ಮೂರು ಮಹಾಪದ್ಮದಷ್ಟಿದ್ದ ಅವಧ್ಯರಾದ ರಾಕ್ಷಸರೂ ತನ್ನ ಮಿತ್ರನಾದ ಮಣಿಮಂತನೂ ಹತನಾದಾಗ ಕುಪಿತನಾದ ಕುಬೇರ ಭೀಮನೊಡನೆ ಯುದ್ಧ ಮಾಡಲು ದಿವ್ಯ ರಥವನ್ನೇರಿದ.
ಅಸುರಾವೇಶತಸ್ತಸ್ಯ ಭೀಮೇ ಕ್ರೋಧೋ ಮಹಾನಭೂತ್ |
ಸ ಆಜಗಾಮ ಭೀಮೇನ ಯೋದ್ಧುಂ ವಿತ್ತಪತಿಃ ಸ್ವಯಮ್ ॥300॥
ಅಸುರಾವೇಶದಿಂದ ಕುಬೇರನಿಗೆ ಭೀಮನ ಮೇಲೆ ಬಹಳ ಕೋಪ ಉಂಟಾಗಿತ್ತು. ಅದರಿಂದ ಅವನು ಸ್ವತಃ ಭೀಮನೊಡನೆ ಯುದ್ಧ ಮಾಡಲು ಬಂದ.
ತಸ್ಮಿನ್ ಕಾಲೇ ಭೀಮಸೇನಸ್ಯ ಘೋಷಂ
ಶ್ರುತ್ವಾ ರಾಜಾಽಪೃಚ್ಛದಾಶು ಸ್ಮ ಕೃಷ್ಣಾಮ್ |
ಕ್ವ ಭೀಮ ಇತ್ಯೇವ ತಯೋದಿತಂ ಚ
ಶ್ರುತ್ವಾ ಜಗಾಮಾಽಶು ರಕ್ಷೋಂಸಸಂಸ್ಥಃ ॥301॥
ಅದೇ ಸಮಯದಲ್ಲಿ ಭೀಮಸೇನನ ಸಿಂಹಾಸನವನ್ನು ಕೇಳಿ ಧರ್ಮರಾಜ ದ್ರೌಪದಿಯನ್ನು ಕೇಳಿದ `ಭೀಮನೆಲ್ಲಿ?' ಎಂದು. ಅವಳು ಹೇಳಿದಳು. ಅದನ್ನು ಕೇಳಿ ಧರ್ಮರಾಜನ ಬೇಗನೆ ಘಟೋತ್ಕಚನ ಹೆಗಲನ್ನೇರಿ ಭೀಮನ ಬಳಿಗೆ ಹೋದ.
ಸಭ್ರಾತೃಕೇ ಮುನಿಭಿಃ ಕೃಷ್ಣಯಾ ಚ
ಗತೇ ರಾಜಾನ್ಯತ್ರ ಭೀಮಂ ಕುಬೇರಃ |
ದೃಷ್ಟ್ವಾಽಸುರಾವೇಶತೋ ಧರ್ಮಜಂ ಚ
ಕಿಂಚಿನ್ಮುಕ್ತಃ ಸ್ನೇಹಯುಕ್ತಸ್ತಥಾಽಸ ॥302॥
ಸೋದರರೊಡನೆ ಮುನಿಗಳೊಡನೆ ಕೂಡಿ ದ್ರೌಪದೀ ಸಮೇತನಾಗಿ ಧರ್ಮರಾಜ ಕುಬೇರನ ಭವನಕ್ಕೆ ಹೋದಾಗ ಕುಬೇರ ಭೀಮನನ್ನೂ ಧರ್ಮರಾಜನನ್ನೂ ನೋಡಿ ಸ್ವಲ್ಪ ಅಸುರಾವೇಶದಿಂದ ಮುಕ್ತನಾಗಿ ಸ್ವಲ್ಪ ಸ್ನೇಹಯುಕ್ತನಾದ.
* * * *

ನೂರ ಐವತ್ತೇಳನೆಯ ಅಧ್ಯಾಯ
ಅಪಶಕುನಗಳನ್ನು ನೋಡಿ ಯುಧಿಷ್ಠಿರಾದಿಗಳಿಂದ ಪರ್ವತಾಗ್ರಗಮನ. ಯುದ್ಧದ ಸುದ್ದಿಯನ್ನು ತಿಳಿದ ಕುಬೇರನಿಂದ ಅಲ್ಲಿಗೆ ಆಗಮನ. ಕೋಪರಹಿತನಾಗಿ ಹಿಂದೆ ಬಂದ ಅಗಸ್ತ್ಯರ ಶಾಪವನ್ನು ಹೇಳಿ
ಭೀಮಸೇನನ ಕಾರ್ಯದ ಅನುಮೋದನೆ.
ವೈಶಂಪಾಯನಃ
ಶ್ರುತ್ವಾ ಬಹುವಿಧೈಃ ಶಬ್ದೈರ್ನಾದ್ಯಮಾನಾಂ ಗಿರೇರ್ಗುಹಾಮ್ |
ಅಜಾತಶತ್ರುಃ ಕೌಂತೇಯೋ ಮಾದ್ರೀಪುತ್ರಾವುಭಾವಪಿ ॥1॥
ಧೌಮ್ಯಃ ಕೃಷ್ಣಾ ಚ ವಿಪ್ರಾಶ್ಚ ಸರ್ವೇ ಚ ಸುಹೃದಸ್ತಥಾ |
ಭೀಮಸೇನಮಪಶ್ಯಂತಃ ಸರ್ವೇ ವಿಮನಸೋಽಭವನ್ ॥2॥
ವೈಶಂಪಾಯನ ಅನೇಕ ವಿಧವಾದ ಶಬ್ಧಗಳಿಂದ ಗುಡುಗುತ್ತಿರುವ ಗಿರಿಗುಹೆಗಳ ಶಬ್ಧಗಳನ್ನು ಕೇಳಿ ಅಜಾತಶತ್ರುವಾದ ಕೌಂತೇಯನೂ ಇಬ್ಬರು ಮಾದ್ರಿಪುತ್ರರೂ, ಧೌಮ್ಯರೂ, ದ್ರೌಪದಿಯೂ, ಬ್ರಾಹ್ಮಣರೂ ಮತ್ತು ಎಲ್ಲಾ ವಿಶ್ವಾಸಿಗಳೂ ಭೀಮಸೇನನನ್ನು ಕಾಣದೆ ಎಲ್ಲರೂ ಮನೋವಿಷಾದಕ್ಕೆ ಒಳಗಾದರು.
ದ್ರೌಪದೀಮಾರ್ಷ್ಟಿಷೇಣಾಯ ಸಂಪ್ರದಾಯ ಮಹಾರಥಾಃ |
ಸಹಿತಾಃ ಸಾಯುಧಾಃ ಶೂರಾಃ ಶೈಲಮಾರುರುಹುಸ್ತದಾ ॥3॥
ಶೂರರೂ ಮಹಾರಥರೂ ಆದ ಅವರು ದ್ರೌಪದಿಯನ್ನು ಆರ್ಷ್ಟಿಷೇಣರ ವಶಕ್ಕೆ ಒಪ್ಪಿಸಿ ತಮ್ಮ ಆಯುಧಗಳನ್ನು ತೆಗೆದುಕೊಂಡು ಆಗ ಪರ್ವತವನ್ನು ಹತ್ತಿದರು.
ತತಃ ಸಂಪ್ರಾಪ್ಯ ಶೈಲಾಗ್ರಂ ವೀಕ್ಷಮಾಣಾ ಮಹಾರಥಾಃ |
ದದೃಶುಸ್ತೇ ಮಹೇಷ್ವಾಸಾ ಭೀಮಸೇನಮರಿಂದಮಾಃ ॥4॥
ಶೈಲಾಗ್ರವನ್ನು ಹತ್ತಿದ ಮಹಾರಥರೂ, ಮಹೇಷ್ವಾಸರೂ, ಅರಿಂದಮರೂ ಆದ ಅವರು ಎಲ್ಲ ಕಡೆಯಲ್ಲಿಯೂ ನೋಡುತ್ತಾ ಭೀಮಸೇನನನ್ನು ನೋಡಿದರು.
ಸ್ಫುರತಶ್ಚ ಮಹಾಕಾಯಾನ್ ಗತಸತ್ತ್ವಂಶ್ಚ ರಾಕ್ಷಸಾನ್ |
ಮಹಾಬಲಾನ್ ಮಹಾಸತ್ತ್ವನ್ ಭೀಮಸೇನೇನ ಪಾತಿತಾನ್ ॥5॥
ಮಹಾಕಾಯರೂ, ಮಹಾಬಲರೂ, ಮಹಾಸತ್ತ್ವವುಳ್ಳವರೂ ಆದ ರಾಕ್ಷಸರು ಭೀಮಸೇನನಿಂದ ಉರುಳಿಸಲ್ಪಟ್ಟು ಇನ್ನೂ ಸ್ವಲ್ಪ ಅಲುಗಾಡುವುದನ್ನೂ ನೋಡಿದರು.
ಶುಶುಭೇ ಸ ಮಹಾಬಾಹುರ್ಗದಾಖಡ್ಗಧನುರ್ಧರಃ |
ನಿಹತ್ಯ ಸಮರೇ ಸರ್ವಾನ್ ದಾನವಾನ್ ಮಘವಾನಿವ ॥6॥
ಗದಾಖಡ್ಗಧನುಸ್ಸುಗಳನ್ನು ಹಿಡಿದ ಮಹಾಬಾಹುವಾದ ಭೀಮಸೇನನು ಯುದ್ಧದಲ್ಲಿ ಎಲ್ಲಾ ದಾನವರನ್ನೂ ಸಂಹಾರ ಮಾಡಿದ ಇಂದ್ರನಂತೆ ಶೋಭಿಸುತ್ತಿದ್ದನು.
ತತಸ್ತೇ ಭ್ರಾತರಂ ದೃಷ್ಟ್ವಾ ಪರಿಷ್ವಜ್ಯ ಮಹಾರಥಾಃ |
ತತ್ರೋಪವಿವಿಶುಃ ಪಾರ್ಥಾಃ ಪ್ರಾಪ್ತಾ ಗತಿಮನುತ್ತಮಾಮ್ ॥7॥
ಅನಂತರ ಶ್ರೇಷ್ಠವಾದ ಗತಿಯನ್ನು ಹೊಂದಿದ ಮಹಾರಥರಾದ ಪಾರ್ಥರಾದ ಅವರು ಸಹೋದರನಾದ ಭೀಮಸೇನನನ್ನು ಆಲಿಂಗಿಸಿ ಅವನ ಸಮೀಪದಲ್ಲಿ ಕುಳಿತುಕೊಂಡರು.
ತೈಶ್ಚತುರ್ಭಿರ್ಮಹೇಷ್ವಾಸೈರ್ಗಿರಿಶೃಂಗಮಶೋಭತ |
ಲೋಕಪಾಲೈರ್ಮಹಾಭಾಗೈರ್ದಿವಂ ದೇವವರೈರಿವ ॥8॥
ಆ ನಾಲ್ಕುಜನ ಮಹಾಧನುರ್ಧಾರಿಗಳಿಂದ ಕೂಡಿದ ಆ ಪರ್ವತಶೃಂಗವು ಮಹಾನುಭಾವರಾದ ದೇವಶ್ರೇಷ್ಠರಾದ ಲೋಕಪಾಲಕರಿಂದ ಕೂಡಿರುವಂತೆ ಶೋಭಿಸಿತು.
ಕುಬೇರಸದನಂ ದೃಷ್ಟ್ವಾ ರಾಕ್ಷಸಾಂಶ್ಚ ನಿಪಾತಿತಾನ್ |
ಭ್ರಾತಾ ಭ್ರಾತರಮಾಸೀನಮಬ್ರುವೀತ್ ಪೃಥಿವೀಪತಿಃ ॥9॥
ಪೃಥಿವೀಪತಿಯಾದ ಧರ್ಮರಾಜನು ಕುಬೇರ ಸದನವನ್ನೂ, ಸುತ್ತಲೂ ರಾಕ್ಷಸರು ಬಿದ್ದು ಮೃತರಾಗಿರುವುದನ್ನೂ ನೋಡಿ ಕುಳಿತಿದ್ದ ತಮ್ಮನಾದ ಭೀಮಸೇನನನ್ನು ಕುರಿತು ಹೇಳಿದನು.
ಸಾಹಸಾದ್ ಯದಿ ವಾ ಮೋಹಾದ್ ಭೀಮ ಪಾಪಮಿದಂ ಕೃತಮ್ |
ನೈತತ್ ತೇ ಸದೃಶಂ ವೀರ ಮುನೇರಿವ ಮೃಷಾ ವಧಃ ॥10॥
ವೀರನಾದ ಭೀಮಸೇನನೇ, ನೀನು ಆಲೋಚನೆಯಿಲ್ಲದೇ ಆಗಲಿ ಅಥವಾ ಪ್ರಮಾದದಿಂದಲಾಗಲೀ ಯಾವ ಈ ಪಾಪಕೆಲಸವನ್ನು ಮಾಡಿದ್ದೀಯೋ ಅದು ಮುನಿಗೆ ವ್ಯರ್ಥವಾದ ವಧೆಯು ಹೇಗೆ ಯೋಗ್ಯವಲ್ಲವೋ, ಹಾಗೆ ನಿನಗೆ ಯೋಗ್ಯವಲ್ಲ.
ರಾಜದ್ವಿಷ್ಟಂ ನ ಕರ್ತವ್ಯಮಿತಿ ಧರ್ಮವಿದೋ ವಿದುಃ |
ತ್ರಿದಶಾನಾಮಿದಂ ದ್ವಿಷ್ಟಂ ಭೀಮಸೇನ ತ್ವಯಾ ಕೃತಮ್ ॥11॥
ರಾಜನಿಗೆ ಅಪ್ರಿಯವಾದುದನ್ನು ಮಾಡಬಾರದೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ. ಭೀಮಸೇನನೇ, ನೀನು ದೇವತೆಗಳಿಗೆ ಅಪ್ರಿಯವಾದ ಈ ಕಾರ್ಯವನ್ನು ಮಾಡಿದ್ದೀಯೆ.
ಅರ್ಥಧರ್ಮಾವನಾದೃತ್ಯ ಯಃ ಪಾಪೇ ಕುರುತೇ ಮನಃ |
ಕರ್ಮಣಾಂ ಪಾರ್ಥ ಪಾಪಾನಾಂ ಸ ಫಲಂ ವಿಂದತೇ ಧ್ರುವಮ್ ॥

ಎಲೈ ಪಾರ್ಥನೇ, ಯಾವನು ಅರ್ಥಧರ್ಮಗಳನ್ನು ವಿಚಾರ ಮಾಡದೆ ತಿರಸ್ಕಾರ ಮಾಡಿ, ಪಾಪಕಾರ್ಯದಲ್ಲಿ ಮನಸ್ಸನ್ನು ಇಡುತ್ತಾನೆಯೋ ಅವನು ಆ ಪಾಪಕಾರ್ಯಗಳ ಫಲವನ್ನು ಶೀಘ್ರದಲ್ಲಿಯೇ ಪಡೆಯುತ್ತಾನೆ.

ಸಾಹಸಂ ಬತ ಭದ್ರಂ ತೇ ದೇವಾನಾಮಪಿ ಚಾಪ್ರಿಯಮ್ |
ಪುನರೇವಂ ನ ಕರ್ತವ್ಯಂ ಮಮ ಚೇದಿಚ್ಛಸಿ ಪ್ರಿಯಮ್ ॥13॥

ಭೀಮಸೇನನೇ, ನಿನಗೆ ಮಂಗಳವಾಗಲಿ. ನೀನು ನನಗೆ ಪ್ರಿಯವನ್ನು ಮಾಡಲು ಬಯಸುವುದಾದರೆ ದೇವತೆಗಳಿಗೂ ಅಪ್ರಿಯವಾದ ಇಂತಹ ದುಡುಕಿನ ಕಾರ್ಯಗಳನ್ನು ಪುನಃ ಮಾಡಬಾರದು.

ವೈಶಂಪಾಯನಃ

ಏವಮುಕತ್ವ ಸ ಧರ್ಮಾತ್ಮಾ ಭ್ರಾತಾ ಭ್ರಾತರಮಚ್ಯುತಮ್ |
ಭೀಮಸೇನಂ ಮಹಾಬಾಹುಮಪ್ರಧೃಷ್ಯಪರಾಕ್ರಮಮ್ ॥14॥
ಅರ್ಥತತ್ತ್ವವಿಭಾಗಜ್ಞಃ ಕುಂತೀಪುತ್ರೋ ಯುಧಿಷ್ಠಿರಃ |
ವಿರರಾಮ ಮಹಾತೇಜಾಸ್ತಮೇವಾರ್ಥಂ ವಿಚಿಂತಯನ್ ॥15॥

ವೈಶಂಪಾಯನ ಧೈರ್ಯಾದಿಗಳಿಂದ ಚ್ಯುತನಾಗದ ಅಪ್ರಧೃಷ್ಯ ಪರಾಕ್ರಮಿಯಾದ ಮಹಾಬಾಹುವಾದ ಭೀಮಸೇನನನ್ನು ಕುರಿತು ಧರ್ಮಾತ್ಮನೂ ಅರ್ಥತತ್ತ್ವಗಳ ವಿಭಾಗವನ್ನು ತಿಳಿದವನೂ, ಮಹಾತೇಜಸ್ವಿಯೂ ಆದ ಕುಂತೀಪುತ್ರನಾದ ಯುಧಿಷ್ಠಿರನು ಅದೇ ವಿಷಯವನ್ನೇ ಚಿಂತಿಸುತ್ತಾ ಸುಮ್ಮನಾದನು.

ತತಸ್ತೇ ಹತಶಿಷ್ಟಾ ಯೇ ಭೀಮಸೇನೇನ ರಾಕ್ಷಸಾಃ |
ಸಹಿತಾಃ ಪ್ರತ್ಯಪದ್ಯಂತ ಕುಬೇರಸದನಂ ಪ್ರತಿ ॥16॥

ಆಗ ಭೀಮಸೇನನಿಂದ ಹತರಾಗಿ ಉಳಿದ ಆ ಎಲ್ಲಾ ರಾಕ್ಷಸರೂ ಜೊತೆಯಾಗಿ ಕುಬೇರ ಸದನಕ್ಕೆ ಹೋದರು.

ತೇ ಜವೇನ ಮಹಾವೇಗಾಃ ಪ್ರಾಪ್ಯ ವೈಶ್ರವಣಾಲಯಮ್ |
ಭೀಮಮಾರ್ತಸ್ವರಂ ಚಕ್ರುರ್ಭೀಮಸೇನಭಯಾರ್ದಿತಾಃ ॥17॥

ಮಹಾವೇಗವುಳ್ಳ ಅವರು ಶೀಘ್ರವಾಗಿ ವೈಶ್ರವಣನ ನಿವಾಸಕ್ಕೆ ಹೋಗಿ ಭೀಮಸೇನನ ಭಯದಿಂದ ಪೀಡಿತರಾಗಿ ಭಯಂಕರವಾದ ಆರ್ತನಾದವನ್ನು ಮಾಡಿದರು.

ನ್ಯಸ್ತಶಸತ್ರಯುಧಾಃ ಕ್ಲಾಂತಾಃ ಶೋಣಿತಾಕ್ತತನುಚ್ಛದಾಃ |
ಪ್ರಕೀರ್ಣಮೂರ್ಧಜಾ ರಾಜನ್ ಯಕ್ಷಾಧಿಪತಿಮಬ್ರುವನ್ ॥18॥

ಎಲೈ ರಾಜನೇ, ಅವರು ತಮ್ಮ ಶಸ್ತ್ರಗಳನ್ನೂ, ಆಯುಧಗಳನ್ನೂ ಮುಂದಿಟ್ಟು ದಣಿದು ಶರೀರ ಮತ್ತು ವಸ್ತ್ರಗಳು ರಕ್ತದಿಂದ ತೋಯಿಸಲ್ಪಟ್ಟು, ತಲೆಕೂದಲು ಕೆದರಿದವರಾಗಿ ಯಕ್ಷಾಧಿಪತಿಯಾದ ಕುಬೇರನನ್ನು ಕುರಿತು ಹೀಗೆ ಹೇಳಿದರು.

ಗದಾಪರಿಘನಿಸ್ತ್ರಿಂಶತೋಮರಪ್ರಾಸಯೋಧಿನಃ |
ರಾಕ್ಷಸಾ ನಿಹತಾಃ ಸರ್ವೇ ತವ ದೇವ ಪುರಃಸರಾಃ ॥19॥

ಎಲೈ ಪ್ರಭುವೇ, ನಿನ್ನ ಪುರಸ್ಸರರಾದ ಗದಾ, ಪರಿಘ (ಒನಕೆ) ಕತ್ತಿ, ತೋಮರ, ಪ್ರಾಸಗಳನ್ನು ಹಿಡಿದು ಯುದ್ಧಮಾಡುವ ರಾಕ್ಷಸರೆಲ್ಲರೂ ಕೊಲ್ಲಲ್ಪಟ್ಟಿದ್ದಾರೆ.

ಪ್ರಮೃದ್ಯ ತರಸಾ ಶೈಲಂ ಮಾನುಷೇಣ ಧನೇಶ್ವರ |
ಏಕೇನ ಸಹಿತಾಃ ಸಂಖ್ಯೇ ರಣೇ ಕ್ರೋಧವಶಾಃ ಗಣಾಃ ॥20॥
ಪ್ರವರಾ ರಾಕ್ಷಸೇಂದ್ರಾಣಾಂ ಯಕ್ಷಾಣಾಂ ಚ ನರಾಧಿಪ |
ಶೇರತೇ ನಿಹತಾ ದೇವ ಗತಸತತ್ತ್ವಾಃ ಪರಾಸವಃ ॥21॥

ಧನೇಶ್ವರನೇ, ಒಬ್ಬ ಮನುಷ್ಯನು ವೇಗವಾಗಿ ಪರ್ವತವನ್ನು ಧ್ವಂಸಮಾಡಿದ್ದಾನೆ. ಎಲೈ ನರಾಧಿಪನೇ, ಯಕ್ಷರ ಮತ್ತು ರಾಕ್ಷಸಶ್ರೇಷ್ಠರಾದ ಕ್ರೋಧವಶಗಣಕ್ಕೆ ಸೇರಿದವರೆಲ್ಲರೂ ಯುದ್ಧದಲ್ಲಿ ಎಲ್ಲರೂ ಜೊತೆಯಲ್ಲಿ ಹತರಾಗಿ ಪ್ರಾಣಗಳನ್ನು ಕಳೆದುಕೊಂಡು ಗತಸತ್ತ್ವರಾಗಿ ಭೂಮಿಯ ಮೇಲೆ ಬಿದ್ದಿದ್ದಾರೆ.

ಭಗ್ನಃ ಶೈಲೋ ವಯಂ ಮುಕ್ತಾ ಮಣಿಮಾಂಸ್ತೇ ಸಖಾ ಹತಃ |
ಮಾನುಷೇಣ ಕೃತಂ ಕರ್ಮ ವಿಧಸ್ವ ಯದನಂತರಮ್ ॥22॥

ಪರ್ವತವು ಭಗ್ನವಾಗಿದೆ. ನಾವು ಹೇಗೋ ಬಿಡಿಸಿಕೊಂಡು ಬಂದಿದ್ದೇವೆ. ನಿನ್ನ ಸ್ನೇಹಿತನಾದ ಮಣಿಮಂತನು ಹತನಾಗಿದ್ದಾನೆ. ಒಬ್ಬ ಮನುಷ್ಯನು ಇಷ್ಟು ಕಾರ್ಯವನ್ನು ಮಾಡಿದ್ದಾನೆ. ಇನ್ನು ನೀನು ಇದಕ್ಕೆ ಉಚಿತವಾದುದನ್ನು ಮಾಡು.

ವೈಶಂಪಾಯನಃ

ಸ ತಚ್ಛ್ರುತ್ವಾ ತು ಸಂಕ್ರುದ್ಧಃ ಸರ್ವಯಕ್ಷಗಣಾಧಿಪಃ |
ಕೋಪಸಂರಕ್ತನಯನಃ ಕಥಮಿತ್ಯಬ್ರವೀದ್ ವಚಃ ॥23॥

ವೈಶಂಪಾಯನ ಅದನ್ನು ಕೇಳಿದ ಯಕ್ಷರಕ್ಷೋಗಣಾಧಿಪನಾದ ಕುಬೇರನು ಬಹಳ ಕೋಪಗೊಂಡು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಇದೆಲ್ಲಾ ಹೇಗೆ ನಡೆಯಿತು ಎಂದು ಕೇಳಿದನು.

ದ್ವಿತೀಯಮಪರಾಧ್ಯಂತಂ ಭೀಮಂ ಶ್ರುತ್ವಾ ಧನೇಶ್ವರಃ |
ಚುಕ್ರೋಧ ಯಕ್ಷಾಧಿಪತಿರ್ಯುಜ್ಯತಾಮಿತಿ ಚಾಬ್ರವೀತ್ ॥24॥

ಭೀಮಸೇನನು ಇಂತಹ ಅಪರಾಧವನ್ನು ಮಾಡುತ್ತಿರುವನೆಂದು ಎರಡನೆಯ ಬಾರಿಗೆ ಕೇಳಿದ ಯಕ್ಷಾಧಿಪತಿಯಾದ ಕುಬೇರನು ಕೋಪಗೊಂಡು ರಥವನ್ನು ಹೂಡಿ ಎಂದು ಹೇಳಿದನು.

ಅಥಾಭ್ರಘನಸಂಕಾಂಶಂ ಗಿರಿಶೃಂಗಮಿವೋಚ್ಛ್ರಿತಮ್ |

ರಥಂ ಸಂಯೋಜಯಾಮಾಸುರ್ಗಂಧರ್ವೈರ್ಹೇಮಮಾಲಿಭಿಃ ॥25॥
ಆಗ ಮೇಘನಾದದಂತಹ ನಾದವನ್ನು ಉಂಟುಮಾಡುವ ಗಿರಿಶೃಂಗದಂತೆ ಎತ್ತರವಾದ ಅವನ ರಥವನ್ನು ಚಿನ್ನದ ಮಾಲೆಗಳನ್ನು ಧರಿಸಿದ ಕುದುರೆಗಳನ್ನು ಕಟ್ಟಿ ಹೂಡಿದರು.
ತಸ್ಯ ಸರ್ವಗುಣೋಪೇತಾ ವಿಮಲಾಕ್ಷಾ ಹಯೋತ್ತಮಾಃ ।
ತೇಜೋಬಲಗುಣೋಪೇತಾ ನಾನಾರತ್ನವಿಭೂಷಿತಾಃ ।
ಶೋಭಮಾನಾ ರಥೇ ಯುಕ್ತಾಸ್ತರಿಷ್ಯಂತ ಇವಾಶುಗಾಃ ॥26॥
ಹ್ರೇಷಯಾಮಾಸುರನ್ಯೋನ್ಯಂ ಹ್ರೇಷಿತೈರ್ವಿಜಯಾವಹೈಃ ।
ಸರ್ವಗುಣಗಳಿಂದ ಕೂಡಿದ, ಶುದ್ಧವಾದ ಕಣ್ಣುಗಳುಳ್ಳ, ತೇಜೋಬಲಗುಣಗಳಿಂದ ಕೂಡಿದ, ನಾನಾರತ್ನವಿಭೂಷಿತವಾದ ಅವನ ಶೀಘ್ರಗಾಮಿಯಾದ ಕುದುರೆಗಳು ಎಲ್ಲವನ್ನೂ ದಾಟಿ ಹೋಗುವಂತೆ ಶೋಭಿಸುತ್ತಾ ಪರಸ್ಪರವಾಗಿ ವಿಜಯಸೂಚಕವಾದ ಹ್ರೇಷಾರವಗಳನ್ನು ಮಾಡಿದವು.
ತತಸ್ತೇ ತು ಮಹಾಯಕ್ಷಾಃ ಕ್ರುದ್ಧಂ ದೃಷ್ಟ್ವಾ ಧನೇಶ್ವರಮ್ ॥
ಹರ್ಷಯಾಮಾಸುರನ್ಯೋನ್ಯಮ್ ಇಂಗಿತೈರ್ವಿಜಯಾವಹೈಃ ॥27॥
ಆಗ ಆ ಮಹಾಯಕ್ಷರು ಕೋಪಗೊಂಡ ಕುಬೇರನನ್ನು ನೋಡಿ ವಿಜಯಪ್ರದವಾದ ಇಂಗಿತಗಳಿಂದ ಪರಸ್ಪರವಾಗಿ ಸಂತೋಷಪಡಿಸಿದರು.
ಸ ತಮಾಸ್ಥಾಯ ಭಗವಾನ್ ರಾಜರಾಜೋ ಮಹಾರಥಮ್ ।
ಪ್ರಯಯೌ ದೇವಗಂಧರ್ವೈಃ ಸ್ತೂಯಮಾನೋ ಮಹಾದ್ಯುತಿಃ ॥28॥
ಆ ರಾಜರಾಜನಾದ ಪೂಜ್ಯನಾದ ಮಹಾದ್ಯುತಿಯಾದ ಕುಬೇರನು ಮಹಾರಥವನ್ನು ಏರಿ ದೇವಗಂಧರ್ವರಿಂದ ಸ್ತೋತ್ರಮಾಡಲ್ಪಟ್ಟವನಾಗಿ ಅಲ್ಲಿಂದ ಹೊರಟನು.
ತಂ ಪ್ರಯಾಂತಂ ಮಹಾತ್ಮಾನಂ ಸರ್ವೇ ಯಕ್ಷಾ ಧನಾಧಿಪಮ್ ।
ಅನುಜಗ್ಮುರ್ಮಹಾತ್ಮಾನಂ ಧನದಂ ಘೋರದರ್ಶನಾಃ ॥29॥
ರಕ್ತಾಕ್ಷಾ ಹೇಮಸಂಕಾಶಾ ಮಹಾಕಾಯಾ ಮಹಾಬಲಾಃ ।
ಸಾಯುಧಾ ಬದ್ಧನಿಸ್ತ್ರಿಂಶಾ ಯಕ್ಷಾ ದಶಶತಾವರಾಃ ॥30॥
ಹಾಗೆ ಹೊರಟ ಮಹಾತ್ಮನಾದ ಕುಬೇರನನ್ನು ಘೋರವಾದ ರೂಪವುಳ್ಳ, ರಕ್ತಾಕ್ಷರಾದ ಸುವರ್ಣಾಲಂಕೃತರಾದ, ಮಹಾಕಾಯರಾದ, ಮಹಾಬಲರಾದ, ಆಯುಧಗಳನ್ನು ಹಿಡಿದು ಕತ್ತಿಯನ್ನು ಕಟ್ಟಿಕೊಂಡ, ಸಹಸ್ರಸಂಖ್ಯೆಗೆ ಕಡಿಮೆಯಿಲ್ಲದ ಯಕ್ಷರು ಹಿಂಬಾಲಿಸಿದರು.
ತೇ ಜವೇನ ಮಹಾವೇಗಾಃ ಪ್ಲವಮಾನಾ ವಿಹಾಯಸಾ ।
ಗಂಧಮಾದನಮಾಜಗ್ಮುಃ ಪ್ರಕರ್ಷಂತ ಇವಾಂಬರಮ್ ॥31॥
ಮಹಾವೇಗವುಳ್ಳ ಅವರು ಆಕಾಶದಲ್ಲಿ ಹಾರಿಬರುತ್ತಾ ಆಕಾಶವನ್ನೇ ಎಳೆದುಕೊಂಡು ಬರುವಂತೆ ಗಂಧಮಾದನ ಪರ್ವತಕ್ಕೆ ಬಂದರು.

ಸಾಯುಧಾ ಬದ್ಧನಿಸ್ತ್ರಿಂಶಾ ಯಕ್ಷಾ ದಶಶತಾಯುತಾಃ ।
ಜವೇನ ಮಹತಾ ವೀರಾಃ ಪರಿವಾರ್ಯೋಪತಸ್ಥಿರೇ ॥32॥
ಕೈಯಲ್ಲಿ ಆಯುಧಗಳನ್ನು ಹಿಡಿದು, ಸೊಂಟದಲ್ಲಿ ಕತ್ತಿಗಳನ್ನು ಕಟ್ಟಿದ ಸಾವಿರ ಸಂಖ್ಯೆಯ ವೀರರಾದ ಯಕ್ಷರು ಬಹಳ ಶೀಘ್ರವಾಗಿ ಕುಬೇರನನ್ನು ಸುತ್ತುವರಿದು ನಿಂತರು.
ಕುಬೇರಂ ಚ ಮಹಾತ್ಮಾನಂ ಯಕ್ಷರಕ್ಷೋಗಣಾವೃತಮ್ ।
ದದೃಶುರ್ಹೃಷ್ಟರೋಮಾಣಃ ಪಾಂಡವಾಃ ಪ್ರಿಯದರ್ಶನಮ್ ॥33॥
ಪಾಂಡವರಾದರೂ ರೋಮಾಂಚಿತರಾಗಿ ಪ್ರಿಯದರ್ಶನನಾದ ಯಕ್ಷ ರಕ್ಷೋಗಣಗಳಿಂದ ಕೂಡಿದ ಮಹಾತ್ಮನಾದ ಕುಬೇರನನ್ನು ನೋಡಿದರು.
ಕುಬೇರಸ್ತು ಮಹಾಸತ್ತ್ವಾನ್ ಪಾಂಡೋಃ ಪುತ್ರಾನ್ ಮಹಾರಥಾನ್ ।
ಅತ್ತಕಾರ್ಮುಕನಿಸ್ತ್ರಿಂಶಾನ್ ದೃಷ್ಟ್ವಾ ಪ್ರೀತೋಽಭವತ್ ತದಾ ॥34॥
ಕುಬೇರನಾದರೂ ಕೈಯಲ್ಲಿ ಕತ್ತಿ ಮತ್ತು ಬಿಲ್ಲುಗಳನ್ನು ಹಿಡಿದ ಮಹಾಬಲಶಾಲಿಗಳಾದ ಮಹಾರಥರಾದ ಪಾಂಡುಪುತ್ರರನ್ನು ನೋಡಿ ಆಗ ಸಂತೋಷಗೊಂಡನು.
ಸರ್ವೇ ಚೇಮೇ ನರವ್ಯಾಘ್ರಾಃ ಪುರಂದರಸಮೌಜಸಃ ।
ದೇವಕಾರ್ಯಂ ಚಿಕೀರ್ಷನ್ ಸ ಹೃದಯೇನ ತುತೋಷ ಹ ॥35॥
ಈ ನರವ್ಯಾಘ್ರರೆಲ್ಲರೂ ಇಂದ್ರನಿಗೆ ಸಮನಾದ ಪರಾಕ್ರಮವುಳ್ಳವರು ಎಂದು ತಿಳಿದು ಕುಬೇರನು ದೇವಕಾರ್ಯವನ್ನು ಮಾಡುವವನಾಗಿ ಮನಸ್ಸಿನಲ್ಲಿ ಸಂತೋಷಪಟ್ಟನು.
ತೇ ಪಕ್ಷಿಣ ಇವಾಪೇತುರ್ಗಿರಿಶೃಂಗಂ ಮಹಾಜವಾಃ ।
ತಸ್ಥುಸ್ತೇಷಾಂ ಸಮಭ್ಯಾಶೇ ಧನೇಶ್ವರಪುರಃಸರಾಃ ॥36॥
ಧನೇಶ್ವರನ ಪುರಸ್ಸರರಾದ ಸೇವಕರೆಲ್ಲರೂ ಮಹಾವೇಗದಿಂದ ಆ ಗಿರಿಶೃಂಗಕ್ಕೆ ಪಕ್ಷಿಗಳಂತೆ ಹಾರಿಬಂದು ಪಾಂಡವರ ಎದುರಿನಲ್ಲಿ ನಿಂತರು.
ತತಸ್ತಂ ಹೃಷ್ಟಮನಸಂ ಪಾಂಡವಾನ್ ಪ್ರತಿ ಭಾರತ ।
ಸಮೀಕ್ಷ್ಯಯಕ್ಷಗಂಧರ್ವಾ ನಿರ್ವಿಕಾರಮವಸ್ಥಿತಾಃ ॥37॥

ಎಲೈ ಭಾರತನೇ, ಆಗ ಕುಬೇರನು ಪಾಂಡವರನ್ನು ನೋಡಿ ಸಂತೋಷ ಪಡುತ್ತಿರುವುದನ್ನು ಗಮನಿಸಿದ ಯಕ್ಷಗಂಧರ್ವರು ಶಾಂತರಾಗಿ ನಿಂತರು.
ಪಾಂಡವಾಶ್ಚ ಮಹಾತ್ಮಾನಃ ಪ್ರಣಮ್ಯ ಧನದಂ ಪ್ರಭುಮ್ |
ನಕುಲಃ ಸಹದೇವಶ್ಚ ಧರ್ಮಪುತ್ರಶ್ಚ ಧರ್ಮವಿತ್ ॥38॥
ಅಪರಾದ್ಧಮಿವಾತ್ಮಾನಂ ಮನ್ಯಮಾನಾ ಮಹಾರಥಾಃ |
ತಸ್ಥುಃ ಪ್ರಾಂಜಲಯಃ ಸರ್ವೇ ಪರಿವಾರ್ಯ ಧನೇಶ್ವರಮ್ ॥39॥
ಮಹಾತ್ಮರಾದ ಪಾಂಡವರೆಲ್ಲರೂ ಎಂದರೆ ನಕುಲಸಹದೇವ ಮತ್ತು ಧರ್ಮಜ್ಞನಾದ ಯುಧಿಷ್ಠಿರ ಈ ಮಹಾರಥರೆಲ್ಲರೂ ಪ್ರಭುವಾದ ಕುಬೇರನಿಗೆ ನಮಸ್ಕರಿಸಿ ತಾವು ಅಪರಾಧವನ್ನು ಮಾಡಿದವರಂತೆ ತಿಳಿದು ಕೈಗಳನ್ನು ಮುಗಿದು ಎಲ್ಲರೂ ಕುಬೇರನ ಸುತ್ತ ನಿಂತರು.
ಸ ಹ್ಯಾಸನವರಂ ಶ್ರೀಮತ್ ಪುಷ್ಪಕಂ ವಿಶ್ವಕರ್ಮಣಾ |
ವಿಹಿತಂ ಚಿತ್ರಪರ್ಯಂತಮಾತಿಷ್ಠತ ಧನಾಧಿಪಃ ॥40॥
ಆ ಕುಬೇರನಾದರೂ ವಿಶ್ವಕರ್ಮದಿಂದ ನಿರ್ಮಿತವಾದ ಪುಷ್ಪಕ ವಿಮಾನದ ಅಂಚಿನಲ್ಲಿದ್ದ ಶ್ರೇಷ್ಠವಾದ ಆಸನದಲ್ಲಿ ಕುಳಿತಿದ್ದನು.
ತಮಾಸೀನಂ ಮಹಾಕಾಯಾಃ ಶಂಕುಕರ್ಣಾ ಮಹಾಜವಾಃ |
ಉಪೋಪವಿವಿಶುರ್ಯಕ್ಷಾ ರಾಕ್ಷಸಾಶ್ಚ ಸಹಸ್ರಶಃ ॥41॥
ಅಲ್ಲಿ ಕುಳಿತಿದ್ದ ಕುಬೇರನ ಸುತ್ತಲೂ ಮಹಾಕಾಯರಾದ, ಮಹಾವೇಗಶಾಲಿಗಳಾದ ಶಂಕುಕರ್ಣ ಮೊದಲಾದ ಯಕ್ಷರೂ ಮತ್ತು ಸಹಸ್ರ ಸಂಖ್ಯೆಯಲ್ಲಿ ರಾಕ್ಷಸರೂ ಕುಳಿತಿದ್ದರು.
ಶತಶಶ್ಚಾಪಿ ಗಂಧರ್ವಾಸ್ತಥೈವಾಪ್ಸರಸಾಂ ಗಣಾಃ |
ಪರಿವಾರ್ಯೋಪತಿಷ್ಠಂತಿ ಯಥಾ ದೇವಾಃ ಶತಕ್ರತುಮ್ ॥42॥
ಗಂಧರ್ವರು ಹಾಗು ಅಪ್ಸರೆಯರ ಗಣಗಳು ನೂರರ ಸಂಖ್ಯೆಯಲ್ಲಿ ಅವನನ್ನು ಸುತ್ತುವರಿದು ದೇವತೆಗಳು ಇಂದ್ರನನ್ನು ಸ್ತೋತ್ರಮಾಡುವಂತೆ ಸ್ತೋತ್ರಮಾಡುತ್ತಿದ್ದರು.
ಕಾಂಚನೀಂ ಶಿರಸಾ ಬಿಭ್ರದ್ ಭೀಮಸೇನಃ ಸ್ರಜಂ ಶುಭಾಮ್ |
ಪಾಶಖಡ್ಗಧನುಷ್ಪಾಣಿರುದೈಕ್ಷತ ಧನಾಧಿಪಮ್ ॥43॥
ಭೀಮಸೇನನು ಸುವರ್ಣಮಯವಾದ ಶುಭವಾದ ಒಂದು ಮಾಲೆಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿ ಪಾಶ ಖಡ್ಗ ಧನುಸ್ಸುಗಳನ್ನು ಹಿಡಿದು ಧನಾಧಿಪನಾದ ಕುಬೇರನನ್ನು ಕಣ್ಣೆತ್ತಿ ನೋಡಿದನು.
ಭೀಮಸೇನಸ್ಯ ನ ಗ್ಲಾನಿರ್ವಿಕ್ಷತಸ್ಯಾಪಿ ರಾಕ್ಷಸೈಃ |
ಆಸೀತ್ ತಸ್ಯಾಮವಸ್ಥಾಯಾಂ ಕುಬೇರಮಪಿ ಪಶ್ಯತಃ ॥44॥
ರಾಕ್ಷಸರಿಂದ ಘಾಸಿಗೊಳಿಸಲ್ಪಟ್ಟಿದ್ದರೂ ಕುಬೇರನನ್ನು ನೋಡುತ್ತಿದ್ದ ಆ ಸ್ಥಿತಿಯಲ್ಲಿ ಭೀಮಸೇನನಿಗೆ ಯಾವ ಆಯಾಸವಾಗಲೀ ದುಃಖವಾಗಲೀ ಇರಲಿಲ್ಲ.
ಆದದಾನಂ ಶಿತಾನ್ ಬಾಣಾನ್ ಯೋದ್ಧುಕಾಮಮವಸ್ಥಿತಮ್ |
ದೃಷ್ಟ್ವಾ ಭೀಮಂ ಧರ್ಮಸುತಮಬ್ರವೀನ್ನರವಾಹನಃ ॥45॥
ಕೈಯಲ್ಲಿ ಬಾಣಗಳನ್ನು ತೆಗೆದುಕೊಂಡು ಯುದ್ಧಮಾಡಲು ಸನ್ನದ್ಧನಾದ ಭೀಮಸೇನನನ್ನು ನೋಡಿ ಕುಬೇರನು ಧರ್ಮರಾಜನನ್ನು ಕುರಿತು ಹೇಳಿದನು.
ವಿದುಸ್ತ್ವಾಂ ಸರ್ವಭೂತಾನಿ ಪಾರ್ಥ ಭೂತಹಿತೇ ರತಮ್ |
ನಿರ್ಭಯಶ್ಚಾಪಿ ಶೈಲಾಗ್ರೇ ವಸ ತ್ವಂ ಭ್ರಾತೃಭಿಃ ಸಹ॥46॥
ಎಲೈ ಪಾರ್ಥನೇ, ನೀನು ಸರ್ವಪ್ರಾಣಿಗಳಿಗೂ ಹಿತವನ್ನು ಮಾಡುವವನು ಎಂದು ಎಲ್ಲ ಪ್ರಾಣಿಗಳೂ (ಮನುಷ್ಯರೂ) ನಿನ್ನನ್ನು ತಿಳಿದಿದ್ದಾರೆ. ನೀನು ಈ ಪರ್ವತ ಶಿಖರದಲ್ಲಿ ತಮ್ಮಂದಿರ ಜೊತೆಯಲ್ಲಿ ನಿರ್ಭಯವಾಗಿ ವಾಸವನ್ನು ಮಾಡು.
ನ ಚ ಮನ್ಯುಸ್ತ್ವಯಾ ಕಾರ್ಯೋ ಭೀಮಸೇನಸ್ಯ ಪಾಂಡವ |
ಕಾಲೇನೈತೇ ಹತಾಃ ಪೂರ್ವಂ ನಿಮಿತ್ತಮನುಜಸ್ತವ ॥47॥
ಎಲೈ ಪಾಂಡವನೇ, ಭೀಮಸೇನನ ಮೇಲೆ ಕೋಪವನ್ನು ಮಾಡಬೇಡ. ಈ ರಾಕ್ಷಸರು ಕಾಲದಿಂದ ಮೊದಲೇ ಹತರಾಗಿದ್ದಾರೆ. ನಿನ್ನ ತಮ್ಮನು ನಿಮಿತ್ತ ಮಾತ್ರ.
ವ್ರೀಡಾ ಚಾತ್ರ ನ ಕರ್ತವ್ಯಾ ಸಾಹಸಂ ಯದಿದಂ ಕೃತಮ್ |
ದೃಷ್ಟಶ್ಚಾಪಿ ಸುರೈಃ ಪೂರ್ವಂ ವಿನಾಶೋ ಯಕ್ಷರಕ್ಷಸಾಮ್ ॥48॥
ಈ ಯಾವ ಸಾಹಸಕಾರ್ಯ ನಡೆದಿದೆಯೋ ಅದರಲ್ಲಿ ನಾಚಿಕೆಯನ್ನು ಪಟ್ಟುಕೊಳ್ಳುವುದು ಬೇಡ. ಈ ಯಕ್ಷರಾಕ್ಷಸರ ವಿನಾಶವು ದೇವತೆಗಳಿಂದ ಮೊದಲೇ ದೃಷ್ಟವಾಗಿದ್ದಿತು.
ನ ಭೀಮಸೇನೇ ಕೋಪೋ ಮೇ ಪ್ರೀತೋಽಸ್ಮಿ ಭರತರ್ಷಭ |
ಕರ್ಮಣಾ ಭೀಮಸೇನಸ್ಯ ಮಮ ತುಷ್ಟಿರಭೂತ್ ಪುರಾ ॥49॥
ಎಲೈ ಭರತಶ್ರೇಷ್ಠನೇ, ನನಗೆ ಭೀಮಸೇನನ ಮೇಲೆ ಕೋಪವಿಲ್ಲ. ನಾನು ಪ್ರಸನ್ನನಾಗಿದ್ದೇನೆ. ಭೀಮಸೇನನ ಈ ಕಾರ್ಯದಿಂದ ನನಗೆ ಮೊದಲೇ ಸಂತೋಷವಾಗಿದೆ.
ವೈಶಂಪಾಯನಃ
ಏವಮುಕ್ತ್ವಾ ತು ರಾಜಾನಂ ಭೀಮಸೇನಮಭಾಷತ ॥50॥
ನೈತನ್ಮನಸಿ ಮೇ ತಾತ ವರ್ತತೇ ಕುರುಸತ್ತಮ |

ಯದಿದಂ ಸಾಹಸಂ ಭೀಮ ಕೃಷ್ಣಾರ್ಥೇ ಕೃತವಾನಸಿ ॥51॥
ವೈಶಂಪಾಯನ ಧರ್ಮರಾಜನನ್ನು ಕುರಿತು ಹೀಗೆ ಹೇಳಿ ಕುಬೇರನು ಭೀಮಸೇನನನ್ನು ಕುರಿತು ಎಲೈ ಪ್ರೀತಿಪಾತ್ರನೇ, ಕುರುಶ್ರೇಷ್ಠನೇ, ದ್ರೌಪದಿಯ ಸಲುವಾಗಿ ಯಾವ ಈ ಸಾಹಸದ ಕಾರ್ಯವನ್ನು ಮಾಡಿದ್ದೀಯೋ ಅದು ನನ್ನ ಮನಸ್ಸಿನಲ್ಲಿ ಯಾವ ದುಷ್ಪರಿಣಾಮವನ್ನೂ ಮಾಡಿಲ್ಲ.
ಮಾಮನಾದೃತ್ಯ ದೇವಾಂಶ್ಚ ವಿನಾಶಂ ಯಕ್ಷರಕ್ಷಸಾಮ್ |
ಸ್ವಬಾಹುಬಲಮಾಶ್ರಿತ್ಯ ತೇನಾಹಂ ಪ್ರೀತಿಮಾಂಸ್ತ್ವಯಿ |
ಶಾಪಾದದ್ಯ ವಿನಿರ್ಮುಕ್ತೋ ಘೋರಾದಸ್ಮಿ ವೃಕೋದರ ॥52॥
ನನ್ನನ್ನು ಮತ್ತು ದೇವತೆಗಳನ್ನು ತಿರಸ್ಕರಿಸಿ ನಿನ್ನ ಬಾಹುಬಲವನ್ನು ಆಶ್ರಯಿಸಿ ಯಾವ ಯಕ್ಷರಾಕ್ಷಸರ ವಿನಾಶವನ್ನು ಮಾಡಿದ್ದೀಯೋ ಅದರಿಂದ ನಾನು ನಿನ್ನಲ್ಲಿ ಸಂತೋಷಗೊಂಡಿದ್ದೇನೆ. ಎಲೈ ವೃಕೋದರನೇ, ನಾನು ಈ ದಿನ ಘೋರವಾದ ಶಾಪದಿಂದ ವಿನಿರ್ಮುಕ್ತನಾಗಿದ್ದೇನೆ.
ಅಹಂ ಪೂರ್ವಮಗಸ್ತ್ಯೇನ ಕ್ರುದ್ಧೇನ ಪರಮರ್ಷಿಣಾ |
ಶಪ್ತೋಽಪರಾಧೇ ಕಸ್ಮಿಂಶ್ಚಿತ್ ತಸ್ಯೈಷಾ ನಿಷ್ಕೃತಿಃ ಕೃತಾ ॥53॥
ನಾನು ಹಿಂದೆ ಪರಮ ಋಷಿಗಳಾದ ಅಗಸ್ತ್ಯರಿಗೆ ಯಾವುದೋ ಒಂದು ಅಪರಾಧವನ್ನು ಮಾಡಿ ಕೋಪಗೊಂಡ ಅವರಿಂದ ಶಾಪವನ್ನು ಹೊಂದಿದೆ. ಈ ದಿನ ಆ ಶಾಪದ ವಿಮೋಚನೆಯಾಯಿತು.
ದೃಷ್ಟೋ ಹಿ ಮಮ ಸಂಕ್ಲೇಶಃ ಪುರಾ ಪಾಂಡವನಂದನ |
ನ ತವಾತ್ರಾಪರಾಧೋಽಸ್ತಿ ಕಥಂಚಿದಪಿ ಪಾಂಡವ ॥54॥
ಎಲೈ ಪಾಂಡವನಂದನನೇ, ಆ ಶಾಪನಿಮಿತ್ತವಾಗಿ ನನ್ನ ಈ ದಿನದ ಕ್ಲೇಶವನ್ನು ನಾನು ಮೊದಲೇ ತಿಳಿದಿದ್ದೆ. ಎಲೈ ಪಾಂಡವನೇ, ಇದರಲ್ಲಿ ನಿನ್ನ ಯಾವ ಅಪರಾಧವೂ ಇಲ್ಲ.
ಯುಧಿಷ್ಠಿರಃ
ಕಥಂ ಶಪ್ತೋಽಸಿ ಭಗವನ್ನಗಸ್ತ್ಯೇನ ಮಹಾತ್ಮನಾ |
ಶ್ರೋತುಮಿಚ್ಛಾಮ್ಯಹಂ ದೇವ ತವೈತಚ್ಛಾಪಕಾರಣಮ್ ॥55॥
ಯುಧಿಷ್ಠಿರ ಪೂಜ್ಯನಾದ ಕುಬೇರನೇ, ಮಹಾತ್ಮರಾದ ಅಗಸ್ತ್ಯರಿಂದ ಹೇಗೆ ಶಾಪಕ್ಕೆ ಒಳಗಾದೆ? ದೇವನೇ, ನಿನ್ನ ಈ ಶಾಪಕಾರಣವನ್ನು ನಾನು ತಿಳಿಯಲು ಬಯಸುತ್ತೇನೆ.
ಇದಂ ಚಾಶ್ಚರ್ಯಭೂತಂ ಮೇ ಯತ್ ಕ್ರೋಧಾತ್ ತಸ್ಯ ಧೀಮತಃ |
ತದೈವ ತ್ವಂ ನ ನಿರ್ದಗ್ಧಃ ಸಬಲಃ ಸಪದಾನುಗಃ ॥56॥
ಇದು ನನಗೆ ಇನ್ನೂ ಆಶ್ಚರ್ಯಭೂತವಾದುದು. ಏಕೆಂದರೆ ಆ ಮೇಧಾವಿಗಳ ಕ್ರೋಧಕ್ಕೆ ಪಾತ್ರನಾದ ನೀನು ಆಗಲೇ ಸೈನ್ಯ ಮತ್ತು ಸೇವಕರಿಂದ ಕೂಡಿ ಭಸ್ಮವಾಗಲಿಲ್ಲ.
ಧನೇಶ್ವರಃ
ದೇವತಾನಾಮಭೂನ್ಮಂತ್ರಃ ಕುಶಾವತ್ಯಾಂ ನರೇಶ್ವರ ॥57॥
ವೃತಸ್ತತ್ರಾಹಮಗಮಂ ಮಹಾಪದ್ಮಶತೈಸ್ತ್ರಿಭಿಃ |
ಯಕ್ಷಾಣಾಂ ಘೋರರೂಪಾಣಾಂ ವಿವಿಧಾಯುಧಧಾರಿಣಾಮ್ |
ಅಧ್ವನ್ಯಹಮಥಾಪಶ್ಯಮಗಸ್ತ್ಯಮೃಷಿಸತ್ತಮಮ್ ॥58॥
ಧನೇಶ್ವರ ನರೇಶ್ವರನೇ, ಹಿಂದೆ ಕುಶಾವತಿಯಲ್ಲಿ ದೇವತೆಗಳ ಮಂತ್ರಾಲೋಚನೆಯ ಸಭೆಯು ನಡೆಯಿತು. ಅಲ್ಲಿ ಆಹೂತನಾಗಿದ್ದ ನಾನು ಮುನ್ನೂರು ಮಹಾಪದ್ಮ ಸಂಖ್ಯೆಯ ಘೋರರೂಪರಾದ ವಿವಿಧಾಯುಧ ಧಾರಿಗಳಾದ ಯಕ್ಷರ ಜೊತೆಯಲ್ಲಿ ಅಲ್ಲಿಗೆ ಹೋದೆ. ಹೋಗುತ್ತಾ ದಾರಿಯಲ್ಲಿ ಋಷಿಶ್ರೇಷ್ಠರಾದ ಅಗಸ್ತ್ಯರನ್ನು ನೋಡಿದೆ.
ಉಗ್ರಂ ತಪಸ್ತಪ್ಯಮಾನಂ ಯಮುನಾತೀರಮಾಶ್ರಿತಮ್ |
ನಾನಾಪಕ್ಷಿಗಣಾಕೀರ್ಣಂ ಪುಷ್ಪಿತದ್ರುಮಶೋಭಿತಮ್ ॥59॥
ತಮೂರ್ಧ್ವಬಾಹುಂ ದೃಷ್ಟ್ವೈವ ಸೂರ್ಯಸ್ಯಾಭಿಮುಖೇ ಸ್ಥಿತಮ್ |
ತೇಜೋರಾಶಿಂ ದೀಪ್ಯಮಾನಂ ಹುತಾಶನಮಿವೈಧಿತಮ್ ॥60॥
ಅವರು ನಾನಾ ಪಕ್ಷಿಗಣಗಳಿಂದ ತುಂಬಿದ ಪುಷ್ಪವುಳ್ಳ ವೃಕ್ಷಗಳಿಂದ ಶೋಭಿತವಾದ ಯಮುನಾ ತೀರದಲ್ಲಿ ನಿಂತು ತಪಸ್ಸನ್ನು ಮಾಡುತ್ತಿದ್ದರು. ಅವರು ಸೂರ್ಯನಿಗೆ ಅಭಿಮುಖವಾಗಿ ನಿಂತು ತೇಜೋರಾಶಿಯಂತೆ ಬೆಳಗುತ್ತಾ ಉರಿಯುತ್ತಿರುವ ಅಗ್ನಿಜ್ವಾಲೆಯಂತೆ ಬೆಳಗುತ್ತಿದ್ದರು.
ರಾಕ್ಷಸಾಧಿಪತಿಃ ಶ್ರೀಮಾನ್ ಮಣಿಮಾನ್ನಾಮ ಮೇ ಸಖಾ |
ಮೌರ್ಖ್ಯಾದಜ್ಞಾನಭಾವಾಚ್ಚ ದರ್ಪಾನ್ಮೋಹಾಚ್ಚ ಪಾರ್ಥಿವ ॥61॥
ನ್ಯಷ್ಠೀವದಾಕಾಶಗತೋ ಮಹರ್ಷೇಸ್ತಸ್ಯ ಮೂರ್ಧನಿ |
ತತಃ ಕ್ರುದ್ಧಃ ಸ ಭಗವಾನುವಾಚೇದಂ ತಪೋಧನಃ ॥62॥
ಎಲೈ ರಾಜನೇ, ಅವರನ್ನು ನೋಡಿದ ನನ್ನ ಸ್ನೇಹಿತನಾದ ರಾಕ್ಷಸಾಧಿಪತಿಯಾದ ಮಣಿಮಂತನು ಮೂರ್ಖತನದಿಂದಲೂ, ಅಜ್ಞಾನದಿಂದಲೂ, ದರ್ಪದಿಂದಲೂ ಮತ್ತು ಮೋಹದಿಂದಲೂ ಆಕಾಶಮಾರ್ಗದಿಂದಲೇ ಆ ಮಹರ್ಷಿಗಳ ತಲೆಯ ಮೇಲೆ ಉಗುಳಿದನು. ಆಗ ಕೋಪಗೊಂಡ ತಪೋಧನರಾದ ಆ ಪೂಜ್ಯರು ಈ ಮಾತನ್ನು ಆಡಿದರು.
ಮಾಮವಜ್ಞಾಯ ದುಷ್ಟಾತ್ಮಾ ಯಸ್ಮಾದೇಷ ಸಖಾ ತವ |

ಧರ್ಷಣಾಂ ಕೃತವಾನೇತಾಂ ಪಶ್ಯತಸ್ತೇ ಧನೇಶ್ವರ ॥63॥
ತಸ್ಮಾತ್ ಸಹೈಭಿಃ ಸೈನ್ಯೈಸ್ತೇ ವಧಂ ಪ್ರಾಪ್ಸ್ಯತಿ ಮಾನುಷಾತ್ |
ತ್ವಂ ಚಾಪ್ಯೇಭಿರ್ಹತೈಃ ಸೈನ್ಯೈಃ ಕ್ಲೇಶಂ ಪ್ರಾಪ್ಯೇಹ ದುರ್ಮತಿಃ ॥64॥
ತಮೇವ ಮಾನುಷಂ ದೃಷ್ಟ್ವಾ ಕಿಲ್ಬಿಷಾದ್ ವಿಪ್ರಮೋಕ್ಷ್ಯಸೇ ॥65॥
ನಿನ್ನ ಸ್ನೇಹಿತನಾದ ಈ ದುಷ್ಟನಾದ ಮಣಿಮಂತನು ನನ್ನನ್ನು ತಿರಸ್ಕರಿಸಿ ನಿನ್ನ ಕಣ್ಣೆದುರಿಗೇ ನನಗೆ ಅವಮಾನ ಮಾಡಿರುವುದರಿಂದ, ಎಲೈ ಧನೇಶ್ವರನೇ, ಇವನು ನಿನ್ನ ಸೈನ್ಯದ ಜೊತೆಯಲ್ಲಿ ಒಬ್ಬ ಮನುಷ್ಯನಿಂದ ವಧೆಯನ್ನು ಹೊಂದುವನು. ನೀನೂ ಸಹ ನಿನ್ನ ಸೈನ್ಯದ ವಧೆಯನ್ನು ನೋಡಿ ಕ್ಲೇಶವನ್ನೂ, ವಿಷಾದವನ್ನೂ ಅನುಭವಿಸಿ ಅದೇ ಮನುಷ್ಯನನ್ನು ನೋಡಿ ನಿನ್ನ ಪಾಪದಿಂದ ನಿರ್ಮುಕ್ತನಾಗುವಿ.
ಸೈನ್ಯಾನಾಂ ತು ತವೈತೇಷಾಂ ಪುತ್ರಪೌತ್ರಬಲಾನ್ವಿತಮ್ |
ನ ಶಾಪಂ ಪ್ರಾಪ್ಸ್ಯ(ಪ್ಯ)ತೇ ಘೋರಂ ತತ್ತವಾಜ್ಞಾಂ ಕರಿಷ್ಯತಿ ॥66॥
ಈ ನಿನ್ನ ಸೈನ್ಯದ ಪುತ್ರಪೌತ್ರರಿಂದ ಒಡಗೂಡಿದ ಸೈನ್ಯಕ್ಕೆ ನನ್ನ ಘೋರವಾದ ಶಾಪವು ತಟ್ಟುವುದಿಲ್ಲ (ಈ ಸೈನ್ಯವು ನಾಶವಾದರೂ) ಆ ಸೈನ್ಯವು ನಿನ್ನ ಆದೇಶವನ್ನು ಪಾಲಿಸುವುದು.
ಕುಬೇರಃ
ಏಷ ಶಾಪೋ ಮಯಾ ಪ್ರಾಪ್ತಃ ಪ್ರಾಕ್ತಸ್ಮಾದೃಷಿಸತ್ತಮಾತ್ |
ಸ ಭೀಮೇನ ಮಹಾರಾಜ ಭ್ರಾತ್ರಾ ತವ ವಿಮೋಕ್ಷಿತಃ ॥67॥
ಹೀಗೆ ಹಿಂದೆ ಆ ಋಷಿಶ್ರೇಷ್ಠರಿಂದ ನಾನು ಶಾಪವನ್ನು ಪಡೆದೆ. ಎಲೈ ಮಹಾರಾಜನೇ, ಈಗ ನಿನ್ನ ತಮ್ಮನಾದ ಭೀಮಸೇನನಿಂದ ಆ ಶಾಪದಿಂದ ನಿರ್ಮುಕ್ತನಾಗಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೇಳನೆಯ ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಧೃತಾಯುಧಂ ಭೀಮಮೀಕ್ಷ್ಯಾಪಿ ಕಿಂಚಿದ್
ದೈತ್ಯಾವೇಶಾದ್ ಬಹು ಮೇನೇ ನ ಭೀಮಮ್ |
ಅಗಸ್ತ್ಯಶಾಪಂ ಚಾವದತ್ ಸ್ವಸ್ಯ ಪೂರ್ವಂ
ಸಖಾಯನಾಶೇ ಕಾರಣಂ ರಾಜರಾಜಃ ॥303॥
ಸ್ವಲ್ಪ ಅಸುರಾವೇಶವಿದ್ದ ಪ್ರಯುಕ್ತ ಆಯುಧಪಾಣಿಯಾದ ಭೀಮನನ್ನು ನೋಡಿಯೂ ಅವನಲ್ಲಿ ಮಹತ್ವವನ್ನು ಕಾಣಲಿಲ್ಲ, ಕುಬೇರ. ತನ್ನ ಮಿತ್ರನ ಮರಣಕ್ಕೆ ಅಗಸ್ತ್ಯರ ಶಾಪ ಕಾರಣ ಎಂದ.
ದೈತ್ಯಾವೇಶಾದುಜ್ಝಿತಃ ಶಾಂತಭಾವೋ
ದದೌ ನಿಜಂ ಸ್ಥಾನಮೇಷಾಂ ಸುತುಷ್ಟಃ |
ಆವಾಸಾರ್ಥ ತೇಽವಸಂಸ್ತತ್ರ ಪಾರ್ಥಾ-
ಸ್ತಥಾಽನ್ಯೇಷಾಂ ದೈವತಾನಾಂ ಗೃಹೇಷು ॥304॥
ಕುಬೇರ ದೈತ್ಯಾವೇಶದಿಂದ ಮುಕ್ತನಾಗಿ ಶಾಂತಭಾವದಿಂದ ಕೂಡಿ ಸಂತುಷ್ಟನಾಗಿ ಪಾಂಡವರಿಗೆ ಆವಾಸ ಮಾಡಲು ತನ್ನ ಮನೆಯನ್ನೇ ಕೊಟ್ಟ. ಪಾಂಡವರು ಅಲ್ಲಿಯೂ ಬೇರೆ ಬೇರೆ ದೇವತೆಗಳ ಮನೆಗಳಲ್ಲಿಯೂ ವಾಸಮಾಡಿದರು.
ತತ್ರೈವ ತೇಷಾಂ ವಸತಾಂ ಮಹಾತ್ಮನಾ-
ಮಾನಂದಿನಾಮಬ್ದಚತುಷ್ಟಯೇ ಗತೇ |
ಪಂಚಾಬ್ದಮಾಧ್ಯಾಪ್ಯ ಮಹಾಂತಿ ಚಾಸ್ತ್ರ-
ಣೀಂದ್ರೋ ಗುರ್ವರ್ಥಂ ಫಲ್ಗುನೇನಾರ್ಥಿತೋಽಭೂತ್ ॥305॥
ದೇವತೆಗಳ ಅರಮನೆಗಳಲ್ಲಿ ಪಾಂಡವರು ಆನಂದದಿಂದ ವಾಸ ಮಾಡುತ್ತಿದ್ದಂತೆ ನಾಲ್ಕು ವರ್ಷಗಳು ಕಳೆದಾಗ ಐದು ವರ್ಷಕಾಲ ಮಹಾ ಅಸ್ತ್ರಗಳನ್ನು ಅರ್ಜುನನಿಗೆ ದೇವೇಂದ್ರ ಕಲಿಸಿ ಗುರುದಕ್ಷಿಣೆಯ ಬಗ್ಗೆ ಅರ್ಜುನನಿಂದ ಪ್ರಾರ್ಥಿತನಾದ.
* * * *
ನೂರ ಐವತ್ತೆಂಟನೆಯ ಅಧ್ಯಾಯ
ಕುಬೇರನಿಂದ ಯುಧಿಷ್ಠಿರನಿಗೆ ಅನುಶಾಸನ. ಕುಬೇರನ ಅಪ್ಪಣೆಯಂತೆ ರಾಕ್ಷಸರಿಂದ ಪೂಜಿತರಾದ ಯುಧಿಷ್ಠಿರಾದಿಗಳ ಕುಬೇರಗೃಹವಾಸ.
ಧನದಃ
ಯುಧಿಷ್ಠಿರ ಧೃತಿರ್ದಾಕ್ಷ್ಯಂ ದೇಶಕಾಲಪರಾಕ್ರಮಾಃ |
ಲೋಕತಂತ್ರವಿಧಾನಾನಾಮೇಷ ಪಂಚವಿಧೋ ವಿಧಿಃ ॥1॥
ಕುಬೇರ ಎಲೈ ಯುಧಿಷ್ಠಿರನೇ, ಧೈರ್ಯ, ದಕ್ಷತೆ, ದೇಶಕಾಲಪರಾಕ್ರಮಗಳು ಇವು ಲೋಕದಲ್ಲಿ ಯಾವ ಕಾರ್ಯವನ್ನು

ಸಾಧಿಸಬೇಕಾದರೂ ಇರಬೇಕಾದ ಐದು ವಿಧವಾದ ಉಪಾಯಗಳು.
ಧೃತಿಮಂತಶ್ಚ ದಕ್ಷಾಶ್ಚ ಸ್ವೇ ಸ್ವೇ ಕರ್ಮಣಿ ಭಾರತ |
ಪರಾಕ್ರಮವಿಧಾನಜ್ಞಾ ನರಾ ಕೃತಯುಗೇಽಭವನ್ ॥2॥
ಎಲೈ ಭಾರತನೇ, ಕೃತಯುಗದಲ್ಲಿ ಧೈರ್ಯಶಾಲಿಗಳೂ, ತಮ್ಮ ತಮ್ಮ ಕರ್ಮದಲ್ಲಿ ದಕ್ಷತೆಯುಳ್ಳವರೂ, ಪರಾಕ್ರಮದ ವಿಧಾನವನ್ನು ತಿಳಿದವರು ಆದ ಮನುಷ್ಯರೂ ಇದ್ದರು.
ಧೃತಿಮಾನ್ ದೇಶಕಾಲಜ್ಞಃ ಸರ್ವಧರ್ಮವಿಧಾನವಿತ್ |
ಕ್ಷತ್ರಿಯಃ ಕ್ಷತ್ರಿಯಶ್ರೇಷ್ಠ ಪ್ರಶಾಸ್ತಿ ಪೃಥಿವೀಂ ಚಿರಮ್ ॥3॥
ಎಲೈ ಕ್ಷತ್ರಿಯಶ್ರೇಷ್ಠನೇ, ಧೈರ್ಯವಂತನೂ, ದೇಶಕಾಲಗಳನ್ನು ತಿಳಿದವನೂ, ಸರ್ವಧರ್ಮದ ರೀತಿಯನ್ನು ತಿಳಿದವನೂ ಆದ ಕ್ಷತ್ರಿಯನು ಭೂಮಿಯನ್ನು ಬಹುಕಾಲ ಆಳುತ್ತಾನೆ.
ಯ ಏವಂ ವರ್ತತೇ ಪಾರ್ಥ ಪುರುಷಃ ಸರ್ವಕರ್ಮಸು |
ಸ ಲೋಕೇ ಲಭತೇ ವೀರ ಯಶಃ ಪ್ರೇತ್ಯ ಚ ಸದ್ಗತಿಮ್ ॥4॥
ಎಲೈ ವೀರನೇ, ಯಾವ ಮನುಷ್ಯನು ಎಲ್ಲಾ ಕಾರ್ಯಗಳಲ್ಲಿಯೂ ಈ ರೀತಿ ವರ್ತಿಸುತ್ತಾನೆಯೋ ಅವನು ಲೋಕದಲ್ಲಿ ಕೀರ್ತಿಯನ್ನೂ ಮರಣಾನಂತರ ಪರಲೋಕದಲ್ಲಿ ಸದ್ಗತಿಯನ್ನೂ ಪಡೆಯುತ್ತಾನೆ.
ದೇಶಕಾಲಾಂತರಪ್ರೇಪ್ಸುಃ ಕೃತ್ವಾ ಶಕ್ರಃ ಪರಾಕ್ರಮಮ್ |
ಸಂಪ್ರಾಪ್ತಸ್ತ್ರಿದಿವೇ ರಾಜ್ಯಂ ವೃತ್ರಹಾ ವಸುಭಿಃ ಸಹ ॥5॥
ದೇಶಕಾಲ ವಿಶೇಷಗಳನ್ನು ಚೆನ್ನಾಗಿ ತಿಳಿದ ವೃತ್ರಸೂದನನಾದ ಇಂದ್ರನು ಪರಾಕ್ರಮವನ್ನು ಮಾಡಿ ವಸುಗಳ ಜೊತೆಯಲ್ಲಿ ಸ್ವರ್ಗರಾಜ್ಯವನ್ನು ಪಡೆದನು.
ಪಾಪಾತ್ಮಾ ಪಾಪಬುದ್ಧಿರ್ಯಃ ಪಾಪಮೇವಾನುವರ್ತತೇ |
ಕರ್ಮಣಾಮವಿಭಾಗಜ್ಞಃ ಪ್ರೇತ್ಯ ಚೇಹ ವಿನಶ್ಯತಿ ॥6॥
ಪಾಪಾತ್ಮನಾದವನೂ ಮತ್ತು ಪಾಪಬುದ್ಧಿಯುಳ್ಳವನೂ ಆದವನು ಪಾಪವನ್ನೇ ಅನುಸರಿಸುತ್ತಾನೆ. ಕರ್ಮಗಳ ವಿಭಾಗವನ್ನು ತಿಳಿಯದ ಅವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ನಾಶವನ್ನು ಹೊಂದುತ್ತಾನೆ.
ಅಕಾಲಜ್ಞಃ ಸುದುರ್ಮೇಧಾಃ ಕಾರ್ಯಾಣಾಮವಿಶೇಷವಿತ್ |
ವೃಥಾಽಽಚಾರಸಮಾರಂಭಃ ಪ್ರೇತ್ಯ ಚೇಹ ವಿನಶ್ಯತಿ ॥7॥
ಕಾಲವನ್ನು ತಿಳಿಯದವನು ಕಾರ್ಯಗಳ ವಿಶೇಷವನ್ನು ತಿಳಿಯದವನು ವ್ಯರ್ಥವಾದ ಆಚಾರವನ್ನು ಮಾಡುವವನು ದುರ್ಬುದ್ಧಿಯುಳ್ಳ ಮನುಷ್ಯನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ವಿನಾಶವನ್ನು ಹೊಂದುತ್ತಾನೆ.
ಸಾಹಸೇ ವರ್ತಮಾನಾನಾಂ ನಿಕೃತೀನಾಂ ದುರಾತ್ಮನಾಮ್ |
ಸರ್ವಸಾಮರ್ಥ್ಯಲಿಪ್ಸೂನಾಂ ಪಾಪೋ ಭವತಿ ನಿಶ್ಚಯಃ ॥8॥
ಸಾಹಸ ಕಾರ್ಯದಲ್ಲಿ ತೊಡಗಿ ಎಲ್ಲ ಸಾಮರ್ಥ್ಯವನ್ನೂ ಬಯಸುವ ವಂಚನೆಕಾರರ ನಿರ್ಧಾರವು ಯಾವಾಗಲೂ ಪಾಪವೇ ಆಗುತ್ತದೆ.

ಅಧರ್ಮಜ್ಞೋಽವಲಿಪ್ತಶ್ಚ ಬಾಲಬುದ್ಧಿರಮರ್ಷಣಃ |
ನಿರ್ಭಯೋ ಭೀಮಸೇನೋಽಯಂ ತಂ ಶಾಧಿ ಪುರುಷರ್ಷಭ ॥9॥
ಎಲೈ ಪುರುಷರ್ಷಭನೇ, ಈ ಭೀಮಸೇನನು ಅಧರ್ಮಜ್ಞನೂ, ದರ್ಪವುಳ್ಳವನೂ, ಬಾಲಬುದ್ಧಿಯುಳ್ಳವನೂ, ಕ್ರೋಧಶೀದನೂ, ನಿರ್ಭಯನೂ ಆಗಿದ್ದಾನೆ. ನೀನು ಅವನನ್ನು ಶಾಸನಮಾಡು.
ಆರ್ಷ್ಟಿಷೇಣಸ್ಯ ರಾಜರ್ಷೇಃ ಪ್ರಾಪ್ಯ ಭೂಯಸ್ತ್ವಮಾಶ್ರಮಮ್ |
ತಾಮಿಸ್ರಂ ಪ್ರಥಮಂ ಪಕ್ಷಂ ವೀತಶೋಕಭಯೋ ವಸ ॥10॥
ನೀನು ಪುನಃ ಆರ್ಷ್ಟಿಷೇಣರ ಆಶ್ರಮಕ್ಕೆ ಹೋಗಿ ಯಾವ ಶೋಕಭಯವಿಲ್ಲದೆ ಈ ಕೃಷ್ಣಪಕ್ಷದಲ್ಲಿ ವಾಸವನ್ನು ಮಾಡು.
ಅಲಕಾಃ ಸಹ ಗಂಧರ್ವೈರ್ಯಕ್ಷಾಶ್ಚ ಸಹ ಕಿನ್ನರೈಃ |
ಮನ್ನಿಯುಕ್ತಾ ಮನುಷ್ಯೇಂದ್ರ ಸರ್ವೇ ಚ ಗಿರಿವಾಸಿನಃ |
ರಕ್ಷಿಷ್ಯಂತಿ ಮಹಾಬಾಹೋ ಸಹಿತಂ ದ್ವಿಜಸತ್ತಮೈಃ ॥11॥
ಎಲೈ ಮಹಾಬಾಹುವಾದ ನರೇಂದ್ರನೇ, ನನ್ನ ರಾಜಧಾನಿಯಾದ ಅಲಕಾ ಪಟ್ಟಣದ ನಿವಾಸಿಗಳು ಗಂಧರ್ವರ, ಯಕ್ಷರ, ಕಿನ್ನರರ ಮತ್ತು ಎಲ್ಲಾ ಗಿರಿವಾಸಿಗಳ ಜೊತೆಯಲ್ಲಿ ನನ್ನ ಆದೇಶದಂತೆ ದ್ವಿಜಶ್ರೇಷ್ಠರಿಂದ ಕೂಡಿದ ನಿನ್ನನ್ನು ರಕ್ಷಿಸುವರು.
ಸಾಹಸಾದನುಸಂಪ್ರಾಪ್ತಃ ಪ್ರತಿಬುದ್ಧ್ಯ ವೃಕೋದರಃ |
ವಾರ್ಯತಾಂ ಸಾಧ್ವಯಂ ರಾಜಂಸ್ತ್ವಯಾ ಧರ್ಮಭೃತಾಂ ವರ ॥12॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಸಾಹಸದಿಂದ ಇಲ್ಲಿಗೆ ಬಂದ ವೃಕೋದರನನ್ನು ನೀನು ಬೋಧಿಸಿ ಮುಂದೆ ಅಂತಹ ಕೆಲಸಗಳನ್ನು ಮಾಡದಂತೆ ಅವನನ್ನು ತಡೆ.
ಇತಃ ಪರಂ ಚ ವೋ ರಾಜನ್ ದ್ರಕ್ಷ್ಯಂತಿ ವನಗೋಚರಾಃ |
ಉಪಸ್ಥಾಸ್ಯಂತಿ ವೋ ರಾಜನ್ ರಕ್ಷಿಷ್ಯಂತೇ ಚ ವಃ ಸದಾ ॥13॥
ತಥೈವ ಚಾನ್ನಪಾನಾನಿ ಸ್ವಾದೂನಿ ಚ ಬಹೂನಿ ಚ |
ಆಹರಿಷ್ಯಂತಿ ಮತ್ಪ್ರೇಷ್ಯಾಃ ಸದಾ ವಃ ಪುರುಷರ್ಷಭಾಃ ॥14॥
ಎಲೈ ರಾಜನೇ, ಇನ್ನು ಮುಂದೆ ವನವಾಸಿಗಳು ನಿಮ್ಮ ದರ್ಶನಕ್ಕೆ ಬರುವರು. ಎಲೈ ಪುರುಷಶ್ರೇಷ್ಠರೇ, ನನ್ನ ಸೇವಕರೇ ಯಾವಾಗಲೂ

ನಿಮಗೆ ರುಚಿಯಾದ ಬಹುವಾದ ಅನ್ನಪಾನಗಳನ್ನೂ ತಂದು ಒದಗಿಸುವರು.
ಯಥಾ ಜಿಷ್ಣುರ್ಮಹೇಂದ್ರಸ್ಯ ಯಥಾ ವಾಯೋರ್ವೃಕೋದರಃ |
ಧರ್ಮಸ್ಯ ತ್ವಂ ಯಥಾ ತಾತ ಯೋಗೋತ್ಪನ್ನೋ ನಿಜಃ ಸುತಃ ॥15॥
ಆತ್ಮಜಾವಾತ್ಮಸಂಪನ್ನೌ ಯಮೌ ಚೋಭೌ ಯಥಾಶ್ವಿನೋಃ |
ರಕ್ಷ್ಯಾಸ್ತದ್ವನ್ಮಮಾಪೀಹ ಯೂಯಂ ಸರ್ವೇ ಯುಧಿಷ್ಠಿರ ॥16॥
ಮಹೇಂದ್ರನಿಗೆ ಅರ್ಜುನನು, ವಾಯುದೇವರಿಗೆ ಭೀಮಸೇನನು, ಯಮಧರ್ಮನಿಗೆ ನೀನು ಮತ್ತು ಅಶ್ವಿನೀದೇವತೆಗಳಿಗೆ ನಕುಲಸಹದೇವರು ಹೇಗೆ ಯೋಗದಿಂದ ಉತ್ಪನ್ನರಾಗಿ ಅವರಿಂದ ರಕ್ಷಿಸಲ್ಪಡುವಿರೋ ಅದರಂತೆ, ಎಲೈ ಯುಧಿಷ್ಠಿರನೇ, ನೀವೆಲ್ಲರೂ ನನ್ನಿಂದಲೂ ಸಹ ಇಲ್ಲಿ ರಕ್ಷಿಸಲ್ಪಡಬೇಕಾದವರು.
ಅರ್ಥತತ್ತ್ವವಿಧಾನಜ್ಞಃ ಸರ್ವಧರ್ಮವಿಧಾನವಿತ್ |
ಭೀಮಸೇನಾದವರಜಃ ಫಲ್ಗುನಃ ಕುಶಲೀ ದಿವಿ ॥17॥
ಅರ್ಥತತ್ತ್ವಗಳ ಪ್ರಕಾರಗಳನ್ನು ತಿಳಿದ, ಸರ್ವಧರ್ಮಗಳ ಪ್ರಕಾರಗಳನ್ನು ತಿಳಿದ, ಭೀಮಸೇನನ ತಮ್ಮನಾದ ಅರ್ಜುನನು ಸ್ವರ್ಗದಲ್ಲಿ ಕ್ಷೇಮದಿಂದಿದ್ದಾನೆ.
ಯಾಃ ಕಾಶ್ಚನ ಮತಾ ಲೋಕೇ ಸ್ವರ್ಗ್ಯಾಃ ಪರಮಸಂಪದಃ |
ಜನ್ಮಪ್ರಭೃತಿ ತಾಃ ಸರ್ವಾಃ ಸ್ಥಿತಾಸ್ತಾತ ಧನಂಜಯೇ ॥18॥
ಎಲೈ ಪ್ರೀತಿಪಾತ್ರನೇ, ಸ್ವರ್ಗಕ್ಕೆ ಉಚಿತವಾದ ಶ್ರೇಷ್ಠವಾದ ಸಂಪತ್ತುಗಳೆಂದು ಲೋಕದಲ್ಲಿ ಎಷ್ಟು ಪ್ರಸಿದ್ಧವಾಗಿವೆಯೋ ಅವೆಲ್ಲವನ್ನೂ ಧನಂಜಯನು ಹುಟ್ಟಿದಾಗಿನಿಂದಲೇ ಪಡೆದಿದ್ದಾನೆ.
ದಮೋ ದಾನಂ ಬಲಂ ಬುದ್ಧಿರ್ಹ್ರೀರ್ಧೃತಿಸ್ತೇಜ ಉತ್ತಮಮ್ |
ಏತಾನ್ಯಪಿ ಮಹಾಸತ್ತ್ವೇ ಸ್ಥಿತಾನ್ಯಮಿತತೇಜಸಿ ॥19॥
ಇಂದ್ರಿಯ ನಿಗ್ರಹ, ದಾನ, ಬಲ, ಬುದ್ಧಿ, ನಾಚಿಕೆ, ಧೈರ್ಯ, ಶ್ರೇಷ್ಠವಾದ ಶೌರ್ಯ ಇವೆಲ್ಲವೂ ಅಮಿತಪರಾಕ್ರಮಿಯಾದ ಮಹಾಸತ್ತ್ವನಾದ ಅರ್ಜುನನಲ್ಲಿ ಇವೆ.
ನ ಮೋಹಾತ್ ಕುರುತೇ ಜಿಷ್ಣುಃ ಕರ್ಮ ಪಾಂಡವ ಗರ್ಹಿತಮ್ |
ನ ಪಾರ್ಥಸ್ಯ ಮೃಷೋಕ್ತಾನಿ ಕಥಯಂತಿ ನರಾ ನೃಷು ॥20॥
ಎಲೈ ಪಾಂಡವನೇ, ಅರ್ಜುನನು ಎಂದೂ ಮೋಹದಿಂದ ನಿಂದ್ಯವಾದ ಕಾರ್ಯವನ್ನು ಮಾಡುವುದಿಲ್ಲ. ಮತ್ತು ಯಾವ ಜನರೂ ಸಹ ಅರ್ಜುನನು ಸುಳ್ಳು ಮಾತನಾಡುತ್ತಾನೆ ಎಂದು ಹೇಳುವುದಿಲ್ಲ.
ಸ ದೇವಪಿತೃಗಂಧರ್ವೈಃ ಕುರೂಣಾಂ ಕೀರ್ತಿವರ್ಧನಃ |
ಮಾನಿತಃ ಕುರುತೇಽಸ್ತ್ರಾಣಿ ಶಕ್ರಸದ್ಮನಿ ಭಾರತ ॥21॥
ಎಲೈ ಭಾರತನೇ, ಕುರುಗಳ ಕೀರ್ತಿವರ್ಧನನಾದ ಅವನು ದೇವ-ಪಿತೃ- ಗಂಧರ್ವರಿಂದ ಪೂಜಿತರಾಗಿ ಇಂದ್ರನ ಅರಮನೆಯಲ್ಲಿ ಅಸ್ತ್ರವಿದ್ಯೆಯನ್ನು ಕಲಿಯುತ್ತಿದ್ದಾನೆ.
ಯೋಽಸೌ ಸರ್ವಾನ್ ಮಹೀಪಾಲಾನ್ ಧರ್ಮೇಣ ವಶಮಾನಯತ್|
ಸ ಶಂತನುರ್ಮಹಾತೇಜಾಃ ಪಿತುಸ್ತವ ಪಿತಾಮಹಃ ॥22॥
ಪ್ರೀಯತೇ ಪಾರ್ಥ ಪಾರ್ಥೇನ ದಿವಿ ಗಾಂಡೀವಧನ್ವನಾ |
ಸಮ್ಯಕ್ ಚಾಸೌ ಮಹಾವೀರ್ಯಃ ಕುಲಧುರ್ಯೇಣ ಪಾರ್ಥಿವಃ ॥23॥
ಯಾವ ಮಹಾತೇಜಸ್ವಿಯಾದ, ನಿನ್ನ ತಂದೆಯ ತಾತನಾದ, ಶಂತನು ಚಕ್ರವರ್ತಿಯು ಎಲ್ಲ ರಾಜರನ್ನೂ ವಶಪಡಿಸಿಕೊಂಡನೋ ಅಂತಹ ಶಂತನುವು ಸ್ವರ್ಗಲೋಕದಲ್ಲಿ ಗಾಂಡೀವಧನುರ್ಧಾರಿಯಾದ ಕುಲದ ಗೌರವಭಾರವನ್ನು ಹೊತ್ತಿರುವ ಅರ್ಜುನನ ಜೊತೆಯಲ್ಲಿ ಬಹಳ ಸಂತೋಷದಿಂದ ಇದ್ದಾನೆ.
ಪಿತೄನ್ ದೇವಾನೃಷೀನ್ ವಿಪ್ರಾನ್ ಪೂಜಯಿತ್ವಾ ಮಹಾತಪಾಃ |
ಸಪ್ತ ಮುಖ್ಯಾನ್ ಮಹಾಮೇಧಾನಾಹರದ್ ಯಮುನಾಂ ಪ್ರತಿ ॥24॥
ಅಧಿರಾಜಃ ಸ ರಾಜಂಸ್ತ್ವಂ ಶಂತನುಃ ಪ್ರಪಿತಾಮಹಃ |
ಸ್ವರ್ಗಜಿಚ್ಛಕ್ರಲೋಕಸ್ಥಃ ಕುಶಲಂ ಪರಿಪೃಚ್ಛತಿ ॥25॥
ಯಾವ ನಿನ್ನ ಪ್ರಪಿತಾಮಹನಾದ ಶಂತನುವು ಯಮುನಾತೀರದಲ್ಲಿ ಏಳು ಮಹಾಯಾಗಗಳನ್ನು ಮಾಡಿದನೋ, ಎಲೈ ರಾಜನೇ, ಅಂತಹ ಅಧಿರಾಜನಾದ ಶಂತನುವು ತನ್ನ ಪುಣ್ಯದಿಂದ ಸ್ವರ್ಗಲೋಕವನ್ನು ಸಂಪಾದಿಸಿ ಇಂದ್ರಲೋಕದಲ್ಲಿದ್ದು ನಿನ್ನ ಕುಶಲವನ್ನು ವಿಚಾರಿಸುತ್ತಿದ್ದಾನೆ.
ವೈಶಂಪಾಯನಃ
ಏತತ್ ಶ್ರುತ್ವಾ ತು ವಚನಂ ಧನದೇನ ಪ್ರಭಾಷಿತಮ್ |
ತತಃ ಶಕ್ತಿಂ ಗದಾಂ ಖಡ್ಗಂ ಧನುಶ್ಚ ಭರತರ್ಷಭಃ |
ಅಂಸೇ ಪ್ರಾಧ್ವತ್ ನಮಶ್ಚಕ್ರೇ ಕುಬೇರಾಯ ವೃಕೋದರಃ ॥26॥
ವೈಶಂಪಾಯನ ಕುಬೇರನಿಂದ ಹೇಳಲ್ಪಟ್ಟ ಈ ಮಾತುಗಳನ್ನು ಕೇಳಿ ಭರತ ಶ್ರೇಷ್ಠನಾದ ವೃಕೋದರನು ತನ್ನ ಶಕ್ತಿ, ಗದೆ, ಖಡ್ಗ, ಧನುಸ್ಸುಗಳನ್ನು ಭುಜದಲ್ಲಿ ಇಟ್ಟುಕೊಂಡು ಕುಬೇರನಿಗೆ ನಮಸ್ಕಾರವನ್ನು ಮಾಡಿದನು.
ಏತತ್ಶ್ರುತ್ವಾ ತು ವಚನಂ ಧನದೇನ ಪ್ರಭಾಷಿತಮ್ |
ಪಾಂಡವಾಶ್ಚ ತತಸ್ತೇನ ಬಭೂವುಃ ಸಂಪ್ರಹರ್ಷಿತಾಃ |

ತತೋಽಬ್ರುವೀದ್ ಧನಾಧ್ಯಕ್ಷಃ ಶರಣ್ಯಃ ಶರಣಾಗತಮ್ ॥27॥
ಕುಬೇರನು ಆಡಿದ ಈ ಮಾತುಗಳನ್ನು ಕೇಳಿ ಪಾಂಡವರೆಲ್ಲರೂ ಅದರಿಂದ ಸಂತೋಷಗೊಂಡರು. ಆಗ ಶರಣಾಗತವತ್ಸಲನಾದ ಕುಬೇರನು ಶರಣಾಗತನಾದ ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು;
ಮಾನಹಾ ಭವ ಶತ್ರೂಣಾಂ ಸುಹೃದಾಂ ನಂದಿವರ್ಧನಃ |
ವಿಭಯಸ್ತಾಪ ಶೈಲಾಗ್ರೇ ವಸಾನಃ ಸಹ ಬಂಧುಭಿಃ ॥28॥
ಸುಪರ್ಣಪಿತೃದೇವಾನಾಂ ಸತತಂ ಮಾನಕೃದ್ ಭವ |
ಋಜುಂ ಪಶ್ಯತ ಮಾ ವಕ್ರಂ ಸತ್ಯಂ ವದತ ಮಾಽನೃತಮ್ ॥29॥
ದೀರ್ಘಂ ಪಶ್ಯತ ಮಾ ಹ್ರಸ್ವಂ ಪರಂ ಪಶ್ಯತ ಮಾಽಪರಮ್ |
ಶತ್ರುಗಳ ಮಾನವನ್ನು ಕಳೆದು ಸುಹೃದರಿಗೆ ಸಂತೋಷವನ್ನು ಉಂಟುಮಾಡುವವನಾಗು. ಈ ಪರ್ವತಶಿಖರದಲ್ಲಿ ಬಂಧುಗಳ ಜೊತೆಯಲ್ಲಿ ನಿರ್ಭಯವಾಗಿ ವಾಸಮಾಡುತ್ತಾ ಪಕ್ಷಿಗಳಿಗೆ ಮತ್ತು ಪಿತೃದೇವತೆಗಳಿಗೆ ಮಾನವನ್ನು ಕೊಡುವವನಾಗು. ನೇರವಾದ ದೃಷ್ಟಿಯಿರಲಿ; ವಕ್ರದೃಷ್ಟಿಯು ಬೇಡ. ಸತ್ಯವನ್ನು ನುಡಿಯಿರಿ; ಅಸತ್ಯವನ್ನು ನುಡಿಯಬೇಡಿ. ದೀರ್ಘದೃಷ್ಟಿಯನ್ನು ಹೊಂದಿ; ಸಂಕುಚಿತ ದೃಷ್ಟಿಯನ್ನು ಹೊಂದಬೇಡಿ. ಮುಂದೆ ಇರುವುದನ್ನು ನೋಡಿ; ಹಿಂದಿರುವುದನ್ನು ನೋಡಬೇಡಿ.
ಸ್ವೇಷು ವೇಶ್ಮಸು ರಮ್ಯೇಷು ವಸತಾಮಿತ್ರತಾಪನಾಃ |
ಕಾಮಾನ್ನ ಪರಿಹಾಸ್ಯಂತಿ ಯಕ್ಷಾ ವೋ ಭರತರ್ಷಭಾಃ ॥30॥
ಎಲೈ ಶತ್ರುತಾಪನರೇ, ಭರತರ್ಷಭರೇ, ನಿಮ್ಮ ನಿಮ್ಮ ಸುಂದರವಾದ ಗೃಹಗಳಲ್ಲಿ ವಾಸವನ್ನು ಮಾಡಿ. ಯಕ್ಷರು ನಿಮಗೆ ಯಾವ ವಸ್ತುಗಳೂ ನ್ಯೂನವಾಗದಂತೆ ನೋಡಿಕೊಳ್ಳುವರು.
ಶೀಘ್ರಮೇವ ಗುಡಾಕೇಶಃ ಕೃತಾಸ್ತ್ರಃ ಪುನರೇಷ್ಯತಿ |
ಸಾಕ್ಷಾನ್ಮಘವತೋತ್ಸೃಷ್ಟಃ ಸಂಪ್ರಾಪ್ಸ್ಯತಿ ಧನಂಜಯಃ ॥31॥
ಗುಡಾಕೇಶನಾದ ಅರ್ಜುನನು ಶೀಘ್ರವಾಗಿಯೇ ಅಸ್ತ್ರವನ್ನು ಸಂಪಾದಿಸಿ ಇಂದ್ರನಿಂದ ಬೀಳ್ಕೊಡಲ್ಪಟ್ಟು ಪುನಃ ಇಲ್ಲಿಗೆ ಬರುವನು.
ವೈಶಂಪಾಯನಃ
ಏವಮುತ್ತಮಕರ್ಮಾಣಮನುಶಿಷ್ಯ ಯುಧಿಷ್ಠಿರಮ್ |
ಅಸ್ತಂ(ಶ್ವೇತಂ) ಗಿರಿವರಶ್ರೇಷ್ಠಂ ಪ್ರಯಯೌ ಗುಹ್ಯಕಾಧಿಪಃ ॥32॥
ವೈಶಂಪಾಯನ ಹೀಗೆ ಉತ್ತಮಕಾರ್ಯಗಳನ್ನು ಮಾಡುವ ಯುಧಿಷ್ಠಿರನಿಗೆ ಅನುಶಾಸನವನ್ನು ಮಾಡಿ ಗುಹ್ಯಕಾಧಿಪನಾದ ಕುಬೇರನು ತನ್ನ ಶ್ರೇಷ್ಠವಾದ ಅಸ್ತಪರ್ವತಕ್ಕೆ (ಶ್ವೇತ ಪರ್ವತಕ್ಕೆ) ಹೋದನು.
ತಂ ಪರಿಸ್ತೋಮಸಂಕೀರ್ಣೈರ್ನಾನಾರತ್ನವಿಭೂಷಿತೈಃ |
ಯಾನೈರನುಯಯುರ್ಯಕ್ಷಾ ರಾಕ್ಷಸಾಶ್ಚ ಸಹಸ್ರಶಃ ॥33॥
ಅವನ ಹಿಂದೆ ನಾನಾರತ್ನವಿಭೂಷಿತವಾದ ಸಾಧನಗಳಿಂದ ಅಲಂಕೃತವಾದ ಯಾನಗಳಲ್ಲಿ ಸಹಸ್ರಾರು ಯಕ್ಷರು ಮತ್ತು ರಾಕ್ಷಸರು ಪ್ರಯಾಣ ಮಾಡಿದರು.
ಪಕ್ಷಿಣಾಮಿವ ನಿರ್ಘೋಷಃ ಕುಬೇರಸದನಂ ಪ್ರತಿ |
ಬಭೂವ ಪರಮಾಶ್ವಾನಾಮೈರಾವಣಪಥೇ ಯತಾಮ್ ॥34॥
ಕುಬೇರ ಸದನದ ಸಮೀಪದಲ್ಲಿ ಕುಬೇರನ ಮಿತ್ರನಾದ ಐರಾವಣನ ಗೃಹದ ಮಾರ್ಗದಲ್ಲಿ ಹೋಗುವ ಶ್ರೇಷ್ಠವಾದ ಅಶ್ವಗಳಿಂದ ಉಂಟಾದ ಶಬ್ದವು ಪಕ್ಷಿಗಳ ನಿರ್ಘೋಷದಂತೆ ಇದ್ದಿತು.
ತೇ ಜಗ್ಮುಸ್ತೂರ್ಣಮಾಕಾಶಂ ಧನಾಧಿಪತಿವಾಜಿನಃ |
ಪ್ರಕರ್ಷಂತ ಇವಾಭ್ರಾಣಿ ಪಿಬಂತ ಇವ ಮಾರುತಮ್ ॥35॥
ಆ ಕುಬೇರನ ಅಶ್ವಗಳು ಬಹಳ ಬೇಗ ಆಕಾಶವನ್ನು ಸೇರಿ ಮೋಡಗಳನ್ನು ಎಳೆದುಕೊಂಡು ಹೋಗುವಂತೆ ಮತ್ತು ವಾಯುವನ್ನು ಹೀರುವಂತೆ ತೋರಿದವು.
ತತಸ್ತಾನಿ ಶರೀರಾಣಿ ಗತಸತ್ತ್ವಾನಿ ರಕ್ಷಸಾಮ್ |
ಅಪಾಕೃಷ್ಯಂತ ಶೈಲಾಗ್ರಾದ್ ಧನಾಧಿಪತಿಶಾಸನಾತ್ ॥36॥
ಅನಂತರ ಕುಬೇರನ ಶಾಸನದಂತೆ ಮೃತರಾದ ಯಕ್ಷರಾಕ್ಷಸರ ಶರೀರಗಳೆಲ್ಲವೂ ಆ ಪರ್ವತಾಗ್ರದಿಂದ ದೂರ ಎಸೆಯಲ್ಪಟ್ಟವು.
ತೇಷಾಂ ಹಿ ಶಾಪಕಾಲಃ ಸ ಕೃತೋಽಗಸ್ತ್ಯೇನ ಧೀಮತಾ |
ಸಮರೇ ನಿಹತಾಸ್ತಸ್ಮಾಚ್ಛಾಪಸ್ಯಾಂತೋಽಭವತ್ ತದಾ ॥37॥
ಅವರಿಗೆ ಮೇಧಾವಿಗಳಾದ ಅಗಸ್ತ್ಯರೇ ಶಾಪಕಾಲದ ಅವಧಿಯನ್ನು ಸೂಚಿಸಿದ್ದರು. ಅವರು ಯುದ್ಧದಲ್ಲಿ ಹತರಾದರು, ಆಗ ಶಾಪದ ಕಾಲವು ಮುಗಿಯಿತು.
ಪಾಂಡವಾಶ್ಚ ಮಹಾತ್ಮಾನಸ್ತೇಷು ವೇಶ್ಮಸು ತಾಃ ಕ್ಷಪಾಃ (ತಾಂ ಕ್ಷಪಾಮ್)|
ಸುಖಮೂಷುರ್ಗತೋದ್ವೇಗಾಃ ಪೂಜಿತಾಃ ಸರ್ವರಾಕ್ಷಸೈಃ ॥38॥
ಮಹಾತ್ಮರಾದ ಪಾಂಡವರಾದರೂ ಕುಬೇರನು ಹೇಳಿದ ಆ ಮನೆಗಳಲ್ಲಿ ಸರ್ವರಾಕ್ಷಸರಿಂದ ಪೂಜಿತರಾಗಿ ಯಾವ ಉದ್ವೇಗವೂ ಇಲ್ಲದೇ ಸುಖವಾಗಿ ಆ ಕೆಲವು ರಾತ್ರಿಗಳನ್ನು ಕಳೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಪಂಚಾಶದಧಿಕಶತತಮೋಽಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ಪಂಚಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೆಂಟನೆಯ
ಅಧ್ಯಾಯ ಮುಗಿಯಿತು
* * * *
ನೂರ ಐವತ್ತೊಂಬತ್ತನೆಯ ಅಧ್ಯಾಯ
ಆರ್ಷ್ಟಿಷೇಣನಿಂದ ಮೇರು ಮಂದರ ಚತುರ್ಮುಖಸದನ, ವೈಕುಂಠ ಮತ್ತು ಸೂರ್ಯಚಂದ್ರಗತಿಗಳ ವರ್ಣನೆ.
ವೈಶಂಪಾಯನಃ
ತತಃ ಸೂರ್ಯೋದಯೇ ಧೌಮ್ಯಃ ಪಾಂಚಾಲೀಸಹಿತಾಂಶ್ಚ ತಾನ್ |
ಆರ್ಷ್ಟಿಷೇಣೇನ ಸಹಿತಃ ಪಾಂಡವಾನಭ್ಯವರ್ತತ ||1||
ವೈಶಂಪಾಯನ ಅನಂತರ ಸೂರ್ಯೋದಯವಾದಾಗ ಧೌಮ್ಯರು ಆರ್ಷ್ಟಿಷೇಣನ ಜೊತೆಯಲ್ಲಿ ದ್ರೌಪದಿಯ ಸಹಿತರಾಗಿದ್ದ ಪಾಂಡವರನ್ನು ಸಮೀಪಿಸಿದರು.
ತೇಽಭಿವಾದ್ಯಾರ್ಷ್ಟಿಷೇಣಸ್ಯ ಪಾದೌ ಧೌಮ್ಯಸ್ಯ ಚೈವ ಹ |
ತತಃ ಪ್ರಾಂಜಲಯಃ ಸರ್ವೇ ಬ್ರಾಹ್ಮಣಾಂಸ್ತಾನಪೂಜಯನ್ ||2||
ಅವರೆಲ್ಲರೂ ಧೌಮ್ಯರ ಮತ್ತು ಆರ್ಷ್ಟಿಷೇಣನ ಪಾದಗಳಿಗೆ ನಮಸ್ಕರಿಸಿ ಕೈಗಳನ್ನು ಮುಗಿದು ಆ ಬ್ರಾಹ್ಮಣರನ್ನು ಪೂಜಿಸಿದರು.
ತತೋ ಯುಧಿಷ್ಠಿರಂ ಧೌಮ್ಯೋ ಗೃಹೀತ್ವಾ ದಕ್ಷಿಣೇ ಕರೇ |
ಪ್ರಾಚೀಂ ದಿಶಮಭಿಪ್ರೇಕ್ಷ್ಯ ಮಹರ್ಷಿರಿದಮಬ್ರವೀತ್ ||3||
ಅನಂತರ ಮಹರ್ಷಿಗಳಾದ ಧೌಮ್ಯರು ಯುಧಿಷ್ಠಿರನ ಬಲಗೈಯನ್ನು ಹಿಡಿದುಕೊಂಡು ಪೂರ್ವದಿಕ್ಕನ್ನು ನೋಡುತ್ತಾ ಹೀಗೆ ಮಾತನಾಡಿದರು.
ಅಸೌ ಸಾಗರಪರ್ಯಂತಾಂ ಭೂಮಿಮಾವೃತ್ಯ ತಿಷ್ಠತಿ |
ಶೈಲರಾಜೋ ಮಹಾರಾಜ ಮಂದರೋಽತಿ ವಿರಾಜತೇ ||4||
ಎಲೈ ಮಹಾರಾಜನೇ, ಈ ಶೈಲರಾಜವಾದ ಮಂದರವು ಸಮುದ್ರ ಪರ್ಯಂತವಾದ ಭೂಮಿಯನ್ನು ಆವರಿಸಿಕೊಂಡು ಶೋಭಿಸುತ್ತಿದೆ.
ಇಂದ್ರವೈಶ್ರವಣಾವೇತಾಂ ದಿಶಂ ಪಾಂಡವ ರಕ್ಷತಃ |
ಪರ್ವತೈಶ್ಚ ವನಾಂತೈಶ್ಚ ಕಾನನೈಶ್ಚೈವ ಶೋಭಿತಾಮ್ ||5||
ಎಲೈ ಪಾಂಡವನೇ, ಪರ್ವತಗಳಿಂದಲೂ ಮತ್ತು ಕಾಡುಗಳಿಂದಲೂ ಶೋಭಿತವಾದ ಈ ದಿಕ್ಕನ್ನು ಇಂದ್ರ ಮತ್ತು ಕುಬೇರರು ರಕ್ಷಿಸುತ್ತಾರೆ.
ಏತದಾಹುರ್ಮಹೇಂದ್ರಸ್ಯ ರಾಜ್ಞೋ ವೈಶ್ರವಣಸ್ಯ ಚ |
ಋಷಯಃ ಸರ್ವಧರ್ಮಜ್ಞಾಃ ಸದ್ಮ ತಾತ ಮನೀಷಿಣಃ ||6||
ಪ್ರೀತಿಪಾತ್ರನೇ, ಸರ್ವಧರ್ಮಗಳನ್ನು ತಿಳಿದ ಮೇಧಾವಿಗಳು ಮತ್ತು ಋಷಿಗಳು ಈ ದಿಕ್ಕನ್ನು ಮಹೇಂದ್ರನ ಮತ್ತು ಕುಬೇರನ ಆವಾಸಸ್ಥಾನವೆಂದು ಹೇಳುತ್ತಾರೆ.
ಅತಶ್ಚೋದ್ಯಂತಮಾದಿತ್ಯಮುಪತಿಷ್ಠಂತಿ ವೈ ಪ್ರಜಾಃ |
ಋಷಯಶ್ಚಾಪಿ ಧರ್ಮಜ್ಞಾಃ ಸಿದ್ಧಾಃ ಸಾಧ್ಯಾಶ್ಚ ದೇವತಾಃ ||7||
ಇಲ್ಲಿಂದ ಉದಯಿಸುವ ಸೂರ್ಯನನ್ನು ಎಲ್ಲಾ ಪ್ರಜೆಗಳೂ ಧರ್ಮಜ್ಞರಾದ ಋಷಿಗಳೂ, ಸಿದ್ಧರೂ, ಸಾಧ್ಯರು ಮತ್ತು ದೇವತೆಗಳು ಸ್ತೋತ್ರಮಾಡುತ್ತಾರೆ.
ಯಮಸ್ತು ರಾಜಾ ಧರ್ಮಜ್ಞಃ ಸರ್ವಪ್ರಾಣಭೃತಾಂ ಪ್ರಭುಃ |
ಪ್ರೇತಸತ್ತ್ವಗತಿಂ ಹ್ಯೇನಾಂ ದಕ್ಷಿಣಾಮಾಶ್ರಿತೋ ದಿಶಮ್ ||8||
ಏತತ್ಸಂಯಮನಂ ಪುಣ್ಯಮತೀವಾದ್ಭುತದರ್ಶನಮ್ |
ಪ್ರೇತರಾಜಸ್ಯ ಭವನಮೃದ್ಧ್ಯಾ ಪರಮಯಾ ಯುತಮ್ ||9||
ಸರ್ವ ಜೀವರಿಗೆ ಪ್ರಭುವಾದ, ಮರಣವನ್ನು ಹೊಂದಿದ ಜೀವರಿಗೆ ಗತಿಯಾದ, ಧರ್ಮಜ್ಞನಾದ ಯಮರಾಜನು ಈ ದಕ್ಷಿಣ ದಿಕ್ಕನ್ನು ಆಶ್ರಯಿಸಿಕೊಂಡಿದ್ದಾನೆ. ಇದು ಅದ್ಭುತವಾದ ದರ್ಶನವುಳ್ಳ ಪವಿತ್ರವಾದ ಪ್ರೇತರಾಜ ಯಮನ ಸಂಯಮನ ಪಟ್ಟಣ. ಇದು ಎಲ್ಲ ಸಂಪತ್ತಿನಿಂದಲೂ ಕೂಡಿದೆ.
ಯಂ ಪ್ರಾಪ್ಯ ಸವಿತಾ ರಾಜನ್ ಸತ್ಯೇನ ಪ್ರತಿತಿಷ್ಠತಿ |
ಅಸ್ತಂ ಪರ್ವತರಾಜಾನಮೇತಮಾಹುರ್ಮನೀಷಿಣಃ ||10||
ಎಲೈ ರಾಜನೇ, ಸತ್ಯದಿಂದ ಸಂಚಾರಮಾಡುವ ಸೂರ್ಯನು ಮೇರುವಿನ ಪೂರ್ವದಿಕ್ಕಿನಲ್ಲಿರುವ ಪ್ರಜೆಗಳಿಗೆ ಅಸ್ತಪರ್ವತವಾದ ದಕ್ಷಿಣದಿಕ್ಕಿನ ಪರ್ವತವನ್ನು ತಲುಪಿ ಅಸ್ತನಾಗುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ.
ಏತಂ ಪರ್ವತರಾಜಾನಂ ಸಮುದ್ರಂ ಚ ಮಹೋದಧಿಮ್ |
ಆವಸನ್ ವರುಣೋ ರಾಜಾ ಭೂತಾನಿ ಪರಿರಕ್ಷತಿ ||11||
ಈ ಪರ್ವತವನ್ನು (ಪಶ್ಚಿಮ ದಿಕ್ಕಿನ ಪರ್ವತವನ್ನು) ಮತ್ತು ಮಹಾಜಲಗಳಿಗೆ ಆಶ್ರಯವಾದ ಸಮುದ್ರವನ್ನು ತನ್ನ ಆವಾಸವನ್ನಾಗಿ ಮಾಡಿಕೊಂಡು ರಾಜನಾದ ವರುಣನು ಎಲ್ಲಾ ಪ್ರಾಣಿಗಳನ್ನೂ ರಕ್ಷಿಸುತ್ತಾನೆ.
ಉದೀಚೀಂ ದೀಪಯನ್ನೇಷ ದಿಶಂ ತಿಷ್ಠತಿ ವೀರ್ಯವಾನ್ |
ಮಹಾಮೇರುರ್ಮಹಾಭಾಗ ಶಿವೋ ಬ್ರಹ್ಮವಿದಾಂ ಗತಿಃ ||12||
ಎಲೈ ಮಹಾನುಭಾವನೇ, ಈ ವೀರ್ಯಶಾಲಿಯಾದ, ಬ್ರಹ್ಮಜ್ಞಾನಿಗಳಿಗೆ ಗತಿಯಾದ, ಮಂಗಳವಾದ ಮಹಾಮೇರು ಪರ್ವತವು

ಉತ್ತರದಿಕ್ಕನ್ನು ಪ್ರಕಾಶಿಸಿಕೊಂಡು ಇರುತ್ತದೆ.
ಯಸ್ಮಿನ್ ಬ್ರಹ್ಮಸದಶ್ಚೈವ ಭೂತಾತ್ಮಾ ಚಾವತಿಷ್ಠತೇ |
ಪ್ರಜಾಪತಿಃ ಸೃಜನ್ ಸರ್ವಂ ಯತ್ಕಿಂಚಿಜ್ಜಂಗಮಾಗಮಮ್ ॥13॥
ಯಾನಾಹುರ್ಬ್ರಹ್ಮಣಃ ಪುತ್ರಾನ್ ಮಾನಸಾನ್ ದಕ್ಷಸಪ್ತಮಾನ್ |
ತೇಷಾಮಪಿ ಮಹಾಮೇರುಃ ಶಿವಂ ಸ್ಥಾನಮನಾಮಯಮ್ ॥14॥
ಅದರಲ್ಲಿ (ಅದರ ಶಿಖರದಲ್ಲಿ) ಎಲ್ಲ ಜೀವರಿಗೆ ಒಡೆಯನಾದ ಬ್ರಹ್ಮದೇವರ ಸಭೆಯಿದೆ. ಬ್ರಹ್ಮದೇವರು ಸ್ಥಾವರ ಜಂಗಮರೂಪವಾದ ಎಲ್ಲ ಪ್ರಜೆಗಳನ್ನೂ ಸೃಷ್ಟಿಸುವವರು. ಬ್ರಹ್ಮದೇವರ ಮಾನಸ ಪುತ್ರರಾದ ದಕ್ಷಪ್ರಜಾಪತಿ ಮೊದಲಾದ ಏಳು ಜನರಿಗೂ ಈ ಮಹಾಮೇರುವು ಮಂಗಳವಾದ ನಿರುಪದ್ರವವಾದ ವಾಸಸ್ಥಾನವಾಗಿದೆ.
ಅತ್ರೈವ ಪ್ರತಿತಿಷ್ಠಂತಿ ಪುನರತ್ರೋ(ರೇವೋ)ದಯಂತಿ ಚ |
ಸಪ್ತ ದೇವರ್ಷಯಸ್ತಾತ ವಸಿಷ್ಠಪ್ರಮುಖಾಃ ಸದಾ ॥15॥
ಎಲೈ ಪ್ರೀತಿಪಾತ್ರನೇ, ವಸಿಷ್ಠ ಮೊದಲಾದ ಸಪ್ತಋಷಿಗಳು ಯಾವಾಗಲೂ ಇಲ್ಲಿಂದಲೇ ಉದಯವನ್ನು ಹೊಂದಿ ಇಲ್ಲಿಂದಲೇ ಹೊರಡುತ್ತಾರೆ.
ದೇಶಂ ವಿರಜಸಂ ಪಶ್ಯ ಮೇರೋಃ ಶಿಖರಮುತ್ತಮಮ್ |
ಯತ್ರಾತ್ಮತೃಪ್ತೈರಧ್ಯಾಸ್ತೇ ದೇವೈಃ ಸಹ ಪಿತಾಮಹಃ ॥16॥
ರಜೋರಹಿತವಾದ ಮೇರುವಿನ ಶ್ರೇಷ್ಠವಾದ ಶಿಖರ ಪ್ರದೇಶವನ್ನು ನೋಡು. ಆತ್ಮತೃಪ್ತರಾದ ಜ್ಞಾನಿಗಳ ಜೊತೆಯಲ್ಲಿ ಬ್ರಹ್ಮದೇವರು ಅಲ್ಲಿ ಇರುತ್ತಾರೆ.
ಯಮಾಹುಃ ಸರ್ವಭೂತಾನಾಂ ಪ್ರಕೃತೇಃ ಪ್ರಕೃತಿಂ ಧ್ರುವಮ್ |
ಅನಾದಿನಿಧನಂ ದೇವಂ ಪ್ರಭುಂ ನಾರಾಯಣಂ ಪರಮ್ |
ಬ್ರಹ್ಮಣಃ ಸದನಾತ್ ತಸ್ಯ ಪರಂ ಸ್ಥಾನಂ ಪ್ರಕಾಶತೇ ॥17॥
ಪ್ರಕೃತಿಗಿಂತಲೂ ಪರವಾದ ಶಾಶ್ವತನಾದ ಅನಾದಿನಿಧನನಾದ ಸರ್ವಭೂತಪತಿಯಾದ ಪ್ರಭುವಾದ ನಾರಾಯಣದೇವರ ಸ್ಥಾನವು ಈ ಬ್ರಹ್ಮಸದನದ ಆಚೆಗೆ ಪ್ರಕಾಶಿಸುತ್ತದೆ.
ದೇವಾ ಅಪಿ ನ ಪಶ್ಯಂತಿ ಸರ್ವತೇಜೋಮಯಂ ಶುಭಮ್ ॥18॥
ಅತ್ಯರ್ಕಾನಲದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ |
ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷ್ಯಂ ದೇವದಾನವೈಃ ॥19॥
ಎಲೈ ರಾಜನೇ, ತನ್ನ ಕಾಂತಿಯಿಂದಲೇ ದೇವದಾನವರಿಂದ ನೋಡಲು ಅಸಾಧ್ಯವಾದ ಸೂರ್ಯಾಗ್ನಿಗಳ ಪ್ರಕಾಶಕ್ಕಿಂತಲೂ ಮಿಗಿಲಾದ ಪ್ರಕಾಶವುಳ್ಳ ಮಹಾತ್ಮನಾದ ವಿಷ್ಣುವಿನ ಸರ್ವತೇಜೋಮಯವಾದ ಪವಿತ್ರವಾದ ಸ್ಥಾನವನ್ನು ದೇವತೆಗಳೂ ಕಾಣುವುದಿಲ್ಲ.
ಪ್ರಾಚ್ಯಾಂ ನಾರಾಯಣಸ್ಥಾನಂ ಮೇರಾವತಿವಿರಾಜತೇ ॥20॥
ಯತ್ರ ಭೂತೇಶ್ವರಸ್ತಾತ ಸರ್ವಪ್ರಕೃತಿರಾತ್ಮಭೂಃ |
ಭಾಸಯನ್ ಸರ್ವಭೂತಾನಿ ಸುಶ್ರಿಯಾಽಭಿವಿರಾಜತೇ ॥21॥
ಮೇರುಶಿಖರದ ಪೂರ್ವದಿಕ್ಕಿನಲ್ಲಿ ನಾರಾಯಣನ ಸ್ಥಾನವು ಬಹಳವಾಗಿ ಶೋಭಿಸುತ್ತದೆ. ಎಲೈ ಪ್ರೀತಿಪಾತ್ರನೇ, ಅಲ್ಲಿ ಸರ್ವಮೂಲಕಾರಣನಾದ, ಸ್ವತಂತ್ರನಾದ ಸರ್ವೇಶ್ವರನಾದ ಪ್ರಭುವು ಎಲ್ಲವನ್ನೂ ಬೆಳಗುತ್ತಾ ತನ್ನ ಶ್ರೇಷ್ಠವಾದ ಕಾಂತಿಯಿಂದ ಶೋಭಿಸುತ್ತಾನೆ.
ನಾತ್ರ ಬ್ರಹ್ಮರ್ಷಯಸ್ತಾತ ಕುತ ಏವ ಮಹರ್ಷಯಃ |
ಪ್ರಾಪ್ನುವಂತಿ ಗತಿಂ ಹ್ಯೇತಾಂ ಯತೀನಾಂ ಕುರುಸತ್ತಮ ॥22॥
ಎಲೈ ಪ್ರೀತಿಪಾತ್ರನಾದ ಕುರುಶ್ರೇಷ್ಠನೇ, ಬ್ರಹ್ಮರ್ಷಿಗಳೂ ಆ ಸ್ಥಾನವನ್ನು ಹೊಂದುವುದಿಲ್ಲ. ಇನ್ನು ಮಹರ್ಷಿಗಳು ಎಲ್ಲಿಂದ ಹೊಂದಬೇಕು? ಯತಿಗಳು ಮಾತ್ರ ಆ ಸ್ಥಾನವನ್ನು ಹೊಂದುತ್ತಾರೆ.
ನ ತಂ ಜ್ಯೋತೀಂಷಿ ಸರ್ವಾಣಿ ಪ್ರಾಪ್ಯ ಭಾಸಂತಿ ಪಾಂಡವ |
ಸ್ವಯಂ ಪ್ರಭುರಚಿಂತ್ಯಾತ್ಮಾ ತತ್ರ ಹ್ಯತಿವಿರಾಜತೇ ॥23॥
ಎಲೈ ಪಾಂಡವನೇ, ಎಲ್ಲ ಜ್ಯೋತಿಗಳೂ ಸೇರಿ ಆ ನಾರಾಯಣನನ್ನು ಪ್ರಕಾಶಿಸಲಾರವು. ಪ್ರಭುವೂ ಅಚಿಂತ್ಯಶಕ್ತಿಸಂಪನ್ನನೂ ಆದ ಅವನು ತಾನೇ ಸ್ವತಃ ಬಹಳವಾಗಿ ಪ್ರಕಾಶಿಸುತ್ತಾನೆ.
ಯತಯಸ್ತತ್ರ ಗಚ್ಛಂತಿ ಭಕ್ತ್ಯಾ ನಾರಾಯಣಂ ಹರಿಮ್ |
ಪರೇಣ ತಪಸಾ ಯುಕ್ತಾ ಭಾವಿತಾಃ ಕರ್ಮಭಿಃ ಶುಭೈಃ ॥24॥
ಶ್ರೇಷ್ಠವಾದ ತಪಸ್ಸಿನಿಂದಲೂ ಮತ್ತು ಶುಭಕರ್ಮಗಳಿಂದಲೂ ನಾರಾಯಣನಾದ ಹರಿಯನ್ನು ಭಕ್ತಿಯಿಂದ ಉಪಾಸನೆ ಮಾಡಿದ ಯತಿಗಳು ಅಲ್ಲಿಗೆ ಹೋಗುತ್ತಾರೆ.
ಯೋಗಸಿದ್ಧಾ ಮಹಾತ್ಮಾನಸ್ತಮೋಮೋಹವಿವರ್ಜಿತಾಃ |
ತತ್ರ ಗತ್ವಾ ಪುನರ್ನೇಮಂ ಲೋಕಮಾಯಾಂತಿ ಭಾರತ |
ಸ್ವಯಂಭುವಂ ಮಹಾತ್ಮಾನಂ ದೇವದೇವಂ ಸನಾತನಮ್ ॥25॥
ಎಲೈ ಭಾರತನೇ, ಯೋಗಸಿದ್ಧರಾದ ರಾಜಸತಾಮಸವರ್ಜಿತರಾದ ಮಹಾತ್ಮರು ಅಲ್ಲಿಗೆ ಹೋದ ಮೇಲೆ ಸ್ವಯಂಭುವಾದ (ಸ್ವತಂತ್ರನಾದ) ಮಹಾತ್ಮನಾದ ದೇವದೇವನಾದ ವೇದಗಮ್ಯನಾದ ನಾರಾಯಣನನ್ನು ಹೊಂದಿ ಪುನಃ ಈ ಲೋಕಕ್ಕೆ ಹಿಂದಿರುಗಿ

ಬರುವುದಿಲ್ಲ.
ಸ್ಥಾನಮೇತನ್ಮಹಾಭಾಗ ಧ್ರುವಮಕ್ಷಯಮವ್ಯಯಮ್ |
ಈಶ್ವರಸ್ಯ ಸದಾ ಹ್ಯೇತತ್ ಪ್ರಣಮಾತ್ರ ಯುಧಿಷ್ಠಿರ ||26||
ಎಲೈ ಮಹಾನುಭಾವನೇ, ಇದು ಎಂದೂ ನಶಿಸದಿರುವ ಆ ಪರಮೇಶ್ವರನ ಶಾಶ್ವತವಾದ ಅವ್ಯಯವಾದ ಸ್ಥಾನ. ಯುಧಿಷ್ಠಿರನೇ, ಈ ಸ್ಥಾನಕ್ಕೆ ನಮಸ್ಕಾರವನ್ನು ಮಾಡು.
ಏನಂ ತ್ವಹರಹರ್ಮೇರುಂ ಸೂರ್ಯಾಚಂದ್ರಮಸೌ ಧ್ರುವಮ್ |
ಪ್ರದಕ್ಷಿಣಮುಪಾವೃತ್ಯ ಕುರುತಃ ಕುರುನಂದನ |
ಜ್ಯೋತೀಂಷಿ ಚಾಪ್ಯಶೇಷೇಣ ಸರ್ವಾಣ್ಯನಘ ಸರ್ವತಃ |
ಪರಿಯಾಂತಿ ಮಹಾರಾಜ ಗಿರಿರಾಜಂ ಪ್ರದಕ್ಷಿಣಮ್ |
ಎಲೈ ಕುರುನಂದನನೇ, ಪ್ರತಿದಿವಸವೂ ಸೂರ್ಯಚಂದ್ರರು ಧ್ರುವವಾದ ಮೇರುವಿಗೆ ಪ್ರದಕ್ಷಿಣೆಯನ್ನು ಮಾಡುತ್ತಾರೆ. ಎಲೈ ಅನಘನಾದ ಮಹಾರಾಜನೇ, ಮತ್ತು ಎಲ್ಲಾ ಜ್ಯೋತಿಃಕಾಯಗಳೂ ಸಹ ಗಿರಿರಾಜ ಮೇರುವಿಗೆ ಪ್ರದಕ್ಷಿಣೆಯನ್ನು ಮಾಡುತ್ತವೆ.
ಏತಂ ಜ್ಯೋತೀಂಷಿ ಸರ್ವಾಣಿ ಪ್ರಕರ್ಷನ್ ಭಗವಾನಪಿ |
ಕುರುತೇ ವಿತಮಸ್ಕರ್ಮಾ ಆದಿತ್ಯೋಽಭಿಪ್ರದಕ್ಷಿಣಮ್ ||27||
ಭಗವಾನ್ ಸೂರ್ಯನು ಈ ಎಲ್ಲಾ ಜ್ಯೋತಿಸ್ಸುಗಳನ್ನೂ ಎಳೆದುಕೊಂಡು ಕತ್ತಲಿನ ನಾಶವನ್ನು ಮಾಡುವ ಕಾರ್ಯವನ್ನು ಮಾಡುವವನಾಗಿ ಈ ಮೇರುವಿಗೆ ಪ್ರದಕ್ಷಿಣೆಯನ್ನು ಮಾಡುತ್ತಾನೆ.
ಅಸ್ತಂ ಪ್ರಾಪ್ಯ ತತಃ ಸಂಧ್ಯಾಮತಿಕ್ರಮ್ಯ ದಿವಾಕರಃ |
ಉದೀಚೀಂ ಭಜತೇ ಕಾಷ್ಠಾಂ ದಿಶಮೇಷ ವಿಭಾವಸುಃ ||28||
ವಿಭಾವಸು ಎಂದು ಕರೆಯಲ್ಪಡುವ ದಿವಾಕರನು ಸಂಧ್ಯಾಕಾಲವನ್ನು ಹೊಂದಿ ಅಸ್ತನಾಗಿ ಉತ್ತರದಿಕ್ಕನ್ನು ಆಶ್ರಯಿಸುತ್ತಾನೆ.
ಸ ಮೇರುಮನುವೃತ್ತಃ ಸನ್ ಪುನರ್ಗಚ್ಛತಿ ಪಾಂಡವ |
ಪ್ರಾಙ್ಮುಖಃ ಸವಿತಾ ದೇವಃ ಸರ್ವಭೂತಹಿತೇ ರತಃ ||29||
ಎಲೈ ಪಾಂಡವನೇ, ಸರ್ವಭೂತಹಿತದಲ್ಲಿ ರತನಾದ ಆ ಸವಿತೃದೇವನು ಪುನಃ ಮೇರುವನ್ನು ಬಳಸಿಕೊಂಡು ಪೂರ್ವಾಭಿಮುಖವಾಗಿ ಬರುತ್ತಾನೆ.
ಸ ಮಾಸಾನ್ ವಿಭಜನ್ ಕಾಲೇ ಬಹುಧಾ ಪರ್ವಸಂಧಿಷು |
ತಥೈವ ಭಗವಾನ್ ಸೋಮೋ ನಕ್ಷತ್ರೈಃ ಸಹ ಗಚ್ಛತಿ ||30||
ಸೂರ್ಯನು ಪರ್ವಸಂಧಿಗಳಲ್ಲಿ ಮಾಸಗಳನ್ನು ಅನೇಕ ರೀತಿಯಲ್ಲಿ ವಿಭಾಗಮಾಡುತ್ತಾ ಸಂಚರಿಸುತ್ತಾನೆ. ಹಾಗೆಯೇ ಪೂಜ್ಯನಾದ ಚಂದ್ರನೂ ನಕ್ಷತ್ರಗಳ ಜೊತೆಯಲ್ಲಿ ಸಂಚರಿಸುತ್ತಾನೆ.
ಏವಮೇತಂ ಪರಿಕ್ರಮ್ಯ ಮಹಾಮೇರುಮತಂದ್ರಿತಃ |
ಸೋಮಶ್ಚ ವಿಭಜನ್ ಕಾಲಂ ಬಹುಧಾ ಪರ್ವಸಂಧಿಷು ||31||
ಭಾವಯನ್ ಸರ್ವಭೂತಾನಿ ಪುನರ್ಗಚ್ಛತಿ ಮಂದರಮ್ ||32||
ಅದರಂತೆ ಚಂದ್ರನೂ ಸಹ ಪರ್ವಸಂಧಿಗಳಾದ ಪೂರ್ಣಿಮಾ ಮತ್ತು ಅಮಾವಾಸ್ಯೆಗಳಲ್ಲಿ ಕಾಲವನ್ನು ವಿಭಾಗಮಾಡುತ್ತಾ ಆಲಸ್ಯವಿಲ್ಲದೆ ಈ ಮಹಾಮೇರುವನ್ನು ಪ್ರದಕ್ಷಿಣೆ ಮಾಡಿ ಎಲ್ಲ ಪ್ರಾಣಿಗಳಿಗೆ ಸಂತೋಷವನ್ನು ಕೊಡುತ್ತಾ ಮಂದರ ಪರ್ವತದ ಸಮೀಪಕ್ಕೆ ಬರುತ್ತಾನೆ.
ತಥಾ ತಮಿಸ್ರಹಾ ದೇವೋ ಮಯೂಖೈರ್ಭಾವಯನ್ ಜಗತ್ |
ಮಾರ್ಗಮೇಮದಸಂಬಾಧಮಾದಿತ್ಯಃ ಪರಿವರ್ತತೇ ||33||
ಅದರಂತೆ ಕತ್ತಲಿನ ನಾಶವನ್ನು ಮಾಡುವ ಸೂರ್ಯದೇವನು ತನ್ನ ಕಿರಣಗಳಿಂದ ಈ ಜಗತ್ತನ್ನು ರಕ್ಷಣೆ ಮಾಡುತ್ತಾ ನಿಬಿಡವಲ್ಲದ ಈ ಮಾರ್ಗದಲ್ಲಿ ಪ್ರದಕ್ಷಿಣಾಕಾರದಲ್ಲಿ ಸಂಚರಿಸುತ್ತಾನೆ.
ಸಿಸೃಕ್ಷುಃ ಶಿಶಿರಾಣ್ಯೇಷ ದಕ್ಷಿಣಾಂ ಭಜತೇ ದಿಶಮ್ |
ತತಃ ಸರ್ವಾಣಿ ಭೂತಾನಿ ಕಾಲೋಽಭ್ಯರ್ಚ್ಛತಿ ಶೈಶಿರಃ ||34||
ಸೂರ್ಯನು ಹಿಮಕಾಲವನ್ನು ಉಂಟುಮಾಡುವವನಾಗಿ ದಕ್ಷಿಣ ದಿಕ್ಕಿಗೆ ತಿರುಗುತ್ತಾನೆ. ಆಗ ಎಲ್ಲಾ ಪ್ರಾಣಿಗಳೂ ಶೈತ್ಯವನ್ನು ಅನುಭವಿಸುತ್ತವೆ.
ಸ್ಥಾವರಾಣಾಂ ಚ ಭೂತಾನಾಂ ಜಂಗಮಾನಾಂ ಚ ತೇಜಸಾ |
ತೇಜಾಂಸಿ ಸಮುಪಾದತ್ತೇ ನಿವೃತ್ತಃ ಸ ವಿಭಾವಸುಃ ||35||
ದಕ್ಷಿಣಾಯನದಿಂದ ನಿವೃತ್ತನಾದ ಸೂರ್ಯನು ತನ್ನ ತೇಜಸ್ಸಿನಿಂದ ಸ್ಥಾವರ ಜಂಗಮ ವಸ್ತುಗಳ ಎಲ್ಲಾ ತೇಜಸ್ಸನ್ನೂ ಅಪಹರಿಸುತ್ತಾನೆ.
ತತಃ ಸ್ವೇದಕ್ಲಮೌ ತಂದ್ರೀ ಗ್ಲಾನಿಶ್ಚ ಭಜತೇ ನರಾನ್ |
ಪ್ರಾಣಿಭಿಃ ಸತತಂ ಸ್ವಪ್ನೋ ಹ್ಯಭೀಕ್ಷ್ಣಂ ಚ ನಿಷೇವ್ಯತೇ ||36||
ಆಗ ಮನುಷ್ಯರಿಗೆ ಮತ್ತು ಪ್ರಾಣಿಗಳಿಗೆ ಬೆವರು, ಆಯಾಸ, ಆಲಸ್ಯ ಮತ್ತು ಗ್ಲಾನಿಗಳು ಉಂಟಾಗುತ್ತವೆ. ಪ್ರಾಣಿಗಳು ಮಧ್ಯಾಹ್ನದಲ್ಲಿಯೂ ಮಲಗಿರುವುದಕ್ಕೆ ಅಪೇಕ್ಷೆ ಪಡುತ್ತವೆ.
ಏವಮೇತದನಿರ್ದೇಶ್ಯಂ ಮಾರ್ಗಮಾವೃತ್ಯ ಭಾನುಮಾನ್ |
ಪುನಃ ಸೃಜತಿ ವರ್ಷಾಣಿ ಭಗವಾನ್ ಭಾವಯನ್ ಪ್ರಜಾಃ ||37||

ಹೀಗೆ ಕಿರಣಗಳಿಂದೊಡಗೂಡಿದ ಸೂರ್ಯನು ಈ ಅನಿರ್ದೇಶ್ಯವಾದ ಮಾರ್ಗದಲ್ಲಿ ತಿರುಗುತ್ತಾ ಎಲ್ಲಾ ಪ್ರಜೆಗಳಿಗೂ ಹಿತವನ್ನು ಮಾಡುವವನಾಗಿ ಪುನಃ ಮಳೆಯನ್ನು ಸೃಷ್ಟಿ ಮಾಡುತ್ತಾನೆ.
ವೃಷ್ಟಿಮಾರುತಸಂತಾಪೈಃ ಸುಖೈಃ ಸ್ಥಾವರಜಂಗಮಾನ್ |
ವರ್ಧಯನ್ ಸುಮಹಾತೇಜಾಃ ಪುನಃ ಪ್ರತಿನಿವರ್ತತೇ ॥38॥
ಹೀಗೆ ವೃಷ್ಟಿ ,ಮಾರುತ, ತಾಪ ಮತ್ತು ಸುಖಗಳಿಂದ ಸ್ಥಾವರಜಂಗಮ ಪ್ರಾಣಿಗಳನ್ನು ಪೋಷಿಸುತ್ತಾ ಮಹಾತೇಜಸ್ವಿಯಾದ ಸೂರ್ಯನು ಪುನಃ ಪುನಃ ಸಂಚರಿಸುತ್ತಾನೆ.
ಏವಮೇಷ ಚರನ್ ಪಾರ್ಥ ಕಾಲಚಕ್ರಮತಂದ್ರಿತಃ |
ಪ್ರಕರ್ಷನ್ ಸರ್ವಭೂತಾನಿ ಸವಿತಾ ಪರಿವರ್ತತೇ ॥39॥
ಎಲೈ ಪಾರ್ಥನೇ, ಹೀಗೆ ಈ ಸೂರ್ಯನು ಕಾಲಚಕ್ರವನ್ನು ತನ್ನೊಡನೆ ಎಳೆದುಕೊಂಡು ಮೇರುವಿಗೆ ಪ್ರದಕ್ಷಿಣೆ ಮಾಡುತ್ತಾನೆ.
ಸಂತತಾ ಗತಿರೇತಸ್ಯ ನೈಷ ತಿಷ್ಠತಿ ಪಾಂಡವ |
ಆದಾಯೈವ ತು ಭೂತಾನಾಂ ತೇಜೋ ವಿಸೃಜತೇ ಪುನಃ ॥40॥
ಸೂರ್ಯನ ಗತಿಯು ಸಂತತವಾದುದು. ಎಲೈ ಪಾಂಡವನೇ, ಅವನು ಒಂದು ಕ್ಷಣವೂ ವಿಶ್ರಮಿಸುವುದಿಲ್ಲ. ಅವನು ಪ್ರಾಣಿಗಳ ತೇಜಸ್ಸನ್ನು ಅಪಹರಿಸಿ ಪುನಃ ಹಿಂದೆ ಕೊಡುತ್ತಾನೆ.
ವಿಭಜನ್ ಸರ್ವಭೂತಾನಾಮಾಯುಃ ಕರ್ಮ ಚ ಭಾರತ |
ಅಹೋರಾತ್ರಂ ಕಲಾಃ ಕಾಷ್ಠಾಃ ಸೃಜತ್ಯೇಷ ಸದಾ ವಿಭುಃ ॥41॥
ಎಲೈ ಭಾರತನೇ, ಎಲ್ಲಾ ಪ್ರಾಣಿಗಳ ಆಯಸ್ಸನ್ನು ಮತ್ತು ಕರ್ಮಗಳನ್ನು ವಿಭಾಗ ಮಾಡುತ್ತಾ ಈ ಪ್ರಭುವು ಸದಾಕಾಲದಲ್ಲಿಯೂ ಕಲಾ ಕಾಷ್ಠಾ ಅಹೋರಾತ್ರ ಮೊದಲಾದ ಕಾಲವಿಭಾಗಗಳನ್ನು ಸೃಷ್ಟಿಸುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ನೂರ ಅರವತ್ತನೆಯ ಅಧ್ಯಾಯ
ಅಸ್ತ್ರಗಳನ್ನು ಪಡೆದು ಅರ್ಜುನನಿಂದ ಗಂಧಮಾದನಪರ್ವತದಲ್ಲಿ ಪುನರಾಗಮನ. ಯುಧಿಷ್ಠಿರಾದಿಗಳಿಗೆ ತನ್ನ ಸ್ವರ್ಗವಾಸಪ್ರಕಾರದ ಕಥನ.
ವೈಶಂಪಾಯನಃ
ತಸ್ಮಿನ್ ನಗೇಂದ್ರೇ ವಸತಾಂ ತು ತೇಷಾಂ
ಮಹಾತ್ಮನಾಂ ಸದ್ವ್ರತಮಾಸ್ಥಿತಾನಾಮ್ |
ರತಿಃ ಪ್ರಮೋದಶ್ಚ ಬಭೂವ ತೇಷಾಂ
ಆಕಾಂಕ್ಷತಾಂ ದರ್ಶನಮರ್ಜುನಸ್ಯ ॥1॥
ವೈಶಂಪಾಯನ ಆ ಪರ್ವತಶ್ರೇಷ್ಠದಲ್ಲಿ ಅರ್ಜುನನ ದರ್ಶನವನ್ನು ಬಯಸಿ ವಾಸಮಾಡುತ್ತಿದ್ದ ಸದ್ವ್ರತಧಾರಿಗಳಾದ ಆ ಮಹಾತ್ಮರಿಗೆ ಸುಖಸಂತೋಷಗಳು ಉಂಟಾದವು.
ತಾನ್ ವೀರ್ಯಯುಕ್ತಾನ್ ಸುವಿಶುದ್ಧಕಾಮಾನ್
ಸ್ತೇಜಸ್ವಿನಃ ಸತ್ಯಧೃತಿಪ್ರಧಾನಾನ್ |
ಸಂಪ್ರೀಯಮಾಣಾ ಬಹವೋಽಭಿಜಗ್ಮುಃ
ಗಂಧರ್ವಸಂಘಾಶ್ಚ ಮಹರ್ಷಯಶ್ಚ ॥2॥
ಪರಾಕ್ರಮಯುಕ್ತರಾಗಿ ವಿಶುದ್ಧವಾದ ಆಸೆಗಳನ್ನು ಹೊಂದಿ ತೇಜಸ್ವಿಗಳೂ, ಸತ್ಯಧೈರ್ಯಪರಾಯಣರೂ ಆದ ಅವರನ್ನು ನೋಡಿ ಸಂತೋಷಗೊಂಡ ಅನೇಕ ಮಹರ್ಷಿಗಳು ಮತ್ತು ಗಂಧರ್ವರ ಸಮೂಹಗಳು ಅಲ್ಲಿಗೆ ಬಂದರು.
ತಂ ಪಾದಪೈಃ ಪುಷ್ಪಧರೈರುಪೇತಂ
ನಗೋತ್ತಮಂ ಪ್ರಾಪ್ಯ ಮಹಾರಥಾನಾಮ್ |
ಮನಃಪ್ರಸಾದಃ ಪರಮೋ ಬಭೂವ
ಯಥಾ ದಿವಂ ಪ್ರಾಪ್ಯ ಮರುದ್ಗಣಾನಾಮ್ ॥3॥
ಪುಷ್ಪಭರಿತವಾದ ವೃಕ್ಷಗಳಿಂದ ಕೂಡಿದ ಆ ಶ್ರೇಷ್ಠ ಪರ್ವತವನ್ನು ಹೊಂದಿ ಮಹಾರಥರಾದ ಅವರಿಗೆ ಸ್ವರ್ಗವನ್ನು ಸೇರಿದ ಮರುದ್ಗಣಗಳಿಗೆ ಉಂಟಾದಂತೆ ಶ್ರೇಷ್ಠವಾದ ಮನಃಪ್ರಸನ್ನತೆಯು ಉಂಟಾಯಿತು.
ಮಯೂರಹಂಸಸ್ವನನಾದಿತಾನಿ
ಪುಷ್ಪೋಪಕೀರ್ಣಾನಿ ಮಹಾಚಲಸ್ಯ |
ಶೃಂಗಾಣಿ ಸಾನೂನಿ ಚ ಪಶ್ಯಮಾನಾ
ಗಿರೇಃ ಪರಂ ಹರ್ಷಮವಾಪ್ಯ ತಸ್ಥುಃ ॥4॥
ಮಯೂರ ಮತ್ತು ಹಂಸಗಳ ಧ್ವನಿಯಿಂದ ನಾದಿತವಾದ, ಪುಷ್ಪಗಳು ಚೆಲ್ಲಿರುವ ಆ ಮಹಾಪರ್ವತದ ಶಿಖರಗಳನ್ನೂ ಮತ್ತು

ತಪ್ಪಲುಗಳನ್ನೂ ನೋಡುತ್ತಾ ಅವರು ಬಹಳ ಸಂತೋಷವನ್ನು ಹೊಂದಿ ವಾಸಮಾಡಿದರು.
ಸಾಕ್ಷಾತ್ಕುಬೇರೇಣ ಕೃತಾಶ್ಚ ತಸ್ಮಿನ್
ನಗೋತ್ತಮೇ ಸಂವೃತಕೂಲರೋಧಸಃ |
ಕಾದಂಬಕಾರಂಡವಹಂಸಜುಷ್ಟಾಃ
ಪದ್ಮಾಕುಲಾಃ ಪುಷ್ಕರಿಣೀರಪಶ್ಯನ್ ॥5॥
ಕುಬೇರನು ಸಾಕ್ಷಾತ್ತಾಗಿ ಆ ಶ್ರೇಷ್ಠಪರ್ವತದಲ್ಲಿ ನಿರ್ಮಿಸಿದ ಚೆನ್ನಾಗಿ ಆವೃತವಾದ ತೀರಗಳುಳ್ಳ ಕದಂಬ, ಕಾರಂಡವ, ಹಂಸ ಮೊದಲಾದ ಪಕ್ಷಿಗಳಿಂದಲೂ ಮತ್ತು ಪದ್ಮಗಳಿಂದಲೂ ಆವೃತವಾದ ಸರೋವರಗಳನ್ನು ಅವರು ನೋಡಿದರು.
ಕ್ರೀಡಾಪ್ರದೇಶಾಂಶ್ಚ ಸಮೃದ್ಧರೂಪಾನ್
ಸವೇದಿಕಾಂಸ್ತೇ ನ್ಯವಸನ್ ಸುವೇಶಾನ್ |
ಮಣಿಪ್ರಕೀರ್ಣಾಂಶ್ಚ ಮನೋರಮಾಂಶ್ಚ
ಯಥಾ ಭವೇಯುರ್ಧನದಸ್ಯ ರಾಜ್ಞಃ ॥6॥
ರಾಜನಾದ ಕುಬೇರನಿಗೆ ಯೋಗ್ಯವಾದಂತಹ ಸಮೃದ್ಧರೂಪವುಳ್ಳ ವೇದಿಕೆಗಳನ್ನು ಹೊಂದಿದ ಒಳ್ಳೆಯ ವಿಶ್ರಾಂತಿಗೃಹಗಳನ್ನು ಹೊಂದಿದ ಮಣಿಗಳಿಂದ ಅಲಂಕೃತವಾದ ಮನೋಹರವಾದ ಕ್ರೀಡಾಪ್ರದೇಶಗಳನ್ನು ನೋಡಿ ಅಲ್ಲಿ ವಾಸಿಸಿದರು.
ಅನೇಕವರ್ಣೈಶ್ಚ ಸುಗಂಧಿಭಿಶ್ಚ
ಮಹಾದ್ರುಮೈಃ ಸಂತತಮಭ್ರಜಾಲೈಃ |
ತಪಃಪ್ರಧಾನಾಃ ಸತತಂ ಚರಂತಃ
ಶೃಂಗಂ ಗಿರೇಶ್ಚಿಂತಯಿತುಂ ನ ಶೇಕುಃ ॥7॥
ಅನೇಕವರ್ಣಗಳಿಂದಲೂ ಸುಗಂಧಯುಕ್ತವಾದ ಮಹಾವೃಕ್ಷಗಳಿಂದಲೂ ಮತ್ತು ವಿಸ್ತಾರವಾದ ಮಹಾದ್ರುಮಗಳಿಂದಲೂ ಕೂಡಿದ, ಮೇಘಸಮೂಹಗಳಿಂದ ಸತತವಾಗಿ ಆವೃತವಾದಂತಹ, ಶೃಂಗಗಳಲ್ಲಿ ತಪಃಪ್ರಧಾನರಾದ ಅವರು ಸಂಚರಿಸುತ್ತಾ ಆ ಗಿರಿಯ ಉಳಿದ ಶೃಂಗಗಳನ್ನು ಅವರು ಚಿಂತಿಸಲು ಸಾಧ್ಯವಾಗಲಿಲ್ಲ.
ಸ್ವತೇಜಸಾ ತಸ್ಯ ನಗೋತ್ತಮಸ್ಯ
ಮಹೌಷಧೀನಾಂ ಚ ತಥಾ ಪ್ರಭಾವಾತ್ |
ವಿಭಕ್ತಭಾವೋ ನ ಬಭೂವ ಕಶ್ಚಿದ್
ನಿಶಾಮುಖಂ ಪ್ರಾಪ್ಯ ನರರ್ಷಭಾಣಾಮ್ ॥8॥
ತಮ್ಮ ಸತ್ವದಿಂದಲೂ ಮತ್ತು ಆ ಶ್ರೇಷ್ಠಪರ್ವತಗಳ ಮಹೌಷಧಿಗಳ ಪ್ರಭಾವದಿಂದಲೂ ಆ ನರರ್ಷಭರು ನಿಶಾಮುಖದಲ್ಲಿ ಸ್ವಸ್ಥಮನಸ್ಸಿನಿಂದ ಇರುತ್ತಿದ್ದರು.
ಯಮಾಸ್ಥಿತಃ ಸ್ಥಾವರಜಂಗಮಾನಿ
ವಿಭಾವಸುರ್ಭಾವಯತೇಽಮಿತೌಜಾಃ |
ತಸ್ಯೋದಯಂ ಚಾಸ್ತಮನಂ ಚ
ವೀರಾಸ್ತತ್ರ ಸ್ಥಿತಾಸ್ತೇ ದದೃಶುರ್ನೃಸಿಂಹಾಃ ॥9॥
ಯಾವ ಪರ್ವತವನ್ನು ಆಶ್ರಯಿಸಿ ಅಮಿತಪ್ರಭಾವಶಾಲಿಯಾದ ಸೂರ್ಯನು ಸ್ಥಾವರ ಜಂಗಮ ಪ್ರಪಂಚವನ್ನು ಅಭಿವೃದ್ಧಿಗೊಳಿಸುತ್ತಾನೆಯೋ ಅಂತಹ ಸೂರ್ಯನ ಉದಯಾಸ್ತಗಳನ್ನು ವೀರರಾದ ನರಸಿಂಹರಾದ ಅವರು ಅಲ್ಲಿ ನಿಂತು ನೋಡಿದರು.
ರವೇಸ್ತಮಿಸ್ರಾಗಮನಿರ್ಗಮಾಂಸ್ತೇ
ತಥೋದಯಂ ಚಾಸ್ತಮನಂ ಚ ವೀರಾಃ |
ಸಮಾವೃತಾಃ ಪ್ರೇಕ್ಷ್ಯ ತಮೋನುದಸ್ಯ
ಗಭಸ್ತಿಜಾಲೈಃ ಪ್ರದಿಶೋ ದಿಶಶ್ಚ ॥10॥
ಸ್ವಾಧ್ಯಾಯವಂತಃ ಸತತಕ್ರಿಯಾಶ್ಚ ಧರ್ಮಪ್ರಧಾನಾಶ್ಚ ಶುಚಿವ್ರತಾಶ್ಚ |
ಸತ್ಯೇ ಸ್ಥಿತಾಸ್ತಸ್ಯ ಮಹಾರಥಸ್ಯ ಸತ್ಯವ್ರತಸ್ಯಾಗಮನಪ್ರತೀಕ್ಷಾಃ ॥11॥
ಸೂರ್ಯನ ಕತ್ತಲಿನೊಳಗೆ ಪ್ರವೇಶವನ್ನೂ ಮತ್ತು ಕತ್ತಲಿನಿಂದ ನಿರ್ಗಮವನ್ನು ಅವನ ಉದಯಾಸ್ತಗಳನ್ನೂ ಕತ್ತಲನ್ನು ಪರಿಹರಿಸುವ ಅವನ ಕಿರಣ ಸಮೂಹಗಳಿಂದ ದಿಕ್ಕುವಿದಿಕ್ಕುಗಳನ್ನೂ ನೋಡಿ ಸ್ವಾಧ್ಯಾಯವನ್ನು ಮಾಡುತ್ತಾ ಸತತಕ್ರಿಯೆಗಳನ್ನು ಮಾಡುವವರಾಗಿ ಧರ್ಮಪ್ರಧಾನರಾಗಿ ಶುಚಿವ್ರತವನ್ನು ಆಚರಿಸುವವರಾಗಿ ಸತ್ಯದಲ್ಲಿ ನಿಷ್ಠರಾಗಿದ್ದ ಅವರು ಮಹಾರಥನಾದ ಸತ್ಯವ್ರತನಾದ ಅರ್ಜುನನ ಆಗಮನದ ನಿರೀಕ್ಷೆಯಲ್ಲಿದ್ದರು.
ಇಹೈವ ಹರ್ಷೋಽಸ್ತು ಸಮಾಗತಾನಾಂ
ಕ್ಷಿಪ್ರಂ ಕೃತಾಸ್ತ್ರೇಣ ಧನಂಜಯೇನ
ಇತಿ ಬ್ರುವಂತಃ ಪರಮಾಶಿಷಸ್ತೇ
ಪಾರ್ಥಾಸ್ತಪೋಯೋಗಪರಾ ಬಭೂವುಃ ॥12॥
ಇಲ್ಲಿಯೇ ಅಸ್ತ್ರವನ್ನು ಸಂಪಾದಿಸಿದ ಅರ್ಜುನನಿಂದ ಬೇಗ ಸಮಾಗಮವನ್ನು ಹೊಂದಿ ಇಲ್ಲಿಗೆ ಬಂದ ನಮಗೆಲ್ಲರಿಗೂ ಸಂತೋಷವುಂಟಾಗಲಿ ಎಂದು ಆಶೀರ್ವಾದ ವಚನಗಳನ್ನು ಹೇಳುತ್ತಾ ಆ ಪಾಂಡವರು ತಪೋಯೋಗಪರರಾದರು.
ದೃಷ್ಟ್ವಾ ವಿಚಿತ್ರಾಣಿ ಗಿರೌ ವನಾನಿ

ಕಿರೀಟಿನಂ ಚಿಂತಯತಾಮಭೀಕ್ಷ್ಣಮ್ |
ಬಭೂವ ರಾತ್ರಿರ್ದಿವಸಶ್ಚ ತೇಷಾಂ
ಸಂವತ್ಸರೇಣೈವ ಸಮಾನರೂಪಃ ॥13॥
ಆ ಪರ್ವತದಲ್ಲಿ ವಿಚಿತ್ರವಾದ ವನಗಳನ್ನು ನೋಡಿ ಸತತವಾಗಿ ಅರ್ಜುನನನ್ನು ಚಿಂತಿಸುವ ಅವರಿಗೆ ಹಗಲುರಾತ್ರಿಗಳು ಒಂದು ಸಂವತ್ಸರದಷ್ಟು ದೀರ್ಘರೂಪವನ್ನು ತಾಳಿದವು.
ಯದೈವ ಧೌಮ್ಯಾನುಮತೇ ಮಹಾತ್ಮಾ
ಕೃತ್ವಾ ಜಟಾಂ ಪ್ರವ್ರಜಿತಃ ಸ ಜಿಷ್ಣುಃ |
ತದೈವ ತೇಷಾಂ ನ ಬಭೂವ ಹರ್ಷಃ
ಕುತೋ ರತಿಸ್ತದ್ಗತಮಾನಸಾನಾಮ್ ॥14॥
ಯಾವಾಗ ಧೌಮ್ಯರ ಅನುಮತಿಯನ್ನು ಪಡೆದು ಜಟೆಗಳನ್ನು ಹಾಕಿಕೊಂಡು ಮಹಾತ್ಮನಾದ ಅರ್ಜುನನು ತಮ್ಮಿಂದ ಹೊರಟನೋ ಆಗಲೇ ಅವರಿಗೆ ಸಂತೋಷವಾಗಲಿಲ್ಲ. ಇನ್ನು ವಿಷಯಸುಖದಿಂದ ಉಂಟಾದ ಸಂತೋಷವು ಅರ್ಜುನನಲ್ಲಿ ನೆಟ್ಟ ಮನಸುಳ್ಳ ಅವರಿಗೆ ಎಲ್ಲಿಂದ ಉಂಟಾಗಬೇಕು?
ಭ್ರಾತುರ್ನಿಯೋಗಾತ್ತು ಯುಧಿಷ್ಠಿರಸ್ಯ
ವನಾದಸೌ ವಾರಣಮತ್ತಗಾಮೀ |
ಯತ್ ಕಾಮ್ಯಕಾತ್ ಪ್ರವ್ರಜಿತಃ ಸ
ಜಿಷ್ಣುಸ್ತದೈವ ತೇ ಶೋಕಹತಾ ಬಭೂವುಃ ॥15॥
ಅಣ್ಣನಾದ ಯುಧಿಷ್ಠಿರನ ಅಪ್ಪಣೆಯಂತೆ ಮತ್ತಗಜಗಾಮಿಯಾದ ಆ ಅರ್ಜುನನು ಯಾವಾಗ ಕಾಮ್ಯಕವನದಿಂದ ಹೊರಟನೋ ಆಗಲೇ ಅವರೆಲ್ಲರೂ ಶೋಕಪರವಶರಾದರು.
ತಥೈವ ತಂ ಚಿಂತಯತಾಂ ಸಿತಾಶ್ವಂ
ಅಸ್ತ್ರಾರ್ಥಿನಂ ವಾಸವಮಭ್ಯುಪೇತಮ್ |
ಮಾಸೋಽಥ ಕೃಚ್ಛ್ರೇಣ ತದಾ ವ್ಯತೀತಸ್ತಸ್ಮಿನ್
ನಗೇ ಭಾರತ ಭಾರತಾನಾಮ್ ॥16॥
ಎಲೈ ಭಾರತನೇ, ಹಾಗೇ ಅಸ್ತ್ರಾರ್ಥವಾಗಿ ಇಂದ್ರನ ಬಳಿಗೆ ಹೋದ ಶ್ವೇತವಾಹನನಾದ ಅರ್ಜುನನನ್ನು ಸತತವಾಗಿ ಚಿಂತಿಸುವ ಆ ಪಾಂಡವರಿಗೆ ಆ ಪರ್ವತದಲ್ಲಿ ಒಂದು ತಿಂಗಳು ಬಹಳ ಕಷ್ಟದಿಂದ ಕಳೆಯಿತು.
ಉಷಿತ್ವಾ ಪಂಚ ವರ್ಷಾಣಿ ಸಹಸ್ರಾಕ್ಷನಿವೇಶನೇ |
ಅವಾಪ್ಯ ದಿವ್ಯಾನ್ಯಸ್ತ್ರಾಣಿ ಸರ್ವಾಣಿ ವಿಬುಧೇಶ್ವರಾತ್ |
ಆಗ್ನೇಯಂ ವಾರುಣಂ ಸೌಮ್ಯಂ ವಾಯವ್ಯಮಥ ವೈಷ್ಣವಮ್ |
ಐಂದ್ರಂ ಪಾಶುಪತಂ ಬ್ರಾಹ್ಮಂ ಪಾರಮೇಷ್ಠ್ಯಂ ಪ್ರಜಾಪತೇಃ ॥16.1॥
ಯಮಸ್ಯ ಧಾತುಃ ಸವಿತುಸ್ತ್ವಷ್ಟುರ್ವೈಶ್ರವಣಸ್ಯ ಚ |
ತಾನಿ ಪ್ರಾಪ್ಯ ಸಹಸ್ರಾಕ್ಷಾದಭಿವಾದ್ಯ ಶತಕ್ರತುಮ್ ॥16.2॥
ಅನುಜ್ಞಾತಸ್ತದಾ ತೇನ ಕೃತ್ವಾ ಚಾಪಿ ಪ್ರದಕ್ಷಿಣಮ್ |
ಆಗಚ್ಛದರ್ಜುನಃ ಪ್ರೀತಃ ಪ್ರಹೃಷ್ಟೋ ಗಂಧಮಾದನಮ್ ॥16.3॥
ಇಂದ್ರನ ಮನೆಯಲ್ಲಿ ಐದುವರ್ಷಗಳ ಕಾಲ ವಾಸಮಾಡಿ ವಿಬುಧೇಶ್ವರನಾದ ಅವನಿಂದ ಎಲ್ಲಾ ದಿವ್ಯಾಸ್ತ್ರಗಳನ್ನೂ ಆಗ್ನೇಯ, ವಾರುಣ, ಸೌಮ್ಯ, ವಾಯವ್ಯ, ವೈಷ್ಣವ, ಐಂದ್ರ, ಪಾಶುಪತ, ಬ್ರಾಹ್ಮ, ಯಾಮ್ಯ, ಕೌಬೇರ, ಸಾವಿತ್ರ, ತ್ವಾಷ್ಟ್ರ ಮೊದಲಾದ ಅಸ್ತ್ರಗಳನ್ನು ಇಂದ್ರನಿಂದ ಪಡೆದು ಶತಕ್ರತುವಾದ ಇಂದ್ರನಿಗೆ ನಮಸ್ಕಾರವನ್ನು ಮಾಡಿ ಅವನ ಅನುಮತಿಯನ್ನು ಪಡೆದು ಅವನಿಗೆ ಪ್ರದಕ್ಷಿಣೆಯನ್ನು ಮಾಡಿ ಅರ್ಜುನನು ಸಂತೋಷದಿಂದ ಗಂಧಮಾದನಪರ್ವತಕ್ಕೆ ಹೊರಟನು.
ತತಃ ಕದಾಚಿದ್ಧರಿಸಂಪ್ರಯುಕ್ತಂ
ಮಹೇಂದ್ರವಾಹಂ ಸಹಸೋಪಯಾತಮ್ |
ವಿದ್ಯುತ್ಪ್ರಭಂ ಪ್ರೇಕ್ಷ್ಯ ಮಹಾರಥಾನಾಂ
ಹರ್ಷೋಽರ್ಜುನಂ ಚಿಂತಯತಾಂ ಬಭೂವ ॥17॥
ಅನಂತರ ಸ್ವಲ್ಪಕಾಲದ ಮೇಲೆ ಅಶ್ವಗಳಿಂದ ಕೂಡಿದ ವಿದ್ಯುತ್ತಿನ ಕಾಂತಿಯನ್ನು ಹೊಂದಿದ ಇಂದ್ರವಾಹನವು ಇದ್ದಕ್ಕಿದ್ದಂತೆಯೇ ಬಂದುದನ್ನು ನೋಡಿ ಯಾವಾಗಲೂ ಅರ್ಜುನನನ್ನೇ ಚಿಂತಿಸುವ ಆ ಮಹಾರಥರಿಗೆ ಹರ್ಷವುಂಟಾಯಿತು.
ಸ ದೀಪ್ಯಮಾನಃ ಸಹಸಾಽಂತರಿಕ್ಷಂ
ಪ್ರಕಾಶಯನ್ ಮಾತಲಿಸಂಗೃಹೀತಃ |
ಬಭೌ ಮಹೋಲ್ಕೇವ ಘನಾಂತರಸ್ಥಾ
ಶಿಖೇವ ಚಾಗ್ನೇರ್ಜ್ವಲಿತಾ ವಿಧೂಮಾ ॥18॥
ಮಾತಲಿಯಿಂದ ಸಂಗೃಹೀತವಾದ ಆ ರಥವು ಮೋಡಗಳ ಮಧ್ಯದಲ್ಲಿರುವ ದೊಡ್ಡ ಉಲ್ಕೆಯಂತೆ, ಧೂಮವಿಲ್ಲದ ಅಗ್ನಿಯ ಉರಿಯುತ್ತಿರುವ ಶಿಖೆಯಂತೆ, ಒಮ್ಮೆಲೇ, ಅಂತರಿಕ್ಷವನ್ನು ಪ್ರಕಾಶಿಸುತ್ತಾ ಬೆಳಗಿತು.
ತಮಾಸ್ಥಿತಃ ಸಂದದೃಶೇ ಕಿರೀಟೀ ಸ್ರಗ್ವೀ
ನವಾನ್ಯಾಭರಣಾನಿ ಬಿಭ್ರತ್ |

ಧನಂಜಯೋ ವಜ್ರಧರಪ್ರಭಾವಃ ಶ್ರಿಯಾ
ಜ್ವಲನ್ ಪರ್ವತಮಾಜಗಾಮ ॥19॥
ಅಂತಹ ರಥವನ್ನು ಆಶ್ರಯಿಸಿದ, ಕಿರೀಟವನ್ನೂ ಮಾಲೆಯನ್ನೂ ಹೊಸ ಆಭರಣಗಳನ್ನೂ ಧರಿಸಿದ, ಇಂದ್ರನಿಗೆ ಸಮಾನವಾದ ಪ್ರಭೆಯುಳ್ಳ, ಅರ್ಜುನನು ಅವರಿಂದ ನೋಡಲ್ಪಟ್ಟನು. ಕಾಂತಿಯಿಂದ ಬೆಳಗುತ್ತಾ ಅರ್ಜುನನು ಆ ಪರ್ವತಕ್ಕೆ ಬಂದನು.
ಸ ಶೈಲಮಾಸಾದ್ಯ ಕಿರೀಟಮಾಲೀ
ಮಹೇಂದ್ರವಾಹಾದವರುಹ್ಯ ತಸ್ಮಾತ್ ।
ಧೌಮ್ಯಸ್ಯ ಪಾದಾವಭಿವಾದ್ಯ
ಧೀಮಾನಜಾತಶತ್ರೋಸ್ತದನಂತರಂ ಚ ॥20॥
ವೃಕೋದರಸ್ಯಾಪಿ ಚ ವಂದ್ಯ ಪಾದೌ
ಮಾದ್ರೀಸುತಾಭ್ಯಾಮಭಿವಾದಿತಶ್ಚ ।
ಸಮೇತ್ಯ ಕೃಷ್ಣಾಂ ಪರಿಸಾಂತ್ವ್ಯ ಚೈನಾಂ
ಪ್ರಹ್ವೋಽಭವದ್ ಭ್ರಾತುರುಪಹ್ವರೇ ಸಃ ॥21॥
ಕಿರೀಟ ಮತ್ತು ಮಾಲೆಗಳನ್ನು ಧರಿಸಿದ ಅರ್ಜುನನು ಗಂಧಮಾದನ ಪರ್ವತವನ್ನು ತಲುಪಿ, ಆ ಇಂದ್ರರಥದಿಂದ ಇಳಿದು ಮೇಧಾವಿಯಾದ ಅವನು ಧೌಮ್ಯರ ಪಾದಗಳಿಗೆ ನಮಸ್ಕರಿಸಿ ಅನಂತರ ಧರ್ಮರಾಜನ ಮತ್ತು ಭೀಮಸೇನನ ಪಾದಗಳಿಗೆ ನಮಸ್ಕರಿಸಿ ಮಾದ್ರೀಸುತರಾದ ನಕುಲಸಹದೇವರಿಂದ ನಮಸ್ಕರಿಸಲ್ಪಟ್ಟವನಾಗಿ ದ್ರೌಪದಿಯ ಜೊತೆಗೂಡಿ ಅವಳನ್ನು ಸಮಾಧಾನಪಡಿಸಿ ಅಣ್ಣನ ಸಮೀಪದಲ್ಲಿ ವಿನಯದಿಂದ ನಿಂತನು.
ಬಭೂವ ತೇಷಾಂ ಪರಮಃ ಪ್ರಹರ್ಷ
ಸ್ತೇನಾಪ್ರಮೇಯೇಣ ಸಮಾಗತಾನಾಮ್ ।
ಸ ಚಾಪಿ ತಾನ್ ಪ್ರೇಕ್ಷ್ಯ ಕಿರೀಟಮಾಲೀ
ನನಂದ ರಾಜಾನಮಭಿಪ್ರಶಂಸನ್ ॥22॥
ಆ ಅಪ್ರಮೇಯನಾದ ಅರ್ಜುನನ ಆಗಮನದಿಂದ ಆ ಪಾಂಡವರಿಗೆ ಪರಮ ಸಂತೋಷವುಂಟಾಯಿತು. ಆ ಕಿರೀಟಮಾಲಿಯಾದ ಅರ್ಜುನನಾದರೂ ಅವರನ್ನು ನೋಡಿ ರಾಜನಾದ ಧರ್ಮರಾಜನನ್ನು ಹೊಗಳುತ್ತಾ ಸಂತೋಷಪಟ್ಟನು.
ಯಮಾಸ್ಥಿತಃ ಸಪ್ತ ಜಘಾನ ಪೂಗಾನ್
ದಿತೇಃ ಸುತಾನಾಂ ನಮುಚೇರ್ನಿಹಂತಾ ।
ತಮಿಂದ್ರವಾಹಂ ಸಮುಪೇತ್ಯ ಪಾರ್ಥಾಃ
ಪ್ರದಕ್ಷಿಣಂ ಚಕ್ರುರದೀನಸತ್ತ್ವಾಃ ॥23॥
ಯಾವ ರಥವನ್ನು ಏರಿ ನಮುಚಿಸೂದನನಾದ ಇಂದ್ರನು ದಿತಿಪುತ್ರರ ಏಳು ಗಣಗಳನ್ನು ಸಂಹರಿಸಿದನೋ ಅಂತಹ ಇಂದ್ರರಥವನ್ನು ಸಮೀಪಿಸಿ ಪಾಂಡವರು ಉಬ್ಬಿದ ಮನಸ್ಸುಳ್ಳವರಾಗಿ ಅದಕ್ಕೆ ಪ್ರದಕ್ಷಿಣೆಯನ್ನು ಮಾಡಿದರು.
ತೇ ಮಾತಲೇಶ್ಚಕ್ರುರತೀವ ಹೃಷ್ಟಾಃ
ಸತ್ಕಾರಮಗ್ರ್ಯಂ ಸುರರಾಜತುಲ್ಯಮ್ ।
ಸರ್ವಾನ್ ಯಥಾವಚ್ಚ ದಿವೌಕಸಸ್ತೇ
ಪಪ್ರಚ್ಛುರೇನಂ ಕುರುರಾಜಪುತ್ರಾಃ ॥24॥
ಅತೀವ ಸಂತುಷ್ಟರಾದ ಅವರು ದೇವರಾಜನಾದ ಇಂದ್ರನಿಗೆ ಯೋಗ್ಯವಾದಂತಹ ಶ್ರೇಷ್ಠವಾದ ಸತ್ಕಾರವನ್ನು ಮಾತಲಿಗೆ ಮಾಡಿದರು ಮತ್ತು ಕ್ರಮದಿಂದ ಆ ಕುರುರಾಜಪುತ್ರರು ಮಾತಲಿಯನ್ನು ಕುರಿತು ಎಲ್ಲಾ ದೇವತೆಗಳ ಕುಶಲವನ್ನೂ ಕೇಳಿದರು.
ತಾನಪ್ಯಸೌ ಮಾತಲಿರಭ್ಯನಂದನ್
ಪಿತೇವ ಪುತ್ರಾನನುಶಿಷ್ಯ ಪಾರ್ಥಾನ್ ।
ಯಯೌ ರಥೇನಾಪ್ರತಿಮಪ್ರಭೇಣ
ಪುನಃ ಸಕಾಶಂ ತ್ರಿದಿವೇಶ್ವರಸ್ಯ ॥25॥
ಆ ಮಾತಲಿಯಾದರೂ ಪಾಂಡವರನ್ನು ನೋಡಿ ಸಂತೋಷಪಟ್ಟು ತಂದೆಯು ಮಕ್ಕಳಿಗೆ ಮಾಡುವಂತೆ ಅವರಿಗೆ ಅನುಶಾಸನವನ್ನು ಮಾಡಿ ಅಪ್ರತಿಮ ಪ್ರಭೆಯುಳ್ಳ ಆ ರಥವನ್ನು ತೆಗೆದುಕೊಂಡು ಪುನಃ ಸ್ವರ್ಗಾಧಿಪತಿಯಾದ ಇಂದ್ರನ ಸಮೀಪಕ್ಕೆ ಹೋದನು.
ಗತೇ ತು ತಸ್ಮಿನ್ನರದೇವವರ್ಯಃ
ಶಕ್ರಾತ್ಮಜಃ ಶಕ್ರರಿಪುಪ್ರಮಾಥೀ ।
ಸಾಕ್ಷಾತ್ಸಹಸ್ರಾಕ್ಷ ಇವ ಪ್ರತೀತಃ
ಶ್ರೀಮಾನ್ ಸ್ವದೇಹಾದವಮುಚ್ಯ ಜಿಷ್ಣುಃ ॥26॥
ಶಕ್ರೇಣ ದತ್ತಾನಿ ದದೌ ಮಹಾತ್ಮಾ
ಮಹಾಧನಾನ್ಯುತ್ತಮರೂಪವಂತಿ ।
ದಿವಾಕರಾಭಾಣಿ ವಿಭೂಷಣಾನಿ ಪ್ರೀತಃ
ಪ್ರಿಯಾಯೈ ಶ್ರುತಸೋಮಮಾತ್ರೇ ॥27॥
ಮಾತಲಿಯು ಹೊರಟುಹೋಗುತ್ತಿರಲು ಇಂದ್ರಪುತ್ರನಾದ, ಇಂದ್ರಶತ್ರುಘಾತಿಯಾದ, ಸಾಕ್ಷಾತ್ ಇಂದ್ರನಂತೆ ತೋರುತ್ತಿದ್ದ ಕಾಂತಿಯುಕ್ತನಾದ ಮಹಾತ್ಮನಾದ ಅರ್ಜುನನು ಇಂದ್ರನಿಂದ ಕೊಡಲ್ಪಟ್ಟ ಮಹಾಬೆಲೆಬಾಳುವ ಉತ್ತಮ ರೂಪವನ್ನು ಹೊಂದಿದ

ಸೂರ್ಯನಂತೆ ಹೊಳೆಯುವ ಆಭರಣಗಳನ್ನು ತನ್ನ ದೇಹದಿಂದ ತೆಗೆದು ಪ್ರಿಯೆಯಾದ ಶ್ರುತಸೋಮನ ತಾಯಿಯಾದ ದ್ರೌಪದಿಗೆ ಸಂತೋಷದಿಂದ ಕೊಟ್ಟನು.
ತತಃ ಸ ತೇಷಾಂ ಕುರುಪಂಗವಾನಾಂ
ತೇಷಾಂ ಚ ಸೂರ್ಯಾಗ್ನಿಸಮಪ್ರಭಾಣಾಮ್ ।
ವಿಪ್ರರ್ಷಭಾಣಾಮುಪವಿಶ್ಯ ಮಧ್ಯೇ
ಸರ್ವಂ ಯಥಾವತ್ ಕಥಯಾಂಬಭೂವ ॥28॥
ಅನಂತರ ಅವನು ಸೂರ್ಯಾಗ್ನಿ ಸಮಾನವಾದ ಪ್ರಭೆಯುಳ್ಳ ಬ್ರಾಹ್ಮಣ ಶ್ರೇಷ್ಠರ ಮಧ್ಯದಲ್ಲಿ ಕುಳಿತು ಎಲ್ಲಾ ಕಥೆಯನ್ನೂ ವಿಸ್ತಾರವಾಗಿ ಹೇಳಿದನು.
ಅರ್ಜುನಃ
ಏವಂ ಮಯಾಽಸ್ತ್ರಾಣ್ಯುಪಶಿಕ್ಷಿತಾನಿ
ಶಕ್ರಾಚ್ಚ ವಾತಾಚ್ಚ ಶಿವಾಚ್ಚ ಸಾಕ್ಷಾತ್ ।
ತಥೈವ ಶೀಲೇನ ಸಮಾಧಿನಾಽಥ ಪ್ರೀತಾಃ
ಸುರಾ ಮೇ ಸಹಿತಾಃ ಸಹೇಂದ್ರಾಃ ॥29॥
ಅರ್ಜುನ ನಾನು ಈ ರೀತಿಯಾಗಿ ಇಂದ್ರನಿಂದಲೂ, ವಾಯುವಿನಿಂದಲೂ ಮತ್ತು ಸಾಕ್ಷಾತ್ ಶಿವನಿಂದಲೂ ಅಸ್ತ್ರಗಳನ್ನು ಸಂಪಾದಿಸಿದೆ. ಅಸ್ತ್ರಗಳ ಉಪದೇಶವನ್ನು ಪಡೆದೆ. ನನ್ನ ಶೀಲದಿಂದಲೂ ಮತ್ತು ಸಮಾಧಿಯಿಂದಲೂ ಪ್ರಸನ್ನರಾದ ಇಂದ್ರ ಮೊದಲಾದ ದೇವತೆಗಳು ಎಲ್ಲರೂ ಸೇರಿ ನನಗೆ ಅಸ್ತ್ರಗಳನ್ನು ಕೊಟ್ಟರು.
ವೈಶಂಪಾಯನಃ
ಸಂಕ್ಷೇಪತೋ ವೈ ಸ ವಿಶುದ್ಧಕರ್ಮಾ
ತೇಭ್ಯಃ ಸಮಾಖ್ಯಾಯ ದಿವಿ ಪ್ರವಾಸಮ್ ।
ಮಾದ್ರೀಸುತಾಭ್ಯಾಂ ಸಹಿತಃ ಕಿರೀಟೀ
ಸುಷ್ವಾಪ ತಾಮಾವಸತಿಂ ಪ್ರತೀತಃ ॥30॥
ವೈಶಂಪಾಯನ ಆ ವಿಶುದ್ಧಕರ್ಮನಾದ ಅರ್ಜುನನು ಉಳಿದ ಹಗಲಿನ ಕಾಲದಲ್ಲಿ ತನ್ನ ಸ್ವರ್ಗಪ್ರವಾಸವನ್ನು ಸಂಕ್ಷೇಪವಾಗಿ ನಿರೂಪಿಸಿ ಮಾದ್ರೀ ಸುತರ ಜೊತೆಯಲ್ಲಿ ಮಲಗಿ ಆ ರಾತ್ರಿಯಲ್ಲಿ ಸಂತೋಷದಿಂದ ನಿದ್ರೆಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ವಧಂ ವವ್ರೇ ಸ್ವಶತ್ರೂಣಾಮಿಂದ್ರಃ ಪಾರ್ಥಾತ್ ಸ್ವರೂಪತಃ ।
ನಿವಾತಕವಚಾಖ್ಯಾನಾಂ ಯೇಷಾಂ ಬ್ರಹ್ಮಾ ದದೌ ವರಮ್ ।
ಅವಧ್ಯತಾಂ ಸುರೈರ್ದೈತ್ಯೈರ್ಗಂಧರ್ವೈಃ ಪರಿರಾಕ್ಷಸೈಃ ।
ಪುನರಿಂದ್ರೇಣಾರ್ಥಿತೋಽದಾಜ್ಜಹೀಮಾನ್ ನರದೇಹವಾನ್ ॥
ದೇವೇಂದ್ರ ತನ್ನ ಅವತಾರನೇ ಆದ ಅರ್ಜುನನಿಂದ ನಿವಾತಕವಚರೆಂಬ ಹೆಸರಿನ ತನ್ನ ಶತ್ರುಗಳ ವಧೆಯನ್ನು ಗುರುದಕ್ಷಿಣೆಯಾಗಿ ಕೇಳಿದ. ಏಕೆಂದರೆ ನಿವಾತಕವಚರಿಗೆ ಬ್ರಹ್ಮದೇವದಾನವ ಗಂಧರ್ವ ಯಕ್ಷರಾಕ್ಷಸರಿಂದ ಅವಧ್ಯತ್ವ ವರ ನೀಡಿದ್ದ. ಬ್ರಹ್ಮನೇ ಪುನಃ ಇಂದ್ರನಿಂದ ಪ್ರಾರ್ಥಿತನಾಗಿ ನೀನು ಇವರನ್ನು ಮನುಷ್ಯ ಶರೀರಿಯಾಗಿ ಸಂಹರಿಸು ಎಂದು ವರ ನೀಡಿದ್ದ.
ಇತಿ ತೇನಾರ್ಜುನಂ ಶಕ್ರಃ ಸ್ವಾತ್ಮಾನಂ ನರದೇಹಗಮ್ ।
ಜಗಾದ ತಾನ್ ಜಹೀತ್ಯೇವ ಕಿರೀಟಂ ಸ್ವಂ ನಿಬದ್ಧ ಚ ॥307॥
ಅದರಿಂದ ಇಂದ್ರ ಮನುಷ್ಯ ದೇಹದಲ್ಲಿರುವ ತನ್ನ ಅವತಾರನೆ ಆದ ಅರ್ಜುನನಿಗೆ ತನ್ನ ಕಿರೀಟವನ್ನು ತೊಡಿಸಿ ನಿವಾತಕವಚರನ್ನು ಕೊಲು ಎಂದ.
* * * *
ನೂರ ಅರವತ್ತೊಂದನೆಯ ಅಧ್ಯಾಯ
ತಮ್ಮಂದಿರಿಂದೊಡಗೂಡಿದ ಯುಧಿಷ್ಠಿರನ ಬಳಿಗೆ ಇಂದ್ರನ ಆಗಮನ ಮತ್ತು ಜಯಾಶೀರ್ವಾದಗಳನ್ನು ಹೇಳಿ ಸ್ವರ್ಗಕ್ಕೆ ನಿರ್ಗಮನ.
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ಸರ್ವವಾದಿತ್ರನಿಸ್ವನಃ ।
ಬಭೂವ ತುಮುಲಃ ಶಬ್ದಸ್ತ್ವಂತರಿಕ್ಷೇ ದಿವೌಕಸಾಮ್ ।
ರಥನೇಮಿಸ್ವನಶ್ಚೈವ ಘಂಟಾಶಬ್ದಶ್ಚ ಭಾರತ ॥1॥
ವೈಶಂಪಾಯನ ಆ ಸಮಯದಲ್ಲಿಯೇ ಅಂತರಿಕ್ಷದಲ್ಲಿ ಸರ್ವವಾದ್ಯಗಳ ಘೋಷವೂ ಮತ್ತು ದೇವತೆಗಳ ತುಮುಲವಾದ ಶಬ್ದವೂ ಉಂಟಾಯಿತು. ಎಲೈ ಭಾರತನೇ, ರಥದ ಚಕ್ರದ ಶಬ್ದವೂ ಮತ್ತು ಘಂಟಾಶಬ್ದವೂ ಉಂಟಾಯಿತು.
ಪೃಥಗ್ವ್ಯಾಲಮೃಗಾಣಾಂ ಚ ಪಕ್ಷಿಣಾಂಚೈವ ಸರ್ವಶಃ ।

ರವೋನ್ಮುಖಾಸ್ತೇ ದದೃಶುಃ ಪ್ರೀಯಮಾಣಾಃ ಕುರೂದ್ವಹಾಃ ॥2॥
ಆ ವನದಲ್ಲಿದ್ದ ವನ್ಯಮೃಗಗಳ ಮತ್ತು ಎಲ್ಲಾ ಪಕ್ಷಿಗಳ ಶಬ್ದಗಳೂ ಎಲ್ಲಾ ಕಡೆ ಉಂಟಾದವು. ಆ ಕುರೂದ್ವಹರು ಸಂತೋಷದಿಂದ ಆ ಶಬ್ದವು ಬಂದ ಕಡೆಗೆ ಮುಖವನ್ನು ಎತ್ತಿನೋಡಿದರು.
ಮರುದ್ಭಿರನ್ವಿತಂ ಶಕ್ರಮಾಪತಂತಂ ವಿಹಾಯಸಾ ॥3॥
ತೇ ಸಮಂತಾದನುಯಯುರ್ಗಂಧರ್ವಾಪ್ಸರಸಾಂ ಗಣಾಃ।
ವಿಮಾನೈಃ ಸೂರ್ಯಸಂಕಾಶೈರ್ದೇವರಾಜಮರಿಂದಮಮ್ ॥4॥
ಮರುದ್ಗಣಗಳಿಂದ ಹಿಂಬಾಲಿಸಲ್ಪಟ್ಟು ಆಕಾಶದಲ್ಲಿ ಬರುತ್ತಿದ್ದ ಅರಿಂದಮನಾದ ದೇವರಾಜನಾದ ಇಂದ್ರನನ್ನೂ, ಅವನ ಸುತ್ತಲೂ ಸೂರ್ಯಪ್ರಭೆಗಳುಳ್ಳ ವಿಮಾನಗಳಲ್ಲಿ ಅರಿಂದಮನಾದ ದೇವರಾಜನಾದ ಇಂದ್ರನನ್ನು ಬರುತ್ತಿರುವ ಗಂಧರ್ವಾಪ್ಸರೆಯರ ಗಣಗಳನ್ನೂ ಅವರು ನೋಡಿದರು.
ತತಃ ಸ ಹರಿಭಿರ್ಯುಕ್ತಂ ಜಾಂಬೂನದಪರಿಷ್ಕೃತಮ್।
ಮೇಘನಾದಿನಮಾರುಹ್ಯ ಶ್ರಿಯಾ ಪರಮಯಾ ಜ್ವಲನ್।
ಪಾರ್ಥಾನಭ್ಯಾಜಗಾಮಾಶು ದೇವರಾಜಃ ಪುರಂದರಃ ॥5॥
ಅನಂತರ ಆ ದೇವರಾಜನಾದ ಇಂದ್ರನು ಅಶ್ವಗಳನ್ನು ಹೂಡಿದ್ದ, ಸುವರ್ಣದಿಂದ ಅಲಂಕೃತವಾದ, ಮೇಘನಾದವುಳ್ಳ, ತನ್ನ ರಥದಿಂದ ಇಳಿದು ಪರಮಕಾಂತಿಯಿಂದ ಜ್ವಲಿಸುತ್ತಾ ಪಾಂಡವರ ಸಮೀಪಕ್ಕೆ ಬೇಗ ಬಂದನು.
ಆಗತ್ಯ ಚ ಸಹಸ್ರಾಕ್ಷೋ ರಥಾದವರುರೋಹ ವೈ ॥6॥
ಸಹಸ್ರಾಕ್ಷನು ರಥದಿಂದ ಇಳಿದುಬಂದನು.
ತಂ ದೃಷ್ಟ್ವೈವ ಮಹಾತ್ಮಾನಂ ಧರ್ಮರಾಜೋ ಯುಧಿಷ್ಠಿರಃ।
ಭ್ರಾತೃಭಿಃ ಸಹಿತಃ ಶ್ರೀಮಾನ್ ದೇವರಾಜಮುಪಾಗಮತ್ ॥7॥
ಆ ಮಹಾತ್ಮನಾದ ಇಂದ್ರನನ್ನು ನೋಡಿದ ತಕ್ಷಣವೇ ಕಾಂತಿಯುಕ್ತನಾದ ಧರ್ಮರಾಜನಾದ ಯುಧಿಷ್ಠಿರನು ತಮ್ಮಂದಿರ ಜೊತೆಯಲ್ಲಿ ದೇವರಾಜನ ಸಮೀಪಕ್ಕೆ ಬಂದನು.
ಪೂಜಯಾಮಾಸ ಚೈವಾಥ ವಿಧಿವದ್ ಭೂರಿದಕ್ಷಿಣಃ।
ಯಥಾರ್ಹಮಮಿತಾತ್ಮಾನಂ ವಿಧಿದೃಷ್ಟೇನ ಕರ್ಮಣಾ ॥8॥
ಭೂರಿದಕ್ಷಿಣೆಯನ್ನು ಕೊಡುವ ಅವನು ಶಾಸ್ತ್ರವು ಹೇಳಿದ ಪ್ರಕಾರದಿಂದ ಅಮಿತಾತ್ಮನಾದ ಆ ಪುರಂದರನಿಗೆ ಉಚಿತವಾದ ರೀತಿಯಲ್ಲಿ ಪೂಜೆಯನ್ನು ಮಾಡಿದನು.
ಧನಂಜಯಶ್ಚ ತೇಜಸ್ವೀ ಪ್ರಣಿಪತ್ಯ ಪುರಂದರಮ್।
ಭ್ರಾತೃ(ಭೃತ್ಯ)ವತ್ ಪ್ರಣತಸ್ತಸ್ಥೌ ದೇವರಾಜಸಮೀಪತಃ ॥9॥
ತೇಜಸ್ವಿಯಾದ ಅರ್ಜುನನೂ ಸಹ ಇಂದ್ರನಿಗೆ ನಮಸ್ಕರಿಸಿ ಆ ದೇವರಾಜನ ಸಮೀಪದಲ್ಲಿ ತಮ್ಮನಂತೆ (ಭೃತ್ಯನಂತೆ) ನಮಸ್ಕಾರವನ್ನು ಮಾಡಿ ನಿಂತನು.
ಆಘ್ರಾಯ ತಂ (ಆಪ್ಯಾಯತ) ಮಹಾತೇಜಾಃ ಕುಂತೀಪುತ್ರೋ ಯುಧಿಷ್ಠಿರಃ।
ಧನಂಜಯಮಭಿಪ್ರೇಕ್ಷ್ಯ ವಿನೀತಂ ಸ್ಥಿತಮಂತಿಕೇ ॥10॥
ಜಟಿಲಂ ದೇವರಾಜಸ್ಯ ತಪೋಯುಕ್ತಮಕಲ್ಮಷಮ್।
ಹರ್ಷೇಣ ಮಹತಾऽऽವಿಷ್ಟಃ ಫಲ್ಗುನಸ್ಯಾಥ ದರ್ಶನಾತ್ ॥11॥
ಬಭೂವ ಪರಮಪ್ರೀತೋ ದೇವರಾಜಂ ಚ ಪೂಜಯನ್।
ಮಹಾತೇಜಸ್ವಿಯಾದ ಕುಂತೀಪುತ್ರನಾದ ಯುಧಿಷ್ಠಿರನು ವಿನಯದಿಂದ ಸಮೀಪದಲ್ಲಿ ನಿಂತಿರುವ ಜಟಿಲನಾದ, ತಪೋಯುಕ್ತನಾದ, ಕಲ್ಮಷರಹಿತನಾದ ಅರ್ಜುನನು ದೇವರಾಜನ ಸಮೀಪದಲ್ಲಿ ನಿಂತಿರುವುದನ್ನು ನೋಡಿ ಫಲ್ಗುನನ ದರ್ಶನದಿಂದ ಬಹಳ ಸಂತೋಷವುಳ್ಳವನಾಗಿ ದೇವರಾಜನನ್ನು ಪೂಜಿಸುತ್ತಾ ಬಹಳ ಸಂತೋಷಪಟ್ಟನು.
ತಂ ತಥಾऽದೀನಮನಸಂ ರಾಜಾನಂ ಹರ್ಷಸಂಪ್ಲುತಮ್।
ಉವಾಚ ವಚನಂ ಧೀಮಾನ್ ದೇವರಾಜಃ ಪುರಂದರಃ ॥12॥
ಹಾಗೆ ಹರ್ಷದಿಂದ ತುಂಬಿ ಉನ್ನತವಾದ ಮನಸ್ಸನ್ನು ಹೊಂದಿದ್ದ ಆ ರಾಜನನ್ನು ಕುರಿತು ಮೇಧಾವಿಯಾದ ದೇವರಾಜನಾದ ಪುರಂದರನು ಹೀಗೆ ಮಾತನಾಡಿದನು.
ತ್ವಮಿಮಾಂ ಪೃಥಿವೀಂ ರಾಜನ್ ಪ್ರಶಾಸಿಷ್ಯಸಿ ಪಾಂಡವ।
ಸ್ವಸ್ತಿ ಪ್ರಾಪ್ನುಹಿ ಕೌಂತೇಯ ಕಾಮ್ಯಕಂ ಪುನರಾಶ್ರಮಮ್ ॥13॥
ಎಲೈ ಪಾಂಡವನೇ, ರಾಜನೇ, ನೀನು ಈ ಭೂಮಿಯನ್ನು ಆಳುವಿ. ನಿನಗೆ ಮಂಗಳವಾಗಲಿ. ಕೌಂತೇಯನೇ, ಪುನಃ ಕಾಮ್ಯಕವನಕ್ಕೆ ಹಿಂದಿರುಗು.
ಅಸ್ತ್ರಾಣಿ ಲಬ್ಧಾನಿ ಚ ಪಾಂಡವೇನ ಸರ್ವಾಣಿ ಮತ್ತಃ ಪ್ರಯತೇನ ರಾಜನ್।
ಕೃತಪ್ರಿಯಶ್ಚಾಸ್ಮಿ ಧನಂಜಯೇನ ಜೇತುಂ ನ ಶಕ್ಯಸ್ತ್ರಿಭಿರೇಷ ಲೋಕೈಃ ॥
ಎಲೈ ರಾಜನೇ, ನಿಯಮಬದ್ಧನಾದ ಅರ್ಜುನನು ನನ್ನಿಂದ ಎಲ್ಲಾ ಅಸ್ತ್ರಗಳನ್ನೂ ಸ್ವೀಕರಿಸಿದ್ದಾನೆ ಮತ್ತು ಧನಂಜಯನು ನನಗೆ ಸಂತೋಷವನ್ನೂ ಉಂಟುಮಾಡಿದ್ದಾನೆ. ಮೂರುಲೋಕಗಳೂ ಅವನನ್ನು ಗೆಲ್ಲಲಾರವು.
ವೈಶಂಪಾಯನಃ
ಏವಮುಕ್ತ್ವಾ ಸಹಸ್ರಾಕ್ಷಃ ಕುಂತೀಪುತ್ರಂ ಯುಧಿಷ್ಠಿರಮ್।

ಜಗಾಮ ತ್ರಿದಿವಂ ಹೃಷ್ಟಃ ಸ್ತೂಯಮಾನೋ ಮಹರ್ಷಿಭಿಃ ॥15॥
ವೈಶಂಪಾಯನ ಸಹಸ್ರಾಕ್ಷನಾದ ಇಂದ್ರನು ಕುಂತೀಪುತ್ರನಾದ ಯುಧಿಷ್ಠಿರನಿಗೆ ಹೀಗೆ ಹೇಳಿ ಮಹರ್ಷಿಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಸಂತೋಷದಿಂದ ಸ್ವರ್ಗಕ್ಕೆ ಹಿಂದಿರುಗಿದನು.
ಧನೇಶ್ವರಗೃಹಸ್ಥಾನಾಂ ಪಾಂಡವಾನಾಂ ಸಮಾಗಮಮ್ |
ಶಕ್ರೇಣ ಯ ಇದಂ ವಿದ್ವಾನಧೀಯೀತ ಸಮಾಹಿತಃ ॥16॥
ಸಂವತ್ಸರಂ ಬ್ರಹ್ಮಚಾರೀ ನಿಯತಃ ಸಂಶಿತವ್ರತಃ |
ಸ ಜೀವೇದ್ಧಿ ನಿರಾಬಾಧಃ ಸುಸುಖೀ ಶರದಾಂ ಶತಮ್ ॥17॥
ಕುಬೇರನ ಮನೆಯಲ್ಲಿ ವಾಸಿಸುವ ಪಾಂಡವರಿಗೆ ಉಂಟಾದ ಈ ಇಂದ್ರನ ಸಮಾಗಮವನ್ನು ಯಾವ ವಿದ್ವಾಂಸನು ಒಂದು ಸಂವತ್ಸರದ ಕಾಲ ಬ್ರಹ್ಮಚರ್ಯವನ್ನು ಮಾಡಿ ನಿಯಮಬದ್ಧನಾಗಿದ್ದು, ಶ್ರೇಷ್ಠವಾದ ವ್ರತವನ್ನು ಮಾಡಿ ಶಾಂತಮನಸ್ಸಿನಿಂದ ಅಧ್ಯಯನವನ್ನು ಮಾಡುವನೋ ಅವನು ಯಾವ ಬಾಧೆಯೂ ಇಲ್ಲದೆ ಸುಖವಾಗಿ ನೂರುವರ್ಷಗಳ ಕಾಲ ಜೀವಿಸುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ಯಕ್ಷಯುದ್ಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೊಂದನೆಯ ಅಧ್ಯಾಯ ಮುಗಿಯಿತು
ನೂರ ಅರವತ್ತೆರಡನೆಯ ಅಧ್ಯಾಯ
ಅರ್ಜುನನಿಂದ ಕಿರಾತರೂಪಿಯಾದ ಶಿವನ ಜೊತೆಯಲ್ಲಿ ತನ್ನ ಯುದ್ಧ ಮತ್ತು ಪಾಶುಪತಾಸ್ತ್ರ ಪ್ರಾಪ್ತಿ ಪ್ರಕಾರದ ಕಥನ.
ವೈಶಂಪಾಯನಃ
ಯಥಾಗತಂ ಗತೇ ಶಕ್ರೇ ಭ್ರಾತೃಭಿಃ ಸಹ ಸಂಗತಃ |
ಕೃಷ್ಣಯಾ ಚೈವ ಬೀಭತ್ಸುರ್ಧರ್ಮಪುತ್ರಮಪೂಜಯತ್ ॥1॥
ವೈಶಂಪಾಯನ ಇಂದ್ರನು ಬಂದಂತೆಯೇ ಹಿಂದೆ ಹೋಗುತ್ತಿರಲು ಅರ್ಜುನನು ತನ್ನ ಸಹೋದರರ ಜೊತೆಯಲ್ಲಿಯೂ ದ್ರೌಪದಿಯ ಜೊತೆಯಲ್ಲಿಯೂ ಸಮಾಗಮವನ್ನು ಹೊಂದಿ ಧರ್ಮರಾಜನನ್ನು ಪೂಜಿಸಿದನು.
ಅಭಿವಾದಯಮಾನಂ ತಂ ಮೂರ್ಧ್ನ್ಯುಪಾಘ್ರಾಯ ಪಾಂಡವಮ್ |
ಹರ್ಷಗದ್ಗದಯಾ ವಾಚಾ ಪ್ರಹೃಷ್ಟೋಽರ್ಜುನಮಬ್ರವೀತ್ ॥2॥
ಹಾಗೆ ನಮಸ್ಕಾರ ಮಾಡಿದ  ಪಾಂಡುಪುತ್ರನಾದ ಅರ್ಜುನನನ್ನು ಧರ್ಮರಾಜನು ಶಿರಸ್ಸಿನಲ್ಲಿ ಆಘ್ರಾಣಿಸಿ ಹರ್ಷಗದ್ಗದವಾದ ವಾಣಿಯಿಂದ ಹೀಗೆ ಹೇಳಿದನು;
ಕಥಮರ್ಜುನ ಕಾಲೋಽಯಂ ಸ್ವರ್ಗೇ ವ್ಯತಿಗತಸ್ತವ |
ಕಥಂ ಚಾಸ್ತ್ರಾಣ್ಯವಾಪ್ತಾನಿ ದೇವರಾಜಶ್ಚ ತೋಷಿತಃ ॥3॥
ಅರ್ಜುನನೇ, ಸ್ವರ್ಗದಲ್ಲಿ ನಿನ್ನ ಕಾಲವು ಹೇಗೆ ಕಳೆಯಿತು? ಹೇಗೆ ಅಸ್ತ್ರಗಳನ್ನು ಸಂಪಾದಿಸಿದೆ? ಮತ್ತು ದೇವರಾಜನಾದ ಇಂದ್ರನನ್ನು ಹೇಗೆ ಸಂತೋಷಪಡಿಸಿದೆ?
ಸಮ್ಯಗ್ವಾ ತೇ ಗೃಹೀತಾನಿ ಕಚ್ಚಿದಸ್ತ್ರಾಣಿ ಪಾಂಡವ |
ಕಚ್ಚಿತ್ ಸುರಾಧಿಪಃ ಪ್ರೀತೋ ರುದ್ರೋ ವಾಽಸ್ತ್ರಾಣ್ಯದಾತ್ ತವ ॥4॥
ಎಲೈ ಪಾಂಡವನೇ, ನೀನು ಅಸ್ತ್ರಗಳನ್ನು ಸರಿಯಾದ ಕ್ರಮದಲ್ಲಿ ಸ್ವೀಕರಿಸಿರುವೆಯಷ್ಟೆ? ದೇವೇಶನಾದ ಇಂದ್ರನೂ ಮತ್ತು ರುದ್ರನೂ ಸಹ ಪ್ರಸನ್ನರಾಗಿ ನಿನಗೆ ಅಸ್ತ್ರಗಳನ್ನು ನೀಡಿದ್ದಾರಷ್ಟೆ?
ಯಥಾ ದೃಷ್ಟಶ್ಚ ತೇ ಶಕ್ರೋ ಭಗವಾನ್ ವಾ ಪಿನಾಕಧೃಕ್ |
ಯಥೈವಾಸ್ತ್ರಾಣ್ಯವಾಪ್ತಾನಿ ಯಥೈವಾರಾಧಿತಶ್ಚ  ತೇ ॥5॥
ಯಥೋಕ್ತವಾಂಸ್ತ್ವಂ ಭಗವಾನ್ ಶತಕ್ರತುರರಿಂದಮ |
ಕೃತಪ್ರಿಯಸ್ತ್ವಯಾಽಸ್ಮೀತಿ ತಸ್ಯ ತೇ ಕಿಂ ಪ್ರಿಯಂ ಕೃತಮ್ |
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಮಹಾದ್ಯುತೇ ॥6॥
ನೀನು ಇಂದ್ರನನ್ನಾಗಲೀ ಅಥವಾ ಪೂಜ್ಯನಾದ ಪಿನಾಕಧಾರಿಯಾದ ರುದ್ರನನ್ನಾಗಲೀ ಹೇಗೆ ನೋಡಿದೆ? ನೀನು ಹೇಗೆ ಅಸ್ತ್ರಗಳನ್ನು ಪಡೆದೆ? ಹೇಗೆ ಅವರನ್ನು ಆರಾಧಿಸಿದೆ? ಎಲೈ ಅರಿಂದಮನೇ, ಪೂಜ್ಯನಾದ ಇಂದ್ರನು ನಿನ್ನಿಂದ ಉಪಕೃತನಾಗಿದ್ದೇನೆ ಎಂದು ನಿನಗೆ ಹೇಳಿದನಷ್ಟೆ? ನೀನು ಅವನಿಗೆ ಯಾವ ಪ್ರಿಯವನ್ನು ಮಾಡಿದೆ? ಎಲೈ ಮಹಾದ್ಯುತಿಯೇ ನಾನು ಇದನ್ನು ವಿಸ್ತಾರವಾಗಿ ಕೇಳಲು ಬಯಸುತ್ತೇನೆ.
ಯಥಾ ತುಷ್ಟೋ ಮಹಾದೇವೋ ದೇವರಾಜಸ್ತಥಾನಘ ॥7॥
ಯಚ್ಚಾಪಿ ವಜ್ರಪಾಣೇಸ್ತು ಪ್ರಿಯಂ ಕೃತಮರಿಂದಮ |
ಏತದಾಖ್ಯಾಹಿ ಮೇ ಸರ್ವಮಖಿಲೇನ ಧನಂಜಯ ॥8॥
ಎಲೈ ಅನಘನೇ, ದೇವರಾಜನಾದ ಇಂದ್ರನು ಮತ್ತು ಮಹಾದೇವನು ಹೇಗೆ ಪ್ರಸನ್ನರಾದರು? ಎಲೈ ಅರಿಂದಮನೇ, ನೀನು ವಜ್ರಪಾಣಿಯಾದ ಇಂದ್ರನಿಗೆ ಯಾವ ಪ್ರಿಯವನ್ನು ಮಾಡಿದೆ? ಎಲೈ ಧನಂಜಯನೇ, ಇದೆಲ್ಲವನ್ನೂ ವಿಸ್ತಾರವಾಗಿ ಹೇಳು.
ಅರ್ಜುನಃ
ಶೃಣು ಹಂತ ಮಹಾರಾಜ ವಿಧಿನಾ ಯೇನ ದೃಷ್ಟವಾನ್ |

ಶತಕ್ರತುಮಹಂ ದೇವಂ ಭಗವಂತಂ ಚ ಶಂಕರಮ್ ॥9॥
ಅರ್ಜುನ ಮಹಾರಾಜನೇ, ನಾನು ಯಾವ ವಿಧಿಯಿಂದ ಶತಕ್ರತುವಾದ ಇಂದ್ರನನ್ನೂ ಮತ್ತು ಭಗವಂತನಾದ ಶಂಕರನನ್ನೂ ನೋಡಿದೆನೆಂದು ಕೇಳು.
ವಿದ್ಯಾಮಧೀತ್ಯ ತಾಂ ರಾಜಸ್ತ್ವಂಯೋಕ್ತಾಮರಿಮರ್ದನ |
ಭವತಾ ಚ ಸಮಾದಿಷ್ಟಸ್ತಪಸೇ ಪ್ರಸ್ಥಿತೋ ವನಮ್ ॥10॥
ಎಲೈ ಅರಿಮರ್ದನನೇ, ನಾನು ನೀನು ಉಪದೇಶಮಾಡಿದ ಮಂತ್ರಗಳನ್ನು ಅಧ್ಯಯನ ಮಾಡಿ ನಿನ್ನ ಆದೇಶವನ್ನು ಪಡೆದು ತಪಸ್ಸಿಗಾಗಿ ಕಾಡಿಗೆ ಹೊರಟೆ.
ಭೃಗುತುಂಗಮಥೋ ಗತ್ವಾ ಕಾಮ್ಯಕಾದಾಸ್ಥಿತಸ್ತಪಃ |
ಏಕರಾತ್ರೋಷಿತಃ ಕಂಚಿದಪಶ್ಯಂ ಬ್ರಾಹ್ಮಣಂ ಪಥಿ ॥11॥
ಅನಂತರ ನಾನು ಕಾಮ್ಯಕವನದಿಂದ ಭೃಗುತುಂಗವನ್ನು ತಲುಪಿ ಅಲ್ಲಿ ತಪಸ್ಸನ್ನು ಮಾಡಿ ಒಂದು ರಾತ್ರಿ ವಾಸವನ್ನು ಮಾಡಿ ದಾರಿಯಲ್ಲಿ ಒಬ್ಬ ಬ್ರಾಹ್ಮಣನನ್ನು ನೋಡಿದೆ.
ಸ ಮಾಮಪೃಚ್ಛತ್ ಕೌಂತೇಯ ಕ್ವಾಸಿ ಗಂತಾ ಬ್ರವೀಹಿ ಮೇ |
ತಸ್ಮಾ ಅವಿತಥಂ ಸರ್ವಮಬ್ರುವಂ ಕುರುನಂದನ ॥12॥
ಅವನು ಕೌಂತೇಯನೇ ನೀನು ಎಲ್ಲಿಗೆ ಹೋಗುತ್ತಿದ್ದೀಯೆ ಹೇಳು ಎಂದು ನನ್ನನ್ನು ಕೇಳಿದನು. ಎಲೈ ಕುರುನಂದನನೇ, ನಾನು ಅವನಿಗೆ ಎಲ್ಲವನ್ನೂ ಸತ್ಯವಾಗಿ ಹೇಳಿದೆನು.
ಸ ತಥ್ಯಂ ಮಮ ತಚ್ಛ್ರುತ್ವಾ ಬ್ರಾಹ್ಮಣೋ ರಾಜಸತ್ತಮ |
ಅಪೂಜಯತ ಮಾಂ ರಾಜನ್ ಪ್ರೀತಿಮಾಂಶ್ಚಾಭವನ್ಮಯಿ ॥13॥
ಎಲೈ ರಾಜಶ್ರೇಷ್ಠನೇ, ಆ ಬ್ರಾಹ್ಮಣನು ನನ್ನ ಸತ್ಯವಚನವನ್ನು ಕೇಳಿ ನನ್ನಲ್ಲಿ ಪ್ರೀತಿಯನ್ನು ಹೊಂದಿ ನನ್ನನ್ನು ಸತ್ಕರಿಸಿದನು.
ತತೋ ಮಾಮಬ್ರವೀತ್ ಪ್ರೀತಸ್ತಪ ಆತಿಷ್ಠ ಭಾರತ |
ತಪಸ್ವೀ ನಚಿರೇಣ ತ್ವಂ ದ್ರಕ್ಷ್ಯಸೇ ವಿಬುಧಾಧಿಪಮ್ ॥14॥
ಅನಂತರ ಅವನು ನನ್ನನ್ನು ಕುರಿತು ಸಂತೋಷದಿಂದ ಭಾರತನೇ, ತಪಸ್ಸನ್ನು ಆಚರಿಸು. ತಪಸ್ವಿಯಾದ ನೀನು ಶೀಘ್ರವಾಗಿ ವಿಬುಧಾಧಿಪನಾದ ಇಂದ್ರನನ್ನು ನೋಡುವಿ ಎಂದು ಹೇಳಿದನು.
ತತೋಽಹಂ ವಚನಾತ್ ತಸ್ಯ ಗಿರಿಮಾರುಹ್ಯ ಶೈಶಿರಮ್ |
ತಪೋಽತಪ್ಯಂ ಮಹಾರಾಜ ಮಾಸಂ ಮೂಲಫಲಾಶನಃ ॥15॥
ಎಲೈ ಮಹಾರಾಜನೇ, ಅನಂತರ ನಾನು ಅವನ ವಚನದಂತೆ ಹಿಮಾಲಯ ಪರ್ವತವನ್ನು ಹತ್ತಿ ಒಂದು ತಿಂಗಳ ಕಾಲ ಮೂಲಫಲಗಳನ್ನು ಸೇವಿಸಿ ತಪಸ್ಸನ್ನು ಮಾಡಿದೆನು.
ದ್ವಿತೀಯಶ್ಚಾಪಿ ಮೇ ಮಾಸೋ ಜಲಂ ಭಕ್ಷಯತೋ ಗತಃ |
ನಿರಾಹಾರಸ್ತೃತೀಯೇಽಥ ಮಾಸೇ ಪಾಂಡವನಂದನ ॥16॥
ಎಲೈ ಪಾಂಡವನಂದನನೇ, ಎರಡನೆಯ ತಿಂಗಳು ಕೇವಲ ಜಲಭಕ್ಷಣವನ್ನು ಮಾಡಿ ತಪಸ್ಸು ಮಾಡುವುದರಲ್ಲಿ ಕಳೆಯಿತು. ಮೂರನೆಯ ತಿಂಗಳಿನಲ್ಲಿ ನಾನು ನಿರಾಹಾರನಾದೆ.
ಊರ್ಧ್ವಬಾಹುಶ್ಚತುರ್ಥಂ ತು ಮಾಸಮಸ್ಮಿ ಸ್ಥಿತಸ್ತದಾ |
ನ ಚ ಮೇ ಹೀಯತೇ ಪ್ರಾಣಸ್ತದದ್ಭುತಮಿವಾಭವತ್ ॥17॥
ನಾಲ್ಕನೆಯ ಮಾಸದಲ್ಲಿ ನಾನು ಊರ್ಧ್ವಬಾಹುವಾಗಿ ನಿಂತೆ. ನನ್ನ ಪ್ರಾಣವು ಹೋಗಲಿಲ್ಲ. ಈ ಸಂಗತಿಯು ಆಶ್ಚರ್ಯಕರವಾಗಿದ್ದಿತು.
ಪಂಚಮೇ ತ್ವಥ ಸಂಪ್ರಾಪ್ತೇ ಪ್ರಥಮೇ ದಿವಸೇ ಗತೇ |
ವರಾಹಸಂಸ್ಥಿತಂ ಭೂತಂ ಮತ್ಸಮೀಪಂ ಸಮಾಗಮತ್ ॥18॥
ಐದನೆಯ ತಿಂಗಳಿನಲ್ಲಿ ಮೊದಲನೆಯ ದಿವಸವು ಕಳೆಯುತ್ತಿರಲು ನನ್ನ ಸಮೀಪಕ್ಕೆ ವರಾಹರೂಪದ ಒಂದು ಪ್ರಾಣಿಯು ಬಂದಿತು.
ನಿಘ್ನನ್ ಪ್ರೋಥೇನ ಪೃಥಿವೀಂ ವಿಲಿಖಂಶ್ಚರಣೈರಪಿ |
ಸಮ್ಮಾರ್ಜನ್ ಜಠರೇಣೋರ್ವೀಂ ವಿವರ್ತಂಶ್ಚ ಮುಹುರ್ಮುಹುಃ ॥
ಅದು ತನ್ನ ಕೋರೆದಾಡೆಯಿಂದ ಭೂಮಿಯನ್ನು ಕೊರೆಯುತ್ತಾ ಪಾದಗಳಿಂದ ಭೂಮಿಯ ಮೇಲೆ ಬರೆಯುತ್ತಾ ಉದರದಿಂದ ಭೂಮಿಯನ್ನು ಸಾರಿಸುತ್ತಾ ಪುನಃ ಪುನಃ ಹೊರಳಾಡುತ್ತಿತ್ತು.
ಅನು ತಸ್ಯಾಪರಂ ಭೂತಂ ಮಹತ್ಕೈರಾತಸಂಸ್ಥಿತಮ್ |
ಧನುರ್ಬಾಣಾಸಿಮತ್ಪ್ರಾಪ್ತಂ ಸ್ತ್ರೀಗಣಾನುಗತಂ ತದಾ ॥20॥
ಆ ಪ್ರಾಣಿಯ ಹಿಂದೆ ದೊಡ್ಡ ಕಿರಾತ ರೂಪವನ್ನು ಧರಿಸಿದ, ಕೈಗಳಲ್ಲಿ ಧನುಸ್ಸು, ಬಾಣ ಮತ್ತು ಅಸ್ತ್ರಗಳನ್ನು ಹಿಡಿದ, ಸ್ತ್ರೀಗಣದಿಂದ ಹಿಂಬಾಲಿಸಲ್ಪಟ್ಟ, ಇನ್ನೊಂದು ವಸ್ತುವು ಬಂದಿತು.
ತತೋಽಹಂ ಧನುರಾದಾಯ ತಥಾಽಕ್ಷಯ್ಯೇ ಮಹೇಷುಧೀ |
ಅತಾಡಯಂ ಶರೇಣಾಥ ತದ್ಭೂತಂ ಲೋಮಹರ್ಷಣಮ್ ॥21॥
ಆಗ ನಾನು ಧನುಸ್ಸನ್ನೂ ಮತ್ತು ಅಕ್ಷಯ ಬತ್ತಳಿಕೆಯನ್ನು ತೆಗೆದುಕೊಂಡು ಬಾಣದಿಂದ ರೋಮಾಂಚಕಾರಿಯಾಗಿದ್ದ ಆ ಪ್ರಾಣಿಯನ್ನು ಹೊಡೆದೆನು.
ಯುಗಪತ್ ತಂ ಕಿರಾತಸ್ತು ವಿಕೃಷ್ಯ ಬಲವದ್ಧನುಃ |
ಅಭ್ಯಾಜ್ಘ್ನೇ ದೃಢತರಂ ಕಂಪಯನ್ನಿವ ಮೇ ಮನಃ ॥22॥

ಅದೇ ಕಾಲದಲ್ಲಿಯೇ ಆ ಕಿರಾತನೂ ಸಹ ತನ್ನ ದೃಢವಾದ ಧನುಸ್ಸನ್ನು ಎಳೆದು ನನ್ನ ಮನಸ್ಸನ್ನು ಕಂಪಿಸುವಂತೆ ಆ ಪ್ರಾಣಿಗೆ ನನಗಿಂತ ದೃಢವಾಗಿ ಹೊಡೆದನು.
ಸ ತು ಮಾಮಬ್ರವೀದ್ ರಾಜನ್ ಮಮ ಪೂರ್ವಪರಿಗ್ರಹಃ |
ಮೃಗಯಾಧರ್ಮಮುತ್ಸೃಜ್ಯ ಕಿಮರ್ಥಂ ತಾಡಿತಸ್ತ್ವಯಾ ||23||
ರಾಜನೇ, ಅವನು ನನ್ನನ್ನು ಕುರಿತು ಇದನ್ನು ನಾನು ಮೊದಲು ನೋಡಿ ಹಿಂಬಾಲಿಸಿದುದು. ಬೇಟೆಯ ಧರ್ಮವನ್ನು ಬಿಟ್ಟು ನೀನು ಏಕೆ ಈ ಪ್ರಾಣಿಗೆ ಹೊಡೆದೆ ಎಂದು ಕೇಳಿದನು?
ಏಷ ತೇ ನಿಶಿತೈರ್ಬಾಣೈರ್ದರ್ಪಂ ಹನ್ಮಿ ಸ್ಥಿರೋ ಭವ |
ಸ ವರ್ಷವಾನ್ಮಹಾಕಾಯಸ್ತತೋ ಮಾಮಭ್ಯಧಾವತ ||24||
ಹರಿತವಾದ ಬಾಣಗಳಿಂದ ನಿನ್ನ ದರ್ಪವನ್ನು ನಾಶಮಾಡುತ್ತೇನೆ. ನನ್ನ ಎದುರಿಗೆ ನಿಲ್ಲು ಎಂದು ಹೇಳಿ ಮಹಾಕಾಯವುಳ್ಳ ಅವನು ಬಾಣಗಳ ಮಳೆಯನ್ನು ಸುರಿಸುತ್ತಾ ನನ್ನೆಡೆಗೆ ಧಾವಿಸಿ ಬಂದನು.
ತತೋ ಗಿರಿಮಿವಾತ್ಯರ್ಥಮಾವೃಣೋನ್ಮಾಂ ಮಹಾಶರೈಃ |
ತಂ ಚಾಹಂ ಶರವರ್ಷೇಣ ಮಹತಾ ಸಮವಾಕಿರಮ್ ||25||
ಆಗ ಅವನು ಮಳೆಯ ಧಾರೆಗಳು ಪರ್ವತವನ್ನು ಮುಚ್ಚುವಂತೆ ತನ್ನ ಮಹಾಬಾಣಗಳಿಂದ ನನ್ನನ್ನು ಮುಚ್ಚಿದನು. ನಾನೂ ಸಹ ದೊಡ್ಡ ಶರವೃಷ್ಟಿಯನ್ನು ಅವನ ಮೇಲೆ ಪ್ರಯೋಗಿಸಿದೆನು.
ತತಃ ಶರೈರ್ದೀಪ್ತಮುಖೈರ್ಯಂತ್ರಿತೈರನುಮಂತ್ರಿತೈಃ |
ಪ್ರತ್ಯವಿಧ್ಯಮಹಂ ತಂ ತು ವಜ್ರೈರಿವ ಶಿಲೋಚ್ಚಯಮ್ ||26||
ಅನಂತರ ಜ್ವಲಿಸುವ ಮುಖಗಳುಳ್ಳ ಯಂತ್ರಾರೂಢವಾದ ಅನುಮಂತ್ರಿತವಾದ ಬಾಣಗಳಿಂದ ವಜ್ರಾಯುಧದಿಂದ ಶಿಲಾರಾಶಿಯಾದ ಪರ್ವತವನ್ನು ಹೊಡೆದಂತೆ ನಾನು ಅವನಿಗೆ ಹೊಡೆದೆನು.
ತಸ್ಯ ತಚ್ಛತಧಾ ರೂಪಮಭವಚ್ಚ ಸಹಸ್ರಧಾ |
ತಾನಿ ಚಾಸ್ಯ ಶರೀರಾಣಿ ಶರೈರಹಮತಾಡಯಮ್ ||27||
ನಾನು ಹೊಡೆಯುತ್ತಿದ್ದಂತೆ ಅವನ ರೂಪವು ನೂರುಪಟ್ಟಾಗಿ ಸಾವಿರಪಟ್ಟಾಗಿ ಅಭಿವೃದ್ಧಿಯನ್ನು ಹೊಂದಿತು. ಅವನ ಆ ಶರೀರಗಳಿಗೂ ಬಾಣಪ್ರಯೋಗವನ್ನು ಮಾಡಿದೆನು.
ಪುನಸ್ತಾನಿ ಶರೀರಾಣಿ ಏಕೀಭೂತಾನಿ ಭಾರತ |
ಅದೃಶ್ಯಂತ ಮಹಾರಾಜ ತಾನ್ಯಹಂ ವ್ಯಧಮಂ ಪುನಃ ||28||
ಎಲೈ ಭಾರತನೇ, ಪುನಃ ಆ ಶರೀರಗಳೆಲ್ಲವೂ ಒಂದಾಗಿ ಒಂದೇ ಶರೀರವಾಗಿ ಕಂಡವು. ಮಹಾರಾಜನೇ, ನಾನು ಪುನಃ ಅವುಗಳನ್ನು ಬಾಣದಿಂದ ಪೀಡಿಸಿದೆನು.
ಅಣುರ್ಬೃಹಚ್ಛಿರಾ ಭೂತ್ವಾ ಬೃಹಚ್ಚಾಣುಶಿರಾಃ ಪುನಃ |
ಏಕೀಭೂತಸ್ತದಾ ರಾಜನ್ ಸೋಽಭ್ಯವರ್ತತ ಮಾಂ ಯುಧಿ ||29||
ಎಲೈ ರಾಜನೇ, ಅವು ದೊಡ್ಡ ತಲೆಯುಳ್ಳ ಅಣುಶರೀರ, ಚಿಕ್ಕ ತಲೆಯುಳ್ಳ ಬೃಹತ್ ಶರೀರಗಳಾಗಿ ಅನೇಕ ರೂಪವನ್ನು ಹೊಂದಿ ಪುನಃ ಎಲ್ಲವೂ ಒಂದಾಗಿ ಯುದ್ಧದಲ್ಲಿ ನನ್ನ ಮೇಲೆ ಎರಗಿ ಬಂದವು.
ಯದಾಽಭಿಭವಿತುಂ ಬಾಣೈರ್ನ ಚ ಶಕ್ನೋಮಿ ತಂ ರಣೇ |
ತತೋ ಮಹಾಸ್ತ್ರಮಾತಿಷ್ಠಂ ವಾಯವ್ಯಂ ಭರತರ್ಷಭ ||30||
ಎಲೈ ಭರತರ್ಷಭನೇ, ನಾನು ನನ್ನ ಬಾಣಗಳಿಂದ ಯುದ್ಧದಲ್ಲಿ ಅವನನ್ನು ಸೋಲಿಸಲು ಸಾಧ್ಯವಿಲ್ಲದಾದಾಗ ನಾನು ಮಹಾಸ್ತ್ರವಾದ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದೆ.
ನ ಚೈನಮಶಕಂ ಹಂತುಂ ತದದ್ಭುತಮಿವಾಭವತ್ |
ತಸ್ಮಿನ್ ಪ್ರತಿಹತೇ ಚಾಸ್ತ್ರೇ ವಿಸ್ಮಯೋ ಮೇ ಮಹಾನಭೂತ್ ||31||
ಆದರೂ ನಾನು ಅವನನ್ನು ಸಂಹರಿಸಲು ಸಾಧ್ಯವಾಗಲಿಲ್ಲ. ಆ ಸಂಗತಿಯು ಅದ್ಭುತವಾಗಿ ಕಂಡಿತು. ವಾಯವ್ಯಾಸ್ತ್ರವೂ ಪ್ರತಿಹತವಾದಾಗ ನನಗೆ ಬಹಳ ಆಶ್ಚರ್ಯವುಂಟಾಯಿತು.
ಭೂಯ ಏವ ಮಹಾರಾಜ ಸವಿಶೇಷಮಹಂ ತತಃ |
ಅಸ್ತ್ರಪೂಗೇನ ಮಹತಾ ರಣೇ ಭೂತಮವಾಕಿರಮ್ ||32||
ಎಲೈ ಮಹಾರಾಜನೇ, ಆಗ ನಾನು ಪುನಃ ವಿಶೇಷವಾಗಿ ಆ ಯುದ್ಧದಲ್ಲಿ ದೊಡ್ಡ ಅಸ್ತ್ರ ಸಮೂಹಗಳ ಮಳೆಯನ್ನು ಆ ಕಿರಾತನ ಮೇಲೆ ಸುರಿಸಿದೆನು.
ಸ್ಥೂಣಾಕರ್ಣಮಯೋಭಾಜಂ ಶರವರ್ಷಂ ಶರೋಲ್ಬಣಮ್ |
ಶಲಭಾಸ್ತ್ರಮಶ್ಮವರ್ಷಂ ಸಮಾಸ್ಥಾಯಾಹಮಭ್ಯಯಾಮ್ ||33||
ಶರವರ್ಷವನ್ನು ಸುರಿಸುವ ಉಲ್ಬಣವಾದ ಶರದಲ್ಲಿ ಅಭಿಮಂತ್ರಿತವಾದ ಸ್ಥೂಣಾಕರ್ಣಾಸ್ತ್ರವನ್ನೂ ಮತ್ತು ಬಂಡೆಗಳ ಮಳೆಯನ್ನು ಸುರಿಸುವ ಶರಭಾಸ್ತ್ರವನ್ನು ಆಶ್ರಯಿಸಿ ನಾನು ಅವನ ಎದುರಾಗಿ ಹೋಗಿ ಪ್ರಯೋಗಿಸಿದೆನು.
ಜಗ್ರಾಸ ಪ್ರಸಭಂ ತಾನಿ ಸರ್ವಾಣ್ಯಸ್ತ್ರಾಣಿ ಮೇ ನೃಪ |
ತೇಷು ಸರ್ವೇಷು ಜಗ್ಧೇಷು ಬ್ರಹ್ಮಾಸ್ತ್ರಂ ಮಹದಾದಿಶಮ್ ||34||
ಎಲೈ ರಾಜನೇ, ಆ ನನ್ನ ಎಲ್ಲಾ ಅಸ್ತ್ರಗಳನ್ನೂ ಆ ಕಿರಾತನು ಶೀಘ್ರವಾಗಿ ನುಂಗಿದನು. ಅವನು ಎಲ್ಲಾ ಅಸ್ತ್ರಗಳನ್ನೂ ನುಂಗಿದಮೇಲೆ ನಾನು ಘೋರವಾದ ಬ್ರಹ್ಮಾಸ್ತ್ರವನ್ನು ಆಶ್ರಯಿಸಿದೆನು.

ತತಃ ಪ್ರಜ್ವಲಿತೈರ್ಬಾಣೈಃ ಸರ್ವತಃ ಸೋಪಚೀಯತೇ |
ಉಪಚೀಯಮಾನಶ್ಚ ಮಯಾ ಮಹಾಸ್ತ್ರೇಣ ವ್ಯವರ್ಧತ ॥35॥
ತತಃ ಸಂತಾಪಿತಾ ಲೋಕಾ ಮತ್ಪ್ರಸೂತೇನ ತೇಜಸಾ |
ಕ್ಷಣೇನ ಹಿ ದಿಶಃ ಖಂ ಚ ಸರ್ವತೋ ಹಿ ವಿದೀಪಿತಮ್ ॥36॥
ಆಗ ನನ್ನಿಂದ ಪ್ರಯೋಗಿಸಲ್ಪಟ್ಟ ಆ ಮಹಾಸ್ತ್ರವು ಎಲ್ಲಕಡೆಗಳಲ್ಲಿಯೂ ಪ್ರಜ್ವಲಿತ ಬಾಣಗಳಿಂದ ಉಪಚಯವನ್ನು ಹೊಂದಿ ಅಭಿವೃದ್ಧಿಯನ್ನು ಹೊಂದಿತು. ನಾನು ಸೃಷ್ಟಿ ಮಾಡಿದ ಅಸ್ತ್ರತೇಜಸ್ಸಿನಿಂದ ಎಲ್ಲ ಲೋಕಗಳೂ ಸಂತಾಪಗೊಂಡವು. ಕ್ಷಣಕಾಲದಲ್ಲಿ ದಿಕ್ಕುಗಳೂ ಮತ್ತು ಅಂತರಿಕ್ಷವೂ ಸಹ ಜ್ವಾಲೆಯಿಂದ ಉರಿಯಲು ಪ್ರಾರಂಭವಾಯಿತು.
ತದಪ್ಯಸ್ತ್ರಂ ಮಹಾತೇಜಾಃ ಕ್ಷಣೇನೈವ ವ್ಯಶಾತಯತ್ |
ಬ್ರಹ್ಮಾಸ್ತ್ರೇ ತು ಹತೇ ರಾಜನ್ ಭಯಂ ಮಾಂ ಮಹದಾವಿಶತ್ ॥37॥
ಮಹಾತೇಜಸ್ವಿಯಾದ ಆ ಕಿರಾತನು ಒಂದು ಕ್ಷಣದಲ್ಲಿಯೇ ಆ ಅಸ್ತ್ರವನ್ನು ನಾಶಮಾಡಿದನು. ರಾಜನೇ, ಬ್ರಹ್ಮಾಸ್ತ್ರವು ಪ್ರತಿಹತಿಯನ್ನು ಹೊಂದಿದಾಗ ನನಗೆ ದೊಡ್ಡ ಭಯವುಂಟಾಯಿತು.
ತತೋಽಹಂ ಧನುರಾದಾಯ ತಥಾಽಕ್ಷಯ್ಯೇ ಮಹೇಷುಧೀ |
ಸಹಸಾಽಭ್ಯಹನಂ ಭೂತಂ ತಾನ್ಯಪ್ಯಸ್ತ್ರಾಣ್ಯಭಕ್ಷಯತ್ ॥38॥
ಆಗ ನಾನು ನನ್ನ ಧನುಸ್ಸನ್ನೂ ಮತ್ತು ಅಕ್ಷಯ ಬತ್ತಳಿಕೆಗಳನ್ನೂ ತೆಗೆದುಕೊಂಡು ಅದರಿಂದಲೇ ಆ ಕಿರಾತನಿಗೆ ಹೊಡೆದೆನು. ಅವನು ಆ ಅಸ್ತ್ರಗಳನ್ನೂ ಭಕ್ಷಿಸಿದನು.
ಹತೇಷ್ವಸ್ತ್ರೇಷು ಸರ್ವೇಷು ಭಕ್ಷಿತೇಷ್ವಾಯುಧೇಷು ಚ |
ಮಮ ತಸ್ಯ ಚ ಭೂತಸ್ಯ ಬಾಹುಯುದ್ಧಮವರ್ತತ ॥39॥
ಎಲ್ಲಾ ಅಸ್ತ್ರಗಳೂ ಪ್ರತಿಹತವಾಗಿ ಎಲ್ಲಾ ಆಯುಧಗಳೂ ನುಂಗಲ್ಪಡುತ್ತಿರಲು ನನಗೂ ಆ ಕಿರಾತರೂಪದ ಭೂತಕ್ಕೂ ಬಾಹುಯುದ್ಧವು ನಡೆಯಿತು.
ವ್ಯಾಯಾಮಂ ಮುಷ್ಟಿಭಿಃ ಕೃತ್ವಾ ತಳೈರಪಿ ಸಮಾಗತೈಃ |
ಅಪಾರಯಂಶ್ಚ ತದ್ಭೂತಂ ನಿಶ್ಚೇಷ್ಟಮಗಮಂ ಮಹೀಮ್ ॥40॥
ತನ್ನ ಮುಷ್ಟಿಯನ್ನು ಸಂಘಟಿಸಿ ಹಸ್ತತಳದಿಂದಲೂ ಆ ಕಿರಾತನು ನನಗೆ ಹೊಡೆದನು. ಆ ಭೂತವು ನನ್ನನ್ನು ನಿಶ್ಚೇಷ್ಟನನ್ನಾಗಿ ಮಾಡಿ ಭೂಮಿಯ ಮೇಲೆ ಕೆಡವಿತು.
ತತಃ ಪ್ರಹಸ್ಯ ತದ್ಭೂತಂ ತತ್ರೈವಾಂತರಧೀಯತ |
ಸಹ ಸ್ತ್ರೀಭಿರ್ಮಹಾರಾಜ ಪಶ್ಯತೋ ಮೇಽದ್ಭುತೋಪಮಮ್ ॥41॥
ಎಲೈ ಮಹಾರಾಜನೇ, ಅನಂತರ ಆ ಅದ್ಭುತವಾದ ಕಿರಾತನು ನಗುತ್ತಾ ನಾನು ನೋಡುತ್ತಿರುವಂತೆಯೇ ಸ್ತ್ರೀಯರ ಜೊತೆಯಲ್ಲಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ತತಶ್ಚಿಂತಾಂ ಸಮಗಮಂ ಪೂಜಯಿಷ್ಯಾಮ್ಯಹಂ ಪುನಃ |
ಇತಿ ಪುಷ್ಪಾಣಿ ಸಂಗೃಹ್ಯ ಸೈಕತಂ ಶಂಕರಂ ಪ್ರಭುಮ್ ॥41.1॥
ಪೂಜಯಿಷ್ಯಂಸ್ತಮದ್ರಾಕ್ಷಂ ಕಿರಾತಂ ಪುಷ್ಪಧಾರಿಣಮ್ |
ಆಗ ನನಗೆ ಚಿಂತೆಯುಂಟಾಯಿತು. ನಾನು ಪೂಜಿಸುವೆನೆಂದು ಉದ್ದೇಶಿಸಿ ಪುಷ್ಪವನ್ನು ಸಂಗ್ರಹಿಸಿ ಮರಳಿನ ಲಿಂಗವನ್ನು ಮಾಡಿ ಪೂಜಿಸಿದ ಪುಷ್ಪಗಳು ಆ ಕಿರಾತನ ಮೇಲೆ ಇರುವುದನ್ನು ನೋಡಿದೆನು.
ತತಶ್ಚಾನ್ಯಾನಿ ಪುಷ್ಪಾಣಿ ಪೂಜಯಿಷ್ಯನ್ ಪುನಃ ಪುನಃ ॥41.2॥
ತಾನಿ ಸರ್ವಾಣಿ ದೃಷ್ಟ್ವಾಽಹಂ ಕಿರಾತಸ್ಯ ಚ ಮೂರ್ಧನಿ |
ಇತಿ ಕೃತ್ವಾ ಮಹಾದೇವಂ ಪ್ರಣತೋಽಸ್ಮಿ ಪುನಃ ಪುನಃ ॥41.3॥
ಅನಂತರ ಬೇರೆ ಪುಷ್ಪಗಳನ್ನು ಪುನಃ ಪುನಃ ಪೂಜಿಸುವವನಾದರೂ ಆ ಎಲ್ಲಾ ಪುಷ್ಪಗಳೂ ಕಿರಾತನ ತಲೆಯ ಮೇಲೆ ಇದ್ದುದನ್ನು ನೋಡಿ ನಾನು ಆ ಮಹಾದೇವನನ್ನು ಪುನಃ ಪುನಃ ನಮಸ್ಕರಿಸಿದೆ.
ಏವಂ ಕೃತ್ವಾ ಸ ಭಗವಾಂಸ್ತತೋಽನ್ಯದ್ ರೂಪಮಾಸ್ಥಿತಃ |
ದಿವ್ಯಮೇವ ಮಹಾರಾಜ ವಸಾನೋಽದ್ಭುತಮಂಬರಮ್ ॥42॥
ಹಿತ್ವಾ ಮೃಗತನುಂ ತಾಂ ಚ ಭಗವಾಂಸ್ತ್ರಿದಶೇಶ್ವರಃ |
ಸ್ವರೂಪಂ ದಿವ್ಯಮಾಸ್ಥಾಯ ತಸ್ಥೌ ತತ್ರ ಮಹೇಶ್ವರಃ ॥43॥
ಎಲೈ ಮಹಾರಾಜನೇ, ಆ ಪೂಜ್ಯನಾದ ಈಶ್ವರನು ಹೀಗೆ ಮಾಡಿ ಇನ್ನೊಂದು ದಿವ್ಯವಾದ ರೂಪವನ್ನು ಧರಿಸಿ ಅದ್ಭುತವಾದ ವಸ್ತ್ರಗಳಿಂದ ಅಲಂಕೃತನಾಗಿ ಬೇಟೆಯಾಡುವ ಕಿರಾತನ ಶರೀರವನ್ನು ಬಿಟ್ಟು ದಿವ್ಯಸ್ವರೂಪವನ್ನು ತೆಗೆದುಕೊಂಡು ಅಲ್ಲಿ ತ್ರಿದಶೇಶ್ವರನಾದ ಪೂಜ್ಯನಾದ ಮಹೇಶ್ವರನು ನಿಂತನು.
ಅದೃಶ್ಯತ ತತಃ ಸಾಕ್ಷಾದ್ ಭಗವಾನ್ ಗೋವೃಷಧ್ವಜಃ |
ಉಮಾಸಹಾಯೋ ವ್ಯಾಲಧೃಗ್ ಬಹುರೂಪಃ ಪಿನಾಕಧೃಕ್ ॥44॥
ಗೋವೃಷಧ್ವಜನಾದ ಉಮಾಸಹಾಯನಾದ ಗಜಚರ್ಮವನ್ನು ಧರಿಸಿದ, ಪಿನಾಕಪಾಣಿಯಾದ ಬಹುರೂಪನಾದ ಮಹೇಶ್ವರನನ್ನು ನಾನು ಸಾಕ್ಷಾತ್ತಾಗಿ ನೋಡಿದೆನು.
ಸ ಮಾಮಭ್ಯೇತ್ಯ ಸಮರೇ ತಥೈವಾಭಿಮುಖಂ ಸ್ಥಿತಮ್ |
ಶೂಲಪಾಣಿರಥೋವಾಚ ತುಷ್ಟೋಽಸ್ಮೀತಿ ಪರಂತಪ ॥45॥

ಎಲೈ ಪರಂತಪನೇ, ಶೂಲಪಾಣಿಯಾದ ಅವನು ಯುದ್ದದಲ್ಲಿ ಅವನಿಗೆ ಅಭಿಮುಖವಾಗಿ ಹಾಗೆಯೇ ನಿಂತಿದ್ದ ನನ್ನನ್ನು ಸಮೀಪಿಸಿ ನಾನು ಸಂತುಷ್ಟನಾಗಿದ್ದೇನೆ ಎಂದು ಹೇಳಿದನು.
ತತಸ್ತದ್ಧನುರಾದಾಯ ತೂಣೌ ಚಾಕ್ಷಯ್ಯಸಾಯಕೌ |
ಪ್ರಾದಾನ್ಮಮೈವ ಭಗವಾನ್ ಧಾರಯಸ್ವೇತಿ ಚಾಬ್ರವೀತ್ ॥46॥
ಅನಂತರ ಆ ಧನುಸ್ಸನ್ನೂ, ಬತ್ತಳಿಕೆಗಳನ್ನೂ ಮತ್ತು ಅಕ್ಷಯಬಾಣಗಳನ್ನೂ ಆ ಭಗವಂತನು ನನಗೇ ಕೊಟ್ಟು ನೀನೇ ಇದನ್ನು ಧರಿಸು ಎಂದು ಹೇಳಿದನು.
ಮಹೇಶ್ವರಃ
ತುಷ್ಟೋಽಸ್ಮಿ ತವ ಕೌಂತೇಯ ಬ್ರೂಹಿ ಕಿಂ ಕರವಾಣಿ ತೇ |
ಯತ್ ತೇ ಮನೋಗತಂ ವೀರ ತದ್ ಬ್ರೂಹಿ ವಿತರಾಮ್ಯಹಮ್ |
ಅಮರತ್ವಮಪಾಹಾಯ ಬ್ರೂಹಿ ಯತ್ ತೇ ಮನೋಗತಮ್ ॥47॥
ಕೌಂತೇಯನೇ, ನಾನು ನಿನಗೆ ಸಂತುಷ್ಟನಾಗಿದ್ದೇನೆ. ನಿನಗೆ ಏನು ಮಾಡಲಿ ಎಂದು ಹೇಳು. ವೀರನೇ, ಸಶರೀರವಾಗಿ ಸ್ವರ್ಗಕ್ಕೆ ಹೋಗುವುದನ್ನು ಬಿಟ್ಟು ನಿನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಹೇಳು, ನಾನು ನೆರವೇರಿಸುತ್ತೇನೆ.
ಅರ್ಜುನಃ
ತತಃ ಪ್ರಾಂಜಲಿರೇವಾಹಮಸ್ತ್ರೇಷು ಗತಮಾನಸಃ |
ಪ್ರಣಮ್ಯ ಮನಸಾ ಶರ್ವಂ ತತೋ ವಚನಮಾದದೇ ॥48॥
ಅರ್ಜುನ ಆಗ ಅಸ್ತ್ರಗಳಲ್ಲಿಯೇ ನೆಟ್ಟ ಮನಸ್ಸುಳ್ಳ ನಾನು ಆ ಶಿವನಿಗೆ ಕೈಗಳನ್ನು ಮುಗಿದು ಮನಸ್ಸಿನಿಂದಲೇ ಪ್ರಣಾಮವನ್ನು ಮಾಡಿ ಮಾತನಾಡಿದೆನು.
ಭಗವಾನ್ ಮೇ ಪ್ರಸನ್ನಶ್ಚೇದೀಪ್ಸಿತೋಽಯಂ ವರೋ ಮಮ |
ಅಸಶತ್ರಣೀಚ್ಛಾಮ್ಯಹಂ ಜ್ಞಾತುಂ ಯಾನಿ ದೇವೇಷು ಕಾನಿಚಿತ್ ॥49॥
ಪೂಜ್ಯನಾದ ನೀನು ನನ್ನ ಮೇಲೆ ಪ್ರಸನ್ನನಾಗಿರುವುದಾದರೆ ದೇವತೆಗಳಲ್ಲಿ ಇರುವ ಎಲ್ಲಾ ಅಸ್ತ್ರಗಳನ್ನೂ ನಾನು ಪಡೆಯಲು ಇಚ್ಛಿಸುತ್ತೇನೆ. ಇದು ನನಗೆ ಇಷ್ಟವಾದ ವರ (ಎಂದು ಹೇಳಿದೆನು)
ದದಾನೀತ್ಯೇವ ಭಗವಾನಬ್ರವೀತ್ ತ್ರ್ಯಂಬಕಶ್ಚ ಮಾಮ್ |
ರೌದ್ರಮಸ್ತ್ರಂ ಮದೀಯಂ ತ್ವಾಮುಪಸ್ಥಾಸ್ಯತಿ ಪಾಂಡವ ॥50॥
ಎಲೈ ಪಾಂಡವನೇ, ಭಗವಂತನಾದ ತ್ರ್ಯಂಬಕನು ನಾನು ಕೊಡುವೆನು ಎಂದೇ ಹೇಳಿದನು. ನನ್ನ ಪಾಶುಪತಾಸ್ತ್ರವು ನಿನಗೆ ಬಂದು ಸೇರುವುದು ಎಂದೂ ಹೇಳಿದನು.
ಪ್ರದದೌ ಚ ಮಮ ಪ್ರೀತಃ ಸೋಽಸ್ತ್ರಂ ಪಾಶುಪತಂ ಮಹತ್ |
ಉವಾಚ ಚ ಮಹಾದೇವೋ ದತಶತ್ವ ಮೇಽಸ್ತ್ರಂ ಸನಾತನಮ್ ॥51॥
ಪ್ರೀತನಾದ ಮಹಾದೇವನು ನನಗೆ ಶ್ರೇಷ್ಠವಾದ ಸನಾತನವಾದ ಪಾಶುಪತಾಸ್ತ್ರವನ್ನು ಕೊಟ್ಟು ಹೀಗೆ ಹೇಳಿದನು.
ಮಹೇಶ್ವರಃ
ನ ಪ್ರಯೋಜ್ಯಂ ಭವೇದೇತನ್ಮಾನುಷೇಷು ಕಥಂಚನ |
ಜಗದ್ ವಿನಿರ್ದಹೇದೇವಮಲ್ಪತೇಜಸಿ ಪಾತಿತಮ್ |
ಪೀಡ್ಯಮಾನೇನ ಬಲವತ್ ಪ್ರಯೋಜ್ಯಂ ಸ್ಯಾದ್ ಧನಂಜಯ ॥52॥
ಅಸಶತ್ರಣಾಂ ಪ್ರತಿಘಾತೇ ಚ ಸರ್ವಥೈವ ಪ್ರಯೋಜಯೇತ್ ॥53॥
ಮಹೇಶ್ವರ ಈ ಅಸ್ತ್ರವನ್ನು ಎಂದೂ ಮನುಷ್ಯರ ಮೇಲೆ ಪ್ರಯೋಗಿಸಬಾರದು. ಈ ಅಸ್ತ್ರವನ್ನು ಅಲ್ಪಸತ್ತ್ವವುಳ್ಳ ಮನುಷ್ಯರ ಮೇಲೆ ಪ್ರಯೋಗಿಸಿದರೆ ಅದು ಜಗತ್ತನ್ನೇ ಸುಟ್ಟೀತು. ಎಲೈ ಧನಂಜಯನೇ, ಬಲಿಷ್ಠನಾದ ಶತ್ರುವಿನಿಂದ ಪೀಡಿಸಲ್ಪಡುವಾಗ ಶತ್ರುಗಳ ಅಸ್ತ್ರಗಳ ಪ್ರತಿಘಾತಕ್ಕಾಗಿ ಇದನ್ನು ಅವಶ್ಯವಾಗಿ ಉಪಯೋಗಿಸಬೇಕು.
ಅರ್ಜುನಃ
ತದಪ್ರತಿಹತಂ ದಿವ್ಯಂ ಸರ್ವಾಸ್ತ್ರಪ್ರತಿಷೇಧನಮ್ |
ಮೂರ್ತಿಮನ್ಮೇ ಸ್ಥಿತಂ ಪಾರ್ಶ್ವೇ ಪ್ರಸನ್ನೇ ಗೋವೃಷಧ್ವಜೇ ॥54॥
ಅರ್ಜುನ ಗೋವೃಷಧ್ವಜನಾದ ಶಂಕರನು ಪ್ರಸನ್ನನಾಗಿರುವಾಗ ಪ್ರತಿಘಾತರಹಿತವಾದ ಸರ್ವಾಸ್ತ್ರಪ್ರತಿಘಾತಕವಾದ ಆ ದಿವ್ಯಾಸ್ತ್ರವು ಶರೀರವನ್ನು ಧರಿಸಿ ನನ್ನ ಪಕ್ಕದಲ್ಲಿ ನಿಂತಿತು.
ಉತ್ಸಾದನಮಮಿತ್ರಾಣಾಂ ಪರಸೇನಾನಿಕರ್ತನಮ್ |
ದುರಾಸದಂ ದುಷ್ಪ್ರಸಹಂ ಸುರದಾನವರಾಕ್ಷಸೈಃ ॥55॥
ಶತ್ರುಗಳನ್ನು ವಿನಾಶಗೊಳಿಸುವ ಪರಸೈನ್ಯವನ್ನು ಕತ್ತರಿಸುವ ಸುರದಾನವ ರಾಕ್ಷಸರು ಯಾರೂ ಅದರ ಹತ್ತಿರ ಸುಳಿಯಲು ಸಾಧ್ಯವಾಗದ ಯಾರೂ ಅದರ ತೇಜಸ್ಸನ್ನು ಸಹಿಸಲಾರದಂತಹ ಆ ದಿವ್ಯಾಸ್ತ್ರವು (ನನ್ನ ಪಾರ್ಶ್ವದಲ್ಲಿ ನಿಂತಿತು).
ಅನುಜ್ಞಾತಸ್ತ್ವಹಂ ತೇನ ತತ್ರೈವ ಸಮುಪಾವಿಶಮ್ |
ಪ್ರೇಕ್ಷತಶ್ಚೈವ ಮೇ ದೇವಸ್ತತ್ರೈವಾಂತರಧೀಯತ ॥56॥
ನಾನು ಅವನ ಅನುಮತಿಯನ್ನು ಪಡೆದು ಅಲ್ಲಿಯೇ ಕುಳಿತುಕೊಂಡೆನು. ನಾನು ನೋಡುತಿತರುವಂತೆಯೇ ಆ ದೇವನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ಇತಿ ಯಕ್ಷಯುದ್ಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು
* * * *
ನೂರ ಅರವತ್ಮೂರನೆಯ ಅಧ್ಯಾಯ
ಅರ್ಜುನನಿಂದ ಸ್ವರ್ಗಲೋಕವಾಸದ ಮತ್ತು ಅಸ್ತ್ರಪ್ರಾಪ್ತಿಪ್ರಕಾರದ ಕಥನ.
ವಿದ್ಯಾ ಸಮಾಪ್ತಿಯ ನಂತರ ಇಂದ್ರನಿಗೆ ನಿವಾತ ಕವಚ ವಧೆ
ರೂಪವಾದ ಗುರುದಕ್ಷಿಣಾ ಪ್ರಾರ್ಥನೆ.
ಅರ್ಜುನಃ
ತತಸ್ತಾಮವಸಂ ಪ್ರೀತೋ ರಜನೀಂ ತತ್ರ ಭಾರತ |
ಪ್ರಸಾದಾದ್ ದೇವದೇವಸ್ಯ ತ್ರ್ಯಂಬಕಸ್ಯ ಮಹಾತ್ಮನಃ ॥1॥
ಅರ್ಜುನ ಎಲೈ ಭಾರತನೇ, ಅನಂತರ ಆ ರಾತ್ರಿಯನ್ನು ದೇವದೇವನಾದ ಮಹಾತ್ಮನಾದ ತ್ರ್ಯಂಬಕನ ಅನುಗ್ರಹದಿಂದ ಅಲ್ಲಿಯೇ ಕಳೆದೆನು.
ವ್ಯುಷಿತೋ ರಜನೀಂ ಚಾಹಂ ಕೃತ್ವಾ ಪೌರ್ವಾಹ್ಣಿಕೀಃ ಕ್ರಿಯಾಃ |
ಅಪಶ್ಯಂ ತಂ ದ್ವಿಜಶ್ರೇಷ್ಠಂ ದೃಷ್ಟವಾನಸ್ಮಿ ಯಂ ಪುರಾ ॥2॥
ರಾತ್ರಿಯು ಕಳೆದು ನಾನು ಪ್ರಾತರಾಹ್ನಿಕ ಕ್ರಿಯೆಗಳನ್ನು ಮಾಡಿದ ಮೇಲೆ ಹಿಂದೆ ನೋಡಿದ ಆ ದ್ವಿಜಶ್ರೇಷ್ಠನನ್ನು ನೋಡಿದೆನು.
ತಸ್ಮೈ ಚಾಹಂ ಯಥಾವೃತ್ತಂ ಸರ್ವಮೇವ ನ್ಯವೇದಯಮ್ |
ಭಗವಂತಂ ಮಹಾದೇವಂ ಸಮೇತೋಽಸ್ಮೀತಿ ಭಾರತ ॥3॥
ಎಲೈ ಭಾರತನೇ, ನಾನು ಅವನಿಗೆ ಭಗವಂತನಾದ ಮಹಾದೇವನನ್ನು ನೋಡಿದೆನೆಂದು ನಡೆದ ಎಲ್ಲಾ ವೃತ್ತಾಂತವನ್ನೂ ನಡೆದಂತೆಯೇ ನಿವೇದಿಸಿದೆನು.
ಸ ಮಾಮುವಾಚ ರಾಜೇಂದ್ರ ಪ್ರೀಯಮಾಣೋ ದ್ವಿಜೋತ್ತಮಃ |
ದೃಷ್ಟಸ್ತ್ವಯಾ ಮಹಾದೇವೋ ಯಥಾ ನಾನ್ಯೇನ ಕೇನಚಿತ್ ॥4॥
ಎಲೈ ರಾಜೇಂದ್ರನೇ, ಆ ದ್ವಿಜೋತ್ತಮನು ಸಂತೋಷದಿಂದ ನನ್ನನ್ನು ಕುರಿತು ನೀನು ಬೇರೆ ಯಾರೂ ನೋಡದಿದ್ದ ರೀತಿಯಲ್ಲಿ ಮಹಾದೇವನನ್ನು ನೋಡಿದ್ದೀಯೆ ಎಂದು ಹೇಳಿದನು.
ಸಮೇತ್ಯ ಲೋಕಪಾಲೈಸ್ತು ಸರ್ವೈರ್ವೈವಸ್ವತಾದಿಭಿಃ |
ದ್ರಷ್ಟಾಸ್ಯನಘ ದೇವೇಂದ್ರಂ ಸ ಚ ತೇಽಸ್ತ್ರಾಣಿ ದಾಸ್ಯತಿ ॥5॥
ಎಲೈ ಅನಘನೇ, ನೀನು ಲೋಕಪಾಲಕರಾದ ಯಮಾದಿ ಸರ್ವದೇವತೆಗಳನ್ನೂ ಸಂಧಿಸಿ ದೇವೇಂದ್ರನನ್ನು ನೋಡುವಿ. ಅವನು ನಿನಗೆ ಅಸ್ತ್ರಗಳನ್ನು ಕೊಡುವನು.
ಏವಮುಕತ್ವ ಸ ಮಾಂ ರಾಜನ್ನಾಶ್ಲಿಷ್ಯ ಚ ಪುನಃ ಪುನಃ |
ಅಗಚ್ಛತ್ ಸ ಯಥಾಕಾಮಂ ಬ್ರಾಹ್ಮಣಃ ಸೂರ್ಯಸನ್ನಿಭಃ ॥6॥
ಹೀಗೆ ಹೇಳಿ ಆ ಸೂರ್ಯಪ್ರಭೆಯುಳ್ಳ ಬ್ರಾಹ್ಮಣನು ನನ್ನನ್ನು ಪುನಃ ಪುನಃ ಆಲಿಂಗಿಸಿ ಅವನಿಗಿಷ್ಟವಾದ ದಾರಿಯಲ್ಲಿ ಹೊರಟುಹೋದನು.
ಅಥಾಪರಾಹ್ಣೇ ತಸ್ಯಾಹ್ನಃ ಪ್ರಾವಾತ್ ಪುಣ್ಯಃ ಸಮೀರಣಃ |
ಪುನರ್ನವಮಿಮಂ ಲೋಕಂ ಕುರ್ವನ್ನಿವ ಸಪತ್ನಹನ್ ॥7॥
ಎಲೈ ಶತ್ರುನಾಶನನೇ, ಆ ದಿನ ಅಪರಾಹ್ಣದಲ್ಲಿ ಈ ಲೋಕವನ್ನು ಪುನಃ ನವೀಕರಿಸುವಂತೆ ಶುಭವಾದ ವಾಯುವು ಬೀಸಿತು.
ದಿವ್ಯಾನಿ ಚೈವ ಮಾಲ್ಯಾನಿ ಸುಗಂಧೀನಿ ನವಾನಿ ಚ |
ಶೈಶಿರಸ್ಯ ಗಿರೇಃ ಪಾದೇ ಪ್ರಾದುರಾಸನ್ ಸಮೀಪತಃ ॥8॥
ಆ ಹಿಮಾಲಯ ಪರ್ವತದ ಪಾದದಲ್ಲಿ ದಿವ್ಯವಾದ ಸುಗಂಧಯುಕ್ತವಾದ ಹೊಸ ಪುಷ್ಪಗಳು ಬಿದ್ದವು.
ವಾದಿತ್ರಾಣಿ ಚ ದಿವ್ಯಾನಿ ಸುಘೋರಾಣಿ ಸಮಂತತಃ |
ಸ್ತುತಯಶ್ಚೇಂದ್ರಸಂಯುಕ್ತಾ ಅಶ್ರೂಯಂತ ಮನೋಹರಾಃ ॥9॥
ದಿವ್ಯವಾದ ಸುಘೋರವಾದ ವಾದ್ಯಗಳು ಮೊಳಗಿದವು. ಮನೋಹರವಾದ ಇಂದ್ರಸ್ತೋತ್ರಗಳು ಕೇಳಿಬಂದವು.
ಗಣಾಶ್ಚಾಪ್ಸರಸಾಂ ತತ್ರ ಗಂಧರ್ವಾಣಾಂ ತಥೈವ ಚ |
ಪುರಸ್ತಾದ್ ದೇವದೇವಸ್ಯ ಜಗುರ್ಗೀತಾನಿ ಸರ್ವಶಃ ॥10॥
ಅಲ್ಲಿ ದೇವದೇವನಾದ ಇಂದ್ರನ ಮುಂದೆ ಗಂಧರ್ವರ ಗಣಗಳು ಮತ್ತು ಅಪ್ಸರೆಯರ ಗಣಗಳು ಎಲ್ಲಕಡೆಗಳಲ್ಲಿಯೂ ಗಾನವನ್ನು ಮಾಡುತ್ತಿದ್ದರು.
ಮರುತಾಂ ಚ ಗಣಾಸ್ತತ್ರ ದೇವಯಾನೈರುಪಾಗಮನ್ |
ಮಹೇಂದ್ರಾನುಚರಾ ಯೇ ಚ ಯೇ ಚ ಸದ್ಮನಿವಾಸಿನಃ ॥11॥
ಮಹೇಂದ್ರನ ಅನುಚರರು ಮತ್ತು ಮಹೇಂದ್ರನ ಭವನದಲ್ಲಿ ವಾಸಿಸುವವರು ಮತ್ತು ಮರುತ್ತುಗಳ ಗಣಗಳೂ ಸಹ ದೇವಯಾನಗಳಲ್ಲಿ ಅಲ್ಲಿಗೆ ಬಂದವು.
ತತೋ ಮರುತ್ವಾನ್ ಹರಿಭಿರ್ಯುಕ್ತೈರ್ವಾಹೈಃ ಸ್ವಲಂಕೃತೈಃ |

ಶಚೀಸಹಾಯಸ್ತತ್ರಾಯಾತ್ ಸಹ ಸರ್ವೈಸ್ತದಾಮರೈಃ ॥12॥
ಅನಂತರ ದೇವೇಂದ್ರನು ಅಶ್ವಗಳನ್ನು ಹೂಡಿದ ಚೆನ್ನಾಗಿ ಅಲಂಕೃತವಾದ ತನ್ನ ರಥದಲ್ಲಿ ಶಚೀಸಹಾಯನಾಗಿ ಎಲ್ಲಾ ದೇವತೆಗಳ ಜೊತೆಯಲ್ಲಿ ಅಲ್ಲಿಗೆ ಬಂದನು.
ಏತಸ್ಮಿನ್ನೇವ ಕಾಲೇ ತು ಕುಬೇರೋ ನರವಾಹನಃ |
ದರ್ಶಯಾಮಾಸ ಮಾಂ ರಾಜಂಲ್ಲಕ್ಷ್ಮ್ಯಾ ಪರಮಯಾ ಯುತಃ ॥13॥
ಎಲೈ ರಾಜನೇ, ಆ ವೇಳೆಗೆ ಸರಿಯಾಗಿ ನರವಾಹನನಾದ ಕುಬೇರನು ತನ್ನ ಪರಮಕಾಂತಿಯಿಂದೊಡಗೂಡಿ ನನಗೆ ದರ್ಶನವನ್ನು ಕೊಟ್ಟನು.
ದಕ್ಷಿಣಸ್ಯಾಂ ದಿಶಿ ಯಮಂ ಪ್ರತ್ಯಪಶ್ಯಂ ವ್ಯವಸ್ಥಿತಮ್ |
ವರುಣಂ ದೇವರಾಜಂ ಚ ಯಥಾಸ್ಥಾನಮವಸ್ಥಿತಮ್ ॥14॥
ತೇ ಮಾಮೂಚುರ್ಮಹಾರಾಜ ಸಾಂತಯಿತ್ವಾ ನರರ್ಷಭ ॥14.1॥
ದಕ್ಷಿಣದಿಕ್ಕಿನಲ್ಲಿ ಅವಸ್ಥಿತನಾದ ಯಮನನ್ನು ನೋಡಿದೆನು. ಅದರಂತೆ ದೇವರಾಜನಾದ ವರ್ಣನು ತನ್ನ ದಿಕ್ಕಾದ ಪಶ್ಚಿಮದಲ್ಲಿ ಅವಸ್ಥಿತನಾಗಿರುವುದನ್ನು ನೋಡಿದೆನು. ಎಲೈ ಮಹಾರಾಜನೇ, ನರಶ್ರೇಷ್ಠನೇ, ಅವರು ನನ್ನನ್ನು ಸಮಾಧಾನ ಪಡಿಸಿ ಹೀಗೆ ಮಾತನಾಡಿದರು.
ಸವ್ಯಸಾಚಿನ್ ನಿರೀಕ್ಷಾಸ್ಮಾಂಲ್ಲೋಕಪಾಲಾನವಸ್ಥಿತಾನ್ ॥15॥
ಸುರಕಾರ್ಯಾರ್ಥಸಿದ್ಧ್ಯರ್ಥಂ ದೃಷ್ಟವಾನಸಿ ಶಂಕರಮ್ |
ಅಸ್ಮತ್ತೋಽಪಿ ಗೃಹಾಣ ತ್ವಮಸ್ತ್ರಾಣೀತಿ ಸಮಂತತಃ ॥16॥
ಎಲೈ ಸವ್ಯಸಾಚಿಯೇ, ನಿನ್ನ ಎದುರಿಗೆ ನಿಂತಿರುವ ಲೋಕಪಾಲಕರಾದ ನಮ್ಮನ್ನು ನೋಡು. ಸುರಕಾರ್ಯಸಿದ್ಧಿಗಾಗಿ ನೀನು ಶಂಕರನನ್ನು ನೋಡಿದವನಾಗಿದ್ದೀಯೇ. ನಮ್ಮಿಂದಲೂ ಸಹ ಎಲ್ಲರಿಂದಲೂ ಅಸ್ತ್ರಗಳನ್ನು ನೀನು ಸ್ವೀಕರಿಸು ಎಂದು ಹೇಳಿದರು.
ಅರ್ಜುನಃ
ತತೋಽಹಂ ಪ್ರಯತೋ ಭೂತ್ವಾ ಪ್ರಣಿಪತ್ಯ ಸುರರ್ಷಭಾನ್ |
ಪ್ರತ್ಯಗೃಹ್ಣಂ ತದಾಽಸ್ತ್ರಾಣಿ ಮಹಾಂತಿ ವಿಧಿವದ್ ವಿಭೋ ॥17॥
ಅರ್ಜುನ ಎಲೈ ವಿಭುವೇ, ಅನಂತರ ನಾನು ವಾಗಾದಿ ನಿಯಮವುಳ್ಳವನಾಗಿ ದೇವಶ್ರೇಷ್ಠರಾದ ಅವರಿಗೆ ನಮಸ್ಕರಿಸಿ ಆ ಮಹಾಸ್ತ್ರಗಳನ್ನು ವಿಧಿಪೂರ್ವಕವಾಗಿ ಸ್ವೀಕರಿಸಿದೆನು.
ಗೃಹೀತಾಸ್ತ್ರಸ್ತತೋ ದೇವೈರನುಜ್ಞಾತೋಽಸ್ಮಿ ಭಾರತ |
ಅಥ ದೇವಾ ಯಯುಃ ಸರ್ವೇ ಯಥಾಗತಮರಿಂದಮ ॥18॥
ಎಲೈ ಭಾರತನೇ, ಅಸ್ತ್ರಗಳನ್ನು ತೆಗೆದುಕೊಂಡ ಮೇಲೆ ದೇವತೆಗಳಿಂದ ಅನುಮತಿಯನ್ನು ಪಡೆದೆನು. ಅರಿಂದಮನೇ, ಅನಂತರ ದೇವತೆಗಳು ತಾವು ಬಂದ ದಾರಿಯಲ್ಲಿಯೇ ಹಿಂದಿರುಗಿದರು.
ಮಘವಾನಪಿ ದೇವೇಶೋ ರಥಮಾರುಹ್ಯ ಸುಪ್ರಭಮ್ |
ಉವಾಚ ಭಗವಾನ್ ಸ್ವರ್ಗಂ ಗಂತವ್ಯಂ ಫಲ್ಗುನ ತ್ವಯಾ ॥19॥
ದೇವೇಶನಾದ ಪೂಜ್ಯನಾದ ಇಂದ್ರನೂ ಸಹ ತನ್ನ ಕಾಂತಿಯುಕ್ತವಾದ ರಥವನ್ನು ಏರಿ ಅರ್ಜುನನೇ ನೀನು ಸ್ವರ್ಗಕ್ಕೆ ಬರಬೇಕು ಎಂದು ಹೇಳಿದನು.
ಪುರೈವಾಗಮನಾದಸ್ಮಾದ್ ವೇದಾಹಂ ತ್ವಾಂ ಧನಂಜಯ |
ಅತಃ ಪರಂ ತ್ವಹಂ ವೈ ತ್ವಾಂ ದರ್ಶಯೇ ಭರತರ್ಷಭ ॥20॥
ಎಲೈ ಧನಂಜಯನೇ, ನೀನು ಇಲ್ಲಿ ಬರುವುದಕ್ಕಿಂತ ಮೊದಲೇ ನಾನು ನಿನ್ನನ್ನು ತಿಳಿದಿದ್ದೆ. ಎಲೈ ಭರತರ್ಷಭನೇ, ಇಲ್ಲಿಂದ ಮುಂದಕ್ಕೆ ನಾನು ನಿನಗೆ ಸ್ವರ್ಗವನ್ನು ತೋರಿಸುವೆನು.
ತ್ವಯಾ ಹಿ ತೀರ್ಥೇಷು ಪುರಾ ಸಮಾಪ್ಲಾವಃ ಕೃತೋಽಸಕೃತ್ |
ತಪಶ್ಚೇದಂ ಮಹತ್ತಪ್ತಂ ಸ್ವರ್ಗಂ ಗಂತಾಸಿ ಪಾಂಡವ ॥21॥
ಭೂಯಶ್ಚೈವ ಚ ತಪ್ತವ್ಯಂ ತಪಶ್ಚರಣಮುತ್ತಮಮ್ ॥22॥
ನೀನು ಹಿಂದೆ ಅನೇಕ ತೀರ್ಥಗಳಲ್ಲಿ ಅನೇಕ ಬಾರಿ ಸ್ನಾನವನ್ನು ಮಾಡಿದ್ದೀಯೆ. ಮತ್ತು ಈ ಮಹಾತಪಸ್ಸನ್ನೂ ಮಾಡಿದ್ದೀಯೆ. ಎಲೈ ಪಾಂಡವನೇ, ನೀನು ಸ್ವರ್ಗಕ್ಕೆ ಹೋಗುವವನಾಗುವಿ. ಅದಕ್ಕಾಗಿ ಪುನಃ ಶ್ರೇಷ್ಠವಾದ ತಪಸ್ಸನ್ನು ಆಚರಿಸಬೇಕು.
ಸ್ವರ್ಗಂ ತ್ವವಶ್ಯಂ ಗಂತವ್ಯಂ ತ್ವಯಾ ಶತ್ರುನಿಷೂದನ |
ಮಾತಲಿರ್ಮನ್ನಿಯೋಗಾತ್ ತ್ವಾಂ ತ್ರಿದಿವಂ ಪ್ರಾಪಯಿಷ್ಯತಿ ॥23॥
ಎಲೈ ಶತ್ರುಸೂದನನೇ, ನೀನು ಅವಶ್ಯವಾಗಿ ಸ್ವರ್ಗಕ್ಕೆ ಬರಬೇಕು. ನನ್ನ ಆದೇಶದಂತೆ ನನ್ನ ಸಾರಥಿಯಾದ ಮಾತಲಿಯು ನಿನ್ನನ್ನು ಸ್ವರ್ಗಕ್ಕೆ ಕರೆದೊಯ್ಯುವನು.
ವಿದಿತಸ್ತ್ವಂ ಹಿ ದೇವಾನಾಂ ಮುನೀನಾಂ ಚ ಮಹಾತ್ಮನಾಮ್ |
ಇಹಸ್ಥಃ ಪಾಂಡವಶ್ರೇಷ್ಠ ತಪಃ ಕುರ್ವನ್ ಸುದುಷ್ಕರಮ್ ॥24॥
ಎಲೈ ಪಾಂಡವಶ್ರೇಷ್ಠನೇ, ನೀನು ಇಲ್ಲಿದ್ದು ಬಹಳ ದುಷ್ಕರವಾದ ತಪಸ್ಸನ್ನು ಮಾಡುತ್ತಿರುವಾಗಲೇ ನಿನ್ನನ್ನು ದೇವತೆಗಳೂ ಮತ್ತು ಮಹಾತ್ಮರಾದ ಎಲ್ಲ ಋಷಿಗಳೂ ಗಮನಿಸಿದ್ದಾರೆ.
ಅರ್ಜುನಃ
ತತೋಽಹಮಬ್ರುವಂ ಶಕ್ರಂ ಪ್ರಸೀದ ಭಗವನ್ ಮಮ |

ಆಚಾರ್ಯಂ ವರಯೇಯಂ ತ್ವಾಮಸ್ತ್ರಾರ್ಥಂ ತ್ರಿದಶೇಶ್ವರ ॥25॥
ಅರ್ಜುನ ಆಗ ನಾನು ಇಂದ್ರನನ್ನು ಕುರಿತು ಪೂಜ್ಯನೇ, ನನಗೆ ಅನುಗ್ರಹವನ್ನು ಮಾಡು. ತ್ರಿದಶೇಶ್ವರನೇ ನಾನು ಅಸ್ತ್ರದ ಸಲುವಾಗಿ ನಿನ್ನನ್ನು ಗುರುವೆಂದು ವರಣೆ ಮಾಡುತ್ತೇನೆ ಎಂದ ಹೇಳಿದನು.
ಇಂದ್ರಃ
ಕ್ರೂರಕರ್ಮಾಸ್ತ್ರವಿತ್ ತಾತ್ ಭವಿಷ್ಯಸಿ ಪರಂತಪ |
ಯದರ್ಥಮಸ್ತ್ರಾಣೀಪ್ಸುಸ್ತ್ವಂ ತಂ ಕಾಮಂ ಪಾಂಡವಾಪ್ನುಹಿ ॥26॥
ಇಂದ್ರ ಪರಂತಪನೇ, ಅಸ್ತ್ರಪ್ರಾಪ್ತಿಯಾದ ಮೇಲೆ ನೀನು ಘೋರಕರ್ಮವನ್ನು ಮಾಡುವವನಾಗುವಿ. ಎಲೈ ಪಾಂಡವನೇ, ಯಾವ ಉದ್ದೇಶದಿಂದ ನೀನು ಅಸ್ತ್ರಗಳನ್ನು ಪಡೆಯಲು ಬಯಸುತ್ತಿದ್ದೀಯೋ ಆ ನಿನ್ನ ಆಸೆಯು ನೆರವೇರಲಿ.
ಅರ್ಜುನಃ
ತತೋಽಹಮಬ್ರುವಂ ನಾಹಂ ದಿವ್ಯಾನ್ಯಸ್ತ್ರಾಣಿ ಶತ್ರುಹನ್ |
ಮಾನುಷೇಷು ಪ್ರಯೋಕ್ಷ್ಯಾಮಿ ವಿನಾಽಸ್ತ್ರಪ್ರತಿಘಾತನಾತ್ ॥27॥
ಅರ್ಜುನ ಎಲೈ ಶತ್ರುಸೂದನನೇ, ನಾನು ಆ ದಿವ್ಯಾಸ್ತ್ರಗಳನ್ನು ಮನುಷ್ಯರ ಮೇಲೆ ಪ್ರಯೋಗಿಸುವುದಿಲ್ಲ. ಶತ್ರುವಿನ ಅಸ್ತ್ರದ ಪ್ರತಿಘಾತಕ್ಕಾಗಿ ಮಾತ್ರ ಪ್ರಯೋಗಿಸುವೆನು ಎಂದು ಹೇಳಿದೆನು.
ತಾನಿ ದಿವ್ಯಾನಿ ಮೇಽಸ್ತ್ರಾಣಿ ಪ್ರಯಚ್ಛ ವಿಬುಧಾಧಿಪ |
ಲೋಕಾಂಶ್ಚಾಸ್ತ್ರಜಿತಾನ್ ಪಶ್ಚಾಲ್ಲಭೇಯಂ ಸುರಪುಂಗವ ॥28॥
ಎಲೈ ವಿಭುಧಾಧಿಪನೇ, ನನಗೆ ಆ ದಿವ್ಯಾಸ್ತ್ರಗಳನ್ನು ನೀಡು. ಸುರಪುಂಗವನೇ, ನಾನು ಆ ಅಸ್ತ್ರಗಳನ್ನು ಪಡೆದು ಅನಂತರ ಅಸ್ತ್ರದಿಂದ ಜಿತವಾದ ಲೋಕಗಳನ್ನು ಹೊಂದುವೆನು ಎಂದು ಹೇಳಿದೆನು.
ಇಂದ್ರಃ
ಪರೀಕ್ಷಾರ್ಥಂ ಮಯೈತತ್ ತೇ ವಾಕ್ಯಮುಕ್ತಂ ಧನಂಜಯ |
ಮಮಾತ್ಮಜಸ್ಯ ವಚನಂ ಸೂಪಪನ್ನಮಿದಂ ತವ ॥29॥
ಇಂದ್ರ ಧನಂಜಯನೇ, ನಿನ್ನನ್ನು ಪರೀಕ್ಷಿಸುವ ಸಲುವಾಗಿ ನಾನು ಈ ಮಾತನ್ನು ಹೇಳಿದೆನು. ನನ್ನ ಪುತ್ರನಾದ ನಿನ್ನ ಇಂತಹ ಉತ್ತರ ವಚನವು ಬಹಳ ಯೋಗ್ಯವಾಗಿಯೇ ಇದೆ.
ಶಿಕ್ಷಾಮಿ (ಶಿಕ್ಷ ಮೇ) ಭವನಂ ಗತ್ವಾ ಸರ್ವಾಣ್ಯಸ್ತ್ರಾಣಿ ಭಾರತ |
ವಾಯೋರಗ್ನೇರ್ವಸುಭ್ಯೋಽಪಿ ವರುಣಾತ್ ಸಮರುದ್ಗಣಾತ್ ॥30॥
ಎಲೈ ಭಾರತನೇ, ನಿನ್ನನ್ನು ನನ್ನ ಮನೆಗೆ ಕರೆದುಕೊಂಡು ಹೋಗಿ ವಾಯು, ಅಗ್ನಿ, ವಸು, ವರುಣ, ಮರುದ್ಗಣ ಇವರ ಅಸ್ತ್ರವನ್ನು ಉಪದೇಶಕೊಡುತ್ತೇನೆ.
ಸಾಧ್ಯಂ ಪೈತಾಮಹಂ ಚೈವ ಗಂಧರ್ವೋರಗರಕ್ಷಸಾಮ್ |
ವೈಷ್ಣವಾನಿ ಚ ಸರ್ವಾಣಿ ನೈರ್ಋತಾನಿ ತಥೈವ ಚ |
ಮದ್ಗತಾನಿ ಚ ಜಾನೀಹಿ ಸರ್ವಾಸ್ತ್ರಾಣಿ ಕುರೂದ್ವಹ ॥31॥
ಹಾಗೆಯೇ ಸಾಧ್ಯರ, ಪಿತಾಮಹನ, ಗಂಧರ್ವೋರಗರಾಕ್ಷಸರ ಅಸ್ತ್ರಗಳನ್ನೂ, ಎಲ್ಲಾ ವೈಷ್ಣವಾಸ್ತ್ರಗಳನ್ನೂ, ನೈರ್ಋತಾಸ್ತ್ರಗಳನ್ನೂ ಉಪದೇಶ ಕೊಡುತ್ತೇನೆ. ಎಲೈ ಕುರೂದ್ವಹನೇ, ಆ ಎಲ್ಲಾ ಅಸ್ತ್ರಗಳೂ ನನ್ನಲ್ಲಿ ಇವೆ ಎಂದು ತಿಳಿ.
ಅರ್ಜುನಃ
ಏವಮುಕ್ತ್ವಾ ತು ಮಾಂ ಶಕ್ರಸ್ತತ್ರೈವಾಂತರಧೀಯತ ॥32॥
ಅರ್ಜುನ ಹೀಗೆ ನನ್ನನ್ನು ಕುರಿತು ಹೇಳಿ ಇಂದ್ರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಅಥಾಪಶ್ಯಂ ಹರಿಯುಜಂ (ತಂ) ರಥಮೈಂದ್ರಮುಪಸ್ಥಿತಮ್ |
ದಿವ್ಯಂ ಮಾಯಾಮಯಂ ಪುಣ್ಯಂ ಯತ್ತಂ ಮಾತಲಿನಾ ನೃಪ ॥33॥
ಎಲೈ ರಾಜನೇ, ಅನಂತರ ನಾನು ಅಶ್ವಗಳನ್ನು ಹೂಡಿದ ದಿವ್ಯವಾದ ಮಾಯಾಮಯವಾದ ಪವಿತ್ರವಾದ ಮಾತಲಿಯಿಂದ ನಿಯಂತ್ರಿಸಲ್ಪಟ್ಟ ರಥವನ್ನು ನೋಡಿದೆನು.
ಲೋಕಪಾಲೇಷು ಯಾತೇಷು ಮಾಮುವಾಚಾಥ ಮಾತಲಿಃ |
ದ್ರಷ್ಟುಮಿಚ್ಛತಿ ಶಕ್ರಸ್ತ್ವಾಂ ದೇವರಾಜೋ ಮಹಾದ್ಯುತೇ ॥34॥
ಲೋಕಪಾಲಕರು ಹೊರಟು ಹೋದಮೇಲೆ ಮಾತಲಿಯು ನನ್ನನ್ನು ಕುರಿತು ಮಹಾದ್ಯುತಿಯೇ, ದೇವರಾಜನಾದ ಇಂದ್ರನು ನಿನ್ನನ್ನು ನೋಡಲು ಬಯಸುತ್ತಾನೆ ಎಂದು ಹೇಳಿದನು.
ಸಂಸಿದ್ಧ್ಯಸ್ವ ಮಹಾಬಾಹೋ ಕುರು ಕಾರ್ಯಮನಂತರಮ್ |
ಪಶ್ಯ ಪುಣ್ಯಕೃತಾಂಲ್ಲೋಕಾನ್ ಸಶರೀರೋ ದಿವಂ ವ್ರಜ ॥35॥
ಮಹಾಬಾಹುವೇ, ಮೊದಲು ಸಿದ್ಧನಾಗು. ಅದಕ್ಕೆ ಬೇಕಾದ ಕಾರ್ಯವನ್ನು ಮಾಡು. ಉಳಿದ ಕಾರ್ಯವನ್ನು ಅನಂತರ ಮಾಡು. ಸಶರೀರನಾಗಿ ಸ್ವರ್ಗಕ್ಕೆ ಹೋಗಿ ಪುಣ್ಯವನ್ನು ಸಂಪಾದಿಸಿದವರ ಲೋಕವನ್ನು ನೋಡು.
ಅರ್ಜುನಃ
ಇತ್ಯುಕ್ತೋಽಹಂ ಮಾತಲಿನಾ ಗಿರಿಮಾಮಂತ್ರ್ಯ ಶೈಶಿರಮ್ |
ಪ್ರದಕ್ಷಿಣಮುಪಾವೃತ್ಯ ಸಮಾರೋಹಂ ರಥೋತ್ತಮಮ್ |
ಚೋದಯಾಮಾಸ ಸ ಹಯಾನ್ ಮನೋಮಾರುತರಂಹಸಃ ॥36॥

ಅರ್ಜುನ ಮಾತಲಿಯಿಂದ ಹೀಗೆ ಹೇಳಲ್ಪಟ್ಟ ನಾನು ಆ ಹಿಮಾಲಯ ಪರ್ವತವನ್ನು ಆಮಂತ್ರಿಸಿ ಪ್ರದಕ್ಷಿಣೆಯನ್ನು ಮಾಡಿ ಆ ಶ್ರೇಷ್ಠವಾದ ರಥವನ್ನು ಹತ್ತಿದೆನು. ಮನೋವೇಗ ಮತ್ತು ವಾಯುವೇಗವುಳ್ಳ ಆ ಅಶ್ವಗಳನ್ನು ಮಾತಲಿಯು ನಡೆಸಿದನು.
ಮಾತಲಿರ್ಹಯತತ್ತ್ವಜ್ಞೋ ಸರ್ವಶಾಸ್ತ್ರವಿಶಾರದಃ |
ಅವ್ಯೈಕ್ಷತ ಚ ಮೇ ವಕ್ತ್ರಂ ಸ್ಥಿತಸ್ಯಾಥ ಸ ಸಾರಥಿಃ ॥37॥
ಹಯತತ್ತ್ವಜ್ಞನೂ, ಸರ್ವಶಾಸ್ತ್ರವಿಶಾರದನೂ ಆದ ಸಾರಥಿಯು ಅಲುಗಾಡದೆ ಕುಳಿತಿದ್ದ ನನ್ನ ಮುಖವನ್ನು ನೋಡಿದನು.
ತಥಾ ಭ್ರಾಂತೇ ರಥೇ ರಾಜನ್ ವಿಸ್ಮಿತಶ್ಚೇದಮಬ್ರವೀತ್ ॥38॥
ಎಲೈ ರಾಜನೇ, ಹಾಗೆ ರಥವು ಹೊರಡುತ್ತಿರಲು ವಿಸ್ಮಿತನಾಗಿ ಈ ಮಾತನ್ನಾಡಿದನು.
ಅತ್ಯದ್ಭುತಮಿದಂ ತ್ವದ್ಯ ವಿಚಿತ್ರಂ ಪ್ರತಿಭಾತಿ ಮೇ |
ಯದಾಸ್ಥಿತೋ ರಥಂ ದಿವ್ಯಂ ಪದಾನ್ನ ಚಲಿತಃ ಪದಮ್ ॥39॥
ಈ ದಿನ ಈ ಘಟನೆಯು ಅತ್ಯದ್ಭುತವಾದುದೆಂದು ನನಗೆ ತೋರುತ್ತದೆ. ಏಕೆಂದರೆ ದಿವ್ಯರಥವನ್ನು ಏರಿದ ನೀನು ಸ್ವಲ್ಪವೂ ಅಲುಗಾಡಲಿಲ್ಲ.
ದೇವರಾಜೋಽಪಿ ಹಿ ಮಯಾ ನಿತ್ಯಮತ್ರೋಪಲಕ್ಷಿತಃ |
ವಿಚಲನ್ ಪ್ರಥಮೋತ್ಪಾತೇ ಹಯಾನಾಂ ಭರತರ್ಷಭ ॥40॥
ಎಲೈ ಭರತರ್ಷಭನೇ, ಅಶ್ವಗಳ ಮೊದಲ ನೆಗೆತದಲ್ಲಿ ದೇವರಾಜನೂ ಸಹ ತನ್ನ ಸ್ಥಾನದಲ್ಲಿ ಚಲಿಸುವುದನ್ನು ನಾನು ಯಾವಾಗಲೂ ನೋಡುತ್ತೇನೆ.
ತ್ವಂ ಪುನಃ ಸ್ಥಿತ ಏವಾತ್ರ ರಥೇ ಭ್ರಾಂತೇ ಕುರೂದ್ವಹ |
ಅತಿಶಕ್ರಮಿದಂ ಸರ್ವಂ ತವೇತಿ ಪ್ರತಿಭಾತಿ ಮೇ ॥41॥
ಕುರೂದ್ವಹನೇ, ನೀನು ಮಾತ್ರ ರಥವು ಚಲಿಸಿದಾಗ ಅಲುಗಾಡದೆ ಕುಳಿತಿದ್ದೀಯೆ. ನಿನ್ನ ಈ ಸಾಮರ್ಥ್ಯವು ಇಂದ್ರನ ಸಾಮರ್ಥ್ಯವನ್ನು ಮೀರಿದುದೆಂದು ನನಗೆ ತೋರುತ್ತದೆ.
ಅರ್ಜುನಃ
ಇತ್ಯುಕತ್ವಾಽಽಕಾಶಮಾವಿಶ್ಯ ಮಾತಲಿರ್ವಿಬುಧಾಲಯಾನ್ |
ದರ್ಶಯಾಮಾಸ ಮೇ ರಾಜನ್ ವಿಮಾನಾನಿ ಚ ಭಾರತ ॥42॥
ಅರ್ಜುನ ಎಲೈ ಭಾರತನೇ, ಎಲೈ ರಾಜನೇ, ಮಾತಲಿಯು ಹೀಗೆ ಹೇಳಿ ಆಕಾಶಕ್ಕೇರಿ ದೇವತೆಗಳ ನಿವಾಸಗಳನ್ನೂ ಮತ್ತು ವಿಮಾನಗಳನ್ನೂ ನನಗೆ ತೋರಿಸಿದನು.
ನಂದನಾದೀನಿ ದೇವಾನಾಂ ವನಾನ್ಯುಪನಾನಿ ಚ |
ದರ್ಶಯಾಮಾಸ ಮೇ ಶೀಘ್ರಂ ಮಾತಲಿಃ ಶಕ್ರಸಾರಥಿಃ ॥43॥
ನಂದನಾದಿ ದೇವವನಗಳನ್ನೂ ಮತ್ತು ಉಪವನಗಳನ್ನೂ ಸಹ ಇಂದ್ರ ಸಾರಥಿಯಾದ ಮಾತಲಿಯು ನನಗೆ ಶೀಘ್ರವಾಗಿ ತೋರಿಸಿದನು.
ತತಃ ಶಕ್ರಸ್ಯ ಭವನಮಪಶ್ಯಮಮರಾವತೀಮ್ |
ದಿವ್ಯೈಃ ಕಾಮಫಲೈರ್ವೃಕ್ಷೈರತ್ನೈಶ್ಚ ಸಮಲಂಕೃತಾಮ್ ॥44॥
ಅನಂತರ ದಿವ್ಯವಾದ ಕಾಮಫಲಗಳುಳ್ಳ ವೃಕ್ಷಗಳಿಂದ ಕೂಡಿದ ಮತ್ತು ರತ್ನಗಳಿಂದ ಅಲಂಕೃತವಾದ ಇಂದ್ರನ ವಾಸಸ್ಥಾನವಾದ ಅಮರಾವತಿ ಪಟ್ಟಣವನ್ನು ನೋಡಿದೆನು.
ನ ತತ್ರ ಸೂರ್ಯಸ್ತಪತಿ ನ ಶೀತೋಷ್ಣೇ ನ ಚ ಕ್ಲಮಃ |
ನ ಬಾಧತೇ ತತ್ರ ರಜಸ್ತತ್ರಾಸ್ತಿ ನ ಜರಾ ನೃಪ ॥45॥
ಎಲೈ ರಾಜನೇ, ಅಲ್ಲಿ ಸೂರ್ಯನು ತಾಪವನ್ನು ಉಂಟುಮಾಡುವುದಿಲ್ಲ. ಅಲ್ಲಿ ಶೀತೋಷ್ಣಗಳಾಗಲೀ ಅಥವಾ ಆಯಾಸವಾಗಲೀ ಉಂಟಾಗುವುದಿಲ್ಲ. ಅಲ್ಲಿ ಧೂಳಿನ ಬಾಧೆಯಾಗಲೀ ಅಥವಾ ಮುಪ್ಪಾಗಲೀ ಇಲ್ಲ.
ನ ತತ್ರ ಶೋಕೋ ದೈನ್ಯಂ ವಾ ದೌರ್ಬಲ್ಯಂ ಚೋಪಲಕ್ಷ್ಯತೇ |
ದಿವೌಕಸಾಂ ಮಹಾರಾಜ ನ ಗ್ಲಾನಿರರಿಮರ್ದನ |
ನ ಕ್ರೋಧಲೋಭೌ ತತ್ರಾಸ್ತಾಂ ಸುರಾದೀನಾಂ ವಿಶಾಂಪತೇ ॥46॥
ಎಲೈ ಅರಿಮರ್ದನನಾದ ರಾಜನೇ, ಅಲ್ಲಿ ದೇವತೆಗಳಿಗೆ ಶೋಕವಾಗಲೀ, ದೈನ್ಯವಾಗಲೀ ಅಥವಾ ದೌರ್ಬಲ್ಯವಾಗಲೀ ಅಥವಾ ಗ್ಲಾನಿಯಾಗಲೀ ಕಂಡುಬರುವುದಿಲ್ಲ. ಎಲೈ ರಾಜನೇ, ಅಲ್ಲಿ ದೇವತೆಗಳಿಗೆ ಕ್ರೋಧಲೋಭಗಳು ಇರಲಿಲ್ಲ.
ನಿತ್ಯತುಷ್ಟಾಶ್ಚ ತೇ ರಾಜನ್ ಪ್ರಾಣಿನಃ ಸುರವೇಶ್ಮನಿ |
ನಿತ್ಯಪುಷ್ಪಫಲಾಸ್ತತ್ರ ಪಾದಪಾ ಹರಿತಚ್ಛದಾಃ ॥47॥
ಎಲೈ ರಾಜನೇ, ಇಂದ್ರನ ಮನೆಯಲ್ಲಿ ಎಲ್ಲ ಪ್ರಾಣಿಗಳೂ ಯಾವಾಗಲೂ ಸಂತೋಷದಿಂದಿರುತ್ತವೆ. ಹಸಿರು ಎಲೆಗಳ ಹೊದಿಕೆಯಿಂದ ಕೂಡಿದ ವೃಕ್ಷಗಳು ಅಲ್ಲಿ ನಿತ್ಯವೂ ಪುಷ್ಪಫಲಭರಿತವಾಗಿರುತ್ತವೆ.
ಪುಷ್ಕರಿಣ್ಯಶ್ಚ ವಿವಿಧಾಃ ಪದ್ಮಸೌಗಂಧಿಕಾಯುತಾಃ |
ಶೀತಸ್ತತ್ರ ವವೌ ವಾಯುಃ ಸುಗಂಧೀ ಜೀವನಃ ಶುಚಿಃ ॥48॥
ಅಲ್ಲಿ ಪದ್ಮಸೌಗಂಧಿಕಾದಿ ಪುಷ್ಪಗಳನ್ನೊಳಗೊಂಡ ಅನೇಕ ಪುಷ್ಕರಿಣಿಗಳಿವೆ. ಸುಗಂಧಯುಕ್ತವಾದ ಶುದ್ಧವಾದ ಜೀವನಪ್ರದವಾದ ವಾಯುವು ಅಲ್ಲಿ ತಂಪಾಗಿ ಬೀಸುತ್ತದೆ.
ಸರ್ವರತ್ನವಿಚಿತ್ರಾ ಚ ಭೂಮಿಃ ಪುಷ್ಪವಿಭೂಷಿತಾ |
ಮೃಗದ್ವಿಜಾಶ್ಚ ಬಹವೋ ರುಚಿರಾ ಮಧುರಸ್ವರಾಃ ॥49॥

ವಿಮಾನಗಾಮಿನಶ್ಚಾತ್ರ ದೃಶ್ಯಂತೇ ಬಹವೋಽಂಬರೇ ॥50॥
ಎಲ್ಲ ರತ್ನಗಳಿಂದ ಅಲಂಕೃತವಾದ ಭೂಮಿಯು ಪುಷ್ಪಗಳಿಂದಲೂ ಅಲಂಕೃತವಾಗಿರುತ್ತವೆ. ಅಲ್ಲಿ ಸುಂದರವಾದ ಮಧುರಸ್ವರವುಳ್ಳ ಅನೇಕ ಮೃಗಪಕ್ಷಿಗಳಿವೆ. ಕೆಲವು ಪಕ್ಷಿಗಳು ಮನೆಯ ಉಪ್ಪರಿಗೆಗಳಲ್ಲೂ, ಇನ್ನೂ ಅನೇಕ ಪಕ್ಷಿಗಳು ಆಕಾಶದಲ್ಲಿಯೂ ಕಂಡುಬರುತ್ತವೆ.
ತತೋಽಪಶ್ಯಂ ವಸೂನ್ ರುದ್ರಾನ್ ಸಾಧ್ಯಾಂಶ್ಚ ಸಮರುದ್ಗಣಾನ್ |
ಆದಿತ್ಯಾನಶ್ವಿನೌ ಚೈವ ತಾನ್ ಸರ್ವಾನ್ ಪ್ರತ್ಯಪೂಜಯಮ್ ॥51॥
ಅನಂತರ ನಾನು ವಸುಗಳನ್ನೂ, ರುದ್ರರನ್ನೂ, ಮರುದ್ಗಣಗಳಿಂದ ಸಹಿತರಾದ ಸಾಧ್ಯರನ್ನೂ, ಆದಿತ್ಯರನ್ನೂ, ಅಶ್ವಿನೀದೇವತೆಗಳನ್ನೂ ನೋಡಿದೆನು. ಆ ಎಲ್ಲರನ್ನೂ ಪೂಜಿಸಿದೆನು.
ತೇ ಮಾಂ ವೀರ್ಯೇಣ ಯಶಸಾ ತೇಜಸಾ ಚ ಬಲೇನ ಚ |
ಅಸ್ತ್ರೈಶ್ಚಾಪ್ಯನ್ವಜಾನಂತ ಸಂಗ್ರಾಮೇ ವಿಜಯೇನ ಚ ॥52॥
ಅವರು ನನ್ನನ್ನು ವೀರ್ಯದಿಂದಲೂ, ಕೀರ್ತಿಯಿಂದಲೂ, ತೇಜಸ್ಸಿನಿಂದಲೂ, ಬಲದಿಂದಲೂ, ಅಸ್ತ್ರಗಳಿಂದಲೂ, ಸಂಗ್ರಾಮ ವಿಜಯದಿಂದಲೂ ಅಭಿನಂದಿಸಿ ಆಶೀರ್ವಾದ ಮಾಡಿದರು.
ಪ್ರವಿಶ್ಯ ತಾಂ ಪುರೀಂ ದಿವ್ಯಾಂ ದೇವಗಂಧರ್ವಪೂಜಿತಾಮ್ |
ದೇವರಾಜಂ ಸಹಸ್ರಾಕ್ಷಮುಪಾತಿಷ್ಠಂ ಕೃತಾಂಜಲಿಃ ॥53॥
ದೇವಗಂಧರ್ವಪೂಜಿತವಾದ ಆ ದಿವ್ಯಪಟ್ಟಣವನ್ನು ಪ್ರವೇಶಮಾಡಿ ನಾನು ದೇವರಾಜನಾದ ಸಹಸ್ರಾಕ್ಷನಾದ ಇಂದ್ರನ ಬಳಿ ಕೈಗಳನ್ನು ಜೋಡಿಸಿ ನಿಂತೆ.
ದದಾವರ್ಧಾಸನಂ ಪ್ರೀತಃ ಶಕ್ರೋ ಮೇ ದದತಾಂ ವರಃ |
ಬಹುಮಾನಾಚ್ಚ ಗಾತ್ರಾಣಿ ಪಸ್ಪರ್ಶ ಮಮ ವಾಸವಃ ॥54॥
ದಾನಮಾಡುವವರಲ್ಲಿ ಶ್ರೇಷ್ಠನಾದ ಇಂದ್ರನು ಸಂತೋಷದಿಂದ ನನಗೆ ತನ್ನ ಅರ್ಧಾಸನವನ್ನು ಕೊಟ್ಟನು ಮತ್ತು ಇಂದ್ರನು ಬಹುಮಾನದಿಂದ ನನ್ನ ಶರೀರವನ್ನು ನೇವರಿಸಿದನು.
ತತ್ರಾಹಂ ದೇವಗಂಧರ್ವೈಃ ಸಹಿತೋ ಭೂರಿದಕ್ಷಿಣೈಃ |
ಅಸ್ತಾರ್ಥಮವಸಂ ಸ್ವರ್ಗೇ ಶಿಕ್ಷಾಣೋಽಸ್ತಾಣಿ ಭಾರತ ॥55॥
ಎಲೈ ಭಾರತನೇ, ನಾನು ಸ್ವರ್ಗದಲ್ಲಿ ಭೂರಿದಕ್ಷಿಣೆಯನ್ನು ಕೊಡುವ ದೇವಗಂಧರ್ವರಿಂದ ಸಹಿತನಾಗಿ ಅಸ್ತ್ರಗಳನ್ನು ಅಭ್ಯಾಸಮಾಡುತ್ತಾ ಹೊಸ ಅಸ್ತ್ರಗಳನ್ನು ಪಡೆಯುವ ಉದ್ದೇಶದಿಂದ ವಾಸಮಾಡಿದೆನು.
ವಿಶ್ವಾವಸೋಶ್ಚ ವೈ ಪುತ್ರಶ್ಚಿತ್ರಸೇನೋಽಭವತ್ ಸಖಾ |
ಸ ಚ ಗಾಂಧರ್ವಮಖಿಲಂ ಗ್ರಾಹಯಾಮಾಸ ಮಾಂ ನೃಪ ॥56॥
ವಿಶ್ವಾವಸು ಗಂಧರ್ವನ ಮಗನಾದ ಚಿತ್ರಸೇನನನು ನನಗೆ ಸ್ನೇಹಿತನಾದನು. ಎಲೈ ರಾಜನೇ, ಅವನು ನನಗೆ ಗಂಧರ್ವವಿದ್ಯೆ ಎಲ್ಲವನ್ನೂ ಕಲಿಸಿದನು.
ತತ್ರಾಹಮವಸಂ ರಾಜನ್ ಗೃಹೀತಾಸ್ತ್ರಃ ಸುಪೂಜಿತಃ |
ಸುಖಂ ಶಕ್ರಸ್ಯ ಭವನೇ ಸರ್ವಕಾಮಸಮನ್ವಿತಃ ॥57॥
ಎಲೈ ರಾಜನೇ, ನಾನು ಆ ಇಂದ್ರಭವನದಲ್ಲಿ ಅಸ್ತ್ರಗಳನ್ನು ಸ್ವೀಕರಿಸಿ ಎಲ್ಲರಿಂದಲೂ ಪೂಜಿತನಾಗಿ ಸರ್ವಭೋಗಸಮನ್ವಿತನಾಗಿ ಸುಖವಾಗಿ ವಾಸಮಾಡಿದೆ.
ಶೃಣ್ವನ್ ವೈ ಗೀತಶಬ್ದಂ ಚ ತೂರ್ಯಶಬ್ದಂ ಚ ಪುಷ್ಕಲಮ್ |
ಪಶ್ಯಂಶ್ಚಾಪ್ಸರಸಃ ಶ್ರೇಷ್ಠಾ ನೃತ್ಯಂತೀರ್ಭರತರ್ಷಭ ॥58॥
ತತ್ಸರ್ವಮನವಜ್ಞಾಯ ತಥ್ಯಂ ವಿಜ್ಞಾಯ ಭಾರತ |
ಅತ್ಯರ್ಥಂ ಪ್ರತಿಗೃಹ್ಯಾಹಮಸ್ತ್ರೇಷ್ವೇವ ವ್ಯವಸ್ಥಿತಃ ॥59॥
ಗೀತಶಬ್ದ ಮತ್ತು ವಾದ್ಯಗಳ ಶಬ್ದವನ್ನು ಪುಷ್ಕಲವಾಗಿ ಕೇಳುತ್ತಿದ್ದರೂ ನೃತ್ಯ ಮಾಡುವ ಶ್ರೇಷ್ಠರಾದ ಅಪ್ಸರೆಯರನ್ನು ನೋಡುತ್ತಿದ್ದರೂ, ಎಲೈ ಭರತರ್ಷಭನೇ, ನಾನು ಅವೆಲ್ಲವನ್ನೂ ತಿರಸ್ಕರಿಸಿ ಮುಖ್ಯವಾದ ವಿಷಯವನ್ನು ಗಮನಿಸಿ ಅಸ್ತ್ರವಿದ್ಯೆಯಲ್ಲಿಯೇ ಬಹಳವಾಗಿ ನಿರತನಾಗಿದ್ದೆ.
ತತೋಽತುಷ್ಯತ್ ಸಹಸ್ರಾಕ್ಷಸ್ತೇನ ಕಾಮೇನ ಮೇ ವಿಭುಃ |
ಏವಂ ಮೇ ವಸತೋ ರಾಜನ್ನೇಷ ಕಾಲೋಽತ್ಯಗಾದ್ದಿವಿ ॥60॥
ಆಗ ನನ್ನ ಆಸೆಯನ್ನು ತಿಳಿದ ವಿಭುವಾದ ಇಂದ್ರನು ನನ್ನ ಮೇಲೆ ಸಂತೋಷವನ್ನು ಹೊಂದಿದನು. ಎಲೈ ರಾಜನೇ, ಸ್ವರ್ಗದಲ್ಲಿ ವಾಸಿಸುವ ನನಗೆ ಹೀಗೆ ಕಾಲವು ಕಳೆಯಿತು.
ಕೃತಾಸ್ತ್ರಮತಿವಿಶ್ವಸ್ತಮಥ ಮಾಂ ಹರಿವಾಹನಃ |
ಸಂಸ್ಪೃಶ್ಯ ಮೂರ್ಧ್ನಿ ಪಾಣಿಭ್ಯಾಮಿದಂ ವಚನಮಬ್ರವೀತ್ ॥61॥
ಅಸ್ತ್ರವನ್ನು ಸ್ವೀಕರಿಸಿ ನಾನು ವಿಶ್ವಾಸದಿಂದಿರುವಾಗ ಹರಿವಾಹನನಾದ ಇಂದ್ರನು ನನ್ನ ತಲೆಯ ಮೇಲೆ ತನ್ನ ಕೈಯನ್ನಿಟ್ಟು ಈ ಮಾತನ್ನು ಆಡಿದನು.
ನ ತ್ವಮದ್ಯ ಯುಧಾ ಜೇತುಂ ಶಕ್ಯಃ ಸುರಗಣೈರಪಿ |
ಕಿಂ ಪುನರ್ಮಾನುಷೇ ಲೋಕೇ ಮಾನುಷೈರಕೃತಾತ್ಮಭಿಃ ॥62॥
ನಿನ್ನನ್ನು ಈ ದಿನ ಯುದ್ಧದಲ್ಲಿ ದೇವತೆಗಳ ಗಣಗಳೂ ಗೆಲ್ಲಲಾರವು, ಇನ್ನು ದುರ್ಬಲಾತ್ಮರಾದ ಮನುಷ್ಯರು, ಮನುಷ್ಯಲೋಕದಲ್ಲಿ

ನಿನ್ನನ್ನು ಗೆಲ್ಲಲಾರರು ಎಂದು ಹೇಳುವುದೇನು?
ಅಪ್ರಮೇಯೋಽಪ್ರಧೃಷ್ಯಶ್ಚ ಯುದ್ಧೇಷ್ವಪ್ರತಿಮಸ್ತಥಾ |
ಅಜೇಯಸ್ತ್ವಂ ಹಿ ಸಂಗ್ರಾಮೇ ಸರ್ವೈರಪಿ ಸುರಾಸುರೈಃ ||63||
ನೀನು ಅಪ್ರಮೇಯನಾಗಿದ್ದೀಯೆ. ಯಾರಿಂದಲೂ ಸೋಲನ್ನು ಅನುಭವಿಸುವುದಿಲ್ಲ. ಯುದ್ಧದಲ್ಲಿ ಅಪ್ರತಿಮನಾದವನು. ಸುರಾಸುರರೆಲ್ಲರೂ ಸೇರಿದರೂ ಸಂಗ್ರಾಮದಲ್ಲಿ ನಿನ್ನನ್ನು ಜಯಿಸಲಾರರು.
ಅರ್ಜುನಃ
ಅಥಾಬ್ರವೀತ್ಪುನರ್ದೇವಃ ಸಂಪ್ರಹೃಷ್ಟತನೂರುಹಃ |
ಅಸ್ತ್ರಯುದ್ಧೇ ಸಮೋ ವೀರ ನ ತೇ ಕಶ್ಚಿದ್ ಭವಿಷ್ಯತಿ ||64||
ಅರ್ಜುನ ಅನಂತರ ಇಂದ್ರದೇವನು ರೋಮಾಂಚವುಳ್ಳವನಾಗಿ ನನ್ನನ್ನು ಕುರಿತು ಎಲೈ ವೀರನೇ, ಅಸ್ತ್ರಯುದ್ಧದಲ್ಲಿ ನಿನಗೆ ಯಾರೂ ಸಮರಾಗಿರುವುದಿಲ್ಲ.
ಅಪ್ರಮತ್ತಃ ಸದಾ ದಕ್ಷಃ ಸತ್ಯವಾದೀ ಜಿತೇಂದ್ರಿಯಃ |
ಬ್ರಹ್ಮಣ್ಯಶ್ಚಾಸ್ತ್ರವಿಚ್ಚಾಸಿ ಶೂರಶ್ಚಾಸಿ ಕುರೂದ್ವಹ ||65||
ಎಲೈ ಕುರೂದ್ವಹನೇ, ನೀನು ಯಾವಾಗಲೂ ಜಾಗರೂಕನಾಗಿರುವವನು; ದಕ್ಷನಾಗಿರುವವನು, ಸತ್ಯವಾದಿ; ಜಿತೇಂದ್ರಿಯನಾಗಿರುವವನು; ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವವನು; ಅಸ್ತ್ರಜ್ಞನು; ಶೂರನೂ ಆಗಿದ್ದೀಯೆ.
ಅಸ್ತ್ರಾಣಿ ಸಮವಾಪ್ತಾನಿ ತ್ವಯಾ ದಶ ಚ ಪಂಚ ಚ |
ಪಂಚಭಿರ್ವಿಧಿಭಿಃ ಪಾರ್ಥ ವಿದ್ಯತೇ ನ ತ್ವಯಾ ಸಮಃ ||66||
ನೀನು ಹದಿನೈದು ಅಸ್ತ್ರಗಳನ್ನು ಅವುಗಳ ಐದುವಿಧಿಗಳೊಂದಿಗೆ ಸಂಪಾದಿಸಿದ್ದೀಯೆ. ನಿನಗೆ ಯಾರೂ ಸಮರಲ್ಲ.
ಪ್ರಯೋಗಮುಪಸಂಹಾರಮಾವೃತ್ತಿಂ ಚ ಧನಂಜಯ |
ಪ್ರಾಯಶ್ಚಿತ್ತಂ ಚ ವೇತ್ಥ ತ್ವಂ ಪ್ರತಿಘಾತಂ ಚ ಸರ್ವಶಃ ||67||
ಎಲೈ ಧನಂಜಯನೇ, ಪ್ರಯೋಗ, ಉಪಸಂಹಾರ, ಆವೃತ್ತಿ, ಪ್ರಾಯಶ್ಚಿತ್ತ ಮತ್ತು ಪ್ರತಿಘಾತ ಈ ಐದು ವಿಧಿಗಳನ್ನು ಎಲ್ಲಾ ಅಸ್ತ್ರಗಳಿಗೆ ತಿಳಿದಿದ್ದೀಯೆ.
ತತೋ ಗುರ್ವರ್ಥಕಾಲೋಽಯಂ ಸಮುತ್ಪನ್ನಃ ಪರಂತಪ |
ಪ್ರತಿಜಾನೀಷ್ವ ತಂ ಕರ್ತುಂ ತತೋ ವೇತ್ಸ್ಯಾಮ್ಯಹಂ ಪರಮ್ ||68||
ಆದ್ದರಿಂದ ಎಲೈ ಪರಂತಪನೇ, ಈಗ ಗುರುದಕ್ಷಿಣೆಯನ್ನು ಕೊಡುವ ಕಾಲವು ಬಂದೊದಗಿದೆ. ಗುರುದಕ್ಷಿಣೆಯನ್ನು ಕೊಡುವೆನೆಂದು ಪ್ರತಿಜ್ಞೆಯನ್ನು ಮಾಡು. ಅನಂತರ ಮುಂದಿನ ವಿಷಯವನ್ನು ಹೇಳುತ್ತೇನೆ (ಎಂದು ಹೇಳಿದನು).
ತತೋಽಹಮಬ್ರುವಂ ರಾಜನ್ ದೇವರಾಜಮಿದಂ ವಚಃ |
ವಿಷಹ್ಯಂ ಯನ್ಮಯಾ ಕರ್ತುಂ ಕೃತಮೇವ ನಿಬೋಧ ತತ್ ||69||
ಎಲೈ ರಾಜನೇ, ಆಗ ನಾನು ದೇವರಾಜನನ್ನು ಕುರಿತು ಯಾವುದು ನನ್ನ ಕೈಯಿಂದ ಮಾಡಲು ಸಾಧ್ಯವೋ ಅದನ್ನು ಮಾಡಿದ್ದೇನೆಂದೇ ತಿಳಿ ಎಂದು ಹೇಳಿದೆನು.
ತತೋ ಮಾಮಬ್ರವೀದ್ ರಾಜನ್ ಪ್ರಹಸನ್ ಬಲವೃತ್ರಹಾ |
ನಾವಿಷಹ್ಯಂ ತವಾದ್ಯಾಸ್ತಿ ತ್ರಿಷು ಲೋಕೇಷು ಕಿಂಚನ ||70||
ಆಗ ಬಲವೃತ್ರಸೂದನನಾದ ಇಂದ್ರನು ನಗುತ್ತಾ ನನ್ನನ್ನು ಕುರಿತು ಈ ದಿನ ಮೂರುಲೋಕದಲ್ಲಿ ನೀನು ಮಾಡಲು ಸಾಧ್ಯವಿಲ್ಲದ ಕೆಲಸವು ಯಾವುದೂ ಇಲ್ಲ ಎಂದು ಹೇಳಿದನು.
ನಿವಾತಕವಚಾ ನಾಮ ದಾನವಾ ಮಮ ಶತ್ರವಃ |
ಸಮುದ್ರಕುಕ್ಷಿಮಾಶ್ರಿತ್ಯ ದುರ್ಗೇ ಪ್ರತಿವಸಂತ್ಯುತ ||71||
ನನ್ನ ಶತ್ರುಗಳಾದ ನಿವಾತಕವಚರೆಂಬ ದಾನವರು ಸಮುದ್ರಕುಕ್ಷಿಯನ್ನು ಆಶ್ರಯಿಸಿ ದುರ್ಗದಲ್ಲಿ ವಾಸವನ್ನು ಮಾಡುತ್ತಾರೆ.
ತಿಸ್ರಃ ಕೋಟ್ಯಃ ಸಮಾಖ್ಯಾತಾಸ್ತುಲ್ಯರೂಪಬಲಪ್ರಭಾಃ |
ತಾಂಸ್ತತ್ರ ಜಹಿ ಕೌಂತೇಯ ಗುರ್ವರ್ಥಸ್ತೇ ಭವಿಷ್ಯತಿ ||72||
ಎಲೈ ಕೌಂತೇಯನೇ, ಅವರು ಮೂರುಕೋಟಿ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರೂ ಸಮಾನವಾದ ರೂಪ, ಬಲ, ಕಾಂತಿಗಳುಳ್ಳವರು. ಅಲ್ಲಿ ಹೋಗಿ ಅವರನ್ನು ಸಂಹಾರ ಮಾಡಿದರೆ ಅದು ನೀನು ಕೊಡಬೇಕಾದ ಗುರುದಕ್ಷಿಣೆಯಾಗುವುದು (ಎಂದು ಹೇಳಿದನು).
ಅರ್ಜುನಃ
ತತೋ ಮಾತಲಿಸಂಯುಕ್ತಂ ಮಯೂರಸರೋಮಭಿಃ |
ಹಯೈರುಪೇತಂ ಪ್ರಾದಾನ್ಮೇ ರಥಂ ದಿವ್ಯಂ ಮಹಾಪ್ರಭಮ್ ||73||
ಅರ್ಜುನ ಅನಂತರ ಮಾತಲಿಯಿಂದ ಕೂಡಿದ ನವಿಲಿನ ಬಣ್ಣದ ರೋಮಗಳನ್ನು ಹೊಂದಿದ ಕುದುರೆಗಳನ್ನು ಹೂಡಿದ ಮಹಾಕಾಂತಿಯುಳ್ಳ ದಿವ್ಯವಾದ ರಥವನ್ನು ನನಗೆ ಕೊಟ್ಟನು.
ಬಬಂಧ ಚೈವ ಮೇ ಮೂರ್ಧ್ನಿ ಕಿರೀಟಮಿದಮುತ್ತಮಮ್ |
ಸ್ವರೂಪಸದೃಶಂ ಚೈವ ಪ್ರಾದಾದಂಗವಿಭೂಷಣಮ್ ||74||
ನನ್ನ ತಲೆಯಲ್ಲಿ ಈ ಶ್ರೇಷ್ಠವಾದ ಕಿರೀಟವನ್ನು ಅವನೇ ಕಟ್ಟಿದನು ಮತ್ತು ನನಗೆ ಸರಿಹೊಂದುವ ಅಂಗವಿಭೂಷಣಗಳನ್ನೂ ಕೊಟ್ಟನು.
ಅಭೇದ್ಯಂ ಕವಚಂ ಚೇದಂ ಸ್ಪರ್ಶರೂಪವದುತ್ತಮಮ್ |

ಅಜರಾಂ ಜ್ಯಾಮಿಮಾಂ ಚಾಪಿ ಗಾಂಡೀವೇ ಸಮಯೋಜಯತ್ ॥75॥
ಅಭೇದ್ಯವಾದ ಒಳ್ಳೆಯ ಸ್ಪರ್ಶ ಮತ್ತು ರೂಪವುಳ್ಳ ಶ್ರೇಷ್ಠವಾದ ಕವಚವನ್ನು ಕೊಟ್ಟು, ಗಾಂಡೀವ ಧನುಸ್ಸಿಗೆ ನಾಶಹೊಂದದಿರುವ ಈ ಹೆದೆಯನ್ನೂ ಕಟ್ಟಿದನು (ಗಾಂಡೀವ ಧನುಸ್ಸಿನ ಹೆದೆಯು ಕತ್ತರಿಸಲ್ಪಟ್ಟರೆ ಅದು ತಾನೇ ಬೆಳೆಯುತ್ತದೆ. ನಾಶವನ್ನು ಹೊಂದುವುದಿಲ್ಲ. ಬೇರೆ ಹೆದೆಯನ್ನು ಕಟ್ಟಬೇಕಾದ ಪ್ರಸಂಗವಿಲ್ಲ).
ತತಃ ಪ್ರಾಯಾಮಹಂ ತೇನ ಸ್ಯಂದನೇನ ವಿರಾಜತಾ |
ಯೇನಾಜಯದ್ ದೇವಪತಿರ್ಬಲಿಂ ವೈರೋಚನಿಂ ಪುರಾ ॥76॥
ಅನಂತರ ಯಾವ ರಥವನ್ನು ಏರಿ ದೇವಪತಿಯಾದ ಇಂದ್ರನು ಹಿಂದೆ ವಿರೋಚನನ ಮಗನಾದ ಬಲಿಯನ್ನು ಜಯಿಸಿದನೋ ಅದೇ ಕಾಂತಿಯುಕ್ತವಾದ ರಥವನ್ನೇರಿ ನಾನು ಅಲ್ಲಿಂದ ಹೊರಟೆನು.
ತತೋ ದೇವಾಃ ಸರ್ವ ಏವ ತೇನ ಘೋಷೇಣ ಬೋಧಿತಾಃ |
ಮನ್ವಾನಾ ದೇವರಾಜಂ ಮಾಂ ಸಮಾಜಗ್ಮುರ್ವಿಶಾಂಪತೇ ॥77॥
ಎಲೈ ರಾಜನೇ, ಆಗ ದೇವತೆಗಳೆಲ್ಲರೂ ಆ ರಥಘೋಷವನ್ನು ಕೇಳಿ ನನ್ನನ್ನು ಇಂದ್ರನೆಂದು ತಿಳಿದು ನನ್ನ ಬಳಿಗೆ ಬಂದರು.
ದೃಷ್ಟ್ವಾ ಚ ಮಾಮಪೃಚ್ಛಂತ ಕಿಂ ಕರಿಷ್ಯಸಿ ಫಲ್ಗುನ |
ತಾನಬ್ರುವಂ ಯಥಾಭೂತಮಿದಂ ಕರ್ತಾಸ್ಮಿ ಸಂಯುಗೇ ॥78॥
ಅವರೆಲ್ಲರೂ ನನ್ನನ್ನು ನೋಡಿ ಅರ್ಜುನ ಏನನ್ನು ಮಾಡುವಿ ಎಂದು ಕೇಳಿದರು. ನಾನು ಯಥಾರ್ಥವಾದ ವಿಷಯಗಳನ್ನು ತಿಳಿಸಿ ಯುದ್ಧದಲ್ಲಿ ಈ ಕಾರ್ಯವನ್ನು ಮಾಡುವೆನು ಎಂದು ತಿಳಿಸಿದೆನು.
ನಿವಾತಕವಚಾನಾಂ ತು ಪ್ರಸ್ಥಿತಂ ಮಾಂ ವಧೈಷಿಣಮ್ |
ನಿಬೋಧತ ಮಹಾಭಾಗಾಃ ಶಿವಂ ಚಾಶಾಸ್ತ ಮೇಽನಘಾಃ ॥79॥
ಎಲೈ ಮಹಾನುಭಾವರೇ, ನಾನು ನಿವಾತಕವಚರ ವಧೆಯನ್ನು ಉದ್ದೇಶಿಸಿ ಹೊರಟಿದ್ದೇನೆಂದು ತಿಳಿಯಿರಿ. ಅನಘರೇ, ನನಗೆ ಮಂಗಳವನ್ನು ಆಶೀರ್ವಾದ ಮಾಡಿ.
ತತೋ ವಾಗ್ಭಿಃ ಪ್ರಶಸ್ತಾಭಿಸ್ತ್ರಿದಶಾಃ ಪೃಥಿವೀಪತೇ |
ತುಷ್ಟುವುರ್ಮಾಂ ಪ್ರಸನ್ನಾಸ್ತೇ ಯಥಾ ದೇವಂ ಪುರಂದರಮ್ ॥80॥
ಎಲೈ ರಾಜನೇ, ಆಗ ದೇವತೆಗಳು ಸಂತೋಷಗೊಂಡು ದೇವನಾದ ಇಂದ್ರನಿಗೆ ಮಂಗಳಾಶಂಸನೆಯನ್ನು ಮಾಡಿದಂತೆ ನನಗೂ ಸಹ ತಮ್ಮ ವಾಣಿಯಿಂದ ಮಂಗಳಾಶಂಸನವನ್ನು ಮಾಡಿದರು.
ದೇವಾಃ
ರಥೇನಾನೇನ ಮಘವಾ ಜಿತವಾನ್ ಶಂಬರಂ ಯುಧಿ |
ನಮುಚಿಂ ಬಲವೃತ್ರೌ ಚ ಪ್ರಹ್ಲಾದನರಕಾವಪಿ ॥81॥
ದೇವತೆಗಳು ಈ ರಥದಿಂದಲೇ ಹಿಂದೆ ಯುದ್ಧದಲ್ಲಿ ಇಂದ್ರನು ಶಂಬರನನ್ನೂ, ನಮುಚಿಯನ್ನೂ, ಬಲನನ್ನೂ, ವೃತ್ರನನ್ನೂ, ಪ್ರಹ್ಲಾದ ಮತ್ತು ನರಕರನ್ನೂ ಗೆದ್ದನು.
ಬಹೂನಿ ಚ ಸಹಸ್ರಾಣಿ ಪ್ರಯುತಾನ್ಯರ್ಬುದಾನ್ಯಪಿ |
ರಥೇನಾನೇನ ದೈತ್ಯಾನಾಂ ಜಿತವಾನ್ ಮಘವಾ ಯುಧಿ ॥82॥
ಇಂದ್ರನು ಯುದ್ಧದಲ್ಲಿ ಅನೇಕ ಸಹಸ್ರಗಳ ಅಥವಾ ಪ್ರಯುತಗಳ ಅಥವಾ ಅರ್ಬುದಗಳ ಸಂಖ್ಯೆಯಲ್ಲಿ ಇದ್ದ ದೈತ್ಯರನ್ನು ಈ ರಥದಲ್ಲಿಯೇ ಪ್ರಯಾಣ ಮಾಡಿ ಗೆದ್ದನು.
ತ್ವಮಪ್ಯನೇನ ಕೌಂತೇಯ ನಿವಾತಕವಚಾನ್ ರಣೇ |
ವಿಜೇತಾ ಯುಧಿ ವಿಕ್ರಮ್ಯ ಪುರೇವ ಮಘವಾ ವಶೀ ॥83॥
ಕೌಂತೇಯನೇ, ಹಿಂದೆ ಇಂದ್ರನು ವಿಕ್ರಮವನ್ನು ಪ್ರದರ್ಶಿಸಿ ಶತ್ರುಗಳನ್ನು ಮೆಟ್ಟಿದಂತೆ ನೀನೂ ಸಹ ಯುದ್ಧದಲ್ಲಿ ಈ ರಥದಿಂದಲೇ ಪ್ರಯಾಣ ಮಾಡಿ ನಿವಾತಕವಚರನ್ನು ಗೆಲ್ಲುವವನಾಗುವಿ.
ಅಯಂ ಚ ಶಂಖಪ್ರವರೋ ಯೇನ ಜೇತಾಸಿ ದಾನವಾನ್ |
ಅನೇನ ವಿಜಿತಾ ಲೋಕಾಃ ಶಕ್ರೇಣಾಪಿ ಮಹಾತ್ಮನಾ ॥84॥
ಈ ಶ್ರೇಷ್ಠ ಶಂಖದಿಂದ (ಧ್ವನಿಯಿಂದ) ನೀನು ದಾನವರನ್ನು ಗೆಲ್ಲುವಿ. ಮಹಾತ್ಮನಾದ ಇಂದ್ರನೂ ಈ ಶಂಖಧ್ವನಿಯಿಂದಲೇ ಹಿಂದೆ ಲೋಕಗಳನ್ನು ಗೆದ್ದನು.
ಅರ್ಜುನಃ
ಪ್ರದೀಯಮಾನಂ ದೇವೈಸ್ತಂ ದೇವದತ್ತಂ ಜಲೋದ್ಭವಮ್ |
ಪ್ರತ್ಯಗೃಹ್ಣಂ ಜಯಾಯೈನಂ ಸ್ತೂಯಮಾನಸ್ತದಾಽಮರೈಃ ॥85॥
ಅರ್ಜುನ ನಾನು ನೀರಿನಲ್ಲಿ ಉದ್ಭವಿಸಿದ ಆ ದೇವದತ್ತ ಶಂಖವನ್ನು ದೇವತೆಗಳಿಂದ ಕೊಡಮಾಡಿದುದನ್ನು ಜಯದ ಸಲುವಾಗಿ ಸ್ವೀಕರಿಸಿದೆನು. ಆಗ ದೇವತೆಗಳು ನನ್ನನ್ನು ಪ್ರಶಂಸಿಸಿದರು.
ಸ ಶಂಖೀ ಕವಚೀ ಬಾಣೀ ಪ್ರಗೃಹೀತಶರಾಸನಃ |
ದಾನವಾಲಯಮತ್ಯುಗ್ರಂ ಪ್ರಯಾತೋಽಸ್ಮಿ ಯುಯುತ್ಸಯಾ ॥86॥
ಅಂತಹ ನಾನು ಶಂಖವನ್ನು ತೆಗೆದುಕೊಂಡು, ಕವಚವನ್ನು ಧರಿಸಿ, ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದುಕೊಂಡು ಯುದ್ಧವನ್ನು ಮಾಡುವ ಇಚ್ಛೆಯಿಂದ ಘೋರವಾದ ದಾನವಾಲಯವನ್ನು ಕುರಿತು ಪ್ರಯಾಣವನ್ನು ಮಾಡಿದೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ಇತಿ ನಿವಾತಕವಚಯುದ್ಧಪರ್ವಣಿ ದಶಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೂಮೂರನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಐಂದ್ರಂ ಸ್ಯಂದನಮಾರುಹ್ಯ ಪಾರ್ಥೋ ಮಾತಲಿಸಂಯುತಃ |
ಗಾಂಡೀವಂ ಧನುರಾದಾಯ ಯಯೌ ಹಂತುಂ ಮಹಾಸುರಾನ್ ॥
ಅರ್ಜುನ ಮಾತಲಿ ಸಮೇತನಾಗಿ ಇಂದ್ರನ ರಥವನ್ನೇರಿ ಗಾಂಡೀವ ಧನುಸ್ಸನ್ನು ಹಿಡಿದು ಮಹಾ ಅಸುರರನ್ನು ಕೊಲ್ಲಲು ಹೊರಟ.
ಶಂಖಂ ದದುಸ್ತಸ್ಯ ದೇವಾ ದೇವದತ್ತಃ ಸ ಶಂಕರಾಟ್ |
ನಾದಯನ್ ಶಾಂಖಘೋಷೇಣ ಧನುರ್ವಿಸ್ಫಾರಯನ್ ಮಹತ್ ॥
ದಧಾನಃ ಕುಂಡಲೇ ದಿವ್ಯೇ ಶಕ್ರದತ್ತೇ ಸುಭಾಸ್ವರೇ |
ಆಸಸಾದ ಪುರಂ ದಿವ್ಯಂ ದೈತ್ಯಾನಾಮಿಂದ್ರನಂದನಃ ॥310॥
ಅರ್ಜುನನಿಗೆ ದೇವತೆಗಳು ಒಂದು ಶಂಖವನ್ನು ಕೊಟ್ಟರು. ಅದು ದೇವದತ್ತ ಎಂಬ ಶ್ರೇಷ್ಠವಾದ ಶಂಖ. ಇಂದ್ರದತ್ತವಾದ ಹೊಳೆಯುವ ಕುಂಡಲಗಳನ್ನು ಧರಿಸಿ ಶಂಖನಾದದಿಂದ ಎಲ್ಲ ದಿಕ್ಕುಗಳನ್ನೂ ಪ್ರತಿಧ್ವನಿಗೊಳಿಸುತ್ತ ಮಹಾಧನುಸ್ಸನ್ನೂ ಠೇಂಕರಿಸುತ್ತ ದಾನವರ ದಿವ್ಯನಗರವನ್ನು ಸೇರಿದ ಅರ್ಜುನ.
ತಸ್ಯ ಶಂಖಧ್ವನಿಂ ಶ್ರುತ್ವಾ ಗಾಂಡೀವಸ್ಯ ಚ ನಿಃಸ್ವನಮ್ |
ಅಭಿಮಸ್ತ್ರುರ್ಮಹಾವೀರ್ಯಾಃ ನಿವಾತಕವಚಾಸುರಾಃ ॥311॥
ಅರ್ಜುನನ ಶಂಖಧ್ವನಿಯನ್ನೂ ಗಾಂಡೀವದ ಧ್ವನಿಯನ್ನೂ ಕೇಳಿ ಮಹಾಬಲಿಷ್ಠರಾದ ನಿವಾತಕವಚಾಸುರರು ಇದಿರಿಗೆ ಬಂದರು.
ತಿಸ್ರಃ ಕೋಟ್ಯೋ ದಾನವಾನಾಂ ಸ್ವಯಂಭುವರಗರ್ವಿತಾಃ |
ನಾನಾಯುಧೈಃ ರಣೇ ಪಾರ್ಥಮಭ್ಯವರ್ಷನ್ ಸುಸಂಹತಾಃ ॥312॥
ಬ್ರಹ್ಮವರದಿಂದ ದೃಪ್ತರಾದ ಮೂರು ಕೋಟಿ ದಾನವರು ಚೆನ್ನಾಗಿ ಸಂಘಟಿತರಾಗಿ ಯುದ್ಧದಲ್ಲಿ ಅರ್ಜುನನ ಮೇಲೆ ನಾನಾ ಆಯುಧಗಳ ಮಳೆಗರೆದರು.
* * * *
ನೂರ ಅರವತ್ನಾಲ್ಕನೆಯ ಅಧ್ಯಾಯ
ನಿವಾತ ಕವಚರ ಜೊತೆಯಲ್ಲಿ ಯುದ್ಧವನ್ನು ಮಾಡಲು ಅರ್ಜುನನ ಸಮುದ್ರಗಮನ ಮತ್ತು ಯುದ್ಧಾರಂಭ.
ಅರ್ಜುನಃ
ತತೋऽಹಂ ಸ್ತೂಯಮಾನಸ್ತು ತತ್ರ ತತ್ರ ಮಹರ್ಷಿಭಿಃ |
ಅಪಶ್ಯಮುದಧಿಂ ಭೀಮಮಪಾಂಪತಿಮಥಾವ್ಯಯಮ್ ॥1॥
ಅರ್ಜುನ ಆಗ ಅಲ್ಲಲ್ಲಿ ನಾನು ಮಹರ್ಷಿಗಳಿಂದ ಸ್ತೋತ್ರ ಮಾಡಲ್ಪಟ್ಟು ನಾಶವನ್ನು ಹೊಂದದಿರುವ ಅಪಾರ ಜಲನಿಧಿಯಾದ ಭಯಂಕರವಾದ ಸಮುದ್ರವನ್ನು ನೋಡಿದೆನು.
ಫೇನವತ್ಯಃ ಪ್ರಕೀರ್ಣಾಶ್ಚ ಸಂಹತಾಶ್ಚ ಸಮುತ್ಥಿತಾಃ |
ಊರ್ಮಯಶ್ಚಾತ್ರ ದೃಶ್ಯಂತೇ ವಲ್ಗಂತ ಇವ ಪರ್ವತಾಃ ॥2॥
ನೊರೆಯಿಂದ ಕೂಡಿ ಕೆಲವು ಸಲ ಬಿಡಿಬಿಡಿಯಾಗಿ, ಇನ್ನು ಕೆಲವು ಸಹ ಒಟ್ಟಿಗೆ ಎದ್ದುಬರುವ ಅಲೆಗಳು ಮಾತನಾಡುವ ಪರ್ವತಗಳಂತೆ ಕಾಣುತ್ತಿದ್ದವು.
ನಾವಃ ಸಹಸ್ರಶಸ್ತತ್ರ ರತ್ನಪೂರ್ಣಾಃ ಸಮಂತತಃ |
ನಭಸೀವ ವಿಮಾನಾನಿ ವಿಚರಂತ್ಯೋ ವಿರೇಜಿರೇ ॥3॥
ಆಕಾಶದಲ್ಲಿ ವಿಮಾನಗಳು ಸಂಚರಿಸಿದಂತೆ ರತ್ನತುಂಬಿದ ಹಡಗುಗಳು ಸಾವಿರಾರು ಸಂಖ್ಯೆಯಲ್ಲಿ ಅಲ್ಲಿ ಸಂಚರಿಸುತ್ತಾ ಶೋಭೆಯನ್ನು ಉಂಟುಮಾಡಿದವು.
ತಿಮಿಂಗಿಲಾಃ ಕಚ್ಛಪಾಶ್ಚ ತಥಾ ತಿಮಿತಿಮಿಂಗಿಲಾಃ |
ಮಕರಾಶ್ಚಾತ್ರ ದೃಶ್ಯಂತೇ ಜಲೇ ಮಗ್ನಾ ಇವಾದ್ರಯಃ ॥4॥
ತಿಮಿಂಗಿಲಗಳು, ಕೂರ್ಮಗಳು, ತಿಮಿತಿಮಿಂಗಿಲಗಳು ಮತ್ತು ಮೊಸಳೆಗಳೂ ನೀರಿನಲ್ಲಿ ಮುಳುಗಿದ ಪರ್ವತಗಳಂತೆ ಕಾಣುತ್ತಿದ್ದವು.
ಶಂಖಾನಾಂ ಚ ಸಹಸ್ರಾಣಿ ಮಗ್ನಾನ್ಯಪ್ಸು ಸಮಂತತಃ |
ದೃಶ್ಯಂತೇ ಸ್ಮ ಯಥಾ ರಾತ್ರೌ ತಾರಾಸ್ತನ್ವಭ್ರಸಂವೃತಾಃ ॥5॥
ನೀರಿನಲ್ಲಿ ಸ್ವಲ್ಪ ಸ್ವಲ್ಪ ಮುಳುಗಿದ ಸುತ್ತಲೂ ಇದ್ದ ಸಹಸ್ರಾರು ಶಂಖಗಳು ರಾತ್ರಿಯ ವೇಳೆಯಲ್ಲಿ ತೆಳುವಾದ ಮೋಡದಿಂದ ಮುಸುಕಿದ ನಕ್ಷತ್ರಗಳಂತೆ ಕಾಣುತ್ತಿದ್ದವು.
ತಥಾ ಸಹಸ್ರಶಸ್ತತ್ರ ರತ್ನಸಂಘಾಃ ಪ್ಲವಂತ್ಯುತ |
ವಾಯುಶ್ಚ ಘೂರ್ಣತೇ ಭೀಮಸ್ತದದ್ಭುತಮಿವಾಭವತ್ ॥6॥
ಹಾಗೆಯೇ ಅಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ರತ್ನಸಮೂಹಗಳು ತೇಲುತ್ತಿದ್ದವು. ವಾಯುವು ಭಯಂಕರವಾಗಿ ಸದ್ದುಮಾಡುತ್ತಾ ಬೀಸುತ್ತಿತ್ತು. ಅದು ಅದ್ಭುತವಾಗಿದ್ದಿತು.
ತದುದೀಕ್ಷ್ಯ ಮಹಾವೇಗಂ ಸರ್ವಾಂಭೋನಿಧಿಮುತ್ತಮಮ್ |

ಅಪಶ್ಯಂ ದಾನವಾಕೀರ್ಣಂ ತದ್ ದೈತ್ಯಪುರಮಂತಿಕಾತ್ ॥7॥
ಮಹಾರಭಸದಿಂದ ಕೂಡಿದ, ಎಲ್ಲ ನೀರುಗಳಿಗೂ ಆಶ್ರಯವಾದ, ಆ ಸಮುದ್ರವನ್ನು ನೋಡಿ ಅದರಲ್ಲಿ ದಾನವರಿಂದ ತುಂಬಿದ ಅವರ ಪಟ್ಟಣವನ್ನು ಸಮೀಪದಿಂದ ನೋಡಿದೆನು.
ತತ್ರೈವ ಮಾತಲಿಸ್ತೂರ್ಣಂ ನಿಪತ್ಯ ಪೃಥಿವೀತಳೇ |
ತ್ರಾಸಯನ್ರಥಘೋಷೇಣ ತತ್ಪುರಂ ಸಮುಪಾದ್ರವತ್ ॥8॥
ಅಲ್ಲಿಯೇ ಮಾತಲಿಯು ಆಕಾಶದಲ್ಲಿ ಹೋಗುತ್ತಿದ್ದ ರಥವನ್ನು ಭೂತಳದಲ್ಲಿ ಇಳಿಸಿ ರಥಘೋಷದಿಂದ ಎಲ್ಲರಿಗೂ ಭಯವನ್ನು ಉಂಟುಮಾಡುತ್ತಾ ಆ ಪುರದ ಕಡೆಗೆ ರಥವನ್ನು ಓಡಿಸಿದನು.
ರಥಘೋಷಂ ತು ತಂ ಶ್ರುತ್ವಾ ಸ್ತನಯಿತ್ನೋರಿವಾಂಬರೇ |
ಮನ್ವಾನಾ ದೇವರಾಜಂ ಮಾಮಾವಿಗ್ನಾ ದಾನವಾಭವನ್ ॥9॥
ಆಕಾಶದಲ್ಲಿ ಮೊಳಗುವ ಗುಡುಗಿನ ಧ್ವನಿಯಂತಿರುವ ಆ ರಥಘೋಷವನ್ನು ಕೇಳಿ ನನ್ನನ್ನು ದೇವರಾಜನೆಂದು ತಿಳಿದು ದಾನವರು ಭಯಗ್ರಸ್ತರಾದರು.
ಸರ್ವೇ ಸಂಭ್ರಾಂತಮನಸಃ ಶರಚಾಪಧರಾಃ ಸ್ಥಿತಾಃ |
ತಥಾಸಿಶೂಲಪರಶುಗದಾಮುಸಲಪಾಣಯಃ ॥10॥
ಅವರೆಲ್ಲರೂ ದಿಗ್ಭ್ರಾಂತವಾದ ಮನಸ್ಸುಳ್ಳವರಾಗಿ ಬಿಲ್ಲುಬಾಣಗಳನ್ನೂ, ಕತ್ತಿ ಶೂಲ ಪರಶು ಗದಾ ಮುಸಲ ಮೊದಲಾದ ಆಯುಧಗಳನ್ನೂ ಕೈಯಲ್ಲಿ ಹಿಡಿದು ನಿಂತರು.
ತತೋ ದ್ವಾರಾಣಿ ಪಿದಧುರ್ದಾನವಾಸ್ತ್ರಸ್ತಚೇತಸಃ |
ಸಂವಿಧಾಯ ಪುರೇ ರಕ್ಷಾಂ ನ ಸ್ಮ ಕಶ್ಚನ ದೃಶ್ಯತೇ ॥11॥
ಅನಂತರ ಹೆದರಿದ ಮನಸ್ಸುಳ್ಳ ಆ ದಾನವರು ಪಟ್ಟಣದೊಳಗೆ ರಕ್ಷಣೆಯ ವ್ಯವಸ್ಥೆಯನ್ನು ಮಾಡಿ ಮಹಾದ್ವಾರಗಳನ್ನು ಮುಚ್ಚಿದರು. ಯಾರೊಬ್ಬರೂ ಕಣ್ಣಿಗೆ ಬೀಳಲಿಲ್ಲ.
ತತಃ ಶಂಖಮುಪಾದಾಯ ದೇವದತ್ತಂ ಮಹಾಸ್ವನಮ್ |
ಪರಮಾಂ ಮುದಮಾಶ್ರಿತ್ಯ ಪ್ರಾಧಮಂ ತಂ ಶನೈರಹಮ್ ॥12॥
ಆಗ ನಾನು ಮಹಾಸ್ವನವುಳ್ಳ ದೇವದತ್ತ ಶಂಖವನ್ನು ತೆಗೆದುಕೊಂಡು ಬಹಳ ಸಂತೋಷದಿಂದ ನಿಧಾನವಾಗಿ ಊದಿದೆನು.
ಸ ತು ಶಬ್ದೋ ದಿವಂ ಸ್ತಬ್ಧ್ವಾ ಪ್ರತಿಶಬ್ದಮಜೀಜನತ್ |
ವಿತ್ರೇಸುಶ್ಚ ನಿಲಿಲ್ಯುಶ್ಚ ಭೂತಾನಿ ಸುಮಹಾಂತ್ಯಪಿ ॥13॥
ಆ ಶಬ್ದವಾದರೂ ಆಕಾಶಕ್ಕೆ ಹೋಗಿ ಅಲ್ಲಿಂದ ಪ್ರತಿಧ್ವನಿಯನ್ನು ಉಂಟುಮಾಡಿತು. ಎಲ್ಲಾ ದೊಡ್ಡದೊಡ್ಡ ಪ್ರಾಣಿಗಳೂ ಸಹ ಹೆದರಿ ಅಡಗಿಕೊಂಡವು.
ತತೋ ನಿವಾತಕವಚಾಃ ಸರ್ವ ಏವ ಸ್ವಲಂಕೃತಾಃ |
ದಂಸಿತಾ ವಿವಿಧೈಸ್ತ್ರಾಣೈರ್ವಿಚಿತ್ರಾಯುಧಪಾಣಯಃ ॥14॥
ಆಯಸೈಶ್ಚ ಮಹಾಶೂಲೈರ್ಗದಾಭಿರ್ಮುಸಲೈರಪಿ |
ಪಟ್ಟಿಸೈಃ ಕರವಾಳೈಶ್ಚ ರಥಚಕ್ರೈಶ್ಚ ಭಾರತ ॥15॥
ಶತಘ್ನೀಭಿರ್ಭುಶುಂಡೀಭಿಃ ಖಡ್ಗೈಶ್ಚಿತ್ರೈಃ ಸ್ವಲಂಕೃತೈಃ |
ಪ್ರಗೃಹೀತೈರ್ದಿತೇಃ ಪುತ್ರಾಃ ಪ್ರಾದುರಾಸನ್ ಸಹಸ್ರಶಃ ॥16॥
ಅನಂತರ ಎಲ್ಲಾ ನಿವಾತಕವಚರೂ ಚೆನ್ನಾಗಿ ಅಲಂಕಾರ ಮಾಡಿಕೊಂಡು ವಿವಿಧವಾದ ರಕ್ಷಣಾ ಕವಚಗಳನ್ನು ಧಾರಣೆಮಾಡಿ ವಿಚಿತ್ರಾಯುಧಗಳನ್ನು ಕಬ್ಬಿಣದಿಂದ ಮಾಡಿದ ಮಹಾಶೂಲಗಳು, ಗದೆಗಳು, ಮುಸಲಗಳು, ಪಟ್ಟಿಸಗಳು, ಕತ್ತಿಗಳು, ರಥಚಕ್ರಗಳು, ಶತಘ್ನಿಗಳು, ಭೂಸುಂಡಗಳು, ಕರವಾಳಗಳು ಈ ಅಲಂಕೃತವಾದ ಆಯುಧಗಳನ್ನು ಕೈಯಲ್ಲಿ ಹಿಡಿದು ದಿತಿಪುತ್ರರಾದ ಅವರು ಸಹಸ್ರ ಸಂಖ್ಯೆಯಲ್ಲಿ ಎದುರಿಗೆ ಬಂದರು.
ತತೋ ವೇಗೇನ ಮಹತಾ ದಾನವಾ ಮಾಮುಪಾದ್ರವನ್
ವಿಮುಂಚಂತೋ ಶಿತಾನ್ ಬಾಣಾನ್ ಶತಶೋಽಥ ಸಹಸ್ರಶಃ ॥17॥
ಅನಂತರ ದಾನವರು ಶೀಘ್ರವಾಗಿ ಶತಸಂಖ್ಯೆಯಲ್ಲಿ ಸಹಸ್ರ ಸಂಖ್ಯೆಯಲ್ಲಿ ನನ್ನ ಮೇಲೆ ಬಾಣಗಳನ್ನು ಸುರಿಸುತ್ತಾ ನನ್ನ ಕಡೆಗೆ ಓಡಿಬಂದರು.
ತತೋ ವಿಚಾರ್ಯ ಬಹುಶೋ ರಥಮಾರ್ಗೇಷು ತಾನ್ ಹಯಾನ್ |
ಪ್ರಾಚೋದಯತ್ ಸಮೇ ದೇಶೇ ಮಾತಲಿರ್ಭರತರ್ಷಭ ॥18॥
ಎಲೈ ಭರತರ್ಷಭನೇ, ಆಗ ಮಾತಲಿಯು ಬಹಳವಾಗಿ ವಿಚಾರಮಾಡಿ ಸಮತಟ್ಟಾದ ಪ್ರದೇಶದಲ್ಲಿರುವ ಅನೇಕ ರಥಮಾರ್ಗಗಳಲ್ಲಿ ಆ ಕುದುರೆಗಳನ್ನು ಪ್ರಚೋದಿಸಿದನು.
ತೇನ ತೇಷಾಂ ಪ್ರಣುನ್ನಾನಾಮಾಶುತ್ವಾಚ್ಛೀಘ್ರಗಾಮಿನಾಮ್ |
ನಾನ್ವಪಶ್ಯಂ ತದಾ ಕಿಂಚಿತ್ ತನ್ಮೇಽದ್ಭುತಮಿವಾಭವತ್ ॥19॥
ಶೀಘ್ರವಾಗಿ ಹೋಗುವ ಆ ವೇಗವುಳ್ಳ ಕುದುರೆಗಳು ಎಲ್ಲವನ್ನೂ ಧ್ವಂಸ ಮಾಡಿಕೊಂಡು ಹೋಗುವಾಗ ನನ್ನ ಕಣ್ಣಿಗೆ ಏನೂ ಕಾಣಲಿಲ್ಲ. ಅದು ಅದ್ಭುತವಾಗಿದ್ದಿತು.
ತತಸ್ತೇ ದಾನವಾಸ್ತತ್ರ ವಾದಿತ್ರಾಣಿ ಸಹಸ್ರಶಃ |
ವಿಕೃತಸ್ವರರೂಪಾಣಿ ಭೃಶಂ ಸರ್ವಾಣ್ಯನಾದಯನ್ ॥20॥

ಆಗ ಆ ದಾನವರು ವಿಕೃತಸ್ವರ ರೂಪಗಳುಳ್ಳ ಸಹಸ್ರಾರು ವಾದ್ಯಗಳನ್ನು ಎಲ್ಲವನ್ನೂ ಗಟ್ಟಿಯಾಗಿ ಮೊಳಗಿಸಿದರು.
ತೇನ ಶಬ್ದೇನ ಸಹಸಾ ಸಮುದ್ರೇ ಪರ್ವತೋಪಮಾಃ |
ಆಪ್ಲವಂತ ಗತೈಃ ಸತ್ತ್ವೈರ್ಮತ್ಸ್ಯಾಃ ಶತಸಹಸ್ರಶಃ ||21||
ಆ ಶಬ್ದವನ್ನು ಕೇಳಿ ಹೆದರಿಕೆಯಿಂದ ಮೃತವಾದ ಪರ್ವತದಷ್ಟು ದೊಡ್ಡದಾದ ಮೀನುಗಳು, ಶತಸಹಸ್ರಸಂಖ್ಯೆಯಲ್ಲಿ ಮರಣವನ್ನು ಹೊಂದಿ ತೇಲಿದವು.
ಸ ಸಂಪ್ರಹಾರಸ್ತುಮುಲಸ್ತೇಷಾಂ ಚ ಮಮ ಭಾರತ |
ಅವರ್ತತ ಮಹಾಘೋರೋ ನಿವಾತಕವಚಾಂತಕಃ ||22||
ಎಲೈ ಭಾರತನೇ, ಅವರಿಗೂ ಮತ್ತು ನನಗೂ ನಡೆದ ಆ ಯುದ್ಧವು ಮಹಾಘೋರವೂ ಮತ್ತು ತೀವ್ರವೂ ಆಗಿದ್ದು ನಿವಾತಕವಚರ ನಾಶವನ್ನು ಉಂಟು ಮಾಡುವುದಾಗಿದ್ದಿತು.
ತತೋ ದೇವರ್ಷಯಶ್ಚೈವ ತಥಾನ್ಯೇ ಚ ಮಹರ್ಷಯಃ |
ಬ್ರಹ್ಮರ್ಷಯಶ್ಚ ಸಿದ್ಧಾಶ್ಚ ಸಮಾಜಗ್ಮುರ್ಮಹಾಮೃಧೇ ||23||
ಆಗ ಮಹಾಯುದ್ಧವು ನಡೆಯುತ್ತಿರಲು ದೇವರ್ಷಿಗಳೂ ಅದರಂತೆ ಮಹರ್ಷಿಗಳೂ ಮತ್ತು ಬ್ರಹ್ಮರ್ಷಿಗಳೂ ಮತ್ತು ಸಿದ್ಧರೂ ಅಲ್ಲಿಗೆ ಬಂದರು.
ತೇ ವೈ ಮಾಮನುರೂಪಾಭಿರ್ಮಧುರಾಭಿರ್ಜಯೈಷಿಣಃ |
ಅಸ್ತುವನ್ ಮುನಯೋ ವಾಗ್ಭಿರ್ಯಥೇಂದ್ರಂ ತಾರಕಾಮಯೇ ||24||
ನನ್ನ ಜಯವನ್ನು ಬಯಸಿದ ಆ ಋಷಿಗಳು ಅನುರೂಪವಾದ ಮಧುರವಾದ ಮಾತುಗಳಿಂದ ತಾರಕಾಮಯ ಯುದ್ಧದಲ್ಲಿ ಇಂದ್ರನನ್ನು ಸ್ತೋತ್ರ ಪೂರ್ವಕವಾಗಿ ಆಶೀರ್ವಾದ ಮಾಡಿದಂತೆ ಆಶೀರ್ವದಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಃಷಷ್ಟ್ಯಧಿಕಶತತಮೋಽಧ್ಯಾಯಃ ||
|| ಇತಿ ನಿವಾತಕವಚಯುದ್ಧಪರ್ವಣಿ ಏಕಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು
* * * *
ನೂರ ಅರವತ್ತೈದನೆಯ ಅಧ್ಯಾಯ
ನಿವಾತಕವಚರ ಜೊತೆಯಲ್ಲಿ ಅರ್ಜುನನ ಯುದ್ಧ.
ಅರ್ಜುನಃ
ತತೋ ನಿವಾತಕವಚಾಃ ಸರ್ವೇ ವೇಗೇನ ಭಾರತ |
ಅಭ್ಯದ್ರುವನ್ ಮಾಂ ಸಹಿತಾಃ ಪ್ರಗೃಹೀತಾಯುಧಾ ರಣೇ ||1||
ಅರ್ಜುನ ಎಲೈ ಭಾರತನೇ, ಆಗ ನಿವಾತಕವಚರೆಲ್ಲರೂ ಕೈಯಲ್ಲಿ ಆಯುಧಗಳನ್ನು ಹಿಡಿದು ಯುದ್ಧದಲ್ಲಿ ಒಟ್ಟಿಗೆ ನನ್ನ ಕಡೆಗೆ ವೇಗದಿಂದ ಓಡಿಬಂದರು.
ಆಚ್ಛಾದ್ಯ ರಥಪಂಥಾನಮುತ್ಕ್ರೋಶಂತೋ ಮಹಾರಥಾಃ |
ಆವೃತ್ಯ ಸರ್ವತಸ್ತೇ ಮಾಂ ಶರವರ್ಷೈರವಾಕಿರನ್ ||2||
ಮಹಾರಥರಾದ ಅವರು ನನ್ನ ರಥಮಾರ್ಗವನ್ನು ತಡೆದು ಗಟ್ಟಿಯಾಗಿ ಕಿರುಚುತ್ತಾ ಎಲ್ಲಕಡೆಗಳಿಂದಲೂ ನನ್ನನ್ನು ಆವರಿಸಿ ನನ್ನ ಮೇಲೆ ಬಾಣಗಳ ಮಳೆಯನ್ನು ಕರೆದರು.
ತತೋಽಪರೇ ಮಹಾವೀರ್ಯಾಃ ಶೂಲಪಟ್ಟಿಸಪಾಣಯಃ |
ಶೂಲಾನಿ ಚ ಭುಶುಂಡೀಶ್ಚ ಮುಮುಚುರ್ದಾನವಾ ಮಯಿ ||3||
ಮತ್ತು ಮಹಾವೀರರಾದ ಇನ್ನು ಕೆಲವು ದಾನವರು ಕೈಯಲ್ಲಿ ಶೂಲಪಟ್ಟಿಸಗಳನ್ನೂ ಹಿಡಿದು ಶೂಲಗಳನ್ನು ಮತ್ತು ಭುಶುಂಡಿಗಳನ್ನು ನನ್ನ ಮೇಲೆ ಎಸೆದರು.
ತಚ್ಛೂಲವರ್ಷಂ ಸುಮಹದ್ ಗದಾಶಕ್ತಿಸಮಾಕುಲಮ್ |
ಅನಿಶಂ ಸೃಜ್ಯಮಾನಂ ತೈರತನ್ ಮದ್ರಥೋಪರಿ ||4||
ಅವರಿಂದ ಸತತವಾಗಿ ಸೃಷ್ಟಿಸಲ್ಪಟ್ಟ ದೊಡ್ಡ ಗದಾಶಕ್ತಿ ಆಯುಧಗಳಿಂದ ಕೂಡಿದ ಆ ಶೂಲವರ್ಷವು ನನ್ನ ರಥದ ಮೇಲೆ ಬಿದ್ದಿತು.
ಅನ್ಯೇ ಮಾಮಭ್ಯಧಾವಂತ ನಿವಾತಕವಚಾ ಯುಧಿ |
ಶಿತಶಸ್ತ್ರಾಯುಧಾ ರೌದ್ರಾಃ ಕಾಲರೂಪಾಃ ಪ್ರಹಾರಿಣಃ ||5||
ಇನ್ನು ಕೆಲವು ಕೃಷ್ಣವರ್ಣದ ಭಯಂಕರರಾದ ಪ್ರಹಾರಶೀಲರಾದ ನಿವಾತಕವಚರು ಹರಿತವಾದ ಶಸ್ತ್ರ ಮತ್ತು ಆಯುಧಗಳನ್ನು ಹಿಡಿದು ಯುದ್ಧದಲ್ಲಿ ನನ್ನ ಮೇಲೆ ಎರಗಿ ಬಂದರು.
ತಾನಹಂ ವಿವಿಧೈರ್ಬಾಣೈರ್ವೇಗವದ್ಭಿರಜಿಹ್ಮಗೈಃ |
ಗಾಂಡೀವಮುಕ್ತೈರಭ್ಯಘ್ನಮೇಕೈಕಂ ದಶಭಿರ್ಮೃಧೇ ||6||
ತೇ ಕೃತಾ ವಿಮುಖಾಃ ಸರ್ವೇ ಮತ್ಪ್ರಯುಕ್ತೈಃ ಶಿಲಾಶಿತೈಃ |
ತತೋ ಮಾತಲಿನಾ ತೂರ್ಣಂ ಹಯಾಸ್ತೇ ಸಂಪ್ರಚೋದಿತಾಃ ||7||
ನಾನು ಅವರಿಗೆ ವೇಗವುಳ್ಳ, ನೇರವಾದ, ಗಾಂಡೀವಮುಕ್ತವಾದ, ವಿವಿಧ ಬಾಣಗಳಿಂದ ಯುದ್ಧದಲ್ಲಿ ಒಬ್ಬೊಬ್ಬನಿಗೆ ಹತ್ತುಬಾಣಗಳಂತೆ

ಬಾಣಗಳನ್ನು ಪ್ರಯೋಗಿಸಿದೆ. ಅವರೆಲ್ಲರೂ ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ ನನ್ನಿಂದ ಪ್ರಯೋಗಿಸಲ್ಪಟ್ಟ ಆ ಬಾಣಗಳಿಂದ ಯುದ್ದದಲ್ಲಿ ವಿಮುಖರಾದರು. ಆಗ ಮಾತಲಿಯು ನನ್ನ ರಥದ ಹಯಗಳನ್ನು ಶೀಘ್ರವಾಗಿ ಪ್ರಚೋದಿಸಿದನು.
ಮಾರ್ಗಾನ್ ಬಹುವಿಧಾಂಸ್ತತ್ರ ವಿಚೇರುರ್ವಾತರಂಹಸಃ |
ಸುಸಂಯುತಾ ಮಾತಲಿನಾ ಪ್ರಾಮಥ್ನಂತ ದಿತೇಃ ಸುತಾನ್ ॥8॥
ವಾಯುವೇಗವುಳ್ಳ ಆ ಕುದುರೆಗಳು ಯುದ್ಧಭೂಮಿಯಲ್ಲಿ ಅನೇಕ ಮಾರ್ಗಗಳಲ್ಲಿ ಸಂಚರಿಸಿದವು. ಮಾತಲಿಯಿಂದ ಚೆನ್ನಾಗಿ ನಿಯಂತ್ರಿಸಲ್ಪಟ್ಟ ಆ ಅಶ್ವಗಳು ದಿತಿಯ ಪುತ್ರರನ್ನು ಕಾಲಾಡಿದವು.
ಶತಂ ಶತಾಸ್ತೇ ಹರಯಸ್ತಸ್ಮಿನ್ ಯುಕ್ತಾ ಮಹಾರಥೇ |
ತದಾ ಮಾತಲಿನಾ ಯತ್ತಾ ವ್ಯಚರನ್ನಲ್ಪಕಾ ಇವ ॥9॥
ಆ ಮಹಾರಥಕ್ಕೆ ಹೂಡಿದ ಹತ್ತುಸಾವಿರ ಕುದುರೆಗಳು ಮಾತಲಿಯಿಂದ ನಿಯಂತ್ರಿಸಲ್ಪಟ್ಟು ಅಲ್ಪಸಂಖ್ಯೆಯಲ್ಲಿದ್ದ ಕುದುರೆಗಳಂತೆ ಸಂಚರಿಸಿದವು.
ತೇಷಾಂ ಚರಣಪಾತೇನ ರಥನೇಮಿಸ್ವನೇನ ಚ |
ಮಮ ಬಾಣನಿಪಾತೈಶ್ಚ ಹತಾಸ್ತೇ ಶತಶೋಽಸುರಾಃ ॥10॥
ಅವುಗಳ ಪದಘಾತದಿಂದಲೂ ರಥನೇಮಿಯ ಘೋಷದಿಂದಲೂ ಮತ್ತು ನನ್ನ ಬಾಣಪ್ರಯೋಗದಿಂದಲೂ ಅಸುರರು ನೂರಾರು ಸಂಖ್ಯೆಯಲ್ಲಿ ಹತರಾದರು.
ಗತಾಸವಸ್ತಥೈವಾನ್ಯೇ ಪ್ರಗೃಹೀತಶರಾಸನಾಃ |
ಹತಸಾರಥಯಸ್ತತ್ರ ವ್ಯಕೃಷ್ಯಂತ ತುರಂಗಮೈಃ ॥11॥
ಕೈಯಲ್ಲಿ ಧನುಸ್ಸನ್ನು ಹಿಡಿದು ತಮ್ಮ ಸಾರಥಿಗಳನ್ನು ಕಳೆದುಕೊಂಡು ಮೃತರಾದ ಅನೇಕ ದಾನವರನ್ನು ನಮ್ಮ ಕುದುರೆಗಳು ಯುದ್ಧಭೂಮಿಯಲ್ಲಿ ಎಳೆದಾಡಿದವು.
ತೇ ದಿಶೋ ವಿದಿಶಃ ಸರ್ವೇ ಪ್ರತಿರುಧ್ಯ ಪ್ರಹಾರಿಣಃ |
ಅಭ್ಯಘ್ನನ್ ವಿವಿಧೈಃ ಶಸ್ತ್ರೈಸ್ತತೋ ಮೇ ವ್ಯಥಿತಂ ಮನಃ ॥12॥
ಆ ದಾನವರೆಲ್ಲರೂ ಪ್ರಹಾರಶೀಲರಾಗಿ ದಿಕ್ಕುಗಳನ್ನೂ ಮತ್ತು ವಿದಿಕ್ಕುಗಳನ್ನೂ ಮುಚ್ಚಿ ಅನೇಕ ಶಸ್ತ್ರಗಳಿಂದ ನನ್ನನ್ನು ಹೊಡೆದರು. ಆಗ ನನ್ನ ಮನಸ್ಸಿಗೆ ವ್ಯಥೆಯಾಯಿತು.
ತತೋಽಹಂ ಮಾತಲೇರ್ವೀರ್ಯಮಪಶ್ಯಂ ಪರಮಾದ್ಭುತಮ್ |
ಅಶ್ವಾಂಸ್ತಥಾ ವೇಗವತೋ ಯದಯತ್ನಾದಧಾರಯನ್ ॥13॥
ಆಗ ನಾನು ಅಂತಹ ವೇಗವುಳ್ಳ ಅಶ್ವಗಳನ್ನು ಅನಾಯಾಸವಾಗಿ ನಿಯಂತ್ರಿಸುವ ಮಾತಲಿಯ ಪರಮಾದ್ಭುತವಾದ ಸಾಮರ್ಥ್ಯವನ್ನು ನೋಡಿದೆನು.
ತತೋಽಹಂ ಲಘುಭಿಶ್ಚಿತ್ರೈರಸ್ತ್ರೈಸ್ತಾನಸುರಾನ್ ರಣೇ |
ಚಿಚ್ಛೇದ ಸಾಯುಧಾನ್ ರಾಜನ್ ಶತಶೋಽಥ ಸಹಸ್ರಶಃ ॥14॥
ಎಲೈ ರಾಜನೇ, ಆಗ ನಾನು ಲಘುವಾದ ವಿಚಿತ್ರವಾದ ಅಸ್ತ್ರಗಳಿಂದ ಆ ಯುದ್ದದಲ್ಲಿ ಕೈಯಲ್ಲಿ ಆಯುಧಗಳನ್ನು ಹಿಡಿದಿದ್ದ ಅಸುರರನ್ನು, ನೂರರಗಟ್ಟಲೆ ಮತ್ತು ಸಾವಿರದ ಗಟ್ಟಲೆ ಕತ್ತರಿಸಿದೆನು.
ಏವಂ ಮೇ ಚರತಸ್ತತ್ರ ಸರ್ವಯತ್ನೇನ ಶತ್ರುಹನ್ |
ಪ್ರೀತಿಮಾನಭವದ್ ವೀರೋ ಮಾತಲಿಃ ಶಕ್ರಸಾರಥಿಃ ॥15॥
ಎಲೈ ಶತ್ರುಘಾತಕನೇ, ಹೀಗೆ ನಾನು ಸರ್ವಪ್ರಯತ್ನದಿಂದ ಯುದ್ಧಭೂಮಿಯಲ್ಲಿ ಸಂಚರಿಸುವುದನ್ನು ನೋಡಿ ಇಂದ್ರಸಾರಥಿಯಾದ ವೀರನಾದ ಮಾತಲಿಯು ನನ್ನಲ್ಲಿ ಪ್ರೀತಿಯುಳ್ಳವನಾದನು.
ವಧ್ಯಮಾನಾಸ್ತತಸ್ತೈಸ್ತು ಹಯೈಸ್ತೇನ ರಥೇನ ಚ |
ಅಗಮನ್ ಪ್ರಕ್ಷಯಂ ಕೇಚಿನ್ನ್ಯವರ್ತಂತ ತಥಾ ಪರೇ ॥16॥
ಆಗ ಅಶ್ವಗಳಿಂದಲೂ ಮತ್ತು ರಥದಿಂದಲೂ ಹತರಾದ ಆ ದಾನವರ ಸೇನೆಯು ವಿಶೇಷವಾಗಿ ಕ್ಷಯವನ್ನು ಹೊಂದಿತು. ಇನ್ನು ಕೆಲವರು ಯುದ್ಧಭೂಮಿಯಿಂದ ಹಿಮ್ಮೆಟ್ಟಿದ್ದರು.
ಸ್ಪರ್ಧಮಾನಾ ಇವಾಸ್ಮಾಭಿರ್ನಿವಾತಕವಚಾ ರಣೇ |
ಶರವರ್ಷೈಃ ಶರಾರ್ತಂ ಮಾಂ ಮಹದ್ಭಿಃ ಪ್ರತ್ಯವಾರಯನ್ ॥17॥
ಇನ್ನು ಕೆಲವು ನಿವಾತಕವಚರು ಯುದ್ದದಲ್ಲಿ ನನ್ನ ಜೊತೆಯಲ್ಲಿ ಸ್ಪರ್ಧೆ ಮಾಡುವಂತೆ ಶರಗಳಿಂದ ಪೀಡಿತನಾದ ನನ್ನನ್ನು ದೊಡ್ಡ ಶರವರ್ಷದಿಂದ ತಡೆಹಿಡಿದರು.
ತತೋಽಹಂ ಲಘುಭಿಶ್ಚಿತ್ರೈರ್ಬ್ರಹ್ಮಾಸ್ತ್ರಪರಿಮಂತ್ರಿತೈಃ |
ವ್ಯಧಮಂ ಸಾಯಕೈರಾಶು ಶತಶೋಽಥ ಸಹಸ್ರಶಃ ॥18॥
ಆಗ ನಾನು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿತವಾದ ಚಿಕ್ಕ ಮತ್ತು ವಿಚಿತ್ರವಾದ ಬಾಣಗಳಿಂದ ಆ ಸೈನ್ಯವನ್ನು ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ನಾಶಪಡಿಸಿದೆನು.
ತತಃ ಸಂಪೀಡ್ಯಮಾನಾಸ್ತೇ ಕ್ರೋಧಾವಿಷ್ಟಾ ಮಹಾಸುರಾಃ |
ಅಪೀಡಯನ್ಮಾಂ ಸಹಿತಾಃ ಶರಶೂಲಾಸಿವೃಷ್ಟಿಭಿಃ ॥19॥
ಆಗ ನನ್ನ ಬಾಣಗಳಿಂದ ಪೀಡಿಸಲ್ಪಟ್ಟ ಮಹಾ ಅಸುರರು ಕ್ರೋಧಾವಿಷ್ಟರಾಗಿ ಎಲ್ಲರೂ ಒಟ್ಟಿಗೆ ಶರಶೂಲ ಮತ್ತು ಖಡ್ಗಗಳ ವರ್ಷದಿಂದ ನನ್ನನ್ನು ಪೀಡಿಸಿದರು.

ತತೋಽಹಮಸ್ತ್ರಮಾತಿಷ್ಠಂ ಪರಮಂ ತಿಗ್ಮತೈಜಸಮ್ |
ದಯಿತಂ ದೇವರಾಜಸ್ಯ ಮಾಧವಂ ನಾಮ ಭಾರತ ॥20॥
ಎಲೈ ಭಾರತನೇ, ಆಗ ನಾನು ದೇವರಾಜನಿಗೆ ಪ್ರಿಯವಾದ ತೀಕ್ಷ್ಣಸಾಮರ್ಥ್ಯವುಳ್ಳ ಶ್ರೇಷ್ಠವಾದ ಮಾಧವಾಸ್ತ್ರವನ್ನು ಆಶ್ರಯಿಸಿದೆನು.
ತತಃ ಖಡ್ಗಾಂಸ್ತ್ರಿಶೂಲಾಂಶ್ಚ ತೋಮರಾಂಶ್ಚ ಸಹಸ್ರಶಃ |
ಅಸ್ತ್ರವೀರ್ಯೇಣ ಶತಧಾ ತೈರ್ಮುಕ್ತಾನಮಹಚ್ಛಿದಮ್ ॥21॥
ಆಗ ನಾನು ಆ ಅಸ್ತ್ರದ ಸಾಮರ್ಥ್ಯದಿಂದ ಅವರಿಂದ ಪ್ರಯೋಗಿಸಲ್ಪಟ್ಟ ಖಡ್ಗಗಳನ್ನೂ, ತ್ರಿಶೂಲಗಳನ್ನೂ ಮತ್ತು ಸಾವಿರಾರು ತೋಮರಗಳನ್ನೂ ಒಂದೊಂದನ್ನೂ ನೂರಾರು ಭಾಗವಾಗಿ ಕತ್ತರಿಸಿದೆನು.
ಛಿತ್ತ್ವಾ ಪ್ರಹರಣಾನ್ಯೇಷಾಂ ತತಸ್ತಾನಪಿ ಸರ್ವಶಃ |
ಪ್ರತ್ಯವಿಧ್ಯಮಹಂ ರೋಷಾದ್ ದಶಾಭಿರ್ದಶಭಿಃ ಶರೈಃ ॥22॥
ಅವರ ಅಸ್ತ್ರಗಳನ್ನು ಕತ್ತರಿಸಿ ಅನಂತರ ರೋಷದಿಂದ ನಾನು ಒಬ್ಬೊಬ್ಬನಿಗೆ ಹತ್ತು ಬಾಣಗಳಂತೆ ಅವರೆಲ್ಲರನ್ನೂ ಬಾಣಗಳಿಂದ ಹೊಡೆದೆನು.
ಗಾಂಡೀವಾದ್ಧಿ ತದಾ ಸಂಖೇ ಯಥಾ ಭ್ರಮರಪಂಕ್ತಯಃ |
ನಿಷ್ಪತಂತಿ ಮಹಾಬಾಣಾಸ್ತಂ ಮಾತಲಿರಪೂಜಯತ್ ॥23॥
ಆಗ ಗಾಂಡೀವದಿಂದ ಮಹಾಬಾಣಗಳು ಭ್ರಮರಪಂಕ್ತಿಯಂತೆ ಹೊರಬರುತ್ತಿದ್ದುದನ್ನು ನೋಡಿ ಮಾತಲಿಯು ನನ್ನ ಮೇಲೆ ಗೌರವವುಳ್ಳವನಾದನು.
ತೇಷಾಮಪಿ ತು ಬಾಣಾಸ್ತೇ ಬಹುಲಾಚ್ಛಲಭಾ ಇವ |
ಅವಾಕಿರನ್ ಮಾಂ ಬಲವತ್ ತಾನಹಂ ವ್ಯಧಮಂ ಶರೈಃ ॥24॥
ಅನೇಕವಾದ ಕಾರಣದಿಂದ ಶಲಭ (ದೀಪದ ಹುಳು)ದಂತಿದ್ದ ಅವರ ಬಾಣಗಳೂ ಸಹ ಬಲದಿಂದ ಕೂಡಿ ನನ್ನ ಮೇಲೆ ಬಿದ್ದವು. ನಾನು ಅವುಗಳನ್ನು ನನ್ನ ಬಾಣಗಳಿಂದ ನಾಶಪಡಿಸಿದೆನು.
ವಧ್ಯಮಾನಾಸ್ತತಸ್ತೇ ತು ನಿವಾತಕವಚಾಃ ಪುನಃ |
ಶರವರ್ಷೈರ್ಮಹದ್ಭಿರ್ಮಾಂ ಸಮಂತಾತ್ ಪರ್ಯವಾರಯನ್ ॥25॥
ಹೀಗೆ ವಧ್ಯಮಾನರಾದ ಆ ನಿವಾತಕವಚರು ಪುನಃ ಎಲ್ಲ ಕಡೆಗಳಿಂದಲೂ ದೊಡ್ಡ ಶರವರ್ಷದಿಂದ ನನ್ನನ್ನು ಆವರಿಸಿದರು.
ಶರವೇಗಾನ್ ನಿಹತ್ಯಾಹಮಸ್ತ್ರೈರಸ್ತ್ರವಿಘಾತಿಭಿಃ |
ಜ್ವಲದ್ಭಿಃ ಪರಮೈಃ ಶೀಘ್ರೈಸ್ತಾನವಿಧ್ಯಂ ಸಹಸ್ರಶಃ ॥26॥
ಅಸ್ತ್ರವಿಘಾತಿಗಳಾದ ಅಸ್ತ್ರಗಳಿಂದ ಅವರ ಶರವೇಗವನ್ನು ನಾಶಪಡಿಸಿ ಉರಿಯುತ್ತಿರುವ ಶೀಘ್ರಗಾಮಿಗಳಾದ ಶ್ರೇಷ್ಠವಾದ ಬಾಣಗಳಿಂದ ಅವರಿಗೆ ಸಹಸ್ರ ಸಂಖ್ಯೆಯಲ್ಲಿ ಹೊಡೆದೆನು.
ತೇಷಾಂ ಛಿನ್ನಾನಿ ಗಾತ್ರಾಣಿ ವಿಸೃಜಂತಿ ಸ್ಮ ಶೋಣಿತಮ್ |
ಪ್ರಾವೃಷೀವಾಭಿವೃಷ್ಟಾನಿ ಶೃಂಗಾಣ್ಯಥ ಧರಾಭೃತಾಮ್ ॥27॥
ಆ ಬಾಣಗಳಿಂದ ಕತ್ತರಿಸಲ್ಪಟ್ಟ ಅವರ ಶರೀರಗಳು ಮಳೆಗಾಲದಲ್ಲಿ ಪರ್ವತ ಶೃಂಗಗಳಿಂದ ಕೆಳಗೆ ಹರಿಯುವ ನೀರಿನಂತೆ ರಕ್ತದ ಧಾರೆಗಳನ್ನು ಸೃಷ್ಟಿಸಿದವು.
ಇಂದ್ರಾಶನಿಸಮಸ್ಪರ್ಶೈರ್ವೇಗವದ್ಭಿರಜಿಹ್ಮಗೈಃ |
ಮದ್ಬಾಣೈರ್ವಧ್ಯಮಾನಾಸ್ತೇ ಸಮುದ್ವಿಗ್ನಾಃ ಸ್ಮ ದಾನವಾಃ ॥28॥
ಇಂದ್ರನ ವಜ್ರಾಯುಧಕ್ಕೆ ಸಮವಾದ ಸ್ಪರ್ಶವುಳ್ಳ, ವೇಗವುಳ್ಳ ಮತ್ತು ನೇರವಾದ ನನ್ನ ಬಾಣಗಳಿಂದ ಹೊಡೆಯಲ್ಪಟ್ಟ ಆ ದಾನವರು ಸಮುದ್ವಿಗ್ನರಾದರು.
ಶತಧಾ ಭಿನ್ನದೇಹಾಸ್ತೇ ಕ್ಷೀಣಪ್ರಹರಣೌಜಸಃ |
ತತೋ ನಿವಾತಕವಚಾ ಮಾಮಯುಧ್ಯಂತ ಮಾಯಯಾ ॥39॥
ಆ ನಿವಾತಕವಚರು ನೂರಾರು ಸಂಖ್ಯೆಯಲ್ಲಿ ಭಿನ್ನದೇಹರಾಗಿ ತಮ್ಮ ಶಸ್ತ್ರಗಳನ್ನೂ ಮತ್ತು ಸಾಮರ್ಥ್ಯಗಳನ್ನೂ ಕಳೆದುಕೊಂಡ ಮೇಲೆ ನನ್ನ ಜೊತೆಯಲ್ಲಿ ಮಾಯಾಯುದ್ಧವನ್ನು ಪ್ರಾರಂಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ನಿವಾತಕವಚಯುದ್ಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೈದನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ತೇಷಾಂ ಸ ಶಸತ್ರಣಿ ಕಿರೀಟಮಾಲೀ
ನಿವಾರ್ಯ ಗಾಂಡೀವಧನುಃಪ್ರಮುಕ್ತೈಃ |
ಶರೈಃ ಶಿರಾಂಸಿ ಪ್ರಚಕರ್ತ ವೀರೋ
ಸಹಸ್ರಶಿಕ್ಷಾಬಲಸಂಪ್ರಯುಕ್ತೈಃ ॥313॥
ಕಿರೀಟ ಹಾರಗಳನ್ನು ಧರಿಸಿದ ವೀರ ಅರ್ಜುನ ನಿವಾತಕವಚರ ಶಸ್ತ್ರಗಳನ್ನು ತಡೆದು ಗಾಂಡೀವ ಧನುಸ್ಸಿನಿಂದ ಮಹಾ ಅಸ್ತ್ರಗಳ

ಅಭ್ಯಾಸ ಬಲದಿಂದ ಚೆನ್ನಾಗಿ ಬಾಣ ಪ್ರಯೋಗ ಮಾಡಿ ಅವರ ತಲೆಗಳನ್ನು ಕತ್ತರಿಸಿದ.
ಸರ್ವೇ ಹತಾಸ್ತೇನ ಮಹಾರಥೇನ ತೇ
ದಾನವಾಃ ಸೋಽಪಿ ಯಯೌ ತಥಾಽನ್ಯಾನ್ |
ಪೌಲೋಮಕಾಲೇಯಗಣಾಭಿಧಾನಾನ್
ಷಷ್ಟಿಂ ಸಹಸ್ರಾಣಿ ಮಹಾರಥಾನಾಮ್ ||314||
ಮಹಾರಥನಾದ ಅರ್ಜುನ ಆ ಎಲ್ಲ ದಾನವರನ್ನೂ ಸಂಹರಿಸಿದ. ಹಾಗೇ ಮಹಾರಥರಾದ ಅರವತ್ತು ಸಾವಿರ ಪೌಲೋಮ ಕಾಲೇಯ ಗಣಗಳೆಂಬ ಹೆಸರಿನ ಬೇರೆ ದಾನವರನ್ನೂ ಆಕ್ರಮಿಸಿದ.
ತಾನಸ್ತ್ರಶಸ್ತ್ರಾಣ್ಯಭಿವರ್ಷಮಾಣಾನ್
ಧನಂಜಯಃ ಪಾಶುಪತಾಸ್ತ್ರತೋ ದ್ರಾಕ್ |
ದಗ್ಧ್ವಾ ಯಯೌ ಪುನರೇವೇಂದ್ರಸದ್ಮ
ತಂ ಸಸ್ವಜೇ ಪ್ರೀತಿಯುತಶ್ಚ ಶಕ್ರಃ ||315||
ಆ ಪೌಲೋಮ ಕಾಲಿಕೇಯರು ಅಸ್ತ್ರಶಸ್ತ್ರಗಳ ಮಳೆ ಸುರಿಸುತ್ತಿದ್ದಂತೆಯೇ ಅರ್ಜುನ ಅವರನ್ನು ಬೇಗನೆ ಪಾಶುಪತಾಸ್ತ್ರದಿಂದ ಸುಟ್ಟು ಪುನಃ ಸ್ವರ್ಗಲೋಕಕ್ಕೆ ಹೋದ. ಇಂದ್ರ ಸಂತುಷ್ಟನಾಗಿ ಅವನನ್ನು ಆಲಿಂಗಿಸಿದ.
* * * *
ನೂರ ಅರವತ್ತಾರನೆಯ ಅಧ್ಯಾಯ
ದಾನವರ ಮಾಯಾಯುದ್ಧ ಮತ್ತು ದಿವ್ಯಾಸ್ತ್ರಗಳಿಂದ ಅರ್ಜುನನಿಂದ ಅದರ ಪ್ರತಿಘಾತ. ದಾನವರ ಹನನ.
ಅರ್ಜುನಃ
ತತೋಽಶ್ಮವರ್ಷಂ ಸುಮಹತ್ ಪ್ರಾದುರಾಸೀತ್ ಸಮಂತತಃ |
ನಗಮಾತ್ರೈಃ ಶಿಲಾಖಂಡೈಸ್ತನ್ಮಾಂ ದೃಢಮಪೀಡಯತ್ ||1||
ಅರ್ಜುನ ಅನಂತರ ಪರ್ವತಗಾತ್ರದ ಶಿಲಾಖಂಡಗಳಿಂದ ಕೂಡಿದ ದೊಡ್ಡ ಶಿಲಾವರ್ಷವು ಪ್ರಾದುರ್ಭಾವವನ್ನು ಹೊಂದಿ ನನ್ನನ್ನು ಬಹಳವಾಗಿ ಪೀಡಿಸಿತು.
ತದಹಂ ವಜ್ರಸಂಕಾಶೈರ್ಮಹೇಂದ್ರಾಸ್ತ್ರಪ್ರಚೋದಿತೈಃ |
ಅಚೂರ್ಣಯಂ ವೇಗವದ್ಭಿಃ ಶರಜಾಲೈರ್ಮಹಾಹವೇ ||2||
ನಾನು ಆ ಮಹಾಯುದ್ಧದಲ್ಲಿ ಇಂದ್ರಾಸ್ತ್ರಗಳಿಂದ ಅಭಿಮಂತ್ರಿತವಾದ ವೇಗವುಳ್ಳ ವಜ್ರಸದೃಶವಾದ ಬಾಣಸಮೂಹಗಳಿಂದ ಆ ಶಿಲೆಗಳನ್ನು ಪುಡಿಪುಡಿ ಮಾಡಿದೆನು.
ಚೂರ್ಣ್ಯಮಾನೇಽಶ್ಮವರ್ಷೇ ತು ಪಾವಕಃ ಸಮಜಾಯತ |
ತತ್ರಾಶ್ಮಚೂರ್ಣಾ ನ್ಯಪತನ್ ಪಾವಕಪ್ರಕರಾ ಇವ ||3||
ಶಿಲಾವರ್ಷವು ಪುಡಿಮಾಡಲ್ಪಡುತ್ತಿರಲು ಅಗ್ನಿಯು ಉಂಟಾಯಿತು. ಅಗ್ನಿಯ ಕೆಂಡಗಳಂತೆ ಕಲ್ಲಿನ ಚೂರುಗಳು ಬೀಳಲು ಪ್ರಾರಂಭಿಸಿದವು.
ತತೋಽಶ್ಮವರ್ಷೇ ವಿಹತೇ ಜಲವರ್ಷಂ ಮಹತ್ತರಮ್ |
ಧಾರಾಭಿರಕ್ಷಮಾತ್ರಾಭಿಃ ಪ್ರಾದುರಾಸೀತ್ ಮಮಾಂತಿಕೇ ||4||
ಶಿಲಾವರ್ಷವು ಪ್ರತಿಹತವಾದಮೇಲೆ ನನ್ನ ಸಮೀಪದಲ್ಲಿ ಒನಕೆಯ ಗಾತ್ರದ ಧಾರೆಗಳಿಂದ ಕೂಡಿದ ಬಹಳ ದೊಡ್ಡದಾದ ಜಲವರ್ಷವು ಉಂಟಾಯಿತು.
ನಭಸಃ ಪ್ರಚ್ಯುತಾ ಧಾರಾಸ್ತಿಗ್ಮವೀರ್ಯಾಃ ಸಹಸ್ರಶಃ |
ಆವೃಣ್ವನ್ ಸರ್ವತೋ ವ್ಯೋಮ ದಿಶಶ್ಚೋಪದಿಶಸ್ತಥಾ ||5||
ಆಕಾಶದಿಂದ ಕೆಳಗೆ ಬಂದ ಬಹಳ ಬಲಶಾಲಿಗಳಾದ ಸಹಸ್ರಾರು ಸಂಖ್ಯೆಯ ಧಾರೆಗಳು ಆಕಾಶವನ್ನು ಮತ್ತು ದಿಕ್ಕುವಿದಿಕ್ಕುಗಳನ್ನು ಎಲ್ಲಕಡೆಗಳಲ್ಲಿಯೂ ಆವರಿಸಿದವು.
ಧಾರಾಣಾಂ ಚ ನಿಪಾತೇನ ವಾಯೋರ್ವಿಸ್ಫೂರ್ಜಿತೇನ ಚ |
ಗರ್ಜಿತೇನ ಚ ದೈತ್ಯಾನಾಂ ನ ಪ್ರಾಜ್ಞಾಯತ ಕಿಂಚನ ||6||
ಜಲಧಾರೆಗಳ ಶಬ್ದಗಳಿಂದ, ಬೀಸುವ ವಾಯುವಿನ ಸ್ಫೋಟ ಶಬ್ದಗಳಿಂದ, ಮತ್ತು ದೈತ್ಯರ ಗರ್ಜನೆಗಳ ಕಾರಣದಿಂದ ಏನೂ ತಿಳಿಯುತ್ತಿರಲಿಲ್ಲ.
ಧಾರಾ ದಿವಿ ಚ ಸಂಬದ್ಧಾ ವಸುಧಾಯಾಂ ಚ ಸರ್ವಶಃ |
ವ್ಯಾಮೋಹಯಂತ ಮಾಂ ತತ್ರ ನಿಪತಂತ್ಯೋಽನಿಶಂ ಭುವಿ ||7||
ಎಲ್ಲಕಡೆಗಳಲ್ಲಿಯೂ ಆಕಾಶದಿಂದ ಭೂಮಿಯವರೆಗೆ ಸಂಬದ್ಧವಾಗಿದ್ದು, ಭೂಮಿಯ ಮೇಲೆ ಸತತವಾಗಿ ಬೀಳುವ ಜಲಧಾರೆಗಳು ನನಗೆ ವ್ಯಾಮೋಹವನ್ನು ಉಂಟುಮಾಡಿದವು.
ತತ್ರೋಪದಿಷ್ಟಮಿಂದ್ರೇಣ ದಿವ್ಯಮಸ್ತ್ರಂ ವಿಶೋಷಣಮ್ |
ದೀಪ್ತಂ ಪ್ರಾಹಿಣವಂ ಘೋರಮಶುಷ್ಯತ್ ತೇನ ತಜ್ಜಲಮ್ ||8||
ಆಗ ನಾನು ಇಂದ್ರನಿಂದ ಉಪದಿಷ್ಟವಾದ ದಿವ್ಯವಾದ ಘೋರವಾದ ಮತ್ತು ಜ್ವಲಿಸುವ ವಿಶೋಷಣಾಸ್ತ್ರವನ್ನು ಪ್ರಯೋಗಿಸಿದೆನು. ಆ ಜಲವೆಲ್ಲವೂ ಒಣಗಿ ಹೋಯಿತು.
ಹತೇಽಶ್ಮವರ್ಷೇ ಚ ಮಯಾ ಜಲವರ್ಷೇ ಚ ಶೋಷಿತೇ |

ಮುಮುಚುರ್ದಾನವಾ ಮಾಯಾಮಗ್ನಿಂ ವಾಯುಂ ಚ ಭಾರತ ॥9॥
ಎಲೈ ಭಾರತನೇ, ಶಿಲಾವರ್ಷ ಮತ್ತು ಜಲವರ್ಷಗಳು ಹತವಾಗಿ ಶೋಷಿತವಾಗುತ್ತಿರಲು ದಾನವರು ಮಾಯೆಯಿಂದ ಅಗ್ನಿ ಮತ್ತು ವಾಯುಗಳನ್ನು ಸೃಷ್ಟಿಸಿ ನನ್ನ ಮೇಲೆ ಪ್ರಯೋಗಿಸಿದರು.
ತತೋಽಹಮಗ್ನಿಂ ವ್ಯಧಮಂ ಸಲಿಲಾಸ್ತ್ರೇಣ ಸರ್ವಶಃ |
ಶೈಲೇನ ಚ ಮಹಾಸ್ತ್ರೇಣ ವಾಯೋರ್ವೇಗಮಧಾರಯಮ್ ॥10॥
ಆಗ ನಾನು ಜಲಾಸ್ತ್ರದಿಂದ (ವಾರುಣಾಸ್ತ್ರದಿಂದ) ಆ ಅಗ್ನಿಯನ್ನು ಎಲ್ಲಕಡೆಯಲ್ಲಿಯೂ ಶಾಂತಗೊಳಿಸಿದೆನು. ಮತ್ತು ಪರ್ವತಾಸ್ತ್ರದಿಂದ ವಾಯುವಿನ ವೇಗವನ್ನು ತಡೆದೆನು.
ತಸ್ಯಾಂ ಪ್ರತಿಹತಾಯಾಂ ತು(ತೇ) ದಾನವಾ ಯುದ್ಧದುರ್ಮದಾಃ |
ಪ್ರಾಕುರ್ವನ್ ವಿವಿಧಾಂ ಮಾಯಾಂ ಯೌಗಪದ್ಯೇನ ಭಾರತ ॥11॥
ಎಲೈ ಭಾರತನೇ, ಅದು ಪ್ರತಿಹತವಾಗುತ್ತಿರಲು ಯುದ್ಧ ದುರ್ಮದರಾದ ಆ ದಾನವರು ಅನೇಕ ಮಾಯೆಗಳನ್ನು ಒಟ್ಟಿಗೆ ಸೃಷ್ಟಿಸಿದರು.
ತತೋ ವರ್ಷಂ ಪ್ರಾದುರಭೂತ್ ಸುಮಹಲ್ಲೋಮಹರ್ಷಣಮ್ |
ಅಸ್ತ್ರಾಣಾಂ ಘೋರರೂಪಾಣಾಮಗ್ನೇರ್ವಾಯೋಸ್ತಥಾಽಶ್ಮನಾಮ್ |
ಸಾ ತು ಮಾಯಾಮಯೀ ವೃಷ್ಟಿಃ ಪೀಡಯಾಮಾಸ ಮಾಂ ಯುಧಿ ॥
ಅನಂತರ ಅಸ್ತ್ರಗಳ, ಘೋರರೂಪವಾದ ಅಗ್ನಿ, ವಾಯು ಮತ್ತು ಶಿಲೆಗಳ, ರೋಮಾಂಚಕರವಾದ ದೊಡ್ಡ ವೃಷ್ಟಿಯು ಕಂಡುಬಂದಿತು. ಆ ಮಾಯಾಮಯವಾದ ವೃಷ್ಟಿಯು ಯುದ್ಧದಲ್ಲಿ ನನ್ನನ್ನು ಪೀಡಿಸಿತು.
ಅಥ ಘೋರಂ ತಮಸ್ತೀವ್ರಂ ಪ್ರಾದುರಾಸೀತ್ ಸಮಂತತಃ ॥13॥
ಅನಂತರ ಘೋರವಾದ ನಿಬಿಡವಾದ ಕತ್ತಲೆಯು ಎಲ್ಲಕಡೆಯಲ್ಲಿಯೂ ಕಾಣಿಸಿಕೊಂಡಿತು.
ತಮಸಾ ಸಂವೃತೇ ಲೋಕೇ ಘೋರೇಣಾವರಣೇನ (ಘೋರೇಣ ಪರುಷೇಣ) ಚ |
ತುರಗಾ(ಹರಯೋ) ವಿಮುಖಾಶ್ಚಾಸನ್ ಪ್ರಾಸ್ಖಲಚ್ಚಾಪಿ ಮಾತಲಿಃ ॥14॥
ಹೀಗೆ ಲೋಕದಲ್ಲಿ ಎಲ್ಲಕಡೆಯಲ್ಲಿಯೂ ಕತ್ತಲು ಆವರಿಸಿದಾಗ ಅಶ್ವಗಳು ವಿಮುಖವಾದವು ಮತ್ತು ಮಾತಲಿಯೂ ಸಹ ಎಡವಲು ಪ್ರಾರಂಭಿಸಿದನು.
ಹಸ್ತಾದ್ಧಿರಣ್ಮ(ಶ್ಮ)ಯಶ್ಚಾಸ್ಯ ಪ್ರತೋದಃ ಪ್ರಾಪತದ್ಭುವಿ |
ಅಸಕೃಚ್ಚಾಹ ಮಾಂ ಭೀತಃ ಕಿಂ ಕರಿಷ್ಯಾಮ ಇತ್ಯಪಿ (ಕ್ವಾಸೀತಿ ಭರತರ್ಷಭ) ॥15॥
ಅವನ ಹಸ್ತದಿಂದ ಚಿನ್ನದ ಚಾವಟಿಯು ನೆಲದ ಮೇಲೆ ಬಿದ್ದಿತು. ಅವನು ಅನೇಕ ಬಾರಿ ನನ್ನನ್ನು ಕುರಿತು ಭಯದಿಂದ ಈಗ ಏನು ಮಾಡೋಣ ಎಂದು ಕೇಳಿದನು.
ಮಾಂ ಚ ಭೀರಾವಿಶತ್ ತೀವ್ರಾ ತಸ್ಮಿನ್ ವಿಗತಚೇತಸಿ |
ಸ ಚ ಮಾಂ ವಿಗತಜ್ಞಾನಃ ಸಂತ್ರಸ್ತಮಿದಮಬ್ರವೀತ್ ॥16॥
ಮಾತಲಿಯು ಹೀಗೆ ಸಮ್ಮೋಹಕ್ಕೆ ಒಳಗಾಗುತ್ತಿರಲು ನನಗೂ ತೀವ್ರವಾದ ಭಯ ಉಂಟಾಯಿತು. ವಿಸಂಜ್ಞನಾದ ಅವನು ಭಯಗ್ರಸ್ತನಾದ ನನ್ನನ್ನು ಕುರಿತು ಹೀಗೆ ಹೇಳಿದನು.
ಸುರಾಣಾಮಸುರಾಣಾಂ ಚ ಸಂಗ್ರಾಮಃ ಸುಮಹಾನಭೂತ್ |
ಅಮೃತಾರ್ಥಂ ಪುರಾ ಪಾರ್ಥ ಸ ಚ ದೃಷ್ಟೋ ಮಯಾಽನಘ ॥17॥
ಎಲೈ ಅನಘನೇ, ಪಾರ್ಥನೇ, ಹಿಂದೆ ಅಮೃತದ ಸಲುವಾಗಿ ಸುರಾಸುರರಿಗೆ ದೊಡ್ಡ ಯುದ್ಧವು ನಡೆಯಿತು. ಅದನ್ನು ನಾನು ನೋಡಿದ್ದೇನೆ.
ಶಂಬರಸ್ಯ ವಧೇ ಚಾಪಿ(ಘೋರಃ) ಸಂಗ್ರಾಮಃ ಸುಮಹಾನಭೂತ್ |
ಸಾರಥ್ಯಂ ದೇವರಾಜಸ್ಯ ತತ್ರಾಪಿ ಕೃತವಾನಹಮ್ ॥18॥
ಶಂಬರನ ವಧೆಯಾದಾಗಲೂ ಘೋರವಾದ ಯುದ್ಧವು ಜರುಗಿತು. ಆಗಲೂ ನಾನು ದೇವರಾಜನಿಗೆ ಸಾರಥ್ಯವನ್ನು ಮಾಡಿದೆ.
ತಥೈವ ವೃತ್ರಸ್ಯ ವಧೇ ಸಂಗೃಹೀತಾ ಹಯಾ ಮಯಾ |
ವೈರೋಚನೇರ್ಮಹಾಯುದ್ಧಂ ದೃಷ್ಟಂ ಚಾಪಿ ಸುದಾರುಣಮ್ ॥19॥
ವೃತ್ರವಧೆಯ ಸಮಯದಲ್ಲಿಯೂ ನಾನು ಅಶ್ವಗಳನ್ನು ನಿಯಂತ್ರಿಸಿದೆ. ವಿರೋಚನನ ಮಗನಾದ ಬಲಿಯ ಜೊತೆಯಲ್ಲಿ ನಡೆದ ಧಾರುಣವಾದ ಯುದ್ಧವನ್ನೂ ನೋಡಿದ್ದೇನೆ.
ಏತೇ ಮಯಾ ಮಹಾಘೋರಾಃ ಸಂಗ್ರಾಮಾಃ ಪರ್ಯುಪಾಸಿತಾಃ |
ನ ಚಾಪಿ ವಿಗತಜ್ಞಾನೋಽಭೂತಪೂರ್ವೋಽಸ್ಮಿ ಪಾಂಡವ ॥20॥
ನಾನು ಈ ಘೋರವಾದ ಸಂಗ್ರಾಮಗಳನ್ನು ನೋಡಿದ್ದೇನೆ ಮತ್ತು ಇಂದ್ರರಥವನ್ನು ಆಗ ನಡೆಸಿದ್ದೇನೆ. ಎಲೈ ಪಾಂಡವನೇ, ಆದರೆ ಹಿಂದೆ ಎಂದೂ ಹೀಗೆ ವಿಸಂಜ್ಞನಾಗಿಲ್ಲ.
ಪಿತಾಮಹೇನ ಸಂಹಾರಃ ಪ್ರಜಾನಾಂ ವಿಹಿತೋ ಧ್ರುವಮ್ |
ನ ಹಿ ಯುದ್ಧಮಿದಂ ಯುಕ್ತಮನ್ಯತ್ರ ಜಗತಃ ಕ್ಷಯಾತ್ ॥21॥
ಪಿತಾಮಹರಾದ ಬ್ರಹ್ಮದೇವರು ಎಲ್ಲ ಪ್ರಜೆಗಳ ವಿನಾಶವನ್ನು ವಿಧಾನ ಮಾಡಿರುವಂತೆ ನಿಶ್ಚಿತವಾಗಿ ತೋರುತ್ತದೆ. ಜಗತ್ತಿನ ಕ್ಷಯದ ಸಂದರ್ಭವನ್ನು ಬಿಟ್ಟು ಬೇರೆ ಕಾಲದಲ್ಲಿ ಇಂತಹ ಯುದ್ಧವು ಯುಕ್ತವಾಗುವುದಿಲ್ಲ.
ಅರ್ಜುನಃ
ತಸ್ಯ ತದ್ವಚನಂ ಶ್ರುತ್ವಾ ಸಂಸ್ತಭ್ಯಾತ್ಮಾನಮಾತ್ಮನಾ |

(ಮೋಹಯಿಷ್ಯನ್ದಾನವಾನಾಮಹಂ ಮಾಯಾಬಲಂ ಮಹತ್) ॥22॥
ಅಬ್ರುವಂ ಮಾತಲಿಂ ಭೀತಂ ಪಶ್ಯ ಮೇ ಭುಜಯೋರ್ಬಲಮ್ |
ಅಸ್ತ್ರಾಣಾಂ ಚ ಪ್ರಭಾವಂ ವೈ ಧನುಷೋ ಗಾಂಡಿವಸ್ಯ ಚ ॥23॥
ಅರ್ಜುನ ಅವನ ಆ ಮಾತುಗಳನ್ನು ಕೇಳಿ ನಾನು ನನ್ನನ್ನೇ ಸಮಾಧಾನ ಮಾಡಿಕೊಂಡು ದಾನವರ ದೊಡ್ಡ ಮಾಯಾಬಲವನ್ನು ಮೋಹಗೊಳಿಸಲು ಉದ್ದೇಶಿಸಿ ಭೀತನಾದ ಮಾತಲಿಯನ್ನು ಕುರಿತು ನನ್ನ ಭುಜಬಲವನ್ನೂ, ನನ್ನ ಅಸ್ತ್ರಗಳ ಮತ್ತು ಗಾಂಡೀವ ಧನುಸ್ಸಿನ ಸಾಮರ್ಥ್ಯವನ್ನೂ ನೋಡು ಎಂದು ಹೇಳಿದೆನು.
ಅದ್ಯಾಸ್ತ್ರಮಾಯಯೈತೇಷಾಂ ಮಾಯಾಮೇತಾಂ ಸುದಾರುಣಾಮ್ |
ವಿನಿಹನ್ಮಿ ತಮಶ್ಚೋಗ್ರಂ ಮಾ ಭೈಃ ಸೂತ ಸ್ಥಿರೋ ಭವ ॥24॥
ಎಲೈ ಸಾರಥಿಯೇ, ಸ್ಥಿರವಾಗಿರು. ನಾನು ಈಗ ನನ್ನ ಅಸ್ತ್ರಗಳ ಸಾಮರ್ಥ್ಯದಿಂದ ದಾನವರ ಈ ಘೋರವಾದ ಮಾಯೆಯನ್ನು ವಿನಾಶಗೊಳಿಸುತ್ತೇನೆ. ತೀವ್ರವಾದ ತಮಸ್ಸನ್ನೂ ಸಂಹರಿಸುತ್ತೇನೆ.
ಏವಮುಕ್ತ್ವಾಽಹಮಸೃಜಮಸ್ತ್ರಮಾಯಾಂ ನರಾಧಿಪ |
ಮೋಹನೀಂ ಸರ್ವಶತ್ರೂಣಾಂ (ಭೂತಾನಾಂ) ಹಿತಾಯ ತ್ರಿದಿವೌಕಸಾಮ್ ॥25॥
ಎಲೈ ನರಾಧಿಪನೇ, ಹೀಗೆ ಹೇಳಿ ನಾನು ಎಲ್ಲಾ ಶತ್ರುಗಳನ್ನು ಮೋಹನಗೊಳಿಸಲು ಮತ್ತು ದೇವತೆಗಳನ್ನು ಸಂತೋಷಪಡಿಸಲು ನನ್ನ ಅಸ್ತ್ರಮಾಯೆಯನ್ನು ಸೃಷ್ಟಿಸಿದೆನು.
ಪೀಡ್ಯಮಾನಾಸು ಮಾಯಾಸು ತಾಸು ತಾಸ್ವಸುರೋತ್ತಮಾಃ |
ಪುನರ್ಬಹುವಿಧಾ ಮಾಯಾಃ ಪ್ರಾಕುರ್ವನ್ನಮಿತೌಜಸಃ ॥26॥
ನನ್ನ ಅಸ್ತ್ರಮಾಯೆಯಿಂದ ಅವರ ಆಯಾಮಾಯೆಗಳು ನಾಶಗೊಳಿಸಲ್ಪಡುತ್ತಿರಲು ಅಮಿತಪರಾಕ್ರಮಿಗಳಾದ ಆ ಅಸುರೋತ್ತಮರು ಪುನಃ ಅನೇಕ ವಿಧವಾದ ಮಾಯೆಗಳನ್ನು ಸೃಷ್ಟಿಸಿದರು.
ಪುನಃ ಪ್ರಕಾಶಮಭವತ್ ತಮಸಾ ಗ್ರಸ್ಯತೇ ಪುನಃ |
ಭವತ್ಯದರ್ಶನೋ ಲೋಕಃ ಪುನರಪ್ಸು ನಿಮಜ್ಜತಿ ॥27॥
ಪುನಃ ಬೆಳಕಾಗುತ್ತದೆ ಮತ್ತು ಪುನಃ ಕತ್ತಲೆಯಾಗುತ್ತದೆ. ಯಾವ ಲೋಕವೂ ಕಾಣುವುದಿಲ್ಲ. ಪುನಃ ಜಗತ್ತು ನೀರಿನಲ್ಲಿ ಮುಳುಗುತ್ತದೆ.
ಸುಸಂಗೃಹಿತೈರ್ಹರಿಭಿಃ ಪ್ರಕಾಶೇ ಸತಿ ಮಾತಲಿಃ |
ವ್ಯಚರತ್ ಸ್ಯಂದನಾಗ್ರ್ಯೇಣ ಸಂಗ್ರಾಮೇ ರೋ(ಲೋ)ಮಹರ್ಷಣೇ ॥
ಆಗ ಪ್ರಕಾಶವುಂಟಾದಾಗ ಮಾತಲಿಯು ಅಶ್ವಗಳನ್ನು ಚೆನ್ನಾಗಿ ನಿಯಂತ್ರಿಸಿ ರೋಮಾಂಚಕಾರಿಯಾದ ಆ ಸಂಗ್ರಾಮದಲ್ಲಿ ನನ್ನ ಶ್ರೇಷ್ಠವಾದ ಆ ರಥವನ್ನು ನಡೆಸಿದನು.
ತತಃ ಪರಿಪತಂತ್ಯುಗ್ರಾ(ಪರ್ಯಪತನ್ನುಗ್ರಾ| ನಿವಾತಕವಚಾ ಮಯಿ |
ತಾನಹಂ ವಿವರಂ ದೃಷ್ಟ್ವಾ ಪ್ರಾಹಿಣ್ವಂ ಯಮಸಾದನಮ್ ॥29॥
ನಂತರ ಉಗ್ರರಾದ ನಿವಾತಕವಚರು ನನ್ನ ಮೇಲೆ ಬೀಳಲು ಪ್ರಾರಂಭಿಸಿದರು. ನಾನು ಸೂಕ್ಷ್ಮವಾದ ಅವಕಾಶವನ್ನು ನೋಡಿಕೊಂಡು ಅವರನ್ನು ಯಮಲೋಕಕ್ಕೆ ಕಳುಹಿಸಿದೆನು.
ವರ್ತಮಾನೇ ತಥಾ ಯುದ್ಧೇ ನಿವಾತಕವಚಾಂತಕೇ |
ನಾಪಶ್ಯಂ ಸಹಸಾ ಸರ್ವಾನ್ ದಾನವಾನ್ ಮಾಯಯಾಽಽವೃತಾನ್ ॥
ನಿವಾತಕವಚ ನಾಶಕವಾದ ಯುದ್ಧವು ಹಾಗೆ ನಡೆಯುತ್ತಿರಲು ಇದ್ದಕ್ಕಿದ್ದಂತೆಯೇ ಯಾವ ದಾನವರೂ ಕಾಣಲಿಲ್ಲ. ಅವರು ತಮ್ಮ ಮಾಯೆಯಿಂದ ಆವೃತರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್ಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ನಿವಾತಕವಚಯುದ್ಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತಾರನೆಯ
ಅಧ್ಯಾಯ ಮುಗಿಯಿತು
* * * *
ನೂರ ಅರವತ್ತೇಳನೆಯ ಅಧ್ಯಾಯ
ಅರ್ಜುನನಿಂದ ಪುನಃ ಸ್ವರ್ಗಗಮನ.
ಅರ್ಜುನಃ
ಅದೃಶ್ಯಮಾನಾಸ್ತೇ ದೈತ್ಯಾ ಯೋಧಯಂತಿ ಸ್ಮ ಮಾಯಯಾ |
ಅದೃಶ್ಯೇನಾಸ್ತ್ರವೀರ್ಯೇಣ ತಾನಪ್ಯಹಮಯೋಧಯಮ್ ॥1॥
ಅರ್ಜುನ ಆ ದೈತ್ಯರು ತಮ್ಮ ಮಾಯೆಯಿಂದ ಅದೃಶ್ಯರಾಗಿ ಯುದ್ಧವನ್ನು ಮಾಡಲು ಪ್ರಾರಂಭಿಸಿದರು. ನಾನೂ ಸಹ ಅದೃಶ್ಯಾಸ್ತ್ರದ ಸಾಮರ್ಥ್ಯದಿಂದಲೇ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಿದೆನು.
ಗಾಂಡೀವಮುಕ್ತಾ ವಿಶಿಖಾಃ ಸಮ್ಯಗಸ್ತ್ರಪ್ರಯೋಜಿತೈಃ (ಚೋದಿತಾಃ) |
ಅಚ್ಛಿದನ್ನುತ್ತಮಾಂಗಾನಿ ಯತ್ರ ಯತ್ರ ಸ್ಮ ತೇಽಭವನ್ ॥2॥
ಗಾಂಡೀವ ಧನುಸ್ಸಿನಿಂದ ಅಸ್ತ್ರಪೂರ್ವಕವಾಗಿ ಪ್ರಯೋಗಿಸಲ್ಪಟ್ಟ ಬಾಣಗಳು ಅವರು ಎಲ್ಲೆಲ್ಲಿ ಇದ್ದರೋ ಅಲ್ಲಿಯೇ ಅವರ ತಲೆಗಳನ್ನು ಕತ್ತರಿಸಿದವು.

ತತೋ ನಿವಾತಕವಚಾ ವಧ್ಯಮಾನಾ ಮಯಾ ಯುಧಿ |
ಸಂಹೃತ್ಯ ಮಾಯಾಂ ತರ(ಸಹ)ಸಾ ಪ್ರಾವಿಶನ್ ಪುರಮಾತ್ಮನಃ ॥3॥
ಅನಂತರ ನನ್ನಿಂದ ಹತರಾಗುತ್ತಿದ್ದ ನಿವಾತಕವಚರು ತಮ್ಮ ಮಾಯೆಯನ್ನು ಉಪಸಂಹಾರ ಮಾಡಿ ಶೀಘ್ರವಾಗಿ ತಮ್ಮ ಪಟ್ಟಣಕ್ಕೆ ಹಿಂದಿರುಗಿದರು.
ವ್ಯಪಯಾತೇಷು ದೈತ್ಯೇಷು ಪ್ರಾದುರ್ಭೂತೇ ಚ ದರ್ಶನೇ |
ಅಪಶ್ಯಂ ದಾನವಾಂಸ್ತತ್ರ ಹತಾನ್ ಶತಸಹಸ್ರಶಃ ॥4॥
ದೈತ್ಯರು ಹೊರಟುಹೋಗಿ ಪ್ರಕಾಶವು ಉಂಟಾದಾಗ ನಾನು ಅಲ್ಲಿ ದಾನವರು, ನೂರುಸಾವಿರ ಸಂಖ್ಯೆಗಳಲ್ಲಿ ಹತರಾಗಿರುವುದನ್ನು ನೋಡಿದೆನು.
ವಿನಿಷ್ಪಿಷ್ಟಾನಿ ತತ್ರೈಷಾಂ ಶಸ್ತ್ರಣ್ಯಾಭರಣಾನಿ ಚ |
ಶತಶಃ ಸ್ಮ ಪ್ರದೃಶ್ಯಂತೇ ಗಾತ್ರಾಣಿ ಕವಚಾನಿ ಚ ॥5॥
ಅವರ ಶಸ್ತ್ರಗಳು, ಆಭರಣಗಳು, ಕವಚಗಳು ಮತ್ತು ಶರೀರಗಳು ಎಲ್ಲವೂ ಕತ್ತರಿಸಲ್ಪಟ್ಟು ನೂರಾರು ಸಂಖ್ಯೆಯಲ್ಲಿ ಕಾಣತೊಡಗಿದವು.
ಹಯಾನಾಂ ನಾಂತರಂ ಹ್ಯಾಸೀತ್ ಪದಾದ್ವಿಚಲಿತುಂ ಪದಮ್ |
ಉತ್ಪತ್ಯ ಸಹಸಾ ತಸ್ಮುರಂತರಿಕ್ಷಗಮಾಸ್ತತಃ ॥6॥
ನನ್ನ ಕುದುರೆಗಳಿಗೆ ಭೂಮಿಯ ಮೇಲೆ ಕಾಲಿಡಲು ಅವಕಾಶವಿರಲಿಲ್ಲ. ಆಗ ಅವು ತಕ್ಷಣ ಹಾರಿ ಅಂತರಿಕ್ಷದಲ್ಲಿ ಸಂಚರಿಸಲು ಪ್ರಾರಂಭಿಸಿದವು.
ತತೋ ನಿವಾತಕವಚಾ ವ್ಯೋಮ ಸಂಛಾದ್ಯ ಕೇವಲಮ್ |
ಅದೃಶ್ಯಾ ಹ್ಯತ್ಯವರ್ತಂತ ವಿಸೃಜಂತಃ ಶಿಲೋಚ್ಚಯಾನ್ ॥7॥
ಆಗ ನಿವಾತಕವಚರು ಆಕಾಶವೆಲ್ಲವನ್ನೂ ಕತ್ತಲಿನಿಂದ ಆವರಿಸಿ ಅದೃಶ್ಯರಾಗಿಯೇ ಶಿಲಾವರ್ಷವನ್ನು ಉಂಟುಮಾಡುತ್ತಾ ಪುನಃ ಹಿಂದಿರುಗಿದರು.
ಅಂತರ್ಭೂಮಿಗತಾಶ್ಚಾನ್ಯೇ ಹಯಾನಾಂ ಚರಣಾನಥ |
ನ್ಯಗೃಹ್ಣನ್ ದಾನವಾ ಘೋರಾ ರಥಚಕ್ರೇ ಚ ಭಾರತ ॥8॥
ಕೆಲವು ದಾನವರು ಭೂಮಿಯ ಒಳಗೆ ಸೇರಿ ಕುದುರೆಗಳ ಕಾಲುಗಳನ್ನು ಹಿಡಿದರು. ಎಲೈ ಭಾರತನೇ, ಇನ್ನು ಕೆಲವು ದಾನವರು ರಥವನ್ನು ಮತ್ತು ಚಕ್ರವನ್ನು ಹಿಡಿದರು.
ವಿನಿಗೃಹ್ಯ ಹಯಾಂಶ್ಚಾನ್ಯೇ ರಥಂ ಚ ಮಮ ಯುಧ್ಯತಃ |
ಸರ್ವತೋ ಮಾಮವಿಧ್ಯಂತ ಸರಥಂ ಧರಣೀಧರೈಃ ॥9॥
ಅವರು ನನ್ನ ರಥವನ್ನೂ, ಅಶ್ವವನ್ನೂ ನಿಗ್ರಹಿಸಿದರು. ಯುದ್ಧಮಾಡುತ್ತಿರುವ ನನ್ನ ಮೇಲೆ ಮತ್ತು ನನ್ನ ರಥದ ಮೇಲೆ ಎಲ್ಲಕಡೆಗಳಿಂದಲೂ ಪರ್ವತಗಳನ್ನು ಎಸೆದು ನನ್ನನ್ನು ಪೀಡಿಸಿದರು.
ಪರ್ವತೈರುಪಚೀಯದ್ಭಿಃ ಪತದ್ಭಿಶ್ಚ ತಥಾಽಪರೈಃ |
ಸ ದೇಶೋ ಯತ್ರ ವರ್ತಾಮ ಗುಹೇವ ಸಮಪದ್ಯತ ॥10॥
ನನ್ನ ಮೇಲೆ ಬೀಳುತ್ತಿರುವ ಸಮೃದ್ಧವಾದ ಆ ಪರ್ವತದಿಂದ ನಾವು ಇದ್ದ ಸ್ಥಳವು ಒಂದು ಗುಹೆಯಂತಾಯಿತು.
ಪರ್ವತೈಶ್ಚಾದ್ಯಮಾನೋಽಹಂ ನಿಗೃಹೀತೈಶ್ಚ ವಾಜಿಭಿಃ |
ಅಗಚ್ಛಂ ಪರಮಾಮಾರ್ತಿಂ ಮಾತಲಿಸ್ತದಲಕ್ಷಯತ್ |
ಲಕ್ಷಯಿತ್ವಾ ಚ ಮಾಂ ಭೀತಮಿದಂ ವಚನಮಬ್ರವೀತ್ ॥11॥
ಅರ್ಜುನಾರ್ಜುನ ಮಾ ಭೈಸ್ತ್ವಂ ವಜ್ರಮಸ್ತ್ರಮುದೀರಯ ॥12॥
ನನ್ನ ಅಶ್ವಗಳು ತಡೆಯಲ್ಪಟ್ಟು ನಾನು ಪರ್ವತದಿಂದ ಮುಚ್ಚಲ್ಪಟ್ಟಾಗ ಬಹಳ ವಿಷಾದಕ್ಕೆ ಒಳಗಾದೆನು. ಮಾತಲಿಯು ಅದನ್ನು ಲಕ್ಷಿಸಿ ಭೀತನಾದ ನನ್ನನ್ನು ಕುರಿತು ಅರ್ಜುನನೇ ಹೆದರಬೇಡ ವಜ್ರಾಸ್ತ್ರವನ್ನು ಪ್ರಯೋಗಿಸು ಎಂದು ಹೇಳಿದನು.
ತತೋಽಹಂ ತಸ್ಯ ತದ್ವಾಕ್ಯಂ ಶ್ರುತ್ವಾ ವಜ್ರಮುದೀರಯಮ್ |
ದೇವರಾಜಸ್ಯ ದಯಿತಂ ವಜ್ರ(ಭೀಮ)ಮಸ್ತ್ರಂ ನರಾಧಿಪ ॥13॥
ಎಲೈ ನರಾಧಿಪನೇ, ಆಗ ನಾನು ಅವನ ಮಾತನ್ನು ಕೇಳಿ ದೇವರಾಜನಿಗೆ ಪ್ರಿಯವಾದ ವಜ್ರಾಸ್ತ್ರವನ್ನು ಪ್ರಯೋಗಿಸಿದೆನು.
ಅಚಲಂ ಸ್ಥಾನಮಾಸಾದ್ಯ ಗಾಂಡೀವಮನುಮಂತ್ರ್ಯ ಚ |
ಅಮುಂಚಂ ವಜ್ರಸಂಸ್ಪರ್ಶಾನಾಯಸಾನ್ ನಿಶಿತಾನ್ ಶರಾನ್ ॥14॥
ಒಂದು ಸ್ಥಿರವಾದ ಸ್ಥಾನದಲ್ಲಿ ನಿಂತು ಗಾಂಡೀವವನ್ನು ಅಭಿಮಂತ್ರಿಸಿ ವಜ್ರಸಂಸ್ಪರ್ಶವುಳ್ಳ ಅಯೋಮಯವಾದ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದೆನು.
ತತೋ ಮಾಯಾಶ್ಚ ತಾಃ ಸರ್ವಾ ನಿವಾತಕವಚಾಂಶ್ಚ ತಾನ್ |
ತೇ ವಜ್ರಚೋದಿತಾ ಬಾಣಾ ವಜ್ರಭೂತಾಃ ಸಮಾವಿಶನ್ ॥15॥
ಆಗ ವಜ್ರಾಸ್ತ್ರದಿಂದ ಪ್ರೇರಿತವಾದ ನನ್ನ ಬಾಣಗಳು ಸ್ವತಃ ವಜ್ರಗಳಂತೆಯೇ ಆಗಿ ನಿವಾತಕವಚರ ಶರೀರಗಳನ್ನೂ ಮತ್ತು ಎಲ್ಲಾ ಮಾಯೆಗಳನ್ನೂ ಪ್ರವೇಶಿಸಿದವು.
ತೇ ವಜ್ರವೇಗವಿಹತಾ ದಾನವಾಃ ಪರ್ವತೋಪಮಾಃ |
ಇತರೇತರಮಾಶ್ಲಿಷ್ಯ ನ್ಯಪತನ್ ಪೃಥಿವೀತಳೇ ॥16॥
ಆ ವಜ್ರ ವೇಗದಿಂದ ನಿಹತರಾದ ಪರ್ವತಕಾಯರಾದ ದಾನವರು ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡು ಭೂಮಿಯ ಮೇಲೆ

ಉರುಳಿದರು.
ಅಂತರ್ಭೂಮೌ ಚ ಯೇऽಗೃಹ್ಣನ್ ದಾನವಾ ರಥವಾಜಿನಃ |
ಅನುಪ್ರವಿಶ್ಯ ತಾನ್ ಬಾಣಾಃ ಪ್ರಾಹಿಣ್ವನ್ ಯಮಸಾದನಮ್ ॥17॥
ಆ ಬಾಣಗಳು ಭೂಮಿಯ ಒಳಗೆ ಅಡಗಿ ರಥ ಮತ್ತು ಕುದುರೆಗಳನ್ನು ಹಿಡಿದ ದಾನವರ ಶರೀರಗಳನ್ನು ಪ್ರವೇಶಿಸಿ ಅವರನ್ನು ಯಮಲೋಕಕ್ಕೆ ಕಳುಹಿಸಿದವು.
ತದಾ ನಿ(ಹತೈರ್ನಿ)ವಾತಕವಚೈರ್ನಿರಸ್ತೈಃ ಪರ್ವತೋಪಮೈಃ |
ಸಮಾಚ್ಛಾದ್ಯತ ದೇಶಃ ಸ ವಿಕೀರ್ಣೈರಿವ ಪರ್ವತೈಃ ॥18॥
ಆಗ ಹತರಾದ ಪರ್ವತಕಾಯರಾದ ನಿವಾತಕವಚರ ಎಲ್ಲ ಕಡೆಯಲ್ಲಿಯೂ ಚೆಲ್ಲಾಡಿದ ಆ ದೇಹವೆಂಬ ಪರ್ವತಗಳಿಂದ ಆ ಭೂಪ್ರದೇಶವೆಲ್ಲವೂ ಆವರಿಸಲ್ಪಟ್ಟಿತು.
ನ ಹಯಾನಾಂ ಕ್ಷತಿಃ ಕ(ಕಾ)ಚಿನ್ನ ರಥಸ್ಯ ನ ಮಾತಲೇಃ |
ಮಮ ಚಾದೃಶ್ಯತ ತದಾ ತದದ್ಭುತಮಿವಾಭವತ್ ॥19॥
ನನಗಾಗಲೀ, ನನ್ನ ರಥಕ್ಕಾಗಲೀ ಅಥವಾ ಮಾತಲಿಗಾಗಲೀ ಯಾವ ಗಾಯವೂ ಆಗಲಿಲ್ಲ. ಅದು ಅದ್ಭುತವಾಗಿದ್ದಿತು.
ತತೋ ಮಾಂ ಪ್ರಹಸನ್ ರಾಜನ್ ಮಾತಲಿಃ ಪ್ರತ್ಯಭಾಷತ |
ನೈತದರ್ಜುನ ದೇವೇಷು ತ್ವಯಿ ವೀರ್ಯಂ ಯದೀಕ್ಷ್ಯತೇ ॥20॥
ಮಾತಲಿ ರಾಜನೇ, ಆಗ ಮಾತಲಿಯು ನಗುತ್ತಾ ನನ್ನನ್ನು ಕುರಿತು `ಎಲೈ ಅರ್ಜುನನೇ, ನಿನ್ನಲ್ಲಿ ಯಾವ ಪರಾಕ್ರಮವನ್ನು ನೋಡುತ್ತಿದ್ದೇನೆಯೋ ಅದು ದೇವತೆಗಳಲ್ಲಿಯೂ ಇಲ್ಲ' ಎಂದು ಹೇಳಿದನು.
ಹತೇಷ್ವಸುರಸೇಂಷು ದಾರಾಸ್ತೇಷಾಂ ತು ಸರ್ವಶಃ |
ಪ್ರಾಕ್ರೋಶನ್ ನಗರೇ ದಾರಾ(ತಸ್ಮಿನ್) ಯಥಾ ಶರದಿ ಲಕ್ಷಣಾಃ ॥21॥
ಅಸುರ ಸಮೂಹಗಳು ಹತವಾಗುತ್ತಿರಲು ನಗರದಲ್ಲಿ ಅವರ ಪತ್ನಿಯರು ಶರತ್ಕಾಲದಲ್ಲಿ ಜಲವು ಕ್ಷಯವನ್ನು ಹೊಂದಿದಾಗ ಹೆಣ್ಣು ಸಾರಸಪಕ್ಷಿಗಳಂತೆ ಕಿರುಚಿದರು.
ತತೋ ಮಾತಲಿನಾ ಸಾರ್ಧಮಹಂ ತತ್ಪುರಮಭ್ಯಯಾಮ್ |
ತ್ರಾಸಯನ್ ರಥಘೋಷೇಣ ನಿವಾತಕವಚಸ್ತ್ರಿಯಃ ॥22॥
ಅನಂತರ ನಾನು ಮಾತಲಿಯ ಜೊತೆಯಲ್ಲಿ ರಥಘೋಷದಿಂದ ನಿವಾತಕವಚ ವನಿತೆಯರಿಗೆ ಭಯವನ್ನುಂಟುಮಾಡುತ್ತಾ ಅವರ ಪಟ್ಟಣವನ್ನು ಪ್ರವೇಶಿಸಿದೆನು.
ತಾನ್ ದೃಷ್ಟ್ವಾ ದಶಸಾಹಸ್ರಾನ್ ಮಯೂರಸದೃಶಾನ್ ಹಯಾನ್ |
ರಥಂ ಚ ರವಿಸಂಕಾಶಂ ಪರ್ಜನ್ಯನಿನದಂ ತದಾ
(ಪ್ರಾದ್ರವನ್‌ಗಣಶಃ ಸ್ತ್ರಿಯಃ) ॥23॥
ಮಯೂರವರ್ಣದ ಹತ್ತುಸಹಸ್ರಕುದುರೆಗಳನ್ನು ಹೂಡಿದ ರವಿಕಾಂತಿಯುಳ್ಳ, ಪರ್ಜನ್ಯಘೋಷವನುನಳ್ಳ ರಥವನ್ನು ನೋಡಿ ಆ ಸ್ತ್ರೀಯರು ಗುಂಪು ಗುಂಪಾಗಿ ಓಡಿ ಹೋದರು.
ತಾಭಿರಾಭರಣೈಃ ಶಬ್ದಸ್ತತ್ರಸಿತಾಭಿಃ ಸಮೀರಿತಃ |
ಶಿಲಾನಾಮಿವ ಶೈಲೇಷು ಪತಂತೀನಾಮಭೂತ್ ತದಾ ॥24॥
ಭಯದಿಂದ ಓಡಿಹೋಗುತ್ತಿದ್ದ ಅವರ ಆಭರಣದಿಂದ ಉಂಟಾದ ಶಬ್ದಗಳು ಪರ್ವತದ ಮೇಲೆ ಬೀಳುತ್ತಿದ್ದ ಶಿಲೆಗಳ ಶಬ್ದಗಳಂತೆ ಕೇಳಿಬಂದವು.
ವಿತ್ರಸ್ತಾ ದೈತ್ಯನಾರ್ಯಸ್ತಾಃ ಸ್ವಾನಿ ವೇಶ್ಮಾನ್ಯಥಾವಿಶನ್ |
ಬಹುರತ್ನವಿಚಿತ್ರಾಣಿ ಶಾತಕುಂಭಮಯಾನಿ ಚ ॥25॥
ಹೆದರಿದ ದೈತ್ಯನಾರಿಯರು ಬಹುರತ್ನವಿಚಿತ್ರವಾದ ಸುವರ್ಣಮಯವಾದ ತಮ್ಮ ಮನೆಗಳನ್ನು ಪ್ರವೇಶಿಸಿದರು.
ತದದ್ಭುತಾಕಾರಮಹಂ ದೃಷ್ಟ್ವಾ ನಗರಮುತ್ತಮಮ್ |
ವಿಶಿಷ್ಟಂ ದೇವನಗರಾದಪೃಚ್ಛಂ ಮಾತಲಿಂ ತತಃ ॥26॥
ಅದ್ಭುತವಾದ ಮತ್ತು ಶ್ರೇಷ್ಠವಾದ ದೇವತೆಗಳ ನಗರಕ್ಕಿಂತಲೂ ವಿಶಿಷ್ಟವಾದ ಆ ನಗರವನ್ನು ನೋಡಿ ನಾನು ಮಾತಲಿಯನ್ನು ಕೇಳಿದೆನು.
ಇದಮೇವಂವಿಧಂ ಕಸ್ಮಾದ್ ದೇವಾ ನಾವಾಸಯುಂತ್ಯುತ |
ಪುರಂದರಪುರಾದ್ಧೀದಂ ವಿಶಿಷ್ಟಮಿತಿ ಲಕ್ಷಯೇ ॥27॥
ಇಂತಹ ಈ ಪಟ್ಟಣದಲ್ಲಿ ದೇವತೆಗಳು ಏಕೆ ವಾಸಮಾಡುವುದಿಲ್ಲ? ಇಂದ್ರನ ಪಟ್ಟಣಕ್ಕಿಂತಲೂ ಇದು ಉತ್ತಮವಾಗಿದೆ ಎಂದು ನಾನು ಕಾಣುತ್ತಿದ್ದೇನೆ.
ಮಾತಲಿಃ
ಆಸೀದಿದಂ ಪುರಾ ಪಾರ್ಥ ದೇವರಾಜಸ್ಯ ನಃ ಪುರಮ್ |
ತತೋ ನಿವಾತಕವಚೈರಿತಃ ಪ್ರಚ್ಯಾವಿತಾಃ ಸುರಾಃ ॥28॥
ಮಾತಲಿ ಪಾರ್ಥನೇ, ಇದು ಮೊದಲು ನಮ್ಮ ದೇವರಾಜನ ಪಟ್ಟಣವಾಗಿದ್ದಿತು. ಅನಂತರ ನಿವಾತಕವಚರು ದೇವತೆಗಳನ್ನು ಇಲ್ಲಿಂದ ಓಡಿಸಿದರು.
ತಪಸ್ತಪ್ತ್ವಾ ಮಹತ್ತೀವ್ರಂ ಪ್ರಸಾದ್ಯ ಚ ಪಿತಾಮಹಮ್ |

ಪ್ರಾಪ್ತಾಃ ಪುರಂ (ಇದಂ ವೃತಂ) ನಿವಾಸಾಯ ದೇವೇಭ್ಯಶ್ಚಾಭಯಂ ಯುಧಿ ॥29॥
ಅವರು ತೀವ್ರವಾದ ತಪಸ್ಸನ್ನು ಮಾಡಿ ಬ್ರಹ್ಮದೇವರನ್ನು ಸಂತೋಷಪಡಿಸಿ ನಿವಾಸಕ್ಕೋಸ್ಕರ ಈ ನಗರವನ್ನೂ, ಯುದ್ಧದಲ್ಲಿ ದೇವತೆಗಳಿಂದ ಅಭಯವನ್ನೂ ಪಡೆದರು.
ತಥಾ ದೇವೈರವಧ್ಯತ್ವಂ ಪುರಸ್ಯಾಭೇದ್ಯತ್ವಮೇವ ತು |
ಮನುಷ್ಯಾಣಾಂ ದುರ್ಬಲತ್ವಾದುಪೇಕ್ಷ್ಯೈವ ಮಹಾಸುರೈಃ ॥29.1॥
ಅದರಂತೆಯೇ, ಮನುಷ್ಯರು ದುರ್ಬಲರಾದುದರಿಂದ ಅವರನ್ನು ಉಪೇಕ್ಷೆ ಮಾಡಿ ಮಹಾಸುರರು ನಾವು ದೇವತೆಗಳಿಂದ ಅವಧ್ಯರಾಗಬೇಕೆಂದು ಮತ್ತು ನಮ್ಮ ಪಟ್ಟಣವು ಅಭೇದ್ಯವಾಗಬೇಕೆಂದು ವರವನ್ನು ಪಡೆದರು.
ತತಃ ಶಕ್ರೇಣ ಭಗವಾನ್ ಸ್ವಯಂಭೂರಿತಿ ಚೋದಿತಃ |
ವಿಧತ್ತಾಂ ಭಗವಾನಂತಮಾತ್ಮನೋ ಹಿತಕಾಮ್ಯಯಾ ॥30॥
ಅನಂತರ ಇಂದ್ರನು ತನ್ನ ಹಿತವನ್ನು ಬಯಸಿ ಬ್ರಹ್ಮದೇವರನ್ನು ಸಮೀಪಿಸಿ ಪೂಜ್ಯರೇ, ಇವರ ವಿನಾಶವನ್ನು ವಿಧಾನಮಾಡಿ ಎಂದು ಒತ್ತಾಯಮಾಡಿದನು.
ತತ ಉಕ್ತೋ ಭಗವತಾ ದಿಷ್ಟಮತ್ರೇತಿ ವಾಸವಃ |
ಭವಿತಾಂತಸ್ತ್ವಮೇವೈಷಾಂ ದೇಹೇನಾನ್ಯೇನ ವೃತ್ರಹನ್ ॥31॥
ಆಗ ಪೂಜ್ಯರಾದ ಬ್ರಹ್ಮದೇವರು ಇಂದ್ರನನ್ನು ಕುರಿತು ನಾನು ಈಗಾಗಲೇ ಅವರ ವಿನಾಶವನ್ನು ವ್ಯವಸ್ಥೆಮಾಡಿದ್ದೇನೆ. ಎಲೈ ವೃತ್ರಹಂತಕನೇ, ನೀನೇ ಇನ್ನೊಂದು ಶರೀರದಿಂದ ಅವರಿಗೆ ಹಂತಕನಾಗುವಿ ಎಂದು ಹೇಳಿದರು.
ತತ ಏಷಾಂ ವಧಾರ್ಥಾಯ ಶಕ್ರೋಽಸ್ತ್ರಾಣಿ ದದೌ ತವ |
ನ ಹಿ ಶಕ್ಯಾಃ ಸುರೈರ್ಹಂತುಂ ಯ ಏತೇ ನಿಹತಾಸ್ತ್ವಯಾ ॥32॥
ಆದ್ದರಿಂದಲೇ ಇವರ ವಧೆಯ ಸಲುವಾಗಿ ಇಂದ್ರನು ನಿನಗೆ ಅಸ್ತ್ರಗಳನ್ನು ಕೊಟ್ಟನು. ದೇವತೆಗಳಿಂದ ಅವಧ್ಯರಾದ ಇವರನ್ನು ನೀನು ಈ ದಿನ ಸಂಹರಿಸಿದ್ದೀಯೆ.
ಕಾಲಸ್ಯ ಪರಿಣಾಮೇನ ತತಸ್ತ್ವಮಿಹ ಭಾರತ |
ಏಷಾಮಂತಕರಃ ಪ್ರಾಪ್ತಸ್ತತ್ ತ್ವಯಾ ಚ ಕೃತಂ ತಥಾ ॥33॥
ಎಲೈ ಭಾರತನೇ, ಕಾಲಪರಿಣಾಮದಿಂದ ನೀನು ಇಲ್ಲಿಗೆ ಇವರಿಗೆ ಹಂತಕನಾಗಿ ಪ್ರಾಪ್ತನಾಗಿ ಬಂದಿದ್ದೀಯೆ ಮತ್ತು ಆ ಕಾರ್ಯವನ್ನು ನೆರವೇರಿಸಿದ್ದೀಯೆ.
ದಾನವಾನಾಂ ವಿನಾಶಾಯ ಅಸ್ತ್ರಾಣಾಂ ಪರಮಂ ಬಲಮ್ |
ಗ್ರಾಹಿತಸ್ತ್ವಂ ಮಹೇಂದ್ರೇಣ ಪುರುಷೇಂದ್ರ ತದುತ್ತಮಮ್ ॥34॥
ಎಲೈ ಪುರುಷಶ್ರೇಷ್ಠನೇ, ದಾನವರ ವಿನಾಶಕ್ಕೋಸ್ಕರ ಅಸ್ತ್ರಗಳ ಶ್ರೇಷ್ಠವಾದ ಬಲವನ್ನು ನಿನಗೆ ಇಂದ್ರನು ಆಧಾನಮಾಡಿದ್ದಾನೆ.
ಅರ್ಜುನಃ
ತತಃ ಪ್ರಶಾಮ್ಯ ನಗರಂ ದಾನವಾಂಶ್ಚ ನಿಹತ್ಯ ತಾನ್ |
ಪುನರ್ಮಾತಲಿನಾ ಸಾರ್ಧಮಗಮಂ(ಚ್ಛಂ) ದೇವಸದ್ಮ ತತ್ ॥35॥
ಅರ್ಜುನ ಆಗ ನಾನು ಆ ದಾನವರನ್ನು ಸಂಹರಿಸಿ ಆ ನಗರವನ್ನು ಶಾಂತಗೊಳಿಸಿ ಮಾತಲಿಯ ಜೊತೆಯಲ್ಲಿ ಪುನಃ ದೇವರಾಜನ ಮನೆಗೆ ಹಿಂದಿರುಗಿದೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ನಿವಾತಕವಚಯುದ್ಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೇಳನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಯಯುರಂಧಂ ತಮಸ್ತೇಽಪಿ ಸರ್ವದೇವದ್ವಿಷೋಽಸುರಾಃ |
ದೇವಶತ್ರುಗಳಾದ ಆ ಅಸುರರೆಲ್ಲರೂ ಅಂಧಂತಮಸ್ಸಿಗೆ ಹೋದರು.
* * * *
ನೂರ ಅರವತ್ತೆಂಟನೆಯ ಅಧ್ಯಾಯ
ನಿವಾತಕವಚರನ್ನು ಸಂಹಾರಮಾಡಿ ಸ್ವರ್ಗಕ್ಕೆ ಹಿಂದಿರುಗುವ ಅರ್ಜುನನಿಂದ ಹಿರಣ್ಯಪುರ ವಾಸಿಗಳ ಮತ್ತು ಪೌಲೋಮರ ವಧೆ.
ಅರ್ಜುನಃ
ನಿವರ್ತಮಾನೇನ ತದಾ(ಮಯಾ) ಮಹದ್ ದೃಷ್ಟಂ ತತೋಽಪರಮ್|
ಪುರಂ ಕಾಮಗಮಂ(ಚರಂ) ದಿವ್ಯಂ ಪಾವಕಾರ್ಕಸಮಪ್ರಭಮ್ ॥1॥
ಅರ್ಜುನ ಅಲ್ಲಿಂದ ಹಿಂದಿರುಗುತ್ತಿದ್ದ ನಾನು ದಿವ್ಯವಾದ ಸೂರ್ಯಾಗ್ನಿ ಸಮಕಾಂತಿಯನ್ನು ಹೊಂದಿದ ಕಾಮಗಾಮಿಯಾದ ಇನ್ನೊಂದು ಪಟ್ಟಣವನ್ನು ನೋಡಿದೆನು.
ರತ್ನದ್ರುಮಮಯೈಶ್ಚಿತ್ರೈಃ ಸುಸ್ವರೈಶ್ಚ ಪತತ್ರಿಭಿಃ |
ಪೌಲೋಮೈಃ ಕಾಲಕೇಯೈ(ಕಂಜೈ)ಶ್ಚ ನಿತ್ಯಹೃಷ್ಟೈರಧಿಷ್ಠಿತಮ್ ॥2॥

ರತ್ನಮಯವಾದ ವಿಚಿತ್ರವೃಕ್ಷಗಳಿಂದಲೂ ಮತ್ತು ಸುಸ್ವರವುಳ್ಳ ಪಕ್ಷಿಗಳಿಂದಲೂ ಕೂಡಿದ್ದ ಆ ಪಟ್ಟಣವು ನಿತ್ಯವೂ ಮುದಿತರಾದ ಕೌಲೋಮರು ಮತ್ತು ಕಾಲಕೇಯರಿಂದ ವಾಸಿಸಲ್ಪಡುತ್ತಿತ್ತು.
ಗೋಪುರಾಟ್ಟಾಲಕೋಪೇತಂ ಚತುರ್ದ್ವಾರಂ ದುರಾಸದಮ್ |
ಸರ್ವರತ್ನಮಯಂ ದಿವ್ಯಮದ್ಭುತೋಪಮದರ್ಶನಮ್ ||3||
ಸರ್ವರತ್ನಮಯವಾದ ಗೋಪುರಗಳು, ಉಪ್ಪರಿಗೆಗಳು ಮತ್ತು ಚತುರ್ದ್ವಾರಗಳಿಂದ ಕೂಡಿ ಅದ್ಭುತವಾಗಿ ಕಾಣುತ್ತಿದ್ದ ಆ ದಿವ್ಯಪಟ್ಟಣವು ಪ್ರವೇಶಿಸಲು ಬಹಳ ಕಷ್ಟವಾಗಿದ್ದಿತು.
ದ್ರುಮೈಃ ಪುಷ್ಪಫಲೋಪೇತೈಃ ಸರ್ವರತ್ನಮಯೈರ್ವೃತಮ್ |
ತಥಾ ಪತತ್ರಿಭಿರ್ದಿವ್ಯೈರುಪೇತಂ ಸುಮನೋಹರೈಃ ||4||
ಫಲಪುಷ್ಪಭರಿತವಾದ ಸರ್ವರತ್ನಮಯವಾದ ವೃಕ್ಷಗಳಿಂದಲೂ, ಮನೋಹರವಾದ ದಿವ್ಯಪಕ್ಷಿಗಳಿಂದಲೂ ಕೂಡಿದ್ದಿತು.
ಅಸುರೈರ್ನಿತ್ಯಮುದಿತೈಃ ಶೂಲಷ್ಟಿರ್ಮುಸಲಾಯುಧೈಃ |
ಚಾಪಮುದ್ಗರಹಸ್ತೈಶ್ಚ ಸ್ರಗ್ವಿಭಿಃ ಸರ್ವತೋ ವೃತಮ್ ||5||
ಮಾಲೆಗಳನ್ನು ಧರಿಸಿ ಕೈಯಲ್ಲಿ ಶೂಲ, ಋಷ್ಟಿ, ಮುಸಲ, ಚಾಪ, ಮುದ್ಗರ ಮೊದಲಾದ ಆಯುಧಗಳನ್ನು ಹಿಡಿದ ನಿತ್ಯಸಂತುಷ್ಟರಾದ ಅಸುರರಿಂದ ಎಲ್ಲಕಡೆಯಲ್ಲಿಯೂ ತುಂಬಿದ್ದಿತು.
ತದಹಂ ಪ್ರೇಕ್ಷ್ಯ ದೈತ್ಯಾನಾಂ ಪುರಮದ್ಭುತದರ್ಶನಮ್ |
ಅಪೃಚ್ಛಂ ಮಾತಲಿಂ ರಾಜನ್ ಕಿಮಿದಂ ವರ್ತತೇಽದ್ಭುತವ್ ||6||
ರಾಜನೇ, ನಾನು ಅದ್ಭುತವಾಗಿ ಕಾಣುತ್ತಿದ್ದ ದೈತ್ಯರ ಆ ಪಟ್ಟಣವನ್ನು ನೋಡಿ ಮಾತಲಿಯನ್ನು ಕುರಿತು ಇದೇನು ಹೀಗೆ ಅದ್ಭುತವಾಗಿದೆ ಎಂದು ಕೇಳಿದೆನು.
ಮಾತಲಿಃ
ಪುಲೋಮಾ ನಾಮ ದೈತೇಯೀ ಕಾಲಕಾ ಚ ಮಹಾಸುರೀ |
ದಿವ್ಯಂ ವರ್ಷಸಹಸ್ರಂ ತೇ ಚೇರತುಃ ಪರಮಂ ತಪಃ ||7||
ಮಾತಲಿ ಪುಲೋಮಾ ಎಂಬ ದೈತ್ಯವನಿತೆಯೂ ಕಾಲಕಾ ಎಂಬ ಮಹಾ ಅಸುರ ವನಿತೆಯೂ ಸಹ ದಿವ್ಯವರ್ಷ ಸಹಸ್ರಗಳವರೆಗೆ ಉತ್ಕೃಷ್ಟವಾದ ತಪಸ್ಸನ್ನು ಮಾಡಿದರು.
ತಪಸೋಽಂತೇ ತತಸ್ತಾಭ್ಯಾಂ ಸ್ವಯಂಭೂರದದಾದ್ ವರಮ್ |
ಅಗೃಹ್ಣೀತಾಂ ವರಂ ತೇ ತು ಸುತಾನಾಮಲ್ಪದುಃಖತಾಮ್ ||8||
ಅವಧ್ಯತಾಂ ಚ ರಾಜೇಂದ್ರ ಸುರರಾಕ್ಷಸಪನ್ನಗೈಃ |
ಪುರಂ ಸುರಮಣೀಯಂ ಚ ಖಚರಂ ಸುಮಹಾಪ್ರಭಮ್ ||9||
ಸರ್ವರತ್ನೈಃ ಸಮುದಿತಂ ದುರ್ಧರ್ಷಮಮರೈರಪಿ |
ಮಹರ್ಷಿಯಕ್ಷಗಂಧರ್ವಪನ್ನಗಾಸುರರಾಕ್ಷಸೈಃ |
ಸರ್ವಕಾಮಗುಣೋಪೇತಂ ವೀತಶೋಕಮನಾಮಯಮ್ ||10||
ತಪಸ್ಸಿನ ಕೊನೆಯಲ್ಲಿ ಅವರಿಬ್ಬರಿಗೂ ಬ್ರಹ್ಮದೇವರು ವರಗಳನ್ನು ಕೊಟ್ಟರು. ರಾಜೇಂದ್ರನೇ, ಅವರಿಬ್ಬರೂ ತಮ್ಮ ಮಕ್ಕಳಿಗೆ ಅಲ್ಪದುಃಖವನ್ನೂ ದೇವರಾಕ್ಷಸ ಸರ್ಪಗಳಿಂದ ಅವಧ್ಯತ್ವವನ್ನೂ ಮತ್ತು ಅತ್ಯಂತ ಮನೋಹರವಾದ ಮಹಾಕಾಂತಿಯನ್ನುಳ್ಳ ಸರ್ವರತ್ನಗಳಿಂದ ಕೂಡಿದ ದೇವತೆಗಳಿಗೆ, ಮಹರ್ಷಿಗಳಿಗೆ, ಯಕ್ಷಗಂಧರ್ವ ಪನ್ನಗಾಸುರ ರಾಕ್ಷಸರಿಗೆ ಸೋಲದಂತಹ, ಸರ್ವಕಾಮಗುಣೋಪೇತವಾದ ಶೋಕರೋಗಗಳಿಂದ ಮುಕ್ತವಾದ ಆಕಾಶಗಾಮಿಯಾದ ಒಂದು ನಗರವನ್ನೂ ವರವಾಗಿ ಬೇಡಿದರು.
ಬ್ರಹ್ಮಣಾ ಭರತಶ್ರೇಷ್ಠ ಕಾಲಕೇಯಕೃತೇ ಕೃತಮ್ ||11||
ತದೇತತ್ಖಪುರಂ ದಿವ್ಯಂ ಚರತ್ಯಮರವರ್ಜಿತಮ್ |
ಪೌಲೋಮಾಧ್ಯುಷಿತಂ ವೀರ ಕಾಲಕಂಜೈಶ್ಚ ದಾನವೈಃ ||12||
ಎಲೈ ವೀರನೇ, ಭರತಶ್ರೇಷ್ಠನೇ, ಈ ಪಟ್ಟಣವು ಕಾಲಕೇಯರ ಸಲುವಾಗಿ ಬ್ರಹ್ಮದೇವರಿಂದ ರಚಿಸಲ್ಪಟ್ಟಿತು. ಇದು ಪೌಲೋಮರಿಂದಲೂ ಮತ್ತು ಕಾಲಕೇಯ ದಾನವರಿಂದಲೂ ಅಧಿಷ್ಠಿತವಾಗಿ ಸರ್ವ ದೇವತೆಗಳಿಂದ ವರ್ಜಿತವಾಗಿ ಆಕಾಶದಲ್ಲಿ ಸಂಚರಿಸುತ್ತದೆ.
ಹಿರಣ್ಯಪುರಮಿತ್ಯೇವಂ ಖ್ಯಾಯತೇ ನಗರಂ ಮಹತ್ |
ರಕ್ಷಿತಂ ಕಾಲಕೇಯೈಶ್ಚ ಪೌಲೋಮೈಶ್ಚ ಮಹಾಸುರೈಃ ||13||
ಮಹಾಸುರರಾದ ಕಾಲಕೇಯರಿಂದಲೂ ಮತ್ತು ಪೌಲೋಮರಿಂದಲೂ ರಕ್ಷಿಸಲ್ಪಡುವ ಈ ದೊಡ್ಡ ನಗರವು ಹಿರಣ್ಯಪುರವೆಂದೇ ಪ್ರಸಿದ್ಧವಾಗಿದೆ.
ತ ಏತೇ ಮುದಿತಾ ರಾಜನ್ನವಧ್ಯಾಃ ಸರ್ವದೈವತೈಃ |
ನಿವಸಂತ್ಯತ್ರ ರಾಜೇಂದ್ರ ಗತೋದ್ವೇಗಾ ನಿರುತ್ಸುಕಾಃ ||14||
ಎಲೈ ರಾಜೇಂದ್ರನೇ, ಇವರು ಸರ್ವದೇವತೆಗಳಿಂದ ಅವಧ್ಯರಾಗಿ ಯಾವ ಉದ್ವೇಗ ಮತ್ತು ಆತಂಕಗಳಿಲ್ಲದೇ ಸಂತೋಷದಿಂದ ಈ ಪಟ್ಟಣದಲ್ಲಿ ವಾಸಿಸುತ್ತಾರೆ.
ಸುರಾಸುರೈರವಧ್ಯಾನಾಂ ದಾನವಾನಾಂ ಧನಂಜಯ |
ಮಾನುಷಾತ್ ಮೃತ್ಯುರೇತೇಷಾಂ ನಿರ್ದಿಷ್ಟೋ ಬ್ರಹ್ಮಣಾ ಪುರಾ ||15||
ಎಲೈ ಧನಂಜಯನೇ, ದೇವದಾನವರಿಂದ ಅವಧ್ಯರಾದ ಇವರಿಗೆ ಬ್ರಹ್ಮದೇವರು ಮನುಷ್ಯನಿಂದ ಮೃತ್ಯುವನ್ನು ಹಿಂದೆಯೇ

ನಿರ್ದೇಶಮಾಡಿದ್ದಾರೆ.
ಏತಾನಪಿ ರಣೇ ಪಾರ್ಥ ಕಾಲಕಂಜಾನ್ ದುರಾಸದಾನ್ |
ವಜ್ರಾಸ್ತ್ರೇಣ ನಯಸ್ವಾಶು ವಿನಾಶಂ ಸುಮಹಾಬಲಾನ್ ॥15.1॥
ಎಲೈ ಪಾರ್ಥನೇ, ಈ ದುರಾಸದರಾದ ಮಹಾಬಲಿಷ್ಠರಾದ ಕಾಲಕಂಜರನ್ನೂ (ಕಾಲಕೇಯರನ್ನೂ) ಯುದ್ಧದಲ್ಲಿ ವಜ್ರಾಸ್ತ್ರದಿಂದ ಶೀಘ್ರವಾಗಿ ವಿನಾಶಮಾಡು.
ಅರ್ಜುನಃ
ಸುರಾಸುರೈರವಧ್ಯಂ ತದಹಂ ಜ್ಞಾತ್ವಾ ವಿಶಾಂಪತೇ |
ಅಬ್ರುವಂ ಮಾತಲಿಂ ಹೃಷ್ಟೋ ಯಾಹ್ಯೇತತ್ಪುರಮಂಜಸಾ ॥16॥
ಅರ್ಜುನ ಎಲೈ ರಾಜನೇ, ಅವರು ಸುರಾಸುರರಿಂದ ಅವಧ್ಯರೆಂದು ತಿಳಿದ ನಾನು ಸಂತೋಷಗೊಂಡು ಮಾತಲಿಯನ್ನು ಕುರಿತು ಈ ಪಟ್ಟಣವನ್ನು ಚೆನ್ನಾಗಿ ಪ್ರವೇಶಮಾಡು ಎಂದು ಹೇಳಿದೆನು.
ತ್ರಿದಶೇಶದ್ವಿಷೋ ಯಾವತ್ ಕ್ಷಯಮಸ್ತ್ರೈರ್ನಯಾಮ್ಯಹಮ್ |
ನ ಕಥಂಚಿದ್ಧಿ ಮೇ ಪಾಪಾ ನವಧ್ಯಾ ಯೇ ಸುರದ್ವಿಷಃ ॥17॥
ನಾನು ದೇವದ್ವೇಷಿಗಳನ್ನು ನನ್ನ ಅಸ್ತ್ರಗಳಿಂದ ವಿನಾಶಗೊಳಿಸುತ್ತೇನೆ. ದೇವದ್ವೇಷಿಗಳಾದ ಪಾಪಿಗಳು ನನಗೆ ಯಾವ ಕಾರಣದಿಂದಲೂ ಅವಧ್ಯರಲ್ಲ.
ಉವಾಹ ಮಾಂ ತತಃ ಶೀಘ್ರಂ ಹಿರಣ್ಯಪುರಮಂತಿಕಾತ್ |
ರಥೇನ ತೇನ ದಿವ್ಯೇನ ಹರಿಯುಕ್ತೇನ ಮಾತಲಿಃ ॥18॥
ಆಗ ಮಾತಲಿಯು ದಿವ್ಯಾಶ್ವಗಳನ್ನು ಹೂಡಿದ ರಥದಿಂದ ನನ್ನನ್ನು ಶೀಘ್ರವಾಗಿ ಹಿರಣ್ಯಪುರದ ಸಮೀಪಕ್ಕೆ ಕರೆದುಕೊಂಡು ಹೋದನು.
ತೇ ಮಾಮಾಲಕ್ಷ್ಯ ದೈತೇಯಾ ವಿಚಿತ್ರಾಭರಣಾಂಬರಾಃ |
ಸಮುತ್ಪೇತುರ್ಮಹಾವೇಗಾ ರಥಾನಾಸ್ಥಾಯ ದಂಸಿತಾಃ ॥19॥
ವಿಚಿತ್ರಾಭರಣ ವಸ್ತ್ರಗಳನ್ನು ಧರಿಸಿದ ಆ ಮಹಾವೇಗವುಳ್ಳ ದೈತೇಯರು ನನ್ನನ್ನು ಗಮನಿಸಿ ಕವಚಗಳನ್ನು ತೊಟ್ಟು ರಥಗಳನ್ನು ಏರಿ ನನ್ನ ಮೇಲೆ ಎರಗಿದರು.
ತತೋ ನಾಲೀಕನಾರಾಚೈರ್ಭಲ್ಲೈಃ ಶಕ್ತ್ಯಯಷ್ಟಿತೋಮರೈಃ |
ಪ್ರತ್ಯಘ್ನನ್ ದಾನವೇಂದ್ರಾ ಮಾಂ ಕ್ರುದ್ಧಾಸ್ತೀವ್ರಪರಾಕ್ರಮಾಃ ॥20॥
ಅನಂತರ ಕ್ರೋಧಯುಕ್ತರೂ, ತೀವ್ರಪರಾಕ್ರಮಶಾಲಿಗಳೂ ಆದ ದಾನವೇಂದ್ರರು ನಾಲೀಕ, ಬಾಣಗಳು, ಭಲ್ಲಗಳು ಮತ್ತು ಶಕ್ತಿಋಷ್ಟಿತೋಮರಗಳಿಂದ ನನ್ನ ಮೇಲೆ ಪ್ರಹಾರ ಮಾಡಿದರು.
ತದಹಂ ಶರವರ್ಷೇಣ ಮಹತಾ ಪ್ರತ್ಯವಾರಯಮ್ |
ಶಸ್ತ್ರವರ್ಷಂ ಮಹದ್ ರಾಜನ್ ವಿದ್ಯಾಬಲಮುಪಾಶ್ರಿತಃ ॥21॥
ಎಲೈ ರಾಜನೇ, ನಾನು ಆ ದೊಡ್ಡ ಶಸ್ತ್ರವರ್ಷವನ್ನು ವಿದ್ಯಾಬಲಗಳನ್ನು ಆಶ್ರಯಿಸಿ ಪ್ರತಿಯಾದ ದೊಡ್ಡ ಬಾಣವರ್ಷದಿಂದ ತಡೆದೆನು.
ವ್ಯಾಮೋಹಯಂ ಚ ತಾನ್ ಸರ್ವಾನ್ ರಥಮಾರ್ಗೈಶ್ಚರನ್ ರಣೇ |
ತೇಽನ್ಯೋನ್ಯಮಭಿಸಮ್ಮೂಢಾಃ ಪಾತಯಂತಿ ಸ್ಮ ದಾನವಾನ್ ॥22॥
ಯುದ್ಧದಲ್ಲಿ ರಥಮಾರ್ಗಗಳಲ್ಲಿ ಸಂಚರಿಸುತ್ತಾ ಅವರೆಲ್ಲರಿಗೂ ಭ್ರಾಂತಿಯನ್ನು ಉಂಟುಮಾಡಿದೆನು. ಆ ದಾನವರು ಭ್ರಾಂತಿವಶರಾಗಿ ಒಬ್ಬರನ್ನೊಬ್ಬರು ಕೊಂದು ಹಾಕಿದರು.
ತೇಷಾಮೇವಂ ವಿಮೂಢಾನಾಮನ್ಯೋನ್ಯಮಭಿಧಾವತಾಮ್ |
ಶಿರಾಂಸಿ ವಿಶಿಖೈರ್ದೀಪ್ತೈರ್ನ್ಯಹನಂ ಶತಸಂಘಶಃ ॥23॥
ಹೀಗೆ ಭ್ರಾಂತಿಗೆ ಒಳಗಾಗಿ ಪರಸ್ಪರವಾಗಿ ಮೇಲೆರಗುತ್ತಿದ್ದ ಅವರ ಶಿರಸ್ಸುಗಳನ್ನು ದೀಪ್ತವಾದ ಬಾಣಗಳಿಂದ ನೂರರ ಸಂಖ್ಯೆಯಲ್ಲಿ ಹೊಡೆದು ಉರುಳಿಸಿದೆನು.
ತೇ ವಧ್ಯಮಾನಾ ದೈತೇಯಾಃ ಪುರಮಾಸ್ಥಾಯ ತತ್ಪುನಃ |
ಸ(ಖ)ಮುತ್ಪೇತುಃ ಸನಗರಾ ಮಾಯಾಮಾಸ್ಥಾಯ ದಾನವೀಮ್ ॥24॥
ದೈತೇಯರು ಹೀಗೆ ಘಾಸಿಗೆ ಸಿಲುಕಿದಾಗ ಅವರು ಪುನಃ ತಮ್ಮ ಪುರವನ್ನು ಪ್ರವೇಶಿಸಿ ದಾನವ ಮಾಯೆಯನ್ನು ಆಶ್ರಯಿಸಿ ಪಟ್ಟಣದ ಜೊತೆಯಲ್ಲಿ ಅಂತರಿಕ್ಷಕ್ಕೆ ಹಾರಿದರು.
ತತೋಽಹಂ ಶರವರ್ಷೇಣ ಮಹತಾ ಕುರುನಂದನ |
ಮಾರ್ಗಮಾವೃತ್ಯ ದೈತ್ಯಾನಾಂ ಗತಿಂ ಚೈಷಾಮವಾರಯಮ್ ॥25॥
ಎಲೈ ಕುರುನಂದನನೇ, ಆಗ ನಾನು ದೊಡ್ಡ ಶರವರ್ಷದಿಂದ ಅವರ ಮಾರ್ಗವನ್ನು ಪ್ರತಿರೋಧಿಸಿ ಅವರ ಊರ್ಧ್ವಗಮನವನ್ನು ತಡೆದೆನು.
ತತ್ಪುರಂ ಖಚರಂ ದಿವ್ಯಂ ಕಾಮಗಂ ಸೂರ್ಯಸಪ್ರಭಮ್ |
ದೈತೇಯೈರ್ವರದಾನೇನ ಧಾರ್ಯತೇ ಸ್ಮ ಯಥಾಸುಖಮ್ ॥26॥
ಸೂರ್ಯಕಾಂತಿಯುಳ್ಳ ಕಾಮಗಾಮಿಯಾದ ಆಕಾಶದಲ್ಲಿ ಸಂಚರಿಸುವ ಆ ದಿವ್ಯವಾದ ಪಟ್ಟಣವನ್ನು ದೈತೇಯರು ವರದಾನದ ಬಲದಿಂದ ಸುಖವಾಗಿ ಧರಿಸಿದ್ದರು.

ಅಂತರ್ಭೂವೌ ನಿಪತತಿ ಪುನರೂರ್ಧ್ವಂ ಪ್ರತಿಷ್ಠತೇ |
ಪುನಸ್ತಿರ್ಯಕ್ ಪ್ರಯಾತ್ಯಾಶು ಪುನರಪ್ಸು ನಿಮಜ್ಜತಿ ॥27॥
ಆ ಪಟ್ಟಣವು ಭೂಮಿಯ ಒಳಗೆ ಪ್ರವೇಶಿಸುತ್ತದೆ. ಪುನಃ ಆಕಾಶಕ್ಕೆ ಹಾರುತ್ತದೆ. ಪುನಃ ಅಡ್ಡವಾಗಿ ಸಂಚರಿಸುತ್ತದೆ ಮತ್ತು ಪುನಃ ಬೇಗ ನೀರಿನಲ್ಲಿ ಮುಳುಗುತ್ತದೆ.
ಅಮರಾವತಿಸಂಕಾಶಂ ತತ್ಪುರಂ ಕಾಮಗಂ ಮಹತ್ |
ಅಹಮಸ್ತ್ರೈರ್ಬಹುವಿಧೈಃ ಪ್ರತ್ಯಗೃಹ್ಣಂ ಪರಂತಪ ॥28॥
ಎಲೈ ಪರಂತಪನೇ, ಅಮರಾವತಿಗೆ ಸದೃಶವಾದ ಕಾಮಗಮನವುಳ್ಳ ಆ ದೊಡ್ಡ ಪಟ್ಟಣವನ್ನು ನಾನು ಅನೇಕ ವಿಧವಾದ ಅಸ್ತ್ರಗಳಿಂದ ತಡೆದು ನಿಲ್ಲಿಸಿದೆನು.
ತತೋಽಹಂ ಶರಜಾಲೇನ ದಿವ್ಯಾಸ್ತ್ರನುದಿತೇನ ಚ |
ವ್ಯಗೃಹ್ಣಂ ಸಹ ದೈತೇಯೈಸ್ತತ್ಪುರಂ ಪುರುಷರ್ಷಭ ॥29॥
ಎಲೈ ಪುರುಷರ್ಷಭನೇ, ಅನಂತರ ನಾನು ದಿವ್ಯಾಸ್ತ್ರ ಪ್ರೇರಿತವಾದ ಬಾಣ ಸಮೂಹಗಳನ್ನು ದೈತೇಯರಿದ್ದ ಆ ಪಟ್ಟಣಕ್ಕೆ ಪ್ರಹಾರಮಾಡಿದೆನು.
ವಿಕ್ಷತಂ ಚಾಯಸೈರ್ಬಾಣರ್ಮತ್ಪ್ರಯುಕ್ತೈರಜಿಹ್ಮಗೈಃ |
ಮಹೀಮಭ್ಯಪತದ್ ರಾಜನ್ ಭಗ್ನಂ ಪುರಮಾಸುರಮ್ ॥30॥
ಎಲೈ ರಾಜನೇ, ನನ್ನಿಂದ ಪ್ರಯುಕ್ತವಾದ ಋಜುವಾದ ಕಬ್ಬಿಣದ ಬಾಣಗಳಿಂದ ಬಹಳವಾಗಿ ಶಿಥಿಲವಾದ ಆ ಅಸುರರ ಪಟ್ಟಣವು ಮುರಿದು ಭೂಮಿಯ ಮೇಲೆ ಬಿದ್ದಿತು.
ತೇ ವಧ್ಯಮಾನಾ ಮದ್ಬಾಣೈರ್ವಜ್ರವೇಗೈರಯಸ್ಮಯೈಃ |
ಪರ್ಯಭ್ರಮಂತ ವೈ ರಾಜನ್ನಸುರಾಃ ಕಾಲಚೋದಿತಾಃ ॥31॥
ಎಲೈ ರಾಜನೇ, ಆ ಅಸುರರಾದರೂ ಸಹ ವಜ್ರವೇಗವುಳ್ಳ ಅಯಸ್ಮಯವಾದ ನನ್ನ ಬಾಣಗಳಿಂದ ಹೊಡೆಯಲ್ಪಟ್ಟು ಮೃತ್ಯುಚೋದಿತರಾಗಿ ಅಲ್ಲಿಯೇ ತಿರುಗಾಡಿದರು.
ತತೋ ಮಾತಲಿರಾರುಹ್ಯ ಪುರಸ್ತಾನ್ನಿಪತನ್ನಿವ |
ಮಹೀಮವಾತರತ್ ಕ್ಷಿಪ್ರಂ ರಥೇನಾದಿತ್ಯವರ್ಚಸಾ ॥32॥
ಆಗ ಮಾತಲಿಯು ಆದಿತ್ಯಪ್ರಭೆಯುಳ್ಳ ನನ್ನ ರಥವನ್ನು ತೆಗೆದುಕೊಂಡು ಆಕಾಶದಲ್ಲಿ ಮೇಲೆ ಹೋಗಿ ಕೆಳಗೆ ಬೀಳುತ್ತಿದೆಯೋ ಎಂಬಂತೆ ಕ್ಷಿಪ್ರವಾಗಿ ಅವರ ಎದುರಿಗೆ ನಿಲ್ಲಿಸಿದನು.
ಯುಯುತ್ಸೂನಾಂ ಮಯಾ ಸಾರ್ಧಂ ಪರ್ಯವರ್ತಂತ ಭಾರತ |
ತಾನ್ಯಹಂ ನಿಶಿತೈರ್ಬಾಣೈರ್ವ್ಯಧಮಂ ಗಾರ್ಧ್ರರಾಜಿತೈಃ ॥33॥
ಎಲೈ ಭಾರತನೇ, ಯುದ್ಧಾಪೇಕ್ಷಿಗಳಾದ ಅವರಿಗೂ ಮತ್ತು ನನಗೂ ಯುದ್ಧವು ನಡೆಯಿತು. ನಾನು ಅವರನ್ನು ಹದ್ದಿನ ಗರಿಗಳಿಂದ ಅಲಂಕೃತವಾದ ಹರಿತವಾದ ಬಾಣಗಳಿಂದ ನಾಶಮಾಡಿದೆನು.
ತೇ ಯುದ್ಧೇ ಸನ್ನ್ಯವರ್ತಂತ ಸಮುದ್ರಸ್ಯ ಯಥೋರ್ಮಯಃ |
ನೇಮೇ ಶಕ್ಯಾ ಮಾನುಷೇಣ ಯುದ್ಧೇನೇತಿ ಪ್ರಚಿಂತ್ಯ ತತ್ ॥34॥
ತತೋಽಹಮಾನುಪೂರ್ವೇಯೇಣ ದಿವ್ಯಾನ್ಯಸ್ತ್ರಾಣ್ಯಯೋಜಯಮ್ ॥35॥
ಅವರು ಸಮುದ್ರದ ಅಲೆಗಳಂತೆ ಪುನಃ ಪುನಃ ನನ್ನ ಎದುರಿಗೆ ಬಂದರು. ಆಗ ನಾನು ಮಾನುಷ ಯುದ್ಧದಿಂದ ಇವರನ್ನು ನಾಶಮಾಡಲು ಸಾಧ್ಯವಿಲ್ಲವೆಂದು ತಿಳಿದು ಕ್ರಮವಾಗಿ ಒಂದೊಂದಾಗಿ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದೆನು.
ತತಸ್ತಾನಿ ಸಹಸ್ರಾಣಿ ರಥಿನಾಂ ಚಿತ್ರಯೋಧಿನಾಮ್ |
ಅಸ್ತ್ರಾಣಿ ಮಮ ದಿವ್ಯಾನಿ ಪ್ರತ್ಯಘ್ನನ್ ಶನಕೈರಿವ ॥36॥
ಆಗ ನನ್ನ ದಿವ್ಯಾಸ್ತ್ರಗಳು ಚಿತ್ರಯೋಧಿಗಳಾದ ಆ ಸಹಸ್ರ ರಥಿಕರ ಮೇಲೆ ಹೋಗಿ ನಿಧಾನವಾಗಿ ಹೊಡೆದವು.
ರಥಮಾರ್ಗಾನ್ ವಿಚಿತ್ರಾಂಸ್ತೇ ವಿಚರಂತೋ ಮಹಾಬಲಾಃ |
ಪ್ರತ್ಯದೃಶ್ಯಂತ ಸಂಗ್ರಾಮೇ ಶತಶೋಽಥ ಸಹಸ್ರಶಃ ॥37॥
ಆ ಮಹಾಬಲರಾದ ದಾನವರೂ ಸಹ ಯುದ್ಧದಲ್ಲಿ ವಿಚಿತ್ರವಾದ ರಥಮಾರ್ಗಗಳಲ್ಲಿ ಸಂಚರಿಸುತ್ತಾ ಶತಸಂಖ್ಯೆಯಲ್ಲಿ ಸಹಸ್ರಸಂಖ್ಯೆಯಲ್ಲಿ ಕಾಣತೊಡಗಿದರು.
ವಿಚಿತ್ರಮುಕುಟಾಪೀಡಾ ವಿಚಿತ್ರಕವಚಧ್ವಜಾಃ |
ವಿಚಿತ್ರಾಭರಣಾಶ್ಚೈವ ನಂದಯಂತೀವ ಮೇ ಮನಃ ॥38॥
ಅವರ ವಿಚಿತ್ರವಾದ ಕಿರೀಟಾಭರಣಗಳನ್ನೂ ಮತ್ತು ಕವಚಧ್ವಜಗಳನ್ನೂ ನೋಡಿ ನನಗೆ ಮನಸ್ಸಿನಲ್ಲಿಯೇ ಹರ್ಷವುಂಟಾದಂತೆ ಆಯಿತು.
ಅಹಂ ತು ಶರವರ್ಷೈಸ್ತಾನಸ್ತ್ರಪ್ರಚುದಿತೈಃ ರಣೇ |
ನಾಶಕ್ನುವಂ ಪೀಡಯಿತುಂ ತೇ ತು ಮಾಂ ಪ್ರತ್ಯಪೀಡಯನ್ ॥39॥
ನಾನು ಯುದ್ಧದಲ್ಲಿ ಅಸ್ತ್ರಪ್ರೇರಿತವಾದ ನನ್ನ ಬಾಣಗಳಿಂದ ಅವರನ್ನು ಪೀಡಿಸಲು ಸಾಧ್ಯವಾಗಲಿಲ್ಲ. ಪ್ರತಿಯಾಗಿ ಅವರೇ ನನ್ನನ್ನು ಪೀಡಿಸಿದರು.
ತೈಃ ಪೀಡ್ಯಮಾನೋ ಬಹುಭಿಃ ಕೃತಾಸ್ತ್ರೈಃ ಕುಶಲೈರ್ಯುಧಿ |
ವ್ಯಥಿತೋಽಸ್ಮಿ ಮಹಾಯುದ್ಧೇ ಭಯಂ ಚಾಗಾನ್ಮಹನ್ಮಮ ॥40॥

ಒಳ್ಳೆಯ ಅಸ್ತ್ರಾಭ್ಯಾಸವನ್ನು ಉಳ್ಳ ಕುಶಲರಾದ ಅನೇಕರಿಂದ ಪೀಡಿಸಲ್ಪಟ್ಟ ನಾನು ಮಹಾಯುದ್ಧದಲ್ಲಿ ವ್ಯಥೆಯನ್ನು ಹೊಂದಿದೆ. ನನಗೆ ದೊಡ್ಡ ಭಯವೂ ಉಂಟಾಯಿತು.
ತತೋಽಹಂ ಪರಮಾಯತ್ತೋ ಮಾತಲಿಂ ಪರಿಪೃಷ್ಟವಾನ್ |
ಕಿಮೇತೇ ಮಮ ಬಾಣೌರ್ದಿವ್ಯಾಸ್ತ್ರಪ್ರತಿಮಂತ್ರಿತೈಃ |
ನ ವಧ್ಯಂತೇ ಮಹಾಘೋರೈಸ್ತತ್ತ್ವಮಾಖ್ಯಾಹಿ ಪೃಚ್ಛತಃ ||41||
ಆಗ ನಾನು ಬಹಳ ಪ್ರಯತ್ನಪಟ್ಟು ಮಾತಲಿಯನ್ನು ಕುರಿತು `ಎಲೈ ಮಾತಲಿಯೇ, ಇವರು ದಿವ್ಯಾಸ್ತ್ರಮಂತ್ರಿತವಾದ ನನ್ನ ಮಹಾಘೋರವಾದ ಬಾಣಸಮೂಹಗಳಿಂದ ವಧೆಯನ್ನು ಹೊಂದುತ್ತಿಲ್ಲ. ನಿನ್ನನ್ನು ಪ್ರಶ್ನಿಸುತ್ತಿರುವ ನನಗೆ ಸತ್ಯಾಂಶವನ್ನು ಹೇಳು' ಎಂದು ಕೇಳಿದೆನು.
ಸ ಮಾಮುವಾಚ ಪರ್ಯಾಪ್ತಸ್ತ್ವಮೇಷಾಂ ಭರತರ್ಷಭ |
ತಾನುದ್ದಿಶ್ಯಾಥ ಮರ್ಮಾಣಿ ಪ್ರತಿಘಾತಂ ತದಾಚರ ||42||
ಎಲೈ ಭರತರ್ಷಭನೇ, ಅವನು ನನ್ನನ್ನು ಕುರಿತು `ನೀನು ಇವರನ್ನು ಸಂಹರಿಸಲು ಸಮರ್ಥನಾಗಿದ್ದೀಯೆ. ಅವರಿಗೆ ಮರ್ಮಗಳಲ್ಲಿ ಪ್ರತಿಘಾತವನ್ನು ಮಾಡು' (ಬಾಣ ಪ್ರಯೋಗವನ್ನು ಮಾಡು) ಎಂದು ಹೇಳಿದನು.
ಏತತ್ ಶ್ರುತ್ವಾ ತು ರಾಜೇಂದ್ರ ಸಂಪ್ರಹೃಷ್ಟಸ್ತಮೂಚಿವಾನ್ |
ನಿವರ್ತಯ ರಥಂ ಶೀಘ್ರಂ ಪಶ್ಯ ಚೈತಾನ್ ನಿಪಾತಿತಾನ್ ||43||
ಏವಮುಕ್ತೋ ರಥಂ ತತ್ರ ಮಾತಲಿಃ ಪರ್ಯವರ್ತಯತ್ ||44||
ಎಲೈ ರಾಜೇಂದ್ರನೇ, ಅದನ್ನು ಕೇಳಿ ಸಂತೋಷಗೊಂಡ ನಾನು ಶೀಘ್ರವಾಗಿ ರಥವನ್ನು ಹಿಂದಿರುಗಿಸು ಅವರನ್ನು ನಾನು ಹೊಡೆದು ಉರುಳಿಸುವುದನ್ನು ನೋಡು ಎಂದು ಹೇಳಿದೆನು. ಹೀಗೆ ಹೇಳಲ್ಪಟ್ಟ ಮಾತಲಿಯು ಅಲ್ಲಿ ರಥವನ್ನು ಹಿಂದಿರುಗಿಸಿದನು.
ತತೋ ಮತ್ವಾ ರಣೇ ಭಗ್ನಂ ದಾನವಾಃ ಪ್ರತಿಹರ್ಷಿತಾಃ |
ವಿಚುಕ್ರುಶುರ್ಮಹಾರಾಜ ಸ್ವರೇಣ ಮಹತಾ ಮುಹುಃ ||45||
ಅಭಗ್ನಃ ಕೈಶ್ಚಿದಪ್ಯೇಷ ಪಾಂಡವೋ ರಣಮೂರ್ಧನಿ |
ಅಸ್ಮಾಭಿಃ ಸಮರೇ ಭಗ್ನ ಇತ್ಯೇವಂ ಸಂಘಶಸ್ತದಾ ||46||
ಎಲೈ ಮಹಾರಾಜನೇ, ಆಗ ರಣದಲ್ಲಿ ನಾನು ಸೋತಿದ್ದೇನೆಂದು ತಿಳಿದು ಸಂತೋಷಪಡುತ್ತಿದ್ದ ದಾನವರು ದೊಡ್ಡ ಸ್ವರದಿಂದ ಕಿರುಚಿದರು. ಯಾರಿಂದಲೂ ಯುದ್ಧದಲ್ಲಿ ಸೋಲಿಸಲ್ಪಡದಿರುವ ಈ ಪಾಂಡವನು ನಮ್ಮಿಂದ ಭಗ್ನನಾಗಿದ್ದಾನೆ ಎಂದು ಸಮೂಹ ಸಮೂಹಗಳಲ್ಲಿ ಕಿರುಚಿದರು.
ತತೋಽಹಂ ದೇವದೇವಾಯ ರುದ್ರಾಯ ಪ್ರಯತೋ ರಣೇ |
ಮಹತ್ಪಾಶುಪತಂ ದಿವ್ಯಂ ಸರ್ವಲೋಕನಮಸ್ಕೃತಮ್ ||
ಪ್ರಯತಃ ಪ್ರಣತೋ ಭೂತ್ವಾ ನಮಸ್ಕೃತ್ಯ ಮಹಾತ್ಮನೇ |
ಸ್ವಸ್ತಿ ಭೂತೇಭ್ಯ ಇತ್ಯುಕ್ತ್ವಾ ಮಹಾಸ್ತ್ರಂ ಸಮಚೋದಯಮ್ ||47||
ಆಗ ನಾನು ಆ ಯುದ್ಧದಲ್ಲಿ ದೇವದೇವನಾದ ರುದ್ರನಿಗೆ ಮನಸ್ಸಿನಲ್ಲಿಯೇ ನಮಸ್ಕರಿಸಿ ಆ ಮಹಾತ್ಮನಿಗೆ ಪ್ರಣಾಮವನ್ನು ಮಾಡಿ ಎಲ್ಲ ಪ್ರಾಣಿಗಳಿಗೂ ಕ್ಷೇಮವಾಗಲಿ ಎಂದು ಹೇಳಿ ಸರ್ವಲೋಕ ನಮಸ್ಕೃತವಾದ ದಿವ್ಯವಾದ ಆ ಮಹಾ ಪಾಶುಪತಾಸ್ತ್ರವನ್ನು ಪ್ರಯೋಗಿಸಿದೆನು.
ಯತ್ತದ್ ರೌದ್ರಮಿತಿ ಖ್ಯಾತಂ ಸರ್ವಲೋಕನಮಸ್ಕೃತಮ್ ||48||
ರೌದ್ರವೆಂದು ಪ್ರಸಿದ್ಧವಾದ ಸರ್ವಶತ್ರುವಿನಾಶಕವಾದ, ಸರ್ವಲೋಕ ನಮಸ್ಕೃತವಾದ ದಿವ್ಯವಾದ ಪಾಶುಪತಾಸ್ತ್ರವನ್ನು ನಾನು ಪ್ರಯೋಗಿಸಿದೆನು.
ತತೋಽಪಶ್ಯಂ ತ್ರಿಶಿರಸಂ ಪುರುಷಂ ನವಲೋಚನಮ್ |
ತ್ರಿಮುಖಂ ಷಡ್ಭುಜಂ ದೀಪ್ತಮರ್ಕಜ್ವಲನಮೂರ್ಧಜಮ್ ||49||
ಆಗ ನಾನು ಮೂರು ತಲೆಗಳು, ಒಂಭತ್ತುಕಣ್ಣುಗಳು, ಮೂರು ಮುಖಗಳು, ಆರು ಭುಜಗಳು ಇರುವ ಸೂರ್ಯನ ಜ್ವಾಲೆಯಂತಿರುವ ಕೇಶಗಳುಳ್ಳ ಕಾಂತಿಯುಕ್ತನಾದ ಒಬ್ಬ ವ್ಯಕ್ತಿಯನ್ನು ನೋಡಿದೆನು.
ಲೇಲಿಹಾನೈರ್ಮಹಾನಾಗೈಃ ಕೃತಚೌಡ(ಚೀರ)ಮಮಿತ್ರಹನ್ |
ಭಕ್ತಾನುಕಂಪಿನಂ ದೇವಂ ನಾಗಯಜ್ಞೋಪವೀತಿನಮ್ ||50||
ಎಲೈ ಶತ್ರುಸೂದನನೇ, ನಾಲಗೆಯನ್ನು ಚಾಚಿ ನೆಕ್ಕುತ್ತಿರುವ ಮಹಾನಾಗಗಳ ಕಿರೀಟವನ್ನು ಹೊಂದಿದಂತಹ ನಾಗಯಜ್ಞೋಪವೀತವನ್ನು ಧರಿಸಿದ ಭಕ್ತಾನುಕಂಪಿಯಾದ ಮಹೇಶ್ವರನನ್ನು ನೋಡಿದೆನು.
ವಿಭೋ(ಭೀ)ಸ್ತತಸ್ತದಸ್ತ್ರಂ ತು ಘೋರಂ ರೌದ್ರಂ ಸನಾತನಮ್ |
ದೃಷ್ಟ್ವಾ ಗಾಂಡೀವಸಂಯೋಗಮಾನೀಯ ಭರತರ್ಷಭ ||51||
ನಮಸ್ಕೃತ್ವಾ ತ್ರಿನೇತ್ರಾಯ ಶರ್ವಾಯಾಮಿತತೇಜಸೇ |
ಮುಕ್ತವಾನ್ ದಾನವೇಂದ್ರಾಣಾಂ ಪರಾಭಾವಾಯ ಭಾರತ ||52||
ಎಲೈ ಭಾರತನೇ, ಆಗ ನಾನು ನಿರ್ಭಯನಾಗಿ ಸನಾತನವಾದ ಘೋರವಾದ ಆ ಪಾಶುಪತಾಸ್ತ್ರವನ್ನು ನೋಡಿ ಅದನ್ನು ಗಾಂಡೀವ ಧನುಸ್ಸಿನಲ್ಲಿ ಹೂಡಿ ಅಮಿತ ತೇಜಸ್ವಿಯಾದ ತ್ರಿನೇತ್ರನಾದ ರುದ್ರನಿಗೆ ನಮಸ್ಕಾರ ಮಾಡಿ ದಾನವೇಂದ್ರರ ಪರಾಭವವನ್ನು ಉದ್ದೇಶಿಸಿ ಪ್ರಯೋಗಿಸಿದೆನು.
ಮುಕ್ತಮಾತ್ರೇ ತತಸ್ತಸ್ಮಿನ್ ರೂಪಾಣ್ಯಾಸನ್ ಸಹಸ್ರಶಃ |

ಮೃಗಾಣಾಮಥ ಸಿಂಹಾನಾಂ ವ್ಯಾಘ್ರಾಣಾಂ ಚ ವಿಶಾಂಪತೇ ॥53॥
ಋಕ್ಷಾಣಾಂ ಮಹಿಷಾಣಾಂ ಚ ಪನ್ನಗಾನಾಂ ತಥಾ ಗವಾಮ್ |
ಶರಭಾಣಾಂ ಗಜಾನಾಂ ಚ ವಾನರಾಣಾಂ ಚ ಸಂಘಶಃ ॥54॥
ಎಲೈ ರಾಜನೇ, ನಾನು ಆ ಅಸ್ತ್ರವನ್ನು ಪ್ರಯೋಗಿಸಿದ ತಕ್ಷಣವೇ ಅಲ್ಲಿ ಸಹಸ್ರಾರು ಆಕೃತಿಗಳು- ಮೃಗಗಳ, ಸಿಂಹಗಳ, ವ್ಯಾಘ್ರಗಳ, ಕರಡಿಗಳ, ಕಾಡುಕೋಣಗಳ, ಸರ್ಪಗಳ, ಗೋವುಗಳ, ಶರಭಗಳ, ಗಜಗಳ, ವಾನರಗಳ ಆಕೃತಿಗಳು- ಕಾಣತೊಡಗಿದವು.
ಋಷಭಾಣಾಂ ವರಾಹಾಣಾಂ ಮಾರ್ಜಾರಾಣಾಂ ತಥೈವ ಚ |
ಋಕ್ಷಾಶ್ವಗಜವಕ್ತ್ರಾಣಾಮುಲೂಕಾನಾಂ ತಥೈವ ಚ ॥55॥
ಮೀನವಾಯಸರೂಪಾಣಾಂ ನಾನಾವಕ್ತ್ರಪ್ರಚಾರಿಣಾಮ್ |
ಸಾಲಾವೃಕಾಣಾಂ ಪ್ರೇತಾನಾಂ ಮುರುಂಟಾನಾಂ ಚ ಸರ್ವಶಃ ॥56॥
ಕರಡಿಗಳ, ಅಶ್ವಗಳ ಮತ್ತು ಗಜಗಳ ಮುಖಗಳನ್ನು ಹೊಂದಿದವರು ಗೂಬೆಗಳ ಆಕೃತಿ ಉಳ್ಳವರು ಮತ್ಸ ಮತ್ತು ಕಾಗೆಗಳ ಆಕೃತಿಯುಳ್ಳವರು, ವೃಷಭ ವರಾಹ ಮಾರ್ಜಾಲಗಳ ಆಕೃತಿಗಳುಳ್ಳವರು, ಅನೇಕ ವದನಗಳನ್ನುಳ್ಳವರು, ಸಾಲಾವೃಕಗಳು, ಪ್ರೇತಗಳು, ಮುರುಂಟಗಳು ಎಲ್ಲಕಡೆಯಲ್ಲಿಯೂ ಕಾಣತೊಡಗಿದವು.
ಶಾರ್ದೂಲಾನಾಂ ವರಾಹಾಣಾಂ ಶರಭಾಣಾಂ ಪ್ರವಲ್ಗತಾಮ್ |
ಗೃಧ್ರಾಣಾಂ ಗರುಡಾನಾಂ ಚ ಚಮರಾಣಾಂ ತಥೈವ ಚ |
ದೇವಾನಾಂ ಚ ಋಷೀಣಾಂ ಚ ಗಂಧರ್ವಾಣಾಂ ಚ ಸರ್ವಶಃ |
ಪಿಶಾಚಾನಾಂ ಸಯಕ್ಷಾಣಾಂ ತಥೈವ ಚ ಸುರದ್ವಿಷಾಮ್ ॥57॥
ಶಾರ್ದೂಲಗಳ, ವರಾಹಗಳ, ಗರ್ಜಿಸುವ ಶರಭಗಳ, ಗೃಧ್ರಗಳ, ಗರುಡಗಳ, ಚಮರಮೃಗಗಳ ಹಾಗೂ ದೇವತೆಗಳ, ಋಷಿಗಳ, ಗಂಧರ್ವರ, ಪಿಶಾಚಗಳ, ಯಕ್ಷರ ಮತ್ತು ಅಸುರರ ಆಕೃತಿಗಳು ಕಾಣತೊಡಗಿದವು.
ಗುಹ್ಯಕಾನಾಂ ಚ ಸಂಗ್ರಾಮೇ ನೈಋತಾನಾಂ ತಥೈವ ಚ |
ಝಷಾಣಾಂ ಗಜವಕ್ತ್ರಾಣಾಮುಲೂಕಾನಾಂ ತಥೈವ ಚ ॥58॥
ಆ ಯುದ್ಧದಲ್ಲಿ ಗುಹ್ಯಕರ, ನೈಋತರು, ಮೊಸಳೆಗಳ, ಗಜಗಳ ಮತ್ತು ಉಲೂಕಗಳ ವಕ್ತ್ರವುಳ್ಳವರು ಕಾಣತೊಡಗಿದರು.
ಮೀನವಾಜಿಸರೂಪಾಣಾಂ ನಾನಾಶಸಾಶತ್ರಸಿಪಾಣಿನಾಮ್ |
ತಥೈವ ಯಾತುಧಾನಾನಾಂ ಗದಾಮುದ್ಗರಧಾರಿಣಾಮ್ ॥59॥
ಮತ್ಸ ಮತ್ತು ಅಶ್ವಗಳ ರೂಪಗಳುಳ್ಳ, ಕೈಯಲ್ಲಿ ನಾನಾ ಶಸ್ತ್ರಗಳನ್ನು ಮತ್ತು ಖಡ್ಗಗಳನ್ನು ಹಿಡಿದ ಹಾಗೆಯೇ ಗದಾಮುದ್ಗರಗಳನ್ನು ಕೈಯಲ್ಲಿ ಹಿಡಿದ ಯಾತುಧಾನರ (ರಾಕ್ಷಸರ) ಆಕೃತಿಗಳು ಅಲ್ಲಿ ಕಂಡುಬಂದವು.
ಏತೈಶ್ಚಾನ್ಯೈಶ್ಚ ಬಹುಭಿರ್ನಾನಾರೂಪಧರೈಸ್ತಥಾ |
ಸರ್ವಮಾಸೀಜ್ಜಗದ್ ವ್ಯಾಪ್ತಂ ತಸ್ಮಿನ್ನಸ್ತ್ರೇ ವಿಸರ್ಜಿತೇ ॥60॥
ನಾನು ಆ ಅಸ್ತ್ರವನ್ನು ಪ್ರಯೋಗಿಸುತ್ತಿದ್ದಂತೆಯೇ ಇಂತಹ ಮತ್ತು ಇನ್ನೂ ಅನೇಕ ಬೇರೆ ಬೇರೆ ರೂಪಗಳನ್ನು ಹೊಂದಿದ ಅನೇಕ ಪ್ರಾಣಿಗಳಿಂದ (ಯೋಧರಿಂದ) ಎಲ್ಲ ಜಗತ್ತೂ ತುಂಬಿಹೋಯಿತು.
ತ್ರಿಶಿರೋಭಿಶ್ಚತುರ್ದಂಷ್ಟ್ರೈಶ್ಚತುರಾಸ್ಯೈಶ್ಚತುರ್ಭುಜೈಃ |
ಅನೇಕರೂಪಸಂಯುಕ್ತೈರ್ಮಾಂಸಮೇದೋವಸಾಶಿಭಿಃ |
ಅಭೀಕ್ಷ್ಣಂ ವಧ್ಯಮಾನಾಸ್ತೇ ದಾನವಾ ನಾಶಮಾಗತಾಃ ॥61॥
ಮೂರು ತಲೆಗಳುಳ್ಳ, ನಾಲ್ಕು ಕೋರೆದಾಡಿಗಳು ಮತ್ತು ನಾಲ್ಕು ಮುಖಗಳುಳ್ಳ, ನಾಲ್ಕು ಭುಜಗಳುಳ್ಳ, ಮಾಂಸ, ಮೇದಸ್ಸು ಮತ್ತು ಕೊಬ್ಬುಗಳನ್ನು ತಿನ್ನುವ ಇಂತಹ ಅನೇಕ ಆಕೃತಿಯುಳ್ಳ ಜೀವರಿಂದ ಸತತವಾಗಿ ವಧ್ಯಮಾನರಾದ ಆ ದಾನವರು ನಾಶವನ್ನು ಹೊಂದಿದರು.
ಅದ್ರಿಸಾರಮಯೈಶ್ಚಾನ್ಯೈರ್ಬಾಣೈರಪಿ ನಿಬರ್ಹಣೈಃ |
ನ್ಯಹನಂ ದಾನವಾನ್ ಸರ್ವಾನ್ ಮುಹೂರ್ತೇನೈವ ಭಾರತ ॥63॥
ಎಲೈ ಭಾರತನೇ, ನಾನು ಸೂರ್ಯಜ್ವಾಲೆಯಂತಹ ತೇಜಸ್ಸುಳ್ಳ ವಜ್ರಾಯುಧ ಮತ್ತು ಸಿಡಿಲಿಗೆ ಸಮಾನವಾದ ಕಾಂತಿಯುಳ್ಳ ಪರ್ವತದ ಸಾರದಿಂದ ಮಾಡಿದಂತೆ ಇರುವ ರೆಕ್ಕೆಗಳನ್ನು ಹೊಂದಿದ ಬೇರೆ ಬಾಣಗಳಿಂದಲೂ ಒಂದು ಮುಹೂರ್ತದಲ್ಲಿ ದಾನವರನ್ನು ಸಂಹರಿಸಿದೆನು.
ಗಾಂಡೀವಾಸ್ತ್ರಪ್ರಣುನ್ನಾಂಸ್ತಾನ್ ಗತಾಸೂನ್ ನಭಸಶ್ಚ್ಯುತಾನ್ |
ದೃಷ್ಟ್ವಾಽಹಂ ಪ್ರಣಮಂ ಭೂಯಸ್ತ್ರಿಪುರಘ್ನಾಯ ವೇಧಸೇ ॥64॥
ಗಾಂಡೀವ ಧನುಸ್ಸಿನಿಂದ ಅಸ್ತ್ರಪೂರ್ವಕವಾಗಿ ಮುಕ್ತವಾದ ಬಾಣಗಳಿಂದ ಆ ದಾನವರು ಆಕಾಶದಿಂದ ಸತ್ತುಬೀಳುತ್ತಿರುವುದನ್ನು ನೋಡಿದ ನಾನು ತ್ರಿಪುರಾರಿಯಾದ ಜಗದ್ಧಾರಕನಾದ ರುದ್ರದೇವರಿಗೆ ಪುನಃ ಪ್ರಣಾಮವನ್ನು ಮಾಡಿದೆನು.
ತಥಾ ರೌದ್ರಾಸ್ತ್ರನಿಷ್ಪಿಷ್ಟಾನ್ ದಿವ್ಯಾಭರಣಭೂಷಿತಾನ್ |
ನಿಶಾಮ್ಯ ಪರಮಂ ಹರ್ಷಮಗಮದ್ ದೇವಸಾರಥಿಃ ॥65॥
ಹಾಗೆಯೇ, ಪಾಶುಪತಾಸ್ತ್ರದಿಂದ ದಿವ್ಯಾಭರಣಭೂಷಿತರಾದ ದಾನವರು ನಾಶಮಾಡಲ್ಪಡುತಿತರುವುದನ್ನು ನೋಡಿ ದೇವಸಾರಥಿಯಾದ ಮಾತಲಿಯು ಪರಮ ಹರ್ಷವನ್ನು ಹೊಂದಿದನು.
ತದಸಹ್ಯಂ ಕೃತಂ ಕರ್ಮ ದೇವೈರಪಿ ದುರಾಸದಮ್ |
ದೃಷ್ಟ್ವಾ ಮಾಂ ಪೂಜಯಾಮಾಸ ಮಾತಲಿಃ ಶಕ್ರಸಾರಥಿಃ ॥66॥

ದೇವತೆಗಳಿಗೂ ಅಸಾಧ್ಯವಾದ ಕರ್ಮವನ್ನು ನಾನು ಮಾಡಿದುದನ್ನು ನೋಡಿ ಇಂದ್ರ ಸಾರಥಿಯಾದ ಮಾತಲಿಯು ನನ್ನನ್ನು ಸತ್ಕರಿಸಿದನು.
ಉವಾಚ ವಚನಂ ಚೇದಂ ಪ್ರೀಯಮಾಣಃ ಕೃತಾಂಜಲಿಃ |
ಹತಾಂಸ್ತಾನ್ ದಾನವಾನ್ ದೃಷ್ಟ್ವಾ ಮಯಾ ಸಂಖೇ ಸಹಸ್ರಶಃ ||67||
ನಾನು ಯುದ್ಧದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ದಾನವರನ್ನು ಸಂಹರಿಸಿದುದನ್ನು ನೋಡಿ ಅವನು ಸಂತೋಷಗೊಂಡು ನನಗೆ ಕೈಗಳನ್ನು ಮುಗಿದು ಹೀಗೆ ಹೇಳಿದನು.
ಮಾತಲಿಃ
ಸುರಾಸುರೈರಸಹ್ಯಂ ಹಿ ಕರ್ಮ ಯತ್ ಸಾಧಿತಂ ತ್ವಯಾ |
ನ ಹ್ಯೇತತ್ ಸಂಯುಗೇ ಕರ್ತುಮಪಿ ಶಕ್ತಃ ಸುರೇಶ್ವರಃ ||68||
ಧ್ರುವಂ ಧನಂಜಯ ಪ್ರೀತಸ್ತ್ವಯಿ ಶಕ್ರಃ ಪುರಾರ್ದನ ||69||
ಮಾತಲಿ ಎಲ್ಲೈ ಧನಂಜಯನೇ, ಎಲ್ಲೈ ಹಿರಣ್ಯಪುರನಾಶನನೇ, ನೀನು ಸುರಾಸುರರಿಗೆ ಅಸಾಧ್ಯವಾದ ಯಾವ ಕಾರ್ಯವನ್ನು ಈ ದಿನ ಸಾಧಿಸಿರುವೆಯೋ ಅದನ್ನು ಹಿಂದೆ ಸುರೇಶ್ವರನಾದ ಇಂದ್ರನು ಸಾಧಿಸಲು ಸಮರ್ಥನಾಗಲಿಲ್ಲ. ಧನಂಜಯನೇ, ಖಂಡಿತವಾಗಿ ಇಂದ್ರನು ನಿನ್ನ ಈ ಕಾರ್ಯದಿಂದ ನಿನ್ನಲ್ಲಿ ಸಂತೋಷವುಳ್ಳವನಾಗುತ್ತಾನೆ.
ಸುರಾಸುರೈರವಧ್ಯಂ ಹಿ ಪುರಮೇತತ್ ಖಗಂ ಮಹತ್ |
ತ್ವಯಾ ವಿಮಥಿತಂ ವೀರ ಸ್ವವೀರ್ಯತಪಸೋ ಬಲಾತ್ ||70||
ಎಲ್ಲೈ ವೀರನೇ, ಸುರಾಸುರರಿಂದ ಅವಧ್ಯವಾದ ಆಕಾಶಗಾಮಿಯಾದ ಈ ಪಟ್ಟಣವನ್ನು ನೀನು ನಿನ್ನ ಪರಾಕ್ರಮ ಮತ್ತು ತಪಸ್ಸಿನ ಬಲದಿಂದ ನಾಶಮಾಡಿದ್ದೀಯೆ (ಎಂದು ಹೇಳಿದನು).
ಅರ್ಜುನಃ
ವಿಧ್ವಸ್ತೇ ಖಪುರೇ ತಸ್ಮಿನ್ ದಾನವೇಷು ಹತೇಷು ಚ |
ವಿನದಂತ್ಯಃ ಸ್ತ್ರಿಯಃ ಸರ್ವಾ ನಿಷ್ಪೇತುರ್ನಗರಾದ್ ಬಹಿಃ ||71||
ಅರ್ಜುನ ಆ ನಗರವು ನಾಶಮಾಡಲ್ಪಟ್ಟು ದಾನವರು ಹತರಾಗುತ್ತಿರಲು ಅವರ ಪತ್ನಿಯರೆಲ್ಲರೂ ಗಟ್ಟಿಯಾಗಿ ರೋದನಮಾಡುತ್ತಾ ನಗರದಿಂದ ಹೊರಗೆ ಬಂದರು.
ಪ್ರಕೀರ್ಣಕೇಶ್ಯೋ ವ್ಯಥಿತಾಃ ಕುರರ್ಯ ಇವ ದುಃಖಿತಾಃ |
ಕುರರ್ಯ ಇವ ವಾಶಂತ್ಯೋ ದುಃಖಿತಾಶ್ಚ ಮುಹುರ್ಮುಹುಃ ||72||
ತಲೆಗಳನ್ನು ಕೆದರಿಕೊಂಡು ವ್ಯಥೆಯಿಂದ ಕೂಡಿದವರಾಗಿ ಕುರರಿಗಳಂತೆ ದುಃಖಿತರಾಗಿ ಕುರರಿಗಳಂತೆ ಅಳುತ್ತಾ ಪುನಃಪುನಃ ದುಃಖಿತರಾದರು.
ಪೇತುಃ ಪುತ್ರಾನ್ ಪಿತ್ರೂನ್ ಭ್ರಾತ್ರೂನ್ ಶೋಚಮಾನಾ ಮಹೀತಳೇ |
ರುದತ್ಯೋ ದೀನಕಂಠ್ಯಸ್ತು ನಿನದಂತ್ಯೋ ಹತೇಶ್ವರಾಃ |
ಉರಾಂಸಿ ಪರಿನಿಘ್ನಂತ್ಯೋ ವಿಸ್ರಸ್ತಸ್ರಗ್ವಿಭೂಷಣಾಃ ||73||
ಮಕ್ಕಳನ್ನೂ, ತಂದೆಗಳನ್ನೂ, ಸಹೋದರರನ್ನೂ ಕುರಿತು ಶೋಕಪಡುತ್ತಾ ದೀನ ಕಂಠದಿಂದ ಅಳುತ್ತಾ ಪತಿಗಳನ್ನು ಕಳೆದುಕೊಂಡು ಕೂಗುತ್ತಾ ಎದೆಗಳನ್ನು ಬಡಿದುಕೊಳ್ಳುತ್ತಾ ತಮ್ಮ ವಸತ್ರಭರಣಗಳು ವ್ಯತ್ಯಸ್ತವಾಗಿರುತ್ತಿರಲು ಭೂಮಿಯ ಮೇಲೆ ಬಿದ್ದರು.
ತಚ್ಛೋಕಯುಕ್ತಮಶ್ರೀಕಂ ದುಃಖದೈನ್ಯಸಮಾಹತಮ್ |
ನ ಬಭೌ ದಾನವಪುರಂ ಹತತ್ವಿಟ್ಕಂ ಹತೇಶ್ವರಮ್ ||74||
ಶೋಕಯುಕ್ತವಾದ, ಕಾಂತಿರಹಿತವಾದ, ದುಃಖದೈನ್ಯಗಳಿಂದ, ಹತವಾದ ಪ್ರಭುಗಳನ್ನು ಕಳೆದುಕೊಂಡ ತೇಜೋಹೀನವಾದ ಆ ದಾನವ ಪುರವು ಶೋಭಿಸಲಿಲ್ಲ.
ಗಂಧರ್ವನಗರಾಕಾರಂ ಹತನಾಗಮಿವ ಹ್ರದಮ್ |
ಶುಷ್ಕವೃಕ್ಷಮಿವಾರಣ್ಯಮದೃಶ್ಯಮಭವತ್ ಪುರಮ್ ||75||
ಸರ್ಪವು ಹತವಾದ ಸರೋವರದಂತೆ, ಒಣಗಿದ ಮರಗಳುಳ್ಳ ಕಾಡಿನಂತೆ, ಗಂಧರ್ವನಗರದಂತೆ ಆ ಪಟ್ಟಣವು ನೋಡುವುದಕ್ಕೆ ಅಸಾಧ್ಯವಾಗಿದ್ದಿತು.
ಮಾಂ ತು ಸಂಹೃಷ್ಟಮನಸಂ ಕ್ಷಿಪ್ರಂ ಮಾತಲಿರಾನಯತ್ |
ದೇವರಾಜಸ್ಯ ಭವನಂ ಕೃತಕರ್ಮಾಣಮಾಹವಾತ್ ||76||
ಯುದ್ಧದಲ್ಲಿ ಕಾರ್ಯವನ್ನು ಸಾಧಿಸಿ ಸಂತೋಷಗೊಂಡ ನನ್ನನ್ನಾದರೂ ಮಾತಲಿಯು ಶೀಘ್ರವಾಗಿ ದೇವರಾಜನ ಭವನಕ್ಕೆ ಕರೆತಂದನು.
ಹಿರಣ್ಯಪುರಮುತ್ಸೃಜ್ಯ ನಿಹತ್ಯ ಚ ಮಹಾಸುರಾನ್ |
ನಿವಾತಕವಚಾಂಶ್ಚೈವ ತತೋಽಹಂ ಶಕ್ರಮಾಗಮಮ್ ||77||
ಹಿರಣ್ಯಪುರವನ್ನು ತ್ಯಜಿಸಿ ಮಹಾಸುರರನ್ನೂ ಮತ್ತು ನಿವಾತಕವಚರನ್ನೂ ಸಂಹರಿಸಿ ನಾನು ಇಂದ್ರನ ಸಮೀಪಕ್ಕೆ ಬಂದೆನು.
ಮಮ ಕರ್ಮ ಚ ದೇವೇಂದ್ರಂ ಮಾತಲಿರ್ವಿಸ್ತರೇಣ ತತ್ |
ಸರ್ವಂ ವಿಶ್ರಾವಯಾಮಾಸ ಯಥಾಭೂತಂ ಮಹಾದ್ಯುತೇ ||78||
ಎಲ್ಲೈ ಮಹಾದ್ಯುತಿಯೇ, ನಾನು ಮಾಡಿದ ಕಾರ್ಯವನ್ನು ಅದು ನಡೆದಂತೆಯೇ ಮಾತಲಿಯು ದೇವೇಂದ್ರನಿಗೆ ವಿಸ್ತಾರವಾಗಿ ತಿಳಿಸಿದನು.

ಹಿರಣ್ಯಪುರಘಾತಂ ಚ ಮಾಯಾನಾಂ ಚ ನಿವಾರಣಮ್ |
ನಿವಾತಕವಚಾನಾಂ ಚ ವಧಂ ಸಂಖ್ಯೇ ಮಹೌಜಸಾಮ್ ॥79॥
ಕಾಲಕೇಯವಧಂ ಚೈವ ಅದ್ಭುತಂ ರೋಮಹರ್ಷಣಮ್ |
ತತ್ ಶ್ರುತ್ವಾ ಭಗವಾನ್ ಪ್ರೀತಃ ಸಹಸ್ರಾಕ್ಷಃ ಪುರಂದರಃ ॥80॥
ಹಿರಣ್ಯಪುರದ ನಾಶ, ಮಾಯೆಗಳ ನಿವಾರಣ, ಮಹಾಬಲವುಳ್ಳ ನಿವಾತಕವಚರ ವಧೆ, ರೋಮಾಂಚಕಾರಿಯಾದ ಕಾಲಕೇಯರ ಅದ್ಭುತವಾದ ವಧೆ ಇವುಗಳನ್ನೆಲ್ಲಾ ಕೇಳಿದ ಪೂಜ್ಯನಾದ ಸಹಸ್ರಾಕ್ಷನಾದ ಪುರಂದರನು ಸಂತೋಷಗೊಂಡನು.
ಮರುದ್ಭಿಃ ಸಹಿತಃ ಶ್ರೀಮಾನ್ ಸಾಧುಸಾಧ್ವಿತ್ಯಥಾಬ್ರವೀತ್ |
ಪರಿಷ್ವಜ್ಯ ಚ ಮಾಂ ಪ್ರೇಮ್ಣಾ ಮೂರ್ಧ್ನಿ ಚಾಘ್ರಾಯ ಸಸ್ಮಿತಮ್ ॥81॥
ಕಾಂತಿಯುಕ್ತನಾದ ಅವನು ನನ್ನನ್ನು ಪ್ರೀತಿಯಿಂದ ಆಲಿಂಗಿಸಿ ಮಂದಹಾಸಪೂರ್ವಕವಾಗಿ ಶಿರಸ್ಸಿನಲ್ಲಿ ಆಘ್ರಾಣಿಸಿ ಮರುತ್ತುಗಳಿಂದ ಸಹಿತನಾಗಿ ಸಾಧು ಸಾಧು ಎಂದು ಪ್ರಶಂಸೆ ಮಾಡಿದನು.
ತತೋ ಮಾಂ ದೇವರಾಜೋ ವೈ ಸಮಾಶ್ವಾಸ್ಯ ಪುನಃ ಪುನಃ |
ಅಬ್ರವೀದ್ ವಿಬುಧೈಃ ಸಾರ್ಧಮಿದಂ ಸ ಮಧುರಂ ವಚಃ ॥82॥
ಆಗ ದೇವರಾಜನು ಪರಿಪರಿಯಾಗಿ ನನ್ನನ್ನು ಸಮಾಧಾನ ಮಾಡಿ ದೇವತೆಗಳ ಜೊತೆಯಲ್ಲಿ ಈ ಮಧುರವಾದ ಮಾತುಗಳನ್ನು ಆಡಿದನು.
ಅತಿದೇವಾಸುರಂ ಕರ್ಮ ಕೃತಮೇವ ತ್ವಯಾ ರಣೇ |
ಗುರ್ವರ್ಥಶ್ಚ ಕೃತಃ ಪಾರ್ಥ ಮಹಾಶತ್ರೂನ್ಘ್ನತಾ ಮಮ ॥83॥
ಎಲೈ ಪಾರ್ಥನೇ, ನೀನು ಯುದ್ಧದಲ್ಲಿ ದೇವತೆಗಳಿಗೂ ಮೀರಿದ ಕರ್ಮವನ್ನು ಮಾಡಿದ್ದೀಯೆ. ನನ್ನ ಮಹಾಶತ್ರುಗಳನ್ನು ಸಂಹಾರ ಮಾಡಿ ನನಗೆ ಗುರುದಕ್ಷಿಣೆಯನ್ನೂ ಕೊಟ್ಟಿದ್ದೀಯೆ.
ಏವಮೇವ ಸದಾ ಭಾವ್ಯಂ ಸ್ಥಿರೇಣಾಜೌ ಧನಂಜಯ |
ಅಸಮ್ಮೂಢೇನ ಚಾಸ್ತ್ರಾಣಾಂ ಕರ್ತವ್ಯಂ ಪ್ರತಿಪಾದನಮ್ ॥84॥
ಎಲೈ ಧನಂಜಯನೇ, ಯಾವಾಗಲೂ ಯುದ್ಧದಲ್ಲಿ ಹೀಗೆಯೇ ಸ್ಥಿರವಾಗಿರಬೇಕು. ಯಾವುದೇ ಪ್ರಮಾದವಿಲ್ಲದೆ ಅಸ್ತ್ರಗಳನ್ನು ಪ್ರಯೋಗಿಸಬೇಕು.
ಅವಿಷಹ್ಯೋ ರಣೇ ಹಿ ತ್ವಂ ದೇವದಾನವರಾಕ್ಷಸೈಃ |
ಸಯಕ್ಷಾಸುರಗಂಧರ್ವೈಃ ಸಪಕ್ಷಿಗಣಪನ್ನಗೈಃ ॥85॥
ನೀನು ಯುದ್ಧದಲ್ಲಿ ದೇವದಾನವರಾಕ್ಷಸರಿಂದಲೂ, ಯಕ್ಷಾಸುರ ಗಂಧರ್ವರಿಂದಲೂ, ಪಕ್ಷಿಗಣಸರ್ಪಗಳಿಂದಲೂ ಅವಿಷಹ್ಯನಾಗಿದ್ದೀಯೆ (ಅಜೇಯನಾಗಿದ್ದೀಯೆ).
ವಸುಧಾಂ ಚಾಪಿ ಕೌಂತೇಯ ತ್ವದ್ಬಾಹುಬಲನಿರ್ಜಿತಾಮ್ |
ಪಾಲಯಿಷ್ಯತಿ ಧರ್ಮಾತ್ಮಾ ಕುಂತೀಪುತ್ರೋ ಯುಧಿಷ್ಠಿರಃ ॥86॥
ಎಲೈ ಕೌಂತೇಯನೇ, ನಿನ್ನ ಬಾಹುಬಲದಿಂದ ನಿರ್ಜಿತವಾದ ಭೂಮಿಯನ್ನು ಧರ್ಮಾತ್ಮನಾದ ಕುಂತೀಪುತ್ರನಾದ ಯುಧಿಷ್ಠಿರನು ಪಾಲಿಸುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಇತಿ ನಿವಾತಕವಚಯುದ್ಧಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೆಂಟನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಅಥಾನುಜ್ಞಾಪ್ಯ ಪಿತರಂ ರಥೇನೈಂದ್ರೇಣ ಭಾಸ್ವತಾ |
ಸೋದರ್ಯಾಣಾಂ ಸಕಾಶಂ ಸ ಯಯೌ ವಜ್ರಧರಾತ್ಮಜಃ ॥316॥
ಅರ್ಜುನ ಇಂದ್ರನ ಅನುಮತಿ ಪಡೆದು ಹೊಳೆಯುವ ಇಂದ್ರರಥದಿಂದ ಸೋದರರ ಬಳಿಗೆ ಬಂದ.
ಆಯಾಂತಮೀಕ್ಷ್ಯ ಬಿಭತ್ಸುಂ ಮುಮುದುರ್ಭ್ರಾತರೋಽಧಿಕಮ್ |
ಅರ್ಜುನ ಬಂದುದನ್ನು ನೋಡಿ ಸೋದರರು ಬಹಳ ಸಂತೋಷಪಟ್ಟರು.
* * * *
ನೂರ ಅರವತ್ತೊಂಬತ್ತನೆಯ ಅಧ್ಯಾಯ
ಅರ್ಜುನನಿಂದ ಇಂದ್ರನು ತನಗೆ ಕವಚ ಕಿರೀಟಾದಿಗಳನ್ನು ಅನುಗ್ರಹಿಸಿದ ಪ್ರಕಾರ ಕಥನ ಮತ್ತು ಮರುದಿನ ಅಸ್ತ್ರಗಳನ್ನು ಯುಧಿಷ್ಠಿರನಿಗೆ ತೋರಿಸುವುದಾಗಿ ಆಶ್ವಾಸನೆ.
ಅರ್ಜುನಃ
ತತೋ ಮಾಮತಿವಿಶ್ವಸ್ತಂ ಸಂರೂಢಶರವಿಕ್ಷತಮ್ |
ದೇವರಾಜೋಽನುಗೃಹ್ಯೇದಂ ಕಾಲೇ ವಚನಮಬ್ರವೀತ್ ॥1॥
ಅರ್ಜುನ ಅನಂತರ ಯುದ್ಧದಲ್ಲಿ ಬಾಣಗಳಿಂದ ಗಾಯಗೊಂಡು ಆದರೂ ಅತ್ಯಂತ ಸಮಾಧಾನದಿಂದ ಕೂಡಿದ ನನ್ನನ್ನು ಕುರಿತು

ಯೋಗ್ಯಕಾಲದಲ್ಲಿ ದೇವರಾಜನಾದ ಇಂದ್ರನು ಮಾತನಾಡಿದನು.
ದಿವ್ಯಾನ್ಯಸ್ತ್ರಾಣಿ ಸರ್ವಾಣಿ ತ್ವಯಿ ತಿಷ್ಠಂತಿ ಭಾರತ |
ನ ತ್ವಾಽಭಿಭವಿತುಂ ಶಕ್ತೋ ಮಾನುಷೋ ಭುವಿ ಕಶ್ಚನ ॥2॥
ಎಲೈ ಭಾರತನೇ, ಎಲ್ಲಾ ದಿವ್ಯಾಸ್ತ್ರಗಳು ನಿನ್ನಲ್ಲಿ ಇವೆ. ನಿನ್ನನ್ನು ಸೋಲಿಸಲು ಭೂಮಿಯಲ್ಲಿರುವ ಯಾವ ಮನುಷ್ಯನಿಗೂ ಸಾಧ್ಯವಿಲ್ಲ.
ಭೀಷ್ಮೋ ದ್ರೋಣಃ ಕೃಪಃ ಕರ್ಣಃ ಶಕುನಿಃ ಸಹ ರಾಜಭಿಃ |
ಸಂಗ್ರಾಮಸ್ಥಸ್ಯ ತೇ ಪುತ್ರ ಕಲಾಂ ನಾರ್ಹಂತಿ ಷೋಡಶೀಮ್ ॥3॥
ಭೀಷ್ಮ, ದ್ರೋಣ, ಕೃಪ, ಕರ್ಣ, ರಾಜರಿಂದೊಡಗೂಡಿದ ಶಕುನಿ ಇವರೆಲ್ಲರೂ ಯುದ್ಧದಲ್ಲಿ ನಿಂತ ನಿನ್ನ ತೇಜಸ್ಸಿನ ಹದಿನಾರನೆಯ ಒಂದು ಅಂಶವನ್ನು ಹೊಂದಲಾರರು (ಎಂದು ಹೇಳಿದನು).
ಅರ್ಜುನಃ
ಇದಂ ಚ ಮೇ ತನುತ್ರಾಣಂ ಪ್ರಾಯಚ್ಛತ್ ಮಘವಾನ್ ಪ್ರಭುಃ |
ಅಭೇದ್ಯ ಕವಚಂ ದಿವ್ಯಂ ಸ್ರಜಂ ಚೈವ ಹಿರಣ್ಮಯೀಮ್ ॥4॥
ಅರ್ಜುನ ಪ್ರಭುವಾದ ಇಂದ್ರನು ಈ ನನ್ನ ಅಭೇದ್ಯವಾದ ಮತ್ತು ದಿವ್ಯವಾದ ಶರೀರ ಕವಚವನ್ನು ಮತ್ತು ಸುವರ್ಣಮಯವಾದ ಮಾಲೆಯನ್ನು ಕೊಟ್ಟನು.
ದೇವದತ್ತಂ ಚ ಮೇ ಶಂಖಂ ಪುನಃ ಪ್ರಾದಾನ್ಮಹಾರವಮ್ |
ದಿವ್ಯಂ ಚೇದಂ ಕಿರೀಟಂ ಮೇ ಸ್ವಯಮಿಂದ್ರೋ ಯುಯೋಜ ಹ ॥5॥
ಮಹಾನಾದವನ್ನು ಮಾಡುವ ಈ ದೇವದತ್ತಶಂಖವನ್ನೂ ನನಗೆ ಕೊಟ್ಟನು. ಈ ದಿವ್ಯವಾದ ಕಿರೀಟವನ್ನು ಇಂದ್ರನು ತಾನೇ ನನ್ನ ತಲೆಯ ಮೇಲೆ ಅಳವಡಿಸಿದನು.
ತತೋ ದಿವ್ಯಾನಿ ವಸ್ತ್ರಾಣಿ ದಿವ್ಯಾನ್ಯಾಭರಣಾನಿ ಚ |
ಪ್ರಾದಾಚ್ಛಕ್ರೋ ಮಮೈತಾನಿ ರುಚಿರಾಣಿ ಬೃಹಂತಿ ಚ ॥6॥
ಅನಂತರ ಇಂದ್ರನು ನನಗೆ ಈ ಮನೋಹರವಾದ ದೊಡ್ಡದಾದ ದಿವ್ಯವಾದ ವಸ್ತ್ರಗಳನ್ನೂ ಮತ್ತು ದಿವ್ಯವಾದ ಆಭರಣಗಳನ್ನೂ ನೀಡಿದನು.
ಏವಂ ಸಂಪೂಜಿತಸ್ತತ್ರ ಸುಖಮಸ್ಮ್ಯುಷಿತೋ ನೃಪ |
ಇಂದ್ರಸ್ಯ ಭವನೇ ಪುಣ್ಯೇ ಗಂಧರ್ವಶಿಶುಭಿಃ ಸಹ |
ತತೋ ಮಾಮಬ್ರವೀಚ್ಛಕ್ರಃ ಪ್ರೀತಿಮಾನಮರೈಃ ಸಹ ॥7॥
ಸಮಯೋಽರ್ಜುನ ಗಂತುಂ ತೇ ಭ್ರಾತರೋ ಹಿ ಸ್ಮರಂತಿ ತೇ ॥8॥
ಎಲೈ ರಾಜನೇ, ಹೀಗೆ ಪುಣ್ಯಪ್ರದವಾದ ಇಂದ್ರಭವನದಲ್ಲಿ ಪೂಜಿಸಲ್ಪಟ್ಟ ಗಂಧರ್ವ ಕುಮಾರರ ಜೊತೆಯಲ್ಲಿ ಸುಖವಾಗಿ ವಾಸಮಾಡಿದೆ. ಆಗ ದೇವತೆಗಳ ಜೊತೆಯಲ್ಲಿದ್ದ ಇಂದ್ರನು ನನ್ನನ್ನು ಕುರಿತು ಸಂತೋಷದಿಂದ ಅರ್ಜುನನೇ ನೀನು ಪ್ರಯಾಣ ಮಾಡುವ ಸಮಯವು ಪ್ರಾಪ್ತವಾಗಿದೆ. ನಿನ್ನ ಸಹೋದರರು ನಿನ್ನ ಸ್ಮರಿಸುತ್ತಾರೆ ಎಂದು ಹೇಳಿದನು.
ಏವಮಿಂದ್ರಸ್ಯ ಭವನೇ ಪಂಚ ವರ್ಷಾಣಿ ಭಾರತ |
ಉಷಿತಾನಿ ಮಯಾ ರಾಜನ್ ಸ್ಮರತಾ ದ್ಯೂತಜಂ ಕಲಿಮ್ ॥9॥
ಎಲೈ ರಾಜನೇ, ಎಲೈ ಭಾರತನೇ, ಹೀಗೆ ಐದು ವರ್ಷಗಳ ಕಾಲ ನಾನು ದ್ಯೂತದಿಂದ ಉಂಟಾದ ದುಃಖವನ್ನು ಸ್ಮರಿಸುತ್ತಾ ಇಂದ್ರಭವನದಲ್ಲಿ ವಾಸವನ್ನು ಮಾಡಿದೆ.
ತತೋ ಭವಂತಮದ್ರಾಕ್ಷಂ ಭ್ರಾತೃಭಿಃ ಪರಿವಾರಿತಮ್ |
ಗಂಧಮಾದನಪಾದಸ್ಯ ಪರ್ವತಸ್ಯಾಸ್ಯ ಮೂರ್ಧನಿ ॥10॥
ಅನಂತರ ಗಂಧಮಾದನ ಪರ್ವತದ ಪಾದದಲ್ಲಿರುವ ಈ ಪರ್ವತದ ಶಿಖರದಲ್ಲಿ ಸಹೋದರರಿಂದ ಕೂಡಿದ ನಿನ್ನನ್ನು ನೋಡಿದೆನು.
ಯುಧಿಷ್ಠಿರಃ
ದಿಷ್ಟ್ಯಾ ಧನಂಜಯಾಸ್ತ್ರಾಣಿ ತ್ವಯಾ ಪ್ರಾಪ್ತಾನಿ ಭಾರತ |
ದಿಷ್ಟ್ಯಾ ಚಾರಾಧಿತೋ ರಾಜಾ ದೇವಾನಾಮೀಶ್ವರಃ ಪ್ರಭುಃ ॥11॥
ಯುಧಿಷ್ಠಿರ ಎಲೈ ಭಾರತನೇ, ಭಗವದನುಗ್ರಹದಿಂದ ನೀನು ಅಸ್ತ್ರಗಳನ್ನು ಸಂಪಾದಿಸಿದ್ದೀಯೆ. ಭಗವದನುಗ್ರಹದಿಂದಲೇ ದೇವರಾಜನಾದ ಪ್ರಭುವಾದ ಇಂದ್ರನನ್ನು ಆರಾಧಿಸಿದ್ದೀಯೆ.
ದಿಷ್ಟ್ಯಾ ಚ ಭಗವಾನ್ ಸ್ಥಾಣುರ್ದೇವ್ಯಾ ಸಹ ಪರಂತಪ |
ಸಾಕ್ಷಾದ್ ದೃಷ್ಟಃ ಸ್ವಯುದ್ಧೇನ ತೋಷಿತಶ್ಚ ತ್ವಯಾಽನಘ ॥12॥
ಎಲೈ ಪರಂತಪನೇ, ಎಲೈ ಅನಘನೇ, ಭಗವದನುಗ್ರಹದಿಂದಲೇ ನೀನು ನಿನ್ನ ಯುದ್ಧದಿಂದ ರುದ್ರನನ್ನು ಸಂತೋಷಪಡಿಸಿ ಪೂಜ್ಯನಾದ ಉಮಾಸಹಿತನಾದ ಸ್ಥಾಣುದೇವನನ್ನು ಸಾಕ್ಷಾತ್ತಾಗಿ ನೋಡಿದೆ.
ದಿಷ್ಟ್ಯಾ ಚ ಲೋಕಪಾಲೈಸ್ತ್ವಂ ಸಮೇತೋ ಭರತರ್ಷಭ |
ದಿಷ್ಟ್ಯಾ ವರ್ಧಾಮಹೇ ಪಾರ್ಥ ದಿಷ್ಟ್ಯಾಽಸಿ ಪುನರಾಗತಃ ॥13॥
ಎಲೈ ಭರತರ್ಷಭನೇ, ಭಗವದನುಗ್ರಹದಿಂದಲೇ ನೀನು ಲೋಕಪಾಲಕರಿಂದ ಸಮಾಗಮವನ್ನು ಹೊಂದಿದೆ. ಪಾರ್ಥನೇ, ಭಗವದನುಗ್ರಹದಿಂದಲೇ ನೀನು ಹಿಂದಿರುಗಿ ಬಂದಿದ್ದೀಯೆ. ಭಗವದನುಗ್ರಹದಿಂದಲೇ ನಾವು ಅಭಿವೃದ್ಧಿಯನ್ನು ಹೊಂದುತ್ತಿದ್ದೇವೆ.
ಅದ್ಯ ಕೃತ್ಸ್ನಾಂ ಮಹೀಂ ದೇವೀಂ ವಿಜಿತಾಂ ಪುರಮಾಲಿನೀಮ್ |

ಮನ್ಯೇ ಚ ಧೃತರಾಷ್ಟ್ರಸ್ಯ ಪುತ್ರಾನಪಿ ವಶೀಕೃತಾನ್ |
ಪಶ್ಯಾಮಿ ಭೂಮಿಂ ಕೌಂತೇಯ ತ್ವಯಾ ಮೇ ಪ್ರತಿಪಾದಿತಾಮ್ ||14||
ಈ ದಿನ ನಗರಗಳ ಮಾಲೆಯುಳ್ಳ ಸಮಗ್ರ ಭೂಮಿಯು ವಿಜಿತವಾಗಿದೆ. ಮತ್ತು ಧೃತರಾಷ್ಟ್ರನ ಪುತ್ರರು ವಶೀಕೃತರಾಗಿದ್ದಾರೆ ಎಂದು ಭಾವಿಸಿದ್ದೇನೆ. ಎಲೈ ಕೌಂತೇಯನೇ, ನೀನು ಈ ದಿನ ನನಗೆ ಭೂಮಿಯನ್ನು ಕೊಡುತ್ತಿರುವುದನ್ನು ನೋಡುತ್ತಿದ್ದೇನೆ.
ಇಚ್ಛಾಮಿ ತಾನಿ ಚಾಸ್ತ್ರಾಣಿ ದ್ರಷ್ಟುಂ ದಿವ್ಯಾನಿ ಭಾರತ |
ಯೈಸ್ತಥಾ ವೀರ್ಯವಂತಸ್ತೇ ನಿವಾತಕವಚಾ ಹತಾಃ ||15||
ಎಲೈ ಭಾರತನೇ, ಯಾವ ದಿವ್ಯಾಸ್ತ್ರಗಳಿಂದ ನೀನು ಪರಾಕ್ರಮಶಾಲಿಗಳಾದ ನಿವಾತ ಕವಚರನ್ನು ಸಂಹರಿಸಿದೆಯೋ ಅಂತಹ ದಿವ್ಯಾಸ್ತ್ರಗಳನ್ನು ನೋಡಲು ಬಯಸುತ್ತೇನೆ.
ಅರ್ಜುನಃ
ಶ್ವಃ ಪ್ರಭಾತೇ ಭವಾನ್ದ್ರಷ್ಟಾ ದಿವ್ಯಾನ್ಯಸ್ತ್ರಾಣಿ ಸರ್ವಶಃ |
ನಿವಾತಕವಚಾ ಘೋರಾ ಯೈರ್ಮಯಾ ವಿನಿಪಾತಿತಾಃ ||16||
ಅರ್ಜುನ ಯಾವ ದಿವ್ಯಾಸ್ತ್ರಗಳಿಂದ ನಾನು ಘೋರರಾದ ನಿವಾತಕವಚರನ್ನು ವಧೆಮಾಡಿದೆನೋ ಅಂತಹ ಎಲ್ಲಾ ಅಸ್ತ್ರಗಳನ್ನೂ ನೀನು ನಾಳೆಯ ಬೆಳಿಗ್ಗೆ ನೋಡುವಿ.
ವೈಶಂಪಾಯನಃ
ಏವಮಾಗಮನಂ ತತ್ರ ಕಥಯಿತ್ವಾ ಧನಂಜಯಃ |
ಭ್ರಾತೃಭಿಃ ಸಹಿತಃ ಸರ್ವೈ ರಜನೀಂ ತಾಮುವಾಸ ಹ ||17||
ವೈಶಂಪಾಯನ ಹೀಗೆ ಧನಂಜಯನು ತನ್ನ ಆಗಮನದ ಪ್ರಕಾರವನ್ನು ತಿಳಿಸಿ ಎಲ್ಲಾ ಸಹೋದರರಿಂದ ಸಹಿತನಾಗಿ ಆ ರಾತ್ರಿಯನ್ನು ಅಲ್ಲಿ ಕಳೆದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನಸಪ್ತತ್ಯಧಿಕಶತತಮೋಽಧ್ಯಾಯಃ ||
|| ಇತಿ ನಿವಾತಕವಚಯುದ್ಧಪರ್ವಣಿ ಷೋಡಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಪ್ಪತ್ತನೆಯ ಅಧ್ಯಾಯ
ಅರ್ಜುನನಿಂದ ಯುಧಿಷ್ಠಿರನಿಗೆ ದಿವ್ಯಾಸ್ತ್ರ ಪ್ರದರ್ಶನ. ಅಸ್ತ್ರ ತೇಜಸ್ಸಿನಿಂದ ಜಗತ್ತಿಗೆ ಕ್ಷೋಭೆ ಉಂಟಾಗುತ್ತಿರಲು ಇಂದ್ರನ ಅಪ್ಪಣೆಯಿಂದ ನಾರದರಿಂದ
ಅಸ್ತ್ರ ಪ್ರದರ್ಶನದ ನಿಷೇಧ.
ವೈಶಂಪಾಯನಃ
ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಧರ್ಮರಾಜೋ ಯುಧಿಷ್ಠಿರಃ |
ಉತ್ಥಾಯಾವಶ್ಯಕಾರ್ಯಾಣಿ ಕೃತವಾನ್ ಭ್ರಾತೃಭಿಃ ಸಹ |
ತತಃ ಸಂಚೋದಯಾಮಾಸ ಸೋಽರ್ಜುನಂ ಭ್ರಾತೃನಂದನಮ್ ||1||
ದರ್ಶಯಾಸ್ತ್ರಾಣಿ ಕೌಂತೇಯ ಯೈರ್ಜಿತಾ ದಾನವಾಸ್ತ್ವಯಾ ||2||
ವೈಶಂಪಾಯನ ಆ ರಾತ್ರಿಯು ಕಳೆಯುತ್ತಿರಲು ಧರ್ಮರಾಜನಾದ ಯುಧಿಷ್ಠಿರನು ಎದ್ದು ತಮ್ಮಂದಿರ ಜೊತೆಯಲ್ಲಿ ಅವಶ್ಯಕಾರ್ಯಗಳನ್ನು ಮಾಡಿದನು. ಅನಂತರ ಭ್ರಾತೃನಂದನನಾದ ಅರ್ಜುನನನ್ನು ಕುರಿತು `ಕೌಂತೇಯನೇ, ಯಾವ ಅಸ್ತ್ರಗಳಿಂದ ನೀನು ದಾನವರನ್ನು ಗೆದ್ದೆಯೋ ಅಂತಹ ಅಸ್ತ್ರಗಳನ್ನು ತೋರಿಸು' ಎಂದು ಒತ್ತಾಯ ಮಾಡಿದನು.
ತತೋ ಧನಂಜಯೋ ರಾಜನ್ ದೇವೈರ್ದತ್ತಾನಿ ಪಾಂಡವಃ |
ಅಸ್ತ್ರಾಣಿ ತಾನಿ ದಿವ್ಯಾನಿ ದರ್ಶಯಾಮಸ ಭಾರತ ||3||
ಎಲೈ ರಾಜನೇ, ಆಗ ಪಾಂಡವನಾದ ಧನಂಜಯನು ದೇವತೆಗಳಿಂದ ಕೊಡಲ್ಪಟ್ಟ ಆ ದಿವ್ಯಾಸ್ತ್ರಗಳನ್ನು ತೋರಿಸಿದನು.
ಯಥಾನ್ಯಾಯಂ ಮಹಾತೇಜಾಃ ಶೌಚಂ ಪರಮಮಾಸ್ಥಿತಃ |
ನಮಸ್ಕೃತ್ಯ ತ್ರಿನೇತ್ರಾಯ ವಾಸವಾಯ ಚ ಪಾಂಡವಃ ||4||
ತ್ರಿಕೂಬರಂ ಸಮುದ್ರಂ ಚ ತ್ರಿಭಿರ್ವಂಶೈಸ್ತ್ರಿವೇಣುಕಮ್ |
ಪಾರ್ಥಿವಂ ರಥಮಾಸ್ಥಾಯ ಶೋಭಮಾನೋ ಧನಂಜಯಃ ||5||
ಮಹಾತೇಜಸ್ವಿಯಾದ ಪಾಂಡವನು ವಿದ್ಯುಕ್ತವಾಗಿ ಪರಮ ಶೌಚವನ್ನು ಆಶ್ರಯಿಸಿದವನಾಗಿ ರುದ್ರನಿಗೂ ಮತ್ತು ಇಂದ್ರನಿಗೂ ನಮಸ್ಕರಿಸಿ ಮೂರು ಕೂಬರರಿಂದಲೂ ರಥದ ಮುದ್ರೆಗಳಿಂದ (ರಥದ ಲಕ್ಷಣಗಳಿಂದಲೂ) ಕೂಡಿದ ಮೂರು ವಂಶಗಳಿಂದಲೂ ಮತ್ತು ಮೂರು ಧ್ವಜಗಳಿಂದಲೂ ಕೂಡಿದ ಪಾರ್ಥಿವವಾದ ರಥವನ್ನು ಏರಿ ಶೋಭಿಸಿದನು.
ದಿವ್ಯೇನ ಸಂವೃತಸ್ತೇನ ಕವಚೇನ ಸುವರ್ಚಸಾ |
ಧನುರಾದಾಯ ಗಾಂಡೀವಂ ದೇವದತ್ತಂ ಸ ವಾರಿಜಮ್ ||6||
ಶೋಶುಭ್ಯಮಾನಃ ಕೌಂತೇಯ ಆನುಪೂರ್ವ್ಯಾಯನ್ ಮಹಾಭುಜಃ |
ಅಸ್ತ್ರಾಣಿ ತಾನಿ ದಿವ್ಯಾನಿ ದರ್ಶನಾಯೋಪಚಕ್ರಮೇ ||7||

ಒಳ್ಳೆಯ ಕಾಂತಿಯುಕ್ತವಾದ ದಿವ್ಯವಾದ ಕವಚದಿಂದ ಆಚ್ಛಾದಿತನಾಗಿ ಗಾಂಡೀವ ಧನುಸ್ಸನ್ನು ಮತ್ತು ದೇವದತ್ತ ಶಂಖವನ್ನೂ ತೆಗೆದುಕೊಂಡು ಮಹಾಭುಜನಾದ ಕುಂತೀಪುತ್ರನಾದ ಅರ್ಜುನನು ಕ್ರಮವಾಗಿ ಆ ದಿವ್ಯಾಸ್ತ್ರಗಳನ್ನು ತೋರಿಸಲು ಪ್ರಾರಂಭಿಸಿದನು.
ಅಥ ಪ್ರಯೋಕ್ಷ್ಯಮಾಣೇಷು ದಿವ್ಯೇಷ್ವಸ್ತ್ರೇಷು ತೇಷು ವೈ |
ಸಮಾಕ್ರಾಂತಾ ಮಹೀ ಪದ್ಭ್ಯಾಂ ಸಮಕಂಪತ ಸದ್ರುಮಾ ॥8॥
ಆಗ ಆ ದಿವ್ಯಾಸ್ತ್ರಗಳು ಪ್ರಯೋಗಿಸಲ್ಪಡುತ್ತಿರಲು ಅವನು ಪಾದಗಳಿಂದ ಮೆಟ್ಟಿ ನಿಂತ ಭೂಮಿಯು ವೃಕ್ಷಗಳ ಸಹಿತವಾಗಿ ಕಂಪಿಸಿತು.
ಕ್ಷುಭಿತಾಃ ಸರಿತಶ್ಚೈವ ತಥೈವ ಚ ಮಹೋದಧಿಃ |
ಶೈಲಾಶ್ಚಾಪಿ ವ್ಯದೀರ್ಯಂತ ನ ವವೌ ಚ ಸಮೀರಣಃ ॥9॥
ನದಿಗಳು ಮತ್ತು ಸಮುದ್ರವು ಕ್ಷೋಭೆಗೊಂಡವು. ಪರ್ವತಗಳು ಬಿರಿದವು. ವಾಯುವು ಸ್ತಬ್ಧವಾಯಿತು.
ನ ಬಭಾಸೇ ಸಹಸ್ರಾಂಶುರ್ನ ಜಜ್ವಾಲ ಚ ಪಾವಕಃ |
ನ ವೇದಾಃ ಪ್ರತಿಭಾಂತಿ ಸ್ಮ ದ್ವಿಜಾತೀನಾಂ ಕಥಂಚನ ॥10॥
ಸಹಸ್ರಕಿರಣನಾದ ಸೂರ್ಯನು ಕಾಂತಿಹೀನನಾದನು. ಅಗ್ನಿಯು ಜ್ವಲಿಸಲಿಲ್ಲ. ಬ್ರಾಹ್ಮಣರಿಗೆ ಯಾವ ರೀತಿಯಿಂದಲೂ ವೇದಗಳ ಪ್ರತಿಭಾನವೇ ಉಂಟಾಗಲಿಲ್ಲ (ವೇದಗಳು ಮರೆತುಹೋದವು).
ಅಂತರ್ಭೂಮಿಗತಾ ಯೇ ಚ ಪ್ರಾಣಿನೋ ಜನಮೇಜಯ |
ಪೀಡ್ಯಮಾನಾಃ ಸಮುತ್ಥಾಯ ಪಾಂಡವಂ ಪರ್ಯವಾರಯನ್ ॥11॥
ಎಲೈ ಜನಮೇಜಯನೇ, ಭೂಮಿಯ ಕೆಳಗಿದ್ದ ಪ್ರಾಣಿಗಳು ಪೀಡೆಗೆ ಒಳಗಾಗಿ ಮೇಲಕ್ಕೆದ್ದು ಪಾಂಡವನಾದ ಅರ್ಜುನನನ್ನು ಸುತ್ತುವರಿದವು.
ವೇಪಮಾನಾಃ ಪ್ರಾಂಜಲಯಸ್ತೇ ಸರ್ವೇ ವಿಕೃತಾನನಾಃ |
ದಹ್ಯಮಾನಾಸ್ತದಾಸ್ತ್ರೈಸ್ತೇ ಯಾಚಂತಿ ಸ್ಮ ಧನಂಜಯಮ್ ॥12॥
ವಿಕೃತ ಮುಖವುಳ್ಳ ಅವು ಅಸ್ತ್ರ ತೇಜಸ್ಸಿನಿಂದ ದಹಿಸಲ್ಪಟ್ಟವುಗಳಾಗಿ ನಡುಗುತ್ತಾ ಕೈಗಳನ್ನು ಮುಗಿದು ಅರ್ಜುನನನ್ನು ಬೇಡಿದವು.
ತತೋ ಬ್ರಹ್ಮರ್ಷಯಶ್ಚೈವ ಸಿದ್ಧಾ ಯೇ ಚ ಮಹರ್ಷಯಃ |
ಜಂಗಮಾನಿ ಚ ಭೂತಾನಿ ಸರ್ವಾಣ್ಯೇವಾವತಸ್ಥಿರೇ ॥13॥
ಅನಂತರ ಬ್ರಹ್ಮರ್ಷಿಗಳೂ, ಸಿದ್ಧರೂ, ಮಹರ್ಷಿಗಳೂ ಚಲಿಸುವ ಎಲ್ಲಾ ಪ್ರಾಣಿಗಳು ಅರ್ಜುನನ ಸುತ್ತಲೂ ಸೇರಿದರು.
ದೇವರ್ಷಯಶ್ಚ ಪ್ರವರಾಸ್ತಥೈವ ಚ ದಿವೌಕಸಃ |
ಯಕ್ಷರಾಕ್ಷಸಗಂಧರ್ವಾಸ್ತಥೈವ ಚ ಪತತ್ರಿಣಃ ॥14॥
ಖೇಚರಾಣಿ ಚ ಭೂತಾನಿ ಸರ್ವಾಣ್ಯೇವಾವತಸ್ಥಿರೇ |
ಶ್ರೇಷ್ಠರಾದ ದೇವತೆಗಳೂ, ದೇವರ್ಷಿಗಳೂ, ಯಕ್ಷರಾಕ್ಷಸ ಗಂಧರ್ವರೂ ಅದರಂತೆಯೇ ಪಕ್ಷಿಗಳೂ ಮತ್ತು ಆಕಾಶದಲ್ಲಿ ಸಂಚರಿಸುವ ಎಲ್ಲಾ ಭೂತಗಳೂ ಅರ್ಜುನನ ಸುತ್ತಲೂ ನಿಂತವು.
ತತೋ ಪಿತಾಮಹಶ್ಚೈವ ಲೋಕಪಾಲಾಶ್ಚ ಸರ್ವಶಃ |
ಭಗವಾಂಶ್ಚ ಮಹಾದೇವಃ ಸಗಣೋಽಭ್ಯಾಯಯೌ ತದಾ ॥15॥
ಅನಂತರ ಪಿತಾಮಹನಾದ ಬ್ರಹ್ಮನೂ ಮತ್ತು ಎಲ್ಲಾ ಲೋಕಪಾಲಕರೂ ತನ್ನ ಪರಿವಾರದಿಂದೊಡಗೂಡಿದ ಪೂಜ್ಯನಾದ ಮಹಾದೇವನೂ ಅಲ್ಲಿಗೆ ಬಂದರು.
ತತೋ ವಾಯುರ್ಮಹಾರಾಜ ದಿವ್ಯೈರ್ಮಾಲ್ಯೈಃ ಸುಗಂಧಿಭಿಃ |
ಅಭಿತಃ ಪಾಂಡವಂ ಚಿತ್ರೈರವಚಕ್ರೇ ಸಮಂತತಃ ॥16॥
ಎಲೈ ಮಹಾರಾಜನೇ, ಆಗ ಸುಗಂಧಯುಕ್ತವಾದ ದಿವ್ಯ ಮತ್ತು ವಿಚಿತ್ರವಾದ ಪುಷ್ಪಮಾಲೆಗಳಿಂದ ಕೂಡಿದ ವಾಯುವು ಪಾಂಡವನಾದ ಅರ್ಜುನನ ಸುತ್ತಲೂ ಎಲ್ಲ ಕಡೆಯಲ್ಲಿಯೂ ಬೀಸಿತು.
ಜಗುಶ್ಚ ಗಾಥಾ ವಿವಿಧಾ ಗಂಧರ್ವಾಃ ಸುರಚೋದಿತಾಃ |
ನನೃತುಃ ಸಂಘಶಶ್ಚೈವ ರಾಜನ್ನಪ್ಸರಸಾಂ ಗಣಾಃ ॥17॥
ದೇವತೆಗಳಿಂದ ಪ್ರೇರಿತರಾಗಿ ಗಂಧರ್ವರು, ವಿಧವಿಧವಾದ ಗೀತೆಗಳನ್ನು ಹಾಡಿದರು. ಎಲೈ ರಾಜನೇ, ಅಪ್ಸರೆಯರ ಗಣಗಳು ಸಮೂಹದಿಂದ ನರ್ತನವನ್ನು ಮಾಡಿದವು.
ದೇವತೂರ್ಯಾಣ್ಯವಾದ್ಯಂತ ರಮ್ಯಾಣಿ ಮಧುರಾಣಿ ಚ |
ತಸ್ಮಿಂಶ್ಚ ತಾದೃಶೇ ಕಾಲೇ ನಾರದಶ್ಚೋದಿತಃ ಸುರೈಃ |
ಆಗಮ್ಯಾಹ ವಚಃ ಪಾರ್ಥಂ ಶ್ರವಣೀಯಮಿದಂ ನೃಪ ॥18॥
ಎಲೈ ರಾಜನೇ, ದೇವವಾದ್ಯಗಳು ಮನೋಹರವಾಗಿ ಮತ್ತು ಮಧುರವಾಗಿ ಬಾರಿಸಿದವು. ಆ ಕಾಲದಲ್ಲಿ ದೇವತೆಗಳಿಂದ ಪ್ರೇರಿತರಾದ ನಾರದರು ಅಲ್ಲಿಗೆ ಬಂದು ಅರ್ಜುನನನ್ನು ಕುರಿತು ಹೇಳಬೇಕಾದ ಈ ಮಾತುಗಳನ್ನು ಹೇಳಿದರು.
ಅರ್ಜುನಾರ್ಜುನ ಮಾ ಯುಂಕ್ಷ್ವ ದಿವ್ಯಾನ್ಯಸ್ತ್ರಾಣಿ ಭಾರತ |
ನೈತಾನಿ ನಿರಧಿಷ್ಠಾನೇ ಪ್ರಯುಜ್ಯಂತೇ ಕಥಂಚನ |
ಪ್ರಯೋಗೇಷು ಮಹಾನ್ ದೋಷೋ ಹ್ಯಸ್ತ್ರಾಣಾಂ ಕುರುನಂದನ ॥19॥
ಏತಾನಿ ರಕ್ಷ್ಯಮಾಣಾನಿ ಧನಂಜಯ ಯಥಾಗಮಮ್ |
ಬಲವಂತಿ ಸುಖಾರ್ಹಾಣಿ ಭವಿಷ್ಯಂತಿ ನ ಸಂಶಯಃ ॥20॥
ಅರ್ಜುನ, ಅರ್ಜುನ, ಎಲೈ ಭಾರತನೇ, ದಿವ್ಯಾಸ್ತ್ರಗಳನ್ನು ಪ್ರಯೋಗಿಸಬೇಡ. ಈ ಅಸ್ತ್ರಗಳು ಒಂದು ಗುರಿಯಿಲ್ಲದೆ ಎಂದೂ

ಪ್ರಯೋಗಿಸಲ್ಪಡುವುದಿಲ್ಲ. ಎಲೈ ಕುರುನಂದನನೇ, ಈ ಅಸ್ತ್ರಗಳನ್ನು ನಿರದಿಷ್ಠಾನದಲ್ಲಿ ಪ್ರಯೋಗಿಸಿದರೆ ಬಹಳ ದೋಷ ಉಂಟಾಗುತ್ತದೆ. ಧನಂಜಯನೇ, ಇವು ಬಂದ ರೀತಿಯಿಂದಲೇ ರಕ್ಷಿಸಲ್ಪಟ್ಟರೆ ನಿಸ್ಸಂಶಯವಾಗಿ ಬಲಿಷ್ಠವಾಗಿಯೂ ಮತ್ತು ಸುಖಕರವಾಗಿಯೂ ಆಗುವವು.
ಅರಕ್ಷ್ಯಮಾಣಾನ್ಯೇತಾನಿ ತ್ರೈಲೋಕ್ಯಸ್ಯಾಪಿ ಪಾಂಡವ |
ಭವಂತಿ ಸ್ಮ ವಿನಾಶಾಯ ಮೈವಂ ಭೂಯಃ ಕೃಥಾಃ ಕ್ವಚಿತ್ ॥21॥
ಎಲೈ ಪಾಂಡವನೇ, ಇವುಗಳ ರಕ್ಷಣೆಯನ್ನು ಮಾಡದಿದ್ದರೆ ಇವು ಮೂರು ಲೋಕಗಳ ವಿನಾಶಕ್ಕೂ ಕಾರಣವಾಗುತ್ತವೆ. ಹೀಗೆ ಇನ್ನೊಮ್ಮೆ ಮಡಬೇಡ.
ಅಜಾತಶತ್ರೋ ತ್ವಂ ಚೈವ ದ್ರಕ್ಷ್ಯಸೇ ತಾನಿ ಸಂಯುಗೇ |
ಯೋಜ್ಯಮಾನಾನಿ ಪಾರ್ಥೇನ ದ್ವಿಷತಾಮವಮರ್ದನೇ ॥22॥
ಎಲೈ ಅಜಾತಶತ್ರುವಾದ ಯುಧಿಷ್ಠಿರನೇ, ನೀನೂ ಸಹ ಯುದ್ಧದಲ್ಲಿ ಪಾರ್ಥನು ಶತ್ರುಗಳನ್ನು ಸೋಲಿಸಲು ಪ್ರಯೋಗಿಸುವಾಗ ಈ ಅಸ್ತ್ರಗಳನ್ನು ನೋಡುವಿ.
ವೈಶಂಪಾಯನಃ
ನಿವಾರ್ಯಾಥ ತತಃ ಪಾರ್ಥಂ ಸರ್ವೇ ದೇವಾ ಯಥಾಗತಮ್ |
ಜಗ್ಮುರನ್ಯೇ ಚ ಯೇ ತತ್ರ ಸಮಾಜಗ್ಮುರ್ನರರ್ಷಭ ॥23॥
ವೈಶಂಪಾಯನ ಹಾಗೆಯೇ ಎಲ್ಲಾ ದೇವತೆಗಳು ಹೀಗೆ ಅರ್ಜುನನನ್ನು ನಿಷೇಧಿಸಿ ತಾವು ಬಂದಂತೆಯೇ ಹಿಂದಿರುಗಿದರು. ಎಲೈ ನರರ್ಷಭನೇ, ಅಲ್ಲಿಗೆ ಬಂದ ಬೇರೆಯವರೂ ಹಿಂದಿರುಗಿದರು.
ತೇಷು ಸರ್ವೇಷು ಕೌರವ್ಯ ಪ್ರತಿಯಾತೇಷು ಪಾಂಡವಾಃ |
ತಸ್ಮಿನ್ನೇವ ವನೇ ಹೃಷ್ಟಾಸ್ತ ಊಷುಃ ಸಹ ಕೃಷ್ಣಯಾ ॥24॥
ಎಲೈ ಕೌರವಕುಲದಲ್ಲಿ ಹುಟ್ಟಿದ ಜನಮೇಜಯನೇ, ಅವರೆಲ್ಲರೂ ಹೊರಟು ಹೋದಮೇಲೆ ಪಾಂಡವರೆಲ್ಲರೂ ಅದೇ ವನದಲ್ಲಿ ದ್ರೌಪದಿಯ ಜೊತೆಯಲ್ಲಿ ಹರ್ಷದಿಂದ ವಾಸಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ನಿವಾತಕವಚಯುದ್ಧಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತನೆಯ ಅಧ್ಯಾಯ ಮುಗಿಯಿತು
* * * *
ಅಜಗರಪರ್ವ
ಮಹಾಭಾರತತಾತ್ಪರ್ಯನಿರ್ಣಯ 22 ಅಧ್ಯಾಯ
ಊಷುಶ್ಚ ಚತುರೋಽಬ್ದಾಂಸ್ತೇ ಪುನರ್ಮೇರೌ ಪ್ರಮೋದಿನಃ ॥317॥
ಬಳಿಕ ಪುನಃ ಮೇರುವಿನಲ್ಲಿ ನಾಲ್ಕು ವರ್ಷ ಆನಂದದಿಂದ ವಾಸ ಮಾಡಿದರು.
ಕಥಾಭಿರ್ವಾಸುದೇವಸ್ಯ ಧ್ಯಾನೇನಾಭ್ಯರ್ಚನೇನ ಚ |
ಯಯೌ ಕಾಲಃ ಸುಖೇನೈವ ತೇಷಾಂ ವಿಷ್ಣುರತಾತ್ಮನಾಮ್ ॥318॥
ಹರಿಯಲ್ಲಿಯೇ ನೆಟ್ಟ ಮನಸ್ಸುಳ್ಳ ಪಾಂಡವರಿಗೆ ಹರಿಕಥೆಗಳಿಂದಲೂ ಧ್ಯಾನ ಪೂಜೆಗಳಿಂದಲೂ ಸುಖವಾಗಿಯೇ ಕಾಲ ಕಳೆಯಿತು.
ನೈವ ಶತ್ರೂನನುತ್ಸಾದ್ಯ ನಾನಾದಾಯ ಮಹದ್ ಯಶಃ |
ನಾಕೃತ್ವಾ ವಾಸುದೇವಾಜ್ಞಾಂ ರಾಜ್ಞಾಂ ಮುಖ್ಯಗತಿರ್ಭವೇತ್ ॥319॥
ಶತ್ರುಗಳನ್ನು ನಾಶಮಾಡದೆ ಮಹಾ ಯಶಸ್ಸನ್ನು ಸಂಪಾದಿಸದೆ ಹರಿಯಾಜ್ಞೆಯನ್ನು ನಡೆಸದೆ ರಾಜರಿಗೆ ಮುಖ್ಯವಾದ ಸದ್ಗತಿ ದೊರೆಯಲಾರದು.
ತದನ್ಯೇಷಾಂ ತು ವರ್ಣಾನಾಂ ಕ್ಷಮಾ ಬಾಹ್ಯೇಷು ಶತ್ರುಷು |
ಪ್ರಾಯೋ ಧರ್ಮ ಇತಿ ಪ್ರೋಕ್ತೋ ಹರೇರಾಜ್ಞಾಽಖಿಲಸ್ಯ ಚ ॥320॥
ಬೇರೆ ವರ್ಣದವರಿಗೆ ಬಾಹ್ಯ ಶತ್ರುಗಳಲ್ಲಿ ಪ್ರಾಯಃ ಕ್ಷಮೆಯೇ ಧರ್ಮವೆಂದು ಉಕ್ತವಾಗಿದೆ. ನಾಲ್ಕು ವರ್ಷದವರಿಗೂ ನಾಲ್ಕು ಆಶ್ರಮದವರಿಗೂ ಶ್ರುತಿಸ್ಮೃತಿ ರೂಪವಾದ ಹರಿಯಾಜ್ಞೆಯನು ಅನುಸರಿಸುವುದೇ ಧರ್ಮವೆನಿಸುತ್ತದೆ.
ಇತಿ ಭೀಮವಚಃ ಶ್ರುತ್ವಾ ಸಸೋದರ್ಯೋ ಯುಧಿಷ್ಠಿರಃ |
ರಾಕ್ಷಸಸ್ಕಂಧಮಾರೂಢಃ ಕೃಷ್ಣಯಾ ಚಾಽಯಯೌ ಪುನಃ ॥321॥
ಹೀಗೆ ಭೀಮನ ಮಾತನ್ನು ಕೇಳಿ ಧರ್ಮರಾಜ ದ್ರೌಪದೀ ಸಮೇತನಾಗಿ ಸೋದರರೊಂದಿಗಿನ ಘಟೋತ್ಕಚ ಮುಂತಾದ ರಾಕ್ಷಸರ ಹೆಗಲನ್ನೇರಿ ಪುನಃ ಹಿಮಾಲಯದ ಕಡೆಗೆ ಬಂದ.
* * * * *
ನೂರ ಎಪ್ಪತ್ತೊಂದನೆಯ ಅಧ್ಯಾಯ
ಯುಧಿಷ್ಠಿರಾದಿಗಳಿಂದ ಗಂಧಮಾದನದಿಂದ ಹಿಂದಿರುಗಲು ನಿಶ್ಚಯ. ಲೋಮಶರ ಸ್ವರ್ಗಗಮನ. ಗಂಧಮಾದನದಿಂದ ಕೈಲಾಸ ಪರ್ವತ, ವೃಷಪರ್ವಾಶ್ರಮ ಮಾರ್ಗವಾಗಿ ಪಾಂಡವರ ದ್ವೈತವನ ಪ್ರವೇಶ
ಮತ್ತು ಸರಸ್ವತೀ ತೀರದಲ್ಲಿ ವಿಹಾರ.
ಜನಮೇಜಯಃ
ತಸ್ಮಿನ್ ಕೃತಾಸ್ತ್ರೇ ರಥಿನಾಂ ಪ್ರವೀರೇ

ಪ್ರತ್ಯಾಗತೇ ಭವನಾದ್ ವೃತ್ರಹಂತುಃ |
ಅತಃ ಪರಂ ಕಿಮಕುರ್ವಂತ ಪಾರ್ಥಾಃ
ಸಮೇತ್ಯ ಶೂರೇಣ ಧನಂಜಯೇನ ||1||
ಜನಮೇಜಯ ರಥಿಶ್ರೇಷ್ಠನಾದ ಶೂರನಾದ ಧನಂಜಯನು ಇಂದ್ರನ ಭವನದಿಂದ ಅಸ್ತ್ರವನ್ನು ಸಂಪಾದಿಸಿ ಹಿಂದಿರುಗಿದ ಮೇಲೆ ಪಾಂಡವರೆಲ್ಲರೂ ಒಟ್ಟುಗೂಡಿ ಏನು ಮಾಡಿದರು?
ವನೇಷು ತೇಷ್ವೇವ ತು ತೇ ನರೇಂದ್ರಾಃ
ಸಹಾರ್ಜುನೇನೇಂದ್ರಸಮೇನ ವೀರಾಃ |
ತಸ್ಮಿಂಶ್ಚ ಶೈಲಪ್ರವರೇ ಸುರಮ್ಯೇ
ಧನೇಶ್ವರಾಕ್ರೀಡಗತಾ ವಿಜಹ್ರುಃ ||2||
ವೈಶಂಪಾಯನ ವೀರರಾದ ಆ ಪಾಂಡವರು ಇಂದ್ರನಿಗೆ ಸಮನಾದ ಅರ್ಜುನನಿಂದ ಕೂಡಿಕೊಂಡು ಅದೇ ವನಗಳಲ್ಲಿ ಅದೇ ಮನೋಹರವಾದ ಪರ್ವತಶ್ರೇಷ್ಠವಾದ ಗಂಧಮಾದನದಲ್ಲಿ ಕುಬೇರನ ವಿಹಾರಸ್ಥಾನದಲ್ಲಿ ವಿಹರಿಸಿದರು.
ವೇಶ್ಮಾನಿ ತಾನ್ಯಪ್ರತಿಮಾನಿ ಪಶ್ಯನ್
ಕ್ರೀಡಾಶ್ಚ ನಾನಾದ್ರುಮಸನ್ನಿಬದ್ಧಾಃ |
ಚಚಾರ ಧನ್ವೀ ಬಹುಧಾ ನರೇಂದ್ರಃ
ಸೋಽಸ್ತ್ರೇಷು ಯತ್ತಃ ಸತತಂ ಕಿರೀಟೀ ||3||
ನರೇಂದ್ರನಾದ ಅರ್ಜುನನು ಆ ಅಸದೃಶವಾದ ಗೃಹಗಳನ್ನು ನೋಡುತ್ತಾ ನಾನಾ ವೃಕ್ಷಗಳಲ್ಲಿ ಉಂಟಾಗುವ ಕ್ರೀಡೆಗಳನ್ನು ನೋಡುತ್ತಾ ಧನುಸ್ಸನ್ನು ಹಿಡಿದು ಅನೇಕ ರೀತಿಯಲ್ಲಿ ಸಂಚರಿಸಿದನು. ಕಿರೀಟಿಯಾದ ಅವನು ಯಾವಾಗಲೂ ಅಸ್ತ್ರಗಳಲ್ಲಿಯೇ ನಿರತನಾಗಿದ್ದನು.
ಅವಾಪ್ಯ ವಾಸಂ ನರದೇವಪುತ್ರಾಃ
ಪ್ರಸಾದಜಂ ವೈಶ್ರವಣಸ್ಯ ರಾಜ್ಞಃ |
ನ ಪ್ರಾಣಿನಾಂ ತೇ ಸ್ಪೃಹಯಂತಿ ರಾಜನ್
ಶಿವಶ್ಚ ಕಾಲಃ ಸ ಬಭೂವ ತೇಷಾಮ್ ||4||
ಎಲೈ ರಾಜನೇ, ಆ ನರದೇವಪುತ್ರರು ರಾಜನಾದ ಕುಬೇರನ ಅನುಗ್ರಹದಿಂದ ದೊರೆತ ಅವನ ಮನೆಯ ವಾಸವನ್ನು ಹೊಂದಿ ಬೇರೆ ಯಾವ ಪ್ರಾಣಿಯನ್ನೂ ಬಯಸಲಿಲ್ಲ. ಅವರಿಗೆ ಆ ಕಾಲವು ಶುಭವಾಗಿ ಕಳೆಯಿತು.
ಸಮೇತ್ಯ ಪಾರ್ಥೇನ ಯಥೈಕರಾತ್ರ
ಮೂಷುಃ ಸಮಾಸ್ತತ್ರ ತದಾ ಚತಸ್ರಃ |
ಪೂರ್ವಾಶ್ಚ ಷಟ್ ತಾ ದಶ ಪಾಂಡವಾನಾಂ
ಶಿವಾ ಬಭೂವುರ್ವಸತಾಂ ವನೇಷು ||5||
ಅವರು ಅರ್ಜುನನ ಜೊತೆಯಲ್ಲಿ ಬೆರೆತು ಅಲ್ಲಿ ನಾಲ್ಕುವರ್ಷಗಳನ್ನು ಒಂದು ದಿನದಂತೆ ಕಳೆದರು. ಅದಕ್ಕೆ ಮೊದಲು ಆರುವರ್ಷಗಳನ್ನು ಕಳೆದಿದ್ದರು. ವನವಾಸವನ್ನು ಮಾಡುವ ಪಾಂಡವರಿಗೆ ಈ ಹತ್ತುವರ್ಷಗಳು ಶುಭವಾಗಿದ್ದವು.
ತತೋಽಬ್ರವೀದ್ ವಾಯುಸುತಸ್ತರಸ್ವೀ
ಜಿಷ್ಣುಶ್ಚ ರಾಜಾನಮುಪೋಪವಿಶ್ಯ |
ಯಮೌ ಚ ವೀರೌ ಸುರರಾಜಕಲ್ಪಾ-
ವೇಕಾಂತಮಾಸ್ಥಾಯ ಹಿತಂ ಪ್ರಿಯಂ ಚ ||6||
ಆಗ ಶೀಘ್ರಗಾಮಿಯಾದ ವಾಯುಕುಮಾರನಾದ ಭೀಮಸೇನನೂ ಅರ್ಜುನನೂ ದೇವೇಂದ್ರ ಸಮಾನರಾದ ವೀರರಾದ ನಕುಲಸಹದೇವರೂ ಒಂದು ಏಕಾಂತ ಸ್ಥಳದಲ್ಲಿ ಸೇರಿ ರಾಜನ ಸಮೀಪದಲ್ಲಿ ಕುಳಿತುಕೊಂಡು ಹಿತವನ್ನು ಮತ್ತು ಪ್ರಿಯವನ್ನು ಮಾತನಾಡಿದರು.
ತವ ಪ್ರತಿಜ್ಞಾಂ ಕುರುರಾಜ ಸತ್ಯಾಂ
ಚಿಕೀರ್ಷಮಾಣಾಸ್ತದನು ಪ್ರಿಯಂ ಚ |
ತತೋ ನ ಗಚ್ಛಾಮ ವನಾನ್ಯಪಾಸ್ಯ
ಸುಯೋಧನಂ ಸಾನುಚರಂ ನಿಹಂತುಮ್ ||7||
ಎಲೈ ಕುರುರಾಜನೇ, ನಿನ್ನ ಪ್ರತಿಜ್ಞೆಯನ್ನು ಸತ್ಯವನ್ನು ಮಾಡಿ ಅದರಿಂದ ನಿನಗೆ ಪ್ರಿಯವನ್ನುಂಟು ಮಾಡುವುದಕ್ಕೋಸ್ಕರ ನಾವು ಈಗ ಪರಿವಾರ ಸಹಿತನಾದ ಸುಯೋಧನನನ್ನು ಕೊಲ್ಲಲು ವನವನ್ನು ತ್ಯಜಿಸಿ ಹೋಗಲಾರೆವು.
ಏಕಾದಶಂ ವರ್ಷಮಿದಂ ವಸಾಮಃ
ಸುಯೋಧನೇನಾತ್ತಸುಖಾಃ ಸುಖಾರ್ಹಾಃ |
ತಂ ವಂಚಯಿತ್ವಾಽಧಮವೃದ್ಧಿಶೀಲ
ಮಜ್ಞಾತವಾಸಂ ಸುಖಮಾಪ್ನುಯಾಮ ||8||
ಸುಖಕ್ಕೆ ಅರ್ಹರಾದ ನಾವು ನಮ್ಮ ಎಲ್ಲಾ ಸುಖವನ್ನೂ ಸುಯೋಧನನು ಕಸಿದುಕೊಂಡಿರುವಾಗ ಈ ಹನ್ನೊಂದನೆಯ ವರ್ಷವನ್ನು ಕಳೆಯುತ್ತಿದ್ದೇವೆ. ಅಜ್ಞಾತವಾಸದಲ್ಲಿ ಆ ಅಧರ್ಮಬುದ್ಧಿಯುಳ್ಳ ಮತ್ತು ಅಧಮಶೀಲವುಳ್ಳ ಸುಯೋಧನನನ್ನು (ನಮ್ಮನ್ನು ಗುರುತಿಸದಂತೆ) ವಂಚಿಸಿ ಸುಖವನ್ನು ಪಡೆದೇವು.

ತವಾಜ್ಞಯಾ ಪಾರ್ಥಿವ ನಿರ್ವಿಶಂಕಾ
ವಿಹಾಯ ಮಾನಂ ವಿಚರಾಮೋ ವನಾನಿ |
ಸಮೀಪವಾಸೇನ ವಿಲೋಭಿತಾಸ್ತೇ
ಜ್ಞಾಸ್ಯಂತಿ ನಾಸ್ಮಾನಪಕೃಷ್ಟದೇಶಾನ್ ||9||
ಎಲೈ ರಾಜನೇ, ನಿನ್ನ ಆಜ್ಞೆಯಿಂದ ನಾವು ಮಾನವನ್ನು ಬಿಟ್ಟು ಯಾವ ಶಂಕೆಯೂ ಇಲ್ಲದೆ ಕಾಡುಗಳಲ್ಲಿ ಸಂಚರಿಸುತ್ತಿದ್ದೇವೆ. ಅಜ್ಞಾತವಾಸಕ್ಕಾಗಿ ದೂರಹೋಗಿರುವರೆಂದು ಭಾವಿಸುವ ದುರ್ಯೋಧನನನ್ನು ನಾವು ಸಮೀಪವಾಸದಿಂದ ವಂಚಿಸೋಣ. ಅವರು ನಮ್ಮನ್ನು ತಿಳಿಯುವುದಿಲ್ಲ.
ಸಂವತ್ಸರಂ ತತ್ರ ವಿಹೃತ್ಯ ಗೂಢಂ
ನರಾಧಮಂ ತಂ ಸುಖಮುದ್ಧರೇಮ|
ನಿರ್ಯಾತ್ಯ ವೈರಂ ಸಫಲಂ ಸಪುಷ್ಪಂ
ತಸ್ಮೈ ನರೇಂದ್ರಾಧಮಪೂರುಷಾಯ ||10||
ಒಂದುವರ್ಷದ ಕಾಲ ಅಲ್ಲಿ ಗೂಢವಾಗಿ ವಿಹರಿಸಿ ಆ ನರಾಧಮನಿಗೆ ಅವನ ವೈರವನ್ನು ಪುಷ್ಪಫಲಗಳ ಜೊತೆಯಲ್ಲಿ ಹಿಂದಿರುಗಿಸಿ ಅವನನ್ನು ಅನಾಯಾಸವಾಗಿ ವಿನಾಶಗೊಳಿಸೋಣ.
ಸುಯೋಧನಾಯಾನುಚರೈರ್ವೃತಾಯ
ತತೋ ಮಹೀಮಾವಸ ಧರ್ಮರಾಜ |
ಸ್ವರ್ಗೋಪಮಂ ದೇಶಮಿಮಂ ಚರದ್ಭಿಃ
ಶಕ್ಯೋ ವಿಂಹತುಂ ನರದೇವ ಶೋಕಃ ||11||
ಧರ್ಮರಾಜನೇ, ಅನುಚರರಿಂದ ಕೂಡಿದ ಸುಯೋಧನನಿಗೆ ಪ್ರತೀಕಾರವನ್ನು ಮಾಡಿ ನೀನು ಭೂಮಿಯನ್ನು ಆಳು. ಎಲೈ ನರದೇವನೇ, ಸ್ವರ್ಗಸದೃಶವಾದ ಈ ದೇಶದಲ್ಲಿ ಸಂಚರಿಸುವ ನಾವು ನಮ್ಮ ಶೋಕವನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗುತ್ತದೆ.
ಕೀರ್ತಿಸ್ತು ತೇ ಭಾರತ ಪುಣ್ಯಗಂಧಾ
ನಶ್ಯೇದ್ಧಿ ಲೋಕೇಷು ಚರಾಚರೇಷು |
ತತ್ಪ್ರಾಪ್ಯ ರಾಜ್ಯಂ ಕುರುಪುಂಗವಾನಾಂ
ಶಕ್ಯಂ ಮಹತ್ ಪ್ರಾಪ್ತುಮಥ ಕ್ರಿಯಾಶ್ಚ ||12||
ಎಲೈ ಭಾರತನೇ, ಇಲ್ಲದಿದ್ದರೆ ಚರಾಚರಲೋಕಗಳಲ್ಲಿ ಸಂಚರಿಸುವ ನಿನ್ನ ಪುಣ್ಯಪರಿಮಳವುಳ್ಳ ಕೀರ್ತಿಯು ನಾಶವನ್ನು ಹೊಂದೀತು. ಕುರುಪುಂಗವರ ಆ ರಾಜ್ಯವನ್ನು ಮರಳಿ ಪಡೆದು ನಾವು ದೊಡ್ಡದನ್ನು ಸಾಧಿಸಲು ಮತ್ತು ದೊಡ್ಡ ಕ್ರಿಯೆಗಳನ್ನು ಮಾಡಲು ಸಮರ್ಥರಾಗುತ್ತೇವೆ.
ಇದಂ ತು ಶಕ್ಯಂ ಸತತಂ ನರೇಂದ್ರ
ಪ್ರಾಪ್ತುಂ ತ್ವಯಾ ಯಲ್ಲಭಸೇ ಕುಬೇರಾತ್ |
ಕುರುಷ್ವ ಬುದ್ಧಿಂ ದ್ವಿಷತಾಂ ವಧಾಯ
ಕೃತಾಗಸಾಂ ಭಾರತ ನಿಗ್ರಹೇ ಚ ||13||
ಎಲೈ ನರೇಂದ್ರನೇ, ಕುಬೇರನಿಂದ ನೀನು ಯಾವ ಅನುಗ್ರಹವನ್ನು ಪಡೆದಿದ್ದೀಯೋ ಅದನ್ನು ಯಾವಾಗಲೂ ಪಡೆಯಲು ಸಾಧ್ಯ. ಎಲೈ ಭಾರತನೇ, ನಮಗೆ ಅಪರಾಧವೆಸಗಿದ ಶತ್ರುಗಳನ್ನು ನಿಗ್ರಹಿಸಿ ಅವರ ವಧೆಯನ್ನು ಮಾಡಲು ನೀನು ನಿರ್ಧರಿಸು.
ತೇಜಸ್ತವೋಗ್ರಂ ನ ಸಹೇತ ರಾಜನ್
ಸಮೇತ್ಯ ಸಾಕ್ಷಾದಪಿ ವಜ್ರಪಾಣಿಃ |
ನ ಹಿ ವ್ಯಥಾಂ ಜಾತು ಕರಿಷ್ಯತಸ್ತೌ
ಸಮೇತ್ಯ ದೇವೈರಪಿ ಧರ್ಮರಾಜ ||14||
ಎಲೈ ರಾಜನೇ, ನಿನ್ನನ್ನು ಸಾಕ್ಷಾತ್ತಾಗಿ ಎದುರಿಸಿದರೆ ವಜ್ರಪಾಣಿಯಾದ ಇಂದ್ರನೂ ಸಹ ನಿನ್ನ ಉಗ್ರವಾದ ತೇಜಸ್ಸನ್ನು ಸಹಿಸಲಾರ. ಎಲೈ ಧರ್ಮರಾಜನೇ, ದೇವತೆಗಳಿಂದಲೂ ದುರ್ಜಯರಾದ ಅವರಿಬ್ಬರು ಎಂದೂ ವ್ಯಥೆಯನ್ನು ಮಾಡುವುದಿಲ್ಲ.
ತವಾರ್ಥಸಿದ್ಧ್ಯರ್ಥಮಪಿ ಪ್ರವೃತ್ತೌ
ಸುಪರ್ಣಕೇತುಶ್ಚ ಶಿನೇಶ್ಚ ನಪ್ತಾ |
ತಥೈವ ಕೃಷ್ಣೋऽಪ್ರತಿಮೋ ಬಲೇನ
ತಥೈವ ಚಾಹಂ ನರದೇವವರ್ಯ ||15||
ಸುಪರ್ಣಕೇತುವಾದ ಕೃಷ್ಣನೂ ಮತ್ತು . ಶಿನಿಯ ಮೊಮ್ಮಗನಾದ ಸಾತ್ಯಕಿಯೂ ಸಹ ನಿನ್ನ ಹಿತಪ್ರಾಪ್ತಿತಯ ಸಲುವಾಗಿ ಪ್ರವೃತ್ತರಾಗುವರು. ಅದರಂತೆ ಕೃಷ್ಣನೂ (=ಅರ್ಜುನನೂ) ಬಲದಲ್ಲಿ ಅಪ್ರತಿಮನಾಗಿದ್ದಾನೆ. ನರದೇವಶ್ರೇಷ್ಠನೇ, ನಾನೂ (=ಭೀಮಸೇನನೂ) ಸಹ ಬಲದಲ್ಲಿ ಅಪ್ರತಿಮನಾಗಿದ್ದೇನೆ.
ತಥೈವ ಚೇಮೌ ನರದೇವವರ್ಯ
ಯಮೌ ಚ ವೀರೌ ಕೃತಿನೌ ಪ್ರಯೋಗೇ |
ತ್ವದರ್ಥಯೋಗಪ್ರಭವಪ್ರಧಾನಾಃ
ಶಮಂ ಕರಿಷ್ಯಾಮ ಪರಾನ್ ಸಮೇತ್ಯ ||16||
ಎಲೈ ನರದೇವವರ್ಯನೇ, ಹಾಗೆಯೇ ವೀರರಾದ ನಕುಲಸಹದೇವರೂ ಶಸತ್ರಸ್ತ್ರ ಪ್ರಯೋಗದಲ್ಲಿ ನಿಪುಣರಾಗಿದ್ದಾರೆ. ನಿನ್ನ

ಅರ್ಥಪ್ರಾಪ್ತಿ ಮತ್ತು ಐಶ್ವರ್ಯ ವೃದ್ಧಿಗಳನ್ನೇ ಪ್ರಧಾನವಾದ ಉದ್ದೇಶವಾಗಿ ಹೊಂದಿದ ನಾವು ಶತ್ರುಗಳನ್ನು ಎದುರಿಸಿ ಅವರನ್ನು ನಾಶಮಾಡೋಣ.
ವೈಶಂಪಾಯನಃ
ತತಸ್ತದಾಜ್ಞಾಯ ಮತಂ ಮಹಾತ್ಮಾ
ತೇಷಾಂ ಚ ಧರ್ಮಸ್ಯ ಸುತೋ ವರಿಷ್ಠಃ |
ಪ್ರದಕ್ಷಿಣಂ ವೈಶ್ರವಣಾಧಿವಾಸಂ ಚಕಾರ
ಧರ್ಮಾರ್ಥವಿದುತ್ತಮೌಜಾಃ ||17||
ವೈಶಂಪಾಯನ ಆಗ ಮಹಾತ್ಮನಾದ ಶ್ರೇಷ್ಠನಾದ ಯಮಧರ್ಮಪುತ್ರನಾದ ಧರ್ಮಾರ್ಥವನ್ನು ತಿಳಿದ, ಉತ್ತಮಪರಾಕ್ರಮವುಳ್ಳ ಯುಧಿಷ್ಠಿರನು ಅವರ ಮಾತುಗಳನ್ನು ಕೇಳಿ ಕುಬೇರನ ನಿವಾಸಕ್ಕೆ ಪ್ರದಕ್ಷಿಣೆಯನ್ನು ಮಾಡಿದನು.
ಆಮಂತ್ರ್ಯ ವೇಶ್ಮಾನಿ ನದೀಃ ಸರಾಂಸಿ
ಸರ್ವಾಣಿ ರಕ್ಷಾಂಸಿ ಚ ಧರ್ಮರಾಜಃ |
ಯಥಾಗತಂ ಮಾರ್ಗಮವೇಕ್ಷಮಾಣಃ
ಪುನರ್ಗಿರಿಂ ಚೈವ ನಿರೀಕ್ಷಮಾಣಃ ||18||
ಸಮಾಪ್ತಕರ್ಮಾ ಸಹಿತಃ ಸುಹೃದ್ಭಿ
ಜಿತ್ವಾಸಪತ್ನಾನ್ ಪ್ರತಿಲಭ್ಯ ರಾಜ್ಯಮ್ |
ಶೈಲೇಂದ್ರ ಭೂಯಸ್ತಪಸೇ ಜಿತಾತ್ಮಾ
ದ್ರಷ್ಟಾ ತವಾಸ್ಮೀತಿ ಮತಿಂ ಚಕಾರ ||19||
ಧರ್ಮರಾಜನು ಆ ಗೃಹಗಳಿಗೂ, ನದಿಗಳಿಗೂ, ಸರೋವರಗಳಿಗೂ, ಎಲ್ಲಾ ರಾಕ್ಷಸರಿಗೂ ಹಿಂದಿರುಗಲು ಅನುಮತಿಯನ್ನು ಕೇಳಿ ಪುನಃ ಬಂದ ಮಾರ್ಗವನ್ನು ನೋಡುತ್ತಾ ಪುನಃ ಪುನಃ ಪರ್ವತವನ್ನು ನೋಡುತ್ತಾ, ಎಲೈ ಪರ್ವತರಾಜನೇ, ನಾನು ಶತ್ರುಗಳನ್ನು ಯುದ್ಧದಲ್ಲಿ ಗೆದ್ದು ರಾಜ್ಯವನ್ನು ಪಡೆದು ಎಲ್ಲ ಕಾರ್ಯಗಳನ್ನು ಮುಗಿಸಿ ಜಿತೇಂದ್ರಿಯನಾಗಿ ತಪಸ್ಸಿಗೋಸ್ಕರ ಬಂದು ನಿನ್ನನ್ನು ನೋಡುತ್ತೇನೆ ಎಂದು ಮನಸ್ಸಿನಲ್ಲಿಯೇ ನಿರ್ಧರಿಸಿದನು (ಪರ್ವತವನ್ನು ಕುರಿತು ಹೇಳಿದನು).
ವೃತಶ್ಚ ಸರ್ವೈರನುಜೈರ್ದ್ವಿಜೈಶ್ಚ ತೇನೈವ
ಮಾರ್ಗೇಣ ಪತಿಃ ಕುರೂಣಾಮ್ |
ಉವಾಹ ಚೈತಾನ್ ಗಣಶಸ್ತಥೈವ
ಘಟೋತ್ಕಚಃ ಪರ್ವತನಿರ್ಝರೇಷು ||20||
ತಮ್ಮಂದಿರಿಂದಲೂ ಮತ್ತು ಬ್ರಾಹ್ಮಣರಿಂದಲೂ ಕೂಡಿದವನಾಗಿ ಆ ಕುರುಪತಿಯು ತಾನು ಹೋದ ಮಾರ್ಗದಿಂದಲೇ ಹಿಂದಿರುಗಿದನು. ಘಟೋತ್ಕಚ ಮತ್ತು ಅವನ ಗಣಗಳು ಪರ್ವತಗಳಲ್ಲಿ ಮತ್ತು ಝರಿಗಳಲ್ಲಿ ಪಾಂಡವರನ್ನು ಎತ್ತಿಕೊಂಡು ಹೋದರು.

ತಾನ್ಪ್ರಸ್ಥಿತಾನ್ ಪ್ರೀತಿಮನಾ ಮಹರ್ಷಿಃ
ಪಿತೇವ ಪುತ್ರಾನನುಶಿಷ್ಯ ಸರ್ವಾನ್ |
ಸ ಲೋಮಶಃ ಪ್ರೀತಮನಾ ಜಗಾಮ
ದಿವೌಕಸಾಂ ಪುಣ್ಯತಮಂ ನಿವಾಸಮ್ ||21||
ಅಲ್ಲಿಂದ ಹೊರಟ ಆ ಎಲ್ಲಾ ಪಾಂಡವರನ್ನು ಮಹರ್ಷಿಗಳಾದ ಲೋಮಶರು ತಂದೆಯು ಮಕ್ಕಳಿಗೆ ಅನುಶಾಸನ ಮಾಡುವಂತೆ ಪ್ರೀತಿಯಿಂದ ಅನುಶಾಸನ ಮಾಡಿ ದೇವತೆಗಳ ಪವಿತ್ರವಾದ ನಿವಾಸಕ್ಕೆ ಹೊರಟುಹೋದರು.
ತೇನಾರ್ಷ್ಟಿಷೇಣೇನ ತಥಾನುಶಿಷ್ಟಾ
ತೀರ್ಥಾನಿರಮ್ಯಾಣಿ ತಪೋವನಾನಿ |
ಮಹಾಂತಿ ಚಾನ್ಯಾನಿ ಸರಾಂಸಿ ಪಾರ್ಥಾಃ
ಸಂಪಶ್ಯಮಾನಾಃ ಪ್ರಯಯುರ್ನರಾಗ್ರ್ಯಾಃ ||22||
ಲೋಮಶರಿಂದಲೂ ಮತ್ತು ಆರ್ಷ್ಟಿಷೇಣರಿಂದಲೂ ಹಾಗೆ ಅನುಶಾಸನವನ್ನು ಪಡೆದ ನರಶ್ರೇಷ್ಠರಾದ ಪಾರ್ಥರು ಮನೋಹರವಾದ ತಪೋವನಗಳನ್ನೂ, ದೊಡ್ಡ ಸರೋವರಗಳನ್ನೂ ನೋಡುತ್ತಾ ಮುಂದೆ ಸಾಗಿದರು.
ನಗೋತ್ತಮಂ ಪ್ರಸ್ರವಣೈರುಪೇತಂ
ದಿಶಾಂ ಗಜೈಃ ಕಿನ್ನರಪಕ್ಷಿಭಿಶ್ಚ |
ಸುಖಂ ನಿವಾಸಂ ಜಹತಾಂ ಹಿ ತೇಷಾಂ
ನ ಪ್ರೀತಿರಾಸೀದ್ ಭರತರ್ಷಭಾಣಾಮ್ ||23||
ಅನೇಕ ಝರಿಗಳಿಂದಲೂ ಮತ್ತು ದಿಗ್ಗಜಗಳಿಂದಲೂ ಕೂಡಿದ, ಕಿನ್ನರರು ಮತ್ತು ಪಕ್ಷಿಗಳಿಗೆ ಸುಖವಾದ ವಾಸಸ್ಥಾನವಾದ, ಆ ಪರ್ವತಶ್ರೇಷ್ಠವನ್ನು ತ್ಯಜಿಸುವ ಆ ಭರತರ್ಷಭರಿಗೆ ಸಂತೋಷವಾಗಲಿಲ್ಲ.
ತತಸ್ತು ತೇಷಾಂ ಪುನರೇವ ಹರ್ಷಃ
ಕೈಲಾಸಮಾಲೋಕ್ಯ ಮಹಾನ್ ಬಭೂವ |
ಕುಬೇರಕಾಂತಂ ಭರತರ್ಷಭಾಣಾಂ
ಮಹೀಧರಂ ವಾರಿಧರಪ್ರಕಾಶಮ್ ||24||

ಅನಂತರ ಹಿಂದಿರುಗುವ ಆ ಭರತರ್ಷಭರಿಗೆ ಕುಬೇರನಿಗೆ ಪ್ರಿಯವಾದ ಮೋಡಗಳ ಕಾಂತಿಯನ್ನು ಹೊಂದಿದ್ದ ಕೈಲಾಸ ಪರ್ವತವನ್ನು ನೋಡಿ ಬಹಳ ಸಂತೋಷವುಂಟಾಯಿತು.
ಸಮುಚ್ಛ್ರಯಾನ್ಪರ್ವತಸನ್ನಿರೋಧಾನ್
ಗೋಷ್ಠಾನ್ ಹರೀಣಾಂ ಗಿರಿಸೇತುಮಾಲಾಃ |
ಬಹೂನ್ ಪ್ರಪಾತಾಂಶ್ಚ ಸಮೀಕ್ಷ್ಯ ವೀರಾಃ
ಸ್ಥಲಾನಿ ನಿಮ್ನಾನಿ ಚ ತತ್ರ ತತ್ರ ॥25॥
ತಥೈವ ಚಾನ್ಯಾನಿ ಮಹಾವನಾನಿ
ಮೃಗದ್ವಿಜಾನೇಕಪಸೇವಿತಾನಿ |
ಆಲೋಕಯಾಂತೋಽಭಿಯಯುಃ
ಪ್ರತೀತಾಸ್ತೇ ಧನ್ವಿನಃ ಖಡ್ಗಧರಾ ನರಾಗ್ರ್ಯಾಃ ॥26॥
ಖಡ್ಗಧಾರಿಗಳೂ ಮತ್ತು ಧನುರ್ಧಾರಿಗಳೂ ಆದ ಆ ಪುರುಷಶ್ರೇಷ್ಠರು ಅನೇಕ ಉನ್ನತವಾದ ಪರ್ವತಗಳನ್ನೂ, ಸಿಂಹಗಳ ಗುಹೆಗಳನ್ನೂ, ದಿವ್ಯಸೇತುಮಾಲೆಗಳನ್ನೂ, ಅನೇಕ ಜಲಪಾತಗಳನ್ನೂ, ಅನೇಕ ತಗ್ಗುಪ್ರದೇಶಗಳನ್ನೂ ಮೃಗಪಕ್ಷಿಗಳಿಂದ ಸೇವಿತವಾದ ಅನೇಕ ಮಹಾಮರಗಳನ್ನೂ ನೋಡುತ್ತಾ ಸಂತೋಷಗೊಂಡು ಮುಂದೆ ಸಾಗಿದರು.
ವನಾನಿ ರಮ್ಯಾಣಿ ನದೀಃ ಸರಾಂಸಿ
ಗುಹಾ ಗಿರೀಣಾಂ ಗಿರಿಗಹ್ವರಾಣಿ |
ಏತೇ ನಿವಾಸಾಃ ಸತತಂ ಬಭೂವು
ರ್ದಿವಾನಿಶಂ ಪ್ರಾಪ್ಯ ನರರ್ಷಭಾಣಾಮ್ ॥27॥
ರಮ್ಯವಾದ ವನಗಳು, ನದಿಗಳು, ಸರೋವರಗಳು, ಪರ್ವತದ ಗುಹೆಗಳು, ಪರ್ವತದ ತಪ್ಪಲು ಪ್ರದೇಶಗಳು ಇವುಗಳು ಆ ನರರ್ಷಭರಿಗೆ ಹಗಲು ಮತ್ತು ರಾತ್ರಿಯ ಕಾಲದಲ್ಲಿ ಸತತವಾಗಿ ನಿವಾಸಸ್ಥಾನವಾಗಿದ್ದವು.
ತೇ ದುರ್ಗವಾಸಂ ಬಹುಧಾ ನಿರುಷ್ಯ
ವ್ಯತೀತ್ಯ ಕೈಲಾಸಮಚಿಂತ್ಯರೂಪಮ್ |
ಆಸೇದುರತ್ಯರ್ಥಮನೋರಮಂ ತೇ
ತಮಾಶ್ರಮಾಗ್ರ್ಯಂ ವೃಷಪರ್ವಣಸ್ತು ॥28॥
ಅವರು ಅನೇಕ ಪ್ರಕಾರಗಳಿಂದ ದುರ್ಗವಾಸವನ್ನು ಕಳೆದು ಅಚಿಂತ್ಯರೂಪವುಳ್ಳ ಕೈಲಾಸಪರ್ವತವನ್ನು ದಾಟಿ ಅತ್ಯಂತ ಮನೋಹರವಾದ ವೃಷಪರ್ವನ ಶ್ರೇಷ್ಠವಾದ ಆಶ್ರಮವನ್ನು ತಲುಪಿದರು.
ಸಮೇತ್ಯ ರಾಜ್ಞಾ ವೃಷಪರ್ವಣಾ ತೇ
ಪ್ರತ್ಯರ್ಚಿತಾಸ್ತೇನ ಚ ವೀತಮೋಹಾಃ |
ಶಶಂಸಿರೇ ವಿಸ್ತರಶಃ ಪ್ರವಾಸಂ ಗಿರೌ
ಯಥಾವದ್ ವೃಷಪರ್ವಣಸ್ತೇ ॥29॥
ವೀತಮೋಹರಾದ ಅವರು ವೃಷಪರ್ವರಾಜನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಅವನಿಂದ ಪೂಜಿತರಾಗಿ ಆ ವೃಷಪರ್ವನಿಗೆ ತಮ್ಮ ಪರ್ವತ ಪ್ರವಾಸದ ಕಥೆಯನ್ನು ಯಥಾರ್ಥವಾಗಿ ಮತ್ತು ವಿಸ್ತೃತರವಾಗಿ ಹೇಳಿದರು.
ಸುಖೋಷಿತಾಸ್ತಸ್ಯ ತ ಏಕರಾತ್ರಂ
ಪುಣ್ಯಾಶ್ರಮೇ ದೇವಮಹರ್ಷಿಜುಷ್ಟೇ |
ಅಭ್ಯಾಯಯುಸ್ತೇ ಬದರೀಂ ವಿಶಾಲಾಂ
ಸುಖೇನ ವೀರಾಃ ಪುನರೇವ ವಾಸಮ್ ॥30॥
ದೇವರ್ಷಿಗಳಿಂದ ಮತ್ತು ಮಹರ್ಷಿಗಳಿಂದ ಸೇವಿತವಾದ ಅವನ ಆ ಪವಿತ್ರವಾದ ಆಶ್ರಮದಲ್ಲಿ ಆ ವೀರರು ಒಂದುರಾತ್ರಿಯನ್ನು ಸುಖವಾಗಿ ಕಳೆದು ಪುನಃ ವಿಶಾಲಾ ಬದರಿಗೆ ವಾಸಕ್ಕಾಗಿ ಬಂದರು.
ಊಷುಸ್ತತಸ್ತತ್ರ ಮಹಾನುಭಾವಾ
ನಾರಾಯಣಸ್ಥಾನಗತಾಃ ಸಮಗ್ರಾಃ |
ಕುಬೇರಕಾಂತಾಂ ನಳಿನೀಂ ವಿಶೋಕಾಃ
ಸಂಪಶ್ಯಮಾನಾಃ ಸುರಸಿದ್ಧಜುಷ್ಟಾಮ್ ॥31॥
ಮಹಾನುಭಾವರಾದ ಅವರೆಲ್ಲರೂ ನಾರಾಯಣಸ್ಥಾನವಾದ ಆ ಪ್ರದೇಶದಲ್ಲಿ ಸುರಸಿದ್ಧ ಸೇವಿತವಾದ ಕುಬೇರನಿಗೆ ಪ್ರಿಯವಾದ ಸರೋವರವನ್ನು ಶೋಕರಹಿತರಾಗಿ ನೋಡುತ್ತಾ ವಾಸವನ್ನು ಮಾಡಿದರು.
ತಾಂ ಚಾಥ ದೃಷ್ಟ್ವಾ ನಳಿನೀಂ ವಿಶೋಕಾಃ
ಪಾಂಡೋಃ ಸುತಾಃ ಸರ್ವನರಪ್ರಧಾನಾಃ |
ತೇ ರೇಮಿರೇ ನಂದನವಾಸಮೇತ್ಯ
ದ್ವಿಜರ್ಷಯೋ ವೀತಮಲಾ ಯಥೈವ ॥32॥
ಸರ್ವನರಶ್ರೇಷ್ಠರಾದ ಶೋಕರಹಿತರಾದ ಪಾಂಡುಸುತರು ಆ ಸರೋವರವನ್ನು ನೋಡಿ ನಿಷ್ಕಲ್ಮಶರಾದ ಬ್ರಾಹ್ಮಣ ಋಷಿಗಳು ನಂದನವನವನ್ನು ಸೇರಿ ಸುಖಪಡುವಂತೆ ಸಂತೋಷಪಟ್ಟರು.
ತತಃ ಕ್ರಮೇಣೋಪಯಯುರ್ನೃವೀರಾ

ಯಥಾಗತೇನೈವ ಪಥಾ ಸಮಗ್ರಾಃ |
ವಿಹೃತ್ಯ ಮಾಸಂ ಸುಖಿನೋ ಬದರ್ಯಾಂ
ಕಿರಾತರಾಜ್ಞೋ ವಿಷಯಂ ಸುಬಾಹೋಃ ||33||
ಆ ಎಲ್ಲಾ ನರವೀರರಾದ ಪಾಂಡವರು ಬದರಿಯಲ್ಲಿ ಒಂದು ತಿಂಗಳ ಕಾಲ ಸುಖವಾಗಿ ವಿಹರಿಸಿ ತಾವು ಮೊದಲು ಹೋದ ಮಾರ್ಗದಿಂದಲೇ ಕ್ರಮವಾಗಿ ಹಿಂದಿರುಗಿ ಕಿರಾತರಾಜನಾದ ಸುಬಾಹುವಿನ ದೇಶವನ್ನು ತಲುಪಿದರು.
ಪೀನಾಂಸ್ತುಷಾರಾನ್ ದರದಾಂಶ್ಚ ಸರ್ವಾನ್
ದೇಶಾನ್ ಕುಲಿಂದಸ್ಯ ಚ ಭೂರಿರತ್ನಾನ್ |
ಅತೀತ್ಯ ದುರ್ಗಂ ಹಿಮವತ್ಪ್ರದೇಶಂ
ಪುರಂ ಸುಬಾಹೋರ್ದದೃಶುರ್ನೃವೀರಾಃ ||34||
ಬದರಿಯಿಂದ ಹೊರಟ ಆ ನರಶ್ರೇಷ್ಠರು ಪೀನ, ತುಷಾರ, ದರದ, ಕುಲಿಂದ, ಭೂರಿರತ್ನಗಳುಳ್ಳ ದೇಶಗಳನ್ನು ದಾಟಿ ದುರ್ಗಮವಾದ ಹಿಮಾಲಯ ಪ್ರದೇಶವನ್ನೂ ದಾಟಿ ಸುಬಾಹುವಿನ ರಾಜಧಾನಿಯನ್ನು (ಪಟ್ಟಣವನ್ನು) ನೋಡಿದರು.
ಶ್ರುತ್ವಾ ಚ ತಾನ್ ಪಾರ್ಥಿವಪುತ್ರಪೌತ್ರಾನ್
ಪ್ರಾಪ್ತಾನ್ ಸುಬಾಹುರ್ವಿಷಯೇ ಸಮಗ್ರಾನ್ |
ಪ್ರತ್ಯುದ್ಯಯೌ ಪ್ರೀತಿಯುತಃ ಸ ರಾಜಾ ತಂ
ಚಾಭ್ಯನಂದನ್ ವೃಷಭಾಃ ಕುರೂಣಾಮ್ ||35||
ರಾಜಪುತ್ರರೂ ಮತ್ತು ಪೌತ್ರರೆಲ್ಲರೂ ತನ್ನ ದೇಶಕ್ಕೆ ಬಂದ ವಾರ್ತೆಯನ್ನು ಕೇಳಿದ ಸುಬಾಹುರಾಜನು ಸಂತೋಷದಿಂದ ಅವರೆದುರಿಗೆ ಬಂದು ಅವರನ್ನು ಅಭಿನಂದಿಸಿದನು. ಕುರುಶ್ರೇಷ್ಠರೂ ಸಹ ಆ ರಾಜನನ್ನು ಅಭಿನಂದಿಸಿದರು.
ಸಮೇತ್ಯ ರಾಜ್ಞಾ ತು ಸುಬಾಹುನಾ ತೇ
ಸೂತೈರ್ವಿಶೋಕಪ್ರಮುಖೈಶ್ಚ ಸರ್ವೇ |
ಸಹೇಂದ್ರಸೇನೈಃ ಪರಿಚಾರಿಕೈಶ್ಚ
ಪೌರೋಗವೈರ್ಯೇ ಚ ಮಹಾನಸಸ್ಥಾಃ ||36||
ಸುಖೋಷಿತಾಸ್ತತ್ರ ತ ಏಕರಾತ್ರಂ ಸೂತಾನ್
ಸಮಾದಾಯ ರಥಾಂಶ್ಚ ಸರ್ವಾನ್ |
ಘಟೋತ್ಕಚಂ ಸಾನುಚರಂ ವಿಸೃಜ್ಯ
ತತೋಽಭ್ಯಯುರ್ಯಾಮುನಮದ್ರಿರಾಜಮ್ ||37||
ಅವರು ಸುಬಾಹುರಾಜನ ಸಮಾಗಮವನ್ನು ಹೊಂದಿ ಅಲ್ಲಿ ಒಂದು ರಾತ್ರಿಯ ಕಾಲ ತಂಗಿ ವಿಶೋಕ ಮೊದಲಾದ ಸೂತರನ್ನೂ, ಇಂದ್ರಸೇನ ಮೊದಲಾದ ಪರಿಚಾರಕರನ್ನೂ ಅಡಿಗೆ ಮನೆಯ ಮೇಲ್ವಿಚಾರಕರನ್ನೂ ಕರೆದುಕೊಂಡು ಅದರಂತೆ ರಥಗಳನ್ನು ತೆಗೆದುಕೊಂಡು ಅನುಚರರಿಂದ ಸಹಿತನಾದ ಘಟೋತ್ಕಚನನ್ನು ಬೀಳ್ಕೊಟ್ಟು ಯಮುನಾ ನದಿಯ ಉತ್ಪತ್ತಿ ಸ್ಥಾನವಾದ ಪರ್ವತಶ್ರೇಷ್ಠಕ್ಕೆ (ಯಮುನೋತ್ರಿಗೆ) ಬಂದರು.
ತಸ್ಮಿನ್ ಗಿರೌ ಪ್ರಸ್ರವಣೋಪಪನ್ನಹಿಮೋತ್ತರೀಯಾರುಣಪಾಂಡುಸಾನೌ |
ವಿಶಾಖಯೂಪಂ ಸಮುಪೇತ್ಯ ಚಕ್ರುಸ್ತದಾ ನಿವಾಸಂ ಪುರುಷಪ್ರವೀರಾಃ ||
ಆ ಪರ್ವತದಲ್ಲಿ ನೀರಿನ ಝರಿಗಳಿಂದ ಉಂಟಾದ ಹಿಮಮಯವಾದ ಉತ್ತರೀಯದಿಂದ ಅರುಣಪಾಂಡುವಾಗಿ ಕಾಣುತ್ತಿದ್ದ ಶಿಖರದಲ್ಲಿ ವಿಶಾಖಯೂಪ ಎಂಬ ಒಂದು ಸ್ಥಾನವನ್ನು ಸೇರಿ ಆ ಪುರುಷಪ್ರವೀರರು ಅಲ್ಲಿ ನಿವಾಸವನ್ನು ಮಾಡಿದರು.
ವರಾಹನಾನಾಮೃಗಪಕ್ಷಿಜುಷ್ಟಂ ಮಹಾವನಂ ಚೈತ್ರರಥಪ್ರಕಾಶಮ್ |
ಶಿವೇನ ಪಾರ್ಥಾ ಮೃಗಯಾಪ್ರಧಾನಾಃ ಸಂವತ್ಸರಂ ತತ್ರ ವನೇ ವಿಜಹ್ರುಃ ||
ಅನೇಕ ವರಾಹಗಳಿಂದಲೂ, ಮೃಗಪಕ್ಷಿಗಳಿಂದಲೂ ಸೇವಿತವಾದ ಚೈತ್ರರಥಪ್ರಕಾಶವೆಂಬ ಆ ಮಹಾವನದಲ್ಲಿ ಪಾರ್ಥರು ಬೇಟೆಯಾಡುತ್ತಾ ಒಂದು ವರ್ಷದ ಕಾಲ ಸುಖವಾಗಿ ವಿಹಾರ ಮಾಡಿದರು.
ತತ್ರಾಸಸಾದಾತಿಬಲಂ ಭುಜಂಗಂ
ಕ್ಷುಧಾರ್ದಿತಂ ಮೃತ್ಯುಮಿವೋಗ್ರರೂಪಮ್ |
ವೃಕೋದರಃ ಪರ್ವತಕಂದರಾಯಾಂ
ವಿಷಾದಮೋಹವ್ಯಥಿತಾಂತರಾತ್ಮಾ ||40||
ಅಲ್ಲಿ ಒಂದು ಪರ್ವತದ ಕಣಿವೆಯಲ್ಲಿ ವೃಕೋದರನು ಮೃತ್ಯುವಿನಂತೆ ಉಗ್ರರೂಪವನ್ನು ಹೊಂದಿದ್ದ ಹಸಿವಿನಿಂದ ಪೀಡಿತವಾದ ಮಹಾಬಲವುಳ್ಳ ಭುಜಂಗಮವನ್ನು ತಲುಪಿ ವಿಷಾದ ಮೋಹಗಳಿಂದ ಕೂಡಿದ ಮನಸ್ಸುಳ್ಳವನಾದನು.
ದ್ವೀಪೋಽಭವದ್ ಯತ್ರ ವೃಕೋದರಸ್ಯ
ಯುಧಿಷ್ಠಿರೋ ಧರ್ಮಭೃತಾಂ ವರಿಷ್ಠಃ |
ಅಮೋಕ್ಷಯದ್ ಯಸ್ತಮನಂತತೇಜಾ
ಗ್ರಾಹೇಣ ಸಂವೇಷ್ಟಿತಸರ್ವಗಾತ್ರಮ್ ||41||
ಅಲ್ಲಿ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ವೃಕೋದರನಿಗೆ ದ್ವೀಪನಾದನು (ಅಪಾಯದಿಂದ ಪಾರುಮಾಡುವವನಾದನು). ಅನಂತ ತೇಜಸ್ಸುಳ್ಳ ಅವನು ಸರ್ವಶರೀರವೂ ಸರ್ಪದಿಂದ ವೇಷ್ಟಿತವಾದ ಆ ಭೀಮನನ್ನು ಆ ಸರ್ಪದ ಹಿಡಿತದಿಂದ ಬಿಡಿಸಿದನು.
ತೇ ದ್ವಾದಶಂ ವರ್ಷಮುಪೋಪಯಾತಂ

ವನೇ ವಿಹರ್ತುಂ ಕುರವಃ ಪ್ರತೀತಾಃ |
ತಸ್ಮಾದ್ ವನಾಚ್ಚೈತ್ರರಥಪ್ರಕಾಶಾತ್
ಶ್ರಿಯಾಜ್ವಲಂತಸ್ತಪಸಾ ಚ ಯುಕ್ತಾಃ ॥42॥
ತತಶ್ಚ ಯಾತ್ವಾ ಮರುಧನ್ವಪಾರ್ಶ್ವಂ
ಸದಾ ಧನುರ್ವೇದರತಿಪ್ರಧಾನಾಃ |
ಸರಸ್ವತೀಮೇತ್ಯ ನಿವಾಸಕಾಮಾಃ
ಸರಸ್ತತೋ ದ್ವೈತವನಂ ಪ್ರತೀಯುಃ ॥43॥
ಆ ಕುರುಗಳು ಹನ್ನೆರಡುವರ್ಷಗಳ ಕಾಲ ಕಾಡಿನಲ್ಲಿ ವಿಹರಿಸಲು ನಿಶ್ಚಯಿಸಿದ್ದು ಕಾಂತಿಯಿಂದ ಬೆಳಗುತ್ತಾ ತಪಸ್ಸಿನಿಂದ ಕೂಡಿದವರಾಗಿ ಯಾವಾಗಲೂ ಧನುರ್ವೇದನಿಷ್ಠರಾಗಿ ಆ ಚೈತ್ರರಥಪ್ರಕಾಶವನದಿಂದ ಹೊರಟು ಮರುಭೂಮಿಯನ್ನು ದಾಟಿ ಸರಸ್ವತೀ ನದಿಯನ್ನು ಸೇರಿ ನಿವಾಸವನ್ನು ಮಾಡಲು ಇಚ್ಛೆಯುಳ್ಳವರಾಗಿ ಅಲ್ಲಿಂದ ಸರೋವರವನ್ನೂ ಮತ್ತು ದ್ವೈತವನವನ್ನು ಕುರಿತು ಪ್ರಯಾಣ ಮಾಡಿದರು.
ಸಮೀಕ್ಷ್ಯ ತಾನ್ ದ್ವೈತವನೇ ನಿವಿಷ್ಟಾನ್
ನಿವಾಸಿನಸ್ತತ್ರ ತತೋಽಭಿಜಗ್ಮುಃ |
ತಪೋದಮಾಚಾರಸಮಾಧಿಯುಕ್ತಾ
ಸ್ತೃಣೋದಪಾತ್ರಾವರಣಾಶ್ಮಕುಟ್ಟಾಃ ॥44॥
ಅವರು ದ್ವೈತವನವನ್ನು ಪ್ರವೇಶಮಾಡಿದುದನ್ನು ನೋಡಿ ತಪಸ್ಸು, ಇಂದ್ರಿಯ ನಿಗ್ರಹ, ಸದಾಚಾರ ಮತ್ತು ಸಮಾಧಿಗಳಿಂದ ಕೂಡಿದ ವಾನಪ್ರಸ್ಥರು ಅವರಿಗೆ ಧರ್ಬಾಸನಗಳನ್ನೂ ಅರ್ಘ್ಯಕ್ಕೋಸ್ಕರ ಜಲಪಾತ್ರೆಗಳನ್ನೂ ತೆಗೆದುಕೊಂಡು ಅವರಿಗೆ ಅಭಿಮುಖವಾಗಿ ಬಂದರು.
ಪ್ಲಕ್ಷಾಕ್ಷರೌಹೀತಕವೇತಸಾಶ್ಚ ತಥಾ
ಬದರ್ಯಃ ಖದಿರಾಃ ಶಿರೀಷಾಃ |
ಬಿಲ್ವೇಂಗುದಾಃ ಪೀಲುಶಮೀಕರೀರಾಃ
ಸರಸ್ವತೀತೀರರುಹಾ ಬಭೂವುಃ ॥45॥
ಸರಸ್ವತೀ ತೀರದಲ್ಲಿ ಪ್ಲಕ್ಷ, ಅಕ್ಷ, ರೋಹಿತಕ, ವೇತಸ, ಬದರಿ, ಖದಿರ, ಶಿರೀಷ, ಬಿಲ್ವ, ಇಂಗುದ, ಪೀಲು, ಶಮೀ, ಕರೀರ ಮೊದಲಾದ ವೃಕ್ಷಗಳು ಬೆಳೆದಿದ್ದವು.
ತಾಂ ಯಕ್ಷಗಂಧರ್ವಮಹರ್ಷಿಕಾಂತಾ
ಮಾಗಾರಭೂತಾಮಿವ ದೇವತಾನಾಮ್ |
ಸರಸ್ವತೀಂ ಪ್ರೀತಿಯುತಾಶ್ಚರಂತಃ
ಸುಖಂವಿಜಹ್ರುರ್ನರದೇವಪುತ್ರಾಃ ॥46॥
ಯಕ್ಷರಿಗೂ, ಗಂಧರ್ವರಿಗೂ ಮಹರ್ಷಿಗಳಿಗೂ ಪ್ರಿಯವಾದ ದೇವತೆಗಳ ನಿವಾಸಸ್ಥಾನವಾದ ಆ ಸರಸ್ವತೀ ನದಿಯ ತೀರದಲ್ಲಿ ಸಂತೋಷದಿಂದ ಸಂಚರಿಸುತ್ತಾ ಆ ರಾಜಕುಮಾರರು ಸುಖದಿಂದ ವಿಹಾರಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಅಜಗರಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು
* * * *

ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಪಾದೇಷು ತೇಷು ನಿವಾಸತ್ಸು ಹಿಮಾಲಯಸ್ಯ
ಯಾಮ್ಯಾಶ್ರಿತೇಷು ಪವಮಾನಸುತಃ ಕದಾಚಿತ್ |
ಧನ್ವೀ ಮೃಗಾನನುಚರನ್ ಸಹಸಾಽಽಸಸಾದ ಹಾಽಽಯೋಃ
ಸುತಂ ನಹುಷಮಾಜಗರೋರುರೂಪಮ್ ॥322॥
ಹಿಮಾಲಯದ ದಕ್ಷಿಣ ತಪ್ಪಲಿನಲ್ಲಿ ಪಾಂಡವರು ವಾಸಮಾಡುತ್ತಿದ್ದಾಗ ಒಂದು ದಿನ ಭೀಮ ಬಿಲ್ಲು ಹಿಡಿದು ಮೃಗಗಳನ್ನು ಬೇಟೆಯಾಡುತ್ತ ಹೆಬ್ಬಾವಿನ ರೂಪದಲ್ಲಿದ್ದ ನಹುಷನ ಬಳಿಗೆ ಬಂದ.
* * * *
ನೂರ ಎಪ್ಪತ್ತೆರಡನೆಯ ಅಧ್ಯಾಯ
ಬೇಟೆಯಲ್ಲಿ ಪ್ರವೃತ್ತನಾದ ಭೀಮನಿಗೆ ಅಜಗರದಿಂದ ಗ್ರಹಣ.
ಜನಮೇಜಯಃ
ಕಥಂ ನಾಗಾಯುತಪ್ರಾಣೋ ಭೀಮೋ ಭೀಮಪರಾಕ್ರಮಃ |
ಭಯಮಾಹಾರಯತ್ ತೀವ್ರಂ ತಸ್ಮಾದಜಗರಾನ್ಮುನೇ ॥1॥

ಜನಮೇಜಯ ಎಲೈ ಋಷಿಯೇ, ಹತ್ತುಸಾವಿರ ಆನೆಗಳ ಪ್ರಾಣಬಲವುಳ್ಳವನೂ ಮತ್ತು ಭಯಂಕರ ಪರಾಕ್ರಮಿಯೂ ಆದ ಭೀಮಸೇನನಿಗೆ ಆ ಅಜಗರದಿಂದ ತೀವ್ರ ಭಯವು ಹೇಗೆ ಉಂಟಾಯಿತು?
ಪೌಲಸ್ತ್ಯಂ ಧನದಂ ಯುದ್ಧೇ ಯ ಆಹ್ವಯತಿ ದರ್ಪಿತಃ |
ನಳಿನ್ಯಾಂ ಕದನಂ ಕೃತ್ವಾ ನಿಹಂತಾ ಯಕ್ಷರಾಕ್ಷಸಾಮ್ ॥2॥
ತಂ ಶಂಸಸಿ ಭಯಾವಿಷ್ಟಮಾಪನ್ನಮರಿಸೂದನಮ್ |
ಏತದಿಚ್ಛಾಮ್ಯಹಂ ಶ್ರೋತುಂ ಪರಂ ಕೌತೂಹಲಂ ಹಿ ಮೇ ॥3॥
ಯಾವನು ದರ್ಪದಿಂದ ಪೌಲಸ್ತ್ಯನಾದ ಕುಬೇರನನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆಯೋ, ಯಾವನು ಸೌಗಂಧಿಕ ಸರೋವರದಲ್ಲಿ ಯುದ್ಧವನ್ನು ಮಾಡಿ ಯಕ್ಷರಾಕ್ಷಸರರನ್ನು ಕೊಲ್ಲುತ್ತಾನೆಯೋ, ಅಂತಹ ಶತ್ರುಸೂದನನಾದ ಭೀಮಸೇನನನ್ನು ಭಯಗ್ರಸ್ತನಾದನೆಂದು ಹೇಳುತ್ತಿದ್ದೀರಿ. ಇದನ್ನು ನಾನು ಕೇಳಲು ಬಯಸುತ್ತೇನೆ. ಈ ವಿಷಯದಲ್ಲಿ ನನಗೆ ಬಹಳ ಕುತೂಹಲವಿದೆ.
ವೈಶಂಪಾಯನಃ
ಯದೃಚ್ಛಯಾ ಧನುಷ್ಪಾಣಿರ್ಬದ್ಧಖಡ್ಗೋ ವೃಕೋದರಃ |
ದದರ್ಶ ತದ್ವನಂ ರಮ್ಯಂ ದೇವಗಂಧರ್ವಸೇವಿತಮ್ ॥5॥
ವೈಶಂಪಾಯನ ಒಮ್ಮೆ ವೃಕೋದರನು ಯದೃಚ್ಛೆಯಿಂದ ಕೈಯಲ್ಲಿ ಧನುಸ್ಸನ್ನು ಹಿಡಿದು ಸೊಂಟದಲ್ಲಿ ಖಡ್ಗವನ್ನು ಕಟ್ಟಿಕೊಂಡು ರಮ್ಯವಾದ ದೇವಗಂಧರ್ವ ಸೇವಿತವಾದ ಆ ವನವನ್ನು ನೋಡಿದನು.
ಸ ದದರ್ಶ ಶುಭಾನ್ ದೇಶಾನ್ ಗಿರೇರ್ಹಿಮವತಸ್ತದಾ |
ದೇವರ್ಷಿಸಿಚರಿತಾನಪ್ಸರೋಗಣಸೇವಿತಾನ್ ॥6॥
ದೇವತೆಗಳೂ ಋಷಿಗಳೂ ಸಿದ್ಧರೂ ಸಂಚರಿಸುವ, ಅಪ್ಸರೆಯರ ಗಣಗಳಿಂದ ಸೇವಿತವಾದ, ಹಿಮಾಲಯದ ಶುಭಪ್ರದೇಶಗಳನ್ನು ಅವನು ಆಗ ನೋಡಿದನು.
ಚಕೋರೈರುಪಚಕ್ರೈಶ್ಚ ಪಕ್ಷಿಭಿರ್ಜೀವಜೀವಕೈಃ |
ಕೋಕಿಲೈರ್ಭೃಂಗರಾಜೈಶ್ಚ ತತ್ರ ತತ್ರ ನಿನಾದಿತಾನ್ ॥7॥
ಆ ವನವು ಚಕೋರ, ಉಪಚಕ್ರ, ಜೀವಜೀವಕ, ಕೋಕಿಲ, ಭೃಂಗರಾಜ ಮೊದಲಾದ ಪಕ್ಷಿಗಳ ನಾದಗಳು ವನದಿಂದ ಅಲ್ಲಲ್ಲಿ ಕೇಳಿಬರುತ್ತಿದ್ದವು.
ನಿತ್ಯಪುಷ್ಪಫಲೈರ್ವೃಕ್ಷೈರ್ಹಿಮಸಂಸ್ಪರ್ಶಕೋಮಲೈಃ |
ಉಪೇತಾನ್ ಬಹುಲಚ್ಛಾಯೈರ್ಮನೋನಯನನಂದನೈಃ ॥8॥
ನಿತ್ಯವೂ ಪುಷ್ಪಫಲಭರಿತವಾದ, ಹಿಮಸ್ಪರ್ಶದಿಂದ ಮೃದುವಾದ, ಬಹಳ ನೆರಳನ್ನು ಕೊಡುವ, ಮನೋನಯನಗಳಿಗೆ ಸಂತೋಷವನ್ನು ಉಂಟುಮಾಡುವ, ವೃಕ್ಷಗಳಿಂದ ಕೂಡಿದ್ದಿತು.
ಸ ಸಂಪಶ್ಯನ್ ಗಿರಿನದೀರ್ವೈದೂರ್ಯಮಣಿಸನ್ನಿಭೈಃ |
ಸಲಿಲೈರ್ಹಿಮಸಂಕಾಶೈರ್ಹಂಸಕಾರಂಡವಾಯುತೈಃ ॥9॥
ವನಾನಿ ದೇವದಾರೂಣಾಂ ಮೇಘಾನಾಮಿವ ವಾಗುರಾಃ |
ಹರಿಚಂದನಮಿಶ್ರಾಣಿ ತುಂಗಕಾಲೀಯಕನ್ಯಾಪಿ ॥10॥
ಅವನು ವೈಢೂರ್ಯಮಣಿಯಂತಿರುವ ಜಲದಿಂದ ತುಂಬಿದ, ಹಿಮದ ಪ್ರಭೆಗಳುಳ್ಳ, ಹಂಸಕಾರಂಡವಾದಿ ಪ್ರಕ್ಷಿಗಳುಳ್ಳ ನದಿಗಳನ್ನೂ, ದೇವದಾರು ವೃಕ್ಷಗಳಿಂದ ಮೋಡಗಳ ಬಲೆಯಂತೆ ತೋರುವ ದೇವದಾರು ವನಗಳನ್ನೂ, ಹರಿಚಂದನ ಮಿಶ್ರಿತವಾದ ತುಂಗ, ಕಾಲೀಯಕ ಮೊದಲಾದ ವೃಕ್ಷಗಳನ್ನೂ ನೋಡುತ್ತಾ ಮುಂದೆ ನಡೆದನು.
ಮೃಗಯಾಂ ಪರಿಧಾವನ್ ಸ ಸಮೇಷು ಮರುಧನ್ವಸು |
ವಿಧ್ಯನ್ ಮೃಗಾನ್ ಶರೈಃ ಶುದ್ಧೈಶ್ಚಚಾರ ಸ ಮಹಾಬಲಃ ॥11॥
ಮಹಾಬಲನಾದ ಅವನು ಆ ಮರುಧನ್ವದ ಸಮವಾದ ಪ್ರದೇಶಗಳಲ್ಲಿ ಓಡಾಡುತ್ತಾ ಶುದ್ಧಬಾಣಗಳಿಂದ ಮೃಗಗಳನ್ನು ಕೊಲ್ಲುತ್ತಾ ಓಡಾಡಿದನು.
ಭೀಮಸೇನಸ್ತು ವಿಖ್ಯಾತೋ ಮಹಾಂತಂ ದಂಷ್ಟ್ರಿಣಂ ಬಲಾತ್ |
ನಿಘ್ನನ್ ನಾಗಶತಪ್ರಾಣೋ ವನೇ ತಸ್ಮಿನ್ ಮಹಾಬಲಃ ॥12॥
ಮೃಗಾಣಾಂ ಸ ವರಾಹಾಣಾಂ ಮಹಿಷಾಣಾಂ ಮಹಾಭುಜಃ |
ವಿನಿಘ್ನಂಸ್ತತ್ರ ತತ್ರೈವ ಭೀಮೋ ಭೀಮಪರಾಕ್ರಮಃ ॥13॥
ವಿಖ್ಯಾತನಾದ ಮಹಾಬಲನಾದ ಭೀಮಪರಾಕ್ರಮನಾದ ಮಹಾಭುಜನಾದ ಭೀಮನು ಮೃಗಗಳನ್ನೂ, ವರಾಹಗಳನ್ನೂ, ಮಹಿಷಗಳನ್ನೂ ಸಂಹಾರಮಾಡಿದನು.
ಸ ಮಾತಂಗಶತಪ್ರಾಣೋ ಮನುಷ್ಯಶತವಾರಣಃ |
ಸಿಂಹಶಾರ್ದೂಲವಿಕ್ರಾಂತೋ ವನೇ ತಸ್ಮಿನ್ ಮಹಾಬಲಃ ॥14॥
ವೃಕ್ಷಾನುತ್ಪಾಟಯಾಮಾಸ ತರಸಾ ವೈ ಬಭಂಜ ಚ |
ಪೃಥಿವ್ಯಾಶ್ಚ ಪ್ರದೇಶಾನ್ ವೈ ನಾದಯಂಸ್ತು ವನಾನಿ ಚ ॥15॥
ನೂರು ಆನೆಗಳ ಬಲವುಳ್ಳ, ನೂರು ಮನುಷ್ಯರ ಜೊತೆಯಲ್ಲಿ ಒಮ್ಮೆಲೇ ಯುದ್ಧ ಮಾಡುವ ಸಾಮರ್ಥ್ಯವುಳ್ಳ, ಸಿಂಹಶಾರ್ದೂಲವಿಕ್ರಮವುಳ್ಳ ಆ ಮಹಾಬಲನಾದ ಭೀಮಸೇನನು ಆ ಕಾಡಿನಲ್ಲಿ ವೃಕ್ಷಗಳನ್ನು ಕಿತ್ತು ತನ್ನ ಬಲದಿಂದ ಮುರಿದನು. ಭೂಮಿಯ ಪ್ರದೇಶಗಳನ್ನು ಮತ್ತು ಆ ಕಾಡನ್ನು ತನ್ನ ನಾದದಿಂದ ತುಂಬುತ್ತಾ ಬೇಟೆಯಾಡಿದನು.

ಪರ್ವತಾಗ್ರಾಣಿ ವೈ ಮೃದ್ನನ್ ನಾದಯಾನಶ್ಚ ವಿಜ್ವರಃ |
ಪ್ರಕ್ಷಿಪನ್ ಪಾದಪಾಂಶ್ಚಾಪಿ ನಾದೇನಾಪೂರಯನ್ ಮಹೀಮ್ ॥16॥
ವೇಗೇನ ನ್ಯಪತದ್ ಭೀಮೋ ನಿರ್ಭಯಶ್ಚ ಪುನಃ ಪುನಃ |
ಆಸ್ಫೋಟಯನ್ ಕ್ಷ್ವೇಡಯಂಶ್ಚ ತಳತಾಲಾಂಶ್ಚ ವಾದಯನ್ |
ಚಿರಸಂಬದ್ಧದರ್ಪಸ್ತು ಭೀಮಸೇನೋ ವನೇ ತದಾ ॥17॥
ಯಾವ ಆತಂಕವೂ ಇಲ್ಲದೆ ಪರ್ವತದ ಶಿಖರಗಳನ್ನು ಕೆಡವುತ್ತಾ ತನ್ನ ಸಿಂಹನಾದದಿಂದ ಆ ಪ್ರದೇಶವನ್ನೆಲ್ಲಾ ತುಂಬುತ್ತಾ, ಮರಗಳನ್ನು ಕಿತ್ತು ಎಸೆಯುತ್ತಾ, ಚಪ್ಪಾಳೆಯನ್ನು ತಟ್ಟುತ್ತಾ, ಸಿಂಹನಾದವನ್ನು ಮಾಡುತ್ತಾ ದರ್ಪಿಷ್ಠನಾದ ಭೀಮಸೇನನು ಆ ಕಾಡಿನಲ್ಲಿ ನಿರ್ಭಯನಾಗಿ ವೇಗದಿಂದ ಸಂಚರಿಸಿದನು.
ಗಜೇಂದ್ರಾಶ್ಚ ಮಹಾಸತ್ತ್ವ ಮೃಗೇಂದ್ರಾಶ್ಚ ಮಹಾಬಲಾಃ |
ಭೀಮಸೇನಸ್ಯ ನಾದೇನ ವ್ಯಮುಂಚಂತ ಗುಹಾ ಭಯಾತ್ ॥18॥
ಕ್ವಚಿತ್ಪ್ರಧಾವಂಸ್ತಿಷ್ಠಂಶ್ಚ ಕ್ವಚಿಚ್ಚೋಪವಿಶಂಸ್ತಥಾ |
ಮೃಗಪ್ರೇಪ್ಸುರ್ಮಹಾರೌದ್ರೇ ವನೇ ಚರತಿ ನಿರ್ಭಯಃ ॥19॥
ಮಹಾಬಲವುಳ್ಳ ಮಹಾಗಜಗಳೂ ಮತ್ತು ಸಿಂಹಗಳೂ ಭೀಮಸೇನನ ನಾದಕ್ಕೆ ಹೆದರಿ ತಮ್ಮ ಗುಹೆಗಳನ್ನು ತ್ಯಜಿಸಿದವು. ನಿರ್ಭಯನಾದ ಭೀಮಸೇನನು ಒಮ್ಮೆ ಓಡುತ್ತಾ, ಒಮ್ಮೆ ನಿಲ್ಲುತ್ತಾ, ಒಮ್ಮೆ ಕುಳಿತುಕೊಳ್ಳುತ್ತಾ ಮೃಗಗಳನ್ನು ಕೊಲ್ಲಲು ಬಯಸಿ ಭಯಂಕರವಾದ ಕಾಡಿನಲ್ಲಿ ಸಂಚರಿಸಿದನು.
ಸ ತತ್ರ ಮನುಜವ್ಯಾಘ್ರೋ ವನೇ ವನಚರೋಪಮಃ |
ಪದ್ಭ್ಯಾಮಭಿಸಮಾಪೇದೇ ಭೀಮಸೇನೋ ಮಹಾಬಲಃ ॥20॥
ಸ ಪ್ರವಿಷ್ಟೋ ಮಹಾರಣ್ಯೇ ನಾದಾನ್ ನದತಿ ಚಾದ್ಭುತಾನ್ |
ತ್ರಾಸಯನ್ ಸರ್ವಭೂತಾನಿ ಮಹಾಸತ್ತ್ವಪರಾಕ್ರಮಃ ॥21॥
ಮಹಾಸತ್ತ್ವಪರಾಕ್ರಮವುಳ್ಳ, ಮನುಜವ್ಯಾಘ್ರನಾದ ಆ ಭೀಮಸೇನನು ಮಹಾರಣ್ಯವನ್ನು ಪ್ರವಿಷ್ಟನಾಗಿ ಅದ್ಭುತವಾದ ನಾದಗಳನ್ನು ಮಾಡುತ್ತಾ, ಎಲ್ಲ ಪ್ರಾಣಿಗಳಲ್ಲಿಯೂ ಭಯವನ್ನುಂಟು ಮಾಡುತ್ತಾ, ವನಚರನಂತೆ ನಡೆದುಕೊಂಡೇ ಎಲ್ಲಕಡೆಯಲ್ಲಿಯೂ ಸಂಚರಿಸಿದನು.
ತತೋ ಭೀಮಸ್ಯ ಶಬ್ದೇನ ಭೀತಾಃ ಸರ್ಪಾ ಗುಹಾಶಯಾಃ |
ಅತಿಕ್ರಾಂತಾಸ್ತು ವೇಗೇನ ಜಗಾಮಾನುಸೃತಃ ಶನೈಃ ॥22॥
ಆಗ ಭೀಮನ ಶಬ್ದದಿಂದ ಹೆದರಿದ ಗುಹೆಯಲ್ಲಿ ಮಲಗಿದ್ದ ಸರ್ಪಗಳು ಶೀಘ್ರವಾಗಿ ಹೊರಗೆ ಬಂದವು. ಭೀಮಸೇನನು ಅವುಗಳಿಂದ ಅನುಸರಿಸಲ್ಪಟ್ಟು ಭೀಮನು ಮೆಲ್ಲನೆ ಹೋದನು.
ತತೋಽಮರವರಪ್ರಖ್ಯೋ ಭೀಮಸೇನೋ ಮಹಾಬಲಃ ॥23॥
ಸ ದದರ್ಶ ಮಹಾಕಾಯಂ ಭುಜಗಂ ಲೋಮಹರ್ಷಣಮ್ |
ಗಿರಿದುರ್ಗೇ ಸಮಾಪನ್ನಂ ಕಾಯೇನಾವೃತ್ಯ ಕಂದರಮ್ ॥24॥
ಆಗ ಶ್ರೇಷ್ಠದೇವತೆಯಾದ ಮಹಾಬಲನಾದ ಭೀಮಸೇನನು ಮಹಾಶರೀರವುಳ್ಳ ರೋಮಾಂಚಕಾರಿಯಾದ ತನ್ನ ದೇಹದಿಂದ ಆ ದುರ್ಗದಲ್ಲಿ ಒಂದು ಕಣಿವೆಯನ್ನೇ ಆವರಿಸಿಕೊಂಡಿದ್ದಂತಹ ಒಂದು ಸರ್ಪವನ್ನು ನೋಡಿದನು.
ಪರ್ವತಾಭೋಗವರ್ಷ್ಮಾಣಮತಿಕಾಯಂ ಮಹಾಬಲಮ್ |
ಚಿತ್ರಾಂಗದಮಂಗಜೈಶ್ಚಿತ್ರೈರ್ಹರಿದ್ರಾಸದೃಶಚ್ಛವಿಮ್ ॥25॥
ಗುಹಾಕಾರೇಣ ವಕ್ತ್ರೇಣ ಚತುರ್ದಂಷ್ಟ್ರೇಣ ರಾಜತಾ |
ದೀಪ್ತಾಕ್ಷೇಣಾತಿತಾಮ್ರೇಣ ಲಿಹಾನಂ ಸೃಕ್ಕಿಣೀ ಮುಹುಃ ॥26॥
ಪರ್ವತಗಾತ್ರದ ಶರೀರವನ್ನು ಹೊಂದಿದ, ಅತಿಕಾಯವಾದ, ಮಹಾಬಲವುಳ್ಳ, ಚಿತ್ರವಾದ ಅವಯವಗಳಿಂದ ಕೂಡಿದ, ಹಳದಿಯ ಬಣ್ಣದ, ಗುಹೆಯಂತಿರುವ ಬಾಯಿಯಲ್ಲಿ ಹೊಳೆಯುವ ನಾಲ್ಕು ಕೋರೆದಾಡೆಗಳಿಂದ ಶೋಭಿಸುವ, ಕೆಂಪಾದ ಕಣ್ಣುಗಳನ್ನು ಹೊಂದಿದ, ತನ್ನ ಕಟಬಾಯಿಯನ್ನು ನಾಲಿಗೆಯಿಂದ ಮತ್ತೆ ಮತ್ತೆ ಸವರಿಕೊಳ್ಳುವ ಆ ಸರ್ಪವನ್ನು ನೋಡಿದನು.
ತ್ರಾಸನಂ ಸರ್ವಭೂತಾನಾಂ ಕಾಲಾಂತಕಯಮೋಪಮಮ್ |
ನಿಃಶ್ವಾಸಕ್ಷ್ವೇಡನಾದೇನ ಭರ್ತ್ಸಯಂತಮಿವ ಸ್ಥಿತಮ್ ॥27॥
ಅದು ಎಲ್ಲ ಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಾ ತನ್ನ ನಿಃಶ್ವಾಸ ಮತ್ತು ಸಿಟ್ಟಿನ ನಾದಗಳಿಂದ ಎಲ್ಲರನ್ನೂ ತಿರಸ್ಕರಿಸುತ್ತಾ ಕಾಲಾಂತಕ ಯಮನಂತೆ ಇದ್ದಿತು.
ಸ ಭೀಮಂ ಸಹಸಾಭ್ಯೇತ್ಯ ಸ್ಪಿಜಾ ತಂ ಕುಪಿತೋ ಭೃಶಮ್ |
ಜಗ್ರಾಹಾಜಗರೋ ಗ್ರಾಹೋ ಭುಜಯೋರುಭಯೋರ್ಬಲಾತ್ ॥28॥
ಆ ಅಜಗರವು ಬಹಳ ಕೋಪದಿಂದ ಭೀಮನ ಕಡೆಗೆ ಇದ್ದಕ್ಕಿದ್ದಂತೆ ತನ್ನ ಕಟಿಪ್ರದೇಶದಿಂದ ಭೀಮನ ಎರಡು ಭುಜಗಳನ್ನು ಬಲವಾಗಿ ಸುತ್ತಿಕೊಂಡಿತು.
ತೇನ ಸಂಸ್ಪೃಷ್ಟಗಾತ್ರಸ್ಯ ಭೀಮಸೇನಸ್ಯ ವೈ ತದಾ |
ಸಂಜ್ಞಾ ಮುಮೋಹ ಸಹಸಾ ವರದಾನೇನ ತಸ್ಯ ಹಿ ॥29॥
ಭೀಮಸೇನನಿಗೆ ಆ ಸರ್ಪ ಸ್ಪರ್ಶವಾದ ತಕ್ಷಣ ಆ ಸರ್ಪಕ್ಕೆ ಇದ್ದ ವರದಾನದಿಂದ ಸಂಜ್ಞೆಯು ಹೊರಟು ಹೋಯಿತು.
ದಶನಾಗಸಹಸ್ರಾಣಿ ಧಾರಯಂತಿ ಹಿ ಯದ್ಬಲಮ್ |

ತದ್ಬಲಂ ಭೀಮಸೇನಸ್ಯ ಭುಜಯೋರ್ನ ಸ ಮಂಸತ ॥30॥
ಯಾವ ಭೀಮಸೇನನ ಬಲವನ್ನು ಹತ್ತುಸಹಸ್ರ ಗಜಗಳು ತಡೆಯಬಹುದೋ ಅಂತಹ ಭೀಮಸೇನನ ಬಲವನ್ನು ಆ ಸರ್ಪವು ಗಣನೆಗೇ ತೆಗೆದುಕೊಳ್ಳಲಿಲ್ಲ.
ಸ ತೇಜಸ್ವೀ ತಥಾ ತೇನ ಭುಜಗೇನ ವಶೀಕೃತಃ |
ವಿಸ್ಫುರನ್ ಶನಕೈರ್ಭೀಮೋ ನ ಶಶಾಕ ವಿಚೇಷ್ಟಿತುಮ್ ॥31॥
ಸರ್ಪದ ವಶಕ್ಕೆ ಹಾಗೆ ಸಿಲುಕಿದ ಆ ತೇಜಸ್ವಿಯಾದ ಭೀಮಸೇನನು ಬಿಡಿಸಿಕೊಳ್ಳಲು ಪ್ರಯತ್ನಪಟ್ಟರೂ ಅಲುಗಾಡಲೂ ಸಾಧ್ಯವಾಗಲಿಲ್ಲ.
ನಾಗಾಯುತಸಮಪ್ರಾಣಃ ಸಿಂಹಸ್ಕಂಧೋ ಮಹಾಭುಜಃ |
ಗೃಹೀತೋ ವ್ಯಜಹಾತ್ ಸತ್ತ್ವಂ ವರದಾನವಿಮೋಹಿತಃ ॥32॥
ಸರ್ಪದ ವರದಾನದಿಂದ ವಿಮೋಹಿತನಾದ, ಹತ್ತುಸಾವಿರ ಆನೆಗಳ ಪ್ರಾಣಬಲವುಳ್ಳ ಸಿಂಹಸ್ಕಂಧನಾದ ಮಹಾಭುಜನಾದ, ಭೀಮಸೇನನು ಸರ್ಪಗ್ರಹಕ್ಕೆ ಒಳಗಾಗಿ ತನ್ನ ಸತ್ತ್ವವನ್ನು ತ್ಯಜಿಸಿದನು.
ನ ಹಿ ಪ್ರಯತ್ನಮಕರೋತ್ ತೀವ್ರಮಾತ್ಮವಿಮೋಕ್ಷಣೇ |
ನ ಚೈನಮಶಕದ್ ವೀರಃ ಕಥಂಚಿತ್ ಪ್ರತಿಬಾಧಿತುಮ್ ॥33॥
ಅನಂತರ ಅವನು ತನ್ನನ್ನು ಬಿಡಿಸಿಕೊಳ್ಳಲು ಪ್ರಯತ್ನವನ್ನೂ ಮಾಡಲಿಲ್ಲ. ವೀರನಾದ ಅವನು ಆ ಮಹಾಸರ್ಪಕ್ಕೆ ಬಾಧೆಯನ್ನು ಉಂಟುಮಾಡಲು ಸಮರ್ಥನಾಗಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಅಜಗರಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಪೂರ್ವಂ ಹಿ ವೃತ್ರವಧಾತೋಽಂಬುಜನಾಲತಂತು-
ಸಂಸ್ಥೇ ಶಚೀಪ್ರಣಯಿನಿ ಪ್ರವಿಚಿಂತ್ಯ ದೇವಾಃ |
ಚಕ್ರುಸ್ತ್ರಿಲೋಕಪತಿಮಾಯುಸುತಂ ವರಂ ಚ
ದತ್ವಾಽಕ್ಷಿಗೋಚರತಪೋಽಸ್ಯ ಬಲಂ ಚ ಸರ್ವಮ್ ॥323॥
ಹಿಂದೆ ವೃತ್ರವಧೆಯ ನಿಮಿತ್ತದಿಂದ ಇಂದ್ರಕಮಲನಾಳದ ತಂತುವಿನಲ್ಲಿ ಇದ್ದಾಗ ದೇವತೆಗಳು ವಿಚಾರಮಾಡಿ ನಹುಷನನ್ನು ಅವನ ಕಣ್ಣಿಗೆ ಬಿದ್ದವರ ತಪಸ್ಸೂ ಬಲವೂ ಪೂರ್ತಿಯಾಗಿ ಅವನಿಗೆ ಬರುವಂತೆ ವರನೀಡಿ ಮೂಲೋಕದ ಅಧಿಪತಿಯನ್ನಾಗಿ ಮಾಡಿದರು.
ಸ ಸರ್ವಸುರವಿಪ್ರೇಂದ್ರತಪಶ್ಚ ವಲಮಕ್ಷಯಮ್ |
ಅವಾಪ್ಯ ವವೃಧೇ ನಿತ್ಯಂ ದರ್ಪಾದೈಚ್ಛಚ್ಛಚೀಮಪಿ ॥324॥
ನಹುಷ ಎಲ್ಲ ದೇವ ಋಷಿಗಳ ತಪಸ್ಸನ್ನೂ ಅಕ್ಷಯವಾದ ಬಲವನ್ನೂ ಹೊಂದಿ ಸದಾ ಮೆರೆಯುತ್ತ ದರ್ಪದಿಂದ ಬೀಗಿದ. ದರ್ಪದಿಂದ ಶಚಿಯನ್ನೂ ಬಯಸಿದ.
ಸ ಇಂದ್ರವಚನಾಚ್ಛಚ್ಯಾ ಮಹರ್ಷಿಗಣವಾಹನೇ |
ನಿಯುಕ್ತೋ ವಂಚನಾಯೈವ ವಾಹಯಾಮಾಸ ತಾನೃಷೀನ್ ॥325॥
ಶಚಿ ಇಂದ್ರನ ಮಾತಿನಂತೆ ನಹುಷನನ್ನು ವಂಚಿಸುವುದಕ್ಕಾಗಿ ಮಹರ್ಷಿ ಸಮೂಹದಿಂದ ವಾಹನ ಹೊರಿಸಲು ಹೇಳಿದಳು. ನಹುಷ ಆ ಋಷಿಗಳಿಂದ ತನ್ನ ವಾಹವನ್ನು ಹೊರಿಸಿದ.
ಸ ಶಚೀಪ್ರತಿಷೇಧಾರ್ಥಮಗಸ್ತ್ಯೇನ ಮಹಾತ್ಮನಾ |
ವೇದಪ್ರಾಮಾಣ್ಯವಿಷಯೇ ಪೃಷ್ಟೋ ನೇತ್ಯಾಹ ಮೂಢಧೀಃ |
ಪ್ರಮಾಣಮಿತಿ ತೇನೋಕ್ತಃ ಶಿರಸ್ಯೇನಂ ಪದಾಽಹನತ್ ॥326॥
ನಹುಷನಿಗೆ ಶಚೀ ಸಂಗವಾಗದಂತೆ ಮಾಡುವುದಕ್ಕಾಗಿ ಮಹಾತ್ಮ ಅಗಸ್ತ್ಯ ವೇದ ಪ್ರಾಮಾಣ್ಯ ವಿಷಯದಲ್ಲಿ ಪ್ರಶ್ನೆ ಮಾಡಿದ. ಮೂಢಬುದ್ಧಿಯ ನಹುಷ ಪ್ರಮಾಣವಲ್ಲ ಎಂದ. ಪ್ರಮಾಣವೇ ಎಂದು ಅಗಸ್ತ್ಯ ವಾದಿಸಿದಾಗ ನಹುಷ ಅವನ ತಲೆಯನ್ನು ಕಾಲಿಂದ ತುಳಿದ.
ತದಾ ಭೃಗುಂ ತಸ್ಯ ಜಟಾಸು ಲೀನಂ
ಕದಾಽಪಿ ತಸ್ಯಾಕ್ಷಿಪಥಂ ನ ಯಾತಮ್ |
ಆವಿಶ್ಯ ಕಂಜಪ್ರಭವಃ ಶಶಾಪ
ವ್ರಜಾಽಶು ಪಾಪಾಜಗರತ್ವಮೇವ ॥327॥
ಆಗ ನಹುಷನಿಗೆ ಎಂದೂ ದೃಷ್ಟಿಗೋಚರನಾಗದೆ ಅಗಸ್ತ್ಯನ ಜಟೆಯಲ್ಲಿ ಅಡಗಿ ಕುಳಿತಿದ್ದ ಭೃಗುಮುನಿಯಲ್ಲಿ ಬ್ರಹ್ಮ ಆವೇಶಗೊಂಡು `ಪಾಪಿಯೇ, ನೀನು ಕೂಡಲೇ ಹೆಬ್ಬಾವಾಗು' ಎಂದು ಶಪಿಸಿದ.
ಷಷ್ಠೇ ಕಾಲೇ ಯಸ್ತ್ವಯಾಽಸಾದಿತಃ ಸ್ಯಾತ್
ಸ ತೇ ವಶಂ ಯಾತು ಬಲಾಧಿಕೋಽಪಿ |

ಯದಾ ಗೃಹೀತಂ ಪುರುಷಂ ನಿಹಂತುಂ
ನ ಶಕ್ಷ್ಯಸೇ ಯದಿ ಸ ತ್ವದ್ಗೃಹೀತಃ |
ಶಕ್ತೋಽಪಿ ನಾಽತ್ಮಾನಮಭಿಪ್ರಮೋಚಯೇತ್
ತದಾಽಸ್ಯ ಸ್ಯಾತ್ ತ್ವತ್ತಪೋಽಗ್ರ್ಯಂ ಬಲಂ ಚ ॥328॥
ಪಷ್ಮಕಾಲ ಯಾರು ನಿನಗೆ ಸಿಗುವನೋ ಅವನು ಮಹಾಬಲಿಷ್ಠನಾದರೂ ನಿನ್ನ ವಶಕ್ಕೆ ಬರಲಿ. ನೀನು ಹಿಡಿದ ವ್ಯಕ್ತಿಯನ್ನು ನಿನಗೆ ಕೊಲ್ಲಲು ಆಗದಿದ್ದಾಗ, ಆ ವ್ಯಕ್ತಿ ಶಕ್ತನಾಗಿದ್ದರೂ ತನ್ನನ್ನು ಬಿಡಿಸಿಕೊಳ್ಳದಿದ್ದಾಗ ನಿನ್ನ ಉತ್ತಮವಾದ ತಪಸ್ಸು ಬಲವೆಲ್ಲವೂ ಅವನಲ್ಲಿಯೇ ಹೋಗಿ ಸೇರುತ್ತದೆ.
ಸರ್ವದೇವಮುನೀಂದ್ರಾಣಾಂ ಯತ್ ತಪಸತ್ತ್ವಪುಪಾಶ್ರಿತಮ್ |
ತಚ್ಚ ಸರ್ವಂ ತಮೇವ್ಯೈತಿ ನಾತ್ರ ಕಾರ್ಯಾ ವಿಚಾರಣಾ ॥329॥
ಎಲ್ಲ ದೇವತೆಗಳ ಮುನಿಗಳ ಯಾವ ತಪೋಬಲ ನಿನ್ನಲ್ಲಿ ಬಂದು ಸೇರಿರುವುದೋ ಅದೆಲ್ಲವೂ ಅವನನ್ನೇ ಸೇರುತ್ತದೆ. ಇದರಲ್ಲಿ ವಿಚಾರ ಮಾಡುವುದೇ ಬೇಡ.
ಯದಾ ಪ್ರಶ್ನಾಂಸ್ತ್ವದೀಯಾಂಶ್ಚ ಕಶ್ಚಿತ್ ಪರಿಹರಿಷ್ಯತಿ |
ತದಾ ಗಂತಾಽಸಿ ಚ ದಿವಂ ವಿಸೃಜ್ಯಾಽಜಗರಂ ತನುಮ್ |
ಸ್ಮೃತಿಶ್ಚ ಮತ್ಪ್ರಸಾದೇನ ಸರ್ವದಾ ತೇ ಭವಿಷ್ಯತಿ ॥330॥
ಯಾವಾಗ ನಿನ್ನ ಪ್ರಶ್ನೆಗಳನ್ನು ಒಬ್ಬನು ಪರಿಹರಿಸುವನೋ ಆಗ ನೀನು ಹಾವಿನ ಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋಗುವಿ. ನನ್ನ ಅನುಗ್ರಹದಿಂದ ನಿನಗೆ ಪೂರ್ವಜನ್ಮದ ಸ್ಮರಣೆ ಸದಾ ಇರುತ್ತದೆ.
ಭೃಗುದೇಹಗತೇನೈವಂ ಶಪ್ತಃ ಕಮಲಯೋನಿನಾ |
ಪಪಾತಾಜಗರೋ ಭೂತ್ವಾ ನಹುಷಃ ಕ್ಷಣಮಾತ್ರತಃ ॥331॥
ಭೃಗು ಮುನಿಯ ಶರೀರದಲ್ಲಿದ್ದ ಬ್ರಹ್ಮನಿಂದ ಹೀಗೆ ಶಾಪ ಹೊಂದಿದ ನಹುಷ ಕ್ಷಣ ಮಾತ್ರದಲ್ಲಿ ಹೆಬ್ಬಾವಾಗಿ ಭೂಮಿಯಲ್ಲಿ ಬಿದ್ದ.
ಇಂದ್ರೋಽಪ್ಯವಾಪ ಸ್ವಂ ಸ್ಥಾನಮಿಷ್ಟ್ವಾ ವಿಷ್ಣುಂ ವಿಪಾಪಕಃ |
ಧರ್ಮವೃದ್ಧ್ಯರ್ಥಮೇವೈತತ್ ಪಾಪಮಾಸೀಚ್ಛಚೀಪತೇಃ ॥332॥
ಇಂದ್ರ ಪಾಪರಹಿತನಾಗಿದ್ದರೂ ವಿಷ್ಣುವನ್ನು ಯಾಗದಿಂದ ಆರಾಧಿಸಿ ತನ್ನ ಸ್ಥಾನವನ್ನು ಹೊಂದಿದ. ವೃತ್ರಹತ್ಯಾಪಾಪ ಇಂದ್ರನಿಗೆ ಹೀಗೆ ಪುಣ್ಯವೃದ್ಧಿಗೇ ಕಾರಣವಾಯಿತು.
ನ ಹಿ ಲೋಕಾವನಂ ಪಾಪಂ ತ್ರೈಲೋಕ್ಯೇಶಸ್ಯ ವಜ್ರಿಣಃ |
ವೃತ್ರಂ ಹತ್ವಾ-ಮಹಾನಾಸೇತ್ಯಾದಿ ವೇದಪದಂ ಚ ಯತ್ ॥333॥
ಏಕೆಂದರೆ ಮೂಲೋಕದೊಡೆಯನಾದ ದೇವೇಂದ್ರ ಲೋಕರಕ್ಷಣೆಗಾಗಿ ಮಾಡಿದ ವೃತಹತ್ಯೆ ಪಾಪಹೇತುವಾಗದು ತಾನೆ? ಇಂದ್ರ ವೃತ್ರನನ್ನು ಕೊಂದು ಪುಣ್ಯ ಗಳಿಸಿದನೆಂದು ವೇದವಚನವಿದೆ.
ಕ್ವಚಿತ್ ಪಾಪಂ ಚ ಪುಣ್ಯಾನಾಂ ವೃದ್ಧಯೇ ಭವತಿ ಸ್ಫುಟಮ್ |
ವೃತ್ರಹತ್ಯಾ ಯಥೇಂದ್ರಸ್ಯ ಜಾತಾ ಧರ್ಮಸ್ಯ ವೃದ್ಧಯೇ ॥334॥
ದೇವಾನಾಂ ವಾ ಮುನೀನಾಂ ವಾ ಭವೇದೇವಂ ನ ವೈ ನೃಣಾಮ್ |
ಪಾಪಂ ಯತ್ ಪುಣ್ಯಮೇವೈತದಸುರಾಣಾಂ ವಿಲೋಮತಃ |
ಏವಂ ಸ್ಕಾಂದೇ ಹಿ ವಚನಂ ನ ಪಾಪಂ ತಚ್ಛಚೀಪತೇಃ ॥335॥
ಕೆಲವೆಡೆ ಪಾಪಕರ್ಮವೂ ಪುಣ್ಯವೃದ್ಧಿಗೇ ಕಾರಣವಾಗುವುದು ಸ್ಪಷ್ಟವಿದೆ. ಏಕೆಂದರೆ ಇಂದ್ರನಿಗೆ ವೃತ್ರಹತ್ಯಾ ಎಂಬ ಪಾಪಕರ್ಮ ಪುಣ್ಯವೃದ್ಧಿಗೆ ಕಾರಣವಾಯಿತು. ದೇವತೆಗಳ ಮತ್ತು ಮುನಿಗಳ ವಿಷಯದಲ್ಲಿ ಮಾತ್ರ ಇದು ಹೀಗೆ. ಮನುಷ್ಯರ ವಿಷಯದಲ್ಲಿ ಅಲ್ಲ. ಅಸುರರಿಗೆ ಇದಕ್ಕೆ ವ್ಯತಿರಿಕ್ತವಾಗಿ ಪುಣ್ಯಕರ್ಮವೂ ಪಾಪ ವೃದ್ಧಿಗೆ ಕಾರಣವಾಗುತ್ತದೆ ಎಂದು ಸ್ಕಾಂದಪುರಾಣದಲ್ಲಿ ಹೇಳಿದ. ಅದರಿಂದ ವೃತ್ರಹತ್ಯೆ ಇಂದ್ರನಿಗೆ ಪಾಪಕರವಾಗಲಿಲ್ಲ.
ನಾನ್ಯಸ್ಯ ಪದಮಾಪ್ಸ್ಯಂತಿ ತದ್ ದೇವಾನಾಂ ವ್ರತಂ ಪರಮ್ |
ತಸ್ಮಾತ್ ತಂ ನಹುಷಂ ಶಕ್ರಪದೇ ವಿದಧುರೀಶ್ವರಾಃ ॥336॥
ಇನ್ನೊಬ್ಬರ ಪದವಿಯನ್ನು ಏರದಿರುವುದು ದೇವತೆಗಳಿಗೆ ಒಂದು ಮಹಾ ವ್ರತ. ಅದರಿಂದ ದೇವತೆಗಳು ತಾವು ಇಂದ್ರ ಪದವಿಯನ್ನೇರಲು ಶಕ್ತರಾಗಿದ್ದರೂ ನಹುಷನನ್ನು ಆ ಸ್ಥಾನದಲ್ಲಿ ಕುಳ್ಳಿರಿಸಿದರು.
ತಸ್ಮಿನ್ನೇವಂ ನಿಪತಿತೇ ಬ್ರಹ್ಮಣಃ ಶಾಪಕಾರಣಾತ್ |
ಅಷ್ಟಾವಿಂಶತಿಮೇ ಪ್ರಾಪ ಯುಗೇ ಭೀಮಸ್ತುಮುಲ್ಬಣಮ್ |
ಜಾನನ್ನೇವ ತದೀಯಂ ತತ್ ತಪ ಆದಾತುಮೀಪ್ಸಯಾ ॥337॥
ನಹುಷ ಬ್ರಹ್ಮನ ಶಾಪಪ್ರಯುಕ್ತ ಪತಿತನಾದಾಗ ಇಪ್ಪತ್ತೆಂಟನೇ ದ್ವಾಪರದಲ್ಲಿ ಭೀಮ ಆತನನ್ನು ಕ್ರೂರವಾದ ಹೆಬ್ಬಾವೆಂದು ತಿಳಿದಿದ್ದೂ ಅವನ ತಪಸ್ಸನ್ನು ಸೆಳೆದುಕೊಳ್ಳುವ ಇಚ್ಛೆಯಿಂದ ಬಳಿಗೆ ಬಂದ.
ಯತ್ತತ್ ಸುರಾಣಾಂ ಸರ್ವೇಷಾಂ ಮುನೀನಾಂ ಚ ತಪಃ ಸ್ಥಿತಮ್ |
ತದ್ ಗೃಹೀತುಂ ವಶಗವದಿಚ್ಛಯೈವಾಽಸ ಮಾರುತಿಃ ॥338॥
ನಹುಷನಲ್ಲಿದ್ದ ಎಲ್ಲ ದೇವತೆಗಳ ಮತ್ತು ಮುನಿಗಳ ತಪಸ್ಸನ್ನು ಸ್ವೀಕರಿಸುವುದಕ್ಕಾಗಿ ಭೀಮ ಸ್ವೇಚ್ಛೆಯಿಂದಲೇ ನಹುಷನ ವಶನಾದ.
ದೇವಾನಾಂ ಹಿ ನೃಜಾತಾನಾಮಲ್ಪಂ ವ್ಯಕ್ತಂ ಭವೇದ್ ಬಲಮ್ |
ಇಚ್ಛಯಾ ವ್ಯಕ್ತತಾ ಯಾತಿ ವಾಯೋರನ್ಯೇಷು ತಚ್ಚ ನ ॥339॥

ನಿತ್ಯಂ ವ್ಯಕ್ತಾ ಗುಣಾ ವಿಷ್ಣೋರಿತಿ ಶಾಸ್ತ್ರಸ್ಯ ನಿರ್ಣಯಃ |
ಏವಮನ್ಯೇऽಪಿ ಹಿ ಗುಣಾ ಮಾನುಷಾದಿಷು ಜನ್ಮಸು ॥340॥
ಬೇರೆ ದೇವತೆಗಳು ಮನುಷ್ಯರಾಗಿ ಹುಟ್ಟಿದಾಗ ಅವರ ದಿವ್ಯಬಲ ಸ್ವಲ್ಪವೇ ವ್ಯಕ್ತವಾಗುತ್ತದೆ. ವಾಯುವಿಗೆ ಇಚ್ಛೆಯಿಂದ ವ್ಯಕ್ತವಾಗುತ್ತದೆ. ಅನ್ಯರಲ್ಲಿ ಅದೂ ಇಲ್ಲ. ಆದಾನಾದಿ ಕಾರಣದಿಂದಲೆ ವ್ಯಕ್ತವಾಗಬೇಕು. ಶ್ರೀಹರಿಗೆ ಗುಣಗಳು ಸದಾ ವ್ಯಕ್ತವೇ ಆಗಿರುತ್ತದೆ. ಇದು ಶಾಸ್ತ್ರನಿರ್ಣಯ. ಹೀಗೇ ದೇವತೆಗಳಿಗೆ ಮನುಷ್ಯಾದಿ ಜನ್ಮಗಳಲ್ಲಿ ಬೇರೆ ಜ್ಞಾನಾನಂದಾದಿ ಗುಣಗಳೂ ಸ್ವಲ್ಪವೇ ವ್ಯಕ್ತವಾಗುತ್ತವೆ.
ದೇವಾನಾಂ ಮಾನುಷಾದೌ ತು ಶಕ್ಯೇऽಪ್ಯವ್ಯಕ್ತತಾಕೃತೇ |
ಧರ್ಮವೃದ್ಧಿರ್ಭವೇತ್ ತೇಷಾಂ ಪ್ರೀತೋ ಭವತಿ ಕೇಶವಃ ॥341॥
ದೇವತೆಗಳು ಮನುಷ್ಯಾದಿ ಜನ್ಮಗಳಲ್ಲಿ ತಮ್ಮ ದಿವ್ಯಗುಣಗಳನ್ನು ವ್ಯಕ್ತ ಮಾಡಿಕೊಳ್ಳಲು ಶಕ್ತರಾಗಿದ್ದರೂ ವ್ಯಕ್ತಮಾಡಿಕೊಳ್ಳದಿರುವುದರಿಂದ ಅವರಿಗೆ ಪುಣ್ಯವೃದ್ಧಿಯಾಗುತ್ತದೆ. ವಿಷ್ಣು ಸುಪ್ರೀತನಾಗುತ್ತಾನೆ.
ತನ್ಮಾನುಷೇ ಬಲೇ ತಸ್ಯ ವರಾದ್ ವಾರಿತವತ್ ಸ್ಥಿತೇ |
ದೈವಂ ಬಲಂ ಸುಶಕ್ತೋऽಪಿ ವ್ಯಕ್ತಂ ಚಕ್ರೇ ನ ಮಾರುತಿಃ ॥342॥
ಅದರಿಂದ ಭೀಮ ತನ್ನ ಮಾನುಷಬಲ ಬ್ರಹ್ಮನ ವರದಿಂದ ಸ್ವಲ್ಪ ಪ್ರತಿಬದ್ಧವಾದಂತಿರಲು ದೈವಬಲವನ್ನು ವ್ಯಕ್ತಮಾಡಲು ಸುಶಕ್ತನಾದರೂ ವ್ಯಕ್ತಮಾಡಿಕೊಳ್ಳಲಿಲ್ಲ.
ಆತ್ಮಮೋಕ್ಷಾಯ ನ ಪ್ರಶ್ನಾನ್ ವ್ಯಾಜಹಾರ ಸ ಚಾಭಿಭೂಃ |
ವಿದ್ಯೋಪಜೀವನಂ ಧರ್ಮೋ ವಿಪ್ರಾಣಾಮಪಿ ನೋ ಯತಃ ॥343॥
ಕಿಮುತ ಕ್ಷತ್ರಿಯಸ್ಯೇತಿ ಜಾನನ್ನಪಿ ವೃಕೋದರಃ |
ತತ್ಪ್ರಶ್ನಪರಿಹಾರೇನ ನಾऽತ್ಮಮೋಕ್ಷಂ ಸಮೈಚ್ಛತ ॥344॥
ನಹುಷನ ಪ್ರಶ್ನೆಗಳಿಗೆ ಉತ್ತರಿಸಲು ಭೀಮ ಸಮರ್ಥನಾದರೂ ಉತ್ತರಿಸಲಿಲ್ಲ. ಏಕೆಂದರೆ ವಿದ್ಯೆಯನ್ನು ಜೀವನಕ್ಕಾಗಿ ಅವಲಂಬಿಸುವುದು ಬ್ರಾಹ್ಮಣರಿಗೆ ಕೂಡ ಧರ್ಮವಲ್ಲ. ಕ್ಷತ್ರಿಯನಿಗೆ ಇನ್ನೇನು? ಅದರಿಂದ ಭೀಮ ಬಲ್ಲವನಾಗಿದ್ದರೂ ನಹುಷನ ಪ್ರಶ್ನೆಗಳಿಗೆ ಪರಿಹಾರ ನೀಡುವ ಮೂಲಕ ತನ್ನ ಬಿಡುಗಡೆ ಮಾಡಿಕೊಳ್ಳಲು ಬಯಸಲಿಲ್ಲ.
ಅಯತಂತಮಪಿ ಹ್ಯೇನಂ ಚಾಲನಾಯಾಪಿ ನಾಶಕತ್ |
ಪೂರ್ಣೋऽಪಿ ಸರ್ವಲೋಕಾನಾಂ ಬಲೇನ ನಹುಷಸ್ತದಾ |
ವೇಷ್ಟಯಿತ್ವೈವ ತಂ ಭೀಮಂ ಸ್ಥಿತೋऽಸೌ ನಾಶಕತ್ ಪರಮ್ ॥345॥
ಕಣ್ಣಿಗೆ ಬಿದ್ದ ಸಮಸ್ತಜನರ ಬಲದಿಂದಲೂ ತುಂಬಿದ್ದ ನಹುಷ ಆಗ ಭೀಮನನ್ನು, ಅವನು ಏನೂ ಪ್ರಯತ್ನ ಮಾಡದಿದ್ದಾಗಲೂ, ಅಲ್ಲಾಡಿಸಲೂ ಶಕ್ತನಾಗಲಿಲ್ಲ. ಭೀಮನನ್ನು ಸುತ್ತಿಕೊಂಡಿದ್ದ ಹೊರತು ಇನ್ನೇನ್ನೂ ಮಾಡಲು ಶಕ್ತನಾಗಲಿಲ್ಲ.
ಭ್ರಾತೃಮಾತ್ರಾದಿಷು ಸ್ನೇಹಾತ್ ಕ್ಷಿಪ್ರಮಾತ್ಮವಿಮೋಕ್ಷಣಮ್ |
ಇಚ್ಛನ್ನಪಿ ನ ಮೋಕ್ಷಾಯ ಯತ್ನಂ ಚಕ್ರೇ ವೃಕೋದರಃ ॥346॥
ಭೀಮ ಸೋದರರಲ್ಲಿ ಮತ್ತು ತಾಯಿ ಮುಂತಾದವರಲ್ಲಿರುವ ಪ್ರೀತಿಯಿಂದ ಬೇಗನೆ ತನ್ನ ಬಿಡುಗಡೆಯಾಗಬೇಕೆಂದು ಬಯಸಿದರೂ ಬಿಡುಗಡೆಗಾಗಿ ಯತ್ನ ಮಾಡಲಿಲ್ಲ.
ಸರ್ವದೇವಮುನೀಂದ್ರಾಣಾಂ ತಪ ಆದಾತುಮತ್ರಗಮ್ |
ಭ್ರಾತ್ರಾದಿಷು ಸ್ನೇಹವಶಾನ್ನ ಸ್ಥಾತವ್ಯಮಿಹೇತ್ಯಪಿ ॥347॥
ಮನ್ವಾನಃ ಕಾಲತೋ ಭಂಘಂ ಸ್ವಯಮೇವೈಷ ಯಾಸ್ಯತಿ |
ಆಜ್ಞಯಾ ವಾಸುದೇವಸ್ಯ ದಾರ್ಢ್ಯದ್ ದೇಹಸ್ಯ ಮೇ ತಥಾ ॥347॥
ಸ್ರಸ್ತಾಂಗಂ ಪತಿತೇ ಸರ್ಪೇ ಯಾಸ್ಯಾಮಿತಿ ವಿಚಿಂತಯನ್ |
ತಸ್ಥೌ ಭೀಮೋ ಹರಿಂ ಧ್ಯಾಯನ್ ಸ್ವಭಾವಾನ್ನ ತದಿಚ್ಛಯಾ ॥348॥
ನಹುಷನಲ್ಲಿದ್ದ ದೇವತೆಗಳ ಮುನೀಂದ್ರರ ತಪಸ್ಸನ್ನು ಸೆಳೆದುಕೊಳ್ಳುವುದಕ್ಕಾಗಿ ಭೀಮ ಸೋದರರು ತಾಯಿ ಮುಂತಾದವರ ಮೇಲಿನ ಸ್ನೇಹದಿಂದ ತಾನು ಹೆಚ್ಚು ಕಾಲ ಹಾವಿನ ತೆಕ್ಕೆಯಲ್ಲಿ ಇರಕೂಡದೆಂದು ತಿಳಿದವನಾಗಿದ್ದರೂ ಸ್ವಲ್ಪ ಹೊತ್ತಿನಲ್ಲಿ ಹಾವು ತಾನೇ ಶಕ್ತಿಗುಂದುತ್ತದೆ. ಹರಿಯ ಇಚ್ಛೆಯಿಂದ ಮತ್ತು ನನ್ನ ಶರೀರದ ದಾರ್ಢ್ಯದಿಂದ ಅದು ಶರೀರ ಶೈಥಿಲ್ಯ ಹೊಂದಿ ಕೆಳಗೆ ಬೀಳುವಾಗ ನಾನು ಹೊರಟು ಹೋಗುವೆನೆಂದು ಆಲೋಚಿಸಿ ಸ್ವಾಭಾವಿಕವಾಗಿ ಹರಿಯನ್ನು ಧ್ಯಾನಿಸುತ್ತ ನಿಂತ ಹೊರತು ಬಿಡುಗಡೆ ಬಯಸಿ ಹರಿಧ್ಯಾನವನ್ನು ಮಾಡಲಿಲ್ಲ.
ತದೈವ ಬ್ರಹ್ಮವಚನಾತ್ ಪೂರ್ವೋಕ್ತಾನ್ ಕೇಶವಾಜ್ಞಯಾ |
ಬಲಂ ತಪಶ್ಚ ಸರ್ವಸ್ಯ ತತ್ಸ್ವಾಮಾಯಾದ್ ವೃಕೋದರಮ್ ॥349॥
ಆಗಲೇ ಹರಿಯಾಜ್ಞೆಯಿಂದ ಹಿಂದೆ ಹೇಳಿದ ಬ್ರಹ್ಮನ ಮಾತಿನಿಂದ ನಹುಷನಲ್ಲಿದ್ದ ಎಲ್ಲ ದೇವಮುನಿಗಳ ತಪಸ್ಸೂ ಬಲವೂ ಭೀಮನಲ್ಲಿ ಬಂದುಸೇರಿತು.
ಪೂರಿತೋ ನಹುಷಸ್ತೇನ ತಪಸಾ ಚ ಬಲೇನ ಚ |
ಭೀಮೇ ಸ ನಹುಷೋऽಥಾऽಸೀತ್ ಸ್ರಸ್ತಭೋಗಃ ಶನೈಃ ಶನೈಃ ॥350॥
ನಹುಷನಲ್ಲಿದ್ದ ತಪಸ್ಸಿನಿಂದಲೂ ಬಲದಿಂದಲೂ ಭೀಮ ತುಂಬಿಕೊಂಡಾಗ ನಹುಷ ನಿಧಾನವಾಗಿ ಶರೀರ ಶೈಥಿಲ್ಯವನ್ನು ಹೊಂದಿದ.
* * * *

ನೂರ ಎಪ್ಪತ್ಮೂರನೆಯ ಅಧ್ಯಾಯ
ಅಜಗರದಿಂದ ಸ್ವವೃತ್ತಾಂತ ಕಥನ ಮತ್ತು ದುರ್ನಿಮಿತ್ತಗಳನ್ನು ನೋಡಿ

ಅಲ್ಲಿಗೆ ಯುಧಿಷ್ಠಿರನ ಆಗಮನ.
ವೈಶಂಪಾಯನಃ
ಸ ಭೀಮಸೇನಸ್ತೇಜಸ್ವೀ ತಥಾ ಸರ್ಪವಶಂ ಗತಃ ।
ಚಿಂತಯಾಮಾಸ ಸರ್ಪಸ್ಯ ವೀರ್ಯಮತ್ಯದ್ಭುತಂ ಮಹತ್ ॥1॥
ವೈಶಂಪಾಯನ ಆ ತೇಜಸ್ವಿಯಾದ ಭೀಮಸೇನನು ಹಾಗೆ ಸರ್ಪವಶನಾಗಿ ಆ ಸರ್ಪದ ಅದ್ಭುತವಾದ ಮಹಾಪರಾಕ್ರಮವನ್ನು ಚಿಂತಿಸಿದನು.
ಉವಾಚ ಚ ಮಹಾಸರ್ಪಂ ಕಾಮಯಾ ಬ್ರೂಹಿ ಪನ್ನಗ ।
ಕಸ್ತ್ವಂ ಭೋ ಭುಜಗಶ್ರೇಷ್ಠ ಕಿಂ ಮಯಾ ಚ ಕರಿಷ್ಯಸಿ ॥2॥
ಅವನು ಆ ಮಹಾಸರ್ಪವನ್ನು ಕುರಿತು ಎಲೈ ಭುಜಗಶ್ರೇಷ್ಠ, ನೀನು ಯಾರು? ನನ್ನಿಂದ ನಿನಗೆ ಏನಾಗಬೇಕು ಎಂಬುದನ್ನು ನಿನ್ನ ಇಚ್ಛೆಯಿಂದಲೇ ಹೇಳು.
ಪಾಂಡವೋ ಭೀಮಸೇನೋಽಹಂ ಧರ್ಮರಾಜಾದನಂತರಃ ।
ನಾಗಾಯುತಸಮಪ್ರಾಣಸ್ತ್ವಯಾ ನೀತಃ ಕಥಂ ವಶಮ್ ॥3॥
ನಾನು ಧರ್ಮರಾಜನ ತಮ್ಮನಾದ ಭೀಮಸೇನನೆಂಬ ಪಾಂಡುಪುತ್ರ. ಹತ್ತುಸಾವಿರ ನನ್ನನ್ನು ಆನೆಗಳ ಬಲವುಳ್ಳ ನೀನು ಹೇಗೆ ವಶಪಡಿಸಿಕೊಂಡೆ?
ಸಿಂಹಾಃ ಕೇಸರಿಣೋ ವ್ಯಾಘ್ರಾ ಮಹಿಷಾ ವಾರಣಾಸ್ತಥಾ ।
ಸಮಾಗತಾಶ್ಚ ಬಹುಶೋ ನಿಹತಾಶ್ಚ ಮಯಾ ಯುಧಿ ॥4॥
ನನ್ನನ್ನು ಎದುರಿಸಿದ ಅನೇಕ ಕೇಸರವುಳ್ಳ ಸಿಂಹಗಳನ್ನೂ, ವ್ಯಾಘ್ರಗಳನ್ನೂ, ಮಹಿಷಗಳನ್ನೂ ಮತ್ತು ಗಜಗಳನ್ನೂ ಯುದ್ಧದಲ್ಲಿ ನಾನು ಅನೇಕಬಾರಿ ಕೊಂದಿದ್ದೇನೆ.
ರಾಕ್ಷಸಾಶ್ಚ ಪಿಶಾಚಾಶ್ಚ ಪನ್ನಗಾಶ್ಚ ಮಹಾಬಲಾಃ ।
ಭುಜವೇಗಮಶಕ್ತಾ ಮೇ ಸೋಢುಂ ಪನ್ನಗಸತ್ತಮ ॥5॥
ಎಲೈ ಪನ್ನಗಶ್ರೇಷ್ಠನೇ, ಮಹಾಬಲರಾದ ರಾಕ್ಷಸರಾಗಲೀ, ಪಿಶಾಚಗಳಾಗಲೀ, ಸರ್ಪಗಳಾಗಲೀ ನನ್ನ ಭುಜವೇಗವನ್ನು ಸಹಿಸಲಾರರು.
ಕಿಂ ನು ವಿದ್ಯಾಬಲಂ ಕಿಂ ನು ವರದಾನಮಥೋ ತವ ।
ಉದ್ಯೋಗಮಪಿ ಕುರ್ವಾಣೋ ವಶಗೋಽಸ್ಮಿ ಕೃತಸ್ತ್ವಯಾ ॥6॥
ನಿನಗೇನು ವಿದ್ಯಾಬಲವಿದೆಯೇ? ಅಥವಾ ವರದಾನದ ಬಲವೇ? ನಾನು ಬಿಡಿಸಿಕೊಳ್ಳಲು ಪ್ರಯತ್ನಪಡುತ್ತಿದ್ದರೂ ನನ್ನನ್ನು ನೀನು ವಶಪಡಿಸಿಕೊಂಡಿದ್ದೀಯೆ.
ಅಸತ್ಯೋ ವಿಕ್ರಮೋ ನೄಣಾಮಿತಿ ಮೇ ಧೀಯತೇ ಮತಿಃ ।
ಯಥೇದಂ ಮೇ ತ್ವಯಾ ನಾಗ ಬಲಂ ಪ್ರತಿಹತಂ ಮಹತ್ ॥7॥
ಎಲೈ ನಾಗನೇ, ನನ್ನ ದೊಡ್ಡ ಬಲವು ನಿನ್ನಿಂದ ಪ್ರತಿಹತವಾಗಿರುವುದರಿಂದ ನಾನು ಮನುಷ್ಯರ ಪರಾಕ್ರಮ ಸತ್ಯ(ನಿತ್ಯ)ವಲ್ಲವೆಂದು ಈ ದಿನ ತಿಳಿಯುತ್ತಿದ್ದೇನೆ (ಎಂದು ಹೇಳಿದನು).
ವೈಶಂಪಾಯನಃ
ಇತ್ಯೇವಂ ವಾದಿನಂ ವೀರಂ ಭೀಮಮಕ್ಲಿಷ್ಟಕಾರಿಣಮ್ ।
ಭೋಗೇನ ಮಹತಾ ಗೃಹ್ಯ ಸಮಂತಾತ್ ಪರ್ಯವೇಷ್ಟಯತ್ ॥8॥
ವೈಶಂಪಾಯನ ಹೀಗೆ ಹೇಳುತ್ತಿದ್ದ ಅನಾಯಾಸವಾಗಿ ಎಲ್ಲವನ್ನೂ ಮಾಡುವ ವೀರನಾದ ಭೀಮಸೇನನನ್ನು ಆ ಸರ್ಪವು ತನ್ನ ದೊಡ್ಡ ದೇಹದಿಂದ ಪೂರ್ಣವಾಗಿ ಸುತ್ತುವರಿಯಿತು.
ನಿಗೃಹ್ಯೈನಂ ಮಹಾಬಾಹುಂ ತತಃ ಸ ಭುಜಗಸ್ತದಾ ।
ವಿಮುಚ್ಯಾಸ್ಯ ಭುಜೌ ಪೀನಾವಿದಂ ವಚನಮಬ್ರವೀತ್ ॥9॥
ಹೀಗೆ ಆ ಭುಜಗವು ಮಹಾಬಾಹುವಾದ ಭೀಮಸೇನನನ್ನು ನಿಗ್ರಹಿಸಿ ಅನಂತರ ಅವನ ಪುಷ್ಟವಾದ ಭುಜಗಳನ್ನು ಮಾತ್ರ ಬಿಟ್ಟು ಮಾತನಾಡಿತು.
ದಿಷ್ಟ್ಯಾಸ್ತ್ವಂ ಕ್ಷುಧಿತಸ್ಯಾದ್ಯ ದೇವೈರ್ಭಕ್ಷ್ಯೋ ಮಹಾಭುಜ ।
ದಿಷ್ಟ್ಯಾ ಕಾಲಸ್ಯ ಮಹತಃ ಪ್ರಿಯಾಃ ಪ್ರಾಣಾ ಹಿ ದೇಹಿನಾಮ್ ॥10॥
ಎಲೈ ಮಹಾಭುಜನೇ, ಹಸಿದಿರುವ ನನಗೆ ಈ ದಿನ ದೇವತೆಗಳು ನಿನ್ನನ್ನು ಆಹಾರವಾಗಿ ಸಂಕಲ್ಪಿಸಿದ್ದಾರೆ. ದೈವಸಂಕಲ್ಪದಿಂದಲೇ ಎಷ್ಟು ಸಮಯವಾದರೂ ದೇಹಿಗಳಿಗೆ ಅವರ ಪ್ರಾಣಗಳು ಪ್ರಿಯವಾಗಿರುತ್ತವೆ.
ಯಥಾ ತ್ವಿದಂ ಮಯಾ ಪ್ರಾಪ್ತಂ ಸರ್ಪರೂಪಮರಿಂದಮ ।
ತಥಾಽವಶ್ಯಂ ಮಯಾ ಖ್ಯಾಪ್ಯಂ ತವಾದ್ಯ ಶೃಣು ಸತ್ತಮ ॥11॥
ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ಅರಿಂದಮನೇ, ನಾನು ಹೇಗೆ ಈ ಸರ್ಪರೂಪವನ್ನು ಪಡೆದೆ ಎಂಬ ವಿಷಯವನ್ನು ಅವಶ್ಯವಾಗಿ ಈ ದಿನ ಹೇಳಲೇಬೇಕು. ಅದನ್ನು ಕೇಳು.
ಇಮಾಮವಸ್ಥಾಂ ಸಂಪ್ರಾಪ್ತೋ ಹ್ಯಹಂ ಕೋಪಾನ್ಮನೀಷಿಣಾಮ್ ।
ಶಾಪಸ್ಯಾಂತಂ ಪರಿಪ್ರೇಪ್ಸುಃ ಸರ್ವಂ ತತ್ಕಥಯಾಮಿ ತೇ ॥12॥
ಜ್ಞಾನಿಗಳ ಕೋಪಕ್ಕೆ ಪಾತ್ರನಾಗಿ ಈ ಅವಸ್ಥೆಯನ್ನು ಹೊಂದಿ ಶಾಪದ ಮೋಕ್ಷವನ್ನು ನಿರೀಕ್ಷಿಸುತ್ತಿರುವ ನಾನು ನಿನಗೆ ಎಲ್ಲವನ್ನೂ ಹೇಳುತ್ತೇನೆ.

ನಹುಷೋ ನಾಮ ರಾಜರ್ಷಿರ್ವ್ಯಕ್ತಂ ತೇ ಶ್ರೋತ್ರಮಾಗತಃ |
ತವೈವ ಪೂರ್ವಃ ಪೂರ್ವೇಷಾಮಾಯೋರ್ವಂಶಧರಃ ಸುತಃ ॥13॥
ನಿನ್ನ ಕಿವಿಗೆ ಬಿದ್ದಿದ್ದರೆ ನಾನು ನಹುಷ ಎಂಬ ರಾಜರ್ಷಿ. ನಾನು ನಿನ್ನ ಪೂರ್ವಿಕನಾದ ಆಯುವಿನ ವಂಶಧರ ಪುತ್ರನಾಗಿ ನಿನ್ನ ಪೂರ್ವಿಕನಾಗಿದ್ದೇನೆ.
ತಪೋಭಿಃ ಕ್ರತುಭಿಶ್ಚೈವ ವಿದ್ಯಯಾಽಭಿಜನೇನ ಚ |
ತ್ರೈಲೋಕ್ಯೈಶ್ವರ್ಯಮತುಲಂ ಪ್ರಾಪ್ತಂ ಮೇ ವಿಕ್ರಮೇಣ ಚ ॥13.1॥
ನಾನು ತಪಸ್ಸಿನಿಂದಲೂ, ಯಜ್ಞಗಳಿಂದಲೂ, ವಿದ್ಯೆಯಿಂದಲೂ ಶ್ರೇಷ್ಠಜನ್ಮದಿಂದಲೂ ಮತ್ತು ಪರಾಕ್ರಮದಿಂದಲೂ ಮೂರುಲೋಕದ ಅತುಲವಾದ ಐಶ್ವರ್ಯವನ್ನು ಪಡೆದೆ.
ಅಥ ಸರ್ವನೃಪೋನ್ಮಾಥೀ ಮದೋ ಮಾಂ ಸಮುಪಾವಿಶತ್ |
ಸಹಸ್ರಂ ಮುನಿಮುಖ್ಯಾನಾಮುವಾಹ ಶಿಬಿಕಾಂ ಮಮ ॥13.2॥
ಎಲ್ಲ ರಾಜರನ್ನೂ ಸೋಲಿಸಿದ ನನಗೆ ಮದವು ಉಂಟಾಯಿತು. ಒಂದು ಸಾವಿರ ಸಂಖ್ಯೆಯ ಋಷಿಶ್ರೇಷ್ಠರು ನನ್ನ ಶಿಬಿಕೆಯನ್ನು ಹೊರುತ್ತಿದ್ದರು.
ತತೋ ವಿಭ್ರಂಶಿತಶ್ಚಾಹಮಗಸ್ತ್ಯೇನ ಮಹಾತ್ಮನಾ |
ಇಮಾಮವಸ್ಥಾಂ ಸಂಪ್ರಾಪ್ತಃ ಪಶ್ಯ ದೈವಮಿದಂ ಮಮ ॥13.4॥
ಆಗ ಮಹಾತ್ಮರಾದ ಅಗಸ್ತ್ಯರು ನನ್ನನ್ನು ಆ ಸ್ಥಾನದಿಂದ ವಿಭ್ರಂಶಗೊಳಿಸಿದರು. ಈಗ ಈ ಅವಸ್ಥೆಯನ್ನು ಹೊಂದಿದ್ದೇನೆ. ನನ್ನ ದುರದೃಷ್ಟವನ್ನು ನೋಡು.
ನ ದೈವಂ ಪ್ರಜ್ಞಯಾ ತಾತ ನ ಬಲೋತ್ಸಾಹಶಕ್ತಿಭಿಃ |
ನ ಸಹಾಯಬಲೈಶ್ಚಾಪಿ ಕಶ್ಚಿದಪ್ಯತಿವರ್ತತೇ ॥13.5॥
ಪ್ರೀತಿಪಾತ್ರನೇ, ದೈವವಿಹಿತವಾದುದನ್ನು ಬಲದಿಂದಲಾಗಲೀ, ಉತ್ಸಾಹ ಶಕ್ತಿಗಳಿಂದಾಗಲೀ, ಪ್ರಜ್ಞೆಯಿಂದಾಗಲೀ ಅಥವಾ ಅನೇಕ ಸಹಾಯಬಲದಿಂದಾಗಲೀ ಯಾರೂ ಮೀರಲಾರರು.
ಯಥಾ ಪ್ರಾಜ್ಞಾಶ್ಚ ಶೂರಾಶ್ಚ ದೃಶ್ಯಂತೇ ದುಃಖಜೀವಿನಃ |
ಭೀರುಮುರ್ಖಾಶ್ಚ ಸುಖಿನಸ್ತಸ್ಮಾದ್ ದೈವಂ ಹಿ ಕಾರಣಮ್ ॥13.5॥
ಪ್ರಾಜ್ಞರೂ ಶೂರರೂ ದುಃಖದಿಂದ ಬದುಕುವುದು ಕಂಡುಬರುತ್ತದೆ. ಭೀರುಗಳು ಮತ್ತು ಮೂರ್ಖರು ಸುಖವಾಗಿರುವುದು ಕಂಡುಬರುತ್ತದೆ. ಆದ್ದರಿಂದ ಎಲ್ಲದಕ್ಕೂ ದೈವವೇ ಕಾರಣ.
ಸೋಽಹಂ ಶಾಪಾದಗಸ್ತ್ಯಸ್ಯ ಬ್ರಾಹ್ಮಣಾನವಮನ್ಯ ಚ |
ಇಮಾಮವಸ್ಥಾಮಾಪನ್ನಃ ಪಶ್ಯ ದೈವಮಿದಂ ಮಮ ॥14॥
ಅಂತಹ ನಾನು ಬ್ರಾಹ್ಮಣರನ್ನು ಅವಮಾನ ಮಾಡಿ ಅಗಸ್ತ್ಯರ ಶಾಪದಿಂದ ಈ ಅವಸ್ಥೆಯನ್ನು ಹೊಂದಿದ್ದೇನೆ. ನನ್ನ ದುರದೃಷ್ಟವನ್ನು ನೋಡು.
ತ್ವಾಂ ಚೇದವಧ್ಯಂ ದಾಯಾದಮತೀವ ಪ್ರಿಯದರ್ಶನಮ್ |
ಅಹಮದ್ಯೋಪಯೋಕ್ಷ್ಯಾಮಿ ವಿಧಾನಂ ಪಶ್ಯ ಯಾದೃಶಮ್ ॥15॥
ಒಂದು ಪಕ್ಷ ಈ ದಿನ ನಾನು ಅವಧ್ಯನಾದ ಪ್ರಿಯದರ್ಶನನಾದ ನನ್ನ ವಂಶದವನೇ ಆದ ನಿನ್ನನ್ನು ಭಕ್ಷಿಸುವುದಾದರೆ ದೈವವಿಧಾನವು ಯಾವ ರೀತಿ ಇದೆ ಎಂದು ನೋಡು.
ನ ಹಿ ಮೇ ಮುಚ್ಯತೇ ಕಶ್ಚಿತ್ ಕಥಂಚಿತ್ ಪ್ರಗ್ರಹಂ ಗತಃ |
ಗಜೋ ವಾ ಮಹಿಷೋ ವಾಪಿ ಷಷ್ಠೇ ಕಾಲೇ ನರೋತ್ತಮ ॥16॥
ಎಲೈ ನರೋತ್ತಮನೇ, ಹಗಲಿನ ಕೊನೆಯ ಆರನೆಯ ಭಾಗದ ಕಾಲದಲ್ಲಿ ಗಜವಾಗಲೀ, ಮಹಿಷವಾಗಲೀ ಯಾರು ನನಗೆ ದೊರೆಯುತ್ತಾರೋ ಅವರು ಯಾರೂ ನನ್ನಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲ.
ನಾಸಿ ಕೇವಲಸರ್ಪೇಣ ತಿರ್ಯಗ್ಯೋನಿಷು ವರ್ತತಾ |
ಗೃಹೀತಃ ಕೌರವಶ್ರೇಷ್ಠ ವರದಾನವಮಿದಂ ಮಮ ॥17॥
ಎಲೈ ಕೌರವಶ್ರೇಷ್ಠನೇ, ನೀನು ತಿರ್ಯಗ್ಯೋನಿಯಲ್ಲಿರುವ ಯಾವುದೋ ಒಂದು ಸರ್ಪದಿಂದ ಗೃಹೀತವಾಗಿಲ್ಲ. ಇದು ನನ್ನ ವರದಾನ.
ಪತತಾ ಹಿ ವಿಮಾನಾಗ್ರ್ಯಾನ್ಮಯಾ ಶಕ್ರಾಸನಾದ್ ದ್ರುತಮ್ |
ಕುರು ಶಾಪಾಂತಮಿತ್ಯುಕ್ತೋ ಭಗವಾನ್ ಮುನಿಸತ್ತಮಃ |
ಸ ಮಾಮುವಾಚ ತೇಜಸ್ವೀ ಕೃಪಯಾಽಭಿಪರಿಪ್ಲುತಃ ॥18॥
ಮೋಕ್ಷಸ್ತೇ ಭವಿತಾ ರಾಜನ್ ಕಸ್ಮಾಚ್ಚಿತ್ ಕಾಲಪರ್ಯಯಾತ್ ॥19॥
ನಾನು ಇಂದ್ರನ ಉಪ್ಪರಿಗೆಯ ಮೇಲಿಂದ ಇಂದ್ರನ ಆಸನದಿಂದ ಶೀಘ್ರವಾಗಿ ಬೀಳುವಾಗ ಶಾಪವಿಮೋಕ್ಷವನ್ನು ಮಾಡಿ ಎಂದು ಕೇಳಲ್ಪಟ್ಟ ಪೂಜ್ಯರೂ ತೇಜಸ್ವಿಗಳೂ ಆದ ಮುನಿಶ್ರೇಷ್ಠರು ದಯದಿಂದ ಕೂಡಿದವರಾಗಿ ನನ್ನನ್ನು ಕುರಿತು ಎಲೈ ರಾಜನೇ, ಕೆಲವು ಕಾಲವು ಕಳೆದ ಮೇಲೆ ನಿನಗೆ ಶಾಪದಿಂದ ಮೋಕ್ಷವುಂಟಾಗುವುದು ಎಂದು ಹೇಳಿದರು.
ತತೋಽಸ್ಮಿ ಪತಿತೋ ಭೂಮೌ ನ ಚ ಮಾಮಜಹಾತ್ ಸ್ಮೃತಿಃ |
ಸ್ಮಾರ್ತಮಸ್ತಿ ಪುರಾಣಂ ಮೇ ಯಥೈವಾಧಿಗತಂ ತಥಾ ॥20॥
ಆಗ ನಾನು ಭೂಮಿಯಲ್ಲಿ ಬಿದ್ದೆ. ಆದರೆ ನನಗೆ ಸ್ಮೃತಿಯು ನಾಶಹೊಂದಲಿಲ್ಲ. ನಾನು ಹಿಂದೆ ಏನೇನು ಅನುಭವಿಸಿದ್ದೇನೋ, ಪ್ರಾಚೀನವಾದ ಆ ಘಟನೆಯೆಲ್ಲವೂ ನನ್ನ ಸ್ಮೃತಿಯಲ್ಲಿದೆ.

ಯಸ್ತು ತೇ ವ್ಯಾಹೃತಾನ್ ಪ್ರಶ್ನಾನ್ ಪ್ರತಿಬ್ರೂಯಾದ್ ವಿಭಾಗವಿತ್ |
ಸ ತ್ವಾಂ ಮೋಕ್ಷಯಿತಾ ಶಾಪಾದಿತಿ ಮಾಮಬ್ರುವೀದೃಷಿಃ ॥21॥
ಯಾವ ವಿಶೇಷಜ್ಞನಾದವನು ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳುತ್ತಾನೋ ಅವನು ನಿನ್ನನ್ನು ಶಾಪದಿಂದ ಬಿಡಿಸುವನು ಎಂದು ಅಗಸ್ತ್ಯ ಋಷಿಗಳು ನನಗೆ ಹೇಳಿದರು.
ಗೃಹೀತಸ್ಯ ತ್ವಯಾ ರಾಜನ್ ಪ್ರಾಣಿನೋಽಪಿ ಬಲೀಯಸಃ |
ಸತ್ತ್ವಭ್ರಂಶೋಽಧಿಕಸ್ಯಾಪಿ ಸರ್ವಸ್ಯಾಶು ಭವಿಷ್ಯತಿ ॥22॥
ಎಲೈ ರಾಜನೇ, ನೀನು ಯಾವ ಪ್ರಾಣಿಯನ್ನು ಹಿಡಿಯುತ್ತೀಯೋ ಅದು ನಿನಗಿಂತ ಅಧಿಕ ಬಲವುಳ್ಳದ್ದಾದರೂ ನೀನು ಹಿಡಿದ ತಕ್ಷಣ ಅದಕ್ಕೆ ಆ ಬಲದ ಭ್ರಂಶವು ಶೀಘ್ರವಾಗಿ ಉಂಟಾಗುವುದು.
ಇತಿ ಚಾಪ್ಯಹಮಶ್ರೌಷಂ ವಚಸ್ತೇಷಾಂ ದಯಾವತಾಮ್ |
ಮಯಿ ಸಂಜಾತಹಾರ್ದಾನಾಮಥ ತೇಽಂತರ್ಹಿತಾ ದ್ವಿಜಾಃ ॥23॥
ಹೀಗೆ ನನ್ನಲ್ಲಿ ಪ್ರೀತಿ ಉಂಟಾದ ದಯಾವಂತರಾದ ಆ ಋಷಿಗಳ ಮಾತನ್ನು ನಾನು ಕೇಳಿದೆನು. ಅನಂತರ ಎಲ್ಲಾ ಋಷಿಗಳೂ ಅಂತರ್ಧಾನವನ್ನು ಹೊಂದಿದರು.
ಸೋಽಹಂ ಪರಮದುಷ್ಕರ್ಮಾ ವಸಾಮಿ ನಿರಯೇಽಶುಚೌ |
ಸರ್ಪಯೋನಿಮಿಮಾಂ ಪ್ರಾಪ್ಯ ಕಾಲಾಕಾಂಕ್ಷೀ ಮಹಾದ್ಯುತೇ ॥24॥
ಎಲೈ ಮಹಾದ್ಯುತಿಯೇ, ನಾನು ಪರಮದುಷ್ಕರ್ಮವನ್ನು ಮಾಡಿ ಅಶುಚಿಯಾದ ನೀಚವಾದ ಈ ಸರ್ಪಯೋನಿಯನ್ನು ಹೊಂದಿ ಶಾಪದ ಮೋಕ್ಷಕಾಲವನ್ನು ನಿರೀಕ್ಷಿಸುತ್ತಾ ವಾಸಮಾಡುತ್ತಿದ್ದೇನೆ (ಎಂದು ಹೇಳಿತು).
ವೈಶಂಪಾಯನಃ
ತಮುವಾಚ ಮಹಾಬಾಹುರ್ಭೀಮಸೇನೋ ಭುಜಂಗಮಮ್ ॥24॥
ನ ಚ ಕುಪ್ಯೇ ಮಹಾಸರ್ಪ ನ ಚಾತ್ಮಾನಂ ವಿಗರ್ಹಯೇ ॥25॥
ವೈಶಂಪಾಯನ ಆಗ ಮಹಾಬಾಹುವಾದ ಭೀಮಸೇನನು ಸರ್ಪವನ್ನು ಕುರಿತು ಎಲೈ ಮಹಾಸರ್ಪವೇ, ನನಗೆ ನಿನ್ನ ಮೇಲೆ ಕೋಪವೂ ಇಲ್ಲ ಮತ್ತು ನನ್ನ ಮೇಲೆ ನಿಂದನೆಯೂ ಇಲ್ಲ ಎಂದು ಹೇಳಿದನು.
ಯಸ್ಮಾದಭಾವೀ ಭಾವೀ ವಾ ಮನುಷ್ಯಃ ಸುಖದುಃಖಯೋಃ |
ಆಗಮೇ ಯದಿ ವಾಽಪಾಯೇ ನ ತತ್ರ ಗ್ಲಪಯೇನ್ಮನಃ ॥26॥
ಮನುಷ್ಯನು ಸುಖದುಃಖಗಳನ್ನು ಸಂಪಾದನೆ ಮಾಡಲು ಅಥವಾ ಪರಿತ್ಯಾಗ ಮಾಡಲು ಸ್ವತಃ ಸಮರ್ಥನಲ್ಲವಾದ್ದರಿಂದ ಆ ವಿಷಯದಲ್ಲಿ ಮನಸ್ಸಿನಲ್ಲಿ ವಿಷಾದವನ್ನು ಮಾಡಬಾರದು.
ದೈವಂ ಪುರುಷಕಾರೇಣ ಕೋ ವಂಚಯಿತುಮರ್ಹತಿ |
ದೈವಮೇವ ಪರಂ ಮನ್ಯೇ ಪುರುಷಾರ್ಥೋ ನಿರರ್ಥಕಃ ॥27॥
ಪುರುಷಪ್ರಯತ್ನದಿಂದ ಯಾರು ದೈವವನ್ನು ವಂಚಿಸಲು ಸಾಧ್ಯ? ನಾನು ದೈವವೇ ಪರವೆಂದು ತಿಳಿಯುತ್ತೇನೆ. ಪುರುಷಪ್ರಯತ್ನವು ನಿರರ್ಥಕವಾದುದು.
ಪಶ್ಯ ದೈವೋಪಘಾತಾದ್ಧಿ ಭುಜವೀರ್ಯವ್ಯಪಾಶ್ರಯಮ್ |
ಇಮಾಮವಸ್ಥಾಂ ಸಂಪ್ರಾಪ್ತಮನಿಮಿತ್ತಮಿಹಾದ್ಯ ಮಾಮ್ ॥28॥
ದೈವವು ಪ್ರತಿಕೂಲವಾಗಿರುವುದರಿಂದ ನನ್ನ ಭುಜವೀರ್ಯವನ್ನು ಅವಲಂಬಿಸಿದ ನಾನು ನಿಷ್ಕಾರಣವಾಗಿ ಇಂತಹ ಅವಸ್ಥೆಯನ್ನು ಹೊಂದಿರುವುದನ್ನು ನೋಡು.
ಕಿಂತು ನಾದ್ಯಾನುಶೋಚಾಮಿ ತಥಾಽಽತ್ಮಾನಂ ವಿನಾಶಿತಮ್ |
ಯಥಾ ನು ವಿಪಿನೇ ನ್ಯಸ್ತಾನ್ ಭ್ರಾತೄನ್ ರಾಜ್ಯಪರಿಚ್ಯುತಾನ್ ॥29॥
ಆದರೆ ನಾನು ಕಾಡಿನಲ್ಲಿರುವ ನನ್ನ ಸಹೋದರರನನ್ನು ಕುರಿತು ಶೋಕಪಡುವಂತೆ ನನ್ನ ವಿನಾಶವನ್ನು ಕುರಿತು ನಾನು ಶೋಕಪಡುವುದಿಲ್ಲ.
ಹಿಮವಾಂಶ್ಚ ಸುದುರ್ಗೋಽಯಂ ಯಕ್ಷರಾಕ್ಷಸಸಂಕುಲಃ |
ಮಾಂ ಸಮುದ್ವೀಕ್ಷಮಾಣಾಸ್ತೇ ಪ್ರಪತಿಷ್ಯಂತಿ ವಿಹ್ವಲಾಃ ॥30॥
ಯಕ್ಷರಾಕ್ಷಸರಿಂದ ತುಂಬಿದ ಈ ಹಿಮಾಲಯಪರ್ವತವು ಬಹಳ ದುರ್ಗಮವಾದುದು. ಅಲ್ಲಿ ಅವರು ನನ್ನನ್ನು ನಿರೀಕ್ಷಿಸುತ್ತಾ ವಿಹ್ವಲರಾಗಿ ಬಿದ್ದುಹೋಗುವರು.
ವಿನಷ್ಟಮಥ ಮಾಂ ಶ್ರುತ್ವಾ ಭವಿಷ್ಯಂತಿ ನಿರುದ್ಯಮಾಃ |
ಧರ್ಮಶೀಲಾ ಮಯಾ ತೇ ಹಿ ಬಾಧ್ಯಂತೇ ರಾಜ್ಯಗೃದ್ಧಿನಾ ॥31॥
ಮತ್ತು ನಾನು ನಾಶಹೊಂದಿದ ವಾರ್ತೆಯನ್ನು ಕೇಳಿ ಅವರು ನಿರುದ್ಯೋಗಿಗಳಾಗುವರು. ರಾಜ್ಯದ ಆಸೆಯಿಂದ ನಾನು ಧರ್ಮಶೀಲರಾದ ಅವರನ್ನು ಬಾಧಿಸಿದಂತಾಗುತ್ತದೆ.
ಅಥವಾ ನಾರ್ಜುನೋ ಧೀಮಾನ್ ವಿಷಾದಮುಪಯಾಸ್ಯತಿ |
ಸರ್ವಾಸ್ತ್ರವಿದನಾಧೃಷ್ಯೋ ದೇವಗಂಧರ್ವರಾಕ್ಷಸೈಃ ॥32॥
ಅಥವಾ ಎಲ್ಲ ಅಸ್ತ್ರಗಳನ್ನು ಹೊಂದಿದ, ದೇವಗಂಧರ್ವರಾಕ್ಷಸರಿಂದ ಸೋಲದಿರುವ, ಮೇಧಾವಿಯಾದ ಅರ್ಜುನನು ವಿಷಾದವನ್ನು ಹೊಂದುವುದಿಲ್ಲ.
ಸಮರ್ಥಃ ಸ ಮಹಾಬಾಹುರೇಕೋಽಪಿ ಸುಮಹಾಬಲಃ |

ದೇವರಾಜಮಪಿ ಸ್ಥಾನಾತ್ ಪ್ರಚ್ಯಾವಯಿತುಮಂಜಸಾ ॥33॥
ಸುಮಹಾಬಲವುಳ್ಳ ಮಹಾಬಾಹುವಾದ ಅವನು ದೇವರಾಜನಾದ ಇಂದ್ರನನ್ನೂ ಸಹ ಅವನ ಸ್ಥಾನದಿಂದ ವಿಹೀನನನ್ನಾಗಿ ಮಾಡಲು ಚೆನ್ನಾಗಿ ಸಮರ್ಥನಾಗಿದ್ದಾನೆ.
ಕಿಂ ಪುನರ್ಧೃತರಾಷ್ಟ್ರಸ್ಯ ಪುತ್ರಂ ದುರ್ದ್ಯೂತದೇವಿನಮ್ |
ವಿದ್ವಿಷ್ಟಂ ಸರ್ವಲೋಕಸ್ಯ ದಂಭಮೋಹಪರಾಯಣಮ್ ॥34॥
ಹೀಗಿರುವ ಡಂಭಮೋಹಗಳನ್ನೇ ಆಶ್ರಯಿಸಿದ, ಎಲ್ಲರ ದ್ವೇಷಕ್ಕೆ ಪಾತ್ರನಾದ, ಕೆಟ್ಟ ಜೂಜನ್ನು ಆಡಿದ, ಧೃತರಾಷ್ಟ್ರನ ಪುತ್ರನ ವಿಷಯದಲ್ಲಿ ಹೇಳುವುದೇನು?
ಮಾತರಂ ಚೈವ ಶೋಚಾಮಿ ಕೃಪಣಾಂ ಪುತ್ರಗೃದ್ಧಿನೀಮ್ |
ಯಾಽಸ್ಮಾಕಂ ನಿತ್ಯಮಾಶಾಸ್ತೇ ಮಹತ್ತ್ವಮಧಿಕಂ ಪರೈಃ ॥35॥
ಮತ್ತು ಯಾವಳು ನಿತ್ಯವಾಗಿ ಬೇರೆಯವರಿಗಿಂತ ಹೆಚ್ಚಿದ ನಮ್ಮ ಅಭ್ಯುದಯವನ್ನು ಯಾವಾಗಲೂ ಬಯಸುತ್ತಾಳೆಯೋ ಅಂತಹ ಪುತ್ರವತ್ಸಲೆಯಾದ ಕೃಪಣಳಾದ ತಾಯಿಯನ್ನು ಕುರಿತು ಶೋಕಪಡುತೇತನೆ.
ತಸ್ಯಾಃ ಕಥಂ ತ್ವನಾಥಾಯಾ ಮದ್ವಿನಾಶಾದ್ ಭುಜಂಗಮ |
ಸಫಲಾಸ್ತೇ ಭವಿಷ್ಯಂತಿ ಮಯಿ ಸರ್ವೇ ಮನೋರಥಾಃ ॥36॥
ಎಲೈ ಭುಜಂಗಮನೇ, ನನ್ನ ವಿನಾಶದಿಂದ ಅನಾಥಳಾದ ಅವಳು ನನ್ನಲ್ಲಿ ಇಟ್ಟುಕೊಂಡಿರುವ ಎಲ್ಲಾ ಮನೋರಥಗಳು ಹೇಗೆ ಸಫಲವಾಗುವುವು?
ನಕುಲಃ ಸಹದೇವಶ್ಚ ಯವೌ ಚ ಗುರುವರ್ತಿನೌ |
ಮದ್ಬಾಹುಬಲಸಂಗುಪ್ತೌ ನಿತ್ಯಂ ಪುರುಷಮಾನಿನೌ ॥37॥
ತಮ್ಮ ಪರಾಕ್ರಮದಲ್ಲಿ ವಿಶ್ವಾಸವುಳ್ಳ ಅವಳಿಗಳಾದ ನಕುಲಸಹದೇವರಿಬ್ಬರೂ ಹಿರಿಯರಾದ ನಮ್ಮನ್ನು ಅನುಸರಿಸಿಕೊಂಡು ನನ್ನ ಬಾಹುಬಲದಿಂದ ರಕ್ಷಿತರಾಗಿದ್ದಾರೆ.
ಭವಿಷ್ಯತೋ ನಿರುತ್ಸಾಹೌ ಭ್ರಷ್ಟವೀರ್ಯಪರಾಕ್ರಮೌ |
ಮದ್ವಿನಾಶಾತ್ ಪರಿದ್ಯೂನಾವಿತಿ ಮೇ ವರ್ತತೇ ಮತಿಃ ॥38॥
ನಾನು ವಿನಾಶಹೊಂದಿದರೆ ಅವರೂ ತಮ್ಮ ವೀರ್ಯಪರಾಕ್ರಮಗಳನ್ನು ಕಳೆದುಕೊಂಡು ನಿರುತ್ಸಾಹರಾಗಿ ನಾಶವನ್ನು ಹೊಂದುವರು ಎಂದು ನನಗೆ ತೋರುತ್ತದೆ (ಎಂದು ಹೇಳಿದನು).
ವೈಶಂಪಾಯನಃ
ಏವಂವಿಧಂ ಬಹು ತದಾ ವಿಲಲಾಪ ವೃಕೋದರಃ |
ಭುಜಂಗಭೋಗಸಂರುದ್ಧೋ ನಾಶಕಚ್ಚ ವಿಚೇಷ್ಟಿತುಮ್ ॥39॥
ವೈಶಂಪಾಯನ ಹೀಗೆ ವೃಕೋದರನು ಬಹುವಿಧವಾಗಿ ವಿಲಾಪವನ್ನು ಮಾಡಿದನು. ಸರ್ಪಶರೀರದಿಂದ ಗೃಹೀತನಾಗಿ ಅವನಿಗೆ ಅಲುಗಾಡಲೂ ಸಾಧ್ಯವಾಗಲಿಲ್ಲ.
ಯುಧಿಷ್ಠಿರಸ್ತು ಕೌಂತೇಯೋ ಬಭೂವಾಸ್ವಸ್ಥಚೇತನಃ |
ಅನಿಷ್ಟದರ್ಶನಾನ್ ಘೋರಾನುತ್ಪಾತಾನ್ ಪರಿಚಿಂತಯನ್ ॥40॥
ಕುಂತೀಪುತ್ರನಾದ ಯುಧಿಷ್ಠಿರನಾದರೂ ಅಪಶಕುನಗಳನ್ನು ನೋಡಿ ಘೋರವಾದ ಅನರ್ಥವನ್ನು ಚಿಂತಿಸುತ್ತಾ ಮನಸ್ಸಿನಲ್ಲಿ ಅಸ್ವಸ್ಥನಾದನು.
ದಾರುಣಂ ಹ್ಯಶಿವಂ ನಾದಂ ಶಿವಾ ದಕ್ಷಿಣತಃ ಸ್ಥಿತಾ |
ದೀಪ್ತಾಯಾಂ ದಿಶಿ ವಿತ್ರಸ್ತಾ ರೌತಿ ತಸ್ಯಾಶ್ರಮಸ್ಯ ಹ ॥41॥
ಅವನ ಬಲಭಾಗದಲ್ಲಿದ್ದ ಹೆಣ್ಣುನರಿಗಳು ದಾರುಣವಾದ ಅಮಂಗಳವಾದ ನಾದವನ್ನು ಮಾಡಿದವು. ದಿಕ್ಕುಗಳು ಉರಿಯುತ್ತಿರುವುದನ್ನು ನೋಡಿ ಹೆದರಿದ ಹೆಣ್ಣು ನರಿಯು ಅವನ ಆಶ್ರಮದ ಬಳಿ ಅತ್ತಂತೆ ಕಿರುಚಿತು.
ಏಕಪಕ್ಷಾಕ್ಷಿಚರಣಾ ವರ್ತಿಕಾ ಘೋರದರ್ಶನಾ |
ರಕ್ತಂ ವಮಂತೀ ದದೃಶೇ ಪ್ರತ್ಯಾದಿತ್ಯಮಭಾಸುರಾ ॥42॥
ಒಂದು ಕಣ್ಣು, ಒಂದು ಪಾದ ಮತ್ತು ಒಂದು ರೆಕ್ಕೆಯುಳ್ಳ ನೋಡಲು ಭಯಂಕರವಾದ ಮತ್ತು ಅಮಂಗಳವಾದ ವರ್ತಿಕಾ ಪಕ್ಷಿಯು ಸೂರ್ಯನಿಗೆ ಎದುರಾಗಿ ರಕ್ತವನ್ನು ಕಾರುವುದು ಕಂಡುಬಂದಿತು.
ಪ್ರವವೌ ಚಾನಿಲೋ ರೂಕ್ಷಶ್ಚಂಡಃ ಶರ್ಕರಕರ್ಷಣಃ |
ಅಪಸವ್ಯಾನಿ ಸರ್ವಾಣಿ ಮೃಗಪಕ್ಷಿರುತಾನಿ ಚ ॥43॥
ವಾಯುವು ಒರಟಾಗಿ ಮರಳಿನ ಕಣಗಳನ್ನು ಎಳೆದುಕೊಂಡು ಕ್ರೂರವಾಗಿ ಬೀಸಿತು. ಎಲ್ಲ ಮೃಗಪಕ್ಷಿಗಳ ನಾದವು ಅವನಿಗೆ ಅಪಸವ್ಯವಾದವು.
ಪೃಷ್ಠತೋ ವಾಯಸಃ ಕೃಷ್ಣೋ ಯಾಹಿ ಯಾಹೀತಿ ಶಂಸತಿ |
ಮುಹುರ್ಮುಹುಃ ಸ್ಫುರತಿ ಚ ದಕ್ಷಿಣೋಽಸ್ಯ ಭುಜಸ್ತಥಾ ॥44॥
ಅವನ ಹಿಂದುಗಡೆಯಿಂದ ಕಪ್ಪಾದ ಕಾಗೆಯು ಹೋಗು ಹೋಗು ಎಂದು ಕಿರುಚಿತು. ಅವನ ಬಲಭುಜವು ಪುನಃ ಪುನಃ ಅದುರಿತು.
ಹೃದಯಂ ಚರಣಶ್ಚಾಪಿ ವಾಮೋಽಸ್ಯ ಪರಿತಪ್ಯತಿ |
ಸವ್ಯಸ್ಯಾಕ್ಷ್ಣೋ ವಿಕಾರಶ್ಚಾಪ್ಯನಿಷ್ಟಃ ಸಮಪದ್ಯತ ॥45॥
ಅವನ ಎದೆ ಮತ್ತು ಎಡಪಾದಗಳು ಇದ್ದಕ್ಕಿದ್ದಂತೆ ಬಿಸಿಯಾದವು. ಎಡಗಣ್ಣಿನಲ್ಲಿ ಅನಿಷ್ಟವಾದ ವಿಕಾರವು (ಅದರುವಿಕೆಯು)

ಉಂಟಾಯಿತು.
ಧರ್ಮರಾಜೋಽಪಿ ಮೇಧಾವೀ ಮನ್ಯಮಾನೋ ಮಹದ್ಭಯಮ್ |
ದ್ರೌಪದೀಂ ಪರಿಪಪ್ರಚ್ಛ ಕ್ವ ಭೀಮ ಇತಿ ಭಾರತ ॥46॥
ಎಲೈ ಭಾರತನೇ, ಮೇಧಾವಿಯಾದ ಧರ್ಮರಾಜನೂ ಸಹ ದೊಡ್ಡ ಭಯವು ಉಪಸ್ಥಿತವಾಗಿದೆ ಎಂದು ತಿಳಿದು ದ್ರೌಪದಿಯನ್ನು ಕುರಿತು ಭೀಮನು ಎಲ್ಲಿದ್ದಾನೆ ಎಂದು ಕೇಳಿದನು.
ಶಶಂಸ ತಸ್ಮೈ ಪಾಂಚಾಲೀ ಚಿರಯಾತಂ ವೃಕೋದರಮ್ |
ಕಥಯಾಮಾಸ ತತ್ಸರ್ವಂ ಮೃಗಾನ್ ಹಂತುಮಿತೋ ಗತಮ್ |
ಸ ಪ್ರತಸ್ಥೇ ಮಹಾಬಾಹುರ್ಧೌಮ್ಯೇನ ಸಹಿತೋ ನೃಪಃ ॥47॥
ಪಾಂಚಾಲಿಯೂ ಸಹ ಮೃಗಗಳನ್ನು ಬೇಟೆಯಾಡಲು ವೃಕೋದರನು ಹೊರಟು ಬಹುಕಾಲವಾಗಿದೆ ಎಂಬ ಎಲ್ಲ ವಿಷಯಗಳನ್ನೂ ಅವನಿಗೆ ತಿಳಿಸಿದಳು.
ತಚ್ಛ್ರುತ್ವಾ ತ್ವರಿತೋ ರಾಜಾ ಭೃಶಮುದ್ವಿಗ್ನಮಾನಸಃ ॥48॥
ಅದನ್ನು ಕೇಳಿ ಮನಸ್ಸಿನಲ್ಲಿ ಉದ್ವೇಗವನ್ನು ಹೊಂದಿದ ಮಹಾಬಾಹುವಾದ ಧರ್ಮರಾಜನು ಧೌಮ್ಯರಿಂದ ಕೂಡಿಕೊಂಡು ಶೀಘ್ರವಾಗಿ ಹೊರಟನು.
ದ್ರೌಪದ್ಯಾ ರಕ್ಷಣಂ ಕಾರ್ಯಮಿತ್ಯುವಾಚ ಧನಂಜಯಮ್ |
ನಕುಲಂ ಸಹದೇವಂ ಚ ವ್ಯಾದಿದೇಶ ದ್ವಿಜಾನ್ ಪ್ರತಿ ॥49॥
ನೀನು ದ್ರೌಪದಿಯ ರಕ್ಷಣೆಯನ್ನು ಮಾಡಬೇಕು ಎಂದು ಅರ್ಜುನನಿಗೆ ಹೇಳಿದನು. ನಕುಲಸಹದೇವರಿಗೆ ಬ್ರಾಹ್ಮಣರ ರಕ್ಷಣೆಯ ವಿಷಯದಲ್ಲಿ ಆದೇಶವನ್ನು ನೀಡಿದನು.
ಸ ತಸ್ಯ ಪದಮುನ್ನೀಯ ತಸ್ಮಾದೇವಾಶ್ರಮಾತ್ ಪ್ರಭುಃ |
ದದರ್ಶ ಪೃಥಿವೀಂ ಚಿಹ್ನೈರ್ಭೀಮಸ್ಯ ಪರಿಚಿಹ್ನಿತಾಮ್ ॥50॥
ಪ್ರಭುವಾದ ಅವನು ಭೀಮಸೇನನ ಪಾದಗಳನ್ನು ಗಮನಿಸಿ ಆಶ್ರಮದಿಂದ ಹೊರಟು ಭೂಮಿಯ ಮೇಲೆ ಮೂಡಿದ ಭೀಮಸೇನನ ಪಾದಚಿಹ್ನೆಗಳನ್ನು ನೋಡಿದನು.
ಮೃಗಯಾಮಾಸ ಕೌಂತೇಯೋ ಭೀಮಸೇನಂ ಮಹಾವನೇ |
ಸ ಪ್ರಾಚೀಂ ದಿಶಮಾಸ್ಥಾಯ ಮಹತೋ ಗಜಯೂಥಪಾನ್ ॥50.1॥
ತತೋ ಮೃಗಸಹಸ್ರಾಣಿ ಮೃಗೇಂದ್ರಾಣಾಂ ಶತಾನಿ ಚ |
ಪತಿತಾನಿ ವನೇ ದೃಷ್ಟ್ವಾ ಮಾರ್ಗಂ ತಸ್ಯಾವಿಶನ್ನೃಪಃ ॥50.2॥
ಕೌಂತೇಯನಾದ ಅವನು ಮಹಾವನದಲ್ಲಿ ಭೀಮಸೇನನನ್ನು ಹುಡುಕಿದನು. ಅವನು ಪೂರ್ವದಿಕ್ಕಿನಲ್ಲಿ ಹೋಗಿ ದೊಡ್ಡ ಗಜಸಮೂಹಗಳು, ಸಾವಿರಾರು ಮೃಗಗಳು, ನೂರಾರು ಸಿಂಹಗಳು ಸತ್ತುಬಿದ್ದಿರುವುದನ್ನು ನೋಡಿ ಆ ಮಾರ್ಗದಲ್ಲಿ ಮುಂದೆ ಸಾಗಿದನು.
ಧಾವತಸ್ತಸ್ಯ ವೀರಸ್ಯ ಮೃಗಾರ್ಥಂ ವಾತರಂಹಸಃ |
ಊರುವಾತವಿನಿರ್ಭಗ್ನಾ ದ್ರುಮಾ ವ್ಯಾವರ್ಜಿತಾಃ ಪಥಿ ॥51॥
ಮೃಗಗಳನ್ನು ಹಿಂಬಾಲಿಸಿ ವಾಯುವೇಗದಿಂದ ಓಡುವ ಆ ಭೀಮಸೇನನ ತೊಡೆಗಳಿಂದ ಉಂಟಾದ ವಾಯುವಿನಿಂದ ಭಗ್ನವಾದ ವೃಕ್ಷಗಳು ದಾರಿಯಲ್ಲಿ ಬಿದ್ದಿದ್ದವು.
ಸ ಗತ್ವಾ ತೈಸ್ತದಾ ಚಿಹ್ನೈರ್ದದರ್ಶ ಗಿರಿಗಹ್ವರೇ |
ಗೃಹೀತಂ ಭುಜಗೇಂದ್ರೇಣ ನಿಶ್ಚೇಷ್ಟಮನುಜಂ ತದಾ ॥52॥
ಅವನು ಆ ಚಿಹ್ನೆಗಳನ್ನು ಅನುಸರಿಸಿಕೊಂಡು ಮುಂದೆ ನಡೆದು ಒಂದು ಕಣಿವೆಯಲ್ಲಿ ಭುಜಗೇಂದ್ರನಿಂದ ಹಿಡಿಯಲ್ಪಟ್ಟ ತನ್ನ ತಮ್ಮನನ್ನು ನೋಡಿದನು.
ರೂಕ್ಷಮಾರುತಭೂಯಿಷ್ಠೇ ನಿಷ್ಪತ್ರದ್ರುಮಸಂಕುಲೇ |
ಈರಿಣೇ ನಿರ್ಜಲೇ ದೇಶೇ ಕಂಟಕಿದ್ರುಮಸಂಕುಲೇ |
ಅಶ್ಮಸ್ಥಾಣುಕ್ಷುಪಾಕೀರ್ಣೇ ಸುದುರ್ಗೇ ವಿಷಮೋತ್ಕಟೇ ॥52.1॥
ಚಂಡಮಾರುತದಿಂದ ಕೂಡಿದ, ಪತ್ರಗಳಿಲ್ಲದ ವೃಕ್ಷಗಳು ನಿಬಿಡವಾಗಿದ್ದ, ನಿರ್ಜಲವಾದ, ಮುಳ್ಳಿನ ಮರಗಳಿಂದ ತುಂಬಿದ್ದ, ಕಲ್ಲುಬಂಡೆಗಳು ಮತ್ತು ಪೊದೆಗಳಿಂದ ತುಂಬಿದ್ದ ದುರ್ಗಮವಾದ ಮತ್ತು ಅತ್ಯಂತ ವಿಷಮವಾದ ಮರುಭೂಮಿಯ ಪ್ರದೇಶದಲ್ಲಿ ಭೀಮಸೇನನನ್ನು ನೋಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಅಜಗರಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ಮೂರನೆಯ
ಅಧ್ಯಾಯ ಮುಗಿಯಿತು
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಗತೇ ಭೀಮೇ ನಿಮಿತ್ತಾನಿ ದೃಷ್ಟ್ವಾ ರಾಜಾ ಯುಧಿಷ್ಠಿರಃ |
ಪಪ್ರಚ್ಛ ಕ್ವ ಗತೋ ಭೀಮ ಇತಿ ಕೃಷ್ಣಾಂ ಚಲನ್ಮನಾಃ ॥351॥

ಭೀಮ ಹೊರಟು ಹೋದಾಗ ರಾಜಾ ಯುಧಿಷ್ಠಿರ, ಉತ್ಪಾತಗಳನ್ನು ಕಂಡು ಶಂಕಾಗ್ರಸ್ತನಾಗಿ `ಭೀಮನೆಲ್ಲಿಗೆ ಹೋದನೆ'ಂದು ದ್ರೌಪದಿಯನ್ನು ಕೇಳಿದ.

ಯಾತಂ ಮೃಗಾರ್ಥಂ ಸ ನಿಶಮ್ಯ ರಾಜಾ
ತದೂರುವೇಗಾತ್ ಪತಿತಾನ್ ನಗೇಂದ್ರಾನ್ |
ದೃಷ್ಟ್ವಾ ಪಥಾ ಯೇನ ಯಯೌ ಸ ತತ್ರ
ದೃಷ್ಟ್ವಾ ಚ ಸರ್ಪಾವೃತಮನ್ವಪೃಚ್ಛತ್ ||352||

ಭೀಮ ಬೇಟೆಗೆ ಹೋಗಿದ್ದಾನೆ ಎಂದು ಕೇಳಿ ಧರ್ಮರಾಜ ಅವನ ನಡಿಗೆಯ ರಭಸಕ್ಕೆ ತೊಡೆಗಳ ಸ್ಪರ್ಶದಿಂದ ಬಿದ್ದ ದೊಡ್ಡ ಮರಗಳನ್ನು ನೋಡಿ ಆ ಮಾರ್ಗದಿಂದ ನಡೆದ. ಅಲ್ಲಿ ಭೀಮ ಹೆಬ್ಬಾವಿನಿಂದ ಸುತ್ತಲ್ಪಟ್ಟಿದ್ದನ್ನು ಕಂಡು ಕಾರಣವನ್ನು ಕೇಳಿದ.

ಸ ಕಾರಣಂ ನಹುಷಾತ್ ಸರ್ವಮೇವ
ಶುಶ್ರಾವ ತತ್ಪ್ರಶ್ನಮಶೇಷತಶ್ಚ |
ಭ್ರಾತೃಸ್ನೇಹಾದ್ ವ್ಯಾಚರೋದ್ ಧರ್ಮಸೂನು-
ಸ್ತದೈವ ಸೋಽಪ್ಯಾರುಹತ್ ಸ್ವರ್ಗಲೋಕಮ್ ||353||

ಧರ್ಮರಾಜ ನಹುಷನಿಂದ ಎಲ್ಲವನ್ನೂ ಕೇಳಿ ತಿಳಿದುಕೊಂಡ. ಸೋದರ ಪ್ರೇಮದಿಂದ ನಹುಷನ ಎಲ್ಲ ಪ್ರಶ್ನೆಗಳನ್ನೂ ಉತ್ತರಿಸಿದ. ಆಗಲೇ ನಹುಷಸ್ವರ್ಗಲೋಕಕ್ಕೆ ತೆರಳಿದ.

ದಿವ್ಯಾಂಬರೇ ಕುಂಡಲೀನಿ ಸ್ವಪೂರ್ವೇ
ಗತೇ ವಿಮಾನೇನ ಸ ಧರ್ಮರಾಜಃ |
ಭೀಮಶ್ಚಾಽಯಾತ್ ಸ್ವಾಶ್ರಮಾಯೈವ ಸರ್ವಂ
ಯುಧಿಷ್ಠಿರಃ ಕಥಯಾಮಾಸ ತತ್ರ ||354||

ದಿವ್ಯ ವಸ್ತ್ರಗಳನ್ನೂ ಕುಂಡಲಗಳನ್ನೂ ಧರಿಸಿದ ತಮ್ಮ ವಂಶದ ಪೂರ್ವಜನಾದ ನಹುಷ ವಿಮಾನದಿಂದ ಸ್ವರ್ಗಕ್ಕೆ ಹೋದಾಗ ಧರ್ಮರಾಜನೂ ಭೀಮನೂ ತಮ್ಮಾಶ್ರಮಕ್ಕೆ ಬಂದರು. ಅಲ್ಲಿ ಎಲ್ಲ ವೃತ್ತಾಂತವನ್ನೂ ಧರ್ಮರಾಜ ಹೇಳಿದ.

ಶ್ರುತ್ವಾ ಕೃಷ್ಣಾ ಭ್ರಾತರಶ್ಚಾಸ್ಯ ಸರ್ವೇ ಸರ್ವೇ
ಮುನೀಂದ್ರಾ ಭೀಮಸೇನೇಽತಿಭಕ್ತಾಃ |
ವ್ರೀಡಾಂ ಯಯುರ್ಭೀಮಸೇನಗ್ರಹೇಣ
ತಥಾಽಬ್ರುವನ್ ಸ್ನೇಹತೋ ಭೀಮಸೇನಮ್ ||355||

ನೈತಾದೃಶಂ ಸಾಹಸಂ ತೇಽನುರೂಪಂ
ಶಕ್ತೋಽಪಿ ಯತ್ ಸ್ವಾತ್ಮನೋ ಮೋಕ್ಷಣಾಯ |
ನೈವಾಽಕರೋ ಯತ್ನಮತೋ ನಿಜಾನಾಂ
ಮಹದ್ ದುಃಖಂ ಹೃದಯೇ ಪ್ರಾರ್ಪಯಸ್ತ್ವಮ್ ||356||

ಮೈವಂ ಪುನಃ ಕಾರ್ಯಮಿತಿ ಬ್ರುವಂತಃ
ಸಮಾಶ್ಲಿಷನ್ ಸರ್ವ ಏವೈತ್ಯ ಭೀಮಮ್ |
ತತೋಽಹೋಭಿಃ ಕೈಶ್ಚಿದಾಪುಃ ಕುರೂಣಾಂ
ರಾಷ್ಟ್ರಂ ಪಾರ್ಥಾ ಮುನಿಮುಖ್ಯೈಃ ಸಮೇತಾ ||357||

ಭೀಮನಲ್ಲಿ ಅತ್ಯಂತ ಭಕ್ತಿಯುಕ್ತರಾದ ದ್ರೌಪದಿಯೂ ಎಲ್ಲ ಸೋದರರೂ ಎಲ್ಲ ಮುನಿಗಳೂ ಭೀಮ ಹಾವಿನ ತೆಕ್ಕೆಯಲ್ಲಿದ್ದ ಬಗ್ಗೆ ನಾಚಿದರು. ಮತ್ತು ಸ್ನೇಹದಿಂದ ಹೇಳಿದರು, `ಭೀಮ, ಇಂಥ ಸಹನೆ ನಿನಗೆ ತಕ್ಕುದಲ್ಲ. ನೀನು ನಿನ್ನ ಬಿಡುಗಡೆ ಮಾಡಿಕೊಳ್ಳಲು ಶಕ್ತನಾಗಿದ್ದು ಅದಕ್ಕೆ ಪ್ರಯತ್ನ ಮಾಡಲಿಲ್ಲ. ಆ ಮೂಲಕ ನೀನು ನಿನ್ನವರ ಹೃದಯದಲ್ಲಿ ಮಹಾ ಕಳವಳ ಉಂಟು ಮಾಡಿರುವೆ. ಹೀಗೆ ಮತ್ತೆ ನೀನು ಮಾಡಕೂಡದು' ಎಂದು ಹೇಳುತ್ತ ಎಲ್ಲರೂ ಬಂದು ಭೀಮನನ್ನು ಅಪ್ಪಿಕೊಂಡರು. ಬಳಿಕ ಕೆಲವು ದಿನಗಳಲ್ಲಿ ಪಾಂಡವರು ಮುನೀಂದ್ರರಿಂದ ಸಮೇತರಾಗಿ ಕುರುರಾಜ್ಯದಲ್ಲಿರುವ ದ್ವೈತ ವನಕ್ಕೆ ಬಂದರು.

* * * *

## ನೂರ ಎಪ್ಪತ್ತಾಲ್ಕನೆಯ ಅಧ್ಯಾಯ

ಸರ್ಪಯುಧಿಷ್ಠಿರ ಸಂವಾದ. ಬ್ರಾಹ್ಮಣ ಜಾತಿ ಮತ್ತು ವೇದ್ಯವಸ್ತುವಿನ ವಿಷಯದಲ್ಲಿ ಪ್ರಶ್ನ ಪ್ರತಿವಚನಗಳು.

ವೈಶಂಪಾಯನಃ

ಯುಧಿಷ್ಠಿರಸ್ತಮಾಸಾದ್ಯ ಸರ್ಪಭೋಗೇನ ವೇಷ್ಟಿತಮ್ |
ದಯಿತಂ ಭ್ರಾತರಂ ಧೀಮಾನಿದಂ ವಚನಮಬ್ರವೀತ್ ||1||
ಕುಂತೀಮಾತಃ ಕಥಮಿಮಾಮಾಪದಂ ತ್ವಮವಾಪ್ತವಾನ್ |
ಕಶ್ಚಾಯಂ ಪರ್ವತಾಭೋಗಪ್ರತಿಮಃ ಪನ್ನಗೋತ್ತಮಃ ||2||

ವೈಶಂಪಾಯನ ಮೇಧಾವಿಯಾದಯುಧಿಷ್ಠಿರನು ಸರ್ಪಶರೀರದಿಂದ ಸುತ್ತುವರಿಯಲ್ಪಟ್ಟ ಪ್ರಿಯನಾದ ತಮ್ಮನನ್ನು ಕುರಿತು `ಕುಂತೀಪುತ್ರನೇ, ನಿನಗೆ ಈ ಆಪತ್ತು ಹೇಗೆ ಪ್ರಾಪ್ತವಾಯಿತು. ಪರ್ವತಸದೃಶವಾದ ಶರೀರವನ್ನು ಹೊಂದಿರುವ ಈ ಪನ್ನಗೋತ್ತಮನು ಯಾರು?' ಎಂದು ಕೇಳಿದನು.

ಸ ಧರ್ಮರಾಜಮಾಲಕ್ಷ್ಯ ಭ್ರಾತಾ ಭ್ರಾತರಮಗ್ರಜಮ್ |
ಕಥಯಾಮಾಸ ತತ್ಸರ್ವಂ ಗ್ರಹಣಾದಿವಿಚೇಷ್ಟಿತಮ್ ||3||

ತಮ್ಮನಾದ ಅವನು ಅಣ್ಣನಾದ ಧರ್ಮರಾಜನನ್ನು ಗಮನಿಸಿ ಸರ್ಪದಿಂದ ಗ್ರಹಣವನ್ನು ಹೊಂದಿದ ಎಲ್ಲಾ ವಿಷಯವನ್ನೂ ಹೇಳಿದನು.
ಅಯಮಾರ್ಯ ಮಹಾಸತ್ತ್ವೋ ಭಕ್ಷಾರ್ಥಂ ಮಾಂ ಗೃಹೀತವಾನ್ |
ನಹುಷೋ ನಾಮ ರಾಜರ್ಷಿಃ ಪ್ರಾಣವಾನಿವ ಸಂಸ್ಥಿತಃ ॥3.1॥
ಆರ್ಯನೇ, ಮಹಾಬಲವುಳ್ಳ ಇವನು ಆಹಾರಾರ್ಥವಾಗಿ ನನ್ನನ್ನು ಹಿಡಿದಿದ್ದಾನೆ. ಇವನು ರಾಜರ್ಷಿಯಾದ ನಹುಷ. ಸರ್ಪದಂತೆ ಇದ್ದಾನೆ (ಸರ್ಪವಲ್ಲ).
ಯುಧಿಷ್ಠಿರಃ
ಮುಚ್ಯತಾಮಯಮಾಯುಷ್ಮನ್ ಭ್ರಾತಾ ಮೇಽಮಿತವಿಕ್ರಮಃ |
ವಯಮಾಹ್ಯಾರಮನ್ಯಂ ತೇ ದಾಸ್ಯಾಮಃ ಕ್ಷುನ್ನಿವಾರಣಮ್ ॥3.2॥
ಯುಧಿಷ್ಠಿರ ಆಯುಷ್ಮಂತನೇ, ಈ ನನ್ನ ಅಮಿತವಿಕ್ರಮನಾದ ತಮ್ಮನನ್ನು ಬಿಟ್ಟುಬಿಡು. ನಾವು ನಿನ್ನ ಹಸಿವನ್ನು ನಿವಾರಿಸಲು ನಿನಗೆ ಬೇರೆ ಆಹಾರವನ್ನು ಕೊಡುವೆವು.
ಸರ್ಪಃ
ಆಹಾರೋ ರಾಜಪುತ್ರೋಽಯಂ ಮಯಾ ಪ್ರಾಪ್ತೋ ಮುಖಾಗತಃ |
ಗಮ್ಯತಾಂ ನೇಹ ಸ್ಥಾತವ್ಯಂ ಶ್ವೋ ಭವಾನಪಿ ಮೇ ಭವೇತ್ ॥3.3॥
ಸರ್ಪ ಈ ರಾಜಪುತ್ರನು ಈ ದಿನ ನನಗೆ ಆಹಾರವಾಗಿ ನನ್ನ ಮುಖದ ಮುಂದೆ ಬಂದು ಒದಗಿದ್ದಾನೆ. ಇಲ್ಲಿ ನಿಲ್ಲಬೇಡ ಹೊರಟುಹೋಗು. ನಾಳೆ ನೀನೂ ಸಹ ಆಹಾರವಾಗಬಹುದು.
ವ್ರತಮೇತನ್ಮಹಾಬಾಹೋ ವಿಷಯಂ ಮಮ ಯೋ ವ್ರಜೇತ್ |
ಸ ಮೇ ಭಕ್ಷೋ ಭವೇತ್ ತಾತ ತ್ವಂ ಚಾಪಿ ವಿಷಯೇ ಮಮ ॥3.4॥
ಎಲೈ ಮಹಾಬಾಹುವೇ, ಯಾರು ನನ್ನ ದೇಶಕ್ಕೆ ಬರುತ್ತಾನೋ ಅವನು ನನಗೆ ಭಕ್ಷವಾಗುತ್ತಾನೆ ಎಂಬುದು ನನ್ನ ವ್ರತ. ಪ್ರೀತಿಪಾತ್ರನೇ, ನೀನೂ ಸಹ ನನ್ನ ದೇಶಕ್ಕೆ ಬಂದಿದ್ದೀಯೆ.
ಚಿರೇಣಾದ್ಯ ಮಯಾಽಽಹಾರಃ ಪ್ರಾಪ್ತೋಽಯಮನುಜಸ್ತವ |
ನಾಹಮೇನಂ ವಿಮೋಕ್ಷ್ಯಾಮಿ ನ ಚಾನ್ಯಮಭಿಕಾಂಕ್ಷಯೇ ॥3.5॥
ಬಹಳ ಕಾಲದ ಮೇಲೆ ನಿನ್ನ ತಮ್ಮನು ನನಗೆ ಆಹಾರವಾಗಿ ಸಿಕ್ಕಿದ್ದಾನೆ. ನಾನು ಇವನನ್ನು ಬಿಡುವುದಿಲ್ಲ ಮತ್ತು ಬೇರೆ ಆಹಾರವನ್ನೂ ಬಯಸುವುದಿಲ್ಲ.
ಯುಧಿಷ್ಠಿರಃ
ದೇವೋ ವಾ ಯದಿ ವಾ ದೈತ್ಯ ಉರಗೋ ವಾ ಭವಾನ್ ಯದಿ |
ಸತ್ಯಂ ಸರ್ಪ ವಚೋ ಬ್ರೂಹಿ ಪೃಚ್ಛತಿ ತ್ವಾಂ ಯುಧಿಷ್ಠಿರಃ ॥4॥
ಯುಧಿಷ್ಠಿರ ಎಲೈ ಸರ್ಪವೇ, ನೀನು ದೇವತೆಯೇ ಅಥವಾ ದೈತ್ಯನೇ ಅಥವಾ ಒಂದುಪಕ್ಷ ಸರ್ಪವೇ ಆಗಿದ್ದೀಯಾ? ಎಂದು ಸತ್ಯವನ್ನು ನುಡಿ. ನಿನ್ನನ್ನು ಯುಧಿಷ್ಠಿರನು ಪ್ರಶ್ನೆಯನ್ನು ಮಾಡುತ್ತಿದ್ದಾನೆ.
ಕಿಮಾಹೃತ್ಯ ವಿದಿತ್ವಾ ವಾ ಪ್ರೀತಿಸ್ತೇ ಸ್ಯಾದ್ ಭುಜಂಗಮ |
ಕಿಮಾಹಾರಂ ಪ್ರಯಚ್ಛಾಮಿ ಕಥಂ ಮುಂಚೇದ್ ಭವಾನಿಮಮ್ ॥5॥
ಎಲೈ ಭುಜಂಗಮನೇ, ಏನನ್ನು ತಂದು ಒಪ್ಪಿಸಿದರೆ ನಿನಗೆ ಸಂತೋಷ ಉಂಟಾಗುತ್ತದೆ? ನಿನಗೆ ಯಾವ ಆಹಾರವನ್ನು ಕೊಡಲಿ? ಏನು ಮಾಡಿದರೆ ನೀನು ಇವನನ್ನು ಬಿಡುತ್ತೀಯೆ?
ಸರ್ಪಃ
ನಹುಷೋ ನಾಮ ರಾಜಾಽಹಮಾಸಂ ಪೂರ್ವಸ್ತವಾನಘ |
ಪ್ರಥಿತಃ ಪಂಚಮಃ ಸೋಮಾದಾಯೋಃ ಪುತ್ರೋ ನರಾಧಿಪ ॥6॥
ಸರ್ಪ ಎಲೈ ಅನಘನೇ, ನಾನು ನಿನ್ನ ಪೂರ್ವಿಕನಾದ ನಹುಷನೆಂಬ ರಾಜನಾಗಿದ್ದೆನು. ಎಲೈ ನರಾಧಿಪನೇ, ನಾನು ಚಂದ್ರವಂಶದಲ್ಲಿ ಚಂದ್ರನಿಂದ ಐದನೆಯವನೆಂದು ಪ್ರಖ್ಯಾತನಾಗಿದ್ದವನು. ಮತ್ತು ಆಯುಮಹಾರಾಜನ ಪುತ್ರ.
ಕ್ರತುಭಿಸ್ತಪಸಾ ಚೈವ ಸ್ವಾಧ್ಯಾಯೇನ ದಮೇನ ಚ |
ತ್ರೈಲೋಕ್ಯೈಶ್ವರ್ಯಮವ್ಯಗ್ರಂ ಪ್ರಾಪ್ತೋಽಹಂ ವಿಕ್ರಮೇಣ ಚ ॥7॥
ನಾನು ಯಜ್ಞಗಳಿಂದಲೂ, ತಪಸ್ಸಿನಿಂದಲೂ, ವೇದಾಧ್ಯಯನದಿಂದಲೂ, ಇಂದ್ರಿಯನಿಗ್ರಹದಿಂದಲೂ, ಪರಾಕ್ರಮದಿಂದಲೂ ಸಂಪೂರ್ಣವಾದ ತ್ರೈಲೋಕ್ಯೈಶ್ವರ್ಯವನ್ನು ಸಂಪಾದಿಸಿದೆನು.
ತದೈಶ್ವರ್ಯಂ ಸಮಾಸಾದ್ಯ ದರ್ಪೋ ಮಾಮಗಮತ್ ತದಾ |
ಸಹಸ್ರಂ ಹಿ ದ್ವಿಜಾತೀನಾಮುವಾಹ ಶಿಬಿಕಾಂ ಮಮ ॥8॥
ಆ ಐಶ್ವರ್ಯವನ್ನು ಹೊಂದಿದ ನನಗೆ ಆಗ ದರ್ಪವುಂಟಾಯಿತು. ಒಂದು ಸಹಸ್ರ ಋಷಿಗಳು ನನ್ನ ಪಲ್ಲಕ್ಕಿಯನ್ನು ಹೊರುತ್ತಿದ್ದರು.
ಐಶ್ವರ್ಯಮದಮತ್ತೋಽಹಮವಮನ್ಯ ತತೋ ದ್ವಿಜಾನ್ |
ಇಮಾಮಗಸ್ತ್ಯೇನ ದಶಾಮಾನೀತಃ ಪೃಥಿವೀಪತೇ ॥9॥
ಎಲೈ ರಾಜನೇ, ಐಶ್ವರ್ಯಮದಮತ್ತನಾದ ನಾನು ಹಾಗೆ ಬ್ರಾಹ್ಮಣರನ್ನು ಅವಮಾನ ಮಾಡಿದಾಗ ಅಗಸ್ತ್ಯರು ನನಗೆ ಈ ಅವಸ್ಥೆಯನ್ನು ತಂದುಕೊಟ್ಟರು.
ನ ತು ಮಾಮಜಹಾತ್ ಪ್ರಜ್ಞಾ ಯಾವದದ್ಯೇತಿ ಪಾಂಡವ |

ತಸ್യೈವಾನುಗ್ರಹಾದ್ ರಾಜನ್ನಗತಸ್ಯಸ್ಯ ಮಹಾತ್ಮನಃ ॥10॥
ಎಲೈ ಪಾಂಡವನೇ, ರಾಜನೇ, ಆದರೆ ಅದೇ ಮಹತ್ಮರಾದ ಅಗಸ್ತ್ಯರ ಅನುಗ್ರಹದಿಂದ ನನಗೆ ಇಲ್ಲಿಯವರೆಗೆ ಹಿಂದಿನ ಸ್ಮರಣೆಯು ನಷ್ಟವಾಗಲಿಲ್ಲ.
ಷಷ್ಠೇ ಕಾಲೇ ಮಯಾಽಽಹಾರಃ ಪ್ರಾಪ್ತೋಽಯಮನುಜಸ್ತವ |
ನಾಹಮೇನಂ ವಿಮೋಕ್ಷ್ಯಾಮಿ ನ ಚಾನ್ಯದಪಿ ಕಾಮಯೇ ॥11॥
ನಿನ್ನ ತಮ್ಮನು ಹಗಲಿನ ಕೊನೆಯ ಆರನೆಯ ಭಾಗದಲ್ಲಿ ನನಗೆ ಆಹಾರವಾಗಿ ಪ್ರಾಪ್ತನಾಗಿದ್ದಾನೆ. ನಾನು ಇವನನ್ನು ಬಿಡುವುದಿಲ್ಲ ಮತ್ತು ಬೇರೆ ಆಹಾರವನ್ನೂ ಬಯಸುವುದಿಲ್ಲ.
ಪ್ರಶ್ನಾನುಚ್ಚಾರಿತಾನದ್ಯ ವ್ಯಾಹರಿಷ್ಯಸಿ ಚೇನ್ಮಮ |
ಅಥ ಪಶ್ಚಾದ್ ವಿಮೋಕ್ಷ್ಯಾಮಿ ಭ್ರಾತರಂ ತೇ ವೃಕೋದರಮ್ ॥12॥
ಒಂದುಪಕ್ಷ ನಾನು ಕೇಳಿದ ಪ್ರಶ್ನೆಗಳಿಗೆ ನೀನು ಉತ್ತರವನ್ನು ಕೊಡುವುದಾದರೆ ಅನಂತರ ನಿನ್ನ ತಮ್ಮನಾದ ವೃಕೋದರನನ್ನು ಬಿಡುಗಡೆಗೊಳಿಸುತ್ತೇನೆ.
ಯುಧಿಷ್ಠಿರಃ
ಬ್ರೂಹಿ ಸರ್ಪ ಯಥಾಕಾಮಂ ಪ್ರತಿವಕ್ಷ್ಯಾಮಿ ತೇ ವಚಃ |
ಅಪಿ ಚೇಚ್ಛಕ್ನುಯಾಂ ಪ್ರೀತಿಮಾಹರ್ತುಂ ತೇ ಭುಜಂಗಮ ॥13॥
ಯುಧಿಷ್ಠಿರ ಎಲೈ ಭುಜಂಗಮವೇ, ನೀನು ಪ್ರಶ್ನೆಗಳನ್ನು ಕೇಳು. ಉತ್ತರವನ್ನು ಕೊಟ್ಟು ನಿನ್ನನ್ನು ಸಂತೋಷಪಡಿಸಲು ಸಾಧ್ಯವಾದರೆ ನಾನು ಉತ್ತರಗಳನ್ನು ಹೇಳುವೆನು.
ವೇದ್ಯಂ ಚ ಬ್ರಾಹ್ಮಣೇನೇಹ ತದ್ಭವಾನ್ ವೇತ್ತಿ ಕೇವಲಮ್ |
ಸರ್ಪರಾಜ ತತಃ ಶ್ರುತ್ವಾ ಪ್ರತಿವಕ್ಷ್ಯಾಮಿ ತೇ ವಚಃ ॥14॥
ಎಲೈ ಸರ್ಪರಾಜನೇ, ಬ್ರಾಹ್ಮಣನು ಏನು ತಿಳಿಯಬೇಕೋ ಅದೆಲ್ಲವನ್ನೂ ನೀನು ತಿಳಿದಿದ್ದೀಯೆ. ಆದ್ದರಿಂದ ನಿನ್ನ ಪ್ರಶ್ನೆಗಳನ್ನು ಕೇಳಿ ಅನಂತರ ಉತ್ತರವನ್ನು ಹೇಳುವೆನು.
ಸರ್ಪಃ
ಬ್ರಾಹ್ಮಣಃ ಕೋ ಭವೇದ್ ರಾಜನ್ ವೇದ್ಯಂ ಕಿಂ ಚ ಯುಧಿಷ್ಠಿರ |
ಬ್ರುವೀಹ್ಯತಿಮತಿಂ ತ್ವಾಂ ಹಿ ವಾಕ್ಯೈರನುಮಿಮೀಮಹೇ ॥15॥
ಸರ್ಪ ಯುಧಿಷ್ಠಿರನೇ, ಬ್ರಾಹ್ಮಣನೆಂದರೆ ಯಾರು? ಮತ್ತು ವೇದ್ಯವಾದ ವಸ್ತುವೆಂದರೆ ಯಾವುದು ಎಂದು ಹೇಳು. ನಿನ್ನ ವಾಕ್ಯಗಳಿಂದ ನೀನು ಮಹಾ ಮೇಧಾವಿ ಎಂದು ಭಾವಿಸುತ್ತೇನೆ.
ಯುಧಿಷ್ಠಿರಃ
ಸತ್ಯಂ ದಾನಂ ಕ್ಷಮಾ ಶೀಲಮಾನೃಶಂಸ್ಯಂ ತಪೋ ಘೃಣಾ |
ದೃಶ್ಯಂತೇ ಯತ್ರ ನಾಗೇಂದ್ರ ಸ ಬ್ರಾಹ್ಮಣ ಇತಿ ಸ್ಮೃತಿಃ(ತಃ) ॥16॥
ಯುಧಿಷ್ಠಿರ ಎಲೈ ನಾಗೇಂದ್ರನೇ, ಸತ್ಯ, ದಾನ, ಕ್ಷಮಾ, ಶೀಲ, ಮಾರ್ದವ, ದಯೆ ಈ ಗುಣಗಳು ಎಲ್ಲಿ ಕಾಣುತ್ತವೆಯೋ ಅವನನ್ನು ಬ್ರಾಹ್ಮಣನೆಂದು ಕರೆಯುತ್ತಾರೆ.
ದೀನಾನುಕಂಪೀ ಸತತಂ ಸತತಂ ಸಾಧುವತ್ಸಲಃ |
ನಿತ್ಯಂ ದಾನರತಶ್ಚೈವ ತಂ ದೇವಾ ಬ್ರಾಹ್ಮಣಂ ವಿದುಃ ॥16.1॥
ಯಾವನು ದೀನಾನುಕಂಪಿಯೋ, ಸತತವಾಗಿ ಸಾಧುಗಳಲ್ಲಿ ಪ್ರೀತಿಯುಳ್ಳವನಾಗಿದ್ದಾನೆಯೋ ಮತ್ತು ನಿತ್ಯವೂ ದಾನರತವನಾಗಿದ್ದಾನೆಯೋ ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಸರ್ಪಃ
ಯತ್ನೇನ ಬ್ರೂಹಿ ರಾಜೇಂದ್ರ ಕಃ ಕಾಲಃ ಶ್ರಾದ್ಧದಾನಯೋಃ |
ಪ್ರಶ್ನಂ ಪ್ರಶ್ನವಿದಾಂ ಶ್ರೇಷ್ಠ ಸರ್ವವಿತ್ತ್ವಂ ಮತೋಽಸಿ ಮೇ ॥16.2॥
ಸರ್ಪ ಎಲೈ ರಾಜೇಂದ್ರನೇ, ಶ್ರಾದ್ಧ ಮತ್ತು ದಾನಗಳಿಗೆ ಯಾವುದು ಯೋಗ್ಯವಾದ ಕಾಲವೆಂದು ವಿಚಾರಮಾಡಿ ಹೇಳು. ನೀನು ಪ್ರಶ್ನೆಗಳಿಗೆ ಉತ್ತರವನ್ನು ಹೇಳುವುದರಲ್ಲಿ ಶ್ರೇಷ್ಠನಾದವನು. ನೀನು ಸರ್ವಜ್ಞನೆಂದು ನನ್ನ ಅಭಿಪ್ರಾಯ.
ಯುಧಿಷ್ಠಿರಃ
ಯತ್ರ ವೈ ಬ್ರಾಹ್ಮಣಂ ಪಶ್ಯೇಚ್ಛ್ರೋತ್ರಿಯಂ ಧ್ಯಾನತತ್ಪರಮ್ |
ಧನಂ ಮನ್ಯೇದ್ ವಿಶಿಷ್ಟಂ ತು ಸ ಕಾಲಃ ಶ್ರದ್ಧಾದಾನಯೋಃ ॥16.3॥
ಯುಧಿಷ್ಠಿರ ಯಾವಾಗ ಶ್ರೋತ್ರಿಯನು ಜ್ಞಾನತತ್ಪರನೂ ಆದ ಬ್ರಾಹ್ಮಣನು ದೊರೆಯುತ್ತಾನೆಯೋ ಮತ್ತು ತನ್ನ ಬಳಿ ವಿಶಿಷ್ಟವಾದ ಧನವಿದೆ ಎಂದು ತಿಳಿಯುತ್ತಾನೆಯೋ ಅದು ಶ್ರಾದ್ಧ ದಾನಗಳಿಗೆ ಯೋಗ್ಯವಾದ ಕಾಲ.
ಸರ್ಪಃ
ಕಿಂ ವೇದ್ಯಂ ಪರಮಂ ರಾಜನ್ ಪ್ರಶಂಸ ಮೇ ತ್ವಂ ಯುಧಿಷ್ಠಿರ ॥
ಸರ್ವಜ್ಞೋಽಸಿ ಮಹಾಬಾಹೋ ವಾಕ್ಯೈರನುಮಿಮೀಮಹೇ |
ಸರ್ಪ ರಾಜನೇ, ತಿಳಿಯಲ್ಪಡಬೇಕಾದ ವಸ್ತುಗಳಲ್ಲಿ ಶ್ರೇಷ್ಠವಾದುದು ಯಾವುದು? ಯುಧಿಷ್ಠಿರನೇ ಅದನ್ನು ನನಗೆ ಹೇಳು. ಮಹಾಬಾಹುವೇ, ನಿನ್ನ ವಾಕ್ಯದಿಂದ ನೀನು ಸರ್ವಜ್ಞನೆಂದು ಊಹಿಸುತ್ತೇನೆ.
ಯುಧಿಷ್ಠಿರಃ

ವೇದ್ಯಂ ಸರ್ಪ ಪರಂ ಬ್ರಹ್ಮ ನಿರ್ದುಃಖಮಸುಖಂ ಚ ಯತ್ |
ಯತ್ರ ಗತ್ವಾ ನ ಶೋಚಂತಿ ಭವತಃ ಕಿಂ ವಿವಕ್ಷಿತಮ್ ॥17॥
ಯುಧಿಷ್ಠಿರ ಎಲೈ ಸರ್ಪವೇ, ವೇದ್ಯವಾದ ವಸ್ತುವೆಂದರೆ ಎಲ್ಲ ವಿಧವಾದ ದುಃಖದಿಂದ ಮತ್ತು ಪ್ರಾಕೃತವಾದ ಸುಖದಿಂದ ರಹಿತವಾದ ಪರಬ್ರಹ್ಮ. ಯಾವನನ್ನು ಹೊಂದಿದರೆ ಜೀವನು ದುಃಖಪಡುವುದಿಲ್ಲವೋ ಅಂತಹ ವಸ್ತುವು ಅವನು. ನಿನ್ನ ಅಭಿಪ್ರಾಯವೇನು?
ಸರ್ಪಃ
ಚಾತುರ್ವರ್ಣ್ಯಂ ಪ್ರಮಾಣಂ ಚ ಸತ್ಯಂ ಚ ಬ್ರಹ್ಮ ಚೈವ ಹಿ |
ಶೂದ್ರೇಷ್ವಪಿ ಚ ಸತ್ಯಂ ಚ ದಾನಮಕ್ರೋಧ ಏವ ಚ ॥18॥
ಆನೃಶಂಸ್ಯಮಹಿಂಸಾ ಚ ಘೃಣಾ ಚೈವ ಯುಧಿಷ್ಠಿರ |
ವೇದ್ಯಂ ಯಚ್ಚಾತ್ರ ನಿರ್ದುಃಖಮಸುಖಂ ಚ ನರಾಧಿಪ |
ತಾಭ್ಯಾಂ ಹೀನಂ ಪದಂ ಚಾನ್ಯನ್ನ ತದಸ್ತೀತಿ ಲಕ್ಷಯೇ ॥19॥
ಸರ್ಪ ನಾಲ್ಕುವರ್ಣಗಳ ಆಚಾರವು ಬ್ರಾಹ್ಮಣಾದಿ ಜಾತಿ ವಿಷಯದಲ್ಲಿ ಒಂದು ಪ್ರಮಾಣ. ಶಾಶ್ವತವಾದ ವೇದವೂ ಪ್ರಮಾಣ. ಎಲೈ ಯುಧಿಷ್ಠಿರನೇ, ಶೂದ್ರರಲ್ಲಿಯೂ ಸತ್ಯ, ದಾನ, ಅಕ್ರೋಧ, ಮಾರ್ದವ, ಅಹಿಂಸೆ ಮತ್ತು ದಯೆ ಇಂತಹ ಗುಣಗಳು ಕಂಡುಬರುತ್ತವೆ. ಎಲೈ ನರಾಧಿಪನೇ, ವೇದ್ಯವಾದ ವಸುತವೆಂದರೆ ಸುಖ ದುಃಖರಹಿತವಾದುದು. ಅಂತಹ ಪ್ರಾಕೃತ ಸುಖದುಃಖರಹಿತವಾದ ವಸ್ತುವು ಈ ಸಂಸಾರದಲ್ಲಿ ಇನ್ನೊಂದು ಕಾಣುವುದಿಲ್ಲ.
ತಾಂಶ್ಚ ಸರ್ವಾನಶೇಷೇಣ ಕಥಯಸ್ವ ನರಾಧಿಪ |
ಎಲೈ ನರಾಧಿಪನೇ, ಈ ವಿಷಯವನ್ನು ಸಮಗ್ರವಾಗಿ ಹೇಳು.
ಯುಧಿಷ್ಠಿರಃ
ಶೂದ್ರೇ ತು ಯದ್ಭವೇಲ್ಲಕ್ಷ್ಮ ದ್ವಿಜೇ ತಚ್ಚ ನ ವಿದ್ಯತೇ |
ನ ವೈ ಶೂದ್ರೋ ಭವೇಚ್ಛೂದ್ರೋ ಬ್ರಾಹ್ಮಣೋ ನ ಚ ಬ್ರಾಹ್ಮಣಃ ॥20॥
ಯುಧಿಷ್ಠಿರ ಯಾವ ಸತ್ಯಾದಿ ಲಕ್ಷಣಗಳು ಶೂದ್ರನಲ್ಲಿ ಇರುತ್ತವೆಯೋ ಮತ್ತು ಬ್ರಾಹ್ಮಣನಲ್ಲಿ ಇರುವುದಿಲ್ಲವೋ ಆ ಶೂದ್ರನು ಶೂದ್ರನಲ್ಲ. ಆ ಬ್ರಾಹ್ಮಣನು ಬ್ರಾಹ್ಮಣನೂ ಅಲ್ಲ.
ಯತ್ರೈತಲ್ಲಕ್ಷ್ಯತೇ ಸರ್ಪ ವೃತ್ತಂ ಸ ಬ್ರಾಹ್ಮಣಃ ಸ್ಮೃತಃ |
ಯತ್ರೈತನ್ನ ಭವೇತ್ ಸರ್ಪ ತಂ ಶೂದ್ರಮಿತಿ ನಿರ್ದಿಶೇತ್ ॥21॥
ಎಲೈ ಸರ್ಪವೇ, ಎಲ್ಲಿ ಇಂತಹ ಸತ್ಯಾದಿ ನಡತೆಯು ಕಾಣುತ್ತದೆಯೋ ಅವನನ್ನೇ ಬ್ರಾಹ್ಮಣನೆಂದು ಹೇಳಬೇಕು. ಎಲ್ಲಿ ಕಾಣುವುದಿಲ್ಲವೋ ಅವನನ್ನು ಶೂದ್ರನೆಂದು ಹೇಳಬೇಕು.
ಯತ್ ಪುನರ್ಭವತಾ ಪ್ರೋಕ್ತಂ ನ ವೇದ್ಯಂ ವಿದ್ಯತೀತಿ ಚ |
ತಾಭ್ಯಾಂ ಹೀನಮತೋಽನ್ಯತ್ರ ಪದಂ ನಾಸ್ತೀ(ದಮಸ್ತೀ)ತಿ ಚೇದಪಿ ॥
ಪ್ರಾಕೃತ ಸುಖದುಃಖದಿಂದ ಹೀನವಾದ ಇನ್ನೊಂದು ವಸ್ತುವು ಈ ಸಂಸಾರದಲ್ಲಿ ಇಲ್ಲವೆಂದು ಹೇಳಿದೆಯಷ್ಟೆ?
ಏವಮೇತನ್ಮತಂ ಸರ್ಪ ತಾಭ್ಯಾಂ ಹೀನಂ ನ ವಿದ್ಯತೇ |
ಯಥಾ ಶೀತೋಷ್ಣಯೋರ್ಮಧ್ಯೇ ಭವೇನ್ನೋಷ್ಣಂ ನ ಶೀತತಾ ॥23॥
ಏವಂ ವೈ ಸುಖದುಃಖಾಭ್ಯಾಂ ಹೀನಂ ನಾ(ನಮ)ಸ್ತಿ ಪದಂ ಕ್ವಚಿತ್ |
ಏಷಾ ಮಮ ಮತಿಃ ಸರ್ಪ ಯಥಾ ವಾ ಮನ್ಯತೇ ಭವಾನ್ ॥24॥
ಎಲೈ ಸರ್ಪವೇ, ನನ್ನ ಅಭಿಪ್ರಾಯವೂ ಹಾಗೆಯೇ. ಶೀತ ಉಷ್ಣಗಳ ಮಧ್ಯೆ ಯಾವುದು ಉಷ್ಣವಲ್ಲದ ಮತ್ತು ಶೈತ್ಯವಿಲ್ಲದ ವಸ್ತುವಿಲ್ಲವೋ ಅದರಂತೆ ಸುಖದುಃಖದಿಂದ ರಹಿತವಾದ ವಸ್ತುವು ಇನ್ನೊಂದು ಇಲ್ಲ. ಇದು ನನ್ನ ಅಭಿಪ್ರಾಯ. ನಿನ್ನ ಅಭಿಪ್ರಾಯವೇನು?
ಸರ್ಪಃ
ಯದಿ ತೇ ವೃತ್ತತೋ ರಾಜನ್ಬ್ರಾಹ್ಮಣಃ ಪ್ರಸಮೀಕ್ಷಿತಃ |
ವೃಥಾ ಜಾತಿಸ್ತದಾಽಽಯುಷ್ಮನ್ ಕೃತಿರ್ಯಾವನ್ನ ವಿದ್ಯತೇ ॥25॥
ಸರ್ಪ ಎಲೈ ಆಯುಷ್ಮಂತನಾದ ರಾಜನೇ, ನಡತೆಯಿಂದಲೇ ಬ್ರಾಹ್ಮಣನೆಂದು ನಿರ್ಧರಿಸುವುದಾದರೆ ಎಲ್ಲಿ ನಡತೆಯಿಲ್ಲವೋ ಅಂತಹ ಸ್ಥಳದಲ್ಲಿ ಜಾತಿಯು ವ್ಯರ್ಥವಾಗುತ್ತದೆ.
ಯುಧಿಷ್ಠಿರಃ
ಜಾತಿರತ್ರ ಮಹಾಸರ್ಪ ಮನುಷ್ಯತ್ವೇ ಮಹಾಮತೇ |
ಸಂಕರಾತ್ ಸರ್ವವರ್ಣಾನಾಂ ದುಷ್ಪರೀಕ್ಷ್ಯೇತಿ ಮೇ ಮತಿಃ ॥26॥
ಯುಧಿಷ್ಠಿರ ಎಲೈ ಮಹಾಬುದ್ಧಿಯುಳ್ಳ ಮಹಾಸರ್ಪವೇ, ಈ ಸಂಸಾರದಲ್ಲಿ ಮನುಷ್ಯರಲ್ಲಿ ಎಲ್ಲ ವರ್ಣಗಳಲ್ಲಿಯೂ ಸಾಂಕರ್ಯವಿರುವುದರಿಂದ ಜಾತಿಯನ್ನು ನಿರ್ಧರಿಸುವುದು ಕಷ್ಟ ಎಂದು ನನ್ನ ಅಭಿಪ್ರಾಯ.
ಸರ್ವೇ ಸರ್ವಾಸ್ವಪತ್ಯಾನಿ ಜನಯಂತಿ ಸದಾ ನರಾಃ |
ವಾಙ್ ಮೈಥುನಮಥೋ ಜನ್ಮ ಮರಣಂ ಚ ಸಮಂ ನೃಣಾಮ್ ॥27॥
ಮನುಷ್ಯರಲ್ಲಿ ಎಲ್ಲ ಪುರುಷರೂ ಎಲ್ಲ ಸ್ತ್ರೀಯರಲ್ಲಿಯೂ ಮಕ್ಕಳನ್ನು ಪಡೆಯುತ್ತಾರೆ. ವಾಕ್, ಮೈಥುನ, ಜನನಮರಣಗಳು ಈ ನಾಲ್ಕು ಎಲ್ಲ ಮನುಷ್ಯರಿಗೂ ಸಮಾನವಾಗಿವೆ.
ಇದಮಾರ್ಷಂ ಪ್ರಮಾಣಂ ಚ ಯೇ ಯಜಾಮಹ ಇತ್ಯಪಿ |

ತಸ್ಮಾಚ್ಛೀಲಂ ಪ್ರಧಾನೇಷ್ಟಂ ವಿದುರ್ಯೇ ತತ್ತ್ವದರ್ಶಿನಃ ॥28॥
ಯೇ ಯಜಾಮಹೇ ಇತ್ಯಾದಿ ವೇದವಾಕ್ಯವು ಬ್ರಾಹ್ಮಣಾದಿಗಳ ಆಚಾರದಲ್ಲಿ ಪ್ರಮಾಣವಾದುದು. ಆದ್ದರಿಂದ ಶೀಲವೇ ಪ್ರಧಾನವಾದುದು ಮತ್ತು ಅಪೇಕ್ಷಿತವಾದುದೆಂದು ಜ್ಞಾನಿಗಳು ತಿಳಿಯುತ್ತಾರೆ.
ಪ್ರಾಙ್ನಾಭಿವರ್ಧನಾತ್ ಪುಂಸೋ ಜಾತಕರ್ಮ ವಿಧೀಯತೇ |
ತತಸ್ತು ನಾಮಕರಣಂ ತತಶ್ಚೌಲಂ ವಿಧೀಯತೇ ॥29॥
ನಾಭಿನಾಳವನ್ನು ಕತ್ತರಿಸುವುದಕ್ಕಿಂತ ಮುಂಚೆ ದ್ವಿಜಾತಿಗಳಿಗೆ ಜಾತಕರ್ಮವು ಅನಂತರ ನಾಮಕರಣವು ಅನಂತರ ಚೌಲವು ವಿಧಿಸಲ್ಪಡುತ್ತದೆ.
ತತೋಪನಯನಂ ಪ್ರೋಕ್ತಂ ದ್ವಿಜಾತೀನಾಂ ಯಥಾವಿಧಿ |
ತದಾ(ತ್ರಾ)ಸ್ಯ ಮಾತಾ ಸಾವಿತ್ರೀ ಪಿತಾ ತ್ವಾಚಾರ್ಯ ಉಚ್ಯತೇ ॥30॥
ಅನಂತರ ದ್ವಿಜರಿಗೆ ವಿಧಿಪೂರ್ವಕವಾಗಿ ಉಪನಯನವು ಹೇಳಲ್ಪಡುತ್ತದೆ. ಉಪನಯನವಾದಾಗ ಆ ವ್ಯಕ್ತಿಗೆ ಗಾಯತ್ರಿಯು ತಾಯಿಯೂ ಆಚಾರ್ಯನು ತಂದೆಯೂ ಆಗುತ್ತಾರೆ ಎಂದು ಹೇಳಲ್ಪಡುತ್ತದೆ.
ತಾವಚ್ಛೂದ್ರಸಮೋ ಹ್ಯೇಷ ಯಾವದ್ವೇದೇ ನ ಜಾಯತೇ |
ತಸ್ಮಿನ್ನೇವಂ ಮತಿದ್ವೈಧೇ ಮನುಃ ಸ್ವಾಯಂಭುವೋಽಬ್ರವೀತ್ ॥31॥
ಕೃತಕೃತ್ಯಾಃ ಪುನರ್ವರ್ಣಾ ಯದಿ ವೃತ್ತಂ ನ ವಿದ್ಯತೇ |
ಸಂಕರಸ್ತ್ವತ್ರ ನಾಗೇಂದ್ರ ಬಲವಾನ್ ಪ್ರಸಮೀಕ್ಷಿತಃ ॥32॥
ಎಲ್ಲಿಯವರೆಗೆ ವೇದಗ್ರಹಣವನ್ನು ಮಾಡುವುದಿಲ್ಲವೋ ಅಲ್ಲಿಯವರೆಗೆ ದ್ವಿಜನು ಶೂದ್ರಸಮಾನನಾಗುತ್ತಾನೆ. ಆದ್ದರಿಂದ ಜಾತಿಯ ವಿಷಯದಲ್ಲಿ ಈ ರೀತಿ ಸಂಶಯವುಂಟಾದರೆ ಸ್ವಾಯಂಭುವ ಮನುವು ಆಚಾರವಿಲ್ಲದ ಸ್ಥಳದಲ್ಲಿ ಜಾತಿಗಳು ಅಪ್ರಯೋಜಕ ಎಂದು ಹೇಳಿದ್ದಾನೆ. ಎಲೈ ನಾಗೇಂದ್ರನೇ, ಜನ್ಮದಿಂದ ಜಾತಿಯನ್ನು ನಿರ್ಧರಿಸುವುದಾದರೆ ಈ ವಿಷಯದಲ್ಲಿ ಪ್ರಬಲವಾದ ಸಾಂಕರ್ಯವು ಕಾಣುತ್ತದೆ.
ಯತ್ರೇದಾನೀಂ ಮಹಾಸರ್ಪ ಸಂಸ್ಕೃತಂ ವೃತ್ತಮಿಷ್ಯತೇ |
ತಂ ಬ್ರಾಹ್ಮಣಮಹಂ ಪೂರ್ವಮುಕ್ತವಾನ್ ಭುಜಗೋತ್ತಮ ॥33॥
ಭುಜಗೋತ್ತಮನೇ, ಮಹಾಸರ್ಪವೇ, ಆದ್ದರಿಂದ ಈಗ ಎಲ್ಲಿ ಸುಸಂಸ್ಕೃತವಾದ ನಡತೆಯು ಕಾಣುತ್ತದೆಯೋ ಅವನು ಬ್ರಾಹ್ಮಣ ಎಂದು ನಾನು ಮೊದಲೇ ಹೇಳಿದೆ.
ಸರ್ಪಃ
ಶ್ರುತಂ ವಿದಿತವೇದ್ಯಸ್ಯ ತವ ವಾಕ್ಯಂ ಯುಧಿಷ್ಠಿರ |
ಭಕ್ಷಯೇಯಮಹಂ ಕಸ್ಮಾದ್ ಭ್ರಾತರಂ ತೇ ವೃಕೋದರಮ್ ॥34॥
ಸರ್ಪ ಎಲೈ ಯುಧಿಷ್ಠಿರನೇ, ಸರ್ವಜ್ಞನಾದ ನಿನ್ನ ಮಾತುಗಳನ್ನು ಕೇಳಿದೆನು. ನಿನ್ನ ತಮ್ಮನಾದ ವೃಕೋದರನನ್ನು ನಾನು ಹೇಗೆ ಭಕ್ಷಿಸಿಯೇನು?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಃಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಅಜಗರಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ನಾಲ್ಕನೆಯ
ಅಧ್ಯಾಯ ಮುಗಿಯಿತು
* * * *

ನೂರ ಎಪ್ಪತ್ತೈದನೆಯ ಅಧ್ಯಾಯ
ದಾನ ಅಹಿಂಸಾದಿ ವಿಷಯಗಳಲ್ಲಿ ಸರ್ಪ ಮತ್ತು ಯುಧಿಷ್ಠಿರನ ಸಂವಾದ.
ಯುಧಿಷ್ಠಿರಃ
ಭವಾನೇತಾದೃಶೋ ಲೋಕೇ ವೇದವೇದಾಂಗಪಾರಗಃ |
ಬ್ರೂಹಿ ಕಿಂ ಕುರ್ವತಃ ಕರ್ಮ ಭವೇದ್ ಗತಿರನುತ್ತಮಾ ॥1॥
ಯುಧಿಷ್ಠಿರ ನೀನು ಈ ಲೋಕದಲ್ಲಿ ವೇದವೇದಾಂಗ ಪಾರಂಗತನಾದ ಇಂತಹ ವ್ಯಕ್ತಿಯಾಗಿದ್ದೀಯೆ. ಯಾವ ಕರ್ಮವನ್ನು ಮಾಡಿದರೆ ಶ್ರೇಷ್ಠವಾದ ಗತಿಯಾಗುತ್ತದೆ ಎಂದು ಹೇಳು.
ಸರ್ಪಃ
ಪಾತ್ರೇ ದತ್ತ್ವಾ ಪ್ರಿಯಾಣ್ಯುಕ್ತ್ವಾ ಸತ್ಯಮುಕ್ತ್ವಾ ಚ ಭಾರತ |
ಅಹಿಂಸಾನಿರತಃ ಸ್ವರ್ಗಂ ಗಚ್ಛೇದಿತಿ ಮತಿರ್ಮಮ ॥2॥
ಸರ್ಪ ಎಲೈ ಭಾರತನೇ, ಪಾತ್ರದಲ್ಲಿ ದಾನವನ್ನು ಮಾಡಿ ಪ್ರಿಯವಚನಗಳನ್ನು, ಸತ್ಯವಚನಗಳನ್ನು ಆಡಿ ಅಹಿಂಸಾ ನಿರತನಾದ ಪುರುಷನು ಸ್ವರ್ಗಕ್ಕೆ ಹೋಗುವನೆಂದು ನನ್ನ ಅಭಿಪ್ರಾಯ.
ಯುಧಿಷ್ಠಿರಃ
ದಾನಾದ್ವಾ ಸರ್ಪ ಸತ್ಯಾದ್ವಾ ಕಿಮತೋ ಗುರು ದೃಶ್ಯತೇ |
ಅಹಿಂಸಾಪ್ರಿಯಯೋಶ್ಚೈವ ಗುರುಲಾಘವಮುಚ್ಯತಾಮ್ ॥3॥

ಯುಧಿಷ್ಠಿರ ಎಲೈ ಸರ್ಪವೇ, ದಾನ ಮತ್ತು ಸತ್ಯವಚನ ಇವೆರಡರಲ್ಲಿ ಯಾವುದು ಶ್ರೇಷ್ಠವಾದುದು? ಹಾಗೆಯೇ ಅಹಿಂಸಾ ಮತ್ತು ಪ್ರಿಯವಚನಗಳಲ್ಲಿ ಯಾವುದು ಶ್ರೇಷ್ಠ ಮತ್ತು ಯಾವುದು ಕನಿಷ್ಠ ಎಂದು ಹೇಳು.
ಸರ್ಪಃ
ದಾನಂ ಚ ಸತ್ಯಂ ತತ್ತ್ವಂ ವಾ ಅಹಿಂಸಾ ಪ್ರಿಯಮೇವ ಚ |
ಏಷಾಂ ಕಾರ್ಯಗರೀಯಸ್ತ್ವಾದ್ ದೃಶ್ಯತೇ ಗುರುಲಾಘವಮ್ ॥4॥
ಸರ್ಪ ದಾನ ಸತ್ಯವಚನಗಳು, ಅಹಿಂಸಾ ಮತ್ತು ಪ್ರಿಯವಚನಗಳು ಇವುಗಳಿಂದ ಉಂಟಾಗುವ ಕಾರ್ಯಗಳನ್ನು ಗಮನಿಸಿ ಯಾವುದು ಶ್ರೇಷ್ಠ, ಯಾವುದು ಕನಿಷ್ಠ ಎಂದು ಹೇಳಬೇಕು.
ಕ್ವಚಿದ್ ದಾನಪ್ರಯೋಗಾದ್ಧಿ ಸತ್ಯಮೇವ ವಿಶಿಷ್ಯತೇ |
ಸತ್ಯವಾಕ್ಯಾಚ್ಚ ರಾಜೇಂದ್ರ ಕಿಂಚಿದ್ದಾನಂ ವಿಶಿಷ್ಯತೇ ॥5॥
ಸತ್ಯವನ್ನು ಹೇಳಿದರೆ ಯಾರಿಗೂ ಅನಿಷ್ಟವಾಗದಿದ್ದರೆ ಆಗ ದಾನಕ್ಕಿಂತಲೂ ಸತ್ಯವೇ ಶ್ರೇಷ್ಠವಾಗುತ್ತದೆ. ಕಳ್ಳನು ಬ್ರಾಹ್ಮಣ ಹಿಂಸೆಯನ್ನು ಮಾಡುವುದಕ್ಕೋಸ್ಕರ ಬ್ರಾಹ್ಮಣರನ್ನು ಹುಡುಕುತ್ತಿದ್ದರೆ ಅಲ್ಲಿ ಸತ್ಯವಚನದಿಂದ ಹಿಂಸೆಯೇ ಉಂಟಾಗುವುದರಿಂದ ಅಂತಹ ಸ್ಥಳದಲ್ಲಿ ಸತ್ಯವಚನಕ್ಕಿಂತಲೂ ದಾನವೇ ಶ್ರೇಷ್ಠವಾಗುತ್ತದೆ.
ಏವಮೇವ ಮಹೇಷ್ವಾಸ ಪ್ರಿಯವಾಕ್ಯಾನ್ ಮಹೀಪತೇ |
ಅಹಿಂಸಾ ದೃಶ್ಯತೇ ಗುರ್ವೀ ತತಶ್ಚ ಪ್ರಿಯಮಿಷ್ಯತೇ ॥6॥
ಎಲೈ ಮಹೇಷ್ವಾಸನೇ, ಎಲೈ ಮಹೀಪತಿಯೇ, ಇದರಂತೆ ಒಮ್ಮೊಮ್ಮೆ ಪ್ರಿಯವಚನಕ್ಕಿಂತಲೂ ಅಹಿಂಸೆಯೇ ಶ್ರೇಷ್ಠವಾಗುತ್ತದೆ. ಮತ್ತೊಮ್ಮೆ ಅಹಿಂಸೆಗಿಂತಲೂ ಪ್ರಿಯವಚನವೇ ಶ್ರೇಷ್ಠವಾಗುತ್ತದೆ.
ಏವಮೇತದ್ ಭವೇದ್ರಾಜನ್ ಕಾರ್ಯಾಪೇಕ್ಷಮನಂತರಮ್ |
ಯದಭಿಪ್ರೇತಮನ್ಯತ್ ತೇ ಬ್ರೂಹಿ ಯಾವದ್ ಬ್ರವೀಮ್ಯಹಮ್ ॥7॥
ರಾಜನೇ, ಹೀಗೆ ಅನಂತರ ಉಂಟಾಗುವ ಕಾರ್ಯವನ್ನು ಗಮನಿಸಿ ಜ್ಯೇಷ್ಠ ಕನಿಷ್ಠತೆಗಳನ್ನು ನಿರ್ಧರಿಸಬೇಕು. ನೀನು ಬೇರೆ ಏನನ್ನಾದರೂ ಕೇಳುವುದಿದ್ದರೆ ಕೇಳು. ಅದಕ್ಕೆ ಉತ್ತರವನ್ನು ಹೇಳುತೆತೇನೆ.
ಯುಧಿಷ್ಠಿರಃ
ಕಥಂ ಸ್ವರ್ಗೇ ಗತಿಃ ಸರ್ಪ ಕರ್ಮಣಾಂ ಚ ಫಲಂ ಧ್ರುವಮ್ |
ಅಶರೀರಸ್ಯ ದೃಶ್ಯೇತ ಪ್ರಬ್ರೂಹಿ ವಿಷಯಾಂಶ್ಚ ಮೇ ॥8॥
ಯುಧಿಷ್ಠಿರ ಎಲೈ ಸರ್ಪವೇ, ಕರ್ಮಗಳಿಗೆ ಅವಶ್ಯವಾಗಿ ಫಲಗಳು ಉಂಟಾಗುತ್ತವೆ. ಶರೀರವನ್ನು ಇಲ್ಲೇ ತ್ಯಜಿಸಿದ ಪುರುಷನು ಹೇಗೆ ಸ್ವರ್ಗಕ್ಕೆ ಹೋಗುತ್ತಾನೆ? (ಹೋಗಿ ಕರ್ಮದ ಫಲವನ್ನು ಅನುಭವಿಸುತ್ತಾನೆ?) ಈ ವಿಷಯಗಳನ್ನು ನನಗೆ ಹೇಳು.
ಸರ್ಪಃ
ತಿಸ್ರೋ ವೈ ಗತಯೋ ರಾಜನ್ ಪರಿದೃಷ್ಟಾಃ ಸ್ವಕರ್ಮಭಿಃ |
ಮಾನುಷಂ ಸ್ವರ್ಗವಾಸಶ್ಚ ತಿರ್ಯಗ್ಯೋನಿಶ್ಚ ತತ್ ತ್ರಿಧಾ ॥9॥
ಸರ್ಪ ಎಲೈ ರಾಜನೇ, ತನ್ನ ಕರ್ಮಗಳಿಂದ ಮನುಷ್ಯ ಜನ್ಮ, ಸ್ವರ್ಗಪ್ರಾಪ್ತಿ, ತಿರ್ಯಗ್ಯೋನಿ ಪ್ರಾಪ್ತಿ ಎಂಬ ಮೂರುವಿಧವಾದ ಗತಿಗಳು ಕಂಡುಬರುತ್ತದೆ.
ತತ್ರ ವೈ ಮಾನುಷಾಲ್ಲೋಕಾದ್ ದಾನಾದಿಭಿರತಂದ್ರಿತಃ |
ಅಹಿಂಸಾರ್ಥಸಮಾಯುಕ್ತೈಃ ಕಾರಣೈಃ ಸ್ವರ್ಗಮಶ್ನುತೇ ॥10॥
ಮನುಷ್ಯಶರೀರದಲ್ಲಿದ್ದು ದಾನಾದಿಗಳನ್ನು ಮಾಡಿ ಅಹಿಂಸಾದಿಗಳನ್ನು ಅನುಷ್ಠಾನ ಮಾಡಿದರೆ ಆ ಕಾರಣದಿಂದ ಜೀವನು ಸ್ವರ್ಗವನ್ನು ಪಡೆಯುತ್ತಾನೆ.
ವಿಪರೀತೈಶ್ಚ ರಾಜೇಂದ್ರ ಕಾರಣೈರ್ಮಾನುಷೋ ಭವೇತ್ |
ತಿರ್ಯಗ್ಯೋನಿಸ್ತಥಾ ತಾತ ವಿಶೇಷಶ್ಚಾತ್ರ ವಕ್ಷ್ಯತೇ ॥11॥
ಎಲೈ ರಾಜೇಂದ್ರನೇ, ಇದಕ್ಕೆ ವಿಪರೀತವಾದ ಕರ್ಮವನ್ನು ಮಾಡಿದರೆ ಪುನಃ ಮನುಷ್ಯನಾಗುತ್ತಾನೆ. ಅಥವಾ ವಿಶೇಷವಾಗಿ ನೀಚಯೋನಿಗಳನ್ನು ಹೊಂದುತ್ತಾನೆ ಎಂದು ಹೇಳಲ್ಪಡುತ್ತದೆ.
ಕಾಮಕ್ರೋಧಸಮಾಯುಕ್ತೋ ಹಿಂಸಾಲೋಭಸಮನ್ವಿತಃ |
ಮನುಷ್ಯತ್ವಾತ್ ಪರಿಭ್ರಷ್ಟಸ್ತಿರ್ಯಗ್ಯೋನೌ ಪ್ರಸೂಯತೇ ॥12॥
ಕಾಮಕ್ರೋಧಗಳಿಂದ ಕೂಡಿ, ಹಿಂಸಾಲೋಭಗಳಿಂದ ಕೂಡಿ ಕರ್ಮಗಳನ್ನು ಮಾಡುವವನು ಮನುಷ್ಯತ್ವದಿಂದ ಭ್ರಷ್ಟನಾಗಿ ತಿರ್ಯಗ್ಯೋನಿಗಳಲ್ಲಿ ಜನಿಸುತ್ತಾನೆ.
ತಿರ್ಯಗ್ಯೋನ್ಯಾಃ ಪೃಥಗ್ಭಾವೋ ಮನುಷ್ಯಾರ್ಥೇ ವಿಧೀಯತೇ |
ಗವಾದಿಭ್ಯಸ್ತಥಾಶ್ವೇಭ್ಯೋ ದೇವತ್ವಮಪಿ ದೃಶ್ಯತೇ ॥13॥
ಪುನಃ ಮನುಷ್ಯನಾಗಿ ಹುಟ್ಟಬೇಕಾದರೆ ತಿರ್ಯಗ್ಯೋನಿಯನ್ನು ಹೊಂದಿಸುವ ನಡತೆಯನ್ನು ಬಿಟ್ಟು ಬೇರೆ ನಡತೆಯನ್ನು ಹೊಂದಿರಬೇಕೆಂದು ಹೇಳಲ್ಪಡುತ್ತದೆ. ಗವಾದಿ ಯೋನಿಗಳಿಂದ ಮತ್ತು ಅಶ್ವಯೋನಿಯಿಂದ ಸ್ವರ್ಗಪ್ರಾಪ್ತಿಯು ಕಂಡುಬರುತ್ತದೆ.
ಸೋಽಯಮೇತಾ ಗತಿ(ತೀ)ಸ್ತಾತ ಜಂತುಶ್ಚರತಿ ಕಾರ್ಯವಾನ್ |
ನಿತ್ಯೇ ಮಹತಿ ಚಾತ್ಮಾನಮವಸ್ಥಾಪಯತೇ ದ್ವಿಜಃ ॥14॥
ಪ್ರೀತಿಪಾತ್ರನೇ, ಹೀಗೆ ಕರ್ಮಗಳನ್ನು ಮಾಡುವ ಜಂತುವು ಈ ಮೂರು ಗತಿಗಳನ್ನು ಹೊಂದುವನು. ದ್ವಿಜನಾದವನು ಶ್ರವಣಾದಿ ಸಾಧನದಿಂದ ಶಾಶ್ವತವಾದ ಮೋಕ್ಷವನ್ನೂ ಹೊಂದುವನು.

ಜಾತೋ ಜಾತಶ್ಚ ಬಲವದ್ ಭುಂಕ್ತೇ ಚಾತ್ಮಾ ಸ ದೇಹವಾನ್ |
ಫಲಾರ್ಥಸ್ತಾತ ನಿಷ್ಪೃಕ್ತಃ ಪ್ರಜಾಪಾಲನಭಾವನಃ ॥15॥
ಪ್ರೀತಿಪಾತ್ರನೇ, ಫಲೋದ್ದೇಶದಿಂದ ಕರ್ಮವನ್ನು ಮಾಡಿದ ಜೀವನು ಮತ್ತೆ ಮತ್ತೆ ದೇಹವನ್ನು ಪಡೆದು ಹುಟ್ಟಿ ಬಲಾತ್ಕಾರದಿಂದ ತನ್ನ ಕರ್ಮದ ಫಲಗಳನ್ನು ಭೋಗಿಸುತ್ತಾನೆ. ಫಲಸಂಕಲ್ಪರಹಿತನಾಗಿ ಕರ್ಮಗಳನ್ನು ಮಾಡುವವನು ಜಗತ್ಪಾಲಕನಾದ ಪರಮಾತ್ಮನ ಧ್ಯಾನದಲ್ಲಿ ಇರುತ್ತಾನೆ.
ಯುಧಿಷ್ಠಿರಃ
ಶಬ್ದೇ ಸ್ಪರ್ಶೇ ಚ ರೂಪೇ ಚ ತಥೈವ ರಸಗಂಧಯೋಃ |
ತಸ್ಯಾಧಿಷ್ಠಾನಮವ್ಯಗ್ರೋ ಬ್ರೂಹಿ ಸರ್ಪ ಯಥಾತಥಮ್ ॥16॥
ಕಿಂ ನ ಗೃಹ್ಣಾಸಿ(ತಿ) ವಿಷಯಾನ್ ಯುಗಪತ್ ತ್ವಂ ಮಹಾಪತೇ |
ಏತಾವದುಚ್ಯತಾಂ ಚೋಕ್ತಂ ಸರ್ವಂ ಪನ್ನಗಸತ್ತಮ ॥17॥
ಯುಧಿಷ್ಠಿರ ಎಲೈ ಮಹಾಮೇಧಾವಿಯಾದ ಸರ್ಪವೇ, ಶಬ್ದ ಸ್ಪರ್ಶ ರೂಪ ರಸ ಗಂಧಗಳಿಗೆ ಯಾವುದು ಅಧಿಷ್ಠಾನವೆಂಬುದನ್ನು ಸರಿಯಾಗಿ ಹೇಳು? ಎಲೈ ಪನ್ನಗಶ್ರೇಷ್ಠನೇ, ಏಕೆ ಎರಡು ಜ್ಞಾನಗಳು ಒಂದೇ ಕಾಲದಲ್ಲಿ ಉತ್ಪನ್ನವಾಗುವುದಿಲ್ಲ ಎಂಬುದನ್ನೂ ಹೇಳು?
ಸರ್ಪಃ
ಯದಾತ್ಮದ್ರವ್ಯಮಾಯುಷ್ಮನ್ ದೇಹಸಂಶ್ರಯಣಾನ್ವಿತಮ್ |
ಕರಣಾಧಿಷ್ಠಿತಂ ಭೋಗಾನುಪಭುಂಕ್ತೇ ಯಥಾವಿಧಿ ॥18॥
ಸರ್ಪ ಎಲೈ ಆಯುಷ್ಮಂತನೇ, ಆತ್ಮರೂಪನಾದ ವಸ್ತುವು ದೇಹವನ್ನು ಆಶ್ರಯಿಸಿ ಕರಣಗಳಲ್ಲಿ ಅಧಿಷ್ಠಿತನಾಗಿ ತನ್ನ ಕರ್ಮಕ್ಕೆ ಅನುಗುಣವಾಗಿ ಬಂದ ಸುಖದುಃಖ ಅನುಭವಗಳನ್ನು ಭೋಗಿಸುತ್ತದೆ.
ಜ್ಞಾನಂ ಚೈವಾತ್ರ ಬುದ್ಧಿಶ್ಚ ಮನಶ್ಚ ಭರತರ್ಷಭ |
ತಸ್ಯ ಭೋಗಾಧಿಕರಣೇ ಕರಣಾನಿ ನಿಬೋಧ ಮೇ ॥19॥
ಎಲೈ ಭರತರ್ಷಭನೇ, ಜೀವನಿಗೆ ಇಂತಹ ಭೋಗಗಳನ್ನು ಅನುಭವಿಸಲು ಭೋಗಾಯತನವಾದ ಶರೀರದಲ್ಲಿರುವ ಜ್ಞಾನೇಂದ್ರಿಯಗಳು, ಬುದ್ಧಿ ಮತ್ತು ಮನಸ್ಸು ಇವುಗಳನ್ನು ಕರಣಗಳೆಂದು ತಿಳಿ (ಜ್ಞಾನೇಂದ್ರಿಯಗಳು ಏಳು ಎಂಬ ವಿವಕ್ಷೆ ಇರುವಾಗ ಮನಸ್ಸು ಮತ್ತು ಬುದ್ಧಿ ಬೇರೆ ಬೇರೆ ಕರಣಗಳಾಗುತ್ತವೆ. ಅದಲ್ಲದೇ ಮನಸ್ಸಿನಿಂದ ಉಂಟಾದ ಜ್ಞಾನಕ್ಕೂ ಬುದ್ಧಿ ಎಂಬ ವ್ಯವಹಾರವಿದೆ).
ಮನಸಾ ತಾತ ಪರ್ಯೇತಿ ಕ್ರಮಶೋ ವಿಷಯಾನಿಮಾನ್ |
ವಿಷಯಾಯತನಸ್ಥೇನ(ಸ್ಥೋ) ಹಿ ಭೂತಾತ್ಮಾ ಕ್ಷೇತ್ರನಿಃಸೃತಃ(ಮಾಸ್ಥಿತಃ) ॥
ಎಲೈ ಪ್ರೀತಿಪಾತ್ರನೇ, ಜೀವನು ತನ್ನ ಹೃದಯರೂಪಸ್ಥಾನದಲ್ಲಿ ಇದ್ದುಕೊಂಡು ವಿಷಯದಲ್ಲಿ ನೆಲೆಗೊಂಡ ಮನಸ್ಸಿನಿಂದ ಶಬ್ದಸ್ಪರ್ಶಾದಿ ವಿಷಯಗಳನ್ನು ಕ್ರಮವಾಗಿ ಸಂಚರಿಸುತ್ತಾನೆ.
ತತ್ರ ಚಾಪಿ ನರವ್ಯಾಘ್ರ ಮನೋ ಜಂತೋರ್ವಿಧೀಯತೇ |
ತಸ್ಮಾದ್ ಯುಗಪದತ್ರಾಸ್ಯ ಗ್ರಹಣಂ ನೋಪಪದ್ಯತೇ ॥21॥
ನರವ್ಯಾಘ್ರನೇ, ಅದರಲ್ಲೂ ಜ್ಞಾನವನ್ನು ಉಂಟುಮಾಡುವ ವಿಷಯದಲ್ಲಿ ಜೀವನಿಗೆ ಮನಸ್ಸು ಬಹಳ ವಿಶೇಷವಾದುದು ಎಂದು ಹೇಳಲ್ಪಡುತ್ತದೆ. ಆದ್ದರಿಂದ ಮನಸ್ಸು ಕ್ರಮವಾಗಿ ವಿಷಯಗಳಲ್ಲಿ ಹೋಗುವುದರಿಂದ ಒಂದೇ ಕಾಲದಲ್ಲಿ ಅನೇಕ ಜ್ಞಾನಗಳು ಉತ್ಪತ್ತಿಯಾಗುವುದಿಲ್ಲ.
ಸ ಆತ್ಮಾ ಪುರುಷವ್ಯಾಘ್ರ ಭ್ರುವೋರಂತರಮಾಶ್ರಿತಃ |
ಬುದ್ಧಿಂ ದ್ರವ್ಯೇಷು ಸೃಜತಿ ವಿವಿಧೇಷು ಪರಾವರಾಮ್ ॥22॥
ಎಲೈ ಪುರುಷವ್ಯಾಘ್ರನೇ, ಪರಮಾತ್ಮನು ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವನ್ನು ಆಶ್ರಯಿಸಿದವನಾಗಿ ಜೀವನಿಗೆ ಈ ವಿಧವಾದ ಶ್ರೇಷ್ಠ ಮತ್ತು ಕನಿಷ್ಠವಾದ ವಿಷಯಗಳ ಬುದ್ಧಿಯನ್ನು ಉಂಟುಮಾಡುತ್ತಾನೆ.
ಬುದ್ಧೇರುತ್ತರಕಾಲಾ ಚ ವೇದನಾ ದೃಶ್ಯತೇ ಬುಧೈಃ |
ಏಷ ವೈ ರಾಜಶಾರ್ದೂಲ ವಿಧಿಃ ಕ್ಷೇತ್ರಜ್ಞಭಾವನಃ ॥23॥
ಬುದ್ಧಿಯು ಉತ್ಪತ್ತಿಯಾದನಂತರ ಸುಖದುಃಖಭೋಗಗಳು ಉಂಟಾಗುವುದೆಂದು ಜ್ಞಾನಿಗಳು ತಿಳಿಯುತ್ತಾರೆ. ಎಲೈ ರಾಜಶಾರ್ದೂಲನೇ, ಕ್ಷೇತ್ರಜ್ಞನಾದ ಪರಮಾತ್ಮನಿಂದ ಉಂಟಾಗುವ ಸುಖದುಃಖಭೋಗ ಪ್ರಕಾರವು ಈ ರೀತಿ ಇದೆ.
ಯುಧಿಷ್ಠಿರಃ
ಮನಸಶ್ಚಾಪಿ ಬುದ್ಧೇಶ್ಚ ಬ್ರೂಹಿ ಮೇ ಲಕ್ಷಣಂ ಪರಮ್ |
ಏತದಧ್ಯಾತ್ಮವಿದುಷಾಂ ಪರಂ ಕಾರ್ಯಂ ವಿಧೀಯತೇ ॥24॥
ಯುಧಿಷ್ಠಿರ ಮನಸ್ಸಿಗೂ ಮತ್ತು ಬುದ್ಧಿಗೂ ಇರುವ ಭಿನ್ನವಾದ ಲಕ್ಷಣಗಳನ್ನು ನನಗೆ ಹೇಳು. ಅಧ್ಯಾತ್ಮವಿದ್ಯೆಯನ್ನು ಬಲ್ಲವರಿಗೆ ಇದು ಶ್ರೇಷ್ಠವಾದ ಕಾರ್ಯವೆಂದು ಹೇಳಲ್ಪಡುತ್ತದೆ.
ಸರ್ಪಃ
ಬುದ್ಧಿರಾತ್ಮಾನುಗಾ ತಾತ ಉತ್ಪಾತೇನ ವಿಧೀಯತೇ |
ತದಾಶ್ರಿತಾ ಹಿ ಸಂಜ್ಞೈಷಾ ಬುದ್ಧಿಸ್ತಸ್ಯೈಷಿಣೀ ಭವೇತ್ ॥25॥
ಸರ್ಪ ಎಲೈ ಪ್ರೀತಿಪಾತ್ರನೇ, ಬುದ್ಧಿಯು ಆತ್ಮನನ್ನು ಅನುಸರಿಸಿಕೊಂಡೇ ಇರುತ್ತದೆ. ವಿಷಯೇಂದ್ರಿಯಸನ್ನಿಕರ್ಷದಿಂದ ಉಂಟಾಗುತ್ತದೆ. ವಿಷಯೇಂದ್ರಿಯ ಸನ್ನಿಕರ್ಷದಿಂದ ಉಂಟಾದ ಜ್ಞಾನಕ್ಕೆ ಬುದ್ಧಿ ಎಂದು ಹೆಸರು. ಬುದ್ಧಿಯು ಸ್ವಾಮಿಯಾಗಿ

ಆತ್ಮನನ್ನು ಬಯಸುತ್ತದೆ.
ಬುದ್ಧಿರುತ್ಪದ್ಯತೇ ಕಾರ್ಯಾನ್ಮನಸ್ತೂತ್ಪನ್ನಮೇವ ಹಿ |
ಬುದ್ಧೇರ್ಗುಣವಿಧಾನೇನ ಮನಸ್ತದ್ಗುಣವದ್ ಭವೇತ್ ॥26॥
ತನ್ನ ಕಾರಣ ಸಾಮಗ್ರಿಯಿಂದ ಬುದ್ಧಿಯು ಉಂಟಾಗುತ್ತದೆ. ಆದರೆ ಮನಸ್ಸು ಮಾತ್ರ ಪೂರ್ವದಲ್ಲಿಯೇ ಇದೆ. ಬುದ್ಧಿಯ ಗುಣಕ್ಕೆ ಅನುಸಾರವಾಗಿ ಮನಸ್ಸಿನಲ್ಲಿ ಗುಣಗಳು ಉಂಟಾಗುತ್ತವೆ (ಇಷ್ಟಾನಿಷ್ಟ ಸಾಧನತ್ವ ಜ್ಞಾನಕ್ಕೆ ಅನುಸಾರವಾಗಿ ಮನಸ್ಸಿನಲ್ಲಿ ರಾಗದ್ವೇಷಗಳು ಉಂಟಾಗುತ್ತವೆ).
ಏತದ್ವಿಶೇಷಣಂ ತಾತ ಮನೋಬುದ್ಧ್ಯೋರ್ಯದಂತರಮ್ |
ತ್ವಮಪ್ಯತ್ರಾಭಿಸಂಬುದ್ಧಃ ಕಥಂ ವಾ ಮನ್ಯತೇ ಭವಾನ್ ॥27॥
ಎಲೈ ಪ್ರೀತಿಪಾತ್ರನೇ, ಇದು ಮನಸ್ಸು ಮತ್ತು ಬುದ್ಧಿಗಳಿಗೆ ಇರುವ ಅಂತರ ಮತ್ತು ಅವುಗಳ ಅಸಾಧಾರಣ ಧರ್ಮವೂ ಹೌದು. ಈ ವಿಷಯಗಳನ್ನೆಲ್ಲಾ ನೀನೂ ಸಹ ಚೆನ್ನಾಗಿ ತಿಳಿದಿದ್ದೀಯೆ. ನಿನ್ನ ಅಭಿಪ್ರಾಯವೇನು?
ಯುಧಿಷ್ಠಿರಃ
ಅಹೋ ಬುದ್ಧಿಮತಾಂ ಶ್ರೇಷ್ಠ ಶುಭಾ ಬುದ್ಧಿರಿಯಂ ತವ |
ವಿದಿತಂ ವೇದಿತವ್ಯಂ ತೇ ಕಸ್ಮಾತ್ ಸಮನುಪೃಚ್ಛಸಿ ॥28॥
ಸರ್ವಜ್ಞಂ ತ್ವಾಂ ಕಥಂ ಮೋಹ ಅವಿಶತ್ ಸ್ವರ್ಗವಾಸಿನಮ್ |
ಏವಮದ್ಭುತಕರ್ಮಾಣಮಿತಿ ಮೇ ಸಂಶಯೋ ಮಹಾನ್ ॥29॥
ಯುಧಿಷ್ಠಿರ ಎಲೈ ಮೇಧಾವಿಗಳಲ್ಲಿ ಶ್ರೇಷ್ಠನಾದವನೇ, ನಿನ್ನ ಈ ಬುದ್ಧಿಯು ಬಹಳ ಶುಭವಾಗಿದೆ. ತಿಳಿಯಬೇಕಾದುದೆಲ್ಲಾ ನಿನಗೆ ತಿಳಿದಿದೆ. ನನ್ನನ್ನು ಏಕೆ ಪ್ರಶ್ನೆ ಮಾಡುತ್ತೀಯೆ? ಅದ್ಭುತ ಕರ್ಮಗಳನ್ನು ಮಾಡಿ ಸ್ವರ್ಗವಾಸಿಯಾದ ಸರ್ವಜ್ಞನಾದ ನಿನಗೆ ಹೇಗೆ ಮೋಹವುಂಟಾಯಿತು ಎಂಬ ವಿಷಯದಲ್ಲಿ ನನಗೆ ಬಹಳ ಸಂಶಯವಿದೆ.
ಸರ್ಪಃ
ಸುಪ್ರಜ್ಞಮಪಿ ಚೇಚ್ಛೂರಮೃದ್ಧಿರ್ಮೋಹಯತೇ ನರಮ್ |
ವರ್ತಮಾನಃ ಸುಖೇ ಸರ್ವೋ ಮುಹ್ಯತೀತಿ ಮತಿರ್ಮಮ ॥30॥
ಸರ್ಪ ಶೂರನಿಗೂ ಮತ್ತು ಒಳ್ಳೆಯ ಪ್ರಜ್ಞೆಯುಳ್ಳ ಮನುಷ್ಯನಿಗೂ ಐಶ್ವರ್ಯವು ಮೋಹವನ್ನು ಉಂಟು ಮಾಡುತ್ತದೆ. ಬಹಳ ಸುಖವನ್ನು ಅನುಭವಿಸುವ ಎಲ್ಲ ಮನುಷ್ಯನೂ ಮೋಹಕ್ಕೆ ಒಳಗಾಗುತ್ತಾನೆ ಎಂದು ನನ್ನ ಅಭಿಪ್ರಾಯ.
ಸೋಽಹಮೈಶ್ವರ್ಯಮೋಹೇನ ಮದಾವಿಷ್ಟೋ ಯುಧಿಷ್ಠಿರ |
ಪತಿತಃ ಪ್ರತಿಸಂಬುದ್ಧಸ್ತ್ವಾಂ ತು ಸಂಬೋಧಯಾಮ್ಯಹಮ್ ॥31॥
ಎಲೈ ಯುಧಿಷ್ಠಿರನೇ, ನಾನೂ ಸಹ ಐಶ್ವರ್ಯದ ಮದದಿಂದ ಮೋಹಾವಿಷ್ಟನಾದೆ. ಅದರಿಂದ ಪತಿತನಾಗಿ ಈಗ ಪ್ರತಿಬುದ್ಧನಾಗಿ ನಿನ್ನ ಜೊತೆಯಲ್ಲಿ ಮಾತನಾಡುತ್ತಿದ್ದೇನೆ.
ಕೃತಂ ಕಾರ್ಯಂ ಮಹಾರಾಜ ತ್ವಯಾ ಮಮ ಪರಂತಪ |
ಕ್ಷೀಣಃ ಶಾಪಃ ಸುಕೃಚ್ಛ್ರೋ ಮೇ ತ್ವಯಾ ಸಂಭಾಷ್ಯ ಸಾಧುನಾ ॥32॥
ಎಲೈ ಪರಂತಪನಾದ ಮಹಾರಾಜನೇ, ನೀನು ನನಗೆ ಬಹಳ ಉಪಕಾರವನ್ನು ಮಾಡಿದ್ದೀಯೆ. ನನಗೆ ಬಂದ ಬಹಳ ಕಷ್ಟಕರವಾದ ಶಾಪವು ಈ ದಿನ ಸಜ್ಜನನಾದ ನಿನ್ನ ಜೊತೆಯಲ್ಲಿ ಮಾತನಾಡಿ ನಾಶವನ್ನು ಹೊಂದಿದೆ.
ಅಹಂ ಹಿ ದಿವಿ ದಿವ್ಯೇನ ವಿಮಾನೇನ ಚರನ್ ಪುರಾ |
ಅಭಿಮಾನೇನ ಮತ್ತಃ ಸನ್ ಕಂಚಿನ್ನಾನ್ಯಮಚಿಂತಯಮ್ ॥33॥
ನಾನಾದರೂ ಹಿಂದೆ ಸ್ವರ್ಗಲೋಕದಲ್ಲಿ ದಿವ್ಯವಾದ ವಿಮಾನದಿಂದ ಸಂಚರಿಸುತ್ತಾ ಐಶ್ವರ್ಯದಿಂದ ಮತ್ತನಾಗಿ ಇನ್ನೊಬ್ಬನನ್ನು ಗಣನೆಗೇ ತಂದುಕೊಳ್ಳಲಿಲ್ಲ.
ಬ್ರಹ್ಮರ್ಷಿದೇವಗಂಧರ್ವಯಕ್ಷರಾಕ್ಷಸಪನ್ನಗಾಃ |
ಕರಾನ್ ಮಮ ಪ್ರಯಚ್ಛಂತಿ ಸರ್ವೇ ತ್ರೈಲೋಕ್ಯವಾಸಿನಃ ॥34॥
ಮೂರುಲೋಕಗಳಲ್ಲಿ ವಾಸಿಸುವ ಬ್ರಹ್ಮರ್ಷಿಗಳು, ದೇವತೆಗಳು, ಗಂಧರ್ವರು, ಯಕ್ಷರಾಕ್ಷಸರು ಸರ್ಪಗಳು ಎಲ್ಲರೂ ನನಗೆ ಕಪ್ಪವನ್ನು ತಂದುಕೊಡುತ್ತಿದ್ದರು.
ಚಕ್ಷುಷಾ ಯಂ ಪ್ರಪಶ್ಯಾಮಿ ಪ್ರಾಣಿನಂ ಪೃಥಿವೀಪತೇ |
ತಸ್ಯ ತೇಜೋ ಹರಾಮ್ಯಾಶು ತದ್ಧಿ ದೃಷ್ಟೇರ್ಬಲಂ ಮಮ ॥35॥
ಎಲೈ ರಾಜನೇ, ನಾನು ಯಾರನ್ನು ಕಣ್ಣಿನಿಂದ ನೋಡುತ್ತೇನೆಯೋ ಅವನ ತೇಜಸ್ಸನ್ನು ಅಪಹರಿಸುತಿತದ್ದೆ. ನನ್ನ ದೃಷ್ಟಿಯ ಬಲವು ಹಾಗಿದ್ದಿತು.
ಬ್ರಹ್ಮರ್ಷೀಣಾಂ ಸಹಸ್ರಂ ಹಿ ಉವಾಹ ಶಿಬಿಕಾಂ ಮಮ |
ಸ ಮಾಮಪನಯೋ ರಾಜನ್ ಭ್ರಂಶಯಾಮಾಸ ವೈ ಶ್ರಿಯಃ ॥36॥
ಒಂದು ಸಹಸ್ರ ಬ್ರಹ್ಮರ್ಷಿಗಳು ನನ್ನ ಪಲ್ಲಕ್ಕಿಯನ್ನು ಹೊರುತ್ತಿದ್ದರು. ಎಲೈ ರಾಜನೇ, ನಾನು ಮಾಡಿದ ಆ ಅನ್ಯಾಯವು ನನ್ನನ್ನು ಸಂಪತ್ತಿನಿಂದ ಕೆಳಗೆ ಉರುಳಿಸಿತು.
ತತ್ರ ಹ್ಯಗಸ್ತ್ಯಃ ಪಾದೇನ ವಹನ್ ಸ್ಪೃಷ್ಟೋ ಮಯಾ ಮುನಿಃ |
ಅದೃಷ್ಟೇನ ತತೋಽಸ್ಮ್ಯುಕ್ತೋ ಧ್ವಂಸ ಸರ್ಪೇತಿ ವೈ ರುಷಾ ॥37॥
ಆ ಸಮಯದಲ್ಲಿ ಪಲ್ಲಕ್ಕಿಯನ್ನು ಹೊರುತ್ತಿದ್ದ ಅಗಸ್ತ್ಯರನ್ನು ನಾನು ಪಾದದಿಂದ ಒದ್ದೆನು. ಅವರ ಹೃದಯದಲ್ಲಿ ಸ್ಥಿತರಾದ

ಪರಮಾತ್ಮನು ರೋಷದಿಂದ ಸರ್ಪವಾಗಿ ಕೆಳಗೆ ಬೀಳು ಎಂದು ಹೇಳಿದನು.
ತತಸ್ತಸ್ಮಾದ್ ವಿಮಾನಾಗ್ರ್ಯಾತ್ ಪ್ರಚ್ಯುತಶ್ಚ್ಯುತಲಕ್ಷಣಃ |
ಪ್ರಪತನ್ ಬುಬುಧೇತ್ಮಾನಂ ವ್ಯಾಲೀಭೂತಮಧೋಮುಖಮ್ ॥
ಆಗ ನನ್ನ ಶುಭಲಕ್ಷಣಗಳನ್ನು ಕಳೆದುಕೊಂಡು ಶ್ರೇಷ್ಠವಾದ ವಿಮಾನವನ್ನು ಕಳೆದುಕೊಂಡು ತಲೆಕೆಳಗಾಗಿ ಬೀಳುತ್ತಾ ನಾನು ಒಂದು ಸರ್ಪವಾಗಿರುವುದನ್ನು ಗಮನಿಸಿದೆನು.
ಅಯಾಚಂ ತಮಹಂ ವಿಪ್ರಂ ಶಾಪಸ್ಯಾಂತೋ ಭವೇದಿತಿ |
ಪ್ರಮಾದಾತ್ಸಂಪ್ರಮೂಢ್ಯ ಭಗವನ್ ಕ್ಷಂತುಮರ್ಹಸಿ ॥39॥
ನಾನು ಆ ಬ್ರಾಹ್ಮಣರನ್ನು ಕುರಿತು ಪೂಜ್ಯರೇ, ಪ್ರಮಾದದಿಂದ ಮೋಹಕ್ಕೆ ಒಳಗಾದ ನನ್ನನ್ನು ನೀವು ಕ್ಷಮಿಸಬೇಕು. ಶಾಪಕ್ಕೆ ವಿಮೋಚನೆಯನ್ನು ಮಾಡಬೇಕು ಎಂದು ಬೇಡಿದೆನು.
ತತಃ ಸ ಮಾಮುವಾಚೇದಂ ಪ್ರಪತಂತಂ ಕೃಪಾನ್ವಿತಃ |
ಯುಧಿಷ್ಠಿರೋ ಧರ್ಮರಾಜಃ ಶಾಪಾತ್ ತ್ವಾಂ ಮೋಕ್ಷಯಿಷ್ಯತಿ ॥40॥
ಅಭಿಮಾನಸ್ಯ ಘೋರಸ್ಯ ಪಾಪಸ್ಯ ಚ ನರಾಧಿಪ |
ಫಲೇ ಕ್ಷೀಣೇ ಮಹಾರಾಜ ಫಲಂ ಪುಣ್ಯಮವಾಪ್ಸ್ಯಸಿ ॥41॥
ಆಗ ದಯಾನ್ವಿತರಾದ ಅವರು ಕೆಳಗೆ ಬೀಳುತ್ತಿದ್ದ ನನ್ನನ್ನು ಕುರಿತು ಧರ್ಮರಾಜನಾದ ಯುಧಿಷ್ಠಿರನು ನಿನ್ನನ್ನು ದರ್ಪದಿಂದ ಮಾಡಿದ ಘೋರವಾದ ಪಾಪದಿಂದಲೂ ಮತ್ತು ಈ ಶಾಪದಿಂದಲೂ ಬಿಡುಗಡೆಗೊಳಿಸುವನು. ಎಲೈ ಮಹಾರಾಜನೇ, ಪಾಪದ ಫಲವು ನಾಶವನ್ನು ಹೊಂದಿದ ಮೇಲೆ ನೀನು ಪುನಃ ಪುಣ್ಯವನ್ನು ಪಡೆಯುವಿ ಎಂದು ಹೇಳಿದರು.
ತತೋ ಮೇ ವಿಸ್ಮಯೋ ಜಾತಸ್ತದ್ ದೃಷ್ಟ್ವಾ ತಪಸೋ ಬಲಮ್ |
ಬ್ರಹ್ಮ ಚ ಬ್ರಾಹ್ಮಣತ್ವಂ ಚ ಯೇನ ತ್ವಾಹಮಚೂಚುದಮ್ ॥42॥
ಆಗ ನನಗೆ ತಪಸ್ಸಿನ ಬಲವನ್ನೂ, ವೇದದ ಬಲವನ್ನೂ ಮತ್ತು ಬ್ರಾಹ್ಮಣರ ಬಲವನ್ನೂ ನೋಡಿ ವಿಸ್ಮಯವುಂಟಾಯಿತು. ಅದರಿಂದ ನಾನು ನಿನ್ನನ್ನು ಮಾತನಾಡುವಂತೆ ಒತ್ತಾಯ ಮಾಡಿದೆನು.
ಸತ್ಯಂ ದಮಸ್ತಪೋ ದಾನಮಹಿಂಸಾ ಧರ್ಮನಿತ್ಯತಾ |
ಸಾಧಕಾನಿ ಸದಾ ಪುಂಸಾಂ ನ ಜಾತಿರ್ನ ಕುಲಂ ನೃಪ ॥42॥
ಎಲೈ ರಾಜನೇ, ಸತ್ಯ, ಇಂದ್ರಿಯನಿಗ್ರಹ, ತಪಸ್ಸು, ದಾನ, ಅಹಿಂಸಾ, ಸರ್ವದಾ ಧರ್ಮಾಚರಣೆ ಇವು ಮನುಷ್ಯನಿಗೆ ಯಾವಾಗಲೂ ಸಾಧಕವೇ ಹೊರತು ಜಾತಿಯಾಗಲೀ, ಕುಲವಾಗಲೀ ಅಲ್ಲ.
ಅರಿಷ್ಟ ಏಷ ತೇ ಭ್ರಾತಾ ಭೀಮಸೇನೋ ಮಹಾಬಲಃ |
ಸ್ವಸ್ತಿ ತೇಽಸ್ತು ಮಹಾರಾಜ ಗಮಿಷ್ಯಾಮಿ ದಿವಂ ಪುನಃ ॥43॥
ಎಲೈ ಮಹಾರಾಜನೇ, ನಿನ್ನ ತಮ್ಮನಾದ ಮಹಾಬಲನಾದ ಭೀಮಸೇನನು ಪೂರ್ಣಕ್ಷೇಮದಿಂದ ಇದ್ದಾನೆ. ನಿನಗೆ ಮಂಗಳವಾಗಲಿ. ನಾನು ಪುನಃ ಸ್ವರ್ಗಕ್ಕೆ ಹೋಗುವೆನು.
ಸ ಚಾಯಂ ಪುರುಷವ್ಯಾಘ್ರ ಕಾಲಃ ಪುಣ್ಯ ಉಪಾಗತಃ |
ತದಸ್ಮಾತ್ ಕಾರಣಾತ್ ಪಾರ್ಥ ಕಾರ್ಯಂ ಮಮ ಮಹತ್ಕೃತಮ್ ॥
ಎಲೈ ಪುರುಷವ್ಯಾಘ್ರನೇ, ನನಗೆ ಇಂತಹ ಪುಣ್ಯಕಾಲವು ಪ್ರಾಪ್ತವಾಗಿದೆ. ಎಲೈ ಪಾರ್ಥನೇ, ಈ ಕಾರಣದಿಂದ ನೀನು ನನಗೆ ದೊಡ್ಡ ಉಪಕಾರವನ್ನು ಮಾಡಿದ್ದೀಯೆ.
ವೈಶಂಪಾಯನಃ
ತತಸ್ತಸ್ಮಿನ್ ಮುಹೂರ್ತೇ ತು ವಿಮಾನಂ ಕಾಮಗಾಮಿ ವೈ |
ಅವಪಾತೇನ ಮಹತಾ ತತ್ರಾವಾಪ ತದ್ದುಮಮ್ ॥46॥
ವೈಶಂಪಾಯನ ಆಗ ಆ ಮುಹೂರ್ತದಲ್ಲಿ ಕಾಮಗಾಮಿಯಾದ ಒಂದು ಕ್ಷೇತ್ರವಾದ ವಿಮಾನವು ಬಹಳ ಮೇಲಿನಿಂದ ಕೆಳಗಿಳಿದು ಅಲ್ಲಿಗೆ ಬಂದಿತು.
ಇತ್ಯುಕ್ತ್ವಾಽಽಜಗರಂ ದೇಹಂ ಮುಕ್ತ್ವಾ ಸ ನಹುಷೋ ನೃಪಃ |
ದಿವ್ಯಂ ವಪುಃ ಸಮಾಸ್ಥಾಯ ಗತಸ್ತ್ರಿದಿವಮೇವ ಹ ॥47॥
ನಹುಷರಾಜನು ಹೀಗೆ ಮಾತನಾಡಿ ಆ ಸರ್ಪದೇಹವನ್ನು ಬಿಟ್ಟು ದಿವ್ಯವಾದ ದೇಹವನ್ನು ಧರಿಸಿ ಸ್ವರ್ಗಕ್ಕೇ ಹೊರಟುಹೋದನು.
ಯುಧಿಷ್ಠಿರೋಽಪಿ ಧರ್ಮಾತ್ಮಾ ಭ್ರಾತ್ರಾ ಭೀಮೇನ ಸಂಗತಃ |
ಧೌಮ್ಯೇನ ಸಹಿತಃ ಶ್ರೀಮಾನಾಶ್ರಮಂ ಪುನರಾಗಮತ್ ॥48॥
ಧರ್ಮಾತ್ಮನಾದ ಕಾಂತಿಯುಕ್ತನಾದ ಯುಧಿಷ್ಠಿರನೂ ಸಹ ತಮ್ಮನಾದ ಭೀಮನಿಂದಲೂ ಮತ್ತು ಧೌಮ್ಯರಿಂದಲೂ ಸಹಿತನಾಗಿ ಪುನಃ ತನ್ನ ಆಶ್ರಮವನ್ನು ತಲುಪಿದನು.
ತತೋ ದ್ವಿಜೇಭ್ಯಃ ಸರ್ವೇಭ್ಯಃ ಸಮೇತೇಭ್ಯೋ ಯಥಾತಥಮ್ |
ಕಥಯಾಮಾಸ ತತ್ಸರ್ವಂ ಧರ್ಮರಾಜೋ ಯುಧಿಷ್ಠಿರಃ ॥49॥
ಅನಂತರ ಅಲ್ಲಿಗೆ ಬಂದ ಎಲ್ಲಾ ಬ್ರಾಹ್ಮಣರಿಗೂ ನಡೆದ ಎಲ್ಲಾ ಘಟನೆಯನ್ನೂ ಧರ್ಮರಾಜನಾದ ಯುಧಿಷ್ಠಿರನು ವಿಸ್ತಾರವಾಗಿ ಹೇಳಿದನು.
ತತ್ಶ್ರುತ್ವಾ ತೇ ದ್ವಿಜಾಃ ಸರ್ವೇ ಭ್ರಾತರಶ್ಚಾಸ್ಯ ತೇ ತ್ರಯಃ |
ಆಸನ್ ಸುವ್ರೀಡಿತಾ ರಾಜನ್ ದ್ರೌಪದೀ ಚ ಯಶಸ್ವಿನೀ ॥50॥

ಎಲೈ ರಾಜನೇ, ಅದನ್ನು ಕೇಳಿದ ಅಲ್ಲಿಗೆ ಬಂದ ಎಲ್ಲಾ ಬ್ರಾಹ್ಮಣರೂ ಮತ್ತು ಧರ್ಮರಾಜನ ಮೂರು ತಮ್ಮಂದಿರೂ ಮತ್ತು ಕೀರ್ತಿಶಾಲಿನಿಯಾದ ದ್ರೌಪದಿಯೂ ಬಹಳ ನಾಚಿಕೆಗೊಂಡರು.
ತೇ ತು ಸರ್ವೇ ದ್ವಿಜಶ್ರೇಷ್ಠಾಃ ಪಾಂಡವಾನಾಂ ಹಿತೇಪ್ಸಯಾ |
ಮೈವಮಿತ್ಯಬ್ರುವನ್ ಭೀಮಂ ಗರ್ಹಯಂತೋಽಸ್ಯ ಸಾಹಸಮ್ ॥51॥
ಆ ಎಲ್ಲ ಬ್ರಾಹ್ಮಣಶ್ರೇಷ್ಠರು ಪಾಂಡವರಿಗೆ ಹಿತವನ್ನು ಬಯಸಿ ಭೀಮಸಾಹಸವನ್ನು ತೆಗಳುತ್ತಾ ಇನ್ನೊಮ್ಮೆ ಹೀಗೆ ಮಾಡಬಾರದು ಎಂದು ಹೇಳಿದರು.
ಪಾಂಡವಾಸ್ತು ಭಯಾನ್ಮುಕ್ತಂ ಪ್ರೇಕ್ಷ್ಯ ಭೀಮಂ ಮಹಾಬಲಮ್ |
ಹರ್ಷಮಾಹಾರಯಾಂಚಕ್ರುರ್ವಿಜಹ್ರುಶ್ಚ ಮುದಾ ಯುತಾಃ ॥52॥
ಪಾಂಡವರಾದರೂ ಭಯದಿಂದ ಮುಕ್ತನಾದ ಮಹಾಬಲನಾದ ಭೀಮಸೇನನನ್ನು ನೋಡಿ ಬಹಳ ಸಂತೋಷವನ್ನುಪಟ್ಟು ಆ ಸಂತೋಷದಿಂದ ಕೂಡಿದವರಾಗಿ ವಿಹಾರವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಅಜಗರಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು
ಮಾರ್ಕಂಡೇಯಸಮಾಸ್ಯಾಪರ್ವ
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಮಾರ್ಕಂಡೇಯಸ್ತದಾಽಽಗತ್ಯ ತೇಷಾಮಕಥಯತ್ ಕಥಾಃ |
ಬಹ್ವ್ಯಶ್ಚೈವ ವಿಚಿತ್ರಾಶ್ಚ ಭಾಷಾತ್ರಯಸಮನ್ವಿತಾಃ ॥372॥
ಮಾರ್ಕಂಡೇಯ ಮುನಿ ಬಂದು ಪಾಂಡವರಿಗೆ ಮೂರು ಭಾಷೆಗಳಿಂದ ಕೂಡಿದ ವಿಚಿತ್ರವಾದ ಬಹಳ ಕಥೆಗಳನ್ನು ಹೇಳಿದ.
ಲೋಕದರ್ವನಮಾಶ್ರಿತ್ಯ ದೇವಾಶ್ಚ ಮನುಯಸ್ತಥಾ |
ಬ್ರೂಯುಃ ಕಥಾಸ್ತತ್ರ ಶಿಕ್ಷಾ ಗ್ರಾಹ್ಯಾ ನಾರ್ಥಃ ಕಥಂಚನ ॥373॥
ಲೋಕ ರೀತಿಯನ್ನು ಅನುಸರಿಸಿ ದೇವತೆಗಳೂ ಮುನಿಗಳೂ ಕಥೆಗಳನ್ನು ಹೇಳಬಹುದು. ಆಗ ಅದರಲ್ಲಿ ನೀತಿಯನ್ನು ಮಾತ್ರ ಸ್ವೀಕರಿಸಬೇಕು. ಕಥಾ ವಸ್ತುವನ್ನಲ್ಲ.
ಅರ್ಥಃ ಸಮಾಧಿಭಾಷಾಹು ಗ್ರಾಹ್ಯಃ ಸರ್ವೋಽಪ್ಯಸಂಶಯಮ್ |
ಪರದರ್ಶನಭಾಷಾಸು ಜ್ಞೇಯಂ ತದ್ದರ್ಶನಂ ತಥಾ ॥374॥
ಗ್ರಾಹ್ಯೋ ನಾರ್ಥೋ ವೈದಿಕಂ ತು ದರ್ಶನಂ ಗ್ರಾಹ್ಯಮೇವ ಹಿ |
ಅನ್ಯಾರ್ಥೋ ಗುಹ್ಯಭಾಷಾಸು ಗ್ರಾಹ್ಯ ಏವಂ ವಿನಿರ್ಣಯಃ ॥375॥
ಸಮಾಧಿ ಭಾಷೆಗಳಲ್ಲಿ ಹೇಳಿದ ವಿಷಯವೆಲ್ಲವೂ ನಿಸ್ಸಂಶಯವಾಗಿ ಗ್ರಾಹ್ಯ. ಪರದರ್ಶನ ಭಾಷೆಯಲ್ಲಿ ಹೇಳಿದಾಗ ಪರರ ದರ್ಶನ ಹಾಗೆ ಇದೆ ಎಂದು ಮಾತ್ರ ತಿಳಿಯಬೇಕು. ಹೇಳಿದ ವಿಷಯ ಗ್ರಾಹ್ಯವಲ್ಲ. ವೈದಿಕ ಪರದರ್ಶನವು ಮಾತ್ರ ಗ್ರಾಹ್ಯವೇ. ಗುಹ್ಯ ಭಾಷೆಗಳಲ್ಲಿ ಬೇರೆಯೇ ಅರ್ಥಗ್ರಾಹ್ಯ. ಹೀಗೆ ಶಾಸ್ತ್ರಗಳಲ್ಲಿ ಭಾಷಾ ನಿರ್ಣಯವಿದೆ.
* * * *
ನೂರ ಎಪ್ಪತ್ತಾರನೆಯ ಅಧ್ಯಾಯ
ವರ್ಷಾಕಾಲ ಶರತ್ಕಾಲಗಳ ವರ್ಣನೆ.
ವೈಶಂಪಾಯನಃ
ನಿದಾಘಾಂತಕರಃ ಕಾಲಃ ಸರ್ವಭೂತಸುಖಾವಹಃ |
ತತ್ರೈವ ವಸತಾಂ ತೇಷಾಂ ಪ್ರಾವೃಟ್ ಸಮಭಿಪದ್ಯತ ॥1॥
ವೈಶಂಪಾಯನ ಅವರು ಅಲ್ಲಿಯೇ ವಾಸಿಸುತ್ತಿರುವಾಗ ಬೇಸಿಗೆ ತಾಪವನ್ನು ಕಡಿಮೆ ಮಾಡುವ ಎಲ್ಲ ಪ್ರಾಣಿಗಳಿಗೂ ಸುಖವನ್ನು ತರುವ ಮಳೆಗಾಲವು ಉಂಟಾಯಿತು.
ಛಾದಯಂತೋ ಮಹಾಘೋಷಾಃ ಖಂ ದಿಶಶ್ಚ ಬಲಾಹಕಾಃ |
ಪ್ರವವರ್ಷುರ್ದಿವಾರಾತ್ರಮಸಿತಾಃ ಸತತಂ ತದಾ ॥2॥
ತಾಪಾತ್ಯಯನಿಕೇತಾಶ್ಚ ಶತಶೋಽಥ ಸಹಸ್ರಶಃ |
ಅಪೇತಾರ್ಕಂಪ್ರಭಾಜಾಲಾಃ ಸವಿದ್ಯುದ್ವಿಮಲಪ್ರಭಾಃ ॥3॥
ಸೂರ್ಯನ ಕಿರಣಗಳ ಪ್ರಭೆಯಿಂದ ರಹಿತವಾದ, ಮಿಂಚಿನ ವಿಮಲಕಾಂತಿಗಳಿಂದ ಕೂಡಿದ, ಬೇಸಿಗೆಕಾಲದ ಕೊನೆಯಲ್ಲಿ ಬಂದ ಮಳೆಗಾಲವನ್ನು ಆಶ್ರಯಿಸಿದ, ಮಹಾಘೋಷವುಳ್ಳ ಕಪ್ಪುಮೋಡಗಳು ದಿಕ್ಕುವಿದಿಕ್ಕುಗಳನ್ನು ಮುಚ್ಚಿಕೊಂಡು ಸತತವಾಗಿ ಮಳೆಯನ್ನು ಸುರಿಸಿದವು.
ವಿರೂಢಶಷ್ಪ ಧರಣೀ ಮತ್ತದಂಶಸರೀಸೃಪಾ |
ಬಭೂವ ಪಯಸಾ ಸಿಕ್ತಾ ಶಾಂತಾ ಸರ್ವಮನೋರಮಾ ॥4॥
ಹುಲ್ಲುಗಳು ಬೆಳೆದು ಮದಿಸಿದ ಕ್ರಿಮಿಯಿಂದ ಮತ್ತು ಸರ್ಪಗಳಿಂದ ಕೂಡಿದ ಮತ್ತು ನೀರಿನಿಂದ ತೋಯಿಸಲ್ಪಟ್ಟ ಭೂಮಿಯು ಶಾಂತವೂ ಮತ್ತು ಸರ್ವ ಮನೋರಮವೂ ಆಯಿತು.
ನ ಸ್ಮ ಪ್ರಜ್ಞಾಯತೇ ಕಿಂಚಿದಂಭಸಾ ಸಮವಸ್ತೃತೇ |

ಸಮಂ ವಾ ವಿಷಮಂ ವಾಪಿ ನದ್ಯೋ ವಾ ಸ್ಥಾವರಾಣಿ ಚ ॥5॥
ನೀರು ಎಲ್ಲಕಡೆಯಲ್ಲಿಯೂ ಹರಡಿರುವಾಗ ಉಬ್ಬುತಗ್ಗುಗಳಾಗಲೀ ಅಥವಾ ನದಿಗಳು ಮತ್ತು ಭೂಮಿಯಾಗಲೀ ಕಾಣುತ್ತಿರಲಿಲ್ಲ.
ಕ್ಷುಬ್ಧತೋಯಾ ಮಹಾವೇಗಾಃ ಶ್ವಸಮಾನಾ ಇವಾಶುಗಾಃ |
ಸಿಂಧವಃ ಶೋಭಯಾಂಚಕ್ರುಃ ಕಾನನಾನಿ ತಪಾತ್ಯಯೇ ॥6॥
ಕ್ಷುಬ್ಧವಾದ ಜಲವುಳ್ಳ ಮಹಾವೇಗದಿಂದ ಕೂಡಿದ ನದಿಗಳು ಬೇಸಿಗೆ ಕಾಲವು ಕಳೆಯುತ್ತಿರಲು ಕಾಡುಗಳಲ್ಲಿ ಗಟ್ಟಿಯಾಗಿ ಉಸಿರಾಡುವ ಅಶ್ವಗಳಂತೆ ಕ್ಷೋಭೆಯನ್ನು ಉಂಟುಮಾಡಿದವು.
ನದತಾಂ ಕಾನನಾಂತೇಷು ಶ್ರೂಯಂತೇ ವಿವಿಧಾಃ ಸ್ವನಾಃ |
ವೃಷ್ಟಿಭಿಶ್ಚಾದ್ಯಮಾನಾನಾಂ ವರಾಹಮೃಗಪಕ್ಷಿಣಾಮ್ ॥7॥
ಮಳೆಯಿಂದ ಆವರಿಸಲ್ಪಟ್ಟು ವನಪ್ರದೇಶಗಳಲ್ಲಿ ಕಿರುಚುವ ವರಾಹ ಮೃಗಪಕ್ಷಿಗಳ ವಿಧವಿಧವಾದ ಧ್ವನಿಗಳು ಕೇಳಿಬರುತ್ತಿದ್ದವು.
ಸ್ತೋಕಕಾಃ ಶಿಖಿನಶ್ಚೈವ ಪುಂಸ್ಕೋಕಿಲಗಣೈಃ ಸಹ |
ಮತ್ತಾಃ ಪರಿಪತಂತಿ ಸ್ಮ ದರ್ದುರಾಶ್ಚೈವ ದರ್ಪಿತಾಃ ॥8॥
ಸ್ತೋಕಕಗಳು (ಪಕ್ಷಿವಿಶೇಷ) ಮತ್ತು ನವಿಲುಗಳು ಗಂಡುಕೋಗಿಲೆಗಳ ಸಮೂಹದ ಜೊತೆಯಲ್ಲಿ ಮದದಿಂದ ಸುತ್ತಲೂ ಹಾರಾಡುತ್ತಿದ್ದವು ಮತ್ತು ಕಪ್ಪೆಗಳು ದರ್ಪದಿಂದ ಹೊರಬರುತ್ತಿದ್ದವು.
ತಥಾ ಬಹುವಿಧಾಕಾರಾ ಪ್ರಾವೃಣ್ಮೇಘಾನುನಾದಿತಾ |
ಅಭ್ಯತೀತಾ ಶಿವಾ ತೇಷಾಂ ಚರತಾಂ ಮರುಧನ್ವಸು ॥9॥
ಕಾಡಿನಲ್ಲಿ ಮರಗಳಿಲ್ಲದ ಪ್ರದೇಶದಲ್ಲಿ ಸಂಚರಿಸುವ ಅವರಿಗೆ ಮೇಘಗಳ ಗರ್ಜನೆಯಿಂದ ಕೂಡಿದ ಮಂಗಳವಾದ ಬಹುವಿಧವಾದ ವರ್ಷಾಕಾಲವು ಕಳೆಯಿತು.
ಕ್ರೌಂಚಹಂಸಸಮಾಕೀರ್ಣಾ ಶರತ್ ಪ್ರಮುದಿತಾಭವತ್ |
ರೂಢಕಕ್ಷವನಪ್ರಸ್ಥಾ ಪ್ರಸನ್ನಜಲನಿಮ್ನಗಾ ॥10॥
ಅನಂತರ ತಿಳಿಯಾದ ನೀರಿನಿಂದ ಕೂಡಿದ ನದಿಗಳುಳ್ಳ ಬೆಳೆದುನಿಂತ ಹುಲ್ಲುಗಾವಲು ಮತ್ತು ಮರಗಳಿಂದ ಕೂಡಿದ ಕ್ರೌಂಚಹಂಸ ಮೊದಲಾದ ಪಕ್ಷಿಗಳಿಂದ ತುಂಬಿದ ಶರತ್ಕಾಲವು ಸಂತೋಷದಿಂದ ಉದಯಿಸಿತು.
ವಿಮಲಾಕಾಶನಕ್ಷತ್ರಾ ಶರತ್ತೇಷಾಂ ಶಿವಾಽಭವತ್ |
ಮೃಗದ್ವಿಜಸಮಾಕೀರ್ಣಾ ಪಾಂಡವಾನಾಂ ಮಹಾತ್ಮನಾಮ್ ॥11॥
ನಿರಭ್ರವಾದ ಆಕಾಶದಲ್ಲಿ ಶೋಭಿಸುವ ನಕ್ಷತ್ರವುಳ್ಳ ,ಮೃಗಪಕ್ಷಿಗಳುಳ್ಳ, ಶರತ್ಕಾಲವು ಮಹಾತ್ಮರಾದ ಪಾಂಡವರಿಗೆ ಮಂಗಳಕರವಾಗಿದ್ದಿತು.
ದೃಶ್ಯಂತೇ ಶಾಂತರಜಸಃ ಕ್ಷಪಾ ಜಲದಶೀತಲಾಃ |
ಗ್ರಹನಕ್ಷತ್ರಸಂಘೈಶ್ಚ ಸೋಮೇನ ಚ ವಿರಾಜಿತಾಃ ॥12॥
ಧೂಳೆಲ್ಲವೂ ಅಡಗಿ ಮೋಡದಿಂದ ಶೀತಲವಾದ ರಾತ್ರಿಗಳು ಗ್ರಹನಕ್ಷತ್ರ ಸಮೂಹಗಳಿಂದಲೂ ಮತ್ತು ಚಂದ್ರನಿಂದಲೂ ವಿರಾಜಿತವಾಗಿ ಕಾಣುತ್ತಿದ್ದವು.
ಕುಮುದೈಃ ಪುಂಡರೀಕೈಶ್ಚ ಶೀತವಾರಿಧರಾಃ ಶಿವಾಃ |
ನದೀಃ ಪುಷ್ಕರಿಣೀಶ್ಚೈವ ದದೃಶುಃ ಸಮಲಂಕೃತಾಃ ॥13॥
ನದಿಗಳು ಮತ್ತು ಸರೋವರಗಳು ತಂಪಾದ ನೀರನ್ನು ಹೊಂದಿ ಕುಮುದ ಕಮಲಗಳಿಂದ ಅಲಂಕೃತವಾಗಿ ಮಂಗಳಪ್ರದವಾಗಿ ಕಾಣುತ್ತಿದ್ದವು.
ಆಕಾಶಸಂಕಾಶಜಲಾಂ ತೀರವಾನೀರಸಂಕುಲಾಮ್ |
ಬಭೂವ ಚರತಾಂ ಹರ್ಷಃ ಪುಣ್ಯತೀರ್ಥಾಂ ಸರಸ್ವತೀಮ್ ॥14॥
ಆಕಾಶದಂತೆ ನೀಲಿಯಾದ ನೀರುಳ್ಳ ತೀರದಲ್ಲಿ ಬೆಳೆದ ವಾನೀರ ವೃಕ್ಷಗಳಿಂದ ನಿಬಿಡವಾದ ಪುಣ್ಯತೀರ್ಥವಾದ ಸರಸ್ವತೀ ನದಿಯ ದಡದಲ್ಲಿ ಸಂಚರಿಸುವ ಪಾಂಡವರಿಗೆ ಸಂತೋಷಪಟ್ಟರು.
ತೇ ವೈ ಮುಮುದಿರೇ ವೀರಾಃ ಪ್ರಸನ್ನಸಲಿಲಾಂ ಶಿವಾಮ್ |
ಪಶ್ಯಂತೋ ದೃಢಧನ್ವಾನಃ ಪರಿಪೂರ್ಣಾಂ ಸರಸ್ವತೀಮ್ ॥15॥
ದೃಢಧನುಸ್ಸುಳ್ಳ ಆ ವೀರರು ಸ್ವಚ್ಛವಾದ ನೀರಿನಿಂದ ತುಂಬಿಹರಿಯುತ್ತಿದ್ದ ಮಂಗಳವಾದ ಸರಸ್ವತೀ ನದಿಯನ್ನು ನೋಡಿ ಸಂತೋಷವಾಯಿತು.
ತೇಷಾಂ ಪುಣ್ಯತಮಾ ರಾತ್ರಿಃ ಪರ್ವಸಂಧೌ ಸ್ಮ ಶಾರದೀ |
ತತ್ರೈವ ವಸತಾಮಾಸೀತ್ ಕಾರ್ತಿಕೀ ಜನಮೇಜಯ ॥16॥
ಎಲೈ ಜನಮೇಜಯನೇ, ಶರತ್ಕಾಲ ಮತ್ತು ಹೇಮಂತಕಾಲಗಳ ಸಂಧಿಯ ಪರ್ವದಲ್ಲಿ ಉಂಟಾಗುವ ಕಾರ್ತಿಕಮಾಸದ ಪವಿತ್ರವಾದ ಪೌರ್ಣಮಾಸಿಯು ಅಲ್ಲಿಯೇ ವಾಸಮಾಡುವ ಪಾಂಡವರಿಗೆ ಉಂಟಾಯಿತು.
ಪುಣ್ಯಕೃದ್ಭಿರ್ಮಹಾಸತ್ತ್ವೈಸ್ತಾಪಸೈಃ ಸಹ ಪಾಂಡವಾಃ |
ತತ್ಸರ್ವೇ ಭರತಶ್ರೇಷ್ಠಾಃ ಸಮೂಹುರ್ಯೋಗಮುತ್ತಮಮ್ ॥17॥
ಪುಣ್ಯವಂತರೂ, ಮಹಾಸಾಮರ್ಥ್ಯೋಪೇತರೂ ಆದ ತಪಸ್ವಿಗಳ ಜೊತೆಯಲ್ಲಿ ಚಲಿಸುತ್ತಿದ್ದ ಭರತಶ್ರೇಷ್ಠರಾದ ಪಾಂಡವರೆಲ್ಲರೂ ತಮ್ಮ ಶ್ರೇಷ್ಠವಾದ ಸಾಧನವನ್ನು ತಾವೇ ಹೊತ್ತುಕೊಂಡು ನಡೆದರು.
ತಮಿಸ್ರಾಭ್ಯುದಯೇ ತಸ್ಮಿನ್ ಧೌಮ್ಯೇನ ಸಹ ಪಾಂಡವಾಃ |

ಸೂತೈಃ ಪೌರೋಗವೈಶ್ಚೈವ ಕಾಮ್ಯಕಂ ಪ್ರಯಯುರ್ವನಮ್ ॥18॥
ಆ ಕಾಡಿನಲ್ಲಿ ಸಂಜೆಯ ಕತ್ತಲು ಪ್ರಾರಂಭವಾಗುವ ವೇಳೆಗೆ ಧೌಮ್ಯರಿಂದ ಸಹಿತರಾದ ಪಾಂಡವರು ಸೂತರ ಮತ್ತು ಪೌರೋಗವರ ಜೊತೆಯಲ್ಲಿ ಕಾಮ್ಯಕವನವನ್ನು ತಲುಪಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಕಾಮ್ಯಕವನಪ್ರವೇಶೇ ಷಟ್ಸಪ್ತತ್ಯಧಿಕಶತತಮೋऽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಮಾರ್ಕಂಡೇಯಸಮಾಖ್ಯಾಪರ್ವಣಿ ಕಾಮ್ಯಕವನಪ್ರವೇಶೇ ಪ್ರಥಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು
* * * *
ನೂರ ಎಪ್ಪತ್ತೇಳನೆಯ ಅಧ್ಯಾಯ
ಕಾಮ್ಯಕವನವನ್ನು ಕುರಿತು ಸತ್ಯಭಾಮಾ ಸಹಿತ ಕೃಷ್ಣನ, ನಾರದರ ಮತ್ತು ಮಾರ್ಕಂಡೇಯರ ಆಗಮನ. ಕೃಷ್ಣನ ಅಪ್ಪಣೆಯಂತೆ ಮಾರ್ಕಂಡೇಯರಿಂದ ಪುರಾಣಕಥನ ಪ್ರಾರಂಭ.
ವೈಶಂಪಾಯನಃ
ಕಾಮ್ಯಕಂ ಪ್ರಾಪ್ಯ ಕೌರವ್ಯ ಯುಧಿಷ್ಠಿರಪುರೋಗಮಾಃ |
ಕೃತಾತಿಥ್ಯಾ ಮುನಿಗಣೈರ್ನಿಷೇದುಃ ಸಹ ಕೃಷ್ಣಯಾ ॥1॥
ವೈಶಂಪಾಯನ ಎಲೈ ಕೌರವ್ಯನಾದ ಜನಮೇಜಯನೇ, ಯುಧಿಷ್ಠಿರ ಮೊದಲಾದವರು ಕಾಮ್ಯಕವನವನ್ನು ತಲುಪಿ ಮುನಿಗಣಗಳಿಂದ ಸತ್ಕಾರವನ್ನು ಹೊಂದಿದವರಾಗಿ ದ್ರೌಪದಿಯ ಜೊತೆಯಲ್ಲಿ ಅಲ್ಲಿ ವಾಸಮಾಡಿದರು.
ತತಸ್ತಾನ್ ಪರಿವಿಶ್ವಸ್ತಾನ್ ವಸತಃ ಪಾಂಡುನಂದನಾನ್ |
ಬ್ರಾಹ್ಮಣಾ ಬಹವಸ್ತತ್ರ ಸಮಂತಾತ್ ಪರ್ಯವಾರಯನ್ ॥2॥
ಅನಂತರ ಅಲ್ಲಿ ಸಮಾಧಾನದಿಂದ ಪಾಂಡುನಂದನರು ವಾಸಮಾಡುತ್ತಿರಲು ಅನೇಕ ಬ್ರಾಹ್ಮಣರು ಅಲ್ಲಿಗೆ ಬಂದು ಅವರ ಸುತ್ತಲೂ ನೆರೆದರು.
ಅಥಾಬ್ರುವೀದ್ ದ್ವಿಜಃ ಕಶ್ಚಿಚದರ್ಜುನಸ್ಯ ಪ್ರಿಯಃ ಸಖಾ |
ಸ ಏಷ್ಯತಿ ಮಹಾಬಾಹುರ್ವಶೀ ಶೌರಿರುದಾರಧೀಃ ॥3॥
ಅನಂತರ ಅರ್ಜುನನ ಪ್ರಿಯಸ್ನೇಹಿತನಾದ ಒಬ್ಬ ಬ್ರಾಹ್ಮಣನು ಉದಾರ ಬುದ್ಧಿಯುಳ್ಳ ಮಹಾಬಾಹುವಾದ ಸರ್ವನಿಯಾಮಕನಾದ ಶೌರಿಯಾದ ಕೃಷ್ಣನು ಇಲ್ಲಿಗೆ ಬರುವನು ಎಂದು ಹೇಳಿದನು.
ವಿದಿತಾ ಹಿ ಹರೇರ್ಯೂಯಮಿಹಾಯಾತಾಃ ಕುರೂದ್ವಹಾಃ |
ಸದಾ ಹಿ ದರ್ಶನಾಕಾಂಕ್ಷೀ ಶ್ರೇಯೋನ್ವೇಷೀ ಚ ವೋ ಹರಿಃ ॥4॥
ಎಲೈ ಕುರೂದ್ವಹರೇ, ನೀವು ಇಲ್ಲಿಗೆ ಬಂದ ವಿಷಯವು ಹರಿಗೆ ತಿಳಿದಿದೆ. ಅವನು ಯಾವಾಗಲೂ ನಿಮ್ಮ ದರ್ಶನಾಕಾಂಕ್ಷಿಯೂ ಮತ್ತು ಶ್ರೇಯಸ್ಸನ್ನು ಬಯಸುವವನೂ ಆಗಿದ್ದಾನೆ.
ಬಹುವತ್ಸರಜೀವೀ ಚ ಮಾರ್ಕಂಡೇಯೋ ಮಹಾತಪಾಃ |
ಸ್ವಾಧ್ಯಾಯತಪಸಾ ಯುಕ್ತಃ ಕ್ಷಿಪ್ರಂ ಯುಷ್ಮಾನ್ ಸಮೇಷ್ಯತಿ ॥5॥
ಮಹಾತಪಸ್ವಿಗಳೂ, ಅನೇಕ ವರ್ಷಗಳವರೆಗೆ ಜೀವಿಸುವ ಚಿರಂಜೀವಿಗಳೂ, ಸ್ವಾಧ್ಯಾಯತಪಸ್ಸಿನಿಂದ ಕೂಡಿದವರೂ ಆದ ಮಾರ್ಕಂಡೇಯರು ಬೇಗ ಬಂದು ನಿಮ್ಮ ಜೊತೆಯಲ್ಲಿ ಸೇರುವರು (ಎಂದು ಹೇಳಿದನು).
ತಥೈವ ಬ್ರುವತಸ್ತಸ್ಯ ಪ್ರತ್ಯದೃಶ್ಯತ ಕೇಶವಃ |
ಶೈಬ್ಯಸುಗ್ರೀವಯುಕ್ತೇನ ರಥೇನ ರಥಿನಾಂ ವರಃ ॥6॥
ಆ ಬ್ರಾಹ್ಮಣನು ಹಾಗೆ ಹೇಳುತ್ತಿರುವಂತೆಯೇ ಶೈಬ್ಯಸುಗ್ರೀವ ಅಶ್ವಗಳನ್ನು ಹೂಡಿದ ರಥದಿಂದ ಬರುತಿತರುವ, ರಥಿಗಳಲ್ಲಿ ಶ್ರೇಷ್ಠನಾದ, ಕೇಶವನು ಕಾಣಿಸಿದನು.
ಮಘವಾನಿವ ಪೌಲೋಮ್ಯಾ ಸಹಿತಃ ಸತ್ಯಭಾಮಯಾ |
ಉಪಾಯಾದ್ ದೇವಕೀಪುತ್ರೋ ದಿದೃಕ್ಷುಃ ಕುರುಸತ್ತಮಾನ್ ॥7॥
ಸತ್ಯಭಾಮಾಸಹಿತನಾಗಿ ಶಚೀಸಹಿತ ಇಂದ್ರನಂತೆ ದೇವಕೀಪುತ್ರನು ಕುರುಶ್ರೇಷ್ಠರನ್ನು ನೋಡಲು ಬಯಸಿ ಅಲ್ಲಿಗೆ ಬಂದನು.
ಅವತೀರ್ಯ ರಥಾತ್ ಕೃಷ್ಣೋ ಧರ್ಮರಾಜಂ ಯಥಾವಿಧಿ |
ವವಂದೇ ಮುದಿತೋ ಧೀಮಾನ್ ಭೀಮಂ ಚ ಬಲಿನಾಂ ವರಮ್ ॥
ಮೇಧಾವಿಯಾದ ಕೃಷ್ಣನು ರಥದಿಂದ ಇಳಿದು ಸಂತೋಷದಿಂದ ಧರ್ಮರಾಜನನ್ನೂ ಮತ್ತು ಬಲವುಳ್ಳವರಲ್ಲಿ ಶ್ರೇಷ್ಠನಾದ ಭೀಮನನ್ನೂ ವಂದಿಸಿದನು.
ಪೂಜಯಾಮಾಸ ಧೌಮ್ಯಂ ಚ ಯಮಾಭ್ಯಾಮಭಿವಾದಿತಃ |
ಪರಿಷ್ವಜ್ಯ ಗುಡಾಕೇಶಂ ದ್ರೌಪದೀಂ ಪರ್ಯಸಾಂತ್ವಯತ್ ॥9॥
ಅವನು ಧೌಮ್ಯರನ್ನು ಪೂಜಿಸಿದನು. ನಕುಲಸಹದೇವರಿಂದ ನಮಸ್ಕರಿಸಲ್ಪಟ್ಟನು. ಅರ್ಜುನನನ್ನು ಆಲಿಂಗಿಸಿ ದ್ರೌಪದಿಯನ್ನು ಸಮಾಧಾನಪಡಿಸಿದನು.
ಸ ದೃಷ್ಟ್ವಾ ಫಲ್ಗುನಂ ವೀರಂ ಚಿರಸ್ಯ ಪ್ರಿಯಮಾಗತಮ್ |
ಪರ್ಯಷ್ವಜತ ದಾಶಾರ್ಹಃ ಪುನಃ ಪುನರರಿಂದಮಃ ॥10॥
ಅರಿಂದಮನಾದ ಆ ದಾಶಾರ್ಹನು ಬಹುಕಾಲದಮೇಲೆ ಹಿಂದಿರುಗಿ ಬಂದ ವೀರನಾದ ಅರ್ಜುನನನ್ನು ನೋಡಿ ಅವನನ್ನು ಪುನಃ

ಪುನಃ ಆಲಿಂಗಿಸಿದನು.
ತಥೈವ ಸತ್ಯಭಾಮಾಽಪಿ ದ್ರೌಪದೀಂ ಪರಿಷಸ್ವಜೇ |
ಪಾಂಡವಾನಾಂ ಪ್ರಿಯಾಂ ಭಾರ್ಯಾಂ ಕೃಷ್ಣಸ್ಯ ಮಹಿಷೀ ಪ್ರಿಯಾ ॥11॥
ಅದರಂತೆ ಕೃಷ್ಣನ ಪ್ರಿಯರಾಣಿಯಾದ ಸತ್ಯಭಾಮೆಯೂ ಸಹ ಪಾಂಡವರ ಪ್ರಿಯಪತ್ನಿಯಾದ ದ್ರೌಪದಿಯನ್ನು ಆಲಿಂಗಿಸಿದಳು.
ತತಸ್ತೇ ಪಾಂಡವಾಃ ಸರ್ವೇ ಸಭಾರ್ಯಾಃ ಸಪುರೋಹಿತಾಃ |
ಆನರ್ಚುಃ ಪುಂಡರೀಕಾಕ್ಷಂ ಪರಿವವ್ರುಶ್ಚ ಸರ್ವಶಃ ॥12॥
ಅನಂತರ ಆ ಪಾಂಡವರೆಲ್ಲರೂ ಪತ್ನೀ ಪುರೋಹಿತ ಸಹಿತರಾಗಿ ಪುಂಡರೀಕಾಕ್ಷನಾದ ಕೃಷ್ಣನನ್ನು ಪೂಜಿಸಿ ಅವನ ಸುತ್ತಲೂ ಕುಳಿತರು.
ಕೃಷ್ಣಸ್ತು ಪಾರ್ಥೇನ ಸಮೇತ್ಯ ವಿದ್ವಾನ್ ಧನಂಜಯೇನಾಸುರತರ್ಜನೇನ|
ಬಭೌ ಯಥಾ ಭೂತಪತಿರ್ಮಹಾತ್ಮಾ ಸಮೇತ್ಯ ಸಾಕ್ಷಾದ್ ಭಗವಾನ್ ಗುಹೇನ ॥13॥
ಸರ್ವಜ್ಞನಾದ ಕೃಷ್ಣನಾದರೂ ಅಸುರ ಸಂಹಾರಕನಾದ ಅರ್ಜುನನ ಜೊತೆಯಲ್ಲಿ ಕೂಡಿ ಮಹಾನುಭಾವನಾದ ಪೂಜ್ಯನಾದ ಭೂತಪತಿಯಾದ ರುದ್ರನು ಗುಹನ ಜೊತೆಯಲ್ಲಿ ಶೋಭಿಸಿದಂತೆ ಶೋಭಿಸಿದನು.
ತತಃ ಸಮಸ್ತಾನಿ ಕಿರೀಟಮಾಲೀ ವನೇಷು ವೃತ್ತಾನಿ ಗದಾಗ್ರಜಾಯ |
ಉಕತ್ವ ಯಥಾವತ್ ಪುನರನ್ವಪೃಚ್ಛತ್ ಕಥಂ ಸುಭದ್ರಾ ಚ ಸ ಚಾಭಿಮನ್ಯುಃ ॥14॥
ಅನಂತರ ಕಿರೀಟಮಾಲಿಯಾದ ಅರ್ಜುನನು ಗದಾಗ್ರಜನಾದ ಕೃಷ್ಣನಿಗೆ ದ್ವೈತವನಾದಿಗಳಲ್ಲಿ ನಡೆದ ಸಮಸ್ತ ವಿಷಯಗಳನ್ನೂ ಸರಿಯಾಗಿ ಹೇಳಿ ಪುನಃ ಸುಭದ್ರೆ ಮತ್ತು ಅಭಿಮನ್ಯುವು ಹೇಗಿದ್ದಾರೆ ಎಂದು ಕೇಳಿದನು.
ಸ ಪೂಜಯಿತ್ವಾ ಮಧುಹಾ ಯಥಾವತ್ ಪಾರ್ಥಂ ಚ ಕೃಷ್ಣಾಂ ಚ ಪುರೋಹಿತಂ ಚ |
ಉವಾಚ ರಾಜಾನಮಭಿಪ್ರಶಂಸನ್ ಯುಧಿಷ್ಠಿರಂ ತತ್ರ ಸಹೋಪವಿಶ್ಯ ॥
ಆ ಮಧುಸೂದನನಾದ ಕೃಷ್ಣನು ಅರ್ಜುನನನ್ನೂ, ದ್ರೌಪದಿಯನ್ನೂ ಮತ್ತು ಪುರೋಹಿತರಾದ ಧೌಮ್ಯರನ್ನೂ ಯಥಾಯೋಗ್ಯವಾಗಿ ಸತ್ಕರಿಸಿ ಅಲ್ಲಿಯೇ ಕುಳಿತು ರಾಜನಾದ ಯುಧಿಷ್ಠಿರನನ್ನು ಪ್ರಶಂಸಿಸುತ್ತಾ ಹೀಗೆ ಮಾತನಾಡಿದನು.
ಧರ್ಮಃ ಪರಃ ಪಾಂಡವ ರಾಜ್ಯಲಾಭಾತ್
ತಸ್ಯಾರ್ಥಮಾಹುಸ್ತಪ ಏವ ರಾಜನ್ |
ಸತ್ಯಾರ್ಜವಾಭ್ಯಾಂ ಚರತಾ ಸ್ವಧರ್ಮಂ
ಜಿತಸ್ತ್ವಯಾಽಯಂ ಚ ಪರಶ್ಚ ಲೋಕಃ ॥17॥
ಎಲೈ ಪಾಂಡವನೇ, ರಾಜ್ಯಲಾಭಕ್ಕಿಂತಲೂ ಧರ್ಮವೇ ಶ್ರೇಷ್ಠವಾದುದು. ಎಲೈ ರಾಜನೇ, ತಪಸ್ಸನ್ನು ರಾಜ್ಯಲಾಭದ ಫಲವೆಂದು ಹೇಳುತ್ತಾರೆ. ಸತ್ಯ ಮತ್ತು ಆರ್ಜವಗಳಿಂದ ಸ್ವಧರ್ಮವನ್ನು ಆಚರಿಸುವ ನೀನು ಈ ಲೋಕವನ್ನೂ ಮತ್ತು ಪರಲೋಕವನ್ನೂ ಜಯಿಸಿದ್ದೀಯೆ.
ಅಧೀತಮಗ್ರೇ ಚರತಾ ವ್ರತಾನಿ
ಸಮ್ಯಗ್ಧನುರ್ವೇದಮವಾಪ್ಯ ಕೃತ್ಸ್ನಮ್ |
ಕ್ಷಾತ್ರೇಣ ಧರ್ಮೇಣ ವಸೂನಿ ಲಬ್ಧ್ವಾ
ಸರ್ವೇ ಹ್ಯವಾಪ್ತಾಃ ಕ್ರತವಃ ಪುರಾಣಾಃ ॥18॥
ನೀನು ಹಿಂದೆ ವ್ರತನಿಯಮಪೂರ್ವಕವಾಗಿ ಅಧ್ಯಯನವನ್ನು ಮಾಡಿ ಸಮಗ್ರವಾದ ಧನುರ್ವೇದವನ್ನು ಚೆನ್ನಾಗಿ ಕಲಿತು ಕ್ಷತ್ರಿಯ ಧರ್ಮಕ್ಕೆ ಅನುಸಾರವಾಗಿ ಧನವನ್ನು ಸಂಪಾದಿಸಿ ಶಾಸ್ತ್ರೋಕ್ತವಾದ ಎಲ್ಲಾ ಯಾಗಗಳನ್ನೂ ಮಾಡಿದ್ದೀಯೆ.
ನ ಗ್ರಾಮ್ಯಧರ್ಮೇಷು ರತಿಸ್ತವಾಸ್ತಿ
ಕಾಮಾನ್ನ ಕಿಂಚಿತ್ ಕುರುಷೇ ನರೇಂದ್ರ |
ನ ಚಾರ್ಥಲೋಭಾತ್ ಪ್ರಜಹಾಸಿ ಧರ್ಮಂ
ತಸ್ಮಾತ್ ಪ್ರಭಾವಾದಸಿ ಧರ್ಮರಾಜಃ ॥19॥
ಎಲೈ ನರೇಂದ್ರನೇ, ನಿನಗೆ ವಿಷಯಸುಖಗಳಲ್ಲಿ ಎಂದೂ ಆಸಕ್ತಿಯಿಲ್ಲ. ಕಾಮದಿಂದ ನೀನು ಯಾವ ಕಾರ್ಯವನ್ನೂ ಮಾಡುವುದಿಲ್ಲ. ಮತ್ತು ಧನಲೋಭದಿಂದ ಯಾವ ಧರ್ಮವನ್ನೂ ಬಿಡುವುದಿಲ್ಲ. ಆ ಪ್ರಭಾವದಿಂದ ನೀನು ಧರ್ಮರಾಜನಾಗಿದ್ದೀಯೆ.
ದಾನಂ ಚ ಸತ್ಯಂ ಚ ತಪಶ್ಚ ರಾಜನ್
ಶ್ರದ್ಧಾ ಚ ಬುದ್ಧಿಶ್ಚ ಕ್ಷಮಾ ಧೃತಿಶ್ಚ |
ಅವಾಪ್ಯ ರಾಷ್ಟ್ರಾಣಿ ವಸೂನಿ ಭೋಗಾನ್
ಏಷಾ ಪರಾ ಪಾರ್ಥ ಸದಾ ರತಿಸ್ತೇ ॥20॥
ಎಲೈ ರಾಜನೇ, ದಾನ, ಸತ್ಯ, ತಪಸ್ಸು, ಶ್ರದ್ಧೆ, ಬುದ್ಧಿ, ಕ್ಷಮೆ, ಧೈರ್ಯ ಇವುಗಳಲ್ಲಿಯೇ ಸದಾ ನಿನ್ನ ಆಸಕ್ತಿಯಿದೆ. ರಾಷ್ಟ್ರವನ್ನೂ, ಸಂಪತ್ತನ್ನೂ ಮತ್ತು ಭೋಗವನ್ನೂ ಪುನಃ ಹೊಂದಿ (ದಾನಾದಿಗಳಲ್ಲಿ ರತನಾಗಿರುವುದೇ ನಿನ್ನ ಆಸೆ).
ಯದಾ ಜನೌಘಃ ಕುರುಜಾಂಗಲಾನಾಂ
ಕೃಷ್ಣಾಂ ಸಭಾಯಾಮವಶಾಮಪಶ್ಯತ್ |
ಅಪೇತಧರ್ಮವ್ಯವಹಾರವೃತ್ತಂ
ಸಹೇತ ತತ್ ಪಾಂಡವ ಕಸ್ತ್ವದನ್ಯಃ ॥21॥
ಎಲೈ ಪಾಂಡವನೇ, ಯಾವಾಗ ಸಭೆಯಲ್ಲಿ ಕುರುಜಾಂಗಲದ ಅನೇಕ ಜನರ ಸಮೂಹವು ಸಭೆಯಲ್ಲಿ ಪರಾಧೀನಳಾಗಿ ಧರ್ಮಕ್ಕೂ

ಮತ್ತು ಲೋಕವ್ಯವಹಾರಕ್ಕೂ ಬಾಹಿರವಾದ ನಡವಳಿಕೆಯನ್ನು ದ್ರೌಪದಿಯು ಹೊಂದುವುದನ್ನು ನೋಡಿದರೋ ಅದನ್ನು ನಿನ್ನನ್ನು ಬಿಟ್ಟು ಬೇರೆ ಯಾರು ಸಹಿಸಿಯಾರು?
ಅಸಂಶಯಂ ಸರ್ವಸಮೃದ್ಧಕಾಮಃ
ಕ್ಷಿಪ್ರಂ ಪ್ರಜಾಃ ಪಾಲಯಿತಾಽಸಿ ಸಮ್ಯಕ್ |
ಇಮೇ ವಯಂ ನಿಗ್ರಹಣೇ ಕುರೂಣಾಂ
ಯದಿ ಪ್ರತಿಜ್ಞಾ ಭವತಃ ಸಮಾಪ್ತಾ ॥22॥
ನೀನು ನಿಸ್ಸಂಶಯವಾಗಿ ಸರ್ವಸಂಪದ್ಭರಿತನಾಗಿ ಶೀಘ್ರವಾಗಿ ಪ್ರಜೆಗಳನ್ನು ಚೆನ್ನಾಗಿ ಪಾಲಿಸುವಿ. ನಿನ್ನ ಪ್ರತಿಜ್ಞೆಯು ಸಮಾಪ್ತವಾದರೆ ಕುರುಗಳನ್ನು ನಿಗ್ರಹಿಸಲು ನಾವು ಸಿದ್ಧರಾಗಿದ್ದೇವೆ.
ಪ್ರೋವಾಚ ಕೃಷ್ಣಾಮಪಿ ಯಾಜ್ಞಸೇನೀಂ
ದಶಾರ್ಹಭರ್ತಾ ಸಹಿತಃ ಸುಹೃದ್ಭಿಃ |
ಕೃಷ್ಣೇ ಧನುರ್ವೇದರತಿಪ್ರಧಾನಾಸ್ತವಾತ್ಮಜಾಸ್ತೇ ಶಿಶವಃ ಸುಶೀಲಾಃ |
ಸದ್ಭಿಃ ಸದೈವಾಚರಿತಂ ಸುಹೃದ್ಭಿಶ್ಚರಂತಿ ಪುತ್ರಾಸ್ತವ ಯಾಜ್ಞಸೇನಿ ॥24॥
ದಶಾರ್ಹಸ್ವಾಮಿಯಾದ ಕೃಷ್ಣನು ಪ್ರೀತಿಯುಕ್ತಜನರಲ್ಲಿ ಕುಳಿತಿದ್ದ ಯಾಜ್ಞಸೇನಿಯಾದ ದ್ರೌಪದಿಯನ್ನು ಕುರಿತು ಎಲೌ ದ್ರೌಪದಿಯೇ, ನಿನ್ನ ಮಕ್ಕಳಾದ ಬಾಲಕರು ಒಳ್ಳೆಯ ನಡತೆಯಿಂದ ಕೂಡಿದವರಾಗಿ ಪ್ರಧಾನವಾಗಿ ಧನುರ್ವೇದದಲ್ಲಿಯೇ ಆಸಕ್ತಿಯುಳ್ಳವರಾಗಿದ್ದಾರೆ. ಯಾಜ್ಞಸೇನಿಯೇ, ನಿನ್ನ ಮಕ್ಕಳು ಸಜ್ಜನರು ಆಚರಿಸಿದ ಮಾರ್ಗದಲ್ಲಿಯೇ ನಡೆಯುತ್ತಿದ್ದಾರೆ.
ರಾಜ್ಯೇನ ರಾಷ್ಟ್ರೈಶ್ಚ ನಿಮಂತ್ರ್ಯಮಾಣಾಃ
ಪಿತ್ರಾ ಚ ಕೃಷ್ಣೇ ತವ ಸೋದರ್ಯೈಶ್ಚ |
ನ ಯಜ್ಞಸೇನಸ್ಯ ನ ಮಾತುಲಾನಾಂ
ಗೃಹೇಷು ಬಾಲಾ ರತಿಮಾಪ್ನುವಂತಿ ॥25॥
ನಿನ್ನ ತಂದೆಯೂ ಮತ್ತು ಸಹೋದರರೂ ಮತ್ತು ಪಾಂಚಾಲ ದೇಶವೂ ರಾಜ್ಯನಿಮಿತ್ತದಿಂದ ಆಹ್ವಾನಮಾಡಿದರೂ ಸಹ ಆ ಭಾರತರು ಯಜ್ಞಸೇನನ ಮನೆಯಲ್ಲಾಗಲೀ ಅಥವಾ ತಮ್ಮ ಸೋದರಮಾವನ ಮನೆಯಲ್ಲಾಗಲೀ ಸಂತೋಷವನ್ನು ಹೊಂದುವುದಿಲ್ಲ.
ಆನರ್ತಮೇವಾಭಿಮುಖಾಃ ಶಿವೇನ
ಗತ್ವಾ ಧನುರ್ವೇದರತಿಪ್ರಧಾನಾಃ |
ತವಾತ್ಮಜಾ ವೃಷ್ಣಿಪುರಂ ಪ್ರವಿಶ್ಯ ತದೈವ
(ನದೈವ)ತೇಭ್ಯಃ ಸ್ಪೃಹಯಂತಿ ಕೃಷ್ಣೇ ॥26॥
ದ್ರೌಪದಿಯೇ, ನಿನ್ನ ಮಕ್ಕಳು ದ್ವಾರಕಾ ಪಟ್ಟಣಕ್ಕೆ ಅಭಿಮುಖವಾಗಿಯೇ ನಿರ್ವಿಘ್ನವಾಗಿ ನಡೆದು ಪ್ರಧಾನವಾಗಿ ಧನುರ್ವೇದದಲ್ಲಿಯೇ ರತಿಯುಳ್ಳವರಾಗಿದ್ದಾರೆ. ದ್ವಾರಕಾಪಟ್ಟಣವನ್ನು ಪ್ರವೇಶಿಸಿದ ಅವರಿಗೆ ಅದರಲ್ಲಿಯೇ ಆಸಕ್ತಿಯಿದೆ.
ಯಥಾ ತ್ವಮೇವಾರ್ಹಸಿ ತೇಷು ವೃತ್ತಂ
ಪ್ರಯೋಕ್ತುಮಾರ್ಯಾ ಚ ತಥೈವ ಕುಂತೀ |
ತೇಷ್ವಪ್ರಮಾದೇನ ತಥಾ ಕರೋತಿ
ತಥೈವ ಭೂಯಶ್ಚ ತಥಾ ಸುಭದ್ರಾ ॥27॥
ನೀನು ಮತ್ತು ಪೂಜ್ಯಳಾದ ಕುಂತಿಯು ಅವರಿಗೆ ಹೇಗೆ ಒಳ್ಳೆಯ ನಡತೆಯನ್ನು ಕಲಿಸುತ್ತೀರೋ ಅದರಂತೆ ಸುಭದ್ರೆಯೂ ಸಹ ಎಚ್ಚರಿಕೆಯಿಂದ ಪುನಃ ಹಾಗೆಯೇ ಮಾಡುತ್ತಿದ್ದಾಳೆ.
ಯಥಾಽನಿರುದ್ಧಸ್ಯ ಯಥಾಽಭಿಮನ್ಯೋ
ರ್ಯಥಾ ಸುನೀಥಸ್ಯ ಯಥೈವ ಭಾನೋಃ |
ತಥಾ ವಿನೇತಾ ಚ ಗತಿಶ್ಚ ಕೃಷ್ಣೇ
ತವಾತ್ಮಜಾನಾಮಪಿ ರೌಕ್ಮಿಣೇಯಃ ॥28॥
ಎಲೌ ದ್ರೌಪದಿಯೇ, ರುಕ್ಮಿಣಿಯ ಮಗನಾದ ಚಾರುದೇಷ್ಣನು ಅನಿರುದ್ಧ, ಅಭಿಮನ್ಯು, ಸುನೀಥ, ಭಾನು ಇವರಿಗೆ ಪಾಠವನ್ನು ಕಲಿಸುವಂತೆ ನಿನ್ನ ಮಕ್ಕಳಿಗೂ ಪಾಠವನ್ನು ಕಲಿಸುತ್ತಾನೆ ಮತ್ತು ರಕ್ಷಕನಾಗಿದ್ದಾನೆ.
ಗದಾಸಿಚರ್ಮಗ್ರಹಣೇಷು ಶೂರಾನಸ್ತ್ರೇಷು ಶಿಕ್ಷಾಸು ರಥಾಶ್ವಯಾನೇ |
ಸಮ್ಯಗ್ವಿನೇತಾ ವಿನಯತ್ಯತಂದ್ರಸ್ತಾಂಶ್ಚಾಭಿಮನ್ಯುಃ ಸತತಂ ಕುಮಾರಃ ॥
ಸುಭದ್ರೆಯ ಮಗನಾದ ಅಭಿಮನ್ಯುವು ಸತತವಾಗಿ ಶೂರರಾದ ನಿನ್ನ ಮಕ್ಕಳಿಗೆ ಗದಾ ಚರ್ಮ ಗ್ರಹಣಗಳ ವಿಷಯವನ್ನೂ, ಅಸ್ತ್ರಗಳನ್ನೂ, ರಥಯಾನ ಮತ್ತು ಅಶ್ವಯಾನವನ್ನೂ ಸ್ವಲ್ಪವೂ ಆಲಸ್ಯವಿಲ್ಲದೇ ಚೆನ್ನಾಗಿ ಕಲಿಸುತ್ತಿದ್ದಾನೆ.
ಸ ಚಾಪಿ ಸಮ್ಯಕ್ಪ್ರಣಿಧಾಯ ಶಿಕ್ಷಾಂ
ಶಸತ್ರಣಿ ಚೈಷಾಂ ವಿಧಿವತ್ ಪ್ರದಾಯ |
ತವಾತ್ಮಜಾನಾಂ ಚ ತಥಾಽಭಿಮನ್ಯೋಃ
ಪರಾಕ್ರಮೈಸ್ತುಷ್ಯತಿ ರೌಕ್ಮಿಣೇಯಃ ॥30॥
ರುಕ್ಮಿಣಿಯ ಮಗನಾದ ಚಾರುದೇಷ್ಣನೂ ಸಹ ಒಳ್ಳೆಯ ಅವಧಾನದಿಂದ ಕೂಡಿದವನಾಗಿ ಅಭಿಮನ್ಯುವಿಗೂ ಮತ್ತು ನಿನ್ನ ಮಕ್ಕಳಿಗೂ ವಿಧಿಪೂರ್ವಕವಾಗಿ ಶಸ್ತ್ರವಿದ್ಯೆಯನ್ನು ಕಲಿಸಿ ಅವರ ಪರಾಕ್ರಮಗಳನ್ನು ನೋಡಿ ಸಂತೋಷಪಡುತ್ತಾನೆ.
ಯದಾ ವಿಹಾರಂ ಪ್ರಸಮೀಕ್ಷಮಾಣಾಃ

ಪ್ರಯಾಂತಿ ಪುತ್ರಾಸ್ತವ ಯಾಜ್ಞಸೇನಿ |
ಏಕೈಕಮೇಷಾಮನುಯಾಂತಿ ತತ್ರ
ರಥಾಶ್ಚ ಯಾನಾನಿ ಚ ದಂತಿನಶ್ಚ ॥31॥
ಎಲೌ ದ್ರೌಪದಿಯೇ, ನಿನ್ನ ಮಕ್ಕಳು ವಿಹಾರವನ್ನು ಬಯಸಿ ಹೊರಗೆ ಹೊರಟಾಗ ಅವರಲ್ಲಿ ಒಬ್ಬೊಬ್ಬರನ್ನೂ ರಥಗಳೂ, ಅಶ್ವಾದಿಯಾನಗಳೂ, ಗಜಗಳೂ ಹಿಂಬಾಲಿಸುತ್ತವೆ (ಎಂದು ಹೇಳಿದನು).
ಅಥಾಬ್ರವೀದ್ ಧರ್ಮರಾಜಂ ತು
ಕೃಷ್ಣೋ ದಶಾರ್ಹಯೋಧಾಃ ಕುಕುರಾಂಧಕಾಶ್ಚ |
ಏತೇ ನಿದೇಶಂ ತವ ಪಾಲಯಂತಃ
ತಿಷ್ಠಂತು ಯತ್ರೇಚ್ಛಸಿ ತತ್ರ ರಾಜನ್ ॥32॥
ಅನಂತರ ಧರ್ಮರಾಜನನ್ನು ಕುರಿತು ಕೃಷ್ಣನು ಎಲೈ ರಾಜನೇ, ದಶಾರ್ಹ ಯೋಧರು ಮತ್ತು ಕುಕುರಾಂಧಕರೂ ಸಹ ನಿನ್ನ ಆಜ್ಞೆಯನ್ನು ಪಾಲಿಸುತ್ತಾ ನೀನು ಬಯಸಿದಲ್ಲಿ ಇರಲಿ.
ಆವರ್ತತಾಂ ಕಾರ್ಮುಕವೇಗವಾತಾ
ಹಲಾಯುಧಪ್ರಗ್ರಹಣಾ ಮಧೂನಾಮ್ |
ಸೇನಾ ತವಾರ್ಥೇಷು ನರೇಂದ್ರ ಯತ್ತಾ
ಸಸಾದಿಪತ್ತ್ಯಶ್ವರಥಾ ಸನಾಗಾ ॥33॥
ಎಲೈ ನರೇಂದ್ರನೇ, ಧನುಸ್ಸಿನ ವೇಗದ ವಾಯುವಿನಿಂದಲೂ, ಬಲರಾಮನ ಆಯುಧಗಳಿಂದಲೂ ಕೂಡಿದ ಮಧುಗಳ ಸೇನೆಯು ಅಶ್ವರಥಗಜಪದಾತಿಗಳ ಸಹಿತವಾಗಿ ನಿನ್ನ ಪ್ರಯೋಜನವನ್ನು ಸಾಧಿಸಲು ಪ್ರವೃತ್ತವಾಗಲಿ.
ಪ್ರಸ್ಥಾಪ್ಯತಾಂ ಪಾಂಡವ ಧಾರ್ತರಾಷ್ಟ್ರಃ
ಸುಯೋಧನಃ ಪಾಪಕೃತಾಂ ವರಿಷ್ಠಃ |
ಸ ಸಾನುಬಂಧಃ ಸಸುಹೃದ್ಗಣಶ್ಚ
ಭೌಮಸ್ಯ ಸೌಭಾಧಿಪತೇಶ್ಚ ಮಾರ್ಗಮ್ ॥34॥
ಎಲೈ ಪಾಂಡವನೇ, ಪಾಪಿಗಳಲ್ಲಿ ಶ್ರೇಷ್ಠನಾದ ಧೃತರಾಷ್ಟ್ರನ ಪುತ್ರನಾದ ಸುಯೋದನನು ಅವನ ಪರಿವಾರ ಮತ್ತು ಮಿತ್ರವರ್ಗದೊಂದಿಗೆ ನರಕಾಸುರನ ಮತ್ತು ಸೌಭಾದಿಪತಿಯಾದ ಸಾಲ್ವನ ಮಾರ್ಗದಲ್ಲಿ ಕಳುಹಿಸಲ್ಪಡಲಿ.
ಕಾಮಂ ತಥಾ ತಿಷ್ಠ ನರೇಂದ್ರ ತಸ್ಮಿನ್
ಯಥಾ ಕೃತಸ್ತೇ ಸಮಯಃ ಸಭಾಯಾಮ್ |
ದಾಶಾರ್ಹಯೋಧೈಸ್ತು ಹತಾರಿಯೋಧಂ
ಪ್ರತೀಕ್ಷತಾಂ ನಾಗಪುರಂ ಭವಂತಮ್ ॥35॥
ನರೇಂದ್ರನೇ, ನೀನು ಸಭೆಯಲ್ಲಿ ಪ್ರತಿಜ್ಞೆ ಮಾಡಿದಂತೆ ಹಾಗೆಯೇ ಇರು. ದಾಶಾರ್ಹ ಯೋಧರಿಂದ ಶತ್ರುಸಂಹಾರವನ್ನು ಹೊಂದಿದ ಹಸ್ತಿನಪುರವು ನಿನ್ನ ಆಗಮನವನ್ನು ನಿರೀಕ್ಷಿಸಲಿ.
ವ್ಯಪೇತಮನ್ಯುರ್ವ್ಯಪನೀತಪಾಪ್ಮಾ
ವಿಹೃತ್ಯ ಯತ್ರೇಚ್ಛಸಿ ತತ್ರ ಕಾಮಮ್ |
ತತಃ ಸಮೃದ್ಧಂ ಪ್ರಥಮಂ ವಿಶೋಕಃ
ಪ್ರಪತ್ಸ್ಯಸೇ ನಾಗಪುರಂ ಸುರಾಷ್ಟ್ರಮ್ ॥36॥
ಕ್ರೋಧವಿಲ್ಲದೆ, ದುಷ್ಕರ್ಮವಿಲ್ಲದೆ ನಿನ್ನ ಮನಸ್ಸಿಗೆ ಪ್ರಶಸ್ತವಾದ ಕಡೆಯಲ್ಲಿ ವಿಹರಿಸಿ ಅನಂತರ ನೀನು ಶೋಕರಹಿತನಾಗಿ ಶ್ರೇಷ್ಠವಾದ ಒಳ್ಳೆಯ ರಾಷ್ಟ್ರವಾದ ನಾಗಪುರವನ್ನು ಹೊಂದುವಿ (ಎಂದು ಹೇಳಿದನು).
ವೈಶಂಪಾಯನಃ
ತತಸ್ತದಾಜ್ಞಾಯ ಮತಂ ಮಹಾತ್ಮಾ
ಯಥಾವದುಕ್ತಂ ಪುರುಷೋತ್ತಮೇನ |
ಪ್ರಶಸ್ಯ ವಿಪ್ರೇಕ್ಷ್ಯ ಚ ಧರ್ಮರಾಜಃ
ಕೃತಾಂಜಲಿಃ ಕೇಶವಮಿತ್ಯುವಾಚ |
ಕಾಲೋದಯೇ ತಚ್ಚ ತತಶ್ಚ ಭೂಯಃ
ಕರ್ತಾ ಭವಾನ್ಕರ್ಮ ನ ಸಂಶಯೋಽಸ್ತಿ ॥37॥
ವೈಶಂಪಾಯನ ಆಗ ಪುರುಷೋತ್ತಮನಿಂದ ಹೀಗೆ ಹೇಳಲ್ಪಟ್ಟ ಮಹಾತ್ಮನಾದ ಧರ್ಮರಾಜನು ಕೃಷ್ಣನ ಮಾತುಗಳ ಯಥಾರ್ಥವಾದ ಅಭಿಪ್ರಾಯವನ್ನು ತಿಳಿದು ಕೃಷ್ಣನನ್ನು ಪ್ರಶಂಸಿಸಿ, ಕೃಷ್ಣನನ್ನು ನೋಡಿ ಕೈಗಳನ್ನು ಮುಗಿದು ಯೋಗ್ಯವಾದ ಕಾಲದಲ್ಲಿ ಇದನ್ನು ಮತ್ತು ಇದಕ್ಕಿಂತ ಹೆಚ್ಚಿನ ಕಾರ್ಯವನ್ನು ನೀನು ಮಾಡುವವನಾಗುವಿ. ಇದರಲ್ಲಿ ನನಗೆ ಸಂಶಯವಿಲ್ಲ ಎಂದು ಹೇಳಿದನು.
ಯಥಾಪ್ರತಿಜ್ಞಂ ವಿಹೃತಶ್ಚ ಕಾಲಃ
ಸರ್ವಾಃ ಸಮಾ ದ್ವಾದಶ ನಿರ್ಜನೇಷು |
ಅಜ್ಞಾತಚರ್ಯಾಂ ವಿಧಿವತ್ ಸಮಾಪ್ಯ
ಭವದ್ಗತಾಃ ಕೇಶವ ಪಾಂಡವೇಯಾಃ ॥38॥
ಅಸಂಶಯಂ ಕೇಶವ ಪಾಂಡವಾನಾಂ

ಭವಾನ್ ಗತಿಸ್ತ್ವಚ್ಛರಣಾ ಹಿ ಪಾರ್ಥಾಃ ॥39॥
ಎಲೈ ಕೇಶವನೇ, ಪಾಂಡುಪುತ್ರರೆಲ್ಲರೂ ತಾವು ಮಾಡಿದ ಪ್ರತಿಜ್ಞೆಗೆ ಅನುಗುಣವಾಗಿ ಹನ್ನೆರಡು ವರ್ಷಗಳ ಕಾಲ ನಿರ್ಜನವಾದ ಕಾಡುಗಳಲ್ಲಿ ವಿಹಾರವನ್ನು ಮಾಡಿ ಅಜ್ಞಾತವಾಸವನ್ನು ವಿಧಿಪೂರ್ವಕವಾಗಿ ಸಮಾಪ್ತಿಗೊಳಿಸಿ ಬಂದು ನಿನ್ನನ್ನು ಆಶ್ರಯಿಸುವರು. ಕೇಶವನೇ, ನಿಸ್ಸಂಶಯವಾಗಿ ಪಾಂಡವರಿಗೆ ನೀನೇ ಗತಿ. ಪಾರ್ಥರೆಲ್ಲರಿಗೂ ನೀನೇ ಆಶ್ರಯನಾಗಿದ್ದೀಯೆ.
ಏಷೈವ ಬುದ್ಧಿರ್ಜುಷತಾಂ ಸದಾ ತ್ವಾಂ
ಸತ್ಯೇ ಸ್ಥಿತಾಃ ಕೇಶವ ಪಾಂಡವೇಯಾಃ।
ಸದಾನಧರ್ಮಾಃ ಸಜನಾಃ ಸದಾರಾಃ
ಸಬಾಂಧವಾಸ್ತ್ವಚ್ಛರಣಾ ಹಿ ಪಾರ್ಥಾಃ।
ಎಲೈ ಕೇಶವನೇ, ನೀನು ನಮ್ಮನ್ನು ಅನುಗ್ರಹಮಾಡುವ ಈ ಬುದ್ಧಿಯು ನಿನಗೆ ಯಾವಾಗಲೂ ಇರಲಿ. ದಾನಧರ್ಮಗಳಿಂದಲೂ ಬಂಧುಜನ ಪರಿವಾರದಿಂದಲೂ ಪತ್ನಿಯರಿಂದಲೂ ಕೂಡಿದ ಪಾಂಡವರೆಲ್ಲರಿಗೂ ನೀನೇ ಗತಿಯಾಗಿದ್ದೀಯಷ್ಟೆ (ಎಂದು ಹೇಳಿದನು).
ವೈಶಂಪಾಯನಃ
ತಥಾ ವದತಿ ವಾರ್ಷ್ಣೇಯೇ ಧರ್ಮರಾಜೇ ಚ ಭಾರತ।
ಅಥ ಪಶ್ಚಾತ್ ತಪೋವೃದ್ಧೋ ಬಹುವರ್ಷಸಹಸ್ರಧೃಕ್।
ಪ್ರತ್ಯದೃಶ್ಯತ ಧರ್ಮಾತ್ಮಾ ಮಾರ್ಕಂಡೇಯೋ ಮಹಾತಪಾಃ ॥40॥
ವೈಶಂಪಾಯನ ಎಲೈ ಭಾರತನೇ, ಧರ್ಮರಾಜನು ಮತ್ತು ಕೃಷ್ಣನು ಹೀಗೆ ಮಾತನಾಡುತ್ತಿರಲು ಅನೇಕ ಸಹಸ್ರವರ್ಷಗಳ ಕಾಲ ಜೀವಿಸುವ ತಪೋವೃದ್ಧರೂ, ಮಹಾತಪಸ್ವಿಗಳೂ, ಧರ್ಮಾತ್ಮರೂ ಆದ ಮಾರ್ಕಂಡೇಯರು ಕಾಣಿಸಿಕೊಂಡರು.
ಅಜರಶ್ಚಾಮರಶ್ಚೈವ ರೂಪೌದಾರ್ಯಗುಣಾನ್ವಿತಃ।
ವ್ಯದೃಶ್ಯತ ತಥಾ ಯುಕ್ತೋ ಯಥಾ ಸ್ಯಾತ್ ಪಂಚವಿಂಶಕಃ ॥
ಅಜರಾಮರರೂ ರೂಪ ಔದಾರ್ಯಗುಣಯುಕ್ತರೂ ಆದ ಅವರು ಇಪ್ಪತ್ತೈದು ವರ್ಷದ ತರುಣನಂತೆ ಕಂಡುಬಂದರು.
ತಮಾಗತಮೃಷಿಂ ವೃದ್ಧಂ ಬಹುವರ್ಷಸಹಸ್ರಿಣಮ್।
ಆನರ್ಚುರ್ಬ್ರಾಹ್ಮಣಾಃ ಸರ್ವೇ ಕೃಷ್ಣಶ್ಚ ಸಹ ಪಾಂಡವೈಃ ॥41॥
ಸಂಪ್ರಾಪ್ತರಾದ ಬಹುವರ್ಷಸಹಸ್ರಜೀವರಾದ ವೃದ್ಧರಾದ ಆ ಋಷಿಗಳಿಗೆ ಎಲ್ಲಾ ಬ್ರಾಹ್ಮಣರೂ ಮತ್ತು ಪಾಂಡವರಿಂದ ಕೂಡಿದ ಕೃಷ್ಣನೂ ಸಹ ಪೂಜೆಯನ್ನು ಸಲ್ಲಿಸಿದರು.
ತಮರ್ಚಿತಂ ಸುವಿಶ್ವಸ್ತಮಾಸೀನಮೃಷಿಸತ್ತಮಮ್।
ಬ್ರಾಹ್ಮಣಾನಾಂ ಮತೇನಾಹ ಪಾಂಡವಾನಾಂ ಚ ಕೇಶವಃ ॥42॥
ಪೂಜಿಸಲ್ಪಟ್ಟು ಸಮಾಧಾನದಿಂದ ಕುಳಿತಿದ್ದ ಆ ಋಷಿಶ್ರೇಷ್ಠರನ್ನು ಕುರಿತು ಬ್ರಾಹ್ಮಣರ ಮತ್ತು ಪಾಂಡವರ ಅಭಿಪ್ರಾಯದಂತೆ ಕೇಶವನು ಹೀಗೆ ಮಾತನಾಡಿದನು.
ಶುಶ್ರೂಷವಃ ಪಾಂಡವಾಸ್ತೇ ಬ್ರಾಹ್ಮಣಾಶ್ಚ ಸಮಾಗತಾಃ।
ದ್ರೌಪದೀ ಸತ್ಯಭಾಮಾ ಚ ತಥಾಽಹಂ ಪರಮಂ ವಚಃ ॥43॥
ಪಾಂಡವರೂ ಇಲ್ಲಿ ಸಮಾಗತರಾದ ಬ್ರಾಹ್ಮಣರೂ, ದ್ರೌಪದಿಯೂ, ಸತ್ಯಭಾಮೆಯೂ ಮತ್ತು ನಾನೂ ಸಹ ನಿನ್ನ ಶ್ರೇಷ್ಠವಾದ ಮಾತುಗಳನ್ನು ಕೇಳಲು ಬಯಸುತ್ತೇವೆ.
ಪುರಾವೃತ್ತಾಃ ಕಥಾಃ ಪುಣ್ಯಾಃ ಸದಾಚಾರಾನ್ ಸನಾತನಾನ್।
ರಾಜ್ಞಾಂ ಸ್ತ್ರೀಣಾಮೃಷೀಣಾಂ ಚ ಮಾರ್ಕಂಡೇಯ ವಿಚಕ್ಷ್ವ ನಃ ॥44॥
ಎಲೈ ಮಾರ್ಕಂಡೇಯರೇ, ರಾಜರ, ಸ್ತ್ರೀಯರ ಮತ್ತು ಋಷಿಗಳ ಪುರಾತನಗಳಾದ ಸದಾಚಾರದಿಂದ ಕೂಡಿದ ಪವಿತ್ರವಾದ ಕಥೆಯನ್ನು ನಮಗೆ ಹೇಳುವವರಾಗಿ.
ವೈಶಂಪಾಯನಃ
ತೇಷು ತತ್ರೋಪವಿಷ್ಟೇಷು ದೇವರ್ಷಿರಪಿ ನಾರದಃ।
ಆಜಗಾಮ ವಿಶುದ್ಧಾತ್ಮಾ ಪಾಂಡವಾನವಲೋಕಕಃ॥45॥
ವೈಶಂಪಾಯನ ಅವರು ಅಲ್ಲಿ ಕುಳಿತಿರಲು ವಿಶುದ್ಧಾತ್ಮರಾದ ದೇವರ್ಷಿಯಾದ ನಾರದರೂ ಸಹ ಪಾಂಡವರನ್ನು ನೋಡಲು ಅಲ್ಲಿಗೆ ಬಂದರು.
ತಮಪ್ಯಥ ಮಹಾತ್ಮಾನಂ ಸರ್ವೇ ತೇ ಪುರುಷರ್ಷಭಾಃ।
ಪಾದ್ಯಾರ್ಘ್ಯಾಭ್ಯಾಂ ಯಥಾನ್ಯಾಯಮುಪತಸ್ಥುರ್ಮನೀಷಿಣಃ ॥46॥
ಆಗತರಾದ ಆ ಮಹಾತ್ಮರಿಗೂ ಸಹ ಮೇಧಾವಿಗಳಾದ ಪುರುಷಶ್ರೇಷ್ಠರೆಲ್ಲರೂ ಪಾದ್ಯ ಅರ್ಘ್ಯಗಳನ್ನು ನೀಡಿ ಶಾಸೊತ್ರೋಕ್ತರಾಗಿ ಸತ್ಕರಿಸಿದರು.
ನಾರದಸ್ತ್ವಥ ದೇವರ್ಷಿರ್ಜ್ಞಾತ್ವಾ ತಾಂಸ್ತು ಕೃತಕ್ಷಣಾನ್।
ಮಾರ್ಕಂಡೇಯಸ್ಯ ವದತಸ್ತಾಂ ಕಥಾಮನ್ವಮೋದತ ॥47॥
ದೇವರ್ಷಿಗಳಾದ ನಾರದರು ಆಗ ಮಾರ್ಕಂಡೇಯರಿಂದ ಕಥೆಗಳನ್ನು ಕೇಳುವ ವಿಷಯದಲ್ಲಿ ಅವಕಾಶವನ್ನು ಮಾಡಿಕೊಂಡು ಕುಳಿತಿದ್ದ ಅವರನ್ನು ತಿಳಿದು ಆ ಕಥೆಗೆ ತಮ್ಮ ಅನುಮೋದನೆಯನ್ನು ನೀಡಿದರು.
ಉವಾಚ ಚೈನಂ ಕಾಲಜ್ಞಃ ಸ್ಮಯನ್ನಿವ ಸನಾತನಃ।
ಬ್ರಹ್ಮರ್ಷೇ ಕಥ್ಯತಾಂ ಯತ್ತೇ ಪಾಂಡವೇಷು ವಿವಕ್ಷಿತಮ್ ॥48॥

ಕಾಲಜ್ಞರೂ, ಸನಾತನರೂ ಆದ ಅವರು ನಗುತ್ತಾ ಬ್ರಹ್ಮರ್ಷಿಗಳೇ ಪಾಂಡವರಿಗೆ ಏನು ಹೇಳಬೇಕೆಂದು ಬಯಸಿದ್ದೀರೋ ಅದನ್ನು ಹೇಳಿ ಎಂದು ಕೇಳಿದರು.
ಏವಮುಕ್ತಃ ಪ್ರತ್ಯುವಾಚ ಮಾರ್ಕಂಡೇಯೋ ಮಹಾತಪಾಃ |
ಕ್ಷಣಂ ಕುರುಧ್ವಂ ವಿಪುಲಮಾಖ್ಯಾತವ್ಯಂ ಭವಿಷ್ಯತಿ ॥49॥
ಹೀಗೆ ಹೇಳಲ್ಪಟ್ಟ ಮಹಾತಪಸ್ವಿಗಳಾದ ಮಾರ್ಕಂಡೇಯರು ಎಲ್ಲರೂ ಅವಕಾಶವನ್ನು ಮಾಡಿಕೊಳ್ಳಿ, ಹೇಳಬೇಕಾದದ್ದು ಬಹಳವಾಗಿದೆ ಎಂದು ಹೇಳಿದರು.
ಏವಮುಕತತ್ವ(ಕ್ತಾಃ) ಕ್ಷಣಂ ಚಕ್ರುಃ ಪಾಂಡವಾಃ ಸಹ ತೈರ್ದ್ವಿಜೈಃ |
ಮಧ್ಯಂದಿನೇ ಯಥಾಽಽದಿತ್ಯಂ ಪ್ರೇಕ್ಷಂತಸ್ತೇ ಮಹಾಮುನಿಮ್ ॥50॥
ಹೀಗೆ ಹೇಳಲ್ಪಟ್ಟ ಪಾಂಡವರು ಬ್ರಾಹ್ಮಣರ ಜೊತೆಯಲ್ಲಿ ಮಧ್ಯಂದಿನದ ಸೂರ್ಯನಂತೆ ಪ್ರಕಾಶಮಾನರಾದ ಆ ಋಷಿಗಳನ್ನು ನೋಡುತ್ತಾ ಅವಕಾಶವನ್ನು ಮಾಡಿಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತೇಳನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಪ್ಪತ್ತೆಂಟನೆಯ ಅಧ್ಯಾಯ
ಯುಧಿಷ್ಠಿರನ ಪ್ರಶ್ನೆಗೆ ಉತ್ತರವಾಗಿ ಮಾರ್ಕಂಡೇಯರಿಂದ
ಪಾಪಪುಣ್ಯಗಳ ಫಲಭೋಗದ ಪ್ರಕಾರದ ಕಥನ.
ವೈಶಂಪಾಯನಃ
ತಂ ವಿವಕ್ಷಂತಮಾಲಕ್ಷ್ಯ ಕುರುರಾಜೋ ಮಹಾಮುನಿಮ್ |
ಕಥಾಸಂಜನನಾರ್ಥಾಯ ಚೋದಯಾಮಾಸ ಪಾಂಡವಃ ॥1॥
ವೈಶಂಪಾಯನ ಮಾರ್ಕಂಡೇಯರು ಮಾತನಾಡಲು ಉದ್ಯುಕ್ತರಾಗಿರುವುದನ್ನು ಗಮನಿಸಿ ಕುರುರಾಜನಾದ ಪಾಂಡವನು ಕಥೆಯನ್ನು ಪ್ರಾರಂಭಿಸುವ ಸಲುವಾಗಿ ಆ ಮಹಾಮುನಿಗಳನ್ನು ಕುರಿತು ಪ್ರಶ್ನೆ ಮಾಡಿದನು (ಹೀಗೆ ಮಾತನಾಡಿದನು).
ಭವಾನ್ ದೈವತದೈತ್ಯಾನಾಮೃಷೀಣಾಂ ಚ ಮಹಾತ್ಮನಾಮ್ |
ರಾಜರ್ಷೀಣಾಂ ಚ ಸರ್ವೇಷಾಂ ಚರಿತಜ್ಞಃ ಪುರಾತನಃ ॥2॥
ನೀವು ದೇವತೆಗಳ, ದೈತ್ಯರ, ಮಹಾತ್ಮರಾದ ಋಷಿಗಳ ಮತ್ತು ಎಲ್ಲಾ ರಾಜರ್ಷಿಗಳ ಕಥೆಗಳನ್ನು ತಿಳಿದಿರುವ ಪುರಾತನ ಪುರುಷರು.
ಸೇವ್ಯಶ್ಚೋಪಾಸಿತವ್ಯಶ್ಚ ಮತೋ ನಃ ಕಾಂಕ್ಷಿತಶ್ಚಿರಮ್ |
ಅಯಂ ಚ ದೇವಕೀಪುತ್ರಃ ಪ್ರಾಪ್ತೋಽಸ್ಮಾನವಲೋಕಕಃ ॥3॥
ನಾವು ಬಹುಕಾಲದಿಂದಲೂ ನಿಮ್ಮ ಸೇವೆಯನ್ನು ಮತ್ತು ಉಪಾಸನೆಯನ್ನು ಮಾಡಬೇಕೆಂಬ ಅಭಿಪ್ರಾಯವನ್ನು ಹೊಂದಿದ್ದೆವು. ಈ ದೇವಕೀಪುತ್ರನಾದ ಕೃಷ್ಣನೂ ನಮ್ಮನ್ನು ನೋಡಲು ಇಲ್ಲಿಗೆ ಬಂದಿದ್ದಾನೆ.
ಭವತ್ಯೇವ ಹಿ ಮೇ ಬುದ್ಧಿರ್ದೃಷ್ಟ್ವಾಽಽತ್ಮಾನಂ ಸುಖಾಚ್ಚ್ಯುತಮ್ |
ಧಾರ್ತರಾಷ್ಟ್ರಾಂಶ್ಚ ದುರ್ವೃತ್ತಾನ್ಋಧ್ಯತಃ ಪ್ರೇಕ್ಷ್ಯ ಸರ್ವತಃ ॥4॥
ಸುಖದಿಂದ ಚ್ಯುತರಾದ ನಮ್ಮನ್ನೂ ಮತ್ತು ಎಲ್ಲಾ ವಿಧವಾದ ಸಮೃದ್ಧಿಯನ್ನು ಹೊಂದಿರುವ ದುರಾಚಾರಿಗಳಾದ ಧೃತರಾಷ್ಟ್ರ ಪುತ್ರರನ್ನೂ ನೋಡಿ ನನಗೆ ಈ ಬುದ್ಧಿಯುಂಟಾಗುತ್ತದೆ.
ಕರ್ಮಣಃ ಪುರುಷಃ ಕರ್ತಾ ಶುಭಸ್ಯಾಪ್ಯಶುಭಸ್ಯ ವಾ |
ಸ ಫಲಂ ತದುಪಾಶ್ನಾತಿ ಕಥಂ ಕರ್ತಾ ಸ್ವಿದೀಶ್ವರಃ ॥5॥
ಶುಭಾಶುಭಕರ್ಮಗಳಿಗೆ ಕರ್ತೃವಾದ ಜೀವನು ಆ ಕರ್ಮದ ಫಲವನ್ನು ಅನುಭವಿಸುತ್ತಾರೆ. ಕರ್ತೃವಾದ ಈಶ್ವರನ ವಿಷಯದಲ್ಲಿ ಹೇಗೆ?

ಅಥ ವಾ ಸುಖದುಃಖೇಷು ನೃಣಾಂ ಬ್ರಹ್ಮವಿದಾಂ ವರ |
ಇಹ ವಾ ಕೃತಮನ್ವೇತಿ ಪರದೇಹೇಽಥ ವಾ ಪುನಃ ॥6॥
ಮತ್ತು ಎಲೈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರೇ, ಪುರುಷರು ಕರ್ಮಫಲವಾದ ಸುಖದುಃಖಗಳನ್ನು ಈ ದೇಹದಲ್ಲಿಯೇ ಅನುಭವಿಸುತ್ತಾರೆಯೇ? ಅಥವಾ ಇನ್ನೊಂದು ದೇಹದಲ್ಲಿ ಅನುಭವಿಸುತ್ತಾರೆಯೇ?
ದೇಹೀ ಚ ದೇಹಂ ಸಂತ್ಯಜ್ಯ ಮೃಗ್ಯಮಾಣಃ ಶುಭಾಶುಭೈಃ |
ಕಥಂ ಸಂಯುಜ್ಯತೇ ಪ್ರೇತ್ಯ ಇಹ ವಾ ದ್ವಿಜಸತ್ತಮ ॥7॥
ಎಲೈ ದ್ವಿಜಶ್ರೇಷ್ಠರೇ, ಜೀವನು ದೇಹವನ್ನು ತ್ಯಾಗಮಾಡಿದ ಮೇಲೆ ಶುಭಾಶುಭ ಕರ್ಮಗಳು ಅವನನ್ನು ಹುಡುಕಿ ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಹೇಗೆ ಅವನ ಜೊತೆಯಲ್ಲಿ ಸೇರುತ್ತವೆ?
ಐಹಲೌಕಿಕಮೇವೇಹ ಉತಾಹೋ ಪಾರಲೌಕಿಕಮ್ |
ಕ್ವ ಚ ಕರ್ಮಾಣಿ ತಿಷ್ಠಂತಿ ಜಂತೋಃ ಪ್ರೇತಸ್ಯ ಭಾರ್ಗವ |
ಏತತ್ ಸರ್ವಂ ಯಥಾವೃತ್ತಂ ಮುನೇ ವಕ್ತುಮಿಹಾರ್ಹಸಿ ॥8॥

ಎಲೈ ಭಾರ್ಗವಗೋತ್ರೋತ್ಪನ್ನರೇ, ಜೀವನು ಮಾಡಿದ ಕರ್ಮಗಳು ಅವನು ಮರಣಹೊಂದಿದ ಮೇಲೆ ಈ ಲೋಕದಲ್ಲಿಯೇ ಉಳಿಯುತ್ತವೆಯೇ? ಅಥವಾ ಪರಲೋಕಕ್ಕೆ ಹೋಗುತ್ತವೆಯೇ? ಎಲೈ ಋಷಿಗಳೇ, ತಾವು ಇವೆಲ್ಲವನ್ನೂ ಸರಿಯಾಗಿ ತಿಳಿಸಬೇಕು.
ಮಾರ್ಕಂಡೇಯಃ
ತ್ವದ್ಯುಕ್ತೋಽಯಮನುಪ್ರಶ್ನೋ ಯಥಾವದ್ ವದತಾಂ ವರ |
ವಿದಿತಂ ವೇದಿತವ್ಯಂ ತೇ ಸ್ಥಿತ್ಯರ್ಥಂ ತ್ವಂ ತು ಪೃಚ್ಛಸಿ ॥9॥
ಮಾರ್ಕಂಡೇಯ ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ, ನೀನು ನಿನ್ನನ್ನೂ ಸೇರಿಸಿ ಈ ಪ್ರಶ್ನೆಯನ್ನು ಕೇಳಿದೆಯಷ್ಟೆ? ನೀನು ತಿಳಿಯಬೇಕಾದುದೆಲ್ಲವನ್ನೂ ತಿಳಿದಿದ್ದೀಯೆ. ಆದರೂ ಲೋಕದ ಧರ್ಮಸ್ಥಿತಿಗಾಗಿ ಮಾತ್ರ ಈ ಪ್ರಶ್ನೆಗಳನ್ನು ಕೇಳುತ್ತಿದ್ದೀಯೆ.
ಅತ್ರ ತೇ ಕಥಯಿಷ್ಯಾಮಿ ತದಿಹೈಕಮನಾಃ ಶೃಣು |
ಯಥೇಹಾಮುತ್ರ ಚ ನರಃ ಸುಖದುಃಖಮುಪಾಶ್ನುತೇ ॥10॥
ಜೀವನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಹೇಗೆ ಸುಖದುಃಖಗಳನ್ನು ಹೊಂದುತ್ತಾನೆ ಎಂದು ಹೇಳುವೆನು. ಅದನ್ನು ಏಕಾಗ್ರ ಮನಸ್ಸಿನಿಂದ ಕೇಳು.
ನಿರ್ಮಲಾನಿ ಶರೀರಾಣಿ ವಿಶುದ್ಧಾನಿ ಶರೀರಿಣಾಮ್ |
ಸಸರ್ಜ ಧರ್ಮತಂತ್ರಾಣಿ ಪೂರ್ವೋತ್ಪನ್ನಃ ಪ್ರಜಾಪತಿಃ ॥11॥
ಮೊದಲು ಜನಿಸಿದ ಪ್ರಜಾಪತಿಗಳಾದ ಬ್ರಹ್ಮದೇವರು ಜೀವರಿಗೆ ವಿಶುದ್ಧವಾದ ಧರ್ಮಸಾಧಕವಾದ ನಿರ್ಮಲವಾದ ಶರೀರಗಳನ್ನು ಸೃಷ್ಟಿಸಿದನು.
ಅಮೋಘಫಲಸಂಕಲ್ಪಾಃ ಸುವ್ರತಾಃ ಸತ್ಯವಾದಿನಃ |
ಬ್ರಹ್ಮಭೂತಾ ನರಾಃ ಪುಣ್ಯಾಃ ಪುರಾಣಾಃ ಕುರುಸತ್ತಮ ॥12॥
ಎಲೈ ಕುರುಶ್ರೇಷ್ಠನೇ, ಪುರಾತನರಾದ ಆ ಪುಣ್ಯಪುರುಷರು ಒಳ್ಳೆಯ ವ್ರತನಿಷ್ಠರಾಗಿ ಸತ್ಯವಾದಿಗಳಾಗಿ ಯಾವಾಗಲೂ ದೇವರನ್ನೇ ಧ್ಯಾನಿಸುವವರಾಗಿ ವ್ಯರ್ಥವಲ್ಲದ ಫಲಸಂಕಲ್ಪಗಳನ್ನು ಉಳ್ಳವರಾಗಿ ಇದ್ದರು.
ಸರ್ವೇ ದೇವೈಃ ಸಮಾಯಾಂತಿ ಸ್ವಚ್ಛಂದೇನ ನಭಸ್ತಳಮ್ |
ತತಶ್ಚ ಪುನರಾಯಾಂತಿ ಸರ್ವೇ ಸ್ವಚ್ಛಂದಚಾರಿಣ ॥13॥
ಎಲ್ಲರೂ ತಮ್ಮ ಇಚ್ಛೆಗೆ ಅನುಗುಣವಾಗಿ ಆಕಾಶದಲ್ಲಿ ದೇವತೆಗಳ ಜೊತೆಯಲ್ಲಿ ಸೇರುತ್ತಾರೆ. ಮತ್ತು ಎಲ್ಲರೂ ಸ್ವಚ್ಛಂದಚಾರಿಗಳಾಗಿ ಹಿಂದೆ ಬರುತ್ತಾರೆ.
ಸ್ವಚ್ಛಂದಮರಣಾಶ್ಚಾಸನ್ ನರಾಃ ಸ್ವಚ್ಛಂದಜೀವಿನಃ |
ಅಲ್ಪಬಾಧಾ ನಿರಾತಂಕಾಃ ಸಿದ್ಧಾರ್ಥಾ ನಿರುಪದ್ರವಾಃ ॥14॥
ಸ್ವಚ್ಛಂದಚಾರಿಗಳಾದ ಆ ಪುರುಷರೆಲ್ಲರೂ ಸ್ವಚ್ಛಂದ ಮರಣವುಳ್ಳವರೂ, ಅಲ್ಪಬಾಧೆಯುಳ್ಳವರೂ, ಉಪದ್ರವರಹಿತರೂ, ಎಲ್ಲವನ್ನೂ ಸಾಧಿಸಿದವರೂ ಮತ್ತು ನಿರಾತಂಕರೂ ಆಗಿದ್ದರು.
ದ್ರಷ್ಟಾರೋ ದೇವಸಂಘಾನಾಮೃಷೀಣಾಂ ಚ ಮಹಾತ್ಮನಾಮ್ |
ಪ್ರತ್ಯಕ್ಷಾಃ ಸರ್ವಧರ್ಮಾಣಾಂ ದಾಂತಾ ವಿಗತಮತ್ಸರಾಃ |
ಆಸನ್ ವರ್ಷಸಹಸ್ರೀಯಾಸ್ತಥಾ ಪುತ್ರಸಹಸ್ರಿಣಃ ॥15॥
ಅವರು ದೇವಸಮೂಹಗಳನ್ನು ಮತ್ತು ಮಹಾತ್ಮರಾದ ಋಷಿಗಳನ್ನು ನೋಡುತ್ತಿದ್ದರು. ಸರ್ವಧರ್ಮಗಳೂ ಅವರಿಗೆ ಪ್ರತ್ಯಕ್ಷವಾಗಿದ್ದವು. ಅವರು ಇಂದ್ರಿಯ ನಿಗ್ರಹವುಳ್ಳವರೂ ಮತ್ತು ಮಾತ್ಸರ್ಯರಹಿತರೂ ಆಗಿದ್ದರು. ಅವರು ಒಂದು ಸಹಸ್ರ ವರ್ಷಗಳ ಕಾಲ ಬದುಕಿರುತ್ತಿದ್ದರು ಮತ್ತು ಸಹಸ್ರಪುತ್ರರನ್ನು ಪಡೆಯುತ್ತಿದ್ದರು.
ತತಃ ಕಾಲಾಂತರೇಽನ್ಯಸ್ಮಿನ್ ಪೃಥಿವೀತಳಚಾರಿಣಃ ॥16॥
ಕಾಮಕ್ರೋಧಾಭಿಭೂತಾಸ್ತೇ ಮಾಯಾವ್ಯಾಜೋಪಜೀವಿನಃ |
ಲೋಭಮೋಹಾಭಿಭೂತಾಶ್ಚ ತ್ಯಕ್ತಾ ದೇವೈಸ್ತತೋ ನರಾಃ ॥17॥
ಕಾಲಾಂತರದಲ್ಲಿ ಅವರು ಕಾಮಕ್ರೋಧಗಳಿಗೆ ವಶರಾಗಿ ಕಪಟ ಮತ್ತು ಮೋಸಗಳನ್ನು ಮಾಡುತ್ತಾ ಭೂಮಿಯಲ್ಲಿ ಮಾತ್ರ ಸಂಚರಿಸುವವರಾದರು. ಲೋಭ ಮೋಹಗಳಿಗೆ ವಶರಾದ ಆ ಮನುಷ್ಯರನ್ನು ದೇವತೆಗಳು ತ್ಯಜಿಸಿದರು.
ಅಶುಭೈಃ ಕರ್ಮಭಿಃ ಪಾಪಾಸ್ತಿರ್ಯಙ್ ನಿರಯಗಾಮಿನಃ |
ಸಂಸಾರೇಷು ವಿಚಿತ್ರೇಷು ಪಚ್ಯಮಾನಾಃ ಪುನಃ ಪುನಃ ॥18॥
ಅಶುಭಕರ್ಮಗಳನ್ನು ಮಾಡಿ ಪಾಪವನ್ನು ಗಳಿಸಿದ ಅವರು ನೀಚಯೋನಿಗಳಿಗೆ ಮತ್ತು ನರಕಗಳಿಗೆ ಪುನಃಪುನಃ ಹೋಗಿ ವಿಚಿತ್ರವಾದ ಸಂಸಾರದಲ್ಲಿ ದುಃಖಪಡುವವರಾದರು.
ಮೋೇಷ್ಟಾ ಮೋಘಸಂಕಲ್ಪಾ ಮೋಘಜ್ಞಾನಾ ವಿಚೇತಸಃ |
ಕಾಂಕ್ಷಿಣಃ ಸರ್ವಕಾಮಾನಾಂ ನಾಸ್ತಿಕಾ ಭಿನ್ನಸೇತವಃ ॥19॥
ವ್ಯರ್ಥವಾದ ಇಚ್ಛೆ, ವ್ಯರ್ಥವಾದ ಸಂಕಲ್ಪ, ವ್ಯರ್ಥವಾದ ಜ್ಞಾನ ಇವುಗಳನ್ನು ಹೊಂದಿ ಪ್ರಜ್ಞಾಶೂನ್ಯರಾಗಿ ಎಲ್ಲ ಭೋಗವಸ್ತುಗಳನ್ನು ಅಪೇಕ್ಷಿಸುತ್ತಾ ನಾಸ್ತಿಕರೂ ಮತ್ತು ಮರ್ಯಾದಾ ರಹಿತರೂ ಆದರು.
ಸರ್ವಾಭಿಶಂಕಿನಶ್ಚೈವ ಸಂವೃತ್ತಾಃ ಕ್ಲೇಶದಾಯಿನಃ |
ಅಶುಭೈಃ ಕರ್ಮಭಿಶ್ಚಾಪಿ ಪ್ರಾಯಶಃ ಪರಿಚಿಹ್ನಿತಾಃ ॥20॥
ಎಲ್ಲದರಲ್ಲಿಯೂ ಸಂಶಯವನ್ನು ಮಾಡುವವರೂ ಮತ್ತು ಇನ್ನೊಬ್ಬರಿಗೆ ಕ್ಲೇಶವನ್ನು ಕೊಡುವವರೂ ಆದರು. ಹೆಚ್ಚಾಗಿ ಅಶುಭಕರ್ಮಗಳ ಚಿಹ್ನೆಗಳಿಂದ ಕೂಡಿದವರಾದರು.

ದೌಷ್ಕುಲ್ಯಾ ವ್ಯಾಧಿಬಹುಲಾ ದುರಾತ್ಮನೋಽಪತಾಪಿನಃ |
ಭವಂತ್ಯಲ್ಪಾಯುಷಃ ಪಾಪಾ ರೌದ್ರಕರ್ಮಫಲೋದಯಾಃ |
ನಾಥಂತಃ ಸರ್ವಕಾಮಾನಾಂ ನಾಸ್ತಿಕಾ ಭಿನ್ನಚೇತಸಃ ॥21॥
ದುಷ್ಕುಲಗಳಲ್ಲಿ ಜನ್ಮವನ್ನು ಹೊಂದಿ ಅನೇಕ ವ್ಯಾಧಿಗಳಿಂದ ಪೀಡಿತರಾಗಿ ದುಷ್ಟವಾದ ಮನಸ್ಸನ್ನು ಹೊಂದಿ ಪಶ್ಚಾತ್ತಾಪರಹಿತರಾಗಿ ಎಲ್ಲ ಭೋಗಸಾಮಗ್ರಿಗಳನ್ನೂ ಬಯಸಿ ನಾಸ್ತಿಕರೂ, ಭಗ್ನಮನಸ್ಸುಳ್ಳವರೂ ಆಗಿ ಘೋರವಾದ ಕರ್ಮಫಲಗಳನ್ನು ಅನುಭವಿಸುತ್ತಾ ಪಾಪಾಚಾರಿಗಳಾದ ಅವರು ಅಲ್ಪಾಯುಷಿಗಳಾದರು.
ಜಂತೋಃ ಪ್ರೇತಸ್ಯ ಕೌಂತೇಯ ಗತಿಃ ಸ್ವೈರಿಹ ಕರ್ಮಭಿಃ |
ಪ್ರಾಜ್ಞಸ್ಯ ಹೀನಬುದ್ಧೇಶ್ಚ ಕರ್ಮಕೋಶಃ ಕ್ವ ತಿಷ್ಠತಿ ॥22॥
ಕ್ವಸ್ಥಸ್ತತ್ ಸಮುಪಾಶ್ನಾತಿ ಸುಕೃತಂ ಯದಿ ವೇತರತ್ |
ಇತಿ ತೇ ದರ್ಶನಂ ಯಚ್ಚ ತತ್ರಾಪ್ಯನುನಯಂ ಶೃಣು ॥23॥
ಎಲೈ ಕೌಂತೇಯನೇ, ಜಂತುವು ಪ್ರಾಜ್ಞನಾಗಲೀ ಅಥವಾ ಹೀನ ಬುದ್ಧಿಯುಳ್ಳವನಾಗಲೀ ಅವನು ಮೃತನಾದಮೇಲೆ ಅವನು ಮಾಡಿದ ಕರ್ಮಗಳ ಸಮೂಹವು ಎಲ್ಲಿರುತ್ತದೆ. ಆ ಕರ್ಮಗಳ ಗತಿಯು ಎಲ್ಲಿ ಉಂಟಾಗುತ್ತದೆ. ಸುಕೃತವಾಗಲೀ ಅಥವಾ ದುಷ್ಕೃತವಾಗಲೀ ಅದನ್ನು ಎಲ್ಲಿದ್ದು ಜೀವನು ಅನುಭವಿಸುತ್ತಾನೆ ಎಂದು ನಿನ್ನ ಪ್ರಶ್ನೆಯಷ್ಟೇ? ಅದಕ್ಕೆ ಉತ್ತರವನ್ನು ಹೇಳುತ್ತೇನೆ, ಕೇಳು.
ಅಯಮಾದಿಶರೀರೇಣ ದೇವಸೃಷ್ಟೇನ ಮಾನವಃ |
ಶುಭಾನಾಮಶುಭಾನಾಂ ಚ ಕುರುತೇ ಸಂಚಯಂ ಮಹತ್ ॥24॥
ದೇವರಿಂದ ಮತ್ತು ದೇವತೆಗಳಿಂದ ಕೊಡಲ್ಪಟ್ಟ ಇದೇ ಮೊದಲಾದ ಶರೀರಗಳಲ್ಲಿ ಮನುಷ್ಯನು ಶುಭಾಶುಭಕರ್ಮಗಳನ್ನು ಮಾಡಿ ಅವುಗಳ ದೊಡ್ಡ ಕೋಶವನ್ನು ಮಾಡುತ್ತಾನೆ.
ಆಯುಷೋಽಂತೇ ಪ್ರಹಾಯೇದಂ ಕ್ಷೀಣಪ್ರಾಯಂ ಕಳೇವರಮ್ |
ಸಂಭವತ್ಯೇವ ಯುಗಪದ್ ಯೋನೌ ನಾಸ್ತ್ಯತ್ರ ಸಂಶಯಃ ॥25॥
ಆಯಸ್ಸು ಮುಗಿದಮೇಲೆ ಕ್ಷೀಣವಾದ ಈ ಶರೀರವನ್ನು ಬಿಟ್ಟು ಇನ್ನೊಂದು ಯೋನಿಯಲ್ಲಿ ಏಕಕಾಲದಲ್ಲಿ ಜನಿಸುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.
ತತ್ರಾಸ್ಯ ಸ್ವಕೃತಂ ಕರ್ಮ ಛಾಯೇವಾನುಗತಂ ಸದಾ |
ಫಲತ್ಯಥ ಸುಖಾರ್ಹೋ ವಾ ದುಃಖಾರ್ಹೋ ವಾಽಥ ಜಾಯತೇ ॥
ಮನುಷ್ಯನನ್ನು ನೆರಳು ಅನುಸರಿಸುವಂತೆ ಅಲ್ಲಿ ಅವನು ಮಾಡಿದ ಸುಖಪ್ರದವಾಗಲೀ ಅಥವಾ ದುಃಖಪ್ರದವಾಗಲೀ ಆದ ಕರ್ಮಗಳು ಅವನನ್ನು ಅನುಸರಿಸಿ ಫಲವನ್ನು ಕೊಡುತ್ತವೆ.
ಅನುಶೇತೇ ಶಯಾನಂ ಚ ತಿಷ್ಠಂತಂ ಚಾನುತಿಷ್ಠತಿ |
ಅನುಧಾವತಿ ಧಾವಂತಂ ಪೂರ್ವಕರ್ಮ ಕೃತಂ ನರಮ್ |
ಮನುಷ್ಯನು ಮಾಡಿದ ಪೂರ್ವಕರ್ಮವು ಅವನು ಮಲಗಿದ್ದರೆ ಮಲಗಿರುತ್ತದೆ. ನಿಂತಿದ್ದರೆ ನಿಂತಿರುತ್ತದೆ. ಓಡಿದರೆ ಅವನ ಜೊತೆಯಲ್ಲಿ ಓಡುತ್ತದೆ.
ಕೃತಾಂತವಿಧಿಸಂಯುಕ್ತಃ ಸ ಜಂತುರ್ಲಕ್ಷಣೈಃ ಶುಭೈಃ |
ಅಶುಭೈರ್ವಾ ನಿರಾದಾನೋ ಲಕ್ಷ್ಯತೇ ಜ್ಞಾನದೃಷ್ಟಿಭಿಃ ॥27॥
ಜ್ಞಾನದೃಷ್ಟಿಯುಳ್ಳ ಮಹಾತ್ಮರು ಕೃತಾಂತವಿಧಿಗೆ ಅನುಗುಣವಾಗಿ ಜಂತುವು ಶುಭಲಕ್ಷಣ ಮತ್ತು ಅಶುಭಲಕ್ಷಣಗಳಿಂದ ಕೂಡಿರುವುದನ್ನು ಗಮನಿಸುತ್ತಾರೆ.
ಏಷಾ ತಾವದಬುದ್ಧೀನಾಂ ಗತಿರುಕ್ತಾ ಯುಧಿಷ್ಠಿರ |
ಅತಃ ಪರಂ ಜ್ಞಾನವತಾಂ ನಿಬೋಧ ಗತಿಮುತ್ತಮಾಮ್ ॥28॥
ಎಲೈ ಯುಧಿಷ್ಠಿರನೇ, ಇದುವರೆಗೆ ನಾನು ಅಜ್ಞಾನಿಗಳಿಗೆ ಆಗುವ ಗತಿಯನ್ನು ಹೇಳಿದೆನು. ಇನ್ನು ಮುಂದೆ ಜ್ಞಾನಿಗಳಿಗೆ ಉಂಟಾಗುವ ಶ್ರೇಷ್ಠವಾದ ಗತಿಯನ್ನು ಹೇಳುತ್ತೇನೆ ಅದನ್ನು ಕೇಳು.
ಮನುಷ್ಯಾಸ್ತಪ್ತತಪಸಃ ಸರ್ವಾಗಮಪರಾಯಣಾಃ |
ಸ್ಥಿರವ್ರತಾಃ ಸತ್ಯಪರಾ ಗುರುಶುಶ್ರೂಷಣೇ ರತಾಃ ॥29॥
ಸುಶೀಲಾಃ ಶುಕ್ಲಜಾತೀಯಾಃ ಕ್ಷಾಂತಾ ದಾಂತಾಃ ಸುತೇಜಸಃ |
ಶುಚಿಯೋನ್ಯಂತರಗತಾಃ ಪ್ರಾಯಶಃ ಶುಭಲಕ್ಷಣಾಃ ॥30॥
ಜಿತೇಂದ್ರಿಯತ್ವಾದ್ ವಶಿನಃ ಶುಕ್ಲತ್ವಾನ್ಮಂದರೋಗಿಣಃ |
ಅಬಾಧಾಶ್ಚಾಪರಿತ್ರಾಸಾ ಭವಂತಿ ನಿರುಪದ್ರವಾಃ ॥31॥
ತಪಸ್ಸನ್ನು ಮಾಡಿ ಸರ್ವಾಗಮಪರಾಯಣರಾಗಿ, ವ್ರತಗಳನ್ನು ಆಚರಿಸಿ, ಸತ್ಯಪರರಾಗಿ, ಗುರುಸೇವೆಯಲ್ಲಿ ರತರಾಗಿ ಇರುವ ಮನುಷ್ಯರು ಒಳ್ಳೆಯ ಶೀಲವನ್ನು ಮತ್ತು ಒಳ್ಳೆಯ ಜಾತಿಯನ್ನು ಹೊಂದಿದವರಾಗಿ ತಮ್ಮ ತಮ್ಮ ತೇಜಸ್ಸುಗಳಿಂದ ಸಹಿತರಾಗಿ, ಒಳ್ಳೆಯ ಯೋನಿಗಳಲ್ಲಿ ಜನಿಸುವವರಾಗಿ, ಪ್ರಾಯಶಃ ಶುಭಲಕ್ಷಣವುಳ್ಳವರಾಗಿ, ಇಂದ್ರಿಯಜಯವುಳ್ಳಕಾರಣದಿಂದ ಮನೋಜಯ ಉಳ್ಳವರಾಗಿ, ಪರಿಶುದ್ಧರಾಗಿರುವುದರಿಂದ ಅಲ್ಪರೋಗವುಳ್ಳವರಾಗಿ, ಯಾವ ಬಾಧೆಯೂ ಪರಿತ್ರಾಸವೂ ಇಲ್ಲದೇ ಉಪದ್ರವರಹಿತರಾಗಿರುತ್ತಾರೆ.
ಚ್ಯವಂತಂ ಜಾಯಮಾನಂ ಚ ಗರ್ಭಸ್ಥಂ ಚೈವ ಸರ್ವಶಃ |
ಸ್ವಮಾತ್ಮಾನಂ ಪರಂ ಚೈವ ಬುಧ್ಯಂತೇ ಜ್ಞಾನಚಕ್ಷುಷಾ ॥32॥

ಸ್ವರ್ಗದಿಂದ ಕೆಳಗೆ ಬರುವ ಗರ್ಭಸ್ಥರಾದ, ತಾಯಿಯ ಉದರದಿಂದ ಹೊರಗೆ ಬರುತ್ತಿರುವ, ತಮ್ಮನ್ನೂ ಇನ್ನೊಬ್ಬರನ್ನೂ ಎಲ್ಲರೀತಿಯಿಂದಲೂ ತಮ್ಮ ಜ್ಞಾನ ಚಕ್ಷುಸ್ಸಿನಿಂದ ತಿಳಿಯುತ್ತಾರೆ.
ಕರ್ಮಭೂಮಿಮಿಮಾಂ ಪ್ರಾಪ್ಯ ಪುನರ್ಯಾಂತಿ ಸುರಾಲಯಮ್ |
ಕೃತ್ವಾ ಶುಭಾನಿ ಕರ್ಮಾಣಿ ಜ್ಞಾನೇನ ಭರತರ್ಷಭ ॥33॥
ಋಷಯಸ್ತೇ ಮಹಾತ್ಮಾನಃ ಪ್ರತ್ಯಕ್ಷಾಗಮಬುದ್ಧಯಃ |
ಎಲೈ ಭರತರ್ಷಭನೇ, ಈ ಕರ್ಮಭೂಮಿಗೆ ಬಂದು ಜ್ಞಾನಪೂರ್ವಕವಾಗಿ ಶುಭಕರ್ಮಗಳನ್ನು ಮಾಡಿ ಪುನಃ ಸ್ವರ್ಗಕ್ಕೆ ಹೋಗುತ್ತಾರೆ. ಅವರು ಆಗಮದಲ್ಲಿ ಹೇಳಿದುದನ್ನೆಲ್ಲಾ ಪ್ರತ್ಯಕ್ಷವಾಗಿ ನೋಡುವ ಮಹಾನುಭಾವರಾದ ಋಷಿಗಳು.
ಕಿಂಚಿದ್ ದೈವಾದ್ಹಠಾತ್ ಕಿಂಚಿತ್ ಕಿಂಚಿದೇವ ಸ್ವಕರ್ಮಭಿಃ |
ಪ್ರಾಪ್ನುವಂತಿ ನರಾ ರಾಜನ್ ಮಾ ತೇಽಸ್ತ್ವನ್ಯಾ ವಿಚಾರಣಾ ॥34॥
ಮನುಷ್ಯರು ಮಾತ್ರ ದೈವದಿಂದ ಸ್ವಲ್ಪಭಾಗವನ್ನು, ತಮ್ಮ ಯೋಗ್ಯತೆಯಿಂದ ಸ್ವಲ್ಪ ಭಾಗವನ್ನು, ತಮ್ಮ ಕರ್ಮದಿಂದ ಸ್ವಲ್ಪಮಾತ್ರ ಭಾಗವನ್ನು ಹೊಂದಿರುವ ಫಲಗಳನ್ನು ಪಡೆಯುತ್ತಾರೆ.ರಾಜನೇ, ಈ ವಿಷಯದಲ್ಲಿ ನೀನು ಅನ್ಯಥಾ ಚಿಂತಿಸುವುದು ಬೇಡ.
ಇಮಾಮತ್ರೋಪಮಾಂ ಚಾಪಿ ನಿಬೋಧ ವದತಾಂ ವರ |
ಮನುಷ್ಯಲೋಕೇ ಯಚ್ಛ್ರೇಯಃ ಪರಂ ಮನ್ಯೇ ಯುಧಿಷ್ಠಿರ ॥35॥
ಇಹ ವೈಕಸ್ಯ ನಾಮುತ್ರ ಅಮುತ್ರೈಕಸ್ಯ ನೋ ಇಹ |
ಇಹ ಚಾಮುತ್ರಚೈಕಸ್ಯ ನಾಮುತ್ರೈಕಸ್ಯ ನೋ ಇಹ ॥36॥
ಮಾತನಾಡುವವರಲ್ಲಿ ಶ್ರೇಷ್ಠನಾದ ರಾಜನೇ, ನಾನು ಹೇಳುವ ಈ ದೃಷ್ಟಾಂತವನ್ನು ತಿಳಿದುಕೋ. ಯುಧಿಷ್ಠಿರನೇ, ಮನುಷ್ಯಲೋಕದಲ್ಲಿ ಯಾವುದು ಪರಮಶ್ರೇಯಸ್ಸೆಂದು ತಿಳಿಯಲ್ಪಡುತ್ತದೆಯೋ ಅದನ್ನು ಕೆಲವರು ಇಲ್ಲಿ ಅನುಭವಿಸುತ್ತಾರೆ, ಸ್ವರ್ಗದಲ್ಲಿ ಅನುಭವಿಸುವುದಿಲ್ಲ. ಇನ್ನು ಕೆಲವರು ಸ್ವರ್ಗದಲ್ಲಿ ಅನುಭವಿಸುತ್ತಾರೆ, ಮನುಷ್ಯ ಲೋಕದಲ್ಲಿ ಅನುಭವಿಸುವುದಿಲ್ಲ. ಇನ್ನು ಕೆಲವರು ಇಲ್ಲಿಯೂ ಮತ್ತು ಸ್ವರ್ಗಲೋಕದಲ್ಲಿಯೂ ಅನುಭವಿಸುತ್ತಾರೆ. ಇನ್ನು ಕೆಲವರು ಇಲ್ಲಾಗಲೀ ಅಥವಾ ಸ್ವರ್ಗಲೋಕದಲ್ಲಾಗಲೀ ಅನುಭವಿಸುವುದಿಲ್ಲ.
ಧನಾನಿ ಯೇಷಾಂ ವಿಪುಲಾನಿ ಸಂತಿ
ನಿತ್ಯಂ ರಮಂತೇ ಸುವಿಭೂಷಿತಾಂಗಾಃ |
ತೇಷಾಮಯಂ ಶತ್ರುವರಘ್ನ ಲೋಕೋ
ನಾಸೌ ಸದಾ ದೇಹಸುಖೇ ರತಾನಾಮ್ ॥37॥
ಎಲೈ ಶ್ರೇಷ್ಠ ಶತ್ರುನಾಶಕನೇ, ಯಾರು ಈ ಲೋಕದಲ್ಲಿ ವಿಪುಲವಾದ ಧನವನ್ನು ಹೊಂದಿ ಅಲಂಕಾರವನ್ನು ಮಾಡಿಕೊಂಡು ಸಂತೋಷಪಡುತ್ತಾರೆಯೋ ಅವರಿಗೆ ಈ ಲೋಕವು ಮಾತ್ರ. ಸದಾ ದೇಹಸುಖದಲ್ಲಿ ಆಸಕ್ತರಾದ ಅವರಿಗೆ ಪರಲೋಕವಿಲ್ಲ.
ಯೇ ಯೋಗಯುಕ್ತಾಸ್ತಪಸಿ ಪ್ರಸಕ್ತಾಃ
ಸ್ವಾಧ್ಯಾಯಶೀಲಾ ಜರಯಂತಿ ದೇಹಾನ್ |
ಜಿತೇಂದ್ರಿಯಾಃ ಪ್ರಾಣಿವಧೇ ನಿವೃತ್ತಾ
ಸ್ತೇಷಾಮಸೌ ನಾಯಮರಿಘ್ನಂ ಲೋಕಃ ॥38॥
ಎಲೈ ಶತ್ರುಸೂದನನೇ, ಯಾರು ಯೋಗಯುಕ್ತರಾಗಿ, ತಪೋನಿಷ್ಠರಾಗಿ, ಸ್ವಾಧ್ಯಾಯನಿಷ್ಠರಾಗಿ, ಜಿತೇಂದ್ರಿಯರಾಗಿ, ಪ್ರಾಣಿವಧೆಯಿಂದ ನಿವೃತ್ತರಾಗಿ ದೇಹವನ್ನು ಸವೆಸುತ್ತಾರೆಯೋ ಅವರಿಗೆ ಪರಲೋಕವು ಮಾತ್ರ ಇದೆ. ಈ ಲೋಕವಿಲ್ಲ.
ಯೇ ಧರ್ಮಮೇವ ಪ್ರಥಮಂ ಚರಂತಿ
ಧರ್ಮೇಣ ಲಬ್ಧ್ವಾ ಚ ಧನಾನಿ ಕಾಲೇ |
ದಾರಾನವಾಪ್ಯ ಕ್ರತುಭಿರ್ಯಜಂತೇ
ತೇಷಾಮಯಂ ಚೈವ ಪರಶ್ಚ ಲೋಕಃ ॥39॥
ಯಾರು ಬಾಲ್ಯದಿಂದಲೂ ಧರ್ಮವನ್ನೇ ಆಚರಿಸುತ್ತಾರೆಯೋ ಮತ್ತು ಧರ್ಮದಿಂದ ಧನವನ್ನು ಸಂಪಾದಿಸಿ ಯೋಗ್ಯಕಾಲದಲ್ಲಿ ವಿವಾಹವನ್ನು ಮಾಡಿಕೊಂಡು ಯಾಗಯಜ್ಞಗಳನ್ನು ಆಚರಿಸುತ್ತಾರೆಯೋ ಅವರಿಗೆ ಈ ಲೋಕವೂ ಇದೆ, ಪರಲೋಕವೂ ಇದೆ.
ಯೇ ನೈವ ವಿದ್ಯಾಂ ನ ತಪೋ ನ ದಾನಂ
ನ ಚಾಪಿ ಮೂಢಾಃ ಪ್ರಜನೇ ಯತಂತಿ |
ನ ಚಾನುಗಚ್ಛಂತಿ ಸುಖಾನಿ
ಭೋಗಾಂಸ್ತೇಷಾಮಯಂ ನೈವ ಪರಶ್ಚ ಲೋಕಃ ॥40॥
ಯಾವ ಮೂಢರು ವಿದ್ಯೆಗಾಗಲೀ, ತಪಸ್ಸಿಗಾಗಲೀ, ದಾನಕ್ಕಾಗಲೀ, ಪ್ರಜೋತ್ಪತ್ತಿಗಾಗಲೀ ಪ್ರಯತ್ನಪಡುವುದಿಲ್ಲವೋ ಮತ್ತು ಸುಖಭೋಗಗಳನ್ನೂ ಸಹ ಅನುಭವಿಸುವುದಿಲ್ಲವೋ ಅವರಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ.
ಸರ್ವೇ ಭವಂತಸ್ತ್ವತಿವೀರ್ಯಸತತ್ವ
ದಿವ್ಯೌಜಸಃ ಸಂಹನನೋಪಪನ್ನಾಃ |
ಲೋಕಾದಮುಷ್ಮಾದವನಿಂ ಪ್ರಪನ್ನಾಃ
ಸ್ವಧೀತವಿದ್ಯಾಃ ಸುರಕಾರ್ಯಹೇತೋಃ ॥41॥
ನೀವೆಲ್ಲರೂ ಅತಿಬಲಪರಾಕ್ರಮವುಳ್ಳವರು, ದಿವ್ಯಶಕ್ತಿಯುಳ್ಳ ಶರೀರಗಳನ್ನು ಹೊಂದಿದವರು, ಎಲ್ಲ ವಿದ್ಯೆಗಳನ್ನೂ ಅಧ್ಯಯನ ಮಾಡಿದವರು ಮತ್ತು ದೇವಕಾರ್ಯದ ಸಲುವಾಗಿ ಸ್ವರ್ಗಲೋಕದಿಂದ ಭೂಮಿಗೆ ಬಂದವರು.

ಕೃತ್ವೈವ ಕರ್ಮಾಣಿ ಮಹಾಂತಿಶೂರಾ
ಸ್ತಪೋದಮಾಚಾರವಿಹಾರಶೀಲಾಃ |
ದೇವಾನೃಷೀನ್ ಪ್ರೇತಗಣಾಂಶ್ಚ ಸರ್ವಾನ್
ಸಂತರ್ಪಯಿತ್ವಾ ವಿಧಿನಾ ಪರೇಣ ॥42॥
ಸ್ವರ್ಗಂ ಪರಂ ಪುಣ್ಯಕೃತೋ ನಿವಾಸಂ
ಕ್ರಮೇಣ ಸಂಪ್ರಾಪ್ಸ್ಯಥ ಕರ್ಮಭಿಃ ಸ್ವೈಃ |
ಮಾ ಭೂದ್ ವಿಶಂಕಾ ತವ ಕೌರವೇಂದ್ರ
ದೃಷ್ಟ್ವಾSSತ್ಮನಃ ಕ್ಲೇಶಮಿಮಂ ಸುಖಾರ್ಹಮ್ ॥43॥
ಎಲೈ ಶೂರರೇ, ನೀವು ಮಹತ್ಕಾರ್ಯಗಳನ್ನು ಮಾಡಿ ತಪೋದಮ ಆಚಾರ ವಿಹಾರಶೀಲರಾಗಿ ದೇವತೆಗಳನ್ನು, ಋಷಿಗಳನ್ನು ಮತ್ತು ಎಲ್ಲಾ ಪ್ರೇತಗಣಗಳನ್ನು ಶ್ರೇಷ್ಠವಾದ ವಿಧಿಯಿಂದ ತೃಪ್ತಿಪಡಿಸಿ, ಪುಣ್ಯವನ್ನು ಸಂಪಾದಿಸಿದವರಾಗಿ ನಿಮ್ಮ ಕರ್ಮಗಳಿಂದ ಶ್ರೇಷ್ಠವಾದ ಸ್ವರ್ಗಲೋಕವನ್ನು ಕ್ರಮವಾಗಿ ಹೊಂದುವಿರಿ. ಎಲೈ ಕೌರವೇಂದ್ರನೇ, ಸುಖಾರ್ಹನಾಗಿರುವ ನೀನು ಈಗ ಅನುಭವಿಸುತ್ತಿರುವ ಈ ಕ್ಲೇಶವನ್ನು ನೋಡಿ ನಾನು ಹೇಳಿದ ವಿಷಯದಲ್ಲಿ ಸಂಶಯವನ್ನು ಪಡುವುದು ಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಕಾಮ್ಯಕವನಪ್ರವೇಶೇ ಅಷ್ಟಸಪ್ತತ್ಯಧಿಕಶತತಮೋSಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ತೃತೀಯೋSಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ
ಮಾರ್ಕಂಡೇಯ ಋಷಿಗಳಿಂದ ಯುಧಿಷ್ಠಿರಾದಿಗಳನ್ನು ಕುರಿತು
ಮೃತೋಜ್ಜೀವನ ರೂಪವಾದ ಬ್ರಾಹ್ಮಣ ಮಹಿಮೆಯ ಕಥನ.
ವೈಶಂಪಾಯನಃ
ಮಾರ್ಕಂಡೇಯಂ ಮಹಾತ್ಮಾನಮೂಚುಃ ಪಾಂಡುಸುತಾಸ್ತದಾ |
ಮಾಹಾತ್ಮ್ಯಂ ದ್ವಿಜಮುಖ್ಯಾನಾಂ ಶ್ರೋತುಮಿಚ್ಛಾಮ ಕಥ್ಯತಾಮ್ ॥1॥
ಏವಮುಕ್ತಃ ಸ ಭಗವಾನ್ ಮಾರ್ಕಂಡೆಯೋ ಮಹಾತಪಾಃ |
ಉವಾಚ ಸುಮಹಾತೇಜಾಃ ಸರ್ವಶಾಸ್ತ್ರವಿಶಾರದಃ ॥2॥
ವೈಶಂಪಾಯನ ಮಹಾತ್ಮರಾದ ಮಾರ್ಕಂಡೇಯರನ್ನು ಕುರಿತು ಪಾಂಡುಪುತ್ರರು ಶ್ರೇಷ್ಠರಾದ ಬ್ರಾಹ್ಮಣರ ಮಹಿಮೆಯನ್ನು ಕೇಳಲು ಇಚ್ಛಿಸುತ್ತೇವೆ ಅದನ್ನು ಹೇಳಿ ಎಂದು ಕೇಳಿದರು. ಹೀಗೆ ಹೇಳಲ್ಪಟ್ಟ ಮಹಾತೇಜಸ್ವಿಗಳೂ, ಸರ್ವಶಾಸ್ತ್ರ ವಿಶಾರದರೂ, ಮಹಾತಪಸ್ವಿಗಳೂ ಆದ ಪೂಜ್ಯರಾದ ಮಾರ್ಕಂಡೇಯರು ಹೀಗೆ ಮಾತನಾಡಿದರು.
ಹೈಹಯಾನಾಂ ಕುಲಕರೋ ರಾಜಾ ಪರಪುರಂಜಯಃ |
ಕುಮಾರೋ ರೂಪಸಂಪನ್ನೋ ಮೃಗಯಾಂ ವ್ಯಚರದ್ ಬಲೀ ॥3॥
ಹೈಹಯವಂಶದಲ್ಲಿ ಜನಿಸಿದ ಆ ವಂಶದ ವರ್ಧಕನಾದ ಶತ್ರುಗಳ ಜಯಿಸುವ ಸುಂದರನಾದ ಮತ್ತು ಬಲಿಷ್ಠನಾದ ಕುಮಾರನೆಂಬ ರಾಜನು ಬೇಟೆಗೆ ಹೊರಟನು.
ಚರಮಾಣಸ್ತು ಸೋSರಣ್ಯೇ ತೃಣವೀರುತ್ಸಮಾವೃತೇ |
ಕೃಷ್ಣಾಜಿನೋತ್ತರಾಸಂಗಂ ದದರ್ಶ ಮುನಿಮಂತಿಕೇ ॥4॥
ಅವನು ಪೊದೆಗಳಿಂದ ಮತ್ತು ಹುಲ್ಲಿನಿಂದ ಕೂಡಿದ ಕಾಡಿನಲ್ಲಿ ಸಂಚಾರವನ್ನು ಮಾಡುತ್ತಾ ಕೃಷ್ಣಾಜಿನದ ಉತ್ತರೀಯವನ್ನು ಧರಿಸಿದ ಒಬ್ಬ ಮುನಿಯನ್ನು ಸಮೀಪದಲ್ಲಿ ನೋಡಿದನು.
ಸ ತೇನ ನಿಹತೋSರಣ್ಯೇ ಮನ್ಯಮಾನೇನ ವೈ ಮೃಗಮ್ |
ವ್ಯಥಿತಃ ಕರ್ಮ ತತ್ ಕೃತ್ವಾ ಶೋಕೋಪಹತಚೇತನಃ ॥5॥
ಅವನು ಅದನ್ನು ಕಾಡಿನಲ್ಲಿರುವ ಮೃಗವೆಂದು ಭಾವಿಸಿ ವಧೆ ಮಾಡಿದನು. ತನ್ನ ಕರ್ಮದಿಂದ ಶೋಕಕ್ಕೆ ಒಳಗಾದವನಾಗಿ ವ್ಯಥೆಪಟ್ಟನು.
ಜಗಾಮ ಹೈಹಯಾನಾಂ ವೈ ಸಕಾಶಂ ಪ್ರಥಿತಾತ್ಮನಾಮ್ |
ರಾಜ್ಞಾಂ ರಾಜೀವನೇತ್ರೋSಸೌ ಕುಮಾರಃ ಪೃಥಿವೀಪತಿಃ ॥6॥
ರಾಜೀವಲೋಚನನಾದ ರಾಜನಾದ ಆ ಕುಮಾರನು ಹೈಹಯಕುಲದಲ್ಲಿ ಪ್ರಖ್ಯಾತರಾದ ತನ್ನ ಹಿರಿಯ ರಾಜರ ಬಳಿಗೆ ಹೋದನು.
ತೇಷಾಂ ಚ ತದ್ ಯಥಾವೃತ್ತಂ ಕಥಯಾಮಾಸ ವೈ ತದಾ |
ಸುಕುಮಾರೋ ಮಹೀಪಾಲೋ ಹೈಹಯಾನಾಂ ಮಹೀಭೃತಾಮ್ ॥
ರಾಜನಾದ ಕುಮಾರನು ಹೈಹಯಕುಲದ ಹಿರಿಯ ರಾಜರಿಗೆ ಆಗ ನಡೆದುದೆಲ್ಲವನ್ನೂ ಹಾಗೆಯೇ ತಿಳಿಸಿದನು.
ತಂ ಚಾಪಿ ಹಿಂಸಿತಂ ತಾತ ಮುನಿಂ ಮೂಲಫಲಾಶಿನಂ |
ಶ್ರುತ್ವಾ ದೃಷ್ಟ್ವಾ ಚ ತೇ ತತ್ರ ಬಭೂವುರ್ದೀನಮಾನಸಾಃ ॥8॥
ಎಲೈ ಪ್ರೀತಿಪಾತ್ರನೇ, ಕಂದಫಲಗಳನ್ನು ಭಕ್ಷಿಸುವ ಮುನಿಯು ಅವನಿಂದ ವಧೆಮಾಡಲ್ಪಟ್ಟದ್ದನ್ನು ಕೇಳಿ ಮತ್ತು ಅಲ್ಲಿಗೆ ಬಂದು

ನೋಡಿ ಅವರೆಲ್ಲರೂ ಧೀನ ಮನಸ್ಕರಾದರು.
ಕಸ್ಯಾಯಮಿತಿ ತೇ ಸರ್ವೇ ಮಾರ್ಗಮಾಣಾಸ್ತತಸ್ತತಃ |
ಜಗ್ಮುಶ್ಚಾರಿಷ್ಟನೇಮ್ಯೋಽಥ ತಾರ್ಕ್ಷ್ಯಸ್ಯಾಶ್ರಮಮಂಜಸಾ ॥9॥
ಈ ಋಷಿಯು ಯಾರಿಗೆ ಸೇರಿದವರು ಎಂದು ಅವರೆಲ್ಲರೂ ಹುಡುಕುತ್ತಾ ಕಾಶ್ಯಪ ಗೋತ್ರದಲ್ಲಿ ಜನಿಸಿದ ಅರಿಷ್ಟನೇಮಿಯ ಆಶ್ರಮಕ್ಕೆ ಬಂದರು.
ತೇಽಭಿವಾದ್ಯ ಮಹಾತ್ಮಾನಂ ತಂ ಮುನಿಂ ನಿಯತವ್ರತಮ್ |
ತಸ್ಥುಃ ಸರ್ವೇ ಸ ತು ಮುನಿಸ್ತೇಷಾಂ ಪೂಜಾಂ ಯಥಾಹರತ್ ॥10॥
ನಿಯತವ್ರತರಾದ ಆ ಮಹಾತ್ಮರಾದ ಋಷಿಗಳಿಗೆ ಅವರೆಲ್ಲರೂ ನಮಸ್ಕಾರ ಮಾಡಿ ನಿಂತರು. ಆ ಋಷಿಗಳು ಅವರಿಗೆ ಸತ್ಕಾರವನ್ನು ಮಾಡಲು ಉಪಕ್ರಮಿಸಿದರು.
ತೇ ತಮೂಚುರ್ಮಹಾತ್ಮಾನಂ ನ ವಯಂ ಸತ್ಕ್ರಿಯಾಂ ಮುನೇ |
ತ್ವತ್ತೋಽರ್ಹಾಃ ಕರ್ಮದೋಷೇಣ ಬ್ರಾಹ್ಮಣೋ ಹಿಂಸಿತೋ ಹಿ ನಃ ॥
ಅವರು ಆ ಮಹಾತ್ಮರನ್ನು ಕುರಿತು ಋಷಿಗಳೇ, ನಾವು ನಮ್ಮ ಕರ್ಮದೋಷದಿಂದ ಒಬ್ಬ ಬ್ರಾಹ್ಮಣನನ್ನು ಕೊಂದಿದ್ದೇವೆ. ಆದ್ದರಿಂದ ನಿಮ್ಮ ಸತ್ಕಾರಕ್ಕೆ ಅರ್ಹರಲ್ಲ ಎಂದು ಹೇಳಿದರು.
ತಾನಬ್ರವೀತ್ ಸ ವಿಪ್ರರ್ಷಿಃ ಕಥಂ ವೋ ಬ್ರಾಹ್ಮಣೋ ಹತಃ |
ಕ್ವ ಚಾಸೌ ಬ್ರೂತ ಸಹಿತಾಃ ಪಶ್ಯಧ್ವಂ ಮೇ ತಪೋಬಲಮ್ ॥12॥
ಆ ಬ್ರಾಹ್ಮಣ ಋಷಿಗಳು ಅವರನ್ನು ಕುರಿತು ನೀವು ಬ್ರಾಹ್ಮಣನನ್ನು ಹೇಗೆ ಹನನ ಮಾಡಿದಿರಿ, ಅವನು ಎಲ್ಲಿದ್ದಾನೆ ಎಂದು ಹೇಳಿ. ನೀವೆಲ್ಲರೂ ನನ್ನ ತಪೋಬಲವನ್ನು ನೋಡಿ ಎಂದು ಹೇಳಿದರು.
ತೇ ತು ತತ್ಸರ್ವಮಖಿಲಮಾಖ್ಯಾಯಾಸ್ಮೈ ಯಥಾತಥಮ್ |
ನಾಪಶ್ಯಂಸ್ತಮೃಷಿಂ ತತ್ರ ಗತಾಸುಂ ತೇ ಸಮಾಗತಾಃ ॥13॥
ಅವರಾದರೂ ನಡೆದುದೆಲ್ಲವನ್ನೂ ಯಥಾವತ್ತಾಗಿ ಆ ಋಷಿಗಳಿಗೆ ಹೇಳಿ ಆ ಋಷಿಯ ದೇಹವಿದ್ದ ಪ್ರದೇಶಕ್ಕೆ ಸಮಾಗತರಾಗಲು ಆ ಋಷಿಯು ಅಲ್ಲಿ ಕಾಣಲಿಲ್ಲ.
ಅನ್ವೇಷಮಾಣಾಃ ಸವ್ರೀಡಾಃ ಸ್ವಪ್ನವದ್ ಗತಚೇತನಾಃ |
ತಾನಬ್ರವೀತ್ ತತ್ರ ಮುನಿಸ್ತಾರ್ಕ್ಷ್ಯಃ ಪರಪುರಂಜಯ ॥14॥
ಅವರು ಆ ಋಷಿಯನ್ನು ಹುಡುಕುತ್ತಾ ನಾಚಿಕೆಯುಳ್ಳವರೂ, ಸ್ವಪ್ನದಂತೆ ಚಿತ್ತಶೂನ್ಯರಾದವರೂ ಆದರು. ಎಲೈ ಪರಪುರಂಜಯನೇ, ಆಗ ಅಲ್ಲಿ ತಾರ್ಕ್ಷ್ಯ ಋಷಿಗಳು ಅವರನ್ನು ಕುರಿತು ಹೇಳಿದರು.
ಸ್ಯಾದಯಂ ಬ್ರಾಹ್ಮಣಃ ಸೋಽಥ ಯುಷ್ಮಾಭಿರ್ಯೋ ವಿನಾಶಿತಃ |
ಪುತ್ರೋ ಹ್ಯಯಂ ಮಮ ನೃಪಾಸ್ತಪೋಬಲಸಮನ್ವಿತಃ ॥15॥
ನಿಮ್ಮಿಂದ ವಧೆ ಮಾಡಲ್ಪಟ್ಟ ಬ್ರಾಹ್ಮಣನು ಇವನು ಇರಬಹುದು. ಎಲೈ ರಾಜರೇ, ಇವನು ತಪೋಬಲಸಮನ್ವಿತನಾದ ನನ್ನ ಪುತ್ರ.
ತೇ ಚ ದೃಷ್ಟ್ವೈವ ತಮೃಷಿಂ ವಿಸ್ಮಯಂ ಪರಮಂ ಗತಾಃ |
ಮಹದಾಯಶ್ಚರ್ಯಮಿತಿ ವೈ ತೇ ಬ್ರುವಾಣಾ ಮಹೀಪತೇ ॥16॥
ಎಲೈ ರಾಜನೇ, ಅವರಾದರೂ ಅವನನ್ನು ನೋಡಿದ ತಕ್ಷಣ ಇದು ದೊಡ್ಡ ಆಶ್ಚರ್ಯವೆಂದು ಹೇಳುತ್ತಾ ಪರಮಾಶ್ಚರ್ಯವೆಂದು ಹೊಂದಿದರು.
ಮೃತೋ ಹ್ಯಯಮುಪಾನೀತಃ ಕಥಂ ಜೀವಿತಮಾಪ್ತವಾನ್ |
ಕಿಮೇತತ್ ತಪಸೋ ವೀರ್ಯಂ ಯೇನಾಯಂ ಜೀವಿತಃ ಪುನಃ |
ಶ್ರೋತುಮಿಚ್ಛಾಮಹೇ ವಿಪ್ರ ಯದಿ ಶ್ರೋತವ್ಯಮಿತ್ಯುತ ॥17॥
ಮರಣವನ್ನು ಹೊಂದಿದ್ದ ಈತನು ಪುನಃ ಹೇಗೆ ಜೀವನವನ್ನು ಪಡೆದನು? ಇವನು ಜೀವನವನ್ನು ಪುನಃ ಪಡೆದದ್ದು ತಪಸ್ಸಿನ ಶಕ್ತಿಯೇ? ಎಲೈ ಋಷಿಗಳೇ ನಾವು ಇದನ್ನು ಕೇಳಲು ಬಯಸುತ್ತೇವೆ ಎಂದು ಹೇಳಿದರು.
ಸ ತಾನುವಾಚ ನಾಸ್ಮಾಕಂ ಮೃತ್ಯುಃ ಪ್ರಭವತೇ ನೃಪಾಃ |
ಕಾರಣಂ ಚ ಪ್ರವಕ್ಷ್ಯಾಮಿ ಹೇತುಯೋಗಸಮಾಸತಃ ॥18॥
ಮೃತ್ಯುಃ ಪ್ರಭವತೇ ಯೇನ ನಾಸ್ಮಾಕಂ ನೃಪಸತ್ತಮಾಃ ॥19॥
ಎಲೈ ರಾಜರೇ, ನಮ್ಮ ಮೇಲೆ ಮೃತ್ಯುವಿನ ಪ್ರಭಾವವಿಲ್ಲ. ಎಲೈ ರಾಜಶ್ರೇಷ್ಠರೇ, ಮೃತ್ಯುವಿಗೆ ಏಕೆ ನಮ್ಮ ಮೇಲೆ ಪ್ರಭಾವವಿಲ್ಲವೆಂಬುದನ್ನೂ ಅದಕ್ಕೆ ಕಾರಣ ಮತ್ತು ಉಪಾಯಗಳನ್ನೂ ಸಂಕ್ಷೇಪವಾಗಿ ಹೇಳುವೆನು.
ಶುದ್ಧಾಚಾರಾ ಅನಲಸಾಃ ಸಂಧ್ಯೋಪಾಸನತತ್ಪರಾಃ |
ಶುದ್ಧಾನ್ನಾಃ ಶುದ್ಧಸುಧನಾ ಬ್ರಹ್ಮಚರ್ಯವ್ರತಾನ್ವಿತಾಃ ॥20॥
ನಾವು ಶುದ್ಧವಾದ ಆಚಾರವುಳ್ಳವರು, ಆಲಸ್ಯವಿಲ್ಲದವರು, ಸಂಧ್ಯೋಪಾಸನೆಯಲ್ಲಿ ನಿರತರಾದವರು. ಶುದ್ಧವಾದ ಅನ್ನ ಮತ್ತು ಶುದ್ಧವಾದ ಧನವನ್ನು ಹೊಂದಿದವರು. ಬ್ರಹ್ಮಚರ್ಯವ್ರತವನ್ನು ಪಾಲಿಸುವವರು.
ಸತ್ಯಮೇವಾಭಿಜಾನೀಮೋ ನಾನೃತೇ ಕುರ್ಮಹೇ ಮನಃ |
ಸ್ವಧರ್ಮಮನುತಿಷ್ಠಾಮಸ್ತಸ್ಮಾನ್ ಮೃತ್ಯುಭಯಂ ನ ನಃ ॥21॥
ನಾವು ಸತ್ಯವನ್ನು ಮಾತ್ರ ತಿಳಿದಿದ್ದೇವೆ. ಅನೃತದ ಕಡೆಗೆ ನಮ್ಮ ಮನಸ್ಸು ಹೋಗುವುದಿಲ್ಲ. ನಾವು ನಮ್ಮ ಧರ್ಮವನ್ನು ಅನುಷ್ಠಾನ ಮಾಡುತ್ತೇವೆ. ಆದ್ದರಿಂದ ನಮಗೆ ಮೃತ್ಯುವಿನ ಭಯವಿಲ್ಲ.

ಯದ್ ಬ್ರಾಹ್ಮಣಾನಾಂ ಕುಶಲಂ ತದೇಷಾಂ ಕಥಯಾಮಹೇ |
ನೈಷಾಂ ದುಶ್ಚರಿತಂ ಬ್ರೂಮಸ್ತಸ್ಮಾನ್ ಮೃತ್ಯುಭಯಂ ನ ನಃ ॥22॥
ಬ್ರಾಹ್ಮಣರು ಮಾಡಿದ ಒಳ್ಳೆಯ ಕೆಲಸಗಳನ್ನು ಮಾತ್ರ ಅವರಿಗೆ ಹೇಳುತ್ತೇವೆ. ಅವರು ಮಾಡಿದ ಕೆಟ್ಟ ಕೆಲಸವನ್ನು ಹೇಳುವುದಿಲ್ಲ. ಆದ್ದರಿಂದ ನಮಗೆ ಮೃತ್ಯುಭಯವಿಲ್ಲ.
ಅತಿಥೀನನ್ನಪಾನೇನ ಭೃತ್ಯಾನತ್ಯಶನೇನ ಚ |
ತೇಜಸ್ವಿದೇಶವಾಸಾಚ್ಚ ತಸ್ಮಾನ್ ಮೃತ್ಯುಭಯಂ ನ ನಃ ॥23॥
ಅತಿಥಿಗಳನ್ನು ಅನ್ನಪಾನದಿಂದ ಸತ್ಕರಿಸುತ್ತೇವೆ; ಭೃತ್ಯರನ್ನು ಭೂರಿಭೋಜನದಿಂದ ಸಂತೋಷಪಡಿಸುತೆತೇವೆ; ಮಹಾತ್ಮರ ಜೊತೆಯಲ್ಲಿ ವಾಸಮಾಡುತ್ತೇವೆ. ಆದ್ದರಿಂದ ನಮಗೆ ಮೃತ್ಯುಭಯವಿಲ್ಲ.
ಸಂಭೋಜ್ಯ ಶೇಷಮಶ್ನೀಮಸ್ತಸ್ಮಾನ್ ಮೃತ್ಯುಭಯಂ ನ ನಃ |
ಶಾಂತಾ ದಾಂತಾ ಕ್ಷಮಾಶೀಲಾಸ್ತೀರ್ಥದಾನಪರಾಯಣಾಃ |
ಪುಣ್ಯದೇಶನಿವಾಸಾಚ್ಚ ತಸ್ಮಾನ್ ಮೃತ್ಯುಭಯಂ ನ ನಃ |
ನಾವು ಶಾಂತರೂ, ದಾಂತರೂ, ಕ್ಷಮಾಶೀಲರೂ, ತೀರ್ಥದಾನಪರಾಯಣರೂ, ಪುಣ್ಯದೇಶನಿವಾಸಿಗಳೂ ಆಗಿದ್ದೇವೆ. ನಾವು ಅತಿಥಿಗಳಿಗೆ ಅನ್ನಸತ್ಕಾರವನ್ನು ಮಾಡಿ ಉಳಿದ ಶೇಷವನ್ನು ಭುಂಜಿಸುತ್ತೇವೆ. ಆದ್ದರಿಂದ ನಮಗೆ ಮೃತ್ಯುಭಯವಿಲ್ಲ.
ಏತದ್ವೈ ಲೇಶಮಾತ್ರಂ ವಃ ಸಮಾಖ್ಯಾತಂ ವಿಮತ್ಸರಾಃ |
ಗಚ್ಛಧ್ವಂ ಸಹಿತಾಃ ಸರ್ವೇ ನ ಪಾಪಾದ್ ಭಯಮಸ್ತಿ ವಃ ॥24॥
ಎಲೈ ಮಾತ್ಸರ್ಯರಹಿತರಾದ ರಾಜರೇ, ನಮ್ಮ ಆಚಾರದಲ್ಲಿ ಅಲ್ಪಭಾಗವನ್ನು ಮಾತ್ರ ನಿಮಗೆ ಹೇಳಿದ್ದೇನೆ. ನೀವೆಲ್ಲರೂ ಇಲ್ಲಿಂದ ಹೋಗಬಹುದು. ನಿಮಗೆ ಪಾಪದ ಭಯವಿಲ್ಲ (ಎಂದು ಹೇಳಿದರು).
ಏವಮಸ್ತ್ವಿತಿ ತೇ ಸರ್ವೇ ಪ್ರತಿಪೂಜ್ಯ ಮಹಾಮುನಿಮ್ |
ಸ್ವದೇಶಮಗಮನ್ ಹೃಷ್ಟಾ ರಾಜಾನೋ ಭರತರ್ಷಭ ॥25॥
ಎಲೈ ಭರತರ್ಷಭನೇ, ಆ ಎಲ್ಲ ರಾಜರೂ ಆ ಮಹರ್ಷಿಗಳಿಗೆ ಹಾಗೆಯೇ ಆಗಲಿ ಎಂದು ಹೇಳಿ ತಮ್ಮ ದೇಶಕ್ಕೆ ಸಂತೋಷದಿಂದ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತನೆಯ ಅಧ್ಯಾಯ
ಪೃಥುಚಕ್ರವರ್ತಿಯ ಅಶ್ವಮೇಧಯಾಗದಲ್ಲಿ ಅತ್ರಿಗೌತಮರ ವಿವಾದವನ್ನು ನಿರೂಪಿಸಿ ಮಾರ್ಕಂಡೇಯರಿಂದ ಬ್ರಾಹ್ಮಣರ ಮಹಿಮೆಯ ಕಥನ.
ಮಾರ್ಕಂಡೇಯಃ
ಭೂಯ ಏವ ಮಹಾಭಾಗ್ಯಂ ಬ್ರಾಹ್ಮಣಾನಾಂ ನಿಬೋಧ ಮೇ |
ವೈನ್ಯೋ ನಾಮೇಹ ರಾಜರ್ಷಿರಶ್ವಮೇಧಾಯ ದಿಕ್ಷಿತಃ ॥1॥
ಮಾರ್ಕಂಡೇಯ ಪುನಃ ನನ್ನಿಂದ ಬ್ರಾಹ್ಮಣರ ಮಹಾಭಾಗ್ಯವನ್ನು ಕೇಳಿ ತಿಳಿದುಕೋ. ವೈನ್ಯ (ಪೃಥು) ಎಂಬ ರಾಜರ್ಷಿಯು ಅಶ್ವಮೇಧಯಾಗವನ್ನು ಮಾಡಲು ದೀಕ್ಷಿತನಾದನು.
ತಮತ್ರಿರ್ಗಂತುಮಾರೇಭೇ ವಿತ್ತಾರ್ಥಮಿತಿ ನಃ ಶ್ರುತಮ್ |
ಭೂಯೋಽರ್ಥಂ ನಾನುರುಧ್ಯತ್ ಸ ಧರ್ಮವ್ಯಕ್ತಿನಿದರ್ಶನಾತ್ ॥2॥
ಅತ್ರಿ ಋಷಿಗಳು ಅಲ್ಲಿಗೆ ಧನಾರ್ಥಿಯಾಗಿ ಹೋಗಲು ಉಪಕ್ರಮಿಸಿದರು ಎಂದು ನಾವು ಕೇಳಿದ್ದೇವೆ. ಅವರು ಪುನಃ ಆಲೋಚಿಸಿ ತಮ್ಮ ಧರ್ಮದ ಅಭಿವ್ಯಕ್ತಿ ಆಗುವುದೆಂದು ತಿಳಿದು ಧನದ ಆಸೆಯನ್ನು ಬಿಟ್ಟರು.
ಸ ವಿಚಿಂತ್ಯ ಮಹಾತೇಜಾ ವನಮೇವಾನ್ವರೋಚಯತ್ |
ಧರ್ಮಪತ್ನೀಂ ಸಮಾಹೂಯ ಪುತ್ರಾಂಶ್ಚೇದಮುವಾಚ ಹ ॥3॥
ಮಹಾತೇಜಸ್ವಿಗಳಾದ ಅವರು ವನವಾಸವೇ ಶ್ರೇಷ್ಠವೆಂದು ನಿಶ್ಚಯಿಸಿ ತಮ್ಮ ಧರ್ಮಪತ್ನಿಯನ್ನು ಮತ್ತು ಮಕ್ಕಳನ್ನು ಕರೆದು ಹೀಗೆ ಹೇಳಿದರು.
ಪ್ರಾಪ್ಸ್ಯಾಮಃ ಫಲಮತ್ಯಂತಂ ಬಹುಲಂ ನಿರುಪದ್ರವಮ್ |
ಅರಣ್ಯಗಮನಂ ಕ್ಷಿಪ್ರಂ ರೋಚತಾಂ ವೋ ಗುಣಾಧಿಕಮ್ |
ಅರಣ್ಯವಾಸದಿಂದ ನಾವು ನಿರುಪದ್ರವಿಯಾದ ಶ್ರೇಷ್ಠವಾದ ಬಹಳ ಫಲವನ್ನು ಪಡೆಯುವೆವು. ಆದ್ದರಿಂದ ನೀವು ಶ್ರೇಷ್ಠವಾದ ಅರಣ್ಯಗಮನವನ್ನೇ ಬಯಸಿ (ಎಂದು ಹೇಳಿದರು).
ಮಾರ್ಕಂಡೇಯಃ
ತಂ ಭಾರ್ಯಾ ಪ್ರತ್ಯುವಾಚಾಥ ಧರ್ಮಮೇವಾನುತನ್ವತೀ ॥4॥
ವೈನ್ಯಂ ಗತ್ವಾ ಮಹಾತ್ಮಾನಮರ್ಥಯಸ್ವ ಧನಂ ಬಹು ॥5॥

ಮಾರ್ಕಂಡೇಯ ಆಗ ಅವರ ಪತ್ನಿಯು ಧರ್ಮವನ್ನೇ ಆಚರಿಸುವವಳಾಗಿ ಅವರನ್ನು ಕುರಿತು ಮಹಾತ್ಮನಾದ ವೈನ್ಯನನ್ನು ಸಮೀಪಿಸಿ ಪ್ರಭೂತವಾದ ಧನವನ್ನು ಯಾಚಿಸಿ,
ಸ ತೇ ದಾಸ್ಯತಿ ರಾಜರ್ಷಿರ್ಯಜಮಾನೋಽರ್ಥಿತೋ ಧನಮ್ |
ತತ ಆದಾಯ ವಿಪ್ರರ್ಷೇ ಪ್ರತಿಗೃಹ್ಯ ಧನಂ ಬಹು
ಭೃತ್ಯಾನ್ ಸುತಾನ್ ಸಂವಿಭಜ್ಯ ತತೋ ವ್ರಜ ಯಥೇಪ್ಸಿತಮ್ ॥6॥
ಏಷ ವೈ ಪರಮೋ ಧರ್ಮೋ ಧರ್ಮವಿದ್ಭಿರುದಾಹೃತಃ ॥7॥
ಯಾಗವನ್ನು ಮಾಡಲು ಹೊರಟಿರುವ ಆ ರಾಜರ್ಷಿಯು ಪ್ರಾರ್ಥನೆ ಮಾಡಿದರೆ ಧನವನ್ನು ಕೊಡುವನು. ವಿಪ್ರರ್ಷಿಗಳೇ, ಆ ಬಹಳವಾದ ಧನವನ್ನು ತೆಗೆದುಕೊಂಡು ಬಂದು ಸೇವಕರಿಗೂ ಮತ್ತು ಪುತ್ರರಿಗೂ ಹಂಚಿ ಅನಂತರ ನಿಮ್ಮ ಇಷ್ಟದಂತೆ ಅರಣ್ಯಕ್ಕೆ ಹೋಗಬಹುದು. ಧರ್ಮವನ್ನು ತಿಳಿದವರು ಇದನ್ನು ಶ್ರೇಷ್ಠವೆಂದು ಹೇಳುತ್ತಾರೆ ಎಂದು ಹೇಳಿದಳು.
ಅತ್ರಿಃ
ಕಥಿತೋ ಮೇ ಮಹಾಭಾಗೇ ಗೌತಮೇನ ಮಹಾತ್ಮನಾ |
ವೈನ್ಯೋ ಧರ್ಮಾರ್ಥಸಂಯುಕ್ತಃ ಸತ್ಯವ್ರತಸಮನ್ವಿತಃ ॥8॥
ಅತ್ರಿ ಮಹಾಭಾಗಳೇ, ಮಹಾತ್ಮರಾದ ಗೌತಮರು ವೈನ್ಯನು ಧರ್ಮಾರ್ಥಗಳಿಂದ ಕೂಡಿದವನೆಂದೂ, ಸತ್ಯವ್ರತಸಮನ್ವಿತನೆಂದೂ ಹೇಳಿದ್ದಾರೆ.
ದ್ವೇಷ್ಟಾರಃ ಕಿಂತು ನಃ ಸಂತಿ ವಸಂತಸ್ತತ್ರ ವೈ ದ್ವಿಜಾಃ |
ಯಥಾ ಮೇ ಗೌತಮಃ ಪ್ರಾಹ ತತೋ ನ ವ್ಯವಸಾಮ್ಯಹಮ್ ॥9॥
ಆದರೆ ಅಲ್ಲಿ ನಮ್ಮನ್ನು ದ್ವೇಷಿಸುವ ಕೆಲವು ಬ್ರಾಹ್ಮಣರೂ ಇದ್ದಾರೆ. ಹಾಗೆ ಗೌತಮರು ಹೇಳಿದ್ದಾರೆ. ಆದ್ದರಿಂದ ನಾನು ಅಲ್ಲಿಗೆ ಹೋಗುವುದಿಲ್ಲ.
ತತ್ರ ಸ್ಮ ವಾಚಂ ಕಲ್ಯಾಣೀಂ ಧರ್ಮಕಾಮಾರ್ಥಸಂಹಿತಾಮ್ |
ಮಯೋಕ್ತಾಮನ್ಯಥಾ ಬ್ರೂಯುಸ್ತತಸ್ತೇ ವೈ ನಿರರ್ಥಿಕಾಮ್ ॥10॥
ಅಲ್ಲಿ ನಾನು ಹೋಗಿ ಧರ್ಮಕಾಮಾರ್ಥಸಂಹಿತವಾದ ಶುಭಕರವಾದ ಮಾತುಗಳನ್ನು ಆಡಿದರೆ ಅವರು ಆ ಮಾತುಗಳನ್ನು ಬೇರೆ ರೀತಿಯಾಗಿ ತಿರುಗಿಸಿ ವ್ಯರ್ಥವನ್ನಾಗಿ ಮಾಡುತ್ತಾರೆ.
ಗಮಿಷ್ಯಾಮಿ ಮಹಾಪ್ರಾಜ್ಞೇ ರೋಚತೇ ಮೇ ವಚಸ್ತವ |
ಗಾಶ್ಚ ಮೇ ದಾಸ್ಯತೇ ವೈನ್ಯಃ ಪ್ರಭೂತಂ ಚಾರ್ಥಸಂಚಯಮ್ ॥11॥
ಮಹಾಪ್ರಾಜ್ಞಳೇ, ನಿನ್ನ ಮಾತು ನನಗೆ ಹಿಡಿಸುತ್ತದೆ. ಆದ್ದರಿಂದ ನಾನು ಹೋಗುವೆನು. ವೈನ್ಯನು ನನಗೆ ಪ್ರಭೂತವಾದ ಧನವನ್ನು ಮತ್ತು ಗೋವುಗಳನ್ನು ಕೊಡುವನು.
ಮಾರ್ಕಂಡೇಯಃ
ಏವಮುಕತ್ವ ಜಗಾಮಾಶು ವೈನ್ಯಯಜ್ಞಂ ಮಹಾತಪಾಃ |
ಗತ್ವಾ ಚ ಯಜ್ಞಾಯತನಮತ್ರಿಸ್ತುಷ್ಟಾವ ತಂ ನೃಪಮ್ ॥12॥
ಮಾರ್ಕಂಡೇಯ ಹೀಗೆ ಹೇಳಿ ಮಹಾತಪಸ್ವಿಗಳಾದ ಅತ್ರಿಗಳು ಶೀಘ್ರವಾಗಿ ವೈನ್ಯಯಜ್ಞಕ್ಕೆ ಹೋಗಿ ಯಜ್ಞಶಾಲೆಯಲ್ಲಿ ಆ ರಾಜನನ್ನು ಸ್ತೋತ್ರ ಮಾಡಿದರು.
ರಾಜನ್ ಧನ್ಯಸ್ತ್ವಮೀಶಶ್ಚ ಭುವಿ ತ್ವಂ ಪ್ರಥಮೋ ನೃಪಃ |
ಸ್ತುವಂತಿ ತ್ವಾಂ ಮುನಿಗಣಸ್ತ್ವದನ್ಯೋ ನಾಸ್ತಿ ಧರ್ಮವಿತ್ |
ರಾಜನೇ, ನೀನು ಧನ್ಯನಾಗಿದ್ದೀಯೆ ಮತ್ತು ಪ್ರಭುವಾಗಿದ್ದೀಯೆ. ಭೂಮಿಯಲ್ಲಿ ನೀನು ಶ್ರೇಷ್ಠನಾದ ರಾಜ. ಮುನಿಗಣಗಳು ನಿನಗಿಂತ ಧರ್ಮಜ್ಞನಾದ ಇನ್ನೊಬ್ಬನು ಇಲ್ಲವೆಂದು ನಿನ್ನನ್ನು ಸ್ತೋತ್ರಮಾಡುತ್ತಾರೆ (ಎಂದು ಹೊಗಳಿದನು).
ಮಾರ್ಕಂಡೇಯಃ
ತಮಬ್ರುವೀದೃಷಿಃ ಕ್ರುದ್ಧೋ ವಚನಂ ವೈ ಮಹಾತಪಾಃ ॥13॥
ಮಾರ್ಕಂಡೇಯ ಆಗ ಕೋಪಗೊಂಡ ಮಹಾತಪಸ್ವಿಗಳಾದ ಗೌತಮ ಋಷಿಗಳು ಹೀಗೆ ಮಾತನಾಡಿದರು.
ಗೌತಮಃ
ಮೈವಮತ್ರೇ ಪುನರ್ಬ್ರೂಯಾ ನ ತೇ ಪ್ರಜ್ಞಾ ಸಮಾಹಿತಾ |
ಅತ್ರ ನಃ ಪ್ರಥಮಂ ಸ್ಥಾತಾ ಮಹೇಂದ್ರೋ ವೈ ಪ್ರಜಾಪತಿಃ ॥14॥
ಗೌತಮ ಅತ್ರಿಗಳೇ, ಪುನಃ ಹೀಗೆ ಮಾತನಾಡಬೇಡಿ. ನಿಮ್ಮ ಬುದ್ಧಿಯು ಸ್ತಿಮಿತವಾಗಿಲ್ಲ. ನಾವು ಪ್ರಜಾಪತಿಯಾದ ಮಹೇಂದ್ರನನ್ನು ಮೊದಲನೆಯ ಸ್ಥಾನದಲ್ಲಿ ನಿಲ್ಲಿಸುತ್ತೇವೆ.
ಮಾರ್ಕಂಡೆಯಃ
ಅಥಾತ್ರಿರಪಿ ರಾಜೇಂದ್ರ ಗೌತಮಂ ಪ್ರತ್ಯಭಾಷತ ॥15॥
ಅಯಮೇವ ವಿಧಾತಾ ಹಿ ಯಥೈವೇಂದ್ರಃ ಪ್ರಜಾಪತಿಃ |
ತ್ವಮೇವ ಮುಹ್ಯಸೇ ಮೋಹಾನ್ನ ಪ್ರಜ್ಞಾನಂ ತವಾಸ್ತಿ ಹ ॥16॥
ಮಾರ್ಕಂಡೇಯ ಎಲೈ ರಾಜೇಂದ್ರನೇ, ಆಗ ಅತ್ರಿಗಳೂ ಸಹ ಗೌತಮರನ್ನು ಕುರಿತು ಪ್ರಜಾಪತಿಯಾದ ಇಂದ್ರನು ಹೇಗೆ ವಿಧಾತೃವೋ ಹಾಗೆ ಈ ರಾಜನೂ ವಿಧಾತೃವಾಗಿದ್ದಾನೆ. ನಿನಗೆ ಜ್ಞಾನವಿಲ್ಲ. ಮೋಹದಿಂದ ನೀನೇ ಭ್ರಾಂತನಾಗಿದ್ದೀಯೆ ಎಂದು ಹೇಳಿದರು.
ಗೌತಮಃ

ಜಾನಾಮಿ ನಾಹಂ ಮುಹ್ಯಾಮಿ ತ್ವಮೇವಾತ್ರ ವಿಮುಹ್ಯಸೇ |
ಸ್ತೌಷಿ ತ್ವಂ ದರ್ಶನಪ್ರೇಪ್ಸೂ ರಾಜಾನಂ ಜನಸಂಸದಿ ॥17॥
ನ ವೇತ್ಥ ಪರಮಂ ಧರ್ಮಂ ನ ಚಾವೈಷಿ ಪ್ರಯೋಜನಮ್ |
ಬಾಲಸ್ತ್ವಮಸಿ ಮೂಢಶ್ಚ ವೃದ್ಧಃ ಕೇನಾಪಿ ಹೇತುನಾ ॥18॥
ಗೌತಮ ನನಗೆ ಜ್ಞಾನವು ಸರಿಯಾಗಿದೆ. ಯಾವ ಮೋಹವೂ ಇಲ್ಲ. ನಿನಗೇ ಮೋಹವುಂಟಾಗಿದೆ. ರಾಜನ ದರ್ಶನವನ್ನು ಬಯಸಿ ಜನಸಮೂಹದಲ್ಲಿ ನೀನು ರಾಜನನ್ನು ಸ್ತೋತ್ರಮಾಡುತ್ತಿದ್ದೀಯೆ. ನಿನಗೆ ಶ್ರೇಷ್ಠವಾದ ಧರ್ಮವಾಗಲೀ, ಶ್ರೇಷ್ಠವಾದ ಪ್ರಯೋಜನವಾಗಲೀ ತಿಳಿದಿಲ್ಲ. ನೀನು ಬಾಲನೂ, ಮೂಢನೂ ಆಗಿದ್ದೀಯೆ. ಯಾವುದೋ ಕಾರಣದಿಂದ ಬೆಳೆದಿದ್ದೀಯೆ ಅಷ್ಟೆ (ಎಂದು ಹೇಳಿದರು).
ಮಾರ್ಕಂಡೇಯಃ
ವಿವದಂತೌ ತಥಾ ತೌ ತು ಮುನೀನಾಂ ದರ್ಶನೇ ಸ್ಥಿತೌ |
ಯೇ ತಸ್ಯ ಯಜ್ಞೇ ಸಂವೃತ್ತಾಸ್ತೇಽಪೃಚ್ಛಂತ ಕಥಂ ತ್ವಿಮೌ ॥19॥
ಪ್ರವೇಶಃ ಕೇನ ದತ್ತೋಽಯಮುಭಯೋರ್ವೈನ್ಯಸಂಸದಿ |
ಉಚ್ಚೈಃ ಸಮಭಿಭಾಷಂತೌ ಕೇನ ಕಾರ್ಯೇಣ ಧಿಷ್ಠಿತೌ ॥20॥
ಮಾರ್ಕಂಡೇಯ ಹೀಗೆ ಆ ಯಜ್ಞದಲ್ಲಿ ಸೇರಿದ್ದ ಮುನಿಗಳ ಎದುರಿನಲ್ಲಿ ಅವರು ವಿವಾದವನ್ನು ಮಾಡಿದರು. ಆ ಯಜ್ಞಕ್ಕೆ ಬಂದ ಋಷಿಗಳಾದರೂ ಗಟ್ಟಿಯಾಗಿ ಮಾತನಾಡುತ್ತಾ ವಿವಾದವನ್ನು ಮಾಡುತ್ತಿರುವ ಈ ಇಬ್ಬರಿಗೆ ವೈನ್ಯಸಭೆಯಲ್ಲಿ ಯಾರು ಪ್ರವೇಶವನ್ನು ನೀಡಿದರು? ಇವರು ಯಾವ ಕಾರ್ಯದ ಉದ್ದೇಶದಿಂದ ಬಂದಿದ್ದಾರೆ? ಎಂದು ಕೇಳಿದರು.
ತತಃ ಪರಮಧರ್ಮಾತ್ಮಾ ಕಾಶ್ಯಪಃ ಸರ್ವಧರ್ಮವಿತ್ |
ವಿವಾದಿನಾವನುಪ್ರಾಪ್ತೌ ತಾವುಭೌ ಪ್ರತ್ಯವೇದಯತ್ |
ಅಥಾಬ್ರವೀತ್ ಸದಸ್ಯಾಂಸ್ತು ಗೌತಮೋ ಮುನಿಸತ್ತಮಾನ್ ॥21॥
ಅನಂತರ ಪರಮಧರ್ಮಾತ್ಮರೂ, ಎಲ್ಲ ಧರ್ಮವನ್ನೂ ತಿಳಿದವರೂ ಆದ ಕಾಶ್ಯಪರು ಇವರಿಬ್ಬರೂ ವಿವಾದ ಮಾಡಿಕೊಂಡು ಬಂದಿರುವುದನ್ನು ಸದಸ್ಯರಿದ್ದ ಸಭೆಯಲ್ಲಿ ತಿಳಿಸಿದರು. ಆಗ ಗೌತಮರು ಆ ಸದಸ್ಯರಾದ ಮುನಿಶ್ರೇಷ್ಠರನ್ನು ಕುರಿತು ಹೀಗೆ ಮಾತನಾಡಿದರು.
ಆವಯೋರ್ವ್ಯಾಹೃತಂ ಪ್ರಶ್ನಂ ಶೃಣುತ ದ್ವಿಜಸತ್ತಮಾಃ |
ವೈನ್ಯಂ ವಿಧಾತೇತ್ಯಾಹಾತ್ರಿರತ್ರ ನೌ ಸಂಶಯೋ ಮಹಾನ್ ॥22॥
ಎಲೈ ಬ್ರಾಹ್ಮಣಶ್ರೇಷ್ಠರೇ, ನಾವಿಬ್ಬರೂ ತಂದಿರುವ ಪ್ರಶ್ನೆಯನ್ನು ಚೆನ್ನಾಗಿ ಆಲಿಸಿ. ಅತ್ರಿಗಳು ಈ ವೈನ್ಯರಾಜನನ್ನು ವಿಧಾತ ಎಂದು ಕರೆದರು. ಈ ವಿಷಯದಲ್ಲಿ ನಮಗೆ ದೊಡ್ಡ ವಿವಾದವಿದೆ.
ತತಸ್ತದ್ಗೌತಮೇನೋಕ್ತಂ ವಾಕ್ಯಂ ವೈನ್ಯಸ್ಯ ಸಂಸದಿ |
ಶ್ರುತ್ವೈವ ತು ಮಹಾತ್ಮಾನೋ ಮುನಯೋಽಭ್ಯದ್ರವನ್ ದ್ರುತಮ್ ॥
ಸನತ್ಕುಮಾರಂ ಧರ್ಮಜ್ಞಂ ಸಂಶಯಚ್ಛೇದನಾಯ ವೈ |
ಪಪ್ರಚ್ಛುಃ ಪ್ರಣತಾಃ ಸರ್ವೇ ಬ್ರಹ್ಮಾಣಮಿವ ಸೋಮಪಾಃ ॥24॥
ಆಗ ಗೌತಮರು ಸಭೆಯಲ್ಲಿ ಹೇಳಿದ ಈ ಮಾತನ್ನು ಕೇಳಿದ ತಕ್ಷಣವೇ ಮಹಾತ್ಮರಾದ ಋಷಿಗಳು ಶೀಘ್ರವಾಗಿ ತಮ್ಮ ಸಂಶಯವನ್ನು ಪರಿಹಾರ ಮಾಡಿಕೊಳ್ಳಲು ಧರ್ಮಜ್ಞರಾದ ಸನತ್ಕುಮಾರರ ಬಳಿಗೆ ಹೋಗಿ ಅವರಿಗೆ ನಮಸ್ಕಾರವನ್ನು ಮಾಡಿ ಬ್ರಹ್ಮದೇವರನ್ನು ನಮಸ್ಕರಿಸಿ ಎಲ್ಲಾ ದೇವತೆಗಳು ಕೇಳುವಂತೆ ಅವರನ್ನು ಕೇಳಿದರು.
ಸ ಚ ತೇಷಾಂ ವಚಃ ಶ್ರುತ್ವಾ ಯಥಾತತ್ತ್ವಂ ಮಹಾತಪಾಃ |
ಪ್ರತ್ಯುವಾಚಾಥ ತಾನೇವ ಧರ್ಮಾರ್ಥಸಹಿತಂ ವಚಃ ॥25॥
ಮಹಾತಪಸ್ವಿಗಳಾದ ಸನತ್ಕುಮಾರರು ಅವರ ಮಾತನ್ನು ಸರಿಯಾಗಿ ಆಲಿಸಿ ಅವರನ್ನು ಕುರಿತು ಧರ್ಮಾರ್ಥಸಹಿತವಾದ ಈ ಮಾತುಗಳನ್ನು ಉತ್ತರವಾಗಿ ಕೊಟ್ಟರು.
ಬ್ರಹ್ಮ ಕ್ಷತ್ರೇಣ ಸಹಿತಂ ಕ್ಷತ್ರಂ ಚ ಬ್ರಹ್ಮಣಾ ಸಹ |
ರಾಜಾ ವೈ ಪ್ರಥಿತೋ ಧರ್ಮಃ ಪ್ರಜಾನಾಂ ಪತಿರೇವ ಚ ॥26॥
ಬ್ರಾಹ್ಮಣರೂ ಕ್ಷತ್ರಿಯರಿಂದ ಒಡಗೂಡಿರುತ್ತಾರೆ. ಕ್ಷತ್ರಿಯರೂ ಸಹ ಬ್ರಾಹ್ಮಣರಿಂದ ಸಹಿತರಾಗಿರುತ್ತಾರೆ. ರಾಜನು ಧರ್ಮನೆಂದೂ, ಪ್ರಜಾಪತಿ ಎಂದೂ ಪ್ರಸಿದ್ಧನಾಗಿರುತ್ತಾನೆ.
ಸ ಏವ ಶಕ್ರಃ ಶುಕ್ರಶ್ಚ ಸ ಧಾತಾ ಚ ಬೃಹಸ್ಪತಿಃ |
ಸಂಯುಕ್ತೌ ದಹತಃ ಶತ್ರೂನ್ ವನಾನೀವಾಗ್ನಿಮಾರುತೌ ॥
ಪ್ರಜಾಪತಿರ್ವಿರಾಟ್ ಸಮ್ರಾಟ್ ಕ್ಷತ್ರಿಯೋ ಭೂಪತಿರ್ನೃಪಃ ॥27॥
ಯ ಏಭಿಃ ಸ್ತೂಯತೇ ಶಬ್ದೈಃ ಕಸ್ತಂ ನಾರ್ಚಿತುಮರ್ಹತಿ ॥28॥
ಅವನೇ ಇಂದ್ರ, ಶುಕ್ರ, ಧಾತ, ಬೃಹಸ್ಪತಿ, ಪ್ರಜಾಪತಿ, ವಿರಾಟ್, ಸಮ್ರಾಟ್, ಕ್ಷತ್ರಿಯ, ಭೂಪತಿ, ನೃಪ ಎಂಬ ಈ ಶಬ್ದಗಳಿಂದ ಸ್ತೋತ್ರ ಮಾಡಲ್ಪಡುತ್ತಾನೆ. ಅವನನ್ನು ಯಾರು ಪೂಜಿಸುವುದಿಲ್ಲ?
ಪುರಾಯೋನಿರ್ಯುಧಾಜಿಚ್ಚ ಸುಭಿಕ್ಷಾನ್ನ್ಯುಚಿತೋದ್ಭವಃ |
ಸ್ವರ್ಣೇತಾ ಮಹಜಿದ್ ಬಭ್ರುರಿತಿ ರಾಜಾಽಭಿಧೀಯತೇ |
ಸತ್ಯಯೋನಿಃ ಪುರಾವಿಚ್ಚ ಸತ್ಯಧರ್ಮಪ್ರವರ್ತಕಃ ॥29॥

ಅವನು ಪುರಾಯೋನಿ, ಯುಧಾಜಿತ್, ಸುಭಿಕ್ಷಾನ್ನೀ (ಒಳ್ಳೆಯ ಅನ್ನವನ್ನು ಹೊಂದಿದವನು), ಉಚಿತೋದ್ಭವ (ಯೋಗ್ಯವಾದ ವೈಭವವನ್ನು ಹೊಂದಿದವನು), ಸ್ವರ್ಣೇತಾ (ಪ್ರಜೆಗಳನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವವನು), ಸಹಜಿತ್ (ಯೋಧರ ಜೊತೆಯಲ್ಲಿ ಗೆಲ್ಲುವವನು), ಬಭ್ರು, ರಾಜ, ಸತ್ಯಯೋನಿ, ಪುರಾವಿತ್ (ಪುರಾತನವನ್ನೆಲ್ಲಾ ತಿಳಿದವನು), ಸತ್ಯಧರ್ಮಪ್ರವರ್ತಕ ಎಂದು ಕರೆಯಲ್ಪಡುತ್ತಾನೆ.
ಪುರಾ ಯೋ ಬ್ರಹ್ಮಣಾ ಸೃಷ್ಟಃ ಪ್ರಜಾನಾಂ ಪರಿಪಾಲನೇ |
ದುಷ್ಟಾನಾಂ ನಿಗ್ರಹಂ ಕರ್ತಾ ಸ ಚ ರಾಜಾಭಿಧೀಯತೇ ॥29.1॥
ಹಿಂದೆ ಪ್ರಜೆಗಳ ಪಾಲನೆಗಾಗಿ ಬ್ರಹ್ಮದೇವರಿಂದ ಸೃಷ್ಟನಾಗಿ ಯಾವನು ದುಷ್ಟನಿಗ್ರಹವನ್ನು ಮಾಡುತ್ತಾನೆಯೋ ಅವನು ರಾಜ ಎಂದು ಕರೆಯಲ್ಪಡುತ್ತಾನೆ.
ಸತ್ಯಂ ಮನ್ಯುರ್ದಯಾ ರಕ್ಷಾ ಧರ್ಮಾಧರ್ಮವಿಲೋಕನಮ್ |
ವಿದ್ಯಂತೇ ಯಸ್ಯ ಚಾರಾಶ್ಚ ಸ ರಾಜೇತ್ಯಭಿಧೀಯತೇ ॥29.2॥
ಯಾವನಲ್ಲಿ ಸತ್ಯ, ಕೋಪ, ದಯಾ, ರಕ್ಷಣೆ ಮತ್ತು ಧರ್ಮಾಧರ್ಮ ವಿವೇಚನೆಗಳು ಇರುತ್ತವೆಯೋ ಮತ್ತು ಯಾವನಿಗೆ ಚಾರರು ಇರುತ್ತಾರೆಯೋ ಅವನನ್ನು ರಾಜ ಎಂದು ಕರೆಯುತ್ತಾರೆ.
ಅಧರ್ಮಾದೃಷಯೋ ಭೀತಾ ಬಲಂ ಕ್ಷತ್ರೇ ಸಮಾದಧನ್ |
ತಸ್ಮಾದ್ಧಿ ಬ್ರಹ್ಮಣಾ ಕ್ಷತ್ರಂ ಕ್ಷತ್ರೇಣ ಬ್ರಹ್ಮ ಚಾವ್ಯಯಮ್ ॥30॥
ಪ್ರಪಂಚದಲ್ಲಿ ಉಂಟಾಗಬಹುದಾದ ಅಧರ್ಮಕ್ಕೆ ಹೆದರಿ ಋಷಿಗಳು ಕ್ಷತ್ರಿಯ ಸಮೂಹಕ್ಕೆ ಬಲವನ್ನು ಆಧಾನ ಮಾಡಿದರು. ಆದ್ದರಿಂದ ಬ್ರಾಹ್ಮಣರ ಜೊತೆಯಲ್ಲಿ ಸೇರಿದ ಕ್ಷತ್ರಿಯರು ಮತ್ತು ಕ್ಷತ್ರಿಯರ ಜೊತೆಯಲ್ಲಿ ಸೇರಿದ ಬ್ರಾಹ್ಮಣರು ನಾಶರಹಿತರಾಗುತ್ತಾರೆ.
ಆದಿತ್ಯೋ ದಿವಿ ದೇವೇಷು ತಮೋ ನುದತಿ ತೇಜಸಾ |
ತಥೈವ ನೃಪತಿರ್ಭೂಮಾವಧರ್ಮಾನ್ ನುದತೇ ಭೃಶಮ್ ॥31॥
ದೇವತೆಗಳಲ್ಲಿ ಸೂರ್ಯನು ತನ್ನ ತೇಜಸ್ಸಿನಿಂದ ಅಂತರಿಕ್ಷ ಮತ್ತು ಸ್ವರ್ಗದಲ್ಲಿ ಕತ್ತಲೆಯನ್ನು ಪರಿಹಾರ ಮಾಡುತ್ತಾನೆ. ಅದರಂತೆ ಭೂಮಿಯಲ್ಲಿ ರಾಜನು ತನ್ನ ತೇಜಸ್ಸಿನಿಂದ ಅಧರ್ಮವನ್ನು ಚೆನ್ನಾಗಿ ನಾಶಮಾಡುತ್ತಾನೆ.
ತತೋ ರಾಜ್ಞಃ ಪ್ರಧಾನತ್ವಂ ಶಾಸ್ತ್ರಪ್ರಾಮಾಣ್ಯದರ್ಶನಾತ್ |
ಉತ್ತರಃ ಸಿದ್ಧ್ಯತೇ ಪಕ್ಷೋ ಯೇನ ರಾಜೇತಿ ಭಾಷಿತಮ್ ॥32॥
ಅತ್ರಿಣಾ ವ್ಯಾಹೃತಂ ಪೂರ್ವಂ ತತ್ ತಥೈವ ನ ಚಾನ್ಯಥಾ |
ಆದ್ದರಿಂದ ರಾಜನ ಪ್ರಾಧಾನ್ಯವು ಶಾಸ್ತ್ರಪ್ರಾಮಾಣ್ಯದಿಂದ ಸಿದ್ಧವಾಗುತ್ತದೆ. ಆದ್ದರಿಂದ ಉತ್ತರಪಕ್ಷವು ಸಿದ್ಧವಾಗುತ್ತದೆ. ಅತ್ರಿಗಳು ರಾಜ ಎಂದು ಕರೆದುದು, ವಿಧಾತಾ ಎಂದು ಕರೆದುದು ಸರಿಯಾಗಿಯೇ ಇದೆ. ಅದರಲ್ಲಿ ಏನೂ ವ್ಯತ್ಯಾಸವಿಲ್ಲ.
ಮಾರ್ಕಂಡೇಯಃ
ತತಃ ಸ ರಾಜಾ ಸಂಹೃಷ್ಟಃ ಸಿದ್ಧೇ ಪಕ್ಷೇ ಮಹಾಮನಾಃ |
ತಮತ್ರಿಮಬ್ರವೀತ್ ಪ್ರೀತಃ ಪೂರ್ವಂ ಯೇನಾಭಿಸಂಸ್ತುತಃ ॥33॥
ಮಾರ್ಕಂಡೇಯರು ಆಗ ಧೈರ್ಯಶಾಲಿಯಾದ ರಾಜನು ನಿರ್ಣಯವು ಹೊರಬೀಳುತ್ತಿರಲು ಸಂತೋಷಗೊಂಡು ಯಾವ ಅತ್ರಿಗಳಿಂದ ಮೊದಲು ಸ್ತೋತ್ರ ಮಾಡಲ್ಪಟ್ಟಿದ್ದನೋ ಅಂತಹ ಅತ್ರಿಗಳನ್ನು ಕುರಿತು ಮಾತನಾಡಿದನು.
ವೈನ್ಯಃ
ಯಸ್ಮಾತ್ ಪೂರ್ವಂ ಮನುಷ್ಯೇಷು ಜ್ಯಾಯಾಂಸಂ ಮಾಮಿಹಾಬ್ರವೀಃ |
ಸರ್ವದೇವೈಶ್ಚ ವಿಪ್ರರ್ಷೇ ಸಮ್ಮಿತಂ ಶ್ರೇಷ್ಠಮೇವ ಚ ॥34॥
ತಸ್ಮಾತ್ ತೇಽಹಂ ಪ್ರದಾಸ್ಯಾಮಿ ವಿವಿಧಂ ವಸು ಭೂರಿ ಚ |
ದಾಸೀಸಹಸ್ರಂ ಶ್ಯಾಮಾನಾಂ ಸುವಸತ್ರಣಾಮಲಂಕೃತಮ್ ॥35॥
ವೈನ್ಯ ಎಲೈ ವಿಪ್ರರ್ಷಿಯೇ, ನೀನು ನನ್ನನ್ನು ಮನುಷ್ಯರಲ್ಲಿ ಶ್ರೇಷ್ಠನೆಂದೂ ಮತ್ತು ಎಲ್ಲ ದೇವತೆಗಳಿಗೂ ಸದೃಶನೆಂದೂ ಮೊದಲು ಹೇಳಿದುದರಿಂದ ನಾನು ಸಂತೋಷಗೊಂಡು ನಿನಗೆ ಬಹಳವಾದ, ವಿವಿಧವಾದ ಧನವನ್ನೂ, ಸುವಸ್ತ್ರ ಮತ್ತು ಸುವರ್ಣಗಳಿಂದ ಅಲಂಕೃತರಾದ ಸುಂದರಿಯರಾದ ಚಿಕ್ಕವಯಸ್ಸಿನ ಸಹಸ್ರ ದಾಸಿಯರನ್ನೂ ಕೊಡುವೆನು.
ದಶಕೋಟೀರ್ಹಿರಣ್ಯಸ್ಯ ರುಕ್ಮಭಾರಾಂಸ್ತಥಾ ದಶ |
ಏತದ್ ದದಾಮಿ ವಿಪ್ರರ್ಷೇ ಸರ್ವಜ್ಞಸ್ತ್ವಂ ಹಿ ಮೇ ಮತಃ ॥36॥
ವಿಪ್ರರ್ಷಿಯೇ, ನಾನು ಹತ್ತುಕೋಟಿ ಹಿರಣ್ಯವನ್ನೂ, ಹತ್ತು ಮಣ ಸುವರ್ಣವನ್ನು ನಿಮಗೆ ಕೊಡುತ್ತೇನೆ. ನೀವು ಸರ್ವಜ್ಞರೆಂದು ನನ್ನ ಅಭಿಪ್ರಾಯ.
ಮಾರ್ಕಂಡೇಯಃ
ತದತ್ರಿರ್ನ್ಯಾಯತಃ ಸರ್ವಂ ಪ್ರತಿಗೃಹ್ಯಾಭಿಸತ್ಕೃತಃ |
ಪ್ರತ್ಯುಜ್ಜಗಾಮ ತೇಜಸ್ವೀ ಗೃಹಾನೇವ ಮಾಹಾತಪಾಃ ॥37॥
ಮಾರ್ಕಂಡೇಯ ಹೀಗೆ ರಾಜನಿಂದ ಸತ್ಕೃತನಾಗಿ ನ್ಯಾಯದಿಂದ ಪ್ರಾಪ್ತವಾದ ಆ ಧನವನ್ನೆಲ್ಲಾ ತೆಗೆದುಕೊಂಡು ಮಹಾತಪಸ್ವಿಗಳೂ, ತೇಜಸ್ವಿಗಳೂ ಆದ ಅತ್ರಿಗಳು ಮನೆಗೆ ಬಂದರು.
ಪ್ರದಾಯ ಚ ಧನಂ ಪ್ರೀತಃ ಪುತ್ರೇಭ್ಯಃ ಪ್ರಯತಾತ್ಮವಾನ್ |
ತಪಃ ಸಮಭಿಸಂಧಾಯ ವನಮೇವಾನ್ವಪದ್ಯತ ॥38॥
ಮನೋಜಯವುಳ್ಳ ಅವರು ಸಂತೋಷದಿಂದ ಆ ಧನವನ್ನು ಮಕ್ಕಳಿಗೆ ಹಂಚಿ ತಪಸ್ಸನ್ನೇ ಶ್ರೇಷ್ಠವೆಂದು ಅನುಸಂಧಾನ ಮಾಡಿ

ಕಾಡಿಗೆ ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತೊಂದನೆಯ ಅಧ್ಯಾಯ
ಮಾರ್ಕಂಡೇಯರಿಂದ ಯುಧಿಷ್ಠಿರನನ್ನು ಕುರಿತು ತಾರ್ಕ್ಷ್ಯ
ಸರಸ್ವತಿಯರ ಸಂವಾದದ ಅನುವಾದ.
ಮಾರ್ಕಂಡೇಯಃ
ಅತ್ರೈವ ಚ ಸರಸ್ವತ್ಯಾ ಗೀತಂ ಪರಪುರಂಜಯ |
ಪೃಷ್ಟಯಾ ಮುನಿನಾ ವೀರ ಶೃಣು ತಾರ್ಕ್ಷ್ಯೇಣ ಧೀಮತಾ ॥1॥
ಮಾರ್ಕಂಡೇಯ ಎಲೈ ಪರಪುರಂಜಯನೇ, ಈ ವಿಷಯದಲ್ಲಿಯೇ ಮೇಧಾವಿಗಳಾದ ತಾರ್ಕ್ಷ್ಯ ಋಷಿಗಳ ಪ್ರಶ್ನೆಗೆ ಉತ್ತರವಾಗಿ
ಸರಸ್ವತಿಯು ಹಾಡಿದ ಮಾತುಗಳನ್ನು ಕೇಳು.
ತಾರ್ಕ್ಷ್ಯಃ
ಕಿಂ ನು ಶ್ರೇಯಃ ಪುರುಷಸ್ಯೇಹ ಭದ್ರೇ
ಕಥಂ ಕುರ್ವನ್ನ ಚ್ಯವತೇ ಸ್ವಧರ್ಮಾತ್ |
ಆಚಕ್ಷ್ವ ಮೇ ಚಾರುಸರ್ವಾಂಗಿ ಕುರ್ಯಾಂ
ತ್ವಯಾ ಶಿಷ್ಟೋ ನ ಚ್ಯವೇಯಂ ಸ್ವಧರ್ಮಾತ್ ॥2॥
ಕಥಂ ಚಾಗ್ನಿಂ ಜುಹುಯಾಂ ಪೂಜಯೇ ವಾ
ಕಸ್ಮಿನ್ ಕಾಲೇ ಕೇನ ಧರ್ಮೋ ನ ನಶ್ಯೇತ್ |
ಏತತ್ ಸರ್ವಂ ಸುಭಗೇ ಪ್ರಬ್ರವೀಹಿ
ಯಥಾ ಲೋಕಾನ್ ವಿರಜಾಃ ಸಂಚರೇಯಮ್ ॥3॥
ತಾರ್ಕ್ಷ್ಯ ಎಲೌ ಮಂಗಳಸ್ವರೂಪಳೇ, ಪುರುಷನಿಗೆ ಶ್ರೇಯಸ್ಸು ಯಾವುದು? ಏನು ಮಾಡಿದರೆ ತನ್ನ ಧರ್ಮದಿಂದ ಚ್ಯುತನಾಗುವುದಿಲ್ಲ?
ಎಲೌ ಸರ್ವಾಂಗ ಸುಂದರಿಯೇ, ನನಗೆ ಹೇಳು. ನಿನ್ನಿಂದ ಉಪದಿಷ್ಟನಾಗಿ ನಾನು ಸ್ವಧರ್ಮದಿಂದ ಚ್ಯುತನಾಗದೇ ಇದ್ದೇನು.
ಅಗ್ನಿಯಲ್ಲಿ ಹೇಗೆ ಹೋಮವನ್ನು ಮಾಡಬೇಕು? ಹೇಗೆ ಪೂಜೆಯನ್ನು ಮಾಡಬೇಕು? ಯಾವ ಕಾಲದಲ್ಲಿ ಯಾವ ಕಾರಣದಿಂದ
ಧರ್ಮವು ನಾಶವನ್ನು ಹೊಂದಲಾರದು? ಎಲೌ ಸೌಭಾಗ್ಯವತಿಯೇ, ಇದೆಲ್ಲವನ್ನೂ ನನಗೆ ಹೇಳು. ನಿನ್ನ ಉಪದೇಶದಿಂದ ನಾನು ರಜ
ಆದಿ ದೋಷದೂರವಾದ ಲೋಕಗಳಲ್ಲಿ ಸಂಚರಿಸಿಯೇನು.
ಮಾರ್ಕಂಡೇಯಃ
ಏವಂ ಪೃಷ್ಟಾ ಪ್ರೀತಿಯುಕ್ತೇನ ತೇನ
ಶುಶ್ರೂಷುಮೀಕ್ಷ್ಯೋತ್ತಮಬುದ್ಧಿಯುಕ್ತಮ್ |
ತಾರ್ಕ್ಷ್ಯಂ ವಿಪ್ರಂ ಧರ್ಮಯುಕ್ತಂ ಹಿತಂ ಚ
ಸರಸ್ವತೀ ವಾಕ್ಯಮಿದಂ ಬಭಾಷೇ ॥4॥
ಮಾರ್ಕಂಡೇಯರು ಹೀಗೆ ವಿಶ್ವಾಸದಿಂದ ಪ್ರಶ್ನೆ ಮಾಡಿದ ತಾರ್ಕ್ಷ್ಯರು ಶ್ರವಣೇಚ್ಛಗಳಾಗಿ ಇರುವುದನ್ನು ಮತ್ತು ಉತ್ತಮ
ಬುದ್ಧಿಯುಳ್ಳವರಾಗಿರುವುದನ್ನು ಗಮನಿಸಿ ಸರಸ್ವತಿಯು ಆ ಬ್ರಾಹ್ಮಣರನ್ನು ಕುರಿತು ಧರ್ಮಯುಕ್ತವಾದ ಮತ್ತು ಹಿತವಾದ ಈ
ಮಾತುಗಳನ್ನು ಆಡಿದಳು.
ಯೋ ಬ್ರಹ್ಮ ಜಾನಾತಿ ಯಥಾಪ್ರದೇಶಂ
ಸ್ವಾಧ್ಯಾಯನಿತ್ಯಃ ಶುಚಿರಪ್ರಮತ್ತಃ |
ಸ ವೈ ಪಾರಂ ದೇವಲೋಕಸ್ಯ ಗಂತಾ
ಸಹಾಮರೈಃ ಪ್ರಾಪ್ನುಯಾತ್ ಪ್ರೀತಿಯೋಗಮ್ ॥5॥
ಯಾವನು ಉಪದೇಶಕ್ಕೆ ಅನುಗುಣವಾಗಿ ವೇದವನ್ನು ತಿಳಿದು ನಿತ್ಯದಲ್ಲಿಯೂ ಸ್ವಾಧ್ಯಾಯನಿರತನಾಗಿ ಶುಚಿಯೂ ಮತ್ತು
ಪ್ರಮಾದರಹಿತನೂ ಆಗುತ್ತಾನೆಯೋ ಅವನು ದೇವಲೋಕದ ಅಂತವನ್ನು ತಲುಪಿ ದೇವತೆಗಳ ಜೊತೆಯಲ್ಲಿದ್ದು ಅವರ ಪ್ರೀತಿಗೆ
ಪಾತ್ರನಾಗುತ್ತಾನೆ.
ತತ್ರ ಸ್ಮ ರಮ್ಯಾ ವಿಪುಲಾ ವಿಶೋಕಾಃ
ಸುಪುಷ್ಪಿತಾಃ ಪುಷ್ಕರಿಣ್ಯಃ ಸುಪುಣ್ಯಾಃ |
ಅಕರ್ದಮಾ ಮೀನವತ್ಯಃ ಸುತೀರ್ಥಾ
ಹಿರಣ್ಮಯೈರಾವೃತಾಃ ಪುಂಡರೀಕೈಃ ॥6॥
ಅಲ್ಲಿ ಮನೋಹರವಾದ, ವಿಶಾಲವಾದ ಶೋಕನಾಶವನ್ನು ಮಾಡುವ, ಪವಿತ್ರವಾದ, ಪುಷ್ಪಿತವಾದ, ಹಿರಣ್ಮಯವಾದ ಕಮಲಗಳಿಂದ
ಕೂಡಿದ, ಮತ್ಸ್ಯಗಳಿರುವ, ಕೆಲಸರಿಲ್ಲದಿರುವ, ಒಳ್ಳೆಯ ನೀರನ್ನು ಹೊಂದಿದ ಸರೋವರಗಳಿವೆ.
ತಾಸಾಂ ತೀರೇಷ್ವಾಸತೇ ಪುಣ್ಯಕರ್ಮಾ

ಮಹೀಯಮಾನಃ ಪೃಥಗಪ್ಸರೋಭಿಃ |
ಸುಪುಣ್ಯಗಂಧಾಭಿರಲಂಕೃತಾಭಿ
ರ್ಹಿರಣ್ಯವರ್ಣಾಭಿರತೀವ ಹೃಷ್ಟಃ ॥7॥
ಪುಣ್ಯಕರ್ಮವನ್ನು ಮಾಡಿದವನು ಅಂತಹ ಸರೋವರದ ತೀರದಲ್ಲಿ ಸುವರ್ಣವರ್ಣವುಳ್ಳ ಸುಗಂಧಯುಕ್ತರಾದ ಮತ್ತು ಅಲಂಕೃತರಾದ ಅಪ್ಸರೆಯರಿಂದ ಪೂಜಿಸಲ್ಪಡುವನಾಗಿ ಸಂತೋಷದಿಂದ ವಾಸಮಾಡುತ್ತಾನೆ.
ಪರಂ ಲೋಕಂ ಗೋಪ್ರದಾಸ್ತತ್ವಪ್ನುವಂತಿ
ದತ್ತ್ವಾ ನಡ್ವಾಹಂ ಸೂರ್ಯಲೋಕಂ ವ್ರಜಂತಿ |
ವಾಸೋ ದತ್ತ್ವಾ ಚಾಂದ್ರಮಸಂ ತು ಲೋಕಂ
ದತ್ತ್ವಾ ಹಿರಣ್ಯಮಮರತ್ವಮೇತಿ ॥8॥
ಗೋದಾನ ಮಾಡಿದವರು ಉತ್ತಮಲೋಕವನ್ನು ಹೊಂದುತ್ತಾರೆ. ವೃಷಭವನ್ನು ದಾನಮಾಡಿದವರು ಸೂರ್ಯಲೋಕಕ್ಕೆ ಹೋಗುತ್ತಾರೆ. ವಸ್ತ್ರದಾನವನ್ನು ಮಾಡಿದವರು ಚಂದ್ರಲೋಕಕ್ಕೆ ಹೋಗುತ್ತಾರೆ. ಸುವರ್ಣವನ್ನು ದಾನಮಾಡಿದವನು ದೇವತ್ವವನ್ನು ಹೊಂದುತ್ತಾನೆ.
ಧೇನುಂ ದತ್ತ್ವಾ ಸುಪ್ರಭಾಂ ಸುಪ್ರದೋಹಾಂ
ಕಲ್ಯಾಣವತ್ಸಾಮಪಲಾಯಿನೀಂ ಚ |
ಯಾವಂತಿ ರೋಮಾಣಿ ಭವಂತಿ ತಸ್ಯಾ
ಸ್ತಾವದ್ವರ್ಷಾಣ್ಯಾಸತೇ ದೇವಲೋಕೇ ॥9॥
ಒಳ್ಳೆಯ ಕಾಂತಿಯುಳ್ಳ, ಚೆನ್ನಾಗಿ ಹಾಲನ್ನು ಕೊಡುವ, ಒಳ್ಳೆಯ ಕರುವನ್ನು ಹೊಂದಿದ, ಓಡಿಹೋಗದಿರುವ ಗೋವನ್ನು ದಾನ ಮಾಡಿದವರು ಆ ಗೋವಿನ ದೇಹದಲ್ಲಿ ಎಷ್ಟು ರೋಮಗಳಿರುತ್ತವೆಯೋ ಅಷ್ಟು ವರ್ಷಗಳ ಕಾಲ ದೇವಲೋಕದಲ್ಲಿ ವಾಸಮಾಡುತ್ತಾರೆ.
ಅನಡ್ವಾಹಂ ಸುವ್ರತಂ ಯೋ ದದಾತಿ
ಹಲಸ್ಯ ವೋಢಾರಮನಂತವೀರ್ಯಮ್ |
ಧುರಂಧರಂ ಬಲವಂತಂ ಯುವಾನಂ
ಪ್ರಾಪ್ನೋತಿ ಲೋಕಾನ್ ದಶಧೇನುದಸ್ಯ ॥10॥
ಯಾರು ಒಳ್ಳೆಯ ನಡತೆಯುಳ್ಳ, ನೇಗಿಲಿಗೆ ಯೋಗ್ಯವಾದ, ಭಾರವನ್ನು ಹೊರುವಷ್ಟು ಶಕ್ತಿಯುಳ್ಳ ಚಿಕ್ಕವಯಸ್ಸಿನ ಎತ್ತನ್ನು ದಾನಮಾಡುತ್ತಾರೋ ಅವರು ಹತ್ತು ಗೋದಾನ ಮಾಡಿದವರು ಹೋಗುವ ಲೋಕಕ್ಕೆ ಹೋಗುತ್ತಾರೆ.
ದದಾತಿ ಯೋ ವೈ ಕಪಿಲಾಂ ಸಚೈಲಾಂ
ಕಾಂಸ್ಯೋಪದೋಹಾಂ ದ್ರವಿಣೈರುತ್ತರೀಯೈಃ |
ತೈಸ್ತೈರ್ಗುಣೈಃ ಕಾಮದುಹಾಥ ಭೂತ್ವಾ
ನರಂ ಪ್ರದಾತಾರಮುಪೈತಿ ಸಾ ಗೌಃ ॥10.1॥
ಯಾರು ವಸ್ತ್ರ, ಹಾಲುಕರೆಯುವ ಕಂಚಿನ ಪಾತ್ರೆ, ಉತ್ತರೀಯ ಮತ್ತು ದ್ರವ್ಯಗಳಿಂದ ಸಹಿತವಾದ ಕಪಿಲ ಗೋವನ್ನು ದಾನಮಾಡುತ್ತಾರೋ ಅಂತಹವರಿಗೆ ಸ್ವರ್ಗಲೋಕದಲ್ಲಿ ಅಂತಹ ಗೋವು ಅವರು ಕೇಳಿದ ಕಾಮವನ್ನೆಲ್ಲಾ ಕೊಡುವುದಾಗಿ ಅವರ ಸಮೀಪದಲ್ಲಿರುತ್ತದೆ.
ಯಾವಂತಿ ರೋಮಣಿ ಭವಂತಿ
ಧೇನ್ವಾಸ್ತಾವತ್ಫಲಂ ಭವತಿ ಗೋಪ್ರದಾನೇ |
ಪುತ್ರಾಂಶ್ಚ ಪೌತ್ರಾಂಶ್ಚ ಕುಲಂ ಚ ಸರ್ವ
ಮಾಸಪ್ತಮಂ ತಾರಯತೇ ಪರತ್ರ ॥10.2॥
ಗೋವಿನ ದೇಹದಲ್ಲಿ ಎಷ್ಟು ರೋಮಗಳಿರುತ್ತವೆಯೋ, ಗೋ ಪ್ರದಾನ ಮಾಡಿದವನು ಅಷ್ಟು ಫಲವನ್ನು ಅನುಭವಿಸುತ್ತಾನೆ. ಮಕ್ಕಳು, ಮೊಮ್ಮಕ್ಕಳನ್ನು ನೀಡುವುದಲ್ಲದೇ ಪರಲೋಕದಲ್ಲಿ ಹಿಂದಿನ ಏಳು ಪಿತೃಗಳನ್ನು ಅದು ದುಃಖದಿಂದ ಪಾರು ಮಾಡುತ್ತದೆ.
ಸದಕ್ಷಿಣಾಂ ಕಾಂಚನಚಾರುಶೃಂಗೀಂ
ಕಾಂಸ್ಯೋಪದೋಹಾಂ ದ್ರವಿಣೈರುತ್ತರೀಯೈಃ |
ಧೇನುಂ ತಿಲಾನಾಂ ದದತೋ ದ್ವಿಜಾಯ
ಲೋಕಾ ವಸೂನಾಂ ಸುಲಭಾ ಭವಂತಿ ॥10.3॥
ಕಂಚಿನ ಪಾತ್ರೆಯಿಂದ ಕೂಡಿದ, ಸುವರ್ಣಾಲಂಕೃತವಾದ ಶೃಂಗವುಳ್ಳ, ಉತ್ತರೀಯ ಮತ್ತು ದ್ರವ್ಯಸಹಿತವಾದ ಗೋವನ್ನು, ದಕ್ಷಿಣೆ ಮತ್ತು ತಿಲಗಳ ಜೊತೆಯಲ್ಲಿ ಬ್ರಾಹ್ಮಣನಿಗೆ ದಾನವನ್ನು ಮಾಡುವವನು ಸುಲಭವಾಗಿ ವಸುಗಳ ಲೋಕವನ್ನು ಹೊಂದುತ್ತಾನೆ.
ಸ್ವಕರ್ಮಭಿರ್ದಾನವಸನ್ನಿರುದ್ಧೇ
ತೀವ್ರಾಂಧಕಾರೇ ನರಕೇ ಸಂಪತಂತಮ್ |
ಮಹಾರ್ಣವೇ ನೌರಿವ ವಾತಯುಕ್ತಾ
ದಾನಂ ಗವಾಂ ತಾರಯತೇ ಪರತ್ರ ॥10.4॥
ತನ್ನ ದುಷ್ಕರ್ಮಗಳಿಂದ ತೀವ್ರ ಅಂಧಕಾರವಿರುವ ರಾಕ್ಷಸರಿಂದ ಸಂಕುಲವಾದ ನರಕದಲ್ಲಿ ಬೀಳಲಿರುವ ಮನುಷ್ಯನನ್ನು ಗೋದಾನವು ಸಮುದ್ರದಲ್ಲಿ ಹಡಗು ಪಾರುಮಾಡಿದಂತೆ ಅವನನ್ನು ನರಕದಿಂದ ಪಾರುಮಾಡುತ್ತದೆ.

ಯೋ ಬ್ರಾಹ್ಮದೇಯಾಂ ತು ದದಾತಿ
ಕನ್ಯಾಂ ಭೂಮಿಪ್ರದಾನಂ ಚ ಕರೋತಿ ವಿಪ್ರೇ |
ದದಾತಿ ದಾನಂ ವಿಧಿನಾ ಚ ಯಶ್ಚ
ಸ ಲೋಕಮಾಪ್ನೋತಿ ಪುರಂದರಸ್ಯ ॥10.5॥
ಯಾರು ಬ್ರಾಹ್ಮವಿಧಿಯಿಂದ ವಿಪ್ರನಿಗೆ ಕನ್ಯಾದಾನವನ್ನೂ ಮತ್ತು ಭೂಮಿ ದಾನವನ್ನೂ ವಿಧಿಪೂರ್ವಕವಾಗಿ ಮಾಡುತ್ತಾನೆಯೋ ಅವನು ಇಂದ್ರಲೋಕವನ್ನು ಹೊಂದುತ್ತಾನೆ.
ಯಃ ಸಪ್ತ ವರ್ಷಾಣಿ ಜುಹೋತಿ ತಾರ್ಕ್ಷ್ಯ
ಹವ್ಯಂ ತ್ವಗ್ನೌ ನಿಯತಃ ಸಾಧುಶೀಲಃ |
ಸಪ್ತಾವರಾನ್ ಸಪ್ತ ಪೂರ್ವಾನ್ ಪುನಾತಿ
ಪಿತಾಮಹಾನಾತ್ಮನಾ ಕರ್ಮಭಿಃ ಸ್ವೈಃ ॥11॥
ಎಲೈ ತಾರ್ಕ್ಷ್ಯನೇ, ಯಾವನು ನಿಯಮಬದ್ಧನಾಗಿದ್ದು, ಸಾಧುಸ್ವಭಾವವನ್ನು ಹೊಂದಿದವನಾಗಿ ಏಳುವರ್ಷಗಳ ಕಾಲ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾನೆಯೋ ಅವನು ತನ್ನನ್ನೂ, ತನ್ನ ಹಿಂದಿನ ಏಳು ಪಿತೃಗಳನ್ನೂ ಮತ್ತು ಮುಂದಿನ ಏಳು ಪೀಳಿಗೆಗಳನ್ನೂ ಅವರ ದುಷ್ಕರ್ಮದಿಂದ ಪಾರುಮಾಡಿ ಪವಿತ್ರೀಕರಿಸುತ್ತಾನೆ.
ತಾರ್ಕ್ಷ್ಯಃ
ಕಿಮಗ್ನಿಹೋತ್ರಸ್ಯ ವ್ರತಂ ಪುರಾಣಮಾಚಕ್ಷ್ವ ಮೇ ಪೃಚ್ಛತಶ್ಚಾನುರೂಪೇ |
ತ್ವಯಾನುಶಿಷ್ಟೋಽಹಮಿಹಾದ್ಯ ವಿದ್ಯಾಂ ಯದಗ್ನಿಹೋತ್ರಸ್ಯ ವ್ರತಂ ಪುರಾಣಮ್ ॥12॥
ತಾರ್ಕ್ಷ್ಯ ಎಲೌ ಸುಂದರಿಯೇ, ಅಗ್ನಿಹೋತ್ರವ್ರತವು ಪ್ರಾಚೀನಕಾಲದಿಂದಲೂ ಹೇಗೆ ನಡೆದುಬಂದಿದೆ ಎಂದು ನನಗೆ ಹೇಳು. ನಿನ್ನ ಉಪದೇಶದಿಂದ ನಾನು ಪ್ರಾಚೀನವಾದ ಅಗ್ನಿಹೋತ್ರವ್ರತವನ್ನು ಈ ದಿನ ತಿಳಿದೇನು.
ಸರಸ್ವತೀ
ನ ಚಾಶುಚಿರ್ನಾಪ್ಯನಿರ್ಣಿಕ್ತಪಾಣಿರ್ನಾಬ್ರಹ್ಮವಿಜ್ಜುಹುಯಾನ್ನಾವಿಪಶ್ಚಿತ್ |
ಬುಭುತ್ಸವಃ ಶುಚಿಕಾಮಾ ಹಿ ದೇವಾ ನಾಶ್ರದ್ದಧಾನಾದ್ಧಿ ಹವಿರ್ಜುಷಂತಿ ॥
ಸರಸ್ವತೀ ಅಶುಚಿಯಾದವನು, ಕೈಗಳನ್ನು ತೊಳೆಯದವನು, ವೇದವನ್ನು ತಿಳಿಯದವನು ಮತ್ತು ಜ್ಞಾನಶೂನ್ಯನಾದವನು ಹೋಮವನ್ನು ಮಾಡಬಾರದು. ಜ್ಞಾನದಲ್ಲಿ ಆಸಕ್ತಿಯುಳ್ಳ ಶುದ್ಧಿಕಾಮರಾದ ದೇವತೆಗಳು ಶ್ರದ್ದೆಯಿಲ್ಲದೇ ಹೋಮಿಸಿದ ಹವಿಸ್ಸನ್ನು ಸ್ವೀಕರಿಸುವುದಿಲ್ಲ.
ನಾಶ್ರೋತ್ರಿಯಂ ದೇವಹವ್ಯೇ ನಿಯುಂಜ್ಯಾ
ನ್ಮೋಘಂ ಪುರಾ ಸಿಂಚತಿ ತಾದೃಶೋ ಹಿ |
ಅಪೂರ್ಣಮಶ್ರೋತ್ರಿಯಮಾಹ ತಾರ್ಕ್ಷ್ಯ
ನ ವೈ ತಾದೃಗ್ಜುಹುಯಾದಗ್ನಿಹೋತ್ರಮ್ ॥14॥
ದೇವತೆಗಳಿಗೆ ಹೋಮಮಾಡಬೇಕಾದಾಗ ಶ್ರೋತ್ರಿಯನಲ್ಲದವನನ್ನು ಪುರೋಹಿತನಾಗಿ ನೇಮಿಸಬಾರದು. ಅಂತಹ ವ್ಯಕ್ತಿಯು ವ್ಯರ್ಥವಾಗಿ ಅಗ್ನಿಯಲ್ಲಿ ಹವಿಸ್ಸನ್ನು ಸುರಿಯುತ್ತಾನೆ. ಎಲೈ ತಾರ್ಕ್ಷರ್ಯನೇ, ಶ್ರೋತ್ರಿಯನಲ್ಲದವನು ಪೂರ್ಣನಲ್ಲ. ಅಂತಹವನು ಅಗ್ನಿಯಲ್ಲಿ ಹೋಮವನ್ನು ಮಾಡಬಾರದು.
ಕೃಶಾಶ್ಚ ಯೇ ಜುಹ್ವತಿ ಶ್ರದ್ದಧಾನಾಃ
ಸತ್ಯವ್ರತಾ ಹುತಶಿಷ್ಟಾಶಿನಶ್ಚ |
ಗವಾಂ ಲೋಕಂ ಪ್ರಾಪ್ಯ ತೇ ಪುಣ್ಯಗಂಧಂ
ಪಶ್ಯಂತಿ ದೇವಂ ಪರಮಂ ಚಾಪಿ ಸತ್ಯಮ್ ॥15॥
ಯಾರು ಶ್ರದ್ಧೆಯುಳ್ಳವರಾಗಿ, ಒಳ್ಳೆಯ ವ್ರತವನ್ನು ಮಾಡುವವರಾಗಿ, ಯಜ್ಞಶೇಷವನ್ನು ಭುಂಜಿಸುವವರಾಗಿ, ಕೃಶರಾಗಿ ಹೋಮವನ್ನು ಮಾಡುತ್ತಾರೆಯೋ ಅವರು ಪುಣ್ಯಗಂಧವುಳ್ಳ ದೇವಲೋಕಕ್ಕೆ ಹೋಗಿ ಸರ್ವೋತ್ತಮನಾದ ಸೃಷ್ಟ್ಯಾದಿಕರ್ತನಾದ ದೇವನನ್ನು ನೋಡುತ್ತಾರೆ.
ತಾರ್ಕ್ಷ್ಯಃ
ಕ್ಷೇತ್ರಜ್ಞಭೂತಾಂ ಪರಲೋಕಭಾವೇ
ಕರ್ಮೋದಯೇ ಬುದ್ಧಿಮತಿಪ್ರವಿಷ್ಟಾಮ್ |
ಪ್ರಜ್ಞಾಂ ಚ ದೇವೀಂ ಸುಭಗೇ ವಿಮೃಶ್ಯ
ಪೃಚ್ಛಾಮಿ ತ್ವಾಂ ಕಾ ಹ್ಯಸಿ ಚಾರುರೂಪೇ ॥16॥
ತಾರ್ಕ್ಷ್ಯ ದೇವಿಯೇ, ನೀನು ಪರಲೋಕವಿಷಯಗಳನ್ನು ಕ್ಷೇತ್ರಜ್ಞನಾದ ಪರಮಾತ್ಮನಂತೆ ತಿಳಿದಿರುವುದನ್ನೂ ಮತ್ತು ಕರ್ಮದ ಫಲದ ವಿಷಯದಲ್ಲಿ ಅತ್ಯಂತ ಸೂಕ್ಷ್ಮವಾದ ನಿನ್ನ ಬುದ್ಧಿಯನ್ನೂ ಮತ್ತು ನಿನ್ನ ಪ್ರಜ್ಞೆಯನ್ನೂ ಗಮನಿಸಿ, ಎಲೌ ಸುಂದರಿಯೇ, ಸೌಭಾಗ್ಯವತಿಯೇ, ನೀನು ಯಾರು ಎಂದು ಕೇಳುತ್ತಿದ್ದೇನೆ?
ಸರಸ್ವತೀ
ಅಗ್ನಿಹೋತ್ರಾದಹಮಭ್ಯಾಗತಾಸ್ಮಿ
ವಿಪ್ರರ್ಷಭಾಣಾಂ ಸಂಶಯಚ್ಛೇದನಾಯ |
ತ್ವತ್ಸಂಯೋಗಾದಹಮೇತಮಬ್ರುವಂ

ಭಾವೇ ಸ್ಥಿತಾ ತಥ್ಯಮರ್ಥಂ ಯಥಾವತ್ ॥17॥
ಸರಸ್ವತೀ ನಾನು ವಿಪ್ರರ್ಷಿಗಳ ಅಗ್ನಿಹೋತ್ರದಿಂದ ತತ್ತ್ವಜ್ಞಾನದ ವಿಷಯದಲ್ಲಿ ಸಂಶಯವನ್ನು ಪರಿಹರಿಸಲು ಬಂದಿದ್ದೇನೆ. ನಿನ್ನ ಸಂಪರ್ಕದಿಂದ ನಿನ್ನ ಅಭಿಪ್ರಾಯವನ್ನು ತಿಳಿದು ಎಲ್ಲವನ್ನೂ ಸರಿಯಾಗಿ ಹೇಳಿದ್ದೇನೆ.
ತಾರ್ಕ್ಷ್ಯಃ
ನ ಹಿ ತ್ವಯಾ ಸದೃಶೀ ಕಾಚಿದಸ್ತಿ ವಿಭ್ರಾಜಸೇ
ಹ್ಯತಿಮಾತ್ರಂ ಯಥಾ ಶ್ರೀಃ।
ರೂಪಂ ಚ ತೇ ದಿವ್ಯಮನಂತಕಾಂತಿ
ಪ್ರಜ್ಞಾಂ ಚ ದೈವೀಂ ಸುಭಗೇ ಬಿಭರ್ಷಿ ॥18॥
ತಾರ್ಕ್ಷ್ಯ ಎಲೌ ಸೌಭಾಗ್ಯವತಿಯೇ, ನಿನ್ನಂತಹ ವನಿತೆಯು ಇನ್ನೊಬ್ಬಳಿಲ್ಲ. ಲಕ್ಷ್ಮೀದೇವಿಯಂತೆ ಕಂಗೊಳಿಸುತ್ತಿದ್ದೀಯೆ. ನಿನ್ನ ರೂಪವಾದರೂ ದಿವ್ಯವಾದ ಅಪರಿಮಿತವಾದ ಕಾಂತಿಯಿಂದ ಕೂಡಿದೆ. ನೀನು ದೈವೀಪ್ರತಿಭೆಯನ್ನು ಹೊಂದಿದವಳಾಗಿದ್ದೀಯೆ.
ಸರಸ್ವತೀ
ಶ್ರೇಷ್ಠಾನಿ ಯಾನಿ ದ್ವಿಪದಾಂ ವರಿಷ್ಠ
ಯಜ್ಞೇಷು ವಿದ್ವನ್ನುಪಪಾದಯಂತಿ।
ತೈರೇವ ಚಾಹಂ ಸಂಪ್ರವೃದ್ಧಾ ಭವಾಮಿ
ಚಾಪ್ಯಾಯಿತಾ ರೂಪವತೀ ಚ ವಿಪ್ರ ॥19॥
ಸರಸ್ವತೀ ಎಲೈ ದ್ವಿಪದರಲ್ಲಿ ಶ್ರೇಷ್ಠನಾದ ಬ್ರಾಹ್ಮಣನೇ, ವಿದ್ವಾಂಸನೇ, ಯಜ್ಞಗಳಲ್ಲಿ ಯಾರು ಶ್ರೇಷ್ಠವಾದ ಪದಾರ್ಥಗಳನ್ನು ಉಪಯೋಗಿಸುತ್ತಾರೆಯೋ ಅಂತಹ ಪದಾರ್ಥಗಳಿಂದ ನಾನು ಅಭಿವೃದ್ಧಳೂ, ಸಂತೋಷವುಳ್ಳವಳೂ ಮತ್ತು ಸೌಂದರ್ಯವುಳ್ಳವಳೂ ಆಗುತ್ತೇನೆ.
ಯಚ್ಚಾಪಿ ವಾಕ್ಯಮುಪಯುಜ್ಯತೇ ಹ
ವಾನಸ್ಪತ್ಯಂ ಪಾಯಸಂ ಪಾರ್ಥಿವಂ ವಾ।
ದಿವ್ಯೇನ ರೂಪೇಣ ಚ ಪ್ರಜ್ಞಯಾ ಚ
ತೇನೈವ ಸಿದ್ಧಿರಿತಿ ವಿದ್ಧಿ ವಿದ್ವನ್ ॥20॥
ಮತ್ತು ಯಜ್ಞಗಳಲ್ಲಿ ಯಾವ ವೇದಮಂತ್ರಗಳು ಉಪಯೋಗಿಸಲ್ಪಡುತ್ತವೆಯೋ, ಯಾವ ಒಳ್ಳೆಯ ಸಮಿತ್ತು ಮೊದಲಾದ ಇಂಧನಗಳು ಉಪಯೋಗಿಸಲ್ಪಡುತ್ತವೆಯೋ ಮತ್ತು ಕ್ಷೀರಾದಿ ಉಪಯೋಗಿಸಲ್ಪಡುತ್ತದೆಯೋ ಮತ್ತು ವ್ರೀಹಿಯವಾದಿಗಳು ಉಪಯೋಗಿಸಲ್ಪಡುತ್ತವೆಯೋ ಅಂತಹ ಪದಾರ್ಥಗಳಿಂದ ನನಗೆ ದಿವ್ಯರೂಪದ ಮತ್ತು ಪ್ರತಿಭೆಯ ಸಿದ್ಧಿ ಉಂಟಾಗುತ್ತದೆ ಎಂದು ತಿಳಿ.
ತಾರ್ಕ್ಷ್ಯಃ
ಇದಂ ಶ್ರೇಯಃ ಪರಮಂ ಮನ್ಯಮಾನಾ
ವ್ಯಾಯಚ್ಛಂತೇ ಪ್ರತ್ಯಯಾತ್ ಸಂಪ್ರತೀತಾಃ।
ಆಚಕ್ಷ್ವ ಮೇ ತಂ ಪರಮಂ ವಿಶೋಕಂ
ಮೋಕ್ಷಂ ಪರಂ ಯಂ ಪ್ರವಿಶಂತಿ ಧೀರಾಃ।
ಸಾಂಖ್ಯಾ ಯೋಗಾ ಪರಮಂ ಯಂ ವಿದಂತಿ
ಪರಂ ಪುರಾಣಂ ತಮಹಂ ನ ವೇದ್ಮಿ ॥21॥
ತಾರ್ಕ್ಷ್ಯ ಇದು ಪರಮಶ್ರೇಯಸ್ಸೆಂದು ತಿಳಿದು ಸಂತೋಷದಿಂದ ಮತ್ತು ವಿಶ್ವಾಸದಿಂದ ವಿದ್ವಾಂಸರು ಯಾವುದನ್ನು ಶಿಷ್ಯರಿಗೆ ಉಪದೇಶ ಮಾಡುತ್ತಾರೆಯೋ ಅಂತಹ ಮತ್ತು ಧೀರರಾದವರು ಯಾವುದನ್ನು ಪ್ರವೇಶ ಮಾಡುತ್ತಾರೆಯೋ ಅಂತಹ ಶೋಕರಹಿತವಾದ ಶ್ರೇಷ್ಠವಾದ ಮೋಕ್ಷವನ್ನು ನನಗೆ ಹೇಳು. ಶುದ್ಧಜ್ಞಾನದಲ್ಲಿ ನಿರತರಾದವರು ಮತ್ತು ಭಕ್ತ್ಯಾದಿ ಉಪಾಯಗಳಲ್ಲಿ ನಿರತರಾದವರು ಯಾವ ಪರಮಮೋಕ್ಷವನ್ನು ಪಡೆಯುತ್ತಾರೆಯೋ ಅಂತಹ ಪುರಾತನವಾದ ಮೋಕ್ಷವನ್ನು ನಾನು ತಿಳಿದಿಲ್ಲ.
ಸರಸ್ವತೀ
ತಂ ವೈ ಪರಂ ವೇದವಿದಃ ಪ್ರಪನ್ನಾಃ
ಪರಂ ಪರೇಭ್ಯಃ ಪ್ರಥಿತಂ ಪುರಾಣಮ್।
ಸ್ವಾಧ್ಯಾಯವಂತೋ ವ್ರತಪುಣ್ಯಯೋಗೈ
ಸ್ತಪೋಧನಾ ವೀತಶೋಕಾ ವಿಮುಕ್ತಾಃ॥22॥
ಸರಸ್ವತೀ ಸ್ವಾಧ್ಯಾಯವನ್ನು ಮಾಡುವವರು, ವ್ರತಗಳನ್ನು ಮತ್ತು ಪುಣ್ಯವಾದ ಭಕ್ತ್ಯಾದಿ ಉಪಾಯಗಳನ್ನು ಅನುಸರಿಸುವವರು, ತಪೋದನರಾದವರು, ವೇದಜ್ಞಾನವುಳ್ಳವರು, ಸರ್ವೋತ್ತಮವಾದ ಪ್ರಖ್ಯಾತವಾದ ಪುರಾತನವಾದ ಆ ಮೋಕ್ಷವನ್ನು ಪಡೆದು ಶೋಕರಹಿತರಾಗುತ್ತಾರೆ.
ತಸ್ಯಾಥ ಮಧ್ಯೇ ವೇತಸಃ ಪುಣ್ಯಗಂಧಃ
ಸಹಸ್ರಶಾಖೋ ವಿಪುಲೋ ವಿಭಾತಿ।
ತಸ್ಯ ಮೂಲಾತ್ಸರಿತಃ ಪ್ರಸ್ರವಂತಿ
ಮಧೂದಕಪ್ರಸ್ರವಣಾಃ ಸುಪುಣ್ಯಾಃ ॥23॥
ಆ ಮೋಕ್ಷದಲ್ಲಿ ಮಧ್ಯಭಾಗದಲ್ಲಿ ಜ್ಞಾನಾನಂದಮಯವಾದ ನದೀಕರ್ದಮ ಸಂಭೂತವಾದ ಸಹಸ್ರ ಶಾಖೆಗಳುಳ್ಳ ಮನೋಹರವಾದ

ಗಂಧವುಳ್ಳ ಒಂದು ಲತಾ ವಿಶೇಷವಿದೆ. ಅದರ ಮೂಲದಿಂದ ಪವಿತ್ರವಾದ ಜೇನುತುಪ್ಪ, ನೀರು ಮೊದಲಾದವುಗಳ ನದಿಗಳು ಹರಿಯುತ್ತವೆ.
ಶಾಖಾಂ ಶಾಖಾಂ ಮಹಾನದ್ಯಃ ಸಂಯಾಂತಿ ಪರಿತಃ ಸ್ರವಾಃ |
ಧಾನಾಪೂಪಾ ಮಾಂಸಕಾಮಾಃ ಸದಾ ಪಾಯಸಕರ್ದಮಾಃ ॥24॥
ಅದರ ಬೇರೆ ಬೇರೆ ಶಾಖೆಗಳಿಂದ ಧಾನ್ಯದ ಅಪೂಪಗಳಿರುವ, ಕಾಮ್ಯವಾದ ಮಾಂಸಗಳಿಂದ ಕೂಡಿದ, ಪಾಯಸದ ಕರ್ದಮದಿಂದ ಕೂಡಿದ ಮಹಾನದಿಗಳು ದಿಕ್ಕುದಿಕ್ಕಿಗೆ ಹರಿಯುತ್ತವೆ.
ಯಸ್ಮಿನ್ನಗ್ನಿಮುಖಾಃ ದೇವಾಃ ಸೇಂದ್ರಾಃ ಸಹಮರುದ್ಗಣಾಃ |
ಈಜಿರೇ ಕ್ರತುಭಿಃ ಶ್ರೇಷ್ಠೈಸ್ತದಕ್ಷರಮುಪಾಸತೇ ॥25॥
ಅಲ್ಲಿ ಮುಕ್ತರಾದ ಅಗ್ನಿ ಮೊದಲಾದ ದೇವತೆಗಳೂ, ಮರುದ್ಗಣಗಳಿಂದ ಸಹಿತರಾದ ಅನೇಕ ಇಂದ್ರರುಗಳಿಂದ ಕೂಡಿದ ದೇವತೆಗಳೂ ಸಹ ಶ್ರೇಷ್ಠವಾದ ಕರ್ತೃಗಳಿಂದ ಚತುರ್ವಿಧ ನಾಶರಹಿತನಾದ ಹರಿಯನ್ನು ಕುರಿತು ಯಜ್ಞವನ್ನು ಮಾಡಿ ಅವನ ಉಪಾಸನೆಯನ್ನು ಮಾಡುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತೊಂದನೆಯ
ಅಧ್ಯಾಯ ಮುಗಿಯಿತು
* * * *

## ನೂರ ಎಂಬತ್ತೆರಡನೆಯ ಅಧ್ಯಾಯ

ಮಾರ್ಕಂಡೇಯರಿಂದ ಯುಧಿಷ್ಠಿರನಿಗೆ ಮತ್ಸ್ಯಾವತಾರ ಚರಿತೆಯ ಕಥನ.
ವೈಶಂಪಾಯನಃ
ತತಃ ಸ ಪಾಂಡವೋ ವಿಪ್ರಂ ಮಾರ್ಕಂಡೇಯಮುವಾಚ ಹ |
ಕಥಯಸ್ವೇತಿ ಚರಿತಂ ಮನೋರ್ವೈವಸ್ವತಸ್ಯ ಚ ॥1॥
ವೈಶಂಪಾಯನ ಅನಂತರ ಆ ಪಾಂಡವನಾದ ಧರ್ಮರಾಜನು ಬ್ರಾಹ್ಮಣರಾದ ಮಾರ್ಕಂಡೇಯನನ್ನು ಕುರಿತು ವೈವಸ್ವತ ಮನುವಿನ ಚರಿತೆಯನ್ನು ಹೇಳಿ ಎಂದು ಕೇಳಿದನು.
ಮಾರ್ಕಂಡೇಯಃ
ವಿವಸ್ವತಃ ಸುತೋ ರಾಜನ್ ಮಹರ್ಷಿಃ ಸುಪ್ರತಾಪವಾನ್ |
ಬಭೂವ ನರಶಾರ್ದೂಲ ಪ್ರಜಾಪತಿಸಮದ್ಯುತಿಃ ॥2॥
ಮಾರ್ಕಂಡೇಯ ಎಲೈ ರಾಜನೇ, ಎಲೈ ನರಶಾರ್ದೂಲನೇ, ವಿವಸ್ವಾನ್ ನಾಮಕ ಸೂರ್ಯನಿಗೆ ಪ್ರತಾಪಶಾಲಿಯಾದ ಪ್ರಜಾಪತಿಗೆ ಸಮನಾದ ಕಾಂತಿಯುಳ್ಳ ಮಹರ್ಷಿಯಾದ ಪುತ್ರನು ಜನಿಸಿದನು.
ಓಜಸಾ ತೇಜಸಾ ಲಕ್ಷ್ಮ್ಯಾ ತಪಸಾ ಚ ವಿಶೇಷತಃ |
ಅತಿಚಕ್ರಾಮ ಪಿತರಂ ಮನುಃ ಸ್ವಂ ಚ ಪಿತಾಮಹಮ್ ॥3॥
ಆ ಮನುವು ತನ್ನ ಶಕ್ತಿಯಿಂದಲೂ, ತೇಜಸ್ಸಿನಿಂದಲೂ, ಕಾಂತಿಯಿಂದಲೂ ಮತ್ತು ವಿಶೇಷವಾದ ತಪಸ್ಸಿನಿಂದಲೂ ತನ್ನ ತಂದೆಯಾದ ವಿವಸ್ವಂತನನ್ನು, ತಾತನಾದ ಕಶ್ಯಪರನ್ನು ಮೀರಿದನು.
ಊರ್ಧ್ವಬಾಹುರ್ವಿಶಾಲಾಯಾಂ ಬದರ್ಯಾಂ ಸ ನರಾಧಿಪ |
ಏಕಪಾದಸ್ಥಿತಸ್ತೀವ್ರಂ ಚಕಾರ ಸುಮಹತ್ತಪಃ ॥4॥
ಎಲೈ ನರಾಧಿಪನೇ, ಅವನು ವಿಶಾಲಾನಾಮಕವಾದ ಬದರೀಕ್ಷೇತ್ರದಲ್ಲಿ ಒಂದು ಪಾದದ ಮೇಲೆ ನಿಂತು ಊರ್ಧ್ವಬಾಹುವಾಗಿ ತೀವ್ರವಾದ ದೊಡ್ಡ ತಪಸ್ಸನ್ನು ಆಚರಿಸಿದನು.
ಅವಾಕ್ಶಿರಾಸ್ತಥಾ ಚಾಪಿ ನೇತ್ರೈರನಿಮಿಷೈರ್ದೃಢಮ್ |
ಸೋಽತಪ್ಯತ ತಪೋ ಘೋರಂ ವರ್ಷಾಣಾಮಯುತಂ ತದಾ ॥5॥
ತಲೆಕೆಳಗಾಗಿ ನಿಂತು ಕಣ್ಣುರೆಪ್ಪೆಗಳನ್ನು ಮುಚ್ಚದೆ ಹತ್ತುಸಾವಿರ ವರ್ಷಗಳ ಕಾಲ ಸ್ಥಿರವಾಗಿ ಅವನು ಘೋರವಾದ ತಪಸ್ಸನ್ನು ಆಚರಿಸಿದನು.
ತಂ ಕದಾಚಿತ್ ತಪಸ್ಯಂತಮಾರ್ದ್ರಚೀರಜಟಾಧರಮ್ |
ಚೀರಿಣೀತೀರಮ್ ಆಗಮ್ಯ ಮತ್ಸ್ಯೋ ವಚನಮಬ್ರವೀತ್ ॥6॥
ಚೀರಿಣೀನದಿಯ ದಡದಲ್ಲಿ ಆರ್ದ್ರವಾದ ನಾರುಮಡಿಯನ್ನು ಉಟ್ಟು ಜಟೆಗಳನ್ನು ಧರಿಸಿ ತಪಸ್ಸು ಮಾಡುವ ಅವನ ಸಮೀಪಕ್ಕೆ ಒಂದು ಕಾಲದಲ್ಲಿ ಒಂದು ಮತ್ಸ್ಯವು ಬಂದು ಹೀಗೆ ಮಾತನಾಡಿತು.
ಭವಾನ್ ಕ್ಷುದ್ರಮತ್ಸ್ಯೋಽಸ್ಮಿ ಬಲವದ್ಭ್ಯೋ ಭಯಂ ಮಮ |
ಮತ್ಸ್ಯೇಭ್ಯೋ ಹಿ ತತೋ ಮಾಂ ತ್ವಂ ತ್ರಾತುಮರ್ಹಸಿ ಸುವ್ರತ ॥7॥
ಪೂಜ್ಯನೇ, ನಾನು ಸಣ್ಣ ಮೀನಾಗಿದ್ದೇನೆ. ಬಲಿಷ್ಠವಾದ ಮೀನುಗಳಿಂದ ನನಗೆ ಭಯವಿದೆ. ಎಲೈ ಸುವ್ರತನೇ, ಆದ್ದರಿಂದ ನನ್ನನ್ನು ಬಲಿಷ್ಠ ಮೀನುಗಳಿಂದ ನೀನು ರಕ್ಷಿಸಬೇಕು.

ದುರ್ಬಲಂ ಬಲವಂತೋ ಹಿ ಮತ್ಸ್ಯಾ ಮತ್ಸ್ಯಂ ವಿಶೇಷತಃ |
ಆಸ್ವದಂತಿ ಸದಾ ವೃತ್ತಿರ್ವಿಹಿತಾ ನಃ ಸನಾತನೀ ॥8॥
ದುರ್ಬಲವಾದ ಮೀನುಗಳನ್ನು ಪ್ರಬಲವಾದ ಮೀನುಗಳು ವಿಶೇಷವಾಗಿ ಯಾವಾಗಲೂ ತಿನ್ನುತ್ತವೆ. ಇದು ಹಿಂದಿನಿಂದಲೂ ನಡೆದುಬಂದ ಮೀನುಗಳ ಜೀವನ ಪ್ರಕಾರವಾಗಿದೆ.
ತಸ್ಮಾದ್ ಭಯೌಘಾನ್ಮಹತೋ ಮಜ್ಜಂತಂ ಮಾಂ ವಿಶೇಷತಃ |
ತ್ರಾತುಮರ್ಹಸಿ ಕರ್ತಾಸ್ಮಿ ಕೃತೇ ಪ್ರತಿಕೃತಂ ತವ ॥9॥
ಆದ್ದರಿಂದ ಈ ದೊಡ್ಡ ಭಯದ ಪ್ರವಾಹದಲ್ಲಿ ವಿಶೇಷವಾಗಿ ಮುಳುಗಿಹೋಗುತ್ತಿರುವ ನನ್ನನ್ನು ನೀನು ರಕ್ಷಿಸಬೇಕು. ನೀನು ಮಾಡಿದ ಉಪಕಾರಕ್ಕೆ ನಾನು ನಿನಗೆ ಪ್ರತ್ಯುಪಕಾರವನ್ನು ಮಾಡುವೆನು (ಎಂದು ಹೇಳಿತು).
ಮಾರ್ಕಂಡೇಯಃ
ಸ ಮತ್ಸ್ಯವಚನಂ ಶ್ರುತ್ವಾ ಕೃಪಯಾಽಭಿಪರಿಪ್ಲುತಃ |
ಮನುರ್ವೈವಸ್ವತೋಽಗೃಹ್ಣಾತ್ ತಂ ಮತ್ಸ್ಯಂ ಪಾಣಿನಾ ಸ್ವಯಮ್ ॥
ಮಾರ್ಕಂಡೇಯ ಮೀನಿನ ಮಾತನ್ನು ಕೇಳಿ ಕೃಪೆಯಿಂದ ಕೂಡಿದ ಮನಸ್ಸುಳ್ಳವನಾಗಿ ವೈವಸ್ವತ ಮನುವು ಆ ಮೀನನ್ನು ಕೈಯಿಂದ ಎತ್ತಿಕೊಂಡನು.
ಉದಕಾಂತಮುಪಾನೀಯ ಮತ್ಸ್ಯಂ ವೈವಸ್ವತೋ ಮನುಃ |
ಅರಂಜಲೇ ಪ್ರಾಕ್ಷಿಪತ್ ತಂ ಚಂದ್ರಾಂಶುಸದೃಶಪ್ರಭೇ(ಭಮ್) ॥11॥
ವೈವಸ್ವತ ಮನುವು ಚಂದ್ರನಂತೆ ಹೊಳೆಯುತ್ತಿದ್ದ ಆ ಮೀನನ್ನು ನೀರಿನ ಅಂಚಿನವರೆಗೆ ತೆಗೆದುಕೊಂಡು ಬಂದು ಒಂದು ಬೋಗುಣಿಯಲ್ಲಿ ಅದನ್ನು ಹಾಕಿದನು.
ಸ ತತ್ರ ವವೃಧೇ ರಾಜನ್ ಮತ್ಸ್ಯಃ ಪರಮಸತ್ಕೃತಃ |
ಪುತ್ರವತ್ ಸ್ವೀಕರೋತ್ ತಸ್ಮೈ ಮನುರ್ಭಾವಂ ವಿಶೇಷತಃ ॥12॥
ಎಲೈ ರಾಜನೇ, ಮನುವಿನಿಂದ ಚೆನ್ನಾಗಿ ನೋಡಿಕೊಳ್ಳಲ್ಪಟ್ಟ ಆ ಮೀನು ಅಲ್ಲಿ ಬೆಳೆಯಿತು. ಮನುವಾದರೂ ಆ ಮತ್ಸ್ಯವನ್ನು ತನ್ನ ಮಗನಂತೆ ಪ್ರೀತಿಸಿದನು.
ಅಥ ಕಾಲೇನ ಮಹತಾ ಸ ಮತ್ಸ್ಯಃ ಸುಮಹಾನಭೂತ್ |
ಅರಂಜಲೇ ಯಥಾ ಚೈವ ನಾಸೌ ಸಮಭವತ್ ಕಿಲ |
ಅಥ ಮತ್ಸ್ಯೋ ಮನುಂ ದೃಷ್ಟ್ವಾ ಪುನರೇವಾಭ್ಯಭಾಷತ ॥13॥
ಭಗವನ್ ಸಾಧು ಮೇಽದ್ಯಾನ್ಯತ್ ಸ್ಥಾನಂ ಸಂಪ್ರತಿಪಾದಯ ॥14॥
ಎಷ್ಟೋ ಕಾಲವು ಕಳೆಯುವ ವೇಳೆಗೆ ಆ ಮತ್ಸ್ಯವು ಬಹಳ ದೊಡ್ಡದಾಯಿತು. ಅದು ಆ ಬೋಗುಣಿಯಲ್ಲಿ ಹಿಡಿಸಲಿಲ್ಲವಷ್ಟೆ? ಆಗ ಅದು ಮನುವನ್ನು ಕುರಿತು ಪುನಃ ಪೂಜ್ಯನೇ, ನನ್ನನ್ನು ಇನ್ನೊಂದು ಸ್ಥಾನಕ್ಕೆ ಈ ದಿನ ಕರೆದುಕೊಂಡು ಹೋಗು ಎಂದು ಹೇಳಿತು.
ಉದ್ಧೃತ್ಯಾರಂಜಲಾತ್ ತಸ್ಮಾತ್ ತತಃ ಸ ಭಗವಾನ್ ಮನುಃ |
ತಂ ಮತ್ಸ್ಯಮನಯದ್ವಾಪೀಂ ಮಹತೀಂ ಸ ಮನುಸ್ತದಾ ॥15॥
ಪೂಜ್ಯನಾದ ಮನುವು ಆ ಮೀನನ್ನು ಬೋಗುಣಿಯಿಂದ ಎತ್ತಿ ಒಂದು ದೊಡ್ಡ ಬಾವಿಗೆ ತೆಗೆದುಕೊಂಡು ಹೋದನು.
ತತ್ರ ತಂ ಪ್ರಾಕ್ಷಿಪಚ್ಚಾಪಿ ಮನುಃ ಪರಪುರಂಜಯ |
ಅಥಾವರ್ಧತ ಮತ್ಸ್ಯಃ ಸ ಪುನರ್ವರ್ಷಗಣಾನ್ ಬಹೂನ್ ॥16॥
ಎಲೈ ಪರಪುಂಜಯನೇ, ಆ ಬಾವಿಯಲ್ಲಿ ಮನುವು ಆ ಮೀನನ್ನು ಇಟ್ಟನು. ಆ ಮತ್ಸ್ಯವಾದರೂ ಅಲ್ಲಿ ಪುನಃ ಅನೇಕ ವರ್ಷಗಳ ಕಾಲ ಬೆಳೆಯಿತು.
ದ್ವಿಯೋಜನಾಯತಾ ವಾಪೀ ವಿಸ್ತೃತಾ ಚಾಪಿ ಯೋಜನಮ್ |
ತಸ್ಯಾಂ ನಾಸೌ ಸಮಭವನ್ಮತ್ಸ್ಯೋ ರಾಜೀವಲೋಚನ ॥17॥
ಎಲೈ ರಾಜೀವಲೋಚನನೇ, ಎರಡು ಯೋಜನ ಉದ್ದ ಮತ್ತು ಒಂದು ಯೋಜನ ಅಗಲವಾದ ಆ ಬಾವಿಯಲ್ಲಿ ಆ ಮೀನಿಗೆ ಸ್ಥಳವು ಸಾಕಾಗಲಿಲ್ಲ.
ವಿಚೇಷ್ಟಿತುಂ ಚ ಕೌಂತೇಯ ಮತ್ಸ್ಯೋ ವಾಪ್ಯಾಂ ವಿಶಾಂಪತೇ |
ಮನುಂ ಮತ್ಸ್ಯಸ್ತತೋ ದೃಷ್ಟ್ವಾ ಪುನರೇವಾಭ್ಯಭಾಷತ ॥18॥
ನಯ ಮಾಂ ಭಗವನ್ ಸಾಧೋ ಸಮುದ್ರಮಹಿಷೀಂ ಪ್ರಿಯಾಮ್ |
ಗಂಗಾಂ ತತ್ರ ನಿವತ್ಸ್ಯಾಮಿ ಯಥಾ ವಾ ತಾತ ಮನ್ಯಸೇ ॥19॥
ಎಲೈ ರಾಜನೇ, ಕೌಂತೇಯನೇ, ಆ ಬಾವಿಯಲ್ಲಿ ಮತ್ಸ್ಯವು ಅಲುಗಾಡಲೂ ಸಾಧ್ಯವಾಗಲಿಲ್ಲ. ಆಗ ಅದು ಪುನಃ ಮನುವನ್ನು ನೋಡಿ ಪೂಜ್ಯನಾದ ಸಜ್ಜನನೇ, ನನ್ನನ್ನು ಸಮುದ್ರರಾಜನಾದ ವರುಣನ ಪ್ರಿಯಪತ್ನಿಯಾದ ಗಂಗೆಗೆ ಕರೆದುಕೊಂಡು ಹೋಗು. ಅಲ್ಲಿ ನಾನು ವಾಸವನ್ನು ಮಾಡುವೆನು. ಅಥವಾ ನಿನ್ನ ಅಭಿಪ್ರಾಯವೇನು ಎಂದು ಹೇಳಿತು.
ಏವಮುಕ್ತೋ ಮನುರ್ಮತ್ಸ್ಯಮನಯದ್ಭಗವಾನ್ ವಶೀ |
ಸಮುದ್ರಮಹಿಷೀಂ ಗಂಗಾಂ ಸ್ವಯಂ ಪ್ರಾಕ್ಷಿಪದೇವ ಚ ॥20॥
ಹೀಗೆ ಹೇಳಲ್ಪಟ್ಟ ಸಮರ್ಥನಾದ ಮನುವು ಆ ಮತ್ಸ್ಯವನ್ನು ತಾನೇ ತೆಗೆದುಕೊಂಡು ಹೋಗಿ ಸಮುದ್ರಮಹಿಷಿಯಾದ ಗಂಗೆಯಲ್ಲಿ ಬಿಟ್ಟನು.
ಸ ತತ್ರ ವವೃಧೇ ಮತ್ಸ್ಯಃ ಕಿಂಚಿತ್ಕಾಲಮರಿಂದಮ |

ತತಃ ಪುನರ್ಮನುಂ ದೃಷ್ಟ್ವಾ ಮತ್ಸ್ಯೋ ವಚನಮಬ್ರವೀತ್ ॥21॥
ಗಂಗಾಯಾಂ ಹಿ ನ ಶಕ್ನೋಮಿ ಬೃಹತಃತತ್ವಚ್ಚೇಷ್ಟಿತುಂ ಪ್ರಭೋ |
ಸಮುದ್ರಂ ನಯ ಮಾಮಾಶು ಪ್ರಸೀದ ಭಗವನ್ನಿತಿ ॥22॥
ಎಲೈ ಅರಿಂದಮನೇ, ಅಲ್ಲಿ ಅದು ಸ್ವಲ್ಪಕಾಲ ಬೆಳೆಯಿತು. ಅನಂತರ ಮನುವನ್ನು ನೋಡಿ ಪುನಃ ಆ ಮತ್ಸ್ಯವು ಪ್ರಭುವೇ, ನಾನು ದೊಡ್ಡದಾಗಿ ಬೆಳೆದಿರುವುದರಿಂದ ಗಂಗೆಯಲ್ಲಿ ಅಲುಗಾಡಲೂ ಸಾಧ್ಯವಾಗುತ್ತಿಲ್ಲ. ಪೂಜ್ಯನೇ, ನನಗೆ ಅನುಗ್ರಹವನ್ನು ಮಾಡು. ನನ್ನನ್ನು ಶೀಘ್ರವಾಗಿ ಸಮುದ್ರಕ್ಕೆ ಕರೆದುಕೊಂಡು ಹೋಗು ಎಂದು ಹೇಳಿತು.
ಉದ್ಧೃತ್ಯ ಗಂಗಾಸಲಿಲಾತ್ ತತೋ ಮತ್ಸ್ಯಂ ಮನುಃ ಸ್ವಯಮ್ |
ಸಮುದ್ರಮನಯತ್ ಪಾರ್ಥ ತತ್ರ ಚೈನಮವಾಸೃಜತ್ ॥23॥
ಎಲೈ ಪಾರ್ಥನೇ, ಮನುವು ತಾನೇ ಸ್ವತಃ ಆ ಮತ್ಸ್ಯವನ್ನು ಗಂಗೆಯಿಂದ ಎತ್ತಿಕೊಂಡು ಸಮುದ್ರಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಅದನ್ನು ಬಿಟ್ಟನು.
ಸುಮಹಾನಪಿ ಮತ್ಸ್ಯಸ್ತು ಸ ಮನೋರ್ನಯತಸ್ತದಾ |
ಆಸೀದ್ಯಥೇಷ್ಟಹಾರ್ಯಶ್ಚ ಸ್ಪರ್ಶಗಂಧಸುಖಶ್ಚ ವೈ ॥24॥
ಮತ್ತೆ ಮತ್ತೆ ದೊಡ್ಡದಾಗಿ ಬೆಳೆದಿದ್ದರೂ ಮನುವು ಅದನ್ನು ತೆಗೆದುಕೊಂಡು ಹೋಗುವಾಗ ಅದು ಅನಾಯಾಸವಾಗಿ ತೆಗೆದುಕೊಂಡು ಹೋಗುವಂತೆ ಹಗುರವೂ ಮತ್ತು ಸುಖಸ್ಪರ್ಶ ಮತ್ತು ಗಂಧವುಳ್ಳದ್ದೂ ಆಯಿತಷ್ಟೆ?
ಯದಾ ಸಮುದ್ರೇ ಪ್ರಕ್ಷಿಪ್ತಃ ಸ ಮತ್ಸ್ಯೋ ಮನುನಾ ತದಾ |
ತತ ಏನಮಿದಂ ವಾಕ್ಯಂ ಸ್ಮಯಮಾನ ಇವಾಬ್ರವೀತ್ ॥25॥
ಯಾವಾಗ ಸ್ವಾಯಂಭುವ ಮನುವು ಆ ಮತ್ಸ್ಯವನ್ನು ಸಮುದ್ರದಲ್ಲಿ ಹಾಕಿದನೋ ಆಗ ಅದು ನಗುತ್ತಾ ಅವನನ್ನು ಕುರಿತು ಮಾತನಾಡಿತು.
ಭಗವನ್ ಹಿ ಕೃತಾ ರಕ್ಷಾ ತ್ವಯಾ ಸರ್ವಾ ವಿಶೇಷತಃ |
ಪ್ರಾಪ್ತಕಾಲಂ ತು ಯತ್ಕಾರ್ಯಂ ತ್ವಯಾ ತಚ್ಛ್ರೂಯತಾಂ ಮಮ ॥26॥
ಪೂಜ್ಯನೇ, ನೀನು ಎಲ್ಲಾ ರೀತಿಯಿಂದಲೂ ವಿಶೇಷವಾಗಿ ನನ್ನ ರಕ್ಷಣೆಯನ್ನು ಮಾಡಿದ್ದೀಯೆ. ಈಗ ಸದ್ಯದಲ್ಲಿ ನೀನು ಮಾಡಬೇಕಾದ ಕಾರ್ಯವನ್ನು ಹೇಳುತ್ತೇನೆ. ಅದನ್ನು ನನ್ನಿಂದ ಕೇಳು.
ಅಚಿರಾದ್ ಭಗವನ್ ಭೌಮಮಿದಂ ಸ್ಥಾವರಜಂಗಮಮ್ |
ಸರ್ವಮೇವ ಮಹಾಭಾಗ ಪ್ರಲಯಂ ವೈ ಗಮಿಷ್ಯತಿ ॥27॥
ಎಲೈ ಪೂಜ್ಯನೇ, ಮಹಾಭಾಗನೇ, ಶೀಘ್ರದಲ್ಲಿಯೇ ಭೂಮಿಯಲ್ಲಿರುವ ಸ್ಥಾವರ ಜಂಗಮಾತ್ಮಕವಾದುದೆಲ್ಲವೂ ನಿಶ್ಚಿತವಾಗಿ ಪ್ರಳಯವನ್ನು ಹೊಂದುವುದು.
ಸಂಪ್ರಕ್ಷಾಲನಕಾಲೋಽಯಂ ಲೋಕಾನಾಂ ಸಮುಪಸ್ಥಿತಃ |
ತಸ್ಮಾತ್ ತ್ವಾಂ ಬೋಧಯಾಮ್ಯದ್ಯ ಯತ್ತೇ ಹಿತಮನುತ್ತಮಮ್ ॥28॥
ಮೂರುಲೋಕಗಳನ್ನೂ ನೀರಿನಿಂದ ತುಂಬುವ ಕಾಲವು ಈಗ ಸನ್ನಿಹಿತವಾಗಿದೆ. ಆದ್ದರಿಂದ ನಿನ್ನ ಶ್ರೇಷ್ಠವಾದ ಹಿತವನ್ನು ನಾನು ಈ ದಿನ ತಿಳಿಸುತ್ತಿದ್ದೇನೆ.
ಚರಾಣಾಂ ಸ್ಥಾವರಾಣಾಂ ಚ ಯಚ್ಚೇಂಗಂ ಯಚ್ಚ ನೇಂಗತಿ |
ತಸ್ಯ ಸರ್ವಸ್ಯ ಸಂಪ್ರಾಪ್ತಃ ಕಾಲಃ ಪರಮದಾರುಣಃ ॥29॥
ಚಲಿಸುವ ಮತ್ತು ಚಲಿಸದಿರುವ ಎಲ್ಲಾ ಚರಾಚರಗಳಿಗೆ ಪರಮದಾರುಣವಾದ ಕಾಲವು ಈಗ ಸಂಪ್ರಾಪ್ತವಾಗಿದೆ.
ನೌಶ್ಚ ಕಾರಯಿತವ್ಯಾ ತೇ ದೃಢಾ ಯುಕ್ತವಟಾಂಕುರಾ |
ತತ್ರ ಸಪ್ತರ್ಷಿಭಿಃ ಸಾರ್ಧಮಾರುಹೇಥಾ ಮಹಾಮುನೇ ॥30॥
ನೀನು ಆಲದ ಬಿಳಿಲಿನಿಂದ ಕೂಡಿದ ಒಂದು ದೃಢವಾದ ದೋಣಿಯನ್ನು ಮಾಡಿಸಬೇಕು. ಎಲೈ ಮಹರ್ಷಿಯೇ, ನೀನು ಸಪ್ತರ್ಷಿಗಳ ಜೊತೆಯಲ್ಲಿ ಆ ದೋಣಿಯನ್ನು ಹತ್ತಿಕುಳಿತುಕೊಳ್ಳಬೇಕು.
ಬೀಜಾನಿ ಚೈವ ಸರ್ವಾಣಿ ಯಥೋಕ್ತಾನಿ ದ್ವಿಜೈಃ ಪುರಾ |
ತಸ್ಯಾಮಾರೋಹಯೇರ್ನಾವಿ ಸುಸಂಗುಪ್ತಾನಿ ಭಾಗಶಃ ॥31॥
ಹಿಂದೆ ಬ್ರಾಹ್ಮಣರು ಹೇಳಿದಂತೆ ಎಲ್ಲಾ ಬೀಜಗಳನ್ನೂ ಆ ದೋಣಿಯಲ್ಲಿ (ಹಡಗಿನಲ್ಲಿ) ಒಂದು ಭಾಗದಲ್ಲಿ ಚೆನ್ನಾಗಿ ರಕ್ಷಣೆ ಮಾಡಿ ತುಂಬಿಸಬೇಕು.
ನೌಸ್ಥಶ್ಚ ಮಾಂ ಪ್ರತೀಕ್ಷೇಥಾಸ್ತತೋ ಮುನಿಜನಪ್ರಿಯ |
ಆಗಮಿಷ್ಯಾಮ್ಯಹಂ ಶೃಂಗೀ ವಿಜ್ಞೇಯಸ್ತೇನ ತಾಪಸ ॥32॥
ಎಲೈ ಮುನಿಜನಪ್ರಿಯನೇ, ನೌಕೆಯಲ್ಲಿ ಕುಳಿತು ನೀನು ನನ್ನನ್ನು ನಿರೀಕ್ಷಿಸಬೇಕು. ಎಲೈ ತಾಪಸನೇ, ನಾನು ಒಂದು ಶೃಂಗವುಳ್ಳ ಮತ್ಸ್ಯನಾಗಿ ಬರುವೆನು. ಅದರಿಂದ ನೀನು ನನ್ನನ್ನು ತಿಳಿಯಬೇಕು.
ಏವಮೇತತ್ ತ್ವಯಾ ಕಾರ್ಯಂ ಆಪೃಚ್ಛ್ಯಾಸ್ಮಿನ್ ವ್ರಜಾಮ್ಯಹಮ್ |
ತಾ ನ ಶಕ್ಯಾ ಮಹತ್ಯೋ ವೈ ಆಪಸ್ತರ್ತುಂ ಮಯಾ ವಿನಾ |
ನಾತಿಶಂಕ್ಯಮಿದಂ ಚಾಪಿ ವಚನಂ ಮೇ ತ್ವಯಾ ವಿಭೋ ॥33॥
ನೀನು ಹೀಗೆ ಮಾಡಬೇಕು. ನೀನು ಆ ದೋಣಿಯಲ್ಲಿ ಕುಳಿತು ನನ್ನನ್ನು ಪ್ರಶ್ನೆ ಮಾಡಬೇಕು. ಈಗ ನಾನು ಹೋಗುತ್ತೇನೆ. ನೀನು ನನ್ನ ಸಹಾಯವಿಲ್ಲದೆ ಆ ದೊಡ್ಡ ಜಲರಾಶಿಯಿಂದ ಪಾರಾಗಲು ಸಾಧ್ಯವಿಲ್ಲ. ಎಲೈ ವಿಭುವೇ, ಈ ನನ್ನ ವಚನಗಳಲ್ಲಿ ನೀನು ಯಾವ

ಶಂಕೆಯನ್ನೂ ಮಾಡಬಾರದು.
ಏವಂ ಕರಿಷ್ಯ ಇತಿ ತಂ ಸ ಮತ್ಸ್ಯಂ ಪ್ರತ್ಯಭಾಷತ |
ಜಗ್ಮತುಶ್ಚ ಯಥಾಕಾಮಮನುಜ್ಞಾಪ್ಯ ಪರಸ್ಪರಮ್ ॥34॥
ಹಾಗೆಯೇ ಮಾಡುವೆನು ಎಂದು ಮನುವು ಆ ಮತ್ಸ್ಯವನ್ನು ಕುರಿತು ಹೇಳಿದನು. ಅನಂತರ ಪರಸ್ಪರ ಅನುಮತಿಯನ್ನು ಪಡೆದು ಇಬ್ಬರೂ ತಮ್ಮ ತಮ್ಮ ದಾರಿಯಲ್ಲಿ ಹೊರಟರು.
ತತೋ ಮನುರ್ಮಹಾರಾಜ ಯಥೋಕ್ತಂ ಮತ್ಸ್ಯಕೇನ ಹ |
ಬೀಜಾನ್ಯಾದಾಯ ಸರ್ವಾಣಿ ಸಾಗರಂ ಪುಪ್ಲುವೇ ತದಾ |
ನೌಕಯಾ ಶುಭಯಾ ವೀರ ಮಹೋರ್ಮಿಣಮರಿಂದಮ ॥35॥
ಚಿಂತಯಾಮಾಸ ಚ ಮನುಸ್ತಂ ಮತ್ಸ್ಯಂ ಪೃಥಿವೀಪತೇ ॥36॥
ಎಲೈ ಮಹಾರಾಜನೇ, ಅನಂತರ ಮನುವು ಆ ಮತ್ಸ್ಯವು ಹೇಳಿದಂತೆ ಎಲ್ಲಾ ಬೀಜಗಳನ್ನೂ ತೆಗೆದುಕೊಂಡು ಒಂದು ನೌಕೆಯನ್ನು ಸಿದ್ಧಪಡಿಸಿ ಅದರಲ್ಲಿ ಇಟ್ಟು ದೊಡ್ಡ ಅಲೆಗಳಿರುವ ಸಾಗರದಲ್ಲಿ ಸಂಚರಿಸಿದನು. ಎಲೈ ಅರಿಂದಮನೇ, ಎಲೈ ಪೃಥಿವೀ ಪತಿಯೇ, ಮನುವು ಆಗ ಆ ಮತ್ಸ್ಯವನ್ನು ಕುರಿತು ಚಿಂತಿಸಿದನು.
ಸ ಚ ತಚ್ಚಿಂತಿತಂ ಜ್ಞಾತ್ವಾ ಮತ್ಸ್ಯಃ ಪರಪುರಂಜಯ |
ಶೃಂಗೀ ತತ್ರಾಜಗಾಮಾಶು ತದಾ ಭರತಸತ್ತಮ ॥37॥
ಎಲೈ ಪರಪುರಂಜಯನೇ, ಭರತಸತ್ತಮನೇ, ಆ ಮತ್ಸ್ಯವಾದರೂ ಮನುವು ತನ್ನನ್ನು ಚಿಂತಿಸುತಿತರುವುದನ್ನು ತಿಳಿದು ಒಂದು ಶೃಂಗವನ್ನು ಧರಿಸಿ ಶೀಘ್ರವಾಗಿ ಅಲ್ಲಿಗೆ ಬಂದಿತು.
ತಂ ದೃಷ್ಟ್ವಾ ಮನುಜವ್ಯಾಘ್ರ ಮನುರ್ಮತ್ಸ್ಯಂ ಜಲಾರ್ಣವೇ |
ಶೃಂಗಿಣಂ ತಂ ಯಥೋಕ್ತೇನ ರೂಪೇಣಾದ್ರಿಮಿವೋಚ್ಛ್ರಿತಮ್ ॥38॥
ವಟಾರಕಮಯಂ ಪಾಶಮಥ ಮತ್ಸ್ಯಸ್ಯ ಮೂರ್ಧನಿ |
ಮನುರ್ಮನುಜಶಾರ್ದೂಲ ತಸ್ಮಿನ್ ಶೃಂಗೇ ನ್ಯವೇಶಯತ್ ॥39॥
ಎಲೈ ಮನುಜ ಶಾರ್ದೂಲನೇ, ಮನುವು ಆ ಜಲಸಾಗರದಲ್ಲಿ ಹಾಗೆ ಮೊದಲು ಹೇಳಿದಂತೆ ಶೃಂಗವನ್ನು ಧರಿಸಿ ಬಂದ ಪರ್ವತದಂತೆ ಉನ್ನತವಾಗಿದ್ದ ಆ ಮತ್ಸ್ಯವನ್ನು ನೋಡಿ ಆಲದ ಮರದ ಬಿಳಿಲುಗಳಿಂದ ಮಾಡಿದ ಪಾಶವನ್ನು ಅದರ ತಲೆಯ ಮೇಲಿದ್ದ ಶೃಂಗದಲ್ಲಿ ಕಟ್ಟಿದನು.
ಸಂಯತಸ್ತೇನ ಪಾಶೇನ ಮತ್ಸ್ಯಃ ಪರಪುರಂಜಯ |
ವೇಗೇನ ಮಹತಾ ನಾವಂ ಪ್ರಾಕರ್ಷಲ್ಲವಣಾಂಭಸಿ ॥40॥
ಎಲೈ ಪರಪುರಂಜಯನೇ, ಆ ಪಾಶದಿಂದ ನಿಯಂತ್ರಿಸಲ್ಪಟ್ಟ ಆ ಮತ್ಸ್ಯವು ಲವಣೋದಕದ ಆ ಸಮುದ್ರದಲ್ಲಿ ಬಹಳ ವೇಗದಿಂದ ಆ ನೌಕೆಯನ್ನು ಎಳೆದಿತು.
ಸ ಚ ತಾಂಸ್ತಾರಯನ್ ನಾವಾ ಸಮುದ್ರಂ ಮನುಜೇಶ್ವರ |
ನೃತ್ಯಮಾನಮಿವೋರ್ಮೀಭಿರ್ಗರ್ಜಮಾನಮಿವಾಂಭಸಾ ॥41॥
ಕ್ಷೋಭ್ಯಮಾಣಾ ಮಹಾವಾತೈಃ ಸಾ ನೌಸ್ತಸ್ಮಿನ್ ಮಹೋದಧೌ |
ಘೂರ್ಣತೇ ಚಪಲೇವ ಸ್ತ್ರೀ ಮತ್ತಾ ಪರಪುರಂಜಯ ॥42॥
ಎಲೈ ಮನುಜೇಶ್ವರನೇ, ಪರಪುರಂಜಯನೇ, ಅದು ಅವರನ್ನು ಅಲೆಗಳಿಂದ ನೃತ್ಯಮಾಡುತ್ತಿದ್ದ ನೀರಿನ ಗರ್ಜನೆಯಿಂದ ಕೂಡಿದ್ದ ಆ ಸಮುದ್ರವನ್ನು ದಾಟಿಸುವಾಗ ಆ ನೌಕೆಯು ಚಂಡಮಾರುತಗಳಿಂದ ಕ್ಷೋಭೆಗೆ ಒಳಗಾಗಿ ಆ ಸಮುದ್ರದಲ್ಲಿ ಚಂಚಲವಾದ ಮತ್ತಳಾದ ವನಿತೆಯಂತೆ ಓಲಾಡಿತು.
ನೈವ ಭೂಮಿರ್ನ ಚ ದಿಶಃ ಪ್ರದಿಶೋ ವಾ ಚಕಾಶಿರೇ |
ಸರ್ವಮಾಂಭಸಮೇವಾಸೀತ್ ಖಂ ದ್ಯೌಶ್ಚ ನರಪುಂಗವ ॥43॥
ಎಲೈ ನರಪುಂಗವನೇ, ಆಗ ಭೂಮಿಯಾಗಲೀ ದಿಕ್ಕುಗಳಾಗಲೀ ಅಥವಾ ವಿದಿಕ್ಕುಗಳಾಗಲೀ ಕಾಣುತಿತರಲಿಲ್ಲ. ಅಂತರಿಕ್ಷ, ಆಕಾಶ ಎಲ್ಲವೂ ಜಲಮಯವಾಗಿದ್ದಿತು.
ಏವಂಭೂತೇ ತದಾ ಲೋಕೇ ಸಂಕುಲೇ ಭರತರ್ಷಭ |
ಅದೃಶ್ಯಂತರ್ಷಯಃ ಸಪ್ತ ಮನುರ್ಮತ್ಸ್ಯಸ್ತಥೈವ ಚ ॥44॥
ಎಲೈ ಭರತರ್ಷಭನೇ, ಆಗ ಹೀಗೆ ಲೋಕವು ಕ್ಷೋಭೆಗೊಂಡಿರಲು ಸಪ್ತರ್ಷಿಗಳು, ಮನು ಮತ್ತು ಆ ಮತ್ಸ್ಯವು ಮಾತ್ರ ಕಾಣುತ್ತಿದ್ದರು.
ಏವಂ ಬಹೂನ್ ವರ್ಷಗಣಾಂಸ್ತಾಂ ನಾವಂ ಸೋಽಥ ಮತ್ಸ್ಯಕಃ |
ಚಕರ್ಷ ತಂತ್ರಿತೋ ರಾಜಂಸ್ತಸ್ಮಿನ್ ಸಲಿಲಸಂಚಯೇ ॥45॥
ಎಲೈ ರಾಜನೇ, ಹೀಗೆ ಆ ಮತ್ಸ್ಯವು ಅನೇಕ ವರ್ಷಗಳ ಕಾಲ ಆ ನೌಕೆಯಿಂದ ನಿಯಂತ್ರಿತವಾಗಿ ಆ ಜಲರಾಶಿಯಲ್ಲಿ ಆ ನೌಕೆಯನ್ನು ಎಳೆದಾಡಿತು.
ತತೋ ಹಿಮವತಃ ಶೃಂಗಂ ಯತ್ಪರಂ ಭರತರ್ಷಭ |
ತತ್ರಾಕರ್ಷತ್ ತತೋ ನಾವಂ ಸ ಮತ್ಸ್ಯಃ ಕುರುನಂದನ |
ಅಥಾಬ್ರುವೀತ್ ತದಾ ಮತ್ಸ್ಯಸ್ತಾನೃಷೀನ್ ಪ್ರಹಸನ್ ಶನೈಃ ॥46॥
ಅಸ್ಮಿನ್ ಹಿಮವತಃ ಶೃಂಗೇ ನಾವಂ ಬಧ್ನೀತ ಮಾಚಿರಮ್ ॥47॥
ಎಲೈ ಭರತರ್ಷಭನೇ, ಕುರುನಂದನನೇ, ಅನಂತರ ಆ ಮತ್ಸ್ಯವು ಆ ನೌಕೆಯನ್ನು ಹಿಮಾಲಯದ ಎತ್ತರವಾದ ಶೃಂಗದ ಬಳಿಗೆ

ಎಳೆದುಕೊಂಡು ಹೋಯಿತು. ಮತ್ತು ನಿಧಾನವಾಗಿ ನಗುತ್ತಾ ಆ ಋಷಿಗಳನ್ನು ಕುರಿತು ಈ ಹಿಮಾಲಯದ ಶಿಖರದಲ್ಲಿ ಈ ನೌಕೆಯನ್ನು ಶೀಘ್ರವಾಗಿ ಬಂಧಿಸಿ ಎಂದು ಹೇಳಿತು.
ಸಾ ಬದ್ಧಾ ತತ್ರ ತೈಸ್ತೂರ್ಣಮೃಷಿಭಿರ್ಭರತರ್ಷಭ |
ನೌರ್ಮತ್ಸ್ಯಸ್ಯ ವಚಃ ಶ್ರುತ್ವಾ ಶೃಂಗೇ ಹಿಮವತಸ್ತದಾ ॥48॥
ಎಲೈ ಭರತರ್ಷಭನೇ, ಮತ್ಸ್ಯದ ಮಾತನ್ನು ಕೇಳಿ ಆ ಋಷಿಗಳು ಆ ನೌಕೆಯನ್ನು ಹಿಮಾಲಯದ ಶೃಂಗದಲ್ಲಿ ಕಟ್ಟಿದರು.
ತಚ್ಚ ನೌಬಂಧನಂ ನಾಮ ಶೃಂಗಂ ಹಿಮವತಃ ಪರಮ್ |
ಖ್ಯಾತಮದ್ಯಾಪಿ ಕೌಂತೇಯ ತದ್ ವಿದ್ಧಿ ಭರತರ್ಷಭ |
ಅಥಾಬ್ರುವೀದನಿಮಿಷಸ್ತಾನೃಷೀನ್ ಸಹಿತಸ್ತದಾ ॥49॥
ಎಲೈ ಕೌಂತೇಯನಾದ ಭರತರ್ಷಭನೇ, ಆ ಹಿಮಾಲಯದ ಶಿಖರವು ನೌಕಾ ಬಂಧನ ಎಂಬ ಹೆಸರಿನಿಂದ ಇಂದಿಗೂ ಪ್ರಖ್ಯಾತವಾಗಿದೆ. ಅನಂತರ ಆ ಮತ್ಸ್ಯವು ಆ ಋಷಿಗಳನ್ನು ಕುರಿತು ಹೀಗೆ ಮಾತನಾಡಿತು.
ಅಹಂ ಪ್ರಜಾಪತಿರ್ಬ್ರಹ್ಮಾ ಮತ್ಪರಂ ನಾಧಿಗಮ್ಯತೇ |
ಮತ್ಸ್ಯರೂಪೇಣ ಯೂಯಂ ಚ ಮಯಾಽಸ್ಮಾನ್ಮೋಕ್ಷಿತಾ ಭಯಾತ್ ॥
ನಾನು ಪ್ರಜಾಪತಿ. ನಾನೇ ಬ್ರಹ್ಮ. ನನಗಿಂತ ಉತ್ತಮವಾದುದು ಎಲ್ಲಿಯೂ ದೊರೆಯುವುದಿಲ್ಲ. ನಾನು ಮತ್ಸ್ಯರೂಪವನ್ನು ಧರಿಸಿ ನಿಮ್ಮನ್ನು ಭಯದಿಂದ ಪಾರುಮಾಡಿದೆ.
ಮನುನಾ ಚ ಪ್ರಜಾಃ ಸರ್ವಾಃ ಸದೇವಾಸುರಮಾನುಷಾಃ |
ಸ್ರಷ್ಟವ್ಯಾಃ ಸರ್ವಲೋಕಾಶ್ಚ ಯಚ್ಚೇಂಗಂ ಯಚ್ಚ ನೇಂಗತಿ ॥51॥
ಮನುವಿನಿಂದ ದೇವಾಸುರ ಮನುಷ್ಯರೂ, ಎಲ್ಲಾ ಪ್ರಜೆಗಳೂ ಚಲಿಸುವ ಮತ್ತು ಚಲಿಸದಿರುವ ಎಲ್ಲಾ ವಸ್ತುಗಳೂ ಮತ್ತು ಸರ್ವಲೋಕಗಳೂ ಸೃಷ್ಟಿಸಲ್ಪಡಬೇಕಾಗಿವೆ.
ತಪಸಾ ಚಾಪಿ ತೀವ್ರೇಣ ಪ್ರತಿಭಾಽಸ್ಯ ಭವಿಷ್ಯತಿ |
ಮತ್ಪ್ರಸಾದಾತ್ ಪ್ರಜಾಸರ್ಗೇ ನ ಚ ಮೋಹಂ ಗಮಿಷ್ಯತಿ ॥52॥
ತೀವ್ರವಾದ ತಪಸ್ಸಿನಿಂದ ಅವನಿಗೆ ಅದಕ್ಕೆ ಬೇಕಾದ ಪ್ರತಿಭೆಯು ಉಂಟಾಗುವುದು. ನನ್ನ ಅನುಗ್ರಹದಿಂದ ಅವನಿಗೆ ಪ್ರಜೆಗಳನ್ನು ಸೃಷ್ಟಿಸುವ ವಿಷಯದಲ್ಲಿ ಮೋಹ ಉಂಟಾಗುವುದಿಲ್ಲ (ಎಂದು ಹೇಳಿತು).
ಮಾರ್ಕಂಡೇಯಃ
ಇತ್ಯುಕತ್ವ ವಚನಂ ಮತ್ಸ್ಯಃ ಕ್ಷಣೇನಾದರ್ಶನಂ ಗತಃ ॥53॥
ಸ್ರಷ್ಟುಕಾಮಃ ಪ್ರಜಾಶ್ಚಾಪಿ ಮನುರ್ವೈವಸ್ವತಃ ಸ್ವಯಮ್ |
ಪ್ರಮೂಢೋಽಭೂತ್ ಪ್ರಜಾಸರ್ಗೇ ತಪಸ್ತೇಪೇ ಮಹತ್ತತಃ ॥54॥
ಮಾರ್ಕಂಡೇಯ ಹೀಗೆ ಹೇಳಿ ಆ ಮತ್ಸ್ಯವು ಒಂದು ಕ್ಷಣದಲ್ಲಿ ಅದೃಶ್ಯವಾಯಿತು. ಪ್ರಜೆಗಳನ್ನು ಸೃಷ್ಟಿಸಲು ಬಯಸಿದ ವೈವಸ್ವತ ಮನುವೂ ಸಹ ಪ್ರಜಾ ಸೃಷ್ಟಿಯ ವಿಷಯದಲ್ಲಿ ತೀವ್ರವಾದ ಮೋಹಕ್ಕೆ ಒಳಗಾಗಿ ದೊಡ್ಡ ತಪಸ್ಸನ್ನು ಆಚರಿಸಿದನು.
ತಪಸಾ ಮಹತಾ ಯುಕ್ತಃ ಸೋಽಥ ಸ್ರಷ್ಟುಂ ಪ್ರಚಕ್ರಮೇ |
ಸರ್ವಾಃ ಪ್ರಜಾ ಮನುಃ ಸಾಕ್ಷಾದ್ಯಥಾವದ್ಭರತರ್ಷಭ ॥55॥
ಎಲೈ ಭರತರ್ಷಭನೇ, ದೊಡ್ಡ ತಪಸ್ಸಿನಿಂದ ಕೂಡಿದ (ಪ್ರತಿಭೆಯನ್ನು ಸಂಪಾದಿಸಿದ) ಮನುವು ಅನಂತರ ಎಲ್ಲಾ ಪ್ರಜೆಗಳನ್ನೂ ಯಥಾವತ್ತಾಗಿ ತಾನೇ ಸೃಷ್ಟಿ ಮಾಡಲು ಉಪಕ್ರಮಿಸಿದನು.
ವೈಶಂಪಾಯನಃ
ಇತ್ಯೇತನ್ಮಾತ್ಸ್ಯಕಂ ನಾಮ ಪುರಾಣಂ ಪರಿಕೀರ್ತಿತಮ್ |
ಆಖ್ಯಾನಮಿದಮಾಖ್ಯಾತಂ ಸರ್ವಪಾಪಹರಂ ಮಯಾ ॥56॥
ವೈಶಂಪಾಯನ ಇದಕ್ಕೆ ಮತ್ಸ್ಯಪುರಾಣವೆಂದು ಹೆಸರು. ಸರ್ವಪಾಪಹರವಾದ ಈ ಕಥೆಯನ್ನು ನಾನು ನಿಮಗೆ ಹೇಳಿದ್ದೇನೆ.
ಯ ಇದಂ ಶೃಣುಯಾನ್ನಿತ್ಯಂ ಮನೋಶ್ಚರಿತಮಾದಿತಃ |
ಸ ಸುಖೀ ಸರ್ವಪೂರ್ಣಾರ್ಥಃ ಸರ್ವಲೋಕಮಿಯಾನ್ನರಃ ॥57॥
ಯಾವ ಅಧಿಕಾರಿಯು ಆದರದಿಂದ ನಿತ್ಯವೂ ಈ ಮನುವಿನ ಚರಿತೆಯನ್ನು ಶ್ರದ್ಧೆಯಿಂದ ಕೇಳುತ್ತಾನೆಯೋ ಅವನು ಸರ್ವಾರ್ಥಗಳಿಂದ ಪೂರ್ಣನಾಗಿ ಸುಖವನ್ನು ಹೊಂದಿ ಸ್ವರ್ಗಾದಿ ಸರ್ವಲೋಕಗಳನ್ನು ಪಡೆಯುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವ್ಯಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಮಾರ್ಕಂಡೇಯಸಮಾಖ್ಯಾಪರ್ವಣಿ ಮತ್ಸ್ಯೋಪಾಖ್ಯಾನೇ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತೂರನೆಯ ಅಧ್ಯಾಯ
ಮಾರ್ಕಂಡೇಯರಿಂದ ಯುಗಪರಿಮಾಣ ಮತ್ತು ಯುಗಧರ್ಮಗಳ
ವರ್ಣನೆ. ಅವರಿಂದ ಪ್ರಳಯ ದರ್ಶನ ಮತ್ತು ಶಿಶುರೂಪಿಯಾದ
ಹರಿಯ ದರ್ಶನಾದಿಗಳ ಕಥನ.
ವೈಶಂಪಾಯನಃ
ತತಃ ಸ ಪುನರೇವಾಥ ಮಾರ್ಕಂಡೇಯಂ ಯಶಸ್ವಿನಮ್ |

ಪಪ್ರಚ್ಛ ವಿನಯೋಪೇತೋ ಧರ್ಮರಾಜೋ ಯಧಿಷ್ಠಿರಃ ॥1॥
ವೈಶಂಪಾಯನ ಅನಂತರ ವಿನಯದಿಂದ ಕೂಡಿದ ಧರ್ಮರಾಜನಾದ ಯುಧಿಷ್ಠಿರನು ಕೀರ್ತಿವಂತರಾದ ಮಾರ್ಕಂಡೇಯರನ್ನು ಕುರಿತು ಪುನಃ ಪ್ರಶ್ನೆ ಮಾಡಿದನು.
ನೈಕಂ ಯುಗಸಹಸ್ರಾಂತಾಸ್ತ್ವಯಾ ದೃಷ್ಟಾ ಮಹಾಮುನೇ |
ನ ಚಾಪೀಹ ಸಮಃ ಕಶ್ಚಿದಾಯುಷ್ಮಾನ್ ದೃಶ್ಯತೇ ತವ ॥2॥
ಮಹಾಮುನಿಗಳೇ, ನೀವು ಅನೇಕ ಯುಗಸಹಸ್ರಾಂತದಲ್ಲಿ ಬರುವ ಪ್ರಳಯವನ್ನು ನೋಡಿದ್ದೀರಿ. ನಿಮಗೆ ಸಮನಾದ ಆಯುಸ್ಸುಳ್ಳವರು ಭೂಮಿಯಲ್ಲಿ ಯಾರೂ ಕಾಣುವುದಿಲ್ಲ.
ವರ್ಜಯಿತ್ವಾ ಮಹಾತ್ಮಾನಂ ಬ್ರಹ್ಮಾಣಂ ಪರಮೇಷ್ಠಿನಮ್ |
ನ ತೇಽಸ್ತಿ ಸದೃಶಃ ಕಶ್ಚಿದಾಯುಷಾ ಬ್ರಹ್ಮವಿತ್ತಮ ॥3॥
ಎಲೈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೇ, ಪರಮೇಷ್ಠಿ ಎಂದು ಕರೆಯಲ್ಪಡುವ ಮಹಾತ್ಮರಾದ ಬ್ರಹ್ಮದೇವರನ್ನು ಬಿಟ್ಟು ಆಯುಸ್ಸಿನಲ್ಲಿ ನಿಮಗೆ ಸಮಾನರಾದವರು ಯಾರೂ ಇಲ್ಲ.
ಅನಂತರಿಕ್ಷೇ ಲೋಕೇಽಸ್ಮಿನ್ ದೇವದಾನವವರ್ಜಿತೇ |
ತ್ವಮೇವ ಪ್ರಲಯೇ ವಿಪ್ರ ಬ್ರಹ್ಮಾಣಮುಪತಿಷ್ಠಸೇ ॥4॥
ಎಲೈ ಬ್ರಾಹ್ಮಣರೇ, ಅಂತರಿಕ್ಷವಾಗಲೀ ಅಥವಾ ದೇವದಾನವರಾಗಲೀ ಇಲ್ಲದಿರುವ ಪ್ರಪಂಚದಲ್ಲಿ ಪ್ರಳಯಕಾಲದಲ್ಲಿ ನೀವೊಬ್ಬರೇ ಬ್ರಹ್ಮದೇವರನ್ನು ಸ್ತೋತ್ರಮಾಡುತ್ತೀರಿ.
ಪ್ರಲಯೇ ಚಾಪಿ ನಿರ್ವೃತ್ತೇ ಪ್ರಬುದ್ಧೇ ಚ ಪಿತಾಮಹೇ |
ತ್ವಮೇಕಃ ಸೃಜ್ಯಮಾನಾನಿ ಭೂತಾನೀಹ ಪ್ರಪಶ್ಯಸಿ ॥5॥
ಚತುರ್ವಿಧಾನಿ ವಿಪ್ರರ್ಷೇ ಯಥಾವತ್ ಪರಮೇಷ್ಠಿನಾ |
ವಾಯುಭೂತಾ ದಿಶಃ ಕೃತ್ವಾ ವಿಕ್ಷಿಪ್ಯಾಪಸ್ತತಸ್ತತಃ ॥6॥
ಪ್ರಳಯಕಾಲವು ಮುಗಿದು ಬ್ರಹ್ಮದೇವರು ಎದ್ದು ದಿಕ್ಕುಗಳನ್ನೆಲ್ಲಾ ವಾಯುಗಳಿಂದ ತುಂಬಿ, ಜಲವನ್ನೆಲ್ಲಾ ದೂರಸರಿಸಿ ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ ರೂಪವಾದ ನಾಲ್ಕು ಪ್ರಾಣಿಗಳನ್ನು ಬ್ರಹ್ಮದೇವರು ಸೃಷ್ಟಿಸುವುದನ್ನು ನೀವೊಬ್ಬರೇ ನೋಡುತ್ತೀರಿ.
ತ್ವಯಾ ಲೋಕಗುರುಃ ಸಾಕ್ಷಾತ್ಸರ್ವಲೋಕಪಿತಾಮಹಃ |
ಆರಾಧಿತೋ ದ್ವಿಜಶ್ರೇಷ್ಠ ತತ್ಪರೇಣ ಸಮಾಧಿನಾ ॥7॥
ಎಲೈ ದ್ವಿಜಶ್ರೇಷ್ಠರೇ, ನೀವು ಪರಮಸಮಾಧಿಯಿಂದ ಸರ್ವಲೋಕ ಪಿತಾಮಹರೂ, ಲೋಕಗುರುಗಳೂ ಆದ ಬ್ರಹ್ಮದೇವರನ್ನು ಸಾಕ್ಷಾತ್ತಾಗಿ ಆರಾಧಿಸಿದ್ದೀರಿ.
ತಸ್ಮಾತ್ ತವಾಂತಕೋ ಮೃತ್ಯುರ್ಜರಾ ವಾ ದೇಹನಾಶಿನೀ |
ನ ತ್ವಾಂ ವಿಶತಿ ವಿಪ್ರರ್ಷೇ ಪ್ರಸಾದಾತ್ಪರಮೇಷ್ಠಿನಃ ॥8॥
ಎಲೈ ವಿಪ್ರರ್ಷಿಗಳೇ, ಆದ್ದರಿಂದ ನಿಮ್ಮನ್ನು ಅಂತ್ಯಗೊಳಿಸುವ ಮೃತ್ಯುವಾಗಲೀ ಅಥವಾ ದೇಹದಲ್ಲಿ ವಿರೂಪವನ್ನುಂಟು ಮಾಡುವ ಮುಪ್ಪಾಗಲೀ ಬ್ರಹ್ಮದೇವರ ಅನುಗ್ರಹದಿಂದ ನಿಮಗೆ ಎಂದೂ ಉಂಟಾಗುವುದಿಲ್ಲ.
ಯದಾ ನೈವ ರವಿರ್ನಾಗ್ನಿರ್ನ ವಾಯುರ್ನ ಚ ಚಂದ್ರಮಾಃ |
ನೈವಾಂತರಿಕ್ಷಂ ನೈವೋರ್ವೀ ಶೇಷಂ ಭವತಿ ಕಿಂಚನ ॥9॥
ತಸ್ಮಿನ್ನೇಕಾರ್ಣವೇ ಲೋಕೇ ನಷ್ಟೇ ಸ್ಥಾವರಜಂಗಮೇ |
ನಷ್ಟೇ ದೇವಾಸುರಗಣೇ ಸಮುತ್ಸನ್ನಮಹೋರಗೇ ॥10॥
ಶಯಾನಮಮಿತಾತ್ಮಾನಂ ಪದ್ಮೋತ್ಪಲನಿಕೇತನಮ್ |
ತ್ವಮೇಕಃ ಸರ್ವಭೂತೇಶಂ ಬ್ರಹ್ಮಾಣಮುಪತಿಷ್ಠಸಿ ॥11॥
ಸೂರ್ಯನಾಗಲೀ, ಅಗ್ನಿಯಾಗಲೀ, ವಾಯುವಾಗಲೀ, ಚಂದ್ರನಾಗಲೀ, ಅಂತರಿಕ್ಷವಾಗಲೀ, ಭೂಮಿಯಾಗಲೀ ಅಥವಾ ಉಳಿದ ಯಾವ ವಸ್ತುವಾಗಲೀ ಇಲ್ಲದಿರುವಾಗ ಪ್ರಪಂಚವೆಲ್ಲವೂ ಜಲಮಯವಾಗಿ ಸ್ಥಾವರಜಂಗಮವೆಲ್ಲವೂ ದೇವಾಸುರ ಸಮೂಹವೆಲ್ಲವೂ ಮಹಾಸರ್ಪಗಳು ಮೊದಲಾದವೂ ನಷ್ಟವಾಗಿರುವಾಗ ನೀವೊಬ್ಬರೇ ಅಮಿತಗುಣವಂತನಾದ ಪದ್ಮಪುಷ್ಪ ನಿವಾಸಿಯಾದ ಎಲ್ಲ ಪ್ರಾಣಿಗಳಿಗೂ ಒಡೆಯರಾದ ಬ್ರಹ್ಮದೇವರನ್ನು ಸ್ತೋತ್ರಮಾಡುತ್ತೀರಿ.
ಏತತ್ಪ್ರತ್ಯಕ್ಷತಃ ಸರ್ವಂ ಪೂರ್ವಂ ವೃತ್ತಂ ದ್ವಿಜೋತ್ತಮ |
ತಸ್ಮಾದಿಚ್ಛಾಮ್ಯಹಂ ಶ್ರೋತುಂ ಸರ್ವಹೇತ್ವಾತ್ಮಿಕಾಂ ಕಥಾಮ್ ॥12॥
ಎಲೈ ದ್ವಿಜೋತ್ತಮರೇ, ಈ ಎಲ್ಲವನ್ನೂ ನೀವು ಹಿಂದೆ ಪ್ರತ್ಯಕ್ಷವಾಗಿ ನೋಡಿದ್ದೀರಿ. ಆದ್ದರಿಂದ ನಾನು ನಿಮ್ಮಿಂದ ಎಲ್ಲದಕ್ಕೂ ಕಾರಣವಾದ ಈ ಕಥೆಯನ್ನು ಕೇಳಲು ಬಯಸುತ್ತೇನೆ.
ಅನುಭೂತಂ ಹಿ ಬಹುಶಸ್ತ್ವಯೈಕೇನ ದ್ವಿಜೋತ್ತಮ |
ನ ತೇಽಸ್ತ್ಯವಿದಿತಂ ಕಿಂಚಿತ್ ಸರ್ವಲೋಕೇಷು ನಿತ್ಯದಾ ॥13॥
ಎಲೈ ದ್ವಿಜೋತ್ತಮರೇ, ಇವೆಲ್ಲವನ್ನೂ ನೀವು ಹಿಂದೆ ಅನೇಕ ಬಾರಿ ಅನುಭವಿಸಿದ್ದೀರಿ. ನಿಮಗೆ ಸರ್ವಲೋಕಗಳಲ್ಲಿ ತಿಳಿಯದಿರುವ ವಸ್ತುವು ಯಾವುದೂ ಇಲ್ಲ.
ಮಾರ್ಕಂಡೇಯಃ
ಹಂತ ತೇ ವರ್ತ(ರ್ಣ)ಯಿಷ್ಯಾಮಿ ನಮಸ್ಕೃತ್ವಾ ಸ್ವಯಂಭುವೇ |
ಪುರುಷಾಯ ಪುರಾಣಾಯ ಶಾಶ್ವತಾಯಾವ್ಯಯಾಯ ಚ ॥14॥

ಮಾರ್ಕಂಡೇಯ ಬಹಳ ಸಂತೋಷ. ನಾನು ಬ್ರಹ್ಮದೇವರಿಗೂ ಮತ್ತು ಪುರಾಣ ಪುರುಷನಾದ ಶಾಶ್ವತನಾದ ಅವ್ಯಯನಾದ ಅವ್ಯಕ್ತನಾದ ಸೂಕ್ಷ್ಮನಾದ ಪ್ರಾಕೃತಗುಣ ರಹಿತನಾದ ಅಪ್ರಾಕೃತ ಗುಣಪೂರ್ಣನಾದ ನಾರಾಯಣನಿಗೂ ನಮಸ್ಕರಿಸಿ ನೀನು ಕೇಳಿದ ವಿಷಯಗಳನ್ನು ಹೇಳುವೆನು.
ಸ ಏಷ ಪುರುಷವ್ಯಾಘ್ರ ಪೀತವಾಸಾ ಜನಾರ್ದನಃ |
ಏಷ ಕರ್ತಾ ವಿಕರ್ತಾ ಚ ಭೂತಾತ್ಮಾ ಭೂತಕೃತ್ ಪ್ರಭುಃ ॥15॥
ಎಲೈ ಪುರುಷವ್ಯಾಘ್ರನೇ, ಈ ಪೀತಾಂಬರಧಾರಿಯಾದ ಜನಾರ್ದನನೇ ಕರ್ತಾ, ವಿಕರ್ತಾ, ಸರ್ವವ್ಯಾಪಿ, ಸರ್ವಸಂಹಾರಕ ಮತ್ತು ಪ್ರಭುವಾದವನು.
ಅಚಿಂತ್ಯಂ ಮಹದಾಶ್ಚರ್ಯಂ ಪವಿತ್ರಮಿತಿ ಚೋಚ್ಯತೇ |
ಅನಾದಿನಿಧನಂ ಭೂತಂ ವಿಶ್ವಮವ್ಯಯಮಕ್ಷಯಮ್ ॥16॥
ಇವನನ್ನು ಅಚಿಂತ್ಯನೆಂದೂ ಮಹದಾಶ್ಚರ್ಯನೆಂದೂ, ಪವಿತ್ರನೆಂದೂ, ಆದ್ಯಂತರಹಿತನೆಂದೂ, ಪೂರ್ಣನೆಂದೂ, ಸರ್ವದಾ ಇರುವವನೆಂದೂ ಅವ್ಯಯನೆಂದೂ, ಚತುರ್ವಿಧನಾಶರಹಿತನೆಂದೂ ಹೇಳುತ್ತಾರೆ.
ಏಷ ಕರ್ತಾ ನ ಕ್ರಿಯತೇ ಕಾರಣಂ ಚಾಪಿ ಪೌರುಷೇ |
ಯದ್ಯೇಷ ಪುರುಷೋ ವೇದ ವೇದಾ ಅಪಿ ನ ತಂ ವಿದುಃ ॥17॥
ಇವನು ಎಲ್ಲವನ್ನೂ ಮಾಡುತ್ತಾನೆ. ತಾನು ಯಾರಿಂದಲೂ ಮಾಡಲ್ಪಡುವುದಿಲ್ಲ. ಪುರುಷನು ಮಾಡುವ ಎಲ್ಲಾ ಕಾರ್ಯಗಳಿಗೂ ಇವನು ಕಾರಣನಾಗುತ್ತಾನೆ. ಇವನು ಏನನ್ನು ತಿಳಿದಿದ್ದಾನೋ ಅದನ್ನು ವೇದಗಳೂ ತಿಳಿದಿಲ್ಲ (ಹೇಳುವುದಿಲ್ಲ).
ಸರ್ವಮಾಶ್ಚರ್ಯಮೇವೈತನ್ನಿರ್ವೃತ್ತಂ ರಾಜಸತ್ತಮ |
ಆದಿತೋ ಮನುಜವ್ಯಾಘ್ರ ಕೃತ್ಸ್ನಸ್ಯ ಜಗತಃ ಕ್ಷಯೇ ॥18॥
ಎಲೈ ರಾಜಶ್ರೇಷ್ಠನೇ, ಮನುಜವ್ಯಾಘ್ರನೇ, ಎಲ್ಲ ಜಗತ್ತೂ ನಾಶವನ್ನು ಹೊಂದಿರುವಾಗ ಸೃಷ್ಟಿಯ ಆರಂಭಕಾಲದಲ್ಲಿ ಬಹಳ ಆಶ್ಚರ್ಯಕರವಾದ ಘಟನೆಯು ಜರುಗಿತು.
ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಮ್ |
ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತತಃ ಪರಮ್ ॥19॥
ದೇವಮಾನದ ನಾಲ್ಕು ಸಹಸ್ರವರ್ಷಗಳು ಕೃತಯುಗದ ಪರಿಮಾಣವೆಂದು ಹೇಳುತ್ತಾರೆ (ಮನುಷ್ಯಮಾನದ ಒಂದುವರ್ಷವು ದೇವತೆಗಳ ಒಂದು ದಿನ. ಇಂತಹ ಗಣನೆಯಲ್ಲಿ ದೇವತೆಗಳಿಗೆ ನಾಲ್ಕುಸಾವಿರ ವರ್ಷಗಳು ಕಳೆಯಬೇಕು). ಕೃತಯುಗಕ್ಕೆ ನಾಲ್ಕುನೂರು ವರ್ಷಗಳ ಸಂಧ್ಯಾಕಾಲವು ಮತ್ತು ನಾಲ್ಕುನೂರು ವರ್ಷಗಳ ಸಂಧ್ಯಾಂಶ ಕಾಲವು ಇರುತ್ತದೆ (ಕೃತಯುಗದ ಆದಿಯಲ್ಲಿ ಇನೂರನರುವರ್ಷ ಸಂಧ್ಯಾಕಾಲ, ಅನಂತರ ಇನ್ನೂರುವರ್ಷಗಳು ಸಂಧ್ಯಾಂಶ ಕಾಲ. ಕೃತಯುಗದ ಕೊನೆಯಲ್ಲಿ ಮೊದಲು ಇನ್ನೂರು ವರ್ಷಗಳು ಸಂಧ್ಯಾಂಶ ಕಾಲ, ಕೊನೆಯ ಇನ್ನೂರು ವರ್ಷಗಳು ಸಂಧ್ಯಾ ಕಾಲ. ಹೀಗೆ ಸಂಧ್ಯಾ ಸಂಧ್ಯಾಂಶಕಾಲಗಳನ್ನು ಸೇರಿಸಿ ಎಂಟುನೂರು ವರ್ಷಗಳಾಗುತ್ತವೆ).
ತ್ರೀಣಿ ವರ್ಷಸಹಸ್ರಾಣಿ ತ್ರೇತಾಯುಗಮಿಹೋಚ್ಯತೇ |
ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತತಃ ಪರಮ್ ॥20॥
ತ್ರೇತಾಯುಗವು ಮೂರುಸಹಸ್ರ ದೇವವರ್ಷಗಳ ಪರಿಮಾಣವುಳ್ಳದ್ದೆಂದು ಹೇಳಲ್ಪಡುತ್ತದೆ. ಅದಕ್ಕೆ ಮುನ್ನೂರು ವರ್ಷ ಸಂಧ್ಯಾಕಾಲವು ಮತ್ತು ಮುನ್ನೂರು ವರ್ಷ ಸಂಧ್ಯಾಂಶ ಕಾಲವು ಇದೆ (ತ್ರೇತಾಯುಗದ ಆದಿಯಲ್ಲಿ ನೂರೈವತ್ತು ವರ್ಷ ಸಂಧ್ಯಾಕಾಲ, ನೂರೈವತ್ತು ವರ್ಷಗಳು ಸಂಧ್ಯಾಂಶ ಕಾಲ. ತ್ರೇತಾಯುಗದ ಕೊನೆಯಲ್ಲಿ ನೂರೈವತ್ತು ವರ್ಷ ಸಂಧ್ಯಾಂಶ ಕಾಲ ಮತ್ತು ಕೊನೆಯ ನೂರೈವತ್ತು ವರ್ಷ ಸಂಧ್ಯಾ ಕಾಲ. ಹೀಗೆ ಒಟ್ಟು ಆರುನೂರು ವರ್ಷಗಳು).
ತಥಾ ವರ್ಷಸಹಸ್ರೇ ದ್ವೇ ದ್ವಾಪರಂ ಪರಿಮಾಣತಃ |
ತಸ್ಯಾಪಿ ದ್ವಿಶತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥21॥
ದ್ವಾಪರ ಯುಗದ ಪರಿಮಾಣ ಎರಡು ಸಾವಿರ ದೇವಮಾನವರ್ಷಗಳು. ಅದಕ್ಕೆ ಹಿಂದಿನ ರೀತಿಯಲ್ಲಿಯೇ ಇನ್ನೂರು ವರ್ಷದ ಸಂಧ್ಯಾಕಾಲವು ಮತ್ತು ಇನ್ನೂರು ವರ್ಷದ ಸಂಧ್ಯಾಂಶ ಕಾಲವು ಇರುತ್ತದೆ.
ಸಹಸ್ರಮೇಕಂ ವರ್ಷಾಣಾಂ ತತಃ ಕಲಿಯುಗಂ ಸ್ಮೃತಮ್ |
ತಸ್ಯ ವರ್ಷಶತಂ ಸಂಧಿಃ ಸಂಧ್ಯಾಂಶಶ್ಚ ತತಃ ಪರಮ್ |
ಸಂಧಿಸಂಧ್ಯಾಂಶಯೋಸ್ತುಲ್ಯಂ ಪ್ರಮಾಣಮುಪಧಾರಯ ॥22॥
ಕಲಿಯುಗದ ಪರಿಮಾಣವು ಒಂದು ಸಹಸ್ರ ದೇವಮಾನ ವರ್ಷಗಳು. ಅದಕ್ಕೆ ಒಂದು ನೂರು ವರ್ಷ ಸಂಧಿಯು, ಒಂದು ನೂರು ವರ್ಷ ಸಂಧ್ಯಾಂಶವು ಮೇಲೆ ಹೇಳಿದ ರೀತಿಯಲ್ಲಿಯೇ ಇದೆ. ಸಂಧಿ ಮತ್ತು ಸಂಧ್ಯಾಂಶ ಕಾಲಗಳು ಎಲ್ಲ ಯುಗಗಳಲ್ಲಿಯೂ ಸಮಾನವಾಗಿರುತ್ತವೆ ಎಂದು ತಿಳಿ.
ಕ್ಷೀಣೇ ಕಲಿಯುಗೇ ಚೈವ ಪ್ರವರ್ತೇತ ಕೃತಂ ಯುಗಮ್ ॥23॥
ಏಷಾ ದ್ವಾದಶಸಾಹಸ್ರೀ ಯುಗಾಖ್ಯಾ ಪರಿಕೀರ್ತಿತಾ |
ಏತತ್ಸಹಸ್ರಪರ್ಯಂತಮಹೋ ಬ್ರಾಹ್ಮಮುದಾಹೃತಮ್ ॥24॥
ಕಲಿಯುಗವು ಕಳೆದ ಮೇಲೆ ಪುನಃ ಕೃತಯುಗವು ಪ್ರಾರಂಭವಾಗುತ್ತದೆ. ಹೀಗೆ ನಾಲ್ಕು ಯುಗಗಳಿಗೆ ಒಟ್ಟು ದೇವಮಾನದ ಹನ್ನೆರಡು ಸಾವಿರ ವರ್ಷಗಳು ಆಗುತ್ತವೆ (ಯುಗಗಳಿಂದ ಹತ್ತುಸಾವಿರ, ಸಂಧ್ಯಾ ಸಂಧ್ಯಾಂಶಗಳು ಸೇರಿ ಎರಡು ಸಾವಿರ. ಹೀಗೆ ಒಟ್ಟು ಹನ್ನೆರಡು ಸಾವಿರ ವರ್ಷಗಳಾಗುತ್ತವೆ). ಇಂತಹ ಸಹಸ್ರ ಚತುರ್ಯುಗಗಳು ಮರಳಿದರೆ ಬ್ರಹ್ಮದೇವರ ಒಂದು ಹಗಲು ಎಂದು ಹೇಳುತ್ತಾರೆ.
ವಿಶ್ವಂ ಹಿ ಬ್ರಹ್ಮಭವನೇ ಸರ್ವತಃ ಪರಿವರ್ತ್ತತೇ |

ಲೋಕಾನಾಂ ಮನುಜವ್ಯಾಘ್ರ ಪ್ರಲಯಂ ತಂ ವಿದುರ್ಬುಧಾಃ ॥25॥
ಬ್ರಹ್ಮದೇವರ ಹಗಲಿನ ಕಾಲದಲ್ಲಿ ಎಲ್ಲಕಡೆಯಲ್ಲಿಯೂ ಜಗತ್ತು ಪ್ರಚಲಿತವಾಗುತ್ತದೆ. ಎಲೈ ಮನುಜವ್ಯಾಘ್ರನೇ, ಹೀಗೆ ಹಗಲಿನ ಸಹಸ್ರ ಯುಗಗಳು ಕಳೆದ ಮೇಲೆ ಜ್ಞಾನಿಗಳು ಪ್ರಳಯಕಾಲವೆಂದು ಹೇಳುತ್ತಾರೆ.
ಅಲ್ಪಾವಶಿಷ್ಟೇ ತು ತದಾ ಯುಗಾಂತೇ ಭರತರ್ಷಭ |
ಸಹಸ್ರಾಂತೇ ನರಾಃ ಸರ್ವೇ ಪ್ರಾಯಶೋಽನೃತವಾದಿನಃ ॥26॥
ಎಲೈ ಭರತರ್ಷಭನೇ, ಹೀಗೆ ಸಹಸ್ರ ಚತುರ್ಯುಗಗಳು ಕಳೆದು ಕೊನೆಯ ಕಲಿಯುಗದಲ್ಲಿ ಸ್ವಲ್ಪ ಭಾಗ ಮಾತ್ರ ಉಳಿದಿರುವಾಗ ಎಲ್ಲ ಮನುಷ್ಯರೂ ಪ್ರಾಯಶಃ ಸುಳ್ಳನ್ನು ಹೇಳುವವರಾಗುತ್ತಾರೆ.
ಯಜ್ಞಪ್ರತಿನಿಧಿಃ ಪಾರ್ಥ ದಾನಪ್ರತಿನಿಧಿಸ್ತಥಾ |
ವ್ರತಪ್ರತಿನಿಧಿಶ್ಚೈವ ತಸ್ಮಿನ್ಕಾಲೇ ಪ್ರವರ್ತತೇ ॥27॥
ಎಲೈ ಪಾರ್ಥನೇ, ಆಗ ಯಜ್ಞಗಳಾಗಲೀ, ದಾನಗಳಾಗಲೀ, ವ್ರತಗಳಾಗಲೀ ಇರುವುದಿಲ್ಲ. ಅವುಗಳ ಪ್ರತಿನಿಧಿಗಳು ಮಾತ್ರ ಇರುತ್ತವೆ.
ಬ್ರಾಹ್ಮಣಾಃ ಶೂದ್ರಕರ್ಮಾಣಸ್ತಥಾ ಶೂದ್ರಾ ಧನಾರ್ಜಕಾಃ |
ಕ್ಷತ್ರಧರ್ಮೇಣ ವಾಪ್ಯತ್ರ ವರ್ತಯಂತಿ ಗತೇ ಯುಗೇ ॥28॥
ಬ್ರಾಹ್ಮಣರು ಶೂದ್ರಕರ್ಮವನ್ನು ಮಾಡುತ್ತಾರೆ. ಶೂದ್ರರು ಧನಾರ್ಜನೆಯನ್ನು ಮಾಡುತ್ತಾರೆ ಅಥವಾ ಆ ಯುಗದ ಕೊನೆಯಲ್ಲಿ ಕ್ಷತ್ರಿಯ ಧರ್ಮವನ್ನಾದರೂ ಅನುಸರಿಸುತ್ತಾರೆ.
ನಿವೃತ್ತಯಜ್ಞಸ್ವಾಧ್ಯಾಯಾ ದಂಡಾಜಿನವಿವರ್ಜಿತಾಃ |
ಬ್ರಾಹ್ಮಣಾಃ ಸರ್ವಭಕ್ಷಾಶ್ಚ ಭವಿಷ್ಯಂತಿ ಕಲೌ ಯುಗೇ ॥29॥
ಬ್ರಾಹ್ಮಣರು ಯಜ್ಞಸ್ವಾಧ್ಯಾಯಗಳನ್ನು ತ್ಯಜಿಸುತ್ತಾರೆ. ದಂಡಾಜಿನಗಳನ್ನೂ ತೊರೆಯುತ್ತಾರೆ. ಕಲಿಯುಗದಲ್ಲಿ ಎಲ್ಲವನ್ನೂ ತಿನ್ನುವವರಾಗುತ್ತಾರೆ.
ಅಜಪಾ ಬ್ರಾಹ್ಮಣಾಸ್ತಾತ ಶೂದ್ರಾ ಜಪಪರಾಯಣಾಃ |
ವಿಪರೀತೇ ತದಾ ಲೋಕೇ ಪೂರ್ವರೂಪಂ ಕ್ಷಯಸ್ಯ ತತ್ ॥30॥
ಎಲೈ ಪ್ರೀತಿಪಾತ್ರನೇ, ಬ್ರಾಹ್ಮಣರು ಜಪವನ್ನು ಮಾಡುವುದಿಲ್ಲ. ಶೂದ್ರರು ಜಪನಿಷ್ಠರಾಗುತ್ತಾರೆ. ಹೀಗೆ ಲೋಕವು ತಲೆಕೆಳಗಾದಾಗ ಅದು ಪ್ರಳಯದ ಮುನ್ಸೂಚನೆ ಎಂದು ತಿಳಿಯಬೇಕು.
ಕ್ಷತ್ರಧರ್ಮೇಣ ವಾಽಪ್ಯತ್ರ ವರ್ತಯಂತಿ ಯುಗಕ್ಷಯೇ |
ಬಹವೋ ಮ್ಲೇಚ್ಛರಾಜಾನಃ ಪೃಥಿವ್ಯಾಂ ಮನುಜಾಧಿಪ ॥31॥
ಎಲೈ ಮನುಜಾಧಿಪನೇ, ಯುಗಕ್ಷಯದ ಸಮಯದಲ್ಲಿ ಭೂಮಿಯಲ್ಲಿ ಅನೇಕ ಮ್ಲೇಚ್ಛರಾಜರುಗಳು ಕ್ಷತ್ರಿಯಧರ್ಮದಿಂದ ವರ್ತಿಸುತ್ತಾರೆ.
ಮೃಷಾನುಶಾಸಿನಃ ಪಾಪಾ ಮೃಷಾವಾದಪರಾಯಣಾಃ |
ಆಂಧ್ರಾಃ ಶಕಾಃ ಪುಲಿಂದಾಶ್ಚ ಯವನಾಶ್ಚ ನರಾಧಿಪಾಃ ॥32॥
ಆಂದ್ರರು, ಶಕರು, ಪುಲಿಂದರು, ಯವನರು ಮೊದಲಾದ ರಾಜರುಗಳು ಪಾಪಿಷ್ಠರಾಗಿ ಸುಳ್ಳನ್ನು ಮಾತನಾಡುತ್ತಾ ಸುಳ್ಳು ಶಾಸನಗಳನ್ನು ಮಾಡಿಕೊಂಡಿರುತ್ತಾರೆ.
ಕಾಂಬೋಜಾ ಬಾಹ್ಲಿಕಾಃ ಶೂರಾಸ್ತಥಾಽಽಭೀರಾ ನರೋತ್ತಮ |
ನ ತದಾ ಬ್ರಾಹ್ಮಣಃ ಕಶ್ಚಿತ್ ಸ್ವಧರ್ಮಮುಪಜೀವತಿ ॥33॥
ಎಲೈ ನರೋತ್ತಮರೇ, ಕಾಂಬೋಜರು, ಬಾಹ್ಲಿಕರು, ಶೂರರು, ಆಭೀರರು ಮೊದಲಾದವರೂ ಕೂಡ ಹಾಗೆಯೇ ಇರುತ್ತಾರೆ. ಆಗ ಯಾವ ಬ್ರಾಹ್ಮಣನೂ ತನ್ನ ಧರ್ಮವನ್ನು ಪರಿಪಾಲಿಸುವುದಿಲ್ಲ.
ಕ್ಷತ್ರಿಯಾಶ್ಚಾಪಿ ವೈಶ್ಯಾಶ್ಚ ವಿಕರ್ಮಸ್ಥಾ ನರಾಧಿಪ ॥34॥
ಎಲೈ ನರಾಧಿಪನೇ, ಕ್ಷತ್ರಿಯರು ಮತ್ತು ವೈಶ್ಯರು ತಮ್ಮ ಧರ್ಮವನ್ನು ಅನುಸರಿಸದೇ ಕೆಟ್ಟ ಕಾರ್ಯಗಳಲ್ಲಿ ತೊಡಗುತ್ತಾರೆ.
ಅಲ್ಪಾಯುಷಃ ಸ್ವಲ್ಪಬಲಾಃ ಸ್ವಲ್ಪವೀರ್ಯಪರಾಕ್ರಮಾಃ |
ಅಲ್ಪಸಾರಾಲ್ಪದೇಹಶ್ಚ ತಥಾ ಸತ್ಯಾಲ್ಪಭಾಷಿಣಃ |
ಬಹುಶೂನ್ಯಾ ಜನಪದಾ ಮೃಗವ್ಯಾಲಾವೃತಾ ದಿಶಃ ॥35॥
ಮನುಷ್ಯರು ಅಲ್ಪಾಯುಷಿಗಳು, ಅಲ್ಪಬಲವನ್ನುಳ್ಳವರು, ಅಲ್ಪವೀರ್ಯಪರಾಕ್ರಮವನ್ನು ಉಳ್ಳವರು, ಅಲ್ಪ ಸಾಮರ್ಥ್ಯವುಳ್ಳವರು, ಅಲ್ಪ ದೇಹವನ್ನುಳ್ಳವರು, ಅಲ್ಪ ಸತ್ಯವನ್ನು ನುಡಿಯುವವರು ಆಗಿರುತ್ತಾರೆ. ದೇಶವೆಲ್ಲವೂ ಶೂನ್ಯಪ್ರಾಯವಾಗಿ ದಿಕ್ಕುದಿಕ್ಕುಗಳು ಮೃಗಸರ್ಪ ಮೊದಲಾದವುಗಳಿಂದ ತುಂಬಿರುತ್ತವೆ.
ಯುಗಾಂತೇ ಸಮನುಪ್ರಾಪ್ತೇ ವೃಥಾ ಚ ಬ್ರಹ್ಮವಾದಿನಃ |
ಭೋವಾದಿನಸ್ತಥಾ ಶೂದ್ರಾ ಬ್ರಾಹ್ಮಣಶ್ಚಾರ್ಯವಾದಿನಃ ॥36॥
ಯುಗಾಂತವು ಪ್ರಾಪ್ತವಾದಾಗ ಬ್ರಾಹ್ಮಣರ ಮಾತುಗಳು ವ್ಯರ್ಥವಾಗುತ್ತವೆ. ಶೂದ್ರರು ಬ್ರಾಹ್ಮಣರನ್ನು ಎಲವೋ ಎಂದು ಕರೆಯುತ್ತಾರೆ. ಬ್ರಾಹ್ಮಣರು ಶೂದ್ರರನ್ನು ಪೂಜ್ಯರೇ ಎಂದು ಕರೆಯುತ್ತಾರೆ.
ಯುಗಾಂತೇ ಮನುಜವ್ಯಾಘ್ರ ಭವಂತಿ ಬಹುಜಂತವಃ |
ನ ತಥಾ ಗಂಧಯುಕ್ತಾಶ್ಚ ಸರ್ವಗಂಧಾ ವಿಶಾಂಪತೇ |
ರಸಾಶ್ಚ ಮನುಜವ್ಯಾಘ್ರ ನ ತಥಾ ಸ್ವಾದುಯೋಗಿನಃ ॥37॥
ಎಲೈ ಮನುಜವ್ಯಾಘ್ರನೇ, ಆ ಯುಗಕ್ಷಯದ ಸಮಯದಲ್ಲಿ ಎಲ್ಲ ಕಡೆಯಲ್ಲಿಯೂ ಜಂತುಗಳು ಹೆಚ್ಚಾಗುತ್ತವೆ. ಎಲೈ ರಾಜನೇ,

ಗಂಧವಸ್ತುಗಳಲ್ಲಿ ಮೊದಲಿನ ಗಂಧವು ಇರುವುದಿಲ್ಲ. ಎಲೈ ಮನುಜವ್ಯಾಘ್ರನೇ, ರಸವುಳ್ಳ ವಸ್ತುಗಳಲ್ಲಿ ಮೊದಲಿನ ರಸ ಇರುವುದಿಲ್ಲ.
ಬಹುಪ್ರಜಾ ಹ್ರಸ್ವದೇಹಾಃ ಶೀಲಾಚಾರವಿವರ್ಜಿತಾಃ |
ಮುಖೇಭಗಾಃ ಸ್ತ್ರಿಯೋ ರಾಜನ್ ಭವಿಷ್ಯಂತಿ ಯುಗಕ್ಷಯೇ ॥38॥
ಮನುಷ್ಯರು ಅನೇಕ ಮಕ್ಕಳನ್ನು ಪಡೆಯುತ್ತಾರೆ. ಹ್ರಸ್ವ ದೇಹವುಳ್ಳವರಾಗಿರುತ್ತಾರೆ. ಶೀಲಾಚಾರಶೂನ್ಯರಾಗಿರುತ್ತಾರೆ. ಎಲೈ ರಾಜನೇ, ಯುಗಕ್ಷಯದ ಕಾಲದಲ್ಲಿ ಸ್ತ್ರೀಯರಿಗೆ ಮುಖದಲ್ಲಿಯೇ ಭಗವುಂಟಾಗುತ್ತದೆ.
ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ |
ಕೇಶಶೂಲಾಃ ಸ್ತ್ರಿಯೋ ರಾಜನ್ ಭವಿಷ್ಯಂತಿ ಯುಗಕ್ಷಯೇ ॥39॥
ಜನರು ಅನ್ನವಿಕ್ರಯವನ್ನು ಮಾಡುತ್ತಾರೆ. ಬ್ರಾಹ್ಮಣರು ವೇದವಿಕ್ರಯವನ್ನು ಮಾಡುತ್ತಾರೆ. ಎಲೈ ರಾಜನೇ, ಆ ಯುಗಕ್ಷಯ ಸಮಯದಲ್ಲಿ ಸ್ತ್ರೀಯರು ತಮ್ಮ ಭಗವನ್ನೇ ವಿಕ್ರಯಮಾಡುತ್ತಾರೆ.
ಅಲ್ಪಕ್ಷೀರಾಸ್ತಥಾ ಗಾವೋ ಭವಿಷ್ಯಂತಿ ಜನಾಧಿಪ |
ಅಲ್ಪಪುಷ್ಪಫಲಾಶ್ಚಾಪಿ ಪಾದಪಾ ಬಹುವಾಯಸಾಃ ॥40॥
ಎಲೈ ಜನಾಧಿಪನೇ, ಗೋವುಗಳು ಅಲ್ಪಕ್ಷೀರವನ್ನು ಕೊಡುವವು. ವೃಕ್ಷಗಳು ಅಲ್ಪ ಪುಷ್ಪಫಲಗಳನ್ನು ಕೊಟ್ಟು ಅನೇಕ ಕಾಗೆಗಳಿಂದ ತುಂಬಿರುತ್ತವೆ.
ಬ್ರಹ್ಮವಧ್ಯಾನುಲಿಪ್ತಾನಾಂ ತಥಾ ಮಿಥ್ಯಾಭಿಶಂಸಿನಾಮ್ |
ನೃಪಾಣಾಂ ಪೃಥಿವೀಪಾಲ ಪ್ರತಿಗೃಹ್ಣಂತಿ ವೈ ದ್ವಿಜಾಃ ॥41॥
ಎಲೈ ರಾಜನೇ, ಬ್ರಾಹ್ಮಣರು ಬ್ರಹ್ಮಹತ್ಯಾ ದೋಷದಿಂದ ಕೂಡಿದ ಮತ್ತು ಅನೃತ ಭಾಷಿಗಳಾದ ರಾಜರುಗಳಿಂದ ದಾನವನ್ನು ಸ್ವೀಕರಿಸುತ್ತಾರೆ.
ಲೋಭಮೋಹಪರೀತಾಶ್ಚ ಮಿಥ್ಯಾಧರ್ಮಧ್ವಜಾವೃತಾಃ |
ಭಿಕ್ಷಾರ್ಥಂ ಪೃಥಿವೀಪಾಲ ಚಂಚೂರ್ಯಂತೇ ದ್ವಿಜಾ ದಿಶಃ ॥42॥
ಬ್ರಾಹ್ಮಣರು ಲೋಭ, ಮೋಹಗಳಿಗೆ ವಶರಾಗಿ ಸುಳ್ಳುಧರ್ಮಗಳನ್ನು ಆಚರಿಸುತ್ತಾ ಅನ್ನಕ್ಕಾಗಿ ದಿಕ್ಕುದಿಕ್ಕುಗಳಲ್ಲಿ ಅಲೆಯುತ್ತಾರೆ.
ಕರಹಾರಭಯಾತ್ ಪುಂಸೋ ಗೃಹಸ್ಥಾಃ ಪರಿಮೋಷಕಾಃ |
ಮುನಿಚ್ಛದ್ಮಾಕೃತಿಚ್ಛನ್ನಾ ವಾಣಿಜ್ಯಮುಪಭುಂಜತೇ ॥43॥
ಗೃಹಸ್ಥರು ತೆರಿಗೆಯನ್ನು ಕೊಡಲು ಸಾಧ್ಯವಾಗದೆ ತೆರಿಗೆಯ ವಂಚಕರಾಗುತ್ತಾರೆ. ತಪಸ್ವಿಗಳ ವೇಷವನ್ನು ಧರಿಸಿ ವೃತ್ತಿಗಾಗಿ ವಾಣಿಜ್ಯವನ್ನು ಮಾಡುತ್ತಾರೆ.
ಮಿಥ್ಯಾಚ ನಖರೋಮಾಣಿ ಧಾರಯಂತಿ ತದಾ ದ್ವಿಜಾಃ |
ಅರ್ಥಲೋಭಾನ್ನರವ್ಯಾಘ್ರ ತಥಾ ಚ ಬ್ರಹ್ಮಚಾರಿಣಃ ॥44॥
ಬ್ರಾಹ್ಮಣರು ಯಾವ ವ್ರತದ ಉದ್ದೇಶವಿಲ್ಲದೆ ನಖರೋಮಗಳನ್ನು ಬೆಳೆಸುತ್ತಾರೆ. ಎಲೈ ನರವ್ಯಾಘ್ರನೇ, ಹಣವನ್ನು ಉಳಿಸುವ ಆಸೆಯಿಂದ ಬ್ರಹ್ಮಚಾರಿಗಳಾಗುತ್ತಾರೆ.
ಆಶ್ರಮೇಷು ವೃಥಾಚಾರಾಃ ಪಾನಪಾ ಗುರುತಲ್ಪಗಾಃ |
ಇಹಲೌಕಿಕಮೀಹಂತೇ ಮಾಂಸಶೋಣಿತವರ್ಧನಮ್ ॥45॥
ಪಾರಲೌಕಿಕಕಾರ್ಯೇಷು ಪ್ರಮತ್ತಾ ಭೃಶನಾಸ್ತಿಕಾಃ ॥46॥
ಆಶ್ರಮದಲ್ಲಿ ವಾಸಿಸುವವರು ವ್ಯರ್ಥವಾದ ಆಚಾರದಲ್ಲಿ ನಿರತರಾಗಿ ಮದ್ಯಪಾನ ಮತ್ತು ಗುರುತಲ್ಪಗಮನದಲ್ಲಿ ಆಸಕ್ತರಾಗಿ ಈ ಲೋಕದ ಸುಖವನ್ನು ಬಯಸಿ ತಮ್ಮ ದೇಹದ ಮಾಂಸರಕ್ತಗಳನ್ನು ಬೆಳೆಸುವುದರಲ್ಲಿ ಆಸಕ್ತರಾಗಿರುತ್ತಾರೆ. ಪರಲೋಕದ ಕಾರ್ಯಗಳಲ್ಲಿ ಪ್ರಮಾದವನ್ನು ಹೊಂದಿ ಬಹಳ ನಾಸ್ತಿಕರಾಗಿರುತ್ತಾರೆ.
ಬಹುಪಾಷಂಡಸಂಕೀರ್ಣಾಃ ಪರಾನ್ನಗುಣವಾದಿನಃ |
ಆಶ್ರಮಾ ಮನುಜವ್ಯಾಘ್ರ ಭವಿಷ್ಯಂತಿ ಯುಗಕ್ಷಯೇ ॥47॥
ಎಲೈ ಮನುಜವ್ಯಾಘ್ರನೇ, ಯುಗಕ್ಷಯದ ಸಮಯದಲ್ಲಿ ಆಶ್ರಮಗಳು ಅನೇಕ ಪಾಷಂಡಿಗಳಿಂದ ತುಂಬಿಹೋಗುವವು.
ಆಶ್ರಮವಾಸಿಗಳು ಪರಾನ್ನವನ್ನು ಹೊಗಳುವರು.
ಯಥರ್ತುವರ್ಷೀ ಭಗವಾನ್ ನ ತಥಾ ಪಾಕಶಾಸನಃ |
ನ ಚಾಪಿ ಸರ್ವಬೀಜಾನಿ ಸಮ್ಯಗ್ರೋಹಂತಿ ಭಾರತ ॥48॥
ಎಲೈ ಭಾರತನೇ, ಆಗ ಪೂಜ್ಯನಾದ ಇಂದ್ರನು ಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸುವುದಿಲ್ಲ ಮತ್ತು ಎಲ್ಲಾ ಬೀಜಗಳೂ ಸಹ ಚೆನ್ನಾಗಿ ಮೊಳಕೆ ಒಡೆದು ಮೇಲೆ ಬರುವುದಿಲ್ಲ.
ಹಿಂಸಾಭಿರಾಮಶ್ಚ ಜನಸ್ತಥಾ ಸಂಪದ್ಯತೇಽಶುಚಿಃ |
ಫಲಂ ಧರ್ಮಸ್ಯ ರಾಜೇಂದ್ರ ಸರ್ವತ್ರ ಪರಿಹೀಯತೇ |
ಅಧರ್ಮಫಲಮತ್ಯರ್ಥಂ ತದಾ ಭವತಿ ಚಾನಘ ॥49॥
ಜನರು ಅಶುಚಿಗಳಾಗಿ ಹಿಂಸೆಯಲ್ಲಿ ಸಂತೋಷವನ್ನು ಪಡುತ್ತಾರೆ. ಎಲೈ ರಾಜೇಂದ್ರನೇ, ಧರ್ಮದ ಫಲವು ಎಲ್ಲಕಡೆಯಲ್ಲಿಯೂ ಕ್ಷೀಣವಾಗುತ್ತದೆ. ಎಲೈ ಅನಘನೇ, ಅಧರ್ಮದ ಫಲವು ವೃದ್ಧಿಯನ್ನು ಹೊಂದುತ್ತದೆ.
ತದಾ ಚ ಪೃಥಿವೀಪಾಲ ಯೋ ಭವೇದ್ ಧರ್ಮಸಂಯುತಃ |
ಅಲ್ಪಾಯುಃ ಸ ಹಿ ಮಂತವ್ಯೋ ನ ಹಿ ಧರ್ಮೋಽಸ್ತಿ ಕಶ್ಚನ ॥50॥
ಎಲೈ ರಾಜನೇ, ಆಗ ಯಾವನಾದರೂ ಧರ್ಮಯುಕ್ತನಾದರೆ ಅವನು ಅಲ್ಪಾಯುಷನೆಂದು ತಿಳಿಯಬೇಕು. ಆಗ ಯಾವ ಧರ್ಮವೂ

ಉಳಿಯುವುದಿಲ್ಲ.
ಭೂಯಿಷ್ಠಂ ಕೂಟಮಾನೈಶ್ಚ ಪಣ್ಯಂ ವಿಕ್ರೀಣತೇ ಜನಾಃ |
ವಣಿಜಶ್ಚ ನರವ್ಯಾಘ್ರ ಬಹಮಾಯಾ ಭವಂತ್ಯುತ ॥51॥
ಎಲೈ ನರವ್ಯಾಘ್ರನೇ, ವರ್ತಕ ಜನಗಳು ಆಗ ಮೋಸದ ಅಳತೆಗಳಿಂದ ಕ್ರಯದ ವಸ್ತುಗಳನ್ನು ಅಳೆಯುತ್ತಾರೆ. ಮತ್ತು ಬಹಳ ವಂಚನೆಯನ್ನು ಮಾಡುತ್ತಾರೆ.
ಧರ್ಮಿಷ್ಠಾಃ ಪರಿಹೀಯಂತೇ ಪಾಪೀಯಾನ್ ವರ್ಧತೇ ಜನಃ |
ಧರ್ಮಸ್ಯ ಬಲಹಾನಿಃ ಸ್ಯಾದಧರ್ಮಶ್ಚ ಬಲೀ ತಥಾ ॥52॥
ಧರ್ಮಿಷ್ಠರು ಕ್ಷಯವನ್ನು ಹೊಂದುತ್ತಾರೆ, ಪಾಪಿಗಳು ಅಭಿವೃದ್ಧಿಯನ್ನು ಹೊಂದುತ್ತಾರೆ. ಧರ್ಮದ ಬಲವು ಕುಗ್ಗುತ್ತದೆ, ಅಧರ್ಮದ ಬಲವು ಹೆಚ್ಚುತ್ತದೆ.
ಅಲ್ಪಾಯುಷೋ ದರಿದ್ರಾಶ್ಚ ಧರ್ಮಿಷ್ಠಾ ಮಾನವಾಸ್ತಥಾ |
ದೀರ್ಘಾಯುಷಃ ಸಮೃದ್ಧಾಶ್ಚ ವಿಧರ್ಮಾಣೋ ಯುಗಕ್ಷಯೇ |
ನಾಗರಾಣಾಂ ವಿಹಾರೇಷು ವಿಧರ್ಮಾಣೋ ಯುಗಕ್ಷಯೇ |
ಅಧರ್ಮಿಷ್ಠೈರುಪಾಯೈಶ್ಚ ಪ್ರಜಾ ವ್ಯವಹರಂತ್ಯುತ ॥53॥
ಸಂಚಯೇನ ತಥಾಲ್ಪೇನ ಭವಂತ್ಯಾಢ್ಯಮದಾನ್ವಿತಾಃ ॥54॥
ಧರ್ಮಿಷ್ಠರಾದ ಮನುಷ್ಯರು ಅಲ್ಪಾಯುಷಿಗಳೂ ಮತ್ತು ದರಿದ್ರರೂ ಆಗುತ್ತಾರೆ. ಯುಗಕ್ಷಯದ ಕಾಲದಲ್ಲಿ ಅಧರ್ಮವನ್ನು ಮಾಡುವವರು ದೀರ್ಘಾಯುಷಿಗಳು ಮತ್ತು ಸಂಪದ್ಯುಕ್ತರಾಗುತ್ತಾರೆ. ನಗರದ ವಿಹಾರದ ಸ್ಥಾನಗಳಲ್ಲೆಲ್ಲಾ ಅಧರ್ಮಿಷ್ಠರೇ ಕಂಡುಬರುತ್ತಾರೆ. ಪ್ರಜೆಗಳು ಅಧರ್ಮದ ಉಪಾಯಗಳಿಂದ ವ್ಯವಹಾರವನ್ನು ಮಾಡುತ್ತಾರೆ. ಸ್ವಲ್ಪ ಧನ ಸಂಚಯವನ್ನು ಮಾಡಿದರೂ ಅವರಿಗೆ ತಾವು ಶ್ರೀಮಂತರು ಎಂಬ ಮದ ಉಂಟಾಗುತ್ತದೆ.
ಧನಂ ವಿಶ್ವಾಸತೋ ನ್ಯಸ್ತಂ ಮಿಥೋ ಭೂಯಿಷ್ಠಶೋ ನರಾಃ |
ನೈತದಸ್ತೀತಿ ಮನುಜಾ ವರ್ತಂತೇ ನಿರಪತ್ರಪಾಃ |
ಹರ್ತುಂ ವ್ಯವಸಿತಾ ರಾಜನ್ ಪಾಪಾಚಾರಸಮನ್ವಿತಾಃ ॥55॥
ವಿಶ್ವಾಸದಿಂದ ರಕ್ಷಣೆಗಾಗಿ ಇಟ್ಟ ಧನವನ್ನು ಪಾಪಾಚಾರಸಮನ್ವಿತರಾದ ಮನುಷ್ಯರು ಇಡಲೇ ಇಲ್ಲ ಎಂದು ನಾಚಿಕೆ ಇಲ್ಲದೆ ಹೇಳಿ ಆ ಧನವನ್ನು ಅಪಹರಿಸಲು ನಿರ್ಧರಿಸುತ್ತಾರೆ.
ಪುರುಷಾದಾನಿ ಸತ್ತ್ವಾನಿ ಪಕ್ಷಿಣೋಽಥ ಮೃಗಾಸ್ತಥಾ |
ನಗರಾಣಾಂ ವಿಹಾರೇಷು ಚೈತ್ಯೇಷ್ವಪಿ ಚ ಶೇರತೇ ॥56॥
ಮನುಷ್ಯರನ್ನು ಭಕ್ಷಿಸುವ ಪ್ರಾಣಿಗಳು, ಪಕ್ಷಿಗಳು ಮತ್ತು ಮೃಗಗಳು ಮತ್ತು ದೇವಾಲಯಗಳಲ್ಲಿ ವಾಸಿಸುತ್ತವೆ.
ಸಪ್ತವರ್ಷಾಷ್ಟವರ್ಷಾಶ್ಚ ಸ್ತ್ರಿಯೋ ಗರ್ಭಧರಾ ನೃಪ |
ದಶದ್ವಾದಶವರ್ಷಾಣಾಂ ಪುಂಸಾಂ ಪುತ್ರಃ ಪ್ರಜಾಯತೇ ॥57॥
ಏಳೆಂಟು ವರ್ಷದ ಕನ್ಯೆಯರು ಗರ್ಭಧರಿಸುತ್ತಾರೆ. ಹತ್ತು ಹನ್ನೆರಡು ವರ್ಷದ ಪುರುಷರಿಗೆ ಪುತ್ರರು ಜನಿಸುತ್ತಾರೆ.
ಭವಂತಿ ಷೋಡಶೇ ವರ್ಷೇ ನರಾಃ ಪಲಿತಿನಸ್ತಥಾ |
ಆಯುಃಕ್ಷಯೋ ಮನುಷ್ಯಾಣಾಂ ಕ್ಷಿಪ್ರಮೇವ ಪ್ರಪದ್ಯತೇ ॥58॥
ಹದಿನಾರು ವರ್ಷಕ್ಕೆ ಮನುಷ್ಯರು ನೆರೆ ಮತ್ತು ಸುಕ್ಕುಗಳಿಂದ ಕೂಡಿದವರಾಗುತ್ತಾರೆ. ಶೀಘ್ರದಲ್ಲಿಯೇ ಅವರಿಗೆ ಮರಣವು ಉಂಟಾಗುತ್ತದೆ.
ಕ್ಷೀಣಾಯುಷೋ ಮಹಾರಾಜ ತರುಣಾ ವೃದ್ಧಶೀಲಿನಃ |
ತರುಣಾನಾಂ ಚ ಯಚ್ಛೀಲಂ ತದ್ವೃದ್ಧೇಷು ಪ್ರಜಾಯತೇ ॥59॥
ಎಲೈ ಮಹಾರಾಜನೇ, ಕ್ಷೀಣಾಯುಷಿಗಳಾದ ತರುಣರು ವೃದ್ಧರಂತೆ ನಡೆದುಕೊಳ್ಳುತ್ತಾರೆ. ವೃದ್ಧರಲ್ಲಿ ತರುಣರ ಸ್ವಭಾವವು ಉಂಟಾಗುತ್ತದೆ.
ವಿಪರೀತಾಸ್ತದಾ ನಾರ್ಯೋ ವಂಚಯಿತ್ವಾಽರ್ಹತಃ ಪತೀನ್ |
ವ್ಯುಚ್ಚರಂತ್ಯಪಿ ದುಃಶೀಲಾ ದಾಸ್ಯೈಃ ಪಶುಭಿರೇವ ಚ ॥60॥
ನಾರಿಯರು ಧರ್ಮಕ್ಕೆ ವಿರುದ್ಧವಾಗಿ ನಡೆದು ತಮ್ಮ ಯೋಗ್ಯರಾದ ಪತಿಗಳನ್ನು ವಂಚಿಸಿ ದುಶ್ಶೀಲರಾಗಿ ಸೇವಕರ ಜೊತೆಯಲ್ಲಿ ಮತ್ತು ಪಶುಗಳ ಜೊತೆಯಲ್ಲಿ ಮೈಥುನವನ್ನು ಮಾಡುತ್ತಾರೆ.
ವೀರಪತ್ನ್ಯಸ್ತಥಾ ನಾರ್ಯಃ ಸಂಶ್ರಯಂತಿ ನರಾನ್ನೃಪ |
ಭರ್ತಾರಮಪಿ ಜೀವಂತಮನ್ಯಾನ್ ವ್ಯಭಿಚರಂತ್ಯುತ ॥60.1॥
ಎಲೈ ರಾಜನೇ, ವೀರಪತ್ನಿಯರೂ ಸಹ ಪರಪುರುಷರನ್ನು ಆಶ್ರಯಿಸುತ್ತಾರೆ. ಪತಿಯು ಬದುಕಿದ್ದರೂ ಸಹ ವ್ಯಭಿಚಾರದಲ್ಲಿ ತೊಡಗುತ್ತಾರೆ.
ತಸ್ಮಿನ್ ಯುಗಸಹಸ್ರಾಂತೇ ಸಂಪ್ರಾಪ್ತೇ ಚಾಯುಷಃ ಕ್ಷಯೇ |
ಅನಾವೃಷ್ಟಿರ್ಮಹಾರಾಜ ಜಾಯತೇ ಬಹುವಾರ್ಷಿಕೀ ॥61॥
ಎಲೈ ಮಹಾರಾಜನೇ, ಯುಗಸಹಸ್ರಾಂತದಲ್ಲಿ ಎಲ್ಲರ ಆಯುಸ್ಸಿನ ಕ್ಷಯವು ಪ್ರಾಪ್ತವಾದಾಗ ಅನೇಕ ವರ್ಷಗಳ ಕಾಲ ಅನಾವೃಷ್ಟಿ ಉಂಟಾಗುತ್ತದೆ.
ತತಸ್ತಾನ್ಯಲ್ಪಸಾರಾಣಿ ಸತ್ತ್ವಾನಿ ಕ್ಷುಧಿತಾನಿ ವೈ |

ಪ್ರಲಯಂ ಯಾಂತಿ ಭೂಯಿಷ್ಠಂ ಪೃಥಿವ್ಯಾಂ ಪೃಥಿವೀಪತೇ ॥62॥
ಎಲೈ ಪೃಥಿವೀಪತಿಯೇ, ಆಗ ಅಲ್ಪಸತ್ತ್ವವುಳ್ಳ ಭೂಮಿಯಲ್ಲಿ ವಾಸಿಸುವ ಪ್ರಾಣಿಗಳೆಲ್ಲವೂ ಹಸಿವಿನಿಂದ ಹೆಚ್ಚಾಗಿ ನಾಶವನ್ನು ಹೊಂದುತ್ತವೆ.
ತತೋ ದಿನಕರೈರ್ದೀಪ್ತೈಃ ಸಪ್ತಭಿರ್ಮನುಜಾಧಿಪ |
ಪೀಯತೇ ಸಲಿಲಂ ಸರ್ವಂ ಸಮುದ್ರೇಷು ಸರಿತ್ಸು ಚ ॥63॥
ಎಲೈ ಮನುಜಾಧಿಪನೇ, ಅನಂತರ ಏಳು ಸೂರ್ಯರು ಪ್ರಖರವಾದ ತಮ್ಮ ಕಿರಣಗಳಿಂದ ಸಮುದ್ರ ಮತ್ತು ನದಿಗಳಲ್ಲಿರುವ ಎಲ್ಲಾ ಜಲವನ್ನೂ ಹೀರುತ್ತಾರೆ.
ಯಚ್ಚ ಕಾಷ್ಠಂ ತೃಣಂ ಚಾಪಿ ಶುಷ್ಕಂ ಚಾರ್ದ್ರಂ ಚ ಭಾರತ |
ಸರ್ವಂ ತದ್ ಭಸ್ಮಸಾದ್ಭೂತಂ ದೃಶ್ಯತೇ ಭರತರ್ಷಭ ॥64॥
ಎಲೈ ಭರತರ್ಷಭನೇ, ಒಣಗಿದ ಅಥವಾ ಹಸಿಯಾದ ಕಾಷ್ಠ, ತೃಣ ಮೊದಲಾದವು ಎಲ್ಲವೂ ಬೂದಿಯಾಗುವುದು ಕಂಡುಬರುತ್ತದೆ.
ತತಃ ಸಂವರ್ತಕೋ ವಹ್ನಿರ್ವಾಯುನಾ ಸಹ ಭಾರತ |
ಲೋಕಮಾವಿಶತೇ ಪೂರ್ವಮಾದಿತ್ಯೈರುಪಶೋಷಿತಮ್ ॥65॥
ಎಲೈ ಭಾರತನೇ, ಹೀಗೆ ಮೊದಲು ಸೂರ್ಯರಿಂದ ಶೋಷಣೆಗೊಂಡ ಜಗತ್ತಿನಲ್ಲಿ ಸಂವರ್ತಕವಹ್ನಿಯು ಮತ್ತು ವಾಯುವು ಉಂಟಾಗುತ್ತದೆ.
ತತಃ ಸ ಪೃಥಿವೀಂ ಭಿತ್ತ್ವಾ ಪ್ರವಿಶ್ಯ ಚ ರಸಾತಳಮ್ |
ದೇವದಾನವಯಕ್ಷಾಣಾಂ ಭಯಂ ಜನಯತೇ ಮಹತ್ ॥66॥
ಅನಂತರ ಆ ವಹ್ನಿಯು ಭೂಮಿಯನ್ನು ಭೇದಿಸಿ ರಸಾತಳವನ್ನು ಪ್ರವೇಶಿಸಿ ದೇವದಾನವ ಯಕ್ಷರಿಗೆ ದೊಡ್ಡ ಭಯವನ್ನು ಉಂಟುಮಾಡುತ್ತದೆ.
ನಿರ್ದಹನ್ ನಾಗಲೋಕಂ ಚ ಯಚ್ಚಕಿಂಚಿತ್ ಕ್ಷಿತಾವಿಹ |
ಅಧಸ್ತಾತ್ ಪೃಥಿವೀಪಾಲ ಸರ್ವಂ ನಾಶಯತೇ ಕ್ಷಣಾತ್ ॥67॥
ಎಲೈ ಪೃಥಿವೀಪಾಲಕನೇ, ಭೂಮಿಯ ಮೇಲಿದ್ದ ಎಲ್ಲವನ್ನೂ ಸುಡುತ್ತಾ ಭೂಮಿಯ ಕೆಳಗೆ ನಾಗಲೋಕದಲ್ಲಿರುವ ಎಲ್ಲವನ್ನೂ ಒಂದುಕ್ಷಣದಲ್ಲಿ ಸುಟ್ಟು ನಾಶವನ್ನು ಮಾಡುತ್ತದೆ.
ತತೋ ಯೋಜನವಿಂಶಾನಾಂ ಸಹಸ್ರಾಣಿ ಶತಾನಿ ಚ |
ನಿರ್ದಹತ್ಯಶಿವೋ ವಾಯುಃ ಸ ಚ ಸಂವರ್ತಕೋಽನಲಃ ॥68॥
ಅನಂತರ ಆ ಸಂವರ್ತಕವಹ್ನಿಯು ಇಪ್ಪತ್ತೆರಡು ಸಾವಿರ ಯೋಜನ ಎತ್ತರವಾದ ಜ್ವಾಲೆಗಳಿಂದ ಕ್ರೂರವಾದ ವಾಯುವಿನ ಜೊತೆಯಲ್ಲಿ ಸೇರಿ ಜಗತ್ತನ್ನು ಸುಡುತ್ತದೆ. ಅಗ್ನಿಜ್ವಾಲೆಗಳ ಪ್ರಕಾಶವು ಸ್ವರ್ಗಲೋಕವನ್ನೂ ತಲುಪುತ್ತದೆ.
ಸದೇವಾಸುರಗಂಧರ್ವಂ ಸಯಕ್ಷೋರಗರಾಕ್ಷಸಮ್ |
ತತೋ ದಹತಿ ದೀಪ್ತಃ ಸ ಸರ್ವಮೇವ ಜಗದ್ ವಿಭುಃ ॥69॥
ಸಮರ್ಥವಾದ ಆ ವಹ್ನಿಯು ಪ್ರಕಾಶಮಾನವಾಗಿ ದೇವಾಸುರಗಂಧರ್ವರನ್ನೂ, ಯಕ್ಷರಾಕ್ಷಸರನ್ನೂ ಎಲ್ಲವನ್ನೂ ಸುಡುತ್ತದೆ.
ತತೋ ಗಜಕುಲಪ್ರಖ್ಯಾಸ್ತಡಿನ್ ಮಾಲಾವಿಭೂಷಿತಾಃ |
ಉತ್ತಿಷ್ಠಂತಿ ಮಹಾಮೇಘಾ ನಭಸ್ಯದ್ಭುತದರ್ಶನಾಃ ॥70॥
ಅನಂತರ ಆನೆಗಳ ಸಮೂಹವನ್ನು ಹೋಲುವ ಮಿಂಚುಗಳ ಮಾಲೆಯಿಂದ ವಿಭೂಷಿತವಾದ ಅದ್ಭುತವಾಗಿ ಕಾಣುವ ಮಹಾಮೇಘಗಳು ಆಕಾಶದಲ್ಲಿ ಏಳುತ್ತವೆ.
ಕೇಚಿನ್ನೀಲೋತ್ಪಲಶ್ಯಾಮಾಃ ಕೇಚಿತ್ ಕುಮುದಸನ್ನಿಭಾಃ |
ಕೇಚಿತ್ ಕಿಂಚಲ್ಕಸಂಕಾಶಾಃ ಕೇಚಿತ್ ಪೀತಾಃ ಪಯೋಧರಾಃ ॥71॥
ಕೆಲವು ಮೋಡಗಳು ನೈದಿಲೆಯ ಬಣ್ಣವನ್ನೂ, ಕೆಲವು ಕುಮುದದ ಬಣ್ಣವನ್ನೂ, ಕೆಲವು ಕೇಸರದ ಬಣ್ಣವನ್ನೂ, ಕೆಲವು ಹಳದಿಯ ಬಣ್ಣವನ್ನೂ ಹೊಂದಿರುತ್ತವೆ.
ಕೇಚಿದ್ಧರಿದ್ರಸಂಕಾಶಾಃ ಕಾರಂಡವನಿಭಾಸ್ತಥಾ |
ಕೇಚಿತ್ ಕಮಲಪತ್ರಾಭಾಃ ಕೆಚಿದ್ಹಿಂಗುಲಸಪ್ರಭಾಃ ॥72॥
ಕೆಲವು ಮೋಡಗಳು ಅರಿಶಿನದ ಬಣ್ಣಗಳು, ಕೆಲವು ಮೋಡಗಳು ಕಾರಂಡದ ಬಣ್ಣವನ್ನೂ, ಕೆಲವು ಮೋಡಗಳು ಕಮಲಪತ್ರಗಳ ಬಣ್ಣವನ್ನೂ, ಕೆಲವು ಮೋಡಗಳು ಇಂಗುಲವೃಕ್ಷದ ಬಣ್ಣವನ್ನೂ ಹೊಂದಿರುತ್ತವೆ.
ಕೇಚಿತ್ ಪುರವರಾಕಾರಾಃ ಕೇಚಿತ್ ಗಜಕುಲೋಪಮಾಃ |
ಕೇಚಿದಂಜನಸಂಕಾಶಾಃ ಕೇಚಿನ್ಮಕರಸನ್ನಿಭಾಃ ॥73॥
ಕೆಲವು ಮೋಡಗಳು ನಗರಗಳಂತೆ ತೋರುತ್ತವೆ. ಇನ್ನು ಕೆಲವು ಗಜಸಮೂಹಗಳನ್ನು ಹೋಲುತ್ತವೆ. ಕೆಲವು ಮೊಸಳೆಯನ್ನು ಹೋಲುತ್ತವೆ. ಇನ್ನು ಕೆಲವು ಕಾಡಿಗೆಯಂತೆ ಕಪ್ಪಾಗಿರುತ್ತವೆ.
ವಿದ್ಯುನ್ಮಾಲಾಪಿನದ್ಧಾಂಗಾಃ ಸಮುತ್ತಿಷ್ಠಂತಿ ವೈ ಘನಾಃ |
ಘೋರರೂಪಾ ಮಹಾರಾಜ ಘೋರಸ್ವನನಿನಾದಿತಾಃ ॥74॥
ಎಲೈ ಮಹಾರಾಜನೇ, ಮಿಂಚಿನ ಪಂಕ್ತಿಗಳಿಂದ ಕೂಡಿದವುಗಳಾಗಿ ಭಯಂಕರವಾದ ಆಕಾರವನ್ನು ಮತ್ತು ಭಯಂಕರವಾದ ಗುಡುಗನ್ನು ಉಂಟು ಮಾಡುತ್ತಾ ಮೋಡಗಳು ಮೇಲೇಳುತ್ತವೆ.
ತತೋ ಜಲಧರಾಃ ಸರ್ವೇ ವ್ಯಾಪ್ನುವಂತಿ ನಭಃ ಸ್ಥಲಮ್ |

ಗರ್ಜಂತಃ ಪೃಥಿವೀಪಾಲ ಪೃಥಿವೀಧರಸನ್ನಿಭಾಃ ॥75॥
ಎಲೈ ಪೃಥಿವೀಪಾಲನೇ, ಅನಂತರ ಪರ್ವತಗಳಂತೆ ತೋರುವ ಎಲ್ಲ ಮೋಡಗಳೂ ಗುಡುಗಿನ ಗರ್ಜನೆಗಳನ್ನು ಮಾಡುತ್ತಾ ಆಕಾಶವನ್ನು ವ್ಯಾಪಿಸುತ್ತವೆ.
ತೈರಿಯಂ ಪೃಥಿವೀ ಸರ್ವಾ ಸಪರ್ವತವನಾಕರಾ |
ಆಪೂರ್ಯತೇ ಮಹಾರಾಜ ಸಲಿಲೌಘಪರಿಪ್ಲುತಾ ॥76॥
ಎಲೈ ಮಹಾರಾಜನೇ, ಆ ಮೋಡಗಳು ಮಳೆಯ ಪ್ರವಾಹವನ್ನೇ ಸುರಿಸಿ ಪರ್ವತ, ವನಗಳಿಂದ ತುಂಬಿದ ಎಲ್ಲಾ ಭೂಮಿಯನ್ನೂ ನೀರಿನಿಂದ ತುಂಬುತ್ತವೆ.
ತತಸ್ತೇ ಜಲದಾ ಘೋರಾ ರಾವಿಣಃ ಪುರುಷರ್ಷಭ |
ಸರ್ವತಃ (ಪರ್ವತಾನ್) ಪ್ಲಾವಯಂತ್ಯಾಶು ಚೋದಿತಾಃ ಪರಮೇಷ್ಠಿನಾ ॥
ಎಲೈ ಪುರುಷರ್ಷಭನೇ, ಅನಂತರ ಆ ಮೋಡಗಳು ಬ್ರಹ್ಮದೇವರ ಪ್ರೇರಣೆಗೆ ಅನುಸಾರವಾಗಿ ಗರ್ಜನೆಯನ್ನು ಮಾಡುತ್ತಾ ಎಲ್ಲವನ್ನೂ ಶೀಘ್ರದಲ್ಲಿ ಕೊಚ್ಚಿಹಾಕುತ್ತವೆ.
ವರ್ಷಮಾಣಾ ಮಹತ್ತೋಯಂ ಪೂರಯಂತೋ ವಸುಂಧರಾಮ್ |
ಸುಘೋರಮಶಿವಂ ರೌದ್ರಂ ನಾಶಯಂತಿ ಚ ಪಾವಕಮ್ ॥78॥
ದೊಡ್ಡ ಮಳೆಯನ್ನು ಕರೆದು ಭೂಮಿಯನ್ನು ನೀರಿನಿಂದ ತುಂಬಿ ಭಯಂಕರವಾಗಿದ್ದ ಅಮಂಗಳವಾದ, ಘೋರವಾದ ಸಂವರ್ತಕವಹ್ನಿಯನ್ನು ನಾಶಮಾಡುತ್ತವೆ.
ತತೋ ದ್ವಾದಶವರ್ಷಾಣಿ ಪಯೋದಾಸ್ತ ಉಪಪ್ಲವೇ |
ಧಾರಾಭಿಃ ಪೂರಯಂತೋ ವೈ ಚೋದ್ಯಮಾನಾ ಮಹಾತ್ಮನಾ ॥79॥
ಲೋಕಕ್ಷಯದ ಕಾಲದಲ್ಲಿ ಬ್ರಹ್ಮದೇವರಿಂದ ಪ್ರೇರಿತವಾದ ಆ ಮೇಘಗಳು ತಮ್ಮ ಮಳೆಯ ಧಾರೆಯಿಂದ ಎಲ್ಲವನ್ನೂ ತುಂಬುತ್ತಾ ಹನ್ನೆರಡು ವರ್ಷಗಳವರೆಗೆ ಮಳೆಯನ್ನು ಸುರಿಸುತ್ತವೆ.
ತತಃ ಸಮುದ್ರಃ ಸ್ವಾಂ ವೇಲಾಮತಿಕ್ರಾಮತಿ ಭಾರತ |
ಪರ್ವತಾಶ್ಚ ವಿದೀರ್ಯಂತೇ ಮಹೀ ಚಾಪ್ಸು ನಿಮಜ್ಜತಿ ॥80॥
ಎಲೈ ಭಾರತನೇ, ಆಗ ಸಮುದ್ರವು ತನ್ನ ಎಲ್ಲೆಯನ್ನು ಮೀರಿ ಉಕ್ಕುತ್ತದೆ. ಪರ್ವತಗಳು ಬಿರಿಯುತ್ತದೆ ಮತ್ತು ಭೂಮಿಯು ನೀರಿನಲ್ಲಿ ಮುಳುಗಿ ಹೋಗುತ್ತದೆ.
ಸರ್ವತಃ  ಸಹಸಾ ಭ್ರಾಂತಾಸ್ತೇ ಪಯೋದಾ ನಭಸ್ತಳಮ್ |
ಸಂವೇಷ್ಟಯಿತ್ವಾ ನಶ್ಯಂತಿ ವಾಯುವೇಗಪರಾಹತಾಃ ॥81॥
ಅನಂತರ ವಾಯುವೇಗಕ್ಕೆ ಸಿಲುಕಿದ ಆ ಮೋಡಗಳು ನಭಸ್ತಳದಲ್ಲಿ ಎಲ್ಲ ಕಡೆಯಲ್ಲಿಯೂ ಸುತ್ತುತ್ತಾ ಶೀಘ್ರವಾಗಿ ನಾಶವನ್ನು ಹೊಂದುತ್ತವೆ.
ತತಸ್ತಂ ಮಾರುತಂ ಘೋರಂ ಸ್ವಯಂಭೂರ್ಮನುಜಾಧಿಪ |
ಆದಿಃ ಪದ್ಮಾಲಯೋ ದೇವಃ ಪೀತ್ವಾ ಸ್ವಪಿತಿ ಭಾರತ ॥82॥
ಎಲೈ ಭಾರತನೇ, ಮನುಜಾಧಿಪನೇ, ಆಗ ಪದ್ಮವಾಸಿಯೂ ಮತ್ತು ಜಗದಾದಿಯೂ ಆದ ಬ್ರಹ್ಮದೇವರು ಆ ಘೋರವಾದ ವಾಯುವನ್ನು ಪಾನಮಾಡಿ ನಿದ್ರೆ ಮಾಡುತ್ತಾರೆ.
ತಸ್ಮಿನ್ನೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ |
ನಷ್ಟೇ ದೇವಾಸುರಗಣೇ ಯಕ್ಷರಾಕ್ಷಸವರ್ಜಿತೇ ॥83॥
ನಿರ್ಮನುಷ್ಯೇ ಮಹೀಪಾಲ ನಿಃಶ್ವಾಪದಮಹೀರುಹೇ |
ಅನಂತರಿಕ್ಷೇ ಲೋಕೇಽಸ್ಮಿನ್ ಭ್ರಮಾಮ್ಯೇಕೋಽಹಮಾಹತಃ ॥84॥
ಅಂತಹ ಸ್ಥಾವರ ಜಂಗಮ ರಹಿತವಾದ ದೇವಾಸುರ ಸಮೂಹರಹಿತವಾದ, ಯಕ್ಷರಾಕ್ಷಸಶೂನ್ಯವಾದ, ಮನುಷ್ಯರಹಿತವಾದ, ವೃಕ್ಷಗಳಿಂದಲೂ ಕ್ರೂರ ಪ್ರಾಣಿಗಳಿಂದಲೂ ರಹಿತವಾದ ಅಂತರಿಕ್ಷರಹಿತವಾದ ಏಕಾರ್ಣವ ಲೋಕದಲ್ಲಿ ನಾನೊಬ್ಬನೇ ಆ ನೀರಿನ ಹೊಡೆತಕ್ಕೆ ಸಿಕ್ಕಿ ಸಂಚರಿಸುತ್ತೇನೆ (ಸಂಚರಿಸಿದೆನು).
ಏಕಾರ್ಣವೇ ಜಲೇ ಘೋರೇ ವಿಚರನ್ ಪಾರ್ಥಿವೋತ್ತಮ |
ಅಪಶ್ಯನ್ ಸರ್ವಭೂತಾನಿ ವೈಕ್ಲವ್ಯಮಗಮಂ ತತಃ ॥85॥
ಎಲೈ ಪಾರ್ಥಿವಶ್ರೇಷ್ಠನೇ, ಅಂತಹ ಏಕಾರ್ಣವವಾದ ಘೋರ ಜಲದಲ್ಲಿ ಸಂಚರಿಸುತ್ತಾ ಬೇರೆ ಯಾವ ಪ್ರಾಣಿಯನ್ನೂ ಕಾಣದೆ ನಾನು ಮನಸ್ಸಿನಲ್ಲಿ ಬಹಳ ವಿಷಾದವನ್ನು ಹೊಂದಿದೆನು.
ತತಃ ಸುದೀರ್ಘಂ ಗತ್ವಾಽಹಂ ಪ್ಲವಮಾನೋ ನರಾಧಿಪ |
ಶ್ರಾಂತಃ ಕ್ವಚಿನ್ನ ಶರಣಂ ಲಭಾಮ್ಯಹಮತಂದ್ರಿತಃ ॥86॥
ಎಲೈ ನರಾಧಿಪನೇ, ಅನಂತರ ನಾನು ಬಹುಕಾಲದವರೆಗೆ ಆಲಸ್ಯವಿಲ್ಲದೆ ಆ ಜಲದಲ್ಲಿ ಎಷ್ಟು ಈಜಿದಣಿದರೂ ಎಲ್ಲಿಯೂ ಒಂದು ಆಶ್ರಯವು ದೊರೆಯುವುದಿಲ್ಲ.
ತತಃ ಕದಾಚಿತ್ ಪಶ್ಯಾಮಿ ತಸ್ಮಿನ್ ಸಲಿಲಸಂಚಯೇ |
ನ್ಯಗ್ರೋಧಂ ಸುಮಹಾಂತಂ ವೈ ವಿಶಾಲಂ ಪೃಥಿವೀಪತೇ ॥87॥
ಎಲೈ ಪೃಥಿವೀಪತಿಯೇ, ಆಗ ಒಮ್ಮೆ ನಾನು ಆ ಜಲರಾಶಿಯಲ್ಲಿ ವಿಶಾಲವಾದ ಒಂದು ದೊಡ್ಡ ಆಲದ ಮರವನ್ನು ನೋಡುತ್ತೇನೆ.
ಶಾಖಾಯಾಂ ತಸ್ಯ ವೃಕ್ಷಸ್ಯ ವಿಸ್ತೀರ್ಣಾಯಾಂ ನರಾಧಿಪ |

ಪರ್ಯಂಕೇ ಪೃಥಿವೀಪಾಲ ದಿವ್ಯಾಸ್ತರಣಸಂಸ್ಕೃತೇ ॥88॥
ಉಪವಿಷ್ಟಂ ಮಹಾರಾಜ ಪದ್ಮೇಂದುಸದೃಶಾನನಮ್ |
ಫುಲ್ಲಪದ್ಮವಿಶಾಲಾಕ್ಷಂ ಬಾಲಂ ಪಶ್ಯಾಮಿ ಭಾರತ ॥89॥
ಎಲೈ ನರಾಧಿಪನೇ, ಎಲೈ ಭಾರತನೇ, ಆ ವಿಸ್ತೀರ್ಣವಾದ ವೃಕ್ಷದ ಒಂದು ಶಾಖೆಯಲ್ಲಿ ದಿವ್ಯವಾದ ಹಾಸಿಗೆಯನ್ನು ಹಾಸಿದ ಮಂಚದಲ್ಲಿ ಕುಳಿತಿರುವ ಪದ್ಮದಂತೆ ಚಂದ್ರನಂತೆ ಕಾಂತಿಯುಳ್ಳ ಮುಖವುಳ್ಳ, ಅರಳಿದ ಪದ್ಮಪತ್ರದಂತೆ ವಿಶಾಲವಾದ ನೇತ್ರವುಳ್ಳ ಬಾಲಕನನ್ನು ನೋಡುತ್ತೇನೆ.
ತತೋ ಮೇ ಪೃಥಿವೀಪಾಲ ವಿಸ್ಮಯಃ ಸುಮಹಾನಭೂತ್ |
ಕಥಂ ತ್ವಯಂ ಶಿಶುಃ ಶೇತೇ ಲೋಕೇ ನಾಶಮುಪಾಗತೇ ॥90॥
ಎಲೈ ಪೃಥಿವೀಪಾಲನೇ, ಆಗ ನನಗೆ ಎಲ್ಲ ಲೋಕವೂ ನಾಶವನ್ನು ಹೊಂದಿರುವಾಗ ಈ ಮಗುವು ಇಲ್ಲಿ ಹೇಗೆ ಮಲಗಿದೆ? ಎಂದು ದೊಡ್ಡ ವಿಸ್ಮಯವುಂಟಾಯಿತು.
ತಪಸಾ ಚಿಂತಯಂಶ್ಚಾಪಿ ತಂ ಶಿಶುಂ ನೋಪಲಕ್ಷಯೇ |
ಭೂತಂ ಭವ್ಯಂ ಭವಿಷ್ಯಂ ಚ ಜಾನನ್ನಪಿ ನರಾಧಿಪ ॥91॥
ಎಲೈ ನರಾಧಿಪನೇ, ನಾನು ಭೂತ ಭವ್ಯ ಭವಿಷ್ಯತ್ತುಗಳನ್ನು ತಿಳಿದಿದ್ದರೂ ಸಹ, ಎಷ್ಟು ತಪಸ್ಸನ್ನು ಯೋಜನೆ ಮಾಡಿದರೂ ಆ ಶಿಶುವು ಯಾರೆಂದು ತಿಳಿಯುವುದಿಲ್ಲ.
ಅತಸೀಪುಷ್ಪವರ್ಣಾಭಃ ಶ್ರೀವತ್ಸಕೃತಭೂಷಣಃ |
ಸಾಕ್ಷಾಲ್ಲಕ್ಷ್ಮ್ಯಾ ಇವಾವಾಸಃ ಸ ತದಾ ಪ್ರತಿಭಾತಿ ಮೇ ॥92॥
ಆಗ ಅಗಸೆಯ ಪುಷ್ಪದ ಬಣ್ಣವುಳ್ಳ ಶ್ರೀವತ್ಸಲಾಂಛನನಾದ, ಲಕ್ಷ್ಮಿಯ ಸಾಕ್ಷಾನ್ನಿವಾಸ ಸ್ಥಾನವಾದ ಅವನು ಯಾರೆಂದು ಹೊಳೆಯುತ್ತದೆ.
ತತೋ ಮಾಮಬ್ರವೀದ್ ಬಾಲಃ ಸ ಪದ್ಮನಿಭಲೋಚನಃ |
ಶ್ರೀವತ್ಸಧಾರೀ ದ್ಯುತಿಮಾನ್ ವಾಕ್ಯಂ ಶ್ರುತಿಸುಖಾವಹಮ್ ॥93॥
ಆಗ ಶ್ರೀವತ್ಸಧಾರಿಯಾದ, ಕಾಂತಿಯುಕ್ತನಾದ, ಪದ್ಮನೇತ್ರನಾದ ಆ ಬಾಲಕನು ನನ್ನ ಕಿವಿಗಳಿಗೆ ಸಂತೋಷವುಂಟಾಗುವಂತೆ ಹೀಗೆ ಮಾತನಾಡಿದನು.
ಜಾನಾಮಿ ತ್ವಾಂ ಪರಿಶ್ರಾಂತಂ ತತೋ ವಿಶ್ರಾಮಕಾಂಕ್ಷಿಣಮ್ |
ಮಾರ್ಕಂಡೇಯ ಇಹಾಸ್ವ ತ್ವಂ ಯಾವದಿಚ್ಛಸಿ ಭಾರ್ಗವ ॥94॥
ಎಲೈ ಭಾರ್ಗವನಾದ ಮಾರ್ಕಂಡೇಯನೇ, ನೀನು ಬಹಳ ದಣಿದು ವಿಶ್ರಾಂತಿಯನ್ನು ಬಯಸುತಿತದ್ದೀಯೆ ಎಂದು ನಾನು ತಿಳಿದಿದ್ದೇನೆ. ಇಲ್ಲಿ ನಿನಗೆ ಬೇಕಾದಷ್ಟು ಸಮಯದವರೆಗೆ ವಿಶ್ರಾಂತಿಯನ್ನು ಪಡೆಯುವವನಾಗು.
ಅಭ್ಯಂತರಂ ಶರೀರೇ ಮೇ ಪ್ರವಿಶ್ಯ ಮುನಿಸತ್ತಮ |
ಆಸ್ವ ಭೋ ವಿಹಿತೋ ವಾಸಃ ಪ್ರಸಾದಸ್ತೇ ಕೃತೋ ಮಯಾ ॥95॥
ಎಲೈ ಮುನಿಶ್ರೇಷ್ಠನೇ, ನನ್ನ ಶರೀರದ ಒಳಗೆ ಪ್ರವೇಶಿಸು. ನಿನಗೆ ನಾನು ವಾಸಸ್ಥಾನವನ್ನು ಕಲ್ಪನೆ ಮಾಡಿದ್ದೇನೆ. ನಿನಗೆ ನಾನು ಅನುಗ್ರಹವನ್ನು ಮಾಡಿದ್ದೇನೆ (ಎಂದು ಹೇಳಿದನು).
ತತೋ ಬಾಲೇನ ತೇನೈವಮುಕ್ತಸ್ಯಾಸೀತ್ ತದಾ ಮಮ |
ನಿರ್ವೇದೋ ಜೀವಿತೇ ದೀರ್ಘೇ ಮನುಷ್ಯತ್ವೇ ಚ ಭಾರತ ॥96॥
ಎಲೈ ಭಾರತನೇ, ಆ ಬಾಲಕನಿಂದ ಈ ಮಾತುಗಳನ್ನು ಕೇಳಿದ ನನಗೆ ನನ್ನ ದೀರ್ಘವಾದ ಜೀವನದಲ್ಲಿ ಮತ್ತು ಮನುಷ್ಯಭಾವದಲ್ಲಿ ವೈರಾಗ್ಯವುಂಟಾಯಿತು.
ತತೋ ಬಾಲೇನ ತೇನಾಸ್ಯಂ ಸಹಸಾ ವಿವೃತಂ ಕೃತಮ್ |
ತಸ್ಯಾಹಮವಶೋ ವಕ್ತ್ರೇ ದೈವಯೋಗಾತ್ ಪ್ರವೇಶಿತಃ ॥97॥
ಆಗ ಆ ಬಾಲಕನು ಇದ್ದಕ್ಕಿದ್ದಂತೆಯೇ ತನ್ನ ಬಾಯನ್ನು ತೆರೆದನು. ನಾನು ನನಗೆ ಅರಿವಿಲ್ಲದೆಯೇ ದೈವಯೋಗದಿಂದ ಅವನ ಬಾಯಿಯಲ್ಲಿ ಪ್ರವೇಶಿಸಿದೆ.
ತತಃ ಪ್ರವಿಷ್ಟಸ್ತತ್ಕುಕ್ಷಿಂ ಸಹಸಾ ಮನುಜಾಧಿಪ |
ಸರಾಷ್ಟ್ರನಗರಾಕಾರಂ ಕೃತ್ಸ್ನಾಂ ಪಶ್ಯಾಮಿ ಮೇದಿನೀಮ್ ॥98॥
ಎಲೈ ಮನುಜಾಧಿಪನೇ, ಅವನ ಬಾಯಿಯ ಮಾರ್ಗವಾಗಿ ಅವನ ಉದರವನ್ನು ಸೇರಿದವನಾಗಿ ಅಲ್ಲಿ ರಾಷ್ಟ್ರನಗರಗಳಿಂದ ಕೂಡಿದ ಸಮಗ್ರವಾದ ಭೂಮಿಯನ್ನು ನೋಡಿದೆ (ಮಹಾಪ್ರಳಯವನ್ನು ನನಗೆ ತೋರಿಸು ಎಂದು ಮಾರ್ಕಂಡೇಯರಿಂದ ಪ್ರಾರ್ಥಿತನಾದ ಭಗವಂತನಾದ ನಾರಾಯಣನು ಸ್ವಪ್ನಕಾಲದಲ್ಲಿ ಭೂಧರಾದಿಗಳನ್ನು ಸೃಷ್ಟಿ ಮಾಡುವಂತೆ ತನ್ನ ಅಚಿಂತ್ಯಶಕ್ತಿಯಿಂದ ಮಹಾಪ್ರಳಯ ಪ್ರತಿನಿಧಿಯಾದ ಒಂದು ಪ್ರಳಯವನ್ನು ಸೃಷ್ಟಿಮಾಡಿ ಮಾರ್ಕಂಡೇಯರಿಗೆ ಅದನ್ನು ತೋರಿಸಿ ತನ್ನ ಉದರದಲ್ಲಿದ್ದ ವಿನಾಶವನ್ನು ಹೊಂದದಿರುವ ಸಕಲ ಪ್ರಪಂಚವನ್ನೂ ತೋರಿಸಿದನು. ಏಕೆಂದರೆ ಬ್ರಹ್ಮದೇವರ ದೈನಂದಿನ ಪ್ರಳಯದಲ್ಲಿ ಬ್ರಹ್ಮದೇವರೂ ನಿದ್ರೆ ಮಾಡುವಾಗ ಮಾರ್ಕಂಡೇಯರು ಎಚ್ಚರದಿಂದಿರಲು ಸಾಧ್ಯವಿಲ್ಲ ಎಂದು ವಾದಿರಾಜರು ಲಕ್ಷಾಲಂಕಾರದಲ್ಲಿ ತಿಳಿಸುತ್ತಾರೆ).
ಗಂಗಾಂ ಶತದ್ರುಂ ಸೀತಾಂ ಚ ಯಮುನಾಮಥ ಕೌಶಿಕೀಮ್ |
ಚರ್ಮಣ್ವತೀಂ ವೇತ್ರವತೀಂ ಚಂದ್ರಭಾಗಾಂ ಸರಸ್ವತೀಮ್ ॥99॥
ಸಿಂಧುಂ ಚೈವ ವಿಪಾಶಾಂ ಚ ನದೀಂ ಗೋದಾವರೀಮಪಿ |

ವಸ್ವೋಕಸಾರಾಂ ನಳಿನೀಂ ನರ್ಮದಾಂ ಚೈವ ಭಾರತ ॥100॥
ಎಲೈ ಭಾರತನೇ, ಗಂಗಾ, ಶತದ್ರು, ಸೀತಾ, ಯಮುನಾ, ಕೌಶಿಕೀ, ಚರ್ಮಣ್ವತೀ, ವೇತ್ರವತೀ, ಚಂದ್ರಭಾಗಾ, ಸರಸ್ವತೀ, ಸಿಂಧು, ವಿಪಾಶಾ, ಗೋದಾವರೀ, ವಸ್ವೋಕಸಾರಾ, ನಳಿನೀ, ನರ್ಮದಾ ಮೊದಲಾದ ನದಿಗಳನ್ನು ನೋಡಿದೆನು.
ನದೀಂ ತಾಮ್ರಾಂ ಚ ವೇಣ್ಣಾಂ ಚ ಪುಣ್ಯತೋಯಾಂ ಶುಭಾವಹಾಮ್|
ಸುವೇಣಾಂ ಕೃಷ್ಣವೇಣಾಂ ಚ ಇರಾಮಾಂ ಚ ಮಹಾನದೀಮ್ |
ವಿತಸ್ತಾಂ ಚ ನರವ್ಯಾಘ್ರ ಕಾವೇರೀಂ ಸರಿತಾಂ ವರಾಮ್ ॥101॥
ಎಲೈ ನರವ್ಯಾಘ್ರನೇ, ತಾಮ್ರನದಿ, ಪುಣ್ಯಜಲದಿಂದ ಕೂಡಿದ ವೇಣ್ಣ ನದಿ, ಕೃಷ್ಣಾ ನದಿ, ಇರಾಮಾ ಮಹಾನದಿ, ವಿತಸ್ತಾ ಮತ್ತು ನದಿಗಳಲ್ಲಿ ಶ್ರೇಷ್ಠವಾದ ಕಾವೇರಿ ಇವುಗಳನ್ನು ನೋಡಿದನು.
ಶೋಣಾಂ(ಣಂ) ಚ ಪುರುಷವ್ಯಾಘ್ರ ವಿಶಲ್ಯಾಂ ಕಿಂಪುನಾಮಪಿ ॥102॥
ಏತಾಶ್ಚಾನ್ಯಾಶ್ಚ ನದ್ಯೋಽಹಂ ಪೃಥಿವ್ಯಾಂ ಯಾ ನರೋತ್ತಮ |
ಪರಿಕ್ರಾಮನ್ ಪ್ರಪಶ್ಯಾಮಿ ತಸ್ಯ ಕುಕ್ಷೌ ಮಹಾತ್ಮನಃ ॥103॥
ಎಲೈ ಪುರುಷವ್ಯಾಘ್ರನೇ, ನರೋತ್ತಮನೇ, ಶೋಣ, ವಿಶಲ್ಯಾ, ಕಿಂಪುನ ಇವೇ ಮೊದಲಾದ ಭೂಮಿಯಲ್ಲಿರುವ ಇನ್ನೂ ಅನೇಕ ನದಿಗಳನ್ನು ಆ ಮಹಾತ್ಮನ ಕುಕ್ಷಿಯಲ್ಲಿ ಸಂಚಾರವನ್ನು ಮಾಡುತ್ತಾ ನಾನು ನೋಡಿದೆನು.
ತತಃ ಸಮುದ್ರಂ ಪಶ್ಯಾಮಿ ಯಾದೋಗಣನಿಷೇವಿತಮ್ |
ರತ್ನಾಕರಮಮಿತ್ರಘ್ನ ಪಯಸೋ ನಿಧಿಮುತ್ತಮಮ್ ॥104॥
ಎಲೈ ಶತ್ರುಸೂದನನೇ, ಅನಂತರ ನಾನು ಜಲಚರಪ್ರಾಣಿಗಳಿಂದ ಕೂಡಿದ ರತ್ನಾಕರವಾದ ಶ್ರೇಷ್ಠ ಜಲನಿಧಿಯಾದ ಸಮುದ್ರವನ್ನು ನೋಡಿದೆನು.
ತತ್ರ ಪಶ್ಯಾಮಿ ಗಗನಂ ಚಂದ್ರಸೂರ್ಯವಿರಾಜಿತಮ್ |
ಜಾಜ್ವಲ್ಯಮಾನಂ ತೇಜೋಭಿಃ ಪಾವಕಾರ್ಕಸಮಪ್ರಭಮ್ ॥105॥
ಅಲ್ಲಿ ನಾನು ಅಗ್ನಿಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳ ತಮ್ಮ ತೇಜಸ್ಸಿನಿಂದ ಹೊಳೆಯುತ್ತಿರುವ ಚಂದ್ರಸೂರ್ಯರಿಂದ ವಿರಾಜಿತವಾದ ಗಗನವನ್ನು ನೋಡಿದೆನು.
ಪಶ್ಯಾಮಿ ಚ ಮಹೀಂ ರಾಜನ್ ಕಾನನೈರುಪಶೋಭಿತಾಮ್ |
ಸಪರ್ವತವನದ್ವೀಪಾಂ ನಿಮ್ನಗಾಶತಸಂಕುಲಾಮ್ ॥106॥
ಎಲೈ ರಾಜನೇ, ಕಾನನಗಳಿಂದ ಶೋಭಿತವಾದ, ಪರ್ವತವನದ್ವೀಪಗಳಿಂದ ಕೂಡಿದ, ನೂರಾರು ನದಿಗಳಿಂದ ನಿಬಿಡವಾದ ಎಲ್ಲ ಭೂಮಿಯನ್ನು ನೋಡಿದೆನು.
ಯಜಂತೇ ಹಿ ತದಾ ರಾಜನ್ ಬ್ರಾಹ್ಮಣಾ ಬಹುಭಿರ್ಮಖೈಃ |
ಕ್ಷತ್ರಿಯಾಶ್ಚ ಪ್ರವರ್ತಂತೇ ಸರ್ವವರ್ಣಾನುರಂಜನೈಃ ॥107॥
ಅಲ್ಲಿ ಬ್ರಾಹ್ಮಣರು ಅನೇಕ ವಿಧವಾದ ಯಾಗಗಳಿಂದ ದೇವರನ್ನು ಆರಾಧಿಸುತ್ತಾರೆ. ಕ್ಷತ್ರಿಯರು ಎಲ್ಲ ವರ್ಣಗಳಿಗೂ ಸಂತೋಷವನ್ನು ಉಂಟು ಮಾಡುತ್ತಾ ಪ್ರವೃತ್ತರಾಗುತ್ತಾರೆ.
ವೈಶ್ಯಾಃ ಕೃಷಿಂ ಯಥಾನ್ಯಾಯಂ ಕಾರಯಂತಿ ನರಾಧಿಪ |
ಶುಶ್ರೂಷಾಯಾಂ ಚ ನಿರತಾ ದ್ವಿಜಾನಾಂ ವೃಷಲಾಸ್ತದಾ ॥108॥
ಎಲೈ ನರಾಧಿಪನೇ, ವೈಶ್ಯರು ನ್ಯಾಯಪ್ರಾಪ್ತವಾದ ಕೃಷಿಯನ್ನು ಮಾಡಿಸುತ್ತಾರೆ. ಶೂದ್ರರು ದ್ವಿಜರ ಸೇವೆಯಲ್ಲಿ ನಿರತರಾಗಿದ್ದಾರೆ.
ತತಃ ಪರಿಪತನ್ ರಾಜಂಸ್ತಸ್ಯ ಕುಕ್ಷೌ ಮಹಾತ್ಮನಃ |
ಹಿಮವಂತಂ ಚ ಪಶ್ಯಾಮಿ ಹೇಮಕೂಟಂ ಚ ಪರ್ವತಮ್ ॥109॥
ಎಲೈ ರಾಜನೇ, ಆಗ ಹೀಗೆಯೇ ಆ ಮಹಾತ್ಮನ ಉದರದಲ್ಲಿ ಸಂಚರಿಸುತ್ತಾ ಹಿಮಾಲಯ ಪರ್ವತವನ್ನೂ, ಹೇಮಕೂಟಪರ್ವತವನ್ನೂ ನೋಡಿದೆನು.
ನಿಷಧಂ ಚಾಪಿ ಪಶ್ಯಾಮಿ ಶ್ವೇತಂ ಚ ರಜತಾನ್ವಿತಮ್ |
ಪಶ್ಯಾಮಿ ಚ ಮಹೀಪಾಲ ಪರ್ವತಂ ಗಂಧಮಾದನಮ್ ॥110॥
ಎಲೈ ಮಹೀಪಾಲನೇ, ನಿಷಧಪರ್ವತವನ್ನೂ, ರಜತಾನ್ವಿತವಾದ ಶ್ವೇತ ಪರ್ವತವನ್ನೂ ಮತ್ತು ಗಂಧಮಾದನಪರ್ವತವನ್ನೂ ನೋಡಿದೆನು.
ಮಂದರಂ ಮನುಜವ್ಯಾಘ್ರ ನೀಲಂ ಚಾಪಿ ಮಹಾಗಿರಿಮ್ |
ಪಶ್ಯಾಮಿ ಚ ಮಹಾರಾಜ ಮೇರುಂ ಕನಕಪರ್ವತಮ್ ॥111॥
ಎಲೈ ಮನುಜವ್ಯಾಘ್ರನೇ, ಮಹಾರಾಜನೇ, ಮಂದರಪರ್ವತವನ್ನೂ ಮಹಾಪರ್ವತವಾದ ನೀಲವನ್ನೂ, ಸುವರ್ಣಮಯವಾದ ಮೇರು ಪರ್ವತವನ್ನೂ ನೋಡಿದೆನು.
ಮಾಹೇಂದ್ರಂ ಚೈವ ಪಶ್ಯಾಮಿ ವಿಂಧ್ಯಂ ಚ ಗಿರಿಮುತ್ತಮಮ್ |
ಮಲಯಂ ಚಾಪಿ ಪಶ್ಯಾಮಿ ಪಾರಿಯಾತ್ರಂ ಚ ಪರ್ವತಮ್ ॥112॥
ಮಹೇಂದ್ರ ಪರ್ವತವನ್ನೂ, ಶ್ರೇಷ್ಠವಾದ ವಿಂದ್ಯ ಪರ್ವತವನ್ನೂ, ಮಲಯ ಪರ್ವತವನ್ನೂ ಮತ್ತು ಪಾರಿಯಾತ್ರ ಪರ್ವತವನ್ನೂ ನೋಡಿದೆನು.
ಏತೇ ಚಾನ್ಯೇ ಚ ಬಹವೋ ಯಾವಂತಃ ಪೃಥಿವೀಧರಾಃ |
ತಸ್ಯೋದರೇ ಮಯಾ ದೃಷ್ಟಾಃ ಸರ್ವೇ ರತ್ನವಿಭೂಷಿತಾಃ ॥113॥

ಇವುಗಳನ್ನೂ ಮತ್ತು ಇನ್ನೂ ಭೂಮಿಯಲ್ಲಿ ಎಷ್ಟು ಪರ್ವತಗಳಿವೆಯೋ ಅಂತಹ ರತ್ನ ವಿಭೂಷಿತವಾದ ಎಲ್ಲಾ ಪರ್ವತಗಳನ್ನೂ ನಾನು ಅವನ ಉದರದಲ್ಲಿ ನೋಡಿದೆನು.
ಸಿಂಹಾನ್ ವ್ಯಾಘ್ರಾನ್ ವರಾಹಾಂಶ್ಚ ಪಶ್ಯಾಮಿ ಮನುಜಾಧಿಪ |
ಪೃಥಿವ್ಯಾಂ ಯಾನಿ ಚಾನ್ಯಾನಿ ಸತ್ತತ್ವಾನಿ ಜಗತೀಪತೇ ॥114॥
ತಾನಿ ಸರ್ವಾಣ್ಯಹಂ ತತ್ರ ಪಶ್ಯನ್ ಪರ್ಯಚರಂ ತದಾ ॥115॥
ಎಲೈ ಮನುಜಾಧಿಪನೇ, ಸಿಂಹಗಳನ್ನೂ, ವ್ಯಾಘ್ರಗಳನ್ನೂ ಮತ್ತು ವರಾಹಗಳನ್ನೂ ಅವನ ಉದರದಲ್ಲಿ ನೋಡಿದೆನು. ಎಲೈ ಜಗತೀಪತಿಯೇ, ಭೂಮಿಯಲ್ಲಿ ಎಷ್ಟು ಪ್ರಾಣಿಗಳಿವೆಯೋ ಅವೆಲ್ಲವನ್ನೂ ನಾನು ಅವನ ಉದರದಲ್ಲಿ ನೋಡುತ್ತಾ ಸಂಚರಿಸಿದೆನು.
ಕುಕ್ಷೌ ತಸ್ಯ ನರವ್ಯಾಘ್ರ ಪ್ರವಿಷ್ಟಃ ಸಂಚರನ್ ದಿಶಃ |
ಶಕ್ರಾದೀಂಶ್ಚಾಪಿ ಪಶ್ಯಾಮಿ ಕೃತ್ಸ್ನಾನ್ ದೇವಗಣಾನಹಮ್ ॥116॥
ಎಲೈ ನರವ್ಯಾಘ್ರನೇ, ನಾನು ಅವನ ಉದರದಲ್ಲಿ ಪ್ರವೇಶ ಮಾಡಿ ಸಂಚರಿಸುತ್ತಾ ದಿಕ್ಕುಗಳನ್ನೂ, ಇಂದ್ರಾದಿ ಸರ್ವದೇವತಾ ಗಣವನ್ನೂ ನೋಡಿದೆನು.
ಸಾಧ್ಯಾನ್ ರುದ್ರಾಂಸ್ತಥಾಽಽದಿತ್ಯಾನ್ ಗುಹ್ಯಕಾನ್ ಪಿತರಸ್ತದಾ |
ಸರ್ಪಾನ್ ನಾಗಾನ್ ಸುಪರ್ಣಾಂಶ್ಚ ವಸೂನಪ್ಯಶ್ವಿನಾವಪಿ ॥
ಸಾಧ್ಯರನ್ನೂ, ರುದ್ರರನ್ನೂ, ಆದಿತ್ಯರನ್ನೂ, ಗುಹ್ಯಕರನ್ನೂ, ಪಿತೃಗಳನ್ನೂ, ಸರ್ಪಗಳನ್ನೂ, ನಾಗಗಳನ್ನೂ, ಸುಪರ್ಣಗಳನ್ನೂ, ವಸುಗಳನ್ನೂ ಮತ್ತು ಅಶ್ವಿನೀ ದೇವತೆಗಳನ್ನೂ ನೋಡಿದೆನು.
ಗಂಧರ್ವಾಪ್ಸರಸೋ ಯಕ್ಷಾನೃಷೀಂಶ್ಚೈವ ಮಹೀಪತೇ |
ದೈತ್ಯದಾನವಸಂಘಾಂಶ್ಚ ನಾಗಾಂಶ್ಚ ಮನುಜಾಧಿಪ |
ಸಿಂಹಿಕಾತನಯಾಂಶ್ಚಾಪಿ ಯೇ ಚಾನ್ಯೇ ಸುರಶತ್ರವಃ ॥117॥
ಎಲೈ ಮಹೀಪತಿಯೇ, ಗಂಧರ್ವಾಪ್ಸರಸರನ್ನೂ, ಯಕ್ಷರನ್ನೂ, ಋಷಿಗಳನ್ನೂ ದೈತ್ಯದಾನವ ಸಮೂಹಗಳನ್ನೂ, ನಾಗಗಳನ್ನೂ, ರಾಹುಕೇತುಗಳನ್ನೂ ಮತ್ತು ಬೇರೆ ದೇವಶತ್ರುಗಳನ್ನೂ ನೋಡಿದೆನು.
ಯಚ್ಚ ಕಿಂಚಿನ್ಮಯಾ ಲೋಕೇ ದೃಷ್ಟಂ ಸ್ಥಾವರಜಂಗಮಮ್ |
ಸರ್ವಂ ಪಶ್ಯಾಮ್ಯಹಂ ರಾಜಂಸ್ತಸ್ಯ ಕುಕ್ಷೌ ಮಹಾತ್ಮನಃ ॥118॥
ಎಲೈ ರಾಜನೇ, ನಾನು ಈ ಲೋಕದಲ್ಲಿ ಎಷ್ಟು ಸ್ಥಾವರಜಂಗಮ ವಸ್ತುಗಳನ್ನು ನೋಡಿದ್ದೇನೆಯೋ ಅವೆಲ್ಲವನ್ನೂ ಆ ಮಹಾತ್ಮನ ಉದರದಲ್ಲಿ ನೋಡಿದೆನು.
ಚರಮಾಣಃ ಫಲಾಹಾರಃ ಕೃತ್ಸ್ನಂ ಜಗದಿದಂ ವಿಭೋ |
ಅಂತಃಶರೀರೇ ತಸ್ಯಾಹಂ ವರ್ಷಾಣಾಮಧಿಕಂ ಶತಮ್ ॥119॥
ನ ಚ ಪಶ್ಯಾಮಿ ತಸ್ಯಾಹಂ ದೇಹಸ್ಯಾಂತಂ ಕದಾಚನ |
ಎಲೈ ರಾಜನೇ, ವಿಭುವೇ, ನಾನು ಫಲಾಹಾರವನ್ನು ಸ್ವೀಕರಿಸುತ್ತಾ ಅವನ ಶರೀರದಲ್ಲಿ ಈ ಸಮಸ್ತ ಜಗತ್ತನ್ನು ನೋಡಿದೆ. ಅವನ ಶರೀರದೊಳಗೆ ನಾನು ನೂರು ವರ್ಷಗಳಿಗಿಂತಲೂ ಹೆಚ್ಚು ಕಾಲ ಸಂಚರಿಸಿದರೂ ಆ ದೇಹದ ಅಂತವೇ ಎಂದೂ ಕಾಣಲಿಲ್ಲ.
ಸತತಂ ಧಾವಮಾನಶ್ಚ ಚಿಂತಯಾನೋ ವಿಶಾಂಪತೇ ॥120॥
ಭ್ರಮಂಸ್ತತ್ರ ಮಹೀಪಾಲ ಯದಾ ವರ್ಷಗಣಾನ್ ಬಹೂನ್ |
ಆಸಾದಯಾಮಿ ನೈವಾಂತಂ ತಸ್ಯ ರಾಜನ್ಮಹಾತ್ಮನಃ ॥121॥
ಎಲೈ ಭೂಪಾಲನೇ, ಪ್ರಜಾಪಾಲನೇ, ನಾನು ಸತತವಾಗಿ ಚಿಂತಿಸುತ್ತಾ ಶೀಘ್ರವಾಗಿ ಓಡುತ್ತಾ ಅನೇಕ ವರ್ಷಗಳ ಕಾಲ ಸಂಚರಿಸಿದರೂ ಆ ಮಹಾತ್ಮನ ಅಂತವು ಎಲ್ಲೂ ದೊರೆಯಲಿಲ್ಲ.
ತತಸ್ತಮೇವ ಶರಣಂ ಗತೋಽಸ್ಮಿ ವಿಧಿವತ್ ತದಾ |
ವರೇಣ್ಯಂ ವರದಂ ದೇವಂ ಮನಸಾ ಕರ್ಮಣೈವ ಚ ॥122॥
ಆಗ ವರೇಣ್ಯನೂ, ವರದನೂ ಆದ ಆ ದೇವನನ್ನೇ ಮನಸ್ಸಿನಿಂದಲೂ ಮತ್ತು ಕ್ರಿಯೆಯಿಂದಲೂ ವಿಧಿಪೂರ್ವಕವಾಗಿ ಶರಣುಹೊಂದಿದೆನು.
ತತೋಽಹಂ ಸಹಸಾ ರಾಜನ್ ವಾಯುವೇಗೇನ ನಿಃಸೃತಃ |
ಮಹಾತ್ಮನೋ ಮುಖಾತ್ ತಸ್ಯ ವಿವೃತಾತ್ ಪುರುಷೋತ್ತಮ ॥123॥
ಎಲೈ ಪುರುಷೋತ್ತಮನೇ, ರಾಜನೇ, ನಾನು ಆಗ ಇದ್ದಕ್ಕಿದ್ದಂತೆಯೇ ತೆರೆದ ಆ ಮಹಾತ್ಮನ ಬಾಯಿಯಿಂದ ವಾಯುವೇಗದಿಂದ ಹೊರಗೆ ಬಂದೆನು.
ತತಸ್ತಸ್ಯೈವ ಶಾಖಾಯಾಂ ನ್ಯಗ್ರೋಧಸ್ಯ ವಿಶಾಂಪತೇ |
ಆಸ್ತೇ ಮನುಜಶಾರ್ದೂಲ ಕೃತ್ಸ್ನಮಾದಾಯ ವೈ ಜಗತ್ ॥124॥
ಎಲೈ ಪ್ರಜಾಪತಿಯೇ, ಎಲೈ ಮನುಜ ಶಾರ್ದೂಲನೇ, ಆಗಲೂ ಸಮಗ್ರವಾದ ಜಗತ್ತನ್ನು ಉದರದಲ್ಲಿ ಧರಿಸಿದ ಆ ಶಿಶುವು ಹಾಗೆಯೇ ಆಲದ ಮರದ ಕೊಂಬೆಯಲ್ಲಿ ಆಶ್ರಯವನ್ನು ಪಡೆದಿತ್ತು.
ತೇನೈವ ಬಾಲವೇಷೇಣ ಶ್ರೀವತ್ಸಕೃತಲಕ್ಷಣಮ್ |
ಆಸೀನಂ ತಂ ನರವ್ಯಾಘ್ರ ಪಶ್ಯಾಮ್ಯಮಿತತೇಜಸಮ್ ॥125॥
ಎಲೈ ನರವ್ಯಾಘ್ರನೇ, ನಾನು ಮೊದಲು ನೋಡಿದ ಬಾಲರೂಪದಿಂದಲೇ ಇದ್ದ ಶ್ರೀವತ್ಸಭೂಷಣನಾದ ಅಪರಿಮಿತ ತೇಜಸ್ವಿಯಾದ ಆ ಬಾಲಕನು ಕುಳಿತಿರುವುದನ್ನು ನೋಡಿದೆನು.

ತತೋ ಮಾಮಬ್ರವೀದ್ ಬಾಲಃ ಸ ಪ್ರೀತಃ ಪ್ರಹಸನ್ನಿವ |
ಶ್ರೀವತ್ಸಧಾರೀ ದ್ಯುತಿಮಾನ್ ಪೀತವಾಸಾ ಮಹಾದ್ಯುತಿಃ ॥126॥
ಆಗ ಶ್ರೀವತ್ಸಧಾರಿಯೂ, ಕಾಂತಿಯುಕ್ತನೂ, ಪೀತಾಂಬರಧಾರಿಯೂ, ಮಹಾತೇಜಸ್ವಿಯೂ ಆದ ಆ ಬಾಲಕನು ನನ್ನನ್ನು ನೋಡಿ ನಗುತ್ತಾ ಹೀಗೆ ಮಾತನಾಡಿದನು.
ಅಪೀದಾನೀಂ ಶರೀರೇಽಸ್ಮಿನ್ ಮಾಮಕೇ ಮುನಿಸತ್ತಮ |
ಉಷಿತಸ್ತ್ವಂ ಸುವಿಶ್ರಾಂತೋ ಮಾರ್ಕಂಡೇಯ ಬ್ರವೀಮಿ ತೇ(ಹಿ ಮೇ) ॥
ಎಲೈ ಋಷಿಶ್ರೇಷ್ಠರಾದ ಮಾರ್ಕಂಡೇಯರೇ, ಇದುವರೆಗೆ ನನ್ನ ಶರೀರದಲ್ಲಿ ಸುವಿಶ್ರಾಂತವಾಗಿ ವಾಸಮಾಡಿದಿರಷ್ಟೆ? ಅದನ್ನು ನನಗೆ ಹೇಳಿ (ಎಂದು ಹೇಳಿದನು).
ಮುಹೂರ್ತಾದಥ ಮೇ ದೃಷ್ಟಿಃ ಪ್ರಾದುರ್ಭೂತಾ ಪುನರ್ನವಾ |
ಯಯಾ ನಿರ್ಮುಕ್ತಮಾತ್ಮಾನಮಪಶ್ಯಂ ಲಬ್ಧಚೇತಸಮ್ ॥128॥
ಒಂದು ಮುಹೂರ್ತವು ಕಳೆದ ಮೇಲೆ ನನಗೆ ನನ್ನ ಜ್ಞಾನವೆಲ್ಲವೂ ಹೊಸದಾಗಿ ಪ್ರಾದುರ್ಭೂತವಾಯಿತು. ನಾನು ಆ ಪ್ರಳಯದಿಂದ ನಿರ್ಮುಕ್ತನಾಗಿ ಸಮಾಧಾನವುಳ್ಳ ಮನಸ್ಸಿನಿಂದ ನಾನು ಇರುವುದನ್ನು ಗಮನಿಸಿದೆ.
ತಸ್ಯ ತಾಮ್ರತಳೌ ತಾತ ಚರಣೌ ಸುಪ್ರತಿಷ್ಠಿತೌ |
ಸುಜಾತೌ ಮೃದುರಕ್ತಾಭಿರಂಗುಲೀಭಿರ್ವಿರಾಜಿತೌ ॥129॥
ಎಲೈ ಪ್ರೀತಿಪಾತ್ರನೇ, ಅವನ ಪಾದತಳಗಳು ಕೆಂಪಾಗಿ ಸುಪ್ರತಿಷ್ಠಿತವಾಗಿದ್ದವು. ಸುಕುಮಾರವಾಗಿ ಮೃದುವಾಗಿ ಕೆಂಪು ಬೆರಳುಗಳಿಂದ ಶೋಭಿಸುತ್ತಿದ್ದವು.
ಪ್ರಯತ್ನೇನ ಮಯಾ ಮೂರ್ಧ್ನಾ ಗೃಹೀತ್ವಾ ಹ್ಯಭಿವಂದಿತೌ |
ದೃಷ್ಟ್ವಾಽಪರಿಮಿತಂ ತಸ್ಯ ಪ್ರಭಾವಮಮಿತೌಜಸಃ ॥130॥
ನಾನು ಅಮಿತಪರಾಕ್ರಮಿಯಾದ ಅವನ ಅಪರಿಮಿತವಾದ ಪ್ರಭಾವವನ್ನು ನೋಡಿ ಪ್ರಯತ್ನಪೂರ್ವಕವಾಗಿ ಆ ಪಾದಗಳನ್ನು ಹಿಡಿದು ಶಿರಸಾ ನಮಸ್ಕಾರವನ್ನು ಮಾಡಿದೆ.
ವಿನಯೇನಾಂಜಲಿಂ ಕೃತ್ವಾ ಪ್ರಯತ್ನೇನೋಪಗಮ್ಯ ಹ |
ದೃಷ್ಟೋ ಮಯಾ ಸ ಭೂತಾತ್ಮಾ ದೇವಃ ಕಮಲಲೋಚನಃ ॥131॥
ಪ್ರಯತ್ನಪೂರ್ವಕವಾಗಿ ಅವನನ್ನು ಸಮೀಪಿಸಿ ವಿನಯದಿಂದ ಕೈಗಳನ್ನು ಜೋಡಿಸಿ ಕಮಲಲೋಚನನಾದ ಸರ್ವಭೂತಾತ್ಮನಾದ ಆ ದೇವನನ್ನು ನೋಡಿದೆನು.
ತಮಹಂ ಪ್ರಾಂಜಲಿರ್ಭೂತ್ವಾ ನಮಸ್ಕೃತ್ಯೇದಮಬ್ರುವಮ್ |
ಜ್ಞಾತುಮಿಚ್ಛಾಮಿ ದೇವ ತ್ವಾಂ ಮಾಯಾಂ ಚೈತಾಂ ತವೋತ್ತಮಾಮ್ ॥
ನಾನು ಕೈಗಳನ್ನು ಜೋಡಿಸಿ ಅವನಿಗೆ ನಮಸ್ಕರಿಸಿ ದೇವನೇ, ನಾನು ನಿನ್ನನ್ನು ಮತ್ತು ನಿನ್ನ ಶ್ರೇಷ್ಠವಾದ ಈ ಸಾಮರ್ಥ್ಯವನ್ನು ತಿಳಿಯಲು ಬಯಸುತ್ತೇನೆ ಎಂದು ಹೇಳಿದೆನು.
ಆಸ್ಯೇನಾನುಪ್ರವಿಷ್ಟೋಽಹಂ ಶರೀರೇ ಭಗವಂಸ್ತವ |
ದೃಷ್ಟವಾನಖಿಲಾನ್ ಸರ್ವಾನ್ ಸಮಸ್ತಾನ್ ಜಠರೇ ಹಿ ತೇ ॥133॥
ಎಲೈ ಭಗವಂತನೇ, ನಾನು ನಿನ್ನ ಮುಖದಿಂದ ಶರೀರವನ್ನು ಪ್ರವೇಶಿಸಿ ನಿನ್ನ ಉದರದಲ್ಲಿ ಸಮಸ್ತವಾದ ಜಗತ್ತನ್ನು ನೋಡಿದೆನು.
ತವ ದೇವ ಶರೀರಸ್ಥಾ ದೇವದಾನವರಾಕ್ಷಸಾಃ |
ಯಕ್ಷಗಂಧರ್ವನಾಗಾಶ್ಚ ಜಗತ್ಸ್ಥಾವರಜಂಗಮಮ್ ॥134॥
ಎಲೈ ದೇವನೇ, ನಿನ್ನ ಶರೀರದಲ್ಲಿ ದೇವದಾನವ ರಾಕ್ಷಸರೂ, ಯಕ್ಷಗಂಧರ್ವ ನಾಗರೂ ಇದ್ದರು. ಸ್ಥಾವರಜಂಗವಾತ್ಮಕವಾದ ಸಮಸ್ತ ಪ್ರಪಂಚವೂ ಇದ್ದಿತು.
ತ್ವತ್ಪ್ರಸಾದಾಚ್ಚ ಮೇ ದೇವ ಸ್ಮೃತಿರ್ನ ಪರಿಹೀಯತೇ |
ದ್ರುತಮಂತಃಶರೀರೇ ತೇ ಸತತಂ ಪರಿವರ್ತಿನಃ ॥135॥
ಎಲೈ ದೇವನೇ, ನಿನ್ನ ಶರೀರದೊಳಗೆ ಧಾವಿಸಿ ಸತತವಾಗಿ ಸಂಚರಿಸಿದರೂ ನಿನ್ನ ಅನುಗ್ರಹದಿಂದ ನನಗೆ ಸ್ಮೃತಿಯ ನಾಶವು ಉಂಟಾಗಲಿಲ್ಲ.
ನಿರ್ಗತೋಽಹಮಕಾಮಸ್ತು ಇಚ್ಛಯಾ ತೇ ಮಹಾಪ್ರಭೋ |
ಇಚ್ಛಾಮಿ ಪುಂಡರೀಕಾಕ್ಷ ಜ್ಞಾತುಂ ತ್ವಾಽಹಮನಿಂದಿತಮ್ ॥136॥
ಎಲೈ ಮಹಾಪ್ರಭುವೇ, ನಾನು ಇದ್ದಕ್ಕಿದ್ದಂತೆಯೇ ನಿನ್ನ ಇಚ್ಛೆಯಿಂದ ನಿನ್ನ ಶರೀರದಿಂದ ಹೊರಗೆ ಬಂದವನಾಗಿ ಎಲೈ ಪುಂಡರೀಕಾಕ್ಷನೇ, ನಿರ್ದುಷ್ಟನಾದ ನಿನ್ನನ್ನು ತಿಳಿಯಲು ಬಯಸುತ್ತೇನೆ.
ಇಹ ಭೂತ್ವಾ ಶಿಶುಃ ಸಾಕ್ಷಾತ್ ಕಿಂ ಭವಾನವತಿಷ್ಠತೇ |
ಪೀತ್ವಾ ಜಗದಿದಂ ಸರ್ವಮೇತದಾಖ್ಯಾತುಮರ್ಹಸಿ ॥137॥
ಇಲ್ಲಿ ಜಗತ್ತೆಲ್ಲವನ್ನೂ ನಿನ್ನ ಉದರದಲ್ಲಿಟ್ಟು ಶಿಶುರೂಪವನ್ನು ಧರಿಸಿ ಏಕೆ ನಿಂತಿದ್ದೀಯೆ! ಇದೆಲ್ಲವನ್ನೂ ನನಗೆ ಹೇಳಬೇಕು.
ಕಿಮರ್ಥಂ ಚ ಜಗತ್ ಸರ್ವಂ ಶರೀರಸ್ಥಂ ತವಾನಘ |
ಕಿಯಂತಂ ಚ ತ್ವಯಾ ಕಾಲಮಿಹ ಸ್ಥೇಯಮರಿಂದಮ ॥138॥
ಎಲೈ ನಿರ್ದುಷ್ಟನೇ, ನೀನು ಏಕೆ ಎಲ್ಲ ಜಗತ್ತನ್ನು ನಿನ್ನ ಶರೀರದಲ್ಲಿ ಧರಿಸಿದೆ? ಎಲೈ ಅರಿಂದಮನೇ, ಎಷ್ಟು ಕಾಲದವರೆಗೆ ನೀನು ಇಲ್ಲಿ ಇರುತ್ತೀಯೆ?

ಏತದಿಚ್ಛಾಮಿ ದೇವೇಶ ಶ್ರೋತುಂ ಬ್ರಾಹ್ಮಣಕಾಮ್ಯಯಾ |
ತ್ವತ್ತಃ ಕಮಲಪತ್ರಾಕ್ಷ ವಿಸ್ತರೇಣ ಯಥಾತಥಮ್ |
ಮಹದ್ಧ್ಯೇತದಚಿಂತ್ಯಂ ಚ ಯದಹಂ ದೃಷ್ಟವಾನ್ ಪ್ರಭೋ ||
ಎಲ್ಲೈ ದೇವೇಶನೇ, ಬ್ರಾಹ್ಮಣನಾದ ನನ್ನ ಮೇಲಿನ ಅನುಕಂಪದಿಂದ ನೀನು ಹೇಳುವ ಮಾತುಗಳನ್ನು ಕೇಳಲು ಬಯಸುತ್ತೇನೆ. ಎಲ್ಲೈ ಕಮಲಪತ್ರಾಕ್ಷನೇ, ಅದನ್ನು ನಾನು ವಿಸ್ತಾರವಾಗಿ ಮತ್ತು ಯಥಾರ್ಥವಾಗಿ ನಿನ್ನಿಂದ ಕೇಳಬೇಕು. ಎಲ್ಲೈ ಪ್ರಭುವೇ, ನಾನು ನೋಡಿದ ಸಂಗತಿಯು ದೊಡ್ಡ ಅದ್ಭುತವಾದುದು ಮತ್ತು ಅಚಿಂತ್ಯವಾದುದು (ಎಂದು ಹೇಳಿದೆನು).
ಇತ್ಯುಕ್ತಃ ಸ ಮಯಾ ಶ್ರೀಮಾನ್ ದೇವದೇವೋ ಮಹಾದ್ಯುತಿಃ |
ಸಾಂತ್ವಯನ್ ಮಾಮಿದಂ ವಾಕ್ಯಮುವಾಚ ವದತಾಂ ವರಃ ||140||
ಹೀಗೆ ಹೇಳಲ್ಪಟ್ಟ ಮಹಾಕಾಂತಿಯುಳ್ಳ, ಮಹಾತೇಜಸ್ಸುಳ್ಳ ಮಾತನಾಡುವವರಲ್ಲಿ ಅಗ್ರಗಣ್ಯನಾದ ಆ ದೇವದೇವನು ನನ್ನನ್ನು ಸಮಾಧಾನಪಡಿಸುತ್ತಾ ಹೀಗೆ ಮಾತನಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರ್ಯಶೀತ್ಯಧಿಕಶತತಮೋಽಧ್ಯಾಯಃ ||
|| ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ಮೂರನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ನಾಲ್ಕನೆಯ ಅಧ್ಯಾಯ
ಶಿಶುರೂಪನಾದ ಹರಿಯಿಂದ ಮಾರ್ಕಂಡೇಯರಿಗೆ ತನ್ನ ಸ್ವರೂಪದ ಉಪದೇಶ. ಮಾರ್ಕಂಡೇಯರಿಂದ ಶ್ರೀಕೃಷ್ಣನ ಸರ್ವೋತ್ತಮತ್ವ ಪ್ರತಿಪಾದನೆ ಮತ್ತು ಶ್ರೀಕೃಷ್ಣನಲ್ಲಿ ಪಾಂಡವರ ಶರಣಾಗತಿ.
ದೇವಃ
ಕಾಮಂ ದೇವಾ ಅಪಿ ನ ಮಾಂ ವಿಪ್ರ ಜಾನಂತಿ ತತ್ತ್ವತಃ |
ತ್ವತ್ಪ್ರೀತ್ಯಾ ತು ಪ್ರವಕ್ಷ್ಯಾಮಿ ಯಥೇದಂ ವಿಸೃಜಾಮ್ಯಹಮ್ ||1||
ದೇವ ಎಲ್ಲೈ ಬ್ರಾಹ್ಮಣನೇ, ದೇವತೆಗಳೂ ಸಹ ನನ್ನನ್ನು ಸರಿಯಾಗಿ ತಿಳಿಯುವುದಿಲ್ಲ. ನಿನ್ನ ಮೇಲಿನ ಪ್ರೀತಿಯಿಂದ ನಾನು ಈ ಜಗತ್ತನ್ನು ಹೇಗೆ ಸೃಷ್ಟಿಸುತ್ತೇನೆ ಎಂದು ಹೇಳುವೆನು.
ಪಿತೃಭಕ್ತೋಽಸಿ ವಿಪ್ರರ್ಷೇ ಮಾಂ ಚೈವ ಶರಣಂ ಗತಃ |
ತತೋ ದೃಷ್ಟೋಽಸ್ಮಿ ತೇ ಸಾಕ್ಷಾತ್ ಬ್ರಹ್ಮಚರ್ಯಂ ಚ ತೇ ಮಹತ್ ||2||
ಎಲ್ಲೈ ವಿಪ್ರರ್ಷಿಯೇ, ನೀನು ಪಿತೃಭಕ್ತನಾದವನು. ನನಗೆ ಶರಣಾಗತನಾಗಿದ್ದೀಯೆ. ನಿನ್ನ ಬ್ರಹ್ಮಚರ್ಯವು ಶ್ರೇಷ್ಠವಾಗಿದೆ. ಆದ್ದರಿಂದ ನೀನು ಸಾಕ್ಷಾತ್ತಾಗಿ ನನ್ನನ್ನು ನೋಡಿದೆ.
ಅಪಾಂ ನಾರಾ ಇತಿ ಪುರಾ ಸಂಜ್ಞಾಕರ್ಮ ಕೃತಂ ಮಯಾ |
ತೇನ ನಾರಾಯಣೋಽಪ್ಯುಕ್ತೋ ಮಮ ತತ್ ತ್ವಯನಂ ಸದಾ ||3||
ನಾನು ಜಲಕ್ಕೆ ನಾರ ಎಂಬ ಸಂಜ್ಞೆಯನ್ನು ಹಿಂದೆಯೇ ಮಾಡಿದ್ದೇನೆ. ಆ ನಾರವು ನನಗೆ ಆಶ್ರಯವಾಗಿದೆ. ಆದ್ದರಿಂದ ನಾನು ನಾರಾಯಣನೆಂದು ಕರೆಸಿಕೊಳ್ಳಲ್ಪಡುತ್ತೇನೆ.
ಅಹಂ ನಾರಾಯಣೋ ನಾಮ ಪ್ರಭವಃ ಶಾಶ್ವತೋಽವ್ಯಯಃ |
ವಿಧಾತಾ ಸರ್ವಭೂತಾನಾಂ ಸಂಹರ್ತಾ ಚ ದ್ವಿಜೋತ್ತಮ ||4||
ಎಲ್ಲೈ ದ್ವಿಜೋತ್ತಮನೇ, ನಾನು ಆ ಕಾರಣದಿಂದ ನಾರಾಯಣ ಎಂಬ ನಾಮವನ್ನು ಧರಿಸಿದ್ದೇನೆ. ಎಲ್ಲಾ ಜಗತ್ತಿನ ಉತ್ಪತ್ತಿ ಸ್ಥಾನವಾಗಿದ್ದೇನೆ. ಶಾಶ್ವತನೂ, ಅವ್ಯಯನೂ, ಸರ್ವಭೂತಗಳ ಸೃಷ್ಟಿಕರ್ತನೂ ಮತ್ತು ಸಂಹಾರಕರ್ತನೂ ಆಗಿದ್ದೇನೆ.
ಅಹಂ ವಿಷ್ಣುರಹಂ ಬ್ರಹ್ಮಾ ಶಕ್ರಶ್ಚಾಹಂ ಸುರಾಧಿಪಃ |
ಅಹಂ ವೈಶ್ರವಣೋ ರಾಜಾ ಯಮಃ ಪ್ರೇತಾಧಿಪಸ್ತಥಾ ||5||
ನಾನು ವಿಷ್ಣು. ನಾನೇ ಬ್ರಹ್ಮ (ಬ್ರಹ್ಮನಲ್ಲಿದ್ದು ಬ್ರಹ್ಮ ಎಂಬ ಹೆಸರಿನಲ್ಲಿ ಕರೆಸಿಕೊಳ್ಳಲ್ಪಡುವವನು ನಾನೇ ಆಗಿದ್ದೇನೆ. ಹೀಗೆಯೇ ಮುಂದೆಯೂ ಅರ್ಥ ಮಾಡಿಕೊಳ್ಳಬೇಕು). ನಾನು ಸುರಾಧಿಪನಾಗಿದ್ದೇನೆ. ನಾನು ರಾಜನಾದ ಕುಬೇರನಾಗಿದ್ದೇನೆ. ನಾನೇ ಪ್ರೇತಾಧಿಪತಿಯಾದ ಯಮ.
ಅಹಂ ಶಿವಶ್ಚ ಸೋಮಶ್ಚ ಕಾ(ಕ)ಶ್ಯಪೋಽಥ ಪ್ರಜಾಪತಿಃ |
ಅಹಂ ಧಾತಾ ವಿಧಾತಾ ಚ ಯಜ್ಞಶ್ಚಾಹಂ ದ್ವಿಜೋತ್ತಮ ||6||
ಎಲ್ಲೈ ದ್ವಿಜೋತ್ತಮನೇ, ನಾನೇ ಶಿವ. ನಾನೇ ಚಂದ್ರ. ನಾನೇ ಪ್ರಜಾಪತಿಯಾದ ಕಾಶ್ಯಪ. ನಾನೇ ಧಾತಾ, ವಿಧಾತಾ ಮತ್ತು ನಾನೇ ಯಜ್ಞ.

ಅಗ್ನಿರಾಸ್ಯಂ ಕ್ಷಿತಿಃ ಪಾದೌ ಚಂದ್ರಾದಿತ್ಯೌ ಚ ಲೋಚನೇ |
ದಿಶಶ್ಚ(ಸದಿಶಂ) ಚ ನಭಃ ಕಾಯೋ ವಾಯುರ್ಮನಸಿ ಮೇ ಸ್ಥಿತಃ ||7||
ಅಗ್ನಿಯು ನನ್ನ ಮುಖ (ನನ್ನ ಮುಖದಿಂದ ಜನಿಸಿ ಮುಖವನ್ನು ಆಶ್ರಯಿಸಿದವನು. ಇದರಂತೆಯೇ ಉಳಿದುದನ್ನೂ ಅರ್ಥಮಾಡಿಕೊಳ್ಳಬೇಕು). ಭೂಮಿಯು ನನ್ನ ಪಾದಗಳು. ಸೂರ್ಯಚಂದ್ರರು ನನ್ನ ನೇತ್ರಗಳು. ದಿಕ್ಕುಗಳು ಮತ್ತು ಆಕಾಶಗಳು ನನ್ನ ದೇಹ. ವಾಯುವು ನನ್ನ ಮನಸ್ಸಿನಲ್ಲಿ ನೆಲೆಸಿದ್ದಾನೆ.
ಮಯಾ ಕ್ರತುಶತೈರಿಷ್ಟಂ ಬಹುಭಿಃ ಸ್ವಾಪ್ತದಕ್ಷಿಣೈಃ |

ಯಜಂತೇ ವೇದವಿದುಷೋ ಮಾಂ ದೇವಯಜನೇ ಸ್ಥಿತಮ್ ॥8॥
ನಾನು ಭೂರಿದಕ್ಷಿಣೆಯುಳ್ಳ ಅನೇಕ ಯಜ್ಞಗಳಿಂದ ನನ್ನನ್ನೇ ಪೂಜಿಸಿದ್ದೇನೆ. ದೇವತೆಗಳನ್ನು ಉದ್ದೇಶಿಸಿ ಯಾಗವನ್ನು ಮಾಡುವ ವೇದಜ್ಞರು ದೇವತೆಗಳಲ್ಲಿರುವ ನನ್ನನ್ನೇ ಆರಾಧಿಸುತ್ತಾರೆ.
ಪೃಥಿವ್ಯಾಂ ಕ್ಷತ್ರಿಯೇಂದ್ರಾಶ್ಚ ಪಾರ್ಥಿವಾಃ ಸ್ವರ್ಗಕಾಂಕ್ಷಿಣಃ।
ಯಜಂತೇ ಮಾಂ ತಥಾ ವೈಶ್ಯಾಃ ಸ್ವರ್ಗಲೋಕಜಿಗೀಷಯಾ ॥9॥
ಸ್ವರ್ಗಾಪೇಕ್ಷಿಗಳಾದ ಕ್ಷತ್ರಿಯ ಶ್ರೇಷ್ಠರಾದ ರಾಜರೂ ಭೂಲೋಕದಲ್ಲಿ ನನ್ನನ್ನೇ ಉದ್ದೇಶಿಸಿ ಯಾಗವನ್ನು ಮಾಡುತ್ತಾರೆ. ಹಾಗೆಯೇ ವೈಶ್ಯರು ಸ್ವರ್ಗಲೋಕದ ಪ್ರಾಪ್ತಿಯನ್ನು ಉದ್ದೇಶಿಸಿ ನನ್ನನ್ನೇ ಆರಾಧಿಸುತ್ತಾರೆ.
ಚತುಃಸಮುದ್ರಪರ್ಯಂತಾಂ ಮೇರುಮಂದರಭೂಷಣಾಮ್।
ಶೇಷೋ ಭೂತ್ವಾಽಹಮೇವೈತಾಂ ಧಾರಯಾಮಿ ವಸುಂಧರಾಮ್ ॥10॥
ಚತುಃಸಮುದ್ರಪರ್ಯಂತವಾದ ಮೇರುಮಂದರಗಳಿಂದ ಭೂಷಿತವಾದ ಈ ಭೂಮಿಯನ್ನು ನಾನೇ ಶೇಷನಾಗಿ ಧರಿಸಿದ್ದೇನೆ.
ವಾರಾಹಂ ರೂಪಮಾಸ್ಥಾಯ ಮಯೇಯಂ ಜಗತೀ ಪುರಾ।
ಮಜ್ಜಮಾನಾ ಜಲೇ ವಿಪ್ರ ವೀರ್ಯೇಣಾಸೀತ್ ಸಮುದ್ಧೃತಾ ॥11॥
ಎಲೈ ವಿಪ್ರನೇ, ನೀರಿನಲ್ಲಿ ಮುಳುಗುತ್ತಿರುವಾಗ ನಾನು ವರಾಹರೂಪವನ್ನು ಧರಿಸಿ ನನ್ನ ಸಾಮರ್ಥ್ಯದಿಂದ ಹಿಂದೆ ಈ ಭೂಮಿಯನ್ನು ಮೇಲಕ್ಕೆತ್ತಿದೆ.
ಅಗ್ನಿಶ್ಚ ವಡವಾವಕೊತ್ರೇ ಭೂತ್ವಾಽಹಂ ದ್ವಿಜಸತ್ತಮ।
ಪಿಬಾಮ್ಯಪಃ ಸಮಾವಿದ್ಧಾಸ್ತಾಶ್ಚೈವ (ಸದಾ ವಿಧ್ವಂಸ್ತಾಶ್ಚೈವಂ) ವಿಸೃಜಾಮ್ಯಹಮ್ ॥12॥
ಎಲೈ ದ್ವಿಜಶ್ರೇಷ್ಠನೇ, ನಾನೇ ಹೆಣ್ಣುಕುದುರೆಯ ಮುಖವುಳ್ಳ ಅಗ್ನಿಯಾಗಿ ಸಮುದ್ರದ ನೀರನ್ನು ಕುಡಿದು ಪುನಃ ಅದನ್ನು ಹೊರಗೆ ಬಿಡುತ್ತೇನೆ.
ಬ್ರಹ್ಮ ವಕ್ತ್ರಂ ಭುಜೌ ಕ್ಷತ್ರಮೂರೂ ಮೇ ಸಂಸ್ಥಿತಾ ವಿಶಃ।
ಪಾದೌ ಶೂದ್ರಾ ಭವಂತೀಮೇ ವಿಕ್ರಮೇಣ ಕ್ರಮೇಣ ಚ ॥13॥
ಬ್ರಾಹ್ಮಣ ಜಾತಿಯು ನನ್ನ ಮುಖವನ್ನು, ಕ್ಷತ್ರಿಯ ಜಾತಿಯು ನನ್ನ ಭುಜವನ್ನು, ವೈಶ್ಯ ಜಾತಿಯು ನನ್ನ ತೊಡೆಗಳನ್ನು ಆಶ್ರಯಿಸಿದೆ. ನನ್ನ ಪಾದಗಳನ್ನು ಶೂದ್ರ ಜಾತಿಯು ಆಶ್ರಯಿಸಿದೆ. ನನ್ನ ಸಾಮರ್ಥ್ಯವಿಶೇಷದಿಂದ ಇವೆಲ್ಲವೂ ಆಗುತ್ತದೆ.
ಋಗ್ವೇದಃ ಸಾಮವೇದಶ್ಚ ಯಜುರ್ವೇದೋಽಪ್ಯಥರ್ವಣಃ।
ಮತ್ತಃ ಪ್ರಾದುರ್ಭವಂತ್ಯೇತೇ ಮಾಮೇವ ಪ್ರವಿಶಂತಿ ಚ ॥14॥
ಋಗ್ವೇದ, ಸಾಮವೇದ ಮತ್ತು ಅಥರ್ವಣ ವೇದವು ನನ್ನಿಂದಲೇ ಹೊರ ಹೊಮ್ಮುತ್ತವೆ. ಮತ್ತು ಪುನಃ ನನ್ನನ್ನೇ ಪ್ರವೇಶಿಸುತ್ತವೆ.
ಯತಯಃ ಶಾಂತಿಪರಮಾ ಯತಾತ್ಮಾನೋ ಬುಭುತ್ಸವಃ।
ಕಾಮಕ್ರೋಧದ್ವೇಷಮುಕ್ತಾ ನಿಃಸಂಗಾ ವೀತಕಲ್ಮಷಾಃ ॥15॥
ಸತ್ತ್ವಸ್ಥಾ ನಿರಹಂಕಾರಾ ನಿತ್ಯಮಧ್ಯಾತ್ಮಕೋವಿದಾಃ।
ಮಾಮೇವ ಸತತಂ ವಿಪ್ರಾಶ್ಚಿಂತಯಂತ ಉಪಾಸತೇ ॥16॥
ಪರಮಶಾಂತರಾದ, ಪ್ರಯತ್ನಶೀಲರಾದ, ಜಿಜ್ಞಾಸುಗಳಾದ, ಕಾಮಕ್ರೋಧ ದ್ವೇಷರಹಿತರಾದ, ನಿಸ್ಸಂಗರಾದ, ಕಲ್ಮಷದೂರರಾದ, ಸತ್ತ್ವಗುಣದಲ್ಲಿಯೇ ಇರುವ, ನಿರಹಂಕಾರರಾದ, ಅಧ್ಯಾತ್ಮಕೋವಿದರಾದ, ವಿಪ್ರರಾದ ಯತಿಗಳು ನನ್ನನ್ನೇ ಸತತವಾಗಿ ಚಿಂತಿಸುತ್ತಾ ಉಪಾಸನೆಯನ್ನು ಮಾಡುತ್ತಾರೆ.
ಅಹಂ ಸಂವರ್ತಕೋ ವಹ್ನಿರಹಂ ಸಂವರ್ತಕೋಯಮಃ।
ಅಹಂ ಸಂವರ್ತಕಃ ಸೂರ್ಯಸ್ತ್ವಹಂ ಸಂವರ್ತಕೋಽನಿಲಃ ॥17॥
ನಾನೇ ಸಂವರ್ತಕವಹ್ನಿ. ನಾನೇ ಸಂವರ್ತಕ ಯಮ. ನಾನೇ ಸಂವರ್ತಕ ಸೂರ್ಯ. ನಾನೇ ಸಂವರ್ತಕ ವಾಯು.
ತಾರಾರೂಪಾಣಿ ದೃಶ್ಯಂತೇ ಯಾನ್ಯೇತಾನಿ ನಭಸ್ತಳೇ।
ಮಮ ವೈ ರೋಮಕೂಪಾಣಿ ವಿದ್ಧಿ ತ್ವಂ ದ್ವಿಜಸತ್ತಮ
(ಮಮ್ಮೈ ವೈತಾನಿ ರೂಪಾಣಿ) ॥18॥
ಎಲೈ ದ್ವಿಜಶ್ರೇಷ್ಠನೇ, ಆಕಾಶದಲ್ಲಿ ಯಾವ ನಕ್ಷತ್ರಗಳು ಕಾಣುತ್ತವೆಯೋ ಅವುಗಳು ನನ್ನ ರೋಮಕೂಪಗಳೆಂದು ತಿಳಿ. (ಅವುಗಳನ್ನು ನನ್ನ ರೂಪಗಳೆಂದೇ ತಿಳಿ).
ರತ್ನಾಕರಾಃ ಸಮುದ್ರಾಶ್ಚ ಸರ್ವ ಏವ ಚತುರ್ದಿಶಮ್।
ವಸನಂ ಶಯನಂ ಚೈವ ನಿ(ವಿ)ಲಯಂ ಚೈವ ವಿದ್ಧಿ ಮೇ ॥19॥
ರತ್ನಾಕರಗಳಾದ ನಾಲ್ಕು ದಿಕ್ಕುಗಳಲ್ಲಿರುವ ಎಲ್ಲಾ ಸಮುದ್ರಗಳು ನನಗೆ ವಾಸಸ್ಥಾನ ಮತ್ತು ಶಯನಸ್ಥಾನ ಮತ್ತು ನನ್ನ ಮನೆ ಎಂದು ತಿಳಿ.
ಕಾಮಂ ಕ್ರೋಧಂ ಚ ಹರ್ಷಂ ಚ ಭಯಂ ಮೋಹಂ ತಥೈವ ಚ।
ಮಮೈವ ವಿದ್ಧಿ ರೋಮಾಣಿ ಸರ್ವಾಣ್ಯೇತಾನಿ ಸತ್ತಮ ॥20॥
ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಕಾಮ-ಕ್ರೋಧ, ಹರ್ಷ-ಭಯ, ಮೋಹ ಇವುಗಳೆಲ್ಲವೂ ನನ್ನ ರೋಮಗಳೆಂದು ತಿಳಿ. )ಇವುಗಳಿಗೆ ಅಭಿಮಾನಿಗಳಾದವರು ನನ್ನ ರೋಮಗಳನ್ನು ಆಶ್ರಯಿಸಿದ್ದಾರೆಂದು ತಿಳಿ).
ಪ್ರಾಪ್ನುವಂತಿ ನರಾ ವಿಪ್ರಾ ಯತ್ ಕೃತ್ವಾ ಕರ್ಮ ಶೋಭನಮ್।
ಸತ್ಯಂ ದಾನಂ ತಪಶ್ಚೋಗ್ರಮಹಿಂಸಾ ಚೈವ ಜಂತುಷು ॥21॥

ಮದ್ವಿಧಾನೇನ ವಿಹಿತಾ ಮಮ ದೇಹವಿಹಾರಿಣಃ |
ಮಯಾಽಽವಿರ್ಭೂತವಿಜ್ಞಾನಾನ ವಿಚೇಷ್ಟಂತೇ ನ ಕಾಮತಃ ॥22॥
ಸಮ್ಯಗ್ವೇದಮಧೀಯಾನಾ ಯಜಂತೇ ವಿವಿಧೈರ್ಮಖೈಃ |
ಶಾಂತಾತ್ಮಾನೋ ಜಿತಕ್ರೋಧಾಃ ಪ್ರಾಪ್ನುವಂತಿ ದ್ವಿಜಾತಯಃ ॥23॥
ಎಲೈ ಬ್ರಾಹ್ಮಣನೇ, ಯಾವ ಶುಭಕರ್ಮವನ್ನು ಮಾಡಿ ಮನುಷ್ಯರು ಸತ್ಯ, ದಾನ, ಉಗ್ರವಾದ ತಪಸ್ಸು, ಸರ್ವ ಜಂತುಗಳಲ್ಲಿ ಅಹಿಂಸೆ ಇಂತಹವುಗಳನ್ನು ಪಡೆಯುತ್ತಾರೆಯೋ ಮತ್ತು ನನ್ನ ಅನುಶಾಸನದಂತೆ ವಿಧಿಸಲ್ಪಟ್ಟ ಇಂತಹ ಗುಣಗಳನ್ನು ಪಡೆದು ವ್ಯಾಪ್ತನಾದ ನನ್ನ ದೇಹದಲ್ಲಿಯೇ ವಿಹರಿಸುತ್ತಾ, ನನ್ನ ಅನುಗ್ರಹದಿಂದ ದಿವ್ಯಜ್ಞಾನವನ್ನು ಪಡೆದು ಅನೇಕ ಯಜ್ಞಗಳಿಂದ ನನ್ನನ್ನು ಆರಾಧಿಸಿ ನನ್ನ ಇಚ್ಛೆಗೆ ಅನುಸಾರವಾಗಿ ನನ್ನ ಪೂಜಾತ್ಮಕವಾಗಿ ಮಾಡುತ್ತಾರೆಯೋ ಅಂತಹ ಶಾಂತಾತ್ಮರಿಂದ ಕ್ರೋಧವನ್ನು ಗೆದ್ದ ಬ್ರಾಹ್ಮಣರಿಂದ ಪ್ರಾಪ್ಯನಾದವನು ನಾನು.
ಪ್ರಾಪ್ತುಂ ನ ಶಕ್ಯೋ ಯೋ ವಿದ್ವನ್ ನರೈರ್ದುಷ್ಕೃತಕರ್ಮಭಿಃ |
ಲೋಭಾಭಿಭೂತೈಃ ಕೃಪಣೈರನಾರ್ಯೈರಕೃತಾತ್ಮಭಿಃ ॥24॥
ಎಲೈ ವಿದ್ವಾಂಸನೇ, ನಾನು ದುಷ್ಕರ್ಮಕಾರಿಗಳಾದ, ಲೋಭವಶರಾದ, ಕೃಪಣರಾದ, ಅನಾರ್ಯರಾದ, ಅಸಂಸ್ಕೃತರಾದ ಮನುಷ್ಯರಿಂದ ಎಂದೂ ಪ್ರಾಪ್ಯನಾಗುವುದಿಲ್ಲ.
ತಂ ಮಾಂ ಮಹಾಫಲಂ ವಿದ್ಧಿ ನರಾಣಾಂ ಭಾವಿತಾತ್ಮನಾಮ್ |
ಸುದುಷ್ಪ್ರಾಪಂ ವಿಮೂಢಾನಾಂ ಮಾರ್ಗಂ ಯೋಗೈರ್ನಿಷೇವಿತಮ್ ॥
ಅಂತಹ ನನ್ನನ್ನು ಶುದ್ಧವಾದ ಮನಸ್ಸುಳ್ಳ ಮನುಷ್ಯರಿಗೆ ದೊರೆಯಬಹುದಾದ ಮಹಾಫಲವೆಂದು ತಿಳಿ. ನಾನು ವಿಮೂಢರಿಗೆ ಅಪ್ರಾಪ್ಯನಾದವನು. ಭಕ್ತ್ಯಾದಿ ಉಪಾಯಗಳಿಂದ ನನ್ನ ಸೇವೆ ಮಾಡುವವರಿಗೆ ನಾನೇ ಮಾರ್ಗಭೂತನಾದವನು.
ಯದಾ ಯದಾ ಚ ಧರ್ಮಸ್ಯ ಗ್ಲಾನಿರ್ಭವತಿ ಭಾರತ(ಸತ್ತಮ) |
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥26॥
ಎಲೈ ಭಾರತನೇ, ಯಾವಾಗ ಯಾವಾಗ ಧರ್ಮದ ಗ್ಲಾನಿ ಉಂಟಾಗುತ್ತದೆಯೋ ಮತ್ತು ಅಧರ್ಮದ ಉನ್ನತಿ ಉಂಟಾಗುತ್ತದೆಯೋ ಆಗ ನನ್ನನ್ನು ನಾನೇ ಸೃಷ್ಟಿ ಮಾಡಿಕೊಳ್ಳುತ್ತೇನೆ (ನಾನು ಅವತರಿಸುತೆತೇನೆ).
ದೈತ್ಯಾ ಹಿಂಸಾನುರಕ್ತಾಶ್ಚ ಅವಧ್ಯಾಃ ಸುರಸತ್ತಮೈಃ |
ರಾಕ್ಷಸಾಶ್ಚಾಪಿ ಲೋಕೇಽಸ್ಮಿನ್ ಯದೋತ್ಪತ್ಸ್ಯಂತಿ ದಾರುಣಾಃ |
ತದಾಽಹಂ ಸಂಪ್ರಸೂಯಾಮಿ ಗೃಹೇಷು ಶುಭಕರ್ಮಣಾಮ್ ॥27॥
ಪ್ರವಿಷ್ಟೋ ಮಾನುಷಂ ದೇಹಂ ಸರ್ವಂ ಪ್ರಶಮಯಾಮ್ಯಹಮ್ ॥28॥
ಹಿಂಸಾನುರಕ್ತರಾದ, ಶ್ರೇಷ್ಠದೇವತೆಗಳಿಂದಲೂ ಅವಧ್ಯರಾದ, ಘೋರರಾದ ದೈತ್ಯರು ಮತ್ತು ರಾಕ್ಷಸರು ಯಾವಾಗ ಈ ಲೋಕದಲ್ಲಿ ಜನಿಸುವರೋ ಆಗ ನಾನು ಶುಭಕರ್ಮವನ್ನು ಆಚರಿಸುವವರ ಗೃಹದಲ್ಲಿ ಮಾನುಷ ದೇಹವನ್ನು ಧರಿಸಿ ಅವತಾರವನ್ನು ಮಾಡಿ ಎಲ್ಲ ಅನರ್ಥಗಳನ್ನೂ ನಾಶಗೊಳಿಸುತ್ತೇನೆ.
ಸೃಷ್ಟ್ವಾ ದೇವಮನುಷ್ಯಾಂಸ್ತು ಗಂಧರ್ವೋರಗರಾಕ್ಷಸಾನ್ |
ಸ್ಥಾವರಾಣಿ ಚ ಭೂತಾನಿ ಸಂಹಾರಮ್ಯಾತ್ಮಮಾಯಯಾ ॥29॥
ದೇವತೆಗಳನ್ನೂ, ಮನುಷ್ಯರನ್ನೂ, ಗಂಧರ್ವೋರಗ ರಾಕ್ಷಸರನ್ನೂ, ವೃಕ್ಷಪರ್ವತಾದಿ ಸ್ಥಾವರಗಳನ್ನೂ ಸೃಷ್ಟಿ ಮಾಡಿ ನನ್ನ ಇಚ್ಛೆ ಮತ್ತು ಸಾಮರ್ಥ್ಯದಿಂದಲೇ ಸಂಹಾರ ಮಾಡುತ್ತೇನೆ.
ಕರ್ಮಕಾಲೇ ಪುನರ್ದೇಹಮವಿಚಿಂತ್ಯಂ ಸೃಜಾಮ್ಯಹಮ್ |
ಆವಿಶ್ಯ ಮಾನುಷಂ ದೇಹಂ ಮರ್ಯಾದಾಬಂಧಕಾರಣಾತ್ ॥30॥
ಪಾಲನಕರ್ಮಕಾಲದಲ್ಲಿ ಅಚಿಂತ್ಯವಾದ ದೇಹವನ್ನು ತೆಗೆದುಕೊಂಡು ಮತ್ತು ಮನುಷ್ಯದೇಹವನ್ನು ಪ್ರವೇಶಿಸಿ ಲೋಕಮರ್ಯಾದೆಯನ್ನು ಸ್ಥಾಪಿಸುತ್ತೇನೆ.
ಶ್ವೇತಃ ಕೃತಯುಗೇ ವರ್ಣಃ ಪೀತಸ್ತ್ರೇತಾಯುಗೇ ಮಮ |
ರಕ್ತೋ ದ್ವಾಪರಮಾಸಾದ್ಯ ಕೃಷ್ಣಃ ಕಲಿಯುಗೇ ತಥಾ ॥31॥
ನಾನು ಕೃತಯುಗದಲ್ಲಿ ಶ್ವೇತವರ್ಣವನ್ನೂ, ತ್ರೇತಾಯುಗದಲ್ಲಿ ಪೀತವರ್ಣವನ್ನೂ, ದ್ವಾಪರಯುಗದಲ್ಲಿ ರಕ್ತವರ್ಣವನ್ನೂ, ಕಲಿಯುಗವು ಪ್ರಾಪ್ತವಾದಾಗ ಕೃಷ್ಣ ವರ್ಣವನ್ನೂ ಹೊಂದಿರುತ್ತೇನೆ.
ತ್ರಯೋ ಭಾಗಾ ಹ್ಯಧರ್ಮಸ್ಯ ತಸ್ಮಿನ್ ಕಾಲೇ ಭವಂತಿ ಚ |
ಯದಾ ಭವತಿ ಮೇ ವರ್ಣಃ ಕೃಷ್ಣೋ ವೈ ಮುನಿಸತ್ತಮ ॥32॥
ಎಲೈ ಮುನಿಶ್ರೇಷ್ಠನೇ, ಯಾವ ಕಾಲದಲ್ಲಿ ಅಧರ್ಮದ ಮೂರು ಪಾದಗಳು ಉಂಟಾಗುತ್ತವೋ ಆಗ ನನ್ನ ವರ್ಣವು ಕೃಷ್ಣವರ್ಣವಾಗುತ್ತದೆ (ತಪಸ್ಸು, ಶೌಚ, ದಯಾ, ಸತ್ಯ ಎಂಬುವು ಧರ್ಮದ ನಾಲ್ಕು ಪಾದಗಳು. ಅಹಂಕಾರ, ಸಂಗ, ಮದ ಮತ್ತು ಅನೃತ ಎಂಬುವು ಅಧರ್ಮದ ನಾಲ್ಕು ಪಾದಗಳು. ಈ ಅಧರ್ಮದ ಪಾದಗಳು ಕ್ರಮವಾಗಿ ಧರ್ಮದ ಪಾದಗಳನ್ನು ನಾಶಮಾಡುತ್ತವೆ. ಕಲಿಯುಗದಲ್ಲಿ ಮಯಸಂಗ ಮದಗಳಿಂದ ಧರ್ಮದ ಮೂರುಪಾದಗಳಾದ ತಪಸ್ಸು, ಶೌಚ ಮತ್ತು ದಯವೆಂಬ ಪಾದಗಳು ನಾಶವಾಗಿ ಸತ್ಯ ಎಂಬ ಒಂದೇ ಪಾದವು ಉಳಿಯುತ್ತದೆ. ಅನೃತವು ಅದಕ್ಕೆ ವಿರೋಧಿಯಾದುದು).
ಅಂತಕಾಲೇ ಚ ಸಂಪ್ರಾಪ್ತೇ ಕಾಲೋ ಭೂತ್ವಾಽತಿದಾರುಣಃ |
ತ್ರೈಲೋಕ್ಯಂ ನಾಶಯಾಮ್ಯೇಕಃ ಕೃತ್ಸ್ನಂ ಸ್ಥಾವರಜಂಗಮಮ್ ॥33॥
ಅಂತಕಾಲವು ಪ್ರಾಪ್ತವಾದಾಗ ಅತಿಘೋರವಾದ ಕಾಲನಾಮಕನಾಗಿ ನಾನೊಬ್ಬನೇ ಎಲ್ಲಾ ಸ್ಥಾವರ ಜಂಗಮಗಳಿಂದ ಕೂಡಿದ

ಮೂರುಲೋಕಗಳನ್ನೂ ನಾಶಮಾಡುತ್ತೇನೆ.
ಅಹಂ ತ್ರಿವರ್ತ್ಮಾ ವಿಶ್ವಾತ್ಮಾ ಸರ್ವಲೋಕಸುಖಾವಹಃ |
ಆವಿರ್ಭೂಃ ಸರ್ವಗೋಽನಂತೋ ಹೃಷೀಕೇಶ ಉರುಕ್ರಮಃ ||34||
ನಾನು ಸ್ವರ್ಗ-ನರಕ-ಭೂಮಿ ಎಂಬ ಮೂರು ಮಾರ್ಗಗಳಿಗೂ ಪ್ರೇರಕನಾದವನು (ಅಥವಾ ದೇವತೆಗಳ, ಮನುಷ್ಯರ ಮತ್ತು ಅಸುರರ ಮೂರು ಗತಿಗಳಿಗೂ ಪ್ರೇರಕನಾದವನು. ವಿಶ್ವವ್ಯಾಪಿಯಾದವನು. ಸರ್ವಲೋಕಕ್ಕೆ ಸುಖವನ್ನು ಕೊಡುವವನು). ನನಗೆ ನಾನೇ ಆವಿರ್ಭೂತನಾದವನು. ಸರ್ವತ್ರ ವ್ಯಾಪ್ತನಾದವನು. ಅನಂತನಾದವನು. ಇಂದ್ರಿಯಸ್ವಾಮಿಯಾದವನು ಮತ್ತು ಉರುಕ್ರಮನಾದವನು.
ಕಾಲಚಕ್ರಂ ನಯಾಮ್ಯೇಕೋ ಬ್ರಹ್ಮನ್ನಹಮರೂಪಕಮ್ |
ಶಮನಂ ಸರ್ವಭೂತಾನಾಂ ಸರ್ವಲೋಕಕೃತೋದ್ಯಮಮ್ ||35||
ಎಲೈ ಬ್ರಾಹ್ಮಣನೇ, ನಾನೊಬ್ಬನೇ ಸರ್ವಪ್ರಾಣಿಗಳಿಗೆ ನಾಶಕವಾದ, ಸರ್ವಲೋಕದ ಕಾರ್ಯಗಳಿಗೆ ಕಾರಣವಾದ ಅದೃಶ್ಯವಾದ ಕಾಲಚಕ್ರವನ್ನು ತಿರುಗಿಸುತ್ತೇನೆ.
ಏವಂ ಪ್ರಣಿಹಿತಃ ಸಮ್ಯಗ್ ಮಮಾತ್ಮಾ ಮುನಿಸತ್ತಮ |
ಸರ್ವಭೂತೇಷು ವಿಪ್ರೇಂದ್ರ ನ ಚ ಮಾಂ ವೇತ್ತಿ ಕಶ್ಚನ |
ಸರ್ವಲೋಕೇ ಚ ಮಾಂ ಭಕ್ತಾಃ ಪೂಜಯಂತಿ ಚ ಸರ್ವಶಃ ||36||
ಎಲೈ ಮುನಿಶ್ರೇಷ್ಠನೇ, ಹೀಗೆ ನನ್ನ ಸ್ವರೂಪವು ಸರ್ವ ಜಡಚೇತನಗಳಲ್ಲಿಯೂ ಸನ್ನಿಹಿತವಾಗಿದೆ. ಎಲೈ ವಿಪ್ರೇಂದ್ರನೇ, ಆದರೆ ಯಾರೂ ನನ್ನನ್ನು ತಿಳಿದಿಲ್ಲ. ಎಲ್ಲ ಲೋಕಗಳಲ್ಲಿರುವ ಭಕ್ತರು ಎಲ್ಲ ರೀತಿಯಿಂದಲೂ ನನ್ನನ್ನು ಪೂಜೆ ಮಾಡುತ್ತಾರೆ.
ಯಚ್ಚ ಕಿಂಚಿತ್ ತ್ವಯಾ ಪ್ರಾಪ್ತಂ ಮಯಿ ಕ್ಲೇಶಾತ್ಮಕಂ ದ್ವಿಜ |
ಸುಖೋದಯಾಯ ತತ್ಸರ್ವಂ ಶ್ರೇಯಸೇ ಚ ತವಾನಘ ||37||
ಎಲೈ ಬ್ರಾಹ್ಮಣನೇ, ನನ್ನ ಉದರದಲ್ಲಿರುವಾಗ ನೀನು ಏನು ಕ್ಲೇಶಗಳನ್ನು ಅನುಭವಿಸಿದೆಯೋ ಅದೆಲ್ಲವೂ ಎಲೈ ಅನಘನೇ, ನಿನ್ನ ಸುಖೋದಯಕ್ಕೂ ಮತ್ತು ಶ್ರೇಯಸ್ಸಿಗೂ ಕಾರಣವಾಗುತ್ತವೆ.
ಯಚ್ಚ ಕಿಂಚಿತ್ ತ್ವಯಾ ಲೋಕೇ ದೃಷ್ಟಂ ಸ್ಥಾವರಜಂಗಮಮ್ |
ವಿಹಿತಃ ಸರ್ವಥೈವಾಸೌ ಮಮಾತ್ಮಾ ಭೂತಭಾವನಃ ||38||
ನೀನು ಲೋಕದಲ್ಲಿ ಯಾವ ಸ್ಥಾವರಜಂಗಮವನ್ನು ನೋಡಿದ್ದೀಯೋ ಆ ಎಲ್ಲ ಪ್ರಾಣಿಗಳನ್ನು ಸೃಷ್ಟಿಸುವ ನನ್ನ ಸ್ವರೂಪವು ಹಾಗೆಯೇ ಎಂದರೆ ಹಿಂದೆ ಹೇಳಿದ ಗುಣಗಳಿಂದ ವಿಶಿಷ್ಟವಾಗಿಯೇ ನಿಹಿತವಾಗಿದೆ.
ಅರ್ಧಂ ಮಮ ಶರೀರಸ್ಯ ಸರ್ವಲೋಕಪಿತಾಮಹಃ |
ಅಹಂ ನಾರಾಯಣೋ ನಾಮ ಶಂಖಚಕ್ರಗದಾಧರಃ ||39||
ಸರ್ವಲೋಕ ಪಿತಾಮಹನಾದ ಬ್ರಹ್ಮನು ನನ್ನ ಶರೀರದಿಂದ ಒಂದು ಭಾಗ. ನಾನು ಶಂಖ-ಚಕ್ರ-ಗದಾಧಾರಿಯಾದ ನಾರಾಯಣನು.
ಯಾವದ್ ಯುಗಾನಾಂ ವಿಪ್ರರ್ಷೇ ಸಹಸ್ರಪರಿವರ್ತನಾತ್ |
ತಾವತ್ ಸ್ವಪಿಮಿ ವಿಶ್ವಾತ್ಮಾ ಸರ್ವಭೂತಾನಿ ಮೋಹಯನ್ ||40||
ಎಲೈ ವಿಪ್ರರ್ಷಿಯೇ, ವಿಶ್ವಾಂತರ್ಯಾಮಿಯಾದ ನಾನು ಎಲ್ಲ ಪ್ರಾಣಿಗಳಿಗೂ ನಿದ್ರೆಯಿಂದ ಮೋಹವನ್ನುಂಟುಮಾಡಿ ಸಹಸ್ರ ಚತುರ್ಯುಗಗಳನ್ನು ಕಳೆಯುವವರೆಗೆ ಯೋಗನಿದ್ರೆಯನ್ನು ಮಾಡುತ್ತೇನೆ.
ಏವಂ ಸರ್ವಮಹಂ ಕಾಲಮಿಹಾಸ್ಸೇ ಮುನಿಸತ್ತಮ |
ಅಶಿಶುಃ ಶಿಶುರೂಪೇಣ ಯಾವದ್ ಬ್ರಹ್ಮಾ ನ ಬುಧ್ಯತೇ ||41||
ಹೀಗೆ ಎಲೈ ಮುನಿಶ್ರೇಷ್ಠನೇ, ಆ ಸರ್ವಕಾಲವನ್ನೂ ಎಂದರೆ ಬ್ರಹ್ಮದೇವರು ಎಚ್ಚರಗೊಳ್ಳುವವರೆಗೆ ಇರುವ ಕಾಲವನ್ನು ಶಿಶುವಲ್ಲದ ನಾನು ಶಿಶುರೂಪದಿಂದಲೇ ಇದ್ದು ಇಲ್ಲಿ ಕಳೆಯುತ್ತೇನೆ.
ಮಯಾ ಚ ದತ್ತೋ ವಿಪ್ರಾಗ್ರ್ಯ ವರಸ್ತೇ ಬ್ರಹ್ಮರೂಪಿಣಾ |
ಅಸಕೃತ್ಪರಿತುಷ್ಟೇನ ವಿಪ್ರರ್ಷಿಗಣಪೂಜಿತ ||42||
ಎಲೈ ವಿಪ್ರಶ್ರೇಷ್ಠನೇ, ವಿಪ್ರರ್ಷಿಗಣಪೂಜಿತನೇ, ಪುನಃ ಪುನಃ ನನ್ನನ್ನು ಸಂತೋಷಪಡಿಸಿದ ನಿನಗೆ ನಾನು ಬ್ರಹ್ಮನ ಅಂತರ್ಯಾಮಿಯಾಗಿದ್ದು ವರವನ್ನು ನೀಡಿದ್ದೇನೆ.
ಸರ್ವಮೇಕಾರ್ಣವಂ ದೃಷ್ಟ್ವಾ ನಷ್ಟಂ ಸ್ಥಾವರಜಂಗಮಮ್ |
ವಿಕ್ಲವೋಽಸಿ ಮಯಾ ಜ್ಞಾತಸ್ತತಸ್ತೇ ದರ್ಶಿತಂ ಜಗತ್ ||43||
ಜಗತ್ತೆಲ್ಲವೂ ಏಕಾರ್ಣವವಾದುದನ್ನು, ಸ್ಥಾವರಜಂಗಮವೆಲ್ಲವೂ ನಷ್ಟವಾದುದನ್ನು ನೋಡಿ ನೀನು ಗಾಬರಿಗೊಂಡಿದ್ದೀಯೆ ಎಂದು ನಾನು ತಿಳಿದು ಅದಕ್ಕಾಗಿ ನಿನಗೆ ನಾನು ನನ್ನ ಉದರದಲ್ಲಿ ಜಗತ್ತನ್ನು ತೋರಿಸಿದೆ.
ಅಭ್ಯಂತರಂ ಶರೀರಸ್ಯ ಪ್ರವಿಷ್ಟೋಽಸಿ ಯದಾ ಮಮ |
ದೃಷ್ಟ್ವಾ ಲೋಕಂ ಸಮಸ್ತಂ ಚ ವಿಸ್ಮಿತೋ ನಾವಬುಧ್ಯಸೇ ||44||
ನನ್ನ ಶರೀರದೊಳಗೆ ಪ್ರವೇಶಿಸಿ ಎಲ್ಲಾ ಲೋಕಗಳನ್ನೂ ನೋಡಿ ವಿಸ್ಮಿತನಾಗಿ ನೀನು ಅವಬೋಧವನ್ನೇ ಪಡೆಯಲಿಲ್ಲ.
ತತೋಽಸಿ ವಕ್ತ್ರಾದ್ ವಿಪ್ರರ್ಷೇ ದ್ರುತಂ ನಿಃಸಾರಿತೋ ಮಯಾ |
ಆಖ್ಯಾತಸ್ತೇ ಮಯಾ ಚಾತ್ಮಾ ದುರ್ಜ್ಞೇಯೋ ಹಿ ಸುರಾಸುರೈಃ ||45||
ಎಲೈ ವಿಪ್ರರ್ಷಿಯೇ, ಆದ್ದರಿಂದ ನಾನು ನಿನ್ನನ್ನು ನನ್ನ ಮುಖದಿಂದ ಶೀಘ್ರವಾಗಿ ಹೊರದೂಡಿದೆ ಮತ್ತು ಸುರಾಸುರರಿಂದ ತಿಳಿಯಲು ಸಾಧ್ಯವಿಲ್ಲದ ನನ್ನ ಸ್ವರೂಪವನ್ನು ನಿನಗೆ ಉಪದೇಶವನ್ನು ಮಾಡಿದೆ.

ಯಾವತ್ ಸ ಭಗವಾನ್ ಬ್ರಹ್ಮಾ ನ ಬುಧ್ಯೇತ ಮಹಾತಪಾಃ |
ತಾವತ್ ತ್ವಮಿಹ ವಿಪ್ರರ್ಷೇ ವಿಸ್ರಬ್ಧಶ್ಚರ ವೈ ಸುಖಮ್ ||46||
ಎಲೈ ವಿಪ್ರರ್ಷಿಯೇ, ಮಹಾತಪಸ್ವಿಗಳಾದ ಪೂಜ್ಯರಾದ ಬ್ರಹ್ಮದೇವರು ಎಚ್ಚರಗೊಳ್ಳುವವರೆಗೆ ನೀನು ಇಲ್ಲಿ ಸುಖವಾಗಿ ವಿಶ್ವಾಸದಿಂದ ಇರು.
ತತೋ ವಿಬುದ್ಧೇ ತಸ್ಮಿಂಸ್ತು ಸರ್ವಲೋಕಪಿತಾಮಹೇ |
ಏಕೀಭೂಯ ಹಿ ಸ್ರಕ್ಷ್ಯಾಮಿ ಶರೀರಾಣಿ ದ್ವಿಜೋತ್ತಮ ||47||
ಎಲೈ ದ್ವಿಜೋತ್ತಮನೇ, ಅನಂತರ ಸರ್ವಲೋಕಪಿತಾಮಹರಾದ ಆ ಬ್ರಹ್ಮದೇವರು ಎದ್ದಮೇಲೆ ಅವರಲ್ಲಿ ಪ್ರವೇಶವನ್ನು ಮಾಡಿ ಎಲ್ಲ ಶರೀರಗಳನ್ನೂ ಸೃಷ್ಟಿಸುವೆನು.
ಆಕಾಶಂ ಪೃಥಿವೀಂ ಜ್ಯೋತಿರ್ವಾಯುಂ ಸಲಿಲಮೇವ ಚ |
ಲೋಕೇ ಯಚ್ಚ ಭವೇಚ್ಛೇಷಮಿಹ ಸ್ಥಾವರಜಂಗಮಮ್ ||48||
ಆಕಾಶ, ಪೃಥಿವೀ, ಅಗ್ನಿ, ವಾಯು, ಜಲ ಮತ್ತು ಈ ಲೋಕದಲ್ಲಿ ಏನೇನು ಸ್ಥಾವರಜಂಗಮವಿದೆಯೋ (ಅವೆಲ್ಲವನ್ನೂ ಸೃಷ್ಟಿಸುವೆನು).
ಮಾರ್ಕಂಡೇಯಃ
ಇತ್ಯುಕ್ತ್ವಾಂತರ್ಹಿತಸ್ತಾತ ಸ ದೇವಃ ಪರಮಾದ್ಭುತಃ |
ಪ್ರಜಾಶ್ಚೇಮಾಃ ಪ್ರಪಶ್ಯಾಮಿ ವಿಚಿತ್ರಾ ವಿವಿಧಾಃ ಕೃತಾಃ ||49||
ಮಾರ್ಕಂಡೇಯ ಎಲೈ ಪ್ರೀತಿಪಾತ್ರನೇ, ಹೀಗೆ ಹೇಳಿ ಆ ಪರಮಾದ್ಭುತನಾದ ದೇವನು ಅಂತರ್ದಾನವನ್ನು ಹೊಂದಿದನು. ಅನಂತರ ಈ ಪ್ರಜೆಗಳನ್ನು ಅವನು ವಿಧವಿಧವಾಗಿ ಸೃಷ್ಟಿಸುತಿತರುವುದನ್ನು ನೋಡುತ್ತಿದ್ದೇನೆ.
ಏವಂ ದೃಷ್ಟಂ ಮಯಾ ರಾಜಂಸ್ತಸ್ಮಿನ್ ಪ್ರಾಪ್ತೇ ಯುಗಕ್ಷಯೇ |
ಆಶ್ಚರ್ಯಂ ಭರತಶ್ರೇಷ್ಠ ಸರ್ವಧರ್ಮಭೃತಾಂ ವರ ||50||
ಎಲೈ ಭರತಶ್ರೇಷ್ಠನೇ, ಎಲೈ ಎಲ್ಲಾ ಧರ್ಮಿಷ್ಠನಲ್ಲಿ ಶ್ರೇಷ್ಠನಾದವನೇ, ಎಲೈ ರಾಜನೇ, ಯುಗಕ್ಷಯವು ಪ್ರಾಪ್ತವಾದಾಗ ಹೀಗೆ ನಾನು ಆಶ್ಚರ್ಯವನ್ನು ನೋಡಿದೆನು.
ಯಃ ಸ ದೇವೋ ಮಯಾ ದೃಷ್ಟಃ ಪುರಾ ಪದ್ಮಾಯತೇಕ್ಷಣಃ |
ಸ ಏಷ ಪುರುಷವ್ಯಾಘ್ರ ಸಂಬಂಧೀ ತೇ ಜನಾರ್ದನಃ||51||
ಎಲೈ ಪುರುಷವ್ಯಾಘ್ರನೇ, ನಾನು ಹಿಂದೆ ಯಾವ ಪದ್ಮನೇತ್ರನಾದ ದೇವದೇವನನ್ನು ನೋಡಿದೆನೋ ಅವನೇ ನಿನ್ನ ಸಂಬಂಧಿಯಾದ ಈ ಜನಾರ್ದನ (ಕೃಷ್ಣನಾಗಿದ್ದಾನೆ).
ಅಸ್ಯೈವ ವರದಾನಾದ್ಧಿ ಸ್ಮೃತಿರ್ನ ಪ್ರಜಹಾತಿ ಮಾಮ್ |
ದೀರ್ಘಮಾಯುಶ್ಚ ಕೌಂತೇಯ ಸ್ವಚ್ಛಂದಮರಣಂ ಮಮ ||52||
ಎಲೈ ಕೌಂತೇಯನೇ, ಇವನ ವರದಾನದ ಬಲದಿಂದಲೇ ನನಗೆ ಸ್ಮೃತಿಯು ನಾಶವಾಗಿಲ್ಲ ಮತ್ತು ದೀರ್ಘಾಯುಷ್ಯ ಮತ್ತು ಸ್ವಚ್ಛಂದ ಮರಣಗಳು ಉಂಟಾಗಿವೆ.
ಸ ಏಷ ಕೃಷ್ಣೋ ವಾರ್ಷ್ಣೇಯಃ ಪುರಾಣಪುರುಷೋ ವಿಭುಃ |
ಆಸ್ತೇ ಹರಿರಚಿಂತ್ಯಾತ್ಮಾ ಕ್ರೀಡನ್ನಿವ ಮಹಾಭುಜಃ ||53||
ವೃಷ್ಟಿಕುಲದಲ್ಲಿ ಜನಿಸಿದ ಈ ಕೃಷ್ಣನೇ ಆ ಪುರಾಣ ಪುರುಷನಾದ ವಿಭುವಾದ ಅಚಿಂತ್ಯಸ್ವರೂಪನಾದ ಹರಿಯು. ಮಹಾಭುಜನಾದ ಇವನು ಕ್ರೀಡೆಯನ್ನು ಮಾಡುವವನಂತೆ ಇದ್ದಾನೆ.
ಏಷ ಧಾತಾ ವಿಧಾತಾ ಚ ಸಂಹರ್ತಾ ಚೈವ ಶಾಶ್ವತಃ |
ಶ್ರೀವತ್ಸವಕ್ಷಾ ಗೋವಿಂದಃ ಪ್ರಜಾಪತಿಪತಿಃ ಪ್ರಭುಃ ||54||
ಇವನೇ ಧಾತಾ; ವಿಧಾತಾ; ಸಂಹಾರವನ್ನು ಮಾಡುವವನು; ಶಾಶ್ವತನಾದವನು; ಶ್ರೀವತ್ಸವಕ್ಷಸ್ಸ್ಥಲವುಳ್ಳವನು;
ವೇದಪ್ರತಿಪಾದ್ಯನಾದವನು; ಪ್ರಜಾಪತಿಗೆ ಪತಿಯಾದವನು; ಸರ್ವಸಮರ್ಥನಾದವನು.
ದೃಷ್ಟ್ವೇಮಂ ವೃಷ್ಣಿಪ್ರವರಂ ಸ್ಮೃತಿರ್ಮಾಮಿಯಮಾಗತಾ |
ಆದಿದೇವಮಜಂ ಜಿಷ್ಣುಂ ಪುರುಷಂ ಪೀತವಾಸಸಮ್ ||55||
ಸರ್ವೇಷಾಮೇವ ಭೂತಾನಾಂ ಪಿತಾ ಮಾತಾ ಚ ಮಾಧವಃ |
ಗಚ್ಛಧ್ವಮೇನಂ ಶರಣಂ ಶರಣ್ಯಂ ಕೌರವರ್ಷಭಾಃ ||56||
ಈ ಆದಿದೇವನಾದ ಅಜನಾದ ಜಯಶೀಲನಾದ ಪೀತಾಂಬರಧಾರಿಯಾದ ಪುರುಷನಾದ ವೃಷ್ಟಿಶ್ರೇಷ್ಠನನ್ನು ನೋಡಿ ನನಗೆ ಹಿಂದಿನ ಸ್ಮೃತಿಯೆಲ್ಲವೂ ಉಂಟಾಯಿತು. ಮಧುಕುಲದಲ್ಲಿ ಜನಿಸಿದ ಈ ಕೃಷ್ಣನು ಎಲ್ಲ ಜೀವರಿಗೂ ತಂದೆಯೂ ಹೌದು, ತಾಯಿಯೂ ಹೌದು. ಎಲೈ ಕೌರವಶ್ರೇಷ್ಠರೇ, ಶರಣುಹೊಂದಲು ಯೋಗ್ಯವಾದ ಇವನನ್ನು ಸರ್ವಾತ್ಮನಾ ಶರಣು ಹೊಂದಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುರಶೀತ್ಯಧಿಕಶತತಮೋಽಧ್ಯಾಯಃ ||
|| ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ನಾಲ್ಕನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತೈದನೆಯ ಅಧ್ಯಾಯ

ಶ್ರೀಕೃಷ್ಣನಲ್ಲಿ ಪಾಂಡವರ ಶರಣಾಗತಿ. ಕೃಷ್ಣನಿಂದ ಅವರಿಗೆ ಸಾಂತ್ವನ. ಮಾರ್ಕಂಡೇಯರಿಂದ ಕಲಿಯುಗದ ಧರ್ಮದ ಮತ್ತು ಕಲ್ಕಿಯ ಅವತಾರದ ವರ್ಣನೆ.
ವೈಶಂಪಾಯನಃ
ಏವಮುಕ್ತಾಸ್ತು ತೇ ಪಾರ್ಥಾ ಯಮೌ ಚ ಪುರುಷರ್ಷಭೌ |
ದ್ರೌಪದ್ಯಾ ಸಹಿತಾಃ ಸರ್ವೇ ನಮಶ್ಚಕ್ರುರ್ಜನಾರ್ದನಮ್ ॥1॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಕುಂತೀಪುತ್ರರು ಮತ್ತು ಪುರುಷಶ್ರೇಷ್ಠರಾದ ನಕುಲಸಹದೇವರು ದ್ರೌಪದಿಯಿಂದ ಸಹಿತರಾಗಿ ಎಲ್ಲರೂ ಕೃಷ್ಣನಿಗೆ ನಮಸ್ಕಾರವನ್ನು ಮಾಡಿದರು.
ಸ ಚೈತಾನ್ ಪುರುಷವ್ಯಾಘ್ರ ಸಾಮ್ನಾ ಪರಮವಲ್ಗುನಾ |
ಸಾಂತ್ವಯಾಮಾಸ ಮಾನಾರ್ಹೋ ಮಾನ್ಯಮಾನೋ ಯಥಾವಿಧಿ ॥2॥
ಎಲೈ ಪುರುಷವ್ಯಾಘ್ರನೇ, ಸನ್ಮಾನಕ್ಕೆ ಯೋಗ್ಯನಾದ ಮತ್ತು ಹೀಗೆ ವಿಧಿವತ್ತಾಗಿ ಸನ್ಮಾನಿಸಲ್ಪಟ್ಟ ಶ್ರೀಕೃಷ್ಣನು ಪರಮಮಧುರವಾದ ಮಾತುಗಳಿಂದ ಅವರನ್ನು ಸಮಾಧಾನಪಡಿಸಿದನು.
ಯುಧಿಷ್ಠಿರಸ್ತು ಕೌಂತೇಯೋ ಮಾರ್ಕಂಡೇಯಂ ಮಹಾಮುನಿಮ್ |
ಪುನಃ ಪಪ್ರಚ್ಛ ಧರ್ಮಾತ್ಮಾ ಭವಿಷ್ಯಾಂ ಜಗತೋ ಗತಿಮ್ ॥3॥
ಧರ್ಮಾತ್ಮನಾದ ಕುಂತೀಪುತ್ರನಾದ ಯುಧಿಷ್ಠಿರನು ಮಾರ್ಕಂಡೇಯ ಮಹಾಮುನಿಯನ್ನು ಕುರಿತು ಮುಂದೆ ಉಂಟಾಗಲಿರುವ ಜಗತ್ತಿನ ಸ್ಥಿತಿಯನ್ನು ಕುರಿತು ಪುನಃ ಹೀಗೆ ಪ್ರಶ್ನೆಯನ್ನು ಮಾಡಿದನು.
ಆಶ್ಚರ್ಯಭೂತಂ ಭವತಃ ಶ್ರುತಂ ನೋ ವದತಾಂ ವರ |
ಮುನೇ ಭಾರ್ಗವ ಯದ್ ವೃತ್ತಂ ಯುಗಾದೌ ಪ್ರಭವಾತ್ಯಯಮ್ ॥4॥
ಎಲೈ ಭಾರ್ಗವ ಋಷಿಗಳೇ, ಮಾತನಾಡುವವರಲ್ಲಿ ಶ್ರೇಷ್ಠರಾದವರೇ, ಯುಗದ ಪ್ರಾರಂಭದಲ್ಲಿ ಉಂಟಾದ ಆಶ್ಚರ್ಯಭೂತವಾದ ಸೃಷ್ಟಿ ಸಂಹಾರಗಳನ್ನು ನಾವು ನಿಮ್ಮಿಂದ ಕೇಳಿದೆವು.
ಅಸ್ಮಿನ್ ಕಲಿಯುಗೇ ತ್ವಸ್ತಿ ಪುನಃ ಕೌತೂಹಲಂ ಮಮ |
ಸಮಾಕುಲೇಷು ಧರ್ಮೇಷು ಕಿಂ ನು ಶೇಷಂ ಭವಿಷ್ಯತಿ ॥5॥
ಈ ಕಲಿಯುಗದ ವಿಷಯದಲ್ಲಿ ನನಗೆ ಪುನಃ ಕುತೂಹಲವಿದೆ. ಎಲ್ಲಾ ಧರ್ಮಗಳು ಸಂಕಟಕ್ಕೆ ಒಳಗಾದಾಗ ಏನು ಉಳಿಯುವುದು?
ಕಿಂವೀರ್ಯಾ ಮಾನವಾಸ್ತತ್ರ ಕಿಮಾಹಾರವಿಹಾರಿಣಃ |
ಕಿಮಾಯುಷಃ ಕಿಂವಸನಾ ಭವಿಷ್ಯಂತಿ ಯುಗಕ್ಷಯೇ ॥6॥
ಯುಗಕ್ಷಯದ ಸಮಯದಲ್ಲಿ ಮಾನವರಿಗೆ ಎಂತಹ ಸಾಮರ್ಥ್ಯವಿರುತ್ತದೆ? ಎಂತಹ ಆಹಾರವಿಹಾರಗಳು ಇರುತ್ತವೆ? ಅವರ ಆಯುಷ್ಯವೆಷ್ಟು? ಅವರಿಗೆ ಎಂತಹ ವಸ್ತ್ರಗಳು ಇರುವವು?
ಕಾಂ ಚ ಕಾಷ್ಠಾಂ ಸಮಾಸಾದ್ಯ ಪುನಃ ಸಂಪತ್ಸ್ಯತೇ ಕೃತಮ್ |
ವಿಸ್ತರೇಣ ಮುನೇ ಬ್ರೂಹಿ ವಿಚಿತ್ರಾಣೀಹ ಭಾಷಸೇ ॥7॥
ಯಾವ ಅಧರ್ಮದ ತುದಿಯನ್ನು ಮುಟ್ಟಿ ಪುನಃ ಕೃತಯುಗವು ಪ್ರಾರಂಭವಾಗುವುದು? ಎಲೈ ಋಷಿಗಳೇ, ಈ ವಿಷಯಗಳನ್ನು ವಿಸ್ತಾರವಾಗಿ ನಿರೂಪಿಸಿ. ನೀವು ವಿಚಿತ್ರವಾಗಿ ಮಾತನಾಡುತ್ತೀರಿ (ಎಂದು ಪ್ರಶ್ನೆಮಾಡಿದನು).
ಇತ್ಯುಕ್ತಃ ಸ ಮುನಿಶ್ರೇಷ್ಠಃ ಪುನರೇವಾಭ್ಯಭಾಷತ |
ರಮಯನ್ ವೃಷ್ಣಿಶಾರ್ದೂಲಂ ಪಾಂಡವಾಂಶ್ಚ ಮಹಾನೃಷಿಃ ॥8॥
ಹೀಗೆ ಹೇಳಲ್ಪಟ್ಟ ಆ ಋಷಿಶ್ರೇಷ್ಠರು ವೃಷ್ಣಿವೀರನಾದ ಕೃಷ್ಣನನ್ನು ಮತ್ತು ಪಾಂಡವರನ್ನು ಸಂತೋಷಪಡಿಸುತ್ತಾ ಪುನಃ ಮಾತನಾಡಿದರು.
ಭವಿಷ್ಯಂ ಸರ್ವಲೋಕಸ್ಯ ವೃತ್ತಾಂತಂ ಭರತರ್ಷಭ |
ಕಲುಷಂ ಕಾಲಮಾಸಾದ್ಯ ಕಥ್ಯಮಾನಂ ನಿಬೋಧ ಮೇ ॥9॥
ಎಲೈ ಭರತರ್ಷಭನೇ, ಯುಗಕ್ಷಯದ ಕೆಟ್ಟ ಕಾಲವನ್ನು ತಲುಪಿದಾಗ ಸರ್ವಲೋಕದ ವೃತ್ತಾಂತವು ಮುಂದೆ ಹೇಗಿರುವುದೆಂದು ನಾನು ಹೇಳುವುದನ್ನು ನೀನು ಆಲಿಸು.
ಕೃತೇ ಚತುಷ್ಪಾತ್ ಸಕಲೋ ನಿರ್ವ್ಯಾಜೋಪಾಧಿವರ್ಜಿತಃ |
ವೃಷಃ ಪ್ರತಿಷ್ಠಿತೋ ಧರ್ಮೋ ಮನುಷ್ಯೇ ಭರತರ್ಷಭ ॥10॥
ಎಲೈ ಭರತಶ್ರೇಷ್ಠನೇ, ಕೃತಯುಗದಲ್ಲಿ ಯಾವ ಕಪಟವೂ, ಫಲೋದ್ದೇಶವೂ ಇಲ್ಲದೆ ಪೂರ್ಣವಾದ ಶ್ರೇಷ್ಠವಾದ ಧರ್ಮವು ನಾಲ್ಕುಪಾದಗಳಿಂದ ಕೂಡಿ ಮನುಷ್ಯರಲ್ಲಿ ಪ್ರತಿಷ್ಠಿತವಾಗಿರುತ್ತದೆ.
ಅಧರ್ಮಪಾದವಿದ್ಧಸ್ತು ತ್ರಿಭಿರಂಶೈಃ ಪ್ರತಿಷ್ಠಿತಃ |
ತ್ರೇತಾಯಾಂ ದ್ವಾಪರೇಽರ್ಧೇನ ವ್ಯಾಮಿಶ್ರೋ ಧರ್ಮ ಉಚ್ಯತೇ ॥11॥
ತ್ರೇತಾಯುಗದಲ್ಲಿ ಅಹಂಕಾರ ಎಂಬ ಅಧರ್ಮಪಾದದಿಂದ ತಪಸ್ಸೆಂಬ ಧರ್ಮಪಾದವು ನಷ್ಟವಾಗಿ ಉಳಿದ ಶೌಚ, ದಯಾ ಮತ್ತು ಸತ್ಯ ಎಂಬ ಮೂರುಪಾದಗಳಿಂದ ಪ್ರತಿಷ್ಠಿತವಾಗಿರುತ್ತದೆ. ದ್ವಾಪರಯುಗದಲ್ಲಿ ವಿಷಯಾಸಕ್ತಿಯಿಂದ ಶೌಚವು ನಷ್ಟವಾಗಿ ಅಧರ್ಮ ಕಲುಷಿತವಾದ ಧರ್ಮವು ಎರಡು ಪಾದಗಳಿಂದ ಉಳಿದಿರುತ್ತದೆ.
ತ್ರಿಭಿರಂಶೈರಧರ್ಮಸ್ತು ಲೋಕಾನಾಕ್ರಮ್ಯ ತಿಷ್ಠತಿ |
ಚತುರ್ಥಾಂಶೇನ ಧರ್ಮಸ್ತು ಮನುಷ್ಯಾನುಪತಿಷ್ಠತಿ ॥12॥
ಕಲಿಯುಗದಲ್ಲಿ ಅಧರ್ಮವು ಸ್ಮಯ, ಸಂಗ, ಮದ ಎಂಬ ಮೂರು ಪಾದದಿಂದ ಜಗತ್ತನ್ನು ಆಕ್ರಮಿಸಿದಾಗ ಮನುಷ್ಯರಲ್ಲಿ ಸತ್ಯ ಎಂಬ

ಒಂದೇ ಪಾದದಿಂದ ಧರ್ಮವು ಉಳಿಯುತ್ತದೆ.
ತಾಮಸಂ ಯುಗಮಾಸಾದ್ಯ ತದಾ ಭರತಸತ್ತಮ |
ಆಯುರ್ವೀರ್ಯಮಥೋ ಬುದ್ಧಿರ್ಬಲಂ ತೇಜಶ್ಚ ಪಾಂಡವ |
ಮನುಷ್ಯಾಣಾಮನುಯುಗಂ ಹ್ರಸತೀತಿ ನಿಬೋಧ ಮೇ ॥13॥
ಎಲೈ ಪಾಂಡವನೇ, ಮನುಷ್ಯರ ಆಯುಸ್ಸು, ವೀರ್ಯ, ಬುದ್ಧಿ, ಬಲ, ತೇಜಸ್ಸುಗಳು ಯುಗದಿಂದ ಯುಗಕ್ಕೆ ಹೋಗುತ್ತಾ ಕಡಿಮೆಯಾಗುತ್ತವೆ ಎಂದು ನನ್ನಿಂದ ತಿಳಿ.
ರಾಜಾನೋ ಬ್ರಾಹ್ಮಣಾ ವೈಶ್ಯಾಃ ಶೂದ್ರಾಶ್ಚೈವ ಯುಧಿಷ್ಠಿರ |
ವ್ಯಾಜೈರ್ಧರ್ಮಂ ಚರಿಷ್ಯಂತಿ ಧರ್ಮವೈತಂಸಿಕಾ ನರಾಃ ॥14॥
ಎಲೈ ಯುಧಿಷ್ಠಿರನೇ, ರಾಜರು, ಬ್ರಾಹ್ಮಣರು, ವೈಶ್ಯರು ಮತ್ತು ಶೂದ್ರರು ಫಲದ ಉದ್ದೇಶದಿಂದ ಧರ್ಮವನ್ನು ಆಚರಿಸುವರು. ಮನುಷ್ಯರು ಕುಟಿಲತೆಯಿಂದ ಧರ್ಮವನ್ನು ಆಚರಿಸುವರು.
ಸತ್ಯಂ ಸಂಕ್ಷೇಪ್ಸ್ಯತೇ ಲೋಕೇ ನರೈಃ ಪಂಡಿತಮಾನಿಭಿಃ |
ಸತ್ಯಹಾನ್ಯಾ ತತಸ್ತೇಷಾಮಾಯುರಲ್ಪಂ ಭವಿಷ್ಯತಿ ॥15॥
ತಮ್ಮನ್ನು ಪಂಡಿತರೆಂದು ತಿಳಿದ ಮನುಷ್ಯರು ಲೋಕದಲ್ಲಿ ಸತ್ಯವನ್ನು ವಿನಾಶ ಮಾಡುತ್ತಾರೆ. ಸತ್ಯದ ನಾಶದಿಂದ ಅವರಿಗೆ ಅಲ್ಪಾಯುಸ್ಸು ಉಂಟಾಗುವುದು.
ಆಯುಷಃ ಪ್ರಕ್ಷಯಾದ್ ವಿದ್ಯಾಂ ನ ಶಕ್ಷ್ಯಂತ್ಯುಪಜೀವಿತುಮ್ |
ವಿದ್ಯಾಹೀನಾನವಿಜ್ಞಾನಾಲ್ಲೋಭೋಽಪ್ಯಭಿಭವಿಷ್ಯತಿ ॥16॥
ಆಯುಸ್ಸಿನ ಕ್ಷಯ ಉಂಟಾಗುವುದರಿಂದ ಅವರು ವಿದ್ಯೆಯನ್ನು ಸಂಪಾದಿಸಿ ಉಪಜೀವನವನ್ನು ಮಾಡಲು ಸಾಧ್ಯವಾಗುವುದಿಲ್ಲ. ವಿದ್ಯಾಹೀನರಾದವರಿಗೆ ಅಜ್ಞಾನದಿಂದ ಲೋಭವು ಉಂಟಾಗುವುದು.
ಲೋಭಕ್ರೋಧಪರಾ ಮೂಢಾಃ ಕಾಮಾಸಕ್ತಾಶ್ಚ ಮಾನವಾಃ |
ವೈರಬದ್ಧಾ ಭವಿಷ್ಯಂತಿ ಪರಸ್ಪರವಧೈಷಿಣಃ ॥17॥
ಲೋಭ ಕ್ರೋಧಗಳಿಗೆ ವಶರಾಗಿ ಜ್ಞಾನಶೂನ್ಯರಾಗಿ ಕಾಮಾಸಕ್ತರಾದ ಮನುಷ್ಯರು ಪರಸ್ಪರ ವಧೆಯನ್ನು ಬಯಸಿ ವೈರವನ್ನು ಮಾಡುವರು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸಂಕೀರ್ಯಂತಃ ಪರಸ್ಪರಮ್ |
ಶೂದ್ರತುಲ್ಯಾ ಭವಿಷ್ಯಂತಿ ತಪಃಸತ್ಯವಿವರ್ಜಿತಾಃ |
ಅಂತ್ಯಾ ಮಧ್ಯಾ ಭವಿಷ್ಯಂತಿ ಮಧ್ಯಾಶ್ಚಾಂತ್ಯಾ ನ ಸಂಶಯಃ ॥18॥
ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಪರಸ್ಪರ ವರ್ಣಸಾಂಕರ್ಯವನ್ನು ಮಾಡುತ್ತಾ ತಪಸ್ಸತ್ಯವಿವರ್ಜಿತರಾಗಿ ಶೂದ್ರರಿಗೆ ಸಮಾನರಾಗಿ ಆಗುವರು. ನೀಚರಾದ ಮನುಷ್ಯರು ಮಧ್ಯಮಸ್ಥಿತಿಗೂ, ಮಧ್ಯಮ ಸ್ಥಿತಿಯಲ್ಲಿದ್ದ ಮನುಷ್ಯರು ನೀಚ ಸ್ಥಿತಿಗೂ ಬರುವರು. ಇದರಲ್ಲಿ ಸಂಶಯವಿಲ್ಲ.
ಈದೃಶೋ ಭವಿತಾ ಲೋಕೋ ಯುಗಾಂತೇ ಪರ್ಯುಪಸ್ಥಿತೇ ॥19॥
ಯುಗಾಂತ ಉಪಸ್ಥಿತವಾದಾಗ ಎಲ್ಲವೂ ಹೀಗೆ ವ್ಯತ್ಯಾಸವಾಗುತ್ತದೆ.
ವಸತ್ರಣಾಂ ಪ್ರವರಾ ಶಾಣೀ ಧಾನ್ಯಾನಾಂ ಕೋರದೂಷಕಾಃ |
ಭಾರ್ಯಾಮಿತ್ರಾಶ್ಚ ಪುರುಷಾ ಭವಿಷ್ಯಂತಿ ಯುಗಕ್ಷಯೇ ॥20॥
ಯುಗಾಂತವು ಸಮೀಪಿಸಿದಾಗ ಒಂದು ಒರಟಾದ ತುಂಡು ವಸ್ತ್ರವೇ ಶ್ರೇಷ್ಠವಾದ ವಸ್ತುವಾಗುವುದು. ಕೋರದೂಷಕ ಎಂದರೆ ಹಾರಕ ಎಂಬ ಧಾನ್ಯವೇ ಶ್ರೇಷ್ಠವಾದ ಧಾನ್ಯವಾಗುವುದು. ಪುರುಷರಿಗೆ ಹೆಂಡತಿಯೇ ಮಿತ್ರಳಾಗುವಳು.
ಮತ್ಸ್ಯಾಮಿಷೇಣ ಜೀವಂತೋ ದುಹಂತಶ್ಚಾಪ್ಯಜೈಡಕಮ್ |
ಗೋಷು ನಷ್ಟಾಸು ಪುರುಷಾ ಯೇಽಪಿ ನಿತ್ಯಂ ಧೃತವ್ರತಾಃ |
ತೇಽಪಿ ಲೋಭಸಮಾಯುಕ್ತಾ ಭವಿಷ್ಯಂತಿ ಯುಗಕ್ಷಯೇ ॥21॥
ಮನುಷ್ಯರು ಮೀನಿನ ಮಾಂಸವನ್ನು ತಿಂದು ಬದುಕುವರು. ಗೋವುಗಳು ನಷ್ಟವಾಗುವುದರಿಂದ ಆಡು, ಕುರಿಗಳ ಹಾಲನ್ನು ಉಪಯೋಗಿಸುವರು. ಯುಗ ಕ್ಷಯದ ಸಮಯದಲ್ಲಿ ವ್ರತವನ್ನು ಮಾಡುವ ಮನುಷ್ಯರೂ ಸಹ ಲೋಭದಿಂದ ಕೂಡಿದವರಾಗುವರು.
ಅನ್ಯೋನ್ಯಂ ಪರಿಮುಷ್ಣಂತೋ ಹಿಂಸಯಂತಶ್ಚ ಮಾನವಾಃ |
ಅಜಪಾ ನಾಸ್ತಿಕಾಃ ಸ್ತೇನಾ ಭವಿಷ್ಯಂತಿ ಯುಗಕ್ಷಯೇ ॥22॥
ಯುಗಕ್ಷಯದ ಸಮಯದಲ್ಲಿ ಮನುಷ್ಯರು ಜಪವನ್ನು ಬಿಟ್ಟು ನಾಸ್ತಿಕರಾಗಿ ಪರಸ್ಪರ ಹಿಂಸೆಯನ್ನು ಮಾಡುತ್ತಾರೆ. ಪರಸ್ಪರ ವಸ್ತುಗಳನ್ನು ಕದಿಯುತ್ತಾ ಕಳ್ಳರಾಗುವರು.
ಸರಿತ್ತೀರೇಷು ಕುದ್ದಾಲೈರ್ವಾಪಯಿಷ್ಯಂತಿ ಚೌಷಧೀಃ |
ತಾಶ್ಚಾಪ್ಯಲ್ಪಫಲಾಸ್ತೇಷಾಂ ಭವಿಷ್ಯಂತಿ ಯುಗಕ್ಷಯೇ ॥23॥
ಯುಗಕ್ಷಯದ ಸಮಯದಲ್ಲಿ ನದೀತೀರಗಳಲ್ಲಿ ಹಾರೆಗಳಿಂದ ಔಷಧಿಯ ಬೀಜಗಳನ್ನು ಬಿತ್ತುವರು. ಅವಾದರೂ ಕೂಡ ಅವರಿಗೆ ಅಲ್ಪ ಫಲಗಳನ್ನೇ ಕೊಡುವುವು.
ಶ್ರಾದ್ಧೇ ದೈವೇ ಚ ಪುರುಷಾ ಯೇಽಪಿ ನಿತ್ಯಂ ಧೃತವ್ರತಾಃ |
ತೇಽಪಿ ಲೋಭಸಮಾಯುಕ್ತಾ ಭೋಕ್ಷ್ಯಂತೀಹ ಪರಸ್ಪರಮ್ ॥24॥
ನಿತ್ಯದಲ್ಲಿ ವ್ರತವನ್ನು ಧರಿಸಿದ ಮನುಷ್ಯರೂ ಸಹ ಲೋಭದಿಂದ ಕೂಡಿದವರಾಗಿ ಶ್ರಾದ್ಧದಲ್ಲಿ ಮತ್ತು ದೈವೋತ್ಸವದಲ್ಲಿ

ಪರಸ್ಪರವಾಗಿ ಭೋಜನವನ್ನು ಮಾಡುವರು.
ಪಿತಾ ಪುತ್ರಸ್ಯ ಭೋಕ್ತಾ ಚ ಪಿತುಃ ಪುತ್ರಸ್ತಥೈವ ಚ |
ಅತಿಕ್ರಾಂತಾನಿ ಭೋಜ್ಯಾನಿ ಭವಿಷ್ಯಂತಿ ಯುಗಕ್ಷಯೇ ॥25॥
ತಂದೆಗೆ ಮಗನೇ ಭೋಕ್ತೃವಾಗುತ್ತಾನೆ. ಪುತ್ರನಿಗೆ ತಂದೆಯೇ ಭೋಕ್ತೃವಾಗುತ್ತಾನೆ (ಭೋಜನಕ್ಕೆ ನಿಮಂತ್ರಿಸಲ್ಪಟ್ಟ ಬ್ರಾಹ್ಮಣನಾಗುತ್ತಾನೆ). ಯುಗಕ್ಷಯದಲ್ಲಿ ಭೋಜ್ಯ ವಸ್ತುಗಳೆಲ್ಲವೂ ತಮ್ಮ ಗುಣಧರ್ಮಗಳನ್ನು ಕಳೆದುಕೊಳ್ಳುವವು.
ರಾತ್ರೌ ಭೋಕ್ಷ್ಯಂತಿ ವ್ರತಿನೋ ಗೃಹಿಣೋಽಪಿ ಯುಗಕ್ಷಯೇ |
ಏವಂವಿಧಂ ಕರಿಷ್ಯಂತಿ ಕಲೌ ಶಾಸ್ತ್ರವಿಮೋಹಿತಾಃ ॥25.1॥
ವ್ರತವನ್ನು ಧರಿಸಿದ ಗೃಹಸ್ಥರೂ ಸಹ ಯುಗಕ್ಷಯ ಸಮಯದಲ್ಲಿ ರಾತ್ರಿಯಲ್ಲಿ ಭೋಜನವನ್ನು ಮಾಡುವರು. ಕಲಿಯುಗದ ಕೊನೆಯಲ್ಲಿ ಶಾಸ್ತ್ರವಿಮೋಹಿತರಾದ ಜನರು ಈ ರೀತಿಯಲ್ಲಿ ಆಚರಿಸುವರು.
ನ ವ್ರತಾನಿ ಚರಿಷ್ಯಂತಿ ಬ್ರಾಹ್ಮಣಾ ವೇದನಿಂದಕಾಃ |
ನ ಯಕ್ಷ್ಯಂತಿ ನ ಹೋಷ್ಯಂತಿ ಹೇತುವಾದವಿಮೋಹಿತಾಃ ॥26॥
ಕುತರ್ಕಗಳಿಂದ ವಿಮೋಹಿತರಾದ ಬ್ರಾಹ್ಮಣರು ವ್ರತಗಳನ್ನು ಮಾಡುವುದಿಲ್ಲ. ವೇದಗಳನ್ನು ನಿಂದಿಸುವರು. ಯಾಗವನ್ನು ಮಾಡುವುದಿಲ್ಲ. ಹೋಮವನ್ನು ಮಾಡುವುದಿಲ್ಲ.
ನಿಮ್ನೇ ಕೃಷಿಂ ಕರಿಷ್ಯಂತಿ ಯೋಕ್ಷ್ಯಂತಿ ಧುರಿ ಧೇನುಕಾಃ |
ಏಕಹಾಯನವತ್ಸಾಂಶ್ಚ ಯೋಜಯಿಷ್ಯಂತಿ ಮಾನವಾಃ ॥27॥
ತಗ್ಗು ಪ್ರದೇಶಗಳಲ್ಲಿ ಮಾತ್ರ ಕೃಷಿಯನ್ನು ಮಾಡುವರು. ಗಾಡಿಗಳಿಗೆ ಮತ್ತು ನೇಗಿಲಿಗೆ ಹಸುಗಳನ್ನು ಕಟ್ಟುವರು. ಮನುಷ್ಯರು ಒಂದು ವರ್ಷದ ಕರುಗಳನ್ನೂ ನೊಗಕ್ಕೆ ಹೂಡುವರು.
ಪುತ್ರಃ ಪಿತೃವಧಂ ಕೃತ್ವಾ ಪಿತಾ ಪುತ್ರವಧಂ ತಥಾ |
ಸ್ತ್ರಿಯೋಽಪಿ ಪತಿಪುತ್ರಾದಿ ವಧಿಷ್ಯಂತಿ ಯುಗಕ್ಷಯೇ |
ನಿರುದ್ವೇಗೋ ಬೃಹದ್ವಾದೀ ನ ನಿಂದಾಮುಪಲಪ್ಸ್ಯತೇ ॥28॥
ಮಗನು ತಂದೆಯ ವಧೆಯನ್ನು ಮಾಡುವನು. ಹಾಗೆಯೇ ತಂದೆಯೂ ಮಗನ ವಧೆಯನ್ನು ಮಾಡುವನು. ಯುಗಕ್ಷಯದ ಕಾಲದಲ್ಲಿ ಸ್ತ್ರೀಯರು ಪತಿಪುತ್ರಾದಿಗಳ ವಧೆಯನ್ನು ಮಾಡುವರು. ನಿರ್ಭಯವಾಗಿ ಗಟ್ಟಿಯಾಗಿ ಮಾತನಾಡುವವನು ಯಾವ ಅಪವಾದಕ್ಕೂ ಸಿಲುಕುವುದಿಲ್ಲ.
ಮ್ಲೇಚ್ಛಭೂತಂ ಜಗತ್ಸರ್ವಂ ನಿಷ್ಕ್ರಿಯಂ ಯಜ್ಞವರ್ಜಿತಮ್ |
ಭವಿಷ್ಯತಿ ನಿರಾನಂದಮನುತ್ಸವಮಥೋ ತಥಾ ॥29॥
ಜಗತ್ತು ಮ್ಲೇಚ್ಛಮಯವಾಗುತ್ತದೆ. ಯಾವ ಸತ್ಕ್ರಿಯೆಗಳೂ, ಯಜ್ಞಗಳೂ ಇರುವುದಿಲ್ಲ. ಯಾವ ಉತ್ಸವಗಳೂ ಇಲ್ಲದೇ ನಿರಾನಂದವಾಗುವುದು.
ಪ್ರಾಯಶಃ ಕೃಪಣಾನಾಂ ಹಿ ತಥಾ ಬಂಧುಮತಾಮಪಿ |
ವಿಧವಾನಾಂ ಚ ವಿತ್ತಾನಿ ಹರಿಷ್ಯಂತೀಹ ಮಾನವಾಃ ॥30॥
ಲೋಭಿಗಳಾದವರ ಮತ್ತು ಬಂಧುಗಳನ್ನುಳ್ಳವರ ಮತ್ತು ವಿಧವೆಯರ ವಿತ್ತವನ್ನು ಮನುಷ್ಯರು ಅಪಹರಿಸುವರು.
ಸ್ವಲ್ಪವೀರ್ಯಬಲಾಃ ಸ್ತಬ್ಧಾ ಲೋಭಮೋಹಪರಾಯಣಾಃ |
ತತ್ಕಥಾದಾನಸಂತುಷ್ಟಾಃ ಶಿಷ್ಟಾನಾಮಪಿ ಬಾಂಧವಾಃ ॥31॥
ಮನುಷ್ಯರು ಸ್ವಲ್ಪ ವೀರ್ಯಬಲವುಳ್ಳವರಾಗಿಯೂ, ಅಹಂಕಾರದಿಂದ ಕೂಡಿದವರಾಗಿಯೂ ಮತ್ತು ಲೋಭ ಮೋಹಗಳಿಂದ ಕೂಡಿದವರಾಗಿಯೂ ಆಗುವರು. ಶಿಷ್ಟರಾದವರ ಬಾಂಧವರೂ ಸಹ ಕಾಮಕ್ರೋಧಗಳ ಕಥೆಯಿಂದ ಮತ್ತು ಅಕಥೆಯಿಂದ ಸಂತುಷ್ಟರಾಗುವರು.
ಪರಿಗ್ರಹಂ ಕರಿಷ್ಯಂತಿ ಮಾಯಾಚಾರಪರಿಗ್ರಹಾಃ |
ಸಂಘಾತಯಂತಃ ಕೌಂತೇಯ ರಾಜಾನಃ ಪಾಪಬುದ್ಧಯಃ ॥32॥
ಎಲೈ ಕೌಂತೇಯನೇ, ರಾಜರು ಪಾಪಬುದ್ಧಿಯುಳ್ಳವರಾಗಿ ಗುಂಪುಗಳನ್ನು ಕಟ್ಟಿಕೊಂಡು ಕಪಟದಿಂದ ಕೂಡಿದ ಆಚಾರವನ್ನು ಮಾಡುವವರಾಗಿ ಪರಿಗ್ರಹವನ್ನು ಮಾಡುವರು.
ಪರಸ್ಪರವಧೋದ್ಯುಕ್ತಾ ಮೂರ್ಖಾಃ ಪಂಡಿತಮಾನಿನಃ |
ಭವಿಷ್ಯಂತಿ ಯುಗಸ್ಯಾಂತೇ ಕ್ಷತ್ರಿಯಾ ಲೋಕಕಂಟಕಾಃ ॥33॥
ಯುಗಾಂತ ಸಮಯದಲ್ಲಿ ಕ್ಷತ್ರಿಯರು ಮೂರ್ಖರಾದರೂ ತಮ್ಮನ್ನು ಪಂಡಿತರೆಂದು ತಿಳಿದು ಪರಸ್ಪರ ವಧೋದ್ಯುಕ್ತರಾಗಿ ಲೋಕಕಂಟಕರಾಗುವರು.
ಅರಕ್ಷಿತಾರೋ ಲುಬ್ಧಾಶ್ಚ ಮಾನಾಹಂಕಾರದರ್ಪಿತಾಃ |
ಕೇವಲಂ ದಂಡರುಚಯೋ ಭವಿಷ್ಯಂತಿ ಯುಗಕ್ಷಯೇ ॥34॥
ಯುಗಕ್ಷಯದ ಕಾಲದಲ್ಲಿ ಅವರು ಯಾರನ್ನೂ ರಕ್ಷಿಸುವುದಿಲ್ಲ. ಲೋಭ, ಮಾನ, ಅಹಂಕಾರ ಮತ್ತು ದರ್ಪಗಳಿಂದ ಕೂಡಿದವರಾಗಿ ಕೇವಲ ಶಿಕ್ಷೆಯನ್ನು ಕೊಡುವುದರಲ್ಲಿಯೇ ಅಭಿರುಚಿಯುಳ್ಳವರಾಗುವರು.
ಆಕ್ರಮ್ಯಾಕ್ರಮ್ಯ ಸಾಧೂನಾಂ ದಾರಾಂಶ್ಚಾಪಿ ಧನಾನಿ ಚ |
ಭೋಕ್ಷ್ಯಂತೇ ನಿರನುಕ್ರೋಶಾ ರುದತಾಮಪಿ ಭಾರತ ॥35॥
ಎಲೈ ಭಾರತನೇ, ಸಜ್ಜನರನ್ನು ಮೆಟ್ಟಿಮೆಟ್ಟಿ ಅವರು ಅಳುತ್ತಿದ್ದರೂ ಅವರ ಧನ ಮತ್ತು ಪತ್ನಿಯರನ್ನು ನಿರ್ದಯವಾಗಿ

ಭೋಗಿಸುವರು.
ನ ಕನ್ಯಾಂ ಯಾಚತೇ ಕಶ್ಚಿನ್ನಾಪಿ ಕನ್ಯಾ ಪ್ರದೀಯತೇ |
ಸ್ವಯಂಗ್ರಾಹಾ ಭವಿಷ್ಯಂತಿ ಯುಗಾಂತೇ ಸಮುಪಸ್ಥಿತೇ ||36||
ಯಾರೂ ಕನ್ಯೆಯನ್ನು ಯಾಚಿಸುವುದಿಲ್ಲ. ಯಾರೂ ಕನ್ಯಾದಾನವನ್ನೂ ಮಾಡುವುದಿಲ್ಲ. ಯುಗಾಂತವು ಪ್ರಾಪ್ತವಾದಾಗ ಸ್ವತಃ ತಾವಾಗಿಯೇ ಕನ್ಯೆಯನ್ನು ಗ್ರಹಣ ಮಾಡುವರು.
ರಾಜಾನಶ್ಚಾಪ್ಯಸಂತುಷ್ಟಾಃ ಪರಾರ್ಥಾನ್ಮೂಢಚೇತಸಃ |
ಸರ್ವೋರ್ಪಾಯೈರ್ಹರಿಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ ||37||
ಯುಗಾಂತವು ಸನ್ನಿಹಿತವಾದಾಗ ರಾಜರೂ ಸಹ ಮೂಢಬುದ್ಧಿಯುಳ್ಳವರಾಗಿ ಅತೃಪ್ತಿಯುಳ್ಳವರಾಗಿ ಇನ್ನೊಬ್ಬರ ಧನವನ್ನು ಎಲ್ಲ ಉಪಾಯಗಳಿಂದಲೂ ಅಪಹರಿಸುವರು.
ಮ್ಲೇಚ್ಛೀಭೂತಂ ಜಗತ್ಸರ್ವಂ ಭವಿಷ್ಯತಿ ನ ಸಂಶಯಃ |
ಹಸ್ತಾದ್ಧಸ್ತಂ ಪರಿಮುಷೇದ್ಯುಗಾಂತೇ ಸಮುಪಸ್ಥಿತೇ ||38||
ಜಗತ್ತೆಲ್ಲವೂ ನಿಸ್ಸಂಶಯವಾಗಿ ಮ್ಲೇಚ್ಛಮಯವಾಗುವುದು. ಯುಗಾಂತದ ಸಮಯದಲ್ಲಿ ಕಳ್ಳತನ ಮಾಡಿದ ವಸ್ತುಗಳು ಒಬ್ಬನ ಕೈಯಿಂದ ಇನ್ನೊಬ್ಬನ ಕೈಗೆ ಸಾಗಿಸಲ್ಪಡುವವು.
ಸತ್ಯಂ ಸಂಕ್ಷಿಪ್ಯತೇ ಲೋಕೇ ನರೈಃ ಪಂಡಿತಮಾನಿಭಿಃ |
ಸ್ಥವಿರಾ ಬಾಲಮತಯೋ ಬಾಲಾಃ ಸ್ಥವಿರಬುದ್ಧಯಃ ||39||
ಲೋಕದಲ್ಲಿ ತಮ್ಮನ್ನು ಪಂಡಿತರೆಂದು ತಿಳಿದುಕೊಳ್ಳುವ ಮನುಷ್ಯರು ಸತ್ಯವನ್ನು ನಾಶಮಾಡುವರು. ವೃದ್ಧರಿಗೆ ಬಾಲಕರ ಬುದ್ಧಿಯೂ, ಬಾಲಕರಿಗೆ ವೃದ್ಧರ ಬುದ್ಧಿಯೂ ಉಂಟಾಗುವುದು.
ಭೀರುಸ್ತಥಾ ಶೂರಮಾನೀ ಶೂರಾ ಭೀರುವಿವಾ(ಷಾ)ದಿನಃ |
ನ ವಿಶ್ವಸಂತಿ ಚಾನ್ಯೋನ್ಯಂ ಯುಗಾಂತೇ ಪರ್ಯುಪಸ್ಥಿತೇ ||40||
ಭೀರುಗಳಾದವರು ತಮ್ಮನ್ನು ಶೂರರೆಂದು ತಿಳಿಯುವರು. ಶೂರರು ಭಯದಿಂದ ವಿಷಾದ ಪಡುವರು. ಯುಗಾಂತವು ಸನ್ನಿಹಿತವಾದಾಗ ಒಬ್ಬರಲ್ಲೊಬ್ಬರು ವಿಶ್ವಾಸವನ್ನು ಮಾಡುವುದಿಲ್ಲ.
ಏಕಹಾರ್ಯಂ ಯುಗಂ ಸರ್ವಂ ಲೋಭಮೋಹವ್ಯವಸ್ಥಿತಮ್ |
ಅಧರ್ಮೋ ವರ್ಧತೇ ತತ್ರ ನ ತು ಧರ್ಮಃ ಪ್ರವರ್ತತೇ ||41||
ಜನಗಳ ಆಹಾರವೆಲ್ಲವೂ ಯುಗಾಂತದಲ್ಲಿ ಒಂದೇ ವಿಧವಾಗಿರುತ್ತದೆ. ಲೋಭ ಮೋಹಗಳು ಸುಪ್ರತಿಷ್ಠಿತವಾಗಿರುತ್ತದೆ. ಅಧರ್ಮವು ಅಭಿವೃದ್ಧಿಯನ್ನು ಹೊಂದುತ್ತವೆ. ಆದರೆ ಧರ್ಮವು ಪ್ರವೃತ್ತವಾಗುವುದಿಲ್ಲ.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ನ ಶಿಷ್ಯಂತಿ ಜನಾಧಿಪ |
ಏಕವರ್ಣಸ್ತದಾ ಲೋಕೋ ಭವಿಷ್ಯತಿ ಯುಗಕ್ಷಯೇ ||42||
ಎಲೈ ಜನಾಧಿಪನೇ, ಯುಗಕ್ಷಯದ ಸಮಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಣಗಳು ಇರುವುದಿಲ್ಲ. ಲೋಕದಲ್ಲಿ ಒಂದೇ ವರ್ಣವು ಉಳಿಯುತ್ತದೆ. (ಎಲ್ಲರೂ ಶೂದ್ರರಾಗಿರುವರು).
ನ ಕ್ಷಂಸ್ಯತಿ ಪಿತಾ ಪುತ್ರಂ ಪುತ್ರಶ್ಚ ಪಿತರಂ ತಥಾ |
ಭಾರ್ಯಾಶ್ಚ ಪತಿಶುಶ್ರೂಷಾಂ ನ ಕರಿಷ್ಯಂತಿ ಸಂಕ್ಷಯೇ ||43||
ಯುಗಕ್ಷಯದ ಸಮಯದಲ್ಲಿ ತಂದೆಯು ಮಗನನ್ನು ಕ್ಷಮಿಸುವುದಿಲ್ಲ. ಹಾಗೆಯೇ ಮಗನೂ ತಂದೆಯನ್ನು ಕ್ಷಮಿಸುವುದಿಲ್ಲ. ಹಾಗೆಯೇ ಪತ್ನಿಯು ಪತಿಸೇವೆಯನ್ನು ಮಾಡುವುದಿಲ್ಲ.
ಯೇ ಯವಾನ್ನಾ ಜನಪದಾ ಗೋಧೂಮಾನ್ನಾಸ್ತಥೈವ ಚ |
ತಾನ್ ದೇಶಾನ್ಸಂಶ್ರಯಿಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ ||44||
ಯುಗಾಂತವು ಸನ್ನಿಹಿತವಾದಾಗ ಮನುಷ್ಯರು ಜವೇ ಗೋಧಿ ಮತ್ತು ಗೋಧಿಯನ್ನು ಆಹಾರವಾಗಿ ಉಪಯೋಗಿಸುವ ದೇಶಗಳಿಗೆ ಹೋಗಿ ನೆಲೆಸುವರು.
ಸ್ವೈರಾಚಾರಾಶ್ಚ ಪುರುಷಾ ಯೋಷಿತಶ್ಚ ವಿಶಾಂಪತೇ |
ಅನ್ಯೋನ್ಯಂ ನ ಸಹಿಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ ||45||
ಎಲೈ ರಾಜನೇ, ಪುರುಷರು ಮತ್ತು ಸ್ತ್ರೀಯರು ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಳ್ಳುವರು. ಯುಗಾಂತವು ಸನ್ನಿಹಿತವಾದಾಗ ಒಬ್ಬರನ್ನೊಬ್ಬರು ನೋಡಿ ಸಹಿಸುವುದಿಲ್ಲ.
ಮ್ಲೇಚ್ಛಭೂತಂ ಜಗತ್ಸರ್ವಂ ಭವಿಷ್ಯತಿ ಯುಧಿಷ್ಠಿರ |
ನ ಶ್ರಾದ್ಧೈಸ್ತರ್ಪಯಿಷ್ಯಂತಿ ದೈವತಾನೀಹ ಮಾನವಾಃ ||46||
ಎಲೈ ಯುಧಿಷ್ಠಿರನೇ, ಜಗತ್ತೆಲ್ಲವೂ ಮ್ಲೇಚ್ಛರಿಂದ ತುಂಬುವುದು. ಮನುಷ್ಯರು ಶ್ರಾದ್ಧಗಳಿಂದ ಪಿತೃದೇವತೆಗಳನ್ನು ಸಂತೋಷಪಡಿಸುವುದಿಲ್ಲ.
ನ ಕಶ್ಚಿತ್ ಕಸ್ಯಚಿಚ್ಛ್ರೋತಾ ನ ಕಶ್ಚಿತ್ ಕಸ್ಯಚಿದ್ ಗುರುಃ |
ತಮೋಗ್ರಸ್ತಸ್ತದಾ ಲೋಕೋ ಭವಿಷ್ಯತಿ ಜನಾಧಿಪ ||47||
ಎಲೈ ಜನಾಧಿಪನೇ, ಯಾರಿಗೆ ಯಾರೂ ಶಿಷ್ಯರಿರುವುದಿಲ್ಲ. ಯಾರಿಗೆ ಯಾರೂ ಗುರುವಿರುವುದಿಲ್ಲ. ಆಗ ಜನರೆಲ್ಲರೂ ಅಜ್ಞಾನಗ್ರಸ್ತರಾಗುವರು.
ಪರಮಾಯುಶ್ಚ ಭವಿತಾ ತದಾ ವರ್ಷಾಣಿ ಷೋಡಶ |

ತತಃ ಪ್ರಾಣಾನ್ ವಿಮೋಕ್ಷ್ಯಂತಿ ಯುಗಾಂತೇ ಸಮುಪಸ್ಥಿತೇ ॥48॥
ಯುಗಾಂತವು ಸನ್ನಿಹಿತವಾದಾಗ ಹದಿನಾರು ವರ್ಷಗಳೇ ಪರಮಾಯುಷ್ಯವಾಗುವುದು. ಅನಂತರ ಮರಣವು ಉಂಟಾಗುವುವು.
ಪಂಚಮೇ ವಾಥ ಷಷ್ಠೇ ವಾ ವರ್ಷೇ ಕನ್ಯಾ ಪ್ರಸೂಯತೇ |
ಸಪ್ತವರ್ಷಾಷ್ಟವರ್ಷಾಶ್ಚ ಪ್ರಜಾಸ್ಯಂತಿ ನರಾಸ್ತದಾ ॥49॥
ಐದು ಅಥವಾ ಆರನೆಯ ವರ್ಷದಲ್ಲಿ ಕನ್ಯೆಯರೂ, ಏಳೆಂಟು ವರ್ಷದ ಪುರುಷರೂ ಮಕ್ಕಳನ್ನು ಪಡೆಯುವರು.
ಪತ್ಯೌ ಸ್ತ್ರೀ ತು ತದಾ ರಾಜನ್ ಪುರುಷೋ ವಾ ಸ್ತ್ರಿಯಂ ಪ್ರತಿ |
ಯುಗಾಂತೇ ರಾಜಶಾರ್ದೂಲ ನ ತೋಷಮುಪಯಾಸ್ಯತಿ ॥50॥
ಎಲೈ ರಾಜಶಾರ್ದೂಲನೇ, ಯುಗಾಂತದಲ್ಲಿ ಪತ್ನಿಯು ಪತಿಯಲ್ಲಾಗಲೀ, ಪತಿಯು ಪತ್ನಿಯಲ್ಲಾಗಲೀ ಸಂತೋಷ ತೃಪ್ತಿಗಳನ್ನು ಪಡೆಯುವುದಿಲ್ಲ.
ಅಲ್ಪದ್ರವ್ಯಾ ವೃಥಾಲಿಂಗಾ ಹಿಂಸಾ ಚ ಪ್ರಭವಿಷ್ಯತಿ |
ನ ಕಶ್ಚಿತ್ ಕಸ್ಯಚಿದ್ ದಾತಾ ಭವಿಷ್ಯತಿ ಯುಗಕ್ಷಯೇ ॥51॥
ಅಲ್ಪ ದ್ರವ್ಯವುಳ್ಳವರಾಗಿ, ವ್ಯರ್ಥವಾಗಿ ಪುರುಷ ಸ್ತ್ರೀ ಚಿಹ್ನೆಯನ್ನು ಧರಿಸಿ ಹಿಂಸೆಯಲ್ಲಿ ತೊಡಗುವರು. ಯುಗಕ್ಷಯದ ಕಾಲದಲ್ಲಿ ಯಾರಿಗೆ ಯಾರೂ ದಾನವನ್ನು ಕೊಡುವುದಿಲ್ಲ.
ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ |
ಕೇಶಶೂಲಾಃ ಸ್ತ್ರಿಯಶ್ಚಾಪಿ ಭವಿಷ್ಯಂತಿ ಯುಗಕ್ಷಯೇ ॥52॥
ಜನರು ಅನ್ನವಿಕ್ರಯವನ್ನು ಮಾಡುವರು. ಬ್ರಾಹ್ಮಣರು ವೇದವಿಕ್ರಯವನ್ನು ಮಾಡುವರು. ಸ್ತ್ರೀಯರು ಯುಗಕ್ಷಯಕಾಲದಲ್ಲಿ ತಮ್ಮ ಭಗವನ್ನು ವಿಕ್ರಯ ಮಾಡುವರು.
ಮ್ಲೇಚ್ಛಾಚಾರಾಃ ಸರ್ವಭಕ್ಷ್ಯಾ ದಾರುಣಾಃ ಸರ್ವಕರ್ಮಸು |
ಭಾವಿನಃ ಪಶ್ಚಿಮೇ ಕಾಲೇ ಮನುಷ್ಯಾನಾತ್ರ ಸಂಶಯಃ ॥53॥
ಮನುಷ್ಯರು ಸರ್ವಭಕ್ಷಕರಾಗಿ ಮ್ಲೇಚ್ಛರಂತೆ ನಡೆದುಕೊಳ್ಳುವರು. ಅಂತ್ಯಕಾಲದಲ್ಲಿ ಎಲ್ಲ ಕರ್ಮಗಳಲ್ಲಿ ಘೋರರಾಗಿರುವರು. ಈ ವಿಷಯದಲ್ಲಿ ಸಂಶಯವಿಲ್ಲ.
ಕ್ರಯವಿಕ್ರಯಕಾಲೇ ಚ ಸರ್ವಃ ಸರ್ವಸ್ಯ ವಂಚನಮ್ |
ಯುಗಾಂತೇ ಭರತಶ್ರೇಷ್ಠ ವಿತ್ತಲೋಭಾತ್ ಕರಿಷ್ಯತಿ ॥54॥
ಎಲೈ ಭರತಶ್ರೇಷ್ಠನೇ, ಯುಗಾಂತ ಸಮಯದಲ್ಲಿ ಕ್ರಯವಿಕ್ರಯ ಮಾಡುವವರೆಲ್ಲರೂ ಧನಲೋಭದಿಂದ ಎಲ್ಲರಿಗೂ ವಂಚನೆಯನ್ನು ಮಾಡುವರು.
ಜ್ಞಾನಾನಿ ಚಾಪ್ಯವಿಜ್ಞಾಯ ಕರಿಷ್ಯಂತಿ ಕ್ರಿಯಾಸ್ತಥಾ |
ಆತ್ಮಚ್ಛಂದೇನ ವರ್ತಂತೇ ಯುಗಾಂತೇ ಸಮುಪಸ್ಥಿತೇ ॥55॥
ಯುಗಾಂತದಲ್ಲಿ ಮಾನವರು ವಿದ್ಯೆಯನ್ನು ಕಲಿಯದೆ ಕ್ರಿಯೆಗಳನ್ನು ಮಾಡುವರು ಮತ್ತು ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಳ್ಳುವರು.
ಸ್ವಭಾವಾತ್ ಕ್ರೂರಕರ್ಮಾಣಶ್ಚಾನ್ಯೋನ್ಯಮಭಿಶಂಸಿನಃ |
ಭವಿತಾರೋ ಜನಾಃ ಸರ್ವೇ ಸಂಪ್ರಾಪ್ತೇ ತು ಯುಗಕ್ಷಯೇ ॥56॥
ಯುಗಕ್ಷಯವು ಪ್ರಾಪ್ತವಾದಾಗ ಮನುಷ್ಯರು ಸ್ವಾಭಾವಿಕವಾಗಿ ಕ್ರೂರ ಕರ್ಮಗಳನ್ನು ಮಾಡುವರು. ಪರಸ್ಪರವಾಗಿ ನಿಂದಿಸುವರು.
ಆರಾಮಾಂಶ್ಚೈವ ವೃಕ್ಷಾಂಶ್ಚ ನಾಶಯಿಷ್ಯಂತಿ ನಿರ್ವ್ಯಥಾಃ |
ಭವಿತಾ ಸಂಶಯೋ ಲೋಕೇ ಜೀವಿತಸ್ಯ ಹಿ ದೇಹಿನಾಮ್ ॥57॥
ಉದ್ಯಾನಗಳನ್ನು ಮತ್ತು ವೃಕ್ಷಗಳನ್ನು ಯಾವ ವ್ಯಥೆಯೂ ಇಲ್ಲದೇ ನಾಶ ಮಾಡುವರು. ಮನುಷ್ಯರು ಜೀವಿಸಿರುವುದೇ ಸಂಶಯಗ್ರಸ್ತವಾಗುವುದು.
ತಥಾ ಲೋಭಾಭಿಭೂತಾಶ್ಚ ಭವಿಷ್ಯಂತಿ ನರಾ ನೃಪ |
ಬ್ರಾಹ್ಮಣಾಂಶ್ಚ ಹನಿಷ್ಯಂತಿ ಬ್ರಾಹ್ಮಣಸ್ವೋಪಭೋಗಿನಃ ॥58॥
ಎಲೈ ರಾಜನೇ, ಹಾಗೆ ಮನುಷ್ಯರು ಲೋಭದಿಂದ ಕೂಡಿದವರಾಗುವರು. ಬ್ರಾಹ್ಮಣರನ್ನು ಕೊಂದು ಅವರ ಧನವನ್ನೂ ಉಪಭೋಗಿಸುವರು.
ಹಾಹಾಕೃತಾ ದ್ವಿಜಾಶ್ಚೈವ ಭಯಾರ್ತಾ ವೃಷಲಾರ್ದಿತಾಃ |
ತ್ರಾತಾರಮಲಭಂತೋ ವೈ ಭ್ರಮಿಷ್ಯಂತಿ ಮಹೀಮಿಮಾಮ್ ॥59॥
ಶೂದ್ರರಿಂದ ಹಿಂಸಿತರಾದ ದ್ವಿಜರು ಭಯಾರ್ತರಾಗಿ ಹಾಹಾಕಾರವನ್ನು ಮಾಡುವರು. ಯಾರೂ ರಕ್ಷಕರಿಲ್ಲದೆ ಭೂಮಿಯಲ್ಲೆಲ್ಲಾ ಅಲೆದಾಡುವರು.
ಜೀವಿತಾಂತಕರಾಃ ಕ್ರೂರಾ ರೌದ್ರಾಃ ಪ್ರಾಣಿವಿಹಿಂಸಕಾಃ |
ಯದಾ ಭವಿಷ್ಯಂತಿ ನರಾಸ್ತದಾ ಸಂಕ್ಷೇಪ್ಸ್ಯತೇ ಯುಗಮ್ ॥60॥
ಮನುಷ್ಯರು ಯಾವಾಗ ಕ್ರೂರರೂ, ಭಯಂಕರರೂ, ಪ್ರಾಣಿಹಿಂಸೆಯನ್ನು ಮಾಡುವವರೂ, ಇನ್ನೊಬ್ಬರನ್ನು ಕೊಲ್ಲುವವರೂ ಆಗುವರೋ ಆಗ ಯುಗವು ಸಮಾಪ್ತಿಯನ್ನು ಹೊಂದುವುದು.
ಆಶ್ರಯಿಷ್ಯಂತಿ ಚ ನದೀಃ ಪರ್ವತಾನ್ ವಿಷಮಾಣಿ ಚ |
ಪ್ರಧಾವಮಾನಾ ವಿತ್ರಸ್ತಾ ದ್ವಿಜಾಃ ಕುರುಕುಲೋದ್ವಹ ॥61॥

ಎಲೈ ಕುರುಕುಲೋದ್ವಹನೇ, ಹೆದರಿದ ದ್ವಿಜರು ಓಡಿಹೋಗಿ ನದಿಗಳನ್ನೂ, ಪರ್ವತಗಳನ್ನೂ, ದುರ್ಗಮ ಪ್ರದೇಶಗಳನ್ನೂ ಆಶ್ರಯಿಸುವರು.
ದಸ್ಯುಭಿಃ ಪೀಡಿತಾ ರಾಜನ್ ಕಾಕಾ ಇವ ದ್ವಿಜೋತ್ತಮಾಃ |
ಕುರಾಜಭಿಶ್ಚ ಸತತಂ ಕರಭಾರಪ್ರಪೀಡಿತಾಃ ॥62॥
ಎಲೈ ರಾಜನೇ, ದ್ವಿಜಶ್ರೇಷ್ಠರು, ದಸ್ಯುಗಳಿಂದ ಪೀಡಿತರಾಗಿ ಕಾಗೆಗಳಂತೆ ಅಂತಹ ಪ್ರದೇಶವನ್ನು ಆಶ್ರಯಿಸುವರು. ಕೆಟ್ಟ ರಾಜರುಗಳು ಬಂದು ಸತತವಾಗಿ ಪ್ರಜೆಗಳನ್ನು ತೆರಿಗೆಯ ಭಾರದಿಂದ ಪೀಡಿಸುವರು.
ಧೈರ್ಯಂ ತ್ಯಕತ್ವ ಮಹೀಪಾಲ ದಾರುಣೇ ಯುಗಸಂಕ್ಷಯೇ |
ವಿಕರ್ಮಾಣಿ ಕರಿಷ್ಯಂತಿ ಶೂದ್ರಾಣಾಂ ಪರಿಚಾರಕಾಃ ॥63॥
ಎಲೈ ರಾಜನೇ, ಘೋರವಾದ ಯುಗಸಂಕ್ಷಯ ಕಾಲದಲ್ಲಿ ದ್ವಿಜರು ಧೈರ್ಯವನ್ನು ತ್ಯಜಿಸಿ ಶೂದ್ರರ ಪರಿಚಾರಕರಾಗಿ ವಿಕರ್ಮಗಳನ್ನು ಮಾಡುವರು.
ಶೂದ್ರಾ ಧರ್ಮಂ ಪ್ರವಕ್ಷ್ಯಂತಿ ಬ್ರಾಹ್ಮಣಾಃ ಪರ್ಯುಪಾಸಕಾಃ |
ಶ್ರೋತಾರಶ್ಚ ಭವಿಷ್ಯಂತಿ ಪ್ರಾಮಾಣ್ಯೇನ ವ್ಯವಸ್ಥಿತಾಃ ॥64॥
ಶೂದ್ರರು ಧರ್ಮೋಪದೇಶವನ್ನು ಮಾಡುವರು. ಬ್ರಾಹ್ಮಣರು ಅವರ ಸೇವೆಯನ್ನು ಮಾಡಿ ಅವರಿಂದ ಶ್ರವಣವನ್ನು ಮಾಡಿ ಅವರು ಹೇಳಿದುದರಲ್ಲಿ ಪ್ರಾಮಾಣ್ಯ ಬುದ್ಧಿಯುಳ್ಳವರಾಗುವರು.
ವಿಪರೀತಶ್ಚ ಲೋಕೋಽಯಂ ಭವಿಷ್ಯತ್ಯಧರೋತ್ತರಃ |
ಏಡೂಕಾನ್ ಪೂಜಯಿಷ್ಯಂತಿ ವರ್ಜಯಿಷ್ಯಂತಿ ದೇವತಾಃ ॥65॥
ಶೂದ್ರಾಃ ಪರಿಚರಿಷ್ಯಂತಿ ನ ದ್ವಿಜಾನ್ಯುಗಸಂಕ್ಷಯೇ ॥66॥
ಲೋಕವೆಲ್ಲವೂ ವಿಪರೀತ ಆಚಾರಗಳಿಂದ ಕೂಡಿ ತಲೆಕೆಳಗಾಗುವುದು. ಯಾರೂ ದೇವತೆಗಳನ್ನು ಪೂಜಿಸುವುದಿಲ್ಲ. ಟಗರು ಹೋತಗಳನ್ನು ಪೂಜಿಸುವರು. ಯುಗಾಂತ ಕಾಲದಲ್ಲಿ ಶೂದ್ರರು ದ್ವಿಜರ ಸೇವೆಯನ್ನು ಮಾಡುವುದಿಲ್ಲ.
ಆಶ್ರಮೇಷು ಮಹರ್ಷೀಣಾಂ ಬ್ರಾಹ್ಮಣಾವಸಥೇಷು ಚ |
ದೇವಸ್ಥಾನೇಷು ಚೈತ್ಯೇಷು ನಾಗಾನಾಮಾಲಯೇಷು ಚ ॥67॥
ಜಾಲೂಕಚಿಹ್ನಾ ಪೃಥಿವೀ ನ ದೇವಗೃಹಭೂಷಿತಾ |
ಭವಿಷ್ಯತಿ ಯುಗೇ ಕ್ಷೀಣೇ ತದ್ಯುಗಾಂತಸ್ಯ ಲಕ್ಷಣಮ್ ॥68॥
ಮಹರ್ಷಿಗಳ ಆಶ್ರಮದಲ್ಲಿ, ಬ್ರಾಹ್ಮಣರ ಮನೆಗಳಲ್ಲಿ, ದೇವಸ್ಥಾನಗಳಲ್ಲಿ, ಪೂಜ್ಯ ವೃಕ್ಷಗಳ ಸನಿನಧಾನದಲ್ಲಿ, ನಾಗಬನಗಳಲ್ಲಿ ಭೂಮಿಯು ವನಜಲೂಕ ಪ್ರಾಣಿಗಳ ಚಿಹ್ನೆಗಳಿಂದ ಕೂಡಿರುವುದು. ದೇವಗೃಹಗಳಿಂದ ಭೂಷಿತವಾಗಿರುವುದಿಲ್ಲ. ಯಾವಾಗ ಈ ರೀತಿಯಾಗುವುದೋ ಆಗ ಯುಗಾಂತವು ಸಮೀಪಿಸಿದೆ ಎಂದು ತಿಳಿಯಬೇಕು.
ಯದಾ ರೌದ್ರಾ ಧರ್ಮಹೀನಾ ಮಾಂಸಾದಾಃ ಪಾನಪಾಸ್ತಥಾ |
ಭವಿಷ್ಯಂತಿ ನರಾ ನಿತ್ಯಂ ತದಾ ಸಂಕ್ಷೇಪ್ಸ್ಯತೇ ಯುಗಮ್ ॥69॥
ಯಾವಾಗ ಎಲ್ಲ ಮನುಷ್ಯರು ಧರ್ಮಹೀನರೂ, ಮಾಂಸಭಕ್ಷಕರೂ, ಮದ್ಯಪಾನಿಗಳೂ ಮತ್ತು ಘೋರ ಸ್ವಭಾವದವರೂ ಆಗುವರು ಆಗ ಯುಗವು ಸಮಾಪ್ತಿಗೊಳ್ಳುವುದು.
ಪುಷ್ಪಂ ಪುಷ್ಪೇ ಯದಾ ರಾಜನ್ ಫಲೇ ವಾ ಫಲಮಾಶ್ರಿತಮ್ |
ಪ್ರಜಾಸ್ಯತಿ ಮಹಾರಾಜ ತದಾ ಸಂಕ್ಷೇಪ್ಸ್ಯತೇ ಯುಗಮ್ |
ಅಕಾಲವರ್ಷೀ ಪರ್ಜನ್ಯೋ ಭವಿಷ್ಯತಿ ಗತೇ ಯುಗೇ ॥70॥
ಎಲೈ ಮಹಾರಾಜನೇ, ಯಾವಾಗ ಪುಷ್ಪದಲ್ಲಿ ಪುಷ್ಪವೂ, ಫಲದಲ್ಲಿ ಫಲವೂ ಉಂಟಾಗುವುದೋ ಆಗ ಯುಗವು ಸಮಾಪ್ತಿಗೊಳ್ಳುವುದು. ಆಗ ಪರ್ಜನ್ಯನು ಅಕಾಲದಲ್ಲಿ ಮಳೆಯನ್ನು ಸುರಿಸುವನು.
ಅಕ್ರಮೇಣ ಮನುಷ್ಯಾಣಾಂ ಭವಿಷ್ಯಂತಿ ತದಾ ಕ್ರಿಯಾಃ |
ವಿರೋಧಮಥ ಯಾಸ್ಯಂತಿ ವೃಷಲಾ ಬ್ರಾಹ್ಮಣೈಃ ಸಹ ॥71॥
ಮನುಷ್ಯರ ಎಲ್ಲಾ ಕ್ರಿಯೆಗಳು ಕ್ರಮವ್ಯತ್ಯಾಸದಿಂದ ಉಂಟಾಗುವುದು. ಶೂದ್ರರು ಉಳಿದ ಬ್ರಾಹ್ಮಣರ ಜೊತೆಯಲ್ಲಿ ವಿರೋಧವನ್ನು ಮಾಡುವರು.
ಮಹೀ ಮ್ಲೇಚ್ಛಜನಾಕೀರ್ಣಾ ಭವಿಷ್ಯತಿ ತತೋಽಚಿರಾತ್ ॥72॥
ಕರಭಾರಭಯಾದ್ವಿಪ್ರಾ ಭಜಿಷ್ಯಂತಿ ದಿಶೋ ದಶ |
ಅನ್ಯಾಯವರ್ತಿನಶ್ಚಾಪಿ ಭವಿಷ್ಯಂತಿ ನರಾಧಿಪಾಃ ॥73॥
ಆಗ ಶೀಘ್ರದಲ್ಲಿಯೇ ಭೂಮಿಯು ಮ್ಲೇಚ್ಛ ಜನರಿಂದ ತುಂಬುವುದು. ಬ್ರಾಹ್ಮಣರು ತೆರಿಗೆಯ ಭಾರದ ಭಯದಿಂದ ಹತ್ತು ದಿಕ್ಕುಗಳನ್ನು ಆಶ್ರಯಿಸುವರು. ರಾಜರು ಅನ್ಯಾಯ ಮಾರ್ಗದಲ್ಲಿಯೇ ನಡೆಯುವರು.
ನಿರ್ವಿಶೇಷಾ ಜನಪದಾಸ್ತಥಾ ವಿಷ್ಟಿಕರಾರ್ದಿತಾಃ |
ಆಶ್ರಮಾನುಪಲಪ್ಸ್ಯಂತಿ ಫಲಮೂಲೋಪಜೀವಿನಃ ॥74॥
ದೇಶವಾಸಿಗಳೆಲ್ಲರೂ ಬಿಟ್ಟಿಯ ಕೆಲಸ ಮತ್ತು ತೆರಿಗೆಗಳಿಂದ ಹಿಂಸೆಗೊಳಗಾಗಿ ಒಂದೇ ರೀತಿಯಲ್ಲಿ ಇರುವರು. ಕಂದಮೂಲಫಲಗಳನ್ನು ಸೇವಿಸುತ್ತಾ ಆಶ್ರಮಗಳಲ್ಲಿ ನೆಲೆಸುವರು.
ಏವಂ ಪರ್ಯಾಕುಲೇ ಲೋಕೇ ಮರ್ಯಾದಾ ನ ಭವಿಷ್ಯತಿ |
ನ ಸ್ಥಾಸ್ಯಂತ್ಯುಪದೇಶೇ ಚ ಶಿಷ್ಯಾ ವಿಪ್ರಿಯಕಾರಿಣಃ ॥75॥

ಹೀಗೆ ಲೋಕವು ಪರ್ಯಾಕುಲವಾಗುತ್ತಿರಲು ಯಾವ ಒಂದು ಒಳ್ಳೆಯ ನಡತೆಯೂ ಉಳಿಯುವುದಿಲ್ಲ. ಶಿಷ್ಯರು ಗುರುಗಳ ಉಪದೇಶವನ್ನು ಕೇಳುವುದಿಲ್ಲ ಮತ್ತು ಗುರುಗಳಿಗೆ ವಿಪ್ರಿಯವನ್ನು ಮಾಡುತ್ತಾರೆ.
ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಪರಿತ್ಯಕ್ಷ್ಯಂತಿ ಸತ್ಕ್ರಿಯಾಮ್ ॥
ಆಚಾರ್ಯೋಪನಿಧಿಶ್ಚೈವ ಭರ್ತ್ಸ್ಯತೇ ತದನಂತರಮ್ ॥76॥
ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಲ್ಲರೂ ಸತ್ಕ್ರಿಯೆಗಳನ್ನು ತ್ಯಜಿಸುತ್ತಾರೆ. ಗುರುಗಳ ಪ್ರತಿನಿಧಿಗಳಾದವರು ಗುರುವಿಗೆ ಅವಮಾನ ಮಾಡಿದಮೇಲೆ ಅವಮಾನಿತರಾಗುತ್ತಾರೆ.
ಅರ್ಥಯುಕ್ತ್ಯಾ ಪ್ರವತ್ಸ್ಯಂತಿ ಮಿತ್ರಸಂಬಂಧಿಬಾಂಧವಾಃ |
ಅಭಾವಃ ಸರ್ವಭೂತಾನಾಂ ಯುಗಾಂತೇ ಸಂಭವಿಷ್ಯತಿ ॥77॥
ಮಿತ್ರ ಸಂಬಂಧಿ ಬಾಂಧವರು ಧನದ ಉದ್ದೇಶದಿಂದ ಜೊತೆಯಲ್ಲಿ ವಾಸ ಮಾಡುವರು. ಎಲ್ಲ ಪ್ರಾಣಿಗಳ ಅಭಾವವು ಯುಗಾಂತದಲ್ಲಿ ಉಂಟಾಗುವುದು.
ದಿಶಃ ಪ್ರಜ್ವಲಿತಾಃ ಸರ್ವಾ ನಕ್ಷತ್ರಾಣ್ಯಪ್ರಭಾಣಿ ಚ |
ಜ್ಯೋತೀಂಷಿ ಪ್ರತಿಕೂಲಾನಿ ವಾತಾಃ ಪರ್ಯಾಕುಲಾಸ್ತಥಾ ॥78॥
ಎಲ್ಲ ದಿಕ್ಕುಗಳು ಉರಿಯುತ್ತವೆ. ನಕ್ಷತ್ರಗಳು ತಮ್ಮ ಕಾಂತಿಯನ್ನು ಕಳೆದುಕೊಳ್ಳುವವು. ಗ್ರಹಗಳು ಪ್ರತಿಕೂಲವಾಗುವವು. ವಾಯುಗಳು ವ್ಯತ್ಯಸ್ತವಾಗಿ ಬೀಸುವವು.
ಉಲ್ಕಾಪಾತಾಶ್ಚ ಬಹವೋ ಮಹಾಭಯನಿದರ್ಶಕಾಃ |
ಷಡ್ಭಿರನ್ಯೈಶ್ಚ ಸಹಿತೋ ಭಾಸ್ಕರಃ ಪ್ರತಪಿಷ್ಯತಿ |
ತುಮುಲಾಶ್ಚಾಪಿ ನಿರ್ಹ್ರಾದಾ ದಿಗ್ದಾಹಾಶ್ಚಾಪಿ ಸರ್ವಶಃ ॥79॥
ಮಹಾಭಯವನ್ನು ಸೂಚಿಸುವ ಅನೇಕ ಉಲ್ಕಾಪಾತಗಳು ಉಂಟಾಗುವುವು. ಸೂರ್ಯನು ಉಳಿದ ಆರು ಸೂರ್ಯರ ಜೊತೆಯಲ್ಲಿ ಸೇರಿ ಜಗತ್ತನ್ನು ಸುಡುವನು. ಘೋರವಾದ ಸಿಡಿಲುಗಳು ಮತ್ತು ಎಲ್ಲಾ ದಿಕ್ಕುಗಳಲ್ಲಿಯೂ ದಾಹಗಳು ಉಂಟಾಗುವುವು.
ಕಬಂಧಾಂತರ್ಹಿತೋ ಭಾನುರುದಯಾಸ್ತಮನೇ ತದಾ |
ಅಕಾಲವರ್ಷೀ ಭಗವಾನ್ ಭವಿಷ್ಯತಿ ಸಹಸ್ರದೃಕ್ ॥80॥
ಸೂರ್ಯೋದಯ ಮತ್ತು ಸೂರ್ಯಾಸ್ತಗಳಲ್ಲಿ ಸೂರ್ಯನು ಮೋಡಗಳಿಂದ ಆಚ್ಛಾದಿತನಾಗುವನು. ಪೂಜ್ಯನಾದ ಇಂದ್ರನು ಅಕಾಲದಲ್ಲಿ ಮಳೆಯನ್ನು ಸುರಿಸುವನು.
ಸಸ್ಯಾನಿ ಚ ನ ರೋಕ್ಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ ॥81॥
ಅಭೀಕ್ಷ್ಣಂ ಕ್ರೂರವಾದಿನ್ಯಃ ಪರುಷಾ ರುದತಿಪ್ರಿಯಾಃ |
ಭರ್ತ್ರೂಣಾಂ ವಚನೇ ಚೈವ ನ ಸ್ಥಾಸ್ಯಂತಿ ತತಃ ಸ್ತ್ರಿಯಃ ॥82॥
ಯುಗಾಂತವು ಸನ್ನಿಹಿತವಾದಾಗ ಸಸ್ಯವು ಬೆಳೆಯುವುದಿಲ್ಲ. ಸ್ತ್ರೀಯರು ಆಗ ಯಾವಾಗಲೂ ಕ್ರೂರವಾದ ಮತ್ತು ಒರಟಾದ ಮಾತನ್ನಾಡುತ್ತಾ ರೋದನ ಪ್ರಿಯರಾಗುವರು. ಪತಿಗಳ ಮಾತನ್ನು ಸ್ತ್ರೀಯರು ಪಾಲಿಸುವುದಿಲ್ಲ.
ಪುತ್ರಾಶ್ಚ ಮಾತಾಪಿತರೌ ಹನಿಷ್ಯಂತಿ ಯುಗಕ್ಷಯೇ |
ಸೂದಯಿಷ್ಯಂತಿ ಚ ಪತೀನ್ ಸ್ತ್ರಿಯಃ ಪುತ್ರಾನುಪಾಶ್ರಿತಾಃ ॥83॥
ಯುಗಕ್ಷಯದಲ್ಲಿ ಮಕ್ಕಳು ತಂದೆ ತಾಯಿಗಳನ್ನು ಕೊಲ್ಲುವರು. ಸ್ತ್ರೀಯರು ಪುತ್ರರನ್ನು ಅವಲಂಬಿಸಿ ಪತಿಗಳನ್ನು ಕೊಲ್ಲುವರು.
ಅಪರ್ವಣಿ ಮಹಾರಾಜ ಸೂರ್ಯಂ ರಾಹುರುಪೈಷ್ಯತಿ |
ಯುಗಾಂತೇ ಹುತಭುಕ್ಚಾಪಿ ಸರ್ವತಃ ಪ್ರಜ್ವಲಿಷ್ಯತಿ ॥84॥
ಎಲೈ ಮಹಾರಾಜನೇ, ರಾಹುವು ಪರ್ವಕಾಲವಲ್ಲದ ಕಾಲದಲ್ಲಿ ಸೂರ್ಯನನ್ನು ಸಮೀಪಿಸಿ ಹಿಡಿಯುವನು. ಯುಗಾಂತ ಸಮಯದಲ್ಲಿ ಎಲ್ಲ ಕಡೆಯಲ್ಲಿಯೂ ಅಗ್ನಿಯು ಉಂಟಾಗುವುದು.
ಪಾನೀಯಂ-ಭೋಜನಂ ಚಾಪಿ ಯಾಚಮಾನಾಸ್ತದಾಽಧ್ವಗಾಃ |
ನ ಲಪ್ಸ್ಯಂತೇ ನಿವಾಸಂ ಚ ನಿರಸ್ತಾಃ ಪಥಿ ಶೇರತೇ ॥85॥
ದಾರಿಹೋಕರು ಅನ್ನಪಾನಗಳನ್ನು ಯಾಚಿಸಿದರೂ ಅವರಿಗೆ ಅದನ್ನು ನೀಡದೆ ಅವರು ಮಾರ್ಗದಲ್ಲೇ ವಾಸವನ್ನು ಮಾಡಿ ಮಲಗುವರು.
ನಿರ್ಘಾತವಾಯಸಾ ನಾಗಾಃ ಶಕುನಾಃ ಸಮೃಗಾದ್ವಿಜಾಃ |
ರೂಕ್ಷಾ ವಾಚೋ ವಿಮೋಕ್ಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ |
ಮಿತ್ರಸಂಬಂಧಿನಶ್ಚಾಪಿ ಸಂತ್ಯಕ್ಷ್ಯಂತಿ ನರಾಸ್ತದಾ ॥86॥
ಅಪಶಕುನವನ್ನು ನುಡಿಯುವ ಕಾಗೆಗಳು, ಸರ್ಪಗಳು, ಶಕುನ ಪಕ್ಷಿಗಳು ಮತ್ತು ಉಳಿದ ಎಲ್ಲಾ ಮೃಗಪಕ್ಷಿಗಳೆಲ್ಲಾ ಯುಗಾಂತವು ಸನ್ನಿಹಿತವಾದಾಗ ಒರಟಾದ ಮತ್ತು ಭಯಂಕರವಾದ ಧ್ವನಿಗಳನ್ನು ಮಾಡುವವು. ಮನುಷ್ಯರು ಮಿತ್ರರನ್ನೂ ಮತ್ತು ಸಂಬಂಧಿಗಳನ್ನು ತ್ಯಜಿಸುವರು.
ಜನಂ ಪರಿಜನಂ ಚಾಪಿ ಯುಗಾಂತೇ ಪರ್ಯುಪಸ್ಥಿತೇ |
ಅಥ ದೇಶಾನ್ದಿಶಾಶ್ಚಾಪಿ ಪತ್ತನಾನಿ ಪುರಾಣಿ ಚ |
ಕ್ರಮಶಃ ಸಂಶ್ರಯಿಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ ॥87॥
ಯುಗಾಂತವು ಸನ್ನಿಹಿತವಾದಾಗ ಜನರು ಮತ್ತು ಪರಿವಾರದವರು ಬೇರೆ ಬೇರೆ ದಿಕ್ಕುಗಳನ್ನು, ದೇಶಗಳನ್ನು, ಪಟ್ಟಣ ಮತ್ತು ಪುರಗಳನ್ನು ಕ್ರಮವಾಗಿ ಆಶ್ರಯಿಸುವರು.

ಹಾ ತಾತ ಹಾ ಸುತೇತ್ಯೇವಂ ತದಾ ವಾಚಃ ಸುದಾರುಣಾಃ |
ವಿಕ್ರೋಶಮಾನಶ್ಚಾನ್ಯೋನ್ಯಂ ಜನೋ ಗಾಂ ಪರ್ಯಟಿಷ್ಯತಿ ॥88॥
ಅಯ್ಯೋ ತಂದೆಯೇ, ಅಯ್ಯೋ ಪುತ್ರನೇ ಎಂಬ ದಾರುಣವಾದ ಶಬ್ದಗಳಿಂದ ಪರಸ್ಪರವಾಗಿ ಕಿರುಚುತ್ತಾ ಜನರು ಭೂಮಿಯಲ್ಲಿ ತಿರುಗಾಡುವರು.
ಭೋವಾದಿನಸ್ತಥಾ ಶೂದ್ರಾಃ ಬ್ರಾಹ್ಮಣಾ ಪ್ರಾಕೃತಪ್ರಿಯಾಃ |
ಪಾಷಂಡಜನಸಂಕೀರ್ಣಾ ಭವಿಷ್ಯಂತಿ ಯುಗಕ್ಷಯೇ ॥89॥
ಯುಗಕ್ಷಯಕಾಲದಲ್ಲಿ ಶೂದ್ರರು ಬ್ರಾಹ್ಮಣರನ್ನು ಎಲವೋ ಎಂದು ಕರೆಯುವರು. ಬ್ರಾಹ್ಮಣರು ಪ್ರಾಕೃತ ಭಾಷೆಯ ಪ್ರಿಯರಾಗುವರು. ಪಾಷಂಡ ಜನರು ಎಲ್ಲ ಕಡೆಯಲ್ಲಿಯೂ ತುಂಬುವರು.
ತತಸ್ತುಮುಲಸಂಘಾತೇ ವರ್ತಮಾನೇ ಯುಗಕ್ಷಯೇ |
ದ್ವಿಜಾತಿಪೂರ್ವಕೋ ಲೋಕಃ ಕ್ರಮೇಣ ಪ್ರಭವಿಷ್ಯತಿ ॥90॥
ಯುಗಕ್ಷಯದ ಕಾಲದಲ್ಲಿ ಇಂತಹ ಘೋರವಾದ ಸಂಘರ್ಷವು ಉಂಟಾಗುತ್ತಿರಲು ಲೋಕದಲ್ಲಿ ಕ್ರಮವಾಗಿ ಹೆಣ್ಣು, ಗಂಡು ಎಂಬ ಎರಡೇ ಜಾತಿಗಳು ಉಳಿಯುವವು.
ತತಃ ಕಾಲಾಂತರೇಽನ್ಯಸ್ಮಿನ್ ಪುನರ್ಲೋಕವಿವೃದ್ಧಯೇ |
ಭವಿಷ್ಯತಿ ಪುನರ್ದೈವಮನುಕೂಲಂ ಯದೃಚ್ಛಯಾ ॥91॥
ಅನಂತರ ಅನುಕೂಲವಾದ ಕಾಲವು ಒದಗಿದಾಗ ಪುನಃ ಲೋಕದ ಏಳಿಗೆಗಾಗಿ ತನ್ನ ಇಚ್ಛೆಯಿಂದಲೇ ದೈವವು ಅನುಕೂಲವಾಗುವುದು.

ಯದಾ ಸೂರ್ಯಶ್ಚ ಚಂದ್ರಶ್ಚ ತಥಾ ತಿಷ್ಯಬೃಹಸ್ಪತೀ |
ಏಕರಾಶೌ ಸಮೇಷ್ಯಂತಿ ಪ್ರಪತ್ಸ್ಯತಿ ತದಾ ಕೃತಮ್ ॥92॥
ಸೂರ್ಯ, ಚಂದ್ರ ಮತ್ತು ಬೃಹಸ್ಪತಿಗಳು ಯಾವಾಗ ಕರ್ಕಾಟಕ ರಾಶಿಯಲ್ಲಿ ಪುಷ್ಯನಕ್ಷತ್ರದಲ್ಲಿ ಏಕಕಾಲದಲ್ಲಿ ಪ್ರವೇಶಿಸುವರೋ ಆಗ ಕೃತಯುಗವು ಪ್ರಾರಂಭವಾಗುವುದು.
ಕಾಲವರ್ಷೀ ಚ ಪರ್ಜನ್ಯೋ ನಕ್ಷತ್ರಾಣಿ ಶುಭಾನಿ ಚ |
ಪ್ರದಕ್ಷಿಣಾ ಗ್ರಹಾಶ್ಚಾಪಿ ಭವಿಷ್ಯಂತ್ಯನುಲೋಮಗಾಃ ॥93॥
ಕ್ಷೇಮಂ ಸುಭಿಕ್ಷಮಾರೋಗ್ಯಂ ಭವಿಷ್ಯತಿ ನಿರಾಮಯಮ್ ॥94॥
ಪರ್ಜನ್ಯನು ಕಾಲಕಾಲಕ್ಕೆ ಮಳೆಯನ್ನು ಸುರಿಸುವನು. ನಕ್ಷತ್ರಗಳು ಶುಭಪ್ರದಗಳಾಗುವುವು. ಎಲ್ಲ ಗ್ರಹಗಳು ಅನುಕೂಲವಾಗಿ ದಲ್ಲಿ ಪ್ರದಕ್ಷಿಣಾಕಾರದಲ್ಲಿ ಚಲಿಸುವವು. ಕ್ಷೇಮವೂ, ಸುಭಿಕ್ಷವೂ, ಆರೋಗ್ಯವೂ, ನಿರುಪದ್ರವವೂ ಉಂಟಾಗುವುವು.
ಕಲ್ಕೀ ವಿಷ್ಣುಯಶಾ ನಾಮ ದ್ವಿಜಃ ಕಾಲಪ್ರಚೋದಿತಃ |
ಉತ್ಪತ್ಸ್ಯತೇ ಮಹಾವೀರ್ಯೋ ಮಹಾಬುದ್ಧಿಪರಾಕ್ರಮಃ ॥95॥
ವಿಷ್ಣುವು ಅನುಕೂಲವಾದ ಕಾಲದಲ್ಲಿ ಮಹಾವೀರ್ಯನೂ, ಮಹಾಬುದ್ಧಿ ಪರಾಕ್ರಮವನ್ನು ಉಳ್ಳವನೂ ಆಗಿ ವಿಷ್ಣುಯಶಸ್ ಎಂಬ ಬ್ರಾಹ್ಮಣನ ಮನೆಯಲ್ಲಿ ತಾನೂ ವಿಷ್ಣುಯಶಸ್ ಎಂಬ ಬ್ರಾಹ್ಮಣನಾಗಿ ಕಲ್ಕಿ ಎಂಬ ಹೆಸರಿನಿಂದ ಅವತಾರ ಮಾಡುವನು.
ಸಂಭೂತಃ ಸಂಭಲಗ್ರಾಮೇ ಬ್ರಾಹ್ಮಣವಸಥೇ ಶುಭೇ |
ಮಹಾತ್ಮಾ ತಸ್ಯ ಸರ್ವಾಣಿ ವಾಹನಾನ್ಯಾಯುಧಾನಿ ಚ |
ಉಪಸ್ಥಾಸ್ಯಂತಿ ಯೋಧಾಶ್ಚ ಶಸತ್ರಣಿ ಕವಚಾನಿ ಚ ॥97॥
ಎಲೈ ರಾಜನೇ, ಆ ಮಹಾತ್ಮನು ಸಂಭಲಗ್ರಾಮದಲ್ಲಿ (ಶಂಬಲ ಗ್ರಾಮದಲ್ಲಿ) ಶುದ್ಧವಾದ ಬ್ರಾಹ್ಮಣನ ಮನೆಯಲ್ಲಿ ಪ್ರಜೆಗಳಿಗೆ ಹಿತವನ್ನುಂಟು ಮಾಡುವ ಸಲುವಾಗಿ ಒಳ್ಳೆಯ ನಡತೆಯುಳ್ಳವನಾಗಿ ಅವತರಿಸುವನು. ಅವನು ಮನಸ್ಸಿನಲ್ಲಿ ಯೋಚಿಸಿದ ತಕ್ಷಣ ಎಲ್ಲಾ ವಾಹನಗಳೂ, ಆಯುಧಗಳೂ, ಯೋಧರೂ, ಶಸ್ತ್ರಗಳೂ ಮತ್ತು ಕವಚಗಳು ಅವನ ಸುತ್ತಲೂ ಸೇರುವವು.
ಸ ಧರ್ಮವಿಜಯೀ ರಾಜಾ ಚಕ್ರವರ್ತೀ ಭವಿಷ್ಯತಿ |
ಸ ಚೇಮಂ ಸಂಕುಲಂ ಲೋಕಂ ಪ್ರಸಾದಮುಪನೇಷ್ಯತಿ ॥98॥
ಅವನು ಧರ್ಮವಿಜಯವನ್ನು ಸಂಪಾದಿಸಿ ಜನಗಳನ್ನು ರಂಜಿಸುವ ಚಕ್ರವರ್ತಿಯಾಗುವನು. ಅದಕ್ಕಿಂತ ಮೊದಲು ಸಂಕಟಕ್ಕೆ ಒಳಗಾದ ಲೋಕದಲ್ಲಿರುವ ದುಷ್ಟರನ್ನೆಲ್ಲಾ ವಿನಾಶಮಾಡುವನು.
ಉತ್ಥಿತೋ ಬ್ರಾಹ್ಮಣೋ ದೀಪ್ತಃ ಕ್ಷಯಾಂತಕೃದುದಾರಧೀಃ |
ಸಂಕ್ಷೇಪಕೋ ಹಿ ಸರ್ವಸ್ಯ ಯುಗಸ್ಯ ಪರಿವರ್ತಕಃ ॥99॥
ಬ್ರಾಹ್ಮಣರ ಮನೆಯಲ್ಲಿ ಉದಿಸಿ, ಕಾಂತಿಯುಳ್ಳವನಾಗಿ, ಉದಾರವಾದ ಬುದ್ಧಿಯುಳ್ಳವನಾಗಿ ಕಲಿಯುಗದ ಕ್ಷಯವನ್ನು ಉಂಟುಮಾಡಿ ಅನಂತರ ಕೃತಯುಗದ ಪ್ರವರ್ತಕನಾಗುವನು.
ಸ ಸರ್ವತ್ರ ಗತಾನ್ ಕ್ಷುದ್ರಾನ್ ಬ್ರಾಹ್ಮಣೈಃ ಪರಿವಾರಿತಃ |
ಉತ್ಸಾದಯಿಷ್ಯತಿ ತದಾ ಸರ್ವಮ್ಲೇಚ್ಛಗಣಾನ್ ದ್ವಿಜಃ ॥100॥
ಬ್ರಾಹ್ಮಣನಾದ ಅವನು, ಬ್ರಾಹ್ಮಣರಿಂದ ಸುತ್ತುವರಿಯಲ್ಪಟ್ಟು ದಿಕ್ಕು ದಿಕ್ಕುಗಳಲ್ಲಿರುವ ಸರ್ವಮ್ಲೇಚ್ಛರ ಸಮೂಹಗಳನ್ನು ವಿನಾಶಗೊಳಿಸುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ದಶಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತೈದನೆಯ
ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತಾರನೆಯ ಅಧ್ಯಾಯ
ಮಾರ್ಕಂಡೇಯರಿಂದ ಕಲ್ಕಿಯು ಮಾಡುವ ಕೃತಯುಗಸ್ಥಾಪನೆಯ ಕಥನ ಮತ್ತು ಯುಧಿಷ್ಠಿರನಿಗೆ ಮಾರ್ಕಂಡೇಯರಿಂದ ಧರ್ಮೋಪದೇಶ.
ಮಾರ್ಕಂಡೇಯಃ
ತತಶ್ಚೋರಕ್ಷಯಂ ಕೃತ್ವಾ ದ್ವಿಜೇಭ್ಯಃ ಪೃಥಿವೀಮಿಮಾಮ್ |
ವಾಜಿಮೇಧೇ ಮಹಾಯಜ್ಞೇ ವಿಧಿವತ್ ಕಲ್ಪಯಿಷ್ಯತಿ ॥1॥
ಮಾರ್ಕಂಡೇಯ ಅನಂತರ ಚೋರರನ್ನು ವಿನಾಶಮಾಡಿ ವಾಜಿಮೇಧ ಮಹಾಯಾಗವನ್ನು ಮಾಡಿ ಅದರಲ್ಲಿ ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ಈ ಭೂಮಿಯನ್ನು ಕೊಡುವನು.
ಸ್ಥಾಪಯಿತ್ವಾ ಚ ಮರ್ಯಾದಾಃ ಸ್ವಯಂಭುವಿಹಿತಾಃ ಶುಭಾಃ |
ವನಂ ಪುಣ್ಯಯಶಃಕರ್ಮಾ ಜರಯಾ ಸಂಶ್ರು(ಕ್ಷ)ಯಿಷ್ಯತಿ |
ತಚ್ಛೀಲಮನುವರ್ತ್ಸ್ಯಂತಿ ಮನುಷ್ಯಾ ಲೋಕವಾಸಿನಃ ॥2॥
ಬ್ರಹ್ಮದೇವರಿಂದ ವಿಹಿತವಾದ ಎಲ್ಲಾ ಶುಭವಾದ ಲೋಕಮರ್ಯಾದೆಗಳನ್ನು ಸ್ಥಾಪಿಸಿ ಪುಣ್ಯವಾದ ಕೀರ್ತಿಯನ್ನು ಹೊಂದಿ, ಪುಣ್ಯವಾದ ಕರ್ಮವನ್ನು ಮಾಡುವವನಾಗಿ, ನಿರ್ಜನವಾದ ವನಗಳನ್ನು ನಾಶಮಾಡಿ ಬ್ರಾಹ್ಮಣಗ್ರಾಮದಿಂದ ತುಂಬುವನು. ಲೋಕದಲ್ಲಿ ವಾಸಿಸುವ ಜನರು ಅವನ ಶೀಲವನ್ನೇ ಅನುಸರಿಸುವರು.
ವಿಪ್ರೈಶ್ಚೋರಕ್ಷಯೇ ಚೈವ ಕೃತೇ ಕ್ಷೇಮಂ ಭವಿಷ್ಯತಿ ॥3॥
ಚೋರಕ್ಷಯವು ಉಂಟಾಗುತ್ತಿರಲು ವಿಪ್ರರಿಂದ ಲೋಕಕ್ಕೆ ಕ್ಷೇಮವಾಗುವುದು.
ಕೃಷ್ಣಾಜಿನಾನಿ ಶಕ್ತೀಶ್ಚ ತ್ರಿಶೂಲಾನ್ಯಾಯುಧಾನಿ ಚ |
ಸ್ಥಾಪಯನ್ ವಿಪ್ರಶಾರ್ದೂಲಾನ್ ದೇಶೇಷು ವಿಜಿತೇಷು ಚ ॥4॥
ತನ್ನಿಂದ ವಿಜಿತವಾದ ದೇಶಗಳಲ್ಲಿ ಕೃಷ್ಣಾಜಿನಗಳನ್ನೂ ಮತ್ತು ಶಕ್ತಿತ್ರಿಶೂಲ ಮೊದಲಾದ ಆಯುಧಗಳನ್ನು ಸ್ಥಾಪಿಸುವವನಾಗುತ್ತಾನೆ (ಶಕ್ತಿ, ತ್ರಿಶೂಲ ಮೊದಲಾದ ಆಯುಧಗಳನ್ನು ನೋಡಿ ಕಳ್ಳರು ಹೆದರುವಂತೆ ಬ್ರಾಹ್ಮಣರ ಕೃಷ್ಣಾಜಿನವನ್ನು ನೋಡಿಯೂ ಚೋರರು ಹೆದರಿ ಓಡುವಂತೆ ಮಾಡುತ್ತಾನೆ).
ಸಂಸ್ತೂಯಮಾನೋ ವಿಪ್ರೇಂದ್ರೈರ್ಮಾನಯಾನೋ ದ್ವಿಜೋತ್ತಮಾನ್ |
ಕಲ್ಕೀ ಚರಿಷ್ಯತಿ ಮಹೀಂ ಸದಾ ದಸ್ಯುವಧೇ ರತಃ ॥5॥
ವಿಪ್ರಶ್ರೇಷ್ಠರಿಂದ ಸ್ತೋತ್ರಮಾಡಲ್ಪಟ್ಟು ಶ್ರೇಷ್ಠರಾದ ವಿಪ್ರರಿಗೆ ಸನ್ಮಾನವನ್ನು ಮಾಡುತ್ತಾ ಸದಾ ದಸ್ಯುವಧೆಯಲ್ಲೇ ನಿರತನಾಗಿ ಕಲ್ಕಿಯು ಭೂಮಿಯಲ್ಲಿ ಸಂಚರಿಸುವನು.
ಹಾ ಮಾತಸ್ತಾತ ಪುತ್ರೇತಿ ತಾಸ್ತಾ ವಾಚಃ ಸುದಾರುಣಾಃ |
ವಿಕ್ರೋಶಮಾನಾನ್ ಸುಭೃಶಂ ದಸ್ಯೂನ್ ನೇಷ್ಯತಿ ಸಂಕ್ಷಯಮ್ ॥6॥
ಅಯ್ಯೋ ತಾಯಿಯೇ, ಅಯ್ಯೋ ಮಗನೇ ಎಂಬ ಧಾರುಣವಾದ ಮಾತುಗಳಿಂದ ವಿಕ್ರೋಶಮಾಡುತ್ತಿರುವ ದಸ್ಯುಗಳನ್ನು ಪೂರ್ಣವಾಗಿ ನಾಶಗೊಳಿಸುವನು.
ತತೋಽಧರ್ಮವಿನಾಶೋ ವೈ ಧರ್ಮವೃದ್ಧಿಶ್ಚ ಭಾರತ |
ಭವಿಷ್ಯತಿ ಕೃತೇ ಪ್ರಾಪ್ತೇ ಕ್ರಿಯಾವಾಂಶ್ಚ ಜನಸ್ತಥಾ ॥7॥
ಎಲೈ ಭಾರತನೇ, ಆಗ ಕೃತಯುಗವು ಪ್ರಾಪ್ತವಾಗಲು ಅಧರ್ಮದ ವಿನಾಶವೂ ಮತ್ತು ಧರ್ಮದ ವೃದ್ಧಿಯೂ ಉಂಟಾಗುವುದು. ಜನರು ಸತ್ಕಾರ್ಯಗಳಲ್ಲಿ ನಿರತರಾಗುವರು.
ಆರಾಮಾಶ್ಚೈವ ಚೈತ್ಯಾಶ್ಚ ತಟಾಕಾವಸಥಾಸ್ತಥಾ |
ಯಜ್ಞಕ್ರಿಯಾಶ್ಚ ವಿವಿಧಾ ಭವಿಷ್ಯಂತಿ ಕೃತೇ ಯುಗೇ |
ಬ್ರಾಹ್ಮಣಾಃ ಸಾಧವಶ್ಚೈವ ಮುನಯಶ್ಚ ತಪಸ್ವಿನಃ ॥8॥
ಉದ್ಯಾನವನಗಳು, ಪೂಜಾವೃಕ್ಷಗಳು, ಸರೋವರಗಳು, ಬ್ರಾಹ್ಮಣರ ಅಗ್ರಹಾರಗಳು, ವಿವಿಧವಾದ ಯಜ್ಞಕ್ರಿಯೆಗಳು ಕೃತಯುಗದಲ್ಲಿ ಉಂಟಾಗುವುವು. ಸಾಧುಗಳಾದ ಬ್ರಾಹ್ಮಣರೂ, ತಪಸ್ವಿಗಳಾದ ಋಷಿಗಳೂ ಉಂಟಾಗುವರು.
ಆಶ್ರಮಾಶ್ಚಾವಿಪಾಷಂಡಾಃ ಸ್ಥಿತಾಃ ಸತ್ಯೇ ಜನಾಸ್ತದಾ |
ಜಾಯಂತಿ ಸರ್ವಭೂತಾನಿ ಶುಧ್ಯಮಾನಾನಿ ಚೈವ ಹಿ ॥9॥
ಆಶ್ರಮಗಳು ಸಂಪೂರ್ಣವಾಗಿ ಪಾಷಂಡರಹಿತವಾಗುವುವು. ಜನರು ಸತ್ಯದಲ್ಲಿಯೇ ರತರಾಗುವರು. ಎಲ್ಲ ಪ್ರಾಣಿಗಳು ಶುದ್ಧವಾದ ತಮ್ಮ ಮರಿಗಳನ್ನು ಪ್ರಸವಿಸುವುವು.
ಸರ್ವೇಷ್ವೃತುಷು ರಾಜೇಂದ್ರ ಸರ್ವಂ ಸಸ್ಯಂ ಭವಿಷ್ಯತಿ ॥10॥
ಎಲೈ ರಾಜೇಂದ್ರನೇ, ಎಲ್ಲ ಋತುಗಳಲ್ಲಿಯೂ ಎಲ್ಲಾ ಸಸ್ಯಗಳೂ ಬೆಳೆಯುವವು.
ನರಾ ದಾನೇಷು ನಿರತಾ ವ್ರತೇಷು ನಿಯಮೇಷು ಚ |
ಜಪಯಜ್ಞಪರಾ ವಿಪ್ರಾ ಧರ್ಮಕಾಮಾ ಮುದಾ ಯುತಾಃ |
ಪಾಲಯಿಷ್ಯಂತಿ ರಾಜಾನೋ ಧರ್ಮೇಣೇಮಾಂ ವಸುಂಧರಾಮ್ ॥

ಮನುಷ್ಯರು ದಾನಗಳಲ್ಲಿಯೂ, ವ್ರತನಿಯಮಗಳಲ್ಲಿಯೂ ನಿರತರಾಗುವರು. ಬ್ರಾಹ್ಮಣರು ಜಪಯಜ್ಞಪರರಾಗಿ ಧರ್ಮವನ್ನೇ ಬಯಸಿ ಸಂತೋಷದಿಂದ ಇರುವರು. ರಾಜರು ಧರ್ಮದಿಂದ ಈ ಭೂಮಿಯನ್ನು ಪಾಲಿಸುವರು.
ವ್ಯವಹಾರರತಾ ವೈಶ್ಯಾ ಭವಿಷ್ಯಂತಿ ಕೃತೇ ಯುಗೇ |
ಷಟ್ಕರ್ಮನಿರತಾ ವಿಪ್ರಾಃ ಕ್ಷತ್ರಿಯಾ ವಿಕ್ರಮೇ ರತಾಃ ||12||
ಶುಶ್ರೂಷಾಯಾಂ ರತಾಃ ಶೂದ್ರಸ್ತಥಾ ವರ್ಣತ್ರಯಸ್ಯ ಚ ||13||
ಕೃತಯುಗದಲ್ಲಿ ವೈಶ್ಯರು ವ್ಯಾಪಾರಾದಿ ವ್ಯವಹಾರಗಳಲ್ಲಿ ನಿರತರಾಗುವರು. ಬ್ರಾಹ್ಮಣರು ಷಟ್ಕರ್ಮಗಳಲ್ಲಿ ನಿರತರಾಗುವರು. ಕ್ಷತ್ರಿಯರು ಪರಾಕ್ರಮಗಳಲ್ಲಿ ನಿರತರಾಗುವರು. ಶೂದ್ರರು ಮೂರುವರ್ಣಗಳ ಸೇವೆಯಲ್ಲಿ ನಿರತರಾಗುವರು.
ಏಷ ಧರ್ಮಃ ಕೃತಯುಗೇ ತ್ರೇತಾಯಾಂ ದ್ವಾಪರೇ ತಥಾ |
ಪಶ್ಚಿಮೇ ಯುಗಕಾಲೇ ಚ ಯಃ ಸ ತೇ ಸಂಪ್ರಕೀರ್ತಿತಃ |
ಸರ್ವಲೋಕಸ್ಯ ವಿದಿತಾ ಯುಗಸಂಖ್ಯಾ ಚ ಪಾಂಡವ ||14||
ಇದು ಕೃತಯುಗದ ಧರ್ಮ. ತ್ರೇತಾಯುಗದಲ್ಲಿ, ದ್ವಾಪರಯುಗದಲ್ಲಿ ಮತ್ತು ಕೊನೆಯದಾದ ಕಲಿಯುಗದ ಕಾಲದಲ್ಲಿ ಧರ್ಮವು ಹೇಗಿರುತ್ತದೆ ಎಂದು ನಿನಗೆ ಮೊದಲೇ ತಿಳಿಸಿದ್ದೇನೆ. ಯುಗಸಂಖ್ಯೆಯೂ ಸಹ ಎಲ್ಲ ಜನರಿಗೂ ತಿಳಿದಿದೆ.
ಏತತ್ ತೇ ಸರ್ವಮಾಖ್ಯಾತಮತೀತಾನಾಗತಂ ತಥಾ |
ವಾಯುಪ್ರೋಕ್ತಮನುಸ್ಮೃತ್ಯ ಪುರಾಣಮೃಷಿಸಂಸ್ತುತಮ್ ||15||
ಋಷಿಗಳಿಂದ ಪ್ರಶಂಸಿಸಲ್ಪಟ್ಟ ವಾಯುಪ್ರೋಕ್ತ ಪುರಾಣವನ್ನು ಅನುಸರಿಸಿ ನಾನು ನಿನಗೆ ಅತೀತವಾದ ಮತ್ತು ಅನಾಗತವಾದ ಎಲ್ಲವನ್ನೂ ತಿಳಿಸಿದ್ದೇನೆ.
ಏವಂ ಸಂಸಾರಮಾರ್ಗಾ ಮೇ ಬಹುಶಶ್ಚಿರಜೀವಿನಾ |
ದೃಷ್ಟಾಶ್ಚೈವಾನುಭೂತಾಶ್ಚ ತಾಂಸ್ತೇ ಕಥಿತವಾನಹಮ್ ||16||
ಚಿರಜೀವಯಾದ ನಾನು ನೋಡಿ ಅನುಭವಿಸಿದ ಈ ವಿಧವಿಧವಾದ ಸಂಸಾರ ಮಾರ್ಗಗಳನ್ನು ನಾನು ನಿನಗೆ ಹೇಳಿದ್ದೇನೆ.
ಇದಂ ಚೈವಾಪರಂ ಭೂಯಃ ಸಹ ಭ್ರಾತೃಭಿರಚ್ಯುತ |
ಧರ್ಮಸಂಶಯಮೋಕ್ಷಾರ್ಥಂ ನಿಬೋಧ ವಚನಂ ಮಮ ||17||
ಎಲೈ ಭಕ್ತ್ಯಾಧಿಗಳಿಂದ ಚ್ಯುತನಾಗದವನೇ, ಧರ್ಮವಿಷಯದಲ್ಲಿ ಸಂಶಯ ಪರಿಹಾರಕ್ಕಾಗಿ ನಾನು ಹೇಳುವ ಈ ಮಾತನ್ನು ತಮ್ಮಂದಿರ ಜೊತೆಯಲ್ಲಿ ಕೇಳು.
ಧರ್ಮೇ ತ್ವಯಾಽಽತ್ಮಾ ಸಂಯೋಜ್ಯೋ ನಿತ್ಯಂ ಧರ್ಮಭೃತಾಂ ವರ |
ಧರ್ಮಾತ್ಮಾ ಹಿ ಸುಖಂ ರಾಜನ್ ಪ್ರೇತ್ಯ ಚೇಹ ಚ ವಿಂದತಿ |
ನಿಬೋಧ ಚ ಶುಭಾಂ ವಾಣೀಂ ಯಾಂ ಪ್ರವಕ್ಷ್ಯಾಮಿ ತೇಽನಘ ||18||
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ, ನೀನು ಯಾವಾಗಲೂ ನಿನ್ನನ್ನು ಧರ್ಮದಲ್ಲಿಯೇ ತೊಡಗಿಸಿಕೊಳ್ಳಬೇಕು. ಎಲೈ ರಾಜನೇ, ಧರ್ಮಾತ್ಮನಾದವನೇ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಸುಖವನ್ನು ಹೊಂದುವನು. ಎಲೈ ಅನಘನೇ, ನಾನು ಹೇಳುವ ಇನ್ನೊಂದು ಶುಭವಾದ ಮಾತನ್ನು ಕೇಳು.
ನ ಬ್ರಾಹ್ಮಣೇ ಪರಿಭವಃ ಕರ್ತವ್ಯಸ್ತೇ ಕದಾಚನ |
ಬ್ರಾಹ್ಮಣಃ ಕುಪಿತೋ ಹನ್ಯಾದಪಿ ಲೋಕಾನ್ ಪ್ರತಿಜ್ಞಯಾ ||19||
ಬ್ರಾಹ್ಮಣನಿಗೆ ನೀನು ಎಂದೂ ಅವಮಾನವನ್ನು ಮಾಡಬಾರದು. ಕುಪಿತನಾದ ಬ್ರಾಹ್ಮಣನು ತನ್ನ ಪ್ರತಿಜ್ಞೆಯಿಂದಲೇ ಲೋಕಗಳನ್ನು ನಾಶಮಾಡಿಯಾನು.
ವೈಶಂಪಾಯನಃ
ಮಾರ್ಕಂಡೇಯವಚಃ ಶ್ರುತ್ವಾ ಕುರೂಣಾಂ ಪ್ರವರೋ ನೃಪಃ |
ಉವಾಚ ವಚನಂ ಧೀಮಾನ್ ಪರಮಂ ಪರಮದ್ಯುತಿಃ ||20||
ವೈಶಂಪಾಯನ ಮಾರ್ಕಂಡೇಯರ ಮಾತುಗಳನ್ನು ಕೇಳಿದ ಮೇಧಾವಿಯಾದ, ಪರಮಕಾಂತಿಯುಕ್ತನಾದ, ಕುರುಶ್ರೇಷ್ಠನಾದ ಧರ್ಮರಾಜನು ಹೀಗೆ ಮಾತನಾಡಿದನು.
ಏತತ್ಶ್ರುತ್ವಾ ಮಯಾ ಕಿಂ ಸ್ಯಾತ್ ಕರ್ತವ್ಯಂ ಮುನಿಸತ್ತಮ |
ಕಥಂ ಚಾಯಂ ಜಿತೋ ಲೋಕೋ ರಕ್ಷಿತವ್ಯೋ ಭವಿಷ್ಯತಿ ||21||
ಎಲೈ ಮುನಿಶ್ರೇಷ್ಠರೇ, ನಿಮ್ಮ ಮಾತನ್ನು ಕೇಳಿ ನಾನು ಏನು ಮಾಡಬೇಕು? ಜಿತವಾದ ಈ ಲೋಕವನ್ನು ನಾನು ಹೇಗೆ ರಕ್ಷಿಸಬೇಕು?
ಮಾರ್ಕಂಡೇಯಃ
ದಯಾವಾನ್ ಸರ್ವಭೂತೇಷು ಹಿತೋ ರಕ್ತೋಽನಸೂಯಕಃ |
ಸತ್ಯವಾದೀ ಮೃದುರ್ದಾಂತಃ ಪ್ರಜಾನಾಂ ರಕ್ಷಣೇ ರತಃ ||22||
ಚರ ಧರ್ಮಂ ತ್ಯಜಾಧರ್ಮಂ ಪಿತೄನ್ ದೇವಾಂಶ್ಚ ಪೂಜಯ |
ಪ್ರಮಾದಾದ್ ಯತ್ಕೃತಂ ತೇಽಭೂತ್ ಸಮ್ಯಗ್ದಾನೇನ ತಜ್ಜಪ ||23||
ಮಾರ್ಕಂಡೇಯರು ಸರ್ವಪ್ರಾಣಿಗಳಲ್ಲಿಯೂ ದಯೆಯನ್ನು ಮಾಡಿ, ಎಲ್ಲರಲ್ಲಿಯೂ ಸ್ನೇಹವನ್ನು ಮಾಡಿ, ಎಲ್ಲರಿಗೂ ಹಿತನಾಗಿದ್ದು, ಅಸೂಯೆಯನ್ನು ಮಾಡದೆ, ಸತ್ಯವಚನವನ್ನು ನುಡಿದು, ಮೃದುವೂ, ಇಂದ್ರಿಯ ನಿಗ್ರಹವುಳ್ಳವನೂ, ಪ್ರಜಾಪಾಲನೆಯಲ್ಲಿ ನಿರತನಾದವನೂ ಆಗಿ ಧರ್ಮವನ್ನು ಆಚರಿಸು. ಅಧರ್ಮವನ್ನು ತ್ಯಜಿಸು. ಪಿತೃಗಳನ್ನು ಮತ್ತು ದೇವತೆಗಳನ್ನು ಪೂಜಿಸು. ಪ್ರಮಾದದಿಂದ ಉಂಟಾದ ಪಾಪವನ್ನು ಒಳ್ಳೆಯ ದಾನವನ್ನು ಕೊಡುವುದರಿಂದ ಜಯಿಸು.

ಅಲಂ ತೇ ಮಾನಮಾಶ್ರಿತ್ಯ ಸತತಂ ಪರವಾನ್ ಭವ |
ವಿಜಿತ್ಯ ಪೃಥಿವೀಂ ಸರ್ವಾಂ ಮೋದಮಾನಃ ಸುಖೀ ಭವ ||24||
ಅಹಂಕಾರವನ್ನು ಪಡಬೇಡ. ನಿತ್ಯದಲ್ಲಿಯೂ ವಿನೀತನಾಗಿರು. ಸಮಗ್ರವಾದ ಭೂಮಿಯನ್ನು ಗೆದ್ದು ಸಂತೋಷಪಡುತ್ತಾ ಸುಖವಾಗಿರು.
ಏಷ ಭೂತೋ ಭವಿಷ್ಯಶ್ಚ ಧರ್ಮಸ್ತೇ ಸಮುದೀರಿತಃ |
ನ ತೇಽಸ್ತ್ಯವಿದಿತಂ ಕಿಂಚಿದತೀತಾನಾಗತಂ ಭುವಿ ||25||
ಭೂತಕಾಲದ ಮತ್ತು ಭವಿಷ್ಯಕಾಲದ ಈ ಧರ್ಮಗಳನ್ನು ನಾನು ನಿನಗೆ ಹೇಳಿದ್ದೇನೆ. ಭೂಮಿಯಲ್ಲಿ ಭೂತಭವಿಷ್ಯತ್ ಕಾಲದಲ್ಲಿ ನಿನಗೆ ತಿಳಿಯದಿರುವ ವಸ್ತುವು ಯಾವುದೂ ಇಲ್ಲ.
ತಸ್ಮಾದಿಮಂ ಪರಿಕ್ಲೇಶಂ ತ್ವಂ ತಾತ ಹೃದಿ ಮಾ ಕೃಥಾಃ |
ಪ್ರಾಜ್ಞಾಸ್ತಾತ ನ ಮುಹ್ಯಂತಿ ಕಾಲೇನಾಪಿ ಪ್ರಪೀಡಿತಾಃ ||26||
ಎಲೈ ಪ್ರೀತಿಪಾತ್ರನೇ, ಆದ್ದರಿಂದ ಈಗ ಅನುಭವಿಸುತ್ತಿರುವ ಕ್ಲೇಶವನ್ನು ಮನಸ್ಸಿನಲ್ಲಿ ಹಚ್ಚಿಕೊಳ್ಳಬೇಡ. ಪ್ರೀತಿಪಾತ್ರನೇ, ಕಾಲಚಕ್ರದಲ್ಲಿ ಪೀಡೆಗೆ ಒಳಗಾದರೂ ಸಹ ಪ್ರಾಜ್ಞರು ಮೋಹಕ್ಕೆ ಒಳಗಾಗುವುದಿಲ್ಲ.
ಏಷ ಕಾಲೋ ಮಹಾಬಾಹೋ ಅಪಿ ಸರ್ವದಿವೌಕಸಾಮ್ |
ಮುಹ್ಯಂತೇ ಹಿ ಪ್ರಜಾಸ್ತಾತ ಕಾಲೇನಾಪಿ ಪ್ರಚೋದಿತಾಃ ||27||
ಎಲೈ ಮಹಾಬಾಹುವೇ, ಕಾಲನಾಮಕ ಪರಮಾತ್ಮನ ಸಾಮರ್ಥ್ಯವು ಅಂತಹುದು. ದೇವತೆಗಳ ಮಕ್ಕಳೂ ಸಹ ಅವನಿಂದ ಪ್ರೇರಿತರಾಗಿ ಮೋಹಕ್ಕೆ ಒಳಗಾಗುತ್ತಾರೆ.
ಮಾ ಚ ತತ್ರ ವಿಶಂಕಾಭೂದ್ ಯನ್ಮಯೋಕ್ತಂ ತವಾನಘ |
ಆಶಂಕ್ಯ ಮದ್ವಚೋ ಹ್ಯೇತದ್ ಧರ್ಮಲೋಪೋ ಭವೇತ್ ತವ ||28||
ಎಲೈ ಅನಘನೇ, ನಾನು ಹೇಳಿದ ವಿಷಯದಲ್ಲಿ ಸಂಶಯವನ್ನು ಪಡಬೇಡ. ನನ್ನ ಮಾತಿನಲ್ಲಿ ಸಂಶಯವನ್ನು ಪಟ್ಟರೆ ನಿನಗೆ ಧರ್ಮಲೋಪವು ಉಂಟಾದೀತು.
ಜಾತೋಽಪಿ(ಸಿ) ಪಶ್ಚಿಮೇ ವಂಶೇ ಕುರೂಣಾಂ ಭರತರ್ಷಭ |
ಕರ್ಮಣಾ ಮನಸಾ ವಾಚಾ ಸರ್ವಮೇತತ್ ಸಮಾಚರ ||29||
ಎಲೈ ಭರತರ್ಷಭನೇ, ಕುರುಗಳ ಚರಮವಂಶದಲ್ಲಿ ಜನಿಸಿದ್ದೀಯೆ. ನೀನು ಕರ್ಮದಿಂದಲೂ, ಮನಸ್ಸಿನಿಂದಲೂ ಮತ್ತು ಮಾತಿನಿಂದಲೂ ನಾನು ಹೇಳಿದ ಎಲ್ಲವನ್ನೂ ಆಚರಿಸು.
ಯುಧಿಷ್ಠಿರಃ
ಯತ್ ತ್ವಯೋಕ್ತಂ ದ್ವಿಜಶ್ರೇಷ್ಠ ವಾಕ್ಯಂ ಶ್ರುತಿಮನೋಹರಮ್ |
ತಥಾ ಕರಿಷ್ಯೇ ಯತ್ನೇನ ಭವತಃ ಶಾಸನಂ ವಿಭೋ ||30||
ಯುಧಿಷ್ಠಿರ ಎಲೈ ದ್ವಿಜಶ್ರೇಷ್ಠರೇ, ಶ್ರವಣ ಮನೋಹರವಾದ ಮಾತುಗಳನ್ನು ಏನು ನೀವು ಆಡಿದ್ದೀರೋ ಅದನ್ನು ಪ್ರಯತ್ನಪೂರ್ವಕವಾಗಿ ಮಾಡುವೆನು. ಸಮರ್ಥರಾದವರೇ, ನಿಮ್ಮ ಶಾಸನವನ್ನು ಪ್ರಯತ್ನಪೂರ್ವಕವಾಗಿ ಆಚರಿಸುವೆನು.
ನ ಮೇ ಲೋಭೋಽಸ್ತಿ ವಿಪ್ರೇಂದ್ರ ನ ಭಯಂ ನ ಚ ಮತ್ಸರಃ |
ಕರಿಷ್ಯಾಮಿ ಹಿ ತತ್ಸರ್ವಮುಕ್ತಂ ಯತ್ ತೇ ಮಯಿ ಪ್ರಭೋ ||31||
ಎಲೈ ವಿಪ್ರೇಂದ್ರರೇ, ನನಗೆ ಲೋಭವಿಲ್ಲ. ಭಯವಾಗಲೀ, ಮತ್ಸರವಾಗಲೀ ಇಲ್ಲ. ಪ್ರಭುಗಳೇ, ನೀವು ಹೇಳಿದ ಎಲ್ಲವನ್ನೂ ನಾನು ಮಾಡುವೆನು.
ವೈಶಂಪಾಯನಃ
ಶ್ರುತ್ವಾ ತು ವಚನಂ ತಸ್ಯ ಮಾರ್ಕಂಡೇಯಸ್ಯ ಧೀಮತಃ |
ಸಂಹೃಷ್ಟಾಃ ಪಾಂಡವಾ ರಾಜನ್ ಸಹಿತಾಃ ಶಾರ್ಙ್ಗಧನ್ವನಾ ||32||
ವೈಶಂಪಾಯನ ಎಲೈ ರಾಜನೇ, ಮೇಧಾವಿಗಳಾದ ಆ ಮಾರ್ಕಂಡೇಯರ ಮಾತುಗಳನ್ನು ಕೇಳಿ ಕೃಷ್ಣನಿಂದ ಸಹಿತರಾದ ಪಾಂಡವರು ಸಂತೋಷಪಟ್ಟರು.
ವಿಪ್ರರ್ಷಭಾಶ್ಚ ತೇ ಸರ್ವೇ ಯೇ ತತ್ರಾಸನ್ ಸಮಾಗತಾಃ |
ತಥಾ ಕಥಾಂ ಶುಭಾಂ ಶ್ರುತ್ವಾ ಮಾರ್ಕಂಡೇಯಸ್ಯ ಧೀಮತಃ |
ವಿಸ್ಮಿತಾಃ ಸಮಪದ್ಯಂತ ಪುರಾಣಸ್ಯ ನಿವೇದನಾತ್ ||33||
ಮೇಧಾವಿಗಳಾದ ಮಾರ್ಕಂಡೇಯರ ಶುಭವಚನಗಳನ್ನು ಕೇಳಿ ಅಲ್ಲಿಗೆ ಪ್ರಾಪ್ತರಾದ ವಿಪ್ರಶ್ರೇಷ್ಠರೂ ಸಹ ಪುರಾಣದ ಜ್ಞಾನದಿಂದ ವಿಸ್ಮಿತರಾದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಡಶೀತ್ಯಧಿಕಶತತಮೋಽಧ್ಯಾಯಃ ||
|| ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಯುಧಿಷ್ಠಿರಾನುಶಾಸನೇ ಏಕಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತಾರನೆಯ ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತೇಳನೆಯ ಅಧ್ಯಾಯ
ಮಾರ್ಕಂಡೇಯರಿಂದ ಮಂಡೂಕೋಪಾಖ್ಯಾನ ಕಥನ.

ವೈಶಂಪಾಯನಃ
ಭೂಯ ಏವ ಬ್ರಾಹ್ಮಣಮಾಹಾತ್ಮ್ಯಂ ವಕ್ತುಮರ್ಹಸೀತ್ಯಬ್ರುವೀತ್ ಪಾಂಡವೇಯೋ ಮಾರ್ಕಂಡೇಯಮ್ ॥1॥
ವೈಶಂಪಾಯನ ಪಾಂಡುಪುತ್ರನಾದ ಧರ್ಮರಾಜನು ಮಾರ್ಕಂಡೇಯರನ್ನು ಕುರಿತು ಪುನಃ ಬ್ರಾಹ್ಮಣ ಮಹಾತ್ಮ್ಯವನ್ನು ತಾವು ಹೇಳಬೇಕು ಎಂದು ಕೇಳಿದನು.
ಅಥಾಚಷ್ಟ ಮಾರ್ಕಂಡೇಯೋಽಪೂರ್ವಮಿದಂ
ಶ್ರೂಯತಾಂ ಬ್ರಾಹ್ಮಣಾನಾಂ ಚರಿತಮ್ ॥2॥
ಆಗ ಮಾರ್ಕಂಡೇಯರು ಅಪೂರ್ವವಾದ ಈ ಬ್ರಾಹ್ಮಣ ಚರಿತ್ರೆಯನ್ನು ಕೇಳು ಎಂದು ಹೇಳಿದರು.
ಮಾರ್ಕಂಡೇಯಃ
ಅಯೋಧ್ಯಾಯಾಮಿಕ್ಷ್ವಾಕುಕುಲೋದ್ವಹಃ ಪಾರ್ಥಿವಃ
ಪರೀಕ್ಷಿನ್ನಾಮ ಮೃಗಯಾಮಗಮತ್ ॥3॥
ಮಾರ್ಕಂಡೇಯರು ಅಯೋಧ್ಯೆಯಲ್ಲಿ ಇಕ್ಷ್ವಾಕು ವಂಶದಲ್ಲಿ ಜನಿಸಿದ ಪರೀಕ್ಷಿತ ಎಂಬ ರಾಜನು ಬೇಟೆಗೆ ಹೋದನು.
ತಮೇಕಾಶ್ವೇನ ಮೃಗಮನುಸರಂತಂ ಮೃಗೋ ದೂರಮಪಾಹರತ್ ॥4॥
ಒಂದು ಅಶ್ವದ ಮೇಲೆ ಮೃಗವನ್ನು ಅನುಸರಿಸಿ ಹೋದ ಅವನನ್ನು ಮೃಗವು ದೂರಕ್ಕೆ ಕೊಂಡೊಯ್ದಿತು.
ಅಧ್ವನಿ ಜಾತಶ್ರಮಃ ಕ್ಷುತ್ತೃಷ್ಣಾಭಿಭೂತಶ್ಚೈಕಸ್ಮಿನ್
ದೇಶೇ ನೀಲಂ ಗಹನಂ ವನಖಂಡಮಪಶ್ಯತ್ ॥5॥
ಮಾರ್ಗದಲ್ಲಿ ಬಳಲಿದವನಾಗಿ ಹಸಿವು ನೀರಡಿಕೆಗಳಿಂದ ಪರಾಭೂತನಾಗಿ ಅವನು ಒಂದು ಪ್ರದೇಶದಲ್ಲಿ ದಟ್ಟವಾದ, ನೀಲವಾದ ಒಂದು ವನಪ್ರದೇಶವನ್ನು ನೋಡಿದನು.
ತಚ್ಚ ವಿವೇಶ ತತಸ್ತಸ್ಯ ವನಖಂಡಸ್ಯ ಮಧ್ಯೇಽತೀವ
ರಮಣೀಯಂ ಸರೋ ದೃಷ್ಟ್ವಾ ಸಾಶ್ವ ಏವ ವ್ಯಗಾಹತ ॥6॥
ಅದನ್ನು ಪ್ರವೇಶಿಸಿದನು. ಅನಂತರ ಅಲ್ಲಿ ಆ ವನಖಂಡದ ಮಧ್ಯದಲ್ಲಿ ಇದ್ದ ರಮಣೀಯವಾದ ಸರೋವರವನ್ನು ನೋಡಿ ಅಶ್ವದ ಜೊತೆಯಲ್ಲಿ ಅಲ್ಲಿ ಸ್ನಾನವನ್ನು ಮಾಡಿದನು.
ಅಥಾಶ್ವಸ್ತಃ ಸ ಬಿಸಮೃಣಾಲಮಶ್ವಾಯಾಗ್ರತೋ
ನಿಕ್ಷಿಪ್ಯ ಪುಷ್ಕರಿಣೀತೀರೇ ಸಂವಿವೇಶ |
ತತಃ ಶಯಾನೋ ಮಧುರಂ ಗೀತಮಶೃಣೋತ್ ॥7॥
ಸ್ವಲ್ಪ ಸಮಾಧಾನವನ್ನು ಪಡೆದ ಅವನು ಕಮಲದ ದಂಟುಗಳನ್ನು ಅಶ್ವದ ಮುಂದೆ ಹಾಕಿ, ಸರೋವರದ ತೀರದಲ್ಲಿ ಮಲಗಿದನು. ಅಲ್ಲಿ ಮಲಗಿ ಅವನು ಮಧುರವಾದ ಗಾನವನ್ನು ಕೇಳಿದನು.
ಸ ಶ್ರುತ್ವಾಽಚಿಂತಯನ್ನೇಹ ಮನುಷ್ಯಗತಿಂ
ಪಶ್ಯಾಮಿ ಕಸ್ಯ ಖಲ್ವಯಂ ಗೀತಶಬ್ದ ಇತಿ ॥8॥
ಅಥಾಪಶ್ಯತ್ ಕನ್ಯಾಂ ಪರಮರೂಪದರ್ಶನೀಯಾಂ
ಪುಷ್ಪಾಣ್ಯವಚಿನ್ವಂತೀಂ ಗಾಯಂತೀಂ ಚ |
ಅಥ ಸಾ ರಾಜ್ಞಃ ಸಮೀಪೇ ಪರ್ಯಕ್ರಾಮತ್ ॥9॥
ಅವನು ಅದನ್ನು ಕೇಳಿ ಇಲ್ಲಿ ಮನುಷ್ಯರ ಗಮನವೇ ಇಲ್ಲ ಎಂದು ಕಾಣುತ್ತಿದೆ. ಈ ಗೀತಶಬ್ದವು ಯಾರದ್ದಾಗಿರಬಹುದು? ಎಂದು ಯೋಚಿಸಿದನು. ಅನಂತರ ಅವನು ಪರಮಸುಂದರಿಯಾದ ಒಬ್ಬ ಕನ್ಯೆಯು ಹೂವುಗಳನ್ನು ಬಿಡಿಸುತ್ತಾ ಹಾಡುತ್ತಿರುವುದನ್ನು ನೋಡಿದನು. ಆಗ ಅವಳು ರಾಜನ ಸಮೀಪಕ್ಕೆ ಬಂದಳು.
ತಾಮಬ್ರುವೀತ್ ಸರಾಜಾ ಕಸ್ಯಾಸಿ ಭದ್ರೇ ಕಾ ವಾ ತ್ವಮಿತಿ ॥10॥
ರಾಜನು ಅವಳನ್ನು ಕುರಿತು ಮಂಗಳಸ್ವರೂಪಳೇ, ನೀನು ಯಾರು ಮತ್ತು ಯಾರಿಗೆ ಸೇರಿದವಳು ಎಂದು ಕೇಳಿದನು.
ಸಾ ಪ್ರತ್ಯುವಾಚ ಕನ್ಯಾಽಸ್ಮೀತಿ ॥11॥
ಅವಳು ನಾನು ಕನ್ಯೆ ಎಂದು ಉತ್ತರವನ್ನು ಕೊಟ್ಟಳು.
ತಾಂ ರಾಜೋವಾಚಾರ್ಥೀ ತ್ವಯಾಽಹಮಿತಿ ॥12॥
ಆಗ ರಾಜನು ನಾನು ನಿನ್ನ ಉದ್ದೇಶದಿಂದ ಕನ್ಯಾರ್ಥಿಯಾಗಿದ್ದೇನೆ ಎಂದು ಹೇಳಿದನು.
ಅಥೋವಾಚ ಕನ್ಯಾ ಸಮಯೇನಾಹಂ ಶಕ್ಯಾ
ತ್ವಯಾ ಲಬ್ಧುಂ ನಾನ್ಯಥೇತಿ ॥13॥
ಆಗ ಕನ್ಯೆಯು ಒಂದು ಷರತ್ತಿನ ಮೇಲೆ ನೀನು ನನ್ನನ್ನು ಪಡೆಯಲು ಸಾಧ್ಯ. ಇಲ್ಲದಿದ್ದರೆ ಇಲ್ಲ ಎಂದು ಹೇಳಿದಳು.
ರಾಜಾ ತಾಂ ಸಮಯಮಪೃಚ್ಛತ್ | ಕಃ ಸಮಯ ಇತಿ ॥14॥
ರಾಜನು ಏನು ಷರತ್ತು ಎಂದು ಅವಳನ್ನು ಷರತ್ತಿನ ವಿಷಯದಲ್ಲಿ ಪ್ರಶ್ನಿಸಿದನು.
ಕನ್ಯೋವಾಚ ನೋದಕಂ ಮೇ ದರ್ಶಯಿತವ್ಯಮಿತಿ ॥15॥
ಕನ್ಯೆಯು ನನಗೆ ನೀರನ್ನು ತೋರಿಸಬಾರದು ಎಂದು ಹೇಳಿದಳು.
ಸ ರಾಜಾ ತಾಂ ಬಾಢಮಿತ್ಯುಕತ್ವ ತಾಮುಪಯೇಮೇ
ಕೃತೋದ್ವಾಹಶ್ಚ ರಾಜಾ ಪರೀಕ್ಷಿತ್ ಕ್ರೀಡಮಾನೋ ಮುದಾ
ಪರಮಯಾ ಯುಕ್ತಸ್ತೂಷ್ಣೀಂ ಸಂಗಮ್ಯ ತಯಾ ಸಹಾಸ್ತೇ ॥16॥

ಆ ರಾಜನು ಹಾಗೆಯೇ ಆಗಲಿ ಎಂದು ಹೇಳಿ ಅವಳನ್ನು ವಿವಾಹವಾದನು. ವಿವಾಹಿತನಾದ ಪರೀಕ್ಷಿತ್ ರಾಜನು ಅವಳ ಜೊತೆಯಲ್ಲಿ ವಿಹರಿಸುತ್ತಾ ಪರಮ ಸಂತೋಷದಿಂದ ಕೂಡಿದವನಾಗಿ ಅವಳ ಜೊತೆಯಲ್ಲಿ ಸುಮ್ಮನೆ ಕಾಲವನ್ನು ಕಳೆದನು.
ತತಸ್ತತ್ರೈವಾಸೀನೇ ರಾಜನಿ ಸೇನಾಽನ್ವಗಚ್ಛತ್ |
ಸಾ ಸೇನೋಪವಿಷ್ಟಂ ರಾಜಾನಂ ಪರಿವಾರ್ಯಾತಿಷ್ಠತ್ ॥17॥
ರಾಜನು ಅಲ್ಲಿಯೇ ಇರುತ್ತಿರಲು ಸೇನೆಯು ಅವನನ್ನು ಹಿಂಬಾಲಿಸಿತು. ಆ ಸೇನೆಯು ಕುಳಿತಿದ್ದ ರಾಜನನ್ನು ಸುತ್ತುವರಿದು ನಿಂತಿತು.
ಪರ್ಯಾಶ್ವಸ್ತಶ್ಚ ರಾಜಾ ತಯೈವ ಸಹ ಶಿಬಿಕಯಾ ಪ್ರಾಯಾದವಘೋಟಿತಯಾ ಸ ಸ್ವಂ ನಗರಮನುಪ್ರಾಪ್ಯ
ರಹಸಿ ತಯಾ ಸಹಾಸ್ತೇ ॥18॥
ಸುಧಾರಿಸಿಕೊಂಡಿದ್ದ ರಾಜನು ಸೈನ್ಯವು ತಂದ ಪರದೆ ಇದ್ದ ಶಿಬಿಕೆಯಲ್ಲಿ ಅವಳ ಜೊತೆಯಲ್ಲಿ ನಗರವನ್ನು ತಲುಪಿ ಏಕಾಂತದಲ್ಲಿ ಅವಳ ಜೊತೆಯಲ್ಲಿ ಇರುತ್ತಿದ್ದನು.
ತತ್ರಾಭ್ಯಾಶಸ್ಥೋಽಪಿ ಕಶ್ಚಿನ್ನಾಪಶ್ಯದಥ ಪ್ರಧಾನಾಮಾತ್ಯೋಽಭ್ಯಾಶಚರಾಸ್ತಸ್ಯ ಸ್ತ್ರಿಯೋಽಪೃಚ್ಛತ್ |
ಕಿಮತ್ರ ಪ್ರಯೋಜನಂ ವರ್ತತೇ ಇತ್ಯಥಾಬ್ರುವಂಸ್ತಾಃ ಸ್ತ್ರಿಯಃ ॥19॥
ಅಪೂರ್ವಮಿವ ಪಶ್ಯಾಮ ಉದಕಂ ನಾತ್ರ ನೀಯತ ॥20॥
ಇತ್ಯಥಾಮಾತ್ಯೋಽನುದಕಂ ವನಂ ಕಾರಯಿತ್ವೋದಾರವೃಕ್ಷಂ ಬಹುಪುಷ್ಪಫಲಮೂಲಂ ತಸ್ಯ ಮಧ್ಯೇ ಮುಕ್ತಾಜಾಲಮಯೀಂ ಪಾರ್ಶ್ವೇ ವಾಪೀಂ ಗೂಢಾಂ ಸುಧಾಸಲಿಲಲಿಪ್ತಾಂ ಸ
ರಹಸ್ಯುಪಗಮ್ಯ ರಾಜಾನಮಬ್ರವೀತ್ ॥
ವನಮಿದಮುದಾರಮನುದಕಂ ಸಾಧ್ವತ್ರ ರಮ್ಯತಾಮಿತಿ ॥21॥
ಅಲ್ಲಿ ಸಮೀಪದಲ್ಲಿದ್ದವರೂ ಸಹ ಯಾರೂ ಅವನನ್ನು ನೋಡಲು ಆಗುತ್ತಿರಲಿಲ್ಲ. ಆಗ ಪ್ರಧಾನಾಮಾತ್ಯನು ರಾಜನ ಸಮೀಪದಲ್ಲಿ ಇರುವ ಸ್ತ್ರೀಯರನ್ನು ಕುರಿತು ಇದರಲ್ಲಿ ಏನು ಪ್ರಯೋಜನವಿದೆ ಎಂದು ಕೇಳಿದನು. ಆಗ ಆ ಸ್ತ್ರೀಯರು ಹೀಗೆ ಹೇಳಿದರು. ಇದು ಅಪೂರ್ವವಾಗಿ ನೋಡುತ್ತಿದ್ದೇವೆ. ಇಲ್ಲಿ ನೀರನ್ನು ತೆಗೆದುಕೊಂಡು ಹೋಗುವುದಿಲ್ಲ ಎಂದು ಹೇಳಿದರು. ಆಗ ಅಮಾತ್ಯನು ಉದಕವಿಲ್ಲದ, ಬಹು ಪುಷ್ಪಫಲಮೂಲಗಳನ್ನುಳ್ಳ, ಅನೇಕ ವೃಕ್ಷಗಳುಳ್ಳ ವನವನ್ನು ಮಾಡಿಸಿ ಅದರ ಮಧ್ಯದಲ್ಲಿ ಮುಕ್ತಾಜಾಲಗಳಿಂದ ಒಂದು ಗೃಹವನ್ನು ನಿರ್ಮಿಸಿ, ಅದರ ಪಕ್ಕದಲ್ಲಿ ಒಂದು ಸುಣ್ಣದಿಂದ ಬಳಿದ ಗೂಢವಾದ ಮುತ್ತಿನ ಸಮೂಹದಂತೆ ತೋರುವ ಒಂದು ಬಾವಿಯನ್ನು ನಿರ್ಮಿಸಿ, ಏಕಾಂತದಲ್ಲಿ ರಾಜನನ್ನು ಸಮೀಪಿಸಿ ಈ ಶ್ರೇಷ್ಠವಾದ ವನವು ಜಲರಹಿತವಾಗಿದೆ. ಇಲ್ಲಿ ನೀನು ಚೆನ್ನಾಗಿ ವಿಹರಿಸಬಹುದು ಎಂದು ಹೇಳಿದನು.
ಸ ತಸ್ಯ ವಚನಾತ್ ತಯೈವ ಸಹ ದೇವ್ಯಾ ತದ್ವನಂ ಪ್ರಾವಿಶತ್ ॥22॥
ರಾಜನು ಅವನ ಮಾತಿನಂತೆ ಆ ದೇವಿಯ ಜೊತೆಯಲ್ಲಿಯೇ ಆ ವನವನ್ನು ಪ್ರವೇಶಿಸಿದನು.
ಸ ಕದಾಚಿತ್ ತಸ್ಮಿನ್ಕಾನನೇ ರಮ್ಯೇ ತಯೈವ ಸಹ ವ್ಯಾಹರದಥ ಕ್ಷುತ್ತೃಷ್ಣಾರ್ದಿತಃ ಶ್ರಾಂತೋಽತಿಮುಕ್ತಕಾಗಾರಮಪಶ್ಯತ್ ॥23॥
ಅವನು ಒಮ್ಮೆ ಆ ರಮ್ಯವಾದ ಕಾನನದಲ್ಲಿ ಅವಳ ಜೊತೆಯಲ್ಲೇ ವ್ಯವಹರಿಸುತ್ತಿದ್ದನು. ಒಮ್ಮೆ ಹಸಿವು ನೀರಡಿಕೆಗಳಿಂದ ಬಳಲಿ ಮುತ್ತಿಗಿಂತ ಶುಭ್ರವಾದ ಆ ಮನೆಯನ್ನು ನೋಡಿದನು.
ತತ್ಪ್ರವಿಶ್ಯ ರಾಜಾ ಸಹ ಪ್ರಿಯಯಾ ಸುಧಾಕೃತಾಂ
ವಿಮಲಾಂ ಸಲಿಲಪೂರ್ಣಾಂ ವಾಪೀಮಪಶ್ಯತ್ ॥24॥
ರಾಜನು ಅದನ್ನು ತನ್ನ ಪ್ರಿಯೆಯ ಜೊತೆಯಲ್ಲಿ ಪ್ರವೇಶಿಸಿ, ಸ್ವಚ್ಛವಾದ ಸುಣ್ಣದಿಂದ ಬಳಿದಿದ್ದ ನೀರಿನಿಂದ ತುಂಬಿದ ಬಾವಿಯನ್ನು ನೋಡಿದನು.
ದೃಷ್ಟ್ವೈವ ಚ ತಾಂ ತಸ್ಯಾಶ್ಚ ತೀರೇ ಸಹೈವ
ತಯಾ ದೇವ್ಯಾವಾತಿಷ್ಠತ್ ॥25॥
ಆ ಬಾವಿಯನ್ನು ನೋಡಿದ ಕೂಡಲೇ ಅದರ ತೀರದಲ್ಲಿ ಆ ದೇವಿಯ ಜೊತೆಯಲ್ಲಿಯೇ ನಿಂತನು.
ಅಥ ತಾಂ ದೇವೀಂ ಸ ರಾಜಾಽಬ್ರವೀತ್
ಸಾಧ್ವವತರ ವಾಪೀಸಲಿಲಮಿತಿ ॥26॥
ಅನಂತರ ಆ ರಾಜನು ಆ ದೇವಿಯನ್ನು ಕುರಿತು ಬಾವಿಯ ನೀರಿನಲ್ಲಿ ಜಾಗರೂಕವಾಗಿ ಇಳಿ ಎಂದು ಹೇಳಿದನು.
ಸಾ ತದ್ವಚಃ ಶ್ರುತ್ವಾಽವತೀರ್ಯ ವಾಪೀಂ
ನ್ಯಮಜ್ಜನ್ನ ಪುನರುದಮಜ್ಜತ್ ॥27॥
ಅವಳು ಅವನ ಮಾತನ್ನು ಕೇಳಿ ಬಾವಿಯಲ್ಲಿ ಇಳಿದು ಮುಳುಗಿದಳು. ಪುನಃ ಮೇಲೆ ಬರಲಿಲ್ಲ.
ತಾಂ ಸ ಮೃಗಯಮಾಣೋ ರಾಜಾ ನಾಪಶ್ಯತ್
ವಾಪೀಮಪಿ ನಿಃಸ್ರಾವ್ಯ ಮಂಡೂಕಂ ಶ್ವಭ್ರಮುಖೇ
ದೃಷ್ಟ್ವಾ ಕ್ರುದ್ಧ ಆಜ್ಞಾಪಯಾಮಾಸ ಸ ರಾಜಾ |
ಸರ್ವತ್ರ ಮಂಡೂಕವಧಃ ಕ್ರಿಯತಾಮಿತಿ ಯೋ ಮಯಾರ್ಥೀ
ಸ ಮಾಂ ಮೃತಮಂಡೂಕೋಪಾಯನಮಾದಾಯೋಪತಿಷ್ಠೇದಿತಿ ॥28॥
ರಾಜನು ಅವಳನ್ನು ಹುಡುಕಿದರೂ ಅವಳು ಕಾಣಲಿಲ್ಲ. ಅವನು ಬಾವಿಯ ನೀರನ್ನೆಲ್ಲಾ ತೆಗೆದು ಆ ಗುಂಡಿನ ಮೇಲಿನ ಪ್ರದೇಶದಲ್ಲಿ ಒಂದು ಮಂಡೂಕವನ್ನು ನೋಡಿ ಕೋಪದಿಂದ ಎಲ್ಲ ಕಡೆಯಲ್ಲಿಯೂ ಮಂಡೂಕಗಳನ್ನು ವಧೆ ಮಾಡಿರಿ. ಯಾರು ನನ್ನನ್ನು ನೋಡಲು ಬಯಸುವರೋ ಅವರು ಮೃತಮಂಡೂಕವನ್ನು ಕಾಣಿಕೆಯಾಗಿ ತೆಗೆದುಕೊಂಡು ನನ್ನ ಬಳಿಗೆ ಬರಬೇಕು ಎಂದು

ಆಜ್ಞೆಯನ್ನು ಮಾಡಿದನು.
ಅಥ ಮಂಡೂಕವಧೇ ಘೋರೇ ಕ್ರಿಯಮಾಣೇ
ದಿಕ್ಷು ಸರ್ವಾಸು ಮಂಡೂಕಾನ್ ಭಯಮಾವಿವೇಶ ॥
ತೇ ಭೀತಾ ಮಂಡೂಕರಾಜ್ಞೋ ಯಥಾವೃತ್ತಂ ನ್ಯವೇದಯನ್ ॥29॥
ಆಗ ಘೋರವಾದ ಮಂಡೂಕವಧೆಯು ಎಲ್ಲ ದಿಕ್ಕುಗಳಲ್ಲಿಯೂ ಮಾಡಲ್ಪಡುತ್ತಿರಲು ಮಂಡೂಕಗಳಿಗೆ ಭಯವುಂಟಾಯಿತು. ಅವು ಭೀತಗಳಾಗಿ ಮಂಡೂಕರಾಜನಿಗೆ ಎಲ್ಲ ಘಟನೆಯನ್ನೂ ನಿವೇದಿಸಿದವು.
ತತೋ ಮಂಡೂಕರಾಟ್ ತಾಪಸವೇಷಧಾರೀ ರಾಜಾನಮಭ್ಯಗಚ್ಛದುಪೇತ್ಯ ಚೈನಮುವಾಚ ॥30॥
ಆಗ ಮಂಡೂಕರಾಜನು ತಾಪಸವೇಷವನ್ನು ಧರಿಸಿ ರಾಜನ ಬಳಿಗೆ ಬಂದು ಅವನನ್ನು ಕುರಿತು ಹೀಗೆ ಮಾತನಾಡಿದನು.
ಮಾ ರಾಜನ್ ಕ್ರೋಧವಶಂ ಗಮಃ ಪ್ರಸಾದಂ ಕುರು |
ನಾರ್ಹಸಿ ಮಂಡೂಕಾನಾಮನಪರಾಧಿನಾಂ ವಧಂ ಕರ್ತುಮಿತಿ ॥31॥
ರಾಜನೇ, ಕ್ರೋಧಕ್ಕೆ ವಶನಾಗಬೇಡ. ಅನುಗ್ರಹವನ್ನು ಮಾಡು. ನಿರಪರಾಧಿಗಳಾದ ಮಂಡೂಕಗಳ ವಧೆಯನ್ನು ಮಾಡುವುದು ಉಚಿತವಲ್ಲ ಎಂದು ಹೇಳಿದನು.
ಈ ವಿಷಯದಲ್ಲಿ ಈ ಶ್ಲೋಕಗಳಿವೆ
ಮಾ ಮಂಡೂಕಾನ್ ಜಿಘಾಂಸ ತ್ವಂ ಕೋಪಂ ಸಂಧಾರಯಾಚ್ಯುತ |
ಪ್ರಕ್ಷೀಯಂತೇ ವಧಾದ್ಯೇಕಾ ಜನಾನಾಮವಿಜಾನತಾಮ್ ॥32॥
ಎಲೈ ಅಚ್ಯುತರಾಜನೇ, ನೀನು ಮಂಡೂಕವನ್ನು ಕೊಲ್ಲಬೇಡ. ಕೋಪವನ್ನು ತಡೆದುಕೋ. ಜನಗಳಿಗೆ ತಿಳಿಯದಂತೆಯೇ ಮಂಡೂಕಗಳು ವಧೆಯಿಂದ ಕ್ಷಯವನ್ನು ಹೊಂದುತ್ತಿವೆ.
ಪ್ರತಿಜಾನೀಹಿ ನೈತಾಂಸ್ತ್ವಂ ಪ್ರಾಪ್ಯ ಕ್ರೋಧಂ ವಿಮೋಕ್ಷ್ಯಸಿ |
ಅಲಂ ಕೃತ್ವಾ ತವಾಧರ್ಮಂ ಮಂಡೂಕೈಃ ಕಿಂ ಹತೈರ್ಹಿ ತೇ ॥33॥
ಮಂಡೂಕಗಳನ್ನು ಕೊಲ್ಲುವೆನೆಂದು ಪ್ರತಿಜ್ಞೆಯನ್ನು ಮಾಡಬೇಡ. ನಿನ್ನ ಪ್ರಿಯೆಯನ್ನು ಹೊಂದಿ ಕ್ರೋಧವನ್ನು ಬಿಡುವವನಾಗು. ಅಧರ್ಮವನ್ನು ಮಾಡಿದುದು ಸಾಕು. ಮಂಡೂಕಗಳನ್ನು ಕೊಲ್ಲುವುದರಿಂದ ನಿನಗೆ ಏನು ಪ್ರಯೋಜನ?
ತಮೇವಂವಾದಿನಮಿಷ್ಟಜನಶೋಕಪರೀತಾತ್ಮಾ ರಾಜಾಥೋವಾಚ |
ನ ಹಿ ಕ್ಷಮ್ಯತೇ ತನ್ಮಯಾ ಹನಿಷ್ಯಾಮ್ಯೇತಾನೇತೈರ್ದುರಾತ್ಮಭಿಃ
ಪ್ರಿಯಾ ಮೇ ಭಕ್ಷಿತಾ ಸರ್ವಥೈವ ಮೇ ವಧ್ಯಾ ಮಂಡೂಕಾ
ನಾರ್ಹಸಿ ವಿದ್ವನ್ ಮಾಮುಪರೋದ್ಧುಮಿತಿ ॥34॥
ಸ ತದ್ವಾಕ್ಯಮುಪಲಭ್ಯ ವ್ಯಥಿತೇಂದ್ರಿಯಮನಾಃ ಪ್ರೋವಾಚ
ಪ್ರಸೀದ ರಾಜನ್ನಹಮಾಯುರ್ನಾಮ ಮಂಡೂಕರಾಜೋ
ಮಮ ಸಾ ದುಹಿತಾ ಸುಶೋಭನಾ ನಾಮ ॥
ತಸ್ಯಾ ಹಿ ದೌಃಶೀಲ್ಯಮೇತದ್ವದ್‌ಬಹವಸ್ತಯಾ
ರಾಜಾನೋ ವಿಪ್ರಲಬ್ಧಃ ಪೂರ್ವಾ ಇತಿ ॥35॥
ಹೀಗೆ ಮಾತನಾಡಿದ ಆ ಮಂಡೂಕರಾಜನನ್ನು ಕುರಿತು ಪ್ರಿಯಜನ ಶೋಕದಿಂದ ತುಂಬಿದ ಮನಸ್ಸುಳ್ಳ ರಾಜನು ನಾನು ಆ ಅಪರಾಧವನ್ನು ಕ್ಷಮಿಸುವುದಿಲ್ಲ. ನಾನು ಇವುಗಳನ್ನು ಕೊಂದೇ ಕೊಲ್ಲುವೆನು. ಈ ದುರಾತ್ಮಗಳು ನನ್ನ ಪ್ರಿಯೆಯನ್ನು ತಿಂದಿವೆ. ಆದ್ದರಿಂದ ಅವುಗಳನ್ನು ನಾನು ಸರ್ವಪ್ರಕಾರದಿಂದ ಕೊಲ್ಲುವೆನು. ಎಲೈ ವಿದ್ವಾಂಸನೇ, ನನಗೆ ನೀನು ಹೀಗೆ ಒತ್ತಾಯವನ್ನು ಮಾಡಬಾರದು ಎಂದು ಹೇಳಿದನು. ಆ ಮಾತುಗಳನ್ನು ಕೇಳಿದ ಮಂಡೂಕರಾಜನು ಮನಸ್ಸಿನಲ್ಲಿಯೂ ಮತ್ತು ಇಂದ್ರಿಯಗಳಲ್ಲಿಯೂ ವ್ಯಥೆಯನ್ನು ಹೊಂದಿದವನಾಗಿ, ರಾಜನೇ, ಪ್ರಸನ್ನನಾಗು. ನಾನು ಆಯು ಎಂಬ ಮಂಡೂಕರಾಜ. ನಿನ್ನ ಪ್ರಿಯೆಯು ಸುಶೋಭನಾ ಎಂಬ ಹೆಸರುಳ್ಳ ನನ್ನ ಮಗಳು. ಅವಳಿಗೆ ಇದೊಂದು ದುಷ್ಟಸ್ವಭಾವ. ಅವಳು ಹಿಂದೆ ಅನೇಕ ರಾಜರನ್ನು ವಂಚಿಸಿದ್ದಾಳೆ ಎಂದು ಹೇಳಿದನು.
ತಮಬ್ರವೀದ್ ರಾಜಾ ತಯಾ ಸಹಾಽಹಮರ್ಥೀ
ಸಾ ಮೇ ದೀಯತಾಮಿತಿ ॥36॥
ಆಗ ರಾಜನು ಅವನನ್ನು ಕುರಿತು ನಾನು ಅವಳಿಂದ ಅರ್ಥಿಯಾಗಿದ್ದೇನೆ. ಅವಳನ್ನು ನನಗೆ ಕೊಡು ಎಂದು ಹೇಳಿದನು.
ಅಥೈನಾಂ ರಾಜ್ಞೇ ಪಿತಾದಾದಬ್ರವೀಚ್ಚೈನಾಮೇನಂ
ರಾಜಾನಂ ಶುಶ್ರೂಷಸ್ವೇತಿ ॥37॥
ಆಗ ಆ ತಂದೆಯಾದ ಮಂಡೂಕರಾಜನು ರಾಜನಿಗೆ ಅವಳನ್ನು ಕೊಟ್ಟು ಅವಳನ್ನು ಕುರಿತು ಈ ರಾಜನ ಸೇವೆಯನ್ನು ಮಾಡು ಎಂದು ಹೇಳಿದನು.
ಸ ಏವಮುಕ್ತತ್ವ ದುಹಿತರಂ ಕ್ರುದ್ಧಃ ಶಶಾಪ ಯಸ್ಮಾತ್
ತ್ವಯಾ ರಾಜಾನೋ ವಿಪ್ರಲಬ್ಧಾ ಬಹವಸ್ತಸ್ಮಾದಬ್ರಹ್ಮಣ್ಯಾನಿ
ತವಾಪತ್ಯಾನಿ ಭವಿಷ್ಯಂತ್ಯಾನೃತಿಕತ್ವಾತ್ ತವೇತಿ ॥38॥
ರಾಜನನ್ನು ಕುರಿತು ಹೀಗೆ ಹೇಳಿ ಅವನು ಕೋಪದಿಂದ ತನ್ನ ಮಗಳನ್ನು ಕುರಿತು ನೀನು ಅನೇಕ ಜನ ರಾಜರನ್ನು ವಂಚಿಸಿರುವುದರಿಂದ ಮತ್ತು ನೀನು ಅನೃತ ಭಾಷಿಣಿಯಾಗಿರುವುದರಿಂದ ನಿನ್ನ ಮಕ್ಕಳು ಅಬ್ರಹ್ಮಣ್ಯರಾಗುವರು ಎಂದು ಶಾಪವನ್ನು ನೀಡಿದನು.

ಸ ಚ ರಾಜಾ ತಾಮುಪಲಭ್ಯ ತಸ್ಯಾಂ ಸುರತಗುಣನಿಬದ್ಧಹೃದಯೋ ಲೋಕತ್ರಯೈಶ್ವರ್ಯ-ಮಿವೋಪಲಭ್ಯ ಹರ್ಷೇಣ ಬಾಷ್ಪಕಲಯಾ ವಾಚಾ ಪ್ರಣಿಪತ್ಯಾಭಿಪೂಜ್ಯ ಮಂಡೂಕರಾಜಮಬ್ರವೀದನುಗೃಹೀತೋಽಸ್ಮೀತಿ ॥39॥

ಆ ರಾಜನಾದರೂ ತ್ರೈಲೋಕ್ಯದ ಐಶ್ವರ್ಯವನ್ನು ಪಡೆದವನಂತೆ ಅವಳನ್ನು ಪಡೆದು, ಅವಳ ಸುರತದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ನೀರು ತುಂಬಿದ ಕಣ್ಣುಗಳಿಂದ ಕೂಡಿ ಮಾತಿನಿಂದಲೇ ಮಂಡೂಕರಾಜನಿಗೆ ನಮಸ್ಕರಿಸಿ ಪೂಜೆಯನ್ನು ಮಾಡಿ, ನಾನು ನಿನ್ನಿಂದ ಅನುಗ್ರಹೀತನಾಗಿದ್ದೇನೆ ಎಂದು ಹೇಳಿದನು.

ಸ ಚ ಮಂಡೂಕರಾಜೋ ದುಹಿತರಮನುಜ್ಞಾಪ್ಯ
ಯಥಾಗತಮಗಚ್ಛತ್ ॥40॥

ಆ ಮಂಡೂಕರಾಜನು ಮಗಳ ಅನುಮತಿಯನ್ನು ಪಡೆದು ತಾನು ಬಂದ ದಾರಿಯಲ್ಲಿಯೇ ಹಿಂದಿರುಗಿದನು.

ಅಥ ಕಸ್ಯಚಿತ್ ಕಾಲಸ್ಯ ತಸ್ಯಾಂ ಕುಮಾರಾಸ್ತ್ರಯಸ್ತಸ್ಯ
ರಾಜ್ಞಃ ಸಂಬಭೂವುಃ ಶಲೋ ದಲೋ ಬಲಶ್ಚೇತಿ ॥41॥

ಸ್ವಲ್ಪ ಕಾಲವು ಕಳೆದ ಮೇಲೆ ರಾಜನಿಗೆ ಅವಳಲ್ಲಿ ಶಲ, ದಲ ಮತ್ತು ಬಲ ಎಂಬ ಮೂರು ಮಕ್ಕಳು ಜನಿಸಿದರು.

ತತಸ್ತೇಷಾಂ ಜ್ಯೇಷ್ಠಂ ಶಲಂ ಸಮಯೇ ಪಿತಾ
ರಾಜ್ಯೇಽಭಿಷಿಚ್ಯ ತಪಸಿ ಧೃತಾತ್ಮಾ ವನಂ ಜಗಾಮ ॥42॥

ಅನಂತರ ಯೋಗ್ಯವಾದ ಸಮಯದಲ್ಲಿ ಆ ರಾಜನು ತನ್ನ ಜ್ಯೇಷ್ಠ ಪುತ್ರನಾದ ಶಲನಿಗೆ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿ ತಪಸ್ಸನ್ನು ಮಾಡುವುದಾಗಿ ನಿಶ್ಚಯಿಸಿ ಕಾಡಿಗೆ ಹೋದನು.

ಅಥ ಕದಾಚಿಚ್ಛಲೋ ಮೃಗಯಾಮನುಚರನ್
ಮೃಗಮಾಸಾದ್ಯ ರಥೇನಾನ್ವಧಾವತ್ ಸೂತಂ ಚೋವಾಚ |
ಶೀಘ್ರಂ ಮಾಂ ವಾಹಯಸ್ವೇತಿ |
ಸ ತಥೋಕ್ತಃ ಸೂತೋ ರಾಜಾನಮಬ್ರವೀತ್ ॥43॥

ಅನಂತರ ಒಮ್ಮೆ ಶಲನು ಬೇಟೆಯಾಡುತ್ತಾ ಒಂದು ಮೃಗವನ್ನು ಕಂಡು ರಥದಿಂದ ಅದನ್ನು ಹಿಂಬಾಲಿಸಿದನು. ತನ್ನ ಸೂತನನ್ನು ಕುರಿತು ನನ್ನ ರಥವನ್ನು ಬೇಗ ನಡೆಸು ಎಂದು ಹೇಳಿದನು.

ಮಾ ಕ್ರಿಯತಾಮನುಬಂಧೋ ನೈಷ ಶಕ್ಯಸ್ತ್ವಯಾ ಮೃಗೋಽಯಂ ಗೃಹೀತುಂ ಯದ್ಯಪಿ ತೇ ರಥೇ ಯುಕ್ತೌ ವಾಮ್ಯೌ ಸ್ಯಾತಾಮಿತಿ ॥44॥

ಆಗ ಸೂತನು ರಾಜನನ್ನು ಕುರಿತು ನನಗೆ ಒತ್ತಾಯವನ್ನು ಮಾಡಬೇಡ. ನಿನಗೆ ವಾಮದೇವ ಋಷಿಗಳ ಕುದುರೆಗಳು ದೊರೆತರೂ ಆ ಮೃಗವನ್ನು ಹಿಡಿಯಲು ನಿನ್ನಿಂದ ಸಾಧ್ಯವಿಲ್ಲ ಎಂದು ಹೇಳಿದನು.

ತತೋಽಬ್ರವೀದ್ ರಾಜಾ ಸೂತಮಾಚಕ್ಷ್ವ
ಮೇ ವಾಮ್ಯೌ, ಹನ್ಮಿ ಚ ತ್ವಾಮಿತಿ ॥45॥

ಆಗ ರಾಜನು ಸೂತನನ್ನು ಕುರಿತು ವಾಮದೇವರ ಕುದುರೆಗಳು ಎಂದರೆ ಯಾವುವು. ಅದನ್ನು ನನಗೆ ಹೇಳು. ಇಲ್ಲದಿದ್ದರೆ ನಿನ್ನನ್ನು ಕೊಲ್ಲುವೆನು ಎಂದು ಹೇಳಿದನು.

ಸ ಏವಮುಕ್ತೋ ರಾಜಭಯಭೀತಃ ಸೂತೋ
ವಾಮದೇವಶಾಪಭೀತಶ್ಚ ಸನ್ನಾಚಖ್ಯೌ ರಾಜ್ಞೇ
ವಾಮದೇವಸ್ಯಾಶ್ವೌ ವಾಮ್ಯೌ ಮನೋಜವಾವಿತಿ ॥46॥

ಹೀಗೆ ಹೇಳಲ್ಪಟ್ಟ ಸೂತನು ರಾಜನ ಭಯದಿಂದಲೂ, ವಾಮದೇವ ಋಷಿಗಳ ಶಾಪದ ಭಯದಿಂದಲೂ ಕೂಡಿದವನಾಗಿ ರಾಜನನ್ನು ಕುರಿತು ವಾಮ್ಯ ಎಂದರೆ ವಾಮದೇವರ ಕುದುರೆಗಳು ಎಂದರ್ಥ. ಅವು ಮನೋವೇಗವುಳ್ಳವು ಎಂದು ಹೇಳಿದನು.

ಅಥೈನಮೇವಂ ಬ್ರುವಾಣಮಬ್ರವೀದ್ ರಾಜಾ
ವಾಮದೇವಾಶ್ರಮಂ ಪ್ರಯಾಹೀತಿ ॥47॥

ಆಗ ರಾಜನು ಅವನನ್ನು ಕುರಿತು ವಾಮದೇವಾಶ್ರಮಕ್ಕೆ ರಥವನ್ನು ತೆಗೆದುಕೊಂಡು ಹೋಗು ಎಂದು ಹೇಳಿದನು.

ಸ ಗತ್ವಾ ವಾಮದೇವಾಶ್ರಮಂ ತಮೃಷಿಮಬ್ರವೀತ್ |
ಭಗವನ್ ಮೃಗೋ ಮೇ ವಿದ್ಧಃ ಪಲಾಯತೇ
ಸಂಭಾವಯಿತುಮ್ ಅರ್ಹಸಿ ವಾಮ್ಯೌ ದಾತುಮಿತಿ ॥48॥

ರಾಜನು ವಾಮದೇವಾಶ್ರಮವನ್ನು ತಲುಪಿ ಆ ಋಷಿಗಳನ್ನು ಕುರಿತು `ಪೂಜ್ಯರೇ, ನನ್ನಿಂದ ಹೊಡೆಯಲ್ಪಟ್ಟ ಮೃಗವು ಓಡಿಹೋಗುತ್ತಿದೆ. ನನ್ನನ್ನು ಸಮಾಧಾನಪಡಿಸಬೇಕು. ನೀವು ವಾಮ್ಯ ಎಂದು ಕರೆಯಲ್ಪಡುವ ಎರಡು ಕುದುರೆಗಳನ್ನು ನನಗೆ ನೀಡಬೇಕು' ಎಂದು ಹೇಳಿದನು.

ತಮಬ್ರವೀದೃಷಿರ್ದದಾನಿ ತೇ ವಾಮ್ಯೌ ॥
ಕೃತಕಾರ್ಯೇಣ ಭವತಾ ಮಮ್ಯೈವ ವಾಮ್ಯೌ ನಿರ್ಯಾತ್ಯೌ ಕ್ಷಿಪ್ರಮಿತಿ ॥

ಋಷಿಗಳು ರಾಜನನ್ನು ಕುರಿತು `ನಿನಗೆ ಆ ಎರಡು ವಾಮ್ಯ ಕುದುರೆಗಳನ್ನು ಕೊಟ್ಟೇನು. ನಿನ್ನ ಕಾರ್ಯ ಮುಗಿದ ಮೇಲೆ ಶೀಘ್ರವಾಗಿ ನನಗೇ ಆ ಕುದುರೆಗಳನ್ನು ಹಿಂದಿರುಗಿಸಬೇಕು' ಎಂದು ಹೇಳಿದರು.

ಸ ಚ ತಾವಶ್ವೌ ಪ್ರತಿಗೃಹ್ಯಾನುಜ್ಞಾಪ್ಯ ಋಷಿಂ ಪ್ರಾಯಾದ್ ವಾಮೀಪ್ರಯುಕ್ತೇನ ರಥೇನ ಮೃಗಂ ಪ್ರತಿಗಚ್ಛಂಶ್ಚಾಬ್ರವೀತ್
ಸೂತಮ್ ಅಶ್ವರತ್ನಾವಿಮಾವಯೋಗ್ಯೌ ಬ್ರಾಹ್ಮಣಾನಾಂ
ನೈತೌ ಪ್ರತಿದೇಯೌ ವಾಮದೇವಾಯೇತ್ಯುಕ್ತ್ವಾ ಮೃಗಮವಾಪ್ಯ ಸ್ವನಗರಮೇತ್ಯಾಶ್ವಾವಂತಃಪುರೇಽಸ್ಥಾಪಯತ್ ॥50॥

ರಾಜನು ಆ ಅಶ್ವಗಳನ್ನು ತೆಗೆದುಕೊಂಡು ಋಷಿಗಳ ಅನುಮತಿಯನ್ನು ಪಡೆದು ಆ ಕುದುರೆಗಳನ್ನು ಹೂಡಿದ ರಥದಲ್ಲಿ ಮೃಗವನ್ನು ಹಿಂಬಾಲಿಸುತ್ತಾ ಸೂತನನ್ನು ಕುರಿತು `ಇವು ಅಶ್ವರತ್ನಗಳು, ಬ್ರಾಹ್ಮಣರಿಗೆ ಯೋಗ್ಯವಲ್ಲ. ಇದನ್ನು ವಾಮದೇವರಿಗೆ ಪುನಃ ಕೊಡಬಾರದು' ಎಂದು ಹೇಳಿ ಆ ಮೃಗವನ್ನು ತೆಗೆದುಕೊಂಡು ತನ್ನ ನಗರಕ್ಕೇ ಹಿಂದಿರುಗಿ ಕುದುರೆಗಳನ್ನು ತನ್ನ ಅಂತಃಪುರದಲ್ಲಿ ಇಟ್ಟನು.

ಅಥರ್ಷಿಶ್ಚಿಂತಯಾಮಾಸ ತರುಣೋ ರಾಜಪುತ್ರಃ ಕಲ್ಯಾಣಂ ಪತ್ರಮಾಸಾದ್ಯ ರಮತೇ ನ ಪ್ರತಿನಿರ್ಯಾತಯತ್ಯಹೋ ಕಷ್ಟಮಿತಿ |51||

ಆಗ ಋಷಿಗಳು ತರುಣನಾದ ರಾಜಪುತ್ರನು ಮಂಗಳಕರವಾದ ವಾಹನಗಳನ್ನು ಪಡೆದು ವಿಹರಿಸುತಿತದ್ದಾನೆ. ನನಗೆ ಹಿಂದಿರುಗಿಸುತ್ತಿಲ್ಲ. ಎಂತಹ ಕಷ್ಟವು ಪ್ರಾಪ್ತವಾಯಿತು ಎಂದು ಚಿಂತಿಸಿದರು.

ಸ ಮನಸಾ ವಿಚಿಂತ್ಯ ಮಾಸಿ ಪೂರ್ಣೇ ಶಿಷ್ಯಮಬ್ರವೀತ್ |
ಗಚ್ಛಾತ್ರೇಯ ರಾಜಾನಂ ಬ್ರೂಹಿ ಯದಿ ಪರ್ಯಾಪ್ತಂ
ನಿರ್ಯಾತಯೋಪಾಧ್ಯಾಯವಾಮ್ಯಾವಿತಿ ||52||

ಅವರು ಮನಸ್ಸಿನಲ್ಲಿ ಹೀಗೆ ಯೋಚಿಸಿ ಒಂದು ತಿಂಗಳು ಕಳೆದ ಮೇಲೆ ತಮ್ಮ ಶಿಷ್ಯನನ್ನು ಕುರಿತು, `ಆತ್ರೇಯನೇ, ನೀನು ರಾಜನ ಬಳಿಗೆ ಹೋಗಿ ನಿನ್ನ ಕೆಲಸವು ಮುಗಿದಿದ್ದರೆ ಉಪಾಧ್ಯಾಯರ ಅಶ್ವಗಳನ್ನು ಹಿಂದಿರುಗಿಸು ಎಂದು ಹೇಳು' ಎಂದು ಹೇಳಿದರು.

ಸ ಗತ್ವೈವಂ ತಂ ರಾಜಾನಮಬ್ರವೀತ್ ತತ್ ||53||

ಆ ಶಿಷ್ಯನು ಹೋಗಿ ರಾಜನನ್ನು ಕುರಿತು ಹಾಗೆಯೇ ಹೇಳಿದನು.

ರಾಜಾ ಪ್ರತ್ಯುವಾಚ ರಾಜ್ಞಾಮೇತದ್ ವಾಹನಮನರ್ಹಾ
ಬ್ರಾಹ್ಮಣಾ ರತ್ನಾನಾಮೇವಂವಿಧಾನಾಂ |
ಕಿಂ ಬ್ರಾಹ್ಮಣಾನಾಮ್ ಅಶ್ವೈಃ ಕಾರ್ಯಂ |
ಸಾಧು ಗಮ್ಯತಾಮ್ ||54||

ರಾಜನು `ಈ ಕುದುರೆಗಳು ರಾಜನಿಗೆ ಯೋಗ್ಯವಾದವು. ಬ್ರಾಹ್ಮಣರು ಇಂತಹ ರತ್ನಗಳನ್ನು ಹೊಂದಿರುವುದು ಯೋಗ್ಯವಲ್ಲ. ಇಂತಹ ಕುದುರೆಗಳಿಂದ ಬ್ರಾಹ್ಮಣರಿಗೆ ಏನಾಗಬೇಕಿದೆ. ನಿನ್ನ ಪಾಡಿಗೆ ನೀನು ಹೋಗು' ಎಂದು ಹೇಳಿದನು.

ಸ ಗತ್ವೈತದುಪಾಧ್ಯಾಯಾಯಾಚಷ್ಟ ||55||

ಆ ಶಿಷ್ಯನು ಹೋಗಿ ಉಪಾಧ್ಯಾಯರಿಗೆ ಇದನ್ನು ತಿಳಿಸಿದನು.

ತಚ್ಛ್ರುತ್ವಾ ವಚನಮಪ್ರಿಯಂ ವಾಮದೇವಃ ಕ್ರೋಧಪರೀತಾತ್ಮಾ ಸ್ವಯಮೇವ ರಾಜಾನಮಭಿಗಮ್ಯಾಶ್ವಾರ್ಥಮಚೋದಯತ್
ನ ಚಾದದಾದ್ ರಾಜಾ ||56||

ಆ ಅಪ್ರಿಯವಾದ ಮಾತುಗಳನ್ನು ಕೇಳಿದ ವಾಮದೇವರು ಕ್ರೋಧದಿಂದ ತುಂಬಿದವರಾಗಿ ತಾವೇ ರಾಜನ ಬಳಿಗೆ ಹೋಗಿ ಅಶ್ವಗಳನ್ನು ಕೊಡುವಂತೆ ಒತ್ತಾಯ ಮಾಡಿದರು. ಆದರೆ ರಾಜನು ಕೊಡಲಿಲ್ಲ.

ಪ್ರಯಚ್ಛ ವಾಮ್ಯೌ ಮಮ ಪಾರ್ಥಿವ ತ್ವಂ
ಕೃತಂ ಹಿ ತೇ ಕಾರ್ಯಮನ್ಯೈರ(ಮಾಭ್ಯಾಮ)ಶಕ್ಯಮ್ |
ಮಾ ತ್ವಾ ವಧೀದ್ ವರುಣೋ ಘೋರಪಾಶೈಃ
ಬ್ರಹ್ಮಕ್ಷತ್ರಸ್ಯಾಂತರೇ ವರ್ತಮಾನಃ ||57||

ವಾಮದೇವ ಎಲೈ ರಾಜನೇ, ನನಗೆ ವಾಮ್ಯಾಶ್ವಗಳನ್ನು ಕೊಟ್ಟುಬಿಡು. ಅವು ಬೇರೆ ಅಶ್ವಗಳಿಂದ ಅಸಾಧ್ಯವಾದ ಕೆಲಸವನ್ನು ನಿನಗೆ ಮಾಡಿಕೊಟ್ಟಿವೆ. ಬ್ರಾಹ್ಮಣರು ಮತ್ತು ಕ್ಷತ್ರಿಯರಿಗೆ ವಿರೋಧವುಂಟಾದರೆ ವರುಣನು ತನ್ನ ಪಾಶಗಳಿಂದ ನಿನ್ನನ್ನು ಕೊಲ್ಲದಿರಲಿ.

ರಾಜಾ

ಅನಡ್ವಾಹೌ ಸುವ್ರತೌ ಸಾಧು ದಾಂತಾ
ವೇತದ್ ವಿಪ್ರಾಣಾಂ ವಾಹನಂ ವಾಮದೇವ |
ತಾಭ್ಯಾಂ ಯಾಹಿ ತ್ವಂ ತತ್ರ ಕಾಮೋ ಮಹರ್ಷೇ
ಛಂದಾಂಸಿ ವೈ ತ್ವಾದೃಶಂ ಸಂವಹಂತಿ ||58||

ರಾಜ ಎಲೈ ವಾಮದೇವರೇ, ಚೆನ್ನಾಗಿ ಪಳಗಿದ ಶಾಂತವಾದ ಒಳ್ಳೆಯ ಕೆಲಸವನ್ನು ಮಾಡುವ ಎತತುಗಳು ಬ್ರಾಹ್ಮಣರಿಗೆ ವಾಹನ. ಅವುಗಳನ್ನು ತೆಗೆದುಕೊಂಡು ನಿನಗೆ ಇಷ್ಟಬಂದಂತೆ ಹೋಗು. ನಿನ್ನ ಕಾರ್ಯವು ಅದರಿಂದ ಪೂರ್ಣವಾಗುತ್ತದೆ. ಎಲೈ ಮಹರ್ಷಿಯೇ, ನಿಮ್ಮಂತಹವರನ್ನು ಛಂದಸ್ಸುಗಳೇ ಹೊರುತ್ತವೆ.

ವಾಮದೇವಃ

ಛಂದಾಂಸಿ ವೈ ಮಾದೃಶಂ ಸಂವಹಂತಿ
ಲೋಕೇಽಮುಷ್ಮಿನ್ ಪಾರ್ಥಿವ ಯಾನಿ ಸಂತಿ |
ಅಸ್ಮಿಂಸ್ತು ಲೋಕೇ ಮಮ ಯಾನಮೇತದ್
ಅಸ್ಮದ್ವಿಧಾನಾಮಪರೇಷಾಂ ಚ ರಾಜನ್ ||59||

ವಾಮದೇವ ಎಲೈ ರಾಜನೇ, ಪರಲೋಕದಲ್ಲಿ ನನ್ನಂತಹವರನ್ನು ಛಂದಸ್ಸುಗಳು ಹೊತ್ತುಕೊಂಡು ಹೋಗುತ್ತವೆ. ಆದರೆ ಎಲೈ ರಾಜನೇ, ಈ ಲೋಕದಲ್ಲಿ ನನಗೂ ಮತ್ತು ನನ್ನಂತಹ ಬೇರೆಯವರಿಗೂ ಇವೇ ವಾಹನಗಳು.

ರಾಜಾ

ಚತ್ವಾರಸತ್ವಂ ವಾ ಗರ್ದಭಾಃ ಸಂವಹಂತು
ಶ್ರೇಷ್ಠಾಶ್ವತರ್ಯೋ ಹರಯೋ ವಾತರಂಹಾಃ |

ತೈಸ್ತ್ವಂ ಯಾಹಿ ಕ್ಷತ್ರಿಯಸ್ಯೈವ ವಾಹೋ
ಮಮೈವ ವಾವ್ಯೌ ನ ತವೈತೌ ಹಿ ವಿದ್ಧಿ ||60||
ರಾಜ ನಾಲ್ಕು ಕತ್ತೆಗಳು ನಿಮ್ಮನ್ನು ಕರೆದುಕೊಂಡು ಹೋಗಲಿ. ಅಥವಾ ವಾಯುವೇಗವುಳ್ಳ ಶ್ರೇಷ್ಠವಾದ ನಾಲ್ಕು ಹೇಸರಕತ್ತೆಗಳು ನಿಮ್ಮನ್ನು ಕರೆದುಕೊಂಡು ಹೋಗಲಿ. ನೀವು ಅದನ್ನು ಹೂಡಿದ ರಥದಲ್ಲಿ ಹೋಗಿ. ಈ ವಾಹನಗಳಾದ ವಾಮ್ಯಾಶ್ವಗಳು ಮಾತ್ರ ಕ್ಷತ್ರಿಯನಾದ ನನಗೇ ಸೇರಿದವುಗಳು. ಅವು ನಿಮ್ಮದಲ್ಲ ಎಂದು ತಿಳಿಯಿರಿ.
ವಾಮದೇವಃ
ಘೋರಂ ವ್ರತಂ ಬ್ರಾಹ್ಮಣಸ್ಯೈತದಾಹು
ರೇತದ್ ರಾಜನ್ ಯದಿಹಾಜೀವಮಾನಃ |
ಅಯಸ್ಮಯಾ ಘೋರರೂಪಾ ಮಹಾಂತ
ಶ್ಚತ್ವಾರೋ ವಾ ಯಾತುಧಾನಾಃ ಸುರೌದ್ರಾಃ |
ಮಯಾ ಪ್ರಯುಕ್ತಾಸ್ತ್ವದ್ವಧಮೀಪ್ಸಮಾನಾ
ವಹಂತು ತ್ವಾಂ ಶಿತಶೂಲಾಶ್ಚತುರ್ಧಾ ||61||
ವಾಮದೇವ ಎಲೈ ರಾಜನೇ, ಬ್ರಾಹ್ಮಣರ ಸ್ವತ್ತನ್ನು ಕ್ಷತ್ರಿಯನು ಉಪಜೀವಿಸಿಕೊಂಡು ಬದುಕುವುದು ಘೋರವಾದ ಕಾರ್ಯವೆಂದು ತಿಳಿದವರು ಹೇಳುತ್ತಾರೆ. ನನ್ನಿಂದ ಪ್ರಯುಕ್ತರಾದ ಕಬ್ಬಿಣದಂತಿರುವ ಘೋರ ರೂಪವನ್ನು ಹೊಂದಿರುವ ದೊಡ್ಡ ಆಕೃತಿಯನ್ನು ಹೊಂದಿರುವ, ಸುಭೀಷಣರಾದ ನಾಲ್ಕು ಜನ ರಾಕ್ಷಸರು ನಿನ್ನ ವಧೆಯನ್ನು ಬಯಸುತ್ತಾ ನಿಶಿತವಾದ ಶೂಲಗಳನ್ನು ಹಿಡಿದು ನಿನ್ನನ್ನು ನಾಲ್ಕುಭಾಗವನ್ನಾಗಿ ಮಾಡಲಿ.
ರಾಜಾ
ಯೇ ತ್ವಾಂ ವಿದುರ್ಬ್ರಾಹ್ಮಣಂ ವಾಮದೇವ
ವಾಚಾ ಹಂತುಂ ಮನಸಾ ಕರ್ಮಣಾ ವಾ |
ತೇ ತ್ವಾಂ ಸಶಿಷ್ಯಮಿಹ ಪಾತಯಂತು
ಮದ್ವಾಕ್ಯನುನ್ನಾಃ ಶಿತಶೂಲಾಸಿಹಸ್ತಾಃ ||62||
ರಾಜ ಎಲೈ ವಾಮದೇವರೇ, ಮಾತಿನಿಂದಲೂ, ಮನಸ್ಸಿನಿಂದಲೂ ಮತ್ತು ಕ್ರಿಯೆಯಿಂದಲೂ ಕೊಲ್ಲಲು ಬಯಸುವ ನಿನ್ನನ್ನು ಯಾರು ಬ್ರಾಹ್ಮಣನೆಂದು ತಿಳಿಯುವರೋ ಅಂತಹ ಶಿಷ್ಯರಿಂದೊಡಗೂಡಿದ ನಿನ್ನನ್ನು ನನ್ನ ವಾಕ್ಯದಿಂದ ಪ್ರೇರಿತರಾದ ನಿಶಿತವಾದ ಶೂಲ ಮತ್ತು ಖಡ್ಗಗಳನ್ನು ಧರಿಸಿದ ನನ್ನ ಸೇವಕರು ಹೊಡೆದು ಉರುಳಿಸಲಿ.
ವಾಮದೇವಃ
ನಾನುಯೋಗಾ ಬ್ರಾಹ್ಮಣಾನಾಂ ಭವಂತಿ
ವಾಚಾ ರಾಜನ್ ಮನಸಾ ಕರ್ಮಣಾ ವಾ |
ಯಸ್ತ್ವೇವಂ ಬ್ರಹ್ಮ ತಪಸಾಽನ್ವೇತಿ ವಿದ್ವಾನ್
ತೇನ ಶ್ರೇಷ್ಠೋ ಭವತಿ ಹಿ ಜೀವಮಾನಃ ||63||
ವಾಮದೇವ ಎಲೈ ರಾಜನೇ, ಬ್ರಾಹ್ಮಣರಿಗೆ ಮನಸ್ಸಿನಿಂದಾಗಲೀ, ಕ್ರಿಯೆಯಿಂದಾಗಲೀ ಅಥವಾ ಮಾತಿನಿಂದಾಗಲೀ ಹೀಗೆ ಶಾಪವನ್ನು ಕೊಡಲು ಬರುವುದಿಲ್ಲ. ಯಾವನು ಬ್ರಾಹ್ಮಣನು ತನ್ನ ತಪಸ್ಸಿನಿಂದ ಶ್ರೇಷ್ಠನಾಗಿ ಎಲ್ಲರನ್ನೂ ಮೀರುವನು ಎಂದು ತಿಳಿಯುವನೋ ಅಂತಹ ಮನುಷ್ಯನು ಶ್ರೇಷ್ಠನಾಗಿ ಜೀವಿಸುವನು.
ಮಾರ್ಕಂಡೇಯಃ
ಏವಮುಕ್ತೇ ವಾಮದೇವೇನ ರಾಜನ್
ಸಮುತ್ತಸ್ಥೂ ರಾಕ್ಷಸಾ ಘೋರರೂಪಾ |
ತೈಃ ಶೂಲಹಸ್ತೈರ್ವಧ್ಯಮಾನಃ ಸ ರಾಜಾ
ಪ್ರೋವಾಚೇದಂ ವಾಕ್ಯಮುಚ್ಚೈಸ್ತದಾನೀಮ್ ||64||
ಮಾರ್ಕಂಡೇಯ ಎಲೈ ರಾಜನೇ, ವಾಮದೇವರು ಹೀಗೆ ಹೇಳುತ್ತಿರಲು ಘೋರ ರೂಪರಾದ ರಾಕ್ಷಸರು ಮೇಲಕ್ಕೆದ್ದರು. ಶೂಲಹಸ್ತರಾದ ಅವರಿಂದ ಪ್ರಹಾರಕ್ಕೆ ಒಳಗಾದ ರಾಜನು ಆಗ ಗಟ್ಟಿಯಾಗಿ ಈ ಮಾತನ್ನು ಆಡಿದನು.
ಐಕ್ಷ್ವಾಕವೋ ಯದಿ ಬ್ರಹ್ಮನ್ ದಲೋ ವಾ
ವಿಧೇಯಾ ಮೇ ಯದಿ ವಾನ್ಯೇ ವಿಶೋಽಪಿ |
ನೋತ್ಸೃಕ್ಷ್ಯೇಽಹಂ ವಾಮದೇವಸ್ಯ ವಾವ್ಯೌ
ನೈವಂವಿಧಾ ಧರ್ಮಶೀಲಾ ಭವಂತಿ ||65||
ಎಲೈ ಬ್ರಾಹ್ಮಣರೇ, ನೀವು ನನ್ನ ತಮ್ಮನಾದ ಇಕ್ಷ್ವಾಕು ವಂಶದ ದಲನನ್ನಾಗಲೀ ಅಥವಾ ಇಕ್ಷ್ವಾಕು ವಂಶದ ಬೇರೆಯವರನ್ನಾಗಲೀ ಇಕ್ಷ್ವಾಕು ವಂಶಕ್ಕೆ ಅಧಿಪತಿಯನ್ನಾಗಿ ಮಾಡಬಹುದು. ನಾನು ವಾಮದೇವರ ಕುದುರೆಗಳನ್ನು ಮಾತ್ರ ಬಿಟ್ಟುಕೊಡುವುದಿಲ್ಲ. ಇಂತಹವರು (ನಿಮ್ಮಂತಹವರು) ಧರ್ಮಶೀಲರಲ್ಲ.
ಏವಂ ಬ್ರುವನ್ನೇವ ಸ ಯಾತುಧಾನ್ಯೈಃ
ಹತೋ ಜಗಾಮಾಶು ಮಹೀಂ ಕ್ಷಿತೀಶಃ |
ತತೋ ವಿದಿತ್ವಾ ನೃಪತಿಂ ನಿಪಾತಿತ
ಮಿಕ್ಷ್ವಾಕವೋ ವೈ ದಲಮಭ್ಯಷಿಂಚನ್ ||66||

ಹೀಗೆ ಹೇಳುತ್ತಿರುವಾಗಲೇ ಆ ರಾಜನು ರಾಕ್ಷಸರಿಂದ ಕೊಲ್ಲಲ್ಪಟ್ಟು ಭೂಮಿಯ ಮೇಲೆ ಉರುಳಿದನು. ಆಗ ರಾಜನು ಮೃತನಾದುದನ್ನು ತಿಳಿದು, ದಲನಿಗೆ ರಾಜ್ಯಾಭಿಷೇಕವನ್ನು ಮಾಡಿದರು.
ರಾಜ್ಯೇ ತದಾ ತತ್ರ ಗತ್ವಾ ಸ ವಿಪ್ರಃ
ಪ್ರೋವಾಚೇದಂ ವಚನಂ ವಾಮದೇವಃ |
ದಲಂ ರಾಜಾನಂ ಬ್ರಾಹ್ಮಣಾನಾಂ ಹಿ ದೇಯಂ
ಏವಂ ರಾಜನ್ ಸರ್ವಧರ್ಮೇಷು ದೃಷ್ಟಮ್ ॥67॥
ಆಗ ಬ್ರಾಹ್ಮಣರಾದ ವಾಮದೇವರು ಅಲ್ಲಿಗೆ ಹೋಗಿ ರಾಜನಾದ ದಲನನ್ನು ಕುರಿತು ಬ್ರಾಹ್ಮಣರ ಸ್ವತ್ತನ್ನು ಬ್ರಾಹ್ಮಣರಿಗೇ ಕೊಡಬೇಕು. ಹೀಗೆ ಎಲ್ಲಾ ಧರ್ಮದಲ್ಲಿಯೂ ದೃಷ್ಟವಾಗಿದೆ ಎಂದು ಹೇಳಿದರು.
ಬಿಭೇಷಿ ಚೇತ್ ತ್ವಮಧರ್ಮಾನ್ನರೇಂದ್ರ
ಪ್ರಯಚ್ಛ ಮೇ ಶೀಘ್ರಮೇವಾದ್ಯ ವಾಮ್ಯೌ |
ಏತತ್ಶ್ರುತ್ವಾ ವಾಮದೇವಸ್ಯ ವಾಕ್ಯಂ
ಸ ಪಾರ್ಥಿವಃ ಸೂತಮುವಾಚ ರೋಷಾತ್ ॥68॥
ಎಲೈ ನರೇಂದ್ರನೇ, ನೀನು ಅಧರ್ಮಕ್ಕೆ ಹೆದರುವುದಾದರೆ ಶೀಘ್ರವಾಗಿ ವಾಮ್ಯಾಶ್ವಗಳನ್ನು ಈಗಲೇ ಕೊಡು (ಎಂದು ಹೇಳಿದರು). ವಾಮದೇವರ ಈ ವಾಕ್ಯವನ್ನು ಕೇಳಿ ರಾಜನು ರೋಷದಿಂದ ಸೂತನನ್ನು ಕುರಿತು ಹೀಗೆ ಹೇಳಿದನು.
ಏಕಂ ಹಿ ಸಾಯಕಂ ಚಿತ್ರರೂಪಂ
ದಿಗ್ಧಂ ವಿಷೇಣಾಹರ ಸಂಗೃಹೀತಮ್ |
ಯೇನ ವಿದ್ಧೋ ವಾಮದೇವಃ ಶಯೀತ
ಸಂದಶ್ಯಮಾನಃ ಶ್ವಭಿರಾರ್ತರೂಪಃ ॥69॥
ಸೂತನೇ, ವಿಷದಿಂದ ಲಿಪ್ತವಾದ ಒಳ್ಳೆಯ ಆಕಾರವುಳ್ಳ ಒಂದು ಬಾಣವನ್ನು ನಮ್ಮ ಕೋಶದಿಂದ ತೆಗೆದುಕೊಂಡು ಬಾ. ಅದರಿಂದ ಹೊಡೆಯಲ್ಪಟ್ಟು ವಾಮದೇವ ಋಷಿಯು ಆರ್ತರೂಪವನ್ನು ಹೊಂದಿ ನಾಯಿಗಳಿಂದ ತಿನ್ನಲ್ಪಟ್ಟು ಭೂಮಿಯ ಮೇಲೆ ಮಲಗುವನು.
ವಾಮದೇವಃ
ಜಾನಾಮಿ ಪುತ್ರಂ ದಶವರ್ಷಂ ತವಾಹಂ
ಜಾತಂ ಮಹಿಷ್ಯಾಂ ಶ್ಯೇನಜಿತಂ ನರೇಂದ್ರ |
ತಂ ಜಹಿ ತ್ವಂ ಮದ್ವಚನಾತ್ ಪ್ರಣುನ್ನಃ
ತೂರ್ಣಂ ಪ್ರಿಯೈಃ(ಯಂ) ಸಾಯಕೈರ್ಘೋರರೂಪೈಃ ॥70॥
ವಾಮದೇವ ಎಲೈ ನರೇಂದ್ರನೇ, ನಾನು ನಿನಗೆ ರಾಣಿಯಲ್ಲಿ ಜನಿಸಿದ ಶ್ಯೇನಜಿತನೆಂಬ ಹತ್ತು ವರ್ಷದ ಮಗನನ್ನು ತಿಳಿದಿದ್ದೇನೆ. ನನ್ನ ಮಾತಿನಿಂದ ಪ್ರೇರಿತನಾಗಿ ನೀನು ಘೋರರೂಪವಾದ ಬಾಣಗಳಿಂದ ಶೀಘ್ರವಾಗಿ ನಿನ್ನ ಆ ಪ್ರಿಯಪುತ್ರನನ್ನು ಕೊಲ್ಲು.
ಮಾರ್ಕಂಡೇಯಃ
ಏವಮುಕ್ತೋ ವಾಮದೇವೇನ ರಾಜನ್
ಅಂತಃಪುರೇ ರಾಜಪುತ್ರಂ ಜಘಾನ |
ಸ ಸಾಯಕಸ್ತಿಗ್ಮತೇಜಾ ವಿಸೃಷ್ಟಃ
ಶ್ರುತ್ವಾ ದಲಸ್ತತ್ರ ವಾಕ್ಯಂ ಬಭಾಷೇ ॥71॥
ಮಾರ್ಕಂಡೇಯ ಎಲೈ ರಾಜನೇ, ವಾಮದೇವಕ ಹೀಗೆ ಹೇಳುತ್ತಿರಲು ಆ ರಾಜನಿಂದ ಬಿಡಲ್ಪಟ್ಟ ಬಾಣವು ಅಂತಃಪುರದಲ್ಲಿದ್ದ ರಾಜಪುತ್ರನನ್ನು ಕೊಂದಿತು. ಅದನ್ನು ಕೇಳಿದ ದಲನು ಹೀಗೆ ಮಾತನಾಡಿದನು.
ಇಕ್ಷ್ವಾಕವೋ ಹಂತ ಚರಾಮಿ ವಃ ಪ್ರಿಯಂ
ನಿಹನ್ಮೀಮಂ ವಿಪ್ರಮದ್ಯ ಪ್ರಮಥ್ಯ |
ಆನೀಯತಾಮಪರಸ್ತಿಗ್ಮತೇಜಾಃ
ಪಶ್ಯಧ್ವಂ ಮೇ ವೀರ್ಯಮದ್ಯ ಕ್ಷಿತೀಶಾಃ ॥72॥
ಎಲೈ ಇಕ್ಷ್ವಾಕು ವಂಶದವರೇ, ನಿಮಗೆ ಪ್ರಿಯವನ್ನು ಮಾಡುತ್ತೇನೆ. ಈ ಬ್ರಾಹ್ಮಣನನ್ನು ನನ್ನ ಬಲದಿಂದ ಈ ದಿನ ಕೊಲ್ಲುವೆನು. ತೀಕ್ಷ್ಣ ತೇಜಸ್ಸುಳ್ಳ ಇನ್ನೊಂದು ಬಾಣವನ್ನು ತೆಗೆದುಕೊಂಡು ಬನ್ನಿ. ಈ ದಿನ ರಾಜರು ನನ್ನ ಪರಾಕ್ರಮವನ್ನು ನೋಡಲಿ.
ವಾಮದೇವಃ
ಯತ್ ತ್ವಮೇನಂ ಸಾಯಕಂ ಘೋರರೂಪಂ
ವಿಷೇಣ ದಿಗ್ಧಂ ಮಮ ಸಂದಧಾಸಿ |
ನ ತ್ವೇತಂ ತ್ವಂ ಶರವರ್ಷಂ ವಿಮೋಕ್ತುಂ
ಸಂಧಾತುಂ ವಾ ಶಕ್ಯಸೇ ಮಾನವೇಂದ್ರ ॥73॥
ವಾಮದೇವ ಎಲೈ ಮಾನವೇಂದ್ರ, ನನ್ನ ಮೇಲೆ ಪ್ರಯೋಗಿಸಲು ಯಾವ ವಿಷದಿಗ್ಧವಾದ ಭಯಂಕರವಾದ ಈ ಬಾಣವನ್ನು ಹೂಡುತ್ತಿರುವೆಯೋ, ನೀನು ಆ ಬಾಣವನ್ನು ಹೂಡುವುದಕ್ಕಾಗಲೀ ಅಥವಾ ಆ ಬಾಣವನ್ನು ಪ್ರಯೋಗಿಸುವುದಕ್ಕಾಗಲೀ ಶಕ್ತನಾಗುವುದಿಲ್ಲ.
ರಾಜಾ

ಇಕ್ಷ್ವಾಕವಃ ಪಶ್ಯತ ಮಾಂ ಗೃಹೀತಂ
ನ ವೈ ಶಕ್ನೋಮ್ಯೇಷ ಶರಂ ವಿಮೋಕ್ತುಮ್ |
ನ ಚಾಸ್ಯ ಕರ್ತುಂ ನಾಶಮಭ್ಯುತ್ಸಹಾಮಿ
ಆಯುಷ್ಮಾನ್ ವೈ ಜೀವತು ವಾಮದೇವಃ ॥74॥
ರಾಜ ಎಲೈ ಇಕ್ಷ್ವಾಕುವಂಶದವರೇ, ಸ್ತಂಭಿತನಾದ ನನ್ನನ್ನು ನೋಡಿ. ಈ ನಾನು ಬಾಣವನ್ನು ಪ್ರಯೋಗಿಸಲು ಸಾಧ್ಯವಾಗುತ್ತಿಲ್ಲ. ಈ ವಾಮದೇವರ ನಾಶವನ್ನು ಮಾಡಲು ನಾನು ಬಯಸುವುದಿಲ್ಲ. ವಾಮದೇವ ಋಷಿಗಳು ಪೂರ್ಣಾಯುಷ್ಯವನ್ನು ಹೊಂದಿದವರಾಗಿ ಜೀವಿಸಲಿ.
ವಾಮದೇವಃ
ಸಂಸ್ಪೃಶ್ಯೈನಾಂ ಮಹಿಷೀಂ ಸಾಯಕೇನ
ತತಸ್ತಸ್ಮಾದೇನಸೋ ಮೋಕ್ಷ್ಯಸೇ ತ್ವಮ್ ॥74॥
ವಾಮದೇವ ಬಾಣದಿಂದ ಈ ನಿನ್ನ ರಾಣಿಯನ್ನು ಸ್ಪರ್ಶಮಾಡು. ಆಗ ನೀನು ನಿನ್ನ ಪಾಪದಿಂದ ಮುಕ್ತನಾಗುವಿ.
ಮಾರ್ಕಂಡೇಯಃ
ತತಸ್ತಥಾ ಕೃತವಾನ್ ಪಾರ್ಥಿವಸ್ತು ತತೋ
ಮುನಿಂ ರಾಜಪುತ್ರೀ ಬಭಾಷೇ ॥75॥
ಮಾರ್ಕಂಡೇಯ ರಾಜನಾದ ದಲನು ಹಾಗೆಯೇ ಮಾಡಿದನು. ಆ ರಾಜಪುತ್ರಿಯು (ರಾಣಿಯು) ಋಷಿಯನ್ನು ಕುರಿತು ಹೀಗೆ ಮಾತನಾಡಿದಳು.
ಯಥಾ ಯುಕ್ತಾ ವಾಮದೇವಾಹಮೇನಂ
ದಿನೇ ದಿನೇ ಸಂದಿಶಂತೀ ನೃಶಂಸಮ್ |
ಬ್ರಾಹ್ಮಣೇಭ್ಯೋ ಮೃಗಯತೀ ಸೂನೃತಾನಿ
ತಥಾ ಬ್ರಹ್ಮನ್ ಪುಣ್ಯಲೋಕಂ ಲಭೇಯಮ್ ॥76॥
ಎಲೈ ವಾಮದೇವ ಋಷಿಗಳೇ, ನನಗೆ ಈ ನನ್ನ ಪತಿಯು ಪ್ರತಿದಿವಸದಲ್ಲಿಯೂ ಬ್ರಾಹ್ಮಣನನ್ನು ಕುರಿತು ಕ್ರೂರವಾದುದನ್ನೇ ಉಪದೇಶ ಮಾಡಿದರೂ ನಾನು ಬ್ರಾಹ್ಮಣರಿಗೆ ಒಳ್ಳೆಯ ಮಾತುಗಳನ್ನೇ ಹುಡುಕಿ ಆಡಿದ್ದೇನೆ. ಎಲೈ ಬ್ರಾಹ್ಮಣರೇ, ಅದರಿಂದ ನನಗೆ ಪುಣ್ಯಲೋಕ ಪ್ರಾಪ್ತಿಯಾಗಲಿ.
ವಾಮದೇವಃ
ತ್ವಯಾ ತ್ರಾತಂ ರಾಜಕುಲಂ ಶುಭೇಕ್ಷಣೇ
ವರಂ ವೃಣೀಷ್ವಾಪ್ರತಿಮಂ ದದಾನಿ ತೇ |
ಪ್ರಶಾಧೀಮಂ ಸ್ವಜನಂ ರಾಜಪುತ್ರಿ
ಇಕ್ಷ್ವಾಕುರಾಜ್ಯಂ ಸುಮಹಚ್ಚಾಪ್ಯನಿಂದ್ಯೇ ॥77॥
ವಾಮದೇವ ಎಲೌ ಶುಭನೇತ್ರೆಯೇ, ನೀನು ರಾಜಕುಲವನ್ನು ರಕ್ಷಿಸಿದ್ದೀಯೆ. ವರವನ್ನು ಕೇಳು. ಅಸದೃಶವಾದ ವರವನ್ನು ನಾನು ಕೊಡುವೆನು. ಎಲೌ ಅನಿಂದಿತಳಾದ ರಾಜಕುಮಾರಿಯಾದ ನೀನು ಈ ದೊಡ್ಡದಾದ ಇಕ್ಷ್ವಾಕು ರಾಜ್ಯವನ್ನು ಮತ್ತು ಈ ಸ್ವಜನರನ್ನು ಆಳುವವಳಾಗು.
ರಾಜಪುತ್ರೀ
ವರಂ ವೃಣೇ ಭಗವಂಸ್ತ್ವೇವಮೇಷ
ವಿಮುಚ್ಯತಾಂ ಕಿಲ್ಬಿಷಾದದ್ಯ ಭರ್ತಾ |
ಶಿವೇನ ಚಾದ್ಯಾಹಿ ಸಪುತ್ರಬಾಂಧವಂ
ವರೋ ವೃತೋ ಹ್ಯೇಷ ಮಯಾ ದ್ವಿಜಾಗ್ರ್ಯ ॥78॥
ರಾಜಪುತ್ರೀ ಎಲೈ ಪೂಜ್ಯರೇ, ನಾನು ನಿಮ್ಮನ್ನು ಈ ವರವನ್ನು ಕೇಳುತ್ತಿದ್ದೇನೆ. ಈ ದಿನ ನನ್ನ ಪತಿಯು ಈ ಪಾಪದಿಂದ ಬಿಡುಗಡೆಯನ್ನು ಹೊಂದಲಿ. ಪುತ್ರಬಾಂಧವ ಸಹಿತನಾದ ರಾಜನಿಗೆ ಮಂಗಳವನ್ನು ಆಶಂಸನೆ ಮಾಡಿ. ಎಲೈ ದ್ವಿಜಶ್ರೇಷ್ಠರೇ, ನಾನು ಈ ವರವನ್ನು ಕೇಳುತ್ತಿದ್ದೇನೆ.
ಮಾರ್ಕಂಡೇಯಃ
ಶ್ರುತ್ವಾ ವಚಃ ಸ ಮುನೀ ರಾಜಪುತ್ರ್ಯಾಃ
ತಥಾಸ್ತ್ವಿತಿ ಪ್ರಾಹ ಕುರುಪ್ರವೀರ |
ತತಃ ಸ ರಾಜಾ ಮುದಿತೋ ಬಭೂವ
ವಾಮ್ಯೌ ಚಾಸ್ಮೈ ಪ್ರದದೌ ಸಂಪ್ರಣಮ್ಯ ॥79॥
ಮಾರ್ಕಂಡೇಯ ಎಲೈ ಕುರುಪ್ರವೀರನಾದ ಯುಧಿಷ್ಠಿರನೇ, ರಾಜಕುಮಾರಿಯ ಮಾತನ್ನು ಕೇಳಿ ಆ ಋಷಿಗಳು ಹಾಗೆಯೇ ಆಗಲಿ ಎಂದು ಹೇಳಿದರು. ಆಗ ಆ ರಾಜನು ಸಂತುಷ್ಟನಾಗಿ ಅವರಿಗೆ ನಮಸ್ಕಾರವನ್ನು ಮಾಡಿ ವಾಮ್ಯಾಶ್ವಗಳನ್ನು ಅವರಿಗೆ ಹಿಂದಿರುಗಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಸಪ್ತಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತೇಳನೆಯ

ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತೆಂಟನೆಯ ಅಧ್ಯಾಯ
ಮಾರ್ಕಂಡೇಯರಿಂದ ಪಾಂಡವರನ್ನು ಕುರಿತು ಸ್ವರ್ಗವಾಸವನ್ನು ಕುರಿತು ಕೀರ್ತಿಯು ಕಾರಣ ಎಂಬ ನಿರೂಪಣೆ.
ವೈಶಂಪಾಯನಃ
ಮಾರ್ಕಂಡೇಯಮೃಷಯಃ ಪಾಂಡವಾಶ್ಚ ಪರ್ಯಪೃಚ್ಛನ್
ಅಸ್ತಿ ಕಶ್ಚಿತ್ ಭವತಶ್ಚಿರಜಾತತರ ಇತಿ ॥1॥
ವೈಶಂಪಾಯನ ಮಾರ್ಕಂಡೇಯರನ್ನು ಋಷಿಗಳು ಮತ್ತು ಪಾಂಡವರು ನಿಮಗಿಂತಲೂ ಮೊದಲು ಜನಿಸಿದವರು ಯಾರಾದರೂ ಇದ್ದಾರೆಯೇ? ಎಂದು ಕೇಳಿದರು.
ಸ ತಾನುವಾಚ ಅಸ್ತಿ ಖಲು ರಾಜರ್ಷಿರಿಂದ್ರದ್ಯುಮ್ನೋ ನಾಮ ಕ್ಷೀಣಪುಣ್ಯೋ ತ್ರಿದಿವಾತ್ ಪ್ರಚ್ಯುತಃ ಕೀರ್ತಿಸ್ತಸ್ಯ ವಿಚ್ಯುತೇತಿ |
ಸ ಮಾಮುಪಾತಿಷ್ಠದಥ ಪ್ರತ್ಯಾಭಿಜಾನಾತಿ ಮಾಂ ಭವಾನಿತಿ ॥2॥
ಮಾರ್ಕಂಡೇಯರು ಅವರನ್ನು ಕುರಿತು ಹೇಳಿದರು. ರಾಜರ್ಷಿಯಾದ ಇಂದ್ರದ್ಯುಮ್ನನು ಇದ್ದಾನಷ್ಟೆ. ಭೂಲೋಕದಲ್ಲಿ ಅವನ ಕೀರ್ತಿಯು ನಷ್ಟವಾದುದರಿಂದ ತನ್ನ ಪುಣ್ಯವನ್ನು ಕಳೆದುಕೊಂಡು ಅವನು ಸ್ವರ್ಗದಿಂದ ಬಿದ್ದನು. ಅವನು ನನ್ನ ಬಳಿಗೆ ಬಂದು ನನ್ನನ್ನು ಗುರುತಿಸುತ್ತೀರಾ ಎಂದು ಕೇಳಿದನು.
ತಮಹಮಬ್ರುವಂ ವಯಂ ರಸಾಯನಿಕಾಃ ನ
ಶರೀರೋಪತಾಪೇನಾತ್ಮನಃ ಸಮಾರಭಾಮಹೇಽರ್ಥಾ
ನಾಮನುಷ್ಠಾನಮೇವ ನ ಭವಂತಂ ಪ್ರತ್ಯಭಿಜಾನೀಮ ಇತಿ ॥3॥
ನಾನು ಅವನನ್ನು ಕುರಿತು ಭೂಮಿಯಲ್ಲಿ ವಾಸಮಾಡುವ ನಾವು ಶರೀರದ ಬಾಧೆಗಳಿಂದ ನಮಗೆ ಅರ್ಥಪ್ರದವಾದ ಕಾರ್ಯಗಳ ಅನುಷ್ಠಾನವನ್ನೂ ಸಹ ಆರಂಭಿಸಲು ಸಾಧ್ಯವಾಗುತ್ತಿಲ್ಲ. ನಿನ್ನನ್ನು ನಾನು ಗುರುತಿಸಲಾರೆ ಎಂದು ಹೇಳಿದೆನು.
ಏವಮುಕ್ತೋ ರಾಜರ್ಷಿರಿಂದ್ರದ್ಯುಮ್ನಃ ಪುನರ್ಮಾಮಬ್ರವೀತ್ |
ಅಸ್ತಿ ಖಲು ಅಥಾಸ್ತಿ ಕಶ್ಚಿತ್ತ್ವತ್ತಶ್ಚಿರಜಾತತರ ಇತಿ ॥4॥
ಹೀಗೆ ಹೇಳಲ್ಪಟ್ಟ ರಾಜರ್ಷಿಯಾದ ಇಂದ್ರದ್ಯುಮ್ನನು ಪುನಃ ನನ್ನನ್ನು ಕುರಿತು ನೀವು ಬಹುಕಾಲದಿಂದ ಇದ್ದೀರಿ. ಆದರೆ ನಿಮಗಿಂತ ಮೊದಲು ಜನಿಸಿದವರು ಯಾರಾದರೂ ಇದ್ದಾರೆಯೇ? ಎಂದು ಕೇಳಿದನು.
ತಂ ಪುನಃ ಪ್ರತ್ಯಬ್ರುವಮ್ - ಅಸ್ತಿ ಖಲು ಹಿಮವತಿ
ಪ್ರಾಕಾರಕರ್ಣೋ ನಾಮೋಲೂಕಃ ಪ್ರತಿವಸತಿ ಸ್ಮ;
ಸ ಮತ್ತಶ್ಚಿರಜಾತಃ ಭವಂತಂ ಸ ಯದಿ ಜಾನೀಯಾದ್ ವಿಪ್ರಕೃಷ್ಟೇ ಚಾಧ್ವನಿ ತತೋ ಹಿಮವಾನ್ ಯತ್ರಾಸೌ ಪ್ರತಿವಸತೀತಿ ॥5॥
ನಾನು ಅವನನ್ನು ಕುರಿತು ಪುನಃ ಹಿಮಾಲಯದಲ್ಲಿ ಪ್ರಾಕಾರಕರ್ಣನೆಂಬ ಗೂಬೆಯು ವಾಸಮಾಡುತ್ತದೆ. ಅವನು ನಿನ್ನನ್ನು ಒಂದುಪಕ್ಷ ತಿಳಿದಿರಬಹುದು. ಹಿಮಾಲಯದಲ್ಲಿ ದೂರದಲ್ಲಿರುವ ಮಾರ್ಗದಲ್ಲಿ ಅವನು ವಾಸಿಸುತ್ತಾನೆ ಎಂದು ಹೇಳಿದೆನು.
ಸ ಮಾಮಶ್ವೋ ಭೂತ್ವಾ ತತ್ರಾವಹದ್ ಯತ್ರ ಬಭೂವೋಲೂಕಃ ॥6॥
ಅವನು ಅಶ್ವರೂಪವನ್ನು ಧರಿಸಿ ಆ ಉಲೂಕನಿದ್ದ ಕಡೆಗೆ ನನ್ನನ್ನು ಕರೆದುಕೊಂಡು ಹೋದನು.
ಅಥೈನಂ ಸ ರಾಜರ್ಷಿಃ ಪರ್ಯಪೃಚ್ಛತ್ -
ಪ್ರತ್ಯಭಿಜಾನಾತಿ ಮಾಂ ಭವಾನಿತಿ ॥7॥
ಅನಂತರ ಆ ರಾಜರ್ಷಿಯು ಅವನನ್ನು ಕುರಿತು ನನ್ನನ್ನು ಗುರುತಿಸುತ್ತೀಯಾ? ಎಂದು ಕೇಳಿದನು.
ಸ ಮುಹೂರ್ತಂ ಧ್ಯಾತ್ವಾಽಬ್ರವೀದೇನಂ
ನಾಭಿಜಾನೇ ಭವಂತಮಿತಿ ॥8॥
ಆ ಉಲೂಕವು ಒಂದುಮುಹೂರ್ತ ಚಿಂತಿಸಿ ಅವನನ್ನು ಕುರಿತು ನಾನು ನಿನ್ನನ್ನು ಗುರುತಿಸಲಾರೆ ಎಂದು ಹೇಳಿತು.
ಸ ಏವಮುಕ್ತೋ ರಾಜರ್ಷಿರಿಂದ್ರದ್ಯುಮ್ನಃ ಪುನಸ್ತಮೂಲಕಮಬ್ರವೀತ್ - ಅಥಾಸ್ತಿ ಕಶ್ಚಿತ್ ತ್ವತ್ತಶ್ಚಿರಜಾತತರ ಇತಿ ॥9॥
ಹೀಗೆ ಹೇಳಲ್ಪಟ್ಟ ರಾಜರ್ಷಿಯಾದ ಇಂದ್ರದ್ಯುಮ್ನನು ಪುನಃ ಆ ಉಲೂಕವನ್ನು ಕುರಿತು ನಿನಗಿಂತ ಮೊದಲು ಜನಿಸಿದವರು ಯಾರಾದರೂ ಇದ್ದಾರೆಯೇ ಎಂದು ಕೇಳಿದನು.
ಸ ಏವಮುಕ್ತೋಽಬ್ರವೀದೇನಮ್ - ಅಸ್ತಿ ಖಲ್ವಿಂದ್ರದ್ಯುಮ್ನಸರೋ ನಾಮ; ತಸ್ಮಿನ್ ನಾಲೀಜಂಘೋ ನಾಮ ಬಕಃ ಪ್ರತಿವಸತಿ;
ಸೋಽಸ್ಮತ್ತಶಿಚರಜಾತತರಃ ತಂ ಪೃಚ್ಛೇ ॥10॥
ಹೀಗೆ ಕೇಳಲ್ಪಟ್ಟ ಉಲೂಕವು ಅವನನ್ನು ಕುರಿತು ಇಂದ್ರದ್ಯುಮ್ನ ಸರೋವರವೆಂಬ ಒಂದು ಸರೋವರವಿದೆ. ಅಲ್ಲಿ ನಾಲೀಜಂಘವೆಂಬ ಒಂದು ಬಕವು ವಾಸಿಸುತ್ತದೆ. ಅದು ನನಗಿಂತಲೂ ಮೊದಲು ಹುಟ್ಟಿದುದು. ಅದನ್ನು ಕೇಳು ಎಂದು ಹೇಳಿತು.
ತತ ಇಂದ್ರದ್ಯುಮ್ನೋ ಮಾಮುಲೂಕಂ ಚಾದಾಯ
ತತ್ ಸರೋಽಗಚ್ಛತ್; ಯತ್ರಾಸೌ ನಾಲೀಜಂಘೋ
ನಾಮ ಬಕೋ ಬಭೂವ ॥11॥
ಅನಂತರ ಇಂದ್ರದ್ಯುಮ್ನನು ನನ್ನನ್ನೂ ಮತ್ತು ಉಲೂಕವನ್ನೂ ಕರೆದುಕೊಂಡು ನಾಲೀಜಂಘವೆಂಬ ಬಕವು ವಾಸಿಸುವ ಸರೋವರಕ್ಕೆ ಹೋದನು.
ಸೋಽಸ್ಮಾಭಿಃ ಪೃಷ್ಟಃ - ಭವಾನಿಮಮಿಂದ್ರದ್ಯುಮ್ನಂ
ರಾಜಾನಂ ಪ್ರತ್ಯಭಿಜಾನಾತೀತಿ ॥12॥

ನಾವು ಆ ಬಕವನ್ನು ಕುರಿತು ನೀನು ಈ ಇಂದ್ರದ್ಯುಮ್ನರಾಜನನ್ನು ಗುರುತಿಸಬಲ್ಲೆಯಾ? ಎಂದು ಕೇಳಿದೆವು.
ಸ ಏವಮುಕ್ತೋ ಮುಹೂರ್ತಂ ಧ್ಯಾತ್ವಾಽಬ್ರವೀತ್ -
ನಾಭಿಜಾನಾಮಿ ಭವಂತಮಿಂದ್ರದ್ಯುಮ್ನಂ ರಾಜಾನಮಿತಿ ॥13॥
ಆ ಬಕವು ಒಂದು ಮುಹೂರ್ತಕಾಲ ಯೋಚಿಸಿ ಇಂದ್ರದ್ಯುಮ್ನ ರಾಜನಾದ ನಿನ್ನನ್ನು ನಾನು ಗುರುತಿಸಲಾರೆ ಎಂದು ಹೇಳಿತು.
ತತಃ ಸೋಽಸ್ಮಾಭಿಃ ಪೃಷ್ಟಃ - ಅಸ್ತಿ ಕಶ್ಚಿದ್
ಭವತೋಽನ್ಯಶ್ಚಿರಜಾತತರ ಇತಿ ॥14॥
ಆಗ ನಾವು ಆ ಬಕವನ್ನು ನಿನಗಿಂತ ಮೊದಲು ಜನಿಸಿದವರು ಯಾರಾದರೂ ಇದ್ದಾರೆಯೇ? ಎಂದು ಕೇಳಿದೆನು.
ಸ ನೋಽಬ್ರವೀತ್ - ಅಸ್ತಿ ಖಲ್ವಿಹೈವ ಸರಸ್ಯಕೂಪಾರೋ
ನಾಮ ಕಚ್ಛಪಃ ಪ್ರತಿವಸತಿ; ಸ ಮತ್ತಶ್ಚಿರಜಾತತರಃ ಸ ಯದಿ
ಕಥಂಚಿದ್ ವಿಜಾನೀಯಾದಿಮಂ ರಾಜಾನಂ ತಂ ಪೃಚ್ಛಾಮೇತಿ ॥15॥
ಆ ಬಕವು ನಮ್ಮನ್ನು ಕುರಿತು ಇಲ್ಲಿಯೇ ಸರೋವರದಲ್ಲಿ ಅಕೂಪಾರವೆಂಬ ಆಮೆಯು ವಾಸಿಸುತ್ತಿದೆ. ಅದು ನನಗಿಂತ ಮೊದಲು ಜನಿಸಿದುದು. ಅದು ಒಂದುಪಕ್ಷ ಈ ರಾಜನನ್ನು ತಿಳಿದಿರಬಹುದು. ಅದನ್ನು ಕೇಳೋಣ ಎಂದು ಹೇಳಿತು.
ತತಃಸ ಬಕಸ್ತಮಕೂಪಾರಂ ಕಚ್ಛಪಂ ವಿಜ್ಞಾಪಯಾಮಾಸ - ಅಸ್ಮಾಕಮಭಿಪ್ರೇತಂ ಭವಂತಂ ಕಂಚಿದರ್ಥಮಭಿಪ್ರಷ್ಟುಂ
ಸಾಧ್ವಾಗಮ್ಯತಾಂ ತಾವದಿತಿ ॥16॥
ಅನಂತರ ಆ ಬಕವು ಆ ಅಕೂಪಾರ ಆಮೆಗೆ ನಾವು ನಮಗೆ ಅಭಿಪ್ರೇತವಾದ ಒಂದು ಅರ್ಥವನ್ನು ಕೇಳಲು ನಿಮ್ಮ ಬಳಿಗೆ ಬಂದಿದ್ದೇವೆ. ಮೊದಲು ಹೊರಗೆ ಬಾ ಎಂದು ವಿಜ್ಞಾಪನೆಯನ್ನು ಮಾಡಿತು.
ತತ್ ಶ್ರುತ್ವಾ ಕಚ್ಛಪಸ್ತಸ್ಮಾತ್ ಸರಸ ಉತ್ಥಾಯಾಭ್ಯಾಗಚ್ಛದ್
ಯತ್ರ ತಿಷ್ಠಾಮೋ ವಯಮ್ ॥17॥
ಅದನ್ನು ಕೇಳಿದ ಆಮೆಯು ಸರೋವರದಿಂದ ಮೇಲೆದ್ದು ನಾವಿದ್ದ ಕಡೆಗೆ ಬಂದಿತು.
ತಸ್ಯ ಸರಸಸ್ತೀರೇ ಆಗತಂ ಚೈನಂ ವಯಂ ಪೃಚ್ಛಾಮಃ - ಭವಾನಿಂದ್ರದ್ಯುಮ್ನಂ ರಾಜಾನಮಭಿಜಾನಾತೀತಿ ॥18॥
ಸರೋವರದ ತೀರಕ್ಕೆ ಬಂದ ಆ ಆಮೆಯನ್ನು ಕುರಿತು ನಾವು ನೀನು ಈ ಇಂದ್ರದ್ಯುಮ್ನರಾಜನನ್ನು ಬಲ್ಲೆಯಾ ಎಂದು ಕೇಳಿದೆವು.
ಸ ಮುಹೂರ್ತಂ ಧ್ಯಾತ್ವಾ ಬಾಷ್ಪಸಂಪೂರ್ಣನಯನ
ಉದ್ವಿಗ್ನಹೃದಯೋ ವೇಪಮಾನೋ ವಿಸಂಜ್ಞಕಲ್ಪಃ ಪ್ರಾಂಜಲಿರಬ್ರವೀತ್ - ಕಿಮಹಮೇನಂ ನ ಪ್ರತ್ಯಭಿಜಾನಾಮಿ ಅಹಂ ಹ್ಯನೇನಾ
ಸಕೃತ್ ತತ್ರ ಅಗ್ನಿಚಿತಿಷು ಪಾತಿತಪೂರ್ವಃ ॥19॥
ಅದು ಒಂದು ಮುಹೂರ್ತದ ಕಾಲ ಯೋಚಿಸಿ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಉದ್ವೇಗವುಳ್ಳ ಮನಸ್ಸಿನಿಂದ ನಡುಗುತ್ತಾ ಜ್ಞಾನವನ್ನೇ ಕಳೆದುಕೊಂಡವರಂತೆ ಆಗಿ ಕೈಗಳನ್ನು ಜೋಡಿಸಿ ನಾನು ಇವನನ್ನು ಹೇಗೆ ತಿಳಿಯದೇ ಇರಲು ಸಾಧ್ಯ! ಇವನು ಯಾಗಗಳನ್ನು ಮಾಡುವಾಗ ಅನೇಕಬಾರಿ ನನ್ನನ್ನು ಹಿಂದೆ ಅಗ್ನಿಯಿಲ್ಲದ ಕಟ್ಟಿಗೆಗಳಲ್ಲಿ (ಸಮಿತ್ತುಗಳಲ್ಲಿ) ಕೆಡವಿದ್ದಾನೆ (ಇದರಿಂದ ಇಂದ್ರದ್ಯುಮ್ನನ ದಯೆಯು ತಿಳಿದುಬರುತ್ತದೆ).
ಸರಶ್ಚೇದಮಸ್ಯ ದಕ್ಷಿಣೋದಕದತ್ತಾಭಿರ್ಗೋಭಿರತಿಕ್ರಮಮಾಣಾಭಿಃ ಕೃತಮ್; ಅತ್ರ ಚಾಹಂ ಪ್ರತಿವಸಾಮೀತಿ ॥20॥
ಈ ಸರೋವರವಾದರೂ ಅವನು ದಕ್ಷಿಣಾಜಲಪೂರ್ವಕವಾಗಿ ದಾನಮಾಡಿದ ಗೋವುಗಳು ಆ ದಕ್ಷಿಣಾಜಲವನ್ನು ದಾಟುವಾಗ ಉಂಟಾದುದು. ಇಲ್ಲಿ ನಾನು ವಾಸಮಾಡುತ್ತೇನೆ.
ಅಥೈತತ್ ಕಚ್ಛಪೇನೋದಾಹೃತಂ ಶ್ರುತ್ವಾ ಸಮನಂತರಂ
ದೇವಲೋಕಾದ್ ದೇವರಥಃ ಪ್ರಾದುರಾಸೀದ್ ವಾಚೋಽಶ್ರೂಯಂತ ಇಂದ್ರದ್ಯುಮ್ನಂ ಪ್ರತಿ - ಪ್ರಸುತತಸ್ತೇ ಸ್ವರ್ಗೋ ಯಥೋಚಿತಂ
ಸ್ಥಾನಂ ಪ್ರತಿಪದ್ಯಸ್ವ ಕೀರ್ತಿಮಾನವ್ಯಗ್ರೋ ಯಾಹೀತಿ ॥21॥
ಆಮೆಯು ಹೇಳಿದ ಈ ಮಾತುಗಳನ್ನು ನಾವು ಕೇಳಿದ ತಕ್ಷಣವೇ ದೇವಲೋಕದಿಂದ ದೇವರಥವು ಪ್ರಾದುರ್ಭೂತವಾಯಿತು. ಇಂದ್ರದ್ಯುಮ್ನನನ್ನು ಕುರಿತು ಆಡಿದ `ನಿನ್ನ ಸ್ವರ್ಗವು ನಿನಗೆ ಮುಂದುವರಿದಿದೆ. ನೀನು ಯೋಗ್ಯವಾದ ಸ್ಥಾನವನ್ನು ಪುನಃ ಹೊಂದು. ನಿನ್ನ ಕೀರ್ತಿಯು ಭೂಲೋಕದಲ್ಲಿ ಸ್ಥಿರವಾಗಿದೆ. ಯಾವ ವಿಷಾದವಿಲ್ಲದೆ ಇಲ್ಲಿಂದ ಹೊರಡು' ಎಂಬ ಮಾತುಗಳು ಕೇಳಿಬಂದವು.
ದಿವಂ ಸ್ಪೃಶತಿ ಭೂಮಿಂ ಚ ಶಬ್ದಃ ಪುಣ್ಯಸ್ಯ ಕರ್ಮಣಃ |
ಯಾವತ್ ಸ ಶಬ್ದೋ ಭವತಿ ತಾವತ್ ಸ್ವರ್ಗೇ ಮಹೀಯತೇ ॥22॥
ಮನುಷ್ಯನು ಮಾಡಿದ ಪುಣ್ಯಕರ್ಮದ ಶಬ್ದವು (ಕೀರ್ತಿಯು) ಎಲ್ಲಿಯವರೆಗೆ ಸ್ವರ್ಗ ಮತ್ತು ಭೂಮಿಗಳನ್ನು ಸ್ಪರ್ಶಮಾಡುತ್ತದೆಯೋ ಅಲ್ಲಿಯವರೆಗೆ ಮನುಷ್ಯನು ಸ್ವರ್ಗದಲ್ಲಿ ಮೆರೆಯುತ್ತಾನೆ.
ಅಕೀರ್ತಿಃ ಕೀರ್ತ್ಯತೇ ಲೋಕೇ ಯಸ್ಯ ಭೂತಸ್ಯ ಕಸ್ಯಚಿತ್ |
ಪತತ್ಯೇವಾಧಮಾಂಲ್ಲೋಕಾನ್ ಯಾವಚ್ಛಬ್ದಃ ಸ ಕೀರ್ತ್ಯತೇ ॥23॥
ಯಾವನಿಗೆ ಭೂಲೋಕದಲ್ಲಿ ಅಕೀರ್ತಿಯು ಹೇಳಲ್ಪಡುತ್ತದೆಯೋ ಅವನು ಅಕೀರ್ತಿಯ ಶಬ್ದವಿರುವವರೆಗೆ ಅಧಃಪಾತವನ್ನು ಹೊಂದಿ ಅಧಮಲೋಕಗಳಲ್ಲಿ ಇರುತ್ತಾನೆ.
ತಸ್ಮಾತ್ - ಕಲ್ಯಾಣವೃತ್ತಃ ಸ್ಯಾದತ್ಯಂತಾಯ ನರೋ ಭಾವಿ |
ವಿಹಾಯ ವೃತ್ತಂ ಪಾಪಿಷ್ಠಂ ಧರ್ಮಮೇವಾಭಿಸಂಶ್ರಯೇತ್ ॥24॥
ಆದುದರಿಂದ ಭೂಮಿಯಲ್ಲಿ ಮನುಷ್ಯನು ಅತ್ಯಂತ ಕಲ್ಯಾಣಯುಕ್ತವಾದ ನಡತೆಯನ್ನು ಹೊಂದಿರಬೇಕು. ಪಾಪಿಷ್ಠವಾದ ನಡತೆಯನ್ನು ಬಿಟ್ಟು ಧರ್ಮವನ್ನೇ ಆಶ್ರಯಿಸಬೇಕು.
ಇತ್ಯೇತಚ್ಛ್ರುತ್ವಾ ಸ ರಾಜಾಽಬ್ರವೀತ್ -

ತಿಷ್ಠ ತಾವದ್ಯಾವದಿದಾನೀಮಿಮೌ ವೃದ್ಧೌ
ಯಥಾಸ್ಥಾನಂ ಪ್ರತಿಪಾದಯಾಮೀತಿ ॥25॥
ಈ ಮಾತನ್ನು ಕೇಳಿದ ಆ ಇಂದ್ರದ್ಯುಮ್ನರಾಜನು (ದೇವದೂತನನ್ನು ಕುರಿತು) ನಾನು ಈ ಇಬ್ಬರು ವೃದ್ಧರನ್ನೂ ಅವರ ಸ್ಥಾನಕ್ಕೆ ಸೇರಿಸಿ ಬರುವವರೆಗೆ ಸ್ವಲ್ಪ ನಿಲ್ಲು ಎಂದು ಹೇಳಿದನು.
ಮಾಂ ಪ್ರಕಾರಕರ್ಣ ಚೋಲೂಕಂ ಯಥೋಚಿತೇ ಸ್ಥಾನೇ ಪ್ರತಿಪಾದ್ಯ ಸಃ ದೇವಯಾನೇನ ಸಂಸಿದ್ಧೋ ಯಥೋಚಿತಂ ಸ್ಥಾನಂ ಪ್ರತಿಪನ್ನಃ ॥26॥
ನನ್ನನ್ನೂ ಪ್ರಾಕಾರಕರ್ಣ ಉಲೂಕನನ್ನೂ ಯೋಗ್ಯವಾದ ಸ್ಥಾನದಲ್ಲಿ ಸೇರಿಸಿ ಅವನು ಸಂಸಿದ್ಧನಾಗಿ ದೇವಯಾನದಿಂದ ಪ್ರಯಾಣ ಮಾಡಿ ತನಗೆ ಉಚಿತವಾದ ಸ್ಥಾನವನ್ನು ಹೊಂದಿದನು.
ಏವಂ ಮಯಾಽನುಭೂತಂ ಚಿರಜೀವಿನಾ ದೃಷ್ಟಮಿತಿ ಪಾಂಡವಾನುವಾಚ ಮಾರ್ಕಂಡೇಯಃ ॥27॥
ಇದು ಚಿರಜೀವಿಯಾದ ನನ್ನಿಂದ ಅನುಭೂತವಾದುದು ಮತ್ತು ನೋಡಲ್ಪಟ್ಟದ್ದು ಎಂದು ಪಾಂಡವರನ್ನು ಕುರಿತು ಮಾರ್ಕಂಡೇಯರು ಹೇಳಿದರು.
ತಮೃಷಿಂ ಪಾಂಡವಾಶ್ಚೋಚುಃ ಪ್ರೀತಾಃ ಸಾಧು ಶೋಭನಂ
ಕೃತಂ ಭವತಾ; ರಾಜಾನಮಿಂದ್ರದ್ಯುಮ್ನಂ ಸ್ವರ್ಗಲೋಕಾಚ್ಚ್ಯುತಂ
ಪುನಃ ಸ್ವರ್ಗಲೋಕಂ ಪ್ರತಿಪಾದಯತೇತಿ ॥28॥
ಪಾಂಡವರೂ ಆ ಋಷಿಗಳೂ ಕುರಿತು ನಾವು ಸಂತುಷ್ಟರಾಗಿದ್ದೇವೆ. ಸ್ವರ್ಗಲೋಕದಿಂದ ಬಿದ್ದ ಇಂದ್ರದ್ಯುಮ್ನರಾಜನನ್ನು ಪುನಃ ಸ್ವರ್ಗಲೋಕಕ್ಕೆ ಸೇರಿಸಿ ನೀವು ಒಳ್ಳೆಯ ಕಾರ್ಯವನ್ನು ಮಾಡಿದ್ದೀರಿ ಎಂದು ಹೇಳಿದರು.
ಅಥೈತಾನ್ ಪ್ರತ್ಯಬ್ರವೀದಸೌ - ನನು ದೇವಕೀಪುತ್ರೇಣಾಪಿ
ಕೃಷ್ಣೇನ ನರಕೇ ಮಜ್ಜಮಾನೋ ರಾಜರ್ಷಿರ್ನೃಗಸ್ತಸ್ಮಾತ್
ಕೃಚ್ಛ್ರಾತ್ ಪುನಃ ಸಮ್ಮುದ್ಧೃತ್ಯ ಸ್ವರ್ಗಂ ಪ್ರತಿಪಾದಿತ ಇತಿ ॥29॥
ಆಗ ಆ ಮಾರ್ಕಂಡೇಯರು ಅವರನ್ನು ಕುರಿತು ದೇವಕೀಪುತ್ರನಾದ ಕೃಷ್ಣನೂ ಸಹ ನರಕದಲ್ಲಿ ಮುಳುಗುತ್ತಿದ್ದ ರಾಜರ್ಷಿಯಾದ ನೃಗನನ್ನು ಆ ಕಷ್ಟದಿಂದ ಪಾರುಮಾಡಿ ಸ್ವರ್ಗಕ್ಕೆ ಸೇರಿಸಿದನಷ್ಟೆ ಎಂದು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟಾಶೀತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಖ್ಯಾಪರ್ವಣಿ ರಾಜಮಾಹಾತ್ಮ್ಯೇ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು
* * * *
ನೂರ ಎಂಬತ್ತೊಂಬತ್ತನೆಯ ಅಧ್ಯಾಯ
ಮಾರ್ಕಂಡೇಯರಿಂದ ಧುಂಧುಮಾರೋಪಾಖ್ಯಾನದ ಆರಂಭ.
ಉದಂಕನ ತಪಸ್ಸು, ವಿಷ್ಣುವಿನ ವರದಾನ, ಉದಂಕನಿಂದ
ಕುವಲಾಶ್ವನಿಗೆ ಧುಂಧುವಿನ ವಧೆಯ ಪ್ರೇರಣೆ.
ವೈಶಂಪಾಯನಃ
ಯುಧಿಷ್ಠಿರೋ ಧರ್ಮರಾಜಃ ಪಪ್ರಚ್ಛ ಭರತರ್ಷಭ |
ಮಾರ್ಕಂಡೇಯಂ ತಪೋವೃದ್ಧಂ ದೀರ್ಘಾಯುಷಮಕಲ್ಮಷಮ್ ॥1॥
ವೈಶಂಪಾಯನ ಧರ್ಮರಾಜನಾದ ಯುಧಿಷ್ಠಿರನು ದೀರ್ಘಾಯುಷಿಗಳಾದ ಪಾಪರಹಿತರಾದ ತಪೋವೃದ್ಧರಾದ ಮಾರ್ಕಂಡೇಯರನ್ನು ಪ್ರಶ್ನೆ ಮಾಡಿದನು.
ವಿದಿತಾಸ್ತವ ಧರ್ಮಜ್ಞ ದೇವದಾನವರಾಕ್ಷಸಾಃ |
ರಾಜವಂಶಾಶ್ಚ ವಿವಿಧಾ ಋಷಿವಂಶಾಶ್ಚ ಶಾಶ್ವತಾಃ |
ನ ತೇಽಸ್ತ್ಯವಿದಿತಂ ಕಿಂಚಿದ್ ಅಸ್ಮಿಂಲ್ಲೋಕೇ ದ್ವಿಜರ್ಷಭ ॥2॥
ಧರ್ಮಜ್ಞನರೇ, ನೀವು ದೇವದಾನವರಾಕ್ಷಸರನ್ನೂ, ಅನೇಕ ರಾಜವಂಶಗಳನ್ನೂ ಮತ್ತು ಶಾಶ್ವತವಾದ ಋಷಿವಂಶಗಳನ್ನೂ ತಿಳಿದಿದ್ದೀರಿ. ಬ್ರಾಹ್ಮಣಶ್ರೇಷ್ಠರೇ, ಈ ಲೋಕದಲ್ಲಿ ನಿಮಗೆ ತಿಳಿಯದಿದ್ದುದು ಯಾವುದೂ ಇಲ್ಲ.
ಕಥಂ ವೇತ್ಸಿ ಮುನೇ ವಂಶಾನ್ ಮನುಷ್ಯೋರಗರಕ್ಷಸಾಮ್ |
ಸುಪರ್ಣಕಿನ್ನರಾಣಾಂ ಚ ಯಕ್ಷಾಣಾಂ ಚ ಮಹೌಜಸಾಮ್ ॥3॥
ಏತದಿಚ್ಛಾಮಿ ಭಗವನ್ ತತ್ತ್ವೇನ ಕಥಿತಂ ದ್ವಿಜ ॥4॥
ಎಲೈ ಋಷಿಗಳೇ, ನೀವು ಮನುಷ್ಯೋರಗರಾಕ್ಷಸರ ವಂಶಗಳನ್ನೂ, ಸುಪರ್ಣ ಕಿನ್ನರರ ವಂಶಗಳನ್ನೂ, ಮಹಾಪ್ರತಾಪಶಾಲಿಗಳಾದ ಯಕ್ಷರ ವಂಶಗಳನ್ನೂ ಹೇಗೆ ತಿಳಿದಿದ್ದೀರಿ? ಪೂಜ್ಯರಾದ ಬ್ರಾಹ್ಮಣರೇ, ನಾನು ಇದನ್ನು ನಿಮ್ಮ ಮಾತಿನಿಂದ ತಿಳಿಯಲು ಬಯಸುತ್ತೇನೆ.

ಕುವಲಾಶ್ವ ಇತಿ ಖ್ಯಾತ ಇಕ್ಷ್ವಾಕುರಪರಾಜಿತಃ |
ಕಥಂ ನಾಮವಿಪರ್ಯಾಸಾದ್ ಧುಂಧುಮಾರತ್ವಮಾಗತಃ ॥5॥
ಕುವಲಾಶ್ವನೆಂದು ಪ್ರಸಿದ್ಧನಾದ ಜಯಶಾಲಿಯಾದ ಇಕ್ಷ್ವಾಕುರಾಜನಿಗೆ ಹೆಸರು ವ್ಯತ್ಯಾಸವಾಗಿ ಹೇಗೆ ಧುಂಧುಮಾರನೆಂಬ ಹೆಸರು ಬಂದಿತು?

ಏತದಿಚ್ಛಾಮಿ ತತ್ತ್ವೇನ ಜ್ಞಾತುಂ ಭಾರ್ಗವಸತ್ತಮ |
ವಿಪರ್ಯಸ್ತಂ ಯಥಾ ನಾಮ ಕುವಲಾಶ್ವಸ್ಯ ಧೀಮತಃ ॥6॥
ಎಲೈ ಭಾರ್ಗವಶ್ರೇಷ್ಠರೇ, ಮೇಧಾವಿಯಾದ ಕುವಲಾಶ್ವನಿಗೆ ಈ ನಾಮವಿಪರ್ಯಾಸವು ಹೇಗೆ ಉಂಟಾಯಿತೆಂದು ಸರಿಯಾಗಿ ತಿಳಿಯಲು ಬಯಸುತ್ತೇನೆ.
ಮಾರ್ಕಂಡೇಯಃ
ಹಂತ ತೇ ಕಥಯಿಷ್ಯಾಮಿ ಶೃಣು ರಾಜನ್ ಯುಧಿಷ್ಠಿರ |
ಧರ್ಮಿಷ್ಠಮಿದಮಾಖ್ಯಾನಂ ಧುಂಧುಮಾರಸ್ಯ ತಚ್ಛೃಣು ॥7॥
ಮಾರ್ಕಂಡೇಯ ರಾಜನಾದ ಯುಧಿಷ್ಠಿರನೇ, ಬಹಳ ಸಂತೋಷ. ನಿನಗೆ ಧರ್ಮಿಷ್ಠವಾದ ಈ ಧುಂಧುಮಾರನ ಕಥೆಯನ್ನು ಹೇಳುವೆನು. ಅದನ್ನು ಕೇಳು.
ಯಥಾ ಸ ರಾಜಾ ಐಕ್ಷ್ವಾಕಃ ಕುವಲಾಶ್ವೋ ಮಹೀಪತಿಃ |
ಧುಂಧುಮಾರತ್ವಮಗಮತ್ ತಚ್ಛೃಣುಷ್ವ ಮಹೀಪತೇ ॥8॥
ಎಲೈ ಮಹೀಪತಿಯೇ, ಇಕ್ಷ್ವಾಕು ವಂಶದ ರಾಜನಾದ ಕುವಲಾಶ್ವನು ಹೇಗೆ ಧುಂಧುಮಾರನಾದನು ಎಂಬುದನ್ನೂ ಕೇಳು.
ಮಹರ್ಷಿರ್ವಿಶ್ರುತಸ್ತಾತ ಉದಂಕ ಇತಿ ಭಾರತ |
ಮರುಧನ್ವಸು ರಮ್ಯೇಷು ಆಶ್ರಮಸ್ತಸ್ಯ ಕೌರವ ॥9॥
ಎಲೈ ಭಾರತನೇ, ಉದಂಕನೆಂಬ ಪ್ರಖ್ಯಾತನಾದ ಮಹರ್ಷಿ ಇದ್ದನು. ಎಲೈ ಪ್ರೀತಿಪಾತ್ರನಾದ ಕೌರವನೇ, ಮರುಭೂಮಿಯ ಒಂದು ರಮ್ಯವಾದ ಪ್ರದೇಶದಲ್ಲಿ ಅವನ ಆಶ್ರಮವಿದ್ದಿತು.
ಉದಂಕಸ್ತು ಮಹಾತೇಜಾಃ ತಪೋಽತಪ್ಯತ್ ಸುದುಶ್ಚರಮ್ |
ಆರಿರಾಧಯಿಷುರ್ವಿಷ್ಣುಂ ಬಹೂನ್ ವರ್ಷಗಣಾನ್ ವಿಭೋ ॥10॥
ಎಲೈ ವಿಭುವೇ, ಮಹಾತೇಜಸ್ವಿಯಾದ ಉದಂಕನು ವಿಷ್ಣುವನ್ನು ಆರಾಧಿಸುತ್ತಾ ಅನೇಕವರ್ಷಗಳ ಕಾಲ ಬಹಳ ದುಷ್ಕರವಾದ ತಪಸ್ಸನ್ನು ಮಾಡಿದನು.
ತಸ್ಯ ಪ್ರೀತಃ ಸ ಭಗವಾನ್ ಸಾಕ್ಷಾದ್ದರ್ಶನಮೇಯಿವಾನ್ |
ದೃಷ್ಟ್ವಾ ಮಹರ್ಷಿರ್ವಿಷ್ಣುಂ ತು ತುಷ್ಟಾವ ವಿವಿಧೈಃಸ್ತವೈಃ ॥11॥
ಅವನಿಗೆ ಪ್ರಸನ್ನನಾದ ಭಗವಂತನು ತಾನೇ ದರ್ಶನವನ್ನು ಕೊಟ್ಟನು. ಮಹರ್ಷಿಯು ವಿಷ್ಣುವನ್ನು ನೋಡಿ ಅನೇಕ ಸ್ತೋತ್ರಗಳಿಂದ ಸ್ತೋತ್ರಮಾಡಿದನು.
ತ್ವಯಾ ದೇವ ಪ್ರಜಾಃಸರ್ವಾಃ ಸಸುರಾಸುರಮಾನವಾಃ |
ಸ್ಥಾವರಾಣಿ ಚ ಭೂತಾನಿ ಜಂಗಮಾನಿ ಚ ಸರ್ವಶಃ ॥12॥
ಬ್ರಹ್ಮ ವೇದಾಶ್ಚ ವೇದ್ಯಂ ಚ ತ್ವಯಾ ಸೃಷ್ಟಂ ಮಹಾದ್ಯುತೇ |
ಶಿರಸ್ತೇ ಗಗನಂ ದೇವ ನೇತ್ರೇ ಶಶಿದಿವಾಕರೌ ॥13॥
ನಿಃಶ್ವಾಸಃ ಪವನಶ್ಚಾಪಿ ತೇಜೋಽಗ್ನಿಶ್ಚ ತವಾಚ್ಯುತ |
ಬಾಹವಸ್ತೇ ದಿಶಃ ಸರ್ವಾಃ ಕುಕ್ಷಿಶ್ಚಾಪಿ ಮಹಾರ್ಣವಃ ॥14॥
ಊರೂ ತೇ ಪರ್ವತಾ ದೇವ ಖಂ ನಾಭಿರ್ಮಧುಸೂದನ |
ಪಾದೌ ತೇ ಪೃಥಿವೀ ಚೈವ ರೋಮಾಣ್ಯೋಷಧಯಸ್ತವ ॥15॥
ಎಲೈ ಮಹಾಕಾಂತಿಯುಳ್ಳ ದೇವನೇ, ನೀನು ಸುರರನ್ನೂ, ಅಸುರರನ್ನೂ, ಮಾನವರನ್ನೂ ಎಲ್ಲಾ ಸ್ಥಾವರಜಂಗಮ ಪ್ರಾಣಿಗಳನ್ನೂ ಬ್ರಾಹ್ಮಣಾದಿ ಜಾತಿಗಳನ್ನೂ, ವೇದಗಳನ್ನೂ, ವೇದ್ಯವಾದ ಎಲ್ಲಾ ವಸುತಗಳನ್ನೂ ಸೃಷ್ಟಿಸಿದ್ದೀಯೆ. ದೇವನೇ, ನಿನ್ನ ಶಿರಸ್ಸಿನಿಂದ ಗಗನವು ಜನಿಸಿದೆ. ನೇತ್ರಗಳಿಂದ ಚಂದ್ರಸೂರ್ಯರು ಜನಿಸಿದ್ದಾರೆ. ಶ್ವಾಸದಿಂದ ವಾಯುವು, ತೇಜಸ್ಸಿನಿಂದ ಅಗ್ನಿಯು, ಬಾಹುಗಳಿಂದ ದಿಕ್ಕುಗಳು, ಉದರದಿಂದ ಸಮುದ್ರವು ಜನಿಸಿವೆ. ಎಲೈ ದೇವನೇ, ನಿನ್ನ ತೊಡೆಗಳಿಂದ ಪರ್ವತಗಳು, ಎಲೈ ಮಧುಸೂದನನೇ, ನಾಭಿಯಿಂದ ಅಂತರಿಕ್ಷವೂ, ಪಾದಗಳಿಂದ ಪೃಥಿವಿಯೂ ಮತ್ತು ರೋಮಗಳಿಂದ ಓಷಧಿ ವನಸ್ಪತಿಗಳೂ ಜನಿಸಿವೆ.
ಇಂದ್ರಸೋಮಾಗ್ನಿವರುಣಾ ದೇವಾಸುರಮಹೋರಗಾಃ |
ಪ್ರಹ್ವಾಸ್ತ್ವಾಮುಪತಿಷ್ಠಂತಿ ಸ್ತುವಂತೋ ವಿವಿಧೈಃ ಸ್ತವೈಃ ॥16॥
ಇಂದ್ರ, ಸೋಮ, ಅಗ್ನಿ, ವರುಣ ಮೊದಲಾದ ದೇವತೆಗಳೂ, ಅಸುರರೂ, ಮಹಾಸರ್ಪಗಳೂ ಅನೇಕ ಸ್ತೋತ್ರಗಳಿಂದ ನಿನ್ನನ್ನು ಸ್ತೋತ್ರಮಾಡುತ್ತಾ ವಿನಯದಿಂದ ನಿನ್ನ ಉಪಾಸನೆಯನ್ನು ಮಾಡುತ್ತಾರೆ.
ತ್ವಯಾ ವ್ಯಾಪ್ತಾನಿ ಸರ್ವಾಣಿ ಭೂತಾನಿ ಭುವನೇಶ್ವರ |
ಯೋಗಿನಃ ಸುಮಹಾವೀರ್ಯಾಃ ಸ್ತುವಂತಿ ತ್ವಾಂ ಮಹರ್ಷಯಃ ॥17॥
ಭುವನೇಶ್ವರನೇ, ನೀನು ಎಲ್ಲಾ ವಸ್ತುಗಳನ್ನೂ ವ್ಯಾಪಿಸಿದ್ದೀಯೆ. ಮಹಾಸಾಮರ್ಥ್ಯವುಳ್ಳ ಯೋಗಿಗಳಾದ ಮಹರ್ಷಿಗಳು ನಿನ್ನನ್ನು ಸ್ತೋತ್ರಮಾಡುತ್ತಾರೆ.
ತ್ವಯಿ ತುಷ್ಟೇ ಜಗಚ್ಛಾಂತಂ ತ್ವಯಿ ರುಷ್ಟೇ ಮಹದ್ಭಯಮ್ |
ಭಯಾನಾಮಪನೇತಾಽಸಿ ತ್ವಮೇಕಃ ಪುರುಷೋತ್ತಮ ॥18॥
ಪುರುಷೋತ್ತಮನೇ, ನೀನು ಪ್ರಸನ್ನನಾಗಿದ್ದರೆ ಜಗತ್ತಿನಲ್ಲಿ ಶಾಂತಿ ಇರುತ್ತದೆ. ನೀನು ಕೋಪಗೊಂಡರೆ ದೊಡ್ಡ ಭಯವುಂಟಾಗುತ್ತದೆ. ನೀನೊಬ್ಬನೇ ಎಲ್ಲ ಭಯಗಳನ್ನೂ ನಿವಾರಣೆ ಮಾಡುವವನಾಗಿದ್ದೀಯೆ.
ದೇವಾನಾಂ ಮಾನುಷಾಣಾಂ ಚ ಸರ್ವಭೂತಸುಖಾವಹಃ |

ತ್ರಿಭಿರ್ವಿಕ್ರಮಣೈರ್ದೇವ ತ್ರಯೋ ಲೋಕಾಸ್ತ್ವಯಾ ವೃತಾಃ |
ಅಸುರಾಣಾಂ ಸಮೃದ್ಧಾನಾಂ ವಿನಾಶಶ್ಚ ತ್ವಯಾ ಕೃತಃ ॥19॥
ದೇವತೆಗಳಿಗೂ ಮನುಷ್ಯರಿಗೂ ಮತ್ತು ಎಲ್ಲಾ ಪ್ರಾಣಿಗಳಿಗೂ ಸುಖವನ್ನು ಕೊಡುವವನಾಗಿದ್ದೀಯೆ. ನಿನ್ನ ಮೂರುಪಾದ ವಿಕ್ಷೇಪಗಳಿಂದ ಮೂರು ಲೋಕಗಳನ್ನೂ ಆವರಿಸಿದ್ದೀಯೆ. ಸಮೃದ್ಧರಾದ ಅಸುರರಿಗೆ ನೀನು ವಿನಾಶವನ್ನು ಉಂಟುಮಾಡಿದ್ದೀಯೆ.
ತವ ವಿಕ್ರಮಣೈರ್ದೇವ ನಿರ್ವಾಣಮಗಮನ್ ಪರಮ್ |
ಪರಾಭವಂ ಚ ದೈತ್ಯೇಂದ್ರಾಃ ತ್ವಯಿ ಕ್ರುದ್ಧೇ ಮಹಾದ್ಯುತೇ ॥20॥
ದೇವನೇ, ನಿನ್ನ ಸಾಮರ್ಥ್ಯದಿಂದ ದೈತ್ಯೇಂದ್ರರು ಸಂಪೂರ್ಣ ವಿನಾಶವನ್ನು ಹೊಂದಿದ್ದಾರೆ. ಮಹಾತೇಜಸ್ವಿಯೇ, ನಿನ್ನ ಕ್ರೋಧದಿಂದ ಅವರು ಪರಾಭವವನ್ನೂ ಹೊಂದಿದ್ದಾರೆ.
ತ್ವಂ ಹಿ ಕರ್ತಾ ವಿಕರ್ತಾ ಚ ಭೂತಾನಾಮಿಹ ಸರ್ವಶಃ |
ಆರಾಧಯಿತ್ವಾ ತ್ವಾಂ ದೇವಾಃ ಸುಖಮೇಧಂತಿ ನಿತ್ಯಶಃ ॥21॥
ನೀನೇ ಎಲ್ಲ ಜೀವರನ್ನೂ ಸೃಷ್ಟಿಮಾಡುವವನು ಮತ್ತು ಸಂಹಾರಮಾಡುವವನು. ನಿನ್ನ ಆರಾಧನೆಯನ್ನು ಮಾಡಿ ದೇವತೆಗಳು ಯಾವಾಗಲೂ ಸುಖವನ್ನು ಪಡೆಯುತ್ತಾರೆ.
ಏವಂ ಸ್ತುತೋ ಹೃಷೀಕೇಶ ಉದಂಕೇನ ಮಹಾತ್ಮನಾ |
ಉದಂಕಮಬ್ರವೀದ್ ವಿಷ್ಣುಃ ಪ್ರೀತಸ್ತೇऽಹಂ ವರಂ ವೃಣು ॥22॥
ಹೀಗೆ ಮಹಾತ್ಮನಾದ ಉದಂಕನಿಂದ ಸ್ತೋತ್ರಮಾಡಲ್ಪಟ್ಟ ಸರ್ವೇಂದ್ರಿಯ ಪ್ರೇರಕನಾದ ಹೃಷೀಕೇಶನು ಉದಂಕನನ್ನು ಕುರಿತು ನಾನು ನಿನಗೆ ಪ್ರಸನ್ನನಾಗಿದ್ದೇನೆ ವರವನ್ನು ಬೇಡು ಎಂದು ಹೇಳಿದನು.
ಉದಂಕಃ
ಪರ್ಯಾಪ್ತೋ ಮೇ ವರೋ ಹ್ಯೇಷ ಯದಹಂ ದೃಷ್ಟವಾನ್ ಹರಿಮ್ |
ಪುರುಷಂ ಶಾಶ್ವತಂ ದಿವ್ಯಂ ಸ್ರಷ್ಟಾರಂ ಜಗತಃ ಪ್ರಭುಮ್ ॥23॥
ಉದಂಕ ಶಾಶ್ವತನೂ, ದಿವ್ಯಪುರುಷನೂ, ಜಗತ್ತಿನ ಸೃಷ್ಟಿಕರ್ತನೂ, ಪ್ರಭುವೂ ಆದ ಹರಿಯಾದ ನಿನ್ನನ್ನು ನಾನು ನೋಡಿರುವುದೇ ಶ್ರೇಷ್ಠವರವಾಗಿದೆ. ಬೇರೆ ವರವು ಬೇಡ.
ಶ್ರೀಭಗವಾನ್
ಪ್ರೀತಸ್ತೇऽಹಮಲೌಲ್ಯೇನ ಭಕ್ತ್ಯಾ ಚ ದ್ವಿಜಸತ್ತಮ |
ಅವಶ್ಯಂ ಹಿ ತ್ವಯಾ ವಿದ್ವನ್ ಮತ್ತೋ ಗ್ರಾಹ್ಯೋ ವರೋ ದ್ವಿಜ ॥24॥
ಶ್ರೀಭಗವಾನ್- ಎಲೈ ದ್ವಿಜಶ್ರೇಷ್ಠನೇ, ನಿನ್ನ ಅಚಾಂಚಲ್ಯದಿಂದಲೂ ಮತ್ತು ಭಕ್ತಿಯಿಂದಲೂ ನಾನು ಸಂತೋಷಗೊಂಡಿದ್ದೇನೆ. ಜ್ಞಾನಿಯಾದ ಬ್ರಾಹ್ಮಣನೇ ನೀನು ಅವಶ್ಯವಾಗಿ ನನ್ನಿಂದ ವರವನ್ನು ಸ್ವೀಕರಿಸಬೇಕು.
ಏವಂ ಸಂಚೋದ್ಯಮಾನಸ್ತು ವರೇಣ ಹರಿಣಾ ತದಾ |
ಉದಂಕಃ ಪ್ರಾಂಜಲಿರ್ವವ್ರೇ ವರಂ ಭರತಸತ್ತಮ ॥25॥
ಎಲೈ ಭರತಸತ್ತಮನೇ, ಹೀಗೆ ಹರಿಯಿಂದ ಒತ್ತಾಯ ಮಾಡಲ್ಪಟ್ಟ ಉದಂಕನು ಕೈಗಳನ್ನು ಮುಗಿದು ವರವನ್ನು ಬೇಡಿದನು.
ಉದಂಕಃ
ಯದಿ ಮೇ ಭಗವಾನ್ ಪ್ರೀತಃ ಪುಂಡರೀಕನಿಭೇಕ್ಷಣ |
ಧರ್ಮೇ ಸತ್ಯೇ ದಮೇ ಚೈವ ಬುದ್ಧಿರ್ಭವತು ಮೇ ಸದಾ ॥26॥
ಅಭ್ಯಾಸಶ್ಚ ಭವೇದ್ ಭಕ್ತ್ಯಾ ತ್ವಯಿ ನಿತ್ಯಂ ಮಹೇಶ್ವರ ॥27॥
ಉದಂಕ ಭಗವಂತನೇ, ಪುಂಡರೀಕಾಕ್ಷನೇ, ನೀನು ನನಗೆ ಪ್ರಸನ್ನನಾಗಿದ್ದರೆ ನನಗೆ ಯಾವಾಗಲೂ ಧರ್ಮದಲ್ಲಿಯೂ, ಸತ್ಯದಲ್ಲಿಯೂ, ದಮದಲ್ಲಿಯೂ ಬುದ್ಧಿಯುಂಟಾಗಲಿ. ಎಲೈ ಮಹಾಪ್ರಭುವೇ, ನಿನ್ನಲ್ಲಿ ಭಕ್ತಿಯೂ ಯಾವಾಗಲೂ ವೃದ್ಧಿಯನ್ನು ಹೊಂದಲಿ.
ಶ್ರೀಭಗವಾನ್
ಸರ್ವಮೇತದ್ಧಿ ಭವಿತಾ ಮತ್ಪ್ರಸಾದಾತ್ ತವ ದ್ವಿಜ |
ಪ್ರತಿಭಾಸ್ಯತಿ ಯೋಗಶ್ಚ ಯೇನ ಯುಕ್ತೋ ದಿವೌಕಸಾಮ್ |
ತ್ರಯಾಣಾಪಿ ಲೋಕಾನಾಂ ಮಹತ್ ಕಾರ್ಯಂ ಕರಿಷ್ಯಸಿ ॥28॥
ಶ್ರೀಭಗವಾನ್- ಎಲೈ ಬ್ರಾಹ್ಮಣನೇ, ನನ್ನ ಅನುಗ್ರಹದಿಂದ ನಿನಗೆ ಇವೆಲ್ಲವೂ ಉಂಟಾಗುವುದು. ನಿನಗೆ ಯೋಗದ ಪ್ರತಿಭಾನವು ಉಂಟಾಗುವುದು. ಅದರಿಂದ ನೀನು ದೇವತೆಗಳಿಗೂ ಮತ್ತು ಮೂರುಲೋಕಗಳಿಗೂ ಉಪಕಾರವಾಗುವಂತಹ ದೊಡ್ಡ ಕಾರ್ಯವನ್ನು ಮಾಡುವಿ.
ಉತ್ಸಾದನಾರ್ಥಂ ಲೋಕಾನಾಂ ಧುಂಧುರ್ನಾಮ ಮಹಾಸುರಃ |
ತಪಸ್ಯತಿ ತಪೋ ಘೋರಂ ಶೃಣು ಯಸ್ತಂ ಹನಿಷ್ಯತಿ ॥29॥
ಲೋಕಗಳನ್ನು ವಿನಾಶಮಾಡುವ ಉದ್ದೇಶದಿಂದ ಧುಂಧು ಎಂಬ ಮಹಾ ಅಸುರನು ಘೋರವಾದ ತಪಸ್ಸನ್ನು ಮಾಡುತ್ತಿದ್ದಾನೆ. ಅವನನ್ನು ಸಂಹರಿಸುವವನು ಯಾವನು ಎಂದು ಹೇಳುವೆನು, ಅದನ್ನು ಕೇಳು.
ಬೃಹದಶ್ವ ಇತಿ ಖ್ಯಾತೋ ಭವಿಷ್ಯತಿ ಮಹೀಪತಿಃ ॥30॥
ತಸ್ಯ ಪುತ್ರಃ ಶುಚಿರ್ದಾಂತಃ ಕುವಲಾಶ್ವ ಇತಿ ಶ್ರುತಃ |
ಸ ಯೋಗಬಲಮಾಸ್ಥಾಯ ಮಾಮಕಂ ಪಾರ್ಥಿವೋತ್ತಮಃ |
ಶಾಸನಾತ್ ತವ ವಿಪ್ರರ್ಷೇ ಧುಂಧುಮಾರೋ ಭವಿಷ್ಯತಿ ॥31॥

ಬೃಹದಶ್ವ ಎಂಬ ಪ್ರಸಿದ್ಧನಾದ ರಾಜನು ಮುಂದೆ ಉಂಟಾಗುವನು. ಅವನಿಗೆ ಶುಚಿಯೂ ಮತ್ತು ಇಂದ್ರಿಯನಿಗ್ರಹವುಳ್ಳವನೂ ಆದ ಕುವಲಾಶ್ವನೆಂಬ ಪುತ್ರನು ಜನಿಸುವನು. ಆ ಶ್ರೇಷ್ಠರಾಜನು ನನ್ನ ಯೋಗಬಲವನ್ನು ಆಶ್ರಯಿಸಿ ಎಲ್ಲೈ ವಿಪ್ರರ್ಷಿಯೇ, ನಿನ್ನ ಆದೇಶದಿಂದ ಧುಂಧುವನ್ನು ಸಂಹರಿಸುವನು.

ಮಾರ್ಕಂಡೇಯಃ

ಉದಂಕಮೇವಮುಕ್ತ್ವಾ ತು ವಿಷ್ಣುರಂತರಧೀಯತ ॥32॥

ಮಾರ್ಕಂಡೇಯ ಉದಂಕನಿಗೆ ಹೀಗೆ ಹೇಳಿ ವಿಷ್ಣುವು ಅಂತರ್ದಾನವನ್ನು ಹೊಂದಿದನು.

ಇಕ್ಷ್ವಾಕೌ ಸಂಸ್ಥಿತೇ ರಾಜನ್ ಶಶಾದಃ ಪೃಥಿವೀಮಿಮಾಮ್ |
ಪ್ರಾಪ್ತಃ ಪರಮಧರ್ಮಾತ್ಮಾ ಸೋಽಯೋಧ್ಯಾಯಾಂ ನೃಪೋಽಭವತ್ ॥

ರಾಜನೇ, ಇಕ್ಷ್ವಾಕುವು ಸ್ವರ್ಗಸ್ಥನಾದಮೇಲೆ ಶಶಾದನಿಗೆ ಈ ಭೂಮಿಯು ಪ್ರಾಪ್ತವಾಯಿತು. ಪರಮಧರ್ಮಾತ್ಮನಾದ ಅವನು ಅಯೋಧ್ಯೆಯಲ್ಲಿ (ರಾಜಧಾನಿ) ರಾಜನಾದನು.

ಶಶಾದಸ್ಯ ತು ದಾಯಾದಃ ಕಕುತ್ಸ್ಥೋ ನಾಮ ವೀರ್ಯವಾನ್ |
ಅನೇನಾಶ್ಚಾಪಿ ಕಾಕುತ್ಸ್ಥಃ ಪೃಥುಶ್ಚಾನೇನಸಃ ಸುತಃ ॥34॥

ಶಶಾದನ ಪುತ್ರನು ಪರಾಕ್ರಮಿಯಾದ ಕಕುತ್ಸ್ಥನು. ಅನೇನನು ಕಕುತ್ಸ್ಥನ ಪುತ್ರನು. ಪೃಥುವು ಅನೇನನ ಪುತ್ರ.

ವಿಷ್ವಗಶ್ವಃ ಪೃಥೋಃ ಪುತ್ರಃ ತಸ್ಮಾದಾರ್ದ್ರಸ್ತು ಜಜ್ಞಿವಾನ್ |
ಆರ್ದ್ರಾದ್ ಯುವನಾಶ್ವಸ್ತು ಶ್ರಾವಸ್ತಸ್ತಸ್ಯ ಚಾತ್ಮಜಃ ॥35॥

ವಿಷ್ವಗಶ್ವನು ಪೃಥುವಿನ ಪುತ್ರ. ಅವನಿಂದ ಆರ್ದ್ರನು ಜನಿಸಿದನು. ಆರ್ದ್ರನಿಂದ ಯುವನಾಶ್ವ ಮತ್ತು ಶ್ರಾವನು ಯುವನಾಶ್ವನ ಪುತ್ರ.

ಜಜ್ಞೇ ಶ್ರಾವ್ಯಸ್ತತೋ ರಾಜಾ ಶ್ರಾವಸ್ತೀ ಯೇನ ನಿರ್ಮಿತಾ |
ಶ್ರಾವ್ಯಸ್ತಸ್ಯ ತು ದಾಯಾದೋ ಬೃಹದಶ್ವೋ ಮಹಾಬಲಃ ॥36॥

ಶ್ರಾವನ ಮಗ ಶ್ರಾವ್ಯ. ಅವನು ಶ್ರಾವಸ್ತೀ ಪಟ್ಟಣವನ್ನು ನಿರ್ಮಾಣ ಮಾಡಿದನು. ಶ್ರಾವ್ಯನ ಪುತ್ರನು ಮಹಾಬಲನಾದ ಬೃಹದಶ್ವ.

ಬೃಹದಶ್ವಸುತಶ್ಚಾಪಿ ಕುವಲಾಶ್ವ ಇತಿ ಸ್ಮೃತಃ |
ಕುವಲಾಶ್ವಸ್ಯ ಪುತ್ರಾಣಾಂ ಸಹಸ್ರಾಣ್ಯೇಕವಿಶತಿಃ ॥37॥

ಬೃಹದಶ್ವನು ಕುವಲಾಶ್ವ ಎಂದು ಪ್ರಸಿದ್ಧನಾದವನು. ಕುವಲಾಶ್ವನಿಗೆ ಇಪ್ಪತ್ತೊಂದು ಸಾವಿರ ಪುತ್ರರು.

ಸರ್ವೇ ವಿದ್ಯಾಸು ನಿಷ್ಣಾತಾ ಬಲವಂತೋ ದುರಾಸದಾಃ |
ಕುವಲಾಶ್ವಶ್ಚ ಪಿತೃತೋ ಗುಣೈರಭ್ಯಧಿಕೋಽಭವತ್ ॥38॥

ಎಲ್ಲರೂ ಎಲ್ಲ ವಿದ್ಯೆಗಳಲ್ಲೂ ನಿಷ್ಣಾತರು, ಬಲಿಷ್ಠರಾದವರು ಮತ್ತು ಸೋಲಿಸಲು ಅಸಾಧ್ಯರಾದವರು. ಕುವಲಾಶ್ವನು ತನ್ನ ಗುಣಗಳಿಂದ ತನ್ನ ತಂದೆಯನ್ನೂ ಮೀರಿಸಿದನು.

ಸಮಯೇ ತಂ ತತೋ ರಾಜ್ಯೇ ಬೃಹದಶ್ವೋಽಭ್ಯಷೇಯತ್ |
ಕುವಲಾಶ್ವಂ ಮಹಾರಾಜ ಶೂರಮುತ್ತಮಧಾರ್ಮಿಕಮ್ ॥39॥

ಎಲ್ಲೈ ಮಹಾರಾಜನೇ, ಯೋಗ್ಯವಾದ ಸಮಯದಲ್ಲಿ ಬೃಹದಶ್ವನು ಶೂರನೂ, ಉತ್ತಮ ಧಾರ್ಮಿಕನೂ ಆದ ಕುವಲಾಶ್ವನಿಗೆ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು.

ಪುತ್ರಸಂಕ್ರಾಮಿತಶ್ರೀಸ್ತು ಬೃಹದಶ್ವೋ ಮಹೀಪತಿಃ |
ಜಗಾಮ ತಪಸೇ ಧೀಮಾನ್ ತಪೋವನಮಮಿತ್ರಹಾ ॥40॥

ರಾಜನೂ ಶತ್ರುಸಂಹಾರಕನೂ ಆದ ಬೃಹದಶ್ವನು ಪುತ್ರನಿಗೆ ತನ್ನ ಸಂಪತ್ತನ್ನು ವರ್ಗಾಯಿಸಿ ಮೇಧಾವಿಯಾದ ಅವನು ತಪಸ್ಸನ್ನು ಮಾಡಲು ತಪೋವನಕ್ಕೆ ಹೋದನು.

ಅಥ ಶುಶ್ರಾವ ರಾಜರ್ಷಿಂ ತಮುದಂಕೋ ಯುಧಿಷ್ಠಿರ |
ವನಂ ಸಂಪ್ರಸ್ಥಿತಂ ರಾಜನ್ ಬೃಹದಶ್ವಂ ದ್ವಿಜೋತ್ತಮಃ ॥41॥

ಎಲ್ಲೈ ಯುಧಿಷ್ಠಿರ ರಾಜನೇ, ಆಗ ದ್ವಿಜಶ್ರೇಷ್ಠನಾದ ಉದಂಕನು ರಾಜರ್ಷಿಯಾದ ಬೃಹದಶ್ವನು ಕಾಡಿಗೆ ಹೊರಟಿದ್ದಾನೆಂಬ ವಾರ್ತೆಯನ್ನು ಕೇಳಿದನು.

ತಮುದಂಕೋ ಮಹಾತೇಜಾಃ ಸರ್ವಾಸ್ತ್ರವಿದುಷಾಂ ವರಮ್ |
ನ್ಯವಾರಯದಮೇಯಾತ್ಮಾ ಸಮಾಸಾದ್ಯ ಪುರೋತ್ತಮೇ ॥42॥

ಅಚಿಂತ್ಯಶಕ್ತಿಯುಳ್ಳ ಉದಂಕನು ಮಹಾತೇಜಸ್ವಿಯೂ, ಸರ್ವಾಸ್ತ್ರಗಳನ್ನು ಬಲ್ಲವನೂ ಆದ ಬೃಹದಶ್ವನನ್ನು ಅವನ ಶ್ರೇಷ್ಠವಾದ ಪಟ್ಟಣದಲ್ಲಿ ಸಂಧಿಸಿ ಅವನನ್ನು ತಡೆದನು.

ಉದಂಕಃ

ಭವತಾ ರಕ್ಷಣಂ ಕಾರ್ಯಂ ತತ್ ತಾವತ್ ಕರ್ತುಮರ್ಹಸಿ |
ನಿರುದ್ವಿಗ್ನಾ ವಯಂ ರಾಜನ್ ತ್ವತ್ಪ್ರಸಾದಾದ್ ವಸೇಮಹಿ ॥43॥

ಉದಂಕ ನೀನು ರಕ್ಷಣೆಯನ್ನು ಮಾಡಬೇಕಾದವನು. ನೀನು ಈಗ ಅದನ್ನೇ ಮಾಡುವುದು ಯೋಗ್ಯವಾದುದು. ಎಲ್ಲೈ ರಾಜನೇ, ನಿನ್ನ ಅನುಗ್ರಹದಿಂದ ನಾವು ನಿನ್ನ ರಾಜ್ಯದಲ್ಲಿ ನಿರಾತಂಕವಾಗಿ ವಾಸಮಾಡುತ್ತಿದ್ದೇವೆ.

ತ್ವಯಾ ಹಿ ಪೃಥಿವೀ ರಾಜನ್ ರಕ್ಷ್ಯಮಾಣಾ ಮಹಾತ್ಮನಾ |
ಭವಿಷ್ಯತಿ ನಿರುದ್ವಿಗ್ನಾ ನಾರಣ್ಯಂ ಗಂತುಮರ್ಹಸಿ ॥44॥

ಎಲ್ಲೈ ರಾಜನೇ, ಮಹಾತ್ಮನಾದ ನೀನು ಭೂಮಿಯನ್ನು ರಕ್ಷಣೆ ಮಾಡಿದರೆ ಎಲ್ಲವೂ ನಿರಾತಂಕವಾಗುವುದು. ನೀನು ಅರಣ್ಯಕ್ಕೆ

ಹೋಗಬೇಡ.
ಪಾಲನೇ ಹಿ ಮಹಾನ್ ಧರ್ಮಃ ಪ್ರಜಾನಾಮಿಹ ದೃಶ್ಯತೇ |
ನ ತಥಾ ದೃಶ್ಯತೇಽರಣ್ಯೇ ಮಾ ಭೂತ್ ತೇ ಬುದ್ಧಿರೀದೃಶೀ ||45||
ಇಲ್ಲಿ ಪ್ರಜೆಗಳನ್ನು ಪಾಲನೆ ಮಾಡುವುದರಲ್ಲಿ ದೊಡ್ಡ ಧರ್ಮವೇ ಕಾಣುತ್ತದೆ. ಅದು ಅರಣ್ಯವಾಸದಲ್ಲಿ ಕಾಣುವುದಿಲ್ಲ. ಆದ್ದರಿಂದ ನಿನಗೆ ಇಂತಹ ಬುದ್ಧಿ ಉಂಟಾಗುವುದು ಬೇಡ.
ಈದೃಶೋ ನ ಚ ರಾಜೇಂದ್ರ ಧರ್ಮಃ ಕ್ವಚನ ದೃಶ್ಯತೇ |
ಪ್ರಜಾನಾಂ ಪಾಲನೇ ಯೋ ವೈ ಪುರಾ ರಾಜರ್ಷಿಭಿಃ ಕೃತಃ ||46||
ಎಲ್ಲೈ ರಾಜೇಂದ್ರನೇ, ಹಿಂದೆ ರಾಜರ್ಷಿಗಳು ಯಾವ ಪ್ರಜಾಪಾಲನವನ್ನು ರಾಜರಿಗೆ ಧರ್ಮವೆಂದು ಹೇಳಿದ್ದಾರೆಯೋ ಅಂತಹ ಧರ್ಮವು ಬೇರೆ ಯಾವುದೂ ಕಂಡುಬರುವುದಿಲ್ಲ.
ರಕ್ಷಿತವ್ಯಾಃ ಪ್ರಜಾ ರಾಜ್ಞಾ ತಾಸ್ತ್ವಂ ರಕ್ಷಿತುಮರ್ಹಸಿ |
ನಿರುದ್ವಿಗ್ನಸ್ತಪಸ್ತಪ್ತುಂ ನ ಹಿ ಶಕ್ನೋಮಿ ಪಾರ್ಥಿವ ||47||
ರಾಜನು ಪ್ರಜೆಗಳನ್ನು ರಕ್ಷಿಸಬೇಕು. ಆದ್ದರಿಂದ ನೀನೂ ಸಹ ಪ್ರಜೆಗಳನ್ನು ರಕ್ಷಿಸುವುದು ಯೋಗ್ಯವಾದುದು. ಎಲ್ಲೈ ರಾಜನೇ, ಹಾಗೆ ಮಾಡದಿದ್ದರೆ ನಾನು ನಿರಾತಂಕವಾಗಿ ತಪಸ್ಸನ್ನು ಮಾಡಲು ಸಾಧ್ಯವಾಗುವುದಿಲ್ಲ.
ಮಮಾಶ್ರಮಸಮೀಪೇ ಹಿ ಸಮೇಷು ಮರುಧನ್ವಸು |
ಸಮುದ್ರವಾಲುಕಾಪೂರ್ಣ ಉಜ್ಜಾನಕ ಇತಿ ಸ್ಮೃತಃ ||48||
ಮರುಭೂಮಿಯಲ್ಲಿ ಸಮತಟ್ಟಾದ ಒಂದು ದೇಶದಲ್ಲಿ ನನ್ನ ಆಶ್ರಮದ ಸಮೀಪದಲ್ಲಿ ಸಮುದ್ರದ ಮರಳಿನಿಂದ ತುಂಬಿದ ಉಜ್ಜಾನಕ ಎಂಬ ಪ್ರದೇಶವಿದೆ.
ಬಹುಯೋಜನವಿಸ್ತೀರ್ಣೋ ಬಹುಯೋಜನಮಾಯತಃ |
ತತ್ರ ರೌದ್ರೋ ದಾನವೇಂದ್ರೋ ಮಹಾವೀರ್ಯಪರಾಕ್ರಮಃ ||49||
ಮಧುಕೈಟಭಯೋಃ ಪುತ್ರೋ ಧುಂಧುರ್ನಾಮ ಮಹಾಸುರಃ |
ಅಂತರ್ಭೂಮಿಗತೋ ರಾಜನ್ ವಸತ್ಯಮಿತವಿಕ್ರಮಃ |
ತಂ ನಿಹತ್ಯ ಮಹಾರಾಜ ವನಂ ತ್ವಂ ಗಂತುಮರ್ಹಸಿ ||50||
ಅದು ಅನೇಕ ಯೋಜನಗಳಷ್ಟು ಉದ್ದವೂ, ಅನೇಕ ಯೋಜನಗಳಷ್ಟು ಅಗಲವೂ ಆಗಿದೆ. ಅಲ್ಲಿ ಘೋರನಾದ ಮಹಾಬಲಪರಾಮಕ್ರಮವುಳ್ಳ ಮಧುಕೈಟಭರ ಪುತ್ರನಾದ ಧುಂಧು ಎಂಬ ಮಹಾಸುರನು ಅಸಾಧಾರಣ ವಿಕ್ರಮವನ್ನು ಹೊಂದಿದವನಾಗಿ ಭೂಮಿಯ ಒಳಗೆ ವಾಸಿಸುತ್ತಾನೆ. ಎಲ್ಲೈ ಮಹಾರಾಜನೇ, ಅವನನ್ನು ಸಂಹಾರ ಮಾಡಿ ನೀನು ಅರಣ್ಯಕ್ಕೆ ಹೋಗಬೇಕು.
ಶೇತೇ ಸ ಲೋಕನಾಶಾಯ ತಪ ಆಸ್ಥಾಯ ದಾರುಣಮ್ |
ತ್ರಿದಶಾನಾಂ ವಿನಾಶಾಯ ಲೋಕಾನಾಂ ಚಾಪಿ ಪಾರ್ಥಿವ ||51||
ಎಲ್ಲೈ ರಾಜನೇ, ಅವನು ಲೋಕದ ವಿನಾಶಕ್ಕಾಗಿ ಮತ್ತು ದೇವತೆಗಳ ವಿನಾಶಕ್ಕಾಗಿ ದಾರುಣವಾದ ತಪಸ್ಸನ್ನು ಮಾಡುತ್ತಾ ಅಲ್ಲಿ ಮಲಗಿರುತ್ತಾನೆ.
ಅವಧ್ಯೋ ದೈವತಾನಾಂ ಹಿ ದೈತ್ಯಾನಾಮಥ ರಕ್ಷಸಾಮ್ |
ನಾಗಾನಾಮಥ ಯಕ್ಷಾಣಾಂ ಗಂಧರ್ವಾಣಾಂ ಚ ಸರ್ವಶಃ ||52||
ಅವಾಪ್ಯ ಸ ವರಂ ರಾಜನ್ ಸರ್ವಲೋಕಪಿತಾಮಹಾತ್ ||53||
ಎಲ್ಲೈ ರಾಜನೇ, ಅವನು ಸರ್ವಲೋಕಪಿತಾಮಹರಾದ ಬ್ರಹ್ಮದೇವರಿಂದ ವರವನ್ನು ಪಡೆದು ದೇವತೆಗಳಿಂದಲೂ, ದೈತ್ಯರಿಂದಲೂ, ನಾಗಗಳಿಂದಲೂ, ಯಕ್ಷರಿಂದಲೂ, ಗಂಧರ್ವರಿಂದಲೂ ಸರ್ವಥಾ ಅವಧ್ಯನಾಗಿದ್ದಾನೆ.
ತಂ ವಿನಾಶಯ ಭದ್ರಂ ತೇ ಮಾ ತೇ ಬುದ್ಧಿರತೋಽನ್ಯಥಾ |
ಪ್ರಾಪ್ಸ್ಯಸೇ ಮಹತೀಂ ಕೀರ್ತಿಂ ಶಾಶ್ವತೀಮವ್ಯಯಾಂ ಧ್ರುವಾಮ್ ||54||
ಅವನನ್ನು ಸಂಹಾರ ಮಾಡು. ನಿನಗೆ ಮಂಗಳವಾಗಲಿ. ನೀನು ಬೇರೆ ರೀತಿ ಯೋಚಿಸಬೇಡ. ಇದರಿಂದ ನೀನು ಶಾಶ್ವತವಾದ, ನಾಶಹೊಂದದಿರುವ, ಧ್ರುವವಾದ ಮಹಾಕೀರ್ತಿಯನ್ನು ಪಡೆಯುವಿ.
ಕ್ರೂರಸ್ಯ ಸ್ವಪತಸ್ತಸ್ಯ ವಾಲುಕಾಂತರ್ಹಿತಸ್ಯ ವೈ |
ಸಂವತ್ಸರಸ್ಯ ಪರ್ಯಂತೇ ನಿಃಶ್ವಾಸಃ ಸಂಪ್ರವರ್ತತೇ ||55||
ಯದಾ ತದಾ ಭೂಶ್ಚಲತಿ ಸಶೈಲವನಕಾನನಾ |
ತಸ್ಯ ನಿಃಶ್ವಾಸವಾತೇನ ರಜ ಉದ್ಧೂಯತೇ ಮಹತ್ ||56||
ಕ್ರೂರನಾಗಿ ಮರಳಿನಲ್ಲಿ ಅಡಗಿ ನಿದ್ರೆಯನ್ನು ಮಾಡುವ ಅವನಿಗೆ ಒಂದು ವರ್ಷಕ್ಕೊಮ್ಮೆ ದೊಡ್ಡ ನಿಃಶ್ವಾಸ ಉಂಟಾಗುತ್ತದೆ. ಆಗ ಶೈಲವನಕಾನನಗಳಿಂದ ಕೂಡಿದ ಭೂಮಿಯು ಕಂಪಿಸುತ್ತದೆ. ಅವನ ನಿಃಶ್ವಾಸದಿಂದ ಉಂಟಾದ ವಾಯುವಿನಿಂದ ಧೂಳಿನ ದೊಡ್ಡ ಸಮೂಹವು ಮೇಲಕ್ಕೇಳುತ್ತದೆ.
ಆದಿತ್ಯಪಥಮಾಶ್ರಿತ್ಯ ಸಪ್ತಾಹಂ ಭೂಮಿಕಂಪನಮ್ |
ಸವಿಸ್ಫುಲಿಂಗಂ ಸಜ್ವಾಲಂ ಸಧೂಮಂ ಹ್ಯಗ್ನಿದಾರುಣಮ್ |
ನ ತೇನ ರಾಜನ್ ಶಕ್ನೋಮಿ ತಸ್ಮಿನ್ ಸ್ಥಾತುಂ ಸ್ವಆಶ್ರಮೇ ||57||
ಆ ಧೂಳು ಸೂರ್ಯಪಥವನ್ನು ಆವರಿಸುತ್ತದೆ. ಏಳುದಿನಗಳ ಕಾಲ ಭೂಕಂಪವಾಗುತ್ತದೆ. ಕಿಡಿಗಳು ಜ್ವಾಲೆಗಳು ಮತ್ತು ಧೂಮದಿಂದ

ಕೂಡಿದ ದಾರುಣವಾದ ಅಗ್ನಿಯು ಭೂಮಿಯಿಂದ ಹೊರಬರುತ್ತದೆ. ಎಲೈ ರಾಜನೇ, ಆ ಕಾರಣದಿಂದ ನಾನು ನನ್ನ ಆಶ್ರಮದಲ್ಲಿ ಇರಲು ಸಾಧ್ಯವಾಗುವುದಿಲ್ಲ.
ತಂ ವಿನಾಶಯ ರಾಜೇಂದ್ರ ಲೋಕಾನಾಂ ಹಿತಕಾಮ್ಯಯಾ |
ಲೋಕಾಃ ಸ್ವಸ್ಥಾ ಭವಂತ್ವದ್ಯ ತಸ್ಮಿನ್ ವಿನಿಹತೇ ಯುಧಿ ॥58॥
ಎಲೈ ರಾಜೇಂದ್ರನೇ, ಲೋಕಗಳಿಗೆ ಹಿತವನ್ನು ಬಯಸಿ ಅವನನ್ನು ವಿನಾಶಗೊಳಿಸು. ಅವನು ಯುದ್ಧದಲ್ಲಿ ಸಂಹರಿಸಲ್ಪಟ್ಟರೆ ಈ ದಿನ ಎಲ್ಲ ಜನರೂ ಸ್ವಸ್ಥರಾಗುತ್ತಾರೆ.
ಧುಂಧುನಾಮಾನಮತ್ಯುಗ್ರಂ ದಾನವಂ ಘೋರವಿಗ್ರಹಮ್ |
ಸಮರೇ ಘೋರತುಮುಲೇ ವಿನಾಶಯ ಮಹೇಷುಣಾ ॥59॥
ಘೋರ ಶರೀರವನ್ನು ಹೊಂದಿದ ಅತಿಕ್ರೂರನಾದ ದಾನವನಾದ ಧುಂಧುವನ್ನು ಘೋರವಾದ ಮತ್ತು ತೀವ್ರವಾದ ಯುದ್ಧದಲ್ಲಿ ನೀನು ದೊಡ್ಡ ಬಾಣದಿಂದ ಸಂಹಾರವನ್ನು ಮಾಡು.
ತ್ವಂ ಹಿ ತಸ್ಯ ವಿನಾಶಾಯ ಪರ್ಯಾಪ್ತ ಇತಿ ಮೇ ಮತಿಃ |
ತೇಜಸಾ ತವ ತೇಜಶ್ಚ ವಿಷ್ಣುರಾಪ್ಯಾಯಯಿಷ್ಯತಿ ॥60॥
ಅವನನ್ನು ಸಂಹರಿಸುವುದಕ್ಕೆ ನೀನು ಸಮರ್ಥನಾಗಿದ್ದೀಯೆ ಎಂದು ನನ್ನ ಅಭಿಪ್ರಾಯ. ವಿಷ್ಣುವು ತನ್ನ ತೇಜಸ್ಸಿನಿಂದ ನಿನ್ನ ತೇಜಸ್ಸನ್ನು ತುಂಬುವನು.
ವಿಷ್ಣುನಾ ಚ ವರೋ ದತ್ತೋ ಮಮ ಪೂರ್ವಂ ತು ತದ್ವಧೇ ॥61॥
ಯಸ್ತಂ ಮಹಾಸುರಂ ರೌದ್ರಂ ವಧಿಷ್ಯತಿ ಮಹೀಪತಿಃ |
ತೇಜಸ್ತದ್ವೈಷ್ಣವಮಿತಿ ಪ್ರವೇಕ್ಷ್ಯತಿ ದುರಾಸದಮ್ ॥62॥
ಯಾವ ರಾಜನು ಘೋರನಾದ ಆ ಮಹಾಸುರನನ್ನು ಸಂಹರಿಸುತ್ತಾನೆಯೋ ಅವನಲ್ಲಿ ದುರಾಸದವಾದ ನನ್ನ ವೈಷ್ಣವ ತೇಜಸ್ಸು ಪ್ರವೇಶಿಸುವುದು ಎಂದು ಅವನ ವಧೆಯ ವಿಷಯದಲ್ಲಿ ಹಿಂದೆ ವಿಷ್ಣುವು ನನಗೆ ವರವನ್ನು ಕೊಟ್ಟಿದ್ದಾನೆ.
ತತ್ತೇಜಸ್ತ್ವಂ ಸಮಾಧಾಯ ರಾಜೇಂದ್ರ ಭವ ದುಃಸಹಃ |
ತಂ ನಿಷೂದಯ ಸಂದಿಷ್ಟೋ ದೈತ್ಯಂ ರೌದ್ರಪರಾಕ್ರಮಮ್ ॥63॥
ಎಲೈ ರಾಜೇಂದ್ರನೇ, ಆ ತೇಜಸ್ಸನ್ನು ನಿನ್ನಲ್ಲಿ ಆಧಾನ ಮಾಡಿಕೊಂಡು ನೀನು ದುಃಸಹನಾಗು. ನನ್ನಿಂದ ಸಂದಿಷ್ಟನಾಗಿ ರುದ್ರಪರಾಕ್ರಮವುಳ್ಳ ಆ ದೈತ್ಯನನ್ನು ಸಂಹರಿಸು.
ನ ಹಿ ಧುಂಧುರ್ಮಹಾತೇಜಾಃ ತೇಜಸಾಽಲ್ಪೇನ ಶಕ್ಯತೇ |
ನಿರ್ದಗ್ಧುಂ ಪೃಥಿವೀಪಾಲ ಸ ಹಿ ವರ್ಷಶತೈರಪಿ ॥64॥
ಎಲೈ ರಾಜನೇ, ಮಹಾತೇಜಸ್ವಿಯಾದ ಧುಂಧುವನ್ನು ಅಲ್ಪತೇಜಸ್ಸಿನಿಂದ ನೂರುವರ್ಷ ಯುದ್ಧಮಾಡಿದರೂ ದಹಿಸಲು ಸಾಧ್ಯವಿಲ್ಲ. ಇದು ಪ್ರಸಿದ್ಧವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಚತುರ್ದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ಎಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ತನೆಯ ಅಧ್ಯಾಯ
ತನ್ನ ಪುತ್ರನಾದ ಕುವಲಾಶ್ವನು ಧುಂಧುವಧೆ ಮಾಡುವನೆಂದು ಹೇಳಿ ಬೃಹದಶ್ವನ ವನಗಮನ. ಧುಂಧುಜನ್ಮಕ್ಕೆ ಉಪೋದ್ಘಾತವಾಗಿ ಮಧುಕೈಟಭರ ವೃತ್ತಾಂತ.
ಮಾರ್ಕಂಡೇಯಃ
ಸ ಏವಮುಕ್ತೋ ರಾಜರ್ಷಿರುದಂಕೇನಾಪರಾಜಿತಃ |
ಉದಂಕಂ ಕೌರವಶ್ರೇಷ್ಠ ಕೃತಾಂಜಲಿರಥಾಬ್ರವೀತ್ ॥1॥
ಮಾರ್ಕಂಡೇಯ ಎಲೈ ಕೌರವಶ್ರೇಷ್ಠನೇ, ಉದಂಕನಿಂದ ಹೀಗೆ ಹೇಳಲ್ಪಟ್ಟ ಅಪರಾಜಿತನಾದ ರಾಜರ್ಷಿಯಾದ ಬೃಹದಶ್ವನು ಅನಂತರ ಕೈಗಳನ್ನು ಮುಗಿದು ಉದಂಕನನ್ನು ಕುರಿತು ಹೇಳಿದನು.
ನಹಿ ಮೇ ಗಮನಂ ಬ್ರಹ್ಮನ್ ಮೋಘಮೇತದ್ ಭವಿಷ್ಯತಿ |
ಪುತ್ರೋ ಮಮಾಪಿ ಭಗವನ್ ಕುವಲಾಶ್ವ ಇತಿ ಸ್ಮೃತಃ ॥2॥
ಬ್ರಾಹ್ಮಣನೇ, ನನ್ನ ಈ ವನಗಮನವು ವ್ಯರ್ಥವಾಗುವುದಿಲ್ಲ. ಪೂಜ್ಯನೇ, ನನಗೆ ಕುವಲಾಶ್ವನೆಂಬ ಒಬ್ಬ ಮಗನೂ ಇದ್ದಾನೆ.
ಧೃತಿಮಾನ್ ಕ್ಷಿಪ್ರಕಾರೀ ಚ ವೀರ್ಯೇಣಾಪ್ರತಿಮೋ ಭುವಿ |
ಪ್ರಿಯಂ ವೈ ಸರ್ವಮೇತತ್ ತೇ ಕರಿಷ್ಯತಿ ನ ಸಂಶಯಃ ॥3॥
ಅವನು ಧೈರ್ಯಶಾಲಿ, ಕ್ಷಿಪ್ರಕಾರಿ ಮತ್ತು ಭೂಮಿಯಲ್ಲಿ ಅಸದೃಶಪರಾಕ್ರಮ ಉಳ್ಳವನು. ಅವನು ನಿನಗೆ ಪ್ರಿಯವಾದ ಇದನ್ನೆಲ್ಲಾ ಮಾಡುವನು. ಇದರಲ್ಲಿ ಸಂಶಯವಿಲ್ಲ.
ಪುತ್ರೈಃ ಪರಿವೃತಃ ಸರ್ವೈಃ ಶೂರೈಃ ಪರಿಘಬಾಹುಭಿಃ |
ಹನಿಷ್ಯತಿ ಮಹಾಬಾಹುಸ್ತಂ ವೈ ಧುಂಧುಂ ಮಹಾಸುರಮ್ |

ವಿಸರ್ಜಯಸ್ವ ಮಾಂ ಬ್ರಹ್ಮನ್ ನ್ಯಸ್ತಶಸೊತ್ರೇಽಸ್ಮಿ ಸಾಂಪ್ರತಮ್ ॥4॥
ಮಹಾಬಾಹುವಾದ ಅವನು ಪರಿಘಬಾಹುವುಳ್ಳ ತನ್ನ ಶೂರರಾದ ಪುತ್ರರಿಂದೊಡಗೂಡಿ ಮಹಾಸುರನಾದ ಧುಂಧುವನ್ನು ಕೊಲ್ಲುವನು. ಬ್ರಾಹ್ಮಣನೇ, ನನ್ನನ್ನು ಈಗ ಬೀಳ್ಕೊಡು. ನಾನು ಶಸ್ತ್ರಸಂನ್ಯಾಸವನ್ನು ಮಾಡಿದ್ದೇನೆ.
ತಥಾಽಸಿತ್ವತಿ ಚ ತೇನೋಕ್ತೋ ಮುನಿನಾಽಮಿತತೇಜಸಾ |
ಸ ತಮಾದಿಶ್ಯ ತನಯಮುದಂಕಾಯ ಮಹಾತ್ಮನೇ ॥5॥
ಕ್ರಿಯತಾಮಿತಿ ರಾಜರ್ಷಿರ್ಜಗಾಮ ವನಮುತ್ತಮಮ್ ॥6॥
ಅಮಿತತೇಜಸ್ವಿಯಾದ ಉದಂಕಮುನಿಯಿಂದ ಹಾಗೆಯೇ ಆಗಲಿ ಎಂದು ಹೇಳಲ್ಪಟ್ಟ ಬೃಹದಶ್ವನು ತನ್ನ ಮಗನನ್ನು ಮಹಾತ್ಮನಾದ ಉದಂಕನ ಆದೇಶದಲ್ಲಿಟ್ಟು, ಉದಂಕರ ಆಜ್ಞೆಯನ್ನು ಪಾಲಿಸು ಎಂದು ಹೇಳಿ ಶ್ರೇಷ್ಠವಾದ ತಪೋವನಕ್ಕೆ ಹೊರಟು ಹೋದನು.
ಯುಧಿಷ್ಠಿರಃ
ಕ ಏಷ ಭಗವನ್ ದೈತ್ಯೋ ಮಹಾವೀರ್ಯಸ್ತಪೋಧನ |
ಕಸ್ಯ ಪುತ್ರೋಽಥ ನಪ್ತಾ ವಾ ಏತದಿಚ್ಛಾಮಿ ವೇದಿತುಮ್ ॥7॥
ಯುಧಿಷ್ಠಿರ ಪೂಜ್ಯನೇ, ತಪೋಧನನನೇ, ಈ ಮಹಾಪರಾಕ್ರಮಿಯಾದ ಧುಂಧು ದೈತ್ಯನು ಯಾರು? ಇವನು ಯಾರ ಮಗ? ಅಥವಾ ಮೊಮ್ಮಗ? ಇದನ್ನು ತಿಳಿಯಲು ಬಯಸುತ್ತೇನೆ.
ಏವಂ ಮಹಾವೀರ್ಯಬಲೋ ನ ಶ್ರುತೋ ಮೇ ತಪೋಧನ |
ಯಸ್ಯ ನಿಃಶ್ವಾಸವಾತೇನ ಕಂಪತೇ ಭೂಃ ಸಪರ್ವತಾ ॥8॥
ಎಲೈ ತಪೋಧನನನೇ, ಯಾವನ ನಿಃಶ್ವಾಸದಿಂದ ಉಂಟಾದ ವಾಯುವಿನಿಂದ ಪರ್ವತ ಸಹಿತವಾದ ಭೂಮಿಯು ಕಂಪಿಸುತ್ತದೆಯೋ, ಅಂತಹ ಮಹಾಪರಾಕ್ರಮ ಮತ್ತು ಬಲವನ್ನು ಹೊಂದಿದ ವ್ಯಕಿತಯನ್ನು ನಾನು ಹಿಂದೆ ಕೇಳಲಿಲ್ಲ.
ಏತದಿಚ್ಛಾಮಿ ಭಗವನ್ ಯಾಥಾತಥ್ಯೇನ ವೇದಿತುಮ್ |
ಸರ್ವಮೇವ ಮಹಾಪ್ರಾಜ್ಞ ವಿಸ್ತರೇಣ ತಪೋಧನ ॥9॥
ಪೂಜ್ಯರೇ, ನಾನು ಇದನ್ನು ಸರಿಯಾಗಿ ತಿಳಿಯಲು ಬಯಸುತ್ತೇನೆ. ತಪೋಧನರೇ, ಮಹಾಪ್ರಾಜ್ಞರೇ, ನನಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳಿ.
ಮಾರ್ಕಂಡೇಯಃ
ಶೃಣು ರಾಜನ್ನಿದಂ ಸರ್ವಂ ಯಥಾವೃತ್ತಂ ನರಾಧಿಪ |
ಏಕಾರ್ಣವೇ ನಿರಾಲೋಕೇ ನಷ್ಟೇ ಸ್ಥಾವರಜಂಗಮೇ |
ಪುನಷ್ಟೇಷು ಚ ಭೂತೇಷು ಸರ್ವೇಷು ಭರತರ್ಷಭ ॥10॥
ಪ್ರಭವಂ ಲೋಕಕರ್ತಾರಂ ವಿಷ್ಣುಂ ಶಾಶ್ವತಮವ್ಯಯಮ್ |
ಚತುರ್ಭುಜಮುದಾರಾಂಗಂ ದೃಷ್ಟವಾನಸ್ಮಿ ಭಾರತ ॥11॥
ಮಾರ್ಕಂಡೇಯ ಎಲೈ ರಾಜನೇ, ನರಾಧಿಪನೇ, ಇದೆಲ್ಲವೂ ಹೇಗೆ ನಡೆಯಿತು ಎಂದು ಕೇಳು. ಎಲೈ ಭರತರ್ಷಭನೇ, ಸ್ಥಾವರಜಂಗಮವೆಲ್ಲವೂ ನಾಶವನ್ನು ಹೊಂದಿ ಉಳಿದ ಎಲ್ಲಾ ಪ್ರಾಣಿಗಳೂ ನಾಶವನ್ನು ಹೊಂದಿ ಯಾವ ಪ್ರಕಾಶವೂ ಇಲ್ಲದೇ ಏಕಾರ್ಣವವಾಗಿದ್ದ ಪ್ರಳಯಸಮಯದಲ್ಲಿ ನಾನು ಲೋಕಕರ್ತೃವಾದ ಶಾಶ್ವತನಾದ ಅವ್ಯಯನಾದ ಚತುರ್ಭುಜನಾದ ಸುಂದರಾಂಗನಾದ ಸರ್ವಸಂಪತ್ತಿಗೆ ಒಡೆಯನಾದ ವಿಷ್ಣುವನ್ನು ನೋಡಿದೆನು.
ಸುಷ್ವಾಪ ಭಗವಾನ್ ವಿಷ್ಣುರಹಿಶಯ್ಯಾಂ ಸ ಏವ ಹಿ |
ನಾಗಸ್ಯ ಭೋಗೇ ಮಹತಿ ಶೇಷಸ್ಯಾಮಿತತೇಜಸಃ ॥12॥
ಅದೇ ಭಗವಂತನಾದ ವಿಷ್ಣುವು ಅಮಿತತೇಜಸ್ವಿಯಾದ ಶೇಷನ ಮಂಚದ ಮೇಲೆ ಶೇಷನ ಆ ದೊಡ್ಡ ಶರೀರದ ಮೇಲೆ ಮಲಗಿದ್ದನು.
ಲೋಕಕರ್ತಾ ಮಹಾಭಾಗ ಭಗವಾನಚ್ಯುತೋ ಹರಿಃ |
ನಾಗಭೋಗೇನ ಮಹತಾ ಪರಿಗೃಹ್ಯ(ರಭ್ಯ) ಚ ಮೇದಿನೀಮ್ ॥13॥
ಸ್ವಪತಸ್ತಸ್ಯ ದೇವಸ್ಯ ಪದ್ಮಂ ಸೂರ್ಯಸಮಪ್ರಭಮ್ |
ನಾಭ್ಯಾ ವಿನಿಃಸೃತಂ ದಿವ್ಯಂ ಯತ್ರೋತ್ಪನ್ನಃ ಪಿತಾಮಹಃ ॥14॥
ಸಾಕ್ಷಾಲ್ಲೋಕಗುರುರ್ಬ್ರಹ್ಮಾ ಪದ್ಮೇ ಸೂರ್ಯೇಂದುಸಪ್ರಭಃ ॥15॥
ಎಲೈ ಮಹಾಭಾಗ್ಯವಂತನೇ, ಲೋಕಕರ್ತೃವಾದ ಭಗವಂತನಾದ ಅಚ್ಯುತನಾದ ಹರಿಯು ವಿಸ್ತಾರವಾದ ಶೇಷಶರೀರದಲ್ಲಿ ಪ್ರಕೃತಿಯನ್ನು ತನ್ನ ಉದರದಲ್ಲಿಟ್ಟು ಮಲಗಿರುವಾಗ ಅವನ ನಾಭಿಯಿಂದ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಒಂದು ದಿವ್ಯವಾದ ಪದ್ಮವು ಹೊರಬಂದಿತು. ಅದರಲ್ಲಿ ಸಾಕ್ಷಾಲ್ಲೋಕಗುರುಗಳಾದ ಸೂರ್ಯಚಂದ್ರರಿಗೆ ಸಮಾನವಾದ ಕಾಂತಿಯುಳ್ಳ ಪಿತಾಮಹರಾದ ಬ್ರಹ್ಮದೇವರು ಜನಿಸಿದರು.
ಚತುರ್ವೇದಶ್ಚತುರ್ಮೂರ್ತಿಶ್ಚತುರ್ವರ್ಗಶ್ಚತುರ್ಮುಖಃ |
ಸ್ವಪ್ರಭಾವಾದ್ ದುರಾಧರ್ಷೋ ಮಹಾಬಲಪರಾಕ್ರಮಃ ॥16॥
ಅವರು ನಾಲ್ಕುವೇದಗಳನ್ನೂ ಬಲ್ಲವರು. ನಾಲ್ಕುಮುಖಗಳನ್ನುಳ್ಳವರು. ನಾಲ್ಕು ಮೂರ್ತಿಗಳನ್ನೂ ಮತ್ತು ನಾಲ್ಕುವರ್ಗಗಳನ್ನೂ ಹೊಂದಿದವರು. ಅವರು ಮಹಾಬಲಪರಾಕ್ರಮವುಳ್ಳವರು. ತಮ್ಮ ಪರಾಕ್ರಮದಿಂದಲೇ ಇನ್ನೊಬ್ಬರಿಗೆ ಸೋಲದವರು.
ಕಸ್ಯಚಿತ್ತ್ವಥ ಕಾಲಸ್ಯ ದಾನವೌ ವೀರ್ಯಸತ್ತಮೌ |
ಮಧುಶ್ಚ ಕೈಟಭಶ್ಚೈವ ದೃಷ್ಟವಂತೌ ಹರಿಂ ಪ್ರಭುಮ್ ॥17॥
ಸ್ವಲ್ಪ ಸಮಯದ ನಂತರ ಮಹಾಪರಾಕ್ರಮಶಾಲಿಗಳಾದ ಮಧುಕೈಟಭ ದಾನವರು ಪ್ರಭುವಾದ ಹರಿಯನ್ನು ನೋಡಿದರು.

ಶಯಾನಂ ಶಯನೇ ದಿವ್ಯೇ ನಾಗಭೋಗೇ ಮಹಾದ್ಯುತಿಮ್ |
ಬಹುಯೋಜನವಿಸ್ತೀರ್ಣೇ ಬಹುಯೋಜನಮಾಯತೇ ॥18॥
ಕಿರೀಟಕೌಸ್ತುಭಧರಂ ಪೀತಕೌಶೇಯವಾಸಸಮ್ |
ದೀಪ್ಯಮಾನಂ ಶ್ರಿಯಾ ರಾಜನ್ ತೇಜಸಾ ವಪುಷಾ ತದಾ |
ಸಹಸ್ರಸೂರ್ಯಪ್ರತಿಮಮದ್ಭುತೋಪಮದರ್ಶನಮ್ ॥19॥
ಬಹುಯೋಜನ ವಿಸ್ತಾರವಾದ, ಬಹುಯೋಜನ ಉದ್ದವಾದ ದಿವ್ಯವಾದ ನಾಗಭೋಗರೂಪವಾದ ಹಾಸಿಗೆಯಲ್ಲಿ ಮಲಗಿದ, ಮಹಾಕಾಂತಿಯುಳ್ಳ, ಕಿರೀಟ ಕೌಸ್ತುಭಗಳನ್ನು ಧರಿಸಿದ, ರೇಷ್ಮೆ ಪೀತಾಂಬರವನ್ನು ಧರಿಸಿದ ತನ್ನ ಕಾಂತಿಯಿಂದಲೂ ಸಂಪತ್ತಿನಿಂದಲೂ ಮತ್ತು ದೇಹದಿಂದಲೂ ಬೆಳಗುತ್ತಿದ್ದಂತಹ ಸಹಸ್ರಸೂರ್ಯರಿಗೆ ಸಮಾನವಾಗಿದ್ದಂತಹ ಅದ್ಭುತದರ್ಶನ ಉಳ್ಳಂತಹ (ಹರಿಯನ್ನು ನೋಡಿದರು).
ವಿಸ್ಮಯಃ ಸುಮಹಾನಾಸೀನ್ಮಧುಕೈಟಭಯೋಸ್ತದಾ |
ದೃಷ್ಟ್ವಾ ಪಿತಾಮಹಂ ಚೈವ ಪದ್ಮೇ ಪದ್ಮನಿಭೇಕ್ಷಣಮ್ ॥20॥
ವಿತ್ರಾಸಯೇತಾಮಥ ತೌ ಬ್ರಹ್ಮಾಣಮಮಿತೌಜಸಮ್ ॥21॥
ಆಗ ಮಧುಕೈಟಭರಿಗೆ ಬಹಳ ಆಶ್ಚರ್ಯವುಂಟಾಯಿತು. ಪದ್ಮದಲ್ಲಿ ಕುಳಿತಿದ್ದ ಪದ್ಮನೇತ್ರರಾದ ಪಿತಾಮಹರಾದ ಅಮಿತಶಕ್ತಿಶಾಲಿಯಾದ ಬ್ರಹ್ಮದೇವರನ್ನು ಅವರು ಹೆದರಿಸಿದರು.
ವಿತ್ರಾಸ್ಯಮಾನೋ ಬಹುಧಾ ಬ್ರಹ್ಮಾ ತಾಭ್ಯಾಂ ಮಹಾಯಶಾಃ |
ಅಕಂಪಯತ್ ಪದ್ಮನಾಲಂ ತತೋಽಬುದ್ಧ್ಯ ತ ಕೇಶವಃ ॥22॥
ಮಹಾಕೀರ್ತಿವಂತರಾದ ಬ್ರಹ್ಮದೇವರನ್ನು ಅವರಿಬ್ಬರೂ ಹೆದರಿಸಲು ಉದ್ಯುಕ್ತರಾದಾಗ ಪದ್ಮನಾಲವು ಅಲುಗಾಡಿತು. ಆಗ ಹರಿಯು ಎಚ್ಚರಗೊಂಡನು.
ಅಥಾಪಶ್ಯತ ಗೋವಿಂದೋ ದಾನವೌ ವೀರ್ಯಸತ್ತಮೌ |
ದೃಷ್ಟ್ವಾ ತಾವಬ್ರವೀದ್ ದೇವಃ ಸ್ವಾಗತಂ ವಾಂ ಮಹಾಬಲೌ |
ದದಾಮಿ ವಾಂ ವರಂ ಶ್ರೇಷ್ಠಂ ಪ್ರೀತಿರ್ಹಿ ಮಮ ಜಾಯತೇ ॥23॥
ಆಗ ಗೋವಿಂದನು ಶೂರಶ್ರೇಷ್ಠರಾದ ಆ ದಾನವರನ್ನು ನೋಡಿದನು. ಆ ದೇವನು ಅವರನ್ನು ನೋಡಿ ಮಹಾಬಲರಾದ ನಿಮ್ಮಿಬ್ಬರಿಗೆ ಸ್ವಾಗತ. ನಿಮಗೆ ನಾನು ಶ್ರೇಷ್ಠವಾದ ವರವನ್ನು ಕೊಡುತ್ತೇನೆ. ನಿಮ್ಮನ್ನು ನೋಡಿದರೆ ನನಗೆ ಸಂತೋಷವಾಗುತ್ತದೆ ಎಂದು ಹೇಳಿದನು.

ತೌ ಪ್ರಹಸ್ಯ ಹೃಷೀಕೇಶಂ ಮಹಾದರ್ಪೌ ಮಹಾಬಲೌ |
ಪ್ರತ್ಯಬ್ರೂತಾಂ ಮಹಾರಾಜ ಸಹಿತೌ ಮಧುಸೂದನಮ್ ॥24॥
ಎಲೈ ಮಹಾರಾಜನೇ, ಮಹಾದರ್ಪವುಳ್ಳವರೂ, ಮಹಾಬಲಿಷ್ಠರೂ ಆದ ಅವರು ಸರ್ವೇಂದ್ರಿಯಪ್ರೇರಕನಾದ ಮಧುಸೂದನನಾದ ಹರಿಯನ್ನು ನೋಡಿ ಹಾಸ್ಯಮಾಡಿ ಮಾತನಾಡಿದರು.
ಆವಾಂ ವರಯ ದೇವ ತ್ವಂ ವರದೌ ಸ್ವಃಸುರೋತ್ತಮ |
ದಾತಾರೌ ಸ್ವೋ ವರಂ ತುಭ್ಯಂ ತದ್ ಬ್ರವೀಹ್ಯವಿಚಾರಯನ್ ॥25॥
ಎಲೈ ದೇವನೇ, ಎಲೈ ದೇವದೇವೋತ್ತಮನೇ, ನಾವೇ ವರವನ್ನು ಕೊಡುವೆವು. ಆದ್ದರಿಂದ ಏನೂ ಸಂಶಯವಿಲ್ಲದೆ ಏನು ವರಬೇಕೆಂದು ಹೇಳು ಎಂದು ಹೇಳಿದರು.
ಶ್ರೀಭಗವಾನ್
ಪ್ರತಿಗೃಹ್ಣೇ ವರಂ ವೀರಾವೀಪ್ಸಿತಂ ಚ ವರೋತ್ತಮಮ್ |
ಯುವಾಂ ಹಿ ವೀರ್ಯಸಂಪನ್ನೌ ನ ವಾಮಸ್ತಿ ಸಮಃ ಪುಮಾನ್ ॥26॥
ವಧ್ಯತ್ವಮುಪಗಚ್ಛೇತಾಂ ಮಮ ಸತ್ಯಪರಾಕ್ರಮೌ |
ಏತದಿಚ್ಛಾಮ್ಯಹಂ ಕಾಮಂ ಪ್ರಾಪ್ತು್ಂ ಲೋಕಹಿತಾಯ ವೈ ॥27॥
ಶ್ರೀಭಗವಾನ್- ಎಲೈ ವೀರರೇ, ನಾನು ನಿಮ್ಮಿಂದ ಶ್ರೇಷ್ಠವಾದ ವರವನ್ನು ಸ್ವೀಕರಿಸುತ್ತೇನೆ. ನೀವಿಬ್ಬರೂ ಬಹಳ ಬಲಶಾಲಿಗಳು. ನಿಮಗೆ ಸಮಾನನಾದ ಪುರುಷನಿಲ್ಲ. ಸತ್ಯಪರಾಕ್ರಮವುಳ್ಳ ನೀವಿಬ್ಬರು ನನ್ನಿಂದ ವಧ್ಯರಾಗಬೇಕು. ಲೋಕಹಿತಕ್ಕಾಗಿ ಈ ವರವನ್ನು ನಿಮ್ಮಿಂದ ಪಡೆಯಲು ಇಚ್ಛಿಸುತ್ತೇನೆ.
ಮಧುಕೈಟಭೌ
ಅನೃತಂ ನೋಕ್ತಪೂರ್ವಂ ನೌ ಸ್ವೈರೇಷ್ವಪಿ ಕುತೋಽನ್ಯಥಾ |
ಸತ್ಯೇ ಧರ್ಮೇ ಚ ನಿರತೌ ವಿದ್ಧ್ಯಾವಾಂ ಪುರುಷೋತ್ತಮ ॥28॥
ಮಧುಕೈಟಭರು ನಾವಿಬ್ಬರೂ ಇದುವರೆಗೆ ವಿನೋದಕ್ಕಾಗಿಯೂ ಅನೃತವನ್ನು ಮಾತನಾಡಿಲ್ಲ. ಇನ್ನು ಬೇರೆ ಸಮಯದಲ್ಲಿ ಹೇಗೆ ಅನೃತವನ್ನು ಮಾತನಾಡುತ್ತೇವೆ? ಎಲೈ ಪುರುಷೋತ್ತಮನೇ, ನಾವಿಬ್ಬರೂ ಸತ್ಯದಲ್ಲಿಯೂ ಮತ್ತು ಧರ್ಮದಲ್ಲಿಯೂ ನಿರತರಾದವರೆಂದು ತಿಳಿ.
ಬಲೇ ವೀರ್ಯೇ ಚ ರೂಪೇ ಚ ಶಮೇ ನ ಚ ಸಮೋಽಸ್ತಿ ನೌ |
ಧರ್ಮೇ ತಪಸಿ ದಾನೇ ಚ ಶೀಲಸತ್ತ್ವದಮೇಷು ಚ ॥29॥
ಬಲದಲ್ಲಿ, ವೀರ್ಯದಲ್ಲಿ, ರೂಪದಲ್ಲಿ, ಶಮದಲ್ಲಿ ನಮ್ಮಿಬ್ಬರಿಗೆ ಸಮಾನರಾದವರು ಯಾರೂ ಇಲ್ಲ. ಧರ್ಮದಲ್ಲಿಯೂ, ತಪಸ್ಸಿನಲ್ಲಿಯೂ, ದಾನದಲ್ಲಿಯೂ, ಶೀಲಸತ್ತ್ವದಮಗಳಲ್ಲಿಯೂ ನಮಗೆ ಸಮಾನರಾದವರು ಯಾರೂ ಇಲ್ಲ.

ಉಪಪ್ಲವೋ ಮಹಾನಸ್ಮಾನುಪಾವರ್ತತ ಕೇಶವ |
ಉಕ್ತಂ ಪ್ರತಿಕುರುಷ್ವ ತ್ವಂ ಕಾಲೋ ಹಿ ದುರತಿಕ್ರಮಃ ॥30॥
ಕೇಶವನೇ, (ನಿನಗೆ ವರವನ್ನು ಕೊಟ್ಟು) ನಮಗೆ ದೊಡ್ಡ ಅನರ್ಥವು ಪ್ರಾಪ್ತವಾಯಿತು. ನೀನು ಹೇಳಿದಂತೆ ನಡೆದುಕೋ. ಕಾಲವನ್ನು ಯಾರೂ ಮೀರಲು ಸಾಧ್ಯವಿಲ್ಲ.
ಆವಾಮಿಚ್ಛಾವಹೇ ದೇವ ಕೃತಮೇಕಂ ತ್ವಯಾ ವಿಭೋ |
ಅನಾಧೃ(ವೃ)ತೇ ತ್ವಮಾಕಾಶೇ ಜಹ್ಯಾವಾಂ ಸುರಸತ್ತಮ ॥31॥
ಎಲೈ ವಿಭುವಾದ ದೇವನೇ, ನಾವಿಬ್ಬರೂ ನಿನ್ನಿಂದ ಇದೊಂದನ್ನು ಬಯಸುತ್ತೇವೆ. ಎಲೈ ಸುರಶ್ರೇಷ್ಠನೇ, ಆಧಾರವಿಲ್ಲದ ಆಕಾಶದಲ್ಲಿ ನೀನು ನಮ್ಮಿಬ್ಬರನ್ನೂ ಕೊಲ್ಲಬೇಕು.
ಪುತ್ರತ್ವಮಭಿಗಚ್ಛಾವಸ್ತವ ಚೈವ ಸುಲೋಚನ |
ವರ ಏಷ ವೃತೋ ದೇವ ತದ್ ವಿದ್ಧಿ ಸುರಸತ್ತಮ ॥32॥
ಎಲೈ ಸುಲೋಚನನೇ, ನಾವಿಬ್ಬರೂ ನಿನಗೆ ಪುತ್ರರಾಗಬೇಕು. ಎಲೈ ಸುರಶ್ರೇಷ್ಠನೇ, ಇದೇ ನಾವು ಕೇಳುವ ವರ. ಇದನ್ನು ನೀನು ತಿಳಿ.
ಶ್ರೀಭಗವಾನ್
ಬಾಢಮೇವಂ ಕರಿಷ್ಯಾಮಿ ಸರಮೇತದ್ ಭವಿಷ್ಯತಿ ॥33॥
ಶ್ರೀಭಗವಾನ್ ಒಳ್ಳೆಯದು. ಹಾಗೆಯೇ ಮಾಡುವೆನು. ನೀವು ಹೇಳಿದಂತೆಯೇ ಎಲ್ಲವೂ ಆಗುವುದು.
ಚಿಂತಯನ್ನಥ ಗೋವಿಂದೋ ನಾಪಶ್ಯತ್ ತದನಾಧೃ(ವೃ)ತಮ್ |
ಅವಕಾಶಂ ಪೃಥಿವ್ಯಾಂ ವಾ ದಿವಿ ವಾ ಮಧುಸೂದನಃ ॥34॥
ಅನಂತರ ಮಧುಸೂದನನಾದ ಗೋವಿಂದನು ಎಷ್ಟು ಆಲೋಚಿಸಿದರೂ, ಭೂಮಿಯಲ್ಲಾಗಲೀ ಅಥವಾ ಸ್ವರ್ಗದಲ್ಲಾಗಲೀ ಆಧಾರವಿಲ್ಲದ ಆಕಾಶವನ್ನು ಕಾಣಲಿಲ್ಲ.
ಸ್ವಕಾವನಾಧೃತಾವೂರೂ ದೃಷ್ಟ್ವಾ ದೇವವರಸ್ತದಾ |
ಮಧುಕೈಟಭಾಯೋರ್ಗೃಹ್ಯ ಶಿರಸೀ ಮಧುಸೂದನಃ |
ಚಕ್ರೇಣ ಶಿತಧಾರೇಣ ನ್ಯಕೃತಂತ ಮಹಾಯಶಾಃ ॥35॥
ಆಗ ದೇವಶ್ರೇಷ್ಠನಾದ ಅವನು ಆಧಾರವಿಲ್ಲದ ತನ್ನ ತೊಡೆಗಳನ್ನು ನೋಡಿ ಮಧುಕೈಟಭರನ್ನು ಹಿಡಿದು ಮಹಾಕೀರ್ತಿವಂತನಾದ ಮಧುಸೂದನನಾದ ಅವನು ಹರಿತವಾದ ಅಲಗುಳ್ಳ ಸುದರ್ಶನ ಚಕ್ರದಿಂದ ಅವರ ತಲೆಗಳನ್ನು ಕತ್ತರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪಂಚದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ತೊಂದನೆಯ ಅಧ್ಯಾಯ
ಮಾರ್ಕಂಡೇಯರಿಂದ ದುಂದುಮಾರೋಪಾಖ್ಯಾನ ಕಥನ.
ಮಾರ್ಕಂಡೇಯಃ
ಧುಂಧುರ್ನಾಮ ಮಹಾರಾಜ ತಯೋಃ ಪುತ್ರೋ ಮಹಾದ್ಯುತಿಃ |
ಸ ತಪೋತಪ್ಯತ ಮಹನ್ಮಹಾವೀರ್ಯಪರಾಕ್ರಮಃ ॥1॥
ಮಾರ್ಕಂಡೇಯ ಎಲೈ ಮಹಾರಾಜನೇ, ಮಹಾತೇಜಸ್ವಿಯಾದ ಧುಂಧು ಎಂಬುವನು ಆ ಮಧುಕೈಟಭರ ಪುತ್ರ. ಮಹಾವೀರ್ಯ ಪರಾಕ್ರಮವುಳ್ಳ ಅವನು ದೊಡ್ಡ ತಪಸ್ಸನ್ನು ಮಾಡಿದನು.
ಅತಿಷ್ಠದೇಕಪಾದೇನ ಕೃಶೋ ಧಮನಿಸಂತತಃ |
ತಸ್ಮೈ ಬ್ರಹ್ಮಾ ದದೌ ಪ್ರೀತೋ ವರಂ ವವ್ರೇ ಸ ಚ ಪ್ರಭುಮ್ ॥2॥
ಅವನು ಒಂದು ಪಾದದ ಮೇಲೆ ನಿಂತು ಕೃಶನೂ, ಧಮನಿಗಳು ಎದ್ದು ಕಾಣುವಂತಹವನೂ ಆದನು. ಬ್ರಹ್ಮದೇವರು ಸಂತುಷ್ಟರಾಗಿ ಅವನಿಗೆ ವರವನ್ನು ನೀಡಿದರು. ಅವನು ಆ ಪ್ರಭುಗಳಿಂದ ವರವನ್ನು ಬೇಡಿದನು.
ಧುಂಧುಃ
ದೇವದಾನವಯಕ್ಷಾಣಾಂ ಸರ್ಪಗಂಧರ್ವರಕ್ಷಸಾಮ್ |
ಅವಧ್ಯೋಽಹಂ ಭವೇಯಂ ವೈ ವರ ಏಷ ವೃತೋ ಮಯಾ ॥3॥
ಧುಂಧು ನಾನು ದೇವದಾನವ ಯಕ್ಷರಿಂದಲೂ, ಸರ್ಪಗಂಧರ್ವ ರಾಕ್ಷಸರಿಂದಲೂ ಅವಧ್ಯನಾಗಬೇಕು. ಇದೇ ನಾನು ಬೇಡುವ ವರ.
ಮಾರ್ಕಂಡೇಯಃ
ಏವಂ ಭವತು ಗಚ್ಛೇತಿ ತಮುವಾಚ ಪಿತಾಮಹಃ |
ಸ ಏವಮುಕ್ತಸ್ತತ್ಪಾದೌ ಮೂರ್ಧ್ನಾ ಸ್ಪೃಶ್ಯ ಜಗಾಮ ಹ ॥4॥
ಮಾರ್ಕಂಡೇಯ ಬ್ರಹ್ಮದೇವರು ಅವನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದರು. ಅವನು ಬ್ರಹ್ಮದೇವರ ಪಾದಗಳಿಗೆ ಶಿರಸ್ಸಿನಿಂದ ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟನು.
ಸ ತು ಧುಂಧುರ್ವರಂ ಲಬ್ಧ್ವಾ ಮಹಾವೀರ್ಯಪರಾಕ್ರಮಃ |
ಅನುಸ್ಮರನ್ ಪಿತೃವಧಂ ದ್ರುತಂ ವಿಷ್ಣುಮುಪಾಗಮತ್ ॥5॥

ಮಹಾವೀರ್ಯಪರಾಕ್ರಮವುಳ್ಳ ಆ ಧುಂಧುವಾದರೂ ವರವನ್ನು ಪಡೆದು ತನ್ನ ತಂದೆಯ ವಧೆಯನ್ನು ಸ್ಮರಿಸುತ್ತಾ ಶೀಘ್ರವಾಗಿ ವಿಷ್ಣುವಿನ ಕಡೆಗೆ ಹೋದನು.
ಸ ತು ದೇವಾನ್ ಸಗಂಧರ್ವಾನ್ ಜಿತ್ವಾ ಧುಂಧುರಮರ್ಷಣಃ |
ಬಬಾಧ ಸರ್ವಾನಸಕೃದ್ ವಿಷ್ಣುಂ ದೇವಾಂಶ್ಚ ವೈ ಭೃಶಮ್ ॥6॥
ದುಷ್ಟಾತ್ಮನಾದ ಅವನು ಅಸಹನೆಯಿಂದ ಕೂಡಿದವನಾಗಿ ದೇವತೆಗಳನ್ನೂ, ಗಂಧರ್ವರನ್ನೂ ಬಾಧಿಸಿದನು. ಅನೇಕ ಬಾರಿ ಎಲ್ಲ ದೇವತೆಗಳನ್ನೂ ಮತ್ತು ವಿಷ್ಣುವನ್ನೂ ಸಹ ಬಹಳವಾಗಿ ಬಾಧಿಸಿದನು.
ಸಮುದ್ರೇ ವಾಲುಕಾಪೂರ್ಣೇ ಉಜ್ಜಾನಕ ಇತಿ ಸ್ಮೃತೇ |
ಆಗಮ್ಯ ಚ ಸ ದುಷ್ಟಾತ್ಮಾ ತಂ ದೇಶಂ ಭರತರ್ಷಭ |
ಬಾಧತೇ ಸ್ಮ ಪರಂ ಶಕ್ತ್ಯಾ ತಮುತ್ತಂಕಾಶ್ರಮಂ ವಿಭೋ ॥7॥
ಎಲೈ ಭರತರ್ಷಭನೇ, ಎಲೈ ವಿಭುವೇ, ಮರಳಿನಿಂದ ಕೂಡಿದ ಉಜ್ಜಾನಕ ಎಂಬ ಸಮುದ್ರದ ಒಳಗಿನ ಪ್ರವೇಶದಲ್ಲಿ ಆ ದುಷ್ಟಾತ್ಮನು ವಾಸವನ್ನು ಮಾಡಿ ಅಲ್ಲಿಂದ ಬಂದು ತನ್ನ ಎಲ್ಲಾ ಶಕ್ತಿಯನ್ನು ಉಪಯೋಗಿಸಿ ಉತ್ತಂಕಾಶ್ರಮವನ್ನು ಬಾಧಿಸುತ್ತಿದ್ದನು.
ಅಂತರ್ಭೂಮಿಗತಸ್ತತ್ರ ವಾಲುಕಾಂತರ್ಹಿತಸ್ತಥಾ ॥8॥
ಮಧುಕೈಟಭಯೋಃ ಪುತ್ರೋ ಧುಂಧುರ್ಭೀಮಪರಾಕ್ರಮಃ |
ಶೇತೇ ಲೋಕವಿನಾಶಾಯ ತಪೋಬಲಮುಪಾಶ್ರಿತಃ |
ಉದಂಕಸ್ಯಾಶ್ರಮಾಭ್ಯಾಶೇ ನಿಃಶ್ವಸನ್ ಪಾವಕಾರ್ಚಿಷಃ ॥9॥
ಮರಳುಗಳಿಂದ ಮುಚ್ಚಿದ ಭೂಮಿಯ ಒಳಗೆ ವಾಸಮಾಡುವವನಾಗಿ ಮಧುಕೈಟಭರ ಪುತ್ರನಾದ ಭಯಂಕರ ಪರಾಕ್ರಮವುಳ್ಳ ಶಯನವನ್ನು ಮಾಡುತ್ತಿದ್ದನು. ತಪೋಬಲವನ್ನು ಹೊಂದಿದವನಾಗಿ ಲೋಕವನ್ನು ವಿನಾಶಮಾಡುವುದಕ್ಕೋಸ್ಕರ ಉದಂಕ ಋಷಿಗಳ ಆಶ್ರಮದ ಬಳಿ ಉಸಿರನ್ನು ಬಿಟ್ಟು ಬೆಂಕಿಯ ಕಿಡಿಗಳನ್ನು ಹೊರಹಾಕುತ್ತಿದ್ದನು. (ಕೆಲವು ಪಾಠಗಳಲ್ಲಿ ಉದಂಕ ಎಂಬುದಕ್ಕೆ ಬದಲಾಗಿ ಉತ್ತಂಕ ಎಂದಿದೆ).
ಏತಸ್ಮಿನ್ನೇವ ಕಾಲೇ ತು ರಾಜಾ ಸಬಲವಾಹನಃ |
ಕುವಲಾಶ್ವೋ ನರಪತಿರನ್ವಿತೋ ಬಲಶಾಲಿನಾಮ್ ॥10॥
ಸಹಸ್ರೈರೇಕವಿಂಶತ್ಯಾ ಪುತ್ರಾಣಾಮರಿಮರ್ದನಃ |
ಪ್ರಾಯಾದುದಂಕಸಹಿತೋ ಧುಂಧೋಸ್ತಸ್ಯ ವಧಾಯ ವೈ ॥11॥
ಆ ಸಮಯದಲ್ಲಿಯೇ ರಾಜನಾದ ಕುವಲಾಶ್ವನು ತನ್ನ ಬಲವಾಹನಗಳಿಂದ ಕೂಡಿದವನಾಗಿ ಬಲಿಷ್ಠರಾದ ಇಪ್ಪತ್ತೊಂದು ಸಹಸ್ರ ಪುತ್ರರಿಂದಲೂ ಕೂಡಿದವನಾಗಿ ಉದಂಕ ಸಹಿತನಾಗಿ ಧುಂಧುವಿನ ವಧೆಯನ್ನು ಉದ್ದೇಶಿಸಿ ಅಲ್ಲಿಗೆ ಬಂದನು.
ತಮಾವಿಶತ್ ತತೋ ವಿಷ್ಣುರ್ಭಗವಾಂಸ್ತೇಜಸಾ ಪ್ರಭುಃ |
ಉತ್ತಂಕಸ್ಯ ನಿಯೋಗೇನ ಲೋಕಾನಾಂ ಹಿತಕಾಮ್ಯಯಾ ॥12॥
ಉತ್ತಂಕನ ಪ್ರಾರ್ಥನೆಯಂತೆ ಲೋಕಗಳಿಗೆ ಹಿತವನ್ನುಂಟು ಮಾಡಲು ಬಯಸಿ ಭಗವಂತನಾದ ಪ್ರಭುವಾದ ವಿಷ್ಣುವು ತನ್ನ ತೇಜಸ್ಸಿನಿಂದ ಕುವಲಾಶ್ವನನ್ನು ಪ್ರವೇಶಿಸಿದನು.
ತಸ್ಮಿನ್ ಪ್ರಯಾತೇ ದುರ್ಧರ್ಷೇ ದಿವಿ ಶಬ್ದೋ ಮಹಾನಭೂತ್ |
ಏಷ ಶ್ರೀಮಾನವಧ್ಯೋಽದ್ಯ ಧುಂಧುಮಾರೋ ಭವಿಷ್ಯತಿ ॥13॥
ದುರ್ಧರ್ಷನಾದ ಅವನು ಯುದ್ಧಕ್ಕಾಗಿ ಪ್ರಯಾಣ ಮಾಡುತ್ತಿರಲು ಆಕಾಶದಲ್ಲಿ ಈ ಕಾಂತಿಯುಕ್ತನಾದ ಅವಧ್ಯನಾದ ಕುವಲಾಶ್ವನು ಈ ದಿನ ಧುಂಧುವನ್ನು ವಧೆ ಮಾಡುವನು ಎಂಬ ಮಾತುಗಳು ಕೇಳಿಬಂದವು.
ದಿವ್ಯೈಶ್ಚ ಪುಷ್ಪೈಸ್ತಂ ದೇವಾಃ ಸಮಂತಾತ್ ಪರ್ಯವಾರಯನ್ |
ದೇವದುಂದುಭಯಶ್ಚಾಪಿ ನೇದುಃ ಸ್ವಯಮನೀರಿತಾಃ ॥14॥
ದೇವತೆಗಳು ಕುವಲಾಶ್ವನ ಸುತ್ತಲೂ ಪುಷ್ಪವೃಷ್ಟಿಯನ್ನು ಸುರಿಸಿದರು. ದೇವ ದುಂದುಭಿಗಳು ತಾವಾಗಿಯೇ ಮೊಳಗಿದವು.
ಶೀತಶ್ಚ ವಾಯುಃ ಪ್ರವವೌ ಪ್ರಯಾಣೇ ತಸ್ಯ ಧೀಮತಃ ॥15॥
ವಿಪಾಂಸುಲಾಂ ಮಹೀಂ ಕುರ್ವನ್ ವವರ್ಷ ಚ ಸುರೇಶ್ವರಃ |
ಪ್ರದಕ್ಷಿಣಾಶ್ಚಾಪ್ಯಭವನ್ ವನ್ಯಾಸ್ತಂ ಸಮೃಗದ್ವಿಜಾಃ ॥16॥
ಆ ಮೇಧಾವಿಯು ಪ್ರಯಾಣ ಮಾಡುವಾಗ ತಂಪಾದ ವಾಯುವು ಬೀಸಿತು. ಇಂದ್ರನು ಭೂಮಿಯ ಧೂಳನ್ನು ಅಡಗಿಸುತ್ತಾ ಮೃದುವಾಗಿ ಮಳೆಯನ್ನು ಸುರಿಸಿದನು. ಕಾಡಿನ ಮೃಗಪಕ್ಷಿಗಳು ಅವನ ಬಲಭಾಗದಲ್ಲಿ ಹೋದವು.
ಅಂತರಿಕ್ಷೇ ವಿಮಾನಾದಿ ದೇವತಾನಾಂ ಯುಧಿಷ್ಠಿರ |
ತತ್ರೈವ ಸಮದೃಶ್ಯಂತ ಧುಂಧುರ್ಯತ್ರ ಮಹಾಸುರಃ ॥17॥
ಎಲೈ ಯುಧಿಷ್ಠಿರನೇ, ಅಂತರಿಕ್ಷದಲ್ಲಿ ದೇವತೆಗಳ ವಿಮಾನಾದಿಗಳು ಮಹಾಸುರನಾದ ಧುಂಧುವು ಎಲ್ಲಿದ್ದನೋ ಅಲ್ಲಿಯೇ ಕಂಡುಬಂದವು.
ಕುವಲಾಶ್ವಸ್ಯ ಧುಂಧೋಶ್ಚ ಯುದ್ಧಕೌತೂಹಲಾನ್ವಿತಾಃ |
ದೇವಗಂಧರ್ವಸಹಿತಾಃ ಸಮವೈಕ್ಷನ್ ಮಹರ್ಷಯಃ ॥18॥
ಕುವಲಾಶ್ವ ಮತ್ತು ಧುಂಧುವಿನ ಯುದ್ಧವನ್ನು ನೋಡಲು ಕುತೂಹಲಾನ್ವಿತರಾದ ದೇವಗಂಧರ್ವಸಹಿತರಾದ ಮಹರ್ಷಿಗಳು ಅದನ್ನು ನೋಡಿದರು.
ನಾರಾಯಣೇನ ಕೌರವ್ಯ ತೇಜಸಾಽಽಪ್ಯಾಯಿತಸ್ತದಾ |

ಸ ಗತೋ ನೃಪತಿಃ ಕ್ಷಿಪ್ರಂ ಪುತ್ರೈಸ್ತೈಃ ಸರ್ವತೋದಿಶಮ್ ॥19॥
ಎಲೈ ಕೌರವ್ಯನೇ, ನಾರಾಯಣನ ತೇಜಸ್ಸಿನಿಂದ ಅಭಿವೃದ್ಧನಾದ ಆ ಕುವಲಾಶ್ವ ರಾಜನು ಶೀಘ್ರವಾಗಿ ತನ್ನ ಆ ಮಕ್ಕಳ ಜೊತೆಯಲ್ಲಿ ಹೊರಟನು.
ಅರ್ಣವಂ ಖಾನಯಾಮಾಸ ಕುವಲಾಶ್ವೋ ಮಹೀಪತಿಃ ॥20॥
ಕುವಲಾಶ್ವಸ್ಯ ಪುತ್ರೈಶ್ಚ ತಸ್ಮಿನ್ ವೈ ವಾಲುಕಾರ್ಣವೇ |
ಸಪ್ತಭಿರ್ದಿವಸೈಃ ಖಾತ್ವಾ ದೃಷ್ಟೋ ಧುಂಧುರ್ಮಹಾಬಲಃ ॥21॥
ರಾಜನಾದ ಕುವಲಾಶ್ವನು ಎಲ್ಲ ದಿಕ್ಕುಗಳಲ್ಲಿಯೂ ಸಮುದ್ರವನ್ನು ಅಗೆಸಿದನು. ಕುವಲಾಶ್ವನ ಪುತ್ರರು ಆ ಮರಳಿನ ಸಮುದ್ರದಲ್ಲಿ ಏಳು ದಿವಸಗಳ ಕಾಲ ಅಗೆದು ಮಹಾಬಲನಾದ ಧುಂಧುವನ್ನು ನೋಡಿದರು.
ಆಸೀದ್ ಘೋರಂ ವಪುಸ್ತಸ್ಯ ವಾಲುಕಾಂತರ್ಹಿತಂ ಮಹತ್ |
ದೀಪ್ಯಮಾನಂ ಯಥಾ ಸೂರ್ಯಸ್ತೇಜಸಾ ಭರತರ್ಷಭ ॥22॥
ಎಲೈ ಭರತರ್ಷಭನೇ, ಮರಳಿನೊಳಗೆ ಹುದುಗಿದ್ದ ಅವನ ದೊಡ್ಡ ದೇಹವು ತನ್ನ ತೇಜಸ್ಸಿನಿಂದ ಬೆಳಗುವ ಸೂರ್ಯನಂತೆ ಘೋರವಾಗಿದ್ದಿತು.
ತತೋ ಧುಂಧುರ್ಮಹಾರಾಜ ದಿಶಮಾವೃತ್ಯ ಪಶ್ಚಿಮಾಮ್ |
ಸುಪ್ತೋಽಭೂದ್ ರಾಜಶಾರ್ದೂಲ ಕಾಲಾನಲಸಮದ್ಯುತಿಃ ॥23॥
ಎಲೈ ಮಹಾರಾಜನೇ, ಎಲೈ ರಾಜಶಾರ್ದೂಲನೇ, ಕಾಲಾನಲಕ್ಕೆ ಸಮನಾದ ಕಾಂತಿಯುಳ್ಳ ಆ ಧುಂಧುವು ಪಶ್ಚಿಮ ದಿಕ್ಕನ್ನು ಆವರಿಸಿ ಮಲಗಿದ್ದನು.
ಕುವಲಾಶ್ವಸ್ಯ ಪುತ್ರೈಸ್ತು ಸರ್ವತಃ ಪರಿವಾರಿತಃ |
ಅಭಿದ್ರುತಃ ಶರೈಸ್ತೀಕ್ಷ್ಣೈರ್ಗದಾಭಿರ್ಮುಸಲೈರಪಿ ॥24॥
ಪಟ್ಟಿಸೈಃ ಪರಿೖಿಃ ಪ್ರಾಸೈಃ ಖಡ್ಗೈಶ್ಚ ವಿಮಲೈಃ ಶಿತೈಃ |
ಸ ವಧ್ಯಮಾನಃ ಸಂಕ್ರುದ್ಧಃ ಸಮುತ್ತಸ್ಥೌ ಮಹಾಬಲಃ ॥25॥
ಕುವಲಾಶ್ವನ ಪುತ್ರರಿಂದ ಓಡಿ ಎಲ್ಲ ಕಡೆಯಿಂದಲೂ ಸುತ್ತುವರಿಯಲ್ಪಟ್ಟು ತೀಕ್ಷ್ಣವಾದ ಬಾಣಗಳಿಂದಲೂ ಗದೆಗಳಿಂದಲೂ, ಮುಸಲಗಳಿಂದಲೂ, ಪಟ್ಟಿಸಗಳಿಂದಲೂ, ಪರಿಘಗಳಿಂದಲೂ, ಪ್ರಾಸಗಳಿಂದಲೂ, ವಿಮಲವಾದ ಹರಿತವಾದ ಖಡ್ಗಗಳಿಂದಲೂ ಹೊಡೆಯಲ್ಪಟ್ಟ ಮಹಾಬಲನಾದ ಅವನು ಕೋಪಗೊಂಡವನಾಗಿ ಮೇಲೆದ್ದನು.
ಕ್ರುದ್ಧಶ್ಚಾಭಕ್ಷಯತ್ ತೇಷಾಂ ಶಸ್ತ್ರಾಣಿ ವಿವಿಧಾನಿ ಚ |
ಆಸ್ಯಾದ್ ವಮನ್ ಪಾವಕಂ ಸ ಸಂವರ್ತಕಸಮಂ ತದಾ ॥26॥
ಕ್ರುದ್ಧನಾದ ಅವನು ತನ್ನ ಮುಖದಿಂದ ಸಂವರ್ತಕಾಗ್ನಿಗೆ ಸಮಾನವಾದ ಅಗ್ನಿಯನ್ನು ಉಗುಳುತ್ತಾ ಅವರ ವಿಧವಿಧವಾದ ಶಸ್ತ್ರಗಳನ್ನು ನುಂಗಿದನು.
ತಾನ್ ಸರ್ವಾನ್ ನೃಪತೇಃ ಪುತ್ರಾನದಹತ್ ಸ್ವೇನ ತೇಜಸಾ |
ಮುಖಜೇನಾಗ್ನಿನಾ ಕ್ರುದ್ಧೋ ಲೋಕಾನುದ್ವರ್ತಯನ್ನಿವ ॥27॥
ಲೋಕವನ್ನೇ ಸುಡುವವನಂತೆ ಕ್ರುದ್ಧನಾದ ಅವನು ತನ್ನ ಮುಖದಿಂದ ಉಂಟಾದ ಅಗ್ನಿಯಿಂದಲೂ ಮತ್ತು ತನ್ನ ಪರಾಕ್ರಮದಿಂದಲೂ ರಾಜನ ಆ ಎಲ್ಲಾ ಪುತ್ರರನ್ನೂ ದಹಿಸಿದನು.
ಕ್ಷಣೇನ ರಾಜಶಾರ್ದೂಲ ಪುರೇವ ಕಪಿಲಃ ಪ್ರಭುಃ |
ಸಗರಸ್ಯಾತ್ಮಜಾನ್ ಕ್ರುದ್ಧಸ್ತದದ್ಭುತಮಿವಾಭವತ್ ॥28॥
ಎಲೈ ರಾಜಶಾರ್ದೂಲನೇ, ಸಗರನ ಮಕ್ಕಳನ್ನು ಹಿಂದೆ ಪ್ರಭುವಾದ ಕಪಿಲನು ದಹಿಸಿದಂತೆ ಕ್ರುದ್ಧನಾದ ಅವನು ಒಂದು ಕ್ಷಣದಲ್ಲಿ ಅವರೆಲ್ಲರನ್ನೂ ದಹಿಸಿದನು. ಅದು ಅದ್ಭುತವಾಗಿದ್ದಿತು.
ತೇಷು ಕ್ರೋಧಾಗ್ನಿದಗ್ಧೇಷು ತದಾ ಭರತಸತ್ತಮ |
ತಂ ಪ್ರಬುದ್ಧಂ ಮಹಾತ್ಮಾನಂ ಕುಂಭಕರ್ಣಮಿವಾಪರಮ್ |
ಆಸಸಾದ ಮಹಾತೇಜಾಃ ಕುವಲಾಶ್ವೋ ಮಹೀಪತಿಃ ॥29॥
ಎಲೈ ಭರತಸತ್ತಮನೇ, ತನ್ನ ಮಕ್ಕಳೆಲ್ಲರೂ ಅವನ ಕ್ರೋಧಾಗ್ನಿಯಿಂದ ದಗ್ಧರಾದಮೇಲೆ ಎಚ್ಚರಗೊಂಡ ಮಹಾಪ್ರಯತ್ನಶೀಲನಾದ ಇನ್ನೊಬ್ಬ ಕುಂಭಕರ್ಣನಂತಿದ್ದ ಅವನನ್ನು ಮಹಾತೇಜಸ್ವಿಯಾದ ಕುವಲಾಶ್ವರಾಜನು ಸಮೀಪಿಸಿದನು.
ತಸ್ಯ ವಾರಿ ಮಹಾರಾಜ ಸುಸ್ರಾವ ಬಹು ದೇಹತಃ |
ತದಾಪೀಯ ತತಸ್ತೇಜೋ ರಾಜಾ ವಾರಿಮಯಂ ನೃಪ ॥30॥
ಯೋಗೀ ಯೋಗೇನ ವಹ್ನಿಂ ಚ ಶಮಯಾಮಾಸ ವಾರಿಣಾ |
ಬ್ರಹ್ಮಾಸ್ತ್ರೇಣ ಚ ರಾಜೇಂದ್ರ ದೈತ್ಯಂ ಕ್ರೂರಪರಾಕ್ರಮಮ್ ॥31॥
ದದಾಹ ಭರತಶ್ರೇಷ್ಠ ಸರ್ವಲೋಕಭಯಾಯ ವೈ ॥32॥
ಸೋಽಸ್ತ್ರೇಣ ದಗ್ಧ್ವಾ ರಾಜರ್ಷಿಃ ಕುವಲಾಶ್ವೋ ಮಹಾಸುರಮ್ |
ಸುರಶತ್ರುಮಮಿತ್ರಘ್ನಃ ತ್ರೈಲೋಕ್ಯೇಶ ಇವಾಪರಃ |
ಧುಂಧೋರ್ವಧಾತ್ ತದಾ ರಾಜಾ ಕುವಲಾಶ್ವೋ ಮಹಾಮನಾಃ ॥
ಧುಂಧುಮಾರ ಇತಿ ಖ್ಯಾತೋ ನಾಮ್ನಾ ಸಮಭವತ್ ತತಃ |
ಎಲೈ ಮಹಾರಾಜನೇ, ಅವನ ದೇಹದಿಂದ ಬಹಳವಾಗಿ ನೀರು ಸುರಿಯಿತು. ಆ ರಾಜನು ವಾರಿಮಯವಾದ ಆ ತೇಜಸ್ಸನ್ನು

ಪಾನಮಾಡಿ ಯೋಗಿಯಾದ ಅವನು ತನ್ನ ಯೋಗಶಕ್ತಿಯಿಂದ ಧುಂಧುಮಾರನಿಂದ ಹೊರಟ ಅಗ್ನಿಯನ್ನು ಆ ಜಲದಿಂದ ನಾಶಪಡಿಸಿದನು. ಎಲೈ ರಾಜೇಂದ್ರನೇ, ಎಲೈ ಭರತಶ್ರೇಷ್ಠನೇ, ಸರ್ವಲೋಕಕ್ಕೆ ಮಂಗಳವನ್ನುಂಟು ಮಾಡಲು ಕ್ರೂರಪರಾಕ್ರಮವುಳ್ಳ ಆ ದೈತ್ಯನನ್ನು ಬ್ರಹ್ಮಾಸ್ತ್ರದಿಂದ ಸುಟ್ಟುಹಾಕಿದನು. ರಾಜರ್ಷಿಯಾದ ಆ ಕುವಲಾಶ್ವನು ಮಹಾಸುರನನ್ನು ಶತ್ರುಸೂದನನಾದ ತ್ರಿಲೋಕಾಧಿಪತಿಯಾದ ಇನ್ನೊಬ್ಬ ಇಂದ್ರನಂತೆ ಸಂಹಾರ ಮಾಡಿ (ಸಂತೋಷಪಟ್ಟನು). ಮಹಾಧೀರನಾದ ಕುವಲಾಶ್ವರಾಜನು ಧುಂಧುವಿನ ವಧೆಯ ನಿಮಿತ್ತದಿಂದಾಗಿ ಆಗ ಧುಂಧುಮಾರನೆಂದು ಪ್ರಖ್ಯಾತನಾಗಿ ಅಪ್ರತಿರಥನಾದನು.

ಪ್ರೀತೈಶ್ಚ ತ್ರಿದಶೈಃ ಸರ್ವೈರ್ಮಹರ್ಷಿಸಹಿತೈಸ್ತದಾ |
ವರಂ ವೃಣೀಷ್ವೇತ್ಯುಕ್ತಃ ಸ ಪ್ರಾಂಜಲಿಃ ಪ್ರಣತಸ್ತದಾ ॥34॥
ಅತೀವ ಮುದಿತೋ ರಾಜನ್ನಿದಂ ವಚನಮಬ್ರವೀತ್ ॥35॥

ಎಲೈ ರಾಜನೇ, ಪ್ರಸನ್ನರಾದ ಎಲ್ಲಾ ಮಹರ್ಷಿಗಳಿಂದ ಸಹಿತರಾದ ದೇವತೆಗಳಿಂದ ವರವನ್ನು ಕೇಳು ಎಂದು ಆಗ ಹೇಳಲ್ಪಟ್ಟವನಾಗಿ ಅವನು ಅವರಿಗೆ ನಮಸ್ಕರಿಸಿ ಕೈಗಳನ್ನು ಮುಗಿದು ಬಹಳ ಸಂತೋಷದಿಂದ ಈ ಮಾತನ್ನು ಹೇಳಿದನು.

ದದ್ಯಾಂ ವಿತ್ತಂ ದ್ವಿಜಗ್ರ್ಯೇಭ್ಯಃ ಶತ್ರೂಣಾಂ ಚಾಪಿ ದುರ್ಜಯಃ |
ಸಖ್ಯಂ ಚ ವಿಷ್ಣುನಾ ಮೇ ಸ್ಯಾದ್ ಭೂತೇಷ್ವದ್ರೋಹ ಏವ ಚ |
ಧರ್ಮೇ ರತಿಶ್ಚ ಸತತಂ ಸ್ವರ್ಗೇ ವಾಸಸ್ತಥಾಽಕ್ಷಯಃ ॥36॥

ನಾನು ಶ್ರೇಷ್ಠಬ್ರಾಹ್ಮಣರಿಗೆ ಧನವನ್ನು ಕೊಡುವವನಾಗಬೇಕು. ಶತ್ರುಗಳಿಗೆ ದುರ್ಜಯನಾಗಬೇಕು. ನನಗೆ ವಿಷ್ಣುವಿನ ಸಖ್ಯವು ಯಾವಾಗಲೂ ಇರಬೇಕು. ನನ್ನಿಂದ ಯಾವ ಪ್ರಾಣಿಗೂ ದ್ರೋಹವಾಗಬಾರದು. ನನಗೆ ಸತತವಾಗಿ ಧರ್ಮದಲ್ಲಿ ರತಿ ಇರಬೇಕು ಮತ್ತು ಹಾಗೆಯೇ ಸ್ವರ್ಗದಲ್ಲಿ ಅಕ್ಷಯವಾದ ವಾಸವುಂಟಾಗಬೇಕು.

ಮಾರ್ಕಂಡೇಯಃ

ತಥಾಸಿತ್ವತಿ ತತೋ ದೇವೈಃ ಪ್ರೀತೈರುಕ್ತಃ ಸ ಪಾರ್ಥಿವಃ |
ಋಷಿಭಿಶ್ಚ ಸಗಂಧರ್ವೈರುತ್ತಂಕೇನ ಚ ಧೀಮತಾ ॥37॥

ಮಾರ್ಕಂಡೇಯ ಆಗ ಪ್ರೀತಿಯುಕ್ತರಾದ ದೇವತೆಗಳೂ, ಋಷಿಗಳೂ, ಗಂಧರ್ವರೂ, ಮೇಧಾವಿಯಾದ ಉತ್ತಂಕನೂ ಸಹ ಆ ರಾಜನಿಗೆ ಹಾಗೆಯೇ ಆಗಲಿ ಎಂದು ಹೇಳಿದರು.

ಸಂಭಾಷ್ಯ ಚೈನಂ ವಿವಿಧೈರಾಶೀರ್ವಾದೈಸ್ತತೋ ನೃಪ |
ದೇವಾ ಮಹರ್ಷಯಶ್ಚಾಪಿ ಸ್ವಾನಿ ಸ್ಥಾನಾನಿ ಭೇಜಿರೇ ॥38॥

ಎಲೈ ರಾಜನೇ, ದೇವತೆಗಳು ಮತ್ತು ಮಹರ್ಷಿಗಳು ಅವನಿಗೆ ವಿಧವಿಧವಾದ ಆಶೀರ್ವಾದಗಳನ್ನು ಉಚ್ಚಾರಣೆ ಮಾಡಿ ಅನಂತರ ತಮ್ಮ ತಮ್ಮ ಸ್ಥಾನಗಳನ್ನು ಸೇರಿದರು.

ತಸ್ಯ ಪುತ್ರಾಸ್ತ್ರಯಃ ಶಿಷ್ಟಾ ಯುಧಿಷ್ಠಿರ ತದಾಽಭವನ್ |
ದೃಢಾಶ್ವಃ ಕಪಿಲಾಶ್ವಶ್ಚ ಚಂದ್ರಾಶ್ವಶ್ಚೈವ ಭಾರತ ॥39॥
ತೇಭ್ಯಃ ಪರಂಪರಾ ರಾಜನ್ನಿಕ್ಷ್ವಾಕೂಣಾಂ ಮಹಾತ್ಮನಾಮ್ ॥40॥
ವಂಶಸ್ಯ ಸುಮಹಾಭಾಗ ರಾಜ್ಞಾಮಮಿತತೇಜಸಾಮ್ |

ಎಲೈ ಭಾರತನೇ, ಯುಧಿಷ್ಠಿರನೇ, ಅವನ ಮಕ್ಕಳಲ್ಲಿ ಆಗ ದೃಢಾಶ್ವ, ಕಪಿಲಾಶ್ವ ಮತ್ತು ಚಂದ್ರಾಶ್ವನೆಂಬ ಮೂರು ಮಕ್ಕಳು ಉಳಿದರು. ಎಲೈ ರಾಜನೇ, ಎಲೈ ಮಹಾಭಾಗನೇ, ಅಮಿತಪರಾಕ್ರಮಿಗಳಾದ ಮಹಾತ್ಮರಾದ ಇಕ್ಷ್ವಾಕು ರಾಜರ ಪರಂಪರೆಯು ಅವರಿಂದ ಮುಂದುವರೆಯಿತು.

ಏವಂ ಸ ನಿಹತಸ್ತೇನ ಕುವಲಾಶ್ವೇನ ಸತ್ತಮ |
ಧುಂಧುರ್ನಾಮ ಮಹಾದೈತ್ಯೋ ಮಧುಕೈಟಭಯೋಃ ಸುತಃ ॥41॥

ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ಹೀಗೆ ಮಧುಕೈಟಭರ ಪುತ್ರನಾದ ಧುಂಧು ಎಂಬ ಮಹಾದೈತ್ಯನು ಕುವಲಾಶ್ವನಿಂದ ಕೊಲ್ಲಲ್ಪಟ್ಟನು.

ಕುವಲಾಶ್ವಶ್ಚ ನೃಪತಿರ್ಧುಂಧುಮಾರ ಇತಿ ಸ್ಮೃತಃ |
ನಾಮ್ನಾ ಚ ಗುಣಸಂಯುಕ್ತಸ್ತದಾಪ್ರಭೃತಿ ಸೋಽಭವತ್ ॥42॥

ಗುಣವಂತನಾದ ಕುವಲಾಶ್ವರಾಜನೂ ಸಹ ಅಲ್ಲಿಂದ ಮುಂದಕ್ಕೆ ಧುಂಧುಮಾರ ಎಂದು ಕರೆಯಲ್ಪಟ್ಟು ಅದೇ ನಾಮದಿಂದಲೇ ಪ್ರಖ್ಯಾತನಾದನು.

ಏತತ್ ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ |
ಧೌಂಧುಮಾರಮುಪಾಖ್ಯಾನಂ ಪ್ರಥಿತಂ ಯಸ್ಯ ಕರ್ಮಣಾ ॥43॥

ಯಾವ ಕುವಲಾಶ್ವನ ಕರ್ಮದಿಂದ ಪ್ರಸಿದ್ಧವಾಗಿದೆಯೋ ಅಂತಹ ನೀನು ಕೇಳಿದ ಈ ಧುಂಧುಮಾರೋಪಾಖ್ಯಾನವೆಲ್ಲವನ್ನೂ ನಿನಗೆ ಹೇಳಿದ್ದೇನೆ.

ಇದಂ ತು ಪುಣ್ಯಮಾಖ್ಯಾನಂ ವಿಷ್ಣೋಃ ಸಮನುಕೀರ್ತನಮ್ |
ಶೃಣುಯಾದ್ ಯಃ ಸ ಧರ್ಮಾತ್ಮಾ ಪುತ್ರವಾಂಶ್ಚ ಭವೇನ್ನರಃ ॥44॥

ಈ ಪುಣ್ಯವಾದ ಆಖ್ಯಾನವು ವಿಷ್ಣುವಿನ ಕೀರ್ತನರೂಪವೂ ಆಗಿದೆ. ಇದನ್ನು ಕೇಳುವ ಅಧಿಕಾರಿಯಾದ ಮನುಷ್ಯನು ಧರ್ಮಾತ್ಮನೂ, ಪುತ್ರವಂತನೂ ಆಗುವನು.

ಆಯುಷ್ಮಾನ್ ಭೂತಿಮಾಂಶ್ಚೈವ ಶ್ರುತ್ವಾ ಭವತಿ ಪರ್ವಸು |
ನ ಚ ವ್ಯಾಧಿಭಯಂ ಕಿಂಚಿತ್ ಪ್ರಾಪ್ನೋತಿ ವಿಗತಜ್ವರಃ ॥45॥

ಇದನ್ನು ಪರ್ವಕಾಲಗಳಲ್ಲಿ ಕೇಳಿದವನು ಆಯುಷ್ಮಂತನೂ, ಐಶ್ವರ್ಯವಂತನೂ ಆಗುವನು. ಅವನಿಗೆ ವ್ಯಾಧಿ ಭಯವಾಗಲೀ, ಮನಸ್ಸಿನ ಸಂತಾಪವಾಗಲೀ ಉಂಟಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಮಾರ್ಕಂಡೇಯಸಮಾಖ್ಯಾಪರ್ವಣಿ ಏಕನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಖ್ಯಾಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೊಂದನೆಯ
ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ತೆರಡನೆಯ ಅಧ್ಯಾಯ
ಮಾರ್ಕಂಡೇಯರಿಂದ ಪತಿವ್ರತಾ ಮಹಾತ್ಮ್ಯ ಕಥನಾರಂಭ.
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ಮಾರ್ಕಂಡೇಯಂ ಮಹಾದ್ಯುತಿಮ್ ।
ಪಪ್ರಚ್ಛ ಭರತಶ್ರೇಷ್ಠ ಧರ್ಮಪ್ರಶ್ನಂ ಸುದುರ್ವಿದಮ್ ॥1॥
ವೈಶಂಪಾಯನ ಎಲೈ ಭರತಶ್ರೇಷ್ಠನೇ, ಅನಂತರ ಯುಧಿಷ್ಠಿರ ರಾಜನು ಮಹಾತೇಜಸ್ವಿಗಳಾದ ಮಾರ್ಕಂಡೇಯರನ್ನು ಕುರಿತು ತಿಳಿಯಲು ಬಹಳ ಕಷ್ಟವಾದ ಧರ್ಮಪ್ರಶ್ನೆಯನ್ನು ಮಾಡಿದನು.
ಶ್ರೋತುಮಿಚ್ಛಾಮಿ ಭಗವನ್ ಸ್ತ್ರೀಣಾಂ ಮಾಹಾತ್ಮ್ಯಮುತ್ತಮಮ್ ।
ಕಥ್ಯಮಾನಂ ತ್ವಯಾ ವಿಪ್ರ ಸೂಕ್ಷ್ಮಂ ಧರ್ಮ್ಯಂ ಚ ತತ್ತ್ವತಃ ॥2॥
ಪೂಜ್ಯರೇ, ಬ್ರಾಹ್ಮಣರೇ, ನಿಮ್ಮಿಂದ ನಾನು ಪತಿವ್ರತಾ ಸ್ತ್ರೀಯರ ಸೂಕ್ಷ್ಮವಾದ ಧರ್ಮ ಮತ್ತು ಸಂಬಂಧಿಯಾದ ಅವರ ಮಹಾತ್ಮ್ಯವನ್ನು ಯಥಾವತ್ತಾಗಿ ಕೇಳಿ ತಿಳಿಯಲು ಬಯಸುತ್ತೇನೆ.
ಪ್ರತ್ಯಕ್ಷಮಿಹ ವಿಪ್ರರ್ಷೇ ದೇವಾ ದೃಶ್ಯಂತಿ ಸತ್ತಮ ।
ಸೂರ್ಯಾಚಂದ್ರಮಸೌ ವಾಯುಃ ಪೃಥಿವೀ ವಹ್ನಿರೇವ ಚ ॥3॥
ಎಲೈ ಸಜ್ಜನರಲ್ಲಿ ಶ್ರೇಷ್ಠರಾದವರೇ, ವಿಪ್ರರ್ಷಿಗಳೇ, ಈ ಲೋಕದಲ್ಲಿ ಸೂರ್ಯಚಂದ್ರರು, ವಾಯು, ಭೂಮಿ, ಅಗ್ನಿ, ಈ ದೇವತೆಗಳು ಪ್ರತ್ಯಕ್ಷವಾಗಿ ಗೋಚರಿಸುತ್ತಾರೆ.
ಪಿತಾ ಮಾತಾ ಚ ಭಗವನ್ ಗುರುರೇವ ಚ ಸತ್ತಮ ।
ಯಚ್ಚಾನ್ಯದ್ ದೇವವಿಹಿತಂ ತಚ್ಚಾಪಿ ಭೃಗುನಂದನ ।
ಮಾನ್ಯಾ ಹಿ ಗುರವಃ ಸರ್ವೇ ಏಕಪತ್ನ್ಯಸ್ತಥಾ ಸ್ತ್ರಿಯಃ ॥4॥
ಪೂಜ್ಯರೇ, ಸಜ್ಜನರಲ್ಲಿ ಶ್ರೇಷ್ಠರೇ, ತಂದೆ, ತಾಯಿ, ಗುರುಗಳು ಇವರೂ ಪ್ರತ್ಯಕ್ಷದೇವತೆಗಳೇ. ಎಲೈ ಭೃಗುನಂದನನೇ, ದೇವವಿಹಿತವಾದ ಬೇರೆ ವಸ್ತುಗಳು ಪ್ರತ್ಯಕ್ಷವಾಗಿ ಗೋಚರಿಸುತ್ತವೆ. ಗುರುಗಳು ಮತ್ತು ಪತಿವ್ರತೆಯರಾದ ಸ್ತ್ರೀಯರೆಲ್ಲರೂ ಮಾನ್ಯರಷ್ಟೆ?
ಪತಿವ್ರತಾನಾಂ ಶುಶ್ರೂಷಾ ದುಷ್ಕರಾ ಪ್ರತಿಭಾತಿ ಮೇ ।
ಪತಿವ್ರತಾನಾಂ ಮಾಹಾತ್ಮ್ಯಂ ವಕ್ತುಮರ್ಹಸಿ ನಃ ಪ್ರಭೋ ॥5॥
ಪತಿವ್ರತೆಯರು ಮಾಡುವ ಸೇವೆಯು ದುಷ್ಕರವಾದೆಂದು ನನಗೆ ತೋರುತ್ತದೆ. ಪ್ರಭುಗಳೇ, ಪತಿವ್ರತೆಯರ ಮಹಾತ್ಮ್ಯವನ್ನು ನಮಗೆ ಹೇಳಬೇಕು.
ನಿರುದ್ಧ್ಯ ಚೇಂದ್ರಿಯಗ್ರಾಮಂ ಮನಃ ಸಂರುಧ್ಯ ಚಾನಘ ।
ಪತಿಂ ದೈವತವಚ್ಚಾಪಿ ಚಿಂತಯಂತ್ಯಃ ಸ್ಥಿತಾ ಹಿ ಯಾಃ ॥6॥
ಎಲೈ ಅನಘರೇ, ಯಾವ ಸ್ತ್ರೀಯರು ತಮ್ಮ ಇಂದ್ರಿಯಗ್ರಾಮವನ್ನು ನಿಯಂತ್ರಿಸಿ, ಮನಸ್ಸನ್ನು ನಿಯಂತ್ರಿಸಿ, ಪತಿಯನ್ನು ದೇವತೆಯಂತೆ ಚಿಂತಿಸುವವರೋ ಅವರ ಮಹಿಮೆಯನ್ನು ಹೇಳಿ.
ಭಗವನ್ ದುಷ್ಕರಂ ತ್ವೇತತ್ ಪ್ರತಿಭಾತಿ ಮಮ ಪ್ರಭೋ ।
ಮಾತಾಪಿತ್ರೋಶ್ಚ ಶುಶ್ರೂಷಾ ಸ್ತ್ರೀಣಾಂ ಭರ್ತರಿ ಚ ದ್ವಿಜ ॥7॥
ಪೂಜ್ಯರೇ, ಪ್ರಭುಗಳೇ, ಸ್ತ್ರೀಯರು ತಂದೆತಾಯಿಗಳಿಗೆ ಮತ್ತು ಪತಿಗೆ ಮಾಡುವ ಸೇವೆಯು ದುಷ್ಕರವಾದುದೆಂದು ನನಗೆ ತೋರುತ್ತದೆ.
ಸ್ತ್ರೀಣಾಂ ಧರ್ಮಾತ್ ಸುಘೋರಾದ್ಧಿ ನಾನ್ಯಂ ಪಶ್ಯಾಮಿ ದುಷ್ಕರಮ್ ।
ಸಾಧ್ವಾಚಾರಾಃ ಸ್ತ್ರಿಯೋ ಬ್ರಹ್ಮನ್ ಯತ್ ಕುರ್ವಂತಿ ಸದಾಽಽದೃತಾಃ ॥
ಎಲೈ ಬ್ರಾಹ್ಮಣರೇ, ಸದಾಚಾರವುಳ್ಳ ಸ್ತ್ರೀಯರು ಸದಾ ಆದರದಿಂದ ಏನನ್ನು ಆಚರಿಸುತ್ತಾರೆಯೋ ಅಂತಹ ಅತ್ಯಂತ ಘೋರವಾದ ಸ್ತ್ರೀಧರ್ಮಕ್ಕಿಂತ ದುಷ್ಕರವಾದುದು ಇನ್ನೊಂದು ಇಲ್ಲವೆಂದು ನಾನು ಭಾವಿಸುತ್ತೇನೆ.
ದುಷ್ಕರಂ ಖಲು ಕುರ್ವಂತಿ ಪಿತರಂ ಮಾತರಂ ಚ ವೈ ।
ಏಕಪತ್ನ್ಯಶ್ಚ ಯಾ ನಾರ್ಯೋ ಯಾಶ್ಚ ಸತ್ಯಂ ವದಂತ್ಯುತ ॥9॥
ತಂದೆತಾಯಿಗಳ ಸೇವೆಯನ್ನು ಮಾಡಿ ಯಾವ ಪತಿವ್ರತೆಯರು ಸತ್ಯವನ್ನೇ ನುಡಿಯುತ್ತಾರೆಯೋ ಅವರು ದುಷ್ಕರವಾದ ಕಾರ್ಯವನ್ನೇ ಮಾಡುತ್ತಾರೆ.
ಕುಕ್ಷಿಣಾ ದಶ ಮಾಸಾಂಶ್ಚ ಗರ್ಭಂ ಸಂಧಾರಯಂತಿ ಯಾಃ ।
ನಾರ್ಯಃ ಕಾಲೇನ ಸಂಭೂಯ ಕಿಮದ್ಭುತತರಂ ತತಃ ॥10॥
ಯಾವ ನಾರಿಯರು ತಮ್ಮ ಉದರದಲ್ಲಿ ಹತ್ತು ತಿಂಗಳು ಗರ್ಭವನ್ನು ಧರಿಸಿ ಕಾಲವನ್ನು ನಿರೀಕ್ಷಿಸುವರೋ ಅದಕ್ಕಿಂತ

ಅದ್ಭುತವಾದುದು ಯಾವುದು ಇದೆ?
ಸಂಶಯಂ ಪರಮಂ ಪ್ರಾಪ್ಯ ವೇದನಾಮತುಲಾಮಪಿ |
ಪ್ರಜಾಯಂತೇ ಸುತಾನ್ ನಾರ್ಯೋ ದುಃಖೇನ ಮಹತಾ ವಿಭೋ ||
ಎಲೈ ವಿಭುಗಳೇ, ಪ್ರಾಣಸಂಶಯವನ್ನು ಹೊಂದಿ ಅತುಲವಾದ ವೇದನೆಯನ್ನು ಅನುಭವಿಸಿ ಬಹಳ ಕಷ್ಟದಿಂದ ನಾರಿಯರು ಮಕ್ಕಳನ್ನು ಪಡೆಯುತ್ತಾರೆ.
ಪುಷ್ಣಂತಿ ಚಾಪಿ ಮಹತಾ ಸ್ನೇಹೇನ ದ್ವಿಜಪುಂಗವ |
ಚಿಂತಯಂತಿ ತತಶ್ಚಾಪಿ ಕಿಂಶೀಲೋಽಯಂ ಭವಿಷ್ಯತಿ ||12||
ಎಲೈ ದ್ವಿಜಶ್ರೇಷ್ಠರೇ, ಅನಂತರ ಬಹಳ ಸ್ನೇಹದಿಂದ ಆ ಶಿಶುಗಳನ್ನು ಪೋಷಿಸುತ್ತಾರೆ. ಅನಂತರ ಇವನು ಎಂತಹ ಸ್ವಭಾವವುಳ್ಳವನಾಗುವನು ಎಂದು ಸತತವಾಗಿ ಚಿಂತಿಸುವರು.
ಯಾಶ್ಚ ಕ್ರೂರೇಷು ಸತ್ತ್ವೇಷು ವರ್ತಮಾನಾ ಜುಗುಪ್ಸಿತಾಃ |
ಸ್ವಕರ್ಮ ಕುರ್ವಂತಿ ಸದಾ ದುಷ್ಕರಂ ತಚ್ಚ ಮೇ ಮತಮ್ ||13||
ಮತ್ತು ಯಾರು ಕ್ರೂರವಾದ ಮತ್ತು ಜುಗುಪ್ಸಿತವಾದ ಕಾರ್ಯಗಳಲ್ಲಿ ನಿರತರಾದರೂ ಸದಾ ತಮ್ಮ ಸ್ವಕರ್ಮವನ್ನು ಆಚರಿಸುತ್ತಾರೆಯೋ ಅದೂ ಸಹ ದುಷ್ಕರವೆಂದು ನನ್ನ ಅಭಿಪ್ರಾಯ.
ಕ್ಷತ್ರಧರ್ಮಸಮಾಚಾರತತ್ತ್ವಂ ವ್ಯಾಖ್ಯಾಹಿ ಮೇ ದ್ವಿಜ |
ಧರ್ಮಃ ಸುದುರ್ಲಭೋ ವಿಪ್ರ ನೃಶಂಸೇನ ಮಹಾತ್ಮನಾಮ್ ||14||
ಎಲೈ ಬ್ರಾಹ್ಮಣರೇ, ಕ್ಷತ್ರಿಯ ಧರ್ಮದ ಆಚರಣೆಯ ವಿಧಾನವನ್ನು ನನಗೆ ಹೇಳಿ. ಎಲೈ ಬ್ರಾಹ್ಮಣರೇ, ನನ್ನಂತಹ ಕ್ರೂರ ಕ್ಷತ್ರಿಯನಿಗೆ ಮಹಾತ್ಮರಿಂದ ತತ್ತ್ವವನ್ನು ಕೇಳುವುದು ದುರ್ಲಭವಾದುದು.
ಏತದಿಚ್ಛಾಮಿ ಭಗವನ್ ಪ್ರಶ್ನಂ ಪ್ರಶ್ನವಿದಾಂ ವರ |
ಶ್ರೋತುಂ ಭೃಗುಕುಲಶ್ರೇಷ್ಠ ಶುಶ್ರೂಷೇ ತವ ಸುವ್ರತ ||15||
ಎಲೈ ಪ್ರಶ್ನೆಗಳನ್ನು ತಿಳಿದವರಲ್ಲಿ ಶ್ರೇಷ್ಠರಾದವರೇ, ಒಳ್ಳೆಯ ವ್ರತವನ್ನು ಧರಿಸಿದವರೇ, ಭೃಗುಕುಲದಲ್ಲಿ ಶ್ರೇಷ್ಠರಾದವರೇ, ಪೂಜ್ಯರಾದವರೇ, ನಿಮ್ಮಿಂದ ಈ ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಕೇಳಲು ಬಯಸುತೆತೇನೆ.
ಮಾರ್ಕಂಡೇಯಃ
ಹಂತ ತೇಽಹಂ ಸಮಾಖ್ಯಾಸ್ಯೇ ಪ್ರಶ್ನಮೇತಂ ಸುದುರ್ವಚಮ್ |
ತತ್ತ್ವೇನ ಭರತಶ್ರೇಷ್ಠ ಗದತಸ್ತನ್ನಿಬೋಧ ಮೇ ||16||
ಮಾರ್ಕಂಡೇಯ ಬಹಳ ಸಂತೋಷ. ಎಲೈ ಭರತಶ್ರೇಷ್ಠನೇ, ನೀನು ಕೇಳಿದ, ಉತ್ತರವನ್ನು ಹೇಳಲು ಕಷ್ಟವಾದ ಈ ಪ್ರಶ್ನೆಗಳಿಗೆ ಯಥಾರ್ಥವಾಗಿ ಉತ್ತರವನ್ನು ಹೇಳುವೆನು. ನಾನು ಹೇಳಿದಂತೆ ಅದನ್ನು ನೀನು ಕೇಳು.
ಮಾತೄಸ್ತು ಗೌರವಾದನ್ಯೇ ಪಿತೄನನ್ಯೇ ತು ಮೇನಿರೇ |
ದುಷ್ಕರಂ ಕುರುತೇ ಮಾತಾ ವಿವರ್ಧಯತಿ ಯಾ ಪ್ರಜಾಃ ||17||
ಕೆಲವರು ತಾಯಿಯನ್ನು, ಇನ್ನು ಕೆಲವರು ತಂದೆಯನ್ನು ಶ್ರೇಷ್ಠರೆಂದು ತಿಳಿಯುತ್ತಾರೆ. ಯಾವ ತಾಯಿಯು ಮಕ್ಕಳನ್ನು ಬೆಳೆಸುತ್ತಾಳೆಯೋ ಅವಳು ದುಷ್ಕರವಾದ ಕಾರ್ಯವನ್ನು ಮಾಡುತ್ತಾಳೆ.
ತಪಸಾ ದೇವತೇಜ್ಯಾಭಿವಂದನೇನ ತಿತಿಕ್ಷಯಾ |
ಸುಪ್ರಶಸ್ತೈರುಪಾಯೈಶ್ಚಾಪೀಹಂತೇ ಪಿತರಃ ಸುತಾನ್ ||18||
ತಪಸ್ಸನ್ನು ಮಾಡಿ ದೇವತೆಗಳಿಗೆ ಪೂಜೆ ಮತ್ತು ನಮಸ್ಕಾರಗಳನ್ನು ಸಲ್ಲಿಸಿ ಸಹನೆಯಿಂದ ಇದ್ದು ಪ್ರಶಸ್ತವಾದ ಉಪಾಯಗಳನ್ನು ಅನುಸರಿಸಿ ತಂದೆ ತಾಯಿಗಳು ಮಕ್ಕಳನ್ನು ಪಡೆಯಲು ಬಯಸುತ್ತಾರೆ.
ಏವಂ ಕೃಚ್ಛ್ರೇಣ ಮಹತಾ ಪುತ್ರಂ ಪ್ರಾಪ್ಯ ಸುದುರ್ಲಭಮ್ |
ಚಿಂತಯಂತಿ ಸದಾ ವೀರ ಕೀದೃಶೋಽಯಂ ಭವಿಷ್ಯತಿ ||19||
ಎಲೈ ವೀರನೇ, ಹೀಗೆ ಬಹಳ ಕಷ್ಟದಿಂದ ದುರ್ಲಭನಾದ ಪುತ್ರನನ್ನು ಪಡೆದು ಇವನು ಎಂತಹ ಸ್ವಭಾವವುಳ್ಳವನಾಗುವನು ಎಂದು ಸತತವಾಗಿ ಚಿಂತಿಸುವರು.
ಆಶಂಸತೇ ಹಿ ಪುತ್ರೇಷು ಪಿತಾ ಮಾತಾ ಚ ಭಾರತ |
ಯಶಃ ಕೀರ್ತಿಮಥೈಶ್ವರ್ಯಂ ಪ್ರಜಾಧರ್ಮಂ ತಥೈವ ಚ ||20||
ಎಲೈ ಭಾರತನೇ, ತಂದೆ ತಾಯಿಗಳು ಮಕ್ಕಳಲ್ಲಿ ಯಾವಾಗಲೂ ಕೀರ್ತಿಯನ್ನೂ, ಐಶ್ವರ್ಯವನ್ನೂ ಮತ್ತು ಪ್ರಜಾಧರ್ಮವನ್ನೂ (ಅವರಿಗೂ ಮಕ್ಕಳಾಗಲಿ ಎಂಬುದನ್ನೂ) ಆಶಂಸನೆ ಮಾಡುತ್ತಾರೆ.
ಮಾತುಃ ಪಿತುಶ್ಚ ರಾಜೇಂದ್ರ ಸತತಂ ಹಿತಕಾರಿಣೋಃ |
ತಯೋರಾಶಾಂ ತು ಸಫಲಾಂ ಯಃ ಕರೋತಿ ಸ ಧರ್ಮವಿತ್ ||21||
ಎಲೈ ರಾಜೇಂದ್ರನೇ, ಸತತವಾಗಿ ಹಿತವನ್ನು ಮಾಡುವ ತಂದೆತಾಯಿಗಳ ಆಸೆಯನ್ನು ಯಾರು ಸಫಲಗೊಳಿಸುತ್ತಾನೆಯೋ ಅವನೇ ಧರ್ಮವನ್ನು ತಿಳಿದವನು (ಧರ್ಮವನ್ನು ಸಂಪಾದಿಸುವವನು).
ಪಿತಾ ಮಾತಾ ಚ ರಾಜೇಂದ್ರ ತುಷ್ಯತೋ ಯಸ್ಯ ನಿತ್ಯಶಃ |
ಇಹ ಪ್ರೇತ್ಯ ಚ ತಸ್ಯಾಥ ಕೀರ್ತಿರ್ಧರ್ಮಶ್ಚ ಶಾಶ್ವತಃ ||22||
ಎಲೈ ರಾಜೇಂದ್ರನೇ, ಯಾರ ವಿಷಯದಲ್ಲಿ ತಂದೆ ತಾಯಿಗಳು ನಿತ್ಯವೂ ಸಂತೋಷಪಡುತ್ತಾರೆಯೋ ಅವನು ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಕೀರ್ತಿಯನ್ನೂ ಮತ್ತು ಶಾಶ್ವತಧರ್ಮವನ್ನೂ ಸಂಪಾದಿಸುತ್ತಾನೆ.

ನೈವ ಯಜ್ಞಕ್ರಿಯಾಃ ಕಾಶ್ಚಿನ್ನ ಶ್ರಾದ್ಧಂ ನೋಪವಾಸಕಮ್ |
ಯಾ ತು ಭರ್ತರಿ ಶುಶ್ರೂಷಾ ತಯಾ ಸ್ವರ್ಗಂ ಜಯತ್ಯುತ ॥23॥
ಸ್ತ್ರೀಯರು ಪತಿಸೇವೆಯಿಂದ ಎಂತಹ ಸ್ವರ್ಗವನ್ನು ಪಡೆಯುತ್ತಾರೆಯೋ ಅದನ್ನು ಯಜ್ಞಕ್ರಿಯೆಗಳಿಂದಾಗಲೀ, ಶ್ರಾದ್ಧದಿಂದಲಾಗಲೀ ಅಥವಾ ಉಪವಾಸದಿಂದಾಗಲೀ ಪಡೆಯಲು ಸಾಧ್ಯವಿಲ್ಲ.
ಏತತ್ಪ್ರಕರಣಂ ರಾಜನ್ನಧಿಕೃತ್ಯ ಯುಧಿಷ್ಠಿರ |
ಪತಿವ್ರತಾನಾಂ ನಿಯತಂ ಧರ್ಮಂ ಚಾವಹಿತಃ ಶೃಣು ॥24॥
ಎಲೈ ರಾಜನಾದ ಯುಧಿಷ್ಠಿರನೇ, ಈ ಪ್ರಕರಣಕ್ಕೆ ಸಂಬಂಧಿಸಿದ ಪತಿವ್ರತೆಯರ ನಿಯತವಾದ ಧರ್ಮವನ್ನು ಜಾಗರೂಕನಾಗಿ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪತಿವ್ರತಾಮಹಾತ್ಮ್ಯೇ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೆರಡನೆಯ
ಅಧ್ಯಾಯ ಮುಗಿಯಿತು
* * * *

## ನೂರ ತೊಂಬತ್ತೂರನೆಯ ಅಧ್ಯಾಯ

ಕೌಶಿಕ ಬ್ರಾಹ್ಮಣರ ತಪಸ್ಸು, ಬಲಾಕ ಪಕ್ಷಿಯ ಪತನ ಮತ್ತು
ಪತಿವ್ರತೆಯ ಜೊತೆಯಲ್ಲಿ ಸಂವಾದ.
ಮಾರ್ಕಂಡೇಯಃ
ಕಶ್ಚಿದ್ ದ್ವಿಜಾತಿಪ್ರವರೋ ವೇದಾಧ್ಯಾಯೀ ತಪೋಧನಃ |
ತಪಸ್ವೀ ಧರ್ಮಶೀಲಶ್ಚ ಕೌಶಿಕೋ ನಾಮ ಭಾರತ ॥1॥
ಮಾರ್ಕಂಡೇಯ ಎಲೈ ಭಾರತನೇ, ಒಬ್ಬ ವೇದಾಧ್ಯಯನವನ್ನು ಮಾಡಿದ ತಪೋಧನನಾದ ಧರ್ಮಶೀಲನಾದ ಕೌಶಿಕನೆಂಬ ಶ್ರೇಷ್ಠವಾದ ತಪಸ್ವಿಯಾದ ಬ್ರಾಹ್ಮಣನಿದ್ದನು.
ಸಾಂಗೋಪನಿಷದೋ ವೇದಾನಧೀತೇ ದ್ವಿಜಸತ್ತಮಃ |
ಸ ವೃಕ್ಷಮೂಲೇ ಕಸ್ಮಿಂಶ್ಚಿದ್ ವೇದಾನುಚ್ಚಾರಯನ್ ಸ್ಥಿತಃ ॥2॥
ಆ ದ್ವಿಜಶ್ರೇಷ್ಠನು ಉಪನಿಷತ್ತುಗಳಿಂದ ಮತ್ತು ಷಡಂಗಗಳಿಂದ ಸಹಿತವಾದ ವೇದಗಳನ್ನು ಅಧ್ಯಯನ ಮಾಡಿ ಯಾವುದೋ ಒಂದು ವೃಕ್ಷ ಮೂಲದಲ್ಲಿ ಕುಳಿತು ವೇದಗಳನ್ನು ಪಾರಾಯಣ ಮಾಡುತ್ತಿದ್ದನು.
ಉಪರಿಷ್ಟಾಚ್ಚ ವೃಕ್ಷಸ್ಯ ಬಲಾಕಾ ಸನ್ನ್ಯಲೀಯತ |
ತಯಾ ಪುರೀಷಮುತ್ಸೃಷ್ಟಂ ಬ್ರಾಹ್ಮಣಸ್ಯ ತದೋಪರಿ ॥3॥
ಆ ಮರದ ಮೇಲೆ ಒಂದು ಬಲಾಕ ಪಕ್ಷಿಯು ಅಡಗಿ ಕುಳಿತಿದ್ದಿತು. ಅದು ಬ್ರಾಹ್ಮಣನ ಮೇಲೆ ಮಲವಿಸರ್ಜನೆಯನ್ನು ಮಾಡಿತು.
ತಾಮವೇಕ್ಷ್ಯ ತತಃ ಕ್ರುದ್ಧಃ ಸಮವಧ್ಯಾಯತ ದ್ವಿಜಃ |
ತಾಂ ಬಲಾಕಾಂ ಮಹಾರಾಜ ನಿಲೀನಾಂ ನಗಮೂರ್ಧನಿ ॥4॥
ಎಲೈ ಮಹಾರಾಜನೇ, ಆ ಬ್ರಾಹ್ಮಣನು ಆಗ ಕ್ರುದ್ಧನಾಗಿ ವೃಕ್ಷದ ಮೇಲೆ ಅಡಗಿ ಕುಳಿತಿದ್ದ ಆ ಬಲಾಕ ಪಕ್ಷಿಯನ್ನು ನೋಡಿ ಅದಕ್ಕೆ ಕೇಡನ್ನು ಬಯಸಿದನು.
ಭೃಶಂ ಕ್ರೋಧಾಭಿಭೂತೇನ ಬಲಾಕಾ ಸಾ ನಿರೀಕ್ಷಿತಾ |
ಅಪಧ್ಯಾತಾ ಚ ವಿಪ್ರೇಣ ನ್ಯಪತದ್ ಧರಣೀತಳೇ ॥5॥
ಕ್ರೋಧಯುಕ್ತನಾದ ಆ ಬ್ರಾಹ್ಮಣನಿಂದ ಸಿಟ್ಟಿನಿಂದ ವೀಕ್ಷಿಸಲ್ಪಟ್ಟು ಕೇಡನ್ನು ಬಯಸಲ್ಪಟ್ಟ ಆ ಬಲಾಕ ಪಕ್ಷಿಯು ಭೂಮಿಯ ಮೇಲೆ ಬಿದ್ದಿತು.
ಬಲಾಕಾಂ ಪತಿತಾಂ ದೃಷ್ಟ್ವಾ ಗತಸತತ್ತ್ವಮಚೇತನಾಮ್ |
ಕಾರುಣ್ಯಾದಭಿಸಂತಪ್ತಃ ಪರ್ಯಶೋಚತ ತಾಂ ದ್ವಿಜಃ |
ಅಕಾರ್ಯಂ ಕೃತವಾನಸ್ಮಿ ರೋಷರಾಗಬಲಾತ್ಕೃತಃ ॥6॥
ಬಲಾಕ ಪಕ್ಷಿಯು ಭೂಮಿಯ ಮೇಲೆ ಬಿದ್ದು ಪ್ರಾಣವನ್ನು ಕಳೆದುಕೊಂಡುದನ್ನು ನೋಡಿ ಆ ಬ್ರಾಹ್ಮಣನು ಅದರ ಮೇಲೆ ಕರುಣೆಯನ್ನು ಹೊಂದಿದವನಾಗಿ ಪಶ್ಚಾತ್ತಾಪ ಪಡುತ್ತಾ ನಾನು ರೋಷ ಮತ್ತು ರಾಗಗಳಿಗೆ ವಶನಾಗಿ ಅಕಾರ್ಯವನ್ನು ಮಾಡಿದೆ ಎಂದು ಶೋಕಪಟ್ಟನು.
ಇತ್ಯುಕತ್ವ ಬಹುಶೋ ವಿದ್ವಾನ್ ಗ್ರಾಮಂ ಭೈಕ್ಷ್ಯಾಯ ಸಂಶ್ರಿತಃ ॥7॥
ಹೀಗೆ ಬಹಳವಾಗಿ ಹೇಳುತ್ತಾ ಅವನು ಭಿಕ್ಷೆಗಾಗಿ ಗ್ರಾಮವನ್ನು ಪ್ರವೇಶಿಸಿದನು.
ಗ್ರಾಮೇ ಶುಚೀನಿ ಪ್ರಚರನ್ ಕುಲಾನಿ ಭರತರ್ಷಭ |
ಪ್ರವಿಷ್ಟಸ್ತತ್ಕುಲಂ ಯತ್ರ ಪೂರ್ವಂ ಚರಿತವಾಂಸ್ತು ಸಃ ॥8॥
ಎಲೈ ಭರತರ್ಷಭನೇ, ಅವನು ಗ್ರಾಮದಲ್ಲಿ ಶುದ್ಧವಾದ ಮನೆಗಳಿಗೆ ಹೋಗುತ್ತಾ ಹಿಂದೆ ಯಾವ ಮನೆಯಲ್ಲಿ ಭಿಕ್ಷೆಯನ್ನು ಬೇಡಿದ್ದನೋ ಆ ಮನೆಯನ್ನು ಪ್ರವೇಶಿಸಿದನು.
ದೇಹೀತಿ ಯಾಚಮಾನೋಽಸೌ ತಿಷ್ಠೇತ್ಯುಕ್ತಃ ಸ್ತ್ರಿಯಾ ತತಃ |
ಶೌಚಂ ತು ಯಾವತ್ ಕುರುತೇ ಭಾಜನಸ್ಯ ಕುಟುಂಬಿನೀ ॥9॥
`ಭಿಕ್ಷಾಂ ದೇಹಿ' ಎಂದು ಹೇಳಿದ ಅವನಿಗೆ ಪಾತ್ರೆಯನ್ನು ತೊಳೆಯುತ್ತಿದ್ದ ಆ ಮನೆಯ ಒಡತಿಯು ಸ್ವಲ್ಪ ನಿಲ್ಲು ಎಂದು ಹೇಳಿದಳು.

ಏತಸ್ಮಿನ್ನಂತರೇ ರಾಜನ್ ಕ್ಷುಧಾಸಂಪೀಡಿತೋ ಭೃಶಮ್ |
ಭರ್ತಾ ಪ್ರವಿಷ್ಟಃ ಸಹಸಾ ತಸ್ಯಾ ಭರತಸತ್ತಮ ॥10॥
ಎಲೈ ಭರತಸತ್ತಮನೇ, ಎಲೈ ರಾಜನೇ, ಈ ಮಧ್ಯದಲ್ಲಿ ಬಹಳ ಹಸಿವಿನಿಂದ ಪೀಡಿತನಾದ ಅವಳ ಪತಿಯು ಇದ್ದಕ್ಕಿದ್ದಂತೆಯೇ ಮನೆಗೆ ಬಂದನು.
ಸಾ ತು ದೃಷ್ಟ್ವಾ ಪತಿಂ ಸಾಧ್ವೀ ಬ್ರಾಹ್ಮಣಂ ವ್ಯವಹಾಯ ತಮ್ |
ಪಾದ್ಯಮಾಚಮನೀಯಂ ವೈ ದದೌ ಭರ್ತುಸ್ತಥಾಸನಮ್ ॥11॥
ಆ ಸಾಧ್ವಿಯು ಪತಿಯನ್ನು ನೋಡಿ ಆ ಬ್ರಾಹ್ಮಣನ್ನು ಬಿಟ್ಟು ಆಗ ಆಗಮಿಸಿದ ತನ್ನ ಪತಿಗೆ ಪಾದ್ಯ ಆಚಮನೀಯ ಆಸನಗಳನ್ನು ಕೊಟ್ಟಳು.
ಪ್ರಹ್ವಾ ಪರ್ಯಚರಚ್ಚಾಪಿ ಭರ್ತಾರಮಸಿತೇಕ್ಷಣಾ |
ಆಹಾರೇಣಾಥ ಭಕ್ಷ್ಯೈಶ್ಚ ಭೋಜ್ಯೈಃ ಸುಮಧುರೈಸ್ತಥಾ ॥12॥
ವಿನಯದಿಂದ ಕೂಡಿದ ಆ ಸುಂದರಿಯು ತನ್ನ ಪತಿಯನ್ನು ಸುಮಧುರವಾದ ಭಕ್ಷ್ಯ ಭೋಜ್ಯಗಳಿಂದ ಕೂಡಿದ ಆಹಾರದಿಂದ ಉಪಚರಿಸಿದಳು.
ಉಚ್ಛಿಷ್ಟಂ ಭಾವಿತಾ ಭರ್ತುರ್ಭುಂಕ್ತೇ ನಿತ್ಯಂ ಯುಧಿಷ್ಠಿರ |
ದೈವತಂ ಚ ಪತಿಂ ಮೇನೇ ಭರ್ತುಶ್ಚಿತ್ತಾನುಸಾರಿಣೀ ॥13॥
ಎಲೈ ಯುಧಿಷ್ಠಿರನೇ, ಅವಳು ನಿತ್ಯವೂ ಪೂಜ್ಯಭಾವನೆಯಿಂದ ಪತಿಯ ಉಚ್ಛಿಷ್ಟವನ್ನೇ ಭುಂಜಿಸುತಿತದ್ದಳು. ಪತಿಯ ಚಿತ್ತಕ್ಕೆ ಅನುಸಾರವಾಗಿ ನಡೆದುಕೊಂಡು ಪತಿಯನ್ನು ದೇವತೆ ಎಂದು ತಿಳಿದಿದ್ದಳು.
ಕರ್ಮಣಾ ಮನಸಾ ವಾಚಾ ನಾನ್ಯಚಿತ್ತಾಽಭ್ಯಗಾತ್ ಪತಿಮ್ |
ತಂ ಸರ್ವಭಾವೋಪಗತಾ ಪತಿಶುಶ್ರೂಷಣೇ ರತಾ ॥14॥
ಎಲ್ಲ ರೀತಿಯಿಂದಲೂ ಶುದ್ಧವಾದ ಮನಸ್ಸಿನಿಂದ ಪತಿಸೇವೆಯಲ್ಲಿಯೇ ನಿರತಳಾದ ಅವಳು ತನ್ನ ಕರ್ಮದಿಂದಲಾಗಲೀ, ಮನಸ್ಸಿನಿಂದಲಾಗಲೀ ಅಥವಾ ಮಾತಿನಿಂದಾಗಲೀ ಇನ್ನೊಬ್ಬ ಪುರುಷನನ್ನು ಚಿಂತಿಸದೆ ಪತಿಯ ಸಮೀಪದಲ್ಲಿರುತ್ತಿದ್ದಳು.
ಸಾಧ್ವಾಚಾರಾ ಶುಚಿರ್ದಕ್ಷಾ ಕುಟುಂಬಸ್ಯ ಹಿತೈಷಿಣೀ |
ಭರ್ತುಶ್ಚಾಪಿ ಹಿತಂ ಯತ್ತತ್ ಸತತಂ ಸಾಽನುವರ್ತತೇ ॥15॥
ಅವಳು ಒಳ್ಳೆಯ ಆಚಾರವುಳ್ಳವಳೂ, ಶುಚಿಯೂ, ಎಲ್ಲ ಕೆಲಸ ಮಾಡುವುದರಲ್ಲಿ ಸಮರ್ಥಳೂ ಕುಟುಂಬದ ಹಿತವನ್ನು ಬಯಸುವವಳೂ ಆಗಿದ್ದು, ಯಾವಾಗಲೂ ಪತಿಯ ಹಿತವನ್ನೇ ಬಯಸಿ ಅದನ್ನೇ ಅನುಸರಿಸುತ್ತಿದ್ದಳು.
ದೇವತಾತಿಥಿಭೃತ್ಯಾನಾಂ ಶ್ವಶ್ರೂಶ್ವಶುರಯೋಸ್ತಥಾ |
ಶುಶ್ರೂಷಣಪರಾ ನಿತ್ಯಂ ಸತತಂ ಸಂಯತೇಂದ್ರಿಯಾ ॥16॥
ಅವಳು ಸತತವಾಗಿ ಜಿತೇಂದ್ರಿಯಳಾಗಿದ್ದು ಯಾವಾಗಲೂ ದೇವತಾ ಅತಿಥಿಗಳ ಪೂಜೆಯಲ್ಲಿಯೂ ಭೃತ್ಯರ ಮತ್ತು ಅತ್ತೆಮಾವಂದಿರ ಸೇವೆಯಲ್ಲಿಯೂ ನಿರತಳಾಗಿರುತ್ತಿದ್ದಳು.
ಸಾ ಬ್ರಾಹ್ಮಣಂ ತದಾ ದೃಷ್ಟ್ವಾ ಸಂಸ್ಥಿತಂ ಭೈಕ್ಷ್ಯಕಾಂಕ್ಷಿಣಮ್ |
ಕುರ್ವತೀ ಪತಿಶುಶ್ರೂಷಾಂ ಸಸ್ಮಾರಾಥ ಶುಭೇಕ್ಷಣಾ ॥17॥
ಆ ಶುಭನೇತ್ರೆಯು ಪತಿಸೇವೆಯನ್ನು ಮಾಡುತ್ತಾ ಭಿಕ್ಷಾಕಾಂಕ್ಷಿಯಾಗಿ ನಿಂತಿದ್ದ ಬ್ರಾಹ್ಮಣನನ್ನು ನೋಡಿ ತಾನು ಮಾಡಬೇಕಾದ ಕಾರ್ಯವನ್ನು ಸ್ಮರಿಸಿಕೊಂಡಳು.
ವ್ರೀಡಿತಾ ಸಾಽಭವತ್ ಸಾಧ್ವೀ ತದಾ ಭರತಸತ್ತಮ |
ಭಿಕ್ಷಾಮಾದಾಯ ವಿಪ್ರಾಯ ನಿರ್ಜಗಾಮ ಯಶಸ್ವಿನೀ ॥18॥
ಎಲೈ ಭರತಶ್ರೇಷ್ಠನೇ, ಆ ಯಶಸ್ವಿನಿಯಾದ ಸಾಧ್ವಿಯು ತನ್ನ ವಿಳಂಬಕ್ಕೆ ಆಗ ನಾಚಿಕೆಗೊಂಡು ಆ ಬ್ರಾಹ್ಮಣನಿಗೆ ಕೊಡಲು ಭಿಕ್ಷೆಯನ್ನು ತೆಗೆದುಕೊಂಡು ಹೊರಗೆ ಬಂದಳು.
ಬ್ರಾಹ್ಮಣಃ
ಕಿಮಿದಂ ಭವತಿ ತ್ವಂ ಮಾಂ ತಿಷ್ಠೇತ್ಯುಕ್ತ್ವಾ ವರಾಂಗನೇ |
ಉಪರೋಧಂ ಕೃತವತೀ ನ ವಿಸರ್ಜಿತವತ್ಯಸಿ ॥19॥
ಬ್ರಾಹ್ಮಣ ಎಲೌ ಶ್ರೇಷ್ಠವನಿತೆಯೇ, ಪೂಜ್ಯೆಯೇ, ನೀನು ನನಗೆ ನಿಲ್ಲು ಎಂದು ಹೇಳಿ ಏನು ಮಾಡಿದೆ? ನನಗೆ ಹೋಗು ಎಂದು ಹೇಳದೆ ನನಗೆ ತೊಂದರೆಯನ್ನು ಮಾಡಿದೆ.
ಮಾರ್ಕಂಡೇಯಃ
ಬ್ರಾಹ್ಮಣಂ ಕ್ರೋಧಸಂತಪ್ತಂ ಜ್ವಲಂತಮಿವ ತೇಜಸಾ |
ದೃಷ್ಟ್ವಾ ಸಾಧ್ವೀ ಮನುಷ್ಯೇಂದ್ರ ಸಾಂತ್ವಪೂರ್ವಂ ವಚೋಽಬ್ರವೀತ್ ॥
ಮಾರ್ಕಂಡೇಯ ಬ್ರಾಹ್ಮಣನು ತೇಜಸ್ಸಿನಿಂದ ಬೆಳಗುತ್ತಾ ಕ್ರೋಧದಿಂದ ಸಂತಪ್ತನಾಗಿರುವುದನ್ನು ನೋಡಿ ಆ ಸಾಧ್ವಿಯು ಎಲೈ ಮನುಷ್ಯೇಂದ್ರನೇ, ಅವನನ್ನು ಸಮಾಧಾನಪಡಿಸುತ್ತಾ ಮಾತನಾಡಿದಳು.
ಸಾಧ್ವೀ
ಕ್ಷಂತುಮರ್ಹಸಿ ಮೇ ವಿದ್ವನ್ ಭರ್ತಾ ಮೇ ದೈವತಂ ಮಹತ್ |
ಸ ಚಾಪಿ ಕ್ಷುಧಿತಃ ಶ್ರಾಂತಃ ಪ್ರಾಪ್ತಃ ಶುಶ್ರೂಷಿತೋ ಮಯಾ ॥21॥
ಸಾಧ್ವೀ ವಿದ್ವಾಂಸರೇ, ನೀವು ನನ್ನನ್ನು ಕ್ಷಮಿಸಬೇಕು. ನನಗೆ ಪತಿಯು ದೊಡ್ಡ ದೇವತೆ. ಅವನಾದರೂ ಹಸಿದು, ದಣಿದು ಬಂದನು.

ನಾನು ಅವನ ಸೇವೆಯನ್ನು ಮಾಡುತ್ತಿದ್ದೆ.
ಬ್ರಾಹ್ಮಣಃ
ಬ್ರಾಹ್ಮಣಾ ನ ಗರೀಯಾಂಸೋ ಗರಿಯಾಂಸ್ತೇ ಪತಿಃ ಕೃತಃ |
ಗೃಹಸ್ಥಧರ್ಮೇ ವರ್ತಂತೀ ಬ್ರಾಹ್ಮಣಾನವಮನ್ಯಸೇ ॥22॥
ಬ್ರಾಹ್ಮಣ ಬ್ರಾಹ್ಮಣರು ನಿನಗೆ ದೊಡ್ಡವರಲ್ಲ, ನಿನ್ನ ಪತಿಯೇ ನಿನಗೆ ದೊಡ್ಡವನಾದನು. ಗೃಹಸ್ಥ ಧರ್ಮದಲ್ಲಿ ಇದ್ದವಳಾಗಿ ನೀನು ಬ್ರಾಹ್ಮಣರಿಗೆ ಅವಮಾನ ಮಾಡುತ್ತಿದ್ದೀಯೆ.
ಇಂದ್ರೋಪ್ಯೇಷಾಂ ಪ್ರಣಮತೇ ಕಿಂ ಪುನರ್ಮಾನವೋ ಭುವಿ |
ಅವಲಿಪ್ತೇ ನ ಜಾನೀಷೇ ವೃದ್ಧಾನಾಂ ನ ಶ್ರುತಂ ತ್ವಯಾ ॥23॥
ಇಂದ್ರನೂ ಸಹ ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡುತ್ತಾನೆ. ಇನ್ನು ಭೂಮಿಯಲ್ಲಿರುವ ಮನುಷ್ಯರಿಗೆ ಹೇಳುವುದೇನು? ಅಹಂಕಾರದಿಂದ ಕೂಡಿದವಳೇ ಯಾವ ನಿನಗೆ ಜ್ಞಾನವಿಲ್ಲ. ನೀನು ದೊಡ್ಡವರಿಂದ ಧರ್ಮವನ್ನೂ ಕೇಳಿಲ್ಲ.
ಬ್ರಾಹ್ಮಣಾ ಹ್ಯಗ್ನಿಸದೃಶಾ ದಹೇಯುಃ ಪೃಥಿವೀಮಪಿ |
ಸಪರ್ವತವನದ್ವೀಪಂ ಕ್ಷಿಪ್ರಮೇವಾವಮಾನಿತಾಃ ॥24॥
ಬ್ರಾಹ್ಮಣರು ಅಗ್ನಿಗೆ ಸದೃಶರಾದವರು. ಅವರಿಗೆ ಅವಮಾನವನ್ನು ಮಾಡಿದರೆ ಪರ್ವತವನದ್ವೀಪಗಳಿಂದ ಕೂಡಿದ ಪೃಥಿವಿಯನ್ನೂ ಸುಟ್ಟಾರು.
ಸಾಧ್ವೀ
ನಾವಜಾನಾಮ್ಯಹಂ ವಿಪ್ರಾನ್ ದೇವೈಸ್ತುಲ್ಯಾನ್ ಮನಸ್ವಿನಃ |
ಅಪರಾಧಮಿಮಂ ವಿಪ್ರ ಕ್ಷಂತುಮರ್ಹಸಿ ಮೇಽನಘ ॥25॥
ಸಾಧ್ವೀ ಎಲೈ ಅನಘನೇ, ಧೈರ್ಯಶಾಲಿಗಳಾದ ದೇವತೆಗಳಿಗೆ ಸಮಾನರಾದ ಬ್ರಾಹ್ಮಣರಿಗೆ ನಾನು ಅವಮಾನವನ್ನು ಮಾಡುವವಳಲ್ಲ. ನನ್ನ ಈ ಅಪರಾಧವನ್ನು ನೀನು ಕ್ಷಮಿಸಬೇಕು.
ಜಾನಾಮಿ ತೇಜೋ ವಿಪ್ರಾಣಾಂ ಮಹಾಭಾಗ್ಯಂ ಚ ಧೀಮತಾಮ್ |
ಅಪೇಯಃ ಸಾಗರಃ ಕ್ರೋಧಾತ್ ಕೃತೋ ಹಿ ಲವಣೋದಕಃ ॥26॥
ನಾನು ಬ್ರಾಹ್ಮಣರ ಸಾಮರ್ಥ್ಯವನ್ನು, ಆ ಮೇಧಾವಿಗಳ ಮಹಾಭಾಗ್ಯವನ್ನು ತಿಳಿದಿದ್ದೇನೆ. ಬ್ರಾಹ್ಮಣರು ತಮ್ಮ ಸಿಟ್ಟಿನಿಂದ ಸಮುದ್ರವನ್ನು ಕುಡಿಯಲು ಅಸಾಧ್ಯವಾದ ಲವಣೋದಕದಿಂದ ಕೂಡಿದುದನ್ನಾಗಿ ಮಾಡಿದರು.
ತಥೈವ ದೀಪ್ತತಪಸಾಂ ಮುನೀನಾಂ ಭಾವಿತಾತ್ಮನಾಮ್ |
ಯೇಷಾಂ ಕ್ರೋಧಾಗ್ನಿರದ್ಯಾಪಿ ದಂಡಕೇ ನೋಪಶಾಮ್ಯತಿ |
ಕಸ್ತಾನ್ ಪರಿಭವೇನ್ಮೂಢೋ ಬ್ರಾಹ್ಮಣಾನಮಿತೌಜಸಃ ॥27॥
ಹಾಗೆಯೇ ಶುದ್ಧಮನಸ್ಸುಳ್ಳ, ದೀಪ್ತವಾದ ತಪಸ್ಸುಳ್ಳ ಋಷಿಗಳ ಸಾಮರ್ಥ್ಯವನ್ನೂ ತಿಳಿದಿದ್ದೇನೆ. ಅವರ ಕ್ರೋಧಾಗ್ನಿಯಿಂದ ಸುಡುತ್ತಿರುವ ದಂಡಕಾರಣ್ಯವು ಇಂದಿಗೂ ಉಪಶಮನವನ್ನು ಹೊಂದಿಲ್ಲ. ಅಂತಹ ಅಮಿತವಾದ ಸಾಮರ್ಥ್ಯವನ್ನು ಹೊಂದಿದ ಬ್ರಾಹ್ಮಣರನ್ನು ಯಾವ ಮೂರ್ಖನು ಅವಮಾನಗೊಳಿಸುತ್ತಾನೆ?
ಬ್ರಾಹ್ಮಾಣಾನಾಂ ಪರಿಭವಾದ್ ವಾತಾಪಿಃ ಸುದುರಾತ್ಮವಾನ್ |
ಅಗಸ್ತ್ಯಮೃಷಿಮಾಸಾದ್ಯ ಜೀರ್ಣಃ ಕ್ರೂರೋ ಮಹಾಸುರಃ ॥28॥
ಬ್ರಾಹ್ಮಣರಿಗೆ ಅವಮಾನವನ್ನು ಮಾಡಿದ್ದರಿಂದ ಬಹಳ ದುಷ್ಟನಾದ ಕ್ರೂರನಾದ ಆ ವಾತಾಪಿಯು ಅಗಸ್ತ್ಯ ಋಷಿಗಳ ಸಮಾಗಮವನ್ನು ಹೊಂದಿ ಅವರ ಉದರದಲ್ಲಿ ಜೀರ್ಣನಾದನು.
ಬಹುಪ್ರಭಾವಾಃ ಶ್ರೂಯಂತೇ ಬ್ರಾಹ್ಮಣಾನಾಂ ಮಹಾತ್ಮನಾಮ್ |
ಕ್ರೋಧಃ ಸುವಿಪುಲೋ ಬ್ರಹ್ಮನ್ ಪ್ರಸಾದಶ್ಚ ಮಹಾತ್ಮನಾಮ್ ॥29॥
ಅಸ್ಮಿಂಸ್ತ್ವತಿಕ್ರಮೇ ಬ್ರಹ್ಮನ್ ಕ್ಷಂತುಮರ್ಹಸಿ ಮೇಽನಘ ॥30॥
ಮಹಾತ್ಮರಾದ ಬ್ರಾಹ್ಮಣರ ಅನೇಕ ಸಾಮರ್ಥ್ಯವು ಕೇಳಿ ಬರುತ್ತವೆ. ಅವರ ಕ್ರೋಧವೂ ಬಹಳ ವಿಸ್ತೃತರವಾದುದು ಮತ್ತು ಆ ಮಹಾತ್ಮರ ಅನುಗ್ರಹವೂ ಸಹ ಹಾಗೆಯೇ ವಿಪುಲವಾದುದು. ಎಲೈ ಬ್ರಾಹ್ಮಣನೇ, ಅನಘನೇ, ನಾನು ಮಾಡಿದ ಈ ಅಪರಾಧವನ್ನು (ವಿಳಂಬವನ್ನು) ಕ್ಷಮಿಸಬೇಕು.
ಪತಿಶುಶ್ರೂಷಯಾ ಧರ್ಮೋ ಯಃ ಸ ಮೇ ರೋಚತೇ ದ್ವಿಜ |
ದೈವತೇಷ್ವಪಿ ಸರ್ವೇಷು ಭರ್ತಾ ಮೇ ದೈವತಂ ಪರಮ್ ॥31॥
ಎಲೈ ಬ್ರಾಹ್ಮಣನೇ, ಪತಿಸೇವೆಯಿಂದ ಉಂಟಾಗುವ ಧರ್ಮವು ನನಗೆ ಬಹಳವಾಗಿ ಇಷ್ಟವಾಗುತ್ತದೆ. ಎಲ್ಲ ದೇವತೆಗಳಿಗಿಂತಲೂ ಪತಿಯೇ ಪರದೇವತೆ.
ಅವಿಶೇಷೇಣ ತಸ್ಯಾಹಂ ಕುರ್ಯಾಂ ಧರ್ಮಂ ದ್ವಿಜೋತ್ತಮ |
ಶುಶ್ರೂಷಾಯಾಃ ಫಲಂ ಪಶ್ಯ ಪತ್ಯುರ್ಬ್ರಾಹ್ಮಣ ಯಾದೃಶಮ್ ॥32॥
ಎಲೈ ದ್ವಿಜೋತ್ತಮನೇ, ನಾನು ಅತಿಶಯವಾದ ಅವನ ಸೇವೆಯನ್ನು ಮಾಡಿ ಧರ್ಮಾಚರಣೆಯನ್ನು ಮಾಡುತ್ತೇನೆ. ಎಲೈ ಬ್ರಾಹ್ಮಣನೇ, ಪತಿಸೇವೆಯ ಫಲವು ಹೇಗಿರುತ್ತದೆ ಎಂಬುದನ್ನು ನೋಡು.
ಬಲಾಕಾ ಹಿ ತ್ವಯಾ ದಗ್ಧಾ ರೋಷಾತ್ ತದ್ ವಿದಿತಂ ಮಯಾ |
ಕ್ರೋಧಃ ಶತ್ರುಃ ಶರೀರಸ್ಥೋ ಮನುಷ್ಯಾಣಾಂ ದ್ವಿಜೋತ್ತಮ |
ಯಃ ಕ್ರೋಧಮೋಹೌ ತ್ಯಜತಿ ತಂ ದೇವಾ ಬ್ರಾಹ್ಮಣಂ ವಿದುಃ ॥33॥

ನೀನು ರೋಷದಿಂದ ಬಲಾಕಪಕ್ಷಿಯನ್ನು ಸುಟ್ಟ ವಿಷಯವನ್ನು ನಾನು ತಿಳಿದಿದ್ದೇನೆ. ಎಲೈ ದ್ವಿಜಶ್ರೇಷ್ಠನೇ, ಮನುಷ್ಯರಿಗೆ ಕ್ರೋಧವು ಶರೀರದಲ್ಲಿಯೇ ಇರುವ ಶತ್ರು. ಯಾರವನು ಕ್ರೋಧ, ಮೋಹಗಳನ್ನು ತ್ಯಜಿಸುತ್ತಾನೆಯೋ ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಯೋ ವದೇದಿಹ ಸತ್ಯಾನಿ ಗುರುಂ ಸಂತೋಷಯಿಷ್ಯತಿ(ಯೇತ ಚ) |
ಹಿಂಸಿತಶ್ಚ ನ ಹಿಂಸೇತ ತಂ ದೇವಾ ಬ್ರಾಹ್ಮಣಂ ವಿದುಃ ॥34॥
ಯಾವನು ಈ ಲೋಕದಲ್ಲಿ ಸತ್ಯವನ್ನೇ ನುಡಿಯುವನೋ, ಗುರುಗಳನ್ನು ಸಂತೋಷಪಡಿಸುವನೋ, ತನಗೆ ಹಿಂಸೆ ಮಾಡಿದರೂ ಇನ್ನೊಬ್ಬರನ್ನು ಹಿಂಸಿಸುವುದಿಲ್ಲವೋ ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಜಿತೇಂದ್ರಿಯೋ ಧರ್ಮಪರಃ ಸ್ವಾಧ್ಯಾಯನಿರತಃ ಶುಚಿಃ |
ಕಾಮಕ್ರೋಧೌ ವಶೌ ಯಸ್ಯ ತಂ ದೇವಾ ಬ್ರಾಹ್ಮಣಂ ವಿದುಃ ॥35॥
ಯಾವನು ಜಿತೇಂದ್ರಿಯನೂ, ಧರ್ಮಪರನೂ, ಸ್ವಾಧ್ಯಾಯನಿರತನೂ, ಶುಚಿಯೂ, ಕಾಮಕ್ರೋಧವನ್ನು ವಶಪಡಿಸಿಕೊಂಡವನೂ ಆಗಿರುತ್ತಾನೆಯೋ ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಯೋಽಧ್ಯಾಪಯೇದಧೀಯೇದ್ ವಾ ಯಾಜಯೇತ ಯಜೇತ ವಾ |
ದದ್ಯಾದ್ ವಾಽಪಿ ಯಥಾಶಕ್ತಿ ತಂ ದೇವಾ ಬ್ರಾಹ್ಮಣಂ ವಿದುಃ ॥36॥
ಯಾವನು ಅಧ್ಯಯನವನ್ನಾಗಲೀ, ಅಧ್ಯಾಪನೆಯನ್ನಾಗಲೀ ಮಾಡುತ್ತಾನೆಯೋ, ತಾನೇ ಯಾಗವನ್ನು ಮಾಡುವನೋ ಅಥವಾ ಇನ್ನೊಬ್ಬರಿಂದ ಮಾಡಿಸುವನೋ ಮತ್ತು ಯಥಾಶಕ್ತಿ ದಾನವನ್ನು ಮಾಡುವನೋ ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಬ್ರಹ್ಮಚಾರೀ ವದಾನ್ಯೋ ಯೋಽಧೀಯೀತ ದ್ವಿಜಪುಂಗವಃ |
ಸರ್ವಧರ್ಮೇಷು ಚ ರತಸ್ತಂ ದೇವಾ ಬ್ರಾಹ್ಮಣಂ ವಿದುಃ ॥37॥
ಯಾವ ದ್ವಿಜಶ್ರೇಷ್ಠನು ಬ್ರಹ್ಮಚಾರಿಯಾಗಿ ಉದಾರನಾಗಿ ವೇದಾಧ್ಯಯನವನ್ನು ಮಾಡಿ ತನ್ನ ಎಲ್ಲಾ ಧರ್ಮಗಳಲ್ಲಿಯೂ ನಿರತನಾಗಿರುತ್ತಾನೆಯೋ ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಯದ್ ಬ್ರಾಹ್ಮಣಾನಾಂ ಕುಶಲಂ ತದೇಷಾಂ ಪರಿಕೀರ್ತಯೇತ್ |
ಸತ್ಯಂ ತಥಾ ವ್ಯಾಹರತಾಂ ನಾನೃತೇ ರಮತೇ ಮನಃ ॥38॥
ಬ್ರಾಹ್ಮಣರಲ್ಲಿ ಯಾವುದು ಒಳ್ಳೆಯದಿದೆಯೋ ಅದನ್ನೇ ಇನ್ನೊಬ್ಬರಿಗೆ ಹೇಳಬೇಕು. ಹಾಗೆ ಸತ್ಯವನ್ನು ನುಡಿಯುವವರಿಗೆ ಅನೃತದಲ್ಲಿ ಮನಸ್ಸು ತೊಡಗುವುದಿಲ್ಲ.
ಧರ್ಮಂ ತು ಬ್ರಾಹ್ಮಣಸ್ಯಾಹುಃ ಸ್ವಾಧ್ಯಾಯಂ ದಮಮಾರ್ಜವಮ್ |
ಇಂದ್ರಿಯಾಣಾಂ ನಿಗ್ರಹಂ ಚ ಶಾಶ್ವತಂ ದ್ವಿಜಸತ್ತಮ ॥39॥
ಎಲೈ ದ್ವಿಜಶ್ರೇಷ್ಠನೇ, ಬ್ರಾಹ್ಮಣರ ಶಾಶ್ವತವಾದ ಧರ್ಮವೆಂದರೆ ಸ್ವಾಧ್ಯಾಯ, ದೇವನಿಷ್ಠೆ, ಆರ್ಜವ ಮತ್ತು ಇಂದ್ರಿಯನಿಗ್ರಹವೆಂದು ಹೇಳುತ್ತಾರೆ.
ಸತ್ಯಾರ್ಜವೇ ಧರ್ಮಮಾಹುಃ ಪರಂ ಧರ್ಮವಿದೋ ಜನಾಃ |
ದುರ್ಜ್ಞೇಯಃ ಶಾಶ್ವತೋ ಧರ್ಮಃ ಸ ಚ ಸತ್ಯೇ ಪ್ರತಿಷ್ಠಿತಃ ॥40॥
ಧರ್ಮವನ್ನು ತಿಳಿದ ಜನರು ಸತ್ಯವಚನ ಮತ್ತು ಆರ್ಜವಗಳನ್ನು ಶ್ರೇಷ್ಠವಾದ ಧರ್ಮವೆಂದು ಹೇಳುತ್ತಾರೆ. ಶಾಶ್ವತವಾದ ಧರ್ಮವು ತಿಳಿಯಲು ಕಷ್ಟವಾದುದು. ಅದಾದರೂ ಸತ್ಯವಚನದಲ್ಲಿ ಆಶ್ರಿತವಾಗಿರುತ್ತದೆ.
ಶ್ರುತಿಪ್ರಮಾಣೋ ಧರ್ಮಃ ಸ್ಯಾದಿತಿ ವೃದ್ಧಾನುಶಾಸನಮ್ |
ಬಹುಧಾ ದೃಶ್ಯತೇ ಧರ್ಮಃ ಸೂಕ್ಷ್ಮ ಏವ ದ್ವಿಜೋತ್ತಮ ॥41॥
ವೇದವು ಹೇಳಿದುದು ಧರ್ಮ ಎಂಬುದು ವೃದ್ಧರ ಅನುಶಾಸನ. ಎಲೈ ಬ್ರಾಹ್ಮಣ ಶ್ರೇಷ್ಠನೇ, ಸೂಕ್ಷ್ಮವಾದ ಧರ್ಮವು ಅನೇಕವಿಧವಾಗಿರುತ್ತದೆ.
ಭವಾನಪಿ ಚ ಧರ್ಮಜ್ಞಃ ಸ್ವಾಧ್ಯಾಯನಿರತಃ ಶುಚಿಃ |
ನ ತು ತತ್ತ್ವೇನ ಭಗವನ್ ಧರ್ಮಂ ವೇತ್ಸೀತಿ ಮೇ ಮತಿಃ ॥42॥
ನೀನೂ ಸಹ ಧರ್ಮಜ್ಞನೂ, ಸ್ವಾಧ್ಯಾಯನಿರತನೂ ಮತ್ತು ಶುಚಿಯೂ ಆಗಿದ್ದೀಯೆ. ಆದರೂ ಪೂಜ್ಯನೇ, ನೀನು ಧರ್ಮವನ್ನು ಸರಿಯಾಗಿ ತಿಳಿದಿಲ್ಲವೆಂದು ನನ್ನ ಅಭಿಪ್ರಾಯ.
ಮಾತಾಪಿತೃಭ್ಯಾಂ ಶುಶ್ರೂಷುಃ ಸತ್ಯವಾದೀ ಜಿತೇಂದ್ರಿಯಃ |
ಮಿಥಿಲಾಯಾಂ ವಸೇದ್ ವ್ಯಾಧಃ ಸ ತೇ ಧರ್ಮಾನ್ ಪ್ರವಕ್ಷ್ಯತಿ ॥43॥
ಮಿಥಿಲಾ ಪಟ್ಟಣದಲ್ಲಿ ತಂದೆತಾಯಿಯರ ಸೇವೆಯನ್ನು ಮಾಡಿಕೊಂಡು ಸತ್ಯವಾದಿಯೂ, ಜಿತೇಂದ್ರಿಯನೂ ಆದ ಒಬ್ಬ ವ್ಯಾಧನು ವಾಸಿಸುತ್ತಾನೆ. ಅವನು ನಿನಗೆ ಧರ್ಮವನ್ನು ಉಪದೇಶ ಮಾಡುವನು.
ತತ್ರ ಗಚ್ಛಸ್ವ ಭದ್ರಂ ತೇ ಯಥಾಕಾಮಂ ದ್ವಿಜೋತ್ತಮ |
ವ್ಯಾಧಃ ಪರಮಧರ್ಮಾತ್ಮಾ ಸ ತೇ ಛೇತ್ಸ್ಯತಿ ಸಂಶಯಾನ್ ॥44॥
ಎಲೈ ದ್ವಿಜೋತ್ತಮನೇ, ನಿನಗೆ ಮಂಗಳವಾಗಲಿ. ನಿನಗೆ ಇಚ್ಛೆ ಬಂದಂತೆ ಅಲ್ಲಿಗೆ ಹೋಗು. ಪರಮ ಧರ್ಮಾತ್ಮನಾದ ಆ ವ್ಯಾಧನು ನಿನ್ನ ಸಂಶಯಗಳನ್ನು ಪರಿಹರಿಸುವನು.
ಅತ್ಯುಕ್ತಮಪಿ ಮೇ ಸರ್ವಂ ಕ್ಷಂತುಮರ್ಹಸ್ಯನಿಂದಿತ |
ಸ್ತ್ರಿಯೋ ಹ್ಯವಧ್ಯಾಃ ಸರ್ವೇಷಾಂ ಯೇ ಚ ಧರ್ಮವಿದೋ ಜನಾಃ ॥

ಎಲ್ಯೆ ಅನಿಂದಿತನಾದ ಬ್ರಾಹ್ಮಣನೇ, ನಾನು ಬಹಳ ಮಾತನಾಡಿದುದನ್ನು ಕ್ಷಮಿಸು. ಸ್ತ್ರೀಯರು ಮತ್ತು ಧರ್ಮವನ್ನು ತಿಳಿದ ಜನರು ಎಲ್ಲರಿಗೂ ಅವಧ್ಯರಷ್ಟೆ?
ಬ್ರಾಹ್ಮಣಃ
ಪ್ರೀತೋಽಸ್ಮಿ ತವ ಭದ್ರಂ ತೇ ಗತಃ ಕ್ರೋಧಶ್ಚ ಶೋಭನೇ |
ಉಪಾಲಂಭಸ್ತ್ವಯಾಽತ್ಯುಕ್ತೋ ಮಮ ನಿಶ್ರೇಯಸಂ ಪರಮ್ ॥46॥
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಧಯಿಷ್ಯಾಮಿ ಶೋಭನೇ |
ಧನ್ಯಾ ತ್ವಮಸಿ ಕಲ್ಯಾಣಿ ಯಸ್ಯಾಸ್ತೇ ವೃತ್ತಮೀದೃಶಮ್ ॥47॥
ಬ್ರಾಹ್ಮಣ ಎಲ್ಯೆ ಶುಭಸ್ವರೂಪಳೇ, ನಿನಗೆ ಮಂಗಳವಾಗಲಿ. ನನ್ನ ಕೋಪವು ಹೊರಟು ಹೋಗಿದೆ. ನಾನು ಪ್ರಸನ್ನನಾಗಿದ್ದೇನೆ. ನೀನು ಆಡಿದ ನಿಂದಾ ವಚನಗಳು ನನ್ನ ಶ್ರೇಯಸ್ಸಿಗೇ ಕಾರಣವಾಗಿವೆ. ಮಂಗಳಸ್ವರೂಪಳೇ, ನಿನಗೆ ಮಂಗಳವಾಗಲಿ. ನಾನು ಮಿಥಿಲಾಪಟ್ಟಣಕ್ಕೆ ಹೋಗಿ ನೀನು ಹೇಳಿದ ಕಾರ್ಯವನ್ನು ಸಾಧಿಸುವೆನು. ಎಲೌ ಕಲ್ಯಾಣಿಯೇ, ಇಂತಹ ನಡತೆಯುಳ್ಳ ನೀನು ಧನ್ಯಳಾದವಳು.
ಮಾರ್ಕಂಡೇಯಃ
ತಯಾ ವಿಸೃಷ್ಟೋ ನಿರ್ಗಮ್ಯ ಸ್ವಮೇವ ಭವನಂ ಯಯೌ |
ವಿನಿಂದನ್ ಸ ಸ್ವಮಾತ್ಮಾನಂ ಕೌಶಿಕೋ ದ್ವಿಜಸತ್ತಮಃ ॥48॥
ಅವಳಿಂದ ಅನುಮತಿಯನ್ನು ಪಡೆದ ಆ ಕೌಶಿಕ ಬ್ರಾಹ್ಮಣಶ್ರೇಷ್ಠನು ತನ್ನನ್ನೇ ತಾನು ನಿಂದಿಸಿಕೊಳ್ಳುತ್ತಾ ಅಲ್ಲಿಂದ ಹೊರಟು ತನ್ನ ಮನೆಯನ್ನು ಸೇರಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪತಿವ್ರತೋಪಾಖ್ಯಾನೇ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೂರನೆಯ
ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ನಾಲ್ಕನೆಯ ಅಧ್ಯಾಯ
ಮಾರ್ಕಂಡೇಯಃ
ಚಿಂತಯಿತ್ವಾ ತದಾಶ್ಚರ್ಯಂ ಸ್ತ್ರಿಯಾ ಪ್ರೋಕ್ತಮಶೇಷತಃ |
ವಿನಿಂದನ್ ಸ ಸ್ವಾಮಾತ್ಮಾನಮಾಗಸ್ಕೃತ ಇವಾಬಭೌ ॥1॥
ಮಾರ್ಕಂಡೇಯ ಆ ಪತಿವ್ರತೆಯು ಹೇಳಿದುದೆಲ್ಲವನ್ನೂ ಮತ್ತು ಆ ಆರ್ಯವನ್ನು ಚಿಂತಿಸುತ್ತಾ ಕೌಶಿಕ ಬ್ರಾಹ್ಮಣನು ಅಪರಾಧವನ್ನು ಮಾಡಿದವನಂತೆ ತನ್ನನ್ನೇ ತಾನು ನಿಂದಿಸಿಕೊಂಡನು.
ಚಿಂತಯಾನಃ ಸ್ವಧರ್ಮಸ್ಯ ಸೂಕ್ಷ್ಮಾಂ ಗತಿಮವಾಪ್ನುಯಾತ್ |
ಶ್ರದ್ದಧಾನೇನ ವೈ ಭಾವ್ಯಂ ಗಚ್ಛಾಮಿ ಮಿಥಿಲಾಮಹಮ್ ॥2॥
ಕೃತಾತ್ಮಾ ಧರ್ಮವಿತ್ ತಸ್ಯಾಂ ವ್ಯಾಧೋ ನಿವಸತೇ ಕಿಲ |
ತಂ ಗಚ್ಛಾಮ್ಯಹಮದ್ಯೈವ ಧರ್ಮಂ ಪ್ರಷ್ಟುಂ ತಪೋಧನಮ್ ॥3॥
ತನ್ನ ಧರ್ಮವನ್ನು ಸತತವಾಗಿ ಚಿಂತಿಸುವವನು ಸೂಕ್ಷ್ಮವಾದ ಗತಿಯನ್ನು ಪಡೆಯಬಹುದು. ನಾನು ಶ್ರದ್ಧೆಯಿಂದ ಕೂಡಿದವನಾಗಿರಬೇಕು. ಮಿಥಿಲಾ ಪಟ್ಟಣಕ್ಕೆ ಹೋಗುತ್ತೇನೆ. ಅಲ್ಲಿ ಧನ್ಯನೂ, ಧರ್ಮಜ್ಞನೂ ಆದ ವ್ಯಾಧನು ವಾಸಿಸುತ್ತಾನಷ್ಟೆ? ಆ ತಪೋಧನನಿಂದ ಧರ್ಮವನ್ನು ಶ್ರವಣಮಾಡಲು ನಾನು ಈ ದಿನವೇ ಅಲ್ಲಿಗೆ ಹೋಗುತ್ತೇನೆ.
ಇತಿ ಸಂಚಿತ್ಯ ಮನಸಾ ಶ್ರದ್ದಧಾನಃ ಸ್ತ್ರಿಯಾ ವಚಃ |
ಬಲಾಕಾಪ್ರತ್ಯಯೇನಾಸೌ ಧರ್ಮ್ಯೈಶ್ಚ ವಚನೈಃ ಶುಭೈಃ |
ಸಂಪ್ರತಸ್ಥೇ ಸ ಮಿಥಿಲಾಂ ಕೌತೂಹಲಸಮನ್ವಿತಃ ॥4॥
ಹೀಗೆ ಚಿಂತಿಸಿ ಆ ಬ್ರಾಹ್ಮಣನು ತನ್ನ ಮನಸ್ಸಿನಲ್ಲಿ ಆ ಸಾಧ್ವಿಯ ಮಾತುಗಳಲ್ಲಿ ಶ್ರದ್ಧೆಯನ್ನು ಇಟ್ಟು ಬಲಾಕಾ ಪಕ್ಷಿಯ ಉಲ್ಲೇಖದಿಂದಲೂ ಮತ್ತು ಅವಳ ಉಳಿದ ಧರ್ಮದ ಮಾತುಗಳಿಂದಲೂ ಅವಳನ್ನು ನಂಬಿ ಕುತೂಹಲ ಸಮನ್ವಿತನಾಗಿ ಮಿಥಿಲಾ ಪಟ್ಟಣಕ್ಕೆ ಹೊರಟನು.
ತತೋ ಜಗಾಮ ಮಿಥಿಲಾಂ ಜನಕೇನ ಸುರಕ್ಷಿತಾಮ್ |
ಧರ್ಮಸೇತುಸಮಾಕೀರ್ಣಾಂ ಯಜ್ಞೋತ್ಸವವತೀಂ ಶುಭಾಮ್ ॥5॥
ಅನಂತರ ಅವನು ಜನಕರಾಜನಿಂದ ಸುರಕ್ಷಿತವಾದ ಧರ್ಮಸೇತುಗಳಿಂದ ನಿಬಿಡವಾದ ಯಜ್ಞೋತ್ಸವಗಳಿಂದ ತುಂಬಿದ ಶುಭವಾದ ಮಿಥಿಲಾಪಟ್ಟಣವನ್ನು ತಲುಪಿದನು.
ಗೋಪುರಾಟ್ಟಾಲಕವತೀಂ ಹರ್ಮ್ಯಪ್ರಾಕಾರಶೋಭನಾಮ್ ॥6॥
ಪ್ರವಿಶ್ಯ ನಗರೀಂ ರಮ್ಯಾಂ ವಿಮಾನೈರ್ಬಹುಭಿರ್ಯುತಾಮ್ |
ಪುಷ್ಪೈಶ್ಚ(ಪಣ್ಯೈಶ್ಚ) ಬಹುಭಿರ್ಯುಕ್ತಾಂ ಸುವಿಭಕ್ತಮಹಾಪಥಾಮ್ ॥7॥
ಗೋಪುರ ಮತ್ತು ಉಪ್ಪರಿಗೆಗಳಿಂದ ಕೂಡಿದ ಅನೇಕ ಅಂತಸ್ತಿನ ಮನೆಗಳು ಮತ್ತು ಕೋಟೆಯ ಗೋಡೆಗಳಿಂದ ಶೋಭಿತವಾದ ಅನೇಕ ಅಂತಸ್ತಿನ ಅನೇಕ ಮನೆಗಳಿಂದ ಕೂಡಿದ ಆ ಮನೋಹರವಾದ ನಗರವನ್ನು ತಲುಪಿದನು.
ಅಶ್ವೈ ರಥೈಸ್ತಥಾ ಯಾನೈ(ನಾಗೈ)ರ್ಯೋಧೈಶ್ಚ ಬಹುಭಿರ್ಯುತಾಮ್ |

ಹೃಷ್ಟಪುಷ್ಟಜನಾಕೀರ್ಣಾಂ ನಿತ್ಯೋತ್ಸವಸಮಾಕುಲಾಮ್ ॥8॥
ಸೋಽಪಶ್ಯದ್ ಬಹುವೃತ್ತಾಂತಾಂ ಬ್ರಾಹ್ಮಣಃ ಸಮತಿಕ್ರಮನ್ ॥9॥
ಧರ್ಮವ್ಯಾಧಮಪೃಚ್ಛಚ್ಚ ಸ ಚಾಸ್ಯ ಕಥಿತೋ ದ್ವಿಜೈಃ |
ಅಪಶ್ಯತ್ ತತ್ರ ಗತ್ವಾ ತಂ ಸೂನಾಮಧ್ಯೇ ವ್ಯವಸ್ಥಿತಮ್ ॥10॥
ಅನೇಕ ಪುಷ್ಪಗಳಿಂದ ಕೂಡಿದ ದೊಡ್ಡ ದೊಡ್ಡ ಮಾರ್ಗಗಳಿಂದ ಕೂಡಿದ ಅಶ್ವರಥ ಯಾನಗಳಿಂದಲೂ, ಅನೇಕ ಯೋಧರಿಂದಲೂ ತುಂಬಿದ ಸಂತೋಷಗೊಂಡ ಪುಷ್ಟ ಜನರಿಂದ ನಿಬಿಡವಾದ ನಿತ್ಯೋತ್ಸವವನ್ನು ಹೊಂದಿದ ಆ ನಗರವನ್ನು ಪ್ರವೇಶಿಸಿದನು. ಆ ಬ್ರಾಹ್ಮಣನು ಮುಂದೆ ನಡೆಯುತ್ತಾ ಅನೇಕ ವಿಷಯಗಳನ್ನು ನೋಡಿದನು. ಅವನು ಧರ್ಮವ್ಯಾಧನನ್ನು ವಿಚಾರಿಸಿದಾಗ ಬ್ರಾಹ್ಮಣರು ಇನ್ನೊಬ್ಬರು ಕೊಂದ ಪ್ರಾಣಿಗಳ ಮಾಂಸವನ್ನು ಕತ್ತರಿಸಿ ಮಾರುವ ಅಂಗಡಿಯ ಮಧ್ಯದಲ್ಲಿ ಅವನು ಕುಳಿತಿರುವುದನ್ನು ಹೇಳಿದರು. ಅವನು ಅಲ್ಲಿಗೆ ಹೋಗಿ ಆ ಧರ್ಮವ್ಯಾಧನನ್ನು ನೋಡಿದನು.
ಮಾರ್ಗಮಾಹಿಷಮಾಂಸಾನಿ ವಿಕ್ರೀಣಂತಂ ತಪಸ್ವಿನಮ್ |
ಆಕುಲತ್ವಾತ್ ತು ಸೇತೂನಾಮೇಕಾಂತೇ ಸಂಸ್ಥಿತೋ ದ್ವಿಜಃ ॥11॥
ಧರ್ಮಸೇತುಗಳ ಚಿಂತನೆಯಿಂದ ಆಕ್ರಾಂತವಾದ ಮನಸ್ಸಿದ್ದ ಕಾರಣದಿಂದ ಏಕಾಂತದಲ್ಲಿ ಕುಳಿತಿದ್ದ ಆ ಬ್ರಾಹ್ಮಣನನ್ನು ಜಿಂಕೆ, ಮಹಿಷ ಮಾಂಸಗಳನ್ನು ಮಾರುತ್ತಿದ್ದ ತಪಸ್ವಿಯಾದ ವ್ಯಾಧನು ನೋಡಿದನು.
ಸ ತು ಜ್ಞಾತ್ವಾ ದ್ವಿಜಂ ಪ್ರಾಪ್ತಂ ಸಹಸಾ ಸಂಭ್ರಾಮೋತ್ಥಿತಃ |
ಆಜಗಾಮ ಯತೋ ವಿಪ್ರಃ ಸ್ಥಿತಃ ಏಕಾಂತ ಆಸನೇ ॥12॥
ಧರ್ಮವ್ಯಾಧನು ಬ್ರಾಹ್ಮಣನು ಬಂದಿದ್ದನ್ನು ತಿಳಿದು ಸಂಭ್ರಮದಿಂದ ಬೇಗ ಕುಳಿತಿದ್ದ ಆಸನದಿಂದ ಮೇಲೆದ್ದು ವಿಪ್ರನು ಏಕಾಂತವಾದ ಆಸನದಲ್ಲಿ ಕುಳಿತಲ್ಲಿಗೆ ಬಂದನು.
ವ್ಯಾಧಃ
ಅಭಿವಾದಯೇ ತ್ವಾಂ ಭಗವನ್ ಸ್ವಾಗತಂ ತೇ ದ್ವಿಜೋತ್ತಮ |
ಅಹಂ ವ್ಯಾಧೋ ಹಿ ಭದ್ರಂ ತೇ ಕಿಂ ಕರೋಮಿ ಪ್ರಶಾಧಿ ಮಾಮ್ ॥
ವ್ಯಾಧ ಬ್ರಾಹ್ಮಣರೇ, ನಿಮಗೆ ನಮಸ್ಕಾರವನ್ನು ಮಾಡುತ್ತೇನೆ. ಪೂಜ್ಯರೇ, ನಿಮಗೆ ಸ್ವಾಗತ. ನಾನೇ ವ್ಯಾಧ. ನಿಮಗೆ ಮಂಗಳವಾಗಲಿ. ನಾನು ನಿಮಗೆ ಏನನ್ನು ಮಾಡಲಿ? ಅಪ್ಪಣೆಯನ್ನು ಮಾಡಿ.
ಏಕಪತ್ನ್ಯಾ ಯದುಕ್ತೋಽಸಿ ಗಚ್ಛ ತ್ವಂ ಮಿಥಿಲಾಮಿತಿ |
ಜಾನಾಮ್ಯೇತದಹಂ ಸರ್ವಂ ಯದರ್ಥಂ ತ್ವಮಿಹಾಗತಃ ॥14॥
ಪತಿವ್ರತೆಯು ಮಿಥಿಲಾಪಟ್ಟಣಕ್ಕೆ ಹೋಗು ಎಂದು ಹೇಳಿರುವಳಷ್ಟೆ? ನಾನು ಅದೆಲ್ಲವನ್ನೂ ಮತ್ತು ನೀವು ಇಲ್ಲಿಗೆ ಬಂದ ಉದ್ದೇಶವನ್ನೂ ತಿಳಿದಿದ್ದೇನೆ.
ಮಾರ್ಕಂಡೇಯಃ
ಶ್ರುತ್ವಾ ಚ ತಸ್ಯ ತದ್ವಾಕ್ಯಂ ಸ ವಿಪ್ರೋ ಭೃಶವಿಸ್ಮಿತಃ |
ದ್ವಿತೀಯಮಿದಮಾಶ್ಚರ್ಯಮಿತ್ಯಚಿಂತಯತ ದ್ವಿಜಃ ॥15॥
ಮಾರ್ಕಂಡೇಯ ಅವನ ಆ ಮಾತನ್ನು ಕೇಳಿ ಬ್ರಾಹ್ಮಣನು ಬಹಳ ವಿಸ್ಮಿತನಾದನು. ಆ ಬ್ರಾಹ್ಮಣನು ಇದು ಎರಡನೆಯ ಆಶ್ಚರ್ಯ ಎಂದು ಮನಸ್ಸಿನಲ್ಲಿ ಚಿಂತಿಸಿದನು.
ಅದೇಶಸ್ಥಂ ಹಿ ತೇ ಸ್ಥಾನಮಿತಿ ವ್ಯಾಧೋಽಬ್ರವೀದಿದಮ್ |
ಗೃಹಂ ಗಚ್ಛಾವ ಭಗವನ್ ಯದಿ ತೇ ರೋಚತೇಽನಘ |
ಬಾಢಮಿತ್ಯೇವ ತಂ ವಿಪ್ರೋ ಹೃಷ್ಟೋ ವಚನಮಬ್ರವೀತ್ ॥16॥
ಅಗ್ರತಸ್ತು ದ್ವಿಜಂ ಕೃತ್ವಾ ಸ ಜಗಾಮ ಗೃಹಂ ಪ್ರತಿ ॥17॥
ವ್ಯಾಧನು ಆ ಬ್ರಾಹ್ಮಣನನ್ನು ಕುರಿತು, ಎಲೈ ಬ್ರಾಹ್ಮಣರೇ ಈ ಸ್ಥಾನವು ನಿಮಗೆ ಯೋಗ್ಯವಾದುದಲ್ಲ. ನಿಮಗೆ ಇಷ್ಟವಾಗುವುದಾದರೆ ಪೂಜ್ಯರೇ, ನನ್ನ ಮನೆಗೆ ಹೋಗೋಣ ಎಂದು ಹೇಳಿದನು. ಆ ಬ್ರಾಹ್ಮಣನು ಹಾಗೆಯೇ ಆಗಲಿ ಎಂದು ಸಂತೋಷದಿಂದ ಅವನಿಗೆ ಹೇಳಿದನು. ಆ ಬ್ರಾಹ್ಮಣನನ್ನು ಮುಂದೆ ಮಾಡಿಕೊಂಡು ವ್ಯಾಧನು ತನ್ನ ಮನೆಗೆ ಹೋದನು.
ಪ್ರವಿಶ್ಯ ಚ ಗೃಹಂ ರಮ್ಯಮಾಸನೇನಾಭಿಪೂಜಿತಃ |
ಪಾದ್ಯಮಾಚಮನೀಯಂಚ ಪ್ರತಿಗೃಹ್ಯ ದ್ವಿಜೋತ್ತಮಃ ॥18॥
ಅರ್ಘ್ಯೇಣ ಚ ಸ ವೈ ತೇನ ವ್ಯಾಧೇನ ದ್ವಿಜಸತ್ತಮಃ |
ತತಃ ಸುಖೋಪವಿಷ್ಟಸ್ತಂ ವ್ಯಾಧಂ ವಚನಮಬ್ರವೀತ್ ॥19॥
ತನ್ನ ಸುಂದರವಾದ ಮನೆಯನ್ನು ಪ್ರವೇಶಿಸಿ ಆ ಬ್ರಾಹ್ಮಣನಿಗೆ ಆಸನವನ್ನು ನೀಡಿ ಅವನನ್ನು ಪೂಜಿಸಿದನು. ಆ ಬ್ರಾಹ್ಮಣ ಶ್ರೇಷ್ಠನು ವ್ಯಾಧನಿಂದ ಪಾದ್ಯ, ಆಚಮನೀಯ ಮತ್ತು ಅರ್ಘ್ಯಗಳನ್ನು ಸ್ವೀಕರಿಸಿ ಪೂಜಿತನಾದನು. ಅನಂತರ ಸುಖವಾಗಿ ಕುಳಿತುಕೊಂಡು ವ್ಯಾಧನನ್ನು ಕುರಿತು ಬ್ರಾಹ್ಮಣನು ಹೀಗೆ ಹೇಳಿದನು.
ಕರ್ಮೈತದ್ ವೈ ನ ಸದೃಶಂ ಭವತಃ ಪ್ರತಿಭಾತಿ ಮೇ |
ಅನುತಪ್ಯೇ ಭೃಶಂ ತಾತ ತವ ಘೋರೇಣ ಕರ್ಮಣಾ ॥20॥
ಎಲೈ ವ್ಯಾಧನೇ, ನಿನ್ನ ಈ ಕರ್ಮವು ನಿನಗೆ ಸದೃಶವಾದುದಲ್ಲ ಎಂದು ನನಗೆ ತೋರುತ್ತದೆ. ಎಲೈ ಪ್ರೀತಿಪಾತ್ರನೇ, ನಿನ್ನ ಘೋರವಾದ ಕರ್ಮದಿಂದ ನಾನು ನಿನ್ನ ಮೇಲೆ ಬಹಳ ಅನುತಾಪವುಳ್ಳವನಾಗಿದ್ದೇನೆ.
ವ್ಯಾಧಃ

ಕುಲೋಚಿತಮಿದಂ ಕರ್ಮ ಪಿತೃಪೈತಾಮಹಂ ಪರಮ್ ।
ವರ್ತಮಾನಸ್ಯ ಮೇ ಧರ್ಮೇ ಸ್ವೇ ಮನ್ಯುಂ ಮಾ ಕೃಥಾ ದ್ವಿಜ ॥21॥
ವ್ಯಾಧ ಎಲೈ ಬ್ರಾಹ್ಮಣರೇ, ಇದು ತಂದೆ ತಾತಂದಿರ ಕಾಲದಿಂದ ನಡೆದುಬಂದ ನಮ್ಮ ಕುಲೋಚಿತವಾದ ಶ್ರೇಷ್ಠವಾದ ಧರ್ಮ. ನನ್ನ ಧರ್ಮದಲ್ಲಿ ಇರುವ ನನ್ನ ಮೇಲೆ ನೀವು ಅಸಮಾಧಾನವನ್ನು ಪಡಬಾರದು.
ವಿಧಾತ್ರಾ ವಿಹಿತಂ ಪೂರ್ವಂ ಕರ್ಮ ಸ್ವಮನುಪಾಲಯನ್ ।
ಪ್ರಯತ್ನಾಚ್ಚ ಗುರೂ ವೃದ್ಧೌ ಶುಶ್ರೂಷೇಽಹಂ ದ್ವಿಜೋತ್ತಮ ॥22॥
ಎಲೈ ದ್ವಿಜೋತ್ತಮರೇ, ದೈವದಿಂದ ಮೊದಲೇ ವಿಹಿತವಾದ ನನ್ನ ಕರ್ಮವನ್ನು ನಾನು ಪಾಲಿಸುತ್ತಾ ವೃದ್ಧರಾದ ಮಾತಾಪಿತೃಗಳಿಗೆ ಮತ್ತು ಗುರುಗಳಿಗೆ ಪ್ರಯತ್ನಪೂರ್ವಕವಾಗಿ ಸೇವೆ ಮಾಡುತ್ತೇನೆ.
ಸತ್ಯಂ ವದೇ ನಾಭ್ಯಸೂಯೇ ಯಥಾಶಕ್ತಿ ದದಾಮಿ ಚ ।
ದೇವತಾತಿಥಿಭೃತ್ಯಾನಾಮವಶಿಷ್ಟೇನ ವರ್ತಯೇ ॥23॥
ನಾನು ಸತ್ಯವನ್ನು ಮಾತನಾಡುತ್ತೇನೆ. ಅಸೂಯೆಯನ್ನು ಪಡುವುದಿಲ್ಲ. ನನ್ನ ಶಕ್ತಿ ಇದ್ದಷ್ಟು ದಾನವನ್ನು ಮಾಡುತ್ತೇನೆ. ದೇವತಾತಿಥಿ ಭೃತ್ಯರಿಗೆ ಅನ್ನವನ್ನು ನೀಡಿ ಉಳಿದುದನ್ನು ಸ್ವೀಕರಿಸುತ್ತೇನೆ.
ನ ಕುತ್ಸಯಾಮ್ಯಹಂ ಕಿಂಚಿನ್ನ ಗರ್ಹೇ ಬಲವತ್ತರಮ್ ।
ಕೃತಮನ್ವೇತಿ ಕರ್ತಾರಂ ಪುರಾ ಕರ್ಮ ದ್ವಿಜೋತ್ತಮ ॥24॥
ಎಲೈ ದ್ವಿಜೋತ್ತಮರೇ, ನಾನು ಯಾರನ್ನೂ ಅವಮಾನ ಮಾಡುವುದಿಲ್ಲ. ಯಾರನ್ನೂ ಗಟ್ಟಿಯಾಗಿ ನಿಂದಿಸುವುದಿಲ್ಲ. ಹಿಂದೆ ಮಾಡಿದ ಕರ್ಮವು ಅದರ ಕರ್ತೃವನ್ನು ಅನುಸರಿಸುತ್ತದೆ.
ಕೃಷಿಗೋರಕ್ಷವಾಣಿಜ್ಯಮಿಹ ಲೋಕಸ್ಯ ಜೀವನಮ್ ।
ದಂಡನೀತಿಸ್ತ್ರಯೀ ವಿದ್ಯಾ ತೇನ ಲೋಕೋ ಭವತ್ಯುತ ॥25॥
ಕೃಷಿಗೋರಕ್ಷ ಮತ್ತು ವಾಣಿಜ್ಯಗಳು ಜನರ ಜೀವನೋಪಾಯಗಳು. ಇನ್ನು ಕೆಲವರಿಗೆ ದಂಡನೀತಿಯೂ, ಇನ್ನು ಕೆಲವರಿಗೆ ವೇದವಿದ್ಯೆಯೂ ಜೀವನೋಪಾಯವಾಗುತ್ತವೆ.
ಕರ್ಮ ಶೂದ್ರೇ ಕೃಷಿರ್ವೈಶ್ಯೇ ಸಂಗ್ರಾಮಃ ಕ್ಷತ್ರಿಯೇ ಸ್ಮೃತಃ ।
ಬ್ರಹ್ಮಚರ್ಯಂ ತಪೋ ಮಂತ್ರಾಃ ಸತ್ಯಂ ಚ ಬ್ರಾಹ್ಮಣೇ ಸದಾ ॥26॥
ಶೂದ್ರನಿಗೆ ಕರ್ಮವು, ವೈಶ್ಯರಿಗೆ ಕೃಷಿಯು, ಕ್ಷತ್ರಿಯರಿಗೆ ಯುದ್ಧವು ಧರ್ಮವೆಂದು ಹೇಳಲ್ಪಡುತ್ತದೆ. ಬ್ರಹ್ಮಚರ್ಯ, ತಪಸ್ಸು, ಮಂತ್ರ, ಸತ್ಯವಚನ ಇವು ಯಾವಾಗಲೂ ಬ್ರಾಹ್ಮಣನ ಧರ್ಮಗಳು.
ರಾಜಾ ಪ್ರಶಾಸ್ತಿ ಧರ್ಮೇಣ ಸ್ವಕರ್ಮನಿರತಾಃ ಪ್ರಜಾಃ ।
ವಿಕರ್ಮಾಣಶ್ಚ ಯೇ ಕೇಚಿತ್ತಾನ್ ಯುನಕ್ತಿ ಸ್ವಕರ್ಮಸು ॥27॥
ರಾಜನು ಸ್ವಕರ್ಮನಿರತರಾದ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಾನೆ. ವಿಕರ್ಮದಲ್ಲಿ ನಿರತರಾದವರನ್ನು ಸರಿಯಾದ ಕರ್ಮಗಳಲ್ಲಿ ತೊಡಗಿಸುತ್ತಾನೆ.
ಭೇತವ್ಯಂ ಹಿ ಸದಾ ರಾಜ್ಞಃ ಪ್ರಜಾನಾಮಧಿಪಾ ಹಿ ತೇ ।
ವಾರಯಂತಿ ವಿಕರ್ಮಸ್ಥಂ ನೃಪಾ ಮೃಗಮಿವೇಷುಭಿಃ ॥28॥
ರಾಜನಿಗೆ ಯಾವಾಗಲೂ ಹೆದರಬೇಕು. ರಾಜರು ಪ್ರಜೆಗಳ ಅಧಿಪತಿಗಳಷ್ಟೆ? ಅವರು ಮೃಗವನ್ನು ಬಾಣಗಳಿಂದ ತಡೆದಂತೆ ವಿಕರ್ಮವನ್ನು ಮಾಡುವ ಪ್ರಜೆಗಳನ್ನು ವಿಕ್ರಮವನ್ನು ಮಾಡದಂತೆ ತಡೆಯುತ್ತಾರೆ.
ಜನಕಸ್ಯೇಹ ವಿಪ್ರರ್ಷೇ ವಿಕರ್ಮಸ್ಥೋ ನ ವಿದ್ಯತೇ ।
ಸ್ವಕರ್ಮನಿರತಾ ವರ್ಣಾಶ್ಚತ್ವಾರೋಽಪಿ ದ್ವಿಜೋತ್ತಮ ॥29॥
ಎಲೈ ವಿಪ್ರರ್ಷಿಗಳೇ, ಜನಕನ ಈ ರಾಜ್ಯದಲ್ಲಿ ಯಾವನೂ ವಿಕರ್ಮವನ್ನು ಮಾಡುವುದಿಲ್ಲ. ದ್ವಿಜೋತ್ತಮರೇ, ನಾಲ್ಕು ವರ್ಣಗಳೂ ಸಹ ಸ್ವಕರ್ಮನಿರತವಾಗಿರುತ್ತವೆ.
ಸ ಏಷ ಜನಕೋ ರಾಜಾ ದುರ್ವೃತ್ತಮಪಿ ಚೇತ್ ಸುತಮ್ ।
ದಂಡ್ಯಂ ದಂಡೇ ನಿಕ್ಷಿಪತಿ ತಥಾ ನ ಗ್ಲಾತಿ ಧಾರ್ಮಿಕಮ್ ॥30॥
ಈ ಜನಕರಾಜನಾದರೂ ತನ್ನ ಪುತ್ರನೇ ದುಷ್ಕರ್ಮವನ್ನು ಮಾಡಿ ದಂಡಕ್ಕೆ ಯೋಗ್ಯನಾದರೂ ಅವನನ್ನು ದಂಡಿಸುತ್ತಾನೆ. ಮತ್ತು ಹಾಗೆಯೇ ಯಾವ ಧಾರ್ಮಿಕನಿಗೂ ದುಃಖವನ್ನು ಕೊಡುವುದಿಲ್ಲ.
ಸುಯುಕ್ತಚಾರೋ ನೃಪತಿಃ ಸರ್ವಂ ಧರ್ಮೇಣ ಪಶ್ಯತಿ ।
ಶ್ರೀಶ್ಚ ರಾಜ್ಯಂ ಚ ದಂಡಶ್ಚ ಕ್ಷತ್ರಿಯಾಣಾಂ ದ್ವಿಜೋತ್ತಮ ॥31॥
ಒಳ್ಳೆಯ ನಡತೆಯನ್ನು ಹೊಂದಿದ ರಾಜನು ಎಲ್ಲವನ್ನೂ ಧರ್ಮದಿಂದ ನೋಡುತ್ತಾನೆ. ಎಲೈ ದ್ವಿಜೋತ್ತಮರೇ, ಕ್ಷತ್ರಿಯರಿಗೆ ಸಂಪತ್ತು, ರಾಜ್ಯವು ಮತ್ತು ದಂಡಾಧಿಕಾರವು ಧರ್ಮದಿಂದ ಪ್ರಾಪ್ತವಾಗುತ್ತದೆ.
ರಾಜಾನೋ ಹಿ ಸ್ವಧರ್ಮೇಣ ಶ್ರಿಯಮಿಚ್ಛಂತಿ ಭೂಯಸೀಮ್ ।
ಸರ್ವೇಷಾಮೇವ ವರ್ಣಾನಾಂ ತ್ರಾತಾ ರಾಜಾ ಭವತ್ಯುತ ॥32॥
ರಾಜರೂ ಕೂಡ ಧರ್ಮದಿಂದಲೇ ಬಹಳವಾದ ಸಂಪತ್ತನ್ನು ಪಡೆಯಲು ಬಯಸುತ್ತಾರೆ. ಮತ್ತು ರಾಜನು ಎಲ್ಲ ವರ್ಣದವರನ್ನೂ ರಕ್ಷಿಸುತ್ತಾನೆ.
ಪರೇಣ ಹಿ ಹತಾನ್ ಬ್ರಹ್ಮನ್ ವರಾಹಮಹಿಷಾನಹಮ್ ।
ನ ಸ್ವಯಂ ಹನ್ಮಿ ವಿಪ್ರರ್ಷೇ ವಿಕ್ರೀಣಾಮಿ ಸದಾ ತ್ವಹಮ್ ॥33॥

ಎಲೈ ಬ್ರಾಹ್ಮಣರೇ, ನಾನು ಸ್ವತಃ ಪ್ರಾಣಿಯನ್ನು ಕೊಲ್ಲುವುದಿಲ್ಲ. ಇನ್ನೊಬ್ಬರು ಕೊಂದ ವರಾಹ, ಮಹಿಷಗಳನ್ನು ನಾನು ಮಾರುತ್ತೇನೆ.

ನ ಭಕ್ಷಯಾಮಿ ಮಾಂಸಾನಿ ಋತುಗಾಮೀ ತಥಾ ಹ್ಯಹಮ್ |
ಸದೋಪವಾಸೀ ಚ ತಥಾ ನಕ್ತಭೋಜೀ ಸದಾ ದ್ವಿಜ ||34||
ನಾನು ಮಾಂಸವನ್ನು ತಿನ್ನುವುದಿಲ್ಲ. ಪತ್ನಿಯಲ್ಲಿ ಋತುಗಾಮಿಯಾಗಿದ್ದೇನೆ. ಎಲೈ ಬ್ರಾಹ್ಮಣರೇ, ನಾನು ಶಾಸ್ತ್ರವಿಹಿತವಾದ ಉಪವಾಸವನ್ನು ಮಾಡುತ್ತಾ ರಾತ್ರಿಯ ಕಾಲದಲ್ಲಿ ಮಾತ್ರ ಭೋಜನವನ್ನು ಮಾಡುತೆತೇನೆ.
ಅಶೀಲಶ್ಚಾಪಿ ಪುರುಷೋ ಭೂತ್ವಾ ಭವತಿ ಶೀಲವಾನ್ |
ಪ್ರಾಣಿಹಿಂಸಾರತಶ್ಚಾಪಿ ಭವತೇ ಧಾರ್ಮಿಕಃ ಪುನಃ ||35||
ಶೀಲವಿಲ್ಲದ ಪುರುಷನೂ ಸಹ ಧರ್ಮವನ್ನು ಆಚರಿಸಿದರೆ ಶೀಲವಂತನಾಗುತ್ತಾನೆ. ಮತ್ತು ಪ್ರಾಣಿಹಿಂಸಾರತನಾದವನೂ ಧಾರ್ಮಿಕನಾಗುತ್ತಾನೆ.
ವ್ಯಭಿಚಾರಾನ್ನರೇಂದ್ರಾಣಾಂ ಧರ್ಮಃ ಸಂಕೀರ್ಯತೇ ಮಹಾನ್ |
ಅಧರ್ಮೋ-ವರ್ಧತೇ ಚಾಪಿ ಸಂಕೀರ್ಯಂತೇ ತತಃ ಪ್ರಜಾಃ ||36||
ರಾಜರು ತಮ್ಮ ಧರ್ಮವನ್ನು ಮೀರಿ ನಡೆಯುವುದರಿಂದ ದೊಡ್ಡ ಧರ್ಮಸಂಕರವುಂಟಾಗುತ್ತದೆ. ಅಧರ್ಮವು ಹೆಚ್ಚಾಗುತ್ತದೆ ಮತ್ತು ಪ್ರಜೆಗಳಲ್ಲಿ ವರ್ಣಸಂಕರ ಉಂಟಾಗುತ್ತದೆ.
ಕುರುಂಡಾ ವಾಮನಾಃ ಕುಬ್ಜಾಃ ಸ್ಥೂಲಶೀರ್ಷಾಸ್ತಥೈವ ಚ |
ಕ್ಲೀಬಾಶ್ಚಾಂಧಾಶ್ಚ ಬಧಿರಾ ಜಾಯಂತೇ ಲಂಬಚೂಚುಕಾಃ |
ಪಾರ್ಥಿವಾನಾಮಧರ್ಮತ್ವಾತ್ ಪ್ರಜಾನಾಮಭವಃ ಸದಾ ||37||
ವಿಕಾರವಾದ ತಲೆಯುಳ್ಳವರು, ದೇಹವೆಲ್ಲವೂ ಹ್ರಸ್ವರಾದವರು, ಪಾದಗಳಲ್ಲಿ ಮಾತ್ರ ಹ್ರಸ್ವರಾದವರು, ದಪ್ಪತಲೆಯನ್ನು ಹೊಂದಿದವರು, ನಪುಂಸಕರು, ಕುರುಡರು, ಕಿವುಡರು, ಇಳಿಬಿದ್ದ ಸ್ತನವುಳ್ಳವರು ಜನಿಸುತ್ತಾರೆ. ರಾಜರ ಅಧರ್ಮದಿಂದ ಪ್ರಜೆಗಳಿಗೆ ಅಮಂಗಲವುಂಟಾಗುತ್ತದೆ..
ಸ ಏಷ ರಾಜಾ ಜನಕಃ ಪ್ರಜಾ ಧರ್ಮೇಣ ಪಶ್ಯತಿ ||38||
ಅನುಗೃಹ್ಣನ್ ಪ್ರಜಾಃ ಸರ್ವಾ ಸ್ವಧರ್ಮನಿರತಾಃ ಸದಾ |
ಪಾತ್ಯೇವ ರಾಜಾ ಜನಕಃ ಪಿತೃವದ್ ದ್ವಿಜಸತ್ತಮ ||39||
ಈ ಜನಕರಾಜನು ಸ್ವಧರ್ಮನಿರತರಾದ ಎಲ್ಲಾ ಪ್ರಜೆಗಳನ್ನೂ ಅನುಗ್ರಹಿಸುತ್ತಾ, ಪ್ರಜೆಗಳನ್ನು ಸದಾ ಧರ್ಮದಿಂದಲೇ ನೋಡುತ್ತಾನೆ. ಎಲೈ ದ್ವಿಜಶ್ರೇಷ್ಠನೇ, ಜನಕರಾಜನು ತಂದೆಯಂತೆ ಪ್ರಜೆಗಳನ್ನು ಪಾಲಿಸುತ್ತಾನೆ.
ಯೇ ಚೈವ ಮಾಂ ಪ್ರಶಂಸಂತಿ ಯೇ ಚ ನಿಂದಂತಿ ಮಾನವಾಃ |
ಸರ್ವಾನ್ ಸುಪರಿಣೀತೇನ ಕರ್ಮಣಾ ತೋಷಯಾಮ್ಯಹಮ್ ||40||
ಯಾರು ನನ್ನನ್ನು ಹೊಗಳುತ್ತಾರೋ ಅಥವಾ ಯಾವ ಮನುಷ್ಯರು ನನ್ನನ್ನು ನಿಂದಿಸುತ್ತಾರೋ ಅವರನ್ನು ಎಲ್ಲಾ ಅವಸ್ಥೆಗಳಲ್ಲಿಯೂ ನೀತಿಯುಕ್ತವಾದ ಕರ್ಮದಿಂದ ನಾನು ಸಂತೋಷಪಡಿಸುತ್ತೇನೆ.
ಯೇ ಜೀವಂತಿ ಸ್ವಧರ್ಮೇಣ ಸಂಯುಂಜಂತೇ ಚ ಪಾರ್ಥಿವಾಃ |
ನ ಕಿಂಚಿದುಪಜೀವಂತಿ ದಾಂತಾ ಉತ್ಥಾನಶೀಲಿನಃ ||41||
ಶಕ್ತ್ಯಾಽನ್ನದಾನಂ ಸತತಂ ತಿತಿಕ್ಷಾ ಧರ್ಮನಿತ್ಯತಾ |
ಯಥಾರ್ಹಂ ಪ್ರತಿಪೂಜಾ ಚ ಸರ್ವಭೂತೇಷು ವೈ ಸದಾ ||42||
ತ್ಯಾಗಾನ್ನಾನ್ಯತ್ರ ಮರ್ತ್ಯಾನಾಂ ಗುಣಾಸ್ತಿಷ್ಠಂತಿ ಪೂರುಷೇ |
ಯಾವ ರಾಜರು ಸ್ವಧರ್ಮದಿಂದ ಜೀವಿಸುತ್ತಾರೋ ಅವರು ಸಂಪತ್ತಿನಿಂದ ಯುಕ್ತರಾಗುತ್ತಾರೆ. ಯಾರು ದಾಂತರೂ ಸತತವಾಗಿ ಉತ್ಥಾನಶೀಲರೂ ಆಗಿ ಇನ್ನೊಬ್ಬರನ್ನು ಉಪಜೀವಿಸುವುದಿಲ್ಲವೋ, ಶಕ್ತಿಯಿದ್ದಷ್ಟು ಅನ್ನದಾನವನ್ನು ಮಾಡಿ ಸತತವಾಗಿ ಸಹನೆಯನ್ನು ಹೊಂದಿ ಧರ್ಮನಿತ್ಯರಾಗಿರುತ್ತಾರೆಯೋ ಮತ್ತು ಯಥಾ ಯೋಗ್ಯವಾಗಿ ಯಾವಾಗಲೂ ಎಲ್ಲಾ ಪ್ರಾಣಿಗಳಲ್ಲಿಯೂ ಸತ್ಕಾರವನ್ನು ಮಾಡುತ್ತಾರೆಯೋ ಅವರೂ ಸಂಪದ್ಯುಕ್ತರಾಗುತ್ತಾರೆ. ಮನುಷ್ಯರಿಗೆ ತ್ಯಾಗವನ್ನು ಬಿಟ್ಟು ಬೇರೆ ಶ್ರೇಷ್ಠವಾದ ಗುಣವಿಲ್ಲ.
ಮೃಷಾವಾದಂ ಪರಿಹರೇತ್ ಕುರ್ಯಾತ್ ಪ್ರಿಯಮಯಾಚಿತಃ ||43||
ನ ಚ ಕಾಮಾನ್ನ ಸಂರಂಭಾನ್ನ ದ್ವೇಷಾದ್ ಧರ್ಮಮುತ್ಸೃಜೇತ್ |
ಪ್ರಿಯೇ ನಾತಿಭೃಶಂ ಹೃಷ್ಯೇದಪ್ರಿಯೇ ನ ಚ ಸಂಜ್ವರೇತ್ ||44||
ಸುಳ್ಳು ಮಾತನಾಡುವುದನ್ನು ತ್ಯಜಿಸಬೇಕು. ಇನ್ನೊಬ್ಬರಿಂದ ಪ್ರಾರ್ಥಿತರಾಗದೇ ಅವರಿಗೆ ಪ್ರಿಯವನ್ನು ಮಾಡಬೇಕು. ರಾಗದಿಂದಲಾಗಲೀ, ದ್ವೇಷದಿಂದಲಾಗಲೀ ಅಥವಾ ಕ್ರೋಧದಿಂದಲಾಗಲೀ ಧರ್ಮವನ್ನು ತ್ಯಜಿಸಬಾರದು. ಪ್ರಿಯವುಂಟಾದಾಗ ಬಹಳ ಸಂತೋಷವನ್ನು ಪಡಬಾರದು. ಅಪ್ರಿಯವುಂಟಾದಾಗ ಸಂತಾಪವನ್ನೂ ಪಡಬಾರದು.
ನ ಮುಹ್ಯೇದರ್ಥಕೃಚ್ಛ್ರೇಷು ನ ಚ ಧರ್ಮಂ ಪರಿತ್ಯಜೇತ್ |
ಕರ್ಮ ಚೇತ್ ಕಿಂಚಿದನ್ಯತ್ ಸ್ಯಾದಿತರನ್ನ ತದಾಚರೇತ್ ||45||
ಅರ್ಥಸಂಕಟವು ಪ್ರಾಪ್ತವಾದಾಗ ಮೋಹಕ್ಕೆ ಒಳಗಾಗಿ ಧರ್ಮವನ್ನು ತ್ಯಜಿಸಬಾರದು. ಬೇರೆ ಯಾವುದಾದರೂ ಪುಣ್ಯಕರ್ಮವಿದ್ದರೆ ಅದನ್ನೂ ಮಾಡಬೇಕು. ಪುಣ್ಯಕರ್ಮವನ್ನು ಬಿಟ್ಟು ಪಾಪಕರ್ಮವನ್ನು ಆಚರಿಸಬಾರದು.
ಯತ್ ಕಲ್ಯಾಣಮಭಿಧ್ಯಾಯೇತ್ ತತ್ರಾತ್ಮಾನಂ ನಿಯೋಜಯೇತ್ |
ನ ಪಾಪೇ ಪ್ರತಿಪಾಪಃ ಸ್ಯಾತ್ ಸಾಧುರೇವ ಸದಾ ಭವೇತ್ ||46||

ಯಾವುದು ಒಳ್ಳೆಯ ಕಾರ್ಯವಿದೆಯೋ ಅದರಲ್ಲಿ ಮೊದಲು ತನ್ನನ್ನೇ ನಿಯೋಗಿಸಿಕೊಳ್ಳಬೇಕು. ಹಿಂಸೆಯನ್ನು ಮಾಡಿದವನಿಗೆ ಪ್ರತಿಹಿಂಸೆಯನ್ನು ಮಾಡಬಾರದು. ಯಾವಾಗಲೂ ಸಾಧುವಾಗಿಯೇ ಇರಬೇಕು.
ಆತ್ಮನೈವ ಹತಃ ಪಾಪೋ ಯಃ ಪಾಪಂ ಕರ್ತುಮಿಚ್ಛತಿ |
ಕರ್ಮ ಚೈತದಸಾಧೂನಾಂ ವೃಜಿನಂ ನಾಮ ಸಾಧುವತ್ ||47||
ಯಾವನು ಪಾಪವನ್ನು ಮಾಡಲು ಬಯಸುತ್ತಾನೆಯೋ ಅಂತಹವನು ತನ್ನ ಪಾಪದಿಂದಲೇ ಹತನಾಗಿರುತ್ತಾನೆ. ಪಾಪವು ಅಸಾಧುಗಳು ಮಾಡುವ ಕರ್ಮ. ಅದನ್ನು ಸತ್ಕರ್ಮದಂತೆಯೇ ನೋಡಿ ಸಾಧುವಾದವನು ಹಿಂಸೆ ಮಾಡದೇ ಸುಮ್ಮನಿರಬೇಕು.
ನ ಧರ್ಮೋಽಸ್ತೀತಿ ಮನ್ವಾನಾಃ ಶುಚೀನವಹಸಂತಿ ಯೇ |
ಅಶ್ರದ್ದಧಂತೋ ಧರ್ಮಸ್ಯ ತೇ ನಶ್ಯಂತಿ ನ ಸಂಶಯಃ ||48||
ಮಹಾಧೃತಿರಿವಾಧ್ಮಾತುಃ ಪಾಪೋ ಭವತಿ ನಿತ್ಯದಾ |
ಸಾಧುಃ ಸನ್ನಿತಿಮಾನೇಷು ಸರ್ವತ್ರ ದ್ವಿಜಸತ್ತಮ ||49||
ಯಾರು ಧರ್ಮವಿಲ್ಲವೆಂದು ತಿಳಿದು, ಶುಚಿಯಾದ ಪುರುಷರನ್ನು ಅವಮಾನ ಮಾಡಿ ಧರ್ಮದಲ್ಲಿ ಅಶ್ರದ್ಧೆಯನ್ನು ಮಾಡುತ್ತಾರೆಯೋ ಅವರು ನಾಶವನ್ನು ಹೊಂದುತ್ತಾರೆ ಎಂಬ ವಿಷಯದಲ್ಲಿ ಸಂಶಯವಿಲ್ಲ. ಯುದ್ಧದಲ್ಲಿ ಶಂಕನಿನಾದವನ್ನು ಮಾಡುವ ವೀರಭಟನಿಗೆ ಮಹಾಧೈರ್ಯವು ಹೇಗೆ ಅಭಿವೃದ್ಧಿಯಾಗುತ್ತದೆಯೋ ಹಾಗೆ ಪಾಪಿಷ್ಠನೂ ಕೂಡ ತಾನು ಮಾಡಿದ ದುಷ್ಕರ್ಮದ ಪ್ರಶಂಸೆಯಿಂದ ಅಭಿವೃದ್ಧನಾಗುತ್ತಾನೆ (ಅಹಂಕಾರಿಯಾಗುತ್ತಾನೆ ಎಂದು ಅಭಿಪ್ರಾಯ). ಎಲೈ ದ್ವಿಜಶ್ರೇಷ್ಠರೇ, ಸಾಧುವಾದವನು ಮಾನ ಅವಮಾನಗಳಲ್ಲಿ ಎಲ್ಲ ಕಡೆಯಲ್ಲಿಯೂ ಸಮಾನವಾಗಿರುತ್ತಾನೆ.
ಮೂಢಾನಾಮವಲಿಪ್ತಾನಾಮಸಾರಂ ಭಾವಿತಂ ಭವೇತ್ |
ದರ್ಶಯತ್ಯಂತರಾತ್ಮಾನಂ ದಿವಾ ರೂಪಮಿವಾಂಶುಮಾನ್ ||50||
ಮೂಢರು ಮತ್ತು ಅಹಂಕಾರಿಗಳು ತಮ್ಮ ಮನಸ್ಸಿನಲ್ಲಿ ಕೆಟ್ಟದ್ದನ್ನೇ ಯೋಚಿಸುತ್ತಾರೆ. ಹಗಲಿನಲ್ಲಿ ಸೂರ್ಯನು ರೂಪವನ್ನು ತೋರಿಸಿದಂತೆ ಅವರ ಸಾಕ್ಷಿಯೇ ಅವರಿಗೆ ತಮ್ಮ ದುಃಸ್ವಭಾವವನ್ನು ತೋರಿಸುತ್ತದೆ.
ನ ಲೋಕೇ ರಾಜತೇ ಮೂರ್ಖಃ ಕೇವಲಾತ್ಮಪ್ರಶಂಸಯಾ |
ಅಪಿ ಚೇಹ ಪ್ರಜಾಹೀನಃ ಕೃತವಿದ್ಯಃ ಪ್ರಕಾಶತೇ ||51||
ವಿದ್ಯಾಹೀನನಾದ ಮೂರ್ಖನು ಕೇವಲ ಆತ್ಮಪ್ರಶಂಸೆಯಿಂದ ಪ್ರಪಂಚದಲ್ಲಿ ಶೋಭಿಸುವುದಿಲ್ಲ. ಸೊತತೀತ್ರಮಾಡುವವರಿಲ್ಲದಿದ್ದರೂ ವಿದ್ಯೆಯನ್ನು ಸಂಪಾದಿಸಿದವನು ಈ ಪ್ರಪಂಚದಲ್ಲಿ ಶೋಭಿಸುತ್ತಾನೆ.
ಅಬ್ರುವನ್ ಕಸ್ಯಚಿನ್ನಿಂದಾಮಾತ್ಮಪೂಜಾಮವರ್ಣಯನ್ |
ನ ಕಶ್ಚಿದ್ ಗುಣಸಂಪನ್ನಃ ಪ್ರಕಾಶೋ ಭುವಿ ದೃಶ್ಯತೇ ||52||
ಯಾವನನ್ನೂ ನಿಂದನೆಯನ್ನು ಮಾಡದೆ ಮತ್ತು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳದೆ ಗುಣಸಂಪನ್ನನಾಗಿರುವವನು ಈ ಭೂಮಿಯಲ್ಲಿ ಯಾರೂ ಕಂಡುಬರುವುದಿಲ್ಲ.
ವಿಕರ್ಮಣಾ ತಪ್ಯಮಾನಃ ಪಾಪಾದ್ ವಿಪರಿಮುಚ್ಯತೇ |
ನ ತತ್ ಕುರ್ಯಾಂ ಪುನರಿತಿ ದ್ವಿತೀಯಾತ್ ಪರಿಮುಚ್ಯತೇ |
ಕರಿಷ್ಯೇ ಧರ್ಮಮೇವೇತಿ ತೃತೀಯಾತ್ಪರಿಮುಚ್ಯತೇ ||53||
ತಾನು ಮಾಡಿದ ವಿಕರ್ಮದಿಂದ ಪಶ್ಚಾತ್ತಾಪಕ್ಕೆ ಒಳಗಾದವನು ವಿಕರ್ಮ ಜನಿತ ಪಾಪದಿಂದ ಮುಕ್ತನಾಗುತ್ತಾನೆ. ನಾನು ಆ ಕಾರ್ಯವನ್ನು ಪುನಃ ಮಾಡುವುದಿಲ್ಲ ಎಂದು ನಿರ್ಧರಿಸಿದವನು ಮುಂದೆ ಮಾಡಬಹುದಾದ ಎರಡನೆಯ ಪಾಪದಿಂದ ಮುಕ್ತನಾಗುತ್ತಾನೆ. ನಾನು ಧರ್ಮವನ್ನೇ ಮಾಡುವೆನು ಎಂದು ನಿಶ್ಚಯಿಸಿದವನು ಮುಂದೆ ಮಾಡಬಹುದಾದ ಮೂರನೆಯ ಪಾಪದಿಂದ ಮುಕ್ತನಾಗುತ್ತಾನೆ.
ಕರ್ಮಣಾ ಯೇನ ಕೇನೇಹ ಪಾಪಾತ್ಮಾ ದ್ವಿಜಸತ್ತಮ |
ಏವಂ ಶ್ರುತಿರಿಯಂ ಬ್ರಹ್ಮನ್ ಧರ್ಮೇಷು ಪರಿದೃಶ್ಯತೇ ||54||
ಎಲೈ ದ್ವಿಜಶ್ರೇಷ್ಠರೇ, ಪಾಪಾತ್ಮರಾದವನು ಇಲ್ಲಿ ಯಾವುದಾದರೂ ದುಷ್ಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಎಲೈ ಬ್ರಾಹ್ಮಣರೇ, ಧರ್ಮದ ವಿಷಯದಲ್ಲಿ ಇಂತಹ ಈ ಶ್ರುತಿಯು ಕಂಡುಬರುತ್ತದೆ.
ಪಾಪಾನ್ಯಬುದ್ಧ್ವೇಹ ಪುರಾ ಕೃತಾನಿ
ಸ್ವಧರ್ಮಶೀಲೋಽಪಿ ವಿಹಂತಿ ಪಶ್ಚಾತ್ |
ಧರ್ಮೋ ಬ್ರಹ್ಮನ್ ನುದತೇ ಪೂರುಷಾಣಾಂ
ಯತ್ಕುರ್ವತೇ ಪಾಪಮಿಹ ಪ್ರಮಾದಾತ್ ||55||
ಮೊದಲು ಬುದ್ಧಿಪೂರ್ವಕವಲ್ಲದೇ ಪಾಪವನ್ನು ಮಾಡಿ ಅನಂತರ ಸ್ವಧರ್ಮ ಶೀಲನಾಗುವವನು ಆ ಪಾಪವನ್ನು ನಾಶಮಾಡುತ್ತಾನೆ. ಎಲೈ ಬ್ರಾಹ್ಮಣರೇ, ಪ್ರಮಾದದಿಂದ ಮಾಡಿದ ಪಾಪವನ್ನು ಪುರುಷರು ಮಾಡುವ ಧರ್ಮಗಳು ನಾಶಮಾಡುತ್ತವೆ.
ಪಾಪಂ ಕೃತ್ವಾ ಹಿ ಮನ್ಯೇತ ನಾಹಮಸ್ಮೀತಿ ಪೂರುಷಃ |
ಚಿಕೀರ್ಷೇದೇವ ಕಲ್ಯಾಣಂ ಶ್ರದ್ದಧಾನೋಽನಸೂಯಕಃ ||56||
ಪಾಪವನ್ನು ಮಾಡಿದ ಸಜ್ಜನನು ನಾನೇ ನಾಶವಾಗಿದ್ದೇನೆ ಎಂದು ತಿಳಿಯಬೇಕು. ಶ್ರದ್ಧೆಯನ್ನು ಹೊಂದಿ ಅಸೂಯಾರಹಿತನಾಗಿ ಕಲ್ಯಾಣವನ್ನು ಮಾಡಲು ಇಚ್ಛಿಸಲೇಬೇಕು.
ವಸನಸ್ಯೇವ ಛಿದ್ರಾಣಿ ಸಾಧೂನಾಂ ವಿವೃಣೋತಿ ಯಃ |
ಅಪಶ್ಯನ್ನಾತ್ಮನೋ ದೋಷಾನ್ ಸ ಪಾಪಃ ಪ್ರೇತ್ಯ ನಶ್ಯತಿ ||57||

ಯಾವನು ತನ್ನ ದೋಷಗಳನ್ನು ತಾನು ನೋಡದೆ, ವಸ್ತ್ರದಲ್ಲಿರುವ ಛಿದ್ರಗಳಂತೆ ಸಜ್ಜನರ ದೋಷಗಳನ್ನು ಬಹಿರಂಗ ಪಡಿಸುವನೋ ಅಂತಹ ಪಾಪಿಯು ಮರಣವನ್ನು ಹೊಂದಿ ನಾಶವನ್ನು ಹೊಂದುವನು.
ಪಾಪಂ ಚೇತ್ ಪುರುಷಃ ಕೃತ್ವಾ ಕಲ್ಯಾಣಮಭಿಪದ್ಯತೇ |
ಮುಚ್ಯತೇ ಸರ್ವಪಾಪೇಭ್ಯೋ ಮಹಾಭ್ರೇಣೇವ ಚಂದ್ರಮಾಃ ॥58॥
ಮನುಷ್ಯನು ಪಾಪವನ್ನು ಮಾಡಿ ಅನಂತರ ಧರ್ಮವನ್ನು ಆಚರಿಸಿದರೆ ಮಹಾಮೇಘಗಳಿಂದ ಚಂದ್ರನು ಬಿಡುಗಡೆಯನ್ನು ಹೊಂದಿದಂತೆ ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಯಥಾಽಽದಿತ್ಯಃ ಸಮುದ್ಯನ್ ವೈ ತಮಃ ಪೂರ್ವಂ ವ್ಯಪೋಹತೇ |
ಏವಂ ಕಲ್ಯಾಣಮಾತಿಷ್ಠನ್ ಸರ್ವಪಾಪೈಃ ಪ್ರಮುಚ್ಯತೇ ॥59॥
ಹೇಗೆ ಸೂರ್ಯನು ಉದಯಿಸುತ್ತಾ ಮೊದಲು ಅಂಧಕಾರವನ್ನು ನಾಶಮಾಡುತ್ತಾನೆಯೋ ಅದರಂತೆ ಪುಣ್ಯವನ್ನು ಆಚರಿಸುವವನು ಮೊದಲು ಸರ್ವಪಾಪಗಳನ್ನೂ ನಾಶಮಾಡಿ ಅದರಿಂದ ಮುಕ್ತನಾಗುತ್ತಾನೆ.
ಪಾಪಾನಾಂ ವಿದ್ಧ್ಯಧಿಷ್ಠಾನಂ ಲೋಭಮೇವ ದ್ವಿಜೋತ್ತಮ |
ತಸ್ಮಾತ್ ತೌ ವಿದುಷಾ ವಿಪ್ರ ವರ್ಜನೀಯೌ ವಿಶೇಷತಃ ॥60॥
ಎಲೈ ಬ್ರಾಹ್ಮಣಶ್ರೇಷ್ಠರೇ, ಪಾಪಗಳಿಗೆ ಮುಖ್ಯವಾದ ಆಶ್ರಯವು ಲೋಭವೆಂದು ತಿಳಿಯಿರಿ. ಆದ್ದರಿಂದ ಎಲೈ ಬ್ರಾಹ್ಮಣರೇ, ವಿವೇಕಿಯಾದವನು ಪಾಪ ಮತ್ತು ಲೋಭಗಳನ್ನು ವಿಶೇಷವಾಗಿ ತ್ಯಜಿಸಬೇಕು.
ಲುಬ್ಧಾಃ ಪಾಪಂ ವ್ಯವಸ್ಯಂತಿ ನರಾ ನಾತಿಬಹುಶ್ರುತಾಃ |
ಅಧರ್ಮಾಃ ಧರ್ಮರೂಪೇಣ ತೃಣೈಃ ಕೂಪಾ ಇವಾವೃತಾಃ ॥61॥
ಲೋಭವುಳ್ಳ ಮತ್ತು ಬಹುಶ್ರುತರಲ್ಲದ ಮನುಷ್ಯರು ಪಾಪವನ್ನು ಮಾಡಲು ನಿರ್ಧರಿಸುತ್ತಾರೆ. ತೃಣದಿಂದ ಮುಚ್ಚಿದ ಕೂಪದಂತೆ ಅವರಿಗೆ ಅಧರ್ಮವು ಧರ್ಮವಾಗಿ ತೋರುತ್ತದೆ.
ಯೇಷಾಂ ಪಂಚ ಪವಿತ್ರಾಣಿ ಪ್ರಲಾಪಾ ಧರ್ಮಸಂಶ್ರಿತಾಃ |
ಸರ್ವಂ ಹಿ ವಿದ್ಯತೇ ತೇಷು ಶಿಷ್ಟಾಚಾರಃ ಸುದುರ್ಲಭಃ ॥62॥
ಯಾರಲ್ಲಿ ಧರ್ಮಸಂಬಂಧಿಯಾದ ಐದು ವಸ್ತುಗಳೂ ಮತ್ತು ಡಂಬವಚನಗಳೂ ಇರುತ್ತವೆಯೋ ಅವರಲ್ಲಿ ಜನರ ವಂಚನೆಯಿಂದ ಪ್ರಾಪ್ತವಾದ ಧನಕನಕಾದಿ ಸರ್ವ ವಸ್ತುವೂ ಇರುತ್ತದೆ. ನಿಜವಾದ ಶಿಷ್ಟಾಚಾರವು ಬಹಳ ದುರ್ಲಭವಾದುದು.
ಮಾರ್ಕಂಡೇಯಃ
ಸ ತು ವಿಪ್ರೋ ಮಹಾಪ್ರಾಜ್ಞೋ ಧರ್ಮವ್ಯಾಧಮಪೃಚ್ಛತ |
ಶಿಷ್ಟಾಚಾರಂ ಕಥಮಹಂ ವಿದ್ಯಾಮಿತಿ ನರೋತ್ತಮ ॥63॥
ಮಾರ್ಕಂಡೇಯ ಎಲೈ ನರೋತ್ತಮನೇ, ಮಹಾಪ್ರಾಜ್ಞನಾದ ಆ ವಿಪ್ರನು ಧರ್ಮವ್ಯಾಧನನ್ನು ಕುರಿತು ಶಿಷ್ಟಾಚಾರವನ್ನು ನಾನು ಹೇಗೆ ತಿಳಿದೇನು ಎಂದು ಪ್ರಶ್ನೆ ಮಾಡಿದನು.
ಪಂಚ ಕಾನಿ ಪವಿತ್ರಾಣಿ ಶಿಷ್ಟಾಚಾರೇಷು ನಿತ್ಯದಾ |
ತ್ವತ್ತೋ ಮಹಾಮತೇ ವ್ಯಾಧ ತದ್ ಬ್ರವೀಹಿ ಯಥಾತಥಮ್ ॥64॥
ಶಿಷ್ಟಾಚಾರದಲ್ಲಿ ಯಾವಾಗಲೂ ಇರುವ ಐದು ಪವಿತ್ರ ವಸ್ತುಗಳು ಯಾವುವು? ಎಲೈ ಮಹಾಮತಿಯಾದ ವ್ಯಾಧನೇ, ಅದನ್ನು ಸರಿಯಾಗಿ ಹೇಳು (ಎಂದು ಕೇಳಿದನು).
ವ್ಯಾಧಃ
ಯಜ್ಞೋ ದಾನಂ ತಪೋ ವೇದಾಃ ಸತ್ಯಂ ಚ ದ್ವಿಜಸತ್ತಮ |
ಪಂಚೈತಾನಿ ಪವಿತ್ರಾಣಿ ಶಿಷ್ಟಾಚಾರೇಷು ಸರ್ವದಾ ॥65॥
ವ್ಯಾಧ ಎಲೈ ದ್ವಿಜಶ್ರೇಷ್ಠರೇ, ಯಜ್ಞ, ದಾನ, ತಪಸ್ಸು, ವೇದಗಳು ಮತ್ತು ಸತ್ಯವಚನ ಪವಿತ್ರವಾದ ಈ ಐದುವಸ್ತುಗಳು ಶಿಷ್ಟಾಚಾರದಲ್ಲಿ ಯಾವಾಗಲೂ ಇರುತ್ತವೆ.
ಕಾಮಕ್ರೋಧೌ ವಶೇ ಕೃತ್ವಾ ದಂಭಂ ಲೋಭಮನಾರ್ಜವಮ್ |
ಧರ್ಮ ಇತ್ಯೇವ ಸಂತುಷ್ಟಾಸ್ತೇ ಶಿಷ್ಟಾಃ ಶಿಷ್ಟಸಮ್ಮತಾಃ ॥66॥
ಕಾಮ, ಕ್ರೋಧ, ಡಂಬ, ಲೋಭ ಮತ್ತು ವಕ್ರತೆಗಳನ್ನು ವಶದಲ್ಲಿಟ್ಟುಕೊಂಡು ಧರ್ಮ ಎಂಬ ಒಂದೇ ದೃಷ್ಟಿಯಿಂದ ಯಾರು ಸಂತೋಷಪಡುತ್ತಾರೆಯೋ ಅವರು ಶಿಷ್ಟರು ಮತ್ತು ಶಿಷ್ಟರಿಗೆ ಸಮ್ಮತರಾದವರು.
ನ ತೇಷಾಂ ವಿದ್ಯತೇಽವೃತ್ತಂ ಯಜ್ಞಸ್ವಾಧ್ಯಾಯಶೀಲಿನಾಮ್ |
ಆಚಾರಪಾಲನಂ ಚೈವ ದ್ವಿತೀಯಂ ಶಿಷ್ಟಲಕ್ಷಣಮ್ ॥67॥
ಯಜ್ಞ ಮತ್ತು ಸ್ವಾಧ್ಯಾಯಗಳಲ್ಲಿ ನಿರತರಾದ ಅವರಲ್ಲಿ ಯಾವ ದುರ್ನಡತೆಯೂ ಇರುವುದಿಲ್ಲ. ಹಿಂದಿನಿಂದ ನಡೆದುಕೊಂಡು ಬಂದ ಆಚಾರದ ಪಾಲನೆಯು ಶಿಷ್ಟರ ಎರಡನೆಯ ಲಕ್ಷಣ.
ಗುರುಶುಶ್ರೂಷಣಂ ಸತ್ಯಮಕ್ರೋಧೋ ದಾನಮೇವ ಚ |
ಏತಚ್ಚತುಷ್ಟಯಂ ಬ್ರಹ್ಮನ್ ಶಿಷ್ಟಾಚಾರೇಷು ನಿತ್ಯದಾ ॥68॥
ಎಲೈ ಬ್ರಾಹ್ಮಣರೇ, ಗುರುಸೇವೆ, ಸತ್ಯವಚನ, ಅಕ್ರೋಧ ಮತ್ತು ದಾನ ಈ ನಾಲ್ಕು ವಸ್ತುಗಳು ಶಿಷ್ಟಾಚಾರಗಳಲ್ಲಿ ನಿತ್ಯವೂ ಇರುತ್ತವೆ.
ಶಿಷ್ಟಾಚಾರೇ ಮನಃ ಕೃತ್ವಾ ಪ್ರತಿಷ್ಠಾಪ್ಯ ಚ ಸರ್ವಶಃ |
ಯಾಮಯಂ ಲಭತೇ ವೃತ್ತಿಂ ಸಾ ನ ಶಕ್ಯಾ ಹ್ಯತೋಽನ್ಯಥಾ ॥69॥
ಶಿಷ್ಟಾಚಾರದಲ್ಲಿ ಮನಸ್ಸನ್ನು ಎಲ್ಲ ರೀತಿಯಿಂದಲೂ ಗಟ್ಟಿ ಮಾಡಿ ಯಾವ ಜೀವನೋಪಾಯವನ್ನು ಪಡೆಯುತ್ತಾನೆಯೋ ಅದನ್ನು

ಬೇರೆ ರೀತಿಯಿಂದ ಪಡೆಯಲು ಸಾಧ್ಯವಿಲ್ಲ.
ವೇದಸ್ಯೋಪನಿಷತ್ ಸತ್ಯಂ ಸತ್ಯಸ್ಯೋಪನಿಷದ್ ದಮಃ |
ದಮಸ್ಯೋಪನಿಷತ್ ತ್ಯಾಗಃ ಶಿಷ್ಟಾಚಾರೇಷು ನಿತ್ಯದಾ ||70||
ವೇದದ ರಹಸ್ಯವೆಂದರೆ ಸತ್ಯವಚನ. ಸತ್ಯದ ರಹಸ್ಯವು ಇಂದ್ರಿಯನಿಗ್ರಹ. ಇಂದ್ರಿಯನಿಗ್ರಹದ ರಹಸ್ಯವು ತ್ಯಾಗ. ಇವು ಶಿಷ್ಟಾಚಾರಗಳಲ್ಲಿ ಯಾವಾಗಲೂ ಇರುತ್ತವೆ.
ಯೇ ತು ಧರ್ಮಾನಸೂಯಂತೇ ಬುದ್ಧಿಮೋಹಾನ್ವಿತಾ ನರಾಃ |
ಅಪಥಾ ಗಚ್ಛತಾಂ ತೇಷಾಮನುಯಾತಾ ಚ ಪೀಡ್ಯತೇ ||71||
ಯಾವ ಮನುಷ್ಯರು ಬುದ್ಧಿಮೋಹಕ್ಕೆ ಒಳಗಾಗಿ ಅಸೂಯೆಯಿಂದ ಧರ್ಮವನ್ನು ಬಿಟ್ಟು ಅಮಾರ್ಗದಲ್ಲಿ ನಡೆಯುತ್ತಾರೆಯೋ ಅಂತಹವರನ್ನು ಹಿಂಬಾಲಿಸುವವರು ಕೂಡ ದುಃಖಕ್ಕೆ ಒಳಗಾಗುತ್ತಾರೆ.
ಯೇ ತು ಶಿಷ್ಟಾಃ ಸುನಿಯತಾಃ ಶ್ರುತಿತ್ಯಾಗಪರಾಯಣಾಃ |
ಧರ್ಮಪಂಥಾನಮಾರೂಢಾಃ ಸತ್ಯಧರ್ಮಪರಾಯಣಾಃ ||72||
ನಿಯಚ್ಛಂತಿ ಪರಾಂ ಬುದ್ಧಿಂ ಶಿಷ್ಟಾಚಾರಾನ್ವಿತಾ ಜನಾಃ |
ಉಪಾಧ್ಯಾಯಮತೇ ಯುಕ್ತಾಃ ಸ್ಥಿತ್ವಾ ಧರ್ಮಾರ್ಥದರ್ಶಿನಃ ||73||
ಯಾರು ಒಳ್ಳೆಯ ನಿಯಮವನ್ನು ಪಾಲಿಸುವವರಾಗಿ ವೇದ ಮತ್ತು ತ್ಯಾಗಗಳಲ್ಲಿ ನಿಯತರಾಗಿ ಸತ್ಯಧರ್ಮ ಪರಾಯಣರಾಗಿ ಶಿಷ್ಟಾಚಾರವನ್ನು ಹೊಂದಿದವರಾಗಿ ತಮ್ಮ ಶ್ರೇಷ್ಠವಾದ ಬುದ್ಧಿಯನ್ನು ವಶದಲ್ಲಿ ಇಟ್ಟುಕೊಳ್ಳುತ್ತಾರೆಯೋ ಮತ್ತು ಧರ್ಮ ಮಾರ್ಗದಲ್ಲಿಯೇ ನಡೆಯುತ್ತಾರೆಯೋ ಮತ್ತು ಉಪಾಧ್ಯಾಯರ ಅಭಿಪ್ರಾಯದಂತೆ ನಡೆದುಕೊಳ್ಳುವವರಾಗಿ ಧರ್ಮಾರ್ಥದರ್ಶಿಗಳಾಗಿರುತ್ತಾರೆಯೋ ಅವರು ನಿಜವಾದ ಶಿಷ್ಟರು.
ನಾಸ್ತಿಕಾನ್ ಭಿನ್ನಮರ್ಯಾದಾನ್ ಕ್ರೂರಾನ್ ಪಾಪಮತೌ ಸ್ಥಿತಾನ್ |
ತ್ಯಜ ತಾನ್ ಜ್ಞಾನಮಾಶ್ರಿತ್ಯ ಧಾರ್ಮಿಕಾನುಪಸೇವ್ಯ ಚ ||74||
ನಾಸ್ತಿಕರು, ಎಲ್ಲ ಮರ್ಯಾದೆಯನ್ನೂ ಮೀರಿದವರು, ಕ್ರೂರರು, ಪಾಪಬುದ್ಧಿಯಲ್ಲಿಯೇ ಇರುವವರೂ ಆದವರನ್ನು ತ್ಯಾಗಮಾಡು. ಒಳ್ಳೆಯ ಜ್ಞಾನವನ್ನು ಸಂಪಾದಿಸಿ ಹಿಂದೆ ಹೇಳಿದ ಧಾರ್ಮಿಕರನ್ನು ಆಶ್ರಯಿಸು.
ಕಾಮಲೋಭಗ್ರಹಾಕೀರ್ಣಾಂ ಪಂಚೇದ್ರಿಯಜಲಾಂ ನದೀಮ್ |
ನಾವಂ ಧೃತಿಮಯೀಂ ಕೃತ್ವಾ ಜನ್ಮದುರ್ಗಾಣಿ ಸಂತರ ||75||
ಕಾಮಲೋಭವೆಂಬ ಮೊಸಳೆಯಿಂದ ಕೂಡಿದ ಪಂಚೇಂದ್ರಿಯ ಎಂಬ ಜಲದಿಂದ ಕೂಡಿದ ಸಂಸಾರ ಎಂಬ ನದಿಯನ್ನು ಧೈರ್ಯ ಎಂಬ ನಾವೆಯನ್ನು ಆಶ್ರಯಿಸಿ, ಜನನ ಮರಣಗಳಿಂದಲೂ ದುಃಖದಿಂದಲೂ ದಾಟುವವನಾಗು.
ಕ್ರಮೇಣ ಸಂಚಿತೋ ಧರ್ಮೋ ಬುದ್ಧಿಯೋಗಮಯೋ ಮಹಾನ್ |
ಶಿಷ್ಟಾಚಾರೋ ಭವೇತ್ ಸಾಧೂ ರಾಗಃ ಶುಕ್ಲೇವ ವಾಸಸಿ
(ಶುಕ್ರ ಇವಾಂಬರೇ) ||76||
ಬುದ್ಧಿಯೋಗದಿಂದ ಕ್ರಮವಾಗಿ ಸಂಪಾದನೆ ಮಾಡಿ ಶೇಖರಿಸಿದ ಧರ್ಮವು ಶಿಷ್ಟಾಚಾರದಲ್ಲಿ ಚೆನ್ನಾಗಿ ಉಪಯುಕ್ತವಾಗುತ್ತದೆ. ಬಣ್ಣದಿಂದ ಕೂಡಿದ ವಸ್ತ್ರವು ಕ್ರಮೇಣ ಶುದ್ಧವಾಗುವಂತೆ ಅಂತಃಕರಣವು ಕ್ರಮೇಣ ನಿರ್ಮಲವಾಗುತ್ತದೆ.
ಅಹಿಂಸಾ ಸತ್ಯವಚನಂ ಸರ್ವಭೂತಹಿತಂ ಪರಮ್ |
ಅಹಿಂಸಾ ಪರಮೋ ಧರ್ಮಃ ಸ ಚ ಸತ್ಯೇ ಪ್ರತಿಷ್ಠಿತಃ ||77||
ಅಹಿಂಸೆ, ಸತ್ಯವಚನ, ಸರ್ವಭೂತಹಿತ ಈ ಮೂರರಲ್ಲಿ ಅಹಿಂಸೆಯು ಶ್ರೇಷ್ಠವಾದ ಧರ್ಮ. ಆ ಅಹಿಂಸೆಯಾದರೂ ಸತ್ಯದಲ್ಲಿ ಪ್ರತಿಷ್ಠಿತವಾಗಿದೆ.
ಸತ್ಯೇ ಕೃತ್ವಾ ಪ್ರತಿಷ್ಠಾಂ ತು ಪ್ರವರ್ತಂತೇ ಪ್ರವೃತ್ತಯಃ |
ಸತ್ಯಮೇವ ಗರೀಯಸ್ತು ಶಿಷ್ಟಾಚಾರನಿಷೇವಿತಮ್ |
ಆಚಾರಶ್ಚ ಸತಾಂ ಧರ್ಮಃ ಸಂತಶ್ಚಾಚಾರಲಕ್ಷಣಾಃ ||78||
ಸಜ್ಜನರು ಸತ್ಯದಲ್ಲಿ ಪ್ರತಿಷ್ಠಿತರಾಗಿ ಎಲ್ಲ ಕಾರ್ಯಗಳಲ್ಲಿಯೂ ಪ್ರತಿಷ್ಠಿತರಾಗುತ್ತಾರೆ. ಶಿಷ್ಟಾಚಾರದಲ್ಲಿ ಒಂದು ಶ್ರೇಷ್ಠವಾದ ಧರ್ಮ ಎಂದರೆ ಅದು ಸತ್ಯವಚನ. ಆಚಾರವೂ ಸಜ್ಜನರ ಒಂದು ಧರ್ಮ. ಸದಾಚಾರವೇ ಸಜ್ಜನರ ಲಕ್ಷಣವೂ ಕೂಡ.
ಯೋ ಯಥಾಪ್ರಕೃತಿರ್ಜಂತುಃ ಸ ಸ್ವಾಂ ಪ್ರಕೃತಿಮಶ್ನುತೇ |
ಪಾಪಾತ್ಮಾ ಕ್ರೋಧಕಾಮಾದೀನ್ ದೋಷಾನಾಪ್ನೋತ್ಯನಾತ್ಮವಾನ್ ||
ಎಲ್ಲ ಜಂತುಗಳೂ ತಮ್ಮ ಉತ್ತಮ ಅಥವಾ ಮಧ್ಯಮ ಅಥವಾ ಅಧಮ ಪ್ರಕೃತಿಗೆ ಅನುಸಾರವಾಗಿ ನಡೆದು ತಮ್ಮ ತಮ್ಮ ಪ್ರಕೃತಿಯನ್ನೇ ಹೊಂದುತ್ತವೆ. ಪಾಪಾತ್ಮನಾದವನು ಮನೋನಿಗ್ರಹವಿಲ್ಲದೆ ಕಾಮಕ್ರೋಧಾದಿ ದೋಷಗಳನ್ನು ಹೊಂದುತ್ತಾನೆ.
ಆರಂಭೋ ನ್ಯಾಯಯುಕ್ತೋ ಯಃ ಸ ಹಿ ಧರ್ಮ ಇತಿ ಸ್ಮೃತಃ |
ಅನಾಚಾರಸ್ತ್ವಧರ್ಮೇತಿ ಏತಚ್ಛಿಷ್ಟಾನುಶಾಸನಮ್ ||80||
ಶಾಸ್ತ್ರವಿಹಿತವಾದ ಕ್ರಿಯಾರಂಭಗಳೆಲ್ಲವೂ ಧರ್ಮವೆಂದು ಹೇಳಲ್ಪಡುತ್ತದೆ. ಅನಾಚಾರವು ಅಧರ್ಮವೆಂದು ಹೇಳಲ್ಪಡುತ್ತದೆ. ಇದು ಶಿಷ್ಟರ ಅನುಶಾಸನ.
ಅಕ್ರುದ್ಧ್ಯಂತೋಽನಸೂಯಂತೋ ನಿರಹಂಕಾರಮತ್ಸರಾಃ |
ಋಜವಃ ಶಮಸಂಪನ್ನಾಃ ಶಿಷ್ಟಾಚಾರಾ ಭವಂತಿ ತೇ ||81||
ಕ್ರೋಧವನ್ನೂ, ಅಸೂಯೆಯನ್ನೂ ಮಾಡದೆ ಅಹಂಕಾರ ಮಾತ್ಸರ್ಯಗಳನ್ನು ಹೊಂದದೆ ಯಾರು ಆರ್ಜವವನ್ನೂ ಮತ್ತು

ಭಗವನ್ನಿಷ್ಠೆಯನ್ನೂ ಹೊಂದಿರುತ್ತಾರೋ ಅವರನ್ನು ಶಿಷ್ಟಾಚಾರವುಳ್ಳವರು ಎಂದು ಕರೆಯುತ್ತಾರೆ.
ತ್ರೈವಿದ್ಯವೃದ್ಧಾಃ ಶುಚಯೋ ವೃತ್ತವಂತೋ ಮನಸ್ವಿನಃ |
ಗುರುಶುಶ್ರೂಷವೋ ದಾಂತಾಃ ಶಿಷ್ಟಾಚಾರಾ ಭವಂತ್ಯುತ ॥82॥
ಮೂರು ವೇದದ ಜ್ಞಾನವುಳ್ಳವರೂ, ಶುಚಿಯಾದವರೂ, ಒಳ್ಳೆಯ ನಡತೆಯುಳ್ಳವರೂ, ಧೈರ್ಯಶಾಲಿಗಳೂ, ಗುರುಸೇವೆಯನ್ನು ಮಾಡುವವರೂ ಮತ್ತು ಇಂದ್ರಿಯನಿಗ್ರಹವನ್ನು ಉಳ್ಳವರೂ ಸಹ ಶಿಷ್ಟಾಚಾರವನ್ನು ಹೊಂದಿದವರಾಗಿರುತ್ತಾರೆ.
ತೇಷಾಮದೀನಸತ್ತ್ವಾನಾಂ ದುಷ್ಕರಾಚಾರಕರ್ಮಣಾಮ್ |
ಸ್ವೈಃ ಕರ್ಮಭಿಃ ಸತ್ಕೃತಾನಾಂ ಘೋರತ್ವಂ ಸಂಪ್ರಣಶ್ಯತಿ ॥83॥
ದೈನ್ಯರಹಿತವಾದ ಮನಸ್ಸುಳ್ಳವರಿಗೆ ದುಷ್ಕರ್ಮವಾದ ಆಚಾರದಲ್ಲಿ ಮತ್ತು ಕರ್ಮದಲ್ಲಿ ನಿರತರಾದ ಮನುಷ್ಯರಲ್ಲಿ ಅವರು ಮಾಡಿದ ಕ್ರೂರತ್ವವು ಅದರ ಸತ್ಕರ್ಮಗಳಿಂದ ನಾಶವನ್ನು ಹೊಂದುತ್ತವೆ.
ತಂ ಸದಾಚಾರಮಾಶ್ಚರ್ಯಂ ಪುರಾಣಂ ಶಾಶ್ವತಂ ಧ್ರುವಮ್ |
ಧರ್ಮಂ ಧರ್ಮೇಣ ಪಶ್ಯಂತಃ ಸ್ವರ್ಗಂ ಯಾಂತಿ ಮನೀಷಿಣಃ ॥84॥
ವಿವೇಕಿಗಳಾದವರು ಆ ಪುರಾತನವಾದ, ಶಾಶ್ವತವಾದ, ನಿತ್ಯವಾದ ಆಶ್ಚರ್ಯಕರವಾದ, ಸದಾಚಾರರೂಪವಾದ ಧರ್ಮವನ್ನು ಧರ್ಮದಿಂದಲೇ ನೋಡುತ್ತಾ (ಧರ್ಮಾಚರಣೆಯನ್ನು ಮಾಡುತ್ತಲೇ) ಸ್ವರ್ಗವನ್ನು ಪಡೆಯುತ್ತಾರೆ.
ಆಸ್ತಿಕಾ ಮಾನಹೀನಾಶ್ಚ ದ್ವಿಜಾತಿಜನಪೂಜಕಾಃ |
ಶ್ರುತವೃತ್ತೋಪಸಂಪನ್ನಾಃ ಸಂತಃ ಸ್ವರ್ಗನಿವಾಸಿನಃ॥85॥
ಆಸ್ತಿಕರೂ, ಅಹಂಕಾರಹೀನರೂ, ಬ್ರಾಹ್ಮಣಪೂಜಕರೂ, ಶಾಸ್ತ್ರಶ್ರವಣ ಮಾಡಿದವರೂ, ಒಳ್ಳೆಯ ನಡತೆಯುಳ್ಳವರೂ ಆದ ಸಜ್ಜನರು ಸ್ವರ್ಗದಲ್ಲಿ ವಾಸವನ್ನು ಮಾಡುತ್ತಾರೆ.
ವೇದೋಕ್ತಃ ಪರಮೋ ಧರ್ಮೋ ಧರ್ಮಶಾಸ್ತ್ರೇಷು ಚಾಪರಃ |
ಶಿಷ್ಟಾಚಾರಶ್ಚ ಶಿಷ್ಟಾನಾಂ ತ್ರಿವಿಧಂ ಧರ್ಮಲಕ್ಷಣಮ್ ॥86॥
ವೇದೋಕ್ತವಾದುದು ಶ್ರೇಷ್ಠವಾದ ಧರ್ಮ. ಧರ್ಮಶಾಸ್ತ್ರಗಳಲ್ಲಿ ಹೇಳಿರುವುದು ಇನ್ನೊಂದು ಧರ್ಮ. ಶಿಷ್ಟರ ಶಿಷ್ಟಾಚಾರವು ಇನ್ನೊಂದು ಧರ್ಮ. ಹೀಗೆ ಧರ್ಮವು ಮೂರುರೂಪವಾಗಿದೆ.
ಪಾ(ಧಾ)ರಣಂ ಚಾಪಿ ವಿದ್ಯಾನಾಂ ತೀರ್ಥಾನಾಮವಗಾಹನಮ್ |
ಕ್ಷಮಾ ಸತ್ಯಾರ್ಜವಂ ಶೌಚಂ ಸತಾಮಾಚಾರದರ್ಶನಮ್ ॥87॥
ವಿದ್ಯೆಯನ್ನು ಕೊನೆಯವರೆಗೂ ಕಲಿಯುವುದು, ತೀರ್ಥದಲ್ಲಿ ಸ್ನಾನವನ್ನು ಮಾಡುವುದು, ಕ್ಷಮಾ, ಸತ್ಯವಚನ, ಆರ್ಜವ ಮತ್ತು ಶೌಚ ಇವುಗಳು ಸಜ್ಜನರ ಆಚಾರವನ್ನು ತೋರಿಸುತ್ತವೆ.
ಸರ್ವಭೂತದಯಾವಂತೋ ಅಹಿಂಸಾನಿರತಾಃ ಸದಾ |
ಪರುಷಂ ಚ ನ ಭಾಷಂತೇ ಸದಾ ಸಂತೋ ದ್ವಿಜಪ್ರಿಯಾಃ ॥88॥
ಸಜ್ಜನರಾದವರು ಯಾವಾಗಲೂ ಸರ್ವಭೂತ ದಯೆಯುಳ್ಳವರೂ, ಅಹಿಂಸಾ ನಿರತರೂ, ಮೃದುಭಾಷಿಗಳೂ ಮತ್ತು ಬ್ರಾಹ್ಮಣಪ್ರಿಯರೂ ಆಗಿರುತ್ತಾರೆ.
ಶುಭಾನಾಮಶುಭಾನಾಂ ಚ ಕರ್ಮಣಾಂ ಫಲಸಂಚಯೇ |
ವಿಪಾಕಮಭಿಜಾನಂತಿ ತೇ ಶಿಷ್ಟಾಃ ಶಿಷ್ಟಸಮ್ಮತಾಃ ॥89॥
ಯಾರು ಶುಭಾಶುಭಕರ್ಮಗಳಿಂದ ಉಂಟಾಗುವ ಫಲರಾಶಿಗಳಲ್ಲಿ ಇರುವ ವ್ಯತ್ಯಾಸವನ್ನು ಮತ್ತು ಆ ಕರ್ಮಗಳು ಪಾಕಹೊಂದುವ ಸಮಯವನ್ನು ತಿಳಿಯುತ್ತಾರೆಯೋ ಅವರು ಶಿಷ್ಟರಿಗೆ ಸಮ್ಮತರಾದ ಶಿಷ್ಟರು.
ನ್ಯಾಯೋಪೇತಾ ಗುಣೋಪೇತಾಃ ಸರ್ವಲೋಕಹಿತೈಷಿಣಃ |
ಸಂತಃ ಸ್ವರ್ಗಜಿತಃ ಶುಕ್ಲಾಃ ಸನ್ನಿವಿಷ್ಟಾಶ್ಚ ಸತ್ಪಥೇ ॥90॥
ನ್ಯಾಯದಿಂದ ನಡೆಯುವವರೂ, ಗುಣವಂತರೂ, ಸರ್ವಲೋಕ ಹಿತವನ್ನು ಬಯಸುವವರೂ, ಸನ್ಮಾರ್ಗದಲ್ಲೇ ನಿಷ್ಟರಾದವರೂ, ಶುದ್ಧರಾದವರೂ ಆದ ಸಜ್ಜನರು ಸ್ವರ್ಗವನ್ನು ಜಯಿಸುತ್ತಾರೆ.
ದಾತಾರಃ ಸಂವಿಭಕ್ತಾರೋ ದೀನಾನುಗ್ರಹಕಾರಿಣಃ |
ಸರ್ವಭೂತದಯಾವಂತಸ್ತೇ ಶಿಷ್ಟಾಃ ಶಿಷ್ಟಸಮ್ಮತಾಃ ॥91॥
ದಾನಮಾಡುವವರು ತಮ್ಮ ಸಂಪತ್ತನ್ನು ಇನ್ನೊಬ್ಬರಿಗೆ ಹಂಚುವವರು, ಧೀನರಿಗೆ ಅನುಗ್ರಹವನ್ನು ಮಾಡುವವರು ಮತ್ತು ಸರ್ವಭೂತಗಳಲ್ಲಿಯೂ ದಯೆಯುಳ್ಳವರು ಶಿಷ್ಟರಿಗೆ ಸಮ್ಮತವಾದ ಶಿಷ್ಟರೆನಿಸುತ್ತಾರೆ.
ಸರ್ವಪೂಜ್ಯಾಃ ಶ್ರುತಧನಾಸ್ತಥೈವ ಚ ತಪಸ್ವಿನಃ |
ದಾನಶಿಷ್ಟಾಃ ಸುಖಾಂಲ್ಲೋಕಾನಾಪ್ನುವಂತೀಹ ಚ ಶ್ರಿಯಮ್ ॥92॥
ಎಲ್ಲರಿಂದಲೂ ಪೂಜಿಸಲ್ಪಡುವವರೂ, ವಿದ್ಯೆಯೇ ಧನವಾಗಿ ಉಳ್ಳವರೂ, ತಪಸ್ವಿಗಳಾದವರೂ, ದಾನವನ್ನು ಮಾಡಿ ಶಿಷ್ಟರಾದವರೂ ಸುಖಮಯವಾದ ಲೋಕಗಳನ್ನು ಪಡೆಯುತ್ತಾರೆ ಮತ್ತು ಈ ಲೋಕದಲ್ಲಿಯೂ ಸಂಪತ್ತನ್ನು ಪಡೆಯುತ್ತಾರೆ.
ಪೀಡಯಾ ಚ ಕಳತ್ರಸ್ಯ ಭೃತ್ಯಾನಾಂ ಚ ಸಮಾಹಿತಾಃ |
ಅತಿಶಕ್ತ್ಯಾ ಪ್ರಯಚ್ಛಂತಿ ಸಂತಃ ಸದ್ಭಿಃ ಸಮಾಗತಾಃ ॥93॥
ಏವಂ ಸಂತೋ ವರ್ತಮಾನಾಸ್ತ್ವೇಧಂತೇ ಶಾಶ್ವತೀಃ ಸಮಾಃ ॥94॥
ಹೆಂಡತಿಗೆ ಮತ್ತು ಸೇವಕರುಗಳಿಗೆ ಪೀಡೆಯನ್ನಾದರೂ ಮಾಡಿ ಸಮಾಧಾನವುಳ್ಳ ಮನಸ್ಸಿನಿಂದ ಸಜ್ಜನರ ಸಮಾಗಮ ಉಂಟಾದಾಗ ತಮ್ಮ ಶಕ್ತಿಯನ್ನು ಮೀರಿ ದಾನವನ್ನು ಮಾಡುತ್ತಾರೆ. ಅವರು ಸಜ್ಜನರು. ಹೀಗಿರುವ ಸಜ್ಜನರು ಬಹುಕಾಲದಲ್ಲಿ ಅಭಿವೃದ್ಧಿಯನ್ನೇ

ಹೊಂದುತ್ತಾರೆ.
ಅಹಿಂಸಾ ಸತ್ಯವಚನಮಾನೃಶಂಸ್ಯಮಥಾರ್ಜವಮ್ |
ಅದ್ರೋಹೋ ನಾಭಿಮಾನಶ್ಚ ಹ್ರೀಸ್ತಿತಿಕ್ಷಾ ದಮಃ ಶಮಃ ॥95॥
ಧೀಮಂತೋ ಧೃತಿಮಂತಶ್ಚ ಭೂತಾನಾಮನುಕಂಪಕಾಃ |
ಅಕಾಮದ್ವೇಷಸಂಯುಕ್ತಾಸ್ತೇ ಸಂತೋ ಲೋಕಸಾಕ್ಷಿಣಃ ॥96॥
ಅಹಿಂಸೆ, ಸತ್ಯವಚನ, ಮಾರ್ದವ, ಆರ್ಜವ, ಅದ್ರೋಹ, ಅನಭಿಮಾನ, ನಾಚಿಕೆ, ಸಹನೆ, ಇಂದ್ರಿಯನಿಗ್ರಹ, ಭಗವನ್ನಿಷ್ಠೆ ಇವುಗಳಿಂದ ಕೂಡಿದ ಮೇಧಾವಿಗಳೂ, ಧೈರ್ಯವಂತರೂ, ಸರ್ವಪ್ರಾಣಿಗಳಲ್ಲಿ ದಯೆಯುಳ್ಳವರೂ, ಕಾಮದ್ವೇಷರಹಿತರೂ ಆದ ಸಜ್ಜನರು ಲೋಕಸಾಕ್ಷಿಗಳಾಗಿರುತ್ತಾರೆ.
ನ ಚೈವ ದ್ರುಹ್ಯೇದ್ ದದ್ಯಾಚ್ಚ ಸತ್ಯಂ ಚೈವ ಸದಾ ವದೇತ್ ॥97॥
ಸರ್ವತ್ರ ಚ ದಯಾವಂತಃ ಸಂತಃ ಕರುಣವೇದಿನಃ |
ಗಚ್ಛಂತೀಹ ಸುಸಂತುಷ್ಟಾ ಧರ್ಮಪಂಥಾನಮುತ್ತಮಮ್ ॥98॥
ಯಾರಿಗೂ ದ್ರೋಹವನ್ನು ಮಾಡಬಾರದು. ದಾನವನ್ನು ಮಾಡಬೇಕು. ಯಾವಾಗಲೂ ಸತ್ಯವನ್ನೇ ನುಡಿಯಬೇಕು. ಎಲ್ಲರಲ್ಲಿಯೂ ದಯೆವುಳ್ಳವರಾಗಬೇಕು. ಕಾರುಣ್ಯವನ್ನು ಹೊಂದುವವರಾಗಬೇಕು. ಅಂತಹ ಸಜ್ಜನರು ಇಲ್ಲಿ ಸುಸಂತುಷ್ಟರಾಗಿ ಶ್ರೇಷ್ಠವಾದ ಧರ್ಮಪಥದಲ್ಲಿ ನಡೆಯುತ್ತಾರೆ.
ಶಿಷ್ಟಾಚಾರಾ ಮಹಾತ್ಮಾನೋ ಯೇಷಾಂ ಧರ್ಮಃ ಸುನಿಶ್ಚಿತಃ ॥99॥
ಅವರು ಶಿಷ್ಟಾಚಾರವುಳ್ಳ ಮಹಾತ್ಮರು. ಅವರಿಗೆ ಧರ್ಮದ ವಿಷಯದಲ್ಲಿ ದೃಢವಾದ ನಿಶ್ಚಯವಿರುತ್ತದೆ.
ಕಾಮಕ್ರೋಧಪರಿತ್ಯಾಗಃ ಶಿಷ್ಟಾಚಾರನಿಷೇವಣಮ್ ॥100॥
ಕರ್ಮ ಚ ಶ್ರುತಸಂಪನ್ನಂ ಸತಾಂ ಮಾರ್ಗಮನುತ್ತಮಮ್ |
ಶಿಷ್ಟಾಚಾರಂ ನಿಷೇವಂತೇ ನಿತ್ಯಂ ಧರ್ಮಮನುವ್ರತಾಃ ॥101॥
ಕಾಮಕ್ರೋಧಗಳ ಪರಿತ್ಯಾಗ, ಶಿಷ್ಟಾಚಾರದ ಆಚರಣೆ, ವೇದೋಕ್ತ ಕರ್ಮಗಳ ಅನುಷ್ಠಾನ ಇವು ಸಜ್ಜನರ ಶ್ರೇಷ್ಠವಾದ ಮಾರ್ಗ. ಧರ್ಮವನ್ನು ಅನುಸರಿಸುವವರು ಯಾವಾಗಲೂ ಶಿಷ್ಟಾಚಾರವನ್ನೇ ಸೇವಿಸುತ್ತಾರೆ (ನೆರವೇರಿಸುತ್ತಾರೆ).
ಪ್ರಜ್ಞಾಪ್ರಾಸಾದಮಾರುಹ್ಯ ಮುಚ್ಯಂತೇ ಮಹತೋ ಭಯಾತ್ |
ಪ್ರೇಕ್ಷಂತೋ ಲೋಕವೃತ್ತಾನಿ ವಿವಿಧಾನಿ ದ್ವಿಜೋತ್ತಮ |
ಅತಿಪುಣ್ಯಾನ್ನದಾನಾನಿ ತಾನಿ ದ್ವಿಜವರೋತ್ತಮ ॥102॥
ಎಲೈ ದ್ವಿಜವರೋತ್ತಮರೇ, ಅತಿಪುಣ್ಯದಾಯಕವಾದ ಅನ್ನದಾನಾದಿ ಕರ್ಮಗಳನ್ನೂ, ವಿವಿಧವಾದ ಲೋಕವೃತ್ತಗಳನ್ನೂ ನೋಡುತ್ತಾ ಪ್ರಜ್ಞೆ ಎಂಬ ಉಪ್ಪರಿಗೆಯ ಮನೆಯನ್ನು ಏರಿದವರಾಗಿ ಸಜ್ಜನರು ದೊಡ್ಡ ಭಯದಿಂದ ನಿರ್ಮುಕ್ತರಾಗುತ್ತಾರೆ.
ಏತತ್ ತೇ ಸರ್ವಮಾಖ್ಯಾತಂ ಯಥಾಪ್ರಜ್ಞಂ ಯಥಾಶ್ರುತಮ್ |
ಶಿಷ್ಟಾಚಾರಗುಣಂ ಬ್ರಹ್ಮನ್ ಪುರಸ್ಕೃತ್ಯ ದ್ವಿಜರ್ಷಭ ॥103॥
ಎಲೈ ದ್ವಿಜ ಋಷಭರೇ, ಬ್ರಾಹ್ಮಣರೇ, ನೀವು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾನು ಶ್ರವಣ ಮಾಡಿದಂತೆ ಮತ್ತು ನನ್ನ ಬುದ್ಧಿಗೆ ಅನುಗುಣವಾಗಿ ಶಿಷ್ಟರ ಆಚಾರ ಮತ್ತು ಗುಣಗಳನ್ನು ಮುಂದೆ ಮಾಡಿಕೊಂಡು ಇವೆಲ್ಲವನ್ನೂ ನಿಮಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರ್ನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪತಿವ್ರತಾಮಾಹಾತ್ಮ್ಯೇ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ನಾಲ್ಕನೆಯ
ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ತೈದನೆಯ ಅಧ್ಯಾಯ
ಕೌಶಿಕ ಬ್ರಾಹ್ಮಣನಿಗೆ ಧರ್ಮವ್ಯಾಧನಿಂದ ಉಪದೇಶದ ಕಥನ.
ಮಾರ್ಕಂಡೇಯಃ
ಸ ತು ವಿಪ್ರಮಥೋವಾಚ ಧರ್ಮವ್ಯಾಧೋ ಯುಧಿಷ್ಠಿರ |
ಮಾರ್ಕಂಡೇಯ- ಎಲೈ ಯುಧಿಷ್ಠಿರನೇ, ಅನಂತರ ಧರ್ಮವ್ಯಾಧನು ಆ ಬ್ರಾಹ್ಮಣನನು ಕುರಿತು ಮಾತನಾಡಿದನು.
ಯದಹಮಾಚರೇ ಕರ್ಮ ಘೋರಮೇತದಸಂಶಯಮ್ ॥1॥
ವಿಧಿಸ್ತು ಬಲವಾನ್ ಬ್ರಹ್ಮನ್ ದುಸ್ತರಂ ಹಿ ಪುರಾಕೃತಮ್ |
ಪುರಾಕೃತಸ್ಯ ಪಾಪಸ್ಯ ಕರ್ಮದೋಷೋ ಭವತ್ಯಯಮ್ ॥2॥
ನಾನು ಏನು ಕರ್ಮವನ್ನು ಮಾಡುತ್ತಿದ್ದೇನೆಯೋ ಅದು ಘೋರವಾದುದು ಎಂಬುದರಲ್ಲಿ ಸಂಶಯವಿಲ್ಲ. ಎಲೈ ಬ್ರಾಹ್ಮಣರೇ, ವಿಧಿಯು ಪ್ರಬಲವಾದುದು. ನಾನು ಹಿಂದೆ ಮಾಡಿದ ಕರ್ಮವನ್ನು ಮೀರಲು ಸಾಧ್ಯವಿಲ್ಲ. ನಾನು ಈಗ ಮಾಡುತ್ತಿರುವುದು ಹಿಂದೆ ಮಾಡಿದ ಪಾಪಕರ್ಮದಿಂದ ಉಂಟಾದ ಕರ್ಮದೋಷವಾಗಿದೆ.
ದೋಷಸ್ಯೈತಸ್ಯ ವೈ ಬ್ರಹ್ಮನ್ವಿಘಾತೇ ಯತ್ನವಾನಹಮ್ |
ವಿಧಿನಾ ವಿಹಿತಂ ಪೂರ್ವಂ ನಿಮಿತ್ತಂ ಘಾತಕೋ ಭವೇತ್ |
ನಿಮಿತ್ತಭೂತಾ ಹಿ ವಯಂ ಕರ್ಮಣೋಽಸ್ಯ ದ್ವಿಜೋತ್ತಮ ॥3॥

ಎಲೈ ಬ್ರಾಹ್ಮಣರೇ, ಈ ದೋಷದ ಪರಿಹಾರಕ್ಕಾಗಿ ನಾನು ಪ್ರಯತ್ನವನ್ನು ಮಾಡುತ್ತಿದ್ದೇನೆ. ಮೊದಲು ವಿಧಿಯಿಂದ ಹೀನಯೋನಿಪ್ರಾಪ್ತಿಗೆ ಯಾವ ಕಾರಣವಾದ ಕರ್ಮವು ವಿಹಿತವಾಗಿದೆಯೋ ಆ ಕಾರಣವೂ ಕೂಡ ಹೀನಯೋನಿಯಲ್ಲಿಯೂ ಪುಣ್ಯವನ್ನು ಸಂಪಾದಿಸುವುದರಿಂದ ನಾಶವನ್ನು ಹೊಂದುತ್ತದೆ. ಎಲೈ ದ್ವಿಜಶ್ರೇಷ್ಠರೇ, ಇಂತಹ ದುಷ್ಕರ್ಮಗಳಿಗೆ ನಾವೇ ಕಾರಣರಾದವರು.

ಯೇಷಾಂ ಹತಾನಾಂ ಮಾಂಸಾನಿ ವಿಕ್ರೀಣಾಮೀಹ ವೈ ದ್ವಿಜ |
ತೇಷಾಮಪಿ ಭವೇತ್ಕರ್ಮ ಉಪಯೋಗೇನ ಭಕ್ಷಣಾತ್ ॥4॥
ದೇವತಾತಿಥಿಭೃತ್ಯಾನಾಂ ಪಿತೄಣಾಂ ಪ್ರತಿಪೂಜನಾತ್ ॥5॥

ಎಲೈ ಬ್ರಾಹ್ಮಣರೇ, ಯಾವ ಪ್ರಾಣಿಗಳ ಮಾಂಸವನ್ನು ನಾನು ಮಾರುತ್ತೇನೆಯೋ ಆ ಪ್ರಾಣಿಗಳಿಗೂ ಸಹ ದೇವತಾಧಿಗಳ ಪೂಜೆಯನ್ನು ಮಾಡುವುದರಿಂದ ಆ ಮಾಂಸದಿಂದ ಪಿತೃಗಳ ಪೂಜೆಯನ್ನೂ, ಭೃತ್ಯರ ಪೂಜೆಯನ್ನೂ ಮಾಡುವುದರಿಂದ ಸ್ವತಃ ಸಜ್ಜನರು ಭಕ್ಷಣ ಮಾಡುವುದರಿಂದ ಪುಣ್ಯ ಉಂಟಾಗುತ್ತದೆ.

ಓಷಧ್ಯೋ ವೀರುಧಶ್ಚೈವ ಪಶವೋ ಮೃಗಪಕ್ಷಿಣಃ |
ಅನ್ನಾದ್ಯಭೂತಾ ಭೂತಾನಾಮಿತ್ಯಪಿ ಶ್ರೂಯತೇ ಶ್ರುತಿಃ ॥6॥

ಓಷಧಿಗಳು, ವೀರುಧಗಳು, ಪಶುಗಳು, ಮೃಗಪಕ್ಷಿಗಳು ಇವು ಪ್ರಾಣಿಗಳಿಗೆ ತಿನ್ನಲ್ಪಡುವ ಅನ್ನವಾಗಿದೆ ಎಂಬ ಶ್ರುತಿಯು ಕೇಳಿಬರುತ್ತದೆ.

ಆತ್ಮಮಾಂಸಪ್ರದಾನೇನ ಶಿಬಿರೌಶೀನರೋ ನೃಪಃ |
ಸ್ವರ್ಗಂ ಸುದುರ್ಗಮಂ ಪ್ರಾಪ್ತಃ ಕ್ಷಮಾವಾನ್ ದ್ವಿಜಸತ್ತಮ ॥7॥

ಎಲೈ ದ್ವಿಜಶ್ರೇಷ್ಠರೇ, ಕ್ಷಮಾಶೀಲನಾದ ಔಷೀನರನಾದ ಶಿಬಿಚಕ್ರವರ್ತಿಯು ತನ್ನ ಮಾಂಸವನ್ನು ದಾನಮಾಡುವುದರಿಂದ ದುರ್ಗಮವಾದ ಸ್ವರ್ಗವನ್ನು ಹೊಂದಿದನು.

ರಾಜ್ಞೋ ಮಹಾನಸೇ ಪೂರ್ವಂ ರಂತಿದೇವಸ್ಯ ವೈ ದ್ವಿಜ |
ದ್ವೇ ಸಹಸ್ರೇ ತು ವಧ್ಯೇತೇ ಪಶೂನಾಮನ್ವಹಂ ತದಾ ॥8॥

ಎಲೈ ಬ್ರಾಹ್ಮಣರೇ, ರಂತಿದೇವರಾಜನ ಅರಮನೆಯಲ್ಲಿ ಅಡಿಗೆಮನೆಯಲ್ಲಿ ನಿತ್ಯವೂ ಹಿಂದೆ ಎರಡು ಸಾವಿರ ಪಶುಗಳು ವಧಿಸಲ್ಪಡುತ್ತಿದ್ದವು.

ಸಮಾಂಸಂ ದದತೋ ಹ್ಯನ್ನಂ ರಂತಿದೇವಸ್ಯ ನಿತ್ಯಶಃ |
ಅತುಲಾ ಕೀರ್ತಿರಭವನ್ನೃಪಸ್ಯ ದ್ವಿಜಸತ್ತಮ ॥9॥

ಎಲೈ ದ್ವಿಜಶ್ರೇಷ್ಠರೇ, ನಿತ್ಯವೂ ಮಾಂಸಸಹಿತವಾದ ಅನ್ನವನ್ನು ದಾನ ಮಾಡುತ್ತಿದ್ದ ರಂತಿದೇವರಾಜನಿಗೆ ಅಪಾರವಾದ ಕೀರ್ತಿಯುಂಟಾಯಿತು.

ಚಾತುರ್ಮಾಸ್ಯೇ ಚ ಪಶವೋ ವಧ್ಯಂತ ಇತಿ ನಿತ್ಯಶಃ |
ಅಗ್ನಯೋ ಮಾಂಸಕಾಮಾಶ್ಚ ಇತ್ಯಪಿ ಶ್ರೂಯತೇ ಶ್ರುತಿಃ ॥10॥

ಚಾತುರ್ಮಾಸ್ಯಯಾಗದಲ್ಲಿ ಈ ರೀತಿ ಪಶುಗಳು ಯಾವಾಗಲೂ ವಧಿಸಲ್ಪಡುತ್ತವೆ. ಅಗ್ನಿಗಳು ಮಾಂಸಕಾಮವುಳ್ಳವರು ಎಂಬ ಶ್ರುತಿಯೂ ಕೇಳಿಬರುತ್ತದೆ.

ಯಜ್ಞೇಷು ಪಶವೋ ಬ್ರಹ್ಮನ್ ವಧ್ಯಂತೇ ಸತತಂ ದ್ವಿಜೈಃ |
ಸಂಸ್ಕೃತಾಃ ಕಿಲ ಮಂತ್ರೈಶ್ಚ ತೇಽಪಿ ಸ್ವರ್ಗಮವಾಪ್ನುವನ್ ॥11॥

ಎಲೈ ಬ್ರಾಹ್ಮಣರೇ, ಯಜ್ಞದಲ್ಲಿ ಸತತವಾಗಿ ದ್ವಿಜರಿಂದ ಪಶುಗಳು ವಧಿಸಲ್ಪಡುತ್ತವೆ. ಮಂತ್ರಗಳಿಂದ ಸಂಸ್ಕೃತವಾದ ಆ ಪಶುಗಳಿಗೂ ಸ್ವರ್ಗವುಂಟಾಗುತ್ತದೆ.

ಯದಿ ನೈವಾಗ್ನಯೋ ಬ್ರಹ್ಮನ್ಮಾಂಸಕಾಮಾಽಭವನ್ ಪುರಾ |
ಭಕ್ಷ್ಯಂ ನೈವಾಭವನ್ಮಾಂಸಂ ಕಸ್ಯಚಿದ್ ದ್ವಿಜಸತ್ತಮ |
ಅತ್ರಾಪಿ ವಿಧಿರುಕ್ತಶ್ಚ ಮುನಿಭಿರ್ಮಾಂಸಭಕ್ಷಣೇ ॥12॥

ಎಲೈ ಬ್ರಾಹ್ಮಣರೇ, ಹಿಂದೆ ಒಂದು ಪಕ್ಷ ಅಗ್ನಿಗಳಿಗೆ ಮಾಂಸದ ಆಸೆಯಿಲ್ಲದಿದ್ದರೆ ಮಾಂಸವು ಯಾರಿಗೂ ಭಕ್ಷ್ಯವಾಗುತ್ತಿರಲಿಲ್ಲ (ತಿನ್ನಲು ಯೋಗ್ಯವಾಗುತ್ತಿರಲಿಲ್ಲ). ಮಾಂಸಭಕ್ಷಣ ವಿಷಯದಲ್ಲಿಯೂ ಋಷಿಗಳು ವಿಧಾನವನ್ನು ತಿಳಿಸಿದ್ದಾರೆ.

ದೇವತಾನಾಂ ಪಿತೄಣಾಂ ಚ ಭುಂಕ್ತೇ ದತ್ತಶತ್ವಽಪಿ ಯಃ ಸದಾ -
ಯಥಾವಿಧಿ ಯಥಾಶ್ರದ್ಧಂ ನ ಪ್ರದುಷ್ಯತಿ ಭಕ್ಷಣಾತ್ ॥13॥
ಅಮಾಂಸಾಶೀ ಭವತ್ಯೇವಮಿತ್ಯಪಿ ಶ್ರೂಯತೇ ಶ್ರುತಿಃ ॥14॥

ಯಾವನು ದೇವತೆಗಳಿಗೂ, ಪಿತೃಗಳಿಗೂ ನಿವೇದಿಸಿ ವಿಧಿಗೆ ಅನುಗುಣವಾಗಿ ಮತ್ತು ತನ್ನ ಶ್ರದ್ಧೆಗೆ ಅನುಗುಣವಾಗಿ ಮಾಂಸಭಕ್ಷಣೆಯನ್ನು ಮಾಡುತ್ತಾನೆಯೋ ಅವನು ದೋಷಿಯಾಗುವುದಿಲ್ಲ. ಅವನು ಮಾಂಸಭಕ್ಷಣೆಯನ್ನು ಮಾಡದವನೇ ಆಗುತ್ತಾನೆ ಎಂದೂ ಶ್ರುತಿಯು ಕೇಳಿಬರುತ್ತದೆ.

ಭಾರ್ಯಾಂ ಗಚ್ಛನ್ ಬ್ರಹ್ಮಚಾರೀ ಋತೌ ಭವತಿ ಬ್ರಾಹ್ಮಣಃ |
ಸತ್ಯಾನೃತೇ ವಿನಿಶ್ಚಿತ್ಯ ಅತ್ರಾಪಿ ವಿಧಿರುಚ್ಯತೇ ॥15॥

ತನ್ನ ಪತ್ನಿಯಲ್ಲಿ ಋತುಗಾಮಿಯಾದ ಬ್ರಾಹ್ಮಣನು ಬ್ರಹ್ಮಚಾರಿಯೇ ಎಂದು ಹೇಳಲ್ಪಡುತ್ತಾನೆ. ಅದರಂತೆ ಮಾಂಸಭಕ್ಷಣ ವಿಷಯದಲ್ಲಿಯೂ ಸತ್ಯ ಮತ್ತು ಅನೃತಗಳನ್ನು ವಿವೇಚಿಸಿ (ವಿಧಿಪೂರ್ವಕವಾದುದು ಸತ್ಯ, ರಾಗಪೂರ್ವಕವಾದುದು ಅನೃತ) ವಿಧಾನವು ಹೇಳಲ್ಪಡುತ್ತದೆ.

ಸೌದಾಸೇನ ತದಾ ರಾಜ್ಞಾ ಮಾನುಷಾ ಭಕ್ಷಿತಾ ದ್ವಿಜ |

ಶಾಪಾಭಿಭೂತೇನ ಭೃಶಮತ್ರ ಕಿಂ ಪ್ರತಿಭಾತಿ ತೇ ॥16॥
ಹಿಂದೆ ಸೌದಾಸ ರಾಜನು ಶಾಪಕ್ಕೆ ಒಳಗಾಗಿ ಅನೇಕ ಮನುಷ್ಯರನ್ನು ಚೆನ್ನಾಗಿ ಭಕ್ಷಿಸಿದನು. ಈ ವಿಷಯದಲ್ಲಿ ನಿನಗೆ ಹೇಗೆನಿಸುತ್ತದೆ?
ಸ್ವಧರ್ಮ ಇತಿ ಕೃತ್ವಾ ತು ನ ತ್ಯಜಾಮಿ ದ್ವಿಜೋತ್ತಮ |
ಪುರಾಕೃತಮಿತಿ ಜ್ಞಾತ್ವಾ ಜೀವಾಮ್ಯೇತೇನ ಕರ್ಮಣಾ ॥17॥
ಎಲೈ ದ್ವಿಜೋತ್ತಮರೇ, ಇದು ನನ್ನ ಸ್ವಧರ್ಮ ಎಂದು ತಿಳಿದು ನಾನು ಇದನ್ನು ಬಿಡುತ್ತಿಲ್ಲ. ಇದು ನನ್ನ ಪೂರ್ವಕರ್ಮದ ದೋಷವೆಂದು ತಿಳಿದು ಈ ಕರ್ಮವನ್ನು ಮಾಡಿ ಜೀವಿಸುತ್ತಿದ್ದೇನೆ.
ಸ್ವಕರ್ಮ ತ್ಯಜತೋ ಬ್ರಹ್ಮನ್ನಧರ್ಮ ಇಹ ದೃಶ್ಯತೇ |
ಸ್ವಕರ್ಮನಿರತೋ ಯಸ್ತು ಧರ್ಮಃ ಸ ಇತಿ ನಿಶ್ಚಯಃ ॥18॥
ಎಲೈ ಬ್ರಾಹ್ಮಣರೇ, ಸ್ವಧರ್ಮವನ್ನು ತ್ಯಾಗಮಾಡಿದರೆ ಅದು ಇಲ್ಲಿ ಅಧರ್ಮವಾಗುತ್ತದೆ. ಯಾರು ಇಲ್ಲಿ ಸ್ವಕರ್ಮನಿರತರಾಗಿರುತ್ತಾರೆಯೋ ಅದು ಧರ್ಮವೇ ಎಂದು ನಿಶ್ಚಿತವಾದುದು.
ಪೂರ್ವಂ ಹಿ ವಿಹಿತಂ ಕರ್ಮ ದೇಹಿನಂ ನ ವಿಮುಂಚತಿ |
ಧಾತ್ರಾ ವಿಧಿರಯಂ ದೃಷ್ಟೋ ಬಹುಧಾ ಕರ್ಮನಿರ್ಣಯೇ ॥19॥
ಹಿಂದೆ ಮಾಡಿದ ಕರ್ಮವು ದೇಹಿಯನ್ನು ಬಿಡುವುದಿಲ್ಲ. ಕರ್ಮನಿರ್ಣಯದ ವಿಷಯದಲ್ಲಿ ಬ್ರಹ್ಮದೇವರು ಈ ವಿಧಾನವನ್ನು ಬಹಳವಾಗಿ ಕಂಡಿದ್ದಾರೆ.
ದ್ರಷ್ಟವ್ಯಾ ತು ಭವೇತ್ ಪ್ರಜ್ಞಾ ಕ್ರೂರೇ ಕರ್ಮಣಿ ವರ್ತತಾ |
ಕಥಂ ಕರ್ಮ ಶುಭಂ ಕುರ್ಯಾಂ ಕಥಂ ಮುಚ್ಯೇ ಪರಾಭವಾತ್ ॥20॥
ಕ್ರೂರಕರ್ಮವನ್ನು ಮಾಡುವವನು ತನ್ನ ಬುದ್ಧಿಯಿಂದ ಈ ಕರ್ಮವು ಹೇಗೆ ಶುಭಕರ್ಮವಾದೀತು. ಇದರಿಂದ ಉಂಟಾಗುವ ದೋಷದಿಂದ ನಾನು ಹೇಗೆ ಬಿಡುಗಡೆಯನ್ನು ಹೊಂದಿಯೇನು ಎಂದು ಯಾವಾಗಲೂ ಯೋಚಿಸಬೇಕು.
ಕರ್ಮಣಸ್ತಸ್ಯ ಘೋರಸ್ಯ ಬಹುಧಾ ನಿರ್ಣಯೋ ಭವೇತ್ |
ದಾನೇ ಚ ಸತ್ಯವಾಕ್ಯೇ ಚ ಗುರುಶುಶ್ರೂಷಣೇ ತಥಾ ॥21॥
ಆ ಘೋರಕರ್ಮಕ್ಕೆ ದಾನವನ್ನು ಮಾಡುವುದರಿಂದ, ಸತ್ಯವನ್ನು ನುಡಿಯುವುದರಿಂದ, ಗುರುಸೇವೆಯಿಂದ ಅನೇಕ ರೀತಿಯಲ್ಲಿ ಸತ್ಕರ್ಮವೆಂಬ ನಿರ್ಣಯವು ಉಂಟಾದೀತು.
ದ್ವಿಜಾತಿಪೂಜನೇ ಚಾಹಂ ಧರ್ಮೇ ಚ ನಿರತಃ ಸದಾ |
ಅಭಿಮಾನಾತಿವಾದಾಭ್ಯಾಂ ನಿವೃತ್ತೋಽಸ್ಮಿ ದ್ವಿಜೋತ್ತಮ |
ಕೃಷಿಂ ಸಾಧ್ವಿತಿ ಮನ್ಯಂತೇ ತತ್ರ ಹಿಂಸಾ ಪರಾ ಸ್ಮೃತಾ ॥22॥
ನಾನು ಯಾವಾಗಲೂ ದ್ವಿಜರ ಪೂಜೆಯಲ್ಲೂ ಮತ್ತು ಧರ್ಮಾಚರಣೆಯಲ್ಲಿಯೂ ನಿರತನಾಗಿದ್ದೇನೆ. ಎಲೈ ದ್ವಿಜೋತ್ತಮರೇ, ಅಹಂಕಾರವನ್ನೂ ಮತ್ತು ಆತ್ಮಪ್ರಶಂಸೆಯನ್ನೂ ಸರ್ವಥಾ ತ್ಯಜಿಸಿದ್ದೇನೆ. ಕೃಷಿಯನ್ನು ಸತ್ಕರ್ಮವೆಂದು ತಿಳಿಯುತ್ತಾರೆ. ಅಲ್ಲಿಯೂ ಬಹಳವಾದ ಹಿಂಸೆ ಇದೆ.
ಕರ್ಷಂತೋ ಲಾಂಗಲೈಃ ಪುಂಸೋ ಘ್ನಂತಿ ಭೂಮಿಶಯಾನ್ ಬಹೂನ್ |
ಜೀವಾನನ್ಯಾಂಶ್ಚ ಬಹುಶಸ್ತತ್ರ ಕಿಂ ಪ್ರತಿಭಾತಿ ತೇ ॥23॥
ನೇಗಿಲಿನಿಂದ ಉಳುತ್ತಾ ಭೂಮಿಯಲ್ಲಿರುವ ಅನೇಕ ಜಂತುಗಳನ್ನು ಮತ್ತು ವ್ಯವಸಾಯವನ್ನು ಮಾಡುತ್ತಾ ಇನ್ನೂ ಅನೇಕ ಜೀವರನ್ನು ಬಹಳವಾಗಿ ಕೊಲ್ಲುತ್ತಾರೆ. ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಧಾನ್ಯಬೀಜಾನಿ ಯಾನ್ಯಾಹುರ್ವ್ರೀಹ್ಯಾದೀನಿ ದ್ವಿಜೋತ್ತಮ |
ಸರ್ವಾಣ್ಯೇತಾನಿ ಬೀಜಾನಿ ತತ್ರ ಕಿಂ ಪ್ರತಿಭಾತಿ ತೇ ॥24॥
ಎಲೈ ದ್ವಿಜೋತ್ತಮರೇ, ವ್ರೀಹಿ ಮೊದಲಾದ ಯಾವ ಧಾನ್ಯ ಬೀಜಗಳಿದೆಯೋ ಅವೆಲ್ಲವೂ ಅಂಕುರಕ್ಕೆ ಕಾರಣವಾದ ಬೀಜಗಳು. ಆ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಅಧ್ಯಾಕ್ರಮ್ಯ ಪಶೂಂಶ್ಚಾಪಿ ಘ್ನಂತಿ ವೈ ಭಕ್ಷಯಂತಿ ಚ |
ವೃಕ್ಷಾಂಸ್ತಥೌಷಧೀಶ್ಚಾಪಿ ಛಿಂದಂತಿ ಪುರುಷಾ ದ್ವಿಜ ॥25॥
ಪಶುಗಳನ್ನು ಮೆಟ್ಟಿನಿಂತು ಅವುಗಳನ್ನು ಕೊಂದು ತಿನ್ನುತ್ತಾರೆ. ಎಲೈ ಬ್ರಾಹ್ಮಣರೇ, ಮನುಷ್ಯರು ವೃಕ್ಷಗಳನ್ನು ಮತ್ತು ಓಷಧಿಗಳನ್ನು ಕಡಿಯುತ್ತಾರೆ.
ಜೀವಾ ಹಿ ಬಹವೋ ಬ್ರಹ್ಮನ್ ವೃಕ್ಷೇಷು ಚ ಫಲೇಷು ಚ |
ಉದಕೇ ಬಹವಶ್ಚಾಪಿ ತತ್ರ ಕಿಂ ಪ್ರತಿಭಾತಿ ತೇ ॥26॥
ಎಲೈ ಬ್ರಾಹ್ಮಣರೇ, ವೃಕ್ಷಗಳಲ್ಲಿಯೂ ಮತ್ತು ಫಲಗಳಲ್ಲಿಯೂ ಅನೇಕ ಜೀವಗಳಿವೆ. ಜಲದಲ್ಲಿಯೂ ಅನೇಕ ಜೀವಗಳಿವೆ. ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಸರ್ವಂ ವ್ಯಾಪ್ತಮಿದಂ ಬ್ರಹ್ಮನ್ ಪ್ರಾಣಿಭಿಃ ಪ್ರಾಣಿಜೀವನೈಃ |
ಮತ್ಸ್ಯಾನ್ ಗ್ರಸಂತೇ ಮತ್ಸ್ಯಾಶ್ಚ ತತ್ರ ಕಿಂ ಪ್ರತಿಭಾತಿ ತೇ ॥27॥
ಎಲೈ ಬ್ರಾಹ್ಮಣರೇ, ಈ ಜಗತ್ತೆಲ್ಲವೂ ಪ್ರಾಣಿಗಳನ್ನು ತಿನ್ನುವ ಪ್ರಾಣಿಗಳಿಂದ ತುಂಬಿಹೋಗಿದೆ. ಮೀನುಗಳೇ ಮೀನುಗಳನ್ನು ನುಂಗುತ್ತವೆ. ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಸತ್ತ್ವೈಃ ಸತತತ್ವನಿ ಜೀವಂತಿ ಬಹುಧಾ ದ್ವಿಜಸತ್ತಮ |
ಪ್ರಾಣಿನೋಽನ್ಯೋನ್ಯಭಕ್ಷಾಶ್ಚ ತತ್ರ ಕಿಂ ಪ್ರತಿಭಾತಿ ತೇ ॥28॥

ಎಲೈ ದ್ವಿಜಶ್ರೇಷ್ಠರೇ, ಒಂದು ಪ್ರಾಣಿಯ ದೇಹವನ್ನು ಇನ್ನೊಂದು ಪ್ರಾಣಿಯು ತಿಂದು ಬಹುವಿಧವಾಗಿ ಜೀವಿಸುತ್ತದೆ. ಪ್ರಾಣಿಗಳು ಪರಸ್ಪರ ಭಕ್ಷಗಳಾಗಿವೆ. ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಚಂಕ್ರಮ್ಯಮಾಣಾ ಜೀವಾಂಶ್ಚ ಧರಣೀಸಂಶ್ರಿತಾನ್ ಬಹೂನ್ |
ಪದ್ಭ್ಯಾಂ ಘ್ನಂತಿ ನರಾ ವಿಪ್ರ ತತ್ರ ಕಿಂ ಪ್ರತಿಭಾತಿ ತೇ ॥29॥
ಮನುಷ್ಯರು ಒಂದು ಕಡೆಯಿಂದ ಇನ್ನೊಂದು ಕಡೆಗೆ ಓಡಾಡುತ್ತಾ ತಮ್ಮ ಪಾದಗಳಿಂದ ಭೂಮಿಯನ್ನು ಆಶ್ರಯಿಸಿರುವ ಅನೇಕ ಜೀವರನ್ನು ಕೊಲ್ಲುತ್ತಾರೆ. ಎಲೈ ಬ್ರಾಹ್ಮಣರೇ, ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಉಪವಿಷ್ಟಾಃ ಶಯಾನಾಶ್ಚ ಘ್ನಂತಿ ಜೀವಾನನೇಕಶಃ |
ಜ್ಞಾನವಿಜ್ಞಾನವಂತಶ್ಚ ತತ್ರ ಕಿಂ ಪ್ರತಿಭಾತಿ ತೇ ॥29.1॥
ಕುಳಿತಿರುವಾಗ ಮಲಗಿರುವಾಗ ಜ್ಞಾನವಿಜ್ಞಾನವಂತರೂ ಸಹ ಅನೇಕ ಜೀವರನ್ನು ಕೊಲ್ಲುತ್ತಾರೆ. ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಜೀವೈರ್ಗ್ರಸ್ತಮಿದಂ ಸರ್ವಮಾಕಾಶಂ ಪೃಥಿವೀ ತಥಾ |
ಅವಿಜ್ಞಾನಾಚ್ಚ ಹಿಂಸಂತಿ ತತ್ರ ಕಿಂ ಪ್ರತಿಭಾತಿ ತೇ ॥30॥
ಭೂಮಿ ಮತ್ತು ಆಕಾಶವೆಲ್ಲವೂ ಜೀವರಿಂದ ತುಂಬಿಹೋಗಿದೆ. ಅಜ್ಞಾನದಿಂದಲೂ ಅವುಗಳನ್ನು ಹಿಂಸಿಸುತ್ತಾರೆ. ಈ ವಿಷಯದಲ್ಲಿ ನಿಮಗೆ ಏನೆನಿಸುತ್ತದೆ?
ಅಹಿಂಸೇತಿ ಯದುಕ್ತಂ ಹಿ ಪುರುಷೈರ್ವಿಸ್ಮಿತೈಃ ಪುರಾ |
ಕೇ ನ ಹಿಂಸಂತಿ ಜೀವಾನ್ ವೈ ಲೋಕೇಽಸ್ಮಿನ್ ದ್ವಿಜಸತ್ತಮ ॥31॥
ಬಹು ಸಂಚಿತ್ಯ ಇತಿ ವೈ ನಾಸ್ತಿ ಕಶ್ಚಿದಹಿಂಸಕಃ ॥32॥
ತತ್ತ್ವವಿಸ್ಮಿತಿವುಳ್ಳ ಪುರುಷರು ಮಾತ್ರ ಹಿಂದೆ ಅಹಿಂಸೆ ಎಂದು ಹೇಳುತ್ತಿದ್ದರು. ಎಲೈ ಬ್ರಾಹ್ಮಣಶ್ರೇಷ್ಠರೇ, ಈ ಲೋಕದಲ್ಲಿ ಯಾರು ಜೀವ ಹಿಂಸೆಯನ್ನು ಮಾಡುವುದಿಲ್ಲ? ಹೀಗೆ ಬಹಳವಾಗಿ ಯೋಚನೆ ಮಾಡಿದರೆ ಅಹಿಂಸಕರು ಯಾರೂ ಇಲ್ಲವೆಂದು ತಿಳಿಯುತ್ತದೆ.
ಅಹಿಂಸಾಯಾಂ ತು ನಿರತಾ ಯತಯೋ ದ್ವಿಜಸತ್ತಮ |
ಕುರ್ವಂತ್ಯೇವ ಹಿ ಹಿಂಸಾಂ ತೇ ಯತ್ನಾದಲ್ಪತರಾ ಭವೇತ್ ॥33॥
ಎಲೈ ಬ್ರಾಹ್ಮಣಶ್ರೇಷ್ಠರೇ, ಅಹಿಂಸೆಯಲ್ಲಿ ನಿರತರಾದ ಯತಿಗಳೂ ಕೂಡ ಹಿಂಸೆಯನ್ನು ಮಾಡಿಯೇ ಮಾಡುತ್ತಾರೆ. ಆದರೆ ಅವರ ಪ್ರಯತ್ನದಿಂದ ಅದು ಅಲ್ಪವಾಗಿರಬಹುದು.
ಆಲಕ್ಷ್ಯಾಶ್ಚೈವ ಪುರುಷಾಃ ಕುಲೇ ಜಾತಾ ಮಹಾಗುಣಾಃ |
ಮಹಾಘೋರಾಣಿ ಕರ್ಮಾಣಿ ಕೃತ್ವಾ ಲಜ್ಜಂತಿ ವೈ ದ್ವಿಜ ॥34॥
ಎಲೈ ಬ್ರಾಹ್ಮಣರೇ, ದೊಡ್ಡ ಕುಲದಲ್ಲಿ ಜನಿಸಿದ ಮಹಾಗುಣವುಳ್ಳ ಎಲ್ಲರೂ ಗಮನಿಸುವ ಪುರುಷರೂ ಸಹ ಮಹಾಘೋರವಾದ ಕರ್ಮವನ್ನು ಮಾಡಿ ನಾಚಿಕೆ ಪಡುತ್ತಾರೆ.
ಸುಹೃದಃ ಸುಹೃದೋಽನ್ಯೇ ಚ ಸುಹೃದಶ್ಚಾಪಿ ದುರ್ಹೃದಃ |
ಸಮ್ಯಕ್ಪ್ರವೃತ್ತಾನ್ ಪುರುಷಾನ್ ನ ಸಮ್ಯಗನುಪಶ್ಯತಿ ॥35॥
ಸುಹೃದಯವುಳ್ಳವರು (ವಿಶ್ವಾಸವುಳ್ಳವರು) ಸುಹೃದರನ್ನೂ, ಹಾಗೆಯೇ ದುರ್ಹೃದ ಉಳ್ಳವರು ಸುಹೃದಯರನ್ನೂ ಅವರು ಚೆನ್ನಾಗಿ ಪ್ರವೃತ್ತರಾದರೂ ಸಹ ಆ ಪುರುಷರನ್ನು ಸರಿಯಾಗಿ ನೋಡುವುದಿಲ್ಲ.
ಸುಸಮೃದ್ಧೈರ್ನ ನ ನಂದಂತಿ ಬಾಂಧವಾ ಬಾಂಧವೈರಪಿ |
ಗೂರೂಂಶ್ಚೈವ ವಿನಿಂದಂತಿ ಮೂಢಾಃ ನಿಶ್ಚಿತಮಾನಿನಃ ॥36॥
ಬಾಂಧವರ ಸಮೃದ್ಧಿಯನ್ನು ನೋಡಿ ಬಾಂಧವರೇ ಸಹಿಸುವುದಿಲ್ಲ. ಮೂಢರೂ ಮತ್ತು ಪಂಡಿತಮಾನಿಗಳೂ ಗುರುಗಳನ್ನೂ ನಿಂದಿಸುತ್ತಾರೆ.
ಬಹು ಲೋಕೇ ವಿಪರ್ಯಸ್ತಂ ದೃಶ್ಯತೇ ದ್ವಿಜಸತ್ತಮ |
ಧರ್ಮಯುಕ್ತಮಧರ್ಮಂ ಚ ತತ್ರ ಕಿಂ ಪ್ರತಿಭಾತಿ ತೇ ॥37॥
ಎಲೈ ದ್ವಿಜಶ್ರೇಷ್ಠರೇ, ಲೋಕದಲ್ಲಿ ಹೀಗೆ ತಲೆಕೆಳಗಾಗಿರುವುದು ಬಹಳವಾಗಿ ಕಾಣುತ್ತದೆ. ಅಧರ್ಮವು ಧರ್ಮಯುಕ್ತವಾಗಿ ಕಾಣುತ್ತದೆ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?
ವಕ್ತುಂ ಬಹುವಿಧಂ ಶಕ್ಯಂ ಧರ್ಮಾಧರ್ಮೇಷು ಕರ್ಮಸು |
ಸ್ವಕರ್ಮನಿರತೋ ಯೋ ಹಿ ಸ ಯಶಃ ಪ್ರಾಪ್ನುಯಾನ್ಮಹತ್ ॥38॥
ಧರ್ಮಾಧರ್ಮ ಕಾರ್ಯಗಳ ವಿಷಯದಲ್ಲಿ ಬೇಕಾದಷ್ಟು ಮಾತನಾಡಬಹುದು. ಯಾರು ಸ್ವಕರ್ಮನಿರತನಾಗಿರುತ್ತಾನೆಯೋ ಅವನು ಮಹಾಕೀರ್ತಿಯನ್ನು ಪಡೆಯುತ್ತಾನೆ (ಎಂಬುದು ಸಾರಾಂಶ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪತಿವ್ರತೋಪಾಖ್ಯಾನೇ ಬ್ರಾಹ್ಮಣವ್ಯಾಧಸಂವಾದೇ ಪತಿವ್ರತಾಮಾಹಾತ್ಮ್ಯೇ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ತಾರನೆಯ ಅಧ್ಯಾಯ

ಧರ್ಮವ್ಯಾಧನ ಉಪದೇಶ. ಪುರುಷಪ್ರಯತ್ನವನ್ನು ನಿಂದಿಸಿ
ದೈವಸಂಕಲ್ಪದ ಪ್ರಶಂಸೆ.
ಮಾರ್ಕಂಡೇಯಃ
ಧರ್ಮವ್ಯಾಧಸ್ತು ನಿಪುಣಂ ಪುನರೇವ ಯುಧಿಷ್ಠಿರ |
ವಿಪ್ರರ್ಷಭಮುವಾಚೇದಂ ಸರ್ವಧರ್ಮಭೃತಾಂ ವರ ॥1॥
ಮಾರ್ಕಂಡೇಯ ಎಲೈ ಸರ್ವಧರ್ಮಿಷ್ಠರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ, ಧರ್ಮವ್ಯಾಧನು ಪುನಃ ಆ ಬ್ರಾಹ್ಮಣಶ್ರೇಷ್ಠನನ್ನು ಕುರಿತು ನಿಪುಣತೆಯಿಂದ ಹೀಗೆ ಮಾತನಾಡಿದನು.
ಶ್ರುತಿಪ್ರಮಾಣೋ ಧರ್ಮೋಽಯಮಿತಿ ವೃದ್ಧಾನುಶಾಸನಮ್ |
ಸೂಕ್ಷ್ಮಾ ಗತಿರ್ಹಿ ಧರ್ಮಸ್ಯ ಬಹುಶಾಖಾ ಹ್ಯನಂತಿಕಾ |
ಪ್ರಾಣಾಂತಿಕೇ ವಿವಾಹೇ ಚ ವಕ್ತವ್ಯಮನೃತಂ ಭವೇತ್ ॥2॥
ಶ್ರುತಿಪ್ರಮಾಣದಿಂದ ತಿಳಿದುಬರುವುದು ಧರ್ಮವೆಂದು ವೃದ್ಧರ ಅನುಶಾಸನ. ಧರ್ಮದ ಗತಿಯು ಬಹಳ ಸೂಕ್ಷ್ಮವಾದುದು. ಅನೇಕ ಪ್ರಕಾರಗಳುಳ್ಳದ್ದು ಮತ್ತು ಅನಂತವಾದುದು. ಪ್ರಾಣಾಪಾಯದ ಸಮಯದಲ್ಲಿ ಮತ್ತು ವಿವಾಹ ಸಮಯದಲ್ಲಿ ಅನೃತವನ್ನೂ ಹೇಳಬೇಕಾದೀತು.
ಅನೃತೇನ ಭವೇತ್ ಸತ್ಯಂ ಸತ್ಯೇನೈವಾನೃತಂ ಭವೇತ್ |
ಯದ್ ಭೂತಹಿತಮತ್ಯಂತಂ ತತ್ ಸತ್ಯಮಿತಿ ಧಾರಣಾ ॥3॥
ವಿಪರ್ಯಯಕೃತೋಽಧರ್ಮಃ ಪಶ್ಯ ಧರ್ಮಸ್ಯ ಸೂಕ್ಷ್ಮತಾಮ್ ॥4॥
ಅನೃತದಿಂದ ಸತ್ಯವುಂಟಾಗುತ್ತದೆ. ಸತ್ಯದಿಂದ ಅನೃತವೂ ಉಂಟಾದೀತು. ಯಾವುದು ಬಹಳ ಜನರಿಗೆ ಅತ್ಯಂತ ಹಿತವಾದುದೋ ಅದು ಸತ್ಯವೆಂಬುದು ನಿಶ್ಚಿತವಾದುದು. ಯಾವುದು ಬಹುಜನರಿಗೆ ಹಿತವಲ್ಲವೋ ಅದು ಸತ್ಯವಚನವಾದರೂ ಅಧರ್ಮವಾಗುತ್ತದೆ. ಧರ್ಮದ ಸೂಕ್ಷ್ಮತೆಯನ್ನು ಗಮನಿಸಿ.
ಯತ್ ಕರೋತ್ಯಶುಭಂ ಕರ್ಮ ಶುಭಂ ವಾ ಯದಿ ಸತ್ತಮ |
ಅವಶ್ಯಂ ತತ್ ಸಮಾಪ್ನೋತಿ ಪುರುಷೋ ನಾತ್ರ ಸಂಶಯಃ ॥5॥
ಎಲೈ ಸಜ್ಜನರಲ್ಲಿ ಶ್ರೇಷ್ಠರಾದವರೇ, ಪುರುಷನು ಯಾವ ಶುಭಕರ್ಮವನ್ನಾಗಲೀ, ಅಶುಭಕರ್ಮವನ್ನಾಗಲೀ ಮಾಡುತ್ತಾನೆಯೋ ಅದರ ಫಲವನ್ನು ಅವಶ್ಯವಾಗಿ ಪಡೆಯುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.
ವಿಷಮಾಂ ಚ ದಶಾಂ ಪ್ರಾಪ್ತೋ ದೇವಾನ್ ಗರ್ಹತಿ ವೈ ಭೃಶಮ್ |
ಆತ್ಮನಃ ಕರ್ಮದೋಷಾಣಿ ನ ವಿಜಾನಾತ್ಯಪಂಡಿತಃ |
ಮೂಢೋ ನೈಕೃತಿಕಶ್ಚಾಪಿ ಚಪಲಶ್ಚ ದ್ವಿಜೋತ್ತಮ ॥6॥
ನ ಶುಭಂ ಕರ್ಮ ಬಧ್ನಾತಿ ಪುರುಷಂ ಪಾಪನಿಶ್ಚಯಮ್ ॥7॥
ಸುಖದುಃಖವಿಪರ್ಯಾಸೋ ಯದಾ ಸಮುಪಪದ್ಯತೇ |
ನೈನಂ ಪ್ರಜ್ಞಾ ಸುನೀತಂ ವಾ ತ್ರಾಯತೇ ನೈವ ಪೌರುಷಮ್ ॥8॥
ದುಃಸ್ಥಿತಿಗೆ ಒಳಗಾದ ಅಪಂಡಿತನು ಬಹಳವಾಗಿ ದೇವತೆಗಳನ್ನು ನಿಂದಿಸುತ್ತಾನೆ. ಅವನು ತನ್ನ ಕರ್ಮದೋಷಗಳನ್ನು ತಿಳಿಯುವುದಿಲ್ಲ. ಸುಖದುಃಖದ ವಿಪರ್ಯಾಸವು (ಸುಖಸಾಧನಕ್ಕೆ ದುಃಖಫಲದಲ್ಲಿ ಪರ್ಯವಸಾನವು) ಯಾವಾಗ ಉಂಟಾಗುತ್ತದೆಯೋ ಆಗ ಮನುಷ್ಯನನ್ನು ಅವನ ಪ್ರಜ್ಞೆಯಾಗಲೀ, ಅವನ ವಿದ್ಯೆಯಾಗಲೀ, ಅವನ ಪೌರುಷವಾಗಲೀ ರಕ್ಷಿಸುವುದಿಲ್ಲ.

ಯೋಽಯಮಿಚ್ಛೇದ್ ಯಥಾಕಾಮಂ ತಂ ತಂ ಕಾಮಂ ಸ ಆಪ್ನುಯಾತ್
ಯದಿ ಸ್ಯಾದಪರಾಧೀನಂ ಪೌರುಷೇಯಸ್ಯ ಕ್ರಿಯಾಫಲಮ್ ॥9॥
ಪುರುಷ ಪ್ರಯತ್ನದಿಂದ ಮಾಡಿದ ಕ್ರಿಯೆಯ ಫಲವು ಪರಾಧೀನವಲ್ಲದಿದ್ದರೆ ಪುರುಷನು ಯಾವ ಯಾವ ಕಾಮವನ್ನು ಇಚ್ಛಿಸುತ್ತಿದ್ದನೋ ಅವೆಲ್ಲವನ್ನೂ ಪಡೆಯಬೇಕಾಗಿದ್ದಿತು.
ಸಂಯತಾಶ್ಚಾಪಿ ದಕ್ಷಾಶ್ಚ ಮತಿಮಂತಶ್ಚ ಮಾನವಾಃ |
ದೃಶ್ಯಂತೇ-ನಿಷ್ಕ(ಷ್ಫ)ಲಾಃ ಸಂತಃ ಪ್ರಹೀಣಾಃ ಸರ್ವಕರ್ಮಭಿಃ ॥10॥
ಸಂಯಮದಿಂದ ಕೂಡಿದ ದಕ್ಷರಾದ ಮೇಧಾವಿಗಳಾದ ಮಾನವರು ಸರ್ವಕರ್ಮಗಳನ್ನು ಮಾಡಿದರೂ ಅವು ನಿಷ್ಫಲವಾಗಿ ಅವರು ದುಃಸ್ಥಿತಿಯಲ್ಲಿರುವುದು ಕಂಡುಬರುತ್ತದೆ.
ಭೂತಾನಾಮಪರಃ ಕಶ್ಚಿದ್ಧಿಂಸಾಯಾಂ ಸತತೋತ್ಥಿತಃ |
ವಂಚನಾಯಾಂ ಚ ಲೋಕಸ್ಯ ಸ ಸುಖೇನೈವ ಯುಜ್ಯತೇ ॥11॥
ಮಾನವರಲ್ಲಿ ಇನ್ನೊಬ್ಬನು ಸತತವಾಗಿ ಹಿಂಸೆಯಲ್ಲಿಯೂ, ಜನರ ವಂಚನೆಯಲ್ಲಿಯೂ ಉದ್ಯುಕ್ತನಾದರೂ ಅವನಿಗೆ ಸುಖವೇ ಉಂಟಾಗುತ್ತದೆ.
ಅಚೇಷ್ಟಮಪಿ ಚಾಸೀನಂ ಶ್ರೀಃ ಕಂಚಿದುಪತಿಷ್ಠತಿ |
ಕಶ್ಚಿತ್ ಕರ್ಮಾಣಿ ಕುರ್ವನ್ ಹಿ ನ ಪ್ರಾಪ್ಯಮಧಿಗಚ್ಛತಿ ॥12॥
ಯಾವ ಕ್ರಿಯೆಯನ್ನೂ ಮಾಡದೆ ಸುಮ್ಮನೆ ಕುಳಿತಿರುವವನನ್ನು ಸಂಪತ್ತು ಬಂದು ಸೇರುತ್ತದೆ. ಇನ್ನೊಬ್ಬನು ಎಲ್ಲ ಕರ್ಮಗಳನ್ನು ಮಾಡಿದರೂ ಅವನಿಗೆ ಕರ್ಮದ ಫಲವು ಈಡೇರುವುದಿಲ್ಲ.
ದೇವಾನಿಷ್ಟ್ವಾ ತಪಸ್ತಪ್ತ್ವಾ ಕೃಪಣೈಃ ಪುತ್ರಗೃಧ್ನುಭಿಃ |

ದಶಮಾಸಧೃತಾ ಗರ್ಭೇ ಜಾಯಂತೇ ಕುಲಪಾಂಸನಾಃ ॥13॥
ದೇವತೆಗಳನ್ನು ಪೂಜೆ ಮಾಡಿ, ತಪಸ್ಸನ್ನು ಮಾಡಿ, ಲೋಭಿಗಳಾಗಿ ದೇವತಾ ಭಕ್ತಿಯಿಲ್ಲದೆ ಕೇವಲ ಪುತ್ರಕಾಮಿಗಳಾದವರು ಹತ್ತುತಿಂಗಳು ಧರಿಸಿದ ಗರ್ಭದಿಂದ ಕುಲನಾಶಕರು ಜನಿಸುತ್ತಾರೆ.
ಅಪರೇ ಧನಧಾನ್ಯೈಶ್ಚ ಭೋಗೈಶ್ಚ ಪಿತೃಸಂಚಿತೈಃ |
ವಿಪುಲೈರಭಿಜಾಯಂತೇ ಲಬ್ಧಾಸ್ತೈರೇವ ಮಂಗಲೈಃ ॥14॥
ಇನ್ನು ಕೆಲವರು ದೇವತಾ ಭಕ್ತಿಯಿಂದ ತಂದೆ ತಾಯಿಗಳು ಮಾಡಿದ ಮಂಗಳಕಾರ್ಯದಿಂದ ಅದರ ಪುಣ್ಯಫಲದಿಂದ ಉಂಟಾದ ಧನಧಾನ್ಯಗಳಿಂದಲೂ, ವಿಪುಲವಾದ ಭೋಗಗಳಿಂದ ಹತ್ತು ತಿಂಗಳ ಗರ್ಭದಿಂದ ಜನಿಸುತ್ತಾರೆ.
ನ ದೇಹಜಾ ಮನುಷ್ಯಾಣಾಂ ವ್ಯಾಧಯೋ ದ್ವಿಜಸತ್ತಮ |
ಕರ್ಮಜಾ ಹಿ ಮನುಷ್ಯಾಣಾಂ ರೋಗಾ ನಾಸ್ತ್ಯತ್ರ ಸಂಶಯಃ ॥15॥
ಎಲೈ ದ್ವಿಜಶ್ರೇಷ್ಠನೇ, ಮನುಷ್ಯರಿಗೆ ವ್ಯಾಧಿಗಳು ಕೇವಲ ದೇಹದಿಂದ ಉಂಟಾಗುವುದಿಲ್ಲ. ಮನುಷ್ಯರಿಗೆ ರೋಗಗಳು ಕರ್ಮದಿಂದ ಉಂಟಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ.
ಆಧಿಭಿಶ್ಚೈವ ಬಾಧ್ಯಂತೇ ವ್ಯಾಧೈಃ ಕ್ಷುದ್ರಮೃಗಾ ಇವ |
ತೇ ಚಾಪಿ ಕುಶಲೈರ್ವೈದ್ಯೈರ್ನಿಪುಣೈಃ ಸಂಭೃತೌಷಧೈಃ |
ವ್ಯಾಧಯೋ ವಿನಿವಾರ್ಯಂತೇ ಮೃಗಾ ವ್ಯಾಧೈರಿವ ದ್ವಿಜ ॥16॥
ಮನುಷ್ಯರು ವ್ಯಾಧರಿಂದ ಕ್ಷುದ್ರಮೃಗಗಳು ಬಾಧಿಸಲ್ಪಡುವಂತೆ ಮನೋರೋಗದಿಂದಲೂ, ದೇಹರೋಗದಿಂದಲೂ ಬಾಧಿತರಾಗುತ್ತಾರೆ. ಎಲೈ ಬ್ರಾಹ್ಮಣರೇ, ಆ ರೋಗಗಳೂ ಕೂಡ ನಿಪುಣರಾದ, ಕುಶಲರಾದ ಒಳ್ಳೆಯ ಔಷಧಿಯನ್ನು ಹೊಂದಿದ ವೈದ್ಯರಿಂದ ವ್ಯಾಧರಿಂದ ಮೃಗಗಳು ನಿವಾರಿಸಲ್ಪಡುವಂತೆ ನಿವಾರಿಸಲ್ಪಡುತ್ತವೆ (ಭೋಕ್ತವ್ಯವಾದ ಪ್ರಾರಬ್ಧಕರ್ಮವೂ ಸಹ ಕುಶಲಕರ್ಮದಿಂದ ನಿವಾರಿಸಲ್ಪಡುತ್ತದೆ).
ಯೇಷಾಮಸ್ತಿ ಚ ಭೋಕ್ತವ್ಯಂ ಗ್ರಹಣೀರೋಗಪೀಡಿತಾಃ |
ನ ಶಕ್ನುವಂತಿ ತೇ ಭೋಕ್ತುಂ ಚೇಷ್ಟಿತುಂ ಪೂರ್ವಕರ್ಮಣಾ ॥17॥
ಯಾರಿಗೆ ಭೋಕ್ತವ್ಯವಾದ ಪ್ರಾರಬ್ಧಕರ್ಮವಿರುತ್ತದೆಯೋ ಅವರು ಸಂಗ್ರಹಣೀ ರೋಗಪೀಡಿತರಾಗುತ್ತಾರೆ. ತಾವು ಮಾಡಿದ ಪೂರ್ವಕರ್ಮಗಳಿಂದಾಗಿ ಅವರಿಗೆ ಭೋಜನ ಮಾಡುವುದಕ್ಕಾಗಲೀ ಅಥವಾ ಕಾರ್ಯವನ್ನು ಮಾಡುವುದಕ್ಕಾಗಲೀ ಸಾಧ್ಯವಾಗುವುದಿಲ್ಲ.
ಅಪರೇ ಬಾಹುಬಲಿನಃ ಕ್ಲಿಶ್ಯಂತೇ ಬಹವೋ ಜನಾಃ |
ದುಃಖೇನ ಚಾಧಿಗಚ್ಛಂತಿ ಭೋಜನಂ ದ್ವಿಜಸತ್ತಮ ॥18॥
ಇನ್ನು ಬಾಹುಬಲವುಳ್ಳ ಅನೇಕ ಜನರು ಕ್ಲೇಶವನ್ನು ಅನುಭವಿಸುತ್ತಾರೆ. ಎಲೈ ದ್ವಿಜಶ್ರೇಷ್ಠರೇ, ಅವರು ಬಹಳ ಕಷ್ಟದಿಂದ ಭೋಜನವನ್ನು ಪಡೆಯುತ್ತಾರೆ.
ಇತಿ ಲೋಕಮನಾಕ್ರಂದಂ ದೇಹಶಂಕಾಪರಿಪ್ಲುತಮ್ |
ಸ್ರೋತಸಾऽಸಕೃದಾಕ್ಷಿಪ್ತಂ ಹ್ರಿಯಮಾಣಂ ಬಲೀಯಸಾ ॥19॥
ಹೀಗೆ ಜನರು ದೇಹರೋಗದಿಂದ ಪೂರ್ಣವಾಗಿ ಪೀಡಿತರಾಗಿ ಅಳುವುದಕ್ಕೂ ಶಕ್ತಿಯಿಲ್ಲದೆ ಬಲವಾದ ಕರ್ಮಪ್ರವಾಹದಿಂದ ಎಳೆದೊಯ್ಯಲ್ಪಡುತ್ತಾರೆ.
ನ ಮ್ರಿಯೇಯುರ್ನ ಜೀರ್ಯೇಯುಃ ಸರ್ವೇ ಸ್ಯುಃ ಸ(ಸಾ)ರ್ವಕಾಮಿಕಾಃ |
ನಾಪ್ರಿಯಂ ಪ್ರತಿಪಶ್ಯೇಯುರ್ವಶಿತ್ವಂ ಯದಿ ವೈ ಭವೇತ್ ॥20॥
ಮನುಷ್ಯರಿಗೆ ಸ್ವಾತಂತ್ರ್ಯವಿದ್ದಿದ್ದರೆ ಅವರಿಗೆ ಮರಣವಾಗಲೀ, ಮುಪ್ಪಾಗಲೀ ಉಂಟಾಗುತ್ತಿರಲಿಲ್ಲ. ಎಲ್ಲರಿಗೂ ಎಲ್ಲ ಕಾಮ್ಯಪದಾರ್ಥಗಳೂ ದೊರೆಯುತ್ತಿದ್ದವು. ಯಾರೂ ತಮಗೆ ಅಪ್ರಿಯವಾದುದನ್ನು ಕಾಣುತ್ತಿರಲಿಲ್ಲ.
ಉಪರ್ಯುಪರಿ ಲೋಕಸ್ಯ ಸರ್ವೋ ಗಂತುಂ ಸಮೀಹತೇ |
ಯತತೇ ಚ ಯಥಾಶಕ್ತಿ ನ ಚ ತದ್ವರ್ತತೇ ತಥಾ ॥21॥
ಎಲ್ಲರೂ ಲೋಕದಲ್ಲಿ ಮೇಲೆ ಮೇಲೆ ಹೋಗುವುದಕ್ಕೆ ಬಯಸುತ್ತಾರೆ. ಅದಕ್ಕಾಗಿ ಯಥಾಶಕ್ತಿ ಪ್ರಯತ್ನವನ್ನೂ ಮಾಡುತ್ತಾರೆ. ಆದರೆ ಹಾಗಾಗುವುದಿಲ್ಲ.
ಬಹವಃ ಸಂಪ್ರದೃಶ್ಯಂತೇ ತುಲ್ಯನಕ್ಷತ್ರಮಂಗಲಾಃ |
ಮಹಚ್ಚ ಫಲವೈಷಮ್ಯಂ ದೃಶ್ಯತೇ ಕರ್ಮಸಂಧಿಷು ॥22॥
ವಹಂತಿ ಶಿಬಿಕಾಮನ್ಯೇ ಯಾಂತ್ಯನ್ಯೇ ಶಿಬಿಕಾಗತಾಃ |
ಒಂದೇ ಶುಭನಕ್ಷತ್ರದಲ್ಲಿ ಜನಿಸಿದ ಅನೇಕ ಮಾನವರು ಕಂಡುಬರುತ್ತಾರೆ. ಆದರೆ ಅವರಿಗೆ ಫಲದಲ್ಲಿ ಬಹಳ ವೈಷಮ್ಯವು ಕಂಡುಬರುತ್ತದೆ. ಕೆಲವರು ಪಲ್ಲಕ್ಕಿಯನ್ನು ಹೊರುತ್ತಾರೆ. ಇನ್ನು ಕೆಲವರು ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಹೋಗುತ್ತಾರೆ.
ನ ಕೇಚಿದೀಶತೇ ಬ್ರಹ್ಮನ್ ಸ್ವಯಂಗ್ರಾಹ್ಯಸ್ಯ ಸತ್ತಮ |
ಕರ್ಮಣಾಂ ಪ್ರಕೃತಾನಾಂ ವಾ ಇಹ ಸಿದ್ಧಿಃ ಪ್ರದೃಶ್ಯತೇ ॥23॥
ಎಲೈ ಸಜ್ಜನರಲ್ಲಿ ಶ್ರೇಷ್ಠರಾದವರೇ, ತಾವು ಮಾಡಿದ ಕರ್ಮಫಲವನ್ನು ತಾವೇ ಸ್ವತಃ ಸಂಪಾದಿಸಲು ಯಾರೂ ಶಕ್ತರಲ್ಲ. ಇಲ್ಲಿ ಮಾಡಿದ ಉತ್ಕಟವಾದ ಕರ್ಮಗಳ ಫಲದ ಸಿದ್ಧಿಯು ಇಲ್ಲಿಯೇ ಕಂಡುಬರುತ್ತದೆ.
ಯಥಾ ಶ್ರುತಿರಿಯಂ ನಿತ್ಯಾ ಜೀವಃ ಕಿಲ ಸನಾತನಃ |
ಶರೀರಮಧ್ರುವಂ ಲೋಕೇ ಸರ್ವೇಷಾಂ ಪ್ರಾಣಿನಾಮಿಹ ॥24॥

ಹೇಗೆ ವೇದವು ನಿತ್ಯವೋ ಅದರಂತೆ ಜೀವನೂ ಸಹ ಆದ್ಯಂತರಹಿತನಾದವನು. ಈ ಲೋಕದಲ್ಲಿ ಎಲ್ಲ ಪ್ರಾಣಿಗಳಿಗೂ ಶರೀರವು ಮಾತ್ರ ಅನಿತ್ಯವಾದುದು.
ವಧ್ಯಮಾನೇ ಶರೀರೇ ತು ದೇಹನಾಶೋ ಭವತ್ಯುತ |
ಜೀವಃ ಸಂಕ್ರಮತೇಽನ್ಯತ್ರ ಕರ್ಮಬಂಧನಿಬಂಧನಃ ॥25॥
ಶರೀರಕ್ಕೆ ಹಿಂಸೆಯನ್ನು ಮಾಡಿದರೆ ದೇಹನಾಶವಾಗುತ್ತದೆ. ಜೀವನು ಮಾತ್ರ ತನ್ನ ಕರ್ಮಬಂಧಕ್ಕೆ ಒಳಗಾಗಿ ಬೇರೆ ಕಡೆಗೆ ಹೋಗುತ್ತಾನೆ.

ಬ್ರಾಹ್ಮಣಃ
ಕಥಂ ಧರ್ಮವಿದಾಂ ಶ್ರೇಷ್ಠ ಜೀವೋ ಭವತಿ ಶಾಶ್ವತಃ |
ಏತದಿಚ್ಛಾಮ್ಯಹಂ ಜ್ಞಾತುಂ ತತ್ತ್ವೇನ ವದತಾಂ ವರ ॥26॥
ಬ್ರಾಹ್ಮಣ ಧರ್ಮಜ್ಞರಲ್ಲಿ ಶ್ರೇಷ್ಠನಾದವನೇ, ಜೀವನು ಹೇಗೆ ಶಾಶ್ವತನಾಗಿದ್ದಾನೆ. ಎಲೈ ಮಾತನಾಡುವವರಲ್ಲಿ ಶ್ರೇಷ್ಠನಾದವನೇ, ಇದನ್ನು ನಾನು ಸರಿಯಾಗಿ ತಿಳಿದುಕೊಳ್ಳಲು ಬಯಸುತ್ತೇನೆ.
ವ್ಯಾಧಃ
ನ ಜೀವನಾಶೋಽಸ್ತಿ ಹಿ ದೇಹಭೇದೇ
ಮಿಥ್ಯೈತದಾಹುರ್ಮ್ರಿಯತೀತಿ ಮೂಢಾಃ |
ಜೀವಸ್ತು ದೇಹಾಂತರಿತಃ ಪ್ರಯಾತಿ
ದಶಾರ್ಧತಸ್ತಸ್ಯ ಶರೀರಭೇದಃ ॥27॥
ವ್ಯಾಧ ಒಂದು ಶರೀರದಿಂದ ಇನ್ನೊಂದು ಶರೀರಕ್ಕೆ ಹೋದಾಗ ಜೀವನಾಶವಾಗುವುದಿಲ್ಲ. ಮೂಢರು ಹೇಳುವ ಜೀವನಿಗೆ ಮರಣವುಂಟಾಯಿತು ಎಂಬ ಮಾತು ಸುಳ್ಳಾದುದು. ಜೀವನು ದೇಹಭೇದ ಉಂಟಾದಾಗ ಇನ್ನೊಂದು ಶರೀರಕ್ಕೆ ಹೋಗುತ್ತಾನೆ. ಪಂಚಮಹಾಭೂತಗಳ ವ್ಯತ್ಯಾಸದಿಂದ ಶರೀರದಲ್ಲಿ ಭೇದವುಂಟಾಗುತ್ತದೆ.
ಅನ್ಯೋ ಹಿ ನಾಶ್ನಾತಿ ಕೃತಂ ಹಿ ಕರ್ಮ
ಮನುಷ್ಯಲೋಕೇ ಮನುಜಸ್ಯ ಕಶ್ಚಿತ್ |
ಯತ್ತೇನ ಕಿಂಚಿದ್ಧಿ ಕೃತಂ ಹಿ ಕರ್ಮ
ತದಶ್ನುತೇ ನಾತ್ರ ಕೃತಸ್ಯ ನಾಶಃ ॥28॥
ಒಬ್ಬ ಜೀವನು ಮಾಡಿದ ಕರ್ಮದ ಫಲವನ್ನು ಇನ್ನೊಬ್ಬ ಜೀವನು ಎಂದೂ ಅನುಭವಿಸುವುದಿಲ್ಲ. ಜೀವನು ಇಲ್ಲಿ ಯಾವ ಕರ್ಮವನ್ನು ಮಾಡಿದ್ದಾನೆಯೋ ಅದರ ಫಲವನ್ನು ಅವನೇ ಪಡೆಯುತ್ತಾನೆ. ಮಾಡಿದ ಕರ್ಮಕ್ಕೆ ನಾಶವುಂಟಾಗುವುದಿಲ್ಲ.
ಅಪುಣ್ಯಶೀಲಾ ಹಿ ಭವಂತಿ ಪುಣ್ಯಾ ನರಾಧಮಾಃ ಪಾಪಕೃತೋ ಭವಂತಿ|
ನರೋಽನುಯಾತಸ್ತ್ವಿಹ ಕರ್ಮಭಿಃ ಸ್ವೈಸ್ತತಃ ಸಮುತ್ಪತ್ಸ್ಯತಿ ಭಾವಿತಸ್ತೈಃ ॥
ನರೋತ್ತಮರಾದ ಅಜಾಮಿಳ ಮೊದಲಾದವರು ಕೆಲವು ಕಾಲ ಅಪುಣ್ಯಶೀಲರಾದರೂ ಕೊನೆಯಲ್ಲಿ ಪುಣ್ಯವನ್ನು ಮಾಡುವವರೇ ಆಗುತ್ತಾರೆ. ನರಾಧಮರಾದವರು ಸಜ್ಜನರ ಸಂಸರ್ಗದಿಂದ ಸ್ವಲ್ಪ ಕಾಲ ಪುಣ್ಯಶೀಲರಾದರೂ ಕೊನೆಯಲ್ಲಿ ಜಟಾಸಂರಾದಿಗಳಂತೆ ಪಾಪವನ್ನು ಮಾಡುವವರೇ ಆಗುತ್ತಾರೆ. ಮಧ್ಯಮ ಜೀವರು ತಮ್ಮ ಕರ್ಮಗಳಿಂದ ಹಿಂಬಾಲಿಸಲ್ಪಟ್ಟು ಆ ಕರ್ಮಗಳ ನಿಮಿತ್ತದಿಂದಾಗಿ ಪುನಃ ಭೂಮಿಯಲ್ಲಿಯೇ ಜನಿಸುತ್ತಾರೆ.
ಬ್ರಾಹ್ಮಣಃ
ಕಥಂ ಸಂಭವತೇ ಯೋನೌ ಕಥಂ ವಾ ಪುಣ್ಯಪಾಪಯೋಃ |
ಜಾತೀಃ ಪುಣ್ಯಾ ಹ್ಯಪುಣ್ಯಾಶ್ಚ ಕಥಂ ಗಚ್ಛತಿ ಸತ್ತಮ ॥30॥
ಬ್ರಾಹ್ಮಣ ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಪುಣ್ಯಪಾಪಸಂಬಂಧಿಯಾದ ಮಧ್ಯಮ ಜೀವನು ಹೇಗೆ ಪುಣ್ಯ ಯೋನಿಗಳನ್ನು, ಅಪುಣ್ಯಯೋನಿಯನ್ನು ಹೊಂದಿ ಜನಿಸುತ್ತಾನೆ?
ವ್ಯಾಧಃ
ಗರ್ಭಾಧಾನಸಮಾಯುಕ್ತಂ ಕರ್ಮೇದಂ ಸಂಪ್ರದೃಶ್ಯತೇ |
ಸಮಾಸೇನ ತು ತೇ ಕ್ಷಿಪ್ರಂ ಪ್ರವಕ್ಷ್ಯಾಮಿ ದ್ವಿಜೋತ್ತಮ ॥31॥
ವ್ಯಾಧ ಗರ್ಭಾಧಾನದಿಂದ ಆರಂಭಿಸಿ ಈ ಕರ್ಮವು (ಕರ್ಮದ ಫಲವು) ಕಂಡುಬರುತ್ತದೆ. ಎಲೈ ದ್ವಿಜೋತ್ತಮರೇ, ನಿಮಗೆ ನಾನು ಅದನ್ನು ಸಂಕ್ಷಿಪ್ತವಾಗಿ ಹೇಳುವೆನು.
ಯಥಾಸಂಭೃತಸಂಭಾರಃ ಪುನರೇವ ಪ್ರಜಾಯತೇ |
ಶುಭಕೃಚ್ಛುಭಯೋನೀಷು ಪಾಪಕೃತ್ ಪಾಪಯೋನಿಷು ॥32॥
ತಾನು ಹೊತ್ತಿರುವ ಕರ್ಮಗಳ ಭಾರಕ್ಕೆ ಅನುಗುಣವಾಗಿ ಶುಭವನ್ನು ಮಾಡಿದವನು ಶುಭಯೋನಿಗಳಲ್ಲಿಯೂ ಪಾಪವನ್ನು ಮಾಡಿದವನು ಪಾಪಯೋನಿಗಳಲ್ಲಿಯೂ ಪುನಃ ಜನಿಸುತ್ತಾನೆ.
ಶುಭೈಃ ಪ್ರಯೋಗೈರ್ದೇವತ್ವಂ ವ್ಯಾಮಿಶ್ರೈರ್ಮಾನುಷೋ ಭವೇತ್ |
ಮೋಹನೀಯೈರ್ವಿಯೋನೀಷು ತ್ವಧೋಗಾಮೀ ಚ ಕಿಲ್ಬಿಷೀ ॥33॥
ಶುಭವಾದ ಮನಸ್ಸಿನ ಪ್ರಯೋಗಗಳಿಂದ ಉತ್ತಮ ಜೀವರು ದೇವತ್ವವನ್ನು ಹೊಂದುವರು. ಶುಭಾಶುಭವೃತ್ತಿಗಳಿಂದ ಕೂಡಿದ ಪ್ರಯೋಗವುಳ್ಳವರು ಪುನಃ ಮನುಷ್ಯರಾಗುವರು. ಮಿಥ್ಯಾಜ್ಞಾನಕ್ಕೆ ಯೋಗ್ಯವಾದ ಪ್ರಯೋಗವನ್ನು ಹೊಂದಿದ ಅಧಮಜೀವರು ಅಧೋಗಾಮಿಗಳಾಗಿ ತಮಸ್ಸಿಗೆ ಹೋಗುವರು (ಹೀಗೆ ಉತ್ತಮ ಜೀವರಿಗೆ ಕೇವಲ ಪುಣ್ಯ, ಮಧ್ಯಮ ಜೀವರಿಗೆ ಪುಣ್ಯಪಾಪಗಳು, ಅಧಮ

ಜೀವರಿಗೆ ಕೇವಲ ಪಾಪ ಎಂಬ ಈ ಸಾಧನ ಭೇದದಿಂದ ಗತಿಭೇದವು ಉಂಟಾಗುತ್ತದೆ).
ಜಾತಿಮೃತ್ಯುಜರಾದುಃಖೈಃ ಸತತಂ ಸಮಭಿದ್ರುತಃ |
ಸಂಸಾರೇ ಪಚ್ಯಮಾನಶ್ಚ ದೋಷೈರಾತ್ಮಕೃತೈರ್ನರಃ ॥34॥
ತಿರ್ಯಗ್ಯೋನಿಸಹಸ್ರಾಣಿ ಗತ್ವಾ ನರಕಮೇವ ಚ |
ಜೀವಾಃ ಸಂಪರಿವರ್ತಂತೇ ಕರ್ಮಬಂಧನಿಬಂಧನಾಃ ॥35॥
ಮನುಷ್ಯನು ತಾನು ಮಾಡಿದ ದೋಷಗಳಿಂದ ಜನನ ಮರಣ ಜರಾದುಃಖಗಳಿಂದ ಸತತವಾಗಿ ಪೀಡಿತನಾಗಿ ಸಂಸಾರದಲ್ಲಿ ಸಂತಪ್ತನಾಗುತ್ತಾನೆ. ಕರ್ಮಬಂಧದ ನಿಮಿತ್ತದಿಂದಾಗಿ ಜೀವರು ಒಂದು ಸಹಸ್ರ ನೀಚಯೋನಿಗಳಿಗೆ ಹೋಗಿ ಮತ್ತು ನರಕಕ್ಕೂ ಹೋಗಿ ಹಾಗೆಯೇ ಸುತ್ತುತ್ತಿರುತ್ತಾರೆ.
ಜಂತುಸ್ತು ಕರ್ಮಭಿಸ್ತೈಸ್ತೈಃ ಸ್ವಕೃತೈಃ ಪ್ರೇತ್ಯ ದುಃಖಿತಃ |
ತದ್ ದುಃಖಪ್ರತಿಘಾತಾರ್ಥಮಪುಣ್ಯಾಂ ಯೋನಿಮಾಪ್ನುತೇ ॥36॥
ಜಂತುವು ತಾನು ಮಾಡಿದ ಆಯಾ ಕರ್ಮಗಳಿಂದ ಮರಣವನ್ನು ಹೊಂದಿ ದುಃಖಿತನಾಗಿ ಆ ದುಃಖವನ್ನು ಪರಿಹಾರ ಮಾಡಿಕೊಳ್ಳಲು ಇನ್ನೊಂದು ಪಾಪಯೋನಿಯನ್ನು ಹೊಂದುತ್ತಾನೆ.
ತತಃ ಕರ್ಮ ಸಮಾದತ್ತೇ ಪುನರನ್ಯಂ ನವಂ ಬಹು |
ಪಚ್ಯತೇ ತು ಪುನಸ್ತೇನ ಭುಕ್ತ್ವಾಽಪಥ್ಯಮಿವಾತುರಃ ॥37॥
ಅಜಸ್ರಮೇವ ದುಃಖಾರ್ತೋ ದುಃಖಿತಃ ಸುಖಸಂಜ್ಞಿತಃ ॥38॥
ಪುನಃ ಅನೇಕ ಕರ್ಮವನ್ನು ಮಾಡುತ್ತಾನೆ. ಪುನಃ ಇನ್ನೊಂದು ಹೊಸ ಶರೀರವನ್ನು ಪಡೆದು ಅಪಥ್ಯವನ್ನು ತಿಂದ ರೋಗಿಯಂತೆ ಆ ಕರ್ಮದಿಂದ ಪುನಃ ಸಂಸಾರದಲ್ಲಿ ಬೇಯಿಸಲ್ಪಡುತ್ತಾನೆ. ಹೀಗೆ ಸತತವಾಗಿ ದುಃಖದಿಂದ ಆರ್ತನಾಗಿ ಒಮ್ಮೊಮ್ಮೆ ಸ್ವಲ್ಪ ಸುಖವಿರುವುದರಿಂದ ಸುಖೀ ಎಂದು ಕರೆಸಿಕೊಂಡು ಸಂಚರಿಸುತ್ತಾನೆ.
ತತೋಽನಿವೃತ್ತಬಂಧತ್ವಾತ್ ಕರ್ಮಣಾಮುದಯಾದಪಿ |
ಪರಿಕ್ರಾಮತಿ ಸಂಸಾರೇ ಚಕ್ರವದ್ ಬಹುವೇದನಃ |
ಸ ಚೇನ್ನಿವೃತ್ತಬಂಧಸ್ತು ವಿಶುದ್ಧಶ್ಚಾಪಿ ಕರ್ಮಭಿಃ ॥39॥
ಆ ಮಧ್ಯಮಜೀವನು ಕೇವಲ ತತ್ತ್ವಜ್ಞಾನಿಯಂತೆ ಬಂಧನಿವೃತ್ತಿ ಇಲ್ಲದಿರುವುದರಿಂದ (ಕೇವಲ ಮಿಥ್ಯಾಜ್ಞಾನಿಯಂತೆ ಸುಖರಹಿತನೂ, ಕೇವಲ ತತ್ತ್ವಜ್ಞಾನಿಯಂತೆ ದುಃಖರಹಿತನೂ ಆಗದಿರುವುದರಿಂದ) ತನ್ನ ಕರ್ಮಗಳ ಪ್ರಭಾವದಿಂದ ಸಂಸಾರದಲ್ಲಿ ಬಹುವೇದನೆಯನ್ನು ಅನುಭವಿಸುತ್ತಾ ಚಕ್ರದಂತೆ ತಿರುಗುತ್ತಾನೆ. ಈ ಮೂರು ವಿಧ ಜೀವರಲ್ಲಿ ಒಬ್ಬ ಉತ್ತಮ ಜೀವನು ನಿವೃತ್ತಬಂಧನಾದರೆ ಎಂದರೆ ಹರಿಯಲ್ಲಿ ಚೆನ್ನಾಗಿ ಸ್ನೇಹ, ಅನುಬಂಧವನ್ನು ಹೊಂದಿದವನಾದರೆ ಎಂದರೆ ಭಕ್ತಿ ಪರಿಪಾಕವುಳ್ಳವನಾದರೆ ತನ್ನ ಕರ್ಮಗಳಿಂದ ವಿಶುದ್ಧನೂ ಆಗುತ್ತಾನೆ.
ತಪೋಯೋಗಸಮಾರಂಭಂ ಕುರುತೇ ದ್ವಿಜಸತ್ತಮ ॥40॥
ಎಲೈ ದ್ವಿಜಶ್ರೇಷ್ಠರೇ, ಅವನು ತಪೋಯೋಗಗಳಲ್ಲಿ ಪ್ರಯತ್ನವನ್ನು ಮಾಡುತ್ತಾನೆ.
ಕರ್ಮಭಿರ್ಬಹುಭಿಶ್ಚಾಪಿ ಲೋಕಾನಶ್ನಾತಿ ಮಾನವಃ |
ಪ್ರಾಪ್ನೋತಿ ಸುಕೃತಾಂಲ್ಲೋಕಾನ್ ಯತ್ರ ಗತ್ವಾ ನ ಶೋಚತಿ ॥41॥
ಆ ಮನುಷ್ಯನು ಅನೇಕ ಕರ್ಮಗಳನ್ನು ಮಾಡಿ ಎಲ್ಲಿ ಶೋಕವಿರುವುದಿಲ್ಲವೋ ಅಂತಹ ಸುಕೃತಲೋಕವಾದ ವೈಕುಂಠಾದಿಗಳನ್ನು ಹೊಂದುತ್ತಾನೆ.
ಪಾಪಕರ್ಮಾ ಪಾಪವೃತ್ತಃ ಪಾಪಸ್ಯಾಂತಂ ನ ಗಚ್ಛತಿ |
ಪುಣ್ಯಂ ಕುರ್ವನ್ ಪುಣ್ಯವೃತಃ ಪುಣ್ಯಸ್ಯಾಂತಂ ನ ಗಚ್ಛತಿ |
ತತ್ ಕರ್ಮ ಯದಿ ಚೇತ್ ಕರ್ತುಃ ವರ್ಜಯೀತ ಚ ಪಾಪಕಮ್ ॥
ಪಾಪಕರ್ಮವನ್ನು ಮಾಡಿದವನು ಪಾಪಸ್ವಭಾವವನ್ನೇ ಉಳ್ಳವನಾಗಿ ಪಾಪಫಲದ ಅಂತವನ್ನೇ ಕಾಣುವುದಿಲ್ಲ (ಸಂಸಾರ ಬಂಧವು ನಿವೃತ್ತವಾದಮೇಲೂ ಅವನು ಪಾಪದ ಫಲವಾದ ದುಃಖವನ್ನೇ ಅಂಧತಮಸ್ಸಿನಲ್ಲಿ ಅನುಭವಿಸುತ್ತಾನೆ). ಪುಣ್ಯವನ್ನು ಮಾಡುವ ಉತ್ತಮ ಜೀವನು ಪುಣ್ಯದ ಅಂತವನ್ನೂ ಕಾಣುವುದಿಲ್ಲ (ಉತ್ತಮಜೀವನು ಸಂಸಾರ ಬಂಧವು ಕಳೆದ ಮೇಲೆಯೂ ಹಿಂದೆ ಮಾಡಿದ ಸತ್ಕರ್ಮಗಳ ಫಲವಾಗಿ ಮೋಕ್ಷದಲ್ಲಿ ಆನಂದಾತಿಶಯವನ್ನು ಪಡೆಯುತ್ತಾನೆ). ಆದ್ದರಿಂದ ತಾನು ಮಾಡಿದ ಕರ್ಮವು ತನ್ನನ್ನು ಬಿಡದಿದ್ದರೂ ಪ್ರಯತ್ನಪೂರ್ವಕವಾಗಿ ಪಾಪಕರ್ಮವನ್ನು ತ್ಯಜಿಸಬೇಕು.
ಅನಸೂಯಃ ಕೃತಜ್ಞಶ್ಚ ಕಲ್ಯಾಣಾನಿ ಚ ಸೇವತೇ |
ಸುಖಾನಿ ಧರ್ಮಮರ್ಥಂ ಚ ಸ್ವರ್ಗಂ ಚ ಲಭತೇ ನರಃ ॥43॥
ಅಸೂಯೆ ಇಲ್ಲದವನೂ ಕೃತಜ್ಞನೂ ಆದ ಮನುಷ್ಯನು ಕಲ್ಯಾಣ ಕರ್ಮಗಳನ್ನೇ ಮಾಡುತ್ತಾನೆ. ಅವನು ಸುಖವನ್ನೂ ಧರ್ಮಾರ್ಥಗಳನ್ನೂ ಮತ್ತು ಸ್ವರ್ಗವನ್ನೂ ಪಡೆಯುತ್ತಾನೆ.
ಸಂಸ್ಕೃತಸ್ಯ ಚ ದಾಂತಸ್ಯ ನಿಯತಸ್ಯ ಯತಾತ್ಮನಃ |
ಪ್ರಾಜ್ಞಸ್ಯಾನಂತರಾ ವೃತ್ತಿರಿಹ ಲೋಕೇ ಪರತ್ರ ಚ ॥44|
ಸುಸಂಸ್ಕೃತನಾದ ಇಂದ್ರಿಯನಿಗ್ರಹವುಳ್ಳ ನಿಯಮಬದ್ಧನಾದ ಮನೋಜಯವುಳ್ಳ ಪ್ರಾಜ್ಞನಿಗೆ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ನಿರವಧಿಕವಾದ ಸುಖಜೀವನವೇ ಇದೆ.
ಸತಾಂ ಧರ್ಮೇಣ ವರ್ತೇತ ಕ್ರಿಯಾಂ ಶಿಷ್ಟವದಾಚರೇತ್ |
ಅಸಂಕ್ಲೇಶೇನ ಲೋಕಸ್ಯ ವೃತ್ತಿಂ ಲಿಪ್ಸೇತ ವೈ ದ್ವಿಜ ॥45॥

ಎಲೈ ಬ್ರಾಹ್ಮಣರೇ, ಸಜ್ಜನರ ಧರ್ಮದಿಂದ ವರ್ತಿಸಬೇಕು. ಶಿಷ್ಟರಂತೆ ಕ್ರಿಯೆಗಳನ್ನು ಆಚರಿಸಬೇಕು. ಇನ್ನೊಬ್ಬರಿಗೆ ತೊಂದರೆಯನ್ನು ಕೊಡದಂತೆ ಜೀವನೋಪಾಯವನ್ನು ಹೊಂದಲು ಇಚ್ಛಿಸಬೇಕು.
ಸಂತಿ ಹ್ಯಾಗಮವಿಜ್ಞಾನಾಃ ಶಿಷ್ಟಾಃ ಶಾಸ್ತ್ರೇ ವಿಚಕ್ಷಣಾಃ |
ಸ್ವಧರ್ಮೇಣ ಕ್ರಿಯಾ ಲೋಕೇ ಕರ್ಮಣಃ ಸೋಽಪ್ಯಸಂಕರಃ |
ಪ್ರಾಜ್ಞೋ ಧರ್ಮೇಣ ರಮತೇ ಧರ್ಮಂ ಚೈವೋಪಜೀವತಿ ॥46॥
ತಸ್ಮಾದ್ ಧರ್ಮಾದವಾಪ್ತೇನ ಧನೇನ ದ್ವಿಜಸತ್ತಮ |
ತಸ್ಯೈವ ಸಂಚಿತೇ ಮೂಲಂ ಗುಣಾನ್ ಪಶ್ಯತಿ ಯತ್ರ ವೈ ॥47॥
ಆಗಮ ವಿಜ್ಞಾನವನ್ನೂ, ಶಾಸ್ತ್ರಪಾಂಡಿತ್ಯವನ್ನೂ ಹೊಂದಿದ ಶಿಷ್ಟರು ಲೋಕದಲ್ಲಿ ತಮ್ಮ ಧರ್ಮದಿಂದ ಕ್ರಿಯೆಗಳನ್ನು ಮಾಡುವವರಾಗಿದ್ದಾರೆ. ಅಲ್ಲಿ ಕರ್ಮದ ಸಾಂಕರ್ಯ ಉಂಟಾಗುವುದಿಲ್ಲ. ಪ್ರಾಜ್ಞನಾದವನು ಧರ್ಮದಲ್ಲಿಯೇ ಸಂತೋಷಪಡುತ್ತಾನೆ. ಧರ್ಮವನ್ನೇ ಉಪಜೀವಿಸುತ್ತಾನೆ. ಎಲೈ ದ್ವಿಜಶ್ರೇಷ್ಠರೇ, ಧರ್ಮದಿಂದ ಸಂಪಾದಿಸಿದ ಧನದಿಂದ ಆ ಧನಸಂಚಯದ ಮೂಲವಾದ ನ್ಯಾಯದಿಂದ ಧನಾರ್ಜನೆಯ ರೂಪವಾದ ಧನವನ್ನು ಅವನು ನೋಡುತ್ತಾನೆ.
ಧರ್ಮೇಣ ವೃತ್ತಿಂ ಕುರುತೇ ಧರ್ಮಂ ಚೈವ ಪ್ರಶಂಸತಿ |
ಧರ್ಮಾತ್ಮಾ ಭವತಿ ಹ್ಯೇವಂ ಚಿತ್ತಂ ಚಾಸ್ಯ ಪ್ರಸೀದತಿ |
ಸ ಮಿತ್ರಜನಸಂತುಷ್ಟ ಇಹ ಪ್ರೇತ್ಯ ಚ ನಂದತಿ ॥48॥
ಧರ್ಮದಿಂದ ಜೀವನವನ್ನು ನಡೆಸುತ್ತಾನೆ. ಧರ್ಮವನ್ನೇ ಪ್ರಶಂಸಿಸುತ್ತಾನೆ. ಅವನು ಹೀಗೆ ಧರ್ಮಾತ್ಮನಾಗುತ್ತಾನೆ. ಅವನ ಮನಸ್ಸು ಪ್ರಸನ್ನವಾಗಿರುತ್ತದೆ. ಅವನು ಮಿತ್ರಜನರೊಡನೆ ಸಂತುಷ್ಟನಾಗಿ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖವನ್ನು ಅನುಭವಿಸುತ್ತಾನೆ.
ಶಬ್ದಂ ಸ್ಪರ್ಶಂ ತಥಾ ರೂಪಂ ಗಂಧಾನಿಷ್ಟಾಂಶ್ಚ ಸತ್ತಮ |
ಪ್ರಭುತ್ವಂ ಲಭತೇ ಚಾಪಿ ಧರ್ಮಸ್ಯೈತತ್ ಫಲಂ ವಿದುಃ ॥49॥
ಎಲೈ ಸಜ್ಜನರಲ್ಲಿ ಶ್ರೇಷ್ಠರಾದವರೇ, ಇಷ್ಟವಾದ ಶಬ್ದಸ್ಪರ್ಶರೂಪರಸಗಂಧಗಳು ಮತ್ತು ಪ್ರಭುತ್ವವು ಅವನಿಗೆ ಲಭಿಸುತ್ತದೆ. ಇದನ್ನು ಧರ್ಮದ ಫಲವೆಂದು ಹೇಳುತ್ತಾರೆ.
ಧರ್ಮಸ್ಯ ಚ ಫಲಂ ಲಬ್ಧ್ವಾ ನ ತೃಪ್ಯತಿ ಮಹಾದ್ವಿಜ |
ಅತೃಪ್ಯಮಾಣೋ ನಿರ್ವೇದಮಾಪೇದೇ ಜ್ಞಾನಚಕ್ಷುಷಾ ॥50॥
ಎಲೈ ಮಹಾಬ್ರಾಹ್ಮಣರೇ, ಸಜ್ಜನರಾದವರು ಧರ್ಮದ ಫಲವನ್ನು ಹೊಂದಿ ತೃಪ್ತಿಯನ್ನು ಹೊಂದುವುದಿಲ್ಲ. ಅವನು ಅತೃಪ್ತಿಯನ್ನು ಹೊಂದಿ ಜ್ಞಾನಚಕ್ಷುಸ್ಸಿನಿಂದ ವೈರಾಗ್ಯವನ್ನು ಹೊಂದುತ್ತಾನೆ.
ಪ್ರಜ್ಞಾಚಕ್ಷುರ್ನರ ಇಹ ದೋಷಂ ನೈವಾನುರುಧ್ಯತೇ |
ವಿರಜ್ಯತಿ ಯಥಾಕಾಮಂ ನ ಚ ಧರ್ಮಂ ವಿಮುಂಚತಿ ॥51॥
ಪ್ರಜ್ಞಾಚಕ್ಷುಸ್ಸನ್ನು ಹೊಂದಿದ ನರನು ದೋಷವನ್ನು ಅನುಸರಿಸುವುದಿಲ್ಲ. ತನ್ನ ಇಚ್ಛೆಗೆ ಅನುಗುಣವಾಗಿ ವೈರಾಗ್ಯವನ್ನು ಹೊಂದುತ್ತಾನೆ ಮತ್ತು ಧರ್ಮವನ್ನು ಬಿಡುವುದಿಲ್ಲ.
ಫಲತ್ಯಾಗೇ ಚ ಯತತೇ ದೃಷ್ಟ್ವಾ ಲೋಕಂ ಶ್ರಿಯಾತ್ಮಕಮ್ |
ತತೋ ಮೋಕ್ಷೇ ಪ್ರಯತತೇ ನಾನೋಪಾಯಾದುಪಾಯತಃ ॥52॥
ಲಕ್ಷ್ಮ್ಯಾತ್ಮಕವಾದ ವೈಕುಂಠಾದಿ ಲೋಕಗಳನ್ನು ಶಾಸ್ತ್ರದೃಷ್ಟಿಯಿಂದ ನೋಡಿ ಕರ್ಮಫಲವನ್ನು ತ್ಯಾಗ ಮಾಡಲು ಪ್ರಯತ್ನಿಸುತ್ತಾನೆ. ಅನಂತರ ಅನೇಕ ಉಪಾಯಗಳನ್ನು ಹೊಂದಿದ ನಾರಾಯಣನ ಅನುಗ್ರಹದಿಂದ ಶ್ರವಣ ಮನನಾದಿ ಉಪಾಯಗಳಿಂದ ಮೋಕ್ಷವನ್ನು ಪಡೆಯಲು ಪ್ರಯತ್ನಿಸುತ್ತಾನೆ.
ಏವಂ ನಿರ್ವೇದಮಾದತ್ತೇ ಪಾಪಂ ಕರ್ಮ ಜಹಾತಿ ಚ |
ಧಾರ್ಮಿಕಶ್ಚಾಪಿ ಭವತಿ ಮೋಕ್ಷಂ ಚ ಲಭತೇ ಪರಮ್ ॥53॥
ಹೀಗೆ ವೈರಾಗ್ಯವನ್ನು ಹೊಂದುತ್ತಾನೆ. ಪಾಪಕರ್ಮವನ್ನು ತ್ಯಜಿಸುತ್ತಾನೆ. ಧಾರ್ಮಿಕನಾಗುತ್ತಾನೆ ಮತ್ತು ಶ್ರೇಷ್ಠವಾದ ಮೋಕ್ಷವನ್ನೂ ಹೊಂದುತ್ತಾನೆ.
ತಪೋ ನಿಶ್ರೇಯಸಂ ಜಂತೋಸ್ತಸ್ಯ ಮೂಲಂ ಶಮೋ ದಮಃ |
ತೇನ ಸರ್ವಾನವಾಪ್ನೋತಿ ಕಾಮಾನ್ ಯಾನ್ ಮನಸೇಚ್ಛತಿ ॥54॥
ತಪಸ್ಸು ಮನುಷ್ಯನ ಶ್ರೇಯಸ್ಸಿಗೆ ಮೂಲಕಾರಣವಾದುದು. ತಪಸ್ಸಿಗೆ ಶಮ ಮತ್ತು ದಮಗಳು ಮೂಲವಾದುವುಗಳು. ಶಮದ ಮೂಲಕವಾದ ತಪಸ್ಸಿನಿಂದ ಅವನ ಮನಸ್ಸಿಗೆ ಕಾಮಗಳೆಲ್ಲವನ್ನೂ ಪಡೆಯುತ್ತಾನೆ.
ಇಂದ್ರಿಯಾಣಾಂ ನಿರೋಧೇನ ಸತ್ಯೇನ ಚ ದಮೇನ ಚ |
ಬ್ರಹ್ಮಣಃ ಪದಮಾಪ್ನೋತಿ ಯತ್ಪರಂ ದ್ವಿಜಸತ್ತಮ ॥55॥
ಎಲೈ ದ್ವಿಜಶ್ರೇಷ್ಠರೇ, ಇಂದ್ರಿಯಗಳನ್ನು ನಿಗ್ರಹಿಸಿ ಸತ್ಯ ಮತ್ತು ದಮಗಳ ಕಾರಣದಿಂದಾಗಿ ಅವನು ಬ್ರಹ್ಮನ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ.
ಕೌಶಿಕಃ
ಇಂದ್ರಿಯಾಣಿ ತು ಯಾನ್ಯಾಹುಃ ಕಾನಿ ತಾನಿ ಯತವ್ರತ |
ನಿಗ್ರಹಶ್ಚ ಕಥಂ ಕಾರ್ಯೋ ನಿಗ್ರಹಸ್ಯ ಚ ಕಿಂ ಫಲಮ್ ॥56॥
ಕೌಶಿಕ ಎಲೈ ವ್ರತನಿಷ್ಠನಾದವನೇ, ಯಾವುದನ್ನು ಇಂದ್ರಿಯನೆಂದು ಹೇಳುತ್ತಾರೆಯೋ ಅವು ಯಾವುವು? ಅವುಗಳನ್ನು ನಿಗ್ರಹ

ಮಾಡುವುದು ಹೇಗೆ? ಮತ್ತು ಆ ನಿಗ್ರಹದ ಫಲವಾದರೂ ಏನು?
ಕಥಂ ಚ ಫಲಮಾಪ್ನೋತಿ ತೇಷಾಂ ಧರ್ಮಭೃತಾಂ ವರ |
ಏತದಿಚ್ಛಾಮಿ ತತ್ತ್ವೇನ ಧರ್ಮಂ ಜ್ಞಾತುಂ ನಿಬೋಧ ಮೇ ॥57॥
ಧರ್ಮಿಷ್ಠರಲ್ಲಿ ಶ್ರೇಷ್ಠನಾದವನೇ ಆ ಫಲವನ್ನು ಜೀವನು ಹೇಗೆ ಪಡೆಯುತ್ತಾನೆ? ಈ ಧರ್ಮವನ್ನು ಯಥಾರ್ಥವಾಗಿ ನಾನು ತಿಳಿಯಲು ಇಚ್ಛಿಸುತ್ತೇನೆ. ಅದನ್ನು ನನಗೆ ಹೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಣ್ಣವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಬ್ರಾಹ್ಮಣವ್ಯಾಧಸಂವಾದೇ ಪತಿವ್ರತಾಮಾಹಾತ್ಮ್ಯೇ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು
* * * *
ನೂರ ತೊಂಬತ್ತೇಳನೆಯ ಅಧ್ಯಾಯ
ಧರ್ಮವ್ಯಾಧನಿಂದ ಸುಬುದ್ಧಿ ಮತ್ತು ದುರ್ಬುದ್ಧಿಗಳಿಂದ ಉಂಟಾಗುವ ಪರಂಪರೆಯ ಕಥನ. ಸತ್ಸಂಗದಿಂದ ಜ್ಞಾನಲಾಭದ ಕಥನ ಮತ್ತು ಬ್ರಹ್ಮವಿದ್ಯೆಯ ವರ್ಣನೆ.
ಮಾರ್ಕಂಡೇಯಃ
ಏವಮುಕ್ತಸ್ತು ವಿಪ್ರೇಣ ಧರ್ಮವ್ಯಾಧೋ ಯುಧಿಷ್ಠಿರ |
ಪ್ರತ್ಯುವಾಚ ಯಥಾ ವಿಪ್ರಂ ತಚ್ಛೃಣುಷ್ವ ನರಾಧಿಪ ॥1॥
ಮಾರ್ಕಂಡೇಯ ನರಾಧಿಪನಾದ ಯುಧಿಷ್ಠಿರನೇ, ಆ ಬ್ರಾಹ್ಮಣನಿಂದ ಹೀಗೆ ಹೇಳಲ್ಪಟ್ಟ ಧರ್ಮವ್ಯಾಧನು ಆ ಬ್ರಾಹ್ಮಣನನ್ನು ಕುರಿತು ಏನು ಉತ್ತರವನ್ನು ಕೊಟ್ಟನು ಎಂದು ಹೇಳುತ್ತೇನೆ ಅದನ್ನು ಕೇಳು.
ವ್ಯಾಧಃ
ವಿಜ್ಞಾನಾರ್ಥಂ ಮನುಷ್ಯಾಣಾಂ ಮತಿಃ ಪೂರ್ವಂ ಪ್ರವರ್ತತೇ |
ತಾಂ ಪ್ರಾಪ್ಯ ಕಾಮಂ ಭಜತೇ ರೋಷಂ(ಕ್ರೋಧಂ) ಚ ದ್ವಿಜಸತ್ತಮ ॥
ವ್ಯಾಧ ಎಲೈ ದ್ವಿಜಶ್ರೇಷ್ಠರೇ, ಜ್ಞಾನದ ಸಲುವಾಗಿ ಮನುಷ್ಯರಿಗೆ ಮೊದಲು ಮನಸ್ಸು ಮನೋವೃತ್ತಿ ರೂಪವಾಗಿ ಪ್ರವೃತ್ತವಾಗುತ್ತದೆ. ಮನೋವೃತ್ತಿ ಹೊಂದಿದ ಮೇಲೆ ಕಾಮವಾಗಲೀ, ರೋಷವಾಗಲೀ ಉಂಟಾಗುತ್ತದೆ (ಮನೋವೃತ್ತಿಯು ಒಳ್ಳೆಯ ವೃತ್ತಿ ಮತ್ತು ಕೆಟ್ಟ ವೃತ್ತಿ ಎಂಬ ಎರಡು ವಿಧ. ಒಳ್ಳೆ ವೃತಿತಯಿಂದ ಕಾಮವು, ಕೆಟ್ಟವೃತ್ತಿಯಿಂದ ರೋಷವು ಉಂಟಾಗುತ್ತದೆ).
ತತಸ್ತದರ್ಥಂ ಯತತೇ ಕರ್ಮ ಚಾರಭತೇ ಮಹತ್ |
ಇಷ್ಟಾನಾಂ ರೂಪಗಂಧಾನಾಮಭ್ಯಾಸಂ ಚ ನಿಷೇವತೇ ॥3॥
ಅನಂತರ ಕಾಮ ಉಂಟಾದ ಮೇಲೆ (ಕಾಮ ಎಂದರೆ ಇಚ್ಛೆ ಎಂದು ಅರ್ಥ) ಆ ಇಚ್ಛೆಯ ವಿಷಯವನ್ನು ಸಂಪಾದಿಸಲು ದೊಡ್ಡ ಕರ್ಮವನ್ನು ಪ್ರಾರಂಭಿಸುತ್ತಾನೆ. ತನ್ನ ಇಷ್ಟವಾದ ರೂಪ ರಸಗಂಧಾದಿಗಳನ್ನು ಪುನಃ ಪುನಃ ಸೇವಿಸುತ್ತಾನೆ.
ತತೋ ರಾಗಃ ಪ್ರಭವತಿ ದ್ವೇಷಶ್ಚ ತದನಂತರಮ್ |
ತತೋ ಲೋಭಃ ಪ್ರಭವತಿ ಮೋಹಶ್ಚ ತದನಂತರಮ್ ॥4॥
ಮನೋವೃತ್ತಿಯು ಕೆಟ್ಟದಾದರೆ ಅದರಿಂದ ರಾಗವು ಉಂಟಾಗುತ್ತದೆ. ಅನಂತರ ದ್ವೇಷವು ಉಂಟಾಗುತ್ತದೆ. ಅನಂತರ ಲೋಭವೂ, ಅನಂತರ ಮೋಹವೂ ಉಂಟಾಗುತ್ತದೆ.
ತತೋ ಲೋಭಾಭಿಭೂತಸ್ಯ ರಾಗದ್ವೇಷಹತಸ್ಯ ಚ |
ನ ಧರ್ಮೇ ಜಾಯತೇ ಬುದ್ಧಿರ್ವ್ಯಾಜಾದ್ ಧರ್ಮಂ ಕರೋತಿ ಚ |
ವ್ಯಾಜೇನ ಚರತೇ ಧರ್ಮಮರ್ಥಂ ವ್ಯಾಜೇನ ರೋಚತೇ ॥5॥
ಆಗ ಲೋಭಕ್ಕೆ ಒಳಗಾಗಿ ರಾಗದ್ವೇಷಗಳಿಂದ ಉಪಹತನಾದ ಮನುಷ್ಯನಿಗೆ ಧರ್ಮದಲ್ಲಿ ಬುದ್ಧಿ ಉಂಟಾಗುವುದಿಲ್ಲ. ಫಲದ ಅಪೇಕ್ಷೆಯ ನಿಮಿತ್ತದಿಂದ ಧರ್ಮವನ್ನು ಆಚರಿಸುತ್ತಾನೆ. ಇಂತಹ ವ್ಯಾಜದಿಂದ ಧರ್ಮವನ್ನು ಆಚರಿಸುತ್ತಾನೆ. ಮತ್ತು ಅದರ ಫಲವಾಗಿ ಅರ್ಥಲಾಭದಲ್ಲಿ ಅಭಿರುಚಿ ಉಳ್ಳವನಾಗುತ್ತಾನೆ.
ವ್ಯಾಜೇನ ಸಿಧ್ಯಮಾನೇಷು ಧನೇಷು ದ್ವಿಜಸತ್ತಮ |
ತತ್ರೈವ ರಮತೇ ಬುದ್ಧಿಸ್ತತಃ ಪಾಪಂ ಚಿಕೀರ್ಷತಿ ॥6॥
ಎಲೈ ದ್ವಿಜಸತ್ತಮರೇ, ಇಂತಹ ವ್ಯಾಜದಿಂದ ಧನವು ಒದಗುತ್ತಿರಲು ಅಲ್ಲಿಯೇ ಅವನ ಬುದ್ಧಿಯು ಸಂತೋಷಗೊಳ್ಳುತ್ತದೆ. ಅನಂತರ ಪಾಪಕರ್ಮವನ್ನು ಮಾಡಲು ಬಯಸುತ್ತಾನೆ.
ಸುಹೃದ್ಭಿರ್ವಾರ್ಯಮಾಣಶ್ಚ ಪಂಡಿತೈಶ್ಚ ದ್ವಿಜೋತ್ತಮ |
ಉತ್ತಮಶ್ರುತಸಂಬಂಧೋ ಬ್ರವೀತಿ ಶ್ರುತಯೋ ಜಿತಮ್ ॥7॥
ಎಲೈ ದ್ವಿಜೋತ್ತಮರೇ, ಪಂಡಿತರಿಂದಲೂ ನಿವಾರಿಸಲ್ಪಟ್ಟರೂ ಸಹ ಕಾಮಕ್ರೋಧದಿಂದ ಜಿತರಾಗಿ ಉತ್ತಮರಿಂದ ಕೇಳಿದ ಶ್ರುತಿಗಳನ್ನು ಮಾತ್ರ ಹೇಳುತ್ತಾನೆ. ಆ ಶ್ರುತಿಗಳಲ್ಲಿ ಹೇಳಿದುದನ್ನು ಆಚರಿಸುವುದಿಲ್ಲ.
ಅಧರ್ಮಸ್ತ್ರಿವಿಧಸ್ತಸ್ಯ ವರ್ತತೇ ರಾಗದೋಷಜಃ |
ಪಾಪಂ ಚಿಂತಯತೇ ಚಾಪಿ ಬ್ರವೀತಿ ಚ ಕರೋತಿ ಚ ॥8॥
ರಾಗದೋಷದಿಂದ ಉಂಟಾದ ಅಧರ್ಮವು ಈ ಮೂರು ವಿಧವಾಗಿ ಇರುತ್ತದೆ. ಮೊದಲು ಪಾಪವನ್ನು ಚಿಂತಿಸುತ್ತಾನೆ. ಅನಂತರ ಅದನ್ನು ಕುರಿತು ಮಾತನಾಡುತ್ತಾನೆ. ಅನಂತರ ಅದನ್ನು ಆಚರಿಸುತ್ತಾನೆ.

ತಸ್ಯಾಧರ್ಮಪ್ರವೃತ್ತಸ್ಯ ಗುಣಾ ನಶ್ಯಂತಿ ಸಾಧವಃ |
ಏಕಶೀಲೈಶ್ಚ ಮಿತ್ರತ್ವಂ ಭಜಂತೇ ಪಾಪಕರ್ಮಿಣಃ ॥9॥
ಅಧರ್ಮದಲ್ಲಿ ಪ್ರವೃತ್ತನಾದವನಿಗೆ ಸದ್ಗುಣಗಳು ನಾಶವನ್ನು ಹೊಂದುತ್ತವೆ. ಪಾಪಕರ್ಮವನ್ನು ಮಾಡುವವರು ಸಮಾನಶೀಲವುಳ್ಳವರ ಜೊತೆಯಲ್ಲಿ ಸ್ನೇಹವನ್ನು ಸಂಪಾದಿಸುತ್ತಾರೆ.
ಸ ತೇನ ದುಃಖಮಾಪ್ನೋತಿ ಪರತ್ರ ಚ ವಿಪದ್ಯತೇ |
ಪಾಪಾತ್ಮಾ ಭವತಿ ಹ್ಯೇವಂ ಧರ್ಮಲಾಭಂ ತು ಮೇ ಶೃಣು ॥10॥
ಅವನು ಅದರಿಂದ ಈ ಲೋಕದಲ್ಲಿ ದುಃಖವನ್ನು ಪಡುತ್ತಾನೆ. ಪರಲೋಕದಲ್ಲಿಯೂ ವಿಪತ್ತಿಗೆ ಒಳಗಾಗುತ್ತಾನೆ. ಪಾಪಾತ್ಮನು ಈ ರೀತಿಯಲ್ಲಿ ಇರುತ್ತಾನೆ. ಧರ್ಮಾತ್ಮನ ಧರ್ಮಲಾಭದ ಪ್ರಕಾರವನ್ನು ನನ್ನಿಂದ ಕೇಳು.
ಯಸ್ತ್ವೇತಾನ್ ಪ್ರಜ್ಞಯಾ ದೋಷಾನ್ ಪೂರ್ವಮೇವಾನುಪಶ್ಯತಿ |
ಕುಶಲಃ ಸುಖದುಃಖೇಷು ಸಾಧೂಂಶ್ಚಾಪ್ಯುಪಸೇವತೇ ॥11॥
ಧರ್ಮಾತ್ಮನಾದವನು ಈ ದೋಷಗಳನ್ನು ಮೊದಲೇ ತನ್ನ ಬುದ್ಧಿಯಿಂದ ಗಮನಿಸುತ್ತಾನೆ. ಅವನು ಸುಖದುಃಖಗಳಲ್ಲಿ ಸಮಾನನಾಗಿರುತ್ತಾನೆ ಮತ್ತು ಸಜ್ಜನರ ಸೇವೆಯನ್ನು ಮಾಡುತ್ತಾನೆ.
ತಸ್ಯ ಸಾಧುಸಮಾರಂಭಾದ್ ಬುದ್ಧಿರ್ಧರ್ಮೇಷು ರಾಜತೇ ॥12॥
ಅವನು ಸತ್ಕರ್ಮಗಳನ್ನು ಆರಂಭಿಸುವುದರಿಂದ ಅವನ ಬುದ್ಧಿಯು ಧರ್ಮಗಳಲ್ಲಿಯೇ ಪ್ರಕಾಶಿಸುತ್ತದೆ.
ಬ್ರಾಹ್ಮಣಃ
ಬ್ರವೀಷಿ-ಸೂನೃತಂ ಧರ್ಮ್ಯಂ ಯಸ್ಯ ವಕ್ತಾ ನ ವಿದ್ಯತೇ |
ದಿವ್ಯಪ್ರಭಾವಃ ಸುಮಹಾನೃಷಿರೇವ ಮತೋಽಸಿ ಮೇ ॥13॥
ಬ್ರಾಹ್ಮಣ -ನೀನು ಮಧುರವಾದ ಧರ್ಮವಚನಗಳನ್ನು ಆಡುತ್ತಿದ್ದೀಯೆ. ಇಂತಹ ಮಾತನ್ನು ಆಡುವವರು ಇನ್ನೊಬ್ಬರಿಲ್ಲ. ದಿವ್ಯಪ್ರಭಾವವುಳ್ಳ ನೀನು ದೊಡ್ಡ ಋಷಿ ಎಂದೇ ನನ್ನ ಅಭಿಪ್ರಾಯ.
ವ್ಯಾಧಃ
ಬ್ರಾಹ್ಮಣಾ ವೈ ಮಹಾಭಾಗಾಃ ಪಿತರೋಽಗ್ರಭುಜಃ ಸದಾ |
ತೇಷಾಂ ಸರ್ವಾತ್ಮನಾ ಕಾರ್ಯಂ ಪ್ರಿಯಂ ಲೋಕೇ ಮನೀಷಿಣಾ ॥14॥
ವ್ಯಾಧ ಬ್ರಾಹ್ಮಣರು ಮಹಾನುಭಾವರು. ಅವರು ಪಿತೃಗಳು. ಯಾವಾಗಲೂ ಅಗ್ರಭೋಜಿಗಳು. ವಿವೇಕವುಳ್ಳವನು ಲೋಕದಲ್ಲಿ ಸರ್ವಪ್ರಕಾರದಿಂದಲೂ ಅವರಿಗೆ ಪ್ರಿಯವನ್ನು ಮಾಡಬೇಕು.
ಯತ್ ತೇಷಾಂ ಚ ಪ್ರಿಯಂ ತತ್ ತೇ ವಕ್ಷ್ಯಾಮಿ ದ್ವಿಜಸತ್ತಮ |
ನಮಸ್ಕೃತ್ವಾ ಬ್ರಾಹ್ಮಣೇಭ್ಯೋ ಬ್ರಾಹ್ಮೀಂ ವಿದ್ಯಾಂ ನಿಬೋಧ ಮೇ ॥15॥
ಎಲೈ ದ್ವಿಜಶ್ರೇಷ್ಠರೇ, ಅವರಿಗೆ ಯಾವುದು ಪ್ರಿಯವೋ ಅದನ್ನು ನಿಮಗೆ ಹೇಳುವೆನು. ಬ್ರಾಹ್ಮಣರಿಗೆ ನಮಸ್ಕರಿಸಿ ನನ್ನಿಂದ ಬ್ರಹ್ಮವಿದ್ಯೆಯನ್ನು ತಿಳಿಯಿರಿ.
ಇದಂ ವಿಶ್ವಂ ಜಗತ್ ಸರ್ವಮಜಯ್ಯಂ ಚಾಪಿ ಸರ್ವಶಃ |
ಮಹಾಭೂತಾತ್ಮಕಂ ಬ್ರಹ್ಮ ನಾತಃ ಪರತರಂ ಭವೇತ್ ॥16॥
ಎಲೈ ಬ್ರಾಹ್ಮಣರೇ, ಈ ಸಮಸ್ತವಾದ ಜಗತ್ತು ಸರ್ವಥಾ ಅಜೇಯವಾದುದು.  ಇದರಲ್ಲಿ ಮಹಾಭೂತನೆಂದು ಕರೆಸಿಕೊಳ್ಳುವ ಪರಬ್ರಹ್ಮನು ಇದ್ದಾನೆ. ಅವನಿಗಿಂತ ಶ್ರೇಷ್ಠವಾದ ವಸ್ತುವು ಇನೊಂದಿಲ್ಲ.
ಮಹಾಭೂತಾನಿ ಖಂ ವಾಯುರಗ್ನಿರಾಪಸ್ತಥಾ ಚ ಭೂಃ |
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ತದ್ಗುಣಾಃ ॥17॥
ಪೃಥಿವೀ, ಜಲ, ವಾಯು, ಅಗ್ನಿ, ಆಕಾಶಗಳು ಪಂಚಮಹಾಭೂತಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಅವುಗಳ ಗುಣಗಳು.
ತೇಷಾಮಪಿ ಗುಣಾಃ ಸರ್ವೇ ಗುಣವೃತ್ತಿಃ ಪರಸ್ಪರಮ್ |
ಪೂರ್ವಪೂರ್ವಗುಣಾಃ ಸರ್ವೇ ಕ್ರಮಶೋ ಗುಣಿಷು ತ್ರಿಷು ॥18॥
ಅವುಗಳ ಗುಣಗಳೂ ಸಹ ಪರಸ್ಪರವಾಗಿ ಗುಣಗಳಲ್ಲಿರುತ್ತವೆ. ವಾಯು, ಆಕಾಶದ ಗುಣಗಳು ಕ್ರಮವಾಗಿ ಮುಂದಿನ ಮೂರು ದ್ರವ್ಯಗಳಲ್ಲಿ ಇರುತ್ತವೆ. (ಆಕಾಶದಲ್ಲಿ ಶಬ್ದ, ವಾಯುವಿನಲ್ಲಿ ಶಬ್ದ ಮತ್ತು ಸ್ಪರ್ಶ, ಅಗ್ನಿಯಲ್ಲಿ ಶಬ್ದಸ್ಪರ್ಶ ಮತ್ತು ರೂಪ, ಜಲದಲ್ಲಿ ಶಬ್ದ ಸ್ಪರ್ಶ ರೂಪ ಮತ್ತು ರಸ, ಭೂಮಿಯಲ್ಲಿ ಶಬ್ದ ಸ್ಪರ್ಶ ರೂಪ ರಸ ಮತ್ತು ಗಂಧ. ಹೀಗೆ ಕ್ರಮವಾಗಿರುತ್ತವೆ).
ಷಷ್ಠಸ್ತು ಚೇತನಾ ನಾಮ ಮನ ಇತ್ಯಭಿಧೀಯತೇ |
ಸಪ್ತಮೀ ತು ಭವೇದ್ ಬುದ್ಧಿರಹಂಕಾರಸ್ತತಃ ಪರಮ್ ॥19॥
ಆರನೆಯ ವಸ್ತುವೆಂದರೆ ಚೇತನಾ ಎಂದು ಕರೆಯಲ್ಪಡುವ ಮನಸ್ಸು ಎಂದು ಹೇಳಲ್ಪಡುತ್ತದೆ. ಏಳನೆಯದೆಂದರೆ ಬುದ್ಧಿ, ಅದರ ನಂತರ ಅಹಂಕಾರ.
ಇಂದ್ರಿಯಾಣಿ ಚ ಪಂಚಾತ್ಮಾ ರಜಃ ಸತ್ತ್ವಂ ತಮಸ್ತಥಾ |
ಇತ್ಯೇಷ ಸಪ್ತದಶಕೋ ರಾಶಿರವ್ಯಕ್ತಸಂಜ್ಞಿತಃ ॥20॥
ಅನಂತರ ಪಂಚವಿಧವಾದ ಇಂದ್ರಿಯಗಳು. ಸತ್ತ್ವರಜಸ್ತಮೋಗುಣಗಳು.ಇದು ಅವ್ಯಕ್ತ ಸಂಜ್ಞೆಯುಳ್ಳ ಮೂಲಪ್ರಕೃತಿಯ ಜೊತೆ ಸೇರಿ ಹದಿನೇಳು ದ್ರವ್ಯಗಳ ರಾಶಿ ಎಂದು ಕರೆಯಲ್ಪಡುತ್ತದೆ (ಪಂಚಮಹಾಭೂತಗಳು, ಪಂಚೇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ, ಸತ್ತ್ವರಜಸ್ತಮೋಗುಣಗಳು ಮತ್ತು ಮೂಲಪ್ರಕೃತಿ. ಇದು ಹದಿನೇಳರ ರಾಶಿ. ರೂಪಾದಿ ಪಂಚಕವು ಗುಣವಾದ್ದರಿಂದ ಅದನ್ನು ದ್ರವ್ಯದ ಜೊತೆಯಲ್ಲಿ ಗಣನೆಯನ್ನು ಮಾಡಿಲ್ಲ).

ಸರ್ವೈರಿಹೇಂದ್ರಿಯಾರ್ಥೈಸ್ತು ವ್ಯಕ್ತಾವ್ಯಕ್ತೈಃ ಸುಸಂವೃತೈಃ |
ಚತುರ್ವಿಂಶಕ ಇತ್ಯೇಷ ವ್ಯಕ್ತಾವ್ಯಕ್ತಮಯೋ ಗಣಃ |
ಏತತ್ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥21॥
ಇದಕ್ಕೆ ಇಂದ್ರಿಯಕ್ಕೆ ವಿಷಯಗಳಾದ ಶಬ್ದ ಸರ್ಶ ರೂಪ ರಸ ಗಂಧಗಳನ್ನೂ, ವ್ಯಕ್ತವಾದ ಬ್ರಹ್ಮಾಂಡವನ್ನೂ ಮತ್ತು ಅವ್ಯಕ್ತವಾದ ಮಹತ್ತತ್ವವನ್ನೂ ಸೇರಿಸಿದರೆ ಇದು ವ್ಯಕ್ತಾವ್ಯಕ್ತವಾದ ಇಪ್ಪತ್ನಾಲ್ಕು ವಸ್ತುಗಳ ಒಂದು ರಾಶಿಯಾಗುತ್ತದೆ. ನೀನು ಕೇಳಿದ ಎಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೇನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಬ್ರಾಹ್ಮಣಮಾಹಾತ್ಮ್ಯೇ
ಪತಿವ್ರತಾಮಾಹಾತ್ಮ್ಯೇ ದ್ವಾವಿಂಶೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೇಳನೆಯ
ಅಧ್ಯಾಯ ಮುಗಿಯಿತು
* * * *

ನೂರ ತೊಂಬತ್ತೆಂಟನೆಯ ಅಧ್ಯಾಯ
ಧರ್ಮವ್ಯಾಧನಿಂದ ಪಂಚಮಹಾಭೂತಗಳ ಗುಣನಿರೂಪಣೆ.
ಮಾರ್ಕಂಡೇಯಃ
ಏವಮುಕ್ತಃ ಸ ವಿಪ್ರಸ್ತು ಧರ್ಮವ್ಯಾಧೇನ ಭಾರತ |
ಕಥಾಮಕಥಯದ್ ಭೂಯೋ ಮನಸಃ ಪ್ರೀತಿವರ್ಧನೀಮ್ ॥1॥
ಮಾರ್ಕಂಡೇಯ ಎಲೈ ಭಾರತನೇ, ಧರ್ಮವ್ಯಾಧನಿಂದ ಹೀಗೆ ಹೇಳಲ್ಪಟ್ಟ ಆ ಬ್ರಾಹ್ಮಣನು ಮನಸ್ಸಿಗೆ ಸಂತೋಷವುಂಟು ಮಾಡುವ ಕಥೆಯನ್ನು ಪುನಃ ಮುಂದುವರಿಸಿದನು.
ಬ್ರಾಹ್ಮಣಃ
ಮಹಾಭೂತಾನಿ ಯಾನ್ಯಾಹುಃ ಪಂಚ ಧರ್ಮಭೃತಾಂ ವರ |
ಏಕೈಕಸ್ಯ ಗುಣಾನ್ ಸಮ್ಯಕ್ ಪಂಚಾನಾಮಪಿ ಮೇ ವದ ॥2॥
ಬ್ರಾಹ್ಮಣ ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಯಾವುದನ್ನು ಪಂಚಮಹಾಭೂತಗಳೆಂದು ಹೇಳುತ್ತಾರೆಯೋ ಅವುಗಳಲ್ಲಿ ಒಂದೊಂದರ ಗುಣಗಳನ್ನೂ ನನಗೆ ಚೆನ್ನಾಗಿ ಹೇಳು.
ವ್ಯಾಧಃ
ಭೂಮಿರಾಪಪಸ್ತಥಾ ಜ್ಯೋತಿರ್ವಾಯುರಾಕಾಶಮೇವ ಚ |
ಗುಣೋತ್ತರಾಣಿ ಸರ್ವಾಣಿ ತೇಷಾಂ ವಕ್ಷ್ಯಾಮಿ ತೇ ಗುಣಾನ್ ॥3॥
ವ್ಯಾಧ ಭೂಮಿ, ಜಲ, ಅಗ್ನಿ, ವಾಯು ಮತ್ತು ಆಕಾಶ. ಇವುಗಳು ಗುಣಗಳಿಂದ ಕೂಡಿದವು. ಆ ಗುಣದ ಪ್ರಕಾರಗಳನ್ನು ನಿನಗೆ ಹೇಳುವೆನು.
ಭೂಮಿಃ ಪಂಚಗುಣಾಃ ಬ್ರಹ್ಮನ್ನುದಕಂ ಚ ಚತುರ್ಗುಣಮ್ |
ಗುಣಾಸ್ತ್ರಯಸ್ತೇಜಸಿ ಸ ತ್ರಯಶ್ಚಾಕಾಶವಾತಯೋಃ ॥4॥
ಎಲೈ ಬ್ರಾಹ್ಮಣರೇ, ಭೂಮಿಗಳಲ್ಲಿ ಐದು ಗುಣಗಳು, ಉದಕದಲ್ಲಿ ನಾಲ್ಕು ಗುಣಗಳು, ತೇಜಸ್ಸಿನಲ್ಲಿ ಮೂರು ಗುಣಗಳು, ವಾಯುವಿನಲ್ಲಿ ಎರಡು ಗುಣಗಳು ಮತ್ತು ಆಕಾಶದಲ್ಲಿ ಒಂದು ಗುಣ (ಆಕಾಶವಾಯುಗಳಲ್ಲಿ ಒಟ್ಟು ಮೂರುಗುಣಗಳು).
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ |
ಏತೇ ಗುಣಾಃ ಪಂಚ ಭೂಮೇಃ ಸರ್ವೇಭ್ಯೋ ಗುಣವತ್ತರಾ ॥5॥
ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಈ ಐದು ಭೂಮಿಯ ಗುಣಗಳು. ಭೂಮಿಯಲ್ಲಿ ಉಳಿದ ನಾಲ್ಕು ಪಂಚಮಹಾಭೂತಗಳಿಗಿಂತ ಅಧಿಕ ಸಂಖ್ಯೆಯ ಗುಣಗಳಿರುತ್ತವೆ.
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸಶ್ಚಾಪಿ ದ್ವಿಜೋತ್ತಮ |
ಅಪಾಮೇತೇ ಗುಣಾ ಬ್ರಹ್ಮನ್ ಕೀರ್ತಿತಾಸ್ತವ ಸುವ್ರತ ॥6॥
ಎಲೈ ದ್ವಿಜೋತ್ತಮರೇ, ಸುವ್ರತರೇ, ಶಬ್ದ, ಸ್ಪರ್ಶ, ರೂಪ, ರಸಗಳು ಉದಕದ ಗುಣಗಳೆಂದು ನಿಮಗೆ ಹೇಳುತ್ತಿದ್ದೇನೆ.
ಶಬ್ದಃ ಸ್ಪರ್ಶಶ್ಚ ರೂಪಂ ಚ ತೇಜಸೋಽಥ ಗುಣಾಸ್ತ್ರಯಃ |
ಶಬ್ದಃ ಸ್ಪರ್ಶಶ್ಚ ವಾಯೌ ತು ಶಬ್ದಶ್ಚಾಕಾಶ ಏವ ತು ॥7॥
ತೇಜಸ್ಸಿನಲ್ಲಿ ಶಬ್ದ, ಸ್ಪರ್ಶ, ರೂಪ ಈ ಮೂರು ಗುಣಗಳಿವೆ. ವಾಯುವಿನಲ್ಲಿ ಶಬ್ದ ಮತ್ತು ಸ್ಪರ್ಶಗಳು. ಆಕಾಶದಲ್ಲಿ ಮಾತ್ರ ಶಬ್ದವು ಒಂದೇ ಗುಣ.
ಏತೇ ಪಂಚದಶ ಬ್ರಹ್ಮನ್ ಗುಣಾ ಭೂತೇಷು ಪಂಚಸು |
ವರ್ತಂತೇ ಸರ್ವಭೂತೇಷು ಯೇಷು ಲೋಕಾಃ ಪ್ರತಿಷ್ಠಿತಾಃ |
ಅನ್ಯೋನ್ಯಂ ನಾತಿವರ್ತಂತೇ ಸಮ್ಯಕ್ ಚ ಭವತಿ ದ್ವಿಜ ॥8॥
ಎಲೈ ಬ್ರಾಹ್ಮಣರೇ, ಪಂಚಮಹಾಭೂತಗಳಲ್ಲಿ ಹೀಗೆ ಒಟ್ಟು ಹದಿನೈದು ಗುಣಗಳಿರುತ್ತವೆ. ಲೋಕಗಳೆಲ್ಲವೂ ಈ ಪಂಚಭೂತಗಳಲ್ಲಿ ಪ್ರತಿಷ್ಠಿತವಾಗಿವೆ. ಎಲೈ ಬ್ರಾಹ್ಮಣರೇ, ಇವು ಒಂದನ್ನೊಂದು ಮೀರಿ ಇರುವುದಿಲ್ಲ (ದೇಹಗಳಲ್ಲಿ ಎಷ್ಟು ಪ್ರಮಾಣದಲ್ಲಿ ಇರಬೇಕೋ

ಅಷ್ಟೇ ಪ್ರಮಾಣದಲ್ಲಿ ಇರುತ್ತವೆ). ಹಾಗಾದಾಗ ಎಲ್ಲವೂ ಸರಿಯಾಗಿರುತ್ತದೆ.
ಯದಾ ತು ವಿಷಮಂ ಭಾವಮಾಚರಂತಿ ಚರಾಚರಾಃ |
ತದಾ ದೇಹೀ ದೇಹಮನ್ಯಂ ವ್ಯತಿರೋಹತಿ ಕಾಲತಃ ||9||
ಯಾವಾಗ ಚರಾಚರ ದೇಹಿಗಳ ಸಂಬಂಧಿಯಾದ ಈ ಪಂಚಭೂತಗಳಲ್ಲಿ ವೈಷಮ್ಯ ಉಂಟಾಗುವುದೋ ಆಗ ದೇಹಿಯು ಮರಣವನ್ನು ಹೊಂದುವನು.
ಪ್ರಾತಿಲೋಮ್ಯಾದ್ ವಿನಶ್ಯಂತಿ ಜಾಯಂತೇ ಚಾನುಪೂರ್ವಶಃ ||10||
ಪಂಚಭೂತಗಳು ಯಾವ ಕ್ರಮದಲ್ಲಿ ಜನಿಸುತ್ತವೆಯೋ ಅದಕ್ಕೆ ವಿರುದ್ಧವಾದ ಕ್ರಮದಲ್ಲಿ ನಾಶವನ್ನು ಹೊಂದುತ್ತವೆ (ಆಕಾಶ, ವಾಯು, ಅಗ್ನಿ, ಉದಕ, ಪೃಥಿವೀ ಈ ಕ್ರಮದಲ್ಲಿ ಜನನ. ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ ಈ ಕ್ರಮದಲ್ಲಿ ನಾಶ).
ತತ್ರ ತತ್ರ ಹಿ ದೃಶ್ಯಂತೇ ಧಾತವಃ ಪಾಂಚಭೌತಿಕಾಃ |
ಯೈರಾವೃತಮಿದಂ ಸರ್ವಂ ಜಗತ್ ಸ್ಥಾವರಜಂಗಮಮ್ ||11||
ಪಂಚಭೂತಗಳಿಗೆ ಸಂಬಂಧಪಟ್ಟ ಧಾತುಗಳು ಎಲ್ಲಾ ಕಡೆಯಲ್ಲಿಯೂ ಕಂಡುಬರುತ್ತವೆ. ಅವುಗಳಿಂದ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲವೂ ವ್ಯಾಪ್ತವಾಗಿದೆ.
ಇಂದ್ರಿಯೈಃ ಗೃಹ್ಯತೇ ಯದ್ಯತ್ ತತ್ತದ್ವ್ಯಕ್ತಮಿತಿ ಸ್ಮೃತಮ್ |
ತದವ್ಯಕ್ತಮಿತಿ ಜ್ಞೇಯಂ ಲಿಂಗಗ್ರಾಹ್ಯಮತೀಂದ್ರಿಯಮ್ ||12||
ಇಂದ್ರಿಯಗಳಿಗೆ ಗೋಚರವಾಗುವುದೆಲ್ಲವೂ ವ್ಯಕ್ತ ಎಂದು ಕರೆಯಲ್ಪಡುತ್ತದೆ. ಲಿಂಗಗ್ರಾಹ್ಯವಲ್ಲದುದು ಮತ್ತು ಅತೀಂದ್ರಿಯವಾದುದು ಅವ್ಯಕ್ತ ಎಂದು ತಿಳಿಯಬೇಕು.
ಯಥಾಸ್ವಂ ಗ್ರಾಹಕಾನ್ಯೇಷಾಂ ಶಬ್ದಾದೀನಾಮಿಮಾನಿ ತು |
ಇಂದ್ರಿಯಾಣಿ ಯದಾ ದೇಹೀ ಧಾರಯನ್ನಿಹ ತಪ್ಯತೇ ||13||
ಯಾವಾಗ ದೇಹಿಯು ಇಂದ್ರಿಯಗಳನ್ನು ಧರಿಸಿ ಸಂಸಾರದಲ್ಲಿ ತಾಪವನ್ನು ಅನುಭವಿಸುತ್ತಾನೆಯೋ ಆಗ ಇಂದ್ರಿಯಗಳು ತಮ್ಮ ಸ್ವಭಾವಕ್ಕೆ ಅನುಗುಣವಾಗಿ ವಿಷಯಗಳನ್ನು ಗ್ರಹಿಸುತ್ತವೆ (ಆಕಾಶೇಂದ್ರಿಯವಾದ ಶ್ರೋತ್ರವು ಶಬ್ದವನ್ನು ಗ್ರಹಿಸುತ್ತದೆ. ವಾಯ್ವಿಂದ್ರಿಯವಾದ ತ್ವಕ್ ಸ್ಪರ್ಶವನ್ನು ಗ್ರಹಿಸುತ್ತದೆ. ತೇಜ ಇಂದ್ರಿಯವಾದ ಚಕ್ಷುಸ್ಸು ರೂಪವನ್ನು ಗ್ರಹಿಸುತ್ತದೆ. ಜಲೇಂದ್ರಿಯವಾದ ರಸನೆಯು ರಸವನ್ನು ಗ್ರಹಿಸುತ್ತದೆ. ಭೂಮೀಂದ್ರಿಯವಾದ ಘ್ರಾಣವು ಗಂಧವನ್ನು ಗ್ರಹಿಸುತ್ತದೆ).
ಪರಾವರಜ್ಞೋ ಯಃ ಶಕ್ತಃ ಸ ತು ಭೂತಾನಿ ಪಶ್ಯತಿ ||14||
ಪರಾವರ ವಸ್ತುವನ್ನು ತಿಳಿದ ಸಮರ್ಥನಾದ ಯಾವ ಜ್ಞಾನಿಯು ಲೋಕದಲ್ಲಿ ವ್ಯಾಪ್ತನಾದ ಪರಮಾತ್ಮನನ್ನು, ಪರಮಾತ್ಮನಲ್ಲಿ ಆಶ್ರಿತವಾದ ಲೋಕವನ್ನು ನೋಡುತ್ತಾನೆಯೋ ಅವನು ಪಂಚಭೂತಗಳನ್ನು ಸರಿಯಾಗಿ ತಿಳಿಯುತ್ತಾನೆ.
ಪಶ್ಯತಃ ಸರ್ವಭೂತಾನಿ ಸರ್ವಾವಸ್ಥಾಸು ಸರ್ವದಾ |
ಬ್ರಹ್ಮಭೂತೇನ ಸಂಯೋಗೋ ನಾಶುಭೇನೋಪಪದ್ಯತೇ ||15||
ಯಾವನು ಎಲ್ಲಾ ಅವಸ್ಥೆಗಳಲ್ಲಿಯೂ ಯಾವಾಗಲೂ ಸರ್ವಭೂತಗಳನ್ನು ಕಾಣುತ್ತಾನೆಯೋ ಅವನಿಗೆ ವೇದಪ್ರತಿಪಾದಿತವಾದ ಸದ್ಧರ್ಮದ ಜೊತೆಯಲ್ಲಿ ಸಂಯೋಗ ಉಂಟಾಗುತ್ತದೆ. ಅಶುಭಧರ್ಮದ ಸಂಯೋಗವು ಉಂಟಾಗುವುದಿಲ್ಲ.
ಜ್ಞಾನಮೂಲಾತ್ಮಕಂ ಕ್ಲೇಶಮತಿವೃತ್ತಸ್ಯ ಮೋಹಜಮ್ |
ಲೋಕೋ ಬುದ್ಧಿಪ್ರಕಾಶೇನ ಜ್ಞೇಯಮಾರ್ಗೇಣ ಗಮ್ಯತೇ ||16||
ವಿಷಯಗಳಲ್ಲಿ ಅತಿಯಾಗಿ ಆಸಕ್ತನಾದವನಿಗೆ ಜ್ಞಾನಗಳನ್ನು ನಿರ್ಮೂಲಗೊಳಿಸುವ ಮೋಹಜನ್ಯವಾದ ಕ್ಲೇಶವುಂಟಾಗುತ್ತದೆ. ಲೋಕವು ತಮ್ಮ ಬುದ್ಧಿಯು ತೋರಿಸಿದ ವಿಷಯದ ಮಾರ್ಗದಲ್ಲಿ ಒಯ್ಯಲ್ಪಡುತ್ತದೆ.
ಅನಾದಿನಿಧನಂ ಜಂತುಮಾತ್ಮಯೋನಿಂ ಸದಾವ್ಯಯಮ್ |
ಅನೌಪಮ್ಯಮಮೂರ್ತಂ ಚ ಭಗವಾನಾಹ ಬುದ್ಧಿಮಾನ್ ||17||
ಮೇಧಾವಿಯಾದ ಮಾನವನು ಅನಾದಿನಿಧನನಾದ ಆತ್ಮಯೋನಿಯಾದ ಶಾಶ್ವತನಾದ ಅಸದೃಶನಾದ ಅವ್ಯಕ್ತವಾದ ವಸ್ತುವನ್ನು ಪರಮಾತ್ಮನೆಂದು ಕರೆಯುತ್ತಾನೆ.
ತಪೋಮೂಲಮಿದಂ ಸರ್ವಂ ಯನ್ಮಾಂ ವಿಪ್ರಾನುಪೃಚ್ಛಸಿ |
ತಪಸಾ ಹಿ ಸಮಾಪ್ನೋತಿ ಯದ್ಯದೇವಾಭಿವಾಂಛಿತಮ್ ||18||
ಎಲೈ ಬ್ರಾಹ್ಮಣರೇ, ನೀವು ನನ್ನನ್ನು ಏನನ್ನು ಕೇಳುತ್ತಿದ್ದೀರೋ ಅವೆಲ್ಲವೂ ತಪೋಮೂಲವಾದುದು. ಮಾನವನು ತನಗೆ ಇಷ್ಟವಾದುದೆಲ್ಲವನ್ನೂ ತಪಸ್ಸಿನಿಂದ ಪಡೆಯುತ್ತಾನೆ.
ಇಂದ್ರಿಯಾಣ್ಯೇವ ತತ್ ಸರ್ವಂ ಯೌಸ್ವರ್ಗನರಕಾವುಭೌ |
ನಿಗೃಹೀತವಿಸೃಷ್ಟಾನಿ ಸ್ವರ್ಗಾಯ ನರಕಾಯ ಚ ||19||
ಸ್ವರ್ಗ ಮತ್ತು ನರಕ ಈ ಎರಡು ಲೋಕಗಳಿಗೆ ಪುರುಷನನ್ನು ಇಂದ್ರಿಯಗಳೇ ಕರೆದುಕೊಂಡು ಹೋಗುತ್ತವೆ. ನಿಗ್ರಹೀತವಾದ ಇಂದ್ರಿಯಗಳು ಸ್ವರ್ಗಕ್ಕೂ, ನಿಯಂತ್ರಣವಿಲ್ಲದ ಇಂದ್ರಿಯಗಳು ನರಕಕ್ಕೂ ಕೊಂಡೊಯ್ಯುತ್ತವೆ.
ತದಿಂದ್ರಿಯಾಣಿ ಸಂಯಮ್ಯ ತಪೋ ಭವತಿ ನಾನ್ಯಥಾ |
ಏಷ ಯೋಗವಿಧಿಃ ಕೃತ್ಸ್ನೋ ಯಾವದಿಂದ್ರಿಯಧಾರಣಮ್ |
ಏತನ್ಮೂಲಂ ಹಿ ತಪಸಃ ಸ್ವರ್ಗಸ್ಯ ನರಕಸ್ಯ ಚ ||20||
ಆದ್ದರಿಂದ ಇಂದ್ರಿಯಗಳನ್ನು ನಿಗ್ರಹಿಸಿದರೆ ಮಾತ್ರ ತಪಸ್ಸು ಸಾಧ್ಯವಾಗುತ್ತದೆ. ಬೇರೆ ರೀತಿಯಲ್ಲಿ ಆಗುವುದಿಲ್ಲ. ಇಂದ್ರಿಯಧಾರಣೆಯೇ ಸಮಸ್ತ ಯೋಗವಿಧಿಗಳ ಉದ್ದೇಶವಾಗಿದೆ. ಈ ಇಂದ್ರಿಯಗಳೇ ತಪಸ್ಸಿಗೂ, ಸ್ವರ್ಗಕ್ಕೂ ಮತ್ತು ನರಕಕ್ಕೂ ಕಾರಣಗಳಾಗಿವೆ.

ಇಂದ್ರಿಯಾಣಾಂ ಪ್ರಸಂಗೇನ ದೋಷಮಾರ್ಚ್ಛತ್ಯಸಂಶಯಮ್ |
ಸನ್ನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ಸಮಾಪ್ನುಯಾತ್ ॥21॥
ಇಂದ್ರಿಯಗಳನ್ನು ಅತಿಯಾಗಿ ವಿಷಯಗಳಲ್ಲಿ ಹರಿಯಲು ಬಿಟ್ಟರೆ ನಿಸ್ಸಂಶಯವಾಗಿ ದೋಷವುಂಟಾಗುತ್ತದೆ. ಅವುಗಳನ್ನು ನಿಗ್ರಹಮಾಡಿದರೆ ಮಾತ್ರ ಅದರಿಂದ ಸಿದ್ಧಿ ಉಂಟಾಗುತ್ತದೆ.
ಷಣ್ಣಾಮಾತ್ಮನಿ ಯೋಜ್ಯಾನಾಮೈಶ್ವರ್ಯಂ ಯೋಽಧಿಗಚ್ಛತಿ |
ನ ಸ ಪಾಪೈಃ ಕುತೋಽನರ್ಥೈರ್ಯುಜ್ಯತೇ ವಿಜಿತೇಂದ್ರಿಯಃ ॥22॥
ಪರಮಾತ್ಮನಲ್ಲಿ ಯೋಜಿಸಲ್ಪಡಬೇಕಾದ ಆರು ಇಂದ್ರಿಯಗಳ ಮೇಲೆ (ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳ ಮೇಲೆ) ಯಾರು ಪ್ರಭುತ್ವವನ್ನು ಹೊಂದುತ್ತಾನೆಯೋ ಅಂತಹ ಜಿತೇಂದ್ರಿಯನಾದವನು ಪಾಪದಿಂದ ಯುಕ್ತನಾಗುವುದಿಲ್ಲ. ಇನ್ನು ಅವನಿಗೆ ದುಃಖವು ಎಲ್ಲಿಂದ ಬರಬೇಕು?
ರಥಂ ಶರೀರಂ ಪುರುಷಸ್ಯ ದೃಷ್ಟ
ಮಾತ್ಮಾನಿಯತೇಂದ್ರಿಯಾಣ್ಯಾಹುರಶ್ವಾನ್ |
ತೈರಪ್ರಮತ್ತಃ ಕುಶಲೀ ಸದಶ್ವೈಃ
ದಾಂತೈಃ ಸುಖಂ ಯಾತಿ ರಥೀವ ಧೀರಃ ॥23॥
ಮನುಷ್ಯನ ಶರೀರವೇ ಒಂದು ರಥವೆಂದು ಜ್ಞಾನಿಗಳಿಂದ ದೃಷ್ಟವಾಗಿದೆ. ಪರಮಾತ್ಮನು ನಿಯಂತ್ರಿಸುವ ರಥಿಕ. ಇಂದ್ರಿಯಗಳನ್ನು ಅಶ್ವಗಳೆಂದು ಕರೆಯುತ್ತಾರೆ. ಆ ಇಂದ್ರಿಯಗಳ ವಿಷಯದಲ್ಲಿ ಪ್ರಮಾದವನ್ನು ಹೊಂದದೇ ಕುಶಲನಾಗಿದ್ದರೆ ಪಳಗಿಸಿದ ಸದಶ್ವಗಳಿಂದ ರಥಿಕನು ಸುಖವಾಗಿ ಪ್ರಯಾಣ ಮಾಡುವಂತೆ ಧೀರನಾದ ಪುರುಷನು ಸುಖವಾಗಿ ಪ್ರಯಾಣವನ್ನು ಮಾಡುತ್ತಾನೆ.
ಷಣ್ಣಾಮಾತ್ಮನಿ ಯುಕ್ತಾನಾಮಿಂದ್ರಿಯಾಣಾಂ ಪ್ರಮಾಥಿನಾಮ್ |
ಯೋ ಧೀರೋ ಧಾರಯೇದ್ ರಶ್ಮೀನ್ ಸ ಸ್ಯಾತ್ ಪರಮಸಾರಥಿಃ ॥
ಮನುಷ್ಯನನ್ನು ಕ್ಷೋಭೆಗೊಳಿಸುವ ಈ ಆರು ಇಂದ್ರಿಯಗಳನ್ನು ಯಾವ ಧೀರನು ಪರಮಾತ್ಮನಲ್ಲಿ ಯೋಜಿಸುತ್ತಾನೆಯೋ ಅವನೇ ಕಡಿವಾಣವನ್ನು ಹಿಡಿದ ಶ್ರೇಷ್ಠ ಸಾರಥಿ.
ಇಂದ್ರಿಯಾಣಾಂ ಪ್ರಸೃಷ್ಟಾನಾಂ ಹಯಾನಾಮಿವ ವರ್ತ್ಮಸು |
ಧೃತಿಂ ಕುರ್ವೀತ ಸಾರಥ್ಯೇ ಧೃತ್ಯಾ ತಾನಿ ಜಯೇದ್ ಧ್ರುವಮ್ ॥25॥
ಅಶ್ವಗಳು ಮಾರ್ಗದಲ್ಲಿ ಹೋಗುವಂತೆ ವಿಷಯದ ಮಾರ್ಗದಲ್ಲಿ ಹೋಗುವ ಇಂದ್ರಿಯಗಳನ್ನು ಸಾರಥಿಯು ಧೈರ್ಯದಿಂದ ನಿಯಂತ್ರಿಸಬೇಕು. ಧೈರ್ಯದಿಂದ ಇಂದ್ರಿಯಗಳ ಜಯವು ಖಂಡಿತವಾಗಿ ಸಾಧ್ಯವಾಗುತ್ತದೆ.
ಇಂದ್ರಿಯಾಣಾಂ ವಿಚರತಾಂ ಯನ್ಮನೋಽನುವಿಧೀಯತೇ |
ತದಸ್ಯ ಹರತೇ ಬುದ್ಧಿಂ ನಾವಂ ವಾಯುರಿವಾಂಭಸಿ ॥26॥
ಯಾವನ ಮನಸ್ಸು ಇಂದ್ರಿಯಗಳು ಹೋದ ದಾರಿಯಲ್ಲಿಯೇ ಹೋಗುತ್ತವೆಯೋ ಅವನ ಮನಸ್ಸು ಜಲದಲ್ಲಿ ವಾಯುವು ನೌಕೆಯನ್ನು ಎಳೆದುಕೊಂಡು ಹೋದಂತೆ ಅವನ ಬುದ್ಧಿಯನ್ನು ಎಳೆದುಕೊಂಡು ಹೋಗುತ್ತದೆ (ನಾಶಮಾಡುತ್ತದೆ).
ಯೇಷು ವಿಪ್ರತಿಪದ್ಯಂತೇ ಷಟ್ಸ್ವಮೋಹಾತ್ ಫಲಾಗಮಮ್ |
ಜ್ಞಾತ್ವೈಷ್ವಧ್ಯಾಯಾಸಿತೋ ಧ್ಯಾಯೀ ವಿಂದತೇ ಧ್ಯಾನಜಂ ಫಲಮ್ ॥
ಯಾವ ಆರು ಇಂದ್ರಿಯಗಳಲ್ಲಿ ಮೋಹವಿಲ್ಲದೆ ವರ್ತಿಸುವುದರಿಂದ ಫಲಪ್ರಾಪ್ತಿಯನ್ನು ವಿಶೇಷವಾಗಿ ಪಡೆಯುತ್ತಾರೆಯೋ, ಆ ಆರು ಇಂದ್ರಿಯಗಳನ್ನು ತಿಳಿದು ಅವುಗಳಲ್ಲಿ ಅಧಿಷ್ಠಿತನಾಗಿ ಪರಮಾತ್ಮನನ್ನು ಧ್ಯಾನಮಾಡುವವನು ಪರಮ ಸುಖವನ್ನು ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟನವತ್ಯಧಿಕಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಪತಿವ್ರತಾಮಾಹಾತ್ಮ್ಯೇ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು
* * * *

ನೂರ ತೊಂಬತ್ತೊಂಬತ್ತನೆಯ ಅಧ್ಯಾಯ
ಧರ್ಮವ್ಯಾಧನಿಂದ ಸತ್ತ್ವಾದಿ ಗುಣದಿಂದ ಉಂಟಾಗುವ ಗುಣಗಳ ವರ್ಣನೆ.
ಮಾರ್ಕಂಡೇಯಃ
ಏವಂ ತು ಸೂಕ್ಷ್ಮೇ ಕಥಿತೇ ಧರ್ಮವ್ಯಾಧೇನ ಭಾರತ |
ಬ್ರಾಹ್ಮಣಃ ಸ ಪುನಃ ಸೂಕ್ಷ್ಮಂ ಪಪ್ರಚ್ಛ ಸುಸಮಾಹಿತಃ ॥1॥
ಮಾರ್ಕಂಡೇಯ ಎಲೈ ಯುಧಿಷ್ಠಿರನೇ, ಧರ್ಮವ್ಯಾಧನಿಂದ ಇಂತಹ ಸೂಕ್ಷ್ಮ ವಿಷಯವು ಹೇಳಲ್ಪಡುತ್ತಿರಲು ಆ ಬ್ರಾಹ್ಮಣನು ಸಮಾಧಾನವುಳ್ಳವನಾಗಿ ಇನ್ನೊಂದು ಸೂಕ್ಷ್ಮ ವಿಷಯದಲ್ಲಿ ಹೀಗೆ ಪ್ರಶ್ನೆಯನ್ನು ಮಾಡಿದನು.
ಸತ್ತ್ವಸ್ಯ ರಜಸಶ್ಚೈವ ತಮಸಶ್ಚ ಯಥಾತಥಮ್ |
ಗುಣಾಂಸ್ತತ್ತ್ವೇನ ಮೇ ಬ್ರೂಹಿ ಯಥಾವದಿಹ ಪೃಚ್ಛತಃ ॥2॥
ಸತ್ತ್ವ, ರಜಸ್ಸು ಮತ್ತು ತಮಸ್ಸು ಈ ಮೂರು ಗುಣಗಳಿಂದ ಮನುಷ್ಯನಲ್ಲಿ ಉಂಟಾಗುವ ಗುಣಗಳನ್ನು ಪ್ರಶ್ನೆಯನ್ನು ಕೇಳುತ್ತಿರುವ ನನಗೆ ಯಥಾರ್ಥವಾಗಿ ಹೇಳು.
ವ್ಯಾಧಃ
ಹಂತ ತೇ ಕಥಯಿಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ |

ಏಷಾಂ ಗುಣಾನ್ ಪೃಥಕ್ತ್ವೇನ ನಿಬೋಧ ಗದತೋ ಮಮ ॥3॥
ವ್ಯಾಧ ಸಂತೋಷ. ನೀನು ಏನನ್ನು ಕೇಳುತ್ತಿದ್ದೀಯೋ ಅಂತಹ ಸತ್ತತ್ವಾದಿ ಗುಣಗಳಿಂದ ಉಂಟಾಗುವ ಗುಣಗಳನ್ನು ಬೇರೆ ಬೇರೆಯಾಗಿ ಹೇಳುವೆನು. ನಾನು ಹೇಳಿದಂತೆ ಅದನ್ನು ಕೇಳು.
ಮೋಹಾತ್ಮಕಂ ತಮಸ್ತೇಷಾಂ ರಜ ಏಷಾಂ ಪ್ರವರ್ತಕಮ್ |
ಪ್ರಕಾಶಬಹುಲತ್ವಾಚ್ಚ ಸತ್ತ್ವಂ ಜ್ಯಾಯ ಇಹೋಚ್ಯತೇ ॥4॥
ಸತ್ತತ್ವಾದಿ ಮೂರುಗುಣಗಳಲ್ಲಿ ತಮೋಗುಣವು ಮೋಹವನ್ನು ಉಂಟು ಮಾಡುವಂತಹದು. ರಜೋಗುಣವು ವಿಷಯದಲ್ಲಿ ಪ್ರವೃತ್ತಿಯನ್ನು ಉಂಟು ಮಾಡುವಂತಹುದು. ಸತ್ತ್ವವು ಜ್ಞಾನವನ್ನು ಉಂಟುಮಾಡುವ ಕಾರಣದಿಂದ ಅದು ಶ್ರೇಷ್ಠವಾದುದು ಎಂದು ಹೇಳಲ್ಪಡುತ್ತದೆ.
ಅವಿದ್ಯಾಬಹುಲೋ ಮೂಢಃ ಸ್ವಪ್ನಶೀಲೋ ವಿಚೇತನಃ |
ದುರ್ಹೃಷೀಕಸ್ತಮೋಧ್ವಸ್ತಃ ಸಕ್ರೋಧಸ್ತಾಮಸೋಽಲಸಃ ॥5॥
ತಾಮಸನಾದ ಮಾನವನು ತಮೋಗುಣದಿಂದ ಪೀಡಿತನಾಗಿ ಬಹಳ ಅಜ್ಞಾನವನ್ನು ಹೊಂದಿ ಮೂಢನೂ, ನಿದ್ರಾಳುವೂ, ವಿಚೇತನನೂ, ದುಷ್ಟೇಂದ್ರಿಯಗಳನ್ನು ಹೊಂದಿದವನೂ, ಕ್ರೋಧವುಳ್ಳವನೂ, ಆಲಸ್ಯ ಉಳ್ಳವನೂ ಆಗಿರುತ್ತಾನೆ.
ಪ್ರವೃತ್ತವಾಕ್ಯೋ ಮಂತ್ರೀ ಚ ಯೋಽನುರಾಗ್ಯಭ್ಯಸೂಯಕಃ |
ವಿಧಿತ್ಸಮಾನೋ ವಿಪ್ರರ್ಷೇ ಸ್ತಬ್ಧೋ ಮಾನೀ ಸ ರಾಜಸಃ ॥6॥
ಎಲೈ ವಿಪ್ರರ್ಷಿಗಳೇ, ರಾಜಸನಾದವನು ಹೆಚ್ಚು ಮಾತನಾಡುವವನೂ, ಮಂತ್ರಾಲೋಚನೆಯನ್ನು ಮಾಡುವವನೂ, ಅನುರಾಗ ಮತ್ತು ಅಸೂಯೆಯನ್ನು ಉಳ್ಳವನೂ, ಯಾವಾಗಲೂ ಏನಾದರೂ ಪ್ರವೃತ್ತಿಯನ್ನು ಮಾಡುವವನೂ, ಅಹಂಕಾರ ಉಳ್ಳವನೂ ಮತ್ತು ಗರ್ವವುಳ್ಳವನೂ ಆಗಿರುತ್ತಾನೆ.
ಪ್ರಕಾಶಬಹುಲೋ ಧೀರೋ ನಿರ್ವಿವಿತ್ಸೋಽನಸೂಯಕಃ |
ಅಕ್ರೋಧನೋ ನರೋ ಧೀಮಾನ್ ದಾಂತಶ್ಚೈವ ಸ ಸಾತಿತ್ವಕಃ ॥7॥
ಸಾತ್ವಿಕನಾದವನು ಬಹಳ ಜ್ಞಾನವನ್ನು ಹೊಂದಿದವನೂ, ಧೀರನೂ, ಸಂಶಯ ರಹಿತನೂ, ಅಸೂಯಾ ರಹಿತನೂ, ಕ್ರೋಧರಹಿತನೂ, ಮೇಧಾವಿಯೂ, ಇಂದ್ರಿಯ ನಿಗ್ರಹವುಳ್ಳವನೂ ಆಗಿರುತ್ತಾನೆ.
ಸಾತಿತ್ವಕಸ್ತ್ವಥ ಸಂಬುದ್ಧೋ ಲೋಕವೃತ್ತೇರ್ನ ಕ್ಲಿಶ್ಯತೇ |
ಯದಾ ಬುಧ್ಯತಿ ಬೋದ್ಧವ್ಯಂ ಲೋಕವೃತ್ತಂ ಜುಗುಪ್ಸತೇ ॥8॥
ಒಳ್ಳೆಯ ಜ್ಞಾನವನ್ನು ಹೊಂದಿದ ಸಾತ್ವಿಕನು ಲೋಕದ ನಡತೆಯಿಂದ ಕ್ಲೇಶವನ್ನು ಪಡುವುದಿಲ್ಲ. ಅವನು ತಿಳಿಯಬೇಕಾದುದನ್ನೆಲ್ಲಾ ತಿಳಿದಾಗ ಲೋಕವೃತ್ತವನ್ನು ನೋಡಿ ಜುಗುಪ್ಸೆ ಪಡುತ್ತಾನೆ.
ವೈರಾಣ್ಯಸ್ಯ ಚ ರೂಪಂ ತು ಪೂರ್ವಮೇವ ಪ್ರವರ್ತತೇ |
ಮೃದುರ್ಭವತ್ಯಹಂಕಾರಃ ಪ್ರಸೀದತ್ಯಾರ್ಜವಂ ಚ ಯತ್ |
ತತೋಽಸ್ಯ ಸರ್ವದ್ವಂದ್ವಾನಿ ಪ್ರಶಾಮ್ಯಂತಿ ಪರಸ್ಪರಮ್ ॥9॥
ಈ ಲೋಕವೃತ್ತಕ್ಕೆ ವಿರುದ್ಧವಾದ ಚಿಹ್ನೆಗಳು ಅವನಲ್ಲಿ ಮೊದಲೇ ಕಾಣಿಸಿಕೊಳ್ಳುತ್ತವೆ. ಅಹಂಕಾರವುಳ್ಳವನು ಮೃದುವಾಗುತ್ತಾನೆ. ಮನಸ್ಸು ಪ್ರಸನ್ನವಾಗುತ್ತದೆ. ಆರ್ಜವವನ್ನು ಹೊಂದಿದವನಾಗುತ್ತಾನೆ. ಅನಂತರ ಅವನು ಎಲ್ಲಾ ದ್ವಂದ್ವಗಳನ್ನೂ ತ್ಯಜಿಸಿ ಶಾಂತಿಯನ್ನು ಹೊಂದುತ್ತಾನೆ.
ನ ಚಾಸ್ಯ ಸಂಶಯೋ ನಾಮ ಕ್ವಚಿದ್ ಭವತಿ ಕಶ್ಚನ ॥10॥
ಅವನಿಗೆ ಎಲ್ಲಿಯೂ ಯಾವ ಸಂಶಯವೂ ಇರುವುದಿಲ್ಲ.
ಶೂದ್ರಯೋನೌ ಹಿ ಜಾತಸ್ಯ ಸದ್ಗುಣಾನುಪತಿಷ್ಠತಃ |
ವೈಶ್ಯತ್ವಂ ಲಭತೇ ಬ್ರಹ್ಮನ್ ಕ್ಷತ್ರಿಯತ್ವಂ ತಥೈವ ಚ ॥11॥
ಶೂದ್ರಯೋನಿಯಲ್ಲಿ ಹುಟ್ಟಿ ಸದ್ಗುಣಗಳನ್ನು ಆಶ್ರಯಿಸಿದವನು ವೈಶ್ಯಜನ್ಮವನ್ನು ಪಡೆಯುತ್ತಾನೆ. ಎಲೈ ಬ್ರಾಹ್ಮಣರೇ, ಹಾಗೆಯೇ ಅವನು ಕ್ಷತ್ರಿಯ ಜನ್ಮವನ್ನೂ ಪಡೆಯುತ್ತಾನೆ.
ಆರ್ಜವೇ ವರ್ತಮಾನಸ್ಯ ಬ್ರಾಹ್ಮಣ್ಯಮಭಿಜಾಯತೇ |
ಗುಣಾಸ್ತೇ ಕೀರ್ತಿತಾಃ ಸರ್ವೇ ಕಿಂ ಭೂಯಃ ಶ್ರೋತುಮಿಚ್ಛಸಿ |
ಏತೈರ್ಗುಣೈರ್ವಿಹೀನಸ್ಯ ವಿಪ್ರಸ್ಯಾಪಿ ನ ವಿಪ್ರತಾ ॥12॥
ಅವನು ಆರ್ಜವವನ್ನು ಹೊಂದಿದ್ದರೆ ಬ್ರಾಹ್ಮಣ ಜನ್ಮವು ಲಭಿಸುತ್ತದೆ. ನೀನು ಕೇಳಿದ ಎಲ್ಲಾ ಗುಣಗಳನ್ನೂ ನಿನಗೆ ಹೇಳಿದ್ದೇನೆ. ಇನ್ನು ಏನನ್ನು ಕೇಳಲು ಬಯಸುತ್ತೀಯೆ? ಈ ಗುಣಗಳಿಂದ ರಹಿತನಾದ ಬ್ರಾಹ್ಮಣನು ಬ್ರಾಹ್ಮಣನೇ ಅಲ್ಲ.
ಬ್ರಾಹ್ಮಣಃ
ಪಾರ್ಥಿವಂ ಧಾತುಮಾಸಾದ್ಯ ಶಾರೀರೋಽಗ್ನಿಃ ಕಥಂ ಭವೇತ್ |
ಅವಕಾಶವಿಶೇಷೇಣ ಕಥಂ ವರ್ತಯತೇಽನಿಲಃ ॥13॥
ಬ್ರಾಹ್ಮಣ ಶರೀರದಲ್ಲಿ ಪೃಥಿವಿಯ ಅಂಶದ ಜೊತೆಯಲ್ಲಿ ಬೆರೆತು ಅಗ್ನಿಯು ಹೇಗೆ ಇರುತ್ತದೆ? ವಾಯುವಾದರೂ ಹೇಗೆ ಅವಕಾಶವಿಶೇಷವನ್ನು ಪಡೆದು ಸಂಚರಿಸುತ್ತದೆ?
ಮಾರ್ಕಂಡೇಯಃ
ಪ್ರಶ್ನಮೇತಂ ಸಮುದ್ದಿಷ್ಟಂ ಬ್ರಾಹ್ಮಣೇನ ಯುಧಿಷ್ಠಿರ |
ವ್ಯಾಧಸ್ತು ಕಥಯಾಮಾಸ ಬ್ರಾಹ್ಮಣಾಯ ಮಹಾತ್ಮನೇ ॥14॥

ಮಾರ್ಕಂಡೇಯ ಎಲೈ ಯುಧಿಷ್ಠಿರನೇ, ಬ್ರಾಹ್ಮಣನು ಕೇಳಿದ ಈ ಪ್ರಶ್ನೆಗೆ ವ್ಯಾಧನಾದರೂ ಮಹಾತ್ಮನಾದ ಬ್ರಾಹ್ಮಣನಿಗೆ ಉತ್ತರವನ್ನು ಕೊಟ್ಟನು.
ವ್ಯಾಧಃ
ಮೂರ್ಧಾನಮಾಶ್ರಿತೋ ವಹ್ನಿಃ ಶರೀರಂ ಪರಿಪಾಲಯನ್ |
ಪ್ರಾಣೋ ಮೂರ್ಧನಿ ಚಾಗ್ನೌ ಚ ವರ್ತಮಾನೋ ವಿಚೇಷ್ಟತೇ ॥15॥
ವ್ಯಾಧ ಅಗ್ನಿಯು ಶಿರಸ್ಸನ್ನು ಆಶ್ರಯಿಸಿ ಶರೀರವನ್ನು ಪರಿಪಾಲಿಸುತ್ತದೆ. ಮುಖ್ಯಪ್ರಾಣನು ಶಿರಸ್ಸಿನಲ್ಲಿಯೂ ಅಗ್ನಿಗಳಲ್ಲಿಯೂ ಇದ್ದು ಎಲ್ಲಾ ಚೇಷ್ಟೆಗಳನ್ನು ಮಾಡಿಸುತ್ತಾನೆ.
ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ಪ್ರಾಣೇ ಪ್ರತಿಷ್ಠಿತಮ್ |
ಶ್ರೇಷ್ಠಂ ತದೇವ ಭೂತಾನಾಂ ಬ್ರಹ್ಮ ಜ್ಯೋತಿರುಪಾಸ್ಮಹೇ ॥16॥
ಭೂತ, ವರ್ತಮಾನ ಮತ್ತು ಭವಿಷ್ಯ ಎಲ್ಲವೂ ಮುಖ್ಯಪ್ರಾಣನನ್ನು ಆಶ್ರಯಿಸಿದೆ. ಎಲ್ಲ ಜೀವರಿಗಿಂತಲೂ ಅವನು ಶ್ರೇಷ್ಠನಾದವನು. ಅವನನ್ನು ಜ್ಯೋತೀರೂಪನಾದ ಪ್ರತ್ಯಕ್ಷ ಬ್ರಹ್ಮನೆಂದು ಉಪಾಸನೆ ಮಾಡುತೆತೇವೆ.
ಸ ಜಂತುಃ ಸರ್ವಭೂತಾತ್ಮಾ ಪುರುಷಃ ಸ ಸನಾತನಃ |
ಮಹಾನ್ ಬುದ್ಧಿರಹಂಕಾರೋ ಭೂತಾನಾಂ ವಿಷಯಶ್ಚ ಸಃ ॥17॥
ಶರೀರಮಧ್ಯೇ ನಾಭಿಃ ಸ್ಯಾನ್ನಾಭ್ಯಾಮಗ್ನಿಃ ಪ್ರತಿಷ್ಠಿತಃ |
ಏಷತ್ವಗ್ನಿರಪಾನೇನ ಪ್ರಾಣೇನ ಪರಿಪಾಲ್ಯತೇ |
ಮಧ್ಯೇ ನಾಭ್ಯಾಂ ತು ಜಠರೇಗ್ನಿಃ ಪ್ರತಿಷ್ಠಿತಃ |
ಅವ್ಯಕ್ತಂ ಸತ್ತ್ವಸಂಜ್ಞಂ ಚ ಜೀವಃ ಕಾಲಃ ಸ ಚೈವ ಹಿ |
ಪ್ರಕೃತಿಃ ಪುರುಷಶ್ಚೈವ ಪ್ರಾಣ ಏವ ದ್ವಿಜೋತ್ತಮ ॥18॥
ಅವನು ಸರ್ವಜೀವರಿಗೆ ನಿಯಾಮಕನಾಗಿದ್ದಾನೆ. ಅವನು ವೇದ ಪ್ರತಿಪಾದ್ಯನಾದವನು. ಅವನು ಮಹಾನ್, ಬುದ್ಧಿ, ಪುರುಷ, ಮೊದಲಾದ ಶಬ್ದಗಳಿಂದ ವಾಚ್ಯನಾದವನು. ಶರೀರದ ಮಧ್ಯೆ ಜಠರದ ಮಧ್ಯೆ ನಾಭಿಯಲ್ಲಿ ಅಗ್ನಿಯು ಪ್ರತಿಷ್ಠಿತನಾಗಿದ್ದಾನೆ. ಅವನು ಪ್ರಾಣದಿಂದ ಪರಿಪಾಲಿಸಲ್ಪಡುತ್ತಾನೆ. ಅಹಂಕಾರ ಶಬ್ದದಿಂದಲೂ ವಾಚ್ಯನಾದವನು. ಎಲೈ ದ್ವಿಜೋತ್ತಮನೇ, ಅವನನ್ನು ಅವ್ಯಕ್ತ, ತತ್ತ್ವ, ಜೀವ, ಕಾಲ, ಪ್ರಕೃತಿ, ಪುರುಷ, ಪ್ರಾಣ ಮೊದಲಾದ ಶಬ್ದಗಳಿಂದ ಕರೆಯುತ್ತಾರೆ.
ಜಾಗರ್ತಿ ಸ್ವಪ್ನಕಾಲೇ ಚ ಸ್ವಪ್ನೇ ಸ್ವಪ್ನಾಯತೇ ಚ ಸಃ |
ಜಾಗ್ರತ್ಸು ಬಲಮಾಧತ್ತೇ ಚೇಷ್ಟತ್ಸು ಚೇಷ್ಟಯತ್ಯಪಿ ॥19॥
ಅವನು ಜೀವನು ಸ್ವಪ್ನವನ್ನು ನೋಡುವ ಸಮಯದಲ್ಲಿ ಎಚ್ಚರದಿಂದಿರುತ್ತಾನೆ ಮತ್ತು ಜೀವನಿಗೆ ಸ್ವಾಪ್ನ ಪದಾರ್ಥಗಳನ್ನು ತೋರಿಸುತ್ತಾನೆ. ಜೀವನು ಎಚ್ಚರಗೊಂಡಾಗ ಅವನಿಗೆ ಬಲವನ್ನು ನೀಡುತ್ತಾನೆ. ಜೀವನು ಕಾರ್ಯಗಳನ್ನು ಮಾಡುವಾಗ ಅವನು ಮಾಡಿಸುತ್ತಾನೆ.
ತಸ್ಮಿನ್ ನಿರುದ್ಧೇ ವಿಪ್ರೇಂದ್ರ ಮೃತ ಇತ್ಯಭಿಧೀಯತೇ |
ತ್ಯಕತ್ವಾ ಶರೀರಂ ಭೂತಾತ್ಮಾ ಪುನರನ್ಯತ್ ಪ್ರಪದ್ಯತೇ ॥20॥
ಏವಂ ತ್ವಿಹ ಸ ಸರ್ವತ್ರ ಪ್ರಾಣೇನ ಪರಿಪಾಲ್ಯತೇ ॥21॥
ಎಲೈ ವಿಪ್ರೇಂದ್ರರೇ, ಅವನು ಶರೀರದಲ್ಲಿ ತನ್ನ ವ್ಯಾಪಾರವನ್ನು ನಿಲ್ಲಿಸಿದರೆ ಜೀವನನ್ನು ಮೃತನೆಂದು ಕರೆಯುತ್ತಾರೆ. ಜೀವನು ಆ ಶರೀರವನ್ನು ಬಿಟ್ಟು ಪಂಚಭೂತಗಳ ಜೊತೆಯಲ್ಲಿ ಇನ್ನೊಂದು ಶರೀರವನ್ನು ಹೊಂದುತ್ತಾನೆ. ಹೀಗೆ ಜೀವನು ಈ ಶರೀರದಲ್ಲಿಯೂ ಮತ್ತು ಎಲ್ಲಾ ಶರೀರದಲ್ಲಿಯೂ ಮುಖ್ಯಪ್ರಾಣನಿಂದ ರಕ್ಷಿಸಲ್ಪಡುತ್ತಾನೆ.
ಪೃಷ್ಠತಸ್ತು ಸಮಾನೇನ ಸ್ವಾಂ ಸ್ವಾಂ ಗತಿಮುಪಾಶ್ರಿತಃ ॥22॥
ವಸ್ತಿಮೂಲೇ ಗುದೇ ಚೈವ ಪಾವಕಂ ಸಮುಪಾಶ್ರಿತಃ |
ವಹನ್ ಮೂತ್ರಂ ಪುರೀಷಂ ವಾಪ್ಯಪಾನಃ ಪರಿವರ್ತತೇ ॥23॥
ಮುಖ್ಯಪ್ರಾಣನು ಶರೀರದ ಹಿಂಭಾಗದಲ್ಲಿ ಸಮಾನರೂಪದಿಂದ ಸಂಚರಿಸಿ ತನ್ನ ಕಾರ್ಯಗಳನ್ನು ಮಾಡುತ್ತಾನೆ. ಅಪಾನನಾಗಿ ವಸ್ತಿಮೂಲ ಮತ್ತು ಗುದದಲ್ಲಿರುವ ಅಗ್ನಿಯಲ್ಲಿ ಆಶ್ರಿತನಾಗಿ ಮೂತ್ರ ಪುರೀಷಗಳನ್ನು ಸಾಗಿಸುತ್ತಾನೆ.
ಪ್ರಯತ್ನೇ ಕರ್ಮಣಿ ಬಲೇ ಸ(ಯ) ಏಷ ತ್ರಿಷು ವರ್ತತೇ |
ಉದಾನಮಿತಿ ತಂ ಪ್ರಾಹುರಧ್ಯಾತ್ಮವಿದುಷೋ ಜನಾಃ ॥24॥
ಪ್ರಯತ್ನ, ಕರ್ಮ ಮತ್ತು ಬಲ ಇವುಗಳಲ್ಲಿ ಯಾವ ಮುಖ್ಯಪ್ರಾಣನ ರೂಪವು ಜೀವನನ್ನು ಪ್ರೇರಿಸುವುದೋ ಆ ರೂಪವನ್ನು ಉದಾನನೆಂದು ಅಧ್ಯಾತ್ಮವಿದ್ಯೆಯನ್ನು ಬಲ್ಲ ಮಾನವರು ಹೇಳುತ್ತಾರೆ.
ಸಂಧೌ ಸಂಧೌ ಸನ್ನಿವಿಷ್ಟಃ ಸರ್ವೇಷ್ವಪಿ ತಥಾನಿಲಃ |
ಶರೀರೇಷು ಮನುಷ್ಯಾಣಾಂ ವ್ಯಾನ ಇತ್ಯುಪದಿಶ್ಯತೇ॥25॥
ಮನುಷ್ಯನ ದೇಹದ ಸರ್ವಸಂಧಿಗಳಲ್ಲೂ ಇರುವ ಮುಖ್ಯಪ್ರಾಣನ ರೂಪವನ್ನು ವ್ಯಾನ ಎಂದು ಕರೆಯುತ್ತಾರೆ.
ಧಾತುಷ್ವಗ್ನಿಸ್ತು ವಿತತಃ ಸ ತು ವಾಯುಸಮೀರಿತಃ |
ರಸಾನ್ ಧಾತೂಂಶ್ಚ ದೋಷಾಂಶ್ಚ ವರ್ತಯನ್ ಪರಿಧಾವತಿ ॥26॥
ಶರೀರಧಾತುಗಳಲ್ಲಿ ಅಗ್ನಿಯು ವ್ಯಾಪಿಸಿದೆ. ಆ ಅಗ್ನಿಯಾದರೂ ವಾಯುವಿನಿಂದ ಪ್ರೇರಿತನಾಗಿ ಶರೀರದ ರಸಗಳು, ಧಾತುಗಳು ಮತ್ತು ದೋಷಗಳನ್ನು ಕಾರ್ಯಪ್ರವೃತ್ತವಾಗುವಂತೆ ಮಾಡಿ ಶರೀರದಲ್ಲೆಲ್ಲಾ ಸಂಚರಿಸುತ್ತಾನೆ.
ಪ್ರಾಣಾನಾಂ ಸನ್ನಿಪಾತಾತ್ತು ಸನ್ನಿಪಾತಃ ಪ್ರಜಾಯತೇ |

ಸೋಷ್ಮಾ ಸೋಗ್ನಿರಿತಿ ಜ್ಞೇಯೋ ಯೋಽನ್ನಂ ಪಚತಿ ದೇಹಿನಾಮ್ ॥27॥
ಈ ಐದು ವಾಯುಗಳು ತಮ್ಮ ಮಾರ್ಗವನ್ನು ಬದಲಿಸಿ ಸಂಚಾರವನ್ನು ಮಾಡಿದರೆ ಆಗ ಸನ್ನಿಪಾತ ಎಂಬ ವ್ಯಾಧಿಯು ಉಂಟಾಗುತ್ತದೆ. ಉಷ್ಣಸ್ಪರ್ಶದಿಂದ ಕೂಡಿದ ವಾಯುವೇ ಅಗ್ನಿ ಎಂದು ತಿಳಿಯಬೇಕು. ಅವನು ದೇಹಿಗಳಲ್ಲಿ ಅನ್ನವನ್ನು ಪಚನ ಮಾಡುತ್ತಾನೆ.
ಅಪಾನೋದಾನಯೋರ್ಮಧ್ಯೇ ಪ್ರಾಣವ್ಯಾನೌ ಸಮಾಹಿತೌ |
ಸಮನ್ವಿತಸ್ತ್ವಧಿಷ್ಠಾನಂ ಸಮ್ಯಕ್ ಪಚತಿ ಪಾವಕಃ ॥28॥
ಅಪಾನ ಉದಾನರ ಮಧ್ಯೆ ಪ್ರಾಣವ್ಯಾನಗಳು ಪ್ರತಿಷ್ಠಿತವಾಗಿವೆ. ಚೆನ್ನಾಗಿ ವಾಯುವಿನ ಜೊತೆಯಲ್ಲಿ ಸೇರಿದ ಅಗ್ನಿಯು ತನಗೆ ಅಧಿಷ್ಠಾನವಾದ ಈ ದೇಹವನ್ನು ಪಚನ ಮಾಡುತ್ತಾನೆ (ಬಿಸಿಯಾಗಿ ಇಡುತ್ತಾನೆ).
ತಸ್ಯಾಪಿ ವಾಯುಪರ್ಯಂತಸ್ತಥಾ ಸ್ಯಾದ್ಗುಣಸಂಜ್ಞಿತಃ |
ಸ್ರೋತಾಂಸಿ ತಸ್ಮಾಜ್ಜಾಯಂತೇ ಸರ್ವಪ್ರಾಣೇಷು ದೇಹಿನಾಮ್ ॥29॥
ಆ ಅಗ್ನಿಯಾದರೂ ಎಲ್ಲಿಯವರೆಗೆ ಶರೀರದಲ್ಲಿ ವಾಯು ಸಂಚಾರವಿರುತ್ತದೆಯೋ ಅಲ್ಲಿಯವರೆಗೆ ತನ್ನ ಗುಣವಾದ ಉಷ್ಣಸ್ಪರ್ಶದ ಜೊತೆಯಲ್ಲಿ ಇರುವವನಾಗಿ ದೇಹಿಗಳಿಗೆ ಎಲ್ಲಕಡೆಯಲ್ಲಿಯೂ ಬೆವರಿನ ರೂಪವಾದ ಪ್ರವಾಹವನ್ನು ಉಂಟುಮಾಡುತ್ತಾನೆ.
ಅಗ್ನಿವೇಗವಹಃ ಪ್ರಾಣೋ ಗುದಾಂತೇ ಪ್ರತಿಹನ್ಯತೇ |
ಸ ಊರ್ಧ್ವಮಾಗಮ್ಯ ಪುನಃ ಸಮುತ್ ಕ್ಷಿಪತಿ ಪಾವಕಮ್ ॥30॥
ಅಗ್ನಿಯ ವೇಗವನ್ನು ಶರೀರದಲ್ಲಿ ಎಲ್ಲಾ ಕಡೆಗೆ ತೆಗೆದುಕೊಂಡು ಹೋಗುವ ಪ್ರಾಣನು ಗುದದ ಕೊನೆಯಲ್ಲಿ ತನ್ನ ಗತಿಯನ್ನು ಕಳೆದುಕೊಳ್ಳುತ್ತಾನೆ. ಅವನು ಪುನಃ ಅಲ್ಲಿಂದ ಊರ್ಧ್ವಮುಖವಾಗಿ ಬಂದು ಅಗ್ನಿಯನ್ನು ಉತ್ತೇಜನಗೊಳಿಸುತ್ತಾನೆ.
ಪಕ್ವಾಶಯಸ್ತ್ವಧೋ ನಾಭ್ಯಾಂ ಊರ್ಧ್ವಮಾಮಾಶಯಃ ಸ್ಥಿತಃ |
ನಾಭಿಮಧ್ಯೇ ಶರೀರಸ್ಯ ಪ್ರಾಣಾಃ ಸರ್ವೇ ಪ್ರತಿಷ್ಠಿತಾಃ ॥31॥
ನಾಭಿಯ ಕೆಳಗೆ ಪಕ್ವವಾದ ಅನ್ನದ ಸ್ಥಾನವಿದೆ. ಅಲ್ಲಿ ಅಗ್ನಿ ಇದ್ದಾನೆ. ನಾಭಿಯ ಮೇಲ್ಭಾಗದಲ್ಲಿ ಪರಮಾತ್ಮನಿಗೆ ಆಶ್ರಯನಾಗಿದ್ದಾನೆ (ನಾಭಿಯ ಕೆಳಗಿರುವ ಅಗ್ನಿಯ ಶಿಖೆಯು ನಾಭಿಯ ಮೇಲ್ಭಾಗಕ್ಕೆ ಬಂದು ಆ ಶಿಖೆಯ ಮಧ್ಯದಲ್ಲಿ ಪರಮಾತ್ಮನು ನೆಲೆಸಿದ್ದಾನೆ). ನಾಭಿಮಧ್ಯದಲ್ಲಿ ಶರೀರದಲ್ಲಿರುವ ಎಲ್ಲಾ ಪ್ರಾಣಗಳೂ ಆಶ್ರಿತವಾಗಿವೆ.
ಯೋಗಿನಾಮೇಷ ಮಾರ್ಗಸ್ತು ಯೇನ ಗಚ್ಛಂತಿ ತತ್ಪರಮ್ ॥32॥
ಈ ಅಗ್ನಿಯು ಯೋಗಿಗಳು ಸರ್ವೋತ್ತಮನಾದ ಪರಮಾತ್ಮನನ್ನು ಹೊಂದಲು ಹೋಗುವ ಮಾರ್ಗದಲ್ಲಿ ಮೊದಲನೆಯ ಸ್ಥಾನ.
ಪ್ರವೃತ್ತಾ ಹೃದಯಾತ್ ಸರ್ವೇ ತಿರ್ಯಗೂರ್ಧ್ವಮಧಸ್ತಥಾ |
ವಹಂತ್ಯನ್ನರಸಾನ್ ನಾಡ್ಯೋ ದಶಪ್ರಾಣಪ್ರಚೋದಿತಾಃ |
ಜಿತಕ್ಲಮಾಃ ಸಮಾ ಧೀರಾ ಮೂರ್ಧನ್ಯಾತ್ಮಾನಮಾದಧುಃ ॥33॥
ಹೃದಯದಿಂದ ಮೇಲ್ಮುಖವಾಗಿ, ಕೆಳಮುಖವಾಗಿ ಮತ್ತು ಅಡ್ಡಲಾಗಿ ಹರಿಯುವ ಎಲ್ಲಾ ನಾಡಿಗಳು ವ್ಯಾನನ ಹತ್ತುರೂಪಗಳಿಂದ ಪ್ರಚೋದಿತವಾಗಿ ಅನ್ನರಸವನ್ನು ದೇಹದ ಎಲ್ಲಾ ಭಾಗಗಳಿಗೂ ಸಾಗಿಸುತ್ತವೆ. ಶ್ರಮವನ್ನು ಮೀರಿದ, ಸಮಾಧಾನವುಳ್ಳ ಧೀರರು ಶಿರಸ್ಸಿನಲ್ಲಿ ಪರಮಾತ್ಮನನ್ನು ಆಧಾನ ಮಾಡಿ ಚಿಂತಿಸುತ್ತಾರೆ.
ಏವಂ ಸರ್ವೇಷು ವಿತತೌ ಪ್ರಾಣಾಪಾನೌ ಹಿ ದೇಹಿಷು |
ತೌ ತಾವದಗ್ನಿಸಹಿತೌ ವಿದ್ಧಿ ವೈ ಪ್ರಾಣಮಾತ್ಮನಿ ॥34॥
ಹೀಗೆ ಎಲ್ಲ ದೇಹಿಗಳಲ್ಲಿಯೂ ಪ್ರಾಣಾಪಾನರು ವ್ಯಾಪ್ತರಾಗಿದ್ದಾರೆ. ಜೀವರಲ್ಲಿ ಅವರನ್ನು ಅಗ್ನಿಸಹಿತವಾದ ಉಚ್ವಾಸ ಮತ್ತು ನಿಶ್ವಾಸಗಳೆಂದು ತಿಳಿಯಿರಿ.
ಏಕಾದಶವಿಕಾರಾತ್ಮಾ ಕಲಾಸಂಭಾರಸಂಭೃತಃ |
ಮೂರ್ತಿಮಂತಂ ಹಿ ತಂ ವಿದ್ಧಿ ನಿತ್ಯಂ ಕರ್ಮಜಿತಾತ್ಮಕಮ್ ॥35॥
ಷೋಡಶಕಲೆಗಳಿಂದ ಯುತನಾಗಿ ಏಕಾದಶ ವಿಕಾರವುಳ್ಳ ದೇಹವನ್ನು ಹೊಂದಿದವನನ್ನು ಜೀವನೆಂದು ತಿಳಿಯಿರಿ. ಅವನು ಯಾವಾಗಲೂ ತನ್ನ ಕರ್ಮದಿಂದ ದೇಹವನ್ನು ಸಂಪಾದಿಸುತ್ತಾನೆ.
ತಸ್ಮಿನ್ ಯಃ ಸಂಸ್ಥಿತೋ ಹ್ಯಗ್ನಿರ್ನಿತ್ಯಂ ಸ್ಥಾಲ್ಯಾಮಿವಾಹಿತಃ |
ಆತ್ಮಾನಂ ತಂ ವಿಜಾನೀಹಿ ನಿತ್ಯಂ ತ್ಯಾಗಜಿತಾತ್ಮಕಮ್ ॥36॥
ಸ್ಥಾಲಿಯಲ್ಲಿ ಆಹಿತವಾದ ಅಗ್ನಿಯಂತೆ ಅಂತಹ ಶರೀರದಲ್ಲಿ ಯಾವ ಅಗ್ನಿಯು ಯಾವಾಗಲೂ ಇದ್ದಾನೆಯೋ ಅವನನ್ನು ಪರಮಾತ್ಮನ ಸನ್ನಿಧಾನ ಸ್ಥಾನವೆಂದು ತಿಳಿಯಿರಿ. ಅವನು ತ್ಯಾಗದಿಂದ ಅಂತಹ ಸ್ವರೂಪವನ್ನು ಪಡೆದಿದ್ದಾನೆ.
ದೇವೋ ಯಃ ಸಂಸ್ಥಿತಸ್ತಸ್ಮಿನ್ನಬ್ಬಿಂದುರಿವ ಪುಷ್ಕರೇ |
ಕ್ಷೇತ್ರಜ್ಞಂ ತಂ ವಿಜಾನೀಹಿ ನಿತ್ಯಂ ಯೋಗಜಿತಾತ್ಮಕಮ್ ॥37॥
ಆ ಅಗ್ನಿಯಲ್ಲಿ ಯಾವನು ಕಮಲಪತ್ರದಲ್ಲಿರುವ ಜಲಬಿಂದುಗಳಂತೆ ಸನ್ನಿಹಿತನಾಗಿದ್ದಾನೆಯೋ ಅವನನ್ನು ಕ್ಷೇತ್ರಜ್ಞನಾದ ಪರಮಾತ್ಮನೆಂದು ತಿಳಿಯಿರಿ. ಅವನು ತನ್ನ ಆ ಸ್ವರೂಪವನ್ನು ತನ್ನ ಸ್ವಾತಂತ್ರ್ಯಾದಿ ಸಾಮರ್ಥ್ಯದಿಂದ ಅನಾದಿ ಕಾಲದಿಂದಲೂ ಪಡೆದಿದ್ದಾನೆ.
ಜೀವಾತ್ಮಕಾನಿ ಜಾನೀಹಿ ರಜಃ ಸತ್ತ್ವಂ ತಮಸ್ತಥಾ |
ಜೀವಮಾತ್ಮಗುಣಂ ವಿದ್ಧಿ ತಥಾಽಽತ್ಮಾನಂ ಪರಾತ್ಮಕಮ್ ॥38॥
ಸತ್ತ್ವರಜಸ್ತಮೋ ವ್ಯಾಪಾರಗಳು ಜೀವನ ಸ್ವಭಾವಭೂತಗಳಾದವುಗಳು ಎಂದು ತಿಳಿಯಿರಿ. ಜೀವನು ಅಂತರ್ಯಾಮಿಯಿಂದ ಜ್ಞಾನಾದಿ ಗುಣಗಳನ್ನು ಪಡೆಯುತ್ತಾನೆಂದೂ ಅಂತರ್ಯಾಮಿಯಾದರೂ ಪರಿಪೂರ್ಣನಾದ, ಸರ್ವೋತ್ತಮನಾದ ಪರಬ್ರಹ್ಮನಿಂದ ಅಭಿನ್ನನೆಂದೂ ತಿಳಿಯಿರಿ.

ಅಚೇತನಂ ಜೀವಗುಣಂ ವದಂತಿ
ಸ ಚೇಷ್ಟತೇ ಚೇಷ್ಟಯತೇ ಚ ಸರ್ವಮ್ |
ತತಃ ಪರಂ ಕ್ಷೇತ್ರವಿದೋ ಬ್ರುವಂತಿ
ಪ್ರಾಕಲ್ಪಯದ್ ಯೋ ಭುವನಾನಿ ಸಪ್ತ ||39||
ಅಚೇತನವಾದ ಶರೀರವನ್ನು ಜೀವನಿಗೆ ಅಪ್ರಧಾನವೆಂದು ಹೇಳುತ್ತಾರೆ. ಆ ಜೀವನು ಪರಮಾತ್ಮ ಪ್ರೇರಣೆಯಿಂದ ತಾನು ಕ್ರಿಯೆಯನ್ನು ಮಾಡಿ ದೇಹೇಂದ್ರಿಯಾದಿಗಳಲ್ಲಿ ಕ್ರಿಯೆಯನ್ನು ಉಂಟುಮಾಡುತ್ತಾನೆ. ಸಪ್ತಲೋಕಗಳನ್ನೂ ಸೃಷ್ಟಿಮಾಡಿದ ಪರಮಾತ್ಮನು ಆ ಜೀವನಿಗಿಂತ ಭಿನ್ನ ಮತ್ತು ಉತ್ತಮನೆಂದು ಜ್ಞಾನಿಗಳು ಹೇಳುತ್ತಾರೆ.
ಏವಂ ಸರ್ವೇಷು ಭೂತೇಷು ಭೂತಾತ್ಮಾ ಸಂಪ್ರಕಾಶತೇ |
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಜ್ಞಾನವೇದಿಭಿಃ ||40||
ಹೀಗೆ ಸರ್ವಭೂತಗಳಲ್ಲಿಯೂ ಸರ್ವಸ್ವಾಮಿಯಾದ ಪರಮಾತ್ಮನು ಪ್ರಕಾಶಿಸುತ್ತಾನೆ. ಜ್ಞಾನವನ್ನು ಸಂಪಾದಿಸಿದವರ ಶ್ರೇಷ್ಠವಾದ ಮತ್ತು ಸೂಕ್ಷ್ಮವಾದ ಬುದ್ಧಿಗೆ ಅವನು ಗೋಚರಿಸುತ್ತಾನೆ.
ಚಿತ್ತಸ್ಯ ಹಿ ಪ್ರಸಾದೇನ ಹಂತಿ ಕರ್ಮ ಶುಭಾಶುಭಮ್ |
ಪ್ರಸನ್ನಾತ್ಮಾಽಽತ್ಮನಿ ಸ್ಥಿತ್ವಾ ಸುಖಮಾನಂತ್ಯಮಶ್ನುತೇ ||41||
ಚಿತ್ತದ ಪ್ರಸನ್ನತೆಯನ್ನು ಸಂಪಾದಿಸಿದವನು ಶುಭಾಶುಭಕರ್ಮಗಳನ್ನು ನಾಶ ಮಾಡುತ್ತಾನೆ. ಪ್ರಸನ್ನಚಿತ್ತನಾದವನು ಪರಮಾತ್ಮನಲ್ಲಿಯೇ ಇದ್ದು ಅನಂತ ಸುಖವನ್ನು ಪಡೆಯುತ್ತಾನೆ.
ಲಕ್ಷಣಂ ತು ಪ್ರಮಾಣಸ್ಯ ಯಥಾವೃತ್ತಃ ಸುಖಂ ಸ್ವಪೇತ್ |
ಸುಖದುಃಖೇ ಹಿ ಸಂತ್ಯಜ್ಯ ನಿರ್ದ್ವಂದ್ವೋ ನಿಷ್ಪ್ರತಿಗ್ರಹಃ |
ನಿವಾತೇ ವಾ ಯಥಾ ದೀಪೋ ದೀಪ್ಯೇತ್ ಕುಶಲದೀಪಿತಃ ||42||
ಜೀವನು ತನ್ನ ಎಲ್ಲಾ ಇಂದ್ರಿಯಗಳು ಉಪರತವಾದಮೇಲೂ ಯಾವನ ಅನುಗ್ರಹದಿಂದ ನಿದ್ರೆಯಲ್ಲಿ ಸುಖವನ್ನು ಪಡೆಯುತ್ತಾನೆಯೋ ಅದೇ ಪ್ರಕೃಷ್ಟ ಪರಿಮಾಣವುಳ್ಳ ನಾರಾಯಣನ ಲಕ್ಷಣ (ನಿದ್ರಿತನಾಗಿ ಬಹಿರ್ವ್ಯಾಪಾರಶೂನ್ಯನಾದ ಜೀವನ ದೇಹವು ಯಾವನ ಅನುಗ್ರಹದಿಂದ ಜೀವಿಸುತ್ತದೆಯೋ ಅವನು ಪರಮಾತ್ಮನೆಂದು ಇಲ್ಲಿ ಸ್ವಾತಂತ್ರ್ಯರೂಪವಾದ ಲಕ್ಷಣವು ಹೇಳಲ್ಪಟ್ಟಿದೆ). ಪ್ರಾಕೃತ ಸುಖದುಃಖಗಳನ್ನು ಅಭಿಮಾನ ತ್ಯಾಗಮಾಡಿ ತಿರಸ್ಕರಿಸಿ, ನಿರ್ದ್ವಂದ್ವನೂ, ನಿಷ್ಪ್ರತಿಗ್ರಹನೂ ಆದ ಜೀವನ ಪರಮಾತ್ಮ ವಿಷಯವಾದ ಜ್ಞಾನವು ಕುಶಲನಾದವನು ಗಾಳಿಯಿಲ್ಲದ ಪ್ರದೇಶದಲ್ಲಿ ಹಚ್ಚಿದ ದೀಪದಂತೆ ಬೆಳಗುತ್ತದೆ.
ಪೂರ್ವರಾತ್ರೇ ಪರೇ ಚೈವ ಯುಂಜಾನಃ ಸತತಂ ಮನಃ |
ಲಘ್ವಾಹಾರೋ ವಿಶುದ್ಧಾತ್ಮಾ ಪಶ್ಯನ್ನಾತ್ಮಾನಮಾತ್ಮನಿ ||43||
ಪ್ರದೀಪ್ತೇನೇವ ದೀಪೇನ ಮನೋದೀಪೇನ ಪಶ್ಯತಿ |
ದೃಷ್ಟ್ವಾಽಽತ್ಮಾನಂ ನಿರಾತ್ಮಾನಂ ಸ ತದಾ ವಿಪ್ರಮುಚ್ಯತೇ ||44||
ರಾತ್ರಿಯ ಪ್ರಾರಂಭದಲ್ಲಿಯೂ ಮತ್ತು ರಾತ್ರಿಯ ಅಂತ್ಯದಲ್ಲಿಯೂ ಸತತವಾಗಿ ದೇವರ ಧ್ಯಾನವನ್ನು ಮಾಡಿ, ಲಘುವಾದ ಆಹಾರವುಳ್ಳವನೂ, ವಿಶುದ್ಧವಾದ ಮನಸ್ಸುಳ್ಳವನೂ ಆದ ಪುರುಷನು ತನ್ನಲ್ಲಿಯೇ ಇರುವ ಪರಮಾತ್ಮನನ್ನು ಚೆನ್ನಾಗಿ ಬೆಳಗುವ ಮನಸ್ಸು ಎಂಬ ದೀಪದಿಂದ ನೋಡುತ್ತಾನೆ. ಅನನ್ಯಾಧಿಪತಿಯಾದ ಪರಮಾತ್ಮನನ್ನು ನೋಡಿ ಅವನು ಮುಕ್ತನಾಗುತ್ತಾನೆ.
ಸರ್ವೋಪಾಯೈಸ್ತು ಲೋಭಸ್ಯ ಕ್ರೋಧಸ್ಯ ಚ ವಿನಿಗ್ರಹಃ |
ಏತತ್ ಪವಿತ್ರಂ ಲೋಕಾನಾಂ ತಪೋ ವೈ ಸಂಕ್ರಮೋ ಮತಃ ||45||
ಎಲ್ಲ ಉಪಾಯಗಳಿಂದಲೂ ಲೋಭ ಮತ್ತು ಕ್ರೋಧಗಳ ವಿನಿಗ್ರಹ ಮತ್ತು ಮನಸ್ಸನ್ನು ಪರಮಾತ್ಮನಲ್ಲಿ ಇಡುವುದು ಇದೇ ಮನುಷ್ಯನಿಗೆ ಪವಿತ್ರವಾದ ತಪಸ್ಸು ಎಂದು ಹೇಳಲ್ಪಡುತ್ತದೆ.
ನಿತ್ಯಂ ಕ್ರೋಧಾತ್ ತಪೋ ರಕ್ಷೇದ್ ಧರ್ಮಂ ರಕ್ಷೇಚ್ಚ ಮತ್ಸರಾತ್ |
ವಿದ್ಯಾಂ ಮಾನಾಪಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ||46||
ಯಾವಾಗಲೂ ಕ್ರೋಧದಿಂದ (ಕ್ರೋಧವು ಉಂಟಾಗದಂತೆ ನೋಡಿಕೊಂಡು) ತಪಸ್ಸನ್ನು ರಕ್ಷಿಸಬೇಕು. ಮಾತ್ಸರ್ಯದಿಂದ ಧರ್ಮವನ್ನು ರಕ್ಷಿಸಬೇಕು. ಮಾನಾಪಮಾನಗಳಿಂದ ವಿದ್ಯೆಯನ್ನು ರಕ್ಷಿಸಬೇಕು ಮತ್ತು ಪ್ರಮಾದದಿಂದ ತನ್ನನ್ನು ರಕ್ಷಿಸಿಕೊಳ್ಳಬೇಕು.
ಆನೃಶಂಸ್ಯಂ ಪರೋ ಧರ್ಮಃ ಕ್ಷಮಾ ಚ ಪರಮಂ ಬಲಮ್ |
ಆತ್ಮಜ್ಞಾನಂ ಪರಂ ಜ್ಞಾನಂ ಸತ್ಯಂ ವ್ರತಪರಂ ವ್ರತಮ್ ||47||
ಮೃದುವಚನವು ಶ್ರೇಷ್ಠವಾದ ಧರ್ಮ. ಕ್ಷಮೆಯು ಶ್ರೇಷ್ಠವಾದ ಬಲ. ಆತ್ಮಜ್ಞಾನವು ಶ್ರೇಷ್ಠವಾದ ಜ್ಞಾನ. ಸತ್ಯವಚನವು ಎಲ್ಲಾ ವ್ರತಗಳಿಗಿಂತಲೂ ಶ್ರೇಷ್ಠವಾದ ವ್ರತ.
ಸತ್ಯಸ್ಯ ವಚನಂ ಶ್ರೇಯಃ ಸತ್ಯಂ ಜ್ಞಾನಂ ಹಿತಂ ಭವೇತ್ |
ಯದ್ ಭೂತಹಿತಮತ್ಯಂತಂ ತದ್ ವೈ ಸತ್ಯಂ ಪರಂ ಮತಮ್ ||48||
ಸತ್ಯವಚನವು ಶ್ರೇಯಸ್ಕರವಾದುದು. ಸತ್ಯವೂ, ಜ್ಞಾನವೂ ಹಿತವಾಗಿರಬೇಕು. ಯಾವುದು ಸಜ್ಜನರಿಗೆ ಅತ್ಯಂತ ಹಿತವಾಗಿರುತ್ತದೆಯೋ ಅದೇ ಶ್ರೇಷ್ಠವಾದ ಸತ್ಯವೆಂದು ತಿಳಿಯಲ್ಪಡುತ್ತದೆ.
ಯಸ್ಯ ಸರ್ವೇ ಸಮಾರಂಭಾ ನಿರಾಶೀರ್ಬಂಧನಾಃ ಸದಾ |
ತ್ಯಾಗೇ ಯಸ್ಯ ಹುತಂ ಸರ್ವಂ ಸ ತ್ಯಾಗೀ ಸ ಚ ಬುದ್ಧಿಮಾನ್ ||49||
ಯಾವನ ಎಲ್ಲಾ ಕ್ರಿಯಾರಂಭಗಳೂ ಯಾವಾಗಲೂ ಫಲಸಂಕಲ್ಪ ರಹಿತವಾಗಿರುತ್ತವೆಯೋ ಮತ್ತು ಯಾವನು ತ್ಯಾಗವನ್ನು ಮಾಡಿ ತನ್ನ ಸರ್ವಸ್ವವನ್ನು ಅರ್ಪಿಸಿದ್ದಾನೆಯೋ ಅವನೇ ತ್ಯಾಗಿ, ಅವನೇ ಮೇಧಾವಿ.

ಯತೋ ನ ಗುರುರಪ್ಯೇನಂ ಚ್ಯಾವಯೇದುಪಪಾದಯನ್ |
ತಂ ವಿದ್ಯಾದ್ ಬ್ರಹ್ಮಣೋ ಯೋಗಮಯೋಗಂ ಯೋಗಸಂಜ್ಞಿತಮ್ ॥
ಎಂತಹ ಶ್ರೇಷ್ಠವಾದ ಮತ್ತು ಮಹತ್ತಾದ ವಿಷಯದ ಸಂಬಂಧವಾದರೂ ಅದು ಯಾವನ ಭಗವದ್ಧ್ಯಾನವನ್ನು ಕೆಡಿಸುವುದಿಲ್ಲವೋ ಅದನ್ನೇ ವಿಷಯ ಸಂಬಂಧ ರಹಿತವಾದ ನಿಜವಾದ ಬ್ರಹ್ಮಪ್ರಾಪ್ತಿಯ ಯೋಗವೆಂದು ತಿಳಿಯಬೇಕು.
ನ ಹಿಂಸ್ಯಾತ್ ಸರ್ವಭೂತಾನಿ ಮೈತ್ರಾಯಣಗತಶ್ಚರೇತ್ |
ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್ ॥51॥
ಯಾವ ಪ್ರಾಣಿಗೂ ಹಿಂಸೆಯನ್ನು ಮಾಡಬಾರದು. ಎಲ್ಲರಿಗೂ ಮಿತ್ರನಾಗಿರಬೇಕು. ಈ ಮನುಷ್ಯ ಶರೀರವನ್ನು ಹೊಂದಿ ಯಾರ ಜೊತೆಯಲ್ಲಿಯೂ ವೈರವನ್ನು ಮಾಡಬಾರದು.
ಆಕಿಂಚನ್ಯಂ ಸುಸಂತೋಷೋ ನಿರಾಶೀತ್ವಮಚಾಪಲಮ್ |
ಏತದೇವ ಪರಂ ಜ್ಞಾನಂ ಸದಾತ್ಮಜ್ಞಾನಮುತ್ತಮಮ್ ॥52॥
ದಾರಿದ್ರ್ಯ, ಸಂತೋಷ, ಆಶಾರಾಹಿತ್ಯ ಮತ್ತು ಸ್ಥಿರತ್ವ ಇವುಗಳೇ ಪರಮಾತ್ಮನ ಶ್ರೇಷ್ಠವಾದ ಜ್ಞಾನವನ್ನು ಪಡೆಯಲು ಇರುವ ಶ್ರೇಷ್ಠವಾದ ಜ್ಞಾನಸಾಧನಗಳು.
ಪರಿಗ್ರಹಂ ಪರಿತ್ಯಜ್ಯ ಭವೇದ್ ಬುದ್ಧ್ಯಾ ಯತವ್ರತಃ |
ಅಶೋಕಂ ಸ್ಥಾನಮಾಶ್ರಿತ್ಯ ನಿಶ್ಚಲಂ ಪ್ರೇತ್ಯ ಚೇಹ ಚ ॥53॥
ಪರಿಗ್ರಹವನ್ನು ತ್ಯಾಗಮಾಡಿ ಬುದ್ಧಿಯಿಂದ ದೃಢವಾದ ವ್ರತವನ್ನು ಹೊಂದಿದವನಾಗಬೇಕು. ಅವನು ಇಲ್ಲಿಯೂ ಮತ್ತು ಪರಲೋಕದಲ್ಲಿಯೂ ನಿಶ್ಚಲವಾದ ಶೋಕರಹಿತ ಸ್ಥಾನವನ್ನು ಹೊಂದಿ ಸುಖವಾಗಿರುವನು.
ತಪೋನಿತ್ಯೇನ ದಾಂತೇನ ಮುನಿನಾ ಸಂಯತಾತ್ಮನಾ |
ಅಜಿತಂ ಜೇತುಕಾಮೇನ ಭಾವ್ಯಂ ಸಂಗೇಷ್ವಸಂಗಿನಾ ॥54॥
ತನಗೆ ಇದುವರೆಗೆ ದೊರೆಯದಿದ್ದ ಮೋಕ್ಷವನ್ನು ಪಡೆಯಲು ಇಚ್ಛಿಸುವವನು ಯಾವಾಗಲೂ ತಪಸ್ಸನ್ನೂ, ಇಂದ್ರಿಯನಿಗ್ರಹವನ್ನೂ, ಮೌನವನ್ನೂ, ಮನೋನಿಗ್ರಹವನ್ನೂ, ವಿಷಯಗಳಲ್ಲಿ ಅಸಂಗವನ್ನೂ ಹೊಂದಿದವನಾಗಿರಬೇಕು.
ಗುಣಾಗುಣಮನಾಸಂಗಮೇಕಕಾರ್ಯಮನಂತರಮ್ |
ಏತತ್ ತದ್ ಬ್ರಹ್ಮಣೋ ವೃತ್ತಮಾಹುರೇಕಪದಂ ಸುಖಮ್ ॥55॥
ಭಗವಂತನ ಗುಣಗಳಲ್ಲಿ ಸ್ನೇಹವೆಂಬ ಶ್ರೇಷ್ಠವಾದ ಗುಣವನ್ನು ಹೊಂದಿರಬೇಕು. ವಿಷಯಗಳ ಸಂಗವನ್ನು ಹೊಂದಿರಬಾರದು. ನಿರಂತರವಾಗಿ ಒಂದೇ ಉದ್ದೇಶವನ್ನು ಹೊಂದಿರಬೇಕು. ಇದು ಪರಬ್ರಹ್ಮನನ್ನು ಪಡೆಯಲು ಇರುವ ನಡತೆ. ಇದರಿಂದ ಮುಖ್ಯವಾದ ಸುಖವು ಲಭ್ಯವಾಗುತ್ತದೆ.
ಪರಿತ್ಯಜತಿ ಯೋ ದುಃಖಂ ಸುಖಂ ಚಾಪ್ಯುಭಯಂ ನರಃ |
ಬ್ರಹ್ಮಪ್ರಾಪ್ನೋತಿ ಸೋऽತ್ಯಂತಮಸಂಗೇನ ಚ ಗಚ್ಛತಿ ॥56॥
ಯಾವನು ಪ್ರಾಕೃತವಾದ ಸುಖದುಃಖಗಳೆರಡನ್ನೂ ಸಹಿಸುತ್ತಾನೆಯೋ ಅವನು ಅತ್ಯಂತ ಅಸಂಗದಿಂದ ನಡೆದು ಪರಬ್ರಹ್ಮನನ್ನು ತಿಳಿದು ಅವನನ್ನು ಹೊಂದುತ್ತಾನೆ.
ಯಥಾಶ್ರುತಮಿದಂ ಸರ್ವಂ ಸಮಾಸೇನ ದ್ವಿಜೋತ್ತಮ |
ಏತತ್ ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥57॥
ಎಲೈ ದ್ವಿಜಶ್ರೇಷ್ಠರೇ, ನಾನು ಕೇಳಿದಂತೆ ಇವೆಲ್ಲವನ್ನೂ ನಿಮಗೆ ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನು ಏನನ್ನು ಕೇಳಲು ಬಯಸುತ್ತೀರಿ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನದ್ವಿಶತಶತತಮೋऽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಬ್ರಾಹ್ಮಣ ಸಂವಾದೇ
ಪತಿವ್ರತಾಮಾಹಾತ್ಮ್ಯೇ ಚತುರ್ವಿಂಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ನೂರ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರನೆಯ ಅಧ್ಯಾಯ
ಧರ್ಮವ್ಯಾಧನಿಂದ ಕೌಶಿಕನನ್ನು ಮನೆಗೆ ಕರೆದುಕೊಂಡು ಹೋಗಿ
ತನ್ನ ಮಾತಾಪಿತೃಗಳ ದರ್ಶನ ಮತ್ತು ತಾನು ಅವರಿಗೆ ಮಾಡುವ
ಶುಶ್ರೂಷೆಯ ಕಥನ.
ಮಾರ್ಕಂಡೇಯಃ
ಏವಂ ಸಂಕಥಿತೇ ಕೃತ್ಸ್ನೇ ಮೋಕ್ಷಧರ್ಮೇ ಯುಧಿಷ್ಠಿರ |
ದೃಢಪ್ರೀತಮನಾ ವಿಪ್ರೋ ಧರ್ಮವ್ಯಾಧಮುವಾಚ ಹ ॥1॥
ಮಾರ್ಕಂಡೇಯ ಎಲೈ ಯುಧಿಷ್ಠಿರನೇ, ಹೀಗೆ ಧರ್ಮವ್ಯಾಧನಿಂದ ಸಮಗ್ರವಾದ ಮೋಕ್ಷಧರ್ಮವು ಹೇಳಲ್ಪಡುತ್ತಿರಲು ಬಹಳ ಸಂತೋಷ ಹೊಂದಿದ ಮನಸ್ಸುಳ್ಳ ಕೌಶಿಕ ಬ್ರಾಹ್ಮಣನು ಅವನನ್ನು ಕುರಿತು ಹೀಗೆ ಹೇಳಿದನು.
ನ್ಯಾಯಯುಕ್ತಮಿದಂ ಸರ್ವಂ ಭವತಾ ಪರಿಕೀರ್ತಿತಮ್ |
ನ ತೇऽಸ್ತ್ಯವಿದಿತಂ ಕಿಂಚಿದ್ ಧರ್ಮೇಷ್ವಿಹ ಹಿ ದೃಶ್ಯತೇ ॥2॥
ನೀನು ಮಾತನಾಡಿದುದೆಲ್ಲವೂ ನ್ಯಾಯದಿಂದ ಕೂಡಿದೆ. ಧರ್ಮದ ವಿಷಯದಲ್ಲಿ ನಿನಗೆ ತಿಳಿಯದಿರುವ ವಿಷಯವು ಯಾವುದೂ

ಇಲ್ಲವೆಂದು ನನಗೆ ತೋರುತ್ತದೆ.
ವ್ಯಾಧಃ
ಪ್ರತ್ಯಕ್ಷಂ ಮಮ ಯೋ ಧರ್ಮಸ್ತಂ ಚ ಪಶ್ಯ ದ್ವಿಜೋತ್ತಮ |
ಯೇನ ಸಿದ್ಧಿರಿಯಂ ಪ್ರಾಪ್ತಾ ಮಯಾ ಬ್ರಾಹ್ಮಣಪುಂಗವ ॥3॥
ವ್ಯಾಧ ಎಲೈ ದ್ವಿಜೋತ್ತಮರೇ, ಬ್ರಾಹ್ಮಣಪುಂಗವರೇ, ಯಾವ ಧರ್ಮಾಚರಣೆಯಿಂದ ನನಗೆ ಈ ಸಿದ್ಧಿಯು ಉಂಟಾಗಿದೆಯೋ ಅಂತಹ ಧರ್ಮವನ್ನು ಪ್ರತ್ಯಕ್ಷವಾಗಿ ನೋಡಿ.
ಉತ್ತಿಷ್ಠ ಭಗವನ್ ಕ್ಷಿಪ್ರಂ ಪ್ರವಿಶ್ಯಾಭ್ಯಂತರಂ ಗೃಹಮ್ |
ದ್ರಷ್ಟುಮರ್ಹಸಿ ಧರ್ಮಜ್ಞ ಮಾತರಂ ಪಿತರಂ ಚ ಮೇ ॥4॥
ಪೂಜ್ಯರೇ, ಧರ್ಮಜ್ಞರೇ, ಇಲ್ಲಿಂದ ಎದ್ದು ಮನೆಯ ಒಳಭಾಗವನ್ನು ಪ್ರವೇಶಿಸಿ ನನ್ನ ಮಾತಾಪಿತೃಗಳನ್ನು ನೀವು ನೋಡಬೇಕು.
ಇತ್ಯುಕ್ತಃ ಸ ಪ್ರವಿಶ್ಯಾಥ ದದರ್ಶ ಪರಮಾರ್ಚಿತಮ್ |
ಸೌಧಂ ಹೃದ್ಯಂ ಚತುಃಶಾಲಮತೀವ ಚ ಮನೋರಮಮ್ ॥5॥
ಹೀಗೆ ಹೇಳಲ್ಪಟ್ಟ ಆ ಬ್ರಾಹ್ಮಣನು ಎದ್ದು ಒಳಗೆ ಪ್ರವೇಶಿಸಿ ನಾಲ್ಕು ಶಾಲೆಗಳಿದ್ದ ಸುಂದರವಾದ, ಮನೋಹರವಾದ ಅವನ ಮನೆಯನ್ನು ನೋಡಿದನು.
ದೇವತಾಗೃಹಸಂಕಾಶಂ ದೈವತೈಶ್ಚ ಸುಪೂಜಿತಮ್ |
ಶಯನಾಸನಸಂಬಾಧಂ ಗಂಧೈಶ್ಚ ಪರಮೈರ್ಯುತಮ್ ॥6॥
ದೇವತಾಗೃಹಕ್ಕೆ ಸಮಾನವಾಗಿದ್ದ, ದೇವತೆಗಳಿಂದಲೂ ಪೂಜಿಸಲು ಯೋಗ್ಯವಾದ ಶಯನಾಸನದಿಂದ ತುಂಬಿದ್ದ, ದಿವ್ಯಗಂಧಯುಕ್ತವಾದ (ಮನೆಯನ್ನು ನೋಡಿದನು).
ತತ್ರ ಶುಕ್ಲಾಂಬರಧರೌ ಪಿತರಾವಸ್ಯ ಪೂಜಿತೌ |
ಕೃತಾಹಾರೌ ತು ಸಂತುಷ್ಟಾವುಪವಿಷ್ಟೌ ವರಾಸನೇ ॥7॥
ಅಲ್ಲಿ ಅವನ ಪೂಜ್ಯರಾದ ತಂದೆತಾಯಿಗಳು ಆಹಾರವನ್ನು ಸೇವಿಸಿ ಬಿಳಿಯ ವಸ್ತ್ರವನ್ನು ಧರಿಸಿ ಶ್ರೇಷ್ಠವಾದ ಆಸನ ಒಂದರಲ್ಲಿ ಸಂತೋಷದಿಂದ ಕುಳಿತಿದ್ದರು.
ತಸ್ಯ ವ್ಯಾಧಸ್ಯ ಪಿತರೌ ಬ್ರಾಹ್ಮಣಃ ಸಂದದರ್ಶ ಹ ॥
ಧರ್ಮವ್ಯಾಧಸ್ತು ತೌ ದೃಷ್ಟ್ವಾ ಪಾದೇಷು ಶಿರಸಾಽಪತತ್ ॥8॥
ಬ್ರಾಹ್ಮಣನು ವ್ಯಾಧನ ತಂದೆತಾಯಿಗಳನ್ನು ನೋಡಿದನು. ಧರ್ಮವ್ಯಾಧನಾದರೂ ಅವರನ್ನು ನೋಡಿ ಅವರ ಪಾದಗಳಿಗೆ ಶಿರಸಾ ನಮಸ್ಕರಿಸಿದನು.
ಉತ್ತಿಷ್ಠೋತ್ತಿಷ್ಠ ಧರ್ಮಜ್ಞ ಧರ್ಮಸ್ತ್ವಾಮಭಿರಕ್ಷತು |
ಪ್ರೀತೌ ಸ್ವಸ್ತವ ಶೌಚೇನ ದೀರ್ಘಮಾಯುರವಾಪ್ನುಹಿ ॥9॥
ವೃದ್ಧರು ಧರ್ಮಜ್ಞನೇ, ಎದ್ದೇಳು, ಎದ್ದೇಳು. ಧರ್ಮವು ನಿನ್ನನ್ನು ರಕ್ಷಿಸಲಿ. ನಿನ್ನ ಶುದ್ಧಿಯನ್ನು ನೋಡಿ ನಾವು ಪ್ರೀತರಾಗಿದ್ದೇವೆ. ದೀರ್ಘಾಯುಷ್ಯವನ್ನು ಹೊಂದು.
ಸತ್ಪುತ್ರೇಣ ತ್ವಯಾ ಪುತ್ರ ನಿತ್ಯಂ ಕಾಲೇ ಸುಪೂಜಿತೌ |
ಸುಖಮಾವಾಂ ವಸಾವೋಽತ್ರ ದೇವಲೋಕಗತಾವಿವ ॥10॥
ಪುತ್ರನೇ, ಸತ್ಪುತ್ರನಾದ ನಿನ್ನಿಂದ ನಾವು ಯಾವಾಗಲೂ ಪೂಜಿತರಾಗಿದ್ದೇವೆ. ನಾವು ಇಲ್ಲಿ ದೇವಲೋಕದಲ್ಲಿರುವಂತೆ ಸುಖವಾಗಿ ವಾಸಿಸುತ್ತಿದ್ದೇವೆ.
ನ ತೇಽನ್ಯದ್ ದೈವತಂ ಕಿಂಚಿದ್ದೈವತೇಷ್ವಪಿ ವರ್ತತೇ |
ಪ್ರಯತತ್ವಾದ್ ದ್ವಿಜಾತೀನಾಂ ದಮೇನಾಸಿ ಸಮನ್ವಿತಃ ॥11॥
ನಮ್ಮನ್ನು ಬಿಟ್ಟು ನಿನಗೆ ದೇವತೆಗಳಲ್ಲಿಯೂ ಬೇರೆ ದೇವತೆ ಇಲ್ಲ. ಬಹಳ ನಿಯಮದಿಂದ ಕೂಡಿರುವ ನೀನು ಬ್ರಾಹ್ಮಣರಿಗೆ ಯೋಗ್ಯವಾದ ಇಂದ್ರಿಯನಿಗ್ರಹದಿಂದ ಕೂಡಿದವನಾಗಿದ್ದೀಯೆ.
ಪಿತುಃ ಪಿತಾಮಹಾ ಯೇ ಚ ತಥೈವ ಪ್ರಪಿತಾಮಹಾಃ |
ಪ್ರೀತಾಸ್ತೇ ಸತತಂ ಪುತ್ರ ದಮೇನಾವಾಂ ಚ ಪೂಜಯಾ ॥12॥
ಎಲೈ ಪುತ್ರನೇ, ನಿನ್ನ ಇಂದ್ರಿಯನಿಗ್ರಹದಿಂದಲೂ ಮತ್ತು ನೀನು ಮಾಡುವ ನಮ್ಮ ಪೂಜೆಯಿಂದಲೂ ನನ್ನ ಪಿತಾಮಹರೂ ಮತ್ತು ಪ್ರಪಿತಾಮಹರೂ ಸಹ ನಿನಗೆ ಪ್ರಸನ್ನರಾಗಿದ್ದಾರೆ.
ಮನಸಾ ಕರ್ಮಣಾ ವಾಚಾ ಶುಶ್ರೂಷಾ ನೈವ ಹೀಯತೇ |
ನ ಚಾನ್ಯಾ ಹಿ ತಥಾ ಬುದ್ಧಿರ್ದೃಶ್ಯತೇ ಸಾಂಪ್ರತಂ ತವ ॥13॥
ನೀನು ನಮಗೆ ಮನಸ್ಸಿನಿಂದ, ಕ್ರಿಯೆಯಿಂದ ಮತ್ತು ಮಾತಿನಿಂದ ಮಾಡುವ ಸೇವೆಯು ಸ್ವಲ್ಪವೂ ಕಡಿಮೆಯಾಗುವುದಿಲ್ಲ. ನಿನಗೆ ಸದ್ಯದಲ್ಲಿ ನಮ್ಮ ಸೇವೆಯನ್ನು ಬಿಟ್ಟು ಬೇರೆ ಏನನ್ನಾದರೂ ಮಾಡಬೇಕೆಂಬ ಬುದ್ಧಿಯು ಉಂಟಾಗುವುದು ಕಾಣುವುದಿಲ್ಲ.
ಜಾಮದಗ್ನ್ಯೇನ ರಾಮೇಣ ಯಥಾ ವೃದ್ಧೌ ಸುಪೂಜಿತೌ |
ತಥಾ ತ್ವಯಾ ಕೃತಂ ಸರ್ವಂ ತದ್ವಿಶಿಷ್ಟಂ ಚ ಪುತ್ರಕ ॥14॥
ಎಲೈ ಪುತ್ರನೇ, ಜಮದಗ್ನಿಗಳ ಮಗನಾದ ಪರಶುರಾಮನು ಹೇಗೆ ವೃದ್ಧರಾದ ತನ್ನ ಮಾತಾಪಿತೃಗಳನ್ನು ಪೂಜಿಸಿದನೋ ಹಾಗೆ ನೀನು ನಮಗೆ ಎಲ್ಲವನ್ನೂ ಮಾಡಿದ್ದೀಯೆ. ಮತ್ತು ಅದಕ್ಕಿಂತ ಹೆಚ್ಚಿನ ಸೇವೆಯನ್ನೂ ಮಾಡಿದ್ದೀಯೆ (ಎಂದು ಹೇಳಿದರು).
ಮಾರ್ಕಂಡೇಯಃ

ತತಸ್ತಂ ಬ್ರಾಹ್ಮಣಂ ತಾಭ್ಯಾಂ ಧರ್ಮವ್ಯಾಧೋ ನ್ಯವೇದಯತ್ |
ತೌ ಸ್ವಾಗತೇನ ತಂ ವಿಪ್ರಮರ್ಚಯಾಮಾಸತುಸ್ತದಾ |
ಪ್ರತಿಪೂಜ್ಯ ಚ ತಾಂ ಪೂಜಾಂ ದ್ವಿಜಃ ಪಪ್ರಚ್ಛ ತಾವುಭೌ ||15||
ಮಾರ್ಕಂಡೇಯ ಅನಂತರ ಧರ್ಮವ್ಯಾಧನು ಕೌಶಿಕ ಬ್ರಾಹ್ಮಣನನ್ನು ತನ್ನ ತಂದೆತಾಯಿಗಳಿಗೆ ಪರಿಚಯಿಸಿದನು. ಆಗ ಅವರು ಸ್ವಾಗತವನ್ನು ಮಾಡಿ ಆ ಬ್ರಾಹ್ಮಣನನ್ನು ಸತ್ಕರಿಸಿದರು. ಆ ಪೂಜೆಯನ್ನು ಸ್ವೀಕರಿಸಿದ ಬ್ರಾಹ್ಮಣನು ಅವರಿಬ್ಬರನ್ನೂ ಕುರಿತು ಪ್ರಶ್ನಿಸಿದನು.
ಕೌಶಿಕಃ
ಸುಪುತ್ರಾಭ್ಯಾಂ ಸಭೃತ್ಯಾಭ್ಯಾಂ ಕಚ್ಚಿದ್ ವಾಂ ಕುಶಲಂ ಗೃಹೇ |
ಅನಾಮಯಂ ಚ ವಾಂ ಕಚ್ಚಿತ್ ಸದೈವೇಹ ಶರೀರಯೋಃ ||16||
ಕೌಶಿಕ ಸುಪುತ್ರ ಮತ್ತು ಭೃತ್ಯರಿಂದ ಕೂಡಿದ ನೀವು ಈ ಮನೆಯಲ್ಲಿ ಕ್ಷೇಮದಿಂದಿರುವಿರಷ್ಟೆ? ನಿಮಗೆ ಯಾವ ದೇಹಬಾಧೆಯೂ ಇಲ್ಲವಷ್ಟೆ?
ವೃದ್ಧೌ
ಕುಶಲಂ ನೌ ಗೃಹೇ ವಿಪ್ರ ಭೃತ್ಯವರ್ಗೇ ಚ ಸರ್ವಶಃ |
ಕಚ್ಚಿತ್ ತ್ವಮಪ್ಯವಿಘ್ನೇನ ಸಂಪ್ರಾಪ್ತೋ ಭಗವನ್ನಿತಿ ||17||
ವೃದ್ಧರು ಬ್ರಾಹ್ಮಣನೇ, ನಮ್ಮ ಮನೆಯಲ್ಲಿಯೂ, ನಮ್ಮ ಭೃತ್ಯವರ್ಗದಲ್ಲಿಯೂ ಎಲ್ಲವೂ ಕುಶಲವಾಗಿದೆ. ಪೂಜ್ಯನೇ, ನೀನಾದರೂ ಇಲ್ಲಿಗೆ ನಿರ್ವಿಘ್ನವಾಗಿ ಬಂದೆಯಷ್ಟೆ?
ಮಾರ್ಕಂಡೇಯಃ
ಬಾಢಮಿತ್ಯೇವ ತೌ ವಿಪ್ರಃ ಪ್ರತ್ಯುವಾಚ ಮುದಾನ್ವಿತಃ |
ಧರ್ಮವ್ಯಾಧೋ ನಿರೀಕ್ಷ್ಯಾಥ ತತಸ್ತಂ ವಾಕ್ಯಮಬ್ರವೀತ್ ||18||
ಮಾರ್ಕಂಡೇಯ ಸಂತೋಷದಿಂದ ಕೂಡಿದ ಆ ಬ್ರಾಹ್ಮಣನು ಅವರನ್ನು ಕುರಿತು ಹೌದು ಎಂದು ಹೇಳಿದನು. ಧರ್ಮವ್ಯಾಧನು ಆಗ ಬ್ರಾಹ್ಮಣನನ್ನು ನೋಡಿ ಹೀಗೆ ಮಾತನಾಡಿದನು.
ಪಿತಾ ಮಾತಾ ಚ ಭಗವನ್ನೇತೌ ಮದ್ದೈವತಂ ಪರಮ್ |
ಯದ್ ದೈವತೇಭ್ಯಃ ಕರ್ತವ್ಯಂ ತದೇತಾಭ್ಯಾಂ ಕರೋಮ್ಯಹಮ್ ||19||
ಪೂಜ್ಯರೇ, ತಂದೆತಾಯಿಗಳೇ ನನಗೆ ಪರದೇವತೆಗಳು. ದೇವತೆಗಳಿಗೆ ಏನು ಮಾಡಬೇಕೋ ಅದನ್ನು ಇವರಿಬ್ಬರಿಗೆ ಮಾಡುತ್ತೇನೆ.
ತ್ರಯಸ್ತ್ರಿಂಶದ್ ಯಥಾ ದೇವಾಃ ಸರ್ವೇ ಶಕ್ರಪುರೋಗಮಾಃ |
ಸಂಪೂಜ್ಯಾಃ ಸರ್ವಲೋಕಸ್ಯ ತಥಾ ವೃದ್ಧಾವಿಮೌ ಮಮ ||20||
ಇಂದ್ರನೇ ಮೊದಲಾದ ಮೂವತ್ಮೂರು ದೇವತೆಗಳು ಎಲ್ಲ ಜನರಿಂದಲೂ ಹೇಗೆ ಪೂಜಿಸಲ್ಪಡುತ್ತಾರೆಯೋ ಅದರಂತೆ ಈ ವೃದ್ಧರು ನನ್ನಿಂದ ಪೂಜಿಸಲ್ಪಡುತ್ತಾರೆ.
ಉಪಾಹಾರಾನಾಹರಂತೋ ದೇವತಾನಾಂ ಯಥಾ ದ್ವಿಜಾಃ |
ಕುರ್ವಂತಿ ತದ್ವದೇತಾಭ್ಯಾಂ ಕರೋಮ್ಯಹಮತಂದ್ರಿತಃ ||21||
ದ್ವಿಜರು ಉಪಾಹಾರಗಳನ್ನು ತಂದು ದೇವತೆಗಳನ್ನು ಹೇಗೆ ಪೂಜಿಸುತ್ತಾರೋ ಅದರಂತೆ ನಾನು ಆಲಸ್ಯವಿಲ್ಲದೆ ಇವರಿಬ್ಬರಲ್ಲಿ ನಡೆದುಕೊಳ್ಳುತ್ತೇನೆ.
ಏತೌ ಮೇ ಪರಮಂ ಬ್ರಹ್ಮನ್ ಪಿತಾ ಮಾತಾ ಚ ದೈವತಮ್ |
ಏತೌ ಪುಷ್ಪೈಃ ಫಲೈರನ್ನೈಸ್ತೋಷಯಾಮಿ ಸದಾ ದ್ವಿಜ ||22||
ಎಲೈ ಬ್ರಾಹ್ಮಣರೇ, ಈ ತಂದೆತಾಯಿಗಳೇ ನನಗೆ ಪರಮದೇವತೆಗಳು. ಇವರನ್ನು ನಾನು ಫಲಪುಷ್ಪಗಳಿಂದಲೂ, ಅನ್ನದಿಂದಲೂ ಯಾವಾಗಲೂ ಸಂತೋಷಪಡಿಸುತ್ತೇನೆ.
ಏತಾವೇವಾಗ್ನಯೋ ಮಹ್ಯಂ ಯಾನ್ ವದಂತಿ ಮನೀಷಿಣಃ |
ಯಜ್ಞಾ ವೇದಾಶ್ಚ ಚತ್ವಾರಃ ಸರ್ವಮೇತೌ ಮಮ ದ್ವಿಜ ||23||
ಜ್ಞಾನಿಗಳು ಯಾವ ಅಗ್ನಿಗಳನ್ನು ಹೇಳುತ್ತಾರೆಯೋ ನನಗೆ ಇವರಿಬ್ಬರೇ ಆ ಅಗ್ನಿಗಳು. ಎಲೈ ಬ್ರಾಹ್ಮಣರೇ, ಯಜ್ಞಗಳು ನಾಲ್ಕುವೇದಗಳು ಎಲ್ಲವೂ ಇವರಿಬ್ಬರೇ.
ಏತದರ್ಥಂ ಮಮ ಪ್ರಾಣಾ ಭಾರ್ಯಾ ಪುತ್ರಾಃ ಸುಹೃಜ್ಜನಃ |
ಸಪುತ್ರದಾರಃ ಶುಶ್ರೂಷಾಂ ನಿತ್ಯಮೇವ ಕರೋಮ್ಯಹಮ್ ||24||
ನನ್ನ ಪ್ರಾಣಗಳು, ನನ್ನ ಪತ್ನಿ, ಪುತ್ರ, ಸುಹೃಜ್ಜನರು ಎಲ್ಲರೂ ಇವರ ಸಲುವಾಗಿಯೇ ಇದ್ದಾರೆ. ಹೆಂಡತಿ ಮಕ್ಕಳೊಂದಿಗೆ ಕೂಡಿ ನಿತ್ಯದಲ್ಲಿಯೂ ಇವರ ಸೇವೆಯನ್ನು ಮಾಡುತ್ತೇವೆ.
ಸ್ವಯಂ ಚ ಸ್ನಾಪಯಾಮ್ಯೇತೌ ತಥಾ ಪಾದೌ ಪ್ರಧಾವಯೇ |
ಆಹಾರಂ ಚ ಪ್ರಯಚ್ಛಾಮಿ ಸ್ವಯಂ ಚ ದ್ವಿಜಸತ್ತಮ ||25||
ನಾನು ಸ್ವತಃ ಅವರಿಗೆ ಸ್ನಾನವನ್ನು ಮಾಡಿಸುತ್ತೇನೆ. ಅವರ ಪಾದಗಳನ್ನು ತೊಳೆಯುತ್ತೇನೆ. ಸ್ವತಃ ಅವರಿಗೆ ಆಹಾರವನ್ನು ಬಡಿಸುತ್ತೇನೆ.
ಅನುಕೂಲಂ ತಥಾ ವಚ್ಮಿ ವಿಪ್ರಿಯಂ ಪರಿವರ್ಜಯೇ |
ಅಧರ್ಮೇಣಾಪಿ ಸಂಯುಕ್ತಂ ಪ್ರಿಯಮಾಭ್ಯಾಂ ಕರೋಮ್ಯಹಮ್ ||26||

ಅವರಿಗೆ ಅನುಕೂಲವಾದುದನ್ನು ಮಾತನಾಡುತ್ತೇನೆ. ಅಪ್ರಿಯವಾದುದನ್ನು ತ್ಯಜಿಸುತ್ತೇನೆ. ಅವರಿಗೆ ಪ್ರಿಯವಾದುದು ಒಂದುಪಕ್ಷ ಅಧರ್ಮವಾದರೂ ನಾನು ಅದನ್ನು ಮಾಡುತ್ತೇನೆ.
ಧರ್ಮಮೇವ ಗುರುಂ ಜ್ಞಾತ್ವಾ ಕರೋಮಿ ದ್ವಿಜಸತ್ತಮ |
ಅತಂದ್ರಿತಃ ಸದಾ ವಿಪ್ರ ಶುಶ್ರೂಷಾಂ ವೈ ಕರೋಮ್ಯಹಮ್ ॥27॥
ಎಲೈ ದ್ವಿಜಶ್ರೇಷ್ಠರೇ, ಧರ್ಮವೇ ದೊಡ್ಡದೆಂದು ತಿಳಿದು ಯಾವ ಆಲಸ್ಯವೂ ಇಲ್ಲದೆ ಯಾವಾಗಲೂ ಇವರ ಸೇವೆಯನ್ನು ಮಾಡುತ್ತೇನೆ.

ಪಂಚೈವ ಗುರವೋ ಬ್ರಹ್ಮನ್ ಪುರುಷಸ್ಯ ಬುಭೂಷತಃ |
ಪಿತಾ ಮಾತಾಽಗ್ನಿರಾತ್ಮಾ ಚ ಗುರುಶ್ಚ ದ್ವಿಜಸತ್ತಮ ॥28॥
ಎಲೈ ದ್ವಿಜಶ್ರೇಷ್ಠರೇ, ಮಂಗಳವನ್ನು ಬಯಸುವವರಿಗೆ ತಂದೆ, ತಾಯಿ, ಗುರು, ಅಗ್ನಿ ಮತ್ತು ಪರಮಾತ್ಮ. ಈ ಐದು ವಸ್ತುಗಳೇ ಪರಮಪೂಜ್ಯವಾದವುಗಳು.
ಏತೇಷು ಯಸ್ತು ವರ್ತೇತ ಸಮ್ಯಗೇವ ದ್ವಿಜೋತ್ತಮ |
ಭವೇಯುರಗ್ನಯಸ್ತಸ್ಯ ಪರಿಚೀರ್ಣಾಸ್ತು ನಿತ್ಯಶಃ ॥29॥
ಗಾರ್ಹಸ್ಥ್ಯೇ ವರ್ತಮಾನಸ್ಯ ಏಷ ಧರ್ಮಃ ಸನಾತನಃ ॥30॥
ಎಲೈ ದ್ವಿಜಶ್ರೇಷ್ಠರೇ, ಈ ಐದು ವಸ್ತುಗಳ ವಿಷಯದಲ್ಲಿ ಯಾವನು ಸರಿಯಾಗಿ ನಡೆದುಕೊಳ್ಳುತ್ತಾನೆಯೋ ಅವನು ನಿತ್ಯದಲ್ಲಿಯೂ ಅಗ್ನಿಯ ಸೇವೆಯನ್ನು ಮಾಡಿದಂತೆ ಆಗುತ್ತದೆ. ಗೃಹಸ್ಥನಿಗೆ ಇದು ಸನಾತನ ಧರ್ಮವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ
ಪತಿವ್ರತಾಮಾಹಾತ್ಮ್ಯೇ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಒಂದನೆಯ ಅಧ್ಯಾಯ
ಧರ್ಮವ್ಯಾಧನಿಂದ ಶೂದ್ರಯೋನಿಗೆ ಕಾರಣವಾದ ತನ್ನ ಪೂರ್ವವೃತ್ತಾಂತ ಕಥನ, ನಾನಾ ಧರ್ಮೋಪದೇಶ. ಕೌಶಿಕನ ಪ್ರತಿನಿವೃತ್ತಿ. ಮಾರ್ಕಂಡೇಯರಿಂದ ಯುಧಿಷ್ಠಿರನನ್ನು ಕುರಿತು ಪತಿವ್ರತಾ ಮಹಾತ್ಮ್ಯ ಕಥನದ ಉಪಸಂಹಾರ.
ಮಾರ್ಕಂಡೇಯಃ
ಗುರೂ ನಿವೇದ್ಯ ವಿಪ್ರಾಯ ತೌ ಮಾತಾಪಿತರಾವುಭೌ |
ಪುನರೇವ ಸ ಧರ್ಮಾತ್ಮಾ ವ್ಯಾಧೋ ಬ್ರಾಹ್ಮಣಮಬ್ರವೀತ್ ॥1॥
ಮಾರ್ಕಂಡೇಯ ತನ್ನ ಹಿರಿಯರಾದ ಮಾತಾಪಿತೃಗಳಿಬ್ಬರನ್ನೂ ಬ್ರಾಹ್ಮಣರಿಗೆ ನಿವೇದಿಸಿ ಧರ್ಮಾತ್ಮನಾದ ವ್ಯಾಧನು ಪುನಃ ಬ್ರಾಹ್ಮಣನನ್ನು ಕುರಿತು ಮಾತನಾಡಿದನು.
ಪ್ರವೃತ್ತಚಕ್ಷುರ್ಜಾತೋಽಸ್ಮಿ ಸಂಪಶ್ಯ ತಪಸೋ ಬಲಮ್ |
ಯದರ್ಥಮುಕ್ತೋಽಸಿ ತಯಾ ಗಚ್ಛ ತ್ವಂ ಮಿಥಿಲಾಮಿತಿ ॥2॥
ನನಗೆ ಜ್ಞಾನೋದಯವುಂಟಾಗಿದೆ. ತಪಸ್ಸಿನ ಬಲವನ್ನು ನೋಡು. ಅದರಿಂದ ಆ ಪತಿವ್ರತೆಯು ಮಿಥಿಲಾಪಟ್ಟಣಕ್ಕೆ ಹೋಗು ಎಂದು ನಿನಗೆ ಹೇಳಿದಳು.
ಪತಿಶುಶ್ರೂಷಪರಯಾ ದಾಂತಯಾ ಸತ್ಯಶೀಲಯಾ |
ಮಿಥಿಲಾಯಾಂ ವಸೇದ್ ವ್ಯಾಧಃ ಸ ತೇ ಧರ್ಮಾನ್ ಪ್ರವಕ್ಷ್ಯತಿ ॥3॥
ಪತಿಶುಶ್ರೂಷಾಪರಳೂ, ಇಂದ್ರಿಯನಿಗ್ರಹವುಳ್ಳವಳೂ, ಸತ್ಯಶೀಲೆಯೂ ಆದ ಆ ಪತಿವ್ರತೆಯು ಮಿಥಿಲಾಪಟ್ಟಣದಲ್ಲಿ ವ್ಯಾಧನಿದ್ದಾನೆ ಅವನು ನಿನಗೆ ಧರ್ಮಗಳನ್ನು ಉಪದೇಶಿಸುವನು ಎಂದು ಹೇಳಿದಳಷ್ಟೆ?
ಬ್ರಾಹ್ಮಣಃ
ಪತಿವ್ರತಾಯಾಃ ಸತ್ಯಾಯಾಃ ಶೀಲಾಢ್ಯಾಯಾ ಯತವ್ರತ |
ಸಂಸ್ಮೃತ್ಯ ವಾಕ್ಯಂ ಧರ್ಮಜ್ಞ ಗುಣವಾನಸಿ ಮೇ ಮತಃ ॥4॥
ಬ್ರಾಹ್ಮಣ ಎಲೈ ನಿಯತವ್ರತನಾದ ವ್ಯಾಧನೇ, ಪತಿವ್ರತೆಯೂ, ಸತ್ಯಶೀಲೆಯೂ, ಗುಣಾಢ್ಯಳೂ ಆದ ಅವಳ ಮಾತುಗಳನ್ನು ಸ್ಮರಿಸಿ, ಎಲೈ ಧರ್ಮಜ್ಞನೇ, ನೀನು ಗುಣವಂತನೆಂದು ನಾನು ಅಭಿಪ್ರಾಯಪಡುತ್ತೇನೆ.
ವ್ಯಾಧಃ
ಯತ್ ತದಾ ತ್ವಂ ದ್ವಿಜಶ್ರೇಷ್ಠ ತಯೋಕ್ತೋ ಮಾಂ ಪ್ರತಿ ಪ್ರಭೋ |
ದೃಷ್ಟಮೇವ ತಯಾ ಸಮ್ಯಗೇಕಪತ್ನ್ಯಾ ನ ಸಂಶಯಃ ॥5॥
ವ್ಯಾಧ ಎಲೈ ದ್ವಿಜಶ್ರೇಷ್ಠರೇ, ಪ್ರಭುಗಳೇ, ಅವಳು ನನ್ನ ವಿಷಯದಲ್ಲಿ ನಿನಗೆ ಏನು ಹೇಳಿದಳೋ ಅವೆಲ್ಲವನ್ನೂ ಪತಿವ್ರತೆಯಾದ ಅವಳು ನಿಸ್ಸಂಶಯವಾಗಿ ಮೊದಲೇ ನೋಡಿದ್ದಾಳೆ.
ತ್ವದನುಗ್ರಹಬುದ್ಧ್ಯಾ ತು ವಿಪ್ರೈತದ್ ದರ್ಶಿತಂ ಮಯಾ |
ವಾಕ್ಯಂ ಚ ಶೃಣು ಮೇ ತಾತ ಯತ್ ತೇ ವಕ್ಷ್ಯೇ ಹಿತಂ ದ್ವಿಜ ॥6॥
ಎಲೈ ಬ್ರಾಹ್ಮಣರೇ, ನಿಮಗೆ ಅನುಗ್ರಹ ಮಾಡಬೇಕೆಂಬ ದೃಷ್ಟಿಯಿಂದ ನಾನು ಇದೆಲ್ಲವನ್ನೂ ತೋರಿಸಿದೆನು. ಪ್ರೀತಿಪಾತ್ರರಾದ ಬ್ರಾಹ್ಮಣರೇ, ನನ್ನ ಮಾತನ್ನು ಕೇಳಿ. ನಿಮಗೆ ಹಿತವನ್ನು ಹೇಳುವೆನು.

ತ್ವಯಾ ವಿನಿಕೃತಾ ಮಾತಾ ಪಿತಾ ಚ ದ್ವಿಜಸತ್ತಮ |
ಅನಿಸೃಷ್ಟೋಽಸಿ ನಿಷ್ಕ್ರಾಂತೋ ಗೃಹಾತ್ ತಾಭ್ಯಾಮನಿಂದಿತ |
ವೇದೋಚ್ಚಾರಣಕಾರ್ಯಾರ್ಥಮಯುಕ್ತಂ ತತ್ ತ್ವಯಾ ಕೃತಮ್ ॥7॥
ಎಲ್ಲೈ ದ್ವಿಜಶ್ರೇಷ್ಠರೇ, ನೀವು ನಿಮ್ಮ ಮಾತಾಪಿತೃಗಳಿಗೆ ಅಪಚಾರವನ್ನು ಮಾಡಿದ್ದೀರಿ. ಎಲ್ಲೈ ಅನಿಂದಿತರೇ, ಅವರ ಅನುಮತಿಯನ್ನು ಪಡೆಯದೆ ವೇದೋಚ್ಚಾರದ ಉದ್ದೇಶದಿಂದ ಮನೆಯನ್ನು ಬಿಟ್ಟು ಬಂದಿದ್ದೀರಿ. ನೀವು ಮಾಡಿದುದು ಅಯುಕ್ತವಾದುದು.
ತವ ಶೋಕೇನ ವೃದ್ಧೌ ತಾವಂಧೀಭೂತೌ ತಪಸ್ವಿನೌ |
ತೌ ಪ್ರಸಾದಯಿತುಂ ಗಚ್ಛ ಮಾ ತ್ವಾಂ ಧರ್ಮೋಽತ್ಯಗಾದಯಮ್ ॥8॥
ನಿಮ್ಮ ಅಗಲಿಕೆಯ ಶೋಕದಿಂದ ಶೋಚನೀಯರಾದ ಆ ಇಬ್ಬರು ವೃದ್ಧರೂ ಕುರುಡರಾಗಿದ್ದಾರೆ. ಅವರನ್ನು ಸಮಾಧಾನಪಡಿಸಲು ಮನೆಗೆ ಹೋಗಿ. ಈ ಧರ್ಮದ ಅತಿಕ್ರಮವು ಉಂಟಾಗುವುದು ಬೇಡ.
ಸರ್ವಮೇತದಪಾರ್ಥಂ ತೇ ಕ್ಷಿಪ್ರಂ ತೌ ಸಂಪ್ರಸಾದಯ |
ತೌ ಪ್ರಸಾದ್ಯ ದ್ವಿಜಶ್ರೇಷ್ಠ ಯಚ್ಛ್ರೇಯಸ್ತದವಾಪ್ಸ್ಯಸಿ ॥9॥
ಅವರನ್ನು ಸಂತೋಷಗೊಳಿಸದಿದ್ದರೆ ನೀವು ಮಾಡಿದುದೆಲ್ಲವೂ ವ್ಯರ್ಥವಾಗುತ್ತದೆ. ಎಲ್ಲೈ ದ್ವಿಜಶ್ರೇಷ್ಠರೇ, ಅವರನ್ನು ಸಂತೋಷಪಡಿಸಿ ನೀವು ಎಲ್ಲಾ ಶ್ರೇಯಸ್ಸನ್ನೂ ಹೊಂದುವಿರಿ.
ಶ್ರದ್ದಧಸ್ವ ಮಮ ಬ್ರಹ್ಮನ್ ನಾನ್ಯಥಾ ಕರ್ತುಮರ್ಹಸಿ |
ಗಮ್ಯತಾಮದ್ಯ ವಿಪ್ರರ್ಷೇ ಶ್ರೇಯಸ್ತೇ ಕಥಯಾಮ್ಯಹಮ್ ॥10॥
ಬ್ರಾಹ್ಮಣರೇ, ನನ್ನ ಮಾತನ್ನು ನಂಬಿ. ಬೇರೆ ಏನನ್ನೂ ಮಾಡಬೇಡಿ. ವಿಪ್ರರ್ಷಿಗಳೇ, ಈ ದಿನವೇ ಮನೆಗೆ ಹೋಗಿ. ನಾನು ನಿಮ್ಮ ಶ್ರೇಯಸ್ಸನ್ನು ಹೇಳುತ್ತಿದ್ದೇನೆ.
ಬ್ರಾಹ್ಮಣಃ
ಯದೇತದುಕ್ತಂ ಭವತಾ ಸರ್ವಂ ಸತ್ಯಮಸಂಶಯಮ್ |
ಪ್ರೀತೋಽಸ್ಮಿ ತವ ಭದ್ರಂ ತೇ ಧರ್ಮಾಚಾರಣಗುಣಾನ್ವಿತ ॥11॥
ಬ್ರಾಹ್ಮಣ ಧರ್ಮಾಚಾರಣಗುಣಾನ್ವಿತನಾದ ವ್ಯಾಧನೇ, ನೀನು ಹೇಳಿದುದೆಲ್ಲವೂ ಸತ್ಯವಾಗಿದೆ. ಇದರಲ್ಲಿ ಸಂಶಯವಿಲ್ಲ. ನನಗೆ ಸಂತೋಷವಾಗಿದೆ. ನಿನಗೆ ಮಂಗಳವಾಗಲಿ.
ವ್ಯಾಧಃ
ದೈವತಪ್ರತಿಮೋ ಹಿ ತ್ವಂ ಯಸ್ತ್ವಂ ಧರ್ಮಮನುವ್ರತಃ |
ಪುರಾಣಂ ಶಾಶ್ವತಂ ದಿವ್ಯಂ ದುಷ್ಪ್ರಾಪ್ಯಮಕೃತಾತ್ಮಭಿಃ ॥12॥
ವ್ಯಾಧ ಧರ್ಮವನ್ನು ಅನುಸರಿಸುವ ನೀವು ನನಗೆ ದೇವತಾ ಸಮಾನನಾಗಿದ್ದೀರಿ. ದುಷ್ಟರಿಗೆ ದೊರೆಯದಂತಹ ದಿವ್ಯವಾದ ಸನಾತನವಾದ, ಶಾಶ್ವತವಾದ ದೇವತಾ ಸ್ವರೂಪವು ನಿಮ್ಮಲ್ಲಿದೆ.
ಮಾತಾಪಿತ್ರೋಃ ಸಕಾಶಂ ಹಿ ಗತ್ವಾ ತ್ವಂ ದ್ವಿಜಸತ್ತಮ |
ಅತಂದ್ರಿತಃ ಕುರು ಕ್ಷಿಪ್ರಂ ಮಾತಾಪಿತ್ರೋರ್ಹಿ ಪೂಜನಮ್ ॥13॥
ಅತಃ ಪರಮಹಂ ಧರ್ಮಂ ನಾನ್ಯಂ ಪಶ್ಯಾಮಿ ಕಂಚನ ॥14॥
ಎಲ್ಲೈ ದ್ವಿಜಶ್ರೇಷ್ಠರೇ, ನೀವು ಮಾತಾಪಿತೃಗಳ ಸಮೀಪಕ್ಕೆ ಕ್ಷಿಪ್ರವಾಗಿ ಹೋಗಿ ಆಲಸ್ಯವಿಲ್ಲದೆ ಅವರ ಸೇವೆಯನ್ನು ಮಾಡಿ. ಇದಕ್ಕಿಂತ ದೊಡ್ಡ ಧರ್ಮವು ನನಗೆ ಯಾವುದೂ ತೋರುವುದಿಲ್ಲ.
ಕೌಶಿಕಃ
ಇಹಾಹಮಾಗತೋ ದಿಷ್ಟ್ಯಾ ದಿಷ್ಟ್ಯಾ ಮೇ ಸಂಗತಂ ತ್ವಯಾ |
ಈದೃಶಾ ದುರ್ಲಭಾ ಲೋಕೇ ನರಾ ಧರ್ಮಪ್ರದರ್ಶಕಾಃ ॥15॥
ಕೌಶಿಕ ದೇವರ ದಯೆಯಿಂದ ನಾನು ಇಲ್ಲಿಗೆ ಬಂದು ನಿನ್ನ ಸಮಾಗಮವನ್ನು ಹೊಂದಿದೆ. ಹೀಗೆ ಧರ್ಮದ ಮಾರ್ಗವನ್ನು ತೋರಿಸುವವರು ಲೋಕದಲ್ಲಿ ದುರ್ಲಭರಾಗಿದ್ದಾರೆ.
ಏಕೋ ನರಸಹಸ್ರೇಷು ಧರ್ಮವಿದ್ ವಿದ್ಯತೇ ನ ವಾ |
ಪ್ರೀತೋಽಸ್ಮಿ ತವ ಸತ್ಯೇನ ಭದ್ರಂ ತೇ ಪುರುಷರ್ಷಭ ॥16॥
ಸಹಸ್ರ ಮನುಷ್ಯರಲ್ಲಿ ಒಬ್ಬನಾದರೂ ಧರ್ಮಜ್ಞನಾದವನು ಇದ್ದಾನೆಯೋ ಇಲ್ಲವೋ ಎನಿಸುತ್ತದೆ. ನಿನ್ನ ಸತ್ಯವಚನಗಳಿಂದ ನಾನು ಸಂತುಷ್ಟನಾಗಿದ್ದೇನೆ. ಪುರುಷಶ್ರೇಷ್ಠನೇ, ನಿನಗೆ ಮಂಗಳವಾಗಲಿ.
ಪತಮಾನೋಽದ್ಯ ನರಕೇ ಭವತಾಽಸ್ಮಿ ಸಮುದ್ಧೃತಃ |
ಭವಿತವ್ಯಮಥೈವಂ ಚ ಯದ್‌ದೃಷ್ಟೋಽಸಿ ಮಯಾನಘ ॥17॥
ನರಕದಲ್ಲಿ ಬೀಳಲಿದ್ದ ನಾನು ಈ ದಿನ ನಿನ್ನಿಂದ ಉದ್ಧರಿಸಲ್ಪಟ್ಟಿದ್ದೇನೆ. ಎಲ್ಲೈ ಅನಘನೇ, ನಾನು ನಿನ್ನನ್ನು ನೋಡಬೇಕೆಂಬುದು ದೈವಸಂಕಲ್ಪವಾಗಿದ್ದಿತು.
ರಾಜಾ ಯಯಾತಿರ್ದೌಹಿತ್ರೈಃ ಪತಿತಸ್ತಾರಿತೋ ಯಥಾ |
ಸದ್ಭಿಃ ಪುರುಷಶಾರ್ದೂಲ ತಥಾಽಹಂ ಭವತಾ ದ್ವಿಜಃ ॥18॥
ಎಲ್ಲೈ ಪುರುಷಶಾರ್ದೂಲನೇ, ಸ್ವರ್ಗಲೋಕದಿಂದ ಕೆಳಗೆ ಬೀಳುತ್ತಿದ್ದ ಯಯಾತಿಯು ಸಜ್ಜನರಾದ ತನ್ನ ದೌಹಿತ್ರದಿಂದ ಪಾರುಮಾಡಲ್ಪಟ್ಟನು. ಹಾಗೆಯೇ ಬ್ರಾಹ್ಮಣನಾದ ನಾನು ನಿನ್ನಿಂದ ಪಾರುಮಾಡಲ್ಪಟ್ಟಿದ್ದೇನೆ.
ಮಾತಾಪಿತೃಭ್ಯಾಂ ಶುಶ್ರೂಷಾಂ ಕರಿಷ್ಯೇ ವಚನಾತ್ ತವ |

ನಾಕೃತಾತ್ಮಾ ವೇದಯತಿ ಧರ್ಮಾಧರ್ಮವಿನಿಶ್ಚಯಮ್ ॥19॥
ನಿನ್ನ ಮಾತಿನಂತೆ ನಾನು ಮಾತಾಪಿತೃಗಳ ಸೇವೆಯನ್ನು ಮಾಡುವೆನು. ಮನೋನಿಗ್ರಹವಿಲ್ಲದವನು ಧರ್ಮಾಧರ್ಮಗಳ ವಿವೇಚನೆಯನ್ನು ಮಾಡಲಾರ.
ದುರ್ಜ್ಞೇಯಃ ಶಾಶ್ವತೋ ಧರ್ಮಃ ಶೂದ್ರಯೋನೌ ಹಿ ವರ್ತತೇ |
ನ ತ್ವಾಂ ಶೂದ್ರಮಹಂ ಮನ್ಯೇ ಭವಿತವ್ಯಂ ಹಿ ಕಾರಣಮ್ ॥20॥
ದುರ್ಜ್ಞೇಯವಾದ ಶಾಶ್ವತವಾದ ಧರ್ಮವು ಶೂದ್ರಯೋನಿಯಲ್ಲಿರುವ ನಿನ್ನಲ್ಲಿ ಆಶ್ರಿತವಾಗಿದೆ. ನಾನು ನಿನ್ನನ್ನು ಶೂದ್ರನೆಂದು ಭಾವಿಸುವುದಿಲ್ಲ. ನೀನು ಶೂದ್ರಯೋನಿಯಲ್ಲಿ ಹುಟ್ಟುವುದಕ್ಕೆ ಏನೋ ಬಲವಾದ ಕಾರಣವಿರಬೇಕು.
ಯೇನ ಕರ್ಮವಿಶೇಷೇಣ ಪ್ರಾಪ್ತೇಯಂ ಶೂದ್ರತಾ ತ್ವಯಾ |
ಏತದಿಚ್ಛಾಮಿ ವಿಜ್ಞಾತುಂ ತತ್ತ್ವೇನ ಹಿ ಮಹಾಮತೇ |
ಕಾಮಯಾ ಬ್ರೂಹಿ ಮೇ ಸರ್ವಂ ಸತ್ಯೇನ ಪ್ರಯತಾತ್ಮನಾ ॥21॥
ಎಲೈ ಮಹಾಮತಿಯೇ, ನೀನು ಯಾವ ಕರ್ಮವಿಶೇಷದಿಂದ ಈ ಶೂದ್ರಯೋನಿಯನ್ನು ಹೊಂದಿದೆ ಎಂದು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ. ನಿಯತಾತ್ಮನಾದ ನೀನು ಅವೆಲ್ಲವನ್ನೂ ನನಗೆ ಸತ್ಯವಾಗಿ ಸಂತೋಷದಿಂದ ಹೇಳು.
ವ್ಯಾಧಃ
ಅನತಿಕ್ರಮಣೀಯಾ ವೈ ಬ್ರಾಹ್ಮಣಾ ಮೇ ದ್ವಿಜೋತ್ತಮ |
ಶೃಣು ಸರ್ವಮಿದಂ ವೃತ್ತಂ ಪೂರ್ವದೇಹೇ ಮಮಾನಘ ॥22॥
ವ್ಯಾಧ ಎಲೈ ದ್ವಿಜೋತ್ತಮರೇ, ನನಗೆ ಬ್ರಾಹ್ಮಣರು ಮೀರಲು ಅಸಾಧ್ಯರಾದವರು. ಅನಘರೇ, ನನ್ನ ಹಿಂದಿನ ದೇಹದಲ್ಲಿ ನಡೆದ ಈ ಘಟನೆಯನ್ನೆಲ್ಲಾ ಕೇಳಿ.
ಅಹಂ ಹಿ ಬ್ರಾಹ್ಮಣಃ ಪೂರ್ವಮಾಸಂ ದ್ವಿಜವರಾತ್ಮಜಃ |
ವೇದಾಧ್ಯಾಯೀ ಸುಕುಶಲೋ ವೇದಾಂಗಾನಾಂ ಚ ಪಾರಗಃ ॥23॥
ಆತ್ಮದೋಷಕೃತೈರ್ಬ್ರಹ್ಮನ್ನವಸ್ಥಾಮಾಪ್ತವಾನಿಮಾಮ್ ॥24॥
ನಾನು ಹಿಂದಿನ ಜನ್ಮದಲ್ಲಿ ಒಬ್ಬ ಶ್ರೇಷ್ಠಬ್ರಾಹ್ಮಣನ ಮಗನಾಗಿದ್ದೆ. ವೇದಾಧ್ಯಯನದಲ್ಲಿ ಕುಶಲನೂ, ವೇದಾಂಗದಲ್ಲಿ ಪಾರಂಗತನೂ ಆಗಿದ್ದೆನು. ಎಲೈ ಬ್ರಾಹ್ಮಣರೇ, ನಾನು ಸ್ವತಃ ಮಾಡಿದ ಅಪರಾಧದಿಂದಾಗಿ ಈ ದುರವಸ್ಥೆಯನ್ನು ಪಡೆದಿದ್ದೇನೆ.
ಕಶ್ಚಿದ್ ರಾಜಾ ಮಮ ಸಖಾ ಧನುರ್ವೇದಪರಾಯಣಃ |
ಸಂಸರ್ಗಾದ್ ಧನುಷಿ ಶ್ರೇಷ್ಠಸ್ತತೋಽಹಮಭವಂ ದ್ವಿಜ ॥25॥
ನನಗೆ ಧನುರ್ವೇದಪರಾಯಣನಾದ ಒಬ್ಬ ರಾಜನು ಸ್ನೇಹಿತನಾಗಿದ್ದನು. ಎಲೈ ಬ್ರಾಹ್ಮಣರೇ, ಅವನ ಸಂಪರ್ಕದಿಂದ ನಾನೂ ಸಹ ಧನುರ್ವಿದ್ಯೆಯಲ್ಲಿ ನಿಪುಣನಾದೆನು.
ಏತಸ್ಮಿನ್ನೇವ ಕಾಲೇ ತು ಮೃಗಯಾಂ ನಿರ್ಗತೋ ನೃಪಃ |
ಸಹಿತೋ ಯೋಧಮುಖ್ಯೈಶ್ಚ ಮಂತ್ರಿಭಿಶ್ಚ ಸುಸಂವೃತಃ |
ತತೋಽಭ್ಯಹನ್ ಮೃಗಾಂಸ್ತತ್ರ ಸುಬಹೂನಾಶ್ರಮಂ ಪ್ರತಿ ॥26॥
ಆ ಸಮಯದಲ್ಲಿ ಒಮ್ಮೆ ರಾಜನು ತನ್ನ ಮಂತ್ರಿಗಳಿಂದಲೂ ಮತ್ತು ಮುಖ್ಯವಾದ ಸೈನಿಕರಿಂದಲೂ ಸಹಿತನಾಗಿ ಬೇಟೆಗೆ ಹೊರಟನು. ಅವನು ಕಾಡಿನಲ್ಲಿ ಒಂದು ಆಶ್ರಮದ ಬಳಿ ಇದ್ದ ಅನೇಕ ಮೃಗಗಳನ್ನು ಕೊಂದನು.
ಅಥ ಕ್ಷಿಪ್ತಃ ಶರೋ ಘೋರೋ ಮಯಾಽಪಿ ದ್ವಿಜಸತ್ತಮ |
ತಾಡಿತಶ್ಚ ಋಷಿಸ್ತೇನ ಶರೇಣಾನತಪರ್ವಣಾ ॥27॥
ಎಲೈ ದ್ವಿಜಶ್ರೇಷ್ಠರೇ, ಆಗ ನಾನೂ ಒಂದು ಘೋರವಾದ ಬಾಣವನ್ನು ಪ್ರಯೋಗಿಸಿದೆನು. ಬಾಗಿದ ತುದಿಯುಳ್ಳ ಆ ಬಾಣವು ಋಷಿಯನ್ನು ತಾಕಿತು.
ಭೂಮೌ ನಿಪತಿತೋ ಬ್ರಹ್ಮನ್ನುವಾಚ ಪ್ರತಿನಾದಯನ್ |
ನಾಪರಾಧ್ಯಾಮ್ಯಹಂ ಕಿಂಚಿತ್ ಕೇನ ಪಾಪಮಿದಂ ಕೃತಮ್ ॥28॥
ಎಲೈ ಬ್ರಾಹ್ಮಣರೇ, ಭೂಮಿಯಲ್ಲಿ ಬಿದ್ದ ಆ ಋಷಿಯು ನಾನು ಯಾರಿಗೂ ಅಪರಾಧವನ್ನು ಮಾಡಿಲ್ಲ. ಈ ಪಾಪಕಾರ್ಯವನ್ನು ಮಾಡಿದವನು ಯಾರು? ಎಂದು ಗರ್ಜಿಸುತ್ತಾ ಹೇಳಿದನು.
ಮನ್ವಾನಸ್ತಂ ಮೃಗಂ ಚಾಹಂ ಸಂಪ್ರಾಪ್ತಃ ಸಹಸಾ ಪ್ರಭೋ |
ಅಪಶ್ಯಂ ತಮೃಷಿಂ ವಿದ್ಧಂ ಶರೇಣಾನತಪರ್ವಣಾ ॥29॥
ಪ್ರಭುಗಳೇ, ಅವನನ್ನು ಮೃಗವೆಂದು ತಿಳಿದಿದ್ದ ನಾನು ತಕ್ಷಣ ಅವನ ಹತ್ತಿರಕ್ಕೆ ಹೋಗಿ ಬಾಗಿದ ತುದಿಯುಳ್ಳ ಬಾಣದಿಂದ ತಾಡಿತನಾದ ಆ ಋಷಿಯನ್ನು ನೋಡಿದೆನು.
ತಮುಗ್ರತಪಸಂ ವಿಪ್ರಂ ನಿಷ್ಟನಂತಂ ಮಹೀತಳೇ |
ಅಕಾರ್ಯಕರಣಾಚ್ಚಾಪಿ ಭೃಶಂ ಮೇ ವ್ಯಥಿತಂ ಮನಃ ॥30॥
ಅಜಾನತಾ ಕೃತಮಿದಂ ಮಯೇತ್ಯಹಮಥಾಬ್ರುವಮ್ |
ಕ್ಷಂತುಮರ್ಹಸಿ ಮೇ ಸರ್ವಮಿತಿ ಚೋಕ್ತೋ ಮಯಾ ಮುನಿಃ ॥31॥
ಉಗ್ರ ತಪಸ್ವಿಯಾಗಿದ್ದ, ಭೂಮಿಯಲ್ಲಿ ಬಿದ್ದು ಹೊರಳಾಡುತ್ತಿದ್ದ ಆ ಬ್ರಾಹ್ಮಣನನ್ನು ನೋಡಿ ನಾನು ಅಕಾರ್ಯವನ್ನು ಮಾಡಿದುದರಿಂದ ಮನಸ್ಸಿನಲ್ಲಿ ಬಹಳ ವ್ಯಥೆಯನ್ನು ಪಟ್ಟೆನು. ನಾನು ನೀವು ಋಷಿಗಳೆಂದು ತಿಳಿಯದೆ ಅಜ್ಞಾನದಿಂದ ಈ ಕಾರ್ಯವನ್ನು ಮಾಡಿದೆನು. ಆದ್ದರಿಂದ ನಾನು ಮಾಡಿದ ಅಪರಾಧವನ್ನು ಕ್ಷಮಿಸಬೇಕು ಎಂದು ಆ ಋಷಿಗಳಿಗೆ ಹೇಳಿದೆನು.

ತತಃ ಪ್ರತ್ಯಬ್ರವೀದ್ ವಾಕ್ಯಮೃಷಿರ್ಮಾಂ ಕ್ರೋಧಮೂರ್ಛಿತಃ |
ವ್ಯಾಧಸ್ತ್ವಂ ಭವಿತಾ ಕ್ರೂರ ಶೂದ್ರಯೋನಾವಿತಿ ದ್ವಿಜ ॥32॥
ಎಲೈ ಬ್ರಾಹ್ಮಣರೇ, ಆಗ ಕ್ರೋಧಮೂರ್ಛಿತರಾದ ಆ ಋಷಿಯು ನನ್ನನ್ನು ಕುರಿತು ಎಲೈ ಕ್ರೂರನೇ, ನೀನು ಶೂದ್ರಯೋನಿಯಲ್ಲಿ ಜನಿಸಿ ವ್ಯಾಧನಾಗುವಿ ಎಂದು ಹೇಳಿದರು.
ಏವಂ ಶಪ್ತೋಽಹಮೃಷಿಣಾ ತದಾ ದ್ವಿಜವರೋತ್ತಮ |
ಅಭಿಪ್ರಸಾದಯಮೃಷಿಂ ಗಿರಾ ತ್ರಾಹೀತಿ ಮಾಂ ತದಾ ॥33॥
ಅಜಾನತಾ ಮಯಾಽಕಾರ್ಯಮಿದಮದ್ಯ ಕೃತಂ ಮುನೇ |
ಕ್ಷಂತುಮರ್ಹಸಿ ತತ್ಸರ್ವಂ ಪ್ರಸೀದ ಭಗವನ್ನಿತಿ ॥34॥
ಎಲೈ ಬ್ರಾಹ್ಮಣಶ್ರೇಷ್ಠರೇ, ಆ ಋಷಿಗಳಿಂದ ಹೀಗೆ ಶಾಪಕ್ಕೆ ಒಳಗಾದ ನಾನು ಆಗ ಪ್ರಸನ್ನನಾಗಿ ನನ್ನನ್ನು ರಕ್ಷಿಸಿ. ಎಲೈ ಪೂಜ್ಯರೇ, ನಾನು ತಿಳಿಯದೆ ಈ ದಿನ ಈ ಅಕಾರ್ಯವನ್ನು ಮಾಡಿದೆನು. ನನ್ನ ಅಪರಾಧವೆಲ್ಲವನ್ನೂ ಕ್ಷಮಿಸಿ ಪ್ರಸನ್ನರಾಗಬೇಕು ಎಂದು ಕೇಳಿಕೊಂಡೆನು.
ಋಷಿಃ
ನಾನ್ಯಥಾ ಭವಿತಾ ಶಾಪ ಏವಮೇತದಸಂಶಯಮ್ |
ಆನೃಶಂಸ್ಯಾತ್ ತ್ವಹಂ ಕಿಂಚಿತ್ ಕರ್ತಾಽನುಗ್ರಹಮದ್ಯ ತೇ ॥35॥
ಋಷಿ ನನ್ನ ಶಾಪವು ವ್ಯರ್ಥವಾಗುವುದಿಲ್ಲ. ಇದರಲ್ಲಿ ಸಂಶಯವಿಲ್ಲ. ಆದರೆ ನಿನ್ನ ಮೇಲಿನ ಕರುಣೆಯಿಂದ ನಿನಗೆ ಸ್ವಲ್ಪ ಅನುಗ್ರಹವನ್ನು ಮಾಡುವೆನು.
ಶೂದ್ರಯೋನ್ಯಾಂ ವರ್ತಮಾನೋ ಧರ್ಮಜ್ಞೋ ಹಿ ಭವಿಷ್ಯಸಿ |
ಮಾತಾಪಿತ್ರೋಶ್ಚ ಶುಶ್ರೂಷಾಂ ಕರಿಷ್ಯಸಿ ನ ಸಂಶಯಃ ॥36॥
ಶೂದ್ರಯೋನಿಯಲ್ಲಿ ಹುಟ್ಟಿದರೂ ನೀನು ಧರ್ಮಜ್ಞನಾಗಿರುವಿ. ಮಾತಾಪಿತೃಗಳ ಸೇವೆಯನ್ನು ಮಾಡುವಿ. ಇದರಲ್ಲಿ ಸಂಶಯವಿಲ್ಲ.
ತಯಾ ಶುಶ್ರೂಷಯಾ ಸಿದ್ಧಿಂ ಮಹತೀಂ ಸಮವಾಪ್ಸ್ಯಸಿ |
ಜಾತಿಸ್ಮರಶ್ಚ ಭವಿತಾ ಸ್ವರ್ಗಂ ಚೈವ ಗಮಿಷ್ಯಸಿ ॥37॥
ಆ ಸೇವೆಯಿಂದ ನಿನಗೆ ದೊಡ್ಡ ಸಿದ್ಧಿ ಉಂಟಾಗುವುದು. ಪೂರ್ವಜನ್ಮದ ಸ್ಮರಣೆಯೂ ಉಂಟಾಗುವುದು ಮತ್ತು ನೀನು ಸ್ವರ್ಗಕ್ಕೆ ಹೋಗುವಿ.
ಭೂತ್ವಾ ಚ ಧಾರ್ಮಿಕೋ ವ್ಯಾಧಃ ಪಿತೃಶುಶ್ರೂಷಣೇ ರತಃ |
ಶಾಪಕ್ಷಯೇ ತು ನಿರ್ವೃತ್ತೇ ಭವಿತಾಸಿ ಪುನರ್ದ್ವಿಜಃ ॥38॥
ನೀನು ಧಾರ್ಮಿಕನಾದ ವ್ಯಾಧನಾಗಿ ತಂದೆತಾಯಿಗಳ ಸೇವೆಯಲ್ಲಿ ನಿರತನಾಗಿ ಶಾಪದ ಫಲವು ಕಳೆದ ಮೇಲೆ ಪುನಃ ಬ್ರಾಹ್ಮಣನಾಗುವಿ.

ವ್ಯಾಧಃ
ಏವಂ ಶಪ್ತಃ ಪುರಾ ತೇನ ಋಷಿಣಾಽಸ್ಮ್ಯುಗ್ರತೇಜಸಾ |
ಪ್ರಸಾದಶ್ಚ ಕೃತಸ್ತೇನ ಮಮೈವಂ ದ್ವಿಪದಾಂವರ ॥39॥
ವ್ಯಾಧ ಎಲೈ ಬ್ರಾಹ್ಮಣಶ್ರೇಷ್ಠರೇ, ಹೀಗೆ ಘೋರತೇಜಸ್ವಿಗಳಾದ ಆ ಋಷಿಗಳಿಂದ ಶಾಪವುಂಟಾಯಿತು ಮತ್ತು ಅವರು ಅನುಗ್ರಹವನ್ನೂ ಮಾಡಿದರು.
ಶರಂ ಚೋದ್ಧೃತವಾನಸ್ಮಿ ತಸ್ಯ ವೈ ದ್ವಿಜಸತ್ತಮ |
ಆಶ್ರಮಂ ಚ ಮಯಾ ನೀತೋ ನ ಚ ಪ್ರಾಣೈರ್ವ್ಯಯುಜ್ಯತ ॥40॥
ಎಲೈ ದ್ವಿಜಶ್ರೇಷ್ಠರೇ, ನಾನು ಅವರ ಶರೀರದಲ್ಲಿ ನೆಟ್ಟ ಬಾಣವನ್ನು ತೆಗೆದು ಅವರನ್ನು ಆಶ್ರಮಕ್ಕೆ ಕರೆದುಕೊಂಡು ಹೋದೆನು. ಅವರು ಮರಣವನ್ನು ಹೊಂದಲಿಲ್ಲ.
ಏತತ್ ತೇ ಸರ್ವಮಾಖ್ಯಾತಂ ಯಥಾ ಮಮ ಪುರಾಽಭವತ್ |
ಅಭಿತಶ್ಚಾಪಿ ಗಂತವ್ಯಂ ಮಯಾ ಸ್ವರ್ಗಂ ದ್ವಿಜೋತ್ತಮ ॥41॥
ಹೀಗೆ ನನಗೆ ಹಿಂದೆ ನಡೆದುದನ್ನೆಲ್ಲಾ ನಿಮಗೆ ಹೇಳಿದೆನು. ಎಲೈ ದ್ವಿಜೋತ್ತಮರೇ, ನಾನು ಸದ್ಯದಲ್ಲಿಯೇ ಸ್ವರ್ಗಕ್ಕೆ ಹೋಗಬೇಕಾಗಿದೆ.
ಬ್ರಾಹ್ಮಣಃ
ಏವಮೇತಾನಿ ಪುರುಷಾ ದುಃಖಾನಿ ಚ ಸುಖಾನಿ ಚ |
ಆಪ್ನುವಂತಿ ಮಹಾಬುದ್ಧೇ ನೋತ್ಕಂಠಾಂ ಕರ್ತುಮರ್ಹಸಿ ॥42॥
ದುಷ್ಕರಂ ಹಿ ಕೃತಂ ಕರ್ಮ ಜಾನತಾ ಜಾತಿಮಾತ್ಮನಃ ॥43॥
ಬ್ರಾಹ್ಮಣ ಎಲೈ ಮಹಾಬುದ್ಧಿಯುಳ್ಳವನೇ, ಮನುಷ್ಯರು ಹೀಗೆ ಸುಖದುಃಖಗಳನ್ನು ಪಡೆಯುತ್ತಾರೆ. ಇದರ ಬಗ್ಗೆ ಕೊರಗಬೇಡ. ಪೂರ್ವಜನ್ಮದ ಸ್ಮರಣೆಯನ್ನು ಹೊಂದಿದ ನೀನು ದುಷ್ಕರವಾದ ಕಾರ್ಯವನ್ನು ಮಾಡಿದ್ದೀಯೆ.
ಕರ್ಮದೋಷಶ್ಚ ವೈ ವಿದ್ವನ್ನಾತ್ಮಜಾತಿಕೃತೇನ ತೇ |
ಕಂಚಿತ್ ಕಾಲಂ ಮೃಷ್ಯತಾಂ ವೈ ತತೋಽಸಿ ಭವಿತಾ ದ್ವಿಜಃ |
ಸಾಂಪ್ರತಂ ಚ ಮತೋ ಮೇಽಸಿ ಬ್ರಾಹ್ಮಣೋ ನಾತ್ರ ಸಂಶಯಃ ॥44॥
ಎಲೈ ವಿದ್ವಾಂಸನೇ, ನಿನ್ನ ಜಾತಿಪ್ರಯುಕ್ತವಾಗಿ ನಿನಗೆ ಈ ಕರ್ಮದೋಷವು ಉಂಟಾಗಿದೆ. ಸ್ವಲ್ಪ ಸಮಯ ಸಹಿಸಿಕೋ. ಅನಂತರ ಬ್ರಾಹ್ಮಣನಾಗುವಿ. ನನ್ನ ಅಭಿಪ್ರಾಯದಂತೆ ನೀನು ಈಗಲೇ ಬ್ರಾಹ್ಮಣನಾಗಿದ್ದೀಯೆ ಎಂಬ ವಿಷಯದಲ್ಲಿ ಸಂಶಯವಿಲ್ಲ.

ಬ್ರಾಹ್ಮಣಃ ಪತನೀಯೇಷು ವರ್ತಮಾನೋ ವಿಕರ್ಮಸು |
ದಾಂಭಿಕೋ ದುಷ್ಕೃತಃ ಪ್ರಾಯಃ ಶೂದ್ರೇಣ ಸದೃಶೋ ಭವೇತ್ ॥45॥
ಪತನಕ್ಕೆ ಕಾರಣವಾದ ವಿಕರ್ಮಗಳನ್ನು ಮಾಡುವ ದುಷ್ಕರ್ಮಿಯಾದ ಡಾಂಭಿಕನಾದ ಬ್ರಾಹ್ಮಣನು ಹೆಚ್ಚಾಗಿ ಶೂದ್ರನಿಗೆ ಸಮಾನನಾಗುತ್ತಾನೆ.
ಯಸ್ತು ಶೂದ್ರೋ ದಮೇ ಸತ್ಯೇ ಧರ್ಮೇ ಚ ಸತತೋಽತ್ಥಿತಃ |
ತಂ ಬ್ರಾಹ್ಮಣಮಹಂ ಮನ್ಯೇ ವೃತ್ತೇನ ಹಿ ಭವೇದ್ ದ್ವಿಜಃ ॥46॥
ಯಾವ ಶೂದ್ರನು ದಮ, ಸತ್ಯ, ಧರ್ಮಗಳಲ್ಲಿ ಸತತವಾಗಿ ನಿರತನಾಗಿರುತ್ತಾನೆಯೋ ಅವನನ್ನು ನಾನು ಬ್ರಾಹ್ಮಣನೆಂದು ತಿಳಿಯುತ್ತೇನೆ. ಗುಣದಿಂದಲೇ ಬ್ರಾಹ್ಮಣ್ಯವು ಉಂಟಾಗುವುದಷ್ಟೇ.
ಕರ್ಮದೋಷೇಣ ವಿಷಮಾಂ ಗತಿಮಾಪ್ನೋತಿ ದಾರುಣಾಮ್ |
ಕ್ಷೀಣದೋಷಮಹಂ ಮನ್ಯೇ ಚಾಭಿತಸಸತ್ವಂ ನರೋತ್ತಮ ॥47॥
ಕರ್ಮದೋಷದಿಂದ ಮನುಷ್ಯನು ಘೋರವಾದ ವಿಷಮಗತಿಯನ್ನು ಹೊಂದುತ್ತಾನೆ. ಎಲೈ ನರಶ್ರೇಷ್ಠನೇ, ಈಗ ನಿನ್ನ ದೋಷವು ನಾಶವನ್ನು ಹೊಂದಿದೆ ಎಂದು ನಾನು ತಿಳಿಯುತ್ತೇನೆ.
ಕರ್ತುಮರ್ಹಸಿ ನೋತ್ಕಂಠಾಂ ತ್ವದ್ವಿಧಾ ಹ್ಯವಿಷಾದಿನಃ |
ಲೋಕವೃತ್ತಾನುವೃತ್ತಜ್ಞಾ ನಿತ್ಯಂ ಧರ್ಮಪರಾಯಣಾಃ ॥48॥
ಈ ವಿಷಯದಲ್ಲಿ ವಿಷಾದವನ್ನು ಪಡಬೇಡ. ಲೋಕವೃತ್ತವನ್ನು ತಿಳಿದ, ನಿತ್ಯವೂ ಧರ್ಮಪರಾಯಣರಾದ ನಿನ್ನಂತಹವರು ವಿಷಾದವನ್ನು ಪಡಬಾರದು.
ವ್ಯಾಧಃ
ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರವೌಷಧೈಃ |
ಏತದ್ ವಿಜ್ಞಾನಸಾಮರ್ಥ್ಯಂ ನ ಬಾಲೈಃ ಸಮತಾಮಿಯಾತ್ ॥49॥
ವ್ಯಾಧ ಜ್ಞಾನದಿಂದ ಮಾನಸದುಃಖವನ್ನೂ, ಔಷಧಿಗಳಿಂದ ಶರೀರದ ದುಃಖವನ್ನೂ ಪರಿಹರಿಸಿಕೊಳ್ಳಬೇಕು. ಜ್ಞಾನದ ಬಲ ಇಂತಹುದು. ಜ್ಞಾನವುಳ್ಳವನು ಎಂದೂ ಬಾಲಕರಿಗೆ ಸಮನಾಗುವುದಿಲ್ಲ.
ಅನಿಷ್ಟಸಂಪ್ರಯೋಗಾಚ್ಚ ವಿಪ್ರಯೋಗಾತ್ ಪ್ರಿಯಸ್ಯ ಚ |
ಮನುಷ್ಯಾ ಮಾನಸೈರ್ದುಃಖೈರ್ಯುಜ್ಯಂತೇ ಚಾಲ್ಪಬುದ್ಧಯಃ ॥50॥
ಅನಿಷ್ಟಸಂಯೋಗದಿಂದ ಮತ್ತು ಇಷ್ಟವಿಯೋಗದಿಂದ ಅಲ್ಪಬುದ್ಧಿಯುಳ್ಳ ಮನುಷ್ಯರು ಮಾನಸದುಃಖಗಳಿಗೆ ಒಳಗಾಗುತ್ತಾರೆ.
ಗುಣೈರ್ಭೂತಾನಿ ಯುಜ್ಯಂತೇ ವಿಯುಜ್ಯಂತೇ ತಥೈವ ಚ |
ಸರ್ವಾಣಿ ನೈತದೇಕಸ್ಯ ಶೋಕಸ್ಥಾನಂ ಹಿ ವಿದ್ಯತೇ ॥51॥
ಎಲ್ಲ ಜೀವರಿಗೂ ಇಂತಹ ಆಪತ್ತುಗಳು ಬರುತ್ತವೆ ಮತ್ತು ಹೋಗುತ್ತವೆ. ಎಲ್ಲರಿಗೂ ಒಂದೇ ವಿಧವಾದ ಶೋಕಸ್ಥಾನವಿಲ್ಲ.
ಅನಿಷ್ಟಂ ಚಾನ್ವಿತಂ ಪಶ್ಯಂಸ್ತಥಾ ಕ್ಷಿಪ್ರಂ ವಿರಜ್ಯತೇ |
ತತಶ್ಚ ಪ್ರತಿಕುರ್ವಂತಿ ಯದಿ ಪಶ್ಯಂತ್ಯುಪಕ್ರಮಾತ್ ॥52॥
ಶೋಚತೋ ನ ಭವೇತ್ ಕಿಂಚಿತ್ ಕೇವಲಂ ಪರಿತಪ್ಯತೇ ॥53॥
ಅನಿಷ್ಟ ಒದಗಿದ ಕೂಡಲೇ ಅದನ್ನು ನೋಡಿ ಮನುಷ್ಯನು ಬೇಗ ವಿಷಾದಪಡುತ್ತಾನೆ. ತನ್ನ ಪ್ರಯತ್ನದಿಂದ ಅದನ್ನು ಪರಿಹರಿಸಲು ಶಕ್ಯವಾದರೆ ಆ ಪರಿಹಾರವನ್ನು ಮಾಡಲು ಪ್ರಯತ್ನಿಸುತ್ತಾನೆ. ಕೇವಲ ಶೋಕಪಡುವುದರಿಂದ ಏನೂ ಆಗುವುದಿಲ್ಲ. ಕೇವಲ ಶೋಕಿಸುವುದಷ್ಟೇ ಆಗುತ್ತದೆ.
ಪರಿತ್ಯಜಂತಿ ಯೇ ದುಃಖಂ ಸುಖಂ ವಾಪ್ಯುಭಯಂ ನರಾಃ |
ತ ಏವ ಸುಖಮೇಧಂತೇ ಜ್ಞಾನತೃಪ್ತಾ ಮನೀಷಿಣಃ |
ಅಸಂತೋಷಪರಾ ಮೂಢಾಃ ಸಂತೋಷಂ ಯಾಂತಿ ಪಂಡಿತಾಃ ॥54॥
ಯಾವ ಮನುಷ್ಯರು ಹೀಗೆ ಸಂಸಾರದಲ್ಲಿ ಒದಗಿಬಂದ ಪ್ರಾಕೃತವಾದ ಸುಖ ಮತ್ತು ದುಃಖಗಳೆರಡನ್ನೂ ತ್ಯಜಿಸುತ್ತಾರೆಯೋ ಜ್ಞಾನತೃಪ್ತರಾದ ವಿವೇಕಿಗಳಾದ ಅವರೇ ಸುಖವನ್ನು ಹೊಂದುತ್ತಾರೆ. ಮೂಢರು ಯಾವಾಗಲೂ ಅಸಂತೋಷವನ್ನೇ ಪಡೆಯುತ್ತಾರೆ. ಪಂಡಿತರು ಸಂತೋಷವನ್ನು ಹೊಂದುತ್ತಾರೆ.
ಅಸಂತೋಷಸ್ಯ ನಾಸ್ತ್ಯಂತಸ್ತುಷ್ಟಿಸ್ತು ಪರಮಂ ಸುಖಮ್ |
ನ ಶೋಚಂತಿ ಗತಾಧ್ವಾನಃ ಪಶ್ಯಂತಃ ಪರಮಾಂ ಗತಿಮ್ ॥55॥
ಅಸಂತೋಷ ಎಂದರೆ ಅತೃಪ್ತಿ. ಅತೃಪ್ತಿಗೆ ಕೊನೆಯೇ ಇಲ್ಲ. ತೃಪ್ತಿಯೇ ಪರಮಸುಖಕರವಾದುದು. ದೂರದಿಂದ ನಡೆದುಬಂದವರು ತಮ್ಮ ಗುರಿಯನ್ನು ತಲುಪಿದ ಮೇಲೆ ಹಿಂದೆ ನಡೆದುಬಂದ ಮಾರ್ಗವನ್ನು ನೋಡಿ ದುಃಖಪಡುವುದಿಲ್ಲ.
ನ ವಿಷಾದೇ ಮನಃ ಕಾರ್ಯಂ ವಿಷಾದೋ ವಿಷಮುತ್ತಮಮ್ |
ಮಾರಯತ್ಯಕೃತಪ್ರಜ್ಞಂ ಬಾಲಂ ಕ್ರುದ್ಧ ಇವೋರಗಃ ॥56॥
ಯಾವಾಗಲೂ ಮನಸ್ಸಿನಲ್ಲಿ ವಿಷಾದವನ್ನು ಪಡಬಾರದು. ವಿಷಾದವೆಂಬುದು ಶ್ರೇಷ್ಠವಾದ ವಿಷ. ಅದು ಕೋಪಗೊಂಡ ಸರ್ಪದಂತೆ ಅವಿವೇಕಿಯಾದ ಬಾಲಕನನ್ನು ಕೊಲ್ಲುತ್ತದೆ.
ಯಂ ವಿಷಾದೋಽಭಿಭವತಿ ವಿಕ್ರಮೇ ಸಮುಪಸ್ಥಿತೇ |
ತೇಜಸಾ ತಸ್ಯ ಹೀನಸ್ಯ ಪುರುಷಾರ್ಥೋ ನ ವಿದ್ಯತೇ ॥57॥
ಪ್ರಯತ್ನವನ್ನು ಮಾಡಬೇಕಾದ ಕಾಲದಲ್ಲಿ ಯಾವನನ್ನು ವಿಷಾದವು ಆವರಿಸುತ್ತದೆಯೋ ಅವನು ಪರಾಕ್ರಮಹೀನನಾದವನು.

ಅವನಿಗೆ ಯಾವ ಪುರುಷಾರ್ಥ ಪ್ರಾಪ್ತಿಯೂ ಇಲ್ಲ.
ಅವಶ್ಯಂ ಕ್ರಿಯಮಾಣಸ್ಯ ಕರ್ಮಣೋ ದೃಶ್ಯತೇ ಫಲಮ್ |
ನ ಹಿ ನಿರ್ವೇದಮಾಗಮ್ಯ ಕಿಂಚಿತ್ ಪ್ರಾಪ್ನೋತಿ ಶೋಭನಮ್ ॥58॥
ಒಂದು ಕರ್ಮವನ್ನು ಪ್ರಯತ್ನಪೂರ್ವಕವಾಗಿ ಮಾಡಿದರೆ ಫಲವು ಅವಶ್ಯವಾಗಿ ದೊರೆಯುತ್ತದೆ. ಸತ್ಕರ್ಮದಲ್ಲಿಯೇ ವೈರಾಗ್ಯವನ್ನು ಹೊಂದಿ ವಿಷಾದದಿಂದ ಕುಳಿತಿದ್ದರೆ ಯಾವ ಒಳ್ಳೆಯ ಫಲವೂ ಉಂಟಾಗುವುದಿಲ್ಲ.
ಅಥಾಪ್ಯುಪಾಯಂ ಪಶ್ಯೇತ ದುಃಖಸ್ಯ ಪರಿಮೋಕ್ಷಣೇ |
ಅಶೌಚಂ ನಾರಭೇತೈವ ಯುಕ್ತಶ್ಚಾವ್ಯಸನೀ ಭವೇತ್ ॥59॥
ಆದರೂ ದುಃಖವುಂಟಾದಾಗ ಅದನ್ನು ಪರಿಹರಿಸಿಕೊಳ್ಳುವ ಉಪಾಯವನ್ನು ಹುಡುಕಬೇಕು. ತನ್ನ ಜೀವನದ ಆಸೆಯಿಂದ ಮಾಂಸಭಕ್ಷಣ ಮೊದಲಾದ ಅಶುಚಿಯಾದ ಕರ್ಮಗಳನ್ನು ಮಾಡಲು ಆರಂಭಿಸಬಾರದು. ಯಾವ ಚಟಕ್ಕೂ ಬಲಿಯಾಗದೆ ಯುಕ್ತವಾದ ಕರ್ಮವನ್ನೇ ಮಾಡಬೇಕು.
ಭೂತೇಷ್ವಭಾವಂ ಸಂಚಿಂತ್ಯ ತೇ ಯು ಬುದ್ಧೇಃ ಪರಂ ಗತಾಃ |
ನ ಶೋಚಂತಿ ಕೃತಪ್ರಜ್ಞಾಃ ಪಶ್ಯಂತಃ ಪರಮಾಂ ಗತಿಮ್ ॥60॥
ಯಾರು ವಸ್ತುಗಳಿಗೆ ಅಭಾವವನ್ನು ಚಿಂತಿಸಿ (ಉಂಟಾದ ಅನಿಷ್ಟಗಳಿಗೆ ವಿನಾಶವನ್ನು ಚಿಂತಿಸಿ) ಬುದ್ಧಿಯ ಶ್ರೇಷ್ಠವಾದ ಮಟ್ಟವನ್ನು ತಲುಪಿರುತ್ತಾರೆಯೋ ಅವರು ಕೃತಪ್ರಜ್ಞರಾಗಿ ಶ್ರೇಷ್ಠವಾದ ಗತಿಯನ್ನು ನೋಡುತ್ತಾರೆ ಮತ್ತು ದುಃಖಪಡುವುದಿಲ್ಲ.
ನ ಶೋಚಾಮಿ ಚ ವೈ ವಿದ್ವನ್ ಕಾಲಾಕಾಂಕ್ಷೀ ಸ್ಥಿತೋ ಹ್ಯಹಮ್ |
ಏತೈರ್ನಿದರ್ಶನೈರ್ಬ್ರಹ್ಮನ್ ನಾವಸೀದಾಮಿ ಸತ್ತಮ ॥61॥
ಎಲೈ ವಿದ್ವಾಂಸರಾದ ಬ್ರಾಹ್ಮಣರೇ, ಸಜ್ಜನರಲ್ಲಿ ಶ್ರೇಷ್ಠರಾದವರೇ, ನಾನು ದುಃಖಪಡುತ್ತಿಲ್ಲ. ಕಾಲವನ್ನು ನಿರೀಕ್ಷಿಸುತ್ತಿದ್ದೇನೆ. ನೀವು ಹೇಳಿದ ನಿದರ್ಶನಗಳನ್ನು ಕೇಳಿ ನಾನು ವಿಷಾದಪಡುತ್ತಿಲ್ಲ.
ಬ್ರಾಹ್ಮಣಃ
ಕೃತಪ್ರಜ್ಞೋಽಸಿ ಮೇಧಾವೀ ಬುದ್ಧಿರ್ಹಿ ವಿಪುಲಾ ತವ |
ನಾಹಂ ಭವಂತಂ ಶೋಚಾಮಿ ಜ್ಞಾನತೃಪ್ತೋಽಸಿ ಧರ್ಮವಿತ್ ॥62॥
ಆಪೃಚ್ಛೇ ತ್ವಾಂ ಸ್ವಸ್ತಿ ತೇಽಸ್ತು ಧರ್ಮಸಸ್ತ್ವಾಂ ಪರಿರಕ್ಷತು |
ಅಪ್ರಮಾದಸ್ತು ಕರ್ತವ್ಯೋ ಧರ್ಮೇ ಧರ್ಮಭೃತಾಂ ವರ ॥63॥
ಬ್ರಾಹ್ಮಣ ಎಲೈ ವ್ಯಾಧನೇ, ನೀನು ಕೃತಪ್ರಜ್ಞನೂ, ಮೇಧಾವಿಯೂ ಆಗಿದ್ದೀಯೆ. ನಿನ್ನ ಬುದ್ಧಿಯು ಅಗಾಧವಾಗಿದೆ. ನಾನು ನಿನ್ನನ್ನು ಕುರಿತು ಶೋಕಿಸುವುದಿಲ್ಲ. ನೀನು ಜ್ಞಾನತೃಪ್ತನೂ, ಧರ್ಮಜ್ಞನೂ ಆಗಿದ್ದೀಯೆ. ಧರ್ಮಿಷ್ಠರಲ್ಲಿ ಶ್ರೇಷ್ಠನಾದವನೇ, ನಾನು ಹೊರಡಲು ನಿನ್ನ ಅನುಮತಿಯನ್ನು ಕೇಳುತಿತರ್ದ್ದೇನೆ. ನಿನಗೆ ಮಂಗಳವಾಗಲಿ. ಧರ್ಮವು ನಿನ್ನನ್ನು ರಕ್ಷಿಸಲಿ. ಧರ್ಮದ ವಿಷಯದಲ್ಲಿ ಯಾವಾಗಲೂ ಎಚ್ಚರದಿಂದಿರು.
ಮಾರ್ಕಂಡೇಯಃ
ಬಾಢಮಿತ್ಯೇವ ತಂ ವ್ಯಾಧಃ ಕೃತಾಂಜಲಿರುವಾಚ ಹ |
ಪ್ರದಕ್ಷಿಣಮಥೋ ಕೃತ್ವಾ ಪ್ರಸ್ಥಿತೋ ದ್ವಿಜಸತ್ತಮಃ ॥64॥
ಮಾರ್ಕಂಡೇಯ ವ್ಯಾಧನು ಕೈಗಳನ್ನು ಮುಗಿದು ಹಾಗೆಯೇ ಆಗಲಿ ಎಂದು ಆ ಬ್ರಾಹ್ಮಣನಿಗೆ ಹೇಳಿದನು. ಆ ಬ್ರಾಹ್ಮಣಶ್ರೇಷ್ಠನು ವ್ಯಾಧನಿಗೆ ಪ್ರದಕ್ಷಿಣೆಯನ್ನು ಮಾಡಿ ಅಲ್ಲಿಂದ ಹೊರಟನು.
ಸ ತು ಗತ್ವಾ ದ್ವಿಜಃ ಸರ್ವಾಂ ಶುಶ್ರೂಷಾಂ ಕೃತವಾಂಸ್ತದಾ |
ಮಾತಾಪಿತೃಭ್ಯಾಂ ವೃದ್ಧಾಭ್ಯಾಂ ಯಥಾನ್ಯಾಯಂ ಸುಶಂಸಿತಃ ॥65॥
ಆ ಬ್ರಾಹ್ಮಣನು ತನ್ನ ಪಟ್ಟಣವನ್ನು ತಲುಪಿ ವೃದ್ಧರಾದ ತನ್ನ ತಂದೆತಾಯಿಗಳಿಂದ ಪ್ರಶಂಸಿಸಲ್ಪಟ್ಟು ಅವರಿಗೆ ಉಚಿತವಾದ ಎಲ್ಲಾ ಸೇವೆಯನ್ನೂ ಮಾಡಿದನು.
ಏತತ್ ತೇ ಸರ್ವಮಾಖ್ಯಾತಂ ನಿಖಿಲೇನ ಯುಧಿಷ್ಠಿರ |
ಪೃಷ್ಟವಾನಸಿ ಯಂ ತಾತ ಧರ್ಮಂ ಧರ್ಮಭೃತಾಂ ವರ ॥66॥
ಎಲೈ ಯುಧಿಷ್ಠಿರನೇ, ಪ್ರೀತಿಪಾತ್ರನೇ, ಧರ್ಮಿಷ್ಠರಲ್ಲಿ ಶ್ರೇಷ್ಠನಾದವನೇ, ಧರ್ಮದ ವಿಷಯದಲ್ಲಿ ನೀನು ಏನು ಪ್ರಶ್ನೆ ಮಾಡಿದೆಯೋ ಅದೆಲ್ಲವನ್ನೂ ನಾನು ನಿನಗೆ ನಿಶ್ಶೇಷವಾಗಿ ಹೇಳಿದ್ದೇನೆ.
ಪತಿವ್ರತಾಯಾ ಮಾಹಾತ್ಮ್ಯಂ ಬ್ರಾಹ್ಮಣಸ್ಯ ಚ ಸತ್ತಮ |
ಮಾತಾಪಿತ್ರೋಶ್ಚ ಶುಶ್ರೂಷಾ ಧರ್ಮವ್ಯಾಧೇನ ಕೀರ್ತಿತಾ ॥67॥
ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಪತಿವ್ರತೆಯ ಮಹಾತ್ಮೆ, ಬ್ರಾಹ್ಮಣರ ಮಹಾತ್ಮೆ, ಮಾತಾಪಿತೃಗಳ ಸೇವೆ ಎಲ್ಲವೂ ಧರ್ಮವ್ಯಾಧನಿಂದ ಹೇಳಲ್ಪಟ್ಟಿದೆ.
ಯುಧಿಷ್ಠಿರಃ
ಅತ್ಯದ್ಭುತಮಿದಂ ಬ್ರಹ್ಮನ್ ಧರ್ಮಾಖ್ಯಾನಮನುತ್ತಮಮ್ |
ಸರ್ವಧರ್ಮವಿದಾಂ ಶ್ರೇಷ್ಠ ಕಥಿತಂ ಮನುಸತ್ತಮ ॥68॥
ಸುಖಶ್ರಾವ್ಯತಯಾ ವಿದ್ವನ್ಮುಹೂರ್ತ ಇವ ಮೇ ಗತಃ |
ನ ಹಿ ತೃಪ್ತೋಽಸ್ಮಿ ಭಗವನ್ ಶೃಣ್ವಾನೋ ಧರ್ಮಮುತ್ತಮಮ್ ॥69॥
ಯುಧಿಷ್ಠಿರ ಎಲೈ ಬ್ರಾಹ್ಮಣರೇ, ಸರ್ವಧರ್ಮವೇತ್ತರಲ್ಲಿ ಶ್ರೇಷ್ಠರೇ, ಮುನಿಶ್ರೇಷ್ಠರೇ, ನೀವು ಹೇಳಿದ ಈ ಧರ್ಮಾಖ್ಯಾನವು

ಅತ್ಯದ್ಭುತವಾದುದು. ಎಲೈ ವಿದ್ವಾಂಸರೇ, ಶ್ರೋತ್ರಮಧುರವಾಗಿದ್ದ ಕಾರಣದಿಂದ ನನಗೆ ಒಂದು ಮುಹೂರ್ತದಂತೆ ಕಾಲವು ಕಳೆದುಹೋಯಿತು. ಪೂಜ್ಯರೇ, ನಿಮ್ಮಿಂದ ಶ್ರೇಷ್ಠವಾದ ಧರ್ಮವನ್ನು ಕೇಳುತ್ತಿರುವ ನನಗೆ ಸಾಕು ಎಂಬ ಬುದ್ಧಿಯೇ ಉಂಟಾಗುತ್ತಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಾಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಬ್ರಾಹ್ಮಣವ್ಯಾಧಸಂವಾದೇ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಒಂದನೆಯ ಅಧ್ಯಾಯ ಮುಗಿಯಿತು
* * * *

ಇನ್ನೂರ ಎರಡನೆಯ ಅಧ್ಯಾಯ
ಮಾರ್ಕಂಡೇಯರಿಂದ ರಾಜರ ಮಹಿಮೆಯ ಕಥನ. ಸುಹೋತ್ರ ಶಿಬಿ ಕಥಾ.
ವೈಶಂಪಾಯನಃ
ತತಃ ಪಾಂಡವಾಃ ಪುನರೇವ ಮಾರ್ಕಂಡೇಯಂ ಪ್ರತ್ಯೂಚುಃ |
ಕಥಿತಂ ಬ್ರಾಹ್ಮಣಮಾಹಾತ್ಮ್ಯಂ ಸ್ತ್ರೀಮಾಹಾತ್ಮ್ಯಂ ಚ |
ಇದಾನೀಂ ರಾಜಮಾಹಾತ್ಮ್ಯಂ ವದ ॥1॥
ವೈಶಂಪಾಯನ ಅನಂತರ ಪಾಂಡವರು ಮಾರ್ಕಂಡೇಯರನ್ನು ಕುರಿತು ಬ್ರಾಹ್ಮಣ ಮಹಾತ್ಮೆಯಯನ್ನು ಮತ್ತು ಸ್ತ್ರೀ ಮಹಾತ್ಮ್ಯೆಯನ್ನು ಹೇಳಿದ್ದೀರಿ. ಈಗ ರಾಜರ ಮಹಾತ್ಮ್ಯೆಯನ್ನು ಹೇಳಿ ಎಂದು ಪುನಃ ಕೇಳಿದರು.
ತಾನುವಾಚ ಮಾರ್ಕಂಡೇಯಃ |
ಶ್ರೂಯತಾಂ ತಾವದಿದಾನೀಂ ರಾಜಮಹಾತ್ಮ್ಯಮ್ ॥2॥
ಮಾರ್ಕಂಡೇಯರು ಈಗ ನೀವು ರಾಜ ಮಹಾತ್ಮೆಯನ್ನು ಕೇಳಿ ಎಂದು ಅವರನ್ನು ಕುರಿತು ಹೇಳಿದರು.
ಕುರೂಣಾಮನ್ಯತಮಃ ಸುಹೋತ್ರೋ ನಾಮ ವೈ ರಾಜಾ ಮಹರ್ಷಿಮಭಿಗಮ್ಯ ನಿವೃತ್ತಃ | ರಥಸ್ಥಃ ಪಥಿ ರಥಸ್ಥಂ ವನೇ ಚ ರಾಜಾನಮೌಶೀನರಂ ಶಿಬಿಂ ದದರ್ಶಾಭಿಮುಖಮ್ ॥3॥
ಕುರುವಂಶದಲ್ಲಿ ಒಬ್ಬನಾದ ಸುಹೋತ್ರನೆಂಬ ರಾಜನು ಒಬ್ಬ ಮಹರ್ಷಿಗಳನ್ನು ನೋಡಿ ಹಿಂದಿರುಗುತಿತದ್ದನು. ರಥದಲ್ಲಿ ಕುಳಿತಿದ್ದ ಅವನು ಕಾಡಿನಲ್ಲಿ ತನಗೆ ಅಭಿಮುಖವಾಗಿ ಬರುತ್ತಿದ್ದ. ರಥದಲ್ಲಿ ಕುಳಿತಿದ್ದ ಔಷೀನರನಾದ ಶಿಬಿರಾಜನನ್ನು ನೋಡಿದನು.
ತೌ ಸಮೇತ್ಯ ಪರಸ್ಪರಂ ಯಥಾವಯಃ ಪೂಜಾಂ ಪ್ರಯುಜ್ಯ ಗುಣಸಾಮ್ಯೇನ ಪರಸ್ಪರಂ ತುಲ್ಯಮಾನೌ (ತುಲ್ಯಾತ್ಮಾನೌ) ವಿದಿತ್ವಾ
ಅವರು ಪರಸ್ಪರ ಸಮಾಗಮವನ್ನು ಹೊಂದಿ ವಯಸ್ಸಿಗೆ ಅನುಗುಣವಾಗಿ ಪರಸ್ಪರವಾಗಿ ಪೂಜೆಯನ್ನು ಸಲ್ಲಿಸಿ ಗುಣಸಾಮ್ಯವಿದ್ದ ಪ್ರಯುಕ್ತ ಇಬ್ಬರೂ ತಮ್ಮನ್ನು ಪರಸ್ಪರ ಸಮಾನರೆಂದು ತಿಳಿದು ಯಾರೊಬ್ಬರೂ ಇನ್ನೊಬ್ಬರಿಗೆ ದಾರಿಯನ್ನು ಕೊಡಲಿಲ್ಲ.
ನಾರದೋ ಮಹಾನ್ ದೇವರ್ಷಿಃ ಪ್ರಾದುರಾಸೀತ್ ॥ (ಉವಾಚ ಚ)
ಕಿಮಿದಂ ಭವಂತೌ ಪರಸ್ಪರಂ ಪಂಥಾನಮಾವೃತ್ಯ ತಿಷ್ಠತ ಇತಿ ॥5॥
ಅವರ ಅಭಿಪ್ರಾಯವನ್ನು ತಿಳಿದ ಮಹಾತ್ಮರಾದ ದೇವರ್ಷಿಗಳಾದ ನಾರದರು ಅಲ್ಲಿ ಪ್ರಾದುರ್ಭೂತರಾದರು. ಇದೇನು ನೀವಿಬ್ಬರು ಪರಸ್ಪರವಾಗಿ ದಾರಿಯನ್ನು ಅಡ್ಡಗಟ್ಟಿ ನಿಂತಿದ್ದೀರಿ? ಎಂದು ಕೇಳಿದರು.
ತಾವೂಚತುರಿದಮ್ | ತದ್ ಭವತೈವ ಕಥಯಿತವ್ಯಮಿತಿ |
ಸರ್ವಥಾ ಧರ್ಮಪ್ರವಾದಿಭಿಃ ವಸಿಷ್ಠಸ್ಯ ಪಂಥಾ ಉಪದಿಶ್ಯತೇ |
ಆವಾಂ ಚ ಸಮೇತೌ ಪರಸ್ಪರೇಣ | ಭವಾಂಸ್ತ್ವದಾನೀಂ
ಬ್ರುವತುವ್ಯೆ ಕ ಏವಾವಯೋರ್ವಾನ್ ಕೋ ಗರೀಯಾನಿತಿ ॥6॥
ಅವರು ಹೇಳಿದರು ಅದನ್ನು ನೀವೇ ಹೇಳಬೇಕು. ಧರ್ಮವನ್ನು ತಿಳಿದವರು ಬಹುಕಾಲವಾಸಿಯಾದ ವೃದ್ಧನಿಗೆ ಮಾರ್ಗವನ್ನು ಬಿಡಬೇಕೆಂದು ಹೇಳುತ್ತಾರೆ. ನಾವಿಬ್ಬರೂ ಪರಸ್ಪರವಾಗಿ ಸಂಧಿಸಿದ್ದೇವೆ. ನಮ್ಮಲ್ಲಿ ಯಾರು ವೃದ್ಧರು, ಯಾರು ಕನಿಷ್ಠರೆಂದು ನೀವೇ ಹೇಳಬೇಕು.
ನಾರದಸ್ತ್ವೇವಮುಕ್ತಃ ಶ್ಲೋಕಾವಪಠತ್ |
ಹೀಗೆ ಹೇಳಲ್ಪಟ್ಟ ನಾರದರು ಶ್ಲೋಕಗಳನ್ನು ಹೇಳಿದರು.
ಕ್ರೂರಃ ಕ್ರೂರಾಯ ಕೌರವ್ಯೋ ಮೃದವೇ ಕೌರವೋ ಮೃದುಃ |
ಅಸಾಧವೇ ತ್ವಸಾಧುಶ್ಚ ಸಾಧವೇ ತತ್ಸಮೋ ಮತಃ ॥
ದಾನಾತ್ ಕದರ್ಯಂ ಜಯತಿ ಸತ್ಯೇನಾನೃತವಾದಿನಮ್ |
ಅಕ್ರೋಧಾಜ್ಜಯತೇ ಕ್ರೋಧಮಸಾಧುಂ ಸಾಧುಕರ್ಮಭಿಃ ॥
ಉಭಾವೇವ ಭವಂತಾವೀದೃಶೌ |
ಉದಾರೋಽಯಂ ಶಿಬಿರಹಂ ಮನ್ಯೇ | ಕೌರವ್ಯೋಽಪಯಾತ್ವಿತಿ ॥7॥
ಕೌರವ್ಯನಾದ ಸುಹೋತ್ರನು ಕ್ರೂರನಿಗೆ ಕ್ರೂರನಾಗಿದ್ದಾನೆ. ಮೃದುವಿಗೆ ಮೃದು. ಅಸಾಧುವಿಗೆ ಅಸಾಧು. ಸಾಧುವಿಗೆ ಅವನು ಸಮಾನನಾದವನು.
ದಾನದಿಂದ ಜಿಪುಣನನ್ನು ಗೆಲ್ಲಬೇಕು. ಸತ್ಯದಿಂದ ಅನೃತವಾದಿಯನ್ನು ಗೆಲ್ಲಬೇಕು. ಕ್ಷಮೆಯಿಂದ ಕ್ರೋಧವನ್ನು ಗೆಲ್ಲಬೇಕು. ಅಸಾಧುವನ್ನು ಸತ್ಕಾರ್ಯದಿಂದ ಗೆಲ್ಲಬೇಕು.
ನೀವಿಬ್ಬರೂ ಇಂತಹವರೇ ಆದರೂ ನಾನು ಶಿಬಿಯನ್ನು ಶ್ರೇಷ್ಠನೆಂದು ತಿಳಿದಿದ್ದೇನೆ. ಕೌರವ್ಯನಾದ ಸುಹೋತ್ರನು ದಾರಿಯನ್ನು

ಬಿಡಬೇಕು (ಎಂದು ಹೇಳಿದರು).
ಏತತ್ ಸಂಗತಮಿತಿ ತೂಷ್ಣೀಂ ನಾರದೋಽಭವತ್ ॥8॥
ಇದು ಸೂಕ್ತವಾದುದು ಎಂದು ಹೇಳಿ ನಾರದರು ಸುಮ್ಮನಾದರು.
ಕೌರವ್ಯಃ ಶಿಬಿಂ ಪ್ರದಕ್ಷಿಣಂ ಕೃತ್ವಾ ಪಂಥಾನಂ
ದತ್ವಾ ಪ್ರಯಯೌ ಬಹುವಿಧಮಭಿಶಸ್ಯ ॥9॥
ಅದನ್ನು ಕೇಳಿದ ಕೌರವ್ಯನಾದ ಸುಹೋತ್ರನು ಶಿಬಿಗೆ ಪ್ರದಕ್ಷಿಣೆಯನ್ನು ಮಾಡಿ, ಬಹುವಿಧವಾಗಿ ಪ್ರಶಂಸೆಯನ್ನು ಮಾಡಿ ದಾರಿಯನ್ನು ಕೊಟ್ಟು ಹೊರಟುಹೋದನು.
ತದೇಷ ವಿನಯೋ ರಾಜ್ಞಾಂ ಮಹಾಭಾಗ್ಯಂ ಚ ಕಥಿತಮಿತಿ ॥
ಇದು ರಾಜರ ವಿನಯ ಮತ್ತು ಮಹಾಭಾಗ್ಯ. ಇದನ್ನು ನಾನು ನಿಮಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ದ್ವ್ಯಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ರಾಜಮಹಾತ್ಮ್ಯೇ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎರಡನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಮೂರನೆಯ ಅಧ್ಯಾಯ
ಮಾರ್ಕಂಡೇಯರಿಂದ ರಾಜರ ಮಹಿಮೆಯ ಕಥನ - ಯಯಾತಿಯ ಕಥೆ.
ಮಾರ್ಕಂಡೇಯಃ
ಇದಮನ್ಯಚ್ಛ್ರೂಯತಾಮ್ | ಯಯಾತಿರ್ನಾಹುಷೋ
ರಾಜಾ ರಾಜ್ಯಸ್ಥಃ ಪೌರಜನಪರಿವೃತಃ ಆಸಾಂಚಕ್ರೇ ॥ ತಂ ಗುರ್ವರ್ಥಂ ಭಿಕ್ಷಯನ್ ಸಮಯಾದಿತಿ ಕಶ್ಚಿದ್ ಬ್ರಾಹ್ಮಣ ಆಗಚ್ಛತ್ ॥1॥
ಮಾರ್ಕಂಡೇಯ ಈ ಇನ್ನೊಂದು ಕಥೆಯನ್ನು ಕೇಳಿ. ನಹುಷನ ಮಗನಾದ ಯಯಾತಿ ರಾಜನು ರಾಜ್ಯದಲ್ಲಿ ಪೌರಜನ ಪರಿವೃತನಾಗಿ ವಾಸಿಸುತ್ತಿದ್ದನು. ಅವನನ್ನು ಕುರಿತು ಇಷ್ಟು ಗುರುದಕ್ಷಿಣೆಯನ್ನು ಕೊಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿದ್ದ ಒಬ್ಬ ಬ್ರಾಹ್ಮಣನು ಆ ಧನವನ್ನು ಬೇಡಲು ರಾಜನ ಬಳಿಗೆ ಬಂದನು.
ರಾಜೋವಾಚ ಬ್ರವೀತು ಭಗವಾನ್ ಸಮಯಮಿತಿ ॥2॥
ರಾಜನು ಅವನನ್ನು ಕುರಿತು ಪೂಜ್ಯರು ನಿಮ್ಮ ನಿಬಂಧನೆಯನ್ನು ಹೇಳಬೇಕು ಎಂದು ಹೇಳಿದನು.
ಬ್ರಾಹ್ಮಣಃ
ವಿದ್ವೇಷಣಂ ಪರಮಂ ಜೀವಲೋಕೇ |
ಕುರ್ಯಾನ್ನರಃ ಪಾರ್ಥಿವ ಯಾಚ್ಯಮಾನಃ |
ತಥಾಪಿ ಪೃಚ್ಛಾಮಿ ಕಥಂ ನು ರಾಜನ್ |
ದದ್ಯಾದ್ ಭವಾನ್ ಯದಿ ತೃಪ್ತಶ್ಚ ಮೇಽದ್ಯ ॥3॥
ಆ ಬ್ರಾಹ್ಮಣನು ಹೀಗೆ ಹೇಳಿದನು.
ಎಲೈ ರಾಜನೇ, ಜೀವಲೋಕದಲ್ಲಿ ಯಾರನ್ನಾದರೂ ಬೇಡಿದರೆ ಬೇಡಲ್ಪಡುವ ಮನುಷ್ಯನು ಪರಮ ವಿದ್ವೇಷವನ್ನು ಹೊಂದುತ್ತಾನೆ. ಆದರೂ ಎಲೈ ರಾಜನೇ, ನೀನು ಸಂತೋಷದಿಂದ ಕೊಡುವುದಾದರೆ ಈ ದಿನ ನಾನು ನಿನ್ನನ್ನು ಕೇಳುತ್ತೇನೆ.
ರಾಜಾ
ನ ಚಾನುಕೀರ್ತಯೇ ದತ್ವಾ ಅಯಾಚ್ಯಮರ್ಥಂ ನ ಚ ಸಂಶೃಣೋಮಿ |
ಪ್ರಾಪ್ಯಮರ್ಥಂ ಚ ಸಂಶ್ರುತ್ಯ ತಂ ಚಾಪಿ ದತ್ವಾ ಸುಸುಖೀ ಭವಾಮಿ ॥
ರಾಜ ನಾನು ದಾನವನ್ನು ಕೊಟ್ಟು ಅದನ್ನು ಇನ್ನೊಬ್ಬರಿಗೆ ಹೇಳುವುದಿಲ್ಲ. ಕೊಡಲು ಸಾಧ್ಯವಿಲ್ಲದ ವಸುತವನ್ನು ಕೊಡುವೆನೆಂದು ಪ್ರತಿಜ್ಞೆಯನ್ನೂ ಮಾಡುವುದಿಲ್ಲ. ಕೊಡಲು ಸಾಧ್ಯವಾದ ವಸ್ತುವನ್ನು ಕೊಡುತೆತೇನೆಂದು ಪ್ರತಿಜ್ಞೆ ಮಾಡಿ ಅದನ್ನು ಕೊಟ್ಟು ಸಂತೋಷದಿಂದ ಇರುತ್ತೇನೆ.
ದದಾಮಿ ತೇ ರೋಹಿಣೀನಾಂ ಸಹಸ್ರಂ
ಪ್ರಿಯೋ ಹಿ ಮೇ ಬ್ರಾಹ್ಮಣೋ ಯಾಚಮಾನಃ |
ನ ಮೇ ಮನಃ ಕುಪ್ಯತಿ ಯಾಚ್ಯಮಾನೇ
ದತ್ವಾ ನ ಶೋಚಾಮಿ ಕಥಂಚಿದರ್ಥಮ್ ॥5॥
ನಾನು ನಿನಗೆ ಸಹಸ್ರ ಗೋವುಗಳನ್ನು ಕೊಡುತ್ತೇನೆ. ಬೇಡಲು ಬಂದ ಬ್ರಾಹ್ಮಣನು ನನಗೆ ಪ್ರಿಯನಾದವನಷ್ಟೆ? ಬೇಡುವವನ ಮೇಲೆ ನನಗೆ ಎಂದೂ ಕೋಪವುಂಟಾಗುವುದಿಲ್ಲ ಮತ್ತು ವಸುತವನ್ನು ದಾನ ಮಾಡಿ ಅನಂತರ ಯಾವ ಕಾರಣದಿಂದಲೂ ವಿಷಾದ ಪಡುವುದಿಲ್ಲ.
ಮಾರ್ಕಂಡೆಯಃ
ಇತ್ಯುಕತ್ವ ಬ್ರಾಹ್ಮಣಾಯ ರಾಜಾ ಗೋಸಹಸ್ರಂ ದದೌ |
ಪ್ರಾಪ್ತವಾಂಶ್ಚ ಗೋಸಹಸ್ರಂ ಬ್ರಾಹ್ಮಣ ಇತಿ ॥
ಮಾರ್ಕಂಡೇಯ ಹೀಗೆ ಹೇಳಿ ರಾಜನು ಬ್ರಾಹ್ಮಣನಿಗೆ ಸಹಸ್ರ ಗೋವುಗಳನ್ನು ಕೊಟ್ಟನು. ಆ ಬ್ರಾಹ್ಮಣನಾದರೂ ಸಹಸ್ರ ಗೋವುಗಳನ್ನು ಪಡೆದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರ್ಯಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಖ್ಯಾಪರ್ವಣಿ ರಾಜಮಹಾತ್ಮ್ಯೇ ದ್ವಿತೀಯೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂರನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ನಾಲ್ಕನೆಯ ಅಧ್ಯಾಯ
ಮಾರ್ಕಂಡೇಯರಿಂದ ರಾಜ ಮಹಿಮೆಯ ಕಥನ ಸೇದುಕ ವೃಷದರ್ಭರ ಕಥೆ.
ವೈಶಂಪಾಯನಃ
ಭೂಯ ಏವ ಮಹಾಭಾಗ್ಯಂ ಕಥ್ಯತಾಮಿತ್ಯಬ್ರವೀತ್ ಪಾಂಡವಃ ॥1॥
ವೈಶಂಪಾಯನ ಇನ್ನೂ ರಾಜರ ಮಹಾಭಾಗ್ಯವನ್ನು ಹೇಳಿ ಎಂದು ಪಾಂಡವನಾದ ಯುಧಿಷ್ಠಿರನು ಕೇಳಿದನು.
ಅಥಾಚಷ್ಟ ಮಹಾರಾಜ ಮಾರ್ಕಂಡೇಯಃ | ವೃಷದರ್ಭಸೇದುಕನಾಮಾನೌ ಬಲಿನೌ ನೀತಿಮಾರ್ಗ-ರತಾವಸೊಂತ್ರೇಪಾಸ್ತ್ರಕೃತಿನೌ ॥2॥
ಎಲೈ ಜನಮೇಜಯ ಮಹಾರಾಜನೇ ಆಗ ಮಾರ್ಕಂಡೇಯರು ಹೇಳಿದರು. ವೃಷದರ್ಭ ಮತ್ತು ಸೇದುಕರೆಂಬ ನೀತಿಮಾರ್ಗವನ್ನು ತಿಳಿದ, ಅಸ್ತ್ರ ಮತ್ತು ಉಪಾಸ್ತ್ರಗಳಲ್ಲಿ ಕುಶಲರಾದ ಇಬ್ಬರು ಮಹಾರಾಜರಿದ್ದರು.
ಸೇದುಕೋ ಬಾಲಸ್ಯೈವ ವೃಷದರ್ಭಸ್ಯ ಉಪಾಂಶುವ್ರತಮಭ್ಯಜಾನಾತ್ | ಕೂಪ್ಯಮದೇಯಂ ಬ್ರಾಹ್ಮಣಸ್ಯೇತಿ ॥3॥
ಸೇದುಕನು ವೃಷದರ್ಭನು ಬಾಲ್ಯದಲ್ಲಿಯೇ ಮಾಡಿದ ರಹಸ್ಯ, ವ್ರತಪ್ರತಿಜ್ಞೆಯನ್ನು ತಿಳಿದಿದ್ದನು. ಬ್ರಾಹ್ಮಣನಿಗೆ ಹಿರಣ್ಯರಜತಗಳನ್ನು ಬಿಟ್ಟು ಬೇರೆ ಏನನ್ನೂ ಕೊಡಬಾರದು ಎಂಬುದು ಅವನ ರಹಸ್ಯವ್ರತವಾಗಿದ್ದಿತು.
ಅಥ ತಂ ಸೇದುಕಂ ಕಶ್ಚಿದ್ ಬ್ರಾಹ್ಮಣೋ
ವೇದಾಧ್ಯಯನಸಂಪನ್ನ ಆಶಿಷಂ ದತ್ತ್ವಾ ಗುರ್ವರ್ಥೀ ಭಿಕ್ಷಿತವಾನ್ ॥ ಅಶ್ವಸಹಸ್ರಂ ಮೇ ಭಗವಾನ್ ದದಾತ್ವಿತಿ ॥4॥
ಅನಂತರ ಒಮ್ಮೆ ವೇದಾಧ್ಯಯನ ಸಂಪನ್ನನಾದ ಒಬ್ಬ ಬ್ರಾಹ್ಮಣನು ಸೇದುಕನ ಬಳಿಗೆ ಬಂದು ಆಶೀರ್ವಾದವನ್ನು ಮಾಡಿ ತಾನು ಕೊಡಬೇಕಾದ ಗುರುದಕ್ಷಿಣೆಯನ್ನು ಬೇಡಿದನು. ಪೂಜ್ಯನಾದ ನೀನು ಒಂದು ಸಹಸ್ರ ಅಶ್ವಗಳನ್ನು ಕೊಡಬೇಕು ಎಂಬುದು ಆ ಬೇಡಿಕೆಯಾಗಿದ್ದಿತು.
ಕೂಪ್ಯಾರ್ಥಿತೋಽಯಂ ಬ್ರಾಹ್ಮಣಸ್ಯ ತಂ ಸೇದುಕೋ ಬ್ರಾಹ್ಮಣಮಬ್ರವೀತ್ | ನಾಸ್ತಿ ಸಂಭವೋ ಗುರ್ವರ್ಥಂ ದಾತುಮಿತಿ | ಸ ತ್ವಂ ಗಚ್ಛ ವೃಷದರ್ಭಸ್ಯ ಸಕಾಶಮ್ | ರಾಜಾ ಪರಮಧರ್ಮಜ್ಞಃ | ಬ್ರಾಹ್ಮಣ ತಂ ಭಿಕ್ಷಸ್ವ | ಸ ತೇ ದಾಸ್ಯತಿ | ತಸ್ಯೈತದುಪಾಂಶುವ್ರತಮಿತಿ॥
ಸುವರ್ಣರಜತವ್ಯತಿರಿಕ್ತವಾದ ವಸ್ತುವು ಬ್ರಾಹ್ಮಣನಿಂದ ಬೇಡಲ್ಪಟ್ಟಾಗ ಸೇದುಕನು ಆ ಬ್ರಾಹ್ಮಣನನ್ನು ಕುರಿತು ನನ್ನ ಬಳಿ ನಿನ್ನ ಗುರುದಕ್ಷಿಣೆಯನ್ನು ಕೊಡುವ ಅವಕಾಶವಿಲ್ಲ. ನೀನು ವೃಷದರ್ಭನ ಸಮೀಪಕ್ಕೆ ಹೋಗು. ಆ ರಾಜನು ಪರಮಧರ್ಮಿಷ್ಠನಾದವನು. ಎಲೈ ಬ್ರಾಹ್ಮಣನೇ, ಅವನನ್ನು ಬೇಡು. ಅವನು ನಿನಗೆ ಕೊಡುವನು. ಇದು ಅವನ ರಹಸ್ಯವ್ರತ ಎಂದು ಹೇಳಿದನು.
ಅಥ ಬ್ರಾಹ್ಮಣೋ ವೃಷದರ್ಭಸಕಾಶಂ ಗತ್ವಾ ಅಶ್ವಸಹಸ್ರಮಯಾಚತ |
ಸ ರಾಜಂ ತಂ ಕಂಸೇನಾತಾಡಯತ್ ॥
ತಂ ಬ್ರಾಹ್ಮಣೋಽಬ್ರವೀತ್ | ಕಿಂ ಹಂಸ್ಯಾನಾಗಸಂ ಮಾಮಿತಿ ॥6॥
ಅನಂತರ ಬ್ರಾಹ್ಮಣನು ವೃಷದರ್ಭನ ಬಳಿಗೆ ಹೋಗಿ ಒಂದು ಸಹಸ್ರ ಅಶ್ವಗಳನ್ನು ಬೇಡಿದನು. ಆ ರಾಜನು ಅವನನ್ನು ತನ್ನ ಕಮಂಡಲುವಿನಿಂದ ಹೊಡೆದನು (ಸುವರ್ಣ ರಜತವನ್ನು ಬೇಡಲಿಲ್ಲ ಎಂದು ರಾಜನ ಕೋಪ). ಆಗ ಬ್ರಾಹ್ಮಣನು ಯಾವ ಅಪರಾಧವನ್ನೂ ಮಾಡದಿರುವ ನನ್ನನ್ನು ಏಕೆ ಹೊಡೆದೆ? ಎಂದು ಕೇಳಿದನು.
ಏವಮುಕತ್ವ ತಂ ಶಪಂತಂ ರಾಜಾಽಽಹ |
ವಿಪ್ರ ಕಿಂ ಯೋ ನ ದದಾತಿ ತುಭ್ಯಮ್ ॥
ಉತಾಹೋಸ್ವಿದ್ ಬ್ರಾಹ್ಮಣ ಮೈತದ್ ॥7॥
ಹೀಗೆ ಹೇಳಿ ಆ ರಾಜನಿಗೆ ಶಾಪವನ್ನು ಕೊಡಲು ಉದ್ಯುಕ್ತನಾದಾಗ ರಾಜನು ಅವನನ್ನು ಕುರಿತು ಬ್ರಾಹ್ಮಣನೇ, ಶಾಪವನ್ನು ಕೊಡಬೇಡ. ಎಲೈ ಬ್ರಾಹ್ಮಣನೇ, ನಿನಗೆ ಕೊಡದಿರುವವರು ಯಾರು? ಎಂದು ಹೇಳಿದನು.
ಬ್ರಾಹ್ಮಣಃ
ರಾಜಾಧಿರಾಜಸಮೀಪಂ ಸೇದುಕೇನ ಪ್ರೇಷಿತೇ |
ಭಿಕ್ಷಿತುಮಾಗತಃ ॥
ತೇನಾನುಶಿಷ್ಟೇನ ಮಯಾ ತ್ವಂ ಭಿಕ್ಷಿತೋಽಸಿ ॥8॥
ಬ್ರಾಹ್ಮಣ ಸೇದುಕನಿಂದ ಕಳುಹಿಸಲ್ಪಟ್ಟವನಾಗಿ ರಾಜಾಧಿರಾಜನಾದ ನಿನ್ನ ಸಮೀಪಕ್ಕೆ ಯಾಚಿಸಲು ಬಂದೆನು. ಅವನ ಆದೇಶದಂತೆ ನಾನು ನಿನ್ನನ್ನು ಬೇಡಿದೆನು ಎಂದು ಹೇಳಿದನು.
ರಾಜಃ
ಪೂರ್ವಾಹ್ಣೇ ತೇ ದಾಸ್ಯಾಮಿ | ಯೋಽಮೋಘಬಲಿರಾಗಮಿಷ್ಯತಿ
ಯೋ ಹನ್ಯತೇ ಕಶಯಾ ಕಥಂ ತಸ್ಯ ನ ದೇಯಂ ಸ್ಯಾತ್ ॥9॥
ರಾಜ ರಾಜನು ಪ್ರಾತಃಕಾಲದಲ್ಲಿ ನಿನಗೆ ಕೊಡುವೆನು. ಯಾರಿಗೆ ಕೊಟ್ಟ ದಾನವು ಎಂದೂ ವ್ಯರ್ಥವಾಗುವುದಿಲ್ಲವೋ ಮತ್ತು ಯಾರು ಶಾಪವೆಂಬ ಚಾವಟಿಯಿಂದ ಕೊಲ್ಲಲು ಸಮರ್ಥರೋ ಅಂತಹ ನಿನಗೆ ಹೇಗೆ ಕೊಡದಿರಲು ಸಾಧ್ಯ? ಎಂದು ಹೇಳಿದನು.
ಇತ್ಯುಕತ್ವ ಬ್ರಾಹ್ಮಣಸ್ಯ ದೈವಿಸಿಕಾಮುತ್ಪತ್ತಿಂ ಪ್ರಾದಾತ್ |

ಅಧಿಕಸ್ಯಾಶ್ಚ ಸಹಸ್ರಸ್ಯ ಮೂಲ್ಯಮೇವಾದಾದಿತಿ ॥10॥
ಹೀಗೆ ಹೇಳಿ ಬ್ರಾಹ್ಮಣನಿಗೆ ತನ್ನ ರಾಜ್ಯದ ಒಂದು ದಿವಸದ ಆದಾಯವನ್ನು ಕೊಟ್ಟನು. ಅವನು ಒಂದು ಸಹಸ್ರ ಅಶ್ವಗಳ ಮೌಲ್ಯಕ್ಕಿಂತಲೂ ಅಧಿಕವಾದ ಧನವನ್ನೇ ಬ್ರಾಹ್ಮಣನಿಗೆ ನೀಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಖ್ಯಾಪರ್ವಣಿ ರಾಜಮಹಾತ್ಮ್ಯೇ ತೃತೀಯೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಐದನೆಯ ಅಧ್ಯಾಯ
ಮಾರ್ಕಂಡೇಯರಿಂದ ಶಿಬಿಯ ಮಹಿಮೆಯ ಕಥನ
ಶ್ಯೇನ ಕಪೋತೀ ಉಪಾಖ್ಯಾನ.
ಮಾರ್ಕಂಡೇಯಃ
ಅಥ ದೇವಾನಾಂ ಕಥಾ ಸಂಜಾತಾ | ಮಹೀತಳಂ ಗತ್ವಾ ಮಹಾಮತಿಂ ಮಹೀಪತಿಂ ಶಿಬಿವೌಶೀನರಂ ಸಾಧ್ವೇನಂ ಜಿಜ್ಞಾಸ್ಯಾಮ ಇತಿ | ಏವಂ ಭೋ ಇತ್ಯುಕಕ್ತ್ವ ಅಗ್ನೀಂದ್ರಾವುಪತಿಷ್ಠೇತಾಮ್ ॥1॥
ಮಾರ್ಕಂಡೇಯ ಒಮ್ಮೆ ದೇವಲೋಕದಲ್ಲಿ ಭೂಮಿಗೆ ಹೋಗಿ ಮಹಾಮತಿಯಾದ ರಾಜನಾದ ಔಷೀನರ ಶಿಬಿಯನ್ನು ಚೆನ್ನಾಗಿ ತಿಳಿದುಕೊಳ್ಳೋಣ ಎಂಬ ಸಂಭಾಷಣೆ ಉಂಟಾಯಿತು. ಹಾಗೆಯೇ ಆಗಲಿ ಎಂದು ಅಗ್ನಿ ಮತ್ತು ಇಂದ್ರರು ಹೊರಟರು.
ಅಗ್ನಿಃ ಕಪೋತರೂಪೇಣ ತಮಭಿಧಾವದಾಮಿಷಾರ್ಥಮಿಂದ್ರಃ ಶ್ಯೇನರೂಪೇಣ ॥2॥
ಅಗ್ನಿಯು ಕಪೋತರೂಪವನ್ನು ಧರಿಸಿ ಶಿಬಿಯೆಡೆಗೆ ಓಡಿ ಬಂದನು. ಇಂದ್ರನು ಶ್ಯೇನ ರೂಪವನ್ನು ಧರಿಸಿ ಮಾಂಸಾಹಾರಕ್ಕಾಗಿ ಅದನ್ನು ಹಿಂಬಾಲಿಸಿದನು.
ಅಥ ಕಪೋತೋ ದೇವ್ಯಾ ಸಹಾಸೀನಸ್ಯೋತ್ಸಂಗೇ ನ್ಯಪತತ್ ॥3॥
ಆಗ ಕಪೋತವು ಬಂದು ರಾಣಿಯ ಜೊತೆಯಲ್ಲಿ ಕುಳಿತಿದ್ದ ರಾಜನ ತೊಡೆಯ ಮೇಲೆ ಬಿದ್ದಿತು.
ಅಥ ಪುರೋಹಿತೋ ರಾಜಾನಮಬ್ರವೀತ್ |
ನಿಂದಿತಂ ಯಸ್ಯಾಭಿಪತತೇ ಕಪೋತಕಃ | ಸ ಭವಾನ್ ರಾಜವೇಶ್ಮ ಚಾನ್ಯದ್ವಾ ವಸು ದದಾತು | ಅನ್ನಂ ಚಾಶು ಪಾರ್ಥಿವೋಽಸ್ಯ ನಿಷ್ಕೃತಿಂ ಕುರ್ಯಾತ್ | ಘೋರಂ ಕಪೋತಸ್ಯ ನಿಪಾತಮಾಹುಃ ॥4॥
ಆಗ ಪುರೋಹಿತನು ರಾಜನನ್ನು ಕುರಿತು ಯಾರ ಮೇಲೆ ಕಪೋತವು ಬೀಳುತ್ತದೆಯೋ ಅದು ಅಪಶಕುನ. ಎಲೈ ರಾಜನೇ, ನೀನು ಶ್ರೇಷ್ಠವಾದ ಮನೆಯನ್ನಾಗಲೀ ಬೇರೆ ಧನವನ್ನಾಗಲೀ ದಾನವನ್ನು ಮಾಡು. ಅನ್ನವನ್ನೂ ಶೀಘ್ರವಾಗಿ ದಾನವನ್ನು ಮಾಡಿ ರಾಜನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಕಪೋತದ ನಿಪಾತದ ಫಲವು ಘೋರವೆಂದು ತಿಳಿದವರು ಹೇಳುತ್ತಾರೆ ಎಂದು ಹೇಳಿದರು.
ಅಥ ಕಪೋತೋ ರಾಜಾನಮಬ್ರವೀತ್ | ಪ್ರಾಣರಕ್ಷಣಾರ್ಥಂ ಶ್ಯೇನಾದ್ ಭಯಭೀತೋ ಭವಂತಂ ಶರಣಾಗತೋಽರ್ಥೀ ಪ್ರಪದ್ಯೇ | ಅಂಗೈರಂಗಾನಿ ಪ್ರಾಪುರತೋ ಮುನಿರ್ಭೂತ್ವಾ ಪ್ರಾಣಾಸತತ್ವಂ ಪ್ರಪದ್ಯೇ॥
ಆಗ ಕಪೋತವು (ಪಾರಿವಾಳವು) ರಾಜನನ್ನು ಕುರಿತು ನಾನು ಶ್ಯೇನದಿಂದ (ಗಿಡುಗದಿಂದ) ಭಯಭೀತನಾಗಿ ನನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ಬಯಸಿ ನಿನಗೆ ಶರಣಾಗತನಾಗಿ ಪ್ರಪನ್ನನಾಗಿದ್ದೇನೆ. ಶ್ಯೇನದ ಮುಖ, ರೆಕ್ಕೆ, ಪಾದಗಳು ಮೊದಲಾದ ಅಂಗಗಳಿಂದ ನನ್ನ ಅಂಗಗಳು ಮತ್ತು ಪ್ರಾಣಗಳು ಹೊರಟು ಹೋದಂತೆಯೇ ಆಗಿವೆ. ಆದ್ದರಿಂದ ಮೌನವಾಗಿ ನಾನು ಶರಣಾಗತನಾಗಿದ್ದೇನೆ ಎಂದು ಹೇಳಿತು.
ಸ್ವಾಧ್ಯಾಯೇನ ಕರ್ಶಿತಂ ಬ್ರಹ್ಮಚಾರಿಣಂ ಮಾಂ ವಿದ್ಧಿ |
ತಪಸಾ ದಮೇನ ಯುಕ್ತಮಾರ್ಯಾ ಪ್ರತಿಕೂಲಭಾಷಿಣಮ್ |
ಏವಂ ಯುಕ್ತಮಪಾಪಂ ಮಾಂ ವಿದ್ಧಿ ॥6॥
ನನ್ನನ್ನು ವೇದಾಧ್ಯಯನದಿಂದ ಬಳಲಿದ ಬ್ರಹ್ಮಚಾರಿ ಎಂದು ತಿಳಿ. ನಾನು ತಪಸ್ಸು ಮತ್ತು ಇಂದ್ರಿಯನಿಗ್ರಹದಿಂದ ಕೂಡಿದವನು. ಗುರುಗಳಿಗೆ ಪ್ರತಿಕೂಲವಾಗಿ ಎಂದೂ ಮಾತನಾಡದವನು. ಹೀಗೆ ನಿಯಮಯುಕ್ತನಾದ ನನ್ನನ್ನು ಪಾಪರಹಿತನೆಂದು ತಿಳಿ.
ಗದಾಮಿ ವೇದಾನ್ ವಿಚಿನೋಮಿ ಛಂದಃ
ಸರ್ವೇ ವೇದಾ ಅಕ್ಷರಶೋ ಮೇ ಅಧೀತಾಃ |
ನ ಸಾಧ್ವದಾನಂ ಶ್ರೋತ್ರೀಯಸ್ಯ ಪ್ರಮಾದಂ
ಮಾ ಪ್ರಾದಾ ಶ್ಯೇನಕಪೋತೋಽಸ್ಮಿ ರಾಜನ್ ॥7॥
ನಾನು ವೇದಗಳನ್ನು ಉಚ್ಚರಿಸುತ್ತೇನೆ. ಛಂದಸ್ಸುಗಳನ್ನು ಬಿಡಿಸುತ್ತೇನೆ. ಎಲ್ಲ ವೇದಗಳನ್ನು ಅಕ್ಷರಶಃ ಅಧ್ಯಯನ ಮಾಡಿದ್ದೇನೆ. ಎಲೈ ರಾಜನೇ, ಪ್ರಮಾದದಿಂದ ನಾನು ಬೇಡಿದ ದಾನವನ್ನು ಶ್ರೋತ್ರಿಯನಾದ ನನಗೆ ಕೊಡದೇ ಇರಬೇಡ. ನಾನು ಶ್ಯೇನಕ್ಕೆ ಹೆದರಿ ಬಂದ ಕಪೋತನಾಗಿದ್ದೇನೆ.
ಪರ್ಯಾಯೇಣ ವಸತಿರ್ವಾ ಭಾವೇಷು
ಸ್ವರ್ಗೋ ಜಾತಃ ಪೂರ್ವಮಾಸ್ಮಾಕಮಾತ್ರಮ್ |
ಮಮಾದದಾನೋಽದ್ಯ ಕಪೋತಮೇನಂ
ಮಾತ್ವಂ ರಾಜನ್ ವಿಪ್ರಕರ್ತಾ ಭವೇಥಾಃ ॥8॥
ಆಗ ಶ್ಯೇನವು ರಾಜನನ್ನು ಕುರಿತು ಹೇಳಿತು. ಜೀವರಿಗೆ ಪರ್ಯಾಯ ಕ್ರಮದಿಂದ ವಾಸವು ಉಂಟಾಗುತ್ತದೆ. ಅದರಂತೆ ನಾನು ಮೊದಲು

ಸ್ವರ್ಗದಲ್ಲಿದ್ದೆ. ಈ ಕಪೋತವು ನನ್ನ ಭಕ್ಷಣಕ್ಕೆ ಯೋಗ್ಯವಾದ ಒಂದು ಅಂಶವಾಗಿದೆ. ಎಲೈ ರಾಜನೇ, ನೀನು ಅದನ್ನು ನನಗೆ ಕೊಡದೇ ಅಪಕಾರವನ್ನು ಮಾಡಬೇಡ.
ರಾಜಾ
ಕೇನೇದೃಶೀ ಜಾತು ಪುರಾ ಹಿ ದೃಷ್ಟಾ
ವಾಗುಚ್ಯಮಾನಾ ಶಕುಕನೇನ ಸಂಸ್ಕೃತಾ |
ಯಾಂ ವೈ ಕಪೋತೋ ವದತೇ ಯಾಂ ಚ
ಶ್ಯೇನ ಉಭೌ ವಿದಿತ್ವಾ ಶಸ್ತ ಇಯಾಂ ಕಥಂ ನು ॥9॥
ರಾಜ ಇಂತಹ ಒಂದು ಪ್ರಸಂಗವನ್ನು ಹಿಂದೆ ಯಾರು ನೋಡಿದ್ದಾರೆ? ಪಕ್ಷಿಯು ಸುಸಂಸ್ಕೃತವಾದ ಮಾತನಾಡುತ್ತದೆ! ಕಪೋತವು ಏನನ್ನು ಹೇಳುತ್ತಿದೆಯೋ, ಶ್ಯೇನನು ಏನು ಹೇಳುತ್ತಿದೆಯೋ ಎರಡನ್ನೂ ತಿಳಿದು ನಾನು ಹೇಗೆ ಪ್ರಶಸ್ತವಾದ ಕರ್ಮವನ್ನು ಮಾಡಲಿ?
ನಾಸ್ಯ ವರ್ಷಂ ವರ್ಷತಿ ವರ್ಷಕಾಲೇ
ನಾಸ್ಯ ಬೀಜಂ ರೋಹತಿ ಕಾಲ ಉತ್ಪಮ್ |
ಭೀತಂ ಪ್ರಪನ್ನಂ ಯೋ ಹಿ ದದಾತಿ ಶತ್ರವೇ
ನ ತ್ರಾತಾರಂ ಲಭತೇ ತ್ರಾತುಮಿಚ್ಛನ್ ॥10॥
ಯಾವ ರಾಜನು ಭೀತನಾದ, ಶರಣಾಗತನಾದ ವ್ಯಕ್ತಿಯನ್ನು ಶತ್ರುವಿಗೆ ಅರ್ಪಿಸುತ್ತಾನೆಯೋ, ರಕ್ಷಣೆಯನ್ನು ಬಯಸಿದ ವ್ಯಕ್ತಿಯು ಎಲ್ಲಿ ರಕ್ಷಣೆಯನ್ನು ಪಡೆಯುವುದಿಲ್ಲವೋ ಅಂತಹವನಿಗೆ ಮಳೆಗಾಲದಲ್ಲಿ ಮಳೆಯಾಗುವುದಿಲ್ಲ ಮತ್ತು ಯೋಗ್ಯವಾದ ಕಾಲದಲ್ಲಿ ಬಿತ್ತಿದ ಬೀಜವು ಮೊಳಕೆಯೊಡೆದು ಬೆಳೆಯುವುದಿಲ್ಲ.
ಕಾಲೇ ಜಾತಾ ಸ್ವಾ ಪ್ರಜಾಽಸ್ಯ ಪ್ರಮೀಯತೇ
ಸದಾ ಸುಬಾಧಾಂ ಪಿತರೋಽಸ್ಯ ಕುರ್ವತೇ |
ಭೀತಂ ಪ್ರಪನ್ನಂ ಯೋ ಹಿ ದದಾತಿ ಶತ್ರವೇ
ನಾಸ್ಯ ದೇವಾಃ ಪ್ರಹರಂತ್ಯಸ್ಯ ವಜ್ರಮ್ ॥11॥
ಯಾರು ಭೀತನಾಗಿ ಪ್ರಪನ್ನನಾದ ವ್ಯಕ್ತಿಯನ್ನು ಶತ್ರುವಿಗೆ ಕೊಡುತ್ತಾನೆಯೋ ಅವನಿಗೆ ಯೋಗ್ಯಕಾಲದಲ್ಲಿ ಹುಟ್ಟಿದ ಮಕ್ಕಳು ಮೃತರಾಗುತ್ತಾರೆ. ಪಿತೃಗಳು ಯಾವಾಗಲೂ ಬಾಧೆಯನ್ನು ಕೊಡುತ್ತಾರೆ. ದೇವತೆಗಳು ಸಹಾಯಭೂತರಾಗಿರುವುದಿಲ್ಲ ಮತ್ತು ದೇವತೆಗಳು ವಜ್ರಪ್ರಯೋಗವನ್ನೂ ಮಾಡುತ್ತಾರೆ.
ಉಕ್ಷಾಣಂ ಪಕತ್ವ ಸಹ ಓದನೇನ
ಅಸ್ಮಾತ್ ಕಪೋತಾದಧಿಕಂ ವೈ ನಯಂತು |
ಯಸ್ಮಿನ್ ದೇಶೇ ರಮಸೇಽತೀವ ಶ್ಯೇನ
ತತ್ರ ಮಾಂಸಂ ವಯಸೇಽಸ್ಮೈ ವಹಂತು ॥12॥
ಎಲೈ ಶ್ಯೇನವೇ ವೃಷಭದ ಮಾಂಸವನ್ನು ಅನ್ನದ ಜೊತೆಯಲ್ಲಿ ಬೇಯಿಸಿ ಈ ಕಪೋತಕ್ಕಿಂತ ಅಧಿಕ ಪರಿಮಾಣವುಳ್ಳ ಅದನ್ನು ನನ್ನ ಸೇವಕರು ನಿನಗೆ ತಂದುಕೊಡಲಿ. ಎಲೈ ಶ್ಯೇನವೇ, ನೀನು ಯಾವ ದೇಶದಲ್ಲಿ ಬಹಳ ಸಂತೋಷಪಡುತ್ತೀಯೋ ಅಂತಹ ದೇಶದಲ್ಲಿಯೇ ಪಕ್ಷಿಯಾದ ನಿನಗೆ ನನ್ನ ಸೇವಕರು ಮಾಂಸವನ್ನು ತೆಗೆದುಕೊಂಡು ಹೋಗಿ ಕೊಡಲಿ.
ಶ್ಯೇನಃ
ನೋಕ್ಷಣೋ ರಾಜನ್ ದ್ವಾದಶ ಕಾಮಯೇಯಂ
ನಾನ್ಯನ್ಮಾಂಸಮಧಿಕಂ ವಾ ಕಪೋತಾತ್ |
ದೇವೈರ್ದತ್ತಃ ಶೈಬ್ಯ ಮಮ್ಯೈಷ ಭಕ್ಷಃ
ತನ್ಮೇದದಸ್ವ ಶಕುನಾನ್ನಭಾವಾತ್ ॥13॥
ಶ್ಯೇನ ಎಲೈ ರಾಜನೇ, ನನಗೆ ಹನ್ನೆರಡು ವೃಷಭವಾದರೂ ಬೇಡ. ಅಥವಾ ಬೇರೆ ಮಾಂಸವಾಗಲೀ ಅಥವಾ ಕಪೋತಕ್ಕಿಂತ ಅಧಿಕವಾದ ಮಾಂಸವಾಗಲೀ ಬೇಡ. ಎಲೈ ಶಿಬಿಚಕ್ರವರ್ತಿಯೇ ಇದು ದೇವತೆಗಳು ನನಗೆ ಕೊಟ್ಟ ಆಹಾರ. ಆದ್ದರಿಂದ ಈ ಕಪೋತವು ನನ್ನ ಆಹಾರವಾದ ಕಾರಣದಿಂದ ಅದನ್ನು ನನಗೆ ಕೊಡು.
ಉಕ್ಷಾಣಂ ವೇಹತಮನೂನಂ ನಯಂತು ತೇ
ವಹಂತು ಪುರುಷಾ ವಚನಾನ್ಮಮೈವ |
ಯಾಹಿ ತಸ್ಯ ದಯೇ ಮಾಮಾಂತಿಕಾತ್
ತ್ವಂ ಹ್ಯೇನಂ ಸ್ವಪುರುಷಂ ಮಾ ಹಿಂಸೀಃ ಕಪೋತಮ್ ॥14॥
ಎಲೈ ಶ್ಯೇನವೇ, ನನ್ನ ಆದೇಶದಂತೆ ನನ್ನ ಭೃತ್ಯರು ನಿನಗೆ ಕಪೋತದ ಮಾಂಸಕ್ಕಿಂತ ಕಡಿಮೆಯಿಲ್ಲದ ವೃಷಭದ ಮಾಂಸವನ್ನಾಗಲೀ ಅಥವಾ ಬರಡು ಹಸುವಿನ ಮಾಂಸವನ್ನಾಗಲೀ ತಂದುಕೊಂಡುವರು. ಎಲೈ ದಯಾರೂಪನಾದ ಶ್ಯೇನವೇ, ನನ್ನ ಸಮೀಪದಿಂದ ಹೊರಟುಹೋಗು (ನಿನಗೆ ಇಷ್ಟವಾದ ದೇಶಕ್ಕೆ ಹೊರಟು ಹೋಗು). ನನಗೆ ಶರಣಾಗತನಾಗಿ ಭೃತ್ಯನಾಗಿರುವ ಈ ಕಪೋತವನ್ನು ಹಿಂಸಿಸಬೇಡ.
ತ್ಯಜೇ ಪ್ರಾಣಾನ್ ನೈವ ದದ್ಯಾಂ ಕಪೋತಂ
ಸೌಮ್ಯೋ ಹ್ಯಹಂ ಕಿಂ ನ ಜಹಾಸಿ ಶ್ಯೇನ |
ವೃಥಾ ಕ್ಲೇಶಂ ಮಾ ಕುರುಷ್ವೇಹ ತ್ವಂ ಹಿ
ನಾಹಂ ಕಪೋತಮರ್ಪಯಿಷ್ಯೇ ಕಥಂಚಿತ್ ॥15॥

ನಾನು ಪ್ರಾಣಗಳನ್ನು ಬಿಟ್ಟೇನು. ಆದರೆ ಕಪೋತವನ್ನು ಕೊಡಲಾರೆ. ನಾನು ಸೌಮ್ಯ ಸ್ವಭಾವದವನು. ಶ್ಯೇನವೇ, ಏಕೆ ನೀನು ಕಪೋತವನ್ನು ಬಿಡುತ್ತಿಲ್ಲ. ಇಲ್ಲಿ ನೀನು ವ್ಯರ್ಥವಾಗಿ ಕ್ಲೇಶಪಡಬೇಡ. ನಾನು ಯಾವ ಕಾರಣದಿಂದಲೂ ಕಪೋತವನ್ನು ನಿನಗೆ ಕೊಡುವುದಿಲ್ಲ.
ಯಥಾ ಮಾಂ ವೈ ಸಾಧುವಾದ್ಯೈಃ ಪ್ರಸನ್ನಾಃ
ಪ್ರಶಂಸೇಯುಃ ಶಿಬಯಃ ಕರ್ಮಣಾದ್ಯ |
ಯಥಾ ತೇ ಶ್ಯೇನ ಪ್ರಿಯಮೇವ ಕುರ್ಯಾಂ
ಪ್ರಶಾಧಿಮಾಂ ಯದ್ ವದೇಸ್ತತ್ಕರೋಮಿ ॥16॥
ಎಲೈ ಶ್ಯೇನವೇ, ನಾನು ಯಾವ ಕಾರ್ಯವನ್ನು ಮಾಡಿದರೆ ಶಿಬಿವಂಶದವರೆಲ್ಲರೂ ಪ್ರಸನ್ನರಾಗಿ ಸಾಧುವಚನಗಳಿಂದ ನನ್ನನ್ನು ಪ್ರಶಂಸೆ ಮಾಡುವರೋ ಅಂತಹ ನಿನಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಲಿ ಎಂದು ನನಗೆ ಆಜ್ಞೆಯನ್ನು ಮಾಡು. ನೀನು ಹೇಳಿದಂತೆ ಮಾಡುತ್ತೇನೆ.
ಶ್ಯೇನಃ
ಊರೋರ್ದಕ್ಷಿಣಾದವಕೃತ್ಯ ಸ್ವಪಿಶಿತಂ ತಾವದ್ ರಾಜನ್ ಯಾವತ್ ಕಪೋತೇನ ಸಮಂ ದದ್ಯಾಃ ತಸ್ಮಾತ್ ಸಾಧುತ್ರಾತಃ ಕಪೋತಃ ಪ್ರಶಂಸೇಯುಃ ಶಿಬಯಃ ಕೃತಂ ಚ ಪ್ರಿಯಂ ಸ್ಯಾನ್ಮಮೇತಿ ॥17॥
ಶ್ಯೇನ ಎಲೈ ರಾಜನೇ, ನಿನ್ನ ಬಲತೊಡೆಯಿಂದ ಕಪೋತದ ತೂಕಕ್ಕೆ ಸಮವಾದಷ್ಟು ನಿನ್ನ ಮಾಂಸವನ್ನು ಕತ್ತರಿಸಿ ಕೊಡುವವನಾಗು. ಹಾಗೆ ಮಾಡಿದರೆ ಕಪೋತದ ರಕ್ಷಣೆಯೂ ಚೆನ್ನಾಗಿ ಆಗುತ್ತದೆ. ಶಿಬಿಗಳೂ ನಿನ್ನನ್ನು ಪ್ರಶಂಸಿಸುತ್ತಾರೆ ಮತ್ತು ನನಗೆ ಪ್ರಿಯವನ್ನೂ ಮಾಡಿದಂತಾಗುತ್ತದೆ.
ಮಾರ್ಕಂಡೇಯಃ
ಅಥ ಸ ದಕ್ಷಿಣಾದೂರೋರುತ್ಕೃತ್ಯ
ಸ್ವಮಾಂಸಪೇಶೀಂ ತುಲಯಾಽಧಾರಯತ್ |
ಗುರುತರಃ ಕಪೋತ ಆಸೀತ್ |
ಪುನರನ್ಯನ್ಮಾಂಸಮುಚ್ಚಕರ್ತ | ಗುರುರೇವ ಕಪೋತಃ ॥
ಏವಂ ಸರ್ವಮಾಂಸಮುತ್ಕೃತ್ಯ ಶರೀರಂ ತುಲಾಮಾರೋಪಯಾಮಾಸ ತತ್ | ತಥಾಪಿ ಗುರುತರ ಏವ ಕಪೋತ ಆಸೀತ್ ॥18॥
ಅನಂತರ ಅವನು ತನ್ನ ದಕ್ಷಿಣ ತೊಡೆಯಿಂದ ಕತ್ತರಿಸಿದ ಮಾಂಸದ ಮುದ್ದೆಯನ್ನು ತಕ್ಕಡಿಯಲ್ಲಿಟ್ಟನು. ಕಪೋತವೇ ಅದಕ್ಕಿಂತ ಹೆಚ್ಚಿನ ಭಾರವಾಯಿತು. ಪುನಃ ಬೇರೆ ಮಾಂಸವನ್ನು ಕತ್ತರಿಸಿ ಇಟ್ಟನು. ಆಗಲೂ ಕಪೋತವು ಭಾರವೇ ಆಯಿತು. ಹೀಗೆ ಶರೀರದ ಎಲ್ಲಾ ಮಾಂಸವನ್ನು ಕತ್ತರಿಸಿ ಅದನ್ನು ತಕ್ಕಡಿಯಲ್ಲಿಟ್ಟನು. ಆದರೂ ಆ ಕಪೋತವೇ ಅವನ ಮಾಂಸಕ್ಕಿಂತ ಹೆಚ್ಚು ಭಾರವಾಯಿತು.
ಅಥ ರಾಜಾ ಸ್ವಯಮೇವ ತುಲಾಮಾರುರೋಹ |
ನ ಚ ವ್ಯಲೀಕಮಾಸೀದ್ ರಾಜ್ಞಃ | ಏತದ್ ವೃತ್ತಾಂತಂ
ದೃಷ್ಟ್ವಾ ತ್ರಾತ ಇತ್ಯುಕತ್ವ ಪ್ರಾಲೀಯತ ಶ್ಯೇನಃ ॥19॥
ಆಗ ರಾಜನು ತಾನೇ ತಕ್ಕಡಿಯನ್ನು ಏರಿ ಕುಳಿತುಕೊಂಡನು. ರಾಜನು ತಾನು ಕೊಟ್ಟ ಮಾತನ್ನು ಸುಳ್ಳು ಮಾಡಲಿಲ್ಲ. ಈ ದೃಶ್ಯವನ್ನು ನೋಡಿದ ಶ್ಯೇನವು ಕಪೋತವು ರಕ್ಷಿಸಲ್ಪಟ್ಟಿತು ಎಂದು ಹೇಳಿ. ಅದೃಶ್ಯವಾಯಿತು.
ಅಥ ರಾಜಾಽಬ್ರವೀತ್ ಕಪೋತಂ |
ಕಥಂ ವಿದ್ಯುಃ ಶಿಬಯಸ‌ತ್ವಂ ಕಪೋತ
ಪೃಚ್ಛಾಮಿ ತ್ವಾಂ ಶಕುನೇ ಕೋನು ಶ್ಯೇನಃ |
ನಾನೀಶ್ವರ ಈದೃಶಂ ಜಾತು ಕುರ್ಯಾತ್
ಏತಂ ಪ್ರಶ್ನಂ ಭಗವನ್ ಮೇ ವಿಚಕ್ಷ್ವ ॥20॥
ಆಗ ರಾಜನು ಕಪೋತವನ್ನು ಕುರಿತು ಹೇಳಿದನು.
ಎಲೈ ಕಪೋತಪಕ್ಷಿಯೇ, ನಿನ್ನನ್ನು ಶಿಬಿಗಳು ಏನೆಂದು ತಿಳಿಯಬೇಕು? ಆ ಶ್ಯೇನವು ಯಾರು ಎಂದು ನಿನ್ನನ್ನು ಕೇಳುತ್ತಿದ್ದೇನೆ. ದೇವತೆಯಲ್ಲದವನು ಯಾವನೂ ಇಂತಹ ಕೆಲಸವನ್ನು ಮಾಡಲಾರ. ಪೂಜ್ಯನಾದ ಕಪೋತವೇ, ನನ್ನ ಈ ಪ್ರಶ್ನೆಗೆ ಉತ್ತರವನ್ನು ನೀಡು.
ಕಪೋತಃ
ವೈಶ್ವಾನರೋಽಹಂ ಜ್ವಲನೋ ಧೂಮಕೇತು
ರಥೈವ ಶ್ಯೇನೋ ವಜ್ರಹಸ್ತಃ ಶಚೀಪತಿಃ |
ಸಾಧು ಜ್ಞಾತುಂ ತ್ವಾಮೃಷಯಃ ಸೌರಥೇಯ
ಆವಾಂ ವಿಜ್ಞಾಸಯಾ ತ್ವತ್ಸಕಾಶಂ ಪ್ರಪನ್ನೌ ॥21॥
ಕಪೋತ ನಾನು ಧೂಮಧ್ವಜನಾದ ಜ್ವಲಿಸುವ ಅಗ್ನಿಯು. ಅದರಂತೆ ಶ್ಯೇನವು ಶಚೀಪತಿಯಾದ ವಜ್ರಾಸ್ತ್ರನಾದ ಇಂದ್ರನು. ಎಲೈ ಮಹಾರಥನೇ, ನಾವು ಮತ್ತು ಋಷಿಗಳು ನಿನ್ನನ್ನು ಸರಿಯಾಗಿ ತಿಳಿಯುವ ಇಚ್ಛೆಯಿಂದ ನಾವಿಬ್ಬರೂ ನಿನ್ನ ಸಮೀಪಕ್ಕೆ ಬಂದೆನು.
ಯಾಮೇತಾಂ ಪೇಶೀಂ ನಿಷ್ಕ್ರಯಾಯ
ಪ್ರಾದಾದ್ ಭವಾನಸಿನೋತ್ಕೃತ್ಯ ರಾಜನ್ |
ಏತದ್ವೋಽಲಕ್ಷ್ಮಂ ಶಿಬೇ ಕರೋಮಿ

ಹಿರಣ್ಯವರ್ಣಂ ರುಚಿರಂ ಪುಣ್ಯಗಂಧಮ್ ॥22॥
ಎಲೈ ರಾಜನೇ, ನನಗೆ ಉಪಕಾರವನ್ನು ಮಾಡಲು ನೀನು ಯಾವ ಮಾಂಸದ ಮುದ್ದೆಯನ್ನು ನಿನ್ನ ದೇಹದಿಂದ ಕತ್ತರಿಸಿದೆಯೋ ಅಂತಹ ನೋಡಲು ಅಸಾಧ್ಯವಾದ (ಅಸಹ್ಯವಾದ) ನಿನ್ನ ಈ ಕ್ರೂರರೂಪವನ್ನು ಸುವರ್ಣವರ್ಣವುಳ್ಳದ್ದಾಗಿ ಸುಗಂಧವುಳ್ಳದ್ದಾಗಿ ಮತ್ತು ಮನೋಹರವಾಗಿ ಮಾಡುತೆತೇನೆ.
ಏತಾಸಾಂ ಪ್ರಜಾನಾಂ ಪಾಲಯಿತಾ ಯಶಸ್ವೀ
ಸುರರ್ಷೀಣಾಮಥ ಸಮ್ಮತೋ ಭೃಶಮ್ |
ಏತಸ್ಮಾತ್ ಪಾರ್ಶ್ವಾತ್ ಪುರುಷೋ ಜನಿಷ್ಯತೇ
ಕಪೋತರೋಮೇತಿ ಚ ತಸ್ಯ ನಾಮ ॥23॥
ನೀನು ಈ ಪ್ರಜೆಗಳನ್ನು ಕೀರ್ತಿವಂತನಾಗಿ ಪಾಲಿಸುವಿ. ದೇವತೆಗಳಿಗೂ ಮತ್ತು ಋಷಿಗಳಿಗೂ ಅತ್ಯಂತ ಸಮ್ಮತನಾಗುವಿ. ನೀನು ಮಾಂಸವನ್ನು ಕಿತ್ತ ನಿನ್ನ ಶರೀರದ ಭಾಗದಿಂದ ನಿನಗೆ ಒಬ್ಬ ಪುತ್ರನು ಜನಿಸುವನು. ಅವನಿಗೆ ಕಪೋತರೋಮ ಎಂದು ಹೆಸರಾಗುತ್ತದೆ.

ಕಪೋತರೋಮಾಣಂ ಶಿಬಿಔದ್ಭಿದಂ ಪುತ್ರಂ ಪ್ರಾಪ್ಸ್ಯಸಿ
ನೃಪವೃಷಂ ಮಹಾರಥಂ ಯಶೋದೀಪ್ಯಮಾನಂ
ದ್ರಷ್ಟಾಸಿ ಶೂರಮೃಷಭಂ ಸೌರಥಾನಾಮ್ ॥24॥
ಎಲೈ ಶಿಬಿಯೇ, ಶತ್ರುಗಳನ್ನು ಸಂಹಾರ ಮಾಡುವ ಕಪೋತರೋಮನೆಂಬ ಶಿಬಿಯನ್ನು ನೀನು ಪುತ್ರನನ್ನಾಗಿ ಪಡೆಯುವಿ.
ನೃಪಶ್ರೇಷ್ಠನಾದ ಕೀರ್ತಿಯಿಂದ ಬೆಳಗುವ ಮಹಾರಥರಲ್ಲಿ ಶ್ರೇಷ್ಠನಾದ ಶೂರನಾದ ಅವನನ್ನು ನೀನು ನೋಡುವಿ (ಎಂದು ಹೇಳಿತು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚಾಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಖ್ಯಾಪರ್ವಣಿ
ರಾಜಮಾಹಾತ್ಮ್ಯೇ ಚತುರ್ಥೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐದನೆಯ
ಅಧ್ಯಾಯ ಮುಗಿಯಿತು
* * * *
ಇನ್ನೂರ ಆರನೆಯ ಅಧ್ಯಾಯ
ಮಾರ್ಕಂಡೇಯರಿಂದ ಅಷ್ಟಕನ ಅಶ್ವಮೇಧಯಾಗದ ಪ್ರಸಂಗದಲ್ಲಿ
ಶಿಬಿಯ ಮಾಹಾತ್ಮ್ಯದ ಕಥನ.
ವೈಶಂಪಾಯನಃ
ಭೂಯ ಏವ ಮಹಾಭಾಗ್ಯಂ ಕಥ್ಯತಾಮಿತ್ಯಬ್ರವೀತ್
ಪಾಂಡವೋ ಮಾರ್ಕಂಡೇಯಮ್ ॥1॥
ವೈಶಂಪಾಯನ ರಾಜರ ಮಹಾಭಾಗ್ಯವನ್ನು ಇನ್ನೂ ಹೇಳಿ ಎಂದು ಯುಧಿಷ್ಠಿರನು ಮಾರ್ಕಂಡೇಯರನ್ನು ಕೇಳಿದನು.
ಅಥಾಚಷ್ಟ ಮಾರ್ಕಂಡೇಯಃ |
ಅಷ್ಟಕಸ್ಯ ವೈಶ್ವಾಮಿತ್ರೇಽಶ್ವಮೇಧೇ ಸರ್ವೇ ರಾಜಾನ ಆಗಚ್ಛನ್ | ಭ್ರಾತರಶ್ಚಾಸ್ಯ ಪ್ರತರ್ದನೋ ವಸುಮನಾಃ ಶಿಬಿರೌಶೀನರ ಇತಿ ॥2॥
ಆಗ ಮಾರ್ಕಂಡೇಯರು ಹೇಳಿದರು. ವಿಶ್ವಾಮಿತ್ರರು ನಡೆಸಿಕೊಟ್ಟ ಅಷ್ಟಕನ ಅಶ್ವಮೇಧ ಯಾಗಕ್ಕೆ ಎಲ್ಲ ರಾಜರೂ ಬಂದರು.
ಅಷ್ಟಕನ ಸಹೋದರರನಾದ ಪ್ರತರ್ದನ, ವಸುಮನಾ ಮತ್ತು ಔಶೀನರ ಶಿಬಿಯೂ ಸಹ ಬಂದರು.
ಸ ಚ ಸಮಾಪ್ತಯಜ್ಞೋ ಭ್ರಾತೃಭಿಃ ಸಹ ರಥೇನ ಪ್ರಾಯಾತ್ |
ತೇ ಚ ನಾರದಮಾಗಚ್ಛಂತಮಪಶ್ಯನ್ |
ತಮಭಿವಾದ್ಯಾರೋಹತು ಭವಾನ್ ರಥಮಿತ್ಯಬ್ರುವನ್ ॥3॥
ಅಷ್ಟಕನು ಯಜ್ಞವನ್ನು ಸಮಾಪ್ತಿಗೊಳಿಸಿ ಸಹೋದರರ ಜೊತೆಯಲ್ಲಿ ರಥದಲ್ಲಿ ಹೊರಟನು. ಅವರು ಎದುರಿಗೆ ನಾರದರು ಬರುತ್ತಿರುವುದನ್ನು ನೋಡಿದರು. ಅವರಿಗೆ ನಮಸ್ಕರಿಸಿ ತಾವು ರಥವನ್ನು ಏರಿ ಎಂದು ಹೇಳಿದರು.
ತಾನ್ ತಥೇತ್ಯುಕತ್ವ ರಥಮಾರುರೋಹ |
ಅಥ ತೇಷಾಮೇಷಾಮೇಕತರ ಋಷಿಂ ನಾರದಮಬ್ರವೀತ್ |
ಪ್ರಸಾದ್ಯ ಭಗವಂತಂ ಕಿಂಚಿದಿಚ್ಛೇಯಂ ಪ್ರಷ್ಟುಮಿತಿ ॥
ಪೃಚ್ಛೇತ್ಯಬ್ರವೀತ್ ಋಷಿರ್ನಾರದಃ ॥4॥
ನಾರದರು ಹಾಗೆಯೇ ಆಗಲಿ ಎಂದು ಹೇಳಿ ರಥವನ್ನು ಏರಿದರು. ಆಗ ಅವರಲ್ಲಿ ಒಬ್ಬನು ನಾರದ ಋಷಿಗಳನ್ನು ಕುರಿತು ಪೂಜ್ಯರಾದ ತಮ್ಮನ್ನು ಪ್ರಸನ್ನೀಕರಿಸಿ ಒಂದು ಪ್ರಶ್ನೆಯನ್ನು ಕೇಳಲು ಬಯಸುತೆತೇನೆ ಎಂದು ಹೇಳಿದನು. ನಾರದ ಋಷಿಗಳು ಕೇಳು ಎಂದು ಹೇಳಿದರು.
ಸೋಽಬ್ರವೀತ್ | ಆಯುಷ್ಮಂತಃ ಸರ್ವ ಏವ ಗುಣಪ್ರಮುದಿತಾಃ | ಅಥಾಯುಷ್ಮಂತಂ ಸ್ವರ್ಗಸ್ಥಾನಂ
ಗುಣವಿಶೇಷಾಚ್ಚತುರ್ಭಿರ್ಯಾತವ್ಯಂ
ಸ್ಯಾತ್ ಕೋಽವತರೇತ್ ॥5॥
ಅವನು ಹೇಳಿದನು. ರಥದಲ್ಲಿರುವ ಸೌಭಾಗ್ಯವಂತರೆಲ್ಲರೂ ಗುಣಗಳಿಂದ ಕೂಡಿ ಸಂತೋಷಪಡುವವರಾಗಿದ್ದಾರೆ. ಒಂದುಪಕ್ಷ

ಸ್ಥಿರಕಾಲೀನವಾದ ಸ್ವರ್ಗಸ್ಥಾನವನ್ನು ಗುಣವಿಶೇಷವುಳ್ಳ ನಾಲ್ಕು ಜನರೇ ತಲುಪಬೇಕೆಂದಾದರೆ ಯಾರು ಇಳಿಯಬೇಕು?
ಅಯಮಷ್ಟಕೋऽವತರೇದಿತ್ಯಬ್ರುವೀದ್ ಋಷಿಃ |
ಕಿಂ ಕಾರಣಮಿತ್ಯಪೃಚ್ಛತ್ ॥6॥
ಈ ಅಷ್ಟಕನು ಇಳಿಯಬೇಕು ಎಂದು ನಾರದರು ಹೇಳಿದರು. ಅದಕ್ಕೆ ಏನು ಕಾರಣ ಎಂದು ಅವನು ಪ್ರಶ್ನೆ ಮಾಡಿದನು.
ಅಥಾಚಷ್ಟ | ಅಷ್ಟಕಸ್ಯ ಗೃಹೇ ಮಯಾ ಉಷಿತಮ್ |
ಸ ಮಾಂ ರಥೇನಾನುಪ್ರಾವಹತ್ |
ಅಥಾಪಶ್ಯಮನೇಕಾನಿ ಗೋಸಹಸ್ರಾಣಿ ವರ್ಣಶೋ ವಿವಿಕ್ತಾನಿ | ತಮಹಮಪೃಚ್ಛಂ ಕಸ್ಯೇಮಾ ಗಾವ ಇತಿ | ಸೋऽಬ್ರವೀತ್ |
ಮಯಾ ನಿಸೃಷ್ಟಾ ಇತಿ | ತೇನೈವ ಸ್ವಯಂ ಶ್ಲಾಘತಿ ಕಥಿತೇನ | ತೇನೈಷೋऽವತರೇತ್ ॥7॥
ಆಗ ನಾರದರು ಹೇಳಿದರು. ನಾನು ಹಿಂದೆ ಅಷ್ಟಕನ ಮನೆಯಲ್ಲಿ ವಾಸಮಾಡಿದೆನು. ಅವನು ಒಮ್ಮೆ ನನ್ನನ್ನು ರಥದಲ್ಲಿ ಕರೆದುಕೊಂಡು ಹೋದನು. ಆಗ ನಾನು ಅವುಗಳ ಬಣ್ಣಗಳಿಗೆ ಅನುಸಾರವಾಗಿ ವಿಂಗಡಿಸಿದ್ದ ಅನೇಕ ಸಹಸ್ರ ಗೋವುಗಳನ್ನು ನೋಡಿದೆನು. ನಾನು ಇವನನ್ನು ಈ ಗೋವುಗಳು ಯಾರವು ಎಂದು ಕೇಳಿದೆನು. ಇವನು ನಾನು ದಾನ ಮಾಡಿದವು ಎಂದು ಹೇಳಿದನು. ಇವನು ತಾನೇ ದಾನವನ್ನು ಕೊಟ್ಟು ಅದನ್ನು ತಾನೇ ಶ್ಲಾಘಿಸುತ್ತಾನೆ. ಆಕಾರಣದಿಂದ ಇವನೇ ಇಳಿಯಬೇಕು.
ಅಥ ತ್ರಿಭಿರ್ಯಾತವ್ಯಂ ಸಾಂಪ್ರತಮ್ | ಕೋऽವತರೇತ್ ॥8॥
ಇನ್ನು ಮೂರುಜನರು ಹೋಗಬೇಕಾದರೆ ಈಗ ಯಾರು ಇಳಿಯಬೇಕು?
ಪ್ರತರ್ದನ ಇತ್ಯಬ್ರುವೀದ್ ಋಷಿಃ | ತತ್ರ ಕಿಂ ಕಾರಣಮ್ ॥9॥
ಪ್ರತರ್ದನ ಎಂದು ನಾರದರು ಹೇಳಿದರು. ಅದಕ್ಕೇನು ಕಾರಣ? (ಎಂದು ಅವನು ಕೇಳಿದನು)
ಪ್ರತರ್ದನಸ್ಯಾಪಿ ಗೃಹೇ ಮಯೋಷಿತಮ್ |
ಸ ಮಾಂ ರಥೇನಾನುಪ್ರಾವಹತ್ |
ಅಥೈತಂ ಬ್ರಾಹ್ಮಣೋ ಭಿಕ್ಷಿತವಾನಶ್ವಂ ಮೇ ದದಾತ್ವಿತಿ |
ನಿವೃತ್ತೋ ದಾಸ್ಯಾಮೀತ್ಯಬ್ರವೀದ್ ಬ್ರಾಹ್ಮಣಮ್ |
ತ್ವರಿತಮೇವ ದೀಯತಾಮಿತ್ಯಬ್ರುವೀದ್ ಬ್ರಾಹ್ಮಣಃ |
ತ್ವರಿತಮೇವ | ಸ ಬ್ರಾಹ್ಮಣಸ್ಯೈವಮುಕತ್ತ್ವ ದಕ್ಷಿಣಪಾರ್ಶ್ವಸ್ಥಮಶ್ವಮದದಾತ್ ॥10॥
ಪ್ರತರ್ದನನ ಮನೆಯಲ್ಲಿಯೂ ನಾನು ವಾಸಮಾಡಿದೆನು. ಅವನು ನನ್ನನ್ನು ರಥದಲ್ಲಿ ಕರೆದುಕೊಂಡು ಹೋದನು. ಆಗ ದಾರಿಯಲ್ಲಿ ಒಬ್ಬ ಬ್ರಾಹ್ಮಣನು ಬಂದು ನನಗೆ ಒಂದು ಅಶ್ವವನ್ನು ಕೊಡು ಎಂದು ಬೇಡಿದನು. ಪ್ರಯಾಣವನ್ನು ಮುಗಿಸಿ ಬಂದು ಕೊಡುವೆನು ಎಂದು ಬ್ರಾಹ್ಮಣನಿಗೆ ಪ್ರತರ್ದನನು ಹೇಳಿದನು. ಶೀಘ್ರವಾಗಿಯೇ ಕೊಡು ಎಂದು ಬ್ರಾಹ್ಮಣನು ಹೇಳಿದನು. ಶೀಘ್ರವಾಗಿಯೇ (ಕೊಡುವೆನು) ಎಂದು ಪ್ರತರ್ದನನು ಹೇಳಿದನು. ಅವನು ಬ್ರಾಹ್ಮಣನಿಗೆ ಹೀಗೆ ಹೇಳಿ ರಥದ ಬಲಭಾಗದಲ್ಲಿದ್ದ ಅಶ್ವವನ್ನು ಕೊಟ್ಟನು.
ಅಥ ಪ್ರಾಯಾತ್ | ಪುನರಪಿ ಚಾನ್ಯೋಪ್ಯಶ್ವಾರ್ಥೀ
ಬ್ರಾಹ್ಮಣ ಆಗಚ್ಛತ್ | ತಮಬ್ರುವೀದಭಿಯಾತೋ ದಾಸ್ಯಾಮಿತಿ | ತ್ವರಿತಮೇವ ದೀಯತಾಮಿತ್ಯಬ್ರುವೀದ್ ಬ್ರಾಹ್ಮಣಃ |
ತಥೇತಿ ಚೈನಮುಕತ್ತ್ವ ವಾಮಪಾರ್ಷ್ಣಿಸ್ಥಮಶ್ವಮಭ್ಯದಾತ್ ॥11॥
ಅನಂತರ ಅಲ್ಲಿಂದ ಹೊರಟನು. ಪುನಃ ಇನ್ನೊಬ್ಬ ಅಶ್ವಾರ್ಥಿಯಾದ ಬ್ರಾಹ್ಮಣನು ಬಂದನು. ಅವನಿಗೂ ಪ್ರತರ್ದನನು ಪ್ರಯಾಣವನ್ನು ಮುಗಿಸಿ ಕೊಡುವೆನು ಎಂದು ಹೇಳಿದನು. ಶೀಘ್ರವಾಗಿಯೇ ಕೊಡು ಎಂದು ಬ್ರಾಹ್ಮಣನು ಹೇಳಿದನು. ಹಾಗೆಯೇ ಆಗಲಿ ಎಂದು ಅವನಿಗೆ ಹೇಳಿ ಪ್ರತರ್ದನನು ರಥದ ಎಡಭಾಗದಲ್ಲಿದ್ದ ಅಶ್ವವನ್ನು ಅವನಿಗೆ ನೀಡಿದನು.
ಅಥ ಪ್ರಾಯಾತ್ | ಪುನರಪಿ ಚಾನ್ಯೋऽಶ್ವಾರ್ಥೀ ಬ್ರಾಹ್ಮಣ ಆಗಚ್ಛತ್ | ತ್ವರಿತೋऽಥ ತಸ್ಮೈ ಅಪನಹ್ಯ ವಾಮಂ ಧುರ್ಯಮದದಾತ್ ॥12॥
ಪುನಃ ಮುಂದೆ ಹೊರಟನು. ಪುನಃ ಅಶ್ವಾರ್ಥಿಯಾದ ಇನ್ನೊಬ್ಬ ಬ್ರಾಹ್ಮಣನು ಬಂದನು. ಅವನಿಗೆ ನೊಗದ ಎಡಭಾಗದಲ್ಲಿ ರಥವನ್ನು ಹೊತ್ತಿದ್ದ ಅಶ್ವವನ್ನು ಬಿಚ್ಚಿ ಕೊಟ್ಟನು.
ಅಥ ಪ್ರಾಯಾತ್ | ಪುನರನ್ಯ ಆಗಚ್ಛದಶ್ವಾರ್ಥೀ ಬ್ರಾಹ್ಮಣಃ | ತಮಬ್ರುವೀತ್-ಅತಿಯಾತೋ ದಾಸ್ಯಾಮೀತಿ |
ತ್ವರಿತಮೇವ ಮೇ ದೀಯತಾಮಿತ್ಯಬ್ರುವೀದ್ ಬ್ರಾಹ್ಮಣಃ |
ತಸ್ಮೈ ದತ್ವಾऽಶ್ವಂ ಸ್ವಪುರಂ ಗೃಹ್ಣತಾ ವ್ಯಾಹೃತಂ-
ಬ್ರಾಹ್ಮಣಾನಾಂ ಸಾಂಪ್ರತಂ ನಾಸ್ತಿ ಕಿಂಚಿದಿತಿ ॥13॥
ಪುನಃ ಹೊರಟನು. ಪುನಃ ಅಶ್ವಾರ್ಥಿಯಾದ ಇನ್ನೊಬ್ಬ ಬ್ರಾಹ್ಮಣನು ಬಂದನು. ಅವನಿಗೆ ಪ್ರಯಾಣವನ್ನು ಮುಗಿಸಿ ಕೊಡುವೆನು ಎಂದು ಹೇಳಿದನು. ಶೀಘ್ರವಾಗಿ ಕೊಡು ಎಂದು ಬ್ರಾಹ್ಮಣನು ಹೇಳಿದನು ಅವನಿಗೆ (ರಥದ ನೊಗದ ಬಲಭಾಗದಲ್ಲಿ ಕಟ್ಟಿದ್ದ) ಅಶ್ವವನ್ನು ಕೊಟ್ಟು ತನ್ನ ಪಟ್ಟಣವನ್ನು ರಕ್ಷಿಸಲು ಹಿಂದೆ ಬರುತ್ತಾ ಇನ್ನು ಬ್ರಾಹ್ಮಣರಿಗೆ ಕೊಡಲು ಏನೂ ಉಳಿದಿಲ್ಲ ಎಂದು ಹೇಳಿದನು.
ಯ ಏಷ ದದಾತಿ ಚಾಸೂಯತಿ ಚ |
ತೇನ ಸ್ಯಾದ್ವತೇನ ತಥಾऽವತರೇತ್ ॥14॥
ಇವನು ದಾನವನ್ನು ಮಾಡುತ್ತಾನೆ ಮತ್ತು ಅಸೂಯೆಯನ್ನೂ ಪಡುತ್ತಾನೆ. ಆದ್ದರಿಂದ ಅಸೂಯೆಯಿಂದಲೇ ಹತನಾದ ಅವನು ರಥದಿಂದ ಇಳಿಯಬೇಕು.
ಅಥ ದ್ವಾಭ್ಯಾಂ ಯಾತವ್ಯಂ ಕೋऽವತರೇತ್ |
ವಸುಮನಾ ಅವತರೇದಿತ್ಯಬ್ರುವೀದ್ ಋಷಿಃ ॥15॥

ಇನ್ನು ಇಬ್ಬರೇ ಹೋಗಬೇಕಾಗಿದೆ. ಯಾರು ಇಳಿಯಬೇಕು? ವಸುಮನನು ಇಳಿಯಬೇಕು ಎಂದು ನಾರದರು ಹೇಳಿದರು.
ಕಿಂ ಕಾರಣಮಿತ್ಯಪೃಚ್ಛದಥಾಚಷ್ಟ ನಾರದಃ ॥16॥
ಅದಕ್ಕೇನು ಕಾರಣ? ಎಂದು ಕೇಳಿದನು. ಆಗ ನಾರದರು ಹೇಳಿದರು.
ಅಹಂ ಪರಿಭ್ರಮಂಶ್ಚ ವಸುಮನಸೋ ಗೃಹೇ ಉಪಸ್ಥಿತಃ। ಸ್ವಸ್ತಿವಾಚನಮಾಸೀತ್ ಪುಷ್ಪರಥಸ್ಯ ಪ್ರಯೋಜನೇನ।
ತಮಹಮನ್ವಗಚ್ಛಮ್। ಸ್ವಸ್ತಿವಾಚಿತೇಷು ಬ್ರಾಹ್ಮಣೇಷು
ರಥೋ ಬ್ರಾಹ್ಮಣಾನಾಂ ದರ್ಶಿತಃ ॥17॥
ನಾನು ಸಂಚಾರವನ್ನು ಮಾಡುತ್ತಾ ವಸುಮನನ ಮನೆಗೆ ಬಂದೆನು. ಅಲ್ಲಿ ಅವನ ಪುಷ್ಪರಥವನ್ನು ಉದ್ದೇಶಿಸಿ ಸ್ವಸ್ತಿವಾಚನವು ನಡೆದಿದ್ದಿತು. ನಾನು ಅವನನ್ನು ಹಿಂಬಾಲಿಸಿದೆನು. ಬ್ರಾಹ್ಮಣರು ಸ್ವಸಿತವಾಚನವನ್ನು ಮಾಡಿದ ಮೇಲೆ ಅವನು ಅವರಿಗೆ ರಥವನ್ನು ತೋರಿಸಿದನು.
ತಮಹಂ ರಥಂ ಪ್ರಾಶಂಸಮ್। ಅಥ ಸ ರಾಜಾಽಬ್ರವೀತ್।
ಭವತಾ ರಥಃ ಪ್ರಶಸ್ತಃ। ಏಷ ಭಗವತೋ ರಥ ಇತಿ ॥18॥
ನಾನು ಆ ರಥವನ್ನು ಪ್ರಶಂಸಿಸಿದೆನು. ಆಗ ರಾಜನು ಹೇಳಿದನು ನೀವು ರಥವನ್ನು ಹೊಗಳಿದ್ದೀರಿ. ಇದು ಪೂಜ್ಯರಾದ ನಿಮ್ಮದೇ ರಥ ಎಂದು.
ಅಥ ಕದಾಚಿತ್ ಪುನರಪ್ಯಹಮುಪಸ್ಥಿತಃ।
ಪುನರೇವ ಚ ರಥಪ್ರಯೋಜನಮಾಸೀತ್।
ತಥಾ ಚೈನಂ ಪ್ರಾಶಂಸಮ್।
ಏಷ ಭಗವತ ಇತ್ಯೇವಂ ರಾಜಾಽಬ್ರವೀತ್ ಪುನರೇವ ಚ ॥19॥
ಅನಂತರ ಇನ್ನೊಮ್ಮೆ ನಾನು ಅವನ ಮನೆಗೆ ಹೋದೆನು. ಆಗಲೂ ಆ ರಥವನ್ನು ಉದ್ದೇಶಿಸಿ ಪುನಃ ಉತ್ಸವವು ನಡೆದಿದ್ದಿತು. ಆಗಲೂ ನಾನು ರಥವನ್ನು ಪ್ರಶಂಸಿಸಿದೆನು. ಇದು ತಮ್ಮದೇ ರಥ ಎಂದು ರಾಜನು ಪುನಃ ಹೇಳಿದನು.
ತೃತೀಯಂ ಸ್ವಸ್ತಿವಾಚನಂ ಸಮಭಾವಯತ್।
ಅಥ ರಾಜಾ ಬ್ರಾಹ್ಮಣಾನ್ ದರ್ಶಯನ್ ಮಾಮಭಿಪ್ರೇಕ್ಷ್ಯಾಬ್ರವೀತ್। ಅಹೋ ಭಗವತಾ ಪುಷ್ಪರಥಸ್ಯ ಸ್ವಸ್ತಿವಾಚನಾನಿ ಸುಷ್ಠು ಸಂಭಾವಿತಾನಿ (ಇತಿ)। ಏತೇನ ದ್ರೋಹವಾಕ್ಯೇನೈಷೋಽವತರೇತ್ ॥20॥
ಆ ರಾಜನು ಮೂರನೆಯ ಬಾರಿಗೆ ಆ ರಥದ ಉದ್ದೇಶದಿಂದ ಸ್ವಸ್ತಿವಾಚನವನ್ನು ಮಾಡಿಸಿದನು. ಆಗ ರಾಜನು ಬ್ರಾಹ್ಮಣರಿಗೆ ರಥವನ್ನು ತೋರಿಸುತ್ತಾ ನನ್ನನ್ನು ನೋಡಿ ಪೂಜ್ಯರಾದ ನೀವು ಪುಷ್ಪರಥಕ್ಕೆ ಮಂಗಳಾಶೀರ್ವಾದವನ್ನು ಮಾಡಿದ್ದೀರಿ ಎಂದು ಹೇಳಿದನು. ಈ ದ್ರೋಹವಚನದಿಂದ ಅವನೂ ಇಳಿಯಬೇಕು (ನಾರದರು ರಾಜನಿಗೆ ನಿರುಪಾಧಿಕವಾಗಿ ಶುಭಾಶಂಸನೆಯನ್ನು ಮಾಡಿದ್ದರೂ, ಪುಷ್ಪರಥದ ನಿಮಿತ್ತದಿಂದ ಮಾಡಿದ್ದೀರಿ ಎಂದು ಹೇಳಿದುದು ರಾಜನ ದ್ರೋಹವಚನ).
ಅಥೈಕೇನ ಯಾತವ್ಯಂ ಸ್ಯಾತ್ ಕೋಽವತರೇತ್।
ಪುನರ್ನಾರದ ಆಹ - ಶಿಬಿರ್ಯಾಯಾದಹಮತರೇಯಮಿತಿ।
ಅತ್ರ ಕಿಂ ಕಾರಣಮಿತ್ಯಬ್ರವೀತ್।
ಅಸಾವಹಂ ಶಿಬಿನಾಂ ಸಮೋ ನಾಸ್ತಿ (ಇತಿ) ॥21॥
ಇನ್ನು ಒಬ್ಬನೇ ಹೋಗಬೇಕಾದರೆ ಯಾರು ಇಳಿಯಬೇಕು? ಪುನಃ ನಾರದರು ಶಿಬಿಯು ರಥದಲ್ಲಿ ಹೋಗಬೇಕು. ನಾನು ಇಳಿಯಬೇಕು ಎಂದು ಹೇಳಿದರು. ಅದಕ್ಕೆ ಏನು ಕಾರಣ ಎಂದು ಕೇಳಿದನು. ಈ ನಾನು ಶಿಬಿಗೆ ಸಮಾನನಲ್ಲ ಎಂದು (ನಾರದರು ಹೇಳಿದರು).
ಬ್ರಾಹ್ಮಣಃ ಕಶ್ಚಿದೇನಮಬ್ರವೀತ್ ಶಿಬೇ ಅನ್ನಾರ್ಥ್ಯಹಮಸ್ಮೀತಿ। ತಮಬ್ರವೀತ್ ಶಿಬಿಃ ಕಿಂ ಕ್ರಿಯತಾಮಾಜ್ಞಾಪಯತು ಭವಾನಿತಿ ॥22॥
ಒಬ್ಬ ಬ್ರಾಹ್ಮಣನು ಶಿಬಿಯ ಬಳಿಗೆ ಬಂದು ನಾನು ಅನ್ನಾರ್ಥಿಯಾಗಿದ್ದೇನೆ ಎಂದು ಹೇಳಿದನು. ಅವನನ್ನು ಕುರಿತು ಶಿಬಿಯು ಏನು ಸಿದ್ಧಪಡಿಸಬೇಕೆಂದು ತಾವು ಆದೇಶವನ್ನು ನೀಡಿ ಎಂದು ಹೇಳಿದನು.
ಅಥೈನಂ ಬ್ರಾಹ್ಮಣೋಽಬ್ರವೀತ್। ಯ ಏಷ ತೇ ಪುತ್ರೋ ವೃಷದರ್ಭ(ಬೃಹದ್ಗರ್ಭ) ನಾಮಾ ಏಷ ಸಂಸ್ಕ್ರಿಯತಾಮ್।
ತ್ವಂ ಚೈನಂ ಸಂಜ್ಞಾಪ್ಯ ಸಂಸ್ಕೃತ್ಯ ಪಾತ್ರ್ಯಾಂ ಸ್ಥಾಪಯ
ತತೋಽಹಂ ಪ್ರತೀಕ್ಷ್ಯ ಇತಿ ॥23॥
ಆಗ ಬ್ರಾಹ್ಮಣನು ಅವನನ್ನು ಕುರಿತು ಈ ನಿನ್ನ ವೃಷದರ್ಭನೆಂಬ ಪುತ್ರನನ್ನು ಸಂಸ್ಕರಿಸು. ನೀನೇ ಅವನನ್ನು ವಧೆ ಮಾಡಿ ಅವನ ಮಾಂಸವನ್ನು ಸಿದ್ಧಪಡಿಸಿ ಒಂದು ಪಾತ್ರೆಯಲ್ಲಿ ಇಡು. ನಾನು ಅಲ್ಲಿಯವರೆಗೆ ನಿರೀಕ್ಷಿಸುತ್ತೇನೆ ಎಂದು ಹೇಳಿದನು.
ಅಥೋ ಪುತ್ರಂ ಸಂಜ್ಞಾಪ್ಯ ಸಂಸ್ಕೃತ್ಯ ಚಾವಿಮನಾ ಪಾತ್ರ್ಯಾಂ ವರ್ತಯಿತ್ವಾ ಶಿರಸಾ ಪ್ರಗೃಹ್ಯ ಬಹಿರ್ಮೃಗಯತೇ ॥24॥
ಆಗ ಶಿಬಿಯು ಪುತ್ರನನ್ನು ವಧೆ ಮಾಡಿ ವಿಷಾದಪಡದೇ ಅವನ ಮಾಂಸವನ್ನು ಸಂಸ್ಕರಿಸಿ ಒಂದು ಪಾತ್ರೆಯೊಳಗಿಟ್ಟು ಅದನ್ನು ತಲೆಯ ಮೇಲಿಟ್ಟುಕೊಂಡು ಹೊರಗೆ ಬ್ರಾಹ್ಮಣನನ್ನು ಹುಡುಕಿದನು.
ಅಥಾಸ್ಯಾಚಷ್ಟ ಕಶ್ಚಿನ್ ಮೃಗಯಮಾಣಸ್ಯ।
ಏಷ ಸ ಬ್ರಾಹ್ಮಣೋ ನಗರಂ ಪ್ರವಿಶ್ಯ ದಹತಿ ತೇ
ಗೃಹಂ ಕೋಷ್ಠಂ ಕೋಶಾಗರಮಾಯುಧಾಗಾರಂ
ಹಸ್ತ್ಯಾಗಾರಮಶ್ವಶಾಲಾಂ ಪ್ರಕ್ರುದ್ಧ ಇತಿ ॥25॥
ಬ್ರಾಹ್ಮಣನನ್ನು ಹುಡುಕುತ್ತಿದ್ದ ಅವನಿಗೆ ಆಗ ಯಾವನೋ ಒಬ್ಬನು ನೀನು ಹುಡುಕುತ್ತಿರುವ ಆ ಬ್ರಾಹ್ಮಣನು ನಗರವನ್ನು ಪ್ರವೇಶಿಸಿ ಕೋಪದಿಂದ ನಿನ್ನ ಅರಮನೆಯನ್ನೂ, ಅಂತರ್ಗೃಹವನ್ನೂ, ಕೋಶಾಗಾರವನ್ನೂ, ಆಯುಧಾಗಾರವನ್ನೂ, ಗಜಾಗಾರವನ್ನೂ,

ಅಶ್ವಶಾಲೆಯನ್ನೂ ಸುಡುತ್ತಿದ್ದಾನೆ ಎಂದು ಹೇಳಿದನು.
ಅಥ ಶಿಬಿರವಿಕೃತಮುಖವರ್ಣೋ ನಗರಂ ಪ್ರವಿಶ್ಯ
ಬ್ರಾಹ್ಮಣಂ ತಮಬ್ರವೀತ್ ಸಿದ್ಧಮನ್ನಂ ಭಗವನ್ನಿತಿ |
ಏವಮುಕ್ತೋ ಬ್ರಾಹ್ಮಣೋ ನ ಕಿಂಚಿ ತದ್ ವ್ಯಾಜಹಾರ | ಅವಾಙ್ಮುಖಶ್ಚಾಸೀತ್ ॥26॥
ಆಗ ಶಿಬಿಯು ತನ್ನ ಮುಖವರ್ಣದಲ್ಲಿ ಯಾವುದೇ ವ್ಯತ್ಯಾಸವನ್ನು ಮಾಡಿಕೊಳ್ಳದೇ ನಗರವನ್ನು ಪ್ರವೇಶಿಸಿ ಬ್ರಾಹ್ಮಣನನ್ನು ಕುರಿತು ಪೂಜ್ಯರೇ, ಅನ್ನವು ಸಿದ್ಧವಾಗಿದೆ ಎಂದು ಹೇಳಿದನು. ಈ ಮಾತನ್ನು ಕೇಳಿದ ಬ್ರಾಹ್ಮಣನು ಏನೂ ಮಾತನಾಡಲಿಲ್ಲ. ತಲೆಯನ್ನು ತಗ್ಗಿಸಿದನು.
ತತಃ ಪ್ರಸಾದ್ಯ ಬ್ರಾಹ್ಮಣಂ ಭಗವನ್ ಭುಜ್ಯತಾಮಿತಿ |
ಸ ಮುಹೂರ್ತಾದುದೀಕ್ಷ್ಯ ಶಿಬಿಮಬ್ರವೀತ್ ॥27॥
ಆಗ ಶಿಬಿಯು ಬ್ರಾಹ್ಮಣನನ್ನು ಪ್ರಸನ್ನೀಕರಿಸಿ ಪೂಜ್ಯರೇ, ಭೋಜನವನ್ನು ಮಾಡಿ ಎಂದು ಹೇಳಿದನು. ಆ ಬ್ರಾಹ್ಮಣನು ಒಂದು ಮುಹೂರ್ತವು ಕಳೆದ ಮೇಲೆ ಶಿಬಿಯನ್ನು ನೋಡಿ ಮಾತನಾಡಿದನು.
ಮಾಹಮತೀತೋ ಭೂತ್ವಾ ಏನಮುಪಭುಂಕ್ಷ್ವೇ ತ್ವಮೇವೈತದಶಾನೇತಿ | ಅಥ ಶಿಬಿಸ್ತಥೈವಾವಿಮನಾ ಅರ್ಚಯಿತ್ವಾ
ಕಪಾಲಮಭ್ಯುದ್ಧಾರ್ಯ ತಮ್ಯೈಚ್ಛದ್ ಭೋಕ್ತುಮ್ ॥28॥
ನೀನು ಆಹಾರವನ್ನು ತರುವುದು ತಡವಾದುದರಿಂದ ನಾನು ತಿನ್ನುವುದಿಲ್ಲ. ನೀನೇ ಅದನ್ನು ತಿನ್ನು. ಆಗ ಶಿಬಿಯು ಮನಸ್ಸಿನಲ್ಲಿ ಏನೂ ವಿಕಾರವನ್ನು ಮಾಡಿಕೊಳ್ಳದೆ ಬ್ರಾಹ್ಮಣನನ್ನು ಸತ್ಕರಿಸಿ ಪಾತ್ರೆಯನ್ನು ಎತ್ತಿ ತಿನ್ನಲು ಉದ್ಯುಕ್ತನಾದನು.
ಅಥಾಸ್ಯ ಬ್ರಾಹ್ಮಣೋ ಹಸ್ತಮಗೃಹ್ಣಾತ್ | ಅಬ್ರವೀಚ್ಚೈನಂ ಜಿತಕ್ರೋಧೋಽಸಿ | ನ ತೇ ಕಿಂಚಿತದಪರಿತ್ಯಾಜ್ಯಂ ಬ್ರಾಹ್ಮಣಾರ್ಥೇ |
ಬ್ರಾಹ್ಮಣೋಪಿ ತಂ ಮಹಾಭಾಗಂ ಸಭಾಜಯತ್ ॥29॥
ಆಗ ಬ್ರಾಹ್ಮಣನು ಅವನ ಕೈಯನ್ನು ಹಿಡಿದುಕೊಂಡನು ಮತ್ತು ಅವನನ್ನು ಕುರಿತು ರಾಜನೇ, ನೀನು ಕ್ರೋಧವನ್ನು ಗೆದ್ದಿದ್ದೀಯೆ. ಬ್ರಾಹ್ಮಣರ ಸಲುವಾಗಿ ಪರಿತ್ಯಾಗವನ್ನು ಮಾಡಲಾರದ ಯಾವ ವಸ್ತುವೂ ನಿನ್ನ ಬಳಿ ಇಲ್ಲ ಎಂದು ಹೇಳಿ ಆ ಬ್ರಾಹ್ಮಣನು ಮಹಾನುಭಾವನಾದ ಶಿಬಿಯನ್ನು ಸತ್ಕರಿಸಿದನು.
ಸ ಹ್ಯುದೀಕ್ಷಮಾಣಃ ಪುತ್ರಮಪಶ್ಯದಗ್ರೇ ತಿಷ್ಠಂತಂ ದೇವಕುಮಾರಮಿವಪುಣ್ಯಗಂಧಾನ್ವಿತಮಲಂಕೃತಮ್ |
ಸರ್ವಂ ಚೈತದರ್ಥಂ ವಿಧಾಯಾಥ ಸ ಬ್ರಾಹ್ಮಣೋಽಂತರಧೀಯತ ॥
ಶಿಬಿಯು ಮುಖವನ್ನು ಮೇಲಕ್ಕೆ ಎತ್ತಿ ತನ್ನ ಮುಂಭಾಗದಲ್ಲಿ ದೇವಕುಮಾರನಂತೆ ಪುಣ್ಯಗಂಧದಿಂದ ಕೂಡಿ ಅಲಂಕೃತನಾಗಿ ನಿಂತಿರುವ ತನ್ನ ಪುತ್ರನನ್ನು ನೋಡಿದನು. ಈ ಎಲ್ಲ ಕಾರ್ಯವನ್ನೂ ಮಾಡಿ ಆ ಬ್ರಾಹ್ಮಣನು ಅಂತರ್ದಾನವನ್ನು ಹೊಂದಿದನು.
ತಸ್ಯ ರಾಜರ್ಷೇರ್ವಿಧಾತಾ ತೇನೈವ ವೇಷೇಣ
ಪರೀಕ್ಷಾರ್ಥಮಾಗತ ಇತಿ ॥31॥
ರಾಜರ್ಷಿಯಾದ ಶಿಬಿಯನ್ನು ಪರೀಕ್ಷೆ ಮಾಡಲು ಸಲುವಾಗಿ ವಿಧಿಯೇ ಆ ರೂಪದಲ್ಲಿ ಬಂದಿದ್ದನು.
ತಸ್ಮಿನ್ನಂತರ್ಹಿತೇ ಅಮಾತ್ಯಾ ರಾಜಾನಮೂಚುಃ |
ಕಂ ಪಶ್ಯತಾ ಮೈವಂ ಜೀವಂತೀಯಕಂ ಕೃತಮಿತಿ ॥32॥
ಆ ಬ್ರಾಹ್ಮಣನು ಅಂತರ್ಧಾನವನ್ನು ಹೊಂದಲು ಅಮಾತ್ಯರು ರಾಜನನ್ನು ಕುರಿತು ಯಾವ ಪುರುಷಾರ್ಥವನ್ನು ಗಮನಿಸಿ ಇಂತಹ ಪುತ್ರಹನನಾದಿ ಕಾರ್ಯವನ್ನು ಮಾಡಿದೆ? ಹೀಗೆ ನಿನ್ನಂತೆ ಯಾರೂ ಜೀವಿಸುವುದಿಲ್ಲ ಎಂದು ಹೇಳಿದರು.
ಶಿಬಿಃ
ನೈವಾಹಮೇತದ್ ಯಶಸೇ ದದಾನಿ
ನ ಭೂತಿಮಿಚ್ಛನ್ ನ ಚ ಭೋಗತೃಷ್ಣಯಾ |
ಶಿಷ್ಟೈಃ ಸದಾ ಸೇವಿತ ಏಷ ಮಾರ್ಗ
ಇತ್ಯೇವಮೇತತ್ ಸಕಲಂ ಕರೋಮಿ |
ಪಾಪೈರನಾಸೇವಿತ ಏಷ ಮಾರ್ಗಃ
ತಸ್ಮಾತ್ ಪ್ರದಾನಾದ್ ಧ್ರಿಯತೇ ಮತಿರ್ಮೇ ॥33॥
ಶಿಬಿಯು ಹೇಳಿದನು. ನಾನು ಇದನ್ನು ಕೀರ್ತಿಗಾಗಿ ಮಾಡುವುದಿಲ್ಲ. ಐಶ್ವರ್ಯವನ್ನು ಬಯಸಿ ಮಾಡುವುದಿಲ್ಲ ಮತ್ತು ಭೋಗದ ಆಸೆಯಿಂದಲೂ ಮಾಡುವುದಿಲ್ಲ. ಇದು ಶಿಷ್ಟರಿಂದ ಯಾವಾಗಲೂ ಸೇವಿತವಾದ ಮಾರ್ಗವೆಂದು ತಿಳಿದು ಇವೆಲ್ಲವನ್ನೂ ಮಾಡುತ್ತೇನೆ. ಈ ಮಾರ್ಗವು ಪಾಪಿಗಳಿಂದ ಸೇವಿತವಾದುದಲ್ಲ. ಆದ್ದರಿಂದ ಇಂತಹ ದಾನದಿಂದ ನನ್ನ ಬುದ್ಧಿಯು ಸ್ಥಿರವಾಗಿದೆ.
ನಾರದಃ
ಏತಾಚ್ಛಿಬೇರ್ಮಹಾಭಾಗ್ಯಂ ತಸ್ಮಾದವತರೇಯಂ ಶಿಬಿರ್ಯಾಯಾದಿತಿ॥
ನಾರದ ಆಗ ನಾರದರು ಇದು ಶಿಬಿಯ ಮಹಾಭಾಗ್ಯ. ಆದ್ದರಿಂದ ನಾನೇ ರಥದಿಂದ ಇಳಿಯುತೆತೇನೆ. ಶಿಬಿಯು ರಥದಿಂದ ಮುಂದೆ ಸಾಗಲಿ ಎಂದು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಡಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಖ್ಯಾಪರ್ವಣಿ ರಾಜಮಹಾತ್ಮ್ಯೇ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಆರನೆಯ ಅಧ್ಯಾಯ ಮುಗಿಯಿತು
* * * *

ಇನ್ನೂರ ಏಳನೆಯ ಅಧ್ಯಾಯ
ಮಾರ್ಕಂಡೇಯರಿಂದ ಬಕಮುನಿಗಳ ಮಾಹಾತ್ಮ್ಯದ ಕಥನ. ಇಂದ್ರ-ಬಕ ಸಮಾಗಮ ಮತ್ತು ಚಿರಜೀವಿಗಳ ಕ್ಲೇಶಗಳ ಕಥನ.
ವೈಶಂಪಾಯನಃ
ಮಾರ್ಕಂಡೇಯಮೃಷಯಃ ಪಾಂಡವಾಶ್ಚ ಪರ್ಯಪೃಚ್ಛನ್
ಕೇನ ದೀರ್ಘಾಯುರಾಸೀದ್ ಬಕ ಇತಿ ॥1॥
ವೈಶಂಪಾಯನ ಪಾಂಡವರು ಮತ್ತು ಋಷಿಗಳು ಮಾರ್ಕಂಡೇಯರನ್ನು ಕುರಿತು ಯಾವ ಕಾರಣದಿಂದ ಬಕಮುನಿಗಳು ದೀರ್ಘಾಯುಷ್ಯವುಳ್ಳವರಾದರು ಎಂದು ಕೇಳಿದರು.
ಮಾರ್ಕಂಡೇಯಃ
ಋಷಿಃ ಕಿಲ ದೀರ್ಘಾಯುಸ್ತು ಬಕೋ ರಾಜನ್ ನಾತ್ರ ಕಾರ್ಯಾ ವಿಚಾರಣಾ |
ಕಿಮಶ್ರುತಂ ಭವತೇದಂ ಕಾಲಾಂತರೇ ಕ್ವಚಿತ್ ॥2॥
ಮಾರ್ಕಂಡೇಯ ರಾಜನೇ, ಬಕ ಋಷಿಗಳು ದೀರ್ಘಾಯುಷ್ಯವುಳ್ಳವರು. ಇದರಲ್ಲಿ ಸಂಶಯಪಡಬೇಕಾಗಿಲ್ಲ. ನೀನು ಈ ವಿಷಯವನ್ನು ಹಿಂದೆ ಯಾವಾಗಲೂ ಕೇಳಿರಲಿಲ್ಲವೇ?
ವೈಶಂಪಾಯನಃ
ಏತತ್ ಶ್ರುತ್ವಾ ತು ಕೌಂತೇಯೋ ಧರ್ಮರಾಜೋ ಯುಧಿಷ್ಠಿರಃ |
ಮಾರ್ಕಂಡೇಯಂ ಮಹಾಭಾಗಂ ಕೃತಕಾಲಮಭಾಷತ ॥3॥
ವೈಶಂಪಾಯನ ಇದನ್ನು ಕೇಳಿದ ಕುಂತೀಪುತ್ರನಾದ ಧರ್ಮರಾಜನಾದ ಯುಧಿಷ್ಠಿರನು ಮಹಾನುಭಾವರಾದ ಮಾರ್ಕಂಡೇಯರನ್ನು ಕುರಿತು ಯೋಗ್ಯಕಾಲದಲ್ಲಿ ಮಾತನಾಡಿದನು.
ಶ್ರೂಯತೇ ಹಿ ಮಹಾಭಾಗ ಬಕೋಽಲ್ಪಾಲ್ಪೋ ಮಹಾಯಶಾಃ |
ಪ್ರಿಯಃ ಸಖಾ ಚ ಶಕ್ರಸ್ಯ ಚಿರಂಜೀವೀ ಚ ಸತ್ತಮ ॥4॥
ಮಹಾನುಭಾವರೇ, ಸಜ್ಜನರಲ್ಲಿ ಶ್ರೇಷ್ಠರಾದವರೇ, ಬಕರು ಮಹಾಕೀರ್ತಿವಂತರೆಂದೂ, ಅಲ್ಪಾಹಾರಿಗಳೆಂದೂ, ಇಂದ್ರನ ಪ್ರಿಯಸ್ನೇಹಿತರೆಂದೂ, ಚಿರಜೀವಿಗಳೆಂದೂ ಕೇಳಿದ್ದೇವೆ.
ಏತದಿಚ್ಛಾಮಿ ಭಗವನ್ ಬಕಸ್ಯೇಂದ್ರಸಮಾಗಮಮ್ |
ಸುಖದುಃಖಸಮಾಯುಕ್ತಂ ತತ್ತ್ವೇನ ಕಥಿತಂ ತ್ವಯಾ ॥5॥
ಪೂಜ್ಯರೇ, ಸುಖದುಃಖಸಮಾಯುಕ್ತವಾದ ಈ ಬಕ-ಇಂದ್ರರ ಸಮಾಗಮವನ್ನು ನಿಮ್ಮಿಂದ ಸರಿಯಾಗಿ ಹೇಳಲ್ಪಟ್ಟಿದ್ದನ್ನು ನಾನು ಕೇಳಲು ಬಯಸುತ್ತೇನೆ.
ಮಾರ್ಕಂಡೇಯಃ
ವೃತ್ತೇ ದೇವಾಸುರೇ ರಾಜನ್ ಸಂಗ್ರಾಮೇ ರೋಮಹರ್ಷಣೇ |
ತ್ರಯಾಣಾಮಪಿ ಲೋಕಾನಾಮಿಂದ್ರೋ ಲೋಕಾಧಿಪೋಽಭವತ್ ॥6॥
ಮಾರ್ಕಂಡೇಯ ರಾಜನೇ, ರೋಮಾಂಚಕಾರಿಯಾದ ದೇವಾಸುರ ಯುದ್ಧವು ಮುಗಿಯುತ್ತಿರಲು ಮೂರುಲೋಕಗಳಿಗೂ ಇಂದ್ರನು ಅಧಿಪತಿಯಾದನು.
ಸಮ್ಯಗ್ ವರ್ಷತಿ ಪರ್ಜನ್ಯಃ ಸಸ್ಯಸಂಪದ ಉತ್ತಮಾಃ |
ನಿರಾಮಯಾಃ ಸುಧರ್ಮಿಷ್ಠಾಃ ಪ್ರಜಾ ಧರ್ಮಪರಾಯಣಾಃ ॥7॥
ಪರ್ಜನ್ಯನು ಸರಿಯಾಗಿ ಮಳೆಯನ್ನು ಸುರಿಸುತ್ತಿದ್ದನು. ಸಸ್ಯಸಂಪತ್ತುಗಳು ಶ್ರೇಷ್ಠವಾಗಿದ್ದವು. ಪ್ರಜೆಗಳು ರೋಗರುಜಿನಗಳಿಲ್ಲದೆ ಒಳ್ಳೆಯ ಧರ್ಮಪರಾಯಣರು ಮತ್ತು ಒಳ್ಳೆಯ ಧರ್ಮಿಷ್ಠರೂ ಆಗಿದ್ದರು.
ತಾಃ ಪ್ರಜಾ ಮುದಿತಾಃ ಸರ್ವಾ ದೃಷ್ಟ್ವಾ ಬಲನಿಷೂದನಃ |
ತತಸ್ತು ಮುದಿತೋ ರಾಜನ್ ದೇವರಾಜಃ ಶತಕ್ರತುಃ ॥8॥
ಐರಾವತಮಥಾರುಹ್ಯ ಶ್ವೇತಂ ಗಜವರೋತ್ತಮಮ್ |
ಲೋಕಂ ಸಮಾನಮಾಸ್ಥಾಯ ದದರ್ಶ ಮುದಿತಾಃ ಪ್ರಜಾಃ ॥9॥
ಎಲೈ ರಾಜನೇ, ಪ್ರಜೆಗಳು ಸಂತೋಷದಲ್ಲಿರುವುದನ್ನು ನೋಡಿದ ಬಲನಿಷೂದನನಾದ ಶತಕ್ರತುವಾದ ದೇವರಾಜನು ಸಂತೋಷದಿಂದ ಕೂಡಿದವನಾಗಿ ಶ್ರೇಷ್ಠಗಜವಾದ ಐರಾವತವನ್ನು ಏರಿ ಪ್ರಜೆಗಳ ಸಮಾನವಾದ ಲೋಕಕ್ಕೆ ಬಂದು ಸಂತೋಷಗೊಂಡ ಪ್ರಜೆಗಳನ್ನು ನೋಡಿದನು.
ಆಶ್ರಮಾಣಿ ಚ ಪುಣ್ಯಾನಿ ನದೀಃ ಶೈಲಾನ್ ಸರಾಂಸಿ ಚ |
ನಗರಾಣಿ ಸಮೃದ್ಧಾನಿ ನಾನಾಜನಪದಾನಿ ಚ |
ಪ್ರಜಾಪಾಲನವೃತ್ತಾಂಶ್ಚ ನರೇಂದ್ರಾನ್ ಧರ್ಮಚಾರಿಣಃ ॥10॥
ಪವಿತ್ರವಾದ ಆಶ್ರಮಗಳು, ನದಿಗಳು, ಪರ್ವತಗಳು, ಸರೋವರಗಳು, ಸಮೃದ್ಧವಾದ ನಗರಗಳು, ನಾನಾಜನಪದಗಳು, ಪ್ರಜಾಪಾಲನತತ್ಪರರಾದ ಧರ್ಮಚಾರಿಗಳಾದ ರಾಜರುಗಳು (ಇವರನ್ನು ನೋಡಿದನು).
ಉದಪಾನ ಪ್ರಪಾಕೂಪಾತಟಾಕಾರಾಮ ಸಂಕುಲಾಮ್ |
ನಾನಾಜನಪದಾಕೀರ್ಣಾಂ ಬ್ರಹ್ಮಚಾರಿನಿಷೇವಿತಾಮ್ ॥11॥
ಯಜ್ಞೋತ್ಸವವತೀಂ ದೇವೀಂ ಸಾಗರಾಂತಾಂ ಸಮೇಖಲಾಮ್ |
ಬಹುವ್ರತಸಮಾಚಾರೈಃ ಸೇವಿತಾಂ ದ್ವಿಜಸತ್ತಮೈಃ ॥12॥

ಕೆರೆ, ಬಾವಿ ಮತ್ತು ಸರೋವರಗಳು, ಉದ್ಯಾನವನಗಳು ಮತ್ತು ಮಂಟಪಗಳಿಂದ ಕೂಡಿದ ಅನೇಕ ಜನಪದರಿಂದ ತುಂಬಿದ ಬ್ರಹ್ಮಚಾರಿಗಳಿಂದ ಸೇವಿಸಲ್ಪಟ್ಟ ಬಹುವ್ರತಧಾರಿಗಳಾದ, ದ್ವಿಜಶ್ರೇಷ್ಠರಿಂದ ಸೇವಿಸಲ್ಪಟ್ಟ ಯಜ್ಞೋತ್ಸವವನ್ನುಳ್ಳ ಸಾಗರಾಂತವಾದ ಮೇಖಲಾಲಂಕೃತವಾದ ಭೂಮಿಯನ್ನು ನೋಡಿದನು.
ಅಥ ರಮ್ಯೇ ಶಿವೇ ದೇಶೇ ಬಹುವೃಕ್ಷಸಮಾಕುಲೇ |
ಪೂರ್ವಸ್ಯಾಂ ದಿಶಿ ರಮ್ಯಾಯಾಂ ಸಮುದ್ರಮಭಿತೋಽಭವತ್ ॥13॥
ತತ್ರಾಶ್ರಮಪದಂ ರಮ್ಯಂ ಮೃಗಪಕ್ಷಿನಿಷೇವಿತಮ್ |
ದದರ್ಶ ಶಕ್ರಃ ಸ ಮಹದ್ ಬಕಸ್ಯ ಸುಮಹಾತ್ಮನಃ ॥14॥
ಅಲ್ಲಿ ಮನೋಹರವಾದ ಪೂರ್ವದಿಕ್ಕಿನಲ್ಲಿ ಸಮುದ್ರದ ಸಮೀಪದಲ್ಲಿ ಅನೇಕ ವೃಕ್ಷಗಳಿಂದ ಕೂಡಿದ ಮನೋಹರವಾದ ಮಂಗಳವಾದ ಪ್ರದೇಶದಲ್ಲಿ ಅನೇಕ ಮೃಗಪಕ್ಷಿಗಳಿಂದ ಸೇವಿತವಾದ ಮನೋಹರವಾದ ಮಹಾತ್ಮರಾದ ಬಕರ ದೊಡ್ಡ ಆಶ್ರಮಸ್ಥಾನವನ್ನು ಇಂದ್ರನು ನೋಡಿದನು.
ತತ್ರಾವತೀರ್ಯ ಭಗವಾನ್ ಶಕ್ರೋ ದಿತಿಜಸೂದಃ |
ಪ್ರವಿವೇಶ ಮಹಾಪುಣ್ಯಂ ತಪೋವನಮನುತ್ತಮಮ್ ॥15॥
ಪೂಜ್ಯನಾದ ಮತ್ತು ದೈತ್ಯಸಂಹಾರಿಯಾದ ಇಂದ್ರನು ಅಲ್ಲಿ ಇಳಿದು ಶ್ರೇಷ್ಠವಾದ ಮತ್ತು ಮಹಾಪುಣ್ಯಪ್ರದವಾದ ಆ ತಪೋವನವನ್ನು ಪ್ರವೇಶಿಸಿದನು.
ಬಕಃ ಸುರಪತಿಂ ದೇವಂ ಪೂಜಯಾಮಾಸ ಸತ್ತಮಃ |
ಸುಖೋಪವಿಷ್ಟೋ ವರದ ಇಂದ್ರೋಬಲನಿಷೂದನಃ ॥16॥
ತತಃ ಪ್ರಶ್ನಂ ಬಕಂ ದಾಲ್ಭ್ಯಮುವಾಚ ಕುರುನಂದನ |
ಸಜ್ಜನರಲ್ಲಿ ಶ್ರೇಷ್ಠರಾದ ಬಕರು ಸುರಪತಿಯಾದ ಇಂದ್ರನನ್ನು ಸತ್ಕರಿಸಿದರು. ಎಲೈ ಕುರುನಂದನನೇ, ಬಲನಿಷೂದನನಾದ, ವರಪ್ರದನಾದ ಇಂದ್ರನು ಸುಖಾಸೀನನಾಗಿ ದಲ್ಭಋಷಿಗಳ ಮಕ್ಕಳಾದ ಬಕರನ್ನು ಕುರಿತು ಈ ಪ್ರಶ್ನೆಯನ್ನು ಮಾಡಿದನು.
ಶತಂ ವರ್ಷಸಹಸ್ರಾಣಾಂ ಮುನೇ ಜಾತಸ್ಯ ತೇ ಬಕ |
ಆಖ್ಯಾಹಿ ತನ್ಮಮ ಬ್ರಹ್ಮನ್ ಕಿಂದುಃಖಂ ಚಿರಜೀವಿತಮ್ ॥17॥
ಎಲೈ ಬಕಋಷಿಗಳೇ, ನೀವು ಹುಟ್ಟಿ ನೂರುಸಾವಿರವರ್ಷಗಳು ಕಳೆದಿವೆ. ಬ್ರಾಹ್ಮಣರೇ ಚಿರಜೀವಿಗಳಿಗೆ ಏನು ದುಃಖವೆಂದು ನನಗೆ ನಿರೂಪಿಸಿ (ಎಂದು ಹೇಳಿದನು).
ಬಕಃ
ಪುತ್ರನಾಶೋಽರ್ಥನಾಶಶ್ಚ ಜ್ಞಾತೀನಾಂ ಸುಹೃದಾಂ ತಥಾ |
ಪರೇಷ್ವಾಯತ್ತತಾ ಚೈವ ಕಿಂನು ದುಃಖಮತಃ ಪರಮ್ ॥18॥
ಬಕ ಪುತ್ರನಾಶ, ದ್ರವ್ಯನಾಶ, ಜ್ಞಾತಿಗಳ ಮತ್ತು ಸ್ನೇಹಿತರ ನಾಶ, ಪರಾಧೀನತೆ ಇವುಗಳಿಗಿಂತ ದೊಡ್ಡ ದುಃಖ ಯಾವುದಿದೆ?
ನಾನ್ಯದ್ ದುಃಖತರಂ ಕಿಂಚಿಲ್ಲೋಕೇಽಸ್ಮಿನ್ ಪ್ರತಿಭಾತಿ ಮೇ |
ಅರ್ಥೈರ್ವಿಹೀನಃ ಪುರುಷೋಯಃ ಪರೈರಭಿಭೂಯತೇ ॥19॥
ಅರ್ಥವಿಹೀನನಾದ ಪುರುಷನು ಇನ್ನೊಬ್ಬರಿಂದ ಅವಮಾನಪಡಿಸಲ್ಪಡುವುದಕ್ಕಿಂತ ದೊಡ್ಡ ದುಃಖವು ಈ ಲೋಕದಲ್ಲಿ ನನಗೆ ಯಾವುದೂ ಕಾಣುವುದಿಲ್ಲ.
ಅಕುಲಾನಾಂ ಕುಲೀಭಾವಂ ಕುಲಾನಾಂ ಚಾಕುಲಕ್ರಿಯಾ |
ಸಂಯೋಗಾನ್ ವಿಪ್ರಯೋಗಾಂಶ್ಚ ಪಶ್ಯಂತಿ ಚಿರಜೀವಿನಃ ॥20॥
ಕುಲೀನರಲ್ಲದವರು ಒಳ್ಳೆಯ ಕುಲದಲ್ಲಿ ಬರುತ್ತಾರೆ. ಒಳ್ಳೆಯ ಕುಲಗಳು ಕುಲಕ್ಕೆ ಅಯೋಗ್ಯವಾದ ಕ್ರಿಯೆಗಳನ್ನು ಮಾಡುತ್ತವೆ. ಬಹುಕಾಲ ಬದುಕುವವನು ಅನಿಷ್ಟ ಸಂಯೋಗವನ್ನೂ ಮತ್ತು ಇಷ್ಟ ವಿಯೋಗವನ್ನೂ ನೋಡುತ್ತಾನೆ.
ಅಪಿ ಪ್ರತ್ಯಕ್ಷಮೇವೈತತ್ ತವ ದೇವ ಶತಕ್ರತೋ |
ಅಸುರಾಣಾಂ ಸಮೃದ್ಧಾನಾಂ ಕಥಿತಃ ಕಾಲಪರ್ಯಯಃ ॥21॥
ಎಲೈ ದೇವನಾದ ಶತಕ್ರತುವೇ, ಇವೆಲ್ಲವೂ ನಿನಗೆ ಪ್ರತ್ಯಕ್ಷವಾದ ವಿಷಯ. ಸಮೃದ್ಧರಾದ ಅಸುರರಿಗೂ ಕಾಲದಲ್ಲಿ ವಿಪರ್ಯಯವುಂಟಾಗುತ್ತದೆ ಎಂದು ಹೇಳಲ್ಪಟ್ಟಿದೆಯಷ್ಟೆ.
ದೇವದಾನವಗಂಧರ್ವಾಃ ಕಿನ್ನರೋರಗಮಾನುಷಾಃ |
ಪ್ರಾಪ್ನುವಂತಿ ವಿಪರ್ಯಾಸಂ ಕಿಂ ನು ದುಃಖತರಃ ತತಃ ॥22॥
ದೇವದಾನವಗಂಧರ್ವರು ಕಿನ್ನರೋರಗಮನುಷ್ಯರು ಎಲ್ಲರೂ ವಿಪರ್ಯಾಸವನ್ನು ಹೊಂದುತ್ತಾರೆ. ಅದಕ್ಕಿಂತ ದೊಡ್ಡ ದುಃಖವು ಯಾವುದು?
ಕುಲೇಜಾತಾಶ್ಚ ದೃಶ್ಯಂತೇ ದೌಷ್ಕುಲೇಯಾಸ್ತಥಾ ನರಾಃ |
ಆಢ್ಯಾ ದರಿದ್ರಾಶ್ಚಾಕ್ರಾಂತಾಃ ಕಿಂನು ದುಃಖತರಂ ತತಃ ॥23॥
ದುಷ್ಕುಲದಲ್ಲಿ ಹುಟ್ಟಬೇಕಾದ ಮನುಷ್ಯರು ಒಳ್ಳೆಯ ಕುಲದಲ್ಲಿ ಜನಿಸುವುದು ಕಾಣುತ್ತದೆ. ಆಢ್ಯರು ದರಿದ್ರರಾಗುತ್ತಾರೆ. ಇನ್ನೊಬ್ಬರ ಆಕ್ರಮಕ್ಕೆ ಒಳಪಡುತ್ತಾರೆ. ಅದಕ್ಕಿಂತ ದೊಡ್ಡ ದುಃಖವು ಯಾವುದು?
ಕುಲೇ ಜಾತಾಶ್ಚ ಕ್ಲಿಶ್ಯಂತೇ ದೌಷ್ಕುಲೇಯವಶಾನುಗಾಃ |
ಆಢ್ಯೈರ್ದರಿದ್ರಾಽವಮತಾಃ ಕಿಂನು ದುಃಖತರಂ ತತಃ ॥24॥
ಒಳ್ಳೆಯ ಕುಲದಲ್ಲಿ ಹುಟ್ಟಿದವರು ದುಷ್ಕುಲಪ್ರಸೂತರಿಗೆ ಅಧೀನರಾಗಿ ಕ್ಲೇಶವನ್ನು ಪಡುತ್ತಾರೆ. ಧನಾಢ್ಯರಿಂದ ಧನವಿಲ್ಲದವರು

ಅವಮಾನವನ್ನು ಅನುಭವಿಸುತ್ತಾರೆ. ಅದಕ್ಕಿಂತ ದೊಡ್ಡ ದುಃಖವು ಯಾವುದು?
ಬಹ್ವನರ್ಥಮಯೋ ಲೋಕೋ ದೃಶ್ಯತೇ ಶತ್ರುಸೂದನ |
ಹೀನ ಜ್ಞಾನಾಶ್ಚ ಹೃಷ್ಯಂತೇ ಕ್ಲಿಶ್ಯಂತೇ ಪ್ರಾಜ್ಞಕೋವಿದಾಃ ॥25॥
ಎಲೈ ಶತ್ರುಸೂದನನೇ, ಲೋಕದಲ್ಲಿ ಬಹಳ ಅನರ್ಥಗಳು ಕಂಡುಬರುತ್ತವೆ. ಜ್ಞಾನಹೀನರು ಸಂತೋಷದಿಂದ ಮೆರೆಯುತ್ತಾರೆ. ಪ್ರಾಜ್ಞರು ಮತ್ತು ಕೋವಿದರು ಕ್ಲೇಶವನ್ನು ಅನುಭವಿಸುತ್ತಾರೆ.
ಲೋಕೇ ವೈಧರ್ಮ್ಯಮೇತತ್ ತು ದೃಶ್ಯತೇ ಬಹುವಿಸ್ತರಮ್ |
ಮಹದ್ದುಃಖತರಕ್ಲೇಶಂ ಮಾನುಷ್ಯಮಿಹ ದೃಶ್ಯತೇ ॥26॥
ಲೋಕದಲ್ಲಿ ಈ ವಿರುದ್ಧ ಧರ್ಮಗಳು ಬಹಳ ವಿಸ್ತಾರವಾಗಿ ಕಂಡುಬರುತ್ತವೆ. ಮನುಷ್ಯರಿಗಂತೂ ಬಹಳ ದುಃಖಗಳು ಮತ್ತು ಕ್ಲೇಶಗಳು ಉಂಟಾಗುವುದು ಕಂಡುಬರುತ್ತದೆ.
ಇಂದ್ರಃ
ಪುನರೇವ ಮಹಾಭಾಗ ಸಪ್ತರ್ಷಿಗಣಸನ್ನಿಭ |
ಆಖ್ಯಾಹಿ ತ್ವಂ ಮಮ ಬ್ರಹ್ಮನ್ ಕಿಂ ದುಃಖಂ ಚಿರಜೀವಿನಾಮ್ ॥27॥
ಇಂದ್ರ ಸಪ್ತರ್ಷಿಗಣಕ್ಕೆ ಸಮಾನವಾದ ಕಾಂತಿಯನ್ನು ಹೊಂದಿದ ಮಹಾನುಭಾವರಾದ ವಿಪ್ರರೇ, ಪುನಃ ನನಗೆ ಚಿರಜೀವಿಗಳಿಗೆ ಏನು ದುಃಖವೆಂದು ಹೇಳಿ.
ಬಕಃ
ಅಪ್ರಿಯೈಃ ಸಹ ಸಂವಾಸಃ ಪ್ರಿಯೈಶ್ಚಾಪಿ ವಿನಾ ಭವಃ |
ಆಪದ್ಭಿಃ ಸಂಪ್ರಯೋಗಶ್ಚ ತದ್ ದುಃಖಂ ಚಿರಜೀವಿನಾಮ್ ॥28॥
ಬಕ ಅಪ್ರಿಯರ ಜೊತೆಯಲ್ಲಿ ವಾಸ, ಪ್ರಿಯರಿಲ್ಲದೇ ಜೀವನ, ಆಪತ್ತುಗಳ ಸಂಯೋಗ ಇದು ಚೀರಜೀವಿಗಳ ದುಃಖ.
ಪುತ್ರನಾಶೋಽರ್ಥನಾಶಶ್ಚ ಜ್ಞಾತೀನಾಂ ಸುಹೃದಾಂ ತಥಾ |
ಪರೇಷ್ವಾಯತ್ತತಾ ಚೈವ ಕಿಂ ನು ದುಃಖಮತಃ ಪರಮ್ ॥29॥
ಪುತ್ರನಾಶ, ಅರ್ಥನಾಶ, ಬಾಂಧವರ ಮತ್ತು ಸ್ನೇಹಿತರ ನಾಶ ಮತ್ತು ಪರಾಧೀನತೆ ಇದಕ್ಕಿಂತ ದೊಡ್ಡ ದುಃಖವು ಯಾವುದು?
ನಾನ್ಯದ್ ದುಃಖತರಂ ಕಿಂಚಿಲ್ಲೋಕೇಽಸ್ಮಿನ್ ಪ್ರತಿಭಾತಿ ಮೇ |
ಅರ್ಥೈರ್ವಿಹೀನಃ ಪುರುಷೋ ಯತ್ ಪರೈರಭಿಭೂಯತೇ ॥30॥
ಧನಹೀನನಾದ ಪುರುಷನು ಇನ್ನೊಬ್ಬನಿಂದ ಅವಮಾನಕ್ಕೆ ಒಳಗಾಗುವುದಕ್ಕಿಂತ ಹೆಚ್ಚಿನ ಇನ್ನೊಂದು ದುಃಖವು ನನಗೆ ಈ ಲೋಕದಲ್ಲಿ ಕಾಣುವುದಿಲ್ಲ.
ಅಷ್ಟಮೇ ನವಮೇ ವಾಽಪಿ ಯಃ ಶಾಕಂ ಪಚತೇ ಗೃಹೇ |
ಕುಮಿತ್ರಾಣ್ಯವ್ಯಪಾಶ್ರಿತ್ಯ ಕಿಂ ವೈ ಸುಖತರಂ ತತಃ ॥31॥
ಕೆಟ್ಟ ಸ್ನೇಹಿತರನ್ನು ಆಶ್ರಯಿಸದೆ ಹಗಲಿನ ಎಂಟನೆಯ ಅಥವಾ ಒಂಭತ್ತನೆಯ ಭಾಗದಲ್ಲಿ ಯಾರು ಮನೆಯಲ್ಲಿ ತರಕಾರಿಯನ್ನು ಬೇಯಿಸಿಕೊಂಡು ತಿನ್ನುತ್ತಾರೋ ಅದಕ್ಕಿಂತ ಸುಖಕರವಾದುದು ಯಾವುದಿದೆ?
ದಿನಾನಿ ನಾಸ್ಯ ಗಣ್ಯಂತೇ ನೈನಮಾಹುರ್ಮಹಾಶನಮ್ |
ಅಪಿ ಶಾಕಂ ಪಚಾನಸ್ಯ ಸ್ವಗೃಹೇ ಪರಮಂ ಸುಖಮ್ ॥32॥
ಯಾರು ತನ್ನ ಮನೆಯಲ್ಲಿ ತರಕಾರಿಯನ್ನು ಬೇಯಿಸಿಕೊಂಡು ಜೀವಿಸುತ್ತಾನೆಯೋ ಅವನ ದಿನಗಳನ್ನು ಯಾರೂ ಎಣಿಸುವುದಿಲ್ಲ (ಇನ್ನೊಬ್ಬರ ಮನೆಗೆ ಹೋದರೆ ಇಷ್ಟು ದಿನವಾಯಿತು ಎಂದು ಎಣಿಸುತ್ತಾರೆ). ಅವನನ್ನು ಬಹಳ ಊಟ ಮಾಡುವವನು ಎಂದು ಯಾರೂ ಹೇಳುವುದಿಲ್ಲ. ಸ್ವಗೃಹದಲ್ಲಿಯೇ ಪರಮಸುಖವಿದೆ.
ಆರ್ಜಿತಂ ಸ್ವೇನ ವೀರ್ಯೇಣ ಅನಪಾಶ್ರಿತ್ಯ ಬಾಂಧವಾನ್ |
ಫಲಮೂಲಮಪಿ ಶ್ರೇಯೋ ಭುಕ್ತಂ ಹ್ಯಕೃಪಣಂ ಸತಾಮ್ ॥33॥
ಬಂಧುಗಳನ್ನು ಆಶ್ರಯಿಸದೆ ತನ್ನ ಸಾಮರ್ಥ್ಯದಿಂದ ಸಂಪಾದಿಸಿದ ಫಲಮೂಲಗಳನ್ನು ಭುಂಜಿಸಿದರೂ ಸಹ ಅದು ಸಜ್ಜನರಿಗೆ ಶ್ರೇಯಸ್ಕರವಾದುದು ಮತ್ತು ಕಾರ್ಪಣ್ಯರಹಿತವಾದುದು.
ಪರಸ್ಯ ಚ ಗೃಹೇ ಭುಕ್ತಂ ಪರಿಭೂತಸ್ಯ ನಿತ್ಯಶಃ |
ಸುಮೃಷ್ಟಮಪಿ ನ ಶ್ರೇಯೋ ವಿಕಲ್ಪಸಮಂ ಸತಾಮ್ ॥34॥
ನಿತ್ಯವೂ ಅವಮಾನಿತನಾಗಿ ಪರಗೃಹದಲ್ಲಿ ಮೃಷ್ಟಾನ್ನವನ್ನು ಭುಂಜಿಸಿದರೂ ಅದು ಸಜ್ಜನರಿಗೆ ಶ್ರೇಯಸ್ಕರವಲ್ಲ. ಅದು ವಿಷಕ್ಕೆ ಸಮಾನವಾದುದು.
ಲಾಲಪ್ಯಮಾನೋ ಭುಂಜತಿ ಯಃ ಪರಸ್ಯ ಗೃಹೇ ಸದಾ |
ಧಿಗಸ್ಯ ತಸ್ಯ ತದ್ ವೃತ್ತಂ ಕೃಪಣಸ್ಯ ದುರಾತ್ಮನಃ ॥35॥
ಯಾವನು ಪರಗೃಹದಲ್ಲಿ ಯಾವಾಗಲೂ ಬಹಳ ಮಾತನಾಡುತ್ತಾ ಊಟ ಮಾಡುತ್ತಾನೆಯೋ ಅಂತಹ ದುರಾತ್ಮನಾದ ಜಿಪುಣನ ನಡತೆಗೆ ಧಿಕ್ಕಾರವಿರಲಿ.
ಶ್ವವದ್ದಿ ಲೋಲುಪೋ ಯಸ್ತು ಪರಾನ್ನ ಭೋಕ್ತುಮಿಚ್ಛತಿ ॥
ಧಿಗಸ್ತು ತಸ್ಯ ತದ್ ಭುಕ್ತಂ ಕೃಪಣಸ್ಯ ದುರಾತ್ಮನಃ ॥36॥
ಯಾವನು ನಾಯಿಯಂತೆ ಲೋಲುಪನಾಗಿ ಪರಾನ್ನವನ್ನು ತಿನ್ನಲು ಬಯಸುತ್ತಾನೆಯೋ ಆ ಜಿಪುಣನೂ ಮತ್ತು ದುರಾತ್ಮನೂ ಆದ

ಅವನು ಭುಂಜಿಸಿದ ಅನ್ನಕ್ಕೆ ಧಿಕ್ಕಾರವಿರಲಿ.
ಅತೋ ಮೃಷ್ಟತರಂ ನಾನ್ಯತ್ ಕಿಂಚಿದಸ್ತಿ ಶತಕ್ರತೋ |
ದೇವತಾತಿಥಿಭೃತ್ಯೇಭ್ಯೋ ದತ್ತ್ವಾ ಭುಂಕ್ತೇ ಹಿ ಯಃ ಸದಾ ॥37॥
ಎಲೈ ಶತಕ್ರತುವೇ, ಯಾವನು ದೇವತೆಗಳಿಗೂ, ಅತಿಥಿಗಳಿಗೂ ಮತ್ತು ಭೃತ್ಯರಿಗೂ ಕೊಟ್ಟು ಅನಂತರ ಸದಾ ಭುಂಜಿಸುತ್ತಾನೆಯೋ ಅದಕ್ಕಿಂತ ಹೆಚ್ಚಿನ ಮೃಷ್ಟಾನ್ನವು ಯಾವುದೂ ಇಲ್ಲ.
ದೇವತಾತಿಥಿಭೃತ್ಯಾನಾಂ ಪಿತೃಣಾಂ ಚ ವಿಶೇಷತಃ |
ವಿಶಿಷ್ಟಾನ್ನಾನಿ ಯೋ ಭುಂಕ್ತೇ ಕಿಂ ವೈ ಸುಖತರಂ ತತಃ |
ಅದತ್ತ್ವಾ ಯಸ್ತು ವಿಪ್ರೇಭ್ಯೋ ಭುಂಕ್ತೇ ಸ್ತೇನಃ ಸ ಏವ ತು ॥38॥
ದೇವತೆಗಳಿಗೆ, ಅತಿಥಿಗಳಿಗೆ ಮತ್ತು ಭೃತ್ಯರಿಗೆ ಮತ್ತು ವಿಶೇಷವಾಗಿ ಪಿತೃಗಳಿಗೆ ಕೊಟ್ಟು ಉಳಿದ ಅನ್ನವನ್ನು ಯಾವನು ಭುಂಜಿಸುತ್ತಾನೆಯೋ ಅದಕ್ಕಿಂತ ಸುಖಕರವಾದುದು ಯಾವುದಿದೆ? ಬ್ರಾಹ್ಮಣರಿಗೆ ನೀಡದೆ ಯಾವನು ಭುಂಜಿಸುತ್ತಾನೆಯೋ ಅವನು ಕಳ್ಳನೇ ಸರಿ.
ಏತಾಶ್ಚಾನ್ಯಾಶ್ಚ ವೈ ಬಹ್ವೀಃ ಕಥಯಿತ್ವಾ ಕಥಾಃ ಶುಭಾಃ |
ಬಕೇನ ಸಹ ದೇವೇಶ ಆಪೃಷ್ಟ್ವಾ ತ್ರಿದಿವಂ ಗತಃ ॥39॥
ದೇವೇಶನಾದ ಇಂದ್ರನು ಬಕನ ಜೊತೆಯಲ್ಲಿ ಇವುಗಳನ್ನೂ ಮತ್ತು ಇನ್ನೂ ಅನೇಕ ಶುಭಕಥೆಗಳನ್ನೂ ಮಾತನಾಡಿ ಬಕನ ಅನುಮತಿಯನ್ನು ಪಡೆದು ಸ್ವರ್ಗಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ರಾಜಮಹಾತ್ಮ್ಯೇಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಏಳನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಎಂಟನೆಯ ಅಧ್ಯಾಯ
ಮಾರ್ಕಂಡೇಯರಿಂದ ಆಂಗೀರಸೋಪಾಖ್ಯಾನ ಪ್ರಾರಂಭ. ಅಂಗೀರಸರಿಂದ ಬೃಹಸ್ಪತ್ಯಾಚಾರ್ಯರ ಉತ್ಪತ್ತಿ. ದೇವತೆಗಳಿಂದ ಗುರುತ್ವೇನ ಅವರ ಸ್ವೀಕಾರ. ಅಗ್ನಿಯಿಂದ ಅಂಗೀರಸರನ್ನು ಪ್ರಥಮಪುತ್ರತ್ವೇನ ಸ್ವೀಕಾರ. ಅಗ್ನಿಗಳ ಉತ್ಪತ್ತಿ.
ವೈಶಂಪಾಯನಃ
ಶ್ರುತ್ವೇಮಾಂ ಧರ್ಮಸಂಯುಕ್ತಾಂ ಧರ್ಮರಾಜಃ ಕಥಾಂ ಶುಭಾಮ್ |
ಪುನಃ ಪಪ್ರಚ್ಛ ತಮೃಷಿಂ ಮಾರ್ಕಂಡೆಯಮಿದಂ ತದಾ ॥1॥
ವೈಶಂಪಾಯನ ಧರ್ಮರಾಜನು ಧರ್ಮಯುಕ್ತವಾದ ಈ ಪವಿತ್ರವಾದ ಕಥೆಯನ್ನು ಕೇಳಿ ಮಾರ್ಕಂಡೇಯ ಋಷಿಗಳನ್ನು ಕುರಿತು ಪುನಃ ಹೀಗೆ ಪ್ರಶ್ನೆ ಮಾಡಿದನು.
ಕಥಮಗ್ನಿರ್ವನಂ ಯಾತಃ ಕಥಂ ಚಾಪ್ಯಂಗಿರಾಃ ಪುರಾ |
ನಷ್ಟೇಽಗ್ನೌ ಹವ್ಯಮವಹದಗ್ನಿರ್ಭೂತ್ವಾ ಮಹಾದ್ಯುತಿಃ ॥2॥
ಅಗ್ನಿಯು ಯಾವ ಕಾರಣದಿಂದ ವನಕ್ಕೆ ಹೋದನು? ಹಿಂದೆ ಅಗ್ನಿಯು ನಷ್ಟವಾದಾಗ ಮಹಾದ್ಯುತಿಯುಳ್ಳ ಅಂಗೀರಸರು ತಾವೇ ಅಗ್ನಿಯಾಗಿ ದೇವತೆಗಳಿಗೆ ಹೇಗೆ ಹವಿಸ್ಸನ್ನು ತಲುಪಿಸಿದರು?
ಅಗ್ನಿರ್ಯದಾ ತ್ವೇಕ ಏವ ಬಹುತ್ವಂ ಚಾಸ್ಯ ಕರ್ಮಸು |
ದೃಶ್ಯತೇ ಭಗವನ್ ಸರ್ವಮೇತದಿಚ್ಛಾಮಿ ವೇದಿತುಮ್ ॥3॥
ಅಗ್ನಿಯು ಒಬ್ಬನೇ, ಆದರೆ ಅವನಲ್ಲಿ ಅನೇಕ ಕರ್ಮಗಳಲ್ಲಿ ಬಹುತ್ವವು ಕಂಡುಬರುತ್ತದೆ. ಪೂಜ್ಯರೇ, ನಾನು ಇದೆಲ್ಲವನ್ನೂ ತಿಳಿಯಲು ಬಯಸುತ್ತೇನೆ.
ಕುಮಾರಶ್ಚ ಯಥೋತ್ಪನ್ನೋ ಯಥಾ ಚಾಗ್ನೇಃ ಸುತೋಽಭವತ್ |
ಯಥಾ ರುದ್ರಾಚ್ಚ ಸಂಭೂತೋ ಗಂಗಾಯಾಂ ಕೃತ್ತಿಕಾಸು ಚ ॥4॥
ಕುಮಾರನು (ಷಣ್ಮುಖನು) ಹೇಗೆ ಉತ್ಪನ್ನನಾದನು? ಹೇಗೆ ಅಗ್ನಿಯ ಸುತನೂ, ರುದ್ರನ ಸುತನೂ, ಗಂಗೆಯ ಸುತನೂ ಮತ್ತು ಕೃತ್ತಿಕಾ ಸುತನೂ ಆದನು?
ಏತದಿಚ್ಛಾಮ್ಯಹಂ ತ್ವತ್ತಃ ಶ್ರೋತುಂ ಭಾರ್ಗವಸತ್ತಮ |
ಕೌತೂಹಲಸಮಾವಿಷ್ಟೋ ಯಾಥಾತಥ್ಯಂ ಮಹಾಮುನೇ ॥5॥
ಎಲೈ ಭಾರ್ಗವಶ್ರೇಷ್ಠರೇ, ನಾನು ಇದನ್ನು ತಿಳಿಯಲು ಕುತೂಹಲದಿಂದ ಕೂಡಿದವನಾಗಿದ್ದೇನೆ. ಮಹಾಮುನಿಗಳೇ, ಇದನ್ನು ಯಥಾರ್ಥವಾಗಿ ನಿಮ್ಮಿಂದ ಕೇಳಲು ಬಯಸುತ್ತೇನೆ.
ಮಾರ್ಕಂಡೇಯಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಥಾ ಕ್ರುದ್ಧೋ ಹುತವಹಸ್ತಪಸ್ತಪ್ತುಂ ವನಂ ಗತಃ ॥6॥
ಮಾರ್ಕಂಡೇಯ ಅಗ್ನಿಯು ಹೇಗೆ ಕೋಪಗೊಂಡು ತಪಸ್ಸನ್ನು ಮಾಡಲು ಕಾಡಿಗೆ ಹೋದನು ಎಂಬ ಈ ವಿಷಯದಲ್ಲಿ ಪ್ರಾಚೀನವಾದ ಒಂದು ಇತಿಹಾಸವನ್ನು ಹೇಳುತ್ತಾರೆ.
ಯಥಾ ಚ ಭಗವಾನಗ್ನಿಃ ಸ್ವಯಮೇವಾಂಗಿರಾಽಭವತ್ |

ಸಂತಾಪಯಂಶ್ಚ ಪ್ರಭಯಾ ನಾಶಯಂಸ್ತಿಮಿರಾಣಿ ಚ ॥7॥
ಹೇಗೆ ಪೂಜ್ಯರಾದ ಅಂಗಿರಸರು ತಾವೇ ಅಗ್ನಿಯಾದರು ಮತ್ತು ತಮ್ಮ ಪ್ರಭೆಯಿಂದ ಅಂಧಕಾರವನ್ನು ನಾಶಮಾಡಿ ಶಾಖವನ್ನು ಕೊಟ್ಟರು ಎಂಬ ವಿಷಯದಲ್ಲಿಯೂ ಪ್ರಾಚೀನವಾದ ಇತಿಹಾಸವನ್ನು ಹೇಳುತ್ತಾರೆ.
ಪುರಾಂಗಿರಾ ಮಹಾಬಾಹೋ ಚಚಾರ ತಪ ಉತ್ತಮಮ್ |
ಆಶ್ರಮಸ್ಥೋ ಮಹಾಭಾಗೋ ಹವ್ಯವಾಹಂ ವಿಶೇಷಯನ್ |
ತಥಾ ಸ ಭೂತ್ವಾ ತು ತದಾ ಜಗತ್ ಸರ್ವಂ ವ್ಯಕಾಶಯತ್ ॥8॥
ಎಲೈ ಮಹಾಬಾಹುವೇ, ಹಿಂದೆ ಮಹಾನುಭಾವರಾದ ಅಂಗೀರಸರು ತಮ್ಮ ಆಶ್ರಮದಲ್ಲಿಯೇ ಇದ್ದು ಶ್ರೇಷ್ಠವಾದ ತಪಸ್ಸನ್ನು ಮಾಡಿದರು. ಅಗ್ನಿಯನ್ನೂ ಮೀರಿಸಿದರು. ಅವರು ಅಂತಹ ಸ್ವರೂಪವನ್ನು ತಳೆದು ಎಲ್ಲ ಜಗತ್ತನ್ನೂ ಪ್ರಕಾಶಿಸಿದರು.
ತಪಶ್ಚರಂಸ್ತು ಹುತಭುಕ್ ಸಂತಪ್ತಸ್ತಸ್ಯ ತೇಜಸಾ |
ಭೃಶಂ ಗ್ಲಾನಶ್ಚ ತೇಜಸ್ವೀ ನ ಚ ಕಿಂಚಿತ್ ಪ್ರಜಜ್ಞಿವಾನ್ |
ಅಥ ಸಂಚಿಂತಾಯಾಮಾಸ ಭಗವಾನ್ ಹವ್ಯವಾಹನಃ ॥9॥
ತಪಸ್ಸನ್ನು ಮಾಡುತ್ತಿದ್ದ ಅಗ್ನಿದೇವನು ಅವರ ತೇಜಸ್ಸಿನಿಂದ ತಾಪವನ್ನು ಹೊಂದಿದನು. ತೇಜಸ್ವಿಯಾದ ಅವನು ಬಹಳ ವಿಷಾದದಿಂದ ಕೂಡಿದವನಾಗಿ ಏನನ್ನೂ ತಿಳಿಯಲಿಲ್ಲ. ಆಗ ಭಗವಂತನಾದ ಅಗ್ನಿಯು ಹೀಗೆ ಯೋಚಿಸಿದನು.
ಅನ್ಯೋಽಗ್ನಿರಿಹ ಲೋಕಾನಾಂ ಬ್ರಹ್ಮಣಾ ಸಂಪ್ರಕಲ್ಪಿತಃ |
ಅಗ್ನಿತ್ವಂ ವಿಪ್ರಣಷ್ಟಂ ಹಿ ತಪ್ಯಮಾನಸ್ಯ ಮೇ ತಪಃ ॥10॥
ಬ್ರಹ್ಮದೇವರು ಲೋಕಕ್ಕೆ ಇನ್ನೊಬ್ಬ ಅಗ್ನಿಯನ್ನೇ ನೀಡಿದ್ದಾರೆ. ತಪಸ್ಸನ್ನು ಮಾಡುತ್ತಿರುವ ನನಗೆ ಅಗ್ನಿತ್ವವು ನಾಶವನ್ನು ಹೊಂದಿದೆ.
ಕಥಮಗ್ನಿಃ ಪುನರಹಂ ಭವೇಯಮಿತಿ ಚಿಂತ್ಯ ಸಃ |
ಅಪಶ್ಯದಗ್ನಿವಲ್ಲೋಕಾಂಸ್ತಾಪಯಂತಂ ಮಹಾಮುನಿಮ್ ॥11॥
ಸೋಪಾಸರ್ಪಚ್ಛನೈರ್ಭೀತಸ್ತಮುವಾಚ ತದಾಽಂಗಿರಾಃ ॥12॥
ನಾನು ಪುನಃ ಹೇಗೆ ಅಗ್ನಿಯಾಗುತ್ತೇನೆ ಎಂದು ಚಿಂತಿಸಿ ಅವನು ಲೋಕಗಳನ್ನು ಅಗ್ನಿಯಂತೆ ಶಾಖಯುಕ್ತವನ್ನಾಗಿ ಮಾಡುತ್ತಿದ್ದಂತಹ ಮಹರ್ಷಿಗಳಾದ ಅಂಗಿರಸರನ್ನು ನೋಡಿದನು. ಅವನು ಭೀತನಾಗಿ ಮೆಲ್ಲನೆ ಅವರ ಬಳಿಗೆ ಹೋದನು. ಅಂಗೀರಸರು ಅವನನ್ನು ಕುರಿತು ಹೀಗೆ ಮಾತನಾಡಿದರು.
ಶೀಘ್ರಮೇವ ಭವಸ್ವಾಗ್ನಿಸ್ತ್ವಂ ಪುನರ್ಲೋಕಭಾವನಃ |
ವಿಜ್ಞಾತಶ್ಚಾಸಿ ಲೋಕೇಷು ತ್ರಿಷು ಸಂಸ್ಥಾನಚಾರಿಷು ॥13॥
ನೀನು ಪುನಃ ಎಲ್ಲ ಲೋಕಗಳಿಗೂ ಕ್ಷೇಮವನ್ನುಂಟುಮಾಡುವ ಅಗ್ನಿಯಾಗು. ಮೂರುಲೋಕಗಳಲ್ಲಿರುವ ಸ್ಥಾವರಜಂಗಮಗಳಲ್ಲಿ ನೀನು ಅಗ್ನಿ ಎಂದು ಪ್ರಸಿದ್ಧನಾಗಿದ್ದೀಯೆ.
ತ್ವಮಗ್ನಿಃ ಪ್ರಥಮಂ ಸೃಷ್ಟೋ ಬ್ರಹ್ಮಣಾ ತಿಮಿರಾಪಹಃ |
ಸ್ವಸ್ಥಾನಂ ಪ್ರತಿಪದ್ಯಸ್ವ ಶೀಘ್ರಮೇವ ತಮೋನುದ ॥14॥
ಬ್ರಹ್ಮದೇವರು ನಿನ್ನನ್ನು ಅಂಧಕಾರವನ್ನು ನಾಶಮಾಡುವ ಅಗ್ನಿ ಎಂದು ಮೊದಲು ಸೃಷ್ಟಿಮಾಡಿದ್ದಾರೆ. ಎಲೈ ಅಂಧಕಾರಪರಿಹಾರಕನೇ, ಶೀಘ್ರವಾಗಿ ನಿನ್ನ ಮೊದಲಿನ ಸ್ಥಾನವನ್ನು ಹೊಂದುವವನಾಗು.
ಅಗ್ನಿಃ
ನಷ್ಟಕೀರ್ತಿರಹಂ ಲೋಕೇ ಭವಾನ್ ಜಾತೋ ಹುತಾಶನಃ |
ಭವಂತಮೇವ ಜ್ಞಾಸ್ಯಂತಿ ಪಾವಕಂ ನ ತು ಮಾಂ ಜನಾಃ ॥15॥
ಅಗ್ನಿ ಲೋಕದಲ್ಲಿ ನಾನು ಅಗ್ನಿ ಎಂಬ ಕೀರ್ತಿಯನ್ನು ಕಳೆದುಕೊಂಡಿದ್ದೇನೆ. ಈಗ ನೀನು ಅಗ್ನಿಯಾಗಿದ್ದೀಯೆ. ಜನರು ನಿನ್ನನ್ನೇ ಅಗ್ನಿ ಎಂದು ತಿಳಿಯುವರು. ನನ್ನನ್ನಲ್ಲ.
ನಿಕ್ಷಿಪಾಮ್ಯಹಮಗ್ನಿತ್ವಂ ತ್ವಮಗ್ನಿಃ ಪ್ರಥಮೋ ಭವ |
ಭವಿಷ್ಯಾಮಿ ದ್ವಿತೀಯೋಽಹಂ ಪ್ರಾಜಾಪತ್ಯಸ್ತಥೈಕತಃ ॥16॥
ನಾನು ಅಗ್ನಿತ್ವವನ್ನು ಬಿಡುತ್ತೇನೆ. ನೀನೇ ಮೊದಲನೆಯ ಅಗ್ನಿಯಾಗು. ನಾನು ಎರಡನೆಯ ಅಗ್ನಿಯಾಗುತ್ತೇನೆ. ಎಲೈ ಬ್ರಹ್ಮಪುತ್ರನೇ, ನಾನು (ಬೇರೆ) ಒಂದು ಕಡೆ ಇರುತ್ತೇನೆ.
ಅಂಗಿರಾಃ
ಕುರು ಪುಣ್ಯಂ ಪ್ರಜಾಸ್ವರ್ಗ್ಯಂ ಭವಾಗ್ನಿಸ್ತಿಮಿರಾಪಹಃ |
ಮಾಂ ಚ ದೇವ ಕುರುಷ್ವಾಗ್ನೇ ಪ್ರಥಮಂ ಪುತ್ರಮಂಜಸಾ ॥17॥
ಅಂಗಿರಾಃ ಪುಣ್ಯವನ್ನು ಆಚರಿಸಿ ಪ್ರಜೆಗಳು ಸ್ವರ್ಗವನ್ನು ಪಡೆಯುವುದಕ್ಕೆ ಕಾರಣನಾಗು. ಅಂಧಕಾರವನ್ನು ನಾಶಮಾಡುವ ಅಗ್ನಿಯು ನೀನೇ ಆಗು. ಎಲೈ ದೇವನೇ, ನನ್ನನ್ನು ನಿನ್ನ ಪ್ರಥಮಪುತ್ರನೆಂದು ಪ್ರೀತಿಯಿಂದ ಅಂಗೀಕರಿಸು.
ಮಾರ್ಕಂಡೇಯಃ
ತಚ್ಛ್ರುತ್ವಾಽಂಗಿರಸೋ ವಾಕ್ಯಂ ಜಾತವೇದಾಸ್ತಥಾಽಕರೋತ್ |
ರಾಜನ್ ಬೃಹಸ್ಪತಿರ್ನಾಮ ತಸ್ಯಾಪ್ಯಂಗಿರಸಃ ಸುತಃ ॥18॥
ಮಾರ್ಕಂಡೇಯ ಅಂಗೀರಸರ ಮಾತನ್ನು ಕೇಳಿ ಅಗ್ನಿಯು ಹಾಗೆಯೇ ಮಾಡಿದನು (ಅಂಗೀರಸರನ್ನು ತನ್ನ ಪ್ರಥಮಪುತ್ರನನ್ನಾಗಿ ಸ್ವೀಕರಿಸಿದನು). ಎಲೈ ರಾಜನೇ, (ಕಾಲಕ್ರಮದಲ್ಲಿ) ಅಂಗೀರಸರಿಗೆ ಬೃಹಸ್ಪತಿ ಎಂಬ ಪುತ್ರನು ಜನಿಸಿದನು.
ಜ್ಞಾತ್ವಾ ಪ್ರಥಮಜಂ ತಂ ತು ವಹ್ನೇರಂಗಿರಸಂ ಸುತಮ್ |

ಉಪೇತ್ಯ ದೇವಾಃ ಪಪ್ರಚ್ಛುಃ ಕಾರಣಂ ತತ್ರ ಭಾರತ ॥19॥
ಎಲೈ ಭಾರತನೇ, ಅಂಗಿರಸರನ್ನು ಅಗ್ನಿಯ ಪ್ರಥಮಪುತ್ರನೆಂದು ತಿಳಿದ ದೇವತೆಗಳು ಅವರನ್ನು ಸಮೀಪಿಸಿ ಅದಕ್ಕೆ ಕಾರಣವನ್ನು ಕೇಳಿದರು.
ಸ ತು ಪೃಷ್ಟಸ್ತದಾ ದೇವೈಸ್ತತಃ ಕಾರಣಮಬ್ರವೀತ್ |
ಪ್ರತ್ಯಗೃಹ್ಣಂಸ್ತು ದೇವಾಶ್ಚ ತದ್ವಚೋಽಂಗಿರಸಸ್ತದಾ ॥20॥
ದೇವತೆಗಳಿಂದ ಕೇಳಲ್ಪಟ್ಟ ಅಂಗಿರಸರು ಕಾರಣವನ್ನು ಹೇಳಿದರು. ದೇವತೆಗಳಾದರೂ ಆಗ ಅಂಗಿರಸರ ಆ ಮಾತುಗಳನ್ನು ಸ್ವೀಕರಿಸಿದರು.
ತತ್ರ ನಾನಾವಿಧಾನಗ್ನೀನ್ ಪ್ರವಕ್ಷ್ಯಾಮಿ ಮಹಾಪ್ರಭಾನ್ |
ಕರ್ಮಭಿರ್ಬಹುಭಿಃ ಖ್ಯಾತಾನ್ ನಾನಾರ್ಥಾನ್ ಬ್ರಾಹ್ಮಣೇಷ್ವಿಹ ॥21॥
ಆ ವಿಷಯದಲ್ಲಿ ಬ್ರಾಹ್ಮಣರಿಗೆ ಅನೇಕ ಪ್ರಯೋಜನವನ್ನುಂಟು ಮಾಡುವ ಅನೇಕ ಕರ್ಮಗಳಲ್ಲಿ ಅನೇಕ ಹೆಸರುಗಳಿಂದ ಖ್ಯಾತರಾದ ಮಹಾಪ್ರಭೆಯುಳ್ಳ ನಾನಾವಿಧವಾದ ಅಗ್ನಿಗಳನ್ನು ಹೇಳುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಾಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಆಂಗಿರಸೇ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಟನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಒಂಬತ್ತನೆಯ ಅಧ್ಯಾಯ
ಸ್ಕಂದೋತ್ಪತ್ತಿಯ ಉಪೋದ್ಘಾತರೂಪವಾಗಿ ಅಂಗೀರಸ ವಂಶದ ಕಥನ.
ಮಾರ್ಕಂಡೇಯಃ
ಬೃಹ್ಮಣೋ ಯಸ್ತೃತೀಯಸ್ತು ಪುತ್ರಃ ಕುರುಕುಲೋದ್ವಹ |
ತಸ್ಯಾಪವವಸುತಾ ಭಾರ್ಯಾ ಪ್ರಜಾಸ್ತಸ್ಯಾಂ ಚ ಮೇ ಶೃಣು ॥1॥
ಮಾರ್ಕಂಡೇಯ ಎಲೈ ಕುರುಕುಲೋದ್ವಹನೇ, ಬ್ರಹ್ಮದೇವರ ತೃತೀಯ ಪುತ್ರರಾದ ಅಂಗಿರಸರಿಗೆ ವಸಿಷ್ಠರ ಮಗಳಾದ ಕಪರ್ದಿಯು ಪತ್ನಿ. ಅವಳಲ್ಲಿ ಹುಟ್ಟಿದ ಪ್ರಜೆಗಳನ್ನು ನನ್ನಿಂದ ಕೇಳು.
ಬೃಹತ್ಕೀರ್ತಿರ್ಬೃಹಜ್ಜ್ಯೋತಿರ್ಬೃಹದ್ಬ್ರಹ್ಮಾ ಬೃಹನ್ಮನಾಃ |
ಬೃಹನ್ಮಂತ್ರೋ ಬೃಹದ್ಭಾಸಸ್ತಥಾ ರಾಜನ್ ಬೃಹಸ್ಪತಿಃ ॥2॥
ಬೃಹತ್ಕೀರ್ತಿ, ಬೃಹಜ್ಜ್ಯೋತಿ, ಬೃಹದ್ಬ್ರಹ್ಮ, ಬೃಹನ್ಮನ, ಬೃಹನ್ಮಂತ್ರ, ಬೃಹದ್ಭಾಸ ಮತ್ತು ಬೃಹಸ್ಪತಿ. ಇವರು ಅವರ ಮಕ್ಕಳು.
ಪ್ರಜಾಸು ತಾಸು ಸರ್ವಾಸು ರೂಪೇಣಾಪ್ರತಿಮಾಽಭವತ್ |
ದೇವೀ ಭಾನುಮತೀ ನಾಮ ಪ್ರಥಮಾಂಗಿರಸಃ ಸುತಾ ॥3॥
ಅಂಗಿರಸರ ಎಲ್ಲಾ ಪ್ರಜೆಗಳಲ್ಲಿಯೂ ರೂಪದಿಂದ ಅಸದೃಶಳಾದವಳು ಭಾನುಮತಿ ಎಂಬುವಳು. ಅವಳು ಅಂಗಿರಸರ ಪ್ರಥಮಪುತ್ರಿ.
ಭೂತಾನಾಮೇವ ಸರ್ವೇಷಾಂ ಯಸ್ಯಾಂ ರಾಗಸ್ತದಾಽಭವತ್ |
ರಾಗಾದ್ ರಾಗೇತಿ ಯಾಮಾಹುರ್ದ್ವಿತೀಯಾಂಗಿರಸಃ ಸುತಾ ॥4॥
ಯಾವಳು ಹುಟ್ಟಿದಾಗ ಎಲ್ಲ ಪ್ರಾಣಿಗಳಿಗೂ ಅವಳಿಗೆ ರಾಗ (ಪ್ರೀತಿ) ಉಂಟಾಯಿತೋ ಅವಳನ್ನು ರಾಗಾ ಎಂದೇ ಕರೆಯುತ್ತಾರೆ. ಅವಳು ಅಂಗಿರಸರ ದ್ವಿತೀಯ ಪುತ್ರಿ.
ಯಾಂ ಕಪರ್ದಿಸುತಾಮಾಹುರ್ದೃಶ್ಯಾದೃಶ್ಯೇತಿ ದೇಹಿನಃ |
ತನುತ್ವಾತ್ ಸಾ ಸಿನೀವಾಲೀ ತೃತೀಯಾಽಂಗಿರಸಃ ಸುತಾ ॥5॥
ಕಪರ್ದಿ ಸುತಳಾದ ಯಾವಳನ್ನು ಮನುಷ್ಯರು ದೃಶ್ಯಾದೃಶ್ಯಾ ಎಂದು ಕರೆಯುತ್ತಾರೋ, ಅವಳು ಕೃಶಳಾದ್ದರಿಂದ ಸಿನೀವಾಲೀ ಎಂದೂ ಕರೆಯಲ್ಪಡುತ್ತಾಳೆ. ಯಾವಳನ್ನು ನೋಡಿ ಜನಗಳು ವಿನೋದಮಾಡುತ್ತಾಳೆಯೋ ಅವಳಿಗೆ ಕುಹು ಎಂದೂ ಹೆಸರು (ದೃಶ್ಯಾದೃಶ್ಯಾ ಸಿನೀವಾಲೀ ಕುಹೂ ಎಂಬುದು ಒಬ್ಬಳಿಗೇ ಇರುವ ಮೂರು ಹೆಸರುಗಳು).
ಯಾಂ ತು ದೃಷ್ಟ್ವಾ ಭಗವತೀಂ ಜನಃ ಕುಹಕುಹಾಯತೇ |
ಏಕಾನಂಶೇ(ಗೇ)ತಿ ತಾಮಾಹುಃ ಚತುರ್ಥೀಮಂಗಿರಃಸುತಾಮ್ ॥6॥
ಪಂಚಮ್ಯರ್ಚಿಷ್ಮತೀ ಭಾಭಿರ್ಹವಿರ್ಭಿಶ್ಚ ಹವಿಷ್ಮತೀ |
ಷಷ್ಠೀಮಂಗಿರಸಃ ಕನ್ಯಾಂ ಪುಣ್ಯಾಮಾಹುಃ ಮಹಿಷ್ಮತೀಮ್ ॥7॥
ಅಂಗಿರಸರ ನಾಲ್ಕನೆಯ ಪುತ್ರಿಯನ್ನು ಏಕಾನಂಗಾ (ಏಕಾನಂಶಾ) ಎಂದು ಹೇಳುತ್ತಾರೆ. ಅಂಗಿರಸರ ಐದನೆಯ ಪುತ್ರಿಯನ್ನು ಪ್ರಕಾಶದ ಕಾರಣದಿಂದ ಅರ್ಚಿಷ್ಮತೀ ಎಂದೂ ಹವಿಸ್ಸನ್ನು ಸ್ವೀಕರಿಸುವುದರಿಂದ ಹವಿಷ್ಮತೀ ಎಂದೂ ಕರೆಯುತ್ತಾರೆ. ಅಂಗಿರಸರ ಆರನೆಯ ಪುತ್ರಿಯನ್ನು ಪುಣ್ಯಾ ಎಂದೂ ಮಹೀಷ್ಮತೀ ಎಂದೂ ಕರೆಯುತ್ತಾರೆ.
ಮಹಾಮಖೇಷ್ವಾಂಗಿರಸೀ ದೀಪ್ತಿಮತ್ಸು ಮಹಾಮತೇ |
ಮಹಾಮತೀತಿ ವಿಖ್ಯಾತಾ ಸಪ್ತಮೀ ಕಥ್ಯತೇ ಸುತಾ ॥8॥
ಎಲೈ ಮಹಾಮತಿಯೇ, ದೊಡ್ಡ ಯಜ್ಞಗಳಲ್ಲಿ ಪ್ರಕಾಶಿಸುವ ಅಂಗಿರಸರ ಮಗಳನ್ನು ಮಹಾಮತಿ ಎಂದು ಕರೆಯುತ್ತಾರೆ. ಇವಳು ಏಳನೆಯ ಪುತ್ರಿ.
ಬೃಹಸ್ಪತೇಃ ಚಾಂದ್ರಮಸೀ ಭಾರ್ಯಾಽಽಭೂದ್ ಯಾ ಯಶಸ್ವಿನೀ |

ಅಗ್ನೀನ್ ಸಾಜನಯತ್ ಪುತ್ರಾನ್ ಷಡೇಕಾಂ ಚಾಪಿ ಪುತ್ರಿಕಾಮ್ ॥9॥
ಬೃಹಸ್ಪತಿಗಳ ಪತ್ನಿಯು ಚಂದ್ರನ ಮಗಳಾದ ಯಶಸ್ವಿನೀ. ಅವಳು ಅಗ್ನಿಗಳೇ ಆರು ಗಂಡುಮಕ್ಕಳನ್ನು ಮತ್ತು ಒಬ್ಬ ಮಗಳನ್ನೂ ಪಡೆದಳು.
ಆಹುತಿಷ್ವೇವ ಯಸ್ಯಾಗ್ನೇರ್ಹವಿಷ್ಯಾ(ಜ್ಯಂ)ದ್ಯಂ ವಿಧೀಯತೇ |
ಸೋಽಗ್ನಿರ್ಬೃಹಸ್ಪತೇಃ ಪುತ್ರಃ ಶಂಯುರ್ನಾಮ ಮಹಾವ್ರತಃ ॥10॥
ಆಹುತಿಗಳನ್ನು ಕೊಡುವಾಗ ಯಾವ ಅಗ್ನಿಗೆ ಮೊದಲನೆಯ ಹವಿಸ್ಸು ಕೊಡಲ್ಪಡುತ್ತದೆಯೋ ಅವನು ಬೃಹಸ್ಪತಿಯ ಪುತ್ರನಾದ ಮಹಾವ್ರತನಾದ ಶಂಯುನಾಮಕನಾದ ಅಗ್ನಿ.
ಚಾತುರ್ಮಾಸ್ಯೇಷು ಯಸ್ಯೇಷ್ಟ್ಯಾ ಮಶ್ವಮೇಧೇಽಗ್ರಜಃ ಪಶುಃ |
ದೀಪ್ತೋ ಜ್ವಾಲೈರನೇಕಾಭೈರಗ್ನಿಷ್ಟೋಮೇಽಥ ವೀರ್ಯವಾನ್ ॥11॥
ಚಾತುರ್ಮಾಸ್ಯಗಳಲ್ಲಿ ಮಾಡುವ ಇಷ್ಟಿಗಳಲ್ಲಿ ಕೊಡುವ ಹವಿಸ್ಸಿನಲ್ಲಿ ಮೊದಲನೆಯ ಭಾಗವೂ, ಅಶ್ವಮೇಧ ಯಾಗಗಳಲ್ಲಿ ಕೊಡುವ ಪಶುವಿನ ಮೊದಲನೆಯ ಹವಿಸ್ಸೂ ಮತ್ತು ಅಗ್ನಿಷ್ಟೋಮಗಳಲ್ಲಿ ಕೊಡುವ ಮೊದಲನೆಯ ಹವಿಸ್ಸೂ ಸಹ ಅನೇಕ ಬಣ್ಣದ ಜ್ವಾಲೆಗಳಿಂದ ದೀಪ್ತನಾದ ವೀರ್ಯವಂತನಾದ ಶಂಯುವಿಗೇ ಸಲ್ಲುತ್ತದೆ.
ಶಂಯೋರಪ್ರತಿಮಾ ಭಾರ್ಯಾ ಸತ್ಯಾಸತ್ಯಾಽಥ ಧರ್ಮಜಾ |
ಅಗ್ನಿಸ್ತಸ್ಯ ಸುತೋ ದೀಪ್ತಸ್ತಿಸ್ರಃ ಕನ್ಯಾಶ್ಚ ಸುಪ್ರಭಾಃ ॥12॥
ಶಂಯುವಿಗೆ ಧರ್ಮನ ಮಗಳಾದ ಅಸದೃಶಳಾದ ಸತ್ಯಾಸತ್ಯ ಎಂಬುವಳು ಪತ್ನಿ. ಅವನಿಗೆ ದೀಪ್ತನಾಮಕನಾದ ಅಗ್ನಿಯೂ ಮತ್ತು ಒಳ್ಳೆಯ ಕಾಂತಿಯುಳ್ಳ ಮೂರು ಪುತ್ರಿಯರೂ ಮಕ್ಕಳು.
ಪ್ರಥಮೇನಾಜ್ಯಭಾಗೇನ ಪೂಜ್ಯತೇ ಯೋಽಗ್ನಿರಧ್ವರೇ |
ಅಗ್ನೇಸ್ತಸ್ಯ ಭರದ್ವಾಜಃ ಪ್ರಥಮಃ ಪುತ್ರ ಉಚ್ಯತೇ ॥13॥
ಯಾಗಗಳಲ್ಲಿ ಯಾವ ಅಗ್ನಿಗೆ ಮೊದಲನೆಯ ಆಜ್ಯಭಾಗವು ಸಲ್ಲುತ್ತದೆಯೋ ಅವನು ಶಂಯುವಿನ ಪ್ರಥಮಪುತ್ರನಾದ ಭರದ್ವಾಜ ಅಗ್ನಿ ಎಂದು ಕರೆಯಲ್ಪಡುತ್ತಾನೆ.
ಪೌರ್ಣಮಾಸೇಷು ಸರ್ವೇಷು ಹವಿಷ್ಯಾಜ್ಯಂ ಸ್ರುವೋದ್ಯತಮ್ |
ಭರತೋ ನಾಮತಃ ಸೋಽಗ್ನಿರ್ದ್ವಿತೀಯಃ ಶಂಯುತಃ ಸುತಃ ॥14॥
ಪೌರ್ಣಮಾಸೇಷ್ಟಿಗಳಲ್ಲಿ ಯಾವನಿಗೆ ಸ್ರುವದಿಂದ ಮೊದಲನೆಯ ಆಜ್ಯಭಾಗವು ಹವಿಸ್ಸಾಗಿ ಕೊಡಲ್ಪಡುತ್ತದೆಯೋ ಅವನು ಭರತನಾಮಕನಾದ ಶಂಯುವಿನ ದ್ವಿತೀಯಪುತ್ರ.
ತಿಸ್ರಃ ಕನ್ಯಾ ಭವಂತ್ಯನ್ಯಾ ಯಾಸಾಂ ಸ ಭರತಃ ಪತಿಃ |
ಭಾರತಸ್ತು ಸುತಸ್ತಸ್ಯ ಭಾರತ್ಯೇಕಾ ಚ ಪುತ್ರಿಕಾ ॥15॥
ಇದಲ್ಲದೇ ಮೂರುಜನ ಕನ್ಯೆಯರಿದ್ದಾರೆ. ಅವರಿಗೆ ಭರತನೇ ಪತಿ. ಭರತನಾಮಕ ಅಗ್ನಿಗೆ ಭಾರತನೆಂಬ ಪುತ್ರ ಮತ್ತು ಭಾರತಿ ಎಂಬ ಒಬ್ಬ ಪುತ್ರಿಯೂ ಮಕ್ಕಳು.
ಭಾರತೋ ಭರತಸ್ಯಾಗ್ನೇಃ ಪಾವಕಸ್ತು ಪ್ರಜಾಯತೇ |
ಮಹಾನತ್ಯರ್ಥಮಹಿತಸ್ತಥಾ ಭರತಸತ್ತಮ ॥16॥
ಎಲೈ ಭರತಸತ್ತಮನೇ, ಭರತನೆಂಬ ಅಗ್ನಿಗೆ ಹುಟ್ಟಿದ ಭಾರತನೂ ಸಹ ಒಬ್ಬ ಅಗ್ನಿಯೇ. ಅವನು ಬಹಳ ಪೂಜಿತನಾದವನು.
ಭರದ್ವಾಜಸ್ಯ ಭಾರ್ಯಾ ತು ವೀರಾ ವೀರಶ್ಚ ಪಿಂಡದಃ |
ಪ್ರಾಹುರಾಜ್ಯೇನ ತಸ್ಯೇಜ್ಯಾಂ ಸೋಮಸ್ಯೇವ ದ್ವಿಜಾಃ ಶನೈಃ ॥17॥
ಭರದ್ವಾಜರ ಭಾರ್ಯೆಯೇ ವೀರಾ ಎಂದು. ವೀರನು ಅವರಿಗೆ ಪಿಂಡಪ್ರದನಾದ ಪುತ್ರನು. ಅವನಿಗೆ ಚಂದ್ರನಿಗೆ ಅನಂತರದ ಆಜ್ಯಭಾಗಗಳು ಸಲ್ಲುವಂತೆ ಅನಂತರದ ಆಜ್ಯಭಾಗಗಳು ಸಲ್ಲುತ್ತವೆ ಎಂದು ಬ್ರಾಹ್ಮಣರು ಹೇಳುತ್ತಾರೆ.
ಹವಿಷಾ ಯೋ ದ್ವಿತೀಯೇನ ಸೋಮೇನ ಸಹ ಯುಜ್ಯತೇ |
ರಥಪ್ರಭೂ ರಥಧ್ವಾನಃ ಕುಂಭರೇತಾಃ ಸ ಉಚ್ಯತೇ ॥18॥
ಎರಡನೆಯ ಸೋಮದಿಂದ ಮಿಶ್ರಿತವಾದ ಹವಿರ್ಭಾಗವು ಯಾವನಿಗೆ ಸಲ್ಲುತ್ತದೆಯೋ ಅವನನ್ನು ರಥಪ್ರಭು ಎಂದೂ ರಥಧ್ವಾನ ಎಂದೂ ಕುಂಭರೇತನೆಂದೂ ಕರೆಯುತ್ತಾರೆ.
ಸರಯ್ವಾಂ ಜನಯತ್ ಸಿದ್ಧಿಂ ಭಾನುಂ ಭಾಭಿಃ ಸಮಾವೃಣೋತ್ |
ಆಗ್ನೇಯಮಾನಯನ್ನಿತ್ಯಮಾಹ್ವಾನೇ ಹ್ಯೇಷ ಕಥ್ಯತೇ ॥19॥
ಅವನು ಸರಯೂ ಎಂಬ ತನ್ನ ಪತ್ನಿಯಲ್ಲಿ ಸಿದ್ಧಿ ಎಂಬ ಪುತ್ರನನ್ನು ಪಡೆದನು. ಮತ್ತು ತನ್ನ ಕಾಂತಿಯಿಂದ ಚಂದ್ರನನ್ನು ಆವರಿಸಿದನು. ಯಾವನಿಗೆ ಆಜ್ಯಭಾಗವನ್ನು ಸಲ್ಲಿಸಿದರೆ ಹೋಮವು ಚೆನ್ನಾಗಿ ನಡೆದಂತೆ ಆಗುತ್ತದೆಯೋ ಅವನನ್ನು ಶ್ರೇಷ್ಠನಾದ ಸ್ವಿಷ್ಟಕೃತ್ ಎಂದು ಕರೆಯುತ್ತಾರೆ.
ಯಸ್ತು ನ ಚ್ಯವತೇ ನಿತ್ಯಂ ಯಶಸಾ ವರ್ಚಸಾ ಶ್ರಿಯಾ |
ಅಗ್ನಿರ್ನಿಶ್ಚ್ಯವನೋ ನಾಮ ಪೃಥಿವೀಂ ಸ್ತೌತಿ ಕೇವಲಮ್ ॥20॥
ಯಾವ ಅಗ್ನಿಯು ಕೀರ್ತಿಯಿಂದ, ಕಾಂತಿಯಿಂದ, ಸಂಪತ್ತಿನಿಂದ ಎಂದೂ ಚ್ಯುತನಾಗುವುದಿಲ್ಲವೋ ಅವನು ನಿಶ್ಚ್ಯವನ ಎಂಬ ಅಗ್ನಿ. ಅವನು ಪೃಥಿವಿಯನ್ನು ಸ್ತೋತ್ರಮಾಡುತ್ತಾನೆ.
ವಿಪಾಪ್ಮಾ ಕಲುಷೈರ್ಮುಕ್ತೋ ವಿಶುದ್ಧಶ್ಚಾರ್ಚಿಷಾ ಜ್ವಲನ್ |
ವಿಪಾಪೋಽಗ್ನಿಃ ಸುತಸ್ತಸ್ಯ ಸತ್ಯಃ ಸಮಯಧರ್ಮಕೃತ್ ॥21॥

ಯಾರು ದೋಷಗಳಿಂದ ಮುಕ್ತನಾಗಿ ಜ್ವಾಲೆಗಳಿಂದ ಬೆಳಗುತ್ತಾ ವಿಶುದ್ಧನಾಗಿದ್ದಾನೆಯೋ ಅವನು ವಿಪಾಪ ಎಂಬ ಅಗ್ನಿ. ಅವನ ಪುತ್ರನು ಸತ್ಯನೆಂಬ ಅಗ್ನಿ. ಅವನು ಸಮಯಧರ್ಮಗಳನ್ನು ಪಾಲಿಸುವವನು.
ಆಕ್ರೋಶತಾಂ ತು ಭೂತಾನಾಂ ಯಃ ಕರೋತಿ ಹಿ ನಿಷ್ಕೃತಿಮ್ |
ಅಗ್ನಿಃ ಸ ನಿಷ್ಕೃತಿರ್ನಾಮ ಶೋಭಯತ್ಯಭಿಸೇವಿತೇ ||22||
ಕಿರುಚಾಡುವ ಪ್ರಾಣಿಗಳಿಗೆ ಯಾರು ಸಮಾಧಾನವನ್ನು ಮಾಡುತ್ತಾನೆಯೋ ಆ ಅಗ್ನಿಗೆ ನಿಷ್ಕೃತಿ ಎಂದು ಹೆಸರು. ಅವನನ್ನು ಸೇವಿಸಿದರೆ ಶೋಭೆ ಉಂಟಾಗುವಂತೆ ಮಾಡುತ್ತಾನೆ.
ಅನುಕೂಜಂತಿ ಯೇನೇಹ ವೇದನಾರ್ತಾಃ ಸ್ವಯಂ ಜನಾಃ |
ತಸ್ಯ ಪುತ್ರಃ ಸ್ವನೋ ನಾಮ ಪಾವಕಃ ಸ ರುಜಸ್ಕರಃ ||23||
ವೇದನೆಯಿಂದ ಬಳಲುವ ಜನರು ಯಾವನಿಂದ ಪ್ರೇರಿತನಾಗಿ ನೆರಳುತ್ತಾರೆಯೋ ಅವನು ನಿಷ್ಕೃತಿಯ ಮಗನಾದ ಸ್ವನ ಎಂಬ ಹೆಸರಿನ ಅಗ್ನಿ. ಅವನು ರೋಗಗಳನ್ನು ಉಂಟುಮಾಡುವವನು.
ಯಸ್ತು ವಿಶ್ವಸ್ಯ ಜಗತೋ ಬುದ್ಧಿಮಾಕ್ರಮ್ಯ ತಿಷ್ಠತಿ |
ತಂ ಪ್ರಾಹುರಧ್ಯಾತ್ಮವಿದೋ ವಿಶ್ವಜಿನ್ನಾಮ ಪಾವಕಮ್ ||24||
ಯಾವ ಅಗ್ನಿಯು ಜಗತ್ತಿನ ಎಲ್ಲಾ ಪ್ರಾಣಿಗಳ ಬುದ್ಧಿಯನ್ನು ಆಕ್ರಮಿಸಿ ಅಲ್ಲಿದ್ದು ಪ್ರೇರಿಸುತ್ತಾನೆಯೋ ಅವನನ್ನು ಅಧ್ಯಾತ್ಮಜ್ಞಾನಿಗಳು ವಿಶ್ವಜಿತ್ ನಾಮಕ ಅಗ್ನಿ ಎಂದು ಕರೆಯುತ್ತಾರೆ.
ಅಂತರಾಗ್ನಿಃ ಸ್ಥಿತೋ ಯಸ್ತು ಭುಕ್ತಂ ಪಚತಿ ದೇಹಿನಾಮ್ |
ಸ ಜಜ್ಞೇ ವಿಶ್ವಭುಜ್ನಾಮ ಸರ್ವಲೋಕೇಷು ಭಾರತ ||25||
ಎಲೈ ಭಾರತನೇ, ಯಾವ ಅಗ್ನಿಯು ದೇಹದ ಒಳಗಿದ್ದು ಪ್ರಾಣಿಗಳು ತಿಂದ ಆಹಾರವನ್ನು ಪಚನಮಾಡುತ್ತಾನೆಯೋ ಅವನು ಸರ್ವಲೋಕಗಳಲ್ಲಿಯೂ ವಿಶ್ವಭುಕ್ ಎಂಬ ಹೆಸರಿನಿಂದ ಪ್ರಸಿದ್ಧನಾದನು.
ಬ್ರಹ್ಮಚಾರೀ ಯತಾತ್ಮಾ ಚ ಸತತಂ ವಿಪುಲವ್ರತಃ |
ಬ್ರಾಹ್ಮಣಾಃ ಪೂಜಯಂತ್ಯೇನಂ ಪಾಕಯಜ್ಞೇಷು ಪಾವಕಮ್ ||26||
ಈ ವಿಶ್ವಭುಕ್ನಾಮಕ ಅಗ್ನಿಯು ಬ್ರಹ್ಮಚಾರಿ, ಮನೋನಿಗ್ರಹವುಳ್ಳವನು, ಸತತವಾಗಿ ಬಹಳ ವ್ರತಗಳನ್ನು ಮಾಡುವವನು. ಬ್ರಾಹ್ಮಣರು ಪಾಕಯಜ್ಞಗಳಲ್ಲಿ ಈ ಅಗ್ನಿಯನ್ನು ಪೂಜಿಸುತ್ತಾರೆ.
ಪವಿತ್ರಾ ಗೋಮತೀ ನಾಮ ನದೀ ಯಸ್ಯಾಭವತ್ ಪ್ರಿಯಾ |
ತಸ್ಮಿನ್ ಕರ್ಮಾಣಿ ಸರ್ವಾಣಿ ಕ್ರಿಯಂತೇ ಕರ್ಮಕರ್ತೃಭಿಃ ||27||
ಪವಿತ್ರವಾದ ಗೋಮತೀ ನದಿಯು ಅವನಿಗೆ ಪ್ರಿಯಳಾದಳು. ಕರ್ಮಗಳನ್ನು ಮಾಡುವವರು ಎಲ್ಲ ಕರ್ಮಗಳನ್ನೂ ಈ ಅಗ್ನಿಯಲ್ಲಿಯೇ ಮಾಡುತ್ತಾರೆ.
ವಡವಾಗ್ನಿಃ ಪಿಬತ್ಯಂಭೋ ಯೋಽಸೌ ಪರಮದಾರುಣಃ |
ಊರ್ಧ್ವಭಾಗೂರ್ಧ್ವಭಾಙ್ನಾಮ ಕವಿಃ ಪ್ರಾಣಾಶ್ರಿತಸ್ತು ಯಃ ||28||
ಸಮುದ್ರದಲ್ಲಿ ಇರುವ ಪರಮದಾರುಣವಾದ ಜಲಪಾನವನ್ನು ಮಾಡುವ ಅಗ್ನಿಗೆ ವಡವಾಗ್ನಿ ಎಂದು ಹೆಸರು. ದೇಹದ ಊರ್ಧ್ವಭಾಗದಲ್ಲಿ ಪ್ರಾಣಾಶ್ರಿತನಾಗಿರುವ ಅಗ್ನಿಗೆ ಕವಿ ಎಂದೂ, ಊರ್ಧ್ವಭಾಕ್ ಎಂದೂ ಹೆಸರು.
ಉದಗ್ದ್ವಾರಂ ಹವಿರ್ಯಸ್ಯ ಗೃಹೇ ನಿತ್ಯಂ ಪ್ರದೀಯತೇ |
ತತಃ ಸ್ವಿಷ್ಟಂ ಭವೇದಾಜ್ಯಂ ಸ್ವಿಷ್ಟಕೃತ್ ಪರಮಃ ಸ್ತು ಸಃ ||29||
ಯಾವ ಅಗ್ನಿಗೆ ಮನೆಯಲ್ಲಿ ಪ್ರತಿನಿತ್ಯವೂ ಉತ್ತರದ್ವಾರದಲ್ಲಿ ಹವಿಸ್ಸು ಕೊಡಲ್ಪಡುತ್ತದೆಯೋ, ಮತ್ತು ಯಾವನಲ್ಲಿ ಹವಿಸ್ಸನ್ನು ಕೊಟ್ಟರೆ ಮಾಡಿದ ಹೋಮವು ಚೆನ್ನಾಗಿ ಮಾಡಲ್ಪಟ್ಟಂತೆ ಆಗುವುದೋ ಅವನು ಸ್ವಿಷ್ಟಕೃತ್ ನಾಮಕನಾದ ಶ್ರೇಷ್ಠನಾದ ಅಗ್ನಿ.
ಯಃ ಪ್ರಶಾಂತೇಷು ಭೂತೇಷು ಮನ್ಯುರ್ಭವತಿ ಪಾವಕಃ |
ಮನ್ಯುಮಾನ್ನಾಮ ಭಗವಾನಗ್ನಿರೇವ ಮಹಾಬಲಃ |
ಶಾಂತರಾದ ಮನುಷ್ಯರಲ್ಲಿ ಮತ್ತು ಪ್ರಾಣಿಗಳಲ್ಲಿ ಕೋಪವನ್ನು ಉಂಟುಮಾಡಲು ಕಾರಣನಾದ ಯಾವ ಅಗ್ನಿ ಇದ್ದಾನೆಯೋ, ಆ ಪೂಜ್ಯನಾದ ಮಹಾಬಲನಾದ ಅಗ್ನಿಗೆ ಮನ್ಯುಮಾನ್ ಎಂದು ಹೆಸರು.
ಆರಣ್ಯಾನಿ ತಥಾ ಗ್ರಾಮ್ಯಾನ್ ಯೋ ದಹನ್ ಸಂಪ್ರಕಾಶತೇ |
ಸ್ವಯಮುತ್ಪತಿತಃ ಶ್ರೀಮಾನ್ ವೃದ್ಧಿಮಾನ್ನಾಮ ಪಾವಕಃ |
ಕ್ರೋಧಃ ಸ ತು ಮಹಾತೇಜಾ ವಿಜ್ಞೇಯಃ ಸರ್ವದೇಹಿಷು ||30||
ಯಾವ ಅಗ್ನಿಯು ತಾನೇ ಉತ್ಪತಿತನಾಗಿ ಅರಣ್ಯದಲ್ಲಿರುವ ವಸ್ತುಗಳನ್ನೂ, ಗ್ರಾಮದಲ್ಲಿರುವ ವಸತಿಗಳನ್ನೂ ದಹಿಸುತ್ತಾ ಪ್ರಕಾಶಿಸುತ್ತಾನೆಯೋ ಆ ಕಾಂತಿಯುಕ್ತನಾದ ಅಗ್ನಿಗೆ ವೃದ್ಧಿಮಾನ್ ಎಂದು ಹೆಸರು. ಮಹಾತೇಜಸ್ವಿಯಾದ ಅವನಿಗೆ ಕ್ರೋಧ ಎಂದೂ ಹೆಸರು. ಅವನು ಎಲ್ಲಾ ದೇಹಗಳಲ್ಲಿಯೂ ಇರುತ್ತಾನೆಂದು ತಿಳಿಯಬೇಕು.
ಕ್ರೋಧಸ್ಯ ತು ರಜೋ ಜಜ್ಞೇ ಮಥ್ನತೀ ಚಾಪಿ ಪುತ್ರಿಕಾ |
ಹಾಹೇತಿ ದಾರುಣಾ ಕ್ರುದ್ಧಾ ಸರ್ವಭೂತೇಷು ತಿಷ್ಠತಿ ||31||
ಕ್ರೋಧನಿಗೆ ರಜ ಎಂಬ ಮಗನೂ, ಮಥ್ನತೀ ಎಂಬ ಮಗಳೂ ಜನಿಸಿದರು. ಆ ಮಥ್ನತೀ ಎಂಬ ಮಗಳು ದಾರುಣಳೂ ಕ್ರೂರಳೂ ಆಗಿದ್ದು ಪ್ರಾಣಿಗಳಲ್ಲಿ ಹಾಹಾಕಾರವನ್ನು ಉಂಟುಮಾಡುವವಳಾಗಿ ಸರ್ವಪ್ರಾಣಿಗಳಲ್ಲಿಯೂ ಇರುತ್ತಾಳೆ.
ತ್ರಿದಿವೇ ಯಸ್ಯ ಸದೃಶೋ ನಾಸ್ತಿ ರೂಪೇಣ ಕಶ್ಚನ |
ಅತುಲತ್ವಾತ್ ಕೃತೋ ದೇವೈರ್ನಾಮ್ನಾ ಕಾಮಸ್ತು ಪಾವಕಃ ||32||

ದೇವತೆಗಳಲ್ಲಿ ಯಾರ ರೂಪಕ್ಕೆ ಸದೃಶವಾದ ರೂಪವಿಲ್ಲವೋ ಅಂತಹ ಅಸದೃಶ ರೂಪವುಳ್ಳ ಅಗ್ನಿಗೆ ದೇವತೆಗಳು ಕಾಮ ಎಂದು ನಾಮಕರಣ ಮಾಡಿದರು.
ಸಂಹರ್ಷಾದ್ ಧಾರಯನ್ ಕ್ರೋಧಂ ಧನ್ವೀ ಸ್ರಗ್ವೀ ರಥೇ ಸ್ಥಿತಃ |
ಸಮರೇ ನಾಶಯೇಚ್ಛತ್ರೂನಮೋಘೋ ನಾಮ ಪಾವಕಃ ॥33॥
ಯಾರು ಸಂತೋಷವನ್ನೂ ಮತ್ತು ಕ್ರೋಧವನ್ನೂ ಧರಿಸಿ (ಸಂತೋಷದಿಂದ ಕ್ರೋಧವನ್ನು ಧರಿಸಿ) ಧನುಸ್ಸನ್ನು ಹಿಡಿದು ಮಾಲೆಯನ್ನು ಧರಿಸಿ ರಥದಲ್ಲಿ ಕುಳಿತು ಯುದ್ಧದಲ್ಲಿ ಶತ್ರುಗಳನ್ನು ನಾಶಮಾಡುತ್ತಾನೆಯೋ ಆ ಅಗ್ನಿಗೆ ಅಮೋಘ ಎಂದು ಹೆಸರು.
ಉಕ್ಥೋ ನಾಮ ಮಹಾಭಾಗ ತ್ರಿಭಿರುಕ್ಥೈರಭಿಷ್ಟುತಃ |
ಮಹಾವಾಚಂ ತ್ವಜನಯತ್ ಸಮಾಶ್ವಾಸಂ ಹಿ ಯಂ ವಿದುಃ ॥34॥
ಎಲೈ ಮಹಾನುಭಾವನೇ, ಉಕ್ಥ ಎಂಬ ಅಗ್ನಿಯು ಮೂರುವೇದದ ಉಕ್ಥಗಳಿಂದ ಸ್ತೋತ್ರಮಾಡಲ್ಪಡುತ್ತಾನೆ. ಯಾವ ಅಗ್ನಿಯು ಮಹಾವಾಕ್ಯಗಳನ್ನು ಉಂಟುಮಾಡುತ್ತಾನೆಯೋ ಅವನನ್ನು ಸಮಾಶ್ವಾಸ ಎಂದು ಕರೆಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ನವಾಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಆಂಗಿರಸೇ ದ್ವಿತಿಯೋಽಧ್ಯಾಯಃ
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಹತ್ತನೆಯ ಅಧ್ಯಾಯ
ಮಾರ್ಕಂಡೇಯರಿಂದ ಪಾಂಚಜನ್ಯ ಅಗ್ನಿಯ ಉತ್ಪತ್ತಿ ಮತ್ತು
ಅವನ ವಂಶದ ಕಥನ.
ಮಾರ್ಕಂಡೇಯಃ
ಕಾಶ್ಯಪೋ ಹ್ಯಥ ವಾಸಿಷ್ಠಃ ಪ್ರಾಣಶ್ಚ ಪ್ರಾಣಪುತ್ರಕಃ |
ಅಂಗಿರಾಂಗಿರಸಶ್ಚೈವ ಚ್ಯವನಶ್ಚ ಸುವರ್ಚಕಃ ॥1॥
ಅಚರಂತ ತಪಸ್ತೀವ್ರಂ ಪುತ್ರಾರ್ಥೇ ಬಹುವಾರ್ಷಿಕಮ್ |
ಪುತ್ರಂ ಲಭೇಮ ಧರ್ಮಿಷ್ಠಂ ಯಶಸಾ ಬ್ರಹ್ಮಣಾ ಸಮಮ್ ॥2॥
ಮಾರ್ಕಂಡೇಯ ಕಾಶ್ಯಪ, ವಸಿಷ್ಠ ವಂಶದ ಬೃಹದ್ವ್ರತ, ಪ್ರಾಣಪುತ್ರನಾದ ಪ್ರಾಣ, ಅಂಗಿರಸರ ಪುತ್ರರಾದ ಅಂಗಿರಸರು ಮತ್ತು ಚ್ಯವನಪುತ್ರರಾದ ಸುವರ್ಚರು, ಧರ್ಮಿಷ್ಠನಾದ ಕೀರ್ತಿಯಿಂದ ಬ್ರಹ್ಮನಿಗೆ ಸಮನಾದ ಪುತ್ರನನ್ನು ಪಡೆಯೋಣವೆಂದು ಪುತ್ರಾರ್ಥವಾಗಿ ಅನೇಕ ವರ್ಷಗಳ ಕಾಲ ತೀವ್ರವಾದ ತಪಸ್ಸನ್ನು ಆಚರಿಸಿದರು.
ಮಹಾವ್ಯಾಹೃತಿಭಿರ್ಧ್ಯಾತಃ ಪಂಚಭಿಸ್ತೈಸ್ತದಾ ತ್ವಥ |
ಜಜ್ಞೇ ತೇಜೋ ಮಹಾರ್ಚಿಷ್ಮಾನ್ ಪಂಚವರ್ಣಃ ಪ್ರಭಾವನಃ ॥3॥
ಸಮಿದ್ಧೋಽಗ್ನಿಃ ಶಿರಸ್ತಸ್ಯ ಬಾಹೂ ಸೂರ್ಯನಿಭೌ ತಥಾ |
ತ್ವಙ್‌ನೇತ್ರೇ ಚ ಸುವರ್ಣಾಭೇ ಕೃಷ್ಣೇ ಜಂಘೇ ಚ ಭಾರತ ॥4॥
ಆಗ ಐದುಜನರಿಂದಲೂ ಮಹಾವ್ಯಾಹೃತಿ ಮಂತ್ರಗಳಿಂದ ಧ್ಯಾತನಾದ ಅಗ್ನಿಯು, ಪಂಚವರ್ಣದಿಂದ ಕೂಡಿದವನಾಗಿ ಸೃಷ್ಟಿಯನ್ನು ಮಾಡುವವನಾಗಿ ಸಮಿದ್ಧಾಗ್ನಿಯಾಗಿ ಜನಿಸಿದನು. ಆ ಅಗ್ನಿಗೆ ಸಮಿದ್ಧವಾದ ಅಗ್ನಿಯೇ ಶಿರಸ್ಸು. ಬಾಹುಗಳು ಸೂರ್ಯನ ಕಾಂತಿಯನ್ನು ಪಡೆದವುಗಳು. ಚರ್ಮ ಮತ್ತು ನೇತ್ರಗಳು ಸುವರ್ಣದ ಕಾಂತಿಯಿಂದ ಕೂಡಿದ್ದವು. ಎಲೈ ಭಾರತನೇ, ಜಂಗಳು ಕೃಷ್ಣವರ್ಣದಿಂದ ಕೂಡಿದ್ದವು.
ಪಂಚವರ್ಣಃ ಸ ತಪಸಾ ಕೃತಸ್ತೈಃ ಪಂಚಭಿರ್ಜನೈಃ |
ಪಾಂಚಜನ್ಯಃ ಶ್ರು(ಸು)ತೋ ದೇವಃ ಪಂಚವಂಶಕರಸ್ತು ಸಃ ॥5॥
ಆ ಐದುಜನರ ತಪಸ್ಸಿನಿಂದ ಅವನು ಐದುವರ್ಣದಿಂದ ಕೂಡಿದವನಾಗಿ ಮಾಡಲ್ಪಟ್ಟನು. ಅವನಿಗೆ ಪಾಂಚಜನ್ಯ ಎಂದು ಹೆಸರಾಯಿತು (ತಪಸ್ಸೆಂದೂ ಅವನ ಹೆಸರು). ಅವನು ಈ ಐದುಜನರ ವಂಶಗಳನ್ನು ಮುಂದುವರೆಸುವವನಾದನು.
ದಶವರ್ಷಸಹಸ್ರಾಣಿ ತಪಸ್ತಪ್ತ್ವಾ ಮಹಾತಪಾಃ |
ಜನಯತ್ ಪಾವಕಂ ಘೋರಂ ಪಿತೄಣಾಂ ಸ ಪ್ರಜಾಃ ಸೃಜನ್ ॥6॥
ಪಿತೃಗಳಿಗೆ ಪ್ರಜೆಗಳನ್ನು ಸೃಷ್ಟಿಸುವವನಾಗಿ ಮಹಾತಪಸ್ವಿಯಾದ ಅವನು ಹತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿ ಘೋರವಾದ ಅಗ್ನಿಯನ್ನು ಉತ್ಪಾದಿಸಿದನು.
ಬೃಹದ್ರಥಂತರಂ ಮೂರ್ಧ್ನೋ ವಕ್ತ್ರಾದ್ವಾ ತರಸಾಹರೌ |
ಶಿವಂ ನಾಭ್ಯಾಂ ಬಲಾದಿಂದ್ರಂ ವಾಯ್ವಗ್ನೀ ಪ್ರಾಣತೋಽಸೃಜತ್ ॥7॥
ಅವನು ತನ್ನ ಶಿರಸ್ಸಿನಿಂದ ಬೃಹದ್ರಥಂತರಗಳನ್ನೂ, ತನ್ನ ಮುಖದಿಂದ ವಾಯು ವರುಣರನ್ನೂ, ನಾಭಿಯಿಂದ ಶಿವನನ್ನೂ, ಬಲದಿಂದ ಇಂದ್ರನನ್ನೂ, ಪ್ರಾಣದಿಂದ ವಾಯ್ವಗ್ನಿಗಳನ್ನೂ ಸೃಷ್ಟಿಸಿದನು.
ಬಾಹುಭ್ಯಾಮನುದಾತ್ತೌ ಚ ವಿಶ್ವೇ ಭೂತಾನಿ ಚೈವ ಹ |
ಏತಾನ್ ಸೃಷ್ಟ್ವಾ ತತಃ ಪಂಚ ಪಿತೄಣಾಮಸೃಜತ್ ಸುತಾನ್ ॥8॥
ಬಾಹುಗಳಿಂದ ಉದಾತ್ತ ಅನುದಾತ್ತಗಳನ್ನೂ ಮತ್ತು ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಸಿದನು. ಅನಂತರ ತನ್ನ ಪಿತೃಗಳಿಗಾಗಿ ಪಂಚಪುತ್ರರನ್ನು ಸೃಷ್ಟಿಸಿದನು.

ಬೃಹದ್ರಥಸ್ಯ ಪ್ರಣಿಧಿಃ ಕಾಶ್ಯಪಸ್ಯ ಬೃಹತ್ತರಃ |
ಭಾನುಃ ಅಂಗಿರಸೋ ಧೀರಃ ಪುತ್ರೋ ವರ್ಚಸ್ಯ ಸೌಭರಃ |
ಪ್ರಾಣಸ್ಯ ಚಾನುದಾತ್ತಸ್ತು ಪ್ರಖ್ಯಾತಾಃ ಪಂಚವಂಶಜಾಃ ॥9॥
ಬೃಹದ್ರಥನಿಗೆ ಪ್ರಣಿಧಿ, ಕಾಶ್ಯಪನಿಗೆ ಬೃಹತ್ತರ, ಅಂಗಿರಸನಿಗೆ ಧೀರನಾದ ಭಾನು, ಸುವರ್ಚನಿಗೆ ಸೌಭರ, ಪ್ರಾಣನಿಗೆ ಅನುದಾತ್ತ ಇವರು ಪಂಚವಂಶಜರೆಂದು ಹೇಳಲ್ಪಡುತ್ತಾರೆ.
ದೇವಾನ್ ಯಜ್ಞಮುಷಶ್ಚಾನ್ಯಾನಸೃಜತ್ ಪಂಚದಶೋತ್ತರಾನ್ ॥10॥
ಸಭೀಮಮತಿಭೀಮಂ ಚ ಭೀಮಂ ಭೀಮಬಲಾಬಲಮ್ |
ಏತಾನ್ ಯಜ್ಞಮುಷಃ ಪಂಚ ದೇವಾನಪ್ಯಸೃಜತ್ ತಪಃ ॥11॥
ಯಜ್ಞಚೋರರಾದ ದೇವತೆಗಳನ್ನೂ ಮತ್ತು ಇನ್ನೂ ಬೇರೆ ದೇವತೆಗಳನ್ನೂ ಒಟ್ಟು ಹದಿನೈದು ದೇವತೆಗಳನ್ನು ಸೃಷ್ಟಿಸಿದನು. ತಪೋನಾಮಕನಾದ ಪಾಂಚಜನ್ಯನು ಸುಭೀಮ, ಅತಿಭೀಮ, ಭೀಮ, ಭೀಮಬಲ ಮತ್ತು ಅಬಲ ಎಂಬ ಯಜ್ಞವನ್ನು ಅಪಹರಿಸುವ ಐದು ದೇವತೆಗಳನ್ನು ಸೃಷ್ಟಿಸಿದನು.
ಸುಮಿತ್ರಂ ಮಿತ್ರವಂತಂ ಚ ಮಿತ್ರಜ್ಞಂ ಮಿತ್ರವರ್ಧನಮ್ |
ಮಿತ್ರಧರ್ಮಾಣಮಿತ್ಯೇತಾನ್ ದೇವಾನಪ್ಯಸೃಜತ್ ತತಃ ॥12॥
ಅನಂತರ ಸುಮಿತ್ರ, ಮಿತ್ರವಂತ, ಮಿತ್ರಜ್ಞ, ಮಿತ್ರವರ್ಧನ, ಮಿತ್ರಧರ್ಮ ಎಂಬ ಐದುದೇವತೆಗಳನ್ನು ಸೃಷ್ಟಿಸಿದನು.
ಸುರಪ್ರವೀರಂ ವೀರಂ ಚ ಸುಕೇಶಂ ಚ ಸುವರ್ಚಸಮ್ |
ಸುರಾಣಾಮಪಿ ಹಂತಾರಂ ಪಂಚೈತಾನುಸೃಚತ್ ತಪಃ (ತತಃ) ॥13॥
ತಪೋನಾಮಕನಾದ ಅವನು ಸುರಪ್ರವೀರ, ವೀರ, ಸುಕೇಶ, ಸುವರ್ಚ, ಸುರಹಂತಾ ಎಂಬ ಐವರನ್ನೂ ಸೃಷ್ಟಿಸಿದನು.
ತ್ರಿವಿಧಂ ಸಂಸ್ಥಿತಾ ಹ್ಯೇತೇ ಪಂಚ ಪಂಚ ಪೃಥಕ್ಪೃಥಕ್ |
ಮುಷ್ಣಂತ್ಯತ್ರ ಸ್ಥಿತಾ ಹ್ಯೇತೇ ಸ್ವರ್ಗತೋ ಯಜ್ಞಯಾಜಿನಃ ॥14॥
ಈ ಮೂರು ಐದೈದುಜನರ ಗುಂಪುಗಳು ಪ್ರತ್ಯೇಕವಾಗಿರುತ್ತವೆ. ಅವರು ಇಲ್ಲಿ ಭೂಮಿಯಲ್ಲಿಯೇ ಇದ್ದು ಯಜ್ಞವನ್ನು ಮಾಡಿ ಸ್ವರ್ಗಕ್ಕೆ ಹೋದವರನ್ನು ಸ್ವರ್ಗದಿಂದ ಅಪಹರಿಸುತ್ತಾರೆ.
ತೇಷಾಮಿಷ್ಟಂ ಹರಂತ್ಯೇತೇ ನಿಘ್ನಂತಿ ಚ ಮಹದ್ಧವಿಃ |
ಸ್ಪರ್ಧಯಾ ಹವ್ಯವಾಹಾನಾಂ ನಿಘ್ನಂತ್ಯೇತೇ ಹರಂತಿ ಚ ॥15॥
ಅವರ ಇಷ್ಟವನ್ನು ಅಪಹಾರ ಮಾಡುತ್ತಾರೆ. ಅವರ ಶ್ರೇಷ್ಠವಾದ ಹವಿಸ್ಸನ್ನು ನಾಶಪಡಿಸುತ್ತಾರೆ. ಸಾತ್ವಿಕದೇವತೆಗಳಾದ ಅಗ್ನಿಗಳ ಮೇಲಿನ ಸ್ಪರ್ಧೆಯಿಂದ ಇವರು ನಾಶವನ್ನು ಮತ್ತು ಚೌರ್ಯವನ್ನೂ ಮಾಡುತ್ತಾರೆ.
ಬಹಿರ್ವೇದ್ಯಾಂ ತದಾದಾನಂ ಕುಶಲೈಃ ಸಂಪ್ರವರ್ತಿತಮ್ |
ತದ್ಯೈತೇ ನೋಪಸರ್ಪಂತಿ ಯತ್ರ ಚಾಗ್ನಿಃ ಸ್ಥಿತೋ ಭವೇತ್ ॥16॥
ಇವರಿಗೆ ವೇದಿಕೆಯ ಹೊರಗಡೆಯಲ್ಲಿಯೇ ಬಲ್ಯಾದಿಗಳನ್ನು ಕೊಡುವುದು ನಿಪುಣರಿಂದ ಪ್ರವರ್ತಿತವಾಗಿದೆ. ಆಗ ಇವರು ಅಗ್ನಿ ಇರುವಲ್ಲಿಗೆ ಪ್ರವೇಶಿಸುವುದಿಲ್ಲ.
ಚಿತೋಽಗ್ನಿರುದ್ವಹನ್ ಯಜ್ಞಂ ಪಕ್ಷಾಭ್ಯಾಂ ತಾನ್ ಪ್ರಬಾಧತೇ |
ಮಂತ್ರೈಃ ಪ್ರಶಮಿತಾ ಹ್ಯೇತೇ ನಮುಷ್ಣಂತಿ ಚ ಯಜ್ಞಿಯಮ್ ॥17॥
ಚಯನ ಮಾಡಲ್ಪಟ್ಟ ಅಗ್ನಿಯು ಪಕ್ಷಿರೂಪವನ್ನು ತಾಳಿ ಯಜ್ಞವನ್ನು ನಿರ್ವಹಿಸುತ್ತಾ ತನ್ನ ರೆಕ್ಕೆಗಳಿಂದ ಅವರನ್ನು ಬಾಧಿಸುತ್ತಾನೆ. ಮಂತ್ರಗಳಿಂದ ಶಾಂತಗೊಳಿಸಲ್ಪಟ್ಟ ಇವರು ಆಗ ಯಜ್ಞದ ಶುಭಫಲವನಾಗಲೀ, ಯಜ್ಞಸಂಬಂಧಿಯಾದ ವಸ್ತುವನ್ನಾಗಲೀ ಕದಿಯುವುದಿಲ್ಲ.
ಬೃಹದುಕ್ಥಸ್ತಪಸ್ಯೈವ ಪುತ್ರೋ ಭೂಮಿಮುಪಾಶ್ರಿತಃ |
ಅಗ್ನಿಹೋತ್ರೇ ಹೂಯಮಾನೇ ಪೃಥಿವ್ಯಾಂ ಸದ್ಭಿರಿಜ್ಯತೇ ॥18॥
ಬೃಹದುಕ್ಥನು ತಪಃನಾಮಕನಾದ ಇದೇ ಅಗ್ನಿಯ ಪುತ್ರನಾಗಿ ಭೂಮಿಯನ್ನು ಆಶ್ರಯಿಸಿಕೊಂಡಿರುತ್ತಾನೆ. ಅಗ್ನಿಹೋತ್ರವನ್ನು ಮಾಡುವಾಗ ಸಜ್ಜನರು ಇವನಿಗೆ ಭೂಮಿಯಲ್ಲಿ ಪೂಜೆಯನ್ನು ಸಲ್ಲಿಸುತ್ತಾರೆ.
ರಥಂತರಶ್ಚ ತಪಸಃ ಪುತ್ರೋಽಗ್ನಿಃ ಪರಿಪಠ್ಯತೇ |
ಮಿತ್ರವಿಂದಾಯ ವೈ ತಸ್ಯ ಹವಿರಧ್ವರ್ಯವೋ ವಿದುಃ ॥19॥
ರಥಂತರ ಎಂಬುವನು ತಪೋನಾಮಕ ಅಗ್ನಿಯ ಇನ್ನೊಬ್ಬ ಪುತ್ರನೆಂದು ಹೇಳಲ್ಪಡುತ್ತಾನೆ (ತಪಸ್ಸೆಂಬ ಸಕಾರಾಂತ ಶಬ್ದವೂ ತಪಃ ಎಂಬ ಅಕಾರಾಂತ ಶಬ್ದವೂ ಈ ಪಾಂಚಜನ್ಯ ಅಗ್ನಿಯನ್ನೇ ಹೇಳುತ್ತದೆ). ಅವನಿಗೆ ಕೊಡುವ ಹವಿಸ್ಸು ಮಿತ್ರಲಾಭ ಪ್ರಯೋಜನವುಳ್ಳದ್ದೆಂದು ತಿಳಿಯುತ್ತಾರೆ.
ಏತೈಃ ಸಹ ಮಹಾಭಾಗ ತಪಸ್ತೇಜಸ್ವಿಭಿರ್ನೃಪ |
ಮುಮುದೇ ಪರಮಪ್ರೀತಃ ಸಹ ಪುತ್ರೈರ್ಮಹಾಯಶಾಃ ॥20॥
ಎಲೈ ಮಹಾನುಭಾವನೇ, ರಾಜನೇ, ಮಹಾಕೀರ್ತಿವಂತನಾದ ಪಾಂಚಜನ್ಯಾಗ್ನಿಯು ತಪಸ್ಸಿನಿಂದ ಸಂಪಾದಿಸಿದ ತೇಜಸ್ಸಿನಿಂದ ಕೂಡಿದ ಈ ಪುತ್ರರ ಜೊತೆಯಲ್ಲಿ ಪರಮತೃಪ್ತಿಯನ್ನು ಹೊಂದಿದವನಾಗಿ ಸಂತೋಷಪಡುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದಶಾಧಿಕದ್ವಿಶತಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಆಂಗಿರಸೇ ತೃತೀಯೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹತ್ತನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಹನ್ನೊಂದನೆಯ ಅಧ್ಯಾಯ
ಮಾರ್ಕಂಡೇಯರಿಂದ ವಿಸ್ತಾರವಾಗಿ ಅಗ್ನಿಗಳ ವಂಶ ಮತ್ತು ಗುಣಗಳ ಕಥನ.
ಮಾರ್ಕಂಡೇಯಃ
ಗುರುಭಿರ್ನಿಯಮ್ಮೆರ್ಯುಕ್ತೋ ಭರತೋ ನಾಮ ಪಾವಕಃ |
ಅಗ್ನಿಃ ಪುಷ್ಟಿಪತಿರ್ನಾಮ ತುಷ್ಟಃ ಪುಷ್ಟಿಂ ಪ್ರಯಚ್ಛತಿ ॥1॥
ಮಾರ್ಕಂಡೇಯ ಭರತನೆಂಬ ಅಗ್ನಿಯು ದೊಡ್ಡ ನಿಯಮಗಳನ್ನು ಆಚರಿಸುವವನು. ಪುಷ್ಟಿಪತಿ ಎಂಬ ಅಗ್ನಿಯು ಸಂತುಷ್ಟನಾಗಿ ಪುಷ್ಟಿಯನ್ನು ಕೊಡುವವನು.
ಭರತ್ಯೇಷ ಪ್ರಜಾಃ ಸರ್ವಾಸ್ತತೋ ಭರತ ಉಚ್ಯತೇ |
ಸತತಂ ಭರತಶ್ರೇಷ್ಠ ಪಾವಕೋವೈ ಮಹಾಪ್ರಭಃ ॥2॥
ಭರತನೆಂಬ ಅಗ್ನಿಯು ಎಲ್ಲಾ ಪ್ರಜೆಗಳನ್ನು ಸತತವಾಗಿ ಭರಣ (ಪೋಷಣ) ಮಾಡುತ್ತಾನೆ. ಆದ್ದರಿಂದಲೇ ಅವನಿಗೆ ಭರತ ಎಂದು ಹೆಸರು. ಎಲೈ ಭರತಶ್ರೇಷ್ಠನೇ, ಈ ಅಗ್ನಿಯು ಮಹಾಕಾಂತಿಯುಳ್ಳವನು.
ಅಗ್ನಿರ್ಯಶ್ಚ ಶಿವೋ ನಾಮ ಶಕ್ತಿಪೂಜಾಪರಶ್ಚ ಸಃ |
ದುಃಖಾರ್ತಾನಾಂ ಚ ಸರ್ವೇಷಾಂ ಶಿವಕೃತ್ ಸತತಂ ಶಿವಃ ॥3॥
ಶಿವನಾಮಕ ಅಗ್ನಿಯು ಶಕ್ತಿಪೂಜಾ ನಿರತನಾಗಿರುತ್ತಾನೆ. ಅವನು ದುಃಖದಿಂದ ಬಳಲಿದ ಎಲ್ಲರಿಗೂ ಶುಭವನ್ನು ಉಂಟುಮಾಡುತ್ತಾನೆ.

ತಪಸಸ್ತು ಫಲಂ ದೃಷ್ಟ್ವಾ ಸಂಪ್ರವೃದ್ಧಂ ತಪೋಮಯಮ್ |
ಉದ್ಧರ್ತುಕಾಮೋ ಮತಿಮಾನ್ ಪುತ್ರೋ ಜಜ್ಞೇ ಪುರಂದರಃ ॥4॥
ತಪೋನಾಮಕ ಅಗ್ನಿಯ ವಂಶವು ಸಮೃದ್ಧವಾಗಿ ಬೆಳೆದು ತಪೋನಿಷ್ಠವಾಗಿರುವುದನ್ನು ನೋಡಿ ಮೇಧಾವಿಯಾದ ಇಂದ್ರನು ತನ್ನ ಉದ್ಧಾರವನ್ನು ಬಯಸಿ ಅವನಿಗೆ ಪುತ್ರನಾಗಿ ಜನಿಸಿದನು.
ಊಷ್ಮಾ ಚೈವೋಷ್ಮಣೋ ಜಜ್ಞೇ ಸೋಽಗ್ನಿರ್ಭೂತೇಷು ಲಕ್ಷ್ಯತೇ |
ಅಗ್ನಿಶ್ಚಾಪಿ ಮನುರ್ನಾಮ ಪ್ರಾಜಾಪತ್ಯಮಕಾರಯತ್ ॥5॥
ತಪೋನಾಮಕ ಅಗ್ನಿಯ ಉಷ್ಣಸ್ಪರ್ಶದಿಂದ ಊಷ್ಮನಾಮಕ ಅಗ್ನಿಯು ಜನಿಸಿದನು. ಈ ಅಗ್ನಿಯು ಎಲ್ಲಾ ಪ್ರಾಣಿಗಳಲ್ಲಿ ಉಷ್ಣಸ್ಪರ್ಶರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಮನುನಾಮಕ ಅಗ್ನಿಯು ತಪೋನಾಮಕ ಅಗ್ನಿಯ ಇನ್ನೊಬ್ಬ ಪುತ್ರ. ಅವನು ಪ್ರಜೆಗಳ ಪಾಲನೆಯನ್ನು ಮಾಡುತ್ತಾನೆ.
ಶಂಭುಮಗ್ನಿಮಥ ಪ್ರಾಹುರ್ಬ್ರಾಹ್ಮಣಾ ವೇದಪಾರಗಾಃ |
ಆವಸಥ್ಯಂ ದ್ವಿಜಂ ಪ್ರಾಹುರ್ದೀಪ್ತಮಗ್ನಿಂ ಮಹಾಪ್ರಭಮ್ ॥6॥
ವೇದಪಾರಂಗತರಾದ ಬ್ರಾಹ್ಮಣರು ಶಂಭುನಾಮಕ ಅಗ್ನಿಯನ್ನು (ಇನ್ನೊಬ್ಬ ಪುತ್ರನೆಂದು) ಹೇಳುತ್ತಾರೆ. ದೀಪ್ತನಾದ ಮಹಾಪ್ರಭೆಯುಳ್ಳ ಔಪಾಸನಾಗ್ನಿಯನ್ನು ದ್ವಿಜನಾಮಕನೆಂದು ಹೇಳುತ್ತಾರೆ.
ಊರ್ಜಸ್ಕರಾನ್ ಹವ್ಯವಾಹಾನ್ ಸುವರ್ಣಸದೃಶಪ್ರಭಾನ್ |
ತತಸ್ತಪೋ ಹ್ಯಜನಯತ್ ಪಂಚ ಯಜ್ಞಸುತಾನಿಹ ॥7॥
ಅನಂತರ ತಪೋನಾಮಕ ಅಗ್ನಿಯು ದೇವಾನ್ನವನ್ನು ಮಾಡುವ ಹವ್ಯವನ್ನು ಸಾಗಿಸುವ ಐದುಜನ ಯಜ್ಞಸಂಬಂಧಿಪುತ್ರರನ್ನು ಪಡೆದನು. ಅವರು ಸುವರ್ಣ ಕಾಂತಿಯುಳ್ಳವರು.
ಪ್ರಶಾಂತೋಽಗ್ನಿರ್ಮಹಾಭಾಗ ಪರಿಶ್ರಾಂತೋ ಗವಾಂಪತಿಃ |
ಅಸುರಾನ್ ಜನಯನ್ ಘೋರಾನ್ಮರ್ತ್ಯಾಂಶ್ಚೈವ ಪೃಥಗ್ವಿಧಾನ್ ॥8॥
ಎಲೈ ಮಹಾನುಭಾವನೇ, ಪ್ರಶಾಂತ, ಪರಿಶ್ರಾಂತ ಮತ್ತು ಗೋಪತಿ ಎಂಬ ಅಗ್ನಿಗಳು ಘೋರರಾದ ಅಸುರರನ್ನೂ, ಅನೇಕ ವಿಧವಾದ ಮನುಷ್ಯರನ್ನೂ ಪಡೆದರು.
ತಪಸಶ್ಚ ಮನುಃ ಪುತ್ರೋ ಭಾನುಂ ಚಾಪ್ಯಂಗಿರಾಃ ಸೃಜತ್ |
ಬೃಹದ್ಭಾನುಂ ತು ತಂ ಪ್ರಾಹುರ್ಬ್ರಾಹ್ಮಣಾ ವೇದಪಾರಗಾಃ ॥9॥
ತಪೋನಾಮಕ ಅಗ್ನಿಗೆ ಮನುನಾಮಕ ಅಗ್ನಿಯು ಇನ್ನೊಬ್ಬ ಪುತ್ರ. ಅಂಗಿರಾ ನಾಮಕ ಅಗ್ನಿಯು ಭಾನುವನ್ನು ಪುತ್ರನನ್ನಾಗಿ ಪಡೆದನು. ವೇದಪಾರಂಗತರಾದ ಬ್ರಾಹ್ಮಣರು ಇವನನ್ನು ಬೃಹದ್ಭಾನು ಎಂದೂ ಕರೆಯುತ್ತಾರೆ.
ಭಾನೋರ್ಭಾರ್ಯಾ ಸುಪ್ರಜಾ ತು ಬೃಹದ್ಭಾಸಾ ತು ಸೋಮಜಾ |
ಅಸೃಜೇತಾಂ ತು ತೇಪುತ್ರಾನ್ ಶೃಣು ತೇಷಾಂ ಪ್ರಜಾವಿಧಿಮ್ ॥10॥
ಚಂದ್ರನ ಮಕ್ಕಳಾದ ಸುಪ್ರಜಾ ಮತ್ತು ಬೃಹದ್ಭಾಸಾ ಎಂಬುವವರು ಭಾನುವಿನ ಪತ್ನಿಯರು. ಅವರಿಬ್ಬರೂ ಅನೇಕ ಪುತ್ರರನ್ನು ಪಡೆದರು. ಅವರ ವಂಶವನ್ನು ಕೇಳು.
ದುರ್ಬಲಾನಾಂ ತು ಭೂತಾನಾಮಸೂನ್ಯಃ ಪಂಪ್ರಯಚ್ಛತಿ |
ತಮಗ್ನಿಂ ಬಲದಂ ಪ್ರಾಹುಃ ಪ್ರಥಮಂ ಭಾನುತಃ ಸುತಮ್ ॥11॥
ದುರ್ಬಲರಾದ ಮನುಷ್ಯರಿಗೆ ಮತ್ತು ಪ್ರಾಣಿಗಳಿಗೆ ಯಾವನು ಪ್ರಾಣಗಳನ್ನು ಕೊಡುತ್ತಾನೆಯೋ ಅವನನ್ನು ಬಲದ ಎಂದು ಕರೆಯುತ್ತಾರೆ. ಅವನು ಭಾನುವಿನ ಪ್ರಥಮ ಪುತ್ರ.

ಯಃ ಪ್ರಶಾಂತೇಷು ಭೂತೇಷು ಮನ್ಯುರ್ಭವತಿ ದಾರುಣಃ |
ಅಗ್ನಿಃ ಸ ಮನ್ಯುಮಾನ್ನಾಮ ದ್ವಿತೀಯೋ ಭಾನುತಃ ಸುತಃ ॥12॥
ಪ್ರಶಾಂತವಾದ ಪ್ರಾಣಿಗಳು ಮತ್ತು ಮನುಷ್ಯರಲ್ಲಿ ದಾರುಣವಾದ ಕೋಪವು ಉಂಟಾಗುವುದಕ್ಕೆ ಕಾರಣನಾದವನು ಮನ್ಯುಮಾನ್ ಎಂಬ ಅಗ್ನಿ. ಅವನು ಭಾನುವಿನ ಎರಡನೆಯ ಪುತ್ರ.
ದರ್ಶೇ ಚ ಪೌರ್ಣಮಾಸೇ ಚ ಯಸ್ಯೇಹ ಹವಿರುಚ್ಯತೇ |
ವಿಷ್ಣುನಾ ಸಹ ಯೋಽಗ್ನಿಸ್ತು ಧೃತಿಮಾನ್ನಾಮ ಸೋಽಂಗಿರಾಃ ॥13॥
ದರ್ಶಪೂರ್ಣಮಾಸಗಳಲ್ಲಿ ಯಾವ ಅಗ್ನಿಗೆ ವಿಷ್ಣುವಿನ ಜೊತೆಯಲ್ಲಿ ಹವಿಸ್ಸು ಸಲ್ಲುತ್ತದೆಯೋ ಅವನಿಗೆ ಧೃತಿಮಾನ್ ಎಂದು ಹೆಸರು. ಅವನು ಅಂಗಿರಸರ ವಂಶಕ್ಕೆ ಸೇರಿದವನು.
ಇಂದ್ರೇಣ ಸಹಿತಂ ಯಸ್ಯ ಹವಿರಾಗ್ರಯಣಂ ಸ್ಮೃತಮ್ |
ಅಗ್ನಿರಾಗ್ರಯಣೋ ನಾಮ ಭಾನೋರೇವಾನ್ವಯಸ್ತು ಸಃ ॥14॥
ಯಾವ ಅಗ್ನಿಗೆ ಇಂದ್ರನ ಜೊತೆಯಲ್ಲಿ ಆಗ್ರಯಣ ಹವಿಸ್ಸು ಸಲ್ಲುತ್ತದೆಯೋ ಅವನಿಗೆ ಆಗ್ರಯಣ ಎಂದೇ ಹೆಸರು. ಅವನು ಭಾನುವಿನ ವಂಶಕ್ಕೆ ಸೇರಿದವನು.
ಚಾತುರ್ಮಾಸ್ಯೇಷು ನಿತ್ಯಾನಾಂ ಹವಿಷಾಂ ಯೋ ನಿರಗ್ರಹಃ |
ಚತುರ್ಭಿಃ ಸಹಿತಃ ಪುತ್ರೈರ್ಭಾನೋರೇವಾನ್ವಯಃ ಸ್ಮೃತಃ ॥15॥
ಚಾತುರ್ಮಾಸ್ಯದಲ್ಲಿ ಯಾವ ಅಗ್ನಿಯು ತನ್ನ ನಾಲ್ಕುಪುತ್ರರ ಜೊತೆಯಲ್ಲಿ ನಿತ್ಯವಾದ ಹವಿಸ್ಸನ್ನು ಸ್ವೀಕರಿಸುತ್ತಾನೆಯೋ ಅವನಿಗೆ ನಿರಗ್ರಹ (ನಿರಗ್ರಜ) ಎಂದು ಹೆಸರು. ಅವನು ಭಾನುವಿನ ವಂಶಕ್ಕೇ ಸೇರಿದವನು.
ನಿಶಾ ತ್ವಜನಯತ್ ಕನ್ಯಾಮಗ್ನೀಷೋಮಾವುಭೌ ತಥಾ |
ಮನೋರೇವಾಭವದ್ ಭಾರ್ಯಾ ಸುಷುವೇ ಪಂಚ ಪಾವಕಾನ್ ॥16॥
ನಿಶಾ ಎಂಬ ರಾತ್ರ್ಯಭಿಮಾನಿ ದೇವತೆಯು ಒಬ್ಬ ಕನ್ಯೆಯನ್ನೂ ಅಗ್ನಿ ಸೋಮ ಎಂಬ ಇಬ್ಬರು ಪುತ್ರರನ್ನೂ ಪಡೆದಳು. ಆ ಕನ್ಯೆಯು ಮನುನಾಮಕ ಅಗ್ನಿಯ ಪತ್ನಿಯಾಗಿ ಐದು ಅಗ್ನಿಗಳನ್ನು ಮಕ್ಕಳಾಗಿ ಪಡೆದಳು.
ಪೂಜ್ಯತೇ ಹವಿಷಾಗ್ರ್ಯೇಣ ಚಾತುರ್ಮಾಸ್ಯೇಷು ಪಾವಕಃ |
ಪರ್ಜನ್ಯಸಹಿತಃ ಶ್ರೀಮಾನಗ್ನಿರ್ವೈಶ್ವಾನರಸ್ತು ಸಃ ॥17॥
ಚಾತುರ್ಮಾಸ್ಯಗಳಲ್ಲಿ ಯಾವ ಅಗ್ನಿಯು ಪರ್ಜನ್ಯನ ಜೊತೆಯಲ್ಲಿ ಶ್ರೇಷ್ಠವಾದ ಹವಿಸ್ಸಿನಿಂದ ಪೂಜಿಸಲ್ಪಡುತ್ತಾನೆಯೋ ಕಾಂತಿಯುಕ್ತನಾದ ಅವನಿಗೆ ವೈಶ್ವಾನರ ಎಂದು ಹೆಸರು.
ಅಸ್ಯ ಲೋಕಸ್ಯ ಸರ್ವಸ್ಯ ಯಃ ಪ್ರಭುಃ ಪರಿಪಠ್ಯತೇ |
ಸೋಽಗ್ನಿರ್ವಿಶ್ವಪತಿರ್ನಾಮ ದ್ವಿತೀಯೋ ವೈ ಮನೋಃ ಸುತಃ ॥18॥
ಎಲ್ಲ ಮನುಷ್ಯರಿಗೂ ಯಾವನನ್ನು ಪ್ರಭುವೆಂದು ಕರೆಯುತ್ತಾರೆಯೋ ಅವನನ್ನು ವಿಶ್ವಪತಿ ಎಂದು ಕರೆಯುತ್ತಾರೆ. ಅವನು ಮನುವಿನ ದ್ವಿತೀಯ ಪುತ್ರ (ವೈಶ್ವಾನರನು ಪ್ರಥಮ ಪುತ್ರ).
ಯಸ್ತು ವಿಶ್ವಸ್ಯ ಜಗತೋ ಬುದ್ಧಿಮಾಕ್ರಮ್ಯ ತಿಷ್ಠತಿ |
ತಂ ಪ್ರಾಹುರಧ್ಯಾತ್ಮವಿದೋ ವಿಶ್ವಜಿನ್ನಾಮ ಪಾವಕಮ್ ॥19॥
ಯಾವ ಅಗ್ನಿಯು ಎಲ್ಲ ಜೀವರ ಬುದ್ಧಿಯನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ಇರುತ್ತಾನೆಯೋ ಅವನನ್ನು ಅಧ್ಯಾತ್ಮಜ್ಞಾನಿಗಳು ವಿಶ್ವಜಿತ್‌ನಾಮಕನಾದ ಅಗ್ನಿ ಎಂದು ಕರೆಯುತ್ತಾರೆ.
ಅಂತರಗ್ನಿಃ ಶ್ರಿತೋ ಯೋ ಹಿ ಭುಕ್ತಂ ಪಚತಿ ದೇಹಿನಾಮ್ |
ಸ ಜಜ್ಞೇ ವಿಶ್ವಭುಙ್‌ನಾಮ ಸರ್ವಲೋಕೇಶ್ವರೇಶ್ವರಃ ॥20॥
ಯಾವ ಅಗ್ನಿಯು ದೇಹದ ಒಳಗಿದ್ದು ಪ್ರಾಣಿಗಳು ತಿಂದ ಆಹಾರವನ್ನು ಪಚನ ಮಾಡುತ್ತಾನೆಯೋ ಅವನಿಗೆ ವಿಶ್ವಭುಗ್ ಎಂದು ಹೆಸರು. ಅವನು ಎಲ್ಲ ಪ್ರಾಣಿಗಳಿಗೂ ಪ್ರಭುವಾಗಿದ್ದಾನೆ.
ಬ್ರಹ್ಮಚಾರೀ ಯತಾತ್ಮಾ ಚ ಸತತಂ ವಿಪುಲವ್ರತಃ |
ಬ್ರಾಹ್ಮಣಾಃ ಪೂಜಯಂತ್ಯೇನಂ ಪಾಕಯಜ್ಞೇಷು ಪಾವಕಮ್ ॥21॥
ಅವನು ಬ್ರಹ್ಮಚಾರಿ, ಮನೋನಿಗ್ರಹವುಳ್ಳವನು, ಸತತವಾಗಿ ಅನೇಕ ವ್ರತಗಳನ್ನು ಧರಿಸಿದವನು. ಬ್ರಾಹ್ಮಣರು ಪಾಕಯಜ್ಞಗಳಲ್ಲಿ ಈ ಅಗ್ನಿಯನ್ನು ಪೂಜಿಸುತ್ತಾರೆ.
ಪ್ರಥಿತೋ ಗೋಪತಿರ್ನಾಮ ನದೀ ಭಾರ್ಯಾಽಭವತ್ಪ್ರಿಯಾ |
ತಸ್ಮಿನ್ ಸರ್ವಾಣಿ ಕರ್ಮಾಣಿ ಕ್ರಿಯಂತೇ ಧರ್ಮಸೇವತಃ ॥22॥
ಗೋಪತಿ ಎಂಬ ಅಗ್ನಿಯು ಭಾನುವಿನ ಇನ್ನೊಬ್ಬ ಪುತ್ರನು. ನದೀ ಎಂಬುವಳು ಅವನ ಪ್ರಿಯಪತ್ನಿ. ಧರ್ಮಸ್ಥಾಪಕವಾದ ಎಲ್ಲಾ ಕರ್ಮಗಳನ್ನೂ ಈ ಅಗ್ನಿಯಲ್ಲಿ ಮಾಡುತ್ತಾರೆ.
ಕನ್ಯಾ ಸಾ ರೋಹಿಣೀ ನಾಮ ಹಿರಣ್ಯಕಶಿಪೋಃ ಸುತಾ |
ಕರ್ದಮಸ್ಯಾಭವದ್ ಭಾರ್ಯಾ ಸ ವಹ್ನಿಃ ಸ ಪ್ರಜಾಪತಿಃ ॥23॥
ಹಿರಣ್ಯಕಶಿಪುವಿನ ಮಗಳಾದ ರೋಹಿಣೀ ಎಂಬ ಕನ್ಯೆಯು ಕರ್ದಮನಾಮಕ ವಹ್ನಿಯ ಪತ್ನಿ. ಆ ವಹಿನಯು ಪ್ರಜೆಗಳ ಪಾಲನೆಯನ್ನು ಮಾಡುತ್ತಾನೆ.
ಪ್ರಾಣಾನಾಶ್ರಿತ್ಯ ಯೋ ದೇಹಂ ಪ್ರವರ್ತಯತಿ ದೇಹಿನಾಮ್ |
ತಸ್ಯ ಸನ್ನಿಹಿತೋ ನಾಮ ಶಬ್ದರೂಪಸ್ಯ ಸಾಧನಃ ॥24॥

ದೇಹಿಗಳ ಇಂದ್ರಿಯಗಳನ್ನು ಆಶ್ರಯಿಸಿ ಯಾವ ಅಗ್ನಿಯು ಅವರಲ್ಲಿ ಪ್ರವೃತ್ತಿಯನ್ನು ಉಂಟುಮಾಡುತ್ತಾನೆಯೋ ಅವನಿಗೆ ಸನ್ನಿಹಿತ ಎಂದು ಹೆಸರು. ಅವನು ಶಬ್ದ ಮತ್ತು ರೂಪಗಳ ಜ್ಞಾನಕ್ಕೆ ಸಾಧನವಾಗಿದ್ದಾನೆ.

ಶುಕ್ಲಕೃಷ್ಣವಪುರ್ದೇವೋ ಯೋ ಬಿಭರ್ತಿ ಹುತಾಶನಃ |
ಅಕಲ್ಮಷಃ ಕಲ್ಮಷಾಣಾಂ ಕರ್ತಾ ಕ್ರೋಧಾಶ್ರಿತಸ್ತು ಸಃ ||25||
ಯಾವ ಅಗ್ನಿಯು ಶುಕ್ಲಕೃಷ್ಣ ದೇಹವನ್ನು ಧರಿಸಿ ತಾನು ಕಲ್ಮಶರಹಿತನಾಗಿ ಜೀವರಲ್ಲಿ ಕಲ್ಮಶವನ್ನು ಉಂಟುಮಾಡುತ್ತಾನೆಯೋ ಅವನಿಗೆ ಕ್ರೋಧಾಶ್ರಿತ ಎಂದು ಹೆಸರು.

ಕಪಿಲಂ ಪರಮರ್ಷಿಂ ಚ ಯಂ ಪ್ರಾಹುರ್ಯತಯಃ ಸದಾ |
ಅಗ್ನಿಃ ಸ ಕಪಿಲೋ ನಾಮ ಸಾಂಖ್ಯಯೋಗಪ್ರವರ್ತಕಃ ||26||
ಯತಿಗಳು ಯಾವನನ್ನು ಸದಾ ಕಪಿಲ ಮಹರ್ಷಿ ಎಂದು ಹೇಳುತ್ತಾರೆಯೋ ಅವನು ಕಪಿಲನಾಮಕ ಅಗ್ನಿ. ಅವನು ಸಾಂಖ್ಯಯೋಗಪ್ರವರ್ತಕನಾದವನು.

ಅನ್ನಂ ಯಚ್ಛಂತಿ ಭೂತಾನಾಂ ಯೇನ ಭೂತಾನಿ ನಿತ್ಯದಾ |
ಕರ್ಮಸ್ವಿಹ ವಿಚಿತ್ರೇಷು ಸೋಽಗ್ರಣೀರ್ವಹ್ನಿರುಚ್ಯತೇ ||27||
ಅನೇಕ ವಿಧವಾದ ಕರ್ಮಗಳನ್ನು ಮಾಡಿದಾಗ ಮನುಷ್ಯರು ಪ್ರಾಣಿಗಳಿಗೆ ನಿತ್ಯವೂ ಏನು ಅನ್ನದಾನವನ್ನು ಮಾಡುತ್ತಾರೆಯೋ ಅದಕ್ಕೆ ಪ್ರೇರಕನಾದ ಅಗ್ನಿಗೆ ಅಗ್ರಣೀ ಎಂದು ಹೆಸರು.

ಇಮಾನನ್ಯಾನ್ ಸಮಸೃಜತ್ ಪಾವಕಾನ್ ಪ್ರಥಿತಾನ್ ಭುವಿ |
ಅಗ್ನಿಹೋತ್ರಸ್ಯ ದುಷ್ಟಸ್ಯ ಪ್ರಾಯಶ್ಚಿತ್ತಾರ್ಥಮುಲ್ಬಣಾನ್ ||28||
ಅನಂತರ ಅಗ್ನಿಹೋತ್ರವು ದುಷ್ಟವಾದಾಗ ಪ್ರಾಯಶ್ಚಿತ್ತವನ್ನು ಮಾಡುವ ಸಲುವಾಗಿ ಈ ಉಲ್ಬಣವಾದ ಪ್ರಖ್ಯಾತರಾದ ಅನೇಕ ವಹ್ನಿಗಳನ್ನು ಭಾನುವು ಸೃಷ್ಟಿಮಾಡಿದನು.

ಸಂಸ್ಪೃಶೇಯುರ್ಯದಾನ್ಯೋನ್ಯಂ ಕಥಂಚಿದ್ ವಾಯುನಾಽಗ್ನಯಃ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ವೈ ಶುಚಯೇಽಗ್ನಯೇ ||29||
ಯಾವಾಗ ವಾಯುವಿನಿಂದ ಎರಡು ಅಗ್ನಿಗಳಿಗೆ ಸಂಸ್ಪರ್ಶವುಂಟಾಗುತ್ತದೆಯೋ ಆಗ ಎಂಟುಕಪಾಲದ ಪುರೋಡಾಶದಿಂದ ಶುಚಿ ಎಂಬ ಅಗ್ನಿಗೆ ಇಷ್ಟಿಯನ್ನು ಮಾಡಬೇಕು.

ದಕ್ಷಿಣಾಗ್ನಿರ್ಯದಾ ದ್ವಾಭ್ಯಾಂ ಸಂಸೃಜೇತ ತದಾ ಕಿಲ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ವೈ ವೀತಯೇಽಗ್ನಯೇ ||30||
ದಕ್ಷಿಣಾಗ್ನಿಗೆ ಉಳಿದ ಎರಡು ಅಗ್ನಿಗಳಾದ ಆಹವನೀಯ ಮತ್ತು ಗಾರ್ಹಪತ್ಯದ ಸಂಸ್ಪರ್ಶ ಉಂಟಾದರೆ ವೀತಿನಾಮಕ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ಯದ್ಯಗ್ನಯೋ ಹಿ ಸ್ಪೃಶ್ಯೇಯುರ್ನಿವೇಶಸ್ಥಾ ದವಾಗ್ನಿನಾ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ತು ಶುಚಯೇಽಗ್ನಯೇ ||31||
ಗೃಹದಲ್ಲಿರುವ ಅಗ್ನಿಗಳಿಗೆ ದಾವಾಗ್ನಿಯ ಸ್ಪರ್ಶವುಂಟಾದರೆ ಶುಚಿನಾಮಕ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ಅಗ್ನಿಂ ರಜಸ್ವಲಾ ವೈ ಸ್ತ್ರೀ ಸಂಸ್ಪೃಶೇದಗ್ನಿಹೋತ್ರಿಕಮ್ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ವಸುಮತೇಽಗ್ನಯೇ ||32||
ಅಗ್ನಿಹೋತ್ರದ ಅಗ್ನಿಯನ್ನು ರಜಸ್ವಲೆಯಾದ ಸ್ತ್ರೀಯು ಮುಟ್ಟಿದರೆ ವಸುಮಾನ್ ಎಂಬ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ವೈದ್ಯುತಾಗ್ನಿರ್ಯದಾ ತ್ವಗ್ನಿಂ ಸಂಸ್ಪೃಶೇದಾಗ್ನಿಹೋತ್ರಿಕಮ್ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ಹ್ಯಗ್ನಿಮತೇಽಗ್ನಯೇ ||33||
ಅಗ್ನಿಹೋತ್ರದ ಅಗ್ನಿಗೆ ಮಿಂಚು ಅಥವಾ ಸಿಡಿಲಿನ ಸ್ಪರ್ಶವುಂಟಾದರೆ ಅಗ್ನಿಮಾನ್ ನಾಮಕ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ಮೃತಃ ಶ್ರೂಯೇತ ಯೋ ಜೀವನ್ ಪರೇಯುಃ ಪಶವೋ ಯದಾ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ಸುರಭಿಮತೇಽಗ್ನಯೇ ||34||
ಬದುಕಿರುವವನು ಮೃತನೆಂಬ ವಾರ್ತೆಯು ಕೇಳಿಬಂದರೆ ಅಥವಾ ಅಗ್ನಿಹೋತ್ರದ ಸ್ಥಳದಲ್ಲಿ ಪಶುಗಳು ಮರಣಹೊಂದಿದರೆ ಸುರಭಿಮಾನ್ ಎಂಬ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ಮೃತೇ ಸ್ಪೃಶೇಚ್ಚ ಯಶ್ಚಾಗ್ನಿಮ್ ಅಶುಚಿರ್ಬಾಲಿಶೋ ನರಃ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ಸ್ಯಾದುತ್ತರಾಗ್ನಯೇ ||35||
ಮೃತಾಶೌಚ ಇರುವಾಗ ಬಾಲಿಶನಾದ ಮನುಷ್ಯನು ಅಗ್ನಿಹೋತ್ರಾದಿ ಅಗ್ನಿಯನ್ನು ಸ್ಪರ್ಶಮಾಡಿದರೆ ಉತ್ತರನಾಮಕ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ಆರ್ತೋ ನ ಜುಹುಯಾದಗ್ನಿಂ ತ್ರಿರಾತ್ರಂ ಯಸ್ತು ಬ್ರಾಹ್ಮಣಃ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ಪಥಿಕೃತೇಽಗ್ನಯೇ ||36||
ರೋಗಗ್ರಸ್ತನಾದ ಬ್ರಾಹ್ಮಣನು ಮೂರುದಿನಗಳ ಕಾಲ ಅಗ್ನಿಹೋತ್ರದಲ್ಲಿ ಹೋಮವನ್ನು ಮಾಡದಿದ್ದರೆ ಪಥಿಕೃತ್ ಎಂಬ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.

ಸೂತಿಕಾಗ್ನಿರ್ಯದಾ ಚಾಗ್ನಿಂ ಸಂಸ್ಪೃಶೇದಗ್ನಿಹೋತ್ರಿಕಮ್ |

ದರ್ಶಂ ಚ ಪೌರ್ಣಮಾಸಂ ಚ ಯಸ್ಯ ತಿಷ್ಠೇತ್ಪ್ರತಿಷ್ಠಿತಮ್ |
ಇಷ್ಟಿರಷ್ಟಾಕಪಾಲೇನ ಕಾರ್ಯಾ ಚಾಭಿಮತೇಽಗ್ನಯೇ ||37||
ಜಾತಾಶೌಚ ಇರುವವನು ಮನೆಯಲ್ಲಿ ಪ್ರತಿಷ್ಠಿತವಾದ ಅಗ್ನಿಹೋತ್ರಾದಿಗಳನ್ನು ಸ್ಪರ್ಶಮಾಡಿದರೆ ಅಥವಾ ದರ್ಶಪೌರ್ಣಮಾಸಗಳ ಉಲ್ಲಂಘನೆಯಾದರೆ ಅಭಿಮಾನ್ (ಅಶುಚಿ) ಎಂಬ ಅಗ್ನಿಗೆ ಅಷ್ಟಕಪಾಲದ ಇಷ್ಟಿಯನ್ನು ಮಾಡಬೇಕು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕಾದಶಾಧಿಕದ್ವಿಶತಶತತಮೋಽಧ್ಯಾಯಃ ||
|| ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಆಂಗಿರಸೇ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹನ್ನೊಂದನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಹನ್ನೆರಡನೆಯ ಅಧ್ಯಾಯ
ಮಾರ್ಕಂಡೇಯರಿಂದ ಪುನಃ ಅಗ್ನಿವಂಶದ ಕಥನ.
ಮಾರ್ಕಂಡೇಯಃ
ಅಪವಸ್ಯ ಸುತಾ ಭಾರ್ಯಾ ಸಹಸ್ಯ ಪರಮಪ್ರಿಯಾ |
ಭೂಪತಿಂಭರ್ೂತಭರ್ತಾರಂ ಜನಯಾಮಸ ಪಾವಕಮ್ ||1||
ಮಾರ್ಕಂಡೇಯ ವಸಿಷ್ಠರ ಪುತ್ರಿಯು ಸಹ ನಾಮಕನಾದ ಅಗ್ನಿಯ ಪರಮಪ್ರಿಯಳಾದ ಪತ್ನಿ. ಅವನು ಅವಳಲ್ಲಿ ಭೂಪತಿ ಮತ್ತು ಭೂತಭರ್ತಾ ಎಂಬ ಅಗ್ನಿಗಳನ್ನು ಮಕ್ಕಳಾಗಿ ಪಡೆದನು.
ಭೂತಾನಾಂ ಚಾಪಿ ಸರ್ವೇಷಾಂ ಯಂ ಪ್ರಾಹುಃ ಪಾವಕಂ ಪತಿಮ್ |
ಆತ್ಮಾ ಭುವನಭರ್ತೇತಿ ಸಾನ್ವಯೇಷು ದ್ವಿಜಾತಿಷು ||2||
ಭೂತಪತಿ ಅಗ್ನಿಯನ್ನು ಎಲ್ಲಾ ಭೂತಗಳಿಗೂ ಒಡೆಯನೆಂದು ಹೇಳುತ್ತಾರೆ. ಅವನು ಆತ್ಮಾ ಎಂದೂ ಭುವನಭರ್ತಾ ಎಂದೂ ಬ್ರಾಹ್ಮಣರು ತಮ್ಮ ವಂಶಪರಂಪರೆಯಲ್ಲಿ ಕರೆಯುತ್ತಾರೆ.
ಮಹತಾಂ ಚೈವ ಭೂತಾನಾಂ ಸರ್ವೇಷಾಮಿಹ ಯಃ ಪತಿಃ |
ಭಗವಾನ್ ಸ ಮಹಾತೇಜಾ ನಿತ್ಯಂ ಚರತಿ ಪಾವಕಃ ||3||
ಮಹಾಭೂತಗಳಿಗೆ ಒಡೆಯನಾದ ಯಾವ ಅಗ್ನಿ ಇದ್ದಾನೆಯೋ ಅವನನ್ನು ಪಾವಕ ಎಂದು ಕರೆಯುತ್ತಾರೆ. ಪೂಜ್ಯನಾದ ಮಹಾತೇಜಸ್ವಿಯಾದ ಅವನು ಯಾವಾಗಲೂ ಸಂಚರಿಸುತ್ತಾನೆ.
ಅಗ್ನಿರ್ಗೃ(ಬೃ)ಹಪತಿರ್ನಾಮ ನಿತ್ಯಂ ಯಜ್ಞೇಷು ಪೂಜ್ಯತೇ |
ಹುತಂ ವಹತಿ ಯೋ ಹವ್ಯಮಸ್ಯ ಲೋಕಸ್ಯ ಪಾವಕಃ ||4||
ಉತ್ತಮವಾದ ಹವಿಸ್ಸನ್ನು ಯಾರು ಲೋಕಗಳಿಗೆ ಕೊಂಡೊಯ್ಯುತ್ತಾನೆಯೋ ಅವನಿಗೆ ಗೃಹಪತಿ (ಬೃಹಸ್ಪತಿ) ಎಂದು ಹೆಸರು. ಅವನು ಯಾವಾಗಲೂ ಯಜ್ಞದಲ್ಲಿ ಪೂಜಿಸಲ್ಪಡುತ್ತಾನೆ.
ಅಪಾಂಗರ್ಭೋ ಮಹಾಭಾಗಃ ಮಹಪುತ್ರೋ ಮಹಾದ್ಭುತಃ |
ಭೂಪತಿರ್ಭೂತಭರ್ತಾ ಚ ಮಹತಃ ಪತಿರುಚ್ಯತೇ |
ದಹನ್ ಮೃತಾನಿ ಭೂತಾನಿ ತಸ್ಯಾಗ್ನಿರ್ಭರತೋಽಭವನ್ ||5||
ಅಗ್ನಿಷ್ಟೋಮೇ ತು ನಿಯತಃ ಕ್ರತುಶ್ರೇಷ್ಠೋ ಭವತ್ಯುತ ||6||
ಜಲಗರ್ಭದಲ್ಲಿರುವ ಮಹಾನುಭಾವನಾದ ಮಹಾದ್ಭುತನೂ (ಇವನಿಗೆ ಅದ್ಭುತ ಎಂದು ಹೆಸರು) ಸಹ ನಾಮಕ ಅಗ್ನಿಯ ಪುತ್ರನು. ಭೂಪತಿ ಮತ್ತು ಭೂತಭರ್ತರೂ ಸಹ ಸಹಪುತ್ರರು. ಅದ್ಭುತನು ಶ್ರೇಷ್ಠರಾದವರಿಗೆ ಪತಿ ಎಂದು ಹೇಳಲ್ಪಡುತ್ತಾನೆ. ಮೃತರಾದ ಪ್ರಾಣಿಗಳನ್ನು ಯಾವ ಅಗ್ನಿ ಸುಡುತ್ತಾನೋ ಅವನಿಗೆ ಭರತನೆಂದು ಹೆಸರು. ಶ್ರೇಷ್ಠ ಕ್ರತುವಾದ ಅಗ್ನಿಷ್ಟೋಮದಲ್ಲಿ ಪೂಜಿಸಲ್ಪಡುವವನು ನಿಯತನಾಮಕನಾದ ಅಗ್ನಿ.
ಆಯಾಂತಂ ನಿಯತೋ ದೃಷ್ಟ್ವಾ ಪ್ರವಿಶೇಶಾರ್ಣವಂ ಭಯಾತ್ |
ದೇವಾಸ್ತತ್ರಾಪಿ ಗಚ್ಛಂತಿ ಮಾರ್ಗಮಾಣಾ ಯಥಾದಿಶಮ್ ||7||
ದೇಹದಾಹಕನಾದ ಭರತನು ಬರುತ್ತಿರುವುದನ್ನು ಕಂಡು ನಿಯತನು ಭಯದಿಂದ ಸಮುದ್ರವನ್ನು ಪ್ರವೇಶಿಸಿದನು. ದೇವತೆಗಳು ಅಲ್ಲಿಯೂ ಅವನನ್ನು ಎಲ್ಲ ದಿಕ್ಕುಗಳಲ್ಲಿಯೂ ಹುಡುಕಿಕೊಂಡು ಹೋದರು.
ದೃಷ್ಟ್ವಾ ತ್ವಗ್ನಿರಥರ್ವಾಣಂ ತತೋ ವಚನಮಬ್ರವೀತ್ |
ದೇವಾನಾಂ ವಹ ಹವ್ಯಂ ತ್ವಮಹಂ ವೀರ ಸುದುರ್ಬಲಃ |
ಅಥರ್ವನ್ ಗಚ್ಛ ಮಧ್ವಕ್ಷ ಪ್ರಿಯಮೇತತ್ ಕುರುಷ್ವ ಮೇ ||8||
ನಿಯತನಾಮಕ ಅಗ್ನಿಯು ಅಥರ್ವನಾಮಕ ಅಗ್ನಿಯನ್ನು ಕಂಡು ಎಲೈ ವೀರನೇ, ನಾನು ಬಹಳ ದುರ್ಬಲನಾಗಿದ್ದೇನೆ. ನೀನೇ ದೇವತೆಗಳಿಗೆ ಹವ್ಯವನ್ನು ತೆಗೆದುಕೊಂಡು ಹೋಗು. ಎಲೈ ಅಥರ್ವನಾಮಕ ಅಗ್ನಿಯೇ, ವಿಮಲಾಕ್ಷನೇ, ನೀನೇ ಹವ್ಯವನ್ನು ತೆಗೆದುಕೊಂಡು ಹೋಗಿ ನನಗೆ ಪ್ರಿಯವನ್ನುಂಟುಮಾಡು ಎಂದು ಮಾತನಾಡಿದನು.
ಮಾರ್ಕಂಡೇಯಃ
ಪ್ರೇಷ್ಯ ಚಾಗ್ನಿರಥರ್ವಾಣಮನ್ಯಂ ದೇಶಂ ತತೋಽಗಮತ್ |
ಮತ್ಸ್ಯಾಸ್ತಸ್ಯ ಸಮಾಚಖ್ಯುಃ ಕ್ರುದ್ಧಸ್ತಾನಗ್ನಿರಬ್ರವೀತ್ |
ಭಕ್ಷ್ಯಾ ವೈ ವಿವಿಧೈರ್ಭಾವೈರ್ಭವಿಷ್ಯಥ ಶರೀರಿಣಾಮ್ ||9||

ಮಾರ್ಕಂಡೇಯ ಅಥರ್ವಾಗ್ನಿಯನ್ನು ಹಾಗೆ ಕಳುಹಿಸಿ ನಿಯತನು ಬೇರೆ ದೇಶಕ್ಕೆ ಹೋಗಿ ನೀರಿನಲ್ಲಿ ಅಡಗಿಕೊಂಡನು. ಮತ್ಸ್ಯಗಳು ಅವನು ಅಲ್ಲಿ ಇರುವುದನ್ನು ತಿಳಿಸಿದವು. ಕ್ರುದ್ಧನಾದ ಅಗ್ನಿಯು ಅವುಗಳಿಗೆ ನೀವು ಅನೇಕ ವಿಧಗಳಲ್ಲಿ ಶರೀರಿಗಳಿಗೆ ಆಹಾರವಾಗಿ ಎಂದು ಶಾಪವನ್ನು ಕೊಟ್ಟನು.
ಅಥರ್ವಾಣಂ ತಥಾ ಚಾಪಿ ಹವ್ಯವಾಹೋಽಬ್ರವೀದ್ ವಚಃ ॥10॥
ಮತ್ತು ಪುನಃ ಅಥರ್ವಾಗ್ನಿಯ ಜೊತೆಯಲ್ಲಿ ಮಾತನಾಡಿದನು.
ಅನುನೀಯಮಾನೋ ಹಿ ಭೃಶಂ ದೇವವಾಕ್ಯದ್ದಿ ತೇನ ಸಃ |
ನೈಚ್ಛದ್ ವೋಢುಂ ಹವಿಃ ಸೋಢುಂ ಶರೀರಂ ಚಾಪಿ ಸೋಽತ್ಯಜತ್ ॥
ಅಥರ್ವಾಗ್ನಿಯನ್ನು ದೇವವಾಕ್ಯಕ್ಕೆ ಅನುಸಾರವಾಗಿ ನಿಯತಾಗ್ನಿಯು ಎಷ್ಟು ಅನುನಯ ಮಾಡಿದರೂ ಅವನು ಹವ್ಯವನ್ನು ತೆಗೆದುಕೊಂಡು ಹೋಗಲು ಒಪ್ಪಲಿಲ್ಲ. ಆಗ ನಿಯತಾಗ್ನಿಯು ತನ್ನ ಶರೀರವನ್ನು ತ್ಯಜಿಸಿದನು.
ಸ ತಚ್ಛರೀರಂ ಸಂತ್ಯಜ್ಯ ಪ್ರವಿವೇಶ ಧರಾಂ ತದಾ |
ಭೂಮಿಂ ಸ್ಪೃಷ್ಟ್ವಾಽಸೃಜದ್ ಧಾತುಂ ಪೃಥಕ್ಪೃಥಗತೀವ ಹಿ ॥12॥
ನಿಯತನು ಆ ಶರೀರವನ್ನು ತ್ಯಜಿಸಿ ಭೂಮಿಯನ್ನು ಪ್ರವೇಶಿಸಿ, ಭೂಮಿಯನ್ನು ಸ್ಪರ್ಶಮಾಡಿ ತನ್ನ ಆ ದೇಹದಲ್ಲಿದ್ದ ಅಸ್ಥಿಶ್ಲೇಷ್ಮ ಮೊದಲಾದ ಪದಾರ್ಥಗಳಿಂದ ಭೂಮಿಯಲ್ಲಿ ನಾನಾ ಪದಾರ್ಥಗಳನ್ನು ಬೇರೆ ಬೇರೆಯಾಗಿ ಸೃಷ್ಟಿಸಿದನು.
ಪೂಯಾತ್ಸುಗಂಧಂ ತೇಜಶ್ಚ ಅಸ್ಥಿಭ್ಯೋ ದೇವದಾರು ಚ |
ಶ್ಲೇಷ್ಮಣಃ ಸ್ಫಾಟಿಕಂ ತಸ್ಯ ಪಿತ್ತಾನ್ಮಾರಕತಂ ತಥಾ ॥13॥
ಅವನು ಪೂಯ (ಕೀವು, ರಕ್ತ) ದಿಂದ ಸುಗಂಧ ಮತ್ತು ತೇಜಸ್ಸನ್ನೂ, ಅಸ್ಥಿಗಳಿಂದ ದೇವದಾರುವನ್ನೂ, ಶ್ಲೇಷ್ಮದಿಂದ ಸ್ಫಟಿಕವನ್ನೂ ಮತ್ತು ಪಿತ್ತದಿಂದ ಮರಕತವನ್ನೂ ಸೃಷ್ಟಿಸಿದನು.
ಯಕೃತ್ಕೃಷ್ಣಾಯಸಂ ತಸ್ಯ ತ್ರಿಭಿರೇತೈರ್ಬಹು ಪ್ರಜಾಃ(ಭಾಃ) |
ನಖಾಸ್ತಸ್ಯಾಭ್ರಪಟಲಂ ಸ್ನಾಯುಜಾಲಾನಿ ವಿದ್ರುಮಮ್ ॥14॥
ಯಕೃತ್ತಿನಿಂದ ಕಬ್ಬಿಣವನ್ನು ಸೃಷ್ಟಿಸಿದನು. ಶ್ಲೇಷ್ಮ, ಪಿತ್ತ ಮತ್ತು ಯಕೃತ್ ಈ ಮೂರರಿಂದ ಅನೇಕ ಕಾಂತಿಗಳನ್ನು ಸೃಷ್ಟಿಸಿದನು. ನಖಗಳು ಮೇಘಮಾಲೆಯಾದವು. ಸ್ನಾಯುಜಾಲಗಳು ಹವಳವಾದವು.
ಶರೀರಾದ್ ವಿವಿಧಾಶ್ಚಾನ್ಯೇ ಧಾತವೋಽಸ್ಯಾಭವನ್ ನೃಪ |
ಏವಂ ತ್ಯಕತ್ವ ಶರೀರಂ ಚ ಪರಮೇ ತಪಸಿ ಸ್ಥಿತಃ ॥15॥
ಎಲೈ ರಾಜನೇ, ಹೀಗೆ ಅವನ ಶರೀರದಿಂದ ವಿವಿಧವಾದ ಬೇರೆ ಪದಾರ್ಥಗಳೂ ಜನಿಸಿದವು. ಹೀಗೆ ಶರೀರವನ್ನು ತ್ಯಜಿಸಿ ನಿಯತನು ಶ್ರೇಷ್ಠವಾದ ತಪಸ್ಸಿನಲ್ಲಿಯೇ ನಿರತನಾದನು.
ಭೃಗ್ವಂಗಿರಾದಿಭಿರ್ಭೂಯಸ್ತಪಸೋತ್ಥಾಪಿತಸ್ತದಾ |
ಭೃಶಂ ಜಜ್ವಾಲ ತೇಜಸ್ವೀ ತಪಸಾಽಪ್ಯಾಯಿತಃ ಶಿಖೀ ॥16॥
ದೃಷ್ಟ್ವಾ ಋಷಿಭಯಾಚ್ಚಾಪಿ ಪ್ರವಿವೇಶ ಮಹಾರ್ಣವಮ್ ॥17॥
ಭೃಗು ಅಂಗಿರ ಮೊದಲಾದವರು ಬಂದು ಅವನನ್ನು ಪುನಃ ತಪಸ್ಸಿನಿಂದ ಎಬ್ಬಿಸಿದರು. ಆಗ ತಪಸ್ಸಿನಿಂದ ಅಭಿವೃದ್ಧಿಯನ್ನು ಹೊಂದಿದ್ದ ತೇಜಸ್ವಿಯಾದ ಆ ನಿಯತಾಗ್ನಿಯು ಬಹಳವಾಗಿ ಜ್ವಲಿಸಿದನು. ಋಷಿಗಳಾದ ಅಥರ್ವಾಗ್ನಿಯ ಬಲದಿಂದ ಅವನು ಪುನಃ ಸಮುದ್ರವನ್ನು ಪ್ರವೇಶಿಸಿದನು.
ತಸ್ಮಿನ್ ನಷ್ಟೇ ಜಗದ್ ಭೀತಮಥರ್ವಾಣಮಥಾಶ್ರಿತಮ್ |
ಅಚರ್ಯಾಮಾಸುರೇಮ್ಯೆನಮಥರ್ವಾಣಂ ಸುರಾದಯಃ ॥18॥
ಅವನು ನಷ್ಟವಾಗುತ್ತಿರಲು ಜಗತ್ತು ಭಯಗೊಂಡು ಅಥರ್ವಾಗ್ನಿಯನ್ನು ಆಶ್ರಯಿಸಿತು. ದೇವತೆಗಳು ಮೊದಲಾದವರುಗಳು ಈ ಅಥರ್ವಾಗ್ನಿಯನ್ನು ಪೂಜಿಸಿದರು.
ಅಥರ್ವಾ ತ್ವಸೃಜಲ್ಲೋಕಾನಾತ್ಮನಾಽಽಲೋಕ್ಯ ಪಾವಕಮ್ |
ಮಿಷತಾಂ ಸರ್ವಭೂತಾನಾಮುನ್ಮಮಾಥ ಮಹಾರ್ಣವಮ್ ॥19॥
ಅಥರ್ವಾಗ್ನಿಯು ನಿಯತಾಗ್ನಿಯು ಸಮುದ್ರವನ್ನು ಪ್ರವೇಶಿಸಿರುವುದನ್ನು ನೋಡಿ ತಾನೇ ಲೋಕಗಳನ್ನು ಸೃಷ್ಟಿಸಿದನು ಮತ್ತು ಎಲ್ಲಾ ಪ್ರಾಣಿಗಳು ನೋಡುತ್ತಿರುವಂತೆಯೇ ಸಮುದ್ರವನ್ನು ಕ್ಷೋಭೆಗೊಳಿಸಿದನು.
ಏವಮಗ್ನಿರ್ಭಗವತಾ ನಷ್ಟಃ ಪೂರ್ವಮಥರ್ವಣಾ |
ಆಹೂತಃ ಸರ್ವಭೂತಾನಾಂ ಹವ್ಯಂ ವಹತಿ ಸರ್ವದಾ ॥20॥
ಹೀಗೆ ಮೊದಲು ನಷ್ಟವಾಗಿದ್ದ ನಿಯತಾಗ್ನಿಯು ಪೂಜ್ಯನಾದ ಅಥರ್ವಾಗ್ನಿಯಿಂದ ಪುನಃ ಕರೆಯಲ್ಪಟ್ಟು ಎಲ್ಲ ಪ್ರಾಣಿಗಳಿಗೂ ಯಾವಾಗಲೂ ಹವಿಸ್ಸನ್ನು ತೆಗೆದುಕೊಂಡು ಹೋಗುತ್ತಾನೆ.
ಏಷ ತ್ವಜನಯದ್ ಧಿಷ್ಣ್ಯಾನ್ ವೇದೋಕ್ತಾನ್ ವಿವಿಧಾನ್ ಬಹೂನ್ |
ವಿಚರನ್ ವಿವಿಧಾನ್ ದೇಶಾನ್ ಭ್ರಮಮಾಣಸ್ತು ತತ್ರ ವೈ ॥21॥
ಈ ನಿಯತಾಗ್ನಿಯು ಅನೇಕ ದೇಶಗಳಲ್ಲಿ ಸಂಚಾರಮಾಡುತ್ತಾ ಋಷಿಗಳಿಗೆ ನಿವಾಸಸ್ಥಾನವಾದಂತಹ ವೇದೋಕ್ತವಾದ ಅನೇಕ ಆಶ್ರಮಗಳನ್ನು ಸೃಷ್ಟಿಸಿದನು.
ಸಿಂಧುನದಂ ಪಂಚನದಂ ದೇವಿಕಾಥ ಸರಸ್ವತೀ |
ಗಂಗಾ ಚ ಶತಕುಂಭಾ ಚ ಸರಯೂರ್ಗಂಡಸಾಹ್ವಯಾ ॥22॥
ಚರ್ಮಣ್ವತೀ ಮಹೀ ಚೈವ ಮೇಧ್ಯಾ ಮೇಧಾತಿಥಿಸ್ತದಾ |

ತಾಮ್ರುವತೀ ವೇತ್ರವತೀ ನದ್ಯಸ್ತಿಸ್ರೋಽಥ ಕೌಶಿಕೀ (ಗೌತಮೀ) ॥23॥
ತಮಸಾ ನರ್ಮದಾ ಚೈವ ನದೀ ಗೋದಾವರೀ ತಥಾ |
ವೇಣೋಪವೇಣಾ ಭೀಮಾ ಚ ವಡವಾ ಚೈವ ಭಾರತ ॥24॥
ಭಾರತೀ ಸುಪ್ರಯೋಗಾ ಚ ಕಾವೇರೀ ಮುರ್ಮುರಾ ತಥಾ |
ತುಂಗವೇಣೀ(ಣಾ) ಕೃಷ್ಣವೇಣೀ(ಣಾ) ಕಪಿಲಾ ಶೋಣ ಏವ ಚ |
ಏತಾ ನದ್ಯಸ್ತು ಧಿಷ್ಣ್ಯಾನಾಂ ಮಾತರೋ ಯಾಃ ಪ್ರಕೀರ್ತಿತಾಃ ॥
ಎಲೈ ಭಾರತನೇ, ಸಿಂಧುನದ, ಪಂಚನದ, ದೇವಿಕಾ, ಸರಸ್ವತೀ, ಗಂಗಾ, ಶತಕುಂಭಾ, ಸರಯೂ, ಗಂಡಕೀ, ಚರ್ಮಣ್ವತೀ, ಮಹೀ, ಮೇಧ್ಯಾ, ಮೇಧಾತಿಥಿ, ತಾಮ್ರುವತೀ, ವೇತ್ರವತೀ, ಗೌತಮೀ (ಕೌಶಿಕೀ), ತಮಸಾ, ನರ್ಮದಾ, ಗೋದಾವರೀ, ವೇಣಾ, ಉಪವೇಣಾ, ಭೀಮಾ, ವಡವಾ, ಭಾರತೀ, ಸುಪ್ರಯೋಗಾ, ಕಾವೇರೀ, ಮುರ್ಮುರಾ, ತುಂಗವೇಣೀ, ಕೃಷ್ಣವೇಣೀ, ಕಪಿಲಾ, ಶೋಣ ಈ ನದಿಗಳು ಋಷಿಗಳ ಆಶ್ರಮಕ್ಕೆ ಮಾತೃಗಳೆಂದು ಹೇಳಲ್ಪಡುತ್ತವೆ.
ಅದ್ಭುತಸ್ಯ ಪ್ರಿಯಾ ಭಾರ್ಯಾ ತಸ್ಯ ಪುತ್ರೋ ವಿಡೂರಥಃ |
ಯಾವಂತಃ ಪಾವಕಾಃ ಪ್ರೋಕ್ತಾಃ ಸೋಮಾಸ್ತಾವಂತ ಏವ ಚ ॥26॥
ಅದ್ಭುತಾಗ್ನಿಯ ಪತ್ನಿ ಪ್ರಿಯಾ. ಅವನ ಪುತ್ರ ವಿಡೂರಥ. ಎಷ್ಟು ಮಂದಿ ಅಗ್ನಿಗಳಿದ್ದಾರೆಯೋ ಅಷ್ಟುವಿಧವಾದ ಸೋಮಲತೆಗಳಿವೆ.
ಅತ್ರೇಶ್ಚಾಪ್ಯನ್ವಯೇ ಜಾತಾ ಬ್ರಹ್ಮಣೋ ಮಾನಸಾಃ ಪ್ರಜಾಃ |
ಅಗ್ನಿಃ ಪುತ್ರಾನ್ಸ್ರಷ್ಟುಕಾಮಸ್ತಾನೇವಾತ್ಮನ್ಯಧಾರಯತ್ ॥27॥
ಅತ್ರಿಯ ವಂಶದಲ್ಲಿಯೂ ಬ್ರಹ್ಮದೇವರ ಮಾನಸಪುತ್ರರು ಜನಿಸಿದರು. ಅಗ್ನಿಪುತ್ರರನ್ನು ಸೃಷ್ಟಿಸಲು ಬಯಸಿದ ಬ್ರಹ್ಮದೇವರು ಅವುಗಳನ್ನು ಜಗತ್ತಿನಲ್ಲಿ ಸಂಚಾರಕ್ಕೆ ಬಿಟ್ಟರೆ ಜಗತ್ತು ನಾಶವಾಗುವುದೆಂಬ ಭಯದಿಂದ ಅಗ್ನಿಪುತ್ರರನ್ನು ತನ್ನ ದೇಹದಲ್ಲಿಯೇ ಧರಿಸಿ ಇಟ್ಟುಕೊಂಡನು.
ತಸ್ಯ ತದ್ಬ್ರಹ್ಮಣಃ ಕಾಯಾನ್ನಿರ್ಹರಂತಿ ಹುತಾಶನಾಃ ॥28॥
ಈ ಅಗ್ನಿಗಳು ತಮ್ಮ ಕಾರ್ಯವಿದ್ದಾಗ ಬ್ರಹ್ಮದೇವರ ದೇಹದಿಂದ ಹೊರಗೆ ಬರುತ್ತಾರೆ (ಕಾರ್ಯವು ಮುಗಿದ ಮೇಲೆ ಪುನಃ ಅಲ್ಲಿಯೇ ಪ್ರವೇಶಿಸುತ್ತಾರೆ).
ಏವಮೇತೇ ಮಹಾತ್ಮಾನಃ ಕೀರ್ತಿತಾಸ್ತೇಽಗ್ನಯೋ ಯಥಾ |
ಅಪ್ರಮೇಯಾ ಯಥೋತ್ಪನ್ನಾಃ ಶ್ರೀಮಂತಸ್ತಿಮಿರಾಪಹಾಃ ॥29॥
ಹೀಗೆ ಅಪ್ರಮೇಯರೂ, ಕಾಂತಿಯುಕ್ತರೂ, ಅಂಧಕಾರನಾಶಕರೂ, ಮಹಾನುಭಾವರೂ ಆದ ಈ ಅಗ್ನಿಗಳು ಹೇಗೆ ಉತ್ಪನ್ನರಾದರೆಂದು ನಾನು ನಿನಗೆ ತಿಳಿಸಿದ್ದೇನೆ.
ಅದ್ಭುತಸ್ಯ ತು ಮಾಹಾತ್ಮ್ಯಂ ಯಥಾ ವೇದೇಷು ಕೀರ್ತಿತಮ್ |
ತಾದೃಶಂ ವಿದ್ಧಿ ಸರ್ವೇಷಾಮೇಕೋ ಹ್ಯೇಷ ಹುತಾಶನಃ ॥30॥
ಅದ್ಭುತನ ಮಹಾತ್ಮೆಯನ್ನು ವೇದಗಳು ಹೇಗೆ ಹೇಳಿವೆಯೋ ಹಾಗೆಯೇ ತಿಳಿಯುವವನಾಗು. ಈ ಎಲ್ಲ ಅಗ್ನಿಗಳಿಗೂ ಒಬ್ಬ ಅಗ್ನಿಯಾದ ಹುತಾಶನನೇ ಮೂಲನಾದವನು.
ಏಕ ಏವೈಷ ಭಗವಾನ್ ವಿಜ್ಞೇಯಃ ಪ್ರಥಮೋಽಂಗಿರಾಃ |
ಬಹುಧಾ ನಿಃಸೃತಃ ಕಾಯಾಜ್ಜ್ಯೋತಿಷ್ಟೋಮಃ ಕ್ರತುರ್ಯಥಾ ॥31॥
ಪೂಜ್ಯನಾದ ಇವನು ಒಬ್ಬನೇ ಇವನು ಅಂಗಿರಸರ ಪ್ರಥಮ ಪುತ್ರ. ಜ್ಯೋತಿಷ್ಟೋಮ ಯಾಗವು ಅನೇಕ ರೂಪಗಳನ್ನು ಧರಿಸಿದಂತೆ ಅವನು ಬೇರೆ ಬೇರೆ ಶರೀರಗಳಿಂದ ಅನೇಕ ರೂಪವನ್ನು ಧರಿಸಿಬಂದಿದ್ದಾನೆ.
ಇತ್ಯೇಷ ವಂಶಃ ಸುಮಹಾನಗ್ನೀನಾಂ ಕೀರ್ತಿತೋ ಮಯಾ |
ಯೋಽರ್ಚಿತೋ ವಿವಿಧೈರ್ಮಂತ್ರೈರ್ಹವ್ಯಂ ವಹತಿ ದೇಹಿನಾಮ್ ॥32॥
ಯಾವ ಅಗ್ನಿಯು ಅನೇಕ ಮಂತ್ರಗಳಿಂದ ಪೂಜಿತನಾಗಿ ದೇವತೆಗಳಿಗೆ ಮತ್ತು ಉಳಿದವರಿಗೆ ಹವ್ಯಗಳನ್ನು ತೆಗೆದುಕೊಂಡು ಹೋಗುತ್ತಾನೆಯೋ ಅಂತಹ ಅಗ್ನಿಯ ಈ ಬಹಳ ದೊಡ್ಡದಾದ ವಂಶವನ್ನು ನಾನು ನಿನಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ದ್ವಾದಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಆಂಗಿರಸೇ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು
॥ ಆಂಗಿರಸೋಪಾಖ್ಯಾನ ಸಮಾಪ್ತವಾಯಿತು ॥
* * * *
ಇನ್ನೂರ ಹದಿಮೂರನೆಯ ಅಧ್ಯಾಯ
ಮಾರ್ಕಂಡೇಯರಿಂದ ಕುಮಾರೋತ್ಪತ್ತಿ ಪ್ರಕಾರ ಕಥನ ಪ್ರಾರಂಭ.
ಮಾರ್ಕಂಡೇಯಃ
ಅಗ್ನೀನಾಂ ವಿವಿಧಾ ವಂಶಾಃ ಕೀರ್ತಿತಾಸ್ತೇ ಮಯಾಽನಘ |
ಶೃಣು ಜನ್ಮ ತು ಕೌರವ್ಯ ಕಾರ್ತ್ತಿಕೇಯಸ್ಯ ಧೀಮತಃ ॥1॥
ಮಾರ್ಕಂಡೇಯ ಎಲೈ ಅನಘನೇ, ನಾನು ಅಗ್ನಿಗಳ ಅನೇಕ ವಿಧವಾದ ವಂಶಗಳನ್ನು ನಿನಗೆ ಹೇಳಿದ್ದೇನೆ. ಕೌರವ್ಯನೇ, ಮೇಧಾವಿಯಾದ ಕಾರ್ತಿಕೇಯನ ಜನ್ಮವನ್ನು ಕೇಳು.

ಅದ್ಭುತಸ್ಯಾದ್ಭುತಂ ಪುತ್ರಂ ಪ್ರವಕ್ಷ್ಯಾಮ್ಯಮಿತೌಜಸಮ್ |
ಜಾತಂ ಬ್ರಹ್ಮರ್ಷಿಭಾರ್ಯಾಭಿರ್ಬ್ರಹ್ಮಣ್ಯಂ ಕೀರ್ತಿವರ್ಧನಮ್ ॥2॥
ಅದ್ಭುತನಾಮಕ ಅಗ್ನಿಯಿಂದ ಜನಿಸಿದ ಬ್ರಹ್ಮರ್ಷಿ ಪತ್ನಿಯರಿಂದಲೂ ಜನಿಸಿದ ಬ್ರಾಹ್ಮಣವತ್ಸಲನೂ, ಕೀರ್ತಿವರ್ಧನನೂ, ಅಮಿತಪರಾಕ್ರಮಿಯೂ ಆದ ಅದ್ಭುತನಾದ ಷಣ್ಮುಖನ ಕಥೆಯನ್ನು ಹೇಳುವೆನು.
ದೇವಾಸುರಾಃ ಪುರಾ ಯತ್ತಾ ವಿನಿಘ್ನಂತಃ ಪರಸ್ಪರಮ್ |
ತತ್ರಾಜಯನ್ ಸದಾ ದೇವಾನ್ ದಾನವಾ ಘೋರರೂಪಿಣಃ ॥3॥
ಹಿಂದೆ ದೇವಾಸುರರು ಪರಸ್ಪರವಾಗಿ ಕೊಲ್ಲುತ್ತಾ ಯುದ್ಧದಲ್ಲಿ ನಿರತರಾಗಿದ್ದರು. ಆ ಯುದ್ಧಗಳಲ್ಲಿ ಘೋರರೂಪವುಳ್ಳ ದಾನವರು ಯಾವಾಗಲೂ ದೇವತೆಗಳನ್ನು ಜಯಿಸುತ್ತಿದ್ದರು.
ವಧ್ಯಮಾನಂ ಬಲಂ ದೃಷ್ಟ್ವಾ ಬಹುಶಸ್ತೈಃ ಪುರಂದರಃ |
ಸ ಸೈನ್ಯನಾಯಕಾರ್ಥಾಯ ಚಿಂತಾಮಾಪ ಭೃಶಂ ತದಾ ॥4॥
ತನ್ನ ಸೈನ್ಯವು ಬಹಳವಾಗಿ ಅವರಿಂದ ಹತವಾಗುತ್ತಿದ್ದುದನ್ನು ನೋಡಿ ಪುರಂದರನು ಒಬ್ಬ ಸೇನಾಪತಿಯ ಸಲುವಾಗಿ ಬಹಳ ಚಿಂತೆಯನ್ನು ಮಾಡಿದನು.
ದೇವಸೇನಾಂ ದಾನವೈರ್ಹಿ ಭಗ್ನಾಂ ದೃಷ್ಟ್ವಾ ಮಹಾಬಲಃ |
ಪಾಲಯೇದ್ ವೀರ್ಯಮಾಶ್ರಿತ್ಯ ಸ ಜ್ಞೇಯಃ ಪುರುಷೋ ಮಯಾ |
ದೇವಸೇನೆಯು ದಾನವರಿಂದ ಭಗ್ನವಾಗುತ್ತಿದುದನ್ನು ನೋಡಿ ಮಹಾಬಲನಾದ ಯಾವನು ತನ್ನ ಶೌರ್ಯದಿಂದ ದೇವಸೇನೆಯನ್ನು ಪಾಲಿಸುವನೋ ಅಂತಹ ಪುರುಷನನ್ನು ನಾನು ತಿಳಿಯಬೇಕು (ಎಂದು ಚಿಂತಿಸಿದನು).
ಸ ಶೈಲಂ ಮಾನಸಂ ಗತ್ವಾ ಧ್ಯಾಯನ್ನರ್ಥಮಿಮಂ ಭೃಶಮ್ |
ಶುಶ್ರಾವಾರ್ತಸ್ವರಂ ಘೋರಮಥ ಮುಕ್ತಂ ಸ್ತ್ರಿಯಾ ತದಾ ॥5॥
ಅವನು ಮಾನಸ ಸರೋವರಕ್ಕೆ ಹೋಗಿ ಇದೇ ವಿಷಯವನ್ನು ಚಿಂತಿಸುತ್ತಿರುವಾಗ ದೈತ್ಯಭಯದಿಂದ ಉಂಟಾದ ಒಬ್ಬ ವನಿತೆಯ ಘೋರವಾದ ಆರ್ತಸ್ವರವನ್ನು ಕೇಳಿದನು.
ಅಭಿಧಾವತು ಮಾಂ ಕಶ್ಚಿತ್ ಪುರುಷಸ್ತ್ರಾತು ಚೈವ ಹ |
ಪತಿಂ ಚ ಮೇ ಪ್ರದಿಶತು ಸ್ವಯಂ ವಾ ಪತಿರಸ್ತು ಮೇ ॥6॥
ನನ್ನನ್ನು ದೈತ್ಯರಿಂದ ರಕ್ಷಿಸಲು ಯಾವನಾದರೂ ಪುರುಷನು ಬೇಗ ಬರಲಿ. ಅವನು ನನಗೆ ಪತಿಯನ್ನೂ ಕೊಡಲಿ ಅಥವಾ ತಾನೇ ನನ್ನ ಪತಿಯಾಗಲಿ (ಎಂಬ ಸ್ವರವು ಕೇಳಿಬಂದಿತು).
ಮಾರ್ಕಂಡೇಯಃ
ಪುರಂದರಸ್ತು ತಾಮಾಹ ಮಾ ಭೈರ್ನಾಸ್ತಿ ಭಯಂ ತವ ॥7॥
ಮಾರ್ಕಂಡೇಯ ಪುರಂದರನಾದರೂ ಅವಳನ್ನು ಕುರಿತು ಹೆದರಬೇಡ, ನಿನಗೆ ಭಯವಿಲ್ಲ ಎಂದು ಹೇಳಿದನು.
ಏವಮುಕ್ತ್ವಾ ತತೋಽಪಶ್ಯತ್ ಕೇಶಿನಂ ಸ್ಥಿತಮಗ್ರತಃ |
ಕಿರೀಟಿನಂ ಗದಾಪಾಣಿಂ ಧಾತುಮಂತಮಿವಾಚಲಮ್ |
ಹಸ್ತೇ ಗೃಹೀತ್ವಾ ಕನ್ಯಾಂ ತಾಮಥೈನಂ ವಾಸವೋಽಬ್ರವೀತ್ ॥8॥
ಅನಾರ್ಯಕರ್ಮನ್ ಕಸ್ಮಾತ್ ತ್ವಮಿಮಾಂ ಕನ್ಯಾಂ ಜಿಹೀರ್ಷಸಿ |
ವಜ್ರಿಣಂ ಮಾಂ ವಿಜಾನೀಹಿ ವಿರಮಾಸ್ಯಾಃ ಪ್ರಬಾಧನಾತ್ ॥9॥
ಹೀಗೆ ಹೇಳಿ ಅವನು ಆಗ ತನ್ನ ಎದುರಿಗೆ ಕಿರೀಟವನ್ನು ಧರಿಸಿ ಗದಾಪಾಣಿಯಾಗಿ ಧಾತುಗಳಿಂದ ಕೂಡಿದ ಪರ್ವತದಂತೆ ನಿಂತಿದ್ದ ಕೇಶಿ ದೈತ್ಯನನ್ನು ನೋಡಿದನು. ಆ ಕನ್ಯೆಯನ್ನು ಹಸ್ತದಲ್ಲಿ ಹಿಡಿದುಕೊಂಡು ವಾಸವನು ಕೇಶಿಯನ್ನು ಕುರಿತು ಅನಾರ್ಯಕಾರ್ಯವನ್ನು ಮಾಡುವವನೇ ನೀನು ಏಕೆ ಈ ಕನ್ಯೆಯನ್ನು ಎಳೆದೊಯ್ಯುತ್ತಿದ್ದೀಯೆ? ನಾನು ವಜ್ರಧರನಾದ ಇಂದ್ರನೆಂದು ತಿಳಿ. ಇವಳನ್ನು ಪೀಡಿಸುವುದನ್ನು ನಿಲ್ಲಿಸು ಎಂದು ಹೇಳಿದನು.
ಕೇಶೀ
ವಿಸೃಜಸ್ವ ತ್ವಮೇವೈನಾಂ ಶಕ್ರೈಷಾ ಪ್ರಾರ್ಥಿತ ಮಯಾ |
ಕ್ಷಮಂ ತೇ ಜೀವತೋ ಗಂತುಂ ಸ್ವಪುರಂ ಪಾಕಶಾಸನ ॥10॥
ಕೇಶೀ ಶಕ್ರನೇ, ನೀನೇ ಅವಳ ಕೈಯನ್ನು ಬಿಡು. ನಾನು ಅವಳನ್ನು ಬಯಸಿ ಪ್ರಾರ್ಥಿಸಿದ್ದೇನೆ. ಪಾಕಶಾಸನನೇ, ಹಾಗೆ ಮಾಡಿದರೆ ನೀನು ಜೀವಸಹಿತನಾಗಿ ನಿನ್ನ ಪಟ್ಟಣಕ್ಕೆ ಹಿಂದಿರುಗಲು ಸಾಧ್ಯ.
ಮಾರ್ಕಂಡೇಯಃ
ಏವಮುಕ್ತ್ವಾ ಗದಾಂ ಕೇಶೀ ಚಿಕ್ಷೇಪೇಂದ್ರವಧಾಯ ವೈ |
ತಾಮಾಪತಂತೀಂ ಚಿಚ್ಛೇದ ಮಧ್ಯೇ ವಜ್ರೇಣ ವಾಸವಃ ॥11॥
ಮಾರ್ಕಂಡೇಯ ಹೀಗೆ ಹೇಳಿ ಕೇಶಿಯು ಇಂದ್ರವಧೆಯನ್ನು ಮಾಡಲು ಗದೆಯನ್ನು ಬೀಸಿದನು. ಇಂದ್ರನು ಅದು ತನ್ನೆಡೆಗೆ ಬರುತ್ತಿರುವಾಗಲೇ ವಜ್ರಾಯುಧದಿಂದ ಅದನ್ನು ಕತ್ತರಿಸಿದನು.
ಅಥಾಸ್ಯ ಶೈಲಶಿಖರಂ ಕೇಶೀ ಕ್ರುದ್ಧೋ ವ್ಯವಾಸೃಜತ್ ॥12|
ತದಾಪತಂತಂ ಸಂಪ್ರೇಕ್ಷ್ಯ ಶೈಲಶೃಂಗಂ ಶತಕ್ರತುಃ |
ಬಿಭೇದ ರಾಜನ್ ವಜ್ರೇಣ ಭುವಿ ತನ್ನಿಪಪಾತ ಹ ॥13॥
ಎಲೈ ರಾಜನೇ, ಅನಂತರ ಕ್ರುದ್ಧನಾದ ಕೇಶಿಯು ಪರ್ವತಶಿಖರವೊಂದನ್ನು ಅವನ ಮೇಲೆ ಎಸೆದನು. ಇಂದ್ರನು ಆ ಶೈಲಶೃಂಗವು

ತನ್ನೆಡೆಗೆ ಬರುತ್ತಿರುವುದನ್ನು ನೋಡಿ ವಜ್ರಾಯುಧದಿಂದ ಅದನ್ನು ಭೇದಿಸಿದನು. ಅದು ಭೂಮಿಯಲ್ಲಿ ಬಿದ್ದುಹೋಯಿತು.
ಪತತಾ ತು ತದಾ ಕೇಶೀ ತೇನ ಶೃಂಗೇಣ ತಾಡಿತಃ |
ಹಿತ್ವಾ ಕನ್ಯಾಂ ಮಹಾಭಾಗಾಂ ಪ್ರಾದ್ರವದ್ ಭೃಶಪೀಡಿತಃ ॥14॥
ಆ ಶೈಲಶೃಂಗವು ಬೀಳುತ್ತಾ ಕೇಶಿಯ ಮೇಲೆ ಬಿದ್ದಿತು. ಆಗ ಅವನು ಅದರಿಂದ ಬಹಳ ಪೀಡಿತನಾಗಿ ಮಹಾನುಭಾವಳಾದ ಆ ಕನ್ಯೆಯನ್ನು ಬಿಟ್ಟು ಓಡಿಹೋದನು.
ಅಪಯಾತೇಽಸುರೇ ತಸ್ಮಿಂಸ್ತಾಂ ಕನ್ಯಾಂ ವಾಸವೋಽಬ್ರವೀತ್ |
ಕಾಸಿ ಕಸ್ಯಾಸಿ ಕಿಂಚೇಹ ಕುರುಷೇ ತ್ವಂ ಶುಭಾನನೇ ॥15॥
ಆ ಅಸುರನು ಓಡಿಹೋಗುತ್ತಿರಲು ಇಂದ್ರನು ಆ ಕನ್ಯೆಯನ್ನು ಕುರಿತು ಶುಭಾನನೆಯೇ, ನೀನು ಯಾರು? ಯಾರಿಗೆ ಸೇರಿದವಳು? ಇಲ್ಲಿ ಏನು ಮಾಡುತ್ತಿದ್ದೀಯೆ? ಎಂದು ಕೇಳಿದನು.
ಕನ್ಯಾ
ಅಹಂ ಪ್ರಜಾಪತೇಃ ಕನ್ಯಾ ದೇವಸೇನೇತಿ ವಿಶ್ರುತಾ |
ಭಗಿನೀ ಮೇ ದೈತ್ಯಸೇನಾ ಸಾ ಪೂರ್ವಂ ಕೇಶಿನಾ ಹೃತಾ ॥16॥
ಕನ್ಯಾ ನಾನು ದಕ್ಷಪ್ರಜಾಪತಿಯ ಪುತ್ರಿ. ದೇವಸೇನಾ ಎಂದು ಪ್ರಸಿದ್ಧಳಾಗಿದ್ದೇನೆ. ದೈತ್ಯಸೇನೆಯು ನನ್ನ ಸಹೋದರಿ. ಅವಳನ್ನು ಕೇಶಿಯು ಮೊದಲೇ ಅಪಹರಿಸಿದ್ದಾನೆ.
ಸದೈವಾವಾಂ ಭಗಿನ್ಯೌ ತು ಸಖೀಭಿಃ ಸಹ ಮಾನಸಮ್ |
ಆಗಚ್ಛಾವೇಹ ರತ್ಯರ್ಥಮನುಜ್ಞಾಪ್ಯ ಪ್ರಜಾಪತಿಮ್ ॥17॥
ನಾವಿಬ್ಬರು ಅಕ್ಕತಂಗಿಯರು ದಕ್ಷಪ್ರಜಾಪತಿಯ ಅಪ್ಪಣೆಯನ್ನು ಪಡೆದು ನಮ್ಮ ಸಖಿಯರ ಜೊತೆಯಲ್ಲಿ ಈ ಮಾನಸ ಸರೋವರಕ್ಕೆ ಆಟವಾಡಲು ಯಾವಾಗಲೂ ಬರುತ್ತೇವೆ.
ನಿತ್ಯಂ ಚಾವಾಂ ಪ್ರಾರ್ಥಯತೇ ಹರ್ತುಂ ಕೇಶೀ ಮಹಾಸುರಃ |
ಇಚ್ಛತ್ಯೇನಂ ದೈತ್ಯಸೇನಾ ನ ಚಾಹಂ ಪಾಕಶಾಸನ ॥18॥
ಈ ಮಹಾಸುರನಾದ ಕೇಶಿಯು ಯಾವಾಗಲೂ ನಮ್ಮನ್ನು ಎಳೆದೊಯ್ಯಲು ನಮ್ಮಿಬ್ಬರನ್ನೂ ಪ್ರಾರ್ಥಿಸುತ್ತಾನೆ. ಪಾಕಶಾಸನನೇ, ದೈತ್ಯಸೇನೆಯು ಅವನನ್ನು ಬಯಸುತ್ತಾಳೆ. ನಾನು ಬಯಸುವುದಿಲ್ಲ.
ಸಾ ಹೃತಾಽನೇನ ಭಗವನ್ ಮುಕ್ತಾಽಹಂ ತ್ವದ್ಬಲೇನ ತು |
ತ್ವಯಾ ದೇವೇಂದ್ರ ನಿರ್ದಿಷ್ಟಂ ಪತಿಮಿಚ್ಛಾಮಿ ದುರ್ಜಯಮ್ ॥19॥
ಪೂಜ್ಯನೇ, ಅವಳು ಅವನಿಂದ ಕರೆದೊಯ್ಯಲ್ಪಟ್ಟಿದ್ದಾಳೆ. ನಿನ್ನ ಸಾಮರ್ಥ್ಯದಿಂದ ನಾನು ಮುಕ್ತಳಾಗಿದ್ದೇನೆ. ದೇವೇಂದ್ರನೇ, ನೀನು ಸೂಚಿಸಿದ ದುರ್ಜಯನಾದ ಪತಿಯನ್ನು ಹೊಂದಲು ನಾನು ಬಯಸುತ್ತೇನೆ.
ಇಂದ್ರಃ
ಮಮ ಮಾತೃಷ್ವಸೇಯೀ ತ್ವಂ ಮಾತಾ ದಾಕ್ಷಾಯಣೀ ಮಮ |
ಆಖ್ಯಾತಂ ತ್ವಹಮಿಚ್ಛಾಮಿ ಸ್ವಯಮಾತ್ಮಬಲಂ ತ್ವಯಾ ॥20॥
ಇಂದ್ರ ನೀನು ನನ್ನ ಚಿಕ್ಕಮ್ಮನ ಮಗಳು. ನನ್ನ ತಾಯಿಯು ದಕ್ಷಪುತ್ರಿ. ನಿನ್ನ ಬಲವು ಏನೆಂದು ಹೇಳು. ಅದನ್ನು ನಾನು ಕೇಳಲು ಬಯಸುತ್ತೇನೆ.
ಕನ್ಯಾ
ಅಬಲಾಽಹಂ ಮಹಾಬಾಹೋ ಪತಿಸ್ತು ಬಲವಾನ್ ಮಮ |
ವರದಾನಾತ್ ಪಿತುರ್ಭಾವೀ ಸುರಾಸುರನಮಸ್ಕೃತಃ ॥21॥
ಕನ್ಯಾ ಮಹಾಬಾಹುವೇ, ನಾನು ಅಬಲೆ. ನನ್ನ ತಂದೆಯ ವರದಾನದಿಂದ ನನ್ನ ಪತಿಯು ಬಲಿಷ್ಠನೂ ಮತ್ತು ಸುರಾಸುರನಮಸ್ಕೃತನೂ ಆಗುವನು.
ಇಂದ್ರಃ
ಕೀದೃಶಂ ತು ಬಲಂ ದೇವಿ ಪತ್ಯುಸ್ತವ ಭವಿಷ್ಯತಿ |
ಏತದಿಚ್ಛಾಮ್ಯಹಂ ಶ್ರೋತುಂ ತವ ವಾಕ್ಯಮನಿಂದಿತೇ ॥22॥
ಇಂದ್ರ ದೇವಿಯೇ, ನಿನ್ನ ಪತಿಯು ಎಂತಹ ಬಲವುಳ್ಳವನಾಗುವನು? ಅನಿಂದಿತೆಯೇ, ಇದಕ್ಕೆ ಉತ್ತರವಾಗಿ ನಿನ್ನ ಮಾತನ್ನು ಕೇಳಲು ಬಯಸುತ್ತೇನೆ.
ಕನ್ಯಾ
ದೇವದಾನವಯಕ್ಷಾಣಾಂ ಕಿನ್ನರೋರಗರಕ್ಷಸಾಮ್ |
ಜೇತಾ ಯೋ ದುಷ್ಟದೈತ್ಯಾನಾಂ ಮಹಾವೀರ್ಯೋ ಮಹಾಬಲಃ ॥23॥
ಯಸ್ತು ಸರ್ವಾಣಿ ಭೂತಾನಿ ತ್ವಯಾ ಸಹ ವಿಜೇಷ್ಯತಿ |
ಸ ಹಿ ಮೇ ಭವಿತಾ ಭರ್ತಾ ಬ್ರಹ್ಮಣ್ಯಃ ಕೀರ್ತಿವರ್ಧನಃ ॥24॥
ಕನ್ಯಾ ಯಾವನು ದೇವದಾನವಯಕ್ಷರನ್ನೂ, ಕಿನ್ನ ರೋರಗರಾಕ್ಷಸರನ್ನೂ, ದುಷ್ಟ ದೈತ್ಯರನ್ನೂ ಜಯಿಸುವನೋ ಮತ್ತು ಯಾವನು ನಿನ್ನ ಜೊತೆಯಲ್ಲಿ ಎಲ್ಲರನ್ನೂ ಜಯಿಸುವನೋ ಅಂತಹ ಮಹಾಬಲನೂ, ಮಹಾಪರಾಕ್ರಮಿಯೂ, ಬ್ರಾಹ್ಮಣ ವತ್ಸಲನೂ, ಕೀರ್ತಿವರ್ಧನನೂ ಆದವನು ನನ್ನ ಪತಿಯಾಗುವನು.
ಮಾರ್ಕಂಡೇಯಃ

ಇಂದ್ರಸ್ತಸ್ಯಾ ವಚಃ ಶ್ರುತ್ವಾ ದುಃಖಿತೋಽಚಿಂತಯದ್ ಭೃಶಮ್ |
ಅಸ್ಯಾ ದೇವ್ಯಾಃ ಪತಿರ್ನಾಸ್ತಿ ಯಾದೃಶಂ ಸಂಪ್ರಭಾಷತೇ ॥25॥
ಮಾರ್ಕಂಡೇಯ ಇಂದ್ರನು ಅವಳ ಮಾತನ್ನು ಕೇಳಿ ಈ ದೇವಿಯು ಎಂತಹ ಪತಿಯನ್ನು ಹೇಳುತ್ತಾಳೆಯೋ ಅಂತಹವರು ಯಾರೂ ಕಾಣುವುದಿಲ್ಲ ಎಂದು ಬಹಳ ದುಃಖಿತನಾದನು.
ಅಥಾಪಶ್ಯತ್ ಸ ಉದಯೇ ಭಾಸ್ಕರಂ ಭಾಸ್ಕರದ್ಯುತಿಃ |
ಸೋಮಂ ಚೈವ ಮಹಾಭಾಗಂ ವಿಶಮಾನಂ ದಿವಾಕರಮ್ ॥26॥
ಆಗ ಭಾಸ್ಕರದ್ಯುತಿಯುಳ್ಳ ಅವನು ಉದಯಿಸುತ್ತಿರುವ ಸೂರ್ಯನನ್ನೂ, ಮಹಾನುಭಾವನಾದ ಚಂದ್ರನು ಸೂರ್ಯನನ್ನು ಪ್ರವೇಶಿಸುತ್ತಿರುವುದನ್ನೂ ನೋಡಿದನು.
ಅಮಾವಾಸ್ಯಾಂ ಪ್ರವೃತ್ತಾಯಾಂ ಮುಹೂರ್ತೇ ರೌದ್ರ ಏವ ತು |
ದೇವಾಸುರಂ ಚ ಸಂಗ್ರಾಮಂ ಸೋಽಪಶ್ಯದುದಯೇ ಗಿರೌ ॥27॥
ಅಮಾವಾಸ್ಯೆಯು ಪ್ರವೃತ್ತವಾಗುತ್ತಿರಲು ರೌದ್ರ ಮುಹೂರ್ತದಲ್ಲಿ ಅವನು ದೇವಾಸುರ ಸಂಗ್ರಾಮವುಂಟಾಗುವುದೆಂದು ಉದಯಗಿರಿಯಲ್ಲಿಯೇ ನೋಡಿದನು (ನಿಶ್ಚಯಿಸಿದನು).
ಲೋಹಿತೈಶ್ಚ ಘನೈರ್ಯುಕ್ತಾಂ ಪೂರ್ವಾಂ ಸಂಧ್ಯಾಂ ಶತಕ್ರತುಃ |
ಅಪಶ್ಯಲ್ಲೋಹಿತೋದಂ ಚ ಭಗವಾನ್ ವರುಣಾಲಯಮ್ ॥28॥
ಪೂಜ್ಯನಾದ ಇಂದ್ರನು ಪೂರ್ವಸಂಧ್ಯೆಯು ಕೆಂಪು ಮೋಡಗಳಿಂದ ಕೂಡಿರುವುದನ್ನೂ, ವರುಣಾಲಯವು ಆ ಕಾಲದಲ್ಲಿ ಕೆಂಪು ನೀರಿನಿಂದ ಕೂಡಿರುವುದನ್ನೂ ಗಮನಿಸಿದನು (ನೋಡಿದನು).
ಭೃಗುಭಿಶ್ಚಾಂಗಿರೋಭಿಶ್ಚ ಹುತಂ ಮಂತ್ರೈಃ ಪೃಥಗ್ವಿಧೈಃ |
ಹವ್ಯಂ ಗೃಹೀತ್ವಾ ವಹ್ನಿಂ ಚ ಪ್ರವಿಶಂತಂ ದಿವಾಕರಮ್ ॥29॥
ಭೃಗುಗಳಿಂದಲೂ ಮತ್ತು ಅಂಗಿರಸರಿಂದಲೂ ಮಂತ್ರಪೂರ್ವಕವಾಗಿ ಕೊಡಲ್ಪಟ್ಟ ವಿಧವಿಧವಾದ ಆಹುತಿಗಳನ್ನು ಸ್ವೀಕರಿಸಿ ಅಗ್ನಿಯನ್ನು ಪ್ರವೇಶಿಸುತ್ತಿರುವ ದಿವಾಕರನನ್ನು ನೋಡಿದನು.
ಪರ್ವ ಚೈವ ಚತುರ್ವಿಂಶತ್ ತದಾ ಸೂರ್ಯಮುಪಸ್ಥಿತಮ್ |
ತಥಾ ಸೂರ್ಯಂ ವಹ್ನಿಗತಂ ಸೋಮಂ ಸೂರ್ಯಗತಂ ಚ ತಮ್ ॥
ಸಮಾಲೋಕ್ಯೈಕತಾಮೇವ ಶಶಿನೋ ಭಾಸ್ಕರಸ್ಯ ಚ |
ಸಮವಾಯಂ ತು ತಂ ರೌದ್ರಂ ದೃಷ್ಟ್ವಾ ಶಕ್ರೋಽನ್ವಚಿಂತಯತ್॥31॥
ಇಪ್ಪತ್ತಾಲ್ಕು ಪರ್ವಗಳಲ್ಲಿ ಸೂರ್ಯನಿಗೆ ಪ್ರಿಯವಾದ ಅಮಾವಾಸ್ಯಾ ಪರ್ವವು ಉಂಟಾಗುತ್ತಿದ್ದಿತು. ಹಾಗೇ ವಹ್ನಿಗತ ಸೂರ್ಯನನ್ನೂ, ಸೂರ್ಯಗತ ಚಂದ್ರನನ್ನೂ ನೋಡಿ ಸೂರ್ಯಚಂದ್ರರು ಸಮಾಗಮವನ್ನು ಹೊಂದುವುದನ್ನು ನೋಡಿ ಆ ರೌದ್ರಮುಹೂರ್ತವನ್ನು ಗಮನಿಸಿ ಇಂದ್ರನು ಹೀಗೆ ಚಿಂತಿಸಿದನು.
ಸೂರ್ಯಾಚಂದ್ರಮಸೋರ್ಘೋರಂ ದೃಶ್ಯತೇ ಪರಿವೇಷಣಮ್ |
ಏತಸ್ಮಿನ್ನೇವ ರಾತ್ರ್ಯಂತೇ ಮಹದ್ಯುದ್ಧಂ ತು ಶಂಸತಿ |
ಸರಿತ್ಸಿಂಧುರಪೀಯಂ ತು ಪ್ರತ್ಯಸೃಗ್ವಾಹಿನೀ ಭೃಶಮ್ |
ಶೃಗಾಲಿನ್ಯಗ್ನಿವಕ್ತ್ರಾ ಚ ಪ್ರತ್ಯಾದಿತ್ಯಂ ವಿರಾವಿಣೀ |
ಸೂರ್ಯಚಂದ್ರರಿಗೆ ಘೋರವಾದ ಪರಿವೇಷಣವು ಕಂಡುಬರುತ್ತಿದೆ. ಇದು ಈ ರಾತ್ರಿಯ ಕೊನೆಯಲ್ಲಿಯೇ ದೊಡ್ಡ ಯುದ್ಧವನ್ನು ಸೂಚಿಸುತ್ತದೆ. ಸಮುದ್ರದ ಬಳಿ ಇರುವ ಈ ನದಿಯು ಕೆಂಪು ನೀರನ್ನು ತೆಗೆದುಕೊಂಡು ಹರಿಯುತ್ತಿದೆ. ಹೆಣ್ಣು ನರಿಯು ಮುಖದಿಂದ ಅಗ್ನಿಯನ್ನು ಕಾರುತ್ತಾ ಸೂರ್ಯನನ್ನು ನೋಡಿ ಅಳುತ್ತಿದೆ.
ಏಷ ರೌದ್ರಶ್ಚ ಸಂಘಾತೋ ಮಹಾನ್ ಯುಕ್ತಶ್ಚ ತೇಜಸಾ |
ಸೋಮಸ್ಯ ವಹ್ನಿಸೂರ್ಯಾಭ್ಯಾಮದ್ಭುತೋಽಯಂ ಸಮಾಗಮಃ ॥32॥
ಇದು ಘೋರವಾದ ಮತ್ತು ವೀರ್ಯಶಾಲಿಯಾದ ಒಂದು ಸಮಾಗಮ. ಚಂದ್ರನಿಗೆ ವಹಿನಸೂರ್ಯರಿಂದ ಉಂಟಾಗುವ ಈ ಸಮಾಗಮವು ಅದ್ಭುತವಾದುದು.
ಜನಯೇದ್ ಯಂ ಸುತಂ ಸೋಮಃ ಸೋಽಸ್ಯಾ ದೇವ್ಯಾಃ ಪತಿರ್ಭವೇತ್ |
ಅಗ್ನಿಶ್ಚೈತೈರ್ಗುಣೈರ್ಯುಕ್ತಃ ಅಗ್ನೌ ಸರ್ವಾಶ್ಚ ದೇವತಾಃ ॥33॥
ಏಷ ಚೇಜ್ಜನಯೇದ್ ಗರ್ಭಂ ಸೋಽಸ್ಯಾ ದೇವ್ಯಾಃ ಪತಿರ್ಭವೇತ್ ॥
ಚಂದ್ರನು ಈ ಮುಹೂರ್ತದಲ್ಲಿ ಯಾವನನ್ನಾದರೂ ಮಗನನ್ನಾಗಿ ಪಡೆದರೆ ಅವನು ಈ ದೇವಿಗೆ ಪತಿಯಾದಾನು. ಅಗ್ನಿಯೂ ಸಹ ಇಂತಹ ಗುಣಗಳಿಂದ ಕೂಡಿದವನು. ಮತ್ತು ಅಗ್ನಿಯಲ್ಲಿ ಎಲ್ಲ ದೇವತೆಗಳೂ ಇದ್ದಾರೆ. ಅಗ್ನಿಯು ಈಗ ಗರ್ಭೋತ್ಪತ್ತಿಯನ್ನು ಮಾಡಿದರೆ ಜನಿಸುವ ಪುರುಷನು ಈ ದೇವಿಗೆ ಪತಿಯಾದಾನು.
ಏವಂ ಸಂಚಿತ್ಯ ಮಘವಾನ್ ಬ್ರಹ್ಮಲೋಕಂ ತದಾ ಗತಃ |
ಗೃಹೀತ್ವಾ ದೇವಸೇನಾಂ ತಾಮವದತ್ ಸ ಪಿತಾಮಹಮ್ |
ಉವಾಚ ಚಾಸ್ಯಾ ದೇವ್ಯಾಸ್ತ್ವಂ ಸಾಧುಶೂರಂ ಪತಿಂ ದಿಶ ॥35॥
ಹೀಗೆ ಆಲೋಚಿಸಿ ಪೂಜ್ಯನಾದ ಅವನು ದೇವಸೇನೆಯನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವರನ್ನು ಕುರಿತು ಈ ಕನ್ಯೆಗೆ ನೀನು ಸಾಧುವೂ ಮತ್ತು ಶೂರನೂ ಆದ ಒಬ್ಬ ಪತಿಯನ್ನು ಕರುಣಿಸು ಎಂದು ಕೇಳಿದನು.
ಬ್ರಹ್ಮಾ

ಮಯ್ಯೈತಚ್ಚಿಂತಿತಂ ಕಾರ್ಯಂ ತ್ವಯಾ ದಾನವಸೂದನ |
ತಥೈವ ಭವಿತಾ ಗರ್ಭೋ ಬಲವಾನುರುವಿಕ್ರಮಃ ॥36॥
ಸ ಭವಿಷ್ಯತಿ ಸೇನಾನೀಸ್ತ್ವಯಾ ಸಹ ಶತಕ್ರತೋ |
ಅಸ್ಯಾ ದೇವ್ಯಾಃ ಪತಿಶ್ಚೈವ ಸ ಭವಿಷ್ಯತಿ ವೀರ್ಯವಾನ್ ॥37॥
ಬ್ರಹ್ಮ: ದಾನವ ಸೂದನನೇ, ನೀನು ಹೇಳಿದ ಕಾರ್ಯವನ್ನು ನಾನು ಮೊದಲೇ ಚಿಂತಿಸಿದ್ದೇನೆ. ನೀನು ಯೋಚಿಸಿದಂತೆಯೇ ಬಲಿಷ್ಠನೂ ಮತ್ತು ವಿಕ್ರಮಶಾಲಿಯೂ ಆದ ಒಂದು ಗರ್ಭವು ಉಂಟಾಗುವುದು. ಅವನು ನಿನ್ನ ಜೊತೆಯಲ್ಲಿ ಸೇನಾಪತಿಯಾಗುವನು. ಎಲೈ ಶತಕ್ರತುವೇ, ಪರಾಕ್ರಮಶಾಲಿಯಾದ ಅವನು ಈ ದೇವಿಗೆ ಪತಿಯೂ ಆಗುವನು.
ಮಾರ್ಕಂಡೇಯಃ
ಏತತ್ಶ್ರುತ್ವಾ ನಮಸ್ತಸ್ಮೈ ಕೃತ್ವಾಽಸೌ ಸಹ ಕನ್ಯಯಾ |
ತತ್ರಾಭ್ಯಗಚ್ಛದ್ ದೇವೇಂದ್ರೋ ಯತ್ರ ದೇವರ್ಷಯೋಽಭವನ್ ॥38॥
ಮಾರ್ಕಂಡೇಯ ಈ ಮಾತುಗಳನ್ನು ಕೇಳಿದ ಇಂದ್ರನು ಬ್ರಹ್ಮದೇವರಿಗೆ ನಮಸ್ಕಾರವನ್ನು ಮಾಡಿ ಕನ್ಯೆಯನ್ನು ಕರೆದುಕೊಂಡು ದೇವರ್ಷಿಗಳು ಇದ್ದಲ್ಲಿಗೆ ಬಂದನು.
ವಸಿಷ್ಠಪ್ರಮುಖಾ ಮುಖ್ಯಾ ವಿಪ್ರೇಂದ್ರಾ ಸುಮಹಾಬಲಾಃ |
ಭಾಗಾರ್ಥಂ ತಪಸೋ ಧಾತುಂ ತೇಷಾಂ ಸೋಮಂ ತಥಾಽಧ್ವರೇ ॥
ಪಿಪಾಸವೋಽಭ್ಯಯುರ್ದೇವಾಃ ಶತಕ್ರತುಪುರೋಗಮಾಃ ॥40॥
ವಸಿಷ್ಠರೇ ಮೊದಲಾದ ಮಹಾಬಲಶಾಲಿಗಳೂ ಮತ್ತು ಪ್ರಧಾನರೂ ಆದ ವಿಪ್ರರಿಂದಲೂ ತಮ್ಮ ತಪಸ್ಸಿನ ಭಾಗವನ್ನು ಇಂದ್ರನಿಗೆ ಆಧಾನವನ್ನು ಮಾಡಲು (ಕಾಯುತ್ತಿದ್ದರು). ಅವರ ಯಾಗದಲ್ಲಿ ಸೋಮವನ್ನು ಪಾನಮಾಡುವ ಇಚ್ಛೆಯಿಂದಲೂ ಇಂದ್ರ ಮೊದಲಾದ ದೇವತೆಗಳು ಅಲ್ಲಿಗೆ ಹೋದರು.
ಇಷ್ಟಿಂ ಕೃತ್ವಾ ಯಥಾನ್ಯಾಯಂ ಸುಸಮಿದ್ಧೇ ಹುತಾಶನೇ |
ಜುಹುವುಸ್ತೇ ಮಹಾತ್ಮಾನೋ ಹವ್ಯಂ ಸರ್ವದಿವೌಕಸಾಮ್ ॥41॥
ಆ ಮಹಾನುಭಾವರು ಪ್ರಜ್ವಲಿಸುವ ಅಗ್ನಿಯಲ್ಲಿ ವಿಧಿಪೂರ್ವಕವಾಗಿ ಇಷ್ಟಿಯನ್ನು ಮಾಡಿ ಎಲ್ಲ ದೇವತೆಗಳಿಗೂ ಹವಿಸ್ಸನ್ನು ಹೋಮ ಮಾಡಿದರು.
ಸಮಾಹೂತೋ ಹುತವಹಃ ಸೋಽದ್ಭುತಃ ಸೂರ್ಯಮಂಡಲಾತ್ |
ವಿನಿಃಸೃತ್ಯ ಯಯೌ ವಹ್ನಿರ್ವಾಗ್ಯತೋ ವಿಧಿವತ್ ಪ್ರಭುಃ ॥42॥
ಅಗ್ನಿಯನ್ನು ಆಹ್ವಾನ ಮಾಡಿದಾಗ ಪ್ರಭುವಾದ ಅದ್ಭುತನಾಮಕ ಅಗ್ನಿಯು ಸೂರ್ಯಮಂಡಲದಿಂದ ಹೊರಗೆ ಬಂದು ಮೌನವಾಗಿ ವಿಧಿಪೂರ್ವಕವಾಗಿ ಹವಿಸ್ಸನ್ನು ಸ್ವೀಕರಿಸಿದನು.
ಆಗಮ್ಯಾಹವನೀಯಂ ವೈ ತೈರ್ದ್ವಿಜೈರ್ಮಂತ್ರತೋ ಹುತಮ್ |
ಸ ತತ್ರ ವಿವಿಧಂ ಹವ್ಯಂ ಪ್ರತಿಗೃಹ್ಯ ಹುತಾಶನಃ ॥43॥
ಋಷಿಭ್ಯೋ ಭರತಶ್ರೇಷ್ಠ ಪ್ರಾಯಚ್ಛತ ದಿವೌಕಸಾಮ್ |
ನಿಷ್ಕ್ರಾಮಂಶ್ಚಾಪ್ಯಪಶ್ಯತ್ ಸ ಪತ್ನೀಸ್ತೇಷಾಂ ಮಹಾತ್ಮನಾಮ್ ॥44॥
ಆ ಅಗ್ನಿಯು ಆಹವನೀಯ ವಹ್ನಿಸ್ಥಾನದಲ್ಲಿ ಬಂದು ಆ ಬ್ರಾಹ್ಮಣರಿಂದ ಮಂತ್ರಪೂರ್ವಕವಾಗಿ ಕೊಡಲ್ಪಟ್ಟ ವಿವಿಧ ಹವಿಸ್ಸನ್ನು ಋಷಿಗಳಿಂದ ಸ್ವೀಕರಿಸಿ ದೇವತೆಗಳಿಗೆ ಅದನ್ನು ತಲುಪಿಸಿದನು. ಎಲೈ ಭರತಶ್ರೇಷ್ಠನೇ, ಅವನು ಅಲ್ಲಿಂದ ಹೊರಗೆ ಬರುತ್ತಾ ಮಹಾನುಭಾವರಾದ ಆ ಋಷಿಗಳ ಪತ್ನಿಯರನ್ನು ನೋಡಿದನು.
ಸ್ವೇಷ್ವಾಸನೇಷೂಪವಿಷ್ಟಾಃ ಸ್ವಪಂತೀಶ್ಚ ತಥಾ ಸುಖಮ್ |
ದೃಷ್ಟ್ವಾ ಶ್ರಮೇಷೂಪವಿಷ್ಟಾಃ ಸ್ನಾಯಂತೀಶ್ಚ ಪತಿವ್ರತಾಃ |
ರುಗ್ಮವೇದಿನಿಭಾಸ್ತಾಸ್ತು ಚಂದ್ರಲೇಖಾ ಇವಾಮಲಾಃ ॥45॥
ತಮ್ಮತಮ್ಮ ಆಸನದಲ್ಲಿ ಕುಳಿತಿದ್ದಂತಹ, ಹಾಗೆಯೇ ಸುಖವಾಗಿ ನಿದ್ರಿಸುತ್ತಿದ್ದಂತಹ, ತಮ್ಮ ತಮ್ಮ ಆಶ್ರಮದಲ್ಲಿ ಕುಳಿತಿದ್ದಂತಹ, ಸ್ನಾನವನ್ನು ಮಾಡುತ್ತಿದ್ದಂತಹ ಸ್ವರ್ಣವೇದಿಯಂತೆ ಪ್ರಕಾಶಮಾನರಾದಂತಹ, ಚಂದ್ರಲೇಖೆಯಂತೆ ಸ್ವಚ್ಛರಾದಂತಹ (ಆ ಪತ್ನಿಯರನ್ನು ನೋಡಿದನು). ಅವರೆಲ್ಲರೂ ಅಗ್ನಿಶಿಖೆಯನ್ನು ಹೋಲುವವರು, ನಕ್ಷತ್ರಗಳಿಗಿಂತ ಅದ್ಭುತರಾದವರೂ ಆಗಿದ್ದರು.
ಸ ತತ್ರ ತೇನ ಮನಸಾ ಬಭೂವ ಕ್ಷುಭಿತೇಂದ್ರಿಯಃ |
ಪತ್ನೀರ್ದೃಷ್ಟ್ವಾ ದ್ವಿಜೇಂದ್ರಾಣಾಂ ವಹ್ನಿಃ ಕಾಮವಶಂ ಯಯೌ ॥46॥
ಅವರ ದರ್ಶನದಿಂದ ಅವನ ಮನಸ್ಸಿನಲ್ಲಿಯೇ ಇಂದ್ರಿಯ ಕ್ಷೋಭೆಗೆ ಒಳಗಾದನು. ದ್ವಿಜಶ್ರೇಷ್ಠರ ಪತಿನಯರನ್ನು ನೋಡಿ ವಹ್ನಿಯು ಕಾಮವಶನಾದನು.
ಭೂಯಃ ಸ ಚಿಂತಯಾಮಾಸ ನ ನ್ಯಾಯ್ಯಂ ಕ್ಷುಭಿತೋ ಹ್ಯಹಮ್ |
ಸಾಧ್ವ್ಯಃ ಪತ್ನ್ಯೋ ದ್ವಿಜೇಂದ್ರಾಣಾಮಕಾಮಾಃ ಕಾಮಯಾಮ್ಯಹಮ್ ॥
ನೈತಾಃ ಶಕ್ಯಾ ಮಯಾ ದ್ರಷ್ಟುಂ ಸ್ಪ್ರಷ್ಟುಂ ವಾಽಪ್ಯನಿಮಿತಃ |
ಗಾರ್ಹಪತ್ಯಂ ಸಮಾವಿಶ್ಯ ತಸ್ಮಾತ್ ಪಶ್ಯಾಮ್ಯಭೀಕ್ಷ್ಣಶಃ ॥48॥
ಅವನು ಪುನಃ ಇದು ಯುಕ್ತವಲ್ಲ. ನಾನು ಕ್ಷೋಭೆಗೆ ಒಳಗಾಗಿದ್ದೇನೆ. ಋಷಿಪತ್ನಿಯರು ಪತಿವ್ರತೆಯರು. ನನ್ನನ್ನು ಕಾಮಿಸುವುದಿಲ್ಲ. ನಾನು ಅವರನ್ನು ಕಾಮಿಸುತ್ತಿದ್ದೇನೆ. ಇವರು ನನ್ನಿಂದ ನಿಮಿತ್ತವಿಲ್ಲದೆ ನೋಡಲೂ ಅಥವಾ ಸ್ಪರ್ಶಮಾಡಲು ಸಾಧ್ಯವಿಲ್ಲ. ಆದ್ದರಿಂದ ಗಾರ್ಹಪತ್ಯ ಅಗ್ನಿಯ ಸ್ಥಾನವನ್ನು ಪ್ರವೇಶಿಸಿ ಇವರನ್ನು ಚೆನ್ನಾಗಿ ನೋಡುತ್ತೇನೆ ಎಂದು ಚಿಂತಿಸಿದನು.

ಮಾರ್ಕಂಡೇಯಃ
ಸಂಸ್ಪೃಶ್ಯನ್ನಿವ ಸರ್ವಾಸ್ತಾಃ ಶಿಖಾಭಿಃ ಕಾಂಚನಪ್ರಭಾಃ |
ಪಶ್ಯಮಾನಶ್ಚ ಮುಮುದೇ ಗಾರ್ಹಪತ್ಯಂ ಸಮಾಶ್ರಿತಃ ॥49॥
ಮಾರ್ಕಂಡೇಯ ಅಗ್ನಿಯು ಗಾರ್ಹಪತ್ಯಸ್ಥಾನವನ್ನು ಆಶ್ರಯಿಸಿದವನಾಗಿ ಸುವರ್ಣಕಾಂತಿಯುಳ್ಳ ಅವರೆಲ್ಲರನ್ನೂ ತನ್ನ ಶಿಖೆಗಳಿಂದ ಮುಟ್ಟುವವನಂತೆ ಅವರನ್ನು ನೋಡುತ್ತಾ ಸಂತೋಷಪಟ್ಟನು.
ನಿರುಷ್ಯ ತತ್ರ ಸುಚಿರಮೇವಂ ವಹ್ನಿರ್ವಶಂ ಗತಃ |
ಮನಸ್ತಾಸು ವಿನಿಕ್ಷಿಪ್ಯ ಕಾಮಯಾನೋ ವರಾಂಗನಾಃ ॥50॥
ಕಾಮಸಂತಪ್ತಹೃದಯೋ ದೇಹತ್ಯಾಗವಿನಿಶ್ಚಿತಃ |
ಅಲಾಭೇ ಬ್ರಾಹ್ಮಣಸ್ತ್ರೀಣಾಮಗ್ನಿರ್ವನಮುಪಾಗಮತ್ |
ಸ್ವಾಹಾ ತಂ ದಕ್ಷದುಹಿತಾ ಪ್ರಥಮಂ ಕಾಮಯತ್ ತದಾ ॥51॥
ಕಾಮವಶನಾದ ವಹ್ನಿಯು ಅಲ್ಲಿ ಬಹುಕಾಲ ಇದ್ದು, ಅವರಲ್ಲಿ ಮನಸ್ಸನ್ನಿಟ್ಟು ಆ ವರಾಂಗನೆಯರನ್ನು ಕಾಮಿಸುತ್ತಾ, ಕಾಮಸಂತಪ್ತ ಹೃದಯವುಳ್ಳವನಾಗಿ ಆ ಬ್ರಾಹ್ಮಣ ಸ್ತ್ರೀಯರು ದೊರೆಯದಿದ್ದರೆ ದೇಹತ್ಯಾಗವನ್ನು ಮಾಡುವುದಾಗಿ ನಿಶ್ಚಯಿಸಿ ವನಕ್ಕೆ ಹೋದನು. ದಕ್ಷನ ಕುಮಾರಿಯಾದ ಸ್ವಾಹಾ ದೇವಿಯು ಅವನನ್ನು ಮೊದಲೇ ಕಾಮಿಸಿದ್ದಳು.
ಸಾ ತಸ್ಯ ಚ್ಛಿದ್ರಮನ್ವೈಚ್ಛಚ್ಚಿರಾತ್ಪ್ರಭೃತಿ ಭಾಮಿನೀ |
ಅಪ್ರಮತ್ತಸ್ಯ ದೇವಸ್ಯ ನ ಚ ಪಶ್ಯತ್ಯನಿಂದಿತಾ ॥52॥
ಆ ಭಾಮಿನಿಯಾದ ಸ್ವಾಹಾದೇವಿಯು ಅವನ ಜೊತೆಯಲ್ಲಿ ಸಮಾಗಮನವನ್ನು ಹೊಂದಲು ಬಹಳ ಕಾಲದಿಂದಲೂ ಅವಕಾಶವನ್ನು ಕಾಯುತ್ತಿದ್ದಳು. ವಹ್ನಿಯು ಬಹಳ ಜಾಗರೂಕನಾಗಿದ್ದುದರಿಂದ ಅನಿಂದಿತೆಯಾದ ಅವಳಿಗೆ ಅವಕಾಶವು ದೊರೆತಿರಲಿಲ್ಲ.
ಸಾ ತಂ ಜ್ಞಾತ್ವಾ ಯಥಾವತ್ ತು ವಹ್ನಿಂ ವನಮುಪಾಗತಮ್ |
ತತ್ತ್ವತಃ ಕಾಮಸಂತಪ್ತಂ ಚಿಂತಯಾಮಾಸ ಭಾರತ ॥53॥
ಈಗ ಅವಳು ಅಗ್ನಿಯು ಕಾಡಿಗೆ ಹೋಗಿರುವುದನ್ನು ಯಥಾರ್ಥವಾಗಿ ತಿಳಿದು ಅವನು ಕಾಮತಪ್ತನಾಗಿರುವನೆಂದೂ ತಿಳಿದು ಹೀಗೆ ಯೋಚಿಸಿದಳು.
ಅಹಂ ಸಪ್ತರ್ಷಿಪತ್ನೀನಾಂ ಕೃತ್ವಾ ರೂಪಾಣಿ ಪಾವಕಮ್ |
ಕಾಮಯಿಷ್ಯಾಮಿ ಕಾಮಾರ್ತಾ ತಾಸಾಂ ರೂಪೇಣ ಮೋಹಿತಮ್ ॥
ಏವಂ ಕೃತೇ ಪ್ರೀತಿರಸ್ಯ ಕಾಮಾವಾಪ್ತಿಶ್ಚ ಮೇ ಭವೇತ್ ॥55॥
ಕಾಮಾರ್ಥಳಾದ ನಾನು ಸಪ್ತರ್ಷಿಗಳ ಪತ್ನಿಯರ ರೂಪವನ್ನು ಧರಿಸಿ ಅವರ ರೂಪದಿಂದ ಮೋಹಿತನಾದ ಅಗ್ನಿಯನ್ನು ಕಾಮಿಸುವೆನು. ಹೀಗೆ ಮಾಡಿದರೆ ಅವನಿಗೆ ಸಂತೋಷವೂ ನನಗೆ ಕಾಮತೃಪ್ತಿಯೂ ಉಂಟಾಗುವುದು (ಎಂದು ಚಿಂತಿಸಿದಳು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ತ್ರಯೋದಶಾಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ಪ್ರಥಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹದಿಮೂರನೆಯ
ಅಧ್ಯಾಯ ಮುಗಿಯಿತು
* * * *

ಇನ್ನೂರ ಹದಿನಾಲ್ಕನೆಯ ಅಧ್ಯಾಯ
ಅರುಂಧತಿಯನ್ನು ಬಿಟ್ಟು ಉಳಿದ ಆರು ಸಪ್ತರ್ಷಿ ಪತ್ನಿಯರ
ವೇಷದಿಂದ ಸ್ವಾಹಾದೇವಿಯಿಂದ ಅಗ್ನಿ ಸಮಾಗಮ.
ಷಣ್ಮುಖನ ಉತ್ಪತ್ತಿ ಮತ್ತು ಅವನ ಪರಾಕ್ರಮ.
ಮಾರ್ಕಂಡೇಯಃ
ಶಿವಾ ಭಾರ್ಯಾ ತ್ವಂಗಿರಸಃ ಶೀಲರೂಪಗುಣಾನ್ವಿತಾ |
ತಸ್ಯಾಃ ಸಾ ಪ್ರಥಮಂ ರೂಪಂ ಕೃತ್ವಾ ದೇವೀ ಜನಾಧಿಪ |
ಜಗಾಮ ಪಾವಕಾಭ್ಯಾಶಂ ತಂ ಚೋವಾಚ ವರಾಂಗನಾ ॥1॥
ಮಾರ್ಕಂಡೇಯ ಅಂಗಿರಸರ ಪತ್ನಿಯು ಶೀಲರೂಪ ಗುಣಗಳಿಂದ ಕೂಡಿದ ಶಿವಾ ಎಂಬುವಳು. ಎಲೈ ರಾಜನೇ, ಸುಂದರಿಯಾದ ಸ್ವಾಹಾದೇವಿಯು ಮೊದಲು ಅವಳ ರೂಪವನ್ನು ಧರಿಸಿ ಪಾವಕನ ಸಮೀಪಕ್ಕೆ ಹೋಗಿ ಹೀಗೆ ಮಾತನಾಡಿದಳು.
ಮಾಮಗ್ನೇ ಕಾಮಸಂತಪ್ತಾಂ ತ್ವಂ ಕಾಮಯಿತುಮರ್ಹಸಿ ॥2॥
ಕರಿಷ್ಯಸಿ ನ ಚೇದೇವಂ ಮೃತಾಂ ಮಾಮುಪಧಾರಯ |
ತವಾಪ್ಯಧರ್ಮಃ ಸುಮಹಾನ್ ಭವಿತಾ ವೈ ಹುತಾಶನ ॥3॥
ಅಗ್ನಿಯೇ, ಕಾಮಸಂತಪ್ತಳಾದ ನನ್ನನ್ನು ನೀನು ಕಾಮಿಸಬೇಕು. ಹಾಗೆ ಮಾಡದಿದ್ದರೆ ನನ್ನನ್ನು ಮೃತಳೆಂದು ತಿಳಿ. ಎಲೈ ಹುತಾಶನನೇ, ಅದರಿಂದ ನಿನಗೂ ದೊಡ್ಡ ಅಧರ್ಮವು ಉಂಟಾಗುವುದು.
ಅಹಮಂಗಿರಸೋ ಭಾರ್ಯಾ ಶಿವಾ ನಾಮ ಹುತಾಶನ |
ಶಿಷ್ಟಾಭಿಃ ಪ್ರಹಿತಾ ಪ್ರಾಪ್ತಾ ಮಂತ್ರಯಿತ್ವಾ ವಿನಿಶ್ಚಯಮ್ ॥4॥

ಹುತಾಶನನೇ, ನಾನು ಅಂಗಿರಸರ ಪತ್ನಿಯಾದ ಶಿವಾ ಎಂಬುವಳು. ಉಳಿದವರು ಮಂತ್ರಾಲೋಚನೆಯನ್ನು ಮಾಡಿ ಒಂದು ನಿರ್ಧಾರಕ್ಕೆ ಬಂದು ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾರೆ.
ಅಗ್ನಿಃ
ಕಥಂ ಮಾಂ ತ್ವಂ ವಿಜಾನಿಷೇ ಕಾಮಾರ್ತಮಿತರಾಃ ಕಥಮ್ |
ಯಾಸ್ತ್ವಯಾ ಕೀರ್ತಿತಾಃ ಸರ್ವಾಃ ಸಪ್ತರ್ಷೀಣಾಂ ಪ್ರಿಯಾಃ ಸ್ತ್ರಿಯಃ ॥5॥
ಅಗ್ನಿ ನೀನಾಗಲೀ ಅಥವಾ ನೀನು ಹೇಳಿದ ಉಳಿದ ಸಪ್ತರ್ಷಿಗಳ ಪ್ರಿಯ ಪತ್ನಿಯರಾಗಲೀ ನನ್ನನ್ನು ಕಾಮಾರ್ತನೆಂದು ಹೇಗೆ ತಿಳಿದಿದ್ದೀರಿ?
ಶಿವಾ
ಅಸ್ಮಾಕಂ ತ್ವಂ ಪ್ರಿಯೋ ನಿತ್ಯಂ ಬಿಭೀಮಸ್ತು ವಯಂ ತವ |
ತ್ವಚ್ಚಿತ್ತಮಿಂಗಿತೈರ್ಜ್ಞಾತ್ವಾ ಪ್ರೇಷಿತಾಽಸ್ಮಿ ತವಾಂತಿಕಮ್ ॥6॥
ಶಿವಾ ನಮಗೆ ನೀನು ಯಾವಾಗಲೂ ಪ್ರಿಯನಾದವನು. ಆದರೆ ನಾವು ನಿನಗೆ ಹೆದರುತ್ತೇವೆ. ನಿನ್ನ ಚಿತ್ತವನ್ನು ನಿನ್ನ ಇಂಗಿತಗಳಿಂದ ತಿಳಿದು ಉಳಿದವರು ನಿನ್ನ ಬಳಿಗೆ ನನ್ನನ್ನು ಕಳುಹಿಸಿದ್ದಾರೆ.
ಮೈಥುನಾಯೇಹ ಸಂಪ್ರಾಪ್ತಾ ಕಾಮಾಚ್ಚೈವ ದ್ರುತಂ ಚ ಮಾಮ್ |
ಉಪಯಂತುಂ ಮಹಾವೀರ್ಯ ಪೂರ್ವಮೇವ ತ್ವಮರ್ಹಸಿ ॥7॥
ನಾನು ಮೈಥುನಕ್ಕಾಗಿ ಇಲ್ಲಿಗೆ ಬಂದಿದ್ದೇನೆ. ಎಲೈ ಮಹಾವೀರ್ಯನೇ, ಕಾಮದಿಂದ ಬಂದಿರುವ ನನ್ನನ್ನು ಮೊದಲು ಬೇಗ ರಮಿಸಬೇಕು.
ತತೋಽಗ್ನಿರುಪಯೇಮೇ ತಾಂ ಶಿವಾಂ ಪ್ರೀತಾಂ ಮುದಾಯುತಃ |
ಪ್ರೀತ್ಯಾ ದೇವೀ ಸಮಾಯುಕ್ತಾ ಶುಕ್ರಂ ಜಗ್ರಾಹ ಪಾಣಿನಾ ॥8॥
ಮಾರ್ಕಂಡೇಯ ಅನಂತರ ಅಗ್ನಿಯು ಸಂತುಷ್ಟಳಾದ ಶಿವೆಯ ಜೊತೆಯಲ್ಲಿ ಸಂತೋಷದಿಂದ ಕೂಡಿದವನಾಗಿ ಸಮಾಗಮವನ್ನು ಮಾಡಿದನು. ಸಂತೋಷದಿಂದ ಯುಕ್ತಳಾದ ಆ ದೇವಿಯು ಅಗ್ನಿಯ ವೀರ್ಯವನ್ನು ಕೈಯಲ್ಲಿ ತೆಗೆದುಕೊಂಡಳು.
ಅಚಿಂತಯನ್ಮಮೇದಂ ಯೇ ರೂಪಂ ದ್ರಕ್ಷ್ಯಂತಿ ಕಾನನೇ |
ತೇ ಬ್ರಾಹ್ಮಣೀನಾಮನೃತಂ ದೋಷಂ ವಕ್ಷ್ಯಂತಿ ಪಾಪಕಮ್ ॥9॥
ತಸ್ಮಾದೇತದ್ ರಕ್ಷಮಾಣಾ ಗರುಡೀ ಸಂಭವಾಮ್ಯಹಮ್ |
ವನಾನ್ನಿರ್ಗಮನೇ ಚೈವ ಸುಖಂ ಮಮ ಭವಿಷ್ಯತಿ ॥10॥
ಅವಳು ಹೀಗೆ ಚಿಂತಿಸಿದಳು. ಈ ಕಾಡಿನಲ್ಲಿ ಯಾರಾದರೂ ನನ್ನ ರೂಪವನ್ನು ನೋಡಿದರೆ ಬ್ರಾಹ್ಮಣ ಸ್ತ್ರೀಯರಿಗೆ ಅವರು ಅನೃತದೋಷವನ್ನು ಮತ್ತು ಪಾಪವನ್ನೂ ಹೇಳುವರು. ಆದ್ದರಿಂದ ಈ ರೂಪವನ್ನು ರಕ್ಷಣೆ ಮಾಡಿಕೊಂಡು (ಮರೆಸಿಕೊಂಡು) ಗರುಡಿಯ ರೂಪವನ್ನು ತಾಳುವೆನು. ಹಾಗೆ ಮಾಡಿದರೆ ನಾನು ಈ ವನದಿಂದ ಹೋಗಲು ನನಗೆ ಸುಖವಾಗುವುದು.
ಮಾರ್ಕಂಡೇಯಃ
ಸುಪರ್ಣೀ ಸಾ ತತೋ ಭೂತ್ವಾ ನಿರ್ಜಗಾಮ ಮಹಾವನಾತ್ |
ಅಪಶ್ಯತ್ ಪರ್ವತಂ ಶ್ವೇತಂ ಶರಸ್ತಂಬೈಃ ಸುಸಂವೃತಮ್ ॥11॥
ಮಾರ್ಕಂಡೇಯ ಅವಳು ಹೆಣ್ಣು ಗರುಡಪಕ್ಷಿಯ ರೂಪವನ್ನು ಧರಿಸಿ ದೊಡ್ಡ ಕಾಡಿನಿಂದ ಹೊರಟು ಹೋದಳು. ಅನಂತರ ಹುಲ್ಲಿನ ಪೊದೆಗಳಿಂದ ಚೆನ್ನಾಗಿ ಆವೃತವಾದ ಶ್ವೇತಪರ್ವತವನ್ನು ನೋಡಿದಳು.
ದೃಷ್ಟೀವಿಷೈಃ ಸಪ್ತಶೀರ್ಷೈರ್ಗುಪ್ತಂ ಭೋಗಿಭಿರದ್ಭುತೈಃ |
ರಕ್ಷೋಭಿಶ್ಚ ಪಿಶಾಚೈಶ್ಚ ರೌದ್ರೈರ್ಭೂತಗಣೈಸ್ತಥಾ ॥12॥
ರಾಕ್ಷಸೀಭಿಶ್ಚ ಸಂಪೂರ್ಣಮನೇಕೈಶ್ಚ ಮೃಗದ್ವಿಜೈಃ |
ನದೀಪ್ರಸ್ರವಣೋಪೇತಂ ನಾನಾತರುಗಣಾಕುಲಮ್ ॥13॥
ಆ ಪ್ರದೇಶವು ದೃಷ್ಟಿವಿಷವುಳ್ಳ ಏಳು ಹೆಡೆಯುಳ್ಳ ಅದ್ಭುತ ಸರ್ಪಗಳಿಂದಲೂ, ರಾಕ್ಷಸರಿಂದಲೂ, ಪಿಶಾಚಿಗಳಿಂದಲೂ, ರುದ್ರನಭೂತಗಣಗಳಿಂದಲೂ ರಕ್ಷಿತವಾಗಿದ್ದಿತು. ಅನೇಕ ಮೃಗಪಕ್ಷಿಗಳಿಂದಲೂ ಮತ್ತು ರಾಕ್ಷಸರಿಂದಲೂ ಸಂಕುಲವಾಗಿದ್ದಿತು. ಅನೇಕ ವೃಕ್ಷಗಳ ಸಮೂಹದಿಂದಲೂ, ಅನೇಕ ನೀರಿನ ಝರಿಗಳಿಂದಲೂ ಕೂಡಿದ್ದಿತು.
ಸಾ ತತ್ರ ಸಹಸಾ ಗತ್ವಾ ಶೈಲಪೃಷ್ಠಂ ಸುದುರ್ಗಮಮ್ |
ಪ್ರಾಕ್ಷಿಪತ್ ಕಾಂಚನೇ ಕುಂಡೇ ಶುಕ್ರಂ ಸಾ ತ್ವರಿತಾ ಶುಭಾ ॥14॥
ಶುಭಳಾದ ಅವಳು ಶೀಘ್ರವಾಗಿ ಬಹಳ ದುರ್ಗಮವಾದ ಆ ಪರ್ವತದ ತಪ್ಪಲಿಗೆ ಹೋಗಿ ಒಂದು ಸುವರ್ಣಮಯವಾದ ಕುಂಡದಲ್ಲಿ ಶೀಘ್ರವಾಗಿ ಅಗ್ನಿಯ ವೀರ್ಯವನ್ನು ಹಾಕಿದಳು.
ಸಪ್ತಾನಾಮಪಿ ದೇವೀನಾಂ ಸಪ್ತರ್ಷೀಣಾಂ ಮಹಾತ್ಮನಾಮ್ |
ಪತ್ನೀಸರೂಪತಾಂ ಕೃತ್ವಾ ಕಾಮಯಾಮಾಸ ಪಾವಕಮ್ ॥15॥
ಆ ದೇವಿಯು ಮಹಾತ್ಮರಾದ ಏಳೂ ಜನ ಸಪ್ತರ್ಷಿಗಳ ಪತ್ನಿಯರ ವೇಷವನ್ನು ಧರಿಸಿ ಅಗ್ನಿಯನ್ನು ಕಾಮಿಸಿದಳು (ಕಾಮಿಸಲು ಇಚ್ಛಿಸಿದಳು).
ದಿವ್ಯರೂಪಮರುಂಧತ್ಯಾಃ ಕರ್ತುಂ ನ ಶಕಿತಂ ತಯಾ |
ತಸ್ಯಾಸ್ತಪಃಪ್ರಭಾವೇಣ ಭರ್ತೃಶುಶ್ರೂಷಣೇನ ಚ ॥16॥
ಆದರೆ ಅರುಂಧತಿಯ ತಪಃ ಪ್ರಭಾವದಿಂದ ಮತ್ತು ಅವಳ ಪತಿ ಸೇವೆಯ ಬಲದಿಂದ ಅರುಂಧತಿಯ ದಿವ್ಯರೂಪವನ್ನು ಅವಳು

ಧರಿಸಲು ಸಾಧ್ಯವಾಗಲಿಲ್ಲ.
ಷಟ್ಕೃತ್ವಸ್ತತ್ತು ನಿಕ್ಷಿಪ್ತಮಗ್ನೌ ರೇತಃ ಕುರೂತ್ತಮ |
ತಸ್ಮಿನ್ ಕುಂಡೇ ಪ್ರತಿಪದಿ ಕಾಮಿನ್ಯಾ ಸ್ವಾಹಯಾ ತದಾ ॥17॥
ಎಲೈ ಕುರುಶ್ರೇಷ್ಠನೇ, ಕಾಮಿನಿಯಾದ ಸ್ವಾಹಾದೇವಿಯು ಆಗ ಪಾಡ್ಯದ ತಿಥಿಯಂದು ಆರುಬಾರಿ ಆ ವೀರ್ಯವನ್ನು ಆ ಕುಂಡದಲ್ಲಿ ಹಾಕಿದಳು.
ತತ್ ಸ್ಕನ್ನಂ ತೇಜಸಾ ತತ್ರ ಸಂವೃತಂ ಜನಯತ್ ಸುತಮ್ |
ಋಷಿಭಿಃ ಪೂಜಿತಂ ಸ್ಕನ್ನಮನಯತ್ ಸ್ಕಂದತಾಂ ತತಃ ॥18॥
ಸ್ಖಲನಗೊಂಡ ಮತ್ತು ತೇಜಸ್ಸಿನಿಂದ ಚೆನ್ನಾಗಿ ರಕ್ಷಿತವಾದ ಆ ವೀರ್ಯವು ಒಬ್ಬ ಮಗನನ್ನು ಉತ್ಪಾದಿಸಿತು. ಋಷಿಗಳಿಂದ ಪೂಜಿತವಾದ ಆ ಪತಿತವಾದ ವೀರ್ಯವೇ ಸ್ಕಂದನ ರೂಪವನ್ನು ತಾಳಿತು.
ಷಟ್ಶಿರಾ ದ್ವಿಗುಣಶ್ರೋತ್ರೋ ದ್ವಾದಶಾಕ್ಷಿಭುಜಕ್ರಮಃ |
ಏಕಗ್ರೀವೈಕಜಠರಃ ಕುಮಾರಃ ಸಮಪದ್ಯತ ॥19॥
ಆರು ತಲೆಗಳು, ಹನ್ನೆರಡು ಕಿವಿಗಳು, ಹನ್ನೆರಡು ಕಣ್ಣುಗಳು ಮತ್ತು ಭುಜಗಳು, ಒಂದು ಕತ್ತು ಮತ್ತು ಒಂದು ಜಠರವಿರುವ ಕುಮಾರನು ಜನಿಸಿದನು.
ದ್ವಿತೀಯಾಯಾಮಭಿವ್ಯಕ್ತಸ್ತೃತೀಯಾಯಾಂ ಶಿಶುರ್ಬಭೌ |
ಅಂಗಪ್ರತ್ಯಂಗಸಂಭೂತಶ್ಚತುರ್ಥ್ಯಾಮಭವದ್ ಗುಹಃ ॥20॥
ದ್ವಿತೀಯಾ ತಿಥಿಯಂದು ಸ್ವಲ್ಪ ಅಭಿವ್ಯಕ್ತವಾದ ಅವನು ತೃತೀಯಾ ತಿಥಿಯಲ್ಲಿ ಶಿಶುರೂಪವನ್ನು ತಾಳಿದನು. ಚತುರ್ಥಿಯಂದು ಅಂಗಪ್ರತ್ಯಂಗಗಳು ಬೆಳೆದು ಗುಹನಾಮಕನಾದನು.
ಲೋಹಿತಾಭ್ರೇಣ ಮಹತಾ ಸಂವೃತಃ ಸಹ ವಿದ್ಯುತಾ |
ಲೋಹಿತಾಭ್ರೇ ಸುಮಹತಿ ಭಾತಿ ಸೂರ್ಯ ಇವೋದಿತಃ ॥21॥
ವಿದ್ಯುತ್ತಿನಿಂದ ಕೂಡಿದ ದೊಡ್ಡ ಕೆಂಪು ಮೋಡಗಳಿಂದ ಮುಚ್ಚಲ್ಪಟ್ಟ ಅವನು, ದೊಡ್ಡ ಕೆಂಪು ಮೋಡಗಳಲ್ಲಿ ಉದಯಿಸಿದ ಸೂರ್ಯನಂತೆ ಕಂಗೊಳಿಸಿದನು.
ಗೃಹೀತಂ ತದ್ ಧನುಸ್ತೇನ ವಿಪುಲಂ ಲೋಮಹರ್ಷಣಮ್ |
ನ್ಯಸ್ತಂ ಯತ್ ತ್ರಿಪುರ್ನಘ್ನೇನ ಸುರಾರಿವಿನಿಕೃಂತನಮ್ ॥22॥
ತ್ರಿಪುರಾರಿಯಾದ ಶಿವನು ರಾಕ್ಷಸರನ್ನು ಕೊಲ್ಲುವ ರೋಮಾಂಚಕಾರಿಯಾದ ಯಾವ ವಿಪುಲವಾದ ಧನುಸ್ಸನ್ನು ಇಟ್ಟಿದ್ದನೋ ಅದನ್ನು ಅವನು ಕೈಯಲ್ಲಿ ತೆಗೆದುಕೊಂಡನು.
ತದ್ ಗೃಹೀತ್ವಾ ಧನುಃ ಶ್ರೇಷ್ಠಂ ನನಾದ ಬಲವಾಂಸ್ತದಾ |
ಸಮ್ಮೋಹಯನ್ನಿಮಾನ್ ಸರ್ವಾನ್ ತ್ರೀಂಲ್ಲೋಕಾನ್ ಸಚರಾಚರಾನ್ ॥
ಆಗ ಆ ಶ್ರೇಷ್ಠವಾದ ಧನುಸ್ಸನ್ನು ಕೈಯಲ್ಲಿ ತೆಗೆದುಕೊಂಡು ಚರಾಚರ ಸಹಿತವಾದ ಈ ಮೂರುಲೋಕಗಳೂ ಗಾಬರಿಗೊಳ್ಳುವಂತೆ ಗರ್ಜಿಸಿದನು.
ತಸ್ಯ ತಂ ನಿನದಂ ಶ್ರುತ್ವಾ ಮಹಾಮೇೌಘನಿಸ್ವನಮ್ |
ಉತ್ಪೇತತುರ್ಮಹಾನಾಗೌ ಚಿತ್ರಶ್ಚೈರಾವತಶ್ಚ ಹ ॥24॥
ಮಹಾಮೇಘಗಳ ಗರ್ಜನೆಯನ್ನು ಹೋಲುವ ಅವನ ನಾದವನ್ನು ಕೇಳಿದ ಚಿತ್ರ ಮತ್ತು ಐರಾವತ ಎಂಬ ಎರಡು ದೊಡ್ಡ ದಿಗ್ಗಜಗಳು ಮೇಲಕ್ಕೆ ನೆಗೆದವು.
ತಾವಾಪತಂತೌ ಸಂಪ್ರೇಕ್ಷ್ಯ ಸ ಬಾಲೋಽರ್ಕಸಮದ್ಯುತಿಃ |
ದ್ವಾಭ್ಯಾಂ ಗೃಹೀತ್ವಾ ಪಾಣಿಭ್ಯಾಂ ಶಕ್ತಿಂ ಚಾನ್ಯೇನ ಪಾಣಿನಾ ॥25॥
ಅಪರೇಣಾಗ್ನಿದಾಯಾದಸ್ತಾಮ್ರಚೂಡಂ ಭುಜೇನ ಸಃ |
ಮಹಾಕಾಯಮುಪಶ್ಲಿಷ್ಟಂ ಕುಕ್ಕುಟಂ ಬಲಿನಾಂ ವರಮ್ |
ಗೃಹೀತ್ವಾ ವ್ಯನದದ್ ಭೀಮಂ ಚಿಕ್ರೀಡ ಚ ಮಹಾಭುಜಃ ॥26॥
ಮೇಲೆ ನೆಗೆಯುತ್ತಿದ್ದ ಗಜಗಳನ್ನು ನೋಡಿದ ಆ ಬಾಲಾರ್ಕ ಪ್ರಭೆಯುಳ್ಳ ಕುಮಾರನು ಎರಡು ಕೈಗಳಿಂದ ಆ ಗಜಗಳನ್ನು ಹಿಡಿದುಕೊಂಡು, ಇನ್ನೊಂದು ಕೈಯಿಂದ ಶಕ್ತಿಯನ್ನು ಹಿಡಿದುಕೊಂಡು, ಇನ್ನೊಂದು ಕೈಯಿಂದ ಬಲಿಷ್ಠವಾದ ಮಹಾಶರೀರವುಳ್ಳ ಸಮೀಪದಲ್ಲಿದ್ದ ಕೆಂಪು ಶಿರಸ್ಸುಳ್ಳ ಕುಕ್ಕುಟವನ್ನು (ಹುಂಜ) ಹಿಡಿದುಕೊಂಡು, ಮಹಾಭುಜನಾದ ಅವನು ಘೋರವಾಗಿ ನಾದವನ್ನು ಮಾಡಿ ಆಟವಾಡಿದನು.
ದ್ವಾಭ್ಯಾಂ ಭುಜಾಭ್ಯಾಂ ಬಲವಾನ್ ಗೃಹೀತ್ವಾ ಶಂಖಮುತ್ತಮಮ್ |
ಪ್ರಾಧ್ಮಾಪಯತ ಭೂತಾನಾಂ ತ್ರಾಸನಂ ಬಲಿನಾಮಪಿ ॥27॥
ದ್ವಾಭ್ಯಾಂ ಭುಜಾಭ್ಯಾಮಾಕಾಶಂ ಬಹುಶೋ ನಿಜಘಾನ ಸಃ ॥28॥
ಬಲಿಷ್ಠನಾದ ಅವನು ಎರಡು ಕೈಗಳಿಂದ ಶ್ರೇಷ್ಠವಾದ ಶಂಖವನ್ನು ಹಿಡಿದುಕೊಂಡು ಬಲಶಾಲಿಗಳಾದ ಪ್ರಾಣಿಗಳೂ ಹೆದರುವಂತೆ ಅದನ್ನು ಊದಿದನು. ಎರಡು ಭುಜಗಳಿಂದ ಅನೇಕ ಬಾರಿ ಆಕಾಶವನ್ನು ಗುದ್ದಿದನು.
ಕ್ರೀಡನ್ ಭಾತಿ ಮಹಾಸೇನಸ್ತ್ರೀಂಲ್ಲೋಕಾನ್ ವದನೈಃ ಪಿಬನ್ |
ಪರ್ವತಾಗ್ರೇಽಪ್ರಮೇಯಾತ್ಮಾ ರಶ್ಮಿಮಾನುದಯೇ ಯಥಾ ॥29॥
ಲೀಲೆಯಿಂದ ಆಟವಾಡಿದ ಮಹಾಸೇನನು ಉದಯಪರ್ವತದ ಶಿಖರದಲ್ಲಿ ಅಪ್ರಮೇಯ ಸ್ವರೂಪನಾದ ಆದಿತ್ಯನಂತೆ

ಮೂರುಲೋಕಗಳನ್ನೂ ತನ್ನ ವದನಗಳಿಂದ ಪಾನಮಾಡುವವನಂತೆ ತೋರುತ್ತಿದ್ದನು.
ಸ ತಸ್ಯ ಪರ್ವತಸ್ಯಾಗ್ರೇ ನಿಷಣ್ಣೋಽದ್ಭುತವಿಕ್ರಮಃ |
ವ್ಯಲೋಕಯದಮೇಯಾತ್ಮಾ ಮುಖೈರ್ನಾನಾವಿಧೈರ್ದಿಶಃ |
ಸ ಪಶ್ಯನ್ ವಿವಿಧಾನ್ ಭಾವಾಂಶ್ಚಕಾರ ನಿನದಂ ಪುನಃ ॥30॥
ಅದ್ಭುತವಿಕ್ರಮನೂ, ಅಪ್ರಮೇಯಾತ್ಮನೂ ಆದ ಅವನು ಪರ್ವತದ ಶಿಖರದಲ್ಲಿ ಕುಳಿತು ತನ್ನ ನಾನಾವಿಧವಾದ ಮುಖಗಳಿಂದ ಎಲ್ಲ ದಿಕ್ಕುಗಳನ್ನೂ ನೋಡಿದನು. ಆ ದಿಕ್ಕುಗಳಲ್ಲಿ ಅನೇಕ ವಿಧವಾದ ವಸ್ತುಗಳನ್ನು ನೋಡುತ್ತಾ ಅವನು ಪುನಃ ಗರ್ಜಿಸಿದನು.
ತಸ್ಯ ತಂ ನಿನದಂ ಶ್ರುತ್ವಾ ನ್ಯಪತನ್ ಬಹುಧಾ ಜನಾಃ |
ಭೀತಾಶ್ಚೋದ್ವಿಗ್ನಮನಸಸ್ತಮೇವ ಶರಣಂ ಯಯುಃ ॥31॥
ಅವನ ಗರ್ಜನೆಯನ್ನು ಕೇಳಿದ ಅನೇಕ ಜನರು (ಭೂಮಿಯ ಮೇಲೆ) ಬಿದ್ದರು. ಅವರು ಭೀತರಾಗಿ ಉದ್ವಿಗ್ನ ಮನಸ್ಸಿನಿಂದ ಕೂಡಿ ಅವನನ್ನೇ ಶರಣು ಹೊಂದಿದರು.
ಯೇ ತು ತಂ ಸಂಶ್ರಿತಾ ದೇವಂ ನಾನಾವರ್ಣಾಸ್ತದಾ ಜನಾಃ |
ತಾಂಸ್ತಸ್ಯಾಹುಃ ಪಾರಿಷದಾನ್ ಬ್ರಾಹ್ಮಣಾಃ ಸುಮಹಾಬಲಾನ್ ॥32॥
ಯಾವ ನಾನಾ ವರ್ಣದ ಜನರು ಆ ದೇವನನ್ನು ಆಗ ಆಶ್ರಯಿಸಿದರೋ ಬಲಿಷ್ಠರಾದ ಆ ಜನರನ್ನು ಬ್ರಾಹ್ಮಣರು ಅವನ ಪಾರ್ಷದರೆಂದು ಕರೆಯುತ್ತಾರೆ.
ಸ ತೂತ್ಥಾಯ ಮಹಾಬಾಹುರುಪಸಾಂತ್ವ್ಯ ಚ ತಾನ್ ಜನಾನ್ |
ಧನುರ್ವಿಕೃಷ್ಯ ವ್ಯಸೃಜದ್ ಬಾಣಾನ್ಶ್ವೇತೇ ಮಹಾಗಿರೌ ॥33॥
ಮಹಾಬಾಹುವಾದ ಅವನು ಎದ್ದು ಆ ಜನಗಳನ್ನು ಸಮಾಧಾನಗೊಳಿಸಿ ಧನುಸ್ಸನ್ನು ಎಳೆದು ಆ ಮಹಾಶ್ವೇತಗಿರಿಗೆ ಬಾಣಪ್ರಯೋಗವನ್ನು ಮಾಡಿದನು.
ಬಿಭೇದ ಸ ಶರೈಃ ಶೈಲಂ ಕ್ರೌಂಚಂ ಹಿಮವತಃ ಸುತಮ್ |
ತೇನ ಹಂಸಾಶ್ಚ ಗೃಧ್ರಾಶ್ಚ ಮೇರುಂ ಗಚ್ಛಂತಿ ಪರ್ವತಮ್ ॥34॥
ಸ ವಿಶೀರ್ಣೋಽಪತಚ್ಛೈಲೋ ಭೃಶಮಾರ್ತಸ್ವರಾನ್ ರುವನ್ ॥
ಅವನು ತನ್ನ ಬಾಣಗಳಿಂದ ಹಿಮಾಲಯದ ಪುತ್ರನಾದ ಕ್ರೌಂಚಪರ್ವತವನ್ನು ಭೇದಿಸಿದನು. ಆ ಕಾರಣದಿಂದ ಹಂಸಗಳು ಮತ್ತು ಗೃಧ್ರುಗಳು ಮೇರುಪರ್ವತಕ್ಕೆ ಹೋದವು. ಆ ಕ್ರೌಂಚ ಪರ್ವತವು ಬಹಳ ಆರ್ತಸ್ವರವನ್ನು ಮಾಡುತ್ತಾ ಬಿರಿದು ಬಿದ್ದುಹೋಯಿತು.
ತಸ್ಮಿನ್ ನಿಪತಿತೇ ತ್ವನ್ಯೇ ನೇದುಃ ಶೈಲಾ ಭೃಶಂ ತದಾ |
ಘೋರಮಾರ್ತಸ್ವರಂ ಚಕ್ರುರ್ದೃಷ್ಟ್ವಾ ಕ್ರೌಂಚಂ ವಿದಾರಿತಮ್ ॥36॥
ಕ್ರೌಂಚಪರ್ವತವು ಬೀಳುತ್ತಿರಲು ಬಿರಿದುಬಿದ್ದ ಆ ಕ್ರೌಂಚಪರ್ವತವನ್ನು ನೋಡಿ ಉಳಿದ ಪರ್ವತಗಳು ಘೋರವಾದ ಆರ್ತಸ್ವರವನ್ನು ಬಹಳವಾಗಿ ಮಾಡಿದವು.
ಸ ತಂ ನಾದಂ ಭೃಶಾರ್ತಾನಾಂ ಶ್ರುತ್ವಾಽಪಿ ಬಲಿನಾಂ ವರಃ |
ನ ಪ್ರಾಪದದಮೇಯಾತ್ಮಾ ಶಕ್ತಿಮುದ್ಯಮ್ಯ ಚಾನದತ್ ॥37॥
ಅಮೇಯಾತ್ಮನೂ, ಬಲಿಷ್ಠರಲ್ಲಿ ಶ್ರೇಷ್ಠನೂ ಆದ ಅವನು ಬಹಳವಾಗಿ ಆರ್ತವಾದ ಆ ಪರ್ವತಗಳ ಘೋರವಾದ ನಾದವನ್ನು ಕೇಳಿದರೂ ಕೂಡ ಕೆಳಗೆ ಬೀಳಲಿಲ್ಲ. ಶಕ್ತಿಯನ್ನು ಎತ್ತಿ ಪುನಃ ಗರ್ಜಿಸಿದನು.
ಸಾ ತದಾ ವಿಮಲಾ ಶಕ್ತಿಃ ಕ್ಷಿಪ್ತಾ ತೇನಾಮಿತಾತ್ಮನಾ |
ಬಿಭೇದ ಶಿಖರಂ ಕ್ರೋಧಾತ್ ಶ್ವೇತಸ್ಯ ತರಸಾ ಗಿರೇಃ ॥38॥
ಆ ಮಹಾತ್ಮನು ಕ್ರೋಧದಿಂದ ಪ್ರಯೋಗಿಸಿದ ಆ ವಿಮಲವಾದ ಶಕ್ತಿಯು ಶೀಘ್ರವಾಗಿ ಶ್ವೇತಪರ್ವತದ ಶಿಖರವನ್ನು ಭೇದಿಸಿತು.
ಸ ತೇನಾಭಿಹತೋ ದೀರ್ಣೋ ಗಿರಿಃ ಶ್ವೇತೋಽಚಲೈಃ ಸಹ |
ಉತ್ಪಪಾತ ಮಹೀಂ ತ್ಯಕ್ತ್ವಾ ಭೀತಸ್ತಸ್ಮಾನ್ಮಹಾತ್ಮನಃ ॥39॥
ಹೀಗೆ ಹೊಡೆಯಲ್ಪಟ್ಟು ಬಿರಿದ ಆ ಶ್ವೇತಪರ್ವತವು ಮಹಾತ್ಮನಾದ ಆ ಕುಮಾರನಿಗೆ ಹೆದರಿ ಉಳಿದ ಪರ್ವತಗಳ ಜೊತೆಯಲ್ಲಿ ಭೂಮಿಯನ್ನು ಬಿಟ್ಟು ಮೇಲಕ್ಕೆ ಹಾರಿತು.
ತತಃ ಪ್ರವ್ಯಥಿತಾ ಭೂಮಿರ್ವ್ಯಶೀರ್ಯತ ಸಮಂತತಃ |
ಆರ್ತಾ ಸ್ಕಂದಂ ಸಮಾಸಾದ್ಯ ಪುನರ್ಬಲವತೀ ಬಭೌ ॥40॥
ಆಗ ದುಃಖಗೊಂಡ ಭೂಮಿಯು ಎಲ್ಲ ಕಡೆಗಳಲ್ಲಿಯೂ ಬಿರಿಯಿತು. ಅದು ಆರ್ತವಾಗಿ ಸ್ಕಂದನನ್ನು ಸಮೀಪಿಸಿ ಶರಣಾಗತಿಯನ್ನು ಹೊಂದಿ ಪುನಃ ಬಲವುಳ್ಳದ್ದಾಗಿ ಕಂಗೊಳಿಸಿತು.
ಪರ್ವತಾಶ್ಚ ನಮಸ್ಕೃತ್ಯ ತಮೇವ ಪೃಥಿವೀಂ ಗತಾಃ |
ಅಥೈನಮಭಜಲ್ಲೋಕಃ ಸ್ಕಂದಂ ಶುಕ್ಲಸ್ಯ ಪಂಚಮೀಮ್ ॥41॥
ಪರ್ವತಗಳೂ ಸಹ ಅವನಿಗೆ ನಮಸ್ಕರಿಸಿ ಪುನಃ ಭೂಮಿಗೇ ಬಂದವು. ಅನಂತರ ಶುಕ್ಲಪಕ್ಷದ ಪಂಚಮಿಯಂದು ಜನರು ಸ್ಕಂದನನ್ನು ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುರ್ದಶಾಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ದ್ವಿತೀಯೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹದಿನಾಲ್ಕನೆಯ

ಅಧ್ಯಾಯ ಮುಗಿಯಿತು
* * * *
ಇನ್ನೂರ ಹದಿನೈದನೆಯ ಅಧ್ಯಾಯ
ಸಪ್ತರ್ಷಿಗಳಲ್ಲಿ ಆರುಜನರಿಂದ ತಮ್ಮ ಪತ್ನಿಯರ ಪರಿತ್ಯಾಗ, ವಿಶ್ವಾಮಿತ್ರರಿಂದ ಕುಮಾರನಿಗೆ ಜಾತಕರ್ಮಾದಿ ಸಂಸ್ಕಾರ ಮತ್ತು ನಿಜಸ್ಥಿತಿಯ ಘೋಷಣೆ. ಋಷಿಗಳಿಂದ ಪತ್ನಿಯರ ಸ್ವೀಕಾರ.
ಮಾರ್ಕಂಡೇಯಃ
ಋಷಯಶ್ಚ ಮಹಾಘೋರಾನ್ ದೃಷ್ಟ್ವೋತ್ಪಾತಾನ್ ಸಮಂತತಃ |
ಅಕುರ್ವಂಛಾಂತಿಮುದ್ವಿಗ್ನಾ ಲೋಕಾನಾಂ ಶಾಂತಿಭಾವನಾಃ ॥1॥
ಮಾರ್ಕಂಡೇಯ ಲೋಕಗಳಿಗೆ ಶಾಂತಿಯನ್ನು ಬಯಸುವ ಋಷಿಗಳು ಎಲ್ಲಕಡೆಗಳಲ್ಲಿಯೂ ಮಹಾಘೋರವಾದ ಅಪಶಕುನಗಳನ್ನು ನೋಡಿ ಉದ್ವಿಗ್ನರಾಗಿ ಶಾಂತಿಯನ್ನು ಮಾಡಿದರು.
ನಿವಸಂತಿ ವನೇ ಯೇ ತು ತಸ್ಮಿಂಶ್ಚೈತ್ರರಥೇ ಜನಾಃ |
ತೇಽಬ್ರುವನ್ನೇಷ ನೋಽನರ್ಥಃ ಪಾವಕೇನಾಹಿತೋ ಮಹಾನ್ |
ಸಂಗಮ್ಯ ಷಡ್ಭಿಃ ಪತ್ನೀಭಿಃ ಸಪ್ತರ್ಷೀಣಾಮಿತಿ ಸ್ಮ ಹ ॥2॥
ಆ ಚೈತ್ರರಥವನದಲ್ಲಿ ವಾಸಮಾಡುವ ಜನಗಳು ಮಾತ್ರ ಅಗ್ನಿಯು ಸಪ್ತರ್ಷಿಗಳ ಪತ್ನಿಯರ ಜೊತೆಯಲ್ಲಿ ಸಂಗವನ್ನು ಮಾಡಿ ನಮಗೆ ಈ ಅನರ್ಥವನ್ನು ತಂದೊಡ್ಡಿದ್ದಾನೆ ಎಂದು ಹೇಳಿದರು.
ಅಪರೇ ಗರುಡೀಮಾಹುಸ್ತ್ವಯಾಽನರ್ಥೋಽಯಮಾಹೃತಃ |
ಯೈರ್ದೃಷ್ಟಾ ಸಾ ತದಾ ದೇವೀ ತಸ್ಯಾ ರೂಪೇಣ ಗಚ್ಛತೀ ॥3॥
ಸ್ವಾಹಾದೇವಿಯು ಹೆಣ್ಣುಗರುಡ ಪಕ್ಷಿಯ ರೂಪದಲ್ಲಿ ಹೋಗುವುದನ್ನು ನೋಡಿದ್ದ ಇನ್ನು ಕೆಲವರು ಆ ಹೆಣ್ಣು ಗರುಡ ಪಕ್ಷಿಯು ಇಂತಹ ಅನರ್ಥವನ್ನು ತಂದಿದೆ ಎಂದು ಹೇಳಿದರು.
ನ ತು ತತ್ ಸ್ವಾಹಯಾ ಕರ್ಮ ಕೃತಂ ಜಾನಾತಿ ವೈ ಜನಃ ॥4॥
ಈ ಕಾರ್ಯವನ್ನು ಮಾಡಿದವಳು ಸ್ವಾಹಾದೇವಿ ಎಂದು ಯಾರೂ ತಿಳಿದಿರಲಿಲ್ಲ.
ಸುಪರ್ಣೀ ತು ವಚಃ ಶ್ರುತ್ವಾ ಮಮಾಯಂ ತನಯಸಿತ್ವತಿ |
ಉಪಗಮ್ಯ ಶನೈಃ ಸ್ಕಂದಮಾಹಾಹಂ ಜನನೀ ತವ ॥5॥
ಆ ಸುಪರ್ಣಿಯಾದರೋ ಇವನು ತನ್ನ ಮಗನೆಂಬ ಮಾತನ್ನು ಕೇಳಿ ಮೆಲ್ಲನೆ ಸ್ಕಂದನನ್ನು ಸಮೀಪಿಸಿ ನಾನು ನಿನ್ನ ತಾಯಿ ಎಂದು ಹೇಳಿದಳು.
ಅಥ ಸಪ್ತರ್ಷಯಃ ಶ್ರುತ್ವಾ ಜಾತಂ ಪುತ್ರಂ ಮಹೌಜಸಮ್ |
ತತ್ಯಜುಃ ಷಟ್ ತದಾ ಪತ್ನೀರ್ವಿನಾ ದೇವೀಮರುಂಧತೀಮ್ |
ಷಡ್ಭಿರೇವ ತದಾ ಜಾತಮಾಹುಸ್ತದ್ವನವಾಸಿನಃ ॥6॥
ಆಗ ಸಪ್ತರ್ಷಿಗಳು ಮಹಾಪರಾಕ್ರಮಿಯಾದ ಪುತ್ರನು ಹುಟ್ಟಿದುದನ್ನು ಕೇಳಿ ಅರುಂಧತಿ ಒಬ್ಬಳನ್ನು ಬಿಟ್ಟು ಉಳಿದ ಆರು ಪತ್ನಿಯರನ್ನು ಪರಿತ್ಯಾಗ ಮಾಡಿದರು. ಆ ವನವಾಸಿಗಳು ಆರುಜನ ಸ್ತ್ರೀಯರೇ ಈ ಕಾರ್ಯವನ್ನು ಮಾಡಿದರು ಎಂದು ಹೇಳಿದರಷ್ಟೆ?
ಸಪ್ತರ್ಷೀನಾಹ ಚ ಸ್ವಾಹಾ ಮಮ ಪುತ್ರೋಽಯಮಿತ್ಯುತ |
ಅಹಂ ಜಾನೇ ನೈತದೇವಮಿತಿ ರಾಜನ್ ಪುನಃ ಪುನಃ ॥7॥
ಎಲೈ ರಾಜನೇ, ಸ್ವಾಹಾದೇವಿಯು ಸಪ್ತರ್ಷಿಗಳ ಬಳಿಗೆ ಬಂದು ಇದು ನೀವು ತಿಳಿದುಕೊಂಡಿರುವಂತೆ ಅಲ್ಲ. ನಾನು ಸರಿಯಾಗಿ ತಿಳಿದಿದ್ದೇನೆ. ಇವನು ನನ್ನ ಪುತ್ರ ಎಂದು ಪುನಃ ಪುನಃ ಹೇಳಿದಳು (ಆದರೂ ಅವರು ಒಪ್ಪಲಿಲ್ಲ).
ವಿಶ್ವಾಮಿತ್ರಸ್ತು ಕೃತ್ವೇಷ್ಟಿಂ ಸಪ್ತರ್ಷೀಣಾಂ ಮಹಾಮುನಿಃ |
ಪಾವಕಂ ಕಾಮಸಂತಪ್ತಮದೃಷ್ಟಃ ಪೃಷ್ಠತೋಽನ್ವಗಾತ್ ॥8॥
ಮಹಾಮುನಿಗಳಾದ ವಿಶ್ವಾಮಿತ್ರರು ಒಬ್ಬರು ಮಾತ್ರ ಸಪ್ತರ್ಷಿಗಳ ಯಾಗವನ್ನು ಮುಗಿಸಿ ಅಗ್ನಿಗೆ ತಿಳಿಯದಂತೆ ಕಾಮಸಂತಪ್ತನಾದ ಅಗ್ನಿಯನ್ನು ಹಿಂಬಾಲಿಸಿದ್ದರು.
ತತ್ ತೇನ ನಿಖಿಲಂ ಸರ್ವಮವಬುದ್ಧಂ ಯಥಾತಥಮ್ |
ವಿಶ್ವಾಮಿತ್ರಸ್ತು ಪ್ರಥಮಂ ಕುಮಾರಂ ಶರಣಂ ಗತಃ ॥9॥
ಆಕಾರಣದಿಂದ ಅವರು ಎಲ್ಲ ವಿಷಯವನ್ನೂ ಯಥಾರ್ಥವಾಗಿ ತಿಳಿದಿದ್ದರು. ವಿಶ್ವಾಮಿತ್ರರು ಒಬ್ಬರೇ ಮೊದಲು ಕುಮಾರನಿಗೆ ಶರಣಾಗತರಾದರು.
ಸ್ತವಂ ದಿವ್ಯಂ ಸಂಪ್ರಚಕ್ರೇ ಮಹಾಸೇನಸ್ಯ ಚಾಪಿ ಸಃ |
ಮಂಗಲಾನಿ ಚ ಕರ್ಮಾಣಿ ಕೌಮಾರಾಣಿ ತ್ರಯೋದಶ ॥10॥
ಜಾತಕರ್ಮಾದಿಕಾಸ್ತಸ್ಯ ಕ್ರಿಯಾಶ್ಚಕ್ರೇ ಮಹಾಮುನಿಃ ॥11॥
ಮತ್ತು ಅವರು ಮಹಾಸೇನನನ್ನು ಕುರಿತು ದಿವ್ಯಸ್ತೋತ್ರವನ್ನು ಮಾಡಿದರು. ಅಲ್ಲದೆ ಬಾಲಕರಿಗೆ ಮಾಡಬೇಕಾದ ಜಾತಕರ್ಮಾದಿ ತ್ರಯೋದಶ ಮಂಗಳ ವಿಧಿಗಳನ್ನೂ ಸಹ ಆ ಮಹಾಮುನಿಗಳು ಮಾಡಿದರು.
ಷಡ್ವಕ್ತ್ರಸ್ಯ ತು ಮಾಹಾತ್ಮ್ಯಂ ಕುಕ್ಕುಟಸ್ಯ ತು ಸಾಧನಮ್ |
ಶಕ್ತ್ಯಾ ದೇವ್ಯಾಃ ಸಾಧನಂ ಚ ತಥಾ ಪಾರಿಷದಾಮಪಿ |
ವಿಶ್ವಾಮಿತ್ರಶ್ಚಕಾರೈತತ್ಕರ್ಮ ಲೋಕಹಿತಾಯ ವೈ ॥12॥

ಷಣ್ಮುಖನ ಮಹಾತ್ಮೆ, ಕುಕ್ಕುಟದ ಸಂಪಾದನೆ, ಶಕ್ತಿ-ದೇವಿಯರ ಮತ್ತು ಪಾರ್ಷದರ ಸಂಪಾದನೆ ಎಲ್ಲವನ್ನೂ ತಮ್ಮ ಸ್ತೋತ್ರದಲ್ಲಿ ಹೇಳಿ ಲೋಕಹಿತಕ್ಕಾಗಿ ಈ ಕರ್ಮವನ್ನು ವಿಶ್ವಾಮಿತ್ರರು ಮಾಡಿದರು.
ತಸ್ಮಾದೃಷಿಃ ಕುಮಾರಸ್ಯ ವಿಶ್ವಾಮಿತ್ರೋಽಭವತ್ ಪ್ರಿಯಃ |
ಅಜಾನಾತ್ ತಚ್ಚ ಸ್ವಾಹಾಯಾ ರೂಪಾನ್ಯತ್ವಂ ಮಹಾಮುನಿಃ ||13||
ಆದ್ದರಿಂದ ವಿಶ್ವಾಮಿತ್ರ ಋಷಿಗಳು ಕುಮಾರನಿಗೆ ಪ್ರಿಯರಾದರು. ಆ ಮಹಾಮುನಿಗಳು ಸ್ವಾಹಾದೇವಿಯು ರೂಪಾಂತರವನ್ನು ಧರಿಸಿ ಮಾಡಿದ ಈ ಕಾರ್ಯವನ್ನು ತಿಳಿದಿದ್ದರು.
ಅಥಾಬ್ರುವೀತ್ ತಾನ್ ಸಪ್ತರ್ಷೀನ್ ಯುಷ್ಮತ್ಪತ್ನೀಷ್ವಯಂ ಶಿಶುಃ |
ಷಟ್ಸು ಜಾತೋ ಹುತವಹಾತ್ ತೇ ಚಾಗ್ನೇಸ್ತ್ವಗ್ರತೋಽತ್ಯಜನ್ ||
ಅಬ್ರುವೀಚ್ಚ ಮುನೀನ್ ಸರ್ವಾನ್ ನಾಪರಾಧ್ಯಂತಿ ವೈ ಸ್ತ್ರಿಯಃ |
ಶ್ರುತ್ವಾ ತು ತತ್ತ್ವತಸ್ತಸ್ಮಾತ್ ತೇ ಪತ್ನೀಃ ಸರ್ವತೋಽತ್ಯಜನ್ ||15||
ಅವರು ಎಲ್ಲಾ ಮುನಿಗಳನ್ನೂ ಕುರಿತು ನಿಮ್ಮ ಸ್ತ್ರೀಯರು ಯಾವ ಅಪರಾಧವನ್ನೂ ಮಾಡಿಲ್ಲ ಎಂದು ಹೇಳಿ ನಡೆದ ಎಲ್ಲಾ ವಿಷಯಗಳನ್ನೂ ಯಥಾರ್ಥವಾಗಿ ತಿಳಿಸಿದರು. ಅದನ್ನು ಕೇಳಿದರೂ ಆರು ಋಷಿಗಳು ತಮ್ಮ ಪತ್ನಿಯರನ್ನು ತ್ಯಜಿಸಿದರು.
ಸ್ಕಂದಂ ಶ್ರುತ್ವಾ ತದಾ ದೇವಾ ವಾಸವಂ ಸಹಿತಾಽಬ್ರುವನ್ |
ಅವಿಷಹ್ಯಬಲಂ ಸ್ಕಂದಂ ಜಹಿ ಶಕ್ರಾಶು ಮಾಚಿರಮ್ ||16||
ದೇವತೆಗಳು ಸ್ಕಂದನ ವೃತ್ತಾಂತವನ್ನು ಕೇಳಿ ಒಟ್ಟಾಗಿ ಇಂದ್ರನ ಬಳಿಗೆ ಹೋಗಿ ಇಂದ್ರನೇ, ಅಸಹ್ಯಬಲವುಳ್ಳ ಈ ಸ್ಕಂದನನ್ನು ಶೀಘ್ರವಾಗಿ ಸಂಹರಿಸು ಎಂದು ಕೇಳಿಕೊಂಡರು.
ಯದಿ ವಾ ನ ನಿಹಂಸ್ಯೇನಂ ದೇವೇಂದ್ರೋಽಯಂ ಭವಿಷ್ಯತಿ |
ತ್ರೈಲೋಕ್ಯಂ ಸಂನಿಗೃಹ್ಯಾಸ್ಮಾಂಸ್ತ್ವಂ ಚ ಶಕ್ರ ಮಹಾಬಲ ||17||
ಎಲೈ ಮಹಾಬಲನೇ, ಒಂದುಪಕ್ಷ ನೀನು ಅವನನ್ನು ಕೊಲ್ಲದಿದ್ದರೆ ಅವನು ಮೂರು ಲೋಕಗಳನ್ನೂ, ನಮ್ಮನ್ನೂ ಮತ್ತು ನಿನ್ನನ್ನೂ ವಶಪಡಿಸಿಕೊಂಡು ತಾನೇ ದೇವೇಂದ್ರನಾಗುವನು (ಎಂದು ಹೇಳಿದರು).
ಸ ತಾನುವಾಚ ವ್ಯಥಿತೋ ಬಾಲೋಽಯಂ ಸುಮಹಾಬಲಃ |
ಸ್ರಷ್ಟಾರಮಪಿ ಲೋಕಾನಾಂ ಯುಧಿ ವಿಕ್ರಮ್ಯ ನಾಶಯೇತ್ ||18||
ವ್ಯಥೆಯಿಂದ ಕೂಡಿದ ಇಂದ್ರನು ಈ ಮಹಾಬಲವುಳ್ಳ ಸ್ಕಂದನು ಲೋಕಗಳ ಸೃಷ್ಟಿಕರ್ತನಾದ ಬ್ರಹ್ಮನನ್ನು ಕೂಡ ಯುದ್ಧದಲ್ಲಿ ಆಕ್ರಮಿಸಿ ನಾಶಮಾಡಿಯಾನು ಎಂದು ಅವರನ್ನು ಕುರಿತು ಹೇಳಿದನು.
ಸರ್ವಾಸ್ತ್ವದ್ಯಾಭಿಗಚ್ಛಂತು ಸ್ಕಂದಂ ಲೋಕಸ್ಯ ಮಾತರಃ |
ಕಾಮವೀರ್ಯಾ ಘ್ನಂತು ಚೈನಂ ತಥೇತ್ಯುಕ್ತ್ವಾ ಚ ತಾ ಯಯುಃ ||
ತಮಪ್ರತಿಬಲಂ ದೃಷ್ಟ್ವಾ ವಿಷಣ್ಣಾವದನಾಸ್ತು ತಾಃ |
ಅಶಕ್ಯೋಽಯಂ ವಿಚಿಂತ್ಯೈವಂ ತಮೇವ ಶರಣಂ ಯಯುಃ ||20||
ಊಚುಶ್ಚೈನಂ ತ್ವಮಸ್ಮಾಕಂ ಪುತ್ರೋ ಭವ ಮಹಾಬಲ |
ಅಭಿನಂದಸ್ವ ನಃ ಸರ್ವಾಃ ಪ್ರಸ್ನುತಾಃ ಸ್ನೇಹವಿಕ್ಲವಾಃ ||21||
ಕಾಮವೀರ್ಯವುಳ್ಳ (ತಮಗೆ ಇಚ್ಛೆಬಂದಷ್ಟು ಸಾಮರ್ಥ್ಯವನ್ನು ಹೊಂದುವ) ಲೋಕಮಾತೆಯರಾದ ಬ್ರಾಹ್ಮೀ, ಮಹೇಶ್ವರೀ ಮೊದಲಾದ ಸಪ್ತಮಾತೆಯರು ಸ್ಕಂದನ ಬಳಿಗೆ ಹೋಗಿ ಅವನನ್ನು ಕೊಲ್ಲಲಿ ಎಂದು ಹೇಳಿ ಆ ದೇವತೆಗಳು ಹೋದರು.
ಆ ಸಪ್ತಮಾತೆಯರು ಅವನ ಅಸದೃಶಬಲವನ್ನು ನೋಡಿ ವಿಷಣ್ಣ ಮುಖವುಳ್ಳವರಾಗಿ ಇವನು ನಮ್ಮಿಂದ ಏನನ್ನೂ ಮಾಡಲು ಅಸಾಧ್ಯನಾದವನು ಎಂದು ಚಿಂತಿಸಿ ಅವನಿಗೇ ಶರಣಾಗತರಾದರು ಮತ್ತು ಅವನನ್ನು ಕುರಿತು ಎಲೈ ಮಹಾಬಲನೇ, ನಾವೆಲ್ಲರೂ ಸ್ನೇಹದಿಂದ ಸ್ತನಗಳಿಂದ ಕ್ಷೀರಧಾರೆಯನ್ನು ಹರಿಸುತ್ತಿದ್ದೇವೆ. ನಮ್ಮನ್ನು ಅಭಿನಂದಿಸಿ ನಮಗೆ ಪುತ್ರನಾಗು ಎಂದು ಹೇಳಿದರು.
ತಾಃ ಸಂಪೂಜ್ಯ ಮಹಾಸೇನಃ ಕಾಮಾಂಶ್ಚಾಸಾಂ ಪ್ರದಾಯ ಸಃ |
ಅಪಶ್ಯದಗ್ನಿಮಾಯಾಂತಂ ಪಿತರಂ ಬಲಿನಾಂ ಬಲೀ ||22||
ಬಲಿಷ್ಠರಲ್ಲಿ ಬಲಿಷ್ಠನಾದ ಮಹಾಸೇನನು ಅವರನ್ನು ಸತ್ಕರಿಸಿ ಅವರಿಗೆ ಬೇಕಾದ ವರಗಳನ್ನು ಕೊಟ್ಟು ತನ್ನ ತಂದೆಯಾದ ಅಗ್ನಿಯು ಬರುತ್ತಿರುವುದನ್ನು ನೋಡಿದನು.
ಸ ತು ಸಂಪೂಜಿತಸ್ತೇನ ಸಹ ಮಾತೃಗಣೇನ ಹ |
ಪರಿಷ್ವಜ್ಯ ಮಹಾಸೇನಂ ರಕ್ಷಮಾಣಃ ಸ್ಥಿತಃ ಶಿವಃ ||23||
ಅಗ್ನಿಯು ಮಹಾಸೇನನಿಂದ ಚೆನ್ನಾಗಿ ಪೂಜಿತನಾಗಿ ಮಾತೃಗಣದ ಜೊತೆಯಲ್ಲಿ ಮಹಾಸೇನನನ್ನು ಸುತ್ತುವರಿದು ರಕ್ಷಣೆ ಮಾಡುತ್ತಾ ಅವನಿಗೆ ಸುಖಪ್ರದನಾಗಿ ನಿಂತನು.
ಸರ್ವಾಸಾಂ ತತ್ರ ನಾರೀಣಾಂ ನಾರೀ ಕ್ರೋಧಸಮುದ್ಭವಾ |
ಧಾತ್ರೀ ಸ್ವಪುತ್ರವತ್ ಸ್ಕಂದಂ ಶೂಲಹಸ್ತಾಽಭ್ಯರಕ್ಷತ ||24||
ಆ ಸಪ್ತಮಾತೆಯರಲ್ಲಿ ಕ್ರೋಧಸಮುದ್ಭವಾ ಎನಿಸಿದ ಚಾಮುಂಡಿಯು ದಾದಿಯು ತನ್ನ ಪುತ್ರನನ್ನು ರಕ್ಷಿಸುವಂತೆ ಕೈಯಲ್ಲಿ ಶೂಲವನ್ನು ಹಿಡಿದು ಸ್ಕಂದನನ್ನು ರಕ್ಷಿಸಿದಳು.
ಲೋಹಿತಸ್ಯೋದಧೇಃ ಕನ್ಯಾ ಕ್ರೂರಾ ಲೋಹಿತಭೋಜನಾ |
ಪರಿಷ್ವಜ್ಯ ಮಹಾಸೇನಂ ಪುತ್ರವತ್ ಪರ್ಯರಕ್ಷತ ||25||
ಸಂಧ್ಯಾಕಾಲದಲ್ಲಿ ಲೋಹಿತವರ್ಣದಿಂದ ಕಾಣುವ ಲೋಹಿತಸಮುದ್ರನ ಕನ್ಯೆಯಾದ ರಕ್ತಭೋಜಿನಿಯಾದ ಕ್ರೂರಾ ಎಂಬ

ಮಾತೆಯು ಮಹಾಸೇನನನ್ನು ಆಲಿಂಗಿಸಿ ಮಗನಂತೆ ಅವನನ್ನು ರಕ್ಷಿಸಿದಳು.
ಅಗ್ನಿರ್ಭೂತ್ವಾ ನೈಜಮೇಷಶ್ಛಾಗವಕೊತ್ರೀ ಬಹುಪ್ರಜಃ |
ರಮಯಾಮಾಸ ಶೈಲಸ್ಥಂ ಬಾಲಂ ಕ್ರೀಡನಕೈರಿವ ॥26॥
ಬಹುಪ್ರಜೆಗಳನ್ನುಳ್ಳ ಅಗ್ನಿಯು ಹೋತದ ಮುಖವನ್ನು, ಟಗರಿನ ದೇಹವನ್ನು ಹೊಂದಿದವನಾಗಿ ಪರ್ವತದಲ್ಲಿದ್ದ ಬಾಲನಾದ ಮಹಾಸೇನನನ್ನು ಕ್ರೀಡಾವಸ್ತುಗಳಿಂದ ಆಡಿಸುವಂತೆ ಆಡಿಸಿ ಸಂತೋಷಪಡಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚದಶಾಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ತೃತೀಯೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹದಿನೈದನೆಯ
ಅಧ್ಯಾಯ ಮುಗಿಯಿತು
* * * *
ಇನ್ನೂರ ಹದಿನಾರನೆಯ ಅಧ್ಯಾಯ
ಇಂದ್ರಸ್ಕಂದರ ಯುದ್ಧ. ಸ್ಕಂದನಿಂದ ಇಂದ್ರನಿಗೆ ಅಭಯದಾನ.
ಮಾರ್ಕಂಡೇಯಃ
ಗ್ರಹಾಃ ಶ್ಚೋಪಗ್ರಹಾಶ್ಚೈವ ಋಷಯೋ ಮಾತರಸ್ತಥಾ |
ಹುತಾಶನಮುಖಾಶ್ಚೈವ ದೃಪ್ತಾಃ ಪಾರಿಷದಾಂ ಗಣಾಃ ॥1॥
ಏತೇ ಚಾನ್ಯೇ ಚ ಬಹವೋ ಘೋರಾಸ್ತ್ರಿದಿವವಾಸಿನಃ |
ಪರಿವಾರ್ಯ ಮಹಾಸೇನಂ ಸ್ಥಿತಾ ಭೂತಗಣೈಃ ಸಹ ॥2॥
ಮಾರ್ಕಂಡೇಯ ಉಪಗ್ರಹಗಳಿಂದ ಸಹಿತವಾದ ಗ್ರಹಗಳು, ಋಷಿಗಳು, ಮಾತೃಗಣ, ಅಗ್ನಿಮೊದಲಾದವರು ದರ್ಪದಿಂದ ಕೂಡಿದ ಪಾರ್ಷದ ಸಮೂಹಗಳು, ಇವರು ಮತ್ತು ಇನ್ನೂ ಅನೇಕ ಸ್ವರ್ಗವಾಸಿಗಳಾದ ಘೋರರೂಪರಾದವರು ಮಹಾಸೇನನನ್ನು ಸುತ್ತುವರಿದು ಭೂತಗಣಗಳ ಜೊತೆಯಲ್ಲಿ ನಿಂತರು.
ಸಂದಿಗ್ಧಂ ವಿಜಯಂ ದೃಷ್ಟ್ವಾ ವಿಜಯೇಪ್ಸುಃ ಸುರೇಶ್ವರಃ |
ಆರುಹ್ಯೈರಾವತಸ್ಕಂಧಂ ಪ್ರಯಯೌ ದೈವತೈಃ ಸಹ |
ವಿಜಿಘಾಂಸುರ್ಮಹಾಸೇನಮಿಂದ್ರಸ್ತೂರ್ಣತರಂ ತದಾ ॥3॥
ತನ್ನ ವಿಜಯವು ಸಂದಿಗ್ಧವಾಗಿದೆ ಎಂದು ತಿಳಿದ ವಿಜಯೇಚ್ಛುವಾದ ಸುರೇಶ್ವರನಾದ ಇಂದ್ರನು ಐರಾವತವನ್ನು ಏರಿ ದೇವತೆಗಳ ಜೊತೆಯಲ್ಲಿ ಯುದ್ಧಕ್ಕೆ ಹೊರಟನು.
ಆದಾಯ ವಜ್ರಂ ಬಲವಾನ್ಸರ್ವೈರ್ದೇವಗಣೈರ್ವೃತಃ ॥5.1॥
ಬಲಿಷ್ಠನಾದ ಇಂದ್ರನು ಮಹಾಸೇನನನ್ನು ಸಂಹರಿಸಲು ಬಯಸಿ ವಜ್ರಾಯುಧವನ್ನು ತೆಗೆದುಕೊಂಡು ಸರ್ವದೇವಗಣಗಳಿಂದ ಕೂಡಿದವನಾಗಿ ಆಗ ಶೀಘ್ರವಾಗಿ ಹೊರಟನು.
ಉಗ್ರಂ ತಂ ಚ ಮಹಾನಾದಂ ದೇವಾನೀಕಂ ಮಹಾಪ್ರಭಮ್ |
ವಿಚಿತ್ರಧ್ವಜಸನ್ನಾಹಂ ನಾನಾವಾಹನಕಾರ್ಮುಕಮ್ ॥6॥
ಪ್ರವರಾಂಬರಸಂವೀತಂ ಶ್ರಿಯಾ ಜುಷ್ಟಮಲಂಕೃತಮ್ |
ವಿಜಿಘಾಂಸುಂ ತಮಾಯಾಂತಂ ಕುಮಾರಃ ಶಕ್ರಮನ್ವಯಾತ್ ॥7॥
ಉಗ್ರವಾದ ಮಹಾನಾದವನ್ನು ಮಾಡುತ್ತಿದ್ದ, ಮಹಾಕಾಂತಿಯುಳ್ಳ, ವಿಚಿತ್ರ ಧ್ವಜಗಳಿಂದ ಕೂಡಿದ್ದ, ಅನೇಕ ವಾಹನಗಳಿಂದ ಮತ್ತು ಧನುಸ್ಸುಗಳಿಂದ ಕೂಡಿದ್ದ, ಶ್ರೇಷ್ಠವಾದ ವಸ್ತ್ರಗಳನ್ನು ಧರಿಸಿ ಕಾಂತಿಯಿಂದ ಕಂಗೊಳಿಸುತ್ತಿದ್ದ, ತನ್ನೆಡೆಗೆ ವಧೇಚ್ಛೆಯಿಂದ ಬರುತ್ತಿದ್ದ ಇಂದ್ರನನ್ನು ಕುಮಾರನು ಎದುರಿಸಿದನು.
ವಿನದನ್ ಪಥಿ ಶಕ್ರಸ್ತು ದ್ರುತಂ ಯಾತಿ ಮಹಾಬಲಃ |
ಸಂಹರ್ಷಯನ್ ದೇವಸೇನಾಂ ಜಿಘಾಂಸುಃ ಪಾವಕಾತ್ಮಜಮ್ ॥8॥
ಮಾರ್ಗದಲ್ಲಿ ಮಹಾಬಲನಾದ ದೇವೇಂದ್ರನು ಸಿಂಹನಾದವನ್ನು ಮಾಡುತ್ತಾ ದೇವಸೈನ್ಯವನ್ನು ಸಂತೋಷಪಡಿಸುತ್ತಾ ಅಗ್ನಿಪುತ್ರನಾದ ಮಹಾಸೇನನನ್ನು ಸಂಹರಿಸುವ ಇಚ್ಛೆಯುಳ್ಳವನಾಗಿ ಶೀಘ್ರವಾಗಿ ಬಂದನು.
ಸಂಪೂಜ್ಯಮಾನಸ್ತ್ರಿದಶೈಸ್ತಥೈವ ಪರಮರ್ಷಿಭಿಃ |
ಸಮೀಪಮಥ ಸಂಪ್ರಾಪ್ತಃ ಕಾರ್ತ್ತಿಕೇಯಸ್ಯ ವಾಸವಃ ॥9॥
ಇಂದ್ರನು ದೇವತೆಗಳಿಂದಲೂ, ಅದರಂತೆಯೇ ಮಹರ್ಷಿಗಳಿಂದಲೂ ಪೂಜಿತನಾಗಿ ಕಾರ್ತ್ತಿಕೇಯನ ಸಮೀಪಕ್ಕೆ ಬಂದನು.
ಸಿಂಹನಾದಂ ತದಾ ಚಕ್ರೇ ದೇವೇಶಃ ಸಹಿತಃ ಸುರೈಃ |
ಗುಹೋಽಪಿ ಶಬ್ದಂ ತಂ ಶ್ರುತ್ವಾ ವ್ಯನದತ್ ಸಾಗರೋ ಯಥಾ ॥10॥
ಆಗ ದೇವತೆಗಳ ಜೊತೆಯಲ್ಲಿದ್ದ ಇಂದ್ರನು ಸಿಂಹನಾದವನ್ನು ಮಾಡಿದನು. ಆ ಶಬ್ದವನ್ನು ಕೇಳಿದ ಗುಹನೂ ಸಹ ಸಾಗರದಂತೆ ಘೋಷವನ್ನು ಮಾಡಿದನು.
ತಸ್ಯ ಶಬ್ದೇನ ಮಹತಾ ಸಮುದ್ಧೂತೋದಧಿಪ್ರಭಮ್ |
ಬಭ್ರಾಮ ತತ್ರ ತತ್ರೈವ ದೇವಸೈನ್ಯಮಚೇತನಮ್ ॥11॥
ಗುಹನ ಆ ದೊಡ್ಡ ಶಬ್ದವನ್ನು ಕೇಳಿ ಉಕ್ಕಿದ ಸಮುದ್ರದ ಕಾಂತಿಯನ್ನು ಹೊಂದಿದ್ದ ದೇವಸೈನ್ಯವು ಸಂಜ್ಞಾಹೀನವಾಗಿ ಅಲ್ಲಲ್ಲಿಯೇ

ತಿರುಗಾಡಿತು.
ಜಿಘಾಂಸೂನುಪಸಂಪ್ರಾಪ್ತಾನ್ ದೇವಾನ್ ದೃಷ್ಟ್ವಾ ಸ ಪಾವಕಿಃ|
ವಿಸಸರ್ಜ ಮುಖಾತ್ ಕ್ರುದ್ಧಃ ಪ್ರವೃದ್ಧಾಃ ಪಾವಕಾರ್ಚಿಷಃ ॥12॥
ಅಹದ್ ದೇವಸೈನ್ಯಾನಿ ವೇಪಮಾನಾನಿ ಭೂತಳೇ ॥13॥
ದೇವತೆಗಳು ತನ್ನ ಸಮೀಪಕ್ಕೆ ತನ್ನನ್ನು ಕೊಲ್ಲುವ ಉದ್ದೇಶದಿಂದ ಬಂದಿರುವುದನ್ನು ಗಮನಿಸಿದ ಅಗ್ನಿಪುತ್ರನಾದ ಗುಹನು ಕೋಪಗೊಂಡು ತನ್ನ ಮುಖದಿಂದ ದೊಡ್ಡದಾದ ಅಗ್ನಿಜ್ವಾಲೆಗಳನ್ನು ಸೃಷ್ಟಿಸಿದನು. ಅದರಿಂದ ಭೂತಳದಲ್ಲಿ ನಡುಗುತ್ತಿದ್ದ ದೇವಸೈನ್ಯವನ್ನು ದಹಿಸಿದನು.
ತೇ ಪ್ರದೀಪ್ತಶಿರೋದೇಹಾಃ ಪ್ರದೀಪ್ತಾಯುಧವಾಹನಾಃ|
ಪತಿತಾಃ ಸಹಸಾ ಭಾಂತಿ ವ್ಯಸ್ತಾಸ್ತಾರಾಗಣಾ ಇವ ॥14॥
ಆ ದೇವಸೈನ್ಯದ ಸೈನಿಕರು ಅಗ್ನಿಜ್ವಾಲೆಯಿಂದ ಉರಿಯುತ್ತಿದ್ದ ತಮ್ಮ ದೇಹ ಮತ್ತು ಶಿರಸ್ಸುಗಳು ಮತ್ತು ಆಯುಧಗಳು ಮತ್ತು ವಾಹನಗಳನ್ನು ಉಳ್ಳವರಾಗಿ ಇದ್ದಕ್ಕಿದ್ದಂತೆಯೇ ಭೂತಳದಲ್ಲಿ ಬಿದ್ದು ಚದುರಿದ ನಕ್ಷತ್ರಸಮೂಹದಂತೆ ತೋರುತ್ತಿದ್ದರು.
ದಹ್ಯಮಾನಾಃ ಪ್ರಪನ್ನಾಸ್ತೇ ಶರಣಂ ಪಾವಕಾತ್ಮಜಮ್|
ದೇವಾ ವಜ್ರಧರಂ ತ್ಯಕ್ತ್ವಾ ತತಃ ಶಾಂತಿಮುಪಾಗತಾಃ ॥15॥
ಅಗ್ನಿಜ್ವಾಲೆಗಳಿಂದ ದಹಿಸಲ್ಪಡುತ್ತಿದ್ದ ಅವರು ಅಗ್ನಿಪುತ್ರನಿಗೆ ಶರಣಾಗತರಾದರು. ದೇವತೆಗಳು ವಜ್ರಧರನಾದ ಇಂದ್ರನನ್ನು ತ್ಯಜಿಸಿ ಯುದ್ಧದಿಂದ ನಿವೃತ್ತರಾದರು.
ತ್ಯಕ್ತೋ ದೇವೈಸ್ತತಃ ಸ್ಕಂದೇ ವಜ್ರಂ ಶಕ್ರೋ ನ್ಯಪಾತಯತ್|
ತದ್ವಿಸೃಷ್ಟಂ ಜಘಾನಾಶು ಪಾರ್ಶ್ವಂ ಸ್ಕಂದಸ್ಯ ದಕ್ಷಿಣಮ್ ॥16॥
ಬಿಭೇದ ಚ ಮಹಾರಾಜ ಪಾರ್ಶ್ವಂ ತಸ್ಯ ಮಹಾತ್ಮನಃ ॥16.1॥
ದೇವತೆಗಳಿಂದ ತ್ಯಕ್ತನಾದ ಇಂದ್ರನು ಸ್ಕಂದನ ಮೇಲೆ ವಜ್ರಾಯುಧದ ಪ್ರಯೋಗವನ್ನು ಮಾಡಿದನು. ಎಲೈ ಮಹಾರಾಜನೇ, ಪ್ರಯೋಗಿಸಲ್ಪಟ್ಟ ಆ ವಜ್ರಾಯುಧವು ಸ್ಕಂದನ ದಕ್ಷಿಣ ಪಾರ್ಶ್ವವನ್ನು ಭೇದಿಸಿತು.
ವಜ್ರಪ್ರಹಾರಾತ್ ಸ್ಕಂದಸ್ಯ ಸಂಜಾತಃ ಪುರುಷೋಽಪರಃ|
ಯುವಾ ಕಾಂಚನಸನ್ನಾಹಃ ಶಕ್ತಿಭೃದ್ ದಿವ್ಯಕುಂಡಲಃ|
ಯದ್ ವಜ್ರವಿಶನಾಜ್ಜಾತೋ ವಿಶಾಖಸ್ತೇನ ಸೋಽಭವತ್ ॥17॥
ಸ್ಕಂದನಿಗೆ ವಜ್ರಪ್ರಹಾರ ಉಂಟಾದಾಗ ಅವನ ಶರೀರದಿಂದ ಯುವಕನೂ, ಕಾಂಚನ ಪ್ರಭೆಯುಳ್ಳವನೂ, ದಿವ್ಯಕುಂಡಲವನ್ನು ಧರಿಸಿದವನೂ, ಶಕ್ತ್ಯಾಯುಧವನ್ನು ಧರಿಸಿದವನೂ ಆದ ಇನ್ನೊಬ್ಬ ಪುರುಷನು ಜನಿಸಿದನು. ವಜ್ರಾಯುಧದ ಪ್ರವೇಶದಿಂದ (ಉಂಟಾದ ಭೇದನದಿಂದ) ಜನಿಸಿದುದರಿಂದ ಅವನಿಗೆ ವಿಶಾಖ ಎಂದು ಹೆಸರಾಯಿತು.
ಸಂಜಾತಮಪರಂ ದೃಷ್ಟ್ವಾ ಕಾಲಾನಲಸಮದ್ಯುತಿಮ್|
ಭಯಾದಿಂದ್ರಸ್ತು ತಂ ಸ್ಕಂದಂ ಪ್ರಾಂಜಲಿಃ ಶರಣಂ ಗತಃ ॥18॥
ತಸ್ಯಾಭಯಂ ದದೌ ಸ್ಕಂದಃ ಸಹ ಸೈನ್ಯಸ್ಯ ಸತ್ತಮಃ ॥19॥
ಪ್ರಳಯಕಾಲದ ಅಗ್ನಿಯ ಕಾಂತಿಯನ್ನು ಹೊಂದಿ ಜನಿಸಿದ ಇನ್ನೊಬ್ಬ ಪುರುಷನನ್ನು ನೋಡಿ ಇಂದ್ರನು ಭಯದಿಂದ ಸ್ಕಂದನಿಗೆ ಕೈಗಳನ್ನು ಮುಗಿದು ಶರಣಾಗತನಾದನು. ಸಜ್ಜನರಲ್ಲಿ ಶ್ರೇಷ್ಠನಾದ ಸ್ಕಂದನು ಇಂದ್ರನಿಗೂ ಮತ್ತು ಇಂದ್ರನ ಸೈನ್ಯಕ್ಕೂ ಅಭಯವನ್ನು ಕೊಟ್ಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷೋಡಶಾಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ಚತುರ್ಥೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹದಿನಾರನೆಯ ಅಧ್ಯಾಯ ಮುಗಿಯಿತು
* * * *
ಇನ್ನೂರ ಹದಿನೇಳನೆಯ ಅಧ್ಯಾಯ
ಸ್ಕಂದಪಾರ್ಷದರ ನಿರೂಪಣೆ.
ಮಾರ್ಕಂಡೇಯಃ
ತತಃ ಪ್ರಹೃಷ್ಟಾಸ್ತ್ರಿದಶಾ ವಾದಿತ್ರಾಣ್ಯಭ್ಯವಾದಯನ್ ॥1॥
ಮಾರ್ಕಂಡೇಯ ಆಗ ಸಂತೋಷಗೊಂಡ ದೇವತೆಗಳು ವಾದ್ಯಗಳನ್ನು ಮೊಳಗಿಸಿದರು.
ಸ್ಕಂದಪಾರಿಷದಾನ್ ಘೋರಾನ್ ಶೃಣುಷ್ವಾದ್ಭುತ ವಿಕ್ರಮಾನ್ ॥2॥
ವಜ್ರಪ್ರಹಾರಾತ್ ಸ್ಕಂದಸ್ಯ ಜಜ್ಞುಸ್ತತ್ರ ಕುಮಾರಕಾಃ|
ಯೇ ಹರಂತಿ ಶಿಶೂನ್ ಜಾತಾನ್ ಗರ್ಭಸ್ಥಾಂಶ್ಚೈವ ದಾರುಣಾಃ|
ವಜ್ರಪ್ರಹಾರಾತ್ ಕನ್ಯಾಶ್ಚ ಜಜ್ಞಿರೇಽಸ್ಯ ಮಹಾಬಲಾಃ ॥3॥
ಘೋರರಾದ ಮತ್ತು ಅದ್ಭುತವಿಕ್ರಮವುಳ್ಳ ಸ್ಕಂದನ ಪಾರ್ಷದರನ್ನು ಹೇಳುತ್ತೇನೆ, ಕೇಳು. ಸ್ಕಂದನಿಗೆ ಇಂದ್ರನು ವಜ್ರಪ್ರಹಾರವನ್ನು ಮಾಡಿದಾಗ ಸ್ಕಂದನ ಶರೀರದಿಂದ ಅನೇಕ ಕುಮಾರರು ಜನಿಸಿದರು. ಮಹಾಬಲವುಳ್ಳ ಅನೇಕ ಕನ್ಯೆಯರೂ ಜನಿಸಿದರು. ಆ ಕುಮಾರರು ದಾರುಣರಾಗಿದ್ದು ಗರ್ಭಸ್ಥರಾದ ಮತ್ತು ನವಜಾತರಾದ ಶಿಶುಗಳನ್ನು ಅಪಹರಿಸುತ್ತಾರೆ.
ವೃತಃ ಕನ್ಯಾಗಣೈಃ ಸರ್ವೈರಾತ್ಮೀಯೈಃ ಸಹ ಪುತ್ರಕೈಃ|

ಮಾತೃಣಾಂ ಪ್ರೇಕ್ಷತಾಂ ಭದ್ರಶಾಖಸ್ತು ಕೋಮಲೈಃ ॥4॥
ಮಾತೃಗಣಗಳು ನೋಡುತ್ತಿರುವಂತೆಯೇ ಭದ್ರಶಾಖನು ಕೋಮಲವಾದ ಭೃತ್ಯಗಣಗಳಿಂದಲೂ, ಆತ್ಮೀಯರಾದ ಕನ್ಯಾಗಣಗಳಿಂದಲೂ ಮತ್ತು ಪುತ್ರಗಣಗಳಿಂದಲೂ ಪರಿವೃತನಾಗಿ ಶೋಭಿಸಿದನು (ಭದ್ರಶಾಖ ಎನ್ನುವುದು ಸ್ಕಂದನ ಇನ್ನೊಂದು ರೂಪ. ಇವನಿಗೆ ಶಾಖ ಎಂದೂ ಹೆಸರು).
ಕುಮಾರಸ್ತು ವಿಶಾಖಂ ಚ ಪುತ್ರತ್ವೇ ಸಮಕಲ್ಪಯತ್ |
ಸ ಭೂತ್ವಾ ಭಗವಾನ್ಸಂಖೇ ರಕ್ಷಂಶ್ಛಾಗಮುಖಸ್ತದಾ ॥5॥
ಕುಮಾರನಾದರೂ ವಿಶಾಖನನ್ನು ಪುತ್ರನಾಗಿ ಕಲ್ಪಿಸಿಕೊಂಡನು. ಆ ಪೂಜ್ಯನೇ ಛಾಗಮುಖನಾಗಿ ಯುದ್ಧದಲ್ಲಿ ಸ್ಕಂದನನ್ನು ರಕ್ಷಿಸುವವನಾದನು (`ತತೋಽಭವ ಚತುಮೂರ್ತಿಃ ಕ್ಷಣೇನ ಭಗವಾನ್ ಪ್ರಭುಃ | ತಸ್ಯ ಶಾಖೋ ವಿಶಾಖಶ್ಚ ನೈಜಮೇಷಶ್ಚ ಪೃಷ್ಠತಃ ॥' ಎಂದು ಗದಾಪರ್ವದಲ್ಲಿ ಹೇಳಿರುವುದರಿಂದ ಸ್ಕಂದನು ಅಗ್ರಗಾಮಿ ಶಾಖ, ವಿಶಾಖ ಮತ್ತು ನೈಜಮೇಷರು ಅವನ ಹಿಂದೆ ಹೋಗುವವರು ಮತ್ತು ಅವನದೇ ಬೇರೆ ರೂಪಗಳು. ಆದ್ದರಿಂದ ಇಲ್ಲಿಯೂ ವಿಶಾಖ ಪದದಿಂದ ಶಾಖ ಮತ್ತು ನೈಜಮೇಷರನ್ನು ಇಟ್ಟುಕೊಳ್ಳಬೇಕು. ಇಲ್ಲಿ ಛಾಗಮುಖನೆಂದರೆ ಹೋತದಂತೆ ಮುಖವುಳ್ಳ ವಿಶಾಖ. ಅವನೂ ಸ್ಕಂದನ ಒಂದು ಅಂಶ. ಅವನು ಯುದ್ಧದಲ್ಲಿ ರಕ್ಷಣೆ ಮಾಡುವವನು - ಲಕ್ಷಾಲಂಕಾರ).
ತತಃ ಕುಮಾರಪಿತರಂ ಸ್ಕಂದಮಾಹುರ್ಜನಾ ಭುವಿ |
ರುದ್ರಮಗ್ನಿಮುಮಾಂ ಸ್ವಾಹಾಂ ಪ್ರದೇಶೇಷು ಮಹಾಬಲಮ್ |
ಯಜಂತಿ ಪುತ್ರಕಾಮಾಶ್ಚ ಪುತ್ರಿಣಶ್ಚ ಸದಾ ಜನಾಃ ॥6॥
ಆದ್ದರಿಂದ ಸ್ಕಂದನನ್ನು ವಿಶಾಖ ಎಂಬ ಕುಮಾರನ ಪಿತೃ ಎಂದು ಭೂಮಿಯಲ್ಲಿ ಜನರು ಹೇಳುತ್ತಾರೆ. ರುದ್ರನನ್ನು, ಅಗ್ನಿಯನ್ನು, ಪಾರ್ವತಿಯನ್ನು ಮತ್ತು ಸ್ವಾಹಾದೇವಿಯನ್ನು ಕುಮಾರನ ಮಾತಾಪಿತೃಗಳೆಂದು ಹೇಳುತ್ತಾರೆ. ಮಕ್ಕಳನ್ನು ಹೊಂದಿದ ಮತ್ತು ಮಕ್ಕಳನ್ನು ಪಡೆಯುವ ಆಸೆಯುಳ್ಳ ಜನರು ಯಾವಾಗಲೂ ಈ ನಾಲ್ವರನ್ನು ಪೂಜೆಮಾಡುತ್ತಾರೆ (ಮೊದಲು ರುದ್ರನ ವೀರ್ಯವನ್ನು ತನ್ನ ಯೋನಿಯಲ್ಲಿ ಧರಿಸಲು ಸಾಧ್ಯವಾಗದೆ ಗೌರಿಯು ಅದನ್ನು ಅಗ್ನಿಯಲ್ಲಿ ಹಾಕಿದಳು. ಅಗ್ನಿಯೂ ಸಹ ಅದರ ಉಷ್ಣಸ್ಪರ್ಶವನ್ನು ತಾಳಲಾರದೆ ಆ ವೀರ್ಯವನ್ನು ಗಂಗೆಯಲ್ಲಿ ಹಾಕಿದನು. ಗಂಗೆಯೂ ಸಹ ಆ ವೀರ್ಯವನ್ನು ತನ್ನ ತೀರದಲ್ಲಿದ್ದ ಶರವಣದಲ್ಲಿ- ಹುಲ್ಲಿನ ವನದಲ್ಲಿ- ತುಂಬಿದಳು. ಆ ವೀರ್ಯವೇ ಬಹಳವಾಗಿದ್ದುದರಿಂದ ಒಂದು ಪರ್ವತವಾಯಿತು. ಆ ಪರ್ವತದಲ್ಲಿ ಗರುಡೀರೂಪವನ್ನು ಧರಿಸಿದ ಸ್ವಾಹಾದೇವಿಯು ಅಗ್ನಿವೀರ್ಯವನ್ನೂ ತಂದು ಸೇರಿಸಿದಾಗ ಶ್ವೇತಪರ್ವತರೂಪವಾಗಿದ್ದ ಆ ರುದ್ರವೀರ್ಯವೇ ಸ್ಕಂದನಾಗಿ ಜನಿಸಿತು. ಆದ್ದರಿಂದ ರುದ್ರ-ಉಮಾ-ಅಗ್ನಿ-ಸ್ವಾಹಾ ಈ ನಾಲ್ವರು ಕುಮಾರನ ಮಾತಾಪಿತೃಗಳಾಗುತ್ತಾರೆ - ಲಕ್ಷಾಲಂಕಾರ).
ಯಾಸ್ತಾಸ್ತ್ವಜನಯತ್ ಕನ್ಯಾಸ್ತಪೋ ನಾಮ ಹುತಾಶನಃ |
ಕಿಂ ಕರೋಮೀತಿ ತಾಃ ಸ್ಕಂದಂ ಸಂಪ್ರಾಪ್ತಾಃ ಸಮಭಾಷಯನ್ ॥7॥
ಭವೇಮ ಸರ್ವಲೋಕಸ್ಯ ಮಾತರೋ ವಯಮುತ್ತಮಾಃ |
ಪ್ರಸಾದಾತ್ ತವ ಪೂಜ್ಯಾಶ್ಚ ಪ್ರಿಯಮೇತತ್ ಕುರುಷ್ವ ನಃ |
ಸೋಽಬ್ರವೀದ್ ಬಾಢಮಿತ್ಯೇವಂ ಭವಿಷ್ಯಧ್ವಂ ಪೃಥಗ್ವಿಧಾಃ ॥8॥
ಅಶಿವಾಶ್ಚ ಶಿವಾಶ್ಚೈವ ಪುನಃ ಪುನರುದಾರಧೀಃ ॥9॥
ವಜ್ರಪ್ರಹಾರವನ್ನು ಮಾಡಿದಾಗ ತಪೋನಾಮಕ ಅಗ್ನಿಯು ಸ್ಕಂದನ ಶರೀರದಿಂದ ಕನ್ಯೆಯರನ್ನು ಸೃಷ್ಟಿಸಿದನು. ಅವರು ಸ್ಕಂದನ ಬಳಿಗೆ ಬಂದು ನಾವು ಏನು ಮಾಡಬೇಕು? ನಾವು ನಿನ್ನ ಅನುಗ್ರಹದಿಂದ ಎಲ್ಲ ಲೋಕಕ್ಕೆ ಉತ್ತಮ ಮಾತೆಯರೂ, ಪೂಜ್ಯರೂ ಆಗಲು ಬಯಸುತ್ತೇವೆ.ನಮಗೆ ಪ್ರಿಯವಾದ ಈ ಉಪಕಾರವನ್ನು ಮಾಡು ಎಂದು ಕೇಳಿದರು. ಉದಾರಬುದ್ಧಿಯುಳ್ಳ ಸ್ಕಂದನು ಹಾಗೆಯೇ ಆಗಲಿ, ನೀವು ಮಂಗಳರಾದ ಮತ್ತು ಅಮಂಗಳರಾದ ಅನೇಕ ವಿಧರಾದ ತಾಯಿಯರಾಗಿರಿ ಎಂದು ಮತ್ತೆ ಮತ್ತೆ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತದಶಾಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ಪಂಚಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು
* * * *

ಇನ್ನೂರ ಹದಿನೆಂಟನೆಯ ಅಧ್ಯಾಯ

ಮಾರ್ಕಂಡೇಯರಿಂದ ಮುಂದುವರಿದ ಸ್ಕಂದ ಚರಿತ್ರೆಯ ಕಥನ. ಸ್ಕಂದನಿಗೆ ಸೇನಾಪತ್ಯದಲ್ಲಿ ಅಭಿಷೇಕ ಮತ್ತು ದೇವಸೇನೆಯ ಜೊತೆಯಲ್ಲಿ ವಿವಾಹ.
ಮಾರ್ಕಂಡೇಯಃ
ಲಬ್ಧಪ್ರಸಾದಾ ಮುದಿತಾಸ್ತಸ್ಮಾದ್ ದೇವಾನ್ಮಹಾತ್ಮನಃ |
ತತಃ ಸಂಕಲ್ಪ್ಯ ಪುತ್ರತ್ವೇ ಸ್ಕಂದಂ ಮಾತೃಗಣೋಽಗಮತ್ |
ಕಾಕೀ ಚ ಹಲಿಮಾ ಚೈವ ಭದ್ರಾ ಚ ವೃಷಭಾ ತಥಾ |
ಆರ್ಯಾ ಬಾಲಾ ಚ ಧಾತ್ರೀ ಚ ಸಪ್ತೈತಾಃ ಶಿಶುಮಾತರಃ ॥1॥
ಮಾರ್ಕಂಡೇಯ ಆ ಮಾತೆಯರೆಲ್ಲರೂ ಮಹಾತ್ಮನಾದ ಆ ದೇವನ ಅನುಗ್ರಹವನ್ನು ಪಡೆದು ಸಂತುಷ್ಟರಾದರು. ಅನಂತರ ಸ್ಕಂದನನ್ನು ಪುತ್ರನೆಂದು ಸಂಕಲ್ಪಿಸಿ ಕಾಕೀ, ಹಲಿಮಾ, ಭದ್ರಾ, ವೃಷಭಾ, ಆರ್ಯಾ, ಬಾಲಾ, ಧಾತ್ರೀ ಈ ಏಳು ಜನರಿದ್ದ ಮಾತೃಗಣವು ಹೊರಟುಹೋಯಿತು. ಈ ಏಳುಜನರು ಸ್ಕಂದನ ಪ್ರಸಾದದಿಂದ ಹುಟ್ಟಿದ ಶಿಶು ಎಂಬ ಪುತ್ರನ ಮಾತೆಯರು.

ಏತಾಸಾಂ ವೀರ್ಯಸಂಪನ್ನಃ ಶಿಶುರ್ನಾಮಾತಿದಾರುಣಃ |
ಸ್ಕಂದಪ್ರಸಾದಜಃ ಪುತ್ರೋ ಲೋಹಿತಾಕ್ಷೋ ಭಯಂಕರಃ ॥2॥
ಶಿಶುವು ಸ್ಕಂದನ ಅನುಗ್ರಹದಿಂದ ಈ ಮಾತೆಯರ ವೀರ್ಯದಿಂದ ಹುಟ್ಟಿದ ಪುತ್ರ. ಅವನು ಲೋಹಿತಾಕ್ಷ, ಅತಿದಾರುಣ ಮತ್ತು ಭಯಂಕರ.
ಏಷ ವೀರೋಽಷ್ಟಕಃ ಪ್ರೋಕ್ತಃ ಸ್ಕಂದೋ ಮಾತೃಗಣೋದ್ವಹಃ |
ಛಾಗವಕ್ತ್ರೇಣ ಸಹಿತೋ ನವಮಃ ಪರಿಕೀರ್ತಿತಃ ॥3॥
ಈ ವೀರನು (ಶಿಶುನಾಮಕನು) ಮಾತೃಗಣದ ಜೊತೆಯಲ್ಲಿ ಸೇರಿ ಎಂಟನೆಯ ಸ್ಕಂದನೆನಿಸುತ್ತಾನೆ. ಈ ಶಿಶುವು ಸ್ಕಂದನ ಸಪ್ತಮಾತೆಯರನ್ನು ವಿವಾಹ ಮಾಡಿಕೊಳ್ಳುವವನು. ಛಾಗವಕ್ತ್ರನಾದ ವಿಶಾಖನ ಜೊತೆಯಲ್ಲಿ ಸೇರಿದರೆ ಇವನು ಒಂಭತ್ತನೆಯವನಾಗುತ್ತಾನೆ.
ಷಷ್ಠಂ ಛಾಗಮಯಂ ವಕ್ತ್ರಂ ಸ್ಕಂದಸ್ಯೈವೇತಿ ವಿದ್ಧಿ ತತ್ ॥4॥
ಆರನೆಯವನು ಛಾಗವಕ್ತ್ರನಾದ ವಿಶಾಖನೆಂಬುವನು. ಅವನನ್ನು ಸ್ಕಂದನ ರೂಪಾಂತರವೆಂದೇ ತಿಳಿ.
ಷಡ್ಭಿರಭ್ಯಂತರೇ ರಾಜನ್ ನಿತ್ಯಂ ಮಾತೃಗಣಾರ್ಚಿತಮ್ |
ಷಣ್ಣಾಂ ತು ಪ್ರವರಂ ತಸ್ಯ ಶೀರ್ಷಾಣಾಮಿಹ ಶಸ್ಯತೇ ॥5॥
ಎಲೈ ರಾಜನೇ, ಅವನು ಏಕಾಂತದಲ್ಲಿ ಆರುಮಾತೃಗಣಗಳಿಂದ ಅರ್ಚಿಸಲ್ಪಡುವವನು. ಛಾಗಮುಖವು ಅವನ ಆರುಮುಖಗಳಲ್ಲಿ ಶ್ರೇಷ್ಠವಾದುದೆಂದು ಪ್ರಶಂಸಿಸಲ್ಪಡುತ್ತದೆ.
ಶಕ್ತಿಂ ಯೇನಾಸೃಜದ್ ದಿವ್ಯಾಂ ಭದ್ರಶಾಖಾಮಿತಿ ಸ್ಮ ಹ |
ಇತ್ಯೇತದ್ ವಿವಿಧಾಕಾರಂ ವೃತ್ತಂ ಶುಕ್ಲಸ್ಯ ಪಂಚಮೀಮ್ ॥6॥
ಅವನು ತನ್ನ ಆ ಮುಖದಿಂದ ಭದ್ರಶಾಖಾ ಎಂದು ಕರೆಯುವ ಶಕ್ತ್ಯಾಯುಧವನ್ನು ನಿರ್ಮಾಣ ಮಾಡಿದನು. ಇಂತಹ ವಿವಿಧವಾದ ಘಟನೆಗಳೆಲ್ಲವೂ ಶುಕ್ಲಪಕ್ಷದ ಪಂಚಮಿಯಂದು ಜರುಗಿದವು.
ತತ್ರ ಯುದ್ಧಂ ಮಹಾಘೋರಂ ವೃತ್ತಂ ಷಷ್ಠ್ಯಾಂ ಜನಾಧಿಪ |
ಉಪವಿಷ್ಟಂ ತು ತಂ ಸ್ಕಂದಂ ಹಿರಣ್ಯಕವಚಸ್ರಜಮ್ ॥7॥
ಹಿರಣ್ಯಚೂಡಮಕುಟಂ ಹಿರಣ್ಯಾಕ್ಷಂ ಮಹಾಪ್ರಭಮ್ |
ಲೋಹಿತಾಂಬರಸಂವೀತಂ ತೀಕ್ಷ್ಣದಂಷ್ಟ್ರಂ ಮನೋರಮಮ್ ॥8॥
ಸರ್ವಲಕ್ಷಣಸಂಪನ್ನಂ ತ್ರೈಲೋಕ್ಯಸ್ಯಾಪಿ ಸುಪ್ರಿಯಮ್ |
ತತಸ್ತಂ ವರದಂ ಶೂರಂ ಯುವಾನಂ ಮೃಷ್ಟಕುಂಡಲಮ್ ॥9॥
ಅಭಜತ್ ಪದ್ಮಹಸ್ತಾ ಶ್ರೀಃ ಸ್ವಯಮೇವ ಶರೀರಿಣೀ |
ಎಲೈ ರಾಜನೇ, ಷಷ್ಠಿಯ ದಿನದಂದು ಘೋರವಾದ ಯುದ್ಧವು ಜರುಗಿತು. ಹಿರಣ್ಯಕವಚವನ್ನೂ, ಹಿರಣ್ಯಮಾಲೆಯನ್ನೂ ಧರಿಸಿ, ಹಿರಣ್ಯಕಿರೀಟವನ್ನೂ ಧರಿಸಿ ರಕ್ತಾಂಬರಧಾರಿಯಾಗಿ ತೀಕ್ಷ್ಣದಂಷ್ಟ್ರನೂ, ಮನೋಹರನೂ, ಹಿರಣ್ಯಾಕ್ಷನೂ, ಮಹಾಪ್ರಭೆಯುಳ್ಳವನೂ, ಮೂರುಲೋಕಕ್ಕೂ ಪ್ರಿಯನಾದವನೂ ಆಗಿ ಕುಳಿತಿದ್ದ ಆ ಸ್ಕಂದನನ್ನು ಪದ್ಮಹಸ್ತಳಾದ ಶ್ರೀದೇವಿಯು ತಾನಾಗಿಯೇ ಶರೀರವನ್ನು ಧರಿಸಿ ಬಂದು ಅವನನ್ನು ಭಜಿಸಿದಳು (ಅವನಲ್ಲಿ ಸನ್ನಿಹಿತಳಾದಳು).
ಶ್ರಿಯಾ ಜುಷ್ಟಃ ಪೃಥುಯಶಾಃ ಸ ಕುಮಾರವರಸ್ತದಾ |
ನಿಷಣ್ಣೋ ದೃಶ್ಯತೇ ಭೂತೈಃ ಪೌರ್ಣಮಾಸ್ಯಾಂ ಯಥಾ ಶಶೀ ॥10॥
ಲಕ್ಷ್ಮಿಯಿಂದ ಸೇವಿತನಾದ ಪೃಥುಕೀರ್ತಿಶಾಲಿಯಾದ ಆ ಕುಮಾರಶ್ರೇಷ್ಠನು ಕುಳಿತುಕೊಂಡಿರಲು ಪೌರ್ಣಿಮಾಸೀ ದಿನದಂದು ಭೂತಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆ ಕಾಣುತ್ತಿದ್ದನು.
ಅಪೂಜಯನ್ ಮಹಾತ್ಮಾನೋ ಬ್ರಾಹ್ಮಣಾಸ್ತಂ ಮಹಾಬಲಮ್ |
ಇದಮಾಹುಸ್ತದಾ ಚೈವ ಸ್ಕಂದಂ ತತ್ರ ಮಹರ್ಷಯಃ ॥11॥
ಮಹಾತ್ಮರಾದ ಬ್ರಾಹ್ಮಣರು ಮಹಾಬಲನಾದ ಅವನನ್ನು ಪೂಜಿಸಿದರು. ಆಗ ಮಹರ್ಷಿಗಳು ಸ್ಕಂದನನ್ನು ಕುರಿತು ಈ ಮಾತುಗಳನ್ನು ಹೇಳಿದರು.
ಹಿರಣ್ಯಗರ್ಭ ಭದ್ರಂ ತೇ ಲೋಕಾನಾಂ ಶಂಕರೋ ಭವ |
ತ್ವಯಾ ಷಡ್ರಾತ್ರಜಾತೇನ ಸರ್ವೇ ಲೋಕಾ ವಶೀಕೃತಾಃ ॥12॥
ಎಲೈ ಹಿರಣ್ಯಗರ್ಭನೇ, ನಿನಗೆ ಮಂಗಳವಾಗಲಿ. ಲೋಕಗಳಿಗೆ ಸುಖವನ್ನು ಉಂಟುಮಾಡುವವನಾಗು. ಆರು ದಿನಗಳ ಹಿಂದೆ ಹುಟ್ಟಿದ ನೀನು ಎಲ್ಲ ಲೋಕಗಳನ್ನೂ ವಶಪಡಿಸಿಕೊಂಡಿದ್ದೀಯೆ.
ಅಭಯಂ ಚ ಪರಂ ದತ್ತಂ ತ್ವಯೈವೈಷಾಂ ಸುರೋತ್ತಮ |
ತಸ್ಮಾದಿಂದ್ರೋ ಭವಾನಸ್ತು ತ್ರೈಲೋಕ್ಯಸ್ಯ ಹಿತಾಯ ವೈ ॥13॥
ಎಲೈ ಸುರೋತ್ತಮನೇ, ನೀನು ಇವರಿಗೆಲ್ಲಾ ಅಭಯವನ್ನು ಕೊಟ್ಟಿದ್ದೀಯೆ. ಆದ್ದರಿಂದ ಮೂರು ಲೋಕಗಳ ಹಿತಕ್ಕಾಗಿ ನೀನೇ ಇಂದ್ರನಾಗು.
ಸ್ಕಂದಃ
ಕಿಮಿಂದ್ರಃ ಸರ್ವಲೋಕಾನಾಂ ಕರೋತೀಹ ತಪೋಧನಾಃ |
ಕಥಂ ದೇವಗಣಾಂಶ್ಚೈವ ಪಾತಿ ನಿತ್ಯಂ ಸುರೇಶ್ವರಃ ॥14॥
ಸ್ಕಂದ ಎಲೈ ತಪೋಧನರೇ, ಇಂದ್ರನು ಎಲ್ಲ ಲೋಕಗಳಿಗೂ ಏನು ಮಾಡುತ್ತಾನೆ? ಸುರೇಶ್ವರನು ದೇವಗಣಗಳನ್ನು ನಿತ್ಯವೂ ಹೇಗೆ

ಪಾಲಿಸುತ್ತಾನೆ?
ಋಷಯಃ
ಇಂದ್ರೋ ದಿಶತಿ ಭೂತಾನಾಂ ಬಲಂ ತೇಜಃ ಪ್ರಜಾಃ ಸುಖಮ್ |
ತುಷ್ಟಃ ಪ್ರಯಚ್ಛತಿ ತಥಾ ಸರ್ವಾನ್ ಕಾಮಾನ್ ಸುರೇಶ್ವರಃ ॥15॥
ಇಂದ್ರನು ಎಲ್ಲ ಪ್ರಾಣಿಗಳಿಗೆ ಬಲವನ್ನೂ, ತೇಜಸ್ಸನ್ನೂ, ಪ್ರಜೆಗಳನ್ನೂ ಮತ್ತು ಸುಖವನ್ನೂ ಕೊಡುತ್ತಾನೆ. ಸಂತುಷ್ಟನಾದರೆ ಆ ಸುರೇಶ್ವರನು ಎಲ್ಲ ಕಾಮಗಳನ್ನೂ ಕೊಡುತ್ತಾನೆ.
ದುರ್ವೃತ್ತಾನಾಂ ಸಂಹರತಿ ಸುವೃತ್ತಾನಾಂ ಪ್ರಯಚ್ಛತಿ |
ಅನುಶಾಸ್ತಿ ಚ ಭೂತಾನಿ ಕಾರ್ಯೇಷು ಬಲಸೂದನಃ ॥16॥
ಕೆಟ್ಟ ನಡತೆಯುಳ್ಳವರನ್ನು ಸಂಹಾರ ಮಾಡುತ್ತಾನೆ. ಒಳ್ಳೆಯ ನಡತೆಯುಳ್ಳವರಿಗೆ ಎಲ್ಲವನ್ನೂ ಕೊಡುತ್ತಾನೆ. ಬಲಸೂದನನಾದ ಅವನು ಆಯಾ ಜೀವರು ಮಾಡಬೇಕಾದ ಕಾರ್ಯಗಳಲ್ಲಿ ಅನುಶಾಸನವನ್ನು ಮಾಡುತ್ತಾನೆ.
ಅಸೂರ್ಯೇ ಚ ಭವೇತ್ ಸೂರ್ಯಸ್ತಥಾಽಚಂದ್ರೇ ಚ ಚಂದ್ರಮಾಃ |
ಭವತ್ಯಗ್ನಿಶ್ಚ ವಾಯುಶ್ಚ ಪೃಥಿವ್ಯಾಪಶ್ಚ ಕಾರಣೈಃ ॥17॥
ಸೂರ್ಯನಿಲ್ಲದಿದ್ದಾಗ ತಾನೇ ಸೂರ್ಯನಾಗುತ್ತಾನೆ. ಚಂದ್ರನಿಲ್ಲದಿದ್ದಾಗ ಚಂದ್ರನಾಗುತ್ತಾನೆ. ಹೀಗೆ ನಿಮಿತ್ತವು ಒದಗಿದಾಗ ಅಗ್ನಿಯು, ವಾಯುವೂ, ಪೃಥಿವಿಯೂ ಮತ್ತು ಜಲವೂ ಆಗುತ್ತಾನೆ.
ಏತದಿಂದ್ರೇಣ ಕರ್ತವ್ಯಮಿಂದ್ರೇ ಹಿ ವಿಪುಲಂ ಬಲಮ್ |
ತ್ವಂ ಚ ವೀರ ಬಲೀ ಶ್ರೇಷ್ಠಸ್ತಸ್ಮಾದಿಂದ್ರೋ ಭವಸ್ವ ನಃ ॥18॥
ಇದು ಇಂದ್ರನ ಕಾರ್ಯ. ಇಂದ್ರನಲ್ಲಿ ವಿಪುಲವಾದ ಬಲವಿದೆ. ಎಲೈ ವೀರನೇ, ನೀನು ಸಹ ಬಲಶಾಲಿಯೂ, ಶ್ರೇಷ್ಠನೂ ಆಗಿದ್ದೀಯೆ. ಆದ್ದರಿಂದ ನಮಗೆ ನೀನೇ ಇಂದ್ರನಾಗು.
ಶಕ್ರಃ
ಭವಸ್ವೇಂದ್ರೋ ಮಹಾಬಾಹೋ ಸರ್ವೇಷಾಂ ನಃ ಸುಖಾವಹಃ |
ಅಭಿಷಿಚ್ಯಸ್ವ ಚೈವಾದ್ಯ ಪ್ರಾಪ್ತರೂಪೋಽಸಿ ಸತ್ತಮ ॥19॥
ಶಕ್ರ ಎಲೈ ಮಹಾಬಾಹುವೇ, ನೀನೇ ಇಂದ್ರನಾಗು. ನಮ್ಮೆಲ್ಲರಿಗೂ ಸುಖವನ್ನು ಉಂಟುಮಾಡುವವನಾಗು. ಈ ದಿನವೇ ಅಭಿಷಿಕ್ತನಾಗು. ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ನೀನು ಆ ಸ್ಥಾನಕ್ಕೆ ಬೇಕಾದ ಎಲ್ಲ ಗುಣಗಳನ್ನು ಹೊಂದಿದ್ದೀಯೆ.
ಕಾರ್ತಿಕೇಯಃ
ಶಾಧಿ ತ್ವಮೇವ ತ್ರೈಲೋಕ್ಯಮವ್ಯಗ್ರೋ ವಿಜಯೇ ರತಃ |
ಅಹಂ ತೇ ಕಿಂಕರಃ ಶಕ್ರ ನ ಮಮೇಂದ್ರತ್ವಮೀಪ್ಸಿತಮ್ ॥20॥
ಕಾರ್ತಿಕೇಯ ಇಂದ್ರನೇ, ನೀನೇ ಎಚ್ಚರಿಕೆಯಿಂದ ವಿಜಯದಲ್ಲಿಯೇ ರತನಾಗಿ ಮೂರುಲೋಕಗಳನ್ನು ಆಳು. ನಾನು ನಿನ್ನ ಕಿಂಕರನಾಗಿರುತ್ತೇನೆ. ನನಗೆ ಇಂದ್ರ ಪದವಿಯ ಅಪೇಕ್ಷೆಯಿಲ್ಲ.
ಶಕ್ರಃ
ಬಲಂ ತವಾದ್ಭುತಂ ವೀರ ತ್ವಂ ದೇವಾನಾಮರೀನ್ ಜಹಿ |
ಅವಜ್ಞಾಸ್ಯಂತಿ ಮಾಂ ಲೋಕಾ ವೀರ್ಯೇಣ ತವ ವಿಸ್ಮಿತಾಃ ॥21॥
ಶಕ್ರ ಎಲೈ ವೀರನೇ, ನಿನಗೆ ಅದ್ಭುತವಾದ ಬಲವಿದೆ. ನೀನು ದೇವಶತ್ರುಗಳನ್ನು ಸಂಹರಿಸು. ನಿನ್ನ ಪರಾಕ್ರಮವನ್ನು ನೋಡಿ ವಿಸ್ಮಿತನಾದ ಜನರು ನನಗೆ ಅವಮಾನವನ್ನು ಮಾಡುವರು.
ಇಂದ್ರತ್ವೇಽಪಿ ಸ್ಥಿತಂ ವೀರ ಬಲಹೀನಂ ಪರಾಜಿತಮ್ |
ತ್ವತ್ತೇಜಸಾಽವಮಂಸ್ಯಂತಿ ಲೋಕಾ ಮಾಂ ಸುರಸತ್ತಮ ॥22॥
ಎಲೈ ವೀರನೇ, ಸುರಶ್ರೇಷ್ಠನೇ, ನಾನು ನಿನ್ನ ಪರಾಕ್ರಮದಿಂದ ಪರಾಜಿತನಾಗಿ ದುರ್ಬಲನಾಗಿ ಇಂದ್ರನ ಪದವಿಯಲ್ಲಿ ಕುಳಿತುಕೊಂಡರೆ ಜನರು ನನಗೆ ಅವಮಾನವನ್ನು ಮಾಡುವರು.
ಆವಯೋಶ್ಚ ಮಿಥೋ ಭೇದೇ ಪ್ರಯತಿಷ್ಯಂತ್ಯತಂದ್ರಿತಾಃ |
ಭೇದಿತೇ ಚ ತ್ವಯಿ ವಿಭೋ ಲೋಕೋ ದ್ವೈಧಮುಪೇಷ್ಯತಿ ॥23॥
ನಮ್ಮಿಬ್ಬರಲ್ಲಿ ವಿರೋಧವನ್ನುಂಟು ಮಾಡುವುದಕ್ಕೆ ಜಾಗರೂಕತೆಯಿಂದ ಪ್ರಯತ್ನ ಪಡುವರು. ವಿಭುವೇ, ನೀನು ವಿರುದ್ಧನಾದರೆ ಲೋಕವು ನಾಶವನ್ನು ಹೊಂದುವುದು (ಲೋಕದಲ್ಲಿಯೂ ವಿರೋಧವುಂಟಾಗುವುದು).
ದ್ವೈಧೀಭೂತೇಷು ಲೋಕೇಷು ನಿಶ್ಚಿತೇಷ್ವಾವಯೋಸ್ತದಾ |
ವಿಗ್ರಹಃ ಸಂಪ್ರವರ್ತೇತ ಭೂತಭೇದಾನ್ಮಹಾಬಲ ॥24॥
ಎಲೈ ಮಹಾಬಲನೇ, ಲೋಕದಲ್ಲಿ ವಿರೋಧವುಂಟಾಗುವುದು ನಿಶ್ಚಿತವಾದರೆ ಆಗ ನಮ್ಮಿಬ್ಬರಿಗೆ ಯುದ್ಧವು ನಡೆಯುತ್ತದೆ.
ತತ್ರ ತ್ವಂ ಮಾಂ ರಣೇ ತಾತ ಯಥಾಶ್ರದ್ಧಂ ವಿಜೇಷ್ಯಸಿ |
ತಸ್ಮಾದಿಂದ್ರೋ ಭವಾನೇವ ಭವಿತಾ ಮಾ ವಿಚಾರಯ ॥25॥
ಎಲೈ ಪ್ರೀತಿಪಾತ್ರನೇ, ಆಗ ನೀನು ಯುದ್ಧದಲ್ಲಿ ನನ್ನನ್ನು ಅನಾಯಾಸದಿಂದ ಗೆಲ್ಲುವಿ. ಆದ್ದರಿಂದ ನೀನೇ ಇಂದ್ರನಾಗಬೇಕಾದವನು. ಈ ವಿಷಯದಲ್ಲಿ ಸಂಶಯಪಡಬೇಡ.
ಕಾರ್ತಿಕೇಯಃ
ತ್ವಮೇವ ರಾಜಾ ಭದ್ರಂ ತೇ ತ್ರೈಲೋಕ್ಯಸ್ಯ ಮಮೈವ ಚ |

ಕರೋಮಿ ಕಿಂ ಚ ತೇ ಶಕ್ರ ಶಾಸನಂ ಬ್ರೂಹಿ ತನ್ಮಮ ॥26॥
ಕಾರ್ತಿಕೇಯ ಎಲ್ಯ ಶಕ್ರನೇ, ನಿನಗೆ ಮಂಗಳವಾಗಲಿ. ಮೂರುಲೋಕಗಳಿಗೂ ಮತ್ತು ನನಗೂ ನೀನೇ ಒಡೆಯನಾದವನು. ನಾನು ನಿನ್ನ ಯಾವ ಶಾಸನವನ್ನು ಅನುಸರಿಸಲಿ? ಅದನ್ನು ನನಗೆ ಹೇಳು.
ಇಂದ್ರಃ
ಅಹಮಿಂದ್ರೋ ಭವಿಷ್ಯಾಮಿ ತವ ವಾಕ್ಯಾನ್ಮಹಾಬಲ |
ಯದಿ ಸತ್ಯಮಿದಂ ವಾಕ್ಯಂ ನಿಶ್ಚಯಾದ್ ಭಾಷಿತಂ ತ್ವಯಾ ॥27॥
ಅಭಿಷಿಚ್ಯಸ್ವ ದೇವಾನಾಂ ಸೇ(ಸೈ) ನಾಪತ್ಯೇ ಮಹಾಬಲ |
ಅಹಮಿಂದ್ರೋ ಭವಿಷ್ಯಾಮಿ ತವ ವಾಕ್ಯಾನ್ಮಹಾಬಲ ॥28॥
ಇಂದ್ರ ಮಹಾಬಲನೇ, ನೀನು ಈ ಮಾತನ್ನು ಸತ್ಯವಾಗಿ ಆಡಿದ್ದೇ ಆದರೆ ನಿನ್ನ ಮಾತಿನಂತೆ ನಾನು ಇಂದ್ರನಾಗುವೆನು. ಮಹಾಬಲನೇ, ನೀನು ದೇವತೆಗಳ ಸೇನಾಧಿಪತ್ಯದಲ್ಲಿ ಅಭಿಷಿಕ್ತನಾಗು. ಮಹಾಬಲನೇ, ನಿನ್ನ ಮಾತಿನಂತೆ ನಾನು ಇಂದ್ರನಾಗುವೆನು.
ಸ್ಕಂದಃ
ದಾನವಾನಾಂ ವಿನಾಶಾಯ ದೇವಾನಾಮರ್ಥಸಿದ್ಧಯೇ |
ಗೋಬ್ರಾಹ್ಮಣಹಿತಾರ್ಥಾಯ ಸೇ(ಸೈ) ನಾಪತ್ಯೇಽಭಿಷಿಂಚ ಮಾಮ್ ॥
ಸ್ಕಂದ ದಾನವರನ್ನು ಸಂಹರಿಸುವುದಕ್ಕೋಸ್ಕರ ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕೋಸ್ಕರ ಮತ್ತು ಗೋಬ್ರಾಹ್ಮಣರಿಗೆ ಹಿತವನ್ನು ಮಾಡುವುದಕ್ಕೋಸ್ಕರ ನನ್ನನ್ನು ಸೇನಾಪತಿಯಾಗಿ ಅಭಿಷೇಕ ಮಾಡು.
ಮಾರ್ಕಂಡೇಯಃ
ಸೋಽಭಿಷಿಕ್ತೋ ಮಘವತಾ ಸರ್ವೈರ್ದೇವಗಣೈಃ ಸಹ |
ಅತೀವ ಶುಶುಭೇ ತತ್ರ ಪೂಜ್ಯಮಾನೋ ಮಹರ್ಷಿಭಿಃ ॥30॥
ಮಾರ್ಕಂಡೇಯ ಅವನು ದೇವಗಣಗಳಿಂದ ಕೂಡಿದ ಇಂದ್ರನಿಂದ ಅಭಿಷಿಕ್ತನಾಗಿ, ಮಹರ್ಸಿಗಳಿಂದ ಪೂಜಿತನಾಗಿ ಅಲ್ಲಿ ಬಹಳವಾಗಿ ಶೋಭಿಸಿದನು.
ತಸ್ಯ ತತ್ಕಾಂಚನಂ ಛತ್ರಂ ಧ್ರಿಯಮಾಣಂ ವ್ಯರೋಚತ |
ಯಥೈವ ಸುಸಮಿದ್ಧಸ್ಯ ಪಾವಕಸ್ಯಾತ್ಮಮಂಡಲಮ್ ॥31॥
ಆಗ ಅವನಿಗೆ ಹಿಡಿದ ಸುವರ್ಣಮಯವಾದ ಛತ್ರವು ತನ್ನ ಮಂಡಲದಿಂದ ಕೂಡಿದ ಸುಸಮಿದ್ಧನಾದ ಅಗ್ನಿಯಂತೆ ಕಂಗೊಳಿಸಿತು.
ವಿಶ್ವಕರ್ಮಕೃತಾ ಚಾಸ್ಯ ದಿವ್ಯಾ ಮಾಲಾ ಹಿರಣ್ಮಯೀ |
ಆಬದ್ಧಾ ತ್ರಿಪುರ್ನೇನ ಸ್ವಯಮೇವ ಯಶಸ್ವಿನಾ ॥32॥
ವಿಶ್ವಕರ್ಮನು ಮಾಡಿದ ದಿವ್ಯವಾದ, ಸುವರ್ಣಮಯವಾದ ಮಾಲೆಯನ್ನು ತ್ರಿಪುರಾರಿಯಾದ ಕೀರ್ತಿವಂತನಾದ ಶಂಕರನೇ ಸ್ವತಃ ಅವನ ಕೊರಳಿಗೆ ಹಾಕಿದನು.
ಆಗಮ್ಯ ಮನುಜವ್ಯಾಘ್ರ ಸಹ ದೇವ್ಯಾ ಪರಂತಪಃ |
ಅರ್ಚಯಾಮಾಸ ಸುಪ್ರೀತೋ ಭಗವಾನ್ ಗೋವೃಷಧ್ವಜಃ ॥33॥
ಎಲೈ ಮನುಜವ್ಯಾಘ್ರನೇ, ಪರಂತಪನೂ, ವೃಷಧ್ವಜನೂ ಆದ ಭಗವಂತನಾದ ಅವನು ಪಾರ್ವತೀದೇವಿಯ ಜೊತೆಯಲ್ಲಿ ಬಂದು ಬಹಳ ಪ್ರಸನ್ನನಾಗಿ ಪೂಜಿಸಿದನು.
ರುದ್ರಮಗ್ನಿಂ ಪ್ರಜಾಃ ಪ್ರಾಹೂ ರುದ್ರಸೂನುಸ್ತತಸ್ತು ಸಃ |
ಕೀರ್ತ್ಯತೇ ಸುಮಹಾತೇಜಾಃ ಕುಮಾರೋಽದ್ಭುತದರ್ಶನಃ ॥34॥
ರುದ್ರನನ್ನು ಕಾಲಾಗ್ನಿರುದ್ರ ಎಂದು ಪ್ರಜೆಗಳು ಹೇಳುತ್ತಾರೆ. ಆದ್ದರಿಂದ ಅವನು ರುದ್ರಪುತ್ರನಾದರೂ ಅಗ್ನಿಪುತ್ರನಾಗುತ್ತಾನೆ. ಆದ್ದರಿಂದ ಅದ್ಭುತದರ್ಶನನಾದ ಮಹಾತೇಜಸ್ವಿಯಾದ ಅವನು ಅಗ್ನಿಪುತ್ರನೆಂದು ಹೇಳಲ್ಪಡುತ್ತಾನೆ.
ರುದ್ರೇಣ ಶುಕ್ರಮುತ್ಸೃಷ್ಟಂ ತಚ್ಛ್ವೇತಃ ಪರ್ವತೋಽಭವತ್ |
ಪಾವಕಸ್ಯೇಂದ್ರಿಯಂ ಶ್ವೇತೇ ಕೃತ್ತಿಕಾಭಿಃ ಧೃತಂ ನಗೇ ॥35॥
ರುದ್ರನು ವಿಸರ್ಜನೆ ಮಾಡಿದ್ದ ವೀರ್ಯವು ಶ್ವೇತಪರ್ವತವಾಯಿತು. ಆ ಶ್ವೇತಪರ್ವತದಲ್ಲಿ ಕೃತಿತಕೆಯರು ಅಗ್ನಿಯ ವೀರ್ಯವನ್ನು ಧರಿಸಿದರು (ರಕ್ಷಿಸಿ ಪೋಷಿಸಿದರು).
ಪೂಜ್ಯಮಾನಂ ತು ರುದ್ರೇಣ ದೃಷ್ಟ್ವಾ ಸರ್ವೇ ದಿವೌಕಸಃ |
ರುದ್ರಸೂನುಂ ತತಃ ಪ್ರಾಹುರ್ಗುಹಂ ಗುಣವತಾಂ ವರಮ್ ॥36॥
ರುದ್ರನು ಗುಹನನ್ನು ಪೂಜಿಸುವುದನ್ನು ನೋಡಿದ ದೇವತೆಗಳೆಲ್ಲರೂ ಆ ಕಾರಣದಿಂದ ರುದ್ರಪುತ್ರನಾದ ಗುಹನನ್ನು ಗುಣವಂತರಲ್ಲಿ ಶ್ರೇಷ್ಠನೆಂದು ಹೇಳಿದರು.
ಅನುಪ್ರವಿಶ್ಯ ರುದ್ರೇಣ ವಹ್ನಿಜಾತೋ ಹ್ಯಯಂ ಶಿಶುಃ |
ತತ್ರ ಜಾತಸ್ತತಃ ಸ್ಕಂದೋ ರುದ್ರಸೂನುಸ್ತತೋಽಭವತ್ ॥37॥
ರುದ್ರನಿಂದ ಅನುಪ್ರವಿಶ್ಟನಾದ ವಹ್ನಿಯಿಂದ ಈ ಶಿಶುವು ಶ್ವೇತಪರ್ವತದಲ್ಲಿ ಜನಿಸಿತು. ಆದ್ದರಿಂದ ಅಲ್ಲಿ ಜನಿಸಿದ ಸ್ಕಂದನು ರುದ್ರಪುತ್ರನಾದನು.
ರುದ್ರಸ್ಯ ವಹ್ನೇಃ ಸ್ವಾಹಾಯಾಃ ಷಣ್ಣಾಂ ಸ್ತ್ರೀಣಾಂ ಚ ಭಾರತ |
ಜಾತಃ ಸ್ಕಂದಃ ಸುರಶ್ರೇಷ್ಠೋ ರುದ್ರಸೂನುಸ್ತತೋಽಭವತ್ ॥38॥
ಎಲೈ ಭಾರತನೇ, ಸ್ಕಂದನು ರುದ್ರನಿಂದ, ವಹ್ನಿಯಿಂದ, ಪಾರ್ವತಿಯಿಂದ, ಸ್ವಾಹಾದೇವಿಯಿಂದ ಮತ್ತು ಷಟ್ಕೃತ್ತಿಕೆಯರಿಂದ

ಹುಟ್ಟಿದವನು. ಆದ್ದರಿಂದ ಆ ಸುರಶ್ರೇಷ್ಠನು ರುದ್ರಪುತ್ರನೂ ಆದನು.
ಅರಜೇ ವಾಸಸೀ ರಕ್ತೇ ವಸಾನಃ ಪಾವಕಾತ್ಮಜಃ |
ಭಾತಿ ದೀಪ್ತವಪುಃ ಶ್ರೀಮಾನ್ ರಕ್ತಾಭ್ರಾಭ್ಯಾಮಿವಾಂಶುಮಾನ್ ॥39॥
ನಿರ್ಮಲವಾದ ರಕ್ತವಸ್ತ್ರವನ್ನು ಧರಿಸಿದ ದೀಪ್ತಶರೀರವುಳ್ಳ ಕಾಂತಿಯುಕ್ತನಾದ ಅಗ್ನಿಪುತ್ರನಾದ ಅವನು ಕೆಂಪು ಮೋಡಗಳ ನಡುವೆ ಇರುವ ಸೂರ್ಯನಂತೆ ಕಂಡನು.
ಕುಕ್ಕುಟಶ್ಚಾಗ್ನಿನಾ ದತ್ತಸ್ತಸ್ಯ ಕೇತುರಲಂಕೃತಃ |
ರಥೇ ಸಮುಚ್ಛ್ರಿತೋ ಭಾತಿ ಕಾಲಾಗ್ನಿರಿವ ಲೋಹಿತಃ ॥40॥
ಅಗ್ನಿಯಿಂದ ಕೊಡಲ್ಪಟ್ಟ ಕುಕ್ಕುಟವೂ ಅವನ ಅಲಂಕೃತ ಧ್ವಜವಾಯಿತು. ರಥದಲ್ಲಿ ಉನ್ನತ ಸ್ಥಾನದಲ್ಲಿ ಅದು ರಕ್ತವರ್ಣದಿಂದ ಯುಕ್ತವಾಗಿ ಕಾಲಾಗ್ನಿಯಂತೆ ಶೋಭಿಸುತ್ತದೆ.
ಯಾ ಚೇಷ್ಟಾ ಸರ್ವಭೂತಾನಾಂ ಪ್ರಜಾ ಶಾಂತಿರ್ಬಲಂ ತಥಾ |
ಅಗ್ರತಸ್ತಸ್ಯ ಸಾ ಶಕ್ತಿರ್ದೇವಾನಾಂ ಜಯವರ್ಧಿನೀ ॥40.1॥
ಎಲ್ಲ ಭೂತಗಳಿಗೆ ಯಾವ ಚೇಷ್ಟಾ ಪ್ರಜೆ ಶಾಂತಿ, ಬಲಗಳು ಇವೆಯೋ ಅವೆಲ್ಲವೂ ಸ್ಕಂದನ ಅನುಗ್ರಹದಿಂದ ಆಗುತ್ತದೆ. ಅವನು ಪ್ರಯಾಣ ಮಾಡುವಾಗ ಅವನ ಮುಂದೆ ಹೋಗುವ ಆ ಶಕ್ತ್ಯಾಯುಧವು ದೇವತೆಗಳಿಗೆ ಜಯವನ್ನು ಉಂಟುಮಾಡುವಂತಹದಾಗಿದೆ.
ವಿವೇಶ ಕವಚಂ ಚಾಸ್ಯ ಶರೀರೇ ಸಹಜಂ ತಥಾ |
ಯುಧ್ಯಮಾನಸ್ಯ ದೇವಸ್ಯ ಪ್ರಾದುರ್ಭವತಿ ತತ್ಸದಾ ॥41॥
ಅವನ ಶರೀರವನ್ನು ಸಹಜವಾದ ಕವಚವು ಪ್ರವೇಶಿಸಿತು. ಆ ದೇವನು ಯುದ್ಧಮಾಡುವಾಗ ಆ ಕವಚವು ಯಾವಾಗಲೂ ಅಭಿವ್ಯಕ್ತವಾಗುತ್ತದೆ.
ಶಕ್ತಿರ್ಧರ್ಮೋ ಬಲಂ ತೇಜಃ ಕಾಂತತ್ವಂ ಸತ್ಯಮುನ್ನತಿಃ |
ಬ್ರಹ್ಮಣ್ಯತ್ವಮಸಮ್ಮೋಹೋ ಭಕ್ತಾನಾಂ ಪರಿರಕ್ಷಣಮ್ ॥42॥
ನಿಕೃಂತನಂ ಚ ಶತ್ರೂಣಾಂ ಲೋಕಾನಾಂ ಚಾಭಿರಕ್ಷಣಮ್ |
ಸ್ಕಂದೇನ ಸಹ ಜಾತಾನಿ ಸರ್ವಾಣ್ಯೇವ ಜನಾಧಿಪ ॥43॥
ಎಲೈ ಜನಾಧಿಪನೇ, ಶಕ್ತಿ, ಧರ್ಮ, ಬಲ, ತೇಜಸ್ಸು, ಸಹನೆ, ಸತ್ಯ, ಉನ್ನತಿ, ಬ್ರಾಹ್ಮಣವಾತ್ಸಲ್ಯ, ಅಸಮ್ಮೋಹ, ಭಕ್ತರಕ್ಷಣೆ, ಶತ್ರುಸಂಹಾರ, ಲೋಕಗಳ ರಕ್ಷಣೆ ಇವೆಲ್ಲಾ ಗುಣಗಳೂ ಸ್ಕಂದನ ಜೊತೆಯಲ್ಲಿಯೇ ಹುಟ್ಟಿದವು.
ಏವಂ ದೇವಗಣೈಃ ಸರ್ವೈಃ ಸೋಽಭಿಷಿಕ್ತಃ ಸ್ವಲಂಕೃತಃ |
ಬಭೌ ಪ್ರತೀತಃ ಸುಮನಾಃ ಪರಿಪೂರ್ಣೇಂದುಮಂಡಲಃ ॥44॥
ಹೀಗೆ ಎಲ್ಲಾ ದೇವಗಣಗಳಿಂದಲೂ ಅಭಿಷಿಕ್ತನಾಗಿ ಅಲಂಕೃತನಾಗಿ ಒಳ್ಳೆಯ ಮನಸ್ಸಿನಿಂದ ಕೂಡಿ ಸಂತುಷ್ಟನಾದ ಅವನು ಪೂರ್ಣಚಂದ್ರಮಂಡಲದಂತೆ ಶೋಭಿಸಿದನು.
ಇಷ್ಟೈಃ ಸ್ವಾಧ್ಯಾಯಘೋಷೈಶ್ಚ ವೇಣುತೂರ್ಯವರೈರಪಿ |
ದೇವಗಂಧರ್ವಗೀತೈಶ್ಚ ಸರ್ವೈರಪ್ಸರಸಾಂ ಗಣೈಃ ॥45॥
ಏತೈಶ್ಚಾನ್ಯೈಶ್ಚ ಬಹುಭಿಸ್ತುಷ್ಟೈರ್ಹೃಷ್ಟೈಃ ಸ್ವಲಂಕೃತೈಃ |
ಕ್ರೀಡನ್ ಭಾತಿ ತದಾ ದೇವೈರಭಿಷಿಕ್ತಶ್ಚ ಪಾವಕಿಃ ॥46॥
ಪ್ರಿಯವಾದ ಸ್ವಾಧ್ಯಾಯ ಘೋಷಗಳಿಂದಲೂ, ವೇಣುತೂರ್ಯಾದಿ ವಾದ್ಯ ಘೋಷಗಳಿಂದಲೂ, ದೇವಗಂಧರ್ವ ಗಾನಗಳಿಂದಲೂ, ಅಪ್ಸರೋಗಣದ ನರ್ತನದಿಂದಲೂ (ಅವನು ಅಭಿಷಿಕ್ತನಾದನು). ದೇವತೆಗಳಿಂದ ಅಭಿಷಿಕ್ತನಾದ ಅಗ್ನಿಪುತ್ರನಾದ ಸ್ಕಂದನು ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಇನ್ನೂ ಅನೇಕ ಅಲಂಕೃತರಾದ ಶಿಷ್ಟಜನರಿಂದಲೂ ಕೂಡಿ ಕ್ರೀಡಿಸುತ್ತಾ ಕಂಗೊಳಿಸಿದನು.

ಅಭಿಷಿಕ್ತಂ ಮಹಾಸೇನಮಪಶ್ಯಂತ ದಿವೌಕಸಃ |
ವಿನಿಕೃ(ಹ)ತ್ಯ ತಮಃ ಸೂರ್ಯಂ ಯಥೇಹಾಭ್ಯುದಿತಂ ತಥಾ ॥47॥
ದೇವತೆಗಳು ಅಭಿಷಿಕ್ತನಾದ ಮಹಾಸೇನನನ್ನು ಕತ್ತಲೆಯನ್ನು ಪರಿಹರಿಸಿ ಉದಯವನ್ನು ಹೊಂದಿದ ಸೂರ್ಯನಂತೆ ಕಂಡರು.
ಅಥೈನಮಭ್ಯಯುಃ ಸರ್ವಾ ದೇವಸೇನಾಃ ಸಹಸ್ರಶಃ |
ಅಸ್ಮಾಕಂ ತ್ವಂ ಪತಿರಿತಿ ಬ್ರುವಾಣಾಃ ಸರ್ವತೋ ದಿಶಃ ॥48॥
ಅನಂತರ ಎಲ್ಲ ದಿಕ್ಕುಗಳಿಂದಲೂ ಸಹಸ್ರ ಸಂಖ್ಯೆಯಲ್ಲಿ ಎಲ್ಲಾ ದೇವಸೇನೆಗಳೂ ನೀನು ನಮ್ಮ ಒಡೆಯ ಎಂದು ಹೇಳುತ್ತಾ ಅವನ ಬಳಿಗೆ ಬಂದವು.
ತಾಃ ಸಮಾಸಾದ್ಯ ಭಗವಾನ್ ಸರ್ವಭೂತಗಣೈರ್ವೃತಃ |
ಅರ್ಚಿತಸ್ತು ಸ್ತುತಶ್ಚೈವ ಸಾಂತ್ವಯಾಮಾಸ ತಾ ಅಪಿ ॥49॥
ಭಗವಂತನಾದ ಸ್ಕಂದನು ಸರ್ವಭೂತಗಣಗಳಿಂದ ಕೂಡಿದವನಾಗಿ ಅವರ ಸಮೀಪವನ್ನು ತಲುಪಿ ಅವರಿಂದ ಪೂಜಿತನೂ, ಸ್ತುತನೂ ಆಗಿ ಅವರೆಲ್ಲರನ್ನೂ ಸಮಾಧಾನಗೊಳಿಸಿದನು.
ಶತಕ್ರತುಶ್ಚಾಭಿಷಿಚ್ಯ ಸ್ಕಂದಂ ಸೇನಾಪತಿಂ ತದಾ |
ಸಸ್ಮಾರ ತಾಂ ದೇವಸೇನಾಂ ಯಾ ಸಾ ತೇನ ವಿಮೋಕ್ಷಿತಾ ॥50॥
ಶತಕ್ರತುವಾದರೂ ಸ್ಕಂದನಿಗೆ ಸೇನಾಪತ್ಯದಲ್ಲಿ ಅಭಿಷೇಕವನ್ನು ಮಾಡಿ ತಾನು ಹಿಂದೆ ವಿಮೋಚನೆಗೊಳಿಸಿದ್ದ ಆ ದೇವಸೇನೆಯನ್ನು ಸ್ಮರಿಸಿದನು.

ಇಂದ್ರಃ
ಅಯಂ ತಸ್ಯಾಃ ಪತಿರ್ನೂನಂ ವಿಹಿತೋ ಬ್ರಹ್ಮಣಾ ಸ್ವಯಮ್ ॥51॥
ಇತಿ ಚಿಂತ್ಯಾನಯಾಮಾಸ ದೇವಸೇನಾಂ ಹ್ಯಲಂಕೃತಾಮ್ ।
ಸ್ಕಂದಂ ಪ್ರೋವಾಚ ಬಲಭಿದಿಯಂ ಕನ್ಯಾ ಸುರೋತ್ತಮ ।
ಅಜಾತೇ ತ್ವಯಿ ನಿರ್ದಿಷ್ಟಾ ತವ ಪತ್ನೀ ಸ್ವಯಂಭುವಾ ॥51.1॥
ತಸ್ಮಾತ್ ತ್ವಮಸ್ಯಾ ವಿಧಿವತ್ ಪಾಣಿಂ ಮಂತ್ರಪುರಸ್ಕೃತಮ್ ।
ಗೃಹಾಣ ದಕ್ಷಿಣಂ ದೇವ್ಯಾಃ ಪಾಣಿನಾ ಪದ್ಮವರ್ಚಸಮ್ ॥52॥
ಇಂದ್ರ ಈ ಮಹಾಸೇನನು ಅವಳ ಪತಿಯಾಗಿ ಬ್ರಹ್ಮದೇವರಿಂದ ಸಂಕಲ್ಪಿಸಲ್ಪಟ್ಟಿದ್ದಾನೆ ಎಂದು ಚಿಂತಿಸಿ ಅವನು ಅಲಂಕೃತಳಾದ ದೇವಸೇನೆಯನ್ನು ಅಲ್ಲಿಗೆ ಕರೆಸಿದನು. ಬಲಶತ್ರುವಾದ ಇಂದ್ರನು ಸ್ಕಂದನನ್ನು ಕುರಿತು ಎಲ್ಲ ಸುರೋತ್ತಮನೇ, ಈ ಕನ್ಯೆಯನ್ನು ನೀನು ಹುಟ್ಟುವುದಕ್ಕಿಂತ ಮುಂಚೆಯೇ ಬ್ರಹ್ಮದೇವರು ನಿನ್ನ ಪತ್ನಿ ಎಂದು ಸಂಕಲ್ಪ ಮಾಡಿದ್ದಾರೆ. ಆದ್ದರಿಂದ ಮಂತ್ರಪುರಸ್ಸರವಾಗಿ ಇವಳ ಪಾಣಿಗ್ರಹಣವನ್ನು ಮಾಡು. ನಿನ್ನ ಕೈಯಿಂದ ಪದ್ಮಕಾಂತಿಯುಳ್ಳ ಇವಳ ದಕ್ಷಿಣ ಹಸ್ತವನ್ನು ಹಿಡಿದುಕೋ (ಎಂದು ಹೇಳಿದನು).
ಏವಮುಕ್ತಃ ಸ ಜಗ್ರಾಹ ತಸ್ಯಾಃ ಪಾಣಿಂ ಯಥಾವಿಧಿ ।
ಬೃಹಸ್ಪತಿರ್ಮಂತ್ರವಿದ್ದಿ ಜಜಾಪ ಚ ಜುಹಾವ ಚ ॥53॥
ಹೀಗೆ ಹೇಳಲ್ಪಟ್ಟ ಮಹಾಸೇನನು ಅವಳ ಪಾಣಿಯನ್ನು ವಿಧಿಪೂರ್ವಕವಾಗಿ ಹಿಡಿದುಕೊಂಡನು. ಮಂತ್ರವೇತ್ತರಾದ ಬೃಹಸ್ಪತಿಗಳು ಉಚಿತವಾದ ಜಪವನ್ನು ಮಾಡಿ ಹೋಮವನ್ನು ಮಾಡಿದರು.
ಏವಂ ಸ್ಕಂದಸ್ಯ ಮಹಿಷೀಂ ದೇವಸೇನಾಂ ವಿದುರ್ಜನಾಃ ।
ಷಷ್ಠೀಂ ಯಾಂ ಬ್ರಾಹ್ಮಣಾಃ ಪ್ರಾಹುರ್ಲಕ್ಷ್ಮೀಮಾಶಾಂ ಸುಖಪ್ರದಾಮ್ ॥
ಸಿನೀವಾಲೀಂ ಕುಹೂಂ ಚೈವ ಸದ್ವೃತ್ತಿಮಪರಾಜಿತಾಮ್ ।
ಇತ್ಯೇವಮಾದಿಭಿರ್ದೇವೀ ನಾಮಭಿಃ ಪರಿಕೀರ್ತ್ಯತೇ ॥55॥
ಹೀಗೆ ಜನಗಳು ದೇವಸೇನೆಯನ್ನು ಸ್ಕಂದನ ರಾಣಿ ಎಂದು ತಿಳಿಯುತ್ತಾರೆ. ಬ್ರಾಹ್ಮಣರು ಯಾರನ್ನು ಷಷ್ಠೀ ಎಂದು ಹೇಳುತ್ತಾರೋ, ಲಕ್ಷ್ಮೀ ಎಂದು ಕರೆಯುತ್ತಾರೋ, ಸುಖಪ್ರದಳಾದ ಆಶಾ ಎಂದು ಕರೆಯುತ್ತಾರೆಯೋ, ಸಿನೀವಾಲೀ, ಕುಹೂ, ಸದ್ವೃತ್ತಿ, ಅಪರಾಜಿತಾ ಇದೇ ಮೊದಲಾದ ನಾಮಗಳಿಂದ ಕರೆಯುತ್ತಾರೆಯೋ ಅವೆಲ್ಲವೂ ಈ ದೇವಸೇನೆಯ ನಾಮಗಳೇ.
ಯದಾ ಸ್ಕಂದಃ ಪತಿರ್ಲಬ್ಧಃ ಶಾಶ್ವತೋ ದೇವಸೇನಯಾ ।
ತದಾ ತಮಾಶ್ರಯಲ್ಲಕ್ಷ್ಮೀಃ ಸ್ವಯಂ ದೇವೀ ಶರೀರಿಣೀ ॥56॥
ಯಾವಾಗ ದೇವಸೇನೆಯು ಸ್ಕಂದನನ್ನು ಶಾಶ್ವತವಾದ ಪತಿಯನ್ನಾಗಿ ಪಡೆದಳೋ ಆಗ ಲಕ್ಷ್ಮೀದೇವಿಯು ಶರೀರವನ್ನು ಧರಿಸಿ ಇನ್ನೊಂದು ರೂಪದಿಂದ ಅವನಲ್ಲಿ ಸನ್ನಿಹಿತಳಾದಳು.
ಶ್ರೀಜುಷ್ಟಃ ಪಂಚಮೀಂ ಸ್ಕಂದಸ್ತಸ್ಮಾತ್ ಶ್ರೀಃ ಪಂಚಮೀ ಸ್ಮೃತಾ ।
ಷಷ್ಠ್ಯಾಂ ಕೃತಾರ್ಥೋಽಭೂದ್ ಯಸ್ಮಾತ್ತಸ್ಮಾತ್ ಷಷ್ಠೀ ಮಹಾತಿಥಿಃ ॥
ಸ್ಕಂದನು ಪಂಚಮಿಯಂದು ಶ್ರೀ ಸಹಿತನಾದನು. ಆದ್ದರಿಂದ ಶ್ರೀದೇವಿಯನ್ನು ಪಂಚಮೀ ಎಂದೂ ಕರೆಯುತ್ತಾರೆ. ಷಷ್ಠಿಯ ದಿವಸ ಅವನು ಕೃತಾರ್ಥನಾದ ಕಾರಣದಿಂದ ಷಷ್ಠಿಯು ಪವಿತ್ರವಾದ ತಿಥಿಯಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಾದಶಾಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ಷಷ್ಠೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹದಿನೆಂಟನೆಯ
ಅಧ್ಯಾಯ ಮುಗಿಯಿತು
* * * *
ಇನ್ನೂರ ಹತ್ತೊಂಬತ್ತನೆಯ ಅಧ್ಯಾಯ
ಮಾರ್ಕಂಡೇಯರಿಂದ ಸ್ಕಂದನ ಮುಂದಿನ ಚರಿತ್ರೆಯ ಕೀರ್ತನೆ.
ಮಾರ್ಕಂಡೇಯಃ
ಶ್ರಿಯಾ ಜುಷ್ಟಂ ಮಹಾಸೇನಂ ದೇವಸೇನಾಪತಿಂ ಕೃತಮ್ ।
ಸಪ್ತರ್ಷಿಪತ್ನ್ಯಃ ಷಡ್ದೇವ್ಯಸ್ತತ್ಸಕಾಶಮಥಾಗಮನ್ ॥1॥
ಮಾರ್ಕಂಡೇಯ ಅನಂತರ ಸಂಪದ್ಯುಕ್ತನಾದ ದೇವಸೇನಾಪತಿಯಾದ ಮಹಾಸೇನನ ಬಳಿಗೆ ಸಪ್ತರ್ಷಿ ಪತ್ನಿಯರಲ್ಲಿ ಆರುಜನರು ಬಂದರು.
ಋಷಿಭಿಃ ಸಂಪರಿತ್ಯಕ್ತಾ ಧರ್ಮಯುಕ್ತಾ ಮಹಾವ್ರತಾಃ ।
ದ್ರುತಮಾಗಮ್ಯ ಚೋಚುಸ್ತಾ ದೇವಸೇನಾಪತಿಂ ಪ್ರಭುಮ್ ॥2॥
ಧರ್ಮಯುಕ್ತರೂ, ಮಹಾವ್ರತಶೀಲರೂ ಆದ ಅವರು ತಮ್ಮ ಪತಿಗಳಾದ ಋಷಿಗಳಿಂದ ಪರಿತ್ಯಕ್ತರಾಗಿ ದೇವಸೇನಾಪತಿಯಾದ ಪ್ರಭುವನ್ನು ಕುರಿತು ಬೇಗ ಬಂದು ಅವರೆಲ್ಲರೂ ಹೇಳಿದರು.
ವಯಂ ಪುತ್ರ ಪರಿತ್ಯಕ್ತಾ ಭರ್ತೃಭಿರ್ದೇವಸಮ್ಮಿತೈಃ ।
ಅಕಾರಣಾದ್ ರುಷಾ ತೈಸ್ತು ಪುಣ್ಯಸ್ಥಾನಾತ್ ಪರಿಚ್ಯುತಾಃ ॥3॥
ದೇವಿಯರು ಎಲ್ಲೆ ಪುತ್ರನೇ, ನಾವು ನಿಷ್ಕಾರಣವಾಗಿ ದೇವತಾ ಸಮಾನರಾದ ನಮ್ಮ ಪತಿಗಳಿಂದ ರೋಷದಿಂದ

ಪರಿತ್ಯಾಗಮಾಡಲ್ಪಟ್ಟು ನಮ್ಮ ಪವಿತ್ರವಾದ ಸ್ಥಾನಗಳಿಂದ ಚ್ಯುತರಾಗಿದ್ದೇವೆ.
ಅಸ್ಮಾಭಿಃ ಕಿಲ ಜಾತಸ್ತ್ವಮಿತಿ ಕೇನಾಪ್ಯುದಾಹೃತಮ್ |
ತತ್ ಸತ್ಯಮೇತತ್ ಸಂಶ್ರುತ್ಯ ತಸ್ಮಾನ್ನಃಸತ್ರತುಮರ್ಹಸಿ ॥4॥
ನೀನು ನಮ್ಮ ಪುತ್ರನೆಂದು ಯಾರೋ ಹೇಳಿದರು (ಈ ಮಾತನ್ನು ಕೇಳಿದ ಋಷಿಗಳು ನಮ್ಮನ್ನು ಶಂಕಿಸಿ ತ್ಯಜಿಸಿದ್ದಾರೆ). ನೀನು ಈ ವಿಷಯದಲ್ಲಿ ಸತ್ಯವಾದ ಅಂಶವೇನು ಎಂದು ಘೋಷಣೆಯನ್ನು ಮಾಡಿ ನಮ್ಮನ್ನು ರಕ್ಷಿಸಬೇಕು.
ಅಕ್ಷಯಶ್ಚ ಭವೇತ್ ಸ್ವರ್ಗಸ್ತ್ವತ್ಪ್ರಸಾದಾದ್ಧಿ ನಃ ಪ್ರಭೋ |
ತ್ವಾಂ ಪುತ್ರಂ ಚಾಪ್ಯಭೀಪ್ಸಾಮಃ ಕೃತ್ವೈತದನೃಣೋ ಭವ ॥5॥
ಎಲೈ ಪ್ರಭುವೇ, ನಿನ್ನ ಅನುಗ್ರಹದಿಂದ ನಮಗೆ ಅಕ್ಷಯವಾದ ಸ್ವರ್ಗಲೋಕ ಪ್ರಾಪ್ತಿಯಾದೀತು. ನಿನ್ನನ್ನು ಪುತ್ರನೆಂದು ಸ್ವೀಕರಿಸಲು ನಾವು ಬಯಸುತ್ತೇವೆ. ಈ ಉಪಕಾರವನ್ನು ಮಾಡಿ ನೀನು ಋಣಮುಕ್ತನಾಗು.
ಸ್ಕಂದಃ
ಮಾತರೋ ಹಿ ಭವತ್ಯೋ ಮೇ ಸುತೋ ವೋಽಹಮನಿಂದಿತಾಃ |
ಯದ್ವಾಪೀಚ್ಛತ ತತ್ಸರ್ವಂ ಸಂಭವಿಷ್ಯತಿ ವಸ್ತಥಾ ॥6॥
ಸ್ಕಂದ ನೀವೆಲ್ಲರೂ ನನ್ನ ಪೂಜ್ಯರಾದ ಮಾತೆಯರು. ಎಲೌ ಅನಿಂದಿತರೇ, ನಾನು ನಿಮ್ಮ ಪುತ್ರ. ನೀವು ಏನನ್ನು ಬಯಸುತ್ತೀರೋ ಅದೆಲ್ಲವೂ ನಿಮಗೆ ಸಿದ್ಧಿಸುವುದು.
ಮಾರ್ಕಂಡೇಯಃ
ಏವಮುಕ್ತೇ ತತಃ ಶಕ್ರಂ ಕಿಂ ಕಾರ್ಯಮಿತಿ ಸೋಽಬ್ರವೀತ್ |
ಉಕ್ತಃ ಸ್ಕಂದೇನ ಬ್ರೂಹೀತಿ ಸೋಽಬ್ರವೀತ್ ವಾಸವಸ್ತತಃ ॥7॥
ಮಾರ್ಕಂಡೇಯ ಹೀಗೆ ಹೇಳುತ್ತಿರಲು ಸ್ಕಂದನು ಇಂದ್ರನನ್ನು ಕುರಿತು ಏನು ಮಾಡಬೇಕು ಅದನ್ನು ಹೇಳು ಎಂದು ಕೇಳಿದನು. ಆಗ ಇಂದ್ರನು ಹೀಗೆ ಹೇಳಿದನು.
ಅಭಿಜಿತ್ ಸ್ಪರ್ಧಮಾನಾ ತು ರೋಹಿಣ್ಯಾ ಕನ್ಯಸೀ ಸ್ವಸಾ |
ಇಚ್ಛಂತೀ ಜ್ಯೇಷ್ಠತಾಂ ದೇವೀ ತಪಸ್ತಪ್ತುಂ ವನಂ ಗತಾ ॥8॥
ಅಭಿಜಿತ್ ನಕ್ಷತ್ರ ದೇವತೆಯು ರೋಹಿಣಿಯ ತಂಗಿ. ಆ ದೇವಿಯು ತನಗೆ ಜ್ಯೇಷ್ಠತೆಯು ಉಂಟಾಗಬೇಕೆಂದು ಉದ್ದೇಶಿಸಿ ತಪಸ್ಸನ್ನು ಮಾಡಲು ಕಾಡಿಗೆ ಹೋದಳು (ಈ ಆರು ಋಷಿಪತ್ನಿಯರು ತಮಗೆ ಬ್ರಾಹ್ಮೀ, ಮಾಹೇಶ್ವರೀ ಮೊದಲಾದ ಸಪ್ತಮಾತೆಯ ಸ್ಥಾನವು ಸಿಗಬೇಕೆಂದು ಕೇಳಲು ಸ್ಕಂದನ ಬಳಿಗೆ ಬಂದರು. ಅದು ಅವರಿಗೆ ಅಯೋಗ್ಯವಾದ್ದರಿಂದ ಅದು ಅವರಿಗೆ ದೊರೆಯುವುದು ಅಸಂಭಾವಿತ. ಆದ್ದರಿಂದ ನೀನು ಅವರಿಗೆ ಕೊಡಕೂಡದು ಎಂದು ಸ್ಕಂದನಿಗೆ ಸೂಚಿಸಲು ಇಂದ್ರನು ಅಭಿಜಿತ್‌ಗೆ ಸಂಬಂಧಿಸಿದ ಒಂದು ಕಥೆಯನ್ನು ಹೇಳುತ್ತಿದ್ದಾನೆ).
ತತ್ರ ಮೂಢೋಽಸ್ಮಿ ಭದ್ರಂ ತೇ ನಕ್ಷತ್ರಂ ಗಗನಾಚ್ಚ್ಯುತಮ್ |
ಕಾಲಂ ತ್ವಿಮಂ ಪರಂ ಸ್ಕಂದ ಬ್ರಹ್ಮಣಾ ಸಹ ಚಿಂತಯ ॥9॥
ಎಲೈ ಸ್ಕಂದನೇ, ಅಭಿಜಿತ್‌ಗೆ ಆ ಸ್ಥಾನವು ದೊರೆಯುವುದೋ ಇಲ್ಲವೋ ಎಂಬ ವಿಷಯದಲ್ಲಿ ನಾನು ಮೂಢನಾಗಿದ್ದೇನೆ (ಅದು ನನಗೆ ತಿಳಿದಿಲ್ಲ). ನಿನಗೆ ಮಂಗಳವಾಗಲಿ. ಆಗ ಕೃತ್ತಿಕಾ ನಕ್ಷತ್ರವು ಗಗನದಿಂದ ಚ್ಯುತವಾಯಿತು. ಎಲೈ ಸ್ಕಂದನೇ, ಈ ಕಾಲದ ವಿಷಯವನ್ನು ನೀನು ಬ್ರಹ್ಮದೇವರ ಜೊತೆಯಲ್ಲಿ ಚಿಂತಿಸಬೇಕು. (ಅಭಿಜಿತ್ ದೇವತೆಗೆ ಅವಳು ಅಪೇಕ್ಷಿಸಿದ ಸ್ಥಾನವು ದೊರೆಯುವುದೋ ಇಲ್ಲವೋ ಎಂದು ನನಗೆ ತಿಳಿದಿಲ್ಲ. ಅಭಿಜಿತ್ ದೇವತೆಯು ತನಗೆ ಅಯೋಗ್ಯವಾದ ಜ್ಯೇಷ್ಠತ್ವವನ್ನು ಉದ್ದೇಶಿಸಿ ತಪಸ್ಸನ್ನು ಮಾಡಿದ ದೋಷದಿಂದ ಕೃತ್ತಿಕಾ ನಕ್ಷತ್ರವು ಉತ್ಪಾತರೂಪದಿಂದ ಕೆಳಗೆ ಬಿದ್ದಿತು. ಮೊದಲು ರೋಹಿಣಿಯು ಶ್ರೇಷ್ಠನಕ್ಷತ್ರವಾಗಿದ್ದಿತು. ಬ್ರಹ್ಮದೇವರ ಆದೇಶದ ನಂತರ ಧನಿಷ್ಠಾ ನಕ್ಷತ್ರವು ಶ್ರೇಷ್ಠವಾಯಿತು. ಹೀಗೆ ಎರಡೇ ರೀತಿ. ಅಭಿಜಿತ್ ದೇವತೆಗೆ ರೋಹಿಣಿಗಿಂತ ಶ್ರೇಷ್ಠತ್ವವು ಎಂದೂ ಪ್ರಾಪ್ತವಾಗುವುದಿಲ್ಲ ಎಂದು ಅಭಿಪ್ರಾಯ- ಲಕ್ಷಾಲಂಕಾರ).
ಧನಿಷ್ಠಾದಿಸ್ತದಾ ಕಾಲೋ ಬ್ರಹ್ಮಣಾ ಪರಿಕೀರ್ತಿತಃ |
ರೋಹಿಣೀ ಹ್ಯಭವತ್ ಪೂರ್ವಮೇವಂ ಸಂಖ್ಯಾ ಸಮಾಭವತ್ ॥10॥
ಆಗ ಬ್ರಹ್ಮದೇವರು ಧನಿಷ್ಠಾದಿಯಾದ ಕಾಲವನ್ನು ಕಲ್ಪಿಸಿದರು. ಮೊದಲು ರೋಹಿಣ್ಯಾದಿ ಕಾಲವಾಗಿದ್ದಿತು. ಈ ರೀತಿ ಸಂಖ್ಯೆಯು ಸಮವೇ ಆಯಿತು. (ಹಿಂದೆ ಕೃತಯುಗದ ಪ್ರಾರಂಭಕಾಲವು ರೋಹಿಣಿಯಾಗಿದ್ದಿತು. ಎಂದರೆ ಸೂರ್ಯಚಂದ್ರ ಮತ್ತು ಬೃಹಸ್ಪತಿಗಳು ಯಾವಾಗ ಒಂದೇ ಕಾಲದಲ್ಲಿ ರೋಹಿಣಿಯನ್ನು ಪ್ರವೇಶಿಸುತ್ತಾರೋ ಅದು ಕೃತಯುಗಾದಿ ಎಂಬ ನಿರ್ಧಾರವಿದ್ದಿತು. ಈಗ ಕೃತ್ತಿಕೆಯು ಬಿದ್ದುಹೋದುದರಿಂದ ನಕ್ಷತ್ರಕಾಲದಲ್ಲಿ ವ್ಯತ್ಯಾಸವಾಗಿ ಧನಿಷ್ಠಾ ನಕ್ಷತ್ರಕ್ಕೆ ಯಾವಾಗ ಸೂರ್ಯಚಂದ್ರ ಮತ್ತು ಬೃಹಸ್ಪತಿಗಳು ಏಕಕಾಲದಲ್ಲಿ ಪ್ರವೇಶಿಸುತ್ತಾರೆಯೋ ಅದು ಕೃತಯುಗಾದಿ ಎಂದು ಬ್ರಹ್ಮದೇವರು ತೀರ್ಮಾನಿಸಿದರು. ಎರಡು ಪಕ್ಷಗಳಲ್ಲಿಯೂ ಅಭಿಜಿತ್‌ಗೆ ಶ್ರೇಷ್ಠತೆಯು ಬರಲಿಲ್ಲ. ಆದ್ದರಿಂದ ಅವಳ ಕನಿಷ್ಠತ್ವ ಸ್ಥಿತಿಯು ಸಮವೇ ಆಗಿದ್ದಿತು).
ಏವಮುಕ್ತೇ ತು ಶಕ್ರೇಣ ತ್ರಿದಿವಂ ಕೃತ್ತಿಕಾಗತಾ |
ನಕ್ಷತ್ರಂ ಶಕಟಾಕಾರಂ ಭಾತಿ ತದ್ ವಹ್ನಿದೈವತಮ್ ॥10.1॥
ಮಾರ್ಕಂಡೇಯರು ಹೀಗೆ ಇಂದ್ರನು ಹೇಳುತ್ತಿರಲು ಕೃತ್ತಿಕಾ ನಕ್ಷತ್ರವು ಪುನಃ ಸ್ವರ್ಗಕ್ಕೆ ಹೋಯಿತು. ವಹ್ನಿದೈವತವಾದ ಆ ನಕ್ಷತ್ರವು ಈಗಲೂ ಶಕಟಾಕಾರವಾಗಿ ಕಾಣುತ್ತದೆ (ಕೃತ್ತಿಕಾ ನಕ್ಷತ್ರದ ಸಂಸ್ಥಾನದಲ್ಲಿರುವ ಆರುನಕ್ಷತ್ರಗಳು ಸಪ್ತರ್ಷಿಗಳ ಆರು ಪತ್ನಿಯರಿಂದ ಅಭಿಮನ್ಯವಾದ ನಕ್ಷತ್ರಗಳು. ಅದು ಅವರ ಸ್ಥಾನ. ಒಟ್ಟು ಅದು ಶಕಟಾಕಾರವಾಗಿ ಕಾಣುತ್ತದೆ. ಅಭಿಜಿತ್‌ಗೆ ಹೇಗೆ ಅವಳಿಗೆ ಅಯೋಗ್ಯವಾದ ಸ್ಥಾನವು ದೊರೆಯಲಿಲ್ಲವೋ ಅದರಂತೆ ಈ ಋಷಿಪತ್ನಿಯರಿಗೂ ಪ್ರಾಚೀನರಾದ ಷಣ್ಮಾತೃಗಳ ಸ್ಥಾನವು ಅಯೋಗ್ಯವಾದುದರಿಂದ ಅದನ್ನು ನೀನು ಕೊಡಬೇಡ ಎಂದು ಇಂದ್ರನ ಅಭಿಪ್ರಾಯ. ಆದ್ದರಿಂದ ಷಟ್‌ಪತ್ನಿಯರು ಸ್ವರ್ಗಕ್ಕೆ ಹೋಗಿ

ತಮ್ಮ ಸ್ಥಾನವನ್ನೇ ಸೇರಿದರು - ಲಕ್ಷಾಲಂಕಾರ).
ವಿನತಾ ಚಾಬ್ರುವೀತ್ ಸ್ಕಂದಂ ಮಮ ತ್ವಂ ಪಿಂಡದಃ ಸುತಃ |
ಇಚ್ಛಾಮಿ ನಿತ್ಯಮೇವಾಹಂ ತ್ವಯಾ ಪುತ್ರ ಸಹಾಸಿತುಮ್ ॥11॥
ವಿನತೆಯು ಸ್ಕಂದನನ್ನು ಕುರಿತು ನೀನು ನನಗೆ ಪಿಂಡಪ್ರದನಾದ ಪುತ್ರ. ಎಲೈ ಪುತ್ರನೇ, ನಾನು ನಿನ್ನ ಜೊತೆಯಲ್ಲಿ ಯಾವಾಗಲೂ ಇರಲು ಬಯಸುತ್ತೇನೆ ಎಂದು ಹೇಳಿದಳು.
ಸ್ಕಂದಃ
ಏವಮಸ್ತು ನಮಸ್ತೇಽಸ್ತು ಪುತ್ರಸ್ನೇಹಾತ್ ಪ್ರಶಾಧಿ ಮಾಮ್ |
ಸ್ನುಷಯಾ ಪೂಜ್ಯಮಾನಾ ವೈ ದೇವಿ ವತ್ಸ್ಯಸಿ ನಿತ್ಯದಾ ॥12॥
ಸ್ಕಂದ ಹಾಗೆಯೇ ಆಗಲಿ. ನಿನಗೆ ನಮಸ್ಕಾರ. ಪುತ್ರಸ್ನೇಹದಿಂದ ನನಗೆ ಶಾಸನವನ್ನು ಮಾಡು. ದೇವಿಯೇ, ಸೊಸೆಯಿಂದ ಪೂಜಿತಳಾಗಿ ಯಾವಾಗಲೂ ನನ್ನ ಜೊತೆಯಲ್ಲಿ ವಾಸಮಾಡುವವಳಾಗು.
ಮಾರ್ಕಂಡೇಯಃ
ಅಥ ಮಾತೃಗಣಃ ಸರ್ವಃ ಸ್ಕಂದಂ ವಚನಮಬ್ರುವೀತ್ |
ವಯಂ ಸರ್ವಸ್ಯ ಲೋಕಸ್ಯ ಮಾತರಃ ಕವಿಭಿಃ ಸ್ತುತಾಃ ॥13॥
ಇಚ್ಛಾಮ ಮಾತರಸ್ತುಭ್ಯಂ ಭವಿತುಂ ಪೂಜಯಸ್ವ ನಃ |
ತಾಸಾಂ ತು ವಚನಂ ಶ್ರುತ್ವಾ ಸ್ಕಂದೋ ವಚನಮಬ್ರುವೀತ್ ॥14॥
ಮಾರ್ಕಂಡೇಯ ಅನಂತರ ಋಷಿಪತ್ನಿರೂಪವಾದ ಮಾತೃಗಣವು ಸ್ಕಂದನನ್ನು ಸಮೀಪಿಸಿ ಎಲ್ಲರೂ ಅವನನ್ನು ಕುರಿತು ನಾವೆಲ್ಲರೂ ಲೋಕಮಾತೆಯರೆಂದು ಜ್ಞಾನಿಗಳಿಂದ ಪ್ರಶಂಸಿಸಲ್ಪಟ್ಟಿದ್ದೇವೆ. ನಾವು ನಿನಗೂ ಮಾತೆಯರಾಗಲು ಬಯಸುತ್ತೇವೆ. ನಮ್ಮನ್ನು ಪೂಜಿಸು ಎಂದು ಹೇಳಿದರು. ಅವರ ಮಾತನ್ನು ಕೇಳಿ ಸ್ಕಂದನು ಹೀಗೆ ಮಾತನಾಡಿದನು.
ಮಾತರೋ ಹಿ ಭವತ್ಯೋ ಮೇ ಭವತೀನಾಮಹಂ ಸುತಃ |
ಉಚ್ಯತಾಂ ಯನ್ಮಯಾ ಕಾರ್ಯಂ ಭವತೀನಾಮಥೇಪ್ಸಿತಮ್ ॥15॥
ನೀವೆಲ್ಲರೂ ನನ್ನ ಮಾತೆಯರೇ. ನಾನು ನಿಮ್ಮ ಪುತ್ರ. ನಿಮಗೆ ಇಷ್ಟವಾದ ಯಾವ ಕಾರ್ಯವನ್ನು ನಾನು ಮಾಡಬೇಕೆಂದು ಹೇಳಿ (ಎಂದು ಹೇಳಿದನು).
ಮಾತರಃ
ಯಾಸ್ತು ತಾ ಮಾತರಃ ಪೂರ್ವಂ ಲೋಕಸ್ಯಾಸ್ಯ ಪ್ರಕಲ್ಪಿತಾಃ |
ಅಸ್ಮಾಕಂ ತು ಭವೇತ್ ಸ್ಥಾನಂ ತಾಸಾಂ ಚೈವ ನ ತದ್ ಭವೇತ್ ॥16॥
ಭವೇಮ ಪೂಜ್ಯಾ ಲೋಕಸ್ಯ ನ ತಾಃ ಪೂಜ್ಯಾಃ ಸುರರ್ಷಭ |
ಅಸ್ಮತ್ಪ್ರಜಾ ಹೃತಾಸ್ತಾಭಿಸ್ತ್ವತ್ಕೃತೇ ತಾಃ ಪ್ರಯಚ್ಛ ನಃ ॥17॥
ಮಾತೆಯರು ಬ್ರಾಹ್ಮೀ, ಮಾಹೇಶ್ವರ್ಯಾದಿ ಮಾತೆಯರು ಲೋಕಮಾತೆಯರೆಂದು ಹಿಂದೆ ಕ್ಲಪ್ತರಾಗಿದ್ದಾರೆಯೋ ನಮಗೆ ಆ ಸ್ಥಾನವು ದೊರೆಯಬೇಕು. ಅವರಿಗೆ ಆ ಸ್ಥಾನವು ದೊರೆಯಬಾರದು. ನಾವು ಲೋಕದಲ್ಲಿ ಪೂಜ್ಯರಾಗಬೇಕು. ಸುರರ್ಷಭನೇ, ಅವರಿಗೆ ಪೂಜೆಯು ಸಲ್ಲಬಾರದು. ಅವರು ನಮ್ಮ ಪ್ರಜೆಗಳನ್ನು ನಿನ್ನ ಸಲುವಾಗಿ ಕದ್ದೊಯ್ದಿದ್ದಾರೆ. ಆ ಪ್ರಜೆಗಳನ್ನು ಹಿಂದಿರುಗಿಸು.
ಸ್ಕಂದಃ
ದತ್ತಾಃ ಪ್ರಜಾ ನ ತಾಃ ಶಕ್ಯಾ ಭವತೀಭಿರ್ನಿಷೇವಿತುಮ್ |
ಅನ್ಯಾಂ ವಃ ಕಾಂ ಪ್ರಯಚ್ಛಾಮಿ ಪ್ರಜಾಂ ಯಾಂ ಮನಸೇಚ್ಛಥ ॥18॥
ಸ್ಕಂದ ಆ ಪ್ರಜೆಗಳನ್ನು ಅವರಿಗೆ ಕೊಟ್ಟಿದ್ದಾಗಿದೆ. ಅವರನ್ನು ನೀವು ಪುನಃ ಪಡೆಯಲು ಸಾಧ್ಯವಿಲ್ಲ. ನೀವು ಎಂತಹ ಪ್ರಜೆಯನ್ನು ಮನಸ್ಸಿನಲ್ಲಿ ಇಚ್ಛಿಸುತ್ತೀರೋ ಅಂತಹ ಬೇರೆ ಯಾವ ಪ್ರಜೆಯನ್ನು ಕೊಡಲಿ ಎಂದು ಹೇಳಿ (ವಿನತಾ ಅದಿತಿ ಮೊದಲಾದ ನಾಮಗಳುಳ್ಳ ದೇವಮಾತೆಯರು ಬೇರೆ. ಅದೇ ನಾಮಗಳುಳ್ಳ ಸ್ಕಂದ ಪರಿವಾರವು ಬೇರೆ. ಸ್ಕಂದಪರಿವಾರಕ್ಕೆ ಸೇರಿದವರೆಲ್ಲರೂ ಭೂತಗ್ರಹಗಳೇ ಹೊರತು ದೇವಮಾತೆಯರಲ್ಲ. ದೇವಮಾತೆಯರು ಎಲ್ಲ ಲೋಕಕ್ಕೂ ಸುಖವನ್ನು ಕೊಡುವವರು. ಸ್ಕಂದನ ಪರಿವಾರಕ್ಕೆ ಸೇರಿದ ಮಾರಿಕಾ ಮೊದಲಾದ ಮಾತೆಯರು ಜಗತ್ತಿಗೆ ಉಪದ್ರವವನ್ನು ಕೊಡುವವರು ಎಂದು ತಿಳಿಯಬೇಕು - ಲಕ್ಷಾಲಂಕಾರ).
ಮಾತರಃ
ಇಚ್ಛಾಮ ತಾಸಾಂ ಮಾತೄಣಾಂ ಪ್ರಜಾ ಭೋಕ್ತುಂ ಪ್ರಯಚ್ಛ ನಃ |
ತ್ವಯಾ ಸಹ ಪೃಥಗ್ಭೂತಾ ಯೇ ಚ ತಾಸಾಮಧೀಶ್ವರಾಃ ॥19॥
ಮಾತೆಯರು ಆ ಮಾತೆಯರ ಪ್ರಜೆಗಳನ್ನು ತಿನ್ನಲು ನಾವು ಬಯಸುತ್ತೇವೆ. ಅವರನ್ನು ನಮಗೆ ಕೊಡು. ಅವರ ಅಧಿಪತಿಗಳಾದ ಪತಿಗಳಾರಿದ್ದಾರೆಯೋ ಅವರನ್ನೂ ಸಹ ನಿನ್ನ ಜೊತೆಯಲ್ಲಿ ಬೇರೆಯಾಗಿ ಕುಳಿತು ತಿನ್ನಲು ಬಯಸುತ್ತೇವೆ.
ಸ್ಕಂದಃ
ಪ್ರಜಾ ವೋ ದದ್ಮಿ ಕಷ್ಟಂ ತು ಭವತೀಭಿರುದಾಹೃತಮ್ |
ಪರಿರಕ್ಷತ ಭದ್ರಂ ವಃ ಪ್ರಜಾಃ ಸಾಧು ನಮಸ್ಕೃತಾಃ ॥20॥
ಸ್ಕಂದ ನಿಮಗೆ ಪ್ರಜೆಗಳನ್ನು ಕೊಡುತ್ತೇನೆ. ಆದರೆ ನೀವು ಬೇಡಿದುದು ಮಾತ್ರ ಬಹಳ ಕಷ್ಟಕರವಾದುದು. ನನ್ನಿಂದ ನಮಸ್ಕರಿಸಲ್ಪಡುವ ನೀವು ನಿಮ್ಮ ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಿಕೊಳ್ಳಿ.
ಮಾತರಃ

ಪರಿರಕ್ಷಾಮ ಭದ್ರಂ ತೇ ಪ್ರಜಾಃ ಸ್ಕಂದ ಯಥೇದಿಚ್ಛಸಿ |
ತ್ವಯಾ ನೋ ರೋಚತೇ ಸ್ಕಂದ ಸಹವಾಸಶ್ಚಿರಂ ಪ್ರಭೋ ॥21॥
ಮಾತೆಯರು ಸ್ಕಂದನೇ, ನೀನು ಬಯಸಿದಂತೆ ನಮ್ಮ ಪ್ರಜೆಗಳನ್ನು ನಾವು ಚೆನ್ನಾಗಿ ರಕ್ಷಿಸುತ್ತೇವೆ. ನಿನಗೆ ಮಂಗಳವಾಗಲಿ. ಸ್ಕಂದನೇ, ಪ್ರಭುವೇ, ನಾವು ನಿನ್ನ ಜೊತೆಯಲ್ಲಿ ಬಹುಕಾಲ ಇರಬೇಕೆಂದು ಇಷ್ಟಪಡುತ್ತೇವೆ.
ಸ್ಕಂದಃ
ಯಾವತ್ ಷೋಡಶ ವರ್ಷಾಣಿ ಭವಂತಿ ತರುಣಾಃ ಪ್ರಜಾಃ |
ಪ್ರಬಾಧತ ಮನುಷ್ಯಾಣಾಂ ತಾವದ್ರೂಪೈಃ ಪೃಥಗ್ವಿಧೈಃ ॥22॥
ಅಹಂ ಚ ವಃ ಪ್ರದಾಸ್ಯಾಮಿ ರೌದ್ರಮಾತ್ಮಾನಮವ್ಯಯಮ್ |
ಪರಮಂ ತೇನ ಸಹಿತಾಃ ಸುಖಂ ವತ್ಸ್ಯಥ ಪೂಜಿತಾಃ ॥23॥
ಸ್ಕಂದ ತರುಣರಾದ ಮನುಷ್ಯ ಪ್ರಜೆಗಳಿಗೆ ಹದಿನಾರು ವರ್ಷಗಳಾಗುವವರೆಗೆ ನೀವು ಅನೇಕ ವಿಧವಾದ ರೂಪಗಳನ್ನು ತೆಗೆದುಕೊಂಡು ಅವರನ್ನು ಬಾಧಿಸಿ. ನಾನು ನನ್ನದೇ ಒಂದು ಶಾಶ್ವತವಾದ ಘೋರವಾದ ರೂಪವನ್ನು ನಿಮಗೆ ಕೊಡುವೆನು. ಆ ರೂಪದ ಜೊತೆಯಲ್ಲಿ ಪೂಜಿತರಾಗಿ ನೀವು ಸುಖವಾಗಿ ವಾಸಮಾಡಿ.
ಮಾರ್ಕಂಡೇಯಃ
ತತಃ ಶರೀರಾತ್ ಸ್ಕಂದಸ್ಯ ಪುರುಷಃ ಪಾವಕಪ್ರಭಃ |
ಭೋಕ್ತುಂ ಪ್ರಜಾಃ ಸ ಮರ್ತ್ಯಾನಾಂ ನಿಷ್ಪಪಾತ ಮಹಾಪ್ರಭಃ ॥24॥
ಮಾರ್ಕಂಡೇಯ ಆಗ ಸ್ಕಂದನ ಶರೀರದಿಂದ ಅಗ್ನಿಯ ಕಾಂತಿಯುಳ್ಳ ಒಬ್ಬ ಪುರುಷನು ಮಹಾಪ್ರಭೆಯುಳ್ಳವನು ಮನುಷ್ಯರ ಪ್ರಜೆಗಳನ್ನು ತಿನ್ನಲು ಹೊರಗೆ ಬಂದನು.
ಅಪತತ್ ಸಹಸಾ ಭೂಮೌ ವಿಸಂಜ್ಞೋಽಥ ಕ್ಷುಧಾಽರ್ದಿತಃ |
ಸ್ಕಂದೇನ ಸೋಽಭ್ಯನುಜ್ಞಾತೋ ರೌದ್ರರೂಪೋಽಭವದ್ ಗ್ರಹಃ ॥25॥
ಅವನು ಹಸಿವಿನಿಂದ ಬಳಲಿ ಪ್ರಜ್ಞಾಶೂನ್ಯನಾಗಿ ಇದ್ದಕ್ಕಿದ್ದಂತೆಯೇ ಭೂಮಿಯ ಮೇಲೆ ಬಿದ್ದನು. ಅನಂತರ ಸ್ಕಂದನ ಅನುಮತಿಯನ್ನು ಪಡೆದು ಅವನೊಂದು ಘೋರರೂಪದ ಗ್ರಹವಾದನು.
ಸ್ಕಂದಾಪಸ್ಮಾರಮಿತ್ಯಾಹುರ್ಗ್ರಹಂ ತಂ ದ್ವಿಜಸತ್ತಮಾಃ |
ವಿನತಾ ತು ಮಹಾರೌದ್ರಾ ಕಥ್ಯತೇ ಶಕುನಿಗ್ರಹಃ ॥26॥
ದ್ವಿಜಶ್ರೇಷ್ಠರು ಆ ಗ್ರಹವನ್ನು ಸ್ಕಂದಾಪಸ್ಮಾರಗ್ರಹ ಎಂದು ಕರೆಯುತ್ತಾರೆ. ಮಹಾಭಯಂಕರಳಾದ ವಿನತೆಯನ್ನು ಶಕುನಿಗ್ರಹ ಎಂದು ಕರೆಯುತ್ತಾರೆ.
ಪೂತನಾಂ ರಾಕ್ಷಸೀಂ ಪ್ರಾಹುಸ್ತಂ ವಿದ್ಯಾತ್ ಪೂತನಾಗ್ರಹಮ್ |
ಕಷ್ಟಾ ದಾರುಣರೂಪೇಣ ಘೋರರೂಪಾ ನಿಶಾಚರೀ ॥27॥
ಪೂತನಿಯನ್ನು ರಾಕ್ಷಸಿ ಎಂದು ಹೇಳುತ್ತಾರೆ. ಅವಳನ್ನು ಪೂತನಾಗ್ರಹವೆಂದು ತಿಳಿಯಬೇಕು. ಅವಳು ಕಷ್ಟಕರವಾದ ದಾರುಣವಾದ ಘೋರರೂಪವನ್ನು ಧರಿಸಿದ ರಾಕ್ಷಸಿ.
ಪಿಶಾಚೀ ದಾರುಣಾಕಾರಾ ಕಥ್ಯತೇ ಶೀತಪೂತನಾ |
ಗರ್ಭಾನ್ ಸಾ ಮಾನುಷೀಣಾಂ ತು ಹರತೇ ಘೋರದರ್ಶನಾ ॥28॥
ದಾರುಣಾಕಾರವನ್ನು ಹೊಂದಿದ ಶೀತಪೂತನಾ ಎಂಬ ಇನ್ನೊಬ್ಬ ಪಿಶಾಚಿ ಇದ್ದಾಳೆ. ನೋಡುವುದಕ್ಕೆ ಘೋರವಾಗಿರುವ ಅವಳು ಮನುಷ್ಯಸ್ತ್ರೀಯರ ಗರ್ಭವನ್ನು ಅಪಹರಿಸುತ್ತಾಳೆ.
ಅದಿತಿಂ ರೇವತೀಂ ಪ್ರಾಹುರ್ಗ್ರಹಸ್ತಸ್ಯಾಸ್ತು ರೈವತಃ |
ಸೋಽಪಿ ಬಾಲಾನ್ ಮಹಾಘೋರೋ ಬಾಧತೇ ವೈ ಮಹಾಪ್ರಭಃ ॥
ಅದಿತಿಗ್ರಹವನ್ನು ರೇವತಿ ಎಂದು ಕರೆಯುತ್ತಾರೆ. ಅವಳ ಮಗನು ರೈವತಗ್ರಹ. ಆ ಮಹಾಘೋರನಾದ ರೈವತನೂ ಸಹ ಮಹಾಕಾಂತಿಯನ್ನು ಹೊಂದಿದವನಾಗಿ ಬಾಲಕರನ್ನು ಬಾಧಿಸುತ್ತಾನೆ.
ದೈತ್ಯಾನಾಂ ಯಾ ದಿತಿರ್ಮಾತಾ ತಾಮಾಹುರ್ಮುಖಮಂಡಿಕಾಮ್ |
ಅತ್ಯರ್ಥಂ ಶಿಶುಮಾಂಸೇನ ಸಂಪ್ರಹೃಷ್ಟಾ ದುರಾಸದಾ ॥30॥
ದೈತ್ಯರ ಮಾತೆಯಾದ ದಿತಿಯಾವಳಿದ್ದಾಳೋ ಅದೇ ಹೆಸರನ್ನು ಧರಿಸಿದ ಸ್ಕಂದ ಪರಿವಾರದವಳೊಬ್ಬಳಿದ್ದಾಳೆ. ಅವಳನ್ನು ಮುಖಮಂಡಿಕಾ ಎಂದು ಕರೆಯುತ್ತಾರೆ. ದುರಾಸದಳಾದ ಅವಳು ಶಿಶುಗಳ ಮಾಂಸದಿಂದ ಬಹಳ ಸಂತೋಷವನ್ನು ಪಡುವವಳು.
ಕುಮಾರಾಶ್ಚ ಕುಮಾರ್ಯಶ್ಚ ಯೇ ಪ್ರೋಕ್ತಾಃ ಸ್ಕಂದಸಂಭವಾಃ |
ತೇಽಪಿ ಗರ್ಭಭುಜಃ ಸರ್ವೇ ಕೌರವ್ಯ ಸುಮಹಾಗ್ರಹಾಃ ॥31॥
ಎಲೈ ಕೌರವ್ಯನೇ, ಸ್ಕಂದನ ಶರೀರದಿಂದ ಉಂಟಾದ ಕುಮಾರರು ಮತ್ತು ಕುಮಾರಿಯರನ್ನು ಏನು ಹೇಳಿದೆನೋ ಅವರೆಲ್ಲರೂ ಗರ್ಭವನ್ನು ತಿನ್ನುವಂತಹ ಕೆಟ್ಟ ಮಹಾಗ್ರಹಗಳು.
ತಾಸಾಮೇವ ತು ಪತ್ನೀನಾಂ ಪತಯಸ್ತೇ ಪ್ರಕೀರ್ತಿತಾಃ |
ಅಜಾಯಮಾನಾನ್ ಗೃಹ್ಣಂತಿ ಬಾಲಕಾನ್ ರೌದ್ರಕರ್ಮಿಣಃ ॥32॥
ಆ ಕುಮಾರರೆಲ್ಲರೂ ಆ ಕುಮಾರಿಯರ ಪತಿಗಳೆಂದು ಹೇಳುತ್ತಾರೆ. ಘೋರಕರ್ಮಿಗಳಾದ ಅವರು ಮಕ್ಕಳು ಹುಟ್ಟುತ್ತಿರುವಾಗಲೇ ಅವರನ್ನು ಹಿಡಿದುಕೊಳ್ಳುತ್ತಾರೆ.
ಗವಾಂ ಮಾತಾ ತು ಯಾ ಪ್ರಾಜ್ಞೈಃ ಕಥ್ಯತೇ ಸುರಭಿರ್ನೃಪ |

ಶಕುನಿಸ್ತಾಮಥಾರುಹ್ಯ ಸಹ ಭುಂಕ್ತೇ ಶಿಶೂನ್ ಭುವಿ ॥33॥
ಗೋವುಗಳ ಮಾತೆಯಾದ ಯಾವ ಸುರಭಿಯು ಪ್ರಾಜ್ಞರಿಂದ ಹೇಳಲ್ಪಡುತ್ತದೆಯೋ ಅದೇ ನಾಮವನ್ನು ಧರಿಸಿದ ಸ್ಕಂದ ಪರಿವಾರದ ಒಂದು ಪಿಶಾಚಿ ಇದೆ. ಶಕುನಿ ಎಂಬ ಪಿಶಾಚನು ಅವಳನ್ನು ಏರಿ ಅವಳ ಜೊತೆಯಲ್ಲಿ ಭೂಮಿಯಲ್ಲಿ ಶಿಶುಗಳನ್ನು ತಿನ್ನುತ್ತಾನೆ.
ಸರಮಾ ನಾಮ ಯಾ ಮಾತಾ ಶುನಾಂ ದೇವೀ ಜನಾಧಿಪ |
ಸಾಽಪಿ ಗರ್ಭಾನ್ ಸಮಾದತ್ತೇ ಮಾನುಷೀಣಾಂ ಸದೈವ ಹಿ ॥34॥
ಎಲೈ ಜನಾಧಿಪನೇ, ಸರಮಾ ಎಂಬ ಸಾರಮೇಯಗಳ ಮಾತೆಯು ದೇವಲೋಕದಲ್ಲಿ ಇರುವಳಷ್ಟೆ? ಅದೇ ಹೆಸರಿನ ಸ್ಕಂದ ಪರಿವಾರಕ್ಕೆ ಸೇರಿದ ಒಬ್ಬ ಪಿಶಾಚಿಯು ಮನುಷ್ಯ ಸ್ತ್ರೀಯರ ಗರ್ಭವನ್ನು ಯಾವಾಗಲೂ ತೆಗೆದುಕೊಂಡು ಹೋಗಿ ತಿನ್ನುತ್ತಾಳೆ.
ಪಾದಪಾನಾಂ ಚ ಯಾ ಮಾತಾ ಕರಂಜನಿಲಯಾ ಹಿ ಸಾ |
ವರದಾ ಸಾ ಹಿ ಸೌಮ್ಯಾ ಚ ನಿತ್ಯಂ ಭೂತಾನುಕಂಪಿನೀ ॥35॥
ವೃಕ್ಷಗಳ ತಾಯಿ ಯಾರು ಇದ್ದಾಳೆಯೋ ಅವಳು ಕರಂಜ ವೃಕ್ಷದಲ್ಲಿ ಇರುತ್ತಾಳೆ. ಅವಳು ದನುವಿನ ಸಮಾನನಾಮವನ್ನು ಹೊಂದಿದವಳು. ಅವಳು ಸೌಮ್ಯಳಾದವಳು ಮತ್ತು ವರವನ್ನು ಕೊಡುವವಳು ಮತ್ತು ಪ್ರಾಣಿಗಳಲ್ಲಿ ಅನುಕಂಪೆ ಉಳ್ಳವಳು.
ಕರಂಜೇ ತಾಂ ನಮಸ್ಯಂತಿ ತಸ್ಮಾತ್ಪುತ್ರಾರ್ಥಿನೋ ನರಾಃ |
ಇಮೇ ತ್ವಷ್ಟಾದಶಾನ್ಯೇ ವೈ ಗ್ರಹಾ ಮಾಂಸಮಧುಪ್ರಿಯಾಃ ॥36॥
ಆದ್ದರಿಂದ ಪುತ್ರಾರ್ಥಿಗಳಾದ ಮನುಷ್ಯರು ಕರಂಜವೃಕ್ಷದಲ್ಲಿ ಅವಳಿಗೆ ನಮಸ್ಕಾರವನ್ನು ಮಾಡುತ್ತಾರೆ. ಇವು ಒಟ್ಟು ಹದಿನೆಂಟು ಗ್ರಹಗಳು. ಮಾಂಸಮದ್ಯ ಪ್ರಿಯವಾದ ಬೇರೆ ಗ್ರಹಗಳೂ ಇವೆ (ಆರುಜನ ಮಾತೆಯರು, ಶಕುನಿ-ಐರಾವತ ಎಂಬ ಎರಡು ಪುರುಷಗ್ರಹ, ಇವು ಎಂಟು. ಸ್ಕಂದನ ಕುಮಾರಿಯರು ಐದು, ಕದ್ರು ಮೊದಲಾದ ಕುಮಾರರು ಐದು, ಹೀಗೆ ಒಟ್ಟು ಹದಿನೆಂಟು. ಇವರೆಲ್ಲರೂ ಮದ್ಯಮಾಂಸಪ್ರಿಯರಾದ ಲೋಕೋಪದ್ರುವಕಾರಿಗಳು).
ದ್ವಿಪಂಚರಾತ್ರಂ ತಿಷ್ಠಂತಿ ಸತತಂ ಸೂತಿಕಾಗೃಹೇ ॥37॥
ಕದ್ರೂಃ ಸೂಕ್ಷ್ಮವಪುರ್ಭೂತ್ವಾ ಗರ್ಭಿಣೀಂ ಪ್ರವಿಶೇತ್ ತದಾ |
ಭುಂಕ್ತೇ ಸಾ ತತ್ರ ತಂ ಗರ್ಭಂ ಸಾ ತು ನಾಗಂ ಪ್ರಸೂಯತೇ ॥38॥
ಸೂತಿಕಾಗೃಹದಲ್ಲಿ ಈ ಹದಿನೆಂಟು ಗ್ರಹಗಳು ಹತ್ತುದಿನಗಳವರೆಗೆ ಯಾವಾಗಲೂ ಇರುತ್ತವೆ. ಕದ್ರೂ ಎಂಬ ಸ್ಕಂದ ಕುಮಾರಿಯು ಸೂಕ್ಷ್ಮವಾದ ಶರೀರವನ್ನು ಧರಿಸಿ ಗರ್ಭಿಣಿಯನ್ನು ಯಾವಾಗ ಪ್ರವೇಶಿಸುತ್ತಾಳೆಯೋ ಆಗ ಅವಳು ಆ ಗರ್ಭವನ್ನು ತಿನ್ನುತ್ತಾಳೆ. ಮತ್ತು ಆ ಗರ್ಭಿಣಿಯು ಸರ್ಪವನ್ನು ಪ್ರಸವಿಸುತ್ತಾಳೆ.
ಗಂಧರ್ವಾಣಾಂ ತು ಯಾ ಮಾತಾ ಸಾ ಗರ್ಭಂ ಗೃಹ್ಯ ಗಚ್ಛತಿ |
ಅಜ್ಞಾತಹರಿಣೀ ಯಾ ತು ಸಾ ಗರ್ಭಂ ವಿಶತಿ ಪ್ರಭೋ |
ತತೋ ವಿಲೀನಗರ್ಭಾ ಸಾ ಮಾನುಷೀ ಭುವಿ ದೃಶ್ಯತೇ ॥38.1॥
ಗಂಧರ್ವರ ಮಾತೆಯ ಸಮಾನನಾಮವುಳ್ಳ ಇನ್ನೊಂದು ಹೆಣ್ಣು ಗ್ರಹವಿದೆ. ಅವಳು ಯಾರಿಗೂ ಗೊತ್ತಾಗದಂತೆ ಗರ್ಭವನ್ನು ತೆಗೆದುಕೊಂಡು ಹೋಗುವವಳು. ಅವಳು ಗರ್ಭವನ್ನು ಪ್ರವೇಶಮಾಡಿ ತೆಗೆದುಕೊಂಡು ಹೋಗುತ್ತಾಳೆ. ಅನಂತರ ಮನುಷ್ಯರ ಗರ್ಭವು ವಿಲೀನವಾಯಿತು ಎಂದು ಲೋಕದಲ್ಲಿ ಕಂಡುಬರುತ್ತದೆ.
ಯಾ ಜನಿತ್ರೀ ತ್ವಪ್ಸರಸಾಂ ಗರ್ಭಮಾಸ್ತೇ ಪ್ರಗೃಹ್ಯ ಸಾ |
ಉಪನಷ್ಟಂ ತತೋ ಗರ್ಭಂ ಕಥಯಂತಿ ಮನೀಷಿಣಃ ॥39॥
ಅಪ್ಸರೆಯರ ತಾಯಿಯ ನಾಮವುಳ್ಳ ಒಂದು ಸ್ತ್ರೀಗ್ರಹವು ಗರ್ಭವನ್ನು ಹಿಡಿದುಕೊಂಡು ಒಳಗೇ ಕುಳಿತಿರುತ್ತದೆ. ಆಗ ಜ್ಞಾನಿಗಳು ಗರ್ಭವು ಒಳಗೇ ನಷ್ಟವಾಯಿತು ಎಂದು ಹೇಳುತ್ತಾರೆ.
ಲೋಹಿತಸ್ಯೋದಧೇಃ ಕನ್ಯಾ ಧಾತ್ರೀ ಸ್ಕಂದಸ್ಯ ಸಾ ಸ್ಮೃತಾ |
ಲೋಹಿತಾಯನಿರಿತ್ಯೇವಂ ಕದಂಬೇ ಸಾ ಹಿ ಪೂಜ್ಯತೇ ॥40॥
ಲೋಹಿತ ಸಮುದ್ರನ ಕನ್ಯೆಯಾದ ಸ್ಕಂದನ ಧಾತ್ರಿಯಾದ ಯಾವ ಗ್ರಹವಿದೆಯೋ ಅವಳನ್ನು ಲೋಹಿತಾಯನಿ ಎಂದು ಕರೆಯುತ್ತಾರೆ. ಅವಳು ಕದಂಬ ವೃಕ್ಷದಲ್ಲಿ ಪೂಜಿಸಲ್ಪಡುತ್ತಾಳೆ.
ಪುರುಷೇಷು ಯಥಾ ರುದ್ರಸ್ತಥಾಽಽರ್ಯಾ ಪ್ರಮದಾಸ್ವಪಿ |
ಆರ್ಯಾ ಮಾತಾ ಕುಮಾರಸ್ಯ ಪೃಥಕ್ಕಾಮಾರ್ಥಮಿಜ್ಯತೇ ॥41॥
ಪುರುಷರಿಗೆ ಹೇಗೆ ರುದ್ರನು ಇಷ್ಟಾರ್ಥಪ್ರದನೋ ಹಾಗೆ ಸ್ತ್ರೀಯರಿಗೂ ಸ್ಕಂದನ ತಾಯಿಯಾದ ಆರ್ಯೆಯು ಇಷ್ಟಾರ್ಥಪ್ರದಳು. ತಮ್ಮ ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಅವಳನ್ನು ಪೂಜಿಸುತ್ತಾರೆ.
ಏವಮೇತೇ ಕುಮಾರಾಣಾಂ ಮಯಾ ಪ್ರೋಕ್ತಾ ಮಹಾಗ್ರಹಾಃ |
ಯಾವತ್ ಷೋಡಶ ವರ್ಷಾಣಿ ಶಿಶೂನಾಂ ಹ್ಯಶಿವಾಸ್ತದಾ ॥42॥
ಹೀಗೆ ನಾನು ಕುಮಾರನ ಪರಿವಾರಕ್ಕೆ ಸೇರಿದ ಈ ಮಹಾಗ್ರಹಗಳನ್ನು ಹೇಳಿದ್ದೇನೆ. ಈ ಗ್ರಹಗಳೆಲ್ಲವೂ ಹದಿನಾರು ವರ್ಷವಾಗುವವರೆಗೆ ಮಕ್ಕಳಿಗೆ ಅಮಂಗಲಪ್ರದವಾದವುಗಳು.
ಯೇ ಚ ಮಾತೃಗಣಾಃ ಪ್ರೋಕ್ತಾಃ ಪುರುಷಾಶ್ಚೈವ ಯೇ ಗ್ರಹಾಃ |
ಸರ್ವೇ ಸ್ಕಂದಗ್ರಹಾ ನಾಮ ಜ್ಞೇಯಾ ನಿತ್ಯಂ ಶರೀರಿಭಿಃ ॥43॥
ಯಾವ ಮಾತೃಗಣಗಳನ್ನು ಹೇಳಿದ್ದೇನೆಯೋ ಮತ್ತು ಯಾವ ಪುರುಷಗ್ರಹಗಳನ್ನು ಹೇಳಿದ್ದೇನೆಯೋ ಅವೆಲ್ಲವನ್ನೂ ಮನುಷ್ಯರು ಸ್ಕಂದಗ್ರಹಗಳೆಂದೇ ತಿಳಿಯಬೇಕು.
ತೇಷಾಂ ಪ್ರಶಮನಂ ಕಾರ್ಯಂ ಸ್ನಾನಂ ಧೂಪಮಥಾರ್ಚನಮ್ |

ಬಲಿಕರ್ಮೋಽಪಹಾರಾಶ್ಚ ಸ್ಕಂದಸ್ಯೇಜ್ಯಾ ವಿಶೇಷತಃ ॥44॥
ಅವುಗಳನ್ನು ಅಭಿಷೇಕ, ಧೂಪ, ಅರ್ಚನೆ, ಅಂಜನ, ನೈವೇದ್ಯ ಮತ್ತು ಉಪಹಾರಗಳಿಂದ ಪೂಜಿಸಿ ಅವುಗಳನ್ನು ಶಮನಗೊಳಿಸಬೇಕು. ಅವುಗಳ ಪೂಜೆಯೇ ವಿಶೇಷವಾಗಿ ಸ್ಕಂದನ ಪೂಜೆ.
ಏವಮಭ್ಯರ್ಚಿತಾಃ ಸರ್ವೇ ಪ್ರಯಚ್ಛಂತಿ ಶುಭಂ ನೃಣಾಮ್ ।
ಆಯುರ್ವೀರ್ಯಂ ಚ ರಾಜೇಂದ್ರ ಸಮ್ಯಕ್ಪೂಜಾನಮಸ್ಕೃತಾಃ ॥45॥
ಎಲೈ ರಾಜೇಂದ್ರನೇ, ಹೀಗೆ ಚೆನ್ನಾಗಿ ಪೂಜೆಯನ್ನು ಮಾಡಿ ನಮಸ್ಕರಿಸಿದರೆ ಆ ಎಲ್ಲಾ ಗ್ರಹಗಳು ಮನುಷ್ಯರಿಗೆ ಆಯುಸ್ಸು, ವೀರ್ಯ ಮೊದಲಾದ ಶುಭಫಲ ಕೊಡುತ್ತವೆ.
ಊರ್ಧ್ವಂ ತು ಷೋಡಶಾದ್ ವರ್ಷಾದ್ ಯೇ ಭವಂತಿ ಗ್ರಹಾ ನೃಣಾಮ್।
ತಾನಹಂ ಸಂಪ್ರವಕ್ಷ್ಯಾಮಿ ನಮಸ್ಕೃತ್ಯ ಮಹೇಶ್ವರಮ್ ॥46॥
ಹದಿನಾರುವರ್ಷಗಳು ಕಳೆದ ಮೇಲೆ ಮನುಷ್ಯರಿಗೆ ಯಾವ ಗ್ರಹವು ಉಂಟಾಗುತ್ತವೆಯೋ ಅವುಗಳನ್ನು ನಾನು ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ ಹೇಳುವೆನು.
ಯಃ ಪಶ್ಯತಿ ನರೋ ದೇವಾನ್ಜಾಗ್ರದ್ವಾ ಶಯಿತೋಽಪಿ ವಾ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ತಂ ತು ದೇವಗ್ರಹಂ ವಿದುಃ ॥47॥
ಯಾವ ಮನುಷ್ಯರು ಜಾಗ್ರುದವಸ್ಥೆಯಲ್ಲಾಗಲೀ ಅಥವಾ ಸ್ವಪ್ನಾವಸ್ಥೆಯಲ್ಲಾಗಲೀ ದೇವತೆಯನ್ನು ನೋಡಿ ಕ್ಷಿಪ್ರವಾಗಿ ಹುಚ್ಚನ್ನು ಹೊಂದುತ್ತಾನೆಯೋ ಅದನ್ನು ದೇವಗ್ರಹವೆಂದು ಕರೆಯುತ್ತಾನೆ.
ಆಸೀನಶ್ಚ ಶಯಾನಶ್ಚ ಯಃ ಪಶ್ಯತಿ ನರಃ ಪಿತ್ರೂನ್ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಸ ಜ್ಞೇಯಸ್ತು ಪಿತೃಗ್ರಹಃ ॥48॥
ಕುಳಿತಿರುವಾಗ ಅಥವಾ ಮಲಗಿರುವಾಗ ಯಾವ ಮನುಷ್ಯನು (ಮೃತರಾದ) ಪಿತೃಗಳನ್ನು ನೋಡಿ ಶೀಘ್ರದಲ್ಲಿ ಹುಚ್ಚನ್ನು ಹೊಂದುತ್ತಾನೆಯೋ ಆ ಗ್ರಹವನ್ನು ಪಿತೃಗ್ರಹ ಎಂದು ಕರೆಯುತ್ತಾರೆ.
ಅವಮನ್ಯತಿ ಯಃ ಸಿದ್ಧಾನ್ಕ್ರುಧ್ಯತ್ಯಭಿಶ ಪತ್ಯಪಿ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಜ್ಞೇಯಃ ಸಿದ್ಧಗ್ರಹಸ್ತು ಸಃ ॥49॥
ಯಾರು ಸಿದ್ಧಪುರುಷರನ್ನು ಅವಮಾನ ಮಾಡಿ ಅವರ ಮೇಲೆ ಕೋಪಗೊಂಡು ಅವರನ್ನು ಶಪಿಸುತ್ತಾನೆಯೋ ಮತ್ತು ಸದ್ಯದಲ್ಲಿಯೇ ಉನ್ಮಾದವನ್ನು ಹೊಂದುತ್ತಾನೆಯೋ ಅದಕ್ಕೆ ಕಾರಣವಾದ ಗ್ರಹಕ್ಕೆ ಸಿದ್ಧಗ್ರಹ ಎಂದು ಹೆಸರು.
ಯಸ್ಯ ದೋಷೈಃ ಪ್ರಕುಪಿತಂ ಚಿತ್ತಂ ಮುಹ್ಯತಿ ದೇಹಿನಃ ॥49.1॥
ಆ ಸಿದ್ಧಗ್ರಹದ ಕೋಪಕ್ಕೆ ತುತ್ತಾದ ಮನುಷ್ಯನಿಗೆ ಆ ದೋಷದಿಂದ ಚಿತ್ತಭ್ರಾಂತಿ ಉಂಟಾಗುತ್ತದೆ.
ಉಪಘ್ರಾತಿ ಚ ಯೋ ಗಂಧಾನ್ರಸಾಂಶ್ಚಾಪಿ ಪೃಥಗ್ವಿಧಾನ್ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಸ ಜ್ಞೇಯೋ ರಾಕ್ಷಸೋ ಗ್ರಹಃ ॥50॥
ಯಾವನು ಅನೇಕ ವಿಧವಾದ ಗಂಧಗಳನ್ನು ಆಘ್ರಾಣಿಸಿ ರಸಗಳನ್ನು ಸೇವಿಸಿ ತಕ್ಷಣದಲ್ಲಿ ಉನ್ಮಾದವನ್ನು ಹೊಂದುತ್ತಾನೆಯೋ ಅದಕ್ಕೆ ಕಾರಣವಾದ ಗ್ರಹವನ್ನು ರಾಕ್ಷಸಗ್ರಹ ಎಂದು ತಿಳಿಯಬೇಕು.
ಗಂಧರ್ವಾಶ್ಚಾಪಿ ಯಂ ದಿವ್ಯಾಃ ಸಂವಿಶಂತಿ ನರಂ ಭುವಿ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಗ್ರಹೋ ಗಾಂಧರ್ವ ಏವ ಸಃ ॥51॥
ದೇವಲೋಕದ ಗಂಧರ್ವರು ಭೂಮಿಯಲ್ಲಿರುವ ಮನುಷ್ಯರನ್ನು ಪ್ರವೇಶ ಮಾಡುತ್ತಾರೆ. ಅನಂತರ ಮನುಷ್ಯರು ಕ್ಷಿಪ್ರವಾಗಿ ಉನ್ಮಾದವನ್ನು ಹೊಂದುತ್ತಾನೆ. ಅದನ್ನು ಗಾಂಧರ್ವಗ್ರಹ ಎಂದು ತಿಳಿಯಬೇಕು.
ಅಧಿರೋಹಂತಿ ಯಂ ನಿತ್ಯಂ ಪಿಶಾಚಾಃ ಪುರುಷಂ ಕ್ವಚಿತ್ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಗ್ರಹಃ ಪೈಶಾಚ ಏವ ಸಃ ॥52॥
ಪಿಶಾಚಗಳು ನಿತ್ಯವೂ ಒಬ್ಬನ ಮೈಮೇಲೆ ಬಂದು ಅವನು ಉನ್ಮಾದಕ್ಕೆ ಒಳಗಾದರೆ ಅದನ್ನು ಪೈಶಾಚಗ್ರಹ ಎಂದು ಕರೆಯಬೇಕು.
ಆವಿಶಂತಿ ಚ ಯಂ ಯಕ್ಷಾಃ ಪುರುಷಂ ಕಾಲಪರ್ಯಯೇ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಜ್ಞೇಯೋ ಯಕ್ಷಗ್ರಹಸ್ತು ಸಃ ॥52.1॥
ಯಕ್ಷರು ಪುರುಷರನ್ನು ಪ್ರವೇಶಿಸಿ ಪುರುಷನಿಗೆ ಶೀಘ್ರವಾಗಿ ಉನ್ಮಾದ ಉಂಟಾದರೆ ಅದನ್ನು ಯಕ್ಷಗ್ರಹವೆಂದು ತಿಳಿಯಬೇಕು.
ಯಸ್ಯ ದೋಷೈಃ ಪ್ರಕೃಪಿತಂ ಚಿತ್ತಂ ಮುಹ್ಯತಿ ದೇಹಿನಃ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಸಾಧನಂ ತಸ್ಯ ಶಾಸ್ತ್ರತಃ ॥53॥
ಯಾವ ಮನುಷ್ಯನು ದೋಷಗಳಿಗೆ ಒಳಗಾಗಿ ಕೋಪವನ್ನು ಮತ್ತು ಚಿತ್ತಭ್ರಮೆಯನ್ನು ಹೊಂದಿ ಕ್ಷಿಪ್ರವಾಗಿ ಉನ್ಮಾದವನ್ನು ಹೊಂದುತ್ತಾನೆಯೋ ಅದಕ್ಕೆ ದುಷ್ಟಪಿಶಾಚಿಯು ಕಾರಣ ಎಂದು ಶಾಸ್ತ್ರದಿಂದ ತಿಳಿಯಬೇಕು.
ವೈಕ್ಲವ್ಯಾಚ್ಚ ಭಯಾಚ್ಚೈವ ಘೋರಾಣಾಂ ಚಾಪಿ ದರ್ಶನಾತ್ ।
ಉನ್ಮಾದ್ಯತಿ ಸ ತು ಕ್ಷಿಪ್ರಂ ಸತ್ವಂ ತಸ್ಯ ತು ಸಾಧನಮ್ ॥54॥
ಗಾಬರಿಯಿಂದಲೂ, ಭಯದಿಂದಲೂ, ಘೋರಪ್ರಾಣಿಗಳ ದರ್ಶನದಿಂದಲೂ ಉನ್ಮಾದ ಉಂಟಾದರೆ ಅದಕ್ಕೆ ಕಾರಣವಾದುದು ಒಂದು ದುಷ್ಟಪಿಶಾಚಿ ಎಂದು ತಿಳಿಯಬೇಕು. ಧೈರ್ಯವೇ ಅದಕ್ಕೆ ಪರಿಹಾರ.
ಕಶ್ಚಿತ್ ಕ್ರೀಡಿತುಕಾಮೋ ವೈ ಭೋಕ್ತುಕಾಮಸ್ತಥಾಽಪರಃ ।
ಅಭಿಕಾಮಸ್ತಥೈವಾನ್ಯ ಇತ್ಯೇಷ ತ್ರಿವಿಧೋ ಗ್ರಹಃ ॥55॥
ಕೆಲವು ಗ್ರಹಗಳು ಆಟವಾಡಲು ಬಯಸುತ್ತವೆ. ಕೆಲವು ಊಟಮಾಡಲು ಬಯಸುತ್ತವೆ. ಇನ್ನು ಕೆಲವು ಕಂಡದ್ದನ್ನೆಲ್ಲಾ ಬಯಸುತ್ತವೆ.

ಹೀಗೆ ಗ್ರಹಗಳು ಮೂರುವಿಧ.
ಯಾವತ್ಸಪ್ತತಿವರ್ಷಾಣಿ ಭವಂತ್ಯೇತೇ ಗ್ರಹಾ ನೃಣಾಮ್ |
ಅತಃ ಪರಂ ದೇಹಿನಾಂ ತು ಗ್ರಹತುಲ್ಯೋ ಭವೇಜ್ಜ್ವರಃ ||56||
ಮನುಷ್ಯರಿಗೆ ಎಪ್ಪತ್ತು ವರ್ಷಗಳಾಗುವವರೆಗೆ ಈ ಗ್ರಹಗಳು ಪ್ರಾಪ್ತವಾಗುತ್ತವೆ. ಅಲ್ಲಿಂದ ಮುಂದಕ್ಕೆ ಗ್ರಹದಂತೆ ಪೀಡಿಸುವ ಜ್ವರವು ಮನುಷ್ಯರಿಗೆ ಉಂಟಾಗುತ್ತದೆ.
ಅಪ್ರಕೀರ್ಣೇಂದ್ರಿಯಂ ದಾಂತಂ ಶುಚಿಂ ನಿತ್ಯಮತಂದ್ರಿತಮ್ |
ಆಸ್ತಿಕಂ ಶ್ರದ್ದಧಾನಂ ಚ ವರ್ಜಯಂತಿ ಸದಾ ಗ್ರಹಾಃ ||57||
ಯಾವ ಮನುಷ್ಯನು ತನ್ನ ಉಪಸ್ಥೇಂದ್ರಿಯ ಶುದ್ಧಿಯನ್ನು ಹೊಂದಿ ದಾಂತನೂ, ಶುಚಿಯೂ, ನಿತ್ಯವೂ ಜಾಗರೂಕನೂ, ಆಸ್ತಿಕನೂ ಮತ್ತು ಶ್ರದ್ಧಾಳುವೂ ಆಗಿದ್ದಾನೆಯೋ ಅಂತಹ ಮನುಷ್ಯನನ್ನು ಎಲ್ಲಾ ಗ್ರಹಗಳು ಯಾವಾಗಲೂ ವರ್ಜಿಸುತ್ತವೆ.
ಇತ್ಯೇಷ ತೇ ಗ್ರಹೋದ್ದೇಶೋ ಮಾನುಷಾಣಾಂ ಪ್ರಕೀರ್ತಿತಃ |
ನ ಸ್ಪೃಶಂತಿ ಗ್ರಹಾ ಭಕ್ತಾನ್ ನರಾನ್ ದೇವೇ ಮಹೇಶ್ವರೇ ||58||
ಹೀಗೆ ನಾನು ನಿನಗೆ ಮನುಷ್ಯರಿಗೆ ಗ್ರಹಗಳಿಂದ ಉಂಟಾಗುವ ಬಾಧೆಗಳನ್ನೆಲ್ಲಾ ತಿಳಿಸಿದ್ದೇನೆ. ಆದರೆ ಯಾರು ಮಹೇಶ್ವರನಲ್ಲಿ ಭಕ್ತಿಯನ್ನು ಹೊಂದಿದ್ದಾರೆಯೋ ಅಂತಹ ಭಕ್ತರನ್ನು ಗ್ರಹಗಳು ಮುಟ್ಟುವುದಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನವಿಂಶತ್ಯಧಿಕದ್ವಿಶತಶತತಮೋಽಧ್ಯಾಯಃ ||
||ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ಸಪ್ತಮೋಽಧ್ಯಾಯಃ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಹತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು
* * * *
ಇನ್ನೂರ ಇಪ್ಪತ್ತನೆಯ ಅಧ್ಯಾಯ
ಸ್ಕಂದನಿಂದ ಸ್ವಾಹಾದೇವಿಗೆ ಅಭೀಷ್ಟದಾನ.
ಬ್ರಹ್ಮದೇವರಿಂದ ಸ್ಕಂದನ ಜನ್ಮವೃತ್ತಾಂತ ಕಥನ.
ಮಾರ್ಕಂಡೇಯಃ
ಯದಾ ಸ್ಕಂದೇನ ಮಾತೄಣಾಮೇವಮೇತತ್ ಪ್ರಿಯಂ ಕೃತಮ್ |
ಅಥೈನಮಬ್ರವೀತ್ ಸ್ವಾಹಾ ಮಮ ಪುತ್ರಸ್ತ್ವಮೌರಸಃ ||1||
ಇಚ್ಛಾಮ್ಯಹಂ ತ್ವಯಾ ದತ್ತಾಂ ಪ್ರೀತಿಂ ಪರಮದುರ್ಲಭಾಮ್ |
ತಾಮಮ್ರವೀತ್ ತತಃ ಸ್ಕಂದಃ ಪ್ರೀತಿಮಿಚ್ಛಸಿ ಕೀದೃಶೀಮ್ ||2||
ಮಾರ್ಕಂಡೇಯ ಯಾವಾಗ ಸ್ಕಂದನು ಮಾತೆಯರಿಗೆ ಈ ರೀತಿಯಲ್ಲಿ ಪ್ರಿಯವನ್ನು ಮಾಡಿದನೋ ಆಗ ಸ್ವಾಹಾದೇವಿಯು ಅವನನ್ನು ಕುರಿತು ನೀನು ನನ್ನ ಔರಸ ಪುತ್ರ. ನೀನು ಕೊಡುವ ಪರಮ ದುರ್ಲಭವಾದ ಪ್ರೀತಿಯನ್ನು ಅಪೇಕ್ಷಿಸುತ್ತೇನೆ ಎಂದು ಹೇಳಿದಳು.
ಸ್ಕಂದನು ಅವಳನ್ನು ಕುರಿತು ನೀನು ಎಂತಹ ಪ್ರೀತಿಯನ್ನು ಇಚ್ಛಿಸುತ್ತೀಯೆ ಎಂದು ಕೇಳಿದನು.
ಸ್ವಾಹಾ
ದಕ್ಷಸ್ಯಾಹಂ ಪ್ರಿಯಾ ಕನ್ಯಾ ಸ್ವಾಹಾ ನಾಮ ಮಹಾಭುಜ |
ಬಾಲ್ಯಾತ್ ಪ್ರಭೃತಿ ನಿತ್ಯಂ ಚ ಜಾತಕಾಮಾ ಹುತಾಶನೇ ||3||
ನ ಸ ಮಾಂ ಕಾಮಿನೀಂ ಪುತ್ರ ಸಮ್ಯಗ್ ಜಾನಾತಿ ಪಾವಕಃ |
ಇಚ್ಛಾಮಿ ಶಾಶ್ವತಂ ವಾಸಂ ವಸ್ತುಂ ಪುತ್ರ ಸಹಾಗ್ನಿನಾ ||4||
ಸ್ವಾಹಾ ಮಹಾಭುಜನೇ, ನಾನು ದಕ್ಷಪ್ರಜಾಪತಿಯ ಪ್ರೀತಿಯ ಮಗಳು. ನನ್ನ ಹೆಸರು ಸ್ವಾಹಾ ಎಂದು. ನಾನು ಬಾಲ್ಯದಿಂದಲೂ ಯಾವಾಗಲೂ ಅಗ್ನಿಯನ್ನೇ ಕಾಮಿಸುತ್ತಿದ್ದೇನೆ. ಎಲೈ ಪುತ್ರನೇ, ಅಗ್ನಿಯು ನಾನು ಅವನನ್ನು ಕಾಮಿಸುತ್ತಿದ್ದೇನೆ ಎಂಬ ವಿಷಯವನ್ನು ಸರಿಯಾಗಿ ತಿಳಿದಿಲ್ಲ. ಪುತ್ರನೇ, ನಾನು ಅಗ್ನಿಯ ಜೊತೆಯಲ್ಲಿ ಶಾಶ್ವತವಾಗಿ ವಾಸವನ್ನು ಮಾಡಲು ಬಯಸುತ್ತೇನೆ.
ಸ್ಕಂದಃ
ಹವ್ಯಂ ಕವ್ಯಂ ಚ ಯತ್ಕಿಂಚಿದ್ ದ್ವಿಜಾನಾಂ ಮಂತ್ರಸಂಸ್ತುತಮ್ |
ಹೋಷ್ಯಂತ್ಯಗ್ನೌ ಸದಾ ದೇವಿ ಸ್ವಾಹೇತ್ಯುಕ್ತ್ವಾ ಸಮುದ್ಧೃತಮ್ ||5||
ಅದ್ಯಪ್ರಭೃತಿ ದಾಸ್ಯಂತಿ ಸುವೃತ್ತಾಃ ಸತ್ಪಥೇ ಸ್ಥಿತಾಃ |
ಏವಮಗ್ನಿಸ್ತ್ವಯಾ ಸಾರ್ಧಂ ಸದಾ ವತ್ಸ್ಯತಿ ಶೋಭತೇ ||6||
ಸ್ಕಂದ ಎಲೌ ದೇವಿಯೇ, ಬ್ರಾಹ್ಮಣರು ಮಂತ್ರಸಂಯುತವಾಗಿ ಯಾವ ಹವ್ಯಕವ್ಯಗಳನ್ನು ಅಗ್ನಿಯಲ್ಲಿ ಹೋಮಿಸಲು ತೆಗೆದುಕೊಳ್ಳುತ್ತಾರೆಯೋ ಅದನ್ನು ಒಳ್ಳೆಯ ನಡತೆಯುಳ್ಳ ಅವರು ಸ್ವಾಹಾ ಎಂದು ಹೇಳಿಯೇ ಈ ದಿನದಿಂದ ಕೊಡುವರು.
ಶೋಭನೆಯೇ, ಈ ರೀತಿಯಲ್ಲಿ ಅಗ್ನಿಯು ಸದಾ ನಿನ್ನ ಜೊತೆಯಲ್ಲಿ ವಾಸಮಾಡುವನು.
ಮಾರ್ಕಂಡೇಯಃ
ಏವಮುಕ್ತಾ ತತಃ ಸ್ವಾಹಾ ತುಷ್ಟಾ ಸ್ಕಂದೇನ ಪೂಜಿತಾ |
ಪಾವಕೇನ ಸಮಾಯುಕ್ತಾ ಭರ್ತ್ರಾ ಸ್ಕಂದಮಪೂಜಯತ್ |
ತತೋ ಬ್ರಹ್ಮಾ ಮಹಾಸೇನಂ ಪ್ರಜಾಪತಿರಥಾಬ್ರವೀತ್ ||7||

ಮಾರ್ಕಂಡೇಯ ಹೀಗೆ ಸ್ಕಂದನಿಂದ ಹೇಳಲ್ಪಟ್ಟು ಪೂಜಿಸಲ್ಪಟ್ಟ ಸ್ವಾಹಾದೇವಿಯು ಪತಿಯಾದ ಅಗ್ನಿಯಿಂದ ಸಹಿತಳಾಗಿ ಸ್ಕಂದನನ್ನು ಪೂಜಿಸಿದಳು. ಅನಂತರ ಪ್ರಜಾಪತಿಗಳಾದ ಬ್ರಹ್ಮದೇವರು ಮಹಾಸೇನನನ್ನು ಕುರಿತು ಹೇಳಿದರು.
ಅಭಿಗಚ್ಛ ಮಹಾದೇವಂ ಪಿತರಂ ತ್ರಿಪುರಾರ್ದನಮ್ |
ರುದ್ರೇಣಾಗ್ನಿಂ ಸಮಾವಿಶ್ಯ ಸ್ವಾಹಾಮಾವಿಶ್ಯ ಚೋಮಯಾ ॥8॥
ಹಿತಾರ್ಥಂ ಸರ್ವಲೋಕಾನಾಂ ಜಾತಸ್ತ್ವಮಪರಾಜಿತಃ ॥9॥
ನಿನ್ನ ತಂದೆಯಾದ ತ್ರಿಪುರಾರ್ದನನಾದ ಮಹಾದೇವನ ಬಳಿಗೆ ಹೋಗು. ರುದ್ರನು ಅಗ್ನಿಯನ್ನು ಮತ್ತು ಉಮಾದೇವಿಯು ಸ್ವಾಹಾದೇವಿಯನ್ನು ಆವೇಶ ಮಾಡಿ ಸರ್ವಲೋಕಗಳ ಹಿತಕ್ಕಾಗಿ ಅಪರಾಜಿತನಾದ ನಿನ್ನನ್ನು ಪಡೆದಿದ್ದಾರೆ.
ಉಮಾಯೋನ್ಯಾಂ ಚ ರುದ್ರೇಣ ಶುಕ್ರಂ ಸಿಕ್ತಂ ಮಹಾತ್ಮನಾ |
ಅಸ್ಮಿನ್ ಗಿರೌ ನಿಪತಿತಂ ಮಿಂಜಿಕಾಮಿಂಜಿಕಂ ಯತಃ ॥10॥
ಮಿಥುನಂ ವೈ ಮಹಾಭಾಗ ತತ್ರ ತದ್ ರುದ್ರಸಂಭವಮ್ |
ಸಂಭೂತಂ ಲೋಹಿತೋದೇ ತು ಶುಕ್ರಶೇಷಮವಾಪತತ್ ॥11॥
ಉಮಾಯೋನಿಯಲ್ಲಿ ಮಹಾತ್ಮನಾದ ರುದ್ರನು ಸೇಕಮಾಡಿದ ವೀರ್ಯವು ಈ ಪರ್ವತದಲ್ಲಿ ಬಿದ್ದಿತು. ಅದರಿಂದ ಮಿಂಜಿಕಾಮಿಂಜಿಕ ಎಂಬ ಅವಳಿ ಮಕ್ಕಳು ಜನಿಸಿದರು. ಎಲೈ ಮಹಾಭಾಗನೇ, ಆ ಮಿಥುನವು ರುದ್ರದೇವರಿಂದ ಜನಿಸಿದುದು. ಲೋಹಿತ ಸಮುದ್ರದಲ್ಲಿ ವೀರ್ಯದ ಇನ್ನೊಂದು ಭಾಗವು ಬಿದ್ದಿತು.
ಸೂರ್ಯರಶ್ಮಿಷು ಚಾಪ್ಯನ್ಯದನ್ಯಚ್ಚಾಪ್ಯಪತದ್ ಭುವಿ |
ಆಸಕ್ತಮನ್ಯದ್ ವೃಕ್ಷೇಷು ತದೇವಂ ಪಂಚಧಾಽಪತತ್ ॥12॥
ತತ್ರೈತೇ ವಿವಿಧಾಕಾರಾ ಗಣಾ ಜ್ಞೇಯಾ ಮನೀಷಿಭಿಃ |
ತವ ಪಾರಿಷದಾ ಘೋರಾ ಯ ಏತೇ ಪಿಶಿತಾಶನಾಃ ॥13॥
ಇನ್ನೊಂದು ಭಾಗವು ಸೂರ್ಯರಶ್ಮಿಗಳಲ್ಲಿಯೂ, ಇನ್ನೊಂದು ಭಾಗವು ಭೂಮಿಯಲ್ಲಿಯೂ ಬಿದ್ದಿತು. ಇನ್ನೊಂದು ಭಾಗವು ವೃಕ್ಷಗಳಲ್ಲಿಯೇ ನಿಂತಿತು. ಹೀಗೆ ರುದ್ರವೀರ್ಯವು ಐದುಭಾಗವಾಗಿ ಬಿದ್ದಿತು. ಆ ಐದುಭಾಗಗಳಿಂದ ನಿನ್ನ ಮಾಂಸಾಶನರಾದ ಘೋರವಾದ ಪಾರಿಶದರ ಗಣಗಳು ಹುಟ್ಟಿದವೆಂದು ವಿವೇಕಿಗಳು ತಿಳಿಯಬೇಕು.
ಮಾರ್ಕಂಡೇಯಃ
ಏವಮಸ್ತ್ವಿತಿ ಚಾಪ್ಯುಕ್ತ್ವಾ ಮಹಾಸೇನೋ ಮಹೇಶ್ವರಮ್ |
ಅಪೂಜಯದಮೇಯಾತ್ಮಾ ಪಿತರಂ ಪಿತೃವತ್ಸಲಃ ॥14॥
ಮಾರ್ಕಂಡೇಯ ಅಮೇಯಾತ್ಮನೂ, ಪಿತೃವತ್ಸಲನೂ ಆದ ಮಹಾಸೇನನು ಹಾಗೆಯೇ ಆಗಲಿ ಎಂದು ಹೇಳಿ ತಂದೆಯಾದ ಮಹೇಶ್ವರನನ್ನು ಪೂಜಿಸಿದನು.
ಅರ್ಕಪುಷ್ಪೈಸ್ತು ತೇ ಪಂಚ ಗಣಾಃ ಪೂಜ್ಯಾ ಧನಾರ್ಥಿಭಿಃ |
ವ್ಯಾಧಿಪ್ರಶಮನಾರ್ಥಂ ಚ ತೇಷಾಂ ಪೂಜಾಂ ಸಮಾಚರೇತ್ ॥15॥
ಧನಾರ್ಥಿಯಾದವರು ಈ ಐದುಗಣಗಳನ್ನು ಅರ್ಕಪುಷ್ಪಗಳಿಂದ ಪೂಜಿಸಬೇಕು. ವ್ಯಾಧಿಪ್ರಶಮನಕ್ಕಾಗಿಯೂ ಕೂಡಿ ಆ ಗಣಗಳನ್ನು ಪೂಜಿಸಬೇಕು.
ಮಿಂಜಿಕಾಮಿಂಜಿಕಂ ಚೈವ ಮಿಥುನಂ ರುದ್ರಸಂಭವಮ್ |
ನಮಸ್ಕಾರ್ಯಂ ಸದೈವೇಹ ಬಾಲಾನಾಂ ಹಿತಮಿಚ್ಛತಾ ॥16॥
ಬಾಲಕರಿಗೆ ಹಿತವನ್ನು ಇಚ್ಛಿಸುವವರು, ರುದ್ರನಿಂದ ಜನಿಸಿದ ಮಿಂಜಿಕಾಮಿಂಜಿಕ ಮಿಥುನಕ್ಕೆ ಯಾವಾಗಲೂ ನಮಸ್ಕಾರವನ್ನು ಮಾಡಬೇಕು.
ಸ್ತ್ರಿಯೋ ಮಾನುಷಮಾಂಸಾದಾ ವೃದ್ಧಿಕಾ ನಾಮ ನಾಮತಃ |
ವೃಕ್ಷೇಷು ಜಾತಾಸ್ತಾ ನಾರ್ಯೋ ನಮಸ್ಕಾರ್ಯಾಃ ಪ್ರಜಾರ್ಥಿಭಿಃ ॥17॥
ವೃಕ್ಷದಲ್ಲಿ ಬಿದ್ದ ರುದ್ರದೇವರ ವೀರ್ಯದಿಂದ ಮನುಷ್ಯಮಾಂಸವನ್ನು ತಿನ್ನುವ ವೃದ್ಧಿಕಾ ಎಂಬ ಹೆಸರಿನ ಸ್ತ್ರೀಯರು ಜನಿಸಿದರು. ಪ್ರಜೆಗಳನ್ನು ಅಪೇಕ್ಷಿಸುವವರು ಅವರಿಗೆ ನಮಸ್ಕಾರ ಮಾಡಬೇಕು.
ಏವಮೇತೇ ಪಿಶಾಚಾನಾಮಸಂಖ್ಯೇಯಾ ಗಣಾಃ ಸ್ಮೃತಾಃ |
ಘಂಟಾಯಾಃ ಸಪತಾಕಾಯಾಃ ಶೃಣು ಮೇ ಸಂಭವಂ ನೃಪ ॥18॥
ಎಲೈ ರಾಜನೇ, ಹೀಗೆ ಈ ಪಿಶಾಚಿಗಳ ಗಣಗಳು ಅಸಂಖ್ಯೇಯವಾಗಿ ಇವೆ ಎಂದು ಹೇಳಲ್ಪಡುತ್ತವೆ. ಘಂಟೆ ಮತ್ತು ಪತಾಕಗಳು ದೊರಕಿದ ರೀತಿಯನ್ನು ಹೇಳುತ್ತೇನೆ ಕೇಳು.
ಐರಾವತಸ್ಯ ಘಂಟೇ ದ್ವೇ ವೈಜಯಂತ್ಯಾವಿತಿ ಶ್ರುತೇ |
ಗುಹಸ್ಯ ತೇ ಸ್ವಯಂ ದತ್ತೇ ಕ್ರಮೇಣಾನಾಯ್ಯ ಧೀಮತಾ ॥19॥
ಐರಾವತದ ಎರಡು ಘಂಟೆಗಳು ವೈಜಯಂತಿ ಎಂದು ಪ್ರಸಿದ್ಧವಾದವು. ಮೇಧಾವಿಯಾದ ಇಂದ್ರನು ತಾನೇ ಅದನ್ನು ತರಿಸಿ ಕ್ರಮವಾಗಿ ಗುಹನಿಗೆ ಕೊಟ್ಟನು.
ಏಕಾ ತತ್ರ ವಿಶಾಖಸ್ಯ ಘಂಟಾ ಸ್ಕಂದಸ್ಯ ಚಾಪರಾ |
ಪತಾಕಾ ಕಾರ್ತ್ತಿಕೇಯಸ್ಯ ವಿಶಾಖಸ್ಯ ಚ ಲೋಹಿತಾ ॥20॥
ಅದರಲ್ಲಿ ಒಂದು ಘಂಟೆಯು ವಿಶಾಖನಿಗೂ, ಇನ್ನೊಂದು ಘಂಟೆಯು ಸ್ಕಂದನಿಗೂ ಸೇರಿತು. ಸ್ಕಂದ ಮತ್ತು ವಿಶಾಖ ಇಬ್ಬರ ಪತಾಕೆಗಳೂ ಕೆಂಪುಬಣ್ಣದವುಗಳೇ ಆಗಿವೆ.

ಯಾನಿ ಕ್ರೀಡನಕಾನ್ಯಸ್ಯ ದೇವೈರ್ದತ್ತಾನಿ ವೈ ತದಾ |
ತೈರೇವ ರಮತೇ ದೇವೋ ಮಹಾಸೇನೋ ಮಹಾಬಲಃ ॥21॥
ಆಗ ದೇವತೆಗಳು ಯಾವ ಕ್ರೀಡಾವಸ್ತುಗಳನ್ನು ತಂದುಕೊಟ್ಟರೋ ಮಹಾಬಲನೂ, ದೇವನೂ ಆದ ಮಹಾಸೇನನು ಅವುಗಳಿಂದಲೇ ಕ್ರೀಡಿಸುತ್ತಾನೆ.
ಸ ಸಂವೃತಃ ಪಿಶಾಚಾನಾಂ ಗಣೈರ್ದೇವಗಣೈಸ್ತಥಾ |
ಶುಶುಭೇ ಕಾಂಚನೇ ಶೈಲೇ ದೀಪ್ಯಮಾನಃ ಶ್ರಿಯಾ ವೃತಃ ॥22॥
ಅವನು ಸ್ವರ್ಣಮಯವಾದ ಪರ್ವತದಲ್ಲಿ ಪಿಶಾಚಿಗಳ ಗಣಗಳಿಂದಲೂ, ದೇವತೆಗಳ ಗಣಗಳಿಂದಲೂ ಸುತ್ತುವರಿಯಲ್ಪಟ್ಟು ಕಾಂತಿಯಿಂದ ಕೂಡಿದವನಾಗಿ ಕಂಗೊಳಿಸಿದನು.
ತೇನ ವೀರೇಣ ಶುಶುಭೇ ಸ ಶೈಲಃ ಶುಭಕಾನನಃ |
ಆದಿತ್ಯೇನೇವಾಂಶುಮತಾ ಮಂದರಶ್ಚಾರುಕಂದರಃ ॥23॥
ಆ ಶೈಲ ಮತ್ತು ಶುಭವಾದ ವನವು ಆ ವೀರನಿಂದ ಅನೇಕ ಗುಹೆಗಳುಳ್ಳ ಮಂದರಪರ್ವತವು ಸೂರ್ಯನಿಂದ ಶೋಭಿಸುವಂತೆ ಶೋಭಿಸಿತು.
ಸಂತಾನಕವನೈಃ ಫುಲ್ಲೈಃ ಕರವೀರವನೈರಪಿ |
ಪಾರಿಜಾತವನೈಶ್ಚೈವ ಜಪಾಶೋಕವನೈಸ್ತಥಾ ॥24॥
ಕದಂಬತರುಷಂಡೈಶ್ಚ ದಿವ್ಯೈರ್ಮೃಗಗಣೈರಪಿ |
ದಿವ್ಯೈಃ ಪಕ್ಷಿಗಣೈಶ್ಚೈವ ಶುಶುಭೇ ಶ್ವೇತಪರ್ವತಃ |
ಸಂತಾನ ವೃಕ್ಷಗಳ ವನದಿಂದಲೂ, ಹೂ ಅರಳಿದ ಕರವೀರ ಪುಷ್ಪಗಳ ವನದಿಂದಲೂ, ಪಾರಿಜಾತ ವನಗಳಿಂದಲೂ, ಜಪಾಶೋಕ ವನಗಳಿಂದಲೂ, ಕದಂಬ ವೃಕ್ಷಗಳಿಂದಲೂ, ದಿವ್ಯವಾದ ಮೃಗಗಣಗಳಿಂದಲೂ, ದಿವ್ಯವಾದ ಪಕ್ಷಿಗಣಗಳಿಂದಲೂ ಆ ಶ್ವೇತಪರ್ವತವು ಶೋಭಿಸಿತು.
ತತ್ರ ದೇವಗಣಾಃ ಸರ್ವೇ ಸರ್ವೇ ದೇವರ್ಷಯಸ್ತಥಾ |
ಮೇಘತೂರ್ಯರವಾಶ್ಚೈವ ಕ್ಷುಬ್ಧೋದಧಿಸಮಸ್ವನಾಃ |
ಅಲ್ಲಿ ಎಲ್ಲಾ ದೇವಗಣಗಳೂ ಮತ್ತು ಎಲ್ಲಾ ದೇವರ್ಷಿಗಳೂ ಇದ್ದರು. ಮೇಘ ಮತ್ತು ವಾದ್ಯಗಳ ನಾದವು ಕ್ಷೋಭೆಗೊಂಡ ಸಮುದ್ರದ ನಾದಕ್ಕೆ ಸಮನಾಗಿದ್ದಿತು.
ತತ್ರ ದಿವ್ಯಾಶ್ಚ ಗಂಧರ್ವಾ ನೃತ್ಯಂತ್ಯಪ್ಸರಸಾಂ ಗಣಾಃ |
ಹೃಷ್ಟಾನಾಂ ತತ್ರ ಭೂತಾನಾಂ ಶ್ರೂಯತೇ ನಿನದೋ ಮಹಾನ್ ॥25॥
ಅಲ್ಲಿ ದಿವ್ಯರಾದ ಗಂಧರ್ವರು ಮತ್ತು ನರ್ತನವನ್ನು ಮಾಡುವ ಅಪ್ಸರೆಯರ ಗಣಗಳೂ ಇದೆ. ಸಂತೋಷದಿಂದ ಪ್ರಾಣಿಗಳು ಕೇಕೆ ಹಾಕುವ ದೊಡ್ಡ ನಾದವು ಅಲ್ಲಿ ಕೇಳಿಬರುತ್ತದೆ.
ಏವಂ ಸೇಂದ್ರಂ ಜಗತ್ಸರ್ವಂ ಶ್ವೇತಪರ್ವತಸಂಸ್ಥಿತಮ್ |
ಪ್ರಹೃಷ್ಟಂ ಪ್ರೇಕ್ಷತೇ ಸ್ಕಂದಂ ನ ಚ ಗ್ಲಾಯತಿ ದರ್ಶನಾತ್ ॥26॥
ಹೀಗೆ ಇಂದ್ರನಿಂದ ಕೂಡಿದ ಎಲ್ಲ ಜಗತ್ತೂ ಶ್ವೇತಪರ್ವತದಲ್ಲಿ ನೆಲೆಸಿ ಸಂತೋಷಗೊಂಡ ಸ್ಕಂದನನ್ನು ಯಾವಾಗಲೂ ನೋಡುತ್ತದೆ. ಅವನ ದರ್ಶನದಿಂದ (ದರ್ಶನದಲ್ಲಿ) ಅವರಿಗೆ ಆಯಾಸವೇ ಉಂಟಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ವಿಂಶತ್ಯಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಾಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ಅಷ್ಟಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತನೆಯ
ಅಧ್ಯಾಯ ಮುಗಿಯಿತು
* * * *
ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯ
ಭದ್ರವಟಕ್ಕೆ ಪಾರ್ವತೀ ಸಹಿತನಾದ ರುದ್ರನ ಮತ್ತು ಉಳಿದ ದೇವತೆಗಳ ಆಗಮನ.
ಮಾರ್ಕಂಡೇಯಃ
ಯದಾಽಭಿಷಿಕ್ತೋ ಭಗವಾನ್ ಸೈನಾಪತ್ಯೇನ ಪಾವಕಿಃ |
ತದಾ ಸಂಪ್ರಸ್ಥಿತಃ ಶ್ರೀಮಾನ್ ಹೃಷ್ಟೋ ಭದ್ರವಟಂ ಹರಃ ॥1॥
ಮಾರ್ಕಂಡೇಯ ಯಾವಾಗ ಪೂಜ್ಯನಾದ ಅಗ್ನಿಪುತ್ರನಾದ ಮಹಾಸೇನನು ಸೇನಾಪತ್ಯದಲ್ಲಿ ಅಭಿಷಿಕ್ತನಾದನೋ ಆಗ ಸಂಪದ್ಯುಕ್ತನಾದ ಶಂಕರನು ಸಂತೋಷದಿಂದ ಭದ್ರವಟಕ್ಕೆ ಹೊರಟನು.
ರಥೇನಾದಿತ್ಯವರ್ಣೇನ ಪಾರ್ವತ್ಯಾ ಸಹಿತಃ ಪ್ರಭುಃ |
ಅನುಯಾತಃ ಸುರೈಃ ಸರ್ವೈಃ ಸಹಸ್ರಾಕ್ಷಪುರೋಗಮೈಃ ॥2॥
ಆದಿತ್ಯವರ್ಣದ ರಥದಲ್ಲಿ ಕುಳಿತು ಪಾರ್ವತಿಯಿಂದ ಸಹಿತನಾದ ಆ ಪ್ರಭುವು ಇಂದ್ರ ಮೊದಲಾದ ಎಲ್ಲ ದೇವತೆಗಳಿಂದಲೂ ಹಿಂಬಾಲಿಸಲ್ಪಟ್ಟನು.
ಸಹಸ್ರಂ ತತ್ರ ಸಿಂಹಾನಾಂ ತಸ್ಮಿನ್ ಯುಕ್ತಂ ರಥೋತ್ತಮೇ |
ಉತ್ಪಪಾತ ದಿವಂ ಶುಭ್ರಂ ಸೂತೇನಾಭಿಪ್ರಚೋದಿತಃ ॥3॥

ಅವನ ಶ್ರೇಷ್ಠವಾದ ರಥದಲ್ಲಿ ಸಹಸ್ರಸಿಂಹಗಳು ಹೂಡಲ್ಪಟ್ಟಿದ್ದವು. ಸೂತನಿಂದ ಪ್ರಚೋದಿತವಾದ ಆ ಶುಭ್ರವಾದ ರಥವು ಆಕಾಶಕ್ಕೆ ಹಾರಿತು.
ತೇ ಪಿಬಂತ ಇವಾಕಾಶಂ ತ್ರಾಸಯಂತಶ್ಚರಾಚರಾನ್ |
ಸಿಂಹಾ ನಭಸ್ಯಗಚ್ಛಂತ ನದಂತಶ್ಚಾರುಕೇಸರಾಃ ॥4॥
ಆ ಮನೋಹರವಾದ ಕೇಸರಗಳಿಂದ ಕೂಡಿದ ಸಿಂಹಗಳು ಆಕಾಶವನ್ನು ಕುಡಿಯುವಂತೆ ಚರಾಚರ ಪ್ರಾಣಿಗಳನ್ನು ಹೆದರಿಸುತ್ತಾ ಆಕಾಶದಲ್ಲಿ ಹೊರಟವು.
ತಸ್ಮಿನ್ ರಥೇ ಪಶುಪತಿಃ ಸ್ಥಿತೋ ಭಾತ್ಯುಮಯಾ ಸಹ |
ವಿದ್ಯುತಾ ಸಹಿತಃ ಸೂರ್ಯಃ ಸೇಂದ್ರಚಾಪೇ ಘನೇ ಯಥಾ ॥5॥
ಆ ರಥದಲ್ಲಿ ಪಾರ್ವತಿಯ ಜೊತೆಯಲ್ಲಿ ಕುಳಿತ ಪಶುಪತಿಯು ವಿದ್ಯುತ್ತಿನಿಂದ ಸಹಿತವಾದ ಸೂರ್ಯನು ಕಾಮನಬಿಲ್ಲಿನಿಂದ ಕೂಡಿದ ಮೋಡದಲ್ಲಿ ಕಂಗೊಳಿಸುವಂತೆ ಕಂಗೊಳಿಸಿದನು.
ಅಗ್ರತಸ್ತಸ್ಯ ಭಗವಾನ್ ಧನೇಶೋ ಗುಹ್ಯಕೈಃ ಸಹ |
ಆಸ್ಥಾಯ ರುಚಿರಂ ಯಾತಿ ಪುಷ್ಪಕಂ ನರವಾಹನಃ ॥6॥
ನರವಾಹನನಾದ ಪೂಜ್ಯನಾದ ಕುಬೇರನು ಅವನ ಮುಂಭಾಗದಲ್ಲಿ ಸುಂದರವಾದ ಪುಷ್ಪಕವಿಮಾನವನ್ನೇರಿ ಗುಹ್ಯಕರ ಜೊತೆಯಲ್ಲಿ ಹೊರಟನು.
ಐರಾವತಂ ಸಮಾಸ್ಥಾಯ ಶಕ್ರಶ್ಚಾಪಿ ಸುರೈಃ ಸಹ |
ಪೃಷ್ಠತೋಽನುಯಯೌ ಯಾಂತಂ ವರದಂ ವೃಷಭಧ್ವಜಮ್ ॥7॥
ಇಂದ್ರನೂ ಸಹ ಐರಾವತವನ್ನೇರಿ ದೇವತೆಗಳ ಜೊತೆಯಲ್ಲಿ ವರದನೂ, ವೃಷಭಧ್ವಜನೂ ಆದ ಪ್ರಯಾಣಿಸುತ್ತಿದ್ದ ಶಂಕರನನ್ನು ಹಿಂಬಾಲಿಸಿದನು.
ಗುಹ್ಯಕೈರ್ಯಕ್ಷರಕ್ಷೋಭಿಃ ಸ್ರಗ್ವಿಭಿಃ ಸಮಲಂಕೃತಃ |
ಯಾತ್ಯಮೋಘೋ ಮಹಾಯಕ್ಷೋ ದಕ್ಷಿಣಂ ಪಕ್ಷಮಾಸ್ಥಿತಃ ॥8॥
ಗುಹ್ಯಕರಿಂದಲೂ, ಮಾಲೆಗಳನ್ನು ಧರಿಸಿ ಅಲಂಕೃತರಾದ ಯಕ್ಷರಕ್ಷ ರಾಕ್ಷಸರುಗಳಿಂದಲೂ ಕೂಡಿದವನಾಗಿ ಮಹಾಯಕ್ಷನಾದ ಅಮೋಘನು ಬಲಭಾಗದಲ್ಲಿ ಹೊರಟನು.
ತಸ್ಯ ದಕ್ಷಿಣತೋ ದೇವಾ ಮರುತಶ್ಚಿತ್ರಯೋಧಿನಃ |
ಗಚ್ಛಂತಿ ವಸುಭಿಃ ಸಾರ್ಧಂ ಸರ್ವತಃ ಪರಿವಾರಿತಃ |
ಘೋರೈರ್ವ್ಯಾಧಿಶತೈರ್ಯಾತಿ ಘೋರರೂಪವಪುಸ್ತದಾ ॥9॥
ಅವನ ಬಲಭಾಗದಲ್ಲಿ ಚಿತ್ರಯೋಧಿಗಳಾದ ಮರುತ್ತುಗಳೂ, ವಸುಗಳ ಮತ್ತು ರುದ್ರರ ಜೊತೆಯಲ್ಲಿ ಸೇರಿ ಹೊರಟವು.
ಘೋರರೂಪವನ್ನು ಧರಿಸಿದ ಯಮನು ಮೃತ್ಯುವಿನ ಜೊತೆಯಲ್ಲಿ ಘೋರವಾದ ನೂರಾರು ವ್ಯಾಧಿಗಳಿಂದ ಎಲ್ಲ ಕಡೆಯಲ್ಲಿಯೂ ಸುತ್ತುವರಿಯಲ್ಪಟ್ಟವನಾಗಿ ಹೊರಟನು.
ಯಮಸ್ಯ ಪೃಷ್ಠತಶ್ಚೈವ ಘೋರಸ್ತ್ರಿಶಿಖರಃ ಶಿತಃ |
ವಿಜಯೋ ನಾಮ ರುದ್ರಸ್ಯ ಯಾತಿ ಶೂಲಃ ಸ್ವಲಂಕೃತಃ ॥10॥
ಯಮನ ಹಿಂಭಾಗದಲ್ಲಿ ಘೋರವೂ, ಮೂರುಶಿಖರಗಳನ್ನುಳ್ಳದ್ದು, ಹರಿತವಾದದ್ದೂ ಮತ್ತು ಅಲಂಕೃತವಾದದ್ದೂ ಆದ ರುದ್ರನ ವಿಜಯನಾಮಕ ತ್ರಿಶೂಲವು ಹೊರಟಿತು.
ತಮುಗ್ರಪಾಶೋ ವರುಣೋ ಭಗವಾನ್ ಸಲಿಲೇಶ್ವರಃ |
ಪರಿವಾರ್ಯ ಶನೈರ್ಯಾತಿ ಯಾದೋಭಿರ್ವಿವಿಧೈರ್ವೃತಃ ॥11|
ಆ ವಿಜಯ ತ್ರಿಶೂಲವನ್ನು ಸುತ್ತುವರಿದು ಉಗ್ರಪಾಶವನ್ನು ಧರಿಸಿದ ಸಲಿಲೇಶ್ವರನಾದ ಪೂಜ್ಯನಾದ ವರುಣನು ಜಲಚರಪ್ರಾಣಿಗಳಿಂದ ಆವೃತನಾಗಿ ನಿಧಾನವಾಗಿ ನಡೆದನು.
ಪೃಷ್ಠತೋ ವಿಜಯಸ್ಯಾಪಿ ಯಾತಿ ರುದ್ರಸ್ಯ ಪಟ್ಟ(ಟ್ಟಿ)ಸಃ |
ಗದಾಮುಸಲಶಕ್ತ್ಯಾದ್ಯೈರ್ವೃತಃ ಪ್ರಹರಣೋತ್ತಮೈಃ ॥12॥
 ವಿಜಯನಾಮಕ ತ್ರಿಶೂಲದ ಹಿಂದೆ ಗದಾಮುಸಲಶಕ್ತಿ ಮೊದಲಾದ ಶ್ರೇಷ್ಠ ಆಯುಧಗಳಿಂದ ಸುತ್ತುತವರಿಯಲ್ಪಟ್ಟ ರುದ್ರದೇವರ ಪಟ್ಟಸ ಆಯುಧವು ಹೊರಟಿತು.
ಪಟ್ಟಿಸಂ ತ್ವನ್ವಗಾದ್ ರಾಜನ್ ಶಸ್ತ್ರಂ ರೌದ್ರಂ ಮಹಾಬಲಮ್ |
ಕಮಂಡಲುಶ್ಚಾಪ್ಯನು ತಂ ಮಹರ್ಷಿಗಣಸೇವಿತಮ್ ॥13॥
ಎಲೈ ರಾಜನೇ, ಆ ಪಟ್ಟಸದ ಹಿಂದೆ ಮಹಾಬಲವುಳ್ಳ ರುದ್ರನ ಶಸ್ತ್ರವು (ಮಹಾಪ್ರಭೆಯುಳ್ಳ ರುದ್ರನ ಛತ್ರವು) ಮತ್ತು ಮಹರ್ಷಿಗಣ ಸೇವಿತವಾದ ಕಮಂಡಲವೂ ಹೊರಟಿತು.
ತಸ್ಯ ದಕ್ಷಿಣತೋ ಯಾತಿ ದಂಡೋ ಗಚ್ಛನ್ ಶ್ರಿಯಾ ವೃತಃ |
ಭೃಗ್ವಂಗಿರೋಭಿಃ ಸಹಿತೋ ದೈವತೈಶ್ಚಾನುಪೂಜಿತಃ ॥14॥
ಅದರ ಬಲಭಾಗದಲ್ಲಿ ಭೃಗು ಮತ್ತು ಅಂಗಿರ ಋಷಿಗಳಿಂದ ಸಹಿತವಾದ ಮತ್ತು ದೇವತೆಗಳಿಂದ ಪೂಜಿತವಾದ ಕಾಂತಿಯುಕ್ತವಾದ ದಂಡವು ಹೊರಟಿತು.
ಏಷಾಂ ತು ಪೃಷ್ಠತೋ ರುದ್ರೋ ವಿಮಲೇ ಸ್ಯಂದನೇ ಸ್ಥಿತಃ |
ಯಾತಿ ಸಂಹರ್ಷಯನ್ ಸರ್ವಾಂಸ್ತೇಜಸಾ ತ್ರಿದಿವೌಕಸಃ ॥15॥

ಇವುಗಳ ಹಿಂಭಾಗದಲ್ಲಿ ರುದ್ರನು ವಿಮಲವಾದ ರಥದಲ್ಲಿ ಕುಳಿತು ತನ್ನ ತೇಜಸ್ಸಿನಿಂದ ದೇವತೆಗಳಿಗೆ ಸಂತೋಷವನ್ನು ಉಂಟುಮಾಡುತ್ತಾ ಹೊರಟನು.
ಋಷಯಶ್ಚಾಪಿ ದೇವಾಶ್ಚ ಗಂಧರ್ವಾ ಭುಜಗಾಸ್ತಥಾ |
ನದ್ಯೋ ಹ್ರದಾಃ ಸಮುದ್ರಾಶ್ಚ ತಥೈವಾಪ್ಸರಸಾಂ ಗಣಾಃ ॥16॥
ನಕ್ಷತ್ರಾಣಿ ಗ್ರಹಾಶ್ಚೈವ ದೇವಾನಾಂ ಶಿಶವಶ್ಚ ಯೇ |
ಸ್ತ್ರಿಯಶ್ಚ ವಿವಿಧಾಕಾರಾ ಯಾಂತಿ ರುದ್ರಸ್ಯ ಪೃಷ್ಠತಃ ॥17॥
ಋಷಿಗಳೂ, ದೇವತೆಗಳೂ, ಗಂಧರ್ವರೂ, ಸರ್ಪಗಳೂ, ನದಿಗಳೂ, ಸರೋವರಗಳೂ, ಸಮುದ್ರಗಳೂ, ಅಪ್ಸರೆಯರಗಣಗಳೂ, ನಕ್ಷತ್ರಗಳೂ, ಗ್ರಹಗಳೂ, ದೇವತೆಗಳ ಮಕ್ಕಳೂ ಮತ್ತು ಸ್ತ್ರೀಯರೂ ವಿವಿಧಾಕಾರವನ್ನು ಧರಿಸಿ ರುದ್ರನ ಹಿಂದುಗಡೆ ನಡೆದರು.
ಸೃಜಂತ್ಯಃ ಪುಷ್ಪವರ್ಷಾಣಿ ಚಾರುರೂಪಾ ವರಾಂಗನಾಃ |
ಪರ್ಜನ್ಯಶ್ಚಾಪ್ಯನುಯಯೌ ನಮಸ್ಕೃತ್ಯ ಪಿನಾಕಿನಮ್ ॥18॥
ಸುಂದರಿಯರಾದ ವರಾಂಗನೆಯರು ಪುಷ್ಪವೃಷ್ಟಿಯನ್ನು ಮಾಡುತ್ತಾ ನಡೆದರು. ಪರ್ಜನ್ಯನೂ ಸಹ ರುದ್ರನಿಗೆ ನಮಸ್ಕಾರವನ್ನು ಮಾಡಿ ಹಿಂದೆ ನಡೆದನು.
ಛತ್ರಂ ಚ ಪಾಂಡರಂ ಸೋಮಸ್ತಸ್ಯ ಮೂರ್ಧನ್ಯಧಾರಯತ್ |
ಚಾಮರೇ ಚಾಪಿ ವಾಯುಶ್ಚ ಗೃಹೀತ್ವಾಽಗ್ನಿಶ್ಚ ಧಿಷ್ಠಿತೌ ॥19॥
ಚಂದ್ರನು ಅವನ ತಲೆಯ ಮೇಲೆ ಶ್ವೇತಚ್ಛತ್ರವನ್ನು ಹಿಡಿದನು. ಅಗ್ನಿ ಮತ್ತು ವಾಯುಗಳು ಚಾಮರವನ್ನು ಹಿಡಿದು ಅವನ ಪಾರ್ಶ್ವಗಳಲ್ಲಿ ನಿಂತಿದ್ದರು.
ಶಕ್ರಶ್ಚ ಪೃಷ್ಠತಸ್ತಸ್ಯ ಯಾತಿ ರಾಜನ್ ಶ್ರಿಯಾ ವೃತಃ |
ಸಹ ರಾಜರ್ಷಿಭಿಃ ಸರ್ವೈಃ ಸ್ತುವಾನೋ ವೃಷಕೇತನಮ್ ॥20॥
ಎಲೈ ರಾಜನೇ, ಇಂದ್ರನೂ ಸಹ ಎಲ್ಲ ರಾಜರ್ಷಿಗಳಿಂದ ಕೂಡಿದವನಾಗಿ ಕಾಂತಿಯಿಂದ ಕಂಗೊಳಿಸುತ್ತಾ ವೃಷಧ್ವಜನಾದ ಶಂಕರನನ್ನು ಸ್ತೋತ್ರಮಾಡುತ್ತಾ ಅವನ ಹಿಂದೆ ನಡೆದನು.
ಗೌರೀ ವಿದ್ಯಾಽಥ ಗಾಂಧಾರೀ ಕೇಶಿನೀ ಮಿತ್ರಸಾಹ್ವಯಾ |
ಸಾವಿತ್ರ್ಯಾ ಸಹ ಸರ್ವಾಸ್ತಾಃ ಪಾರ್ವತ್ಯಾ ಯಾಂತಿ ಪೃಷ್ಠತಃ ॥21॥
ಗೌರೀ, ವಿದ್ಯಾ, ಗಾಂಧಾರೀ, ಕೇಶಿನೀ, ಮಿತ್ರಾ, ಸಾವಿತ್ರೀ ಮೊದಲಾದವರೆಲ್ಲರೂ ಪಾರ್ವತಿಯ ಹಿಂದೆ ನಡೆದರು.
ತತ್ರ ವಿದ್ಯಾಗಣಾಃ ಸರ್ವೇ ಯೇ ಕೇಚಿತ್ ಕವಿಭಿಃ ಕೃತಾಃ |
ತಸ್ಯ ಕುರ್ವಂತಿ ವಚನಂ ಸೇಂದ್ರಾ ದೇವಾಶ್ಚಮೂಮುಖೇ ॥22॥
ಅಲ್ಲಿ ಕೆಲವರು ಜ್ಞಾನಿಗಳು ಮಾಡಿದ ವಿದ್ಯಾಗಣಗಳೇನಿವೆಯೋ ಅವುಗಳನ್ನು ಇಂದ್ರ ಮೊದಲಾದ ದೇವತೆಗಳೆಲ್ಲರೂ ಸೇನಾಮುಖದಲ್ಲಿ ಪ್ರವಚನವನ್ನು ಮಾಡುತ್ತಿದ್ದರು.
ಸ್ವೇನ ಸ್ವೇನಾನುಯೋಗೇನ ಸರ್ವೇ ತೇಽನುಯಯುರ್ಹರಮ್ |
ಗೃಹೀತ್ವಾ ತು ಪತಾಕಾಂ ವೈ ಯಾತ್ಯಸೌ ರಾಕ್ಷಸೋ ಗ್ರಹಃ |
ವ್ಯಾಪೃತಸ್ತು ಶ್ಮಶಾನೇ ಯೋ ನಿತ್ಯಂ ರುದ್ರಸ್ಯ ವೈ ಸಖಾ ॥23॥
ತಮ್ಮ ತಮ್ಮ ಅನುಚರರಿಂದ ಕೂಡಿ ಎಲ್ಲರೂ ರುದ್ರನ ಹಿಂದೆ ಹೊರಟರು. ರುದ್ರನ ಸ್ನೇಹಿತನಾಗಿ ನಿತ್ಯವೂ ಸ್ಮಶಾನ ಕಾರ್ಯಗಳಲ್ಲಿ ನಿರತವಾದ ರಾಕ್ಷಸ ಗ್ರಹವು ಪತಾಕೆಯನ್ನು ಹಿಡಿದುಕೊಂಡು ಹೊರಟಿತು.
ಪಿಂಗಲೋ ನಾಮ ಯಕ್ಷೇಂದ್ರೋ ಲೋಕಸ್ಯಾನಂದದಾಯಕಃ |
ಏಭಿಶ್ಚ ಸಹಿತೋ ದೇವಸ್ತತ್ರ ಯಾತಿ ಯಥಾಸುಖಮ್ ॥24॥
ಅಗ್ರತಃ ಪೃಷ್ಠತಶ್ಚೈವ ನ ಹಿ ತಸ್ಯ ಗತಿರ್ಧ್ರುವಾ |
ಲೋಕಕ್ಕೆ ಆನಂದವನ್ನು ಕೊಡುವ ಪಿಂಗಲ ಎಂಬ ಯಕ್ಷೇಂದ್ರನೂ ಹೊರಟನು. ಇವರೆಲ್ಲರಿಂದ ಕೂಡಿದ ದೇವನಾದ ಶಂಕರನು ಭದ್ರವಟಕ್ಕೆ ಅನಾಯಾಸವಾಗಿ ಪ್ರಯಾಣವನ್ನು ಬಯಸಿದನು. ರುದ್ರನ ಪರಿವಾರದ ಗಮನವು ಒಂದೇ ರೀತಿ ಇರಲಿಲ್ಲ. (ಕೆಲವು ಸಲ ಮುಂಭಾಗದಲ್ಲಿಯೂ, ಕೆಲವು ಸಲ ಹಿಂಭಾಗದಲ್ಲಿಯೂ, ಕೆಲವು ಸಲ ಪಾರ್ಶ್ವಗಳಲ್ಲಿಯೂ ಹೋಗುತ್ತಿತ್ತು).
ರುದ್ರಂ ಸತ್ಕರ್ಮಭಿರ್ಮರ್ತ್ಯಾಃ ಪೂಜಯಂತೀಹ ದೈವತಮ್ ॥25॥
ಶಿವಮಿತ್ಯೇವ ಯಂ ಪ್ರಾಹುರೀಶಂ ರುದ್ರಂ ಪಿತಾಮಹಮ್ ॥26॥
ಏವಂ ಸರ್ವೇ ಸುರಗಣಾಸ್ತದಾ ವೈ ಪ್ರೀತಮಾನಸಾಃ |
ಭಾವೈಸ್ತು ವಿವಿಧಾಕಾರೈಃ ಪೂಜಯಂತಿ ಮಹೇಶ್ವರಮ್ ॥27॥
ಭೂಮಿಯಲ್ಲಿ ಮನುಷ್ಯರು ಸತ್ಕರ್ಮಗಳಿಂದ ರುದ್ರದೇವರನ್ನು ಪೂಜಿಸುತ್ತಾರೆ. ಯಾವನನ್ನು ಶಿವನೆಂದೂ, ಈಶನೆಂದೂ, ರುದ್ರನೆಂದೂ, ಪಿತಾಮಹನೆಂದೂ ಹೇಳುತ್ತಾರೆಯೋ ಅಂತಹ ಮಹೇಶ್ವರನನ್ನು ಮನಸ್ಸಿನಲ್ಲಿ ಸಂತೋಷಗೊಂಡ ಎಲ್ಲಾ ಸುರಗಣಗಳೂ ವಿವಿಧಾಕಾರಗಳಿಂದ ಮತ್ತು ವಿವಿಧ ಭಾವನೆಗಳಿಂದ ಪೂಜಿಸಿದರು.
ದೇವಸೇನಾಪತಿಸ್ತ್ವೇವಂ ದೇವಸೇನಾಭಿರಾವೃತಃ |
ಅನುಗಚ್ಛತಿ ದೇವೇಶಂ ಬ್ರಹ್ಮಣ್ಯಃ ಕೃತ್ತಿಕಾಸುತಃ ॥28॥
ಈ ರೀತಿಯಲ್ಲಿ ದೇವಸೇನಾಪತಿಯಾದ ಬ್ರಾಹ್ಮಣ ವತ್ಸಲನಾದ ಕಾರ್ತಿಕೇಯನೂ ಸಹ ದೇವಸೇನೆಯಿಂದ ಪರಿವೃತನಾಗಿ ದೇವೇಶನಾದ ಶಂಕರನನ್ನು ಹಿಂಬಾಲಿಸಿದನು.
ಅಥಾಬ್ರವೀನ್ಮಹಾಸೇನಂ ಮಹಾದೇವೋ ಬೃಹದ್ವಚಃ |

ಸಪ್ತಮಂ ಮಾರುತಸ್ಕಂಧಂ ರಕ್ಷ ನಿತ್ಯಮತಂದ್ರಿತಃ ॥29॥
ಆಗ ಮಹಾದೇವನು ಮಹಾಸೇನನನ್ನು ಕುರಿತು ನೀನು ಎಚ್ಚರಿಕೆಯಿಂದ ಏಳನೆಯ ಮಾರುತ ಸ್ಕಂದವನ್ನು ರಕ್ಷಿಸು ಎಂಬ ದೊಡ್ಡ ಮಾತನ್ನು ಆಡಿದನು (ಅಷ್ಟದಿಕ್ಪಾಲಕರಲ್ಲಿ ಇರುವ ಎಂಟು ಸೇನಾಸಮುದಾಯಗಳಲ್ಲಿ ಈಶಾನ್ಯದಿಕ್ಕಿನ ದೇವಸಮುದಾಯವನ್ನು ತಾನೇ ರಕ್ಷಿಸುವುದರಿಂದ ಉಳಿದ ಏಳು ದೇವತಾ ಸಮೂಹಗಳನ್ನು - ಅವು ಮರುದ್ಗಣಗಳ ಸಮುದಾಯಗಳು - ರಕ್ಷಿಸು ಎಂದು ಅಭಿಪ್ರಾಯ).
ಸ್ಕಂದಃ
ಸಪ್ತಮಂ ಮಾರುತಸ್ಕಂಧಂ ಪಾಲಯಿಷ್ಯಾಮ್ಯಹಂ ಪ್ರಭೋ |
ಯದನ್ಯದಪಿ ಮೇ ಕಾರ್ಯಂ ದೇವ ತದ್ ವದ ಮಾಚಿರಮ್ ॥30॥
ಸ್ಕಂದ ಪ್ರಭುವೇ, ನಾನು ಏಳನೆಯ ಮಾರುತಸ್ಕಂಧವನ್ನು ರಕ್ಷಿಸುವೆನು. ನಾನು ಮಾಡಬೇಕಾದ ಬೇರೆ ಕಾರ್ಯವಿದ್ದರೆ ಅದನ್ನೂ ಶೀಘ್ರವಾಗಿ ಹೇಳು.
ರುದ್ರಃ
ಕಾರ್ಯೇಷ್ವಹಂ ತ್ವಯಾ ಪುತ್ರ ಸಂದ್ರಷ್ಟವ್ಯಃ ಸದೈವ ಹಿ |
ದರ್ಶನಾನ್ಮಮ ಭಕ್ತ್ಯಾ ಚ ಶ್ರೇಯಃ ಪರಮವಾಪ್ಸ್ಯಸಿ ॥31॥
ರುದ್ರ ಪುತ್ರನೇ, ಎಲ್ಲ ಕಾರ್ಯಗಳನ್ನೂ ಮಾಡುವಾಗ ನೀನು ಯಾವಾಗಲೂ ನನ್ನ ಸಂದರ್ಶನವನ್ನು ಮಾಡಬೇಕು. ನನ್ನ ದರ್ಶನದಿಂದ ಮತ್ತು ನಿನ್ನ ಭಕ್ತಿಯಿಂದ ಶ್ರೇಷ್ಠವಾದ ಶ್ರೇಯಸ್ಸನ್ನು ಹೊಂದುವಿ.
ಮಾರ್ಕಂಡೇಯಃ
ಇತ್ಯುಕ್ತ್ವಾ ವಿಸಸರ್ಜೈನಂ ಪರಿಷ್ವಜ್ಯ ಮಹೇಶ್ವರಃ |
ಸ್ಕಂದಂ ಸಹೋಮಯಾ ಪ್ರೀತೋ ಜ್ವಲಂತಮಿವ ತೇಜಸಾ ॥32॥
ಮಾರ್ಕಂಡೇಯ ಪಾರ್ವತಿಯಿಂದ ಸಹಿತನಾದ ಮಹೇಶ್ವರನು ಪ್ರಸನ್ನನಾಗಿ ಹೀಗೆ ಹೇಳಿ ತೇಜಸ್ಸಿನಿಂದ ಬೆಳಗುತ್ತಿದ್ದ ಸ್ಕಂದನನ್ನು ಆಲಿಂಗಿಸಿ ಅವನನ್ನು ಬೀಳ್ಕೊಟ್ಟನು.
ವಿಸರ್ಜಿತೇ ತತಃ ಸ್ಕಂದೇ ಬಭೂವೌತ್ಪಾತಿಕಂ ಮಹತ್ |
ಸಹಸೈವ ಮಹಾರಾಜ ದೇವಾನ್ ಸರ್ವಾನ್ ಪ್ರಮೋಹಯತ್ ॥33॥
ಮಹಾರಾಜನೇ, ಮಹೇಶ್ವರನು ಸ್ಕಂದನನ್ನು ಬೀಳ್ಕೊಡುತ್ತಿರಲು ಇದ್ದಕ್ಕಿದ್ದಂತೆಯೇ ದೇವತೆಗಳಿಗೂ ದಿಗ್ಭ್ರಮೆಯನ್ನು ಉಂಟುಮಾಡುವಂತೆ ದೊಡ್ಡ ಅಪಶಕುನವು ಉಂಟಾಯಿತು.
ಜಜ್ವಾಲ ಖಂ ಸನಕ್ಷತ್ರಂ ಪ್ರಮೂಢಂ ಭುವನಂ ಭೃಶಮ್ |
ಚಚಾಲ ವ್ಯನದಚ್ಚೋರ್ವೀ ತಮೋಭೂತಂ ಜಗದ್ ಬಭೌ ॥34॥
ನಕ್ಷತ್ರದಿಂದ ಕೂಡಿದ ಆಕಾಶದಲ್ಲಿ ಜ್ವಾಲೆಗಳು ಕಂಡುಬಂದವು. ಭೂಮಿಯು ಮೋಹಕ್ಕೆ ಒಳಗಾಯಿತು. ಭೂಮಿಯು ನಡುಗಿತು ಮತ್ತು ಗುಡುಗಿತು. ಜಗತ್ತು ಕತ್ತಲಿನಿಂದ ಆವರಿಸಲ್ಪಟ್ಟಿತು.
ತತಸ್ತದ್ದಾರುಣಂ ದೃಷ್ಟ್ವಾ ಕ್ಷುಭಿತಃ ಶಂಕರಸ್ತದಾ |
ಉಮಾ ಚೈವ ಮಹಾಭಾಗ ದೇವಾಶ್ಚರ್ಷಿಗಣೈಃ ಸಹ ॥35॥
ಆಗ ಆ ದಾರುಣವಾದ ಅಪಶಕುನಗಳನ್ನು ನೋಡಿ ಶಂಕರನು ಕ್ಷೋಭೆಗೊಂಡನು. ಮಹಾನುಭಾವಳಾದ ಪಾರ್ವತಿಯೂ, ಋಷಿಗಣಗಳಿಂದ ಸಹಿತರಾದ ದೇವತೆಗಳೂ ಕ್ಷೋಭೆಗೊಂಡರು.
ತತಸ್ತೇಷು ಪ್ರಮೂಢೇಷು ಪರ್ವತಾಂಬುದಸನ್ನಿಭಮ್ |
ನಾನಾಪ್ರಹರಣಂ ಘೋರಮದೃಶ್ಯತ ಮಹದ್ಬಲಮ್ ॥36॥
ಹೀಗೆ ಅವರು ದಿಗ್ಭ್ರಮೆಗೊಳ್ಳುತ್ತಿರಲು ಪರ್ವತವನ್ನು ಮುಚ್ಚುವ ಮೋಡದಂತಿರುವ ಅನೇಕ ಆಯುಧಗಳಿಂದ ಕೂಡಿದ ದೊಡ್ಡ ಸೈನ್ಯವು ಕಂಡುಬಂದಿತು.
ತದ್ ವೈ ಘೋರಮಸಂಖ್ಯೇಯಂ ಗರ್ಜಚ್ಚ ವಿವಿಧಾ ಗಿರಃ |
ಅಭ್ಯದ್ರವದ್ ರಣೇ ದೇವಾನ್ ಭಗವಂತಂ ಚ ಶಂಕರಮ್ ॥37॥
ಆ ಘೋರವಾದ ಅಸಂಖ್ಯಾತವಾದ ಸೈನ್ಯವು ವಿಧವಿಧವಾದ ನಾದಗಳನ್ನು ಗರ್ಜಿಸುತ್ತಾ ಯುದ್ಧದಲ್ಲಿ ದೇವತೆಗಳ ಮೇಲೆ ಮತ್ತು ಭಗವಂತನಾದ ಶಂಕರನ ಮೇಲೆ ಎರಗಿತು.
ತೈರ್ವಿಸೃಷ್ಟಾನ್ಯನೀಕೇಷು ಬಾಣಜಾಲಾನ್ಯನೇಕಶಃ |
ಪರ್ವತಾಶ್ಚ ಶತಘ್ನ್ಯಶ್ಚ ಪ್ರಾಸಾಸಿಪರಿಘಾ ಗದಾಃ ॥38॥
ನಿಪತದ್ಭಿಸ್ತು ತೈಘೋರೈರ್ದೇವಾನೀಕಂ ಮಹಾಯುಧೈಃ |
ಕ್ಷಣೇಣ ವ್ಯದ್ರುವತ್ ಸರ್ವಂ ವಿಮುಖಂ ಚಾಪ್ಯದೃಶ್ಯತ ॥39॥
ಅವರಿಂದ ದೇವಸೈನ್ಯದ ಮೇಲೆ ಪ್ರಯೋಗಿಸಲ್ಪಟ್ಟ ಅನೇಕ ಬಾಣಜಾಲಗಳೂ, ಪರ್ವತಗಳೂ, ಶತಘ್ನಿಗಳೂ, ಪ್ರಾಸ-ಅಸಿ-ಪರಿಘಾ ಮತ್ತು ಗದೆಗಳೂ (ದೇವತೆಗಳ ಸೈನ್ಯದ ಮೇಲೆ ಬಿದ್ದವು). ಆ ಘೋರವಾದ ಮಹಾಯುಧಗಳು ದೇವ ಸೈನ್ಯದ ಮೇಲೆ ಬೀಳುತ್ತಿದ್ದಂತೆ ಒಂದು ಕ್ಷಣದಲ್ಲಿ ದೇವಸೈನ್ಯವೆಲ್ಲವೂ ಚದುರಿಹೋಯಿತು. ಯುದ್ಧ ವಿಮುಖವಾಗಿಯೂ ಕಂಡುಬಂದಿತು.
ನಿಕೃತ್ತಯೋಧನಾಗಾಶ್ವಂ ಕೃತ್ತಾಯುಧಮಹಾರಥಮ್ |
ದಾನವೈರರ್ದಿತಂ ಸೈನ್ಯಂ ದೇವಾನಾಂ ವಿಮುಖಂ ಬಭೌ ॥40॥
ಕತ್ತರಿಸಲ್ಪಟ್ಟ ಸೈನಿಕರೂ, ಗದೆಗಳೂ ಮತ್ತು ಅಶ್ವಗಳನ್ನುಳ್ಳ ಕತ್ತರಿಸಲ್ಪಟ್ಟ ಆಯುಧಗಳನ್ನೂ ಮತ್ತು ಮಹಾರಥಗಳನ್ನುಳ್ಳ

ದೇವತೆಗಳ ಸೈನ್ಯವು ದಾನವರಿಂದ ಪೀಡಿತವಾಗಿ ವಿಮುಖವಾದುದು ಕಂಡುಬಂದಿತು.
ಅಸುರೈರ್ವಧ್ಯಮಾನಂ ತತ್ ಪಾವಕೈರಿವ ಕಾನನಮ್ |
ಅಪತದ್ ದಗ್ಧಭೂಯಿಷ್ಠಂ ಮಹಾದ್ರುಮವನಂ ಯಥಾ ॥41॥
ಅಸುರರಿಂದ ಹತವಾಗುತ್ತಿದ್ದ ಆ ಸೈನ್ಯವು ಕಾಡ್ಗಿಚ್ಚಿನಿಂದ ಮಹಾವೃಕ್ಷಗಳನ್ನು ಹೊಂದಿದ ವನವು ದಗ್ಧಭೂಯಿಷ್ಠವಾಗಿ ಬೀಳುವಂತೆ ಬಿದ್ದುಹೋಯಿತು.
ತೇ ವಿಭಿನ್ನಶಿರೋದೇಹಾಃ ಪ್ರಾದ್ರವಂತೋ ದಿವೌಕಸಃ |
ನ ನಾಥಮಭ್ಯಗಚ್ಛಂತಿ ವಧ್ಯಮಾನಾ ಮಹಾರಣೇ ॥42॥
ದೇವತೆಗಳು ಅಸುರರಿಂದ ಮಹಾಯುದ್ಧದಲ್ಲಿ ಪ್ರಹಾರಗಳಿಗೆ ಒಳಗಾಗಿ ತಮ್ಮ ಶಿರಸ್ಸು ಮತ್ತು ದೇಹಗಳನ್ನು ಒಡೆದುಕೊಂಡು ಓಡುತ್ತಾ ತಮ್ಮನ್ನು ರಕ್ಷಿಸುವ ಸ್ವಾಮಿಯನ್ನು ಕಾಣಲಿಲ್ಲ.
ಅಥ ತದ್ವಿದ್ರುತಂ ಸೈನ್ಯಂ ದೃಷ್ಟ್ವಾ ದೇವಃ ಪುರಂದರಃ |
ಆಶ್ವಾಸಯನ್ನುವಾಚೇದಂ ಬಲಭಿದ್ ದಾನವಾರ್ದಿತಮ್ ॥43॥
ಆಗ ಬಲಶತ್ರುವಾದ ಪುರಂದರನು ದಾನವರಿಂದ ಪೀಡಿತವಾಗಿ ಓಡಿ ಹೋಗುತ್ತಿದ್ದ ತನ್ನ ಸೈನ್ಯವನ್ನು ನೋಡಿ ಆಶ್ವಾಸನೆಯನ್ನು ಮಾಡುತ್ತಾ ಹೀಗೆ ಮಾತನಾಡಿದನು.
ಭಯಂ ತ್ಯಜತ ಭದ್ರಂ ವಃ ಶೂರಾಃ ಶಸ್ತ್ರಾಣಿ ಗೃಹ್ಣತ |
ಕುರುಧ್ವಂ ವಿಕ್ರಮೇ ಬುದ್ಧಿಂ ಮಾ ವಃ ಕಾಚಿದ್ ವ್ಯಥಾ ಭವೇತ್ ॥44॥
ಭಯವನ್ನು ತ್ಯಜಿಸಿ, ನಿಮಗೆ ಮಂಗಳವಾಗಲಿ. ಶೂರರೇ, ಶಸ್ತ್ರಗಳನ್ನು ಹಿಡಿಯಿರಿ. ಪರಾಕ್ರಮದಲ್ಲಿ ಬುದ್ಧಿಯನ್ನು ಮಾಡಿ. ಯಾವ ವ್ಯಥೆಯನ್ನೂ ಪಡಬೇಡಿ.
ಜಯತೈನಾನ್ ದುರಾಚಾರಾನ್ ದಾನವಾನ್ ಘೋರದರ್ಶನಾನ್ |
ಅಭಿದ್ರವತ ಭದ್ರಂ ವೋ ಮಯಾ ಸಹ ಮಹಾಸುರಾನ್ ॥45॥
ದುರಾಚಾರಿಗಳಾದ ಘೋರರೂಪವನ್ನು ಧರಿಸಿದ ಈ ದಾನವರನ್ನು ಜಯಿಸಿ. ನಿಮಗೆ ಮಂಗಳವಾಗಲಿ. ನನ್ನ ಜೊತೆಯಲ್ಲಿ ಮಹಾಸುರರ ಮೇಲೆ ಎರಗಿ.
ಶಕ್ರಸ್ಯ ವಚನಂ ಶ್ರುತ್ವಾ ಸಮಾಶ್ವಸ್ತಾ ದಿವೌಕಸಃ |
ದಾನವಾನ್ ಪ್ರತ್ಯಯುಧ್ಯಂತ ಶಕ್ರಂ ಕೃತ್ವಾ ವ್ಯಪಾಶ್ರಯಮ್ ॥46॥
ಇಂದ್ರನ ಮಾತುಗಳನ್ನು ಕೇಳಿ ಧೈರ್ಯವನ್ನು ಪಡೆದ ದೇವತೆಗಳು ಇಂದ್ರನನ್ನು ಆಶ್ರಯಿಸಿ ದಾನವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತಸ್ತೇ ತ್ರಿದಶಾಃ ಸರ್ವೇ ಮರುತಶ್ಚ ಮಹಾಬಲಾಃ |
ಪ್ರತ್ಯುದ್ಯಯುರ್ಮಹಾವೇಗಾಃ ಸಾಧ್ಯಾಶ್ಚ ವಸುಭಿಃ ಸಹ ॥47॥
ಅನಂತರ ಮಹಾಬಲರಾದ, ಮಹಾವೇಗವುಳ್ಳ ಮರುತ್ತುಗಳೂ ಮತ್ತು ಎಲ್ಲಾ ದೇವತೆಗಳೂ ಸಾಧ್ಯರ ಮತ್ತು ವಸುಗಳ ಜೊತೆಯಲ್ಲಿ ಸೇರಿ ದೈತ್ಯರ ಮೇಲೆ ಎರಗಿದರು.
ತೈರ್ವಿಸೃಷ್ಟಾನ್ಯನೀಕೇಷು ಕ್ರುದ್ಧೈಃ ಶಸ್ತ್ರಾಣಿ ಸಂಯುಗೇ |
ಶರಾಶ್ಚ ದೈತ್ಯಕಾಯೇಷು ಪಿಬಂತಿ ರುಧಿರಂ ಬಹು ॥48॥
ಅವರು ಯುದ್ಧದಲ್ಲಿ ಕ್ರುದ್ಧರಾಗಿ ದೈತ್ಯಸೇನೆಯಲ್ಲಿ ಪ್ರಯೋಗಿಸಿದ ಶಸ್ತ್ರಗಳು ಮತ್ತು ಬಾಣಗಳು ದೈತ್ಯರ ಶರೀರವನ್ನು ಪ್ರವೇಶಿಸಿ ಅವರ ರಕ್ತವನ್ನು ಬಹಳವಾಗಿ ಕುಡಿದವು.
ತೇಷಾಂ ದೇಹಾನ್ ವಿನಿರ್ಭಿದ್ಯ ಶರಾಸ್ತೇ ನಿಶಿತಾಸ್ತದಾ |
ನಿಪತಂತೋಽಭ್ಯದೃಶ್ಯಂತ ನಗೇಭ್ಯ ಇವ ಪನ್ನಗಾಃ ॥49॥
ಆ ನಿಶಿತವಾದ ಬಾಣಗಳು ಆಗ ಪರ್ವತದಿಂದ ಹೊರಬರುವ ಸರ್ಪದಂತೆ ದೈತ್ಯರ ಶರೀರವನ್ನು ಭೇದಿಸಿ ಹೊರಗೆ ಬರುತ್ತಿದ್ದುದು ಕಂಡುಬಂದಿತು.
ತಾನಿ ದೈತ್ಯಶರೀರಾಣಿ ನಿರ್ಭಿನ್ನಾನಿ ಸ್ಮ ಸಾಯಕೈಃ |
ಅಪತನ್ ಭೂತಳೇ ರಾಜಂಶ್ಛಿನ್ನಾಭ್ರಾಣೀವ ಸರ್ವಶಃ ॥50॥
ಎಲೈ ರಾಜನೇ, ಬಾಣಗಳಿಂದ ಕತ್ತರಿಸಲ್ಪಟ್ಟ ದೈತ್ಯಶರೀರಗಳು ಛಿನ್ನವಾದ ಮೋಡಗಳಂತೆ ಭೂತಲದಲ್ಲಿ ಎಲ್ಲ ಕಡೆಯಲ್ಲಿಯೂ ಬಿದ್ದವು.
ತತಸ್ತದ್ ದಾನವಂ ಸೈನ್ಯಂ ಸರ್ವೈರ್ದೇವಗಣೈರ್ಯುಧಿ |
ತ್ರಾಸಿತಂ ವಿವಿಧೈರ್ಬಾಣೈಃ ಕೃತಂ ಚೈವ ಪರಾಙ್ಮುಖಮ್ ॥51॥
ಆಗ ಆ ದಾನವ ಸೈನ್ಯವು ಎಲ್ಲ ದೇವಗಣಗಳಿಂದ ವಿವಿಧ ಬಾಣಗಳಿಂದ ಯುದ್ಧದಲ್ಲಿ ಹೆದರಿಸಲ್ಪಟ್ಟಿತು ಮತ್ತು ಯುದ್ಧವಿಮುಖವಾಗಿಯೂ ಮಾಡಲ್ಪಟ್ಟಿತು.
ಅಥೋ ಕ್ರುಷ್ಟಂ ತದಾ ಹೃಷ್ಟೈಃ ಸರ್ವೈರ್ದೇವೈರುದಾಯುಧೈಃ |
ಸಂಹಿತಾನಿ ಚ ತೂರ್ಯಾಣಿ ಪ್ರಾವಾದ್ಯಂತ ಹ್ಯನೇಕಶಃ ॥52॥
ಆಗ ದೈತ್ಯಸೈನ್ಯವು ಆಕ್ರೋಶವನ್ನು ಮಾಡಿತು. ಸಂತುಷ್ಟಗೊಂಡ ಮತ್ತು ಆಯುಧಗಳನ್ನು ಎತ್ತಿಹಿಡಿದ ದೇವತೆಗಳು ಜೊತೆಯಾಗಿ ಅನೇಕರೀತಿಯಲ್ಲಿ ಮಂಗಳವಾದ್ಯಗಳನ್ನು ಮೊಳಗಿಸಿದರು.
ಏವಮನ್ಯೋನ್ಯಸಂಯುಕ್ತಂ ಯುದ್ಧಮಾಸೀತ್ ಸುದಾರುಣಮ್ |

ದೇವಾನಾಂ ದಾನವಾನಾಂ ಚ ಮಾಂಸಶೋಣಿತಕರ್ದಮಮ್ ॥53॥
ಹೀಗೆ ದೇವತೆಗಳಿಗೂ ಮತ್ತು ದಾನವರಿಗೂ ಪರಸ್ಪರ ಸಂಯುಕ್ತವಾಗಿ ಮಾಂಸಶೋಣಿತಗಳೇ ಕೆಸರಾಗಿ ಉಳ್ಳ ಅತ್ಯಂತ ದಾರುಣವಾದ ಯುದ್ಧವು ಜರುಗಿತು.
ಅನಯೋ ದೇವಲೋಕಸ್ಯ ಸಹಸೈವಾಭ್ಯದೃಶ್ಯತ |
ತದಾಽಪಿ ದಾನವಾ ಘೋರಾ ವಿನಿಘ್ನಂತಿ ದಿವೌಕಸಃ ॥54॥
ಆಗ ಇದ್ದಕ್ಕಿದ್ದಂತೆಯೇ ದೇವಲೋಕಕ್ಕೆ ಅಪಚಾರವುಂಟಾಗುವುದು ಕಂಡುಬಂದಿತು. ಆಗಲೂ ಘೋರ ದಾನವರು ದೇವತೆಗಳನ್ನು ಕೊಲ್ಲುತ್ತಿದ್ದರು.
ತತಸ್ತೂರ್ಯಪ್ರಾಣದಾಶ್ಚ ಭೇರೀಣಾಂ ಚ ಮಹಾಸ್ವನಃ |
ಬಭೂವುರ್ದಾನವೇಂದ್ರಾಣಾಂ ಸಿಂಹಾನಾದಾಶ್ಚ ದಾರುಣಾಃ ॥55॥
ಆಗ ದಾನವೇಂದ್ರರ ತೂರ್ಯನಿನಾದಗಳೂ ಭೇರಿಗಳ ಮಹಾಧ್ವನಿಯೂ ದಾರುಣವಾದ ಸಿಂಹನಾದವೂ ಕೇಳಿಬಂದವು.
ಅಥ ದೈತ್ಯಬಲಾದ್ ಘೋರಾನ್ನಿಷ್ಪಪಾತ ಮಹಾಬಲಃ |
ದಾನವೋ ಮಹಿಷೋ ನಾಮ ಪ್ರಗೃಹ್ಯ ವಿಪುಲಂ ಗಿರಿಮ್ ॥56॥
ಅನಂತರ ದೈತ್ಯಸೈನ್ಯದಿಂದ ಮಹಾಬಲನಾದ ಮಹಿಷನೆಂಬ ದಾನವನು ದೊಡ್ಡ ಪರ್ವತವನ್ನು ಎತಿತಕೊಂಡು ಹೊರಗೆ ಬಂದನು.
ತೇ ತಂ ಘನೈರಿವಾದಿತ್ಯಂ ದೃಷ್ಟ್ವಾ ಸಂಪರಿವಾರಿತಮ್ |
ಸಮುದ್ಯಮ್ಯಗಿರಿಂ ರಾಜನ್ ವ್ಯದ್ರುವಂತ ದಿವೌಕಸಃ ॥57॥
ಎಲೈ ರಾಜನೇ, ದೇವತೆಗಳು ಮೋಡಗಳಿಂದ ಸುತ್ತುವರಿಯಲ್ಪಟ್ಟ ಸೂರ್ಯನಂತೆ ದೊಡ್ಡ ಪರ್ವತವನ್ನು ಎತ್ತಿಬರುತ್ತಿದ್ದ ಆ ದಾನವನನ್ನು ನೋಡಿ ದಿಕ್ಕುದಿಕ್ಕುಗಳಿಗೆ ಓಡಿ ಹೋದರು.
ಅಥಾಭಿದ್ರುತ್ಯ ಮಹಿಷೋ ದೇವಾಂಶ್ಚಿಕ್ಷೇಪ ತಂ ಗಿರಿಮ್ |
ಮಹಾಕಾಯಂ ಮಹಾರಾಜ ಸತೋಯಮಿವ ತೋಯದಮ್ ॥58॥
ಎಲೈ ಮಹಾರಾಜನೇ, ಆಗ ಮಹಿಷನು ದೇವತೆಗಳನ್ನು ಅಟ್ಟಿಸಿಕೊಂಡು ಹೋಗಿ ನೀರಿನಿಂದ ಕೂಡಿದ ಮೋಡದಂತಿದ್ದ ಮಹಾಪರಿಮಾಣದ ಪರ್ವತವನ್ನು ದೇವತೆಗಳ ಮೇಲೆ ಎಸೆದನು.
ಪತತಾ ತೇನ ಗಿರಿಣಾ ದೇವಸೈನ್ಯಸ್ಯ ಪಾರ್ಥಿವ |
ಭೀಮರೂಪೇಣ ನಿಹತಮಯುತಂ ಪ್ರಾಪತದ್ ಭುವಿ ॥59॥
ಎಲೈ ರಾಜನೇ, ಆ ಪರ್ವತವು ಬೀಳುವಾಗ ದೇವಸೈನ್ಯದ ಹತ್ತುಸಾವಿರ ಸೈನ್ಯವು ಭಯಂಕರ ರೂಪವುಳ್ಳ ಆ ಪರ್ವತದಿಂದ ಹತವಾಗಿ ಭೂಮಿಯ ಮೇಲೆ ಬಿದ್ದಿತು.
ಅಥ ತೈರ್ದಾನವೈಃಸಾರ್ಧಂ ಮಹಿಷಸ್ತ್ರಾಸಯನ್ ಸುರಾನ್ |
ಅಭ್ಯದ್ರುವದ್ ರಣೇ ತೂರ್ಣಂ ಸಿಂಹಃ ಕ್ಷುದ್ರಮೃಗಾನಿವ ॥60॥
ಅನಂತರ ಆ ದಾನವರಿಂದ ಒಡಗೂಡಿದ ಮಹಿಷನು ದೇವತೆಗಳನ್ನು ಹೆದರಿಸುತ್ತಾ ಸಿಂಹವು ಕ್ಷುದ್ರಮೃಗಗಳ ಕಡೆಗೆ ಓಡುವಂತೆ ಯುದ್ಧದಲ್ಲಿ ದೇವತೆಗಳ ಕಡೆಗೆ ಓಡಿದನು.
ತಮಾಪತಂತಂ ಮಹಿಷಂ ದೃಷ್ಟ್ವಾ ಸೇಂದ್ರಾ ದಿವೌಕಸಃ |
ವ್ಯದ್ರುವಂತ ರಣೇ ಭೀತಾ ವಿಕೀರ್ಣಾಯುಧಕೇತನಾಃ ॥61॥
ಹಾಗೆ ಮೇಲೆರಗುತ್ತಿದ್ದ ಮಹಿಷನನ್ನು ನೋಡಿ ಇಂದ್ರಸಹಿತರಾದ ದೇವತೆಗಳು ಯುದ್ಧದಲ್ಲಿ ಭೀತರಾಗಿ ತಮ್ಮ ಆಯುಧ ಮತ್ತು ಧ್ವಜಗಳನ್ನು ಎಸೆದು ಓಡಿಹೋದರು.
ತತಃ ಸ ಮಹಿಷಃ ಕ್ರುದ್ಧಸ್ತೂರ್ಣಂ ರುದ್ರರಥಂ ಯಯೌ |
ಅಭಿದ್ರುತ್ಯ ಚ ಜಗ್ರಾಹ ರುದ್ರಸ್ಯ ರಥಕೂಬರಮ್ ॥62॥
ಆಗ ಆ ಮಹಿಷನು ಕೋಪಗೊಂಡು ಶೀಘ್ರವಾಗಿ ರುದ್ರನ ರಥಕ್ಕೆ ಹೋದನು. ಅವನು ಓಡಿಹೋಗಿ ರುದ್ರನ ರಥದ ಕೂಬರವನ್ನು (ಮೂಕಿಯನ್ನು) ಹಿಡಿದನು.
ಯದಾ ರುದ್ರರಥಂ ಕ್ರುದ್ಧೋ ಮಹಿಷಃ ಸಹಸಾ ಗತಃ |
ರೇಸತೂ ರೋದಸೀ ಗಾಢಂ ಮುಮುಹುಶ್ಚಸ್ತದಾ ॥63॥
ಕೋಪಗೊಂಡ ಮಹಿಷನು ವೇಗವಾಗಿ ಹೋಗಿ ರುದ್ರರಥವನ್ನು ಹಿಡಿದಾಗ ದ್ಯಾವಾಪೃಥಿವಿಗಳು ಗಾಢವಾಗಿ ಕಂಪಿಸಿದವು. ಋಷಿಗಳು ಮೋಹಕ್ಕೆ ಒಳಗಾದರು.
ಅನದಂಶ್ಚ ಮಹಾಕಾಯಾ ದೈತ್ಯಾ ಜಲಧರೋಪಮಾಃ |
ಆಸೀಚ್ಚ ನಿಶ್ಚಿತಂ ತೇಷಾಂ ಜಿತಮಸ್ಮಾಭಿರಿತ್ಯುತ ॥64॥
ಮಹಾಶರೀರವುಳ್ಳ ದೈತ್ಯರು ಮೋಡಗಳಂತೆ ಗುಡುಗಿದರು ಮತ್ತು ಅವರು ನಾವು ಗೆದ್ದೆವು ಎಂಬ ನಿಶ್ಚಯವುಳ್ಳವರಾಗಿದ್ದರು.
ತಥಾಭೂತೇ ತು ಭಗವಾನ್ ನಾಹನನ್ಮಹಿಷಂ ರಣೇ |
ಸಸ್ಮಾರ ಚ ತದಾ ಸ್ಕಂದಂ ಮೃತ್ಯುಂ ತಸ್ಯ ದುರಾತ್ಮನಃ ॥65॥
ಅಂತಹ ಪರಿಸ್ಥಿತಿ ಇದ್ದರೂ ಯುದ್ಧದಲ್ಲಿ ಭಗವಂತನಾದ ಶಂಕರನು ಮಹಿಷನನ್ನು ಕೊಲ್ಲಲಿಲ್ಲ. ಆ ದುರಾತ್ಮನಿಗೆ ಸ್ಕಂದನೇ ಮೃತ್ಯುವೆಂದು ಆಗ ಅವನು ಸ್ಮರಿಸಿದನು.
ಮಹಿಷೋಽಪಿ ರಥಂ ದೃಷ್ಟ್ವಾ ರೌದ್ರೋ ರುದ್ರಸ್ಯ ಚಾನದತ್ |
ದೇವಾನ್ ಸಂತ್ರಾಸಯಂಶ್ಚಾಪಿ ದೈತ್ಯಾಂಶ್ಚಾಪಿ ಪ್ರಹರ್ಷಯನ್ ॥66॥

ಘೋರನಾದ ಮಹಿಷನೂ ಸಹ ರುದ್ರನ ರಥವನ್ನು ನೋಡಿ ದೇವತೆಗಳನ್ನು ಭಯಪಡಿಸುತ್ತಾ ದೈತ್ಯರನ್ನು ಸಂತೋಷಪಡಿಸುವವನಾಗಿ ಘೋರನಾದವನ್ನು ಮಾಡಿದನು.
ತತಸ್ತಸ್ಮಿನ್ ಭಯೇ ಘೋರೇ ದೇವಾನಾಂ ಸಮುಪಸ್ಥಿತೇ |
ಆಜಗಾಮ ಮಹಾಸೇನಃ ಕ್ರೋಧಾತ್ ಸೂರ್ಯ ಇವ ಜ್ವಲನ್ ॥67॥
ಆಗ ದೇವತೆಗಳಿಗೆ ಆ ಘೋರವಾದ ಭಯವು ಪ್ರಾಪ್ತವಾಗಿರಲು ಮಹಾಸೇನನು ಸೂರ್ಯನಂತೆ ಕ್ರೋಧದಿಂದ ಬೆಳಗುತ್ತಾ ಅಲ್ಲಿಗೆ ಬಂದನು.
ಲೋಹಿತಾಂಬರಸಂವೀತೋ ಲೋಹಿತಸ್ರಗ್ವಿಭೂಷಣಃ |
ಲೋಹಿತಾಕ್ಷೋ ಮಹಾಬಾಹುರ್ಹಿರಣ್ಯಕವಚಃ ಪ್ರಭುಃ ॥68॥
ರಥಮಾದಿತ್ಯಸಂಕಾಶಮಾಸ್ಥಿತಃ ಕನಕಪ್ರಭಮ್ |
ತಂ ದೃಷ್ಟ್ವಾ ದೈತ್ಯಸೇನಾ ಸಾ ವ್ಯದ್ರುವತ್ ಸಹಸಾ ರಣೇ ॥69॥
ರಕ್ತವಸ್ತ್ರಧಾರಿಯೂ, ರಕ್ತಮಾಲಾವಿಭೂಷಿತನೂ, ರಕ್ತಾಕ್ಷನೂ, ಹಿರಣ್ಯಕವಚನೂ, ಮಹಾಬಾಹುವೂ ಆದ ಆ ಪ್ರಭುವು ಸುವರ್ಣಕಾಂತಿಯುಳ್ಳ, ಆದಿತ್ಯನಂತೆ ಹೊಳೆಯುವ ರಥವನ್ನು ಏರಿ ಬಂದನು. ಅವನನ್ನು ನೋಡಿ ದೈತ್ಯಸೈನ್ಯವು ಇದ್ದಕ್ಕಿದ್ದಂತೆಯೇ ಯುದ್ಧದಲ್ಲಿ ಓಡಿಹೋಯಿತು.
ಸ ಚಾಪಿ ತಾಂ ಪ್ರಜ್ವಲಿತಾಂ ಮಹಿಷಸ್ಯ ವಿದಾರಿಣೀಮ್ |
ಮುಮೋಚ ಶಕ್ತಿಂ ರಾಜೇಂದ್ರ ಮಹಾಸೇನೋ ಮಹಾಬಲಃ ॥70॥
ಎಲೈ ರಾಜೇಂದ್ರನೇ, ಆ ಮಹಾಬಲನಾದ ಮಹಾಸೇನನನಾದರೂ ಸಹ ಮಹಿಷನನ್ನು ಭೇದಿಸುವ ಜ್ವಾಲೆಗಳಿಂದ ಬೆಳಗುತ್ತಿದ್ದಂತಹ ಶಕ್ತ್ಯಾಯುಧವನ್ನು ಪ್ರಯೋಗಿಸಿದನು.
ಸಾ ಮುಕ್ತಾಽಭ್ಯಹರತ್ ತಸ್ಯ ಮಹಿಷಸ್ಯ ಶಿರೋ ಮಹತ್ |
ಪಪಾತ ಭಿನ್ನೇ ಶಿರಸಿ ಮಹಿಷಸ್ತ್ಯಕ್ತಜೀವಿತಃ ॥71॥
ಅವನಿಂದ ಪ್ರಯೋಗಿಸಲ್ಪಟ್ಟ ಆ ಶಕ್ತ್ಯಾಯುಧವು ಆ ಮಹಿಷನ ದೊಡ್ಡದಾದ ಶಿರಸ್ಸನ್ನು ಕತ್ತರಿಸಿತು. ಶಿರಸ್ಸು ಕತ್ತರಿಸಲ್ಪಡುತ್ತಿರಲು ಮಹಿಷನು ಪ್ರಾಣವನ್ನು ತೊರೆದು ಬಿದ್ದನು.
ಕ್ಷಿಪ್ತಾಕ್ಷಿಪ್ತಾ ತು ಸಾ ಶಕ್ತಿರ್ಹತ್ವಾ ಶತ್ರೂನ್ ಸಹಸ್ರಶಃ |
ಸ್ಕಂದಹಸ್ತಮನುಪ್ರಾಪ್ತಾ ದೃಶ್ಯತೇ ದೇವದಾನವೈಃ ॥72॥
ಮಹಾಸೇನನು ಆ ಶಕ್ತಿಯನ್ನು ಮತ್ತೆ ಮತ್ತೆ ಪ್ರಯೋಗಿಸುತ್ತಿದ್ದಂತೆ ಅದು ಸಹಸ್ರಾರು ಶತ್ರುಗಳನ್ನು ಕೊಂಡು ಪುನಃ ಸ್ಕಂದನ ಕೈ ಸೇರುತ್ತಿದ್ದುದು ದೇವತೆಗಳಿಗೆ ಮತ್ತು ದಾನವರಿಗೆ ಗೋಚರಿಸಿತು.
ಪ್ರಾಯಃ ಶರೈರ್ವಿನಿಹತಾ ಮಹಾಸೇನೇನ ಧೀಮತಾ |
ದಾನವೇಷು ಮಹಾರಾಜ ತಸ್ಮಿನ್ ದೇವಾಸುರೇ ಯುಧಿ ॥73॥
ಶೇಷಾ ದೈತ್ಯಗಣಾ ಘೋರಾ ಭೀತಾಸ್ತ್ರಸ್ತಾ ದುರಾಸದೈಃ |
ಸ್ಕಂದಪಾರಿಷದೈರ್ಹತ್ವಾ ಭಕ್ಷಿತಾಶ್ಚ ಸಹಸ್ರಶಃ ॥74॥
ಎಲೈ ಮಹಾರಾಜನೇ, ಮೇಧಾವಿಯಾದ ಮಹಾಸೇನನಿಂದ ಬಾಣಪ್ರಯೋಗದಿಂದ ದಾನವರ ಸೈನ್ಯದಲ್ಲಿ ದಾನವರು ಹೆಚ್ಚಾಗಿ ಹತರಾದರು. ಆ ದೇವಾಸುರ ಯುದ್ಧದಲ್ಲಿ ಉಳಿದ ಘೋರವಾಗಿ ಹೆದರಿ ನಡುಗಿದ ದೈತ್ಯಗಣಗಳು ದುರಾಸದರಾದ ಸ್ಕಂದಪಾರ್ಷದರಿಂದ ಸಹಸ್ರಸಂಖ್ಯೆಯಲ್ಲಿ ಕೊಂದು ತಿನ್ನಲ್ಪಟ್ಟರು.
ದಾನವಾನ್ ಭಕ್ಷಯಂತಸ್ತೇ ಪ್ರಪಿಬಂತಶ್ಚ ಶೋಣಿತಮ್ |
ಕ್ಷಣಾನ್ನಿರ್ದಾನವಂ ಸರ್ವಮಕಾರ್ಷುರ್ಭೃಶಹರ್ಷಿತಾಃ ॥75॥
ಆ ಸ್ಕಂದಪಾರ್ಷದರು ದಾನವರನ್ನು ಭಕ್ಷಿಸುತ್ತಾ ಅವರ ರಕ್ತವನ್ನು ಪಾನಮಾಡುತ್ತಾ ಬಹಳ ಹರ್ಷದಿಂದ ಕೂಡಿದವರಾಗಿ ಒಂದುಕ್ಷಣದಲ್ಲಿ ಆ ಎಲ್ಲಾ ಸೈನ್ಯವನ್ನು ನಿರ್ದಾನವವನ್ನಾಗಿ ಮಾಡಿದರು.
ತಮಾಂಸಿ ಚ ಯಥಾ ಸೂರ್ಯೋ ವೃಕ್ಷಾನಗ್ನಿರ್ಘನಾನ್ ಖಗಃ |
ತಥಾ ಸ್ಕಂದೋಽಜಯಚ್ಛತ್ರೂನ್ ಸ್ವೇನ ವೀರ್ಯೇಣ ಕೀರ್ತಿಮಾನ್ ॥
ಸೂರ್ಯನು ಕತ್ತಲೆಯನ್ನು ನಾಶಮಾಡಿದಂತೆ, ಅಗ್ನಿಯು ವೃಕ್ಷಗಳನ್ನು ನಾಶಮಾಡಿದಂತೆ, ವಾಯುವು ಮೋಡಗಳನ್ನು ನಾಶಮಾಡಿದಂತೆ ಕೀರ್ತಿಶಾಲಿಯಾದ ಸ್ಕಂದನು ತನ್ನ ಪರಾಕ್ರಮದಿಂದ ಶತ್ರುಗಳನ್ನು ಗೆದ್ದನು.
ಸಂಪೂಜ್ಯಮಾನಸ್ತ್ರಿದಶೈರಭಿವಾದ್ಯ ಮಹೇಶ್ವರಮ್ |
ಶುಶುಭೇ ಕೃತ್ತಿಕಾಪುತ್ರಃ ಪ್ರಕೀರ್ಣಾಂಶುರಿವಾಂಶುಮಾನ್ ॥77॥
ದೇವತೆಗಳಿಂದ ಪೂಜಿಸಲ್ಪಟ್ಟು ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ ಎಲ್ಲಕಡೆಗಳಲ್ಲಿಯೂ ಹರಡಿದ ಕಿರಣಗಳುಳ್ಳ ಸೂರ್ಯನಂತೆ ಕೃತ್ತಿಕಾಪುತ್ರನು ಶೋಭಿಸಿದನು.
ನಷ್ಟಶತ್ರುರ್ಯದಾ ಸ್ಕಂದಃ ಪ್ರಯಾತಸ್ತು ಮಹೇಶ್ವರಮ್ |
ತದಾಬ್ರವೀನ್ಮಹಾಸೇನಂ ಪರಿಷ್ವಜ್ಯ ಪುರಂದರಃ ॥78॥
ಸ್ಕಂದನು ಶತ್ರುಗಳನ್ನು ನಾಶಮಾಡಿ ಮಹೇಶ್ವರನ ಬಳಿಗೆ ಹೋದಾಗ ಪುರಂದರನು ಮಹಾಸೇನನನ್ನು ಆಲಿಂಗಿಸಿ ಹೀಗೆ ಮಾತನಾಡಿದನು.
ಬ್ರಹ್ಮದತ್ತವರಃ ಸ್ಕಂದ ತ್ವಯಾಽಯಂ ಮಹಿಷೋ ಹತಃ |
ಅಜೇಯೋ ಯುಧಿ ದೇವಾನಾಂ ದಾನವಃ ಸುಮಹಾಬಲಃ ॥79॥

ಎಲೈ ಸ್ಕಂದನೇ, ಬ್ರಹ್ಮನಿಂದ ವರವನ್ನು ಪಡೆದು ಯುದ್ಧದಲ್ಲಿ ದೇವತೆಗಳಿಂದ ಅಜೇಯನಾದ ಮಹಾಬಲಿಷ್ಠನಾದ ಈ ಮಹಿಷದಾನವನು ನಿನ್ನಿಂದ ಹತನಾಗಿದ್ದಾನೆ.
ದೇವಾಸ್ತೃಣಸಮಾ ಯಸ್ಯ ಬಭೂವುರ್ಜಯತಾಂ ವರ |
ಸೋಽಯಂ ತ್ವಯಾ ಮಹಾಬಾಹೋ ಶಮಿತೋ ದೇವಕಂಟಕಃ ॥80॥
ಎಲೈ ಜಯಿಸಾವವರಲ್ಲಿ ಶ್ರೇಷ್ಠನಾದವನೇ, ಯಾವನಿಗೆ ದೇವತೆಗಳು ತೃಣಕ್ಕೆ ಸಮಾನರಾಗಿದ್ದರೋ ಅಂತಹ ದೇವಕಂಟಕನಾದ ಇವನು ಎಲೈ ಮಹಾಬಾಹುವೇ, ನಿನ್ನಿಂದ ಶಾಂತಗೊಳಿಸಲ್ಪಟ್ಟಿದ್ದಾನೆ.
ಶತಂ ಮಹಿಷತುಲ್ಯಾನಾಂ ದಾನವಾನಾಂ ಮಹಾ(ತ್ವಯಾ)ರಣೇ |
ನಿಹತಂ ದೇವಶತ್ರೂಣಾಂ ಯೈರ್ವಯಂ ಪೂರ್ವತಾಪಿತಾಃ ॥81॥
ಯಾರಿಂದ ನಾವು ಹಿಂದೆ ಉಪದ್ರವಕ್ಕೆ ಒಳಗಾಗಿದ್ದೆವೋ ಅಂತಹ ಆ ದೇವಶತ್ರುಗಳಾದ ಮಹಿಷನಿಗೆ ಸಮಾನರಾದ ದಾನವರು ಒಂದು ನೂರುಜನ ಯುದ್ಧದಲ್ಲಿ ನಿನ್ನಿಂದ ಹತರಾಗಿದ್ದಾರೆ.
ತಾವಕೈರ್ಭಕ್ಷಿತಾಶ್ಚಾನ್ಯೇ ದಾನವಾಃ ಶತಸಂಘಶಃ |
ಅಜೇಯಸ್ತ್ವಂ ರಣೇಽರೀಣಾಮುಮಾಪತಿರಿವ ಪ್ರಭುಃ |
ಭವತೋಽನುಚರೈರ್ವೀರ ಗಣ್ಯೈಃ ಪರಮಭೀಷಣೈಃ ॥82॥
ಉಳಿದ ದಾನವರು ಶತಸಂಖ್ಯೆಗಳಲ್ಲಿ ನಿನ್ನ ಸೈನ್ಯದಿಂದ ಭಕ್ಷಿಸಲ್ಪಟ್ಟಿದ್ದಾರೆ. ಎಲೈ ವೀರನೇ, ಪರಮಭೀಷಣರಾದ ನಿನ್ನ ಅನುಚರರಿಂದ ಕೂಡಿದ ನೀನು ಯುದ್ಧದಲ್ಲಿ ಪ್ರಭುವಾದ ಉಮಾಪತಿಯಂತೆ ಶತ್ರುಗಳಿಂದ ಅಜೇಯನಾಗಿದ್ದೀಯೆ.
ಏತತ್ತೇ ಪ್ರಥಮಂ ದೇವ ಖ್ಯಾತಂ ಕರ್ಮ ಭವಿಷ್ಯತಿ |
ತ್ರಿಷು ಲೋಕೇಷು ಕೀರ್ತಿಶ್ಚ ತವಾಕ್ಷಯ್ಯಾ ಭವಿಷ್ಯತಿ ॥83॥
ವಶಗಾಶ್ಚ ಭವಿಷ್ಯಂತಿ ಸುರಾಸ್ತವ ಸುರಾತ್ಮಜ ॥84॥
ಎಲೈ ದೇವನೇ, ಈ ನಿನ್ನ ಪ್ರಥಮ ಕರ್ಮವು ಲೋಕದಲ್ಲಿ ಪ್ರಖ್ಯಾತವಾಗುವುದು. ಮೂರುಲೋಕಗಳಲ್ಲಿಯೂ ನಿನ್ನ ಕೀರ್ತಿಯು ಅಕ್ಷಯವಾಗುವುದು. ಎಲೈ ಸುರಾತ್ಮಜನೇ, ದೇವತೆಗಳು ಎಲ್ಲರೂ ನಿನಗೆ ವಶರಾಗುವರು.
ಮಾರ್ಕಂಡೇಯಃ
ಏವಮುಕತ್ವ ಮಹಾಸೇನಂ ನಿವೃತ್ತಃ ಸಹ ದೈವತೈಃ |
ಅನುಜ್ಞಾತೋ ಭಗವತಾ ತ್ರ್ಯಂಬಕೇಣ ಶಚೀಪತಿಃ ॥85॥
ಮಾರ್ಕಂಡೇಯ ಮಹಾಸೇನನಿಗೆ ಹೀಗೆ ಹೇಳಿ ಶಚೀಪತಿಯು ಪೂಜ್ಯನಾದ ಶಂಕರನಿಂದ ಅನುಮತಿಯನ್ನು ಪಡೆದು ದೇವತೆಗಳ ಜೊತೆಯಲ್ಲಿ ಹಿಂದಿರುಗಿದನು.
ಗತೋ ಭದ್ರವಟಂ ರುದ್ರೋ ನಿವೃತ್ತಾಶ್ಚ ದಿವೌಕಸಃ |
ಉಕ್ತಾಶ್ಚ ದೇವಾ ರುದ್ರೇಣ ಸ್ಕಂದಂ ಪಶ್ಯತ ಮಾಮಿವ ॥86॥
ರುದ್ರನು ಭದ್ರವಟಕ್ಕೆ ಹೋದನು. ದೇವತೆಗಳೂ ಹಿಂದಿರುಗಿದರು. ದೇವತೆಗಳನ್ನು ಕುರಿತು ರುದ್ರನು ಸ್ಕಂದನನ್ನು ನನ್ನಂತೆ ನೋಡಿ ಎಂದು ಹೇಳಿದನು.
ಸ ಹತ್ವಾ ದಾನವಗಣಾನ್ ಪೂಜ್ಯಮಾನೋ ಮಹರ್ಷಿಭಿಃ |
ಏಕಾಹ್ನೈವಾಜಯತ್ ಸರ್ವಂ ತ್ರೈಲೋಕ್ಯಂ ವಹ್ನಿನಂದನಃ ॥87॥
ವಹ್ನಿನಂದನನಾದ ಆ ಮಹಾಸೇನನು ದಾನವಗಣಗಳನ್ನು ಸಂಹರಿಸಿ ಮಹರ್ಷಿಗಳಿಂದ ಪೂಜಿತನಾಗಿ ಒಂದುದಿನದಲ್ಲಿಯೇ ಮೂರುಲೋಕಗಳನ್ನೂ ಗೆದ್ದನು.
ಸ್ಕಂದಸ್ಯ ಯ ಇದಂ ವಿಪ್ರಃ ಪಠೇಜ್ಜನ್ಮ ಸಮಾಹಿತಃ |
ಸ ಪುಷ್ಟಿಮಿಹ ಸಂಪ್ರಾಪ್ಯ ಸ್ಕಂದಸಾಲೋಕ್ಯಮಾಪ್ನುಯಾತ್ ॥88॥
ಸ್ಕಂದನ ಈ ಜನ್ಮಚರಿತ್ರೆಯನ್ನು ಯಾವ ವಿಪ್ರನು ಶುದ್ಧಮನಸ್ಸಿನಿಂದ ಪಠಿಸುವನೋ ಅವನು ಈ ಲೋಕದಲ್ಲಿ ಪುಷ್ಟಿಯನ್ನು ಹೊಂದಿ ಪರಲೋಕದಲ್ಲಿ ಸ್ಕಂದಸಾಲೋಕ್ಯವನ್ನು ಪಡೆಯುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕವಿಂಶತ್ಯಧಿಕದ್ವಿಶತಶತತಮೋಽಧ್ಯಾಯಃ ॥
॥ಇತಿ ಮಾರ್ಕಂಡೇಯಸಮಸ್ಯಾಪರ್ವಣಿ ಸ್ಕಾಂದೋಪಾಖ್ಯಾನೇ ನವಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು
॥ ಮಾರ್ಕಂಡೇಯ ಸಮಾಸ್ಯಾಪರ್ವ ಸಮಾಪ್ತಂ ॥
* * * *
ದ್ರೌಪದೀಸತ್ಯಭಾಮಾಸಂವಾದಪರ್ವ
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ತತೋಽಮಿತೌಜಾ ಭಗವಾನುಪಾಗಮ-
ನ್ನಾರಾಯಣಃ ಸತ್ಯಭಾಮಾಸಹಾಯಃ |
ಸಂಪೂಜಿತಃ ಪಾಂಡವೈಸ್ತೈಃ ಸಮೇತ-
ಶ್ಚಕ್ರೇಽಥ ಸೌಹಾರ್ದನಿಮಿತ್ತಸತ್ಕಥಾಃ ॥358॥

ಬಳಿಕ ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣ ಸತ್ಯಭಾಮಾಸಮೇತನಾಗಿ ಅಲ್ಲಿಗೆ ಬಂದು ಪಾಂಡವರಿಂದ ಪೂಜಿತನಾಗಿ ಅವರೊಂದಿಗೆ ಸೌಹಾರ್ದದಿಂದ ವಿನೋದದ ಮಾತುಕತೆಗಳನ್ನಾಡಿದ.
ಕೃಷ್ಣಾ ಚ ಸತ್ಯಾ ಚ ಪರಸ್ಪರಂ ಮುದಾ
ಸಂಭಾಷಣಂ ಚಕರುತಯೋರ್ಷಿದಗ್ರ್ಯೇ |
ಪರೀಕ್ಷಯಂತ್ಯಾ ಸತ್ಯಯಾ ಸರ್ವವೇತ್ತ್ರ್ಯಾ
ನಿರ್ದೋಷಯಾ ಚೋದಿತಾ ಪ್ರಾಹ ಕೃಷ್ಣಾ ॥359॥
ಸ್ತ್ರೀಧರ್ಮಾನಖಿಲಾಂಸ್ತತ್ರ ಸತ್ಯಾಂ ನಿರ್ದೋಷಸಂವಿದಮ್ |
ಜ್ಞಾತ್ವಾಽಪಿ ಕೃಷ್ಣಾ ಪ್ರೋವಾಚ ಲೋಕಶಿಕ್ಷಾರ್ಥಮೇವ ತು ॥360॥
ಸ್ತ್ರೀಯರಲ್ಲಿ ಉತ್ತಮರಾದ ದ್ರೌಪದಿಯೂ ಸತ್ಯಭಾಮೆಯೂ ಪರಸ್ಪರ ಸಂಭಾಷಣೆಗೈದರು. ಸರ್ವಜ್ಞಳಾದ ನಿರ್ದೋಷಳಾದ ಸತ್ಯಭಾಮೆ ದ್ರೌಪದಿಯ ಧರ್ಮ ಕೌಶಲವನ್ನು ವಿನೋದಕ್ಕಾಗಿ ಪರೀಕ್ಷಿಸುತ್ತ ಪ್ರಶ್ನಿಸಿದಾಗ ದ್ರೌಪದಿ ಎಲ್ಲ ಸ್ತ್ರೀಧರ್ಮಗಳನ್ನೂ ಹೇಳಿದಳು. ಸತ್ಯಭಾಮೆ ನಿರ್ದುಷ್ಟ ಜ್ಞಾನವುಳ್ಳವಳೆಂದು ತಿಳಿದೂ ಕೂಡ ದ್ರೌಪದಿ ಲೋಕಶಿಕ್ಷಾರ್ಥವಾಗಿ ಅವಳಿಗೆ ಎಲ್ಲ ಸ್ತ್ರೀಧರ್ಮಗಳನ್ನೂ ಉಪದೇಶಿಸಿದಳು.
ಕ್ರೀಡಾರ್ಥಮೇವ ವಚನಂ ಜ್ಞಾತ್ವಾ ಸತ್ಯಾಸಮೀರಿತಮ್ |
ತಸ್ಯಾನುಸಾರಿವಾಕ್ಯಾನಿ ತತ್ಪ್ರೀತ್ಯಾ ಏವ ಸಾಽಬ್ರುವೀತ್ ॥361॥
ಸತ್ಯಭಾಮೆ ಹೇಳಿದ ಮಾತು ವಿನೋದಕ್ಕಾಗಿಯೇ ಹೇಳಿದ್ದೆಂದು ತಿಳಿದು ಅದಕ್ಕೆ ಅನುಸಾರವಾದ ಮಾತುಗಳನ್ನೇ, ಅವಳಿಗೆ ಪ್ರೀತಿಯಾಗಲೆಂದೇ, ದ್ರೌಪದಿ ಆಡಿದಳು.
* * * *

ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ
ಸತ್ಯಭಾಮಾ ದ್ರೌಪದಿಯರ ಸಂವಾದ. ದ್ರೌಪದಿಯಿಂದ ಪತಿವ್ರತಾಧರ್ಮಕಥನ.
ವೈಶಂಪಾಯನಃ
ಉಪಾಸೀನೇಷು ವಿಪ್ರೇಷು ಪಾಂಡವೇಷು ಮಹಾತ್ಮಸು |
ದ್ರೌಪದೀ ಸತ್ಯಭಾಮಾ ಚ ವಿವಿಶಾತೇ ತದಾ ಸಮಮ್ ॥1॥
ವೈಶಂಪಾಯನ ಮಹಾತ್ಮರಾದ ಪಾಂಡವರು ಮತ್ತು ಬ್ರಾಹ್ಮಣರು ಕೃಷ್ಣನ ಬಳಿ ಕುಳಿತಿರುವಾಗ ದ್ರೌಪದಿ ಮತ್ತು ಸತ್ಯಭಾಮೆಯರು ಒಟ್ಟಿಗೆ ಆಶ್ರಮವನ್ನು ಪ್ರವೇಶಿಸಿದರು.
ಪ್ರವಿಶ್ಯ ಚಾಶ್ರಮಂ ರಮ್ಯಮುಭೇ ತೇ ಪರಮಸ್ತ್ರಿಯೌ |
ಜಹಾಸ್ಯಮಾನೇ ಸುಪ್ರೀತೇ ಸುಖಂ ತತ್ರ ನ್ಯಷೀದತಾಮ್ ॥2॥
ಆ ಇಬ್ಬರು ಶ್ರೇಷ್ಠ ಸ್ತ್ರೀಯರು ರಮ್ಯವಾಗಿದ್ದ ಆಶ್ರಮವನ್ನು ಪ್ರವೇಶಿಸಿ ಸುಪ್ರೀತರಾಗಿ ನಗುತ್ತಾ ಅಲ್ಲಿ ಸುಖವಾಗಿ ಕುಳಿತುಕೊಂಡರು.
ಚಿರಸ್ಯ ದೃಷ್ಟ್ವಾ ರಾಜೇಂದ್ರ ತೇಽನ್ಯೋನ್ಯಸ್ಯ ಪ್ರಿಯಂವದೇ |
ಕಥಯಾಮಾಸತುಶ್ಚಿತ್ರಾಃ ಕಥಾಃ ಕುರುಯದೂತ್ಥಿತಾಃ ॥3॥
ಎಲೈ ರಾಜೇಂದ್ರನೇ, ಪರಸ್ಪರವಾಗಿ ಪ್ರಿಯವನ್ನು ಮಾತನಾಡುವ ಅವರಿಬ್ಬರೂ ಒಬ್ಬರನ್ನೊಬ್ಬರು ಬಹಳಕಾಲದ ಮೇಲೆ ನೋಡಿ ಕುರುವಂಶ ಮತ್ತು ಯದುವಂಶಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳ ಬಗ್ಗೆ ಮಾತನಾಡಿದರು.
ಅಥಾಬ್ರುವೀತ್ ಸತ್ಯಭಾಮಾ ಕೃಷ್ಣಸ್ಯ ಮಹಿಷೀ ಪ್ರಿಯಾ |
ಸಾತ್ರಾಜಿತೀ ಯಾಜ್ಞಸೇನೀಂ ರಹಸೀದಂ ಸುಮಧ್ಯಮಾ ॥4॥
ಅನಂತರ ಸತ್ರಾಜಿತನ ಮಗಳಾದ ಕೃಷ್ಣನ ಪ್ರಿಯಮಹಿಷಿಯಾದ ಸುಂದರಿಯಾದ ಸತ್ಯಭಾಮೆಯು ಏಕಾಂತದಲ್ಲಿ ಯಜ್ಞಸೇನನ ಮಗಳಾದ ದ್ರೌಪದಿಯನ್ನು ಕುರಿತು ಹೀಗೆ ಮಾತನಾಡಿದಳು.
ಕೇನ ದ್ರೌಪದಿ ವೃತ್ತೇನ ಪಾಂಡವಾನಧಿತಿಷ್ಠಸಿ |
ಲೋಕಪಾಲೋಪಮಾನ್ ವೀರಾನ್ ಪುನಃ ಪರಮಸಮ್ಮತಾನ್ ॥5॥
ದ್ರೌಪದಿಯೇ, ಲೋಕಪಾಲಕರಿಗೆ ಸದೃಶರಾದ ಮತ್ತು ಪರಮಸಮ್ಮತರಾದ ಪಾಂಡವರನ್ನು ನೀನು ಯಾವ ನಡತೆಯಿಂದ ವಶಪಡಿಸಿಕೊಂಡಿದ್ದೀಯೆ?
ಕಥಂ ಚ ವಶಗಾಸ್ತುಭ್ಯಂ ನ ಕುಪ್ಯಂತಿ ಚ ತೇ ಶುಭೇ
ತವ ವಶ್ಯಾ ಹಿ ಸತತಂ ಪಾಂಡವಾಃ ಪ್ರಿಯದರ್ಶನೇ ॥6॥
ಅವರು ಹೇಗೆ ನಿನ್ನ ವಶವಾಗಿದ್ದಾರೆ? ಶುಭಸ್ವರೂಪಳೇ, ಅವರು ನಿನ್ನ ಮೇಲೆ ಕೋಪಗೊಳ್ಳುವುದಿಲ್ಲ. ಪ್ರಿಯದರ್ಶನೆಯೇ, ಪಾಂಡವರು ಸತತವಾಗಿ ನಿನಗೆ ವಶವಾಗಿದ್ದಾರಷ್ಟೆ?
ನ ಚಾನ್ಯೋನ್ಯಮಾಸಾಯಂತೇ ಕಥಂ ವಾ ತೇ ಸುಮಧ್ಯಮೇ |
ಮುಖಪ್ರೇಕ್ಷಾಶ್ಚ ತೇ ಸರ್ವೇ ತತ್ತ್ವಮೇತದ್ ಬ್ರವೀಹಿ ಮೇ ॥7॥
ಸುಂದರಿಯೇ, ಅವರು ಪರಸ್ಪರವಾಗಿ ಅಸೂಯೆಯನ್ನು ಪಡುವುದಿಲ್ಲ. ಅವರೆಲ್ಲರೂ ನಿನ್ನ ಮುಖವನ್ನೇ ನೋಡಿಕೊಂಡಿರುತ್ತಾರೆ (ನೀನು ಹೇಳಿದಂತೆ ಕೇಳುತ್ತಾರೆ). ಇದರ ರಹಸ್ಯವನ್ನು ನನಗೆ ತಿಳಿಸು.
ವ್ರತಚರ್ಯಾ ತಪೋ ವಾಪಿ ಸ್ನಾನಮಂತ್ರೌಷಧಾನಿ ವಾ |
ವಿದ್ಯಾವೀರ್ಯಂ ಮೂಲವೀರ್ಯಂ ಜಪಹೋಮಾಗದಾಸ್ತಥಾ ॥8॥

ಮಮಾದ್ಯಾಚಕ್ಷ್ವ ಪಾಂಚಾಲಿ ಯಶಸ್ಯಂ ಭಗದೈವತಮ್ |
ಯೇನ ಕೃಷ್ಣೇ ಭವೇನ್ನಿತ್ಯಂ ಮಮ ಕೃಷ್ಣೋ ವಶಾನುಗಃ ||9||
ಪಾಂಚಾಲಿಯೇ, ವ್ರತಚರ್ಯ ಅಥವಾ ತಪಸ್ಸು ಅಥವಾ ಸ್ನಾನಮಂತ್ರೌಷಧಿಗಳು ಅಥವಾ ವಿದ್ಯಾಸಾಮರ್ಥ್ಯ ಅಥವಾ ಮೂಲಿಕೆಗಳ ಸಾಮರ್ಥ್ಯ, ಜಪಹೋಮ ಔಷಧಿಗಳು ಇವುಗಳಲ್ಲಿ ಯಾವುದನ್ನು ಮಾಡಿದರೆ ಕೃಷ್ಣನು ಯಾವಾಗಲೂ ನನಗೆ ವಶನಾಗುತ್ತಾನೆ? ಎಲೌ ಕೃಷ್ಣೆಯೇ, ಅಂತಹ ಯಶಸ್ಸಿಗೆ ಮತ್ತು ಸೌಭಾಗ್ಯಕ್ಕೆ ಕಾರಣವಾದ ಉಪಾಯವನ್ನು ನನಗೆ ಈ ದಿನ ಹೇಳು.
ವೈಶಂಪಾಯನಃ
ಏವಮುಕತ್ತ್ವ ಸತ್ಯಭಾಮಾ ವಿರರಾಮ ಯಶಸ್ವಿನೀ |
ಪತಿವ್ರತಾ ಮಹಾಭಾಗಾ ದ್ರೌಪದೀ ಪ್ರತ್ಯುವಾಚ ತಾಮ್ ||10||
ವೈಶಂಪಾಯನ ಹೀಗೆ ಹೇಳಿ ಯಶಸ್ವಿನಿಯಾದ ಸತ್ಯಭಾಮೆಯು ಸುಮ್ಮನಾದನು. ಪತಿವ್ರತೆಯೂ ಮಹಾನುಭಾವಳೂ ಆದ ದ್ರೌಪದಿಯು ಅವಳಿಗೆ ಉತ್ತರವನ್ನು ಕೊಟ್ಟಳು.
ದ್ರೌಪದೀ
ಅಸತ್ಸ್ತ್ರೀಣಾಂ ಸಮಾಚಾರಂ ಸತ್ಯೇ ಮಾಮನುಪೃಚ್ಛಸಿ |
ಅಸದಾಚರಿತೇ ಮಾರ್ಗೇ ಕಥಂ ಸ್ಯಾದನುಕೀರ್ತನಮ್ ||11||
ದ್ರೌಪದಿ ಸತ್ಯಭಾಮೆಯೇ, ದುಷ್ಟಸ್ತ್ರೀಯರ ಸಮಾಚಾರವನ್ನು ನನ್ನನ್ನು ಕುರಿತು ಕೇಳುತ್ತಿದ್ದೀಯೆ. ದುಷ್ಟರು ನಡೆಯುವ ಮಾರ್ಗವನ್ನು ನಾವು ಮಾತನಾಡುವುದಾದರೂ ಹೇಗೆ?
ಅನುಪ್ರಶ್ನಃ ಸಂಶಯೋ ವಾ ನೈತತ್ ತ್ವಯ್ಯುಪಪದ್ಯತೇ |
ತಥಾ ಹ್ಯುಪೇತಾ ಬುದ್ಧ್ಯಾ ತ್ವಂ ಕೃಷ್ಣಸ್ಯ ಮಹಿಷೀ ಪ್ರಿಯಾ ||12||
ಇನ್ನು ಈ ಪ್ರಶ್ನೆಯನ್ನು ಸಂಶಯದಿಂದಾಗಲೀ ಅಥವಾ ಅಜ್ಞಾನದಿಂದಲಾಗಲೀ ಮಾಡಿರುವೆ ಎಂದು ತಿಳಿಯಲು ಸಾಧ್ಯವಿಲ್ಲ. ಏಕೆಂದರೆ ನೀನು ಕೃಷ್ಣನಿಗೆ ಪ್ರಿಯಳಾದ ಮಹಿಷಿ ಮತ್ತು ಯಾವಾಗಲೂ ಅಂತಹ ಸದ್ಬುದ್ಧಿಯಿಂದ ಕೂಡಿದವಳು.
ಯದೈವ ಭರ್ತಾ ಜಾನೀಯಾನ್ ಮಂತ್ರಮೂಲಪರಾಂ ಸ್ತ್ರಿಯಮ್ |
ಉದ್ವಿಜೇತ ತದೈವಾಸ್ಯಾಃ ಸರ್ಪಾದ್ ವೇಶ್ಮಗತಾದಿವ ||13||
ಯಾವಾಗ ಪತಿಯು ತನ್ನ ಪತ್ನಿಯು ಮಂತ್ರಗಳನ್ನು ಮತ್ತು ಮೂಲಿಕೆಗಳನ್ನು ಆಶ್ರಯಿಸುತ್ತಿದ್ದಾಳೆ ಎಂದು ತಿಳಿಯುವನೋ ಆಗ ಮನೆಯಲ್ಲಿ ಪ್ರವೇಶಿಸಿದ ಸರ್ಪಕ್ಕೆ ಹೆದರುವಂತೆ ಪತಿಯು ಅವಳಿಗೆ ಹೆದರುತ್ತಾನೆ.
ಉದ್ವಿಗ್ನಸ್ಯ ಕುತಃ ಶಾಂತಿರಶಾಂತಸ್ಯ ಕುತಃ ಸುಖಮ್ |
ನ ಜಾತು ವಶಗೋ ಭರ್ತಾ ಸ್ತ್ರಿಯಾಃ ಸ್ಯಾನ್ಮಂತ್ರಕರ್ಮಣಾ ||14||
ಭೀತನಾದವನಿಗೆ ಎಲ್ಲಿಯ ಶಾಂತಿ? ಶಾಂತಿಯಿಲ್ಲದವನಿಗೆ ಎಲ್ಲಿಯ ಸುಖ? ಹೆಂಗಸಿನ ಮಂತ್ರಕರ್ಮಗಳಿಂದ ಎಂದೂ ಪತಿಯು ವಶನಾಗುವುದಿಲ್ಲ.
ಅಮಿತ್ರಪ್ರಹಿತಾಂಶ್ಚಾಪಿ ಗದಾನ್ ಪರಮದಾರುಣಾನ್ |
ಮೂಲವಾದೈರ್ಹಿ ವಿಷಂ ಪ್ರಯಚ್ಛಂತಿ ಜಿಘಾಂಸವಃ ||15||
ಪತಿಯನ್ನೇ ಕೊಲ್ಲಲು ಬಯಸುವ ದುಷ್ಟಸ್ತ್ರೀಯರು ಪತಿಯ ವಿರೋಧಿಗಳಿಂದ ಕಳುಹಿಸಲ್ಪಟ್ಟ ಪರಮದಾರುಣವಾದ ವ್ಯಾಧಿಗಳನ್ನು ತರುವ ವಿಷವನ್ನು ಇದು ಒಳ್ಳೆಯ ಮೂಲಿಕೆ ಎಂಬ ಮಾತುಗಳಿಂದ ಪತಿಗೆ ನೀಡುತ್ತಾರೆ.
ಜಿಹ್ವಯಾ ಯಾನಿ ಪುರುಷಸ್ತ್ವಚಾ ವಾಽಪ್ಯುಪಸೇವತೇ |
ತಾನಿ ಚೂರ್ಣಾನಿ ದತ್ತಾನಿ ಹನ್ಯುಃ ಕ್ಷಿಪ್ರಮಸಂಶಯಮ್
ಪುರುಷನು ಯಾವುದನ್ನು ನಾಲಿಗೆಯಿಂದ ಸೇವಿಸುತ್ತಾನೋ ಅಥವಾ ಚರ್ಮದ ಮೇಲೆ ಲೇಪಿಸುತ್ತಾನೆಯೋ ಅಲ್ಲಿ ದುಷ್ಟ ಚೂರಣವನ್ನು ಕೊಟ್ಟರೆ ಅದು ನಿಸ್ಸಂಶಯವಾಗಿ ಅವನನ್ನು ಕೊಲ್ಲುತ್ತದೆ.
ಜಲೋದರಸಮಾಯುಕ್ತಾಃ ಶ್ವಿತ್ರಿಣಃ ಪಲಿತಾಸ್ತಥಾ |
ಅಪುಂಭಿಃ ಸತ್ಕೃತಾ ಸ್ತ್ರೀಭಿಃ ಜಡಾಂಧಬಧಿರಾಸ್ತಥಾ ||17||
ಜಲೋದರದಿಂದ ಕೂಡಿದ, ಶ್ವಿತ್ರದಿಂದ ಕೂಡಿದ ಮತ್ತು ನೆರೆತ ಪತಿಗಳನ್ನು ಸ್ತ್ರೀಯರು ನಪುಂಸಕರಿಗೆ ಮತ್ತು ಜಡಾಂಧಬಧಿರರಿಗೆ ಸಮಾನವಾಗಿ ಕಾಣುತ್ತಾರೆ.
ಪಾಪಾನುಗಾಸ್ತು ಪಾಪಾಸ್ತಾಃ ಪತೀನುಪಸೃಜಂತ್ಯುತ |
ನ ಜಾತು ವಿಪ್ರಿಯಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂಚನ ||18||
ಪಾಪಿಷ್ಠರಾದ ಸ್ತ್ರೀಯರನ್ನು ಅನುಸರಿಸುವ ಅವರು ತಮ್ಮ ಪತಿಗಳಿಗೆ ವಿರೋಧವನ್ನು ಮಾಡುತ್ತಾರೆ. ಸ್ತ್ರೀಯರು ಎಂದೂ ಯಾವ ಕಾರಣದಿಂದಲೂ ಪತಿಗೆ ವಿಪ್ರಿಯವನ್ನು ಮಾಡಬಾರದು.
ವರ್ತಾಮ್ಯಹಂ ತು ಯಾಂ ವೃತ್ತಿಂ ಪಾಂಡವೇಷು ಮಹಾತ್ಮಸು |
ತತ್ ಸರ್ವಂ ಶೃಣು ಮೇ ವೃತ್ತಂ ಸತ್ಯಭಾಮೇ ಯಶಸ್ವಿನಿ ||19||
ಯಶಸ್ವಿನಿಯಾದ ಸತ್ಯಭಾಮೆಯೇ, ನಾನು ಮಹಾತ್ಮರಾದ ಪಾಂಡವರ ವಿಷಯದಲ್ಲಿ ಯಾವ ನಡತೆಯನ್ನು ಇಟ್ಟುಕೊಂಡಿದ್ದೇನೆಯೋ ಅದೆಲ್ಲವನ್ನೂ ನೀನು ನನ್ನಿಂದ ಕೇಳು.
ಅಹಂಕಾರಂ ವಿಹಾಯಾಹಂ ಕಾಮಕ್ರೋಧೌ ಚ ಸರ್ವದಾ |
ಸದಾರಾನ್ ಪಾಂಡವಾನ್ ನಿತ್ಯಂ ಪ್ರಯತೋಪಚರಾಮ್ಯಹಮ್ ||20||
ನಾನು ಅಹಂಕಾರವನ್ನೂ, ಕಾಮಕ್ರೋಧಗಳನ್ನೂ ಬಿಟ್ಟು ಯಾವಾಗಲೂ ಎಚ್ಚರಿಕೆಯಿಂದ ಪತ್ನಿಯ ಸಹಿತರಾದ ಪಾಂಡವರಿಗೆ

ಉಪಚಾರವನ್ನು ಮಾಡುತ್ತಿರುತ್ತೇನೆ (ಪಾಂಡವರಿಗೆ ದ್ರೌಪದಿಯಲ್ಲದೆ ಬೇರೆ ಪತ್ನಿಯರೂ ಇದ್ದಾರೆ).
ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ |
ಶುಶ್ರೂಷುರ್ನಿರಹಂಕಾರಾ(ಮಾನಾ) ಪತೀನಾಂ ಚಿತ್ತರಕ್ಷಿಣೀ ॥21॥
ನನ್ನ ಪ್ರೀತಿಯನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು (ಪ್ರೀತಿಯಿಂದ ಅವರ ಜೊತೆಯಲ್ಲಿ ಹಗುರವಾಗಿ ವರ್ತಿಸದೆ) ನನ್ನ ಬುದ್ಧಿಯಿಂದ ಮನಸ್ಸನ್ನು ನಿಯಂತ್ರಿಸಿಕೊಂಡು ಅಹಂಕಾರವನ್ನು ಬಿಟ್ಟು ಅವರ ಸೇವೆಯನ್ನು ಮಾಡಿ ಯಾವಾಗಲೂ ಪತಿಗಳ ಚಿತ್ತವನ್ನು ರಕ್ಷಿಸುತ್ತೇನೆ.
ದುರ್ವ್ಯಾಹೃತಾಚ್ಛಂಕಮಾನಾ ದುಃಸ್ಥಿತಾದ್ ದುರವೇಕ್ಷಿತಾತ್ |
ದುರಾಸೀತಾದ್ ದುರ್ವ್ರಜಿತಾದಿಂಗತಾಧ್ಯಾಸಿತಾದಪಿ ॥22॥
ಸೂರ್ಯವೈಶ್ವಾನರಸಮಾನ್ ಸೋಮಕಲ್ಪಾನ್ ಮಹಾರಥಾನ್ |
ಸೇವೇ ಶತ್ರು(ಚಕ್ಷು)ರ್ಹಣಃ ಪಾರ್ಥಾನುಗ್ರವೀರ್ಯಪ್ರತಾಪಿನಃ ॥23॥
ಕೆಟ್ಟ ಮಾತುಗಳು, ಕೆಟ್ಟ ಸ್ಥಾನದಲ್ಲಿ ನಿಲ್ಲುವುದು, ಕೆಟ್ಟ ನೋಟಗಳು, ಕೆಟ್ಟ ಸ್ಥಾನದಲ್ಲಿ ಕೂಡುವುದು, ಕೆಟ್ಟ ಸ್ಥಾನಕ್ಕೆ ಹೋಗುವುದು ಕೆಟ್ಟ ಇಂಗಿತಾದಿಗಳನ್ನು ಮಾಡುವುದು ಇಂತಹ ದುಷ್ಪ್ರವರ್ತನಗಳಿಗೆ ಹೆದರಿ (ಇಂತಹ ದುರ್ಗುಣಗಳು ಬರದಂತೆ) ಸೂರ್ಯ, ಅಗ್ನಿ, ಚಂದ್ರರಿಗೆ ಸಮಾನರಾದ ಉಗ್ರ ಬಲಪರಾಕ್ರಮಗಳನ್ನು ಹೊಂದಿರುವ ಶತ್ರುಸಂಹಾರಕರಾದ ಮಹಾರಥರಾದ ಪಾಂಡವರ ಸೇವೆಯನ್ನು ಅವರ ಇಂಗಿತವನ್ನು ತಿಳಿದು ಮಾಡುತ್ತೇನೆ.
ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ |
ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ ॥24॥
ದೇವತೆಯನ್ನಾಗಲೀ, ಮನುಷ್ಯನನ್ನಾಗಲೀ, ಗಂಧರ್ವನನ್ನಾಗಲೀ ಚೆನ್ನಾಗಿ ಅಲಂಕೃತನಾದ ಯುವಕನನ್ನಾಗಲೀ, ಧನವಂತನನ್ನಾಗಲೀ ಅಥವಾ ಸುಂದರನನ್ನಾಗಲೀ ನಾನು ಇನ್ನೊಬ್ಬನನ್ನು ಪುರುಷನೆಂದು ಭಾವಿಸುವುದಿಲ್ಲ.
ನಭುಕ್ತವತಿ ನಸ್ನಾತೇ ನಾಸಂವಿಷ್ಟೇ ಚ ಭರ್ತರಿ |
ನ ಸಂವಿಶಾಮಿ ನಾಶ್ನಾಮಿ ನ ಸ್ನಾಯೇ ಕರ್ಮ ಕುರ್ವತೀ ॥25॥
ಪತಿಯು ಭೋಜನ ಮಾಡದೆ ನಾನು ಭೋಜನ ಮಾಡುವುದಿಲ್ಲ. ಅವನು ಅಭ್ಯಂಗವನ್ನು ಮಾಡದೆ ನಾನು ಅಭ್ಯಂಗವನ್ನು ಮಾಡುವುದಿಲ್ಲ. ಅವನು ಮಲಗದೆ ನಾನು ಮಲಗುವುದಿಲ್ಲ. ಹೀಗೆ ಯಾವಾಗಲೂ ಅವನ ಸೇವಾರೂಪವಾದ ಕರ್ಮವನ್ನು ಮಾಡುತ್ತೇನೆ.
ಕ್ಷೇತ್ರಾದ್ವನಾದ್ವಾ ಗ್ರಾಮಾದ್ವಾ ಭರ್ತಾರಂ ಗೃಹಮಾಗತಮ್ |
ಅಭ್ಯುತ್ಥಾಯಾಭಿನಂದಾಮಿ ಆಸನೇನೋದಕೇನ ಚ ॥26॥
ಕ್ಷೇತ್ರದಿಂದಲಾಗಲೀ, ಕಾಡಿನಿಂದಲಾಗಲೀ, ಗ್ರಾಮದಿಂದಾಗಲೀ ಹಿಂದಿರುಗಿ ಮನೆಗೆ ಬಂದ ಪತಿಯನ್ನು ಎದ್ದುನಿಂತು ಆಸನ ಮತ್ತು ಉದಕದಿಂದ ಅಭಿನಂದಿಸುತ್ತೇನೆ.
ಪ್ರಮೃಷ್ಟಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ |
ಸಂಯತಾ ಗುಪ್ತಧಾನ್ಯಾ ಚ ಸುಸಮ್ಮೃಷ್ಟನಿವೇಶನಾ ॥27॥
ಪಾತ್ರೆಗಳನ್ನೆಲ್ಲಾ ಚೆನ್ನಾಗಿ ತೊಳೆದು, ಮನೆಯನ್ನು ಚೆನ್ನಾಗಿ ಸಾರಿಸಿ, ಹೆಚ್ಚು ಮಾತನಾಡದೆ ಧಾನ್ಯಾದಿಗಳನೆನಲ್ಲಾ ಚೆನ್ನಾಗಿ ಮುಚ್ಚಿಟ್ಟು ಕಾಲಕ್ಕೆ ಸರಿಯಾಗಿ ನಾನು ಪತಿಗಳಿಗೆ ಭೋಜನವನ್ನು ಕೊಡುತ್ತೇನೆ.
ಅತಿರಸ್ಕೃತಸಂಭಾಷಾ ದುಃಸ್ತ್ರಿಯೋ ನಾನುಸೇವತೀ |
ಅನುಕೂಲವತೀ ನಿತ್ಯಂ ಭವಾಮ್ಯನಲಸಾ ಸದಾ ॥28॥
ಪತಿಗಳು ಮಾತನಾಡಿಸಿದಾಗ ಮೌನವಾಗಿರದೆ ದುಷ್ಟಸ್ತ್ರೀಯ ಸಂಪರ್ಕವನ್ನು ಹೊಂದದೆ ಜಾಗರೂಕತೆಯಿಂದ ನಿತ್ಯವೂ ಪತಿಗಳಿಗೆ ಅನುಕೂಲವಾಗಿರುತ್ತೇನೆ.
ಅನರ್ಮೇ ಚಾಪಿ ಹಸನಂ ದ್ವಾರಿ ಸ್ಥಾನಮಭೀಕ್ಷ್ಣಶಃ |
ಅವಸ್ಕರೇ ಚಿರಂ ಸ್ಥಾನಂ ನಿಷ್ಕುಟೇಷು ವಿಸರ್ಜಯೇ ॥29॥
ಹಾಸ್ಯವಿಲ್ಲದಿದ್ದಾಗ ನಗುವುದು, ಯಾವಾಗಲೂ ಬಾಗಿಲಿನಲ್ಲಿ ನಿಲ್ಲುವುದು, ಕಸದ ಮಧ್ಯದಲ್ಲಿರುವುದು ಮತ್ತು ಶೌಚಸ್ಥಾನದಲ್ಲಿ ಬಹಳ ಹೊತ್ತು ಕೂಡುವುದು ಇವುಗಳನ್ನು ತ್ಯಜಿಸುತ್ತೇನೆ.
ನಿರತಾಹಂ ಸದಾ ಸತ್ಯೇ ಪಾಪಾನಾಂ ಚ ವಿಸರ್ಜನೇ |
ಅತ್ಯಾಲಾಪಮಸಂತೋಷಂ ಪರವ್ಯಾಪಾರಸಂಕಥಾ |
ಅತ್ಯಾಹಾರಾತಿರೋಷೌ ಚ ಕ್ರೋಧನಂ ಚ ವಿಸರ್ಜಯೇ ॥30॥
ನಾನು ಯಾವಾಗಲೂ ಸತ್ಯದಲ್ಲಿ ರತಳಾಗಿದ್ದು ಪಾಪಕರ್ಮಗಳನ್ನು ತ್ಯಜಿಸುತ್ತೇನೆ. ಬಹಳವಾಗಿ ಮಾತನಾಡುವುದು, ಯಾವಾಗಲೂ ಅತೃಪ್ತಿಯಿಂದಿರುವುದು, ಇನ್ನೊಬ್ಬರ ಮನೆಯ ವಿಷಯಗಳನ್ನು ಮಾತನಾಡುವುದು, ಬಹಳವಾಗಿ ಊಟಮಾಡುವುದು, ಅತಿರೋಷ ಮತ್ತು ಕ್ರೋಧಗಳನ್ನು ತ್ಯಜಿಸುತೆತೇನೆ.
ನಿರತಾಽಹಂ ಸದಾ ಸತ್ಯೇ ಭರ್ತೄಣಾಮುಪಸೇವನೇ |
ಸರ್ವಥಾ ಭರ್ತೃರಹಿತಂ ನ ಮಮೇಷ್ಟಂ ಕಥಂಚನ ॥31॥
ನಾನು ಯಾವಾಗಲೂ ಸತ್ಯದಲ್ಲಿ ನಿರತಳಾಗಿರುತ್ತೇನೆ. ಪತಿಗಳ ಸಮೀಪದಲ್ಲಿ ಅವರ ಸೇವೆಯಲ್ಲಿ ನಿರತಳಾಗಿರುತ್ತೇನೆ. ಜೊತೆಯಲ್ಲಿ ಪತಿಗಳು ಇರದಿದ್ದರೆ ನನಗೆ ಯಾವುದೂ ಇಷ್ಟವಾಗುವುದಿಲ್ಲ.
ಯದಾ ಪ್ರವಸತೇ ಭರ್ತಾ ಕುಟುಂಬಾರ್ಥೇನ ಕೇನಚಿತ್ |

ಸುಮನೋವರ್ಜಕಾಯೇತಾ ಭವಾಮಿ ವ್ರತಚಾರಿಣೀ ॥32॥
ಪತಿಗಳು ಯಾವುದಾದರೂ ಕುಟುಂಬದ ಕಾರ್ಯದ ಸಲುವಾಗಿ ಪ್ರವಾಸವನ್ನು ಮಾಡಿದರೆ ನಾನು ಹೂವನ್ನು ಮುಡಿಯದೆ ವ್ರತಚಾರಿಣಿಯಾಗಿರುತ್ತೇನೆ.
ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ |
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ ವರ್ಜಯಾಮ್ಯಹಮ್ ॥
ನನ್ನ ಪತಿಯು ಏನನ್ನು ಕುಡಿಯುವುದಿಲ್ಲವೋ, ಯಾವುದನ್ನು ಸೇವಿಸುವುದಿಲ್ಲವೋ ಮತ್ತು ಯಾವುದನ್ನು ತಿನ್ನುವುದಿಲ್ಲವೋ ಅವೆಲ್ಲವನ್ನೂ ನಾನು ವರ್ಜಿಸುತ್ತೇನೆ.
ಯಥೋಪದೇಶಂ ನಿಯತಾ ವರ್ತಮಾನಾ ವರಾಂಗನೇ |
ಸ್ವಲಂಕೃತಾಽನು ಪ್ರಯತಾ ಭರ್ತುಃ ಪ್ರಿಯಹಿತೇ ರತಾ ॥34॥
ವರಾಂಗನೆಯೇ, ನಾನು ಪತಿಯ ಉಪದೇಶದಂತೆ ನಡೆದುಕೊಂಡು ಅವನು ಅಲಂಕೃತನಾದ ಮೇಲೆ ಅಲಂಕಾರವನ್ನು ಮಾಡಿಕೊಂಡು ಮಾತನ್ನು ನಿಯಂತ್ರಿಸಿ ಯಾವಾಗಲೂ ಪತಿಯ ಪ್ರಿಯದಲ್ಲಿ ಮತ್ತು ಹಿತದಲ್ಲಿ ನಿರತಳಾಗಿರುತ್ತೇನೆ.
ಯೇ ಚ ಧರ್ಮಾಃ ಕುಟುಂಬೇಷು ಶಶ್ವಾ, ಮೇ ಕಥಿತಾಃ ಪುರಾ |
ಭಿಕ್ಷಾಬಲಿಶ್ರಾದ್ಧಮಿತಿ ಸ್ಥಾಲೀಪಾಕಾಶ್ಚ ಪರ್ವಸು ॥35॥
ಮಾನ್ಯಾನಾಂ ಮಾನಸತ್ಕಾರಾ ಯೇ ಚಾನ್ಯೇ ವಿದಿತಾ ಮಮ ॥36॥
ತಾನ್ ಸರ್ವಾನನುವರ್ತೇಽಹಂ ದಿವಾರಾತ್ರಮತಂದ್ರಿತಾ |
ವಿನಯಾನ್ನಿಯಮಾಂಶ್ಚೈವ ಸದಾ ಸರ್ವಾತ್ಮನಾ ಶ್ರಿತಾ ॥37॥
ಅತ್ತೆಯು ನನಗೆ ಹಿಂದೆ ಹೇಳಿದ ಕುಟುಂಬ ಧರ್ಮಗಳು ಏನಿವೆಯೋ ಬ್ರಹ್ಮಚಾರಿಗಳಿಗೆ ಭಿಕ್ಷೆಯನ್ನು ನೀಡುವುದು, ಅತಿಥಿಗಳಿಗೆ ಅನ್ನದಾನ, ಶ್ರಾದ್ಧ, ಸ್ಥಾಲೀಪಾಕವಿಧಿ, ದೊಡ್ಡವರ ಸತ್ಕಾರ ಇವುಗಳ ವಿಷಯದಲ್ಲಿ ಮತ್ತು ನನಗೇ ತಿಳಿದ ಧರ್ಮಗಳನ್ನೂ ಸಹ ಹಗಲೂ ಮತ್ತು ರಾತ್ರಿಯೂ ಎಚ್ಚರಿಕೆಯಿಂದ ಅನುಸರಿಸುತ್ತೇನೆ. ಯಾವಾಗಲೂ ವಿನಯದಿಂದ ಕೂಡಿದವಳಾಗಿ ಸರ್ವಾತ್ಮನಾ ಎಲ್ಲ ನಿಯಮಗಳನ್ನೂ ಪಾಲಿಸುತ್ತೇನೆ.
ಅನುತಿಷ್ಠಾಮಿ ತಾನ್ ಸತ್ಯೇ ನಿತ್ಯಕಾಲಮತಂದ್ರಿತಾ |
ಮೃದೂನ್ ಸತಃ ಸತ್ಯಶೀಲಾನ್ ಸತ್ಯಧರ್ಮಾನುಪಾಲಿನಃ |
ಆಶೀವಿಷಾನಿವ ಕ್ರುದ್ಧಾನ್ ಪತೀನ್‌ಪರಿಚರಾಮ್ಯಹಮ್ ॥38॥
ನನ್ನ ಪತಿಗಳು, ಮೃದುಗಳೂ, ಸತ್ಯಶೀಲರೂ, ಸತ್ಯಧರ್ಮಪರಿಪಾಲಕರೂ ಆದರೂ ಸರ್ಪಗಳಂತೆ ಕ್ರುದ್ಧರೂ ಆದವರು. ಅಂತಹ ಪತಿಗಳನ್ನು ನಾನು ಪರಿಚರಿಸುತ್ತೇನೆ.
ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ |
ಸ ದೇವಃ ಸಾ ಗತಿರ್ನಾನ್ಯಾ ತಸ್ಯ ಕಾ ವಿಪ್ರಿಯಂ ಚರೇತ್ ॥39॥
ಸ್ತ್ರೀಯರ ಎಲ್ಲಾ ಧರ್ಮಗಳೂ ಪತಿಯನ್ನು ಆಶ್ರಯಿಸಿವೆ ಎಂಬುದು ನನಗೆ ತಿಳಿದಿರುವ ಸನಾತನವಾದ ಧರ್ಮ. ಸ್ತ್ರೀಯರಿಗೆ ಅವನೇ ದೇವ, ಅವನೇ ಸಂಪತ್ತು. ಅವನನ್ನು ಬಿಟ್ಟು ಬೇರೆ ಸಂಪತ್ತಿಲ್ಲ. ಅಂತಹ ಪತಿಗೆ ಯಾವಳು ವಿಪ್ರಿಯವನ್ನು ಮಾಡಲು ಸಾಧ್ಯ?
ಅಹಂ ಪತೀನ್ ನಾತಿಶಯೇ ನಾತ್ಯಶ್ನೇ ನಾತಿಭೂಷಯೇ |
ನಾಪಿ ಶ್ವಶ್ರೂಂ ಪರಿವದೇ ಸರ್ವದಾ ಪರಿಯಂತ್ರಿತಾ ॥40॥
ನಾನು ಯಾವ ಅಂಶದಲ್ಲಿಯೂ ಪತಿಗಳನ್ನು ಮೀರುವುದಿಲ್ಲ. ಪತಿಗಳಿಗಿಂತ ಹೆಚ್ಚು ಊಟ ಮಾಡುವುದಿಲ್ಲ, ಹೆಚ್ಚು ಅಲಂಕಾರವನ್ನು ಮಾಡಿಕೊಳ್ಳುವುದಿಲ್ಲ, ಎಂದೂ ಅತ್ತೆಯನ್ನು ನಿಂದಿಸುವುದಿಲ್ಲ. ಯಾವಾಗಲೂ ಅವರಿಗೆ ಅಧೀನಳಾಗಿರುತ್ತೇನೆ.
ಅವಧಾನೇನ ಸುಭಗೇ ನಿತ್ಯೋತ್ಥಾನೇನ ಚೈವ ಚ |
ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥41॥
ಎಲೌ ಸುಂದರಿಯೇ, ಯಾವಾಗಲೂ ಜಾಗರೂಕಳಾಗಿರುವುದರಿಂದ ಮತ್ತು ಅವರ ಸೇವೆಯಲ್ಲಿಯೇ ಮನಸ್ಸಿಟ್ಟಿರುವುದರಿಂದ ಮತ್ತು ಗುರುಹಿರಿಯರ ಸೇವೆಯಿಂದ ಪತಿಗಳು ನನಗೆ ಯಾವಾಗಲೂ ವಶರಾಗಿದ್ದಾರೆ.
ನಿತ್ಯಮಾರ್ಯಾಮಹಂ ಕುಂತೀಂ ವೀರಸೂಂ ಸತ್ಯವಾದಿನೀಮ್ |
ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನಭೋಜನೈಃ ॥42॥
ವೀರಪುತ್ರರನ್ನು ಪಡೆದ ಸತ್ಯವಾದಿನಿಯಾದ ಪೂಜ್ಯಳಾದ ಕುಂತಿಯನ್ನು ನಾನೇ ಯಾವಾಗಲೂ ಅನ್ನವಸ್ತ್ರಭೋಜನಗಳಿಂದ ಪರಿಚರಿಸುತ್ತೇನೆ.
ನೈತಾಮತಿಶಯೇ ಜಾತು ವಸತ್ರಲಂಕಾರಭೋಜನೈಃ |
ನಾಪಿ ಪರಿವದೇ ಚಾಹಂ ತಾಂ ಪೃಥಾಂ ಪೃಥಿವೀಸಮಾಮ್ ॥43॥
ವಸ್ತ್ರ ಅಲಂಕಾರ ಭೋಜನಗಳಲ್ಲಿ ನಾನು ಎಂದೂ ಕುಂತಿಯನ್ನು ಮೀರುವುದಿಲ್ಲ. ಭೂದೇವಿಗೆ ಸಮಾನವಾದ ಕ್ಷಮಾ ಗುಣವುಳ್ಳ ಅವಳನ್ನು ನಾನು ಎಂದೂ ನಿಂದಿಸುವುದಿಲ್ಲ.
ಅಷ್ಟಾವಗ್ರೇ ಬ್ರಾಹ್ಮಣಾನಾಂ ಸಹಸ್ರಾಣಿ ಸ್ಮ ನಿತ್ಯದಾ |
ಭುಂಜತೇ ರುಗ್ಮಪಾತ್ರೀಷು ಯುಧಿಷ್ಠಿರನಿವೇಶನೇ ॥44॥
ಯುಧಿಷ್ಠಿರನ ಮನೆಯಲ್ಲಿ ಎಂಟು ಸಾವಿರ ಬ್ರಾಹ್ಮಣರು ನಿತ್ಯವೂ ಸುವರ್ಣ ಪಾತ್ರೆಗಳಲ್ಲಿ ಮೊದಲು ಊಟವನ್ನು ಮಾಡುತ್ತಾರೆ.
ಅಷ್ಟಾಶೀತಿಸಹಸ್ರಾಣಿ ಸ್ನಾತಕಾ ಗೃಹಮೇಧಿನಃ |
ತ್ರಿಶಂದ್ದಾಸೀಕ ಏಕೈಕೋ ಯಾನ್ ಬಿಭರ್ತಿ ಯುಧಿಷ್ಠಿರಃ ॥45॥

ಯುಧಿಷ್ಠಿರನು ಒಬ್ಬೊಬ್ಬನಿಗೂ ಮೂವತ್ತು ದಾಸಿಯರಿರುವ ಎಂಬತ್ತೆಂಟು ಸಾವಿರ ಸ್ನಾತಕ ಗೃಹಸ್ಥರನ್ನು ಯಾವಾಗಲೂ ಪೋಷಿಸುತ್ತಾನೆ.
ದಶಾನ್ಯಾನಿ ಸಹಸ್ರಾಣಿ ಯೇಷಾಮನ್ನಂ ಸುಸಂಸ್ಕೃತಮ್ |
ಹ್ರಿಯತೇ ರುಗ್ಮಪಾತ್ರೀಭಿರ್ಯತೀನಾಮೂರ್ಧ್ವರೇತಸಾಮ್ ||46||
ಇನ್ನು ಬೇರೆ ಹತ್ತುಸಾವಿರ ಊರ್ಧ್ವರೇತಸ್ಕರಾದ ಯತಿಗಳಿಗೆ ಸುಸಂಸ್ಕೃತವಾದ ಅನ್ನವು ಸುವರ್ಣಪಾತ್ರೆಗಳಲ್ಲಿ ಕೊಂಡೊಯ್ಯಲ್ಪಡುತ್ತದೆ.
ತಾನ್ ಸರ್ವಾನಗ್ರಹಾರೇಣ ಬ್ರಾಹ್ಮಣಾನ್ ವೇದವಾದಿನಃ |
ಯಥಾರ್ಹಂ ಪೂಜಯಾಮಿ ಸ್ಮ ಪಾನಾಚ್ಛಾದನಭೋಜನೈಃ ||47||
ನಾನು ವೇದವಾದಿಗಳಾದ ಆ ಎಲ್ಲಾ ಬ್ರಾಹ್ಮಣರಿಗೂ ವಾಸಕ್ಕಾಗಿ ಅಗ್ರಹಾರಗಳನ್ನು ಕಟ್ಟಿಸಿಕೊಟ್ಟು ಯಥಾಯೋಗ್ಯವಾಗಿ ಪಾನವಸ್ತ್ರಭೋಜನಗಳಿಂದ ಪೂಜಿಸುತ್ತೇನೆ.
ಶತಂ ದಾಸೀಸಹಸ್ರಾಣಿ ಕೌಂತೇಯಸ್ಯ ಮಹಾತ್ಮನಃ |
ಕಂಬುಕೇಯೂರಧಾರಿಣ್ಯೋ ನಿಷ್ಕಕಂಠ್ಯಃ ಸ್ವಲಂಕೃತಾಃ ||48||
ಮಹಾತ್ಮನಾದ ಕೌಂತೇಯನಿಗೆ ಕಂಚುಕ, ಕೇಯೂರ, ಕಂಠದಲ್ಲಿ ಸುವರ್ಣಮಾಲೆಗಳನ್ನು ಧರಿಸಿದ ಅಲಂಕೃತರಾದ ಹತ್ತುಸಾವಿರ ದಾಸಿಯರಿದ್ದಾರೆ.
ಮಹಾರ್ಹಮಾಲ್ಯಾಭರಣಾಃ ಸುವರ್ಣಾಶ್ಚಂದನೋಕ್ಷಿತಾಃ |
ಮಣೀನ್ ಹೇಮ ಚ ಬಿಭ್ರತ್ಯೋ ನೃತ್ಯಗೀತವಿಶಾರದಾಃ ||49||
ಅವರು ಬೆಲೆಬಾಳುವ ಮಾಲೆ ಮತ್ತು ಆಭರಣಗಳನ್ನೂ, ಸುವರ್ಣಗಳನ್ನೂ ಮತ್ತು ರತ್ನಗಳನ್ನೂ ಧರಿಸಿದವರು. ಒಳ್ಳೆಯ ಬಣ್ಣವನ್ನು ಹೊಂದಿದವರು. ಶ್ರೀಗಂಧದಿಂದ ಲೇಪಿಸಲ್ಪಟ್ಟವರು ಮತ್ತು ನೃತ್ಯಗಾನ ವಿಶಾರದರು.
ತಾಸಾಂ ನಾಮಾನಿ ರೂಪಾಣಿ ಭೋಜನಾಚ್ಛಾದನಾನಿ ಚ |
ಸರ್ವಾಸಾಮೇವ ವೇದಾಹಂ ಕರ್ಮ ಚೈವ ಕೃತಾಕೃತಮ್ ||50||
ಅವರಲ್ಲಿ ಪ್ರತಿಯೊಬ್ಬರ ಹೆಸರನ್ನೂ, ಅವರ ರೂಪವನ್ನೂ, ಅವರ ಭೋಜನಾಚ್ಛಾದನಗಳನ್ನೂ, ಅವರು ಮಾಡಿರುವ ಅಥವಾ ಮಾಡದಿರುವ ಕರ್ಮಗಳನ್ನೂ ನಾನು ತಿಳಿದಿದ್ದೇನೆ.
ಶತಂ ದಾಸೀಸಹಸ್ರಾಣಿ ಕುಂತೀಪುತ್ರಸ್ಯ ಧೀಮತಃ |
ಪಾತ್ರೀಹಸ್ತಾ ದಿವಾರಾತ್ರಮತಿಥೀನ್ ಭೋಜಯಂತ್ಯುತ ||51||
ಮೇಧಾವಿಯಾದ ಕುಂತೀಪುತ್ರನ ಮನೆಯಲ್ಲಿ ಹತ್ತುಸಾವಿರ ದಾಸಿಯರು ಕೈಯಲ್ಲಿ ಪಾತ್ರೆಯನ್ನು ಹಿಡಿದು ಹಗಲೂ ಮತ್ತು ರಾತ್ರಿಯೂ ಅತಿಥಿಗಳಿಗೆ ಭೋಜನವನ್ನು ಬಡಿಸುತ್ತಾರೆ.
ಶತಮಶ್ವಸಹಸ್ರಾಣಿ ದಶನಾಗಾಯುತಾನಿ ಚ |
ಯುಧಿಷ್ಠಿರಸ್ಯಾನುಯಾತ್ರಂ ಇಂದ್ರಪ್ರಸ್ಥನಿವಾಸಿನಃ ||52||
ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿ ವಾಸವನ್ನು ಮಾಡುತ್ತಿದ್ದಾಗ ಒಂದುಸಾವಿರ ಕುದುರೆಗಳು ಮತ್ತು ಹತುತಸಾವಿರ ಆನೆಗಳು ಅವನ ಹಿಂದೆ ಹೋಗುತ್ತಿದ್ದವು.
ಏತದಾಸೀತ್ ತದಾ ರಾಜ್ಞೋ ಯನ್ಮಹೀಂ ಪರ್ಯಪಾಲಯತ್ |
ಯೇಷಾಂ ಸಂಖ್ಯಾವಿಧಿಂ ಚೈವ ಪ್ರದಿಶಾಮಿ ಶೃಣೋಮಿ ಚ ||53||
ಇದು ಹಿಂದೆ ಧರ್ಮರಾಜನು ಭೂಮಿಯನ್ನು ಪಾಲಿಸುತ್ತಿದ್ದಾಗ ಅವನ ವೈಭವವಾಗಿದ್ದಿತು. ಅವರಲ್ಲಿ ಪ್ರತಿಯೊಬ್ಬ ಸೇವಕರ ವೇತನ ಸಂಖ್ಯೆಯನ್ನು ತಿಳಿದು ನಾನು ಅವರಿಗೆ ವೇತನವನ್ನು ಕೊಡುತ್ತಿದ್ದೆ ಮತ್ತು ಅವರ ವಾಕ್ಯಗಳನ್ನು ಕೇಳುತ್ತಿದ್ದೆ.
ಅಂತಃಪುರಾಣಾಂ ಸರ್ವೇಷಾಂ ಭೃತ್ಯಾನಾಂ ಚೈವ ಸರ್ವಶಃ |
ಆಗೋಪಾಲಾವಿಪಾಲೇಭ್ಯಃ ಸರ್ವಂ ವೇದ ಕೃತಾಕೃತಮ್ ||54||
ಗೋಪಾಲ ಮತ್ತು ಆವಿಪಾಲರಿಂದ ಹಿಡಿದು ಅಂತಃಪುರದ ಎಲ್ಲಾ ಭೃತ್ಯರೂ ಮಾಡಿದ ಮತ್ತು ಮಾಡದಿದ್ದ ಕಾರ್ಯವನ್ನು ನಾನು ತಿಳಿದಿರುತ್ತೇನೆ.
ಸರ್ವಂ ರಾಜ್ಞಃ ಸಮುದಯಮಾಯಂ ಚ ವ್ಯಯಮೇವ ಚ |
ಏಕಾಹಂ ವೇದ್ಮಿ ಕಲ್ಯಾಣಿ ಪಾಂಡವಾನಾಂ ಯಶಸ್ವಿನಿ ||55||
ಎಲೌ ಯಶಸ್ವಿನಿಯೇ, ಕಲ್ಯಾಣಿಯೇ, ರಾಜನ ಸಂಪತ್ತನ್ನೂ, ಪ್ರತಿದಿನದ ಆಯಾ-ವ್ಯಯಗಳೆಲ್ಲವನ್ನೂ ನಾನೊಬ್ಬಳೇ ತಿಳಿದಿರುತ್ತೇನೆ.
ಮಯಿ ಸರ್ವಂ ಸಮಾಸಜ್ಯ ಕುಟುಂಬಂ ಭರತರ್ಷಭಾಃ |
ಉಪಾಸನರತಾಃ ಸರ್ವೇ ಘಟಂತೇ ಸ್ಮ ವರಾನನೇ ||56||
ಎಲೌ ಸುಂದರಿಯೇ, ಭರತರ್ಷಭರು ನನ್ನ ಮೇಲೆ ಎಲ್ಲಾ ಕುಟುಂಬಭಾರವನ್ನು ಹಾಕಿ ತಾವು ಭಗವದುಪಾಸನೆಯಲ್ಲಿ ನಿರತರಾಗಿರುತ್ತಾರೆ.
ತಮಹಂ ಭರಮಾಸಕ್ತಮನಾಧೃಷ್ಯಂ ದುರಾತ್ಮಭಿಃ |
ಸುಖಂ ಸರ್ವಂ ಪರಿತ್ಯಜ್ಯ ರಾತ್ರ್ಯಹಾನಿ ಘಟಾಮಿ ವೈ ||57||
ಹೀಗೆ ನನ್ನ ಮೇಲೆ ಹೊರಿಸಿದ ದುಷ್ಟರು ಹೊರಲಾರದ ಈ ಭಾರವನ್ನು ಎಲ್ಲಾ ಸುಖಗಳನ್ನೂ ಪರಿತ್ಯಜಿಸಿ ಹಗಲೂ ಮತ್ತು ರಾತ್ರಿಯೂ ನಾನು ನಿರ್ವಹಿಸುತ್ತೇನೆ.
ಅಧೃಷ್ಯಂ ವರುಣಸ್ಯೇವ ವೈ ಪತೀನಾಂ ಧರ್ಮಚಾರಿಣಾಮ್ ||58||

ವರುಣನಿಗೆ ನಿಧಿಪೂರ್ಣವಾದ ಸಮುದ್ರದ ಸಂಪತ್ತು ಇರುವಂತೆ ಧರ್ಮಚಾರಿಗಳಾದ ಪತಿಗಳ ಅಧೃಷ್ಯವಾದ (ವ್ಯಯಮಾಡಿ ನಾಶಮಾಡಲು ಸಾಧ್ಯವಿಲ್ಲದ) ಕೋಶವನ್ನು ನಾನೊಬ್ಬಳೇ ತಿಳಿದಿದ್ದೇನೆ.
ಅನಿಶಾಯಾಂ ನಿಶಾಯಾಂ ಚ ಸಹನಾತ್ ಕ್ಷುತ್ಪಿಪಾಸಯೋಃ|
ಆರಾಧಯಂತ್ಯಾಃ ಕೌರವ್ಯಾಂಸ್ತುಲ್ಯಾ ರಾತ್ರಿರಹಶ್ಚ ಮೇ ॥59॥
ಹಸಿವು, ನೀರಡಿಕೆಗಳನ್ನು ತಡೆದು ಹಗಲೂ ಮತ್ತು ರಾತ್ರಿಯೂ ಪಾಂಡವರನ್ನು ಆರಾಧಿಸುವ ನನಗೆ ಹಗಲೂ ಮತ್ತು ರಾತ್ರಿಯೂ ಸಮಾನವಾಗಿ (ಒಂದೇ ರೀತಿ) ಇರುತ್ತವೆ.
ಪ್ರಥಮಂ ಪ್ರತಿಬುಧ್ಯಾಮಿ ಚರಮಂ ಸಂವಿಶಾಮಿ ಚ|
ನಿತ್ಯಕಾಲಮಹಂ ಸತ್ಯೇ ಏತತ್ಸವಂನನಂ ಮಮ ॥60॥
ನಾನು ಪತಿಗಳಿಗಿಂತ ಮೊದಲು ಏಳುತ್ತೇನೆ. ಅವರು ಮಲಗಿದ ಅನಂತರ ಮಲಗುತ್ತೇನೆ. ಸತ್ಯಭಾಮೆಯೇ, ನಿತ್ಯದಲ್ಲಿಯೂ ಇದು ನಾನು ಮಾಡುವ ಪತಿಗಳ ಪೂಜೆ.
ಏತಜ್ಞಾನಾಮ್ಯಹಂ ಕರ್ತುಂ ಏತತ್ಸಂವನನಂ ಮಮ|
ಅಸತ್ಸ್ತ್ರೀಣಾಂ ಸಮಾಚಾರಂ ನಾಹಂ ಕುರ್ಯಾಂ ನ ಕಾಮಯೇ ॥
ನಾನು ಇದನ್ನೇ ಮಾಡಲು ತಿಳಿದಿದ್ದೇನೆ. ಇದೇ ನನ್ನ ಪೂಜೆ. ದುಷ್ಟ ಸ್ತ್ರೀಯರ ಆಚರಣೆಯನ್ನು ನಾನು ಮಾಡುವುದಿಲ್ಲ, ಮಾಡಲು ಇಚ್ಛಿಸುವುದೂ ಇಲ್ಲ.
ವೈಶಂಪಾಯನಃ
ತತ್ ಶ್ರುತ್ವಾ ಧರ್ಮಸಹಿತಂ ಕೃಷ್ಣಾಯಾ ವ್ಯಾಹೃತಂ ತದಾ|
ಉವಾಚ ಸತ್ಯಾ ಸತ್ಕೃತ್ಯ ಪಾಂಚಾಲೀಂ ಧರ್ಮಚಾರಿಣೀಮ್ ॥62॥
ವೈಶಂಪಾಯನ ದ್ರೌಪದಿಯ ಧರ್ಮಸಹಿತವಾದ ವಚನಗಳನ್ನು ಕೇಳಿ ಸತ್ಯಭಾಮೆಯು ಧರ್ಮಚಾರಿಣಿಯಾದ ಪಾಂಚಾಲಿಯನ್ನು ಸತ್ಕರಿಸಿ ಹೀಗೆ ಮಾತನಾಡಿದಳು.
ಅಭಿಪನ್ನಾಽಸ್ಮಿ ಪಾಂಚಾಲಿ ಯಾಜ್ಞಸೇನಿ ಕ್ಷಮಸ್ವ ಮೇ|
ಕಾಮಕಾರಃ ಸಖೀನಾಂ ಹಿ ಸೋಪಹಾಸಂ ಪ್ರಭಾಷಿತಮ್ ॥63॥
ಪಾಂಚಾಲಿಯೇ, ನಿನ್ನಿಂದ ಎಲ್ಲವನ್ನೂ ತಿಳಿದೆ. ಯಾಜ್ಞಸೇನಿಯೇ, ನನ್ನನ್ನು ಕ್ಷಮಿಸು. ಸಖಿಯರು ತಮ್ಮ ಇಚ್ಛಾನುಸಾರವಾಗಿ ಹಾಸ್ಯಪೂರ್ವಕವಾಗಿಯೂ (ರಹಸ್ಯವಿಷಯಗಳನ್ನು) ಮಾತನಾಡಬಹುದಷ್ಟೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ದ್ರೌಪದೀಸತ್ಯಭಾಮಾಸಂವಾದಪರ್ವಣಿ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಇಪ್ಪತ್ಮೂರನೆಯ ಅಧ್ಯಾಯ
ದ್ರೌಪದಿಯಿಂದ ಪಾತಿವ್ರತ್ಯಧರ್ಮ ನಿರೂಪಣೆ.
ದ್ರೌಪದೀ
ಇಮಂ ತು ತೇ ಮಾರ್ಗಮಪೇತದೋಷಂ
ವಕ್ಷ್ಯಾಮಿ ಚಿತ್ತಗ್ರಹಣಾಯ ಭರ್ತುಃ|
ಯಸ್ಮಿನ್ಯಥಾಭರ್ತರಿ ವರ್ತಮಾನಾ
ಭರ್ತಾರಮಾಚ್ಛೇತ್ಸ್ಯಸಿ ಕಾಮಿನೀಭ್ಯಃ ॥1॥
ಪತಿಯ ಮನಸ್ಸನ್ನು ವಶೀಕರಿಸಲು ನಿರ್ದುಷ್ಟವಾದ ಈ ಮಾರ್ಗವನ್ನು ಹೇಳುವೆನು. ಈ ಮಾರ್ಗದಲ್ಲಿ ಸರಿಯಾಗಿ ನಡೆದರೆ ನಿನ್ನ ಪತಿಯನ್ನು ಅನ್ಯಕಾಮಿನಿಯರಿಂದ ದೂರಮಾಡುವಿ.
ನೈತಾದೃಶಂ ದೈವತಮಸ್ತಿ ಕಿಂಚಿತ್
ಸರ್ವೇಷು ಲೋಕೇಷು ಸದೇವಕೇಷು|
ಯಥಾ ಪತಿ ಸ್ತಸ್ಯ ತು ಸರ್ವಕಾಮಾ
ಲಭ್ಯಾಃ ಪ್ರಸಾದೇ ಕುಪಿತಶ್ಚ ಹನ್ಯಾತ್ ॥2॥
ಸ್ತ್ರೀಯರಿಗೆ ದೇವತೆಗಳಿಂದ ಕೂಡಿದ ಎಲ್ಲ ಲೋಕಗಳಲ್ಲಿಯೂ ಪತಿಯಂಥ ದೇವತೆಯು ಇನ್ನೊಬ್ಬ ಇಲ್ಲ. ಪತಿಯು ಪ್ರಸನ್ನನಾದರೆ ಅದರಿಂದ ಎಲ್ಲ ಕಾಮಗಳೂ ಲಭ್ಯವಾಗುವುವು. ಅವನು ಕುಪಿತನಾದರೆ ಎಲ್ಲವೂ ನಾಶವಾಗುವುದು.
ತಸ್ಮಾದಪತ್ಯಂ ವಿವಿಧಾಶ್ಚ ಭೋಗಾಃ
ಶಯ್ಯಾಸನಾನ್ಯುತ್ತಮದರ್ಶನಾನಿ|
ವಸತ್ರಣಿ ಮಾಲ್ಯಾನಿ ತಥೈವ ಗಂಧಾಃ
ಸ್ವರ್ಗಶ್ಚ ಲೋಕೋ ವಿಪುಲಾ ಚ ಕೀರ್ತಿಃ ॥3॥
ಅವನಿಂದಲೇ ಅನೇಕ ವಿಧವಾದ ಭೋಗಗಳು, ಶಯ್ಯಾ, ಆಸನ, ಉತ್ತಮ ದರ್ಶನಗಳು, ವಸ್ತ್ರಗಳು, ಮಾಲ್ಯಗಳು, ಗಂಧಗಳು, ಸ್ವರ್ಗಲೋಕ ಮತ್ತು ವಿಪುಲವಾದ ಕೀರ್ತಿ.

ಸುಖಂ ಸುಖೇನೇಹ ನ ಜಾತು ಲಭ್ಯಂ
                ದುಃಖೇನ ಸಾಧ್ವೀ ಲಭತೇ ಸುಖಾನಿ |
ಸಾ ಕೃಷ್ಣಮಾರಾಧಯ ಸೌಹೃದೇನ
                ಪ್ರೇಮ್ಣಾ ಚ ನಿತ್ಯಂ ಪ್ರತಿಕರ್ಮಣಾ ಚ ॥4॥
ಸುಖದಿಂದ ಸುಖವನ್ನು ಎಂದೂ ಸಂಪಾದಿಸಲು ಸಾಧ್ಯವಿಲ್ಲ. ಸಾಧ್ವಿಯಾದವಳು ಕಷ್ಟಪಟ್ಟು ಸುಖವನ್ನು ಸಂಪಾದಿಸುತ್ತಾಳೆ. ಅಂತಹವಳಾದ ನೀನು ನಿತ್ಯವೂ ಸೌಹಾರ್ದದಿಂದ, ಪ್ರೇಮದಿಂದ ಮತ್ತು ಅವನಿಗೆ ಉಪಕಾರವನ್ನು ಮಾಡುವುದರಿಂದ ಕೃಷ್ಣನನ್ನು ಆರಾಧಿಸು.
ತಥಾಽಶನೈಶ್ಚಾರುಭಿರಗ್ರಮಾಲ್ಯೈ
                ರ್ದಾಕ್ಷಿಣ್ಯಯೋಗೈರ್ವಿವಿಧೈಶ್ಚ ಗಂಧೈಃ |
ಅಸ್ಯಾಃ ಪ್ರಿಯೋಽಸ್ಮೀತಿ ಯಥಾ ವಿದಿತ್ವಾ
                ತ್ವಾಮೇವ ಸಂಶ್ಲಿಷ್ಯತಿ ತದ್ವಿಧತ್ಸ್ವ ॥5॥
ಹಾಗೆಯೇ ಒಳ್ಳೆಯ ಆಸನಗಳು, ಶ್ರೇಷ್ಠವಾದ ಪುಷ್ಪಮಾಲೆಗಳು, ವಿನಯದಿಂದ ಕೂಡಿದ ಮಾತುಗಳು, ಅನೇಕ ವಿಧವಾದ ಗಂಧಗಳು ಇವುಗಳಿಂದ ಪತಿಯಾದ ಕೃಷ್ಣನನ್ನು ರಕ್ಷಿಸಿದರೆ ಇವಳಿಗೆ ನಾನು ಪ್ರಿಯನಾಗಿದ್ದೇನೆ ಎಂದು ತಿಳಿದು ನಿನ್ನನ್ನೇ ಆಲಿಂಗಿಸುವಂತೆ ಎಲ್ಲ ಕಾರ್ಯಗಳನ್ನೂ ಮಾಡು.
ಶ್ರುತ್ವಾ ಸ್ವರಂ ದ್ವಾರಗತಸ್ಯ ಭರ್ತುಃ
                ಪ್ರತ್ಯುತ್ಥಿತಾ ತಿಷ್ಠ ಗೃಹಸ್ಯ ಮಧ್ಯೇ |
ದೃಷ್ಟ್ವಾ ಪ್ರವಿಷ್ಟಂ ತ್ವರಿತಾಽಽಸನೇನ
                ಪಾದ್ಯೇನ ಚೈನಂ ಪ್ರತಿಪೂಜಯಸ್ವ ॥6॥
ಬಾಗಿಲಿಗೆ ಬಂದ ಪತಿಯ ಸ್ವರವನ್ನು ಕೇಳಿ ಗೃಹದ ಮಧ್ಯಭಾಗದಲ್ಲಿ ಎದ್ದು ನಿಲ್ಲು. ಅವನು ಒಳಗೆ ಪ್ರವೇಶಿಸುದುದನ್ನು ನೋಡಿ ಶೀಘ್ರವಾಗಿ ಆಸನ ಮತ್ತು ಪಾದ್ಯಗಳಿಂದ ಅವನನ್ನು ಪೂಜಿಸು.
ಸಂಪ್ರೇಷಿತಾಯಾಮಥ ಚೈವ ದಾಸ್ಯಾ
                ಮುತ್ಥಾಯ ಸರ್ವಂ ಸ್ವಯಮೇವ ಕಾರ್ಯಮ್ |
ಜಾನಾತು ಕೃಷ್ಣಸ್ತವ ಭಾವಮೇತಂ
                ಸರ್ವಾತ್ಮನಾ ಮಾಂ ಭಜತೀತಿ ಸತ್ಯೇ ॥7॥
ದಾಸಿಯನ್ನು ಕಳುಹಿಸಿ ನೀನೇ ಎದ್ದು ಅವನಿಗೆ ಮಾಡಬೇಕಾದ ಉಪಚಾರಗಳನ್ನೆಲ್ಲಾ ಸ್ವತಃ ಮಾಡು. ಸತ್ಯಭಾಮೆಯೇ, ಇವಳು ಸರ್ವಾತ್ಮನಾ ನನ್ನನ್ನು ಭಜಿಸುತ್ತಾಳೆ ಎಂದು ಕೃಷ್ಣನು ನಿನ್ನ ಮನಸ್ಸಿನ ಈ ಅಭಿಪ್ರಾಯವನ್ನು ತಿಳಿಯಲಿ.
ತ್ವತ್ಸನ್ನಿಧೌ ಯತ್ಕಥಯೇತ್ ಪತಿಸ್ತೇ
                ಯದ್ಯಪ್ಯಗುಹ್ಯಂ ಪರಿರಕ್ಷಿತವ್ಯಮ್ |
ಕಾಚಿತ್ ಸಪತ್ನೀ ತವ ವಾಸುದೇವಂ
                ಪ್ರತ್ಯಾದಿಶೇತ್ ತೇನ ಭವೇದ್ ವಿರಾಗಃ ॥8॥
ನಿನ್ನ ಸನ್ನಿಧಿಯಲ್ಲಿ ಪತಿಯು ಏನನ್ನು ಹೇಳುತ್ತಾನೆಯೋ ಅದು ರಹಸ್ಯವಲ್ಲದಿದ್ದರೂ ಅದನ್ನು ಇನೊಂಬ್ಬರಿಗೆ ಹೇಳಬಾರದು. ಹಾಗೆ ಮಾಡದೆ ಇನ್ನೊಬ್ಬರ ಜೊತೆಯಲ್ಲಿ ಹೇಳಿದರೆ ನಿನ್ನ ಯಾರಾದರೂ ಸವತಿಯು ಆ ಮಾತನ್ನು ಕೃಷ್ಣನಿಗೆ ತಿಳಿಸಿ ಅವನಿಗೆ ನಿನ್ನಲ್ಲಿ ವಿರಾಗವುಂಟಾಗುವಂತೆ ಮಾಡಬಹುದು.
ಪ್ರಿಯಾಂಶ್ಚ ರಕ್ತಾಂಶ್ಚ ಹಿತಾಂಶ್ಚ ಭತುಃ
                ತಾನ್ ಭೋಜಯೇಥಾ ವಿವಿಧೈರುಪಾಯೈಃ |
ದ್ವೇಷ್ಯೈರುಪೇಕ್ಷ್ಯೈರಹಿತೈಶ್ಚ ತಸ್ಯ
                ಭಿದ್ಯಸ್ವ ನಿತ್ಯಂ ಕುಹಕೋದ್ಯತೈಶ್ಚ ॥9॥
ಪತಿಗೆ ಪ್ರಿಯರಾದವರಿಗೆ, ಹಿತರಾದವರಿಗೆ ಮತ್ತು ಪತಿಯಲ್ಲಿ ಹಿತರಾದವರಿಗೆ ಎಲ್ಲ ಉಪಾಯಗಳಿಂದಲೂ ಭೋಜನವನ್ನು ನೀಡು. ಪತಿಯ ದ್ವೇಷಕ್ಕೆ ವಿಷಯರಾದವರು, ಅವನ ಉಪೇಕ್ಷೆಗೆ ವಿಷಯರಾದವರು, ಅವನಿಗೆ ಅಹಿತರಾದವರು, ಯಾವಾಗಲೂ ವಂಚನೆಯನ್ನು ಮಾಡುವುದಕ್ಕೆ ಪ್ರಯತ್ನ ಪಡುವವರು ಇಂತಹವರಿಂದ ನಿತ್ಯವೂ ದೂರದಲ್ಲಿರು.
ಮದಂ ಪ್ರಮಾದಂ ಪುರುಷೇಷು ಹಿತ್ವಾ
                ಸಂಯಚ್ಛ ಮಾನಂ ಪ್ರತಿಗೃಹ್ಯ ವಾಚಮ್ |
ಪ್ರದ್ಯುಮ್ನಸಾಂಬಾವಪಿ ತೇ ಕುಮಾರೌ
                ನೋಪಾಸಿತವ್ಯೌ ರಹಿತೇ ಕದಾಚಿತ್ ॥10॥
ಪುರುಷರಲ್ಲಿ ಮದ ಪ್ರಮಾದಗಳನ್ನು ತೋರಿಸುವುದನ್ನು ಬಿಟ್ಟು ಮಾತನ್ನು ನಿಲ್ಲಿಸಿ ಮಾನವನ್ನು ನಿಯಂತ್ರಿಸಿಕೋ. ನಿನ್ನ ಮಕ್ಕಳಾದ ಪ್ರದ್ಯುಮ್ನ ಸಾಂಬರ ಜೊತೆಯಲ್ಲಿಯೂ ಸಹ ನೀನು ಏಕಾಂತದಲ್ಲಿ ಇರಬಾರದು.
ಮಹಾಕುಲೀನಾಭಿರಪಾಪಿಕಾಭಿಃ
                ಸ್ತ್ರೀಭಿಃ ಸತೀಭಿಸ್ತವ ಸಖ್ಯಮಸ್ತು |
ಚಂಡಾಶ್ಚ ಶೌಂಡಾಶ್ಚ ಮಹಾಶನಾಶ್ಚ
                ಚೋರಾಶ್ಚ ದುಷ್ಟಾಶ್ಚಪಲಾಶ್ಚ ವರ್ಜಯ ॥11॥

ನಿನಗೆ ಒಳ್ಳೆ ಕುಲೀನರಾದ ಪಾಪಕರ್ಮವನ್ನು ಮಾಡದಿರುವ ಸಾಧ್ವಿಯರಾದ ಸ್ತ್ರೀಯರ ಜೊತೆಯಲ್ಲಿ ಸಖ್ಯವಿರಲಿ. ಹಠಮಾರಿಗಳನ್ನು, ಮದ್ಯಪಾನಮಾಡುವವರನ್ನು, ಬಹಳ ಊಟಮಾಡುವವರನ್ನು, ಕಳ್ಳರನ್ನು, ದುಷ್ಟರನ್ನು ಮತ್ತು ಚಂಚಲೆಯರನ್ನು ಪರಿತ್ಯಜಿಸು.

ಏತದ್ಯಶಸ್ಯಂ ಭಗವೇತನಂ ಚ
ಸ್ವರ್ಗ್ಯಂ(ಸ್ವಾರ್ಥ್ಯಂ) ತಥಾ ಶತ್ರುನಿಬರ್ಹಣಂ ಚ |
ಮಹಾರ್ಹಮಾಲ್ಯಾಭರಣಾಂಗರಾಗಾ
ಭರ್ತಾರಮಾರಾಧಯ ಪುಣ್ಯಗಂಧೈಃ ॥12॥

ಪಾತಿವ್ರತ್ಯಧರ್ಮದ ಫಲವಾಗಿ ದೊರಕುವ ಪತಿಯ ಅನುಗ್ರಹರೂಪವಾದ ಈ ಭಗವೇತನವು ಯಶಸ್ಕರವಾದುದು. ಅದರಿಂದ ಸ್ವರ್ಗ, ಶತ್ರುಸಂಹಾರ, ಅನರ್ಘ್ಯವಾದ ಮಾಲ್ಯಾಭರಣಗಳು, ಅಂಗರಾಗಗಳು ಎಲ್ಲವೂ ದೊರೆಯುತ್ತವೆ. ಪವಿತ್ರವಾದ ಗಂಧಗಳಿಂದ ಪತಿಯನ್ನು ಆರಾಧಿಸು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ದ್ರೌಪದೀಸತ್ಯಭಾಮಾಸಂವಾದಪರ್ವಣಿ ದ್ವಿತೀಯೋಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ಮೂರನೆಯ
ಅಧ್ಯಾಯ ಮುಗಿಯಿತು.

* * * *

ಇನ್ನೂರ ಇಪ್ಪತ್ನಾಲ್ಕನೆಯ ಅಧ್ಯಾಯ

ದ್ರೌಪದಿಯನ್ನು ಸಮಾಧಾನಮಾಡಿ ಸತ್ಯಭಾಮೆಯಿಂದ ದ್ವಾರಕಾಪ್ರಯಾಣ.

ವೈಶಂಪಾಯನಃ

ಮಾರ್ಕಂಡೆಯಾದಿಭಿರ್ವಿಪ್ರೈಃ ಪಾಂಡವೈಶ್ಚ ಮಹಾತ್ಮಭಿಃ |
ಕಥಾಭಿರನುಕೂಲಾಭಿಃ ಸಹ ಸ್ಥಿತ್ವಾ ಜನಾರ್ದನಃ ॥1॥
ತತಸ್ತೈಃ ಸಂವಿದಂ ಕೃತ್ವಾ ಯಥಾವನ್ಮಧುಸೂದನಃ |
ಆರುರುಕ್ಷೂ ರಥಂ ಸತ್ಯಾಮಾಹ್ವಯಾಮಾಸ ಕೇಶವಃ ॥2॥

ವೈಶಂಪಾಯನ ಮಾರ್ಕಂಡೇಯಾದಿ ಬ್ರಾಹ್ಮಣರ ಜೊತೆಯಲ್ಲಿಯೂ ಮತ್ತು ಮಹಾತ್ಮರಾದ ಪಾಂಡವರ ಜೊತೆಯಲ್ಲಿಯೂ ಅನುಕೂಲವಾದ ಮಾತುಗಳನ್ನಾಡುತ್ತಾ ಅವರ ಜೊತೆಯಲ್ಲಿದ್ದು ಜನಾರ್ದನನು ಅವರಿಂದ ಹೊರಡಲು ಅನುಮತಿಯನ್ನು ಪಡೆದು ವಿಧಿವತ್ತಾಗಿ ರಥವನ್ನು ಏರಲು ಬಯಸಿ ಮಧುಸೂದನನಾದ ಕೇಶವನು ಸತ್ಯಭಾಮೆಯನ್ನು ಆಹ್ವಾನಿಸಿದನು.

ಸತ್ಯಭಾಮಾ ತತಸ್ತತ್ರ ಸ್ವಜಿತ್ವಾ ದ್ರುಪದಾತ್ಮಜಾಮ್ |
ಉವಾಚ ವಚನಂ ಹೃದ್ಯಂ ಯಥಾಭಾವಂ ಸಮಾಹಿತಾ ॥3॥

ಆಗ ಸತ್ಯಭಾಮೆಯು ಅಲ್ಲಿ ದ್ರೌಪದಿಯನ್ನು ಆಲಿಂಗಿಸಿ ಅವಳ ಮನಸ್ಸಿನ ಭಾವಕ್ಕೆ ಅನುಗುಣವಾಗಿ ಸಮಾಧಾನದಿಂದ ಹಿತವಾದ ಮಾತುಗಳನ್ನು ಆಡಿದಳು.

ಕೃಷ್ಣೇ ಮಾ ಭೂತ್ ತವೋತ್ಕಂಠಾ ಮಾ ವ್ಯಥಾ ಮಾ ಪ್ರಜಾಗರಃ |
ಭರ್ತೃಭಿರ್ದೇವಸಂಕಾಶೈರ್ಜಿತಾಂ ಪ್ರಾಪ್ಸ್ಯಸಿ ಮೇದಿನೀಮ್ ॥4॥

ದ್ರೌಪದಿಯೇ, ನೀನು ಕಳವಳವನ್ನಾಗಲೀ, ವ್ಯಥೆಯನ್ನಾಗಲೀ ಪಡಬೇಡ. ಚಿಂತೆಯಿಂದ ನಿದ್ದೆಗೆಡಬೇಡ. ದೇವತೆಗಳನ್ನು ಹೋಲುವ ನಿನ್ನ ಪತಿಗಳಿಂದ ಜಿತವಾದ ಭೂಮಿಯನ್ನು ನೀನು ಹೊಂದುವಿ.

ನ ಹ್ಯೇವಂ ಶೀಲಸಂಪನ್ನಾ ನೈವಂ ಪೂಜಿತಲಕ್ಷಣಾಃ |
ಪ್ರಾಪ್ನುವಂತಿ ಚಿರಂ ಕ್ಲೇಶಂ ಯಥಾ ತ್ವಮಸಿತೇಕ್ಷಣೇ ॥5॥

ಎಲೌ ಅಸಿತೇಕ್ಷಣೆಯೇ, ನಿನ್ನಂತೆ ಶೀಲಸಂಪನ್ನರಾದವರು, ನಿನ್ನಂತಹ ಪೂಜ್ಯ ಲಕ್ಷಣಗಳಿಂದ ಕೂಡಿದವರು ಬಹಳ ಕಾಲ ಕ್ಲೇಶವನ್ನು ಅನುಭವಿಸುವುದಿಲ್ಲ.

ಅವಶ್ಯಂ ಚ ತ್ವಯಾ ಭೂಮಿರಿಯಂ ನಿಹತಕಂಟಕಾ |
ಭರ್ತೃಭಿಃ ಸಹ ಭೋಕ್ತವ್ಯಾ ನಿರ್ದ್ವಂದ್ವೇತಿ ಶ್ರುತಂ ಮಯಾ ॥6॥

ನೀನು ಖಂಡಿತವಾಗಿ ಶತ್ರುರಹಿತವಾದ ಈ ಭೂಮಿಯನ್ನು ಪತಿಯರ ಜೊತೆಯಲ್ಲಿ ಅಪ್ರತಿದ್ವಂದ್ವಳಾಗಿ ಭೋಗಿಸುವಿ ಎಂಬ ಮಾತನ್ನು ನಾನು ಕೇಳಿದ್ದೇನೆ.

ಧಾರ್ತರಾಷ್ಟ್ರವಧಂ ಕೃತ್ವಾ ವೈರಾಣಿ ಪ್ರತಿಯಾತ್ಯ ಚ |
ಯುಧಿಷ್ಠಿರಸ್ಥಾಂ ಪೃಥಿವೀಂ ದ್ರಕ್ಷ್ಯಸಿ ದ್ರುಪದಾತ್ಮಜೇ ॥7॥

ದ್ರುಪದನಂದಿನಿಯೇ, ಧೃತರಾಷ್ಟ್ರಪುತ್ರರ ವಧೆಯನ್ನು ಮಾಡಿ ಅವರು ಮಾಡಿದ ವೈರಕ್ಕೆ ಸೇಡನ್ನು ತೀರಿಸಿ ಯುಧಿಷ್ಠಿರನಲ್ಲಿ ನೆಲೆನಿಂತ ಭೂಮಿಯನ್ನು ನೀನು ನೋಡುವಿ.

ಯಾಸ್ತಾಃ ಪ್ರವ್ರಜಮಾನಾಂ ತ್ವಾಂ ಪ್ರಾಹಸನ್ ದರ್ಪಮೋಹಿತಾಃ |
ತಾಃ ಕ್ಷಿಪ್ರಂ ಹತಸಂಕಲ್ಪಾ ದ್ರಕ್ಷ್ಯಸಿ ತ್ವಂ ಕುರುಸ್ತ್ರಿಯಃ ॥8॥

ನೀನು ದ್ಯೂತಸಭೆಯಿಂದ ಕಾಡಿಗೆ ಹೊರಡುವಾಗ ಯಾವ ಕೌರವ ಸ್ತ್ರೀಯರು ದರ್ಪಮೋಹಿತರಾಗಿ ನಿನ್ನನ್ನು ಗೇಲಿಮಾಡಿದರೋ ಅವರು ಕ್ಷಿಪ್ರವಾಗಿಯೇ ಭ್ರಷ್ಟ ಸಂಕಲ್ಪರಾಗುವುದನ್ನು ನೀನು ನೋಡುವಿ.

ತವ ದುಃಖೋಪಪನ್ನಾಯಾ ಯೈರಾಚಿತರಮಪ್ರಿಯಮ್ |

ವಿದ್ಧಿ ಸಂಪ್ರಸ್ಥಿತಾನ್ ಸರ್ವಾಂಸ್ತಾನ್ ಕೃಷ್ಣೇ ಯಮಸಾದನಮ್ ॥9॥
ಎಲೌ ಕೃಷ್ಣೆಯೇ, ದುಃಖದಲ್ಲಿರುವ ನಿನಗೆ ಯಾರು ಅಪ್ರಿಯವನ್ನು ಮಾಡಿದ್ದಾರೆಯೋ ಅವರೆಲ್ಲರೂ ಯಮಪಟ್ಟಣಕ್ಕೆ ಹೊರಡಲು ಸಿದ್ದರಾಗಿದ್ದಾರೆಂದು ತಿಳಿ.
ಯೇ ಚ ತತ್ರ ಸ್ಥಿತಾ ರಾಜ್ಞಿ ತತ್ಪಕ್ಷೀಯಾಃ ಕ್ಷಿತೀಶ್ವರಾಃ ।
ತೇಷಾಂ ಕಾಲಃ ಕ್ಷಿತೀಶಾನಾಂ ಪ್ರಾಪ್ತಃ ಕೃಷ್ಣೇ ದುರಾಸದಃ ।
ಎಲೌ ರಾಣಿಯೇ, ದ್ರೌಪದಿಯೇ, ಆ ಸಭೆಯಲ್ಲಿ ಕೌರವ ಪಕ್ಷದ ರಾಜರು ಯಾರಿದ್ದರೋ ಅವರೆಲ್ಲರಿಗೂ ದುರಾಸದವಾದ ಕಾಲವು ಸಮೀಪಿಸಿದೆ.
ಪುತ್ರಸ್ತೇ ಪ್ರತಿವಿಂಧ್ಯಶ್ಚ ಸುತಸೋಮಸ್ತಥಾವಿಧಃ ।
ಶ್ರುತಕರ್ಮಾರ್ಜುನಿಶ್ಚೈವ ಶತಾನೀಕಶ್ಚ ನಾಕುಲಿಃ ॥10॥
ಸಹದೇವಾಚ್ಚ ಯೋ ಜಾತಃ ಶ್ರುತಸೇನಸ್ತವಾತ್ಮಜಃ ।
ಸರ್ವೇ ಕುಶಲಿನೋ ವೀರಾಃ ಕೃತಾಸ್ತ್ರಾಶ್ಚ ಸುತಾಸ್ತವ ॥11॥
ನಿನ್ನ ಮಕ್ಕಳಾದ ಪ್ರತಿವಿಂಧ್ಯ, ಸುತಸೋಮ, ಅರ್ಜುನನಿಂದ ಪಡೆದ ಶ್ರುತಕರ್ಮ, ನಕುಲನಿಂದ ಪಡೆದ ಶತಾನೀಕ, ಸಹದೇವನಿಂದ ಪಡೆದ ಶ್ರುತಸೇನ ಇವರೆಲ್ಲರೂ ವೀರರಾಗಿ ಅಸ್ತ್ರವಿದ್ಯೆಯನ್ನು ಕಲಿತು ಕ್ಷೇಮದಿಂದ್ದಾರೆ.
ಅಭಿಮನ್ಯುರಿವ ಪ್ರೀತಾ ದ್ವಾರವತ್ಯಾಂ ರತಾ ಭೃಶಮ್ ।
ತ್ವಮಿವೈಷಾಂ ಸುಭದ್ರಾ ಚ ಪ್ರೀತ್ಯಾ ಸರ್ವಾತ್ಮನಾ ಸ್ಥಿತಾ ॥12॥
ಅಭಿಮನ್ಯುವಿನಂತೆ ಸಂತೋಷದಿಂದ ದ್ವಾರಾವತಿಯಲ್ಲಿ ಚೆನ್ನಾಗಿ ಸುಖದಿಂದಿದ್ದಾರೆ. ನೀನು ನೋಡಿಕೊಳ್ಳುವಂತೆ ಸುಭದ್ರೆಯು ಈ ಮಕ್ಕಳನ್ನು ಸರ್ವ ಪ್ರಕಾರದಿಂದ ಪ್ರೀತಿಯಿಂದ ನೋಡಿಕೊಳ್ಳುತಿತದ್ದಾಳೆ.
ಪ್ರೀಯತೇ ತವ ನಿರ್ದ್ವಂದ್ವಾ ತೇಭ್ಯಶ್ಚ ವಿಗತಜ್ವರಾ ।
ದುಃಖಿತಾ ತೇನ ದುಃಖೇನ ಸುಖೇನ ಸುಖಿತಾ ತಥಾ ।
ಭೇಜೇ ಸರ್ವಾತ್ಮನಾ ಚೈವ ಪ್ರದ್ಯುಮ್ನಜನನೀ ತಥಾ ॥13॥
ಸುಭದ್ರೆಯು ನಿರ್ದ್ವಂದ್ವಳಾಗಿ ಮಕ್ಕಳನ್ನು ಪ್ರೀತಿಯನ್ನು ಹೊಂದಿದ್ದಾಳೆ ಮತ್ತು ಮಕ್ಕಳಿಂದ ಅವಳಿಗೆ ಯಾವ ಆತಂಕವೂ ಇಲ್ಲ. ಅವರು ದುಃಖಿತರಾದರೆ ಅವಳೂ ದುಃಖಪಡುತ್ತಾಳೆ. ಅವರು ಸುಖಪಟ್ಟರೆ ಅವಳೂ ಸುಖಪಡುತ್ತಾಳೆ ಮತ್ತು ಪ್ರದ್ಯುಮ್ನನ ತಾಯಿಯಾದ ರುಗ್ಮಿಣಿಯೂ ಸಹ ಸರ್ವರೀತಿಯಿಂದ ಅವರನ್ನು ನೋಡುಕೊಳ್ಳುತ್ತಿದ್ದಾಳೆ.
ಭಾನುಪ್ರಭೃತಿಭಿಶ್ಚೈನಾನ್ ವಿಶಿನಷ್ಟಿ ಚ ಕೇಶವಃ ।
ಭೋಜನಾಚ್ಛಾದನೇ ಚೈಷಾಂ ನಿತ್ಯಂ ಮೇ ಶ್ವಶುರಃ ಸ್ಥಿತಃ ॥14॥
ಕೇಶವನು ಭಾನು ಮೊದಲಾದ ತನ್ನ ಮಕ್ಕಳಿಗಿಂತಲೂ ಇವರಲ್ಲಿ ವಿಶೇಷವಾದ ದೃಷ್ಟಿಯನ್ನು ಇಟ್ಟಿದ್ದಾನೆ. ಅವರ ಭೋಜನಾಚ್ಛಾದನ ವಿಷಯದಲ್ಲಿ ನನ್ನ ಮಾವನಾದ ವಸುದೇವನು ಯಾವಾಗಲೂ ಎಚ್ಚರದಿಂದ ಕೂಡಿದವನಾಗಿದ್ದಾನೆ.
ರಾಮಪ್ರಭೃತಯಃ ಸರ್ವೇ ಭಜಂತ್ಯಂಧಕವೃಷ್ಣಯಃ ।
ತುಲ್ಯೋ ಹಿ ಪ್ರಣಯಸ್ತೇಷಾಂ ಪ್ರದ್ಯುಮ್ನಸ್ಯ ಚ ಭಾಮಿನಿ ॥15॥
ಬಲರಾಮ ಮೊದಲಾದವರು ಮತ್ತು ಎಲ್ಲಾ ಅಂಧಕವೃಷ್ಣಿಗಳು ಅವರಲ್ಲಿ ಪ್ರೀತಿಯನ್ನು ಮಾಡಿ ಉಪಚಾರವನ್ನು ಮಾಡುತ್ತಾರೆ. ಎಲೌ ಭಾಮಿನಿಯೇ, ಅವರಿಗೆ ಪ್ರದ್ಯುಮ್ನನ ಮೇಲೆಯೂ ನಿನ್ನ ಮಕ್ಕಳ ಮೇಲೆಯೂ ಸಮಾನವಾದ ಪ್ರೀತಿಯಿದೆ.
ವೈಶಂಪಾಯನಃ
ಏವಮಾದಿ ಪ್ರಿಯಂ ಸತ್ಯಂ ಹೃದ್ಯಮುಕತ್ತ್ವ ಮನೋಽನುಗಮ್ ।
ಗಮನಾಯ ಮನಶ್ಚಕ್ರೇ ವಾಸುದೇವರಥಂ ಪ್ರತಿ ॥16॥
ವೈಶಂಪಾಯನ ಇದೇ ಮೊದಲಾದ ಪ್ರಿಯವಾದ, ಹಿತವಾದ ಮತ್ತು ಮನೋನುಸಾರಿಯಾದ ಸತ್ಯವಚನಗಳನ್ನು ಆಡಿ ಕೃಷ್ಣನ ರಥಕ್ಕೆ ಹೋಗಲು ನಿರ್ಧರಿಸಿದಳು.
ತಾಂ ಕೃಷ್ಣಾ ಕೃಷ್ಣಮಹಿಷೀಂ ಚಕಾರಾಭಿಪ್ರದಕ್ಷಿಣಮ್ ।
ಆರುರೋಹಂ ರಥಂ ಶೌರೇಃ ಸತ್ಯಭಾಮಾಽಥ ಭಾಮಿನೀ ॥17॥
ಭಾಮಿನಿಯಾದ ದ್ರೌಪದಿಯು ಕೃಷ್ಣಮಹಿಷಿಯಾದ ಸತ್ಯಭಾಮೆಗೆ ಪ್ರದಕ್ಷಿಣೆಯನ್ನು ಮಾಡಿದಳು. ಅನಂತರ ಸತ್ಯಭಾಮೆಯು ಶೌರಿಯಾದ ಕೃಷ್ಣನ ರಥವನ್ನು ಏರಿದಳು.
ಸ್ಮಯಿತ್ವಾ ತು ಯದುಶ್ರೇಷ್ಠೋ ದ್ರೌಪದೀಂ ಪರಿಸಾಂತ್ವ್ಯ ಚ ।
ಉಪಾವರ್ತ್ಯ ತತಃ ಶೀಘ್ರೈರ್ಹಯೈಃ ಪ್ರಾಯಾತ್ ಪುರಂ ಸ್ವಕಮ್ ॥18॥
ಯದುಶ್ರೇಷ್ಠನಾದ ಕೃಷ್ಣನು ದ್ರೌಪದಿಯನ್ನು ಸಮಾಧಾನಪಡಿಸಿ ಅವರೆಲ್ಲರಿಗೂ ಒಂದು ಮುಗುಳ್ನಗೆಯನ್ನು ಬೀರಿ ರಥವನ್ನು ತಿರುಗಿಸಿ ತನ್ನ ಶೀಘ್ರವಾದ ಹಯಗಳಿಂದ ತನ್ನ ಪಟ್ಟಣಕ್ಕೆ ಹಿಂದಿರುಗಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ದ್ರೌಪದೀಸತ್ಯಭಾಮಾಸಂವಾದಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
॥ ದ್ರೌಪದೀಸತ್ಯಭಾಮಾಸಂವಾದಪರ್ವವು ಮುಗಿಯಿತು ॥

* * * *

ಘೋಷಯಾತ್ರಾಪರ್ವ

ಇನ್ನೂರ ಇಪ್ಪತ್ತೈದನೆಯ ಅಧ್ಯಾಯ

ಬ್ರಾಹ್ಮಣರಿಂದ ಪಾಂಡವರ ವನವಾಸದ ವಾರ್ತೆಯನ್ನು ಕೇಳಿ ಧೃತರಾಷ್ಟ್ರನ ಸಂತಾಪ ಮತ್ತು ತನ್ನ ಪುತ್ರರಿಗೆ ಒದಗಲಿರುವ ಅನರ್ಥವನ್ನು ಚಿಂತಿಸಿ ಶೋಕ.

ಜನಮೇಜಯಃ
ಏವಂ ವನೇ ವರ್ತಮಾನಾ ನರಾಗ್ರ್ಯಾಃ
ಶೀತೋಷ್ಣವಾತಾತಪಕರ್ಶಿತಾಂಗಾಃ |
ಸರಸ್ತದಾಸಾದ್ಯ ವನಂ ಚ ಪುಣ್ಯಂ ತತಃ
ಪರಂ ಕಿಮಕುರ್ವನ್ ಸ್ಮ ಪಾರ್ಥಾಃ ॥1॥

ಜನಮೇಜಯ ಹೀಗೆ ಕಾಡಿನಲ್ಲಿ ಶೀತೋಷ್ಣಗಳಿಂದಲೂ, ಬಿಸಿಲು ಗಾಳಿಗಳಿಂದಲೂ ಕರ್ಶಿತ ಶರೀರವುಳ್ಳ ನರಶ್ರೇಷ್ಠರಾದ ಆ ಪಾಂಡವರು ಆ ಸರೋವರಕ್ಕೂ ಮತ್ತು ಆ ಪುಣ್ಯವನಕ್ಕೂ ಬಂದು ಅಲ್ಲಿಂದ ಮುಂದೆ ಏನು ಮಾಡಿದರು?

ವೈಶಂಪಾಯನಃ
ಸರಸ್ತದಾಸಾದ್ಯ ತು ಪಾಂಡುಪುತ್ರಾ
ಜನಂ ಸಮುತ್ಸೃಜ್ಯ ವಿಹಾಯ ವೇಷಮ್ |
ವನಾನಿ ರಮ್ಯಾಣ್ಯಥ ಪರ್ವತಾಂಶ್ಚ
ನದೀಪ್ರದೇಶಾಂಶ್ಚ ತದಾ ವಿಚೇರುಃ ॥2॥

ವೈಶಂಪಾಯನ ಪಾಂಡುಪುತ್ರರು ಆ ಸರೋವರವನ್ನು ತಲುಪಿ ಜೊತೆಯಲ್ಲಿದ್ದ ಜನರನ್ನು ವಿಸರ್ಜಿಸಿ ವೇಷವನ್ನು ಬದಲಾಯಿಸಿಕೊಂಡು ಸುಂದರವಾದ ಕಾಡಿನಲ್ಲಿ, ಪರ್ವತಗಳಲ್ಲಿ ಮತ್ತು ನದೀಪ್ರದೇಶಗಳಲ್ಲಿ ಆಗ ಸಂಚರಿಸಿದರು.

ತಥಾ ವನೇ ತಾನ್ ವಸತಃ ಪ್ರವೀರಾನ್
ಸ್ವಾಧ್ಯಾಯನವಂತಶ್ಚ ತಪೋಧನಾಶ್ಚ |
ಅಭ್ಯಾಯಯುರ್ವೇದವಿದಃ ಪುರಾಣಾಃ
ತಾನ್ ಪೂಜಯಾಮಾಸುರಥೋ ನರಾಗ್ರ್ಯಾಃ ॥3॥

ಆ ರೀತಿಯಲ್ಲಿ ಕಾಡಿನಲ್ಲಿ ವಾಸಿಸುತ್ತಿದ್ದ ವೀರರಾದ ಪಾಂಡವರ ಸಮೀಪಕ್ಕೆ ತಪೋಧನರೂ, ಸ್ವಾಧ್ಯಾಯಶೀಲರೂ, ವೇದಜ್ಞರೂ ಆದ ಹಿರಿಯ ಬ್ರಾಹ್ಮಣರು ಬಂದರು. ಆಗ ಆ ನರಶ್ರೇಷ್ಠರು ಆ ಬ್ರಾಹ್ಮಣರಿಗೆ ಪೂಜೆಯನ್ನು ಮಾಡಿದರು.

ತತಃ ಕದಾಚಿತ್ ಕುಶಲಃ ಕಥಾಸು
ವಿಪ್ರೋಭ್ಯಗಚ್ಛದ್ ಭುವಿ ಕೌರವೇಯಾನ್ |
ಸ ತೈಃ ಸಮೇತ್ಯಾಥ ಯದೃಚ್ಛಯೈವ
ವೈಚಿತ್ರವೀರ್ಯಂ ನೃಪಮಭ್ಯಗಚ್ಛತ್ ॥4॥

ಅನಂತರ ಒಮ್ಮೆ ಆ ಬ್ರಾಹ್ಮಣರಲ್ಲಿ ಕಥಾಕುಶಲನಾದ ಒಬ್ಬ ಬ್ರಾಹ್ಮಣನು ದ್ವೈತವನಕ್ಕೆ ಬಂದು ಪಾಂಡವರನ್ನು ಸಂಧಿಸಿದನು. ಅವನು ಅವರ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಅನಂತರ ಸಹಜವಾಗಿ (ಭಗವದ್‌ಪ್ರೇರಣೆಯಿಂದ) ಧೃತರಾಷ್ಟ್ರನ ಸಮೀಪಕ್ಕೆ ಬಂದನು.

ಅಥೋಪವಿಷ್ಟಃ ಪ್ರತಿಸತ್ಕೃತಶ್ಚ
ವೃದ್ಧೇನ ರಾಜ್ಞಾ ಕುರುಸತ್ತಮೇನ |
ಪ್ರಚೋದಿತಃ ಸಂಕಥಯಾಂಬಭೂವ
ಧರ್ಮಾನಿಲೇಂದ್ರಪ್ರಭವಾನ್ ಯಮೌ ಚ ॥5॥

ಅನಂತರ ಅವನು ಕುಳಿತುಕೊಂಡು ವೃದ್ಧನಾದ, ಕುರುಶ್ರೇಷ್ಠನಾದ ಧೃತರಾಷ್ಟ್ರನಿಂದ ಪೂಜಿತನಾಗಿ ಅನಂತರ ಅವನಿಂದ ಪ್ರೇರಿತನಾಗಿ ಯುಧಿಷ್ಠಿರ, ಭೀಮಸೇನ, ಅರ್ಜುನ ಮತ್ತು ನಕುಲ-ಸಹದೇವರ ವಿಷಯದಲ್ಲಿ ಮಾತನಾಡಿದನು.

ಕೃಶಾಂಶ್ಚ ವಾತಾತಪಕರ್ಶಿತಾಂಗಾನ್
ದುಃಖಸ್ಯ ಚೋಗ್ರಸ್ಯ ಮುಖೇ ಪ್ರಪನ್ನಾನ್ |
ತಾಂ ಚಾಪ್ಯನಾಥಾಮಿವ ವೀರನಾಥಾಂ
ಕೃಷ್ಣಾಂ ಪರಿಕ್ಲೇಶಗುಣೇನ ಯುಕ್ತಾಮ್ ॥

ಅವನು ಪಾಂಡವರು ಬಿಸಿಲು ಮತ್ತು ವಾತಗಳಿಂದ ಕರ್ಶಿತ ಶರೀರವುಳ್ಳವರಾಗಿ ಕೃಶರಾಗಿದ್ದಾರೆಂದೂ, ಉಗ್ರವಾದ ದುಃಖದ ಮುಖದಲ್ಲಿ ಬಿದ್ದಿದ್ದಾರೆಂದೂ, ವೀರಪತಿಯರನ್ನು ಹೊಂದಿದ ದ್ರೌಪದಿಯು ಅನಾಥೆಯಂತೆ ಕ್ಲೇಶದ ಸಮೂಹದಿಂದ ಕೂಡಿದ್ದಾಳೆಂದೂ ತಿಳಿಸಿದನು.

ವನೇ ತಥಾ ಪಾರ್ಥಿವಪುತ್ರಪೌತ್ರಾನ್
ಶ್ರುತ್ವಾ ತಥಾ ದುಃಖನದೀಂ ಪ್ರಪನ್ನಾನ್ |
ತತಃ ಕಥಾಸ್ತಸ್ಯ ನಿಶಮ್ಯ ರಾಜಾ
ವೈಚಿತ್ರವೀರ್ಯಃ ಕೃಪಯಾಭಿತಪ್ತಃ ॥
ಪ್ರೋವಾಚ ದೈನ್ಯಾಭಿಹತಾಂತರಾತ್ಮಾ

ನಿಃಶ್ವಾಸಬಾಷ್ಪೋಪಹತಸ್ತದಾನೀಮ್ ॥6॥
ಕಾಡಿನಲ್ಲಿ ರಾಜಪುತ್ರರೂ ಪೌತ್ರರೂ ಆದ ಪಾಂಡವರು ಆ ರೀತಿಯಲ್ಲಿ ದುಃಖನದಿಯಲ್ಲಿ ಬಿದ್ದಿದ್ದಾರೆಂದು ಕೇಳಿದ ಧೃತರಾಷ್ಟ್ರನು ಪುನಃ ಅವರ ಕಥೆಗಳನ್ನು ಕೇಳಿ ವಿಚಿತ್ರವೀರ್ಯನ ಮಗನಾದ ಆ ರಾಜನು ಕೃಪೆಯಿಂದ ತಾಪವನ್ನು ಹೊಂದಿದನು. ಆಗ ಅವನು ದೈನ್ಯದಿಂದ ಕೂಡಿದ ಮನಸ್ಸುಳ್ಳವನಾಗಿ ನಿಟ್ಟುಸಿರು ಮತ್ತು ಕಣ್ಣೀರಿನಿಂದ ಉಪಹತನಾಗಿ ಮಾತನಾಡಲು ಉದ್ಯುಕ್ತನಾದನು.
ವಾಚಂ ಕಥಂಚಿತ್ಸ್ಥಿರತಾಮುಪೇತ್ಯ
ತತ್ಸರ್ವಮಾತ್ಮಪ್ರಭವಂ ವಿಚಿಂತ್ಯ |
ಕಥಂ ನು ಸತ್ಯಃ ಶುಚಿರಾರ್ಯವೃತ್ತೋ
ಜ್ಯೇಷ್ಠಃ ಸುತಾನಾಂ ಮಮ ಧರ್ಮರಾಜಃ |
ಅಜಾತಶತ್ರುಃ ಪೃಥಿವೀತಳೇ ಸ್ಮ
ಶೇತೇ ಪುರಾ ರಾಂಕವಕೂಟಶಾಯೀ ॥7॥
ತನ್ನ ಮಾತಿನಲ್ಲಿ ಹೇಗೋ ಸ್ಥೈರ್ಯವನ್ನು ತಂದುಕೊಂಡು ಆ ಅನರ್ಥವೆಲ್ಲವೂ ತನ್ನಿಂದಲೇ ಉಂಟಾದುದೆಂದು ಚಿಂತಿಸಿ ಮಾತನಾಡಿದನು. ಸತ್ಯವಂತನೂ, ಶುಚಿಯೂ, ಶ್ರೇಷ್ಠವಾದ ನಡತೆಯುಳ್ಳವನೂ, ಅಜಾತಶತ್ರುವೂ, ಹಿಂದೆ ಒಳ್ಳೆಯ ಮಂಚದಲ್ಲಿ ಮಲಗುತ್ತಿದ್ದವನೂ ಆದ ನನ್ನ ಜ್ಯೇಷ್ಠಪುತ್ರನಾದ ಧರ್ಮರಾಜನು ಭೂತಳದಲ್ಲಿ ಹೇಗೆ ಮಲಗುತ್ತಾನೆ?
ಪ್ರಬೋಧ್ಯತೇ ಮಾಗಧಸೂತಪೂಗೈರ್ನಿತ್ಯಂ ಸ್ತುವದ್ಭಿಃ ಸ್ವಯಮಿಂದ್ರಕಲ್ಪಃ |
ಪತತ್ರಿಸಂಘೈಃ ಸ ಜಘನ್ಯರಾತ್ರೇ ಪ್ರಬೋಧ್ಯತೇ ನೂನಮಿಡಾತಳಸ್ಥಃ ॥8॥
ಸ್ವತಃ ಇಂದ್ರನಂತಿದ್ದ ಯಾವನನ್ನು ಸೂತಮಾಗದರ ಸಮೂಹವು ನಿತ್ಯವೂ ಸ್ತೋತ್ರವನ್ನು ಮಾಡಿ ನಿದ್ರೆಯಿಂದ ಎಬ್ಬಿಸುತ್ತಿದ್ದಿತೋ ಅಂತಹವನು ಪಶ್ಚಿಮರಾತ್ರಿಯಲ್ಲಿ ಪಕ್ಷಿಗಳ ಗಣದಿಂದ ಎಚ್ಚರಿಸಲ್ಪಡುತ್ತಾನೆ ಮತ್ತು ಭೂತಳದಲ್ಲಿ ಮಲಗಿದ್ದಾನೆ.
ಕಥಂ ನು ವಾತಾತಪಕರ್ಶಿತಾಂಗೋ ವೃಕೋದರಃ ಕೋಪಪರಿಪ್ಲುತಾಂಗಃ |
ಶೇತೇ ಪೃಥಿವ್ಯಾಮತಥೋಚಿತಾಂಗಃ ಕೃಷ್ಣಾಸಮಕ್ಷಂ ವಸುಧಾತಳಸ್ಥಃ ॥9॥
ಕೋಪದಿಂದ ತುಂಬಿದ ದೇಹವುಳ್ಳವನಾದ ವೃಕೋದರನು ವಾತಾತಪಗಳ ಕ್ಲೇಶಕ್ಕೆ ಅನರ್ಹನಾದವನು, ಈಗ ವಾತಾತಪಗಳ ಕ್ಲೇಶಕ್ಕೆ ಒಳಗಾಗಿ ದ್ರೌಪದಿಯ ಎದುರಿನಲ್ಲಿ ಭೂತಳದಲ್ಲಿ ಹೇಗೆ ತಾನೆ ಮಲಗುತ್ತಾನೆ?
ತಥಾಽರ್ಜುನಃ ಸುಕುಮಾರೋ ಮನಸ್ವೀ
ವಶೇ ಸ್ಥಿತೋ ಧರ್ಮಸುತಸ್ಯ ರಾಜ್ಞಃ |
ವಿದೂಯಮಾನೈರಿವ ಸರ್ವಗಾತ್ರೈಃ
ಧ್ರುವಂ ನ ಶೇತೇ ವಸತೀರಮರ್ಷಾತ್ ॥10॥
ಹಾಗೆಯೇ ಸುಕುಮಾರನೂ, ಧೈರ್ಯಶಾಲಿಯೂ, ಧರ್ಮರಾಜನ ವಶದಲ್ಲಿರುವವನೂ ಆದ ಅರ್ಜುನನು ಶರೀರದಲ್ಲೆಲ್ಲಾ ವೇದನೆಯಾದವನಂತೆ ಸಿಟ್ಟಿನಿಂದ ಕೂಡಿದವನಾಗಿ ಖಂಡಿತವಾಗಿ ರಾತ್ರಿಗಳಲ್ಲಿ ಮಲಗುವುದಿಲ್ಲ.
ಯಮೌ ಚ ಕೃಷ್ಣಾಂ ಚ ಯುಧಿಷ್ಠಿರಂ ಚ
ಭೀಮಂ ಚ ದೃಷ್ಟ್ವಾ ಸುಖವಿಪ್ರಯುಕ್ತಮ್ |
ವಿನಿಃಶ್ವಸನ್ ಸರ್ಪ ಇವೋಗ್ರತೇಜಾ
ಧ್ರುವಂ ನ ಶೇತೇ ವಸತೀರಮರ್ಷಾತ್ ॥11॥
ನಕುಲ-ಸಹದೇವರನ್ನೂ, ದ್ರೌಪದಿಯನ್ನೂ, ಯುಧಿಷ್ಠಿರನನ್ನೂ ಮತ್ತು ಭೀಮನನ್ನೂ ಸುಖದಿಂದ ಚ್ಯುತರಾಗಿರುವುದನ್ನು ನೋಡಿ ಸರ್ಪದಂತೆ ನಿಟ್ಟುಸಿರು ಬಿಡುತ್ತಾ ಉಗ್ರತೇಜಸ್ವಿಯಾದ ಅರ್ಜುನನು ಕ್ರೋಧದಿಂದ ಕೂಡಿದವನಾಗಿ ಖಂಡಿತವಾಗಿ ರಾತ್ರಿಗಳಲ್ಲಿ ನಿದ್ರೆಯನ್ನು ಮಾಡುವುದಿಲ್ಲ.
ತಥಾ ಯಮೌ ಚಾಪ್ಯಸುಖೌ ಸುಖಾರ್ಹೌ
ಸಮೃದ್ಧರೂಪಾವಮರೌ ದಿವೀವ |
ಪ್ರಜಾಗರಸ್ಥೌ ಧ್ರುವಮಪ್ರಶಾಂತೌ
ಸತ್ಯೇನ ಧರ್ಮೇಣ ಚ ವಾರ್ಯಮಾಣೌ ॥12॥
ಅದರಂತೆ ಸುಖಕ್ಕೆ ಅರ್ಹರಾದ ದೇವಲೋಕದ ದೇವತೆಗಳಂತೆ ಸುಂದರವಾದ ರೂಪವನ್ನು ಹೊಂದಿದ ಈಗ ಕಷ್ಟವನ್ನು ಅನುಭವಿಸಿ ಮನಸ್ಸಿನ ಶಾಂತಿಯನ್ನು ಕಳೆದುಕೊಂಡಿರುವ ನಕುಲ-ಸಹದೇವರು ನಿದ್ರೆಯನ್ನು ಮಾಡದೆ ಸತ್ಯಶೀಲನಾದ ಧರ್ಮರಾಜನಿಂದ (ಪರಾಕ್ರಮವನ್ನು ಮಾಡದಂತೆ ಸತ್ಯ ಮತ್ತು ಧರ್ಮದಿಂದ) ತಡೆಹಿಡಿಯಲ್ಪಟ್ಟಿದ್ದಾರೆ.
ಸಮೀರಣೇನಾಥ ಸಮೋ ಬಲೇನ
ಸಮೀರಣಸ್ಯೈವ ಸುತೋ ಬಲೀಯಾನ್ |
ಸ ಧರ್ಮಪಾಶೇನ ನಿಬದ್ಧಮೂರ್ತಿಃ
ಧ್ರುವಂ ವಿನಿಃಶ್ವಸ್ಯ ಸಹತ್ಯಮರ್ಷಮ್ ॥13॥
ವಾಯುದೇವರ ಮಗನೂ, ಬಲಶಾಲಿಯೂ, ವಾಯುದೇವರಿಗೆ ಸಮಾನವಾದ ಬಲವುಳ್ಳವನೂ ಆದ ಭೀಮಸೇನನು ಧರ್ಮಪಾಶದಿಂದ ಕಟ್ಟಲ್ಪಟ್ಟವನಾಗಿ ನಿಟ್ಟುಸಿರು ಬಿಡುತ್ತಾ ತನ್ನ ಕೋಪವನ್ನು ನಿಶ್ಚಿತವಾಗಿ ತಡೆದುಕೊಂಡಿದ್ದಾನೆ.
ಸ ಚಾಪಿ ಭೂಮೌ ಪರಿವರ್ತಮಾನೋ
ವಧಂ ಸುತಾನಾಂ ಮಮ ಕಾಂಕ್ಷಮಾಣಃ |
ಸತ್ಯೇನ ಧರ್ಮೇಣ ಚ ವಾರ್ಯಮಾಣಃ

ಕಾಲಂ ಪ್ರತೀಕ್ಷತ್ಯಧಿಕೋ ರಣೇऽನ್ಯೈಃ ॥14॥
ಅವನಾದರೂ ಭೂಮಿಯಲ್ಲಿ ಹೊರಳಾಡುತ್ತಾ ನನ್ನ ಮಕ್ಕಳ ವಧೆಯನ್ನು ಆಶಿಸುತ್ತಾ ಸತ್ಯದಿಂದಲೂ, ಧರ್ಮದಿಂದಲೂ ನಿವಾರಿಸಲ್ಪಟ್ಟವನಾಗಿ ಉಳಿದವರಿಗಿಂತ ಅಧಿಕವಾಗಿ ಯುದ್ಧದ ಕಾಲವನ್ನು ನಿರೀಕ್ಷಿಸುತ್ತಿದ್ದಾನೆ.

ಅಜಾತಶತ್ರೌ ತು ಜಿತೇ ನಿಕೃತ್ಯಾ
ದುಃಶಾಸನೋ ಯತ್ ಪರುಷಾಣ್ಯವೋಚತ್ ।
ತಾನಿ ಪ್ರವಿಷ್ಟಾನಿ ವೃಕೋದರಾಂಗಂ
ದಹಂತಿ ಕಕ್ಷಾಗ್ನಿರಿವೇಂಧನಾನಿ ॥15॥
ಅಜಾತಶತ್ರುವು ಮೋಸದಿಂದ ಸೋಲಿಸಲ್ಪಟ್ಟಾಗ ದುಶ್ಶಾಸನನು ಯಾವ ಉಗ್ರವಾದ ಮಾತುಗಳನ್ನು ಆಡಿದನೋ ಅವು ವೃಕೋದರನ ಶರೀರವನ್ನು ಪ್ರವೇಶಿಸಿ ಕಾಡ್ಗಿಚ್ಚು ಒಣಗಿದ ಕಟ್ಟಿಗೆಯನ್ನು ಸುಡುವಂತೆ ಸುಡುತ್ತವೆ.

ನ ಪಾಪಕಂ ಧ್ಯಾಸ್ಯತಿ ಧರ್ಮಪುತ್ರೋ
ಧನಂಜಯಶ್ಚಾಪ್ಯನುವರ್ತ್ಸ್ಯತೇ ತಮ್ ।
ಅರಣ್ಯವಾಸೇನ ವಿವರ್ಧತೇ ತು
ಭೀಮಸ್ಯ ಕೋಪೋऽಗ್ನಿರಿವಾನಿಲೇನ ॥16॥
ಧರ್ಮರಾಜನು ಪಾಪವನ್ನು ಚಿಂತಿಸುವುದಿಲ್ಲ ಮತ್ತು ಅರ್ಜುನನು ತನ್ನನ್ನು ಅನುಸರಿಸುವಂತೆ ಮಾಡುತ್ತಾನೆ. ಆದರೆ ಭೀಮನ ಕೋಪವು ಮಾತ್ರ ವಾಯುವಿನಿಂದ ಅಗ್ನಿಯು ಪ್ರಜ್ವಲಿಸುವಂತೆ ಅಭಿವೃದ್ಧಿಯನ್ನು ಹೊಂದುತ್ತದೆ.

ಸ ತೇನ ಕೋಪೇನ ವಿದಹ್ಯಮಾನಃ
ಕರಂ ಕರೇಣಾಭಿನಿಪೀಡ್ಯ ವೀರಃ ।
ವಿನಿಃಶ್ವಸತ್ಯುಷ್ಣಮತೀವ ಘೋರಂ
ದಹನ್ನಿವೇಮಾನ್ ಮಮ ಪುತ್ರಪೌತ್ರಾನ್ ॥17॥
ಆ ವೀರನು ಆ ಕೋಪದಿಂದ ಉರಿಯುತ್ತಾ ಕೈಯನ್ನು ಕೈಯಿಂದ ಹೊಸಕುತ್ತಾ ಈ ನನ್ನ ಪುತ್ರಪೌತ್ರರನ್ನು ಸುಟ್ಟುಬಿಡುವಂತೆ ಮಹಾಘೋರವಾದ ಮತ್ತು ಉಷ್ಣವಾದ ನಿಟ್ಟುಸಿರನ್ನು ಬಿಡುತ್ತಾನೆ.

ಗಾಂಡೀವಧನ್ವಾ ಚ ವೃಕೋದರಶ್ಚ
ಸರಂಭಿಣಾವಂತಕಕಾಲಕಲ್ಪೌ ।
ನ ಶೇಷಯೇತಾಂ ಯುಧಿ ಶತ್ರುಸೇನಾಂ
ಶರಾನ್ ಕಿರಂತಾವಶನಿಪ್ರಕಾಶಾನ್ ॥18॥
ಗಾಂಡೀವಧನ್ವಿಯಾದ ಅರ್ಜುನನು ಮತ್ತು ವೃಕೋದರನು ಕೋಪದಿಂದ ಕೂಡಿ ಯಮ ಮತ್ತು ಕಾಲನಿಗೆ ಸದೃಶರಾಗಿದ್ದಾರೆ. ಅವರು ಯುದ್ಧದಲ್ಲಿ ಸಿಡಿಲಿನಂತಹ ಬಾಣಗಳನ್ನು ಪ್ರಯೋಗಿಸುತ್ತಾ ಶತ್ರುಸೇನೆಯನ್ನು ಉಳಿಸುವುದಿಲ್ಲ.

ದುರ್ಯೋಧನಃ ಶಕುನಿಃ ಸೂತಪುತ್ರೋ
ದುಃಶಾಸನಶ್ಚಾಪಿ ಸುಮಂದಚೇತಾಃ ।
ಮಧು ಪ್ರಪಾಸ್ಯಂತಿ ನ ತು ಪ್ರಪಾತಂ
ವೃಕೋದರಶ್ಚೈವ ಧನಂಜಯಶ್ಚ ॥19॥
ದುರ್ಯೋಧನ, ಶಕುನಿ, ಸೂತಪುತ್ರನಾದ ಕರ್ಣ ಮತ್ತು ದುಶ್ಶಾಸನ ಇವರೆಲ್ಲರೂ ಮಂದಚೇತನರು. ಮದ್ಯಪಾನವನ್ನು ಮಾಡುತ್ತಾರೆ. ಮುಂದಿರುವ ಪ್ರಪಾತವನ್ನು ಕಾಣುತ್ತಿಲ್ಲ. ಭೀಮಸೇನ ಮತ್ತು ಅರ್ಜುನರು ಮದ್ಯಪಾನವನ್ನು ಮಾಡುವುದಿಲ್ಲ ಮತ್ತು ಅದರಿಂದ ಉಂಟಾಗಬಹುದಾದ ಪ್ರಪಾತವನ್ನೂ ಹೊಂದುವುದಿಲ್ಲ.

ಶುಭಾಶುಭಂ ಕರ್ಮ ನರೋ ಹಿ ಕೃತ್ವಾಪ್ರತೀಕ್ಷತೇ ತಸ್ಯ ಫಲಂ ವಿಪಾಕೇ ।
ಸ ತೇನ ಯುಜ್ಯತ್ಯವಶಃ ಫಲೇನ ಮೋಕ್ಷಃ ಕಥಂ ಸ್ಯಾತ್ ಪುರುಷಸ್ಯ ತಸ್ಮಾತ್
ಮನುಷ್ಯನು ಶುಭಾಶುಭ ಕರ್ಮಗಳನ್ನು ಮಾಡಿ ಕರ್ಮದ ಫಲಗಳನ್ನು ಕರ್ಮವಿಪಾಕದ ಸಮಯದಲ್ಲಿ ನೋಡುತ್ತಾನೆ. ಅವನು ಅವಶನಾಗಿ ಆ ಕರ್ಮದ ಫಲದಿಂದ ಸಂಬಂಧವನ್ನು ಹೊಂದುತ್ತಾನೆ. ಮಾಡಿದ ಶುಭಾಶುಭ ಕರ್ಮಗಳಿಂದ ಮನುಷ್ಯನಿಗೆ ಮೋಚನೆಯು ಹೇಗೆ ಉಂಟಾಗುತ್ತದೆ? (ಮನುಷ್ಯನು ಶುಭಾಶುಭ ಕರ್ಮಗಳ ಫಲವನ್ನು ಹೊಂದದಿರಲು ಹೇಗೆ ಸಾಧ್ಯ?)

ಕ್ಷೇತ್ರೇ ಸುಕೃಷ್ಟೇ ಹ್ಯುಪಿತೇ ಚ ಸಮ್ಯಗ್
ದೇವೇ ಚ ವರ್ಷತ್ಯೃತುಕಾಲಯುಕ್ತಮ್ ।
ನ ಸ್ಯಾತ್ಫಲಂ ತಸ್ಯ ಕುತಃ ಪ್ರಸಿದ್ಧಿಃ
ಅನ್ಯತ್ರ ದೈವಾದಿತಿ ಚಿಂತನೀಯಮ್ ॥21॥
ಭೂಮಿಯನ್ನು ಚೆನ್ನಾಗಿ ಉತ್ತು ಬೀಜವನ್ನು ಬಿತ್ತಿ ಪರ್ಜನ್ಯನು ಋತುಕಾಲಕ್ಕೆ ಅನುಕೂಲವಾದ ಮಳೆಯನ್ನು ನೀಡಿದರೆ ಆ ಬೀಜದಿಂದ ಉಂಟಾದ ಸಸ್ಯದ ಫಲವು ಏಕೆ ದೊರೆಯುವುದಿಲ್ಲ? ದೈವವು ಅನುಕೂಲವಾಗಿರುವಾಗ ಫಲವು ಸಿದ್ಧಿಸುತ್ತದೆ. ದೈವವನ್ನು ಬಿಟ್ಟು ಬೇರೆ ಏನಾದರೂ ಅದಕ್ಕೆ ಕಾರಣವಿದೆಯೇ ಎಂದು ಚಿಂತಿಸಬೇಕು? (ಅಂತಹ ಕಾರಣವು ಯಾವುದೂ ಇಲ್ಲ).

ಕೃತಂ ಮತಾಕ್ಷೇಣ ಯಥಾ ನ ಸಾಧು
ಸಾಧುಪ್ರವೃತ್ತೇನ ಚ ಪಾಂಡವೇನ ।
ಮಯಾ ಚ ದುಷ್ಪುತ್ರವಶಾನುಗೇನ
ಕೃತಃ ಕುರೂಣಾಮಯಮಂತಕಾಲಃ ॥22॥

ಅಕ್ಷ ಹೃದಯವನ್ನು ಬಲ್ಲ ಶಕುನಿಯು ಮಾಡಿದ ಕಾರ್ಯವು ಎಂದೂ ಸಾಧುವಲ್ಲ. ತನ್ನ ಪ್ರತಿಜ್ಞೆಗೆ ಅನುಸಾರವಾಗಿ ಸಾಧುಮಾರ್ಗದಲ್ಲಿ ಪ್ರವೃತ್ತನಾದ ಪಾಂಡವರಿಂದಲೂ ಮತ್ತು ದುಷ್ಟಪುತ್ರನಿಗೆ ವಶನಾಗಿ ಕಾರ್ಯವನ್ನು ಮಾಡಿದ ನನ್ನಿಂದಲೂ ಕುರುಕುಲಕ್ಕೆ ಈ ವಿನಾಶಕಾಲವು ತಂದೊಡ್ಡಲ್ಪಟ್ಟಿತು.

ಧ್ರುವಂ ಪ್ರಶಾಮ್ಯತ್ಯಸಮೀರಿತೋಽಗ್ನಿಃ
ಧ್ರುವಂ ಪ್ರಜಾಸ್ಯತ್ಯುತ ಗರ್ಭಿಣೀ ಯಾ |
ಧ್ರುವಂ ದಿನಾದೌ ರಜನೀಪ್ರಣಾಶಃ
ತಥಾ ಕ್ಷಪಾದೌ ಚ ದಿನಪ್ರಣಾಶಃ ॥23॥

ವಾಯುವಿನಿಂದ ಪ್ರೇರಿತನಾಗದ ಅಗ್ನಿಯು ಖಂಡಿತವಾಗಿ ಶಾಂತವಾಗುತ್ತದೆ. (ವಾಯುವಿನಿಂದ ಪ್ರೇರಿತನಾದ ಅಗ್ನಿಯು ಖಂಡಿತವಾಗಿ ದಾಹರೂಪವಾದ ಶಿಕ್ಷೆಯನ್ನು ಕೊಡುತ್ತಾನೆ). ಶಿಕ್ಷೆಯನ್ನು ಕೊಡುವನು. ಗರ್ಭಿಣಿಯಾದವಳು ನಿಶ್ಚಿತವಾಗಿ ಪ್ರಸವಿಸುವಳು. ದಿನದ ಆದಿಯಲ್ಲಿ ರಾತ್ರಿಯ ನಾಶವೂ, ರಾತ್ರಿಯ ಆದಿಯಲ್ಲಿ ದಿನದ ನಾಶವು ಖಂಡಿತವಾಗಿ ಉಂಟಾಗುವುದು.

ಕ್ರಿಯೇತ ತಸ್ಮಾನ್ನ ಪರೇ ಚ ಕುರ್ಯುಃ
ದತ್ತೇ ನ ದದ್ಯುಃ ಪುರುಷಾಃ ಕಥಂಸ್ವಿತ್ |
ಪ್ರಾಪ್ಯಾರ್ಥಕಾಲಂ ಚ ಭವೇದನರ್ಥಃ
ಕಥಂ ನ ತತ್ ಸ್ಯಾದಿತಿ ತತ್ಕುತಃ ಸ್ಯಾತ್ ॥24॥

ಆದ್ದರಿಂದ ತಾನು ಪಾಪಕಾರ್ಯವನ್ನು ಮಾಡಬಾರದು. ಇನ್ನೊಬ್ಬರು ಮಾಡಿದರೆ ಮಾಡಲಿ. ಪುರುಷರಿಗೆ ಏನು ಕೊಡುತ್ತೇವೋ ಅದನ್ನು ಅವರು ಹೇಗೆ ಹಿಂದಿರುಗಿಸಿ ಕೊಡುವುದಿಲ್ಲ? ದುಷ್ಕರ್ಮವನ್ನು ಮಾಡಿದವರಿಗೆ ಆ ಕರ್ಮವಿಪಾಕದ ಕಾಲವು ಬಂದಾಗ ಅನರ್ಥವು ಆಗಿಯೇ ತೀರುತ್ತದೆ. ಅನರ್ಥವು ಆಗಬಾರದು ಎಂದು ಚಿಂತಿಸಿದರೆ ಅದು ಆಗದೇ ಇರಲು ಹೇಗೆ ಸಾಧ್ಯ?

ಕಥಂ ನ ಭಿದ್ಯೇತ ನ ಚ ಸ್ರವೇತ
ನ ಚ ಪ್ರಸಿದ್ಧ್ಯೇದಿತಿ ರಕ್ಷಿತವ್ಯಮ್ |
ಅರಕ್ಷ್ಯಮಾಣಃ ಶತಧಾ ವಿಕೀರ್ಯೇತ್
ಧ್ರುವಂ ನ ನಾಶೋಽಸ್ತಿ ಕೃತಸ್ಯ ಲೋಕೇ ॥25॥

ಮಾಡಿದ ಸತ್ಕರ್ಮವು ನಾಶವಾಗದಂತೆ, ನಿಧಾನವಾಗಿ ಸ್ರವಿಸಿ ಹೋಗದಂತೆ, ಪ್ರಸಿದ್ಧಿಯಿಂದ ಹಾಳಾಗಿ ಹೋಗದಂತೆ ರಕ್ಷಿಸಬೇಕು. ರಕ್ಷಣೆ ಮಾಡದಿದ್ದರೆ ಅದು ನೂರು ರೀತಿಯಲ್ಲಿ ಸೋರಿಹೋಗುತ್ತದೆ. ಲೋಕದಲ್ಲಿ ಮಾಡಿದ ಕೆಟ್ಟ ಕರ್ಮಕ್ಕೆ ಎಂದೂ ನಾಶವುಂಟಾಗುವುದಿಲ್ಲ (ಈ ಶ್ಲೋಕದ ಅರ್ಥವನ್ನು ತಿಳಿಯುವುದು ಕಷ್ಟವಾಗಿದೆ).

ಗತೋ ಹ್ಯರಣ್ಯಾದಪಿ ಶಕ್ರಲೋಕಂ
ಧನಂಜಯಃ ಪಶ್ಯತ ವೀರ್ಯಮಸ್ಯ |
ಅಸ್ತ್ರಾಣಿ ದಿವ್ಯಾನಿ ಚತುರ್ವಿಧಾನಿ
ಜ್ಞಾತ್ವಾ ಪುನರ್ಲೋಕಮಿಮಂ ಪ್ರಪನ್ನಃ ॥26॥

ಕಾಡಿನಿಂದಲೂ ಕೂಡ ಧನಂಜಯನು ಇಂದ್ರಲೋಕಕ್ಕೆ ಹೋಗಿದ್ದಾನೆ. ಅವನ ಸಾಮರ್ಥ್ಯವನ್ನು ನೋಡಿ. ನಾಲ್ಕುವಿಧವಾದ ದಿವ್ಯಾಸ್ತ್ರಗಳನ್ನು ಸಂಪಾದಿಸಿ ಪುನಃ ಈ ಲೋಕಕ್ಕೆ ಬಂದಿದ್ದಾನೆ.

ಸ್ವರ್ಗಂ ಹಿ ಗತ್ವಾ ಸಶರೀರ ಏವ
ಕೋ ಮಾನುಷಃ ಪುನರಾಗಂತುಮಿಚ್ಛೇತ್ |
ಅನ್ಯತ್ರ ಕಾಲೋಪಹತಾನನೇಕಾನ್
ಸಮೀಕ್ಷಮಾಣಸ್ತು ಕುರೂನ್ ಮುಮೂರ್ಷೂನ್ ॥27॥

ಸಶರೀರವಾಗಿ ಸ್ವರ್ಗಕ್ಕೆ ಹೋದ ಯಾವ ಮನುಷ್ಯನು ಕಾಲೋಪಹತರಾಗಿ ಮರಣವನ್ನು ಹೊಂದಲಿರುವ ಕುರುಗಳನ್ನು ನೋಡುವವನಾಗದಿದ್ದರೆ ಬೇರೆ ಯಾವನು ಪುನಃ ಈ ಲೋಕಕ್ಕೆ ಹಿಂದಿರುಗಲು ಇಚ್ಛಿಸುತ್ತಾನೆ?

ಧನುರ್ಗ್ರಾಹಶ್ಚಾರ್ಜುನಃ ಸವ್ಯಸಾಚೀ
ಧನುಶ್ಚ ತದ್ಗಾಂಡಿವಂ ಭೀಮವೇಗಮ್ |
ಅಸ್ತ್ರಾಣಿ ದಿವ್ಯಾನಿ ಚ ತಾನಿ ತಸ್ಯ
ತ್ರಯಸ್ಯ ತೇಜಃ ಪ್ರಸಹೇತ ಕೋಽನು ॥28॥

ಧನುಸ್ಸನ್ನು ಹಿಡಿದಿರುವವನು ಸವ್ಯಸಾಚಿಯಾದ ಅರ್ಜುನ. ಧನುಸ್ಸಾದರೂ ಭಯಂಕರ ವೇಗವಾದ ಗಾಂಡೀವ ಧನುಸ್ಸು. ಅವನ ಬಳಿ ಇರುವ ಅಸ್ತ್ರಗಳು ದಿವ್ಯಾಸ್ತ್ರಗಳು. ಅರ್ಜುನ, ಗಾಂಡೀವ ಧನುಸ್ಸು ಮತ್ತು ದಿವ್ಯಾಸ್ತ್ರಗಳು ಈ ಮೂರರ ಸಾಮರ್ಥ್ಯವನ್ನು ತಡೆಯುವವನು ಯಾವನು?

ನಿಶಮ್ಯ ತದ್ವಚನಂ ಪಾರ್ಥಿವಸ್ಯ
ದುರ್ಯೋಧನಃ ಸಹಿತಃ ಸೌಬಲೇನ |
ಉವಾಚ ತತ್ಕರ್ಣಮುಪೇತ್ಯ ಸರ್ವಂ
ಸ ಚಾಪ್ಯಹೃಷ್ಟೋಽಭವದಲ್ಪಚೇತಾಃ ॥29॥

ಧೃತರಾಷ್ಟ್ರನ ಈ ಮಾತುಗಳನ್ನು ಕೇಳಿ ದುರ್ಯೋಧನನು ಶಕುನಿಯಿಂದ ಸಹಿತನಾಗಿ ಕರ್ಣನ ಸಮೀಪಕ್ಕೆ ಹೋಗಿ ಅವೆಲ್ಲವನ್ನೂ ಹೇಳಿದನು. ಅಲ್ಪಬುದ್ಧಿಯುಳ್ಳ ಕರ್ಣನೂ ಸಹ ಅಸಂತುಷ್ಟನಾದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ

ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಧೃತರಾಷ್ಟ್ರಖೇದವಾಕ್ಯಂ ನಾಮ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಇಪ್ಪತ್ತಾರನೆಯ ಅಧ್ಯಾಯ
ಕರ್ಣ-ಶಕುನಿಗಳಿಂದ ದುರ್ಯೋಧನನಿಗೆ ದ್ವೈತವನಕ್ಕೆ ಹೋಗುವ ಪ್ರೇರಣೆ.
ವೈಶಂಪಾಯನಃ
ಧೃತರಾಷ್ಟ್ರಸ್ಯ ತದ್ವಾಕ್ಯಂ ನಿಶಮ್ಯ ಶಕುನಿಸ್ತದಾ |
ದುರ್ಯೋಧನಮಿದಂ ಕಾಲೇ ಕರ್ಣೇನ ಸಹಿತೋಽಬ್ರವೀತ್ ॥1॥
ವೈಶಂಪಾಯನ ಧೃತರಾಷ್ಟ್ರನ ಈ ಮಾತನ್ನು ಕೇಳಿ ಆಗ ಶಕುನಿಯು ಕರ್ಣನ ಜೊತೆಯಲ್ಲಿ ಕೂಡಿದವನಾಗಿ ಯೋಗ್ಯವಾದ ಕಾಲದಲ್ಲಿ ದುರ್ಯೋಧನನನ್ನು ಕುರಿತು ಈ ರೀತಿ ಹೇಳಿದನು.
ಪ್ರವ್ರಾಜ್ಯ ಪಾಂಡವಾನ್ ವೀರಾನ್ ಸ್ವೇನ ವೀರ್ಯೇಣ ಭಾರತ |
ಭುಂಕ್ಷ್ವೇಮಾಂ ಪೃಥಿವೀಮೇಕೋ ದಿವಿ ಶಂಬರಹಾ ಯಥಾ ॥2॥
ಭಾರತನೇ, ನಿನ್ನ ಸಾಮರ್ಥ್ಯದಿಂದ ವೀರರಾದ ಪಾಂಡವರನ್ನು ಕಾಡಿಗೆ ಕಳುಹಿಸಿ ಈ ಭೂಮಿಯನ್ನು ನೀನೊಬ್ಬನೇ ದೇವಲೋಕದ ಶಂಬರಾರಿಯಾದ ಮನ್ಮಥನಂತೆ ಆಳುವವನಾಗು.
ತವಾದ್ಯ ಪೃಥಿವೀ ರಾಜನ್ನಖಿಲಾ ಸಾಗರಾಂಬರಾ |
ಸಪರ್ವತವನಾರಾಮಾ ಸಹ ಸ್ಥಾವರಜಂಗಮಾ ॥3॥
ರಾಜನೇ, ಪರ್ವತ-ವನ-ಉದ್ಯಾನವನಗಳಿಂದ ಕೂಡಿದ ಸ್ಥಾವರಜಂಗಮಗಳಿಂದ ಕೂಡಿದ ಸಾಗರಾಂಬರೆಯಾದ ಈ ಸಮಗ್ರಭೂಮಿಯು ಈ ದಿನ ನಿನ್ನದಾಗಿದೆ.
ಪ್ರಾಚ್ಯಾಶ್ಚ ದಾಕ್ಷಿಣಾತ್ಯಾಶ್ಚ ಪ್ರತೀಚ್ಯೋದೀಚ್ಯವಾಸಿನಃ |
ಕೃತಾಃ ಕರಪ್ರದಾಃ ಸರ್ವೇ ರಾಜಾನಸ್ತೇ ನರಾಧಿಪ ॥4॥
ಎಲೈ ನರಾಧಿಪನೇ, ಪೂರ್ವದಿಕ್ಕಿನವರು, ದಕ್ಷಿಣದಿಕ್ಕಿನವರು, ಪಶ್ಚಿಮದಿಕ್ಕಿನವರು ಮತ್ತು ಉತ್ತರದಿಕ್ಕಿನವರೂ ಆದ ಎಲ್ಲ ರಾಜರೂ ನಿನಗೆ ಕಪ್ಪವನ್ನು ಕೊಡುವಂತೆ ಮಾಡಲ್ಪಟ್ಟಿದ್ದಾರೆ.
ಯಾ ಹಿ ಮಾ ದೀಪ್ಯಮಾನೇವ ಪಾಂಡವಾನಭಜತ್ಪುರಾ |
ಸಾದ್ಯ ಲಕ್ಷ್ಮೀಸ್ತ್ವಯಾ ರಾಜನ್ನವಾಪ್ತಾ ಭ್ರಾತೃಭಿಃ ಸಹ ॥5॥
ಎಲೈ ರಾಜನೇ, ಯಾವ ಸಂಪತ್ತು ಹಿಂದೆ ಪಾಂಡವರಲ್ಲಿ ಬೆಳಗುತ್ತಿತ್ತೋ ಆ ಸಂಪತ್ತನ್ನು ನೀನು ಈ ದಿನ ಸಹೋದರರ ಜೊತೆಯಲ್ಲಿ ಪಡೆದಿದ್ದೀಯೆ.
ಇಂದ್ರಪ್ರಸ್ಥಗತೇ ಯಾಂ ತಾಂ ದೀಪ್ಯಮಾನಾಂ ಯುಧಿಷ್ಠಿರೇ |
ಅಪಶ್ಯಾಮ ಶ್ರಿಯಂ ರಾಜನ್ ದೃಶ್ಯತೇ ಸಾ ತವಾದ್ಯ ವೈ |
ಶತ್ರವಸ್ತವ ರಾಜೇಂದ್ರ ನಚಿರಂ ಶೋಕಕರ್ಶಿತಾಃ ॥6॥
ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿರುವಾಗ ಅವನಲ್ಲಿ ಯಾವ ಸಂಪತ್ತನ್ನು ನೋಡಿದ್ದೆವೋ, ಎಲೈ ರಾಜನೇ, ಆ ಸಂಪತ್ತು ಈ ದಿನ ನಿನ್ನದಾಗಿದೆ. ರಾಜೇಂದ್ರನೇ, ನಿನ್ನ ಶತ್ರುಗಳು ಬೇಗ ಇನ್ನೂ ಶೋಕಕರ್ಶಿತರಾಗುತ್ತಾರೆ.
ಸಾ ತು ಬುದ್ಧಿಬಲೇನೇಯಂ ರಾಜ್ಞಸ್ತಸ್ಮಾದ್ ಯುಧಿಷ್ಠಿರಾತ್ |
ತ್ವಯಾಽಽಕ್ಷಿಪ್ತಾ ಮಹಾಬಾಹೋ ದೀಪ್ಯಮಾನೇವ ದೃಶ್ಯತೇ ॥7॥
ಎಲೈ ಮಹಾಬಾಹುವೇ, ನೀನು ನಿನ್ನ ಬುದ್ಧಿಬಲದಿಂದ ಯುಧಿಷ್ಠಿರ ರಾಜನಿಂದ ಅಪಹರಿಸಿ ಹಾರಿಸಿಕೊಂಡು ಬಂದ ಈ ಸಂಪತ್ತು ನಿನ್ನಲ್ಲಿ ಬೆಳಗುವಂತೆ ಕಾಣುತ್ತಿದೆ.
ತಥೈವ ತವ ರಾಜೇಂದ್ರ ರಾಜಾನಃ ಪರವೀರಹನ್ |
ಶಾಸನೇಽಧಿಷ್ಠಿತಾಃ ಸರ್ವೇ ಕಿಂ ಕುರ್ಮ ಇತಿ ವಾದಿನಃ ॥8॥
ಎಲೈ ರಾಜೇಂದ್ರನೇ, ಎಲೈ ಶತ್ರುವೀರಸಂಹಾರಕನೇ, ಹಾಗೆಯೇ ಎಲ್ಲ ರಾಜರೂ ನಿನ್ನ ಆಳ್ವಿಕೆಗೆ ಒಳಪಟ್ಟವರಾಗಿ ನಿನಗೆ ಏನು ಸೇವೆಯನ್ನು ಮಾಡೋಣ ಎಂದು ಕೇಳುತ್ತಿದ್ದಾರೆ.
ತವೇಯಂ ಪೃಥಿವೀ ರಾಜನ್ ನಿಖಿಲಾ ಸಾಗರಾಂಬರಾ |
ಸಪರ್ವತವನಾ ದೇವೀ ಸಗ್ರಾಮನಗರಾಕರಾ ॥9॥
ನಾನಾವನೋದ್ದೇಶವತೀ ಪರ್ವತೈರುಪಶೋಭಿತಾ |
ನಾನಾಜನಪದಾಕೀರ್ಣಾ ಸ್ಫೀತರಾಷ್ಟ್ರಾ ಮಹಾಬಲಾ ॥10॥
ಸಾಗರಾಂಬರಳಾದ ಪರ್ವತವನಗಳಿಂದಲೂ, ಗ್ರಾಮನಗರಗಳಿಂದಲೂ ಕೂಡಿದ ನಾನಾವನೋದ್ದೇಶಗಳಿಂದಲೂ, ಪರ್ವತಗಳಿಂದಲೂ ಶೋಭಿತವಾದ, ನಾನಾ ಜನಪದರಿಂದ ನಿಬಿಡವಾದ ಪರಿಶುದ್ಧವಾದ ರಾಷ್ಟ್ರವನ್ನು ಹೊಂದಿದ ಮಹಾಬಲವುಳ್ಳ ಈ ಪೃಥಿವೀದೇವಿಯು ನಿನ್ನವಳಾಗಿದ್ದಾಳೆ.
ವಂದ್ಯಮಾನೋ ದ್ವಿಜೈ ರಾಜನ್ ಪೂಜ್ಯಮಾನಶ್ಚ ರಾಜಭಿಃ |
ಪೌರುಷಾದ್ ದಿವಿ ದೇವೇಷು ಭ್ರಾಜಸೇ ರಶ್ಮಿವಾನಿವ ॥11॥
ರಾಜನೇ, ನೀನು ಬ್ರಾಹ್ಮಣರಿಂದ ವಂದ್ಯಮಾನವಾಗಿ, ರಾಜರಿಂದ ನಮಸ್ಕರಿಸಲ್ಪಟ್ಟು ನಿನ್ನ ಸಾಮರ್ಥ್ಯದಿಂದ ಸೂರ್ಯನು

ದೇವತೆಗಳಲ್ಲಿ ಕಂಗೊಳಿಸುವಂತೆ ಕಂಗೊಳಿಸುತ್ತಿದ್ದೀಯೆ.
ರುದ್ರೈರಿವ ಯಮೋ ರಾಜಾ ಮರುದ್ಭಿರಿವ ವಾಸವಃ |
ಕುರುಭಿಸ್ತ್ವಂ ವೃತೋ ರಾಜನ್ ಭಾಸಿ ನಕ್ಷತ್ರರಾಡಿವ ॥12॥
ಎಲೈ ರಾಜನೇ, ಯಮನು ರುದ್ರಗಣದಿಂದ ಸುತ್ತುವರಿಯಲ್ಪಟ್ಟಂತೆ ಇಂದ್ರನು ಮರುತ್ತುಗಳಿಂದ ಸುತ್ತುವರಿಯಲ್ಪಟ್ಟಂತೆ ನೀನು ಕುರುಗಳಿಂದ ಸುತ್ತುವರಿಯಲ್ಪಟ್ಟು ನಕ್ಷತ್ರರಾಜನಾದ ಚಂದ್ರನಂತೆ ಬೆಳಗುತಿತದ್ದೀಯೆ.
ಯೇ ಸ್ಮ ತೇ ನಾದ್ರಿಯಂತೇಽಜ್ಞಾ ನೋದ್ವಿಜಂತೇ ಕದಾಚನ |
ಪಶ್ಯಾಮಸ್ತಾನ್ ಶ್ರಿಯಾ ಹೀನಾನ್ ಪಾಂಡವಾನ್ ವನವಾಸಿನಃ ॥13॥
ಯಾವ ಅಜ್ಞರು ನಿನ್ನನ್ನು ಆದರಿಸುವುದಿಲ್ಲವೋ, ನಿನಗೆ ಹೆದರುವುದಿಲ್ಲವೋ ಅಂತಹ ಪಾಂಡವರು ಸಂಪತ್ತನ್ನು ಕಳೆದುಕೊಂಡು ವನವಾಸಿಗಳಾಗಿರುವುದನ್ನು ನಾವು ನೋಡುತ್ತಿದ್ದೇವೆ.
ಶ್ರೂಯತೇ ಹಿ ಮಹಾರಾಜ ಸರೋ ದ್ವೈತವನಂ ಪ್ರತಿ |
ವಸಂತಃ ಪಾಂಡವಾಃ ಸಾರ್ಧಂ ಬ್ರಾಹ್ಮಣೈರ್ವನವಾಸಿಭಿಃ ॥14॥
ಎಲೈ ಮಹಾರಾಜನೇ, ದ್ವೈತವನದ ಸಮೀಪದ ಸರೋವರದಲ್ಲಿ ಪಾಂಡವರು ವನವಾಸಿಗಳಾದ ಬ್ರಾಹ್ಮಣರ ಜೊತೆಯಲ್ಲಿ ವಾಸಮಾಡುತ್ತಿದ್ದಾರೆ ಎಂದು ಕೇಳಿಬರುತ್ತಿದೆ.
ಸಂಪ್ರಯಾಹಿ ಮಹಾರಾಜ ಶ್ರಿಯಾ ಪರಮಯಾ ಯುತಃ |
ತಾಪಯನ್ ಪಾಂಡುಪುತ್ರಾಂಸ್ತ್ವಂ ರಶ್ಮಿಮಾನಿವ ತೇಜಸಾ ॥15॥
ಎಲೈ ಮಹಾರಾಜನೇ, ಪರಮಸಂಪತ್ತಿನಿಂದ ಕೂಡಿದವನಾಗಿ ಪಾಂಡುಪುತ್ರರ ಬಳಿಗೆ ಹೋಗಿ ತನ್ನ ತೇಜಸ್ಸಿನಿಂದ ಸೂರ್ಯನು ಸಂತಾಪಗೊಳಿಸಿದಂತೆ ಅವರನ್ನು ಸಂತಾಪಗೊಳಿಸು.
ಸ್ಥಿತೋ ರಾಜ್ಯೇ ಚ್ಯುತಾನ್ ರಾಜ್ಯಾತ್ ಶ್ರಿಯಾ ಹೀನಾಂಛ್ರಿಯಾ ವೃತಃ |
ಅಸಮೃದ್ಧಾನ್ ಸಮೃದ್ಧಾರ್ಥಃ ಪಶ್ಯ ಪಾಂಡುಸುತಾನ್ ನೃಪ ॥16॥
ಎಲೈ ರಾಜನೇ, ರಾಜ್ಯದಲ್ಲಿ ಸ್ಥಾಪಿತನಾದ ನೀನು ರಾಜ್ಯಭ್ರಷ್ಟರಾದಂತಹ, ಸಂಪದ್ಯುಕ್ತನಾದ ನೀನು ಸಂಪತ್ತಿನಿಂದ ರಹಿತರಾದಂತಹ, ಸಮೃದ್ಧನಾದ ನೀನು ಸಮೃದ್ಧಿಯಿಲ್ಲದಂತಹ, ಪಾಂಡವರನ್ನು ನೋಡು.
ವಂದೀ
ಮಹಾಭಿಜನಸಂಪನ್ನಂ ಭದ್ರೇ ಮಹತಿ ಸಂಸ್ಥಿತಮ್ |
ಪಾಂಡವಾಸ್ತ್ವಭಿವೀಕ್ಷಂತಾಂ ಯಯಾತಿಮಿವ ನಾಹುಷಮ್ ॥17॥
ವಂದೀ ಶ್ರೇಷ್ಠವಾದ ವಂಶದಲ್ಲಿ ಹುಟ್ಟಿ ಮಹಾಸಂಪತ್ತಿನಲ್ಲಿ ಇರುವ ನಿನ್ನನ್ನು ನಹುಷ ಪುತ್ರನಾದ ಯಯಾತಿಯನ್ನು ನೋಡಿದಂತೆ ಪಾಂಡವರು ನೋಡಲಿ.
ಯಾಂ ಶ್ರಿಯಂ ಸುಹೃದಶ್ಚೈವ ದುರ್ಹೃದಶ್ಚ ವಿಶಾಂಪತೇ |
ಪಶ್ಯಂತಿ ಪುರುಷೇ ದೀಪ್ತಾಂ ಸ ಸಮರ್ಥೋ ಭವತ್ಯುತ ॥18॥
ಸಮಸ್ಥೋ ವಿಷಮಸ್ಥಾನ್ ಹಿ ದುರ್ಹೃದೋ ಯೋಽಭಿವೀಕ್ಷತೇ |
ಜಗತೀಸ್ಥಾನಿವಾದ್ರಿಸ್ಥಃ ಕಿಮತಃ ಪರಮಂ ಸುಖಮ್ ॥19॥
ಎಲೈ ರಾಜನೇ, ಮಿತ್ರರು ಮತ್ತು ಶತ್ರುಗಳು ಯಾವ ಪುರುಷನಲ್ಲಿ ಇಂತಹ ದೀಪ್ತವಾದ ಸಂಪತ್ತನ್ನು ನೋಡುತ್ತಾರೆಯೋ ಅಂತಹ ಪುರುಷನು ಸಮರ್ಥನೆನಿಸುತ್ತಾನೆ. ಜೀವನದಲ್ಲಿ ಸಮವಾದ ಸ್ಥಿತಿಯಲ್ಲಿರುವವನು ವಿಷಮ ಸ್ಥಿತಿಯಲ್ಲಿರುವ ಶತ್ರುಗಳನ್ನು ಆಕಾಶದಲ್ಲಿರುವ (ಪರ್ವತದ ಮೇಲಿರುವ) ಸೂರ್ಯನು ಭೂಮಿಯಲ್ಲಿರುವವರನ್ನು ನೋಡಿದಂತೆ ಯಾವನು ನೋಡುತ್ತಾನೆಯೋ ಅದಕ್ಕಿಂತ ಪರಮಸುಖವಾದುದು ಯಾವುದಿದೆ?
ನ ಪುತ್ರಧನಲಾಭೇನ ನ ರಾಜ್ಯೇನಾಪಿ ವಿಂದತಿ |
ಪ್ರೀತಿಂ ನೃಪತಿಶಾರ್ದೂಲ ಯಾಮಮಿತ್ರಾಘದರ್ಶನಾತ್ ॥20॥
ಎಲೈ ರಾಜಶಾರ್ದೂಲನೇ, ಶತ್ರುಗಳು ಕಷ್ಟದಲ್ಲಿರುವುದನ್ನು ನೋಡುವುದರಿಂದ ಎಂತಹ ಸುಖವುಂಟಾಗುತ್ತದೆಯೋ ಅಂತಹ ಸುಖವು ಪುತ್ರಲಾಭದಿಂದಲಾಗಲೀ, ಧನಲಾಭದಿಂದಲಾಗಲೀ ಅಥವಾ ರಾಜ್ಯಲಾಭದಿಂದಲಾಗಲೀ ಆಗುವುದಿಲ್ಲ.
ಕಿಂ ನು ತಸ್ಯ ಸುಖಂ ನ ಸ್ಯಾದಾಶ್ರಮೇ ಯೋ ಧನಂಜಯಮ್ |
ಅಭಿವೀಕ್ಷೇತ ಸಿದ್ಧಾರ್ಥೋ ವಲ್ಕಲಾಜಿನವಾಸಸಮ್ ॥21॥
ಯಾವನು ತಾನು ಸಂಪದ್ಯುಕ್ತನಾಗಿ ಆಶ್ರಮದಲ್ಲಿ ನಾರುಮಡಿ ಮತ್ತು ಕೃಷ್ಣಾಜಿನವನ್ನು ಧರಿಸಿದ ಅರ್ಜುನನನ್ನು ನೋಡುವನೋ ಅವನಿಗೆ ಸುಖವಾಗದೇ ಇರಲು ಹೇಗೆ ಸಾಧ್ಯ?
ಸುವಾಸಸೋ ಹಿ ತೇ ನಾರ್ಯೋ ವಲ್ಕಲಾಜಿನವಾಸಸೀಮ್ |
ಪಶ್ಯಂತು ದುಃಖಿತಾಂ ಕೃಷ್ಣಾಂ ಸಾ ಚ ನಿರ್ವಿದ್ಯತಾಂ ಪುನಃ ॥22॥
ಒಳ್ಳೆಯ ವಸ್ತ್ರಗಳನ್ನು ಉಟ್ಟ ನಿನ್ನ ಪತ್ನಿಯರು ನಾರುಮಡಿ ಮತ್ತು ಕೃಷ್ಣಾಜಿನವನ್ನು ಉಟ್ಟು ದುಃಖಿತಳಾದ ದ್ರೌಪದಿಯನ್ನು ನೋಡಲಿ. ಆಗ ದ್ರೌಪದಿಗೆ ಪುನಃ ಇನ್ನೂ ದುಃಖವಾಗಲಿ.
ವಿಂದಂತಾಂ ಚಾಪ್ಯನಾತ್ಮಾನಂ ಜೀವಿತಸ್ಯ ಧನಾಚ್ಚ್ಯುತಾಃ |
ದಾರಾಣಾಂ ತೇ ಶ್ರಿಯಂ ದೃಷ್ಟ್ವಾ ದೀಪ್ತಾಮದ್ಯ ಜನಾಧಿಪ ॥23॥
ಎಲೈ ಜನಾಧಿಪನೇ, ನಿನ್ನ ಪತ್ನಿಯರ ದೀಪ್ತವಾದ ಸಂಪತ್ತನ್ನು ನೋಡಿ, ಸಂಪತ್ತಿನಿಂದ ಚ್ಯುತರಾದ ಪಾಂಡವರು ಜೀವಿಸುವುದಕ್ಕೂ ಪ್ರಯತ್ನವನ್ನು ಮಾಡದೇ ಇರಲಿ.

ನ ತಥಾ ಹಿ ಸಭಾಮಧ್ಯೇ ತಸ್ಯಾ ಭವಿತುಮರ್ಹತಿ |
ವೈಮನಸ್ಯಂ ಯಥಾ ದೃಷ್ಟ್ವಾ ತವ ಭಾರ್ಯಾಃ ಸ್ವಲಂಕೃತಾಃ ॥24॥
ಅಲಂಕೃತರಾದ ನಿನ್ನ ಭಾರ್ಯೆಯರನ್ನು ನೋಡಿ ದ್ರೌಪದಿಗೆ ಎಂತಹ ವಿಷಾದ ಉಂಟಾಗುತ್ತದೋ ಅದು ಸಭಾಮಧ್ಯದಲ್ಲಿಯೂ ಸಹ ಅವಳಿಗೆ ಆಗಿರಲು ಸಾಧ್ಯವಿಲ್ಲ.
ವೈಶಂಪಾಯನಃ
ಏವಮುಕತ್ವ ತು ರಾಜಾನಂ ಕರ್ಣಃ ಶಕುನಿನಾ ಸಹ |
ತೂಷ್ಣೀಂಬಭೂವತುರುಭೌ ವಾಕ್ಯಾಂತೇ ಜನಮೇಜಯ ॥25॥
ವೈಶಂಪಾಯನ ಎಲೈ ಜನಮೇಜಯನೇ, ರಾಜನನ್ನು ಕುರಿತು ಕರ್ಣ ಮತ್ತು ಶಕುನಿಗಳು ಈ ರೀತಿ ಮಾತನಾಡಿ ತಮ್ಮ ಮಾತುಗಳು ಮುಗಿದ ಮೇಲೆ ಇಬ್ಬರೂ ಸುಮ್ಮನಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ಷಡ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಕರ್ಣಶಕುನಿವಾಕ್ಯಂನಾಮ ದ್ವಿತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತಾರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ
ಘೋಷಯಾತ್ರೆಗಾಗಿ ದ್ವೈತವನಕ್ಕೆ ಹೋಗಲು
ಕರ್ಣ-ಶಕುನಿಗಳಿಂದ ಉಪಾಯ ನಿಶ್ಚಯ.
ವೈಶಂಪಾಯನಃ
ಕರ್ಣಸ್ಯ ವಚನಂ ಶ್ರುತ್ವಾ ರಾಜಾ ದುರ್ಯೋಧನಸ್ತತಃ |
ಹೃಷ್ಟೋ ಭೂತ್ವಾ ಪುನರ್ದೀನ ಇದಂ ವಚನಮಬ್ರವೀತ್ ॥1॥
ವೈಶಂಪಾಯನ ಕರ್ಣನ ಮಾತುಗಳನ್ನು ಕೇಳಿದ ರಾಜನಾದ ದುರ್ಯೋಧನನು ಆಗ ಮೊದಲು ಸಂತೋಷಗೊಂಡು ಪುನಃ ದೀನನಾಗಿ ಈ ಮಾತನ್ನು ಆಡಿದನು.
ಬ್ರವೀಷಿ ಯದಿದಂ ಕರ್ಣ ಸರ್ವಂ ತದ್ ಹೃದಯೇ ಸ್ಥಿತಮ್ |
ನ ತ್ವಭ್ಯನುಜ್ಞಾಂ ಲಪ್ಸ್ಯಾಮಿ ಗಮನೇ ಯತ್ರ ಪಾಂಡವಾಃ ॥2॥
ಕರ್ಣನೇ, ನೀನು ಏನು ಹೇಳುತ್ತಿದ್ದೀಯೋ ಅದೆಲ್ಲವೂ ನನ್ನ ಮನಸ್ಸಿನಲ್ಲಿದೆ. ಆದರೆ ಪಾಂಡವರು ಇದ್ದಲ್ಲಿಗೆ ಹೋಗಲು ಧೃತರಾಷ್ಟ್ರನ ಅನುಮತಿ ನನಗೆ ದೊರೆಯುವುದಿಲ್ಲ.
ಪರಿದೇವತಿ ತಾನ್ ವೀರಾನ್ ಧೃತರಾಷ್ಟ್ರೋ ಮಹೀಪತಿಃ |
ಮನ್ಯತೇಽಭ್ಯಧಿಕಾಂಶ್ಚಾಪಿ ತಪೋಯೋಗೇನ ಪಾಂಡವಾನ್ ॥3॥
ರಾಜನಾದ ಧೃತರಾಷ್ಟ್ರನು ಆ ವೀರರನ್ನು ಕುರಿತು ಗೋಳಾಡುತ್ತಿದ್ದಾನೆ. ಅಲ್ಲದೆ, ಅವರ ತಪಸ್ಸಿನ ಬಲದಿಂದ ಪಾಂಡವರು ಶ್ರೇಷ್ಠರೆಂದೂ ತಿಳಿದಿದ್ದಾನೆ.
ಅಥವಾಽಪ್ಯನುಬುಧ್ಯೇತ ನೃಪೋಽಸ್ಮಾಕಂ ಚಿಕೀರ್ಷಿತಮ್ |
ಏತಾಮಪ್ಯಾಯತಿಂ ರಕ್ಷನ್ನಾಭ್ಯನುಜ್ಞಾತುಮರ್ಹತಿ ॥4॥
ಅಥವಾ ರಾಜನಿಗೆ ನಮ್ಮ ಅಭಿಪ್ರಾಯವೇನಾದರೂ ತಿಳಿದರೆ ಈಗಿರುವ ಸಂಪತ್ತನ್ನು ರಕ್ಷಿಸುವುದೇ ಒಳ್ಳೆಯದೆಂದು ತಿಳಿದು (ಕಲಹವುಂಟಾದರೆ ಅದೂ ಕೂಡ ಹೊರಟು ಹೋಗುತ್ತದೆ ಎಂದು ತಿಳಿದು) ಅನುಮತಿಯನ್ನು ಕೊಡುವುದಿಲ್ಲ.
ನ ಹಿ ದ್ವೈತವನೇ ಕಿಂಚಿದ್ ವಿದ್ಯತೇಽನ್ಯತ್ ಪ್ರಯೋಜನಮ್ |
ಉತ್ಸಾದನಮೃತೇ ತೇಷಾಂ ವನಸ್ಥಾನಾಂ ಮಹಾದ್ಯುತೇ ॥5॥
ಎಲೈ ಮಹಾದ್ಯುತಿಯೇ, ಕಾಡಿನಲ್ಲಿರುವ ಅವರನ್ನು ವಿನಾಶಮಾಡುವುದನ್ನು ಬಿಟ್ಟು ದ್ವೈತವನದಲ್ಲಿ ನಮಗೆ ಬೇರೆ ಯಾವ ಪ್ರಯೋಜನವೂ ಇಲ್ಲ.
ಜಾನಾಸಿ ಹಿ ಯಥಾ ಕ್ಷತ್ತಾ ದ್ಯೂತಕಾಲ ಉಪಸ್ಥಿತೇ |
ಅಬ್ರವೀದ್ ಯಚ್ಚ ಮಾಂ ತ್ವಾಂ ಚ ಸೌಬಲಂ ವಚನಂ ತದಾ ॥6॥
ದ್ಯೂತಕಾಲವು ಉಪಸ್ಥಿತವಾದಾಗ ವಿದುರನು ನನ್ನ, ನಿನ್ನ ಮತ್ತು ಶಕುನಿಯ ವಿಷಯದಲ್ಲಿ ಏನು ಮಾತಾಡಿದನೆಂದು ನೀನೇ ತಿಳಿದಿದ್ದೀಯೆ.
ತಾನಿ ಸರ್ವಾಣಿ ವಾಕ್ಯಾನಿ ಯಚ್ಚಾನ್ಯತ್ ಪರಿದೇವಿತಮ್ |
ವಿಚಿಂತ್ಯ ನಾಧಿಗಚ್ಛಾಮಿ ಗಮನಾಯೇತರಾಯ ವಾ ॥7॥
ಆ ಎಲ್ಲ ಮಾತುಗಳನ್ನೂ ಮತ್ತು ಬೇರೆಯವರ ಪರಿದೇವನೆಗಳನ್ನೂ (ಶೋಕಾಲಾಪ-ಗೋಲಾಟಗಳನುನ) ಚಿಂತಿಸಿ ಹೋಗುವುದೇ ಅಥವಾ ಬಿಡುವುದೇ ಎಂದು ನಿರ್ಧರಿಸಲು ನನಗೆ ಸಾಧ್ಯವಾಗುತ್ತಿಲ್ಲ.
ಮಮಾಪಿ ಹಿ ಮಹಾನ್ ಹರ್ಷೋ ಯದಹಂ ಭೀಮಫಲ್ಗುನೌ |
ಕ್ಲಿಷ್ಟಾವರಣ್ಯೇ ಪಶ್ಯೇಯಂ ಕೃಷ್ಣಯಾ ಸಹಿತಾವಿತಿ ॥8॥
ದ್ರೌಪದಿಯಿಂದ ಸಹಿತರಾದ ಭೀಮಾರ್ಜುನರು ಅರಣ್ಯದಲ್ಲಿ ಕಷ್ಟಪಡುವುದನ್ನು ನಾನು ನೋಡುವುದಾದರೆ ನನಗೂ ದೊಡ್ಡ

ಸಂತೋಷವುಂಟಾಗುತ್ತದೆ.
ನ ತಥಾ ಹ್ಯಾಪ್ನುಯಾಂ ಪ್ರೀತಿಮವಾಪ್ಯ ವಸುಧಾಮಿಮಾಮ್ |
ದೃಷ್ಟ್ವಾ ಯಥಾ ಪಾಂಡುಸುತಾನ್ ವಲ್ಕಲಾಜಿನವಾಸಸಃ ||9||
ನಾರುಮಡಿ ಮತ್ತು ಕೃಷ್ಣಾಜಿನವನ್ನು ಧರಿಸಿದ ಪಾಂಡವರನ್ನು ನೋಡಿದರೆ ಎಂತಹ ಸಂತೋಷವುಂಟಾಗುವುದೋ ಅಂತಹ ಸಂತೋಷವು ಈ ಭೂಮಿಯನ್ನು ಪಡೆದರೂ ನನಗೆ ಆಗಲಾರದು.
ಕಿಂ ನು ಸ್ಯಾದಧಿಕಂ ತಸ್ಮಾದ್ ಯದಹಂ ದ್ರುಪದಾತ್ಮಜಾಮ್ |
ದ್ರೌಪದೀಂ ಕರ್ಣ ಪಶ್ಯೇಯಂ ಕಾಷಾಯವಸನಾಂ ವನೇ ||10||
ಎಲೈ ಕರ್ಣನೇ, ನಾನು ಕಾಡಿನಲ್ಲಿ ಕಾಷಾಯವಸ್ತ್ರವನ್ನು ಧರಿಸಿದ ದ್ರುಪದಾತ್ಮಜೆಯಾದ ದ್ರೌಪದಿಯನ್ನು ನೋಡುವುದಾದರೆ ಅದಕ್ಕಿಂತ ದೊಡ್ಡದು ಯಾವುದಿದೆ?
ಯದಿ ಮಾಂ ಧರ್ಮರಾಜಶ್ಚ ಭೀಮಸೇನಶ್ಚ ಪಾಂಡವಃ |
ಯುಕ್ತಂ ಪರಮಯಾ ಲಕ್ಷ್ಮ್ಯಾ ಪಶ್ಯೇತಾಂ ಜೀವಿತಂ ಭವೇತ್ ||11||
ಪಾಂಡುಪುತ್ರನಾದ ಧರ್ಮರಾಜನು ಮತ್ತು ಭೀಮಸೇನನು ಪರಮಸಂಪತ್ತಿನಿಂದ ಕೂಡಿದ ನನ್ನನ್ನು ನೋಡುವುದಾದರೆ ನನ್ನ ಜೀವನವು ಸಾರ್ಥಕವಾದೀತು.
ಉಪಾಯಂ ತು ನ ಪಶ್ಯಾಮಿ ಯೇನ ಗಚ್ಛೇಮ ತದ್ವನಮ್ |
ಯಥಾ ಚಾಭ್ಯನುಜಾನೀಯಾದ್ ಗಚ್ಛಂತಂ ಮಾಂ ಮಹೀಪತಿಃ ||12||
ಆದರೆ ನಾವು ಯಾವ ರೀತಿ ದ್ವೈತವನಕ್ಕೆ ಹೋದೇವು ಮತ್ತು ಅಲ್ಲಿಗೆ ಹೋಗುವ ನನಗೆ ಧೃತರಾಷ್ಟ್ರನು ಹೇಗೆ ಅನುಮತಿಯನ್ನು ಕೊಟ್ಟಾನು ಎಂದು ನನಗೆ ತಿಳಿಯುತ್ತಿಲ್ಲ.
ಸ ಸೌಬಲೇನ ಸಹಿತಸ್ತಥಾ ದುಃಶಾಸನೇನ ಚ |
ಉಪಾಯಂ ಪಶ್ಯ ನಿಪುಣಂ ಯೇನ ಗಚ್ಛೇಮ ತದ್ವನಮ್ ||13||
ಅಂತಹ ನೀನಾದರೂ ದುಶ್ಶಾಸನ ಮತ್ತು ಶಕುನಿಗಳ ಜೊತೆಯಲ್ಲಿ ನಾವು ದ್ವೈತವನಕ್ಕೆ ಹೋಗುವ ನಿಪುಣವಾದ ಉಪಾಯವನ್ನು ಕಂಡುಹಿಡಿ.
ಅಹಮಪ್ಯದ್ಯ ನಿಶ್ಚಿತ್ಯ ಗಮನಾಯೇತರಾಯ ವಾ |
ಕಲ್ಯಮೇವ ಗಮಿಷ್ಯಾಮಿಃ ಸಮೀಪಂ ಪಾರ್ಥಿವಸ್ಯ ಹ ||14||
ನಾನೂ ಸಹ ಈ ದಿನ ಹೋಗುವುದೇ ಅಥವಾ ಇಲ್ಲವೇ ಎಂದು ನಿಶ್ಚಯಿಸಿ ನಾಳೆ ಪ್ರಾತಃಕಾಲದಲ್ಲಿಯೇ ರಾಜನ ಸಮೀಪಕ್ಕೆ ಹೋಗುತ್ತೇನೆ.
ಮಯಿ ತತ್ರೋಪವಿಷ್ಟೇ ತು ಭೀಷ್ಮೇ ಚ ಕುರುಸತ್ತಮೇ |
ಉಪಾಯೋ ಯೋ ಭವೇದ್ ದೃಷ್ಟಸ್ತಂ ಬ್ರೂಯಾಃ ಸಹಸೌಬಲಃ ||15||
ನಾನು ಮತ್ತು ಕುರುಶ್ರೇಷ್ಠರಾದ ಭೀಷ್ಮರು ಅಲ್ಲಿ ಕುಳಿತಿರುವಾಗ ನೀನು ಶಕುನಿಯ ಜೊತೆಯಲ್ಲಿ ಕಂಡುಹಿಡಿದ ಉಪಾಯವನ್ನು ಅಲ್ಲಿ ಹೇಳು.
ವಚೋ ಭೀಷ್ಮಸ್ಯ ರಾಜ್ಞಶ್ಚ ನಿಶಮ್ಯ ಗಮನಂ ಪ್ರತಿ |
ವ್ಯವಸಾಯಂ ಕರಿಷ್ಯೇಽಹಮನುನೀಯ ಪಿತಾಮಹಮ್ ||16||
ನಾನು ಗಮನದ ವಿಷಯದಲ್ಲಿ ಭೀಷ್ಮರ ಮತ್ತು ಧೃತರಾಷ್ಟ್ರರ ಮಾತುಗಳನ್ನು ಕೇಳಿ ಒಂದು ನಿರ್ಧಾರಕ್ಕೆ ಬಂದು ಅನಂತರ ಪಿತಾಮಹರಾದ ಭೀಷ್ಮರನ್ನು ಒತ್ತಾಯ ಪಡಿಸುವೆನು.
ವೈಶಂಪಾಯನಃ
ತಥೇತ್ಯುಕ್ತತ್ವ ತು ತಂ ಸರ್ವೇ ಜಗ್ಮುರಾವಸಥಾನ್ ಪ್ರತಿ |
ವ್ಯುಷಿತಾಯಾಂ ರಜನ್ಯಾಂ ತು ಕರ್ಣೋ ರಾಜಾನಮಭ್ಯಯಾತ್ ||17||
ವೈಶಂಪಾಯನ ಹಾಗೆಯೇ ಆಗಲಿ ಎಂದು ಅವನಿಗೆ ಹೇಳಿ ಅವರೆಲ್ಲರೂ ತಮ್ಮ ಮನೆಗಳಿಗೆ ಹೋದರು. ರಾತ್ರಿಯು ಕಳೆಯುತ್ತಿರಲು ಕರ್ಣನು ದುರ್ಯೋಧನನ ಬಳಿಗೆ ಬಂದನು.
ತತೋ ದುರ್ಯೋಧನಂ ಕರ್ಣಃ ಪ್ರಹಸನ್ನಿದಮಬ್ರವೀತ್ |
ಉಪಾಯಃ ಪರಿದೃಷ್ಟೋಽಯಂ ತಂ ನಿಬೋಧ ಜನೇಶ್ವರ ||18||
ಆಗ ಕರ್ಣನು ದುರ್ಯೋಧನನ್ನು ನೋಡಿ ನಗುತ್ತಾ, ರಾಜನೇ, ಈ ಉಪಾಯವನ್ನು ಕಂಡುಹಿಡಿದಿದ್ದಾಗಿದೆ. ಅದನ್ನು ತಿಳಿ ಎಂದು ಹೇಳಿದನು.
ಘೋಷಾ ದ್ವೈತವನೇ ಸರ್ವೇ ತ್ವತ್ಪ್ರತೀಕ್ಷಾ ನರಾಧಿಪ |
ಘೋಷಯಾತ್ರಾಪದೇಶೇನ ಗಮಿಷ್ಯಾಮೋ ನ ಸಂಶಯಃ ||19||
ಎಲೈ ರಾಜನೇ, ದ್ವೈತವನದಲ್ಲಿರುವ ಘೋಷಗಳೆಲ್ಲವೂ (ಗೋಪಾಲಕರೆಲ್ಲರೂ - ಘೋಷ ಎಂದರೆ ಗೋಪಾಲಕರು ಇರುವ ಸ್ಥಳ) ನಿನ್ನ ಪ್ರತೀಕ್ಷೆಯಲ್ಲಿದ್ದಾರೆ. ಘೋಷಯಾತ್ರೆಯ ನೆವದಿಂದ ನಾವು ಅಲ್ಲಿಗೆ ಹೋಗುವೆವು. ಇದರಲ್ಲಿ ಸಂಶಯವಿಲ್ಲ.
ಉಚಿತಂ ಹಿ ಸದಾ ಗಂತುಂ ಘೋಷಯಾತ್ರಾಂ ವಿಶಾಂಪತೇ |
ಏವಂ ಚ ತ್ವಾಂ ಪಿತಾ ರಾಜನ್ ಸಮನುಜ್ಞಾತುಮರ್ಹತಿ ||20||
ಎಲೈ ರಾಜನೇ, ಘೋಷಯಾತ್ರೆಗಾಗಿ ಯಾವಾಗ ಬೇಕಾದರೂ ಹೋಗುವುದು ಉಚಿತವಾಗಿದೆ. ರಾಜನೇ, ಹೀಗೆ ಮಾಡಿದರೆ ನಿನ್ನ ತಂದೆಯು ನಿನಗೆ ಅನುಮತಿಯನ್ನು ಕೊಡುತ್ತಾನೆ.

ವೈಶಂಪಾಯನಃ
ತಥಾ ಕಥಯಮಾನೌ ತೌ ಘೋಷಯಾತ್ರಾವಿನಿಶ್ಚಯಮ್ |
ಗಾಂಧಾರರಾಜಃ ಶಕುನಿಃ ಪ್ರತ್ಯುವಾಚ ಹಸನ್ನಿವ ॥21॥
ವೈಶಂಪಾಯನ ಘೋಷಯಾತ್ರೆ ವಿನಿಶ್ಚಯವನ್ನು ಮಾಡಿ ಹಾಗೆ ಮಾತನಾಡುತ್ತಿದ್ದ ಅವರಿಬ್ಬರನ್ನು ನೋಡಿ ನಗುತ್ತಾ ಗಾಂಧಾರರಾಜನಾದ ಶಕುನಿಯು ಮಾತನಾಡಿದನು.
ಉಪಾಯೋಽಯಂ ಮಯಾ ದೃಷ್ಟೋ ಗಮನಾಯ ನಿರಾಮಯಃ |
ಅನುಜ್ಞಾಸ್ಯತಿ ನೋ ರಾಜಾ ಚೋದಯಿಷ್ಯತಿ ಚಾಪ್ಯುತ ॥22॥
ದ್ವೈತವನಕ್ಕೆ ಹೋಗಲು ಈ ನಿರ್ದುಷ್ಟವಾದ ಉಪಾಯವನ್ನು ಕಂಡುಹಿಡಿದವನು ನಾನು. ನಮಗೆ ರಾಜನು ಅನುಮತಿಯನ್ನು ನೀಡುವನು. ಇಷ್ಟೇ ಅಲ್ಲ ರಾಜನೇ ನಮಗೆ ಅಲ್ಲಿಗೆ ಹೋಗುವಂತೆ ಹೇಳುವನು.
ಘೋಷಾ ದ್ವೈತವನೇ ಸರ್ವೇ ತ್ವತ್ಪ್ರತೀಕ್ಷಾ ನರಾಧಿಪ |
ಘೋಷಯಾತ್ರಾಪದೇಶೇನ ಗಮಿಷ್ಯಾಮಃ ಸರಃ ಪ್ರತಿ ॥23॥
ಎಲೈ ರಾಜನೇ, ದ್ವೈತವನದಲ್ಲಿರುವ ಘೋಷಗಳೆಲ್ಲವೂ ನಿನ್ನ ಪ್ರತೀಕ್ಷೆಯಲ್ಲಿವೆ. ಘೋಷಯಾತ್ರೆಯ ನೆವದಿಂದ ನಾವು ಆ ಸರೋವರಕ್ಕೆ ಹೋಗೋಣ.
ವೈಶಂಪಾಯನಃ
ತತಃ ಪ್ರಹಸಿತಾಃ ಸರ್ವೇ ತೇಽನ್ಯೋನ್ಯಸ್ಯ ತಳಾನ್ ದದುಃ |
ತದೇವ ಚ ವಿನಿಶ್ಚಿತ್ಯ ದದೃಶುಃ ಕುರುಸತ್ತಮಮ್ ॥24॥
ಆಗ ಎಲ್ಲರೂ ನಗುತ್ತಾ ಪರಸ್ಪರವಾಗಿ ಹಸ್ತಲಾಘವವನ್ನು ನೀಡಿದರು. ಅದನ್ನೇ ನಿಶ್ಚಯಿಸಿ ಕುರುಶ್ರೇಷ್ಠನಾದ ಧೃತರಾಷ್ಟ್ರನನ್ನು ನೋಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಘೋಷಯಾತ್ರಾಮಂತ್ರಣಂ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * **
ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯ
ಘೋಷಯಾತ್ರೆಗೆ ಹೋಗಲು ಧೃತರಾಷ್ಟ್ರನಿಂದ ಮನಸ್ಸಿಲ್ಲದೇ ಅನುಮತಿ.
ವೈಶಂಪಾಯನಃ
ಧೃತರಾಷ್ಟ್ರಂ ತತಃ ಸರ್ವೇ ದದೃಶುರ್ಜನಮೇಜಯ |
ಪೃಷ್ಟ್ವಾ ಸುಖಮಥೋ ರಾಜ್ಞಃ ಪೃಷ್ಟಾ ರಾಜ್ಞಾ ಚ ಭಾರತ ॥1॥
ವೈಶಂಪಾಯನ ಜನಮೇಜಯನೇ, ಅನಂತರ ಎಲ್ಲರೂ ಧೃತರಾಷ್ಟ್ರನನ್ನು ನೋಡಿದರು. ಎಲೈ ಭಾರತನೇ, ಅವರು ರಾಜನ ಕ್ಷೇಮವನ್ನು ವಿಚಾರಿಸಿದರು. ರಾಜನೂ ಅವರ ಕ್ಷೇಮವನ್ನು ವಿಚಾರಿಸಿದನು.
ತತಸ್ತೈರ್ವಿಹಿತಃ ಪೂರ್ವಂ ಸಮಂಗೋ ನಾಮ ವಲ್ಲವಃ |
ಸಮೀಪಸ್ಥಾಸ್ತದಾ ಗಾವೋ ಧೃತರಾಷ್ಟ್ರೇ ನ್ಯವೇದಯತ್ ॥2॥
ಆಗ ಅವರು ಮೊದಲೇ ವ್ಯವಸ್ಥೆ ಮಾಡಿದ್ದಂತೆ ಸಮಂಗ ಎಂಬ ಗೋಪಾಲನು ಬಂದು ಧೃತರಾಷ್ಟ್ರನಿಗೆ ಗೋವುಗಳು ಸಮೀಪದಲ್ಲಿಯೇ ಇವೆ ಎಂದು ನಿವೇದಿಸಿದನು.
ಅನಂತರಂ ಚ ರಾಧೇಯಃ ಶಕುನಿಶ್ಚ ಮಹಾರಥಃ |
ಆಹತುಃ ಪಾರ್ಥಿವಶ್ರೇಷ್ಠಂ ಧೃತರಾಷ್ಟ್ರಂ ಜನಾಧಿಪಮ್ ॥3॥
ಅನಂತರ ಮಹಾರಥರಾದ ಶಕುನಿ ಮತ್ತು ಕರ್ಣರು ರಾಜಶ್ರೇಷ್ಠನಾದ ಧೃತರಾಷ್ಟ್ರನನ್ನು ಕುರಿತು ಹೇಳಿದರು.
ಶಕುನಿ-ಕರ್ಣೌ
ರಮಣೀಯೇಷು ದೇಶೇಷು ಘೋಷಾಃ ಸಂಪ್ರತಿ ಕೌರವ |
ಸ್ಮಾರಣಂ ಸಮಯಂ ಪ್ರಾಪ್ತಂ ವತ್ಸಾನಾಮಪಿ ಚಾಂಕನಮ್ ॥4॥
ಶಕುನಿ-ಕರ್ಣ ಎಲೈ ಕೌರವನೇ, ಈಗ ರಮಣೀಯ ಪ್ರದೇಶಗಳಲ್ಲಿ ಗೋಪಾಲರು ಬೀಡುಬಿಟ್ಟಿದ್ದಾರೆ. ಗೋವುಗಳ ಗಣನೆಯನ್ನು ತೆಗೆದುಕೊಳ್ಳುವ ಮತ್ತು ವತ್ಸಗಳಿಗೆ ರಾಜಮುದ್ರೆಯನ್ನು ಹಾಕುವ ಸಮಯವು ಈಗ ಪ್ರಾಪ್ತವಾಗಿದೆ.
ಮೃಗಯಾ ಚೋಚಿತಾ ರಾಜನ್ನಸ್ಮಿನ್ ಕಾಲೇ ಸುತಸ್ಯ ತೇ |
ದುರ್ಯೋಧನಸ್ಯ ಗಮನಂ ಸಮನುಜ್ಞಾತುಮರ್ಹಸಿ ॥5॥
ರಾಜನೇ, ನಿನ್ನ ಮಗನಿಗೆ ಈಗ ಬೇಟೆಯಾಡಲು ಯೋಗ್ಯವಾದ ಕಾಲವೂ ಆಗಿದೆ. ಆದ್ದರಿಂದ ದುರ್ಯೋಧನನ ವನಗಮನಕ್ಕೆ ನೀನು ಅನುಮತಿಯನ್ನು ಕೊಡಬೇಕು.
ಧೃತರಾಷ್ಟ್ರಃ
ಮೃಗಯಾ ಶೋಭನಾ ತಾತ ಗವಾಂ ಹಿ ಸಮವೇಕ್ಷಣಮ್ |
ವಿಶ್ರಂಭಸ್ತು ನ ಗಂತವ್ಯೋ ವಲ್ಲವಾನಾಮಿತಿ ಸ್ಮರೇ ॥6॥

ಧೃತರಾಷ್ಟ್ರ ಪ್ರೀತಿಪಾತ್ರನೇ, ಬೇಟೆಯಾಡುವುದು ಒಳ್ಳೆಯದು. ಗೋವುಗಳ ಮೇಲ್ವಿಚಾರಣೆಯೂ ಒಳ್ಳೆಯದೆ. ಆದರೆ ಗೋಪಾಲರ ಮಾತಿನಲ್ಲಿ ವಿಶ್ವಾಸವನ್ನು ಮಾಡಬಾರದು ಎಂದು ನಾನು ತಿಳಿಯುತೆತೇನೆ.
ತೇ ತು ತತ್ರ ನರವ್ಯಾಘ್ರಾಃ ಸಮೀಪೇ ಇತಿ ನಃ ಶ್ರುತಮ್ |
ಅತೋ ನಾಭ್ಯನುಜಾನಾಮಿ ಗಮನಂ ತತ್ರ ವಃ ಸ್ವಯಮ್ ॥7॥
ನರವ್ಯಾಘ್ರರಾದ ಪಾಂಡವರು ಅಲ್ಲಿ ಸಮೀಪದಲ್ಲಿಯೇ ಇದ್ದಾರೆಂದು ನಾನು ಕೇಳಿದ್ದೇನೆ. ಆದ್ದರಿಂದ ನಾನಾಗಿಯೇ ನಿಮಗೆ ಅಲ್ಲಿಗೆ ಹೋಗಲು ಅನುಮತಿಯನ್ನು ಕೊಡುವುದಿಲ್ಲ.
ಛದ್ಮನಾ ನಿರ್ಜಿತಾಸ್ತೇ ತು ಕರ್ಶಿತಾಶ್ಚ ಮಹಾವನೇ |
ತಪೋನಿತ್ಯಾಶ್ಚ ರಾಧೇಯ ಸಮರ್ಥಾಶ್ಚ ಮಹಾರಥಾಃ ॥8॥
ಅವರು ಮೋಸದಿಂದ ಸೋಲಿಸಲ್ಪಟ್ಟಿದ್ದಾರೆ. ಕಾಡಿನಲ್ಲಿ ಬಳಲಿದ್ದಾರೆ. ಕರ್ಣನೇ, ಮಹಾರಥರಾದ ಅವರು ಸಮರ್ಥರೂ, ತಪೋನಿರತರೂ ಆಗಿದ್ದಾರೆ.
ಧರ್ಮರಾಜೋ ನ ಸಂಕ್ರುದ್ಧ್ಯೇದ್ ಭೀಮಸೇನಸ್ತ್ವಮರ್ಷಣಃ |
ಯಜ್ಞಸೇನಸ್ಯ ದುಹಿತಾ ತೇಜ ಏವ ತು ಕೇವಲಮ್ ॥9॥
ಧರ್ಮರಾಜನು ಕೋಪಗೊಳ್ಳಲಾರ. ಆದರೆ ಭೀಮಸೇನನು ಮಾತ್ರ ಮಹಾಕೋಪವುಳ್ಳವನು. ಯಜ್ಞಸೇನನ ಮಗಳಾದ ದ್ರೌಪದಿಯಂತೂ ಅಗ್ನಿಯೇ ಸರಿ.
ಯೂಯಂ ಚಾಪ್ಯಪರಾಧ್ಯೇಯುರ್ದರ್ಪಮೋಹಸಮನ್ವಿತಾಃ |
ತತೋ ವಿನಿರ್ದಹೇಯುಸ್ತೇ ತಪಸಾ ಹಿ ಸಮನ್ವಿತಾಃ ॥10॥
ದರ್ಪಮೋಹಸಮನ್ವಿತರಾದ ನೀವೂ ಸಹ ಅಪರಾಧವನ್ನು ಮಾಡಬಹುದು. ಆಗ ಅವರು ತಪಸ್ಸಿನಿಂದಲೂ ಕೂಡಿದವರಾಗಿ ನಿಮ್ಮನ್ನು ಸುಟ್ಟುಬಿಡಬಹುದು.
ಅಥವಾ ಸಾಯುಧಾ ವೀರಾ ಮನ್ಯುನಾಽಭಿಪರಿಪ್ಲುತಾಃ |
ಸಹಿತಾ ಬದ್ಧನಿಸ್ತ್ರಿಂಶಾ ದಹೇಯುಃ ಶಸ್ತ್ರತೇಜಸಾ ॥11॥
ಅಥವಾ ಆಯುಧಗಳನ್ನು ಧರಿಸಿದ ಕತ್ತಿಗಳನ್ನು ಕಟ್ಟಿದ ವೀರರಾದ ಅವರು ಎಲ್ಲರೂ ಒಂದಾಗಿ ತಮ್ಮ ಶಸ್ತ್ರತೇಜಸ್ಸಿನಿಂದ ನಿಮ್ಮನ್ನು ದಹಿಸಬಹುದು.
ಅಥ ಯೂಯಂ ಬಹುತ್ವಾತ್ ತಾನಭಿಯಾತ ಕಥಂಚನ |
ಅನಾರ್ಯಂ ಪರಮಂ ತತ್ ಸ್ಯಾದಶಕ್ಯಂ ತಚ್ಚ ವೈ ಮತಮ್ ॥12॥
ನೀವು ಬಹುಸಂಖ್ಯೆಯಲ್ಲಿ ಇರುವುದರಿಂದ ಅವರ ಜೊತೆಯಲ್ಲಿ ಹೋರಾಡುವುದಾದರೆ ಅದು ದೊಡ್ಡ ಅನಾರ್ಯವಾದ ಕಾರ್ಯವಾಗುತ್ತದೆ. ಅದು ನಿಮ್ಮಿಂದ ಶಕ್ಯವೂ ಅಲ್ಲ ಎಂದು ನನ್ನ ಅಭಿಪ್ರಾಯ.
ಉಷಿತೋ ಹಿ ಮಹಾಬಾಹುರಿಂದ್ರಲೋಕೇ ಧನಂಜಯಃ |
ದಿವ್ಯಾನ್ಯಸ್ತ್ರಾಣ್ಯವಾಪ್ಯಾಥ ತತಃ ಪ್ರತ್ಯಾಗತೋ ವನಮ್ ॥13॥
ಮಹಾಬಾಹುವಾದ ಅರ್ಜುನನು ಇಂದ್ರಲೋಕದಲ್ಲಿ ವಾಸಮಾಡಿ ದಿವ್ಯಾಸ್ತ್ರಗಳನ್ನು ಸಂಪಾದಿಸಿ ಈಗ ಅಲ್ಲಿಂದ ಹಿಂದಿರುಗಿ ವನಕ್ಕೆ ಬಂದಿದ್ದಾನೆ.
ಅಕೃತಾಸ್ತ್ರೇಣ ಪೃಥಿವೀ ಜಿತಾ ಬೀಭತ್ಸುನಾ ಪುರಾ |
ಕಿಂ ಪುನಃ ಸ ಕೃತಾಸ್ತ್ರೋಽದ್ಯ ನ ಹನ್ಯಾದ್ ವೋ ಮಹಾರಥಃ ॥14॥
ಹಿಂದೆ ಅಂತಹ ಅಸ್ತ್ರಗಳನ್ನು ಪಡೆಯದಿದ್ದರೂ ಅರ್ಜುನನು ಪೃಥಿವಿಯನ್ನೇ ಜಯಿಸಿದ್ದಾನೆ. ಈಗ ಅಸ್ತ್ರವನ್ನು ಸಂಪಾದಿಸಿರುವ ಆ ಮಹಾರಥನು ಈ ದಿನ ನಿಮ್ಮನ್ನು ಕೊಲ್ಲಬಹುದು ಎಂದು ಹೇಳುವುದೇನು?
ಅಥವಾ ಮದ್ವಚಃ ಶ್ರುತ್ವಾ ತತ್ರ ಯತ್ತಾ ಭವಿಷ್ಯಥ |
ಉದ್ವಿಗ್ನವಾಸೋಽವಿಸ್ರಂಭಾತ್ ದುಃಖಂ ತತ್ರ ಭವಿಷ್ಯತಿ ॥15॥
ಅಥವಾ ನೀವು ನನ್ನ ಮಾತನ್ನು ಕೇಳಿ ಅಲ್ಲಿ ಎಚ್ಚರಿಕೆಯಿಂದ (ಅವರಿಗೆ ತೊಂದರೆ ಮಾಡದೆ) ಇರುವುದಾದರೂ ನಿಮಗೆ ಪಾಂಡವರಲ್ಲಿ ವಿಶ್ವಾಸವಿಲ್ಲದಿರುವುದರಿಂದ ನಿಮ್ಮ ಸೈನಿಕರು ಅಲ್ಲಿರುವ ಫಲಮೂಲಗಳನ್ನೆಲ್ಲಾ ಅಪಹಾರ ಮಾಡಿದರೆ ಅಲ್ಲಿ ಮುಂದೆ ಪಾಂಡವರ ವಾಸವು ಕಷ್ಟಕರವಾಗುವುದು.
ಅಥವಾ ಸೈನಿಕಾಃ ಕೇಚಿದಪಕುರ್ಯುರ್ಯುಧಿಷ್ಠಿರಮ್ |
ತದಬುದ್ಧಿಕೃತಂ ಕರ್ಮ ದೋಷಮುತ್ಪಾದಯೇಚ್ಚ ವಃ ॥16॥
ಅಥವಾ ನಿಮ್ಮ ಸೈನಿಕರಲ್ಲಿ ಕೆಲವರು ಯುಧಿಷ್ಠಿರನಿಗೆ ಅಪಚಾರವನ್ನು ಮಾಡಬಹುದು. ಅವರು ಅಜ್ಞಾನದಿಂದ ಅಂತಹ ಕಾರ್ಯವನ್ನು ಮಾಡಿದರೂ ನಿಮಗೇ ದೋಷವುಂಟಾದೀತು.
ತಸ್ಮಾತ್ ಗಚ್ಛಂತು ಪುರುಷಾಃ ಸ್ಮಾರಣಾಯಾಪ್ತಚಾರಿಣಃ |
ನ ಸ್ವಯಂ ತತ್ರ ಗಮನಂ ರೋಚಯೇ ತವ ಭಾರತ ॥17॥
ಆದ್ದರಿಂದ ಗೋವುಗಳನ್ನು ಗಣನೆಯನ್ನು ಮಾಡಲು ಆಪ್ತರಾದ ಸೇವಕರನ್ನು ಕಳುಹಿಸೋಣ. ಎಲೈ ಭಾರತನೇ, (ದುರ್ಯೋಧನನೇ) ನೀನು ಅಲ್ಲಿಗೆ ಹೋಗುವುದು ನನಗೆ ಸ್ವತಃ ಇಷ್ಟವಲ್ಲ.
ಶಕುನಿಃ
ಧರ್ಮಜ್ಞಃ ಪಾಂಡವೋ ಜ್ಯೇಷ್ಠಃ ಪ್ರತಿಜ್ಞಾತಂ ಚ ಸಂಸದಿ |
ತೇನ ದ್ವಾದಶ ವರ್ಷಾಣಿ ವಸ್ತವ್ಯಾನೀತಿ ಭಾರತ ॥18॥

ಶಕುನಿ ಪಾಂಡವರಲ್ಲಿ ಹಿರಿಯನಾದವನು ಧರ್ಮರಾಜನು ಧರ್ಮವನ್ನು ತಿಳಿದವನು. ಎಲೈ ಧೃತರಾಷ್ಟ್ರನೇ, ಅವನು ಹನ್ನೆರಡು ವರ್ಷಗಳ ಕಾಲ ಕಾಡಿನಲ್ಲಿ ವಾಸವನ್ನು ಮಾಡುವುದಾಗಿ ಸಭೆಯಲ್ಲಿ ಪ್ರತಿಜ್ಞೆಯನ್ನು ಮಾಡಿದ್ದಾನೆ.
ಅನುವೃತ್ತಾಶ್ಚ ತೇ ಸರ್ವೇ ಪಾಂಡವಾ ಧರ್ಮಚಾರಿಣಃ |
ಯುಧಿಷ್ಠಿರಸ್ತು ಕೌಂತೇಯೋ ನ ನಃ ಕೋಪಂ ಕರಿಷ್ಯತಿ ॥19॥
ಆ ಪಾಂಡವರೆಲ್ಲರೂ ಧರ್ಮಚಾರಿಗಳು ಮತ್ತು ಅಣ್ಣನನ್ನು ಅನುಸರಿಸುವವರು. ಕೌಂತೇಯನಾದ ಯುಧಿಷ್ಠಿರನಾದರೂ ನಮ್ಮ ಮೇಲೆ ಕೋಪವನ್ನು ಮಾಡುವುದಿಲ್ಲ.
ಮೃಗಯಾಂ ಚೈವ ನೋ ಗಂತುಮಿಚ್ಛಾ ಸಂವರ್ತತೇ ಭೃಶಮ್ |
ಸ್ಮಾರಣಂ ತು ಚಿಕೀರ್ಷಾಮೋ ನ ತು ಪಾಂಡವದರ್ಶನಮ್ ॥20॥
ನಮಗೆ ಬೇಟೆಯಾಡಬೇಕೆಂಬ ಬಹಳವಾದ ಆಸೆಯಿದೆ. ಗೋಗಣನೆಯನ್ನು ಮಾತ್ರ ಮಾಡುತ್ತೇವೆ. ಪಾಂಡವರನ್ನು ನೋಡುವುದೂ ಇಲ್ಲ.
ನ ಚಾನಾರ್ಯಸಮಾಚಾರಃ ಕಶ್ಚಿತ್ ತತ್ರ ಭವಿಷ್ಯತಿ |
ನ ಚ ತತ್ರ ಗಮಿಷ್ಯಾಮೋ ಯತ್ರ ತೇಷಾಂ ಪ್ರತಿಶ್ರಯಃ ॥21॥
ಅಲ್ಲಿ ಅನಾರ್ಯವಾದ ಯಾವ ಘಟನೆಯೂ ಜರುಗುವುದಿಲ್ಲ. ಅವರು ವಾಸವಾಗಿರುವ ಸ್ಥಳಕ್ಕೆ ನಾವು ಹೋಗುವುದೇ ಇಲ್ಲ.
ವೈಶಂಪಾಯನಃ
ಏವಮುಕ್ತಃ ಶಕುನಿನಾ ಧೃತರಾಷ್ಟ್ರೋ ಜನೇಶ್ವರಃ |
ದುರ್ಯೋಧನಂ ಸಹಾಮಾತ್ಯಮನುಜಜ್ಞೇ ನ ಕಾಮತಃ ॥22॥
ವೈಶಂಪಾಯನ ಶಕುನಿಯಿಂದ ಹೀಗೆ ಹೇಳಲ್ಪಟ್ಟ ಧೃತರಾಷ್ಟ್ರ ರಾಜನು ಅಮಾತ್ಯರಿಂದ ಕೂಡಿದ ದುರ್ಯೋಧನನಿಗೆ ಅನುಮತಿಯನ್ನು ನೀಡಿದನು. ಮನಃಪೂರ್ವಕವಾಗಿ ನೀಡಲಿಲ್ಲ.
ಅನುಜ್ಞಾತಸ್ತು ಗಾಂಧಾರಿಃ ಕರ್ಣೇನ ಸಹಿತಸ್ತದಾ |
ನಿರ್ಯಯೌ ಭರತಶ್ರೇಷ್ಠ ಬಲೇನ ಮಹತಾ ವೃತಃ ॥23॥
ಅನುಮತಿಯನ್ನು ಪಡೆದ ದುರ್ಯೋಧನನು ಕರ್ಣನಿಂದ ಸಹಿತನಾಗಿ ಮತ್ತು ದೊಡ್ಡ ಸೇನೆಯಿಂದ ಸಂವೃತನಾಗಿ ಆಗ ಹೊರಟನು.
ದುಃಶಾಸನೇನ ಕರ್ಣೇನ ಸೌಬಲೇನ ಚ ಧೀಮತಾ |
ಸಂವೃತೋ ಭ್ರಾತೃಭಿಶ್ಚಾನ್ಯೈಃ ಸ್ತ್ರೀಭಿಶ್ಚಾಪಿ ಸಹಸ್ರಶಃ ॥24॥
ದುಃಶಾಸನನಿಂದಲೂ, ಮೇಧಾವಿಯಾದ ಶಕುನಿಯಿಂದಲೂ, ಕರ್ಣನಿಂದಲೂ ಉಳಿದ ತಮ್ಮಂದಿರಿಂದಲೂ ಮತ್ತು ಸಹಸ್ರಾರು ಸ್ತ್ರೀಯರಿಂದಲೂ ಸಹಿತನಾಗಿ ಹೊರಟನು.
ತಂ ನಿರ್ಯಾಂತಂ ಮಹಾಬಾಹುಂ ದ್ರಷ್ಟುಂ ದ್ವೈತವನಂ ಸರಃ |
ಪೌರಾಶ್ಚಾನುಯಯುಃ ಸರ್ವೇ ಸಹದಾರಾ ವನಂ ಚ ತತ್ ॥25॥
ದ್ವೈತವನದ ಸರೋವರವನ್ನು ನೋಡಲು ಹೊರಟ ಆ ಮಹಾಬಾಹುವಿನ ಹಿಂದೆ ಪೌರರೆಲ್ಲರೂ ಸಹ ತಮ್ಮ ಪತ್ನಿಯರೊಂದಿಗೆ ಆ ವನಕ್ಕೆ ಹೊರಟರು.
ಅಷ್ಟೌ ರಥಸಹಸ್ರಾಣಿ ತ್ರೀಣಿ ನಾಗಾಯುತಾನಿ ಚ |
ಪತ್ತಯೋ ಬಹುಸಾಹಸ್ರಾ ಹಯಾಶ್ಚ ನವತಿಃ ಶತಾಃ ॥26॥
ಎಂಟುಸಾವಿರ ರಥಗಳು, ಮೂವತ್ತು ಸಾವಿರ ಗಜಗಳು, ಅನೇಕ ಸಹಸ್ರ ಯೋಧರು, ಒಂಬತ್ತು ಸಾವಿರ ಕುದುರೆಗಳು ಹೊರಟವು.
ಶಕಟಾಪಣವೇಶಾಶ್ಚ ವಣಿಜೋ ವಂದಿನಸ್ತಥಾ |
ನರಾಶ್ಚ ಮೃಗಯಾಶೀಲಾಃ ಶತಶೋಽಥ ಸಹಸ್ರಶಃ ॥27॥
ಗಾಡಿಗಳು, ಅಂಗಡಿಗಳು, ವೇಶ್ಯೆಯರು, ವರ್ತಕರೂ, ವಂದಿಗಳೂ, ಬೇಟೆಯಾಡುವ ಸ್ವಭಾವವುಳ್ಳ ಮನುಷ್ಯರು, ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಹೊರಟರು.
ತತಃ ಪ್ರಯಾಣೇ ನೃಪತೇಃ ಸುಮಹಾನಭವತ್ಸ್ವನಃ |
ಪ್ರಾವೃಷೀವ ಮಹಾವಾಯೋರುದ್ಧತಸ್ಯ ವಿಶಾಂಪತೇ ॥28॥
ಆಗ ರಾಜನು ಪ್ರಯಾಣವನ್ನು ಮಾಡಿದಾಗ ಎಲೈ ರಾಜನೇ, ಮಳೆಗಾಲದಲ್ಲಿ ಎದ್ದ ಮಹಾಬಿರುಗಾಳಿಯಂತೆ ದೊಡ್ಡ ಶಬ್ದವು ಉಂಟಾಯಿತು.
ಗವ್ಯೂತಿಮಾತ್ರೇ ನ್ಯವಸದ್ ರಾಜಾ ದುರ್ಯೋಧನಸ್ತದಾ |
ಪ್ರಯಾತೋ ವಾಹನೈಃ ಸರ್ವೈಸ್ತತೋ ದ್ವೈತವನಂ ಸರಃ ॥29॥
ದುರ್ಯೋಧನ ರಾಜನು ಎಲ್ಲಾ ವಾಹನಗಳ ಜೊತೆಯಲ್ಲಿ ಹೊರಟು ಮೊದಲು ಒಂದು ಗವ್ಯೂತಿ ಯೋಜನ ದೂರದಲ್ಲಿ ತಂಗಿ ಅಲ್ಲಿಂದ ಮುಂದೆ ದ್ವೈತವನದ ಸರೋವರದ ಕಡೆಗೆ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಧೃತರಾಷ್ಟ್ರಖೇದವಾಕ್ಯಂ ನಾಮ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * *

ವನೇ ವಸತ್ಸ್ವೇನ ಚ ಪಾಂಡವೇಷು
ಚಕ್ರೇ ಯಜ್ಞಂ ಪೌಂಡರೀಕಾಖ್ಯಮೇವ |
ಸಂಸ್ಪರ್ಧಯಾ ರಾಜಸೂಯಸ್ಯ ರಾಜಾ
ದುರ್ಯೋಧನೋ ನಾಪ್ಯಸೌ ತತ್ಕಲಾರ್ಹಃ ॥377॥

ಪಾಂಡವರು ವನವಾಸ ಮಾಡುತ್ತಿದ್ದಾಗಲೇ ಅವರ ರಾಜಸೂಯಕ್ಕೆ ಪ್ರತಿಯಾಗಿ ಸ್ಪರ್ಧೆಯಿಂದ ಪೌಂಡರೀಕವೆಂಬ ಯಾಗವನ್ನು ರಾಜಾ ದುರ್ಯೋಧನ ಮಾಡಿದ. ಆದರೆ ಆ ಯಾಗ ಪಾಂಡವರ ರಾಜಸೂಯಯಾಗಕ್ಕೆ ಹದಿನಾರನೆ ಒಂದಂಶದಷ್ಟೂ ಸಮವಾಗಲಿಲ್ಲ.

ದುರ್ಯೋಧನಸ್ಯಾಽಜ್ಞಯಾ ಪಾಂಡವಾನಾಂ
ದುಃಶಾಸನಃ ಪದೇಷಯಾಮಾಸ ತತ್ರ |
ಆಗಚ್ಛತೇತ್ಯವಮಾನಾಯ ತಂ ತು
ಭೀಮೋಽವಾದೀದ್ ರಣಯಜ್ಞಂ ಸ್ವಗಮ್ಯಮ್ ॥378॥

ದುರ್ಯೋಧನನ ಆಜ್ಞೆಯಂತೆ ದುಃಶಾಸನ ಪಾಂಡವರನ್ನು ಅವಮಾನಿಸುವುದಕ್ಕಾಗಿ `ನಾವು ಯಾಗ ಮಾಡುತ್ತೇವೆ, ಬನ್ನಿರೆಂ'ದು ದೂತನನ್ನು ಅವರ ಬಳಿಗೆ ಅಟ್ಟಿದ. ಭೀಮನೆಂದ `ನಾವು ಯುದ್ಧಕ್ಕೇ ಬರುವೆವು` ಎಂದು.

ತತೋ ದಿನೈಃ ಕೈಶ್ಚನ ಧಾರ್ತರಾಷ್ಟ್ರಾಃ
ಸಕರ್ಣಗಾಂಧಾರನೃಪಾಃ ಕುಮಂತ್ರತಃ |
ಸಭಾರ್ಯಕಾಃ ಪಾಂಡವಾನ್ ದ್ರೌಪದೀಂ ಚ
ಮಹೈಶವರ್ಯಂ ದರ್ಶಯಿತ್ವಾಽವಮಂತುಮ್ ॥379॥

ತೈ ಸ್ಯಂದನೈಃ ಕಾಧನರತ್ನಚಿತ್ರೈ
ರ್ಮಹಾಗಜೈಸ್ತುರಗೈಃ ಪತ್ತಿಭಿಶ್ಚ |
ಸ್ವಲಂಕೃತಾಶ್ಚತ್ರಮಾಲ್ಯಬಂರಾಶ್ಚ
ವಿನಿರ್ಯಯುರ್ದ್ವೈತವನಾಯ ಶೀಘದಮ್ ॥380॥

ಬಳಿಕ ಕೆಲವು ದಿನಗಳು ಕಳೆದಾಗ ಕೌರವರು ಕರ್ಣಶಕುನಿಗಳೊಂದಿಗೆ ಕೆಟ್ಟ ಮಂತ್ರಾಲೋಚನೆ ಮಾಡಿ, ತಮ್ಮ ಮಹಾ ಐಶ್ವರ್ಯವನ್ನು ತೋರಿಸುವ ಮೂಲಕ ಪಾಂಡವರನ್ನೂ ದ್ರೌಪದಿಯನ್ನೂ ಅವಮಾನಿಸುವ ಉದ್ದೇಶದಿಂದ ಒಳ್ಳೆಯ ಅಲಂಕಾರ ಮಾಡಿಕೊಂಡು ಸುಂದರ ಅಮೂಲ್ಯ ವಸ್ತ್ರಗಳನ್ನು ಧರಿಸಿ ಬಂಗಾರರತ್ನಮಯ ಸುಂದರ ರಥಗಳು ಮಹಾಗಜಗಳು ಕುದುರೆಗಳು ಕಾಲಾಳುಗಳೊಂದಿಗೆ ಪತ್ನೀ ಸಮೇತರಾಗಿ ವೇಗವಾಗಿ ದ್ವೈತವನಕ್ಕೆ ಹೊರಟರು.

ಗವಾಂ ದೃಷ್ಟಿಚ್ಛಣದ್ಮನಾ ನಿರ್ಗತಾಂಸ್ತಾನ್
ಜ್ಞಾತ್ವಾ ಶಕದ್ ಸ್ತೇಜಸೋ ಭಂಘಕಾಮಃ |
ತತ್ಸಾಮರ್ಥ್ಯಂ ವರಮಸ್ಮೈ ಪ್ರದಾಯ
ತದ್ವಂಧನಾಯಾದಿತ್ ಚಿತ್ರಸೇನಮ್ ॥381॥

ಗೋವುಗಳನ್ನು ನೋಡುವ ನೆಪದಿಂದ ಹೊರಟಿದ್ದ ಕೌರವರ ದುರುದ್ದೇಶವನ್ನು ತಿಳಿದು ದೇವೇಂದ್ರ ಅವರ ತೇಜೋಭಂಗ ಮಾಡಲು ಬಯಸಿದ. ಚಿತ್ರಸೇನ ಗಂಧರ್ವನಿಗೆ ಈ ಕಾರ್ಯದಲ್ಲಿ ಸಾಮರ್ಥ್ಯ ಬರಲಿ ಎಂದು ವರ ನೀಡಿ ಕೌರವರನ್ನು ಸೆರೆ ಹಿಡಿಯಲು ಆದೇಶಿಸಿದ.

ಸ ಷಷ್ಠಿಸಾಹಸ್ರಕೋಟಿಯೂಥಪೈ
ರ್ಗಂಧರ್ವಮುಖ್ಯೈಃ ಸಂವೃತೋಽಗಾತ್ ಸರಸ್ತತ್ |
ಯಸ್ಮಿನ್ ಸ್ನಾತುಂ ವಾಂಛತಿ ಧಾರ್ತರಾಷ್ಟ್ರ
ಸ್ತದಾಜ್ಞಯಾ ಪುರುಷಾಸ್ತಾನಥೋಚುಃ ॥382॥

ಅರವತ್ತು ಸಾವಿರ ಕೋಟಿ ಸೇನಾಧಿಪತಿಗಳಿಂದ ಕೂಡಿದ ಗಂಧರ್ವಶ್ರೇಷ್ಠರಿಂದ ಪರಿವೃತನಾಗಿ ಚಿತ್ರಸೇನ ಗಂಧರ್ವ ದ್ವೈತವನದ ಸರೋವರದ ಬಳಿಗೆ ಹೋದ. ಆಗ ಅದೇ ಸರೋವರದಲ್ಲಿ ಸ್ನಾನ ಮಾಡಲು ದುರ್ಯೋಧನ ಬಯಸಿದ್ದ. ಅವನಾಜ್ಞೆಯಿಂದ ಭಟರು ಗಂಧರ್ವರಿಗೆ ಹೇಳಿದರು.

ಸ್ನಾತುಃ ಸಮಾಯಾಸ್ಯತಿ ಧಾರ್ತರಾಷ್ಟ್ರೋ
ರಾಜೇಶ್ವರೋ ನಿಃಸರಧ್ವಂ ತದಸ್ಮಾತ್ |
ತೀರ್ಥಾದಾಜ್ಞಾಂ ಧಾರಯಂತಶ್ಚತಸ್ಯೇ-
ತ್ಯುಕ್ತಾ ಗಂಧರ್ವಾ ಜಹಸುತಾನಥೌಚ್ಚೈಃ ॥383॥

`ರಾಜಾಧಿರಾಜ ದುರ್ಯೋಧನ ಇಲ್ಲಿ ಸ್ನಾನ ಮಾಡಲು ಬರುತ್ತಿದ್ದಾನೆ. ಈ ತೀರ್ಥದಿಂದ ಆಚೆಗೆ ತೊಲಗಿರಿ. ಅವನ ಆಜ್ಞೆಯನ್ನು ಶಿರಸಾವಹಿಸಿರಿ'. ಹೀಗೆ ಹೇಳಿದಾಗ ಗಂಧರ್ವರು ಅವರನ್ನು ಗಟ್ಟಿಯಾಗಿ ಅಪಹಾಸ ಮಾಡಿ ನಕ್ಕರು.

ಊಚುರ್ವಯಂ ಮಾನಯಾಮಸ್ತದಾಜ್ಞಾಂ
ತ್ರಿಲೋಕಾನಾಂ ಯಃ ಪತಿಃ ಶಕ್ರ ದೇವಃ |
ನ ಮಾನುಷಾಣಾಮಪಿ ಚಕ್ರವರ್ತಿನಾಂ
ಕಿಂವಲ್ಪಸಾರಸ್ಯ ಸುಯೋಧನಸ್ಯ ॥384॥

`ನಾವು ಮೂಲೋಕದೊಡೆಯನಾದ ದೇವೇಂದ್ರನ ಆಜ್ಞೆಯನ್ನು ಮನ್ನಿಸುವೆವು. ಮನುಷ್ಯಚಕ್ರವರ್ತಿಗಳ ಆಜ್ಞೆಯನ್ನೂ ಕೂಡ ಮನ್ನಿಸಲಾರೆವು ಎಂದ ಮೇಲೆ ಈ ಅಲ್ಪಶಕ್ತಿ ಉಳ್ಳ ದುರ್ಯೋಧನನ ಬಗ್ಗೆ ಏನು ಹೇಳಬೇಕು?'

ಇತಿರಿತೇ ಕುಪಿತೋ ಧಾರ್ತರಾಷ್ಟ್ರೋ

ಜಘಾನ ಗಂಧರ್ವರಾಂಛರೌಘೈಃ |

ಜಘ್ನುಃ ಸಕರ್ಣಾ ಅಪಿ ತಸ್ಯ ಸೋದರಾ

ಜಘ್ನುಶ್ಚ ತೇ ಧಾರ್ತರಾಷ್ಟ್ರಸ್ಯ ಸೇನಾಮ್ ॥385॥

ಹೀಗೆ ಹೇಳಿದಾಗ ಕುಪಿತನಾದ ದುರ್ಯೋಧನ ಗಂಧರ್ವ ಪ್ರಮುಖರನ್ನು ಬಾಣ ಸಮೂಹಗಳಿಂದ ಹೊಡೆದ. ಅವನ ಸೋದರರೂ ಕರ್ಣನೂ ಅವರನ್ನು ಹೊಡೆದರು. ಅವರೂ ದುರ್ಯೋಧನನ ಸೈನ್ಯವನ್ನು ಹೊಡೆದರು.

ಮುಹೂರ್ತಮಾಸೀತ್ ಸಮಮೇವ ಯುದ್ಧಂ

ತೇಷಾಂ ತದಾ ಧಾರ್ತರಾಷ್ಟ್ರಸ್ಯ ಚೈವ |

ಪುರಾಂ ಭಿಂದೋರ್ವರತೋ ಮಾಯಯಾ ಚ

ಗಂಧರ್ವವೀರಾ ವವೃಧುಸ್ತತಃ ಸ್ಮ ॥386॥

ಒಂದು ಮುಹೂರ್ತ ಪರ್ಯಂತ ಗಂಧರ್ವರಿಗೂ ದುರ್ಯೋಧನನಿಗೂ ಯುದ್ಧ ಸಮವೇ ಆಯಿತು. ಬಳಿಕ ದೇವೇಂದ್ರನ ವರದಿಂದಲೂ ಮಾಯೆಯಿಂದಲೂ ಗಂಧರ್ವ ವೀರರ ಕೈ ಮೇಲಾಯಿತು.

ತೇಜೋಭಂಘಂ ತತ್ರ ಸುಯೋಧನಸ್ಯ

ಪಾರ್ಥಾರ್ಥಮತ್ರ ಪದವಿಧಾತುಮೇವ ಚ |

ಬಲಂ ದದಾವಬ್ಜಜಃ ಕೇಶವಶ್ಚ

ಗಂಧರ್ವಾಣಾಂ ತೇಭ್ಯುಯುರ್ಧಾರ್ತರಾಷ್ಟ್ರಾನ್ ॥387॥

ಪಾಂಡವರಿಗಾಗಿ ದುರ್ಯೋಧನನ ತೇಜೋವಧೆ ಮಾಡುವುದಕ್ಕಾಗಿಯೇ ಶ್ರೀಹರಿಯೂ ಬ್ರಹ್ಮನೂ ಗಂಧರ್ವರಿಗೆ ಈ ಯುದ್ಧದಲ್ಲಿ ವಿಶೇಷ ಶಕ್ತಿ ನೀಡಿದ್ದರು. ಅದರಿಂದಲೂ ಗಂಧರ್ವರು ಕೌರವರನ್ನು ಆಕ್ರಮಿಸಿದ್ದರು.

ಸ ಚಿತ್ರಸೇನಃ ಪ್ರಥಮಂ ಕರ್ಣಮೇವ

ಯುಯೋಧ ಪಾರ್ಥಸ್ಪರ್ಧಯಾ ತೇನ ಯುದ್ಧನ್ |

ಕರ್ಣೋ ನಾಶಾಕ್ನೋದ್ ವಚನಾದ್ ಭಾರ್ಗವಸ್ಯ

ರಾಮಸ್ಯ ನಿತ್ಯಾಮಿತಷಡ್ಗುಣಸ್ಯ ॥388॥

ಚಿತ್ರಸೇನ ಮೊದಲಿಗೆ ಕರ್ಣನೊಡನೆ ಹೋರಾಡಿದ. ಆಗ ಕರ್ಣ ಅರ್ಜುನನೊಡನೆ ಸ್ಪರ್ಧೆಯಿಂದಲೇ ಯುದ್ಧ ಮಾಡುತ್ತಿದ್ದುದರಿಂದ ನಿತ್ಯ ಅಪರಿಮಿತ ಷಡ್ಗುಣಶಾಲಿಯಾದ ಪರಶುರಾಮರ ಶಾಪದಿಂದ ಅವನು ಗೆಲ್ಲಲು ಶಕ್ತನಾಗಲಿಲ್ಲ.

ಸ ಭಗ್ನಯಾನಶ್ಚ ವಿಕರ್ಣಯಾನ-

ಮಾಸ್ಥಾಯ ತಸ್ಯೈವ ನಿಯಮ್ಯ ವಾಜಿನಃ |

ಪರಾದ್ರುವತ್ ತೇನ ಸಹೈವ ಶೀಘ್ರಂ

ದುರ್ಯೋಧನಶ್ಚ ಚಿತ್ರಸೇನಂ ಯುಯೋಧ ॥389॥

ಕರ್ಣ ತನ್ನ ರಥ ನಾಶವಾದಾಗ ವಿಕರ್ಣನ ರಥವೇರಿ ಅವನ ಕುದುರೆಗಳನ್ನು ನಡೆಸಿ ಅವನೊಂದಿಗೆ ಬೇಗನೆ ಪಲಾಯನ ಮಾಡಿದ. ದುರ್ಯೋಧನ ಚಿತ್ರಸೇನನೊಂದಿಗೆ ಯುದ್ಧಮಾಡಿದ.

ಮುಹೂರ್ತಮೇತೇನ ಸಮಂ ಸ ಯುದ್ಧ-

ನ್ನನ್ಯೈರ್ಗಂಧರ್ವೈರ್ಬಹುಭಿರ್ಮಾಯಯೈವ |

ಭಗ್ನೇ ರಥೇ ಭೂಮಿತಲೇ ಸ್ಥಿತಃ ಸನ್

ಗೃಹೀತ ಆಸೀನ್ ಚಿತ್ರಸೇನೇನ ಸಂಖ್ಯೇ ॥390॥

ಮುಹೂರ್ತ ಪರ್ಯಂತ ದುರ್ಯೋಧನ ಚಿತ್ರಸೇನನೊಡನೆ ಸಮನಾಗಿಯೇ ಯುದ್ಧ ಮಾಡಿದ. ಆದರೆ ಬಹುಸಂಖ್ಯೆಯಲ್ಲಿದ್ದ ಬೇರೆ ಗಂಧರ್ವದಿಂದ ಮಾಯೆಯಿಂದಲೇ ಅವನ ರಥ ಮುರಿಯಲ್ಪಟ್ಟಿತು. ಆಗ ಅವನು ನೆಲದಲ್ಲಿ ನಿಂತು ಚಿತ್ರಸೇನನಿಂದ ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ.

ಮಹಾಬಲೋ ಧಾರ್ತರಾಷ್ಟ್ರೋಽಪಿ ಶಕ್ರ-

ವರಾದ್ ವಿಷ್ಣೋರಾಜ್ಞಯಾ ಚಾಭಿವೃದ್ಧೇ |

ಸ ಚಿತ್ರಸೇನೇನ ಧೃತಸ್ತದಾಽಸೀದ್

ಬದ್ಧಃ ಪಾಶೌರ್ವೈದ್ಯುತೈರಿಂದ್ರದತ್ತೈಃ ॥391॥

ಇಂದ್ರನ ವರದಿಂದಲೂ ಹರೀಚ್ಛೆಯಿಂದರೂ ಬಲಪೂರ್ಣನಾಗಿದ್ದ ಚಿತ್ರಸೇನನಿಂದ ಮಹಾಬಲನಾದ ದುರ್ಯೋಧನನೂ ಇಂದ್ರದತ್ತವಾದ ವಿದ್ಯುತ್ ಪಾಶಗಳಲ್ಲಿ ಸೇರೆ ಹಿಡಿಯಲ್ಪಟ್ಟ.

ತಸ್ಯಾನುಜಾಃ ಶಕುನೀ ರಾಜಭಾರ್ಯಾಃ

ಸರ್ವೇ ಬದ್ಧಾಃ ಶಕ್ರ ದೂತೈಃ ಪದಣೀತಾಃ |

ಆದಾಯ ತಾನಂಬರೇ ಸಂಪ್ರಯಾತೇ-

ಷ್ವರೂರುವನ್ ಪಾಂಡವಾನ್ ಮಂತ್ರಿಣೋಽಸ್ಯ ॥392॥

ಸಮೀಪಮಾಗತ್ಯ ಪೃಥಾಸುತಾನಾಂ

ಪರಾಭೂತಂ ವಃ ಕುಲಂ ಶಕ್ರ ಭೃತ್ಯೈಃ |
ಧೃತಃ ಸಭಾರ್ಯಃ ಸಾನುಜೋ ಧಾರ್ತರಾಷ್ಟ್ರ-
ಸ್ತಂ ಮೋಚಯಧ್ವಂ ಭದಾತರಂ ಭಾರತಾಗ್ರ್ಯಾಃ ॥393॥
ದುರ್ಯೋಧನನ ತಮ್ಮಂದಿರನ್ನೂ ಶಕುನಿಯನ್ನೂ ರಾಣಿಯರನ್ನೂ ಎಲ್ಲರನ್ನೂ ಇಂದ್ರನ ಭೃತ್ಯರು ಕಟ್ಟಿ ಸೆಳೆದೊಯ್ದರು. ಅವರು ಎಲ್ಲರನ್ನೂ ಹಿಡಿದುಕೊಂಡು ಆಕಾಶದಲ್ಲಿ ಹೋಗುತ್ತಿದ್ದಾಗ ದುರ್ಯೋಧನನ ಮಂತ್ರಿಗಳು ಪಾಂಡವರ ಬಳಿಗೆ ಬಂದು `ಇಂದ್ರನ ಭೃತ್ಯರು ನಿಮ್ಮ ಕುಲವನ್ನು ಪರಾಭವಗೊಳಿಸಿರುವರು. ದುರ್ಯೋಧನ ಸಪತ್ನೀಕನಾಗಿ ತಮ್ಮಂದಿರೊಡನೆ ಶತ್ರುಗಳಿಗೆ ಸೆರೆ ಸಿಕ್ಕಿದ್ದಾನೆ. ಭರವಂಶದ ಶ್ರೇಷ್ಠ ಪುರುಷರಾದ ನೀವು ನಿಮ್ಮ ತಮ್ಮನನ್ನು ಬಿಡಿಸಿಕೊಳ್ಳಿರಿ' ಎಂದು ಕೂಗಿದರು.
ಇತ್ಯುಕ್ತ ಊಚೇ ಭೀಮಸೇನೋಽಗ್ರಜಂ ಸ್ವಂ
ಜಾನೇ ರಾಜನ್ ಯಾದೃಶೋಽಯಂ ವಿಮರ್ದಃ |
ಐಶ್ವರ್ಯಂ ಸ್ವಂ ದರ್ಶಯನ್ ನಃ ಸಮಾಗಾತ್
ದುರ್ಯೋಧನಸ್ತೇಜಸೋ ಭಂಘಮಿಚ್ಛನ್ ॥394॥
ವಿಜ್ಞಾಯ ತೇಷಾಂ ಮಂತ್ರಿತಂ ವಜದಬಾಹು-
ರೇತಚ್ಚಕ್ರೇ ನಾತ್ರ ನಃ ಕಾರ್ಯಹಾನಿಃ |
ದಿವ್ಯಂ ಜ್ಞಾನಂ ಸ್ವಾತ್ಮನೋ ದರ್ಶಾಯನ್ ಸ
ಏತಾವದುಕತ್ವ ವಿರರಾಮ ಭೀಮಃ ॥395॥
ಮಂತ್ರಿಗಳು ಹೀಗೆ ಹೇಳಿದಾಗ ಭೀಮಸೇನ ತಮ್ಮ ಅಣ್ಣನಿಗೆ ಹೇಳಿದ, ಈ ಯುದ್ಧ ಏತರಿಂದಾಯಿತು ನನಗೆ ಗೊತ್ತು. ನಮ್ಮ ಮುಂದೆ ತನ್ನ ಐಶ್ವರ್ಯವನ್ನು ಪ್ರದರ್ಶಿಸಲು ದುರ್ಯೋಧನ ಬಂದಿದ್ದ. ಅವನ ದುರಾಲೋಚನೆಯನ್ನು ತಿಳಿದು ಅವನ ತೇಜೋವಧೆ ಮಾಡಲು ಬಯಸಿದ ಇಂದ್ರ ಈ ಯುದ್ಧವನ್ನು ಉಂಟುಮಾಡಿದ. ನಮಗೆ ಇದರಿಂದ ಏನೂ ಕಾರ್ಯಹಾನಿ ಇಲ್ಲ'. ಹೀಗೆ ಭೀಮ ತನ್ನ ದಿವ್ಯಜ್ಞಾನವನ್ನು ತೋರುತ್ತ ಇಷ್ಟು ಹೇಳಿ ಸುಮ್ಮನಾದ.
ಏಕಾಹಯಜ್ಞೇ ವೀಕ್ಷಿತೇನೈವ ರಾಜ್ಞಾ
ಸಂಪದೇಷಿತೋ ಭೀಮಸೇನೋಽರ್ಜುನಶ್ಚ |
ಸಮಾದ್ರೇಯೌ ಚಿತ್ರಸೇನಂ ರಣೇ ತೌ
ವಿಜಿತ್ಯ ದುರ್ಯೋಧನಮಾಶವಮಧುತಾಮ್ ॥396॥
ಏಕಾಹಯಜ್ಞದಲ್ಲಿ ದೀಕ್ಷಿತನಾಗಿದ್ದ ಧರ್ಮರಾಜ ಭೀಮಾರ್ಜುನರನ್ನು ನಕುಲ ಸಹದೇವರೊಂದಿಗೆ ಕಳಿಸಿದ. ಅವರು ಚಿತ್ರಸೇನನನ್ನು ಯುದ್ಧದಲ್ಲಿ ಬೇಗನೆ ಗೆದ್ದು ದುರ್ಯೋಧನನನ್ನು ಬಿಡಿಸಿಕೊಂಡರು.
* * * *
ಇನ್ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ
ದುರ್ಯೋಧನನಿಂದ ದ್ವೈತವನ ಸರೋವರದ ಬಳಿ ಬೀಡು.
ಅವನ ಸೈನಿಕರಿಗೂ ಮತ್ತು ಗಂಧರ್ವರಿಗೂ ಕಲಹ.
ವೈಶಂಪಾಯನಃ
ಅಥ ದುರ್ಯೋಧನೋ ರಾಜಾ ತತ್ರ ತತ್ರ ವನೇ ವಸನ್ |
ಜಗಮ ಘೋಷಾನಭಿತಸ್ತತ್ರ ಚಕ್ರೇ ನಿವೇಶನಂ ॥1॥
ವೈಶಂಪಾಯನ ಅನಂತರ ರಾಜನಾದ ದುರ್ಯೋಧನನು ಕಾಡಿನಲ್ಲಿ ಅಲ್ಲಲ್ಲಿ ತಂಗುತ್ತಾ ಘೋಷಗಳ ಸಮೀಪಕ್ಕೆ ಹೋಗಿ ಅಲ್ಲಿ ಬಿಡಾರವನ್ನು ಮಾಡಿದನು.
ರಮಣೀಯೇ ಸಮಾಜ್ಞಾತೇ ಸೋದಕೇ ಸಮಹೀರುಹೇ |
ದೇಶೇ ಸರ್ವಗುಣೋಪೇತಾನ್ ಚಕ್ರುರಾವಸಥಾನ್ ಪರಾಃ ॥2॥
ರಮಣೀಯವಾದ ಸಮತಟ್ಟಾದ ಉದಕ ಮತ್ತು ವೃಕ್ಷಗಳಿಂದ ಕೂಡಿದ ಪ್ರದೇಶದಲ್ಲಿ ಎಲ್ಲಾ ಸೌಕರ್ಯಗಳಿಂದ ಕೂಡಿದ ಬಿಡಾರಗಳನ್ನು ಉಳಿದವರು ನಿರ್ಮಿಸಿಕೊಂಡರು.
ತಥೈವ ತತ್ಸಮೀಪಸ್ಥಾನ್ ಪೃಥಗಾವಸಥಾನ್ ಬಹೂನ್ |
ಕರ್ಣಸ್ಯ ಶಕುನೇಶ್ಚೈವ ಭ್ರಾತೃಣಾಂ ಚೈವ ಸರ್ವಶಃ ॥3॥
ಹಾಗೆಯೇ ದುರ್ಯೋಧನನ ಬಿಡಾರದ ಸಮೀಪದಲ್ಲಿ ಕರ್ಣನಿಗೆ, ಶಕುನಿಗೆ ಮತ್ತು ದುರ್ಯೋಧನನ ಎಲ್ಲಾ ತಮ್ಮಂದಿರಿಗೆ ಅನೇಕ ಬಿಡಾರಗಳನ್ನು ನಿರ್ಮಿಸಿದರು.
ದದರ್ಶ ಸ ತದಾ ಗಾವಃ ಶತಶೋಽಥ ಸಹಸ್ರಶಃ |
ಅಂಕೈರ್ಲಕ್ಷೈಶ್ಚ ತಾಃ ಸರ್ವಾ ಲಕ್ಷಯಾಮಾಸ ಪಾರ್ಥಿವಃ ॥4॥
ರಾಜನು ಆಗ ನೂರಾರು ಸಾವಿರಾರು ಸಂಖ್ಯೆಯಲ್ಲಿದ್ದ ಗೋವುಗಳನ್ನು ನೋಡಿದನು ಮತ್ತು ಅವುಗಳಿಗೆಲ್ಲಾ ರಾಜಮುದ್ರಾಂಕನವನ್ನು ಮಾಡಿಸಿ ಚಿಹ್ನೆಗಳನ್ನೂ ಮಾಡಿಸಿದನು.
ಅಂಕಯಾಮಾಸ ವತ್ಸಾಂಶ್ಚ ಜಜ್ಞೇ ಚೋಪಸೃತಾಂಸ್ತ್ವಪಿ |
ಬಾಲವತ್ಸಾಶ್ಚ ಯಾ ಗಾವಃ ಕಾರಯಾಮಾಸ ತಾ ಅಪಿ ॥5॥
ಕರುಗಳಿಗೂ ಸಹ ಅವನು ರಾಜಚಿಹ್ನೆಯಿಂದ ಮುದ್ರೆಯನ್ನು ಹಾಕಿಸಿದನು. ಸಮೀಪಕ್ಕೆ ಬಂದ ಕರುಗಳನ್ನೂ ಗಮನಿಸಿ ರಾಜಮುದ್ರೆಯನ್ನು ಹಾಕಿಸಿದನು. ಚಿಕ್ಕ ಕರುಗಳಿದ್ದ ಗೋವುಗಳನ್ನೂ ಸಹ ಅಲ್ಲಿಗೆ ಕರೆಸಿ ಮುದ್ರೆಯನ್ನು ಹಾಕಿಸಿದನು.

ಅಥ ಸ ಸ್ಮಾರಣಂ ಕೃತ್ವಾ ಲಕ್ಷಯಿತ್ವಾ ತ್ರಿಹಾಯನಾನ್ |
ವೃತೋ ಗೋಪಾಲಕೈಃ ಪ್ರೀತೋ ವ್ಯಹರತ್ ಕುರುನಂದನಃ ॥6॥
ಹೀಗೆ ಗೋವುಗಳ ಗಣನೆಯನ್ನು ಮಾಡಿ ಮೂರುವರ್ಷಗಳನ್ನು ಮೀರಿದ ಕರುಗಳನ್ನೆಲ್ಲಾ ಅಂಕನವನ್ನು ಮಾಡಿ ಕುರುನಂದನನಾದ ದುರ್ಯೋಧನನು ಗೋಪಾಲರ ಜೊತೆಯಲ್ಲಿ ಸಂತೋಷದಿಂದ ವಿಹಾರವನ್ನು ಮಾಡಿದನು.
ಸ ಚ ಪೌರಜನಃ ಸರ್ವಃ ಸೈನಿಕಾಶ್ಚ ಸಹಸ್ರಶಃ |
ಯಥೋಪಜೋಷಂ ಚಿಕ್ರೀಡುರ್ವನೇ ತಸ್ಮಿನ್ ಯಥಾಮರಾಃ ॥7॥
ಆ ಎಲ್ಲಾ ಪೌರಜನರೂ ಮತ್ತು ಸಹಸ್ರಾರು ಸಂಖ್ಯೆಯಲ್ಲಿದ್ದ ಸೈನಿಕರೂ ತಮ್ಮ ಇಚ್ಛೆಗೆ ಅನುಗುಣವಾಗಿ ಕಾಡಿನಲ್ಲಿ ದೇವತೆಗಳಂತೆ ಆಟವಾಡಿದರು.
ತತೋ ಗೋಪಾಃ ಪ್ರಗಾತಾರಃ ಕುಶಲಾ ನೃತ್ಯವಾದನೇ |
ಧಾರ್ತರಾಷ್ಟ್ರಮುಪಾತಿಷ್ಠನ್ ಕನ್ಯಾಶ್ಚೈವ ಸ್ವಲಂಕೃತಾಃ ॥8॥
ಅನಂತರ ಗಾನವನ್ನು ಮಾಡುವುದರಲ್ಲೂ, ನೃತ್ಯ ಮತ್ತು ವಾದನಗಳಲ್ಲಿಯೂ ನಿಪುಣರಾದ ಗೋಪಾಲರು ಮತ್ತು ಚೆನ್ನಾಗಿ ಅಲಂಕೃತರಾದ ಕನ್ಯೆಯರು ದುರ್ಯೋಧನನ ಸೇವೆಯನ್ನು ಮಾಡಿದರು.
ಸ ಸ್ತ್ರೀಗಣಯುತೋ ರಾಜಾ ಪ್ರಹೃಷ್ಟಃ ಪ್ರದದೌ ವಸು |
ತೇಭ್ಯೋ ಯಥಾರ್ಹಮನ್ನಾನಿ ಪಾನಾನಿ ವಿವಿಧಾನಿ ಚ ॥9॥
ತನ್ನ ಪತ್ನೀಗಣದಿಂದ ಸಹಿತನಾದ ದುರ್ಯೋಧನನು ಸಂತೋಷಗೊಂಡು ಅವರಿಗೆ ಧನವನ್ನೂ, ವಿವಿಧವಾದ ಅನ್ನಪಾನಗಳನ್ನೂ ನೀಡಿದನು.
ತತಸ್ತೇ ಸಹಿತಾಃ ಸರ್ವೇ ತರಕ್ಷೂನ್ ಮಹಿಷಾನ್ ಮೃಗಾನ್ |
ಗವಯರ್ಕ್ಷವರಾಹಾಂಶ್ಚ ಸಮಂತಾತ್ ಪರ್ಯಕಾಲಯನ್ ॥10॥
ಅನಂತರ ಅವರೆಲ್ಲರೂ ಒಟ್ಟಿಗೆ ಸೇರಿ ಹುಲಿಗಳನ್ನೂ, ಕಾಡೆಮ್ಮೆಗಳನ್ನೂ, ಜಿಂಕೆಗಳನ್ನೂ, ಗವಯ, ಕರಡಿ ಮತ್ತು ವರಾಹಗಳನ್ನೂ ಎಲ್ಲ ಕಡೆಗಳಿಂದಲೂ ಅಟ್ಟಾಡಿದರು.
ಸ ತಾಂಛರೈರ್ವಿನಿರ್ಭಿಂದನ್ ಗಜಾಂಶ್ಚ ಸುಬಹೂನ್ ವನೇ |
ರಮಣೀಯೇಷು ದೇಶೇಷು ಗ್ರಾಹಯಾಮಾಸ ವೈ ಮೃಗಾನ್ ॥11॥
ಅವನು ಕಾಡಿನಲ್ಲಿ ಅನೇಕ ಗಜಗಳನ್ನು ಬಾಣಗಳಿಂದ ಭೇದಿಸಿ ಜಿಂಕೆಗಳನ್ನೆಲ್ಲಾ ಒಂದು ರಮಣೀಯವಾದ ಪ್ರದೇಶದಲ್ಲಿ ಒಟ್ಟುಗೂಡಿಸಿದನು.
ಗೋರಸಾನುಪಯುಂಜಾನ ಉಪಭೋಗಾಂಶ್ಚ ಭಾರತ |
ಪಶ್ಯನ್ ಸ ರಮಣೀಯಾನಿ ವನಾನ್ಯುಪವನಾನಿ ಚ ॥12॥
ಮತ್ತಭ್ರಮರಜುಷ್ಟಾನಿ ಬರ್ಹಿಣಾಭಿರುತಾನಿ ಚ |
ಅಗಚ್ಛದಾನುಪೂರ್ವ್ಯೇಣ ಪುಣ್ಯಂ ದ್ವೈತವನಂ ಸರಃ ॥13॥
ಎಲೈ ಭಾರತನೇ, ಅವನು ಕ್ಷೀರಘೃತಾದಿ ಗೋರಸವನ್ನು ಸೇವಿಸುತ್ತಾ ಬೇರೆ ಭೋಗಗಳನ್ನು ಅನುಭವಿಸುತ್ತಾ ಮತ್ತಭ್ರಮರಗಳಿಂದ ಸೇವಿತವಾದ ನವಿಲುಗಳ ಧ್ವನಿಯಿಂದ ಕೂಡಿದ ರಮಣೀಯವಾದ ವನಗಳನ್ನೂ ಮತ್ತು ಉಪವನಗಳನ್ನೂ ನೋಡುತ್ತಾ ಕ್ರಮವಾಗಿ ದ್ವೈತವನದ ಸರೋವರದ ಬಳಿಗೆ ಹೋದನು.
ಋದ್ಧ್ಯಾ ಪರಮಯಾ ಯುಕ್ತೋ ಮಹೇಂದ್ರ ಇವ ವಜ್ರಭೃತ್ |
ಮತ್ತಭ್ರಮರಸಂಜುಷ್ಟಂ ನೀಲಕಂಠರವಾಕುಲಮ್ |
ಸಪ್ತಚ್ಛದಸಮಾಕೀರ್ಣಂ ಪುನ್ನಾಗವ(ಬ)ಕುಲೈರ್ಯುತಮ್ ॥13॥
ವಜ್ರಧರನಾದ ಮಹೇಂದ್ರನಂತೆ ಪರಮಸಮೃದ್ಧಿಯಿಂದ ಯುಕ್ತನಾದ ಅವನು ಮತ್ತಭ್ರಮರಗಳಿಂದ ಸೇವಿತವಾದ ನವಿಲು ಪಕ್ಷಿಗಳ ರವದಿಂದ ಕೂಡಿದ ಸಪ್ತಚ್ಛದ ಪುಷ್ಪಗಳಿಂದಲೂ, ಪುನ್ನಾಗ ಬಕುಳ ಪುಷ್ಪಗಳಿಂದಲೂ ನಿಬಿಡವಾಗಿದ್ದ ಸರೋವರದ ಬಳಿಗೆ ಹೋದನು.
ಯದೃಚ್ಛಯಾ ಚ ತತ್ರಸ್ಥೋ ಧರ್ಮಪುತ್ರೋ ಯುಧಿಷ್ಠಿರಃ |
ಈಜೇ ರಾಜರ್ಷಿಯಜ್ಞೇನ ಸದ್ಯಸ್ಕೇನ ವಿಶಾಂಪತೇ ॥14॥
ದಿವ್ಯೇನ ವಿಧಿನಾ ಚೈವ ವನ್ಯೇನ ಕುರುಸತ್ತಮ |
ವಿದ್ವದ್ಭಿಃ ಸಹಿತೋ ಧೀಮಾನ್ ಬ್ರಾಹ್ಮಣೈರ್ವನವಾಸಿಭಿಃ ॥15॥
ಎಲೈ ರಾಜನೇ, ಧರ್ಮಪುತ್ರನಾದ ಯುಧಿಷ್ಠಿರನು ಅಲ್ಲಿ ಯದೃಚ್ಛೆಯಿಂದ ರಾಜರ್ಷಿಗಳಿಗೆ ಯೋಗ್ಯವಾದ ಒಂದೇ ದಿನದಲ್ಲಿ ಮಾಡುವ ಒಂದು ಯಜ್ಞವನ್ನು ಮಾಡುತ್ತಿದ್ದನು. ಎಲೈ ಕುರುಶ್ರೇಷ್ಠನೇ, ವಿದ್ವಾಂಸರಾದ ಬ್ರಾಹ್ಮಣರಿಂದಲೂ, ವನವಾಸಿಗಳಿಂದಲೂ ಸಹಿತನಾಗಿ ದಿವ್ಯವಾದ ವನಕ್ಕೆ ಯೋಗ್ಯವಾದ ವಿಧಿಯ ಪ್ರಕಾರ ಅವನು ಯಜ್ಞವನ್ನು ಮಾಡುತ್ತಿದ್ದನು.
ಭೀಮಾರ್ಜುನಯಮೈಃ ಸಾರ್ಧಂ ಸರೋಭ್ಯಾಶೇ ತದಾವಸತ್ |
ಕೃತ್ವಾ ನಿವೇಶಮಭಿತಃ ಸರಸಸ್ತಸ್ಯ ಕೌರವಃ |
ದ್ರೌಪದ್ಯಾ ಸಹಿತೋ ಧೀಮಾನ್ ಧರ್ಮಪತ್ನ್ಯಾ ನರಾಧಿಪಃ ॥16॥
ಕೌರವರಾಜನಾದ ಯುಧಿಷ್ಠಿರನು ಸರೋವರದ ಸುತ್ತಲೂ ಬಿಡಾರಗಳನ್ನು ಮಾಡಿಕೊಂಡು ಭೀಮಾರ್ಜುನ ನಕುಲಸಹದೇವರ ಜೊತೆಯಲ್ಲಿ ಮತ್ತು ಧರ್ಮಪತ್ನಿಯಾದ ದ್ರೌಪದಿಯಿಂದ ಸಹಿತನಾಗಿ ಮೇಧಾವಿಯಾದ ಅವನು ಅಲ್ಲಿ ವಾಸಮಾಡುತ್ತಿದ್ದನು.
ತತೋ ದುರ್ಯೋಧನಃ ಪ್ರೇಷ್ಯಾನಾದಿದೇಶ ಸಹಾನುಜೈಃ |

ಆಕ್ರೀಡಾವಸಥಾಃ ಕ್ಷಿಪ್ರಂ ಕ್ರಿಯಂತಾಮಿತಿ ಭಾರತ ॥17॥
ಎಲೈ ಭಾರತನೇ, ಆಗ ದುರ್ಯೋಧನನು ತನ್ನ ತಮ್ಮಂದಿರ ಜೊತೆಯಲ್ಲಿ ಸೇವಕರನ್ನು ಕುರಿತು ಕ್ರೀಡಾ ಬಿಡಾರಗಳನ್ನು ಸಹಸ್ರಸಂಖ್ಯೆಯಲ್ಲಿ ನಿರ್ಮಿಸಿ ಎಂದು ಆದೇಶವನ್ನು ಮಾಡಿದನು.
ತೇ ತಥೇತ್ಯೇವ ಕೌರವ್ಯಮುಕ್ತ್ವಾ ವಚನಕಾರಿಣಃ |
ಚಿಕೀರ್ಷಂತಸ್ತದಾಽಽಕ್ರೀಡಾನ್ಜಗ್ಮುರ್ದ್ವೈತವನಂ ಸರಃ ॥18॥
ಅವನ ಸೇವಕರು ಅವನಿಗೆ ಹಾಗೇ ಆಗಲಿ ಎಂದು ಹೇಳಿ, ಕ್ರೀಡಾ ಬಿಡಾರಗಳನ್ನು ನಿರ್ಮಿಸಲು ಬಯಸಿ ದ್ವೈತವನದ ಸರೋವರದ ಬಳಿಗೆ ಬಂದರು.
ಸೇನಾಗ್ರ್ಯಂ ಧಾರ್ತರಾಷ್ಟ್ರಸ್ಯ ಪ್ರಾಪ್ತಂ ದ್ವೈತವನಂ ಸರಃ |
ಪ್ರವಿಶಂತಂ ವನದ್ವಾರಿ ಗಂಧರ್ವಾಃ ಸಮವಾರಯನ್ ॥19॥
ದುರ್ಯೋಧನನ ಶ್ರೇಷ್ಠವಾದ ಸೇನೆಯು ದ್ವೈತವನದ ಸಮೀಪಿಸುತ್ತಿದ್ದಂತೆ ಪ್ರವೇಶ ದ್ವಾರದಲ್ಲಿ ಗಂಧರ್ವರು ಅದನ್ನು ತಡೆದರು.
ತತ್ರ ಗಂಧರ್ವರಾಜೋ ವೈ ಪೂರ್ವಮೇವ ವಿಶಾಂಪತೇ |
ಕುಬೇರಭವನಾದ್ ರಾಜನ್ನಾಜಗಾಮ ಗಣೈರ್ವೃತಃ ॥20॥
ಎಲೈ ರಾಜನೇ, ಅಲ್ಲಿ ಕುಬೇರ ಭವನದಿಂದ ಹೊರಟು ತನ್ನ ಗಣಗಳ ಜೊತೆಯಲ್ಲಿ ಗಂಧರ್ವರಾಜನು ಮೊದಲೇ ಬಂದಿದ್ದನು.
ಗಣೈರಪ್ಸರಸಾಂ ಚೈವ ತ್ರಿದಶಾನಾಂ ತಥಾಽಽತ್ಮಜೈಃ |
ವಿಹಾರಶೀಲಃ ಕ್ರೀಡಾರ್ಥಂ ತೇನ ತತ್ ಸಂವೃತಂ ಸರಃ ॥21॥
ಅಪ್ಸರೆಯರ ಗಣದಿಂದಲೂ, ದೇವತೆಗಳ ಪುತ್ರರಿಂದಲೂ ಸಹಿತನಾದ ವಿಹಾರಶೀಲನಾದ ಅವನು ವಿಹಾರಕ್ಕೋಸ್ಕರ ಅಲ್ಲಿ ಬಂದು ಆ ಸರೋವರವನ್ನು ಸುತ್ತುವರಿದಿದ್ದನು.
ತೇನ ತತ್ಸಂವೃತಂ ದೃಷ್ಟ್ವಾ ತೇ ರಾಜಪರಿಚಾರಕಾಃ |
ಪ್ರತಿಜಗ್ಮುಸ್ತತೋ ರಾಜನ್ ಯತೋ ದುರ್ಯೋಧನೋ ನೃಪಃ ॥22॥
ಗಂಧರ್ವರಾಜನಿಂದ ಸರೋವರವು ಸುತ್ತುವರಿಯಲ್ಪಟ್ಟಿದ್ದನ್ನು ನೋಡಿದ ರಾಜಪರಿಚಾರಕರು ರಾಜನಾದ ದುರ್ಯೋಧನನು ಇದ್ದಲ್ಲಿಗೆ ಅಲ್ಲಿಂದ ಹಿಂದಿರುಗಿದರು.
ತೇ ಸಮೇತ್ಯ ತದಾ ಪ್ರೋಚುರ್ಗಂತುಂ ನೈವೋಪಲಭ್ಯತೇ |
ರಕ್ಷಿತಂ ಬಹುಭಿಃ ಶೂರೈರಾಜನ್ ದ್ವೈತವನಂ ಸರಃ |
ನ್ಯವೇದಯಂಸ್ತತೋ ರಾಜ್ಞೇ ಗಂಧರ್ವಾಸ್ತತ್ರ ಭಾರತ ॥22.1॥
ಅವರೆಲ್ಲರೂ ಒಟ್ಟಾಗಿ ರಾಜನ ಬಳಿಗೆ ಬಂದು ಅಲ್ಲಿಗೆ ಹೋಗಲು ಅವಕಾಶವು ಇಲ್ಲ. ರಾಜನೇ, ದ್ವೈತವನದ ಸರೋವರವು ಅನೇಕ ಶೂರರಾದ ಗಂಧರ್ವರಿಂದ ರಕ್ಷಿತವಾಗಿದೆ ಎಂದು ಅವರು ರಾಜನಿಗೆ ನಿವೇದಿಸಿದರು.
ಸ ತು ತೇಷಾಂ ವಚಃ ಶ್ರುತ್ವಾ ಸೈನಿಕಾನ್ ಯುದ್ಧದುರ್ಮದಾನ್ |
ಪ್ರೇಷಯಾಮಾಸ ಕೌರವ್ಯ ಉತ್ಸಾರಯತ ತಾನಿತಿ ॥23॥
ಅವನಾದರೂ ಅವರ ಮಾತುಗಳನ್ನು ಕೇಳಿ ಯುದ್ಧದುರ್ಮದರಾದ ತನ್ನ ಸೈನಿಕರಿಗೆ ಅವರನ್ನು ವಿನಾಶಗೊಳಿಸಿ ಎಂದು ಹೇಳಿ ಅವರನ್ನು ಕಳುಹಿಸಿದನು.
ತಸ್ಯ ತದ್ವಚನಂ ಶ್ರುತ್ವಾ ರಾಜ್ಞಃ ಸೇನಾಗ್ರಯಾಯಿನಃ |
ಸರೋ ದ್ವೈತವನಂ ಗತ್ವಾ ಗಂಧರ್ವಾನಿದಮಬ್ರುವನ್ ॥24॥
ರಾಜನ ಆ ಮಾತುಗಳನ್ನು ಕೇಳಿ ಸೇನೆಯ ಮುಂಭಾಗದಲ್ಲಿ ಹೋಗುವ ಸೈನಿಕರು ದ್ವೈತವನದ ಸರೋವರಕ್ಕೆ ಹೋಗಿ ಗಂಧರ್ವರನ್ನು ಕುರಿತು ಹೀಗೆ ಹೇಳಿದರು.
ರಾಜಾ ದುರ್ಯೋಧನೋ ನಾಮ ಧೃತರಾಷ್ಟ್ರಸುತೋ ಬಲೀ |
ವಿಜಿಹೀರ್ಷುರಿಹಾಯಾತಿ ತದರ್ಥಮಪಸರ್ಪತ ॥25॥
ಧೃತರಾಷ್ಟ್ರನ ಮಗನಾದ ದುರ್ಯೋಧನನೆಂಬ ಬಲಿಷ್ಠನಾದ ರಾಜನು ಇಲ್ಲಿಗೆ ವಿಹಾರಕ್ಕಾಗಿ ಬರುತಿತದ್ದಾನೆ. ಅದಕ್ಕಾಗಿ ನೀವೆಲ್ಲರೂ ದೂರ ಸರಿಯಿರಿ.
ವೈಶಂಪಾಯನಃ
ಏವಮುಕ್ತಾಸ್ತು ಗಂಧರ್ವಾಃ ಪ್ರಹಸಂತೋ ವಿಶಾಂಪತೇ |
ಪ್ರತ್ಯಬ್ರುವಂಸ್ತಾನ್ ಪುರುಷಾನಿದಂ ಹಿ ಪರುಷಂ ವಚಃ ॥26॥
ವೈಶಂಪಾಯನ ಎಲೈ ರಾಜನೇ, ಈ ಮಾತುಗಳನ್ನು ಕೇಳಿದ ಗಂಧರ್ವರು ಹಾಸ್ಯಮಾಡುತ್ತಾ ಆ ಸೈನಿಕರಿಗೆ ಈ ಒರಟಾದ ಉತ್ತರವನ್ನು ಕೊಟ್ಟರು.
ನ ಚೇತಯತಿ ವೋ ರಾಜಾ ಮಂದಬುದ್ಧಿಃ ಸುಯೋಧನಃ |
ಯೋಽಸ್ಮಾನಾಜ್ಞಾಪಯತ್ಯೇವಂ ವೈಶ್ಯಾನಿವ ದಿವೌಕಸಃ ॥27॥
ನಿಮ್ಮ ರಾಜನಾದ ದುರ್ಯೋಧನನು ಮಂದಬುದ್ಧಿಯುಳ್ಳವರು. ವೈಶ್ಯರನ್ನು ಆಜ್ಞಾಪಿಸಿದಂತೆ ದೇವತೆಗಳಾದ ನಮ್ಮನ್ನು ಆಜ್ಞಾಪಿಸುವ ಅವನಿಗೆ ಜ್ಞಾನವಿಲ್ಲ.
ಯೂಯಂ ಮುಮೂರ್ಷವಶ್ಚಾಪಿ ಮಂದಪ್ರಜ್ಞಾ ನ ಸಂಶಯಃ |
ಯೇ ತಸ್ಯ ವಚನಾದೇವಮಸ್ಮಾನ್ ಬ್ರೂತ ವಿಚೇತಸಃ ॥28॥
ಅವನ ಮಾತನ್ನು ಕೇಳಿ ಜ್ಞಾನವಿಲ್ಲದೆ ನಮಗೆ ಹೀಗೆ ಆಜ್ಞಾಪಿಸುತ್ತಿರುವ ನೀವೂ ಸಹ ಮಂದಪ್ರಜ್ಞರು ಮತ್ತು ಮರಣ

ಸಮೀಪದಲ್ಲಿರುವವರು. ಇದರಲ್ಲಿ ಸಂಶಯವಿಲ್ಲ.
ಗಚ್ಛಧ್ವಂ ತ್ವರಿತಾಃ ಸರ್ವೇ ಯತ್ರ ರಾಜಾ ಸ ಕೌರವಃ |
ನ ಚೇದ್ದ್ಯೈವ ಗಚ್ಛಧ್ವಂ ಧರ್ಮರಾಜನಿವೇಶನಮ್ ॥29॥
ನೀವೆಲ್ಲರೂ ಶೀಘ್ರವಾಗಿ ಆ ಕೌರವರಾಜನಿದ್ದಲ್ಲಿಗೆ ಹಿಂದಿರುಗಿ. ಇಲ್ಲದಿದ್ದರೆ ಈ ದಿನವೇ ಯಮಪಟ್ಟಣಕ್ಕೆ ಹೋಗಬೇಕಾಗುತ್ತದೆ (ಎಂದು ಹೇಳಿದರು).
ವೈಶಂಪಾಯನಃ
ಏವಮುಕ್ತಾಸ್ತು ಗಂಧರ್ವೈ ರಾಜ್ಞಃ ಸೇನಾಗ್ರಯಾಯಿನಃ |
ಸಂಪ್ರಾದ್ರವನ್ ಯತೋ ರಾಜಾ ಧೃತರಾಷ್ಟ್ರಸುತೋಽಭವತ್ ॥30॥
ವೈಶಂಪಾಯನ ಗಂಧರ್ವರಿಂದ ಹೀಗೆ ಹೇಳಲ್ಪಟ್ಟ ರಾಜನ ಶ್ರೇಷ್ಠ ಸೈನಿಕರು ಧೃತರಾಷ್ಟ್ರ ಸುತನಾದ ದುರ್ಯೋಧನನು ಇದ್ದಲ್ಲಿಗೆ ಓಡಿ ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನವತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಗಂಧರ್ವದುರ್ಯೋಧನಸೇನಾ
ಸಂವಾದೋ ನಾಮ ಪಂಚಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತನೆಯ ಅಧ್ಯಾಯ
ಕೌರವರ ಮತ್ತು ಗಂಧರ್ವರ ಯುದ್ಧ. ಕರ್ಣನ ಪಲಾಯನ.
ವೈಶಂಪಾಯನಃ
ತತಸ್ತೇ ಸಹಿತಾಃ ಸರ್ವೇ ದುರ್ಯೋಧನಮುಪಾಗಮನ್ |
ಅಬ್ರುವಂಶ್ಚ ಮಹಾರಾಜ ಯದೂಚುಃ ಕೌರವಂ ಪ್ರತಿ ॥1॥
ವೈಶಂಪಾಯನ ಎಲೈ ಮಹಾರಾಜನೇ, ಅನಂತರ ಅವರೆಲ್ಲರೂ ಜೊತೆಯಲ್ಲಿ ದುರ್ಯೋಧನನ ಬಳಿಗೆ ಬಂದು ಗಂಧರ್ವರು ಅವನಿಗೆ ತಿಳಿಸಲು ಹೇಳಿದ ವಿಷಯವನ್ನು ಹೇಳಿದರು.
ಗಂಧರ್ವೈರ್ವಾರಿತೇ ಸೈನ್ಯೇ ಧಾರ್ತರಾಷ್ಟ್ರಃ ಪ್ರತಾಪವಾನ್ |
ಅಮರ್ಷಪೂರ್ಣಃ ಸೈನ್ಯಾನಿ ಪ್ರತ್ಯಭಾಷತ ಭಾರತ ॥2॥
ಶಾಸತೈನಾನಧರ್ಮಜ್ಞಾನ್ ಮಮ ವಿಪ್ರಿಯಕಾರಿಣಃ |
ಯದಿ ಪ್ರಕ್ರೀಡತೇ ಸರ್ವೈರ್ದೇವೈಃ ಸಹ ಶತಕ್ರತುಃ ॥3॥
ವಯಮತ್ರ ಯಥಾಪ್ರೀತಾಃ ಕ್ರೀಡಿಷ್ಯಾಮೋ ನಿರಂತರಮ್ |
ಗಂಧರ್ವರು ತನ್ನ ಸೈನ್ಯವನ್ನು ತಡೆಯುತ್ತಿರಲು ಪ್ರತಾಪಶಾಲಿಯಾದ ದುರ್ಯೋಧನನು ಕ್ರೋಧದಿಂದ ಪೂರ್ಣನಾಗಿ ತನ್ನ ಸೈನ್ಯವನ್ನು ಕುರಿತು ನನಗೆ ಪ್ರತಿಕೂಲವನ್ನು ಮಾಡುತ್ತಿರುವಂತಹ ಈ ಅಧರ್ಮಜ್ಞರು ಅವರು ದೇವತೆಗಳಿಂದ ಕೂಡಿದ ಇಂದ್ರನೇ ಆದರೂ ಸಹ ಅವರಿಗೆ ಶಾಸನವನ್ನು ಮಾಡಿ. ನಾವು ಇಲ್ಲಿ ನಮ್ಮ ಮನಸ್ಸಿಗೆ ಬಂದಂತೆ ವಿಹರಿಸುತ್ತೇವೆ ಎಂದು ಹೇಳಿದನು.
ದುರ್ಯೋಧನವಚಃ ಶ್ರುತ್ವಾ ಧಾರ್ತರಾಷ್ಟ್ರಾ ಮಹಾಬಲಾಃ |
ಸರ್ವ ಏವಾಭಿಸನ್ನದ್ಧಾ ಯೋಧಾಶ್ಚಾಪಿ ಸಹಸ್ರಶಃ ॥4॥
ದುರ್ಯೋಧನನ ಮಾತನ್ನು ಕೇಳಿ ಧೃತರಾಷ್ಟ್ರನ ಎಲ್ಲಾ ಪುತ್ರರೂ ಮತ್ತು ಸಹಸ್ರ ಸಂಖ್ಯೆಯಲ್ಲಿ ಯೋಧರು ಸಿದ್ಧರಾದರು.
ತತಃ ಪ್ರಮಥ್ಯ ಸರ್ವಾಂಸ್ತಾಂಸ್ತದ್ವನಂ ವಿವಿಶುರ್ಬಲಾತ್ |
ಸಿಂಹನಾದೇನ ಮಹತಾ ಪೂರಯಂತೋ ದಿಶೋ ದಶ ॥5॥
ಅನಂತರ ಆ ಗಂಧರ್ವರೆಲ್ಲರನ್ನೂ ಸೋಲಿಸುವ ಸಲುವಾಗಿ ತಮ್ಮ ದೊಡ್ಡ ಸಿಂಹನಾದದಿಂದ ಹತ್ತುದಿಕ್ಕನ್ನೂ ತುಂಬಿ ಆ ಪ್ರದೇಶವನ್ನು ಪ್ರವೇಶಿಸಿದರು.
ತತೋಽಪರೈರವಾರ್ಯಂತ ಗಂಧರ್ವೈಃ ಕುರುಸೈನಿಕಾಃ |
ಸಾಮ್ನೈವ ತತ್ರ ವಿಕ್ರಾಂತಾ ಮಾ ಸಾಹಸಮಿತಿ ಪ್ರಭೋ ॥6॥
ಎಲೈ ಪ್ರಭುವೇ, ಆಗ ಗಂಧರ್ವರಿಂದ ಪರಾಕ್ರಮವನ್ನು ತೋರಲು ಹೊರಟಿದ್ದ ಕುರುಸೈನಿಕರು ಶಾಂತರೀತಿಯಿಂದಲೇ ಈ ಸಾಹಸವನ್ನು ಮಾಡಬೇಡಿ ಎಂದು ಹೇಳಿ ತಡೆಯಲ್ಪಟ್ಟರು.
ತೇ ವಾರ್ಯಮಾಣಾ ಗಂಧರ್ವೈಃ ಸಾಮ್ನೈವ ವಸುಧಾಧಿಪ |
ತಾನನಾದೃತ್ಯ ಗಂಧರ್ವಾಂಸ್ತದ್ವನಂ ವಿವಿಶುರ್ಮಹತ್ ॥7॥
ಎಲೈ ರಾಜನೇ, ಗಂಧರ್ವರು ಶಾಂತ ರೀತಿಯಲ್ಲಿ ಅವರನ್ನು ತಡೆಯುತ್ತಿದ್ದರೂ ಆಗ ಗಂಧರ್ವರನ್ನು ತಿರಸ್ಕರಿಸಿ ಕೌರವ ಸೈನಿಕರು ಆ ದೊಡ್ಡ ಕಾಡನ್ನು ಹೊಕ್ಕರು.
ಯದಾ ವಾಚಾ ನ ತಿಷ್ಠಂತಿ ಧಾರ್ತರಾಷ್ಟ್ರಾಃ ಸರಾಜಕಾಃ |
ತತಸ್ತೇ ಖೇಚರಾಃ ಸರ್ವೇ ಚಿತ್ರಸೇನೇ ನ್ಯವೇದಯನ್ ॥8॥
ಯಾವಾಗ ರಾಜನಿಂದ ಸಹಿತರಾದ ಧೃತರಾಷ್ಟ್ರ ಪುತ್ರರು ತಮ್ಮ ಮಾತುಗಳನ್ನು ಕೇಳಲಿಲ್ಲವೋ ಆಗ ಆಕಾಶಗಾಮಿಗಳಾದ ಆ

ಗಂಧರ್ವರೆಲ್ಲರೂ ತಮ್ಮ ರಾಜನಾದ ಚಿತ್ರಸೇನನಿಗೆ ಈ ವಿಷಯವನ್ನು ನಿವೇದಿಸಿದರು.
ಗಂಧರ್ವರಾಜಸ್ತಾನ್ ಸರ್ವಾನಬ್ರವೀತ್ ಕೌರವಾನ್ ಪ್ರತಿ |
ಅನಾರ್ಯಾಂಛಾಸತೇತ್ಯೇತಾಂಶ್ಚಿತ್ರಸೇನೋಽತ್ಯಮರ್ಷಣಃ ॥9॥
ಗಂಧರ್ವರಾಜನಾದ ಚಿತ್ರಸೇನನು ಬಹಳ ಕೋಪವನ್ನು ಹೊಂದಿದವನಾಗಿ ಕೌರವರ ವಿಷಯದಲ್ಲಿ ಅನಾರ್ಯರಾದ ಅವರಿಗೆ ತಕ್ಕ ಶಾಸನವನ್ನು ಮಾಡಿ ಎಂದು ಅವರೆಲ್ಲರನ್ನೂ ಕುರಿತು ಹೇಳಿದನು.
ಅನುಜ್ಞಾತಾಸ್ತು ಗಂಧರ್ವಾಶ್ಚಿತ್ರಸೇನೇನ ಭಾರತ |
ಪ್ರಗೃಹೀತಾಯುಧಾಃ ಸರ್ವೇ ಧಾರ್ತರಾಷ್ಟ್ರಾನುಪಾದ್ರವನ್ ॥10॥
ಎಲೈ ಭಾರತನೇ, ಚಿತ್ರಸೇನನ ಅನುಮತಿಯನ್ನು ಪಡೆದ ಗಂಧರ್ವರೆಲ್ಲರೂ ಆಯುಧಗಳನ್ನು ಹಿಡಿದು ಧೃತರಾಷ್ಟ್ರನ ಪುತ್ರರ ಕಡೆಗೆ ಓಡಿದರು.
ತಾನ್ ದೃಷ್ಟ್ವಾಪತತಃ ಶೀಘ್ರಾನ್ ಗಂಧರ್ವಾನುದ್ಯತಾಯುಧಾನ್ |
ಪ್ರಾದ್ರವಂಸ್ತೇ ದಿಶಃ ಸರ್ವೇ ಧಾರ್ತರಾಷ್ಟ್ರಸ್ಯ ಪಶ್ಯತಃ ॥11॥
ಕೈಯಲ್ಲಿ ಆಯುಧವನ್ನು ಹಿಡಿದು ವೇಗಶಾಲಿಗಳಾದ ಆ ಗಂಧರ್ವರು ತಮ್ಮ ಮೇಲೆ ಎರಗುತಿತರುವುದನ್ನು ನೋಡಿ ದುರ್ಯೋಧನನ ಕಣ್ಣೆದುರಿಗೇ ಕೌರವ ಯೋಧರು ದಿಕ್ಕು ದಿಕ್ಕುಗಳಿಗೆ ಓಡಿಹೋದರು.
ತಾನ್ ದೃಷ್ಟ್ವಾ ದ್ರವತಃ ಸರ್ವಾನ್ ಧಾರ್ತರಾಷ್ಟ್ರಾನ್ ಪರಾಙ್ಮುಖಾನ್ |
ರಾಧೇಯಸ್ತು ತದಾ ವೀರೋ ನಾಸೀತ್ ತತ್ರ ಪರಾಙ್ಮುಖಃ ॥12॥
ಆ ಧೃತರಾಷ್ಟ್ರಪುತ್ರರು ಯುದ್ಧಕ್ಕೆ ವಿಮುಖರಾಗಿ ಓಡಿ ಹೋಗುವುದನ್ನು ನೋಡಿದ ವೀರನಾದ ಕರ್ಣನು ಮಾತ್ರ ವಿಮುಖನಾಗಲಿಲ್ಲ.
ಆಪತಂತೀಂ ತು ಸಂಪ್ರೇಕ್ಷ್ಯ ಗಂಧರ್ವಾಣಾಂ ಮಹಾಚಮೂಮ್ |
ಮಹತಾ ಶರವರ್ಷೇಣ ರಾಧೇಯಃ ಸಮವಾರಯತ್ ॥13॥
ಗಂಧರ್ವರ ದೊಡ್ಡ ಸೈನ್ಯವು ತನ್ನ ಮೇಲೆ ಎರಗುತ್ತಿರುವುದನ್ನು ನೋಡಿದ ಕರ್ಣನು ಬಾಣಗಳ ದೊಡ್ಡ ಮಳೆಯಿಂದ ಅವರನ್ನು ತಡೆದನು.
ಕ್ಷುರಪ್ರೈರ್ನಿಶಿತೈರ್ಭಲ್ಲೈರ್ವತ್ಸದಂತೈಸ್ತದಾಽಽಯಸೈಃ |
ಗಂಧರ್ವಾಂಛತಶೋಽಭ್ಯಘ್ನಂಲ್ಲಘುತ್ವಾತ್ ಸೂತನಂದನಃ ॥14॥
ಸೂತನಂದನನಾದ ಕರ್ಣನು ಬಹಳ ಕ್ಷಿಪ್ರಕಾರಿಯಾದುದರಿಂದ ಹರಿತವಾದ ಭಲ್ಲಗಳಿಂದಲೂ, ಕಬ್ಬಿಣದ ವತ್ಸದಂತಗಳಿಂದಲೂ ಗಂಧರ್ವರನ್ನು ನೂರರ ಸಂಖ್ಯೆಯಲ್ಲಿ ಹೊಡೆದನು.
ಪಾತಯನ್ನುತ್ತಮಾಂಗಾನಿ ಗಂಧರ್ವಾಣಾಂ ಮಹಾರಥಃ |
ಕ್ಷಣೇನ ವ್ಯಧಮತ್ ಸರ್ವಾಂ ಚಿತ್ರಸೇನಸ್ಯ ವಾಹಿನೀಮ್ ॥15॥
ಮಹಾರಥನಾದ ಅವನು ಗಂಧರ್ವರ ಶಿರಸ್ಸನ್ನು ನೆಲಕ್ಕೆ ಉರುಳಿಸುತ್ತಾ ಒಂದು ಕ್ಷಣದಲ್ಲಿ ಚಿತ್ರಸೇನನ ಎಲ್ಲಾ ಸೈನ್ಯವನ್ನೂ ಖಾಲಿ ಮಾಡಿದನು.
ತೇ ವಧ್ಯಮಾನಾ ಗಂಧರ್ವಾಃ ಸೂತಪುತ್ರೇಣ ಧನ್ವಿನಾ |
ಭೂಯ ಏವಾಭಿವರ್ತಂತ ಶತಶೋಽಥ ಸಹಸ್ರಶಃ ॥16॥
ಧನುರ್ಧಾರಿಯಾದ ಕರ್ಣನಿಂದ ಪ್ರಹಾರಕ್ಕೆ ಒಳಗಾದ ಆ ಗಂಧರ್ವರು ಪುನಃ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಅವನ ಮೇಲೆ ಎರಗಿದರು.
ಗಂಧರ್ವಭೂತಾ ಪೃಥಿವೀ ಕ್ಷಣೇನ ಸಮಪದ್ಯತ |
ಆಪತದ್ಭಿರ್ಮಹಾವೇಗೈಶ್ಚಿತ್ರಸೇನಸ್ಯ ಸೈನಿಕೈಃ ॥17॥
ಕರ್ಣನ ಮೇಲೆ ಬೀಳುವ ಚಿತ್ರಸೇನನ ಸೈನಿಕರಿಂದ ಭೂಮಿಯು ಒಂದುಕ್ಷಣದಲ್ಲಿ ಎಲ್ಲವೂ ಗಂಧರ್ವಮಯವಾಗಿ ಕಂಡಿತು.
ಅಥ ದುರ್ಯೋಧನೋ ರಾಜಾ ಶಕುನಿಶ್ಚಾಪಿ ಸೌಬಲಃ |
ದುಃಶಾಸನೋ ವಿಕರ್ಣಶ್ಚ ಯೇ ಚಾನ್ಯೇ ಧೃತರಾಷ್ಟ್ರಜಾಃ |
ನ್ಯಹನಂಸ್ತತ್ ತದಾ ಸೈನ್ಯಂ ರಥೈರ್ಗರುಡನಿಸ್ವನೈಃ ॥18॥
ಆಗ ರಾಜನಾದ ದುರ್ಯೋಧನನು ಸುಬಲಪುತ್ರನಾದ ಶಕುನಿಯೂ, ದುಶ್ಶಾಸನ ವಿಕರ್ಣರೂ ಮತ್ತು ಉಳಿದ ಧೃತರಾಷ್ಟ್ರಪುತ್ರರೂ ಗರುಡಧ್ವನಿಯನ್ನು ಮಾಡುವ ರಥಗಳಲ್ಲಿ ಕುಳಿತು ಗಂಧರ್ವರ ಸೈನ್ಯವನ್ನು ಪ್ರಹರಿಸಿದರು.
ಭೂಯಶ್ಚ ಯೋಧಯಾಮಾಸುಃ ಕೃತ್ವಾ ಕರ್ಣಮಥಾಗ್ರತಃ |
ಮಹತಾ ರಥಸೇಂನ ಹಯಚಾರೇಣ ಚಾಪ್ಯುತ ॥19॥
ವೈಕರ್ತನಂ ಪರೀಪ್ಸಂತೋ ಗಂಧರ್ವಾನ್ ಸಮವಾಕಿರನ್ ॥20॥
ಅವರು ಪುನಃ ಕರ್ಣನನ್ನು ಮುಂದೆ ಮಾಡಿಕೊಂಡು ದೊಡ್ಡ ರಥಸಮೂಹದಿಂದ ಮತ್ತು ಅಶ್ವಸಮೂಹದ ಸಂಚಾರದಿಂದ ಕರ್ಣನನ್ನು ರಕ್ಷಿಸಿಕೊಂಡು ಗಂಧರ್ವ ಸೈನ್ಯದ ಮೇಲೆ ಶಸ್ತ್ರಗಳ ಮಳೆಯನ್ನು ಕರೆದರು.
ತತಃ ಸನ್ನ್ಯಪತನ್ ಸರ್ವೇ ಗಂಧರ್ವಾಃ ಕೌರವೈಃ ಸಹ |
ತದಾ ಸುತುಮುಲಂ ಯುದ್ಧಮುಭಯೋರ್ಲೋಮಹರ್ಷಣಮ್ ॥
ಆಗ ಎಲ್ಲ ಗಂಧರ್ವರೂ ಕೌರವರ ಮೇಲೆ ಬಿದ್ದು ಅವರ ಜೊತೆಯಲ್ಲಿ ಬಹಳ ತೀವ್ರವಾದ ಲೋಮಹರ್ಷಣವಾದ ಯುದ್ಧವನ್ನು ಮಾಡಿದರು.
ತತಸ್ತೇ ಮೃದವೋಽಭೂವನ್ಗಂಧರ್ವಾಃ ಶರಪೀಡಿತಾಃ |

ಉಚ್ಚುಕ್ರುಶುಶ್ಚ ಕೌರವ್ಯಾ ಗಂಧರ್ವಾನ್ ಪ್ರೇಕ್ಷ್ಯ ಪೀಡಿತಾನ್ ॥22॥
ಆಗ ಕೌರವರ ಬಾಣಗಳಿಂದ ಪೀಡಿತರಾದ ಗಂಧರ್ವರು ಮೃದುವಾದರು (ದುರ್ಬಲರಾದರು). ಕೌರವರಾದರೂ ತಮ್ಮಿಂದ ಪೀಡಿತರಾದ ಗಂಧರ್ವರನ್ನು ನೋಡಿ ಹರ್ಷೋದ್ಗಾರವನ್ನು ಮಾಡಿದರು.
ಗಂಧರ್ವಾಂಸ್ತತ್ರಸಿತಾನ್ ದೃಷ್ಟ್ವಾ ಚಿತ್ರಸೇನೋ ಹ್ಯಮರ್ಷಣಃ।
ಉತ್ಪಪಾತಾಸನಾತ್ ಕ್ರುದ್ಧೋ ವಧೇ ತೇಷಾಂ ಸಮಾಹಿತಃ ॥23॥
ಗಂಧರ್ವರು ಹೆದರುತ್ತಿರುವುದನ್ನು ನೋಡಿದ ಚಿತ್ರಸೇನನು ಬಹಳ ಕೋಪದಿಂದ ಕೂಡಿದವನಾಗಿ ಕೌರವ ಯೋಧರ ವಧೆಯನ್ನು ನಿಶ್ಚಯಿಸಿ ತನ್ನ ಆಸನದಿಂದ ನೆಗೆದು ಬಂದನು.
ತತೋ ಮಾಯಾಸ್ತ್ರಮಾಸ್ಥಾಯ ಯುಯುಧೇ ಚಿತ್ರಮಾರ್ಗವಿತ್।
ವಿಯತ್ ಸಂಛಾದಯಾಮಾಸ ನ ವವೌ ತತ್ರ ಮಾರುತಃ ॥24॥
ಆಗ ಯುದ್ಧದ ಚಿತ್ರಮಾರ್ಗಗಳನ್ನು ಬಲ್ಲ ಅವನು ಮಾಯಾಸ್ತ್ರವನ್ನು ಆಶ್ರಯಿಸಿ ಆಕಾಶವನ್ನು ಬಾಣಗಳಿಂದ ಮುಚ್ಚಿದನು. ಆಗ ಅಲ್ಲಿ ವಾಯುವು ಬೀಸಲಿಲ್ಲ.
ತಯಾ ಮುಹ್ಯಂತ ಕೌರವ್ಯಾಶ್ಚಿತ್ರಸೇನಸ್ಯ ಮಾಯಯಾ।
ಹಸ್ತ್ಯಾರೋಹಾ ಹತಾಃ ಪೇತುರ್ಹಸ್ತಿಭಿಃ ಸಹ ಭಾರತ ॥25॥
ಹಯಾರೋಹಾಶ್ಚ ಸಹಯೈ ರಥೈಶ್ಚ ರಥಿನಸ್ತಥಾ।
ಪತ್ತಯಶ್ಚ ತಥಾ ಪೇತುರ್ವಿಶಸ್ತಾಃ ಶರವೃಷ್ಟಿಭಿಃ ॥26॥
ಚಿತ್ರಸೇನನ ಮಾಯಾಸ್ತ್ರದ ಸಾಮರ್ಥ್ಯದಿಂದ ಕೌರವ ಸೈನ್ಯವು ಮೋಹಕ್ಕೆ ಒಳಗಾಯಿತು. ಎಲೈ ಭಾರತನೇ, ಗಜಾರೋಹಿಗಳು ಗಜಗಳ ಜೊತೆಯಲ್ಲಿ ಬಿದ್ದರು. ಅಶ್ವಾರೋಹಿಗಳು ಅಶ್ವದ ಜೊತೆಯಲ್ಲಿ, ರಥಾರೋಹಿಗಳು ರಥಗಳ ಜೊತೆಯಲ್ಲಿ ಬಿದ್ದರು. ಸೈನಿಕರೂ ಸಹ ಬಾಣಗಳ ಮಳೆಯಿಂದ ಕತ್ತರಿಸಿದ ದೇಹವುಳ್ಳವರಾಗಿ ನೆಲಕ್ಕುರುಳಿದರು.
ಏಕೈಕೋಽಪಿ ತದಾ ಯೋಧೋ ಧಾರ್ತರಾಷ್ಟ್ರಸ್ಯ ಭಾರತ।
ಪರ್ಯವರ್ತತ ಗಂಧರ್ವೈರ್ದಶಭಿರ್ದಶಭಿಃ ಸಹ ॥27॥
ಭಾರತನೇ, ದುರ್ಯೋಧನನ ಸೈನ್ಯದ ಒಬ್ಬೊಬ್ಬ ಯೋಧನೂ ಸಹ ಹತ್ತು ಹತ್ತು ಗಂಧರ್ವನಿಂದ ಸುತ್ತುವರಿಯಲ್ಪಟ್ಟನು.
ತತಃ ಸಂಪೀಡ್ಯಮಾನಾಸ್ತೇ ಬಲೇನ ಮಹತಾ ತದಾ।
ಪ್ರಾದ್ರುವಂತ ರಣೇ ಭೀತಾ ಯೇ ಚ ರಾಜಂಜಿಜೀ(ಗೀ)ಷವಃ ॥27.1॥
ಎಲೈ ರಾಜನೇ, ಆಗ ಗಂಧರ್ವರ ಮಹಾಸೈನ್ಯದಿಂದ ಪೀಡಿತರಾದ ಕೌರವ ಯೋಧರು ಭೀತರಾಗಿ ಬದುಕುವ ಇಚ್ಛೆಯಿಂದ ಯುದ್ಧವನ್ನು ಬಿಟ್ಟು ಓಡಿಹೋದರು.
ಭಜ್ಯಮಾನೇಷ್ವನೀಕೇಷು ಧಾರ್ತರಾಷ್ಟ್ರೇಷು ಸರ್ವಶಃ।
ಕರ್ಣೋ ವೈಕರ್ತನೋ ರಾಜಂಸ್ತಸ್ಥೌ ಗಿರಿರಿವಾಚಲಃ ॥28॥
ಎಲೈ ರಾಜನೇ, ಧೃತರಾಷ್ಟ್ರ ಪುತ್ರರು ಮತ್ತು ಅವನ ಸೈನ್ಯವು ಹೀಗೆ ಭೇದಿಸಲ್ಪಡುತ್ತಿರಲು ವೈಕರ್ತನನಾದ ಕರ್ಣನೊಬ್ಬನೇ ಪರ್ವತದಂತೆ ಅಚಲನಾಗಿ ನಿಂತನು.
ದುರ್ಯೋಧನಶ್ಚ ಕರ್ಣಶ್ಚ ಶಕುನಿಶ್ಚಾಪಿ ಸೌಬಲಃ।
ಗಂಧರ್ವಾನ್ ಯೋಧಯಾಮಾಸುಃ ಸಮರೇ ಭೃಶವಿಕ್ಷತಾಃ ॥29॥
ಆಗ ಬಹಳ ಗಾಯಗೊಂಡ ದುರ್ಯೋಧನನೂ, ಕರ್ಣನೂ ಮತ್ತು ಸೌಬಲನಾದ ಶಕುನಿಯು ಗಂಧರ್ವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಸರ್ವ ಏವ ತು ಗಂಧರ್ವಾಃ ಶತಶೋಽಥ ಸಹಸ್ರಶಃ।
ಜಿಘಾಂಸಮಾನಾಃ ಸಹಿತಾಃ ಕರ್ಣಮಭ್ಯದ್ರುವನ್ ರಣೇ ॥30॥
ಸೂತಪುತ್ರಂ ಜಿಘಾಂಸಂತಃ ಸಮಂತಾತ್ ಪರ್ಯವಾಕಿರನ್ ॥31॥
ಎಲ್ಲ ಗಂಧರ್ವರೂ ನೂರರ ಸಂಖ್ಯೆಯಲ್ಲಿ ಸಾವಿರದ ಸಂಖ್ಯೆಯಲ್ಲಿ ಸೂತಪುತ್ರನಾದ ಕರ್ಣನು ಕೊಲ್ಲುವ ಇಚ್ಛೆಯಿಂದ ಒಟ್ಟಿಗೆ ಅವನ ಕಡೆಗೆ ಓಡಿದರು. ಮತ್ತು ಅವನ ಮೇಲೆ ಬಾಣಗಳ ಮಳೆಯನ್ನು ಕರೆದರು.
ಅನ್ಯೇಽಸ್ಯ ಯುಗಮಚ್ಛಿಂದನ್ ಧ್ವಜಮನ್ಯೇ ನ್ಯಪಾತಯನ್।
ಈಷಾಮನ್ಯೇ ಹಯಾನನ್ಯೇ ಸೂತಮನ್ಯೇ ನ್ಯಪಾತಯನ್ ॥32॥
ಕೆಲವರು ಅವನ ರಥದ ನೊಗವನ್ನು ಕತ್ತರಿಸಿದರು. ಕೆಲವರು ಧ್ವಜವನ್ನು ಕೆಡವಿದರು. ಕೆಲವರು ರಥದ ಮೂಕಿಯನ್ನು, ಇನ್ನು ಕೆಲವರು ಅಶ್ವಗಳನ್ನೂ, ಇನ್ನು ಕೆಲವರು ಸಾರಥಿಯನ್ನೂ ಉರುಳಿಸಿದರು.
ಅನ್ಯೇ ಛತ್ರಂ ವರೂಥಂ ಚ ಬಂಧುರಂ ಚ ತಥಾ ಪರೇ।
ಅನ್ಯೇ ಸಂಚೂರ್ಣಯಾಮಾಸುರ್ನಲ್ವಂ ಚಾಕ್ಷೌ ತಥಾ ಪರೇ ॥33॥
ಇನ್ನು ಕೆಲವರು ಛತ್ರವನ್ನೂ, ಕೆಲವರು ರಥದ ರಕ್ಷಣೆಗಳನ್ನೂ, ಇನ್ನು ಕೆಲವರು ರಥದ ಅಲಂಕಾರರೂಪವಾದ ಶೋರಣಗಳನ್ನೂ, ಇನ್ನು ಕೆಲವರು ನಲ್ವ ಎಂಬ ಇನ್ನೊಂದು ರಥಾಲಂಕಾರವನ್ನೂ, ಇನ್ನು ಕೆಲವರು ರಥದ ಎರಡು ತೂಬುಗಳನ್ನು ಮುರಿದು ಕೆಡವಿದರು.
ಗಂಧರ್ವಾ ಬಹುಸಾಹಸ್ರಾಸ್ತಿಲಶೋ ವ್ಯಧಮನ್ ರಥಮ್।
ಪ್ರಗೃಹೀತಾಯುಧಾ ವೀರಾಶ್ಚಿತ್ರಸೇನಪುರೋಗಮಾಃ ॥34॥
ಚಿತ್ರಸೇನನನ್ನು ಮುಂದೆ ಮಾಡಿಕೊಂಡ ಬಹುಸಹಸ್ರ ಗಂಧರ್ವವೀರರು ಕೈಯಲ್ಲಿ ಆಯುಧಗಳನ್ನು ಹಿಡಿದು ಕರ್ಣನ ರಥವನ್ನು

ಎಳ್ಳಿನಂತೆ ಪುಡಿ ಮಾಡಿದರು.
ತತೋ ರಥಾದವಪ್ಲುತ್ಯ ಸೂತಪುತ್ರೋಽಸಿಚರ್ಮಭೃತ್ |
ಅಂಸಾವಲಂಬಿತಧನುರ್ಧಾವಮಾನೋ ಮಹಾಬಲಃ ॥35॥
ವಿಕರ್ಣರಥಮಾಸ್ಥಾಯ ಮೋಕ್ಷಾಯಾಶ್ವಾನಚೋದಯತ್ ॥36॥
ಆಗ ಸೂತಪುತ್ರನಾದ ಮಹಾಬಲನಾದ ಕರ್ಣನು ಅಸಿಚರ್ಮಗಳನ್ನು ಹಿಡಿದು ಹೆಗಲಿಗೆ ಧನುಸ್ಸನ್ನು ತೂಗುಹಾಕಿಕೊಂಡು ರಥದಿಂದ ಕೆಳಕ್ಕೆ ನೆಗೆದು ಓಡುತ್ತಾ ವಿಕರ್ಣರಥವನ್ನು ಏರಿ ಯುದ್ಧಭೂಮಿಯಿಂದ ಹೊರಗೆ ಹೋಗುವುದಕ್ಕಾಗಿ ಅಶ್ವಗಳನ್ನು ಚೋದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಕರ್ಣಪರಾಭವೋನಾಮ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತೊಂದನೆಯ ಅಧ್ಯಾಯ
ಕೌರವಸೈನ್ಯದ ಪರಾಜಯ. ಚಿತ್ರರಥನಿಂದ ದುರ್ಯೋಧನನ ಬಂಧನ. ಇತರ ಗಂಧರ್ವರಿಂದ ದುರ್ಯೋಧನನ ತಮ್ಮಂದಿರ ಮತ್ತು ಅವರ ಪತ್ನಿಯರ ಬಂಧನ. ದುರ್ಯೋಧನನ ಅಮಾತ್ಯನಿಂದ ಯುಧಿಷ್ಠಿರನಿಗೆ ಈ ವಾರ್ತೆಯ ನಿವೇದನ. ಭೀಮಸೇನನಿಂದ ಬಂಧನದ ಅನುಮೋದನ.
ವೈಶಂಪಾಯನಃ
ಗಂಧರ್ವೈಸ್ತು ಮಹಾರಾಜ ಭಗ್ನೇ ಕರ್ಣೇ ಮಹಾರಥೇ |
ಸಂಪ್ರಾದ್ರವಚ್ಚಮೂಃ ಸರ್ವಾ ಧಾರ್ತರಾಷ್ಟ್ರಸ್ಯ ಪಶ್ಯತಃ ॥1॥
ವೈಶಂಪಾಯನ ಮಹಾರಾಜನೇ, ಮಹಾರಥನಾದ ಕರ್ಣನು ಗಂಧರ್ವರಿಂದ ಭಗ್ನನಾದಾಗ ದುರ್ಯೋಧನನು ನೋಡುತ್ತಿರುವಂತೆಯೇ ಅವನ ಸೈನ್ಯವೆಲ್ಲವೂ ಓಡಿಹೋಯಿತು.
ತಾನ್ ದೃಷ್ಟ್ವಾ ದ್ರವತಃ ಸರ್ವಾನ್ ಧಾರ್ತರಾಷ್ಟ್ರಾನ್ ಪರಾಙ್ಮುಖಾನ್ |
ಧುರ್ಯೋಧನೋ ಮಹಾರಾಜೋ ನಾಸೀತ್ ತತ್ರ ಪರಾಙ್ಮುಖಃ ॥2॥
ಯುದ್ಧಕ್ಕೆ ಪರಾಙ್ಮುಖರಾಗಿ ಓಡುತ್ತಿರುವ ತನ್ನ ಸೈನ್ಯವನ್ನು ನೋಡಿದ ಮಹಾರಾಜನಾದ ದುರ್ಯೋಧನನು ಮಾತ್ರ ಅಲ್ಲಿ ಪರಾಙ್ಮುಖನಾಗಲಿಲ್ಲ.
ತಾಮಾಪತಂತೀಂ ಸಂಪ್ರೇಕ್ಷ್ಯ ಗಂಧರ್ವಾಣಾಂ ಮಹಾಚಮೂಮ್ |
ಮಹತಾ ಶರವರ್ಷೇಣ ಸೋಽಭ್ಯವರ್ಷದರಿಂದಮಃ ॥3॥
ಮೇಲೆ ಎರಗುತ್ತಿದ್ದ ಗಂಧರ್ವರ ಮಹಾಸೈನ್ಯವನ್ನು ನೋಡಿದ ಅರಿಂದಮನಾದ ಅವನು ಬಾಣಗಳ ದೊಡ್ಡ ಮಳೆಯನ್ನು ಸುರಿಸಿದನು.
ಅಚಿಂತ್ಯ ಶರವರ್ಷಂ ತು ಗಂಧರ್ವಾಸ್ತಸ್ಯ ತಂ ರಥಮ್ |
ದುರ್ಯೋಧನಂ ಜಿಘಾಂಸಂತಃ ಸಮಂತಾ ಪರ್ಯವಾರಯನ್ ॥4॥
ಗಂಧರ್ವರು ಅವನ ಶರವರ್ಷವನ್ನು ಲೆಕ್ಕಿಸದೆ ದುರ್ಯೋಧನನನ್ನು ಕೊಲ್ಲಲು ಬಯಸಿ ಅವರ ರಥವನ್ನು ಸುತ್ತುವರಿದರು.
ಯುಗಮೀಷಾಂ ವರೂಥಂ ಚ ತಥೈವ ಧ್ವಜಸಾರಥೀ |
ಅಶ್ವಾಂಸ್ತ್ರಿವೇಣು ತಲ್ಪಂ ಚ ತಿಲಶೋ ವ್ಯಧಮಂಭರೈಃ ॥5॥
ರಥದ ನೊಗ, ಮೂಕಿ, ರಕ್ಷಣೆ, ಧ್ವಜ, ಸಾರಥಿ, ಅಶ್ವಗಳು, ತ್ರಿವೇಣು, ಆಸನ ಇವುಗಳನ್ನು ತಮ್ಮ ಬಾಣಗಳಿಂದ ಎಳ್ಳಿನಂತೆ ಪುಡಿಮಾಡಿದರು.
ದುರ್ಯೋಧನಂ ಚಿತ್ರಸೇನೋ ವಿರಥಂ ಪತಿತಂ ಭುವಿ |
ಅಭಿದ್ರುತ್ಯ ಮಹಾಬಾಹುರ್ಜೀವಗ್ರಾಹಮಥಾಗ್ರಹೀತ್ ॥6॥
ಮಹಾಬಾಹುವಾದ ಚಿತ್ರಸೇನನು ರಥವನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದ ದುರ್ಯೋಧನನ ಕಡೆಗೆ ಓಡಿಹೋಗಿ ಅವನನ್ನು ಜೀವಸಹಿತವಾಗಿ ಸೆರೆಹಿಡಿದನು.
ತಸ್ಮಿನ್ ಗೃಹೀತೇ ರಾಜೇಂದ್ರ ಸ್ಥಿತಂ ದುಃಶಾಸನಂ ರಥೇ |
ಪರ್ಯಗೃಹ್ಣಂತ ಗಂಧರ್ವಾಃ ಪರಿವಾರ್ಯ ಸಮಂತತಃ ॥7॥
ರಾಜೇಂದ್ರನೇ, ದುರ್ಯೋಧನನು ಗೃಹೀತನಾಗುತ್ತಿರಲು ರಥದಲ್ಲಿದ್ದ ದುಃಶಾಸನನನ್ನು ಎಲ್ಲಕಡೆಯಿಂದಲೂ ಸುತ್ತುವರಿದು ಗಂಧರ್ವರು ಅವನನ್ನು ಹಿಡಿದರು.
ವಿವಿಂಶತಿಂ ಚಿತ್ರಸೇನಮಾದಾಯಾನ್ಯೇ ವಿದುದ್ರುವುಃ |
ವಿಂದಾನುವಿಂದಾನವಪರೇ ರಾಜದಾರಾಂಶ್ಚ ಸರ್ವಶಃ ॥8॥
ಇನ್ನು ಕೆಲವರು ವಿವಿಂಶತಿ ಮತ್ತು ಚಿತ್ರಸೇನರನ್ನು (ದುರ್ಯೋಧನನ ತಮ್ಮಂದಿರು) ಹಿಡಿದು ಓಡಿದರು. ಇನ್ನು ಕೆಲವರು ವಿಂದಾನುವಿಂದರನ್ನು ಮತ್ತು ಎಲ್ಲಾ ರಾಜಪತ್ನಿಯರನ್ನೂ ಹಿಡಿದರು.
ಸೈನ್ಯಂ ತದ್ಧಾರ್ತರಾಷ್ಟ್ರಸ್ಯ ಗಂಧರ್ವೈಃ ಸಮಭಿದ್ರುತಮ್ |
ಪೂರ್ವಂ ಪ್ರಭಗ್ನೈಃ ಸಹಿತಾಃ ಪಾಂಡವಾನಭ್ಯಯುಸ್ತದಾ ॥9॥

ಗಂಧರ್ವರಿಂದ ಆಘಾತಕ್ಕೆ ಒಳಗಾದ ದುರ್ಯೋಧನನ ಆ ಸೈನ್ಯವು ಮೊದಲು ಭಗ್ನರಾದ ದುರ್ಯೋಧನನ ಸೈನಿಕರ ಜೊತೆಯಲ್ಲಿ ಆಗ ಪಾಂಡವರ ಬಳಿಗೆ ಹೋದರು.
ಶಕಟಾಪಣವೈಶ್ಯಾ(ವೇಶಾ)ಶ್ಚ ಯಾನಯುಗ್ಯಂ ಚ ಸರ್ವಶಃ |
ಶರಣಂ ಪಾಂಡವಾಂಜಗ್ಮುರ್ಹ್ರಿಯಮಾಣೇ ಮಹೀಪತೌ ॥10॥
ರಾಜನಾದ ದುರ್ಯೋಧನನು ಸೆರೆಹಿಡಿದು ಕೊಂಡೊಯ್ಯಲ್ಪಡುತ್ತಿರಲು ಅಲ್ಲಿಗೆ ಬಂದಿದ್ದ ಗಾಡಿಗಳವರೂ, ಅಂಗಡಿಗಳ ವೈಶ್ಯರೂ, ಅವರ ಎಲ್ಲಾ ವಾಹನಗಳೂ ಪಾಂಡವರನ್ನು ಶರಣುಹೊಂದಿದವು.
ದುರ್ಯೋಧನಾಮಾತ್ಯಾಃ
ಪ್ರಿಯದರ್ಶೀ ಮಹಾಬಾಹುಧಾರ್ತರಾಷ್ಟ್ರೋ ಮಹಾಬಲಃ |
ಗಂಧರ್ವೈರ್ಹ್ರಿಯತೇ ರಾಜಾ ಪಾರ್ಥಾಸ್ತಮನುಧಾವತ ॥11॥
ಪ್ರಿಯದರ್ಶಿ ಅಮಾತ್ಯರು ಮಹಾಬಾಹುವೂ, ಮಹಾಬಲನೂ ಆದ ದುರ್ಯೋಧನ ರಾಜನು ಗಂಧರ್ವರಿಂದ ಅಪಹರಿಸಲ್ಪಡುತ್ತಿದ್ದಾನೆ. ಪಾಂಡವರೇ, ಅವನನ್ನು ಹಿಂಬಾಲಿಸಿ.
ದುಃಶಾಸನೋ ದುರ್ವಿಷಹೋ ದುರ್ಮುಖೋ ದುರ್ಜಯಸ್ತಥಾ |
ಬದ್ಧ್ವಾ ಹ್ರಿಯಂತೇ ಗಂಧರ್ವೈ ರಾಜದಾರಾಶ್ಚ ಸರ್ವಶಃ ॥12॥
ದುಃಶಾಸನ, ದುರ್ವಿಷಹ, ದುರ್ಮುಖ, ದುರ್ಜಯ ಮತ್ತು ಎಲ್ಲಾ ರಾಜಪತ್ನಿಯರು ಇವರನ್ನು ಗಂಧರ್ವರು ಬಂಧಿಸಿ ಅಪಹರಣ ಮಾಡುತ್ತಿದ್ದಾರೆ.
ವೈಶಂಪಾಯನಃ
ಇತಿ ದುರ್ಯೋಧನಾಮಾತ್ಯಾಃ ಕ್ರೋಶಂತೋ ರಾಜಗೃದ್ಧಿನಃ |
ಆರ್ತಾ ದೀನಾಸ್ತತಃ ಸರ್ವೇ ಯುಧಿಷ್ಠಿರಮುಪಾಗಮನ್ ॥13॥
ವೈಶಂಪಾಯನ ಹೀಗೆ ರಾಜನ ಹಿತವನ್ನು ಬಯಸುವ ದುರ್ಯೋಧನನ ಅಮಾತ್ಯರೆಲ್ಲರೂ ಆರ್ತರಾಗಿ, ದೀನರಾಗಿ ಕಿರುಚಿಕೊಳ್ಳುತ್ತಾ ಯುಧಿಷ್ಠಿರನ ಸಮೀಪಕ್ಕೆ ಬಂದರು.
ತಾಂಸ್ತಥಾ ವ್ಯಥಿತಾನ್ ದೀನಾನ್ ಭಿಕ್ಷಮಾಣಾನ್ ಯುಧಿಷ್ಠಿರಮ್ |
ವೃದ್ಧಾನ್ ದುರ್ಯೋಧನಾಮಾತ್ಯಾನ್ ಭೀಮಸೇನೋಽಭ್ಯಭಾಷತ ॥
ವ್ಯಥಿತರೂ, ದೀನರೂ, ಯುಧಿಷ್ಠಿರನನ್ನು ಬೇಡುವವರೂ, ವೃದ್ಧರೂ ಆದ ಆ ದುರ್ಯೋಧನನ ಅಮಾತ್ಯರನ್ನು ಕುರಿತು ಭೀಮಸೇನನು ಮಾತನಾಡಿದನು.
ಅನ್ಯಥಾ ವರ್ತಮಾನಾನಾಮರ್ಥೋ ಜಾತೋಽಯಮನ್ಯಥಾ |
ಅಸ್ಮಾಭಿರ್ಯದನುಷ್ಠೇಯಂ ಗಂಧರ್ವೈಸ್ತದನುಷ್ಠಿತಮ್ ॥15॥
ಬೇರೆ ರೀತಿಯಲ್ಲಿ ಯೋಚನೆ ಮಾಡಿದುದು ಅದಕ್ಕಿಂತ ಬೇರೆ ರೀತಿಯಲ್ಲಿಯೇ ಪರ್ಯವಸಾನವನ್ನು ಹೊಂದಿತು. ನಾವು ಮಾಡಬೇಕಾಗಿದ್ದ ಕಾರ್ಯವನ್ನು ಗಂಧರ್ವರು ಮಾಡಿದ್ದಾರೆ.
ದುರ್ಮಂತ್ರಿತಮಿದಂ ತಾವದ್ ರಾಜ್ಞೋ ದುರ್ದ್ಯೂತದೇವಿನಃ |
ದೀನಾನ್ ದುರ್ಯೋಧನಸ್ಯಾಸ್ಮಾನ್ ದ್ರಷ್ಟುಕಾಮಸ್ಯ ದುರ್ಮತೇಃ ॥16॥
ಇದು ದೀನರಾದ ನಮ್ಮನ್ನು ನೋಡಲು ಬಯಸಿದ ದುರ್ಮತಿಯಾದ ದುರ್ದ್ಯೂತವನ್ನು ಆಡುವ ದುರ್ಯೋಧನನ ದುರಾಲೋಚನೆಯಾಗಿದೆ.
ದ್ವೇಷ್ಟಾರಮನ್ಯೇ ಕ್ಲೀಬಸ್ಯ ಪಾತಯಂತೀತಿ ನಃ ಶ್ರುತಮ್ |
ಇದಂ ಕೃತಂ ನಃ ಪ್ರತ್ಯಕ್ಷಂ ತದೇತದತಿಮಾನುಷಮ್ ॥17॥
ದ್ವೇಷಮಾಡುವ ಹೇಡಿಯನ್ನು ಇನ್ನೊಬ್ಬರು ಬೀಳಿಸುತ್ತಾರೆ ಎಂದು ನಾವು ಕೇಳಿದ್ದೇವೆ. ಆದ್ದರಿಂದ ಮನುಷ್ಯರನ್ನು ಮೀರಿದ ಈ ಘಟನೆಯು ನಮಗೆ ಈ ದಿನ ಪ್ರತ್ಯಕ್ಷವಾಯಿತು.
ದಿಷ್ಟ್ಯಾ ಲೋಕೇ ಪುಮಾನಸ್ತಿ ಕಶ್ಚಿದಸ್ಮತ್ಪ್ರಿಯೇ ಸ್ಥಿತಃ |
ಯೇನಾಸ್ಮಾಕಂ ಹೃತೋ ಭಾರ ಆಸೀನಾನಾಂ ಸುಖಾವಹಃ ॥18॥
ದೇವರ ದಯೆಯಿಂದ ಈ ಪ್ರಪಂಚದಲ್ಲಿ ನಮ್ಮ ಹಿತವನ್ನು ಬಯಸುವ ಯಾವನೋ ಒಬ್ಬನಿದ್ದಾನೆ. ನಾವು ಕುಳಿತಿದ್ದರೂ ಸಹ ಅವನು ನಮ್ಮ ಭಾರವನ್ನು ಇಳಿಸಿ ನಮಗೆ ಸುಖವನ್ನು ತಂದುಕೊಟ್ಟಿದ್ದಾನೆ.
ಶೀತವಾತಾತಪಸಹಾಂಸ್ತಪಸಾ ಚೈವ ಕರ್ಶಿತಾನ್ |
ಸಮಸ್ಥೋ ವಿಷಮಾಸ್ಥಾನ್ ಹಿ ದ್ರಷ್ಟುಮಿಚ್ಛತಿ ದುರ್ಮತಿಃ ॥19॥
ಸಮೃದ್ಧಿಯಲ್ಲಿರುವ ದುರ್ಮತಿಯಾದ ದುರ್ಯೋಧನನು ಶೀತ, ವಾತ, ಬಿಸಿಲುಗಳನ್ನು ಸಹಿಸಿ ತಪಸ್ಸಿನಿಂದ ಕರ್ಶಿತರಾಗಿ ಸಂಕಟದಲ್ಲಿರುವ ನಮ್ಮನ್ನು ನೋಡಲು ಬಯಸುತ್ತಾನೆ.
ಅಧರ್ಮಚಾರಿಣಸ್ತಸ್ಯ ಕೌರವ್ಯಸ್ಯ ದುರಾತ್ಮನಃ |
ಯೇ ಶೀಲಮನುವರ್ತಂತೇ ತೇ ಪಶ್ಯಂತಿ ಪರಾಭವಮ್ ॥20॥
ಅಧರ್ಮವನ್ನು ಆಚರಿಸುವ ದುರಾತ್ಮನಾದ ಆ ಕೌರವನ ಗುಣವನ್ನು ಯಾರು ಅನುಸರಿಸುತ್ತಾರೆಯೋ ಅವರು ಹೀಗೆ ಪರಾಭವಕ್ಕೆ ಸಿಲುಕುತ್ತಾರೆ.
ಅಧರ್ಮೋ ಹಿ ಕೃತಸ್ತೇನ ಯೇನೈತದುಪಲಕ್ಷಿತಮ್ |
ಅನೃಶಾಸಾಂಸ್ತು ಕೌಂತೇಯಾಸ್ತತ್ಪ್ರತ್ಯಕ್ಷಂ ಬ್ರವೀಮಿ ವಃ ॥21॥

ಯಾವ ದುರ್ಯೋಧನನು ಇದನ್ನು ಯೋಜನೆ ಮಾಡಿದನೋ ಅವನು ಅಧರ್ಮವನ್ನು ಮಾಡಿದ್ದಾನೆ. ಕೌಂತೇಯರು ಅಧರ್ಮವನ್ನು ಮಾಡುವವರಲ್ಲ. ದಯಾಪರರು. ಇದನ್ನು ಅವನ ಸೈನ್ಯದ ಅಧಿಪತಿಗಳಾದ ಅಮಾತ್ಯರಾದ ನಿಮಗೆ ಹೇಳುತ್ತಿದ್ದೇನೆ.
ಏವಂ ಬ್ರುವಾಣಂ ಕೌಂತೇಯಂ ಭೀಮಸೇನಮಪಸ್ವರಮ್ |
ನ ಕಾಲಃ ಪರುಷಸ್ಯಾಯಮಿತಿ ರಾಜಾಭ್ಯಭಾಷತ ॥22॥
ಭೀಮಸೇನನು ಹೀಗೆ ಅಪಸ್ವರದಿಂದ ಮಾತನಾಡುತ್ತಿರಲು ಧರ್ಮರಾಜನು ಅವನನ್ನು ಕುರಿತು ಇದು ಇಂತಹ ಒರಟುತನಕ್ಕೆ ಕಾಲವಲ್ಲ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ಏಕತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ಇತಿ ಘೋಷಯಾತ್ರಾಪರ್ವಣಿ ದುರ್ಯೋಧನಾದಿಹರಣಂ ನಾಮ ಸಪ್ತಮೋಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತೆರಡನೆಯ ಅಧ್ಯಾಯ
ಭೀಮಸೇನನಿಂದ ದುರ್ಯೋಧನಾದಿಗಳ ವಿಮೋಚನೆಗೆ ಧರ್ಮರಾಜನ ಅತಿಶಯದ ಒತ್ತಾಯ. ಅರ್ಜುನನ ಅಂಗೀಕಾರ ಮತ್ತು ಪ್ರತಿಜ್ಞೆ.
ಯುಧಿಷ್ಠಿರಃ
ಅಸ್ಮಾನಭಿಗತಾಂಸ್ತಾತ ಭಯಾರ್ತಾಂಛರಣೈಷಿಣಃ |
ಕೌರವಾನ್ ವಿಷಮಪ್ರಾಪ್ತಾನ್ ಕಥಂ ಬ್ರೂಯಾಸ್ತ್ವಮೀದೃಶಮ್ ॥1॥
ರಕ್ಷಣೀಯಾ ಮಹಾಬಾಹೋ ಮೈವಂ ವದ ಮಹಾಮತೇ |
ಯುಧಿಷ್ಠಿರ ಪ್ರೀತಿಪಾತ್ರನಾದ ಭೀಮಸೇನನೇ, ಭಯಾರ್ತರಾಗಿ ಸಂಕಟಕ್ಕೆ ಸಿಲುಕಿ ರಕ್ಷಣೆಯನ್ನು ಅಪೇಕ್ಷಿಸಿ ನಮ್ಮ ಬಳಿಗೆ ಬಂದ ಕೌರವರನ್ನು ಕುರಿತು ನೀನು ಹೇಗೆ ಇಂತಹ ಮಾತುಗಳನ್ನು ಆಡುತಿತೇಯೆ? ಮಹಾಮತಿಯೇ, ಮಹಾಬಾಹುವೇ, ಅವರು ನಮ್ಮಿಂದ ರಕ್ಷಿಸಲ್ಪಡಬೇಕಾದವರು. ಹೀಗೆ ಮಾತನಾಡಬೇಡ.
ಭವಂತಿ ಭೇದಾ ಜ್ಞಾತೀನಾಂ ಕಲಹಾಶ್ಚ ವೃಕೋದರ |
ಪ್ರಸಕ್ತಾನಿ ಚ ವೈರಾಣಿ ಕುಲಧರ್ಮೋ ನ ನಶ್ಯತಿ ॥2॥
ವೃಕೋದರನೇ, ದಾಯಾದಿಗಳಲ್ಲಿ ವಿರೋಧವೂ, ಕಲಹಗಳೂ ಮತ್ತು ವೈರಗಳೂ ಉಂಟಾಗುತ್ತವೆ. ಆದರೆ ಕುಲಧರ್ಮವು ನಾಶವನ್ನು ಹೊಂದುವುದಿಲ್ಲ.
ಯದಾ ತು ಕಶ್ಚಿಜ್ಜ್ಞಾತೀನಾಂ ಬಾಹ್ಯಃ ಪ್ರೋಥಯತೇ ಕುಲಮ್ |
ನ ಮರ್ಷಯಂತಿ ತತ್ ಸಂತೋ ಬಾಹ್ಯೇನಾಭಿಪ್ರಧರ್ಷಣಮ್ ॥3॥
ದಾಯಾದಿಗಳಿಂದ ಹೊರಗಿನವನು ಯಾವಾಗ ಕುಲವನ್ನು ಘಾಸಿಗೊಳಿಸುತ್ತಾನೆಯೋ ಆಗ ಬಾಹ್ಯಪುರುಷನಿಂದ ಆಗುವ ಈ ಅವಮಾನವನ್ನು ಸಜ್ಜನರು ಸಹಿಸುವುದಿಲ್ಲ.
ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಮ್ |
ಪರಸ್ಪರವಿರೋಧೇ ತು ವಯಂ ಪಂಚ ಶತಂ ತು ತೇ ॥3.1॥
ಇನ್ನೊಬ್ಬರಿಂದ ಪರಿಭವವುಂಟಾಗುವುದಾದರೆ ನಾವು ನೂರೈದು ಜನ. ನಮ್ಮಲ್ಲಿಯೇ ವಿರೋಧವುಂಟಾಗುವುದಿದ್ದರೆ ಮಾತ್ರ ನಾವು ಐವರು ಮತ್ತು ಅವರು ನೂರುಜನ.
ಜಾನಾತ್ಯೇಷ ಹಿ ದುರ್ಬುದ್ಧಿರಸ್ಮಾನಿಹ ಚಿರೋಷಿತಾನ್ |
ಸ ಏವಂ ಪರಿಭೂಯಾಸ್ಮಾನಕಾರ್ಷೀದಿದಮಪ್ರಿಯಮ್ ॥4॥
ದುರ್ಬುದ್ಧಿಯುಳ್ಳ ಈ ದುರ್ಯೋಧನನು ನಾವು ಇಲ್ಲಿ ಬಹಳ ಸಮಯದಿಂದ ವಾಸಿಸುತ್ತಿದ್ದೇವೆಂದು ತಿಳಿದಿದ್ದಾನೆ. ಅವನು ಹೀಗೆ ನಮ್ಮನ್ನು ಅವಮಾನಗೊಳಿಸಿ ಅಪ್ರಿಯವನ್ನು ಮಾಡಿದ್ದಾನೆ.
ದುರ್ಯೋಧನಸ್ಯ ಗ್ರಹಣಾದ್ ಗಂಧರ್ವೇಣ ಬಲಾತ್ಪ್ರಭೋ |
ಸ್ತ್ರೀಣಾಂ ಬಾಹ್ಯಾಭಿಮರ್ಶಾದ್ಧಿ ಹತಂ ಭವತಿ ನಃ ಕುಲಮ್ ॥5॥
ಎಲೈ ಪ್ರಭುವೇ, ಗಂಧರ್ವರು ದುರ್ಯೋಧನನನ್ನು ಸೆರೆಹಿಡಿಯುವುದರಿಂದ ಮತ್ತು ಸ್ತ್ರೀಯರ ಮೇಲೆ ಕೈಮಾಡುವುದರಿಂದ ನಮ್ಮ ಕುಲವು ನಾಶವನ್ನು ಹೊಂದುತ್ತದೆ.
ಶರಣಂ ಚ ಪ್ರಪನ್ನಾನಾಂ ತ್ರಾಣಾರ್ಥಂ ಚ ಕುಲಸ್ಯ ಚ |
ಉತ್ತಿಷ್ಠಧ್ವಂ(ತ) ನರವ್ಯಾಘ್ರಾಃ ಸಜ್ಜೀಭವತ ಮಾಚಿರಮ್ ॥6॥
ಎಲೈ ನರವ್ಯಾಘ್ರರೇ, ಶರಣಾಗತರ ರಕ್ಷಣೆಗೋಸ್ಕರ ಮತ್ತು ಕುಲದ ರಕ್ಷಣೆಗೋಸ್ಕರ ಎದ್ದು ಶೀಘ್ರವಾಗಿ ಸನ್ನದ್ಧರಾಗಿ.
ಅರ್ಜುನಶ್ಚ ಯಮೌ ಚೈವ ತ್ವಂ ಚ ವೀರಾಪರಾಜಿತಃ |
ಮೋಕ್ಷಯಧ್ವಂ ನರವ್ಯಾಘ್ರಾ ಹ್ರಿಯಮಾಣಂ ಸುಯೋಧನಮ್ ॥7॥
ಎಲೈ ವೀರನೇ, ನರವ್ಯಾಘ್ರರಾದ ಅರ್ಜುನ, ನಕುಲ-ಸಹದೇವರು ಮತ್ತು ಅಪರಾಜಿತನಾದ ನೀನು ಗಂಧರ್ವರು ಎಳೆದುಕೊಂಡುಹೋಗುತ್ತಿರುವ ಸುಯೋಧನನನ್ನು ಬಿಡಿಸಿ.
ಏತೇ ರಥಾ ನರವ್ಯಾಘ್ರಾಃ ಸರ್ವಶಸ್ತ್ರಸಮನ್ವಿತಾಃ |

ಇಂದ್ರುಸೇನಾದಿಭಿಃ ಸೂತೈಃ ಕೃತಶಸ್ತ್ರೈರಧಿಷ್ಠಿತಾನ್ ॥8॥
ಏತಾನಾಸ್ಥಾಯ ವೈ ಯತ್ತಾ ಗಂಧರ್ವಾನ್ ಯೋದ್ಧುಮಾಹವೇ |
ಸುಯೋಧನಸ್ಯ ಮೋಕ್ಷಾಯ ಪ್ರಯತಧ್ವಮತಂದ್ರಿತಾಃ ॥9॥
ನರವ್ಯಾಘ್ರರೇ, ಈ ರಥಗಳು ಇಂದ್ರಸೇನ ಮೊದಲಾದ ಸೂತರಿಂದ ಎಲ್ಲ ಶಸತ್ರಸ್ತ್ರಗಳಿಂದ ತುಂಬಲ್ಪಟ್ಟಿವೆ. ನೀವು ಈ ರಥಗಳನ್ನು ಏರಿ ಆಲಸ್ಯವಿಲ್ಲದೇ ಜಾಗರೂಕತೆಯಿಂದ ಯುದ್ಧವನ್ನು ಮಾಡಿ ಸುಯೋಧನನನ್ನು ಬಿಡಿಸುವ ಪ್ರಯತ್ನವನ್ನು ಮಾಡಿ.
ಯ ಏವ ಕಶ್ಚಿತ್ ರಾಜನ್ಯಃ ಶರಣಾರ್ಥಮಿಹಾಗತಮ್ |
ಪರಂ ಶಕ್ತ್ಯಾಽಭಿರಕ್ಷೇತ ಕಿಂ ಪುನಸ್ತ್ವಂ ವೃಕೋದರ ॥10॥
ಎಲೈ ವೃಕೋದರನೇ, ಯಾವುದೇ ಒಬ್ಬ ರಾಜನು ತನ್ನ ಬಳಿ ಶರಣಾಗತಿಯಾಗಿ ಬಂದವನನ್ನು ತನ್ನ ಶಕ್ತಿಯನ್ನು ಮೀರಿ ರಕ್ಷಿಸುತ್ತಾನೆ. ಹೀಗಿರುವಾಗ ನೀನು ಹೇಗೆ ರಕ್ಷಿಸುವುದಿಲ್ಲ?
ವೈಶಂಪಾಯನಃ
ಏವಮುಕ್ತಸ್ತು ಕೌಂತೇಯಃ ಪುನರ್ವಾಕ್ಯಮಭಾಷತ |
ಕೋಪಸಂರಕ್ತನಯನಃ ಪೂರ್ವವೈರಮನುಸ್ಮರನ್ ॥11॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಕುಂತೀಪುತ್ರನಾದ ಭೀಮಸೇನನು ಹಿಂದಿನ ವೈರವನ್ನು ಸ್ಮರಿಸುತ್ತಾ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಪುನಃ ಮಾತನಾಡಿದನು.
ಪುರಾ ಜತುಗೃಹೇಽನೇನ ದಗ್ಧುಮಸ್ಮಾನ್ ಯುಧಿಷ್ಠಿರ |
ದುರ್ಬುದ್ಧಿರ್ಹಿ ಕೃತಾ ವೀರ ತದಾ ದೈವೇನ ರಕ್ಷಿತಾಃ ॥12॥
ಯುಧಿಷ್ಠಿರನೇ, ಇವನು ಹಿಂದೆ ನಮ್ಮನ್ನು ಅರಗಿನ ಮನೆಯಲ್ಲಿ ಸುಡುವ ದುರ್ಬುದ್ಧಿಯನ್ನು ಮಾಡಿದನು. ಎಲೈ ವೀರನೇ, ನಾವು ಆಗ ದೈವದಿಂದ ರಕ್ಷಿಸಲ್ಪಟ್ಟೆವು.
ಕಾಲಕೂಟಂ ವಿಷಂ ತೀಕ್ಷ್ಣಂ ಭೋಜನೇ ಮಮ ಭಾರತ |
ಉಪಾಶತ್ವ ಗಂಗಾಂ ಲತಾಪಾಶೈರ್ಬದ್ಧ್ವಾ ಚ ಪ್ರಾಕ್ಷಿಪತ್ ಪ್ರಭೋ ॥13॥
ಭಾರತನೇ, ಎಲೈ ಪ್ರಭುವೇ, ನನ್ನ ಭೋಜನದಲ್ಲಿ ತೀಕ್ಷ್ಣವಾದ ಕಾಲಕೂಟವಿಷವನ್ನು ಬೆರೆಸಿ ನನ್ನನ್ನು ಲತಾಪಾಶಗಳಿಂದ ಕಟ್ಟಿ ಗಂಗೆಯಲ್ಲಿ ಹಾಕಿದನು.
ರಸಾತಳೇ ಚ ಸಂಪ್ರಾಪ್ಯ ತದಾ ವಾಸುಕಿಮಂಜಸಾ |
ತತ್ರ ದೃಷ್ಟ್ವಾ ತು ರಾಜೇಂದ್ರ ಪುನಃ ಪ್ರಾಪ್ತೋ ಮಹೀತಳಮ್ ॥
ರಾಜೇಂದ್ರನೇ, ನಾನು ಆಗ ರಸಾತಳಕ್ಕೆ ಹೋಗಿ ಅಲ್ಲಿ ವಾಸುಕಿಯನ್ನು ನೋಡಿ ಪುನಃ ಭೂಮಿಗೆ ಬಂದೆನು.
ದ್ಯೂತಕಾಲೇಽಪಿ ಕೌಂತೇಯ ವೃಜಿನಾನಿ ಕೃತಾನಿ ವೈ |
ದ್ರೌಪದ್ಯಾಶ್ಚ ಪರಾಮರ್ಶಃ ಕೇಶಗ್ರಹಣಮೇವ ಚ |
ವಸಶತ್ರಪಹರಣಂ ಚೈವ ಸಭಾಮಧ್ಯೇ ಕೃತಾನಿ ವೈ ॥14॥
ಕೌಂತೇಯನೇ, ದ್ಯೂತಕಾಲದಲ್ಲಿಯೂ ಅನೇಕ ಅಪಚಾರಗಳನ್ನು ಮಾಡಿದನು. ದ್ರೌಪದಿಯನ್ನು ಸ್ಪರ್ಶಿಸಿ ಅವಳ ತಲೆಗೂದಲನ್ನು ಪೀಡಿಸಿದನು. ಸಭೆಯ ಮಧ್ಯದಲ್ಲಿ ವಸಶತ್ರಪಹರಣವನ್ನೂ ಮಾಡಿಸಿದನು.
ಪುರಾ ಕೃತಾನಾಂ ಪಾಪಾನಾಂ ಪಲಂ ಭುಂಕ್ತೇ ಸುಯೋಧನಃ ॥15॥
ಅಸ್ಮಾಭಿರೇವ ಕರ್ತವ್ಯೋ ಧಾರ್ತರಾಷ್ಟ್ರಸ್ಯ ನಿಗ್ರಹಃ |
ಅನ್ಯೇನ ತು ಕೃತಂ ತದ್ವೈ(ಚ್ಚ) ಮೈತ್ರ್ಯಮಸ್ಮಾಭಿರಿಚ್ಛತಾ |
ಉಪಕಾರೀ ತು ಗಂಧರ್ವೋ ಮಾ ರಾಜನ್ ವಿಮನಾ ಭವ ॥16॥
ಸುಯೋಧನನನು ಹಿಂದೆ ಮಾಡಿದ ಪಾಪಗಳ ಫಲಗಳನ್ನು ಅನುಭವಿಸುತ್ತಿದ್ದಾನೆ. ನಾವೇ ಅವನ ನಿಗ್ರಹವನ್ನು ಮಾಡಬೇಕಾಗಿದ್ದಿತು. ಆದರೆ ನಮ್ಮ ಮೈತ್ರವನ್ನು ಬಯಸುವ ಇನ್ನೊಬ್ಬನು ಆ ಕಾರ್ಯವನ್ನು ಮಾಡಿದ್ದಾನೆ. ಗಂಧರ್ವನು ನಮಗೆ ಉಪಕಾರವನ್ನೇ ಮಾಡಿದ್ದಾನೆ. ರಾಜನೇ ಬೇಸರಪಡಬೇಡ.
ವೈಶಂಪಾಯನಃ
ಏತಸ್ಮಿನ್ನಂತರೇ ರಾಜಂಶ್ಚಿತ್ರಸೇನೇನ ವೈ ಹೃತಃ |
ವಿಲಲಾಪ ಸುದುಃಖಾರ್ತೋ ಹ್ರಿಯಮಾಣಃ ಸುಯೋಧನಃ ॥17॥
ವೈಶಂಪಾಯನ ರಾಜನೇ, ಈ ಸಮಯದಲ್ಲಿ ಚಿತ್ರಸೇನನಿಂದ ಪ್ರಹಾರಕ್ಕೆ ಒಳಗಾದ ಎಳೆದೊಯ್ಯಲ್ಪಡುತ್ತಿದ್ದ ಸುಯೋಧನನು ದುಃಖದಿಂದ ಬಹಳ ಆರ್ತನಾಗಿ ವಿಲಾಪವನ್ನು ಮಾಡಿದನು.
ದುರ್ಯೋಧನಃ
ಯುಧಿಷ್ಠಿರ ಮಹಾಬಾಹೋ ಸರ್ವಧರ್ಮಭೃತಾಂ ವರ |
ಸರ್ವಧರ್ಮಭೃತಾಂ ಶ್ರೇಷ್ಠ ಗಂಧರ್ವೇಣ ಹೃತಂ ಬಲಾತ್ ॥18॥
ರಕ್ಷಸ್ವ ಪುರುಷವ್ಯಾಘ್ರ ಯುಧಿಷ್ಠಿರ ಮಹಾಯಶಃ ॥19॥
ದುರ್ಯೋಧನ ಮಹಾಬಾಹುವಾದ ಸರ್ವಧರ್ಮಿಷ್ಠರಲ್ಲಿ ಶ್ರೇಷ್ಠನಾದ, ಮಹಾಕೀರ್ತಿಶಾಲಿಯಾದ, ಪುರುಷವ್ಯಾಘ್ರನಾದ ಯುಧಿಷ್ಠಿರನೇ, ಗಂಧರ್ವನಿಂದ ಬಲವನ್ನು ಆಶ್ರಯಿಸಿ ಎಳೆದೊಯ್ಯಲ್ಪಡುತಿತರುವ ನನ್ನನ್ನು ರಕ್ಷಿಸು.
ಭ್ರಾತರಂ ತೇ ಮಹಾಬಾಹೋ ಬದ್ಧ್ವಾ ನಯತಿ ಮಾಮಯಮ್ |
ದುಃಶಾಸನಂ ದುರ್ವಿಷಹಂ ದುರ್ಮುಖಂ ದುರ್ಜಯಂ ತಥಾ ॥20॥

ಮಹಾಬಾಹುವೇ, ನಿನ್ನ ತಮ್ಮನಾದ ನನ್ನನ್ನು ಈ ಗಂಧರ್ವನು ಬಂಧಿಸಿ ಕರೆದುಕೊಂಡು ಹೋಗುತಿತದ್ದಾನೆ. ದುಃಶಾಸನ, ದುರ್ವಿಷಹ, ದುರ್ಮುಖ, ದುರ್ಜಯರನ್ನೂ ಕೊಂಡೊಯ್ಯುತ್ತಿದ್ದಾನೆ.
ಬದ್ಧ್ವಾ ಹರಂತಿ ಗಂಧರ್ವಾ ಅಸ್ಮದ್ದಾರಾಂಶ್ಚ ಸರ್ವಶಃ |
ಅನುಧಾವತ ಮಾಂ ಕ್ಷಿಪ್ರಂ ರಕ್ಷಧ್ವಂ ಪುರುಷೋತ್ತಮಾಃ |
ವೃಕೋದರ ಮಹಾಬಾಹೋ ಧನಂಜಯ ಮಹಾಯಶಃ ॥21॥
ಗಂಧರ್ವರು ನಮ್ಮ ಪತ್ನಿಯರೆಲ್ಲರನ್ನೂ ಬಂಧಿಸಿ ಕರೆದೊಯ್ಯುತ್ತಿದ್ದಾರೆ. ಮಹಾಬಾಹುವಾದ ವೃಕೋದರನೇ, ಮಹಾಕೀರ್ತಿಶಾಲಿಯಾದ ಧನಂಜಯನೇ, ಪುರುಷೋತ್ತಮರಾದ ನೀವು ನನ್ನ ಬಳಿಗೆ ಓಡಿಬಂದು ಬೇಗ ನನ್ನನ್ನು ರಕ್ಷಿಸಿ.
ಯವೌ ಮಾಮನುಧಾವೇತಾಂ ರಕ್ಷಾರ್ಥಂ ಮಮ ಸಾಯುಧೌ |
ಕುರುವಂಶಸ್ಯ ಸು ಮಹದಯಶಃ ಪ್ರಾಪ್ತಮೀದೃಶಮ್ ॥22॥
ವ್ಯಪೋಹಯಧ್ವಂ ಗಂಧರ್ವಾನ್ ಜಿತ್ವಾ ವೀರ್ಯೇಣ ಪಾಂಡವಾಃ ॥
ನಕುಲ-ಸಹದೇವರೇ, ನನ್ನನ್ನು ರಕ್ಷಿಸಲು ಆಯುಧವನ್ನು ಹಿಡಿದು ಓಡಿಬನ್ನಿ. ಕುರುವಂಶಕ್ಕೆ ಇಂತಹ ದೊಡ್ಡ ಅಪಕೀರ್ತಿಯು ಪ್ರಾಪ್ತವಾಗಿದೆ. ಎಲೈ ಪಾಂಡವರೇ, ನಿಮ್ಮ ಪರಾಕ್ರಮದಿಂದ ಗಂಧರ್ವರನ್ನು ಗೆದ್ದು ಈ ಅಪಕೀರ್ತಿಯನ್ನು ದೂರಮಾಡಿ.
ವೈಶಂಪಾಯನಃ
ಏವಂ ವಿಲಪಮಾನಸ್ಯ ಕೌರವಸ್ಯಾರ್ತಯಾ ಗಿರಾ |
ಶ್ರುತ್ವಾ ವಿಲಾಪಂ ಸಂಭ್ರಾಂತೋ ಘೃಣಯಾಽಭಿಪರಿಪ್ಲುತಃ |
ಯುಧಿಷ್ಠಿರಃ ಪುನರ್ವಾಕ್ಯಂ ಭೀಮಸೇನಮಥಾಬ್ರವೀತ್ ॥24॥
ವೈಶಂಪಾಯನ ಹೀಗೆ ಆರ್ತಸ್ವರದಿಂದ ವಿಲಾಪಮಾಡುತ್ತಿದ್ದ ದುರ್ಯೋಧನನ ವಿಲಾಪವನ್ನು ಕೇಳಿ ಸಂಭ್ರಾಂತನಾದ ಯುಧಿಷ್ಠಿರನು ಕರುಣೆಯಿಂದ ಪೂರಿತನಾಗಿ ಭೀಮಸೇನನನ್ನು ಕುರಿತು ಪುನಃ ಮಾತನಾಡಿದನು.
ಯುಧಿಷ್ಠಿರಃ
ಸುಯೋಧನಸ್ಯ ಮೋಕ್ಷಾಯ ಪ್ರಯತಧ್ವಮತಂದ್ರಿತಾಃ ॥25॥
ಯ ಏವ ಕಶ್ಚಿದ್ರಾಜನ್ಯಃ ಶರಣಾರ್ಥಮಿಹಾಗತಮ್ |
ಪರಂ ಶಕ್ತ್ಯಾಽಭಿರಕ್ಷೇತ ಕಿಂ ಪುನಸ್ತ್ವಂ ವೃಕೋದರಃ ॥26॥
ಯುಧಿಷ್ಠಿರ ಸುಯೋಧನನ ಮೋಚನೆಗಾಗಿ ಆಲಸ್ಯವಿಲ್ಲದೇ ಪ್ರಯತ್ನವನ್ನು ಮಾಡಿ. ಯಾವ ರಾಜನಾದರೂ ಸಹ ಶರಣಾಗತರಾದವರನ್ನು ತನ್ನ ಶಕ್ತಿಯನ್ನು ಮೀರಿ ರಕ್ಷಿಸುತ್ತಾನೆ. ಹೀಗಿರುವಾಗ ವೃಕೋದರನೇ, ನೀನು ರಕ್ಷಿಸಬೇಕಾದ ವಿಷಯದಲ್ಲಿ ಹೇಳುವುದೇನು?
ಕ ವಹೇಯೋರ್ ಇಹಾತ್ ಪ್ರಾಣಾನಭಿಧಾವೇತಿ ಚೋದಿತಃ |
ಪ್ರಾಂಜಲಿಂ ಶರಣಾಪನ್ನಂ ದೃಷ್ಟ್ವಾ ಶತ್ರುಮಪಿ ಧ್ರುವಮ್ ॥27॥
ಕೈಗಳನ್ನು ಮುಗಿದು ಶರಣಾಗತನಾಗಿ ನನ್ನ ರಕ್ಷಣೆಗೆ ಓಡಿ ಬನ್ನಿ ಎಂದು ಕರೆಯುವ ಮನುಷ್ಯನು ಅವನು ಶತ್ರುವಾದರೂ ಸಹ ಆರ್ಯಸ್ವಭಾವವನ್ನು ಧರಿಸಿದ ಯಾವನು ಅವನ ರಕ್ಷಣೆಗೆ ಹೋಗದೆ ಜೀವಂತನಾಗಿರುತ್ತಾನೆ?
ವರಪ್ರದಾನಂ ರಾಜ್ಯಂ ಚ ಪುತ್ರಜನ್ಮ ಚ ಪಾಂಡವ |
ಶತ್ರೋಶ್ಚ ಮೋಕ್ಷಣಂ ಕ್ಲೇಶಾತ್ ತ್ರೀಣಿ ಚೈಕಂ ಚ ತತ್ಸಮಮ್ ॥28॥
ಅಭೀಷ್ಟವಾದ ವರಪ್ರದಾನ, ಶತ್ರುಗಳನ್ನು ಸೋಲಿಸಿ ರಾಜ್ಯಸಂಪಾದನೆ, ಪುತ್ರಕಾಮೇಷ್ಟಿಯಾದಿಗಳಿಂದ ಪುತ್ರಸಂಪಾದನೆ ಇವು ಮೂರು ರಾಜನಿಗೆ ಅಪೇಕ್ಷಿತವಾದುದು. ಎಲೈ ಪಾಂಡವನೇ, ಶರಣಾಗತನಾದವನನ್ನು ಶತ್ರುವಿನಿಂದ ಮೋಚನೆ ಮಾಡುವುದು ಈ ಮೂರಕ್ಕೂ ಸಮನಾದುದು.
ಕಿಮಭ್ಯಧಿಕಮೇತಸ್ಮಾದ್ ಯದಾಪನ್ನಃ ಸುಯೋಧನಃ |
ತ್ವದ್ಬಾಹುಬಲಮಾಶ್ರಿತ್ಯ ಜೀವಿತಂ ಪರಿಮಾರ್ಗತೇ ॥29॥
ಆಪತ್ತಿಗೊಳಗಾದ ಸುಯೋಧನನು ನಿನ್ನ ಬಾಹುಬಲವನ್ನು ಆಶ್ರಯಿಸಿ ಬದುಕಲು ಅಪೇಕ್ಷಿಸುತ್ತಾನೆ. ಇದಕ್ಕಿಂತ ದೊಡ್ಡ ಲಾಭವು ಏನಿದೆ?
ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಮ್ |
ಸ್ವಯಮೇವ ಪ್ರಧಾವೇಯಂ ಯದಿ ನ ಸ್ಯಾದ್ ವೃಕೋದರ |
ವಿತತೋ ಮೇ ಕ್ರತುರ್ವೀರ ನ ಹಿ ಮೇಽತ್ರ ವಿಚಾರಣಾ ॥30॥
ಇನ್ನೊಬ್ಬರಿಂದ ಪರಿಭವವುಂಟಾದರೆ ನಾವು ನೂರೈದು ಮಂದಿ. ಎಲೈ ವೃಕೋದರನೇ, ವೀರನೇ, ನಾನು ಈ ಯಜ್ಞವನ್ನು ಹಬ್ಬಿಸಿಕೊಳ್ಳದಿದ್ದರೆ ನಾನಾಗಿಯೇ ಓಡಿಹೋಗುತ್ತಿದ್ದೆ. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.
ಸಾಮ್ನೈವ ತು ಯಥಾ ಭೀಮ ಮೋಕ್ಷಯೇಥಾಃ ಸುಯೋಧನಮ್ |
ತಥಾ ಸರ್ವೈರುಪಾಯೈಸ್ತ್ವಂ ಯತೇಥಾಃ ಕುರುನಂದನ ॥31॥
ಎಲೈ ಕುರುನಂದನನಾದ ಭೀಮನೇ, ಸಾಮೋಪಾಯದಿಂದಲೇ ನೀನು ಸುಯೋಧನನನ್ನು ಬಿಡಿಸು. (ಅದು ಆಗದಿದ್ದರೆ) ಉಳಿದ ಎಲ್ಲಾ ಉಪಾಯಗಳಿಂದಲೂ ಅವನನ್ನು ಬಿಡಿಸಲು ಪ್ರಯತ್ನವನ್ನು ಮಾಡು.
ನ ಸಾಮ್ನಾ ಪ್ರತಿಪದ್ಯೇತ ಯದಿ ಗಂಧರ್ವರಾಡಸೌ |
ಪರಾಕ್ರಮೇಣ ಮೃದುನಾ ಮೋಕ್ಷಯೇಥಾಃ ಸುಯೋಧನಮ್ ॥32॥
ಈ ಗಂಧರ್ವರಾಜನು ಸಾಮಮಾರ್ಗದಿಂದ ನಮ್ಮ ಮಾತನ್ನು ಕೇಳದಿದ್ದರೆ ಮೃದುವಾದ ಪರಾಕ್ರಮವನ್ನು ಉಪಯೋಗಿಸಿ

ಸುಯೋಧನನನ್ನು ಮೋಚನೆಗೊಳಿಸು.
ಅಥಾಸೌ ಮೃದುಯುದ್ಧೇನ ನ ಮುಂಚೇದ್ ಭೀಮ ಕೌರವಾನ್ |
ಸರ್ವೋಪಾಯೈರ್ವಿಮೋಚ್ಯಾಸ್ತೇ ನಿಗೃಹ್ಯ ಪರಿಪಂಥಿನಃ |
ಏತಾವದ್ಧಿ ಮಯಾ ಶಕ್ಯಂ ಸಂದೇಷ್ಟುಂ ವೈ ವೃಕೋದರ ॥33॥
ಇನ್ನು ಮೃದುವಾದ ಯುದ್ಧದಿಂದ ಗಂಧರ್ವರಾಜನು ಕೌರವರನ್ನು ಬಿಡದಿದ್ದರೆ ಎಲ್ಲ ಉಪಾಯಗಳನ್ನೂ ಅನುಸರಿಸಿ ವಿರೋಧಿಗಳನ್ನು ನಿಗ್ರಹಿಸಿ ಸುಯೋಧನಾದಿಗಳು ಮೋಚನೆಗೊಳಿಸಲ್ಪಡಬೇಕು. ವೃಕೋದರನೇ, ನಾನು ನಿನಗೆ ಇಷ್ಟುಮಾತ್ರ ಸಂದೇಶವನ್ನು ಕೊಡಲು ಸಾಧ್ಯ.
ವೈತಾನೇ ಕರ್ಮಣಿ ತತೇ ವರ್ತಮಾನೇ ಚ ಭಾರತ |
ವರಪ್ರದಾನಂ ಸುಮಹದ್ ಯಾಚಕಸ್ಯ ಪ್ರಕೀರ್ತಿತಮ್ ॥34॥
ಎಲೈ ಭಾರತನೇ, ಯಜ್ಞಕರ್ಮದಲ್ಲಿ ತೊಡಗಿರುವಾಗ ಯಾಚಕನಿಗೆ ವರಪ್ರದಾನವನ್ನು ಮಾಡಿದರೆ ಅದು ಬಹಳ ಶ್ರೇಷ್ಠವೆಂದು ಹೇಳಲ್ಪಡುತ್ತದೆ.
ವೈಶಂಪಾಯನಃ
ಅಜಾತಶತ್ರೋರ್ವಚನಂ ತತ್ಶ್ರುತ್ವಾ ತು ಧನಂಜಯಃ |
ಪ್ರತಿಜಜ್ಞೇ ಗುರೋರ್ವಾಕ್ಯಂ ಕೌರವಾಣಾಂ ವಿಮೋಕ್ಷಣೇ(ಣಮ್) ॥
ವೈಶಂಪಾಯನ ಅಜಾತಶತ್ರುವಿನ ಆ ಮಾತುಗಳನ್ನು ಕೇಳಿ ಧನಂಜಯನು ಅಣ್ಣನ ವಾಕ್ಯಗಳಿಗೆ ಅನುಸಾರವಾಗಿ ಕೌರವರನ್ನು ಬಿಡಿಸುವುದಾಗಿ ಪ್ರತಿಜ್ಞೆಯನ್ನು ಮಾಡಿದನು.
ಅರ್ಜುನಃ
ಯದಿ ಸಾಮ್ನಾ ನ ಮೋಕ್ಷ್ಯಂತಿ ಗಂಧರ್ವಾ ಧೃತರಾಷ್ಟ್ರಜಾನ್ |
ಅದ್ಯ ಗಂಧರ್ವರಾಜಸ್ಯ ಭೂಮಿಃ ಪಾಸ್ಯತಿ ಶೋಣಿತಮ್ ॥36॥
ಅರ್ಜುನ ಗಂಧರ್ವರು ಧೃತರಾಷ್ಟ್ರಪುತ್ರರನ್ನು ಸಾಮಮಾರ್ಗದಿಂದ ಬಿಡುಗಡೆ ಮಾಡದಿದ್ದರೆ ಈ ದಿನ ಭೂಮಿಯು ಗಂಧರ್ವರಾಜನ ರಕ್ತವನ್ನು ಕುಡಿಯುವುದು.
ಅರ್ಜುನಸ್ಯ ತು ತಾಂ ಶ್ರುತ್ವಾ ಪ್ರತಿಜ್ಞಾಂ ಸತ್ಯವಾದಿನಃ |
ಕೌರವಾಣಾಂ ತದಾ ರಾಜನ್ ಪುನಃ ಪ್ರತ್ಯಾಗತಂ ಮನಃ ॥37॥
ಎಲೈ ರಾಜನೇ, ಸತ್ಯವಾದಿಯಾದ ಅರ್ಜುನನ ಆ ಪ್ರತಿಜ್ಞೆಯನ್ನು ಕೇಳಿ ಕೌರವರಿಗೆ ಹೊರಟು ಹೋಗಿದ್ದ ಮನಸ್ಸು (ಪ್ರಾಣವು) ಪುನಃ ಬಂದಂತಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಾತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ದುರ್ಯೋಧನಾದಿಮೋಚನಾನುಜ್ಞಾನಾಮ ಅಷ್ಟಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ಮೂರನೆಯ ಅಧ್ಯಾಯ
ಚಿತ್ರಸೇನ ಮೊದಲಾದ ಗಂಧರ್ವರ ಜೊತೆಯಲ್ಲಿ ಪಾಂಡವರ ಯುದ್ಧ.
ವೈಶಂಪಾಯನಃ
ಯುಧಿಷ್ಠಿರವಚಃ ಶ್ರುತ್ವಾ ಭೀಮಸೇನಪುರೋಗಮಾಃ |
ಪ್ರಹೃಷ್ಟವದನಾಃ ಸರ್ವೇ ಸಮುತ್ತಸ್ಥುರ್ನರರ್ಷಭಾಃ ॥1॥
ವೈಶಂಪಾಯನ ಯುಧಿಷ್ಠಿರನ ಮಾತನ್ನು ಕೇಳಿ ಭೀಮಸೇನ ಮೊದಲಾದ ನರಶ್ರೇಷ್ಠರೆಲ್ಲರೂ ಸಂತೋಷದಿಂದ ಕೂಡಿದ ಮುಖವುಳ್ಳವರಾಗಿ ಮೇಲೆದ್ದರು.
ಜಾಂಬೂನದವಿಚಿತ್ರಾಣಿ ಕವಚಾನಿ ಮಹಾರಥಾಃ |
ಅಭೇದ್ಯಾನಿ ತತಃ ಸರ್ವೇ ಸಮನಹ್ಯಂತ ಭಾರತ ॥2॥
ಎಲೈ ಭಾರತನೇ, ಆ ಮಹಾರಥರು ಎಲ್ಲರೂ ಸುವರ್ಣದಿಂದ ಅಲಂಕೃತವಾದ, ವಿಚಿತ್ರವಾದ ಮತ್ತು ಅಭೇದ್ಯವಾದ ಕವಚಗಳನ್ನು ಧರಿಸಿದರು.
ಆಯುಧಾನಿ ಚ ದಿವ್ಯಾನಿ ವಿವಿಧಾನಿ ಸಮಾದಧುಃ |
ತೇ ದಂಶಿತಾ ರಥೈಃ ಸರ್ವೇ ಧ್ವಜಿನಃ ಸಶರಾಸನಾಃ |
ಪಾಂಡವಾಃ ಪ್ರತ್ಯದೃಶ್ಯಂತ ಜ್ವಲಿತಾ ಇವ ಪಾವಕಾಃ ॥3॥
ಅವರು ಅನೇಕ ವಿಧವಾದ ದಿವ್ಯವಾದ ಆಯುಧಗಳನ್ನೂ ತೆಗೆದುಕೊಂಡರು. ಪಾಂಡವರು ಧ್ವಜಗಳುಳ್ಳ ರಥಗಳಲ್ಲಿ ಬಿಲ್ಲುಗಳನ್ನು ಹಿಡಿದು ಕವಚವನ್ನು ಧರಿಸಿ ಜ್ವಲಿಸುವ ಅಗ್ನಿಯಂತೆ ಕಂಡುಬಂದರು.
ತಾನ್ರಥಾನ್ ಸಾಧುಸಂಪನ್ನಾನ್ ಸಂಯುಕ್ತಾನ್ ಜವನೈರ್ಹಯೈಃ |
ಆಸ್ಥಾಯ ನರಶಾರ್ದೂಲಾಃ ಶೀಘ್ರಮೇವ ಯಯುಸ್ತತಃ ॥4॥
ವೇಗಶಾಲಿಗಳಾದ ಅಶ್ವಗಳನ್ನು ಹೂಡಿದ ಎಲ್ಲ ಸಲಕರಣೆಗಳಿಂದಲೂ ಸಂಪನ್ನವಾದ ಆ ರಥಗಳನ್ನು ಏರಿ ಆ ನರಶಾರ್ದೂಲರು ಶೀಘ್ರವಾಗಿಯೇ ಅಲ್ಲಿಂದ ಹೊರಟರು.

ತತಃ ಕೌರವಸೈನ್ಯಾನಾಂ ಪ್ರಾದುರಾಸೀನ್ ಮಹಾಸ್ವನಃ |
ಪ್ರಯಾತಾನ್ ಸಹಿತಾನ್ ದೃಷ್ಟ್ವಾ ಪಾಂಡುಪುತ್ರಾನ್ ಮಹಾರಥಾನ್ ||
ಆಗ ಯುದ್ಧಕ್ಕೆ ಒಟ್ಟಿಗೆ ಹೊರಟ ಮಹಾರಥರಾದ ಪಾಂಡುಪುತ್ರರನ್ನು ನೋಡಿ ಕೌರವ ಸೈನ್ಯದಲ್ಲಿ ಮಹಾನಾದ ಉಂಟಾಯಿತು.
ಜಿತಕಾಶಿನಶ್ಚ ಚತ್ವಾರಸ್ತ್ವರಿತಾಶ್ಚ ಮಹಾರಥಾಃ |
ಕ್ಷಣೇನೈವ ವನೇ ತಸ್ಮಿನ್ ಸಮಾಜಗ್ಮುರಭೀತವತ್ ||6||
ಜಯವನ್ನು ಬಯಸುವ ಆ ನಾಲ್ವರು ಮಹಾರಥರು ಜಾಗ್ರತೆಯಾಗಿ ಒಂದು ಕ್ಷಣದಲ್ಲಿಯೇ ಯಾವ ಭೀತಿಯೂ ಇಲ್ಲದೆ ಆ ವನಕ್ಕೆ ಬಂದರು.
ನ್ಯವರ್ತಂತ ತತಃ ಸರ್ವೇ ಗಂಧರ್ವಾಃ ಜಿತಕಾಶಿನಃ |
ದೃಷ್ಟ್ವಾ ರಥಾಗತಾನ್ ವೀರಾನ್ ಪಾಂಡವಾಂಶ್ಚತುರೋ ರಣೇ ||7||
ತಾವು ವಿಜಯಶಾಲಿಗಳೆಂದು ಎಣಿಸುತ್ತಿದ್ದ ಗಂಧರ್ವರೆಲ್ಲರೂ ವೀರರಾದ ನಾಲ್ಕುಜನ ಪಾಂಡವರು ರಥದಲ್ಲಿ ಕುಳಿತು ರಣರಂಗಕ್ಕೆ ಬರುತ್ತಿರುವುದನ್ನು ನೋಡಿ ತಾವೂ ಅವರ ಕಡೆಗೆ ತಿರುಗಿದರು.
ತಾಂಸ್ತು ವಿಭ್ರಾಜಿತಾನ್ ದೃಷ್ಟ್ವಾ ಲೋಕಪಾಲಾನಿವೋದ್ಯತಾನ್ |
ವ್ಯೂಢಾನೀಕಾ ವ್ಯತಿಷ್ಠಂತ ಗಂಧರ್ವಾ ವನಚಾರಿಣಃ ||8||
ಲೋಕಪಾಲಕರಂತೆ ಉದ್ಯಮಶೀಲರಾದ ಪ್ರಕಾಶಮಾನರಾದ ಅವರನ್ನು ನೋಡಿ ಸೈನ್ಯವನ್ನು ಹೂಡಿದ ವನಚಾರಿಗಳಾದ ಗಂಧರ್ವರು ಅಲ್ಲಿಯೇ ನಿಂತರು.
ರಾಜ್ಞಸ್ತು ವಚನಂ ಸ್ಮೃತ್ವಾ ಧರ್ಮಪುತ್ರಸ್ಯ ಧೀಮತಃ |
ಕ್ರಮೇಣ ಮೃದುನಾ ಯುದ್ಧಮುಪಕ್ರಾಂತಂ ಚ ಭಾರತ ||9||
ಎಲೈ ಭಾರತನೇ, ರಾಜನಾದ ಮೇಧಾವಿಯಾದ ಧರ್ಮಪುತ್ರನ ಮಾತನ್ನು ಸ್ಮರಿಸಿ ಪಾಂಡವರು ಕ್ರಮವಾಗಿ ಮೃದುವಾಗಿಯೇ ಯುದ್ಧವನ್ನು ಪ್ರಾರಂಭಿಸಿದರು.
ನ ತು ಗಂಧರ್ವರಾಜಸ್ಯ ಸೈನಿಕಾ ಮಂದಚೇತಸಃ |
ಶಕ್ಯಂತೇ ಮೃದುನಾ ಶ್ರೇಯಃ ಪ್ರತಿಪಾದಯಿತುಂ ತದಾ ||10||
ಆದರೆ ಮಂದಚೇತನರಾದ ಗಂಧರ್ವರಾಜನ ಸೈನಿಕರು ಮೃದುವಾದ ಯುದ್ಧದಿಂದ ಶ್ರೇಯೋಮಾರ್ಗವನ್ನು ಹಿಡಿಯಲು ಸಾಧ್ಯವಾಗಲಿಲ್ಲ.
ತತಸ್ತಾನ್ ಯುಧಿ ದುರ್ಧರ್ಷಾನ್ ಸವ್ಯಸಾಚೀ ಪರಂತಪಃ |
ಸಾಂತ್ವಪೂರ್ವಮಿದಂ ವಾಕ್ಯಮುವಾಚ ಖಚರಾನ್ ರಣೇ ||11||
ವಿಸರ್ಜಯತ ರಾಜಾನಂ ಭ್ರಾತರಂ ಮೇ ಸುಯೋಧನಮ್ |
ಆಗ ಯುದ್ಧದಲ್ಲಿ ದುರ್ಧರ್ಷರಾದ ಆಕಾಶಚಾರಿಗಳಾದ ಆ ಗಂಧರ್ವರನ್ನು ಕುರಿತು ಯುದ್ಧಭೂಮಿಯಲ್ಲಿ ಪರಂತಪನಾದ ಅರ್ಜುನನು ಮೃದುವಾದ ಮಾತಿನಿಂದಲೇ ನಮ್ಮ ಸಹೋದರನಾದ ಸುಯೋಧನನನ್ನು ಮೋಚನೆಗೊಳಿಸಿ ಎಂದು ಹೇಳಿದನು.
ನೈತದ್ ಗಂಧರ್ವರಾಜಸ್ಯ ಯುಕ್ತಂ ಕರ್ಮ ಜುಗುಪ್ಸಿತಮ್ |
ಪರದಾರಾಭಿಮರ್ಶಶ್ಚ ಮಾನುಷೈಶ್ಚ ಸಮಾಗಮಃ ||12||
ಗಂಧರ್ವರಾಜನ ಈ ಕರ್ಮವು ಯೋಗ್ಯವಾದುದಲ್ಲ. ಪರಪತ್ನಿಯರ ಮೇಲೆ ಕೈಮಾಡುವುದು ಮತ್ತು ಮನುಷ್ಯರ ಜೊತೆಯಲ್ಲಿ ಸಮಾಗಮವನ್ನು ಹೊಂದುವುದು ಎರಡೂ ಗಂಧರ್ವರಿಗೆ ಜುಗುಪ್ಸಿತವಾದುದು.
ಉತ್ಸೃಜಧ್ವಂ ಮಹಾವೀರ್ಯಾನ್ ಧೃತರಾಷ್ಟ್ರಸುತಾನಿಮಾನ್ |
ದಾರಾಂಶ್ಚೈಷಾಂ ವಿಮುಂಚಧ್ವಂ ಧರ್ಮರಾಜಸ್ಯ ಶಾಸನಾತ್ ||13||
ಧರ್ಮರಾಜನ ಶಾಸನದಂತೆ ಮಹಾಪರಾಕ್ರಮಶಾಲಿಗಳಾದ ಈ ಧೃತರಾಷ್ಟ್ರ ಪುತ್ರರನ್ನು ವಿಮೋಚನೆಗೊಳಿಸಿ. ಅವರ ಪತ್ನಿಯರನ್ನೂ ವಿಮೋಚನೆಗೊಳಿಸಿ.
ವೈಶಂಪಾಯನಃ
ತ ಏವಮುಕ್ತಾ ಗಂಧರ್ವಾಃ ಪಾಂಡವೇನ ಯಶಸ್ವಿನಾ |
ಉತ್ಸ್ಮಯಂತಸ್ತದಾ ಪಾರ್ಥಮಿದಂ ವಚನಮಬ್ರುವನ್ ||14||
ವೈಶಂಪಾಯನ ಹೀಗೆ ಕೀರ್ತಿಶಾಲಿಯಾದ ಪಾಂಡವನಿಂದ ಹೇಳಲ್ಪಟ್ಟ ಗಂಧರ್ವರು ನಗುತ್ತಾ ಅರ್ಜುನನನ್ನು ಕುರಿತು ಹೀಗೆ ಮಾತನಾಡಿದರು.
ಏಕಸ್ಯೈವ ವಯಂ ತಾತ ಕುರ್ಯಾಮ ವಚನಂ ಭುವಿ |
ಯಸ್ಯ ಶಾಸನಮಾಜ್ಞಾಯ ಚರಾಮೋ ವಿಗತಜ್ವರಾಃ ||15||
ಪ್ರೀತಿಪಾತ್ರನೇ, ನಾವು ಒಬ್ಬನ ಶಾಸನವನ್ನು ಮಾತ್ರ ಕಾರ್ಯಗತಮಾಡುತ್ತೇವೆ. ಅವನ ಶಾಸನವನ್ನು ಸ್ವೀಕರಿಸಿ ನಿರ್ಭಯರಾಗಿ ಭೂಮಿಯಲ್ಲಿ ಸಂಚರಿಸುತ್ತೇವೆ.
ತೇನೈಕೇನ ಯಥಾಽಽದಿಷ್ಟಂ ತಥಾ ವರ್ತಾಮ ಭಾರತ |
ನ ಶಾಸ್ತಾ ವಿದ್ಯತೇಽಸ್ಮಾಕಮನ್ಯಸ್ತಸ್ಮಾತ್ ಸುರೇಶ್ವರಾತ್ ||16||
ಎಲೈ ಭಾರತನೇ, ಆ ಒಬ್ಬನು ಆದೇಶ ಮಾಡಿದಂತೆ ನಾವು ನಡೆದುಕೊಳ್ಳುತ್ತೇವೆ. ನಮಗೆ ಆ ಸುರೇಶ್ವರನಾದ ಇಂದ್ರನನ್ನು ಬಿಟ್ಟು ಇನ್ನೊಬ್ಬ ಶಾಸಕನು ಇರುವುದಿಲ್ಲ.
ಏವಮುಕ್ತಃ ಸ ಗಂಧರ್ವೈಃ ಕುಂತೀಪುತ್ರೋ ಧನಂಜಯಃ |

ಗಂಧರ್ವಾನ್ ಪುನರೇವೇದಂ ವಚನಂ ಪ್ರತ್ಯಭಾಷತ ॥17॥
ವೈಶಂಪಾಯನ ಹೀಗೆ ಗಂಧರ್ವರಿಂದ ಹೇಳಲ್ಪಟ್ಟ ಕುಂತೀಪುತ್ರನಾದ ಧನಂಜಯನು ಗಂಧರ್ವರನ್ನು ಕುರಿತು ಪುನಃ ಹೀಗೆ ಮಾತನಾಡಿದನು.
ನ ತದ್ಗಂಧರ್ವರಾಜಸ್ಯ ಯುಕ್ತಂ ಕರ್ಮ ಜುಗುಪ್ಸಿತಮ್ |
ಪರದಾರಾಭಿಮಾರ್ಶಶ್ಚ ಮಾನುಷೈಶ್ಚ ಸಮಾಗಮಃ |
ಉತ್ಸೃಜಧ್ವಂ ಮಹಾವೀರ್ಯಾನ್ ಧೃತರಾಷ್ಟ್ರಸುತಾನಿಮಾನ್ |
ದಾರಾಂಶ್ಚೈಷಾಂ ವಿಮುಂಚಧ್ವಂ ಧರ್ಮರಾಜಸ್ಯ ಶಾಸನಾತ್ |
ಪರದಾರಾಭಿಮರ್ಶನ ಮತ್ತು ಮಾನುಷ ಸಮಾಗಮರೂಪವಾದ ಈ ಕರ್ಮವು ಗಂಧರ್ವರಾಜನಿಗೆ ಯೋಗ್ಯವಾದುದಲ್ಲ ಮತ್ತು ಜುಗುಪ್ಸಿತವಾದುದು. ಧರ್ಮರಾಜನ ಶಾಸನದಂತೆ ಮಹಾಪರಾಕ್ರಮಶಾಲಿಗಳಾದ ಈ ಧೃತರಾಷ್ಟ್ರಪುತ್ರರನ್ನೂ ಮತ್ತು ಅವರ ಪತ್ನಿಯರನ್ನೂ ವಿಮೋಚನೆಗೊಳಿಸಿ.
ಯದಾ ಸಾಮ್ನಾ ನ ಮುಂಚಧ್ವಂ ಗಂಧರ್ವಾ ಧೃತರಾಷ್ಟ್ರಜಾನ್ |
ಮೋಕ್ಷಯಿಷ್ಯಾಮಿ ವಿಕ್ರಮ್ಯ ಸ್ವಯಮೇವ ಸುಯೋಧನಮ್ ॥18॥
ಎಲೈ ಗಂಧರ್ವರೇ, ನೀವು ಸಾಮಮಾರ್ಗದಿಂದ ಧೃತರಾಷ್ಟ್ರ ಪುತ್ರರನ್ನು ಮೋಚನೆಗೊಳಿಸದಿದ್ದರೆ ನಾನು ಸ್ವತಃ ನನ್ನ ವಿಕ್ರಮವನ್ನು ತೋರಿಸಿ ಸುಯೋಧನನನ್ನು ಮೋಚನೆಗೊಳಿಸುವೆನು.
ವೈಶಂಪಾಯನಃ
ಏವಮುಕತ್ವ ತತಃ ಪಾರ್ಥಃ ಸವ್ಯಸಾಚೀ ಧನಂಜಯಃ |
ಸಸರ್ಜನಿಶಿತಾನ್ ಬಾಣಾನ್ ಖಚರಾನ್ ಖಚರಾನ್ ಪ್ರತಿ ॥19॥
ವೈಶಂಪಾಯನ ಸವ್ಯಸಾಚಿಯಾದ ಕುಂತೀಪುತ್ರನಾದ ಧನಂಜಯನು ಹೀಗೆ ಮಾತನಾಡಿ ಆಕಾಶಗಾಮಿಗಳಾದ ಆ ಗಂಧರ್ವರ ಮೇಲೆ ಆಕಾಶಗಾಮಿಗಳಾದ ಬಾಣಗಳನ್ನು ಪ್ರಯೋಗಿಸಿದನು.
ತಥೈವ ಶರವರ್ಷೇಣ ಗಂಧರ್ವಾಸ್ತೇ ಬಲೋತ್ಕಟಾಃ |
ಪಾಂಡವಾನಭ್ಯವರ್ತಂತ ಪಾಂಡವಾಶ್ಚ ದಿವೌಕಸಃ ॥20॥
ಹಾಗೆಯೇ ಬಲೋತ್ಕಟರಾದ ಗಂಧರ್ವರು ಪಾಂಡವರ ಮೇಲೆ ಬಾಣಗಳ ಮಳೆಯನ್ನು ಕರೆದರು. ಪಾಂಡವರೂ ಆ ಸ್ವರ್ಗನಿವಾಸಿಗಳ ಮೇಲೆ ಬಾಣಗಳ ಮಳೆಯನ್ನು ಕರೆದರು.
ತತಃ ಸುತುಮುಲಂ ಯುದ್ಧಂ ಗಂಧರ್ವಾಣಾಂ ತರಸ್ವಿನಾಮ್ |
ಬಭೂವ ಭೀಮವೇಗಾನಾಂ ಪಾಂಡವಾನಾಂ ಚ ಭಾರತ ॥21॥
ಎಲೈ ಭಾರತನೇ, ಅನಂತರ ವೇಗಶಾಲಿಗಳಾದ ಗಂಧರ್ವರಿಗೂ ಮತ್ತು ಭಯಂಕರವೇಗವುಳ್ಳ ಪಾಂಡವರಿಗೂ ತೀವ್ರವಾದ ಯುದ್ಧವು ಪ್ರಾರಂಭವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ತ್ರಯಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಪಾಂಡವಗಂಧರ್ವಯುದ್ಧಂ ನಾಮ
ನವಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ಮೂರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ನಾಲ್ಕನೆಯ ಅಧ್ಯಾಯ
ಪಾಂಡವ ಮತ್ತು ಗಂಧರ್ವರ ಘೋರವಾದ ಯುದ್ಧ. ಅದೃಶ್ಯನಾದ ಚಿತ್ರಸೇನನಿಗೆ ಅರ್ಜುನನಿಂದ ಬಾಣಪ್ರಯೋಗ. ಚಿತ್ರಸೇನನ ಪ್ರಾದುರ್ಭಾವ ಮತ್ತು ಸ್ವರೂಪ ಕಥನ. ಯುದ್ಧವಿರಾಮ ಮತ್ತು ಪಾಂಡವರ ಜೊತೆಯಲ್ಲಿ ಚಿತ್ರಸೇನನ ಸಲ್ಲಾಪ.
ವೈಶಂಪಾಯನಃ
ತತೋ ದಿವ್ಯಾಸ್ತ್ರಸಂಪನ್ನಾನ್ ಗಂಧರ್ವಾನ್ ಹೇಮಮಾಲಿನಃ |
ವಿಸೃಜಂತಃ ಶರಾನ್ ದೀಪ್ತಾನ್ ಸಮಂತಾತ್ ಪರ್ಯವಾರಯನ್ ॥1॥
ವೈಶಂಪಾಯನ ಅನಂತರ ಪಾಂಡವರು ದಿವ್ಯಾಸ್ತ್ರಸಂಪನ್ನರಾದ ಹೇಮಮಾಲಿಗಳಾದ ಗಂಧರ್ವರ ಮೇಲೆ ದೀಪ್ತವಾದ ಬಾಣಗಳನ್ನು ಪ್ರಯೋಗಿಸುತ್ತಾ ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಚತ್ವಾರಃ ಪಾಂಡವಾ ವೀರಾ ಗಂಧರ್ವಾಶ್ಚ ಸಹಸ್ರಶಃ |
ರಣೇ ಸನ್ನ್ಯಪತನ್ ರಾಜಂಸ್ತದದ್ಭುತಮಿವಾಭವತ್॥2॥
ನಾಲ್ಕುಜನ ಪಾಂಡವ ವೀರರು ಮತ್ತು ಸಹಸ್ರಾರು ಗಂಧರ್ವರು ಯುದ್ಧದಲ್ಲಿ ಪರಸ್ಪರವಾಗಿ ಎದುರಿಸಿದರು. ರಾಜನೇ, ಅದು ಅದ್ಭುತವಾಗಿದ್ದಿತು.
ಯಥಾ ಕರ್ಣಸ್ಯ ಚ ರಥೋ ಧಾರ್ತರಾಷ್ಟ್ರಸ್ಯ ಚೋಭಯೋಃ |
ಗಂಧರ್ವೈಃ ಶತಶಶ್ಛಿನ್ನೋ ತಥಾ ತೇಷಾಂ ಪ್ರಚಕ್ರಿರೇ ॥3॥
ಹೇಗೆ ಕರ್ಣನ ರಥವನ್ನು, ದುರ್ಯೋಧನನ ರಥವನ್ನು ಗಂಧರ್ವರು ನೂರಾರು ಚೂರುಗಳಾಗಿ ವಿಭಜಿಸಿದ್ದರೋ ಅದರಂತೆ ಗಂಧರ್ವರ ರಥಗಳಿಗೂ ಪಾಂಡವರು ಹಾಗೆಯೇ ಮಾಡಿದರು.

ತಾನ್ ಸಮಾಪತತೋ ರಾಜನ್ ಗಂಧರ್ವಾಂಛತಶೋ ರಣೇ |
ಪ್ರತ್ಯಗೃಹ್ಣನ್ ನರವ್ಯಾಘ್ರಾಃ ಶರವರ್ಷೈರನೇಕಶಃ ॥4॥
ಎಲೈ ರಾಜನೇ, ಯುದ್ಧದಲ್ಲಿ ನೂರಾರು ಸಂಖ್ಯೆಯಲ್ಲಿ ಮೇಲೆರಗುತ್ತಿದ್ದ ಗಂಧರ್ವರನ್ನು ನರವ್ಯಾಘ್ರರಾದ ಪಾಂಡವರು ಅನೇಕ ಶರವರ್ಷಗಳಿಂದ ಎದುರಿಸಿದರು.
ತೇ ಕೀರ್ಯಮಾಣಾಃ ಖಗಮಾಃ ಶರವರ್ಷೈಃ ಸಮಂತತಃ |
ನ ಶೇಕುಃ ಪಾಂಡುಪುತ್ರಾಣಾಂ ಸಮೀಪೇ ಪರಿವರ್ತಿತುಮ್ ॥5॥
ಪಾಂಡವರಿಂದ ಉಂಟಾದ ಶರವರ್ಷದಿಂದ ಗಂಧರ್ವರಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಆಕಾಶದಲ್ಲಿ ಚದುರಿ ಹೋಗಿ ಪಾಂಡುಪುತ್ರರ ಸಮೀಪಕ್ಕೂ ಬರಲಿಲ್ಲ.
ಅಭಿಕ್ರುದ್ಧಾನಭಿಪ್ರಾಯಾದ್ ಗಂಧರ್ವಾನರ್ಜುನಸ್ತದಾ |
ಲಕ್ಷಯಿತ್ವಾಽಥ ದಿವ್ಯಾನಿ ಮಹಾಸ್ತ್ರಾಣ್ಯುಪಚಕ್ರಮೇ ॥6॥
ಆಗ ಅರ್ಜುನನು ಮಹಾಕ್ರೋಧಕ್ಕೆ ಒಳಗಾದ ಗಂಧರ್ವರನ್ನು ಗಮನಿಸಿ ಅವರ ಕಡೆಗೆ ಹೋಗುತ್ತಾ, ಅವರ ಮೇಲೆ ದಿವ್ಯವಾದ ಮಹಾಸ್ತ್ರಗಳನ್ನು ಪ್ರಯೋಗಿಸಲು ಪ್ರಾರಂಭಿಸಿದನು.
ಸಹಸ್ರಾಣಾಂ ಸಹಸ್ರಾಣಿ ಪ್ರಾಹಿಣೋದ್ ಯಮಸಾದನಮ್ |
ಆಗ್ನೇಯೇನಾರ್ಜುನಃ ಸಂಖ್ಯೇ ಗಂಧರ್ವಾಣಾಂ ಬಲೋತ್ಕಟಃ ॥7॥
ಬಲೋತ್ಕಟನಾದ ಅರ್ಜುನನು ಆಗ್ನೇಯಾಸ್ತ್ರದಿಂದ ಹತ್ತುಲಕ್ಷ ಗಂಧರ್ವರನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ತಥಾ ಭೀಮೋ ಮಹಾಬಾಹುಃ ಸಂಯುಗೇ ಬಲಿನಾಂ ವರಃ |
ಗಂಧರ್ವಾಂಛತಶೋ ರಾಜನ್ ಜಘಾನ ನಿಶಿತೈಃ ಶರೈಃ ॥8॥
ಎಲೈ ರಾಜನೇ, ಅದರಂತೆ ಬಲಿಷ್ಠರಲ್ಲಿ ಶ್ರೇಷ್ಠನಾದ ಮಹಾಬಾಹುವಾದ ಭೀಮಸೇನನು ಯುದ್ಧದಲ್ಲಿ ಗಂಧರ್ವರನ್ನು ನಿಶಿತವಾದ ನೂರಾರು ಬಾಣಗಳಿಂದ ಸಂಹರಿಸಿದನು.
ಮಾದ್ರೀಪುತ್ರಾವಪಿ ತದಾ ಯುಧ್ಯಮಾನೌ ಬಲೋತ್ಕಟೌ |
ಪರಿಗೃಹ್ಯಾಗ್ರತೋ ರಾಜನ್ ನಿಘ್ನತುಃ ಶತಶಃ ಪರಾನ್ ॥9॥
ಎಲೈ ರಾಜನೇ, ಆಗ ಬಲೋತ್ಕಟರಾದ ಮಾದ್ರಿಪುತ್ರರಾದ ನಕುಲಸಹದೇವರೂ ಸಹ ಮುಂದೆ ಸಾಗಿ ಯುದ್ಧವನ್ನು ಮಾಡುತ್ತಾ ನೂರಾರು ಗಂಧರ್ವರನ್ನು ಹಿಡಿದು ಸಂಹರಿಸಿದರು.
ತೇ ವಧ್ಯಮಾನಾ ಗಂಧರ್ವಾ ದಿವ್ಯೈರಸ್ತ್ರೈರ್ಮಹಾರಥೈಃ |
ಉತ್ಪೇತುಃ ಖಮುಪಾದಾಯ ಧೃತರಾಷ್ಟ್ರಸುತಾಂಸ್ತತಃ ॥10॥
ಮಹಾರಥರ ದಿವ್ಯಾಸ್ತ್ರಗಳಿಂದ ಪೀಡಿತರಾದ ಗಂಧರ್ವರು ಆಗ ಧೃತರಾಷ್ಟ್ರನ ಮಕ್ಕಳನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿದರು.
ಸ ತಾನುತ್ಪತಿತಾನ್ ದೃಷ್ಟ್ವಾ ಕುಂತೀಪುತ್ರೋ ಧನಂಜಯಃ |
ಮಹತಾ ಶರಜಾಲೇನ ಸಮಂತಾತ್ ಪರ್ಯವಾರಯತ್ ॥11॥
ಅವರು ಮೇಲಕ್ಕೆ ಹೋಗುವುದನ್ನು ನೋಡಿದ ಕುಂತೀಪುತ್ರನಾದ ಧನಂಜಯನು ಬಾಣಗಳ ದೊಡ್ಡ ಬಲೆಯನ್ನು ಎಲ್ಲ ಕಡೆಯಲ್ಲಿಯೂ ನಿರ್ಮಾಣ ಮಾಡಿ ಅವರು ಮೇಲೆ ಹೋಗದಂತೆ ತಡೆದನು.
ತೇ ಬದ್ಧಾಃ ಶರಜಾಲೇನ ಶಕುಂತಾ ಇವ ಪಂಜರೇ |
ವವರ್ಷುರರ್ಜುನಂ ಕ್ರೋಧಾದ್ ಗದಾಶಕ್ತ್ಯಸಿವೃಷ್ಟಯಃ ॥12॥
ಪಂಜರದಲ್ಲಿ ಇಟ್ಟ ಪಕ್ಷಿಗಳಂತೆ ಶರಪಂಜರದಲ್ಲಿ ಬದ್ಧರಾದ ಆ ಗಂಧರ್ವರು ಕ್ರೋಧದಿಂದ ಅರ್ಜುನನ ಮೇಲೆ ಗದೆ, ಶಕ್ತಿ, ಖಡ್ಗ ಮೊದಲಾದ ಶಸ್ತ್ರಗಳ ವೃಷ್ಟಿಯನ್ನು ಕರೆದರು.
ಗದಾಶಕ್ತ್ಯಸಿವೃಷ್ಟೀಸ್ತಾ ನಿಹತ್ಯ ಪರಮಾಸ್ತ್ರವಿತ್ |
ಗಾತ್ರಾಣಿ ಚಾಹನದ್ ಭಲ್ಲೈರ್ಗಂಧರ್ವಾಣಾಂ ಧನಂಜಯಃ ॥13॥
ಪರಮಾಸ್ತ್ರ ಜ್ಞಾನವನ್ನು ಹೊಂದಿದ ಧನಂಜಯನು ಗಂಧರ್ವರು ಪ್ರಯೋಗಿಸಿದ ಗದಾ, ಶಕ್ತಿ, ಖಡ್ಗ ಮೊದಲಾದವುಗಳ ಮಳೆಯನ್ನು ನಿವಾರಿಸಿ ಗಂಧರ್ವರ ಶರೀರದ ಮೇಲೆ ಭಲ್ಲಗಳನ್ನು ಪ್ರಯೋಗಿಸಿದನು.
ಶಿರೋಭಿಃ ಪ್ರಪತದ್ಭಿಶ್ಚ ಚರಣೈರ್ಬಾಹುಭಿಸ್ತಥಾ |
ಅಶ್ಮವೃಷ್ಟಿರಿವಾಭಾತಿ ಪರೇಷಾಮಭವದ್ ಭಯಮ್ ॥14॥
ಕತ್ತರಿಸಿ ಬೀಳುವ ಶಿರಸ್ಸುಗಳಿಂದಲೂ, ಪಾದ ಮತ್ತು ಬಾಹುಗಳಿಂದಲೂ ಆ ರಣರಂಗದಲ್ಲಿ ಶಿಲಾವೃಷ್ಟಿಯಾಗುವಂತೆ ತೋರಿತು. ಅದರಿಂದ ಶತ್ರುಗಳಿಗೆ ಭಯ ಉಂಟಾಯಿತು.
ತೇ ವಧ್ಯಮಾನಾ ಗಂಧರ್ವಾಃ ಪಾಂಡವೇನ ಮಹಾತ್ಮನಾ |
ಭೂಮಿಷ್ಠಮಂತರಿಕ್ಷಸ್ಥಾಃ ಶರವರ್ಷೈರವಾಕಿರನ್ ॥15॥
ಮಹಾತ್ಮನಾದ ಪಾಂಡವನಿಂದ ಪೀಡಿತರಾದ ಗಂಧರ್ವರು ಅಂತರಿಕ್ಷದಲ್ಲಿ ನಿಂತು ಭೂಮಿಯ ಮೇಲಿದ್ದ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಕರೆದರು.
ತೇಷಾಂ ತು ಶರವರ್ಷಾಣಿ ಸವ್ಯಸಾಚೀ ಪರಂತಪಃ |
ಅಸ್ತ್ರೈಃ ಸಂವಾರ್ಯ ತೇಜಸ್ವೀ ಗಂಧರ್ವಾನ್ ಪ್ರತ್ಯಯುಧ್ಯತ ॥16॥
ಪರಂತಪನೂ, ತೇಜಸ್ವಿಯೂ ಆದ ಅರ್ಜುನನು ಅವರು ಪ್ರಯೋಗಿಸಿದ ಶರವರ್ಷಗಳನ್ನು ತಡೆದು ಆ ಗಂಧರ್ವರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ಸ್ಥೂಣಾಕರ್ಣೇಂದ್ರಜಾಲಂ ಚ ಸೌರಂ ಚಾಪಿ ತಥಾಽರ್ಜುನಃ |
ಆಗ್ನೇಯಂ ಚಾಪಿ ಸೌಮ್ಯಂ ಚ ಸಸರ್ಜ ಕುರುನಂದನಃ ॥17॥
ಕುರುನಂದನನಾದ ಅರ್ಜುನನು ಸ್ಥೂಣಾಕರ್ಣಾಸ್ತ್ರ, ಇಂದ್ರಾಸ್ತ್ರ, ಸೂರ್ಯಾಸ್ತ್ರ ಮತ್ತು ಚಂದ್ರಾಸ್ತು ಆಗ್ನೇಯಾಸ್ತ್ರಗಳನ್ನು ಪ್ರಯೋಗಿಸಿದನು.
ತೇ ದಹ್ಯಮಾನಾ ಗಂಧರ್ವಾಃ ಕುಂತೀಪುತ್ರಸ್ಯ ಸಾಯಕೈಃ |
ದೈತೇಯಾ ಇವ ಶಕ್ರೇಣ ವಿಷಾದಮಗಮನ್ ಪರಮ್ ॥18॥
ಕುಂತೀಪುತ್ರನಾದ ಅರ್ಜುನನು ಪ್ರಯೋಗಿಸಿದ ಅಸ್ತ್ರಗಳಿಂದ ದಹಿಸಲ್ಪಡುತ್ತಿದ್ದ ಆ ಗಂಧರ್ವರು ಇಂದ್ರನಿಂದ ಪೀಡಿತರಾದ ದೈತ್ಯರಂತೆ ವಿಷಾದವನ್ನು ಹೊಂದಿದರು.
ಊರ್ಧ್ವಮಾಕ್ರಮಮಾಣಾಶ್ಚ ಶರಜಾಲೇನ ವಾರಿತಾಃ |
ವಿಸರ್ಪಮಾಣಾ ಭಲ್ಲೈಶ್ಚ ವಾರ್ಯಂತೇ ಸವ್ಯಸಾಚಿನಾ ॥19॥
ಮೇಲೆ ಹೋಗಲು ಪ್ರಯತ್ನಪಡುವ ಗಂಧರ್ವರು ಅರ್ಜುನನ ಬಾಣ ಪಂಜರದಿಂದ ತಡೆಯಲ್ಪಡುತಿತದ್ದರು. ಪಕ್ಕದಲ್ಲಿ ಹೋಗುವ ಗಂಧರ್ವರನ್ನು ಅರ್ಜುನನು ಭಲ್ಲಗಳಿಂದ ತಡೆಯುತ್ತಿದ್ದನು.
ಗಂಧರ್ವಾಂಸ್ತ್ರಾಸಿತಾನ್ ದೃಷ್ಟ್ವಾ ಕುಂತೀಪುತ್ರೇಣ ಭಾರತ |
ಚಿತ್ರಸೇನೋ ಗದಾಂ ಗೃಹ್ಯ ಸವ್ಯಸಾಚಿನಮಾದ್ರವತ್ ॥20॥
ಎಲೈ ಭಾರತನೇ, ಗಂಧರ್ವರು ಕುಂತೀಪುತ್ರನಿಂದ ಪೀಡಿತರಾದುದನ್ನು ನೋಡಿ ಗಂಧರ್ವರಾಜನಾದ ಚಿತ್ರಸೇನನು ಗದೆಯನ್ನು ಹಿಡಿದು ಅರ್ಜುನನ ಬಳಿಗೆ ಓಡಿದನು.
ತಸ್ಯಾಭಿಪತತಸ್ತೂರ್ಣಂ ಗದಾಹಸ್ತಸ್ಯ ಸಂಯುಗೇ |
ಗದಾಂ ಸರ್ವಾಯಸೀಂ ಪಾರ್ಥಃ ಶರೈಶ್ಚಿಚ್ಛೇದ ಸಪ್ತಧಾ ॥21॥
ಅವನು ಯುದ್ಧಭೂಮಿಯಲ್ಲಿ ಗದೆಯನ್ನು ಕೈಯಲ್ಲಿ ಹಿಡಿದು ತನ್ನ ಕಡೆಗೆ ವೇಗದಿಂದ ಬರುತಿತರುವುದನ್ನು ಗಮನಿಸಿದ ಅರ್ಜುನನು ಸರ್ವಾಯೋಮಯವಾದ ಆ ಗದೆಯನ್ನು (ಪೂರ್ಣವಾಗಿ ಕಬ್ಬಿಣದಿಂದ ಮಾಡಿದ ಆ ಗದೆಯನ್ನು) ಬಾಣಗಳಿಂದ ಏಳುಭಾಗವಾಗಿ ಕತ್ತರಿಸಿದನು.
ಸ ಗದಾಂ ಬಹುಧಾ ದೃಷ್ಟ್ವಾ ಕೃತ್ತಾಂ ಬಾಣೈಸ್ತರಸ್ವಿನಾ |
ಸಂವೃತ್ಯ ವಿದ್ಯಯಾಽಽತ್ಮಾನಂ ಯೋಧಯಾಮಾಸ ಪಾಂಡವಮ್ ॥22॥
ಚಿತ್ರಸೇನನು ತನ್ನ ಗದೆಯು ವೇಗಶಾಲಿಯಾದ ಪಾಂಡವನಿಂದ ಅನೇಕ ಭಾಗವಾಗಿ ಕತ್ತರಿಸಲ್ಪಟ್ಟಿದ್ದನ್ನು ನೋಡಿ ತನ್ನ ವಿದ್ಯೆಯಿಂದ ತನ್ನನ್ನು ರಕ್ಷಿಸಿಕೊಂಡು ಪಾಂಡವನಾದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಅಸ್ತ್ರಾಣಿ ತಸ್ಯ ದಿವ್ಯಾನಿ ಸಂಪ್ರಯುಕ್ತಾನಿ ಸರ್ವಶಃ |
ದಿವ್ಯೈರಸ್ತ್ರೈಸ್ತದಾ ವೀರಃ ಪರ್ಯವಾರಯದರ್ಜುನಃ |
ಸ ವಾರ್ಯಮಾಣಸ್ತೈರಸ್ತ್ರೈರರ್ಜುನೇನ ಮಹಾತ್ಮನಾ |
ಗಂಧರ್ವರಾಜೋ ಬಲವಾನ್ ಮಾಯಯಾಽಂತರ್ಹಿತಸ್ತದಾ ॥23॥
ಅವನು ಪ್ರಯೋಗಿಸಿದ ಎಲ್ಲಾ ದಿವ್ಯಾಸ್ತ್ರಗಳನ್ನೂ ವೀರನಾದ ಅರ್ಜುನನು ತನ್ನ ದಿವ್ಯಾಸ್ತ್ರಗಳಿಂದ ತಡೆದನು. ತನ್ನ ಅಸ್ತ್ರಗಳು ಮಹಾತ್ಮನಾದ ಅರ್ಜುನನಿಂದ ನಿವಾರಿಸಲ್ಪಟ್ಟಿದ್ದನ್ನು ನೋಡಿ ಬಲಿಷ್ಠನಾದ ಗಂಧರ್ವರಾಜನು ಆಗ ತನ್ನ ಮಾಯಾ ಶಕ್ತಿಯಿಂದ ಅಂತರ್ಧಾನವನ್ನು ಹೊಂದಿದನು.
ಅಂತರ್ಹಿತಂ ಸ(ತ)ಮಾಲಕ್ಷ್ಯ ಪ್ರಹರಂತಮಥಾರ್ಜುನಃ |
ತಾಡಯಾಮಾಸ ಖಚರೈರ್ದಿವ್ಯಾಸ್ತ್ರಪ್ರತಿಮಂತ್ರಿತೈಃ ॥24॥
ಅಂತರ್ಧಾನವನ್ನು ಹೊಂದಿದ ಚಿತ್ರಸೇನನನ್ನು ಗಮನಿಸಿ ಆಗ ಅರ್ಜುನನು ದಿವ್ಯಾಸ್ತ್ರಗಳಿಂದ ಮಂತ್ರಿತವಾದ ಆಕಾಶಗಾಮಿಯಾದ ಬಾಣಗಳಿಂದ ಪ್ರಹಾರವನ್ನು ಮಾಡಿದನು.
ಅಂತರ್ಧಾನವಧಂ ಚಾಸ್ಯ ಚಕ್ರೇ ಕ್ರುದ್ಧೋಽರ್ಜುನಸ್ತದಾ |
ಶಬ್ದವೇಧ್ಯಂ ಸಮಾಶ್ರಿತ್ಯ ಬಹುರೂಪೋ ಧನಂಜಯಃ ॥25॥
ಕ್ರೋಧಗೊಂಡ ಅರ್ಜುನನು ಆಗ ಶಬ್ದವೇಧೀ ವಿದ್ಯೆಯನ್ನು ಆಶ್ರಯಿಸಿ ಅನೇಕ ರೂಪವನ್ನು ತೆಗೆದುಕೊಂಡು ಚಿತ್ರಸೇನನ ಅಂತರ್ಧಾನವನ್ನು ನಾಶಮಾಡಿದನು.
ಅವಧ್ಯಮಾನಾಸ್ತೈರಸ್ತ್ರೈರರ್ಜುನೇನ ಮಹಾತ್ಮನಾ |
ತತೋಽಸ್ಯಾ ದರ್ಶಯಾಮಾಸ ತದಾಽಽತ್ಮಾನಂ ಪ್ರಿಯಃ ಸಖಾ ॥26॥
ಮಹಾತ್ಮನಾದ ಅರ್ಜುನನ ಅಸ್ತ್ರಗಳಿಂದ ಅವಧ್ಯನಾಗಿ ಅರ್ಜುನನಿಗೆ ಪ್ರಿಯಸಖನಾಗಿದ್ದ ಚಿತ್ರಸೇನನು ಆಗ ತನ್ನನ್ನು ತಾನು ಅರ್ಜುನನಿಗೆ ತೋರಿಸಿಕೊಂಡನು.
ಚಿತ್ರಸೇನಸ್ತದೋವಾಚ ಸಖಾಯಂ ಯುಧಿ ವಿದ್ಧಿ ಮಾಮ್ |
ಚಿತ್ರಸೇನಂ ಸಮಾ(ಮಥಾ)ಲಕ್ಷ್ಯ ಸಖಾಯಂ ಯುಧಿ ವಿಹ್ವಲಮ್ |
ಸಂಜಹಾರಾಸ್ತ್ರಮಥ ತತ್ ಪ್ರಸೃಷ್ಟಂ ಪಾಂಡವರ್ಷಭಃ ॥27॥
ಚಿತ್ರಸೇನನು ಅರ್ಜುನನನ್ನು ಕುರಿತು ಆ ಯುದ್ಧಭೂಮಿಯಲ್ಲಿ ನನ್ನನ್ನು ನಿನ್ನ ಸ್ನೇಹಿತನಾದ ಚಿತ್ರಸೇನನೆಂದು ತಿಳಿ ಎಂದು ಹೇಳಿದನು. ತನ್ನ ಸ್ನೇಹಿತನಾದ ಚಿತ್ರಸೇನನು ಯುದ್ಧದಲ್ಲಿ ವಿಹ್ವಲನಾಗಿರುವುದನ್ನು ಗಮನಿಸಿ ಪಾಂಡವಶ್ರೇಷ್ಠನಾದ ಅರ್ಜುನನು ತಾನು ಪ್ರಯೋಗಿಸಿದ ಅಸ್ತ್ರವನ್ನು ಉಪಸಂಹಾರ ಮಾಡಿದನು.

ದೃಷ್ಟ್ವಾ ತು ಪಾಂಡವಾಃ ಸರ್ವೇ ಸಂಹೃತಾಸ್ತ್ರಂ ಧನಂಜಯಮ್ |
ಸಂಜಹ್ರುಃ ಪ್ರದ್ರುತಾನಶ್ವಾನ್ ಶರವೇಗಾನ್ ಧನೂಂಷಿ ಚ ॥28॥
ಧನಂಜಯನು ತನ್ನ ಅಸ್ತ್ರಗಳನ್ನು ಸಂಹಾರಮಾಡಿದುದನ್ನು ನೋಡಿದ ಪಾಂಡವರು ತಮ್ಮ ಧನುಸ್ಸುಗಳನ್ನೂ, ಬಾಣವೇಗವನ್ನೂ, ಓಡುತ್ತಿದ್ದ ಕುದುರೆಗಳನ್ನೂ ಸಂಹಾರ ಮಾಡಿದರು (ನಿಲ್ಲಿಸಿದರು).
ಚಿತ್ರಸೇನಶ್ಚ ಭೀಮಶ್ಚ ಸವ್ಯಸಾಚೀ ಯಮಾವಪಿ |
ಪೃಷ್ಟ್ವಾ ಕೌಶಲಮನ್ಯೋನ್ಯಂ ರಥೇಷ್ವೇವಾವತಸ್ಥಿರೇ ॥29॥
ಚಿತ್ರಸೇನ, ಭೀಮ, ಅರ್ಜುನ, ನಕುಲಸಹದೇವರು ರಥಗಳಲ್ಲಿಯೇ ಕುಳಿತು ಪರಸ್ಪರ ಯೋಗಕ್ಷೇಮವನ್ನು ವಿಚಾರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ಚತುಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ಗಂಧರ್ವಪರಾಭವೋ ನಾಮ ದಶಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತೈದನೆಯ ಅಧ್ಯಾಯ
ಚಿತ್ರಸೇನನಿಂದ ದುರ್ಯೋಧನನ ಬಂಧನಕ್ಕೆ ಕಾರಣದ ನಿರೂಪಣೆ. ಯುಧಿಷ್ಠಿರನಿಂದ ದುರ್ಯೋಧನಾದಿಗಳ ಬಂಧವಿಮೋಚನೆ.
ಅಲ್ಲಿಂದ ದುರ್ಯೋಧನನ ಪ್ರಯಾಣ.
ವೈಶಂಪಾಯನಃ
ತತೋಽರ್ಜುನಶ್ಚಿತ್ರಸೇನಂ ಪ್ರಹಸನ್ನಿದಮಬ್ರವೀತ್ |
ಮಧ್ಯೇ ಗಂಧರ್ವಸೈನ್ಯಾನಾಂ ಮಹೇಷ್ವಾಸೋ ಮಹಾದ್ಯುತಿಃ ॥1॥
ವೈಶಂಪಾಯನ ಆಗ ಗಂಧರ್ವ ಸೈನ್ಯಗಳ ಮಧ್ಯೆ ಮಹಾಧನುರ್ಧಾರಿಯೂ ಮತ್ತು ಮಹಾದ್ಯುತಿಯೂ ಆದ ಅರ್ಜುನನು ಚಿತ್ರಸೇನನನ್ನು ಕುರಿತು ಹೀಗೆ ಮಾತನಾಡಿದನು.
ಕಿಂ ತೇ ವ್ಯವಸಿತಂ ವೀರ ಕೌರವಾಣಾಂ ವಿನಿಗ್ರಹೇ |
ಕಿಮರ್ಥಂ ಚ ಸದಾರೋಽಯಂ ನಿಗೃಹೀತಃ ಸುಯೋಧನಃ ॥2॥
ಎಲೈ ವೀರನೇ, ಕೌರವರನ್ನು ನಿಗ್ರಹಮಾಡುವುದರಲ್ಲಿ ನಿನ್ನ ಅಭಿಪ್ರಾಯವೇನು? ಪತ್ನೀಸಹಿತನಾದ ಸುಯೋಧನನನ್ನು ನೀನು ಏತಕ್ಕೆ ನಿಗ್ರಹಿಸಿದೆ?
ಚಿತ್ರಸೇನಃ
ವಿದಿತೋಽಯಮಭಿಪ್ರಾಯಸ್ತತ್ರಸ್ಥೇನ ದುರಾತ್ಮನಃ |
ದುರ್ಯೋಧನಸ್ಯ ಪಾಪಸ್ಯ ಕರ್ಣಸ್ಯ ಚ ಧನಂಜಯ ॥3॥
ಚಿತ್ರಸೇನ ಎಲೈ ಧನಂಜಯನೇ, ದುರಾತ್ಮನಾದ ದುರ್ಯೋಧನನ ಮತ್ತು ಪಾಪಶೀಲನಾದ ಕರ್ಣನ ಈ ದುರಭಿಪ್ರಾಯವು ನಮಗೆ ಸ್ವರ್ಗದಲ್ಲಿದ್ದಾಗಲೇ ತಿಳಿಯಿತು.
ವನಸ್ಥಾನ್ ಭವತೋ ಜ್ಞಾತ್ವಾ ಕ್ಲಿಶ್ಯಮಾನಾನನಾಥವತ್ |
ಇಮೇ ಚ(ಽವ)ಹಸಿತುಂ ಪ್ರಾಪ್ತಾ ದ್ರೌಪದೀಂ ಚ ಯಶಸ್ವಿನೀಮ್ |
ಜ್ಞಾತ್ವಾ ಚಿಕೀರ್ಷಿತಂ ಚೈಷಾಂ ಮಾಮುವಾಚ ಸುರೇಶ್ವರಃ ॥4॥
ನೀವು ಯಶಸ್ವಿನಿಯಾದ ದ್ರೌಪದಿಯ ಜೊತೆಯಲ್ಲಿ ಕಾಡಿನಲ್ಲಿ ಕ್ಲೇಶ ಪಡುತ್ತಿರುವುದನ್ನು ನೋಡಿ ನಿಮ್ಮನ್ನೂ ಮತ್ತು ದ್ರೌಪದಿಯನ್ನೂ ಅಪಹಾಸ ಮಾಡುವ ಇವರ ಉದ್ದೇಶವನ್ನು ತಿಳಿದು ಸುರೇಶ್ವರನಾದ ಇಂದ್ರನು ನನ್ನನ್ನು ಕುರಿತು ಹೀಗೆ ಹೇಳಿದನು.
ಗಚ್ಛ ದುರ್ಯೋಧನಂ ಬದ್ಧ್ವಾ ಸಹಾಮಾತ್ಯಮಿಹಾನಯ |
ಧನಂಜಯಶ್ಚ ತೇ ರಕ್ಷ್ಯಃ ಸಹ ಭ್ರಾತೃಭಿರಾಹವೇ ॥5॥
ಸ ಚ ಪ್ರಿಯಃ ಸಖಾ ತುಭ್ಯಂ ಶಿಷ್ಯಶ್ಚ ತವ ಪಾಂಡವಃ ॥6॥
ನೀನು ಹೋಗಿ ಅಮಾತ್ಯರ ಜೊತೆಯಲ್ಲಿ ದುರ್ಯೋಧನನನ್ನು ಬಂಧಿಸಿ ಇಲ್ಲಿಗೆ ಕರೆದುಕೊಂಡು ಬಾ. ಅರ್ಜುನನನ್ನು, ಅವನ ಸಹೋದರರನ್ನು ನೀನು ಯುದ್ಧದಲ್ಲಿ ರಕ್ಷಿಸಬೇಕು. ಆ ಪಾಂಡವನು ನಿನಗೆ ಪ್ರಿಯಸ್ನೇಹಿತನೂ ಮತ್ತು ಶಿಷ್ಯನೂ ಆಗಿದ್ದಾನೆ (ಎಂದು ಹೇಳಿದನು).
ಚಿತ್ರಸೇನಃ
ವಚನಾದ್ ದೇವರಾಜಸ್ಯ ತತೋಽಸ್ಮೀಹಾಗತೋ ದ್ರುತಮ್ |
ಅಯಂ ದುರಾತ್ಮಾ ಬದ್ಧಶ್ಚ ಗಮಿಷ್ಯಾಮಿ ಸುರಾಲಯಮ್ ॥7॥
ಚಿತ್ರಸೇನ ದೇವರಾಜನ ವಚನದಂತೆ ನಾನು ಇಲ್ಲಿಗೆ ಬಂದೆನು. ಈ ದುರಾತ್ಮನಾದ ದುರ್ಯೋಧನನನ್ನು ಬಂಧಿಸಿ ನಾನು ಸ್ವರ್ಗಲೋಕಕ್ಕೆ ಹೋಗುವೆನು.
ಅರ್ಜುನಃ
ಉತ್ಸೃಜ್ಯತಾಂ ಚಿತ್ರಸೇನ ಭ್ರಾತಾಽಸ್ಮಾಕಂ ಸುಯೋಧನಃ |
ಧರ್ಮರಾಜಸ್ಯ ಸಂದೇಶಾನ್ಮಮ ಚೇದಿಚ್ಛಸಿ ಪ್ರಿಯಮ್ ॥8॥

ಅರ್ಜುನ ಚಿತ್ರಸೇನನೇ, ದುರ್ಯೋಧನನು ನಮ್ಮ ಸಹೋದರ. ನನಗೆ ಪ್ರಿಯವನ್ನು ಮಾಡುವುದಾದರೆ ಧರ್ಮರಾಜನ ವಚನದಂತೆ ಇವನನ್ನು ಬಿಟ್ಟುಬಿಡು.
ಚಿತ್ರಸೇನಃ
ಪಾಪೋಽಯಂ ನಿತ್ಯಸಂದುಷ್ಟೋ ನ ವಿಮೋಕ್ಷಣಮರ್ಹತಿ |
ಪ್ರಲಬ್ಧಾ ಧರ್ಮರಾಜಸ್ಯ ಕೃಷ್ಣಾಯಾಶ್ಚ ಧನಂಜಯ ॥9॥
ಚಿತ್ರಸೇನ ಈ ಪಾಪಿಯು ಯಾವಾಗಲೂ ದುಷ್ಟನಾಗಿದ್ದಾನೆ. ಇವನು ಬಿಡುಗಡೆ ಮಾಡಲು ಅರ್ಹನಲ್ಲ. ಇವನು ಧರ್ಮರಾಜನಿಗೂ ಮತ್ತು ದ್ರೌಪದಿಗೂ ವಂಚನೆಯನ್ನು ಮಾಡಿದ್ದಾನೆ.
ಅರ್ಜುನಃ
ನೇದಂ ಚಿಕೀರ್ಷಿತಂ ತಸ್ಯ ಕುಂತೀಪುತ್ರೋ ಮಹಾವ್ರತಃ |
ಜಾನಾತಿ ಧರ್ಮರಾಜೋ ಹಿ ಶ್ರುತ್ವಾ ಕುರು ಯಥೇಚ್ಛಸಿ ॥10॥
ಅರ್ಜುನ ಇದು ಮಹಾವ್ರತನಾದ ಧರ್ಮರಾಜನಿಗೆ ಸಮ್ಮತವಾದುದಲ್ಲ. ನೀನು ಹೇಳುವ ವಂಚನೆಯ ಅಭಿಪ್ರಾಯವನ್ನು ಧರ್ಮರಾಜನು ತಿಳಿದಿಲ್ಲ. ಈ ಮಾತನ್ನು ಕೇಳಿ ನಿನಗೆ ಇಷ್ಟವಾದಂತೆ ಮಾಡು.
ವೈಶಂಪಾಯನಃ
ತೇ ಸರ್ವ ಏವ ರಾಜಾನಮಭಿಜಗ್ಮುರ್ಯುಧಿಷ್ಠಿರಮ್ |
ಅಭಿಗಮ್ಯ ಚ ತತ್ಸರ್ವಂ ಶಶಂಸುಸ್ತಸ್ಯ ಚೇಷ್ಟಿತಮ್ ॥11॥
ವೈಶಂಪಾಯನ ಆಗ ಅವರೆಲ್ಲರೂ ರಾಜನಾದ ಯುಧಿಷ್ಠಿರನ ಬಳಿಗೆ ಹೋಗಿ ಅವನ ಚೇಷ್ಟೆ ಎಲ್ಲವನ್ನೂ ಯುಧಿಷ್ಠಿರನಿಗೆ ನಿವೇದಿಸಿದರು.
ಅಜಾತಶತ್ರುಸ್ತಚ್ಛ್ರುತ್ವಾ ಗಂಧರ್ವಸ್ಯ ವಚಸ್ತದಾ |
ಮೋಕ್ಷಯಾಮಾಸ ತಾನ್ ಸರ್ವಾನ್ ಗಂಧರ್ವಾನ್ ಪ್ರಶಶಂಸ ಚ ॥
ಅಜಾತಶತ್ರುವು ಗಂಧರ್ವನ ಆ ಮಾತುಗಳನ್ನು ಕೇಳಿ ಅವರೆಲ್ಲರನ್ನೂ ಬಂಧನದಿಂದ ಬಿಡುಗಡೆಗೊಳಿಸಿ ಗಂಧರ್ವರನ್ನು ಪ್ರಶಂಸಿಸಿದನು.
ದಿಷ್ಟ್ಯಾ ಭವದ್ಭಿರ್ಬಲಿಭಿಃ ಶಕ್ತೈಃ ಸರ್ವೈರ್ನ ಹಿಂಸಿತಃ |
ದುರ್ವೃತ್ತೋ ಧಾರ್ತರಾಷ್ಟ್ರೋಽಯಂ ಸಾಮಾತ್ಯಜ್ಞಾತಿಬಾಂಧವಃ ॥13॥
ದೇವರ ದಯೆಯಿಂದ ಪ್ರಬಲರೂ ಮತ್ತು ಸಮರ್ಥರೂ ಆದ ನಿಮ್ಮಿಂದ ದುಷ್ಟನಡತೆಯುಳ್ಳ ಅಮಾತ್ಯಜ್ಞಾತಿಗಳಿಂದ ಮತ್ತು ಬಂಧುಗಳಿಂದ ಸಹಿತನಾದ ಈ ದುರ್ಯೋಧನನು ಹಿಂಸಿಸಲ್ಪಡಲಿಲ್ಲ.
ಉಪಕಾರೋ ಮಹಾಂಸ್ತಾತ ಕೃತೋಽಯಂ ಮಮ ಖೇಚರೈಃ |
ಕುಲಂ ನ ಪರಿಭೂತಂ ಮೇ ಮೋಕ್ಷಣೇಽಸ್ಯ ದುರಾತ್ಮನಃ ॥14॥
ಎಲೈ ಚಿತ್ರಸೇನನೇ, ಪ್ರೀತಿಪಾತ್ರನೇ, ಗಗನಚರರಾದ ಗಂಧರ್ವರಿಂದ ನನಗೆ ದೊಡ್ಡ ಉಪಕಾರವು ಮಾಡಲ್ಪಟ್ಟಿತು. ಈ ದುರಾತ್ಮನನ್ನು ಮೋಚನೆ ಮಾಡಿರುವುದರಿಂದ ನಮ್ಮ ಕುಲಕ್ಕೆ ಒದಗಿದ್ದ ದೊಡ್ಡ ಅವಮಾನವು ನಿವಾರಣೆಯಾಯಿತು.
ಆಜ್ಞಾಪಯಧ್ವಮಿಷ್ಟಾನಿ ಪ್ರಯಾಮೋ ದರ್ಶನೇನ ವಃ |
ಪ್ರಾಪ್ಯ ಸರ್ವಾನಭಿಪ್ರಾಯಾಂಸ್ತತೋ ವ್ರಜತ ಮಾಚಿರಮ್ ॥15॥
ನಿಮಗೆ ಏನು ಇಷ್ಟವೆಂದು ಹೇಳಿ. ನಿಮ್ಮ ದರ್ಶನದಿಂದ ನಮಗೆ ಸಂತೋಷವಾಗುತ್ತಿದೆ. ನಿಮಗೆ ಅಭಿಪ್ರೇತವಾದುದನ್ನೆಲ್ಲಾ ಪಡೆದು ಇಲ್ಲಿಂದ ನೀವು ಶೀಘ್ರವಾಗಿ ಹೊರಡಿ.
ವೈಶಂಪಾಯನಃ
ಅನುಜ್ಞಾತಾಸ್ತು ಗಂಧರ್ವಾಃ ಪಾಂಡುಪುತ್ರೇಣ ಧೀಮತಾ |
ಸಹಾಪ್ಸರೋಭಿಃ ಸಂಹೃಷ್ಟಾಶ್ಚಿತ್ರಸೇನಮುಖಾ ಯಯುಃ ॥16॥
ವೈಶಂಪಾಯನ ಮೇಧಾವಿಯಾದ ಪಾಂಡುಪುತ್ರರಿಂದ ಅನುಮತಿಯನ್ನು ಪಡೆದ ಚಿತ್ರಸೇನ ಮೊದಲಾದ ಗಂಧರ್ವರು ಸಂತೋಷಯುಕ್ತರಾಗಿ ಅಪ್ಸರೆಯರ ಜೊತೆಯಲ್ಲಿ ಹಿಂದಿರುಗಿದರು.
ದೇವಲೋಕಂ ತತೋ ಗತ್ವಾ ಗಂಧರ್ವೈಃ ಸಹಿತಸ್ತದಾ |
ನ್ಯವೇದಯಚ್ಚ ತತ್ಸರ್ವಂ ಚಿತ್ರಸೇನಃ ಶತಕ್ರತೋಃ ॥17॥
ಗಂಧರ್ವಸಹಿತನಾದ ಚಿತ್ರಸೇನನು ದೇವಲೋಕಕ್ಕೆ ಹೋಗಿ ನಡೆದ ಘಟನೆಗಳನ್ನೆಲ್ಲಾ ಶತಕ್ರತುವಾದ ಇಂದ್ರನಿಗೆ ನಿವೇದಿಸಿದನು.
ದೇವರಾಡಪಿ ಗಂಧರ್ವಾನ್ಮೃತಾಂಸ್ತಾನ್ ಸಮಜೀವಯತ್ |
ದಿವ್ಯೇನಾಮೃತವರ್ಷೇಣ ಯೇ ಹತಾಃ ಕೌರವೈರ್ಯುಧಿ ॥18॥
ದೇವೇಂದ್ರನೂ ಸಹ ಯುದ್ಧದಲ್ಲಿ ಕೌರವರಿಂದ ಮೃತರಾದ ಗಂಧರ್ವರನ್ನು ದಿವ್ಯವಾದ ಅಮೃತವರ್ಷದಿಂದ ಉಜ್ಜೀವನಗೊಳಿಸಿದನು.
ಚಿತ್ರಸೇನಸ್ತದಾ ವಾಕ್ಯಮುವಾಚ ಪ್ರೌಢಯಾ ಗಿರಾ |
ಮುಂಚಧ್ವಂ ಸಾನುಜಾಮಾತ್ಯಂ ಸದಾರಂ ಚ ಸುಯೋಧನಮ್ ॥19॥
ಆಗ ಚಿತ್ರಸೇನನು ಉದಾರವಾದ ಮಾತುಗಳಿಂದ ತಮ್ಮಂದಿರು, ಅಮಾತ್ಯರು ಮತ್ತು ಪತ್ನಿಯರಿಂದ ಕೂಡಿದ ಈ ಸುಯೋಧನನನ್ನು ಬಿಡುಗಡೆ ಮಾಡಿ ಎಂದು ಹೇಳಿದನು.
ಗಂಧರ್ವಾಸ್ತು ವಚಃಶ್ರುತ್ವಾ ಚಿತ್ರಸೇನಸ್ಯ ವೈದ್ರುತಮ್ |

ರಾಜಾನಂ ಮೋಚಯಾಮಾಸುರ್ಬದ್ಧಂ ನಿಗಡಬಂಧನೈಃ ॥20॥
ಚಿತ್ರಸೇನನ ಮಾತನ್ನು ಕೇಳಿ ಗಂಧರ್ವರು ಶೀಘ್ರವಾಗಿ ಸಂಕೋಲೆಗಳಿಂದ ಬದ್ಧನಾದ ರಾಜನನ್ನು ಬಿಡುಗಡೆಗೊಳಿಸಿದರು.
ಸದಾರಂ ಸಾನುಗಾಮಾತ್ಯಂ ಬಾಣಚಾಲಮಯೇ ವನೇ |
ಲುಂರತಶ್ಚಾऽಪಿ ತೇ ಸರ್ವೇ ಯುಧಿಷ್ಠಿರಸಮೀಪತಃ ॥21॥
ಪತಿತಾಃ ಲಜ್ಜಿತಾಶ್ಚೈವ ತಸ್ಥುಶ್ಚಾಧೋಮುಖಾಸ್ತದಾ |
ಪತ್ನಿಯರು ಮತ್ತು ಅನುಜರು ಅಮಾತ್ಯರಿಂದ ಕೂಡಿದ ದುರ್ಯೋಧನನನ್ನು ಬಾಣಗಳ ಸಮೂಹಗಳು ಹರಡಿದ್ದ ಆ ಕಾಡಿನಲ್ಲಿ ಬಿಡುಗಡೆ ಮಾಡಿದರು. ಅವರೆಲ್ಲರೂ ಆ ಬಾಣಗಳನ್ನು ದಾಟುತ್ತಾ ನಾಚಿಕೆಯಿಂದ ಮುಖವನ್ನು ತಗ್ಗಿಸಿ ಯುಧಿಷ್ಠಿರನ ಸಮೀಪದಲ್ಲಿ ಬಂದು ನಿಂತರು.
ಯುಧಿಷ್ಠಿರೋऽಪಿ ದಯಯಾ ತಾನ್ ಸಮೀಕ್ಷ್ಯ ತಥಾಗತಾನ್ ॥22॥
ಜ್ಞಾತೀಂಸ್ತಾನವಮುಚ್ಯಾಥ ರಾಜದಾರಾಂಶ್ಚ ಸರ್ವಶಃ |
ಕೃತ್ವಾ ಚ ದುಷ್ಕರಂ ಕರ್ಮ ಪ್ರೀತಿಯುಕ್ತಾಶ್ಚ ಪಾಂಡವಾಃ ॥23॥
ಸಸ್ತ್ರೀಕುಮಾರೈಃ ಕುರುಭಿಃ ಪೂಜ್ಯಮಾನಾ ಮಹಾರಥಾಃ |
ಬಭ್ರಾಜಿರೇ ಮಹಾತ್ಮಾನಃ ಕ್ರತುಮಧ್ಯೇ ಯಥಾऽಗ್ನಯಃ ॥24॥
ಯುಧಿಷ್ಠಿರನೂ ಸಹ ಆ ಸ್ಥಿತಿಯಲ್ಲಿ ಬಂದ ಅವರನ್ನು ನೋಡಿ ದಯೆಯಿಂದ ಅವರೆಲ್ಲರನ್ನೂ, ರಾಜಪತ್ನಿಯರನ್ನೂ ಬಿಡುಗಡೆಗೊಳಿಸಿ ದುಷ್ಕರವಾದ ಕರ್ಮವನ್ನು ಮಾಡಿದನು. ಮಹಾರಥರೂ, ಮಹಾತ್ಮರೂ ಆದ ಪಾಂಡವರು ಸ್ತ್ರೀಯರು ಮತ್ತು ಕುಮಾರರಿಂದ ಸಹಿತರಾದ ಕುರುಗಳಿಂದ ಪೂಜಿತರಾಗಿ ಸಂತೋಷವನ್ನು ಹೊಂದಿ ಯಜ್ಞಮಧ್ಯದಲ್ಲಿ ಅಗ್ನಿಗಳಂತೆ ಶೋಭಿಸಿದರು.
ತತೋ ದುರ್ಯೋಧನಂ ಮುಕ್ತಂ ಭ್ರಾತೃಭಿಃ ಸಹಿತಸ್ತದಾ |
ಯುಧಿಷ್ಠಿರಸ್ತು ಪ್ರಣಯಾದಿದಂ ವಚನಮಬ್ರವೀತ್ ॥25॥
ಅನಂತರ ಮುಕ್ತನಾದ ಭ್ರಾತೃಸಹಿತನಾದ ದುರ್ಯೋಧನನನ್ನು ಕುರಿತು ಯುಧಿಷ್ಠಿರನು ಪ್ರೀತಿಯಿಂದ ಹೀಗೆ ಮಾತನಾಡಿದನು.
ಮಾ ಸ್ಮ ತಾತ ಪುನಃ ಕಾರ್ಷೀರೀದೃಶಂ ಸಾಹಸಂ ಕ್ವಚಿತ್ |
ನ ಹಿ ಸಾಹಸಕರ್ತಾರಃ ಸುಖಮೇಧಂತಿ ಭಾರತ ॥26॥
ಪ್ರೀತಿಪಾತ್ರನೇ, ಪುನಃ ಇಂತಹ ಸಾಹಸಕಾರ್ಯವನ್ನು ಮಾಡಬೇಡ. ಭಾರತನೇ, ಸಾಹಸ ಕಾರ್ಯವನ್ನು ಮಾಡುವವರು ಎಂದೂ ಸುಖವನ್ನು ಹೊಂದುವುದಿಲ್ಲ.
ಸ್ವಸ್ತಿಮಾನ್ ಸಹಿತಃ ಸರ್ವೈರ್ಭ್ರಾತೃಭಿಃ ಕುರುನಂದನ |
ಗೃಹಾನ್ ವ್ರಜ ಯಥಾಕಾಮಂ ವೈಮನಸ್ಯಂ ಚ ಮಾ ಕೃಥಾಃ ॥27॥
ಎಲೈ ಕುರುನಂದನನನೇ, ಎಲ್ಲ ತಮ್ಮಂದಿರಿಂದ ಸಹಿತನಾಗಿ ಕ್ಷೇಮದಿಂದ ನಿನ್ನ ಇಚ್ಛೆಯಂತೆ ಮನೆಗೆ ಹಿಂದಿರುಗು. ವೈಮನಸ್ಯವನ್ನು ಮಾಡಬೇಡ.
ವೈಶಂಪಾಯನಃ
ಪಾಂಡವೇನಾಭ್ಯನುಜ್ಞಾತೋ ರಾಜಾ ದುರ್ಯೋಧನಸ್ತದಾ |
ವಿದೀರ್ಯಮಾಣೋ ವ್ರೀಡಾವಾನ್ ಜಗಾಮ ನಗರಂ ಪ್ರತಿ ॥28॥
ವೈಶಂಪಾಯನ ಪಾಂಡವನಾದ ಧರ್ಮರಾಜನಿಂದ ಅನುಜ್ಞೆಯನ್ನು ಪಡೆದ ದುರ್ಯೋಧನ ರಾಜನು ಆಗ ಅವಮಾನದಿಂದ (ನಾಚಿಕೆಯಿಂದ) ಬಿರಿದು ಹೋಗುತ್ತಾ ತನ್ನ ನಗರಕ್ಕೆ ಹೊರಟನು.
ತಸ್ಮಿನ್ ಗತೇ ಕೌರವೇಯೇ ಕುಂತೀಪುತ್ರೋ ಯುಧಿಷ್ಠಿರಃ |
ಭ್ರಾತೃಭಿಃ ಸಹಿತೋ ವೀರಃ ಪೂಜ್ಯಮಾನೋ ದ್ವಿಜಾತಿಭಿಃ ॥29॥
ತಪೋಘನೈಶ್ಚ ತೈಃ ಸರ್ವೈರ್ವೃತಃ ಶಕ್ರ ಇವಾಮರೈಃ |
ತದಾ ದ್ವೈತವನೇ ತಸ್ಮಿನ್ ವಿಜಹಾರ ಮುದಾ ಯುತಃ ॥30॥
ಆ ಕೌರವರಾಜನು ಹೊರಟುಹೋಗುತ್ತಿರಲು ಕುಂತೀಪುತ್ರನಾದ ವೀರನಾದ ಯುಧಿಷ್ಠಿರನು ತಮ್ಮಂದಿರಿಂದ ಸಹಿತನಾಗಿ ಬ್ರಾಹ್ಮಣರಿಂದ ಪೂಜಿಸಲ್ಪಟ್ಟು ತಪೋಧನರಿಂದ ಸಂವೃತನಾಗಿ ದೇವತೆಗಳಿಂದ ಕೂಡಿದ ಶಕ್ರನಂತೆ ಆ ದ್ವೈತವನದಲ್ಲಿ ಸಂತೋಷದಿಂದ ಯುಕ್ತನಾಗಿ ವಿಹರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ಪಂಚತ್ರಿಂಶಾಧಿಕದ್ವಿಶತತಮೋऽಧ್ಯಾಯಃ ॥
॥ ಇತಿ ಘೋಷಯಾತ್ರಾಪರ್ವಣಿ ದುರ್ಯೋಧನ ಮೋಕ್ಷಣಂನಾಮ ಏಕಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತೈದನೆಯ
ಅಧ್ಯಾಯ ಮುಗಿಯಿತು.
॥ ಘೋಷಯಾತ್ರಾಪರ್ವ ಸಮಾಪ್ತಮ್ ॥
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಸ ಚಿತ್ರಸೇನೋ ವಾಸವೋಕ್ತಂ ಚ ಸರ್ವಂ
ಕುಮಂತ್ರಿತಂ ಧಾರ್ತರಾಷ್ಟ್ರಸ್ಯ ಚಾऽಹ |
ಪಾರ್ಥಸ್ಯ ಭೀಮಸ್ಯ ಚ ತನ್ನಿಶಮ್ಯ

ಸುವದೀಡಿತೋ ಧೃತರಾಷ್ಟ್ರಾತ್ಮಜೋಽಭೂತ್ ॥397॥
ಚಿತ್ರಸೇನ ಅರ್ಜುನನಿಗೂ ಭೀಮನಿಗೂ ದುರ್ಯೋಧನನ ದುರಾಲೋಚನೆಯನ್ನೂ ಇಂದ್ರನ ಆಜ್ಞೆಯನ್ನೂ ಪೂರ್ತಿಯಾಗಿ ತಿಳಿಸಿದ. ಅದನ್ನು ಕೇಳಿ ದುರ್ಯೋಧನ ಬಹಳ ಲಜ್ಜಿತನಾದ.
ಸಮಾಪ್ಯ ಯಜ್ಞಂ ಚ ತತೋಽಭಿಯಾಂತಂ
ಸರ್ವೇ ಪದಾಪುರ್ಧರ್ಮರಾಜಂ ಸ ಚಾಽಶು |
ಸಂಪೂಜ್ಯ ತೂತ್ಸೃಜ್ಯ ಚ ಚಿತ್ರಸೇನ-
ಮೂಚೇ ಗಾಂಧಾರೇ ನ ಪುನಃ ಕಾರ್ಯಮೀದೃಕ್ ॥398॥
ಅಷ್ಟರಲ್ಲಿ ಯಜ್ಞವನ್ನು ಮುಗಿಸಿ ಎದುರಿಗೆ ಬಂದ ಧರ್ಮರಾಜನ ಬಳಿಯಲ್ಲಿ ಎಲ್ಲರೂ ಬೇಗನೆ ಬಂದು ಸೇರಿದರು. ಧರ್ಮರಾಜ ಚಿತ್ರಸೇನನನ್ನು ಪ್ರಶಂಸೆ ಮಾಡಿ ಕಳಿಸಿಕೊಟ್ಟ ದುರ್ಯೋಧನನಿಗೆ, `ನೀನಿನ್ನು ಇಂಥ ಸಾಹಸಕ್ಕೆ ತೊಡಗಬೇಡ' ಎಂದ.
ಸ ಪಾಂಡವೈರ್ಮೋಚಿತಃ ಸಾನುಜಶ್ಚ
ಸಭಾರ್ಯಕಃ ಕಿಧಿಟತೋಽಪಗಮ್ಯ |
ಸಮ್ಮೀಲನಾಯೋಪವಿಷ್ಟಶ್ಚ ತತ್ರ
ಸುವದೀಡಿತಃ ಸೂತಪುತ್ರಂ ದದರ್ಶಃ ॥399॥
ದುರ್ಯೋಧನ ಪಾಂಡವರ ಸಹಾಯದಿಂದ ಬಿಡುಗಡೆ ಹೊಂದಿ ಬಹಳ ಲಜ್ಜಿತನಾಗಿ ಸೋದರರೊಂದಿಗೆ ಮತ್ತು ಹೆಂಡಂದಿರೊಂದಿಗೆ ಅಲ್ಲಿಂದ ಸ್ವಲ್ಪ ದೂರದವರೆಗೆ ಹೋಗಿ ಅಲ್ಲಿಯೇ ತನ್ನ ಸೈನ್ಯವನ್ನು ಒಟ್ಟುಗೂಡಿಸುವುದಕ್ಕಾಗಿ ಕುಳಿತ. ಅಲ್ಲಿಯೇ ಕರ್ಣನನ್ನು ಕಂಡ.
ಸ ಚಾಽಹ ದಿಷ್ಟ್ಯಾ ಜಯಸಿ ರಾಜನ್ನಿತಿ ಸುಯೋಧನಮ್ |
ವದೀಡಿತೋ ನೇತಿ ತಂ ಚೋಕ್ತ್ವಾ ಯಥಾವೃತ್ತಂ ಸುಯೋಧನಃ |
ಉಕ್ತ್ವಾ ಪದಾಯೋಪವೇಶಾಂ ಚ ಚಕ್ರೇ ತತ್ರ ಸುದುಃಖಿತಃ ॥400॥
ಕರ್ಣದುರ್ಯೋಧನನಿಗೆ ಹೇಳಿದ, `ರಾಜನೇ, ಸುದೈವದಿಂದ ನೀನು ಜಯಗಳಿಸಿದೆ' ಎಂದು. ದುರ್ಯೋಧನ ಲಜ್ಜಿತನಾಗಿ `ಇಲ್ಲ' ಎಂದು ಹೇಳಿ ಯಥಾವತ್ತಾಗಿ ನಡೆದುದನ್ನೆಲ್ಲ ಹೇಳಿ ಬಲು ದುಃಖಿತನಾಗಿ ಅಲ್ಲಿಯೇ ಆಮರಣಾಂತ ಉಪವಾಸ ವ್ರತಕ್ಕೆ ಕುಳಿತ.
ಕರ್ಣದುಃಶಾಸನಾಭ್ಯಾಂ ಚ ಸೌಬಲೇನ ಚ ದೇವಿನಾ |
ಅನ್ಯೈಶ್ಚ ಯಾಚ್ಯಮಾನೋಽಪಿ ನೈವೋತ್ತಸ್ಥೌ ಸುಯೋಧನಃ ॥401॥
ಕರ್ಣ ದುಃಶಾಸನ, ಜೂಜುಕೋರನಾದ ಶಕುನಿ ಮತ್ತು ಇನ್ನಿತರರು ಎಲ್ಲರೂ ಬೇಡಿಕೊಂಡರು. ಆದರೂ ದುರ್ಯೋಧನ ಮೇಲೇಳಲಿಲ್ಲ.
* * * *
ಪ್ರಾಯೋಪವೇಶನಪರ್ವ
ಇನ್ನೂರ ಮೂವತ್ತಾರನೆಯ ಅಧ್ಯಾಯ
ಮಾರ್ಗಮಧ್ಯದಲ್ಲಿ ದುರ್ಯೋಧನನ ವಿಶ್ರಾಂತಿ. ಅಲ್ಲಿಗೆ ಕರ್ಣನ ಆಗಮನ ಮತ್ತು ಅಜ್ಞಾನದಿಂದ ದುರ್ಯೋಧನನ ಪ್ರಶಂಸೆ.
ಜನಮೇಜಯಃ
ಶತ್ರುಭಿರ್ಜಿತಬದ್ಧಸ್ಯ ಪಾಂಡವೈಶ್ಚ ಮಹಾತ್ಮಭಿಃ |
ಮೋಕ್ಷಿತಸ್ಯ ಯುಧಾ ಪಶ್ಚಾನ್ಮಾನಿತಸ್ಯ ದುರಾತ್ಮನಃ ॥1॥
ಕತ್ಥನಸ್ಯಾವಲಿಪ್ತಸ್ಯ ಗರ್ವಿತಸ್ಯ ಚ ನಿತ್ಯಶಃ |
ಸದಾ ಚ ಪೌರುಷೌದಾರ್ಯೈಃ ಪಾಂಡವಾನವಜಾನತಃ ॥2॥
ದುರ್ಯೋಧನಸ್ಯ ಪಾಪಸ್ಯ ನಿತ್ಯಾಹಂಕಾರಮಾನಿನಃ |
ಪ್ರವೇಶೋ ಹಸ್ತಿನಪುರೇ ದುಷ್ಕರಃ ಪ್ರತಿಭಾತಿ ಮೇ ॥3॥
ಜನಮೇಜಯ ಶತ್ರುಗಳಿಂದ ಪರಾಭವವನ್ನು ಹೊಂದಿ ಬದ್ಧನಾಗಿ ಅನಂತರ ಮಹಾತ್ಮರಾದ ಪಾಂಡವರಿಂದ ಯುದ್ಧದಲ್ಲಿ ಬಿಡಿಸಲ್ಪಟ್ಟ ಮಾನಿಯಾದ, ದುರಾತ್ಮನಾದ, ತನ್ನನ್ನು ಹೊಗಳುವ ಶೀಲವುಳ್ಳ, ಯಾವಾಗಲೂ ಗರ್ವಿತನಾದ ಮತ್ತು ಯಾವಾಗಲೂ ತನ್ನ ಔದಾರ್ಯ ಪೌರುಷವನ್ನು ಹೇಳಿಕೊಂಡು ಪಾಂಡವರನ್ನು ಅವಮಾನ ಮಾಡುವ, ನಿತ್ಯವೂ ಅಹಂಕಾರಭರಿತನಾದ, ಪಾಪಿಯಾದ ದುರ್ಯೋಧನನಿಗೆ ಪುನಃ ಹಸ್ತಿನಪುರದ ಪ್ರವೇಶವು ದುಷ್ಕರವೆಂದು ನನಗೆ ತೋರುತ್ತದೆ.
ತಸ್ಯ ಲಜ್ಜಾನ್ವಿತಸ್ಯೈವ ಶೋಕವ್ಯಾಕುಲಚೇತಸಃ |
ಪ್ರವೇಶಂ ವಿಸ್ತರೇಣ ತ್ವಂ ವೈಶಂಪಾಯನ ಕೀರ್ತಯ ॥4॥
ಎಲೈ ವೈಶಂಪಾಯನರೇ, ಹೀಗೆ ಅವಮಾನದಿಂದ ಕೂಡಿ ಶೋಕವ್ಯಾಕುಲವಾದ ಮನಸುಳ್ಳ ಅವನ ಪ್ರವೇಶವನ್ನು ವಿಸ್ತಾರವಾಗಿ ಹೇಳಿ.

ವೈಶಂಪಾಯನಃ
ಧರ್ಮರಾಜನಿಸೃಷ್ಟಸ್ತು ಧಾರ್ತರಾಷ್ಟ್ರಃ ಸುಯೋಧನಃ |
ಲಜ್ಜಯಾಽಧೋಮುಖಶ್ಚಾಸೀನ್ನಚಾವರ್ತತ ದುಃಖಿತಃ ॥5॥
ಧರ್ಮರಾಜನಿಂದ ಬಿಡುಗಡೆ ಮಾಡಲ್ಪಟ್ಟ ಧೃತರಾಷ್ಟ್ರಪುತ್ರನಾದ ಸುಯೋಧನನು ನಾಚಿಕೆಯಿಂದ ತಲೆ ತಗ್ಗಿಸಿ, ದುಃಖಿತನಾಗಿ ಪುನಃ ನಗರಕ್ಕೆ ಹಿಂದಿರುಗಲಿಲ್ಲ.
ಸ್ವಪುರಂ ಪ್ರಯಯೌ ರಾಜಾ ಚತುರಂಗಬಲಾನುಗಃ |

ಶೋಕೋಪಹತಯಾ ಬುದ್ಧ್ಯಾ ಚಿಂತಯಾನಃ ಪರಾಭವಮ್ ॥6॥
ಚತುರಂಗ ಸೈನ್ಯಯುಕ್ತನಾದ ಆ ರಾಜನು ತನಗೆ ಉಂಟಾದ ಅವಮಾನವನ್ನು ಶೋಕಯುಕ್ತವಾದ ಬುದ್ಧಿಯಿಂದ ಚಿಂತಿಸುತ್ತಾ ತನ್ನ ಪಟ್ಟಣಕ್ಕೆ ಹೊರಟನು.
ವಿಮುಚ್ಯ ಪಥಿ ಯಾನಾನಿ ದೇಶೇ ಸುಯವಸೋದಕೇ।
ಸನ್ನಿವಿಷ್ಟಃ ಶುಭೇ ರಮ್ಯೇ ಭೂಮಿಭಾಗೇ ಯಥೇಪ್ಸಿತಮ್।
ಹಸ್ತ್ಯಶ್ವರಥಪಾದಾತಂ ಯಥಾಸ್ಥಾನಂ ನ್ಯವೇಶಯತ್ ॥7॥
ಅವನು ದಾರಿಯಲ್ಲಿ ಹೋಗುತ್ತಾ ಒಳ್ಳೆಯ ಹುಲ್ಲು ನೀರುಗಳಿದ್ದ ಒಂದು ರಮ್ಯವಾದ ಶುಭವಾದ ಭೂಪ್ರದೇಶದಲ್ಲಿ ತಂಗಿ ಹಸ್ತ್ಯಶ್ವರಥಕಾಲಾಳುಗಳನ್ನು ಅವುಗಳಿಗೆ ಯೋಗ್ಯವಾದ ಸ್ಥಾನಗಳಲ್ಲಿ ಇಟ್ಟು ಕುಳಿತುಕೊಂಡನು.
ಅಥೋಪವಿಷ್ಟಂ ರಾಜಾನಂ ಪರ್ಯಂಕೇ ಜ್ವಲನಪ್ರಭೇ।
ಉಪಪ್ಲುತಂ ಯಥಾ ಸೋಮಂ ರಾಹುಣಾ ರಾತ್ರಿಸಂಕ್ಷಯೇ ॥8॥
ಉಪಾಗಮ್ಯಾಬ್ರವೀತ್ ಕರ್ಣೋ ದುರ್ಯೋಧನಮಿದಂ ತದಾ ॥9॥
ರಾತ್ರಿಯ ಕೊನೆಯ ಭಾಗದಲ್ಲಿ ರಾಹುವಿನಿಂದ ಗ್ರಸ್ತವಾದ ಚಂದ್ರನಂತೆ ಅಗ್ನಿಯಂತೆ ಶೋಭಿಸುವ ಮಂಚದಲ್ಲಿ ಉಪವಿಷ್ಟನಾದ ರಾಜನಾದ ದುರ್ಯೋಧನನನ್ನು ಕರ್ಣನು ಸಮೀಪಿಸಿ ಆಗ ಹೀಗೆ ಮಾತನಾಡಿದನು.
ದಿಷ್ಟ್ಯಾ ಜೀವಸಿ ಗಾಂಧಾರೇ ದಿಷ್ಟ್ಯಾ ನಃ ಸಂಗಮಃ ಪುನಃ।
ದಿಷ್ಟ್ಯಾ ತ್ವಯಾ ಜಿತಾಶ್ಚೈವ ಗಂಧರ್ವಾಃ ಕಾಮರೂಪಿಣಃ ॥10॥
ಗಾಂಧಾರೀ ಪುತ್ರನೇ, ಅದೃಷ್ಟದಿಂದ ನೀನು ಜೀವಿಸಿದ್ದೀಯೆ. ಅದೃಷ್ಟದಿಂದಲೇ ನಮ್ಮ ಸಮಾಗಮವು ಉಂಟಾಗಿದೆ. ದೈವವಶಾತ್ ಕಾಮರೂಪಿಗಳಾದ ಗಂಧರ್ವರು ನಿನ್ನಿಂದ ಪರಾಜಿತರಾಗಿದ್ದಾರೆ.
ದಿಷ್ಟ್ಯಾ ಸಮಗ್ರಾನ್ಪಶ್ಯಾಮಿ ಭ್ರಾತೄಂಸ್ತೇ ಕುರುನಂದನ।
ವಿಜಿಗೀಷೂನ್ ರಣೇ ಯುಕ್ತಾನ್ ನಿರ್ಜಿತಾರೀನ್ ಮಹಾರಥಾನ್ ॥
ಎಲೈ ಕುರುನಂದನನೇ, ಯುದ್ಧದಲ್ಲಿ ಜಯವನ್ನು ಬಯಸುವ ನಿನ್ನ ಮಹಾರಥರಾದ ತಮ್ಮಂದಿರು ಶತ್ರುಗಳನ್ನು ಗೆದ್ದು ಯಾವ ವ್ರಣವೂ ಇಲ್ಲದೇ ಸಮಗ್ರಾಂಗರಾಗಿ ಇರುವುದನ್ನು ನೋಡುತ್ತಿದ್ದೇನೆ.
ಅಹಂ ತ್ವಭಿದ್ರುತಃ ಸರ್ವೈರ್ಗಂಧರ್ವೈಃ ಪಶ್ಯತಸ್ತವ।
ನಾಶಕ್ನುವಂ ಧಾರಯಿತುಂ ದೀರ್ಯಮಾಣಾಂ ಚ ವಾಹಿನೀಮ್ ॥12॥
ನಾನಾದರೂ ನೀನು ನೋಡುತ್ತಿರುವಂತೆ ಎಲ್ಲ ಗಂಧರ್ವರ ಆಕ್ರಮಣಕ್ಕೆ ಒಳಗಾಗಿ ಅವರನ್ನು ತಡೆಯಲು ಸಾಧ್ಯವಿಲ್ಲದೆ ಮತ್ತು ಹೆದರಿಹೋಗುತ್ತಿದ್ದ ಸೈನ್ಯವನ್ನು ನಿಲ್ಲಿಸಲು ಸಾಧ್ಯವಾಗದೆ ಓಡಿಹೋದೆನು.
ಶರಕ್ಷತಾಂಗಸ್ತು ಭೃಶಂ ವ್ಯಪಯಾತೋಽಭಿಪೀಡಿತಃ।
ಇದಂ ತ್ವತ್ಯದ್ಭುತಂ ಮನ್ಯೇ ಯದ್ ಯುಷ್ಮಾನಿಹ ಭಾರತ ॥13॥
ಅರಿಷ್ಟಾನಕ್ಷತಾಂಶ್ಚಾಪಿ ಸದಾರಬಲವಾಹನಾನ್।
ವಿಮುಕ್ತಾನ್ ಸಂಪ್ರಪಶ್ಯಾಮಿ ಯುದ್ಧಾತ್ ತಸ್ಮಾದಮಾನುಷಾತ್ ॥14॥
ನಾನು ಅವರಿಂದ ಬಹಳ ಪೀಡಿತನಾಗಿ ಅವರ ಬಾಣದಿಂದ ಶರೀರದಲ್ಲೆಲ್ಲಾ ವ್ರಣಗಳನ್ನು ಹೊಂದಿ ಯುದ್ಧಭೂಮಿಯಿಂದ ಓಡಿಹೋದೆನು. ಎಲೈ ಭಾರತನೇ, ಈಗ ನಾನು ಯಾವ ವ್ರಣವೂ ಇಲ್ಲದೆ, ಯಾವ ನಾಶಗಳನ್ನೂ ಹೊಂದದೆ ಪತ್ನಿ, ಸೈನ್ಯ ಮತ್ತು ವಾಹನಗಳಿಂದ ಸಹಿತರಾಗಿ ಆ ಅಮಾನುಷ ಯುದ್ಧದಿಂದ ಹೊರಬಂದ ನಿಮ್ಮನ್ನು ನೋಡುತ್ತಿದ್ದೇನೆ. ಇದು ಬಹಳ ಅದ್ಭುತವಾದುದು ಎಂದು ತಿಳಿಯುತ್ತೇನೆ.
ನೈತಸ್ಯ ಕರ್ತಾ ಲೋಕೇಽಸ್ಮಿನ್ ಪುಮಾನ್ ಭಾರತ ವಿದ್ಯತೇ।
ಯತ್ಕೃತಂ ತೇ ಮಹಾರಾಜ ಸಹ ಭ್ರಾತೃಭಿರಾಹವೇ ॥15॥
ಎಲೈ ಭಾರತನೇ, ಮಹಾರಾಜನೇ, ನೀನು ತಮ್ಮಂದಿರ ಜೊತೆಯಲ್ಲಿ ಯುದ್ಧದಲ್ಲಿ ಏನನ್ನು ಮಾಡಿದೆಯೋ ಆ ಕಾರ್ಯವನ್ನು ಮಾಡುವವರು ಈ ಲೋಕದಲ್ಲಿ ಇನ್ನೊಬ್ಬರಿಲ್ಲ.
ವೈಶಂಪಾಯನಃ
ಏವಮುಕ್ತಸ್ತು ಕರ್ಣೇನ ರಾಜಾ ದುರ್ಯೋಧನಸ್ತದಾ।
ಉವಾಚ ಚಾಂಗರಾಜಾನಂ ಬಾಷ್ಪಗದ್ಗದಯಾ ಗಿರಾ ॥16॥
ವೈಶಂಪಾಯನ ಕರ್ಣನಿಂದ ಹೀಗೆ ಹೇಳಲ್ಪಟ್ಟ ದುರ್ಯೋಧನನು ಆಗ ಅಂಗರಾಜನನ್ನು ಕುರಿತು ಬಾಷ್ಪಪೂರಿತ ಮಾತುಗಳಿಂದ ಹೀಗೆ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವನಪರ್ವಣಿ
ಷಟ್‌ತ್ರಿಂಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ಕರ್ಣದುಯೋಧನಸಂವಾದೋನಾಮ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತಾರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತೇಳನೆಯ ಅಧ್ಯಾಯ
ದುರ್ಯೋಧನನಿಂದ ಕರ್ಣನನ್ನು ಕುರಿತು ತನ್ನ ಪರಾಜಯದ ವೃತ್ತಾಂತ ಕಥನ.

ದುರ್ಯೋಧನಃ
ಅಜಾನತಸ್ತೇ ರಾಧೇಯ ನಾಭ್ಯಸೂಯಾಮ್ಯಹಂ ವಚಃ |
ಜಾನಾಸಿ ತ್ವಂ ಜಿತಾನ್ ಶತ್ರೂನ್ ಗಂಧರ್ವಾಂಸ್ತೇಜಸಾ ಮಯಾ ||1||
ದುರ್ಯೋಧನ ರಾಧೇಯನೇ, ತಿಳಿಯದೆ ಮಾತನಾಡುತ್ತಿರುವ ನಿನ್ನ ಮಾತುಗಳಿಂದ ನಾನು ಕೋಪಗೊಳ್ಳುವುದಿಲ್ಲ. ನಾನು ಗಂಧರ್ವರನ್ನು ನನ್ನ ಪರಾಕ್ರಮದಿಂದ ಜಯಿಸಿದ್ದೇನೆಂದು ನೀನು ತಿಳಿದಿದ್ದೀಯೆ.
ಆಯೋಧಿತಾಸ್ತು ಗಂಧರ್ವಾಃ ಸುಚಿರಂ ಸೋದರೈರ್ಮಮ |
ಮಯಾ ಸಹ ಮಹಾಬಾಹೋ ಕೃತಶ್ಚೋಭಯತಃ ಕ್ಷಯಃ ||2||
ಎಲೈ ಮಹಾಬಾಹುವೇ, ನಾನು ಮತ್ತು ನನ್ನ ತಮ್ಮಂದಿರು ಬಹಳ ಸಮಯದವರೆಗೆ ಗಂಧರ್ವರ ಜೊತೆಯಲ್ಲಿ ಯುದ್ಧಮಾಡಿದೆವು. ಎರಡುಪಕ್ಷಗಳಲ್ಲಿಯೂ ಹಾನಿಯುಂಟಾಯಿತು.
ಮಾಯಾಧಿಕಾಸ್ತ್ವಯುಧ್ಯಂತ ಯದಾ ಶೂರಾ ವಿಯದ್ಗತಾಃ |
ತದಾ ನೋ ನ ಸಮಂ ಯುದ್ಧಮಭವತ್ ಖೇಚರೈಃ ಸಹ ||3||
ಆದರೆ ಅಧಿಕ ಮಾಯಾಶಕ್ತಿಯನ್ನು ಪಡೆದ ಗಂಧರ್ವ ಶೂರರು ಯಾವಾಗ ಆಕಾಶದಲ್ಲಿ ನಿಂತು ಯುದ್ಧವನ್ನು ಮಾಡಲು ಪ್ರಾರಂಭಿಸಿದರೋ ಆಗ ನಮಗೂ ಮತ್ತು ಖೇಚರರಾದ ಅವರಿಗೂ ಯುದ್ಧವು ಸಮವಾಗಲಿಲ್ಲ.
ಅಸಮರ್ಥಾಸ್ತತಸ್ತಾಂಸ್ತು ಪ್ರತಿಯೋದ್ಧುಂ ವಿಯದ್ಗತಾನ್ |
ಪರಾಜಯಂ ಚ ಪ್ರಾಪ್ತಾಃ ಸ್ಮೋ ರಣೇ ಬಂಧನಮೇವ ಚ |
ಸಭೃತ್ಯಾಮಾತ್ಯಪುತ್ರಾಶ್ಚ ಸದಾರಬಲವಾಹನಾಃ |
ಉಚ್ಚೈರಾಕಾಶಮಾರ್ಗೇಣ ಹ್ರಿಯಾಮಸ್ತೈಃ ಸುದುಃಖಿತಾಃ ||4||
ಆಕಾಶದಿಂದ ಯುದ್ಧ ಮಾಡುವ ಅವರ ಜೊತೆಯಲ್ಲಿ ಪ್ರತಿಯಾಗಿ ಯುದ್ಧಮಾಡಲು ಸಮರ್ಥರಾಗದೆ ನಾವು ಯುದ್ಧದಲ್ಲಿ ಪರಾಜಯವನ್ನೂ ಮತ್ತು ಬಂಧನವನ್ನೂ ಪಡೆದೆವು. ಭೃತ್ಯರು, ಅಮಾತ್ಯರು, ಪುತ್ರರು, ಪತ್ನಿಯರು, ಸೈನ್ಯ ಮತ್ತು ವಾಹನಗಳು ಇವುಗಳ ಜೊತೆಯಲ್ಲಿ ನಾವು ಆಕಾಶಮಾರ್ಗದಲ್ಲಿ ಅವರಿಂದ ಒಯ್ಯಲ್ಪಟ್ಟವರಾಗಿ ಬಹಳ ದುಃಖಿತರಾದೆವು.
ಅಥ ನಃ ಸೈನಿಕಾಃ ಕೇಚಿದಮಾತ್ಯಾಶ್ಚ ಮಹಾರಥಾನ್ |
ಉಪಗಮ್ಯಾಬ್ರುವನ್ ದೀನಾಃ ಪಾಂಡವಾಂಛರಣಪ್ರದಾನ್ ||5||
ಆಗ ನಮ್ಮಲ್ಲಿ ಕೆಲವು ಸೈನಿಕರು ಮತ್ತು ಅಮಾತ್ಯರು ಮಹಾರಥರಾದ ಅಭಯಪ್ರದರಾದ ಪಾಂಡವರನ್ನು ದೀನರಾಗಿ ಸಮೀಪಿಸಿ ಮಾತನಾಡಿದರು.
ಏಷ ದುರ್ಯೋಧನೋ ರಾಜಾ ಧಾರ್ತರಾಷ್ಟ್ರಃ ಸಹಾನುಜಃ |
ಸಾಮಾತ್ಯದಾರೋ ಹ್ರಿಯತೇ ಗಂಧರ್ವೈರ್ದಿವಮಾಸ್ಥಿತೈಃ ||6||
ಧೃತರಾಷ್ಟ್ರ ಪುತ್ರನಾದ ದುರ್ಯೋಧನನು ಅಮಾತ್ಯರು, ಪತ್ನಿಯರು ಮತ್ತು ತಮ್ಮಂದಿರ ಜೊತೆಯಲ್ಲಿ ಗಂಧರ್ವರಿಂದ ಆಕಾಶಮಾರ್ಗವನ್ನು ಆಶ್ರಯಿಸಿದ ಗಂಧರ್ವರಿಂದ ಕರೆದೊಯ್ಯಲ್ಪಡುತ್ತಿದ್ದಾನೆ.
ತಂ ಮೋಕ್ಷಯತ ಭದ್ರಂ ವಃ ಸಹದಾರಂ ನರಾಧಿಪಮ್ |
ಪರಾಮರ್ಶೋ ಮಾ ಭವತಾಂ ಕುರುದಾರೇಷು ಸರ್ವಶಃ ||7||
ನಿಮಗೆ ಮಂಗಳವಾಗಲಿ. ಪತ್ನಿಯರ ಜೊತೆಯಲ್ಲಿ ರಾಜನನ್ನು ವಿಮೋಚನೆಗೊಳಿಸಿ. ಕುರುರಾಜಪತ್ನಿಯರ ಮೇಲೆ ಎಲ್ಲರೂ ಹಸ್ತಕ್ಷೇಪವನ್ನು ಮಾಡುವುದು ಬೇಡ.
ಏವಮುಕ್ತೇ ತು ಧರ್ಮಾತ್ಮಾ ಜ್ಯೇಷ್ಠಃ ಪಾಂಡುಸುತಸ್ತದಾ |
ಪ್ರಸಾದ್ಯ ಸೋದರಾನ್ ಸರ್ವಾನಾಜ್ಞಾಪಯತ ಮೋಕ್ಷಣೇ ||8||
ಹೀಗೆ ಹೇಳಲ್ಪಟ್ಟ ಪಾಂಡುಪುತ್ರರಲ್ಲಿ ಜ್ಯೇಷ್ಠನಾದ ಯುಧಿಷ್ಠಿರನು ಆಗ ತಮ್ಮಂದಿರನ್ನು ಒಲಿಸಿ ಅವರನ್ನು ವಿಮೋಚನೆಗೊಳಿಸುವಂತೆ ಆಜ್ಞಾಪಿಸಿದನು.
ಅಥಾಗಮ್ಯ ತದುದ್ದೇಶಂ ಪಾಂಡವಾಃ ಪುರುಷರ್ಷಭಾಃ |
ಸಾಂತ್ವಪೂರ್ವಮಯಾಚಂತ ಶಕ್ತಾಃ ಸರ್ವೇ ಮಹಾರಥಾಃ ||9||
ಅನಂತರ ಪುರುಷರ್ಷಭರಾದ ಪಾಂಡವರು ಆ ಪ್ರದೇಶಕ್ಕೆ ಬಂದು ಮಹಾರಥರಾದ ಅವರು ಶಕ್ತರಾದರೂ ಗಂಧರ್ವರನ್ನು ವಿಮೋಚನೆಗೊಳಿಸುವಂತೆ ಶಾಂತಿಸಮಾಧಾನಗಳಿಂದ ಬೇಡಿದರು.
ಯದಾ ಚಾಸ್ಮಾನ್ ನ ಮುಮುಚುರ್ಗಂಧರ್ವಾಃ ಸಾಂತ್ವಿತಾ ಅಪಿ |
ಆಕಾಶಚಾರಿಣೋ ವೀರಾ ನದಂತೋ ಜಲದಾ ಇವ ||10||
ತತೋಽರ್ಜುನಶ್ಚ ಭೀಮಶ್ಚ ಯಮಜೌ ಚ ಬಲೋತ್ಕಟೌ |
ಮುಮುಚುಃ ಶರವರ್ಷಾಣಿ ಗಂಧರ್ವಾನ್ ಪ್ರತ್ಯನೇಕಶಃ ||11||
ಯಾವಾಗ ಸಮಾಧಾನದ ಮಾತುಗಳನ್ನು ಹೇಳಿದರೂ ಆಕಾಶಚರರಾದ ಆ ವೀರರಾದ ಗಂಧರ್ವರು ಮೇಘಗಳಂತೆ ಗರ್ಜಿಸುತ್ತಾ ನಮ್ಮನ್ನು ವಿಮೋಚನೆಗೊಳಿಸಲಿಲ್ಲವೋ ಆಗ ಬಲೋತ್ಕಟರಾದ ಅರ್ಜುನ, ಭೀಮ ಮತ್ತು ನಕುಲಸಹದೇವರು ಗಂಧರ್ವರ ಮೇಲೆ ಅನೇಕ ಬಾರಿ ಬಾಣವರ್ಷಗಳನ್ನು ಮಾಡಿದರು.
ಅಥ ಸರ್ವೇ ರಣಂ ಮುಕ್ತ್ವಾ ಪ್ರಯಾತಾಃ ಖೇಚರಾ ದಿವಮ್ |
ಅಸ್ಮಾನೇವಾಭಿಕರ್ಷಂತೋ ದೀನಾನ್ ಮುದಿತಾಮಾನಸಾಃ ||12||
ಅನಂತರ ಆ ಸಂತೋಷಗೊಂಡ ಮನಸ್ಸುಳ್ಳ ಖೇಚರರೆಲ್ಲರೂ ರಣವನ್ನು ಬಿಟ್ಟು ಆಕಾಶವನ್ನು ಏರಿ ದೀನರಾದ ನಮ್ಮನ್ನು

ಎಳೆಯುತ್ತಾ ಹೊರಟರು.
ತತಃ ಸಮಂತಾತ್ ಪಶ್ಯಾಮಃ ಶರಜಾಲೇನ ವೇಷ್ಟಿತಾಃ |
ಅಮಾನುಷಾಣಿ ಚಾಸ್ತ್ರಾಣಿ ಪ್ರಮುಂಚಂತಂ ಧನಂಜಯಮ್ ||13||
ಆಗ ನಾವು ಬಾಣಗಳ ಪಂಜರದಲ್ಲಿ ವೇಷ್ಟಿತರಾಗಿರುವುದನ್ನೂ ಅಮಾನುಷವಾದ ಅಸ್ತ್ರಗಳನ್ನು ಪ್ರಯೋಗಿಸುತ್ತಿರುವ ಅರ್ಜುನನನ್ನೂ ನೋಡಿದೆವು.
ಸಮಾವೃತಾ ದಿಶೋ ದೃಷ್ಟ್ವಾ ಪಾಂಡವೇನ ಶಿತೈಃ ಶರೈಃ |
ಧನಂಜಯಸಖಾಽಽತ್ಮಾನಂ ದರ್ಶಯಾಮಾಸ ವೈ ತದಾ ||14||
ಪಾಂಡವನಾದ ಅರ್ಜುನನಿಂದ ಬಾಣಗಳಿಂದ ಎಲ್ಲಾ ದಿಕ್ಕುಗಳೂ ಆವೃತವಾದುದನ್ನು ನೋಡಿದ ಅರ್ಜುನನ ಸ್ನೇಹಿತನಾದ ಚಿತ್ರಸೇನನು ಆಗ ತನ್ನನ್ನು ತಾನು ತೋರಿಸಿಕೊಂಡನು.
ಚಿತ್ರಸೇನಃ ಪಾಂಡವೇನ ಸಮಾಶ್ಲಿಷ್ಯ ಪರಸ್ಪರಮ್ |
ಕುಶಲಂ ಪರಿಪಪ್ರಚ್ಛ ತೈಃ ಪೃಷ್ಟಶ್ಚಾಪ್ಯನಾಮಯಮ್ ||15||
ಚಿತ್ರಸೇನನು ಅರ್ಜುನನಿಂದ ಮತ್ತು ಪರಸ್ಪರವಾಗಿ ಆಲಿಂಗನ ಹೊಂದಿ ಅರ್ಜುನನ ಕುಶಲಪ್ರಶ್ನೆಯನ್ನು ಮಾಡಿದನು. ಪಾಂಡವರೂ ಸಹ ಚಿತ್ರಸೇನನ ಕುಶಲ ಪ್ರಶ್ನೆಯನ್ನು ಮಾಡಿದರು.
ತೇ ಸಮೇತ್ಯ ತಥಾನ್ಯೋನ್ಯಂ ಸದಾರಾನ್ ವಿಪ್ರಮೋಚ್ಯ ಚ |
ಏಕೀಭೂತಾಸ್ತತೋ ವೀರಾ ಗಂಧರ್ವಾಃ ಪಾಂಡವೈಃ ಸಹ ||16||
ಹೀಗೆ ಅವರು ಅನ್ಯೋನ್ಯವಾಗಿ ವರ್ತಿಸಿ ನಮ್ಮ ಪತ್ನಿಯರನ್ನೂ, ನಮ್ಮನ್ನೂ ವಿಮೋಚನೆಗೊಳಿಸಿ ಅನಂತರ ಆ ವೀರರಾದ ಗಂಧರ್ವರು ಪಾಂಡವರ ಜೊತೆಯಲ್ಲಿ ಒಂದಾದರು.
ಅಪೂಜಯೇತಾಮನ್ಯೋನ್ಯಂ ಚಿತ್ರಸೇನಧನಂಜಯೌ |
ಪರಸ್ಪರಂ ಸಮಾಗಮ್ಯ ಪ್ರೀತ್ಯಾ ಪರಮಯಾ ಯುತಾಃ ||17||
ಚಿತ್ರಸೇನ ಮತ್ತು ಅರ್ಜುನರು ಪರಸ್ಪರ ಸಮಾಗಮವನ್ನು ಹೊಂದಿ ಶ್ರೇಷ್ಠವಾದ ಸಂತೋಷದಿಂದ ಕೂಡಿದವರಾಗಿ ಪರಸ್ಪರವಾಗಿ ಸತ್ಕಾರವನ್ನು ಮಾಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತ್ರಿಂಶಾಧಿಕದ್ವಿಶತತಮೋಽಧ್ಯಾಯಃ ||
|| ಇತಿ ಪ್ರಾಯೋಪವೇಶನಪರ್ವಣಿ ದುರ್ಯೋಧನವಾಕ್ಯಂನಾಮ ದ್ವಿತೀಯೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತೆಂಟನೆಯ ಅಧ್ಯಾಯ
ದುರ್ಯೋಧನನಿಂದ ಕರ್ಣನನ್ನು ಕುರಿತು ತನ್ನ ದುರವಸ್ಥೆಯ ಕಥನ. ದುಃಶಾಸನನನ್ನು ರಾಜ್ಯದಲ್ಲಿ ಅಭಿಷೇಕ ಮಾಡುವಂತೆ ಸೂಚನೆ. ದುಃಶಾಸನನ ಪರಿದೇವನೆ ಮತ್ತು ಕರ್ಣನ ಸಮಾಧಾನ ವಚನಗಳು.
ದುರ್ಯೋಧನಃ
ಚಿತ್ರಸೇನಂ ಸಮಾಗಮ್ಯ ಪ್ರಹಸನ್ನರ್ಜುನಸ್ತದಾ |
ಇದಂ ವಚನಮಕ್ಲೀಬಮಬ್ರವೀತ್ ಪರವೀರಹಾ ||1||
ದುರ್ಯೋಧನ ಪರಶತ್ರುನಿಷೂದನನಾದ ಅರ್ಜುನನು ಚಿತ್ರಸೇನನನ್ನು ಸಂಧಿಸಿ ಈ ಪೌರುಷಯುಕ್ತವಾದ ಮಾತುಗಳನ್ನು ಆಡಿದನು.
ಭ್ರಾತೄನರ್ಹಸಿ ಮೇ ವೀರ ಮೋಕ್ತುಂ ಗಂಧರ್ವಸತ್ತಮ |
ಅನರ್ಹಧರ್ಷಣಾ ಹೀಮೇ ಜೀವಮಾನೇಷು ಪಾಂಡುಷು ||2||
ಎಲೈ ಗಂಧರ್ವಶ್ರೇಷ್ಠನೇ, ವೀರನೇ, ನನ್ನ ಸಹೋದರರನ್ನು ನೀನು ಬಿಡಬೇಕು. ಪಾಂಡವರು ಬದುಕಿರುವಾಗ ಇವರು ಈ ಅವಮಾನಕ್ಕೆ ಅರ್ಹರಲ್ಲ.
ದುರ್ಯೋಧನಃ
ಏವಮುಕ್ತಸ್ತು ಗಂಧರ್ವಃ ಪಾಂಡವೇನ ಮಹಾತ್ಮನಾ |
ಉವಾಚ ಯತ್ಕರ್ಣ ವಯಂ ಮಂತ್ರಯಂತೋ ವಿನಿರ್ಗತಾಃ ||3||
ಎಲೈ ಕರ್ಣನೇ, ಮಹಾತ್ಮನಾದ ಪಾಂಡವನಿಂದ ಹೀಗೆ ಹೇಳಲ್ಪಟ್ಟ ಗಂಧರ್ವನು ನಾವು ಮಂತ್ರಾಲೋಚನೆ ಮಾಡಿ ಹೊರಡುವಾಗ ಏನು ಮಾತನಾಡಿದೆವೋ ಅದನ್ನು ಹೇಳಿದನು.
ದ್ರಷ್ಟಾರಃ ಸ್ಮ ಸುಖಾದ್ದೀನಾನ್ ಸದಾರಾನ್ ಪಾಂಡವಾನಿತಿ |
ಸ್ಥಿತೋ ರಾಜ್ಯೇ ಚ್ಯುತಾನ್ ಸ್ಥಾನಾತ್ಶ್ರಿಯಾ ಹೀನಾನ್ ಶ್ರಿಯಾವೃತಾಃ ||4||
ನಾವು ಸುಖದಿಂದ ಚ್ಯುತರಾದ, ಪತ್ನೀಸಹಿತರಾದ ಪಾಂಡವರನ್ನು ನೋಡುವೆವು. ರಾಜ್ಯದಲ್ಲಿ ಪ್ರತಿಷ್ಠಿತರಾದ ನಾವು ರಾಜ್ಯದಿಂದ ಚ್ಯುತರಾದ, ಸಂಪತ್ತಿನಿಂದ ಕೂಡಿರುವ ನಾವು ಸಂಪತ್ತಿನಿಂದ ಹೀನರಾದ ಪಾಂಡವರನ್ನು ನೋಡುವೆವು (ಎಂಬ ನಮ್ಮ ಈ ಮಾತನ್ನು ಚಿತ್ರಸೇನನು ಹೇಳಿದನು).

ತಸ್ಮಿನ್ನುಚ್ಚಾರ್ಯಮಾಣೇ ತು ಗಂಧರ್ವೇಣ ವಚಸ್ತಥಾ |
ಭೂಮಿರ್ವಿವರಮನ್ವೈಚ್ಛಂ ಪ್ರವೇಷ್ಟುಂ ವ್ರೀಡಯಾಽನ್ವಿತಃ ॥5॥
ಗಂಧರ್ವನು ಹಾಗೆ ಮಾತನಾಡುತ್ತಿರಲು ನಾನು ಅವಮಾನದಿಂದ ಭೂಮಿಯ ಬಿಲವನ್ನು ಪ್ರವೇಶಿಸಲು ಅಪೇಕ್ಷಿಸಿದೆ.
ಯುಧಿಷ್ಠಿರಮಥಾಗಮ್ಯ ಗಂಧರ್ವಾಃ ಸಹ ಪಾಂಡವೈಃ |
ಅಸ್ಮದ್ದುರ್ಮಂತ್ರಿತಂ ತಸ್ಮೈ ಬದ್ಧಾಂಶ್ಚಾಸ್ಮಾನ್ ನ್ಯವೇದಯನ್ ॥6॥
ಅನಂತರ ಯುಧಿಷ್ಠಿರನು ಬಂದ ಮೇಲೆ ಪಾಂಡವರಿಂದ ಸಹಿತರಾದ ಗಂಧರ್ವರು ನಮ್ಮ ದುರ್ಮಂತ್ರಣವನ್ನೂ, ನಾವು ಬದ್ಧರಾದ ವಿಷಯವನ್ನೂ ಅವನಿಗೆ ತಿಳಿಸಿದರು.
ಸ್ತ್ರೀಸಮಕ್ಷಮಹಂ ದೀನೋ ಬದ್ಧಃ ಶತ್ರುವಶಂ ಗತಃ |
ಯುಧಿಷ್ಠಿರಃಸ್ಯೋಪಹೃತಃ ಕಿಂ ನು ದುಃಖಮತಃ ಪರಮ್ ॥7॥
ನಾನು ಸ್ತ್ರೀಯರ ಎದುರಿನಲ್ಲಿ ಬದ್ಧನಾಗಿ, ದೀನನಾಗಿ, ಶತ್ರುವಶನಾಗಿ ಯುಧಿಷ್ಠಿರನ ಸಮೀಪಕ್ಕೆ ಕರೆದೊಯ್ಯಲ್ಪಟ್ಟೆ. ಇದಕ್ಕಿಂತ ದುಃಖತರವಾದುದು ಯಾವುದು?
ಯೇ ಮೇ ನಿರಾಕೃತಾ ನಿತ್ಯಂ ರಿಪುರ್ಯೇಷಾಮಹಂ ಸದಾ |
ತೈರ್ಮೋಕ್ಷಿತೋಽಹಂ ದುರ್ಬುದ್ಧಿರ್ದತ್ತಂ ಜೀವಿತಂ ಚ ಮೇ ॥8॥
ನಾನು ಯಾರನ್ನು ನಿರಾಕರಿಸಿದ್ದೇನೆಯೋ ಮತ್ತು ಯಾರಿಗೆ ನಾನು ನಿತ್ಯವೂ ಶತ್ರುವೋ ಅಂತಹ ದುರ್ಬುದ್ಧಿಯುಳ್ಳ ನಾನು ಅವರಿಂದ ಮೋಚನೆಗೊಳಿಸಲ್ಪಟ್ಟೆ ಮತ್ತು ಜೀವಿತವನ್ನೂ ಪಡೆದೆ.
ಪ್ರಾಪ್ತಃ ಸ್ಯಾಂ ಯದ್ಯಹಂ ವೀರ ವಧಂ ತಸ್ಮಿನ್ ಮಹಾರಣೇ |
ಶ್ರೇಯಸ್ತದ್ ಭವಿತಾ ಮಹ್ಯಂ ನೈವಂಭೂತಸ್ಯ ಜೀವಿತಮ್ ॥9॥
ಎಲೈ ವೀರನೇ, ಆ ಮಹಾಯುದ್ಧದಲ್ಲಿ ನಾನು ಮರಣವನ್ನು ಹೊಂದಿದ್ದರೆ ಅದು ನನಗೆ ಶ್ರೇಯಸ್ಕರವಾಗುತ್ತಿತ್ತು. ಈ ರೀತಿಯಲ್ಲಿ ಬದುಕಿರುವುದು ಶ್ರೇಯಸ್ಕರವಲ್ಲ.
ಅಭೂದ್ಯಶಃ ಪೃಥಿವ್ಯಾಂ ಮೇ ಖ್ಯಾತಂ ಗಂಧರ್ವತೋ ವಧಾತ್ |
ಪ್ರಾಪ್ತಶ್ಚ ಪುಣ್ಯಲೋಕಾಃ ಸ್ಯುರ್ಮಹೇಂದ್ರಸದನೇಽಕ್ಷಯಾಃ ॥10॥
ನಾನು ಗಂಧರ್ವರಿಂದ ಮರಣವನ್ನು ಹೊಂದಿದ್ದರೆ ನನಗೆ ಭೂಮಿಯಲ್ಲಿ ಒಳ್ಳೆಯ ಕೀರ್ತಿಯೂ ಬಂದಿರುತ್ತಿತ್ತು. ನಾನು ಇಂದ್ರಸದನದಲ್ಲಿ ಪ್ರಕಾಶಮಾನವಾದ ಪುಣ್ಯಲೋಕಗಳನ್ನೂ ಸಂಪಾದಿಸಿರುತಿತದ್ದೆ.
ಯತ್ತ್ವದ್ಯ ಮೇ ವ್ಯವಸಿತಂ ತತ್ಶೃಣುಧ್ವಂ ನರರ್ಷಭಾಃ ॥11॥
ಇಹ ಪ್ರಾಯಮುಪಾಸಿಷ್ಯೇ ಯೂಯಂ ವ್ರಜತ ವೈ ಗೃಹಾನ್ |
ಭ್ರಾತರಶ್ಚೈವ ಮೇ ಸರ್ವೇ ಪ್ರಯಾಂತ್ವದ್ಯ ಪುರಂ ಪ್ರತಿ ॥12॥
ಎಲೈ ನರಶ್ರೇಷ್ಠರೇ, ಈ ದಿನದ ನನ್ನ ನಿಶ್ಚಯವನ್ನು ಕೇಳಿ. ನಾನು ಇಲ್ಲಿ ಪ್ರಾಯೋಪವೇಶಕ್ಕೆ ಕುಳಿತುಕೊಳ್ಳುವೆನು. ನೀವು ಮನೆಗಳಿಗೆ ಹಿಂದಿರುಗಿ. ನನ್ನ ತಮ್ಮಂದಿರೆಲ್ಲರೂ ಈ ದಿನ ತಮ್ಮ ನಗರಕ್ಕೆ ಹಿಂದಿರುಗಲಿ.
ನ ಹ್ಯಹಂ ಸಂಪ್ರಯಾಸ್ಯಾಮಿ ಪುರಂ ಶತ್ರುನಿರಾಕೃತಃ |
ಶತ್ರುಮಾನಾಪಹೋ ಭೂತ್ವಾ ಸುಹೃದಾಂ ಮಾನಕೃತ್ ತಥಾ ॥13॥
ಶತ್ರುಗಳ ಮಾನವನ್ನು ನಾಶಮಾಡುತ್ತಿದ್ದ ಮತ್ತು ಸುಹೃದರಿಗೆ ಮಾನವನ್ನು ಉಂಟುಮಾಡುತ್ತಿದ್ದ ನಾನು ಶತ್ರುಗಳ ಕೈಯಿಂದ ಮಾನವನ್ನು ಕಳೆದುಕೊಂಡು ಪಟ್ಟಣವನ್ನು ಪ್ರವೇಶಿಸುವುದಿಲ್ಲ.
ಕಾರಣ್ಯೈಃರಸಮ್ಯಗಭಿಹಿತಃ ಶತ್ರುಭಿರ್ವೈ ವಿಮಾನಿತಃ |
ಸ ಸುಹೃಚ್ಛೋಕದೋ ಭೂತ್ವಾ ಶತ್ರೂಣಾಂ ಹರ್ಷವರ್ಧನಃ ॥14॥
ಸರಿಯಾದ ಕಾರಣಗಳನ್ನು ಹೇಳಿ ಶತ್ರುಗಳಿಂದ ಅವಮಾನಿತನಾದ ನಾನು ಶತ್ರುಗಳಿಗೆ ಸಂತೋಷ ಉಂಟುಮಾಡುತ್ತಾ, ಸುಹೃದರಿಗೆ ಶೋಕವನ್ನು ಉಂಟುಮಾಡುತ್ತಾ ಪಟ್ಟಣವನ್ನು ಪ್ರವೇಶಿಸುವುದಿಲ್ಲ.
ವಾರಣಾಹ್ವಯಮಾಸಾದ್ಯ ಕಿಂ ವಕ್ಷ್ಯಾಮಿ ಜನಾಧಿಪಮ್ ॥15॥
ಭೀಷ್ಮದ್ರೋಣೌ ಕೃಪದ್ರೌಣೀ ವಿದುರಃ ಸಂಜಯಸ್ತಥಾ |
ಬಾಹ್ಲೀಕಃ ಸೌಮದತ್ತಿಶ್ಚ ಯೇ ಚಾನ್ಯೇ ವೃದ್ಧಸಮ್ಮತಾಃ ॥16॥
ಭೀಷ್ಮ-ದ್ರೋಣರು, ಕೃಪ-ಅಶ್ವತ್ಥಾಮರು, ವಿದುರ-ಸಂಜಯ, ಬಾಹ್ಲೀಕ, ಸೌಮದತ್ತಿ ಮತ್ತು ಉಳಿದ ವೃದ್ಧಸಮ್ಮತರಾದವರು ಇವರಿಗೆ ಮತ್ತು ಧೃತರಾಷ್ಟ್ರನಿಗೆ ನಾನು ಹಸ್ತಿನಾವತಿಗೆ ಹೋಗಿ ಏನು ಹೇಳಲಿ?
ಬ್ರಾಹ್ಮಣಾಃ ಶ್ರೇಣಿಮುಖ್ಯಾಶ್ಚ ತಥೋದಾಸೀನವೃತ್ತಯಃ |
ಕಿಂ ಮಾಂ ವಕ್ಷ್ಯಂತಿ ಕಿಂ ಚಾಪಿ ಪ್ರತಿವಕ್ಷ್ಯಾಮಿ ತಾನಹಮ್ ॥17॥
ಬ್ರಾಹ್ಮಣರು, ಅಂಗರಕ್ಷಕರು, ಇನ್ನೂ ಉದಾಸೀನರಾದ ಕೆಲವರು ನನ್ನ ವಿಷಯದಲ್ಲಿ ಏನು ಹೇಳುವರು? ಅವರಿಗಾದರೂ ನಾನು ಏನು ಉತ್ತರವನ್ನು ಕೊಡಲಿ?
ರಿಪೂಣಾಂ ಶಿರಸಿ ಸ್ಥಿತ್ವಾ ತಥಾ ವಿಕ್ರಮ್ಯ ಚೋರಸಿ |
ಆತ್ಮದೋಷಾತ್ ಪರಿಭ್ರಷ್ಟಃ ಕಥಂ ವಕ್ಷ್ಯಾಮಿ ತಾನಹಮ್ ॥18॥
ಶತ್ರುಗಳ ತಲೆಯ ಮೇಲೆ ಕಾಲಿಟ್ಟು, ಅವರ ಎದೆಯ ಮೇಲೆ ನಿಂತ ನಾನು ಈಗ ನನ್ನ ದೋಷದಿಂದ ಪರಿಭ್ರಷ್ಟನಾಗಿ ಅವರ ಜೊತೆಯಲ್ಲಿ ನಾನು ಹೇಗೆ ಮಾತನಾಡಲಿ?
ದುರ್ವಿನೀತಾಃ ಶ್ರಿಯಂ ಪ್ರಾಪ್ಯ ವಿದ್ಯಾಮೈಶ್ವರ್ಯಮೇವ ಚ |

ತಿಷ್ಠಂತಿ ನ ಚಿರಂ ಭದ್ರೇ ಯಥಾಽಹಂ ಮದಗರ್ವಿತಃ ॥19॥
ದುರ್ವಿನೀತರಾದವರು ಸಂಪತ್ತನ್ನೂ, ವಿದ್ಯೆಯನ್ನೂ, ಐಶ್ವರ್ಯವನ್ನೂ ಪಡೆದು ಮದಗರ್ವಿತರಾಗಿ ನನ್ನಂತೆ ಬಹಳ ಕಾಲ ಮಂಗಲಕರವಾದ ಸ್ಥಿತಿಯಲ್ಲಿ ಇರುವುದಿಲ್ಲ.
ಅಹೋ ನಾರ್ಹಮಿದಂ ಕರ್ಮ ಕಷ್ಟಂ ದುಶ್ಚರಿತಂ ಕೃತಮ್ |
ಸ್ವಯಂ ದುರ್ಬುದ್ಧಿನಾ ಮೋಹಾದ್ ಯೇನ ಪ್ರಾಪ್ತೋಽಸ್ಮಿ ಸಂಶಯಮ್
ಆದ್ದರಿಂದ ಇಂತಹ ಕಾರ್ಯವನ್ನು ಮಾಡಿರುವ ನಾನು ಸರಿಯಾಗಲಿಲ್ಲ. ನಾನು ಕಷ್ಟಕರವಾದ, ದುಷ್ಕಾರ್ಯವನ್ನು ಮಾಡಿದ್ದೇನೆ. ದುರ್ಬುದ್ಧಿಯುಳ್ಳ ನಾನು ಮೋಹದಿಂದ ಇಂತಹ ಸಂಕಟವನ್ನು ಹೊಂದಿದ್ದೇನೆ.
ತಸ್ಮಾತ್ ಪ್ರಾಯಮುಪಾಸಿಷ್ಯೇ ನ ಹಿ ಶಕ್ಷ್ಯಾಮಿ ಜೀವಿತುಮ್ |
ಚೇತಯಾನೋ ಹಿ ಕೋ ಜೀವೇತ್ ಕೃಚ್ಛ್ರಾಚ್ಛತ್ರುಭಿರುದ್ಧೃತಃ ॥21॥
ಆದ್ದರಿಂದ ನಾನು ಪ್ರಾಯೋಪವೇಶಕ್ಕೆ ಕುಳಿತುಕೊಳ್ಳುತ್ತೇನೆ. ನಾನು ಹೀಗೆ ಜೀವಿಸಲಾರೆ. ಶತ್ರುಗಳಿಂದ ನಿರಾಕೃತನಾದ ಯಾವನು ತಾನೇ ಚೇತನನು ಜೀವಿಸಲು ಸಾಧ್ಯ?
ಶತ್ರುಭಿಶ್ಚಾಪಹಸಿತೋ ಮಾನೀ ಪೌರುಷವರ್ಜಿತಃ |
ಪಾಂಡವೈರ್ವಿಕ್ರಮಾಢ್ಯೈಶ್ಚ ಸಾವಮಾನಮವೇಕ್ಷಿತಃ ॥22॥
ಶತ್ರುಗಳಿಂದ ಅಪಹಾಸಕ್ಕೆ ಈಡಾಗಿದ್ದೇನೆ. ಆತ್ಮಾಭಿಮಾನವುಳ್ಳ ನಾನು ಪೌರುಷವರ್ಜಿತನಾಗಿ ವಿಕ್ರಮಶಾಲಿಗಳಾದ ಪಾಂಡವರಿಂದ ಅವಮಾನ ಪೂರ್ವಕವಾಗಿ ನೋಡಲ್ಪಟ್ಟಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟತ್ರಿಂಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋವಶೇನಪರ್ವಣಿ ದುಯೋರ್ಧನ ಪ್ರಾಯೋಪವೇಶ ನಿಶ್ಚಯೋನಾಮ ತೃತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಮೂವತ್ತೊಂಬತ್ತನೆಯ ಅಧ್ಯಾಯ
ದುಯೋರ್ಧನನಿಂದ ದುಃಶಾಸನನಿಗೆ ರಾಜ್ಯಪಾಲನೆಯ ವಿಧಾನ ಮತ್ತು ಕರ್ಣನ ಸಮಾಧಾನೋಕ್ತಿ.
ವೈಶಂಪಾಯನಃ
ಏವಂ ಚಿಂತಾಪರೋ ರಾಜಾ ದುಃಶಾಸನಮಥಾಬ್ರವೀತ್ |
ದುಃಶಾಸನ ನಿಬೋಧೇದಂ ವಚನಂ ಮಮ ಭಾರತ |
ಪ್ರತೀಚ್ಛ ತ್ವಂ ಮಯಾ ದತ್ತಮಭಿಷೇಕಂ ನೃಪೋ ಭವ ॥1॥
ವೈಶಂಪಾಯನ ಹೀಗೆ ಚಿಂತಾಪರನಾದ ರಾಜನು ದುಃಶಾಸನನನ್ನು ಕುರಿತು ಭಾರತನೇ, ನನ್ನ ಈ ಮಾತನ್ನು ಕೇಳು. ನಾನು ಕೊಡುವ ರಾಜ್ಯಾಭಿಷೇಕವನ್ನು ಸ್ವೀಕರಿಸಿ ರಾಜನಾಗು ಎಂದು ಹೇಳಿದನು.
ಪ್ರಶಾಧಿ ಪೃಥಿವೀಂ ಸ್ಫೀತಾಂ ಕರ್ಣಸೌಬಲಪಾಲಿತಾಮ್ |
ಭ್ರಾತೄನ್ ಪಾಲಯ ವಿಸ್ರಬ್ಧಂ ಮರುತೋ ವೃತ್ರಹಾ ಯಥಾ ॥2॥
ಕರ್ಣ-ಶಕುನಿಗಳಿಂದ ರಕ್ಷಿತವಾದ ಸಮೃದ್ಧವಾದ ಭೂಮಿಯನ್ನು ಆಳುವವನಾಗು. ಇಂದ್ರನು ಮರುತ್ತುಗಳನ್ನು ರಕ್ಷಿಸುವಂತೆ ತಮ್ಮಂದಿರನ್ನು ವಿಶ್ವಾಸದಿಂದ ರಕ್ಷಿಸು.
ಬಾಂಧವಾಶ್ಚೋಪಜೀವಂತು ದೇವಾ ಇವ ಶತಕ್ರತುಮ್ ॥3॥
ದೇವತೆಗಳು ಇಂದ್ರನನ್ನು ಉಪಜೀವಿಸಿದಂತೆ ಬಂಧುಗಳು ನಿನ್ನನ್ನು ಉಪಜೀವಿಸಲಿ.
ಬ್ರಾಹ್ಮಣೇಷು ಸದಾ ವೃತ್ತಿಂ ಕುರ್ವೀಥಾಶ್ಚಾಪ್ರಮಾದತಃ |
ಬಂಧೂನಾಂ ಸುಹೃದಾಂ ಚೈವ ಭವೇಥಾಸ್ತ್ವಂ ಗತಿಃ ಸದಾ ॥4॥
ಬ್ರಾಹ್ಮಣರ ವಿಷಯದಲ್ಲಿ ಯಾವಾಗಲೂ ಎಚ್ಚರಿಕೆಯಿಂದ ಸದ್ವೃತ್ತಿಯನ್ನು ಮಾಡು. ಬಂಧುಗಳಿಗೂ ಮತ್ತು ಸುಹೃದರಿಗೂ ನೀನು ಯಾವಾಗಲೂ ಗತಿಯಾಗಿರು.
ಜ್ಞಾತೀಂಶ್ಚಾಪ್ಯನುಪಶ್ಯೇಥಾ ವಿಷ್ಣುರ್ದೇವಗಣಾನ್ ಯಥಾ |
ಗುರವೋ ಮಾನನೀಯಾಸ್ತೇ ಗಚ್ಛ ಪಾಲಯ ಮೇದಿನೀಮ್ ॥5॥
ವಿಷ್ಣುವು ದೇವತೆಗಳ ಸಮೂಹವನ್ನು ನೋಡಿಕೊಂಡಂತೆ ಜ್ಞಾತಿಗಳನ್ನು ನೋಡಿಕೋ. ಗುರುಗಳಿಗೆ ಗೌರವವನ್ನು ಕೊಡು. ಹೋಗಿ ಭೂಮಿಯನ್ನು ಆಳು.
ನಂದಯನ್ ಸುಹೃದಃ ಸರ್ವಾನ್ಶಾತ್ರವಾಂಶ್ಚೋಪತಾಪಯನ್ |
ಕಂಠೇ ಚೈನಂ ಪರಿಷ್ವಜ್ಯ ಗಮ್ಯತಾಮಿತ್ಯಥಾಬ್ರವೀತ್ |
ದುಃಶಾಸನನನ್ನು ಕಂಠದಲ್ಲಿ ಆಲಿಂಗಿಸಿ ಸುಹೃದರಿಗೆ ಸುಖವನ್ನೂ, ಎಲ್ಲಾ ಶತ್ರುಗಳಿಗೆ ತಾಪವನ್ನೂ ಕೊಡುವವನಾಗು, ಹೋಗು ಎಂದು ಹೇಳಿದನು.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ದೀನೋ ದುಃಶಾಸನೋಽಬ್ರವೀತ್ |
ಅಶ್ರುಕಂಠಃ ಸುದುಃಖಾರ್ತಃ ಪ್ರಾಂಜಲಿಃ ಪ್ರಣಿಪತ್ಯ ಚ ॥7॥

ಸಗದ್ಗದಮಿದಂ ವಾಕ್ಯಂ ಭ್ರಾತರಂ ಜ್ಯೇಷ್ಠಮಾತ್ಮನಃ |
ಪ್ರಸೀದೇತ್ಯಪತದ್ ಭೂಮೌ ದೂಯಮಾನೇನ ಚೇತಸಾ ॥8॥
ವೈಶಂಪಾಯನ ಅವನ ಆ ಮಾತನ್ನು ಕೇಳಿದ ದುಃಶಾಸನನು ಬಹಳ ದುಃಖಾರ್ತನಾಗಿ ಅಶ್ರುಕಂಠನಾಗಿ ದೀನನಾಗಿ ಕೈಗಳನ್ನು ಮುಗಿದು ನಮಸ್ಕರಿಸಿ ಗದ್ಗದ ಕಂಠದಿಂದ ಅಣ್ಣನನ್ನು ಕುರಿತು ಪ್ರಸನ್ನನಾಗು ಎಂದು ಭೂಮಿಯಲ್ಲಿ ಬಿದ್ದು ದುಃಖಗೊಂಡ ಮನಸ್ಸಿನಿಂದ ಈ ಮಾತುಗಳನ್ನು ಆಡಿದನು.
ದುಃಖಿತಃ ಪಾದಯೋಸ್ತಸ್ಯ ನೇತ್ರಜಂ ಜಲಮುತ್ಸೃಜನ್ |
ಉಕ್ತವಾಂಶ್ಚ ನರವ್ಯಾಘ್ರೋ ನೈತದೇವಂ ಭವಿಷ್ಯತಿ ॥9॥
ಆ ನರವ್ಯಾಘ್ರನು ದುಃಖಿತನಾಗಿ ಅಣ್ಣನ ಕಾಲುಗಳ ಮೇಲೆ ಕಣ್ಣೀರನ್ನು ಸುರಿಸುತ್ತಾ ಇದು ಹೀಗೆ ಆಗಲು ಸಾಧ್ಯವಿಲ್ಲ ಎಂದು ಹೇಳಿದನು.
ವಿದೀರ್ಯೇತ್ ಸನಗಾ ಭೂಮಿರ್ದ್ಯೌಶ್ಚಾಪಿ ಶಕಲೀಭವೇತ್ |
ರವಿರಾತ್ಮಪ್ರಭಾಂ ಜಹ್ಯಾತ್ ಸೋಮಃ ಶೀತಾಂಶುತಾಂ ತ್ಯಜೇತ್ ॥10॥
ಪರ್ವತ ಸಹಿತವಾದ ಭೂಮಿಯು ಬಿರಿದು ಹೋದೀತು. ಆಕಾಶವು ಚೂರುಚೂರಾದೀತು. ಸೂರ್ಯನು ತನ್ನ ಪ್ರಭೆಯನ್ನು ಬಿಟ್ಟಾನು. ಚಂದ್ರನು ತನ್ನ ಶೀತಕಿರಣಗಳನ್ನು ತೊರೆದಾನು.
ವಾಯುಃ ಶೈಘ್ರ್ಯಮಥೋ ಜಹ್ಯಾದ್ಧಿಮವಾಂಶ್ಚ ಪರಿಪ್ಲವೇತ್ |
ಶುಷ್ಯೇತ್ ತೋಯಂ ಸಮುದ್ರೇಷು ವಹ್ನಿರಪ್ಯುಷ್ಣತಾಂ ತ್ಯಜೇತ್ ॥11॥
ವಾಯುವು ತನ್ನ ಶೈತ್ಯವನ್ನು ಬಿಡಬಹುದು. ಹಿಮಾಲಯ ಪರ್ವತವು ತೇಲಬಹುದು. ಸಮುದ್ರದ ನೀರು ಒಣಗಿ ಹೋಗಬಹುದು. ವಹ್ನಿಯು ಉಷ್ಣತೆಯನ್ನು ಬಿಡಬಹುದು.
ನ ಚಾಹಂ ತ್ವದೃತೇ ರಾಜನ್ ಪ್ರಶಾಸ್ಯೇಯಂ ವಸುಂಧರಾಮ್ |
ಪುನಃ ಪುನಃ ಪ್ರಸೀದೇತಿ ವಾಕ್ಯಂ ಚೇದಮುವಾಚ ಹ ॥12॥
ಆದರೆ ರಾಜನೇ, ನೀನಿಲ್ಲದೇ ನಾನು ಭೂಮಿಯನ್ನು ಆಳುವುದಿಲ್ಲ ಎಂದು ಹೇಳಿ ಪುನಃ ಪುನಃ ಪ್ರಸನ್ನನಾಗು ಎಂದು ಹೇಳಿ ಈ ಮಾತನ್ನು ಆಡಿದನು.
ತ್ವಮೇವ ನಃ ಕುಲೇ ರಾಜಾ ಭವಿಷ್ಯತಿ ಶತಂ ಸಮಾಃ |
ಶತ್ರೂಣಾಂ ಶೋಕಕೃದ್ ರಾಜನ್ ಸುಹೃದಾಂ ಶೋಕನಾಶನಃ ॥13॥
ನೀನೇ ನಮ್ಮ ಕುಲದಲ್ಲಿ ಶತ್ರುಗಳಿಗೆ ಶೋಕವನ್ನು ಉಂಟುಮಾಡುವವನೂ ಸುಹೃದರಿಗೆ ಶೋಕನಾಶನನೂ ಆಗಿ ನೂರುವರ್ಷಗಳ ಕಾಲ ರಾಜ್ಯವಾಳುವಿ.
ವೈಶಂಪಾಯನಃ
ಏವಮುಕತ್ವ ಸ ರಾಜಾನಂ ಸುಸ್ವರಂ ಪ್ರರುರೋದ ಹ |
ಪಾದೌ ಸಂಸ್ಪೃಶ್ಯ ಮಾನಾರ್ಹೌ ಭ್ರಾತುರ್ಜ್ಯೇಷ್ಠಸ್ಯ ಭಾರತ ॥14॥
ವೈಶಂಪಾಯನ ಎಲ್ಲೈ ಭಾರತನೇ, ರಾಜನನ್ನು ಕುರಿತು ಹೀಗೆ ಹೇಳಿ ದುಃಶಾಸನನು ಮಾನಾರ್ಹವಾದ ಅಣ್ಣನ ಕಾಲುಗಳನ್ನು ಮುಟ್ಟಿ ಸುಸ್ವರದಿಂದ ರೋದಿಸಿದನು.
ತಥಾ ತೌ ದುಃಖಿತೌ ದೃಷ್ಟ್ವಾ ದುಃಶಾಸನಸುಯೋಧನೌ |
ಅಧಿಗಮ್ಯ ವ್ಯಥಾವಿಷ್ಟಃ ಕರ್ಣಸ್ತೌ ಪ್ರತ್ಯಭಾಷತ ॥15॥
ದುಃಶಾಸನ ಮತ್ತು ಸುಯೋಧನರು ಹೀಗೆ ದುಃಖಿತರಾಗಿರುವುದನ್ನು ನೋಡಿ ವ್ಯಥೆಯಿಂದ ಕೂಡಿದ ಕರ್ಣನು ಅಲ್ಲಿಗೆ ಬಂದು ಅವರಿಬ್ಬರನ್ನೂ ಕುರಿತು ಮಾತನಾಡಿದನು.
ವಿಷೀದಥಃ ಕಿಂ ಕೌರವ್ಯೌ ಬಾಲಿಶ್ಯಾತ್ ಪ್ರಾಕೃತಾಮಿವ |
ನ ಶೋಕಃ ಶೋಚಮಾನಸ್ಯ ವಿನಿವರ್ತೇತ ಕರ್ಹಿಚಿತ್ ॥16॥
ಎಲ್ಲೈ ಕೌರವ್ಯರೇ, ಬಾಲಿಶರಂತೆ, ಸಾಮಾನ್ಯ ಜನರಂತೆ ಏಕೆ ವಿಷಾದಪಡುತ್ತಿದ್ದೀರಿ? ಶೋಕಪಡುವುದರಿಂದ ಎಂದೂ ಶೋಕವು ನಿವೃತ್ತವಾಗುವುದಿಲ್ಲ.
ಯದಾ ಚ ಶೋಚತಃ ಶೋಕೋ ವ್ಯಸನಂ ಚಾ(ನಾ)ಪಕರ್ಷತಿ |
ಸಾಮರ್ಥ್ಯಂ ಕಿಂ ತತಃ ಶೋಕೇ ಶೋಚಮಾನಃ ಪ್ರಪಶ್ಯತಿ ॥17॥
ಯಾವಾಗ ಶೋಕಪಡುವವನ ಶೋಕವು ಅವನ ವ್ಯಸನವನ್ನು ಪರಿಹರಿಸುವುದಿಲ್ಲವೋ ಆಗ ಶೋಕಪಡುವವನು ಆ ಶೋಕದಲ್ಲಿ ಯಾವ ಸಾಮರ್ಥ್ಯವನ್ನು ನೋಡಿ ಶೋಕಪಡುತ್ತಾನೆ?
ಧೃತಿಂ ಗೃಹ್ಣೀತ ಮಾ ಶತ್ರೂನ್ ಶೋಚಂತೌ ನಂದಯಿಷ್ಯಥಃ |
ಕರ್ತವ್ಯಂ ಹಿ ಕೃತಂ ರಾಜನ್ ಪಾಂಡವೈಸ್ತವ ಮೋಕ್ಷಣಮ್ ॥18॥
ಧೈರ್ಯವನ್ನು ಹೊಂದಿ. ಶೋಕವನ್ನು ಪಟ್ಟು ಶತ್ರುಗಳಿಗೆ ಸಂತೋಷವನ್ನು ಉಂಟುಮಾಡಬೇಡಿ. ರಾಜನೇ, ನಿನ್ನನ್ನು ಮೋಚನೆಗೊಳಿಸುವುದು ಪಾಂಡವರ ಕರ್ತವ್ಯ. ಅದನ್ನು ಅವರು ಮಾಡಿದ್ದಾರೆ.
ನಿತ್ಯಮೇವ ಪ್ರಿಯಂ ಕಾರ್ಯಂ ರಾಜ್ಞೋ ವಿಷಯವಾಸಿಭಿಃ |
ಪಾಲ್ಯಮಾನಾಸ್ತ್ವಯಾ ತೇ ಹಿ ನಿವಸಂತಿ ಗತಜ್ವರಾಃ ॥19॥
ಒಬ್ಬ ರಾಜನ ಆಳ್ವಿಕೆಯ ದೇಶದಲ್ಲಿರುವವರು ಯಾವಾಗಲೂ ರಾಜನಿಗೆ ಪ್ರಿಯವನ್ನು ಮಾಡಬೇಕು. ನಿನ್ನಿಂದ ರಕ್ಷಿತರಾಗಿ ಅವರು ಯಾವ ತೊಂದರೆಯೂ ಇಲ್ಲದೆ ವಾಸವನ್ನು ಮಾಡುತ್ತಿದ್ದಾರಷ್ಟೆ?

ನಾರ್ಹಸ್ಯೇವಂಗತೇ ಮನ್ಯುಂ ಕರ್ತುಂ ಪ್ರಾಕೃತವದ್ ಯಥಾ |
ವಿಷಣ್ಣಾಸ್ತವ ಸೋದರ್ಯಾಸ್ತ್ವಯಿ ಪ್ರಾಯ ಸಮಾಸ್ಥಿತೇ ||20||
ಪರಿಸ್ಥಿತಿಯು ಹೀಗಿರುವಾಗ ಪ್ರಾಕೃತನಂತೆ ನಿನ್ನ ಮೇಲೆ ಕೋಪವನ್ನು ಮಾಡಿಕೊಳ್ಳುವುದು ಯುಕ್ತವಲ್ಲ. ನೀನು ಪ್ರಾಯೋಪವೇಶವನ್ನು ಆಶ್ರಯಿಸುತ್ತಿರಲು ನಿನ್ನ ತಮ್ಮಂದಿರೆಲ್ಲಾ ವಿಷಾದದಿಂದ ಕೂಡಿದ್ದಾರೆ.
ತದಲಂ ದುಃಖಿತಾನೇನಾನ್ ಕರ್ತುಂ ಸರ್ವಾನ್ ನರಾಧಿಪ |
ಉತ್ತಿಷ್ಠ ವ್ರಜ ಭದ್ರಂ ತೇ ಸಮಾಶ್ವಾಸಯ ಸೋದರಾನ್ ||21||
ಎಲೈ ರಾಜನೇ, ಇವರೆಲ್ಲರನ್ನೂ ದುಃಖಿತರನ್ನಾಗಿ ಮಾಡಿದುದು ಸಾಕು. ಎದ್ದು ಇಲ್ಲಿಂದ ಹೊರಡು. ನಿನಗೆ ಮಂಗಳವಾಗಲಿ. ನಿನ್ನ ಸೋದರರನ್ನು ಸಮಾಧಾನಪಡಿಸು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಚತ್ವಾರಿಂಶಾಧಿಕದ್ವಿಶತತಮೋಽಧ್ಯಾಯಃ ||
|| ಇತಿ ಘೋಷಯಾತ್ರಾಪರ್ವಣಿ ಕರ್ಣಸಾಂತ್ವನಂ ನಾಮ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ನಲವತ್ತನೆಯ ಅಧ್ಯಾಯ
ಕರ್ಣನ ಸಮಾಧಾನ ವಚನಗಳು. ಆದರೂ ದುರ್ಯೋಧನನ ಹಠ.
ಕರ್ಣಃ
ರಾಜನ್ ನಾದ್ಯಾವಗಚ್ಛಾಮಿ ತವೇಹ ಲಘುಸತ್ತ್ವತಾಮ್ |
ಅಲ್ಪತ್ವಂ ಚ ತಥಾ ಬುದ್ಧೇಃ ಕಾರ್ಯಾಣಾಮವಿವೇಕತಃ ||1||
ಕರ್ಣ ರಾಜನೇ, ಈ ದಿನ ಈ ನಿನ್ನ ಅಲ್ಪವಾದ ಧೈರ್ಯವನ್ನು, ಬುದ್ಧಿಯ ಅಲ್ಪತ್ವವನ್ನು, ಕಾರ್ಯಗಳ ಬಗ್ಗೆ ಇರುವ ಅವಿವೇಕವನ್ನು ನಾನು ತಿಳಿಯುತ್ತಿಲ್ಲ.
ಕಿಮತ್ರ ಚಿತ್ರಂ ಯದ್ ವೀರ ಮೋಕ್ಷಿತಃ ಪಾಂಡವೈರಸಿ |
ಸದ್ಯೋ ಯದ್‌ವಶಂ ಮಾಪನ್ನಃ ಶತ್ರೂಣಾಂ ಶತ್ರುಕರ್ಶನ ||2||
ವೀರನೇ, ನೀನು ಪಾಂಡವರಿಂದ ಬಿಡಿಸಲ್ಪಟ್ಟರೆ ಇದರಲ್ಲಿ ಆಶ್ಚರ್ಯವೇನು? ಶತ್ರುಕರ್ಶನನೇ, ನೀನು ಇದ್ದಕ್ಕಿದ್ದಂತೆಯೇ ಶತ್ರುಗಳ ವಶವಾದಿಯಷ್ಟೆ.
ಸೇನಾಜೀವೈಶ್ಚ ಕೌರವ್ಯ ತಥಾ ವಿಷಯವಾಸಿಭಿಃ |
ಅಜ್ಞಾತೈರ್ಯದಿ ವಾ ಜ್ಞಾತೈಃ ಕರ್ತವ್ಯಂ ನೃಪತೇಃ ಪ್ರಿಯಮ್ ||3||
ಕೌರವ್ಯನೇ, ಸೈನ್ಯದಲ್ಲಿದ್ದು ಜೀವಿಸುವವರು ಮತ್ತು ರಾಜನ ದೇಶದಲ್ಲಿ ವಾಸಿಸುವವರು ಅವರು ತಿಳಿದಿರಲಿ ಅಥವಾ ತಿಳಿಯದಿರಲಿ ರಾಜನಿಗೆ ಪ್ರಿಯವನ್ನೇ ಮಾಡಬೇಕು.
ಪ್ರಾಯಃ ಪ್ರಧಾನಾಃ ಪುರುಷಾಃ ಕ್ಷೋಭಯಂತ್ಯರಿವಾಹಿನೀಮ್ |
ನಿಗೃಹ್ಯತೇ ಚ ಯುದ್ಧೇಷು ಮೋಕ್ಷ್ಯಂತೇ ಚೈವ ಸೈನಿಕೈಃ ||4||
ಪ್ರಧಾನರಾದ ಪುರುಷರೇ ಶತ್ರುಸೈನ್ಯವನ್ನು ಕ್ಷೋಭೆಗೊಳಿಸುತ್ತಾರೆ. ಯುದ್ಧದಲ್ಲಿ ಬಂಧನಕ್ಕೂ ಒಳಗಾಗುತ್ತಾರೆ ಮತ್ತು ಸೈನಿಕರಿಂದ ಮೋಚನೆಗೊಳಿಸಲ್ಪಡುತ್ತಾರೆ.
ಸೇನಾಜೀವಾಶ್ಚ ಯೇ ರಾಜ್ಞಾಂ ವಿಷಯೇ ಸಂತಿ ಮಾನವಾಃ |
ತೈಃ ಸಂಗಮ್ಯ ನೃಪಾರ್ಥಾಯ ಯತಿತವ್ಯಂ ಯಥಾತಥಮ್ ||5||
ಸೇನಾಜೀವಿಗಳು ಮತ್ತು ರಾಜ್ಯದಲ್ಲಿ ವಾಸಮಾಡುವ ಮನುಷ್ಯರು ಒಟ್ಟಿಗೆ ಸೇರಿ ರಾಜನ ಹಿತಕ್ಕಾಗಿ ಯಥಾರ್ಥವಾದ ಪ್ರಯತ್ನವನ್ನು ಮಾಡಬೇಕು.
ಯದ್ಯೇವಂ ಪಾಂಡವೈ ರಾಜನ್ ಭವದ್ವಿಷಯವಾಸಿಭಿಃ |
ಯದೃಚ್ಛಯಾ ಮೋಕ್ಷಿತೋಽಸಿ ತತ್ರ ಕಾ ಪರಿದೇವನಾ ||6||
ಎಲೈ ರಾಜನೇ, ನಿನ್ನ ರಾಜ್ಯದಲ್ಲಿ ವಾಸಿಸುವ ಪಾಂಡವರಿಂದ ನೀನು ಹೀಗೆ ಅನಿರೀಕ್ಷಿತವಾಗಿ ಮೋಚನೆಗೊಳಿಸಲ್ಪಟ್ಟರೆ ಆ ವಿಷಯದಲ್ಲಿ ಗೋಳಾಡುವುದು ಏನಿದೆ?
ನ ಚೈತತ್ ಸಾಧು ಯದ್ ರಾಜನ್ ಪಾಂಡವಾಸಾಃತ್ವಂ ನೃಪೋತ್ತಮಮ್|
ಸ್ವಸೇನಯಾ ಸಂಪ್ರಯಾಂತಂ ನಾನುಯಾಂತಿ ಸ್ಮ ಪೃಷ್ಠತಃ ||7||
ಎಲೈ ರಾಜನೇ, ನಿನ್ನ ಸೇನೆಯ ಜೊತೆಯಲ್ಲಿ ಹೊರಟಾಗ ಪಾಂಡವರು ರಾಜಶ್ರೇಷ್ಠನಾದ ನಿನ್ನನ್ನು ಹಿಂಬಾಲಿಸದಿದ್ದುದು ಅವರದೇ ದೋಷ.
ಶೂರಾಶ್ಚ ಬಲವಂತಶ್ಚ ಸಂಯುಗೇಷ್ವಪಲಾಯಿನಃ |
ಭವತಸ್ತೇ ಸಹಾಯಾ ವೈ ಪ್ರೇಷ್ಯತಾಂ ಪೂರ್ವಮಾಗತಾಃ ||8||
ಶೂರರೂ, ಬಲಿಷ್ಠರೂ, ಯುದ್ಧದಲ್ಲಿ ಹಿಮ್ಮೆಟ್ಟದವರೂ ಆದ ಅವರು ಮೊದಲೇ ನಿನ್ನ ದಾಸ್ಯಭಾವವನ್ನು ಹೊಂದಿ ನಿನಗೆ ಸಹಾಯಕರಾಗಿದ್ದಾರಷ್ಟೆ?
ಪಾಂಡವೇಯಾನಿ ರತ್ನಾನಿ ತ್ವಮದ್ಯಾಪ್ಯುಪಭುಂಜಸೇ |

ಸತ್ತ್ವಸ್ಥಾನ್ ಪಾಂಡವಾನ್ ಪಶ್ಯ ನ ತೇ ಪ್ರಾಯಮುಪಾವಿಶನ್ ॥9॥
ಈ ದಿನ ನೀನು ಪಾಂಡವರ ರತ್ನಗಳನ್ನು ಭೋಗಿಸುತ್ತಿದ್ದೀಯೆ. ಧೈರ್ಯಶಾಲಿಗಳಾದ ಪಾಂಡವರನ್ನು ನೋಡು. ಅವರು ಪ್ರಾಯೋಪ್ರವೇಶವನ್ನು ಮಾಡಲಿಲ್ಲ.
ಉತ್ತಿಷ್ಠ ರಾಜನ್ ಭದ್ರಂ ತೇ ನಚಿರಂ ಕರ್ತುಮರ್ಹಸಿ।
ತದಲಂ ತೇ ಮಹಾಬಾಹೋ ಬುದ್ಧಿಃ ಪ್ರಾಯೋಪವೇಶನೇ ॥10॥
ರಾಜನೇ, ನಿನಗೆ ಮಂಗಳವಾಗಲಿ. ಎದ್ದೇಳು. ತಡಮಾಡಬೇಡ. ಮಹಾಬಾಹುವೇ, ನಿನ್ನ ಪ್ರಾಯೋಪ್ರವೇಶದ ನಿರ್ಣಯವನ್ನು ಸಾಕುಮಾಡು.
ಅವಶ್ಯಮೇವ ನೃಪತೇ ರಾಜ್ಞೋ ವಿಷಯವಾಸಿಭಿಃ।
ಪ್ರಿಯಾಣ್ಯಾಚರಿತವ್ಯಾನಿ ತತ್ರ ಕಾ ಪರಿದೇವನಾ ॥11॥
ರಾಜನ ವಿಷಯವಾಸಿಗಳಾದ ಪ್ರಜೆಗಳಿಂದ ಅವಶ್ಯವಾಗಿ ರಾಜರಿಗೆ ಪ್ರಿಯವಾದುದೇ ಮಾಡಲ್ಪಡಬೇಕು. ಈ ವಿಷಯದಲ್ಲಿ ಸಂತಾಪಪಡುವುದು ಏನಿದೆ?
ಮದ್ವಾಕ್ಯಮೇತದ್ ರಾಜೇಂದ್ರ ಯದ್ಯೇವಂ ನ ಕರಿಷ್ಯಸಿ।
ಸ್ಥಾಸ್ಯಾಮೀಹ ಭವತ್ಪಾದೌ ಶುಶ್ರೂಷನ್ನರಿಮರ್ದನ ॥12॥
ಎಲೈ ರಾಜೇಂದ್ರನೇ, ಎಲೈ ಅರಿಮರ್ದನನೇ, ನೀನು ಈ ರೀತಿಯಾದ ನನ್ನ ಮಾತುಗಳನ್ನು ನಡೆಸಿಕೊಡದಿದ್ದರೆ ನಾನು ನಿನ್ನ ಪಾದಸೇವೆಯನ್ನು ಮಾಡುತ್ತಾ ಇಲ್ಲಿಯೇ ಇರುವೆನು.
ನೋತ್ಸಹೇ ಜೀವಿತುಮಹಂ ತ್ವದ್ವಿಹೀನೋ ನರರ್ಷಭ।
ಪ್ರಾಯೋಪವಿಷ್ಟಸ್ತು ತಥಾ ರಾಜ್ಞಾಂ ಹಾಸ್ಯೋ ಭವಿಷ್ಯಸಿ ॥13॥
ಎಲೈ ನರಶ್ರೇಷ್ಠನೇ, ನೀನಿಲ್ಲದೆ ನಾನು ಬದುಕಲು ಇಷ್ಟಪಡುವುದಿಲ್ಲ. ನೀನು ಹೀಗೆ ಪ್ರಾಯೋಪ್ರವೇಶಕ್ಕೆ ಕುಳಿತುಕೊಂಡರೆ ರಾಜನ ಎದುರಿನಲ್ಲಿ ಹಾಸ್ಯಾಸ್ಪದನಾಗುವಿ.
ವೈಶಂಪಾಯನಃ
ಏವಮುಕ್ತಸ್ತು ಕರ್ಣೇನ ರಾಜಾ ದುರ್ಯೋಧನಸ್ತದಾ।
ನೈವೋತ್ಥಾತುಂ ಮನಶ್ಚಕ್ರೇ ಸ್ವರ್ಗಾಯ ಕೃತನಿಶ್ಚಯಃ ॥14॥
ವೈಶಂಪಾಯನ ಕರ್ಣನು ಹೀಗೆ ಹೇಳಿದರೂ ರಾಜನಾದ ದುರ್ಯೋಧನನು ಸ್ವರ್ಗವನ್ನು ಸಾಧಿಸುವುದಾಗಿ ನಿರ್ಧರಿಸಿ ಪ್ರಾಯೋಪ್ರವೇಶದಿಂದ ಏಳಲು ಮನಸ್ಸು ಮಾಡಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತ್ವಾರಿಂಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ಕರ್ಣವಾಕ್ಯಂ ನಾಮ ಪಂಚಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತನೆಯ
ಅಧ್ಯಾಯ ಮುಗಿಯಿತು.
* * * *
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ತತೋ ನಿಶಾಯಾಂ ಪ್ರಾಪ್ತಾಯಾಂ ಸ್ವಪಕ್ಷೇ ಪ್ರವಿಷೀದತಿ।
ಮಂತ್ರಯಿತ್ವಾಽಸುರೈಃ ಕೃತ್ಯಾ ನಿರ್ಮಿತಾ ಹೋಮಕರ್ಮಣಿ ॥402॥
ಅಸುರರು ತಮ್ಮ ಪಕ್ಷ ಹೀಗೆ ಬಲಗುಂದಿದಾಗ ರಾತ್ರಿಕಾಲದಲ್ಲಿ ಮಂತ್ರಾಲೋಚನ ಮಾಡಿ ಹೋಮಕರ್ಮದಿಂದ ಒಂದು ಕೃತ್ರಿಮ ದೇವತೆಯನ್ನು ನಿರ್ಮಿಸಿದರು.
ಶುಕ್ರೇಣೋತ್ಪಾದಿತಾ ಕೃತ್ಯಾ ಸಾ ಪ್ರಸುಪ್ತೇಷು ಮಂತ್ರಿಷು।
ಧಾರ್ತರಾಷ್ಟ್ರಂ ಸಮಾದಾಯ ಯಯೌ ಪಾತಾಲಮಾಶು ಚ।
ಅಥ ಸಂಬೋಧಯಾಮಾಸುರ್ದೈತ್ಯಾ ದುರ್ಯೋಧನಂ ನೃಪಮ್ ॥
ದುರ್ಯೋಧನನ ಮಂತ್ರಿಗಳು ನಿದ್ರಿಸುತ್ತಿದ್ದಾಗ ಶುಕ್ರಾಚಾರ್ಯರಿಂದ ನಿರ್ಮಿತವಾದ ಆ ಕ್ಷುದ್ರದೇವತೆ ದುರ್ಯೋಧನನನ್ನು ಎತ್ತಿಕೊಂಡು ಬೇಗನೆ ಪಾತಾಳವನ್ನು ಸೇರಿದ. ಬಳಿಕ ಅಸುರರು ದುರ್ಯೋಧನನಿಗೆ ಬೋಧಿಸಿದರು.
ತ್ವಂ ದಿವ್ಯಃ ಪುರುಷೋ ವೀರಃ ಸೃಷ್ಟೋಽಸ್ಮಾಭಿಃ ಪ್ರತೋಷಿತಾತ್।
ತಪಸಾ ಶಂಕರಾದ್ ವಜ್ರಕಾಯೋಽವಧ್ಯಶ್ಚ ಸರ್ವದಾ।
ಅಸ್ಮಾಕಂ ಪಕ್ಷಭೂತಸ್ತ್ವಂ ದೇವಾನಾಂ ಚೈವ ಪಾಂಡವಾಃ ॥404॥
ನೀನು ದಿವ್ಯ ಪುರುಷ, ವೀರ. ನಾವು ತಪಸಿನಿಂದ ಒಲಿಸಿಕೊಂಡು ಶಿವನ ಮೂಲಕ ನಿನ್ನನ್ನು ವಜ್ರಕಾಯನನ್ನಾಗಿ ಅವಧ್ಯನನ್ನಾಗಿ ಮಾಡಿದ್ದೇವೆ. ನಮ್ಮ ಪಕ್ಷದವನು ನೀನು. ದೇವತೆಗಳ ಪಕ್ಷದವರು ಪಾಂಡವರು.
ಇದಾನೀಂ ಸರ್ವದೇವಾನಾಂ ವರಾತ್ ತ್ವಂ ವಿಜಿತೋ ರಣೇ।
ವಯಂ ತಥಾ ಕರಿಷ್ಯಾಮೋ ಯಥಾ ಜೇಷ್ಯಸಿ ಪಾಂಡವಾನ್ ॥405॥
ಈಗ ನೀನು ಎಲ್ಲ ದೇವತೆಗಳ ವರದಿಂದ ಪರಾಭವಗೊಂಡಿರುವಿ. ಇನ್ನು ನೀನು ಪಾಂಡವರನ್ನು ಗೆಲ್ಲುವಂತೆ ನಾವು ಮಾಡುವೆವು.
ಕೃಷ್ಣೇನ ನಿಹತಶ್ಚೈವ ನರಕಃ ಕರ್ಣ ಆಸ್ಥಿತಃ।
ಸ ಚ ಕೃಷ್ಣಾರ್ಜುನಾಭಾವಂ ಕರಿಷ್ಯತಿ ನ ಸಂಶಯಃ ॥406॥

ಕೃಷ್ಣನಿಂದ ಹತನಾದ ನರಕಾಸುರ ಈಗ ಕರ್ಣನಲ್ಲಿ ಆವೇಶಗೊಂಡಿದ್ದಾನೆ. ಅವನು ಕೃಷ್ಣಾರ್ಜುನರನ್ನು ನಾಶಮಾಡುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಭೀಷ್ಮಾದೀಂಶ್ಚ ವಯಂ ಸರ್ವಾನಾವಿಶಾಮ ಜಯಾಯ ತೇ |
ತಪಸಾ ವರ್ದ್ಧಯಿಷ್ಯಾಮಸ್ತತ್ತ್ವಂ ಕರ್ಣಾದೀಂಶ್ಚ ಸರ್ವಶಃ ॥407॥
ನಿನ್ನ ವಿಜಯಕ್ಕಾಗಿ ನಾವೆಲ್ಲರೂ ಭೀಷ್ಮಾದಿಗಳಲ್ಲಿ ಆವೇಶಗೊಳ್ಳುತ್ತೇವೆ. ತಪಸ್ಸಿನಿಂದ ನಿನ್ನನ್ನೂ ಕರ್ಣಾದಿಗಳನ್ನೂ ಎಲ್ಲರನ್ನೂ ಬಲಪಡಿಸುತ್ತೇವೆ.
ತಸ್ಮಾದ್ ಗತ್ವಾ ಪಾಲಯಸ್ವ ರಾಜ್ಯಂ ರಾಜನ್ನಪೇತಭೀಃ |
ಇದಂ ಕಸ್ಯಾಪಿ ನಾಽಽಖ್ಯೇಯಂ ಸುಗುಪ್ತಂ ಭೂತಿವರ್ದ್ಧನಮ್ ॥408॥
ಅದರಿಂದ ರಾಜನೇ, ನೀನು ನಿರ್ಭಯನಾಗಿ ರಾಜ್ಯವಾಳು. ಈ ವಿಷಯವನ್ನು ಯಾರಿಗೂ ಹೇಳಬೇಡ. ಇದು ರಹಸ್ಯ ಐಶ್ವರ್ಯ ವರ್ಧಕ.

ಇತ್ಯುಕಾತ್ವ ಕೃತ್ಯಯಾ ಭೂಯಃ ಸ್ವಸ್ಥಾನೇ ಸ್ಥಾಪಿತೋ ನೃಪಃ |
ಉಮಯಾ ನಿರ್ಮಿತಾತ್ಮಾರ್ದ್ಧಮುತ್ತರಂ ಹರಿನಿರ್ಮಿತಮ್ ॥409॥
ಜ್ಞಾತ್ವೈವಾವಧ್ಯತಾಂ ಚೈವ ರಾಜ್ಯೇ ಬುದ್ಧಿಂ ಚಕಾರ ಸಃ |
ನೋವಾಚ ಕಸ್ಯಚಿತ್ ತೇಷು ಸ್ವಾನುಭೂತಂ ಸುಯೋಧನಃ ॥410॥
ಹೀಗೆ ಹೇಳಿ ಅಸುರರು ಕ್ಷುದ್ರದೇವತೆಯ ಮೂಲಕ ದುರ್ಯೋಧನನನ್ನು ಅವನ ಸ್ವಸ್ಥಾನದಲ್ಲಿ ಇರಿಸಿದರು. ತನ್ನ ಶರೀರದ ಕೆಳಗಿನ ಅರ್ಧ ಉಮೆಯಿಂದ ನಿರ್ಮಿತವಾದುದೆಂದೂ ಮೇಲಿನ ಅರ್ಧ ಶಿವನಿಂದ ನಿರ್ಮಿತವಾದುದೆಂದೂ ತಾನು ಅವಧ್ಯನೆಂದೂ ತಿಳಿದು ದುರ್ಯೋಧನ ರಾಜ್ಯವಾಳಲು ಮನಸು ಮಾಡಿದ. ತಾನು ಅನುಭವದಿಂದ ಕಂಡುದನ್ನು ತನ್ನವರಲ್ಲಿಯೂ ಯಾರಿಗೂ ಹೇಳಲಿಲ್ಲ.
ಪ್ರಭಾತಾಯಾಂ ತು ಶರ್ವರ್ಯಾಂ ಪುನಃ ಕರ್ಣೋ ವಚೋಽಬ್ರವೀತ್ |
ಭೃತ್ಯೈಸ್ತವೈವ ಪಾರ್ಥೈರ್ಯನ್ಮೋಚಿತೋಽಸಿ ಪರಂತಪ ॥411॥
ತೇನ ಮಾನ್ಯೋಽಧಿಕಂ ಲೋಕೇ ಯದ್ ಭೃತ್ಯಾ ಏವ ತಾದೃಶಾಃ |
ಕಿಮು ತ್ವಂ ರಾಜಶಾರ್ದೂಲ ತದುತ್ತಿಷ್ಠ ಸ್ಥಿರೋ ಭವ ॥412॥
ರಾತ್ರಿ ಬೆಳಗಾದಾಗ ಪುನಃ ಕರ್ಣ ಈ ಮಾತನ್ನು ಹೇಳಿದ. `ಮಹಾರಾಜ, ಶತ್ರುನಾಶಕ, ನಿನ್ನ ದಾಸರಾದ ಪಾಂಡವರಿಂದಲೇ ಬಿಡುಗಡೆ ಹೊಂದಿರುವುದರಿಂದ ನೀನು ಲೋಕದಲ್ಲಿ ಇನ್ನೂ ಹೆಚ್ಚು ಮಾನ್ಯನೆನಿಸಿರುವೆ. ನಿನ್ನ ದಾಸರೇ ಅಂಥ ವೀರರೆಂದರೆ ನೀನು ಎಂಥವನು ಎಂದು. ಅದರಿಂದ ಎದ್ದೇಳು. ಸ್ಥಿರಬುದ್ಧಿಯವನಾಗು' ಎಂದು.
ಯಾ ಚ ತೇಽರ್ಜುನಮಾಹಾತ್ಮ್ಯೇ ಶಂಕಾ ಸಾ ವ್ಯೇತು ಮೇ ಶೃಣು |
ಯಾವನ್ನೈವಾರ್ಜುನಂ ಹನ್ಯಾಂ ಪಾದೌ ಪ್ರಕ್ಷಾಲಯೇ ಸ್ವಯಮ್ ॥
ಇತ್ಯುಕ್ತೋಽವರಜೈಶ್ಚೈವ ಸರ್ವೈಃ ಶಕುನಿನಾ ತಥಾ |
ಯಾಚಿತೋ ರಥಮಾರುಹ್ಯ ಯಯೌ ನಾಗಪುರಂ ದ್ರುತಮ್ ॥414॥
ಅರ್ಜುನನ ಬಲದ ವಿಷಯದಲ್ಲಿ ಇರುವ ನಿನ್ನ ಭಯ ದೂರವಾಗಲಿ. ನಾನು ಹೇಳುವುದನ್ನು ಕೇಳು, `ಅರ್ಜುನನನ್ನು ಕೊಲ್ಲದ ತನಕ ನಾನು ನನ್ನ ಪಾದಗಳನ್ನು ನಾನೇ ತೊಳೆದುಕೊಳ್ಳುತ್ತೇನೆ' ಕರ್ಣ ಹೀಗೆ ಹೇಳಿ ರಾಜಧಾನಿಗೆ ಹಿಂತಿರುಗಲು ಬೇಡಿದ. ಎಲ್ಲ ಸೋದರರೂ ಶಕುನಿಯೂ ಬೇಡಿದರು. ಆಗ ದುರ್ಯೋಧನ ರಥವನ್ನೇರಿ ಬೇಗನೆ ಹಸ್ತಿನಾವತಿಗೆ ತೆರಳಿದ.
* * * *
ಇನ್ನೂರ ನಲವತ್ತೊಂದನೆಯ ಅಧ್ಯಾಯ
ಶಕುನಿಯ ಪ್ರಬೋಧನದಿಂದಲೂ ತನ್ನ ಹಠವನ್ನು ಬಿಡದಿದ್ದ ದುರ್ಯೋಧನನನ್ನು ದೈತ್ಯರು ಕೃತ್ಯಯನ್ನು ಸೃಷ್ಟಿ ಮಾಡಿ ರಸಾತಳಲೋಕಕ್ಕೆ ಸಮಾನಯನ.
ವೈಶಂಪಾಯನ
ಪ್ರಾಯೋಪವಿಷ್ಟಂ ರಾಜಾನಂ ದುರ್ಯೋಧನಮಮರ್ಷಣಮ್ |
ಉವಾಚ ಸಾಂತ್ವಯನ್ ರಾಜನ್ ಶಕುನಿಃ ಸೌಬಲಸ್ತದಾ ॥1॥
ಎಲೈ ರಾಜನೇ, ಸಿಟ್ಟಿನಿಂದ ಪ್ರಾಯೋಪ್ರವೇಶಕ್ಕೆ ಕುಳಿತಿದ್ದ ದುರ್ಯೋಧನನನ್ನು ಕುರಿತು ಸೌಬಲನಾದ ಶಕುನಿಯು ಆಗ ಸಮಾಧಾನಪಡಿಸುತ್ತಾ ಮಾತನಾಡಿದನು.
ಶಕುನಿಃ
ಸಮ್ಯಗುಕ್ತಂ ಹಿ ಕರ್ಣೇನ ನ ಶ್ರುತಂ ಕೌರವ ತ್ವಯಾ |
ಮಯಾ ಹೃತಾಂ ಶ್ರಿಯಂ ಸ್ಫೀತಾಂ ತಾಂ ಮೋಹಾದಪಹಾಯ ಕಿಮ್ ॥
ತ್ವಂ ಬುಧ್ವಾ ನೃವರ ಪ್ರಾಣಾನುತ್ಸ್ರಷ್ಟುಮಿಹ ಚೇಚ್ಛಸಿ |
ಅಥವಾಪ್ಯವಗಚ್ಛಾಮಿ ನ ವೃದ್ಧಾಃ ಸೇವಿತಾಸ್ತ್ವಯಾ ॥3॥
ಶಕುನಿ ಕೌರವನೇ, ಕರ್ಣನು ಸರಿಯಾಗಿ ಮಾತನಾಡಿದುದನ್ನು ನೀನು ಕೇಳಲಿಲ್ಲವೇ? ಎಲೈ ನರಶ್ರೇಷ್ಠನೇ, ನಾನು ಅಪಹರಿಸಿ ಸಂಪಾದಿಸಿಕೊಟ್ಟ ಪರಿಶುದ್ಧವಾದ ಸಂಪತ್ತನ್ನು ಮೋಹದಿಂದ ನಿರಾಕರಿಸಿ ಏನನ್ನು ಯೋಚಿಸಿ ಇಲ್ಲಿ ಪ್ರಾಣಗಳನ್ನು ಬಿಡಲು ಹೊರಟಿರುವೆ? ಅಥವಾ ನೀನು ವೃದ್ಧರ ಸೇವೆಯನ್ನು ಮಾಡಿಲ್ಲವೆಂದು ನಾನು ತಿಳಿಯುತ್ತೇನೆ.
ಯಃ ಸಮುತ್ಪತಿತಂ ಹರ್ಷಂ ದೈನ್ಯಂ ವಾ ನ ನಿಯಚ್ಛತಿ |
ಸ ನಶ್ಯತಿ ಶ್ರಿಯಂ ಪ್ರಾಪ್ಯ ಪಾತ್ರಮಾಮನಮಿವಾಂಭಸಿ ॥4॥

ಯಾವನು ಉಂಟಾದ ಹರ್ಷವನ್ನಾಗಲೀ, ದೈನ್ಯವನ್ನಾಗಲೀ ನಿಯಂತ್ರಿಸುವುದಿಲ್ಲವೋ ಅವನು ಸಂಪತ್ತನ್ನು ಹೊಂದಿ ನೀರು ತುಂಬಿದ ಹಸಿಯ ಮಣ್ಣಿನ ಪಾತ್ರೆಯಂತೆ ನಾಶವನ್ನು ಹೊಂದುತ್ತಾನೆ.
ಯಃ ಶೋಕಂ ಸಮನುಪ್ರಾಪ್ತಂ ನ ನಿಯಚ್ಛತಿ ಭಾರತ |
ತಮೀದೃಶಂ ನರಂ ನ ಶ್ರೀಃ ಕದಾಚಿದಪಿ ಸೇವತೇ ॥5॥
ಎಲೈ ಭಾರತನೇ, ಯಾರು ಸಂಪ್ರಾಪ್ತವಾದ ಶೋಕವನ್ನು ನಿಯಂತ್ರಿಸುವುದಿಲ್ಲವೋ ಇಂತಹ ನರನನ್ನು ಲಕ್ಷ್ಮಿಯು ಯಾವಾಗಲೂ ಸೇವಿಸುವುದಿಲ್ಲ.
ಅತಿಭೀರುಮತಿಕ್ಲೀಬಂ ದೀರ್ಘಸೂತ್ರಂ ಪ್ರಮಾದಿನಮ್ |
ವ್ಯಸನಾದ್ ವಿಷಯಾಕ್ರಾಂತಂ ನ ಭಜಂತಿ ನೃಪಂ ಪ್ರಜಾಃ ॥6॥
ಬಹಳ ಭಯಪಡುವಂತಹ, ಪೌರುಷವಿಲ್ಲದಂತಹ, ವಿಳಂಬದಿಂದ ಕೆಲಸ ಮಾಡುವಂತಹ, ಪ್ರಮಾದದಿಂದಿರುವಂತಹ, ವ್ಯಸನಗಳಿಗೆ ತುತ್ತಾಗಿ ವಿಷಯ ಭೋಗಗಳಿಗೆ ತುತ್ತಾದಂತಹ ರಾಜನನ್ನು ಪ್ರಜೆಗಳು ಸೇವಿಸುವುದಿಲ್ಲ.
ಸತ್ಕೃತಸ್ಯ ಹಿ ತೇ ಶೋಕೋ ವಿಪರೀತಃ ಕಥಂ ಭವೇತ್ |
ಮಾ ಕೃತಂ ಶೋಭನಂ ಪಾರ್ಥೈಃ ಶೋಕಮಾಲಂಬ್ಯ ನಾಶಯ ॥7॥
ನೀನು ಸತ್ಕರಿಸಲ್ಪಟ್ಟಿದ್ದೀಯೆ. ಅದಕ್ಕೆ ವಿಪರೀತವಾಗಿ ಶೋಕವು ಹೇಗೆ ಉಂಟಾಯಿತು? ಪಾಂಡವರು ಮಾಡಿದ ಒಳ್ಳೆಯ ಉಪಕಾರವನ್ನು (ಸೇವೆಯನ್ನು) ಶೋಕವನ್ನು ಆಶ್ರಯಿಸಿ ನಾಶಮಾಡಬೇಡ.
ಯತ್ರ ಹರ್ಷಸ್ತ್ವಯಾ ಕಾರ್ಯಃ ಸತ್ಕರ್ತವ್ಯಾಶ್ಚ ಪಾಂಡವಾಃ |
ತತ್ರ ಶೋಚಸಿ ರಾಜೇಂದ್ರ ವಿಪರೀತಮಿದಂ ತವ ॥8॥
ನೀನು ಎಲ್ಲಿ ಹರ್ಷವನ್ನು ಪಡಬೇಕೋ ಮತ್ತು ಪಾಂಡವರನ್ನು ಸತ್ಕರಿಸಬೇಕೋ ಅಂತಹ ಸ್ಥಳದಲ್ಲಿ ಶೋಕಪಡುತ್ತಿದ್ದೀಯೆ. ರಾಜೇಂದ್ರನೇ, ಇದೇನು ನಿನ್ನ ವಿಪರೀತ ವರ್ತನೆ?
ಪ್ರಸೀದ ಮಾ ತ್ಯಜಾತ್ಮಾನಂ ತುಷ್ಟಶ್ಚ ಸುಕೃತಂ ಸ್ಮರ |
ಪ್ರಯಚ್ಛ ರಾಜ್ಯಂ ಪಾರ್ಥಾನಾಂ ಯಶೋ ಧರ್ಮಮವಾಪ್ನುಹಿ |
ಕ್ರಿಯಾಮೇತಾಂ ಸಮಾಜ್ಞಾಯ ಕೃತಜ್ಞಸ್ತ್ವಂ ಭವಿಷ್ಯಸಿ |
ತೇಷಾಂ ಪ್ರತಿಕೃತಂ ಕೃತ್ವಾ ಯಶೋ ಧರ್ಮಮವಾಪ್ನುಹಿ ॥9॥
ಪ್ರಸನ್ನನಾಗು. ಪ್ರಾಣವನ್ನು ತೊರೆಯಬೇಡ. ಸಂತೋಷದಿಂದ ಮಾಡಿದ ಒಳ್ಳೆಯ ಕೆಲಸವನ್ನು ಸ್ಮರಿಸು. ಪಾಂಡವರಿಗೆ ರಾಜ್ಯವನ್ನು ಕೊಟ್ಟು ಯಶಸ್ಸನ್ನು ಮತ್ತು ಧರ್ಮವನ್ನು ಹೊಂದು. ಅವರ ಉಪಕಾರಕ್ಕೆ ಪ್ರತಿ ಉಪಕಾರವನ್ನು ಮಾಡಿ ಯಶಸ್ಸನ್ನು ಮತ್ತು ಧರ್ಮವನ್ನು ಸಂಪಾದಿಸು.
ಸೌಭ್ರಾತ್ರಂ ಪಾಂಡವೈಃ ಕೃತ್ವಾ ಸಮವಸ್ಥಾಪ್ಯ ಚೈವ ತಾನ್ |
ಪಿತ್ರ್ಯಂ ರಾಜ್ಯಂ ಪ್ರಯಚ್ಛೈಷಾಂ ತತಃ ಸುಖಮವಾಪ್ಸ್ಯಸಿ ॥10॥
ಪಾಂಡವರ ಜೊತೆಯಲ್ಲಿ ಭ್ರಾತೃಸ್ನೇಹವನ್ನು ಹೊಂದಿ ರಾಜ್ಯದಲ್ಲಿ ಅವರನ್ನಿಟ್ಟು ಅವರ ಪಿತೃಸಂಬಂಧಿಯಾದ ರಾಜ್ಯವನ್ನು ಅವರಿಗೆ ಕೊಟ್ಟು ಸುಖವನ್ನು ಹೊಂದುವವನಾಗು.
ವೈಶಂಪಾಯನಃ
ಶಕುನೇಸ್ತು ವಚಃ ಶ್ರುತ್ವಾ ದುಃಶಾಸನಮವೇಕ್ಷ್ಯ ಚ |
ಪಾದಯೋಃ ಪತಿತಂ ವೀರಂ ವಿಕೃತಂ ಭ್ರಾತೃಸೌಹೃದಾತ್ ॥11॥
ಬಾಹುಭ್ಯಾಂ ಸಾಧುಜಾತಾಭ್ಯಾಂ ದುಃಶಾಸನಮರಿಂದಮಮ್ |
ಉತ್ಥಾಪ್ಯ ಸಂಪರಿಷ್ವಜ್ಯಪ್ರೀತ್ಯಾಽಜಿಘ್ರತ ಮೂರ್ಧನಿ ॥12॥
ವೈಶಂಪಾಯನ ಶಕುನಿಯ ಮಾತುಗಳನ್ನು ಕೇಳಿ ಪಾದಗಳಲ್ಲಿ ಬಿದ್ದಿದ್ದ ವೀರನಾದ, ದುಃಖವಿಕಾರವನ್ನು ಹೊಂದಿದ್ದ ದುಃಶಾಸನನನ್ನು ನೋಡಿ ಭ್ರಾತೃಸ್ನೇಹದಿಂದ ತನ್ನ ಪುಷ್ಟವಾದ ಬಾಹುಗಳಿಂದ ಅರಿಂದಮನಾದ ದುಃಶಾಸನನನ್ನು ಎಬ್ಬಿಸಿ ಆಲಿಂಗಿಸಿ ಪ್ರೀತಿಯಿಂದ ಶಿರಸ್ಸನ್ನು ಆಘ್ರಾಣಿಸಿದನು.
ಕರ್ಣಸೌಬಲಯೋಶ್ಚಾಪಿ ಸಂಶ್ರುತ್ಯವಚನಾನ್ಯಸೌ |
ನಿರ್ವೇದಂ ಪರಮಂ ಗತ್ವಾ ರಾಜಾ ದುರ್ಯೋಧನಸ್ತದಾ ॥13॥
ಕರ್ಣ ಶಕುನಿಗಳ ಮಾತನ್ನು ಕೇಳಿದರೂ ಸಹ ರಾಜನಾದ ದುರ್ಯೋಧನನು ಆಗ ಬಹಳ ನಿರಾಸೆಯನ್ನು ತಾಳಿದನು.
ವ್ರೀಡಯಾಽಭಿಪರೀತಾತ್ಮಾ ನೈರಾಶ್ಯಮಗಮತ್ ಪರಮ್ |
ತತ್ಶ್ರುತ್ವಾ ಸುಹೃದಶ್ಚೈವ ಸಮನ್ಯುರಿದಮಬ್ರವೀತ್ ॥14॥
ನಾಚಿಕೆಯಿಂದ ಕೂಡಿದವನಾಗಿ ಪರಮನೈರಾಶ್ಯವನ್ನು ಹೊಂದಿದನು. ಸುಹೃದರ ಆ ಮಾತುಗಳನ್ನು ಕೇಳಿ ಕೋಪದಿಂದ ಈ ಮಾತುಗಳನ್ನು ಆಡಿದನು.
ನ ಧರ್ಮಧನಸೌಖ್ಯೇನ ನೈಶ್ವರ್ಯೇಣ ನ ಚಾಜ್ಞಯಾ |
ನೈವ ಭೋಗೈಶ್ಚ ಮೇ ಕಾರ್ಯಂ ಮಾ ವಿಹಾಯ ಚ ಗಚ್ಛತ ॥15॥
ನನಗೆ ಧರ್ಮದಿಂದಲಾಗಲೀ, ಧನದಿಂದಲಾಗಲೀ, ಸೌಖ್ಯದಿಂದಲಾಗಲೀ, ಐಶ್ವರ್ಯದಿಂದಲಾಗಲೀ, ಶಾಸನದಿಂದಲಾಗಲೀ, ಭೋಗಗಳಿಂದಲಾಗಲೀ ಆಗಬೇಕಾದುದು ಏನೂ ಇಲ್ಲ. ನೀನು ನನ್ನನ್ನು ಬಿಟ್ಟು ಹೊರಡಿ.
ನಿಶ್ಚಿತೇಯಂ ಮಮ ಮತಿಃ ಸ್ಥಿತಾ ಪ್ರಾಯೋಪವೇಶನೇ |
ಗಚ್ಛಧ್ವಂ ನಗರಂ ಸರ್ವೇ ಪೂಜ್ಯಾಶ್ಚ ಗುರವೋ ಮಮ ॥16॥

ಈ ನನ್ನ ಬುದ್ಧಿಯು ಪ್ರಾಯೋಪ್ರವೇಶದಲ್ಲಿ ಸ್ಥಿರವಾಗಿದೆ. ನೀವೆಲ್ಲರೂ ನಗರಕ್ಕೆ ಹೋಗಿ ನನ್ನ ಹಿರಿಯರನ್ನು ಸತ್ಕರಿಸಿ.
ತ ಏವಮುಕ್ತಾಃ ಪ್ರತ್ಯೂಚೂ ರಾಜಾನಮರಿಮರ್ದನಮ್ ॥17॥
ಹೀಗೆ ಹೇಳಲ್ಪಟ್ಟ ಅವರು ಅರಿಮರ್ದನನಾದ ರಾಜನನ್ನು ಕುರಿತು ಪ್ರತ್ಯುತ್ತರವನ್ನು ನೀಡಿದರು.
ಯಾ ಗತಿಸ್ತವ ರಾಜೇಂದ್ರ ಸಾಽಸ್ಮಾಕಮಪಿ ಭಾರತ |
ಕಥಂ ವಾ ಸಂಪ್ರವೇಕ್ಷ್ಯಾಮಸ್ತ್ವದ್ವಿಹೀನಾಃ ಪುರಂ ವಯಮ್ ॥18॥
ಎಲೈ ರಾಜೇಂದ್ರನೇ, ಭಾರತನೇ, ನಿನಗೆ ಯಾವ ಗತಿಯಾಗುತ್ತದೆಯೋ ನಮಗೂ ಅದೇ ಆಗಲಿ. ನೀನಿಲ್ಲದೆ ನಾವು ಹೇಗೆ ಪಟ್ಟಣವನ್ನು ಪ್ರವೇಶಿಸುವೆವು (ಎಂದು ಹೇಳಿದರು).
ಸ ಸುಹೃದ್ಭಿರಮಾತ್ಯೈಶ್ಚ ಭ್ರಾತೃಭಿಃ ಸ್ವಜನೇನ ಚ |
ಬಹುಪ್ರಕಾರಮಪ್ಯುಕ್ತೋ ನಿಶ್ಚಯಾನ್ನ ವಿಚಾಲ್ಯತೇ ॥19॥
ಅವನು ಸುಹೃದರಿಂದ, ಅಮಾತ್ಯರಿಂದ, ತಮ್ಮಂದಿರಿಂದ, ಸ್ವಜನರಿಂದ ಬಹುಪ್ರಕಾರವಾಗಿ ಹೇಳಲ್ಪಟ್ಟರೂ ತನ್ನ ನಿಶ್ಚಯದಿಂದ ಅಲುಗಾಡಲಿಲ್ಲ.
ದರ್ಭಾಸ್ತರಣಮಾಸ್ತೀರ್ಯ ನಿಶ್ಚಯಾದ್ ಧೃತರಾಷ್ಟ್ರಜಃ |
ಸಂಸ್ಪೃಶ್ಯಾಪಃ ಶುಚಿರ್ಭೂತ್ವಾ ಭೂತಳೇ ಸಮುಪಸ್ಥಿತಃ ॥20॥
ಭೂಮಿಯ ಮೇಲೆ ದರ್ಭಾಸನವನ್ನು ಹಾಕಿ ಜಲವನ್ನು ಸ್ಪರ್ಶಮಾಡಿ, ಶುಚಿಯಾಗಿ ನಿಶ್ಚಯವನ್ನು ಹೊಂದಿ ಧೃತರಾಷ್ಟ್ರ ಪುತ್ರನಾದ ಅವನು ಕುಳಿತುಕೊಂಡನು.
ಕುಶಚೀರಾಂಬರಧರಃ ಪರಂ ನಿಯಮಮಾಸ್ಥಿತಃ |
ವಾಗ್ಯತೋ ರಾಜಶಾರ್ದೂಲಃ ಸ ಸ್ವರ್ಗಗತಿಕಾಮ್ಯಯಾ ॥21॥
ಕುಶಚೀರ ವಸ್ತ್ರಗಳನ್ನು ಧರಿಸಿ, ಶ್ರೇಷ್ಠವಾದ ನಿಯಮವನ್ನು ಆಶ್ರಯಿಸಿದವನಾಗಿ ಮೌನವಾಗಿ ಆ ರಾಜಶಾರ್ದೂಲನು ಸ್ವರ್ಗವನ್ನು ಹೊಂದುವ ಇಚ್ಛೆಯಿಂದ ಕುಳಿತುಕೊಂಡನು.
ಮನಸೋಪಚಿತಿಂ ಕೃತ್ವಾ ನಿರಸ್ಯ ಚ ಬಹಿಷ್ಕ್ರಿಯಾಃ |
ತಸ್ಥೌ ಪ್ರಾಯೋಪವೇಶೇಽಥ ಮತಿಂ ಕೃತ್ವಾ ಸುನಿಶ್ಚಿತಾಮ್ ॥22॥
ಮನಸ್ಸನ್ನು ಬೇರೆ ವಿಷಯಗಳಿಂದ ತೆಗೆದು ಬಾಹ್ಯಕ್ರಿಯೆಗಳೆಲ್ಲವನ್ನೂ ತ್ಯಜಿಸಿ ಪ್ರಾಯೋಪವೇಶದ ವಿಷಯದಲ್ಲಿ ಸುದೃಢವಾದ ಬುದ್ಧಿಯುಳ್ಳವನಾಗಿ ಕುಳಿತನು.
ಅಥ ತಂ ನಿಶ್ಚಯಂ ತಸ್ಯ ಬುದ್ಧ್ವಾ ದೈತೇಯದಾನವಾಃ |
ಪಾತಾಳವಾಸಿನೋ ರೌದ್ರಾಃ ಪೂರ್ವಂ ದೇವೈರ್ವಿನಿರ್ಜಿತಾಃ ॥23॥
ತೇ ಸ್ವಪಕ್ಷಕ್ಷಯಂ ತಂ ತು ಜ್ಞಾತ್ವಾ ದುರ್ಯೋಧನಸ್ಯ ವೈ |
ಆಹ್ವಾನಾಯ ತದಾ ಚಕ್ರುಃ ಕರ್ಮ ವೈತಾನಸಂಭವಮ್ ॥24॥
ಅವನ ನಿಶ್ಚಯವನ್ನು ತಿಳಿದ ಪಾತಾಳವಾಸಿಗಳೂ, ಉಗ್ರರೂ, ಹಿಂದೆ ದೇವತೆಗಳಿಂದ ಪರಾಜಿತರಾದವರೂ ಆದ ದೈತ್ಯದಾನವರು ತಮ್ಮ ಪಕ್ಷದ ಕ್ಷಯವನ್ನು ತಿಳಿದವರಾಗಿ ದುರ್ಯೋಧನನನ್ನು ಕರೆಯಲು ಆಗ ಒಂದು ಆಭಿಚಾರಕ ಪ್ರಯೋಗವನ್ನು ಮಾಡಿದರು.
ಬೃಹಸ್ಪತ್ಯುಶನಃಪ್ರೋಕ್ತೈಃ ಮಂತ್ರೈರ್ಮಂತ್ರವಿಶಾರದಾಃ |
ಅಥರ್ವವೇದಪ್ರೋಕ್ತೈಶ್ಚ ಯಾಶ್ಚೋಪನಿಷದಿ ಕ್ರಿಯಾಃ |
ಮಂತ್ರಜಪ್ಯಸಮಾಯುಕ್ತಾಸ್ತಾದಾ ಸಂಪ್ರವರ್ತಯನ್ ॥25॥
ಮಂತ್ರವಿಶಾರದರಾದ ಅವರು ಬೃಹಸ್ಪತಿ ಮತ್ತು ಶುಕ್ರಾಚಾರ್ಯರು ಹೇಳಿದ ಮಂತ್ರದಿಂದಲೂ, ಅಥರ್ವವೇದದಲ್ಲಿ ಹೇಳಿರುವ ವಿಧಾನದಿಂದಲೂ ಮಂತ್ರ ಮತ್ತು ಜಪಗಳನ್ನು ಮಾಡಿದವರಾಗಿ ಉಪನಿಷತ್ತಿನಲ್ಲಿ ಹೇಳಿದ ಕ್ರಿಯೆಗಳನ್ನು ಆಗ ನೆರವೇರಿಸಿದರು.
ಜುಹ್ವಂತ್ಯಗ್ನೌ ಹವಿಃ ಕ್ಷೀರಂ ಮಂತ್ರವತ್ಸುಸಮಾಹಿತಾಃ |
ಬ್ರಾಹ್ಮಣಾ ವೇದವೇದಾಂಗಪಾರಗಾಃ ಸ್ಯದೃಢವ್ರತಾಃ ॥26॥
ವೇದವೇದಾಂಗ ಪಾರಂಗತರೂ, ದೃಢವ್ರತರೂ ಆದ ಬ್ರಾಹ್ಮಣರು ಆಗ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಕ್ಷೀರರೂಪವಾದ ಹವಿಸ್ಸನ್ನು ಹೋಮ ಮಾಡಿದರು.
ಅಧ್ವರ್ಯವೋ ದಾನವಾನಾಂ ಕರ್ಮ ಪ್ರಾವರ್ತಯಂಸ್ತತಃ ॥27॥
ಕರ್ಮಸಿದ್ಧೌ ತದಾ ತತ್ರ ಜೃಂಭಮಾಣಾ ಮಹಾದ್ಭುತಾ |
ಕೃತ್ಯಾ ಸಮುತ್ಥಿತಾ ರಾಜನ್ ಕಿಂ ಕರೋಮೀತಿ ಚಾಬ್ರವೀತ್ ॥28॥
ಆಹುರ್ದೈತ್ಯಾಶ್ಚ ತಾಂ ತತ್ರ ಸುಪ್ರೀತೇನಾಂತರಾತ್ಮನಾ |
ಪ್ರಾಯೋಪವಿಷ್ಟಂ ರಾಜಾನಂ ಧಾರ್ತರಾಷ್ಟ್ರಮಿಹಾನಯ ॥30॥
ದಾನವರ ಅಧ್ವರ್ಯುಗಳಾದ ಬ್ರಾಹ್ಮಣರು ಆಗ ಅಲ್ಲಿ ಆ ಕರ್ಮವನ್ನು ನೆರವೇರಿಸಿದರು. ರಾಜನೇ, ಆ ಕರ್ಮವು ಸಂಪೂರ್ಣಗೊಳ್ಳುತ್ತಿರಲು ಒಂದು ಬಹಳ ದೊಡ್ಡದಾಗ ಮತ್ತು ಅದ್ಭುತವಾದ ಕೃತ್ಯೆಯು (ಪಿಶಾಚಿಯು) ಎದ್ದು ನಾನು ಏನು ಮಾಡಲಿ ಎಂದು ಕೇಳಿತು. ಆಗ ದೈತ್ಯರು ಸಂತೋಷಗೊಂಡ ಮನಸ್ಸುಳ್ಳವರಾಗಿ ಪ್ರಾಯೋಪ್ರವೇಶಕ್ಕೆ ಕುಳಿತ ದುರ್ಯೋಧನನನ್ನು ಇಲ್ಲಿಗೆ ಕರೆದುಕೊಂಡು ಬಾ ಎಂದು ಹೇಳಿದರು.
ವೈಶಂಪಾಯನಃ
ತಥೇತಿ ಚ ಪ್ರತಿಶ್ರುತ್ಯ ಸಾ ಕೃತ್ಯಾ ಪ್ರಯಯೌ ತದಾ |
ನಿಮೇಷಾದಗಮಚ್ಚಾಪಿ ಯತ್ರ ರಾಜಾ ಸುಯೋಧನಃ ॥30॥

ಆ ಕೃತ್ಯೆಯು ಹಾಗೆಯೇ ಆಗಲಿ ಎಂದು ಪ್ರತಿಜ್ಞೆ ಮಾಡಿ ಅಲ್ಲಿಂದ ಹೊರಟಿತು. ಮತ್ತು ಒಂದು ನಿಮಿಷದಲ್ಲಿ ರಾಜನಾದ ಸುಯೋಧನನು ಕುಳಿತಿದ್ದ ಸ್ಥಳಕ್ಕೆ ಬಂದಿತು.
ಸಮಾದಾಯ ಚ ರಾಜಾನಂ ಪ್ರವಿವೇಶ ರಸಾತಳಮ್ |
ದಾನವಾನಾಂ ಮುಹೂರ್ತಾಚ್ಚ ತಮಾನೀತಂ ನ್ಯವೇದಯತ್ ॥31॥
ಮತ್ತು ರಾಜನನ್ನು ಎತ್ತಿಕೊಂಡು ರಸಾತಲ ಲೋಕಕ್ಕೆ ಹೋಯಿತು. ಒಂದು ಮುಹೂರ್ತದ ಸಮಯದಲ್ಲಿ ದಾನವರಿಗೆ ಅದು ರಾಜನನ್ನು ತಂದಿದ್ದೇನೆಂದು ಹೇಳಿತು.
ತಮಾನೀತಂ ನೃಪಂ ದೃಷ್ಟ್ವಾ ರಾತ್ರೌ ಸಂಹತ್ಯ ದಾನವಾಃ |
ಪ್ರಹೃಷ್ಟಮನಸಃ ಸರ್ವೇ ಕಿಂಚಿದುತ್ಫುಲ್ಲಲೋಚನಾಃ ॥32॥
ದೃಢಮೇನಂ ಪರಿಷ್ವಜ್ಯ ಪೃಷ್ಟ್ವಾ ಚ ಕುಶಲಂ ತದಾ |
ಸಾಭಿಮಾನಮಥೋ ವಾಕ್ಯಂ ದುರ್ಯೋಧನಮಥಾಬ್ರುವನ್ ॥33॥
ಅಲ್ಲಿಗೆ ರಾತ್ರಿಯಲ್ಲಿ ತರಲ್ಪಟ್ಟ ಅವನನ್ನು ನೋಡಿ ದಾನವರೆಲ್ಲರೂ ಸಂತೋಷಗೊಂಡ ಮನಸ್ಸುಳ್ಳವರಾಗಿ ಸ್ವಲ್ಪ ಅರಳಿದ ಕಣ್ಣುಳ್ಳವರಾಗಿ ದುರ್ಯೋಧನನನ್ನು ಆಲಿಂಗಿಸಿ ಅವನ ಕುಶಲ ಪ್ರಶ್ನೆಯನ್ನು ಮಾಡಿ ಅಭಿಮಾನ ಪೂರ್ವಕವಾಗಿ ಅವನನ್ನು ಕುರಿತು ಈ ಮಾತನ್ನು ಆಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ದುರ್ಯೋಧನಸ್ಯ ರಸಾತಳನಯನಂ ನಾಮ ಷಷ್ಠೋಽಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ನಲವತ್ತೆರಡನೆಯ ಅಧ್ಯಾಯ
ಪಾತಾಳವಾಸಿಗಳಾದ ದೈತ್ಯದಾನವರಿಂದ ಹೇತೂಪನ್ಯಾಸಪೂರ್ವಕವಾಗಿ ಪ್ರಾಯೋಪವೇಶದಿಂದ ದುರ್ಯೋಧನನ ನಿವರ್ತನೆ.
ದಾನವಾಃ
ಭೋಃ ಸುಯೋಧನ ರಾಜೇಂದ್ರ ಭರತಾನಾಂ ಕುಲೋದ್ವಹ |
ಶೂರೈಃ ಪರಿವೃತೋ ನಿತ್ಯಂ ತಥೈವ ಚ ಮಹಾತ್ಮಭಿಃ ॥1॥
ಅಕಾರ್ಷೀಃ ಸಾಹಸಮಿದಂ ಕಸ್ಮಾತ್ ಪ್ರಾಯೋಪವೇಶನಮ್ |
ಆತ್ಮತ್ಯಾಗೀ ಹ್ಯಧೋ ಯಾತಿ ವಾಚ್ಯತಾಂ ಚಾಯಶಸ್ಕರೀಮ್ ॥2॥
ದಾನವರು ಎಲೈ ರಾಜೇಂದ್ರನಾದ ಭರತಕುಲೋದ್ವವನಾದ ಸುಯೋಧನನೇ, ಶೂರರಿಂದಲೂ ಮತ್ತು ಮಹಾತ್ಮರಿಂದಲೂ ನಿತ್ಯವೂ ಪರಿವೃತನಾದ ನೀನು ಈ ಪ್ರಾಯೋಪವೇಶರೂಪವಾದ ಸಾಹಸಕಾರ್ಯವನ್ನು ಏಕೆ ಮಾಡಿದೆ? ಆತ್ಮತ್ಯಾಗವನ್ನು ಮಾಡುವವನು ಅಧಃಪತನವನ್ನು ಹೊಂದುತ್ತಾನೆ ಮತ್ತು ಲೋಕದಲ್ಲಿ ನಿಂದನೆಯನ್ನು ಮತ್ತು ಅಕೀರ್ತಿಯನ್ನು ಪಡೆಯುತ್ತಾನಷ್ಟೆ?
ನ ಹಿ ಕಾರ್ಯವಿರುದ್ಧೇಷು ಬಹುಪಾಪೇಷು ಕರ್ಮಸು |
ಮೂಲಘಾತಿಷು ಸಜ್ಜಂತೇ ಬುದ್ಧಿಮಂತೋ ಭವದ್ವಿಧಾಃ ॥3॥
ನಿನ್ನಂತಹ ಮೇಧಾವಿಗಳು ಮೂಲಘಾತವನ್ನು ಮಾಡುವ, ಉದ್ದೇಶಕ್ಕೆ ವಿರುದ್ಧವಾದ, ಬಹಳ ಪಾಪಕರವಾದ ಕರ್ಮಗಳಲ್ಲಿ ಆಸಕ್ತರಾಗುವುದಿಲ್ಲವಷ್ಟೆ?
ನಿಯಚ್ಛೈನಾಂ ಮತಿಂ ರಾಜನ್ ಧರ್ಮಾರ್ಥಸುಖನಾಶಿನೀಮ್ |
ಯಶಃಪ್ರತಾಪವೀರ್ಯಘ್ನೀಂ ಶತ್ರೂಣಾಂ ಹರ್ಷವರ್ಧನೀಮ್ ॥4॥
ಎಲೈ ರಾಜನೇ, ಧರ್ಮಾರ್ಥಸುಖವನ್ನು ನಾಶಮಾಡುವ, ಕೀರ್ತಿ ಪ್ರತಾಪ ಮತ್ತು ಪರಾಕ್ರಮವನ್ನು ನಾಶಮಾಡುವ, ಶತ್ರುಗಳಿಗೆ ಸಂತೋಷವನ್ನು ಹೆಚ್ಚಿಸುವ ಈ ನಿನ್ನ ಬುದ್ಧಿಯನ್ನು ನಿಯಂತ್ರಿಸು.
ಶ್ರೂಯತಾಂ ಚ ಪ್ರಭೋ ತತ್ತ್ವಂ ದಿವ್ಯತಾಂ ಚಾತ್ಮನೋ ನೃಪ |
ನಿರ್ಮಾಣಂ ಚ ಶರೀರಸ್ಯ ತತೋ ಧೈರ್ಯಮವಾಪ್ನುಹಿ |
ಪುರಾ ತ್ವಂ ತಪಸಾಽಸ್ಮಾಭಿರ್ಲಬ್ಧೋ ರಾಜನ್ ಮಹೇಶ್ವರಾತ್ ॥5॥
ಪ್ರಭುವೇ, ರಾಜನೇ, ನಿನ್ನ ಶರೀರವು ಹೇಗೆ ದಿವ್ಯಪ್ರಕಾರದಿಂದ ನಿರ್ಮಾಣವಾಗಿದೆ ಎಂದು ತಿಳಿದು ಧೈರ್ಯವನ್ನು ತಂದುಕೋ. ಎಲೈ ರಾಜನೇ, ನಾವು ಹಿಂದೆ ಮಹೇಶ್ವರನನ್ನು ಕುರಿತು ತಪಸ್ಸು ಮಾಡಿ ನಿನ್ನನ್ನು ಪಡೆದಿದ್ದೇವೆ.
ಪೂರ್ವಕಾಯಶ್ಚ ಸರ್ವಸ್ತೇ ನಿರ್ಮಿತೋ ವಜ್ರಸಂಚಯೈಃ |
ಅಸ್ತ್ರೈರಭೇದ್ಯಃ ಶಸ್ತ್ರೈಶ್ಚಾಪ್ಯಧಃಕಾಯಸ್ತು ತೇಽನಘ ॥6॥
ನಿನ್ನ ಪೂರ್ವಕಾಯವೆಲ್ಲವೂ (ನಾಭಿಯಿಂದ ಮೇಲ್ಭಾಗವೆಲ್ಲವೂ) ವಜ್ರಸಮೂಹಗಳಿಂದ ನಿರ್ಮಿತವಾಗಿದೆ. ಅನಘನೇ, ನಿನ್ನ ನಾಭಿಯ ಕೆಳಗಿನ ಶರೀರವೂ ಸಹ ಅಸ್ತ್ರಶಸ್ತ್ರಗಳಿಂದ ಅಭೇದ್ಯವಾಗಿದೆ.
ಕೃತಃ ಪುಷ್ಪಮಯೋ ದೇವ್ಯಾ ರೂಪತಃ ಸ್ತ್ರೀಮನೋಹರಃ |
ಏವಮೀಶ್ವರಸಂಯುಕ್ತಸ್ತವ ದೇಹೋ ನೃಪೋತ್ತಮ |
ದೇವ್ಯಾ ಚ ರಾಜಶಾರ್ದೂಲ ದಿವ್ಯಸ್ತ್ವಂ ಹಿ ನ ಮಾನುಷಃ ॥7॥
ಪಾರ್ವತೀದೇವಿಯು ನಿನ್ನ ಈ ಶರೀರವನ್ನು ಸ್ತ್ರೀಮನೋಹರವಾಗಿ ಪುಷ್ಪಮಯವಾಗಿ ಸೃಷ್ಟಿಸಿದ್ದಾಳೆ. ಎಲೈ ನೃಪೋತ್ತಮನೇ,

ರಾಜಶಾರ್ದೂಲನೇ, ಈಗ ನೀನು ಈಶ್ವರನಿಂದಲೂ ಮತ್ತು ಪಾರ್ವತಿಯಿಂದಲೂ ಸಂಯುಕ್ತನಾಗಿರುವುದರಿಂದ ನೀನು ಒಬ್ಬ ದೇವತೆ. ಮನುಷ್ಯನೇ ಅಲ್ಲ.
ಕ್ಷತ್ರಿಯಾಶ್ಚ ಮಹಾವೀರ್ಯಾ ಭಗದತ್ತಪುರೋಗಮಾಃ |
ದಿವ್ಯಾಸ್ತ್ರನಿಪುಣಾಃ ಶೂರಾಃ ಕ್ಷಪಯಿಷ್ಯಂತಿ ತೇ ರಿಪೂನ್ |
ತದಲಂ ತೇ ವಿಷಾದೇನ ಭಯಂ ತವ ನ ವಿದ್ಯತೇ ॥8॥
ಭಗದತ್ತನೇ ಮೊದಲಾದ ಮಹಾಪರಾಕ್ರಮಿಗಳಾದ ಶೂರರಾದ ಕ್ಷತ್ರಿಯರು ದಿವ್ಯಾಸ್ತ್ರಗಳನ್ನು ತಿಳಿದವರಾಗಿ ನಿನ್ನ ಶತ್ರುಗಳನ್ನು ನಾಶಮಾಡುವರು. ಆದ್ದರಿಂದ ನಿನ್ನ ವಿಷಾದವನ್ನು ಸಾಕು ಮಾಡು. ನಿನಗೆ ಭಯವಿಲ್ಲ.
ಸಾಹಾಯ್ಯಾರ್ಥಂ ಚ ತೇ ವೀರಾಃ ಸಂಭೂತಾ ಭುವಿ ದಾನವಾಃ |
ಭೀಷ್ಮದ್ರೋಣಕೃಪಾದೀಂಶ್ಚ ಪ್ರವೇಕ್ಷ್ಯಂತ್ಯಪರೇಽಸುರಾಃ |
ತೈರಾವಿಷ್ಟಾ ಘೃಣಾಂ ತ್ಯಕ್ತ್ವಾ ಯೋತ್ಸ್ಯಂತೇ ಸಹ ವೈರಿಭಿಃ ॥9॥
ನಿನ್ನ ಸಹಾಯಕ್ಕಾಗಿ ವೀರರಾದ ದಾನವರು ಭೂಮಿಯಲ್ಲಿ ಜನಿಸಿದ್ದಾರೆ. ಉಳಿದ ಅಸುರರು ಭೀಷ್ಮದ್ರೋಣಕೃಪಾದಿಗಳನ್ನು ಪ್ರವೇಶಿಸುವರು. ಅವರಿಂದ ಆವಿಷ್ಟರಾದ ಭೀಷ್ಮ- ದ್ರೋಣಾದಿಗಳು ದಯೆಯನ್ನು ತೊರೆದು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವರು.
ನೈವ ಪುತ್ರಾನ್ನ ಚ ಭ್ರಾತೄನ್ನ ಪಿತೄನ್ನ ಚ ಬಾಂಧವಾನ್ |
ನೈವ ಶಿಷ್ಯಾನ್ನ ಚ ಜ್ಞಾತೀನ್ನ ಬಾಲಾನ್ನ ಸ್ಥವಿರಾನ್ನ ಚ |
ಯುಧಿ ಸಂಪ್ರಹರಿಷ್ಯಂತೋ ಮೋಕ್ಷ್ಯಂತಿ ಕುರುಸತ್ತಮ ॥10॥
ಎಲೈ ಕುರುಶ್ರೇಷ್ಠನೇ, ಅವರು ಯುದ್ಧದಲ್ಲಿ ಪ್ರಹಾರವನ್ನು ಮಾಡುತ್ತಾ ಪುತ್ರರನ್ನಾಗಲೀ, ಭ್ರಾತೃಗಳನ‍ನಗಲೀ, ಪಿತೃಗಳನ್ನಾಗಲೀ, ಬಾಂಧವರನ್ನಾಗಲೀ, ಶಿಷ್ಯರನ್ನಾಗಲೀ, ದಾಯಾದಿಗಳನ್ನಾಗಲೀ, ಬಾಲಕರನ್ನಾಗಲೀ, ವೃದ್ಧರನ್ನಾಗಲೀ ಉಳಿಸುವುದಿಲ್ಲ (ವಧೆ ಮಾಡದೆ ಬಿಡುವುದಿಲ್ಲ).
ನಿಃಸ್ನೇಹಾ ದಾನವಾವಿಷ್ಟಾಃ ಸಮಾಕ್ರಾಂತೇಽಂತರಾತ್ಮನಿ |
ಪ್ರಹರಿಷ್ಯಂತಿ ವಿವಶಾಃ ಸ್ನೇಹಮುತ್ಸೃಜ್ಯ ದೂರತಃ ॥11॥
ಅವರ ಅಂತರಾತ್ಮವು ದಾನವರಿಂದ ಆವಿಷ್ಟವಾದಾಗ ಭೀಷ್ಮಾದಿಗಳು ವಿವಶರಾಗಿ ಸ್ನೇಹವನ್ನು ದೂರದಲ್ಲಿಟ್ಟು ಸಂಹಾರವನ್ನು ಮಾಡುವರು.
ದೃಷ್ಟಾಃ ಪುರುಷಶಾರ್ದೂಲಾಃ ಕಲುಷೀಕೃತಮಾನಸಾಃ |
ಅವಿಜ್ಞಾನವಿಮೂಢಾಶ್ಚ ದೈವಾಚ್ಚ ವಿಧಿನಿರ್ಮಿತಾಃ ॥12॥
ವ್ಯಾಭಾಷಮಾಣಾಶ್ಚಾನ್ಯೋನ್ಯಂ ನ ಮೇ ಜೀವನ್ ವಿಮೋಕ್ಷ್ಯಸೇ |
ಸರ್ವೇ ಶಸ‍ತ್ರಸ್ತ್ರಮೋಕ್ಷೇಣ ಪೌರುಷೇ ಸಮವಸ್ಥಿತಾಃ ॥13॥
ಆ ಪುರುಷಶಾರ್ದೂಲರು ಪರಸ್ಪರ ವೈರವುಳ್ಳ ಮನಸ್ಸುಳ್ಳವರಾಗಿ ವಿಧಿಯ ಪ್ರೇರಣೆಯಿಂದ ಅಜ್ಞಾನದಿಂದ ಮೋಹಿತರಾಗಿ ಒಬ್ಬರಿಗೊಬ್ಬರು ನೀನು ನನ್ನ ಎದುರಿನಲ್ಲಿ ಜೀವಂತವಾಗಿ ಹೋಗುವುದಿಲ್ಲ ಎಂದು ಮಾತನಾಡುತ್ತಾ ಶಸ‍ತ್ರಸ್ತ್ರಗಳನ್ನು ಪ್ರಯೋಗ ಮಾಡಿ ಎಲ್ಲರೂ ಪೌರುಷವನ್ನು ಆಶ್ರಯಿಸುತ್ತಾರೆ.
ಶ್ಲಾಘಮಾನಾಃ ಕುರುಶ್ರೇಷ್ಠ ಕರಿಷ್ಯಂತಿ ಜನಕ್ಷಯಮ್ |
ತೇಽಪಿ ಪಂಚ ಮಹಾತ್ಮಾನಃ ಪ್ರತಿಯೋತ್ಸ್ಯಂತಿ ಪಾಂಡವಾಃ |
ಕ್ಷಯಂ ಚೈಷಾಂ ಕರಿಷ್ಯಂತಿ ದೈವಯುಕ್ತಾ ಮಹಾಬಲಾಃ ॥14॥
ಎಲೈ ಕುರುಶ್ರೇಷ್ಠನೇ, ತಮ್ಮನ್ನೇ ತಾವು ಹೊಗಳಿಕೊಳ್ಳುತ್ತಾ ಜನಕ್ಷಯವನ್ನು ಮಾಡುವರು. ಮಹಾತ್ಮರಾದ, ಮಹಾಬಲವುಳ್ಳ ಪಾಂಡವರೂ ಸಹ ದೈವಚೋದಿತರಾಗಿ ಭೀಷ್ಮದ್ರೋಣಾದಿ ಸೈನ್ಯದ ವಧೆಯನ್ನು ಮಾಡುವರು.
ದೈತ್ಯರಕ್ಷೋಗಣಾಶ್ಚೈವ ಸಂಭೂತಾಃ ಕ್ಷತ್ರಯೋನಿಷು |
ಯೋತ್ಸ್ಯಂತಿ ಯುಧಿ ವಿಕ್ರಮ್ಯ ಶತ್ರುಭಿಸ್ತವ ಪಾರ್ಥಿವ ॥15॥
ಎಲೈ ರಾಜನೇ, ದೈತ್ಯರ ಮತ್ತು ರಾಕ್ಷಸರ ಗಣಕ್ಕೆ ಸೇರಿದವರು ಕ್ಷತ್ರಿಯ ಜಾತಿಯಲ್ಲಿ ಜನಿಸಿ ವಿಕ್ರಮವನ್ನು ಆಶ್ರಯಿಸಿ ನಿನ್ನ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವರು.
ಗದಾಭಿರ್ಮುಸಲೈಃ ಶೂಲೈಃ ಶಸ್ತ್ರೈರುಚ್ಚಾವಚೈಸ್ತಥಾ |
ಪ್ರಹರಿಷ್ಯಂತಿ ತೇ ವೀರಾಸ್ತವಾರಿಷು ಮಹಾಬಲಾಃ ॥16॥
ಮಹಾಬಲರಾದ ಆ ವೀರರು ಗದೆಗಳಿಂದ, ಮುಸಲಗಳಿಂದ, ಶ್ರೇಷ್ಠವಾದ ಮತ್ತು ಕನಿಷ್ಠವಾದ ಶಸ್ತ್ರಗಳಿಂದ ನಿನ್ನ ಶತ್ರುಗಳಲ್ಲಿ ಪ್ರಹಾರವನ್ನು ಮಾಡುವರು.
ಯಚ್ಚ ತೇಽಂತರ್ಗತಂ ವೀರ ಭಯಮರ್ಜುನಸಂಭವಮ್ |
ತತ್ರಾಪಿ ವಿಹಿತೋಽಸ್ಮಾಭಿರ್ವಧೋಪಾಯೋಽರ್ಜುನಸ್ಯ ವೈ ॥17॥
ಎಲೈ ವೀರನೇ, ಅರ್ಜುನನ ವಿಷಯದಲ್ಲಿ ನಿನಗೆ ಒಳಗೇ ಹುದುಗಿರುವ ಭಯವು ಏನಿದೆಯೋ ಆ ವಿಷಯದಲ್ಲಿಯೂ ಅರ್ಜುನನ ವಧೆಯ ಉಪಾಯವು ನಮ್ಮಿಂದ ಕಂಡುಹಿಡಿಯಲ್ಪಟ್ಟಿದೆ.
ಹತಸ್ಯ ನರಕಸ್ಯಾತ್ಮಾ ಕರ್ಣಮೂರ್ತಿಮುಪಾಶ್ರಿತಃ |
ತದ್ವೈರಂ ಸಂಸ್ಮರನ್ ವೀರ ಯೋತ್ಸ್ಯತೇ ಕೇಶವಾರ್ಜುನೌ ॥18॥
ಎಲೈ ವೀರನೇ, ನರಕನು ಕೃಷ್ಣನಿಂದ ಹತನಾದ ಮೇಲೆ ಅವನ ಆತ್ಮವು ಕರ್ಣನನ್ನು ಪ್ರವೇಶಿಸಿದೆ. ಅವನು ಆ ಹಿಂದಿನ ವೈರವನ್ನು

ಸ್ಮರಿಸಿಕೊಂಡು ಕೃಷ್ಣಾರ್ಜುನರ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಸ ತೇ ವಿಕ್ರಮಶೌಂಡೀರೋ ರಣೇ ಪಾರ್ಥಂ ವಿಜೇಷ್ಯತಿ |
ಕರ್ಣಃ ಪ್ರಹರತಾಂ ಶ್ರೇಷ್ಠಃ ಸರ್ವಾಂಶ್ಚಾರೀನ್ ಮಹಾರಥಃ ॥19॥
ಪರಾಕ್ರಮಪಟುವಾದ ಶಸ್ತ್ರಪ್ರಯೋಗವನ್ನು ಮಾಡುವವರಲ್ಲಿ ಶ್ರೇಷ್ಠನಾದ ಮಹಾರಥನಾದ ಕರ್ಣನು ಯುದ್ಧದಲ್ಲಿ ಅರ್ಜುನನನ್ನೂ ಮತ್ತು ನಿನ್ನ ಎಲ್ಲಾ ಶತ್ರುಗಳನ್ನೂ ಗೆಲ್ಲುವನು.
ಜ್ಞಾತ್ವೈತಚ್ಛದ್ಮನಾ ವಜ್ರೀ ರಕ್ಷಾರ್ಥಂ ಸವ್ಯಸಾಚಿನಃ |
ಕುಂಡಲೇ ಕವಚಂ ಚೈವ ಕರ್ಣಸ್ಯಾಪಹರಿಷ್ಯತಿ ॥20॥
ಇದನ್ನು ತಿಳಿದ ಇಂದ್ರನು ಅರ್ಜುನನನ್ನು ರಕ್ಷಿಸುವುದಕ್ಕೋಸ್ಕರ ಒಂದು ಛದ್ಮ ಬ್ರಾಹ್ಮಣವೇಷವನ್ನು ಧರಿಸಿ ಕರ್ಣನ ಕವಚ ಕುಂಡಲಗಳನ್ನು ಅಪಹರಿಸುವನು.
ತಸ್ಮಾದಸ್ಮಾಭಿರಪ್ಯತ್ರ ದೈತ್ಯಾಃ ಶತಸಹಸ್ರಶಃ |
ನಿಯುಕ್ತಾ ರಾಕ್ಷಸಾಶ್ಚೈವ ಯೇ ತೇ ಸಂಶಪ್ತಕಾ ಇತಿ ॥21॥
ಆದ್ದರಿಂದ ನಾವು ಈ ವಿಷಯದಲ್ಲಿ ಸಾವಿರಾರು ಸಂಖ್ಯೆಯಲ್ಲಿ ದೈತ್ಯರನ್ನು ನಿಯೋಜಿಸಿದ್ದೇವೆ. ಸಂಶಪ್ತಕರೆಂದು ಕರೆಯಲ್ಪಡುವ ರಾಕ್ಷಸರೂ ಸಹ ಕರ್ಣನ ರಕ್ಷಣೆಯಲ್ಲಿ ನಿಯೋಜಿಸಲ್ಪಟ್ಟಿದ್ದಾರೆ.
ಪ್ರಖ್ಯಾತಾಸ್ತೇಽರ್ಜುನಂ ವೀರಂ ನಿಹನಿಷ್ಯಂತಿ ಮಾ ಶುಚಃ |
ಅಸಪತ್ನಾ ತ್ವಯಾ ಹೀಯಂ ಭೋಕ್ತವ್ಯಾ ವಸುಧಾ ನೃಪ ॥22॥
ಪ್ರಖ್ಯಾತರಾದ ಅವರು ವೀರನಾದ ಅರ್ಜುನನನ್ನು ಕೊಲ್ಲುವರು. ನೀನು ಶೋಕಪಡಬೇಡ. ಎಲೈ ರಾಜನೇ, ಶತ್ರುರಹಿತವಾದ ಈ ಭೂಮಿಯನ್ನು ನೀನು ಆಳಬೇಕು.
ಮಾ ವಿಷಾದಂ ಗಮಸ್ತ್ವಸ್ಮಾನ್ನೈತತ್ತ್ವಯ್ಯುಪಪದ್ಯತೇ |
ವಿನಷ್ಟೇ ತ್ವಯಿ ಚಾಸ್ಮಾಕಂ ಪಕ್ಷೋ ಹೀಯೇತ ಕೌರವ ॥23॥
ಆದ್ದರಿಂದ ವಿಷಾದವನ್ನು ಪಡಬೇಡ. ಈ ವಿಷಾದವು ನಿನಗೆ ಯೋಗ್ಯವಾದುದಲ್ಲ. ಎಲೈ ಕೌರವನೇ, ನೀನು ನಾಶವನ್ನು ಹೊಂದಿದರೆ ನಮ್ಮ ಪಕ್ಷವು ಹಾನಿಗೊಳಗಾಗುತ್ತದೆ.
ಗಚ್ಛ ವೀರ ನ ತೇ ಬುದ್ಧಿರನ್ಯಾ ಕಾರ್ಯಾ ಕಥಂಚನ |
ತ್ವಮಸ್ಮಾಕಂ ಗತಿರ್ನಿತ್ಯಂ ದೇವತಾನಾಂ ಚ ಪಾಂಡವಾಃ ॥24॥
ಎಲೈ ವೀರನೇ, ನೀನು ಇಲ್ಲಿಂದ ಹೊರಡು. ಯಾವ ಕಾರಣದಿಂದಲೂ ಬೇರೆ ಯೋಚನೆಯನ್ನು ಮಾಡಬೇಡ. ನೀನು ನಿತ್ಯವೂ ನಮಗೆ ಗತಿಯಾದವನು. ಮತ್ತು ಎಲ್ಲ ದೇವತೆಗಳಿಗೆ ಪಾಂಡವರು ಗತಿಯಾದವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಚತ್ವಾರಿಂಶಾಧಿಕದ್ವಿತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ದಾನವಸಾಂತ್ವನಂ ನಾಮ ಸಪ್ತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * *

ಇನ್ನೂರ ನಲವತ್ಮೂರನೆಯ ಅಧ್ಯಾಯ

ಕೃತ್ಯೆಯಿಂದ ಪುನಃ ಪೂರ್ವಸ್ಥಾನದಲ್ಲಿ ದುರ್ಯೋಧನನ ಸ್ಥಾಪನೆ. ದಾನವರ ಉಪದೇಶ ಮತ್ತು ದುರ್ಯೋಧನನ ಸ್ವಪುರ ಪ್ರಾಪ್ತಿ.
ವೈಶಂಪಾಯನಃ
ಏವಮುಕತ್ವ ಪರಿಷ್ವಜ್ಯ ದೈತ್ಯಾಸ್ತಂ ರಾಜಕುಂಜರಮ್ |
ಸಮಾಶ್ವಾಸ್ಯ ಚ ದುರ್ಧರ್ಷಂ ಪುತ್ರವದ್ ದಾನವರ್ಷಭಾಃ ॥1॥
ಸ್ಥಿರಾಂ ಕೃತ್ವಾ ಬುದ್ಧಿಮಸ್ಯ ಪ್ರಿಯಾಣ್ಯುಕತ್ವ ಚ ಭಾರತ |
ಗಮ್ಯತಾಮಿತ್ಯನುಜ್ಞಾಯ ಜಯಮಾಪ್ನುಹಿ ಚೇತ್ಯಥ ॥2॥
ವೈಶಂಪಾಯನ ಎಲೈ ಭಾರತನೇ, ದೈತ್ಯರು ಮತ್ತು ದಾನವಶ್ರೇಷ್ಠರು ರಾಜಕುಂಜರನಾದ ದುರ್ಧರ್ಷನಾದ ಆ ದುರ್ಯೋಧನನಿಗೆ ಈ ರೀತಿಯಾಗಿ ಹೇಳಿ ಅವನನ್ನು ಆಲಿಂಗಿಸಿ ಸಮಾಧಾನಪಡಿಸಿ ಅವನ ಬುದ್ಧಿಯನ್ನು ಸ್ಥಿರಗೊಳಿಸಿ ನೀನು ಹೊರಡು ಎಂದು ಅನುಜ್ಞೆಯನ್ನು ಕೊಟ್ಟು ಜಯವನ್ನು ಹೊಂದು ಎಂದೂ ಆಶಂಸನೆ ಮಾಡಿದರು.
ತೈರ್ವಿಸೃಷ್ಟಂ ಮಹಾಬಾಹುಂ ಕೃತ್ಯಾ ಸೈವಾನಯತ್ಪುನಃ |
ತಮೇವ ದೇಶಂ ಯತ್ರಾಸೌ ತದಾ ಪ್ರಾಯಮುಪೇಯಿವಾನ್ ॥3॥
ಅವರಿಂದ ಬೀಳ್ಕೊಡಲ್ಪಟ್ಟ ಮಹಾಬಾಹುವಾದ ಅವನನ್ನು ಅದೇ ಕೃತ್ಯೆಯೇ ಮೊದಲು ಯಾವ ಸ್ಥಳದಲ್ಲಿ ಪ್ರಾಯೋಪ್ರವೇಶಕ್ಕೆ ಕುಳಿತಿದ್ದನೋ ಅಲ್ಲಿಗೇ ತೆಗೆದುಕೊಂಡು ಬಂದಿತು.
ಪ್ರತಿನಿಕ್ಷಿಪ್ಯ ತಂ ವೀರಂ ಕೃತ್ಯಾ ಸಮಭಿಪೂಜ್ಯ ಚ |
ಅನುಜ್ಞಾತಾ ಚ ರಾಜ್ಞಾ ಸಾ ತತ್ರೈವಾಂತರಧೀಯತ ॥4॥
ಆ ಕೃತ್ಯೆಯು ಆ ವೀರನನ್ನು ಅಲ್ಲಿಟ್ಟು ಅವನನ್ನು ಸತ್ಕರಿಸಿ ರಾಜನಾದ ಅವನಿಂದ ಅಪ್ಪಣೆಯನ್ನು ಪಡೆದು ಅಲ್ಲಿಯೇ ಅಂತರ್ಧಾನವನ್ನು ಹೊಂದಿತು.
ಗತಾಯಾಮಥ ತಸ್ಯಾಂ ತು ರಾಜಾ ದುರ್ಯೋಧನಸ್ತದಾ |

ಸ್ವಪ್ನಭೂತಮಿದಂ ಸರ್ವಮಚಿಂತಯತ ಭಾರತ ॥5॥
ಎಲೈ ಭಾರತನೇ, ಆ ಕೃತ್ಯೆಯು ಹೊರಟು ಹೋದಮೇಲೆ ರಾಜನಾದ ದುರ್ಯೋಧನನು ನಡೆದ ಈ ಘಟನೆಯನ್ನೆಲ್ಲಾ ಸ್ವಪ್ನದಂತೆ ಚಿಂತಿಸಿದನು.
ವಿಜೇಷ್ಯಾಮಿ ರಣೇ ಪಾಂಡೂನಿತಿ ಚಾಸ್ಯಾಭವನ್ಮತಿಃ ॥6॥
ಸಂಸ್ಮೃತ್ಯ ತಾನಿ ವಾಕ್ಯಾನಿ ದಾನವೋಕ್ತಾನಿ ದುರ್ಮತಿಃ।
ಕರ್ಣಂ ಸಂಶಪ್ತಕಾಂಶ್ಚೈವ ಪಾರ್ಥಸ್ಯಾಮಿತ್ರಘಾತಿನಃ।
ಅಮನ್ಯತ ವಧೇ ಯುಕ್ತಾನ್ ಸಮರ್ಥಾಂಶ್ಚ ಸುಯೋಧನಃ ॥7॥
ಯುದ್ಧದಲ್ಲಿ ಪಾಂಡವರನ್ನು ಗೆಲ್ಲುವೆನು ಎಂದು ಅವನಿಗೆ ಬುದ್ಧಿಯುಂಟಾಯಿತು. ದುರ್ಮತಿಯಾದ ಆ ದುರ್ಯೋಧನನು ದಾನವರು ಆಡಿದ ಆ ಮಾತುಗಳನ್ನು ಸ್ಮರಿಸಿಕೊಂಡು ಕರ್ಣನನ್ನು ಮತ್ತು ಸಂಶಪ್ತಕರನ್ನು ಶತ್ರುಘಾತಿಯಾದ ಅರ್ಜುನನ ವಧೆಯಲ್ಲಿ ನಿಯುಕ್ತರಾದವರು ಮತ್ತು ಆ ಕಾರ್ಯವನ್ನು ಮಾಡಲು ಸಮರ್ಥರಾದವರು ಎಂದು ಭಾವಿಸಿದನು.
ಏವಮಾಶಾ ದೃಢಾ ತಸ್ಯ ಧಾರ್ತರಾಷ್ಟ್ರಸ್ಯ ದುರ್ಮತೇಃ।
ವಿನಿರ್ಜಯೇ ಪಾಂಡವಾನಾಮಭವದ್ ಭರತರ್ಷಭ ॥8॥
ಎಲೈ ಭರತರ್ಷಭನೇ, ದುರ್ಮತಿಯಾದ ದುರ್ಯೋಧನನಿಗೆ ಪಾಂಡವರನ್ನು ಗೆಲ್ಲುತ್ತೇನೆ ಎಂಬ ಆಸೆಯು ಹೀಗೆ ದೃಢವಾಯಿತು.
ಕರ್ಣೋಽಪ್ಯಾವಿಷ್ಟಚಿತ್ತಾತ್ಮಾ ನರಕಸ್ಯಾಂತರಾತ್ಮನಾ।
ಅರ್ಜುನಸ್ಯ ವಧೇ ಕ್ರೂರಾಂ ಕರೋತಿ ಸ್ಮ ತದಾ ಮತಿಮ್ ॥9॥
ಕರ್ಣನೂ ಸಹ ನರಕನ ಅಂತರಾತ್ಮದಿಂದ ಆವಿಷ್ಟವಾದ ಮನಸ್ಸುಳ್ಳವನಾಗಿ ಅರ್ಜುನನ ವಧೆಯನ್ನು ಕುರಿತು ಯಾವಾಗಲೂ ಕ್ರೂರವಾದ ಬುದ್ಧಿಯನ್ನು ಮಾಡಿದನು.
ಸಂಶಪ್ತಕಾಶ್ಚ ತೇ ವೀರಾ ರಾಕ್ಷಸಾವಿಷ್ಟಚೇತಸಃ।
ರಜಸ್ತಮೋಭ್ಯಾಮಾಕ್ರಾಂತಾಃ ಫಲ್ಗುನಸ್ಯ ವಧೈಷಿಣಃ ॥10॥
ವೀರರಾದ ಆ ಸಂಶಪ್ತಕರೂ ಸಹ ರಾಕ್ಷಸರಿಂದ ಆವಿಷ್ಟವಾದ ಮನಸ್ಸುಳ್ಳವರಾಗಿ ರಜೋಗುಣ ಮತ್ತು ತಮೋಗುಣಗಳಿಂದ ತುಂಬಿದವರಾಗಿ ಅರ್ಜುನನ ವಧೆಯನ್ನು ಆಶಿಸಿದರು.
ಭೀಷ್ಮದ್ರೋಣಕೃಪಾದ್ಯಾಶ್ಚ ದಾನವಾಕ್ರಾಂತಚೇತಸಃ।
ನ ತಥಾ ಪಾಂಡುಪುತ್ರಾಣಾಂ ಸ್ನೇಹವಂತೋ ವಿಶಾಂಪತೇ ॥11॥
ಎಲೈ ರಾಜನೇ, ಭೀಷ್ಮದ್ರೋಣಕೃಪಾದಿಗಳು ದಾನವರಿಂದ ಆವಿಷ್ಟವಾದ ಮನಸ್ಸುಳ್ಳವರಾಗಿ ಪಾಂಡುಪುತ್ರರಲ್ಲಿ ಮೊದಲಿನಂತೆ ಸ್ನೇಹವನ್ನು ಮಾಡಲಿಲ್ಲ.
ನ ಚಾಚಚಕ್ಷೇ ಕಸ್ಮೈಚಿದೇತದ್ ರಾಜಾ ಸುಯೋಧನಃ।
ಕೃತ್ಯಯಾಽಽನಾಯ್ಯ ಕಥಿತಂ ಯದಸ್ಯ ನಿಶಿ ದಾನವೈಃ ॥12॥
ರಾಜನಾದ ಸುಯೋಧನನು ಆ ಪಿಶಾಚಿಯು ರಾತ್ರಿಯಲ್ಲಿ ತನ್ನನ್ನು ಕರೆದುಕೊಂಡು ಹೋದುದನ್ನು ಮತ್ತು ದಾನವರು ತನಗೆ ಹೇಳಿದ ಮಾತನ್ನು ಯಾರಿಗೂ ಹೇಳಲಿಲ್ಲ.
ದುರ್ಯೋಧನಂ ನಿಶಾಂತೇ ಚ ಕರ್ಣೋ ವೈಕರ್ತನೋಽಬ್ರವೀತ್।
ಸ್ಮಯನ್ನಿವಾಂಜಲಿಂ ಕೃತ್ವಾ ಪಾರ್ಥಿವಂ ಹೇತುಮದ್ವಚಃ ॥13॥
ರಾತ್ರಿಯು ಕಳೆಯುವ ವೇಳೆಗೆ ವೈಕರ್ತನನಾದ ಕರ್ಣನು ರಾಜನಾದ ದುರ್ಯೋಧನನನ್ನು ಕುರಿತು ಕೈಗಳನ್ನು ಮುಗಿದು ನಗುತ್ತಾ ಹೇತುಯುಕ್ತವಾದ ಮಾತುಗಳನ್ನು ಆಡಿದನು.
ನ ಮೃತೋ ಜಯತೇ ಶತ್ರೂನ್ ಜೀವನ್ ಭದ್ರಾಣಿ ಪಶ್ಯತಿ।
ಮೃತಸ್ಯ ಭದ್ರಾಣಿ ಕುತಃ ಕೌರವೇಯ ಕುತೋ ಜಯಃ।
ನ ಕಾಲೋಽದ್ಯ ವಿಷಾದಸ್ಯ ಭಯಸ್ಯ ಮರಣಸ್ಯ ವಾ ॥14॥
ಮೃತನಾದವನು ಶತ್ರುಗಳನ್ನು ಜಯಿಸುವುದಿಲ್ಲ. ಬದುಕಿರುವವನು ಮುಂದೆ ಕಲ್ಯಾಣವನ್ನು ಕಾಣುತ್ತಾನೆ. ಎಲೈ ಕೌರವೇಯನೇ, ಮೃತನಾದವನಿಗೆ ಕಲ್ಯಾಣವಾಗಲೀ, ಜಯವಾಗಲೀ ಎಲ್ಲಿಂದ ಬರಬೇಕು? ಇದು ವಿಷಾದಕ್ಕೆ ಅಥವಾ ಭಯಕ್ಕೆ ಅಥವಾ ಮರಣಕ್ಕೆ ಉಚಿತವಾದ ಕಾಲವಲ್ಲ.
ವೈಶಂಪಾಯನಃ
ಪರಿಷ್ವಜ್ಯಾಬ್ರವೀಚ್ಚೈನಂ ಭುಜಾಭ್ಯಾಂ ಸ ಮಹಾಬಲಃ ॥15॥
ಉತ್ತಿಷ್ಠ ರಾಜನ್ ಕಿಂ ಶೇಷೇ ಕಸ್ಮಾಚ್ಛೋಚಸಿ ಶತ್ರುಹನ್।
ಶತ್ರೂನ್ಪ್ರತಾಪ್ಯ ವೀರ್ಯೇಣ ಸ ಕಥಂ ಮೃತ್ಯುಮಿಚ್ಛಸಿ ॥16॥
ವೈಶಂಪಾಯನ ಮಹಾಬಲನಾದ ಕರ್ಣನು ತನ್ನ ಭುಜಗಳಿಂದ ದುರ್ಯೋಧನನನ್ನು ಆಲಿಂಗಿಸಿ ಅವನನ್ನು ಕುರಿತು ರಾಜನೇ ಎದ್ದೇಳು. ಏತಕ್ಕೆ ಮಲಗಿದ್ದೀಯೆ? ಶತ್ರುಸೂದನನೇ, ಏತಕ್ಕೆ ಶೋಕಪಡುತ್ತೀಯೆ? ಪರಾಕ್ರಮದಿಂದ ಶತ್ರುಗಳನ್ನು ಸಂತಾಪಗೊಳಿಸಿದ ನೀನು ಹೇಗೆ ಮರಣವನ್ನು ಬಯಸುತ್ತೀಯೆ? ಎಂದು ಹೇಳಿದನು.
ಅಥವಾ ತೇ ಭಯಂ ಜಾತಂ ದೃಷ್ಟ್ವಾಽರ್ಜುನಪರಾಕ್ರಮಮ್।
ಸತ್ಯಂ ತೇ ಪ್ರತಿಜಾನಾಮಿ ವಧಿಷ್ಯಾಮಿ ರಣೇಽರ್ಜುನಮ್ ॥17॥
ಗತೇ ತ್ರಯೋದಶೇ ವರ್ಷೇ ಸತ್ಯೇನಾಯುಧಮಾಲಭೇ।
ಆನಯಿಷ್ಯಾಮ್ಯಹಂ ಪಾರ್ಥಾನ್ ವಶಂ ತವ ಜನಾಧಿಪ ॥18॥

ಅಥವಾ ನಿನಗೆ ಅರ್ಜುನನ ಪರಾಕ್ರಮವನ್ನು ನೋಡಿ ಭಯವುಂಟಾಗಿದ್ದರೆ ಹದಿಮೂರು ವರ್ಷಗಳು ಕಳೆದ ಮೇಲೆ ನಾನು ಅರ್ಜುನನನ್ನು ಕೊಲ್ಲುವೆನು ಎಂದು ಪ್ರತಿಜ್ಞೆಯನ್ನು ಮಾಡುತ್ತೇನೆ. ನನ್ನ ಆಯುಧವನ್ನು ಹಿಡಿದು ಪ್ರಮಾಣ ಮಾಡಿ ಇದನ್ನು ಹೇಳುತ್ತಿದ್ದೇನೆ. ಎಲೈ ರಾಜನೇ, ಪಾಂಡವರನ್ನು ನಿನ್ನ ವಶವರ್ತಿಗಳನ್ನಾಗಿ ಮಾಡುವೆನು (ಎಂದು ಹೇಳಿದನು).
ವೈಶಂಪಾಯನಃ
ಏವಮುಕ್ತಸ್ತು ಕರ್ಣೇನ ದೈತ್ಯಾನಾಂ ವಚನಾತ್ ತಥಾ |
ಪ್ರಣಿಪಾತೇನ ಚಾಪ್ಯೇಷಾಮುದತಿಷ್ಠತ್ ಸುಯೋಧನಃ ॥19॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ದುರ್ಯೋಧನನು ಕರ್ಣನ ಮಾತುಗಳಿಂದಲೂ, ದೈತ್ಯರ ಮಾತುಗಳಿಂದಲೂ, ಉಳಿದವರ ನಮಸ್ಕಾರಗಳಿಂದಲೂ ಪ್ರೇರಿತನಾಗಿ ಎದ್ದುನಿಂತನು.
ದೈತ್ಯಾನಾಂ ತದ್ವಚಃ ಶ್ರುತ್ವಾ ಹೃದಿ ಕೃತ್ವಾ ಸ್ಥಿರಾಂ ಮತಿಮ್ |
ತತೋ ಮನುಜಶಾರ್ದೂಲೋ ಯೋಜಯಾಮಾಸ ವಾಹಿನೀಮ್ |
ರಥನಾಗಾಶ್ವಕಲಿಲಾಂ ಪದಾತಿಜನಸಂಕುಲಾಮ್ ॥20॥
ದೈತ್ಯರ ಆ ಮಾತುಗಳನ್ನು ಕೇಳಿ ಅದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಪಾಂಡವರ ಹನನ ವಿಷಯದಲ್ಲಿ ಸ್ಥಿರವಾದ ಬುದ್ಧಿಯನ್ನು ಹೊಂದಿ ಮನುಜಶಾರ್ದೂಲನಾದ ಅವನು ರಥನಾಗಾಶ್ವಗಳಿಂದ ತುಂಬಿದ ಮತ್ತು ಪದಾತಿಜನರಿಂದ ನಿಬಿಡವಾದ ತನ್ನ ಸೈನ್ಯವನ್ನು ಮುಂದಿನ ಪ್ರಯಾಣಕ್ಕೆ ಯೋಜನೆ ಮಾಡಿದನು.
ಗಂಗೌಘಪ್ರತಿಮಾ ರಾಜನ್ ಸಾ ಪ್ರಯಾತಾ ಮಹಾಚಮೂಃ |
ಶ್ವೇತಚ್ಛತ್ರೈಃ ಪತಾಕಾಭಿಶ್ಚಾಮರೈಶ್ಚ ಸುಪಾಂಡರೈಃ ॥21॥
ರಥೈರ್ನಾಗೈಃ ಪದಾತೈಶ್ಚ ಶುಶುಭೇಽತೀವ ಸಂಕುಲಾ ॥22॥
ಎಲೈ ರಾಜನೇ, ಗಂಗಾಪ್ರವಾಹದಂತಿದ್ದ ಆ ದೊಡ್ಡ ಸೈನ್ಯವು ಶ್ವೇತಚ್ಛತ್ರಗಳಿಂದಲೂ, ಪತಾಕೆಗಳಿಂದಲೂ, ಶ್ವೇತಚಾಮರಗಳಿಂದಲೂ, ರಥನಾಗ ಪದಾತಿಗಳಿಂದಲೂ ಪ್ರಯಾಣ ಮಾಡುತ್ತಾ ನಿಬಿಡವಾಗಿ ಬಹಳವಾಗಿ ಶೋಭಿಸಿತು.
ವ್ಯಪೇತಾಭ್ರಘನೇ ಕಾಲೇ ದ್ಯೌರಿವ ವ್ಯಾಪ್ತಶಾರದೀ |
ಹಂಸಪಂಕ್ತಿಸಮಾಕೀರ್ಣಾ ಭ್ರಮತ್ಸಾರಸಶೋಭಿತಾ ॥23॥
ಹಂಸಗಳ ಪಂಕ್ತಿಗಳಿಂದ ನಿಬಿಡವಾಗಿ ಚಲಿಸುವ ಸಾರಸಗಳಿಂದ ಶೋಭಿತವಾದ ನಿರಭ್ರವಾದ ಶರತ್ಕಾಲದ ಆಕಾಶದಂತೆ ಆ ಸೈನ್ಯವು ಶೋಭಿಸಿತು.
ಜಯಾಶೀರ್ಭಿರ್ದ್ವಿಜೇಂದ್ರೈಃ ಸ ಸ್ತೂಯಮಾನೋಽಧಿರಾಜವತ್ |
ಗೃಹ್ಣನ್ನಂಜಲಿಮಾಲಾಶ್ಚ ಧಾರ್ತರಾಷ್ಟ್ರೋ ಜನಾಧಿಪಃ ॥24॥
ಸುಯೋಧನೋ ಯಯಾವಗ್ರೇ ಶ್ರಿಯಾ ಪರಮಯಾ ಜ್ವಲನ್ |
ಕರ್ಣೇನ ಸಾರ್ಧಂ ರಾಜೇಂದ್ರ ಸೌಬಲೇನ ಚ ದೇವಿನಾ ॥25॥
ಎಲೈ ರಾಜೇಂದ್ರನೇ, ಜನಾಧಿಪನಾದ ದುರ್ಯೋಧನನು ಬ್ರಾಹ್ಮಣಶ್ರೇಷ್ಠರ ಜಯಾಶೀರ್ವಾದಗಳಿಂದ ಚಕ್ರವರ್ತಿಯಂತೆ ಸ್ತೋತ್ರಮಾಡಲ್ಪಡುತ್ತಾ ಅಂಜಲಿ ಮಾಲೆಗಳನ್ನು ಸ್ವೀಕರಿಸುತ್ತಾ ಪರಮಕಾಂತಿಯಿಂದ ಕಂಗೊಳಿಸುತ್ತಾ ಕರ್ಣನ ಜೊತೆಯಲ್ಲಿ ಮತ್ತು ದ್ಯೂತಪ್ರಿಯನಾದ ಶಕುನಿಯ ಜೊತೆಯಲ್ಲಿ ಮುಂದೆ ಹೊರಟನು.
ದುಃಶಾಸನಾದಯಶ್ಚಾಸ್ಯ ಭ್ರಾತರಃ ಸರ್ವ ಏವ ತೇ |
ಭೂರಿಶ್ರವಾಃ ಸೋಮದತ್ತೋ ಮಹಾರಾಜಶ್ಚ ಬಾಹ್ಲಿಕಃ ॥26॥
ರಥೈರ್ನಾನಾವಿಧಾಕಾರೈರ್ಹಯೈರ್ಗಜವರೈಸ್ತಥಾ |
ಪ್ರಯಾಂತಂ ನೃಪಸಿಂಹಂ ತಮನುಜಗ್ಮುಃ ಕುರೂದ್ವಹಾಃ ॥27॥
ಭೂರಿಶ್ರವ, ಸೋಮದತ್ತ, ಬಾಹ್ಲಿಕ ಮಹಾರಾಜ ಮೊದಲಾದ ಕುರೂದ್ವಹರು ನಾನಾವಿಧವಾದ ರಥಗಳಿಂದಲೂ, ಅಶ್ವಗಳಿಂದಲೂ, ಶ್ರೇಷ್ಠವಾದ ಗಜಗಳಿಂದಲೂ ಮುಂದೆ ಸಾಗುತ್ತಿದ್ದ ಆ ರಾಜಸಿಂಹನನ್ನು ಹಿಂಬಾಲಿಸಿದರು.
ಪ್ರತ್ಯುದ್ಗತಾಶ್ಚ ಕುರುಭಿರ್ನಾಗರೈರ್ಬ್ರಾಹ್ಮಣೈರಪಿ |
ಕಾಲೇನಾಲ್ಪೇನ ರಾಜೇಂದ್ರ ಸ್ವಪುರಂ ವಿವಿಶುಸ್ತದಾ ॥28॥
ಎಲೈ ರಾಜೇಂದ್ರನೇ, ನಗರವಾಸಿಗಳಾದ ಕುರುಗಳಿಂದಲೂ, ಬ್ರಾಹ್ಮಣರಿಂದಲೂ ಎದ್ದು ಮುಂದೆ ಬಂದು ಸ್ವೀಕರಿಸಲ್ಪಟ್ಟು ಅಲ್ಪಕಾಲದಲ್ಲಿಯೇ ಅವರು ತಮ್ಮ ಪಟ್ಟಣವನ್ನು ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ತ್ರಿಚತ್ವಾರಿಂಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ದುರ್ಯೋಧನ ಪುರಪ್ರವೇಶೋನಾಮ ಅಷ್ಟೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ಮೂರನೆಯ
ಅಧ್ಯಾಯ ಮುಗಿಯಿತು.
* * * *

ಇನ್ನೂರ ನಲವತ್ತನಾಲ್ಕನೆಯ ಅಧ್ಯಾಯ
ಕರ್ಣನನ್ನು ನಿಂದಿಸಿ ಭೀಷ್ಮರಿಂದ ಪಾಂಡವರ ಜೊತೆಯಲ್ಲಿ ಸಂಧಿ ಮಾಡಿಕೊಳ್ಳುವಂತೆ ದುರ್ಯೋಧನನಿಗೆ ಸೂಚನೆ. ಕರ್ಣನ ಅಸಹನೆಯ ಮಾತುಗಳು ಮತ್ತು ದಿಗ್ವಿಜಯಕ್ಕಾಗಿ ಕರ್ಣನ ಪ್ರಯಾಣ.
ಜನಮೇಜಯಃ

ವರ್ತಮಾನೇಷು ಪಾರ್ಥೇಷು ವನೇ ತೇಷುಮಹಾತ್ಮಸು |
ಧಾರ್ತರಾಷ್ಟ್ರಾ ಮಹೇಷ್ವಾಸಾಃ ಕಿಮಕುರ್ವತ ಸತ್ತಮ ॥1॥
ಜನಮೇಜಯ ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಮಹಾತ್ಮರಾದ ಪಾಂಡವರು ಕಾಡಿನಲ್ಲಿ ವಾಸಿಸುತಿತರುವಾಗ ಮಹಾಧನುರ್ಧಾರಿಗಳಾದ ಧೃತರಾಷ್ಟ್ರ ಪುತ್ರರು ಏನು ಮಾಡಿದರು?
ಕರ್ಣೋ ವೈಕರ್ತನಶ್ಚಾಪಿ ಶಕುನಿಶ್ಚ ಮಹಾಬಲಃ |
ಭೀಷ್ಮದ್ರೋಣಕೃಪಾಶ್ಚೈವ ತನ್ಮೇ ಶಂಸಿತುಮರ್ಹಸಿ ॥2॥
ವೈಕರ್ತನನಾದ ಕರ್ಣನೂ, ಮಹಾಬಲನಾದ ಶಕುನಿಯೂ, ಭೀಷ್ಮದ್ರೋಣಕೃಪರೂ ಏನು ಮಾಡಿದರೆಂದು ನನಗೆ ಹೇಳಿ.
ವೈಶಂಪಾಯನಃ
ಏವಂ ಗತೇಷು ಪಾರ್ಥೇಷು ವಿಸೃಷ್ಟೇ ಚ ಸುಯೋಧನೇ |
ಆಗತೇ ಹಸ್ತಿನಪುರಂ ಮೋಕ್ಷಿತೇ ಪಾಂಡುನಂದನೈಃ |
ಭೀಷ್ಮೋಽಬ್ರವೀನ್ಮಹಾರಾಜ ಧಾರ್ತರಾಷ್ಟ್ರಮಿದಂ ವಚಃ ॥3॥
ಎಲೈ ಮಹಾರಾಜನೇ, ಪಾಂಡವರು ಹೀಗಿರುವಾಗ ಪಾಂಡವರಿಂದ ಮೋಚಿತನಾಗಿ ಬಿಡುಗಡೆಗೊಳಿಸಲ್ಪಟ್ಟ ಸುಯೋಧನನು ಹಸ್ತಿನಪುರಕ್ಕೆ ಹಿಂದಿರುಗುತ್ತಿರಲು ಭೀಷ್ಮರು ಸುಯೋಧನನನ್ನು ಕುರಿತು ಹೀಗೆ ಮಾತನಾಡಿದರು.
ಉಕ್ತಂ ತಾತ ಯಥಾ ಪೂರ್ವಂ ಗಚ್ಛತಸ್ತೇ ತಪೋವನಮ್ |
ಗಮನಂ ಮೇ ನ ರುಚಿತಂ ಮದ್ವಚೋ ನ ಕೃತಂ ಚ ತೇ ॥4॥
ಪ್ರೀತಿಪಾತ್ರನೇ, ನೀನು ಮೊದಲು ತಪೋವನಕ್ಕೆ ಹೊರಡುವಾಗಲೇ ಇದು ನನಗೆ ಇಷ್ಟವಿಲ್ಲ ಎಂದು ಹೇಳಿದೆನು. ನನ್ನ ಮಾತನ್ನು ನೀನು ನಡೆಸಲಿಲ್ಲ.
ತತಃ ಪ್ರಾಪ್ತಂ ತ್ವಯಾ ವೀರ ಗ್ರಹಣಂ ಶತ್ರುಭಿರ್ಬಲಾತ್ |
ಮೋಕ್ಷಿತಶ್ಚಾಸಿ ಧರ್ಮಜ್ಞೈಃ ಪಾಂಡವೈರ್ನ ಚ ಲಜ್ಜಸೇ ॥5॥
ಎಲೈ ವೀರನೇ, ಆದ್ದರಿಂದ ನಿನಗೆ ಶತ್ರುಗಳಿಂದ ಬಲಾತ್ಕಾರದಿಂದ ಗ್ರಹಣವು ಉಂಟಾಯಿತು. ಧರ್ಮಜ್ಞರಾದ ಪಾಂಡವರು ನಿನ್ನನ್ನು ಬಿಡಿಸಿದರು. ಆದರೂ ನಿನಗೆ ನಾಚಿಕೆಯಿಲ್ಲ.
ಪ್ರತ್ಯಕ್ಷಂ ತವ ಗಾಂಧಾರೇ ಸಸೈನ್ಯಸ್ಯ ವಿಶಾಂಪತೇ |
ಸೂತಪುತ್ರೋಪಯಾದ್ ಭೀತೋ ಗಂಧರ್ವಾಣಾಂ ತದಾ ರಣಾತ್ ॥
ಎಲೈ ಗಾಂಧಾರಿ ಪುತ್ರನೇ, ರಾಜನೇ, ನೀನು ಮತ್ತು ನಿನ್ನ ಸಕಲ ಸೈನ್ಯವು ನೋಡುತ್ತಿರುವಂತೆಯೇ ಗಂಧರ್ವರಿಗೆ ಭೀತನಾಗಿ ಸೂತಪುತ್ರನಾದ ಕರ್ಣನು ರಣರಂಗದಿಂದ ಓಡಿಹೋದನು.
ಕ್ರೋಶತಸ್ತವ ರಾಜೇಂದ್ರ ಸಸೈನ್ಯಸ್ಯ ನೃಪಾತ್ಮಜ |
ವ್ಯಪಯಾತಃ ಪೃಷ್ಠತಸ್ತತ್ ಪ್ರೇಕ್ಷಮಾಣಃ ಪುನಃ ಪುನಃ |
ದೃಷ್ಟಸ್ತೇ ವಿಕ್ರಮಶ್ಚೈವ ಪಾಂಡವಾನಾಂ ಮಹಾತ್ಮನಾಮ್ ॥7॥
ಎಲೈ ರಾಜೇಂದ್ರನೇ, ರಾಜಕುಮಾರನೇ, ನೀನು ಮತ್ತು ನಿನ್ನ ಸೈನ್ಯವು ಕಿರುಚಿಕೊಳ್ಳುತ್ತಿದ್ದರೂ ಅವನು ಆ ಸೈನ್ಯವನ್ನು ಮತ್ತೆ ಮತ್ತೆ ನೋಡುತ್ತಾ ಹಿಂಭಾಗದಿಂದ ಹೊರಟುಹೋದನು. ಮಹಾತ್ಮರಾದ ಪಾಂಡವರ ಪರಾಕ್ರಮವನ್ನು ನೀನು ನೋಡಿದೆ.
ಕರ್ಣಸ್ಯ ಚ ಮಹಾಬಾಹೋ ಸೂತಪುತ್ರಸ್ಯ ದುರ್ಮತೇಃ ॥8॥
ನ ಚಾಪಿ ಪಾದಭಾಕ್ ಕರ್ಣಃ ಪಾಂಡವಾನಾಂ ನೃಪೋತ್ತಮ |
ಧನುರ್ವೇದೇ ಚ ಶೌರ್ಯೇ ಚ ಧರ್ಮೇ ವಾ ಧರ್ಮವತ್ಸಲ ॥9॥
ಮಹಾಬಾಹುವೇ, ದುರ್ಮತಿಯಾದ ಸೂತಪುತ್ರನಾದ ಕರ್ಣನ ವಿಕ್ರಮವನ್ನೂ ನೀನು ನೋಡಿದೆ. ನೃಪಶ್ರೇಷ್ಠನೇ, ಧರ್ಮವತ್ಸಲನೇ, ಧನುರ್ವೇದದಲ್ಲಾಗಲೀ, ಶೌರ್ಯದಲ್ಲಾಗಲೀ, ಧರ್ಮದಲ್ಲಾಗಲೀ ಕರ್ಣನು ಪಾಂಡವರ ನಾಲ್ಕನೆಯ ಒಂದಂಶಕ್ಕೂ ಸಮಾನನಲ್ಲ.
ತಸ್ಮಾದಹಂ ಕ್ಷಮಂ ಮನ್ಯೇ ಪಾಂಡವೈಸ್ತೈರ್ಮಹಾತ್ಮಭಿಃ |
ಸಂಧಿಂ ಸಂಧಿವಿದಾಂ ಶ್ರೇಷ್ಠ ಕುಲಸ್ಯಾಸ್ಯ ವಿವೃದ್ಧಯೇ ॥10॥
ಆದ್ದರಿಂದ ಸಂಧಿಯನ್ನು ತಿಳಿದವರಲ್ಲಿ ಶ್ರೇಷ್ಠನೇ, ಈ ಕುಲದ ವೃದ್ಧಿಗಾಗಿ ಮಹಾತ್ಮರಾದ ಪಾಂಡವರ ಜೊತೆಯಲ್ಲಿ ಸಂಧಾನವನ್ನು ಮಾಡಿಕೊಳ್ಳುವುದು ಯೋಗ್ಯವೆಂದು ನಾನು ತಿಳಿಯುತ್ತೇನೆ.
ವೈಶಂಪಾಯನಃ
ಏವಮುಕ್ತಶ್ಚ ಭೀಷ್ಮೇಣ ಧಾರ್ತರಾಷ್ಟ್ರೋ ಜನೇಶ್ವರಃ |
ಪ್ರಹಸ್ಯ ಸಹಸಾ ರಾಜನ್ ವಿಪ್ರತಸ್ಥೇ ಸಸೌಬಲಃ ॥11॥
ವೈಶಂಪಾಯನ ಎಲೈ ರಾಜನೇ, ಭೀಷ್ಮರಿಂದ ಹೀಗೆ ಹೇಳಲ್ಪಟ್ಟ ರಾಜನಾದ ದುರ್ಯೋಧನನು ನಕ್ಕು ಶಕುನಿಯ ಜೊತೆಯಲ್ಲಿ ತಕ್ಷಣದಲ್ಲಿ ಹೊರಟನು.
ತಂ ತು ಪ್ರಸ್ಥಿತಮಾಜ್ಞಾಯ ಕರ್ಣದುಃಶಾಸನಾದಯಃ |
ಅನುಜಗ್ಮುರ್ಮಹೇಷ್ವಾಸಾ ಧಾರ್ತರಾಷ್ಟ್ರಂ ಮಹಾಬಲಮ್ ॥12॥
ಮಹಾಬಲನಾದ ದುರ್ಯೋಧನನು ಹೊರಟುದುದನ್ನು ತಿಳಿದು ಮಹೇಶ್ವಾಸರಾದ ಕಣರ್ದುಃಶಾಸನಾದಿಗಳು ಅವನನ್ನು ಹಿಂಬಾಲಿಸಿದರು.
ತಾಂಸ್ತು ಸಂಪ್ರಸ್ಥಿತಾನ್ ದೃಷ್ಟ್ವಾ ಭೀಷ್ಮಃ ಕುರುಪಿತಾಮಹಃ |
ಲಜ್ಜಯಾಽಧೋಮುಖೋ ರಾಜನ್ ಜಗಾಮ ಸ್ವಂ ನಿವೇಶನಮ್ ॥

ಎಲ್ಲೈ ರಾಜನೇ, ತಮ್ಮ ಮಾತುಗಳಿಗೆ ಉತ್ತರವನ್ನು ಕೊಡದೆ ಹೊರಟ ಅವರೆಲ್ಲರನ್ನೂ ನೋಡಿ ಕುರುಕುಲಪಿತಾಮಹರಾದ ಭೀಷ್ಮರು ನಾಚಿಕೆಯಿಂದ ತಲೆಯನ್ನು ತಗ್ಗಿಸಿ ತಮ್ಮ ಮನೆಗೆ ಹಿಂದಿರುಗಿದರು.
ಗತೇ ಭೀಷ್ಮೇ ಮಹಾರಾಜ ಧಾರ್ತರಾಷ್ಟ್ರೋ ಜನೇಶ್ವರಃ |
ಪುನರಾಗಮ್ಯ ತಂ ದೇಶಮಮಂತ್ರಯತ ಮಂತ್ರಿಭಿಃ ||14||
ಎಲ್ಲೈ ಮಹಾರಾಜನೇ, ಭೀಷ್ಮರು ಹೊರಟು ಹೋದಮೇಲೆ ರಾಜನಾದ ಸುಯೋಧನನು ಪುನಃ ಆ ಪ್ರದೇಶಕ್ಕೆ ಬಂದು ಮಂತ್ರಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿದನು.
ಕಿಮಸ್ಮಾಕಂ ಭವೇತ್ಶ್ರೇಯಃ ಕಿಂ ಕಾರ್ಯಮವಶಿಷ್ಯತೇ |
ಕಥಂ ಚ ಸುಕೃತಂ ತತ್ ಸ್ಯಾನ್ಮಂತ್ರಯಾಮೋಽದ್ಯ ಯದ್ ಹಿತಮ್ ||
ನಮಗೆ ಏನು ಮಾಡಿದರೆ ಒಳ್ಳೆಯದಾಗುತ್ತದೆ? ಏನು ಮಾಡುವುದು ಉಳಿದಿದೆ? ಏನು ಮಾಡಿದರೆ ಮಾಡಿದ ಕೆಲಸವು ಒಳ್ಳೆಯ ಫಲವನ್ನು ನೀಡುತ್ತದೆ? ನಮಗೆ ಯಾವುದು ಹಿತ ಎಂದು ಈ ದಿನ ಮಂತ್ರಾಲೋಚನೆಯನ್ನು ಮಾಡೋಣ.
ಕರ್ಣಃ
ದುರ್ಯೋಧನ ನಿಬೋಧೇದಂ ಯತತ್ತ್ವಂ ವಕ್ಷ್ಯಾಮಿ ಕೌರವ |
ಶ್ರುತ್ವಾ ವಾಚಂ ತಥಾ ಸರ್ವಂ ಕರ್ತುಮರ್ಹಸ್ಯರಿಂದಮ ||16||
ಕರ್ಣ ಕೌರವನಾದ ದುರ್ಯೋಧನನೇ, ನಾನು ಆಡುವ ಈ ಮಾತನ್ನು ತಿಳಿದುಕೋ. ಅರಿಂದಮನೇ, ನನ್ನ ಮಾತನ್ನು ಪೂರ್ಣವಾಗಿ ಕೇಳಿ ಅನಂತರ ನೀನು ಪ್ರವೃತ್ತನಾಗು.
ತವಾದ್ಯ ಪೃಥಿವೀ ವೀರ ನಿಃಸಪತ್ನಾ ನೃಪೋತ್ತಮ |
ತಾಂ ಪಾಲಯ ಯಥಾ ಶಕ್ರೋ ಹತಶತ್ರುರ್ಮಹಾಮನಾಃ ||16.1||
ಎಲ್ಲೈ ನೃಪೋತ್ತಮನೇ, ವೀರನೇ, ಈ ದಿನ ನಿನಗೆ ಶತ್ರುರಹಿತವಾದ ಸಮಗ್ರವಾದ ಭೂಮಿಯು ವಶವಾಗಿದೆ. ಹತಶತ್ರುವಾದ ನೀನು ಸಂತೋಷದಿಂದ ಕೂಡಿ ಇಂದ್ರನಂತೆ ಆ ಭೂಮಿಯನ್ನು ಪಾಲಿಸು.
ವೈಶಂಪಾಯನಃ
ಏವಮುಕ್ತಸ್ತು ಕರ್ಣೇನ ಕರ್ಣಂ ರಾಜಾಽಬ್ರವೀತ್ ಪುನಃ ||17||
ವೈಶಂಪಾಯನ ಕರ್ಣನಿಂದ ಹೀಗೆ ಹೇಳಲ್ಪಟ್ಟ ರಾಜನು ಪುನಃ ಕರ್ಣನನ್ನು ಕುರಿತು ಹೀಗೆ ಮಾತನಾಡಿದನು.
ದುರ್ಯೋಧನಃ
ದುರ್ಲಭಂ ತಸ್ಯ ಕಿಂ ನಾಮ ಯಸ್ಯ ತ್ವಂ ಪುರುಷರ್ಷಭ |
ಸಹಾಯಶ್ಚಾನುರಕ್ತಶ್ಚ ಮದರ್ಥಂ ಚ ಸಮುದ್ಯತಃ ||18||
ಅಭಿಪ್ರಾಯಶ್ಚ(ಸ್ತು)ಮೇ ಕಶ್ಚಿತ್ತಂ ವೈ ಶೃಣು ಯಥಾತಥಮ್ ||19||
ದುರ್ಯೋಧನ ಎಲ್ಲೈ ಪುರುಷಶ್ರೇಷ್ಠನೇ, ನೀನು ನನಗೆ ಸಹಾಯಕನೂ, ನನ್ನಲ್ಲಿ ಪ್ರೀತಿಯುಕ್ತನೂ ಮತ್ತು ನನ್ನ ಸಲುವಾಗಿ ಪ್ರಯತ್ನಶೀಲನೂ ಆಗಿರುವಾಗ ನನಗೆ ಯಾವುದು ತಾನೇ ದುರ್ಲಭವಾದೀತು? ಆದರೆ ನನಗೆ ಒಂದು ಅಭಿಪ್ರಾಯವಿದೆ. ಅದನ್ನು ಸರಿಯಾಗಿ ಕೇಳು.
ರಾಜಸೂಯಂ ಪಾಂಡವಸ್ಯ ದೃಷ್ಟ್ವಾ ಕ್ರತುವರಂ ಮಹತ್ |
ಮಮ ಸ್ಪೃಹಾ ಸಮುತ್ಪನ್ನಾ ತಾಂ ಸಂಪಾದಯ ಸೂತಜ |
ಸೂತಪುತ್ರನೇ, ಪಾಂಡವರು ಕ್ರತುಶ್ರೇಷ್ಠವಾದ ರಾಜಸೂಯ ಮಹಾಯಾಗವನ್ನು ಮಾಡಿದುದನ್ನು ನೋಡಿ ನನಗೂ ಸಹ ಆ ಯಾಗವನ್ನು ಮಾಡಬೇಕೆಂದು ಆಸೆ ಉಂಟಾಗಿದೆ. ಸೂತಪುತ್ರನೇ, ನನಗೆ ಆ ಯಾಗವನ್ನು ಸಂಪಾದಿಸು.
ವೈಶಂಪಾಯನಃ
ಏವಮುಕ್ತಸ್ತತಃ ಕರ್ಣೋ ರಾಜಾನಮಿದಮಬ್ರವೀತ್ ||20||
ತವಾದ್ಯ ಪೃತಿವೀಪಾಲಾ ವಶ್ಯಾಃ ಸರ್ವೇ ನೃಪೋತ್ತಮ |
ಆಹೂಯಂತಾಂ ದ್ವಿಜವರಾಃ ಸಂಭಾರಾಶ್ಚ ಯಥಾವಿಧಿ ||21||
ವೈಶಂಪಾಯನ ಹೀಗೆ ಹೇಳಲ್ಪಟ್ಟ ಕರ್ಣನು ರಾಜನನ್ನು ಕುರಿತು ಹೀಗೆ ಮಾತನಾಡಿದನು. ನೃಪೋತ್ತಮನೇ, ಈ ದಿನ ನಿನಗೆ ಎಲ್ಲ ರಾಜರೂ ವಶರಾಗಿದ್ದಾರೆ. ಎಲ್ಲ ಬ್ರಾಹ್ಮಣಶ್ರೇಷ್ಠರನ್ನೂ ಕರೆಸು. ಯಜ್ಞಸಂಭಾರಗಳನ್ನು ಶಾಸ್ತ್ರೋಕ್ತವಾಗಿ ಅಣಿಮಾಡು.
ಸಂಭ್ರಿಯಂತಾಂ ಕುರುಶ್ರೇಷ್ಠ ಯಜ್ಞೋಪಕರಣಾನಿ ಚ |
ಋತ್ವಿಜಶ್ಚ ಸಮಾಹೂತಾ ಯಥೋಕ್ತಾ ವೇದಪಾರಗಾಃ ||22||
ಕ್ರಿಯಾಂ ಕುರ್ವಂತು ಹೇ ರಾಜನ್ ಯಥಾಶಾಸ್ತ್ರಮರಿಂದಮ ||23||
ಕುರುಶ್ರೇಷ್ಠನೇ, ಯಜ್ಞೋಪಕರಣಗಳನ್ನೂ ಸಿದ್ಧಗೊಳಿಸು. ವೇದಪಾರಂಗತರಾದ ಆಹೂತರಾದ ಋತ್ವಿಕ್‌ಗಳು ಎಲ್ಲೈ ಅರಿಂದಮನೇ, ರಾಜನೇ, ಶಾಸ್ತ್ರೋಕ್ತ ರೀತಿಯಿಂದ ಕ್ರಿಯೆಗಳನ್ನು ಮಾಡಲಿ.
ಬಹ್ವನ್ನಪಾನಸಂಯುಕ್ತಃ ಸುಸಮೃದ್ಧಗುಣಾನ್ವಿತಃ |
ಪ್ರವರ್ತತಾಂ ಮಹಾಯಜ್ಞಸ್ತವಾಪಿ ವಸುಧಾಧಿಪ ||24||
ಎಲ್ಲೈ ವಸುಧಾಧಿಪನೇ, ಬಹಳ ಅನ್ನಪಾನಗಳಿಂದ ಕೂಡಿದ ಮತ್ತು ಸಮೃದ್ಧವಾದ ಗುಣಗಳಿಂದ ಕೂಡಿದ ನಿನ್ನ ಮಹಾಯಜ್ಞವೂ ಕೂಡ ನಡೆಯಲಿ.
ವೈಶಂಪಾಯನಃ
ಏವಮುಕ್ತಸ್ತು ಕರ್ಣೇನ ಧಾರ್ತರಾಷ್ಟ್ರೋ ವಿಶಾಂಪತೇ |

ಪುರೋಹಿತಂ ಸಮಾನಾಯ್ಯ ಇದಂ ವಚನಮಬ್ರವೀತ್ ॥25॥
ವೈಶಂಪಾಯನ ರಾಜನೇ, ಕರ್ಣನಿಂದ ಹೀಗೆ ಹೇಳಲ್ಪಟ್ಟ ದುರ್ಯೋಧನನು ಪುರೋಹಿತರನ್ನು ಕರೆಸಿ ಈ ಮಾತನ್ನು ಆಡಿದನು.
ರಾಜಸೂಯಂ ಕ್ರತುವರಂ ಸಮಾಪ್ತವರದಕ್ಷಿಣಮ್ |
ಆಹರ ತ್ವಂ ಮಮ ಕೃತೇ ಯಥಾನ್ಯಾಯಂ ಯಥಾಕ್ರಮಮ್ |
ಶ್ರೇಷ್ಠಕ್ರತುವಾದ ರಾಜಸೂಯವನ್ನು ಶ್ರೇಷ್ಠ ದಕ್ಷಿಣೆಯಿಂದ ಕೂಡಿದುದಾಗಿ ಶಾಸ್ತ್ರಕ್ಕೆ ಅನುಸಾರವಾಗಿ ಕ್ರಮಗಳನ್ನು ಬಿಡದೆ ನನ್ನ ಸಲುವಾಗಿ ಮಾಡುವವನಾಗು.
ವೈಶಂಪಾಯನಃ
ಸ ಏವಮುಕ್ತೋ ನೃಪತಿಮುವಾಚ ದ್ವಿಜಸತ್ತಮಃ ॥26॥
ಬ್ರಾಹ್ಮಣೈಃ ಸಹಿತೋ ಧೀಮಾನ್ ಯೇ ತತ್ರಾಸನ್ ಸಮಾಗತಾಃ |
ನ ಸ ಶಕ್ಯಃ ಕುರುಶ್ರೇಷ್ಠ ಜೀವಮಾನೇ ಯುಧಿಷ್ಠಿರೇ ॥27॥
ಆಹರ್ತುಂ ಕೌರವಶ್ರೇಷ್ಠ ಕುಲೇ ತವ ನೃಪೋತ್ತಮ |
ದೀರ್ಘಾಯುರ್ಜೀವತಿ ಚ ವೈ ಧೃತರಾಷ್ಟ್ರಃ ಪಿತಾ ನೃಪ ॥28॥
ಅತಶ್ಚಾಪಿ ವಿರುದ್ಧಸ್ತೇ ಕ್ರತುರೇಷ ನೃಪೋತ್ತಮ ॥29॥
ಹೀಗೆ ಹೇಳಲ್ಪಟ್ಟ ಆ ಮೇಧಾವಿಯಾದ ದ್ವಿಜಶ್ರೇಷ್ಠನು ಅಲ್ಲಿ ಬಂದಿದ್ದ ಬ್ರಾಹ್ಮಣರ ಜೊತೆಯಲ್ಲಿ ದುರ್ಯೋಧನನನ್ನು ಕುರಿತು ಹೀಗೆ ಹೇಳಿದನು. ಎಲೈ ನೃಪೋತ್ತಮನೇ, ಕೌರವಶ್ರೇಷ್ಠನೇ, ನಿನ್ನ ಕುಲದಲ್ಲಿ ಹಿರಿಯನಾದ ಯುಧಿಷ್ಠಿರನು ಬದುಕಿರುವಾಗ ನೀನು ಆ ಯಾಗವನ್ನು ಮಾಡಲು ಸಾಧ್ಯವಿಲ್ಲ. ನೃಪೋತ್ತಮನೇ, ನಿನ್ನ ತಂದೆಯಾದ ಧೃತರಾಷ್ಟ್ರನು ದೀರ್ಘಾಯುಷ್ಯವನ್ನು ಹೊಂದಿ ಬದುಕಿದ್ದಾನೆ. ಆದ್ದರಿಂದಲೂ ಈ ಯಾಗವನ್ನು ಮಾಡುವುದು ನಿನಗೆ ವಿರುದ್ಧವಾಗುತ್ತದೆ ಎಂದು ಹೇಳಿದನು.
ಅಸ್ತಿ ತ್ವನ್ಯನ್ಮಹತ್ಸತ್ರಂ ರಾಜಸೂಯಸಮಂ ಪ್ರಭೋ |
ತೇನ ತ್ವಂ ಯಜ ರಾಜೇಂದ್ರ ಶೃಣು ಚೇದಂ ವಚೋ ಮಮ ॥30॥
ಪ್ರಭುವೇ, ರಾಜಸೂಯಕ್ಕೆ ಸಮಾನವಾದ ಇನ್ನೊಂದು ಯಾಗವಿದೆ. ರಾಜೇಂದ್ರನೇ, ನೀನು ಆ ಯಾಗವನ್ನು ಮಾಡು ಮತ್ತು ನನ್ನ ಈ ಮಾತನ್ನು ಕೇಳು.
ಯ ಇಮೇ ಪೃಥಿವೀಪಾಲಾಃ ಕರದಾಸ್ತವ ಪಾರ್ಥಿವ |
ತೇ ಕರಾನ್ ಸಂಪ್ರಯಚ್ಛಂತು ಸುವರ್ಣಂ ಚ ಕೃತಾಕೃತಮ್ ॥31॥
ಎಲೈ ಪಾರ್ಥಿವನೇ, ನಿನಗೆ ಕಪ್ಪವನ್ನು ಕೊಡುವ ಈ ರಾಜರು ಯಾರು ಇದ್ದಾರೆಯೋ ಅವರು ನಿನಗೆ ಆಭರಣ ರೂಪವಾದ ಮತ್ತು ಗಟ್ಟಿಯ ರೂಪವಾದ ಸುವರ್ಣರೂಪವಾದ ಕಪ್ಪವನ್ನು ತಂದುಕೊಡಲಿ.
ತೇನ ತೇ ಕ್ರಿಯತಾಮದ್ಯ ಲಾಂಗಲಂ ನೃಪಸತ್ತಮ |
ಯಜ್ಞವಾಟಸ್ಯ ತೇ ಭೂಮಿಃ ಕೃಷ್ಯತಾಂ ತೇನ ಭಾರತ ॥32॥
ಎಲೈ ನೃಪಶ್ರೇಷ್ಠನೇ, ಆ ಸುವರ್ಣದಿಂದ ನೀನು ಒಂದು ನೇಗಿಲನ್ನು ಮಾಡಿಸು. ಎಲೈ ಭಾರತನೇ, ಯಜ್ಞವನ್ನು ಮಾಡುವ ಆ ಭೂಮಿಯು ಎಂದರೆ ಯಜ್ಞಶಾಲಾ ಪ್ರದೇಶವು ಆ ನೇಗಿಲಿನಿಂದ ಉಳಲ್ಪಡಲಿ.
ತತ್ರ ಯಜ್ಞೋ ನೃಪಶ್ರೇಷ್ಠ ಪ್ರಭೂತಾನ್ನಃ ಸುಸಂಸ್ಕೃತಃ |
ಪ್ರವರ್ತತಾಂ ಯಥಾನ್ಯಾಯಂ ಸರ್ವತೋ ಹ್ಯನಿವಾರಿತಃ ॥33॥
ಎಲೈ ನೃಪಶ್ರೇಷ್ಠನೇ, ಅಲ್ಲಿ ಪ್ರಭೂತವಾದ ಅನ್ನವನ್ನು ಹೊಂದಿದ ಸುಸಂಸ್ಕೃತವಾದ ನಿನ್ನ ಯಜ್ಞವು ಯಾವ ವಿಘ್ನವೂ ಇಲ್ಲದೆ ಶಾಸ್ತ್ರೋಕ್ತ ರೀತಿಯಲ್ಲಿ ನಡೆಯಲಿ.
ಏಷ ತೇ ವೈಷ್ಣವೋ ನಾಮ ಯಜ್ಞಃ ಸತ್ಪುರುಷೋಚಿತಃ |
ಏತೇನ ನೇಷ್ಟವಾನ್ ಕಶ್ಚಿದೃತೇ ವಿಷ್ಣುಂ ಪುರಾತನಮ್ ॥34॥
ಇದಕ್ಕೆ ವೈಷ್ಣವ ಯಜ್ಞ ಎಂದು ಹೆಸರು. ಇದು ಸತ್ಪುರುಷರು ಆಚರಿಸಲು ಯೋಗ್ಯವಾದುದು. ಹಿಂದೆ ವಿಷ್ಣುವನ್ನು ಬಿಟ್ಟು ಯಾರೂ ಈ ಯಾಗವನ್ನು ಮಾಡಿಲ್ಲ.
ರಾಜಸೂಯಂ ಕ್ರತುಶ್ರೇಷ್ಠಂ ಸ್ಪರ್ಧತ್ಯೇಷ ಮಹಾಕ್ರತುಃ |
ಅಸ್ಮಾಕಂ ರೋಚತೇ ಚೈಷಃ ಶ್ರೇಯಶ್ಚ ತವ ಭಾರತ ॥35॥
ಈ ಮಹಾಯಜ್ಞವು ಕ್ರತುಶ್ರೇಷ್ಠವಾದ ರಾಜಸೂಯದ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತದೆ. ನಮಗೆ ಇಷ್ಟವಾಗಿದೆ ಮತ್ತು ಭಾರತನೇ, ನಿನಗೆ ಶ್ರೇಯಸ್ಕರವೂ ಆಗಿದೆ.
ನಿರ್ವಿಘ್ನಶ್ಚ ಭವತ್ಯೇಷ ಸಫಲಾ ಸ್ಯಾತ್ಸ್ಪೃಹಾ ತವ |
ತಸ್ಮಾದೇಷ ಮಹಾಬಾಹೋ ತವ ಯಜ್ಞಃ ಪ್ರವರ್ತತಾಮ್ ॥36॥
ಈ ಯಜ್ಞಕ್ಕೆ ಯಾವ ವಿಘ್ನವೂ ಬರುವುದಿಲ್ಲ. ನಿನ್ನ ಆಸೆಯೂ ಪೂರ್ಣಗೊಳ್ಳುತ್ತದೆ. ಮಹಾಬಾಹುವೇ, ಆ ಕಾರಣದಿಂದ ಈ ನಿನ್ನ ಯಜ್ಞವು ಪ್ರವೃತ್ತವಾಗಲಿ (ಎಂದು ಹೇಳಿದರು).
ಏವಮುಕ್ತಸ್ತು ತೈರ್ವಿಪ್ರೈರ್ಧಾರ್ತರಾಷ್ಟ್ರೋ ಮಹೀಪತಿಃ |
ಕರ್ಣಂ ಚ ಸೌಬಲಂ ಚೈವ ಭ್ರಾತೄಂಶ್ಚೈವೇದಮಬ್ರವೀತ್ ॥37॥
ರೋಚತೇ ಮೇ ವಚಃ ಕೃತ್ಸ್ನಂ ಬ್ರಾಹ್ಮಣಾನಾಂ ನ ಸಂಶಯಃ |
ರೋಚತೇ ಯದಿ ಯುಷ್ಮಾಕಂ ತಸ್ಮಾತ್ ಪ್ರಬ್ರೂತ ಮಾಚಿರಮ್ ॥38॥
ಆ ಬ್ರಾಹ್ಮಣರಿಂದ ಹೀಗೆ ಹೇಳಲ್ಪಟ್ಟ ರಾಜನಾದ ದುರ್ಯೋಧನನು ಕರ್ಣನನ್ನೂ, ಶಕುನಿಯನ್ನೂ ಮತ್ತು ತಮ್ಮಂದಿರನ್ನೂ ಕುರಿತು

ಬ್ರಾಹ್ಮಣರ ಎಲ್ಲ ಮಾತುಗಳೂ ನನಗೆ ಚೆನ್ನಾಗಿ ಇಷ್ಟವಾಗುತ್ತವೆ. ಇದರಲ್ಲಿ ಸಂಶಯವಿಲ್ಲ. ನಿಮಗೆ ಇಷ್ಟವಾಗುವುದೇ ಇಲ್ಲವೇ ಎಂದು ಶೀಘ್ರವಾಗಿ ಹೇಳಿ ಎಂದು ಹೇಳಿದನು.
ವೈಶಂಪಾಯನಃ
ಏವಮುಕ್ತಾಸ್ತು ತೇ ಸರ್ವೇ ತಥೇತ್ಯೂಚುರ್ನರಾಧಿಪಮ್ |
ಸಂದಿದೇಶ ತತೋ ರಾಜಾ ವ್ಯಾಪಾರಸ್ಥಾನ್ ಯಥಾಕ್ರಮಮ್ ॥39॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಅವರೆಲ್ಲರೂ ರಾಜನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದರು. ಅನಂತರ ರಾಜನು ಯಾರು ಯಾರು ಯಾವ ಕಾರ್ಯವನ್ನು ಮಾಡಬೇಕೆಂದು ಕ್ರಮದಿಂದ ಹೇಳಿದನು.
ಹಲಸ್ಯ ಕರಣೇ ಚಾಪಿ ವ್ಯಾದಿಷ್ಟಾಃ ಸರ್ವಶಿಲ್ಪಿನಃ |
ಯಥೋಕ್ತಂ ಚ ನೃಪಶ್ರೇಷ್ಠ ಕೃತಂ ಸರ್ವಂ ಯಥಾಕ್ರಮಮ್ ॥40॥
ಎಲ್ಲ ಶಿಲ್ಪಿಗಳನ್ನೂ ನೇಗಿಲ ನಿರ್ಮಾಣಕ್ಕಾಗಿ ಆಜ್ಞೆಮಾಡಿದನು. ನೃಪಶ್ರೇಷ್ಠನೇ, ಶಾಸ್ತ್ರಕ್ಕೆ ಅನುಗುಣವಾಗಿ ಎಲ್ಲವೂ ಅದೇ ಕ್ರಮದಿಂದ ಸಿದ್ಧಮಾಡಲ್ಪಟ್ಟಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಶ್ಚತ್ವಾರಿಂಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ದುರ್ಯೋಧನ ಯಜ್ಞ ಸಮಾರಂಭೋ ನಾಮ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ನಲವತ್ತೈದನೆಯ ಅಧ್ಯಾಯ
ದುರ್ಯೋಧನನಿಂದ ಯಾಗಾನುಷ್ಠಾನ. ಋತ್ವಿಕ್‌ಗಳ ಮತ್ತು ಬ್ರಾಹ್ಮಣರ ಸತ್ಕಾರ. ಅವಭೃಥಸ್ನಾನವನ್ನು ಮಾಡಿ ನಗರ ಪ್ರವೇಶ.
ವೈಶಂಪಾಯನಃ
ತತಸ್ತು ಶಿಲ್ಪಿನಃ ಸರ್ವೇ ತೇಽಮಾತ್ಯಪ್ರವರಾಶ್ಚ ಹ |
ವಿದುರಶ್ಚ ಮಹಾಪ್ರಾಜ್ಞೋ ಧಾರ್ತರಾಷ್ಟ್ರೇ ನ್ಯವೇದಯನ್ ॥1॥
ಸಜ್ಜಂ ಕ್ರತುವರಂ ರಾಜನ್ ಪ್ರಾಪ್ತಕಾಲಂ ಚ ಭಾರತ |
ಸೌವರ್ಣಂ ಚ ಕೃತಂ ಸರ್ವಂ ಲಾಂಗಲಂ ಚ ಮಹಾಧನಮ್ ॥2॥
ವೈಶಂಪಾಯನ ಅನಂತರ ಎಲ್ಲ ಶಿಲ್ಪಿಗಳು, ಅಮಾತ್ಯರಲ್ಲಿ ಮುಖ್ಯರಾದವರು ಮತ್ತು ಮಹಾಪ್ರಾಜ್ಞರಾದ ವಿದುರನು ದುರ್ಯೋಧನನಿಗೆ ರಾಜನೇ, ಭಾರತನೇ, ಯಾಗಕ್ಕೆ ಸಿದ್ಧಪಡಿಸಬೇಕಾದ ಎಲ್ಲವನ್ನೂ ಯೋಗ್ಯಕಾಲದಲ್ಲಿ ಸಿದ್ಧಪಡಿಸಿದ್ದಾಗಿದೆ. ಬೆಲೆಬಾಳುವ ಸುವರ್ಣಮಯವಾದ ನೇಗಿಲನ್ನೂ ಮಾಡಿಸಿದ್ದಾಗಿದೆ ಎಂದು ಹೇಳಿದರು.
ಏತತ್‌ಶ್ರುತ್ವಾ ನೃಪಶ್ರೇಷ್ಠೋ ಧಾರ್ತರಾಷ್ಟ್ರೋ ವಿಶಾಂಪತೇ |
ಭೀಷ್ಮೋ ದ್ರೋಣಃ ಕೃಪಃ ಕರ್ಣೋ ಗಾಂಧಾರೀ ಚ ಯಶಸ್ವಿನೀ |
ಆಜ್ಞಾಪಯಾಮಾಸ ತದಾ ಕ್ರತುರಾಜಪ್ರವರ್ತನೇ ॥3॥
ಎಲೈ ರಾಜನೇ, ಇದನ್ನು ಕೇಳಿದ ನೃಪಶ್ರೇಷ್ಠನಾದ ದುರ್ಯೋಧನನು ಭೀಷ್ಮರೂ, ದ್ರೋಣರೂ, ಕೃಪರೂ, ಕರ್ಣನೂ, ಯಶಸ್ವಿನಿಯಾದ ಗಾಂಧಾರಿಯೂ ಈ ಕ್ರತುಶ್ರೇಷ್ಠದ ಅನುಷ್ಠಾನಕ್ಕೆ ಅನುಮತಿಯನ್ನು ಕೊಟ್ಟರು. ಆಗ ರಾಜನು ಯಜ್ಞಾನುಷ್ಠಾನಕ್ಕೆ ಆದೇಶವನ್ನು ನೀಡಿದನು.
ತತಃ ಪ್ರವವೃತೇ ಯಜ್ಞಃ ಪ್ರಭೂತಾನ್ನಃ ಸುಸಂಸ್ಕೃತಃ |
ದೀಕ್ಷಿತಶ್ಚಾಪಿ ಗಾಂಧಾರಿರ್ಯಥಾಶಾಸ್ತ್ರಂ ಯಥಾಕ್ರಮಮ್ ॥4॥
ಅನಂತರ ದುರ್ಯೋಧನನು ಶಾಸ್ತ್ರಕ್ಕೆ ಅನುಗುಣವಾಗಿ ಕ್ರಮಕ್ಕೆ ಅನುಗುಣವಾಗಿ ದೀಕ್ಷಿತನಾದನು. ಅನಂತರ ಪ್ರಭೂತ ಅನ್ನದಾನದಿಂದ ಕೂಡಿದ ಸುಸಂಸ್ಕೃತವಾದ ಯಜ್ಞವು ಪ್ರವೃತ್ತವಾಯಿತು.
ಪ್ರಹೃಷ್ಟೋ ಧೃತರಾಷ್ಟ್ರೋಽಭೂದ್ ವಿದುರಶ್ಚ ಮಹಾಮನಾಃ |
ಭೀಷ್ಮೋ ದ್ರೋಣಃ ಕೃಪಃ ಕರ್ಣೋ ಗಾಂಧಾರೀ ಯ ಯಶಸ್ವಿನೀ ॥5॥
ಧೃತರಾಷ್ಟ್ರನೂ, ಮಹಾಮನನಾದ ವಿದುರನೂ, ಭೀಷ್ಮರೂ, ದ್ರೋಣರೂ, ಕೃಪರೂ, ಕರ್ಣ ಮತ್ತು ಯಶಸ್ವಿನಿಯಾದ ಗಾಂಧಾರಿಯೂ ಎಲ್ಲರೂ ಸಂತೋಷಪಟ್ಟರು.
ನಿಮಂತ್ರಣಾರ್ಥಂ ದೂತಾಂಶ್ಚ ಪ್ರೇಷಯಾಮಾಸ ಶೀಘ್ರಗಾನ್ |
ಪಾರ್ಥಿವಾನಾಂ ಚ ರಾಜೇಂದ್ರ ಬ್ರಾಹ್ಮಣಾನಾಂ ತಥೈವ ಚ ॥6॥
ರಾಜೇಂದ್ರನೇ, ಬ್ರಾಹ್ಮಣರನ್ನೂ ಮತ್ತು ರಾಜರನ್ನೂ ಆಹ್ವಾನಮಾಡಲು ಶೀಘ್ರಗಾಮಿಗಳಾದ ದೂತರನ್ನು ದುರ್ಯೋಧನನು ಕಳುಹಿಸಿದನು.
ತೇ ಪ್ರಯಾತಾ ಯಥೋದ್ದಿಷ್ಟಂ ದೂತಾಸ್ತ್ವರಿತವಾಹನಾಃ |
ತತ್ರ ಕಿಂಚಿತ್ ಪ್ರಯಾತಂ ತು ದೂತಂ ದುಃಶಾಸನೋಽಬ್ರವೀತ್ ॥7॥
ಗಚ್ಛ ದ್ವೈತವನಂ ಕ್ಷಿಪ್ರಂ ಪಾಂಡವಾನ್ ಪಾಪಪೂರುಷಾನ್ |
ನಿಮಂತ್ರಯ ಯಥಾನ್ಯಾಯಂ ವಿಪ್ರಾಂಸ್ತಸ್ಮಿನ್ ವನೇ ತದಾ ॥8॥
ಆ ದೂತರೆಲ್ಲರೂ ಶೀಘ್ರವಾಗಿ ಚಲಿಸುವ ವಾಹನಗಳಲ್ಲಿ ತಮ ತಮಗೆ ನಿರ್ದಿಷ್ಟವಾದ ಸ್ಥಳಗಳಿಗೆ ಹೊರಟನು. ಆಗ ದುಃಶಾಸನನು

ಹೊರಟಿದ್ದ ಒಬ್ಬ ದೂತನನ್ನು ಕುರಿತು ನೀನು ದ್ವೈತವನಕ್ಕೆ ಶೀಘ್ರವಾಗಿ ಹೋಗಿ ಆ ಪಾಪ ಪುರುಷರಾದ ಪಾಂಡವರನ್ನು ನಿಮಂತ್ರಿಸು. ಆ ವನದಲ್ಲಿರುವ ಉಳಿದ ಬ್ರಾಹ್ಮಣರನ್ನು ಶಾಸೊಕ್ತಪ್ರೋಕ್ತವಾಗಿ ನಿಮಂತ್ರಿಸು ಎಂದು ಹೇಳಿದನು.
ವೈಶಂಪಾಯನಃ
ಸ ಗತ್ವಾವ ಪಾಂಡವಾನ್ ಸರ್ವಾನುವಾಚಾಭಿಪ್ರಣಮ್ಯ ಚ |
ದುರ್ಯೋಧನೋ ಮಹಾರಾಜ ಯಜತೇ ನೃಪಸತ್ತಮಃ |
ಸ್ವವೀರ್ಯಾರ್ಜಿತಮರ್ಥೌಘಮವಾಪ್ಯ ಕುರುಸತ್ತಮಃ ॥9॥
ಆ ದೂತನು ಪಾಂಡವರ ಬಳಿಗೆ ಹೋಗಿ ನಮಸ್ಕರಿಸಿ ಅವರೆಲ್ಲರನ್ನೂ ಕುರಿತು ಮಹಾರಾಜನೂ, ನೃಪಶ್ರೇಷ್ಠನೂ, ಕುರುಸತ್ತಮನೂ ಆದ ದುರ್ಯೋಧನನು ತನ್ನ ಬಾಹುಬಲದಿಂದ ಧನರಾಶಿಯನ್ನು ಸಂಪಾದಿಸಿ ಯಾಗವನ್ನು ಮಾಡುತ್ತಿದ್ದಾನೆ.
ತತ್ರ ಗಚ್ಛಂತಿ ರಾಜಾನೋ ಬ್ರಾಹ್ಮಣಾಶ್ಚ ತತಸ್ತತಃ ॥10॥
ಅಹಂ ತು ಪ್ರೇಷಿತೋ ರಾಜನ್ ಕೌರವೇಣ ಮಹಾತ್ಮನಾ |
ಆಮಂತ್ರಯತಿ ವೋ ರಾಜಾ ಧಾರ್ತರಾಷ್ಟ್ರೋ ಜನೇಶ್ವರಃ |
ಮನೋಽಭಿಲಷಿತಂ ರಾಜ್ಞಸ್ತಂ ಕ್ರತುಂ ದ್ರಷ್ಟುಮರ್ಹಥ ॥11॥
ಅಲ್ಲಿಗೆ ಬೇರೆ ಬೇರೆ ಸ್ಥಳಗಳಿಂದ ರಾಜರೂ ಮತ್ತು ಬ್ರಾಹ್ಮಣರೂ ಹೋಗುತ್ತಿದ್ದಾರೆ. ಮಹಾತ್ಮನಾದ ಕೌರವನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ. ಎಲೈ ರಾಜನೇ, ಜನೇಶ್ವರನಾದ ದುರ್ಯೋಧನ ರಾಜನು ನಿಮ್ಮನ್ನು ಆಮಂತ್ರಿಸುತ್ತಿದ್ದಾನೆ. ನೀವು ಬಂದು ಆ ಯಾಗವನ್ನು ನೋಡಬೇಕು ಎಂಬುದು ರಾಜನ ಮನೋಭಿಲಾಷೆ ಎಂದು ಹೇಳಿದನು.
ತತೋ ಯುಧಿಷ್ಠಿರೋ ರಾಜಾ ತಚ್ಛ್ರುತ್ವಾ ದೂತಭಾಷಿತಮ್ |
ಅಬ್ರವೀನ್ನೃಪಶಾರ್ದೂಲೋ ದಿಷ್ಟ್ಯಾ ರಾಜಾ ಸುಯೋಧನಃ ॥12॥
ಯಜತೇ ಕ್ರತುಮುಖ್ಯೇನ ಸರ್ವೇಷಾಂ ಪ್ರೀತಿವರ್ಧನಃ |
ವಯಮಪ್ಯುಪಯಾಸ್ಯಾಮೋ ನ ತ್ವಿದಾನೀಂ ಕಥಂಚನ ॥13॥
ಸಮಯಃ ಪರಿಪಾಲ್ಯೋ ನೋ ಯಾವದ್ವರ್ಷಂ ತ್ರಯೋದಶಮ್ |
ಆಗ ರಾಜನಾದ ನೃಪಶಾರ್ದೂಲನಾದ ಯುಧಿಷ್ಠಿರನು ದೂತನ ವಾಕ್ಯವನ್ನು ಕೇಳಿ ಅದೃಷ್ಟವಶಾತ್ ನಮ್ಮ ಪೂರ್ವಜರ ಕೀರ್ತಿಯನ್ನು ಅಭಿವೃದ್ಧಿಪಡಿಸುವ ದುರ್ಯೋಧನನು ಶ್ರೇಷ್ಠವಾದ ಕ್ರತುವನ್ನು ಮಾಡುತ್ತಿದ್ದಾನೆ. ಆದರೆ ನಾವು ಈಗ ಅಲ್ಲಿಗೆ ಯಾವ ಕಾರಣದಿಂದಲೂ ಹೋಗುವುದಿಲ್ಲ. ಏಕೆಂದರೆ ನಾವು ನಮ್ಮ ಹದಿಮೂರು ವರ್ಷದ ಪ್ರತಿಜ್ಞೆಯನ್ನು ಪಾಲನೆ ಮಾಡಬೇಕು ಎಂದು ಹೇಳಿದನು.
ವೈಶಂಪಾಯನಃ
ಶ್ರುತ್ವೈತದ್ ಧರ್ಮರಾಜಸ್ಯ ಭೀಮೋ ವಚನಮಬ್ರವೀತ್ ॥14॥
ತದಾ ತು ನೃಪತಿರ್ಗಂತಾ ಧರ್ಮರಾಜೋ ಯುಧಿಷ್ಠಿರಃ |
ಅಸ್ತ್ರಶಸ್ತ್ರಪ್ರದೀಪ್ತೇಽಗ್ನೌ ಯದಾ ತಂ ಪಾತಯಿಷ್ಯತಿ ॥15॥
ವೈಶಂಪಾಯನ ಧರ್ಮರಾಜನ ಈ ಮಾತುಗಳನ್ನು ಕೇಳಿದ ಭೀಮಸೇನನು ಹೀಗೆ ಮಾತನಾಡಿದನು. ಅಸ್ತ್ರಶಸ್ತ್ರಗಳಿಂದ ಉರಿಯುವ ಅಗ್ನಿಯಲ್ಲಿ ಯಾವಾಗ ದುರ್ಯೋಧನನು ಕೆಡವುತ್ತಾನೆಯೋ ಆ ಕಾಲದಲ್ಲಿ ಮಾತ್ರ ಧರ್ಮರಾಜನಾದ ಯುಧಿಷ್ಠಿರನು ಅಲ್ಲಿಗೆ ಬರುವನು.
ವರ್ಷಾತ್ ತ್ರಯೋದಶಾದೂರ್ಧ್ವಂ ರಣಸತ್ರೇ ನರಾಧಿಪಮ್ |
ಯದಾ ಕ್ರೋಧಹವಿರ್ಮೋಕ್ತಾ ಧಾರ್ತರಾಷ್ಟ್ರೇಷು ಪಾಂಡವಃ ॥16॥
ಆಗಂತಾಹಂ ತದಾಸ್ಮೀತಿ ವಾಚ್ಯ ಏವಂ ಸುಯೋಧನಃ ॥17॥
ಹದಿಮೂರು ವರ್ಷಗಳು ಕಳೆದ ಮೇಲೆ ಯುದ್ದ ಎಂಬ ಯಾಗದಲ್ಲಿ ರಾಜನಾದ ಪಾಂಡವನು ದುರ್ಯೋಧನಾದಿಗಳಲ್ಲಿ ಕ್ರೋಧವೆಂಬ ಹವಿಸ್ಸನ್ನು ಯಾವಾಗ ಅಗ್ನಿಯಲ್ಲಿ ಹಾಕುವನೋ ಆಗ ನಾನೂ ಬರುವೆನು ಎಂದು ಸುಯೋಧನನಿಗೆ ಹೇಳು (ಎಂದು ಹೇಳಿದನು).
ವೈಶಂಪಾಯನಃ
ಶೇಷಾಸ್ತು ಪಾಂಡವಾ ರಾಜನ್ ನೈವೋಚುಃ ಕಿಂಚಿದಪ್ರಿಯಮ್ |
ದೂತಶ್ಚಾಪಿ ಯಥಾವೃತ್ತಂ ಧಾರ್ತರಾಷ್ಟ್ರೇ ನ್ಯವೇದಯತ್ ॥18॥
ವೈಶಂಪಾಯನ ಎಲೈ ರಾಜನೇ, ಉಳಿದ ಪಾಂಡವರು ಯಾವ ಅಪ್ರಿಯವನ್ನೂ ಮಾತನಾಡಲಿಲ್ಲ. ಆ ದೂತನಾದರೂ ದುರ್ಯೋಧನನ ಬಳಿಗೆ ಹೋಗಿ ನಡೆದುದೆಲ್ಲವನ್ನೂ ನಿವೇದಿಸಿದನು.
ಅಥ ಜಗ್ಮುರ್ನೃಪಶ್ರೇಷ್ಠಂ ನಾನಾಜನಪದೇಶ್ವರಾಃ |
ಬ್ರಾಹ್ಮಣಾಶ್ಚ ಮಹಾಭಾಗ ಧಾರ್ತರಾಷ್ಟ್ರಪುರಂ ಪ್ರತಿ ॥19॥
ಎಲೈ ಮಹಾನುಭಾವನೇ, ಅನಂತರ ನಾನಾ ದೇಶದ ಅಧಿಪತಿಗಳಾದ ರಾಜಶ್ರೇಷ್ಠರೂ ಮತ್ತು ಬ್ರಾಹ್ಮಣರೂ ದುರ್ಯೋಧನ ಪಟ್ಟಣವಾದ ಹಸ್ತಿನಪುರಕ್ಕೆ ಬಂದರು.
ತೇ ತ್ವರ್ಚಿತಾ ಯಥಾಶಾಸ್ತ್ರಂ ಯಥಾವಿಧಿ ಯಥಾಕ್ರಮಮ್ |
ಮುದಾ ಪರಮಯಾ ಯುಕ್ತಾಃ ಪ್ರೀತಾಶ್ಚಾಪಿ ನರೇಶ್ವರಾಃ ॥20॥
ಆ ರಾಜರು ಕ್ರಮವಾಗಿ, ವಿಧಿವತ್ತಾಗಿ, ಶಾಸ್ತ್ರಾನುಗುಣವಾಗಿ ಪೂಜಿಸಲ್ಪಟ್ಟು ಪರಮ ಸಂತೋಷದಿಂದ ಕೂಡಿದವರಾದರು.
ಧೃತರಾಷ್ಟ್ರೋಽಪಿ ಕೌರವ್ಯ ಸಂವೃತಃ ಸರ್ವಕೌರವೈಃ |
ಹರ್ಷೇಣ ಮಹತಾ ಯುಕ್ತೋ ವಿದುರಂ ಪ್ರತ್ಯಭಾಷತ ॥21॥

ಯಥಾ ಸುಖೀ ಜನಃ ಸರ್ವಃ ಕ್ಷತ್ತಃ ಸ್ಯಾದನ್ನಸಂಯುತಃ |
ತುಷ್ಯೇತ್ ತು ಯಜ್ಞಸದನೇ ಸದಾ ಕ್ಷಿಪ್ರಂ ವಿಧೀಯತಾಮ್ ॥22॥
ಎಲೈ ಕೌರವ್ಯನೇ, ಧೃತರಾಷ್ಟ್ರನೂ ಸಹ ಎಲ್ಲ ಕೌರವರಿಂದಲೂ ಕೂಡಿದವನಾಗಿ ಬಹಳ ಸಂತೋಷವನ್ನು ಹೊಂದಿ ವಿದುರನನ್ನು ಕುರಿತು ಎಲೈ ವಿದುರನೇ, ಹೇಗೆ ಎಲ್ಲ ಜನರು ಸುಖದಿಂದ ಇದ್ದು ಒಳ್ಳೆಯ ಭೋಜನವನ್ನು ಹೊಂದಿ ಯಜ್ಞಶಾಲೆಯಲ್ಲಿ ಸಂತೋಷ ಪಡುವರೋ ಅದರಂತೆ ಎಲ್ಲವನ್ನೂ ಶೀಘ್ರವಾಗಿ ವ್ಯವಸ್ಥೆಗೊಳಿಸು ಎಂದು ಹೇಳಿದನು.
ವಿದುರಸ್ತು ತದಾಜ್ಞಾಯ ಸರ್ವವರ್ಣಾನರಿಂದಮ |
ಯಥಾಪ್ರಮಾಣತೋ ವಿದ್ವಾನ್ ಪೂಜಯಾಮಾಸ ಧರ್ಮವಿತ್ ॥23॥
ಅರಿಂದಮನೇ, ವಿದ್ವಾಂಸನೂ ಮತ್ತು ಧರ್ಮಜ್ಞನೂ ಆದ ವಿದುರನು ಧೃತರಾಷ್ಟ್ರನ ಅಭಿಪ್ರಾಯವನ್ನು ತಿಳಿದು ಎಲ್ಲ ವರ್ಣದವರನ್ನೂ ಪ್ರಮಾಣಕ್ಕೆ ಅನುಸಾರವಾಗಿ ಪೂಜಿಸಿದನು.
ಭಕ್ಷ್ಯಪೇಯಾನ್ನಪಾನೇನ ಮಾಲ್ಯೈಶ್ಚಾಪಿ ಸುಗಂಧಿಭಿಃ |
ವಾಸೋಭಿರ್ವಿವಿಧೈಶ್ಚೈವ ಯೋಜಯಾಮಾಸ ಹೃಷ್ಟವತ್ ॥24॥
ಅವನು ಸಂತೋಷದಿಂದ ಭಕ್ಷ್ಯ, ಪೇಯ, ಅನ್ನಪಾನಗಳನ್ನು, ಸುಗಂಧಯುಕ್ತವಾದ ಮಾಲೆಗಳನ್ನೂ, ವಿಧವಿಧವಾದ ವಸ್ತ್ರಗಳನ್ನೂ ಎಲ್ಲರಿಗೂ ತಲಪುವಂತೆ ವ್ಯವಸ್ಥೆ ಮಾಡಿದನು.
ಕೃತ್ವಾ ಹ್ಯಾವಸಥಾನ್ ವೀರೋ ಯಥಾಶಾಸ್ತ್ರಂ ಯಥಾಕ್ರಮಮ್ |
ಸಾಂತ್ವಯಿತ್ವಾ ಚ ರಾಜೇಂದ್ರೋ ದತ್ತ್ವಾ ಚ ವಿವಿಧಂ ವಸು |
ವಿಸರ್ಜಯಾಮಾಸ ನೃಪಾನ್ ಬ್ರಾಹ್ಮಣಾಂಶ್ಚ ಸಹಸ್ರಶಃ ॥25॥
ವೀರನಾದ ರಾಜೇಂದ್ರನಾದ ದುರ್ಯೋಧನನು ಶಾಸ್ತ್ರಕ್ಕೆ ಅನುಗುಣವಾಗಿ ಮತ್ತು ಶ್ರೇಷ್ಠತೆಗೆ ಅನುಗುಣವಾಗಿ ಬಿಡಾರಗಳನ್ನು ಮಾಡಿ, ಎಲ್ಲರನ್ನೂ ಸಮಾಧಾನಪಡಿಸಿ, ಅನೇಕ ವಿಧವಾದ ದ್ರವ್ಯಗಳನ್ನು ದಾನವಾಗಿ ಕೊಟ್ಟು ಸಹಸ್ರ ಸಂಖ್ಯೆಯಲ್ಲಿ ಬಂದಿದ್ದ ರಾಜರನ್ನೂ ಮತ್ತು ಬ್ರಾಹ್ಮಣರನ್ನೂ ಬೀಳ್ಕೊಟ್ಟನು.
ಸ್ನಾತಶ್ಚಾವಭೃಥೋ ರಾಜಾ ಧಾರ್ತರಾಷ್ಟ್ರೋ ಮಹಾಮನಾಃ |
ವಿಸೃಜ್ಯ ಚ ನೃಪಾನ್ ಸರ್ವಾನ್ ಭ್ರಾತೃಭಿಃ ಪರಿವಾರಿತಃ |
ವಿವೇಶ ಹಸ್ತಿನಪುರಂ ಸಹಿತಃ ಕರ್ಣಸೌಬಲೈಃ ॥26॥
ಮಹಾಮನನಾದ ರಾಜನಾದ ದುರ್ಯೋಧನನು ಅವಭೃಥಸ್ನಾನವನ್ನು ಮಾಡಿ ಎಲ್ಲ ರಾಜರನ್ನೂ ಬೀಳ್ಕೊಟ್ಟು ತಮ್ಮಂದಿರಿಂದ ಕೂಡಿದವನಾಗಿ ಕರ್ಣಶಕುನಿಗಳ ಜೊತೆಯಲ್ಲಿ ಹಸ್ತಿನಪುರವನ್ನು ಪ್ರವೇಶ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ದುರ್ಯೋಧನಯಜ್ಞೋನಾಮ
ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತೈದನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ನಲವತ್ತಾರನೆಯ ಅಧ್ಯಾಯ
ದುರ್ಯೋಧನನ ಸಭೆಯಲ್ಲಿ ಕರ್ಣನಿಂದ ಅರ್ಜುನನ ವಧೆಯ ಪ್ರತಿಜ್ಞೆ. ಅದನ್ನು ಕೇಳಿ ಧರ್ಮರಾಜನ ಚಿಂತೆ.
ವೈಶಂಪಾಯನಃ
ಪ್ರವಿಶಂತಂ ಮಹಾರಾಜ ಸುತಾಸ್ತುಷ್ಟುವುರಚ್ಯುತಮ್ |
ಜನಾಶ್ಚಾಪಿ ಮಹೇಷ್ವಾಸಂ ತುಷ್ಟುವೂ ರಾಜಸತ್ತಮ ॥1॥
ವೈಶಂಪಾಯನ ಮಹಾರಾಜನೇ, ರಾಜಸತ್ತಮನೇ, ದುರ್ಯೋಧನನು ನಗರವನ್ನು ಪ್ರವೇಶಿಸುತ್ತಿತದ್ದಂತೆ ತನ್ನ ವರ್ಚಸ್ಸಿನಿಂದ ಚ್ಯುತನಾಗದ ಆ ಮಹೇಷ್ವಾಸನನ್ನು ಸೂತರೂ ಮತ್ತು ಜನರೂ ಸ್ತೋತ್ರಮಾಡಿದರು.
ಲಾಜೈಶ್ಚಂದನಚೂರ್ಣೈಶ್ಚ ವಿಕೀರ್ಯ ಚ ಜನಾಸ್ತತಃ |
ಊಚುರ್ದಿಷ್ಟ್ಯಾ ನೃಪಾವಿಘ್ನಃ ಸಮಾಪ್ತೋಽಯಂ ಕ್ರತುಸ್ತವ ॥2॥
ಲಾಜಗಳನ್ನು ಮತ್ತು ಚಂದನಚೂರ್ಣವನ್ನು ಎರಚಿ ಜನಗಳು ರಾಜನೇ, ದೇವರ ದಯೆಯಿಂದ ಈ ನಿನ್ನ ಯಜ್ಞವು ಚೆನ್ನಾಗಿ ಸಮಾಪ್ತವಾಯಿತು ಎಂದು ಹೇಳಿದರು.
ಅಪರೇ ತ್ವಬ್ರುವಂಸ್ತತ್ರ ವಾದಿಕಾಸ್ತಂ ಮಹೀಪತಿಮ್ |
ಯುಧಿಷ್ಠಿರಸ್ಯ ಯಜ್ಞಸ್ಯ ನ ಸಮೋ ಹ್ಯೇಷ ತೇ ಕ್ರತುಃ ॥3॥
ಇನ್ನೂ ಕೆಲವು ಯಥಾರ್ಥವಾದಿಗಳು ಆ ರಾಜನನ್ನು ಕುರಿತು ಈ ನಿನ್ನ ಯಜ್ಞವು ಯುಧಿಷ್ಠಿರನು ಮಾಡಿದ ಯಜ್ಞಕ್ಕೆ ಸಮಾನವಲ್ಲ ಎಂದು ಹೇಳಿದರು.
ನೈವ ತಸ್ಯ ಕ್ರತೋರೇಷ ಕಲಾಮರ್ಹತಿ ಷೋಡಶೀಮ್ |
ಏವಂ ತತ್ರಾಬ್ರುವನ್ ಕೇಚಿದ್ ವಾದಿಕಾಸ್ತಂ ಜನೇಶ್ವರಮ್ ॥4॥
ಇನ್ನು ಕೆಲವರು ಸತ್ಯವಾದಿಗಳು ಆ ರಾಜನನ್ನು ಕುರಿತು ಯುಧಿಷ್ಠಿರನು ಮಾಡಿದ ಯಜ್ಞದ ಹದಿನಾರನೆಯ ಒಂದಂಶಕ್ಕೂ ನಿನ್ನ ಯಜ್ಞವು ಸಮಾನವಲ್ಲ ಎಂದು ಹೇಳಿದರು.

ಸೃಹೃದಸ್ತ್ವಬ್ರುವಂಸ್ತತ್ರ ಅತಿ ಸರ್ವಾನಯಂ ಕ್ರತುಃ |
ಯಯಾತಿರ್ನಹುಷಶ್ಚಾಪಿ ಮಾಂಧಾತಾ ಭರತಸ್ತಥಾ |
ಕ್ರತುಮೇನಂ ಸಮಾಹೃತ್ಯ ಪೂತಾಃ ಸರ್ವೇ ದಿವಂ ಗತಾಃ ॥5॥
ಯಯಾತಿ, ನಹುಷ, ಮಾಂಧಾತಾ ಮತ್ತು ಭರತ ಇವರೆಲ್ಲರೂ ಈ ಯಜ್ಞವನ್ನು ನೆರವೇರಿಸಿ ಸ್ವರ್ಗವನ್ನು ಸಂಪಾದಿಸಿದರು. ಈ ಯಜ್ಞವು ಅವೆಲ್ಲವನ್ನೂ ಮೀರಿಸಿದುದು ಎಂದು ಕೆಲವು ಸುಹೃದರು ಹೇಳಿದರು.
ಏತಾ ವಾಚಃ ಶುಭಾಃ ಶೃಣ್ವನ್ ಸುಹೃದಾಂ ಭರತರ್ಷಭ |
ಪ್ರವಿವೇಶ ಪುರಂ ಹೃಷ್ಟಃ ಸ್ವವೇಶ್ಮ ಚ ನರಾಧಿಪಃ ॥6॥
ಭರತರ್ಷಭನೇ, ಇಂತಹ ಸುಹೃದರ ಶುಭವಾದ ಮಾತುಗಳನ್ನು ಕೇಳುತ್ತಾ ನರಾಧಿಪನಾದ ಸುಯೋಧನನು ಸಂತೋಷದಿಂದ ತನ್ನ ಪಟ್ಟಣವನ್ನೂ ಅಲ್ಲಿ ತನ್ನ ಮನೆಯನ್ನೂ ಪ್ರವೇಶಿಸಿದನು.
ಅಭಿವಾದ್ಯ ತತಃ ಪಾದೌ ಮಾತಾಪಿತ್ರೋರ್ವಿಶಾಂಪತೇ |
ಭೀಷ್ಮದ್ರೋಣಕೃಪಾದೀನಾಂ ವಿದುರಸ್ಯ ಚ ಧೀಮತಃ ॥7॥
ಅಭಿವಾದಿತಃ ಕನೀಯೋಭಿರ್ಭ್ರಾತೃಭಿರ್ಭ್ರಾತೃನಂದನಃ |
ನಿಷಸಾದಾಸನೇ ಮುಖ್ಯೇ ಭ್ರಾತೃಭಿಃ ಪರಿವಾರಿತಃ ॥8॥
ಎಲೈ ರಾಜನೇ, ತಂದೆತಾಯಿಗಳಿಗೆ ನಮಸ್ಕಾರವನ್ನು ಮಾಡಿ ಭೀಷ್ಮದ್ರೋಣಕೃಪರ ಮತ್ತು ಮೇಧಾವಿಯಾದ ವಿದುರನ ಪಾದಗಳಿಗೂ ನಮಸ್ಕರಿಸಿ ಭ್ರಾತೃನಂದನನಾದ ಅವನು ತಮ್ಮಂದಿರಿಂದ ನಮಸ್ಕರಿಸಲ್ಪಟ್ಟು ತಮ್ಮಂದಿರಿಂದ ಸುತ್ತುವರಿಯಲ್ಪಟ್ಟು ಮುಖ್ಯವಾದ ಆಸನದಲ್ಲಿ ಕುಳಿತುಕೊಂಡನು.
ಸ(ತ)ಮುತ್ಥಾಯ ಮಹಾರಾಜಂ ಸೂತಪುತ್ರೋಽಬ್ರವೀದ್ ವಚಃ |
ದಿಷ್ಟ್ಯಾ ತೇ ಭರತಶ್ರೇಷ್ಠ ಸಮಾಪ್ತೋಽಯಂ ಮಹಾಕ್ರತುಃ ॥9॥
ಹತೇಷು ಯುಧಿ ಪಾರ್ಥೇಷು ರಾಜಸೂಯೇ ತಥಾ ತ್ವಯಾ |
ಆಹೃತೇಽಹಂ ನರಶ್ರೇಷ್ಠ ತ್ವಾಂ ಸಭಾಜಯಿತಾ ಪುನಃ ॥10॥
ಸೂತಪುತ್ರನಾದ ಕರ್ಣನು ತನ್ನ ಆಸನದಿಂದ ಎದ್ದು ಮಹಾರಾಜನನ್ನು ಕುರಿತು ಭರತಶ್ರೇಷ್ಠನೇ, ದೈವಪ್ರೇರಣೆಯಂತೆ ಈ ಮಹಾಯಜ್ಞವು ಮುಗಿಯಿತು. ನರಶ್ರೇಷ್ಠನೇ, ಯುದ್ಧದಲ್ಲಿ ನೀನು ಪಾಂಡವರನ್ನು ಕೊಂದು ರಾಜಸೂಯ ಯಾಗವನ್ನು ಮಾಡುವಾಗ ನಾನು ಇನ್ನೊಮ್ಮೆ ನಿನ್ನನ್ನು ಸತ್ಕರಿಸುತ್ತೇನೆ ಎಂದು ಹೇಳಿದನು.
ತಮಬ್ರುವೀನ್ಮಹಾರಾಜೋ ಧಾರ್ತರಾಷ್ಟ್ರೋ ಮಹಾಯಶಾಃ ॥11॥
ಸತ್ಯಮೇತತ್ ತ್ವಯೋಕ್ತಂ ಹಿ ಪಾಂಡವೇಷು ದುರಾತ್ಮಸು |
ನಿಹತೇಷು ನರಶ್ರೇಷ್ಠ ಪ್ರಾಪ್ತೇ ಚಾಪಿ ಮಹಾಕ್ರತೌ |
ರಾಜಸೂಯೇ ಪುನರ್ಧೀರ ತ್ವಮೇವಂ ವರ್ಧಯಿಷ್ಯಸಿ ॥12॥
ಆಗ ಮಹಾಕೀರ್ತಿವಂತನಾದ ದುರ್ಯೋಧನ ಮಹಾರಾಜನು ಕರ್ಣನನ್ನು ಕುರಿತು ನೀನು ಹೇಳಿದ ಮಾತು ಸತ್ಯವಾದುದು. ಎಲೈ ನರಶ್ರೇಷ್ಠನೇ, ಧೀರನೇ, ದುರಾತ್ಮರಾದ ಪಾಂಡವರು ಹತರಾದ ಮೇಲೆ ರಾಜಸೂಯ ಮಹಾಕ್ರತುವನ್ನು ಮಾಡಿದಾಗ ನೀನು ಪುನಃ ನನ್ನನ್ನು ಶುಭಾಶಂಸನೆಗಳಿಂದ ವರ್ಧಿಸುವಿ ಎಂದು ಹೇಳಿದರು.
ಏವಮುಕತತ್ವ ಮಹಾರಾಜ ಕರ್ಣಮಾಶ್ಲಿಷ್ಯ ಭಾರತ |
ರಾಜಸೂಯಂ ಕ್ರತುಶ್ರೇಷ್ಠಂ ಚಿಂತಯಾಮಾಸ ಕೌರವಃ ॥13॥
ಎಲೈ ಮಹಾರಾಜನೇ, ಭಾರತನೇ, ಕೌರವನು ಹೀಗೆ ಹೇಳಿ ಕರ್ಣನನ್ನು ಆಲಿಂಗಿಸಿ ಕ್ರತುಶ್ರೇಷ್ಠವಾದ ರಾಜಸೂಯ ಯಾಗವನ್ನು ಕುರಿತು ಚಿಂತಿಸಿದನು.
ಸೋಽಬ್ರವೀತ್ ಕೌರವಾಂಶ್ಚಾಪಿ ಪಾರ್ಶ್ವಸ್ಥಾನ್ ನೃಪಸತ್ತಮಃ |
ರಾಧೇಯಸೌಬಲಾದೀನ್ ವೈ ಧಾರ್ತರಾಷ್ಟ್ರೋ ಮಹೀಪತಿಃ ॥14॥
ಕದಾ ತು ತಂ ಕ್ರತುವರಂ ರಾಜಸೂಯಂ ಮಹಾಧನಮ್ |
ನಿಹತ್ಯ ಪಾಂಡವಾನ್ ಸರ್ವಾನಾಹರಿಷ್ಯಾಮಿ ಕೌರವಾಃ ॥15॥
ನೃಪಶ್ರೇಷ್ಠನಾದ ಧೃತರಾಷ್ಟ್ರಪುತ್ರನಾದ ಅವನು ಪಕ್ಕದಲ್ಲಿದ್ದ ಕೌರವರನ್ನೂ ಮತ್ತು ಕರ್ಣಶಕುನಿಗಳನ್ನೂ ಕುರಿತು ಎಲೈ ಕೌರವರೇ, ನಾನು ಯಾವಾಗ ಎಲ್ಲಾ ಪಾಂಡವರನ್ನೂ ಕೊಂದು ಮಹಾಧನದಿಂದ ಕೂಡಿದ ಕ್ರತುಶ್ರೇಷ್ಠವಾದ ರಾಜಸೂಯವನ್ನು ನೆರವೇರಿಸುವೆನು ಎಂದು ಹೇಳಿದನು.
ತಮಬ್ರುವೀತ್ ತದಾ ಕರ್ಣಃ ಶೃಣು ಮೇ ರಾಜಕುಂಜರ |
ಪಾದೌ ನ ಧಾವಯೇ ತಾವದ್ ಯಾವನ್ನ ನಿಹತೋಽರ್ಜುನಃ ॥16॥
ಆಗ ಕರ್ಣನು ಅವನನ್ನು ಕುರಿತು ಎಲೈ ರಾಜಕುಂಜರನೇ, ನನ್ನ ಮಾತನ್ನು ಕೇಳು. ನಾನು ಅರ್ಜುನನನ್ನು ಕೊಲ್ಲುವವರೆಗೆ ದಾಸಿಯರಿಂದ ನನ್ನ ಪಾದಗಳನ್ನು ಕಾಂತಿ ವಿಶೇಷ ಉಂಟಾಗುವಂತೆ ತೊಳೆಸಿಕೊಳ್ಳುವುದಿಲ್ಲ.
ಕೀಲಾಲಜಂ ನ ಖಾದೇಯಂ ಕರಿಷ್ಯೇ ಚಾಸುಖತಮ್ |
ನಾಸ್ತೀತಿ ನೈವ ವಕ್ಷ್ಯಾಮಿ ಯಾಚಿತೋ ಯೇನ ಕೇನಚಿತ್ ॥17॥
ಹಾಲನ್ನು ಕುಡಿಯುವುದಿಲ್ಲ. ಈ ಅಸುರವ್ರತವನ್ನು ಮಾಡುವೆನು. ಯಾರು ಏನು ಬೇಡಿದರೂ ಇಲ್ಲವೆಂದು ಹೇಳುವುದಿಲ್ಲ (ಎಂದು ಹೇಳಿದನು).
ಅಥೋತ್ಕ್ರುಷ್ಟಂ ಮಹೇಷ್ವಾಸೈರ್ಧಾರ್ತರಾಷ್ಟೈರ್ಮಹಾರಥೈಃ ॥18॥

ಆಗ ಮಹೇಷ್ವಾಸರೂ ಮಹಾರಥರೂ ಆದ ಧೃತರಾಷ್ಟ್ರ ಪುತ್ರರು ಸಂತೋಷದಿಂದ ಸಿಂಹನಾದವನ್ನು ಮಾಡಿದರು.
ಪ್ರತಿಜ್ಞಾತೋ ಫಲ್ಗುನಸ್ಯ ವಧೇ ಕರ್ಣೇನ ಸಂಯುಗೇ |
ವಿಜಿತಾಂಶ್ಚಾಪ್ಯಮನ್ಯಂತ ಪಾಂಡವಾನ್ ಧೃತರಾಷ್ಟ್ರಜಾಃ ॥19॥
ಕರ್ಣನಿಂದ ಯುದ್ಧದಲ್ಲಿ ಅರ್ಜುನನ ವಧೆಯು ಪ್ರತಿಜ್ಞಾತವಾಗುತ್ತಿರಲು ಧೃತರಾಷ್ಟ್ರ ಪುತ್ರರು ಪಾಂಡವರನ್ನು ವಿಜಿತರೆಂದೇ ತಿಳಿದರು.
ತದಾ ಪ್ರತಿಜ್ಞಾಮಾರುಹ್ಯ ಸೂತಪುತ್ರೇಣ ಭಾಷಿತೇ ॥20॥
ಪ್ರವಿವೇಶ ಗೃಹಂ ಶ್ರೀಮಾನ್ ಯಥಾ ಚೈತ್ರರಥಂ ಪ್ರಭುಃ |
ತೇಽಪಿ ಸರ್ವೇ ಮಹೇಷ್ವಾಸಾ ಜಗ್ಮುರ್ವೇಶ್ಮಾನಿ ಭಾರತ ॥21॥
ಎಲೈ ರಾಜೇಂದ್ರನೇ, ಸೂತಪುತ್ರನು ಹೀಗೆ ಪ್ರತಿಜ್ಞಾಪೂರ್ವಕವಾಗಿ ಮಾತನಾಡುತ್ತಿರಲು ದುರ್ಯೋಧನನು ಶ್ರೇಷ್ಠರಾದ ಸಭಾಸದರನ್ನು ಕಳುಹಿಸಿ ಚೈತ್ರರಥದಂತೆ ಇದ್ದ ತನ್ನ ಗೃಹವನ್ನು ಪ್ರಭುವೂ, ಕಾಂತಿಯುಕ್ತನೂ ಆದ ಅವನು ಪ್ರವೇಶಿಸಿದನು.
ಕರ್ಣೋಽಪಿ ಸ್ವಗೃಹಂ ಗತ್ವಾ ಮುದಿತೋ ಬಾಂಧವೈಃ ಸಹ |
ಪ್ರದದೌ ವಿತ್ತಮರ್ಥಿಭ್ಯೋ ಧನಾಧ್ಯಕ್ಷ ಇವಾಪರಃ ॥22॥
ಕರ್ಣನೂ ಬಂಧುಗಳ ಜೊತೆಯಲ್ಲಿ ಸಂತೋಷದಿಂದ ತನ್ನ ಮನೆಗೆ ಹೋಗಿ ಯಾಚಕರಿಗೆ ಕುಬೇರನಂತೆ ಬೇಡಿದುದನ್ನು ಕೊಟ್ಟನು.
ಸ್ವಾನಿ ಸ್ವಾನಿ ಮಹಾರಾಜ ಭೀಷ್ಮದ್ರೋಣಾದಯೋ ನೃಪಾಃ |
ಪಾಂಡವಾಶ್ಚ ಮಹೇಷ್ವಾಸಾ ದೂತವಾಕ್ಯಪ್ರಚೋದಿತಾಃ |
ಚಿಂತಯಂತಸ್ತಮೇವಾರ್ಥಂ ನಾಲಭಂತ ಸುಖಂ ಕ್ವಚಿತ್ ॥23॥
ಎಲೈ ಮಹಾರಾಜನೇ, ಭೀಷ್ಮದ್ರೋಣಾದಿಗಳು ಮತ್ತು ಉಳಿದ ರಾಜರು ತಮ್ಮ ತಮ್ಮ ಮನೆಗಳಿಗೆ ಹೋದರು. ಮಹೇಷ್ವಾಸರಾದ ಪಾಂಡವರಾದರೂ ದೂತರ ಮೂಲಕವಾಗಿ ಕರ್ಣನ ಪ್ರತಿಜ್ಞೆಯನ್ನು ತಿಳಿದು ಅದನ್ನೇ ಕುರಿತು ಚಿಂತಿಸುತ್ತಾ ಸುಖಹೀನರಾದರು.
ಭೂಯಶ್ಚಾರೈರ್ನರವ್ಯಾಘ್ರ ಪ್ರವೃತ್ತಿರುಪಪಾದಿತಾಃ |
ಪ್ರತಿಜ್ಞಾ ಸೂತಪುತ್ರಸ್ಯ ವಿಜಯಸ್ಯ ವಧಂ ಪ್ರತಿ ॥24॥
ರಾಜೇಂದ್ರನೇ, ನರವ್ಯಾಘ್ರನೇ, ಪುನಃ ಚಾರರ ಮೂಲಕವಾಗಿ ಕರ್ಣನು ಮಾಡಿದ ಅರ್ಜುನನ ವಧೆಯ ಪ್ರತಿಜ್ಞೆಯು ಎಲ್ಲ ಕಡೆಯಲ್ಲಿಯೂ ಹರಡಲ್ಪಟ್ಟಿತು.
ಏತತ್ಶ್ರುತ್ವಾ ಧರ್ಮಪುತ್ರಃ ಸಮುದ್ವಿಗ್ನೋ ನರಾಧಿಪ |
ಅಧೋಮುಖಶ್ಚಿರಂ ತಸ್ಥೌ ಕಿಂ ಕಾರ್ಯಮಿತಿ ಚಿಂತಯನ್ ॥25॥
ಎಲೈ ನರಾಧಿಪನೇ, ಇದನ್ನು ಕೇಳಿದ ಧರ್ಮಪುತ್ರನು ಉದ್ವೇಗಕ್ಕೆ ಒಳಗಾಗಿ ಮುಖವನ್ನು ಕೆಳಗೆ ಹಾಕಿ ಬಹಳ ಸಮಯದವರೆಗೆ ಏನು ಮಾಡುವುದು ಎಂದು ಚಿಂತಿಸಿದನು.
ಅಭೇದ್ಯಕವಚಂ ಮತ್ವಾ ಕರ್ಣಮದ್ಭುತವಿಕ್ರಮಮ್ |
ಅನುಸ್ಮರಂಶ್ಚ ಸಂಕ್ಲೇಶಾನ್ ನ ಶಾಂತಿಮುಪಯಾತಿ ಸಃ ॥26॥
ಕರ್ಣನ ಕವಚವು ಅಭೇದ್ಯವೆಂದು ತಿಳಿದು ಕರ್ಣನ ಅದ್ಭುತ ಪರಾಕ್ರಮವನ್ನೂ ಮತ್ತು ತಾವು ಅನುಭವಿಸಿದ ಕ್ಲೇಶವನ್ನೂ ನೆನೆದು ಅವನು ಶಾಂತಿಯನ್ನು ಹೊಂದಲಿಲ್ಲ.
ತಸ್ಯ ಚಿಂತಾಪರೀತಸ್ಯ ಬುದ್ಧಿರ್ಜಜ್ಞೇ ಮಹಾತ್ಮನಃ |
ಬಹುವ್ಯಾಲಮೃಗಾಕೀರ್ಣಂ ತ್ಯಕ್ತುಂ ದ್ವೈತವನಂ ಸರಃ ॥27॥
ಹೀಗೆ ಚಿಂತಾಪರವಶನಾದ ಮಹಾತ್ಮನಿಗೆ ಅನೇಕ ಮೃಗಗಳಿಂದ ಮತ್ತು ವ್ಯಾಲಗಳಿಂದ ಕೂಡಿದ ದ್ವೈತವನನ್ನು ಬಿಟ್ಟು ಹೊರಡಬೇಕೆಂದು ಬುದ್ಧಿಯುಂಟಾಯಿತು.
ಧಾರ್ತರಾಷ್ಟ್ರೋಽಪಿ ನೃಪತಿಃ ಪ್ರಶಶಾಸ ವಸುಂಧರಾಮ್ |
ಭ್ರಾತೃಭಿಃ ಸಹಿತೋ ವೀರೈರ್ಭೀಷ್ಮದ್ರೋಣಕೃಪೈಸ್ತಥಾ ॥28॥
ದುರ್ಯೋಧನನೂ ಸಹ ಭ್ರಾತೃಸಹಿತನಾಗಿ ಭೀಷ್ಮದ್ರೋಣಕೃಪ ಮೊದಲಾದ ವೀರರಿಂದ ಒಡಗೂಡಿ ಪೃಥಿವಿಯನ್ನು ಆಳಿದನು.
ಸಂಗಮ್ಯ ಸೂತಪುತ್ರೇಣ ಕರ್ಣೇನಾಹವಶೋಭಿನಾ |
ಸತತಂ ಪ್ರಿಯಮಾಣೋ ವೈ ದೇವಿನಾ ಸೌಬಲೇನ ಚ ॥29॥
ಯುದ್ಧದಲ್ಲಿ ಶೋಭಿಸುವ ಸೂತಪುತ್ರನಾದ ಕರ್ಣನಿಂದಲೂ, ದ್ಯೂತಪ್ರಿಯನಾದ ಶಕುನಿಯಿಂದಲೂ ಕೂಡಿ ಸತತವಾಗಿ ಸಂತೋಷದಲ್ಲಿದ್ದನು.
ದುರ್ಯೋಧನಃ ಪ್ರಿಯೇ ನಿತ್ಯಂ ವರ್ತಮಾನೋ ಮಹೀಭೃತಾಮ್ |
ಪೂಜಯಾಮಾಸ ವಿಪ್ರೇಂದ್ರಾನ್ ಕ್ರತುಭಿರ್ಭೂರಿದಕ್ಷಿಣೈಃ ॥30॥
ಉಳಿದ ರಾಜರ ಪ್ರಿಯದಲ್ಲಿ ಯಾವಾಗಲೂ ನಿರತನಾದ ದುರ್ಯೋಧನನು ಅನೇಕ ಕ್ರತುಗಳನ್ನು ಮಾಡಿ ಭೂರಿದಕ್ಷಿಣೆಯನ್ನು ಕೊಟ್ಟು ಬ್ರಾಹ್ಮಣಶ್ರೇಷ್ಠರನ್ನು ಪೂಜಿಸಿದನು.
ಭ್ರಾತೄಣಾಂ ಚ ಪ್ರಿಯಂ ರಾಜನ್ ಚಕಾರ ಸ ಪರಂತಪಃ |
ನಿಶ್ಚಿತ್ಯ ಮನಸಾ ವೀರೋ ದತ್ತಭುಕ್ತಫಲಂ ಧನಮ್ ॥31॥
ರಾಜನೇ, ದಾನ ಮತ್ತು ಭೋಗ ಇವೆರಡೇ ಧನದ ಫಲವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ವೀರನೂ, ಪರಂತಪನೂ ಆದ ಅವನು ತನ್ನ ತಮ್ಮಂದಿರಿಗೂ ಹಿತವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ

ಷಟ್‌ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಪ್ರಾಯೋಪವೇಶನಪರ್ವಣಿ ಯುಧಿಷ್ಠಿರಚಿಂತಾ ನಾಮ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತಾರನೆಯ
ಅಧ್ಯಾಯ ಮುಗಿಯಿತು.
॥ ಪ್ರಾಯೋಪವೇಶಪರ್ವ ಸಮಾಪ್ತಮ್ ॥
* * * *
ಮೃಗಸ್ವಪ್ನೋದ್ಭವಪರ್ವ
ಇನ್ನೂರ ನಲವತ್ತೇಳನೆಯ ಅಧ್ಯಾಯ
ಯುಧಿಷ್ಠಿರನಿಗೆ ಸ್ವಪ್ನದಲ್ಲಿ ಮೃಗಗಳ ಪ್ರಾರ್ಥನೆ ಮತ್ತು ಪುನಃ ಪಾಂಡವರಿಂದ ಕಾಮ್ಯಕ ವನಕ್ಕೆ ಪ್ರಯಾಣ.
ಜನಮೇಜಯಃ
ದುರ್ಯೋಧನಂ ಮೋಕ್ಷಯಿತ್ವಾ ಪಾಂಡುಪುತ್ರಾ ಮಹಾಬಲಾಃ |
ಕಿಮಕಾರ್ಷುರ್ವನೇ ತಸ್ಮಿಂಸ್ತನ್ಮಮಾಖ್ಯಾತುಮರ್ಹಸಿ ॥1॥
ಜನಮೇಜಯ ಮಹಾಬಲರಾದ ಪಾಂಡುಪುತ್ರರು ದುರ್ಯೋಧನನನ್ನು ಮೋಚನೆಗೊಳಿಸಿ ಆ ದ್ವೈತವನದಲ್ಲಿ ಏನು ಮಾಡಿದರೆಂದು ನೀವು ನನಗೆ ಹೇಳಬೇಕು.
ವೈಶಂಪಾಯನಃ
ತತಃ ಶಯಾನಂ ಕೌಂತೇಯಂ ರಾತ್ರೌ ದ್ವೈತವನೇ ಮೃಗಾಃ |
ಸ್ವಪ್ನಾಂತೇ ದರ್ಶಯಾಮಾಸುರ್ಬಾಷ್ಪಕಂಠಾ ಯುಧಿಷ್ಠಿರಮ್ |
ತಾನಬ್ರವೀತ್ ಸ ರಾಜೇಂದ್ರೋ ವೇಪಮಾನಾನ್ ಕೃತಾಂಜಲೀನ್ ॥2॥
ಬ್ರೂತ ಯದ್ವಕ್ತುಕಾಮಾಃ ಸ್ಥ ಕೇ ಭವಂತಃ ಕಿಮಿಷ್ಯತೇ ॥3॥
ಅನಂತರ ದ್ವೈತವನದಲ್ಲಿ ಯುಧಿಷ್ಠಿರನು ರಾತ್ರಿಯಲ್ಲಿ ನಿದ್ರಿಸುತ್ತಿರುವಾಗ ಸ್ವಪ್ನದ ಮಧ್ಯದಲ್ಲಿ ಬಾಷ್ಪಕಂಠದಿಂದ ಕೂಡಿದ ಮೃಗಗಳು ಬಂದು ದರ್ಶನವನ್ನು ನೀಡಿದವು. ಆ ರಾಜೇಂದ್ರನು ಕೈಗಳನ್ನು ಮುಗಿದು ನಡುಗುತ್ತಿದ್ದ ಆ ಮೃಗಗಳನ್ನು ಕುರಿತು ನೀವು ಯಾರು? ಏನು ಹೇಳಲು ಬಯಸುತ್ತೀರಿ? ನಿಮಗೆ ಏನಾಗಬೇಕಾಗಿದೆ? ಎಂದು ಕೇಳಿದನು.
ವೈಶಂಪಾಯನಃ
ಏವಮುಕ್ತಾ ಪಾಂಡವೇನ ಕೌಂತೇಯೇನ ಯಶಸ್ವಿನಾ |
ಪ್ರತ್ಯುಬ್ರುವನ್ ಮೃಗಾಸ್ತತ್ರ ಹತಶೇಷಾ ಯುಧಿಷ್ಠಿರಮ್ ॥4॥
ವೈಶಂಪಾಯನ ಯಶಸ್ವಿಯಾದ ಕುಂತೀಪುತ್ರನಾದ ಪಾಂಡವನಾದ ಯುಧಿಷ್ಠಿರನು ಹೀಗೆ ಹೇಳುತ್ತಿರಲು ಅಳಿದುಳಿದ ಮೃಗಗಳು ಅಲ್ಲಿ ಅವನಿಗೆ ಹೀಗೆ ಉತ್ತರವನ್ನು ನೀಡಿದವು.
ವಯಂ ಮೃಗಾ ದ್ವೈತವನೇ ಹತಶಿಷ್ಟಾಸ್ತು ಭಾರತ |
ನೋತ್ಸೀದೇಮ ಮಹಾಭಾಗ ಕ್ರಿಯತಾಂ ವಾಸಪರ್ಯಯಃ ॥5॥
ಎಲೈ ಭಾರತನೇ, ನಾವು ದ್ವೈತವನದಲ್ಲಿ ಅಳಿದು ಉಳಿದಿರುವ ಮೃಗಗಳು. ಮಹಾರಾಜನೇ, ನಮ್ಮ ಕುಲವು ಸಂಪೂರ್ಣವಾಗಿ ನಾಶವಾಗುವುದು ಬೇಡ. ಬೇರೆ ಸ್ಥಳದಲ್ಲಿ ವಾಸವನ್ನು ಮಾಡು.
ಭವತೋ ಭ್ರಾತರಃ ಶೂರಾಃ ಸರ್ವ ಏವಾಸ್ತ್ರಕೋವಿದಾಃ |
ಕುಲಾನ್ಯಲ್ಪಾವಶಿಷ್ಟಾನಿ ಕೃತವಂತೋ ವನೌಕಸಾಮ್ ॥6॥
ನಿನ್ನ ತಮ್ಮಂದಿರೆಲ್ಲರೂ ಶೂರರು ಮತ್ತು ಅಸ್ತ್ರಕೋವಿದರು. ಅವರು ವನವಾಸಿಗಳಾದ ನಮ್ಮ ಕುಲವು ಅಲ್ಪ ಮಾತ್ರ ಉಳಿಯುವಂತೆ ಮಾಡಿದ್ದಾರೆ.
ಬೀಜಭೂತಾ ವಯಂ ಕೇಚಿದವಶಿಷ್ಟಾ ಮಹಾಮತೇ |
ವಿವರ್ಧೇಮಹಿ ರಾಜೇಂದ್ರ ಪ್ರಸಾದಾತ್ ತೇ ಯುಧಿಷ್ಠಿರ ॥7॥
ಮಹಾಮತಿಯೇ, ನಮ್ಮಲ್ಲಿ ಬೀಜಭೂತರಾದ ಕೆಲವರು ಮಾತ್ರ ಉಳಿದಿದ್ದೇವೆ. ರಾಜೇಂದ್ರನಾದ ಯುಧಿಷ್ಠಿರನೇ, ನಿನ್ನ ಅನುಗ್ರಹದಿಂದ ನಾವು ಪುನಃ ಬೆಳೆಯುತ್ತೇವೆ (ಎಂದು ಹೇಳಿದವು).
ತಾನ್ ವೇಪಮಾನಾನ್ ವಿತ್ರಸ್ತಾನ್ ಬೀಜಮಾತ್ರಾವಶೇಷಿತಾನ್ |
ಮೃಗಾನ್ ದೃಷ್ಟ್ವಾ ಸುದುಃಖಾರ್ತೋ ಧರ್ಮರಾಜೋ ಯುಧಿಷ್ಠಿರಃ |
ತಾಂಸ್ತಥೇತ್ಯಬ್ರವೀದ್ ರಾಜಾ ಸರ್ವಭೂತಹಿತೇ ರತಃ ॥8॥
ಯಥಾ ಭವಂತೋ ಬ್ರುವತೇ ಕರಿಷ್ಯಾಮಿ ಚ ತತ್ತಥಾ ॥9॥
ಹೆದರಿ ನಡುಗುತ್ತಿರುವ ಬೀಜಮಾತ್ರವಾಗಿ ಉಳಿದಿರುವ ಆ ಮೃಗಗಳನ್ನು ನೋಡಿ ದುಃಖಪೂರಿತನಾದ ಸರ್ವಭೂತಹಿತದಲ್ಲಿ ರತನಾದ ಯುಧಿಷ್ಠಿರನು ನೀವು ಹೇಗೆ ಹೇಳುತ್ತೀರೋ ಅದರಂತೆ ಮಾಡುತ್ತೇನೆ ಎಂದು ಹೇಳಿದನು.
ಇತ್ಯೇವಂ ಪ್ರತಿಬುದ್ಧಃ ಸ ರಾತ್ರ್ಯಂತೇ ರಾಜಸತ್ತಮಃ |
ಅಬ್ರವೀತ್ ಸಹಿತಾನ್ ಭ್ರಾತೄನ್ ದಯಾಪನ್ನೋ ಮೃಗಾನ್ ಪ್ರತಿ ॥
ಉಕ್ತಂ ರಾತ್ರೌ ಮೃಗೈರಸ್ಮಿನ್ ಸ್ವಪ್ನಾಂತೇ ಹತಶೇಷಿತೈಃ |
ಅನುಭೂತಾಃ ಸ್ಮ ಭದ್ರಂ ತೇ ದಯಾ ನಃ ಕ್ರಿಯತಾಮಿತಿ ॥11॥
ಹೀಗೆ ರಾತ್ರಿಯ ಕೊನೆಯ ಭಾಗದಲ್ಲಿ ಸ್ವಪ್ನವನ್ನು ನೋಡಿದ ಆ ರಾಜಶ್ರೇಷ್ಠನು ಎದ್ದು ಮೃಗಗಳ ಮೇಲೆ ದಯೆಯುಳ್ಳವನಾಗಿ

ತಮ್ಮಂದಿರನ್ನು ಕುರಿತು ರಾತ್ರಿಯಲ್ಲಿ ಹತಶೇಷರಾದ ಮೃಗಗಳು ಸ್ವಪ್ನದಲ್ಲಿ ನನಗೆ ದರ್ಶನವನ್ನು ಕೊಟ್ಟು ನಾವು ಇದುವರೆಗೆ ನಿಮಗೆ ಅನುಕೂಲವಾಗಿದ್ದೇವೆ, ನಿಮಗೆ ಮಂಗಳವಾಗಲಿ, ನಮ್ಮ ಮೇಲೆ ದಯೆಯನ್ನು ತೋರಿಸಿ ಎಂದು ಹೇಳಿದವು.
ತೇ ಸತ್ಯಮಾಹುಃ ಕರ್ತವ್ಯಾ ದಯಾऽಸ್ಮಾಭಿರ್ವನೌಕಸಾಮ್ |
ಸಾಷ್ಟಮಾಸಂ ಹಿ ನೋ ವರ್ಷಂ ಯದೇನಾನು(ತದು)ಪಯುಂಜ್ಮಹೇ ॥
ಪ್ರಾಣಿಗಳು ಹೇಳಿದ ಮಾತು ಸತ್ಯವಾದುದು. ನಾವು ವನನಿವಾಸಿಗಳಾದ ಅವುಗಳಿಗೆ ದಯೆಯನ್ನು ತೋರಿಸಬೇಕು. ನಾವು ಈ ಪ್ರಾಣಿಗಳನ್ನು ಉಪಜೀವಿಸುತ್ತಾ ಒಂದು ವರ್ಷ ಮತ್ತು ಎಂಟು ತಿಂಗಳುಗಳು ಕಳೆದಿವೆ (ಎಂದು ಹೇಳಿದನು).
ಅರ್ಜುನಃ
ತ್ವದಧೀನಾ ವಯಂ ರಾಜನ್ ಮಾ ತ್ವಮಸ್ಮಾನ್ ವಿಚಾರಯ |
ಯತ್ರೈವ ಮನ್ಯಸೇ ಪಾರ್ಥ ತತ್ರ ಗಚ್ಛಾಮಹೇ ವಯಮ್ ॥13॥
ಅರ್ಜುನ ರಾಜನೇ, ನಾವು ನಿನಗೆ ಅಧೀನರಾದವರು. ಈ ವಿಷಯದಲ್ಲಿ ನೀನು ನಮ್ಮನ್ನು ವಿಚಾರಿಸಬೇಡ. ನೀನು ಎಲ್ಲಿಗೆ ಹೋಗಬೇಕೆಂದು ತಿಳಿಯುತ್ತೀಯೋ, ನಾವು ಅಲ್ಲಿಗೆ ಹೋಗುತ್ತೇವೆ.
ಯುಧಿಷ್ಠಿರಃ
ಪುನರ್ಬಹುಮೃಗಂ ರಮ್ಯಂ ಕಾಮ್ಯಕಂ ಕಾನನೋತ್ತಮಮ್ |
ಮರುಭೂಮೇಃ ಶಿರಃಸ್ಥಾನಂ ತೃಣಬಿಂದುಸರಃ ಪ್ರತಿ |
ತತ್ರೇಮಾಂ ವಸತಿಂ ಶಿಷ್ಟಾಂ ವಿಹರಂತೋ ರಮೇಮಹಿ ॥14॥
ಯುಧಿಷ್ಠಿರ ಮರುಭೂಮಿಯ ಶಿರಃಸ್ಥಾನವಾದ ತುದಿಯಲ್ಲಿ ತೃಣಬಿಂದು ಸರೋವರದ ಸಮೀಪದಲ್ಲಿ ಶ್ರೇಷ್ಠವಾದ ಕಾಮ್ಯಕವನವಿದೆ. ಅದು ಸುಂದರವೂ ಬಹುಮೃಗಗಳಿಂದ ಕೂಡಿದುದೂ ಆಗಿದೆ. ನಾವು ಉಳಿದ ಕಾಲವನ್ನು ಅಲ್ಲಿ ವಾಸಮಾಡಿ ಸುಖವಾಗಿ ಕಳೆಯೋಣ.
ವೈಶಂಪಾಯನಃ
ಇತ್ಯುಕ್ತಾಸ್ತೇ ಮಹಾತ್ಮಾನಃ ಪಾಂಡವೇನ ಮಹಾತ್ಮನಾ |
ತತಸ್ತೇ ಪಾಂಡವಾಃ ಶೀಘ್ರಂ ಪ್ರಯಯುರ್ಧರ್ಮಕೋವಿದಃ ॥15॥
ವೈಶಂಪಾಯನ ಮಹಾತ್ಮನಾದ ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಮಹಾತ್ಮರಾದ ಮತ್ತು ಧರ್ಮಕೋವಿದರಾದ ಪಾಂಡವರು ಶೀಘ್ರವಾಗಿ ಅಲ್ಲಿಂದ ಹೊರಟರು.
ಬ್ರಾಹ್ಮಣೈಃ ಸಹಿತಾ ರಾಜನ್ ಯೇ ತತ್ರಾಸನ್ ಸಮಾಗತಾಃ |
ಇಂದ್ರಸೇನಾದಿಭಿಶ್ಚೈವ ಪ್ರೇಷ್ಯೈರನುಗತಾಸ್ತದಾ ॥16॥
ಎಲೈ ರಾಜನೇ, ಅಲ್ಲಿಗೆ ಬಂದ ಬ್ರಾಹ್ಮಣರಿಂದಲೂ ಇಂದ್ರಸೇನಾದಿ ದೂತರಿಂದಲೂ ಹಿಂಬಾಲಿಸಲ್ಪಟ್ಟವರಾಗಿ ಅವರು ಹೊರಟರು.
ತೇ ಯಾತ್ವಾ ಸುಸುಖೈರ್ಮಾರ್ಗೈಃ ಸ್ವನ್ನೈಃ ಶುಚಿಜಲಾನ್ವಿತೈಃ |
ದದೃಶುಃ ಕಾಮ್ಯಕಂ ಪುಣ್ಯಮಾಶ್ರಮಂ ತಾಪಸೈರ್ಯುತಮ್ ॥17॥
ಅವರು ಒಳ್ಳೆಯ ಆಹಾರವು ಮತ್ತು ಶುಚಿಯಾದ ಜಲವು ದೊರೆಯುವ ಸುಖಕರವಾದ ಮಾರ್ಗಗಳಿಂದ ಪ್ರಯಾಣಮಾಡಿ ತಾಪಸರಿಂದ ಯುಕ್ತವಾದ ಪವಿತ್ರವಾದ ಕಾಮ್ಯಕವನದ ಆಶ್ರಮವನ್ನು ನೋಡಿದರು.
ವಿವಿಶುಸ್ತೇ ಸ್ಮ ಕೌರವ್ಯಾ ವೃತಾ ವಿಪ್ರರ್ಷಭೈಸ್ತದಾ |
ತದ್ವನಂ ಭರತಶ್ರೇಷ್ಠಾಃ ಸ್ವರ್ಗಂ ಸುಕೃತಿನೋ ಯಥಾ ॥18॥
ಆ ಕೌರವ್ಯರಾದ ಭರತಶ್ರೇಷ್ಠರು ವಿಪ್ರಶ್ರೇಷ್ಠರಿಂದ ಕೂಡಿದವರಾಗಿ ಪುಣ್ಯವನ್ನು ಮಾಡಿದವರು ಸ್ವರ್ಗವನ್ನು ಪ್ರವೇಶಿಸುವಂತೆ ಆ ವನವನ್ನು ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಸಪ್ತಚತ್ವಾರಿಂಶದಧಿಕದ್ವಿಶತತಮೋऽಧ್ಯಾಯಃ ॥
॥ ಇತಿ ಮೃಗಸ್ವಪ್ನೋದಭ್ವಪರ್ವಣಿ ಕಾಮ್ಯಕವನಪ್ರವೇಶೋನಾಮ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರಜಲವತ್ತೇಳನೆಯ
ಅಧ್ಯಾಯ ಮುಗಿಯಿತು.
॥ ಮೃಗಸ್ವಪ್ನೋದ್ಭವಪರ್ವವು ಮುಗಿಯಿತು ॥
* * * *

ವ್ರೀಹಿದ್ರೌಣಿಕಪರ್ವ
ಇನ್ನೂರ ನಲವತ್ತೆಂಟನೆಯ ಅಧ್ಯಾಯ
ಕಾಮ್ಯಕವನದಲ್ಲಿ ಯುಧಿಷ್ಠಿರನ ಚಿಂತೆ ಮತ್ತು ವ್ಯಾಸರ ಆಗಮನ.
ವೈಶಂಪಾಯನಃ
ವನೇ ನಿವಸತಾಂ ತೇಷಾಂ ಪಾಂಡವಾನಾಂ ಮಹಾತ್ಮನಾಮ್ |
ವರ್ಷಾಣ್ಯೇಕಾದಶಾತೀಯುಃ ಕೃಚ್ಛ್ರೇಣ ಭರತರ್ಷಭ ॥1॥
ವೈಶಂಪಾಯನ ಭರತರ್ಷಭನೇ, ವನವಾಸವನ್ನು ಮಾಡುತ್ತಿದ್ದ ಮಹಾತ್ಮರಾದ ಪಾಂಡವರಿಗೆ ಹನ್ನೊಂದು ವರ್ಷಗಳು ಕಷ್ಟದಿಂದ ಕಳೆದವು.
ಫಲಮೂಲಾಶನಾಸ್ತೇ ಹಿ ಸುಖಾರ್ಹಾ ದುಃಖಮುತ್ತಮಮ್ |
ಪ್ರಾಪ್ತಕಾಲಮನುಧ್ಯಾಂತಃ ಸೇಹಿರೇ ವರಪೂರುಷಾಃ ॥2॥

ಸುಖಾರ್ಹರಾದ ಆ ಶ್ರೇಷ್ಠಪುರುಷರು ಫಲಮೂಲಗಳನ್ನು ಸೇವಿಸುತ್ತಾ ಪ್ರಸಕ್ತ ಸಮಯದಲ್ಲಿ ಮಾಡಬಹುದಾದುದನ್ನು ಯೋಚಿಸುತ್ತಾ ಆ ದೊಡ್ಡ ಕ್ಲೇಶವನ್ನು ಸಹಿಸಿದರು.
ಯುಧಿಷ್ಠಿರಸ್ತು ರಾಜರ್ಷಿರಾತ್ಮಕರ್ಮಾಪರಾಧಜಮ್ |
ಚಿಂತಯನ್ ಸ ಮಹಾಬಾಹುರ್ಭ್ರಾತೄಣಾಂ ದುಃಖಮುತ್ತಮಮ್ ||3||
ನ ಸುಷ್ವಾಪ ಸುಖಂ ರಾಜಾ ಹೃದಿ ಶಲ್ಯೈರಿವಾರ್ಪಿತೈಃ |
ದೌರಾತ್ಮ್ಯಮನುಪಶ್ಯಂಸ್ತತ್ಕಾಲೇ ದ್ಯೂತೋದ್ಭವಸ್ಯ ಹಿ ||4||
ರಾಜರ್ಷಿಯೂ, ಮಹಾಬಾಹುವೂ ಆದ ಯುಧಿಷ್ಠಿರನಾದರೂ ತನ್ನ ಕರ್ಮಾಪರಾಧದಿಂದ ಸೋದರರಿಗೆ ಇಂತಹ ದುಃಖ ಉಂಟಾಗಿದೆ ಎಂದು ಚಿಂತಿಸುತ್ತಾ ದ್ಯೂತದಿಂದ ಉಂಟಾದ ದುಷ್ಫಲಗಳನ್ನು ಗಮನಿಸುತ್ತಾ ಹೃದಯದಲ್ಲಿ ಶಲ್ಯಗಳು ನಾಟಿದವನಂತೆ ಸುಖವಾಗಿ ನಿದ್ದೆಯನ್ನು ಮಾಡಲಿಲ್ಲ.
ಸಂಸ್ಮರನ್ ಪರುಷಾ ವಾಚಃ ಸೂತಪುತ್ರಸ್ಯ ಪಾಂಡವಃ |
ನಿಃಶ್ವಾಸಪರಮೋ ದೀನೋ ಬಿಭ್ರತ್ ಕೋಪವಿಷಂ ಮಹತ್ ||5||
ಸೂತಪುತ್ರನಾದ ಕರ್ಣನು ಆಡಿದ ತೀಕ್ಷ್ಣವಾದ ಮಾತುಗಳನ್ನು ಸ್ಮರಿಸುತ್ತಾ ಧರ್ಮರಾಜನು ದೊಡ್ಡ ಕೋಪವಿಷವನ್ನು ಮನಸ್ಸಿನಲ್ಲಿಯೇ ಧರಿಸಿ ದೀನನೂ, ನಿಃಶ್ವಾಸಪರನೂ ಆದನು.
ಅರ್ಜುನೋ ಯಮಜೌ ಚೋಭೌ ದ್ರೌಪದೀ ಚ ಯಶಸ್ವಿನೀ |
ಸ ಚ ಭೀಮೋ ಮಹಾತೇಜಾಃ ಸರ್ವೇಷಾಮುತ್ತಮೋ ಬಲೀ ||6||
ಚಿರಸ್ಯ ಜಾತಂ ಧರ್ಮಜ್ಞಂ ಸಾಸೂಯಮಿವ ತೇ ತದಾ |
ಯುಧಿಷ್ಠಿರಮುದೀಕ್ಷಂತಃ ಸೇಹುರ್ದುಃಖಮನುತ್ತಮಮ್ ||7||
ಅರ್ಜುನ, ನಕುಲಸಹದೇವರಿಬ್ಬರೂ, ಯಶಸ್ವಿನಿಯಾದ ದ್ರೌಪದಿ, ಮಹಾತೇಜಸ್ವಿಯೂ, ಬಲಿಷ್ಠನೂ, ಎಲ್ಲರಿಗಿಂತಲೂ ಶ್ರೇಷ್ಠನೂ ಆದ ಆ ಭೀಮಸೇನ ಇವರೂ ಬಹಳ ಕಾಲದ ನಂತರ ಕೋಪಾಸೂಯೆಗಳನ್ನು ಹೊಂದಿದ ಯುಧಿಷ್ಠಿರನನ್ನು ನೋಡಿ ತಮ್ಮ ಮಹತ್ತಾದ ಕ್ಲೇಶಗಳನ್ನು ಸಹಿಸಿಕೊಂಡರು.
ಅವಶಿಷ್ಟಮಲ್ಪಕಾಲಂ ಮನ್ವಾನಾಃ ಪುರುಷರ್ಷಭಾಃ |
ವಪುರನ್ಯದಿವಾಕಾರ್ಷುರುತ್ಸಾಹಾಮರ್ಷಚೇಷ್ಟಿತೈಃ ||8||
ಆ ಪುರುಷರ್ಷಭರು ಸ್ವಲ್ಪವೇ ಕಾಲವು ಉಳಿದಿದೆ ಎಂದು ತಿಳಿದು ಉತ್ಸಾಹ ಮತ್ತು ಕೋಪಗಳಿಂದ ಕೂಡಿದ ಕ್ರಿಯೆಗಳನ್ನು ಮಾಡುತ್ತಾ ಒಳಗಿದ್ದ ದುಃಖವನ್ನು ತೋರಗೊಡದೆ ಬೇರೆ ರೂಪವನ್ನೇ ತೋರಿಸಿದರು.
ಕಸ್ಯಚಿತ್ತ್ವಥ ಕಾಲಸ್ಯ ವ್ಯಾಸಃ ಸತ್ಯವತೀಸುತಃ |
ಆಜಗಾಮ ಮಹಾಯೋಗೀ ಪಾಂಡವಾನವಲೋಕಕಃ ||9||
ಸ್ವಲ್ಪ ಕಾಲವು ಕಳೆದ ಮೇಲೆ ಮಹಾಯೋಗಿಗಳಾದ ಸತ್ಯವತೀ ಸುತರಾದ ವ್ಯಾಸರು ಪಾಂಡವರನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದರು.
ತಮಾಗತಮಭಿಪ್ರೇಕ್ಷ್ಯ ಕುಂತೀಪುತ್ರೋ ಯುಧಿಷ್ಠಿರಃ |
ಪ್ರತ್ಯುದ್ಗಮ್ಯ ಮಹಾತ್ಮಾನಂ ಪ್ರತ್ಯಗೃಹ್ಣಾದ್ ಯಥಾವಿಧಿ ||10||
ಬರುತ್ತಿರುವ ಅವರನ್ನು ನೋಡಿದ ಕುಂತೀಪುತ್ರನಾದ ಯುಧಿಷ್ಠಿರನು ಎದ್ದು ಅವರ ಕಡೆಗೆ ನಡೆದು ಮಹಾತ್ಮರಾದ ಅವರನ್ನು ವಿಧಿಪೂರ್ವಕವಾಗಿ ಸ್ವೀಕರಿಸಿದನು.
ತಮಾಸೀನಮುಪಾಸೀನಃ ಶುಶ್ರೂಷುರ್ನಿಯತೇಂದ್ರಿಯಃ |
ತೋಷಯನ್ ಪ್ರಣಿಪಾತೇನ ವ್ಯಾಸಂ ಪಾಂಡವನಂದನಃ ||11||
ಕುಳಿತುಕೊಂಡ ವ್ಯಾಸರ ಬಳಿ ನಮಸ್ಕಾರವನ್ನು ಮಾಡಿ ಪಾಂಡವನಂದನನು ನಿಯತೇಂದ್ರಿಯಾಗಿ ಅವರ ಸೇವೆಯನ್ನು ಮಾಡುವವನಾಗಿ ಸಂತೋಷಪಡಿಸುತ್ತಾ ಸಮೀಪದಲ್ಲಿ ನಿಂತನು.
ತಾನವೇಕ್ಷ್ಯ ಕೃಶಾನ್ ಪೌತ್ರಾನ್ ವನೇ ವನ್ಯೇನ ಜೀವತಃ |
ಮಹರ್ಷಿರನುಕಂಪಾರ್ಥಮಬ್ರವೀದ್ ಬಾಷ್ಪಗದ್ಗದಮ್ ||12||
ವನ್ಯಪದಾರ್ಥಗಳಿಂದ ಜೀವಿಸಿ ಕೃಶರಾದ ತನ್ನ ಪೌತ್ರರನ್ನು ನೋಡಿದ ಆ ಮಹರ್ಷಿಗಳು ಅನುಕಂಪದಿಂದ ಬಾಷ್ಪಗದ್ಗದವಾದ ಈ ಮಾತುಗಳನ್ನು ಆಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಚತ್ವಾರಿಂಶಾಧಿಕದ್ವಿಶತತಮೋಽಧ್ಯಾಯಃ ||
|| ಇತಿ ವ್ರೀಹಿದ್ರೌಣಿಕಪರ್ವಣಿ ವ್ಯಾಸಾಗಮನಂ ನಾಮ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ನಲವತ್ತೊಂಬತ್ತನೆಯ ಅಧ್ಯಾಯ
ಯುಧಿಷ್ಠಿರನಿಗೆ ವ್ಯಾಸರ ಉಪದೇಶ.
ವ್ಯಾಸಃ
ಯುಧಿಷ್ಠಿರ ಮಹಾಬಾಹೋ ಶೃಣು ಧರ್ಮಭೃತಾಂ ವರ |

ನಾತಪ್ತತಪಸೋ ಲೋಕೇ ಪ್ರಾಪ್ನುವಂತಿ ಮಹತ್ಸುಖಮ್ ॥1॥
ವ್ಯಾಸ ಮಹಾಬಾಹುವೇ, ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ ಕೇಳು. ಲೋಕದಲ್ಲಿ ತಪಸ್ಸನ್ನು ಮಾಡದವರು ದೊಡ್ಡ ಸುಖವನ್ನು ಹೊಂದುವುದಿಲ್ಲ.
ಸುಖದುಃಖೇ ಹಿ ಪುರುಷಃ ಪರ್ಯಾಯೇಣೋಪಸೇವತೇ |
ನಾತ್ಯರ್ಥಮಸುಖಂ ಕಶ್ಚಿತ್ ಪ್ರಾಪ್ನೋತಿ ಪುರುಷರ್ಷಭ ॥2॥
ಪುರುಷರ್ಷಭನೇ, ಮನುಷ್ಯನಿಗೆ ಸುಖದುಃಖಗಳು ಪರ್ಯಾಯದಿಂದ ಬರುತ್ತವೆ. ಯಾವನೂ ಕೇವಲ ದುಃಖವನ್ನೇ ಹೊಂದುವುದಿಲ್ಲ.
ಪ್ರಜ್ಞಾವಾಂಸ್ತ್ವೇವ ಪುರುಷಃ ಸಂಯುಕ್ತಃ ಪರಯಾ ಧಿಯಾ |
ಉದಯಾಸ್ತಮನಜ್ಞೋ ಹಿ ನ ಹೃಷ್ಯತಿ ನ ಶೋಚತಿ ॥3॥
ಪ್ರಜ್ಞಾವಂತನಾದ ಪುರುಷನು ಶ್ರೇಷ್ಠಬುದ್ಧಿಯನ್ನು ಹೊಂದಿದವನಾಗಿ ಸಂಪತ್ತಿನ ಉದಯಾಸ್ತಗಳನ್ನು ತಿಳಿದು ಸಂತೋಷವನ್ನೂ ಪಡುವುದಿಲ್ಲ, ಶೋಕವನ್ನೂ ಪಡುವುದಿಲ್ಲ.
ಸುಖಮಾಪತಿತಂ ಸೇವೇತ್ ದುಃಖಮಾಪತಿತಂ ಸಹೇತ್ |
ಪ್ರಾಪ್ತಕಾಲಮುಪಾಸೀತ ಸಸ್ಯಾನಾಮಿವ ಕರ್ಷಕಃ ॥4॥
ಒದಗಿ ಬಂದ ಸುಖವನ್ನು ಅನುಭವಿಸಬೇಕು, ಒದಗಿದ ದುಃಖವನ್ನು ಸಹಿಸಬೇಕು. ಸಸ್ಯಗಳಿಗೆ ಕೃಷೀವಲದಂತೆ ಆಯಾ ಕಾಲಕ್ಕೆ ಪ್ರಾಪ್ತವಾದುದನ್ನು ಸೇವಿಸಬೇಕು.
ತಪಸೋ ಹಿ ಪರಂ ನಾಸ್ತಿ ತಪಸಾ ವಿಂದತೇ ಮಹತ್ |
ನಾಸಾಧ್ಯಂ ತಪಸಃ ಕಿಂಚಿದಿತಿ ಬುದ್ಧ್ಯಸ್ವ ಭಾರತ ॥5॥
ತಪಸ್ಸಿಗಿಂತ ಶ್ರೇಷ್ಠವಾದುದು ಇನ್ನೊಂದಿಲ್ಲ. ತಪಸ್ಸಿನಿಂದ ದೊಡ್ಡ ಫಲವನ್ನು ಪಡೆಯಬಹುದು. ತಪಸ್ಸಿನಿಂದ ಅಸಾಧ್ಯವಾದುದು ಯಾವುದೂ ಇಲ್ಲ. ಭಾರತನೇ, ಇದನ್ನು ತಿಳಿ.
ಸತ್ವ(ತ್ಯ)ಮಾರ್ಜವಮಕ್ರೋಧಃ ಸಂವಿಭಾಗೋ ದಮಃ ಶಮಃ |
ಅನಸೂಯಾಽವಿಹಿಂಸಾ ಚ ಶೌಚಮಿಂದ್ರಿಯಸಂಯಮಃ |
ಪಾವನಾನಿ ಮಹಾರಾಜ ನರಾಣಾಂ ಪುಣ್ಯಕರ್ಮಣಾಮ್ ॥6॥
ಮಹಾರಾಜನೇ, ಸತ್ಯ, ಧೈರ್ಯ, ಆರ್ಜವ, ಅಕ್ರೋಧ, ಸಂವಿಭಾಗ (ಇನ್ನೊಬ್ಬರಿಗೆ ಹಂಚುವುದು), ದಮ, ಶಮ, ಅನಸೂಯಾ, ಅಹಿಂಸಾ, ಶೌಚ, ಇಂದ್ರಿಯ ನಿಯಂತ್ರಣ ಇವುಗಳು ಪುಣ್ಯಕರ್ಮರಾದ ಮನುಷ್ಯರಿಗೆ ಪವಿತ್ರವಾದವುಗಳು.
ಅಧರ್ಮರುಚಯೋ ಮೂಢಾಸ್ತಿರ್ಯಗ್ಗತಿಪರಾಯಣಾಃ |
ಕೃಚ್ಛ್ರಾಂ ಯೋನಿಮನುಪ್ರಾಪ್ತಾ ನ ಸುಖಂ ವಿಂದತೇ ಜನಾಃ ॥7॥
ಅಧರ್ಮದಲ್ಲಿಯೇ ಆಸಕ್ತರಾದ ಮೂಢರು ತಿರ್ಯಯೋನಿಗಳನ್ನೇ ಹೊಂದುವವರಾಗಿ ಕ್ಲೇಶಕರವಾದ ಯೋನಿಗಳನ್ನು ಹೊಂದಿ ಸುಖವನ್ನು ಪಡೆಯುವುದಿಲ್ಲ.
ಕರ್ಮಭೂಮಿರಿಯಂ ತಾತ ಫಲಭೂಮಿರಸೌ ಪರಾ |
ಇಹ ಯತ್ಕ್ರಿಯತೇ ಕರ್ಮ ತತ್ ಪರತ್ರೋಪಯುಜ್ಯತೇ ॥8॥
ಪ್ರೀತಿಪಾತ್ರನೇ, ಇದು ಕರ್ಮಭೂಮಿ. ಆ ಪರಲೋಕವು (ಸ್ವರ್ಗ-ನರಕಗಳು) ಫಲಭೂಮಿಗಳು. ಇಲ್ಲಿ ಏನು ಮಾಡುತ್ತಾನೆಯೋ ಅದರ ಫಲವನ್ನು ಪರಲೋಕದಲ್ಲಿ ಅನುಭವಿಸುತ್ತಾನೆ.
ತಸ್ಮಾತ್ ಶರೀರಂ ಯುಂಜೀತ ತಪಸಾ ನಿಯಮೇನ ಚ |
ಮೂಲೇಸಿಕ್ತಸ್ಯ ವೃಕ್ಷಸ್ಯ ಫಲಂ ಶಾಖಾಸು ದೃಶ್ಯತೇ |
ಯಥಾಶಕ್ತಿ ಪ್ರಯಚ್ಛೇತ ಸಂಪೂಜ್ಯಾಭಿಪ್ರಣಮ್ಯ ಚ ॥9॥
ಆದ್ದರಿಂದ ಶರೀರವನ್ನು ತಪಸ್ಸು ಮತ್ತು ನಿಯಮಗಳಿಂದ ಯೋಜಿಸಬೇಕು. ವೃಕ್ಷದ ಮೂಲಕ್ಕೆ ನೀರೆರೆದರೆ ಕೊಂಬೆಗಳಲ್ಲಿ ಫಲವು ಕಾಣಿಸುತ್ತದೆ. ಸಜ್ಜನರನ್ನು ಸತ್ಕರಿಸಿ ಪ್ರಣಾಮವನ್ನು ಮಾಡಿ ಯೋಗ್ಯರಿಗೆ ಯಥಾಶಕ್ತಿ ದಾನವನ್ನು ಮಾಡಬೇಕು.
ಕಾಲೇ ಪಾತ್ರೇ ಚ ಹೃಷ್ಟಾತ್ಮಾ ರಾಜನ್ ವಿಗತಮತ್ಸರಃ |
ಸತ್ಯವಾದೀ ಲಭೇತಾಯುರನಾಯಾಸಮನಾಮಯಮ್ ॥10॥
ಯೋಗ್ಯವಾದ ಕಾಲದಲ್ಲಿ ಪಾತ್ರನಲ್ಲಿ ಸಂತೋಷದಿಂದ ಮಾತ್ಸರ್ಯವಿಲ್ಲದೆ ದಾನವನ್ನು ಮಾಡುವ ಸತ್ಯವಾದಿಯು ಆಯುಸ್ಸನ್ನೂ, ಅಕ್ಲೇಶವನ್ನೂ ಮತ್ತು ಕ್ಷೇಮವನ್ನೂ ಪಡೆಯುತ್ತಾನೆ.
ಅಕ್ರೋಧನೋಽನಸೂಯಶ್ಚ ನಿರ್ವೃತಿಂ ಲಭತೇ ಪರಾಮ್ |
ದಾಂತಃ ಶಮಪರಃ ಶಶ್ವತ್ ಪರಿಕ್ಲೇಶಂ ನ ವಿಂದತಿ |
ನ ಚ ತಪ್ಯತಿ ಶಾಂತಾತ್ಮಾ ದೃಷ್ಟ್ವಾ ಪರಗತಾಂ ಶ್ರಿಯಮ್ ॥11॥
ಕ್ರೋಧರಹಿತನೂ, ಅಸೂಯಾ ರಹಿತನೂ ಆದ ನರನು ಶ್ರೇಷ್ಠವಾದ ಸುಖವನ್ನು ಪಡೆಯುತ್ತಾನೆ. ಯಾವಾಗಲೂ ಶಮ-ದಮಗಳನ್ನು ಹೊಂದಿದವನು ಕ್ಲೇಶಗಳನ್ನು ಪಡೆಯುವುದಿಲ್ಲ. ಶಾಂತವಾದ ಮನಸ್ಸುಳ್ಳವನು ಇನ್ನೊಬ್ಬರ ಸಂಪತ್ತನ್ನು ನೋಡಿ ತಾಪ ಪಡುವುದಿಲ್ಲ.
ಸಂವಿಭಕ್ತಾ ಚ ದಾತಾ ಚ ಭೋಗವಾನ್ ಸುಖವಾನ್ ನರಃ |
ಭವತ್ಯಹಿಂಸಕಶ್ಚೈವ ಪರಮಾರೋಗ್ಯಮಶ್ನುತೇ ॥12॥
ತನ್ನ ವಸ್ತುವನ್ನು ಹಂಚಿ ಕೊಡುವವನು ಮತ್ತು ದಾನ ಮಾಡುವವನು ಆದ ನರನು ಭೋಗವನ್ನೂ, ಸುಖವನ್ನೂ ಹೊಂದುತ್ತಾನೆ. ಹಿಂಸೆಯನ್ನು ಮಾಡದಿರುವವನು ಒಳ್ಳೆಯ ಆರೋಗ್ಯವನ್ನು ಪಡೆಯುತ್ತಾನೆ.

ಮಾನ್ಯಮಾನಯಿತಾ ಜನ್ಮ ಕುಲೇ ಮಹತಿ ವಿಂದತಿ |
ವ್ಯಸನೈರ್ನ ತು ಸಂಯೋಗಂ ಪ್ರಾಪ್ನೋತಿ ವಿಜಿತೇಂದ್ರಿಯಃ ॥13॥
ಮಾನ್ಯರಾದವರನ್ನು ಸತ್ಕರಿಸುವವನು ಶ್ರೇಷ್ಠವಾದ ಕುಲದಲ್ಲಿ ಜನ್ಮವನ್ನು ಪಡೆಯುತ್ತಾನೆ. ಜಿತೇಂದ್ರಿಯನಾದವನು ಚಟಗಳಿಗೆ ಬಲಿಯಾಗುವುದಿಲ್ಲ.
ವಿಂದತೇ ಸುಖಮತ್ಯಂತಮಿಹ ಲೋಕೇ ಪರತ್ರ ಚ |
ಶುಭಾನುಶಯಬುದ್ಧಿರ್ಹಿ ಸಂಯುಕ್ತಃ ಕಾಲಧರ್ಮಣಾ ॥14॥
ಪ್ರಾದುರ್ಭವತಿ ತದ್ಯೋಗಾತ್ ಕಲ್ಯಾಣಮತಿರೇವ ಸಃ ॥15॥
ಯಾವನು ಸುಖದಲ್ಲಿಯೇ ಬುದ್ಧಿಯನ್ನು ಹೊಂದಿರುತ್ತಾನೆಯೋ ಅವನು ಆಯಾ ಕಾಲದಲ್ಲಿ ಉಂಟಾಗುವ ಧರ್ಮಗಳಿಂದ ಸಂಯುಕ್ತನಾಗಿ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಅತ್ಯಂತ ಸುಖವನ್ನೇ ಹೊಂದುತ್ತಾನೆ. ಅವನು ಅದರಿಂದ ಕಲ್ಯಾಣಬುದ್ಧಿಯನ್ನೇ ಹೊಂದುವವನಾಗುತ್ತಾನೆ.
ಯುಧಿಷ್ಠಿರಃ
ಭಗವನ್ ದಾನಧರ್ಮಾಣಾಂ ತಪಸೋ ವಾ ಮಹಾಮುನೇ |
ಕಿಂಸ್ವಿದ್ ಬಹುಗುಣಂ ಪ್ರೇತ್ಯ ಕಿಂ ವಾ ದುಷ್ಕರಮುಚ್ಯತೇ ॥16॥
ಯುಧಿಷ್ಠಿರ ಪೂಜ್ಯರೇ, ಮಹಾಮುನಿಗಳೇ, ದಾನ-ಧರ್ಮ ಮತ್ತು ತಪಸ್ಸುಗಳಲ್ಲಿ ಯಾವುದು ಮರಣಾನಂತರದಲ್ಲಿ ಶ್ರೇಷ್ಠಫಲವನ್ನು ಕೊಡುತ್ತದೆ. ಅವುಗಳಲ್ಲಿ ಕಷ್ಟಸಾಧ್ಯವಾದುದು ಯಾವುದು?
ವ್ಯಾಸಃ
ದಾನಾನ್ನ ದುಷ್ಕರಂ ತಾತ ಪೃಥಿವ್ಯಾಮಸ್ತಿ ಕಿಂಚನ |
ಅರ್ಥೇ ಹಿ ಮಹತೀ ತೃಷ್ಣಾ ಸ ಚ ದುಃಖೇನ ಲಭ್ಯತೇ ॥17॥
ವ್ಯಾಸರು ಪ್ರೀತಿಪಾತ್ರನೇ, ಪೃಥ್ವಿಯಲ್ಲಿ ದಾನಕ್ಕಿಂತಲೂ ಕಷ್ಟಸಾಧ್ಯವಾದುದು ಇನ್ನೊಂದಿಲ್ಲ. ಅರ್ಥದಲ್ಲಿ ಎಲ್ಲರಿಗೂ ಬಹಳ ಆಸೆ ಇರುತ್ತದೆ. ಆ ಅರ್ಥವಾದರೂ ದುಃಖದಿಂದ ಸಂಪಾದಿಸಲ್ಪಡುತ್ತದೆ.
ರಾಜನ್ ಪ್ರತ್ಯಕ್ಷಮೇವೈದ್ ದೃಶ್ಯತೇ ಲೋಕಸಾಕ್ಷಿಕಮ್ |
ಪರಿತ್ಯಜ್ಯ ಪ್ರಿಯಾನ್ ಪ್ರಾಣಾನ್ ಧನಾರ್ಥಂ ಹಿ ರಣಾಜಿರಮ್ |
ಪ್ರವಿಶಂತಿ ಮಹಾವೀರಾಃ ಸಮುದ್ರಮಟವೀಂ ತಥಾ ॥18॥
ರಾಜನೇ, ಇದು ಲೋಕಸಾಕ್ಷಿಕವಾದ ಪ್ರತ್ಯಕ್ಷವಾಗಿ ಕಾಣುವ ವಿಷಯ. ಪ್ರಿಯವಾದ ಪ್ರಾಣಗಳನ್ನು ತ್ಯಜಿಸಿ ಮಹಾವೀರರು ರಣರಂಗಕ್ಕೆ ಹೋಗುತ್ತಾರೆ. ಅದರಂತೆ ಕೆಲವರು ಸಮುದ್ರಕ್ಕೂ, ಕಾಡಿಗೂ ಹೋಗುತ್ತಾರೆ.
ಕೃಷಿಗೋರಕ್ಷಮಿತ್ಯೇಕೇ ಪ್ರತಿಪದ್ಯಂತಿ ಮಾನವಾಃ |
ಪುರುಷಾಃ ಪ್ರೇಷ್ಯತಾಮೇಕೇ ನಿರ್ಗಚ್ಛಂತಿ ಧನಾರ್ಥಿನಃ ॥19॥
ಕೆಲವು ಮನುಷ್ಯರು ಕೃಷಿ ಮತ್ತು ಗೋರಕ್ಷೆಗಳನ್ನು ಮಾಡುವವರಾಗುತ್ತಾರೆ. ಇನ್ನು ಕೆಲವರು ಧನವನ್ನು ಅಪೇಕ್ಷಿಸಿ ದಾಸ್ಯಭಾವವನ್ನೂ ಹೊಂದುತ್ತಾರೆ.
ತಸ್ಮಾದ್ ದುಃಖಾರ್ಜಿತಸ್ಯೈವ ಪರಿತ್ಯಾಗಃ ಸುದುಷ್ಕರಃ |
ನ ದುಷ್ಕರತರಂ ದಾನಾತ್ ತಸ್ಮಾದ್ ದಾನಂ ಮತಂ ಮಮ ॥20॥
ಆದ್ದರಿಂದ ಕಷ್ಟದಿಂದ ಸಂಪಾದಿಸಿದ ವಸ್ತುವನ್ನು ತ್ಯಾಗಮಾಡುವುದು ಬಹಳ ದುಷ್ಕರವಾದುದು. ದಾನಕ್ಕಿಂತಲೂ ದುಷ್ಕರವಾದುದು ಇನ್ನೊಂದಿಲ್ಲ. ಆದ್ದರಿಂದ ಮೂರರಲ್ಲಿ ದಾನವೇ ಶ್ರೇಷ್ಠವೆಂದು ನನ್ನ ಅಭಿಪ್ರಾಯ.
ವಿಶೇಷಸ್ತ್ವತ್ರ ವಿಜ್ಞೇಯೋ ನ್ಯಾಯೇನೋಪಾರ್ಜಿತಂ ಧನಮ್ |
ಪಾತ್ರೇ ಕಾಲೇ ಚ ದೇಶೇ ಚ ಸಾಧುಭ್ಯಃ ಪ್ರತಿಪಾದಯೇತ್ |
ಶ್ರದ್ಧಯಾ ವಿಧಿವತ್ಪಾತ್ರೇ ದತ್ತಸ್ಯಾಂತೋ ನ ವಿದ್ಯತೇ ॥21॥
ಈ ವಿಷಯದಲ್ಲಿ ವಿಶೇಷವನ್ನು ತಿಳಿಯಬೇಕು. ನ್ಯಾಯದಿಂದ ಗಳಿಸಿದ ಧನವನ್ನು ಸತ್ಪಾತ್ರರಲ್ಲಿ, ಯೋಗ್ಯಕಾಲದಲ್ಲಿ, ಯೋಗ್ಯದೇಶದಲ್ಲಿ ವಿಧಿಗೆ ಅನುಸಾರವಾಗಿ ಶ್ರದ್ಧೆಯಿಂದ ಕೊಟ್ಟರೆ ಅದರ ಫಲಕ್ಕೆ ಅಂತವಿಲ್ಲ.
ಅನ್ಯಾಯಾತ್ ಸಮುಪಾತ್ತೇನ ದಾನಧರ್ಮೋ ಧನೇನ ಯಃ |
ಕ್ರಿಯತೇ ನ ಸ ಕರ್ತಾರಂ ತ್ರಾಯತೇ ಮಹತೋ ಭಯಾತ್ ॥22॥
ಯಾವನು ಅನ್ಯಾಯದಿಂದ ಧನವನ್ನು ಸಂಪಾದನೆ ಮಾಡಿ ದಾನ ಧರ್ಮಗಳನ್ನು ಮಾಡುತ್ತಾನೆಯೋ ಅವನನ್ನು ಆ ದಾನ-ಧರ್ಮಗಳು ದೊಡ್ಡ ಭಯದಿಂದ ಪಾರು ಮಾಡುವುದಿಲ್ಲ.
ಪಾತ್ರೇ ದಾನಂ ಸ್ವಲ್ಪಮಪಿ ಕಾಲೇ ದತ್ತಂ ಯುಧಿಷ್ಠಿರ |
ಮನಸಾ ಹಿ ವಿಶುದ್ಧೇನ ಪ್ರೇತ್ಯಾನಂತಫಲಂ ಸ್ಮೃತಮ್ ॥23॥
ಎಲೈ ಯುಧಿಷ್ಠಿರನೇ, ಸತ್ಪಾತ್ರರಲ್ಲಿ, ಯೋಗ್ಯಕಾಲದಲ್ಲಿ ವಿಶುದ್ಧವಾದ ಮನಸ್ಸಿನಿಂದ ಕೊಟ್ಟ ಅಲ್ಪವಾದ ದಾನವೂ ಸಹ ಮರಣಾನಂತರದಲ್ಲಿ ಅನಂತಫಲವನ್ನು ಕೊಡುತ್ತದೆ ಎಂದು ಹೇಳಲ್ಪಡುತ್ತದೆ.
ದೇಶೇ ಕಾಲೇ ಚ ಪಾತ್ರೇ ಚ ಮುದ್ಗಲಃ ಶ್ರದ್ಧಯಾನ್ವಿತಃ |
ವ್ರೀಹಿದ್ರೋಣಂ ಪ್ರದಾಯಾಥ ಪರಂ ಪದಮವಾಪ್ತವಾನ್ ॥24॥
ದೇಶ, ಕಾಲ ಮತ್ತು ಪಾತ್ರಗಳಲ್ಲಿ ಶ್ರದ್ಧೆ ಮತ್ತು ಮಾರ್ದವದಿಂದ ಒಂದು ಕೊಳಗ ಭತ್ತವನ್ನು ಕೊಟ್ಟ ಮುದ್ಗಲನು ಸಹ ಶ್ರೇಷ್ಠವಾದ ಸ್ಥಾನವನ್ನು ಹೊಂದಿದನು.

ಶ್ರದ್ಧಾ ಧರ್ಮಾನುಗಾ ದೇವೀ ಪಾವನೀ ವಿಶ್ವಧಾರಿಣೀ |
ಸಾವಿತ್ರೀ ಪ್ರಸವಿತ್ರೀ ಚ ಸಂಸಾರಾರ್ಣವತಾರಿಣೀ ||25||
ಶ್ರದ್ಧೆ ಎನ್ನುವುದು ಧರ್ಮಾನುಸಾರಿಯಾದ ಧರ್ಮದ ಕಡೆಗೆ ಕೊಂಡೊಯ್ಯುವ ದೇವತೆ. ಆ ದೇವತೆಯು ಪಾವನಳಾದವಳು, ವಿಶ್ವವನ್ನು ಧರಿಸುವವಳು, ಎಲ್ಲ ಶುಭಗಳನ್ನು ಉಂಟುಮಾಡುವವಳು, ಶಾಶ್ವತಳಾದವಳು ಮತ್ತು ಸಂಸಾರ ಸಾಗರದಿಂದ ದಾಟಿಸುವವಳು.
ಶ್ರದ್ಧಯಾ ಧಾರ್ಯತೇ ಧರ್ಮೋ ಮಹದ್ಭಿರ್ನಾರ್ಥದರ್ಶಿಭಿಃ |
ಸಧನಾ ಅಪಿ ರಾಜಾನೋ ನಿಃಶ್ರದ್ಧಾ ನರಕಂ ಗತಾಃ |
ನಿಷ್ಕಿಂಚನಾಶ್ಚ ಮುನಯೋ ಶ್ರದ್ಧಾವಂತೋ ದಿವಂ ಗತಾಃ ||26||
ಮಹಾತ್ಮರು ಶ್ರದ್ಧೆಯಿಂದಲೇ ಧರ್ಮವನ್ನು ಉಳಿಸಿಕೊಳ್ಳುತ್ತಾರೆ. ಕೇವಲ ಧನವನ್ನೇ ನೋಡುವವರು ಧರ್ಮವನ್ನು ಧರಿಸುವುದಿಲ್ಲ. ಶ್ರೀಮಂತರಾದ ರಾಜರೂ ಸಹ ಶ್ರದ್ಧೆಯಿಲ್ಲದೆ ನರಕಕ್ಕೆ ಹೋಗಿದ್ದಾರೆ. ನಿಷ್ಕಿಂಚನರಾದ ಋಷಿಗಳೂ ಸಹ ಶ್ರದ್ಧೆಯಿಂದ ಸ್ವರ್ಗಕ್ಕೆ ಹೋಗಿದ್ದಾರೆ.
ಅತ್ರಾಪ್ಯುದಾಹರಂತೀಮಂ ಇತಿಹಾಸಂ ಪುರಾತನಮ್ |
ವ್ರೀಹಿದ್ರೋಣಪರಿತ್ಯಾಗಾದ್ ಯತ್ಫಲಂ ಪ್ರಾಪ ಮುದ್ಗಲಃ ||27||
ಈ ವಿಷಯದಲ್ಲಿ ಮುದ್ಗಲನೆಂಬ ಬ್ರಾಹ್ಮಣನು ಒಂದು ಕೊಳಗ ಭತ್ತವನ್ನು ದಾನವಾಗಿ ಕೊಟ್ಟು ಎಂತಹ ಫಲವನ್ನು ಪಡೆದ ಎಂಬ ಪ್ರಾಚೀನವಾದ ಇತಿಹಾಸವನ್ನು ಹಿರಿಯರು ಹೇಳುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನಪಂಚಶಾಧಿಕದ್ವಿಶತತಮೋಽಧ್ಯಾಯಃ ||
|| ಇತಿ ವ್ರೀಹಿದ್ರೌಣಿಕಪರ್ವಣಿ ದಾನದುಷ್ಕರತ್ವಕಥನಂ ನಾಮ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ತನೆಯ ಅಧ್ಯಾಯ
ದುರ್ವಾಸರಿಂದ ಮುದ್ಗಲನ ಪರೀಕ್ಷೆ. ಮುದ್ಗಲನ ಅನ್ನದಾನದಿಂದ
ದುರ್ವಾಸರ ಸಂತೋಷ. ತನ್ನನ್ನು ವಿಮಾನದಲ್ಲಿ ಕರೆದುಕೊಂಡು
ಹೋಗಲು ಬಂದ ದೇವದೂತನ ಜೊತೆಯಲ್ಲಿ ಮುದ್ಗಲನ ಸಂವಾದ.
ಯುಧಿಷ್ಠಿರಃ
ವ್ರೀಹಿದ್ರೋಣಃ ಪರಿತ್ಯಕ್ತಃ ಕಥಂ ತೇನ ಮಹಾತ್ಮನಾ |
ಕಸ್ಮೈ ದತ್ತಶ್ಚ ಭಗವನ್ ವಿಧಿನಾ ಕೇನ ಚಾತ್ಥ ಮೇ ||1||
ಪ್ರತ್ಯಕ್ಷಧರ್ಮಾ ಭಗವಾನ್ ಯಸ್ಯ ತುಷ್ಟೋ ಹಿ ಕರ್ಮಭಿಃ |
ಸಫಲಂ ತಸ್ಯ ಜನ್ಮಾಹಂ ಮನ್ಯೇ ಸದ್ಧರ್ಮಚಾರಿಣಃ ||2||
ಯುಧಿಷ್ಠಿರ ಆ ಮಹಾತ್ಮನು ಒಂದು ಕೊಳಗ ಭತ್ತವನ್ನು ಹೇಗೆ ದಾನಮಾಡಿದನು? ಪೂಜ್ಯರೇ, ಯಾವ ವಿಧಾನದಿಂದ ಅವನು ದಾನಮಾಡಿದನೆಂದು ನನಗೆ ಹೇಳಿ. ಯಾವನ ಕರ್ಮಗಳಿಂದ ಧರ್ಮಪ್ರತ್ಯಕ್ಷವುಳ್ಳ ಭಗವಂತನೇ ಸಂತುಷ್ಟನಾದನೋ ಅಂತಹ ಸದ್ಧರ್ಮವನ್ನು ಅನುಷ್ಠಾನ ಮಾಡುವ ಅವನ ಜನ್ಮವು ಸಫಲವೆಂದು ನಾನು ಭಾವಿಸುತ್ತೇನೆ.
ಶ್ರೀ ವ್ಯಾಸಃ
ಸಿಲೋಂಛವೃತ್ತಿರ್ಧರ್ಮಾತ್ಮಾ ಮುದ್ಗಲಃ ಸಂಶ್ರಿತವ್ರತಃ |
ಆಸೀದ್ ರಾಜನ್ ಕುರುಕ್ಷೇತ್ರೇ ಸತ್ಯವಾಗನಸೂಯಕಃ ||3||
ವ್ಯಾಸರು ರಾಜನೇ, ಕುರುಕ್ಷೇತ್ರದಲ್ಲಿ ಧರ್ಮಿಷ್ಠನೂ, ಶ್ರೇಷ್ಠವಾದ ವ್ರತಗಳನ್ನು ಮಾಡುವವನೂ, ಸತ್ಯವಚನನೂ,ಅಸೂಯಾ ರಹಿತನೂ, ಸಿಲೋಂಛನವೃತ್ತಿಯಿಂದ ಜೀವಿಸುವವನೂ ಆದ ಮುದ್ಗಲನೆಂಬ ಬ್ರಾಹ್ಮಣನಿದ್ದನು.
ಅತಿಥಿವ್ರತೀ ಕ್ರಿಯಾವಾಂಶ್ಚ ಕಾಪೋತೀಂ ವೃತ್ತಿಮಾಶ್ರಿತಃ |
ಸತ್ರಮಿಷ್ಟೀಕೃತಂ ನಾಮ ಸಮುಪಾಸ್ತೇ ಮಹಾತಪಾಃ ||4||
ಅತಿಥಿ ಪೂಜಾವ್ರತವುಳ್ಳ ಕ್ರಿಯಾಶೀಲನಾದ ಅವನು ಕಪೋತ ಪಕ್ಷಿಯಂತೆ ಕಣಕಣಗಳನ್ನು ಆರಿಸುವ ಸಿಲೋಂಛವೃತ್ತಿಯನ್ನು ಆಶ್ರಯಿಸಿದವನಾಗಿದ್ದನು. ಆ ಮಹಾತಪಸ್ವಿಯು ಇಷ್ಟೀಕೃತ ಎಂಬ ವ್ರತವನ್ನು ಮಾಡುತ್ತಿದ್ದನು.
ಸಪುತ್ರದಾರೋ ಹಿ ಮುನಿಃ ಪಕ್ಷಾಹಾರೋ ಬಭೂವ ಸಃ |
ಕಪೋತವೃತ್ತ್ಯಾ ಪಕ್ಷೇಣ ವ್ರೀಹಿದ್ರೋಣಮುಪಾರ್ಜಯತ್ ||5||
ಭಾರ್ಯಾಪುತ್ರರಿಂದ ಸಹಿತನಾದ ಆ ಋಷಿಯು ಒಂದುಪಕ್ಷದಲ್ಲಿ ಒಂದು ದಿವಸ ಆಹಾರವನ್ನು ಸೇವಿಸುತ್ತಿದ್ದನು. ಮತ್ತು ಒಂದು ಪಕ್ಷದಲ್ಲಿ ಕಪೋತವೃತ್ತಿಯಿಂದ ಒಂದು ಕೊಳಗ ಭತ್ತವನ್ನು ಸಂಗ್ರಹಿಸುತಿತದ್ದನು.
ದರ್ಶಂ ಚ ಪೌರ್ಣಮಾಸ್ಯಂ ಚ ಕುರ್ವನ್ ವಿಗತಮತ್ಸರಃ |
ದೇವತಾತಿಥಿಶೇಷೇಣ ಕುರುತೇ ದೇಹಯಾಪನಮ್ ||6||
ಅವನು ಮತ್ಸರರಹಿತನಾಗಿ ದರ್ಶಪೂರ್ಣಮಾಸ ಯಾಗವನ್ನು ಮಾಡಿ ದೇವತಾ ಅತಿಥಿಶೇಷದಿಂದ ದೇಹಯಾತ್ರೆಯನ್ನು ನಡೆಸುತ್ತಿದ್ದನು.
ತಸ್ಯೇಂದ್ರಃ ಸಹಿತೋ ದೇವೈಃ ಸಾಕ್ಷಾತ್ ತ್ರಿಭುವನೇಶ್ವರಃ |

ಪ್ರತ್ಯಗೃಹ್ಣಾನ್ಮಹಾರಾಜ ಭಾಗಂ ಪರ್ವಣಿ ಪರ್ವಣಿ ॥7॥
ಎಲೈ ಮಹಾರಾಜನೇ, ಅವನು ದರ್ಶಪೂರ್ಣಮಾಸಗಳಲ್ಲಿ ಹೋಮವನ್ನು ಮಾಡುವಾಗ ತ್ರಿಲೋಕೇಶ್ವರನಾದ ಇಂದ್ರನು ದೇವತೆಗಳ ಜೊತೆಯಲ್ಲಿ ಬಂದು ಸಾಕ್ಷಾತ್ತಾಗಿ ಹವಿರ್ಭಾಗವನ್ನು ಸ್ವೀಕರಿಸುತ್ತಿದ್ದನು.
ಸ ಪರ್ವಕಾಲಂ ಕೃತ್ವಾ ತು ಮುನಿವೃತ್ತ್ಯಾ ಸಮನ್ವಿತಃ |
ಅತಿಥಿಭ್ಯೋ ದದಾವನ್ನಂ ಪ್ರಹೃಷ್ಟೇನಾನಂತರಾತ್ಮನಾ ॥8॥
ಅವನು ದರ್ಶಪೂರ್ಣಮಾಸಾದಿ ಪರ್ವಕಾಲಗಳಲ್ಲಿ ಮಾಡಬೇಕಾದ ಇಷ್ಟಿಗಳನ್ನು ಮಾಡಿ ಮುನಿವೃತ್ತಿಯಿಂದ ಕೂಡಿದವನಾಗಿ ಅತಿಥಿಗಳಿಗೆ ಸಂತುಷ್ಟವಾದ ಮನಸ್ಸಿನಿಂದ ಅನ್ನವನ್ನು ಕೊಡುತ್ತಿದ್ದನು.
ವ್ರೀಹಿದ್ರೋಣಸ್ಯ ಸಿದ್ಧಸ್ಯ ದದತೋಽನ್ನಂ ಮಹಾತ್ಮನಃ |
ಶಿಷ್ಟಂ ಮಾತ್ಸರ್ಯಹೀನಸ್ಯ ವರ್ಧತೇಽತಿಥಿದರ್ಶನಾತ್ |
ತಚ್ಛತಾನ್ಯಪಿ ಭುಂಜಂತಿ ಬ್ರಾಹ್ಮಣಾನಾಂ ಮನೀಷಿಣಾಮ್ ॥9॥
ಒಂದು ಕೊಳಗ ಭತ್ತದಿಂದ ಅನ್ನವನ್ನು ದಾನಮಾಡುವ ಮತ್ಸರಹೀನನಾದ ಆ ಮಹಾತ್ಮನಿಗೆ ಅತಿಥಿಗಳನ್ನು ನೋಡಿದ ತಕ್ಷಣ ಉಳಿದ ಅನ್ನವು ಅಭಿವೃದ್ಧಿಯನ್ನು ಹೊಂದುತ್ತಿತ್ತು. ಅದರಿಂದ ಮೇಧಾವಿಗಳಾದ ನೂರುಮಂದಿ ಬ್ರಾಹ್ಮಣರೂ ಸಹ ಭೋಜನ ಮಾಡುತ್ತಿದ್ದರು.
ಮುನೇಸ್ತ್ಯಾಗವಿಶುದ್ಧ್ಯಾ ತು ತದನ್ನಂ ವೃದ್ಧಿಮೃಚ್ಛತಿ ॥10॥
ಮುನಿಯ ವಿಶುದ್ಧ ತ್ಯಾಗದಿಂದ ಮಾಡಿದ ಅನ್ನವು ವೃದ್ಧಿಯನ್ನು ಹೊಂದುತ್ತಿತ್ತು.
ತಂ ತು ಶುಶ್ರಾವ ಧರ್ಮಿಷ್ಠಂ ಮುದ್ಗಲಂ ಶಂಸಿತವ್ರತಮ್ |
ದುರ್ವಾಸಾ ನೃಪ ದಿಗ್ವಾಸಾಸ್ತಮಥಾಭ್ಯಾಜಗಾಮ ಹ ॥11॥
ಎಲೈ ರಾಜನೇ, ದಿಗಂಬರರಾದ ದುರ್ವಾಸರು ಮುದ್ಗಲನು ಧರ್ಮಿಷ್ಠನು ಮತ್ತು ಒಳ್ಳೆಯ ವ್ರತವನ್ನು ಧರಿಸಿದವನು ಎಂಬ ವಿಷಯವನ್ನು ಕೇಳಿ ಅಲ್ಲಿಗೆ ಆಗಮಿಸಿದರು.
ಬಿಭ್ರಚ್ಚಾನಿಯತಂ ವೇಷಮುನ್ಮತ್ತ ಇವ ಪಾಂಡವ |
ವಿಕಚಃ ಪರುಷಾ ವಾಚೋ ವ್ಯಾಹರನ್ ವಿವಿಧಾ ಮುನಿಃ |
ಅಭಿಗಮ್ಯಾಥ ತಂ ವಿಪ್ರಮುವಾಚ ಮುನಿಸತ್ತಮಃ ॥12॥
ಅನ್ನಾರ್ಥಿನಮನುಪ್ರಾಪ್ತಂ ವಿದ್ಧಿ ಮಾಂ ದ್ವಿಜಸತ್ತಮ ॥13॥
ಎಲೈ ಪಾಂಡವನೇ, ಆ ಮುನಿಶ್ರೇಷ್ಠರು ಉನ್ಮತ್ತನಂತೆ ಅನಿಯತವೇಷವನ್ನು ಧರಿಸಿ ತಲೆಯಲ್ಲಿ ಕೂದಲಿಲ್ಲದೇ ಅನೇಕ ವಿಧವಾದ ಉಗ್ರವಾದ ಮಾತುಗಳನ್ನು ಆಡುತ್ತಾ ಆ ಬ್ರಾಹ್ಮಣನ ಬಳಿಗೆ ಬಂದು ಬ್ರಾಹ್ಮಣ ಶ್ರೇಷ್ಠನೇ ನಾನು ಅನ್ನಾರ್ಥಿಯಾಗಿ ಬಂದಿದ್ದೇನೆ ಎಂದು ತಿಳಿ ಎಂದು ಹೇಳಿದರು.
ವೈಶಂಪಾಯನ
ಸ್ವಾಗತಂ ತೇಽಸ್ತ್ವಿತಿ ಮುನಿಂ ಮುದ್ಗಲಃ ಪ್ರತ್ಯಭಾಷತ |
ಪಾದ್ಯಮಾಚಮನೀಯಂ ಚ ಪ್ರತಿಪಾದ್ಯಾರ್ಘ್ಯಮುತ್ತಮಮ್ ॥14॥
ವೈಶಂಪಾಯನ ಮುದ್ಗಲನು ಆ ಮುನಿಗಳಿಗೆ ಸ್ವಾಗತವನ್ನು ಕೋರಿ ಪಾದ್ಯ, ಆಚಮನೀಯ ಮತ್ತು ಅರ್ಘ್ಯಗಳನ್ನು ನೀಡಿದನು.
ಪ್ರಾದಾತ್ ಸ ತಾಪಸಾಯಾನ್ನಂ ಕ್ಷುಧಿತಾಯಾತಿಥಿವ್ರತೀ |
ಉನ್ಮತ್ತಾಯ ಪರಾಂ ಶ್ರದ್ಧಾಮಾಸ್ಥಾಯ ಸ ಧೃತವ್ರತಃ ॥15॥
ಅತಿಥಿವ್ರತವನ್ನು ಹೊಂದಿದ ಧೃತ್ರವ್ರತವುಳ್ಳ ಅವನು ಉನ್ಮತ್ತನಂತಿದ್ದ ಆ ತಾಪಸನಿಗೆ ಶ್ರದ್ಧಾಪೂರ್ವಕವಾಗಿ ಅನ್ನವನ್ನು ನೀಡಿದನು.
ತತಸ್ತದನ್ನಂ ರಸವತ್ ಸ ಏವ ಕ್ಷುಧಯಾಽನ್ವಿತಃ |
ಬುಭುಜೇ ಕೃತ್ಸ್ನಮುನ್ಮತ್ತಃ ಪ್ರಾದಾತ್ ತಸ್ಮೈ ಚ ಮುದ್ಗಲಃ ॥16॥
ಆಗ ಹಸಿವಿನಿಂದ ಕೂಡಿದ್ದ ಆ ಉನ್ಮತ್ತನು ಎಲ್ಲಾ ಅನ್ನವನ್ನೂ ತಾನೇ ಊಟಮಾಡಿದನು. ಮುದ್ಗಲನು ಅವನಿಗೆ ಅನ್ನವನ್ನು ನೀಡಿದನು.
ಭುಕ್ತ್ವಾ ಚಾನ್ನಂ ತತಃ ಸರ್ವಮುಚ್ಛಿಷ್ಟೇನಾತ್ಮನಸ್ತತಃ |
ಅಥಾಂಗಂ ಲಿಲಿಪೇಽನ್ನೇನ ಯಥಾಗತಮಗಾಚ್ಚ ಸಃ ॥17॥
ಎಲ್ಲಾ ಅನ್ನವನ್ನು ಊಟಮಾಡಿ ಭೋಜನ ಪಾತ್ರೆಯಲ್ಲಿ ಉಳಿದಿದ್ದ ಉಚ್ಛಿಷ್ಟವನ್ನು ತನ್ನ ಶರೀರಕ್ಕೆಲ್ಲಾ ಲೇಪಿಸಿಕೊಂಡು ಆ ಉನ್ಮತ್ತನು ಬಂದಂತೆಯೇ ಹೊರಟು ಹೋದನು.
ಏವಂ ದ್ವಿತೀಯೇ ಸಂಪ್ರಾಪ್ತೇ ಯಥಾಕಾಲೇ ಮನೀಷಿಣಃ |
ಆಗಮ್ಯ ಬುಭುಜೇ ಸರ್ವಮನ್ನಮುಂಛೋಪಜೀವಿನಃ ॥18॥
ಹೀಗೆಯೇ ಎರಡನೆಯ ಪರ್ವಕಾಲವು ಪ್ರಾಪ್ತವಾದಾಗ ಆ ಕಾಲದಲ್ಲಿ ಪುನಃ ಬಂದು ಮೇಧಾವಿಯಾದ ಆ ಉಂಛೋಪಜೀವಿಯಾದ ಬ್ರಾಹ್ಮಣನ ಅನ್ನವೆಲ್ಲವನ್ನೂ ಭುಂಜಿಸಿದನು.
ನಿರಾಹಾರಸ್ತು ಸ ಮುನಿರುಂಛಮಾರ್ಜಯತೇ ಪುನಃ |
ನ ಚೈನಂ ವಿಕ್ರಿಯಾಂ ನೇತುಮಶಕನ್ಮುದ್ಗಲಂ ಕ್ಷುಧಾ ॥19॥
ನಿರಾಹಾರನಾದ ಆ ಬ್ರಾಹ್ಮಣನು ಪುನಃ ಉಂಛವೃತ್ತಿಯಿಂದ ಧಾನ್ಯವನ್ನು ಸಂಪಾದಿಸಿದನು. ದುರ್ವಾಸರು ಮುದ್ಗಲನಿಗೆ ಹಸಿವೆಯಿಂದ ವಿಕಾರವನ್ನು ಉಂಟು ಮಾಡಲು ಶಕ್ತರಾಗಲಿಲ್ಲ.
ನ ಕ್ರೋಧೋ ನ ಚ ಮಾತ್ಸರ್ಯಂ ನಾವಮಾನೋ ನ ಸಂಭ್ರಮಃ |

ಸಪುತ್ರದಾರಮುಂಛಂತಮಾವಿವೇಶ ದ್ವಿಜೋತ್ತಮಮ್ ॥20॥
ಉಂಛವೃತ್ತಿಯಿಂದ ಭಾರ್ಯಾಪುತ್ರರ ಜೊತೆಯಲ್ಲಿ ಜೀವಿಸುವ ಆ ದ್ವಿಜೋತ್ತಮನಿಗೆ ಕ್ರೋಧವಾಗಲೀ, ಮಾತ್ಸರ್ಯವಾಗಲೀ, ಅವಮಾನವಾಗಲೀ, ಕಳವಳವಾಗಲೀ ಉಂಟಾಗಲಿಲ್ಲ.
ತಥಾ ತಮುಂಛಧರ್ಮಾಣಂ ದುರ್ವಾಸಾ ಮುನಿಸತ್ತಮಮ್ |
ಉಪತಸ್ಥೇ ಯಥಾಕಾಲಂ ಷಟ್ಕೃತ್ವಃ ಕೃತನಿಶ್ಚಯಃ ॥21॥
ಹಾಗೆ ಆ ಉಂಛಧರ್ಮವುಳ್ಳ ಆ ಮುನಿಯನ್ನು ದುರ್ವಾಸರು ಪರೀಕ್ಷಿಸಬೇಕೆಂದು ನಿಶ್ಚಯಿಸಿ ಪರ್ವಕಾಲದಲ್ಲಿ ಆರುಬಾರಿ ಬಂದರು.
ನ ಚಾಸ್ಯ ಮಾನಸಂ ಕಂಚಿದ್ ವಿಕಾರಂ ದದೃಶೇ ಮುನಿಃ |
ಶುದ್ಧಸತ್ತ್ವಸ್ಯ ಶುದ್ಧಂ ಸ ದದೃಶೇ ನಿರ್ಮಲಂ ಪುನಃ |
ತಮುವಾಚ ತತಃ ಪ್ರೀತಃ ಸ ಮುನಿರ್ಮುದ್ಗಲಂ ತತಃ ॥22॥
ಆದರೆ ಆ ಮುನಿಯಲ್ಲಿ ಯಾವ ಮಾನಸ ವಿಕಾರವನ್ನೂ ಅವರು ಕಾಣಲಿಲ್ಲ. ಶುದ್ಧಸತ್ತ್ವವುಳ್ಳ ಆ ಬ್ರಾಹ್ಮಣನ ನಿರ್ಮಲವಾದ ಮನಸ್ಸನ್ನೇ ಪುನಃ ಪುನಃ ನೋಡಿ ಸಂತುಷ್ಟರಾಗಿ ಅವರು ಮುದ್ಗಲನನ್ನು ಕುರಿತು ಹೀಗೆ ಮಾತನಾಡಿದರು.
ತ್ವತ್ಸಮೋ ನಾಸ್ತಿ ಲೋಕೇಽಸ್ಮಿನ್ ದಾತಾ ಮಾತ್ಸರ್ಯವರ್ಜಿತಃ ॥23॥
ಲೋಕದಲ್ಲಿ ಮಾತ್ಸರ್ಯವರ್ಜಿತನಾಗಿ ನಿನಗೆ ಸಮಾನವಾಗಿ ದಾನವನ್ನು ಮಾಡುವವನು ಇನ್ನೊಬ್ಬನಿಲ್ಲ.
ಕ್ಷುದ್ ಧರ್ಮಸಂಜ್ಞಾಂ ಪ್ರಣುದತ್ಯಾದತ್ತೇ ಧೈರ್ಯಮೇವ ಚ |
ರಸಾನುಸಾರಿಣೀ ಜಿಹ್ವಾ ಕರ್ಷತ್ಯೇವ ರಸಾನ್ಪ್ರತಿ ॥24॥
ಹಸಿವು ಧರ್ಮಪ್ರಜ್ಞೆಯನ್ನು ನಾಶಮಾಡುತ್ತದೆ. ಧೈರ್ಯವನ್ನು ಅಪಹರಿಸುತ್ತದೆ. ರುಚಿಯನ್ನು ಅನುಸರಿಸುವ ಜಿಹ್ವೆಯು ರಸಗಳ ಕಡೆಗೇ ಎಳೆದುಕೊಂಡು ಹೋಗುತ್ತದೆ.
ಆಹಾರಪ್ರಭವಾಃ ಪ್ರಾಣಾ ಮನೋ ದುರ್ನಿಗ್ರಹಂ ಚಲಮ್ |
ಮನಸಶ್ಚೇಂದ್ರಿಯಾಣಾಂ ಚಾಪ್ಯೈಕಾಗ್ರ್ಯಂ ನಿಶ್ಚಿತಂ ತಪಃ ॥25॥
ಶ್ರಮೇಣೋಪಾರ್ಜಿತಂ ತ್ಯಕ್ತುಂ ನ ಚ ದುಃಖೇನ ಚೇತಸಾ |
ತತ್ಸರ್ವಂ ಭವತಾ ಸಾಧೋ ಯಥಾವದುಪಪಾದಿತಮ್ ॥26॥
ಆಹಾರದಿಂದ ಎಲ್ಲ ಇಂದ್ರಿಯಗಳು ಚುರುಕಾಗುತ್ತವೆ. ಮನಸ್ಸು ಚಂಚಲ ಮತ್ತು ನಿಗ್ರಹಿಸಲು ಕಷ್ಟಸಾಧ್ಯವಾದುದು. ಮನಸ್ಸು ಮತ್ತು ಇಂದ್ರಿಯಗಳಿಗೂ ದುಃಖವುಂಟಾಗುವಂತೆ ಶ್ರಮದಿಂದ ಗಳಿಸಿದ ಧನವನ್ನು (ವಸ್ತುವನ್ನು) ವೈರಾಗ್ಯಯುಕ್ತವಾದ ಮನಸ್ಸಿನಿಂದ ಕೊಡಲು (ಮನಃಪೂರ್ವಕವಾಗಿ) ನಿನ್ನ ಏಕಾಗ್ರವಾದ ಮನಸ್ಸು ನಿಶ್ಚಯಿಸಿದೆ. ಸಾಧುವೇ, ನೀನು ದಾನಮಾಡಿದುದನ್ನೆಲ್ಲಾ ನೀನು ನ್ಯಾಯದಿಂದ ಸಂಪಾದಿಸಿ ವಿಧಿಪೂರ್ವಕವಾಗಿ ಕೊಟ್ಟಿದ್ದೀಯೆ.
ಪ್ರೀತಾಃ ಸ್ಮೋಽನುಗೃಹೀತಾಶ್ಚ ಸಮೇತ್ಯ ಭವತಾ ಸಹ |
ಪಾವನಂ ಪರಮಂ ಮನ್ಯೇ ದರ್ಶನಂ ತೇ ಮಹಾಮುನೇ ॥27॥
ನಿನ್ನ ಸಮಾಗಮದಿಂದ ನಾನು ಸಂತುಷ್ಟನೂ ಮತ್ತು ಅನುಗೃಹೀತನೂ ಆಗಿದ್ದೇನೆ. ಎಲೈ ಮಹಾಮುನಿಯೇ, ನಿನ್ನ ದರ್ಶನವನ್ನು ಪರಮಪಾವನವೆಂದು ಭಾವಿಸಿದ್ದೇನೆ.
ಇಂದ್ರಿಯಾಭಿಜಯೋ ಧೈರ್ಯಂ ಸಂವಿಭಾಗೋ ದಮಃ ಶಮಃ |
ದಯಾ ಸತ್ಯಂ ಚ ಧರ್ಮಶ್ಚ ತ್ವಯಿ ಸರ್ವಂ ಪ್ರತಿಷ್ಠಿತಮ್ ॥28॥
ವಿಶುದ್ಧಸತ್ತ್ವಸಂಪನ್ನೋ ನ ತ್ವದನ್ಯೋಽಸ್ತಿ ಕಶ್ಚನ |
ಇಂದ್ರಿಯ ಜಯ, ಧೈರ್ಯ, ಸಂವಿಭಾಗ, ದಮ, ಶಮ, ದಯಾ, ಸತ್ಯ, ಧರ್ಮ ಇವೆಲ್ಲವೂ ನಿನ್ನಲ್ಲಿ ಆಶ್ರಿತವಾಗಿವೆ. ಇಂತಹ ವಿಶುದ್ಧವಾದ ಮನಸ್ಸುಳ್ಳವನು ನಿನ್ನನ್ನು ಬಿಟ್ಟು ಇನ್ನೊಬ್ಬನಿಲ್ಲ.
ಜಿತಾಸ್ತೇ ಕರ್ಮಭಿರ್ಲೋಕಾಃ ಪ್ರಾಪ್ತೋಽಸಿ ಪರಮಾಂ ಗತಿಮ್ ॥29॥
ನಿನ್ನ ವಿಶುದ್ಧ ಕರ್ಮಗಳಿಂದ ಲೋಕಗಳನ್ನು ಜಯಿಸಿದ್ದೀಯೆ. ಶ್ರೇಷ್ಠವಾದ ಗತಿಯನ್ನು ಹೊಂದಿದ್ದೀಯೆ.
ಸದ್ಭಿಃ ಸಮಾಗಮೋ ನಿತ್ಯಂ ಸರ್ವಪಾಪಹರಃ ಸ್ಮೃತಃ |
ಧರ್ಮೋಽಪಿ ಧಾರ್ಯತೇ ಯೇನ ಧೃತಿಯುಕ್ತಾತ್ಮನಾಕ್ತತ್ವಯಾ ॥30॥
ಸಜ್ಜನರ ಸಮಾಗಮವು ಯಾವಾಗಲೂ ಸರ್ವಪಾಪ ಪರಿಹಾರಕವೆಂದು ಹೇಳಲ್ಪಡುತ್ತದೆ. ಚರಾಚರವಾದ ಸಮಸ್ತ ಲೋಕಗಳೂ ಧರ್ಮದಿಂದ ಧರಿಸಲ್ಪಡುತ್ತದೆ. ಎಲೈ ಧೈರ್ಯಶಾಲಿಯೇ, ಆ ಧರ್ಮವನ್ನು ನೀನು ಧರಿಸಿದ್ದೀಯೆ.
ಅಹೋ ದಾನಂ ವಿಘುಷ್ಟಂ ತೇ ಸುಮಹತ್ ಸ್ವರ್ಗವಾಸಿಭಿಃ |
ಸಶರೀರೋ ಭವಾನ್ ಗಂತಾ ಸ್ವರ್ಗಂ ಸುಚರಿತವ್ರತ॥31॥
ನಿನ್ನ ದಾನವು ಸ್ವರ್ಗವಾಸಿಗಳಿಂದ ದೊಡ್ಡದೆಂದು ಘೋಷಿಸಲ್ಪಡುತ್ತದೆ. ಸುಚರಿತವ್ರತನೇ, ನೀನು ಶರೀರಸಹಿತನಾಗಿ ಸ್ವರ್ಗಕ್ಕೆ ಹೋಗುವಿ.
ಇತ್ಯೇವಂ ವದತಸ್ತಸ್ಯ ತದಾ ದುರ್ವಾಸಸೋ ಮುನೇಃ |
ದೇವದೂತೋ ವಿಮಾನೇನ ಮುದ್ಗಲಂ ಪ್ರತ್ಯುಪಸ್ಥಿತಃ ॥32॥
ಹೀಗೆ ದುರ್ವಾಸ ಮುನಿಗಳು ಹೇಳುತ್ತಿರುವಾಗಲೇ ದೇವದೂತನು ವಿಮಾನವನ್ನು ತೆಗೆದುಕೊಂಡು ಮುದ್ಗಲನ ಸಮೀಪಕ್ಕೆ ಬಂದನು.
ಹಂಸಸಾರಸಯುಕ್ತೇನ ಕಿಂಕಿಣೀಜಾಲಮಾಲಿನಾ |
ಕಾಮಗೇನ ವಿಚಿತ್ರೇಣ ದಿವ್ಯಗಂಧವತಾ ತಥಾ |
ಉವಾಚ ಚೈನಂ ವಿಪ್ರರ್ಷಿಂ ವಿಮಾನಂ ಕರ್ಮಭಿರ್ಜಿತಮ್ ॥32॥

ಹಂಸಸಾರಸಪಕ್ಷಿಗಳನ್ನು ಹೂಡಿದ ಸಣ್ಣ ಗಂಟೆಗಳ ಸಮೂಹ ಮತ್ತು ಮಾಲೆಗಳನ್ನು ಹೊಂದಿದ, ದಿವ್ಯಗಂಧಗಳನ್ನು ಹೊಂದಿದ, ಇಚ್ಛಾನುಸಾರವಾಗಿ ಹೋಗುವ ಆ ಬ್ರಾಹ್ಮಣನ ಕರ್ಮದಿಂದ ಜಿತವಾದ ಆ ವಿಚಿತ್ರ ವಿಮಾನವನ್ನು ತಂದು ಆ ವಿಪ್ರ ಋಷಿಯನ್ನು ಕುರಿತು ಹೇಳಿದನು.
ಸಮುಪಾರೋಹ ಸಂಸಿದ್ಧಿಂ ಪ್ರಾಪ್ತೋಽಸಿ ಪರಮಾಂ ಮುನೇ |
ತಮೇವಂ ವಾದಿನಮೃಷಿರ್ದೇವದೂತಮುವಾಚ ಹ ॥33॥
ಮುನಿಯೇ, ಶ್ರೇಷ್ಠವಾದ ಸಂಸಿದ್ಧಿಯನ್ನು ಹೊಂದಿದ್ದೀಯೆ. ವಿಮಾನವನ್ನು ಏರು (ಎಂದು ಹೇಳಿದನು). ಹೀಗೆ ಹೇಳಿದ ಆ ದೇವದೂತನನ್ನು ಕುರಿತು ಋಷಿಯು ಹೀಗೆ ಮಾತನಾಡಿದನು.
ಇಚ್ಛಾಮಿ ಭವತಾ ಪ್ರೋಕ್ತಾನ್ ಗುಣಾನ್ ಸ್ವರ್ಗನಿವಾಸಿನಾಮ್ ॥34॥
ಕೇ ಗುಣಾಸ್ತತ್ರ ವಸತಾಂ ಕಿ ತಪಃ ಕಶ್ಚ ನಿಶ್ಚಯಃ |
ಸ್ವರ್ಗೇ ತತ್ರ ಸುಖಂ ಕಿಂ ಚ ದೋಷೋ ವಾ ದೇವದೂತಕ ॥35॥
ಎಲೈ ದೇವದೂತನೇ, ಸ್ವರ್ಗನಿವಾಸಿಗಳಿಗೆ ಸ್ವರ್ಗದಲ್ಲಿರುವ ಗುಣಗಳು ಎಂತಹವು ಎಂದು ನಿನ್ನಿಂದ ಕೇಳಲು ಬಯಸುತ್ತೇನೆ. ಅಲ್ಲಿ ವಾಸಮಾಡುವವರಿಗೆ ಯಾವ ಗುಣಗಳು, ಯಾವ ತಪಸ್ಸು, ಎಂತಹ ಜ್ಞಾನ, ಸ್ವರ್ಗದಲ್ಲಿರುವ ಸುಖವು ಎಂತಹದು, ಅಲ್ಲಿರುವ ದೋಷವಾದರೂ ಏನು?
ಸತಾಂ ಸಪ್ತಪದಂ ಮೈತ್ರಮಾಹುಃ ಸಂತಃ ಕುಲೋಚಿತಃ |
ಮಿತ್ರತಾಂ ಚ ಪುರಸ್ಕೃತ್ಯ ಪೃಚ್ಛಾಮಿ ತ್ವಾಮಹಂ ವಿಭೋ ॥36॥
ಎಲೈ ವಿಭುವೇ, ಸಜ್ಜನರ ಸ್ನೇಹವು ಸಪ್ತಪದದಿಂದ- ಎದ್ದು ಅವರನ್ನು ಸ್ವೀಕರಿಸಲು ಏಳು ಹೆಜ್ಜೆ ನಡೆಯುವುದರಿಂದ, ಪ್ರಿಯವಾದ ವಿಷಯವನ್ನು ಹೇಳುವ ಏಳು ಪದಗಳುಳ್ಳ ವಾಕ್ಯದಿಂದ - ಉಂಟಾಗುತ್ತದೆ ಎಂದು ಸಜ್ಜನರು ಹೇಳುತ್ತಾರೆ. ಒಳ್ಳೆಯ ಕುಲದಲ್ಲಿ ಜನಿಸಿದ ನಾನು ನಿನ್ನ ಸ್ನೇಹವನ್ನು ಪುರಸ್ಕರಿಸಿ ನಿನಗೆ ಪ್ರಶ್ನೆಯನ್ನು ಕೇಳುತ್ತಿದ್ದೇನೆ.
ಯದತ್ರ ತಥ್ಯಂ ಪಥ್ಯಂ ಚ ತದ್‌ಬ್ರವೀಹ್ಯವಿಚಾರಯನ್ |
ಶ್ರುತ್ವಾ ತಥಾ ಕರಿಷ್ಯಾಮಿ ವ್ಯವಸಾಯಂ ಗಿರಾ ತವ ॥37॥
ಇದರಲ್ಲಿ ಯಾವುದು ನಿಜವೋ ಮತ್ತು ಯಾವುದು ಹಿತವೋ ಅದನ್ನು ಸಂಕೋಚ ಪಡದೆ ಹೇಳು. ನಿನ್ನ ಮಾತನ್ನು ಕೇಳಿ ನಾನು ಬರುವ ಅಥವಾ ಬಿಡುವ ವಿಷಯವನ್ನು ನಿರ್ಧರಿಸುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚಾಶಾದಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವ್ರೀಹಿದ್ರೌಣಿಕಪರ್ವಣಿ ಮೌದ್ಗಲೋಪಾಖ್ಯಾನಂ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ತೊಂದನೆಯ ಅಧ್ಯಾಯ
ದೇವದೂತನ ಮುಖದಿಂದ ಸ್ವರ್ಗದ ಗುಣದೋಷಗಳನ್ನು ಮತ್ತು ವಿಷ್ಣುಲೋಕದ ನಿರ್ದೋಷತ್ವವನ್ನು ಕೇಳಿದ ಮುದ್ಗಲನಿಂದ ದೇವದೂತನ ಜೊತೆಯಲ್ಲಿ ವಿಮಾನದಲ್ಲಿ ಹೋಗಲು ನಿರಾಕರಣೆ. ಯುಧಿಷ್ಠಿರನಿಗೆ ಉಪದೇಶವನ್ನು ಮಾಡಿ ವ್ಯಾಸರಿಂದ ತಮ್ಮ ಆಶ್ರಮಕ್ಕೆ ಗಮನ.
ದೇವದೂತಃ
ಮಹರ್ಷೇಽನಾರ್ಯಬುದ್ಧಿಸ್ತ್ವಂ ಯಃ ಸ್ವರ್ಗಸುಖಮುತ್ತಮಮ್ |
ಸಂಪ್ರಾಪ್ತಂ ಬಹು ಮಂತವ್ಯಂ ವಿಮೃಶಸ್ಯಬುಧೋ ಯಥಾ ॥1॥
ದೇವದೂತ ಮಹರ್ಷಿಯೇ, ನೀನು ಆರ್ಯಬುದ್ಧಿಯುಳ್ಳವನಲ್ಲ. ಒದಗಿ ಬಂದ ಬಹುಮಾನ್ಯವಾದ ಉತ್ತಮವಾದ ಸ್ವರ್ಗಸುಖವನ್ನು ನೀನು ಅಜ್ಞಾನಿಯಂತೆ ವಿಮರ್ಶೆ ಮಾಡುತ್ತಿದ್ದೀಯೆ.
ನಂದನಾದೀನಿ ರಮ್ಯಾಣಿ ತತ್ರೋದ್ಯಾನಾನಿ ಮುದ್ಗಲ |
ಸರ್ವಕಾಮಫಲೈರ್ವೃಕ್ಷೈಃ ಶೋಭಿತಾನಿ ಸಮಂತತಃ ॥1.1॥
ಮುದ್ಗಲನೇ, ಅಲ್ಲಿ ಅಪೇಕ್ಷಿತ ಫಲಗಳೆಲ್ಲವನ್ನೂ ಕೊಡುವ ವೃಕ್ಷಗಳಿಂದ ಶೋಭಿಸುವ ಸುಂದರವಾದ ನಂದನಾದಿ ಉದ್ಯಾನವನಗಳು ಎಲ್ಲ ಕಡೆಯಲ್ಲಿಯೂ ಇವೆ.
ಉಪರಿಷ್ಟಾದಸೌಲೋಕೋ ಯೋಽಯಂ ಸ್ವರಿತಿ ಸಂಜ್ಞಿತಃ |
ಊರ್ಧ್ವಗಃ ಸತ್ಪಥಃ ಶಶ್ವದ್ ದೇವಯಾನಚರೋ ಮುನೇ ॥2॥
ಸ್ವರ್ಗಲೋಕವೆಂದು ಕರೆಯಲ್ಪಡುವ ಆ ಲೋಕವು ಮೇಲ್ಭಾಗದಲ್ಲಿ ಇದೆ. ಎಲೈ ಋಷಿಯೇ, ಅದು ಮೇಲ್ಭಾಗದಲ್ಲಿ ಹೋಗುವ ದೇವಯಾನ ರೂಪವಾದ ಸನ್ಮಾರ್ಗವಾಗಿದೆ.
ನಾತಪ್ತ್ತತಪಸಃ ಪುಂಸೋ ನಾಮಹಾಯಜ್ಞಯಾಜಿನಃ |
ನಾನೃತಾ ನಾಸ್ತಿಕಾಶ್ಚೈವ ತತ್ರ ಗಚ್ಛಂತಿ ಮುದ್ಗಲ ॥3॥
ಎಲೈ ಮುದ್ಗಲನೇ, ತಪಸ್ಸನ್ನು ಮಾಡದ ಪುರುಷರು, ಮಹಾಯಜ್ಞವನ್ನು ಮಾಡದವರು, ಅನೃತವನ್ನು ನುಡಿಯುವವರು ಮತ್ತು ನಾಸ್ತಿಕರು ಅಲ್ಲಿಗೆ ಹೋಗುವುದಿಲ್ಲ.
ಧರ್ಮಾತ್ಮಾನೋ ಜಿತಾತ್ಮಾನಃ ಶಾಂತಾ ದಾಂತಾ ವಿಮತ್ಸರಾಃ |

ದಾನಧರ್ಮಪರಾನಿತ್ಯಂ ಶೂರಾಶ್ಚಾಹವಲಕ್ಷಣಾಃ ॥4॥
ತತ್ರ ಗಚ್ಛಂತಿ ಕರ್ಮಾಗ್ರ್ಯಂ ಕೃತ್ವಾ ಶಮದಮಾತ್ಮಕಮ್ |
ಲೋಕಾನ್ ಪುಣ್ಯಕೃತಾಂ ಬ್ರಹ್ಮನ್ ಸದ್ಭಿರಾಚರಿತಾನ್ ನೃಭಿಃ ॥5॥
ಧರ್ಮಾತ್ಮರೂ, ಜಿತಮನಸ್ಕರೂ, ಶಾಂತರೂ, ದಾಂತರೂ, ಮಾತ್ಸರ್ಯ ರಹಿತರೂ, ನಿತ್ಯವೂ ದಾನಧರ್ಮದಲ್ಲಿ ರತರಾದವರೂ, ಯುದ್ಧದಲ್ಲಿ ಶೂರರಾದವರೂ, ಶಮದಮಾತ್ಮಕವಾದ ಸಜ್ಜನರಿಂದ ಆಚರಿಸಲ್ಪಟ್ಟ ಶ್ರೇಷ್ಠಧರ್ಮವನ್ನು ಆಚರಿಸಿ ಪುಣ್ಯವನ್ನು ಮಾಡಿದವರಿಗೆ ದೊರಕುವ ಆ ಲೋಕಗಳಿಗೆ ಹೋಗುತ್ತಾರೆ.
ದೇವಾಃ ಸಾಧ್ಯಾಸ್ತಥಾ ವಿಶ್ವೇ ತಥೈವ ಚ ಮಹರ್ಷಯಃ |
ಧರ್ಮೋ ಧಾಮಾಶ್ಚ ಮೌದ್ಗಲ್ಯ ಗಂಧರ್ವಾಪ್ಸರಸ್ತಥಾ ॥6॥
ಮೌದ್ಗಲ್ಯನೇ, ಅಲ್ಲಿ ದೇವತೆಗಳೂ, ಸಾಧ್ಯರೂ, ಎಲ್ಲಾ ಮಹರ್ಷಿಗಳೂ, ಧರ್ಮವೂ, ಗಂಧರ್ವ ಅಪ್ಸರೆಗಳೂ ಮತ್ತು ಅನೇಕ ಭವನಗಳೂ ಇರುತ್ತವೆ.
ಏಷಾಂ ದೇವನಿಕಾಯಾನಾಂ ಪೃಥಕ್ಪೃಥಗನೇಕಶಃ |
ಭಾಸ್ವಂತಃ ಕಾಮಸಂಪನ್ನಾ ಲೋಕಾಸ್ತೇಜೋಮಯಾಃ ಶುಭಾಃ ॥7॥
ಈ ದೇವಸಮೂಹಗಳಿಗೆ ಪ್ರಕಾಶಮಾನವಾದ ಎಲ್ಲ ಕಾಮ್ಯವಸ್ತುಗಳಿಂದಲೂ ಸಂಪನ್ನವಾದ, ತೇಜೋಮಯವಾದ, ಶುಭವಾದ ಅನೇಕ ಲೋಕಗಳು ಬೇರೆ ಬೇರೆಯಾಗಿಯೇ ಇರುತ್ತವೆ.
ತ್ರಯಸ್ತ್ರಿಂಶತ್ಸಹಸ್ರಾಣಿ ಯೋಜನಾನಿ ಹಿರಣ್ಮಯಃ |
ಮೇರುಃ ಪರ್ವತರಾಡ್ ಯತ್ರ ದೇವೋದ್ಯಾನಾನಿ ಮುದ್ಗಲ ॥8॥
ಎಲೈ ಮುದ್ಗಲನೇ, ಮೂವತ್ತುಮೂರು ಸಾವಿರ ಯೋಜನ ಎತ್ತರವಾದ ಸುವರ್ಣಮಯವಾದ ಪರ್ವತರಾಜನಾದ ಮೇರುವೂ ಮತ್ತು ದೇವೋದ್ಯಾನಗಳೂ ಅಲ್ಲಿವೆ.
ನಂದನಾದೀನಿ ಪುಣ್ಯಾನಿ ವಿಹಾರಾಃ ಪುಣ್ಯಕರ್ಮಣಾಮ್ |
ನ ಕ್ಷುತ್ಪಿಪಾಸೇ ನ ಗ್ಲಾನಿರ್ನ ಶೀತೋಷ್ಣಭಯಂ ತಥಾ ॥9॥
ಪುಣ್ಯಕರ್ಮವನ್ನು ಮಾಡಿದವರಿಗೆ ಪವಿತ್ರವಾದ ನಂದನಾದಿ ವಿಹಾರ ಸ್ಥಾನಗಳಿವೆ. ಅಲ್ಲಿ ಹಸಿವು ನೀರಡಿಕೆಗಳಿಲ್ಲ, ಶ್ರಮವಿಲ್ಲ ಮತ್ತು ಶೀತೋಷ್ಣಗಳ ಭಯವಿಲ್ಲ.
ಬೀಭತ್ಸಮಶುಭಂ ವಾಪಿ ತತ್ರ ಕಿಂಚಿನ್ನ ವಿದ್ಯತೇ |
ಮನೋಜ್ಞಾಃ ಸರ್ವತೋ ಗಂಧಾಃ ಸುಖಸ್ಪರ್ಶಾಶ್ಚ ಸರ್ವಶಃ ॥10॥
ಅಲ್ಲಿ ಜುಗುಪ್ಸಿತವಾದುದಾಗಲೀ, ಅಶುಭವಾದುದಾಗಲೀ ಯಾವುದೂ ಇಲ್ಲ. ಎಲ್ಲ ಕಡೆಯಲ್ಲಿಯೂ ಸುಗಂಧವೂ ಮತ್ತು ಸುಖಸ್ಪರ್ಶವುಳ್ಳ ವಸ್ತುಗಳೂ ಇರುತ್ತವೆ.
ಶಬ್ದಾಃ ಶ್ರುತಿಮನೋಗ್ರಾಹ್ಯಾಃ ಸರ್ವತಸ್ತತ್ರ ವೈ ಮುನೇ |
ನ ಶೋಕೋ ನ ಜರಾ ತತ್ರ ನಾಯಾಸಃ ಪರಿದೇವನಮ್ ॥11॥
ಎಲೈ ಋಷಿಯೇ, ಅಲ್ಲಿ ಶ್ರೋತ್ರಕ್ಕೂ ಮತ್ತು ಮನಸ್ಸಿಗೂ ಹಿತವಾದ ಶಬ್ದಗಳು ಎಲ್ಲ ಕಡೆಗಳಲ್ಲಿಯೂ ಕೇಳಿ ಬರುತ್ತವೆ. ಅಲ್ಲಿ ಶೋಕವಿಲ್ಲ, ಮುಪ್ಪಿಲ್ಲ, ಆಯಾಸವಿಲ್ಲ, ಗೋಳಾಟಗಳಿಲ್ಲ.
ಈದೃಶಃ ಸ ಮುನೇ ಲೋಕಃ ಸ್ವಕರ್ಮಫಲಹೇತುಕಃ |
ಸುಕೃತೈಸ್ತತ್ರ ಪುರುಷಾಃ ಸಂಭವಂತ್ಯಾತ್ಮಕರ್ಮಭಿಃ ॥12॥
ಎಲೈ ಋಷಿಯೇ, ಹೀಗೆ ಆ ಲೋಕವು ತನ್ನ ಕರ್ಮದ ಫಲವಾಗಿ ಪಡೆಯಬಹುದಾದುದು. ಪುರುಷರು ತಾವು ಮಾಡಿದ ಸತ್ಕರ್ಮಗಳಿಂದ ಅಲ್ಲಿಗೆ ಹೋಗುತ್ತಾರೆ.
ತೈಜಸಾನಿ ಶರೀರಾಣಿ ಭವಂತ್ಯತ್ರೋಪಪದ್ಯತಾಮ್ |
ಕರ್ಮಜಾನ್ಯೇವ ಮೌದ್ಗಲ್ಯ ನ ಮಾತೃಪಿತೃಜಾನ್ಯುತ ॥13॥
ಎಲೈ ಮೌದ್ಗಲ್ಯನೇ, ಸ್ವರ್ಗದಲ್ಲಿ ಇರುವವರಿಗೆ ತೈಜಸವಾದ ಶರೀರಗಳು ಉಂಟಾಗುತ್ತವೆ. ಅವು ಕರ್ಮಜನ್ಯವಾದವುಗಳೇ. ಆದರೆ ಮಾತಾಪಿತೃಗಳಿಂದ ಜನ್ಯವಾದುದಲ್ಲ.
ನ ಸ್ವೇದೋ ನಚ ದೌರ್ಗಂಧ್ಯಂ ಪುರೀಷಂ ಮೂತ್ರಮೇವ ಚ |
ತೇಷಾಂ ನ ಚ ರಜೋ ವಸ್ತ್ರಂ ಬಾಧತೇ ತತ್ರ ವೈ ಮುನೇ ॥14॥
ಅಲ್ಲಿ ಬೆವರು ಇರುವುದಿಲ್ಲ, ದುರ್ಗಂಧವಿರುವುದಿಲ್ಲ, ಮಲಮೂತ್ರಗಳಿರುವುದಿಲ್ಲ. ಎಲೈ ಋಷಿಯೇ, ಅವರು ಧರಿಸಿದ ವಸ್ತ್ರಗಳು ಕೊಳೆಯಾಗುವುದಿಲ್ಲ.
ನ ಮ್ಲಾಯಂತಿ ಸ್ರಜಸ್ತೇಷಾಂ ದಿವ್ಯಗಂಧಾ ಮನೋರಮಾಃ |
ಸಂಯುಜ್ಯಂತೇ ವಿಮಾನೈಶ್ಚ ಬ್ರಹ್ಮನ್ನೇವಂವಿಧೈಶ್ಚ ತೇ ॥15॥
ಅವರು ಧರಿಸಿದ ಮಾಲೆಗಳು ಬಾಡುವುದಿಲ್ಲ. ಅವು ದಿವ್ಯಗಂಧದಿಂದ ಕೂಡಿ ಮನೋಹರವಾಗಿರುತ್ತವೆ. ಎಲೈ ಬ್ರಾಹ್ಮಣನೇ, ಇಂತಹ ಅನೇಕ ವಿಮಾನಗಳು ಅಲ್ಲಿ ಅವರಿಗೆ ದೊರೆಯುತ್ತವೆ.
ಈರ್ಷ್ಯಾಸೂಯಶೋಕಕ್ಲಮಾಪೇತಾ ಮೋಹಮಾತ್ಸರ್ಯವರ್ಜಿತಾಃ |
ಸುಖಂ ಸ್ವರ್ಗಜಿತಸ್ತತ್ರ ವರ್ತಯಂತೇ ಮಹಾಮುನೇ ॥16॥
ಮಹಾಮುನಿಯೇ, ಅಲ್ಲಿ ಅಸೂಯೆ, ಶೋಕ, ಆಯಾಸಗಳಿಂದ ರಹಿತರಾಗಿ, ಮೋಹಮಾತ್ಸರ್ಯಗಳಿಂದ ವರ್ಜಿತರಾಗಿ ತಮ್ಮ ಕರ್ಮಗಳಿಂದ ಸ್ವರ್ಗವನ್ನು ಸಂಪಾದಿಸಿದವರು ಸುಖವನ್ನೇ ಅನುಭವಿಸುತ್ತಾರೆ.

ತೇಷಾಂ ತಥಾವಿಧಾನಾಂ ತು ಲೋಕಾನಾಂ ಮುನಿಪುಂಗವ |
ಉಪರ್ಯುಪರಿ ಲೋಕಸ್ಯ ಲೋಕಾ ದಿವ್ಯಾ ಗುಣಾನ್ವಿತಾಃ ॥17॥
ಎಲೈ ಮುನಿಪುಂಗವನೇ, ಸ್ವರ್ಗವಾಸಿಗಳ ಅಂತಹ ಲೋಕಗಳ ಮೇಲೆ ದಿವ್ಯವಾದ ಗುಣಗಳಿಂದ ಕೂಡಿದ ಲೋಕಗಳು ಮೇಲೆ ಮೇಲೆ ಇವೆ.
ಪರಸ್ತಾದ್ ಬ್ರಹ್ಮಣಸ್ತತ್ರ ಲೋಕಾಸ್ತೇಜೋಮಯಾಃ ಶುಭಾಃ |
ಯತ್ರ ಯಾಂತ್ಯೃಷಯೋ ಬ್ರಹ್ಮನ್ ಪೂತಾಃ ಸ್ವೈಃ ಕರ್ಮಭಿಃ ಶುಭೈಃ ॥
ಬ್ರಹ್ಮಲೋಕದಿಂದ ಆಚೆಗೆ ತೇಜೋಮಯವಾದ ಶುಭವಾದ ಲೋಕಗಳಿವೆ. ಬ್ರಾಹ್ಮಣನೇ, ಅಲ್ಲಿಗೆ ಶುಭವಾದ ಕರ್ಮಗಳನ್ನು ಮಾಡಿದ ಋಷಿಗಳು ಹೋಗುತ್ತಾರೆ.
ಋಜವೋ ನಾಮ ತತ್ರಾನ್ಯೇ ದೇವಾನಾಮಪಿ ದೇವತಾಃ |
ತೇಷಾಂ ಲೋಕಾತ್ ಪರತರೇ ಯಾನ್ಯಜಂತೀಹ ದೇವತಾಃ ॥19॥
ಋಜುಗಳು ಎಂಬ ದೇವತೆಗಳಿಗೂ ದೇವತೆಗಳಾದ ಬೇರೆಯವರಿದ್ದಾರೆ. ಅವರ ಲೋಕವು ಸ್ವರ್ಗಾದಿ ಲೋಕಗಳಿಗಿಂತ ಮೇಲೆ ಇದೆ. ಅಂತಹ ಋಜುಗಳನ್ನು ದೇವತೆಗಳೂ ಪೂಜಿಸುತ್ತಾರೆ.
ಸ್ವಯಂಪ್ರಭಾಸ್ತೇ ಭಾಸ್ವಂತೋ ಲೋಕಾಃ ಕಾಮದುಘಾಃ ಪರೇ |
ನ ತೇಷಾಂ ಸ್ತ್ರೀಕೃತಸ್ತಾಪೋ ನ ಲೋಕೈಶ್ವರ್ಯಮತ್ಸರಃ ॥20॥
ಇನ್ನು ಸ್ವಯಂ ಪ್ರಕಾಶವಾದ ಬೇಡಿದುದೆಲ್ಲಾ ದೊರೆಯುವ ಬೇರೆ ಪ್ರಕಾಶಮಾನವಾದ ಲೋಕಗಳಿವೆ. ಅಲ್ಲಿ ಇರುವವರಿಗೆ ಸ್ತ್ರೀಯರಿಂದ ಉಂಟಾಗುವ ತಾಪವಾಗಲೀ ಅಥವಾ ಲೋಕೈಶ್ವರ್ಯವನ್ನು ನೋಡಿ ಮತ್ಸರವಾಗಲಿ ಇರುವುದಿಲ್ಲ.
ನ ವರ್ತಯಂತ್ಯಾಹುತಿಭಿಸ್ತೇ ನಾಪ್ಯಮೃತಭೋಜನಾಃ |
ತಥಾ ದಿವ್ಯಶರೀರಾಸ್ತೇ ನ ಚ ವಿಗ್ರಹಮೂರ್ತಯಃ ॥21॥
ಅವರು ಆಹುತಿಗಳನ್ನು ಕೊಡುವುದಿಲ್ಲ. ಅಮೃತಭೋಜನವನ್ನೂ ಮಾಡುವುದಿಲ್ಲ. ಅವರು ಅಂತಹ ದಿವ್ಯಶರೀರವನ್ನು ಉಳ್ಳವರು. ಅವರು ಪ್ರಾಕೃತ ಶರೀರವನ್ನು ಧರಿಸಿದವರಲ್ಲ.
ನಾಸುಖಾಃ ಸುಖಕಾಮಾಸ್ತೇ ದೇವದೇವಾಃ ಸನಾತನಾಃ |
ನ ಕಲ್ಪಪರಿವರ್ತೇಷು ಪರಿವರ್ತಂತಿ ತೇ ತಥಾ ॥22॥
ಅವರಿಗೆ ದುಃಖವಿಲ್ಲ. ಸುಖಕಾಮನೆಯೂ ಇಲ್ಲ. ಅವರು ಸನಾತನರಾದ ದೇವದೇವತೆಗಳು. ಕಲ್ಪವು ತಿರುಗಿದಂತೆ ಅವರು ತಿರುಗುವುದಿಲ್ಲ.
ಜರಾ ಮೃತ್ಯುಃ ಕುತಸ್ತೇಷಾಂ ಹರ್ಷಃ ಪ್ರೀತಿಃ ಸುಖಂ ನ ಚ |
ನ ದುಃಖಂ ನ ಸುಖಂ ಚಾಪಿ ರಾಗದ್ವೇಷೌ ಕುತೋ ಮುನೇ ॥23॥
ಎಲೈ ಮುನಿಯೇ, ಅವರಿಗೆ ಜರಾಮೃತ್ಯುಗಳು ಎಲ್ಲಿಂದ ಬರಬೇಕು? ಪ್ರಾಕೃತವಾದ ಸುಖದುಃಖಗಳು ಎಲ್ಲಿಂದ ಬರಬೇಕು? ಅವರಿಗೆ ಅಂತಹ ಸುಖದುಃಖಗಳಿಲ್ಲ, ಇನ್ನು ರಾಗದ್ವೇಷಗಳು ಎಲ್ಲಿಂದ ಬರಬೇಕು?
ದೇವಾನಾಮಪಿ ಮೌದ್ಗಲ್ಯ ಕಾಂಕ್ಷಿತಾ ಸಾ ಗತಿಃ ಪರಾ |
ದುಷ್ಪ್ರಾಪಾ ಪರಮಾ ಸಿದ್ಧಿರಗಮ್ಯಾ ಕಾಮಗೋಚರೈಃ ॥24॥
ಎಲೈ ಮೌದ್ಗಲ್ಯನೇ, ದೇವತೆಗಳಿಗೂ ಅಂತಹ ಗತಿಯು ಪ್ರಾರ್ಥ್ಯಮಾನವಾದುದು. ಆ ಪರಮಸಿದ್ಧಿಯು ಬಹಳ ಕಷ್ಟದಿಂದ ಪಡೆಯಲು ಸಾಧ್ಯವಾದುದು. ಕಾಮಾಸಕ್ತರು ಅದನ್ನು ಪಡೆಯಲು ಸಾಧ್ಯವಿಲ್ಲ.
ತ್ರಯಸಿತ್ರಂಶದಿಮೇ ದೇವಾ ಯೇಷಾಂ ಲೋಕಾ ಮನೀಷಿಭಿಃ |
ಗಮ್ಯಂತೇ ನಿಯಮೈಃ ಶ್ರೇಷ್ಠೈರ್ದಾನೈರ್ವಾ ವಿಧಿಪೂರ್ವಕೈಃ ॥25॥
ಈ ಮೂವತ್ತಮೂರು ದೇವತೆಗಳಿಗೆ ಬೇರೆ ಬೇರೆ ಲೋಕಗಳೇ ಇವೆ ಎಂದು ಜ್ಞಾನಿಗಳು ಹೇಳುತ್ತಾರೆ. ವಿಧಿಪೂರ್ವಕವಾದ ಶ್ರೇಷ್ಠವಾದ ದಾನಗಳಿಂದಲೂ, ನಿಯಮಗಳಿಂದಲೂ ಆ ಲೋಕಗಳು ಪ್ರಾಪ್ತವಾಗುತ್ತವೆ.
ಸೇಯಂ ದಾನಕೃತಾ ವ್ಯುಷ್ಟಿರನುಪ್ರಾಪ್ತಾ ಸುಖಾವಹಾ |
ತಾಂ ಭುಂಕ್ಷ್ವ ಸುಕೃತೈರ್ಲಬ್ಧಾಂ ತಪಸಾ ದ್ಯೋತಿತಪ್ರಭಃ ॥26॥
ತಪಸ್ಸಿನಿಂದ ಕಾಂತಿಯನ್ನು ಹೊಂದಿದ ನೀನು, ನೀನು ಮಾಡಿದ ದಾನದ ಫಲವಾಗಿ ಉಂಟಾದ ಸುಕೃತಲಬ್ಧವಾದ ಈ ಸುಖಸಮೃದ್ಧಿಯನ್ನು ಅನುಭವಿಸು.
ಏತತ್ ಸ್ವರ್ಗಸುಖಂ ವಿಪ್ರ ಲೋಕಾ ನಾನಾವಿಧಾಸ್ತಥಾ |
ಗುಣಾಃ ಸ್ವರ್ಗಸ್ಯ ಪ್ರೋಕ್ತಾಸ್ತೇ ದೋಷಾನಪಿ ನಿಬೋಧ ಮೇ ॥27॥
ಎಲೈ ಬ್ರಾಹ್ಮಣನೇ, ಸ್ವರ್ಗಸುಖವೆಂದರೆ ಇದು. ಅದರಂತೆಯೇ ನಾನಾ ವಿಧವಾದ ಲೋಕಗಳೂ ಇವೆ. ಸ್ವರ್ಗದ ಗುಣಗಳನ್ನು ನಿನಗೆ ಹೇಳಿದ್ದಾಯಿತು. ದೋಷಗಳನ್ನೂ ನನ್ನಿಂದ ಕೇಳು.
ಕೃತಸ್ಯ ಕರ್ಮಣಸ್ತತ್ರ ಭುಜ್ಯತೇ ಯತ್ಫಲಂ ದಿವಿ |
ನ ಚಾನ್ಯತ್ ಕ್ರಿಯತೇ ಕರ್ಮ ಮೂಲಚ್ಛೇದೇನ ಭುಜ್ಯತೇ ॥28॥
ಸ್ವರ್ಗಲೋಕದಲ್ಲಿ ಭೂಲೋಕದಲ್ಲಿ ಮಾಡಿದ ಕರ್ಮದ ಫಲವು ಮಾತ್ರ ಅನುಭವಿಸಲ್ಪಡುತ್ತದೆ. ಅಲ್ಲಿ ಯಾವ ಸತ್ಕರ್ಮವೂ (ಪುಣ್ಯಸಂಪಾದನೆಯನ್ನು ಮಾಡುವ ಕರ್ಮವು) ಮಾಡಲ್ಪಡುವುದಿಲ್ಲ. ಅನುಭವಿಸುವ ಸುಖವು ಮೂಲಪುಣ್ಯದ ನಾಶದಿಂದಲೇ ಅನುಭವಿಸಲ್ಪಡುತ್ತದೆ.
ಸೋಽತ್ರ ದೋಷೋ ಮಮ ಮತಸ್ತಸ್ಯಾಂತೇ ಪತನಂ ಚ ಯತ್ |

ಸುಖವ್ಯಾಪ್ತಸ್ಯ ಸಹಸಾ ಪತನಂ ಯಚ್ಚ ಮುದ್ಗಲ ॥29॥
ಇದು ದೋಷವೆಂದು ನನ್ನ ಅಭಿಪ್ರಾಯ. ಪುಣ್ಯವು ನಾಶವನ್ನು ಹೊಂದಿದ ಮೇಲೆ ಸ್ವರ್ಗದಿಂದ ಪತನವೂ ಇದೆ. ಎಲ್ಲೈ ಮುದ್ಗಲನೇ, ಸುಖದಲ್ಲಿ ಇದ್ದವನಿಗೆ ಇದ್ದಕ್ಕಿದ್ದಂತೆಯೇ ಪತನವೂ ಸಹ ದೋಷವಾಗಿದೆ.
ಅಸಂತೋಷಃ ಪರೀತಾಪೋ ದೃಷ್ಟ್ವಾ ದೀಪ್ತಾಂ ಪರಶ್ರಿಯಮ್ |
ಯದ್ ಭವತ್ಯಮರಸ್ಥಾನೇ ಸ್ಥಿತಾನಾಂ ತತ್ ಸುದುಷ್ಕರಮ್ ॥30॥
ಸ್ವರ್ಗದಲ್ಲಿ ಇದ್ದವರಿಗೆ ತಮಗಿಂತ ಉನ್ನತ ಸ್ಥಾನದಲ್ಲಿ ಇರುವವರ ಪ್ರಕಾಶಮಾನವಾದ ವೈಭವವನ್ನು ನೋಡಿ ಅತೃಪ್ತಿಯೂ, ಪರಿತಾಪವೂ ಉಂಟಾಗುತ್ತದೆ. ಇದು ಬಹಳ ದುಃಖವನ್ನು ಕೊಡುವ ಇನೊಂದು ದೋಷ.
ಸಂಜ್ಞಾಮೋಹಶ್ಚ ಪತತಾಂ ರಜಸಾ ಚ ಪ್ರಧರ್ಷಣಮ್ |
ಪ್ರಮ್ಲಾನೇಷು ಚ ಮಾಲ್ಯೇಷು ತತಃ ಪಿಪತಿಷೋರ್ಭಯಮ್ ॥31॥
ಕೆಳಗೆ ಬೀಳುವವರಿಗೆ ಜ್ಞಾನದ ಲೋಪವುಂಟಾಗುತ್ತದೆ. ಧೂಳು ಮತ್ತು ಕೊಳೆಗಳಿಂದ ಸಂಬಂಧವುಂಟಾಗುತ್ತದೆ. ಮಾಲೆಗಳು ಬಾಡುತ್ತವೆ. ಇದು ಬೀಳುವವರಿಗೆ ಇರುವ ಭಯ.
ಆಬ್ರಾಹ್ಮಭವನಾದೇತೇ ದೋಷಾ ಮೌದ್ಗಲ್ಯ ದಾರುಣಾಃ |
ನಾಕಲೋಕೇ ಸುಕೃತಿನಾಂ ಗುಣಾಸ್ತ್ವಯುತಶೋ ನೃಣಾಮ್ ॥32॥
ಮೌದ್ಗಲ್ಯನೇ, ಬ್ರಹ್ಮಲೋಕದವರೆಗೂ ಇರುವ ಲೋಕಗಳಲ್ಲಿ ದಾರುಣವಾದ ಈ ದೋಷಗಳಿವೆ. ಸ್ವರ್ಗಲೋಕದಲ್ಲಿರುವ ಪುಣ್ಯವಂತರಿಗೆ ಮನುಷ್ಯರಿಗಿಂತ ಹತ್ತುಸಾವಿರಪಟ್ಟು ಸುಖಗಳಿರುತ್ತವೆ.
ಅಯಂ ತ್ವನ್ಯೋ ಗುಣಃ ಶ್ರೇಷ್ಠಶ್ಚ್ಯುತಾನಾಂ ಸ್ವರ್ಗತೋ ಮುನೇ |
ಶುಭಾನುಶಯಯೋಗೇನ ಮನುಷ್ಯೇಷೂಪಜಾಯತೇ ॥33॥
ಎಲ್ಲೈ ಋಷಿಯೇ, ಸ್ವರ್ಗದಿಂದ ಬೀಳುವವರೆಗೆ ಇನ್ನೊಂದು ಗುಣವಿದೆ. ಪುಣ್ಯಶೇಷವನ್ನು ಉಳಿಸಿಕೊಂಡು ಅವರು ಮನುಷ್ಯಯೋನಿಯಲ್ಲಿ ಜನಿಸುವುದೇ ಆ ಗುಣ.
ತತ್ರಾಪಿ ಸ ಮಹಾಭಾಗಃ ಸುಖಭಾಗಭಿಜಾಯತೇ |
ನ ಚೇತ್ ಸಂಬುಧ್ಯತೇ ತತ್ರ ಗಚ್ಛತ್ಯಧಮತಾಂ ತತಃ ॥34॥
ಅಲ್ಲಿಯೂ ಸಹ ಆ ಪುಣ್ಯವಂತನು ಸುಖಭಾಗಿಯಾಗಿಯೇ ಜನಿಸುತ್ತಾನೆ. ಅಲ್ಲಿ ಅವನು ವಿವೇಕವನ್ನು ಪಡೆಯದಿದ್ದರೆ ಅಧಃಪತನವನ್ನು ಹೊಂದುತ್ತಾನೆ.
ಇಹ ಯತ್ಕ್ರಿಯತೇ ಕರ್ಮ ತತ್ ಪರತ್ರೋಪಭುಜ್ಯತೇ |
ಕರ್ಮಭೂಮಿರಿಯಂ ಬ್ರಹ್ಮನ್ ಫಲಭೂಮಿರಸೌ ಮತಾ ॥35॥
ಇಲ್ಲಿ ಏನು ಕರ್ಮವನ್ನು ಮಾಡುತ್ತಾರೆಯೋ ಅದರ ಫಲವು ಪರಲೋಕದಲ್ಲಿ ಅನುಭವಿಸಲ್ಪಡುತ್ತದೆ. ಬ್ರಾಹ್ಮಣನೇ, ಇದು ಕರ್ಮಭೂಮಿ, ಅದು ಫಲಭೂಮಿ ಎಂದು ಕರೆಯಲ್ಪಡುತ್ತದೆ.
ಮೌದ್ಗಲ್ಯಃ
ಮಹಾಂತಃ ಖಲ್ವಮೀ ದೋಷಾಃ ತ್ವಯಾ ಸ್ವರ್ಗಸ್ಯ ಕೀರ್ತಿತಾಃ |
ನಿರ್ದೋಷ ಏವ ಯಸ್ತ್ವನ್ಯೋ ಲೋಕಂ ತಂ ವೈ ವದಸ್ವ ಮೇ ॥36॥
ಮುದ್ಗಲ ನೀನು ಸ್ವರ್ಗಲೋಕಕ್ಕೆ ಈ ದೊಡ್ಡ ದೋಷಗಳನ್ನೇ ಹೇಳಿದ್ದೀಯೆ. ನಿರ್ದೋಷವಾದ ಯಾವ ಇನ್ನೊಂದು ಲೋಕವಿದೆಯೋ ಅದನ್ನು ನನಗೆ ಹೇಳು.
ದೇವದೂತಃ
ಬ್ರಹ್ಮಣಃ ಸದನಾದೂರ್ಧ್ವಂ ತದ್ ವಿಷ್ಣೋಃ ಪರಮಂ ಪದಮ್ |
ಶುದ್ಧಂ ಸನಾತನಂ ಜ್ಯೋತಿಃ ಪರಂ ಬ್ರಹ್ಮೇತಿ ಯ ವಿದುಃ ॥37॥
ದೇವದೂತ ಚತುರ್ಮುಖ ಬ್ರಹ್ಮದೇವರ ಲೋಕದ ಮೇಲೆ ಇರುವುದು ವಿಷ್ಣುವಿನ ಪರಮಸ್ಥಾನ. ಆ ವಿಷ್ಣುವನ್ನು ಶುದ್ಧನೆಂದೂ, ಸನಾತನನೆಂದೂ, ಜ್ಯೋತಿ ಎಂದೂ, ಪರಬ್ರಹ್ಮನೆಂದೂ ಜ್ಞಾನಿಗಳು ತಿಳಿಯುತ್ತಾರೆ.
ನ ತತ್ರ ವಿಪ್ರ ಗಚ್ಛಂತಿ ಪುರುಷಾ ವಿಷಯಾತ್ಮಕಾಃ |
ಡಂಬಲೋಭಮದಕ್ರೋಧಮೋಹದ್ರೋಹೈರಭಿದ್ರುತಾಃ ॥38॥
ಎಲ್ಲೈ ಬ್ರಾಹ್ಮಣನೇ, ಅಲ್ಲಿಗೆ ವಿಷಯಾಸಕ್ತರೂ, ಡಂಬ, ಲೋಭ, ಮಹಾಕ್ರೋಧ, ಮೋಹ, ದ್ರೋಹ ಇವುಗಳನ್ನು ಹೊಂದಿದ ಪುರುಷರೂ ಹೋಗುವುದಿಲ್ಲ.
ನಿರ್ಮಮಾ ನಿರಹಂಕಾರಾ ನಿರ್ದ್ವಂದ್ವಾಃ ಸಂಯತೇಂದ್ರಿಯಾಃ |
ಧ್ಯಾನಯೋಗ್ಯಪರಾಶ್ಚೈವ ತತ್ರ ಗಚ್ಛಂತಿ ಮಾನವಾಃ ॥39॥
ಅಹಂಕಾರ ಮಮಕಾರಗಳನ್ನು ಬಿಟ್ಟವರೂ, ದ್ವಂದ್ವಾತೀತರಾದವರೂ, ಇಂದ್ರಿಯ ಸಂಯಮವುಳ್ಳವರೂ, ಧ್ಯಾನಯೋಗಪರರೂ ಆದ ಪುರುಷರು ಅಲ್ಲಿಗೆ ಹೋಗುತ್ತಾರೆ.
ಏತತ್ ತೇ ಸರ್ವಮಾಖ್ಯಾತಂ ಯನ್ಮಾಂ ಪೃಚ್ಛಸಿ ಮುದ್ಗಲ |
ತವಾನುಕಂಪಯಾ ಸಾಧೋ ಸಾಧು ಗಚ್ಛಾಮ ಮಾಚಿರಮ್ ॥40॥
ಎಲ್ಲೈ ಮುದ್ಗಲನೇ, ನೀನು ಏನು ಪ್ರಶ್ನೆಯನ್ನು ಮಾಡಿದೆಯೋ ನಿನ್ನ ಮೇಲಿನ ಅನುಕಂಪೆಯಿಂದ ಅದಕ್ಕೆ ಉತ್ತರವಾಗಿ ಎಲ್ಲವನ್ನೂ ನಿನಗೆ ಹೇಳಿದೆನು. ಸಜ್ಜನನೇ, ತಡಮಾಡಬೇಡ. ಬೇಗ ಹೊರಡೋಣ.
ಶ್ರೀ ವ್ಯಾಸಃ

ಏತತ್ ಶ್ರುತ್ವಾ ತು ಮೌದ್ಗಲ್ಯೋ ವಾಕ್ಯಂ ವಿಮಮೃಶೇ ಧಿಯಾ |
ವಿಮೃಶ್ಯ ಚ ಮುನಿಶ್ರೇಷ್ಠೋ ದೇವದೂತಮುವಾಚ ಹ ||41||
ವ್ಯಾಸ ದೇವದೂತನ ಈ ವಾಕ್ಯವನ್ನು ಕೇಳಿದ ಮುದ್ಗಲನು ತನ್ನ ಬುದ್ಧಿಯಿಂದ ವಿಮರ್ಶೆ ಮಾಡಿದನು. ವಿಮರ್ಶೆಮಾಡಿದ ಆ ಮುನಿಶ್ರೇಷ್ಠನು ದೇವದೂತನನ್ನು ಕುರಿತು ಹೀಗೆ ಹೇಳಿದನು.
ದೇವದೂತ ನಮಸ್ತೇಽಸ್ತು ಗಚ್ಛ ತಾತ ಯಥಾಸುಖಮ್ |
ಮಹಾದೋಷೇಣ ಮೇ ಕಾರ್ಯಂ ನ ಸ್ವರ್ಗೇಣ ಸುಖೇನ ವಾ ||42||
ದೇವದೂತನೇ, ನಿನಗೆ ನಮಸ್ಕಾರ. ಪ್ರೀತಿಪಾತ್ರನೇ, ನೀನು ಸುಖವಾಗಿ ಹೋಗಿಬಾ. ಮಹಾದೋಷವಿರುವ ಸ್ವರ್ಗದಿಂದಾಗಲೀ ಅಥವಾ ಸುಖದಿಂದಾಗಲೀ ನನಗೆ ಏನೂ ಆಗಬೇಕಾದುದಿಲ್ಲ.
ಪತನಾಂತೇ ಮಹದ್ ದುಃಖಂ ಪರಿತಾಪಃ ಸುದಾರುಣಃ |
ಸ್ವರ್ಗಭಾಜಶ್ಚರಂತೀಹ ತಸ್ಮಾತ್ಸ್ವರ್ಗಂ ನ ಕಾಮಯೇ ||43||
ಪತನವನ್ನು ಹೊಂದಿದ ಮೇಲೆ ಮಹಾದುಃಖ, ಅಲ್ಲಿಯೇ ಇರುವಾಗ ಇನ್ನೊಬ್ಬರನ್ನು ನೋಡಿ ದಾರುಣವಾದ ಪರಿತಾಪ, ಸ್ವರ್ಗವಾಸವು ಮುಗಿದ ಮೇಲೆ ಪುನಃ ಭೂಮಿಯಲ್ಲಿ ಸಂಚಾರ. ಆದ್ದರಿಂದ ನಾನು ಸ್ವರ್ಗವನ್ನು ಬಯಸುವುದಿಲ್ಲ.
ಯತ್ರ ಗತ್ವಾ ನ ಶೋಚಂತಿ ನ ವ್ಯಥಂತೇ ಚಲಂತಿ ವಾ |
ತದಹಂ ಸ್ಥಾನಮತ್ಯಂತಂ ಮಾರ್ಗಯಿಷ್ಯಾಮಿ ಕೇವಲಮ್ ||44||
ಎಲ್ಲಿ ಹೋದರೆ ಶೋಕವುಂಟಾಗುವುದಿಲ್ಲವೋ, ವ್ಯಥೆ ಉಂಟಾಗುವುದಿಲ್ಲವೋ, ಪತನವುಂಟಾಗುವುದಿಲ್ಲವೋ ಅಂತಹ ಅತ್ಯಂತ ಶುದ್ಧವಾದ ಸ್ಥಾನವನ್ನು ನಾನು ಹುಡುಕುವೆನು.
ವ್ಯಾಸಃ
ಇತ್ಯುಕ್ತ್ವಾ ಸ ಮುನಿರ್ವಾಕ್ಯಂ ದೇವದೂತಂ ವಿಸೃಜ್ಯ ತಮ್ |
ಶಿಲೋಂಛವೃತ್ತಿರ್ಧರ್ಮಾತ್ಮಾ ಶಮಮಾತಿಷ್ಠದುತ್ತಮಮ್ ||45||
ವ್ಯಾಸ ಧರ್ಮಾತ್ಮನಾದ ಆ ಮುನಿಯು ದೇವದೂತನನ್ನು ಕುರಿತು ಹೀಗೆ ಹೇಳಿ ಅವನನ್ನು ಕಳುಹಿಸಿ ಶಿಲೋಂಛವೃತ್ತಿಯನ್ನು ಮಾಡಿ ಶ್ರೇಷ್ಠವಾದ ಶಮದ ಮಾರ್ಗವನ್ನು ಅನುಸರಿಸಿದನು.
ತುಲ್ಯನಿಂದಾಸ್ತುತಿರ್ಭೂತ್ವಾ ಸಮಲೋಷ್ಟಾಶ್ಮಕಾಂಚನಃ |
ಜ್ಞಾನಯೋಗೇನ ಶುದ್ಧೇನ ಧ್ಯಾನನಿತ್ಯೋ ಬಭೂವ ಹ ||46||
ನಿಂದಾಸ್ತುತಿಗಳಲ್ಲಿ ಸಮಾನವಾಗಿದ್ದು, ಮಣ್ಣಿನ ಹೆಂಟೆ, ಕಲ್ಲು ಮತ್ತು ಸುವರ್ಣಗಳನ್ನು ಸಮದೃಷ್ಟಿಯಿಂದ ನೋಡಿ ಶುದ್ಧವಾದ ಜ್ಞಾನಯೋಗದಿಂದ ನಿತ್ಯವೂ ಧ್ಯಾನಪರನಾದನು.
ವಿನಿಗೃಹ್ಯೇಂದ್ರಿಯಗ್ರಾಮಂ ಸಮಯೋಜಯದಾತ್ಮನಿ |
ಯುಕ್ತಚಿಂತಂ ತಥಾತ್ಮಾನಂ ಯುಯೋಜ ಪರಮೇಶ್ವರೇ ||47||
ಇಂದ್ರಿಯಗ್ರಾಮವನ್ನು ನಿಯಂತ್ರಿಸಿ ಮನಸ್ಸನ್ನು ಪರಮಾತ್ಮನಲ್ಲಿ ನಿಯೋಜಿಸಿದನು. ಯುಕ್ತಚಿಂತನೆಯಿಂದ ಕೂಡಿದವನಾಗಿ ಪರಮೇಶ್ವರನಲ್ಲಿಯೇ ತನ್ನನ್ನು ಯೋಜಿಸಿದನು.
ಧ್ಯಾನಯೋಗಾತ್ ಪರಂ ಲಬ್ಧ್ವಾ ಪ್ರಾಪ್ಯ ಬುದ್ಧಿಮನುತ್ತಮಾಮ್ |
ಜಗಾಮ ಶಾಶ್ವತೀಂ ಸಿದ್ಧಿಂ ಪರಾಂ ನಿರ್ವಾಣಲಕ್ಷಣಾಮ್ ||48||
ಧ್ಯಾನಯೋಗದಿಂದ ಪರಮಾತ್ಮನನ್ನು ಹೊಂದಿ ಶ್ರೇಷ್ಠವಾದ ಅಪರೋಕ್ಷ ಜ್ಞಾನವನ್ನು ಪಡೆದು ಮೋಕ್ಷರೂಪವಾದ ಶಾಶ್ವತವಾದ ಸಿದ್ಧಿಯನ್ನು ಪಡೆದನು.
ತಸ್ಮಾತ್ತ್ವಮಪಿ ಕೌಂತೇಯ ನ ಶೋಕಂ ಕರ್ತುಮರ್ಹಸಿ |
ರಾಜ್ಯಾತ್ ಸ್ಫೀತಾತ್ ಪರಿಭ್ರಷ್ಟಸ್ತಪಸಾ ತದವಾಪ್ಸ್ಯಸಿ ||49||
ಆದ್ದರಿಂದ ಕೌಂತೇಯನೇ, ನೀನೂ ಸಹ ಶೋಕವನ್ನು ಮಾಡಬೇಡ. ಸಮೃದ್ಧವಾದ ರಾಜ್ಯದಿಂದ ಚ್ಯುತನಾದ ನೀನು ತಪಸ್ಸಿನಿಂದ ಪುನಃ ಅದನ್ನು ಪಡೆಯುವಿ.
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ |
ಪರ್ಯಾಯೇಣೋಪಸರ್ಪಂತೇ ನರಂ ನೇಮಿಮರಾ ಇವ ||50||
ಸುಖದ ಅನಂತರ ದುಃಖ. ದುಃಖದ ಅನಂತರ ಸುಖ. ಹೀಗೆ ಮನುಷ್ಯನಿಗೆ ಚಕ್ರದಲ್ಲಿ ಅರಗಳು ತಿರುಗುವಂತೆ ಪರ್ಯಾಯವಾಗಿ ಉಂಟಾಗುತ್ತದೆ.
ಪಿತೃಪೈತಾಮಹಂ ರಾಜ್ಯಂ ಪ್ರಾಪ್ಸ್ಯಸ್ಯಮಿತವಿಕ್ರಮ |
ವರ್ಷಾತ್ ತ್ರಯೋದಶಾದೂರ್ಧ್ವಂ ವ್ಯೇತು ತೇ ಮಾನಸೋ ಜ್ವರಃ ||
ಅಮಿತವಿಕ್ರಮನೇ, ಪಿತೃಪಿತಾಮಹರ ರಾಜ್ಯವನ್ನು ನೀನು ಹದಿಮೂರು ವರ್ಷಗಳ ನಂತರ ಪಡೆಯುವಿ. ನಿನ್ನ ಮನಸ್ಸಿನ ತಾಪವು ದೂರವಾಗಲಿ.
ವೈಶಂಪಾಯನಃ
ಸ ಏವಮುಕ್ತ್ವಾ ಭಗವಾನ್ ವ್ಯಾಸಃ ಪಾಂಡವನಂದನಮ್ |
ಜಗಾಮ ತಪಸೇ ಧೀಮಾನ್ ಪುನರೇವಾಶ್ರಮಂ ಪ್ರತಿ ||52||
ವೈಶಂಪಾಯನ ಪಾಂಡವನಂದನನಾದ ಧರ್ಮರಾಜನನ್ನು ಕುರಿತು ಹೀಗೆ ಹೇಳಿ ಮೇಧಾವಿಯಾದ ಭಗವಾನ್ ವ್ಯಾಸರು ಪುನಃ ತಪಸ್ಸಿಗಾಗಿ ತಮ್ಮ ಆಶ್ರಮಕ್ಕೆ ಹೋದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕಪಂಚಾಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ವ್ರೀಹಿದ್ರೌಣಿಕಪರ್ವಣಿ ಮುದ್ಗಲದೇವದೂತ ಸಂವಾದೋ ನಾಮ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತೊಂದನೆಯ
ಅಧ್ಯಾಯ ಮುಗಿಯಿತು.
॥ ವ್ರೀಹಿದ್ರೌಣಿಕಪರ್ವ ಸಮಾಪ್ತಮ್ ॥
* * * *
ದ್ರೌಪದೀಹರಣಪರ್ವ
ಮಹಾಭಾರತತಾತ್ಪರ್ಯನಿರ್ಣಯ-22 ಅಧ್ಯಾಯ
ತತಃ ಕತಿಪಯಾಹಾನಿ ನಿರುಷ್ಯಾತ್ರ ಜನಾರ್ದನಃ |
ಯಯೌ ಸಭಾರ್ಯಃ ಸ್ವಪುರೀಂ ಪಾಂಡವಾನನುಮಾನ್ಯ ಚ ॥362॥
ಬಳಿಕ ಶ್ರೀಕೃಷ್ಣ ಕೆಲವು ದಿನ ಪಾಂಡವರ ಜೊತೆಗೆ ಇದ್ದು ಅವರಿಂದ ಬೀಳ್ಕೊಂಡು ಸತ್ಯಭಾಮೆಯೊಡನೆ ತನ್ನ ಪಟ್ಟಣಕ್ಕೆ ತೆರಳಿದ.
ತತಃ ಕದಾಚಿನ್ಮೃಗಯಾಂ ಗತೇಷು
ಪಾರ್ಥೇಷು ರಾಜಾ ಸೈಂಧವ ಆಸಸಾದ |
ಸಕೋಟಿಕಾಶ್ಯಃ ಸಬಲಶ್ಚ ತೇಷಾಂ
ವರಾಶ್ರಮಂ ಸೋಽತ್ರ ದದರ್ಶ ಕೃಷ್ಣಾಮ್ ॥363॥
ಬಳಿಕ ಒಮ್ಮೆ ಪಾಂಡವರು ಬೇಟೆಗೆ ಹೋಗಿದ್ದಾಗ ಅವರ ಆಶ್ರಮಕ್ಕೆ ರಾಜಾ ಸೈಂಧವ ಕೋಟಿಕಾಶ್ಯನೊಂದಿಗೆ ಸೈನ್ಯ ಸಮೇತನಾಗಿ ಬಂದ. ಅಲ್ಲಿ ದ್ರೌಪದಿಯನ್ನು ಕಂಡ.
ವ್ರಜನ್ ವಿವಾಹಾರ್ಥಮಸೌ ನಿಶಾಮ್ಯ
ಕೃಷ್ಣಾಂ ಕೋಟಿಂ ಪ್ರೇಷಯಿತ್ವೈವ ಕಾಶ್ಯಮ್ |
ಆಯಾಹಿ ಮಾಮಿತ್ಯವದತ್ ಸುಪಾಪ
ಸ್ತಯಾ ನಿರಸ್ತೋ ಜಗೃಹೇ ಕರೇ ಚ ॥364॥
ವಿವಾಹಕ್ಕೆ ಹೋಗುತ್ತಿದ್ದ ಆ ಮಹಾಪಾಪಿ ಜಯದ್ರಥ ದ್ರೌಪದಿಯನ್ನು ಕಂಡು ಕೋಟಿಕಾಶ್ಯನನ್ನು ಕಳಿಸಿಕೊಟ್ಟು ನನ್ನ ಬಳಿಗೆ ಬಾ ಎಂದ. ಅವಳು ನಿರಾಕರಿಸಿದಾಗ ಕೈಯಲ್ಲಿ ಹಿಡಿದ.
ತಯಾ ಧೂತೋ ನಿಪಪಾತಾಽಶು ಭೂಮೌ
ಪುನಸ್ಸಸಂಜ್ಞೋಽಭ್ಯಗಮದ್ ವಿಲಜ್ಜಃ |
ತತೋಽಸಹಾಯತ್ವತ ಏವ ಕೃಷ್ಣಾ
ಧೌಮ್ಯಾಯೋತಕತ್ವ ಸಾಗ್ನಿರನ್ವೇಹಿ ಮೇತಿ ॥365॥
ಸಮಾರುಹತ್ ಸೈಂಧವಸ್ಯೈವ ಯಾನಂ
ಸುಖಂ ನ ಯಾಸೀತಿ ತಮೀರಯಿತ್ವಾ |
ತದಾ ನಿಮಿತ್ತಾನಿ ನಿಶಾಮ್ಯ ಪಾರ್ಥಾಃ
ಸಮಾಯಯುಸ್ತ್ವರಯೈವಾಽಶ್ರಮಾಯ ॥366॥
ದ್ರೌಪದಿ ಕೈ ಕೊಡವಿಕೊಂಡಾಗ ಜಯದ್ರಥ ತಕ್ಷಣ ನೆಲದಲ್ಲಿ ಬಿದ್ದು, ಮೂರ್ಛೆ ಹೋದ. ಪುನಃ ಎದ್ದು ಬಂದ, ನಾಚಿಕೆಯಿಲ್ಲದ ಆತ ದ್ರೌಪದಿ ತಾನೀಗ ಅಸಹಾಯಕಳಾಗಿದ್ದೇನೆ ಎಂದು, ಧೌಮ್ಯರಿಗೆ ಅಗ್ನಿ ಸಹಿತರಾಗಿ ನನ್ನನ್ನು ಹಿಂಬಾಲಿಸಿ ಬನ್ನಿರೆಂದು ಹೇಳಿ, ಸೈಂಧವನಿಗೆ, `ನೀನು ಸುಖವಾಗಿ ಹೋಗುವುದಿಲ್ಲ!' ಎನ್ನುತ್ತ ಅವನ ರಥವನ್ನೇರಿದಳು. ಆಗ ಉತ್ಪಾತಗಳನ್ನು ಕಂಡು ಪಾಂಡವರು ವೇಗದಿಂದ ಆಶ್ರಮಕ್ಕೆ ಬಂದರು.
ಶ್ರುತ್ವಾ ದಾಸೀವಚನಾತ್ ಸರ್ವಮೇವ ಚಕ್ರುಃ
ಕ್ಷಿಪ್ರಂ ಸೈಂಧವಸ್ಯಾನುಯಾನಮ್ |
ಆಕ್ರೋಶಮಾನಂ ಭೀಮಸೇನೇತಿ ಧೌಮ್ಯಂ
ದೃಷ್ಟ್ವಾ ತಸ್ಯಾಗ್ನೇ ಸೈಂಧವಂ ಚಾತಿಪಾಪಮ್ ॥367॥
ಚಕ್ರುರ್ನಾದಾನ್ ಸಿಂಹವತ್ ಪಾಂಡುಪುತ್ರಾ
ದೃಷ್ಟ್ವಾ ಕೃಷ್ಣಾ ಚಾವತರದ್ ರಥಾತ್ ತದಾ |
ಧೌಮ್ಯೇನ ಸಾರ್ದ್ಧಂ ಸಾ ಯಯೌ ಚಾಽಶ್ರಮಾಯ
ಸೈನ್ಯಂ ಪಾರ್ಥಸ್ತತ್ರ ನಿಜಘ್ನುರೋಜಸಾ ॥368॥
ಪಾಂಡವರು ದಾಸಿಯ ಮಾತಿನಿಂದ ಎಲ್ಲವನ್ನೂ ಕೇಳಿ ತಿಳಿದು ಬೇಗನೆ ಸೈಂಧವನನ್ನು ಬೆನ್ನಟ್ಟಿ ಹೋದರು. `ಭೀಮಸೇನ!' ಎಂದು ಧೌಮ್ಯರು ಕೂಗುತ್ತಿದ್ದುದನ್ನೂ ಅವರಿಗೆ ಮುಂಭಾಗದಲ್ಲಿ ಮಹಾಪಾಪಿ ಸೈಂಧವ ಹೋಗುತ್ತಿದ್ದುದನ್ನೂ ಕಂಡು ಸಿಂಹನಾದ ಮಾಡಿದರು. ದ್ರೌಪದಿ ಅವರನ್ನು ಕಂಡು ರಥದಿಂದಿಳಿದು ಧೌಮ್ಯರೊಂದಿಗೆ ಆಶ್ರಮದ ಕಡೆಗೆ ನಡೆದಳು. ಪಾಂಡವರು ಅಲ್ಲಿ ಸೈಂಧವನ ಸೈನ್ಯವನ್ನು ಪರಾಕ್ರಮದಿಂದ ಸಂಹರಿಸಿದರು.
ಅಗ್ರೇ ಕೃಷ್ಣಾಂ ಯೋಽವದತ್ ಸಿಂಧುರಾಜಂ
ಯಾಹೀತಿ ತಂ ಕೋಟಿಕಾಶ್ಯಂ ಸುಪಾಪಮ್ |

ಛಿತ್ವಾ ಶಿರೋ ಮೃತ್ಯವೇ ಭೀಮಸೇನೋ
ನಿವೇದಯಾಮಾಸ ತಮಃ ಸ ಚಾಗಾತ್ ॥369॥
ಮೊದಲಿಗೆ, ದ್ರೌಪದಿಯನ್ನು ಅಪಹರಿಸೆಂದು ಸೈಂಧವನಿಗೆ ಹೇಳಿದ ಮಹಾಪಾಪಿ ಕೋಟಿಕಾಶ್ಯನನ್ನು ಭೀಮಸೇನ ಶಿರಶ್ಚೇದ ಮಾಡಿ ಮೃತ್ಯುವಿಗೆ ನೀಡಿದ. ಆ ಕೋಟಿಕಾಶ್ಯ ತಮಸ್ಸಿಗೆ ನಡೆದ.
ಹತ್ವಾ ಸೇನಾಮಖಿಲಾಂ ಸೈಂಧವಸ್ಯ
ಭೀಮಾರ್ಜುನೌ ಸಯಮಂ ಧರ್ಮರಾಜಮ್ ।
ವಿಸರಜ್ಯ ಧಾವಂತಮಥಾನುಜಗ್ಮತುರ್ಜಯದ್ರಥಂ
ವಿರಥಂ ಪಲ್ಗುನೋಽಕಃ ॥370॥
ಭೀಮಾರ್ಜುನರು ಸೈಂಧವನ ಎಲ್ಲ ಸೈನ್ಯವನ್ನೂ ಕೊಂದು ಧರ್ಮರಾಜ ನಕುಲ ಸಹದೇವರನ್ನು ಹಿಂದೆ ಕಳಿಸಿ ತಾವು ಮುಂದೆ ಧಾವಿಸುತ್ತಿದ್ದ ಜಯದ್ರಥನನ್ನು ಬೆನ್ನಟ್ಟಿದರು. ಅರ್ಜುನ ಅವನನ್ನು ವಿರಥನನ್ನಾಗಿ ಮಾಡಿದ.
ಪದ್ಭ್ಯಾಂ ಧಾವಂತಂ ಭೀಮಸೇನೋ ನಿಗೃಹ್ಯ
ದತ್ವಾ ಪ್ರಹಾರಾಂಶ್ಚ ಭೃಶಂ ತಮಾರ್ತಮ್ ।
ಆದಾಯಾಧಾದ್ ದ್ರೌಪದೀಪಾದಯೋಶ್ಚ ತಂ
ಮೋಚಯಾಮಾಸ ಚ ಧರ್ಮಸೂನುಃ ॥371॥
ಕಾಲ್ನಡೆಯಿಂದ ಧಾವಿಸುತ್ತಿದ್ದ ಜಯದ್ರಥನನ್ನು ಭೀಮಸೇನ ಹಿಡಿದು ಚೆನ್ನಾಗಿ ಒದೆಗಳನ್ನು ಕೊಟ್ಟು ಆರ್ತನಾದ ಆತನನ್ನು ದ್ರೌಪದಿಯ ಕಾಲುಗಳ ಮೇಲೆ ಚೆಲ್ಲಿದ. ಧರ್ಮರಾಜ ಬಿಡಿಸಿದ.
ದಾಸೋ ದ್ರೌಪದ್ಯಾ ಅಹಮಿತ್ಯೇವ ವಾಕ್ಯೇ
ತೇನೈವೋಕ್ತೇ ಭೀಮಸೇನೋಽಪ್ಯಮುಂಚತ್ ।
ಸ ವ್ರೀಡಿತೋಽವಾಗ್ವದನೋ ಯಯೌ ವನಂ
ಪಾರ್ಥ್ಯಾಶ್ಚ ತತ್ರೋಷುರತಿಪ್ರಮೋದಿನಃ ॥372॥
ನಾನು ದ್ರೌಪದಿಯ ದಾಸನೆಂದು ಜಯದ್ರಥ ಹೇಳಿದಾಗಲೇ ಭೀಮಸೇನ ಅವನನ್ನು ಬಿಟ್ಟ. ಅವನು ನಾಚಿ ಮುಖ ತಗ್ಗಿಸಿ ಕಾಡಿಗೆ ಹೊರಟು ಹೋದ. ಪಾಂಡವರು ಅಲ್ಲಿ ಸಂತುಷ್ಟರಾಗಿ ವಾಸಮಾಡಿದರು.
ಜಯದ್ರಥಸ್ತು ಭೀಮೇನ ತದಾ ಪಂಚಶಿಖೀಕೃತಃ ।
ತಪಸಾ ಶಿವಮಾರಾಧ್ಯ ವವ್ರೇ ಪಾಂಡವರೋಧನಮ್ ।
ಋತೇಽರ್ಜುನಾದರ್ಜುನಸ್ಯ ತುಷ್ಟೋ ಹಿ ತಪಸಾ ಶಿವಃ ॥373॥
ಜಯದ್ರಥ ಭೀಮನಿಂದ ತಲೆಯಲ್ಲಿ ಐದು ಜುಟ್ಟು ಇಡಿಸಿಕೊಂಡಾಗ ಅವನು ತಪಸ್ಸಿನಿಂದ ಶಿವನನ್ನು ಆರಾಧಿಸಿ ಅರ್ಜುನನನ್ನು ಹೊರತು ಎಲ್ಲ ಪಾಂಡವರನ್ನು ಇದಿರಿಸಿ ತಡೆಯುವ ಶಕ್ತಿಯನ್ನು ಪಡೆದುಕೊಂಡ. ಏಕೆಂದರೆ ಅರ್ಜುನನಿಗೆ ತಪಸ್ಸಿನಿಂದ ಶಿವ ಮೊದಲೇ ಒಲಿದಿದ್ದ.
* * * *
ಇನ್ನೂರ ಐವತ್ತೆರಡನೆಯ ಅಧ್ಯಾಯ
ಪಾಂಡವರು ಬೇಟೆಗೆ ಹೋಗಿರುವಾಗ ಜಯದ್ರಥನ ಆಗಮನ.
ದ್ರೌಪದಿಯ ರೂಪದಿಂದ ಮೋಹಿತನಾದ ಅವನಿಂದ ತನ್ನ
ಮಂತ್ರಿಯಾದ ಕೋಟಿಕಾಶ್ಯನ ಪ್ರೇಷಣ.
ವೈಶಂಪಾಯನಃ
ತಸ್ಮಿನ್ ಬಹುಮೃಗೇಽರಣ್ಯೇ ಅಟಮಾನಾ ಮಹಾರಥಾಃ ।
ಕಾಮ್ಯಕೇ ಭರತಶ್ರೇಷ್ಠಾ ವಿಜಹ್ರುಸ್ತೇ ಯಥಾಽಮರಾಃ ॥1॥
ವೈಶಂಪಾಯನ ಬಹುಮೃಗಗಳು ಇದ್ದ ಆ ಕಾಮ್ಯಕವನದಲ್ಲಿ ಮಹಾರಥರಾದ ಭರತಶ್ರೇಷ್ಠರು ತಿರುಗಾಡುತ್ತಾ ದೇವತೆಗಳಂತೆ ವಿಹರಿಸಿದರು.
ಪ್ರೇಕ್ಷಮಾಣಾ ಬಹುವಿಧಾನ್ ವನೋದ್ದೇಶಾನ್ ಸಮಂತತಃ ।
ಯಥರ್ತುಕಾಲರಮ್ಯಾಶ್ಚ ವನರಾಜೀಃ ಸುಪುಷ್ಪಿತಾಃ ॥2॥
ಪಾಂಡವಾ ಮೃಗಯಾಶೀಲಾಶ್ಚರಂತಸ್ತನ್ಮಹದ್ವನಮ್ ।
ವಿಜಹ್ರುರಿಂದ್ರಪ್ರತಿಮಾಃ ಕಂಚಿತ್ಕಾಲಮರಿಂದಮಾಃ ॥3॥
ಸುತ್ತಲೂ ಬಹುವಿಧವಾದ ವನಪ್ರದೇಶಗಳನ್ನು ನೋಡುತ್ತಾ ಆಯಾ ಕಾಲಗಳಲ್ಲಿ ಅರಳಿದ ಹೂಗಳುಳ್ಳ ಸುಂದರವಾದ ವನಶ್ರೇಣಿಗಳನ್ನು ನೋಡುತ್ತಾ ಬೇಟೆಯಾಡುವುದರಲ್ಲಿ ನಿರತರಾಗಿ ಇಂದ್ರನಂತಿದ್ದ ಅರಿಂದಮರಾದ ಪಾಂಡವರು ಆ ದೊಡ್ಡ ಕಾಡಿನಲ್ಲಿ ಸಂಚರಿಸುತ್ತಾ ಸ್ವಲ್ಪ ಕಾಲ ವಿಹರಿಸಿದರು.
ತತಸ್ತೇ ಯೌಗಪದ್ಯೇನ ಯಯುಃ ಸರ್ವೇ ಚತುರ್ದಿಶಮ್ ।
ಮೃಗಾಯಾಂ ಪುರುಷವ್ಯಾಘ್ರಾ ಬ್ರಾಹ್ಮಣಾರ್ಥೇ ಪರಂತಪಾಃ ॥4॥
ಅನಂತರ ಪುರುಷವ್ಯಾಘ್ರರಾದ ಪರಂತಪರಾದ ಅವರು ಒಮ್ಮೆ ಬ್ರಾಹ್ಮಣರ ಸಲುವಾಗಿ ಬೇಟೆಯಾಡಲು ಎಲ್ಲರೂ ಒಟ್ಟಿಗೆ ನಾಲ್ಕು ದಿಕ್ಕುಗಳಿಗೆ ಹೊರಟರು.
ದ್ರೌಪದೀಮಾಶ್ರಮೇ ನ್ಯಸ್ಯ ತೃಣಬಿಂದೋರನುಜ್ಞಯಾ ।

ಮಹರ್ಷೇರ್ದೀಪ್ತತಪಸೋ ಧೌಮ್ಯಸ್ಯ ಚ ಪುರೋಧಸಃ ॥5॥
ಮಹರ್ಷಿಗಳಾದ ತೃಣಬಿಂದು ಋಷಿಗಳ ಅನುಮತಿಯನ್ನು ಪಡೆದು ದೀಪ್ತ ತಪಸ್ಸುಳ್ಳ ಪುರೋಹಿತರಾದ ಧೌಮ್ಯರ ಅನುಮತಿಯನ್ನು ಪಡೆದು ದ್ರೌಪದಿಯನ್ನು ಆಶ್ರಮದಲ್ಲಿ ಇರಿಸಿ (ಅವರು ಹೊರಟರು).
ತತಸ್ತು ರಾಜಾ ಸಿಂಧೂನಾಂ ವಾರ್ದ್ಧಕ್ಷತ್ರಿರ್ಜಯದ್ರಥಃ |
ವಿವಾಹಕಾಮಃ ಶಾಲ್ವೇಯಾನ್ ಪ್ರಯಾತಃ ಸೋಽಭವತ್ ತದಾ ॥6॥
ಅನಂತರ ಸಿಂಧು ದೇಶದ ದೊರೆಯಾದ ವೃದ್ಧಕ್ಷತ್ರನ ಮಗನಾದ ಜಯದ್ರಥ ರಾಜನು ವಿವಾಹವನ್ನು ಮಾಡಿಕೊಳ್ಳುವ ಇಚ್ಛೆಯಿಂದ ಶಾಲ್ವದೇಶಕ್ಕೆ ಹೊರಟವನಾಗಿದ್ದನು.
ಮಹತಾ ಪರಿಬರ್ಹೇಣ ರಾಜಯೋಗ್ಯೇನ ಸಂವೃತಃ |
ರಾಜಭಿರ್ಬಹುಭಿಃ ಸಾರ್ಧಮುಪಾಯಾತ್ ಕಾಮ್ಯಕಂ ಚ ಸಃ ॥7॥
ಅವನು ರಾಜಯೋಗ್ಯವಾದ ದೊಡ್ಡ ಸಲಕರಣೆಗಳಿಂದ ಕೂಡಿ ಅನೇಕ ರಾಜರ ಜೊತೆಯಲ್ಲಿ ಕಾಮ್ಯಕವನಕ್ಕೆ ಬಂದನು.
ತತ್ರಾಪಶ್ಯತ್ ಪ್ರಿಯಾಂ ಭಾರ್ಯಾಂ ಪಾಂಡವಾನಾಂ ಯಶಸ್ವಿನೀಮ್ |
ತಿಷ್ಠಂತೀಮಾಶ್ರಮದ್ವಾರಿ ದ್ರೌಪದೀಂ ನಿರ್ಜನೇ ವನೇ ॥8॥
ಅಲ್ಲಿ ಅವನು ನಿರ್ಜನವಾದ ಅರಣ್ಯದಲ್ಲಿ ಆಶ್ರಮದ್ವಾರದಲ್ಲಿ ನಿಂತಿರುವ ಪಾಂಡವರ ಪ್ರಿಯಪತ್ನಿಯಾದ ಯಶಸ್ವಿನಿಯಾದ ದ್ರೌಪದಿಯನ್ನು ನೋಡಿದನು.
ವಿಭ್ರಾಜಮಾನಾಂ ವಪುಷಾ ಬಿಭ್ರತೀಂ ರೂಪಮುತ್ತಮಮ್ |
ಭ್ರಾಜಯಂತೀಂ ವನೋದ್ದೇಶಂ ನೀಲಾಭ್ರಮಿವ ವಿದ್ಯುತಮ್ ॥9॥
ಉತ್ತಮ ರೂಪವನ್ನು ಧರಿಸಿ ತನ್ನ ದೇಹದಿಂದ ಶೋಭಿಸುತ್ತಾ ಆ ವನಪ್ರದೇಶವನ್ನು ಬೆಳಗುತ್ತಿರುವ ಮಿಂಚಿನಿಂದ ಕೂಡಿದ ನೀಲಮೇಘದಂತಿದ್ದ (ದ್ರೌಪದಿಯನ್ನು ನೋಡಿದನು).
ಅಪ್ಸರಾ ದೇವಕನ್ಯಾ ವಾ ಮಾಯಾ ವಾ ದೇವನಿರ್ಮಿತಾ |
ಇತಿ ಕೃತ್ವಾಽಂಜಲಿಂ ಸರ್ವೇ ದದೃಶುಸ್ತಾಮನಿಂದಿತಾಮ್ ॥10॥
ಇವಳೇನು ಅಪ್ಸರೆಯೋ, ದೇವಕನ್ಯೆಯೋ ಅಥವಾ ದೈವನಿರ್ಮಿತ ಮಾಯೆಯೋ ಎಂದು ಎಲ್ಲರೂ ಕೈಗಳನ್ನು ಮುಗಿದು ಅನಿಂದಿತಳಾದ ಅವಳನ್ನು ನೋಡಿದರು.
ತತಃ ಸ ರಾಜಾ ಸಿಂಧೂನಾಂ ವಾರ್ದ್ಧಕ್ಷತ್ರಿರ್ಜಯದ್ರಥಃ |
ವಿಸ್ಮಿತಸ್ತ್ವನವದ್ಯಾಂಗೀಂ ದೃಷ್ಟ್ವಾ ತಾಂ ದುಷ್ಟಮಾನಸಃ |
ಸ ಕೋಟಿಕಾಶ್ಯ ರಾಜಾನಮಬ್ರವೀತ್ ಕಾಮಮೋಹಿತಃ ॥11॥
ಆಗ ಸಿಂಧುಪತಿಯಾದ ವೃದ್ಧಕ್ಷತ್ರನ ಮಗನಾದ ಜಯದ್ರಥನು ಆ ಅನವದ್ಯಾಂಗಿಯನ್ನು ನೋಡಿ ವಿಸ್ಮಿತನಾಗಿ ಕಾಮಮೋಹಿತನಾಗಿ ದುಷ್ಟ ಅಭಿಪ್ರಾಯವನ್ನು ಹೊಂದಿದವನಾಗಿ ಕೋಟಿಕಾಶ್ಯನೆಂಬ ತನ್ನ ಸಾಮಂತರಾಜನನ್ನು ಕಳುಹಿಸಿದನು.
ಕಸ್ಯ ತ್ವೇಷಾಽನವದ್ಯಾಂಗೀ ಯದಿ ವಾಪಿ ನ ಮಾನುಷೀ |
ವಿವಾಹಾರ್ಥೋ ನ ಮೇ ಕಶ್ಚಿದಿಮಾಂ ಪ್ರಾಪ್ಯಾತಿಸುಂದರೀಮ್ ॥12॥
ಏತಾಮೇವಾಹಮಾದಾಯ ಗಮಿಷ್ಯಾಮಿ ಸ್ವಮಾಲಯಮ್ ॥13॥
ಈ ಅನವದ್ಯಾಂಗಿಯು ಯಾರಿಗೆ ಸೇರಿದವಳು ಅಥವಾ ಇವಳೇನು ಅಮಾನುಷಳಾದ ದೇವ ವನಿತೆಯೇ? ನಾನು ಈ ಸುಂದರಿಯನ್ನು ಹೊಂದಿದರೆ ನನಗೆ ಬೇರೆ ವಿವಾಹದಿಂದ ಆಗಬೇಕಾದುದು ಏನೂ ಇಲ್ಲ. ಇವಳನ್ನೇ ಕರೆದುಕೊಂಡು ನನ್ನ ಮನೆಗೆ ಹೋಗುವೆನು.
ಗಚ್ಛ ಜಾನೀಹಿ ಸೌಮ್ಯೇಮಾಂ ಕಸ್ಯ ವಾಽತ್ರ ಕುತೋಽಪಿ ವಾ |
ಕಿಮರ್ಥಮಾಗತಾ ಸುಭ್ರೂರಿದಂ ಕಂಟಕಿತಂ ವನಮ್ ॥14॥
ಕೋಟಿಕಾಶ್ಯನೇ, ಸೌಮ್ಯನೇ, ಹೋಗಿ ಈ ಸುಂದರಿಯು ಯಾರು? ಎಲ್ಲಿಂದ ಬಂದಳು? ಏಕೆ ಈ ಮುಳ್ಳಿರುವ ವನಕ್ಕೆ ಬಂದಳು? ಎಂದು ತಿಳಿದುಕೋ.
ಅಪಿ ನಾಮ ವರಾರೋಹಾ ಮಾಮೇಷಾ ಲೋಕಸುಂದರೀ |
ಭಜೇದದ್ಯಾಯತಾಪಾಂಗೀ ಸುದತೀ ತನುಮಧ್ಯಮಾ ॥15॥
ಅಪ್ಯಹಂ ಕೃತಕಾಮಃ ಸ್ಯಾಮಿಮಾಂ ಪ್ರಾಪ್ಯ ವರಸ್ತ್ರಿಯಮ್ |
ಗಚ್ಛ ಜಾನೀಹಿ ಕೋ ನ್ವಸ್ಯಾ ನಾಥ ಇತ್ಯೇವ ಕೋಟಿಕ ॥16॥
ಈ ವರಾರೋಹಳೂ, ಸುದತಿಯೂ, ತನುಮಧ್ಯಮೆಯೂ, ವಿಶಾಲನೇತ್ರೆಯೂ ಆದ ಲೋಕಸುಂದರಿಯು ನನ್ನನ್ನು ಭಜಿಸುವುದಾದರೆ ಇಂತಹ ಶ್ರೇಷ್ಠ ವನಿತೆಯನ್ನು ಪಡೆದು ನಾನು ಕೃತಕೃತ್ಯನಾಗುತ್ತೇನೆ. ಕೋಟಿಕಾಶ್ಯನೇ, ನೀನು ಹೋಗಿ ಇವಳ ಒಡೆಯನು ಯಾರು ಎಂದು ತಿಳಿದುಕೋ (ಎಂದು ಹೇಳಿದನು).
ವೈಶಂಪಾಯನಃ
ಸ ಕೋಟಿಕಾಶ್ಯಸ್ತಚ್ಛ್ರುತ್ವಾ ರಥಾತ್ ಪ್ರಸ್ಕಂದ್ಯ ಕುಂಡಲೀ |
ಉಪೇತ್ಯ ಪಪ್ರಚ್ಛ ತದಾ ಕ್ರೋಷ್ಟಾ ವ್ಯಾಘ್ರವಧೂಮಿವ ॥17॥
ವೈಶಂಪಾಯನ ಈ ಮಾತುಗಳನ್ನು ಕೇಳಿದ ಕುಂಡಲಧಾರಿಯಾದ ಕೋಟಿಕಾಶ್ಯನು ರಥದಿಂದ ಕೆಳಗಿಳಿದು ನರಿಯು ಹೆಣ್ಣು ಹುಲಿಯನ್ನು ಸಮೀಪಿಸುವಂತೆ ಅವಳನ್ನು ಸಮೀಪಿಸಿ ಆಗ ಪ್ರಶ್ನೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ದ್ವಿಪಂಚಾಶಾಧಿಕದ್ವಿಶತತಮೋಽಧ್ಯಾಯಃ ॥

॥ ಇತಿ ದ್ರೌಪದೀಹರಣಪರ್ವಣಿ ಜಯದ್ರಥಾಗಮನಂ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ಮೂರನೆಯ ಅಧ್ಯಾಯ
ಜಯದ್ರಥನ ಪ್ರೇರಣೆಯಂತೆ ಕೋಟಿಕಾಶ್ಯನಿಂದ ದ್ರೌಪದಿಯ ವಿಚಾರಣೆ.
ಕೋಟಿಕಃ
ಕಾ ತ್ವಂ ಕದಂಬಸ್ಯ ವಿನಾಮ್ಯ
ಶಾಖಾಮೇಕಾಽಽಶ್ರಮೇ ತಿಷ್ಠಸಿ ಶೋಭಮಾನಾ |
ದೇದೀಪ್ಯಮಾನಾಽಗ್ನಿಶಿಖೇವ ನಕ್ತಂ
ಆಚಕ್ಷ್ವ ಶೀಘ್ರಂ ವೃಜಿನಾಗ್ರಕೇಶಿ ॥1॥
ಕೋಟಿಕಾಶ್ಯ ಎಲೌ ಗುಂಗುರು ಕೂದಲುಳ್ಳವಳೇ, ನೀನು ಯಾರು? ಕದಂಬ ವೃಕ್ಷದ ಶಾಖೆಯನ್ನು ಬಗ್ಗಿಸಿ ಶೋಭಮಾನಳಾಗಿ ರಾತ್ರಿಯಲ್ಲಿ ಜ್ವಲಿಸುವ ಅಗ್ನಿಶಿಖೆಯಂತೆ ಒಬ್ಬಳೇ ಆಶ್ರಮದಲ್ಲಿ ಏಕೆ ನಿಂತಿದ್ದೀಯೆ? ಶೀಘ್ರವಾಗಿ ಹೇಳು.
ಅತೀವ ರೂಪೇಣ ಸಮನ್ವಿತಾ ತ್ವಂ ನ
ಚಾಪ್ಯರಣ್ಯೇಷು ವಿಭೇಷಿ ಕಿಂ ನು |
ದೇವೀ ನು ಯಕ್ಷೀ ಯದಿ ದಾನವೀ ವಾ
ವರಾಪ್ಸರಾ ದೈತ್ಯವರಾಂಗನಾ ವಾ ॥2॥
ನೀನು ಬಹಳ ರೂಪಸಂಪನ್ನಳಾಗಿದ್ದೀಯೆ. ಅರಣ್ಯದಲ್ಲಿ ನಿನಗೆ ಭಯವಾಗುವುದಿಲ್ಲವೇ? ನೀನು ದೇವವನಿತೆಯೋ? ಅಥವಾ ಯಕ್ಷಿಯೋ? ಅಥವಾ ದಾನವಿಯೋ? ಅಥವಾ ಶ್ರೇಷ್ಠಳಾದ ಅಪ್ಸರೆಯೋ? ಅಥವಾ ದೈತ್ಯವನಿತೆಯೋ? (ಎಂದು ಹೇಳು).
ವಪುಷ್ಮತೀ ವೋರಗರಾಜಕನ್ಯಾ ವನೇಚರೀ ವಾ ಕ್ಷಣದಾ ಚಲಸ್ತ್ರೀ |
ಕಿಂದೇವರಾಜ್ಞೋ ವರುಣಸ್ಯ ಪತ್ನೀ ಯಮಸ್ಯ ಸೋಮಸ್ಯ ಧನೇಶ್ವರಸ್ಯ ॥
ದೇಹವನ್ನು ಧರಿಸಿದ ಉರಗರಾಜ ಕನ್ಯೆಯೋ? ಅಥವಾ ವನಚರಿಯೋ? ಅಥವಾ ರಾತ್ರಿದೇವತೆಯೋ? ಅಥವಾ ಚಂಚಲವಾದ ವನಿತೆಯೋ? ಅಥವಾ ದೇವರಾಜನಾದ ವರುಣನ ಅಥವಾ ಯಮನ ಅಥವಾ ಚಂದ್ರನ ಅಥವಾ ಕುಬೇರನ ಪತ್ನಿಯೋ?
ಧಾತುರ್ವಿಧಾತುಃ ಸವಿತುರ್ವಿಭೋರ್ವಾ
ಶಕ್ರಸ್ಯ ವಾ ತ್ವಂ ಸದನಾತ್ ಪ್ರಪನ್ನಾ |
ನ ಹ್ಯೇವ ನಃ ಪೃಚ್ಛಸಿ ಯೇ ವಯಂ ಸ್ಮ
ನ ಚಾಪಿ ಜಾನೀಮ ತವೇಹ ನಾಥಮ್ ॥4॥
ನೀನು ಬ್ರಹ್ಮದೇವರ ಮನೆಯಿಂದಲೋ, ವಿಷ್ಣುವಿನ ಮನೆಯಿಂದಲೋ, ಸವಿತೃವಿನ ಮನೆಯಿಂದಲೋ ಅಥವಾ ಶಕ್ರಸದನದಿಂದಲೋ ಇಲ್ಲಿಗೆ ಬಂದಿರುವೆಯಾ? ನೀವು ಯಾರು ಎಂದು ನನ್ನನ್ನು ನೀನು ಕೇಳುತ್ತಿಲ್ಲ. ನಮಗಾದರೂ ನಿಮ್ಮ ಒಡೆಯನು ಯಾರು ಎಂದು ತಿಳಿಯುತಿತಲ್ಲ.
ವಯಂ ಹಿ ಮಾನಂ ತವ ವರ್ಧಯಂತಃ
ಪೃಚ್ಛಾಮ ಭದ್ರೇ ಪ್ರಭವಂ ಪ್ರಭುಂ ಚ |
ಆಚಕ್ಷ್ವ ಬಂಧೂಂಶ್ಚ ಪತಿಂ ಕುಲಂ ಚ
ತತ್ತ್ವೇನ ಯಚ್ಚೇಹ ಕರೋಷಿ ಕಾರ್ಯಮ್ ॥5॥
ಎಲೌ ಭದ್ರೆಯೇ, ನಾನು ನಿನಗೆ ಗೌರವವನ್ನು ಕೊಡುತ್ತಾ ನಿನ್ನ ತಂದೆಯಾರು? ಒಡೆಯನು ಯಾರು ಎಂದು ಕೇಳುತ್ತಿದ್ದೇನೆ? ನಿನ್ನ ಬಂಧುಗಳು ಯಾರು? ಪತಿಯು ಯಾರು? ಕುಲವು ಯಾವುದು? ಇಲ್ಲಿ ಏನು ಮಾಡಲು ಬಂದಿದ್ದೀಯೆ? ಎಲ್ಲವನ್ನೂ ನಿಜವಾಗಿ ಹೇಳು.
ಅಹಂ ತು ರಾಜ್ಞಃ ಸುರಥಸ್ಯ ಪುತ್ರೋ
ಯಂ ಕೋಟಿಕಾಶ್ಯೇತಿ ವಿದುರ್ಮನುಷ್ಯಾಃ |
ಅಸೌ ತು ಯಸ್ತಿಷ್ಠತಿ ಕಾಂಚನಾಂಗೇ ರಥೇ
ಹುತೋಽಗ್ನಿಶ್ಚಯನೇ ಯಥೈವ |
ತ್ರಿಗರ್ತರಾಜಃ ಕಮಲಾಯತಾಕ್ಷಿ
ಕ್ಷೇಮಂಕರೋ ನಾಮ ಸ ಏಷ ವೀರಃ ॥6॥
ನಾನು ಸುರಥರಾಜನ ಪುತ್ರ. ನನ್ನನ್ನು ಕೋಟಿಕಾಶ್ಯನೆಂದು ಮನುಷ್ಯರು ತಿಳಿಯುತ್ತಾರೆ. ಕಾಂಚನಮಯವಾದ ರಥದಲ್ಲಿ ವೇದಿಕೆಯಲ್ಲಿ ಚಿತವಾದ ಅಗ್ನಿಯಂತೆ ಪ್ರಕಾಶಿಸುತ್ತಿರುವ ಇವನು ಎಲೌ ಕಮಲಾಯತಾಕ್ಷಿಯೇ, ತ್ರಿಗರ್ತರಾಜನಾದ ಕ್ಷೇಮಂಕರನೆಂಬ ವೀರನು.
ವಶ್ಯೇಂದ್ರಿಯಃ ಸತ್ಯರುಚಿರ್ವರೋರು
ವೃದ್ಧೋಪಸೇವೀ ಗುರುಪೂಜಕಶ್ಚ ॥7॥
ಎಲೌ ವರೋರುವೇ, ಇವನು ಜಿತೇಂದ್ರಿಯನು, ಸತ್ಯದಲ್ಲಿ ಆಸಕ್ತನಾದವನು, ವೃದ್ಧರ ಸೇವೆಯನ್ನು ಮಾಡುವವನು ಮತ್ತು ಹಿರಿಯರನ್ನು ಪೂಜಿಸುವವನು.
ಅಸ್ಮಾತ್ ಪರಸ್ತ್ವೇಷ ಮಹಾಧನುಷ್ಮಾನ್
ಪುತ್ರಃ ಕುಲಿಂದಾಧಿಪತೇರ್ವರಿಷ್ಠಃ |

ನಿರೀಕ್ಷತೇ ತ್ವಾಂ ವಿಪುಲಾಯತಾಕ್ಷಃ
ಸುಪುಷ್ಪಿತಃ ಪರ್ವತವಾಸನಿತ್ಯಃ ॥8॥
ಅವನಿಂದ ಆಚೆಗೆ ಮಹಾಧನುಸ್ಸನ್ನು ಹಿಡಿದಿರುವ ಇವನು ಕುಲಿಂದಾಧಿಪತಿಯ ಶ್ರೇಷ್ಠನಾದ ಪುತ್ರ. ಒಳ್ಳೆಯ ಪುಷ್ಪವನ್ನು ಧರಿಸಿದ ನಿತ್ಯವೂ ಪರ್ವತವಾಸಿಯಾದ ವಿಪುಲನೇತ್ರನಾದ ಇವನು ನಿನ್ನನ್ನು ನೋಡುತ್ತಿದ್ದಾನೆ.
ಅಸೌ ತು ಯಃ ಪುಷ್ಕರಿಣೀಸಮೀಪೇ
ಶ್ಯಾಮೋ ಯುವಾ ತಿಷ್ಠತಿ ದರ್ಶನೀಯಃ |
ಇಕ್ಷ್ವಾಕುರಾಜ್ಞಃ ಸುಬಲಸ್ಯ ಪುತ್ರಃ
ಸ ಏವ ಹಂತಾ ದ್ವಿಷತಃ ಸುಗಾತ್ರಿ ॥9॥
ಪುಷ್ಕರಿಣೀ ಸಮೀಪದಲ್ಲಿ ಇರುವ ಶ್ಯಾಮಲ ವರ್ಣದವನೂ, ಯುವಕನೂ, ಸುಂದರನೂ ಆದ ಇವನು ಇಕ್ಷ್ವಾಕುರಾಜನಾದ ಸುಬಲನ ಪುತ್ರನು. ಸುಗಾತ್ರಿಯೇ, ಇವನು ಶತ್ರುಗಳನ್ನು ನಾಶಮಾಡುವಂತಹವನು.
ಯಸ್ಯಾನುಯಾತ್ರಾ ಧ್ವಜಿನಃ ಪ್ರಯಾಂತಿ
ಸೌವೀರಕಾ ದ್ವಾದಶ ರಾಜಪುತ್ರಾಃ |
ಶೋಣಾಶ್ವಯುಕ್ತೇಷು ರಥೇಷು ಸರ್ವೇ
ಮಖೇಷು ದೀಪ್ತಾ ಇವ ಹವ್ಯವಾಹಾಃ ॥10॥
ಅವನನ್ನು ಹಿಂಬಾಲಿಸಿ ಧ್ವಜಗಳನ್ನು ಹೊಂದಿದ, ಯಜ್ಞದಲ್ಲಿರುವ ಅಗ್ನಿಯಂತೆ ದೀಪ್ತರಾದ ಹನ್ನೆರಡು ಜನ ಸೌವೀರ ರಾಜಕುಮಾರರು ಕೆಂಪುಕುದುರೆಗಳನ್ನು ಹೂಡಿದ ರಥದಲ್ಲಿ ಅವನನ್ನು ಹಿಂಬಾಲಿಸುತ್ತಾರೆ.
ಅಂಗಾರಕಃ ಕುಂಜರೋ ಗುಪ್ತಕಶ್ಚ
ಶತ್ರುಂಜಯಃ ಸಂಜಯಸುಪ್ರವೃದ್ಧೌ |
ಪ್ರಭಾಕರೋಽಥ ಭ್ರಮರೋ ರವಿಶ್ಚ
ಶೂರಃ ಪ್ರತಾಪಃ ಕುಹರಶ್ಚ ನಾಮಾ ॥11॥
ಅಂಗಾರಕ, ಕುಂಜರ, ಗುಪ್ತಕ, ಶತ್ರುಂಜಯ, ಸಂಜಯ, ಸುಪ್ರವೃದ್ಧ, ಪ್ರಭಾಕರ, ಭ್ರಮರ, ರವಿ, ಶೂರ, ಪ್ರತಾಪ ಮತ್ತು ಕುಹರ (ಇವರು ಆ ಹನ್ನೆರಡು ಮಂದಿ ಸೌವೀರ ರಾಜಕುಮಾರರು).
ಯಂ ಷಟ್‌ಸಹಸ್ರಾ ರಥಿನೋಽನುಯಾಂತಿ
ನಾಗಾ ಹಯಾಶ್ಚೈವ ಪದಾತಿನಶ್ಚ |
ಜಯದ್ರಥೋ ನಾಮ ಯದಿ ಶ್ರುತಸ್ತೇ
ಸೌವೀರರಾಜಃ ಸುಭಗೇ ಸ ಏಷಃ ॥12॥
ಎಲೌ ಸುಂದರಿಯೇ, ಯಾವನು ಹೊರಟರೆ ಅವನನ್ನು ಆರು ಸಹಸ್ರ ರಥಿಕರು, ಗಜಾಶ್ವಪದಾತಿಗಳು ಹಿಂಬಾಲಿಸುತ್ತವೆಯೋ ಅಂತಹ ಇವನು ನೀನು ಅವನನ್ನು ಕೇಳಿದ್ದರೆ ಸೌವೀರರಾಜನಾದ ಜಯದ್ರಥನೆಂಬುವನು.
ತಸ್ಯಾಪರೇ ಭ್ರಾತರೋಽದೀನಸತ್ತ್ವ
ಬಲಾಹಕಾನೀಕವಿದಾರಣಾದ್ಯಾಃ |
ಸೌವೀರವೀರಾಃ ಪ್ರವರಾ ಯುವಾನೋ
ರಾಜಾನಮೇತೇ ಬಲಿನೋಽನುಯಾಂತಿ ॥13॥
ಅದೂ ಅಲ್ಲದೇ ಬಲಾಹಕ, ಅನೀಕವಿದಾರಣ ಮೊದಲಾದ ಸೌವೀರ ವೀರರೂ ಶ್ರೇಷ್ಠರೂ, ಯುವಕರೂ ಮತ್ತು ಪರಾಕ್ರಮಶಾಲಿಗಳೂ ಆದ ಅವನ ತಮ್ಮಂದಿರು ಆ ರಾಜನನ್ನು ಹಿಂಬಾಲಿಸುತ್ತಾರೆ.
ಏತೈಃ ಸಹಾಯೈರುಪಯಾತಿ ರಾಜಾ
ಮರುದ್ಗಣೈರಿಂದ್ರ ಇವಾಭಿಗುಪ್ತಃ |
ಸಾ ಜಾನತೀ ವ್ಯಾಪನಯಃ ಸುಕೇಶಿ
ಕಸ್ಯಾಪಿ ಭಾರ್ಯಾ ದುಹಿತಾ ಚ ಕಸ್ಯ ॥14॥
ಇಂತಹವರ ಜೊತೆಯಲ್ಲಿ ಈ ರಾಜನು ಮರುದ್ಗಣಗಳಿಂದ ರಕ್ಷಿತನಾದ ಇಂದ್ರನಂತೆ ಬರುತ್ತಾನೆ. ಇದನ್ನು ತಿಳಿದು ಎಲೌ ಸುಕೇಶಿಯೇ, ನೀನು ಯಾರ ಪತ್ನಿ, ಯಾರ ಪುತ್ರಿ ಎಂದು ಬಾಯಿಯನ್ನು ತೆಗೆದು ಮಾತನಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಪಂಚಾಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ದ್ರೌಪದೀಹರಣಪರ್ವಣಿ ಕೋಟಿಕಾಶ್ಯಪ್ರಶ್ನೋನಾಮ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ತನಾಲ್ಕನೆಯ ಅಧ್ಯಾಯ
ಕೋಟಿಕಾಶ್ಯನಿಗೆ ದ್ರೌಪದಿಯಿಂದ ಆತ್ಮವೃತ್ತಾಂತ ಕಥನ.
ವೈಶಂಪಾಯನಃ
ಅಥಾಬ್ರವೀದ್ ದ್ರೌಪದೀ ರಾಜಪುತ್ರೀ
ಪೃಷ್ಟಾ ಶಿಬೀನಾಂ ಪ್ರವರೇಣ ತೇನ |

ಅವೇಕ್ಷ್ಯ ಮಂದಂ ಪ್ರವಿಮುಚ್ಯ ಶಾಖಾಂ
ಸಂಗೃಹ್ಣತೀ ಕೌಶಿಕಮುತ್ತರೀಯಮ್ ॥1॥
ವೈಶಂಪಾಯನ ಶಿಬಿವಂಶದ ಶ್ರೇಷ್ಠನಾದ ಒಬ್ಬ ಪುರುಷನಿಂದ ಹೀಗೆ ಹೇಳಲ್ಪಟ್ಟ ರಾಜಪುತ್ರಿಯಾದ ದ್ರೌಪದಿಯು ಅನಂತರ ಅವನನ್ನು ನೋಡಿ ಮೆಲ್ಲನೆ ಕದಂಬ ಶಾಖೆಯನ್ನು ಬಿಟ್ಟು ರೇಷ್ಮೆಯ ಉತ್ತರೀಯವನ್ನು ಸರಿಯಾಗಿ ಹೊದ್ದು ಮಾತನಾಡಿದಳು.
ಬುದ್ಧ್ಯಾಭಿಜಾನಾಮಿ ನರೇಂದ್ರಪುತ್ರ
ನ ಮಾದೃಶೀ ತ್ವಾಮಭಿಭಾಷ್ಟುಮರ್ಹತಿ |
ನ ತ್ವೇಹ ವಕ್ತಾಽಸ್ತಿ ತವೇಹ ವಾಕ್ಯಂ
ಅನ್ಯೋ ನರೋ ವಾಽಪ್ಯಥವಾಽಪಿ ನಾರೀ ॥2॥
ಎಲೈ ನರೇಂದ್ರಪುತ್ರನೇ, ನಾನು ನನ್ನ ಬುದ್ಧಿಯಿಂದ ಎಲ್ಲವನ್ನೂ ತಿಳಿದಿದ್ದೇನೆ. ಆದರೆ ನನ್ನಂತಹವಳು ನಿನ್ನ ಜೊತೆಯಲ್ಲಿ ಮಾತನಾಡಬಾರದು. ಆದರೆ ಇಲ್ಲಿ ನೀನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವ ಇನ್ನೊಬ್ಬ ಪುರುಷನಾಗಲೀ ಅಥವಾ ನಾರಿಯಾಗಲೀ ಇಲ್ಲ.
ಏಕಾ ಹ್ಯಹಂ ಸಂಪ್ರತಿ ತೇನ ವಾಚಂ
ದದಾಮಿ ವೈ ಭದ್ರ ನಿಬೋಧ ಚೇದಮ್ |
ಅಹಂ ಹ್ಯರಣ್ಯೇ ಕಥಮೇಕಮೇಕಾ
ತ್ವಾಮಾಲಪೇಯಂ ನಿರತಾ ಸ್ವಧರ್ಮೇ ॥3॥
ಸದ್ಯಕ್ಕೆ ನಾನು ಒಬ್ಬಳೇ ಇದ್ದೇನೆ. ಆದ್ದರಿಂದ ನಿನಗೆ ಉತ್ತರವನ್ನು ಕೊಡುತ್ತೇನೆ. ಭದ್ರನೇ, ಇದನ್ನು ತಿಳಿದುಕೋ. ಇಲ್ಲದಿದ್ದರೆ ಅರಣ್ಯದಲ್ಲಿ ಏಕಾಂಗಿಯಾಗಿದ್ದು ಸ್ವಧರ್ಮದಲ್ಲಿ ನಿರತಳಾದ ನಾನು ನಿನ್ನ ಜೊತೆಯಲ್ಲಿ ಹೇಗೆ ಮಾತನಾಡಲು ಸಾಧ್ಯ?
ಜಾನಾಮಿ ಚ ತ್ವಾಂ ಸುರಥಸ್ಯ ಪುತ್ರಂ
ಯಂ ಕೋಟಿಕಾಶ್ಯೇತಿ ವಿದುರ್ಮನುಷ್ಯಾಃ |
ತಸ್ಮಾದಹಂ ಶೈಬ್ಯ ತಥೈವ ತುಭ್ಯಂ
ಆಖ್ಯಾಮಿ ಬಂಧೂನ್ ಪ್ರಥಿತಂ ಕುಲಂ ಚ ॥4॥
ನಾನು ನಿನ್ನನ್ನು ಸುರಥನ ಪುತ್ರನೆಂದೂ, ನಿನ್ನನ್ನು ಮನುಷ್ಯರು ಕೋಟಿಕಾಶ್ಯನೆಂದು ಕರೆಯುತ್ತಾರೆಂದೂ ತಿಳಿದಿದ್ದೇನೆ. ಆದ್ದರಿಂದ ಎಲೈ ಶೈಬ್ಯನೇ ನಿನಗೆ ಅದಕ್ಕೆ ಅನುಗುಣವಾಗಿ ನಾನು ನನ್ನ ಪ್ರಸಿದ್ಧವಾದ ಕುಲವನ್ನು ಮತ್ತು ಬಂಧುಗಳನ್ನೂ ಹೇಳುತ್ತೇನೆ.
ಅಪತ್ಯಮಸ್ಮಿ ದ್ರುಪದಸ್ಯ ರಾಜ್ಞಃ
ಕೃಷ್ಣೇತಿ ಮಾಂ ಶೈಬ್ಯ ವಿದುರ್ಮನುಷ್ಯಾಃ |
ಸಾಽಹಂ ವೃಣೇ ಪಂಚ ಜನಾನ್ ಪತಿತ್ವೇ
ಯೇ ಖಾಂಡವಪ್ರಸ್ಥಗತಾಃ ಶ್ರುತಾಸ್ತೇ ॥5॥
ಶೈಬ್ಯನೇ, ನಾನು ದ್ರುಪದ ರಾಜನ ಪುತ್ರಿ. ನನ್ನನ್ನು ಕೃಷ್ಣಾ ಎಂದು ಮನುಷ್ಯರು ಕರೆಯುತ್ತಾರೆ. ನೀನು ಕೇಳಿದ್ದರೆ ನಾನು ಇಂದ್ರಪ್ರಸ್ಥ ನಿವಾಸಿಗಳಾದ ಐದು ಜನರನ್ನು ಪತಿಗಳಾಗಿ ವರಿಸಿದ್ದೇನೆ.
ಯುದಿಷ್ಠಿರೋ ಭೀಮಸೇನಾರ್ಜುನೌ ಚ
ಮಾದ್ರ್ಯಾಶ್ಚ ಪುತ್ರೌ ಪುರುಷಪ್ರವೀರೌ |
ತೇ ಮಾಂ ನಿವೇಶ್ಯೇಹ ದಿಶಶ್ಚತಸ್ರೋ
ವಿಭಜ್ಯ ಪಾರ್ಥಾ ಮೃಗಾಯಾಂ ಪ್ರಯಾತಾಃ ॥6॥
ಯುಧಿಷ್ಠಿರ, ಭೀಮಸೇನ, ಅರ್ಜುನ ಮತ್ತು ಮಾದ್ರೀಪುತ್ರರಾದ ಪುರುಷ ಪ್ರವೀರರಾದ ನಕುಲಸಹದೇವರು ಅವರು ನನ್ನನ್ನು ಇಲ್ಲಿ ಇಟ್ಟು ವಿಭಾಗವನ್ನು ಮಾಡಿಕೊಂಡು ನಾಲ್ಕು ದಿಕ್ಕುಗಳಿಗೂ ಬೇಟೆಗಾಗಿ ಹೋಗಿದ್ದಾರೆ.
ಪ್ರಾಚೀಂ ರಾಜಾ ದಕ್ಷಿಣಾಂ ಭೀಮಸೇನೋ
ಜಯಃ ಪ್ರತೀಚೀಂ ಯಮಜಾವುದೀಚೀಮ್ |
ಮನ್ಯೇ ತು ತೇಷಾಂ ರಥಸತ್ತಮಾನಾಂ
ಕಾಲೋಽಬಹು ಪ್ರಾಪ್ತ ಇಹೋಪಯಾತುಮ್ ॥7॥
ಯುಧಿಷ್ಠಿರನು ಪೂರ್ವದಿಕ್ಕಿಗೂ, ಭೀಮಸೇನನು ದಕ್ಷಿಣ ದಿಕ್ಕಿಗೂ, ಅರ್ಜುನನು ಪಶ್ಚಿಮದಿಕ್ಕಿಗೂ, ನಕುಲಸಹದೇವರು ಉತ್ತರದಿಕ್ಕಿಗೂ, ರಥಶ್ರೇಷ್ಠರಾದ (ಮಹಾರಥರಾದ) ಅವರು ಹೋಗಿ ಬಹಳ ಕಾಲವಾಗಿರುವುದರಿಂದ ಈಗ ಇನ್ನೇನು ಬರುವ ಸಮಯ ಎಂದು ನಾನು ತಿಳಿದಿದ್ದೇನೆ.
ಸಮ್ಮಾನಿತಾ ಯಾಸ್ಯಥ ತೈರ್ಯಥೇಷ್ಟಂ
ವಿಮುಚ್ಯ ವಾಹಾನವರೋಹಯಧ್ವಮ್ |
ಪ್ರಿಯಾತಿಥಿರ್ಧರ್ಮಸುತೋ ಮಹಾತ್ಮಾ
ಪ್ರೀತೋ ಭವಿಷ್ಯತ್ಯಭಿವೀಕ್ಷ್ಯ ಯುಷ್ಮಾನ್ ॥8॥
ನೀವು ಅವರಿಂದ ಸಮ್ಮಾನಿತರಾಗಿ ಹೋಗುವವರಾಗಿರಿ. ಅಶ್ವಗಳನ್ನು ಬಿಡಿಸಿ ರಥಗಳಿಂದ ಇಳಿಯಿರಿ. ಮಹಾತ್ಮನಾದ ಧರ್ಮಪುತ್ರನು ಅತಿಥಿಪ್ರಿಯನಾದವನು ನಿಮ್ಮನ್ನು ನೋಡಿ ಅವನು ಸಂತೋಷಪಡುವನು.
ಏತಾವದುಕತ್ವ ದ್ರುಪದಾತ್ಮಜಾ ಸಾ
ಶೈಬ್ಯಾತ್ಮಜಂ ಚಂದ್ರಮುಖೀ ಪ್ರತೀತಾ |

ವಿವೇಶ ತಾಂ ಪರ್ಣಶಾಲಾಂ ಪ್ರಶಸ್ತಾಂ
ಸಂಚಿಂತ್ಯ ತೇಷಾಮತಿಥಿತ್ವಧರ್ಮಂ (ಮರ್ಥೇ) ॥9॥
ಪ್ರಸಿದ್ಧಳಾದ ಚಂದ್ರಮುಖಿಯಾದ ಆ ದ್ರೌಪದಿಯು ಶೈಬ್ಯಪುತ್ರನಾದ ಕೋಟಿಕಾಶ್ಯನನ್ನು ಕುರಿತು ಇಷ್ಟು ಮಾತ್ರ ಹೇಳಿ ಅವರಿಗೆ ಮಾಡಬೇಕಾದ ಅತಿಥಿ ಧರ್ಮವನ್ನು ಚಿಂತಿಸಿ ಆ ಪ್ರಶಸ್ತವಾದ ಪಣರ್ಶಾಲೆಯನ್ನು ಪ್ರವೇಶಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಃಪಂಚಾಶಾಧಿಕದ್ವಿಶತತಮೋऽಧ್ಯಾಯಃ ॥
॥ ಇತಿ ದ್ರೌಪದೀಹರಣಪರ್ವಣಿ ದೌಪದೀವಾಕ್ಯಂ ನಾಮ ತೃತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ತೈದನೆಯ ಅಧ್ಯಾಯ
ಕೋಟಿಕಾಶ್ಯನಿಂದ ದ್ರೌಪದಿಯ ತತ್ತ್ವವನ್ನು ತಿಳಿದ ಜಯದ್ರಥನಿಂದ
ದ್ರೌಪದಿಗೆ ತನ್ನ ಪತ್ನಿಯಾಗುವಂತೆ ಒತ್ತಾಯ.
ವೈಶಂಪಾಯನಃ
ತಥಾऽऽಸೀನೇಷು ಸರ್ವೇಷು ತೇಷು ರಾಜಸು ಭಾರತ |
ಕೋಟಿಕಾಶ್ಯೋ ಜಗಾಮಾಶು ಸಿಂಧುರಾಜ ನಿವೇಶನಮ್ |
ಯದುಕ್ತಂ ಕೃಷ್ಣಯಾ ಸಾರ್ಧಂ ತತ್ಸರ್ವಂ ಪ್ರತ್ಯವೇದಯತ್ ॥1॥
ವೈಶಂಪಾಯನ ಎಲೈ ಭಾರತನೇ, ಎಲ್ಲ ರಾಜರೂ ಹಾಗೆ ಕುಳಿತಿರುವಾಗ ಕೋಟಿಕಾಶ್ಯನು ಶೀಘ್ರವಾಗಿ ಸಿಂಧುರಾಜನ ಬಿಡಾರಕ್ಕೆ ಹೋಗಿ ದ್ರೌಪದಿಯು ಹೇಳಿದ ಎಲ್ಲವನ್ನೂ ಅವನಿಗೆ ತಿಳಿಸಿದನು.
ಜಯದ್ರಥಃ
ಯದಾ ವಾಚಂ ವ್ಯಾಹರಂತ್ಯಾಮಸ್ಯಾಂ ಮೇ ರಮತೇ ಮನಃ |
ಸೀಮಂತಿನೀನಾಂ ಮುಖ್ಯಾಯಾಂ ವಿನಿವೃತ್ತಃ ಕಥಂ ಭವಾನ್ ॥2॥
ಜಯದ್ರಥ ಸೀಮಂತಿನಿಯರಲ್ಲಿ ಶ್ರೇಷ್ಠಳಾದ ಅವಳು ಮಾತನಾಡುತ್ತಿರುವಾಗ ನನ್ನ ಮನಸ್ಸಿಗೆ ಇಷ್ಟು ಸಂತೋಷವಾಗುತ್ತಿರುವಾಗ ನೀನು ಅವಳನ್ನು ಬಿಟ್ಟು ಹೇಗೆ ಬಂದೆ?
ಏತಾಂ ದೃಷ್ಟ್ವಾ ಸ್ತ್ರಿಯೋ ಮೇऽನ್ಯಾ ಯಥಾ ಶಾಖಾಮೃಗಸ್ತ್ರಿಯಃ |
ಪ್ರತಿಭಾಂತಿ ಮಹಾಬಾಹೋ ಸತ್ಯಮೇತದ್ ಬ್ರವೀಮಿ ತೇ ॥3॥
ಎಲೈ ಮಹಾಬಾಹುವೇ, ಇವಳನ್ನು ನೋಡಿದ ಮೇಲೆ ನನಗೆ ಬೇರೆ ಸ್ತ್ರೀಯರು ಹೆಣ್ಣು ಕೋತಿಗಳಂತೆ ಕಾಣುತ್ತಿದ್ದಾರೆ.ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ದರ್ಶನಾದೇವ ಹಿ ಮನಸ್ತಯಾ ಮೇऽಪಹೃತಂ ಭೃಶಮ್ |
ತಾಂ ಸಮಾಚಕ್ಷ್ವ ಕಲ್ಯಾಣೀಂ ಯದಿ ಸ್ಯಾಚ್ಛೈಬ್ಯ ಮಾನುಷೀ ॥4॥
ಅವಳ ದರ್ಶನದಿಂದಲೇ ನನ್ನ ಮನಸ್ಸು ಅವಳಿಂದ ಅಪಹೃತವಾಗಿದೆ. ಎಲೈ ಶೈಭ್ಯನೇ, ಅವಳು ಮನುಷ್ಯವನಿತೆಯಾಗಿದ್ದರೆ ಈ ವಿಷಯವನ್ನು ಹೇಳು.
ಕೋಟಿಕಃ
ಏಷಾ ವೈ ದ್ರೌಪದೀ ಕೃಷ್ಣಾ ರಾಜಪುತ್ರೀ ಯಶಸ್ವಿನೀ |
ಪಂಚಾನಾಂ ಪಾಂಡುಪುತ್ರಾಣಾಂ ಮಹಿಷೀ ಸಮ್ಮತಾ ಭೃಶಮ್ ॥5॥
ಕೋಟಿಕ ಇವಳು ಯಶಸ್ವಿನಿಯಾದ ರಾಜಪುತ್ರಿಯಾದ ದ್ರುಪದನ ಮಗಳಾದ ಕೃಷ್ಣೆ. ಐದುಜನ ಪಾಂಡುಪುತ್ರರಿಗೂ ಚೆನ್ನಾಗಿ ಸಮ್ಮತಳಾದ ಪಟ್ಟಮಹಿಷಿ.
ಸರ್ವೇಷಾಂ ಚೈವ ಪಾರ್ಥಾನಾಂ ಪ್ರಿಯಾ ಬಹುಮತಾ ಸತೀ |
ತಯಾऽಸಮೇತ್ಯ ಸೌವೀರ ಸೌವೀರಾಭಿಮುಖೋ ವ್ರಜ ॥6॥
ಎಲ್ಲ ಪಾರ್ಥರಿಗೂ ಪ್ರಿಯಳಾದವಳು ಮತ್ತು ಗೌರವಿಸಲ್ಪಡುವವಳೂ ಆದ ಸಾಧ್ವೀ. ಎಲೈ ಸೌವೀರನೇ, ಅವಳನ್ನು ಭೇಟಿಯಾಗದೇ ಸೌವೀರದೇಶಕ್ಕೆ ತಿರುಗಿ ಹೋಗು.
ವೈಶಂಪಾಯನಃ
ಏವಮುಕ್ತಃ ಪ್ರತ್ಯುವಾಚ ಪಶ್ಯಾಮಿ ದ್ರೌಪದೀಮಿತಿ |
ಪತಿಃ ಸೌವೀರಸಿಂಧೂನಾಂ ದುಷ್ಟಭಾವೋ ಜಯದ್ರಥಃ ॥7॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಸಿಂಧು ಸೌವೀರಪತಿಯಾದ ಜಯದ್ರಥನು ದುಷ್ಟಭಾವವನ್ನು ಹೊಂದಿ ನಾನು ದ್ರೌಪದಿಯನ್ನು ನೋಡುತ್ತೇನೆ ಎಂದು ಹೇಳಿದನು.
ಜಯದ್ರಥಃ
ಸ ಪ್ರವಿಶ್ಯಾಶ್ರಮಂ ಪುಣ್ಯಂ ಸಿಂಹಗೋಷ್ಠಂ ವೃಕೋ ಯಥಾ |
ಆತ್ಮನಾ ಸಪ್ತಮಃ ಕೃಷ್ಣಾಮಿದಂ ವಚನಮಬ್ರವೀತ್ ॥8॥
ಕುಶಲಂ ತೇ ವಹಾರೋಹೇ ಭರ್ತಾರಸ್ತೇऽಪ್ಯನಾಮಯಾಃ |

ಯೇಷಾಂ ಕುಶಲಕಾಮಾಽಸಿ ತೇಽಪಿ ಕಚ್ಚಿದನಾಮಯಾಃ ॥9॥
ತೋಳವು ಸಿಂಹದ ಗುಹೆಯನ್ನು ಪ್ರವೇಶಿಸುವಂತೆ ಅವನು ತನ್ನಿಂದ ಏಳನೆಯವನಾಗಿ ಆ ಪವಿತ್ರವಾದ ಆಶ್ರಮವನ್ನು ಪ್ರವೇಶಿಸಿ ದ್ರೌಪದಿಯನ್ನು ಕುರಿತು ವರಾರೋಹೆಯೇ, ನೀನು ಕುಶಲವೇ? ನಿನ್ನ ಪತಿಗಳು ಕ್ಷೇಮದಿಂದಿದ್ದಾರೆಯೇ? ನೀನು ಯಾರ ಕುಶಲವನ್ನು ಬಯಸುತ್ತೀಯೋ ಅವರು ಕುಶಲವಾಗಿದ್ದಾರೆಯೇ? ಎಂದು ಕೇಳಿದನು.
ದ್ರೌಪದೀ
ಕೌರವ್ಯಃ ಕುಶಲೀ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ಅಹಂ ಚ ಭ್ರಾತರಶ್ಚಾಸ್ಯ ಯಾಂಶ್ಚಾನ್ಯಾನ್ ಪರಿಪೃಚ್ಛಸಿ ॥10॥
ದ್ರೌಪದೀ ಕುರುವಂಶದಲ್ಲಿ ಜನಿಸಿದ ಕುಂತೀಪುತ್ರನಾದ ಯುಧಿಷ್ಠಿರ ರಾಜನು ಕುಶಲದಿಂದಿದ್ದಾನೆ. ನಾನು, ಅವನ ತಮ್ಮಂದಿರು ಮತ್ತು ನೀನು ಕೇಳುವ ಉಳಿದವರು ಎಲ್ಲರೂ ಕುಶಲದಿಂದಿದ್ದೇವೆ.
ಅಪಿ ತ್ವಂ ಕುಶಲೀ ರಾಜನ್ ಸಹಾಮಾತ್ಯಃ ಸಹಪ್ರಜಃ ।
ಅಪಿ ತೇ ಕುಶಲಂ ರಾಜನ್ ರಾಷ್ಟ್ರೇ ಕೋಶೇ ಬಲೇ ತಥಾ ॥11॥
ಎಲೈ ರಾಜನೇ, ಪ್ರಜೆಗಳು ಮತ್ತು ಅಮಾತ್ಯರಿಂದ ಕೂಡಿದ ನೀನು ಕುಶಲನಾಗಿದ್ದೀಯಾ? ರಾಜನೇ, ನಿನ್ನ ರಾಷ್ಟ್ರದಲ್ಲಿ, ಕೋಶದಲ್ಲಿ ಮತ್ತು ಸೈನ್ಯದಲ್ಲಿ ಎಲ್ಲವೂ ಕುಶಲವೇ?
ಕಚ್ಚಿದೇಕಃ ಶಿಬೀನಾಢ್ಯಾನ್ ಸೌವೀರಾನ್ ಸಹ ಸಿಂಧುಭಿಃ ।
ಅನುತಿಷ್ಠಸಿ ಧರ್ಮೇಣ ಯೇ ಚಾನ್ಯೇ ವಿಜಿತಾಸ್ತ್ವಯಾ ॥12॥
ನೀನೊಬ್ಬನೇ ಆಢ್ಯರಾದ ಶಿಬಿಗಳನ್ನೂ, ಸಿಂಧುಗಳಿಂದ ಸಹಿತರಾದ ಸೌವೀರರನ್ನೂ ಮತ್ತು ನೀನು ಜಯಿಸಿದ ಉಳಿದ ದೇಶದವರನ್ನೂ ಧರ್ಮದಿಂದ ನಡೆಸುತ್ತಿದ್ದೀಯಾ?
ಪಾದ್ಯಂ ಪ್ರತಿಗೃಹಾಣೇದಮಾಸನಂ ಚ ನೃಪಾತ್ಮಜ ।
ಮೃಗಾನ್ಪಂಚಾಶತಂ ಚೈವ ಪ್ರಾತರಾಶಂ ದದಾನಿ ತೇ ॥13॥
ರಾಜಪುತ್ರನೇ, ಪಾದ್ಯವನ್ನು ಸ್ವೀಕರಿಸು. ಈ ಆಸನವನ್ನೂ ಸ್ವೀಕರಿಸು. ಐವತ್ತು ಮೃಗಗಳನ್ನು (ಮೃಗಗಳ ಮಾಂಸವನ್ನು) ನಿನಗೆ ಉಪಹಾರವಾಗಿ ಕೊಡುವೆನು.
ಏಣೇಯಾನ್ ಪೃಷತಾಂ ನ್ಯಂಕೂನ್ ಹರಿಣಾನ್ ಶರಭಾನ್ ಶಶಾನ್ ।
ಋಕ್ಷಾನ್ ರುರೂನ್ ಶಂಬರಾಂಶ್ಚ ಗವಯಾಂಶ್ಚ ಮೃಗಾನ್ಬಹೂನ್ ॥
ವರಾಹಾನ್ ಮಹಿಷಾಂಶ್ಚೈವ ಯಾಶ್ಚಾನ್ಯಾ ಮೃಗಜಾತಯಃ ।
ಪ್ರದಾಸ್ಯತಿ ಸ್ವಯಂ ತುಭ್ಯಂ ಕುಂತೀಪುತ್ರೋ ಯುಧಿಷ್ಠಿರಃ ॥15॥
ಜಿಂಕೆಗಳು, ಪೃಷತ್ತುಗಳು, ನ್ಯಂಕುಗಳು, ಹರಿಣಗಳು, ಶರಭಗಳು, ಮೊಲಗಳು, ಕರಡಿಗಳು, ರುರುಗಳು, ಶರಭಗಳು, ಗವಯಗಳು ಇನ್ನೂ ಅನೇಕ ಮೃಗಗಳು, ವರಾಹಗಳು, ಮಹಿಷಗಳು ಇನ್ನು ಉಳಿದ ಮೃಗಜಾತಿಗಳು ಇವುಗಳ ಉಪಹಾರವನ್ನು ಕುಂತೀಪುತ್ರನಾದ ಯುಧಿಷ್ಠಿರನು ನಿನಗೆ ಸ್ವತಃ ಕೊಡುವನು.
ಜಯದ್ರಥಃ
ಕುಶಲಂ ಪ್ರಾತರಾಶಾಯ ಸರ್ವಂ ಮೇಽಪಚಿತಿಃ ಕೃತಾ ।
ಏಹಿ ಮೇ ರಥಮಾರೋಹ ಸುಖಮಾಪ್ನುಹಿ ಕೇವಲಮ್ ॥16॥
ಜಯದ್ರಥ ನಿನ್ನ ಉಪಹಾರವು ಕ್ಷೇಮದಿಂದಿರಲಿ. ನನಗೆ ಎಲ್ಲಾ ಪೂಜೆಯೂ ಸಂಧಿದೆ. ಬಂದು ನನ್ನ ರಥವನ್ನು ಏರು. ನನ್ನ ಜೊತೆಯಲ್ಲಿ ಸುಖವನ್ನು ಹೊಂದು.
ಗತಶ್ರೀಕಾಂಶ್ಚ್ಯುತಾನ್ ರಾಜ್ಯಾತ್ ಕೃಪಣಾನ್ ಗತಚೇತಸಃ ।
ಅರಣ್ಯವಾಸಿನಃ ಪಾರ್ಥಾನ್ ನಾನುರೋದ್ಧುಂ ತ್ವಮರ್ಹಸಿ ॥17॥
ಸಂಪತ್ತನ್ನು ಕಳೆದುಕೊಂಡು, ರಾಜ್ಯದಿಂದ ಚ್ಯುತರಾಗಿ, ಗತಚೇತನರಾಗಿ, ಕೃಪಣರಾಗಿ, ಅರಣ್ಯವಾಸವನ್ನು ಮಾಡುವ ಪಾಂಡವರನ್ನು ನೀನು ಅನುಸರಿಸುವುದು ಉಚಿತವಲ್ಲ.
ನೈವ ಪ್ರಾಜ್ಞಾ ಗತಶ್ರೀಕಂ ಭರ್ತಾರಮುಪಯುಂಜತೇ ।
ಯುಂಜಾನಮನುಯುಂಜೀತ ನ ಶ್ರಿಯಃ ಸಂಕ್ಷಯೇ ವಸೇತ್ ॥18॥
ಪ್ರಾಜ್ಞರಾದವರು ಸಂಪತ್ತಿನಿಂದ ಹೀನರಾದ ಪತಿಯನ್ನು ಸೇವಿಸುವುದಿಲ್ಲ. ಯಾವನು ನಿನ್ನನ್ನು ಸೇವಿಸುತ್ತಾನೆಯೋ ಅಂತಹವನನ್ನು ಸೇವಿಸು. ಸಂಪತ್ತು ನಾಶವಾದ ಸ್ಥಳದಲ್ಲಿ ವಾಸವನ್ನು ಮಾಡಬಾರದು.
ಶ್ರಿಯಾ ವಿಹೀನಾ ರಾಷ್ಟ್ರಾಚ್ಚ ವಿನಷ್ಟಾಃ ಶಾಶ್ವತೀಃ ಸಮಾಃ ।
ಅಲಂ ತೇ ಪಾಂಡುಪುತ್ರಾಣಾಂ ಭಕ್ತ್ಯಾ ಕ್ಲೇಶಮುಪಾಸಿತುಮ್ ॥19॥
ಸಂಪತ್ತಿನಿಂದ ವಿಹೀನರಾದ, ರಾಷ್ಟ್ರದಿಂದಲೂ ವಿಹೀನರಾದ, ಬಹುಕಾಲದವರೆ ವಿನಷ್ಟರಾದ ಪಾಂಡುಪುತ್ರರಲ್ಲಿ ಭಕ್ತಿಯನ್ನು ಮಾಡಿ ಅವರ ಸೇವೆಯನ್ನು ಮಾಡಿ ನೀನು ಕ್ಲೇಶವನ್ನು ಪಡುವುದು ಸಾಕು.
ಭಾರ್ಯಾ ಮೇ ಭವ ಸುಶ್ರೋಣಿ ತ್ಯಜೈನಾನ್ ಸುಖಮಾಪ್ನುಹಿ ।
ಅಖಿಲಾನ್ ಸಿಂಧುಸೌವೀರಾನಾಪ್ನುಹಿ ತ್ವಂ ಮಯಾ ಸಹ ॥20॥
ಸುಶ್ರೋಣಿಯೇ, ನನ್ನ ಭಾರ್ಯೆಯಾಗು. ಈ ಪಾಂಡವರನ್ನು ಬಿಟ್ಟು ಸುಖವನ್ನು ಹೊಂದು. ನನ್ನ ಜೊತೆಯಲ್ಲಿ ಸಮಗ್ರವಾದ ಸಿಂಧುಸೌವೀರರಾಜ್ಯವನ್ನು ಹೊಂದುವವಳಾಗು.
ವೈಶಂಪಾಯನಃ

ಇತ್ಯುಕ್ತ್ವಾ ಸಿಂಧುರಾಜೇನ ವಾಕ್ಯಂ ಹೃದಯಕಂಪನಮ್ |
ಕೃಷ್ಣಾ ತಸ್ಮಾದಪಾಕ್ರಾಮದ್ ದೇಶಾತ್ ಸಭ್ರುಕುಟೀಮುಖೀ ||21||
ವೈಶಂಪಾಯನ ಹೀಗೆ ಸಿಂಧುರಾಜನಿಂದ ಎದೆಯನ್ನು ನಡುಗಿಸುವ ಮಾತುಗಳನ್ನು ಕೇಳಿದ ದ್ರೌಪದಿಯು ಹುಬ್ಬುಗಳನ್ನು ಗಂಟಿಕ್ಕಿ ಆ ಪ್ರದೇಶದಿಂದ ದೂರಸರಿದಳು.
ಅವಮತ್ಯಾಸ್ಯ ತದ್ವಾಕ್ಯಮಾಕ್ಷಿಪ್ಯ ಚ ಸುಮಧ್ಯಮಾ |
ಮೈವಮಿತ್ಯಬ್ರವೀತ್ ಕೃಷ್ಣಾ ಲಜ್ಜಸ್ವೇತಿ ಚ ಸೈಂಧವ ||22||
ಸುಮಧ್ಯಮಳಾದ ದ್ರೌಪದಿಯು ಅವನ ಆ ವಾಕ್ಯಗಳನ್ನು ತಿರಸ್ಕರಿಸಿ ಮತ್ತು ನಿಂದಿಸಿ, ಸೈಂಧವನೇ, ಹೀಗೆ ಮಾತನಾಡಬೇಡ. ನೀನು ನಾಚಿಕೆಯನ್ನು ಪಡಬೇಕು ಎಂದು ಹೇಳಿದಳು.
ಸಾ ಕಾಂಕ್ಷಮಾಣಾ ಭರ್ತೄಣಾಮುಪಯಾನಮನಿಂದಿತಾ |
ವಿಲೋಭಯಾಮಾಸ ಪರಂ ವಾಕ್ಯೈರ್ವಾಕ್ಯಾನಿ ಯುಂಜತೀ |
ನೈವಂ ವದ ಮಹಾಬಾಹೋ ನ್ಯಾಯ್ಯಂ ತ್ವಂ ನ ಚ ಮನ್ಯಸೇ ||23||
ಭರ್ತೃಗಳ ಆಗಮನವನ್ನು ನಿರೀಕ್ಷಿಸುತ್ತಿದ್ದ ಅನಿಂದಿತೆಯಾದ ಆ ದ್ರೌಪದಿಯು ಅವನ ವಾಕ್ಯಗಳಿಗೆ ಅನುರೂಪವಾದ ವಾಕ್ಯಗಳನ್ನು ಜೋಡಿಸಿ ಅವನನ್ನು ವಿಲೋಭಗೊಳಿಸಿದಳು. ಮಹಾಬಾಹುವೇ, ಹೀಗೆ ಮಾತನಾಡಬೇಡ. ನಿನಗೆ ನ್ಯಾಯಮಾರ್ಗವು ಕಾಣುತ್ತಿಲ್ಲ.
ದ್ರೌಪದೀ
ಪಾಂಡೂನಾಂ ಧಾರ್ತರಾಷ್ಟ್ರಾಣಾಂ ಸ್ವಸಾ ಚೈವ ಕನೀಯಸೀ |
ದುಃಶಲಾ ನಾಮ ತಸ್ಯಾಸ್ತ್ವಂ ಭರ್ತಾ ರಾಜಕುಲೋದ್ವಹ ||24||
ಎಲೈ ರಾಜಕುಲೋದ್ವಹನೇ, ಪಾಂಡವರಿಗೂ ಮತ್ತು ಧಾರ್ತರಾಷ್ಟ್ರರಿಗೂ ತಂಗಿಯಾದವಳು ದುಃಶಲೆ. ನೀನು ಅವಳ ಪತಿ.
ಮಮ ಭ್ರಾತಾ ಚ ನ್ಯಾಯ್ಯೇನ ತ್ವಯಾ ರಕ್ಷ್ಯಾ ಮಹಾರಥ |
ಧರ್ಮಿಷ್ಠಾನಾಂ ಕುಲೇ ಜಾತೋ ನ ಧರ್ಮಂ ತ್ವಮವೇಕ್ಷಸೇ ||25||
ಎಲೈ ಮಹಾರಥನೇ, ನೀನು ನ್ಯಾಯವಾಗಿ ನೋಡಿದರೆ ನನ್ನ ಸಹೋದರ. ನಾನು ನಿನ್ನಿಂದ ರಕ್ಷಿಸಲ್ಪಡಬೇಕಾದವಳು. ಧರ್ಮಿಷ್ಠರ ಕುಲದಲ್ಲಿ ಹುಟ್ಟಿ ನೀನು ಧರ್ಮವನ್ನು ಕಾಣುತ್ತಿಲ್ಲ (ಎಂದು ಹೇಳಿದಳು).
ವೈಶಂಪಾಯನಃ
ಇತ್ಯುಕ್ತಃ ಸಿಂಧುರಾಜೋಽಥ ವಾಕ್ಯಮುತ್ತರಮಬ್ರವೀತ್ ||26||
ರಾಜ್ಞಾಂ ಧರ್ಮಂ ನ ಜಾನೀಷೇ ಸ್ತ್ರಿಯೋ ರತ್ನಾನಿ ಚೈವ ಹಿ |
ಸಾಧಾರಣಾನಿ ಲೋಕೇಽಸ್ಮಿನ್ ಪ್ರವದಂತಿ ಮನೀಷಿಣಃ ||27||
ವೈಶಂಪಾಯನ ಹೀಗೆ ಹೇಳಲ್ಪಟ್ಟ ಸಿಂಧುರಾಜನು ನಿನಗೆ ರಾಜಧರ್ಮವು ತಿಳಿದಿಲ್ಲ. ಸ್ತ್ರೀಯರು ಮತ್ತು ರತ್ನಗಳು ಈ ಲೋಕದಲ್ಲಿ ಎಲ್ಲರಿಗೂ ಸೇರಿದವುಗಳು ಎಂದು ವಿವೇಕಿಗಳು ಹೇಳುತ್ತಾರೆ.
ಸ್ವಸಾ ಚ ಸ್ವಸ್ರಿಯಾ ಚೈವ ಭ್ರಾತೃಭಾರ್ಯಾ ತಥೈವ ಚ |
ಸುಖಂ ಗೃಹ್ಣಂತಿ ರಾಜಾನಸ್ತಾಶ್ಚ ತತ್ರ ನೃಪೋದ್ಭವಾಃ ||28||
ತಂಗಿಯರು, ತಂಗಿಯ ಮಗಳು ಹಾಗೆಯೇ ಸೋದರರನ ಪತ್ನಿ ಇವರನ್ನು ರಾಜರು ಸುಖವಾಗಿ ಸ್ವೀಕರಿಸುತ್ತಾರೆ. ಆ ರಾಜಕುಲದಲ್ಲಿ ಹುಟ್ಟಿದ ಸ್ತ್ರೀಯರೂ ಸಹ ರಾಜರನ್ನು ಸುಖವಾಗಿ ಸ್ವೀಕರಿಸುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚಪಂಚಾಶಾಧಿಕದ್ವಿಶತತಮೋಽಧ್ಯಾಯಃ ||
|| ಇತಿ ದ್ರೌಪದೀಹರಣಪರ್ವಣಿ ದ್ರೌಪದೀ ಜಯದ್ರಥ ಸಂವಾದೋ ನಾಮ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತೈದನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ತಾರನೆಯ ಅಧ್ಯಾಯ
ದ್ರೌಪದಿಯಿಂದ ಜಯದ್ರಥನ ನಿಂದನೆ. ಉತ್ತರೀಯವನ್ನು ಹಿಡಿದ
ಅವನ ಅಧಃಪತನ. ದ್ರೌಪದಿಯಿಂದ ಸ್ವತಃ ರಥಾರೋಹಣ.
ವೈಶಂಪಾಯನಃ
ಸರೋಷರಾಗೋಪಹತೇನ ವಲ್ಗುನಾ
ಸರಾಗನೇತ್ರೇಣ ನತೋನ್ನತಭ್ರುವಾ |
ಮುಖೇನ ವಿಸ್ಫೂರ್ಯ ಸುವೀರರಾಷ್ಟ್ರಪಂ
ತತೋಽಬ್ರವೀತ್ತಂ ದ್ರುಪದಾತ್ಮಜಾ ಪುನಃ ||1||
ವೈಶಂಪಾಯನ ಆಗ ರೋಷದಿಂದ ಉಪಹತವಾದ ಸುಂದರವಾದ ಕೆಂಪಾದ ಕಣ್ಣುಗಳಿಂದಲೂ, ನತೋನ್ನತವಾದ ಹುಬ್ಬುಗಳಿಂದಲೂ, ಅದರುವ ತುಟಿಗಳಿಂದಲೂ ಕೂಡಿದ ದ್ರುಪದಾತ್ಮಜೆಯು ಪುನಃ ಸೌವೀರಾದಿಪತಿಯಾದ ಅವನನ್ನು ಕುರಿತು ಮಾತನಾಡಿದಳು.
ದ್ರೌಪದೀ
ಯಶಸ್ವಿನಸ್ತೀಕ್ಷ್ಣವಿಷಾನ್ ಮಹಾರಥಾನ್

अभिब्रुवन् मूढ न लज्जसे कथम् ।
महेन्द्रकल्पान्निरतान् स्वकर्मसु
स्थितान् समूहेष्वपि यक्षरक्षसाम् ॥2॥
ದ್ರೌಪದೀ ಎಲ್ಲೈ ಮೂಢನೇ, ಯಶಸ್ವಿಗಳೂ, ತೀಕ್ಷ್ಣವಿಷವುಳ್ಳವರೂ, ಮಹಾರಥರೂ ಆದ ನನ್ನ ಪತಿಗಳ ವಿಷಯದಲ್ಲಿ ಹೀಗೆ ಕೆಟ್ಟ ಮಾತನಾಡುವ ನಿನಗೆ ನಾಚಿಕೆಯಾಗುವುದಿಲ್ಲವೆ? ಅವರು ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾದವರು, ಮಹೇಂದ್ರನಿಗೆ ಸದೃಶರಾದವರು ಮತ್ತು ಯಕ್ಷರಾಕ್ಷಸರ ಸಮೂಹದೆದುರಿಗೂ ಅಲುಗಾಡದೇ ನಿಲ್ಲುವವರು.
ನ ಕಿಂಚಿದೀಡ್ಯಂ ಪ್ರವದಂತಿ ಪಾಪಂ
ವನೇಚರಂ ವಾ ಗೃಹಮೇಧಿನಂ ವಾ ।
ತಪಸ್ವಿನಂ ಸಂಪರಿಪೂರ್ಣವಿದ್ಯಂ
ಭಷಂತಿ ಹ್ಯೆವಂ ಶ್ವನರಾಃ ಸುವೀರ ॥3॥
ಪ್ರಶಂಶನೀಯನಾದ ವ್ಯಕ್ತಿಯು ಕಾಡಿನಲ್ಲಿರಲಿ ಅಥವಾ ಗೃಹದಲ್ಲಿರಲಿ ತಪಸ್ವಿಯೂ, ಪರಿಪೂಣರ್ವಿದ್ಯೆಯುಳ್ಳವನೂ ಆದವನ ವಿಷಯದಲ್ಲಿ ಕೆಟ್ಟದ್ದನ್ನು ಮಾತನಾಡುವುದಿಲ್ಲ. ಎಲ್ಲೈ ಸೌವೀರನೇ, ನಾಯಿಯಂತಹ ಮನುಷ್ಯರು ಹೀಗೆ ಬೊಗಳುತ್ತಾರೆ.
ಅಹಂ ತು ಮನ್ಯೇ ತವ ನಾಸ್ತಿ ಕಶ್ಚಿತ್
ಏತಾದೃಶೇ ಕ್ಷತ್ರಿಯಸಂನಿವೇಶೇ ।
ಯಸ್ತ್ವಾಽದ್ಯ ಪಾತಾಳಮುಖೇ ಪತಂತಂ
ಪಾಣೌ ಗೃಹೀತ್ವಾ ಪ್ರತಿಸಂಹರೇತ ॥4॥
ಪಾತಾಳಮುಖದಲ್ಲಿ ಬೀಳುವ ನಿನ್ನನ್ನು ಈ ದಿನ ಕೈಯಲ್ಲಿ ಹಿಡಿದು ನಿಲ್ಲಿಸುವ ವ್ಯಕ್ತಿಯು ಇಂತಹ ಕ್ಷತ್ರಿಯಸಮೂಹದಲ್ಲಿ ಯಾರೂ ಇಲ್ಲವೆಂದು ತೋರುತ್ತದೆ.
ನಾಗಂ ಪ್ರಭಿನ್ನಂ ಗಿರಿಕೂಟಕಲ್ಪಮ್
ಉಪತ್ಯಕಾಂ ಹೈಮವತೀಂ ಚರಂತಮ್ ।
ದಂಡೀವ ಯೂಥಾದಪಸೇಧಸಿ ತ್ವಂ
ಯೋ ಜೇತುಮಾಶಂಸಸಿ ಧರ್ಮರಾಜಮ್ ॥5॥
ಹಿಮಾಲಯದ ಸಮೀಪದಲ್ಲಿ ಸಂಚರಿಸುವ ಪರ್ವತ ಶಿಖರದಂತಿರುವ ಮದ್ದಾನೆಯನ್ನು ಕೈಯಲ್ಲಿ ಕೋಲನ್ನು ಹಿಡಿದು ಓಡಿಸುವವನಂತೆ ನೀನು ಧರ್ಮರಾಜನನ್ನು ಗೆಲ್ಲಲು ಬಯಸುತ್ತಿದ್ದೀಯೆ.
ಬಾಲ್ಯಾತ್ ಪ್ರಸುಪ್ತಸ್ಯ ಮಹಾಬಲಸ್ಯ
ಸಿಂಹಸ್ಯ ಪಕ್ಷ್ಮಾಣಿ ಮುಖಾಲ್ಲುನಾಸಿ ।
ಪದಾ ಸಮಾಹತ್ಯ ಪಲಾಯಮಾನಃ
ಕ್ರುದ್ಧಂ ಯದಾ ದ್ರಕ್ಷ್ಯಸಿ ಭೀಮಸೇನಮ್ ॥6॥
ನೀನು ಯಾವಾಗ ಕ್ರುದ್ಧನಾದ ಭೀಮಸೇನನನ್ನು ನೋಡುವಿಯೋ ಆಗ ಮಹಾಬಲವುಳ್ಳ ಪ್ರಸುಪ್ತವಾದ ಸಿಂಹವನ್ನು ಬಾಲಬುದ್ಧಿಯಿಂದ ಕಾಲಿನಿಂದ ಒದ್ದು ಅದರ ಮುಖದಿಂದ ರೆಪ್ಪೆಯನ್ನು ಕಿತ್ತು ಓಡುವವನ ಪರಿಸ್ಥಿತಿಯಂತೆಯೇ ನಿನ್ನ ಅವಸ್ಥೆಯೂ ಆಗುತ್ತದೆ.
ಮಹಾಬಲಂ ಘೋರತರಂ ಪ್ರವೃದ್ಧಂ
ಜಾತಂ ಹರಿಂ ಪರ್ವತಕಂದರೇಷು ।
ಪ್ರಸುಪ್ತಮುಗ್ರಂ ಪ್ರಪದೇನ ಹಂಸಿ
ಯಃ ಕ್ರುದ್ಧಮಾಯೋತ್ಸ್ಯಸಿ ಜಿಷ್ಣುಮುಗ್ರಮ್ ॥7॥
ಯಾವ ನೀನು ಕ್ರುದ್ಧನಾದ ಉಗ್ರನಾದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತಿತೀಯೋ ಅಂತಹ ನೀನು ಮಹಾಬಲವುಳ್ಳ ಘೋರತರವಾದ ಪರ್ವತದ ಕಂದರದಲ್ಲಿ ಜನಿಸಿ ಪೂಣರ್ವಾಗಿ ಬೆಳೆದ ಮಲಗಿದ ಸಿಂಹವನ್ನು ಕಾಲಿನಿಂದ ಒದ್ದುಕೊಲ್ಲಲು ಆಶಿಸುತ್ತೀಯೆ.
ಕೃಷ್ಣೋರಗೌ ತೀಕ್ಷ್ಣಮುಖೌ ದ್ವಿಜಿಹ್ವೌ
ಮತ್ತಃ ಪದಾಽಽಕ್ರಾಮಸಿ ಪುಚ್ಛದೇಶೇ ।
ಯಃ ಪಾಂಡವಾಭ್ಯಾಂ ಪುರುಷೋತ್ತಮಾಭ್ಯಾಂ
ಜಘನ್ಯಜಾಭ್ಯಾಂ ಪ್ರಯುಯುತ್ಸಸೇ ತ್ವಮ್ ॥8॥
ಯಾವ ನೀನು ಪಾಂಡವರಲ್ಲಿ ಅತಿಚಿಕ್ಕವರಾದ, ಪುರುಷೋತ್ತಮರಾದ ನಕುಲ ಸಹದೇವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತೀಯೋ ಅಂತಹ ನೀನು ತೀಕ್ಷ್ಣ ಮುಖವುಳ್ಳ, ಎರಡು ನಾಲಿಗೆಗಳುಳ್ಳ, ಎರಡು ಕೃಷ್ಣ ಸರ್ಪಗಳನ್ನು ಕೆಣಕಿ ಅವುಗಳ ಬಾಲದ ಮೇಲೆ ಮತ್ತನಾಗಿ ನಿಲ್ಲುತ್ತೀಯೆ.
ಯಥಾ ಚ ವೇಣುಃ ಕದಳೀ ನಲೋ ವಾ
ಫಲಂತ್ಯಭಾವಾಯ ನ ಭೂತಯೇತ್ಮನಃ ।
ತಥೈವ ಮಾಂ ತೈಃ ಪರಿರಕ್ಷ್ಯಮಾಣಾ
ಮಾದಾಸ್ಯಸೇ ಕರ್ಕಟಕೀವಗರ್ಭಮ್ ॥9॥
ಹೇಗೆ ಬಿದಿರಾಗಲೀ, ಬಾಳೆಯಾಗಲೀ, ನಲವೃಕ್ಷವಾಗಲೀ ತಮ್ಮ ನಾಶಕ್ಕಾಗಿಯೇ ಫಲವನ್ನು ಬಿಡುತ್ತವೆಯೋ, ತಮ್ಮ ಸಮೃದ್ಧಿಗಾಗಿ

ಬಿಡುವುದಿಲ್ಲವೋ ಅದರಂತೆ ಆ ಪಾಂಡವರಿಂದ ರಕ್ಷಿಸಲ್ಪಡುವ ನನ್ನನ್ನು ಕರೆದುಕೊಂಡು ಹೋಗಲು ಚೇಳು ಗರ್ಭವನ್ನು ಧರಿಸಿದಂತೆ ಬಯಸುತ್ತೀಯೆ.
ಜಯದ್ರಥಃ
ಜಾನಾಮಿ ಕೃಷ್ಣೇ ವಿದಿತಂ ಮಮೈತದ್
ಯಥಾವಿಧಾಸ್ತೇ ನರದೇವಪುತ್ರಾಃ |
ನ ತ್ವೇವಮೇತೇನ ವಿಭೀಷಣೇನ ಶಕ್ಯಾ
ವಯಂ ತ್ರಾಸಯಿತುಂ ತ್ವಯಾಽದ್ಯ ॥10॥
ಜಯದ್ರಥ ಎಲೌ ದ್ರೌಪದಿಯೇ, ರಾಜಕುಮಾರರಾದ ನಿನ್ನ ಆ ಪತಿಗಳು ಎಂಥವರು ಎಂದು ನಾನು ತಿಳಿದಿದ್ದೇನೆ. ಇಂತಹ ಬೆದರಿಕೆಗಳಿಂದ ನೀನು ನನ್ನನ್ನು ಈ ದಿವಸ ಹೆದರಿಸಲು ಸಾಧ್ಯವಿಲ್ಲ.
ವಯಂ ಪುನಃ ಸಪ್ತದಶೇಷು ಕೃಷ್ಣೇ
ಕುಲೇಷು ಸರ್ವೇಽನವಮೇಷು ಜಾತಾಃ |
ಷಡ್ಭ್ಯೋ ಗುಣೇಭ್ಯೋಽಭ್ಯಧಿಕಾ ವಿಹೀನಾನ್
ಮನ್ಯಾಮಹೇ ದ್ರೌಪದೀ ಪಾಂಡುಪುತ್ರಾನ್ ॥11
ಎಲೌ ದ್ರೌಪದಿಯೇ, ನಾವಾದರೂ ಹದಿನೇಳು ಶ್ರೇಷ್ಠ ಕುಲದಲ್ಲಿ ಜನಿಸಿದ್ದೇವೆ. ಸಂಧಿವಿಗ್ರಹ ಮೊದಲಾದ ಆರು ರಾಜಗುಣಗಳಿಂದ ನಾವು ಉತ್ಕೃಷ್ಟರಾಗಿದ್ದೇವೆ. ದ್ರೌಪದಿಯೇ, ಪಾಂಡುಪುತ್ರರು ಹೀನರಾಗಿದ್ದಾರೆ ಎಂದು ನಾವು ಭಾವಿಸುತ್ತೇವೆ.
ಸಾ ಕ್ಷಿಪ್ರಮಾತಿಷ್ಠ ಗಜಂ ರಥಂ ವಾ
ನ ವಾಕ್ಯಮಾತ್ರೇಣ ವಯಂ ಹಿ ಶಕ್ಯಾಃ |
ಆಶಂಸ ವಾ ತ್ವಂ ಕೃಪಣಂ ವದಂತೀ
ಸೌವೀರರಾಜಸ್ಯ ಪುನಃ ಪ್ರಸಾದಮ್ ॥12॥
ಅಂತಹ ನೀನು ಬೇಗ ನನ್ನ ಗಜವನ್ನಾಗಲೀ ಅಥವಾ ನನ್ನ ರಥವನ್ನಾಗಲೀ ಏರು. ಕೇವಲ ಮಾತಿನಿಂದ ನನ್ನನ್ನು ನಿವಾರಿಸಲು ಶಕ್ಯವಿಲ್ಲ. ಅಥವಾ ಹೀಗೆ ಕಾರ್ಪಣ್ಯದಿಂದ ಮಾತನಾಡುತ್ತಾ ಸೌವೀರರಾಜನಾದ ನನ್ನ ಅನುಗ್ರಹವನ್ನು ಆಶಿಸುವವಳಾಗು.
ದ್ರೌಪದೀ
ಮಹಾಬಲಾ ಕಿಂತ್ವಿಹ ದುರ್ಬಲೇವ
ಸೌವೀರರಾಜಸ್ಯ ಮತಾಹಮಸ್ಮಿ |
ನಾಹಂ ಪ್ರಮಾಥಾದಿಹ ಸಂಪ್ರತೀತಾ
ಸೌವೀರರಾಜಂ ಕೃಪಣಂ ವದೇಯಮ್ ॥13॥
ದ್ರೌಪದೀ ಮಹಾಬಲವುಳ್ಳ ನನ್ನನ್ನು ಸೌವೀರರಾಜನು ಇಂದು ಇಲ್ಲಿ ದುರ್ಬಲಳೆಂದು ತಿಳಿದಿದ್ದಾನೆ. ಅವನ ಘರ್ಷಣೆಗೆ ಒಳಗಾದ ನಾನು ಮನಸ್ಸಮಾಧಾನದಿಂದ ಸೌವೀರರಾಜನನ್ನು ಕುರಿತು ಯಾವ ದೈನ್ಯದ ಮಾತನ್ನೂ ಆಡುವುದಿಲ್ಲ.
ಯಸ್ಯಾ ಹಿ ಕೃಷ್ಣೌ ಪದವೀಂ ಚರೇತಾಂ
ಸಮಾಸ್ಥಿತಾವೇಕರಥೇ ಸಮೇತೌ |
ಇಂದ್ರೋಽಪಿ ತಾಂ ನಾಪಹರೇತ್ ಕಥಂಚಿತ್
ಮನುಷ್ಯಮಾತ್ರಃ ಕೃಪಣಃ ಕುತೋಽನ್ಯಃ ॥14॥
ಯಾವಳ ಮಾರ್ಗವನ್ನು ಒಂದೇ ರಥದಲ್ಲಿ ಕುಳಿತ ಇಬ್ಬರು ಕೃಷ್ಣರು (ಕೃಷ್ಣಾರ್ಜುನರು) ಅನುಸರಿಸಿ ರಕ್ಷಿಸುತ್ತಾರೆಯೋ ಅಂತಹ ನನ್ನನ್ನು ಇಂದ್ರನೂ ಯಾವ ಕಾರಣದಿಂದಲೂ ಅಪಹರಿಸಲಾರ. ಇನ್ನು ಕೃಪಣನಾದ ಒಬ್ಬ ಕೇವಲ ಮನುಷ್ಯನು ಹೇಗೆ ಅಪಹರಿಸಿಯಾನು?
ಯದಾ ಕಿರೀಟೀ ಪರವೀರಘಾತೀ
ನಿಘ್ನನ್ ರಥಸ್ಥೋ ದ್ವಿಷತಾಂ ಮನಾಂಸಿ |
ಮದಂತರೇ ತ್ವದ್ಧ್ವಜಿನೀಂ ಪ್ರವೇಷ್ಟಾ
ಕಕ್ಷಂ ದಹನ್ನಗ್ನಿರಿವೋಷ್ಣಗೇಷು ॥15॥
ಜನಾರ್ದನಃ ಸಾಂಧಕವೃಷ್ಣಿವೀರೋ
ಮಹೇಷ್ವಾಸಃ ಕೇಕಯಾಶ್ಚಾಪಿ ಸರ್ವೇ |
ಏತೇ ಹಿ ಸರ್ವೇ ಮಮ ರಾಜಪುತ್ರಾಃ
ಪ್ರಹೃಷ್ಟರೂಪಾಃ ಪದವೀಂ ಚರೇಯುಃ ॥16॥
ಯಾವಾಗ ಶತ್ರುವೀರಘಾತಿಯಾದ ಅರ್ಜುನನು ರಥದಲ್ಲಿ ಕುಳಿತು ಶತ್ರುಗಳ ಮನಸ್ಸನ್ನು ನಾಶಗೊಳಿಸುತ್ತಾ ನನ್ನ ನಿಮಿತ್ತದಿಂದಾಗಿ ನಿನ್ನ ಸೈನ್ಯವನ್ನು ಬೇಸಿಗೆ ಕಾಲದಲ್ಲಿ ಹುಲ್ಲುಗಾವಲನ್ನು ಪ್ರವೇಶಿಸುವ ಅಗ್ನಿಯಂತೆ ಪ್ರವೇಶಿಸುತ್ತಾನೆಯೋ ಆಗ ಅಂಧಕ ವೃಷ್ಣಿವೀರರ ಜೊತೆಯಲ್ಲಿ ಸೇರಿದ ಕೃಷ್ಣನೂ ಮಹಾಧನುರ್ಧಾರಿಯಾದ ಎಲ್ಲ ಕೈಕೇಯರೂ, ನನ್ನ ರಾಜಪುತ್ರರೂ ಎಲ್ಲರೂ ಸಂತೋಷದಿಂದ ಅವನನ್ನು ಹಿಂಬಾಲಿಸುವರು.
ಮೌರ್ವೀವಿಸೃಷ್ಟಾಃ ಸ್ತನಯಿತ್ನುಘೋಷಾ
ಗಾಂಡೀವಮುಕ್ತಾಸ್ತ್ವತಿವೇಗವಂತಃ |
ಹಸ್ತಂ ಸಮಾಹತ್ಯ ಧನಂಜಯಸ್ಯ

ಭೀಮಾಃ ಶಬ್ದಂ ಘೋರತರಂ ನದಂತಿ ॥17॥
ಅರ್ಜುನನ ಪಾಣಿತಲವನ್ನು ಸ್ಪರ್ಶಮಾಡಿ ಹೆದೆಯಿಂದ ಚಿಮ್ಮಿದ ಸಿಡಿಲಿನ ಘೋಷವನ್ನು ಹೊಂದಿರುವ ಗಾಂಡೀವ ಧನುಸ್ಸಿನಿಂದ ಹೊರಹೊಮ್ಮಿದ ಅತಿವೇಗಶಾಲಿಗಳಾದ ಧನಂಜಯನ ಬಾಣಗಳು ಭಯಂಕರ ಶಬ್ದವನ್ನು ಮಾಡುತ್ತಾ ಬಹಳ ಘೋರವಾಗಿ ಗರ್ಜಿಸುತ್ತವೆ.
ಗಾಂಡೀವಮುಕ್ತಾಂಶ್ಚ ಮಹಾಶರೌಘಾನ್
ಪತಂಗಸಂಘಾನಿವ ಶೀಘ್ರವೇಗಾನ್ ।
ಸಶಂಖಘೋಷಃ ಸತಲತ್ರಘೋಷೋ
ಗಾಂಡೀವಧನ್ವಾ ಮುಹುರುದ್ವಹಂಶ್ಚ ।
ಯದಾ ಶರಾನರ್ಪಯಿತಾ ತವೋರಸಿ
ತದಾ ಮನಸ್ತೇ ಕಿಮಿವಾಭವಿಷ್ಯತ್ ॥18॥
ತನ್ನ ದೇವದತ್ತ ಶಂಖದ ಘೋಷದ ಜೊತೆಯಲ್ಲಿ ಮತ್ತು ಹಸ್ತರಕ್ಷಣೆಗಳ ಘೋಷದ ಜೊತೆಯಲ್ಲಿ ಗಾಂಡೀವ ಧನುಸ್ಸನ್ನು ಹೊಂದಿದ ಅರ್ಜುನನು ಆ ಧನುಸ್ಸನ್ನು ಎತ್ತಿ ಪತಂಗಗಳ ಸಮೂಹದಂತೆ ಶೀಘ್ರವೇಗವುಳ್ಳ ಗಾಂಡೀವ ಮುಕ್ತವಾದ ದೊಡ್ಡ ಬಾಣಗಳ ಸಮೂಹವನ್ನು ನಿನ್ನ ಎದೆಯಲ್ಲಿ ಅರ್ಪಿಸುತ್ತಾನೆಯೋ ಆಗ ನಿನ್ನ ಮನಸ್ಸು ಹೇಗಾದೀತು?
ಗದಾಹಸ್ತಂ ಭೀಮಮಭಿದ್ರವಂತಂ
ಮಾದ್ರೀಪುತ್ರೌ ಸಂಪತಂತೌ ದಿಶಶ್ಚ ।
ಅಮರ್ಷಜಂ ಕ್ರೋಧವಿಷಂ ವಮಂತೌ
ದೃಷ್ಟ್ವಾ ಚಿರಂ ತಾಪಮುಪೈಷ್ಯಸೇಽಧಮ ॥19॥
ಎಲೈ ಅಧಮನೇ, ಕೈಯಲ್ಲಿ ಗದೆಯನ್ನು ಹಿಡಿದು ಮೇಲೇರಿಬರುತ್ತಿರುವ ಭೀಮಸೇನನನ್ನೂ ದಿಕ್ಕು ದಿಕ್ಕುಗಳಲ್ಲಿ ಕೋಪದಿಂದ ಉಂಟಾದ ವಿಷವನ್ನು ಕಾರುತ್ತಾ ನಿನ್ನ ಮೇಲೆ ಎರಗುವ ಮಾದ್ರಿಪುತ್ರರಾದ ನಕುಲಸಹದೇವರನ್ನೂ ನೋಡಿ ಬಹುಕಾಲ ತಾಪವನ್ನು ಹೊಂದುವಿ.
ಯಥಾ ಚಾಹಂ ನಾತಿಚರೇ ಕಥಂಚಿತ್
ಪತೀನ್ ಮಹಾರ್ಹಾನ್ ಮನಸಾಪಿ ಜಾತು ।
ತೇನಾದ್ಯ ಸತ್ಯೇನ ವಶೀಕೃತಂ ತ್ವಾಂ
ದ್ರಷ್ಟಾಸ್ಮಿ ಪಾರ್ಥೈಃ ಪರಿಕೃಷ್ಯಮಾಣಮ್ ॥20॥
ನಾನು ಯಾವ ರೀತಿಯಲ್ಲಿ ಬಹಳ ಪೂಜ್ಯರಾದ ನನ್ನ ಪತಿಗಳನ್ನು ಮನಸ್ಸಿನಿಂದಲೂ ಅತಿಕ್ರಮಿಸುವುದಿಲ್ಲವೋ ಆ ಸತ್ಯದಿಂದ ನೀನು ಈ ದಿನ ಪಾಂಡವರಿಂದ ಎಳೆದಾಡಲ್ಪಡುವುದನ್ನು ನೋಡುವೆನು.
ನ ಸಂಭ್ರಮಂ ಗಂತುಮಹಂ ಹಿ ಶಕ್ಷ್ಯೇ
ತ್ವಯಾ ನೃಶಂಸೇನ ವಿಕೃಷ್ಯಮಾಣಾ ।
ಸಮಾಗತಾಽಹಂ ಹಿ ಕುರುಪ್ರವೀರೈಃ
ಪುನರ್ವನಂ ಕಾಮ್ಯಕಮಾಗತಾಽಸ್ಮಿ ॥21॥
ಕ್ರೂರನಾದ ನಿನ್ನಿಂದ ಎಳೆಯಲ್ಪಟ್ಟು ನಾನು ಯಾವ ಕಳವಳವನ್ನೂ ಹೊಂದಲು ಸಾಧ್ಯವಾಗುವುದಿಲ್ಲ. ಕುರುಪ್ರವೀರರ ಜೊತೆಯಲ್ಲಿ ಸಮಾಗಮವನ್ನು ಹೊಂದಿ ನಾನು ಪುನಃ ಕಾಮ್ಯಕವನಕ್ಕೇ ಬರುವವಳಾಗುತ್ತೇನೆ.
ವೈಶಂಪಾಯನಃ
ಇತ್ಯೇವಮುಕ್ತಸ್ತು ಸ ಸಿಂಧುನಾಥಃ
ತಾಂ ದ್ರೌಪದೀಮಾಹ ವಿಶಾಲನೇತ್ರಾಮ್ ।
ಆರುಹ್ಯತಾಮಾಶು ರಥಂ ಮದೀಯಂ
ಮಾತ್ವಾಂ ಬಲಾದ್ ದ್ರೌಪದಿ ಕರ್ಷಯೇಽಹಮ್ ॥22॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಸೈಂಧವನು ವಿಶಾಲನೇತ್ರೆಯಾದ ದ್ರೌಪದಿಯನ್ನು ಕುರಿತು ಬೇಗ ನನ್ನ ರಥವನ್ನು ಏರು. ಇಲ್ಲದಿದ್ದರೆ ನಾನು ಕೈಯಿಂದ ನಿನ್ನನ್ನು ಎಳೆಯಬೇಕಾದೀತು ಎಂದು ಹೇಳಿದನು.
ಸಾ ತಾನನುಪ್ರೇಕ್ಷ್ಯ ವಿಶಾಲನೇತ್ರಾ
ಜಿಘೃಕ್ಷಮಾಣಾನವಭರ್ತ್ಸಯಂತೀ ।
ಪ್ರೋವಾಚ ಮಾ ಮಾ ಸ್ಪೃಶತೇತಿ ಭೀತಾ
ಧೌಮ್ಯಂ ಪ್ರಚುಕ್ರೋಶ ಪುರೋಹಿತಂ ಸಾ ॥23॥
ವಿಶಾಲನೇತ್ರೆಯಾದ ಅವಳು ತನ್ನನ್ನು ಹಿಡಿಯಲು ಬರುವ ಜಯದ್ರಥನನ್ನೂ, ಅವನ ಸೈನಿಕರನ್ನೂ ನೋಡಿ ಅವರನ್ನು ಗದರಿಸುತ್ತಾ ನನ್ನನ್ನು ಮುಟ್ಟಬೇಡಿ, ಮುಟ್ಟಬೇಡಿ ಎಂದು ಹೇಳಿ ಭಯದಿಂದ ಪುರೋಹಿತರಾದ ಧೌಮ್ಯರನ್ನು ಕೂಗಿ ಕರೆದಳು.
ಜಗ್ರಾಹ ತಾಮುತ್ತರವಸ್ತ್ರದೇಶೇ
ಜಯದ್ರಥಸ್ತಂ ಸಮವಾಕ್ಷಿಪತ್ ಸಾ ।
ತಯಾ ಸಮಾಕ್ಷಿಪ್ತತನುಃ ಸ ಪಾಪಃ
ಪಪಾತ ಶಾಖೀವ ನಿಕೃತ್ತಮೂಲಃ ॥24॥
ಜಯದ್ರಥನು ಅವಳ ಉತ್ತರೀಯದಲ್ಲಿ ಹಿಡಿದನು. ಆಗ ಅವಳು ತನ್ನ ಉತ್ತರೀಯವನ್ನು ಕೊಡವಿದಳು. ಆಗ ಆ ಪಾಪಿಯು

ಬುಡವನ್ನು ಕಡಿದ ಮರದಂತೆ ದೂರದಲ್ಲಿ ಹೋಗಿ ಬಿದ್ದನು.
ಪ್ರಗೃಹ್ಯಮಾಣಾ ತು ಮಹಾಜವೇನ
ಮುಹುರ್ವಿನಿಃಶ್ವಸ್ಯ ಚ ರಾಜಪುತ್ರೀ |
ಸಾ ಕೃಷ್ಯಮಾಣಾ ರಥಮಾರುರೋಹ
ಧೌಮ್ಯಸ್ಯ ಪಾದಾವಭಿವಾದ್ಯ ಕೃಷ್ಣಾ ॥25॥
ಅವನು ಪುನಃ ಮಹಾವೇಗದಿಂದ ಕೈಯನ್ನು ಹಿಡಿದು ಎಳೆಯಲು ಬರುತ್ತಿರಲು ರಾಜಕುಮಾರಿಯಾದ ದ್ರೌಪದಿಯು ಧೌಮ್ಯರ ಪಾದಗಳಿಗೆ ನಮಸ್ಕರಿಸಿ ತಾನೇ ರಥವನ್ನು ಏರಿದಳು.
ಧೌಮ್ಯಃ
ನೇಯಂ ಶಕ್ಯಾ ತ್ವಯಾ ನೇತುಮವಿಜಿತ್ಯ ಮಹಾರಥಾನ್ |
ಧರ್ಮಂ ಕ್ಷತ್ರಸ್ಯ ಪೌರಾಣಮವೇಕ್ಷಸ್ವ ಜಯದ್ರಥ ॥26॥
ಧೌಮ್ಯರು ಜಯದ್ರಥನೇ, ಮಹಾರಥರನ್ನು ಜಯಿಸದೆ ಇವಳನ್ನು ನೀನು ಕರೆದುಕೊಂಡು ಹೋಗುವುದು ಸಾಧ್ಯವಿಲ್ಲ. ಪುರಾತನವಾದ ಕ್ಷತ್ರಿಯ ಧರ್ಮವನ್ನು ಗಮನಿಸು.
ಕ್ಷುದ್ರಂ ಕೃತ್ವಾ ಫಲಂ ಪಾಪಂ ತ್ವಂ ಪ್ರಾಪ್ಸ್ಯಸಿ ನ ಸಂಶಯಃ |
ಆಸಾದ್ಯ ಪಾಂಡವಾನ್ ವೀರಾನ್ ಧರ್ಮರಾಜಪುರೋಗಮಾನ್ ॥
ನೀನು ನೀಚವಾದ ಕರ್ಮವನ್ನು ಮಾಡಿ ಧರ್ಮರಾಜ ಮೊದಲಾದ ವೀರರಾದ ಪಾಂಡವರನ್ನು ಸಂಧಿಸಿ ಆ ನೀಚಕರ್ಮದ ಫಲವನ್ನು ಹೊಂದುವಿ ಎಂಬ ವಿಷಯದಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ಇತ್ಯುಕತ್ವ ಹ್ರಿಯಮಾಣಾಂ ತಾಂ ರಾಜಪುತ್ರೀಂ ಯಶಸ್ವಿನೀಮ್ |
ಅನ್ವಗಚ್ಛತ್ ತದಾ ಧೌಮ್ಯಃ ಪದಾತಿಗಣಮಧ್ಯಗಃ ॥28॥
ವೈಶಂಪಾಯನ ರಾಜಕುಮಾರಿಯಾದ ಯಶಸ್ವಿನಿಯಾದ ದ್ರೌಪದಿಯನ್ನು ಕುರಿತು ಹೀಗೆ ಹೇಳಿ ಧೌಮ್ಯರು ಅಪಹರಿಸಲ್ಪಡುತ್ತಿದ್ದ ಅವಳನ್ನು ಪದಾತಿಗಳ ಸಮೂಹದ ಮಧ್ಯದಲ್ಲಿ ಸೇರಿ ಹಿಂಬಾಲಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್ಪಂಚಾಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ದ್ರೌಪದೀಹರಣಪರ್ವಣಿ ದ್ರೌಪದ್ಯ ಸೈಂಧವರಥಾರೋಹಣಂ ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತಾರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಐವತ್ತೇಳನೆಯ ಅಧ್ಯಾಯ
ಬೇಟೆಗೆ ಹೊರಟ ಪಾಂಡವರಿಂದ ಅಪಶಕುನಗಳನ್ನು ಕಂಡು ಆಶ್ರಮಕ್ಕೆ ಪ್ರತಿನಿವೃತ್ತಿ. ದಾಸಿಯಿಂದ ದ್ರೌಪದಿಯ ವೃತ್ತಾಂತವನ್ನು ತಿಳಿದು
ಜಯದ್ರಥನನ್ನು ಹಿಂಬಾಲಿಸಿ ಅವನ ದರ್ಶನ.
ವೈಶಂಪಾಯನಃ
ತತೋ ದಿಶಃ ಸಂಪ್ರವಿಹೃತ್ಯ ಪಾರ್ಥಾ
ಮೃಗಾನ್ ವರಾಹಾನ್ ಮಹಿಷಾಂಶ್ಚ ಹತ್ವಾ |
ಧನುರ್ಧರಾಃ ಶ್ರೇಷ್ಠತಮಾಃ ಪೃಥಿವ್ಯಾಂ
ಪೃಥಕ್ಚರಂತಃ ಸಹಿತಾ ಬಭೂವುಃ ॥1॥
ವೈಶಂಪಾಯನ ಆಗ ಧನುರ್ಧರರೂ, ಅತ್ಯಂತ ಶೇಷ್ಠರೂ ಆದ ಆ ಪಾಂಡವರು ಬೇರೆ ಬೇರೆಯಾಗಿ ಆ ಕಾಡಿನಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ವಿಹಾರವನ್ನು ಮಾಡಿ ಮೃಗಗಳನ್ನೂ, ವರಾಹಗಳನ್ನೂ, ಮಹಿಷಗಳನ್ನೂ ಕೊಂದು ಪುನಃ ಒಂದುಗೂಡಿದರು.
ತತೋ ಮೃಗವ್ಯಾಲಗಣಾನುಕೀರ್ಣಂ
ಮಹಾವನಂ ತದ್ ವಿಹಗೋಪಘುಷ್ಟಮ್ |
ಭ್ರಾತೄಂಶ್ಚ ತಾನಭ್ಯವದದ್ ಯುಧಿಷ್ಠಿರಃ
ಶ್ರುತ್ವಾ ಗಿರೋ ವ್ಯಾಹರತಾಂ ಮೃಗಾಣಾಮ್ ॥2॥
ಆಗ ಮೃಗಗಳ ಮತ್ತು ವ್ಯಾಲಗಳ ಸಮೂಹದಿಂದ ಸಂಕುಲವಾದ, ಪಕ್ಷಿಗಳ ನಾದದಿಂದ ತುಂಬಿದ, ಆ ಮಹಾವನವನ್ನು ನೋಡಿ ಅರಚುವ ಮೃಗಗಳ ಶಬ್ದವನ್ನು ಕೇಳಿ ಆ ತಮ್ಮಂದಿರನನ್ನು ಕುರಿತು ಯುಧಿಷ್ಠಿರನು ಮಾತನಾಡಿದನು.
ಆದಿತ್ಯದೀಪ್ತಾಂ ದಿಶಮಭ್ಯುಪೇತ್ಯ
ಮೃಗಾ ದ್ವಿಜಾಃ ಕ್ರೂರಮಿಮೇ ವದಂತಿ |
ಆಯಾಸಮುಗ್ರಂ ಪ್ರತಿವೇದಯಂತೋ
ಮಹಾವನಂ ಶತ್ರುಭಿರ್ಬಾಧ್ಯಮಾನಮ್ ॥3॥
ಆದಿತ್ಯನು ಬೆಳಗುವ ಪೂರ್ವದಿಕ್ಕನ್ನು ಸೇರಿ ಮೃಗಪಕ್ಷಿಗಳು ಕ್ರೂರವಾಗಿ ಶಬ್ದವನ್ನು ಮಾಡುತ್ತಿವೆ. ಇವು ಉಗ್ರವಾದ ಒಂದು ಕಷ್ಟದ ಸೂಚನೆಯನ್ನೂ ಮತ್ತು ಈ ಮಹಾವನವು ಶತ್ರುಗಳಿಂದ ಬಾಧಿಸಲ್ಪಡುತ್ತದೆ ಎಂಬ ಸೂಚನೆಯನ್ನೂ ಕೊಡುತ್ತಿವೆ.

ಕ್ಷಿಪ್ರಂ ನಿವರ್ತಧ್ವಮಲಂ ಮೃಗೈರ್ನೋ
ಮನೋ ಹಿ ಮೇ ದೂಯತಿ ದಹ್ಯತೇ ಚ |
ಬುದ್ಧಿಂ ಸಮಾಚ್ಛಾದ್ಯ ಚ ಮೇ ಸಮನ್ಯು
ರುದ್ಧೂಯತೇ ಪ್ರಾಣಪತಿಃ ಶರೀರೇ ||4||
ಬೇಗ ಹಿಂದಿರುಗಿರಿ. ನಮಗೆ ಸಂಹರಿಸಲ್ಪಟ್ಟ ಮೃಗಗಳು ಸಾಕು. ನನ್ನ ಮನಸ್ಸು ದುಃಖಗೊಂಡು ದಹಿಸುತಿತದೆ. ನನ್ನ ಬುದ್ಧಿಯನ್ನು ಆವರಿಸಿ ಕೋಪದಿಂದ ಕೂಡಿದ ಪ್ರಾಣನನ್ನು ಪತಿಯನ್ನಾಗಿ ಉಳ್ಳ ಅಗ್ನಿಯು ನನ್ನ ಶರೀರದಲ್ಲಿ ಮೇಲ್ಮುಖವಾಗಿ ಜ್ವಲಿಸುತ್ತಿದೆ.
ಸರಃ ಸುಪರ್ಣೇನ ಹೃತೋರಗೇಂದ್ರ
ಮರಾಜಕಂ ರಾಜ್ಯಮಿವೇಹ ಶಾಸ್ತ್ರಮ್ |
ಏವಂ ವಿಧಂ ಮೇ ಪ್ರತಿಭಾತಿ ಕಾಮ್ಯಕಂ
ಶೌಂಡೈರ್ಯಥಾ ಪೀತರಸಶ್ಚ ಕುಂಭಃ ||5||
ಗರುಡನು ಸರ್ಪವನ್ನು ಅಪಹರಿಸಿದ ಮೇಲೆ ಇರುವ ಸರೋವರದಂತೆ, ಅರಾಜಕವಾದ ರಾಜ್ಯದಂತೆ, ಕಲಿಯುಗದ ಶಾಸ್ತ್ರಾಭ್ಯಾಸದಂತೆ, ಕುಶಲರೂ ರಸವನ್ನು ಕುಡಿದು ಎಸೆದ ಮಡಕೆಯಂತೆ (ಕೊಡದಂತೆ) ಈ ಕಾಮ್ಯಕವನವು ನನಗೆ ತೋರುತ್ತಿದೆ.
ವೈಶಂಪಾಯನಃ
ತೇ ಸೈಂಧವೈರತ್ಯನಿಲೋಗ್ರವೇಗೈರ್ಮಹಾಜವೈರ್ವಾಜಿಭಿರುಹ್ಯಮಾನಾಃ |
ಯುಕ್ತೈರ್ಬೃಹದ್ಭಿಃ ಸುರಥೈರ್ನೃವೀರಾಸ್ತದಾಽಽಶ್ರಮಾಯಾಭಿಮುಖಾ ಬಭೂವುಃ ||6||
ವೈಶಂಪಾಯನ ಆಗ ಆ ವೀರ ಸಿಂಧುದೇಶದಲ್ಲಿ ಜನಿಸಿದ ವಾಯುವಿನಂತೆ ಉಗ್ರವೇಗವುಳ್ಳ, ಮಹಾಜವವುಳ್ಳ ಕುದುರೆಗಳನ್ನು ಹೂಡಿದ ದೊಡ್ಡ ರಥಗಳಲ್ಲಿ ಸಂಚರಿಸುವವರಾಗಿ ಆಶ್ರಮಕ್ಕೆ ಅಭಿಮುಖವಾದರು.
ತೇಷಾಂ ತು ಗೋಮಾಯುರನಲ್ಪಘೋಷೋ
ನಿವರ್ತತಾಂ ವಾಮಮುಪೇತ್ಯ ಪಾರ್ಶ್ವಮ್ |
ಪ್ರವ್ಯಾಹರತ್ತತ್ಪ್ರವಿಮೃಶ್ಯ ರಾಜಾ
ಪ್ರೋವಾಚ ಭೀಮಂ ಚ ಧನಂಜಯಂ ಚ ||7||
ಅವರು ಹಾಗೆ ಹಿಂದಿರುಗಲು ಹೊರಟಾಗ ಅವರ ಎಡಭಾಗದಲ್ಲಿ ಒಂದು ನರಿಯು ದೊಡ್ಡದಾಗಿ ಶಬ್ದವನ್ನು ಮಾಡಿತು. ಧರ್ಮರಾಜನು ಅದನ್ನು ವಿಮರ್ಶೆ ಮಾಡಿ ಭೀಮ ಮತ್ತು ಅರ್ಜುನರನ್ನು ಕುರಿತು ಹೀಗೆ ಮಾತನಾಡಿದನು.
ಯದಾ ವದತ್ಯೇಷ ವಿಹೀನಯೋನಿಃ
ಶಾಲಾವೃಕೋ ವಾಮಮುಪೇತ್ಯ ಪಾರ್ಶ್ವಮ್ |
ಸುವ್ಯಕ್ತಮಸ್ಮಾನವಮನ್ಯ ಪಾಪೈಃ
ಕೃತೋಽಭಿಮರ್ದಃ ಕುರುಭಿಃ ಪ್ರಸಹ್ಯ ||8||
ಈ ನೀಚಯೋನಿಯಲ್ಲಿರುವ ನರಿಯು ನಮ್ಮ ಎಡಪಾರ್ಶ್ವಕ್ಕೆ ಬಂದು ಹೇಳುತ್ತಿರುವುದನ್ನು ನೋಡಿದರೆ ಪಾಪಿಷ್ಠರಾದ ಕುರುಗಳು ನಮ್ಮನ್ನು ಅವಮಾನ ಮಾಡಿ ಬಲದಿಂದ ನಮಗೆ ಏನೋ ಮರ್ದನೆಯನ್ನು ಮಾಡಿದ್ದಾರೆ ಎಂದು ಸ್ಪಷ್ಟವಾಗಿ ತೋರುತ್ತದೆ.
ಇತ್ಯೇವ ತೇ ತದ್ವನಮಾವಿಶಂತೋ
ಮಹತ್ಯರಣ್ಯೇ ಮೃಗಯಾಂ ಚರಿತ್ವಾ |
ಬಾಲಾಮಪಶ್ಯಂತ ತದಾ ರುದಂತೀಂ
ಧಾತ್ರೇಯಿಕಾಂ ಪ್ರೇಷ್ಯವಧೂಂ ಪ್ರಿಯಾಯಾಃ ||9||
ಹೀಗೆ ಅವರು ಮಹಾರಣ್ಯದಲ್ಲಿ ಬೇಟೆಯಾಡಿ ಆ ಕಾಡಿನಲ್ಲಿ ತಿರುಗಿ ಹಿಂದಿರುಗುತ್ತಾ ಆಶ್ರಮದ ಬಾಗಿಲಲ್ಲಿ ತಮ್ಮ ಪ್ರಿಯೆಯ ದಾಸಿಯ ಚಿಕ್ಕವಯಸ್ಸಿನ ಪುತ್ರಿಯು ಅಳುತ್ತಿರುವುದನ್ನು ನೋಡಿದರು.
ತಾಮಿಂದ್ರಸೇನಸ್ತ್ವರಿತೋಽಭಿಸೃತ್ಯ
ರಥಾದವಪ್ಲುತ್ಯ ತತೋಽಭ್ಯಧಾವತ್ |
ಪ್ರೋವಾಚ ಚೈನಾಂ ವಚನಂ ನರೇಂದ್ರ
ಧಾತ್ರೇಯಿಕಾಮಂತಿತರಸ್ತದಾನೀಮ್ ||10||
ಎಲೈ ನರೇಂದ್ರನೇ, ಆಗ ಧರ್ಮರಾಜನ ಸಾರಥಿಯಾದ ಇಂದ್ರಸೇನನು ರಥದಿಂದ ಧುಮುಕಿ ಶೀಘ್ರವಾಗಿ ಅವಳ ಬಳಿಗೆ ಓಡಿ ಅವಳ ಸಮೀಪದಲ್ಲಿ ನಿಂತು ಆಗ ಅವಳನ್ನು ಕುರಿತು ಹೀಗೆ ಮಾತನಾಡಿದನು.
ಕಿಂ ರೋದಿಷಿ ತ್ವಂ ಪತಿತಾ ಧರಣ್ಯಾಂ
ಕಿಂ ತೇ ಮುಖಂ ಶುಷ್ಯತಿ ದೀನವರ್ಣಮ್ |
ಕಚ್ಚಿನ್ನ ಪಾಪೈಃ ಸುನೃಶಂಸಕೃದ್ಭಿಃ
ಪ್ರಮಾಥಿತಾ ದ್ರೌಪದೀ ರಾಜಪುತ್ರೀ ||11||
ಏಕೆ ನೆಲದಲ್ಲಿ ಬಿದ್ದು ಅಳುತ್ತಿದ್ದೀಯೆ? ನಿನ್ನ ಮುಖವು ದೈನ್ಯದಿಂದ ಏಕೆ ಬಾಡಿಹೋಗಿದೆ? ಕ್ರೂರ ಕರ್ಮಿಗಳಾದ ಆ ಪಾಪಿಗಳು ರಾಜಕುಮಾರಿಯಾದ ದ್ರೌಪದಿಗೆ ಯಾವ ಅವಮಾನವನ್ನೂ ಮಾಡಿಲ್ಲವಷ್ಟೆ?
ಪರ್ಯಾಕುಲಾ ಸಾಧು ಸಮೀಕ್ಷ್ಯ ಸೂತ
ಮಭ್ಯಾಪತಂತಂ ದ್ರುತಮಿಂದ್ರಸೇನಮ್ |
ಉರೋ ಘ್ನತೀ ಕಷ್ಟತರಂ ತದಾನೀ

ಮುಚ್ಚೈಃ ಪ್ರಚುಕ್ರೋಶ ಹತೇತಿ ದೇವೀ ॥12॥
ವೈಶಂಪಾಯನ ಗಾಬರಿಗೊಂಡಿದ್ದ ಆ ಧಾತ್ರೇಯಿ ಈಕೆಯು ಸೂತನಾದ ಇಂದ್ರಸೇನನು ಶೀಘ್ರವಾಗಿ ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ತನ್ನ ಎದೆಯನ್ನು ದುಃಖಕರವಾಗಿ ಬಡಿದುಕೊಂಡು ಆಗ ದ್ರೌಪದಿಯು ಅಪಹೃತಳಾಗಿದ್ದಾಳೆ ಎಂದು ಗಟ್ಟಿಯಾಗಿ ಕಿರುಚಿದಳು.

ಇಂದ್ರಸೇನಃ
ಅಚಿಂತ್ಯರೂಪಾ ತು ವಿಶಾಲನೇತ್ರಾ
ಶರೀರತುಲ್ಯಾ ಕುರುಪುಂಗವಾನಾಮ್ |
ಕೇನಾತ್ಮನಾಶಾಯ ಪದಾऽಪನೀತಾ
ಛಿದ್ರಂ ಸಮಾಸಾದ್ಯ ನರೇಂದ್ರಪತ್ನೀ ॥13॥
ಇಂದ್ರಸೇನ ಅಚಿಂತ್ಯಲಾವಣ್ಯವತಿಯೂ, ವಿಶಾಲನೇತ್ರೆಯೂ, ಕುರುಶ್ರೇಷ್ಠರಿಗೆ ಶರೀರದಂತೆಯೂ ಇರುವ ಆ ನರೇಂದ್ರ ಪತ್ನಿಯನ್ನು ಯಾವನು ತನ್ನ ನಾಶಕ್ಕಾಗಿ ಒಂದು ಅವಕಾಶಕ್ಕಾಗಿ ಕಾಯ್ದು ಕಾಲಿನಿಂದ ನಡೆದುಬಂದು ಅಪಹರಿಸಿದ್ದಾನೆ?
ಯದ್ಯೇವ ದೇವೀ ಪೃಥಿವೀಂ ಪ್ರವಿಷ್ಟಾ
ದಿವಂ ಪ್ರಪನ್ನಾಪ್ಯಥವಾ ಸಮುದ್ರಮ್ |
ತಸ್ಯಾ ಗಮಿಷ್ಯಂತಿ ಪದೇ ಹಿ ಪಾರ್ಥಾ
ಯಥಾ ಹಿ ಸಂತಪ್ಯತಿ ಧರ್ಮಪುತ್ರಃ ॥14॥
ಧರ್ಮರಾಜನು ಸಂತಾಪ ಪಡುವುದನ್ನು ನೋಡಿದರೆ ಭೂಮಿಯ ಒಳಗೆ ಹುದುಗಿರಲಿ ಅಥವಾ ಅಂತರಿಕ್ಷದಲ್ಲಿರಲಿ ಅಥವಾ ಸಮುದ್ರದಲ್ಲಿ ಮುಳುಗಿರಲಿ ಪಾಂಡವರು ಅವಳನ್ನು ಹುಡುಕಿಯೇ ತೀರುತ್ತಾರೆ ಎಂದು ತೋರುತ್ತದೆ.
ಕೋ ಹೀದೃಶಾನಾಮರಿಮರ್ದನಾನಾಂ
ಕ್ಲೇಶಕ್ಷಮಾಣಾಮಪರಾಜಿತಾನಾಮ್ |
ಪ್ರಾಣೈಃ ಸಮಾಮಿಷ್ಟತಮಾಂ ಜಿಹೀರ್ಷೇ
ದನುತ್ತಮಂ ರತ್ನಮಿವ ಪ್ರಮೂಢಃ ॥15॥
ಯಾವ ಮೂಢನು ತಾನೇ ಶತ್ರುಮರ್ದನರಾದ, ಕಷ್ಟಸಹಿಷ್ಣುಗಳಾದ, ಅಪರಾಜಿತರಾದ ಪಾಂಡವರಿಗೆ ಪರಮಪ್ರಿಯಳಾದ ಅತಿಶ್ರೇಷ್ಠ ರತ್ನದಂತಿರುವ ಇಂತಹ ದ್ರೌಪದಿಯನ್ನು ಅಪಹರಿಸಲು ಬಯಸಿಯಾನು?
ನ ಬುಧ್ಯತೇ ನಾಥವತೀಮಿಹಾದ್ಯ
ಬಹಿಶ್ಚರಂ ಹೃದಯಂ ಪಾಂಡವಾನಾಮ್ |
ಕಸ್ಯಾದ್ಯ ಕಾಯಂ ಪ್ರತಿಭಿದ್ಯ ಘೋರಾ
ಮಹೀಂ ಪ್ರವೇಕ್ಷ್ಯಂತಿ ಶಿತಾಃ ಶರಾಗ್ರ್ಯಾಃ ॥16॥
ಅವನು ದ್ರೌಪದಿಯು ಸನಾಥಳೆಂದೂ, ಪಾಂಡವರ ಹೊರಗೆ ಚಲಿಸುವ ಪಾಂಡವರ ಹೃದಯವೆಂದೂ ತಿಳಿದಿಲ್ಲ. ಈ ದಿನ ಹರಿತವಾದ ಮತ್ತು ಘೋರವಾದ ಬಾಣಗಳು ಯಾರ ಶರೀರವನ್ನು ಭೇದಿಸಿ ಭೂಮಿಯನ್ನು ಪ್ರವೇಶಿಸುವುವು?
ಮಾ ತ್ವಂ ಶುಚಸ್ತಾಂ ಪ್ರತಿ ಭೀರು ವಿದ್ಧಿ
ಯಥಾದ್ಯ ಕೃಷ್ಣಾ ಪುನರೇಷ್ಯತೀತಿ |
ನಿಹತ್ಯ ಸರ್ವಾನ್ ದ್ವಿಷತಃ ಸಮಗ್ರಾನ್
ಪಾರ್ಥಾಃ ಸಮೇಷ್ಯಂತ್ಯಥ ಯಾಜ್ಞಸೇನ್ಯಾ ॥17॥
ಎಲೈ ಭೀರುವೇ, ನೀನು ಅವಳನ್ನು ಕುರಿತು ಶೋಕಪಡಬೇಡ. ನಿಶ್ಚಯವಾಗಿ ದ್ರೌಪದಿಯು ಪುನಃ ಬರುವಳು. ಪಾರ್ಥರು ತಮ್ಮ ಶತ್ರುಗಳನ್ನೆಲ್ಲಾ ಕೊಂದು ದ್ರೌಪದಿಯ ಜೊತೆಯಲ್ಲಿ ಸಮಾಗಮವನ್ನು ಹೊಂದುವರು.
ವೈಶಂಪಾಯನಃ
ಅಥಾಬ್ರವೀಚ್ಚಾರು ಮುಖಂ ವಿಮೃಶ್ಯ(ಪ್ರಮೃಜ್ಯ)
ಧಾತ್ರೇಯಿಕಾ ಸಾರಥಿಮಿಂದ್ರಸೇನಮ್ |
ಜಯದ್ರಥೇನಾಪಹೃತಾ ಪ್ರಮಥ್ಯ
ಪಂಚೇಂದ್ರಕಲ್ಪಾನ್ ಪರಿಭೂಯ ಕೃಷ್ಣಾ ॥18॥
ಆಗ ಆ ಧಾತ್ರೇಯಿಕೆಯು ತನ್ನ ಸುಂದರವಾದ ಮುಖವನ್ನು ಒರೆಸಿಕೊಂಡು ಧರ್ಮರಾಜನ ಸಾರಥಿಯಾದ ಇಂದ್ರಸೇನನನ್ನು ಕುರಿತು ಇಂದ್ರಕಲ್ಪರಾದ ಐವರನ್ನು ಪರಿಭವಗೊಳಿಸಿ ಜಯದ್ರಥನು ಬಲಾತ್ಕಾರದಿಂದ ದ್ರೌಪದಿಯನ್ನು ಅಪಹರಿಸಿದನು ಎಂದು ಹೇಳಿದಳು.
ತಿಷ್ಠಂತಿ ವರ್ತ್ಮಾನಿ ನವಾನ್ಯಮೂನಿ
ವೃಕ್ಷಾಶ್ಚ ನ ಮ್ಲಾಂತಿ ತಥೈವ ಭಗ್ನಾಃ |
ಆವರ್ತಯಧ್ವಂ ಹ್ಯನುಯಾತ ಶೀಘ್ರಂ
ನ ದೂರಯಾತೈವ ಹಿ ರಾಜಪುತ್ರೀ ॥19॥
ಅವರು ಹೋದ ಮಾರ್ಗವು ಹಾಗೆಯೇ ಹೊಸದಾಗಿಯೇ ಇದೆ. ಅವರು ದಾರಿಯಲ್ಲಿ ಮುರಿದುಕೊಂಡು ಹೋದ ಮರಗಳು ಇನ್ನೂ ಒಣಗಿಲ್ಲ. ರಥಗಳನ್ನು ತಿರುಗಿಸಿ ನೀವು ಅವಳನ್ನು ಬೇಗ ಹಿಂಬಾಲಿಸಿ. ರಾಜಕುಮಾರಿಯಾದ ದ್ರೌಪದಿಯು ದೂರ ಹೋಗಿರಲು ಸಾಧ್ಯವಿಲ್ಲ.
ಸನ್ನಹ್ಯಧ್ವಂ ಸರ್ವ ಏವೇಂದ್ರಕಲ್ಪಾ

మహాంతి ಚಾರೂಣಿ ಚ ದಂಸನಾನಿ |
ಗೃಹ್ಣೀತ ಚಾಪಾನಿ ಮಹಾಧನಾನಿ
ಶರಾಂಶ್ಚ ಶೀಘ್ರಂ ಪದವೀಂ ಚರಧ್ವಮ್ ॥20॥
ಇಂದ್ರಕಲ್ಪರಾದ ನೀವೆಲ್ಲರೂ ದೊಡ್ಡದಾದ ಮತ್ತು ಸುಂದರವಾದ ಕವಚಗಳನ್ನು ತೊಡಿ. ಬೆಲೆಬಾಳುವ ಬಿಲ್ಲುಗಳನ್ನು ಮತ್ತು ಬಾಣಗಳನ್ನು ತೆಗೆದುಕೊಳ್ಳಿ. ಶೀಘ್ರವಾಗಿ ಅವಳ ಮಾರ್ಗವನ್ನು ಹಿಡಿದು ಹೋಗಿ.
ಪುರಾ ಹಿ ನಿರ್ಭರ್ತ್ಸನದಂಡಮೋಹಿತಾ
ಪ್ರಮೋಹಚಿತ್ತಾ ವದನೇನ ಶುಷ್ಯತಾ |
ದದಾತಿ ಕಸ್ಮೈಚಿದನರ್ಹತೇ ತನುಂ
ವರಾಜ್ಯಪೂರ್ಣಾಮಿವ ಭಸ್ಮನಿ ಸ್ರುಚಮ್ ॥21॥
ಅವಳು ಒಣಗಿದ ಮುಖವುಳ್ಳವಳಾಗಿ ಚಿತ್ತಭ್ರಾಂತಿಗೆ ಒಳಗಾಗಿ ಬೆದರಿಕೆಯ ದಂಡಕ್ಕೆ ಹೆದರಿದವಳಾಗಿ ಆಜ್ಯದಿಂದ ಪೂರ್ಣವಾದ ಸ್ರುಚವನ್ನು ಭಸ್ಮದಲ್ಲಿ ಹಾಕಿದಂತೆ ತನ್ನ ದೇಹವನ್ನು ಅನರ್ಹನಾದ ಇನ್ನೊಬ್ಬನಿಗೆ ಒಪ್ಪಿಸುವುದಕ್ಕಿಂತಲೂ ಮೊದಲೇ ನೀವು ಅವಳ ಬಳಿಗೆ ಹೋಗಿ.
ಪುರಾ ತುಷಾಗ್ನಾವಿವ ಹೂಯತೇ ಹವಿಃ
ಪುರಾ ಶ್ಮಶಾನೇ ಸ್ರಗಿವಾಪವಿದ್ಧ್ಯತೇ |
ಪುರಾ ಚ ಸೋಮೋಽಧ್ವರಗೋಽವಲಿಹ್ಯತೇ
ಶುನಾ ಯಥಾ ವಿಪ್ರಜನೇ ಪ್ರಮೋಹಿತೇ ॥22॥
ಹೊಟ್ಟಿನ ರೂಪವಾದ ಅಗ್ನಿಯಲ್ಲಿ ಹವಿಸ್ಸನ್ನು ಹಾಕಿದಂತಾಗುವ ಮೊದಲೇ, ಸ್ಮಶಾನದಲ್ಲಿ ಹೂಮಾಲೆಯನ್ನು ಎಸೆದಂತೆ ಆಗುವುದಕ್ಕಿಂತ ಮೊದಲೇ, ವಿಪ್ರಜನರು ಅನ್ಯಮನಸ್ಕರಾಗಿರುವಾಗ ನಾಯಿಯು ಅಧ್ವರದ ಹವಿಸ್ಸನ್ನು ನೆಕ್ಕಿದಂತೆ ಆಗುವ ಮೊದಲೇ ನೀವು ಅವಳನ್ನು ಸಮೀಪಿಸಿ.
ಶ್ರುತಿಂ ಚ ಸಮ್ಯಕ್ ಪ್ರಕೃತಿಂ ಮಹಾಧ್ವರೇ
ಗ್ರಾಮ್ಯೋ ಜನೋ ಯದ್ವದಸೌ ನ ನಾಶಯೇತ್ |
ಮಹತ್ಯರಣ್ಯೇ ಮೃಗಯಾಂ ಚರಿತ್ವಾ
ಪುರಾ ಶೃಗಾಲೋ ನಳಿನೀಂ ವಿಗಾಹತೇ |
ಪುರಾ ಹಿ ಮಂತ್ರಾಹುತಿಪೂಜಿತಾಯಾಂ
ಹುತಾಗ್ನಿವೇದ್ಯಾಂ ಬಲಿಭುಜ್ ನಿಲೀಯತೇ ॥23॥
ಒಳ್ಳೆಯ ಯಜ್ಞದಲ್ಲಿ ಗ್ರಾಮ್ಯಜನರು ವೇದವನ್ನು ಸ್ಪರ್ಶಿಸಿ ನಾಶಮಾಡುವಂತೆ ಅವನು ದ್ರೌಪದಿಯನ್ನು ನಾಶಮಾಡದಿರಲಿ. ದೊಡ್ಡ ಕಾಡಿನಲ್ಲಿ ಬೇಟೆಯಾಡಿ ನರಿಯು ಸರೋವರದಲ್ಲಿ ಸ್ನಾನವನ್ನು ಮಾಡದಂತೆ ಆಗುವುದಕ್ಕಿಂತ ಮೊದಲೇ, ವೇದಿಕೆಯಲ್ಲಿ ಸ್ಥಾಪಿಸಿದ ಅಗ್ನಿಯಲ್ಲಿ ಮಂತ್ರಾಹುತಿಯನ್ನು ಕೊಟ್ಟು ಪೂಜಿಸಿದ ಆ ಅಗ್ನಿಯು ಶಾಂತಿಯು ಆಗುವುದಕ್ಕಿಂತ ಮೊದಲೇ (ನೀವು ಅವಳನ್ನು ಸಮೀಪಿಸಿ).
ಮಾ ವಃ ಪ್ರಿಯಾಯಾಃ ಸುನಸಂ ಸುಲೋಚನಂ
ಚಂದ್ರಪ್ರಭಾಚ್ಛಂ ವದನಂ ಪ್ರಸನ್ನಮ್ |
ಸ್ಪೃಶ್ಯಾಚ್ಛುಭಂ ಕಶ್ಚಿದಕೃತ್ಯಕಾರೀ
ಶ್ವಾ ವೈ ಪುರೋಡಾಶಮಿವಾಧ್ವರಸ್ಥಮ್ ॥24॥
ನಾಯಿಯು ಯಜ್ಞದ ಪುರೋಡಾಶವನ್ನು ಮುಟ್ಟಿದಂತೆ ನಿಮ್ಮ ಪ್ರಿಯಯ ಸುಂದರವಾದ ನಾಸಿಕ ಮತ್ತು ನೇತ್ರಗಳುಳ್ಳ ಚಂದ್ರನಂತಿರುವ ಪ್ರಸನ್ನವಾದ ಶುಭವಾದ ಮುಖವನ್ನು ಅಕಾರ್ಯವನ್ನು ಮಾಡುವ ಯಾವನೋ ಒಬ್ಬನು ಮುಟ್ಟದಿರಲಿ.
ಏತಾನಿ ವರ್ತ್ಮಾನ್ಯನುಯಾತ ಶೀಘ್ರಂ
ಮಾ ವಃ ಕಾಲಃ ಕ್ಷಿಪ್ರಮಿಹಾತ್ಯಗಾದ್ವೈ |
ಶೀಘ್ರಂ ಪ್ರಧಾವಧ್ವಮಿತೋ ನರೇಂದ್ರಾಃ
ಯಾವನ್ನದೂರಂ ವ್ರಜತೀತಿ ಪಾಪಃ |
ಪ್ರತ್ಯಾಹರಧ್ವಂ ದ್ವಿಷತಾಂ ಸಕಾಶಾ
ಲ್ಲಕ್ಷ್ಮೀಮಿವ ಸ್ವಾಂ ದಯಿತಾಂ ನೃಸಿಂಹಃ ॥25॥
ನೀವು ಈ ಮಾರ್ಗದಲ್ಲಿ ಶೀಘ್ರವಾಗಿ ಹೋಗಿ. ಒಂದುಕ್ಷಣವೂ ತಡವಾಗುವುದು ಬೇಡ. ಎಲೈ ನರೇಂದ್ರರೇ, ಆ ಪಾಪಿಯು ದೂರಹೋಗುವುದಕ್ಕಿಂತ ಮೊದಲೇ ನೀವು ಶೀಘ್ರವಾಗಿ ಇಲ್ಲಿಂದ ಓಡಿ, ನರಸಿಂಹದೇವರು ಪ್ರಿಯಳಾದ ಲಕ್ಷ್ಮಿಯನ್ನು ಕರೆದುಕೊಂಡು ಬಂದಂತೆ ಶತ್ರುಗಳ ಕೈಯಿಂದ ಬಿಡಿಸಿ ದ್ರೌಪದಿಯನ್ನು ಕರೆದುಕೊಂಡು ಬನ್ನಿ.
ಯುಧಿಷ್ಠಿರಃ
ಭದ್ರೇ ಪ್ರತಿಕ್ರಾಮ ನಿಯಚ್ಛ ವಾಚಂ
ಮಾಸ್ಮತ್ಸಕಾಶೇ ಪರುಷಾಣ್ಯವೋಚಃ |
ರಾಜಾನೋ ವಾ ಯದಿ ವಾ ರಾಜಪುತ್ರಾ
ಬಲೇನ ಮತ್ತಾ ವಂಚನಾಂ ಪ್ರಾಪ್ನುವಂತಿ ॥26॥
ಯುಧಿಷ್ಠಿರ ಭದ್ರೆಯೇ, ಇಲ್ಲಿಂದ ಹೊರಡು. ಮಾತಿನಲ್ಲಿ ಬಿಗಿ ಇರಲಿ. ನಮ್ಮ ಸಮೀಪದಲ್ಲಿ ಬಾಯಿಗೆ ಬಂದಂತೆ ಕೆಟ್ಟ ಮಾತುಗಳನ್ನು

ಆಡಬೇಡ. ರಾಜರಾಗಲೀ, ರಾಜಪುತ್ರರಾಗಲೀ ಅವರು ತಮ್ಮ ಬಲದಿಂದ ಮತ್ತರಾಗಿದ್ದರೆ ವಂಚನೆಯನ್ನು ಹೊಂದುತ್ತಾರೆ.
ವೈಶಂಪಾಯನಃ
ಏತಾವದುಕತ್ವ ಪ್ರಯಯುರ್ಹಿ ಶೀಘ್ರಂ
ತಾನ್ಯೇವ ವರ್ತ್ಮಾನ್ಯನುವರ್ತಮಾನಾಃ |
ಮುಹುರ್ಮುಹುರ್ವ್ಯಾಲವದುಚ್ಛ್ವಸಂತೋ
ಜ್ಯಾ(ಜ್ಯಾಂ) ವಿಕ್ಷಿಪಂತಶ್ಚ ಮಹಾಧನುರ್ಭ್ಯಃ ||27||
ವೈಶಂಪಾಯನ ಹೀಗೆ ಹೇಳಿ ಅವರು ಮತ್ತೆ ಮತ್ತೆ ಸರ್ಪಗಳಂತೆ ಉಸಿರು ಬಿಡುತ್ತಾ ತಮ್ಮ ದೊಡ್ಡ ಧನುಸ್ಸುಗಳಿಂದ ಹೆದೆಯನ್ನು ಎಳೆಯುತ್ತಾ ಅದೇ ಮಾರ್ಗವನ್ನು ಅನುಸರಿಸಿ ಶೀಘ್ರವಾಗಿ ಅಲ್ಲಿಂದ ಹೊರಟರು.
ತತೋಽಪಶ್ಯಂಸ್ತಸ್ಯ ಸೈನ್ಯಸ್ಯ ರೇಣು
ಮುದ್ಧೂತಂ ವೈ ವಾಜಿಖುರಪ್ರಣುನ್ನಮ್ |
ಪದಾತೀನಾಂ ಮಧ್ಯಗತಂ ಚ ಧೌಮ್ಯಂ
ವಿಕ್ರೋಶಂತಂ ಭೀಮಮಭಿದ್ರವೇತಿ ||28||
ಅನಂತರ ಅವರು ಸೈನ್ಯವನ್ನೂ ಕುದುರೆಗಳ ಗೊರಸಿನಿಂದ ಮೇಲೇಳುತ್ತಿರುವ ಧೂಳನ್ನೂ ಪದಾತಿಗಳ ಮಧ್ಯದಲ್ಲಿ ಬೇಗ ಓಡಿ ಬಾ ಎಂದು ಭೀಮನನ್ನು ಕುರಿತು ಕಿರುಚುತ್ತಿರುವ ಧೌಮ್ಯರನ್ನೂ ನೋಡಿದರು.
ತೇ ಸಾಂತ್ವ್ಯ ಧೌಮ್ಯಂ ಪರಿದೀನಸತತ್ವಃ
ಸುಖಂ ಭವಾನೇತ್ವಿತಿ ರಾಜಪುತ್ರಾಃ |
ಶ್ಯೇನಾ ಯಥೈವಾಮಿಷಸಂಪ್ರಯುಕ್ತಾ
ಜವೇನ ತತ್ಸೈನ್ಯಮಥಾಭ್ಯಧಾವನ್ ||29||
ಆ ರಾಜಪುತ್ರರು ಧೌಮ್ಯರನ್ನು ಮೃದುವಾದ ಮಾತುಗಳಿಂದ ಸಮಾಧಾನಪಡಿಸಿ ನೀವು ಸುಖವಾಗಿ ಆಶ್ರಮಕ್ಕೆ ಹೋಗಿ ಎಂದು ಹೇಳಿ ಬಾಯಲ್ಲಿ ಮಾಂಸವನ್ನು ಹಿಡಿದ ಶ್ಯೇನ ಪಕ್ಷಿಗಳಂತೆ ವೇಗವಾಗಿ ಜಯದ್ರಥನ ಸೈನ್ಯದ ಕಡೆಗೆ ಓಡಿದರು.
ತೇಷಾಂ ಮಹೇಂದ್ರೋಪಮವಿಕ್ರಮಾಣಾಂ
ಸಂರಬ್ಧಾನಾಂ ಧರ್ಷಣಾದ್ಯಾಜ್ಞಸೇನ್ಯಾಃ |
ಕ್ರೋಧಃ ಪ್ರಜಜ್ವಾಲ ಜಯದ್ರಥಂ ಚ
ದೃಷ್ಟ್ವಾ ಪ್ರಿಯಾಂ ತಸ್ಯ ರಥೇ ಸ್ಥಿತಾಂ ಚ ||30||
ಮಹೇಂದ್ರನಿಗೆ ಸಮನಾದ ವಿಕ್ರಮವುಳ್ಳ, ಯಾಜ್ಞಸೇನಿಯ ದರ್ಶನದಿಂದ ಕೋಪಗೊಂಡ ಅವರ ಕ್ರೋಧವು ಜಯದ್ರಥನನ್ನು ಮತ್ತು ಅವನ ರಥದಲ್ಲಿ ಕುಳಿತಿರುವ ತಮ್ಮ ಪ್ರಿಯೆಯನ್ನು ನೋಡಿದ ತಕ್ಷಣ ಅಗ್ನಿಯಂತೆ ಹತ್ತಿ ಉರಿಯಿತು.
ಪ್ರಚುಕ್ರುಶುಶ್ಚಾಪ್ಯಥ ಸಿಂಧುರಾಜಂ
ವೃಕೋದರಶ್ಚೈವ ಧನಂಜಯಶ್ಚ |
ಯಮೌ ಚ ರಾಜಾ ಚ ಮಹಾಧನುರ್ಧರಾ
ಸ್ತತೋ ದಿಶಃ ಸಮ್ಮುಮುಹುಃ ಪರೇಷಾಮ್ ||31||
ಅನಂತರ ಮಹಾಧನುರ್ಧರರಾದ ವೃಕೋದರನೂ, ಧನಂಜಯನೂ, ನಕುಲಸಹದೇವರೂ ಮತ್ತು ಧರ್ಮರಾಜನೂ ಸಿಂಧುರಾಜನನ್ನು ಗಟ್ಟಿಯಾಗಿ ಕರೆದರು. ಆಗ ಶತ್ರುಗಳಿಗೆ ದಿಗ್ಭ್ರಾಂತಿ ಉಂಟಾಯಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಪಂಚಾಶಾಧಿಕದ್ವಿಶತತಮೋಽಧ್ಯಾಯಃ ||
|| ಇತಿ ದ್ರೌಪದೀಹರಣಪರ್ವಣಿ ಪಾರ್ಥಾಗಮನಂ ನಾಮ ಷಷ್ಠೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * *

ಇನ್ನೂರ ಐವತ್ತೆಂಟನೆಯ ಅಧ್ಯಾಯ
ದ್ರೌಪದಿಯಿಂದ ಜಯದ್ರಥನಿಗೆ ಪಾಂಡವರ ಪರಿಚಯ.
ವೈಶಂಪಾಯನಃ
ತತೋ ಘೋರತರಃ ಶಬ್ದೋ ವನೇ ಸಮಭವತ್ ತದಾ |
ಭೀಮಸೇನಾರ್ಜುನೌ ದೃಷ್ಟ್ವಾ ಕ್ಷತ್ರಿಯಾಣಾಮಮರ್ಷಿಣಾಮ್ ||1||
ವೈಶಂಪಾಯನ ಆಗ ಭೀಮಸೇನ ಮತ್ತು ಅರ್ಜುನರನ್ನು ನೋಡಿ ಕೋಪಿಷ್ಠರಾದ ಆ ಕ್ಷತ್ರಿಯರಿಗೆ ಆ ಕಾಡಿನಲ್ಲಿ ಆಗ ಘೋರತರವಾದ ಶಬ್ದವುಂಟಾಯಿತು.
ತೇಷಾಂ ಧ್ವಜಾಗ್ರಾಣ್ಯಭಿವೀಕ್ಷ್ಯ ರಾಜಾ
ಸ್ವಯಂ ದುರಾತ್ಮಾ ಕುರುಪುಂಗವಾನಾಮ್ |
ಜಯದ್ರಥೋ ಯಾಜ್ಞಸೇನೀಮುವಾಚ
ರಥೇ ಸ್ಥಿತಾಂ ಭಾನುಮತೀಂ ಹತೌಜಾಃ ||2||

ಕುರುಪುಂಗವರ ಆ ಶ್ರೇಷ್ಠವಾದ ಧ್ವಜಗಳನ್ನು ನೋಡಿದ ಸ್ವತಃ ದುರಾತ್ಮನಾದ ಜಯದ್ರಥರಾಜನು ಪತಿಗಳ ದರ್ಶನದಿಂದ ಕಾಂತಿಯುಕ್ತಳಾಗಿದ್ದ ರಥದಲ್ಲಿ ಕುಳಿತಿದ್ದ ದ್ರೌಪದಿಯನ್ನು ಕುರಿತು ತಾನು ಕಾಂತಿಹೀನನಾಗಿ ಮಾತನಾಡಿದನು.
ಜಯದ್ರಥಃ
ಆಯಾಂತೀಮೇ ಪಂಚ ರಥಾ ಮಹಾಂತೋ
ಮನ್ಯೇ ಚ ಕೃಷ್ಣೇ ಪತಯಸ್ತವೈತೇ |
ಸಾ ಜಾನತೀ ಖ್ಯಾಪಯ ನಃ ಸುಕೇಶಿ
ಪರಾವರಂ ಪಾಂಡವಾನಾಂ ರಥಸ್ಥಮ್ ||3||
ಜಯದ್ರಥ ಈ ಐದು ದೊಡ್ಡ ರಥಗಳು ಬರುತ್ತಿವೆ. ದ್ರೌಪದಿಯೇ, ಇವರು ನಿನ್ನ ಪತಿಗಳೆಂದು ತಿಳಿಯುತ್ತೇನೆ. ಎಲೌ ಸುಕೇಶಿಯೇ, ಚೆನ್ನಾಗಿ ತಿಳಿದಿರುವ ನೀನು ರಥಸ್ಥ ಈ ಪಾಂಡವರಲ್ಲಿ ಯಾರು ಜ್ಯೇಷ್ಠರು, ಯಾರು ಕನಿಷ್ಠರು ಎಂದು ನನಗೆ ತಿಳಿಸು.
ದ್ರೌಪದೀ
ಕಿಂ ತೇ ಜ್ಞಾತ್ಯೆ (ಶಾತ್ಯೆ)ಮೂಢ ಮಹಾಧನುರ್ಧರೈ
ರನಾಯುಷ್ಯಂ ಕರ್ಮ ಕೃತ್ವಾಽತಿಘೋರಮ್ |
ಏತೇ ವೀರಾಃ ಪತಯೋ ಮೇ ಸಮೇತಾ
ನ ವಃ ಶೇಷಃ ಕಶ್ಚಿದಿಹಾಸ್ತಿ ಯುದ್ಧೇ ||4||
ದ್ರೌಪದೀ ಎಲೈ ಮೂಢನೇ, ಆಯುಷ್ಯವನ್ನು ನಾಶಮಾಡುವ ಘೋರವಾದ ಕರ್ಮವನ್ನು ಮಾಡಿರುವ ನಿನಗೆ ಆ ಮಹಾಧನುರ್ಧರರನ್ನು ತಿಳಿದು ಏನಾಗಬೇಕಾಗಿದೆ? ಈ ವೀರರು ನನ್ನ ಪತಿಗಳು ಅವರೆಲ್ಲರೂ ಸೇರಿ ಯುದ್ಧದಲ್ಲಿ ಇಲ್ಲಿ ನಿನ್ನವರಲ್ಲಿ ಯಾರನ್ನೂ ಉಳಿಸುವುದಿಲ್ಲ.
ಆಖ್ಯಾತವ್ಯಂ ತ್ವೇವ ಸರ್ವಂ ಮುಮೂರ್ಷೋರ್-
ಮಯಾ ತುಭ್ಯಂ ಪೃಷ್ಟಯಾ ಧರ್ಮ ಏಷಃ |
ನ ಮೇ ವ್ಯಥಾ ವಿದ್ಯತೇ ತ್ವದ್ಭಯಂ ವಾ
ಸಂಪಶ್ಯಂತ್ಯಾಃ ಸಾನುಜಂ ಧರ್ಮರಾಜಮ್ ||5||
ಮರಣವು ಸಮೀಪಿಸಿರುವವರಿಗೆ ಅವರು ಕೇಳಿದುದನ್ನು ಹೇಳಬೇಕು ಎಂಬುದು ಧರ್ಮ. ಆದ್ದರಿಂದ ನಿನಗೆ ಹೇಳುತ್ತೇನೆ. ಧರ್ಮರಾಜನನ್ನು ಮತ್ತು ಅವನ ತಮ್ಮಂದಿರನ್ನು ನೋಡುತ್ತಿರುವ ನನಗೆ ನಿನ್ನಿಂದ ದುಃಖವಾಗಲೀ ಅಥವಾ ನಿನ್ನ ಭಯವಾಗಲೀ ಇಲ್ಲ.
ಯಸ್ಯ ಧ್ವಜಾಗ್ರೇ ನದತೋ ಮೃದಂಗೌ
ನಂದೋಪನಂದೌ ಮಧುರೌ ಯುಕ್ತರೂಪೌ |
ಏತಂ ಸ್ವಧರ್ಮಾರ್ಥವಿನಿಶ್ಚಯಜ್ಞಂ
ಸದಾ ಜನಾಃ ಕೃತ್ಯವಂತೋಽನುಯಾಂತಿ ||6||
ಯ ಏಷ ಜಾಂಬೂನದಶುದ್ಧಗೌರಃ
ಪ್ರಚಂಡಘೋಣಸ್ತನುರಾಯತಾಕ್ಷಃ |
ಏನಂ ಕುರುಶ್ರೇಷ್ಠತಮಂ ವದಂತಿ
ಯುಧಿಷ್ಠಿರಂ ಧರ್ಮಸುತಂ ಪತಿಂ ಮೇ ||7||
ಯಾವನ ಧ್ವಜದ ಮೇಲ್ಭಾಗದಲ್ಲಿ ಮಧುರವಾಗಿ ನುಡಿಯುವ ನಂದ ಮತ್ತು ಉಪನಂದ ಎಂಬ ಎರಡು ಮೃದಂಗಗಳಿವೆಯೋ, ಸ್ವಧರ್ಮ ಮತ್ತು ಅರ್ಥಗಳ ನಿಶ್ಚಯವನ್ನು ಹೊಂದಿದ ಯಾವನನ್ನು ಉಪಕಾರವನ್ನು ಪಡೆಯುವ ಜನರು ಯಾವಾಗಲೂ ಹಿಂಬಾಲಿಸುತ್ತಾರೋ, ಅಂತಹ ಚಿನ್ನದಂತೆ ಶುದ್ಧವೂ, ಧವಳವೂ ಆದ ಪ್ರಚಂಡವಾದ ಶರೀರವುಳ್ಳ, ಸುವ್ಯಕ್ತವಾದ ನಾಸಿಕವೂ ಮತ್ತು ವಿಶಾಲವಾದ ನೇತ್ರಗಳೂ ಇರುವ ಈ ಕುರುಶ್ರೇಷ್ಠತಮನನ್ನು ಜನರು ನನ್ನ ಪತಿಯಾದ ಧರ್ಮಸುತನಾದ ಯುಧಿಷ್ಠಿರನೆಂದು ಕರೆಯುತ್ತಾರೆ.
ಅಪ್ಯೇಷ ಶತ್ರೋಃ ಶರಣಾಗತಸ್ಯ
ದದ್ಯಾತ್ ಪ್ರಾಣಾನ್ ಧರ್ಮಚಾರೀ ನೃವೀರಃ |
ಪರೇಹ್ಯೇನಂ ಮೂಢ ಜವೇನ ಭೂತಯೇ
ತ್ವಮಾತ್ಮನಃ ಪ್ರಾಂಜಲಿರ್ನ್ಯಸ್ತಶಸ್ತ್ರಃ ||8||
ಈ ಧರ್ಮಚಾರಿಯಾದ ನೃವೀರನು ಶತ್ರುವು ಶರಣಾಗತನಾದರೆ ಅವನಿಗೆ ತನ್ನ ಪ್ರಾಣವನ್ನೂ ಕೊಟ್ಟಾನು. ಮೂಢನೇ, ಅವನನ್ನು ನಿನ್ನ ಕಲ್ಯಾಣಕ್ಕಾಗಿ ಕೈಗಳನ್ನು ಮುಗಿದು ಶಸ್ತ್ರವನ್ನು ಕೆಳಗಿಟ್ಟು ಶರಣುವನ್ನು ಹೊಂದು.
ಅಥಾಪ್ಯೇನಂ ಪಶ್ಯಸಿ ಯಂ ರಥಸ್ಥಂ
ಮಹಾಭುಜಂ ಶಾಲಮಿವ ಪ್ರವೃದ್ಧಮ್ |
ಸಂದಷ್ಟೌ (ಷ್ಟಂ) ಭ್ರುಕುಟೀಸಂಹತಭ್ರುವಂ
ವೃಕೋದರೋ ನಾಮ ಪತಿರ್ಮಮೈಷಃ ||9||
ಇನ್ನು ರಥದಲ್ಲಿ ಕುಳಿತ ಮಹಾಭುಜನಾದ, ಸಾಲವೃಕ್ಷದಂತೆ ಎತ್ತರವಾದ, ತುಟಿಯನ್ನು ಕಚ್ಚಿ ಹುಬ್ಬನ್ನು ಗಂಟಿಕ್ಕಿರುವ ಯಾವ ಇವನನ್ನು ನೋಡುತ್ತಿದ್ದೀಯೋ ಇವನು ವೃಕೋದರನೆಂಬ ನನ್ನ ಪತಿ.
ಆಜಾನೇಯಾ ಬಲಿನಃ ಸಾಧುದಾಂತಾ

মহাবলাঃ ಶೂರಮುದಾವಹಂತಿ |
ಏತಸ್ಯ ಕರ್ಮಾಣ್ಯತಿಮಾನುಷಾಣಿ
ಭೀಮೇತಿ ಶಬ್ದೋಽಸ್ಯ ಗತಃ ಪೃಥಿವ್ಯಾಮ್ ॥10॥
ಸತ್ಕುಲದಲ್ಲಿ ಹುಟ್ಟಿದವೂ, ಬಲವುಳ್ಳವೂ, ಸಾಧುಗಳೂ, ಪಳಗಿಸಲ್ಪಟ್ಟವೂ, ಮಹಾಬಲವುಳ್ಳವೂ ಆದ ಅಶ್ವಗಳು ಈ ಶೂರನನ್ನು ಎಳೆಯುತ್ತವೆ. ಅವನ ಕರ್ಮಗಳೆಲ್ಲವೂ ಮನುಷ್ಯರನ್ನು ಮೀರಿದವುಗಳು. ಭೂಮಿಯಲ್ಲಿ ಭೀಮನೆಂದು ಅವನ ಹೆಸರು ಪ್ರಖ್ಯಾತವಾಗಿದೆ.
ನಾಸ್ಯಾಪರಾದ್ಧಾಃ ಶೇಷಮವಾಪ್ನುವಂತಿ
ನಾಯಂ ವೈರಂ ವಿಸ್ಮರತೇ ಕದಾಚಿತ್ |
ವೈರಸ್ಯಾಂತಂ ಸಂವಿಧಾಯೋಪಯಾತಿ
ಪಶ್ಚಾಚ್ಛಾಂತಿಂ ನ ಚ ತಪ್ಯತೀಹ ॥11॥
ಇವನಿಗೆ ಅಪರಾಧವನ್ನು ಮಾಡಿದವರು ಯಾರೂ ಉಳಿಯುವುದಿಲ್ಲ. ಇವನು ತನಗೆ ಮಾಡಿದ ವೈರವನ್ನು ಎಂದೂ ಮರೆಯುವುದಿಲ್ಲ. ವೈರಕ್ಕೆ ಪ್ರತೀಕಾರವನ್ನು ಮಾಡಿ ಅನಂತರ ಸಮಾಧಾನವನ್ನು ಹೊಂದುತ್ತಾನೆ. ಆ ವಿಷಯದಲ್ಲಿ ಪಶ್ಚಾತ್ತಾಪವನ್ನು ಪಡುವುದಿಲ್ಲ.
ಧನುರ್ಧರಾಗ್ರ್ಯೋ ಧೃತಿಮಾನ್ ಯಶಸ್ವೀ
ಜಿತೇಂದ್ರಿಯೋ ವೃದ್ಧಸೇವೀ ನೃವೀರಃ |
ಭ್ರಾತಾ ಚ ಶಿಷ್ಯಶ್ಚ ಯುಧಿಷ್ಠಿರಸ್ಯ
ಧನಂಜಯೋ ನಾಮ ಪತಿರ್ಮಮೈಷಃ॥12॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದವನೂ, ಧೈರ್ಯಶಾಲಿಯೂ, ಕೀರ್ತಿಶಾಲಿಯೂ, ಜಿತೇಂದ್ರಿಯನೂ, ಹಿರಿಯರನ್ನು ಸೇವಿಸುವವನೂ, ನೃವೀರನೂ ಆದ ಇವನು ಯುಧಿಷ್ಠಿರನ ತಮ್ಮ ಮತ್ತು ಶಿಷ್ಯ. ಇವನು ಧನಂಜಯನೆಂಬ ನನ್ನ ಪತಿ.
ಯೋ ವೈ ನ ಕಾಮಾನ್ನ ಭಯಾನ್ನ ಲೋಭಾತ್
ತ್ಯಜೇದ್ಧರ್ಮಂ ನ ನೃಶಂಸ್ಯಂ(ಸಂ) ಚ ಕುರ್ಯಾತ್ |
ಸ ಏಷ ವೈಶ್ವಾನರತುಲ್ಯತೇಜಾಃ
ಕುಂತೀಸುತಃ ಶತ್ರುಸಹಃ ಪ್ರಮಾಥೀ ॥13॥
ಯಾವನು ಕಾಮದಿಂದಲಾಗಲೀ, ಭಯದಿಂದಲಾಗಲೀ, ಲೋಭದಿಂದಾಗಲೀ ತನ್ನ ಧರ್ಮವನ್ನು ತ್ಯಜಿಸುವುದಿಲ್ಲವೋ, ಮತ್ತು ಕ್ರೂರ (ಅಸಾಧು) ಕರ್ಮವನ್ನು ಮಾಡುವುದಿಲ್ಲವೋ, ಅಂತಹ ಈ ಕುಂತೀಪುತ್ರನು ಶತ್ರುಗಳ ವೇಗವನ್ನು ಸಹಿಸುವವನು, ಶತ್ರುಗಳನ್ನು ಮರ್ದಿಸುವವನು ಮತ್ತು ಅಗ್ನಿಗೆ ಸಮಾನವಾದ ತೇಜಸ್ಸುಳ್ಳವನು.
ಯಃ ಸರ್ವಧರ್ಮಾರ್ಥವಿನಿಶ್ಚಯಜ್ಞೋ
ಭಯಾರ್ತಾನಾಂ ಭಯಹರ್ತಾ ಮನೀಷೀ |
ಬಂಧುಪ್ರಿಯಃ ಶಸ್ತ್ರಭೃತಾಂ ವರಿಷ್ಠೋ
ಮಹಾಬಲೇಷ್ವಪ್ರತಿವಾರ್ಯವೀರ್ಯಃ ॥14॥
ಯಸ್ಯೋತ್ತಮಂ ರೂಪಮಾಹುಃ ಪೃಥಿವ್ಯಾಂ
ಯಂ ಪಾಂಡವಾಃ ಪರಿರಕ್ಷಂತಿ ಸರ್ವೇ |
ಪ್ರಾಣೈರ್ಗರೀಯಾಂಸಮನುವ್ರತಂ ವೈ
ಸ ಏಷ ವೀರೋ ನಕುಲಃ ಪತಿರ್ಮೇ ॥15॥
ಯಾವನು ಧರ್ಮಾರ್ಥಗಳ ವಿಷಯದ ನಿಶ್ಚಿತಜ್ಞಾನವನ್ನು ಹೊಂದಿದ್ದಾನೆಯೋ, ಭಯಾರ್ತರಿಗೆ ಭಯವನ್ನು ಪರಿಹರಿಸುವನೋ, ಮೇಧಾವಿಯೋ, ಬಂಧುಪ್ರಿಯನೋ, ಶಸ್ತ್ರವನ್ನು ಧರಿಸಿದವರಲ್ಲಿ ಶ್ರೇಷ್ಠನೋ, ಯಾವನ ಪರಾಕ್ರಮಕ್ಕೆ ಮಹಾಬಲಿಷ್ಠರಲ್ಲಿಯೂ ಪ್ರತಿವಾರಣೆ ಇಲ್ಲವೋ, ಯಾವನಿಗೆ ಉತ್ತಮವಾದ ಸೌಂದರ್ಯವಿದೆಯೋ, ತಮ್ಮ ಪ್ರಾಣಕ್ಕಿಂತ ಪ್ರಿಯನಾದ ತಮ್ಮನ್ನು ಅನುಸರಿಸುವ ಯಾವನನ್ನು ಎಲ್ಲಾ ಪಾಂಡವರೂ ರಕ್ಷಿಸುತ್ತಾರೆಯೋ ಅಂತಹ ಈ ವೀರನು ನನ್ನ ಪತಿಯಾದ ನಕುಲ.
ಯಃ ಖಡ್ಗಯೋಧೀ ಲಘುಚಿತ್ರಹಸ್ತೋ
ಮಹಾಂಶ್ಚ ಧೀಮಾನ್ ಸಹದೇವೋಽದ್ವಿತೀಯಃ |
ಶೂರಃ ಕೃತಜ್ಞೋ ದೃಢಸೌಹೃದಶ್ಚ
ಮಹಾಹವೇ ಯಶ್ಚ ರಿಪುಪ್ರಮಾಥೀ |
ಯಸ್ಯಾದ್ಯ ಕರ್ಮ ದ್ರಕ್ಷ್ಯಸೇ ಮೂಢಸತ್ತ್ವ
ಶತಕ್ರತೋರ್ವಾ ದೈತ್ಯಸೇನಾಸು ಸಂಖ್ಯೇ ॥16॥
ಶೂರಃ ಕೃತಾಸ್ತ್ರೋ ಮತಿಮಾನ್ ಮನಸ್ವೀ
ಪ್ರಿಯಂಕರೋ ಧರ್ಮಸುತಸ್ಯ ರಾಜ್ಞಃ |
ಯ ಏಷ ಚಂದ್ರಾರ್ಕಸಮಾನತೇಜಾಃ
ಜಘನ್ಯಜಃ ಪಾಂಡವಾನಾಂ ಪ್ರಿಯಶ್ಚ ॥17॥
ಎಲೈ ಮೂಢಸತ್ತ್ವನೇ, ಯಾವನು ಖಡ್ಗಯುದ್ಧದಲ್ಲಿ ನಿಪುಣನೋ, ಲಘುವಾದ ವಿಚಿತ್ರ ಹಸ್ತವ್ಯಾಪಾರ ಉಳ್ಳವನೋ, ಮಹಾತ್ಮನೋ, ಮೇಧಾವಿಯೋ, ಅದ್ವಿತೀಯನೋ, ದೇವತೆಗಳನ್ನು ಅರ್ಚಿಸುವವನೋ, ಶೂರನೋ, ಕೃತಜ್ಞನೋ, ದೃಢಸೌಹೃದವುಳ್ಳವನೋ,

ದೊಡ್ಡ ಯುದ್ಧದಲ್ಲಿ ಶತ್ರುಗಳನ್ನು ಮರ್ದಿಸುವವನೋ, ದೈತ್ಯಸೈನ್ಯದ ಜೊತೆ ಯುದ್ಧದಲ್ಲಿ ಶತಕ್ರತುವಿನಂತಿರುವ ಯಾವನ ಕರ್ಮವನ್ನು ಈ ದಿನ ನೀನು ನೋಡುವಿಯೋ, ಯಾವನು ಅಸ್ತ್ರಗಳನ್ನು ಬಲ್ಲವನೋ, ಮೇಧಾವಿಯೋ, ಧೈರ್ಯಶಾಲಿಯೋ, ಧರ್ಮರಾಜನಿಗೆ ಯಾವಾಗಲೂ ಪ್ರಿಯವನ್ನು ಮಾಡುವವನೋ ಅಂತಹ ಚಂದ್ರಸೂರ್ಯರಿಗೆ ಸಮಾನ ತೇಜಸ್ಸುಳ್ಳ ಇವನು ಪಾಂಡವರಲ್ಲಿ ಕನಿಷ್ಠನಾದವನು ಮತ್ತು ಪ್ರಿಯನಾದವನು.

ಬುದ್ಧ್ಯಾ ಸಮೋ ಯಸ್ಯ ನರೋ ನ ವಿದ್ಯತೇ
ವಕ್ತಾ ತಥಾ ಸತ್ಸು ವಿನಿಶ್ಚಯಜ್ಞಃ |
ಸ ಏಷ ಶೂರೋ ನಿತ್ಯಮಮರ್ಷಣಶ್ಚ
ಧೀಮಾನ್ ಪ್ರಾಜ್ಞಃ ಸಹದೇವಃ ಪತಿರ್ಮೇ ॥18॥

ಯಾವನ ಬುದ್ಧಿಗೆ ಸಮವಾದ ಬುದ್ಧಿಯುಳ್ಳ ಇನ್ನೊಬ್ಬ ಮನುಷ್ಯನು ಇಲ್ಲವೋ, ಸಜ್ಜನರ ಸಭೆಯಲ್ಲಿ ನಿರ್ಣಯಗಳ ವಿಷಯದಲ್ಲಿ ಮಾತನಾಡುವವನು ಯಾವನಂತೆ ಇನ್ನೊಬ್ಬನಿಲ್ಲವೋ, ಅಂತಹ ಶೂರನೂ, ನಿತ್ಯವೂ ಕ್ರೋಧವುಳ್ಳವನೂ, ಮೇಧಾವಿಯೂ, ಪ್ರಾಜ್ಞನೂ ಆದ ಈ ಸಹದೇವನು ನನ್ನ ಪತಿ.

ತ್ಯಜೇತ್ ಪ್ರಾಣಾನ್ ಪ್ರವಿಶೇದ್ವ್ಯವಾಹಂ
ನ ತ್ವೇವೈಷ ವ್ಯಾಹರೇದ್ಧರ್ಮಬಾಹ್ಯಮ್ |
ಸದಾ ಮನಸ್ವೀ ಕ್ಷತ್ರಧರ್ಮೇ ರತಶ್ಚ
ಕುಂತ್ಯಾಃ ಪ್ರಾಣೈರಿಷ್ಟತಮೋ ನೃವೀರಃ ॥19॥

ಅವನು ಪ್ರಾಣಗಳನ್ನು ಬಿಟ್ಟಾನು, ಅಗ್ನಿಯನ್ನು ಪ್ರವೇಶಿಸಿಯಾನು ಆದರೆ ಧರ್ಮಬಾಹ್ಯವಾದುದನ್ನು ಎಂದೂ ಮಾತನಾಡಲಾರ. ಅವನು ಯಾವಾಗಲೂ ಧೈರ್ಯಶಾಲಿ, ಕ್ಷತ್ರಿಯ ಧರ್ಮದಲ್ಲಿ ರತನಾದವನು ಮತ್ತು ಕುಂತಿಗೆ ತನ್ನ ಪ್ರಾಣಕ್ಕಿಂತ ಇಷ್ಟನಾದ ವೀರನಾದವನು.

ವಿಶೀರ್ಯಂತೀಂ ನಾವಮಿವಾರ್ಣವಾಂತೇ
ರತ್ನಾಭಿಪೂರ್ಣಾಂ ಮಕರಸ್ಯ ಪೃಷ್ಠೇ |
ಸೇನಾಂ ತವೇಮಾಂ ಹತಸರ್ವಯೋಧಾಂ
ವಿಕ್ಷೋಭಿತಾಂ ದ್ರಕ್ಷ್ಯಸಿ ಪಾಂಡುಪುತ್ರೈಃ ॥20॥

ಸಮುದ್ರದ ಮಧ್ಯದಲ್ಲಿ ರತ್ನದಿಂದ ತುಂಬಿದ ನಾವೆಯು ಮೊಸಳೆಯ ಬೆನ್ನಿನ ಮೇಲೆ ಸಿಕ್ಕಿ ಒಡೆದು ಹೋಗುವಂತೆ ಈ ದಿನ ಈ ನಿನ್ನ ಸೈನ್ಯವೆಲ್ಲವೂ ಪಾಂಡುಪುತ್ರರಿಂದ ನಾಶಗೊಳಿಸಲ್ಪಡುವುದನ್ನು ನೀನು ನೋಡುವಿ.

ಇತ್ಯೇತೇ ವೈ ಕಥಿತಾಃ ಪಾಂಡುಪುತ್ರಾ
ಯಾಂಸ್ತ್ವಂ ಮೋಹಾದವಮನ್ಯ ಪ್ರವೃತ್ತಃ |
ಯದ್ಯೇತೇಭ್ಯೋ ಮುಚ್ಯಸೇಽರಿಷ್ಟದೇಹಃ
ಪುನರ್ಜನ್ಮ ಪ್ರಾಪ್ಸ್ಯಸೇ ಜೀವ ಏವ ॥21॥

ಯಾವ ಪಾಂಡುಪುತ್ರರನ್ನು ಮೋಹವಶನಾಗಿ ನೀನು ಅವಮಾನ ಮಾಡಿ ಹೊರಟಿದ್ದೀಯೋ ಅಂತಹ ಪಾಂಡುಪುತ್ರರನ್ನು ನಿನಗೆ ಪರಿಚಯಿಸಿದ್ದೇನೆ. ಈ ದಿನ ನೀನು ಇವರಿಂದ ಗಾಯಗೊಳ್ಳದೇ ಜೀವಂತನಾಗಿ ಬಿಡುಗಡೆಯನ್ನು ಹೊಂದುವುದಾದರೆ ಅದು ನೀನು ಪುನರ್ಜನ್ಮವನ್ನು ಪಡೆದಂತೆಯೇ ಸರಿ.

ವೈಶಂಪಾಯನಃ

ತತಃ ಪಾರ್ಥಾಃ ಪಂಚ ಪಂಚೇಂದ್ರಕಲ್ಪಾ
ಸ್ತ್ಯಕ್ತ್ವಾ ತ್ರಸ್ತಾನ್ ಪ್ರಾಂಜಲೀಂಸ್ತಾನ್ ಪದಾತೀನ್ |
ಯ(ರ)ಥಾನೀಕಂ ಶರವರ್ಷಾಂಧಕಾರಂ
ಚಕ್ರುಃ ಕ್ರುದ್ಧಾಃ ಸರ್ವತಃ ಸನ್ನಿಗೃಹ್ಯ ॥22॥

ವೈಶಂಪಾಯನ ಆಗ ಪಂಚೇಂದ್ರಿಯರಿಗೆ ಸದೃಶರಾಗಿದ್ದ ಆ ಪಂಚಪಾಂಡವರು ಹೆದರಿ ಕೈಗಳನ್ನು ಮುಗಿದ ಪದಾತಿಗಳನ್ನು ಬಿಟ್ಟು ಕೋಪದಿಂದ ಕೂಡಿದವರಾಗಿ ಎಲ್ಲ ಕಡೆಗಳಿಂದಲೂ ಸೈನ್ಯವನ್ನು ನಿಗ್ರಹಿಸಿ ರಥಗಳ ಸಮೂಹದ ಮೇಲೆ ಬಾಣಗಳ ಮಳೆಯನ್ನು ಕರೆದು ಅಂಧಕಾರಮಯವನ್ನಾಗಿ ಮಾಡಿದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಪಂಚಾಶಾಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ದ್ರೌಪದೀಹರಣಪರ್ವಣಿ ದ್ರೌಪದೀವಾಕ್ಯಂ ನಾಮ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತೆಂಟನೆಯ
ಅಧ್ಯಾಯ ಮುಗಿಯಿತು.

* * * *

ಇನ್ನೂರ ಐವತ್ತೊಂಬತ್ತನೆಯ ಅಧ್ಯಾಯ

ಜಯದ್ರಥನ ಜೊತೆಯಲ್ಲಿ ಪಾಂಡವರ ಯುದ್ಧ. ದ್ರೌಪದಿಯನ್ನು
ಬಿಟ್ಟು ಜಯದ್ರಥನ ಪಲಾಯನ. ಭೀಮಾರ್ಜುನರಿಂದ
ಕಟೂಕ್ತಿಪೂರ್ವಕವಾಗಿ ಅವನ ಅನುಸರಣ.

ವೈಶಂಪಾಯನಃ

ಸಂತಿಷ್ಠತ ಪ್ರಹರತ ತೂರ್ಣಂ ವಿಪರಿಧಾವತ |
ಇತಿ ಸ್ಮ ಸೈಂಧವೋ ರಾಜಾ ಚೋದಯಾಮಾಸ ತಾನ್ ನೃಪಾನ್ ॥1॥
ವೈಶಂಪಾಯನ ನಿಲ್ಲಿ, ಹೊಡೆಯಿರಿ, ಕ್ಷಿಪ್ರವಾಗಿ ಎಲ್ಲ ಕಡೆಯಲ್ಲಿಯೂ ತಿರುಗಾಡಿ ಎಂದು ರಾಜನಾದ ಸೈಂಧವನು ಉಳಿದ ರಾಜರುಗಳನ್ನು ಪ್ರೇರಿಸಿದನು.
ತತೋ ಘೋರತಮಃ ಶಬ್ದೋ ರಣೇ ಸಮಭವತ್ ತದಾ |
ಭೀಮಾರ್ಜುನಯಮಾನ್ ದೃಷ್ಟ್ವಾ ಸೈನ್ಯಾನಾಂ ಸಯುಧಿಷ್ಠಿರಾನ್ ॥2॥
ಅನಂತರ ಭೀಮಾರ್ಜುನ ನಕುಲಸಹದೇವರಿಂದ ಸಹಿತನಾದ ಯುಧಿಷ್ಠಿರನನ್ನು ನೋಡಿದ ಆ ಸೈನ್ಯದಲ್ಲಿ ಘೋರವಾದ ಶಬ್ದವು ರಣರಂಗದಲ್ಲಿ ಉಂಟಾಯಿತು.
ಶಿಬಿಸೌವೀರಸಿಂಧೂನಾಂ ವಿಷಾದಶ್ಚಾಪ್ಯಜಾಯತ |
ತಾನ್ ದೃಷ್ಟ್ವಾ ಪುರುಷವ್ಯಾಘ್ರಾನ್ ವ್ಯಾಘ್ರಾನಿವ ಬಲೋತ್ಕಟಾನ್ ॥3॥
ವ್ಯಾಘ್ರಗಳಂತೆ ಬಲೋತ್ಕಟರಾದ ಆ ಪುರುಷವ್ಯಾಘ್ರರನ್ನು ನೋಡಿ ಶಿಬಿ, ಸೌವೀರ ಮತ್ತು ಸಿಂಧುದೇಶಗಳ ವೀರರು ವಿಷಾದವನ್ನು ಹೊಂದಿದರು.
ಹೈಮಚಿತ್ರಸಮುತ್ಸೇಧಾಂ ಸರ್ವಶೈಕ್ಯಾಯಸೀಂ ಗದಾಮ್ |
ಪ್ರಗೃಹ್ಯಾಭ್ಯದ್ರವದ್ ಭೀಮಃ ಸೈಂಧವಂ ಕಾಲಚೋದಿತಮ್ ॥4॥
ಭೀಮನು ಚಿನ್ನದ ಹೂಗಳು ಮೆಟ್ಟಲ್ಪಟ್ಟಿದ್ದ ಎತ್ತರವಾದ ಯಾವಾಗಲೂ ವಿಲುಗೆನಲ್ಲಿರುವ ತನ್ನ ಗದೆಯನ್ನು ಎತ್ತಿಕೊಂಡು ಕಾಲಚೋದಿತನಾದ ಸೈಂಧವನ ಕಡೆಗೆ ಓಡಿದನು.
ತದಂತರಮಥಾವೃತ್ಯ ಕೋಟಿಕಾಶ್ಯೋಽಭ್ಯಹಾರಯತ್ |
ಮಹತಾ ರಥವಂಶೇನ ಪರಿವಾರ್ಯ ವೃಕೋದರಮ್ ॥5॥
ಆ ಮಧ್ಯದಲ್ಲಿ ಕೋಟಿಕಾಶ್ಯನು ದೊಡ್ಡ ರಥವೃಂದದಿಂದ ವೃಕೋದರನನ್ನು ಸುತ್ತುವರಿದು ಅವನ ಮೇಲೆ ಶಸ್ತ್ರಗಳನ್ನು ಸುರಿಸಿದನು.
ಶಕ್ತಿತೋಮರನಾರಾಚೈರ್ವೀರಬಾಹುಪ್ರಚೋದಿತೈಃ |
ಕೀರ್ಯಮಾಣೋಽಪಿ ಬಹುಭಿರ್ನ ಸ್ಮ ಭೀಮೋಽಭ್ಯಕಂಪತ ॥6॥
ವೀರರ ಬಾಹುಗಳಿಂದ ಪ್ರೇರಿತವಾದ ಶಕ್ತಿ, ತೋಮರ, ನಾರಾಚ ಮೊದಲಾದ ಆಯುಧಗಳ ಅನೇಕ ವಿಧವಾದ ಮಳೆಯು ತನ್ನ ಮೇಲೆ ಬೀಳುತ್ತಿದ್ದರೂ ಭೀಮನು ಅಲುಗಾಡಲಿಲ್ಲ.
ಗಜಂ ತು ಸಗಜಾರೋಹಂ ಪದಾತೀಂಶ್ಚ ಚತುರ್ದಶ |
ಜಘಾನ ಗದಯಾ ಭೀಮಃ ಸೈಂಧವಧ್ವಜಿನೀಮುಖೇ ॥7॥
ಭೀಮನು ತನ್ನ ಗದೆಯಿಂದ ಗಜಾರೋಹಿಯಾದ ಯೋಧನನ್ನೂ ಅವನ ಸಹಾಯಕ್ಕಾಗಿ ಒಂದೊಂದು ಗಜದ ಸುತ್ತಲೂ ಇದ್ದ ಹದಿನಾಲ್ಕು ಹದಿನಾಲ್ಕು ಪದಾತಿಗಳನ್ನೂ ಸೈಂಧವನ ಸೇನಾಮುಖದಲ್ಲಿ (ಅನೇಕ ಸಂಖ್ಯೆಗಳಲ್ಲಿ) ತನ್ನ ಗದೆಯಿಂದ ಕೊಂದನು.
ಪಾರ್ಥಃ ಪಂಚ ಶತಾನ್ ಶೂರಾನ್ ಪಾ(ಪ)ರ್ವತೀಯಾನ್ ಮಹಾರಥಾನ್ |
ಪರೀಪ್ಸಮಾನಃ ಸೌವೀರಂ ಜಘಾನ ಧ್ವಜಿನೀಮುಖೇ ॥8॥
ಅರ್ಜುನನು ಸೌವೀರಾಧಿಪತಿಯಾದ ಜಯದ್ರಥನನ್ನು ಉಳಿಸುತ್ತಾ ಸೇನಾ ಮುಖದಲ್ಲಿದ್ದ ಐನೂರು ಮಂದಿ ಪರ್ವತದೇಶದ ಶೂರರಾದ ಮಹಾರಥರನ್ನು ಸಂಹರಿಸಿದನು.
ರಾಜಾ ಸ್ವಯಂ ಸುವೀರಾಣಾಂ ಪ್ರವರಾಣಾಂ ಪ್ರಹಾರಿಣಾಮ್ |
ನಿಮೇಷಮಾತ್ರೇಣ ಶತಂ ಜಘಾನ ಸಮರೇ ತದಾ ॥9॥
ಧರ್ಮರಾಜನು ಒಂದು ನಿಮಿಷದಲ್ಲಿ ಆಗ ಶ್ರೇಷ್ಠವಾಗಿ ಯುದ್ಧವನ್ನು ಮಾಡುವ ಸುವೀರರ ನೂರುಜನ ಸೈನಿಕರನ್ನು ಸ್ವತಃ ಯುದ್ಧದಲ್ಲಿ ಕೊಂದನು.
ದದೃಶೇ ನಕುಲಸ್ತತ್ರ ರಥಾತ್ ಪ್ರಸ್ಕಂದ್ಯ ಖಡ್ಗಧೃಕ್ |
ಶಿರಾಂಸಿ ಪಾದರಕ್ಷಾಣಾಂ ಬೀಜವತ್ ಪ್ರವಪನ್ ಮುಹುಃ ॥10॥
ನಕುಲನು ತನ್ನ ರಥದಿಂದ ಧುಮುಕಿ ಖಡ್ಗವನ್ನು ಹಿಡಿದು ಪದಾತಿಗಳ ಶಿರಸ್ಸುಗಳನ್ನು ಬೀಜಗಳನ್ನು ಎರಚಿದಂತೆ ಉರುಳಿಸುತ್ತಿರುವುದು ಅಲ್ಲಿ ಕಂಡುಬಂದಿತು.
ಸಹದೇವಸ್ತು ಸಂಧಾ(ಯಾ)ಯ ರಥೇನ ಗಜಯೋಧಿನಃ |
ಪಾತಯಾಮಾಸ ನಾರಾಚೈರ್ದ್ರುಮೇಭ್ಯ ಇವ ಬರ್ಹಿಣಃ ॥11॥
ಸಹದೇವನು ರಥವನ್ನು ಯೋಜಿಸಿ ಗಜಯೋಧಿಗಳನ್ನು ಮರಗಳಿಂದ ನವಿಲುಗಳನ್ನು ಉರುಳಿಸುವಂತೆ ತನ್ನ ಬಾಣಗಳಿಂದ ಉರುಳಿಸಿದನು.
ತತಸ್ತ್ರಿಗರ್ತಃ ಸಧನುರವತೀರ್ಯ ಮಹಾರಥಾನ್(ತ್) |
ಗದಯಾ ಚತುರೋ ವಾಹಾನ್ ರಾಜ್ಞಸ್ತಸ್ಯ ತದಾಽವಧೀತ್ ॥12॥
ಆಗ ತ್ರಿಗರ್ತರಾಜನು ಧನುಸ್ಸನ್ನು ಹಿಡಿದು ತನ್ನ ದೊಡ್ಡ ರಥದಿಂದ ಇಳಿದು ಗದೆಯಿಂದ ಧರ್ಮರಾಜನ ನಾಲ್ಕು ಅಶ್ವಗಳನ್ನು ಕೊಂದನು.
ತಮಭ್ಯಾಶಗತಂ ರಾಜಾ ಪದಾತಿಂ ಕುಂತಿನಂದನಃ |
ಅರ್ಧಚಂದ್ರೇಣ ಬಾಣೇನ ವಿವ್ಯಾಧೋರಸಿ ಧರ್ಮರಾಟ್ ॥13॥
ಕುಂತಿನಂದನನಾದ ಧರ್ಮರಾಜನು ಸಮೀಪಕ್ಕೆ ಬಂದು ಪದಾತಿಯಾಗಿದ್ದ ಅವನ ಎದೆಯಲ್ಲಿ ಅರ್ಧಚಂದ್ರಬಾಣದಿಂದ

ಭೇದಿಸಿದನು.
ಸ ಭಿನ್ನಹೃದಯೋ ವೀರೋ ವಕತ್ರಚ್ಛೋಣಿತಮುದ್ವಮನ್ |
ಪಪಾತಾಭಿಮುಖಃ ಪಾರ್ಥಂ ಛಿನ್ನಮೂಲ ಇವ ದ್ರುಮಃ ॥14॥
ಹೃದಯವು ಭೇದಿಸಲ್ಪಟ್ಟ ಆ ವೀರನು ಬಾಯಿಂದ ರಕ್ತವನ್ನು ಕಾರುತ್ತಾ ಧರ್ಮರಾಜನಿಗೆ ಅಭಿಮುಖವಾಗಿ ಬುಡವನ್ನು ಕತ್ತರಿಸಿದ ಮರದಂತೆ ಬಿದ್ದನು.
ಇಂದ್ರಸೇನದ್ವಿತೀಯಸ್ತು ರಥಾನ್ ಪ್ರಸ್ಕಂದ್ಯ ಧರ್ಮರಾಟ್ |
ಹತಾಶ್ವಃ ಸಹದೇವಸ್ಯ ಪ್ರತಿಪೇದೇ ಮಹಾರಥಮ್ ॥15॥
ತನ್ನ ಅಶ್ವಗಳನ್ನು ಕಳೆದುಕೊಂಡಿದ್ದ ಧರ್ಮರಾಜನು ಇಂದ್ರಸೇನನ ಜೊತೆಯಲ್ಲಿ ರಥದಿಂದಿಳಿದು ಸಹದೇವನ ದೊಡ್ಡ ರಥವನ್ನು ತಲುಪಿದನು.
ನಕುಲಂ ತ್ವಭಿಸಂಧಾಯ ಕ್ಷೇಮಂಕರಮಹಾಮುಖೌ |
ಉಭಾವುಭಯತಸ್ತೀಕ್ಷ್ಣೈಃ ಶರವರ್ಷೈರವರ್ಷತಾಮ್ ॥16॥
ಕ್ಷೇಮಂಕರ ಮತ್ತು ಮಹಾಮುಖ ಇವರಿಬ್ಬರು ನಕುಲನನ್ನು ಉದ್ದೇಶಿಸಿ ಎರಡು ಭಾಗಗಳಲ್ಲಿಯೂ ತೀಕ್ಷ್ಣವಾದ ಬಾಣಗಳ ಮಳೆಯನ್ನು ಅವನ ಮೇಲೆ ಕರೆದರು.
ತೌ ಶರೈರಭಿವರ್ಷಂತೌ ಜೀಮೂತಾವಿವ ವಾರ್ಷಿಕೌ |
ಏಕೈಕೇನ ವಿಪಾಠೇನ ಜಘ್ನೇ ಮಾದ್ರವತೀಸುತಃ ॥17॥
ಮಳೆಗಾಲದ ಮೋಡಗಳಂತೆ ತನ್ನ ಮೇಲೆ ಬಾಣಗಳ ಮಳೆಗಳನ್ನು ಸುರಿಸುತ್ತಿದ್ದ ಅವರನ್ನು ಮಾದ್ರವತೀಸುತನಾದ ನಕುಲನು ಒಂದೊಂದು ವಿಪಾಠದಿಂದ (ಬಾಣ ವಿಶೇಷದಿಂದ) ಕೊಂದನು.
ತ್ರಿಗರ್ತರಾಜಃ ಸುರಥಃ ತಸ್ಯಾಥ ರಥಧೂರ್ಗತಃ |
ರಥಮಾಕ್ಷೇಪಯಾಮಾಸ ಗಜೇನ ಗಜಯಾನವಿತ್ ॥18॥
ಗಜಯಾವನನ್ನು ತಿಳಿದ ತ್ರಿಗರ್ತರಾಜನಾದ ಸುರಥನು ಅನಂತರ ನಕುಲನ ರಥಮಾರ್ಗದ ಎದುರಿನಲ್ಲಿ ಬಂದು ತನ್ನ ಗಜದಿಂದ ನಕುಲನ ರಥವನ್ನು ಎತ್ತಿಹಾಕಿಸಿದನು.
ನಕುಲಸ್ತ್ವಪಭೀಸ್ತಸ್ಮಾದ್ ರಥಾಚ್ಚರ್ಮಾಸಿಪಾಣಿಮಾನ್ |
ಉದ್ಭ್ರಾಮ್ಯ(ದ್ಭ್ರಾಂತಂ) ಸ್ಥಾನಮಾಸ್ಥಾಯ ತಸ್ಥೌ ಗಿರಿರಿವಾಚಲಃ ॥19॥
ನಕುಲನು ಭಯವನ್ನು ಹೊಂದದೆ ಕೈಯಲ್ಲಿ ಅಸಿಚರ್ಮಗಳನ್ನು ಹಿಡಿದು ತಿರುಗುವ ರಥದಿಂದ ಇಳಿದು ಒಂದುಸ್ಥಾನವನ್ನು ತಲುಪಿ ಪರ್ವತದಂತೆ ಅಚಲನಾಗಿ ನಿಂತನು.
ಸುರಥಸ್ತಂ ಗಜವರಂ ವಧಾಯ ನಕುಲಸ್ಯ ತು |
ಪ್ರೇಷಯಾಮಾಸ ಸಕ್ರೋಧಮತ್ಯುಚ್ಛ್ರಿತಕರಂ ತತಃ ॥20॥
ಸುರಥನು ನಕುಲನ ವಧೆಗಾಗಿ ಸೊಂಡಿಲನ್ನು ಎತ್ತಿದ ತನ್ನ ಕ್ರೋಧಯುಕ್ತವಾದ ಶ್ರೇಷ್ಠವಾದ ಗಜವನ್ನು ನಕುಲನ ಕಡೆಗೆ ಕಳುಹಿಸಿದನು.
ನಕುಲಸ್ತಸ್ಯ ನಾಗಸ್ಯ ಸಮೀಪೇ ಪರಿವರ್ತಿನಃ |
ಸವಿಷಾಣಂ ಭುಜಂ ಮೂಲೇ ಖಡ್ಗೇನ ನಿರಕೃಂತತ ॥21॥
ನಕುಲನು ಸಮೀಪಕ್ಕೆ ಬಂದ ಆ ಗಜದ ವಿಷಾಣಸಹಿತವಾದ ಭುಜವನ್ನು ತನ್ನ ಖಡ್ಗದಿಂದ ಕತ್ತರಿಸಿದನು.
ಸ ವಿನದ್ಯ ಮಹಾನಾದಂ ಗಜಃ ಕಿಂಕಿಣಿಭೂಷಣಃ |
ಪತನ್ನವಾಕ್ಶಿರಾ ಭೂಮೌ ಹಸ್ತ್ಯಾರೋಹಮಪೋಥಯತ್ ॥22॥
ಸಣ್ಣ ಗಂಟೆಗಳಿಂದ ಭೂಷಿತವಾದ ಆ ಗಜವು ಮಹಾನಾದವನ್ನು ಉಂಟುಮಾಡುತ್ತಾ ತಲೆಕೆಳಗಾಗಿ ಭೂಮಿಯ ಮೇಲೆ ಬೀಳುತ್ತಾ ಗಜಾರೋಹಿಯನ್ನೂ ಸಹ ಪುಡಿಮಾಡಿತು.
ಸ ತತ್ಕರ್ಮ ಮಹತ್ ಕೃತ್ವಾ ಶೂರೋ ಮಾದ್ರವತೀಸುತಃ |
ಭೀಮಸೇನರಥಂ ಪ್ರಾಪ್ಯ ಶರ್ಮ ಲೇಭೇ ಮಹಾರಥಃ ॥23॥
ಮಾದ್ರವತೀಸುತನಾದ ಶೂರನಾದ ನಕುಲನು ಆ ಮಹಾಕರ್ಮವನ್ನು ಮಾಡಿ ಭೀಮಸೇನನ ರಥವನ್ನು ತಲುಪಿ ಮಹಾರಥನಾದ ಅವನು ಸಮಾಧಾನವನ್ನು ಹೊಂದಿದನು.
ಭೀಮಸಶತ್ವಪತತೋ ರಾಜ್ಞಃ ಕೋಟಿಕಾಶ್ಯಸ್ಯ ಸಂಗರೇ |
ಸೂತಸ್ಯ ನುದತೋ ವಾಹಾನ್ ಕ್ಷುರೇಣಾಪಾಹರಚ್ಛಿರಃ ॥24॥
ಭೀಮನಾದರೂ ಯುದ್ಧದಲ್ಲಿ ಮುಂದೆ ಬರುತ್ತಿರುವ ಕೋಟಿಕಾಶ್ಯನ ರಥದ ಅಶ್ವಪ್ರೇರಕನಾದ ಸಾರಥಿಯ ಶಿರಸ್ಸನ್ನು ಕ್ಷುರ ಎಂಬ ಚಿಕ್ಕಬಾಣದಿಂದ ಕೆಡವಿದನು.
ನ ಬುಬೋಧ ಹತಂ ಸೂತಂ ಸ ರಾಜಾ ಬಾಹುಶಾಲಿನಾ |
ತಸ್ಯಾಶ್ವಾ ವ್ಯದ್ರುವನ್ ಸಂಖ್ಯೇ ಹತಸೂತಾಸ್ತತಸ್ತತಃ ॥25॥
ಬಾಹುಶಾಲಿಯಾದ ಆ ಕೋಟಿಕಾಶ್ಯರಾಜನಿಗೆ ಸೂತನು ಹತನಾದುದೇ ತಿಳಿಯಲಿಲ್ಲ. ಯುದ್ಧದಲ್ಲಿ ಸೂತನು ಹತನಾದಾಗ ಅವನ ಅಶ್ವಗಳು ಚೆಲ್ಲಾಪಿಲ್ಲಿಯಾಗಿ ಓಡಿಹೋದವು.
ವಿಮುಖಂ ಹತಸೂತಂ ತಂ ಭೀಮಃ ಪ್ರಹರತಾಂ ವರಃ |
ಜಘಾನ ತಲಯುಕ್ತೇನ ಪ್ರಾಸೇನಾಭ್ಯೇತ್ಯ ಪಾಂಡವಃ ॥26॥

ಪ್ರಹಾರಮಾಡುವವರಲ್ಲಿ ಶ್ರೇಷ್ಠನಾದ ಭೀಮನು, ಹತಸೂತನೂ, ವಿಮುಖನೂ ಆದ ಕೋಟಿಕಾಶ್ಯನನ್ನು ಸಮೀಪಿಸಿ ತಲಯುಕ್ತವಾದ ಪ್ರಾಸದಿಂದ ಅವನನ್ನು ಸಂಹರಿಸಿದನು.
ಅಂಗಾರಕಃ ಕುಂಜರಶ್ಚ ಸಂಜಯೋ ಗುಪ್ತಕಸ್ತಥಾ |
ಶತ್ರುಂಜಯಃ ಸುಪ್ರಬುದ್ಧೋ ಶುಭಕೃದ್ ಭ್ರಮಕಾ ಅಪಿ ||26.1||
ಶೂರಃ ಪರಾಕುಃ ಕುಹಕೋ ದ್ವಾದಶೈತೇ ಮಹಾರಥಾಃ |
ಸುಬಲಾಃ ಸೈಂಧವಾಶ್ಚೈವ ತ್ರಿಗರ್ತಾಶ್ಚ ಮಹಾಬಲಾಃ ||26.2||
ಇಕ್ಷ್ವಾಕುಯೋಧಾಃ ಪ್ರಬಲಾ ರಥಿನಃ ಸಹಯದ್ವಿಪಾಃ |
ಕೋಟೀಕೃತ್ಯ ಚ ಪಾರ್ಥಂ ತು ಶರವರ್ಷೈರವಾಕಿರನ್ ||26.3||
ಹೀಗೆ ಸೈನಿಕರ ಸಂಕ್ಷಯವನ್ನು ಮಾಡುವ ಘೋರವಾದ ಯುದ್ಧವು ನಡೆಯುತ್ತಿರಲು ಅಂಗಾರಕ, ಕುಂಜರಕ, ಸಂಜಯ, ಗುಪ್ತಕ, ಶತ್ರುಂಜಯ, ಸುಪ್ರಬುದ್ಧ, ಶುಭಕೃದ್, ಭ್ರಮಕ, ಶೂರ, ಪರಾಕು, ಕುಹಕ ಮತ್ತು ಸೌವೀರರಾದ ಈ ಹನ್ನೆರಡು ಜನ ಮಹಾರಥರೂ ಮತ್ತು ಸುಬಲ, ಸಿಂಧು, ತ್ರಿಗರ್ತ ದೇಶದ ಮಹಾಬಲಿಷ್ಠರಾದ ಯೋಧರೂ, ಪ್ರಬಲರಾದ ಇಕ್ಷ್ವಾಕು ಯೋಧರೂ ರಥಗಳನ್ನು ಏರಿ ಅಶ್ವಗಜಗಳ ಜೊತೆಯಲ್ಲಿ ಅರ್ಜುನನ ಸುತ್ತಲೂ ಒಂದು ಆವರಣವನ್ನು ನಿರ್ಮಾಣ ಮಾಡಿ ಅರ್ಜುನನನ್ನು ಬಾಣಗಳ ಮಳೆಯಿಂದ ಮುಚ್ಚಿದರು.
ಅರ್ಜುನಸ್ತು ತತಃ ಕ್ರುದ್ಧಃ ಶರವರ್ಷಂ ನಿಹತ್ಯ ಚ |
ದ್ವಾದಶಾನಾಂ ತು ಸರ್ವೇಷಾಂ ಸೌವೀರಾಣಾಂ ಧನಂಜಯಃ |
ಚಕರ್ತ ನಿಶಿತೈರ್ಭಲ್ಲೈರ್ಧನೂಂಷಿ ಚ ಶಿರಾಂಸಿ ಚ ||27||
ಆಗ ಅರ್ಜುನನು ಕ್ರುದ್ಧನಾಗಿ ಅವರ ಶರವರ್ಷವನ್ನು ನಾಶಮಾಡಿ ಸೌವೀರರಾದ ಆ ಹನ್ನೆರಡು ಜನರ ಧನುಸ್ಸುಗಳೂ ಮತ್ತು ಶಿರಸ್ಸುಗಳನ್ನು ನಿಶಿತವಾದ ಭಲ್ಲಗಳಿಂದ ಕತ್ತರಿಸಿದನು.
ಶಿಬೀನಿಕ್ಷ್ವಾಕುಮುಖ್ಯಾಂಶ್ಚ ತ್ರಿಗರ್ತಾನ್ ಸೈಂಧವಾನಪಿ |
ಜಘಾನಾತಿರಥಃ ಸಂಖೇ ಬಾಣಗೋಚರಮಾಗತಾನ್ ||28||
ಯುದ್ಧದಲ್ಲಿ ತನ್ನ ಬಾಣಕ್ಕೆ ವಿಷಯರಾದ ಶಿಬಿಗಳನ್ನೂ, ಇಕ್ಷ್ವಾಕು ಪ್ರಮುಖರನ್ನೂ, ತ್ರಿಗರ್ತರನ್ನೂ, ಸೈಂಧವರನ್ನೂ ಅತಿರಥನಾದ ಅರ್ಜುನನು ಕೊಂದನು.
ಸಾದಿತಾಃ ಪ್ರತ್ಯದೃಶ್ಯಂತ ಬಹುಶಃ ಸವ್ಯಸಾಚಿನಾ |
ಸಪತಾಕಾಶ್ಚ ಮಾತಂಗಾಃ ಸಧ್ವಜಾಶ್ಚ ಮಹಾರಥಾಃ ||29||
ಅರ್ಜುನನಿಂದ ಸಂಹರಿಸಲ್ಪಟ್ಟ ಪತಾಕ ಸಹಿತವಾದ ಗಜಗಳೂ, ಧ್ವಜಸಹಿತವಾದ ಮಹಾರಥಗಳೂ ಬಹಳವಾಗಿ ಕಂಡುಬಂದವು.
ಪ್ರಚ್ಛಾದ್ಯ ಪೃಥಿವೀಂ ತಸ್ಥುಃ ಸರ್ವಮಾಯೋಧನಂ ಪ್ರತಿ |
ಶರೀರಾಣ್ಯಶಿರಸ್ಕಾನಿ ವಿದೇಹಾನಿ ಶಿರಾಂಸಿ ಚ ||30||
ಆ ರಣರಂಗದ ಎಲ್ಲಾ ಭೂಪ್ರದೇಶವನ್ನೂ, ಮುಂಡವಿಲ್ಲದ ರುಂಡಗಳು ಮತ್ತು ರುಂಡವಿಲ್ಲದ ಮುಂಡಗಳು ಮುಚ್ಚಿದವು.
ಶ್ವಗೃಧ್ರಕಂಕಕಾಕೋಲಭಾಸಗೋಮಾಯುವಾಯಸಾಃ |
ಅತೃಪ್ಯಂಸ್ತತ್ರ ವೀರಾಣಾಂ ಹತಾನಾಂ ಮಾಂಸಶೋಣಿತೈಃ ||31||
ನಾಯಿಗಳು, ಹದ್ದುಗಳು, ಕಂಕ, ಕಾಕ, ಉಲೂಕ, ಭಾಸ ಮೊದಲಾದ ಪಕ್ಷಿಗಳು, ನರಿಗಳು ಅಲ್ಲಿ ಹತರಾದ ವೀರರ ಮಾಂಸರಕ್ತಗಳಿಂದ ತೃಪ್ತಿಯನ್ನು ಹೊಂದಿದವು.
ಏವಂ ತೀಕ್ಷ್ಣಶರಜ್ವಾಲೈರ್ಗಾಂಡಿವಾನಿಲಚೋದಿತೈಃ |
ಸೇನೇಂಧನಂ ದದಾಹಾಶು ಸರೋಷಃ ಪಾರ್ಥಪಾವಕಃ ||32||
ಚಕ್ರಾಣಾಂ ಪತಿತಾನಾಂ ಚ ಯುಗಾನಾಂ ಚ ಮಹೀಪತೇ |
ತೂಣೀರಾಣಾಂ ಪತಾಕಾನಾಂ ಧ್ವಜಾನಾಂ ಚ ರಥೈಸ್ಸಹ ||33||
ಈಷಾಣಾಮನುಕರ್ಷಾಣಾಂ ತ್ರಿವೇಣೂನಾಂ ತಥೈವ ಚ |
ಅಕ್ಷಾಣಾಮಥ ಯೋಕ್ತ್ರಾಣಾಂ ಪ್ರತೋದಾನಾಂ ಚ ರಾಶಯಃ ||34||
ಹೀಗೆ ರೋಷದಿಂದ ಕೂಡಿದ ಪಾರ್ಥನೆಂಬ ಪಾವಕನು ಗಾಂಡೀವವೆಂಬ ವಾಯುವಿನಿಂದ ಪ್ರೇರಿತವಾದ ತೀಕ್ಷ್ಣಬಾಣಗಳೆಂಬ ಜ್ವಾಲೆಗಳಿಂದ ಕೂಡಿದವನಾಗಿ ಸೈನ್ಯ ಎಂಬ ಕಟ್ಟಿಗೆಯನ್ನು ಶೀಘ್ರವಾಗಿ ಸುಟ್ಟುಹಾಕಿದನು. ರಾಜನೇ, ಅಲ್ಲಿ ಕೆಳಗೆ ಬಿದ್ದ ಚಕ್ರಗಳ, ನೊಗಗಳ, ಬತ್ತಳಿಕೆಗಳ, ಪತಾಕೆಗಳ, ರಥಸಹಿತವಾದ ಧ್ವಜಗಳ, ಮೂಕಿಗಳ, ಧ್ವಜದ ಸಲಕರಣೆಗಳ, ತ್ರಿವೇಣುಗಳ, ಅಕ್ಷಗಳ, ಗೂಟಗಳ ಮತ್ತು ಚಾವಟಿಗಳ ರಾಶಿಗಳು ಕಂಡುಬಂದವು.
ಶಿರಸಾಂ ಪತಿತಾನಾಂ ಚ ಕುಂಡಲೋಷ್ಣೀಷಧಾರಿಣಾಮ್ |
ಭುಜಾನಾಂ ಮಕುಟಾನಾಂ ಚ ಹಾರಣಾಮಂಗದೈಸ್ಸಹ ||35||
ಛತ್ರಾಣಾಂ ವ್ಯಜನಾನಾಂ ಚ ಚರ್ಮಣಾಂ ವರ್ಮಣಾಂ ತಥಾ |
ಛಿನ್ನಾನಾಂ ಕಾರ್ಮುಕಾನಾಂ ಚ ಪಟ್ಟಸಾನಾಂ ತಥೈವ ಚ ||36||
ಶಕ್ತೀನಾಮಥ ಖಡ್ಗಾನಾಂ ದಂಡಾನಾಂ ಸಹ ತೋಮರೈಃ |
ರಾಶಯಶ್ಚಾತ್ರ ದೃಶ್ಯಂತೇ ತತ್ರ ತತ್ರ ವಿಶಾಂಪತೇ ||37||
ಎಲೈ ರಾಜನೇ, ಕರ್ಣಕುಂಡಲ ಮತ್ತು ರುಮಾಲುಗಳನ್ನು ಧರಿಸಿ ಬಿದ್ದ ಶಿರಸ್ಸುಗಳ, ಹಾರ ಅಂಗದ ಸಹಿತವಾದ ಭುಜಗಳ, ಕಿರೀಟಗಳ, ಛತ್ರಗಳ, ಚಾಮರಗಳ, ಗುರಾಣಿಗಳ, ಕವಚಗಳ, ಮುರಿದುಹೋದ ಬಿಲ್ಲುಗಳ, ಪಟ್ಟಸಗಳ, ಶಕ್ತಿಗಳ, ಖಡ್ಗಗಳ, ತೋಮರ ಸಹಿತವಾದ

ದಂಡಗಳ ರಾಶಿಗಳು ಅಲ್ಲಲ್ಲಿ ಕಾಣುತ್ತಿದ್ದವು.
ಪತಿತೈಶ್ಚೈವ ಮಾತಂಗೈಃ ಸಯೋಧೈಃ ಪರ್ವತೋಪಮೈಃ |
ಹಯೈರ್ದ್ವಿಧಾಕೃತೈಃ ಸಾರ್ಧಂ ಸಾದಿಭಿಃ ಸಾಯುಧೈಸ್ತಥಾ ॥38॥
ವಿಪ್ರವಿದ್ಧೈಃ ರಥೈಶ್ಚೈವ ನಿಹತೈಶ್ಚ ಪದಾತಿಭಿಃ |
ಆಗಮ್ಯರೂಪಾ ಪೃಥಿವೀ ಮಾಂಸಶೋಣಿತಕರ್ದಮಾ ॥39॥
ಯೋಧಸಹಿತವಾಗಿ ಕೆಳಗೆ ಉರುಳಿದ ಪರ್ವತದಂತಹ ಗಜಗಳಿಂದ, ಆಯುಧವನ್ನು ಹಿಡಿದ ಅಶ್ವಾರೋಹಿಗಳಿಂದ ಸಹಿತವಾದ ಕತ್ತರಿಸಲ್ಪಟ್ಟ ಕುದುರೆಗಳಿಂದ, ಮುರಿಯಲ್ಪಟ್ಟ ರಥಗಳಿಂದ, ಹತರಾದ ಪದಾತಿಗಳಿಂದ ಮತ್ತು ಮಾಂಸಶೋಣಿತ ಕರ್ದಮದಿಂದ ಕೂಡಿದ ಆ ಭೂಮಿಯು ನಡೆಯಲು ಅಸಾಧ್ಯವಾಗಿದ್ದಿತು.
ಹತೇಷು ತೇಷು ವೀರೇಷು ಸಿಂಧುರಾಜೋ ಜಯದ್ರಥಃ |
ವಿಮುಚ್ಯ ಕೃಷ್ಣಾಂ ಸಂತ್ರಸ್ತಃ ಪಲಾಯನಪರೋಽಭವತ್ ॥40॥
ಆ ವೀರರು ಹತರಾಗುತ್ತಿರಲು ಸಿಂಧುರಾಜನಾದ ಜಯದ್ರಥನು ಹೆದರಿ ದ್ರೌಪದಿಯನ್ನು ಬಿಟ್ಟು ಪಲಾಯನ ಪರನಾದನು.
ಸ ತಸ್ಮಿನ್ ಸಂಕುಲೇ ಸೈನ್ಯೇ ದ್ರೌಪದೀಮವತಾರ್ಯ ತಾಮ್ |
ಪ್ರಾಣಪ್ರೇಪ್ಸುರುಪಾಧಾವದ್ ವನಂ ತತ್ರ ನರಾಧಮಃ ॥41॥
ಆ ನರಾಧಮನು ಸೈನ್ಯದ ಗಡಿಬಿಡಿಯಲ್ಲಿ ದ್ರೌಪದಿಯನ್ನು ರಥದಿಂದ ಇಳಿಸಿ ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಕಾಡಿನ ಕಡೆಗೆ ಓಡಿದನು.
ದ್ರೌಪದೀಂ ಧರ್ಮರಾಜಸ್ತು ದೃಷ್ಟ್ವಾ ಧೌಮ್ಯಪುರಸ್ಕೃತಾಮ್ |
ಮಾದ್ರೀಪುತ್ರೇಣ ವೀರೇಣ ರಥಮಾರೋಪಯತ್ ತದಾ ॥42॥
ಧರ್ಮರಾಜನಾದರೂ ದ್ರೌಪದಿಯನ್ನು ನೋಡಿ ಧೌಮ್ಯರನ್ನು ಮುಂದೆ ಮಾಡಿಕೊಂಡು ವೀರನಾದ ಮಾದ್ರೀಪುತ್ರನಿಂದ ಅವಳನ್ನು ರಥಕ್ಕೆ ಹತ್ತಿಸಿದನು.
ತತಸ್ತದ್ವಿದ್ರುತಂ ಸೈನ್ಯಮಪಯಾತೇ ಜಯದ್ರಥೇ |
ಆದಿಶ್ಯಾದಿಶ್ಯ ನಾರಾಚೈರಾಜಘಾನ ವೃಕೋದರಃ ॥43॥
ಜಯದ್ರಥನು ಓಡಿಹೋಗುತ್ತಿರಲು ಆ ಸೈನ್ಯವು ಒಡೆದು ಹೋಯಿತು. ವೃಕೋದರನು ಬಾಣಗಳಿಂದ ಹೇಳಿ ಹೇಳಿ ಸೈನಿಕರಿಗೆ ಹೊಡೆದು ಕೊಂದನು.
ಸವ್ಯಸಾಚೀ ತು ತಂ ದೃಷ್ಟ್ವಾ ಪಲಾಯಂತಂ ಜಯದ್ರಥಮ್ |
ವಾರಯಾಮಾಸ ನಿಘ್ನಂತಂ ಭೀಮಂ ಸೈಂಧವಸೈನಿಕಾನ್ ॥44॥
ಸವ್ಯಸಾಚಿಯಾದ ಅರ್ಜುನನು ಓಡಿಹೋಗುತ್ತಿದ್ದ ಜಯದ್ರಥನನ್ನು ನೋಡಿ ಸೈಂಧವರ ಸೈನಿಕರನ್ನು ಕೊಲ್ಲುತ್ತಿದ್ದ ಭೀಮಸೇನನನ್ನು ತಡೆಹಿಡಿದನು.
ಅರ್ಜುನಃ
ಯಸ್ಯಾಪಚಾರಾತ್ ಪ್ರಾಪ್ತೋಽಯಮಸ್ಮಾನ್ ಕ್ಲೇಶೋ ದುರಾಸದಃ |
ತಮಸ್ಮಿನ್ ಸಮರೋದ್ದೇಶೇ ನ ಪಶ್ಯಾಮಿ ಜಯದ್ರಥಮ್ ॥45॥
ಅರ್ಜುನ ಯಾವನ ಅಪಚಾರದಿಂದ ನಮಗೆ ಹೊಂದಲು ಅಸಾಧ್ಯವಾದ ಈ ಕ್ಲೇಶವು ಉಂಟಾಯಿತೋ ಆ ಜಯದ್ರಥನನ್ನು ಈ ಸಮರಭೂಮಿಯಲ್ಲಿ ನಾನು ಕಾಣುತಿಲ್ಲ.
ಮೂಢಂ ನೈಕೃತಿಕಂ ದುಷ್ಟಂ ದ್ರೌಪದ್ಯಾಃ ಕ್ಲೇಶಕಾರಿಣಮ್ |
ತಮೇವಾನ್ವಿಷ ಭದ್ರಂ ತೇ ಕಿಂ ತೇ ಯೋಧೈರ್ನಿಪಾತಿತೈಃ |
ಅನಾಮಿಷಮಿದಂ ಕರ್ಮ ಕಥಂ ವಾ ಮನ್ಯತೇ ಭವಾನ್ ॥46॥
ಮೂಢನಾದ, ವಂಚನಶೀಲನಾದ, ದುಷ್ಟನಾದ, ದ್ರೌಪದಿಗೆ ಕ್ಲೇಶವನ್ನು ಕೊಟ್ಟ ಅವನನ್ನೇ ಹುಡುಕು. ನಿನಗೆ ಮಂಗಳವಾಗಲಿ. ಈ ಯೋಧರನ್ನು ಕೊಂದು ಏನು ಪ್ರಯೋಜನ? ಇದು ನಮಗೆ ತೃಪ್ತಿಯನ್ನು ಕೊಡುವ ಜಯದ್ರಥನೆಂಬ ಆಮಿಷವಿಲ್ಲದಿರುವ ಸೈನ್ಯವನ್ನು ಕೊಲ್ಲುವ ಕಾರ್ಯ. ನಿನ್ನ ಅಭಿಪ್ರಾಯವೇನು?
ವೈಶಂಪಾಯನಃ
ಇತ್ಯುಕ್ತೋ ಭೀಮಸೇನಸ್ತು ಗುಡಾಕೇಶೇನ ಧೀಮತಾ |
ಯುಧಿಷ್ಠಿರಮಭಿಪ್ರೇಕ್ಷ್ಯ ವಾಗ್ಮೀ ವಚನಮಬ್ರವೀತ್ ॥47॥
ವೈಶಂಪಾಯನ ಹೀಗೆ ಮೇಧಾವಿಯಾದ ಅರ್ಜುನನಿಂದ ಹೇಳಲ್ಪಟ್ಟ ವಾಗ್ಮಿಯಾದ ಭೀಮಸೇನನು ಯುಧಿಷ್ಠಿರನನ್ನು ನೋಡಿ ಮಾತನಾಡಿದನು.
ಹತಪ್ರವೀರಾ ರಿಪವೋ ಭೂಯಿಷ್ಠಂ ವಿದ್ರುತಾ ದಿಶಃ |
ಗೃಹೀತ್ವಾ ದ್ರೌಪದೀಂ ರಾಜನ್ ನಿವರ್ತತು ಭವಾನಿತಃ ॥48॥
ಶತ್ರುಗಳಲ್ಲಿ ಪ್ರಧಾನರಾದವರು ಹತರಾಗಿದ್ದಾರೆ. ಇನ್ನು ಹೆಚ್ಚಿನ ಸೈನ್ಯಭಾಗವು ಓಡಿಹೋಗಿದೆ. ರಾಜನೇ, ನೀನು ದ್ರೌಪದಿಯನ್ನು ಕರೆದುಕೊಂಡು ಇಲ್ಲಿಂದ ಹಿಂದಿರುಗು.
ಯಮಾಭ್ಯಾಂ ಸಹ ರಾಜೇಂದ್ರ ಧೌಮ್ಯೇನ ಚ ಮಹಾತ್ಮನಾ |
ಪ್ರಾಪ್ಯಾಶ್ರಮಪದಂ ರಾಜನ್ ದ್ರೌಪದೀಂ ಪರಿಸಾಂತ್ತ್ವಯ ॥49॥
ರಾಜೇಂದ್ರನೇ, ನೀನು ನಕುಲಸಹದೇವರಿಂದಲೂ, ಮಹಾತ್ಮರಾದ ಧೌಮ್ಯರಿಂದಲೂ ಸಹಿತನಾಗಿ ಆಶ್ರಮಸ್ಥಾನವನ್ನು ತಲುಪಿ

ದ್ರೌಪದಿಯನ್ನು ಸಮಾಧಾನಗೊಳಿಸು.
ನ ಹಿ ಮೇ ಮೋಕ್ಷ್ಯತೇ ಜೀವನ್ ಮೂಢಃ ಸೈಂಧವಕೋ ನೃಪಃ |
ಪಾಲಾಳತಳಸಂಸ್ಥೋಽಪಿ ಯದಿ ಶಕ್ರೋಽಸ್ಯ ಸಾರಥಿಃ ॥50॥
ಈ ದಿನ ಮೂಢನಾದ ಸೈಂಧವನು ಪಾತಾಳತಳವನ್ನು ಸೇರಿದರೂ, ಇಂದ್ರನೇ ಅವನಿಗೆ ಸಾರಥಿಯಾಗಿದ್ದರೂ ಸಹ ಜೀವಸಹಿತನಾಗಿ ನನ್ನಿಂದ ಬಿಡುಗಡೆಯನ್ನು ಹೊಂದುವುದಿಲ್ಲ.
ಯುಧಿಷ್ಠಿರಃ
ನ ಹಂತವ್ಯೋ ಮಹಾಬಾಹೋ ದುರಾತ್ಮಾಽಪಿ ಸ ಸೈಂಧವಃ |
ದುಃಶಲಾಮಭಿಸಂಸ್ಮೃತ್ಯ ಗಾಂಧಾರೀಂ ಚ ಯಶಸ್ವಿನೀಮ್ ॥51॥
ಯುಧಿಷ್ಠಿರ ಮಹಾಬಾಹುವೇ, ಸೈಂಧವನು ದುಷ್ಟನಾದರೂ ಯಶಸ್ವಿನಿಯಾದ ಗಾಂಧಾರಿಯನ್ನು ಮತ್ತು ತಂಗಿಯಾದ ದುಃಶಲೆಯನ್ನು ಸ್ಮರಣೆ ಮಾಡಿ ನೀನು ಅವನನ್ನು ಕೊಲ್ಲಬಾರದು.
ವೈಶಂಪಾಯನಃ
ತಚ್ಛ್ರುತ್ವಾ ದ್ರೌಪದೀ ಭೀಮಮುವಾಚ ವ್ಯಾಕುಲೇಂದ್ರಿಯಾ |
ಕುಪಿತಾ ಹ್ರೀಮತೀ ಪ್ರಾಜ್ಞಾ ಪತೀ ಭೀಮಾರ್ಜುನಾವುಭೌ ॥52॥
ವೈಶಂಪಾಯನ ಅದನ್ನು ಕೇಳಿದ ಪ್ರಾಜ್ಞಳಾದ ನಾಚಿಕೆಯಿಂದ ಕೂಡಿದ ದ್ರೌಪದಿಯು ಕೋಪಗೊಂಡವಳಾಗಿ ವ್ಯಾಕುಲೇಂದ್ರಿಯಳಾಗಿ ಪತಿಗಳಾದ ಭೀಮಾರ್ಜುನರನ್ನು ಕುರಿತು ಮಾತನಾಡಿದಳು.
ಕರ್ತವ್ಯಂ ಚೇತ್ ಪ್ರಿಯಂ ಮಹ್ಯಂ ವಧ್ಯಃ ಸ ಪುರುಷಾಧಮಃ |
ಸೈಂಧವಾಪಶದಃ ಪಾಪೋ ದುರ್ಮತಿಃ ಕುಲಪಾಂಸನಃ ॥53॥
ನನಗೆ ಪ್ರಿಯವನ್ನು ಮಾಡುವುದಾದರೆ ಪಾಪಿಯೂ, ದುರ್ಮತಿಯೂ, ಕುಲಪಾಂಸನನೂ, ಪುರುಷಾಧಮನೂ ಆದ ಸೈಂಧವಾಪಶದನನ್ನು ಕೊಲ್ಲಬೇಕು.
ಭಾರ್ಯಾಭಿಮರ್ಷ್ಯಾ ನಿರ್ವೈರೋ ಯಶ್ಚ ರಾಜ್ಯಾಪಹಾರಕಃ |
ಯಾಚಮಾನೋಽಪಿ ಸಂಗ್ರಾಮೇ ನ ಮೋಕ್ತವ್ಯಃ ಕಥಂಚನ ॥54॥
ಪತ್ನಿಯ ಮೇಲೆ ಕೈಮಾಡಿದವನು ಮತ್ತು ರಾಜ್ಯವನ್ನು ಅಪಹರಿಸಿದವನು ಯುದ್ಧದಲ್ಲಿ ವೈರವನ್ನು ತ್ಯಜಿಸಿ ಬೇಡಿದರೂ ಸಹ ಅವನನ್ನು ಎಂದೂ ಜೀವ ಸಹಿತವಾಗಿ ಉಳಿಸಬಾರದು.
ವೈಶಂಪಾಯನಃ
ಇತ್ಯುಕ್ತೌ ತೌ ನರವ್ಯಾಘ್ರೌ ಯಯತುರ್ಯತ್ರ ಸೈಂಧವಃ |
ರಾಜಾ ನಿವವೃತೇ ಕೃಷ್ಣಾಮಾದಾಯ ಸಪುರೋಹಿತಃ ॥55॥
ವೈಶಂಪಾಯನ ಹೀಗೆ ದ್ರೌಪದಿಯು ಹೇಳಿದಾಗ ಆ ನರವ್ಯಾಘ್ರರು ಸೈಂಧವನು ಹೋದ ಕಡೆಗೆ ಹೋದರು. ಧರ್ಮರಾಜನು ಪುರೋಹಿತರ ಜೊತೆಯಲ್ಲಿ ದ್ರೌಪದಿಯನ್ನು ಕರೆದುಕೊಂಡು ಹಿಂದಿರುಗಿದನು.
ಸ ಪ್ರವಿಶ್ಯಾಶ್ರಮಪದಮಪವಿದ್ಧಬೃಸೀಕಟಮ್ |
ಮಾರ್ಕಂಡೇಯಾದಿಭಿರ್ವಿಪ್ರೈರನುಕೀರ್ಣಂ ದದರ್ಶ ಹ ॥56॥
ಅವನು ಆಶ್ರಮವನ್ನು ಪ್ರವೇಶಿಸಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಕಮಂಡಲು, ಚಾಪೆ ಮೊದಲಾದವುಗಳನ್ನು ಮಾರ್ಕಂಡೇಯಾದಿ ಬ್ರಾಹ್ಮಣರು ಜೋಡಿಸುತ್ತಿರುವುದನ್ನು ನೋಡಿದನು.
ದ್ರೌಪದೀಮನುಶೋಚದ್ಭಿರ್ಬ್ರಾಹ್ಮಣೈಸ್ತೈಃ ಸಮಾಹಿತೈಃ |
ಸಮಿಯಾಯ ಮಹಾಪ್ರಾಜ್ಞಃ ಸಭಾರ್ಯೋ ಭ್ರಾತೃಮಧ್ಯಗಃ ॥57॥
ಮಹಾಪ್ರಾಜ್ಞನಾದ ಅವನು ದ್ರೌಪದಿಯನ್ನು ಕುರಿತು ಆ ಸಮಾಹಿತರಾದ ಬ್ರಾಹ್ಮಣರು ಶೋಕಪಡುತಿತರಲು ಭಾರ್ಯಾಸಹಿತನಾಗಿ ಭ್ರಾತೃಗಳ ಮಧ್ಯದಲ್ಲಿ ಇರುವವನಾಗಿ ಆ ಬ್ರಾಹ್ಮಣರ ಜೊತೆಯಲ್ಲಿ ಸಮಾಗಮವನ್ನು ಹೊಂದಿದನು.
ತೇ ಸ್ಮ ತಂ ಮುದಿತಾ ದೃಷ್ಟ್ವಾ ಪುನರಪ್ಯಾಗತಂ ನೃಪಮ್ |
ಜಿತ್ವಾ ತಾನ್ ಸಿಂಧುಸೌವೀರಾನ್ ದ್ರೌಪದೀಂ ಚಾಹೃತಾಂ ಪುನಃ |
ಸ ತೈಃ ಪರಿವೃತೋ ರಾಜಾ ತತ್ರೈವೋಪವಿವೇಶ ಹ ॥58॥
ಅವರು ಸಿಂಧುಸೌವೀರರನ್ನು ಗೆದ್ದು ದ್ರೌಪದಿಯನ್ನು ಕರೆದುಕೊಂಡು ಪುನಃ ಆಶ್ರಮಕ್ಕೆ ಬಂದ ರಾಜನನ್ನು ನೋಡಿ ಸಂತುಷ್ಟರಾದರು. ಅವರಿಂದ ಸುತ್ತುವರಿಯಲ್ಪಟ್ಟ ರಾಜನು ಅಲ್ಲಿಯೇ ಕುಳಿತುಕೊಂಡನು.
ಪ್ರವಿವೇಶಾಶ್ರಮಂ ಕೃಷ್ಣಾ ಯಮಾಭ್ಯಾಂ ಸಹ ಭಾಮಿ(ವಿ)ನೀ ॥59॥
ಭಾಮಿನಿಯಾದ ದ್ರೌಪದಿಯೂ ಸಹ ನಕುಲಸಹದೇವರ ಜೊತೆಯಲ್ಲಿ ಆಶ್ರಮವನ್ನು ಪ್ರವೇಶಿಸಿದಳು.
ಭೀಮಸೇನಾರ್ಜುನೌ ಚಾಪಿ ಶ್ರುತ್ವಾ ಕ್ರೋಶಗತಂ ರಿಪುಮ್ |
ಸ್ವಯಮಶ್ವಾಂಸ್ತುದಂತೌ ತೌ ಜವೇನೈವಾಭ್ಯಧಾವತಾಮ್ ॥60॥
ಭೀಮಸೇನ ಅರ್ಜುನರೂ ಸಹ ಸೈಂಧವನು ಒಂದು ಕ್ರೋಶ ದೂರ ಹೋಗಿದ್ದಾನೆಂದು ಕೇಳಿ ಕುದುರೆಗಳನ್ನು ತಾವೇ ಪ್ರೇರಣೆ ಮಾಡುತ್ತಾ ವೇಗದಿಂದ ಓಡಿದರು.
ಇದಮತ್ಯದ್ಭುತಂ ಚಾತ್ರ ಚಕಾರ ಪುರುಷೋಽರ್ಜುನಃ |
ಕ್ರೋಶಮಾತ್ರಗತಾನಶ್ವಾನ್ ಸೈಂಧವಸ್ಯ ಜಘಾನ ಯತ್ ॥61॥
ಒಂದು ಕ್ರೋಶದೂರದಲ್ಲಿದ್ದ ಸೈಂಧವನ ಕುದುರೆಗಳಿಗೆ ಬಾಣಪ್ರಯೋಗವನ್ನು ಮಾಡಿ ಅವುಗಳನ್ನು ಕೊಂದು ಅರ್ಜುನನು ಈ

ಅದ್ಭುತವಾದ ಕಾರ್ಯವನ್ನು ಮಾಡಿದನು.
ಸ ಹಿ ದಿವ್ಯಾಸ್ತ್ರಸಂಪನ್ನಃ ಕೃಚ್ಛ್ರಕಾಲೇಽಪ್ಯಸಂಭ್ರಮಃ |
ಅಕರೋದ್ ದುಷ್ಕರಂ ಕರ್ಮ ಶರೈರಸ್ತ್ರಾನುಮಂತ್ರಿತೈಃ ||62||
ದಿವ್ಯಾಸ್ತ್ರಸಂಪನ್ನನೂ ಕಷ್ಟಕಾಲದಲ್ಲಿಯೂ ಪ್ರಮಾದಕ್ಕೆ ಒಳಗಾಗದವನೂ ಆದ ಅವನು ಅಸ್ತ್ರಗಳಿಂದ ಮಂತ್ರಿತವಾದ ಶರಗಳಿಂದ ದುಷ್ಕರವಾದ ಕರ್ಮವನ್ನು ಮಾಡಿದನು.
ತತೋಽಭ್ಯಧಾವತಾಂ ವೀರಾವುಭೌ ಭೀಮಧನಂಜಯೌ |
ಹತಾಶ್ವಂ ಸೈಂಧವಂ ಭೀತಮೇಕಂ ವ್ಯಾಕುಲಚೇತಸಮ್ ||63||
ಅನಂತರ ಅಶ್ವಗಳನ್ನು ಕಳೆದುಕೊಂಡು ವ್ಯಾಕುಲಚೇತನನಾಗಿ ಭಯದಿಂದ ಏಕಾಕಿಯಾಗಿ ಓಡುತ್ತಿದ್ದ ಸೈಂಧವನ ಕಡೆಗೆ ವೀರರಾದ ಭೀಮಾರ್ಜುನರಿಬ್ಬರೂ ಓಡಿದರು.
ಸೈಂಧವಸ್ತು ಹತಾನ್ ದೃಷ್ಟ್ವಾ ತಥಾಽಶ್ವಾನ್ ಸ್ವಾನ್ ಸುದುಃಖಿತಃ |
ರಥಾತ್ ಪ್ರಸ್ಕಂದ್ಯ ಪದ್ಭ್ಯಾಂ ವೈ ಪಲಾಯನಪರೋಽಭವತ್ ||64||
ಸೈಂಧವನಾದರೂ ತನ್ನ ಕುದುರೆಗಳು ಹತವಾದುದನ್ನು ನೋಡಿ ಬಹಳ ದುಃಖದಿಂದ ಕೂಡಿದವನಾಗಿ ರಥದಿಂದ ಧುಮುಕಿ ಕಾಲಿನಿಂದಲೇ ಓಡಲು ಪ್ರಾರಂಭ ಮಾಡಿದನಷ್ಟೆ?
ದೃಷ್ಟ್ವಾ ವಿಕ್ಲವಕರ್ಮಾಣಿ ಕುರ್ವಾಣಂ ಚ ಧನಂಜಯಮ್ |
ಪಲಾಯನಕೃತೋತ್ಸಾಹಃ ಪ್ರಾದ್ರವದ್ ಯೇನ ವೈ ವನಮ್ ||65||
ಅರ್ಜುನನು ಒಮ್ಮೊಮ್ಮೆ ಎಡವುತ್ತಿದ್ದುದನ್ನು ಗಮನಿಸಿದ ಅವನು ಪಲಾಯನದಲ್ಲಿ ಉತ್ಸಾಹವನ್ನು ಹೊಂದಿದವನಾಗಿ ಕಾಡಿನ ಕಡೆಗೆ ಓಡಿದನು.
ಸೈಂಧವಂ ತ್ವಭಿಸಂಪ್ರೇಕ್ಷ್ಯ ಪರಾಕ್ರಾಂತಂ ಪಲಾಯನೇ |
ಅನುಯಾಯ ಮಹಾಬಾಹುಃ ಫಲ್ಗುನೋ ವಾಕ್ಯಮಬ್ರವೀತ್ ||66||
ಪಲಾಯನದಲ್ಲಿ ನಿರತನಾಗಿದ್ದ ಸೈಂಧವನನ್ನು ನೋಡಿ ಅವನನ್ನು ಹಿಂಬಾಲಿಸಿ ಮಹಾಬಾಹುವಾದ ಅರ್ಜುನನು ಅವನನ್ನು ಕುರಿತು ಮಾತನಾಡಿದನು.
ಅನೇನ ವೀರ್ಯೇಣ ಕಥಂ ಸ್ತ್ರಿಯಂ ಪ್ರಾರ್ಥಪಸೇ ಬಲಾತ್ |
ರಾಜಪುತ್ರ ನಿವರ್ತಸ್ವ ನ ತೇ ಯುಕ್ತಂ ಪಲಾಯನಮ್ |
ಕಥಂ ಹ್ಯನುಚರಾನ್ ಹಿತ್ವಾ ಶತ್ರುಮಧ್ಯೇ ಪಲಾಯಸೇ ||67||
ಎಲೈ ರಾಜಪುತ್ರನೇ, ಇಂತಹ ಪರಾಕ್ರಮವನ್ನು ಹೊಂದಿದ ನೀನು ಹೇಗೆ ಇನ್ನೊಬ್ಬರ ಪತ್ನಿಯನ್ನು ಬಯಸುವಿ? ಹಿಂದಿರುಗು. ಪಲಾಯನವು ನಿನಗೆ ಯೋಗ್ಯವಲ್ಲ. ನಿನ್ನ ಹಿಂಬಾಲಕರನ್ನು ಬಿಟ್ಟು ಹೇಗೆ ಶತ್ರುಗಳ ಮಧ್ಯದಲ್ಲಿ ಓಡಿಹೋಗುತ್ತಿದ್ದೀಯೆ?
ವೈಶಂಪಾಯನಃ
ಇತ್ಯುಚ್ಯಮಾನಃ ಪಾರ್ಥೇನ ಸೈಂಧವೋ ನ ನ್ಯವರ್ತತ ||68||
ತಿಷ್ಠ ತಿಷ್ಠೇತಿ ತಂ ಭೀಮಃ ಸಹಸಾಽಭ್ಯದ್ರವದ್ ಬಲೀ |
ಮಾ ವಧೀರಿತಿ ಪಾರ್ಥಸ್ತಂ ದಯಾವಾನ್ ಪ್ರತ್ಯಭಾಷತ ||69||
ವೈಶಂಪಾಯನ ಅರ್ಜುನನು ಹೀಗೆ ಹೇಳುತ್ತಿದ್ದರೂ ಸೈಂಧವನು ಹಿಂದಿರುಗಲಿಲ್ಲ. ಬಲಿಷ್ಠನಾದ ಭೀಮಸೇನನು ನಿಲ್ಲು, ನಿಲ್ಲು ಎಂದು ಹೇಳುತ್ತಾ ಅವನ ಹಿಂದೆ ಓಡಿದನು. ದಯಾಳುವಾದ ಅರ್ಜುನನು ಭೀಮಸೇನನನ್ನು ಕುರಿತು ಅವನನ್ನು ಕೊಲ್ಲಬೇಡ ಎಂದು ಹೇಳಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನನಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||
||ಇತಿ ದ್ರೌಪದೀಹರಣಪರ್ವಣಿ ಜಯದ್ರಥಕುಲಾಯನಂ ನಾಮ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ಜಯದ್ರಥ ವಿಮೋಕ್ಷ ಪರ್ವ
ಇನ್ನೂರ ಅರವತ್ತನೆಯ ಅಧ್ಯಾಯ
ಭೀಮನಿಂದ ಜಯದ್ರಥನನ್ನು ಹಿಡಿದು ಪಾದಪ್ರಹಾರವನ್ನು ಮಾಡಿ ಅವನಿಗೆ ಪಂಚಚೂಡಾಕರಣ. ಯುಧಿಷ್ಠಿರನಿಂದ ಸೈಂಧವನ ವಿಮೋಚನೆ. ಸೈಂಧವನ ತಪಸ್ಸು ಮತ್ತು ರುದ್ರದೇವರಿಂದ ವರದಾನ.
ವೈಶಂಪಾಯನಃ
ಜಯದ್ರಥಸ್ತು ಸಂಪ್ರೇಕ್ಷ್ಯ ಭ್ರಾತರಾವುದ್ಯತಾವುಭೌ |
ಪ್ರಾಧಾವತ್ತೂರ್ಣಮವ್ಯಗ್ರೋ ಜೀವಿತೇಪ್ಸುಃ ಸುದುಃಖಿತಃ ||1||
ವೈಶಂಪಾಯನ ಜಯದ್ರಥನು ಸಹೋದರರಿಬ್ಬರೂ ತನ್ನ ಬೆನ್ನು ಹತ್ತಿ ಬರುತ್ತಿರುವುದನ್ನು ನೋಡಿ ಸುದುಃಖಿತನಾಗಿ ಜೀವವನ್ನು ಉಳಿಸಿಕೊಳ್ಳಲು ಬಯಸಿ ಅವ್ಯಗ್ರನಾಗಿ ಶೀಘ್ರವಾಗಿ ಓಡಿದನು.
ಲತಾಭಿಃ ಸಂವೃತೇ ಕಕ್ಷೇ ಕಿರೀಟಂ ರತ್ನಭಾಸ್ವರಮ್ |
ಅಪವಿಧ್ಯ ಪ್ರಧಾವಂತಂ ನಿಲೀಯಂತಂ ವನಾಂತರೇ ||2||

ಲತೆಗಳಿಂದ ಮುಚ್ಚಲ್ಪಟ್ಟಿದ್ದ ಒಂದು ಪೊದೆಯಲ್ಲಿ ತನ್ನ ರತ್ನದಿಂದ ಶೋಭಿಸುವ ಕಿರೀಟವನ್ನು ಎಸೆದು ಕಾಡಿನಲ್ಲಿ ಅಲ್ಲಲ್ಲಿ ಅವಿತುಕೊಂಡು ಓಡಿದನು.
ಭೀಮಸೇನಸ್ತು ತಂ ಕಕ್ಷೇ ಲೀಯಮಾನಂ ಭಯಾಕುಲಮ್ |
ಮಾರ್ಗಮಾಣೋಽವತೀರ್ಯಾಶು ರಥಾದ್ರತ್ನವಿಭೂಷಿತಾತ್ ॥3॥
ಭೀಮಸೇನನಾದರೂ ಭಯಾಕುಲನಾಗಿ ಪೊದೆಗಳಲ್ಲಿ ಅವಿತುಕೊಳ್ಳುತ್ತಿದ್ದ ಅವನನ್ನು ಹುಡುಕುತ್ತಾ ತನ್ನ ರತ್ನವಿಭೂಷಿತವಾದ ರಥದಿಂದ ಇಳಿದು (ಹಿಂಬಾಲಿಸಿದನು).
ತಂ ಭೀಮಸೇನೋ ಧಾವಂತಮವತೀರ್ಯ ರಥಾದ್ ಬಲೀ |
ಅಭಿದ್ರುತ್ಯ ನಿಜಗ್ರಾಹ ಕೇಶಪಕ್ಷೇ ಹ್ಯಮರ್ಷಣಃ ॥4॥
ಸಮುದ್ಯಮ್ಯ ಚ ತಂ ಭೀಮೋ ನಿಷ್ಪಿಪೇಷ ಮಹೀತಳೇ |
ಶಿರೋ ಗೃಹೀತ್ವಾ ರಾಜಾನಂ ತಾಡಯಾಮಾಸ ಚೈವ ಹಿ ॥5॥
ಕ್ರೋಧಶೀಲನಾದ ಭೀಮಸೇನನು ಅವನ ಹಿಂದೆ ಓಡಿ ಅವನ ಕೇಶಗಳಲ್ಲಿ ಅವನನ್ನು ಹಿಡಿದು ಭೂಮಿಯಲ್ಲಿ ಹಾಕಿ ಅರೆದನು. ಮತ್ತು ಶಿರಸ್ಸನ್ನು ಹಿಡಿದುಕೊಂಡು ಆ ರಾಜನಿಗೆ ತಾಡನವನ್ನು ಮಾಡಿದನು.
ಪುನಃ ಸಂಜೀವಮಾನಸ್ಯ ತಸ್ಯೋತ್ಪತಿತುಮಿಚ್ಛತಃ |
ಪದಾ ಮೂರ್ಧ್ನಿ ಮಹಾಬಾಹುಃ ಪ್ರಾಹರದ್ ವಿಲಪಿಷ್ಯತಃ ॥6॥
ಪುನಃ ಮೇಲೇಳಲು ಇಚ್ಛಿಸಿ ಜೀವಸಹಿತನಾಗಿ ವಿಲಾಪವನ್ನು ಮಾಡುತ್ತಿದ್ದ ಅವನ ತಲೆಯನ್ನು ಮಹಾಬಾಹುವಾದ ಭೀಮಸೇನನು ತನ್ನ ಕಾಲಿನಿಂದ ಒದ್ದನು.
ತಸ್ಯ ಜಾನೂ ದದೌ ಭೀಮೋ ಜಘ್ನೇ ಚೈನಮರತ್ನಿನಾ |
ಸ ಮೋಹಮಗಮದ್ ರಾಜಾ ಪ್ರಹಾರವರಪೀಡಿತಃ ॥7॥
ಅವನನ್ನು ತನ್ನ ಮಂಡಿಗಳಿಂದ ಹಿಡಿದು ತನ್ನ ಮೊಣಕೈಯಿಂದ ಅವನಿಗೆ ಗುದ್ದಿದನು. ಅಂತಹ ದೊಡ್ಡ ಹೊಡೆತದಿಂದ ಪೀಡಿತನಾದ ಜಯದ್ರಥನು ಮೂರ್ಛೆ ಹೋದನು.
ಸರೋಷಂ ಭೀಮಸೇನಂ ತು ವಾರಯಾಮಾಸ ಫಲ್ಗುನಃ |
ದುಃಶಲಾಯಾಃ ಕೃತೇ ರಾಜಾ ಯತ್ತದಾಹೇತಿ ಕೌರವಃ ॥8॥
ಅರ್ಜುನನು ದುಃಶಲೆಯ ಸಲುವಾಗಿ ಕೌರವರಾಜನಾದ ಯುಧಿಷ್ಠಿರನು ಏನು ಹೇಳಿದನೋ ಅದನ್ನು ಸ್ಮರಿಸಿ ರೋಷದಿಂದ ಕೂಡಿದ ಭೀಮಸೇನನನ್ನು ತಡೆದನು.
ಭೀಮಸೇನಃ
ನಾಯಂ ಪಾಪಸಮಾಚಾರೋ ಮತ್ತೋ ಜೀವಿತುಮರ್ಹತಿ |
ಕೃಷ್ಣಾಯಾಸ್ತದನರ್ಹಾಯಾಃ ಪರಿಕ್ಲೇಷ್ಟಾ ನರಾಧಮಃ ॥9॥
ಭೀಮಸೇನ ಪಾಪಾಚಾರವುಳ್ಳ ಇವನು ನನ್ನ ಕೈಗೆ ಸಿಲುಕಿ ಜೀವಂತವಾಗಿ ಉಳಿಯಬಾರದು. ಇವನು ಅಂತಹ ಕ್ಲೇಶಕ್ಕೆ ಅರ್ಹಳಲ್ಲದ ದ್ರೌಪದಿಗೆ ಬಹಳ ಕ್ಲೇಶವನ್ನು ಕೊಟ್ಟ ನರಾಧಮ.
ಕಿಂ ನು ಶಕ್ಯಂ ಮಯಾ ಕರ್ತುಂ ಯದ್ ರಾಜಾ ಸತತಂ ಘೃಣೀ |
ತ್ವಂ ಚ ಬಾಲಿಶಯಾ ಬುದ್ಧ್ಯಾ ಸದೈವಾಸ್ಮಾನ್ ಪ್ರಬಾಧಸೇ ॥10॥
ರಾಜನು ಹೀಗೆ ಯಾವಾಗಲೂ ದಯಾಪರನಾಗಿರುವಾಗ ನಾನೇನು ಮಾಡಲಿ? ನೀನೂ ಸಹ ಬಾಲಿಶ ಬುದ್ಧಿಯಿಂದ ಯಾವಾಗಲೂ ನನ್ನನ್ನು ಪೀಡಿಸುತ್ತಿದ್ದೀಯೆ.
ಏವಮುಕತ್ವ ಸಟಾಸ್ತಸ್ಯ ಪಂಚ ಚಕ್ರೇ ವೃಕೋದರಃ |
ಅರ್ಧಚಂದ್ರೇಣ ಬಾಣೇನ ಕಿಂಚಿದಬ್ರುವತಸ್ತದಾ |
ವಿಕಲ್ಪಯಿತ್ವಾ ರಾಜಾನಂ ತತಃ ಪ್ರಾಹ ವೃಕೋದರಃ ॥11॥
ವೈಶಂಪಾಯನ ಹೀಗೆ ಹೇಳಿ ವೃಕೋದರನು ತನ್ನ ಅರ್ಧಚಂದ್ರ ಬಾಣದಿಂದ ಏನೂ ಮಾತನಾಡದೆ ಮೌನವಾಗಿದ್ದ ಅವನ ತಲೆಕೂದಲುಗಳನ್ನು ಐದುಭಾಗವನ್ನಾಗಿ ಮಾಡಿದನು. ಆ ರಾಜನನ್ನು ವಿರೂಪಗೊಳಿಸಿ ಅನಂತರ ಭೀಮಸೇನನು ಮಾತನಾಡಿದನು.
ಜೀವಿತುಂ ಚೇಚ್ಛಸೇ ಮೂಢ ಹೇತುಂ ಮೇ ಗದತಃ ಶೃಣು ॥12॥
ದಾಸೋಽಸ್ಮೀತಿ ತಥಾ ವಾಚ್ಯಂ ಸಂಸತ್ಸು ಚ ಸಭಾಸು ಚ |
ಏವಂ ಚೇಜ್ಜೀವಿತಂ ದದ್ಯಾಂ ಏಷ ಯುದ್ಧಜಿತೋ ವಿಧಿಃ ॥13॥
ಮೂಢನೇ, ನೀನು ಬದುಕಲು ಬಯಸುತ್ತೀಯೆ. ಬದುಕಬೇಕಾದರೆ ಅದಕ್ಕೆ ಕಾರಣವನ್ನು ಹೇಳುತ್ತೇನೆ, ಕೇಳು. ನಾನು ನಿಮ್ಮ ದಾಸನಾಗಿದ್ದೇನೆ ಎಂದು ನೀನು ಸಜ್ಜನರಿರುವ ಸಭೆಯಲ್ಲಿ ಹೇಳಬೇಕು. ಹಾಗಾದರೆ ನಿನಗೆ ಜೀವಿತವನ್ನು ಕೊಡುತ್ತೇನೆ. ಇದು ಯುದ್ಧದಲ್ಲಿ ಪರಾಜಿತರಾದವರು ಅನುಸರಿಸಬೇಕಾದ ಕ್ರಮ.
ವೈಶಂಪಾಯನಃ
ಏವಮಸ್ತ್ವಿತಿ ತಂ ರಾಜಾ ಕೃಷ್ಯಮಾಣೋ ಜಯದ್ರಥಃ |
ಪ್ರೋವಾಚ ಪುರುಷವ್ಯಾಘ್ರಂ ಭೀಮಮಾಹವಶೋಭಿನಮ್ ॥14॥
ವೈಶಂಪಾಯನ ಹಾಗೆಯೇ ಆಗಲಿ ಎಂದು ಹೇಳಿ ಭೀಮಸೇನನಿಂದ ಎಳೆಯಲ್ಪಡುತ್ತಿದ್ದ ಆ ಜಯದ್ರಥರಾಜನು ಆಹವಶೋಭಿಯಾದ ಪುರುಷವ್ಯಾಘ್ರನಾದ ಭೀಮಸೇನನನ್ನು ಕುರಿತು ಹೇಳಿದನು.
ತತ ಏನಂ ವಿಚೇಷ್ಟಂತಂ ಬದ್ಧ್ವಾ ಪಾರ್ಥೋ ವೃಕೋದರಃ |

ರಥಮಾರೋಪಯಾಮಾಸ ವಿಸಂಜ್ಞಂ ಪಾಂಸುಗುಂಠಿತಮ್ ॥15॥
ಅನಂತರ ಕುಂತೀಪುತ್ರನಾದ ವೃಕೋದರನು ವಿಸಂಜ್ಞನಾಗಿ ಧೂಳಿನಿಂದ ಆವೃತನಾಗಿ ಸ್ವಲ್ಪ ಶರೀರ ಚೇಷ್ಟೆಯನ್ನು ಹೊಂದಿದ್ದ ಅವನನ್ನು ಕಟ್ಟಿ ರಥದಲ್ಲಿ ಹಾಕಿದನು.
ತತಸ್ತಂ ರಥಮಾಸ್ಥಾಯ ಭೀಮಃ ಪಾರ್ಥಾನುಗಸ್ತದಾ |
ಅಭ್ಯೇತ್ಯಾಶ್ರಮಮಧ್ಯಸ್ಥಮಭ್ಯಗಚ್ಛದ್ ಯುಧಿಷ್ಠಿರಮ್ ॥16॥
ಅನಂತರ ಅರ್ಜುನನಿಂದ ಹಿಂಬಾಲಿಸಲ್ಪಟ್ಟ ಭೀಮನು ಆ ರಥವನ್ನು ಏರಿ ಆಶ್ರಮಕ್ಕೆ ಬಂದು ಆಶ್ರಮದ ಮಧ್ಯದಲ್ಲಿದ್ದ ಯುಧಿಷ್ಠಿರನ ಸಮೀಪಕ್ಕೆ ಬಂದನು.
ದರ್ಶಯಾಮಾಸ ಭೀಮಸ್ತು ತದವಸ್ಥಂ ಜಯದ್ರಥಮ್ |
ತಂ ರಾಜಾ ಪ್ರಾಹಸದ್ ದೃಷ್ಟ್ವಾ ಮುಚ್ಯತಾಮಿತಿ ಚಾಬ್ರವೀತ್ ॥17॥
ಭೀಮಸೇನನಾದರೂ ಆ ಅವಸ್ಥೆಯಲ್ಲಿದ್ದ ಜಯದ್ರಥನನ್ನು ಯುಧಿಷ್ಠಿರನಿಗೆ ತೋರಿಸಿದನು. ಆ ರಾಜನು ಅವನನ್ನು ನೋಡಿ ನಕ್ಕು ಅವನನ್ನು ಬಿಡುಗಡೆ ಮಾಡು ಎಂದು ಹೇಳಿದನು.
ರಾಜಾನಂ ಚಾಬ್ರವೀದ್ ಭೀಮೋ ದ್ರೌಪದ್ಯಾ ಕಥ್ಯತಾಮಿತಿ |
ದಾಸಭಾವಗತೋ ಹ್ಯೇಷ ಪಾಂಡೂನಾಂ ಪಾಪಚೇತನಃ |
ತಮುವಾಚ ತತೋ ಜ್ಯೇಷ್ಠೋ ಭ್ರಾತಾ ಸಪ್ರಣಯಂ ವಚಃ ॥18॥
ಮುಂಚೈನಮಧಮಾಚಾರಂ ಪ್ರಮಾಣಾ ಯದಿ ತೇ ವಯಮ್ |
ದ್ರೌಪದೀ ಚಾಬ್ರವೀದ್ ಭೀಮಮಭಿಪ್ರೇಕ್ಷ್ಯ ಯುಧಿಷ್ಠಿರಮ್ ॥19॥
ದಾಸೋಽಯಂ ಮುಚ್ಯತಾಂ ರಾಜ್ಞಸ್ತ್ವಯಾ ಪಂಚಸಟಃ ಕೃತಃ |
ಏವಮುಕ್ತಃ ಸ ಭೀಮಸ್ತು ಭ್ರಾತ್ರಾ ಚೈವ ಚ ಕೃಷ್ಣಯಾ |
ಮುಮೋಚ ತಂ ಮಹಾಪಾಪಂ ಜಯದ್ರಥಮಚೇತಸಮ್ ॥20॥
ಭೀಮನು ರಾಜನನ್ನು ಕುರಿತು ದ್ರೌಪದಿಯು ಹೇಳಲಿ ಎಂದು ಹೇಳಿದನು. ಈ ಪಾಪಚೇತನನು ಪಾಂಡವರಿಗೆ ದಾಸನಾಗಿದ್ದಾನೆ ಎಂದೂ ಹೇಳಿದನು. ಆಗ ಅಣ್ಣನಾದ ಧರ್ಮರಾಜನು ಸ್ನೇಹಪೂರ್ವಕವಾಗಿ ಭೀಮಸೇನನನ್ನು ಕುರಿತು ಪ್ರೀತಿಪೂರ್ವಕವಾಗಿ ನಿನಗೆ ನನ್ನ ಮೇಲೆ ಗೌರವವಿದ್ದರೆ ಈ ನೀಚ ಕರ್ಮವನ್ನು ಮಾಡಿರುವ ಜಯದ್ರಥನನ್ನು ಬಿಟ್ಟುಬಿಡು ಎಂದು ಹೇಳಿದನು. ದ್ರೌಪದಿಯೂ ಸಹ ಯುಧಿಷ್ಠಿರನನ್ನು ನೋಡುತ್ತಾ ಭೀಮಸೇನನನ್ನು ಕುರಿತು ರಾಜನಾದ ದಾಸನಾದ ಇವನಿಗೆ ನೀನು ಪಂಚಚೂಡಗಳನ್ನು ಮಾಡಿದ್ದೀಯೆ. ಇವನನ್ನು ಬಿಟ್ಟುಬಿಡು ಎಂದು ಹೇಳಿದಳು. ಹೀಗೆ ಅಣ್ಣನಿಂದಲೂ ಮತ್ತು ದ್ರೌಪದಿಯಿಂದಲೂ ಹೇಳಲ್ಪಟ್ಟ ಭೀಮನು ವಿಚೇತನನಾದ, ಮಹಾಪಾಪಿಯಾದ ಆ ಜಯದ್ರಥನನ್ನು ಮೋಚನೆ ಮಾಡಿದನು.
ಸ ಮುಕ್ತೋಽಭ್ಯೇತ್ಯ ರಾಜಾನಮಭಿವಾದ್ಯ ಯುಧಿಷ್ಠಿರಮ್ |
ವವಂದೇ ವಿಹ್ವಲೋ ರಾಜಂಸ್ತಾಂಶ್ಚ ದೃಷ್ಟ್ವಾ ಮುನೀಂಸ್ತದಾ ॥21॥
ಎಲೈ ರಾಜನೇ, ಬಿಡುಗಡೆಯನ್ನು ಹೊಂದಿದ ಅವನು ರಾಜನಾದ ಯುಧಿಷ್ಠಿರನಿಗೆ ನಮಸ್ಕಾರವನ್ನು ಮಾಡಿ ಅಲ್ಲಿ ನೆರೆದಿದ್ದ ಮುನಿಗಳನ್ನು ನೋಡಿ ಅವರಿಗೂ ಸಹ ವಿಹ್ವಲನಾಗಿ ನಮಸ್ಕಾರವನ್ನು ಮಾಡಿದನು.
ತಮುವಾಚ ಘೃಣೀ ರಾಜಾ ಧರ್ಮಪುತ್ರೋ ಯುಧಿಷ್ಠಿರಃ |
ತಥಾ ಜಯದ್ರಥಂ ದೃಷ್ಟ್ವಾ ಗೃಹೀತಂ ಸವ್ಯಸಾಚಿನಾ ॥22॥
ಅರ್ಜುನನಿಂದ ಗೃಹೀತನಾಗಿದ್ದ ಜಯದ್ರಥನನ್ನು ನೋಡಿ ದಯಾಳುವಾದ ಧರ್ಮಪುತ್ರನಾದ ಯುಧಿಷ್ಠಿರ ರಾಜನು ಅವನನ್ನು ಕುರಿತು ಮಾತನಾಡಿದನು.
ಅದಾಸೋ ಗಚ್ಛ ಮುಕ್ತೋಸಿ ಮೈವಂ ಕಾರ್ಷೀಃ ಪುನಃ ಕ್ವಚಿತ್ |
ಸ್ತ್ರೀಕಾಮುಕ ಧಿಗಸ್ತು ತ್ವಾಂ ಕ್ಷುದ್ರಃ ಕ್ಷುದ್ರಸಹಾಯವಾನ್ ॥23॥
ನಿನ್ನನ್ನು ಬಿಡುಗಡೆ ಮಾಡಿದ್ದೇವೆ. ನೀನು ದಾಸನಾಗದೆ ಇಲ್ಲಿಂದ ಹೋಗು. ಇನ್ನೊಮ್ಮೆ ಇಂತಹ ಕಾರ್ಯವನ್ನು ಮಾಡಬೇಡ. ಸ್ತ್ರೀಕಾಮುಕನೇ ನಿನಗೆ ಧಿಕ್ಕಾರವಿರಲಿ. ನೀನು ಕ್ಷುದ್ರನಾದವನು ಮತ್ತು ಕ್ಷುದ್ರರ ಸಹಾಯವನ್ನು ಹೊಂದಿದವನು.
ಏವಂವಿಧಂ ಹಿ ಕಃ ಕುರ್ಯಾತ್ ತ್ವದನ್ಯಃ ಪುರುಷಾಧಮಃ |
ಕರ್ಮ ಧರ್ಮವಿರುದ್ಧಂ ವೈ ಲೋಕದುಷ್ಟಂ ಚ ದುರ್ಮತೇ ॥24॥
ಎಲೈ ದುರ್ಮತಿಯೇ, ಇಂತಹ ಧರ್ಮವಿರುದ್ಧವಾದ ಲೋಕದುಷ್ಟವಾದ ಕಾರ್ಯವನ್ನು ನಿನ್ನನ್ನು ಬಿಟ್ಟು ಯಾವ ಪುರುಷಾಧಮನು ಮಾಡಿಯಾನು? (ಎಂದು ಹೇಳಿದನು).
ವೈಶಂಪಾಯನಃ
ಗತಸತ್ವಮಿವ ಜ್ಞಾತ್ವಾ ಕರ್ತಾರಮ ಶುಭಸ್ಯ ತಮ್ |
ಸಂಪ್ರೇಕ್ಷ್ಯ ಭರತಶ್ರೇಷ್ಠಃ ಕೃಪಾಂ ಚಕ್ರೇ ನರಾಧಿಪಃ ॥25॥
ವೈಶಂಪಾಯನ ಪ್ರಾಣವೇ ಹೋದಂತಿದ್ದ ಅಶುಭ ಕಾರ್ಯವನ್ನು ಮಾಡಿದ ಅವನನ್ನು ನೋಡಿ ಭರತಶ್ರೇಷ್ಠನಾದ ಧರ್ಮರಾಜನು ಅವನಲ್ಲಿ ದಯೆಯನ್ನು ಮಾಡಿದನು.
ಧರ್ಮೇ ತೇ ವರ್ಧತಾಂ ಬುದ್ಧಿಃ ಕ್ಷುದ್ರ ಧರ್ಮೇ ಮನಃ ಕೃಥಾಃ |
ಸಾಶ್ವಃ ಸರಥಪಾದಾತಃ ಸ್ವಸ್ತಿ ಗಚ್ಛ ಜಯದ್ರಥ ॥26॥
ಯುಧಿಷ್ಠಿರ ನಿನಗೆ ಧರ್ಮದಲ್ಲಿ ಬುದ್ಧಿಯು ಹೆಚ್ಚಾಗಲಿ. ಎಲೈ ಕ್ಷುದ್ರನೇ, ಇನ್ನು ಮೇಲೆ ಧರ್ಮದಲ್ಲಿಯೇ ಮನಸ್ಸನ್ನು ಇಡುವವನಾಗು. ಜಯದ್ರಥನೇ, ನಿನ್ನ ಅಶ್ವ ರಥ ಪದಾತಿಗಳ ಜೊತೆಯಲ್ಲಿ ಕ್ಷೇಮದಿಂದ ಇಲ್ಲಿಂದ ಹೊರಡು.

ಏವಮುಕ್ತಸ್ತು  ಸವ್ರೀಡಂ ತೂಷ್ಣೀಂ ಕಿಂಚಿದವಾಙ್ಮುಖಃ |
ಜಗಾಮ ರಾಜನ್ ದುಃಖಾರ್ತೋ ಗಂಗಾದ್ವಾರಾಯ ಭಾರತ ॥27॥
ವೈಶಂಪಾಯನ ಭಾರತನೇ, ರಾಜನೇ, ಹೀಗೆ ಹೇಳಲ್ಪಟ್ಟ ಜಯದ್ರಥನು ಮುಖವನ್ನು ಸ್ವಲ್ಪ ತಗ್ಗಿಸಿ ನಾಚಿಕೆಯಿಂದ ಕೂಡಿದವನಾಗಿ ದುಃಖಾರ್ತನಾಗಿ ಮೌನದಿಂದ ಗಂಗಾದ್ವಾರಕ್ಕೆ ಹೋದನು.
ಸ ದೇವಂ ಶರಣಂ ಗತ್ವಾ ವಿರೂಪಾಕ್ಷಮುಮಾಪತಿಮ್ |
ತಪಶ್ಚಚಾರ ವಿಪುಲಂ ತಸ್ಯ ಪ್ರೀತೋ ವೃಷಧ್ವಜಃ ॥28॥
ಅಲ್ಲಿ ಅವನು ಉಮಾಪತಿಯಾದ ವಿರೂಪಾಕ್ಷನಿಗೆ ಶರಣಾಗತನಾಗಿ ಅವನನ್ನು ಕುರಿತು ವಿಪುಲನಾದ ತಪಸ್ಸನ್ನು ಆಚರಿಸಿದನು. ವೃಷಧ್ವಜನಾದ ಶಂಕರನು ಅವನಿಗೆ ಪ್ರಸನ್ನನಾದನು.
ಬಲಿಂ ಸ್ವಯಂ ಪ್ರತ್ಯಗೃಹ್ಣಾತ್ ಪ್ರೀಯಮಾಣಸ್ತ್ರಿಲೋಚನಃ |
ವರಂ ಚಾಸ್ಮೈ ದದೌ ದೇವಃ ಸ ಜಗ್ರಾಹ ಚ ತಚ್ಛೃಣು ॥29॥
ಸಮಸ್ತಾನ್ ಸರಥಾನ್ ಪಂಚ ಜಯೇಯಂ ಯುಧಿ ಪಾಂಡವಾನ್ |
ಇತಿ ರಾಜಾಬ್ರುವೀದ್ದೇವಂ ನೇತಿ ದೇವಸ್ತಮಬ್ರವೀತ್ ॥30॥
ತ್ರಿಲೋಚನನು ಸಂತೋಷದಿಂದ ಸ್ವತಃ ಅವನ ಪೂಜೆಯನ್ನು ಸ್ವೀಕರಿಸಿದನು. ಆ ದೇವನು ಅವನಿಗೆ ವರವನ್ನೂ ನೀಡಿದನು. ಅವನು ಕೇಳಿದ ವರವನ್ನು ಹೇಳುತ್ತೇನೆ ಕೇಳು.
ನಾನು ಯುದ್ಧದಲ್ಲಿ ರಥದಿಂದ ಕೂಡಿದ ಐದು ಪಾಂಡವರನ್ನು ಒಟ್ಟಿಗೆ ಗೆಲ್ಲಬೇಕು ಎಂದು ರಾಜನು ಶಂಕರನನ್ನು ಕುರಿತು ಹೇಳಿದನು.ಶಂಕರನು ಅದು ಸಾಧ್ಯವಿಲ್ಲ ಎಂದು ಹೇಳಿದನು.
ವೈಶಂಪಾಯನಃ
ಅಜಯ್ಯಾಂಶ್ಚಾಪ್ಯವಧ್ಯಾಂಶ್ಚ ವಾರಯಿಷ್ಯಸಿ ತಾನ್ ಯುಧಿ |
ಋತೇಽರ್ಜುನಂ ಮಹಾಬಾಹುಂ ನರಂ ನಾಮ ಸುರೇಶ್ವರಮ್ ॥31॥
ವೈಶಂಪಾಯನ ಅವರು ಅಜೇಯರು ಮತ್ತು ಅವಧ್ಯರು. ಅರ್ಜುನನು ನರನಾಮಕನಾದ ಸುರೇಶ್ವರ. ಮಹಾಬಾಹುವಾದ ಅರ್ಜುನನನ್ನು ಬಿಟ್ಟು ನೀನು ಯುದ್ಧದಲ್ಲಿ ಒಂದು ದಿವಸ ಉಳಿದ ಪಾಂಡವರನ್ನು ತಡೆಯುವಿ.
ಮಮ ಪಾಶುಪತಾಸ್ತ್ರೇಣ ಗುಪ್ತಂ ಸರ್ವತ್ರ ಸರ್ವದಾ |
ಬದರ್ಯಾಂ ತಪ್ತತಪಸಂ ನಾರಾಯಣಸಹಾಯಕಮ್ ॥32॥
ಅವನು ನನ್ನ ಪಾಶುಪತಾಸ್ತ್ರದಿಂದ ಯಾವಾಗಲೂ ರಕ್ಷಿತನಾಗಿದ್ದಾನೆ. ಬದರಿಯಲ್ಲಿ ತಪಸ್ಸನ್ನು ಆಚರಿಸಿ ನಾರಾಯಣನ ಅನುಗ್ರಹವನ್ನು ಸಂಪಾದಿಸಿದ್ದಾನೆ.
ಮಯಾ ದತ್ತಂ ಪಾಶುಪತಂ ದಿವ್ಯಮಪ್ರತಿಮಂ ಶರಮ್ |
ಅವಾಪ ಲೋಕಪಾಲೇಭ್ಯೋ ವಜ್ರಾದೀನ್ ಸ ಮಹಾಶರಾನ್ ॥33॥
ನಾನು ಅವನಿಗೆ ಅಸದೃಶವಾದ ದಿವ್ಯವಾದ ಪಾಶುಪತಾಸ್ತ್ರವನ್ನು ನೀಡಿದ್ದೇನೆ. ಅವನು ಇಂದ್ರಾದಿ ಲೋಕಪಾಲಕರಿಂದ ವಜ್ರ ಮೊದಲಾದ ಮಹಾಬಾಣಗಳನ್ನು (ಮಹಾಸ್ತ್ರಗಳನ್ನು) ಪಡೆದಿದ್ದಾನೆ.
ದೇವದೇವೋ ಹ್ಯನಂತಾತ್ಮಾ ವಿಷ್ಣುಃ ಸುರಗುರುಃ ಪ್ರಭುಃ |
ಪ್ರಧಾನಪುರುಷೋಽವ್ಯಕ್ತೋ ವಿಶ್ವಾತ್ಮಾ ವಿಶ್ವಮೂರ್ತಿಮಾನ್ ॥34॥
ದೇವದೇವನಾದ ಆ ನಾರಾಯಣನು ಅನಂತರೂಪವುಳ್ಳವನು, ಅವನೇ ವಿಷ್ಣು. ದೇವತೆಗಳಿಗೆ ಗುರು, ಪ್ರಭು, ಪ್ರಧಾನಪುರುಷನಾದವನು, ಅವ್ಯಕ್ತನಾದವನು, ವಿಶ್ವವನ್ನು ವ್ಯಾಪಿಸಿದವನು, ವಿಶ್ವವನ್ನೇ ಒಂದು ಪ್ರತಿಮೆಯಾಗಿ ಉಳ್ಳವನು.
ಯುಗಾಂತಕಾಲೇ ಸಂಪ್ರಾಪ್ತೇ ಕಾಲಾಗ್ನಿರ್ದಹತೇ ಜಗತ್ |
ಸಪರ್ವತಾರ್ಣವದ್ವೀಪಂ ಸಶೈಲವನಕಾನನಮ್ ॥35॥
ಯುಗಾಂತಕಾಲವು ಪ್ರಾಪ್ತವಾದಾಗ ಕಾಲಾಗ್ನಿಯು ಪರ್ವತ ಸಮುದ್ರ ದ್ವೀಪಗಳಿಂದ ಸಹಿತವಾದ ವನಕಾನನಶೈಲಗಳಿಂದ ಸಹಿತವಾದ ಈ ಜಗತ್ತನ್ನು ಸುಡುತ್ತದೆ.
ನಿರ್ದಹನ್ ನಾಗಲೋಕಾಂಶ್ಚ ಪಾತಾಳತಳಚಾರಿಣಃ |
ಅಥಾಂತರಿಕ್ಷೇ ಸುಮಹನ್ ನಾನಾವರ್ಣಾಃ ಪಯೋಧರಾಃ ॥36॥
ಘೋರಸ್ವರಾ ವಿನದಿನಸ್ತಡಿನ್ಮಾಲಾವಲಂಬಿನಃ |
ಸಮುತ್ತಿಷ್ಠನ್ ದಿಶಃ ಸರ್ವಾ ವಿವರ್ಷಂತಃ ಸಮಂತತಃ ॥37॥
ತತೋಽಗ್ನಿಂ ನಾಶಯಾಮಾಸುಃ ಸಂವರ್ತಾಗ್ನಿನಿಯಾಮಕಾಃ |
ಅಕ್ಷಮಾತ್ರೈಶ್ಚ ಧಾರಾಭಿಸ್ತಿಷ್ಠಂತ್ಯಾಪೂರ್ಯ ಸರ್ವಶಃ ॥38॥
ಅದು ಪಾತಾಳ ತಳದಲ್ಲಿ ವಾಸಿಸುವವರನ್ನೂ, ನಾಗಲೋಕಾದಿಗಳನ್ನೂ ಸುಡುತ್ತದೆ. ಅನಂತರ ಅಂತರಿಕ್ಷದಲ್ಲಿ ನಾನಾವರ್ಣದ ಘೋರವಾದ ಮೋಡಗಳು ಗುಡುಗುತ್ತಾ ಮಿಂಚಿನ ಮಾಲೆಗಳನ್ನು ಹೊಂದಿ ಮೇಲೇಳುತ್ತವೆ. ಎಲ್ಲ ದಿಕ್ಕುಗಳಲ್ಲಿಯೂ ಬಹಳವಾಗಿ ಮಳೆಯನ್ನು ಸುರಿಸುತ್ತವೆ. ಅನಂತರ ಒಂದು ಒನಕೆ ಗಾತ್ರದಷ್ಟು ದೊಡ್ಡ ಧಾರೆಗಳಿಂದ ಕೂಡಿದ ಆ ಮಳೆಯ ನೀರು ಜಗತ್ತನ್ನು ತುಂಬಿ ಸಂವರ್ತಾಗ್ನಿಯನ್ನು ನಿಯಂತ್ರಿಸಿ ನಾಶಗೊಳಿಸುತ್ತವೆ.
ಏಕಾರ್ಣವೇ ತದಾ ತಸ್ಮಿನ್ನುಪಶಾಂತಚರಾಚರೇ |
ನಷ್ಟಚಂದ್ರಾರ್ಕಪವನೇ ಗ್ರಹನಕ್ಷತ್ರವರ್ಜಿತೇ ॥39॥
ಚತುರ್ಯುಗಸಹಸ್ರಾಂತೇ ಸಲಿಲೇನಾಪ್ಲುತಾ ಮಹೀ |

ಜಗತ್ತೆಲ್ಲವೂ ಏಕಾರ್ಣವವಾಗಿ ಚರಾಚರಗಳೆಲ್ಲವೂ ನಾಶವನ್ನು ಹೊಂದಿ ಸೂರ್ಯಚಂದ್ರವಾಯುಗಳು ನಷ್ಟರಾಗಿ, ಗ್ರಹನಕ್ಷತ್ರಗಳು ಇಲ್ಲದಿರುವ ಆ ಚತುರ್ಯುಗಸಹಸ್ರಗಳ ಕೊನೆಯಲ್ಲಿ ಭೂಮಿಯು ನೀರಿನಲ್ಲಿ ಮುಳುಗಿಹೋಗುತ್ತದೆ.
ತತೋ ನಾರಾಯಣಾಖ್ಯಸ್ತು ಸಹಸ್ರಾಕ್ಷಃ ಸಹಸ್ರಪಾತ್ ॥40॥
ಸಹಸ್ರಶೀರ್ಷಾ ಪುರುಷಃ ಸ್ವಪ್ತುಕಾಮಸ್ತ್ವತೀಂದ್ರಿಯಃ।
ಫಟಾಸಹಸ್ರವಿಕಟಂ ಶೇಷಂ ಪರ್ಯಂಕಭಾಜನಮ್ ॥41॥
ಸಹಸ್ರಮಿವ ತಿಗ್ಮಾಂಶುಸಂಘಾತಮಮಿತದ್ಯುತಿಮ್।
ಕುಂದೇಂದುಹಾರಗೋಕ್ಷೀರಮೃಣಾಲಕುಮುದಪ್ರಭಮ್ ॥42॥
ತತ್ರಾಸೌ ಭಗವಾನ್ ದೇವಃ ಸ್ವಪನ್ ಜಲನಿಧೌ ತದಾ।
ನೈಶೇನ ತಮಸಾ ವ್ಯಾಪ್ತಾಂ ಸ್ವಾಂ ರಾತ್ರಿಂ ಕುರುತೇ ವಿಭುಃ ॥43॥
ಆಗ ಅದರಿಂದ (ನೀರಿನಲ್ಲಿ ಮಲಗಿರುವುದರಿಂದ) ಅವನಿಗೆ ನಾರಾಯಣನೆಂದು ಹೆಸರು. ಸಹಸ್ರಾಕ್ಷಗಳನ್ನೂ, ಸಹಸ್ರಪಾದಗಳನ್ನೂ, ಸಹಸ್ರಶಿರಸ್ಸುಗಳನ್ನೂ ಹೊಂದಿದ ಅತೀಂದ್ರಿಯನಾದ ಅವನು ನಿದ್ರಿಸಲು ಬಯಸುತ್ತಾನೆ. ಸಾವಿರ ಹೆಡೆಗಳಿಂದ ಶೋಭಿಸುವ ಸಹಸ್ರಸೂರ್ಯಕಾಂತಿಯನ್ನು ಹೊಂದಿರುವ ಅಮಿತದ್ಯುತಿಯಾದ ಕುಂದ ಪುಷ್ಪದಂತೆ, ಚಂದ್ರನಂತೆ, ಮುತ್ತಿನಹಾರದಂತೆ, ಮೋಕ್ಷೀರದಂತೆ, ಕಮಲದ ನಾಳದಂತೆ, ಕುಮುದದಂತೆ ಕಾಂತಿಯನ್ನು ಹೊಂದಿರುವ ಆ ಶೇಷಪರ್ಯಂಕದಲ್ಲಿ ಭಗವಂತನಾದ ಈ ನಾರಾಯಣನು ಜಲನಿಧಿಯಲ್ಲಿ ಆಗ ಮಲಗುತ್ತಾನೆ. ಆ ವಿಭುವು ಎಲ್ಲ ಕಡೆಯಲ್ಲಿಯೂ ಕತ್ತಲೆಯನ್ನು ಹರಡಿ ತನ್ನ ರಾತ್ರಿಯನ್ನು ಕಳೆಯುತ್ತಾನೆ.
ಸತೋತ್ವದ್ರೇಕಾತ್ ಪ್ರಬುದ್ಧಸ್ತು ಶೂನ್ಯಂ ಲೋಕಮಪಶ್ಯತ।
ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ॥44॥
ಸತೋತ್ವದ್ರೇಕದ ಕಾಲದಲ್ಲಿ ಎಚ್ಚರಗೊಂಡು ಶೂನ್ಯವಾದ ಈ ಜಗತ್ತನ್ನು ನೋಡುತ್ತಾನೆ. ಆ ನಾರಾಯಣನ ವಿಷಯದಲ್ಲಿ ಜ್ಞಾನಿಗಳು ಈ ಶ್ಲೋಕವನ್ನು ಹೇಳುತ್ತಾರೆ.
ಆಪೋ ನಾರಾಸ್ತತ್ತನವ ಇತ್ಯಪಾಂ ನಾಮ ಶುಶ್ರುಮ।
ಅಯನಂ ತೇನ ಚೈವಾಸ್ತೇ ತೇನ ನಾರಾಯಣಃ ಸ್ಮೃತಃ ॥45॥
ನಾರ ಎಂದರೆ ಜಲವೆಂದು ನಾವು ಕೇಳಿದ್ದೇವೆ. ಆ ನಾರವು ಅವನ ಶರೀರವಾಗಿದೆ (ಶರೀರದಲ್ಲಿ ಜೀವನು ವಾಸಿಸುವಂತೆ ವಿಷ್ಣುವು ಅಲ್ಲಿ ವಾಸಿಸುತ್ತಾನೆ). ಆ ಜಲವು ಅವನಿಗೆ ಅಯನ ಎಂದರೆ ಆಶ್ರಯವಾಗಿರುವುದರಿಂದ ನೀರನ್ನು ಆಶ್ರಯವಾಗಿ ಹೊಂದಿದವನು ಎಂಬ ಅರ್ಥದಲ್ಲಿ ನಾರಾಯಣ ಎಂಬ ಶಬ್ದವು ಹೇಳಲ್ಪಡುತ್ತದೆ.
ಪ್ರಧ್ಯಾನಸಮಕಾಲಂ ತು ಪ್ರಜಾಹೇತೋಃ ಸನಾತನಃ।
ಧ್ಯಾತಮಾತ್ರೇ ತು ಭಗವನ್ನಾಭ್ಯಾಂ ಪದ್ಮಃ ಸಮುತ್ಥಿತಃ ॥46॥
ಸನಾತನನಾದ ಆ ನಾರಾಯಣನು ಪ್ರಜೆಗಳನ್ನು ಸೃಷ್ಟಿ ಮಾಡುವ ಸಲುವಾಗಿ ಧ್ಯಾನವನ್ನು ಮಾಡುವ ಸಮಕಾಲದಲ್ಲಿಯೇ ಕೇವಲ ಧ್ಯಾನಮಾತ್ರದಿಂದಲೇ ಅವನ ನಾಭಿಯಲ್ಲಿ ಪದ್ಮವು ಉದಯಿಸಿತು.
ತತ್ರಶ್ಚತುರ್ಮುಖೋ ಬ್ರಹ್ಮಾ ನಾಭಿಪದ್ಮಾದ್ ವಿನಿಃಸೃತಃ।
ತತ್ರೋಪವಿಷ್ಟಃ ಸಹಸಾ ಪದ್ಮೇ ಲೋಕಪಿತಾಮಹಃ॥47॥
ಶೂನ್ಯಂ ದೃಷ್ಟ್ವಾ ಜಗತ್ಕೃತ್ಸ್ನಂ ಮಾನಸಾನಾತ್ಮನಃ ಸಮಾನ್।
ತತೋ ಮರೀಚಿಪ್ರಮುಖಾನ್ ಮಹರ್ಷೀನಸೃಜನ್ ನವ ॥48॥
ಅಲ್ಲಿ ನಾಭಿಪದ್ಮದಿಂದ ಚತುರ್ಮುಖ ಬ್ರಹ್ಮನು ಹೊರಬಂದನು. ಆ ಪದ್ಮದಲ್ಲಿ ಕುಳಿತ ಲೋಕಪಿತಾಮಹನಾದ ಬ್ರಹ್ಮನು ಲೋಕವೆಲ್ಲವೂ ಪ್ರಜೆಗಳಿಂದ ಶೂನ್ಯವಾಗಿರುವುದನ್ನು ನೋಡಿ ತನಗೆ ಸದೃಶವಾದ ಮರೀಚಿ ಮೊದಲಾದ ಒಂಭತ್ತು ಮಹರ್ಷಿಗಳನ್ನು ಮನಸ್ಸಿನಿಂದಲೇ ಸೃಷ್ಟಿಸಿದನು.
ತೇಽಸೃಜನ್ ಸರ್ವಭೂತಾನಿ ತ್ರಸಾನಿ ಸ್ಥಾವರಾಣಿ ಚ।
ಯಕ್ಷರಾಕ್ಷಸಭೂತಾನಿ ಪಿಶಾಚೋರಗಮಾನುಷಾನ್ ॥49॥
ಸೃಜ್ಯತೇ ಬ್ರಹ್ಮಮೂರ್ತಿಸ್ತು ರಕ್ಷತೇ ಪೌರುಷೀ ತನುಃ।
ರೌದ್ರೀಭಾವೇನ ಶಮಯೇತ್ತಿಸ್ರೋಽವಸ್ಥಾಃ ಪ್ರಜಾಪತೇಃ ॥50॥
ಆ ಮಹರ್ಷಿಗಳು (ಅವರನ್ನು ಪ್ರಜಾಪತಿಗಳು ಎಂದು ಹೇಳುತ್ತಾರೆ). ಸ್ಥಾವರ ಜಂಗಮಾತ್ಮಕವಾದ ಎಲ್ಲಾ ಪ್ರಾಣಿಗಳನ್ನೂ ಎಂದರೆ ಯಕ್ಷರಾಕ್ಷಸ ಭೂತಗಳನ್ನೂ, ಪಿಶಾಚ ಸರ್ಪ ಮನುಷ್ಯರು ಮೊದಲಾದವರನ್ನೂ ಸೃಷ್ಟಿಸಿದರು. ಆ ನಾರಾಯಣನು ಬ್ರಹ್ಮ ರೂಪದಿಂದ ಸೃಷ್ಟಿಸುತ್ತಾನೆ, ಪುರುಷರೂಪದಿಂದ ರಕ್ಷಿಸುತ್ತಾನೆ, ರುದ್ರರೂಪದಿಂದ ಸಂಹರಿಸುತ್ತಾನೆ. ಈ ಮೂರು ಅವಸ್ಥೆಗಳು (ಮೂರು ರೂಪಗಳು) ಎಲ್ಲ ಪ್ರಜೆಗಳ ಒಡೆಯನಾದ ಅವನವೇ.
ನ ಶ್ರುತಂ ತೇ ಸಿಂಧುಪತೇ ವಿಷ್ಣೋರದ್ಭುತಕರ್ಮಣಃ।
ಕಥ್ಯಮಾನಾನಿ ಮುನಿಭಿರ್ಬ್ರಾಹ್ಮಣೈರ್ವೇದಪಾರಗೈಃ ॥51॥
ಎಲೈ ಸಿಂಧುರಾಜನೇ, ಮುನಿಗಳು ಮತ್ತು ವೇದಪಾರಂಗತರಾದ ಬ್ರಾಹ್ಮಣರು ಹೇಳುವ ವಿಷ್ಣುವಿನ ಅದ್ಭುತ ಕರ್ಮಗಳನ್ನು (ಅದ್ಭುತ ಕರ್ಮವನ್ನು ಮಾಡುವ ವಿಷ್ಣುವಿನ ವಿಷಯವಾಗಿ) ನೀನು ಕೇಳಿಲ್ಲವೇ?
ಜಲೇನ ಸಮನುಪ್ರಾಪ್ತೇ ಸರ್ವತಃ ಪೃಥಿವೀತಳೇ।
ತದಾ ಚೈಕಾರ್ಣವೇ ತಸ್ಮಿನ್ನೇಕಾಕಾಶೇ ಪ್ರಭುಶ್ಚರನ್॥52॥
ನಿಶಾಯಾಮಿವ ಖದ್ಯೋತಃ ಪ್ರಾವೃಟ್ ಕಾಲೇ ಸಮಂತತಃ।

ಪ್ರತಿಷ್ಠಾನಾಯ ಪೃಥಿವೀಂ ಮಾರ್ಗಮಾಣಸ್ತದಾಽಭವತ್ ॥53॥
ಜಲವು ಭೂತಳವನ್ನೆಲ್ಲಾ ಮುಚ್ಚಿ ಎಲ್ಲವೂ ಏಕಾರ್ಣವವೂ, ಏಕಾಕಾಶವೂ ಆಗಿರಲು ಆ ಪ್ರಭುವು ರಾತ್ರಿಯಲ್ಲಿ ವರ್ಷಾಕಾಲದಲ್ಲಿ ಮಿಣುಕುಹುಳದಂತೆ ಸಂಚರಿಸುತ್ತಾ ಎಲ್ಲ ಪ್ರಜೆಗಳನ್ನೂ ಸ್ಥಾಪಿಸುವುದಕ್ಕಾಗಿ ಭೂಮಿಯನ್ನು ಹುಡುಕಲು ಪ್ರಾರಂಭಿಸಿದನು.
ಜಲೇ ನಿಮಗ್ನಾಂ ಗಾಂ ದೃಷ್ಟ್ವಾ ಚೋದ್ಧರ್ತುಂ ಮನಸೇಚ್ಛತಿ |
ಕಿಂ ನು ರೂಪಮಹಂ ಕೃತ್ವಾ ಸಲಿಲಾದುದ್ಧರೇ ಮಹೀಮ್ ॥54॥
ಏವಂ ಸಂಚಿಂತ್ಯ ಮನಸಾ ದೃಷ್ಟ್ವಾ ದಿವ್ಯೇನ ಚಕ್ಷುಷಾ |
ಜಲಕ್ರೀಡಾಭಿರುಚಿತಂ ವಾರಾಹಂ ರೂಪಮಸ್ಮರತ್ ॥55॥
ನೀರಿನಲ್ಲಿ ಮುಳುಗಿಹೋದ ಭೂಮಿಯನ್ನು ನೋಡಿ ಅದನ್ನು ಎತ್ತಲು ಮನಸ್ಸಿನಲ್ಲಿ ಇಚ್ಛಿಸಿದನು. ಯಾವ ರೂಪವನ್ನು ತೆಗೆದುಕೊಂಡು ನಾನು ಭೂಮಿಯನ್ನು ಮೇಲಕ್ಕೆತ್ತಲಿ ಎಂದು ಚಿಂತಿಸಿದ ಅವನು ತನ್ನ ಮನಸ್ಸಿನಲ್ಲಿಯೇ ದಿವ್ಯದೃಷ್ಟಿಯಿಂದ ಜಲಕ್ರೀಡೆಯಲ್ಲಿ ಸಂತೋಷಪಡುವ ವರಾಹರೂಪವನ್ನು ಸ್ಮರಿಸಿದನು.
ಕೃತ್ವಾ ವರಾಹವಪುಷಂ ವಾಙ್ಮಯಂ ವೇದಸಮ್ಮಿತಮ್ |
ದಶಯೋಜನವಿಸ್ತೀರ್ಣಮಾಯತಂ ಶತಯೋಜನಮ್ ॥56॥
ಮಹಾಪರ್ವತವರ್ಷ್ಮಾಭಂ ತೀಕ್ಷ್ಣದಂಷ್ಟ್ರಂ ಪ್ರದೀಪ್ತಿಮತ್ |
ಮಹಾಮೇ◌ೌಘನಿರ್ಘೋಷಂ ನೀಲಜೀಮೂತಸನ್ನಿಭಮ್ ॥57॥
ಭೂತ್ವಾ ಯಜ್ಞವರಾಹೋ ವೈ ಅಪಃ ಸಂಪ್ರಾವಿಶತ್ ಪ್ರಭುಃ |
ದಂಷ್ಟ್ರೇಣೈಕೇನ ಚೋದ್ಧೃತ್ಯ ಸ್ವೇ ಸ್ಥಾನೇ ನ್ಯವಿಶನ್ಮಹೀಮ್ ॥58॥
ವೇದ ಪ್ರತಿಪಾದ್ಯವಾದ, ವೇದದಂತೆ ಪವಿತ್ರವಾದ, ಹತ್ತುಯೋಜನ ಅಗಲವೂ, ನೂರು ಯೋಜನ ಉದ್ದವೂ ಇದ್ದು ಮಹಾಪರ್ವತದ ಶರೀರದ ಕಾಂತಿಯನ್ನು ಹೊಂದಿದ, ನಿಶಿತವಾದ ಕೋರೆದಾಡುಗಳುಳ್ಳ, ಪ್ರಕಾಶಿಸುವ ಮಹಾಮೇಘಗಳ ಸಮೂಹದಂತೆ, ಗರ್ಜಿಸುವ, ನೀಲಮೇಘಕಾಂತಿಯನ್ನು ಹೊಂದಿದ, ವರಾಹರೂಪವನ್ನು ಧರಿಸಿ ಆ ಪ್ರಭುವು ಯಜ್ಞವರಾಹನಾಗಿ ಜಲವನ್ನು ಪ್ರವೇಶಿಸಿದನು ಮತ್ತು ಭೂಮಿಯನ್ನು ಒಂದು ಕೋರೆದಾಡೆಯಿಂದ ಎತ್ತಿ ಅದರ ಸ್ಥಾನದಲ್ಲಿ ಸ್ಥಾಪಿಸಿದನು.
ಪುನರೇವ ಮಹಾಬಾಹುರಪೂರ್ವಾಂ ತನುಮಾಶ್ರಿತಃ |
ನರಸ್ಯ ಕೃತ್ವಾಽರ್ಧತನುಂ ಸಿಂಹಸ್ಯಾರ್ಧತನುಂ ಪ್ರಭುಃ ॥59॥
ದೈತ್ಯೇಂದ್ರಸ್ಯ ಸಭಾಂ ಗತ್ವಾ ಪಾಣಿಂ ಸಂಸ್ಪೃಶ್ಯ ಪಾಣಿನಾ |
ಪುನಃ ಮಹಾಬಾಹುವಾದ ಪ್ರಭುವಾದ ನಾರಾಯಣನು ಅರ್ಧಮನುಷ್ಯನ ಶರೀರವೂ, ಅರ್ಧ ಸಿಂಹದ ಶರೀರವೂ ಇರುವ ಅಪೂರ್ವವಾದ ರೂಪವನ್ನು ಧರಿಸಿ ಕೈಯಿಂದ ಕೈಯನ್ನು ಮಸೆಯುತ್ತಾ ದೈತ್ಯೇಂದ್ರನಾದ ಹಿರಣ್ಯಕಶಿಪುವಿನ ಸಭೆಗೆ ಹೋಗಿ (ಹೋದನು).
ದೈತ್ಯಾನಾಮಾದಿಪುರುಷಃ ಸುರಾರಿರ್ದಿತಿನಂದನಃ ॥60॥
ದೃಷ್ಟ್ವಾ ಚಾಪೂರ್ವಪುರುಷಂ ಕ್ರೋಧಾತ್ ಸಂರಕ್ತಲೋಚನಃ |
ಶೂಲೋದ್ಯತಕರಃ ಸ್ರಗ್ವೀ ಹಿರಣ್ಯಕಶಿಪುಸ್ತದಾ ॥61॥
ಮೇಘಸ್ತನಿತನಿರ್ಘೋಷೋ ನೀಲಾಭ್ರಚಯಸನ್ನಿಭಃ |
ದೇವಾರಿರ್ದಿತಿಜೋ ವೀರೋ ನೃಸಿಂಹಂ ಸಮುಪಾದ್ರವತ್ ॥62॥
ದೈತ್ಯರ ಆದಿಪುರುಷನೂ, ದೇವತೆಗಳ ಶತ್ರುವೂ, ದಿತಿನಂದನನೂ ಆದ ಹಿರಣ್ಯಕಶಿಪುವು ಆಗ ಈ ಅಪೂರ್ವಪುರುಷನನ್ನು ನೋಡಿ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಎತ್ತಿದ ಕೈಯಲ್ಲಿ ಶೂಲವನ್ನು ಹಿಡಿದು ಮಾಲೆಗಳಿಂದ ಅಲಂಕೃತನಾಗಿ ಮೇಘ ಗರ್ಜನೆಯಂತೆ ನಾದವನ್ನು ಹೊಂದಿದ, ನೀಲಮೇಘಸಮೂಹ ಕಾಂತಿಯನ್ನು ಹೊಂದಿದ ವೀರನಾದ ದಿತಿಪುತ್ರನಾದ ದೇವಶತ್ರುವಾದ ಅವನು ನರಸಿಂಹನ ಕಡೆಗೆ ಧಾವಿಸಿದನು.
ಸಮುಪೇತ್ಯ ತತಸ್ತೀಕ್ಷ್ಣೈರ್ಮೃಗೇಂದ್ರೇಣ ಬಲೀಯಸಾ |
ನಾರಸಿಂಹೇನ ವಪುಷಾ ದಾರಿತಃ ಕರಜೈರ್ಭೃಶಮ್ ॥63॥
ಬಲಿಷ್ಠನಾದ ಮೃಗೇಂದ್ರರೂಪದಿಂದ ಸಮಾಗಮವನ್ನು ಹೊಂದಿದ ಹಿರಣ್ಯಕಶಿಪುವು ನರಸಿಂಹರೂಪವನ್ನು ಧರಿಸಿದ ಆ ಪ್ರಭುವಿನ ನಿಶಿತವಾದ ಉಗುರುಗಳಿಂದ ಚೆನ್ನಾಗಿ ಸೀಳಿಹಾಕಲ್ಪಟ್ಟನು.
ಏವಂ ನಿಹತ್ಯ ಭಗವಾನ್ ದೈತ್ಯೇಂದ್ರಂ ರಿಪುಘಾತಿನಮ್ |
ಭೂಯೋಽನ್ಯಃ ಪುಂಡರೀಕಾಕ್ಷಃ ಪ್ರಭುರ್ಲೋಕಹಿತಾಯ ಚ ॥64॥
ಕಶ್ಯಪಸ್ಯಾತ್ಮಜಃ ಶ್ರೀಮಾನದಿತ್ಯಾ ಗರ್ಭಧಾರಿತಃ |
ಪೂರ್ಣೇ ವರ್ಷಸಹಸ್ರೇ ತು ಪ್ರಸೂತಾ ಗರ್ಭಮುತ್ತಮಮ್ ॥65॥
ಹೀಗೆ ಭಗವಂತನಾದ ಕಾಂತಿಮಂತನಾದ ಪುಂಡರೀಕಾಕ್ಷನು ಶತ್ರುಸಂಹಾರಕನಾದ ದೈತ್ಯೇಂದ್ರನನ್ನು ಸಂಹರಿಸಿ ಲೋಕಹಿತಕ್ಕಾಗಿ ಪುನಃ ಇನ್ನೊಂದು ರೂಪವನ್ನು ಧರಿಸಿ ಕಶ್ಯಪರಿಂದ ಅದಿತಿಯ ಉದರಕ್ಕೆ ಬಂದು ಅದಿತಿಯಿಂದ ಗರ್ಭದಲ್ಲಿ ಧರಿಸಲ್ಪಟ್ಟನು. ಒಂದು ಸಹಸ್ರವರ್ಷಗಳು ಪೂರ್ಣವಾದ ಮೇಲೆ ಅವಳು ಶ್ರೇಷ್ಠವಾದ ಆ ಗರ್ಭವನ್ನು ಪ್ರಸವಿಸಿದಳು.
ದುರ್ದಿನಾಂಭೋದಸದೃಶೋ ದೀಪ್ತಾಕ್ಷೋ ವಾಮನಾಕೃತಿಃ |
ದಂಡೀ ಕಮಂಡಲುಧರಃ ಶ್ರೀವತ್ಸೋರಸಿ ಭೂಷಿತಃ ॥66॥
ಜಟೀ ಯಜ್ಞೋಪವೀತೀ ಚ ಭಗವಾನ್ ಬಾಲರೂಪಧೃಕ್ |
ಯಜ್ಞವಾಟಂ ಗತಃ ಶ್ರೀಮಾನ್ ದಾನವೇಂದ್ರಸ್ಯ ವೈ ತದಾ ॥67॥

ಸೂರ್ಯನಿಲ್ಲದಿರುವ ದಿವಸದ ಮೇಘಗಳ ಕಾಂತಿಯನ್ನು ಹೊಂದಿದ, ಪ್ರಕಾಶಮಾನವಾದ ಕಣ್ಣುಗಳನ್ನು ಹೊಂದಿದ, ಚಿಕ್ಕ ಆಕೃತಿಯುಳ್ಳ, ವಕ್ಷಸ್ಸ್ಥಲದಲ್ಲಿ ಶ್ರೀವತ್ಸವನ್ನು ಧರಿಸಿದ ಆ ಭಗವಂತನು ಬಾಲರೂಪವನ್ನು ಧರಿಸಿ ದಂಡಕಮಂಡಲುಗಳನ್ನು ಹಿಡಿದು ಜಟೆಯನ್ನು ಧರಿಸಿ, ಯಜ್ಞೋಪವೀತವನ್ನು ಧರಿಸಿ ಕಾಂತಿಯುಕ್ತನಾದ ಅವನು ದಾನವೇಂದ್ರನಾದ ಬಲಿಯ ಯಜ್ಞಶಾಲೆಗೆ ಹೋದನು.
ಬೃಹಸ್ಪತಿಸಹಾಯೋಽಸೌ ಪ್ರವಿಷ್ಟೋ ಬಲಿನೋ ಮಖೇ |
ತಂ ದೃಷ್ಟ್ವಾ ವಾಮನತನುಂ ಪ್ರಹೃಷ್ಟೋ ಬಲಿರಬ್ರವೀತ್ ॥68॥
ಬೃಹಸ್ಪತಿ ಸಹಿತನಾಗಿ ಅವನು ಬಲಿಯ ಯಜ್ಞಶಾಲೆಯನ್ನು ಪ್ರವೇಶಮಾಡಲು ಆ ವಾಮನರೂಪವನ್ನು ನೋಡಿದ ಬಲಿಯು ಸಂತುಷ್ಟನಾಗಿ ಅವನನ್ನು ಕುರಿತು ಹೀಗೆ ಹೇಳಿದನು.
ಪ್ರೀತೋಽಸ್ಮಿ ದರ್ಶನೇ ವಿಪ್ರ ಬ್ರೂಹಿ ತ್ವಂ ಕಿಂ ದದಾನಿ ತೇ |
ಏವಮುಕ್ತಸ್ತು ಬಲಿನಾ ವಾಮನಃ ಪ್ರತ್ಯುವಾಚ ಹ ॥69॥
ವಿಪ್ರನೇ, ನಿನ್ನ ದರ್ಶನದಿಂದ ಸಂತುಷ್ಟನಾಗಿದ್ದೇನೆ. ನಿನಗೆ ಏನು ಕೊಡಲಿ ಎಂದು ಹೇಳು. ಹೀಗೆ ಬಲಿಯಿಂದ ಹೇಳಲ್ಪಟ್ಟ ವಾಮನನು ಅವನಿಗೆ ಉತ್ತರವನ್ನು ನೀಡಿದನಷ್ಟೆ?
ಸ್ವಸ್ತೀತ್ಯುಕತ್ವ ಬಲಿಂ ದೇವಃ ಸ್ಮಯಮಾನೋಽಭ್ಯಭಾಷತ |
ಮೇದಿನೀಂ ದಾನವಪತೇ ದೇಹಿ ಮೇ ವಿಕ್ರಮತ್ರಯಮ್ ॥70॥
ದೇವನು ನಿನಗೆ ಮಂಗಳವಾಗಲಿ ಎಂದು ಹೇಳಿ ನಗುತ್ತಾ ಬಲಿಯನ್ನು ಕುರಿತು ದಾನವಪತಿಯೇ ನನಗೆ ನನ್ನ ಹೆಜ್ಜೆಯಲ್ಲಿ ಮೂರು ಹೆಜ್ಜೆ ಭೂಮಿಯನ್ನು ಕೊಡು ಎಂದು ಮಾತನಾಡಿದನು (ಯಾಚಿಸಿದನು).
ಬಲಿರ್ದದೌ ಪ್ರಸನ್ನಾತ್ಮಾ ವಿಪ್ರಾಯಾಮಿತತೇಜಸೇ |
ತತೋ ದಿವ್ಯಾದ್ಭುತತಮಂ ರೂಪಂ ವಿಕ್ರಮತೋ ಹರೇಃ ॥71॥
ವಿಕ್ರಮೈಸ್ತ್ರಿಭಿರಕ್ಷೋಭ್ಯೋ ಜಹಾರಾಶು ಸ ಮೇದಿನೀಮ್ |
ದದೌ ಶಕ್ರಾಯ ಚ ಮಹೀಂ ವಿಷ್ಣುರ್ದೇವಃ ಸನಾತನಃ ॥72॥
ಬಲಿಯು ಅಮಿತತೇಜಸ್ವಿಯಾದ ಬ್ರಾಹ್ಮಣನಿಗೆ ಪ್ರಸನ್ನವಾದ ಮನಸ್ಸಿನಿಂದ ಭೂಮಿಯನ್ನು ಕೊಟ್ಟನು. ಆಗ ಅಕ್ಷೋಭ್ಯನಾದ ಹರಿಯು ದಿವ್ಯಾದ್ಭುತ ರೂಪವನ್ನು ತೆಗೆದುಕೊಂಡು ಆ ಸನಾತನದೇವನಾದ ವಿಷ್ಣುವು ತನ್ನ ಪಾದವಿಕ್ಷೇಪಗಳಿಂದ ಬಲಿಯಿಂದ ಶೀಘ್ರವಾಗಿ ಎಲ್ಲಾ ಭೂಮಿಯನ್ನೂ ಅಪಹರಿಸಿ ಇಂದ್ರನಿಗೆ ಭೂಮಿಯನ್ನು ಕೊಟ್ಟನು.
ಏಷ ತೇ ವಾಮನೋ ನಾಮ ಪ್ರಾದುರ್ಭಾವಃ ಪ್ರಕೀರ್ತಿತಃ |
ತೇನ ದೇವಾಃ ಪ್ರಾದುರಾಸನ್ ವೈಷ್ಣವಂ ಚೋಚ್ಯತೇ ಜಗತ್ ॥73॥
ನಾನು ನಿನಗೆ ಹೇಳಿದುದು ವಾಮನನೆಂಬ ಅವತಾರ. ಅವನಿಂದ ದೇವತೆಗಳು ಸಮೃದ್ಧಿಯನ್ನು ಹೊಂದಿ ಜಗತ್ತೆಲ್ಲಾ ವೈಷ್ಣವವಾಯಿತು.
ಅಸತಾಂ ನಿಗ್ರಹಾರ್ಥಾಯ ಧರ್ಮಸಂರಕ್ಷಣಾಯ ಚ |
ಅವತೀರ್ಣೋ ಮನುಷ್ಯಾಣಾಮಜಾಯತ ಯದುಕ್ಷಯೇ ॥74॥
ಸ ಏವಂ ಭಗವಾನ್ ವಿಷ್ಣುಃ ಕೃಷ್ಣೇತಿ ಪರಿಕೀರ್ತ್ಯತೇ |
ದುಷ್ಟರ ನಿಗ್ರಹಕ್ಕೋಸ್ಕರ ಮತ್ತು ಧರ್ಮಸಂರಕ್ಷಣೆಗೋಸ್ಕರ ಅವನು ಯದುಕುಲದಲ್ಲಿ ಮನುಷ್ಯರ ಮನೆಯಲ್ಲಿ ಅವತಾರ ಮಾಡಿದನು. ಆ ಭಗವಂತನಾದ ವಿಷ್ಣುವೇ ಈ ರೀತಿಯಲ್ಲಿ ಕೃಷ್ಣನೆಂದು ಕರೆಯಲ್ಪಡುತ್ತಾನೆ.
ಅನಾದ್ಯಂತಮಜಂ ದೇವಂ ಪ್ರಭುಂ ಲೋಕನಮಸ್ಕೃತಮ್ ॥75॥
ಯಮಾಹುರಜಿತಂ ಕೃಷ್ಣಂ ಶಂಖಚಕ್ರಗದಾಧರಮ್ |
ಶ್ರೀವತ್ಸಧಾರಿಣಂ ದೇವಂ ಪೀತಕೌಶೇಯವಾಸಸಮ್ |
ಪ್ರಧಾನಃ ಸೋಽಸ್ತ್ರವಿದುಷಾಂ ತೇನ ಕೃಷ್ಣೇನ ರಕ್ಷ್ಯತೇ ॥76॥
ಆದ್ಯಂತರಹಿತನೂ, ಜನನರಹಿತನೂ, ಕ್ರೀಡಾದಿ ಗುಣವಿಶಿಷ್ಟನೂ, ಸಮರ್ಥನೂ, ಲೋಕನಮಸ್ಕೃತನೂ, ಶಂಖಚಕ್ರಗದಾಧರನೂ, ಶ್ರೀವತ್ಸಧಾರಿಯೂ, ಪೀತಾಂಬರಧಾರಿಯೂ ಆದ ದೇವನಾದ ಕೃಷ್ಣನನ್ನು ಅಜಿತನೆಂದು ಹೇಳುತ್ತಾರೆ. ಅಸ್ತ್ರಜ್ಞರಲ್ಲಿ ಶ್ರೇಷ್ಠನಾದ ಆ ಅರ್ಜುನನು ಆ ಕೃಷ್ಣನಿಂದ ರಕ್ಷಿಸಲ್ಪಡುತ್ತಿದ್ದಾನೆ.
ತಸ್ಮಾತ್ತ್ವಂ ಪಾರ್ಥರಹಿತಾನ್ ಪಾಂಡವಾನ್ ವಾರಯಿಷ್ಯಸಿ |
ಏಕದಾ ಪುರುಷವ್ಯಾಘ್ರ ಮಯಾ ದತ್ತಂ ವರಂ ತವ ॥77॥
ಆದ್ದರಿಂದ ನೀನು ಆ ಅರ್ಜುನನನ್ನು ಬಿಟ್ಟು ಉಳಿದ ಪಾಂಡವರನ್ನು ಒಂದು ಬಾರಿ ತಡೆಯುವಿ. ಪುರುಷವ್ಯಾಘ್ರನೇ, ಇದು ನಾನು ನಿನಗೆ ಕೊಟ್ಟಿರುವ ವರ.
ಸಹಾಯಃ ಪುಂಡರೀಕಾಕ್ಷಃ ಶ್ರೀಮಾನತುಲವಿಕ್ರಮಃ |
ಸಮಾನಸ್ಯಂದನೇ ಪಾರ್ಥಮಾಸ್ಥಾಯ ಪರವೀರಹಾ ॥78॥
ನ ಶಕ್ಯತೇ ತೇನ ಜೇತುಂ ತ್ರಿದಶೈರಪಿ ದುಃಸಹಃ |
ಕಃ ಪುನರ್ಮಾನುಷೋ ಭಾವೋ ರಣೇ ಪಾರ್ಥಂ ವಿಜೇಷ್ಯತಿ ॥79॥
ಯಾವ ಪಾರ್ಥನಿಗೆ ಶತ್ರುನಿಷೂದನನಾದ, ಅತುಲವಿಕ್ರಮನಾದ, ಕಾಂತಿಯುಕ್ತನಾದ ಪುಂಡರೀಕಾಕ್ಷನು ಒಂದೇ ರಥದಲ್ಲಿ ಕುಳಿತು ಸಹಾಯನಾಗಿದ್ದಾನೆಯೋ ಆ ಕಾರಣದಿಂದ ಅರ್ಜುನನನ್ನು ದೇವತೆಗಳೂ ಸಹ ಜಯಿಸಲು ಸಾಧ್ಯವಿಲ್ಲ. ಇನ್ನು ಯಾವ ಮನುಷ್ಯನು ಯುದ್ಧದಲ್ಲಿ ಅರ್ಜುನನನ್ನು ಗೆಲ್ಲುವನು?

ತಮೇಕಂ ವರ್ಜಯಿತ್ವಾ ತು ಸರ್ವಂ ಯೌಧಿಷ್ಠಿರಂ ಬಲಮ್ |
ಚತುರಃ ಪಾಂಡವಾನ್ ರಾಜನ್ ದಿನೈಕಂ ಜೇಷ್ಯಸೇ ರಿಪೂನ್ ॥80॥
ಎಲೈ ರಾಜನೇ, ಅವನೊಬ್ಬನನ್ನು ಬಿಟ್ಟು ಉಳಿದ ಎಲ್ಲಾ ಯುಧಿಷ್ಠಿರನ ಸೈನ್ಯವನ್ನು ಮತ್ತು ನಿನ್ನ ಶತ್ರುಗಳಾದ ನಾಲ್ವರನ್ನು ಒಂದು ದಿನ ನೀನು ಗೆಲ್ಲುವಿ.
ವೈಶಂಪಾಯನಃ
ಇತ್ಯೇವಮುಕತ್ತ್ವ ನೃಪತಿಂ ಸರ್ವಪಾಪಹರೋ ಹರಃ |
ಉಮಾಪತಿಃ ಪಶುಪತಿರ್ಯಜ್ಞಹಾ ತ್ರಿಪುರಾರ್ದನಃ ॥81॥
ವಾಮನೈರ್ವಿಕಟೈಃ ಕುಬ್ಜೈರುಗ್ರಶ್ರವಣದರ್ಶನೈಃ |
ವೃತಃ ಪಾರಿಷದೈರ್ಘೋರೈರ್ನಾನಾಪ್ರಹರಣೋದ್ಯನಃ(ತೈಃ) ॥82॥
ತ್ರ್ಯಂಬಕೋ ರಾಜಶಾರ್ದೂಲ ಭಗನೇತ್ರನಿಪಾತನಃ |
ಉಮಾಸಹಾಯೋ ಭಗವಾಂಸ್ತತ್ರೈವಾಂತರಧೀಯತ ॥83॥
ವೈಶಂಪಾಯನ ಎಲೈ ರಾಜಶಾರ್ದೂಲನೇ, ಹೀಗೆ ಆ ರಾಜನಿಗೆ ಹೇಳಿ ಸರ್ವಪಾಪಹರನೂ, ಉಮಾಪತಿಯೂ, ಪಶುಪತಿಯೂ, ದಕ್ಷಾದ್ವರಭಂಜಕನೂ, ತ್ರಿಪುರವಿನಾಶಕನೂ, ತ್ರ್ಯಂಬಕನೂ, ಭಗನೇತ್ರ ನಿಪಾತನನೂ, ಉಮಾಸಹಾಯನೂ ಆದ ಭಗವಾನ್ ಶಂಕರನು ಉಗ್ರಶ್ರವಣ ಮತ್ತು ಉಗ್ರದರ್ಶನವುಳ್ಳ ವಾಮನರೂ, ವಿಕಟರೂ ಮತ್ತು ಕುಬ್ಜರ ಜೊತೆಯಲ್ಲಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಜಯದ್ರಥೋಽಪಿ ಮಂದಾತ್ಮಾ ಸ್ವಮೇವ ಭವನಂ ಯಯೌ |
ಪಾಂಡವಾಶ್ಚ ವನೇ ತಸ್ಮಿನ್ ನ್ಯವಸನ್ ಕಾಮ್ಯಕೇ ತಥಾ ॥84॥
ಮಂದಾತ್ಮನಾದ ಜಯದ್ರಥನೂ ಸಹ ತನ್ನ ಮನೆಗೇ ಹಿಂದಿರುಗಿದನು. ಪಾಂಡವರಾದರೂ ಆ ಕಾಮ್ಯಕ ವನದಲ್ಲಿ ಹಾಗೆಯೇ ವಾಸಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಷ್ಟ್ಯಮಹಾಭಾರತ ಆದಿಪರ್ವಘೋಷಯಾತ್ರಾಪರ್ವ್ಯೂಕ್ಷ್ವಾರ್ಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಜಯದ್ರಥವಿಮೋಕ್ಷಣಪರ್ವಣಿ ಜಯದ್ರಥ ವಿಮೋಕ್ಷೋ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತನೆಯ
ಅಧ್ಯಾಯ ಮುಗಿಯಿತು.
* * * *
ರಾಮೋಪಾಖ್ಯಾನಪರ್ವ
ಇನ್ನೂರ ಅರವತ್ತೊಂದನೆಯ ಅಧ್ಯಾಯ
ಯುಧಿಷ್ಠಿರನಿಂದ ಮಾರ್ಕಂಡೇಯರನ್ನು ಕುರಿತು ತನ್ನಂತಹ ದುಃಖಿವಿರುವವನು ಇನೊಅನಬ್ಬನಿದ್ದಾನೆಯೇ ಎಂಬ ಪ್ರಶ್ನೆ.
ಜನಮೇಜಯಃ
ಏವಂ ಹೃತಾಯಾಂ ಕೃಷ್ಣಾಯಾಂ ಪ್ರಾಪ್ಯ ಕ್ಲೇಶಮನುತ್ತಮಮ್ |
ಅತ ಊರ್ಧ್ವಂ ನರವ್ಯಾಘ್ರಾಃ ಕಿಮಕುರ್ವತ ಪಾಂಡವಾಃ ॥1॥
ಜನಮೇಜಯ ಹೀಗೆ ದ್ರೌಪದಿಯು ಅಪಹೃತವಾದಾಗ ಬಹಳ ಕ್ಲೇಶವನ್ನು ಅನುಭವಿಸಿದ ನರವ್ಯಾಘ್ರರಾದ ಪಾಂಡವರು ಅಲ್ಲಿಂದ ಮುಂದೆ ಏನು ಮಾಡಿದರು?
ವೈಶಂಪಾಯನಃ
ಏವಂ ಕೃಷ್ಣಾಂ ಮೋಕ್ಷಯಿತ್ವಾ ವಿನಿರ್ಜಿತ್ಯ ಜಯದ್ರಥಮ್ |
ಆಸಾಂಚಕ್ರೇ ಮುನಿಗಣೈರ್ಧರ್ಮರಾಜೋ ಯುಧಿಷ್ಠಿರಃ ॥2॥
ತೇಷಾಂ ಮಧ್ಯೇ ಮಹರ್ಷೀಣಾಂ ಶೃಣ್ವತಾಮನುಶೋಚತಾಮ್ |
ಮಾರ್ಕಂಡೇಯಮಿದಂ ವಾಕ್ಯಮಬ್ರುವೀತ್ ಪಾಂಡುನಂದನಃ ॥3॥
ವೈಶಂಪಾಯನ ಹೀಗೆ ಜಯದ್ರಥನನ್ನು ಸೋಲಿಸಿ ದ್ರೌಪದಿಯನ್ನು ಬಿಡಿಸಿ ಧರ್ಮರಾಜನಾದ ಯುಧಿಷ್ಠಿರನು ಮುನಿಗಣಗಳ ಜೊತೆಯಲ್ಲಿ ಕಾಮ್ಯಕವನದಲ್ಲಿ ವಾಸಮಾಡಿದನು. ತನ್ನ ಮಾತನ್ನು ಕೇಳುವ ಮತ್ತು ತನ್ನ ಸ್ಥಿತಿಯನ್ನು ನೋಡಿ ಶೋಕಪಡುವ ಮಹರ್ಷಿಗಳ ಮಧ್ಯದಲ್ಲಿ ಮಾರ್ಕಂಡೇಯರನ್ನು ಕುರಿತು ಪಾಂಡುನಂದನನಾದ ಯುಧಿಷ್ಠಿರನು ಹೀಗೆ ಮಾತನಾಡಿದನು.
ಯುಧಿಷ್ಠಿರಃ
ಭಗವನ್ ದೇವರ್ಷೀಣಾಂ ತ್ವಂ ಖ್ಯಾತೋ ಭೂತಭವಿಷ್ಯವಿತ್ |
ಸಂಶಯಂ ಪರಿಪೃಚ್ಛಾಮಿ ಛಿಂಧಿ ಮೇ ಹೃದಿ ಸಂಸ್ಥಿತಮ್ ॥4॥
ಯುಧಿಷ್ಠಿರ ಪೂಜ್ಯರೇ, ನೀವು ದೇವರ್ಷಿಗಳಲ್ಲಿ ಪ್ರಖ್ಯಾತರಾಗಿ ಭೂತ ಭವಿಷ್ಯವನ್ನು ತಿಳಿದವರು. ನನ್ನ ಮನಸ್ಸಿನಲ್ಲಿರುವ ಒಂದು ಸಂಶಯ ವಿಷಯವನ್ನು ಕೇಳುತ್ತೇನೆ. ಅದನ್ನು ಪರಿಹರಿಸಿ.
ದ್ರುಪದಸ್ಯ ಸುತಾ ಹ್ಯೇಷಾ ವೇದಿಮಧ್ಯಾತ್ ಸಮುತ್ಥಿತಾ |
ಅಯೋನಿಜಾ ಮಹಾಭಾಗಾ ಸ್ನುಷಾ ಪಾಂಡೋರ್ಮಹಾತ್ಮನಃ ॥5॥
ಈ ದ್ರುಪದಕುಮಾರಿಯು ವೇದಿ ಮಧ್ಯದಿಂದ ಎದ್ದುಬಂದವಳು. ಅಯೋನಿಜಳಾದವಳು, ಮಹಾನುಭಾವಳು ಮತ್ತು ಮಹಾತ್ಮನಾದ ಪಾಂಡುವಿನ ಸೊಸೆ.

ಮನ್ಯೇ ಕಾಲಶ್ಚ ಭಗವನ್ ದೈವಂ ಚ ವಿಧಿನಿರ್ಮಿತಮ್ |
ಭವಿತವ್ಯಂ ಚ ಭೂತಾನಾಂ ಯಸ್ಯ ನಾಸ್ತಿ ವ್ಯತಿಕ್ರಮಃ ॥6॥
ಪೂಜ್ಯರೇ, ಕಾಲವು ಮತ್ತು ದೈವವು ವಿಧಿನಿರ್ಮಿತವೆಂದು ಭಾವಿಸುತ್ತೇನೆ. ಜೀವರ ಭವಿತವ್ಯವೂ ಸಹ ವಿಧಿನಿರ್ಮಿತವಾದುದು. ಅದನ್ನು ಯಾರೂ ದಾಟಲಾರರು.
ಇಮಾಂ ಹಿ ಪತ್ನೀಮಸ್ಮಾಕಂ ಧರ್ಮಜ್ಞಾಂ ಧರ್ಮಚಾರಿಣೀಮ್ |
ಸಂಸ್ಪೃಶೇದೀದೃಶೋ ಭಾವಃ ಶುಚಿಂ ಸ್ತೈನ್ಯಮಿವಾನೃತಮ್ ॥7॥
ನಮ್ಮ ಧರ್ಮಜ್ಞಳಾದ, ಧರ್ಮಚಾರಿಣಿಯಾದ ಈ ಪತ್ನಿಯನ್ನು ಶುಚಿಯಾದ ಪುರುಷನನ್ನು ಕಳ್ಳತನವು ಹೇಗೆ ಸ್ಪರ್ಶಿಸಲು ಸಾಧ್ಯವಿಲ್ಲವೋ ಅಂತಹ ಪರಪುರುಷ ಸ್ಪರ್ಶರೂಪವಾದ ಭಾವವು ಹೇಗೆ ಉಂಟಾಯಿತು?
ನ ಹಿ ಪಾಪಂ ಕೃತಂ ಕಿಂಚಿತ್ ಕರ್ಮ ವಾ ನಿಂದಿತಂ ಕ್ವಚಿತ್ |
ದ್ರೌಪದ್ಯಾ ಬ್ರಾಹ್ಮಣೇಷ್ವೇವ ಧರ್ಮಃ ಸುಚರಿತೋ ಮಹಾನ್ ॥8॥
ದ್ರೌಪದಿಯು ಯಾವ ಪಾಪಕರ್ಮವನ್ನಾಗಲೀ ಅಥವಾ ನಿಂದಿತಕರ್ಮವನ್ನಾಗಲಿ ಮಾಡಲಿಲ್ಲ. ದ್ರೌಪದಿಯು ಬ್ರಾಹ್ಮಣರ ವಿಷಯದಲ್ಲಿ ಮಹಾಧರ್ಮವನ್ನು ಆಚರಿಸಿದ್ದಾಳೆ.
ತಂ ಜಹಾರ ಬಲಾದ್ ರಾಜಾ ಮೂಢಬುದ್ಧಿರ್ಜಯದ್ರಥಃ |
ತಸ್ಯಾಃ ಸಂಹರಣಾತ್ ಪಾಪಃ ಶಿರಸಃ ಕೇಶಪಾತನಮ್ |
ಪರಾಜಯಂ ಚ ಸಂಗ್ರಾಮೇ ಸಸಹಾಯಃ ಸಮಾಪ್ತವಾನ್ ॥9॥
ಅಂತಹವಳನ್ನು ಮೂಢಬುದ್ಧಿಯುಳ್ಳ ಜಯದ್ರಥನು ಬಲಾತ್ಕಾರದಿಂದ ಅಪಹರಿಸಿದನು. ಅವಳ ಅಪಹರಣದಿಂದ ಆ ಪಾಪಿಯು ಶಿರಸ್ಸಿನಲ್ಲಿ ಕೇಶವಪನವನ್ನು ಮತ್ತು ಯುದ್ಧದಲ್ಲಿ ಪರಾಜಯವನ್ನು ಸಹಾಯದಿಂದ ಕೂಡಿದ್ದರೂ ಪಡೆದನು.
ಪ್ರತ್ಯಾಹೃತಾ ತಥಾಽಸ್ಮಾಭಿರ್ಹತ್ವಾ ತತ್ ಸೈಂಧವಂ ಬಲಮ್ ॥10॥
ತದ್ದಾರಹರಣಂ ಪ್ರಾಪ್ತಮಸ್ಮಾಭಿರವಿತರ್ಕಿತಮ್ |
ದುಃಖಶ್ಚಾಯಂ ವನೇ ವಾಸೋ ಮೃಗಯಾಯಾಂ ಚ ಜೀವಿಕಾ ॥11॥
ನಾವು ಸೈಂಧವ ಸೈನ್ಯವನ್ನು ಸೋಲಿಸಿ (ವಧೆ ಮಾಡಿ) ಅವಳನ್ನು ಮರಳಿ ತಂದೆವು. ನಾವು ನಿರೀಕ್ಷಿಸದಿದ್ದ ಪತ್ನಿಯ ಅಪಹಾರವು ನಮಗೆ ಉಂಟಾಯಿತು. ಈ ಕಾಡಿನಲ್ಲಿ ವಾಸವೂ ಬೇಟೆಯಿಂದ ಜೀವನವೂ ಸಹ ದುಃಖದಾಯಕವಾದುದು.
ಹಿಂಸಾ ಚ ಮೃಗಜಾತೀನಾಂ ವನೌಕೋಭಿರ್ವನೌಕಸಾಮ್ |
ಜ್ಞಾತಿಭಿರ್ವಿಪ್ರವಾಸಶ್ಚ ಮಿಥ್ಯಾವ್ಯವಸಿತೈರಯಮ್ ॥12॥
ಕಾಡಿನಲ್ಲಿ ವಾಸಮಾಡುವವರಾಗಿ ನಾವು ವನಮೃಗಗಳಿಗೂ ಮತ್ತು ವನವಾಸಿಗಳಿಗೂ ಹಿಂಸೆಯನ್ನು ಉಂಟುಮಾಡಿದೆವು. ದುಷ್ಟಸಂಕಲ್ಪವುಳ್ಳ ಜ್ಞಾತಿಗಳ ನಿಮಿತ್ತದಿಂದ ನಮಗೆ ರಾಜ್ಯವನ್ನು ಬಿಟ್ಟು ಈ ವಿಪ್ರವಾಸವು ಉಂಟಾಯಿತು.
ಅಸ್ತಿ ಕಶ್ಚಿನ್ಮಯಾ ನೂನಂ ಅಲ್ಪಭಾಗ್ಯತರೋ ನರಃ |
ಭವತಾ ದೃಷ್ಟಪೂರ್ವೋ ವಾ ಶ್ರುತಪೂರ್ವೋಽಪಿ ವಾ ಕ್ವಚಿತ್ ॥13॥
ನನಗಿಂತ ದುರ್ಭಾಗ್ಯನಾದ ಒಬ್ಬ ಮನುಷ್ಯನು ಯಾವನಾದರೂ ಇದ್ದಾನೆಯೇ? ಅಂತಹವನನ್ನು ನೀವು ಹಿಂದೆ ನೋಡಿದ್ದೀರಾ? ಅಥವಾ ಕೇಳಿದ್ದೀರಾ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಯುಧಿಷ್ಠಿರಪ್ರಶ್ನೋ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ತೆರಡನೆಯ ಅಧ್ಯಾಯ
ಮಾರ್ಕಂಡೇಯರಿಂದ ರಾಮಾದಿಗಳ ಉತ್ಪತ್ತಿ ಕಥನ ಮತ್ತು ರಾವಣನ
ಉತ್ಪತ್ತಿಗೆ ಉಪೋದ್ಘಾತ ರೂಪವಾಗಿ ........ ಕಥನ.
ಮಾರ್ಕಂಡೇಯಃ
ಪ್ರಾಪ್ತಮಪ್ರತಿಮಂ ದುಃಖಂ ರಾಮೇಣ ಭರತರ್ಷಭ |
ರಕ್ಷಸಾ ಜಾನಕೀ ತಸ್ಯ ಹೃತಾ ಭಾರ್ಯಾ ಬಲೀಯಸಾ ॥1॥
ಮಾರ್ಕಂಡೇಯರು ಭರತರ್ಷಭನೇ, ರಾಮನು ಅಸದೃಶವಾದ ದುಃಖವನ್ನು ಹೊಂದಿದನು. ಅವನ ಪತ್ನಿಯಾದ ಜಾನಕಿಯು ಬಲಿಷ್ಠನಾದ ರಾಕ್ಷಸನಿಂದ ಅಪಹರಿಸಲ್ಪಟ್ಟಳು.
ಆಶ್ರಮಾದ್ ರಾಕ್ಷಸೇಂದ್ರೇಣ ರಾವಣೇನ ದುರಾತ್ಮನಾ |
ಮಾಯಾಮಾಸ್ಥಾಯ ತರಸಾ ಹತ್ವಾ ಗೃಧ್ರಂ ಜಟಾಯುಷಮ್ ॥2॥
ದುರಾತ್ಮನಾದ ರಾಕ್ಷಸೇಂದ್ರನಾದ ರಾವಣನು ಮಾಯೆಯನ್ನು ಆಶ್ರಯಿಸಿ ತನ್ನ ಬಲದಿಂದ ಜಟಾಯು ಪಕ್ಷಿಯನ್ನು ಕೊಂದು ಆಶ್ರಮದಿಂದ ಜಾನಕಿಯನ್ನು ಅಪಹರಿಸಿದನು.
ಪ್ರತ್ಯಾಜಹಾರ ತಾಂ ರಾಮಃ ಸುಗ್ರೀವಬಲಮಾಶ್ರಿತಃ |
ಬದ್ಧ್ವಾ ಸೇತುಂ ಸಮುದ್ರಸ್ಯ ದಗ್ಧ್ವಾ ಲಂಕಾಂ ಶಿತೈಃ ಶರೈಃ ॥3॥

ರಾಮನು ಸುಗ್ರೀವನ ಬಲವನ್ನು ಆಶ್ರಯಿಸಿ ಸಮುದ್ರಕ್ಕೆ ಸೇತುವೆಯನ್ನು ನಿರ್ಮಾಣ ಮಾಡಿ ನಿಶಿತವಾದ ಶರಗಳಿಂದ ಲಂಕೆಯನ್ನು ದಹಿಸಿ ಅವಳನ್ನು ಕರೆದುಕೊಂಡು ಬಂದನು.
ತತಸ್ತಂ ಬಲವಾನ್ ರಾಮೋ ರಿಪುಂ ಭಾರ್ಯಾಪಹಾರಿಣಮ್ |
ಸಹ ವಾನರಸೈನ್ಯೇನ ಜಘಾನ ರಣಮೂರ್ಧನಿ ||4||
ಅನಂತರ ಬಲಿಷ್ಠನಾದ ರಾಮನು ವಾನರಸೈನ್ಯದ ಜೊತೆಯಲ್ಲಿ ಘೋರವಾದ ಯುದ್ಧದಲ್ಲಿ ತನ್ನ ಪತಿನಯನ್ನು ಅಪಹರಿಸಿದ್ದ ಶತ್ರುವನ್ನು ಸಂಹರಿಸಿದನು.
ಯುಧಿಷ್ಠಿರಃ
ಕಸ್ಮಿನ್ ರಾಮಃ ಕುಲೇ ಜಾತಃ ಕಿಂವೀರ್ಯಃ ಕಿಂಪರಾಕ್ರಮಃ |
ರಾವಣಃ ಕಸ್ಯ ಪುತ್ರೋ ವಾ ಕಿಂ ವೈರಂ ತಸ್ಯ ತೇನ ಹ ||4||
ಯುಧಿಷ್ಠಿರ ರಾಮನು ಯಾವ ಕುಲದಲ್ಲಿ ಜನಿಸಿದನು. ಅವನ ವೀರ್ಯ ಎಂತಹುದು. ಪರಾಕ್ರಮ ಎಂಥಹುದು? ಮತ್ತು ರಾವಣನು ಯಾರ ಪುತ್ರ? ಅವನಿಗೆ ರಾಮನ ಜೊತೆಯಲ್ಲಿ ಏತಕ್ಕೆ ವೈರವುಂಟಾಯಿತು?
ಏತನ್ಮೇ ಭಗವನ್ ಸರ್ವಂ ಸಮ್ಯಗಾಖ್ಯಾತುಮರ್ಹಸಿ |
ಶ್ರೋತುಮಿಚ್ಛಾಮಿ ಚರಿತಂ ರಾಮಸ್ಯಾಕ್ಲಿಷ್ಟಕರ್ಮಣಃ |
ತ್ವಯಾ ಪ್ರತ್ಯಕ್ಷತೋ ದೃಷ್ಟಂ ಯಥಾ ಸರ್ವಮಶೇಷತಃ ||5||
ಪೂಜ್ಯರೇ, ಇದೆಲ್ಲವನ್ನೂ ನನಗೆ ನೀವು ಸರಿಯಾಗಿ ಹೇಳಬೇಕು. ನೀವು ಪ್ರತ್ಯಕ್ಷವಾಗಿ ನೋಡಿದ ಅಕ್ಲಿಷ್ಟಕಾರಿಯಾದ ರಾಮನ ಸಮಗ್ರವಾದ ಚರಿತ್ರವನ್ನು ಯಥಾವತ್ತಾಗಿ ಕೇಳಲು ಬಯಸುತ್ತೇನೆ.
ಮಾರ್ಕಂಡೇಯಃ
ಶೃಣು ರಾಜನ್ ಪುರಾ ವೃತ್ತಮಿತಿಹಾಸಂ ಪುರಾತನಮ್ |
ಅಜೋ ನಾಮಾಭವದ್ ರಾಜಾ ಮಹಾನಿಕ್ಷ್ವಾಕುವಂಶಜಃ |
ತಸ್ಯ ಪುತ್ರೋ ದಶರಥಃ ಶಶ್ವತ್ಸ್ವಾಧ್ಯಾಯವಾನ್ ಶುಚಿಃ ||6||
ಮಾರ್ಕಂಡೇಯರು ರಾಜನೇ, ಹಿಂದೆ ನಡೆದ ಪುರಾತನವಾದ ಇತಿಹಾಸವನ್ನು ಕೇಳು. ಇಕ್ಷ್ವಾಕು ವಂಶದಲ್ಲಿ ಅಜನೆಂಬ ದೊಡ್ಡ ರಾಜನಿದ್ದನು. ಅವನ ಪುತ್ರ ದಶರಥ. ಅವನು ಯಾವಾಗಲೂ ಸ್ವಾಧ್ಯಾಯಶೀಲನೂ ಮತ್ತು ಶುಚಿಯೂ ಆಗಿದ್ದನು.
ಅಭವಂಸ್ತಸ್ಯ ಚತ್ವಾರಃ ಪುತ್ರಾ ಧರ್ಮಾರ್ಥಕೋವಿದಾಃ |
ರಾಮಲಕ್ಷ್ಮಣಶತ್ರುಘ್ನಾ ಭರತಶ್ಚ ಮಹಾಬಲಃ ||7||
ಅವನಿಗೆ ಧರ್ಮಾರ್ಥಕೋವಿದರಾದ ನಾಲ್ಕುಮಕ್ಕಳು ಜನಿಸಿದರು. ಅವರು ಮಹಾಬಲರಾದ ರಾಮ, ಲಕ್ಷ್ಮಣ, ಶತ್ರುಘ್ನ ಮತ್ತು ಭರತರು.
ರಾಮಸ್ಯ ಮಾತಾ ಕೌಸಲ್ಯಾ ಕೈಕೇಯೀ ಭರತಸ್ಯ ತು |
ಸುತೌ ಲಕ್ಷ್ಮಣಶತ್ರುಘ್ನೌ ಸುಮಿತ್ರಾಯಾಃ ಪರಂತಪೌ ||8||
ರಾಮನ ತಾಯಿ ಕೌಸಲ್ಯೆ. ಕೈಕೇಯಿಯು ಭರತನ ತಾಯಿ. ಪರಂತಪರಾದ ಲಕ್ಷ್ಮಣಶತ್ರುಘ್ನರು ಸುಮಿತ್ರೆಯ ಮಕ್ಕಳು.
ವಿದೇಹರಾಜೋ ಜನಕಃ ಸೀತಾ ತಸ್ಯಾತ್ಮಜಾ ವಿಭೋ |
ಯಾಂ ಚಕಾರ ಸ್ವಯಂ ತ್ವಷ್ಟಾ ರಾಮಸ್ಯ ಮಹಿಷೀಂ ಪ್ರಿಯಾಮ್ ||9||
ಎಲೈ ವಿಭುವೇ, ಜನಕನು ವಿದೇಹರಾಜ. ಸೀತೆಯು ಅವನ ಪುತ್ರಿ. ಅವಳನ್ನು ಬ್ರಹ್ಮದೇವರೇ ರಾಮನ ಪ್ರಿಯಮಹಿಷಿಯನ್ನಾಗಿ ಮಾಡಿದರು.
ಏತದ್ ರಾಮಸ್ಯ ತೇ ಜನ್ಮ ಸೀತಾಯಾಶ್ಚ ಪ್ರಕೀರ್ತಿತಮ್ |
ರಾವಣಸ್ಯಾಪಿ ತೇ ಜನ್ಮ ವ್ಯಾಖ್ಯಾಸ್ಯಾಮಿ ಜನೇಶ್ವರ ||10||
ನಿನಗೆ ರಾಮ ಮತ್ತು ಸೀತೆಯರ ಜನ್ಮವನ್ನು ಹೇಳಿದೆನು. ಜನೇಶ್ವರನೇ, ರಾವಣನ ಜನ್ಮವನ್ನೂ ನಿನಗೆ ಹೇಳುವೆನು.
ಪಿತಾಮಹೋ ರಾವಣಸ್ಯ ಸಾಕ್ಷಾದ್ದೇವಃ ಪ್ರಜಾಪತಿಃ |
ಸ್ವಯಂಭೂಃ ಸರ್ವಲೋಕಾನಾಂ ಪ್ರಭುಃ ಸ್ರಷ್ಟಾ ಮಹಾತಪಾಃ ||11||
ಸರ್ವಲೋಕಗಳಿಗೆ ಪ್ರಭುವಾದ ಸರ್ವಲೋಕವನ್ನು ಸೃಷ್ಟಿಮಾಡುವ ಮಹಾತಪಸ್ವಿಯಾದ ಸ್ವಯಂಭೂ ಎಂದು ಕರೆಯಲ್ಪಡುವ ಪ್ರಜಾಪತಿಗಳಾದ ಬ್ರಹ್ಮದೇವರು ರಾವಣನ ತಾತ (ರಾವಣನ ತಂದೆಯಾದ ವಿಶ್ರವಸನು ಪುಲಸ್ತ್ಯನ ಅರ್ಧದೇಹರೂಪನಾದುದರಿಂದ ಬ್ರಹ್ಮದೇವರು ರಾವಣನಿಗೆ ಪಿತಾಮಹರಾಗುತ್ತಾರೆ).
ಪುಲಸ್ತ್ಯೋ ನಾಮ ತಸ್ಯಾಸೀನ್ಮಾನಸೋ ದಯಿತಃ ಸುತಃ |
ತಸ್ಯ ವೈಶ್ರವಣೋ ನಾಮ ಗವಿ ಪುತ್ರೋಽಭವತ್ ಪ್ರಭುಃ ||12||
ಅವರಿಗೆ ಪುಲಸ್ತ್ಯನೆಂಬ ಪ್ರೀತಿಪಾತ್ರನಾದ ಮಾನಸ ಪುತ್ರನು ಜನಿಸಿದನು. ಪುಲಸ್ತ್ಯನಿಗೆ ಗೋವಿನಲ್ಲಿ ಪ್ರಭುವಾದ ಕುಬೇರನು ಪುತ್ರನಾಗಿ ಜನಿಸಿದನು.
ಪಿತರಂ ಸ ಸಮುತ್ಸೃಜ್ಯ ಪಿತಾಮಹಮುಪಸ್ಥಿತಃ |
ತಸ್ಯ ಕೋಪಾತ್ ಪಿತಾ ರಾಜನ್ ಸಸರ್ಜಾತ್ಮಾನಮಾತ್ಮನಾ |
ಸ ಜಜ್ಞೇ ವಿಶ್ರವಾ ನಾಮ ತಸ್ಯಾತ್ಮಾರ್ಧೇನ ವೈ ದ್ವಿಜಃ ||13||
ಅವನು ತಂದೆಯನ್ನು ಬಿಟ್ಟು ಪಿತಾಮಹನನ್ನು ಆಶ್ರಯಿಸಿದನು. ರಾಜನೇ, ಅವನ ಮೇಲಿನ ಕೋಪದಿಂದ ಆಗ ತಂದೆಯು ತನ್ನನ್ನೇ ಪುನಃ ಸೃಷ್ಟಿಸಿಕೊಂಡನು. ಅವನು ಪುಲಸ್ತ್ಯರ ಅರ್ಧದೇಹದಿಂದ ಕೂಡಿದವನಾಗಿ ವಿಶ್ರವ ಎಂಬ ಬ್ರಾಹ್ಮಣನಾಗಿ ಜನಿಸಿದನು.

ಪಿತಾಮಹಸ್ತು ಪ್ರೀತಾತ್ಮಾ ದದೌ ವೈಶ್ರವಣಸ್ಯ ಹ |
ಅಮರತ್ವಂ ಧನೇಶತ್ವಂ ಲೋಕಪಾಲತ್ವಮೇವ ಚ ||14||
ಪಿತಾಮಹರಾದ ಬ್ರಹ್ಮದೇವರು ಸಂತೋಷಗೊಂಡು ವೈಶ್ರವಣನಿಗೆ (ಕುಬೇರನಿಗೆ) ದೇವತ್ವವನ್ನೂ, ಧನೇಶತ್ವವನ್ನೂ ಮತ್ತು ಲೋಕಪಾಲಕತ್ವವನ್ನೂ ಕೊಟ್ಟರು.
ಈಶಾನೇನ ತಥಾ ಸಖ್ಯಂ ಪುತ್ರಂ ಚ ನಳಕೂಬರಮ್ |
ರಾಜಧಾನೀನಿವೇಶಂ ಚ ಲಂಕಾಂ ರಕ್ಷೋಗಣಾನ್ವಿತಾಮ್ |
ವಿಮಾನಂ ಪುಷ್ಪಕಂ ನಾಮ ಕಾಮಗಂ ಚ ದದೌ ಪ್ರಭುಃ ||15||
ರುದ್ರದೇವರಿಂದ ಸಖ್ಯವನ್ನೂ, ನಳಕೂಬರ ಎಂಬ ಪುತ್ರನನ್ನೂ ಕೊಟ್ಟರು. ರಾಕ್ಷಸಗಣದಿಂದ ಕೂಡಿದ ಲಂಕೆಯನ್ನು ರಾಜಧಾನಿಯಾಗಿ ಕೊಟ್ಟರು ಮತ್ತು ಕಾಮಗಾಮಿಯಾದ ಪುಷ್ಪಕ ವಿಮಾನವನ್ನು ಪ್ರಭುಗಳಾದ ಅವರು ನೀಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||
|| ಇತಿ ರಾಮೋಪಾಖ್ಯಾನಪರ್ವಣಿ ರಾಮರಾವಣಯೋರ್ಜನ್ಮ ಕಥನಂ ನಾಮ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ಮೂರನೆಯ ಅಧ್ಯಾಯ
ವಿಶ್ರವಸ ಮುನಿಯಿಂದ ಮೂರುಪತ್ನಿಯರಲ್ಲಿ ರಾವಣಾದಿಗಳ ಉತ್ಪತ್ತಿ. ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿ ಅವರ ಅನುಗ್ರಹದಿಂದ ಪುಷ್ಪಕವಿಮಾನವನ್ನು ಅಪಹರಿಸಿ ಕುಬೇರನನ್ನು ಲಂಕೆಯಿಂದ ಓಡಿಸಿ ಲಂಕೆಯಲ್ಲಿ ನಿವಾಸ.
ಮಾರ್ಕಂಡೇಯಃ
ಪುಲಸ್ತ್ಯಸ್ಯ ತು ಯಃ ಕ್ರೋಧಾದರ್ಧದೇಹೋಽಭವನ್ಮುನಿಃ |
ವಿಶ್ರವಾ ನಾಮ ಸಕ್ರೋಧಃ ಸ ವೈಶ್ರವಣಮೈಕ್ಷತ ||1||
ಮಾರ್ಕಂಡೇಯ ಯಾವ ವಿಶ್ರವಾ ಮುನಿಯು ಕ್ರೋಧದಿಂದ ಪುಲಸ್ತ್ಯರ ಅರ್ಧದೇಹವನ್ನು ಹೊಂದಿದರೋ ಅವರು ಕ್ರೋಧಯುಕ್ತರಾಗಿ ಕುಬೇರನನ್ನು ನೋಡಿದರು.
ಬುಬುಧೇ ತಂ ತು ಸಕ್ರೋಧಂ ಪಿತರಂ ರಾಕ್ಷಸೇಶ್ವರಃ |
ಕುಬೇರಸ್ತು ಪ್ರಸಾದಾರ್ಥಂ ಯತತೇ ಸ್ಮ ಸದಾ ನೃಪ ||2||
ರಾಕ್ಷಸರ ರಾಜನಾದ ಕುಬೇರನು ತಂದೆಯ ಆ ಕ್ರೋಧವನ್ನು ತಿಳಿದನು. ಎಲೈ ರಾಜನೇ, ಕುಬೇರನು ತಂದೆಯ ಅನುಗ್ರಹವನ್ನು ಸಂಪಾದಿಸಲು ಯಾವಾಗಲೂ ಪ್ರಯತ್ನ ಪಡುತ್ತಿದ್ದನು.
ಸ ರಾಜರಾಜೋ ಲಂಕಾಯಾಂ ನ್ಯವಸನ್ ನರವಾಹನಃ |
ರಾಕ್ಷಸೀಃ ಪ್ರದದೌ ತಿಸ್ರಃ ಪಿತುರ್ವೈ ಪರಿಚಾರಿಕಾಃ ||3||
ಆ ರಾಜರಾಜನಾದ ಕುಬೇರನು ನರವಾಹನನಾಗಿ ಲಂಕೆಯಲ್ಲಿ ವಾಸಿಸುತ್ತಿದ್ದನು. ಅವನು ತಂದೆಯ ಸೇವೆಗಾಗಿ ಅವನಿಗೆ ಮೂರುಜನ ರಾಕ್ಷಸ ಸ್ತ್ರೀಯರನ್ನು ಕೊಟ್ಟನು.
ತಾಃ ಸದಾ ತಂ ಮಹಾತ್ಮಾನಂ ಸಂತೋಷಯಿತುಮುದ್ಯತಾಃ |
ಋಷಿಂ ಭರತಶಾರ್ದೂಲ ನೃತ್ಯಗೀತವಿಶಾರದಾಃ ||4||
ಎಲೈ ಭರತಶಾರ್ದೂಲನೇ, ನೃತ್ಯಗಾನವಿಶಾರದರಾದ ಅವರು ಮಹಾತ್ಮನಾದ ಋಷಿಯನ್ನು ಸಂತೋಷಪಡಿಸಲು ಉದ್ಯುಕ್ತರಾದರು.
ಪುಷ್ಪೋತ್ಕಟಾ ಚ ರಾಕಾ ಚ ಮಾಲಿನೀ ಚ ವಿಶಾಂಪತೇ |
ಅನ್ಯೋನ್ಯಸ್ಪರ್ಧಯಾ ರಾಜನ್ ಶ್ರೇಯಸ್ಕಾಮಾಃ ಸುಮಧ್ಯಮಾಃ||5||
ಎಲೈ ರಾಜನೇ, ಪುಷ್ಪೋತ್ಕಟಾ, ರಾಕಾ ಮತ್ತು ಮಾಲಿನೀ ಎಂಬ ಆ ಮೂವರು ಸುಂದರಿಯರು ಶ್ರೇಯಸ್ಕಾಮರಾಗಿ ಪರಸ್ಪರ ಸ್ಪರ್ಧೆಯನ್ನು ಮಾಡಿದರು.
ಸ ತಾಸಾಂ ಭಗವಾಂಸ್ತುಷ್ಟೋ ಮಹಾತ್ಮಾ ಪ್ರದದೌ ವರಾನ್ |
ಲೋಕಪಾಲೋಪಮಾನ್ ಪುತ್ರಾನೇಕೈಕಸ್ಯಾ ಯಥೇಪ್ಸಿತಾನ್ ||6||
ಅವರ ಸೇವೆಯಿಂದ ಸಂತುಷ್ಟರಾದ ಪೂಜ್ಯರಾದ ಆ ಮಹಾತ್ಮರು ಅವರಿಗೆ ಒಬ್ಬೊಬ್ಬರಿಗೂ ಇಷ್ಟವಾದಂತಹ ಲೋಕಪಾಲಕರಂತಹ ಶ್ರೇಷ್ಠರಾದ ಪುತ್ರರನ್ನು ಕೊಟ್ಟರು.
ಪುಷ್ಪೋತ್ಕಟಾಯಾಂ ಜಜ್ಞಾತೇ ದ್ವೌ ಪುತ್ರೌ ರಾಕ್ಷಸೇಶ್ವರೌ |
ಕುಂಭಕರ್ಣದಶಗ್ರೀವೌ ಬಲೇನಾಪ್ರತಿವೌ ಭುವಿ ||7||
ಪುಷ್ಪೋತ್ಕಟಾ ಎಂಬ ರಾಕ್ಷಸ ಸ್ತ್ರೀಯಲ್ಲಿ ಭೂಮಿಯಲ್ಲಿ ಅಪ್ರತಿಮ ಬಲವುಳ್ಳ ಕುಂಭಕರ್ಣ ಮತ್ತು ರಾವಣನೆಂಬ ರಾಕ್ಷಸೇಶ್ವರರಾದ ಇಬ್ಬರು ಪುತ್ರರು ಜನಿಸಿದರು.
ಮಾಲಿನೀ ಜನಯಾಮಾಸ ಪುತ್ರಮೇಕಂ ವಿಭೀಷಣಮ್ |
ರಾಕಾಯಾಂ ಮಿಥುನಂ ಜಜ್ಞೇ ಖರಃ ಶೂರ್ಪಣಖಾ ತಥಾ ||8||
ಮಾಲಿನಿಯು ವಿಭೀಷಣನೆಂಬ ಒಬ್ಬ ಪುತ್ರನನ್ನು ಪಡೆದಳು. ರಾಕೆಯಲ್ಲಿ ಖರ ಮತ್ತು ಶೂರ್ಪಣಖಾ ಎಂಬ ಅವಳಿ ಮಕ್ಕಳು ಜನಿಸಿದರು.
ವಿಭೀಷಣಸ್ತು ರೂಪೇಣ ಸರ್ವೇಭ್ಯೋಽಭ್ಯಧಿಕೋಽಭವತ್ |

ಸ ಬಭೂವ ಮಹಾಭಾಗೋ ಧರ್ಮಗೋಪ್ತಾ ಕ್ರಿಯಾರತಿಃ ॥9॥
ವಿಭೀಷಣನು ರೂಪದಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನಾಗಿದ್ದನು. ಆ ಮಹಾನುಭಾವನು ಧರ್ಮರಕ್ಷಕನೂ, ಸತ್ಕರ್ಮನಿರತನೂ ಆಗಿದ್ದನು.
ದಶಗ್ರೀವಸ್ತು ಸರ್ವೇಷಾಂ ಶ್ರೇಷ್ಠೋ ರಾಕ್ಷಸಪುಂಗವಃ |
ಮಹೋತ್ಸಾಹೋ ಮಹಾವೀರ್ಯೋ ಮಹಾಸತ್ತ್ವಪರಾಕ್ರಮಃ ॥10॥
ದಶಗ್ರೀವನಾದ ರಾವಣನು ಎಲ್ಲರಿಗಿಂತಲೂ ಶ್ರೇಷ್ಠನಾದ ರಾಕ್ಷಸಪುಂಗವ. ಅವನು ಮಹಾ ಉತ್ಸಾಹವನ್ನೂ, ವೀರ್ಯವನ್ನೂ, ಸತ್ತ್ವಪರಾಕ್ರಮಗಳನ್ನೂ ಹೊಂದಿದ್ದನು.
ಕುಂಭಕರ್ಣೋ ಬಲೇನಾಸೀತ್ ಸರ್ವೇಭ್ಯೋಽಭ್ಯಧಿಕೋ ಯುಧಿ |
ಮಾಯಾವೀ ರಣಶೌಂಡಶ್ಚ ರೌದ್ರಶ್ಚ ರಜನೀಚರಃ ॥11॥
ಕುಂಭಕರ್ಣನು ತನ್ನ ಬಲದಿಂದ ಯುದ್ಧದಲ್ಲಿ ಎಲ್ಲರಿಗೂ ಮಿಗಿಲಾಗಿದ್ದನು. ಅವನು ಮಯಾವಿ, ಯುದ್ಧಕುಶಲ ಮತ್ತು ಭಯಂಕರನಾದ ರಾಕ್ಷಸ.
ಖರೋ ಧನುಷಿ ವಿಕ್ರಾಂತೋ ಬ್ರಹ್ಮದ್ವಿಟ್ ಪಿಶಿತಾಶನಃ |
ಸಿದ್ಧಿವಿಘ್ನಕರೀ ಚಾಪಿ ರೌದ್ರೀ ಶೂರ್ಪಣಖಾ ತಥಾ ॥12॥
ಖರನು ಧನುರ್ವಿದ್ಯೆಯನ್ನು ಬಲ್ಲವನು, ಬ್ರಹ್ಮದ್ವೇಷಿ ಮತ್ತು ಮಾಂಸಾಹಾರಿಯಾದವನು. ಶೂರ್ಪಣಖೆಯು ಸಿದ್ಧಿಗಳಿಗೆ ವಿಘ್ನವನ್ನು ಉಂಟು ಮಾಡುವ ಭಯಂಕರಳಾದ ರಾಕ್ಷಸೀ.
ಸರ್ವೇ ವೇದವಿದಃ ಶೂರಾಃ ಸರ್ವೇ ಸುಚರಿತವ್ರತಾಃ |
ಊಷುಃ ಪಿತ್ರಾ ಸಹ ರತಾ ಗಂಧಮಾದನಪರ್ವತೇ ॥13॥
ಎಲ್ಲರೂ ವೇದವನ್ನು ತಿಳಿದವರು, ಶೂರರು ಮತ್ತು ವ್ರತಗಳನ್ನು ಅನುಷ್ಠಾನ ಮಾಡುವವರು. ಅವರು ತಂದೆಯ ಜೊತೆಯಲ್ಲಿ ಗಂಧಮಾದನ ಪರ್ವತದಲ್ಲಿ ಸಂತೋಷದಿಂದ ವಾಸಮಾಡಿದರು.
ತತೋ ವೈಶ್ರವಣಂ ತತ್ರ ದದೃಶುರ್ನರವಾಹನಮ್ |
ಪಿತ್ರಾ ಸಾರ್ಧಂ ಸಮಾಸೀನಮೃದ್ಧ್ಯಾ ಪರಮಯಾ ಯುತಮ್ ॥14॥
ಅನಂತರ ಅವರು ಅಲ್ಲಿ ತಮ್ಮ ತಂದೆಯು ಜೊತೆಯಲ್ಲಿ ಕುಳಿತಿದ್ದ ಪರಮ ಸಮೃದ್ಧಿಯಿಂದ ಯುತನಾದ ನರವಾಹನನಾದ ಕುಬೇರನನ್ನು ನೋಡಿದರು.
ಜಾತಾಮರ್ಷಾಸ್ತತಸ್ತೇ ತು ತಪಸೇ ಧೃತನಿಶ್ಚಯಾಃ |
ಬ್ರಹ್ಮಾಣಂ ತೋಷಯಾಮಾಸುರ್ಘೋರೇಣ ತಪಸಾ ತದಾ ॥15॥
ಅದರಿಂದ ಕೋಪಗೊಂಡ ಅವರು ತಪಸ್ಸನ್ನು ಮಾಡುವುದಾಗಿ ನಿಶ್ಚಯಿಸಿ ಘೋರವಾದ ತಪಸ್ಸಿನಿಂದ ಬ್ರಹ್ಮದೇವರನ್ನು ಸಂತೋಷಪಡಿಸಿದರು.
ಅತಿಷ್ಠದೇಕಪಾದೇನ ಸಹಸ್ರಂ ಪರಿವತ್ಸರಾನ್ |
ವಾಯುಭಕ್ಷೋ ದಶಗ್ರೀವಃ ಪಂಚಾಗ್ನಿಃ ಸುಸಮಾಹಿತಃ ॥16॥
ರಾವಣನು ವಾಯುಭಕ್ಷನಾಗಿ ಪಂಚಾಗ್ನಿಗಳ ಮಧ್ಯೆ ಒಂದು ಪಾದದ ಮೇಲೆ ನಿಂತು ಒಂದುಸಾವಿರ ವರ್ಷಗಳ ಕಾಲ ಸಮಾಹಿತನಾಗಿ ತಪಸ್ಸನ್ನು ಮಾಡಿದನು.
ಅಧಃಶಾಯೀ ಕುಂಭಕರ್ಣೋ ಯತಾಹಾರೋ ಯತವ್ರತಃ |
ವಿಭೀಷಣಃ ಶೀರ್ಣಪರ್ಣಮೇಕಮಭ್ಯವಹಾರಯನ್ ॥17॥
ಕುಂಭಕರ್ಣನು ನಿಯತವ್ರತನಾಗಿ ನಿಯತ ಆಹಾರವನ್ನು ಹೊಂದಿ ನೆಲದ ಮೇಲೆ ಮಲಗಿ ತಪಸ್ಸನ್ನು ಮಾಡಿದನು. ವಿಭೀಷಣನು ಪ್ರತಿದಿನವೂ ಒಂದು ಒಣಗಿದ ಎಲೆಯನ್ನು ಭಕ್ಷಿಸಿ ತಪಸ್ಸನ್ನು ಮಾಡಿದನು.
ಉಪವಾಸರತಿರ್ಧೀಮಾನ್ ಸದಾ ಜಪ್ಯಪರಾಯಣಃ |
ತಮೇವ ಕಾಲಮಾತಿಷ್ಠತ್ ತೀವ್ರಂ ತಪ ಉದಾರಧೀಃ ॥18॥
ಅವನು ಯಾವಾಗಲೂ ಉಪವಾಸದಲ್ಲಿ ರತನಾಗಿದ್ದು, ಮೇಧಾವಿಯೂ, ಜಪಪರಾಯಣನೂ ಆಗಿದ್ದನು. ಉದಾರಬುದ್ಧಿಯುಳ್ಳ ಅವನು ಅಷ್ಟೇ ಕಾಲ ಎಂದರೆ ಒಂದುಸಹಸ್ರ ವರ್ಷಗಳ ಕಾಲ ತೀವ್ರವಾದ ತಪಸ್ಸನ್ನು ಆಚರಿಸಿದನು.
ಖರಃ ಶೂರ್ಪಣಖಾ ಚೈವ ತೇಷಾಂ ವೈ ತಪ್ಯತಾಂ ತಪಃ |
ಪರಿಚರ್ಯಾಂ ಚ ರಕ್ಷಾಂ ಚ ಚಕ್ರುತುರ್ಹೃಷ್ಟಮಾನಸೌ ॥19॥
ಖರ ಮತ್ತು ಶೂರ್ಪಣಖೆಯರು ತಪಸ್ಸು ಮಾಡುವ ಆ ಮೂವರಿಗೆ ಸಂತೋಷಗೊಂಡ ಮನಸ್ಸಿನಿಂದ ಸೇವೆಯನ್ನು ಮತ್ತು ರಕ್ಷಣೆಯನ್ನು ಮಾಡಿದರು.
ಪೂರ್ಣೇ ವರ್ಷಸಹಸ್ರೇ ತು ಶಿರಶ್ಛಿತ್ತ್ವಾ ದಶಾನನಃ |
ಜುಹೋತ್ಯಗ್ನೌ ದುರಾಧರ್ಷಸ್ತೇನಾತುಷ್ಯಜ್ಜಗತ್ಪ್ರಭುಃ ॥20॥
ಒಂದುಸಾವಿರ ವರ್ಷಗಳು ಪೂರ್ಣವಾದಾಗ ದುರಾಧರ್ಷನಾದ ದಶಾನನನು ತನ್ನ ತಲೆಯನ್ನು ಕತ್ತರಿಸಿ ಅಗ್ನಿಯಲ್ಲಿ ಹೋಮವನ್ನು ಮಾಡಿದನು. ಅದರಿಂದ ಪ್ರಭುಗಳಾದ ಬ್ರಹ್ಮದೇವರು ಪ್ರಸನ್ನರಾದರು.
ತತೋ ಬ್ರಹ್ಮಾ ಸ್ವಯಂ ಗತ್ವಾ ತಪಸಸ್ತಾನ್ ನ್ಯವಾರಯತ್ |
ಪ್ರಲೋಭ್ಯ ವರದಾನೇನ ಸರ್ವಾನೇವ ಪೃಥಕ್ಪೃಥಕ್ ॥21॥
ಆಗ ಬ್ರಹ್ಮದೇವರು ತಾವಾಗಿಯೇ ಹೋಗಿ ಅವರೆಲ್ಲರನ್ನೂ ಬೇರೆ ಬೇರೆ ವರಗಳಿಂದ ಪ್ರಲೋಭಗೊಳಿಸಿ ಅವರ ತಪಸ್ಸನ್ನು ನಿಲ್ಲಿಸಿದರು.

ಬ್ರಹ್ಮಾ
ಪ್ರೀತೋಽಸ್ಮಿ ವೋ ನಿವರ್ತಧ್ವಂ ವರಾನ್ ವೃಣುತ ಪುತ್ರಕಾಃ |
ಯದ್ಯದಿಷ್ಟಮೃತೇ ತ್ವೇಕಮಮರತ್ವಂ ತಥಾಸ್ತು ತತ್ ||22||
ಬ್ರಹ್ಮ ಮಕ್ಕಳೇ, ನಾನು ನಿಮಗೆ ಪ್ರಸನ್ನನಾಗಿದ್ದೇನೆ. ತಪಸ್ಸನ್ನು ನಿಲ್ಲಿಸಿ, ಅಮರತ್ವವನ್ನು ಬಿಟ್ಟು ನಿಮಗೆ ಯಾವುದು ಯಾವುದು ಇಷ್ಟವಾಗಿದೆಯೋ ಅದೆಲ್ಲವೂ ಹಾಗೆಯೇ ಉಂಟಾಗಲಿ.
ಯದ್ಯದಗ್ನೌ ಹುತಂ ಸರ್ವಂ ಶಿರಸ್ತೇ ಮಹದೀಪ್ಸಯಾ |
ತಥೈವ ತಾನಿ ತೇ ದೇಹೇ ಭವಿಷ್ಯಂತಿ ಯಥೇಪ್ಸಯಾ ||23||
ನೀನು ಯಾವ ಯಾವ ಶಿರಸ್ಸನ್ನು ಮಹತ್ವವನ್ನು ಪಡೆಯುವ ಉದ್ದೇಶದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿದೆಯೋ ಅವೆಲ್ಲವೂ ನಿನ್ನ ಇಷ್ಟದಂತೆ ನಿನ್ನ ದೇಹಕ್ಕೇ ಬಂದು ಸೇರುವುವು.
ವೈರೂಪ್ಯಂ ಚ ನ ತೇ ದೇಹೇ ಕಾಮರೂಪಧರಸ್ತಥಾ |
ಭವಿಷ್ಯಸಿ ರಣೇಽರೀಣಾಂ ವಿಜೇತಾ ನ ಚ ಸಂಶಯಃ ||24||
ನಿನ್ನದೇಹದಲ್ಲಿ ವೈರೂಪ್ಯವು ಉಂಟಾಗುವುದಿಲ್ಲ. ನೀನು ಕಾಮರೂಪಧರನಾಗುವಿ. ಯುದ್ಧದಲ್ಲಿ ಶತ್ರುಗಳನ್ನೂ ಜಯಿಸುವಿ. ಇದರಲ್ಲಿ ಸಂಶಯವಿಲ್ಲ.
ರಾವಣಃ
ಗಂಧರ್ವದೇವಾಸುರತೋ ಯಕ್ಷರಾಕ್ಷಸತಸ್ತಥಾ |
ಸರ್ಪಕಿನ್ನರಭೂತೇಭ್ಯೋ ನ ಮೇ ಭೂಯಾತ್ ಪರಾಭವಃ ||25||
ರಾವಣ ಗಂಧರ್ವದೇವ ಅಸುರರಿಂದ ಅದರಂತೆ ಯಕ್ಷರಾಕ್ಷಸರಿಂದ ಮತ್ತು ಸರ್ಪಕಿನ್ನರ ಭೂತಗಳಿಂದ ನನಗೆ ಸೋಲು ಉಂಟಾಗಬಾರದು.
ಬ್ರಹ್ಮಾ
ಯ ಏತೇ ಕೀರ್ತಿತಾಃ ಸರ್ವೇ ನ ತೇಭ್ಯೋಽಸ್ತಿ ಭಯಂ ತವ |
ಋತೇ ಮನುಷ್ಯಾದ್ ಭದ್ರಂ ತೇ ತಥಾ ತದ್ ವಿಹಿತಂ ಮಯಾ ||26||
ಬ್ರಹ್ಮ ನಿನಗೆ ಮಂಗಳವಾಗಲಿ. ಮನುಷ್ಯನನ್ನು ಬಿಟ್ಟು ನೀನು ಈ ಯಾರನ್ನು ಉಲ್ಲೇಖಿಸಿದ್ದೀಯೋ ಆ ಯಾರಿಂದಲೂ ನಿನಗೆ ಭಯವಿಲ್ಲ ಎಂದು ನಾನು ವಿಧಾನ ಮಾಡಿದ್ದೇನೆ.
ಮಾರ್ಕಂಡೇಯಃ
ಏವಮುಕ್ತೋ ದಶಗ್ರೀವಸ್ತುಷ್ಟಃ ಸಮಭವತ್ ತದಾ |
ಅವಮೇನೇ ಹಿ ದುರ್ಬುದ್ಧಿರ್ಮನುಷ್ಯಾನ್ ಪುರುಷಾದಕಃ ||27||
ಮಾರ್ಕಂಡೇಯರು ಹೀಗೆ ಹೇಳಲ್ಪಟ್ಟ ರಾವಣನು ಆಗ ಸಂತುಷ್ಟನಾದನು. ನರಮಾಂಸಭಕ್ಷಕನಾದ ಆ ದುರ್ಬುದ್ಧಿಯು ಮನುಷ್ಯರನ್ನು ಅವಮಾನ ಮಾಡಿದನು.
ಕುಂಭಕರ್ಣಮಥೋವಾಚ ತಥೈವ ಪ್ರಪಿತಾಮಹಃ |
ವರಂ ವೃಣೀಷ್ವ ಭದ್ರಂ ತೇ ಪ್ರೀತೋಽಸ್ಮೀತಿ ಪುನಃ ಪುನಃ ||28||
ಅದರಂತೆ ಪ್ರಪಿತಾಮಹರಾದ ಬ್ರಹ್ಮದೇವರು ಕುಂಭಕರ್ಣನನ್ನು ಕುರಿತು ನಿನಗೆ ಪ್ರಸನ್ನನಾಗಿದ್ದೇನೆ. ಬೇಕಾದ ವರವನ್ನು ಕೇಳು ಎಂದು ಪುನಃ ಪುನಃ ಹೇಳಿದರು.
ಸ ವವ್ರೇ ಮಹತೀಂ ನಿದ್ರಾಂ ತಮಸಾ ಗ್ರಸ್ತಚೇತನಃ |
ತಥಾ ಭವಿಷ್ಯತೀತ್ಯುಕ್ತ್ವಾ ವಿಭೀಷಣಮುವಾಚ ಹ |
ವರಂ ವೃಷ್ಣೀಷ್ವ ಪುತ್ರ ತ್ವಂ ಪ್ರೀತೋಽಸ್ಮೀತಿ ಪುನಃ ಪುನಃ ||29||
ತಮೋಗುಣದಿಂದ ಗ್ರಸ್ತವಾದ ಮನಸ್ಸುಳ್ಳ ಅವನು ದೀರ್ಘವಾದ ನಿದ್ರೆಯನ್ನು ವರವಾಗಿ ಬೇಡಿದನು. ಹಾಗೆಯೇ ಆಗಲಿ ಎಂದು ಬ್ರಹ್ಮದೇವರು ವಿಭೀಷಣನನ್ನು ಕುರಿತು ಪುತ್ರನೇ, ನಿನಗೆ ಪ್ರಸನ್ನನಾಗಿದ್ದೇನೆ, ಇಷ್ಟವಾದ ವರವನ್ನು ಕೇಳು ಎಂದು ಪುನಃ ಪುನಃ ಹೇಳಿದರು.
ವಿಭೀಷಣಃ
ಪರಮಾಪದ್ಗತಸ್ಯಾಪಿ ನಾಧರ್ಮೇ ಮೇ ಮತಿರ್ಭವೇತ್ |
ಅಶಿಕ್ಷಿತಂ ಚ ಭಗವನ್ ಬ್ರಹ್ಮಾಸ್ತ್ರಂ ಪ್ರತಿಭಾತು ಮೇ ||30||
ವಿಭೀಷಣ ಪೂಜ್ಯನೇ, ಎಂತಹ ಆಪತ್ತು ಬಂದರೂ ನನಗೆ ಅಧರ್ಮವನ್ನು ಮಾಡುವ ಬುದ್ಧಿಯುಂಟಾಗಬಾರದು. ನಾನು ಬ್ರಹ್ಮಾಸ್ತ್ರದ ಉಪದೇಶವನ್ನು ಪಡೆಯದಿದ್ದರೂ ಅದು ನನಗೆ ಪ್ರತಿಭಾತವಾಗಬೇಕು.
ಬ್ರಹ್ಮಾ
ಯಸ್ಮಾದ್ ರಾಜಕ್ಷಸಯೋನೌ ತೇ ಜಾತಸ್ಯಾಮಿತ್ರಕರ್ಶನ |
ನಾಧರ್ಮೇ ಧೀಯತೇ ಬುದ್ಧಿರಮರತ್ವಂ ದದಾಮಿ ತೇ ||31||
ಬ್ರಹ್ಮ ಎಲೈ ಶತ್ರುಕರ್ಶನನೇ, ರಾಕ್ಷಸಯೋನಿಯಲ್ಲಿ ಜನಿಸಿದರೂ ನಿನಗೆ ಅಧರ್ಮವನ್ನು ಮಾಡುವ ಬುದ್ಧಿ ಇಲ್ಲದಿರುವುದರಿಂದ ನಿನಗೆ ಕಲ್ಪಾಂತದವರೆಗೂ ಮರಣರಾಹಿತ್ಯರೂಪವಾದ ಅಮರತ್ವವನ್ನು ಕೊಡುತ್ತೇನೆ.
ಮಾರ್ಕಂಡೇಯಃ
ರಾಕ್ಷಸಸ್ತು ವರಂ ಲಬ್ಧ್ವಾ ದಶಗ್ರೀವೋ ವಿಶಾಂಪತೇ |

ಲಂಕಾಯಾಶ್ಚ್ಯಾವಯಾಮಾಸ ಯುಧಿ ಜಿತ್ವಾ ಧನೇಶ್ವರಮ್ ॥32॥
ಮಾರ್ಕಂಡೇಯರು ಎಲೈ ರಾಜನೇ, ರಾಕ್ಷಸನಾದ ರಾವಣನು ಬ್ರಹ್ಮದೇವರಿಂದ ವರವನ್ನು ಪಡೆದು ಯುದ್ಧದಲ್ಲಿ ಕುಬೇರನನ್ನು ಸೋಲಿಸಿ ಅವನನ್ನು ಲಂಕೆಯಿಂದ ಓಡಿಸಿದನು.
ಹಿತ್ವಾ ಸ ಭಗವಾಂಲ್ಲಂಕಾಮಾವಿಶದ್ ಗಂಧಮಾದನಮ್ |
ಗಂಧರ್ವಯಕ್ಷಾನುಗತೋ ರಕ್ಷಃಕಿಂಪುರುಷೈಃ ಸಹ ॥33॥
ಆ ಪೂಜ್ಯನಾದ ಕುಬೇರನು ಲಂಕೆಯನ್ನು ಬಿಟ್ಟು ಗಂಧರ್ವರು, ಯಕ್ಷರು, ರಾಕ್ಷಸರು ಮತ್ತು ಕಿಂಪುರುಷರ ಜೊತೆಯಲ್ಲಿ ಗಂಧಮಾದನ ಪರ್ವತವನ್ನು ಪ್ರವೇಶಿಸಿದನು.
ವಿಮಾನಂ ಪುಷ್ಪಕಂ ತಸ್ಯ ಜಹಾರಾಕ್ರಮ್ಯ ರಾವಣಃ |
ಶಶಾಪ ತಂ ವೈಶ್ರವಣೋ ನ ತ್ವಾಮೇತದ್ ವಹಿಷ್ಯತಿ ॥34॥
ಅವನ ಪುಷ್ಪಕವಿಮಾನವನ್ನೂ ತನ್ನ ವಿಕ್ರಮದಿಂದ ರಾವಣನು ಅಪಹರಿಸಿದನು. ಆಗ ಕುಬೇರನು ಅವನಿಗೆ ಈ ವಿಮಾನವು ಎಂದೂ ನಿನ್ನನ್ನು ಧರಿಸುವುದಿಲ್ಲ ಎಂದು ಶಾಪವನ್ನು ಕೊಟ್ಟನು.
ಯಸ್ತು ತ್ವಾಂ ಸಮರೇ ಹಂತಾ ತಮೇವೈತದ್ವಹಿಷ್ಯತಿ |
ಅವಮನ್ಯ ಗುರುಂ ಮಾಂ ಚ ಕ್ಷಿಪ್ರಂ ತ್ವಂ ನ ಭವಿಷ್ಯಸಿ ॥35॥
ಯಾವನು ನಿನ್ನನ್ನು ಯುದ್ಧದಲ್ಲಿ ಕೊಲ್ಲುವನೋ ಅವನನ್ನು ಈ ವಿಮಾನವು ಹೊರುವುದು. ಹಿರಿಯನಾದ ನನಗೆ ಅವಮಾನವನ್ನು ಮಾಡಿದ ನೀನು ಶೀಘ್ರವಾಗಿ ನಾಶವನ್ನು ಹೊಂದುವಿ (ಎಂದೂ ಶಾಪವನ್ನು ಕೊಟ್ಟನು).
ವಿಭೀಷಣಸ್ತು ಧರ್ಮಾತ್ಮಾ ಸತಾಂ ಮಾರ್ಗಮನುಸ್ಮರನ್ |
ಅನ್ವಗಚ್ಛನ್ಮಹಾರಾಜ ಶ್ರಿಯಾ ಪರಮಯಾ ಯುತಃ ॥36॥
ಎಲೈ ಮಹಾರಾಜನೇ, ಧರ್ಮಾತ್ಮನಾದ ವಿಭೀಷಣನು ಸಜ್ಜನ ಮಾರ್ಗವನ್ನು ಸ್ಮರಿಸುತ್ತಾ ಪರಮೈಶ್ವರ್ಯದಿಂದ ಯುಕ್ತನಾಗಿ ಕುಬೇರನನ್ನು ಅನುಸರಿಸಿದನು.
ತಸ್ಮೈ ಸ ಭಗವಾಂಸ್ತುಷ್ಟೋ ಭ್ರಾತಾ ಭ್ರಾತ್ರೇ ಧನೇಶ್ವರಃ |
ಸೈನಾಪತ್ಯಂ ದದೌ ಧೀಮಾನ್ ಯಕ್ಷರಾಕ್ಷಸಸೇನಯೋಃ ॥37॥
ತನ್ನ ತಮ್ಮನಾದ ಅವನಿಗೆ ಅಣ್ಣನಾದ ಮೇಧಾವಿಯಾದ ಕುಬೇರನು ಯಕ್ಷರಾಕ್ಷಸೈನ್ಯದ ಸೇನಾಧಿಪತ್ಯವನ್ನು ಕೊಟ್ಟನು.
ರಾಕ್ಷಸಾಃ ಪುರುಷಾದಾಶ್ಚ ಪಿಶಾಚಾಶ್ಚ ಮಹಾಬಲಾಃ |
ಸರ್ವೇ ಸಮೇತ್ಯ ರಾಜಾನಮಭ್ಯಷಿಂಚನ್ ದಶಾನನಮ್ ॥38॥
ನರಮಾಂಸಭಕ್ಷಕರಾದ ರಾಕ್ಷಸರು ಮತ್ತು ಮಹಾಬಲವುಳ್ಳ ಪಿಶಾಚಗಳು ಎಲ್ಲರೂ ಸೇರಿ ರಾವಣನನ್ನು ರಾಜನಾಗಿ ಅಭಿಷೇಕ ಮಾಡಿದರು.
ದಶಗ್ರೀವಶ್ಚ ದೈತ್ಯಾನಾಂ ದೇವಾನಾಂ ಚ ಬಲೋತ್ಕಟಃ |
ಆಕ್ರಮ್ಯ ರತ್ನಾನ್ಯಹರತ್ ಕಾಮರೂಪೀ ವಿಹಂಗಮಃ ॥39॥
ಬಲೋದ್ಧತನಾದ ರಾವಣನು ಕಾಮರೂಪವನ್ನು ಧರಿಸಿ ಆಕಾಶದಲ್ಲಿ ಸಂಚಾರ ಮಾಡುವವನಾಗಿ ತನ್ನ ಪರಾಕ್ರಮದಿಂದ ದೈತ್ಯರ ಮತ್ತು ದೇವತೆಗಳ ರತ್ನಗಳನ್ನು ಅಪಹರಿಸಿದನು.
ರಾವಯಾಮಾಸ ಲೋಕಾನ್ ಯತ್ ತಸ್ಮಾದ್ ರಾವಣ ಉಚ್ಯತೇ |
ದಶಗ್ರೀವಃ ಕಾಮಬಲೋ ದೇವಾನಾಂ ಭಯಮಾದಧತ್ ॥40॥
ಎಲ್ಲ ಲೋಕಗಳನ್ನೂ ಗೋಳಾಡಿಸಿದ್ದರಿಂದ ದಶಗ್ರೀವನಾದ ಅವನಿಗೆ ರಾವಣ ಎಂದು ಹೆಸರು ಬಂದಿತು. ಕಾಮಬಲನಾದ ದಶಗ್ರೀವನು ದೇವತೆಗಳಿಗೆ ಭಯವನ್ನು ಉಂಟು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಖ್ಯಾನಪರ್ವಣಿ ರಾವಣಾದೀನಾಂವರಪ್ರಾಪ್ತಿರ್ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ಮೂರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ನಾಲ್ಕನೆಯ ಅಧ್ಯಾಯ
ರಾವಣನ ಉಪದ್ರವಕ್ಕೆ ಒಳಗಾದ ದೇವತೆಗಳಿಂದ ಬ್ರಹ್ಮದೇವರಲ್ಲಿ ಮೊರೆ. ಬ್ರಹ್ಮದೇವರಿಂದ ರಾಮನಾಗಿ ಅವತಾರ ಮಾಡುವಂತೆ ವಿಷ್ಣುವಿನ ಪ್ರಾರ್ಥನೆ. ಕಪಿಗಳಾಗಿ ಅವತಾರ ಮಾಡಿ ರಾಮನ ಸಹಾಯವನ್ನು ಮಾಡುವಂತೆ ದೇವತೆಗಳಿಗೆ ಪ್ರೇರಣೆ.
ಮಾರ್ಕಂಡೇಯಃ
ತತೋ ಬ್ರಹ್ಮರ್ಷಯಃ ಸರ್ವೇ ಸಿದ್ಧಾ ದೇವರ್ಷಯಸ್ತಥಾ |
ಹವ್ಯವಾಹಂ ಪುರಸ್ಕೃತ್ಯ ಬ್ರಹ್ಮಾಣಂ ಶರಣಂ ಗತಾಃ ॥1॥
ಮಾರ್ಕಂಡೇಯರು ಅನಂತರ ಎಲ್ಲ ಬ್ರಹ್ಮರ್ಷಿಗಳು, ಸಿದ್ಧರು ಮತ್ತು ದೇವರ್ಷಿಗಳು ಅಗ್ನಿಯನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರಿಗೆ ಶರಣಾಗತರಾದರು.
ಅಗ್ನಿಃ
ಯೋಽಸೌ ವಿಶ್ರವಸಃ ಪುತ್ರೋ ದಶಗ್ರೀವೋ ಮಹಾಬಲಃ |

ಅವಧ್ಯೋ ವರದಾನೇನ ಕೃತೋ ಭಗವತಾ ಪುರಾ ॥2॥
ಸ ಬಾಧತೇ ಪ್ರಜಾಃ ಸರ್ವಾ ವಿಪ್ರಕಾರೈರ್ಮಹಾಬಲಃ।
ತತೋ ನಸಸ್ತ್ರಾತು ಭಗವನ್ ನಾನ್ಯಸ್ತತ್ರಾತಾ ಹಿ ವಿದ್ಯತೇ ॥3॥
ಅಗ್ನಿ ವಿಶ್ರವಸನ ಪುತ್ರನಾದ ಮಹಾಬಲನಾದ ದಶಗ್ರೀವನು ಯಾವನಿದ್ದಾನೆಯೋ ಅವನು ಹಿಂದೆ ಪೂಜ್ಯರಾದ ನೀವು ನೀಡಿದ ವರದಾನದಿಂದ ಅವಧ್ಯನಾಗಿ ಎಲ್ಲಾ ಪ್ರಜೆಗಳಿಗೂ ಅಪಕಾರವನ್ನು ಮಾಡಿ ಬಾಧಿಸುತ್ತಿದ್ದಾನೆ. ಪೂಜ್ಯರೇ, ಅವನ ಉಪದ್ರವದಿಂದ ನಮ್ಮನ್ನು ರಕ್ಷಿಸಿ. ನಿಮ್ಮನ್ನು ಬಿಟ್ಟು ನಮಗೆ ಬೇರೆ ರಕ್ಷಕರಿಲ್ಲ.
ಬ್ರಹ್ಮಾ
ನ ಸ ದೇವಾಸುರೈಃ ಶಕ್ಯೋ ಯುದ್ಧೇ ಜೇತುಂ ವಿಭಾವಸೋ।
ವಿಹಿತಂ ತತ್ರ ಯತ್ಕಾರ್ಯಮಭಿತಸ್ತಸ್ಯ ನಿಗ್ರಹಃ ॥4॥
ತದರ್ಥಮವತೀರ್ಣೋಽಸೌ ಮನ್ನಿಯೋಗಾಚ್ಚತುರ್ಭುಜಃ।
ವಿಷ್ಣುಃ ಪ್ರಹರತಾಂ ಶ್ರೇಷ್ಠಃ ಸ ತತ್ಕರ್ಮ ಕರಿಷ್ಯತಿ ॥5॥
ಬ್ರಹ್ಮದೇವರು ಎಲೈ ಅಗ್ನಿಯೇ, ದೇವತೆಗಳಿಂದಲಾಗಲೀ, ಅಸುರರಿಂದಾಗಲೀ ಅವನನ್ನು ಯುದ್ಧದಲ್ಲಿ ಜಯಿಸಲು ಸಾಧ್ಯವಿಲ್ಲ. ಅವನ ನಿಗ್ರಹದ ವಿಷಯದಲ್ಲಿ ಏನು ಮಾಡಬೇಕಾಗಿದೆಯೋ ಅದು ಈಗಾಗಲೇ ವಿಹಿತವಾಗಿದೆ (ಕ್ಲಪ್ತವಾಗಿದೆ). ಅವನ ನಿಗ್ರಹದ ಸಲುವಾಗಿ ನನ್ನ ಪ್ರಾರ್ಥನೆಯಂತೆ ಚತುರ್ಭುಜನಾದ ವಿಷ್ಣುವು ಅವತರಿಸಿದ್ದಾನೆ. ಪ್ರಹಾರಮಾಡುವವರಲ್ಲಿ ಶ್ರೇಷ್ಠನಾದ ಅವನು ಅವನ ನಿಗ್ರಹ ರೂಪವಾದ ಕರ್ಮವನ್ನು ಮಾಡುವನು.
ಮಾರ್ಕಂಡೇಯಃ
ಪಿತಾಮಹಸ್ತತಸ್ತೇಷಾಂ ಸನ್ನಿಧೌ ಶಕ್ರಮಬ್ರವೀತ್।
ಸರ್ವೈರ್ದೇವಗಣೈಃ ಸಾರ್ಧಂ ಸಂಭವ ತ್ವಂ ಮಹೀತಳೇ ॥6॥
ವಿಷ್ಣೋಃ ಸಹಾಯಾನೃಕ್ಷೀಷು ವಾನರೀಷು ಚ ಸರ್ವಶಃ।
ಜನಯಧ್ವಂ ಸುತಾನ್ ವೀರಾನ್ ಕಾಮರೂಪಬಲಾನ್ವಿತಾನ್ ॥7॥
ಮಾರ್ಕಂಡೇಯ ಪಿತಾಮಹರಾದ ಬ್ರಹ್ಮದೇವರು ಅವರೆಲ್ಲರ ಸನ್ನಿಧಿಯಲ್ಲಿ ಇಂದ್ರನನ್ನು ಕುರಿತು ಎಲ್ಲ ದೇವಗಣಗಳ ಜೊತೆಯಲ್ಲಿ ನೀನು ಭೂತಲದಲ್ಲಿ ಅವತರಿಸು. ನೀವು ಹೆಣ್ಣು ಕರಡಿಗಳಲ್ಲಿ ಮತ್ತು ಕಪಿಗಳಲ್ಲಿ ವಿಷ್ಣುವಿಗೆ ಸಹಾಯವನ್ನು ಮಾಡುವ ಕಾಮರೂಪಬಲವನ್ನು ಹೊಂದಿದ ವೀರರಾದ ಪುತ್ರರನ್ನು ಎಲ್ಲರೂ ಪಡೆಯಿರಿ ಎಂದು ಹೇಳಿದರು.
ತೇ ಯಥೋಕ್ತಂ ಭಗವತಾ ತತ್ಪ್ರತಿಶ್ರುತ್ಯ ಶಾಸನಮ್।
ಸಸೃಜುರ್ದೇವಗಂಧರ್ವಾಃ ಪುತ್ರಾನ್ ವಾನರರೂಪಿಣಃ ॥8॥
ತತೋ ಭಾಗಾನುಭಾಗೇನ ದೇವಗಂಧರ್ವಪನ್ನಗಾಃ।
ಅವತರ್ತುಂ ಮಹೀಂ ಸರ್ವೇ ಮಂತ್ರಯಾಮಾಸುರಂಜಸಾ ॥9॥
ಅವರು ಬ್ರಹ್ಮದೇವರ ಶಾಸನದ ವಿಷಯದಲ್ಲಿ ಹಾಗೆಯೇ ಆಗಲಿ ಎಂದು ಪ್ರತಿಜ್ಞೆ ಮಾಡಿ ಆ ದೇವಗಂಧರ್ವ ಸರ್ಪಗಳೆಲ್ಲರೂ ಅಂಶಾಂಶಗಳಿಂದ ಭೂಮಿಯಲ್ಲಿ ಅವತಾರವನ್ನು ಮಾಡಲು ಚೆನ್ನಾಗಿ ಮಂತ್ರಾಲೋಚನೆಯನ್ನು ಮಾಡಿದರು.
ಅವತೇರುರ್ಮಹೀಂ ಸ್ವರ್ಗಾದಂಶೈಶ್ಚ ಸಹಿತಾಃ ಸುರಾಃ।
ಋಷಯಶ್ಚ ಮಹಾತ್ಮಾನಃ ಸಿದ್ಧಾಶ್ಚ ಸಹ ಕಿನ್ನರೈಃ।
ಚಾರಣಾಶ್ಚಾಸೃಜನ್ ಘೋರಾನ್ ವಾನರಾನ್ ವನಚಾರಿಣಃ ॥10॥
ಅನಂತರ ಸ್ವರ್ಗದಿಂದ ಭೂಮಿಗೆ ಬಂದು ದೇವತೆಗಳು ತಮ್ಮ ಅಂಶಗಳಿಂದ ಅವತಾರ ಮಾಡಿದರು. ಮಹಾತ್ಮರಾದ ಋಷಿಗಳೂ, ಸಿದ್ಧರೂ, ಕಿನ್ನರರೂ, ಚಾರಣರೂ ಸಹ ವನಚಾರಿಗಳಾದ ಘೋರರಾದ ವಾನರರನ್ನು ಸೃಷ್ಟಿಸಿದರು.
ಯಸ್ಯ ದೇವಸ್ಯ ಯದ್ರೂಪಂ ವೇಷಸ್ತೇಜಶ್ಚ ಯದ್ವಿಧಮ್।
ಅಜಾಯಂತ ಸಮಾಸ್ತೇನ ತಸ್ಯ ತಸ್ಯ ಸುತಾಸ್ತದಾ ॥11॥
ಯಾವ ದೇವತೆಗೆ ಎಂತಹ ರೂಪ, ಎಂತಹ ಸಾಮರ್ಥ್ಯ ಮತ್ತು ಎಂತಹ ವೇಷವಿದೆಯೋ ಅವನ ಪುತ್ರರೂ ಸಹ ಅದಕ್ಕೆ ಸಮಾನವಾಗಿ ಜನಿಸಿದರು.
ತೇ ಸೃಷ್ಟ್ವಾ ಬಹುಸಾಹಸ್ರಾ ದಶಗ್ರೀವವಧೇ ರತಾಃ।
ಅಪ್ರಮೇಯಬಲಾಃ ಶೂರಾ ವಾನರಾಃ ಕಾಮರೂಪಿಣಃ ॥12॥
ಅನೇಕ ಸಹಸ್ರಸಂಖ್ಯೆಯಲ್ಲಿ ಸೃಷ್ಟಿಸಲ್ಪಟ್ಟ ಅವರು ದಶಗ್ರೀವನ ವಧೆಯಲ್ಲಿ ನಿರತರಾಗಿದ್ದರು. ಅವರೆಲ್ಲರೂ ಅಪ್ರಮೇಯಬಲವುಳ್ಳ ಕಾಮರೂಪಿಗಳಾದ ಶೂರರಾದ ವಾನರರಾಗಿದ್ದರು.
ತೇಷಾಂ ಸಮಕ್ಷಂ ಗಂಧರ್ವೀಂ ದುಂದುಭೀಂ ನಾಮ ನಾಮತಃ।
ಶಶಾಸ ವರದೋ ದೇವೋ ಗಚ್ಛ ಕಾರ್ಯಾರ್ಥಸಿದ್ಧಯೇ ॥13॥
ವರಪ್ರದರಾದ ಬ್ರಹ್ಮದೇವರು ಅವರ ಎದುರಿನಲ್ಲಿಯೇ ದುಂಧುಬಿ ಎಂಬ ಗಂಧರ್ವಸ್ತ್ರೀಯನ್ನು ಕಾರ್ಯಸಿದ್ಧಿಗಾಗಿ ಭೂಲೋಕಕ್ಕೆ ಹೋಗು ಎಂದು ಆಜ್ಞೆ ಮಾಡಿದರು.
ಪಿತಾಮಹವಚಃ ಶ್ರುತ್ವಾ ಗಂಧರ್ವೀ ದುಂದುಭೀ ತತಃ।
ಮಂಥರಾ ಮಾನುಷೇ ಲೋಕೇ ಕುಬ್ಜಾ ಸಮಭವತ್ ತದಾ ॥14॥
ಬ್ರಹ್ಮದೇವರ ಮಾತನ್ನು ಕೇಳಿದ ದುಂದುಭೀ ಎಂಬ ಗಂಧರ್ವಿಯು ಆಗ ಮನುಷ್ಯ ಲೋಕದಲ್ಲಿ ಮಂಥರೆ ಎಂಬ ಹೆಸರಿನಿಂದ ಕುಬ್ಜೆಯಾಗಿ ಜನಿಸಿದಳು.

ಶಕ್ರಪ್ರಭೃತಯಶ್ಚೈವ ಸರ್ವೇ ತೇ ಸುರಸತ್ತಮಾಃ |
ವಾನರರ್ಕ್ಷವರಸ್ತ್ರೀಷು ಜನಯಾಮಾಸುರಾತ್ಮಜಾನ್ ||15||
ಇಂದ್ರ ಮೊದಲಾದ ಶ್ರೇಷ್ಠದೇವತೆಗಳೆಲ್ಲರೂ ವಾನರಋಕ್ಷ ಸ್ತ್ರೀಯರಲ್ಲಿ ಮಕ್ಕಳನ್ನು ಪಡೆದರು.
ಭೇತ್ತಾರೋ ಗಿರಿಶೃಂಗಾಣಾಂ ಶಾಲತಾಳಶಿಲಾಯುಧಾಃ |
ವಜ್ರಸಂಹನನಾಃ ಸರ್ವೇ ಸರ್ವೇ ಚೌಘಬಲಾಸ್ತಥಾ ||16||
ಅವರೆಲ್ಲರೂ ಗಿರಿಶಿಖರಗಳನ್ನು ಭೇದಿಸುವವರು. ಸಾಲವೃಕ್ಷಗಳನ್ನೂ, ಶಿಲೆಗಳನ್ನೂ ಆಯುಧವನ್ನಾಗಿ ಉಳ್ಳವರು. ವಜ್ರಶರೀರರು ಮತ್ತು ಪ್ರವಾಹದ ಬಲವುಳ್ಳವರು.
ತೇಽನ್ವವರ್ತನ್ ಪಿತೄನ್ ಸರ್ವೇ ಯಶಸಾ ಚ ಬಲೇನ ಚ |
ಕಾಮವೀರ್ಯಬಲಾಶ್ಚೈವ ಸರ್ವೇ ಯುದ್ಧ ವಿಶಾರದಾಃ ||17||
ಅವರೆಲ್ಲರೂ ಯಶಸ್ಸಿನಿಂದಲೂ ಮತ್ತು ಬಲದಿಂದಲೂ ತಮ್ಮ ತಮ್ಮ ಪಿತೃಗಳನ್ನು ಅನುಸರಿಸಿದರು. ಎಲ್ಲರೂ ಕಾಮವೀರ್ಯಬಲವುಳ್ಳವರು ಮತ್ತು ಯುದ್ಧದಲ್ಲಿ ವಿಶಾರದರು.
ನಾಗಾಯುತಸಮಪ್ರಾಣಾ ವಾಯುವೇಗಸಮಾ ಜವೇ |
ಯಥೇಚ್ಛಕನಿವಾಸಾಶ್ಚ ಕೇಚಿದತ್ರ ವನೌಕಸಃ ||18||
ಹತ್ತುಸಹಸ್ರ ಆನೆಯಬಲವುಳ್ಳವರು. ವೇಗದಲ್ಲಿ ವಾಯುವೇಗಕ್ಕೆ ಸಮಾನರಾದವರು. ತಮ್ಮ ಇಚ್ಛೆಬಂದ ಕಡೆಯಲ್ಲಿ ನಿವಾಸ ಮಾಡುವವರು ಮತ್ತು ಕೆಲವರು ವನವಾಸಿಗಳು.
ಏವಂ ವಿಧಾಯ ತತ್ಸರ್ವಂ ಭಗವಾನ್ ಲೋಕಭಾವನಃ |
ಮಂಥರಾಂ ಬೋಧಯಾಮಾಸ ಯದ್ಯತ್ಕಾರ್ಯಂ ಯಥಾ ಯಥಾ ||
ಬ್ರಹ್ಮದೇವರು ಹೀಗೆ ಎಲ್ಲವನ್ನೂ ವ್ಯವಸ್ಥೆಗೊಳಿಸಿ ಮುಂದೆ ಮಾಡಬೇಕಾದ ಕಾರ್ಯದ ವಿಷಯದಲ್ಲಿ ಮಂಥರೆಗೆ ತಿಳುವಳಿಕೆಯನ್ನು ನೀಡಿದರು.
ಸಾ ತದ್ವಚಃ ಸಮಾಜ್ಞಾಯ ತಥಾ ಚಕ್ರೇ ಮನೋಜವಾ |
ಇತಶ್ಚೇತಶ್ಚ ಗಚ್ಛಂತೀ ವೈರಸಂಧುಕ್ಷಣೇ ರತಾ ||20||
ಮನೋಜವವನ್ನು ಹೊಂದಿದ ಮಂಥರೆಯು ಬ್ರಹ್ಮದೇವರ ಮಾತನ್ನು ತಿಳಿದು ಅದರಂತೆಯೇ ಇಲ್ಲಿಂದಲ್ಲಿಗೆ ಸಂಚರಿಸುತ್ತಾ ವೈರವನ್ನು ಉಂಟುಮಾಡುವ ಕಾರ್ಯವನ್ನು ಮಾಡಿದಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||
|| ಇತಿ ರಾಮೋಪಖ್ಯಾನಪರ್ವಣಿ ವಾನರಾದ್ಯುಪ್ಪತ್ತಿರ್ನಾಮ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ತೈದನೆಯ ಅಧ್ಯಾಯ
ರಾಮನ ಪಟ್ಟಾಭಿಷೇಕದ ಸಿದ್ಧತೆ. ಮಂಥರೆಯ ಕುತಂತ್ರ. ರಾಮನ ವನಗಮನ.
ಯುಧಿಷ್ಠಿರಃ
ಉಕ್ತಂ ಭಗವತಾ ಜನ್ಮ ರಾಮಾದೀನಾಂ ಪೃಥಕ್ಪೃಥಕ್|
ಪ್ರಸ್ಥಾನಶಮನೇ ಬ್ರಹ್ಮಚ್ಛ್ರೋತುಮಿಚ್ಛಾಮಿ ಕಥ್ಯತಾಮ್ ||1||
ಯುಧಿಷ್ಠಿರ ಪೂಜ್ಯರಾದ ನೀವು ರಾಮಾದಿಗಳ ಜನ್ಮವನ್ನು ಪ್ರತ್ಯೇಕವಾಗಿ ಹೇಳಿದ್ದೀರಿ. ಬ್ರಾಹ್ಮಣಶ್ರೇಷ್ಠರೇ, ರಾಮನ ವನವಾಸವನ್ನೂ ಮತ್ತು ಭರತಶತ್ರುಘ್ನರ ರಾಜ್ಯದಲ್ಲಿ ಸ್ಥಿತಿಯನ್ನೂ ಕೇಳಲು ಬಯಸುತ್ತೇನೆ. ಅದನ್ನು ತಿಳಿಸಿ.
ಜನ್ಮಾದಿ ಚರಿತಂ ಸರ್ವಂ ವಿವಾಹಾದಿ ಮಯಾ ಶ್ರುತಮ್ |
ಕಥಂ ದಾಶರಥೀ ವೀರೌ ಭ್ರಾತರೌ ರಾಮಲಕ್ಷ್ಮಣೌ |
ಸಂಪ್ರಸ್ಥಿತೌ ವನೇ ಬ್ರಹ್ಮನ್ ಮೈಥಿಲೀ ಚ ಯಶಸ್ವಿನೀ ||2||
ರಾಮನ ಜನ್ಮ, ವಿವಾಹಾದಿಗಳು ಎಲ್ಲವನ್ನೂ ನಾನು ಕೇಳಿದ್ದೇನೆ. ಬ್ರಾಹ್ಮಣರೇ, ದಶರಥ ಪುತ್ರರಾದ ಸಹೋದರರಾದ ವೀರರಾದ ರಾಮಲಕ್ಷ್ಮಣರು ಹೇಗೆ ಕಾಡಿಗೆ ಹೋದರು. ಯಶಸ್ವಿನಿಯಾದ ಜಾನಕಿಯೂ ಸಹ ಹೇಗೆ ಕಾಡಿಗೆ ಹೋದಳು?
ಮಾರ್ಕಂಡೇಯಃ
ಜಾತಪುತ್ರೋ ದಶರಥಃ ಪ್ರೀತಿಮಾನಭವನ್ನೃಪ |
ಕ್ರಿಯಾರತಿರ್ಧರ್ಮರತಃ ಸತತಂ ವೃದ್ಧಸೇವಿತಾ ||3||
ಮಾರ್ಕಂಡೇಯರು ಎಲೈ ರಾಜನೇ, ದಶರಥನು ಪುತ್ರರನ್ನು ಪಡೆದು ಸಂತೋಷಯುಕ್ತನಾದನು. ಸತ್ಕರ್ಮನಿರತನೂ, ಧರ್ಮನಿರತನೂ, ಸತತವೂ ಹಿರಿಯರನ್ನು ಸೇವಿಸುವವನೂ ಆದನು.
ವೃಷ್ಟಿರ್ಜಯಂತೋ ವಿಜಯಃ ಸಿದ್ಧಾರ್ಥೋ ರಾಷ್ಟ್ರವರ್ಧನಃ |
ಅಶೋಕೋ ಧರ್ಮಪಾಲಶ್ಚ ಸುಮಂತ್ರಶ್ಚಾಷ್ಟಮೋಽಭವತ್ ||4||
ದಶರಥನಿಗೆ ವೃಷ್ಟಿ, ಜಯಂತ, ಸಿದ್ಧಾರ್ಥ, ರಾಷ್ಟ್ರವರ್ಧನ, ಅಶೋಕ, ಧರ್ಮಪಾಲ, ಸುಮಂತ್ರನೆಂಬ ಎಂಟು ಜನ ಅಮಾತ್ಯರಿದ್ದರು.
ಕ್ರಮೇಣ ಚಾಸ್ಯ ತೇ ಪುತ್ರಾ ವ್ಯವರ್ಧಂತ ಮಹೌಜಸಃ |
ವೇದೇಷು ಸರಹಸ್ಯೇಷು ಧನುರ್ವೇದೇಷು ಪಾರಗಾಃ ||5||

ದಶರಥನ ಮಕ್ಕಳೆಲ್ಲರೂ ಕ್ರಮವಾಗಿ ಸರಹಸ್ಯವಾದ ವೇದಗಳಲ್ಲಿಯೂ, ಧನುರ್ವೇದಗಳಲ್ಲಿಯೂ ಪಾರಂಗತರಾಗಿ ಮಹಾಬಲಶಾಲಿಗಳಾಗಿ ಬೆಳೆದರು.
ಚರಿತಬ್ರಹ್ಮಚರ್ಯಾಸ್ತೇ ಕೃತದಾರಾಶ್ಚ ಪಾರ್ಥಿವ |
ಯದಾ ತದಾ ದಶರಥಃ ಪ್ರೀತಿಮಾನಭವತ್ ಸುಖೀ ॥6॥
ಎಲೈ ರಾಜನೇ, ಅವರು ಬ್ರಹ್ಮಚರ್ಯವ್ರತವನ್ನು ಮುಗಿಸಿ ವಿವಾಹವನ್ನು ಮಾಡಿಕೊಂಡ ಮೇಲೆ ದಶರಥನು ಸಂತೋಷದಿಂದ ಕೂಡಿದವನಾದನು.
ಜ್ಯೇಷ್ಠೋ ರಾಮೋಽಭವತ್ ತೇಷಾಂ ರಮಯಾಮಾಸ ಹಿ ಪ್ರಜಾಃ |
ಮನೋಹರತಯಾ ಧೀಮಾನ್ ಪಿತುರ್ಹೃದಯನಂದನಃ ॥7॥
ಅವರಲ್ಲಿ ಜ್ಯೇಷ್ಠನಾದ ರಾಮನು ಪ್ರಜೆಗಳನ್ನು ಸಂತೋಷಪಡಿಸಿದನು. ಅವನು ಮನೋಹರನೂ, ಮೇಧಾವಿಯೂ, ತಂದೆಯ ಮನಸ್ಸಿಗೆ ಬಹಳ ಸಂತೋಷವನ್ನು ಕೊಡುವವನೂ ಆಗಿದ್ದನು.
ತತಃ ಸ ರಾಜಾ ಮತಿಮಾನ್ ಮತ್ವಾಽಽತ್ಮಾನಂ ವಯೋಽಧಿಕಮ್ |
ಮಂತ್ರಯಾಮಾಸ ಸಚಿವೈರ್ಧರ್ಮಜ್ಞೈಶ್ಚ ಪುರೋಹಿತೈಃ ॥8॥
ಅನಂತರ ಆ ಮೇಧಾವಿಯಾದ ರಾಜನು ತನ್ನನ್ನು ವಯಸ್ಸಾದವನೆಂದು ತಿಳಿದು ಧರ್ಮಜ್ಞರಾದ ಪುರೋಹಿತರ ಮತ್ತು ಸಚಿವರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿದನು.
ಅಭಿಷೇಕಾಯ ರಾಮಸ್ಯ ಯೌವರಾಜ್ಯೇನ ಭಾರತ |
ಪ್ರಾಪ್ತಕಾಲಂ ಚ ತೇ ಸರ್ವೇ ಮೇನಿರೇ ಮಂತ್ರಿಸತ್ತಮಾಃ ॥9॥
ಎಲೈ ಭಾರತನೇ, ಆ ಮಂತ್ರಿಶ್ರೇಷ್ಠರೆಲ್ಲರೂ ರಾಮನಿಗೆ ಯುವರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಲು ಯೋಗ್ಯವಾದ ಕಾಲವು ಬಂದಿದೆ ಎಂದು ಹೇಳಿದರು.
ಲೋಹಿತಾಕ್ಷಂ ಮಹಾಬಾಹುಂ ಮತ್ತಮಾತಂಗಮಿನಮ್ |
ದೀರ್ಘಬಾಹುಂ ಮಹೋರಸ್ಕಂ ನೀಲಕುಂಚಿತಮೂರ್ಧಜಮ್ ॥10॥
ದೀಪ್ಯಮಾನಂ ಶ್ರಿಯಾ ವೀರಂ ಶಕ್ರಾದನವರಂ ರಣೇ |
ಪಾರಗಂ ಸರ್ವಧರ್ಮಾಣಾಂ ಬೃಹಸ್ಪತಿಸಮಂ ಮತೌ ॥11॥
ಸರ್ವಾನುರಕ್ತಪ್ರಕೃತಿಂ ಸರ್ವವಿದ್ಯಾವಿಶಾರದಮ್ |
ಜಿತೇಂದ್ರಿಯಮಮಿತ್ರಾಣಾಮಪಿ ದೃಷ್ಟಿಮನೋಹರಮ್ ॥12॥
ನಿಯಂತಾರಮಸಾಧೂನಾಂ ಗೋಪ್ತಾರಂ ಧರ್ಮಚಾರಿಣಾಮ್ |
ಧೃತಿಮಂತಮನಾಧೃಷ್ಯಂ ಜೇತಾರಮಪರಾಜಿತಮ್ ॥13॥
ಪುತ್ರಂ ರಾಜಾ ದಶರಥಃ ಕೌಸಲ್ಯಾನಂದವರ್ಧನಮ್ |
ಸಂದೃಶ್ಯ ಪರಮಾಂ ಪ್ರೀತಿಮಗಚ್ಛತ್ ಕುರುನಂದನ ॥14॥
ಲೋಹಿತಾಕ್ಷನೂ, ಮಹಾಬಾಹುವೂ, ಮತ್ತಗಜಗಮನನೂ, ದೀರ್ಘಬಾಹುವೂ, ಮಹಾವಕ್ಷಸ್ಸ್ಥಲವನ್ನು ಹೊಂದಿದವನೂ, ಕಪ್ಪಾದ ಗುಂಗುರುಕೂದಲುಳ್ಳವನೂ, ಕಾಂತಿಯಿಂದ ಬೆಳಗುವವನೂ, ವೀರನೂ, ಯುದ್ಧದಲ್ಲಿ ಇಂದ್ರನಿಗಿಂತ ಕಡಿಮೆಯಲ್ಲದವನೂ, ಎಲ್ಲ ಧರ್ಮದಲ್ಲಿ ಪಾರಂಗತನಾದವನೂ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮನಾದವನೂ, ಎಲ್ಲ ಪ್ರಜೆಗಳಲ್ಲಿ ಅನುರಾಗವನ್ನು ಸಂಪಾದಿಸಿದವನೂ, ಸರ್ವವಿದ್ಯಾವಿಶಾರದನೂ, ಜಿತೇಂದ್ರಿಯನೂ, ಶತ್ರುಗಳ ದೃಷ್ಟಿಗೂ ಮನೋಹರವಾಗಿ ಕಾಣುವವನೂ, ದುಷ್ಟರನ್ನು ನಿಯಂತ್ರಿಸುವವನೂ, ಧರ್ಮಾಚರಣೆಯನ್ನು ಮಾಡುವವರನ್ನು ರಕ್ಷಿಸುವವನೂ, ಧೈರ್ಯವಂತನೂ, ಯಾರಿಗೂ ಸೋಲದವನೂ, ಎಲ್ಲರನ್ನೂ ಗೆಲ್ಲುವವನೂ, ಅಪರಾಜಿತನೂ, ಕೌಸಲ್ಯಾನಂದವರ್ಧನನೂ ಆದ ಪುತ್ರನನ್ನು ನೋಡಿ ಎಲೈ ಕುರುನಂದನನೇ, ದಶರಥನು ಪರಮಸಂತೋಷವನ್ನು ಹೊಂದಿದನು.
ಚಿಂತಯಂಶ್ಚ ಮಹಾತೇಜಾ ಗುಣಾನ್ ರಾಮಸ್ಯ ವೀರ್ಯವಾನ್ |
ಅಭ್ಯಭಾಷತ ಭದ್ರಂ ತೇ ಪ್ರೀಯಮಾಣಃ ಪುರೋಹಿತಮ್ ॥15॥
ಕುರುನಂದನನೇ, ನಿನಗೆ ಮಂಗಳವಾಗಲಿ. ಮಹಾತೇಜಸ್ವಿಯೂ, ಪರಾಕ್ರಮಶಾಲಿಯೂ ಆದ ಅವನು ರಾಮನ ಗುಣಗಳನ್ನು ಚಿಂತಿಸುತ್ತಾ ಸಂತೋಷಪಡುತ್ತಾ ಪುರೋಹಿತನನ್ನು ಕರೆದು ಹೇಳಿದನು.
ಅದ್ಯ ಪುಷ್ಯೋ ನಿಶಿ ಬ್ರಹ್ಮನ್ ಪುಣ್ಯಂ ಯೋಗಮುಪೈಷ್ಯತಿ |
ಸಂಭಾರಾಃ ಸಂಭ್ರಿಯಾಂತಾಂ ವೈ ರಾಮಶ್ಚೋಪನಿಮಂತ್ರ್ಯತಾಮ್ ॥
ಬ್ರಾಹ್ಮಣನೇ, ಈ ರಾತ್ರಿಯಲ್ಲಿ ಪವಿತ್ರವಾದ ಪುಷ್ಯಯೋಗವು ಉಂಟಾಗುವುದು. ಎಲ್ಲ ಸಲಕರಣೆಗಳನ್ನು ಸಿದ್ಧಪಡಿಸಿ ರಾಮನನ್ನು ಆಮಂತ್ರಿಸಿ.
ಶ್ವ ಏವ ಪುಷ್ಯೋ ಭವಿತಾ ಯತ್ರ ರಾಮಃ ಸುತೋ ಮಯಾ |
ಯೌವರಾಜ್ಯೇಽಭಿಷೇಕ್ತವ್ಯಃ ಪೌರೈಶ್ಚ ಸಹ ಮಂತ್ರಿಭಿಃ ॥17॥
ನಾಳೆಯೇ ಪುಷ್ಯನಕ್ಷತ್ರವು ಬರುವುದು. ಅದರಲ್ಲಿ ಪೌರರಿಂದಲೂ ಮತ್ತು ಮಂತ್ರಿಗಳಿಂದಲೂ ಸೇರಿ ರಾಮನು ಯೌವರಾಜ್ಯದಲ್ಲಿ ಅಭಿಷೇಕವನ್ನು ಹೊಂದಬೇಕು.
ಇತಿ ತದ್ ರಾಜವಚನಂ ಪ್ರತಿಶ್ರುತ್ಯಾಥ ಮಂಥರಾ |
ಕೈಕೇಯೀಮಭಿಗಮ್ಯೇದಂ ಕಾಲೇ ವಚನಮಬ್ರವೀತ್ ॥18॥
ರಾಜನ ಈ ವಚನವನ್ನು ಕೇಳಿದ ಮಂಥರೆಯು ಆಗ ಕೈಕೇಯಿಯ ಸಮೀಪಕ್ಕೆ ಬಂದು ಯೋಗ್ಯವಾದ ಕಾಲದಲ್ಲಿ ಈ ಮಾತನ್ನು

ಆಡಿದಳು.
ಅದ್ಯ ಕೈಕೇಯಿ ದೌರ್ಭಾಗ್ಯಂ ರಾಜ್ಞಾ ತೇ ಖ್ಯಾಪಿತಂ ಮಹತ್ |
ಆಶೀವಿಷಸಶತ್ವಂ ಸಂಕ್ರುದ್ಧಶ್ಚಂಡೋ ದಶತಿ ದುರ್ಭಗೇ ॥19॥
ಕೈಕೇಯಿಯೇ ಇವತ್ತು ರಾಜನು ನಿನಗೆ ದೊಡ್ಡ ದೌರ್ಭಾಗ್ಯವನ್ನು ಪ್ರಕಟಿಸಿದ್ದಾನೆ. ಎಲೌ ದೌರ್ಭಾಗ್ಯಶಾಲಿನಿಯೇ ಕ್ರುದ್ಧವಾದ ಭಯಂಕರವಾದ ಸರ್ಪವು ನಿನ್ನನ್ನು ಕಚ್ಚುತ್ತಿದೆ.
ಸುಭಗಾ ಖಲು ಕೌಸಲ್ಯಾ ಯಸ್ಯಾಃ ಪುತ್ರೋಽಭಿಷೇಕ್ಷ್ಯತೇ |
ಕುತೋ ಹಿ ತವ ಸೌಭಾಗ್ಯಂ ಯಸ್ಯಾಃ ಪುತ್ರೋ ನ ರಾಜ್ಯಭಾಕ್ ॥20॥
ಕೌಸಲ್ಯೆಯು ಭಾಗ್ಯವತಿ. ಏಕೆಂದರೆ ಅವಳ ಮಗನು ಅಭಿಷಿಕ್ತನಾಗುವನು. ನಿನ್ನ ಮಗನಿಗೆ ರಾಜ್ಯವು ಬರದಿದ್ದ ಮೇಲೆ ನಿನಗೆ ಎಲ್ಲಿಂದ ಸೌಭಾಗ್ಯವು ಬರಬೇಕು?
ಸಾ ತದ್ವಚನಮಾಜ್ಞಾಯ ಸರ್ವಾಭರಣಭೂಷಿತಾ |
ದೇವೀ ವಿಲಗ್ನಮಧ್ಯೇವ ಬಿಭ್ರತೀ ರೂಪಮುತ್ತಮಮ್ ॥21॥
ವಿವಿಕ್ತೇ ಪತಿಮಾಸಾದ್ಯ ಹಸಂತೀವ ಶುಚಿಸ್ಮಿತಾ |
ಪ್ರಣಯಂ ವ್ಯಂಜಯಂತೀವ ಮಧುರಂ ವಾಕ್ಯಮಬ್ರವೀತ್ ॥22॥
ಕೈಕೇಯಿಯು ಆ ಮಾತನ್ನು ಕೇಳಿ ಸರ್ವಾಭರಣಭೂಷಿತಳಾಗಿ ಸುಂದರಿಯಂತಹ ಶ್ರೇಷ್ಠರೂಪವನ್ನು ಧರಿಸಿ, ಏಕಾಂತದಲ್ಲಿ ಪತಿಯನ್ನು ಸಮೀಪಿಸಿ ನಗುವವಳಂತೆ ಒಳ್ಳೆಯ ನಗುವನ್ನು ನಟಿಸಿ, ಪ್ರೀತಿಯನ್ನು ತೋರಿಸುವವಳಂತೆ ಮಧುರವಾಗಿ ಮಾತನಾಡಿದಳು.
ಸತ್ಯಪ್ರತಿಜ್ಞ ಯನ್ಮೇ ತ್ವಂ ಕಾಮಮೇಕಂ ನಿಸೃಷ್ಟವಾನ್ |
ಉಪಾಕುರುಷ್ವ ತದ್ರಾಜಂಸ್ತಸ್ಮಾನ್ಮುಚ್ಯಸ್ವ ಸಂಕಟಾತ್ |
ತದದ್ಯ ಕುರು ಸತ್ಯಂ ಮೇ ವರಂ ವರದ ಭೂಪತೇ ॥23॥
ಸತ್ಯಪ್ರತಿಜ್ಞನೇ, ನೀನು ನನಗೆ ಒಂದು ವರವನ್ನು ಕೊಟ್ಟಿದ್ದಿಯಷ್ಟೆ? ಅದನ್ನು ಈಗ ನೀಡಿ ಸಂಕಟದಿಂದ ಪಾರಾಗುವವನಾಗು. ಎಲೈ ಭೂಪತಿಯೇ, ವರದನೇ, ಆ ದಿನ ಆಡಿದ ಮಾತನ್ನು ಸತ್ಯವನ್ನಾಗಿ ಮಾಡು.
ದಶರಥಃ
ವರಂ ದದಾನಿ ತೇ ಹಂತ ತದ್ಗೃಹಾಣ ಯದಿಚ್ಛಸಿ |
ಅಬಧ್ಯೋ ಬಧ್ಯತಾಂ ಕೋಽದ್ಯ ಬಧ್ಯಃ ಕೋಽದ್ಯ ವಿಮುಚ್ಯತಾಮ್ ॥
ಧನಂ ದದಾನಿ ಕಸ್ಯಾದ್ಯ ಹ್ರಿಯತಾಂ ಕಸ್ಯ ವಾ ಪುನಃ |
ಬ್ರಾಹ್ಮಣಸ್ವಾದಿಹಾನ್ಯತ್ರ ಯತ್ಕಿಂಚಿದ್ ವಿತ್ತಮಸ್ತಿ ಮೇ ॥25॥
ದಶರಥ ಸಂತೋಷ. ನಿನಗೆ ವರವನ್ನು ಕೊಡುವೆನು. ಬೇಕಾದ ವರವನ್ನು ಕೇಳು. ಅವಧ್ಯನಾದ ಯಾವನನ್ನು ವಧೆ ಮಾಡಬೇಕು? ವಧ್ಯನಾದ ಯಾವನನ್ನು ಬಿಡುಗಡೆ ಮಾಡಬೇಕು? ಈ ದಿನ ಯಾರಿಗೆ ಧನವನ್ನು ಕೊಡಬೇಕು? ಅಥವಾ ಯಾವ ಧನವನ್ನು ಅಪಹರಿಸಬೇಕು?ಬ್ರಾಹ್ಮಣನ ಧನವನ್ನು ಬಿಟ್ಟು ಇಲ್ಲಿ ಮತ್ತು ಬೇರೆ ಕಡೆಯಲ್ಲಿ ನನಗೆ ಎಷ್ಟು ಧನವಿದೆಯೋ ಅವೆಲ್ಲವೂ ನಿನ್ನದೇ? (ಎಂದು ಹೇಳಿದನು).
ಮಾರ್ಕಂಡೇಯಃ
ಸಾ ತದ್ವಚನಮಾಜ್ಞಾಯ ಪರಿಗೃಹ್ಯ ನರಾಧಿಪಮ್ |
ಆತ್ಮನೋ ಬಲಮಾಜ್ಞಾಯ ತತ ಏನಮುವಾಚ ಹ ॥26॥
ಮಾರ್ಕಂಡೇಯ ಅವಳು ಆ ಮಾತುಗಳನ್ನು ಕೇಳಿ ತನ್ನ ಬಲವನ್ನು ತಿಳಿದು ರಾಜನನ್ನು ಹಿಡಿದು ಅವನನ್ನು ಕುರಿತು ಹೀಗೆ ಮಾತನಾಡಿದಳು.
ಕೈಕೇಯೀ
ಆಭಿಷೇಚನಿಕಂ ಯತ್ ತೇ ರಾಮಾರ್ಥಮುಪಕಲ್ಪಿತಮ್ |
ಭರತಸ್ತದವಾಪ್ನೋತು ವನಂ ಗಚ್ಛತು ರಾಘವಃ ॥27॥
ನವಪಂಚ ಚ ವರ್ಷಾಣಿ ದಂಡಕಾರಣ್ಯಮಾಶ್ರಿತಃ |
ಚೀರಾಜಿನಜಟಾಧಾರೀ ರಾಮೋ ಭವತು ತಾಪಸಃ ॥28॥
ಕೈಕೇಯೀ ನೀನು ರಾಮನ ಅಭಿಷೇಕಕ್ಕಾಗಿ ಏನು ಅಣಿಗೊಳಿಸಿದ್ದೀಯೋ ಅದರಿಂದ ಭರತನು ಅಭಿಷಿಕ್ತನಾಗಲಿ. ರಾಮನು ಕಾಡಿಗೆ ಹೋಗಲಿ. ಹದಿನಾಲ್ಕು ವರ್ಷಗಳ ಕಾಲ ದಂಡಕಾರಣ್ಯವಾಸಿಯಾಗಿ ನಾರುಮಡಿ, ಕೃಷ್ಣಾಜಿನ ಮತ್ತು ಜಟೆಯನ್ನು ಧರಿಸಿದವನಾಗಿ ರಾಮನು ತಾಪಸನಾಗಲಿ.
ಮಾರ್ಕಂಡೇಯಃ
ಸ ತದ್ರಾಜಾ ವಚಃ ಶ್ರುತ್ವಾ ವಿಪ್ರಿಯಂ ದಾರುಣೋದಯಮ್ |
ದುಃಖಾರ್ತೋ ಭರತಶ್ರೇಷ್ಠ ನ ಕಿಂಚಿದ್ ವ್ಯಾಜಹಾರ ಹ ॥29॥
ಮಾರ್ಕಂಡೇಯರು ಎಲೈ ಭರತಶ್ರೇಷ್ಠನೇ, ಆ ರಾಜನು ಅಪ್ರಿಯವಾದ ದಾರುಣಫಲವನ್ನು ಹೊಂದಿದ ಆ ಮಾತನ್ನು ಕೇಳಿ ದುಃಖಾರ್ತನಾಗಿ ಏನೂ ಮಾತನಾಡಲಿಲ್ಲ.
ತತಸ್ತಥೋಕ್ತಂ ಪಿತರಂ ರಾಮೋ ವಿಜ್ಞಾಯ ವೀರ್ಯವಾನ್ |
ವನಂ ಪ್ರತಸ್ಥೇ ಧರ್ಮಾತ್ಮಾ ರಾಜಾ ಸತ್ಯೋ ಭವತ್ವಿತಿ ॥30॥

ಆಗ ತಂದೆಯು ಹಾಗೆ ಮಾತನಾಡಿರುವುದನ್ನು ತಿಳಿದ ಧೀರನಾದ ಮತ್ತು ಧರ್ಮಾತ್ಮನಾದ ರಾಮನು ರಾಜನ ಮಾತು ಸತ್ಯವಾಗಲಿ ಎಂದು ಕಾಡಿಗೆ ಹೊರಟನು.
ತಮನ್ವಗಚ್ಛಲ್ಲಕ್ಷ್ಮೀವಾನ್ ಧನುಷ್ಮಾಂಲ್ಲಕ್ಷ್ಮಣಸ್ತದಾ |
ಸೀತಾ ಚ ಭಾರ್ಯಾ ಭದ್ರಂ ತೇ ವೈದೇಹೀ ಜನಕಾತ್ಮಜಾ ॥31॥
ಕಾಂತಿಯುಕ್ತನಾದ ಧನುರ್ಧಾರಿಯಾದ ಲಕ್ಷ್ಮಣನೂ ಅವನನ್ನು ಹಿಂಬಾಲಿಸಿದನು. ನಿನಗೆ ಮಂಗಳವಾಗಲಿ.
ವಿದೇಹರಾಜಕುಮಾರಿಯಾದ ಅವನ ಪತ್ನಿಯಾದ ಸೀತೆಯೂ ಹಿಂಬಾಲಿಸಿದಳು.
ತತೋ ವನಂ ಗತೇ ರಾಮೇ ರಾಜಾ ದಶರಥಸ್ತದಾ |
ಸಮಯುಜ್ಯತ ಧರ್ಮಾತ್ಮಾ ಕಾಲಪರ್ಯಾಯಧರ್ಮಣಾ ॥32॥
ರಾಮನು ಕಾಡಿಗೆ ಹೋಗುತ್ತಿರಲು ಧರ್ಮಾತ್ಮನಾದ ದಶರಥರಾಜನು ಕಾಲಧರ್ಮವನ್ನು ಹೊಂದಿದನು.
ರಾಮಂ ತು ಗತಮಾಜ್ಞಾಯ ರಾಜಾನಂ ಚ ತಥಾಗತಮ್ |
ಆನಾಯ್ಯ ಭರತಂ ದೇವೀ ಕೈಕೇಯೀ ವಾಕ್ಯಮಬ್ರವೀತ್ ॥33॥
ರಾಮನು ಕಾಡಿಗೆ ಹೋದುದನ್ನು ಮತ್ತು ದಶರಥನು ವಿಪನ್ನನಾದುದನ್ನು ತಿಳಿದ ಕೈಕೇಯಿಯು ಭರತನನ್ನು ಕರೆಸಿ ಅವನಿಗೆ ಈ ಮಾತನ್ನು ಹೇಳಿದಳು.
ಗತೋ ದಶರಥಃ ಸ್ವರ್ಗಂ ವನಸ್ಥೌ ರಾಮಲಕ್ಷ್ಮಣೌ |
ಗೃಹಾಣ ರಾಜ್ಯಂ ವಿಪುಲಂ ಕ್ಷೇಮಂ ನಿಹತಕಂಟಕಮ್ ॥34॥
ದಶರಥನು ಸ್ವರ್ಗಸ್ಥನಾದನು. ರಾಮಲಕ್ಷ್ಮಣರು ಕಾಡಿನಲ್ಲಿದ್ದಾರೆ. ಕ್ಷೇಮವಾದ ಶತ್ರುರಹಿವಾದ ಈ ವಿಪುಲವಾದ ರಾಜ್ಯವನ್ನು ನೀನು ಹೊಂದುವವನಾಗು.
ಮಾರ್ಕಂಡೇಯಃ
ತಾಮುವಾಚ ಸ ಧರ್ಮಾತ್ಮಾ ನೃಶಂಸಂ ಬತ ತೇ ಕೃತಮ್ |
ಪತಿಂ ಹತ್ವಾ ಕುಲಂ ಚೇದಮುತ್ಸಾದ್ಯ ಧನಲುಬ್ಧಯಾ ॥35॥
ಅಯಶಃ ಪಾತಯಿತ್ವಾ ಮೇ ಮೂರ್ಧ್ನಿ ತ್ವಂ ಕುಲಪಾಂಸನೇ |
ಸಕಾಮಾ ಭವ ಮೇ ಮಾತರಿತ್ಯುಕ್ತ್ವಾ ಪ್ರರುರೋದ ಹ ॥36॥
ಮಾರ್ಕಂಡೇಯರು ಧರ್ಮಾತ್ಮನಾದ ಭರತನು ಅವಳನ್ನು ಕುರಿತು ಧನಲೋಭಿಯಾದ ನೀನು ಪತಿಯನ್ನು ಕೊಂದು ಈ ಕುಲವನ್ನು ವಿನಾಶಮಾಡಿ ಕ್ರೂರಕರ್ಮವನ್ನು ಮಾಡಿದ್ದೀಯೆ. ಎಲೌ ಕುಲನಾಶಿನಿಯೇ, ನನ್ನ ತಲೆಯ ಮೇಲೆ ಅಪಕೀರ್ತಿಯನ್ನು ಹಾಕಿ ಈಗ ಕೃತಕೃತ್ಯಳಾಗು ಎಂದು ಹೇಳಿ ರೋಧಿಸಿದನು.
ಸ ಚಾರಿತ್ರಂ ವಿಶೋಧ್ಯಾಥ ಸರ್ವಪ್ರಕೃತಿಸನ್ನಿಧೌ |
ಅನ್ವಯಾದ್ ಭ್ರಾತರಂ ರಾಮಂ ವಿನಿವರ್ತನಲಾಲಸಃ ॥37॥
ಅವನು ತನ್ನ ನಡತೆಯನ್ನೇ ಶೋಧಿಸಿ ಎಲ್ಲಾ ಪ್ರಜೆಗಳನ್ನೂ ಕರೆದುಕೊಂಡು ರಾಮನನ್ನು ಕಾಡಿನಿಂದ ಹಿಂದಿರುಗಿಸುವ ಆಸೆಯಿಂದ ಅಣ್ಣನಾದ ರಾಮನನ್ನು ಹುಡುಕಿಕೊಂಡು ಹೊರಟನು.
ಸಂಸ್ಕೃತ್ಯ ಪಿತರಂ ವೃತ್ತಂ ಭರತೋ ಧರ್ಮವತ್ಸಲಃ |
ಕೌಸಲ್ಯಾಂ ಚ ಸುಮಿತ್ರಾಂ ಚ ಕೈಕೇಯೀಂ ಚ ಸುದುಃಖಿತಃ |
ಅಗ್ರೇ ಪ್ರಸ್ಥಾಪ್ಯ ಯಾನೈಃ ಸ ಶತ್ರುಘ್ನಸಹಿತೋ ಯಯೌ ॥38॥
ತಂದೆಯ ಸಂಸ್ಕಾರವನ್ನು ಮಾಡಿ ಧರ್ಮವತ್ಸಲನಾದ ಭರತನು ಸುದುಃಖಿತನಾಗಿ ಕೌಸಲ್ಯೆ, ಸುಮಿತ್ರೆ, ಕೈಕೇಯೀಯರನ್ನು ಯಾನಗಳಿಂದ ಮುಂದೆ ಕಳುಹಿಸಿ ಶತ್ರುಘ್ನನ ಜೊತೆಯಲ್ಲಿ ಹೊರಟನು.
ವಸಿಷ್ಠವಾಮದೇವಾಭ್ಯಾಂ ವಿಪ್ರೈಶ್ಚಾನ್ಯೈಃ ಸಹಸ್ರಶಃ |
ಪೌರಜಾನಪದೈಃ ಸಾರ್ಧಂ ರಾಮಾನಯನಕಾಂಕ್ಷಯಾ ॥39॥
ವಸಿಷ್ಠವಾಮದೇವಾದಿ ಸಹಸ್ರಾರು ವಿಪ್ರರ ಜೊತೆಯಲ್ಲಿ ಮತ್ತು ಪೌರಜಾನಪದರ ಜೊತೆಯಲ್ಲಿ ರಾಮನನ್ನು ಹಿಂದಕ್ಕೆ ಕರೆತರುವ ಆಸೆಯಿಂದ ಅವನು ಹೊರಟನು.
ದದರ್ಶ ಚಿತ್ರಕೂಟಸ್ಥಂ ಸ ರಾಮಂ ಸಹಲಕ್ಷ್ಮಣಮ್ |
ತಾಪಸಾನಾಮಲಂಕಾರಂ ಧಾರಯಂತಂ ಧನುರ್ಧರಮ್ ॥40॥
ಅವನು ತಾಪಸವೇಷವನ್ನು ಧರಿಸಿ ಧನುರ್ಧಾರಿಯಾದ ರಾಮನನ್ನು ಲಕ್ಷ್ಮಣನ ಜೊತೆಯಲ್ಲಿ ಚಿತ್ರಕೂಟಪರ್ವತದಲ್ಲಿ ನೋಡಿದನು.
ಶಶಂಸ ಮರಣಂ ರಾಜ್ಞಃ ಸೋಽನಾಥಾಂಶ್ಚಾಪಿ ಕೋಸಲಾನ್ |
ಸ ತಸ್ಯ ವಚನಂ ಶ್ರುತ್ವಾ ರಾಮಃ ಪರಮದುಃಖಿತಃ ॥41॥
ಚಕಾರ ದೇವಕಲ್ಪಸ್ಯ ಪಿತುಃ ಸ್ನಾತ್ವೋದಕಕ್ರಿಯಾಮ್ |
ಅವನು ತಂದೆಯ ಮರಣವನ್ನೂ ಮತ್ತು ಕೋಸಲರು ಅನಾಥರಾಗಿದ್ದಾರೆ ಎಂಬ ವಿಷಯವನ್ನೂ ರಾಮನಿಗೆ ತಿಳಿಸಿದನು. ಆ ಮಾತನ್ನು ಕೇಳಿದ ರಾಮನು ಪರಮ ದುಃಖಿತನಾಗಿ ಸ್ನಾನವನ್ನು ಮಾಡಿ ದೇವಕಲ್ಪನಾದ ತಂದೆಗೆ ಉದಕಕ್ರಿಯೆಯನ್ನು ಮಾಡಿದನು.
ಅಬ್ರವೀತ್ ಸ ತದಾ ರಾಮೋ ಭ್ರಾತರಂ ಭ್ರಾತೃವತ್ಸಲಃ ॥42॥
ಪಾದುಕೇ ಮೇ ಭವಿಷ್ಯೇತೇ ರಾಜ್ಯಗೋಪ್ತ್ರ್ಯೌ ಪರಂತಪ |
ಏವಮಸ್ತ್ವಿತಿ ತಂ ಪ್ರಾಹ ಭರತಃ ಪ್ರಣತಸ್ತದಾ ॥43॥
ಆಗ ಭ್ರಾತೃವತ್ಸಲನಾದ ರಾಮನು ತಮ್ಮನನ್ನು ಕುರಿತು ಪರಂತಪನೇ, ಈ ನನ್ನ ಪಾದುಕೆಗಳು ರಾಜ್ಯವನ್ನು ರಕ್ಷಿಸುವವು ಎಂದು

ಹೇಳಿದನು. ಹಾಗೆಯೇ ಆಗಲಿ ಎಂದು ಹೇಳಿ ಭರತನು ಅವನಿಗೆ ನಮಸ್ಕಾರವನ್ನು ಮಾಡಿದನು.
ಸ ರಾಮೋ ಭರತಂ ದೃಷ್ಟ್ವಾ ಶ್ರುತ್ವಾ ಸ್ವರ್ಗಗತಿಂ ಪಿತುಃ |
ಕೃತ್ವಾ ತಸ್ಯೋದಕಂ ಸಮ್ಯಗುವಾಚ ಭ್ರಾತರಂ ಪ್ರಿಯಮ್ |
ಗಚ್ಛ ತಾತ ಪ್ರಜಾ ರಕ್ಷ್ಯಾಃ ಸತ್ಯಂ ರಕ್ಷಾಮ್ಯಹಂ ಪಿತುಃ ॥44॥
ಆ ರಾಮನು ಭರತನನ್ನು ನೋಡಿ ತಂದೆಯ ಸ್ವರ್ಗಗತಿಯನ್ನು ಕೇಳಿ ಅವನಿಗೆ ಉದಕಕ್ರಿಯೆಯನ್ನು ಮಾಡಿ ಪ್ರಿಯನಾದ ಆ ತಮ್ಮನನ್ನು ಕುರಿತು ಪ್ರೀತಿಪಾತ್ರನೇ, ಹೋಗು ಪ್ರಜೆಗಳನ್ನು ರಕ್ಷಿಸಬೇಕು. ನಾನು ತಂದೆಯ ಸತ್ಯವಚನವನ್ನು ರಕ್ಷಿಸಬೇಕು ಎಂದು ಹೇಳಿದನು.
ಮಾರ್ಕಂಡೇಯಃ
ವಿಸರ್ಜಿತಃ ಸ ರಾಮೇಣ ಪಿತುರ್ವಚನಕಾರಿಣಾ |
ನಂದಿಗ್ರಾಮೇಽಕರೋದ್ ರಾಜ್ಯಂ ಪುರಸ್ಕೃತ್ಯಾಸ್ಯ ಪಾದುಕೇ ॥45॥
ಮಾರ್ಕಂಡೇಯರು ತಂದೆಯ ಮಾತನ್ನು ನಡೆಸುವ ರಾಮನಿಂದ ಬೀಳ್ಕೊಡಲ್ಪಟ್ಟ ಭರತನು ರಾಮನ ಪಾದುಕೆಗಳನ್ನು ಮುಂದಿಟ್ಟುಕೊಂಡು ನಂದಿಗ್ರಾಮದಲ್ಲಿ ನೆಲೆಸಿ ರಾಜ್ಯಭಾರವನ್ನು ಮಾಡಿದನು.
ರಾಮಸ್ತು ಪುನರಾಶಂಕ್ಯ ಪೌರಜಾನಪದಾಗಮಮ್ |
ಪ್ರವಿವೇಶ ಮಹಾರಣ್ಯಂ ಶರಭಂಗಾಶ್ರಮಂ ಪ್ರತಿ ॥46॥
ರಾಮನು ಪುನಃ ಪೌರಜಾನಪದರು ಬರಬಹುದೆಂದು ಶಂಕಿಸಿ ಮಹಾರಣ್ಯದಲ್ಲಿ ಶರಭಂಗರ ಆಶ್ರಮವನ್ನು ಪ್ರವೇಶಿಸಿದನು.
ಸತ್ಕೃತ್ಯ ಶರಭಂಗಂ ಸ ದಂಡಕಾರಣ್ಯಮಾಶ್ರಿತಃ |
ನದೀಂ ಗೋದಾವರೀಂ ರಮ್ಯಾಮಾಶ್ರಿತ್ಯ ನ್ಯವಸತ್ ತದಾ ॥47॥
ಶರಭಂಗರಿಗೆ ಸತ್ಕಾರವನ್ನು ಮಾಡಿ ದಂಡಕಾರಣ್ಯವನ್ನು ತಲುಪಿ ರಮ್ಯವಾದ ಗೋದಾವರೀ ನದಿಯ ತೀರದಲ್ಲಿ ಆಗ ವಾಸ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಖ್ಯಾನಪರ್ವಣಿ ರಾಮಸ್ಯ ವನಪ್ರಾಪ್ತಿರ್ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತೈದನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ತಾರನೆಯ ಅಧ್ಯಾಯ
ಲಕ್ಷ್ಮಣನಿಂದ ಶೂರ್ಪಣಖೆಯ ವಿರೂಪಕರಣ. ಖರದೂಷಣಾದಿ ಹನನ. ಕ್ರುದ್ಧನಾದ ರಾವಣನಿಂದ ಮಾರೀಚ ಸಮೀಪ ಪ್ರಾಪ್ತಿ.
ಮಾರ್ಕಂಡೇಯಃ
ವಸತಸ್ತಸ್ಯ ರಾಮಸ್ಯ ತತಃ ಶೂರ್ಪಣಖಾಕೃತಮ್ |
ಖರೇಣಾಸೀನ್ಮಹದ್ ವೈರಂ ಜನಸ್ಥಾನನಿವಾಸಿನಾ ॥1॥
ಮಾರ್ಕಂಡೇಯ ಅಲ್ಲಿ ವಾಸಮಾಡುತ್ತಿದ್ದ ರಾಮನಿಗೆ ಶೂರ್ಪಣಖೆಯ ನಿಮಿತ್ತದಿಂದಾಗಿ ಜನಸ್ಥಾನದಲ್ಲಿ ವಾಸಮಾಡುವ ಖರನ ಜೊತೆಯಲ್ಲಿ ದೊಡ್ಡ ವೈರವು ಉಂಟಾಯಿತು.
ರಕ್ಷಾರ್ಥಂ ತಾಪಸಾನಾಂ ತು ರಾಘವೋ ಧರ್ಮವತ್ಸಲಃ |
ಚತುರ್ದಶಸಹಸ್ರಾಣಿ ಜಘಾನ ಭುವಿ ರಕ್ಷಸಾಮ್ ॥2॥
ತಾಪಸರನ್ನು ರಕ್ಷಿಸುವುದಕ್ಕೋಸ್ಕರ ಧರ್ಮವತ್ಸಲನಾದ ರಾಮನು ಭೂಮಿಯಲ್ಲಿ ಅಲ್ಲಿ ಹದಿನಾಲ್ಕು ಸಹಸ್ರ ರಾಕ್ಷಸರನ್ನು ಕೊಂದನು.
ದೂಷಣಂ ಚ ಖರಂ ಚೈವ ನಿಹತ್ಯ ಸುಮಹಾಬಲೌ |
ಚಕ್ರೇ ಕ್ಷೇಮಂ ಪುನರ್ಧೀಮಾನ್ ಧರ್ಮಾರಣ್ಯಂ ಚ ರಾಘವಃ ॥3॥
ಧೀಮಂತನಾದ ರಾಘವನು ಮಹಾಬಲಿಷ್ಠರಾದ ಖರದೂಷಣರನ್ನು ಸಂಹರಿಸಿ ಆ ಧರ್ಮಾರಣ್ಯವನ್ನು ಕ್ಷೇಮದಿಂದ ಕೂಡಿದುದನ್ನಾಗಿ ಮಾಡಿದನು.
ಹತೇಷು ತೇಷು ರಕ್ಷಃಸು ತತಃ ಶೂರ್ಪಣಖಾ ಪುನಃ |
ಯಯೌ ನಿಕೃತ್ತನಾಸೋಷ್ಠೀ ಲಂಕಾಂ ಭ್ರಾತುರ್ನಿವೇಶನಮ್ ॥4॥
ಆ ರಾಕ್ಷಸರೆಲ್ಲರೂ ಹತರಾದ ಮೇಲೆ ಶೂರ್ಪಣಖೆಯು ಕತ್ತರಿಸಿದ ನಾಸೋಷ್ಠ ಉಳ್ಳವಳಾಗಿ ಲಂಕೆಯಲ್ಲಿ ತನ್ನ ಅಣ್ಣನ ಮನೆಗೆ ಹೋದಳು.
ತತೋ ರಾವಣಮಭ್ಯೇತ್ಯ ರಾಕ್ಷಸೀ ದುಃಖಮೂರ್ಚ್ಛಿತಾ |
ಪಪಾತ ಪಾದಯೋರ್ಭ್ರಾತುಃ ಸಂಶುಷ್ಕರುಧಿರಾನನಾ ॥5॥
ದುಃಖಮೂರ್ಛಿತಳಾದ ಆ ರಾಕ್ಷಸಿಯು ಆಗ ರಾವಣನನ್ನು ಸಮೀಪಿಸಿ ಒಣಗಿದ ರಕ್ತವುಳ್ಳ ಮುಖದಿಂದ ಅಣ್ಣನಾದ ಅವನ ಪಾದಗಳ ಮೇಲೆ ಬಿದ್ದಳು.
ತಾಂ ತಥಾ ವಿಕೃತಾಂ ದೃಷ್ಟ್ವಾ ರಾವಣಃ ಕ್ರೋಧಮೂರ್ಚ್ಛಿತಃ |
ಉತ್ಪಪಾತಾಸನಾತ್ ಕ್ರುದ್ಧೋ ದಂತೈರ್ದಂತಾನುಪಸ್ಪೃಶನ್ |

ಸ್ಥಾನಮಾತ್ಯಾನ್ ವಿಸೃಜ್ಯಾಥ ವಿವಿಕ್ತೇ ತಾಮುವಾಚ ಸಃ ॥6॥
ಅವಳು ಹಾಗೆ ವಿರೂಪಳಾಗಿರುವುದನ್ನು ನೋಡಿದ ರಾವಣನು ಕ್ರೋಧ ಮೂರ್ಛಿತನಾಗಿ ಹಲ್ಲುಗಳಿಂದ ಹಲ್ಲುಗಳನ್ನು ಕಡಿಯುತ್ತಾ ಕ್ರುದ್ಧನಾಗಿ ಆಸನದಿಂದ ಮೇಲೆ ಹಾರಿ ತನ್ನ ಅಮಾತ್ಯರನ್ನು ದೂರಕಳುಹಿಸಿ ಏಕಾಂತದಲ್ಲಿ ಅವಳನ್ನು ಕುರಿತು ಮಾತನಾಡಿದನು.
ಕೇನಾಸ್ಯೇವಂ ಕೃತಾ ಭದ್ರೇ ಮಾಮಚಿಂತ್ಯಾವಮನ್ಯ ಚ |
ಕಃ ಶೂಲಂ ತೀಕ್ಷ್ಣಮಾಸಾದ್ಯ ಸರ್ವಗಾತ್ರೈರ್ನಿಷೇವತೇ ॥7॥
ಎಲೌ ಭದ್ರೆಯೇ, ನನ್ನನ್ನು ಲೆಕ್ಕಿಸದೇ ನನಗೆ ಅವಮಾನವನ್ನು ಮಾಡಿದ ಯಾವನು ನಿನಗೆ ಈ ರೀತಿಯಲ್ಲಿ ಮಾಡಿದ್ದಾನೆ? ಯಾವನು ತನ್ನ ಎಲ್ಲಾ ಶರೀರದಲ್ಲಿ ಈ ದಿನ ತೀಕ್ಷ್ಣವಾದ ಶೂಲವನ್ನು ಹೊಂದುವವನಾಗುತ್ತಾನೆ?
ಕಃ ಶಿರಸ್ಯಗ್ನಿಮಾಧಾಯ ವಿಶ್ವಸ್ತಃ ಸ್ವಪತೇ ಸುಖಮ್ |
ಆಶೀವಿಷಂ ಘೋರತರಂ ಪಾದೇನ ಸ್ಪೃಶತೀಹ ಕಃ ॥8॥
ಸಿಂಹಂ ಕೇಸರಿಣಂ ಕಶ್ಚ ದಂಷ್ಟ್ರಾಭ್ಯಾಂ ಸ್ಪೃಶ್ಯ ತಿಷ್ಠತಿ ॥9॥
ಯಾವನು ಶಿರಸ್ಸಿನಲ್ಲಿ ಅಗ್ನಿಯನ್ನು ಇಟ್ಟುಕೊಂಡು ವಿಶ್ವಾಸದಿಂದ ಸುಖವಾಗಿ ಮಲಗಿ ನಿದ್ರಿಸುತ್ತಾನೆ? ಘೋರವಾದ ಸರ್ಪವನ್ನು ಯಾವನು ಪಾದದಿಂದ ಮುಟ್ಟುತ್ತಿದ್ದಾನೆ? ಯಾವನು ಕೇಸರವುಳ್ಳ ಸಿಂಹವನ್ನು ಅದರ ಕೋರದಾಡೆಯಲ್ಲಿ ಹಿಡಿದು ನಿಂತಿದ್ದಾನೆ?
ಮಾರ್ಕಂಡೇಯಃ
ಇತ್ಯೇವಂ ಬ್ರುವತಸ್ತಸ್ಯ ಸ್ರೋತೋಭ್ಯಸ್ತೇಜಸೋಽರ್ಚಿಷಃ |
ನಿಶ್ಚೇರುರ್ದಹ್ಯತೋ ರಾತ್ರೌ ವೃಕ್ಷಸ್ಯೇವ ಸ್ವರಂಧ್ರತಃ ॥10॥
ಮಾರ್ಕಂಡೇಯ ಹೀಗೆ ಮಾತನಾಡುತ್ತಿದ್ದ ಅವನ ನವದ್ವಾರಗಳಿಂದಲೂ ರಾತ್ರಿಯ ಕಾಲದಲ್ಲಿ ಒಣಗಿ ಹತ್ತಿ ಉರಿಯುತ್ತಿರುವ ಮರದ ರಂಧ್ರಗಳಿಂದ ಹೊರಬಂದಂತೆ ಜ್ವಾಲೆಗಳು ಹೊರಬಂದವು.
ತಸ್ಯ ತತ್ಸರ್ವಮಾಚಖ್ಯೌ ಭಗಿನೀ ರಾಮವಿಕ್ರಮಮ್ |
ಖರದೂಷಣಸಂಯುಕ್ತಂ ರಾಕ್ಷಸಾನಾಂ ಪರಾಭವಮ್ ॥11॥
ಅವನ ತಂಗಿಯು ರಾಮವಿಕ್ರಮ, ಖರದೂಷಣರನ್ನೂ ಸೇರಿಸಿ ಎಲ್ಲ ರಾಕ್ಷಸರ ಪರಾಭವ ಮೊದಲಾದ ಎಲ್ಲ ವಿಷಯಗಳನ್ನೂ ಅವನಿಗೆ ಹೇಳಿದಳು.
ಸ ನಿಶ್ಚಿತ್ಯ ತತಃ ಕೃತ್ಯಂ ಸ್ವಸಾರಮುಪಾಸಾಂತ್ವ್ಯ ಚ |
ಊರ್ಧ್ವಮಾಚಕ್ರಮೇ ರಾಜಾ ವಿಧಾಯ ನಗರೇ ವಿಧಿಮ್ ॥12॥
ಆ ರಾಜನು ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿ ತಂಗಿಯನ್ನು ಸಮಾಧಾನ ಪಡಿಸಿ ನಗರದಲ್ಲಿ ಎಲ್ಲ ವ್ಯವಸ್ಥೆಯನ್ನೂ ಮಾಡಿ ಊರ್ಧ್ವಮುಖವಾಗಿ (ಉತ್ತರಾಭಿಮುಖವಾಗಿ) ಹೊರಟನು.
ತ್ರಿಕೂಟಂ ಸಮತಿಕ್ರಮ್ಯ ಕಾಲಪರ್ವತಮೇವ ಚ |
ದದರ್ಶ ಮಕರಾವಾಸಂ ಗಂಭೀರೋದಂ ಮಹೋದಧಿಮ್ ॥13॥
ತ್ರಿಕೂಟಪರ್ವತವನ್ನೂ, ಕಾಲಪರ್ವತವನ್ನೂ ದಾಟಿ ಗಂಭೀರವಾದ ಉದಕವಿರುವ ಮಕರಾದಿಗಳ ಆವಾಸಸ್ಥಾನವಾದ ಮಹಾಸಮುದ್ರವನ್ನು ನೋಡಿದನು.
ತಮತೀತ್ಯಾಥ ಗೋಕರ್ಣಮಭ್ಯಗಚ್ಛದ್ ದಶಾನನಃ |
ದಯಿತಂ ಸ್ಥಾನಮವ್ಯಗ್ರಂ ಶೂಲಪಾಣೇರ್ಮಹಾತ್ಮನಃ ॥14॥
ದಶಾನನನು ಅದನ್ನು ದಾಟಿ ಮಹಾತ್ಮನಾದ ಶೂಲಪಾಣಿಗೆ ಪ್ರಿಯವಾದ ಸ್ಥಾನವಾದ ಗೋಕರ್ಣ ಕ್ಷೇತ್ರವನ್ನು ಅವ್ಯಗ್ರವಾಗಿ ತಲುಪಿದನು.
ತತ್ರಾಭ್ಯಗಚ್ಛನ್ಮಾರೀಚಂ ಪೂರ್ವಾಮಾತ್ಯಂ ದಶಾನನಃ |
ಪುರಾ ರಾಮಭಯಾದೇವ ತಾಪಸ್ಯಂ ಸಮುಪಾಶ್ರಿತಮ್ ॥15॥
ಅಲ್ಲಿ ದಶಾನನನು ತನ್ನ ಹಿಂದಿನ ಅಮಾತ್ಯನಾಗಿದ್ದ ಹಿಂದೆ ರಾಮನ ಬಾಣದ ಸ್ಪರ್ಶವನ್ನು ಹೊಂದಿ ರಾಮಭಯದಿಂದಲೇ ತಾಪಸ ವೇಷವನ್ನು ಧರಿಸಿದ್ದ ಮಾರೀಚನ ಸಮೀಪಕ್ಕೆ ಬಂದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್ಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ರಾವಣಸ್ಯ ಮಾರೀಚ ಪ್ರಾತಿರ್ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ತೇಳನೆಯ ಅಧ್ಯಾಯ
ಮಾಯಾಮೃಗ ರೂಪವನ್ನು ಧರಿಸಿ ಮಾರೀಚನಿಂದ ಸೀತೆಯ ಪ್ರಲೋಭನ. ರಾಮನಿಂದ ಮಾರೀಚ ವಧೆ. ಈ ಮಧ್ಯದಲ್ಲಿ ರಾವಣನಿಂದ ಸೀತಾಪಹರಣ.
ಮಾರ್ಕಂಡೇಯಃ
ಮಾರೀಚಸ್ತ್ವಥ ಸಂಭ್ರಾಂತೋ ದೃಷ್ಟ್ವಾ ರಾವಣಮಾಗತಮ್ |
ಪೂಜಯಾಮಾಸ ಸತ್ಕಾರೈಃ ಫಲಮೂಲಾದಿಭಿಸ್ತತಃ॥1॥
ಮಾರ್ಕಂಡೇಯರು ಮಾರೀಚನು ಆಗ ಪ್ರಾಪ್ತನಾದ ರಾವಣನನ್ನು ನೋಡಿ ಸಂಭ್ರಾಂತನಾಗಿ ಫಲಮೂಲಾದಿ ಸತ್ಕಾರಗಳಿಂದ ಅವನನ್ನು ಪೂಜಿಸಿದನು.

ವಿಶ್ರಾಂತಂ ಚೈನಮಾಸೀನಮನ್ವಾಸೀನಃ ಸ ರಾಕ್ಷಸಃ |
ಉವಾಚ ಪ್ರಶ್ರಿತಂ ವಾಕ್ಯಂ ವಾಕ್ಯಜ್ಞೋ ವಾಕ್ಯಕೋವಿದಮ್ ॥2॥
ವಿಶ್ರಾಂತಿಯನ್ನು ತೆಗೆದುಕೊಂಡು ಕುಳಿತಿದ್ದ ರಾವಣನ ಸಮೀಪದಲ್ಲಿ ಕುಳಿತ ವಾಕ್ಯಜ್ಞನಾದ ಮಾರೀಚನು ವಾಕ್ಯಕೋವಿದನಾದ ರಾವಣನನ್ನು ಕುರಿತು ವಿನಯದಿಂದ ಮಾತನಾಡಿದನು.
ನ ತೇ ಪ್ರಕೃತಿಮಾನ್ ವರ್ಣಃ ಕಚ್ಚಿತ್ ಕ್ಷೇಮಂ ಪುರೇ ತವ |
ಕಚ್ಚಿತ್ ಪ್ರಕೃತಯಃ ಸರ್ವಾ ಭಜಂತೇ ತ್ವಾಂ ಯಥಾ ಪುರಾ ॥3॥
ನಿನ್ನ ಬಣ್ಣವು ಎಂದಿನಂತಿಲ್ಲ. ನಿನ್ನ ಪಟ್ಟಣದಲ್ಲಿ ಎಲ್ಲವೂ ಕ್ಷೇಮವಷ್ಟೆ? ನಿನ್ನ ಪ್ರಜೆಗಳೆಲ್ಲರೂ ನಿನ್ನನ್ನು ಮೊದಲಿನಂತೆಯೇ ಸತ್ಕರಿಸುತ್ತಿದ್ದಾರೆಯೇ?
ಕಿಮಿಹಾಗಮನೇ ಚಾಪಿ ಕಾರ್ಯಂ ತೇ ರಾಕ್ಷಸೇಶ್ವರ |
ಕೃತಮಿತ್ಯೇವ ತದ್ ವಿದ್ಧಿ ಯದ್ಯಪಿ ಸ್ಯಾತ್ ಸುದುಷ್ಕರಮ್ ॥4॥
ರಾಕ್ಷಸೇಶ್ವರನೇ, ಇಲ್ಲಿ ಬರುವುದಕ್ಕೆ ನಿನಗೆ ಆಗಬೇಕಾದ ಕಾರ್ಯವೇನು? ಅದು ಬಹಳ ದುಷ್ಕರವಾದರೂ ಅದು ಮಾಡಲ್ಪಟ್ಟಿದೆ ಎಂದೇ ತಿಳಿ.
ಮಾರ್ಕಂಡೇಯಃ
ಶಶಂಸ ರಾವಣಸ್ತಸ್ಮೈ ತತ್ಸರ್ವಂ ರಾಮಚೇಷ್ಟಿತಮ್ |
ಮಾರೀಚಸ್ತ್ವಬ್ರವೀತ್ ಶ್ರುತ್ವಾ ಸಮಾಸೇನೈವ ರಾವಣಮ್ ॥5॥
ಮಾರ್ಕಂಡೇಯರು ರಾವಣನು ಅವನಿಗೆ ರಾಮನ ಚೇಷ್ಟಿತವೆಲ್ಲವನ್ನೂ ತಿಳಿಸಿದನು. ಮಾರೀಚನು ಅದನ್ನು ಕೇಳಿ ಸಂಕ್ಷೇಪವಾಗಿ ರಾವಣನನ್ನು ಕುರಿತು ಹೀಗೆ ಮಾತನಾಡಿದನು.
ಅಲಂ ತೇ ರಾಮಮಾಸಾದ್ಯ ವೀರ್ಯಜ್ಞೋ ಹ್ಯಸ್ಮಿ ತಸ್ಯ ವೈ |
ಬಾಣವೇಗಂ ಹಿ ಕಸ್ತಸ್ಯ ಶಕ್ತಃ ಸೋಢುಂ ಮಹಾತ್ಮನಃ ॥6॥
ನಿನಗೆ ರಾಮನ ಸಹವಾಸವು ಸಾಕು. ಅವನ ಪರಾಕ್ರಮವನ್ನು ನಾನು ತಿಳಿದಿದ್ದೇನೆ. ಆ ಮಹಾತ್ಮನ ಬಾಣವೇಗವನ್ನು ಸಹಿಸಲು ಯಾವನಿಗೆ ಸಾಧ್ಯ?
ಪ್ರವ್ರಜ್ಯಾಯಾಂ ಹಿ ಮೇ ಹೇತುಃ ಸ ಏವ ಪುರುಷರ್ಷಭಃ |
ವಿನಾಶಮುಖಮೇತತ್ ತೇ ಕೇನಾಖ್ಯಾತಂ ದುರಾತ್ಮನಾ |
ತಮುವಾಚಾಥ ಸಕ್ರೋಧೋ ರಾವಣಃ ಪರಿಭರ್ತ್ಸಯನ್ ॥7॥
ಅಕುರ್ವತೋಽಸ್ಮದ್ವಚನಂ ಸ್ಯಾನ್ಮೃತ್ಯುರಪಿ ತೇ ಧ್ರುವಮ್ ॥8॥
ನಾನು ಈ ಏಕಾಂತಸ್ಥಳಕ್ಕೆ ಬರಲು ಆ ಪುರುಷಶ್ರೇಷ್ಠನೇ ಕಾರಣ. ನಿನ್ನ ವಿನಾಶವನ್ನು ತಂದೊಡ್ಡುವ ಇಂತಹ ಕಾರ್ಯವನ್ನು ಯಾವ ದುರಾತ್ಮನು ನಿನಗೆ ಹೇಳಿದನು? (ಎಂದು ಹೇಳಿದನು). ಆಗ ರಾವಣನು ಕ್ರೋಧದಿಂದ ಕೂಡಿದವನಾಗಿ ಅವನನ್ನು ಗದರಿಸುತ್ತಾ ನನ್ನ ಮಾತನ್ನು ನಡೆಸಿಕೊಡದಿದ್ದರೆ ನಿನಗೆ ನಿಶ್ಚಿತವಾಗಿ ಮೃತ್ಯುವೇ ಉಂಟಾಗುವುದು ಎಂದು ಹೇಳಿದನು.
ಮಾರ್ಕಂಡೇಯಃ
ಮಾರೀಚಶ್ಚಿಂತಯಾಮಾಸ ವಿಶಿಷ್ಟಾನ್ಮರಣಂ ವರಮ್ |
ಅವಶ್ಯಂ ಮರಣೇ ಪ್ರಾಪ್ತೇ ಕರಿಷ್ಯಾಮ್ಯಸ್ಯ ಯನ್ಮತಮ್ |
ತತಸ್ತಂ ಪ್ರತ್ಯುವಾಚಾಥ ಮಾರೀಚೋ ರಾಕ್ಷಸೇಶ್ವರಮ್ ॥9॥
ಮಾರ್ಕಂಡೇಯರು ಮರಣವು ಅವಶ್ಯವಾಗಿ ಪ್ರಾಪ್ತವಾಗುವುದಾದರೆ ಶ್ರೇಷ್ಠ ಪುರುಷನಿಂದ ಮರಣವೇ ಒಳ್ಳೆಯದು. ಆದ್ದರಿಂದ ಇವನ ಅಭಿಪ್ರಾಯದಂತೆ ನಡೆಯುವೆ ಎಂದು ಯೋಚಿಸಿದನು. ಅನಂತರ ಮಾರೀಚನು ಆ ರಾಕ್ಷಸೇಶ್ವರನನ್ನು ಕುರಿತು ಮಾತನಾಡಿದನು.
ಕಿಂ ತೇ ಸಾಹ್ಯಂ ಮಯಾ ಕಾರ್ಯಂ ಕರಿಷ್ಯಾಮ್ಯವಶೋಽಪಿ ತತ್ ॥
ನಿನಗೆ ನನ್ನಿಂದ ಏನು ಸಹಾಯವಾಗಬೇಕು? ನಾನು ಅವಶವಾಗಿಯಾದರೂ ಆ ಕಾರ್ಯವನ್ನು ಮಾಡುವೆನು.
ತಮಬ್ರವೀದ್ ದಶಗ್ರೀವೋ ಗಚ್ಛ ಸೀತಾಂ ಪ್ರಲೋಭಯ |
ರತ್ನಶೃಂಗೋ ಮೃಗೋ ಭೂತ್ವಾ ರತ್ನಚಿತ್ರತನೂರುಹಃ ॥11॥
ನೀನು ಹೋಗಿ ರತ್ನಶೃಂಗವುಳ್ಳ ರತ್ನಗಳಿಂದ ಚಿತ್ರವಾದ ಶರೀರವುಳ್ಳ ಜಿಂಕೆಯಾಗಿ ಸೀತೆಯನ್ನು ಪ್ರಲೋಭಗೊಳಿಸು ಎಂದು ದಶಗ್ರೀವನು ಹೇಳಿದನು.
ಧ್ರುವಂ ಸೀತಾ ಸಮಾಲಕ್ಷ್ಯ ತ್ವಾಂ ರಾಮಂ ಚೋದಯಿಷ್ಯತಿ |
ಅಪಕ್ರಾಂತೇ ಚ ಕಾಕುತ್ಸ್ಥೇ ಸೀತಾ ವಶ್ಯಾ ಭವಿಷ್ಯತಿ ॥12॥
ನಿನ್ನನ್ನು ನೋಡಿ ಖಂಡಿತವಾಗಿ ಸೀತೆಯು ರಾಮನನ್ನು ಅದನ್ನು ತರುವಂತೆ ಪ್ರೇರಿಸುತ್ತಾಳೆ. ರಾಮನು ದೂರಹೋಗುತ್ತಿರಲು ಸೀತೆಯು ವಶಳಾಗುವಳು.
ತಾಮಾದಾಯಾಪನೇಷ್ಯಾಮಿ ತತಃ ಸ ನ ಭವಿಷ್ಯತಿ |
ಭಾರ್ಯಾವಿಯೋಗಾದ್ ದುರ್ಬುದ್ಧಿರೇತತ್ ಸಾಹ್ಯಂ ಕುರುಷ್ವ ಮೇ ॥
ನಾನು ಅವಳನ್ನು ಕರೆದುಕೊಂಡು ಹೊರಟುಬರುವೆನು. ಅನಂತರ ದುರ್ಬುದ್ಧಿಯಾದ ರಾಮನು ಭಾರ್ಯಾವಿಯೋಗದಿಂದ ಮರಣವನ್ನು ಹೊಂದುವನು. ನನಗೆ ಈ ಸಹಾಯವನ್ನು ಮಾಡು.
ಇತ್ಯೇವಮುಕ್ತೋ ಮಾರೀಚಃ ಕೃತ್ವೋದಕಮಥಾತ್ಮನಃ |
ರಾವಣಂ ಪುರತೋ ಯಾಂತಮನ್ವಗಚ್ಛತ್ ಸುದುಃಖಿತಃ ॥14॥

ಹೀಗೆ ಹೇಳಲ್ಪಟ್ಟ ಮಾರೀಚನು ತನಗೆ ಉದಕಕ್ರಿಯೆಯನ್ನು ಮಾಡಿಕೊಂಡು ಬಹಳ ದುಃಖಿತನಾಗಿ ಮುಂದೆ ಹೋಗಿ ರಾವಣನನ್ನು ಹಿಂಬಾಲಿಸಿದನು.
ತತಸ್ತಸ್ಯಾಶ್ರಮಂ ಗತ್ವಾ ರಾಮಸ್ಯಾಕ್ಲಿಷ್ಟಕರ್ಮಣಃ |
ಚಕ್ರತುಸ್ತತ್ ತಥಾ ಸರ್ವಮುಭೌ ಯತ್ಪೂರ್ವಮಂತ್ರಿತಮ್ ॥15॥
ಅನಂತರ ಅಕ್ಲಿಷ್ಟಕಾರಿಯಾದ ರಾಮನ ಆಶ್ರಮದ ಬಳಿಗೆ ಹೋಗಿ ಅವರಿಬ್ಬರು ಮೊದಲು ಮಾತನಾಡಿಕೊಂಡಿದ್ದಂತೆ ಎಲ್ಲವನ್ನೂ ಮಾಡಿದರು.
ರಾವಣಸ್ತು ಯತಿರ್ಭೂತ್ವಾ ಮುಂಡಃ ಕುಂಡೀ ತ್ರಿದಂಡಧೃತ್ |
ಮೃಗಶ್ಚ ಭೂತ್ವಾ ಮಾರೀಚಸ್ತಂ ದೇಶಮುಪಜಗ್ಮತುಃ ॥16॥
ರಾವಣನಾದರೂ ತಲೆಯನ್ನು ಮುಂಡನ ಮಾಡಿ ಕೈಯಲ್ಲಿ ಕಮಂಡಲುವನ್ನು ಹಿಡಿದ ತ್ರಿದಂಡಧಾರಿಯಾಗಿ ಮತ್ತು ಮಾರೀಚನು ರಾವಣನು ಹೇಳಿದಂತೆ ಮೃಗವಾಗಿ ಆ ದೇಶಕ್ಕೆ ಬಂದರು.
ದರ್ಶಯಾಮಾಸ ಮಾರೀಚೋ ವೈದೇಹೀಂ ಮೃಗರೂಪಧೃಕ್ |
ಚೋದಯಾಮಾಸ ತಸ್ಯಾರ್ಥೇ ಸಾ ರಾಮಂ ವಿಧಿಚೋದಿತಾ ॥17॥
ಮಾರೀಚನು ಮೃಗರೂಪವನ್ನು ಧರಿಸಿ ಸೀತೆಗೆ ಕಾಣಿಸಿಕೊಂಡನು. ವಿಧಿಚೋದಿತಳಾದ ಸೀತೆಯು ರಾಮನಿಗೆ ಅದನ್ನು ತರುವಂತೆ ಒತ್ತಾಯ ಮಾಡಿದಳು.
ರಾಮಸ್ತಸ್ಯಾಃ ಪ್ರಿಯಂ ಕುರ್ವನ್ ಧನುರಾದಾಯ ಸತ್ವರಃ |
ರಕ್ಷಾರ್ಥೇ ಲಕ್ಷ್ಮಣಂ ನ್ಯಸ್ಯ ಪ್ರಯಯೌ ಮೃಗಲಿಪ್ಸಯಾ ॥18॥
ರಾಮನು ಅವಳಿಗೆ ಪ್ರಿಯವನ್ನು ಮಾಡುವವನಾಗಿ ಬೇಗ ಧನುಸ್ಸನ್ನು ತೆಗೆದುಕೊಂಡು ಲಕ್ಷ್ಮಣನನ್ನು ಅವಳ ರಕ್ಷಣೆಯಲ್ಲಿಟ್ಟು ಮೃಗವನ್ನು ಹಿಡಿಯುವ ಅಭಿಪ್ರಾಯದಿಂದ ಆಶ್ರಮದಿಂದ ಹೊರಟನು.
ಸ ಧನ್ವೀ ಬದ್ಧತೂಣೀರಃ ಖಡ್ಗಗೋಧಾಂಗುಲಿತ್ರವಾನ್ |
ಅನ್ವಧಾವನ್ಮೃಗಂ ರಾಮೋ ರುದ್ರಸ್ತಾರಾಮೃಗಂ ಯಥಾ ॥19॥
ಆ ರಾಮನು ಧನುಸ್ಸನ್ನು ಹಿಡಿದು ಬತ್ತಳಿಕೆಯನ್ನು ಕಟ್ಟಿಕೊಂಡು ಖಡ್ಗ ಮತ್ತು ಉಡದ ಚರ್ಮದಿಂದ ಮಾಡಿದ ಹಸ್ತರಕ್ಷಣೆಗಳನ್ನು ಹಾಕಿಕೊಂಡು ರುದ್ರದೇವರು ಮೃಗಶೀರ್ಷ ಎಂಬ ಹೆಸರಿನ ಮೃಗವನ್ನು ಹಿಂಬಾಲಿಸಿದಂತೆ ಆ ಮೃಗದ ಹಿಂದೆ ಓಡಿದನು.
ಸೋಽಂತರ್ಹಿತಃ ಪುನಸ್ತಸ್ಯ ದರ್ಶನಂ ರಾಕ್ಷಸೋ ವ್ರಜನ್ |
ಚಕರ್ಷ ಚ ಮಹಾಧ್ವಾನಂ ರಾಮಸ್ತಂ ಬುಬುಧೇ ತತಃ ॥20॥
ಆ ರಾಕ್ಷಸನು ಒಮ್ಮೆ ಅಂತರ್ಧಾನವನ್ನು ಹೊಂದಿ ಇನ್ನೊಮ್ಮೆ ದೃಶ್ಯನಾಗಿ ಹೋಗುತ್ತಾ ರಾಮನನ್ನು ಬಹಳ ದೂರದವರೆಗೆ ಎಳೆದನು. ಆಗ ರಾಮನು ಅವನ ನಿಜಸ್ವರೂಪವನ್ನು ತಿಳಿದನು.
ನಿಶಾಚರಂ ವಿದಿತ್ವಾ ತಂ ರಾಘವಃ ಪ್ರತಿಭಾನವಾನ್ |
ಅಮೋಘಂ ಶರಮಾದಾಯ ಜಘಾನ ಮೃಗರೂಪಿಣಮ್ ॥21॥
ಅವನು ರಾಕ್ಷಸನೆಂದು ತಿಳಿದ ರಾಮನು ದಿವ್ಯಜ್ಞಾನವನ್ನು ಹೊಂದಿದವನಾಗಿ ಅಮೋಘವಾದ ಶರವನ್ನು ತೆಗೆದುಕೊಂಡು ಮೃಗರೂಪಿಯಾದ ಅವನನ್ನು ಅದರಿಂದ ಹೊಡೆದನು.
ಸ ರಾಮಬಾಣಾಭಿಹತಃ ಕೃತ್ವಾ ರಾಮಸ್ವರಂ ತದಾ |
ಹಾ ಸೀತೇ ಲಕ್ಷ್ಮಣೇತ್ಯೇವಂ ಚುಕ್ರೋಶಾರ್ತಸ್ವರೇಣ ಹ ॥22॥
ರಾಮನ ಬಾಣದಿಂದ ಹೊಡೆಯಲ್ಪಟ್ಟ ಆ ಮಾರೀಚನು ರಾಮನ ಧ್ವನಿಯನ್ನು ಮಾಡಿಕೊಂಡು ಹಾ ಸೀತೇ, ಹಾ ಲಕ್ಷ್ಮಣ ಎಂದು ಆರ್ತಸ್ವರದಿಂದ ಗಟ್ಟಿಯಾಗಿ ಕಿರುಚಿದನು.
ಶುಶ್ರಾವ ತಸ್ಯ ವೈದೇಹೀ ತತಸ್ತಾಂ ಕರುಣಾಂ ಗಿರಮ್ |
ಸಾ ಪ್ರಾದ್ರವದ್ ಯತಃ ಶಬ್ದಸ್ತಾಮುವಾಚಾಥ ಲಕ್ಷ್ಮಣಃ ॥23॥
ಅಲಂ ತೇ ಶಂಕಯಾ ಭೀರು ಕೋ ರಾಮಂ ಪ್ರಹರಿಷ್ಯತಿ |
ಮುಹೂರ್ತಾದ್ ದ್ರಕ್ಷ್ಯಸೇ ರಾಮಂ ಭರ್ತಾರಂ ತ್ವಂ ಶುಚಿಸ್ಮಿತೇ ॥24॥
ಅವನ ಆ ಕರುಣಾಜನಕವಾದ ಶಬ್ದವನ್ನು ಜಾನಕಿಯು ಕೇಳಿದಳು. ಅನಂತರ ಅವಳು ಶಬ್ದವು ಬಂದ ದಿಕ್ಕಿಗೆ ಓಡಲು ಪ್ರಾರಂಭಿಸಿದಳು. ಆಗ ಲಕ್ಷ್ಮಣನು ಅವಳನ್ನು ಕುರಿತು ಭೀರುವೇ, ನೀನು ಭಯಪಡಬೇಡ. ರಾಮನನ್ನು ಹೊಡೆಯುವವನು ಯಾವನಿದ್ದಾನೆ? ಶುಚಿಸ್ಮಿತೆಯೇ, ಒಂದು ಮುಹೂರ್ತದಲ್ಲಿ ನೀನು ಪತಿಯಾದ ರಾಮನನ್ನು ನೋಡುವಿ ಎಂದು ಹೇಳಿದನು.
ಮಾರ್ಕಂಡೇಯಃ
ಇತ್ಯುಕ್ತಾತ್ವ ಸಾ ಪ್ರರುದತೀ ಪರ್ಯಶಂಕತ ಲಕ್ಷ್ಮಣಮ್ |
ಹತಾ ವೈ ಸ್ತ್ರೀಸ್ವಭಾವೇನ ಶುಕ್ಲಚಾರಿತ್ರಭೂಷಣಾ |
ಸಾ ತಂ ಪರುಷಮಾರಬ್ಧಾ ವಕ್ತುಂ ಸಾಧ್ವೀ ಪತಿವ್ರತಾ ॥25॥
ಮಾರ್ಕಂಡೇಯರು ಹೀಗೆ ಹೇಳಲ್ಪಟ್ಟ ಸೀತೆಯು ಅಳುತ್ತಾ ಲಕ್ಷ್ಮಣನನ್ನು ಶಂಕಿಸಿದಳು. ಶುದ್ಧ ಚಾರಿತ್ರ್ಯ ಅಲಂಕಾರದಿಂದ ಕೂಡಿದ ಸಾಧ್ವಿಯೂ, ಪತಿವ್ರತೆಯೂ ಆದ ಅವಳು ಸ್ತ್ರೀಸ್ವಭಾವದಿಂದ ಕೂಡಿದವಳಾಗಿ ಲಕ್ಷ್ಮಣನನ್ನು ಕುರಿತು ಕ್ರೂರವಾದ ಮಾತುಗಳನ್ನು ಆಡಲು ಪ್ರಾರಂಭಿಸಿದಳು.
ನೈಷ ಕಾಮೋ ಭವೇನ್ಮೂಢ ಯಂ ತ್ವಂ ಪ್ರಾರ್ಥಯಸೇ ಹೃದಾ ॥26॥
ಅಪ್ಯಹಂ ಶಸ್ತ್ರಮಾದಾಯ ಹನ್ಯಾಮಾತ್ಮಾನಮಾತ್ಮನಾ |

ಪತೇಯಂ ಗಿರಿಶೃಂಗಾದ್ವಾ ವಿಶೇಯಂ ವಾ ಹುತಾಶನಮ್ ॥27॥
ಸೀತಾ ಮೂಢನೇ, ನೀನು ನಿನ್ನ ಮನಸ್ಸಿನಲ್ಲಿ ಏನನ್ನು ಬಯಸುತ್ತಿದ್ದೀಯೋ ಅಂತಹ ನಿನ್ನ ಕಾಮವು ನೆರವೇರುವುದಿಲ್ಲ. ನಾನು ಬೇಕಾದರೆ ಶಸ್ತ್ರವನ್ನು ತೆಗೆದುಕೊಂಡು ನನ್ನನ್ನೇ ನಾನು ಕೊಂದುಕೊಳ್ಳುವೆನು. ಅಥವಾ ಗಿರಿಶಿಖರದಿಂದ ಕೆಳಗೆ ಹಾರುವೆನು ಅಥವಾ ಅಗ್ನಿಪ್ರವೇಶವನ್ನು ಮಾಡುವೆನು.
ರಾಮಂ ಭರ್ತಾರಮುತ್ಸೃಜ್ಯ ನ ತ್ವಹಂ ತ್ವಾಂ ಕಥಂಚನ |
ನ ಹೀನಮುಪತಿಷ್ಠೇಯಂ ಶಾರ್ದೂಲೀ ಕ್ರೋಷ್ಟುಕಂ ಯಥಾ ॥28॥
ಪತಿಯಾದ ರಾಮನನ್ನು ಬಿಟ್ಟು ಹೀನಪುರುಷನಾದ ನಿನ್ನನ್ನು ಹೆಣ್ಣು ಹುಲಿಯು ನರಿಯನ್ನು ಸೇವಿಸುವಂತೆ ಎಂದೂ ಸೇವಿಸುವುದಿಲ್ಲ.
ಮಾರ್ಕಂಡೇಯಃ
ಏತಾದೃಶಂ ವಚಃ ಶ್ರುತ್ವಾ ಲಕ್ಷ್ಮಣಃ ಪ್ರಿಯರಾಘವಃ |
ವಿಧಾಯ ಕರ್ಣೌ ಸದ್ವೃತ್ತಃ ಪ್ರಸ್ಥಿತೋ ಯೇನ ರಾಘವಃ |
ಸ ರಾಮಸ್ಯ ಪದಂ ಗೃಹ್ಯ ಪ್ರಸಸಾರ ಧನುರ್ಧರಃ ॥29॥
ಮಾರ್ಕಂಡೇಯರು ಈ ಮಾತುಗಳನ್ನು ಕೇಳಿ ರಾಮನಿಗೆ ಪ್ರಿಯನಾದವನೂ, ಒಳ್ಳೆಯ ನಡತೆಯಿಂದ ಕೂಡಿದವನೂ ಆದ ಲಕ್ಷ್ಮಣನು ಕಿವಿಗಳನ್ನು ಮುಚ್ಚಿಕೊಂಡು ರಾಮನು ಹೋದ ಕಡೆಗೆ ಹೊರಟನು. ಅವನು ರಾಮನ ಹೆಜ್ಜೆಗಳನ್ನು ಹಿಡಿದುಕೊಂಡು ಧನುರ್ಧರನಾಗಿ ಮುಂದೆ ಸಾಗಿದನು.
ಏತಸ್ಮಿನ್ನಂತರೇ ರಕ್ಷೋ ರಾವಣಃ ಪ್ರತ್ಯದೃಶ್ಯತ |
ಅಭವ್ಯೋ ಭವ್ಯರೂಪೇಣ ಭಸ್ಮಚ್ಛನ್ನ ಇವಾನಲಃ ॥30॥
ಈ ಮಧ್ಯದಲ್ಲಿ ಬೂದಿಯು ಮುಚ್ಚಿದ ಅಗ್ನಿಯಂತೆ ಅಮಂಗಳನಾದ ರಾಕ್ಷಸನಾದ ರಾವಣನು ಮಂಗಳಸ್ವರೂಪವನ್ನು ಧರಿಸಿ ಕಾಣಿಸಿಕೊಂಡನು.
ಯತಿವೇಷಪ್ರತಿಚ್ಛನ್ನೋ ಜಿಹೀರ್ಷುಸ್ತಾಮನಿಂದಿತಾಮ್ |
ಉಪಾಗಚ್ಛತ್ ಸ ವೈದೇಹೀಂ ರಾವಣಃ ಪಾಪನಿಶ್ಚಯಃ ॥31॥
ಪಾಪನಿರ್ಧಾರವುಳ್ಳ ಆ ರಾವಣನು ಯತಿವೇಷದಿಂದ ತನ್ನ ನಿಜಸ್ವರೂಪವನ್ನು ಮರೆಮಾಚಿಕೊಂಡು ಅನಿಂದಿತಳಾದ ಅವಳನ್ನು ಅಪಹರಣ ಮಾಡಲು ಬಯಸಿ ವೈದೇಹಿಯ ಸಮೀಪಕ್ಕೆ ಬಂದನು.
ಸಾ ತಮಾಲಕ್ಷ್ಯ ಸಂಪ್ರಾಪ್ತಂ ಧರ್ಮಜ್ಞಾ ಜನಕಾತ್ಮಜಾ |
ನಿಮಂತ್ರಯಾಮಾಸ ತದಾ ಫಲಮೂಲಾಶನಾದಿಭಿಃ ॥32॥
ಸಮೀಪಕ್ಕೆ ಬಂದ ರಾವಣನನ್ನು ನೋಡಿ ಧರ್ಮಜ್ಞಳಾದ ಆ ಜನಕ ರಾಜಕುಮಾರಿಯು ಅವನಿಗೆ ಫಲಮೂಲಗಳಿಂದ ನಿಮಂತ್ರಣ ಮಾಡಿದಳು.
ಅವಮನ್ಯ ತತಃ ಸರ್ವಂ ಸ್ವರೂಪಂ ಪ್ರತ್ಯಪದ್ಯತ |
ಸಾಂತ್ವಯಾಮಾಸ ವೈದೇಹೀಮಿತಿ ರಾಕ್ಷಸಪುಂಗವಃ ॥33॥
ಆ ರಾಕ್ಷಸಶ್ರೇಷ್ಠನು ಅವೆಲ್ಲವನ್ನೂ ತಿರಸ್ಕರಿಸಿ ತನ್ನ ನಿಜರೂಪವನ್ನು ತೆಗೆದುಕೊಂಡು ವೈದೇಹಿಯನ್ನು ಹೀಗೆ ಸಮಾಧಾನಪಡಿಸಿದನು.

ಸೀತೇ ರಾಕ್ಷಸರಾಜೋಽಹಂ ರಾವಣೋ ನಾಮ ವಿಶ್ರುತಃ |
ಮಮ ಲಂಕಾ ಪುರೀ ನಾಮ್ನಾ ರಮ್ಯಾ ಪಾರೇ ಮಹೋದಧೇಃ ॥34॥
ರಾವಣ ಎಲೌ ಸೀತೆಯೇ, ನಾನು ರಾಕ್ಷಸರಾಜ. ರಾವಣ ಎಂದು ಪ್ರಖ್ಯಾತನಾಗಿದ್ದೇನೆ. ನನ್ನ ಪಟ್ಟಣವು ಲಂಕಾ ಎಂಬ ಹೆಸರನ್ನು ಹೊಂದಿದೆ. ರಮ್ಯವಾದ ಆ ಪಟ್ಟಣವು ಸಮುದ್ರದ ದಡದಲ್ಲಿದೆ.
ತತ್ರ ತ್ವಂ ನರನಾರೀಷು ಶೋಭಿಷ್ಯಸಿ ಮಯಾ ಸಹ |
ಭಾರ್ಯಾ ಮೇ ಭವ ಸುಶ್ರೋಣಿ ತಾಪಸಂ ತ್ಯಜ ರಾಘವಮ್ ॥35॥
ಅಲ್ಲಿ ನೀನು ನರನಾರಿಯರ ಮಧ್ಯದಲ್ಲಿ ನನ್ನ ಜೊತೆಯಲ್ಲಿ ಶೋಭಿಸುವಿ. ಎಲೌ ಸುಶ್ರೋಣಿಯೇ, ನನ್ನ ಪತ್ನಿಯಾಗು. ತಾಪಸನಾದ ರಾಮನನ್ನು ಪರಿತ್ಯಾಗ ಮಾಡು.
ಮಾರ್ಕಂಡೇಯಃ
ಏವಮಾದೀನಿ ವಾಕ್ಯಾನಿ ಶ್ರುತ್ವಾ ತಸ್ಯಾಥ ಜಾನಕೀ |
ಪಿಧಾಯ ಕರ್ಣೌ ಸುಶ್ರೋಣೀ ಮೈವಮಿತ್ಯಬ್ರವೀತ್ ವಚಃ ॥36॥
ಮಾರ್ಕಂಡೇಯರು ಜಾನಕಿಯು ಇವೇ ಮೊದಲಾದ ಅವನ ಮಾತುಗಳನ್ನು ಕೇಳಿ ಅನಂತರ ಕಿವಿಗಳನ್ನು ಮುಚ್ಚಿಕೊಂಡು ಸುಶ್ರೋಣಿಯಾದ ಅವಳು ಹೀಗೆ ಮಾತನಾಡಬೇಡ ಎಂದು ಹೇಳಿದಳು.
ಪ್ರಪತೇದ್ ದ್ಯೌಃ ಸನಕ್ಷತ್ರಾ ಪೃಥಿವೀ ಶಕಲೀಭವೇತ್ |
ಶುಷ್ಯೇತ್ ತೋಯನಿಧೌ ತೋಯಂ ಚಂದ್ರಃ ಶೀತಾಂಶುತಾಂ ತ್ಯಜೇತ್ ॥
ಸೂರ್ಯನಕ್ಷತ್ರಗಳಿಂದ ಕೂಡಿದ ದ್ಯುಲೋಕವು ಕೆಳಗೆ ಬೀಳಬಹುದು. ಪೃಥಿವಿಯು ಚೂರುಚೂರಾಗಬಹುದು. ಸಮುದ್ರದಲ್ಲಿ ನೀರು ಬತ್ತಿಹೋಗಬಹುದು. ಚಂದ್ರನು ತನ್ನ ಶೀತಕಿರಣಗಳನ್ನು ತ್ಯಜಿಸಬಹುದು.
ಉಷ್ಣಾಂಶುತ್ವಮಥೋ ಜಹ್ಯಾದಾದಿತ್ಯೋ ವಹ್ನಿರುಷ್ಣತಾಮ್ |
ಶೈತ್ಯಮಗ್ನಿರಿಯಾನ್ನಾಹಂ ತ್ಯಜೇಯಂ ರಘುನಂದನಮ್ ॥38॥

ಆದಿತ್ಯನು ತನ್ನ ಉಷ್ಣಕಿರಣಗಳನ್ನು ತ್ಯಜಿಸಬಹುದು. ವಹ್ನಿಯು ತನ್ನ ಉಷ್ಣತೆಯನ್ನು ತ್ಯಜಿಸಬಹುದು. ಅಗ್ನಿಯು ಶೀತವಾಗಬಹುದು. ಆದರೆ ನಾನು ರಘುನಂದನನನ್ನು ಬಿಡಲಾರೆ.
ಕಥಂ ಹಿ ಭಿನ್ನಕರಟಂ ಹಸ್ತಿನಂ(ಪದ್ಮಿನಂ) ವನಗೋಚರಮ್ |
ಉಪಸ್ಥಾಯ ಮಹಾನಾಗಂ ಕರೇಣುಃ ಸೂಕರಂ ಸ್ಪೃಶೇತ್ ॥39॥
ವನಗೋಚರವಾದ ಮದಿಸಿದ ದೊಡ್ಡ ಆನೆಯನ್ನು ಭಜಿಸಿದ ಮರಿ ಹೆಣ್ಣಾನೆಯು ಹಂದಿಯನ್ನು ಹೇಗೆ ಮುಟ್ಟೀತು?
ಕಥಂ ಹಿ ಪೀತ್ವಾ ಮಾಧ್ವೀಕಂ ಪೀತ್ವಾ ಚ ಮಧುಮಾಧವೀಮ್ |
ಲೋಭಂ ಸೌವೀರಕೇ ಕುರ್ಯಾನ್ನಾರೀ ಕಾಚಿದಿತಿ ಸ್ಮರೇತ್ ॥40॥
ಜೇನುತುಪ್ಪವನ್ನು ಮತ್ತು ಮಧುಮಾಧವಿಯನ್ನು ಪಾನಮಾಡಿದ ಯಾವ ಹೆಂಗಸು ಅಂಬಲಿಯನ್ನು ಕುಡಿಯಲು ಆಸೆಮಾಡಿ ಸ್ಮರಿಸಬಹುದು?
ಮಾರ್ಕಂಡೇಯಃ
ಇತಿ ತಾ ತಂ ಸಮಾಭಾಷ್ಯ ಪ್ರವಿವೇಶಾಶ್ರಮಂ ತತಃ |
ಕ್ರೋಧಾತ್ ಪ್ರಸ್ಫುರಮಾಣೌಷ್ಠೀ ವಿಧುನ್ವಾನಾ ಕರೌ ಮುಹುಃ |
ತಾಮಭಿದ್ರುತ್ಯ ಸುಶ್ರೋಣೀಂ ರಾವಣಃ ಪ್ರತ್ಯಷೇಧಯತ್ ॥41॥
ಮಾರ್ಕಂಡೇಯರು ಹೀಗೆ ಅವಳು ಅವನನ್ನು ಕುರಿತು ಮಾತನಾಡಿ ಕೈಗಳನ್ನು ನಿಷೇಧ ಸೂಚಕವಾಗಿ ಅಲ್ಲಾಡಿಸುತ್ತಾ ಕ್ರೋಧದಿಂದ ಅದುರುವ ತುಟಿಗಳುಳ್ಳವಳಾಗಿ ಆಶ್ರಮದ ಒಳಭಾಗವನ್ನು ಪ್ರವೇಶಿಸಿದಳು. ರಾವಣನು ಆ ಸುಶ್ರೋಣಿಯ ಕಡೆಗೆ ಓಡಿ ಅವಳನ್ನು ತಡೆದನು.
ಭರ್ತ್ಸಯಿತ್ವಾ ತು ರೂಕ್ಷೇಣ ಸ್ವರೇಣ ಗತಚೇತನಾಮ್ |
ಮೂರ್ಧಜೇಷು ನಿಜಗ್ರಾಹ ಊರ್ಧ್ವಮಾಚಕ್ರಮೇ ತತಃ ॥42॥
ತನ್ನ ಒರಟಾದ ಸ್ವರದಿಂದ ಅವಳನ್ನು ಗದರಿಸಿ ಗತಚೇತನಳಾದ ಅವಳನ್ನು ತಲೆಗೂದಲುಗಳಲ್ಲಿ ಹಿಡಿದು ಮೇಲ್ಮುಖವಾಗಿ ಹಾರಿ ಹೊರಟನು.
ತಾಂ ದದರ್ಶ ತತೋ ಗೃಧ್ರೋ ಜಟಾಯುರ್ಗಿರಿಗೋಚರಃ |
ರುದತೀಂ ರಾಮ ರಾಮೇತಿ ಹ್ರಿಯಮಾಣಾಂ ತಪಸ್ವಿನೀಮ್ ॥43॥
ಪರ್ವತವಾಸಿಯಾದ ಜಟಾಯು ಎಂಬ ಪಕ್ಷಿಯು ರಾಮ ರಾಮ ಎಂದು ಅಳುತ್ತಿದ್ದ ಅಪಹರಿಸಲ್ಪಡುತಿತದ್ದ ತಪಸ್ವಿಯಾದಂತಹ ಆ ಸೀತೆಯನ್ನು ನೋಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಮಾರೀಚವಧ ಸೀತಾಪಹರಣಂ ನಾಮ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ತೆಂಟನೆಯ ಅಧ್ಯಾಯ
ರಾವಣನಿಂದ ಜಟಾಯುವನ್ನು ಕೊಂದು ಲಂಕಾ ಪ್ರವೇಶ. ರಾಮನಿಂದ ಸೀತಾನ್ವೇಷಣೆ. ಕಬಂಧನ ಪ್ರಾಪ್ತಿ ಮತ್ತು ಅವನ ಮೋಚನೆ. ಪಂಪಾತಟದಲ್ಲಿ ಸುಗ್ರೀವನ ಸಖ್ಯವನ್ನು ಬೆಳೆಸಲು ಪ್ರಯಾಣ ಮಾಡಲು ಸೂಚನೆ.
ಮಾರ್ಕಂಡೇಯಃ
ಸಖಾ ದಶರಥಸ್ಯಾಸೀಜ್ಜಟಾಯುರರುಣಾತ್ಮಜಃ |
ಗೃಧ್ರರಾಜೋ ಮಹಾವೀರಃ ಸಂಪಾತಿರ್ಯಸ್ಯ ಸೋದರಃ ॥1॥
ಮಾರ್ಕಂಡೇಯರು ಅರುಣನ ಮಗನಾದ ಜಟಾಯುವು ದಶರಥನ ಸ್ನೇಹಿತನಾಗಿದ್ದನು. ಅವನು ಮಹಾವೀರನಾದ ಪಕ್ಷಿರಾಜನೂ, ಸಂಪಾತಿಪಕ್ಷಿಯ ಸೋದರನೂ ಆಗಿದ್ದನು.
ಸ ದದರ್ಶ ತದಾ ಸೀತಾಂ ರಾವಣಾಂಕಗತಾಂ ಸ್ನುಷಾಮ್ |
ಸಕ್ರೋಧೋಽಭ್ಯದ್ರವತ್ ಪಕ್ಷೀ ರಾವಣಂ ರಾಕ್ಷಸೇಶ್ವರಮ್ ॥2॥
ಆಗ ಅವನು ರಾವಣನ ತೊಡೆಯಲ್ಲಿ ಇದ್ದ ತನ್ನ ಸೊಸೆಯಂತಿದ್ದ ಸೀತೆಯನ್ನು ನೋಡಿದನು. ಪಕ್ಷಿಯಾದ ಅವನು ಕ್ರೋಧದಿಂದ ಕೂಡಿದವನಾಗಿ ರಾಕ್ಷಸೇಶ್ವರನಾದ ರಾವಣನ ಕಡೆಗೆ ಓಡಿದನು.
ಅಥೈನಮಬ್ರವೀದ್ ಗೃಧ್ರೋ ಮುಂಚ ಮುಂಚೇತಿ ಮೈಥಿಲೀಮ್ |
ಧ್ರಿಯಮಾಣೇ ಮಯಿ ಕಥಂ ಹರಿಷ್ಯತಿ ನಿಶಾಚರ ॥3॥
ಅನಂತರ ಆ ಪಕ್ಷಿರಾಜನು ರಾವಣನನ್ನು ಕುರಿತು ಮೈಥಿಲಿಯನ್ನು ಬಿಡು ಬಿಡು. ನಿಶಾಚರನೇ, ನಾನು ಬದುಕಿರುವಾಗ ಹೇಗೆ ಜಾನಕಿಯನ್ನು ಅಪಹರಿಸುವಿ ಎಂದು ಹೇಳಿದನು.
ನ ಹಿ ಮೇ ಮೋಕ್ಷ್ಯಸೇ ಜೀವನ್ ಯದಿ ನೋತ್ಸೃಜಸೇ ವಧೂಮ್ |
ಉಕ್ತ್ವೈವಂ ರಾಕ್ಷಸೇಂದ್ರಂ ತಂ ಚಕರ್ತ ನಖರೈರ್ಭೃಶಮ್ ॥4॥
ವಧುವಾದ ಜಾನಕಿಯನ್ನು ಬಿಡದಿದ್ದರೆ ಜೀವಂತನಾಗಿ ನೀನು ನನ್ನಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ರಾಕ್ಷಸೇಂದ್ರನನ್ನು ಕುರಿತು ಹೀಗೆ ಹೇಳಿ ಅವನನ್ನು ತನ್ನ ಉಗುರುಗಳಿಂದ ಚೆನ್ನಾಗಿ ಗಾಯಗೊಳಿಸಿದನು.
ಪಕ್ಷತುಂಡಪ್ರಹಾರೈಶ್ಚ ಶತಶೋ ಜರ್ಜರೀಕೃತಃ |

ಚಕ್ನಾರ ರುಧಿರಂ ಭೂರಿ ಗಿರಿಃ ಪ್ರಸ್ರವಣೈರಿವ ॥5॥
ಕೊಕ್ಕಿನ ಮತ್ತು ರೆಕ್ಕೆಗಳ ಪ್ರಹಾರಗಳಿಂದ ನೂರಾರು ಬಾರಿ ಜರ್ಜರೀಕೃತನಾದ ರಾವಣನು ಪರ್ವತವು ಮಳೆಯ ನೀರನ್ನು ಕೆಳಗೆ ಸುರಿಸುವಂತೆ ತನ್ನ ಶರೀರದಿಂದ ಬಹಳ ರಕ್ತವನ್ನು ಸುರಿಸಿದನು.
ಸ ವಧ್ಯಮಾನೋ ಗೃಧ್ರೇಣ ರಾಮಪ್ರಿಯಹಿತೈಷಿಣಾ |
ಖಡ್ಗಮಾದಾಯ ಚಿಚ್ಛೇದ ಭುಜೌ ತಸ್ಯ ಪತತ್ರಿಣಃ ॥6॥
ರಾಮನಿಗೆ ಪ್ರಿಯಹಿತಗಳನ್ನು ಮಾಡಲು ಬಯಸಿದ ಪಕ್ಷಿಯಿಂದ ಹೀಗೆ ಪ್ರಹಾರಕ್ಕೆ ಒಳಗಾದ ಅವನು ಖಡ್ಗವನ್ನು ತೆಗೆದುಕೊಂಡು ಆ ಪಕ್ಷಿಯ ಭುಜಗಳನ್ನು ಕತ್ತರಿಸಿದನು.
ನಿಹತ್ಯ ಗೃಧ್ರರಾಜಂ ಸ ಭಿನ್ನಾಭ್ರಶಿಖರೋಪಮಮ್ |
ಊರ್ಧ್ವಮಾಚಕ್ರಮೇ ಸೀತಾಂ ಗೃಹೀತ್ವಾಽಂಕೇನ ರಾಕ್ಷಸಃ ॥7॥
ಆ ರಾಕ್ಷಸನು ಭಿನ್ನವಾದ ಮೋಡದ ಶಿಖರದಂತಿದ್ದ ಗೃಧ್ರರಾಜನನ್ನು ಸಂಹರಿಸಿ ಸೀತೆಯನ್ನು ತೊಡೆಮೇಲೆ ಇಟ್ಟುಕೊಂಡೇ ಆಕಾಶಕ್ಕೆ ಹಾರಿದನು.
ಯತ್ರ ಯತ್ರ ತು ವೈದೇಹೀ ಪಶ್ಯತ್ಯಾಶ್ರಮಮಂಡಲಮ್ |
ಸರೋ ವಾ ಸರಿತೋ ವಾಪಿ ತತ್ರ ಮುಂಚತಿ ಭೂಷಣಮ್ ॥8॥
ವೈದೇಹಿಯು ಎಲ್ಲೆಲ್ಲಿ ಆಶ್ರಮಸ್ಥಾನಗಳನ್ನು, ಸರೋವರವನ್ನು, ನದಿಗಳನ್ನು ಕಾಣುತ್ತಿದ್ದಳೋ ಅಲ್ಲಿ ತನ್ನ ಭೂಷಣಗಳನ್ನು ಕೆಳಗೆ ಹಾಕುತ್ತಿದ್ದಳು.
ಸಾ ದದರ್ಶ ಗಿರಿಪ್ರಸ್ಥೇ ಪಂಚ ವಾನರಪುಂಗವಾನ್ |
ತತ್ರ ವಾಸೋ ಮಹದ್ದಿವ್ಯಮುತ್ಸಸರ್ಜ ಮನಸ್ವಿನೀ ॥9॥
ಅವಳು ಒಂದು ಪರ್ವತದ ತಪ್ಪಲಿನಲ್ಲಿ ಐದುಜನ ವಾನರಶ್ರೇಷ್ಠರನ್ನು ನೋಡಿದಳು. ಧೈರ್ಯಶಾಲಿಯಾದ ಅವಳು ಅಲ್ಲಿ ತನ್ನ ದಿವ್ಯವಾದ ಉತ್ತರೀಯವನ್ನು ಕೆಳಗೆ ಹಾಕಿದಳು.
ತತ್ತೇಷಾಂ ವಾನರೇಂದ್ರಾಣಾಂ ಪಪಾತ ಪವನೋದ್ಧತಮ್ |
ಮಧ್ಯೇ ಸುಪೀತಂ ಪಂಚಾನಾಂ ವಿದ್ಯುನ್ಮೇಘಾಂತರೇ ಯಥಾ ॥10॥
ಮೋಡದ ಮಧ್ಯದಲ್ಲಿ ಕಾಣುವ ಮಿಂಚಿನಂತಿದ್ದ ಆ ಉತ್ತರೀಯವು ಗಾಳಿಯಿಂದ ಹೊಡೆಯಲ್ಪಟ್ಟು ಆ ಐವರು ವಾನರೇಂದ್ರರ ಮಧ್ಯೆ ಬಿದ್ದಿತು.
ಏವಂ ಹೃತಾಯಾಂ ವೈದೇಹ್ಯಾಂ ರಾಮೋ ಹತ್ವಾ ಮಹಾಮೃಗಮ್ |
ನಿವೃತ್ತೋ ದದೃಶೇ ಧೀಮಾನ್‌ಭ್ರಾತರಂ ಲಕ್ಷ್ಮಣಂ ತಥಾ |
ಕಥಮುತ್ಸೃಜ್ಯ ವೈದೇಹೀಂ ವನೇ ರಾಕ್ಷಸಸೇವಿತೇ ॥11॥
ಇತಿ ತಂ ಭ್ರಾತರಂ ದೃಷ್ಟ್ವಾ ಪ್ರಾಪ್ತೋಽಸೀತಿ ವ್ಯಗರ್ಹಯತ್ ॥12॥
ಇತ್ತ ಕಡೆ ವೈದೇಹಿಯು ಅಪಹರಿಸಲ್ಪಡುತ್ತಿರಲು ರಾಮನು ಮಹಾಮೃಗವನ್ನು ಕೊಂದು ಹಿಂದಿರುಗಿ ಲಕ್ಷ್ಮಣನನ್ನು ನೋಡಿ ರಾಕ್ಷಸ ಪೀಡಿತವಾದ ಕಾಡಿನಲ್ಲಿ ವೈದೇಹಿಯೊಬ್ಬಳನ್ನೇ ಏಕೆ ಬಿಟ್ಟು ಬಂದೆ ಎಂದು ಕೇಳಿ ಲಕ್ಷ್ಮಣನನ್ನು ನಿಂದಿಸಿದನು.
ಮೃಗರೂಪಧರೇಣಾಥ ರಕ್ಷಸಾ ಸೋಽಪಕರ್ಷಣಮ್ |
ಭ್ರಾತುರಾಗಮನಂ ಚೈವ ಚಿಂತಯನ್ ಪರ್ಯತಪ್ಯತ |
ಗರ್ಹಯನ್ನೇವ ರಾಮಸ್ತು ತ್ವರಿತಸ್ತಂ ಸಮಾಸದತ್ ॥13॥
ಅನಂತರ ಅವನು ಮೃಗರೂಪವನ್ನು ಧರಿಸಿದ ರಾಕ್ಷಸನಿಂದ ತನ್ನ ಅಪಕರ್ಷಣವನ್ನು ಮತ್ತು ಲಕ್ಷ್ಮಣನ ಆಗಮನವನ್ನು ಚಿಂತಿಸಿ ತಾಪವನ್ನು ಪಟ್ಟನು. ಅವನನ್ನು ನಿಂದಿಸುತ್ತಲೇ ರಾಮನು ಶೀಘ್ರವಾಗಿ ಅವನ ಬಳಿಗೆ ಬಂದನು.
ಶ್ರೀರಾಮಃ
ಅಪಿ ಜೀವತಿ ವೈದೇಹೀ ನೇತಿ ಪಶ್ಯಾಮಿ ಲಕ್ಷ್ಮಣ ॥14॥
ತಸ್ಯ ತತ್‌ಸರ್ವಮಾಚಖ್ಯೌ ಸೀತಾಯಾ ಲಕ್ಷ್ಮಣೋ ವಚಃ |
ಯದುಕ್ತವತ್ಯಸದೃಶಂ ವೈದೇಹೀ ಪಶ್ಚಿಮಂ ವಚಃ ॥15॥
ಶ್ರೀರಾಮ ಲಕ್ಷ್ಮಣನೇ, ಸೀತೆಯು ಬದುಕಿದ್ದಾಳೆಯೋ ಇಲ್ಲವೋ ಎಂದು ನೋಡುತ್ತೇನೆ ಎಂದು ಹೇಳಿದನು. ಲಕ್ಷ್ಮಣನು ವೈದೇಹಿಯು ಆಡಿದ ಅಸದೃಶವಾದ ಹೀನವಾದ ಮಾತುಗಳನ್ನೆಲ್ಲಾ ರಾಮನಿಗೆ ಹೇಳಿದನು.
ದಹ್ಯಮಾನೇನ ತು ಹೃದಾ ರಾಮೋಽಭ್ಯಪತದಾಶ್ರಮಮ್ |
ಸ ದದರ್ಶ ತದಾ ಗೃಧ್ರಂ ನಿಹತಂ ಪರ್ವತೋಪಮಮ್ ॥16॥
ಹೃದಯವು ದಹಿಸಿ ಹೋಗುತ್ತಿದ್ದ ರಾಮನು ಬೇಗ ಆಶ್ರಮಕ್ಕೆ ಹಿಂದಿರುಗಿ ದಾರಿಯಲ್ಲಿ ರಾವಣನಿಂದ ಏಟು ತಿಂದು ಬಿದ್ದಿದ್ದ ಪರ್ವತದಂತಿದ್ದ ಪಕ್ಷಿಯನ್ನು ನೋಡಿದನು.
ರಾಕ್ಷಸಂ ಶಂಕಮಾನಸ್ತಂ ವಿಕೃಷ್ಯ ಬಲವತ್ ಧನುಃ |
ಅಭ್ಯಧಾವತ ಕಾಕುತ್ಸ್ಥಸ್ತತಸ್ತಂ ಸಹಲಕ್ಷ್ಮಣಃ |
ಸ ತಾವುವಾಚ ತೇಜಸ್ವೀ ಸಹಿತೌ ರಾಮಲಕ್ಷ್ಮಣೌ ॥17॥
ಗೃಧ್ರರಾಜೋಽಸ್ಮಿ ಭದ್ರಂ ವಾಂ ಸಖಾ ದಶರಥಸ್ಯ ವೈ ॥18॥
ರಾಮನು ಆ ಪಕ್ಷಿಯನ್ನು ರಾಕ್ಷಸನೆಂದು ಶಂಕಿಸಿ ಬಲಿಷ್ಠವಾದ ಧನುಸ್ಸನ್ನು ಎಳೆದು ಅವನ ಕಡೆಗೆ ಲಕ್ಷ್ಮಣನ ಜೊತೆಯಲ್ಲಿ ಓಡಿದನು. ಆಗ ತೇಜಸ್ವಿಯಾದ ಆ ಪಕ್ಷಿಯು ಒಟ್ಟುಗೂಡಿದ ರಾಮಲಕ್ಷ್ಮಣರನ್ನು ಕುರಿತು ನಾನು ದಶರಥನ ಸ್ನೇಹಿತನಾದ ಪಕ್ಷಿರಾಜನಾಗಿದ್ದೇನೆ.

ನಿಮ್ಮಿಬ್ಬರಿಗೂ ಮಂಗಳವಾಗಲಿ ಎಂದು ಹೇಳಿತು.
ತಸ್ಯ ತದ್ವಚನಂ ಶ್ರುತ್ವಾ ಸಂಗೃಹ್ಯ ಧನುಷೀ ಶುಭೇ |
ಕೋಽಯಂ ಪಿತರಮಸ್ಮಾಕಂ ನಾಮ್ನಾಽಽಹೇತ್ಯೂಚತುಶ್ಚ ತೌ |
ತತೋ ದದೃಶತುಸ್ತೌ ತಂ ಛಿನ್ನಪಕ್ಷದ್ವಯಂ ಖಗಮ್ ॥19॥
ತಯೋಃ ಶಶಂಸ ಗೃಧ್ರಸ್ತು ಸೀತಾರ್ಥೇ ರಾವಣಾದ್ ವಧಮ್ ॥20॥
ಜಟಾಯುವಿನ ಆ ಮಾತನ್ನು ಕೇಳಿ ಶುಭವಾದ ಧನುಸ್ಸುಗಳನ್ನು ಹಿಂದಕ್ಕಿಟ್ಟು ನಮ್ಮ ತಂದೆಯ ಹೆಸರನ್ನು ಹೇಳುತ್ತಿರುವ ಇವನು ಯಾರು ಎಂದು ಪರಸ್ಪರವಾಗಿ ಮಾತನಾಡಿಕೊಂಡರು. ಅನಂತರ ಅವರು ಎರಡು ರೆಕ್ಕೆಗಳೂ ಕತ್ತರಿಸಲ್ಪಟ್ಟ ಪಕ್ಷಿಯನ್ನು ನೋಡಿದರು. ಆ ಪಕ್ಷಿರಾಜನು ಸೀತೆಯ ಸಲುವಾಗಿ ಹೋರಾಡಿ ರಾವಣನಿಂದ ಪ್ರಾಪ್ತವಾದ ತನ್ನ ವಧೆಯನ್ನು ಅವರಿಬ್ಬರಿಗೂ ಹೇಳಿದನು.
ಅಪೃಚ್ಛದ್ ರಾಘವೋ ಗೃಧ್ರಂ ರಾವಣಃ ಕಾಂ ದಿಶಂ ಗತಃ |
ತಸ್ಯ ಗೃಧ್ರಃ ಶಿರಃಕಂಪೈರಾಚಚಕ್ಷೇ ಮಮಾರ ಚ ॥21॥
ರಾಮನು ಆ ಪಕ್ಷಿಯನ್ನು ಕುರಿತು ರಾವಣನು ಯಾವ ದಿಕ್ಕಿಗೆ ಹೋದನು ಎಂದು ಕೇಳಿದನು. ಅದಕ್ಕೆ ಆ ಪಕ್ಷಿಯು ತಲೆಯ ಕಂಪನದಿಂದಲೇ ದಿಕ್ಕನ್ನು ಹೇಳಿ ಮರಣವನ್ನು ಹೊಂದಿತು.
ದಕ್ಷಿಣಾಮಿತಿ ಕಾಕುತ್ಸ್ಥೋವಿದಿತ್ವಾಽಸ್ಯ ತದಿಂಗಿತಮ್ |
ಸಂಸ್ಕಾರಂ ಲಂಭಯಾಮಾಸ ಸಖಾಯಂ ಪೂಜಯನ್ ಪಿತುಃ ॥22॥
ಅದರ ಸೂಚನೆಯಿಂದ ರಾಮನು ದಕ್ಷಿಣದಿಕ್ಕು ಎಂದು ಅದರ ಇಂಗಿತವನ್ನು ತಿಳಿದು ತಂದೆಯ ಸೇನೇಹಿತನಾದ ಆ ಗೃಧ್ರರಾಜನಿಗೆ ಉತ್ತರಕ್ರಿಯೆಗಳನ್ನು ಮಾಡಿದನು.
ತತೋ ದೃಷ್ಟ್ವಾಽಽಶ್ರಮಪದಂ ವ್ಯಪವಿದ್ಧಬೃಸೀಕಟಮ್ |
ವಿಧ್ವಸ್ತಕಲಶಂ ಶೂನ್ಯಂ ಗೋಮಾಯುಶತಸಂಕುಲಮ್ ॥23॥
ಅನಂತರ ಆಶ್ರಮದ ಪ್ರದೇಶಕ್ಕೆ ಬಂದು ದರ್ಭೆ, ಚಾಪೆಗಳು, ಆಸನಗಳು, ಒಡೆದ ಕಮಂಡಲುಗಳು ಎಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ನರಿಗಳಿಂದ ತುಂಬಿದ ಪ್ರಿಯೆಯಿಂದ ಶೂನ್ಯವಾದ ಆ ಆಶ್ರಮವನ್ನು ನೋಡಿದನು.
ದುಃಖಶೋಕಸಮಾವಿಷ್ಟೌ ವೈದೇಹೀಹರಣಾರ್ದಿತೌ |
ಜಗ್ಮತುರ್ದಂಡಕಾರಣ್ಯಂ ದಕ್ಷಿಣೇನ ಪರಂತಪೌ ॥24॥
ಪರಂತಪರಾದ ರಾಮಲಕ್ಷ್ಮಣರು ಜಾನಕೀಹರಣದಿಂದ ಹಿಂಸಿತರಾಗಿ ದುಃಖಶೋಕಗಳನ್ನು ಹೊಂದಿದವರಾಗಿ ದಕ್ಷಿಣಮಾರ್ಗದಿಂದ ದಂಡಕಾರಣ್ಯಕ್ಕೆ ಹೋದರು.
ವನೇ ಮಹತಿ ತಸ್ಮಿಂಸ್ತು ರಾಮಃ ಸೌಮಿತ್ರಿಣಾ ಸಹ |
ದದರ್ಶ ಮೃಗಯೂಥಾನಿ ದ್ರವಮಾಣಾನಿ ಸರ್ವಶಃ ॥25॥
ಲಕ್ಷ್ಮಣನಿಂದ ಒಡಗೂಡಿದ ರಾಮನು ಆ ದೊಡ್ಡ ವನದಲ್ಲಿ ಎಲ್ಲ ಕಡೆಗಳಲ್ಲಿಯೂ ಓಡಾಡುತ್ತಿರುವ ಜಿಂಕೆಗಳ ಗುಂಪುಗಳನ್ನು ನೋಡಿದನು.
ಶಬ್ದಂ ಚ ಘೋರಂ ಸತ್ತ್ವಾನಾಂ ದಾವಾಗ್ನೇರಿವ ವರ್ಧತಃ |
ಅಪಶ್ಯೇತಾಂ ಮುಹೂರ್ತಾಚ್ಚ ಕಬಂಧಂ ಘೋರದರ್ಶನಮ್ ॥26॥
ಅಲ್ಲಿ ಅಭಿವೃದ್ಧಿಯನ್ನು ಹೊಂದುವ ದಾವಾಗ್ನಿಯ ಶಬ್ದದಂತೆ ಇರುವ ಕ್ರೂರ ಮೃಗಗಳ ನಾದಗಳನ್ನು ಅವರು ಕೇಳಿದರು. ಒಂದುಮುಹೂರ್ತದಲ್ಲಿ ಅವರು ಘೋರವಾದ ಆಕಾರವನ್ನು ಹೊಂದಿದ್ದ ಕಬಂಧನನ್ನು ನೋಡಿದರು.
ಮೇಘಪರ್ವತಸಂಕಾಶಂ ಶಾಲಸ್ಕಂಧಂ ಮಹಾಭುಜಮ್ |
ಉರೋಗತವಿಶಾಲಾಕ್ಷಂ ಮಹೋದರಮಹಾಮುಖಮ್ ॥27॥
ಮೇಘದಂತೆ, ಪರ್ವತದಂತೆ ಕಾಂತಿಯನ್ನು ಹೊಂದಿದ್ದ ಸಾಲವೃಕ್ಷದಂತೆ ಉನ್ನತವಾದ ಮಹಾಭುಜನಾದ ಉದರದಲ್ಲಿ ಮುಖವು ಅಡಗಿ ವಕ್ಷಸ್ಸ್ಥಲದಲ್ಲಿ ವಿಶಾಲವಾದ ಕಣ್ಣನ್ನು ಹೊಂದಿದ್ದ ಆ ಕಬಂದನನ್ನು ನೋಡಿದರು.
ಯದೃಚ್ಛಯಾಥ ತದ್ರಕ್ಷಃ ಕರೇ ಜಗ್ರಾಹ ಲಕ್ಷ್ಮಣಮ್|
ವಿಷಾದಮಗಮತ್ ಸದ್ಯಃ ಸೌಮಿತ್ರಿರಥ ಭಾರತ ॥28॥
ಭಾರತನೇ, ಆ ರಾಕ್ಷಸನು ಯದೃಚ್ಛೆಯಿಂದ ತನ್ನ ಕೈಗಳನ್ನು ಚಾಚಿ ಲಕ್ಷ್ಮಣನನ್ನು ಹಿಡಿದುಕೊಂಡನು. ಆಗ ಸೌಮಿತ್ರಿಯು ತಕ್ಷಣದಲ್ಲಿಯೇ ವಿಷಾದವನ್ನು ಹೊಂದಿದನು.
ಸ ರಾಮಮಭಿಸಂಪ್ರೇಕ್ಷ್ಯ ಕೃಷ್ಯತೇ ಯೇನ ತನ್ಮುಖಮ್ |
ವಿಷಣ್ಣಶ್ಚಾಬ್ರವೀದ್ ರಾಮಂ ಪಶ್ಯಾವಸ್ಥಾಮಿಮಾಂ ಮಮ ॥29॥
ಹರಣಂ ಚೈವ ವೈದೇಹ್ಯಾ ಮಮ ಚಾಯಮುಪಪ್ಲವಃ |
ರಾಜ್ಯಭ್ರಂಶಶ್ಚ ಭವತಸ್ತಾತಸ್ಯ ಮರಣಂ ತಥಾ ॥30॥
ಕಬಂಧನು ತನ್ನ ಕೈಗಳಿಂದ ತನ್ನ ಬಾಯಿಯು ಇದ್ದ ಹೊಟ್ಟೆಯ ಕಡೆಗೆ ಲಕ್ಷ್ಮಣನನ್ನು ಎಳೆಯುತ್ತಿರಲು ಲಕ್ಷ್ಮಣನು ರಾಮನನ್ನು ನೋಡಿ ಈ ನನ್ನ ಅವಸ್ಥೆಯನ್ನು ನೋಡು. ವೈದೇಹಿಯ ಅಪಹರಣ ಮತ್ತು ನನಗೆ ಒದಗಿದ ಈ ಉಪದ್ರವ, ನಿನ್ನ ರಾಜ್ಯಭ್ರಂಶ, ತಂದೆಯ ಮರಣ (ಇವೆಲ್ಲವನ್ನೂ ಗಮನಿಸು) ಎಂದು ಹೇಳಿದನು.
ನಾಹಂ ತ್ವಾಂ ಸಹ ವೈದೇಹ್ಯಾ ಸಮೇತಂ ಕೋಸಲಾಗತಮ್ |
ದ್ರಕ್ಷ್ಯಾಮಿ ಪೃಥಿವೀರಾಜ್ಯೇ ಪಿತೃಪೈತಾಮಹೇ ಸ್ಥಿತಮ್ ॥31॥

ನಾನು ಇನ್ನೊಮ್ಮೆ ಕೋಸಲದೇಶದ ರಾಜಧಾನಿಯಲ್ಲಿ ಪಿತೃಪಿತಾಮಹರಿಂದ ಬಂದ ಪೃಥಿವೀರಾಜ್ಯದಲ್ಲಿ ಜಾನಕಿಯ ಜೊತೆಯಲ್ಲಿ ಕುಳಿತಿರುವ ನಿನ್ನನ್ನು ನೋಡುವುದಿಲ್ಲ.
ದ್ರಕ್ಷ್ಯಂತ್ಯಾರ್ಯಸ್ಯ ಧನ್ಯಾ ಯೇ ಕುಶಲಾಜಶಮೀದಲೈಃ |
ಅಭಿಷಿಕ್ತಸ್ಯ ವದನಂ ಸೋಮಂ ಶಾಂತಘನಂ ಯಥಾ ॥32॥
ಯಾರು ಕುಶ, ಲಾಜ ಮತ್ತು ಶಮೀಪತ್ರಗಳಿಂದ ಅಭಿಷಿಕ್ತವಾದ ಅಣ್ಣನಾದ ನಿನ್ನ ಮುಖವನ್ನು ಮೋಡನಿಲ್ಲದ ಚಂದ್ರನನ್ನು ನೋಡಿದಂತೆ ನೋಡುವವರೋ ಅವರೇ ಧನ್ಯರು.
ಏವಂ ಬಹುವಿಧಂ ಧೀಮಾನ್ ವಿಲಲಾಪ ಸ ಲಕ್ಷ್ಮಣಃ |
ತಮುವಾಚಾಥ ಕಾಕುತ್ಸ್ಥಃ ಸಂಭ್ರಮೇಷ್ವಪ್ಯಸಂಭ್ರಮಃ ॥33॥
ಹೀಗೆ ಮೇಧಾವಿಯಾದ ಲಕ್ಷ್ಮಣನು ಬಹುವಿಧವಾಗಿ ವಿಲಾಪವನ್ನು ಮಾಡಿದನು. ಆಗ ಗಾಬರಿಯಾಗುವ ಸಂದರ್ಭದಲ್ಲಿಯೂ ಗಾಬರಿಗೊಳ್ಳದೇ ಸಮಾಧಾನದಿಂದಿರುವ ರಾಮನು ಅವನನ್ನು ಕುರಿತು ಮಾತನಾಡಿದನು.
ಮಾ ವಿಷೀದ ನರವ್ಯಾಘ್ರ ನೈಷ ಕಶ್ಚಿನ್ಮಯಿ ಸ್ಥಿತೇ |
ಛಿಂಧ್ಯಸ್ಯ ದಕ್ಷಿಣಂ ಬಾಹುಂ ಛಿನ್ನಃ ಸವ್ಯೋ ಮಯಾ ಭುಜಃ ॥34॥
ನರವ್ಯಾಘ್ರನೇ, ವಿಷಾದಪಡಬೇಡ. ನಾನು ಇರುವಾಗ ಈ ಕಬಂಧನು ಯಾವ ವಸ್ತುವೂ ಅಲ್ಲ. ಅವನ ಬಲಭುಜವನ್ನು ಕತ್ತರಿಸು, ನಾನು ಅವನ ಎಡಭುಜವನ್ನು ಕತ್ತರಿಸಿದ್ದೇನೆ.
ಮಾರ್ಕಂಡೇಯಃ
ಇತ್ಯೇವಂ ವದತಾ ತಸ್ಯ ಭುಜೋ ರಾಮೇಣ ಪಾತಿತಃ |
ಖಡ್ಗೇನ ಭೃಶತೀಕ್ಷ್ಣೇನ ನಿಕೃತ್ತಸ್ತಿಲಕಾಂಡವತ್ ॥35॥
ಹೀಗೆ ಮಾತನಾಡುತ್ತಾ ರಾಮನು ಬಹಳ ನಿಶಿತವಾದ ತನ್ನ ಖಡ್ಗದಿಂದ ಅವನ ಎಡಭುಜವನ್ನು ಎಳ್ಳಿನ ಕಡ್ಡಿಯಂತೆ ಕತ್ತರಿಸಿ ಬೀಳಿಸಿದನು.
ತತೋಽಸ್ಯ ದಕ್ಷಿಣಂ ಬಾಹುಂ ಖಡ್ಗೇನಾಜಘ್ನಿವಾನ್ ಬಲೀ |
ಸೌಮಿತ್ರಿರಪಿ ಸಂಪ್ರೇಕ್ಷ್ಯ ಭ್ರಾತರಂ ರಾಘವಂ ಸ್ಥಿತಮ್ ॥36॥
ಅನಂತರ ಬಲಿಷ್ಠನಾದ ಲಕ್ಷ್ಮಣನೂ ಕೂಡ ಅಣ್ಣನಾದ ರಾಮನು ಸ್ಥಿರವಾಗಿರುವುದನ್ನು ನೋಡಿ ತನ್ನ ಖಡ್ಗದಿಂದ ಕಬಂಧನ ದಕ್ಷಿಣಬಾಹುವನ್ನು ಕತ್ತರಿಸಿದನು.
ಪುನರ್ಜಘಾನ ಪಾರ್ಶ್ವೇ ವೈ ತದ್ರುಕ್ಣೋ ಲಕ್ಷ್ಮಣೋ ಭೃಶಮ್ |
ಗತಾಸುರಪತದ್ ಭೂಮೌ ಕಬಂಧಃ ಸುಮಹಾಂಸ್ತತಃ ॥37॥
ಪುನಃ ಲಕ್ಷ್ಮಣನು ಆ ಕಬಂಧನ ಪಾರ್ಶ್ವಕ್ಕೆ ಹೊಡೆದನು. ಆ ರಾಕ್ಷಸನು ಪ್ರಾಣಗಳನ್ನು ಕಳೆದುಕೊಂಡು ಆ ದೊಡ್ಡ ರೂಪದಿಂದ ಭೂಮಿಯಲ್ಲಿ ಬಿದ್ದನು.
ತಸ್ಯ ದೇಹಾದ್ ವಿನಿಃಸೃತ್ಯ ಪುರುಷೋ ದಿವ್ಯದರ್ಶನಃ |
ದದೃಶೇ ದಿವಮಾಸ್ಥಾಯ ದಿವಿ ಸೂರ್ಯ ಇವ ಜ್ವಲನ್ ॥38॥
ಅವನ ದೇಹದಿಂದ ಹೊರಟ ದಿವ್ಯಾಕೃತಿಯ ಒಬ್ಬ ಪುರುಷನು ಆಕಾಶದಲ್ಲಿ ಸೂರ್ಯನು ಜ್ವಲಿಸುವಂತೆ ಆಕಾಶವನ್ನು ಆಶ್ರಯಿಸಿ ನಿಂತಿರುವುದು ಕಾಣಬಂದಿತು.
ಪಪ್ರಚ್ಛ ರಾಮಸ್ತಂ ವಾಗ್ಮೀ ಕಸ್ತ್ವಂ ಪ್ರಬ್ರೂಹಿ ಪೃಚ್ಛತಃ |
ಕಾಮಯಾ ಕಿಮಿದಂ ಚಿತ್ರಮಾಶ್ಚರ್ಯಂ ಪ್ರತಿಭಾತಿ ಮೇ ॥39॥
ವಾಗ್ಮಿಯಾದ ರಾಮನು ಅವನನ್ನು ಕುರಿತು ನೀನು ಯಾರು ಎಂದು ಕೇಳುತ್ತಿರುವ ನನಗೆ ಮನಃಪೂರ್ವಕವಾಗಿ ಉತ್ತರವನ್ನು ಹೇಳು. ಇದು ಆಶ್ಚರ್ಯವೆಂದು ನನಗೆ ತೋರುತ್ತಿದೆ ಎಂದು ಕೇಳಿದನು.
ತಸ್ಯಾಚಚಕ್ಷೇ ಗಂಧರ್ವೋ ವಿಶ್ವಾವಸುರಹಂ ನೃಪ |
ಪ್ರಾಪ್ತೋ ಬ್ರಾಹ್ಮಣಶಾಪೇನ ಯೋನಿಂ ರಾಕ್ಷಸಸೇವಿತಾಮ್ ॥40॥
ರಾಮನನ್ನು ಕುರಿತು ಆ ಪುರುಷನು ರಾಜನೇ, ನಾನು ವಿಶ್ವಾವಸು ಎಂಬ ಗಂಧರ್ವ. ಬ್ರಾಹ್ಮಣಶಾಪದಿಂದ ನಾನು ರಾಕ್ಷಸಯೋನಿಯನ್ನು ಹೊಂದಿದೆನು.
ರಾವಣೇನ ಹೃತಾ ಸೀತಾ ರಾಜ್ಞಾ ಲಂಕಾಧಿವಾಸಿನಾ |
ಸುಗ್ರೀವಮಭಿಗಚ್ಛಸ್ವ ಸ ತೇ ಸಾಹ್ಯಂ ಕರಿಷ್ಯತಿ ॥41॥
ಲಂಕಾನಿವಾಸಿಯಾದ, ಲಂಕಾಪತಿಯಾದ ರಾವಣನಿಂದ ಸೀತೆಯು ಅಪಹರಿಸಲ್ಪಟ್ಟಿದ್ದಾಳೆ. ನೀನು ಸುಗ್ರೀವನ ಕಡೆಗೆ ಹೋಗು. ಅವನು ನಿನಗೆ ಸಹಾಯವನ್ನು ಮಾಡುವನು.
ಏಷಾ ಪಂಪಾ ಶಿವಜಲಾ ಹಂಸಕಾರಂಡವೈರ್ಯುತಾ |
ಋಷ್ಯಮೂಕಸ್ಯ ಶೈಲಸ್ಯ ಸನ್ನಿಕರ್ಷೇ ತಟಾಕಿನೀ ॥42॥
ಋಷ್ಯಮೂಕಪರ್ವತದ ಸಮೀಪದಲ್ಲಿ ಹಂಸಕಾರಂಡವಾದಿ ಜಲಪಕ್ಷಿಗಳಿಂದ ಕೂಡಿದ ಪವಿತ್ರವಾದ ಜಲವುಳ್ಳ ಈ ಪಂಪಾಸರೋವರವಿದೆ.
ವಸತೇ ತತ್ರ ಸುಗ್ರೀವಶ್ಚತುರ್ಭಿಃ ಸಚಿವೈಃ ಸಹ |
ಭ್ರಾತಾ ವಾನರರಾಜಸ್ಯ ವಾಲಿನೋ ಹೇಮಮಾಲಿನಃ ॥43॥
ಅಲ್ಲಿ ಸುಗ್ರೀವನು ತನ್ನ ನಾಲ್ವರು ಮಂತ್ರಿಗಳ ಜೊತೆಯಲ್ಲಿ ವಾಸಮಾಡುತ್ತಾನೆ. ಅವನು ಹೇಮಮಾಲೆಯನ್ನು ಧರಿಸಿದ

ವಾನರರಾಜನಾದ ವಾಲಿಯ ತಮ್ಮ.
ತೇನ ತ್ವಂ ಸಹ ಸಂಗಮ್ಯ ದುಃಖಮೂಲಂ ನಿವೇದಯ |
ಏತಾವಚ್ಛಕ್ಯಮಸ್ಮಾಭಿರ್ವಕ್ತುಂ ದ್ರಷ್ಟಾಸಿ ಜಾನಕೀಮ್ |
ಧ್ರುವಂ ವಾನರರಾಜಸ್ಯ ವಿದಿತೋ ರಾವಣಾದಯಃ ||44||
ನೀನು ಅವನ ಸಮಾಗಮವನ್ನು ಹೊಂದಿ ನಿನ್ನ ದುಃಖಕ್ಕೆ ಕಾರಣವನ್ನು ಅವನಿಗೆ ತಿಳಿಸು. ನೀನು ಜಾನಕಿಯನ್ನು ನೋಡುವಿ ಎಂದು ಇಷ್ಟೇ ನಾನು ಹೇಳಲು ಸಾಧ್ಯ. ಖಂಡಿತವಾಗಿ ರಾವಣಾದಿಗಳು ವಾನರರಾಜನಾದ ವಾಲಿಗೆ ಪರಿಚಿತರಾದವರು.
ಇತ್ಯುಕ್ತ್ವಾಂತರ್ಹಿತೋ ದಿವ್ಯಃ ಪುರುಷಃ ಸ ಮಹಾಪ್ರಭಃ |
ವಿಸ್ಮಯಂ ಜಗ್ಮತುಶ್ಚೋಭೌ ಪ್ರವೀರೌ ರಾಮಲಕ್ಷ್ಮಣೌ ||45||
ಹೀಗೆ ಹೇಳಿ ಮಹಾಪ್ರಭೆಯುಳ್ಳ ಆ ದಿವ್ಯಪುರುಷನು ಅಂತರ್ಧಾನವನ್ನು ಹೊಂದಿದನು. ವೀರರಾದ ಆ ರಾಮಲಕ್ಷ್ಮಣರಿಬ್ಬರೂ ಆಶ್ಚರ್ಯವನ್ನು ಹೊಂದಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||
|| ಇತಿ ರಾಮೋಪಖ್ಯಾನಪರ್ವಣಿ ಕಬಂಧಹನನಂ ನಾಮ ಸಪ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಅರವತ್ತೊಂಬತ್ತನೆಯ ಅಧ್ಯಾಯ
ರಾಮ-ಸುಗ್ರೀವರ ಸಖ್ಯ. ವಾಲಿಯ ಹನನ.
ರಾವಣನಿಂದ ಅಶೋಕವನದಲ್ಲಿ ಸೀತೆಯ ಸ್ಥಾಪನೆ.
ರಾಕ್ಷಸಿಯರ ತರ್ಜನ ಮತ್ತು ತ್ರಿಜಟೆಯಿಂದ ಸೀತೆಯ ಸಾಂತ್ವನ.
ಮಾರ್ಕಂಡೇಯಃ
ತತೋಽವಿದೂರೇ ನಳಿನೀಂ ಪ್ರಭೂತಕಮಲೋತ್ಪಲಾಮ್ |
ಸೀತಾಹರಣದುಃಖಾರ್ತಃ ಪಂಪಾಂ ರಾಮಃ ಸಮಾಸದತ್ ||1||
ಮಾರ್ಕಂಡೇಯರು ಅನಂತರ ಸೀತಾಪಹರಣ ದುಃಖದಿಂದ ಆರ್ತನಾದ ರಾಮನು ಸಮೀಪದಲ್ಲೇ ಇದ್ದ ಅನೇಕ ಕಮಲ ಮತ್ತು ನೈದಿಲೆ ಪುಷ್ಪಗಳಿಂದ ಕೂಡಿದ್ದ ಪಂಪಾ ಸರೋವರವನ್ನು ತಲುಪಿದನು.
ಮಾರುತೇನ ಸುಶೀತೇನ ಸುಖೇನಾಮೃತಗಂಧಿನಾ |
ಸೇವ್ಯಮಾನೋ ವನೇ ತಸ್ಮಿನ್ ಜಗಾಮ ಮನಸಾ ಪ್ರಿಯಾಮ್ ||2||
ಸುಶೀತವಾದ, ಸುಗಂಧಯುಕ್ತವಾದ, ಸುಖಕರವಾದ ಮಾರುತದಿಂದ ಸೇವಿಸಲ್ಪಟ್ಟ ಅವನು ಆ ಕಾಡಿನಲ್ಲಿ ತನ್ನ ಪ್ರಿಯೆಯನ್ನು ಮನಸ್ಸಿನಲ್ಲಿಯೇ ಸ್ಮರಿಸಿದನು.
ವಿಲಲಾಪ ಸ ರಾಜೇಂದ್ರಸ್ತತ್ರ ಕಾಂತಾಮನುಸ್ಮರನ್ |
ಕಾಮಬಾಣಾಭಿಸಂತಪ್ತಃ ಸೌಮಿತ್ರಿಸ್ತಮಥಾಬ್ರವೀತ್ ||3||
ರಾಜೇಂದ್ರನಾದ ರಾಮನು ಅಲ್ಲಿ ತನ್ನ ಕಾಂತೆಯನ್ನು ಸ್ಮರಿಸುತ್ತಾ ಕಾಮಬಾಣಗಳಿಂದ ತಪ್ತನಾಗಿ ವಿಲಾಪವನ್ನು ಮಾಡಿದನು. ಆಗ ಲಕ್ಷ್ಮಣನು ಅವನನ್ನು ಕುರಿತು ಹೀಗೆ ಹೇಳಿದನು.
ನ ತ್ವಾಮೇವಂವಿಧೋ ಭಾವಃ ಸ್ಪ್ರಷ್ಟುಮರ್ಹತಿ ಮಾನದ |
ಆತ್ಮವಂತಮಿವ ವ್ಯಾಧಿಃ ಪುರುಷಂ ವೃದ್ಧಶೀಲಿನಮ್ ||4||
ಸದೃಢವಾದ ದೇಹವುಳ್ಳ ಮನುಷ್ಯನನ್ನು ವ್ಯಾಧಿಯು ಹೇಗೆ ಮುಟ್ಟುವುದಿಲ್ಲವೋ ಹಾಗೆ ಎಲೈ ಮಾನದನೇ, ವೃದ್ಧರ ಶೀಲವನ್ನುಳ್ಳ ಪುರುಷನಾದ ನಿನ್ನನ್ನು ಇಂತಹ ವಿಷಾದಭಾವನೆಗಳು ಸ್ಪರ್ಶಿಸಬಾರದು.
ಪ್ರವೃತ್ತಿರುಪಲಬ್ಧಾ ತೇ ವೈದೇಹ್ಯಾ ರಾವಣಸ್ಯ ಚ |
ತಾಂ ತ್ವಂ ಪುರುಷಕಾರೇಣ ಬುದ್ಧ್ಯಾ ಚೈವೋಪಪಾದಯ ||5||
ವೈದೇಹಿ ಮತ್ತು ರಾವಣರ ವೃತ್ತಾಂತಗಳು ನಿನಗೆ ದೊರೆತಿವೆ. ನೀನು ಅದನ್ನು ಬುದ್ಧಿಯಿಂದಲೂ ಮತ್ತು ಪುರುಷಪ್ರಯತ್ನದಿಂದಲೂ ಸಾಧಿಸುವವನಾಗು.
ಅಭಿಗಚ್ಛಾವ ಸುಗ್ರೀವಂ ಶೈಲಸ್ಥಂ ಹರಿಪುಂಗವಮ್ |
ಮಯಿ ಶಿಷ್ಯೇ ಚ ಭೃತ್ಯೇ ಚ ಸಹಾಯೇ ಚ ಸಮಾಶ್ವಸ ||6||
ಪರ್ವತದಲ್ಲಿರುವ ಕಪಿಶ್ರೇಷ್ಠನಾದ ಸುಗ್ರೀವನ ಕಡೆಗೆ ಹೋಗೋಣ. ನಾನು ನಿನ್ನ ಶಿಷ್ಯನೂ, ಭೃತ್ಯನೂ, ಸಹಾಯಕನೂ ಆಗಿರುವಾಗ ನೀನು ಸಮಾಧಾನವನ್ನು ತಂದುಕೋ.
ಮಾರ್ಕಂಡೇಯಃ
ಏವಂ ಬಹುವಿಧೈರ್ವಾಕ್ಯೈರ್ಲಕ್ಷ್ಮಣೇನ ಸ ರಾಘವಃ |
ಉಕ್ತಃ ಪ್ರಕೃತಿಮಾಪೇದೇ ಕಾರ್ಯೇ ಚಾನಂತರೋಽಭವತ್ ||7||
ಮಾರ್ಕಂಡೇಯ ಹೀಗೆ ಲಕ್ಷ್ಮಣನಿಂದ ಬಹುವಿಧವಾದ ವಾಕ್ಯಗಳನ್ನು ಕೇಳಿದ ರಾಮನು ಸಮಾಧಾನವನ್ನು ತಂದುಕೊಂಡು ಮಾಡಬೇಕಾದ ಕಾರ್ಯದಲ್ಲಿ ನಿರತನಾದನು.

ನಿಷೇವ್ಯ ವಾರಿ ಪಂಪಾಯಾಸ್ತರ್ಪಯಿತ್ವಾ ಪಿತೄನಪಿ |
ಪ್ರತಸ್ಥತುರುಭೌ ವೀರೌ ಭ್ರಾತರೌ ರಾಮಲಕ್ಷ್ಮಣೌ ॥8॥
ಪಂಪಾ ಸರೋವರದಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಆ ಜಲವನ್ನು ಸೇವಿಸಿ ವೀರರೂ, ಸಹೋದರರೂ ಆದ ರಾಮಲಕ್ಷ್ಮಣರಿಬ್ಬರೂ ಅಲ್ಲಿಂದ ಹೊರಟರು.
ತಾವೃಷ್ಯಮೂಕಮಭ್ಯೇತ್ಯ ಬಹುಮೂಲಫಲದ್ರುಮಮ್ |
ಗಿರ್ಯಗ್ರೇ ವಾನರಾನ್ ಪಂಚ ವೀರೌ ದದೃಶತುಸ್ತದಾ ॥9॥
ವೀರರಾದ ಅವರಿಬ್ಬರೂ ಬಹುಮೂಲಫಲ ಭರಿತ ವೃಕ್ಷಗಳಿರುವ ಋಷ್ಯಮೂಕ ಪರ್ವತವನ್ನು ತಲುಪಿ ಅಲ್ಲಿ ಪರ್ವತದ ಮೇಲ್ಭಾಗದಲ್ಲಿ ಐವರು ವಾನರರನ್ನು ನೋಡಿದರು.
ಸುಗ್ರೀವಃ ಪ್ರೇಷಯಾಮಾಸ ಸಚಿವಂ ವಾನರಂ ತಯೋಃ |
ಬುದ್ಧಿಮಂತಂ ಹನೂಮಂತಂ ಹಿಮವಂತಮಿವ ಸ್ಥಿತಮ್ ॥10॥
ಸುಗ್ರೀವನು ಅವರ ಬಳಿಗೆ ಬುದ್ಧಿವಂತನೂ, ಹಿಮಾಲಯದಂತೆ ಗಂಭೀರನೂ ಆದ ತನ್ನ ಸಚಿವನಾದ ಹನುಮಂತನೆಂಬ ವಾನರನನ್ನು ಕಳುಹಿಸಿದನು.
ತೇನ ಸಂಭಾಷ್ಯ ಪೂರ್ವಂ ತೌ ಸುಗ್ರೀವಮಭಿಜಗ್ಮತುಃ |
ಸಖ್ಯಂ ವಾನರರಾಜೇನ ಚಕ್ರೇ ರಾಮಸ್ತದಾ ನೃಪ ॥11॥
ಮೊದಲು ಹನುಮಂತನ ಜೊತೆಯಲ್ಲಿ ಸಂಭಾಷಣೆ ಮಾಡಿ ಅವರಿಬ್ಬರೂ ಸುಗ್ರೀವನ ಬಳಿಗೆ ಬಂದರು. ಎಲೈ ರಾಜನೇ, ಆಗ ರಾಮನು ವಾನರರಾಜನಾದ ಸುಗ್ರೀವನ ಜೊತೆಯಲ್ಲಿ ಸಖ್ಯವನ್ನು ಮಾಡಿಕೊಂಡನು.
ತತಃ ಸೀತಾಂ ಹೃತಾಂ ಶ್ರುತ್ವಾ ಸುಗ್ರೀವೋ ವಾಲಿನಾ ಕೃತಮ್ |
ದುಃಖಮಾಖ್ಯಾತವಾನ್ ಸರ್ವಂ ರಾಮಾಯಾಮಿತತೇಜಸೇ ॥12॥
ಅನಂತರ ಸುಗ್ರೀವನು ಸೀತಾಪಹಾರದ ವಾರ್ತೆಯನ್ನು ಕೇಳಿ ವಾಲಿಯು ತನಗೆ ಮಾಡಿರುವ ಉಪದ್ರವಗಳೆಲ್ಲವನ್ನೂ ಅಮಿತಪರಾಕ್ರಮಿಯಾದ ರಾಮನಿಗೆ ತಿಳಿಸಿದನು.
ತದ್ ವಾಸೋ ದರ್ಶಯಾಮಾಸುಸ್ತಸ್ಯ ಕಾರ್ಯೇ ನಿವೇದಿತೇ |
ವಾನರಾಣಾಂ ತು ಯತ್ ಸೀತಾ ಹ್ರಿಯಮಾಣಾ ವ್ಯವಾಸೃಜತ್ ॥13॥
ರಾಮನು ಮಾಡಬೇಕಾದ ಕಾರ್ಯವನ್ನು ತಿಳಿಸಿದ ಮೇಲೆ ವಾನರರು ಸೀತೆಯು ಅಪಹರಿಸಲ್ಪಡುತಿತದ್ದಾಗ ಕೆಳಗೆ ಬೀಳಿಸಿದ ಆ ವಸ್ತ್ರವನ್ನು ತೋರಿಸಿದರು.
ತತ್ಪ್ರತ್ಯಯಕರಂ ಲಬ್ಧ್ವಾ ಸುಗ್ರೀವಂ ಪ್ಲವಗಾಧಿಪಮ್ |
ಪೃಥಿವ್ಯಾಂ ವಾನರೈಶ್ವರ್ಯೇ ಸ್ವಯಂ ರಾಮೋಽಭ್ಯಷೇಚಯತ್॥14॥
ವಿಶ್ವಾಸಜನಕವಾದ ಆ ಸೂಚನೆಯನ್ನು ಹೊಂದಿ ರಾಮನು ಸುಗ್ರೀವನಿಗೆ ಭೂಮಿಯಲ್ಲಿರುವ ಎಲ್ಲಾ ವಾನರರ ಐಶ್ವರ್ಯಕ್ಕೆ ಮತ್ತು ವಾನರರಿಗೆ ಅಧಿಪತಿಯನ್ನಾಗಿ ತಾನೇ ಅಭಿಷೇಕ ಮಾಡಿದನು.
ಪ್ರತಿಜಜ್ಞೇ ಚ ಕಾಕುತ್ಸ್ಥಃ ಸಮರೇ ವಾಲಿನೋ ವಧಮ್ |
ಸುಗ್ರೀವಶ್ಚಾಪಿ ವೈದೇಹ್ಯಾಃ ಪುನರಾನಯನಂ ನೃಪ ॥15॥
ಎಲೈ ರಾಜನೇ, ರಾಮನು ಯುದ್ಧದಲ್ಲಿ ವಾಲಿಯ ವಧೆಯನ್ನು ಪ್ರತಿಜ್ಞೆ ಮಾಡಿದನು. ಸುಗ್ರೀವನೂ ಸಹ ಸೀತೆಯನ್ನು ಪುನಃ ಕರೆದುತರುವ ಪ್ರತಿಜ್ಞೆಯನ್ನು ಮಾಡಿದನು.
ಇತ್ಯುಕತ್ವ ಸಮಯಂ ಕೃತ್ವಾ ವಿಶ್ವಾಸ್ಯ ಚ ಪರಸ್ಪರಮ್ |
ಅಭ್ಯೇತ್ಯ ಸರ್ವೇ ಕಿಷ್ಕಿಂಧಾಂ ತಸ್ಥುರ್ಯುದ್ಧಾಭಿಕಾಂಕ್ಷಿಣಃ ॥16॥
ಹೀಗೆ ಪರಸ್ಪರವಾಗಿ ಮಾತನಾಡಿಕೊಂಡು, ಪರಸ್ಪರ ನಿಬಂಧನೆಯನ್ನು ಮಾಡಿಕೊಂಡು, ಪರಸ್ಪರ ವಿಶ್ವಾಸವುಳ್ಳವರಾಗಿ ಅವರು ಕಿಷ್ಕಿಂಧಾ ಪಟ್ಟಣಕ್ಕೆ ಬಂದು ಯುದ್ಧವನ್ನು ಬಯಸುವವರಾಗಿ ವಾಸಮಾಡಿದರು.
ಸುಗ್ರೀವಃ ಪ್ರಾಪ್ಯ ಕಿಷ್ಕಿಂಧಾಂ ನನಾದ ಘನನಿಸ್ವನಃ |
ನಾಸ್ಯ ತನ್ಮಮೃಷೇ ವಾಲೀ ತಾರಾ ತಂ ಪ್ರತ್ಯಷೇಧಯತ್ ॥17॥
ಸುಗ್ರೀವನು ಕಿಷ್ಕಿಂಧಾ ಪಟ್ಟಣವನ್ನು ತಲುಪಿ ಮೇಘ ಗರ್ಜನೆಯಂತೆ ಗರ್ಜನೆಯನ್ನು ಮಾಡಿದನು. ವಾಲಿಯು ಅದನ್ನು ಕೇಳಿ ಸಹಿಸಲಿಲ್ಲ. ಹೊರಗೆ ಹೊರಟ ವಾಲಿಯನ್ನು ಅವನ ಪತ್ನಿಯಾದ ತಾರೆಯು ತಡೆದಳು.
ಯಥಾ ನದತಿ ಸುಗ್ರೀವೋ ಬಲವಾನೇಷ ವಾನರಃ |
ಮನ್ಯೇ ಚಾಶ್ರಯವಾನ್ ಪ್ರಾಪ್ತೋ ನ ತ್ವಂ ನಿಷ್ಕ್ರಾಂತುಮರ್ಹಸಿ ॥18॥
ಸುಗ್ರೀವನು ಗರ್ಜಿಸುವುದನ್ನು ನೋಡಿದರೆ ಈ ಕಪಿಯು ಈಗ ಬಲಿಷ್ಠನಾಗಿರುವಂತೆ ತೋರುತ್ತದೆ. ಅವನಿಗೆ ಯಾವುದೋ ಬಲವಾದ ಆಶ್ರಯವು ದೊರೆತಿರುವಂತೆ ಕಾಣುತ್ತದೆ. ನೀನು ಹೊರಗೆ ಹೋಗುವುದು ಯೋಗ್ಯವಲ್ಲ (ಎಂದು ಹೇಳಿದಳು).
ಹೇಮಮಾಲೀ ತತೋ ವಾಲೀ ತಾರಾಂ ತಾರಾಧಿಪಾನನಾಮ್ |
ಪ್ರೋವಾಚ ವಚನಂ ವಾಗ್ಮೀ ತಾಂ ವಾನರಪತಿಃ ಪತಿಃ ॥19॥
ಸರ್ವಭೂತರುತಜ್ಞಾ ತ್ವಂ ಪಶ್ಯ ಬುದ್ಧ್ಯಾ ಸಮನ್ವಿತಾ |
ಕೇನ ಚಾಶ್ರಯವಾನ್ ಪ್ರಾಪ್ತೋ ಮಮೈಷ ಭ್ರಾತೃಗಂಧಿಕಃ ॥20॥
ಆಗ ಹೇಮಮಾಲಿಯಾದ ವಾನರಪತಿಯಾದ, ವಾಗ್ಮಿಯಾದ, ತಾರಾಪತಿಯಾದ ವಾಲಿಯು ಚಂದ್ರಮುಖಿಯಾದ ತಾರೆಯನ್ನು ಕುರಿತು ಎಲ್ಲ ಪ್ರಾಣಿಗಳ ಶಬ್ದಗಳನ್ನೂ ತಿಳಿದಿರುವ ನೀನು ಈಗ ನಿನ್ನ ಬುದ್ಧಿಯಿಂದ ನನ್ನ ಈ ಭ್ರಾತೃವಾದ ಸುಗ್ರೀವನು ಯಾರ ಬಲದಿಂದ

ಬಂದಿದ್ದಾನೆ ಎಂದು ನೋಡು ಎಂದು ಹೇಳಿದನು.
ಮಾರ್ಕಂಡೇಯಃ
ಚಿಂತಯಿತ್ವಾ ಮುಹೂರ್ತಂ ತು ತಾರಾ ತಾರಾಧಿಪಪ್ರಭಾ |
ಪತಿಮಿತ್ಯಬ್ರವೀತ್ ಪ್ರಾಜ್ಞಾ ಶೃಣು ಸರ್ವಂ ಕಪೀಶ್ವರ ॥21॥
ಹೃತದಾರೋ ಮಹಾಸತ್ತ್ವೋ ರಾಮೋ ದಶರಥಾತ್ಮಜಃ |
ತುಲ್ಯಾರಿಮಿತ್ರತಾಂ ಪ್ರಾಪ್ತಃ ಸುಗ್ರೀವೇಣ ಧನುರ್ಧರಃ ॥22॥
ಚಂದ್ರಕಾಂತಿಯುಳ್ಳ ತಾರೆಯು ಒಂದು ಮುಹೂರ್ತಕಾಲ ಯೋಚಿಸಿ ಪ್ರಾಜ್ಞಳಾದ ಅವಳು ಪತಿಯನ್ನು ಕುರಿತು ಕಪೀಶ್ವರನೇ, ದಶರಥಪುತ್ರನಾದ ಪತ್ನಿಯನ್ನು ಕಳೆದುಕೊಂಡ ರಾಮನು ಮಹಾಸತ್ತ್ವಶಾಲಿಯಾಗಿದ್ದಾನೆ. ಧನುರ್ಧರನಾದ ಅವನು ಸುಗ್ರೀವನ ಜೊತೆಯಲ್ಲಿ ಸಮಾನಶತ್ರುಮಿತ್ರಭಾವವನ್ನು ಹೊಂದಿದ್ದಾನೆ.
ಭ್ರಾತಾ ಚಾಸ್ಯ ಮಹಾಬಾಹುಃ ಸೌಮಿತ್ರಿರಪರಾಜಿತಃ |
ಲಕ್ಷ್ಮಣೋ ನಾಮ ಮೇಧಾವೀ ಸ್ಥಿತಃ ಕಾರ್ಯಾರ್ಥಸಿದ್ಧಯೇ ॥23॥
ಅವನ ತಮ್ಮನಾದ ಅಪರಾಜಿತನಾದ ಸುಮಿತ್ರಾತನಯನಾದ ಮಹಾಬಾಹುವು ಲಕ್ಷ್ಮಣ ಎಂಬ ಹೆಸರಿನವನು. ಅವನು ಮೇಧಾವಿ. ರಾಮನ ಕಾರ್ಯವನ್ನು ಸಾಧಿಸುವುದಕ್ಕಾಗಿಯೇ ಅವನ ಜೊತೆಯಲ್ಲಿದ್ದಾನೆ.
ಮೈಂದಶ್ಚ ದ್ವಿ(ವಿ)ದಶ್ಚಾಪಿ ಹನೂಮಾಂಶ್ಚಾನಿಲಾತ್ಮಜಃ |
ಜಾಂಬವಾನೃಕ್ಷರಾಜಶ್ಚ ಸುಗ್ರೀವಸಚಿವಾಃ ಸ್ಥಿತಾಃ ॥24॥
ಮೈಂದ, ವಿವಿದ, ವಾಯುಪುತ್ರನಾದ ಹನುಮಂತ, ಋಕ್ಷರಾಜನಾದ ಜಾಂಬವಂತ ಈ ನಾಲ್ವರು ಸುಗ್ರೀವನ ಸಚಿವರಾಗಿದ್ದಾರೆ.
ಸರ್ವ ಏತೇ ಮಹಾತ್ಮಾನೋ ಬುದ್ಧಿಮಂತೋ ಮಹಾಬಲಾಃ |
ಅಲಂ ತವ ವಿನಾಶಾಯ ರಾಮವೀರ್ಯಬಲಾಶ್ರಯಾತ್ ॥25॥
ಈ ಎಲ್ಲ ಮಹಾತ್ಮರೂ, ಮೇಧಾವಿಗಳೂ ಮತ್ತು ಮಹಾಬಲರೂ ಆಗಿದ್ದಾರೆ. ರಾಮನ ಪರಾಕ್ರಮ ಮತ್ತು ಬಲಗಳನ್ನು ಆಶ್ರಯಿಸಿ ಒಬ್ಬೊಬ್ಬರೂ ನಿನ್ನನ್ನು ನಾಶ ಮಾಡಲು ಸಮರ್ಥರಾಗಿದ್ದಾರೆ (ಎಂದು ಹೇಳಿದಳು).
ತಸ್ಯಾಸ್ತದಾಕ್ಷಿಪ್ಯ ವಚೋ ಹಿತಮುಕ್ತಂ ಕಪೀಶ್ವರಃ |
ಪರ್ಯಶಂಕತ ತಾಮೀರ್ಷುಃ ಸುಗ್ರೀವಗತಮಾನಸಾಮ್ ॥26॥
ಕಪೀಶ್ವರನಾದ ವಾಲಿಯು ಅವಳ ಹಿತವಚನಗಳನ್ನು ನಿರಾಕರಿಸಿ ಅವಳಿಗೆ ಸುಗ್ರೀವನ ಮೇಲೆ ಮನಸ್ಸಿದೆ ಎಂದು ಶಂಕಿಸಿ ಅವಳ ಮೇಲೆ ಅಸೂಯೆಯನ್ನು ಪಟ್ಟನು.
ತಾರಾಂ ಪರುಷಮುಕತ್ವ ತು ನಿರ್ಜಗಾಮ ಗುಹಾಮುಖಾತ್ |
ಸ್ಥಿತಂ ಮಾಲ್ಯವತೋಽಭ್ಯಾಶೇ ಸುಗ್ರೀವಂ ಸೋಽಭ್ಯಭಾಷತ ॥27॥
ಅಸಕೃತ್ ತ್ವಂ ಮಯಾ ಪೂರ್ವಂ ನಿರ್ಜಿತೋ ಜೀವಿತಪ್ರಿಯಃ |
ಮುಕ್ತೋ ಜ್ಞಾತಿರಿತಿ ಜ್ಞಾತ್ವಾ ಕಾ ತ್ವರಾ ಮರಣೇ ಪುನಃ ॥28॥
ತಾರೆಗೆ ಒರಟುಮಾತುಗಳನ್ನು ಆಡಿ ಗುಹಾಮುಖದಿಂದ ಹೊರಗೆ ಬಂದು ಮಾಲ್ಯವಾನ್ ಪರ್ವತದ ಸಮೀಪದಲ್ಲಿದ್ದ ಸುಗ್ರೀವನನ್ನು ಕುರಿತು ಅನೇಕ ಬಾರಿ ನೀನು ಹಿಂದೆ ನನ್ನಿಂದ ನಿರ್ಜಿತನಾಗಿದ್ದೀಯೆ. ಜೀವಿತಪ್ರಿಯನಾದ ನಿನ್ನನ್ನು ಬಂಧು ಎಂದು ತಿಳಿದು ಬಿಟ್ಟಿದ್ದೇನೆ. ಮರಣವನ್ನು ಹೊಂದಲು ಪುನಃ ಏಕೆ ತ್ವರೆಮಾಡುತ್ತಿದ್ದೀಯೆ ಎಂದು ಕೇಳಿದನು.
ಮಾರ್ಕಂಡೇಯಃ
ಇತ್ಯುಕ್ತಃ ಪ್ರಾಹ ಸುಗ್ರೀವೋ ಭ್ರಾತರಂ ಹೇತುಮದ್ವಚಃ |
ಪ್ರಾಪ್ತಕಾಲಮಮಿತ್ರಘ್ನೋ ರಾಮಂ ಸಂಬೋಧಯನ್ನಿವ ॥29॥
ಮಾರ್ಕಂಡೇಯರು ಹೀಗೆ ಹೇಳಲ್ಪಟ್ಟ ಶತ್ರುನಾಶನನಾದ ಸುಗ್ರೀವನು ರಾಮನನ್ನು ಸಂಬೋಧಿಸುವಂತೆ ಆ ಕಾಲಕ್ಕೆ ಉಚಿತವಾದ ಯುಕ್ತಿಯುಕ್ತವಾದ ಮಾತುಗಳನ್ನು ಅಣ್ಣನಿಗೆ ಹೇಳಿದನು.
ಹೇತುಮದ್ವಚನಂ ಭ್ರಾತ್ರೇ ಪ್ರೋವಾಚೇದಂ ಮಹಾತ್ಮನೇ |
ಹೃತರಾಜ್ಯಸ್ಯ ಮೇ ರಾಜನ್‌ಹೃತದಾರಸ್ಯ ಚ ತ್ವಯಾ |
ಕಿಂ ಮೇ ಜೀವಿತಸಾಮರ್ಥ್ಯಮಿತಿ ವಿದ್ಧಿ ಸಮಾಗತಮ್ ॥30॥
ನಿನ್ನಿಂದ ರಾಜ್ಯವನ್ನೂ ಮತ್ತು ಪತ್ನಿಯನ್ನೂ ಕಳೆದುಕೊಂಡಿರುವ ನನಗೆ ಜೀವನದಲ್ಲಿ ಏನು ಪ್ರಯೋಜನ ಎಂದು ನಾನು ಬಂದಿದ್ದೇನೆಂದು ತಿಳಿ ಎಂದು ಹೇಳಿದನು
ಮಾರ್ಕಂಡೇಯಃ
ಏವಮುಕತ್ವ ಬಹುವಿಧಂ ತತಸ್ತೌ ಸನ್ನಿಪೇತತುಃ |
ಸಮರೇ ವಾಲಿಸುಗ್ರೀವೌ ಶಾಲತಾಲಶಿಲಾಯುಧೌ ॥31॥
ಮಾರ್ಕಂಡೇಯರು ಹೀಗೆ ಬಹುವಿಧವಾಗಿ ಮಾತನಾಡಿ ವಾಲಿಸುಗ್ರೀವರು ಶಾಲ-ತಾಲ-ಶಿಲೆಗಳನ್ನು ಆಯುಧವನ್ನಾಗಿ ಹಿಡಿದು ಯುದ್ಧದಲ್ಲಿ ಒಬ್ಬರ ಮೇಲೆ ಒಬ್ಬರು ಎರಗಿದರು.
ಉಭೌ ಜಘ್ನತುರನ್ಯೋನ್ಯಮುಭೌ ಭೂಮೌ ನಿಪೇತತುಃ |
ಉಭೌ ವವಲ್ಗತುಶ್ಚಿತ್ರಂ ಮುಷ್ಟಿಭಿಶ್ಚ ನಿಜಘ್ನತುಃ ॥32॥
ಇಬ್ಬರೂ ಪರಸ್ಪರವಾಗಿ ಹೊಡೆದರು. ಇಬ್ಬರೂ ಭೂಮಿಯ ಮೇಲೆ ಬಿದ್ದರು. ಇಬ್ಬರೂ ವಿಚಿತ್ರವಾಗಿ ಮಾತನಾಡಿದರು ಮತ್ತು ಇಬ್ಬರೂ ಮುಷ್ಟಿಗಳಿಂದ ಗುದ್ದಿದರು.

ಉಭೌ ರುಧಿರಸಂಸಿಕ್ತೌ ನಖದಂತಪರಿಕ್ಷತೌ|
ಶುಶುಭಾತೇ ತದಾ ವೀರೌ ಪುಷ್ಪಿತಾವಿವ ಕಿಂಶುಕೌ ॥33॥
ವೀರರಾದ ಅವರಿಬ್ಬರೂ ನಖದಂತಗಳಿಂದ ಗಾಯಗಳನ್ನು ಹೊಂದಿ ರಕ್ತವನ್ನು ಸುರಿಸುತ್ತಾ ಅರಳಿದ ಮುತ್ತುಗದ ಮರದಂತೆ ಶೋಭಿಸಿದರು.
ನ ವಿಶೇಷಸ್ತಯೋರ್ಯುದ್ಧೇ ಯದಾ ಕಶ್ಚನ ದೃಶ್ಯತೇ |
ಸುಗ್ರೀವಸ್ಯ ತದಾ ಮಾಲಾಂ ಹನುಮಾನ್ ಕಂಠ ಆಸಜತ್ ॥34॥
ಯುದ್ಧದಲ್ಲಿ ಅವರಿಬ್ಬರ ಮಧ್ಯದಲ್ಲಿ ಯಾವ ವಿಶೇಷವೂ ಕಾಣದಿದ್ದಾಗ ಹನುಮಂತನು ಸುಗ್ರೀವನ ಕೊರಳಿನಲ್ಲಿ ಒಂದು ಮಾಲೆಯನ್ನು ಹಾಕಿದನು.
ಸ ಮಾಲಯಾ ತದಾ ವೀರಃ ಶುಶುಭೇ ಕಂಠಸಕ್ತಯಾ |
ಶ್ರೀಮಾನಿವ ಮಹಾಶೈಲೋ ಮಲಯೋ ಮೇಘಮಾಲಯಾ ॥35॥
ಕಂಠಗತವಾದ ಆ ಮಾಲೆಯಿಂದ ಕೂಡಿದ ವೀರನಾದ ಸುಗ್ರೀವನು ಮೇಘಮಾಲೆಯಿಂದ ಕೂಡಿದ ಕಾಂತಿಯುಕ್ತವಾದ ಮಲಯ ಮಹಾಪರ್ವತದಂತೆ ಶೋಭಿಸಿದನು.
ಕೃತಚಿಹ್ನಂ ತು ಸುಗ್ರೀವಂ ರಾಮೋ ದೃಷ್ಟ್ವಾ ಮಹಾಧನುಃ |
ವಿಚಕರ್ಷ ಧನುಃ ಶ್ರೇಷ್ಠಂ ವಾಲಿಮುದ್ದಿಶ್ಯ ಲಕ್ಷ್ಯವತ್ ॥36॥
ಸುಗ್ರೀವನಿಗೆ ಹೀಗೆ ಗುರುತಿನ ಚಿಹ್ನೆಯನ್ನು ಮಾಡಿದುದನ್ನು ನೋಡಿದ ರಾಮನು ವಾಲಿಯನ್ನು ಲಕ್ಷವನ್ನಾಗಿ ಮಾಡಿಕೊಂಡು ತನ್ನ ಶ್ರೇಷ್ಠವಾದ ಧನುಸ್ಸನ್ನು ಎಳೆದನು.
ವಿಸ್ಫಾರಸ್ತಸ್ಯ ಧನುಷೋ ವಜ್ರಘೋಷ ಇವಾಬಭೌ |
ವಿತತ್ರಾಸ ತದಾ ವಾಲೀ ಶರೇಣಾಭಿಹತೋ ಹೃದಿ ॥37॥
ಆ ಧನುಸ್ಸಿನ ಹೆದೆಯ ನಾದವೇ ವಜ್ರಘೋಷದಂತೆ ಶೋಭಿಸಿತು. ಅದರಿಂದಲೇ ಹೆದರಿದ ವಾಲಿಯು ರಾಮನಿಂದ ಬಾಣದಿಂದ ಎದೆಯಲ್ಲಿ ಹೊಡೆಯಲ್ಪಟ್ಟನು.
ಸ ಭಿನ್ನಹೃದಯೋ ವಾಲೀ ವಕ್ತ್ರಾಚ್ಛೋಣಿತಮುದ್ವಮನ್ |
ದದರ್ಶಾವಸ್ಥಿತಂ ರಾಮಂ ತತಃ ಸೌಮಿತ್ರಿಣಾ ಸಹ ॥38॥
ಹೃದಯಭೇದನವನ್ನು ಹೊಂದಿದ ವಾಲಿಯು ಬಾಯಿಯಿಂದ ರಕ್ತವನ್ನು ಕಾರುತ್ತಾ ಎದುರಿಗೆ ನಿಂತ ಲಕ್ಷ್ಮಣ ಸಹಿತನಾದ ರಾಮನನ್ನು ನೋಡಿದನು.
ಗರ್ಹಯಿತ್ವಾ ಸ ಕಾಕುತ್ಸ್ಥಂ ಪಪಾತ ಭುವಿ ಮೂರ್ಚ್ಛಿತಃ |
ತಾರಾ ದದರ್ಶ ತಂ ಭೂಮೌ ತಾರಾಪತಿಸಮೌಜಸಮ್ ॥39॥
ಅವನು ರಾಮನನ್ನು ನಿಂದಿಸಿ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು. ತಾರೆಯು ಚಂದ್ರನಂತಹ ಪರಾಕ್ರಮವನ್ನು ಹೊಂದಿದ್ದ ಅವನು ಭೂಮಿಯಲ್ಲಿ ಬಿದ್ದಿರುವುದನ್ನು ನೋಡಿದಳು.
ಹತೇ ವಾಲೀನಿ ಸುಗ್ರೀವಃ ಕಿಷ್ಕಿಂಧಾಂ ಪ್ರತ್ಯಪದ್ಯತ |
ತಾಂ ಚ ತಾರಾಪತಿಮುಖೀಂ ತಾರಾಂ ನಿಪತಿತೇಶ್ವರಾಮ್ ॥40॥
ವಾಲಿಯು ಹತನಾಗುತ್ತಿರಲು ಸುಗ್ರೀವನು ಕಿಷ್ಕಿಂಧಾ ಪಟ್ಟಣವನ್ನೂ ಮತ್ತು ಪತಿಯನ್ನು ಕಳೆದುಕೊಂಡ ಚಂದ್ರಮುಖಿಯಾದ ತಾರೆಯನ್ನೂ ಪಡೆದನು.
ರಾಮಸ್ತು ಚತುರೋ ಮಾಸಾನ್ಪೃಷ್ಠೇ ಮಾಲ್ಯವತಃ ಶುಭೇ |
ನಿವಾಸಮಕರೋದ್ ಧೀಮಾನ್ ಸುಗ್ರೀವೇಣಾಭ್ಯುಪಸ್ಥಿತಃ ॥41॥
ಮೇಧಾವಿಯಾದ ರಾಮನು ಪವಿತ್ರವಾದ ಮಾಲ್ಯವಾನ್ ಪರ್ವತದಲ್ಲಿ ನಾಲ್ಕುತಿಂಗಳುಗಳ ಕಾಲ ಸುಗ್ರೀವನಿಂದ ಸೇವಿತನಾಗಿ ವಾಸವನ್ನು ಮಾಡಿದನು.
ರಾವಣೋಽಪಿ ಪುರೀಂ ಗತ್ವಾ ಲಂಕಾಂ ಕಾಮಬಲಾತ್ಕೃತಃ |
ಸೀತಾಂ ನಿವೇಶಯಾಮಾಸ ಭವನೇ ನಂದನೋಪಮೇ ॥42॥
ರಾವಣನೂ ಕೂಡ ತನ್ನ ಲಂಕಾಪಟ್ಟಣಕ್ಕೆ ಹೋಗಿ ಕಾಮವಶನಾಗಿ ಸೀತೆಯನ್ನು ನಂದನದಂತಿದ್ದ ಒಂದು ಭವನದಲ್ಲಿ ಇರಿಸಿದನು.
ಅಶೋಕವನಿಕಾಭ್ಯಾಶೇ ತಾಪಸಾಶ್ರಮಸನ್ನಿಭೇ |
ಭರ್ತೃಸ್ಮರಣತನ್ವಂಗೀ ತಾಪಸೀವೇಷಧಾರಿಣೀ ॥43॥
ಉಪವಾಸತಪಃಶೀಲಾ ತತ್ರಾಸ ಪೃಥುಲೇಕ್ಷಣಾ |
ಉವಾಸ ದುಃಖವಸತಿಂ ಫಲಮೂಲಕೃತಾಶನಾ ॥44॥
ತಾಪಸಾಶ್ರಮದಂತೆ ತೋರುವ ಅಶೋಕವನದ ಸಮೀಪದಲ್ಲಿ ತಾಪಸವೇಷ ಧಾರಿಣಿಯಾಗಿ ಭರ್ತೃಸ್ಮರಣದಿಂದ ಕೃಶಳಾಗಿ ವಿಶಾಲನೇತ್ರೆಯಾದ ಸೀತೆಯು ಉಪವಾಸದಲ್ಲಿ ಮತ್ತು ತಪಸ್ಸಿನಲ್ಲಿ ನಿರತಳಾಗಿ ಅಲ್ಲಿ ವಾಸಮಾಡಿದಳು (ಹೆದರಿದಳು). ಅವಳು ಫಲಮೂಲಗಳನ್ನು ತನ್ನ ಆಹಾರವಾಗಿ ಮಾಡಿಕೊಂಡು ಅಲ್ಲಿ ದುಃಖವಾಸವನ್ನು ಕಳೆದಳು.
ದಿದೇಶ ರಾಕ್ಷಸೀಸ್ತತ್ರ ರಕ್ಷಣೇ ರಾಕ್ಷಸಾಧಿಪಃ |
ಪ್ರಾಸಾಸಿಶೂಲಪರಶುಮುದ್ಗರಾಲಾತಧಾರಿಣೀಃ ॥45॥
ರಾಕ್ಷಸಾಧಿಪನಾದ ರಾವಣನು ಸೀತೆಯ ರಕ್ಷಣೆಗಾಗಿ ಪ್ರಾಸ, ಅಸಿ, ಶೂಲ, ಪರಶು, ಮುದ್ಗರ, ಅಲಾತ ಮೊದಲಾದ ಆಯುಧಗಳನ್ನು ಹಿಡಿದ ರಾಕ್ಷಸಿಯರನ್ನು ಅವಳ ರಕ್ಷಣೆಗಾಗಿ ನೇಮಿಸಿದನು.

ದ್ವ್ಯಕ್ಷೀಂ ತ್ರ್ಯಕ್ಷೀಂ ಲಲಾಟಾಕ್ಷೀಂ ದೀರ್ಘಜಿಹ್ವಾಮಜಿಹ್ವಿಕಾಮ್ |
ತ್ರಿಸ್ತನೀಮೇಕಪಾದಾಂ ಚ ತ್ರಿಜಟಾಮೇಕಲೋಚನಾಮ್ ॥46॥
ಏತಾಶ್ಚಾನ್ಯಾಶ್ಚ ದೀಪ್ತಾಕ್ಷ್ಯಃ ಕರಭೋತ್ಕರಮೂರ್ಧ್ವಜಾಃ |
ಪರಿವಾರ್ಯಾಸತೇ ಸೀತಾಂ ದಿವಾರಾತ್ರಮತಂದ್ರಿತಾಃ ॥47॥
ಎರಡುಕಣ್ಣುಳ್ಳವಳು, ಮೂರುಕಣ್ಣುಳ್ಳವಳು, ಹಣೆಯಲ್ಲಿ ಕಣ್ಣುಳ್ಳವಳು, ದೀರ್ಘ ಜಿಹ್ವೆಯುಳ್ಳವಳು, ಜಿಹ್ವೆ ಇಲ್ಲದವಳು, ಮೂರು ಸ್ತನವುಳ್ಳವಳು, ಒಂದು ಪಾದವುಳ್ಳವಳು, ಮೂರು ಜಟೆಯುಳ್ಳವಳು, ಒಂದುಕಣ್ಣುಳ್ಳವಳು ಇವರನ್ನು ಮತ್ತು ಇಂತಹ ಇನ್ನೂ ಅನೇಕ ಹ್ರಸ್ವವಾದ ಸ್ಥೂಲವಾದ ಕೇಶವನ್ನು ಹೊಂದಿದ ಅನೇಕ ದೀಪ್ತಾಕ್ಷಿಯರು ಹಗಲೂ ಮತ್ತು ರಾತ್ರಿಯೂ ಆಲಸ್ಯವಿಲ್ಲದೇ ಸೀತೆಯನ್ನು ಸುತುತವರಿದು ಇರುತ್ತಿದ್ದರು.
ತಾಸ್ತು ತಾಮಾಯತಾಪಾಂಗೀಂ ಪಿಶಾಚ್ಯೋ ದಾರುಣಸ್ವರಾಃ |
ತರ್ಜಯಂತಿ ಸದಾ ರೌದ್ರಾಃ ಪರುಷವ್ಯಂಜನಸ್ವರಾಃ ॥48॥
ದಾರುಣಸ್ವರದ ಪಿಶಾಚಿಗಳಂತಿದ್ದ ಒರಟಾದ ಸ್ವರದಿಂದ ಕೂಡಿದ ಭಯಂಕರರಾದ ಆ ರಾಕ್ಷಸಿಯರು ಯಾವಾಗಲೂ ವಿಶಾಲನೇತ್ರೆಯಾದ ಸೀತೆಯನ್ನು ಹೆದರಿಸುತ್ತಿದ್ದರು.
ಖಾದಾಮ ಪಾಟಯಾಮ್ಯೆನಾಂ ತಿಲಶಃ ಪ್ರವಿಭಜ್ಯ ತಾಮ್ |
ಯೇಯಂ ಭರ್ತಾರಮಸ್ಮಾಕಮವಮನ್ಯೇಹ ಜೀವತಿ ॥49॥
ಯಾವ ಇವಳು ನಮ್ಮ ಸ್ವಾಮಿಯನ್ನು ಅವಮಾನ ಮಾಡಿ ಇಲ್ಲಿ ಜೀವಿಸುತ್ತಿದ್ದಾಳೆಯೋ ಇವಳನ್ನು ಎಳ್ಳುಕಾಳಿನಷ್ಟು ಸಣ್ಣದಾಗಿ ಭಾಗಮಾಡಿ ಕತ್ತರಿಸಿ ತಿನ್ನೋಣ (ಎಂದು ಹೆದರಿಸುತ್ತಿದ್ದರು).
ಮಾರ್ಕಂಡೇಯಃ
ಇತ್ಯೇವಂ ಪರಿಭರ್ತ್ಸಂತೀಸ್ತ್ರಸ್ಯಮಾನಾ ಪುನಃ ಪುನಃ |
ಭರ್ತೃಶೋಕಸಮಾವಿಷ್ಟಾ ನಿಃಶ್ವಸ್ಯೇದಮುವಾಚ ತಾಃ ॥50॥
ಮಾರ್ಕಂಡೇಯ ಹೀಗೆ ಅವರಿಂದ ಪುನಃ ಪುನಃ ಹೆದರಿಸಲ್ಪಡುತ್ತಿದ್ದ ಸೀತೆಯು ಭರ್ತೃಶೋಕದಿಂದ ಕೂಡಿದವಳಾಗಿ ನಿಟ್ಟುಸಿರನ್ನು ಬಿಟ್ಟು ತನ್ನನ್ನು ಹೆದರಿಸುವ ಆ ರಾಕ್ಷಸಿಯರನ್ನು ಕುರಿತು ಹೀಗೆ ಮಾತನಾಡಿದಳು.
ಆರ್ಯಾಃ ಖಾದತ ಮಾಂ ಶೀಘ್ರಂ ನ ಮೇ ಲೋಭೋಽಸ್ತಿ ಜೀವಿತೇ |
ವಿನಾ ತಂ ಪುಂಡರೀಕಾಕ್ಷಂ ನೀಲಕುಂಚಿತಮೂರ್ಧಜಮ್ ॥51॥
ಆರ್ಯೆಯರೇ, ನನ್ನನ್ನು ಬೇಗ ತಿನ್ನಿ. ಕಪ್ಪಾದ ಗುಂಗುರು ಕೂದಲನ್ನುಳ್ಳ ಆ ಪುಂಡರೀಕಾಕ್ಷನನ್ನು ಬಿಟ್ಟು ನಾನು ಬದುಕುವ ಆಸೆಯನ್ನು ಹೊಂದಿಲ್ಲ.
ಅಪ್ಯೇವಾಹಂ ನಿರಾಹಾರಾ ಜೀವಿತಪ್ರಿಯವರ್ಜಿತಾ |
ಶೋಷಯಿಷ್ಯಾಮಿ ಗಾತ್ರಾಣಿ ವ್ಯಾಲೀ ತಾಳಗತಾ ಯಥಾ ॥52॥
ಅಥವಾ ನಾನು ನನ್ನ ಪ್ರಾಣಪ್ರಿಯನಿಂದ ವರ್ಜಿತಳಾದುದರಿಂದ ನಿರಾಹಾರಳಾಗಿ ತಾಳೆವೃಕ್ಷದಲ್ಲಿರುವ ಸರ್ಪದಂತೆ ನನ್ನ ಶರೀರವನ್ನು ಶೋಷಿಸುವೆನು.
ನ ತ್ವನ್ಯಮಭಿಗಚ್ಛೇಯಂ ಪುಮಾಂಸಂ ರಾಘವಾದೃತೇ |
ಇತಿ ಜಾನೀತಿ ಸತ್ಯಂ ಮೇ ಕ್ರಿಯತಾಂ ಯದನಂತರಮ್ ॥53॥
ರಾಮನನ್ನು ಬಿಟ್ಟು ಇನ್ನೊಬ್ಬ ಪುರುಷನನ್ನು ಮನಸ್ಸಿನಲ್ಲಿಯೂ ಯೋಚಿಸುವುದಿಲ್ಲ ಎಂದು ತಿಳಿಯಿರಿ. ಇದು ನನ್ನ ಸತ್ಯ. ನಿಮಗೆ ಬೇಕಾದಂತೆ ಮಾಡಿ (ಎಂದು ಹೇಳಿದಳು).
ಮಾರ್ಕಂಡೇಯಃ
ತಸ್ಯಾಸ್ತದ್ವಚನಂ ಶ್ರುತ್ವಾ ರಾಕ್ಷಸ್ಯಸ್ತಾಃ ಖರಸ್ವನಾಃ |
ಆಖ್ಯಾತುಂ ರಾಕ್ಷಸೇಂದ್ರಾಯ ಜಗ್ಮುಸ್ತತ್ಸರ್ವಮಾದಿತಃ ॥54॥
ಗತಾಸು ತಾಸು ಸರ್ವಾಸು ತ್ರಿಜಟಾ ನಾಮ ರಾಕ್ಷಸೀ |
ಸಾಂತ್ವಯಾಮಾಸ ವೈದೇಹೀಂ ಧರ್ಮಜ್ಞಾ ಪ್ರಿಯವಾದಿನೀ ॥55॥
ಮಾರ್ಕಂಡೇಯ ಅವಳ ಆ ಮಾತುಗಳನ್ನು ಕೇಳಿ ಒರಟಾದ ಧ್ವನಿಯುಳ್ಳ ಆ ರಾಕ್ಷಸಿಯರು ರಾಕ್ಷಸೇಂದ್ರಿಯನಾದ ಆ ರಾವಣನಿಗೆ ನಡೆದ ಎಲ್ಲಾ ವಿಷಯವನ್ನೂ ಮೊದಲಿನಿಂದ ನಿವೇದಿಸಲು ಅವನ ಬಳಿಗೆ ಹೋದರು. ಅವರೆಲ್ಲರೂ ಹೊರಟು ಹೋದ ಮೇಲೆ ತ್ರಿಜಟೆ ಎಂಬ ಧರ್ಮಜ್ಞಳೂ, ಪ್ರಿಯವಾದಿನಿಯೂ ಆದ ರಾಕ್ಷಸಿಯು ಸೀತೆಯನ್ನು ಸಮಾಧಾನಪಡಿಸಿದಳು.
ಸೀತೇ ವಕ್ಷ್ಯಾಮಿ ತೇ ಕಿಂಚಿದ್ ವಿಶ್ವಾಸಂ ಕುರು ಮೇ ಸಖಿ |
ಭಯಂ ತ್ವಂ ತ್ಯಜ ವಾಮೋರು ಶೃಣು ಚೇದಂ ವಚೋ ಮಮ ॥56॥
ಸೀತೆಯೇ, ಒಂದು ವಿಷಯವನ್ನು ಹೇಳುವೆನು. ಸಖಿಯೇ, ನನ್ನಲ್ಲಿ ವಿಶ್ವಾಸವನ್ನು ಮಾಡು. ಸುಂದರಿಯೇ, ಭಯವನ್ನು ಬಿಡು. ನನ್ನ ಈ ಮಾತನ್ನು ಕೇಳು.
ಅವಿಂಧ್ಯೋ ನಾಮ ಮೇಧಾವೀ ವೃದ್ಧೋ ರಾಕ್ಷಸಪುಂಗವಃ |
ಸ ರಾಮಸ್ಯ ಹಿತಾನ್ವೇಷೀ ತ್ವದರ್ಥೇ ಹಿ ಸ ಮಾಽವದತ್ |
ಸೀತಾ ಮದ್ವಚನಾದ್ ವಾಚ್ಯಾ ಸಮಾಶ್ವಾಸ್ಯ ಪ್ರಸಾದ್ಯ ಚ ॥57॥
ಅವಿಂಧ್ಯನೆಂಬ ಮೇಧಾವಿಯೂ, ವೃದ್ಧನೂ ಆದ ಒಬ್ಬ ರಾಕ್ಷಸಶ್ರೇಷ್ಠನಿದ್ದಾನೆ. ಅವನು ರಾಮನ ಹಿತವನ್ನು ಬಯಸುವವನು. ಅವನು ನಿನ್ನ ಸಲುವಾಗಿ ನನ್ನನ್ನು ಕುರಿತು ಸೀತೆಯನ್ನು ಸಮಾಧಾನಪಡಿಸಿ ಪ್ರಸನ್ನೀಕರಿಸಿಕೊಂಡು ನಾನು ಹೇಳಿದೆನೆಂದು ಸೀತೆಗೆ

ತಿಳಿಸು ಎಂದು ನನಗೆ ಹೇಳಿದ್ದಾನೆ.
ಭರ್ತಾ ತೇ ಕುಶಲೀ ರಾಮೋ ಲಕ್ಷ್ಮಣಾನುಗತೋ ಬಲೀ ॥58॥
ನಿನ್ನ ಪತಿಯಾದ ರಾಮನು ಲಕ್ಷ್ಮಣನಿಂದ ಹಿಂಬಾಲಿಸಲ್ಪಟ್ಟವನಾಗಿ ಬಲಿಷ್ಠನಾಗಿ ಕುಶಲದಿಂದಿದ್ದಾನೆ.
ಸಖ್ಯಂ ವಾನರರಾಜೇನ ಶಕ್ರಪ್ರತಿಮತೇಜಸಾ |
ಕೃತವಾನ್ ರಾಘವಃ ಶ್ರೀಮಾಂಸ್ತ್ವದರ್ಥೇ ಚ ಸಮುದ್ಯತಃ ॥59॥
ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ವಾನರರಾಜನಾದ ಸುಗ್ರೀವನ ಸಖ್ಯವನ್ನು ಪಡೆದಿದ್ದಾನೆ. ಕಾಂತಿಯುಕ್ತನಾದ ರಾಘವನು ನಿನ್ನನ್ನು ಪಡೆಯುವ ಸಲುವಾಗಿ ಉದ್ಯುಕ್ತನಾಗಿದ್ದಾನೆ.
ಮಾ ಚ ತೇಽಸ್ತು ಭಯಂ ಭೀರು ರಾವಣಾಲ್ಲೋಕಗರ್ಹಿತಾತ್ |
ನಳಕೂಬರಶಾಪೇನ ರಕ್ಷಿತಾ ಹ್ಯಸಿ ನಂದಿನಿ ॥60॥
ಎಲೈ ಭೀರುವೇ, ಲೋಕಗರ್ಹಿತನಾದ ರಾವಣನ ದೆಸೆಯಿಂದ ನೀನು ಭಯಪಡಬೇಡ. ಎಲೌ ನಂದಿನಿಯೇ, ನೀನು ನಳಕೂಬರರು ರಾವಣನಿಗೆ ಕೊಟ್ಟ ಶಾಪದಿಂದ ರಕ್ಷಿಸಲ್ಪಟ್ಟಿದ್ದೀಯೆ.
ಶಪ್ತೋ ಹ್ಯೇಷ ಪುರಾ ಪಾಪೋ ವಧೂಂ ರಂಭಾಂ ಪರಾಮೃಶನ್ |
ನ ಶಕ್ನೋತ್ಯವಶಾಂ ನಾರೀಮುಪೈತುಮಜಿತೇಂದ್ರಿಯಃ ॥61॥
ಹಿಂದೆ ಈ ಪಾಪಿಯು ರಂಭೆಯ ಮೇಲೆ ಕೈಮಾಡಲು ಹೋದಾಗ ಅಜಿತೇಂದ್ರಿಯನಾದ ಇವನು ಇಷ್ಟವಿಲ್ಲದ ಯಾವ ವನಿತೆಯ ಮೇಲೂ ಕೈಮಾಡಲು ಸಾಧ್ಯವಿಲ್ಲವೆಂದು ಶಾಪವನ್ನು ಪಡೆದಿದ್ದಾನೆ.
ಕ್ಷಿಪ್ರಮೇಷ್ಯತಿ ತೇ ಭರ್ತಾ ಸುಗ್ರೀವೇಣಾಭಿರಕ್ಷಿತಃ |
ಸೌಮಿತ್ರಿಸಹಿತೋ ಧೀಮಾಂಸ್ತತ್ವಂ ಚೇತೋ ಮೋಕ್ಷಯಿಷ್ಯತಿ ॥62॥
ನಿನ್ನ ಪತಿಯಾದ ಮೇಧಾವಿಯಾದ ರಾಮನು ಸುಗ್ರೀವನಿಂದ ರಕ್ಷಿತನಾಗಿ ಲಕ್ಷ್ಮಣನ ಜೊತೆಯಲ್ಲಿ ಇಲ್ಲಿಗೆ ಬೇಗ ಬಂದು ನಿನ್ನನ್ನು ಇಲ್ಲಿಂದ ಬಿಡುಗಡೆಗೊಳಿಸುವನು (ಎಂದು ನಿನಗೆ ತಿಳಿಸುವಂತೆ ಅವಿಂಧ್ಯನು ನನಗೆ ಹೇಳಿದ್ದಾನೆ).
ತ್ರಿಜಟಾ
ಸ್ವಪ್ನಾ ಹಿ ಸುಮಹಾಘೋರಾ ದೃಷ್ಟಾ ಮೇಽನಿಷ್ಟದರ್ಶನಾಃ |
ವಿನಾಶಾಯಾಸ್ಯ ದುರ್ಬುದ್ಧೇಃ ಪೌಲಸ್ತ್ಯಕುಲಘಾತಿನಃ ॥63॥
ತ್ರಿಜಟಾ ನನಗೆ ಪೌಲಸ್ತ್ಯಕುಲಘಾತಿಯಾದ ದುರ್ಬುದ್ಧಿಯಾದ ರಾವಣನ ವಿನಾಶವನ್ನು ಸೂಚಿಸುವ ಮಹಾಘೋರವಾದ ಅನೇಕ ಸ್ವಪ್ನಗಳು ಕಂಡಿವೆ.
ದಾರುಣೋ ಹ್ಯೇಷ ದುಷ್ಟಾತ್ಮಾ ಕ್ಷುದ್ರಕರ್ಮಾ ನಿಶಾಚರಃ |
ಸ್ವಭಾವಾಚ್ಛೀಲದೋಷೇಣ ಸರ್ವೇಷಾಂ ಭಯವರ್ಧನಃ ॥64॥
ದುಷ್ಟಾತ್ಮನೂ, ನೀಚಕರ್ಮವನ್ನು ಮಾಡುವವನೂ, ಭಯಂಕರನೂ ಆದ ಈ ರಾಕ್ಷಸನು ತನ್ನ ಸ್ವಾಭಾವಿಕ ನಡತೆಯಿಂದಲೇ ಎಲ್ಲರಿಗೂ ಭಯವನ್ನು ಉಂಟು ಮಾಡುವವನಾಗಿದ್ದಾನೆ.
ಸ್ಪರ್ಧತೇ ಸರ್ವದೇವೈರ್ಯಃ ಕಾಲೋಪಹತಚೇತನಃ |
ಮಯಾ ವಿನಾಶಲಿಂಗಾನಿ ಸ್ವಪ್ನೇ ದೃಷ್ಟಾನಿ ತಸ್ಯ ವೈ ॥65॥
ಕಾಲದಿಂದ ನಷ್ಟಚೇತನನಾಗಿ (ವಿವೇಕವನ್ನು ಕಳೆದುಕೊಂಡು) ದೇವತೆಗಳ ಜೊತೆಯಲ್ಲಿ ಸ್ಪರ್ಧಿಸುತಿತದ್ದಾನೆ. ನಾನು ಸ್ವಪ್ನದಲ್ಲಿ ಅವನ ವಿನಾಶಸೂಚಕವಾದ ಅನೇಕ ಲಿಂಗಗಳನ್ನು ನೋಡಿದೆನು.
ತೈಲಾಭಿಷಿಕ್ತೋ ವಿಕಚೋ ಮಜ್ಜನ್ ಪಂಕೇ ದಶಾನನಃ |
ಅಸಕೃತ್ ಖರಯುಕ್ತೇ ತು ರಥೇ ನೃತ್ಯನ್ನಿವ ಸ್ಥಿತಃ ॥66॥
ದೇಹಕ್ಕೆ ತೈಲವನ್ನು ಅಭಿಷೇಕ ಮಾಡಿಕೊಂಡು ತಲೆಕೂದಲುಗಳನ್ನು ಕೆದರಿ ಕೆಸರಿನಲ್ಲಿ ಮುಳುಗುತ್ತಾ ಕತೆತಗಳು ಹೂಡಿದ ರಥದಲ್ಲಿ ನರ್ತನ ಮಾಡುವವನಂತೆ ಇರುವ ರಾವಣನನ್ನು ನಾನು ಅನೇಕ ಬಾರಿ ನೋಡಿದ್ದೇನೆ.
ಕುಂಭಕರ್ಣಾದಯಶ್ಚೇಮೇ ನಗ್ನಾಃ ಪತಿತಮೂರ್ಧಜಾಃ |
ಗಚ್ಛಂತಿ ದಕ್ಷಿಣಾಮಾಶಾಂ ರಕ್ತಮಾಲ್ಯಾನುಲೇಪನಾಃ ॥67॥
ಕುಂಭಕರ್ಣ ಮೊದಲಾದ ಇವರೆಲ್ಲರೂ ನಗ್ನರಾಗಿ ತಲೆಕೂದಲುಗಳೆಲ್ಲಾ ಉದುರಿ ರಕ್ತಮಾಲೆಗಳನ್ನು ಧರಿಸಿ ರಕ್ತಚಂದನವನ್ನು ಲೇಪಿಸಿಕೊಂಡು ದಕ್ಷಿಣ ದಿಕ್ಕಿಗೆ ಹೋಗುತ್ತಾರೆ.
ಶ್ವೇತಾತಪತ್ರಃ ಸೋಷ್ಣೀಷಃ ಶುಕ್ಲಮಾಲ್ಯಾನುಲೇಪನಃ |
ಶ್ವೇತಪರ್ವತಮಾರೂಢ ಏಕ ಏವ ವಿಭೀಷಣಃ ॥68॥
ವಿಭೀಷಣನೊಬ್ಬನೇ ಬಿಳಿಯ ಛತ್ರಿಯನ್ನು ಹಿಡಿದು ತಲೆಗೆ ರುಮಾಲನ್ನು ಕಟ್ಟಿಕೊಂಡು ಬಿಳಿಯ ಹೂಮಾಲೆಗಳನ್ನು ಮತ್ತು ಅನುಲೇಪನವನ್ನು ಹೊಂದಿ ಶ್ವೇತ ಪರ್ವತವನ್ನು ಹತ್ತಿ ಒಬ್ಬನೇ ಇರುತ್ತಾನೆ.
ಸಚಿವಾಶ್ಚಾಸ್ಯ ಚತ್ವಾರಃ ಶುಕ್ಲಮಾಲ್ಯಾನುಲೇಪನಾಃ |
ರಾಮಸ್ಯಾಸ್ತ್ರೇಣ ಪೃಥಿವೀ ಪರಿಕ್ಷಿಪ್ತಾ ಸಸಾಗರಾ |
ಯಶಸಾ ಪೃಥಿವೀಂ ಕೃತ್ಸ್ನಾಂ ಪೂರಯಿಷ್ಯತಿ ತೇ ಪತಿಃ ॥69॥
ಅವನ ನಾಲ್ವರು ಸಚಿವರೂ ಬಿಳಿಯ ಹೂಮಾಲೆಗಳನ್ನೂ ಮತ್ತು ಅನುಲೇಪನಗಳನ್ನೂ ಧರಿಸಿರುತ್ತಾರೆ. ರಾಮನ ಅಸ್ತ್ರದಿಂದ ಸಾಗರ ಸಹಿತವಾದ ಪೃಥಿವಿಯು ಎಲ್ಲವೂ ಅಧೀನವಾಗುತ್ತದೆ. ನಿನ್ನ ಪತಿಯು ತನ್ನ ಕೀರ್ತಿಯಿಂದ ಸಮಸ್ತ ಭೂಮಿಯನ್ನು ತುಂಬುತ್ತಾನೆ.
ಮೋಕ್ಷಿತಾ ತ್ವಾಂ ಭಯಾದಸ್ಮಾದ್ರಾಮಃ ಶತ್ರುನಿಷೂದನಃ |

ಅಸ್ಥಿಸಂಚಯಮಾರೂಢೋ ಭುಂಜಾನೋ ಮಧುಪಾಯಸಮ್ |
ಲಕ್ಷ್ಮಣಶ್ಚ ಮಯಾ ದೃಷ್ಟೋ ದಿಧಕ್ಷುಃ ಸರ್ವತೋ ದಿಶಮ್ ॥70॥
ಶತ್ರುಸಂಹಾರಕನಾದ ರಾಮನು ನಿನ್ನನ್ನು ಈ ಭಯದಿಂದ ಪಾರುಮಾಡುವನು. ಅಸ್ಥಿಯ ರಾಶಿಯ ಮೇಲೆ ನಿಂತು ಮಧುಪಾಯಸವನ್ನು ತಿನ್ನುತ್ತಾ ಎಲ್ಲ ದಿಕ್ಕುಗಳನ್ನೂ ದಹಿಸುತ್ತಿರುವ ಲಕ್ಷ್ಮಣನನ್ನೂ ಸಹ ನಾನು ನೋಡಿದ್ದೇನೆ.
ರುದತೀ ರುಧಿರಾದ್ರಾಂಗೀ ವ್ಯಾಘ್ರೇಣ ಪರಿರಕ್ಷಿತಾ |
ಅಸಕೃತ್ ತ್ವಂ ಮಯಾ ದೃಷ್ಟಾ ಗಚ್ಛಂತೀ ದಿಶಮುತ್ತರಾಮ್ |
ಹರ್ಷಮೇಷ್ಯಸಿ ವೈದೇಹಿ ಕ್ಷಿಪ್ರಂ ಭರ್ತ್ರಾ ಸಮನ್ವಿತಾ ॥71॥
ಅಳುತ್ತಾ ರಕ್ತದಿಂದ ಕೆಂಪಾದ ಶರೀರವುಳ್ಳವಳಾಗಿ ವ್ಯಾಘ್ರದಿಂದ ರಕ್ಷಿಸಲ್ಪಟ್ಟು ಉತ್ತರ ದಿಕ್ಕನ್ನು ಕುರಿತು ಪ್ರಯಾಣ ಮಾಡುವ ನಿನ್ನನ್ನು ನಾನು ಅನೇಕ ಬಾರಿ ನೋಡಿದ್ದೇನೆ. ವೈದೇಹಿಯೇ, ಪತಿಯಿಂದ ಸಮಾಗಮವನ್ನು ಹೊಂದಿ ನೀನು ಕ್ಷಿಪ್ರದಲ್ಲಿಯೇ ಸಂತೋಷವನ್ನು ಹೊಂದುವಿ.
ಮಾರ್ಕಂಡೇಯಃ
ಇತ್ಯೇತನ್ಮೃಗಶಾವಾಕ್ಷೀ ತತ್ಶ್ರುತ್ವಾ ತ್ರಿಜಟಾವಚಃ |
ಬಭೂವಾಶಾವತೀ ಬಾಲಾ ಪುನರ್ಭರ್ತೃಸಮಾಗಮೇ ॥72॥
ಮಾರ್ಕಂಡೇಯ ಮೃಗಶಾವಾಕ್ಷಿಯಾದ ಬಾಲೆಯಾದ ಸೀತೆಯು ತ್ರಿಜಟೆಯ ಮಾತುಗಳನ್ನು ಕೇಳಿ ಪುನಃ ಭರ್ತೃಸಮಾಗಮವನ್ನು ಹೊಂದುವ ವಿಷಯದಲ್ಲಿ ಆಸೆಯನ್ನು ಹೊಂದಿದವಳಾದಳು.
ಯಾವದಭ್ಯಾಗತಾ ರೌದ್ರಾಃ ಪಿಶಾಚ್ಯಸ್ತಾಃ ಸುದಾರುಣಾಃ |
ದದೃಶುಸ್ತಾಂ ತ್ರಿಜಟಯಾ ಸಹಾಸೀನಾಂ ಯಥಾ ಪುರಾ ॥73॥
ಆ ಭಯಂಕರರಾದ ದಾರುಣರಾದ ಪಿಶಾಚಸ್ತ್ರೀಯರು ಪುನಃ ಹಿಂದಿರುಗಿ ಬರುವ ಹೊತ್ತಿಗೆ ಅವರು ಮೊದಲಿನಂತೆ ದೂರದಲ್ಲಿ ಕುಳಿತಿದ್ದ ತ್ರಿಜಟೆಯನ್ನೂ ಮತ್ತು ಅಲ್ಲಿಯೇ ದೂರದಲ್ಲಿದ್ದ ಸೀತೆಯನ್ನೂ ನೋಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಖ್ಯಾನಪರ್ವಣಿ ತ್ರಿಜಟಾಸಾಂತ್ವಾನಂ ನಾಮ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಅರವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರ ಎಪ್ಪತ್ತನೆಯ ಅಧ್ಯಾಯ
ರಾವಣನಿಂದ ಸೀತೆಯ ಪ್ರಲೋಭನೆ ಮತ್ತು ಸೀತೆಯ ನಿರಾಕರಣೆ.
ಮಾರ್ಕಂಡೇಯಃ
ತತಸ್ತಾಂ ಭರ್ತೃಶೋಕಾರ್ತಾಂ ದೀನಾಂ ಮಲಿನವಾಸಸಮ್ |
ಮಣಿಶೇಷಾಭ್ಯಲಂಕಾರಾಂ ರುದತೀಂ ಚ ಪತಿವ್ರತಾಮ್ ॥1॥
ರಾಕ್ಷಸೀಭಿರುಪಾಸ್ಯಂತೀಂ ಸಮಾಸೀನಾಂ ಶಿಲಾತಳೇ |
ರಾವಣಃ ಕಾಮಬಾಣಾರ್ತೋ ದದರ್ಶೋಪಸಸರ್ಪ ಚ ॥2॥
ಅನಂತರ ಕಾಮಬಾಣಗಳಿಂದ ಪೀಡಿತನಾದ ರಾವಣನು ಭರ್ತೃಶೋಕದಿಂದ ದುಃಖಿತಳಾಗಿದ್ದ ದೀನಳಾಗಿದ್ದ, ಮಲಿನವಸ್ತ್ರಗಳನ್ನು ಧರಿಸಿದ್ದ, ಅಲ್ಪಾಭರಣವನ್ನು ಧರಿಸಿದ್ದ, ಅಳುತ್ತಿದ್ದ, ರಾಕ್ಷಸಿಯರಿಂದ ಸೇವಿಸಲ್ಪಡುತ್ತಿದ್ದ, ಶಿಲಾತಳದಲ್ಲಿ ಕುಳಿತಿದ್ದ ಆ ಪತಿವ್ರತೆಯನ್ನು ನೋಡಿ ಅವಳ ಸಮೀಪಕ್ಕೆ ಬಂದನು.
ದೇವದಾನವಗಂಧರ್ವಯಕ್ಷಕಿಂಪುರುಷೈರ್ಯುಧಿ |
ಅಜಿತೋಽಶೋಕವನಿಕಾಂ ಯಯೌ ಕಂದರ್ಪಪೀಡಿತಃ ॥3॥
ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ಕಿಂಪುರುಷರು ಇವರಿಂದ ಯುದ್ಧದಲ್ಲಿ ಪರಾಜಯವನ್ನು ಹೊಂದದಿದ್ದ ಅವನು ಮನ್ಮಥರ ಬಾಣಪೀಡಿತರಾಗಿ ಅಶೋಕವನಕ್ಕೆ ಬಂದನು.
ದಿವ್ಯಾಂಬರಧರಃ ಶ್ರೀಮಾನ್ ಸುಮೃಷ್ಟಮಣಿಕುಂಡಲಃ |
ವಿಚಿತ್ರಮಾಲ್ಯಮುಕುಟೋ ವಸಂತ ಇವ ಮೂರ್ತಿಮಾನ್ ॥4॥
ದಿವ್ಯಾಂಬರವನ್ನು ಧರಿಸಿ ಹೊಳೆಯುವ ಕರ್ಣಕುಂಡಲಗಳನ್ನು ಉಳ್ಳವನಾಗಿ ವಿಚಿತ್ರವಾದ ಹೂಮಾಲೆಗಳನ್ನು ಮತ್ತು ಕಿರೀಟಗಳನ್ನು ಧರಿಸಿ ಶರೀರವನ್ನು ಧರಿಸಿದ ವಸಂತಮಾಸದಂತೆ (ಬಂದನು).
ಸ ಕಲ್ಪವೃಕ್ಷಸದೃಶೋ ಯತ್ನಾದಪಿ ವಿಭೂಷಿತಃ |
ಶ್ಮಶಾನಚೈತ್ಯದ್ರುಮವದ್ ಭೂಷಿತೋಽಪಿ ಭಯಂಕರಃ ॥5॥
ಹಿಂದೆ ಪ್ರಯತ್ನಪೂರ್ವಕವಾಗಿ ಅಲಂಕರಿಸಿದ ಕಲ್ಪವೃಕ್ಷದಂತಿದ್ದ ಅವನು ಈಗ ಅಲಂಕಾರ ಮಾಡಿಕೊಂಡಿದ್ದರೂ ಸ್ಮಶಾನದ ವೃಕ್ಷದಂತೆ ಭಯಂಕರನಾಗಿದ್ದನು.
ಸ ತಸ್ಯಾಸ್ತನುಮಧ್ಯಾಯಾಃ ಸಮೀಪೇ ರಜನೀಚರಃ |
ದದೃಶೇ ರೋಹಿಣೀಮೇತ್ಯ ಶನೈಶ್ಚರ ಇವ ಗ್ರಹಃ ॥6॥
ಆ ರಾಕ್ಷಸನು ತನುಮಧ್ಯಮಳಾದ ಅವಳ ಸಮೀಪಕ್ಕೆ ಬಂದು ಶನಿಗ್ರಹವು ರೋಹಿಣಿಯ ಬಳಿಗೆ ಬರುವಂತೆ ಕಂಡುಬಂದನು.
ಸ ತಾಮಾಮಂತ್ರ್ಯ ಸುಶ್ರೋಣೀಂ ಪುಷ್ಪಕೇತುಶರಾಹತಃ |

ಇದಮಿತ್ಯಬ್ರವೀದ್ ಬಾಲಾಂ ತ್ರಸ್ತಾಂ ಮೃಗವಧೂಮಿವ ॥7॥
ಅವನು ಮನ್ಮಥನ ಬಾಣಗಳಿಂದ ಬಾಧಿತನಾಗಿ ಜಿಂಕೆಯ ಮರಿಯಂತಿದ್ದ ಹೆದರಿದ ಆ ಬಾಲೆಯನ್ನು ಸಂಬೋಧಿಸಿ ಹೀಗೆ ಮಾತನಾಡಿದನು.
ಸೀತೇ ಪರ್ಯಾಪ್ತಮೇತಾವತ್ ಕೃತೋ ಭರ್ತುರನುಗ್ರಹಃ |
ಪ್ರಸಾದಂ ಕುರು ತನ್ವಂಗಿ ಕ್ರಿಯತಾಂ ಪರಿಕರ್ಮ ತೇ ॥8॥
ಸೀತೆಯೇ, ಇಷ್ಟು ಮಾಡಿದ್ದು ಸಾಕು. ನಿನ್ನ ವ್ರತದಿಂದ ಪತಿಗೆ ಅನುಗ್ರಹವನ್ನು ಮಾಡಿದ್ದೀಯೆ. ಕೃಶಾಂಗಿಯೇ, ನನ್ನನ್ನು ಅನುಗ್ರಹಿಸು. ನೀನು ಅಲಂಕಾರವನ್ನು ಮಾಡಿಕೋ.
ಭಜಸ್ವ ಮಾಂ ವರಾರೋಹೇ ಮಹಾರ್ಹಾಭರಣಾಂಬರಾ |
ಭವ ಮೇ ಸರ್ವನಾರೀಣಾಮುತ್ತಮಾ ವರವರ್ಣಿನೀ ॥9॥
ಎಲೌ ವರಾರೋಹೆಯೇ, ಬೆಲೆಬಾಳುವ ಆಭರಣಗಳನ್ನೂ, ವಸ್ತ್ರಗಳನ್ನೂ ಧರಿಸಿ ನನ್ನನ್ನು ಸೇವಿಸು. ವರವರ್ಣಿನಿಯೇ, ನನ್ನ ಎಲ್ಲಾ ನಾರಿಯರಿಗಿಂತಲೂ ಶ್ರೇಷ್ಠಳಾಗಿರು.
ಸಂತಿ ಮೇ ದೇವಕನ್ಯಾಶ್ಚ ಗಂಧರ್ವಾಣಾಂ ಚ ಯೋಷಿತಃ |
ಸಂತಿ ದಾನವಕನ್ಯಾಶ್ಚ ದೈತ್ಯಾನಾಂ ಚಾಪಿ ಯೋಷಿತಃ |
ತಾಸಾಮದ್ಯ ವಿಶಾಲಾಕ್ಷಿ ಸರ್ವಾಸಾಂ ಮೇ ಭವೋತ್ತಮಾ ॥10॥
ನನ್ನ ಅಂತಃಪುರದಲ್ಲಿ ದೇವಕನ್ಯೆಯರೂ, ಗಂಧರ್ವಸ್ತ್ರೀಯರೂ, ದಾನವ ಕನ್ಯೆಯರೂ ಮತ್ತು ದೈತ್ಯಸ್ತ್ರೀಯರೂ ಇದ್ದಾರೆ. ಎಲೌ ವಿಶಾಲಾಕ್ಷಿಯೇ, ನೀನು ಅವರೆಲ್ಲರಿಗಿಂತಲೂ ಶ್ರೇಷ್ಠಳಾದವಳಾಗು.
ಚತುರ್ದಶ ಪಿಶಾಚಾನಾಂ ಕೋಟ್ಯೋ ಮೇ ವಚನೇ ಸ್ಥಿತಾಃ |
ದ್ವಿಸ್ತಾವತ್ ಪುರುಷಾದಾನಾಂ ರಕ್ಷಸಾಂ ಭೀಮಕರ್ಮಣಾಮ್ ॥11॥
ನನ್ನ ಅಧೀನವಾಗಿ ನನ್ನ ಮಾತನ್ನು ನಡೆಸಿಕೊಡುವ ಹದಿನಾಲ್ಕುಕೋಟಿ ಪಿಶಾಚಗಳಿದ್ದಾರೆ. ಭಯಂಕರವಾದ ಕರ್ಮಗಳನ್ನು ಮಾಡುವ ನರಭಕ್ಷಕರಾದ ರಾಕ್ಷಸರು ಅವರ ಎರಡರಷ್ಟಿದ್ದಾರೆ.
ತತೋ ಮೇ ತ್ರಿಗುಣಾ ಯಕ್ಷಾ ಯೇ ಮದ್ವಚನಕಾರಿಣಃ |
ಕೇಚಿದೇವ ಧನಾಧ್ಯಕ್ಷಂ ಭ್ರಾತರಂ ಮೇ ಸಮಾಶ್ರಿತಾಃ ॥12॥
ನನ್ನ ಮಾತನ್ನು ನಡೆಸಿಕೊಡುವ ಯಕ್ಷರು ಅದಕ್ಕಿಂತ ಮೂರುಪಟ್ಟು ಇದ್ದಾರೆ. ಕೇವಲ ಕೆಲವರು ಮಾತ್ರ ನನ್ನ ಸಹೋದರನಾದ ಕುಬೇರನನ್ನು ಆಶ್ರಯಿಸಿದ್ದಾರೆ.
ಗಂಧರ್ವಾಪ್ಸರಸೋ ಭದ್ರೇ ಮಾಮಾಪಾನಗತಂ ಸದಾ |
ಉಪತಿಷ್ಠಂತಿ ವಾಮೋರು ಯಥೈವ ಭ್ರಾತರಂ ಮಮ ॥13॥
ಎಲೌ ಭದ್ರೆಯೇ, ವಾಮೋರುವೇ, ನಾನು ಪಾನಶಾಲೆಯಲ್ಲಿರುವಾಗ ನನ್ನ ಸಹೋದರನಾದ ಕುಬೇರನನ್ನು ಉಪಚರಿಸಿದಂತೆ ಗಂಧರ್ವರು ಮತ್ತು ಅಪ್ಸರೆಯರು ನನ್ನನ್ನು ಉಪಚರಿಸುತ್ತಾರೆ (ಸೊತೀತ್ರಮಾಡುತ್ತಾರೆ).
ಪುತ್ರೋಽಹಮಪಿ ವಿಪ್ರರ್ಷೇಃ ಸಾಕ್ಷಾದ್ ವಿಶ್ರವಸೋ ಮುನೇಃ |
ಪಂಚಮೋ ಲೋಕಪಾಲಾನಾಮಿತಿ ಮೇ ಪ್ರಥಿತಂ ಯಶಃ ॥14॥
ನಾನೂ ಸಹ ವಿಪ್ರರ್ಷಿಯಾದ ವಿಶ್ರವಸ್ ಮುನಿಗಳ ಸಾಕ್ಷಾತ್ ಪುತ್ರನಾಗಿದ್ದೇನೆ. ನನಗೆ ಐದನೆಯ ಲೋಕಪಾಲಕನೆಂಬ ಕೀರ್ತಿಯು ಪ್ರಖ್ಯಾತವಾಗಿದೆ.
ದಿವ್ಯಾನಿ ಭಕ್ಷ್ಯಭೋಜ್ಯಾನಿ ಪಾನಾನಿ ವಿವಿಧಾನಿ ಚ |
ಯಥೈವ ತ್ರಿದಶೇಶಸ್ಯ ತಥೈವ ಮಮ ಭಾಮಿನಿ ॥15॥
ಎಲೌ ಭಾಮಿನಿಯೇ, ಇಂದ್ರನಿಗಿರುವಂತೆಯೇ ನನಗೆ ದಿವ್ಯವಾದ ಭಕ್ಷ್ಯಭೋಜ್ಯಗಳೂ, ವಿವಿಧವಾದ ಪಾನಗಳೂ ಇವೆ.
ಕ್ಷೀಯತಾಂ ದುಷ್ಕೃತಂ ಕರ್ಮ ವನವಾಸಕೃತಂ ತವ |
ಭಾರ್ಯಾ ಮೇ ಭವ ಸುಶ್ರೋಣಿ ಯಥಾ ಮಂಡೋದರೀ ತಥಾ ॥
ನಿನ್ನ ವನವಾಸರೂಪವಾದ ದುಷ್ಕರ್ಮವು ನಾಶವಾಗಲಿ. ಸುಶ್ರೋಣಿಯೇ, ಮಂಡೋದರಿಯಂತೆ ನನ್ನ ಪತ್ನಿಯಾಗು.
ಮಾರ್ಕಂಡೇಯಃ
ಇತ್ಯುಕ್ತಾ ತೇನ ವೈದೇಹೀ ಪರಿವೃತ್ಯ ಶುಭಾನನಮ್ |
ತೃಣಮಂತರಿತಂ(ರತಃ) ಕೃತ್ವಾ ಕ್ರೋಧಸಂರಕ್ತಲೋಚನಾ ॥17॥
ಅಶಿವೇನಾತಿವಾಮೋರೂರಜಸ್ರಂ ನೇತ್ರವಾರಿಣಾ |
ಸ್ತನಾವಪತಿತೌ ಬಾಲಾ ಸಂಹತಾವಭಿವರ್ಷತೀ ॥18॥
ವ್ಯವಸ್ಥಾಪ್ಯ ಕಥಂಚಿತ್ ಸಾ ವಿಷಾದಾದತಿಮೋಹಿತಾ |
ಉವಾಚ ವಾಕ್ಯಂ ತಂ ಕ್ಷುದ್ರಂ ವೈದೇಹೀ ಪತಿದೇವತಾ ॥19॥
ಮಾರ್ಕಂಡೇಯ ಹೀಗೆ ರಾವಣನಿಂದ ಹೇಳಲ್ಪಟ್ಟ ಆ ವೈದೇಹಿಯು ತನ್ನ ಸುಂದರವಾದ ಮುಖವನ್ನು ತಿರುಗಿಸಿ, ಒಂದು ಹುಲ್ಲುಕಡ್ಡಿಯನ್ನು ಮಧ್ಯದಲ್ಲಿ ಹಿಡಿದು ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿ ಅತ್ಯಂತ ಸುಂದರಿಯಾದ ಅವಳು ತನ್ನ ಕಣ್ಣುಗಳಿಂದ ಹೊರಟ ಅಮಂಗಳವಾದ ಕಣ್ಣೀರಿನಿಂದ ತನ್ನ ಸುಂದರವಾದ ಸ್ತನಗಳನ್ನು ಒದ್ದೆಮಾಡುತ್ತಾ ಮನಸ್ಸಿನಲ್ಲಿ ಸ್ವಲ್ಪ ಸಮಾಧಾನವನ್ನು ತೆಗೆದುಕೊಂಡು ವಿಷಾದದಿಂದ ಮೋಹಿತಳಾಗಿ ಪತಿದೇವತೆಯಾದ ಅವಳು ಆ ಕ್ಷುದ್ರನನ್ನು ಕುರಿತು ಮಾತನಾಡಿದಳು.

ಅಸಕೃದ್ ವದತೋ ವಾಕ್ಯಮೀದೃಶಂ ರಾಕ್ಷಸೇಶ್ವರ |
ವಿಷಾದಯುಕ್ತಮೇತತ್ ತೇ ಮಯಾ ಶ್ರುತಮಭಾಗ್ಯಯಾ ॥20॥
ಎಲೈ ರಾಕ್ಷಸೇಶ್ವರನೇ, ನೀನು ಅನೇಕ ಬಾರಿ ಆಡುವ ಈ ಮಾತುಗಳನ್ನು ವಿಷಾದಯುಕ್ತಳಾಗಿ ಕೇಳುವುದು ನನ್ನ ದೌರ್ಭಾಗ್ಯವಾಗಿದೆ.
ತದ್ ಭದ್ರಮುಖ ಭದ್ರಂ ತೇ ಮಾನಸಂ ವಿನಿವರ್ತ್ಯತಾಮ್ |
ಪರದಾರಾಸ್ಮ್ಯಲಭ್ಯಾ ಚ ಸತತಂ ಚ ಪತಿವ್ರತಾ ॥21॥
ಭದ್ರನೇ, ನಿನಗೆ ಮಂಗಳವಾಗಲಿ. ನಿನ್ನ ಮನಸ್ಸನ್ನು ತಿರುಗಿಸು. ನಾನು ಸತತವಾಗಿ ಪತಿವ್ರತೆಯಾದ ಪರಸ್ತ್ರೀ. ನಿನಗೆ ಲಭ್ಯಳಾಗುವವಳಲ್ಲ.
ನ ಚೈವೋಪಯಿಕೀ ಭಾರ್ಯಾ ಮಾನುಷೀ ತವ ರಾಕ್ಷಸ |
ವಿವಶಾಂ ಧರ್ಷಯಿತ್ವಾ ಚ ಕಾಂ ತ್ವಂ ಪ್ರೀತಿಮವಾಪ್ಸ್ಯಸಿ ॥22॥
ಎಲೈ ರಾಕ್ಷಸನೇ, ನಿನಗೆ ಯಾವ ಮನುಷ್ಯ ಕನ್ಯೆಯೂ ವೇಶ್ಯೆಯಾದರೂ ಯೋಗ್ಯಳಾದ ಪತಿನಯಾಗುವುದಿಲ್ಲ. ಇಷ್ಟವಿಲ್ಲದವಳನ್ನು ಬಲಾತ್ಕಾರಮಾಡಿ ನೀನು ಯಾವ ಸುಖವನ್ನು ಹೊಂದುವಿ?
ಪ್ರಜಾಪತಿಸಮೋ ವಿಪ್ರೋ ಬ್ರಹ್ಮಯೋನಿಃ ಪಿತಾ ತವ |
ನ ಚ ಪಾಲಯಸೇ ಧರ್ಮಂ ಲೋಕಪಾಲಸಮಃ ಕಥಮ್ ॥23॥
ನಿನ್ನ ತಂದೆಯು ಪ್ರಜಾಪತಿಗೆ ಸಮನಾದ ಬ್ರಾಹ್ಮಣ ಮತ್ತು ಬ್ರಹ್ಮದೇವರಿಂದ ಜನಿಸಿದವನು. ಲೋಕಪಾಲಕರಿಗೆ ಸಮನೆಂದು ಹೇಳಿಕೊಳ್ಳುವ ನೀನು ಏಕೆ ಧರ್ಮವನ್ನು ಪಾಲಿಸುತ್ತಿಲ್ಲ?
ಭ್ರಾತರಂ ರಾಜರಾಜಂ ಚ ಮಹೇಶ್ವರಸಖಂ ಪ್ರಭುಮ್ |
ಧನೇಶ್ವರಂ ವ್ಯಪದಿಶನ್ ಕಥಂ ತ್ವಿಹ ನ ಲಜ್ಜಸೇ ॥24॥
ರುದ್ರದೇವರಿಗೆ ಸ್ನೇಹಿತನಾದ ರಾಜರಾಜನಾದ ಕುಬೇರನನ್ನು ಸಹೋದರನೆಂದು ಹೇಳಿಕೊಳ್ಳುವ ನೀನು ಈ ವಿಷಯದಲ್ಲಿ ಏಕೆ ನಾಚಿಕೆಯನ್ನು ಪಡುವುದಿಲ್ಲ?
ಮಾರ್ಕಂಡೇಯಃ
ಇತ್ಯುಕ್ತ್ವಾ ಪ್ರಾರುದತ್ ಸೀತಾ ಕಂಪಯಂತೀ ಪಯೋಧರೌ |
ಶಿರೋಧರಾಂ ಚ ತನ್ವಂಗೀ ಮುಖಂ ಪ್ರಚ್ಛಾದ್ಯ ವಾಸಸಾ ॥25॥
ಮಾರ್ಕಂಡೇಯ ಹೀಗೆ ಹೇಳಿ ಆ ಕೃಷಾಂಗಿಯಾದ ಸೀತೆಯು ತನ್ನ ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಸ್ತನಗಳನ್ನು ಮತ್ತು ಕತ್ತನ್ನು ಕಂಪಿಸುತ್ತಾ ರೋದನವನ್ನು ಮಾಡಿದಳು.
ತಸ್ಯಾ ರುಂತ್ಯಾ ಭಾಮಿನ್ಯಾ ದೀರ್ಘಾ ವೇಣೀ ಸುಸಂಯತಾ |
ದದೃಶೇಽತಿತರಾಂ ಸ್ನಿಗ್ಧಾ ಕಾಲೀ ವ್ಯಾಲೀವ ಮೂರ್ಧನಿ ॥26॥
ಅಳುತ್ತಿದ್ದ ಆ ಭಾಮಿನಿಯ ದೀರ್ಘವಾದ, ಚೆನ್ನಾಗಿ ಕಟ್ಟಲ್ಪಟ್ಟ, ಒತ್ತಾದ, ಕಪ್ಪಾದ ಕೂದಲುಗಳು ಅವಳ ತಲೆಯಲ್ಲಿ ಕೃಷ್ಣಸರ್ಪದಂತೆ ಕಾಣುತ್ತಿದ್ದವು.
ಶ್ರುತ್ವಾ ತದ್ ರಾವಣೋ ವಾಕ್ಯಂ ಸೀತಯೋಕ್ತಂ ಸುನಿಷ್ಠುರಮ್ |
ಪ್ರತ್ಯಾಖ್ಯಾತೋಽಪಿ ದುರ್ಮೇಧಾಃ ಪುನರೇವಾಬ್ರವೀದ್ ವಚಃ ॥27॥
ಸೀತೆಯ ನಿಷ್ಠುರವಾದ ಆ ವಾಕ್ಯಗಳನ್ನು ಕೇಳಿದ ಆ ರಾವಣನು ನಿರಾಕರಿಸಲ್ಪಟ್ಟರೂ ಸಹ ದುರ್ಬುದ್ಧಿಯುಳ್ಳ ಅವನು ಪುನಃ ಅವಳನ್ನು ಕುರಿತು ಮಾತನಾಡಿದನು.
ಕಾಮಮಂಗಾನಿ ಮೇ ಸೀತೇ ದುನೋತು ಮಕರಧ್ವಜಃ |
ನ ತ್ವಾಮಕಾಮಾಂ ಸುಶ್ರೋಣೀಂ ಸಮೇಷ್ಯೇ ಚಾರುಹಾಸಿನೀಮ್ ॥28॥
ಸೀತೆಯೇ, ನನ್ನ ದೇಹವನ್ನು ಮನ್ಮಥನು ತನಗೆ ಇಷ್ಟಬಂದಂತೆ ಪೀಡಿಸಲಿ ಆದರೆ ನಾನು ಸುಶ್ರೋಣಿಯೂ, ಚಾರುಹಾಸಿನಿಯೂ ಆದ ನಿನ್ನನ್ನು ನಿನ್ನ ಸಮ್ಮತಿ ಇಲ್ಲದೆ ಸಮಾಗಮವನ್ನು ಮಾಡುವುದಿಲ್ಲ.
ಕಿಂ ನು ಶಕ್ಯಂ ಮಯಾ ಕರ್ತುಂ ಯತ್ತ್ವಮದ್ಯಾಪಿ ಮಾನುಷಮ್ |
ಆಹಾರಭೂತಮಸ್ಮಾಕಂ ರಾಮಮೇವಾನುರುಧ್ಯಸೇ ॥29॥
ನೀನು ಇನ್ನೂ ಸಹ ನಮಗೆ ಆಹಾರನಾದ ರಾಮನನ್ನೇ ಅನುಸರಿಸುತ್ತಿರುವುದರಿಂದ ನಾನು ಏನು ಮಾಡಲು ಸಾಧ್ಯ? ನಿನಗೆ ನನ್ನಲ್ಲಿ ಕಾಮವಿಲ್ಲದಿರುವುದರಿಂದ ಮತ್ತು ನಾನು ಅಕಾಮಳನ್ನು ಭೋಗಿಸಲು ಸಾಧ್ಯವಿಲ್ಲವಾದ್ದರಿಂದ (ಮನೆಗೆ ಹೋಗುವುದೇ ಲೇಸು).
ಮಾರ್ಕಂಡೇಯಃ
ಇತ್ಯುಕ್ತ್ವಾ ತಾಮನಿಂದ್ಯಾಂಗೀಂ ಸ ರಾಕ್ಷಸಮಹೇಶ್ವರಃ |
ತತ್ರೈವಾಂತರ್ಹಿತೋ ಭೂತ್ವಾ ಜಗಾಮಾಭಿಮತಾಂ ದಿಶಮ್ ॥30॥
ಮಾರ್ಕಂಡೇಯರು ಆ ಅನವದ್ಯಾಂಗಿಯಾದ ಸೀತೆಯನ್ನು ಕುರಿತು ರಾಕ್ಷಸೇಶ್ವರನಾದ ಆ ರಾವಣನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿ ತನಗೆ ಇಷ್ಟವಾದ ದಿಕ್ಕಿಗೆ ಹೋದನು.
ರಾಕ್ಷಸೀಭಿಃ ಪರಿವೃತಾ ವೈದೇಹೀ ಶೋಕಕರ್ಶಿತಾ |
ಸೇವ್ಯಮಾನಾ ತ್ರಿಜಟಯಾ ತತ್ರೈವ ನ್ಯವಸತ್ ತದಾ ॥31॥
ರಾಕ್ಷಸಿಯರಿಂದ ಪರಿವೃತಳಾದ ಶೋಕಕರ್ಶಿತಳಾದ ವೈದೇಹಿಯು ತ್ರಿಜಟೆಯಿಂದ ಸೇವಿತಳಾಗಿ ಆಗ ಅಲ್ಲಿಯೇ ವಾಸಮಾಡಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥

॥ ಇತಿ ರಾಮೋಪಖ್ಯಾನಪರ್ವಣಿ ಸೀತಾರಾವಣ ಸಂವಾದೋ ನಾಮ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ತೊಂದನೆಯ ಅಧ್ಯಾಯ
ರಾಮನಿಂದ ಲಕ್ಷ್ಮಣನ ಮೂಲಕ ಸುಗ್ರೀವನಿಗೆ ಎಚ್ಚರಿಕೆಯ ಮಾತುಗಳು. ಸುಗ್ರೀವನಿಂದ ಕಪಿಗಳ ಪ್ರೇಷಣ. ಹನುಮಂತನಿಂದ ಅಶೋಕವನದಲ್ಲಿ ಸೀತೆಯನ್ನು ಕಂಡು ರಾಮನಿಗೆ ಅವಳ ಚೂಡಾಮಣಿಯ ಪ್ರದಾನ.
ಮಾರ್ಕಂಡೇಯಃ
ರಾಘವಃ ಸಹಸೌಮಿತ್ರಿಃ ಸುಗ್ರೀವೇಣಾಭಿಪಾಲಿತಃ |
ವಸನ್ ಮಾಲ್ಯವತಃ ಪೃಷ್ಠೇ ದದೃಶೇ ವಿಮಲಂ ನಭಃ ॥1॥
ಮಾರ್ಕಂಡೇಯ ರಾಘವನು ಲಕ್ಷ್ಮಣನಿಂದ ಸಹಿತನಾಗಿ ಸುಗ್ರೀವನಿಂದ ರಕ್ಷಿತನಾಗಿ ಮಾಲ್ಯವಾನ್ ಪರ್ವತದ ತಪ್ಪಲಿನಲ್ಲಿ ವಾಸಿಸುತ್ತಾ ಸ್ವಚ್ಛವಾದ ಆಕಾಶವನ್ನು (ಶರತ್ಕಾಲದ ಆಕಾಶವನ್ನು) ನೋಡಿದನು.
ಸ ದೃಷ್ಟ್ವಾ ವಿಮಲೇ ವ್ಯೋಮ್ನಿ ನಿರ್ಮಲಂ ಶಶಲಕ್ಷಣಮ್ |
ಗ್ರಹನಕ್ಷತ್ರತಾರಾಭಿರನುಯಾತಮಮಿತ್ರಹಾ ॥2॥
ಕುಮುದೋತ್ಪಲಪದ್ಮಾನಾಂ ಗಂಧಮಾದಾಯ ವಾಯುನಾ |
ಮಹೀಧರಸ್ಥಃ ಶೀತೇನ ಸಹಸಾ ಪ್ರತಿಬೋಧಿತಃ ॥3॥
ಶತ್ರುಸಂಹಾರಕನಾದ ಅವನು ನಿರ್ಮಲವಾದ ಆಕಾಶದಲ್ಲಿ ಗ್ರಹನಕ್ಷತ್ರತಾರೆಗಳಿಂದ ಕೂಡಿದ ಚಂದ್ರನನ್ನು ನೋಡಿ ಕುಮುದೋತ್ಪಲ ಪದ್ಮಪುಷ್ಪಗಳ ಸುಗಂಧವನ್ನು ತೆಗೆದುಕೊಂಡು ಬೀಸುವ ತಂಪಾದ ವಾಯುವಿನಿಂದ ಆ ಪರ್ವತದಲ್ಲಿ ಬೇಗ ಎಚ್ಚರಗೊಂಡನು.
ಪ್ರಭಾತೇ ಲಕ್ಷ್ಮಣಂ ವೀರಮಭ್ಯಭಾಷತ ದುರ್ಮನಾಃ |
ಸೀತಾಂ ಸಂಸ್ಮೃತ್ಯ ಧರ್ಮಾತ್ಮಾ ರುದ್ಧಾಂ ರಾಕ್ಷಸವೇಶ್ಮನಿ ॥4॥
ಪ್ರಾತಃಕಾಲದಲ್ಲಿ ವಿಷಾದಗೊಂಡಿದ್ದ ರಾಮನು ರಾಕ್ಷಸನ ಮನೆಯಲ್ಲಿ ಬದ್ಧಳಾಗಿದ್ದ ಸೀತೆಯನ್ನು ಸ್ಮರಿಸಿ, ಧರ್ಮಾತ್ಮನಾದ ಅವನು ವೀರನಾದ ಲಕ್ಷ್ಮಣನನ್ನು ಕುರಿತು ಮಾತನಾಡಿದನು.
ಗಚ್ಛ ಲಕ್ಷ್ಮಣ ಜಾನೀಹಿ ಕಿಷ್ಕಿಂಧಾಯಾಂ ಕಪೀಶ್ವರಮ್ |
ಪ್ರಮತ್ತಂ ಗ್ರಾಮ್ಯಧರ್ಮೇಷು ಕೃತಘ್ನಂ ಸ್ವಾರ್ಥಪಂಡಿತಮ್ ॥5॥
ಲಕ್ಷ್ಮಣನೇ, ಕಿಷ್ಕಿಂಧೆಗೆ ಹೋಗಿ ಕಪೀಶ್ವರನಾದ ಸುಗ್ರೀವನನ್ನು ನೋಡಿ ಬಾ. ಅವನು ಕೃತಘ್ನನಾಗಿ ಸ್ವಾರ್ಥಪಂಡಿತನಾಗಿ ಎಲ್ಲವನ್ನೂ ಮರೆತು ಸ್ತ್ರೀಸುಖದಲ್ಲಿ ಮಗ್ನನಾಗಿದ್ದಾನೆ.
ಯೋಽಸೌ ಕುಲಾಧಮೋ ಮೂಢೋ ಮಯಾ ರಾಜ್ಯೇಽಭಿಷೇಚಿತಃ |
ಸರ್ವವಾನರಗೋಪುಚ್ಛಾ ಯಮೃಕ್ಷಾಶ್ಚ ಭಜಂತಿ ವೈ ॥6॥
ಎಲ್ಲ ವಾನರಗಳೂ, ಗೋಪುಚ್ಛಗಳೂ, ಕರಡಿಗಳೂ ಯಾವನನ್ನು ಸೇವಿಸುತ್ತವೆಯೋ ಅಂತಹ ಕುಲಾಧಮನಾದ ಮೂಢನಿಗೆ ನಾನು ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದೆ.
ಯದರ್ಥಂ ನಿಹತೋ ವಾಲೀ ಮಯಾ ರಘುಕುಲೋದ್ವಹ |
ತ್ವಯಾ ಸಹ ಮಹಾಬಾಹೋ ಕಿಷ್ಕಿಂಧೋಪವನೇ ತದಾ ॥7॥
ಕೃತಘ್ನಂ ತಮಹಂ ಮನ್ಯೇ ವಾನರಾಕುಶದಂ ಭುವಿ |
ಯೋ ಮಾಮೇವಂಗತಂ ಮೂಢೋ ನ ಜಾನೀತೇಽದ್ಯ ಲಕ್ಷ್ಮಣ ॥8॥
ಎಲೈ ರಘುಕುಲೋದ್ವಹನೇ, ಮಹಾಬಾಹುವೇ, ನಾನು ಕಿಷ್ಕಿಂಧೆಯ ಉಪವನದಲ್ಲಿ ಯಾವನ ಉದ್ದೇಶದಿಂದ ವಾಲಿಯನ್ನು ವಧೆ ಮಾಡಿದೆನೋ ಎಲೈ ಲಕ್ಷ್ಮಣನೇ, ಭೂಮಿಯಲ್ಲಿ ವಾನರಕುಲದೂಷಕನೂ, ಕೃತಘ್ನನೂ ಆದ ಅವನು ಮೂಢನಾಗಿ ಈ ದಿನ ನನ್ನ ಈ ಕಷ್ಟದ ಅವಸ್ಥೆಯನ್ನು ತಿಳಿಯುತ್ತಿಲ್ಲ.
ಅಸೌ ಮನ್ಯೇ ನ ಜಾನೀತೇ ಸಮಯಪ್ರತಿಪಾಲನಮ್ |
ಕೃತೋಪಕಾರಂ ಮಾಂ ನೂನಮವಮನ್ಯಾಲ್ಪಯಾ ಧಿಯಾ ॥9॥
ಅವನಿಗೆ ಉಪಕಾರವನ್ನು ಮಾಡಿದ ನನ್ನನ್ನು ಅಲ್ಪಬುದ್ಧಿಯಿಂದ ಅವಮಾನವನ್ನು ಮಾಡಿ ಅವನು ಕೊಟ್ಟಮಾತಿನಂತೆ ನಡೆದುಕೊಳ್ಳಬೇಕೆಂಬುದನ್ನೇ ತಿಳಿದಿಲ್ಲವೆಂದು ನಾನು ಭಾವಿಸುತ್ತೇನೆ.
ಯದಿ ತಾವದನುದ್ಯುಕ್ತಃ ಶೇತೇ ಕಾಮಸುಖಾತ್ಮಕಃ |
ನೇತವ್ಯೋ ವಾಲಿಮಾರ್ಗೇಣ ಸರ್ವಭೂತಗತಿಂ ತ್ವಯಾ ॥10॥
ಅವನು ನನ್ನ ಕಾರ್ಯದಲ್ಲಿ ಉದ್ಯುಕ್ತನಾಗದೆ ಕಾಮಸುಖದಲ್ಲಿಯೇ ಮಲಗಿರುವವನಾದರೆ ನೀನು ಅವನನ್ನು ವಾಲಿಯು ಹೋದ ಮಾರ್ಗದಿಂದ ಎಲ್ಲ ಪ್ರಾಣಿಗಳೂ ಹೋಗುವ ಸ್ಥಳಕ್ಕೆ ಕಳುಹಿಸಬೇಕು.
ಅಥಾಪಿ ಘಟತೇಽಸ್ಮಾಕಮರ್ಥೇ ವಾನರಪುಂಗವಃ |
ತಮಾದಾಯೈವ ಕಾಕುತ್ಸ್ಥ ತ್ವರಾವಾನ್ ಭವ ಮಾಚಿರಮ್ ॥11॥
ಇನ್ನಾದರೂ ಆ ವಾನರಪುಂಗವನು ನಮ್ಮ ಕಾರ್ಯದಲ್ಲಿ ಉದ್ಯುಕ್ತನಾಗುವುದಾದರೆ ಎಲೈ ಕಾಕುತ್ಸ್ಥನೇ ಅವನನ್ನು ಕರೆದುಕೊಂಡು ಬೇಗ ನನ್ನ ಬಳಿಗೆ ಬಾ.
ಇತ್ಯುಕ್ತೋ ಲಕ್ಷ್ಮಣೋ ಭ್ರಾತ್ರಾ ಗುರುವಾಕ್ಯಹಿತೇ ರತಃ |
ಪ್ರತಸ್ಥೇ ರುಚಿರಂ ಗೃಹ್ಯ ಸಮಾರ್ಗಣಗುಣಂ ಧನುಃ ॥12॥

ಹೀಗೆ ಅಣ್ಣನಿಂದ ಹೇಳಲ್ಪಟ್ಟ ಗುರುವಾಕ್ಯವನ್ನು ನಡೆಸಿಕೊಡುವುದರಲ್ಲಿ ರತನಾದ ಲಕ್ಷ್ಮಣನು ತನ್ನ ಮನೋಹರವಾದ ಧನುಸ್ಸನ್ನೂ, ಬಾಣಗಳನ್ನೂ ಮತ್ತು ಹದೆಯನ್ನು ತೆಗೆದುಕೊಂಡು ಹೊರಟನು.
ಕಿಷ್ಕಿಂಧಾದ್ವಾರಮಾಸಾದ್ಯ ಪ್ರವಿವೇಶಾನಿವಾರಿತಃ |
ಸಕ್ರೋಧ ಇತಿ ತಂ ಮತ್ವಾ ರಾಜಾ ಪ್ರತ್ಯುದ್ಯಯೌ ಹರಿಃ ॥13॥
ಕಿಷ್ಕಿಂಧಾಪಟ್ಟಣದ ಮಹಾದ್ವಾರಕ್ಕೆ ಹೋಗಿ ಯಾರಿಂದಲೂ ತಡೆಯಲ್ಪಡದೇ ಪ್ರವೇಶಿಸಿದನು. ಅವನು ಕೋಪದಿಂದ ಕೂಡಿರುವನೆಂದು ತಿಳಿದು ಕಪಿರಾಜನಾದ ಸುಗ್ರೀವನು ಅವನನ್ನು ಎದುರುಗೊಳ್ಳಲು ಮುಂದೆ ಬಂದನು.
ತಂ ಸದಾರೋ ವಿನೀತಾತ್ಮಾ ಸುಗ್ರೀವಃ ಪ್ಲವಗಾಧಿಪಃ |
ಪೂಜಯಾ ಪ್ರತಿಜಗ್ರಾಹ ಪ್ರೀಯಮಾಣಸ್ತದರ್ಹಯಾ ॥14॥
ಕಪಿಗಳ ಅಧಿಪತಿಯಾದ ವಿನೀತನಾದ ಸುಗ್ರೀವನು ಪತ್ನೀಸಹಿತವಾಗಿ ಅವನನ್ನು ಪೂಜಿಸಿ ಆ ಪೂಜೆಯಿಂದ ಸಂತೋಷಪಡುತ್ತಾ ಅವನನ್ನು ಸ್ವೀಕರಿಸಿದನು.
ತಮಬ್ರವೀದ್ ರಾಮವಚಃ ಸೌಮಿತ್ರಿರಕುತೋಭಯಃ |
ಸ ತತ್ ಸರ್ವಮಶೇಷೇಣ ಶ್ರುತ್ವಾ ಪ್ರಹ್ವಃ ಕೃತಾಂಜಲಿಃ ॥15॥
ಸಭೃತ್ಯದಾರೋ ರಾಜೇಂದ್ರ ಸುಗ್ರೀವೋ ವಾನರಾಧಿಪಃ |
ಇದಮಾಹ ವಚಃ ಪ್ರೀತೋ ಲಕ್ಷ್ಮಣಂ ನರಕುಂಜರಮ್ ॥16॥
ಲಕ್ಷ್ಮಣನು ಯಾವ ಭಯವೂ ಇಲ್ಲದೆ ಅವನನ್ನು ಕುರಿತು ರಾಮನ ಆದೇಶವನ್ನು ತಿಳಿಸಿದನು. ಎಲೈ ರಾಜೇಂದ್ರನೇ, ಅದೆಲ್ಲವನ್ನೂ ಕೇಳಿದ ಭೃತ್ಯಪತ್ನೀಸಹಿತನಾದ ವಾನರಾಧಿಪನಾದ ಸುಗ್ರೀವನು ಕೈಗಳನ್ನು ಮುಗಿದು ವಿನಯದಿಂದ ಬಾಗಿದವನಾಗಿ ನರಶ್ರೇಷ್ಠನಾದ ಲಕ್ಷ್ಮಣನನ್ನು ಕುರಿತು ಸಂತೋಷದಿಂದ ಈ ಮಾತನ್ನು ಹೇಳಿದನು.
ನಾಸ್ಮಿ ಲಕ್ಷ್ಮಣ ದುರ್ಮೇಧಾ ನಾಕೃತಜ್ಞೋ ನ ನಿರ್ಘೃಣಃ |
ಶ್ರೂಯತಾಂ ಯಃ ಪ್ರಯತ್ನೋ ಮೇ ಸೀತಾಪರ್ಯೇಷಣೇ ಕೃತಃ ॥17॥
ಲಕ್ಷ್ಮಣನೇ, ನಾನು ದುರ್ಬುದ್ಧಿಯುಳ್ಳವನಲ್ಲ. ಮಾಡಿದ ಉಪಕಾರವನ್ನು ಮರೆಯುವವನೂ ಅಲ್ಲ. ದಯಾರಹಿತನೂ ಅಲ್ಲ. ನಾನು ಸೀತೆಯನ್ನು ಹುಡುಕುವ ವಿಷಯದಲ್ಲಿ ಏನು ಪ್ರಯತ್ನವನ್ನು ಮಾಡಿದ್ದೇನೆ ಎಂಬುದನ್ನು ಕೇಳು.
ದಿಶಃ ಪ್ರಸ್ಥಾಪಿತಾಃ ಸರ್ವೇ ವಿನೀತಾ ಹರಯೋ ಮಯಾ |
ಸರ್ವೇಷಾಂ ಚ ಕೃತಃ ಕಾಲೋ ಮಾಸೇನಾಗಮನಂ ಪುನಃ ॥18॥
ನಾನು ನನ್ನಲ್ಲಿ ವಿನಯಯುಕ್ತರಾದ ಎಲ್ಲಾ ಕಪಿಗಳನ್ನೂ ದಿಕ್ಕುದಿಕ್ಕುಗಳಿಗೆ ಕಳುಹಿಸಿದ್ದೇನೆ. ಎಲ್ಲರ ಆಗಮನಕ್ಕೂ ಒಂದು ತಿಂಗಳಿನ ಕಾಲಾವಧಿಯನ್ನು ಮಾಡಿದ್ದೇನೆ.
ಯೈರಿಯಂ ಸವನಾ ಸಾದ್ರಿಃ ಸಪುರಾ ಸಾಗರಾಂಬರಾ |
ವಿಚೇತವ್ಯಾ ಮಹೀ ವೀರ ಸಗ್ರಾಮನಗರಾಕರಾ ॥19॥
ಎಲೈ ವೀರನೇ, ಅವರು ಕಾಡುಗಳಿಂದ, ಪಟ್ಟಣಗಳಿಂದ, ಗ್ರಾಮಗಳಿಂದ, ನಗರಗಳಿಂದ ತುಂಬಿರುವ ಈ ಸಾಗರಾಂಬರವಾದ ಭೂಮಿಯನ್ನು ಹುಡುಕಿ ಬರಬೇಕು.
ಸ ಮಾಸಃ ಪಂಚರಾತ್ರೇಣ ಪೂರ್ಣೋ ಭವಿತುಮರ್ಹತಿ |
ತತಃ ಶ್ರೋಷ್ಯಸಿ ರಾಮೇಣ ಸಹಿತಃ ಸುಮಹತ್ಪ್ರಿಯಮ್ ॥20॥
ಆ ಒಂದು ತಿಂಗಳಿನ ಅವಧಿಯು ಇನ್ನು ಐದು ದಿನಗಳಲ್ಲಿ ಪೂರ್ಣಗೊಳ್ಳುತ್ತದೆ. ಅನಂತರ ರಾಮನಿಂದ ಸಹಿತನಾಗಿ ನೀನು ಬಹಳ ಪ್ರಿಯವಾದ ವಾರ್ತೆಯನ್ನು ಕೇಳುವಿ.
ಮಾರ್ಕಂಡೇಯಃ
ಇತ್ಯುಕ್ತೋ ಲಕ್ಷ್ಮಣಸ್ತೇನ ವಾನರೇಂದ್ರೇಣ ಧೀಮತಾ |
ತ್ಯಕ್ತ್ವಾ ರೋಷಮದೀನಾತ್ಮಾ ಸುಗ್ರೀವಂ ಪ್ರತ್ಯಪೂಜಯತ್ ॥21॥
ಮಾರ್ಕಂಡೇಯ ವಾನರೇಂದ್ರನಾದ ಮೇಧಾವಿಯಾದ ಅವನಿಂದ ಹೀಗೆ ಹೇಳಲ್ಪಟ್ಟ ಲಕ್ಷ್ಮಣನು ರೋಷವನ್ನು ಬಿಟ್ಟು ಮನಸ್ಸಿನಲ್ಲಿ ಧೈರ್ಯವನ್ನು ಹೊಂದಿ ಸುಗ್ರೀವನನ್ನು ಪ್ರತಿಯಾಗಿ ಪೂಜಿಸಿದನು.
ಸ ರಾಮಂ ಸಹಸುಗ್ರೀವೋ ಮಾಲ್ಯವತ್ಪೃಷ್ಠಮಾಸ್ಥಿತಮ್ |
ಅಭಿಗಮ್ಯೋದಯಂ ತಸ್ಯ ಕಾರ್ಯಸ್ಯ ಪ್ರತ್ಯವೇದಯತ್ ॥22॥
ಲಕ್ಷ್ಮಣನು ಸುಗ್ರೀವ ಸಹಿತನಾಗಿ ಮಾಲ್ಯವಾನ್ ಪರ್ವತದ ತಪ್ಪಲಿನಲ್ಲಿ ಇದ್ದ ರಾಮನ ಬಳಿಗೆ ಬಂದು ರಾಮಕಾರ್ಯದ ಪ್ರಗತಿಯನ್ನು ಅವನಿಗೆ ನಿವೇದಿಸಿದನು.
ಇತ್ಯೇವಂ ವಾನರೇಂದ್ರಾಸ್ತೇ ಸಮಾಜಗ್ಮುಃ ಸಹಸ್ರಶಃ |
ದಿಶಸ್ತಿಸ್ರೋ ವಿಚಿತ್ಯಾಥ ನ ತು ಯೇ ದಕ್ಷಿಣಾಂ ಗತಾಃ ॥23॥
ಹೀಗೆ ಮೂರುದಿಕ್ಕುಗಳಿಗೆ ಸಹಸ್ರಾರು ಸಂಖ್ಯೆಯಲ್ಲಿ ಹೋಗಿದ್ದ ಆ ವಾನರೇಂದ್ರರು ಎಲ್ಲವನ್ನೂ ಹುಡುಕಿ ಹಿಂದಿರುಗಿದರು. ಆದರೆ ದಕ್ಷಿಣ ದಿಕ್ಕಿಗೆ ಹೋದವರು ಮಾತ್ರ ಹಿಂದಿರುಗಲಿಲ್ಲ.
ಆಚಖ್ಯುಸ್ತತ್ರ ರಾಮಾಯ ಮಹೀಂ ಸಾಗರಮೇಖಲಾಮ್ |
ವಿಚಿತಾಂ ನ ತು ವೈದೇಹ್ಯಾ ದರ್ಶನಂ ರಾವಣಸ್ಯ ವಾ ॥24॥
ಮೂರುದಿಕ್ಕುಗಳಿಂದ ಬಂದ ವಾನರರು ರಾಮನಿಗೆ ತಾವು ಸಾಗರಾಂಬರಳಾದ ಭೂಮಿಯನ್ನೆಲ್ಲಾ ಹುಡುಕಿದರೂ ವೈದೇಹಿಯ ಅಥವಾ ರಾವಣನ ದರ್ಶನವು ಸಿಗಲಿಲ್ಲ ಎಂದು ನಿವೇದಿಸಿದರು.

ಗತಾಸ್ತು ದಕ್ಷಿಣಾಮಾಶಾಂ ಯೇ ವೈ ವಾನರಪುಂಗವಾಃ ।
ಆಶಾವಾಂಸ್ತೇಷು ಕಾಕುತ್ಸ್ಥಃ ಪ್ರಾಣಾನಾರ್ತೋಽಭ್ಯಧಾರಯತ್ ॥25॥
ಕಾಕುತ್ಸ್ಥನಾದ ರಾಮನು ದಕ್ಷಿಣ ದಿಕ್ಕಿಗೆ ಹೋದ ವಾನರಶ್ರೇಷ್ಠರ ಮೇಲೆ ಆಸೆಯುಳ್ಳವನಾಗಿ ಆರ್ತನಾಗಿ ಪ್ರಾಣಗಳನ್ನು ಧರಿಸಿದನು.
ದ್ವಿಮಾಸೋಪರಮೇ ಕಾಲೇ ವ್ಯತೀತೇ ಪ್ಲವಗಾಸ್ತತಃ ।
ಸುಗ್ರೀವಮಭಿಗಮ್ಯೇದಂ ತ್ವರಿತಾ ವಾಕ್ಯಮಬ್ರುವನ್ ॥26॥
ಎರಡು ತಿಂಗಳುಗಳು ಕಳೆದ ಮೇಲೆ ಕಪಿಗಳು ಸುಗ್ರೀವನ ಸಮೀಪಕ್ಕೆ ಬಂದು ತ್ವರಿತವಾಗಿ ಈ ಮಾತುಗಳನ್ನು ಆಡಿದವು.
ರಕ್ಷಿತಂ ವಾಲಿನಾ ಯತ್ತತ್ಸ್ಫೀತಂ ಮಧುವನಂ ಮಹತ್ ।
ತ್ವಯಾ ಚ ಪ್ಲವಗಶ್ರೇಷ್ಠ ತದ್ ಭುಂಕ್ತೇ ಪವನಾತ್ಮಜಃ ॥27॥
ವಾಲಿಪುತ್ರೋಽಂಗದಶ್ಚೈವ ಯೇ ಚಾನ್ಯೇ ಪ್ಲವಗರ್ಷಭಾಃ ।
ವಿಚೇತುಂ ದಕ್ಷಿಣಾಮಾಶಾಂ ರಾಜನ್ ಪ್ರಸ್ಥಾಪಿತಾಸ್ತ್ವಯಾ ॥28॥
ಎಲೈ ಕಪಿಶ್ರೇಷ್ಠನೇ, ನೀನೂ ಮತ್ತು ವಾಲಿಯೂ ರಕ್ಷಿಸಿದ್ದ ದೊಡ್ಡದಾದ, ಶುದ್ಧವಾದ ಮಧುವನವನ್ನು ಪವನಾತ್ಮಜನಾದ ಹನುಮಂತನು ಭೋಗಿಸುತ್ತಿದ್ದಾನೆ. ಎಲೈ ರಾಜನೇ, ವಾಲಿಪುತ್ರನಾದ ಅಂಗದನೂ ಮತ್ತು ಸೀತೆಯನ್ನು ಹುಡುಕಲು ನೀನು ದಕ್ಷಿಣ ದಿಕ್ಕಿಗೆ ಕಳುಹಿಸಿದ್ದ ಉಳಿದ ಕಪಿಶ್ರೇಷ್ಠರೂ ಸಹ ಮಧುವನದ ಮಧುವನ್ನು ಭೋಗಿಸುತ್ತಿದ್ದಾರೆ.
ಮಾರ್ಕಂಡೇಯಃ
ತೇಷಾಮಪನಯಂ ಶ್ರುತ್ವಾ ಮೇನೇ ಸ ಕೃತಕೃತ್ಯತಾಮ್ ।
ಕೃತಾರ್ಥಾನಾಂ ಹಿ ಭೃತ್ಯಾನಾಮೇತದ್ ಭವತಿ ಚೇಷ್ಟಿತಮ್ ॥29॥
ಮಾರ್ಕಂಡೇಯರು ಸುಗ್ರೀವನು ಅವರ ಅವಿನಯವನ್ನು ಕೇಳಿ ಅವರು ಕೃತಾರ್ಥರಾಗಿದ್ದಾರೆಂದು ತಿಳಿದನು. ಕಾರ್ಯವನ್ನು ಸಾಧಿಸಿದ ಭೃತ್ಯರಿಗೆ ಇಂತಹ ನಡೆವಳಿಕೆಯು ಉಂಟಾಗುವುದಷ್ಟೆ.
ಸ ತದ್ ರಾಮಾಯ ಮೇಧಾವೀ ಶಶಂಸ ಪ್ಲವಗರ್ಷಭಃ ।
ರಾಮಶ್ಚಾಪ್ಯನುಮಾನೇನ ಮೇನೇ ದೃಷ್ಟಾಂ ತು ಮೈಥಿಲೀಮ್ ॥30॥
ಮೇಧಾವಿಯಾದ ಆ ಕಪಿಶ್ರೇಷ್ಠನು ರಾಮನಿಗೆ ಈ ವಿಷಯವನ್ನು ತಿಳಿಸಿದನು. ರಾಮನೂ ಸಹ ಸೀತೆಯು ನೋಡಲ್ಪಟ್ಟಿದ್ದಾಳೆ ಎಂದು ಊಹಿಸಿದನು.
ಹನೂಮತ್ಪ್ರಮುಖಾಶ್ಚಾಪಿ ವಿಶ್ರುತಾಸ್ತೇ ಪ್ಲವಂಗಮಾಃ ।
ಅಭಿಜಗ್ಮುರ್ಹರೀಂದ್ರಂ ತಂ ರಾಮಲಕ್ಷ್ಮಣಸನ್ನಿಧೌ ॥31॥
ಹನುಮಂತ ಮೊದಲಾದ ಪ್ರಖ್ಯಾತರಾದ ಕಪಿಶ್ರೇಷ್ಠರು ರಾಮಲಕ್ಷ್ಮಣರ ಸನ್ನಿಧಿಯಲ್ಲಿ ಕಪಿರಾಜನಾದ ಸುಗ್ರೀವನ ಬಳಿಗೆ ಬಂದರು.
ಗತಿಂ ಚ ಮುಖವರ್ಣಂ ಚ ದೃಷ್ಟ್ವಾ ರಾಮೋ ಹನೂಮತಃ ।
ಅಗಮತ್ ಪ್ರತ್ಯಯಂ ಭೂಯೋ ದೃಷ್ಟಾ ಸೀತೇತಿ ಭಾರತ ॥32॥
ಎಲೈ ಭಾರತನೇ, ಹನುಮಂತನ ನಡಿಗೆಯನ್ನು ಮತ್ತು ಮುಖವರ್ಣವನ್ನು ಗಮನಿಸಿದ ರಾಮನು ಸೀತೆಯು ನೋಡಲ್ಪಟ್ಟಿದ್ದಾಳೆ ಎಂದು ಪುನಃ ವಿಶ್ವಾಸವನ್ನು ಹೊಂದಿದನು.
ಹನುಮತ್ಪ್ರಮುಖಾಸ್ತೇ ತು ವಾನರಾಃ ಪೂರ್ಣಮಾನಸಾಃ ।
ಪ್ರಣೇಮುರ್ವಿಧಿವದ್ ರಾಮಂ ಸುಗ್ರೀವಂ ಲಕ್ಷ್ಮಣಂ ತಥಾ ।
ತಾನುವಾಚಾಗತಾನ್ ರಾಮಃ ಪ್ರಗೃಹ್ಯ ಸಶರಂ ಧನುಃ ॥33॥
ಹನುಮಂತನೇ ಮೊದಲಾದ ವಾನರರು ಪೂರ್ಣಮನಸ್ಸಿನಿಂದ ರಾಮನಿಗೂ, ಲಕ್ಷ್ಮಣನಿಗೂ ಮತ್ತು ಸುಗ್ರೀವನಿಗೂ ವಿಧಿಪೂರ್ವಕವಾಗಿ ನಮಸ್ಕಾರವನ್ನು ಮಾಡಿದರು. ಧನುರ್ಬಾಣಗಳನ್ನು ಧರಿಸಿದ ರಾಮನು ಹಿಂದಿರುಗಿದ ಅವರನ್ನು ನೋಡಿ ಮಾತನಾಡಿದನು.
ಅಪಿ ಮಾಂ ಜೀವಯಿಷ್ಯಧ್ವಮಪಿ ವಃ ಕೃತಕೃತ್ಯತಾ ।
ಅಪಿ ರಾಜ್ಯಮಯೋಧ್ಯಾಯಾಂ ಕಾರಯಿಷ್ಯಾಮ್ಯಹಂ ಪುನಃ ॥34॥
ನನ್ನ ಪ್ರಾಣಗಳನ್ನು ಏನಾದರೂ ಉಳಿಸುವಿರಾ? ನೀನು ಕೃತಾರ್ಥರಾಗಿದ್ದೀರಾ? ಇನ್ನೊಮ್ಮೆ ನಾನು ಅಯೋಧ್ಯೆಯಲ್ಲಿ ರಾಜ್ಯವನ್ನು ಆಳುವೆನೇ?
ನಿಹತ್ಯ ಸಮರೇ ಶತ್ರೂನಾಹೃತ್ಯ ಜನಕಾತ್ಮಜಾಮ್ ।
ಅಮೋಕ್ಷಯಿತ್ವಾ ವೈದೇಹೀಮಹತ್ವಾ ಚ ರಣೇ ರಿಪೂನ್ ॥35॥
ಹೃತದಾರೋಽವಧೂತಶ್ಚ ನಾಹಂ ಜೀವಿತುಮುತ್ಸಹೇ ।
ಯುದ್ಧಗಳಲ್ಲಿ ಶತ್ರುಗಳನ್ನು ಕೊಲ್ಲದೆ ಸೀತೆಯನ್ನು ಬಂಧನದಿಂದ ಬಿಡಿಸಿ ಹಿಂದಕ್ಕೆ ಕರೆತರದೆ, ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸದೆ ಪತ್ನಿಯನ್ನು ಕಳೆದುಕೊಂಡು ತಿರಸ್ಕೃತನಾಗಿ ನಾನು ಬದುಕಲು ಬಯಸುವುದಿಲ್ಲ.
ಮಾರ್ಕಂಡೇಯಃ
ಇತ್ಯುಕ್ತವಚನಂ ರಾಮಂ ಪ್ರತ್ಯುವಾಚಾನಿಲಾತ್ಮಜಃ ॥36॥
ಪ್ರಿಯಮಾಖ್ಯಾಮಿ ತೇ ರಾಮ ದೃಷ್ಟಾ ಸಾ ಜಾನಕೀ ಮಯಾ ॥37॥
ಮಾರ್ಕಂಡೇಯರು ಹೀಗೆ ರಾಮನು ಮಾತನಾಡಿದ ಮೇಲೆ ಅನಿಲಾತ್ಮಜನಾದ ಹನುಮಂತನು ರಾಮನೇ ನಿನಗೆ ಪ್ರಿಯವನ್ನು ಹೇಳುತ್ತೇನೆ ನಾನು ಜಾನಕಿಯನ್ನು ನೋಡಿದ್ದೇನೆ ಎಂದು ಹೇಳಿದನು.
ವಿಚಿತ್ಯ ದಕ್ಷಿಣಾಮಾಶಾಂ ಸಪರ್ವತವನಾಕರಾಮ್ ।

ಶ್ರಾಂತಾಃ ಕಾಲೇ ವ್ಯತೀತೇ ಸ್ಮ ದೃಷ್ಟವಂತೋ ಮಹಾಗುಹಾಮ್ ॥38॥
ನಾವು ಪರ್ವತವನಗಳಿಂದ ಕೂಡಿದ ದಕ್ಷಿಣದಿಕ್ಕಿನಲ್ಲಿ ಹುಡುಕಿ ದಣಿದವರಾಗಿ ಒಂದು ತಿಂಗಳಿನ ಅವಧಿಯು ಮುಗಿದುಹೋಗುತ್ತಿರಲು ಒಂದು ದೊಡ್ಡ ಗುಹೆಯನ್ನು ನೋಡಿದೆವು.
ಪ್ರವಿಶಾಮೋ ವಯಂ ತಾಂ ತು ಬಹುಯೋಜನಮಾಯತಾಮ್ ।
ಸಾಂಧಕಾರಾಂ ಸುವಿಪಿನಾಂ ಗಹನಾಂ ಕೀಟಸೇವಿತಾಮ್ ॥39॥
ನಾವು ಅಂಧಕಾರಮಯವಾಗಿದ್ದ, ಒಳಗಡೆ ಕಾಡುಗಳಿದ್ದ, ಕ್ರಿಮಿಕೀಟಗಳಿಂದ ಸೇವಿತವಾದ ಆ ದಟ್ಟವಾದ ಗುಹೆಯನ್ನು ಪ್ರವೇಶಿಸಿದೆವು.
ಗತ್ವಾ ಸುಮಹದಧ್ವಾನಮಾದಿತ್ಯಸ್ಯ ಪ್ರಭಾಂ ತತಃ ।
ದೃಷ್ಟವಂತಃ ಸ್ಮ ತತ್ರೈವ ಭವನಂ ದಿವ್ಯಮಂತರಾ ॥40॥
ನಾವು ಅಲ್ಲಿ ಬಹಳ ದೂರಹೋದಮೇಲೆ ಸೂರ್ಯನ ಪ್ರಭೆಯನ್ನೂ, ಅಲ್ಲಿಯೇ ಒಳಗೆ ಒಂದು ದಿವ್ಯವಾದ ಭವನವನ್ನೂ ನೋಡಿದೆವು.
ಮಯಸ್ಯ ಕಿಲ ದೈತ್ಯಸ್ಯ ತದಾಸೀದ್ ವೇಶ್ಮ ರಾಘವ ।
ತತ್ರ ಪ್ರಭಾವತೀ ನಾಮ ತಪೋಽತಪ್ಯತ ತಾಪಸೀ ॥41॥
ರಾಘವನೇ, ಅದು ಮಯ ಎಂಬದೈತ್ಯನ ಭವನವಾಗಿದ್ದಿತು. ಅಲ್ಲಿ ಪ್ರಭಾವತೀ ಎಂಬ ಒಬ್ಬ ತಾಪಸಿಯು ತಪಸ್ಸು ಮಾಡುತ್ತಿದ್ದಳು.
ತಯಾ ದತ್ತಾನಿ ಭೋಜ್ಯಾನಿ ಪಾನಾನಿ ವಿವಿಧಾನಿ ಚ ।
ಭುಕತ್ವ ಲಬ್ಧಬಲಾಃ ಸಂತಸ್ತಯೋಕ್ತೇನ ಪಥಾ ತತಃ ॥42॥
ಅವಳು ನಮಗೆ ವಿವಿಧವಾದ ಭೋಜ್ಯಗಳನ್ನು ಮತ್ತು ಪಾನಗಳನ್ನು ಕೊಟ್ಟಳು. ಅದನ್ನು ಸ್ವೀಕರಿಸಿ ಬಲವನ್ನು ಹೊಂದಿದವರಾಗಿ ಅವಳು ಹೇಳಿದ ಮಾರ್ಗದಿಂದ ಮುಂದೆ ನಡೆದೆವು.
ನಿರ್ಯಾಯ ತಸ್ಮಾದುದ್ದೇಶಾತ್ ಪಶ್ಯಾಮೋ ಲವಣಾಂಭಸಃ ।
ಸಮೀಪೇ ಮಹ್ಯಮಲಯೌ ದರ್ದುರಂ ಚ ಮಹಾಗಿರಿಮ್ ॥43॥
ಅಲ್ಲಿಂದ ಮುಂದೆ ಬಂದು ಲವಣ ಸಮುದ್ರದ ಸಮೀಪದಲ್ಲಿದ್ದ ಮಹ್ಯಮಲಯಪರ್ವತಗಳನ್ನು ಮತ್ತು ದರ್ದುರ ಪರ್ವತವನ್ನು ನೋಡಿದೆವು.
ತತೋ ಮಲಯಮಾರುಹ್ಯ ಪಶ್ಯಂತೋ ವರುಣಾಲಯಮ್ ।
ವಿಷಣ್ಣಾ ವ್ಯಥಿತಾಃ ಖಿನ್ನಾ ನಿರಾಶಾ ಜೀವಿತೇ ಭೃಶಮ್ ॥44॥
ಅನಂತರ ಮಲಯಪರ್ವತವನ್ನು ಹತ್ತಿ ಸಮುದ್ರವನ್ನು ನೋಡುತ್ತಾ ವಿಷಾದದಿಂದಲೂ, ವ್ಯಥೆಯಿಂದಲೂ ಕೂಡಿದವರಾಗಿ ಜೀವನದ ಆಸೆಯನ್ನು ತೊರೆದೆವು.
ಅನೇಕಶತವಿಸ್ತೀರ್ಣಂ ಯೋಜನಾನಾಂ ಮಹೋದಧಿಮ್ ।
ತಿಮಿನಕ್ರಝಷಾವಾಸಂ ಚಿಂತಯಂತಃ ಸುದುಃಖಿತಾಃ ॥45॥
ಅನೇಕ ಶತಯೋಜನ ವಿಸ್ತಾರವಾದ, ತಿಮಿಂಗಿಲಗಳ ಮತ್ತು ಮೊಸಳೆಗಳ ಆವಾಸಸ್ಥಾನವಾದ ಸಮುದ್ರವನ್ನು ಕುರಿತು ಚಿಂತಿಸುತ್ತಾ ಬಹಳ ದುಃಖಿತರಾದೆವು.
ತತ್ರಾಶನಸಂಕಲ್ಪಂ ಕೃತ್ವಾಽಽಸೀನಾ ವಯಂ ತದಾ ।
ತತಃ ಕಥಾಂತೇ ಗೃಧ್ರಸ್ಯ ಜಟಾಯೋರಭವತ್ ಕಥಾ ॥46॥
ಅಲ್ಲಿ ಉಪವಾಸ ಸಂಕಲ್ಪವನ್ನು ಮಾಡಿ ರಾಮನ ಕಥೆಯನ್ನು ಹೇಳುತ್ತಾ ಕುಳಿತಿದ್ದ ನಮಗೆ ಕಥೆಯ ಕೊನೆಯಲ್ಲಿ ಜಟಾಯು ಪಕ್ಷಿಯ ಕಥೆಯು ಬಂದಿತು.
ತತಃ ಪರ್ವತಶೃಂಗಾಭಂ ಘೋರರೂಪಂ ಭಯಾವಹಮ್ ।
ಪಕ್ಷಿಣಂ ದೃಷ್ಟವಂತಃ ಸ್ಮ ವೈನತೇಯಮಿವಾಪರಮ್ ।
ಸೋಽಸ್ಮಾನತರ್ಕಯದ್ ಭೋಕ್ತುಮಥಾಭ್ಯೇತ್ಯ ವಚೋಽಬ್ರವೀತ್ ॥
ಆಗ ಇನ್ನೊಬ್ಬ ಗರುಡನಂತಿದ್ದ, ಪರ್ವತಶಿಖರದಂತಿದ್ದ, ಭಯಂಕರ ಆಕೃತಿಯನ್ನು ಹೊಂದಿದ್ದ ಒಂದು ಪಕ್ಷಿಯನ್ನು ನೋಡಿದೆವು. ಆ ಪಕ್ಷಿಯು ನಾವು ಪ್ರಾಯೋಪವೇಶಕ್ಕೆ ಕುಳಿತಿರುವುದನ್ನು ಊಹಿಸಿ ನಮ್ಮ ಸಮೀಪಕ್ಕೆ ಬಂದು ಆಹಾರವನ್ನು ಸ್ವೀಕರಿಸುವಂತೆ ಹೇಳಿತು.
ಭೋಃ ಕ ಏಷ ಮಮ ಭ್ರಾತುರ್ಜಟಾಯೋಃ ಕುರುತೇ ಕಥಾಮ್ ॥48॥
ಸಂಪಾತಿರ್ನಾಮ ತಸ್ಯಾಹಂ ಜ್ಯೇಷ್ಠೋ ಭ್ರಾತಾ ಖಗಾಧಿಪಃ ।
ಅನ್ಯೋನ್ಯಸ್ಪರ್ಧಯಾಽಽರೂಢಾವಾವಾಮಾದಿತ್ಯಸತ್ಪದಮ್ ॥49॥
ಅಯ್ಯಾ! ನನ್ನ ತಮ್ಮನಾದ ಜಟಾಯುವಿನ ಕಥೆಯನ್ನು ಹೇಳುತ್ತಿರುವ ನೀವು ಯಾರು? ನಾನು ಅವನ ಅಣ್ಣನಾದ ಸಂಪಾತಿ ಎಂಬ ಪಕ್ಷಿರಾಜ. ಅನ್ಯೋನ್ಯ ಸ್ಪರ್ಧೆಯಿಂದ ನಾವಿಬ್ಬರೂ ಮೇಲೆ ಮೇಲೆ ಆದಿತ್ಯನ ಸ್ಥಾನವನ್ನು ಉದ್ದೇಶಿಸಿ ಹೊರಟೆವು.
ತತೋ ದಗ್ಧಾವಿಮೌ ಪಕ್ಷೌ ನ ದಗ್ಧೌ ತು ಜಟಾಯುಷಃ ।
ತದಾ ಮೇ ಚಿರದೃಷ್ಟಃ ಸ ಭ್ರಾತಾ ಗೃಧ್ರಪತಿಃ ಪ್ರಿಯಃ ॥50॥
ನಿರ್ದಗ್ಧಪಕ್ಷಃ ಪತಿತೋ ಹ್ಯಹಮಸ್ಮಿನ್ ಮಹಾಗಿರೌ ।
ದ್ರಷ್ಟುಂ ವೀರಂ ನ ಶಕ್ನೋಮಿ ಭ್ರಾತರಂ ವೈ ಜಟಾಯುಷಮ್ ॥51॥
ಆಗ ನನ್ನ ಈ ಎರಡು ರೆಕ್ಕೆಗಳು ಸುಟ್ಟುಹೋದವು. ಜಟಾಯುವಿನ ರೆಕ್ಕೆಯು ಸುಡಲಿಲ್ಲ. ಗೃಧ್ರರಾಜನಾದ ಪ್ರೀತಿಪಾತ್ರನಾದ ಆ

ತಮ್ಮನನ್ನು ನೋಡಿ ಬಹಳ ಕಾಲವಾಯಿತು. ನಾನು ರೆಕ್ಕೆಗಳನ್ನು ಸುಟ್ಟುಕೊಂಡು ಈ ದೊಡ್ಡ ಪರ್ವತದಲ್ಲಿ ಬಿದ್ದೆ. ನನ್ನ ತಮ್ಮನಾದ ವೀರನಾದ ಜಟಾಯುವನ್ನು ನೋಡಲು ನನಗೆ ಸಾಧ್ಯವಾಗುತ್ತಿಲ್ಲ.
ಹನುಮಾನ್
ತಸ್ಯೈವಂ ವದತೋಽಸ್ಮಾಭಿರ್ಹತೋ ಭ್ರಾತಾ ನಿವೇದಿತಃ |
ವ್ಯಸನಂ ಭವತಶ್ಚೇದಂ ಸಂಕ್ಷೇಪಾದ್ವೈ ನಿವೇದಿತಮ್ ॥52॥
ಹನುಮಾನ್ ಹೀಗೆ ಮಾತನಾಡುತ್ತಿದ್ದ ಅವನಿಗೆ ಹನುಮಂತನು ನಿನ್ನ ತಮ್ಮನು ಹತನಾದನು. ನಿನಗೆ ಉಂಟಾದ ಈ ವ್ಯಸನವನ್ನು ಸಂಕ್ಷೇಪವಾಗಿ ಹೇಳುತ್ತಿದ್ದೇನೆ (ಎಂದು ಹೇಳಿದನು).
ಸ ಸಂಪಾತಿಸ್ತದಾ ರಾಜನ್ ಶ್ರುತ್ವಾ ಸುಮಹದಪ್ರಿಯಮ್ |
ವಿಷಣ್ಣಚೇತಾಃ ಪಪ್ರಚ್ಛ ಪುನರಸ್ಮಾನರಿಂದಮ ॥53॥
ರಾಜನೇ, ಅರಿಂದಮನೇ, ಆ ಸಂಪಾತಿಯಾದರೂ ಈ ದೊಡ್ಡ ಅಪ್ರಿಯವಾದ ವಾರ್ತೆಯನ್ನು ಕೇಳಿ ದುಃಖಗೊಂಡವನಾಗಿ ನಮ್ಮನ್ನು ಪುನಃ ಪ್ರಶ್ನೆಮಾಡಿದನು.
ಕಃ ಸ ರಾಮಃ ಕಥಂ ಸೀತಾ ಜಟಾಯುಶ್ಚ ಕಥಂ ಹತಃ |
ಇಚ್ಛಾಮಿ ಸರ್ವಮೇವೈತತ್ ಶ್ರೋತುಂ ಪ್ಲವಗಸತ್ತಮಾಃ ॥54॥
ರಾಮನು ಯಾರು? ಸೀತೆಯು ಹೇಗಿದ್ದಾಳೆ? ಜಟಾಯುವು ಹೇಗೆ ಹತನಾದನು? ಎಲೈ ಕಪಿಶ್ರೇಷ್ಠರೇ, ನಾನು ಇವೆಲ್ಲವನ್ನೂ ತಿಳಿಯಲು (ಕೇಳಲು) ಬಯಸುತ್ತೇನೆ.
ಹನುಮಾನ್
ತಸ್ಯಾಹಂ ಸರ್ವಮೇವೈತದ್ ಭವತೋ ವ್ಯಸನಾಗಮಮ್ |
ಪ್ರಾಯೋಪವೇಶನೇ ಚೈವ ಹೇತುಂ ವಿಸ್ತರಶೋಽಬ್ರುವಮ್ |
ಸೋಽಸ್ಮಾನುತ್ಥಾಪಯಾಮಾಸ ವಾಕ್ಯೇನಾನೇನ ಪಕ್ಷಿರಾಟ್ ॥55॥
ಹನುಮಾನ್ ಅವನಿಗೆ ಈ ನಿಮ್ಮ ಎಲ್ಲಾ ವ್ಯಸನವನ್ನೂ ಮತ್ತು ನಾವು ಪ್ರಾಯೋಪ್ರವೇಶಕ್ಕೆ ಕುಳಿತುಕೊಳ್ಳುವ ಕಾರಣವನ್ನೂ ವಿಸ್ತಾರವಾಗಿ ಹೇಳಿದೆವು. ಆ ಪಕ್ಷಿರಾಜನು ಈ ವಾಕ್ಯವನ್ನು ಹೇಳಿ ನಮ್ಮನ್ನು ಆ ಸ್ಥಳದಿಂದ ಎಬ್ಬಿಸಿದನು.
ರಾವಣೋ ವಿದಿತೋ ಮಹ್ಯಂ ಲಂಕಾ ಚಾಸ್ಯ ಮಹಾಪುರೀ |
ದೃಷ್ಟಾ ಪಾರೇ ಸಮುದ್ರಸ್ಯ ತ್ರಿಕೂಟಗಿರಿಕಂದರೇ ॥56॥
ಭವಿತ್ರೀ ತತ್ರ ವೈದೇಹೀ ನ ಮೇಽಸ್ತ್ಯತ್ರ ವಿಚಾರಣಾ ॥57॥
ರಾವಣನನ್ನು ನಾನು ತಿಳಿದಿದ್ದೇನೆ. ಲಂಕೆಯು ಅವನ ದೊಡ್ಡ ಪಟ್ಟಣ. ಸಮುದ್ರದ ದಡದಲ್ಲಿ ತ್ರಿಕೂಟಗಿರಿ ಪರ್ವತದ ತಪ್ಪಲಿನಲ್ಲಿ ಅದು ಕಂಡುಬರುತ್ತದೆ. ಸೀತೆಯು ಅಲ್ಲಿಯೇ ಇರುವಳು. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಇತಿ ತಸ್ಯ ವಚಃ ಶ್ರುತ್ವಾ ವಯಮುತ್ಥಾಯ ಸತ್ವರಾಃ |
ಸಾಗರಕ್ರಮಣೇ ಮಂತ್ರಂ ಮಂತ್ರಯಾಮಃ ಪರಂತಪ ॥58॥
ಎಲೈ ಪರಂತಪನೇ, ಹೀಗೆ ಅವನ ಮಾತುಗಳನ್ನು ಕೇಳಿ ನಾವು ಬೇಗ ಮೇಲೆದ್ದು ಸಮುದ್ರವನ್ನು ದಾಟುವ ವಿಷಯದಲ್ಲಿ ಮಂತ್ರಾಲೋಚನೆಯನ್ನು ಮಾಡಿದೆವು.
ನಾಧ್ಯವಸ್ಯದ್ ಯದಾ ಕಶ್ಚಿತ್ ಸಾಗರಸ್ಯ ವಿಲಂಘನಮ್ |
ತತಃ ಪಿತರಮಾವಿಶ್ಯ ಪುಪ್ಲು(ಪ್ಲ)ವೇಽಹಂ ಮಹಾರ್ಣವಮ್ |
ಯಾರೂ ಸಾಗರವನ್ನು ದಾಟುವ ವಿಷಯದಲ್ಲಿ ನಿರ್ಧಾರವನ್ನು ಮಾಡಲಿಲ್ಲವಾದ್ದರಿಂದ ನಾನು ದಕ್ಷಿಣ ದಿಕ್ಕಿನಲ್ಲಿ ಉಂಟಾದ ಒಂದು ಜಂಝಾವಾತವನ್ನು ಆವೇಶಿಸಿ ಆ ಸಮುದ್ರವನ್ನು ದಾಟಿದೆನು.
ಶತಯೋಜನವಿಸ್ತೀರ್ಣಂ ನಿಹತ್ಯ ಜಲರಾಕ್ಷಸೀಮ್ ॥59॥
ತತ್ರ ಸೀತಾ ಮಯಾ ದೃಷ್ಟಾ ರಾವಣಾಂತಃಪುರೇ ಸತೀ |
ಉಪವಾಸತಪಃಶೀಲಾ ಭರ್ತೃದರ್ಶನಲಾಲಸಾ ॥60॥
ಶತಯೋಜನ ವಿಸ್ತೀರ್ಣವಾದ ಸಮುದ್ರವನ್ನು ದಾಟಿ ಜಲರಾಕ್ಷಸಿಯನ್ನು ಕೊಂದು ರಾವಣನ ಅಂತಃಪುರದಲ್ಲಿ ಉಪವಾಸ ಪರಳೂ, ತಪಃಶೀಲಳೂ, ಪತಿದರ್ಶನ ಲಾಲಸಳೂ ಆದ ಪತಿವ್ರತೆಯಾದ ಸೀತೆಯನ್ನು ನಾನು ನೋಡಿದೆನು.
ಜಟಿಲಾ ಮಲದಿಗ್ಧಾಂಗೀ ಕೃಶಾ ದೀನಾ ತಪಸ್ವಿನೀ ॥61॥
ನಿಮಿತ್ತೈಸ್ತಾಮಹಂ ಸೀತಾಮುಪಲಭ್ಯ ಪೃಥಗ್ವಿಧೈಃ |
ಉಪಸೃತ್ಯಾಬ್ರುವಂ ಚಾರ್ಯಾಮಭಿಗಮ್ಯ ರಹೋಗತಾಮ್ ॥62॥
ಅವಳು ಜಟಿಲಳೂ, ದೇಹದ ಮೇಲೆ ಕೊಳೆಯನ್ನು ಹೊಂದಿದವಳೂ, ಕೃಶಳೂ, ದೀನಳೂ, ಶೋಚನೀಯಳೂ ಆಗಿದ್ದಳು. ಅನೇಕ ಕಾರಣಗಳಿಂದ ನಾನು ಅವಳನ್ನು ಸೀತೆ ಎಂದು ಊಹಿಸಿ ಅವಳನ್ನು ಸಮೀಪಿಸಿ ಏಕಾಂತದಲ್ಲಿ ಆ ಪೂಜ್ಯೆಯನ್ನು ಕುರಿತು ಮಾತನಾಡಿದೆನು.
ಸೀತೇ ರಾಮಸ್ಯ ದೂತೋಽಹಂ ವಾನರೋ ಮಾರುತಾತ್ಮಜಃ |
ತ್ವದ್ದರ್ಶನಮಭಿಪ್ರೇಪ್ಸುರಿಹ ಪ್ರಾಪ್ತೋ ವಿಹಾಯಸಾ ॥63॥
ಸೀತೆಯೇ, ನಾನು ರಾಮನ ದೂತನಾದ ವಾಯುಪುತ್ರನಾದ ವಾನರ. ನಿನ್ನ ದರ್ಶನವನ್ನು ಪಡೆಯಲು ಬಯಸಿ ನಾನು ಆಕಾಶಮಾರ್ಗದಿಂದ ಇಲ್ಲಿಗೆ ಬಂದೆನು.
ರಾಜಪುತ್ರೌ ಕುಶಲಿನೌ ಭ್ರಾತರೌ ರಾಮಲಕ್ಷ್ಮಣೌ |

ಸರ್ವಶಾಖಾಮೃಗೇಂದ್ರೇಣ ಸುಗ್ರೀವೇಣಾಭಿಪಾಲಿತೌ ॥64॥
ರಾಜಕುಮಾರರಾದ ರಾಮಲಕ್ಷ್ಮಣ ಸಹೋದರರು ಕ್ಷೇಮದಿಂದಿದ್ದಾರೆ. ಎಲ್ಲಾ ಕಪಿಗಳ ರಾಜನಾದ ಸುಗ್ರೀವನು ಅವರನ್ನು ರಕ್ಷಿಸುತ್ತಿದ್ದಾನೆ.
ಕುಶಲಂ ತ್ವಾಬ್ರವೀದ್ ರಾಮಃ ಸೀತೇ ಸೌಮಿತ್ರಿಣಾ ಸಹ |
ಸಖೀಭಾವಾಚ್ಚ ಸುಗ್ರೀವಃ ಕುಲಂ ತ್ವಾಽನುಪೃಚ್ಛತಿ ॥65॥
ಸೀತೆಯೇ, ರಾಮನು ನಿನಗೆ ಕುಶಲವನ್ನು ತಿಳಿಸುವಂತೆ ಲಕ್ಷ್ಮಣನ ಜೊತೆಯಲ್ಲಿ ಹೇಳಿದನು. ಸುಗ್ರೀವನೂ ಸಹ ಸ್ನೇಹಭಾವದಿಂದ ನಿನ್ನ ಕುಶಲವನ್ನು ವಿಚಾರಿಸುತ್ತಾನೆ.
ಕ್ಷಿಪ್ರಮೇಷ್ಯತಿ ತೇ ಭರ್ತಾ ಸರ್ವಶಾಖಾಮೃಗೈಃ ಸಹ |
ಪ್ರತ್ಯಯಂ ಕುರು ಮೇ ದೇವಿ ವಾನರೋಽಸ್ಮಿ ನ ರಾಕ್ಷಸಃ ॥66॥
ನಿನ್ನ ಪತಿಯಾದ ರಾಮನು ಎಲ್ಲ ಕಪಿಗಳ ಜೊತೆಯಲ್ಲಿ ಶೀಘ್ರವಾಗಿ ಇಲ್ಲಿಗೆ ಬರುವನು. ದೇವಿಯೇ, ನನ್ನ ಮಾತನ್ನು ನಂಬು. ನಾನು ಕಪಿ. ರಾಕ್ಷಸನಲ್ಲ.
ಮುಹೂರ್ತಮಿವ ಚ ಧ್ಯಾತ್ವಾ ಸೀತಾ ಮಾಂ ಪ್ರತ್ಯುವಾಚ ಹ |
ಅವೈಮಿ ತ್ವಾಂ ಹನೂಮಂತಮವಿಂಧ್ಯವಚನಾದಹಮ್ ॥67॥
ಒಂದು ಮುಹೂರ್ತದ ಕಾಲ ಚಿಂತಿಸಿ ಸೀತೆಯು ನನ್ನನ್ನು ಕುರಿತು ಅವಿಂಧ್ಯನ ಮಾತಿನಂತೆ ನಿನ್ನನ್ನು ಹನುಮಂತನೆಂದು ನಾನು ತಿಳಿಯುತ್ತೇನೆ ಎಂದು ಹೇಳಿದಳು.
ಅವಿಂಧ್ಯೋ ಹಿ ಮಹಾಬಾಹೋ ರಾಕ್ಷಸೋ ವೃದ್ಧಸಮ್ಮತಃ |
ಕಥಿತಸ್ತೇನ ಸುಗ್ರೀವಸ್ತ್ವದ್ವಿಧೈಃ ಸಚಿವೈರ್ವೃತಃ ॥68॥
ಎಲೈ ಮಹಾಬಾಹುವೇ, ಅವಿಂಧ್ಯನೆಂಬ ವೃದ್ಧಸಮ್ಮತನಾದ ಒಬ್ಬ ರಾಕ್ಷಸನು ಸುಗ್ರೀವನೆಂಬ ಕಪಿರಾಜನು ನಿನ್ನಂತಹ ಸಚಿವರಿಂದ ಕೂಡಿದ್ದಾನೆ ಎಂಬ ವಿಷಯವನ್ನು ನನಗೆ ಹೇಳಿದ್ದನು (ಎಂದೂ ಹೇಳಿದಳು).
ಗಮ್ಯತಾಮಿತಿ ಚೋಕ್ತಸ್ತ್ವ ಮಾಂ ಸೀತಾ ಪ್ರಾದಾದಿಮಂ ಮಣಿಮ್ ॥
ಧಾರಿತಾ ಯೇನ ವೈದೇಹೀ ಕಾಲಮೇತಮನಿಂದಿತಾ |
ಪ್ರತ್ಯಯಾರ್ಥಂ ಕಥಾಂ ಚೇಮಾಂ ಕಥಯಾಮಾಸ ಜಾನಕೀ ॥70॥
ನೀನು ಹೊರಡು ಎಂದು ಹೇಳಿ ಸೀತೆಯು ನನಗೆ ಈ ಮಣಿಯನ್ನು ಕೊಟ್ಟಳು. ಈ ಚೂಡಾಮಣಿಯ ಬಲದಿಂದಲೇ ಅನಿಂದಿತಳಾದ ವೈದೇಹಿಯು ಇದುವರೆಗೆ ಜೀವಿಸಿದ್ದಳು. ವಿಶ್ವಾಸವುಂಟಾಗುವುದಕ್ಕಾಗಿ ಜಾನಕಿಯು ಈ ಕಥೆಯನ್ನು ಹೇಳಿದಳು.
ಕ್ಷಿಪ್ತಾಮಿಷೀಕಾಂ ಕಾಕಾಯ ಚಿತ್ರಕೂಟೇ ಮಹಾಗಿರೌ |
ಭವತಾ ಪುರುಷವ್ಯಾಘ್ರ ಪ್ರತ್ಯಭಿಜ್ಞಾನಕಾರಣಾತ್ |
ಏಕಾಕ್ಷಿವಿಕಲಃ ಕಾಕಃ ಸುದುಷ್ಟಾತ್ಮಾ ಕೃತಶ್ಚ ವೈ ॥71॥
ಎಲೈ ಪುರುಷವ್ಯಾಘ್ರನೇ, ಚಿತ್ರಕೂಟಪರ್ವತದಲ್ಲಿ ಒಂದು ಕಾಗೆಯ ಮೇಲೆ ನೀನು ಪ್ರಯೋಗಿಸಿದ ಒಂದು ಹುಲ್ಲುಕಡ್ಡಿಯನ್ನೂ ಅದರಿಂದ ಅತ್ಯಂತ ದುಷ್ಟನಾದ ಆ ಕಾಗೆಯು ಏಕಾಕ್ಷಿಯಾಗಿ ಮಾಡಲ್ಪಟ್ಟದ್ದನ್ನೂ ನಂಬಿಕೆಯು ಬರುವ ಸಲುವಾಗಿ ಜಾನಕಿಯು ಹೇಳಿದಳು.
ಮಾರ್ಕಂಡೇಯಃ
ಗ್ರಾಹಯಿತ್ವಾಹಮಾತ್ಮಾನಂ ತತೋ ದಗ್ಧ್ವಾ ಚ ತಾಂ ಪುರೀಮ್ |
ಸಂಪ್ರಾಪ್ತ ಇತಿ ತಂ ರಾಮಃ ಪ್ರಿಯವಾದಿನಮಾರ್ಚಯತ್ ॥72॥
ಮಾರ್ಕಂಡೇಯ ಅನಂತರ ನಾನು ನನ್ನ ಪರಿಚಯವನ್ನು ಮಾಡಿಕೊಟ್ಟು ಲಂಕಾಪಟ್ಟಣವನ್ನು ಸುಟ್ಟು ಇಲ್ಲಿಗೆ ಬಂದೆನು ಎಂದು ಹೇಳಿದ ಪ್ರಿಯವಾದಿಯಾದ ಹನುಮಂತನನ್ನು ರಾಮನು ಸತ್ಕರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ಇತಿ ರಾಮೋಪಖ್ಯಾನಪರ್ವಣಿ ಹನೂಮತ್‌ಪ್ರತ್ಯಾಗಮನಾ ನಾಮ ದಶಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ತೆರಡನೆಯ ಅಧ್ಯಾಯ
ವಾನರ ಸೈನ್ಯದ ಜೊತೆಯಲ್ಲಿ ಸಮುದ್ರದಡಕ್ಕೆ ಪ್ರಯಾಣ. ರಾಮನಿಂದ ವ್ರತರೂಪವಾಗಿ ದರ್ಭೆಯಲ್ಲಿ ಶಯನ. ಸಮುದ್ರರಾಜನಿಂದ ನಳನಿಂದ ಸೇತುವೆಯನ್ನು ನಿರ್ಮಾಣ ಮಾಡಿಸುವಂತೆ ಪ್ರೇರಣೆ. ವಿಭೀಷಣನ ಸ್ವೀಕಾರ.
ಮಾರ್ಕಂಡೇಯಃ
ತತಸ್ತತ್ರೈವ ರಾಮಸ್ಯ ಸಮಾಸೀನಸ್ಯ ತೈಃ ಸಹ |
ಸಮಾಜಗ್ಮುಃ ಕಪಿಶ್ರೇಷ್ಠಾಃ ಸುಗ್ರೀವವಚನಾತ್ ತದಾ ॥1॥
ಮಾರ್ಕಂಡೇಯ ಅನಂತರ ರಾಮನು ಅಲ್ಲಿಯೇ ಅವರ ಜೊತೆಯಲ್ಲಿ ಕುಳಿತಿರಲು ಸುಗ್ರೀವನ ಆಜ್ಞೆಯಂತೆ ಕಪಿಶ್ರೇಷ್ಠರು ಆಗ ಅಲ್ಲಿಗೆ ಬಂದರು.
ವೃತಃ ಕೋಟಿಸಹಸ್ರೇಣ ವಾನರಾಣಾಂ ತರಸ್ವಿನಾಮ್ |
ಶ್ವಶುರೋ ವಾಲಿನಃ ಶ್ರೀಮಾನ್ ಸುಷೇಣೋ ರಾಮಮಭ್ಯಯಾತ್ ॥2॥

ವಾಲಿಯ ಮಾವನಾದ ಸುಷೇಣನು ಶೀಘ್ರಗಾಮಿಗಳಾದ ಒಂದು ಸಹಸ್ರ ಕೋಟಿ ಕಪಿಗಳನ್ನು ತೆಗೆದುಕೊಂಡು ರಾಮನ ಬಳಿಗೆ ಬಂದನು.
ಕೋಟೀಶತವೃತೋ ವಾಪಿ ಗಜೋ ಗವಯ ಏವ ಚ |
ವಾನರೇಂದ್ರೌ ಮಹಾವೀರ್ಯೌ ಪೃಥಕ್ಪೃಥಗದೃಶ್ಯತಾಮ್ ॥3॥
ಗಜ ಗವಯ ಎಂಬ ಮಹಾವೀರ್ಯಶಾಲಿಗಳಾದ ವಾನರ ಶ್ರೇಷ್ಠರು ಶತಕೋಟಿ ಕಪಿಗಳಿಂದ ಸಹಿತವಾಗಿ ಬೇರೆ ಬೇರೆಯಾಗಿ ಬಂದುದು ಕಂಡುಬಂದಿತು.
ಷಷ್ಟಿಕೋಟಿಸಹಸ್ರಾಣಿ ಪ್ರಕರ್ಷನ್ ಪ್ರತ್ಯದೃಶ್ಯತ |
ಗೋಲಾಂಗೂಲೋ ಮಹಾರಾಜ ಗವಾಕ್ಷೋ ಭೀಮದರ್ಶನಃ ॥4॥
ಎಲೈ ಮಹಾರಾಜನೇ, ಗವಾಕ್ಷನೆಂಬ ಘೋರರೂಪವುಳ್ಳ ಗೋಲಾಂಗೂಲ ಜಾತಿಗೆ ಸೇರಿದ ಕಪಿಯು ಅರವತ್ತು ಸಹಸ್ರ ಕೋಟಿ ಕಪಿಗಳನ್ನು ತೆಗೆದುಕೊಂಡು ಬರುವುದು ಕಂಡಿತು.
ಗಂಧಮಾದನವಾಸೀ ತು ಪ್ರಥಿತೋ ಗಂಧಮಾದನಃ |
ಕೋಟೀಶತಸಹಸ್ರಾಣಿ ಹರೀಣಾಂ ಸಮಕರ್ಷತ ॥5॥
ಗಂಧಮಾದನ ನಿವಾಸಿಯಾದ ಗಂದಮಾದನ ಎಂಬ ಕಪಿಯು ಒಂದು ಲಕ್ಷ ಕೋಟಿ ಕಪಿಗಳನ್ನು ಕರೆತಂದನು.
ಪನಸೋ ನಾಮ ಮೇಧಾವೀ ವಾನರಃ ಸುಮಹಾಬಲಃ |
ಕೋಟೀರ್ದಶ ದ್ವಾದಶ ಚ ತ್ರಿಂಶತ್ಪಂಚ ಪ್ರಕರ್ಷತಿ ॥6॥
ಪನಸ ಎಂಬ ಮೇಧಾವಿಯೂ, ಮಹಾಬಲಿಷ್ಠನೂ ಆದ ಕಪಿಯು ಐವತ್ತೇಳು ಕೋಟಿ ಕಪಿಗಳನ್ನು ಕರೆತಂದನು.
ಶ್ರೀಮಾನ್ ದಧಿಮುಖೋ ನಾಮ ಹರಿವೃದ್ಧೋಽತಿವೀರ್ಯವಾನ್ |
ಪ್ರಚಕರ್ಷ ಮಹಾಸೈನ್ಯಂ ಹರೀಣಾಂ ಭೀಮತೇಜಸಾಮ್ ॥7॥
ದಧಿಮುಖ ಎಂಬ ಕಾಂತಿಯುಕ್ತನೂ, ಮಹಾಪರಾಕ್ರಮಿಯೂ ಆದ ಕಪಿವೃದ್ಧನು ಭಯಂಕರ ಪರಾಕ್ರಮವುಳ್ಳ ಕಪಿಗಳ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದನು.
ಕೃಷ್ಣಾನಾಂ ಮುಖಪುಂಡ್ರಾಣಾಮೃಕ್ಷಾಣಾಂ ಭೀಮಕರ್ಮಣಾಮ್ |
ಕೋಟೀಶತಸಹಸ್ರೇಣ ಜಾಂಬವಾನ್ ಪ್ರತ್ಯದೃಶ್ಯತ ॥8॥
ಜಾಂಬವಂತನು ಭಯಂಕರ ಕರ್ಮವನ್ನು ಮಾಡುವ ಮುಖದಲ್ಲಿ ಊರ್ಧ್ವಪುಂಡ್ರವಿದ್ದ ಒಂದು ಲಕ್ಷಕೋಟಿ ಕಪ್ಪು ಕರಡಿಗಳನ್ನು ಕರೆದುಕೊಂಡು ಬಂದನು.
ಏತೇ ಚಾನ್ಯೇ ಚ ಬಹವೋ ಹರಿಯೂಥಪಯೂಥಪಾಃ |
ಅಸಂಖ್ಯೇಯಾ ಮಹಾರಾಜ ಸಮೀಯೂ ರಾಮಕಾರಣಾತ್ ॥9॥
ಎಲೈ ಮಹಾರಾಜನೇ, ರಾಮಕಾರ್ಯದ ಸಲುವಾಗಿ ಈ ಮತ್ತು ಇನ್ನೂ ಅನೇಕ ಕಪಿನಾಯಕ ನಾಯಕರು ಲೆಕ್ಕವಿಲ್ಲದ ಸಂಖ್ಯೆಯಲ್ಲಿ ಬಂದು ಒಟ್ಟುಗೂಡಿದರು.
ಗಿರಿಕೂಟನಿಭಾಂಗಾನಾಂ ಸಿಂಹಾನಾಮಿವ ಗರ್ಜತಾಮ್ |
ಶ್ರೂಯತೇ ತುಮುಲಃ ಶಬ್ದಸ್ತತ್ರ ತತ್ರ ಪ್ರಧಾವತಾಮ್ ॥10॥
ಪರ್ವತದ ಕೋಡುಗಲ್ಲಂತಿರುವ ಅವಯವಗಳುಳ್ಳ ಸಿಂಹದಂತೆ ಗರ್ಜನೆಯನ್ನು ಮಾಡುವ ಅಲ್ಲಲ್ಲಿ ಓಡಾಡುವ ಕಪಿಗಳ ತೀವ್ರವಾದ ಶಬ್ದವು ಕೇಳಿಬರುತ್ತಿದ್ದಿತು.
ಗಿರಿಕೂಟನಿಭಾಃ ಕೇಚಿತ್ ಕೇಚಿನ್ಮಹಿಷಸನ್ನಿಭಾಃ |
ಶರದಭ್ರಪ್ರತೀಕಾಶಾಃ ಪಿಷ್ಟಹಿಂಗುಲಿಕಾನನಾಃ ॥11॥
ಕೆಲವು ಕಪಿಗಳು ಪರ್ವತದ ಕೋಡುಗಲ್ಲಿನಂತಿದ್ದವು, ಕೆಲವು ಎಮ್ಮೆಗಳಂತಿದ್ದವು, ಕೆಲವು ಕಪಿಗಳು ಶರತ್ಕಾಲದ ಮೋಡದಂತೆ ಬಿಳಿಯ ವರ್ಣದಿಂದ ಕೂಡಿದ್ದು ಹಿಂಗುಲಿ ಎಂಬ ರಕ್ತಧಾತುವಿನಂತೆ ಕೆಂಪಾದ ಮುಖಗಳನ್ನು ಹೊಂದಿದ್ದವು.
ಉತ್ಪತಂತಃ ಪತಂತಶ್ಚ ಪ್ಲವಮಾನಾಶ್ಚ ವಾನರಾಃ |
ಉದ್ಧೂನ್ವಂತೋಽಪರೇ ರೇಣೂನ್ ಸಮಾಜಗ್ಮುಃ ಸಮಂತತಃ ॥12॥
ಆ ಕಪಿಗಳು ಹಾರುತ್ತಾ, ನೆಗೆಯುತ್ತಾ, ಓಲಾಡುತ್ತಾ, ಧೂಳನ್ನು ಎಬ್ಬಿಸುತ್ತಾ ಎಲ್ಲ ಕಡೆಗಳಿಂದಲೂ ಬಂದು ಸೇರಿದವು.
ಸ ವಾನರಮಹಾಸಂಘಃ ಪೂರ್ಣಸಾಗರಸನ್ನಿಭಃ |
ನಿವೇಶಕಮಕರೋತ್ ತತ್ರ ಸುಗ್ರೀವಾನುಮತೇ ತದಾ ॥13॥
ಆಗ ಸುಗ್ರೀವನ ಆದೇಶದಂತೆ ಪೂರ್ಣವಾದ ಸಮುದ್ರದಂತಿದ್ದ ಆ ಮಹಾವಾನರ ಸಮೂಹವು ಅಲ್ಲಿ ತಂಗಿತು.
ತತಸ್ತೇಷು ಹರೀಂದ್ರೇಷು ಸಮಾವೃತ್ತೇಷು ಸರ್ವಶಃ |
ತಿಥೌ ಪ್ರಶಸ್ತೇ ನಕ್ಷತ್ರೇ ಮುಹೂರ್ತೇ ಚಾಭಿಪೂಜಿತೇ ॥14॥
ತೇನ ವ್ಯೂಢೇನ ಸೈನ್ಯೇನ ಲೋಕಾನುದ್ವರ್ತಯನ್ನಿವ |
ಪ್ರಯಯೌ ರಾಘವಃ ಶ್ರೀಮಾನ್ ಸುಗ್ರೀವಸಹಿತಸ್ತದಾ ॥15॥
ಅನಂತರ ಕಪೀಂದ್ರರೆಲ್ಲರೂ ಎಲ್ಲ ಕಡೆಗಳಿಂದಲೂ ಬಂದು ಸೇರಿದ ಮೇಲೆ ಒಂದು ಪ್ರಶಸ್ತವಾದ ತಿಥಿ ನಕ್ಷತ್ರದಲ್ಲಿ, ಶುಭಮುಹೂರ್ತದಲ್ಲಿ ಆ ಒಂದುಗೂಡಿದ ಸೈನ್ಯ ಸಹಿತನಾಗಿ ಲೋಕಗಳನ್ನೇ ನಾಶಮಾಡುವಂತೆ ಕಾಂತಿಯುಕ್ತನಾದ ರಾಮನು ಸುಗ್ರೀವನ ಜೊತೆಯಲ್ಲಿ ಹೊರಟನು.
ಮುಖಮಾಸೀತ್ ತು ಸೈನ್ಯಸ್ಯ ಹನೂಮಾನ್ ಮಾರುತಾತ್ಮಜಃ |

ಜಘನಂ ಪಾಲಯಾಮಾಸ ಸೌಮಿತ್ರಿರಕಕುತೋಭಯಃ ॥16॥
ಸೈನ್ಯದ ಮುಂಭಾಗವನ್ನು ಮಾರುತಾತ್ಮಜನಾದ ಹನುಮಂತನೂ ಮತ್ತು ಸೈನ್ಯದ ಹಿಂಭಾಗವನ್ನು ನಿರ್ಭಯನಾದ ಲಕ್ಷ್ಮಣನೂ ಪಾಲಿಸುತ್ತಿದ್ದರು.
ಬದ್ಧಗೋಧಾಂಗುಲಿತ್ರಾಣೌ ರಾಘವೌ ತತ್ರ ಜಗ್ಮತುಃ |
ವೃತೌ ಹರಿಮಹಾಮಾತ್ರೈಶ್ಚಂದ್ರಸೂರ್ಯೌ ಗ್ರಹೈರಿವ ॥17॥
ಕೈಗಳಿಗೆ ಗೋಧಚರ್ಮದ ತ್ರಾಣಗಳನ್ನು ಹಾಕಿಕೊಂಡು ರಾಮಲಕ್ಷ್ಮಣರು ಶ್ರೇಷ್ಠವಾದ ಕಪಿಗಳಿಂದ ಕೂಡಿ ಗ್ರಹಗಳಿಂದ ಕೂಡಿದ ಚಂದ್ರಸೂರ್ಯರಂತೆ ಹೊರಟರು.
ಪ್ರಬಭೌ ಹರಿಸೈನ್ಯಂ ತತ್ ಸಾಲತಾಳಶಿಲಾಯುಧಮ್ |
ಸುಮಹಚ್ಛಾಲಿಭವನಂ ಯಥಾ ಸೂರ್ಯೋದಯಂ ಪ್ರತಿ ॥18॥
ಸಾಲತಾಳವೃಕ್ಷಗಳನ್ನು ಮತ್ತು ಶಿಲೆಗಳನ್ನು ಆಯುಧವಾಗಿ ಹೊಂದಿದ್ದ ಆ ಕಪಿಸೈನ್ಯವು ಸೂರ್ಯೋದಯದಲ್ಲಿ ಭತ್ತದ ತೆನೆಗಳಿಂದ ಕೂಡಿದ ದೊಡ್ಡ ಭತ್ತದ ಗದ್ದೆಯಂತೆ ಶೋಭಿಸುತ್ತಿದ್ದಿತು.
ನಳನೀಲಾಂಗದಕ್ರಾಥಮೈಂದದ್ವಿವಿದಪಾಲಿತಾ |
ಯಯೌ ಸುಮಹತೀ ಸೇನಾ ರಾಘವಸ್ಯಾರ್ಥಸಿದ್ಧಯೇ ॥19॥
ನಳ, ನೀಲ, ಅಂಗದ, ಕ್ರಾಥ, ಮೈಂದ, ದ್ವಿವಿದರಿಂದ ರಕ್ಷಿತವಾದ ಆ ದೊಡ್ಡ ಸೈನ್ಯವು ರಾಮನ ಕಾರ್ಯಸಿದ್ಧಿಗಾಗಿ ಹೊರಟಿತು.
ವಿವಿಧೇಷು ವನೇಷ್ವೇವ(ಪ್ರಶಸ್ತೇಷು) ಬಹುಮೂಲಫಲೇಷು ಚ |
ಪ್ರಭೂತಮಧುಮೂಲೇಷು ವಾರಿಮತ್ಸುಶಿವೇಷು ಚ ॥20॥
ನಿವಸಂತೀ ನಿರಾಬಾಧಾ ತಥೈವ ಗಿರಿಸಾನುಷು |
ಉಪಾಯಾದ್ಧರಿಸೇನಾ ಸಾ ಕ್ಷಾರೋದಮಥ ಸಾಗರಮ್ ॥21॥
ಫಲಮೂಲಗಳಿದ್ದ, ಶಿವಜಲಗಳಿದ್ದ, ಪ್ರಭೂತವಾದ ಮಧುಮೂಲಗಳೂ ಇದ್ದ ವಿವಿಧವಾದ ವನಗಳಲ್ಲಿಯೂ ಅದರಂತೆ ಗಿರಿಶಿಖರಗಳಲ್ಲಿಯೂ ನಿವಾಸವನ್ನು ಮಾಡುತ್ತಾ ಆ ಕಪಿಸೈನ್ಯವು ಯಾವ ಬಾಧೆಯೂ ಇಲ್ಲದೆ ಲವಣ ಸಮುದ್ರವನ್ನು ಸಮೀಪಿಸಿತು.
ದ್ವಿತೀಯಸಾಗರನಿಭಂ ತದ್ಬಲಂ ಬಹುಲಧ್ವಜಮ್ |
ವೇಲಾವನಂ ಸಮಾಸಾದ್ಯ ನಿವಾಸಮಕರೋತ್ ತದಾ ॥22॥
ಎರಡನೆಯ ಸಮುದ್ರದಂತಿದ್ದ ಅನೇಕ ಧ್ವಜಗಳಿಂದ ಕೂಡಿದ ಆ ಸೈನ್ಯವು ಸಮುದ್ರದ ದಡವನ್ನು ಸೇರಿ ಅಲ್ಲಿ ಬೀಡುಬಿಟ್ಟಿತು.
ತತೋ ದಾಶರಥಿಃ ಶ್ರೀಮಾನ್ ಸುಗ್ರೀವಂ ಪ್ರತ್ಯಭಾಷತ |
ಮಧ್ಯೇ ವಾನರಮುಖ್ಯಾನಾಂ ಪ್ರಾಪ್ತಕಾಲಮಿದಂ ವಚಃ ॥23॥
ಉಪಾಯಃ ಕೋ ನು ಭವತಾಂ ಮತಃ ಸಾಗರಲಂಘನೇ |
ಇಯಂ ಹಿ ಮಹತೀ ಸೇನಾ ಸಾಗರಶ್ಚಾತಿದುಸ್ತರಃ ॥24॥
ಆಗ ವಾನರಶ್ರೇಷ್ಠರ ಮಧ್ಯದಲ್ಲಿ ಕಾಂತಿಯುಕ್ತನಾದ ರಾಮನು ಸುಗ್ರೀವನನ್ನು ಕುರಿತು ನೀವು ಸಾಗರವನ್ನು ದಾಟುವುದಕ್ಕೆ ಯಾವ ಉಪಾಯವನ್ನು ಹೊಂದಿದ್ದೀರಿ? ನಮ್ಮ ಈ ಸೈನ್ಯವಾದರೂ ಬಹಳ ದೊಡ್ಡದಾಗಿದೆ. ಸಾಗರವೂ ಸಹ ದಾಟಲು ಬಹಳ ಕಷ್ಟವಾದುದು ಎಂದು ಆ ಕಾಲಕ್ಕೆ ಯೋಗ್ಯವಾದ ಮಾತನ್ನು ಆಡಿದನು.
ಮಾರ್ಕಂಡೇಯಃ
ತತ್ರಾನ್ಯೇ ವ್ಯಾಹರಂತಿ ಸ್ಮ ವಾನರಾ ಬಹುಮಾನಿನಃ |
ಸಮರ್ಥಾ ಲಂಘನೇ ಸಿಂಧೋರ್ನ ತು ತತ್ಕೃತ್ಸ್ನಕಾರಕಮ್ ॥25॥
ಮಾರ್ಕಂಡೇಯ ಆಗ ಆತ್ಮಾಭಿಮಾನವುಳ್ಳ ಉಳಿದ ಅನೇಕ ಕಪಿಗಳು ಸಮುದ್ರವನ್ನು ದಾಟುವುದಕ್ಕೆ ಸಮರ್ಥರಾದರೂ ಪೂರ್ಣವಾಗಿ ದಾಟಲಾರೆವು ಎಂದು ಮಾತನಾಡುತ್ತಿದ್ದರು.
ಕೇಚಿನ್ನೌಭಿರ್ವ್ಯವಸ್ಯಂತಿ ಕೇಚಿಚ್ಚ ವಿವಿಧೈಃ ಪ್ಲವೈಃ |
ನೇತಿ ರಾಮಸ್ತು ತಾನ್ ಸರ್ವಾನ್ ಸಾಂತ್ವಯನ್ ಪ್ರತ್ಯಭಾಷತ ॥26॥
ಕೆಲವರು ಹಡಗುಗಳಿಂದ ದಾಟುವುದು ಎಂದು ನಿರ್ಧರಿಸಿದರು. ಇನ್ನು ಕೆಲವರು ಅನೇಕ ದೋಣಿಗಳಿಂದ ಎಂದು ನಿರ್ಧರಿಸಿದರು. ರಾಮನು ಅದು ಸರಿಯಲ್ಲ ಎಂದು ಹೇಳಿ ಆ ಎಲ್ಲ ಕಪಿಗಳಿಗೂ ಸಮಾಧಾನವನ್ನು ಮಾಡಿ ಮಾತನಾಡಿದನು.
ಶತಯೋಜನವಿಸ್ತಾರಂ ನ ಶಕ್ತಾಃ ಸರ್ವವಾನರಾಃ |
ಕ್ರಾಂತುಂ ತೋಯನಿಧಿಂ ವೀರಾ ನೈಷಾ ವೋ ನೈಷ್ಠಿಕೀ ಮತಿಃ ॥27॥
ನೂರು ಯೋಜನ ವಿಸ್ತಾರವಾದ ಈ ಸಮುದ್ರವನ್ನು ದಾಟಲು ಎಲ್ಲಾ ಕಪಿಗಳೂ ಸಮರ್ಥರಲ್ಲ. ಎಲೈ ವೀರರೇ, ಸಮುದ್ರವನ್ನು ದಾಟುವ ವಿಷಯದಲ್ಲಿ ನಿಮ್ಮ ಅಭಿಪ್ರಾಯವು ಸರಿಯಲ್ಲ.
ನಾವೋ ನ ಸಂತಿ ಸೇನಾಯಾ ಬಹ್ವ್ಯಸ್ತಾರಯಿತುಂ ತಥಾ |
ವಣಿಜಾಮುಪಘಾತಂ ಚ ಕಥಮಸ್ಮಾದ್ವಿಧಶ್ಚರೇತ್ ॥28॥
ಸೈನ್ಯವನ್ನು ದಾಟಿಸಲು ಅನೇಕ ಹಡಗುಗಳೂ ಇಲ್ಲ. ಇನ್ನು ಅನೇಕ ದೋಣಿಗಳಲ್ಲಿ ಹೋಗಿ ವರ್ತಕರಿಗೆ ನಮ್ಮಂತಹವರು ಹೇಗೆ ತೊಂದರೆಯನ್ನು ಮಾಡುವುದು ಸಾಧ್ಯ?
ವಿಸ್ತೀರ್ಣಂ ಚೈವ ನಃ ಸೈನ್ಯಂ ಹನ್ಯಾಚ್ಛಿದ್ರೇಣ ವೈ ಪರಃ |
ಪ್ಲವೋಡುಪಪ್ರತಾರಶ್ಚ ನೈವಾತ್ರ ಮಮ ರೋಚತೇ॥29॥
ನಮ್ಮ ಸೈನ್ಯವು ಬಹಳ ವಿಸ್ತಾರವಾದುದು. ಸ್ವಲ್ಪ ಅವಕಾಶವು ದೊರೆತರೂ ಶತ್ರುವು ಸಂಹಾರ ಮಾಡಬಹುದು. ಆದ್ದರಿಂದ ಹಡಗು

ಮತ್ತು ದೋಣಿಗಳಲ್ಲಿ ಸಮುದ್ರವನ್ನು ದಾಟುವುದು ನನಗೆ ಇಷ್ಟವಿಲ್ಲ.
ಅಹಂ ತ್ವಿಮಂ ಜಲನಿಧಿಂ ಸಮಾರಪ್ಸ್ಯಾಮ್ಯುಪಾಯತಃ |
ಪ್ರತಿಶೇಷ್ಯಾಮ್ಯುಪವಸನ್ ದರ್ಶಯಿಷ್ಯತಿ ಮಾಂ ತತಃ ॥30॥
ನಾನು ಉಪಾಯದಿಂದ ಈ ಜಲನಿಧಿಯ ಬಳಿಯಲ್ಲಿ ಉಪವಾಸವನ್ನು ಮಾಡಿ ಶಯನವನ್ನು ಮಾಡುತ್ತೇನೆ. ಆಗ ಸಮುದ್ರರಾಜನು ತನ್ನ ದರ್ಶನವನ್ನು ನೀಡುವನು.
ನ ಚೇದ್ ದರ್ಶಯಿತಾ ಮಾರ್ಗಂ ಧಕ್ಷ್ಯಾಮ್ಯೇನಮಹಂ ತತಃ |
ಮಹಾಸ್ತ್ರೈರಪ್ರತಿಹತೈರತ್ಯಗ್ನಿಪವನೋಜ್ಜ್ವಲೈಃ ॥31॥
ಸಮುದ್ರರಾಜನು ದಾರಿಯನ್ನು ಕೊಡದಿದ್ದರೆ ಅವನನ್ನು ನಾನು ಆಗ್ನೇಯಾಸ್ತ್ರ, ವಾಯವ್ಯಾಸ್ತ್ರಗಳಿಗಿಂತಲೂ ಉಗ್ರವಾದ, ನಿವಾರಣೆ ಮಾಡಲು ಸಾಧ್ಯವಿಲ್ಲದ ಮಹಾಸ್ತ್ರಗಳಿಂದ ಸುಟ್ಟುಬಿಡುತ್ತೇನೆ.
ಮಾರ್ಕಂಡೇಯಃ
ಇತ್ಯುಕತ್ವ ಸಹ ಸೌಮಿತ್ರಿರುಪಸ್ಪೃಶ್ಯಾಥ ರಾಘವಃ |
ಪ್ರತಿಶಿಶ್ಯೇ ಜಲನಿಧಿಂ ವಿಧಿವತ್ ಕುಶಸಂಸ್ತರೇ ॥32॥
ಮಾರ್ಕಂಡೇಯರು ಹೀಗೆ ಹೇಳಿ ರಾಮನು ಸೌಮಿತ್ರಿಯ ಜೊತೆಯಲ್ಲಿ ಜಲವನ್ನು ಸ್ಪರ್ಶಿಸಿ ಶುದ್ಧನಾಗಿ ವಿಧಿವತ್ತಾಗಿ ದರ್ಭೆಯನ್ನು ಹರಡಿ ಸಮುದ್ರದ ಎದುರಿನಲ್ಲಿ ಮಲಗಿದನು.
ಸಾಗರಸ್ತು ತತಃ ಸ್ವಪ್ನೇ ದರ್ಶಯಾಮಾಸ ರಾಘವಮ್ |
ದೇವೋ ನದನದೀಭರ್ತಾ ಶ್ರೀಮಾನ್ ಯಾದೋಗಣೈರ್ವೃತಃ ॥33॥
ನದನದೀಪತಿಯಾದ ಕಾಂತಿಯುಕ್ತನಾದ ಯಾದೋಗಣಗಳಿಂದ ವೃತನಾದ ಸಮುದ್ರರಾಜನಾದ ವರುಣದೇವನು ರಾಮನಿಗೆ ತನ್ನ ದರ್ಶನವನ್ನು ನೀಡಿದನು. (ಒಬ್ಬನೇ ನೋಡುವ ಸ್ವಪ್ನದಂತೆ ರಾಮನೊಬ್ಬನೇ ನೋಡಿದುದರಿಂದ ಸ್ವಪ್ನದಲ್ಲಿ ಎಂದು ಹೇಳಿದ್ದಾರೆ. ಆದರೆ ಇದು ಸ್ವಪ್ನವಲ್ಲ - ವಾದಿರಾಜರು).
ಕೌಸಲ್ಯಾಮಾತರಿತ್ಯೇವಮಾಭಾಷ್ಯ ಮಧುರಂ ವಚಃ |
ಇದಮಿತ್ಯಾಹ ರತ್ನಾನಾಮಾಕರೈಃ ಶತಶೋ ವೃತಃ ॥34॥
ನೂರಾರು ಸಂಖ್ಯೆಯಲ್ಲಿ ರತ್ನಕೋಶಗಳಿಂದ ವೃತನಾದ ವರುಣನು ಮಧುರವಾದ ಮಾತುಗಳಿಂದ ಕೌಸಲ್ಯಾಪುತ್ರನೆಂದು ಸಂಬೋಧಿಸಿ ಮಾತನಾಡಿದನು.
ಬ್ರೂಹಿ ಕಿಂ ತೇ ಕರೋಮ್ಯತ್ರ ಸಾಹಾಯ್ಯಂ ಪುರುಷರ್ಷಭ |
ಐಕ್ಷ್ವಾಕೋರಸ್ಮಿ ತೇ ಜ್ಞಾತಿರಿತಿ ರಾಮಸ್ತಮಬ್ರವೀತ್ |
ಏವಮುಕ್ತಃ ಸಮುದ್ರೇಣ ರಾಮೋ ವಾಕ್ಯಮಥಾಬ್ರವೀತ್ ॥35॥
ಎಲೈ ಪುರುಷರ್ಷಭನೇ, ಏನು ಸಹಾಯವನ್ನು ಮಾಡಲಿ ಎಂದು ಹೇಳು. ಸಗರನ ಪುತ್ರನಿಂದ ನಿರ್ಮಿತವಾಗಿರುವುದರಿಂದ ನಾನೂ ಸಹ ಇಕ್ಷ್ವಾಕುವಂಶಕ್ಕೆ ಸೇರಿದ ನಿನ್ನ ಜ್ಞಾತಿ ಎಂದು ಸಮುದ್ರರಾಜನು ಹೇಳಿದಾಗ ರಾಮನು ಅವನನ್ನು ಕುರಿತು ಮಾತನಾಡಿದನು.
ಮಾರ್ಗಮಿಚ್ಛಾಮಿ ಸೈನ್ಯಸ್ಯ ದತ್ತಂ ನದನದೀಪತೇ ॥36॥
ಯೇನ ಗತ್ವಾ ದಶಗ್ರೀವಂ ಹನ್ಯಾಂ ಪೌಲಸ್ತ್ಯಪಾಂಸನಮ್ |
ರಾಕ್ಷಸಂ ಸಾನುಬಂಧಂ ತು ಮಮ ಭಾರ್ಯಾಪಹಾರಿಣಮ್ ॥37॥
ನಾನು ಯಾವ ಮಾರ್ಗದಿಂದ ಹೋಗಿ ಪೌಲಸ್ತ್ಯಕುಲಪಾಂಸನನಾದ ರಾಕ್ಷಸನಾದ ನನ್ನ ಪತ್ನಿಯನ್ನು ಅಪಹರಿಸಿದ ದಶಗ್ರೀವನನ್ನು ಅವನ ಪರಿವಾರ ಸಹಿತವಾಗಿ ಕೊಲ್ಲುವೆನೋ, ಎಲೈ ನದನದೀಪತಿಯೇ, ಅಂತಹ ಮಾರ್ಗವನ್ನು ನನ್ನ ಸೈನ್ಯಕ್ಕೆ ನೀನು ಕೊಡಬೇಕೆಂದು ನಾನು ಇಚ್ಛಿಸುತ್ತೇನೆ.
ಯದ್ಯೇವಂ ಯಾಚತೋ ಮಾರ್ಗಂ ನ ಪ್ರದಾಸ್ಯತಿ ಮೇ ಭವಾನ್ |
ಶರೈಸ್ತತ್ವಂ ಶೋಷಯಿಷ್ಯಾಮಿ ದಿವ್ಯಾಸ್ತ್ರಪ್ರತಿಮಂತ್ರಿತೈಃ ॥38॥
ನಾನು ಯಾಚನೆ ಮಾಡಿದರೂ ನೀನು ಮಾರ್ಗವನ್ನು ಕೊಡದಿದ್ದರೆ ದಿವ್ಯಾಸ್ತ್ರ ಮಂತ್ರಿತವಾದ ಬಾಣಗಳಿಂದ ನಿನ್ನನ್ನು ಶೋಷಿಸುತ್ತೇನೆ.
ಮಾರ್ಕಂಡೇಯಃ
ಇತ್ಯೇವಂ ಬ್ರುವತಃ ಶ್ರುತ್ವಾ ರಾಮಸ್ಯ ವರುಣಾಲಯಃ |
ಉವಾಚ ವ್ಯಥಿತೋ ವಾಕ್ಯಮಿತಿ ಬದ್ಧಾಂಜಲಿಃ ಸ್ಥಿತಃ ॥39॥
ಮಾರ್ಕಂಡೇಯರು ಹೀಗೆ ಹೇಳುತ್ತಿರುವ ರಾಮನ ಮಾತುಗಳನ್ನು ಕೇಳಿ ವ್ಯಥೆಗೊಂಡ ಸಮುದ್ರರಾಜನು ಕೈಗಳನ್ನು ಮುಗಿದು ಮಾತನಾಡಿದನು.
ನೇಚ್ಛಾಮಿ ಪ್ರತಿಘಾತಂ ತೇ ನಾಸ್ತಿ ವಿಘ್ನಕರಸ್ತವ |
ಶೃಣು ಚೇದಂ ವಚೋ ರಾಮ ಶ್ರುತ್ವಾ ಕರ್ತವ್ಯಮಾಚರ ॥40॥
ನಾನು ನಿನಗೆ ಪ್ರತಿಘಾತವನ್ನು ಮಾಡಲು ಬಯಸುವುದಿಲ್ಲ ಮತ್ತು ನಿನಗೆ ವಿಘ್ನವನ್ನು ಉಂಟುಮಾಡುವವನೂ ಅಲ್ಲ. ರಾಮನೇ, ನನ್ನ ಮಾತನ್ನು ಕೇಳಿ ಅನಂತರ ಮಾಡಬೇಕಾದ ಕಾರ್ಯವನ್ನು ಮಾಡು.
ಯದಿ ದಾಸ್ಯಾಮಿ ತೇ ಮಾರ್ಗಂ ಸೈನ್ಯಸ್ಯ ವ್ರಜತೋಽಽಜ್ಞಯಾ |
ಅನ್ಯೇಽಪ್ಯಾಜ್ಞಾಪಯಿಷ್ಯಂತಿ ಮಾಮೇವಂ ಧನುಷೋ ಬಲಾತ್ ॥41॥
ನಾನು ನಿನ್ನ ಆಜ್ಞೆಯಂತೆ ಇಲ್ಲಿಂದ ಹೊರಡುತ್ತಿರುವ ನಿನ್ನ ಸೈನ್ಯಕ್ಕೆ ಮಾರ್ಗವನ್ನು ನೀಡಿದರೆ ಬೇರೆಯವರೂ ಸಹ ಧನುಸ್ಸಿನ

ಬಲದಿಂದ ನನಗೆ ಹೀಗೆ ಆಜ್ಞೆಯನ್ನು ಮಾಡುವರು.
ಅಸ್ತಿ ತ್ವತ್ರ ನಳೋ ನಾಮ ವಾನರಃ ಶಿಲ್ಪಿಸಮ್ಮತಃ |
ತ್ವಷ್ಟುರ್ದೇವಸ್ಯ ತನಯೋ ಬಲವಾನ್ ವಿಶ್ವಕರ್ಮಣಃ ॥42॥
ಈ ವಾನರ ಸಮೂಹದಲ್ಲಿ ನಳನೆಂಬ ಶಿಲ್ಪಿಗಳಿಗೂ ಸಮ್ಮತನಾದವನು ಒಬ್ಬನಿದ್ದಾನೆ. ಅವನು ತ್ವಷ್ಟೃವಿನ ಮಗ ಮತ್ತು ವಿಶ್ವಕರ್ಮನಿಗಿಂತಲೂ ಬಲಿಷ್ಠನಾದವನು.
ಸ ಯತ್ಕಾಷ್ಠಂ ತೃಣಂ ವಾಪಿ ಶಿಲಾಂ ವಾ ಕ್ಷೇಪ್ಸ್ಯತೇ ಮಯಿ |
ಸರ್ವಂ ತದ್ಧಾರಯಿಷ್ಯಾಮಿ ಸ ತೇ ಸೇತುರ್ಭವಿಷ್ಯತಿ ॥43॥
ಅವನು ನನ್ನಲ್ಲಿ ಯಾವ ಕಾಷ್ಠವನ್ನಾಗಲೀ, ತೃಣವನ್ನಾಗಲೀ ಅಥವಾ ಶಿಲೆಯನ್ನಾಗಲೀ ಹಾಕುತ್ತಾನೆಯೋ ಅದನ್ನು ನಾನು ಹಾಗೆಯೇ ಹಿಡಿದುಕೊಳ್ಳುವೆನು. ಅದು ನಿನಗೆ ಸೇತುವೆಯಾಗುವುದು.
ಮಾರ್ಕಂಡೇಯಃ
ಇತ್ಯುಕ್ತ್ವಾಂತರ್ಹಿತೇ ತಸ್ಮಿನ್ ರಾಮೋ ನಳಮುವಾಚ ಹ |
ಕುರು ಸೇತುಂ ಸಮುದ್ರೇ ತ್ವಂ ಶಕ್ತೋ ಹ್ಯಸಿ ಮತೋ ಮಮ ॥44॥
ಮಾರ್ಕಂಡೇಯರು ಹೀಗೆ ಹೇಳಿ ಸಮುದ್ರರಾಜನು ಅಂತರ್ಧಾನವನ್ನು ಹೊಂದುತ್ತಿರಲು ರಾಮನು ನಳನನ್ನು ಕುರಿತು ಸಮುದ್ರದಲ್ಲಿ ಸೇತುವೆಯನ್ನು ನಿರ್ಮಾಣ ಮಾಡು. ನೀನು ಅದನ್ನು ಮಾಡಲು ಸಮರ್ಥನಾಗಿದ್ದೀಯೆ ಎಂದು ನನ್ನ ಅಭಿಪ್ರಾಯ ಎಂದು ಹೇಳಿದನು.
ತೇನೋಪಾಯೇನ ಕಾಕುಸ್ಥಃ ಸೇತುಬಂಧಮಕಾರಯತ್|
ದಶಯೋಜನವಿಸ್ತಾರಮಾಯತಂ ಶತಯೋಜನಬ್॥45॥
ಆ ಉಪಾಯದಿಂದ ಕಾಕುಸ್ಥನಾದ ರಾಮನು ಹತ್ತು ಯೋಜನ ಅಗಲವಾದ, ನೂರುಯೋಜನ ಉದ್ದವಾದ ಸೇತುವೆಯನ್ನು ಕಟ್ಟಿಸಿದನು.
ನಳಸೇತುರಿತಿ ಖ್ಯಾತೋ ಯೋಽದ್ಯಾಪಿ ಪ್ರಥಿತೋ ಭುವಿ |
ರಾಮಸ್ಯಾಜ್ಞಾಂ ಪುರಸ್ಕೃತ್ಯ ಧಾರ್ಯತೇ ಗಿರಿಸನ್ನಿಭಃ ॥46॥
ಆ ಸೇತುವೆಯು ನಳಸೇತುವೆ ಎಂದು ಇಂದಿಗೂ ಭೂಮಿಯಲ್ಲಿ ಪ್ರಖ್ಯಾತವಾಗಿದೆ. ರಾಮನ ಆಜ್ಞೆಯಂತೆ ಸಮುದ್ರರಾಜನು ನೀರಿನಲ್ಲಿ ಮುಳುಗಿ ಹೋಗದಂತೆ ಆ ಪರ್ವತ ಸದೃಶವಾದ ಸೇತುವೆಯನ್ನು ಎತ್ತಿಹಿಡಿದಿದ್ದಾನೆ.
ತತ್ರಸ್ಥಂ ಸ ತು ಧರ್ಮಾತ್ಮಾ ಸಮಾಗಚ್ಛದ್ ವಿಭೀಷಣಃ |
ಭ್ರಾತಾ ವೈ ರಾಕ್ಷಸೇಂದ್ರಸ್ಯ ಚತುರ್ಭಿಃ ಸಚಿವೈಃ ಸಹ ॥47॥
ರಾಮನು ಅಲ್ಲಿ ಇರುತ್ತಿರಲು ರಾಕ್ಷಸೇಂದ್ರನ ತಮ್ಮನಾದ ಧರ್ಮಾತ್ಮನಾದ ವಿಭೀಷಣನು ನಾಲ್ಕು ಜನ ಸಚಿವರ ಜೊತೆಯಲ್ಲಿ ಅಲ್ಲಿಗೆ ಬಂದನು.
ಪ್ರತಿಜಗ್ರಾಹ ರಾಮಸ್ತಂ ಸ್ವಾಗತೇನ ಮಹಾಮನಾಃ |
ಸುಗ್ರೀವಸ್ಯ ತು ಶಂಕಾಽಭೂತ್ ಪ್ರಣಿಧಿಃ ಸ್ಯಾದಿತಿ ಸ್ಮ ಹ ॥48॥
ಉದಾರ ಮನಸ್ಸುಳ್ಳ ರಾಮನು ಅವನಿಗೆ ಸ್ವಾಗತವನ್ನು ಕೋರಿ ಸ್ವೀಕರಿಸಿದನು. ಸುಗ್ರೀವನ ಮನಸ್ಸಿನಲ್ಲಿ ಮಾತ್ರ ಇವನು ಶತ್ರುಪಕ್ಷದಿಂದ ಬಂದ ಗೂಢಚಾರನಿರಬಹುದು ಎಂಬ ಸಂಶಯವಿದ್ದಿತು.
ರಾಘವಃ ಸತ್ಯಚೇಷ್ಟಾಭಿಃ ಸಮ್ಯಕ್ಚ ಚರಿತೇಂಗಿತೈಃ |
ಯದಾ ತತ್ತ್ವೇನ ತುಷ್ಟೋಽಭೂತ್ ತತ ಏನಮಪೂಜಯತ್ ॥49॥
ರಾಘವನು ಅವನ ಸತ್ಯವಾದ ಚೇಷ್ಟೆಗಳನ್ನು, ಅವನ ಶುದ್ಧವಾದ ಚರಿತ್ರೆಯನ್ನು ಮತ್ತು ಇಂಗಿತಗಳನ್ನು ಯಥಾರ್ಥವಾಗಿ ತಿಳಿದು ಸಂತುಷ್ಟನಾಗಿ ಅವನನ್ನು ಸತ್ಕರಿಸಿದನು.
ಸರ್ವರಾಕ್ಷಸರಾಜ್ಯೇ ಚಾಪ್ಯಭ್ಯಷಿಂಚದ್ ವಿಭೀಷಣಮ್ |
ಚಕ್ರೇ ಚ ಮಂತ್ರಿಪ್ರವರಂ ಸುಹೃದಂ ಲಕ್ಷ್ಮಣಸ್ಯ ಚ ॥50॥
ಅಲ್ಲದೇ ಸರ್ವರಾಕ್ಷಸ ರಾಜ್ಯದ ಅಧಿಪತಿಯನ್ನಾಗಿ ಅವನಿಗೆ ಅಭಿಷೇಕವನ್ನೂ ಮಾಡಿದನು ಮತ್ತು ತನ್ನ ಮಂತ್ರಿಶ್ರೇಷ್ಠನನ್ನಾಗಿಯೂ ಮತ್ತು ಲಕ್ಷ್ಮಣನ ಸ್ನೇಹಿತನನ್ನಾಗಿಯೂ ಮಾಡಿಕೊಂಡನು.
ವಿಭೀಷಣಮತೇ ಚೈವ ಸೋಽತ್ಯಕ್ರಾಮತ್ ಮಹಾರ್ಣವಮ್ |
ಸಸೈನ್ಯಃ ಸೇತುನಾ ತೇನ ಮಾಸೇನೈವ ನರಾಧಿಪ ॥51॥
ಎಲೈ ನರಾಧಿಪನೇ, ಸುಗ್ರೀವನ ಅಭಿಪ್ರಾಯದಂತೆ ಅವನು ಸೈನ್ಯ ಸಹಿತನಾಗಿ ಆ ಸೇತುವೆಯ ಮೂಲಕ ಒಂದುತಿಂಗಳಿನಲ್ಲಿ ಆ ಮಹಾಸಮುದ್ರವನ್ನು ದಾಟಿದನು.
ತತೋ ಗತ್ವಾ ಸಮಾಸಾದ್ಯ ಲಂಕೋದ್ಯಾನಾನ್ಯನೇಕಶಃ |
ಭೇದಯಾಮಾಸ ಕಪಿಭಿರ್ಮಹಾಂತಿ ಚ ಬಹೂನಿ ಚ ॥52॥
ಸೇತುವೆಯ ಸಹಾಯದಿಂದ ಲಂಕೆಯನ್ನು ಪ್ರವೇಶಿಸಿ ಕಪಿಗಳ ಸಹಾಯದಿಂದ ಲಂಕೆಯ ಅನೇಕ ದೊಡ್ಡ ಉದ್ಯಾನವನಗಳನ್ನು ನಾಶಮಾಡಿಸಿದನು.
ತತ್ರಾಸ್ತಾಂ ರಾವಣಾಮಾತ್ಯೌ ಮಂತ್ರಿಣೌ ಶುಕಸಾರಣೌ |
ಚರೌ ವಾನರರೂಪೇಣ ತೌ ಜಗ್ರಾಹ ವಿಭೀಷಣಃ |
ದೃಷ್ಟ್ವಂ ಸೇನಾಮನುಪ್ರಾಪ್ತೌ ರಾವಣಪ್ರಿಯಕಾರಿಣೌ ॥53॥

ಅಲ್ಲಿ ರಾವಣನ ಸಚಿವರಾದ ಶುಕಸಾರಣರೆಂಬ ರಾವಣಪ್ರಿಯಕಾರಿಗಳಾದ ಇಬ್ಬರು ರಾಮನ ಸೈನ್ಯವನ್ನು ನೋಡಲು ಕಪಿಗಳ ರೂಪವನ್ನು ಧರಿಸಿ ಅಲ್ಲಿಗೆ ಬಂದಿದ್ದರು. ಅವರನ್ನು ವಿಭೀಷಣನು ಗುರುತಿಸಿ ಹಿಡಿದನು.
ಪ್ರತಿಪನ್ನೌ ಯದಾ ರೂಪಂ ರಾಕ್ಷಸಂ ತೌ ನಿಶಾಚರೌ |
ದರ್ಶಯಿತ್ವಾ ತತಃ ಸೈನ್ಯಂ ರಾಮಃ ಪಶ್ಚಾದವಾಸೃಜತ್ ॥54॥
ತಮ್ಮ ನಿಜಸ್ವರೂಪವು ತಿಳಿದ ಕೂಡಲೆ ಆ ರಾಕ್ಷಸರು ವಾನರರೂಪವನ್ನು ಬಿಟ್ಟು ತಮ್ಮ ರಾಕ್ಷಸರ ರೂಪವನ್ನು ತೋರಿಸಿದರು. ಆಗ ರಾಮನು ಅವರನ್ನು ಅವರ ಸೈನ್ಯಕ್ಕೆ ಹಿಂದಕ್ಕೆ ಕಳುಹಿಸಿದನು.
ನಿವೇಶ್ಯೋಪವನೇ ಸೈನ್ಯಂ ತತ್ಪುರಃ ಪ್ರಾಜ್ಞವಾನರಮ್ |
ಪ್ರೇಷಯಾಮಾಸ ದೌತ್ಯೇನ ರಾವಣಸ್ಯ ತತೋಽಂಗದಮ್ ॥55॥
ರಾಮನು ತನ್ನ ಸೈನ್ಯವನ್ನು ಲಂಕೆಯ ಉಪವನದಲ್ಲಿ ನಿಲ್ಲಿಸಿ ಶ್ರೇಷ್ಠವಾನರನಾದ ಅಂಗದನನ್ನು ರಾವಣನ ಸಮೀಪಕ್ಕೆ ದೂತನನ್ನಾಗಿ ಮೊದಲು ಕಳುಹಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ದ್ವಿಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಖ್ಯಾನಪರ್ವಣಿ ಸೇತುಬಂಧನಂ ನಾಮ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ಮೂರನೆಯ ಅಧ್ಯಾಯ
ಅಂಗದನಿಂದ ರಾವಣನಿಗೆ ರಾಮಸಂದೇಶವನ್ನು ತಲುಪಿಸಿ ಪ್ರತಿನಿವೃತ್ತಿ. ಯುದ್ಧಪ್ರಾರಂಭ. ರಾಮನಿಂದ ಸೈನ್ಯಾಪಹಾರ.
ಮಾರ್ಕಂಡೇಯಃ
ಪ್ರಭೂತಾನ್ನೋದಕೇ ತಸ್ಮಿನ್ ಬಹುಮೂಲಫಲೇ ವನೇ |
ಸೇನಾಂ ನಿವೇಶ್ಯ ಕಾಕುತ್ಸ್ಥೋ ವಿಧಿವತ್ ಪರ್ಯರಕ್ಷತ ॥1॥
ಬಹುಮೂಲಫಲಗಳು, ಅನ್ನೋದಕಗಳು ಇದ್ದ ಆ ಉಪವನದಲ್ಲಿ ರಾಮನು ಸೈನ್ಯವನ್ನು ನಿಲ್ಲಿಸಿ ವಿಧಿಪ್ರಕಾರದಿಂದ ರಕ್ಷಣೆಯನ್ನು ಮಾಡಿದನು.
ರಾವಣಃ ಸಂವಿಧಂ ಚಕ್ರೇ ಲಂಕಾಯಾಂ ಶಾಸ್ತ್ರನಿರ್ಮಿತಾಮ್ |
ಪ್ರಕೃತ್ಯೈವ ದುರಾಧರ್ಷಾ ದೃಢಪ್ರಾಕಾರತೋರಣಾ ॥2॥
ಸ್ವಭಾವದಿಂದಲೇ ದುರಾದರ್ಷನಾದ ರಾವಣನು ತನ್ನ ಆಜ್ಞೆಯಿಂದ ಲಂಕೆಯಲ್ಲಿ ದೃಢವಾದ ಕೋಟೆ ತೋರಣಗಳು ಮೊದಲಾದ ವ್ಯವಸ್ಥೆಯನ್ನು ಮಾಡಿದನು.
ಅಗಾಧತೋಯಾಃ ಪರಿಖಾ ಮೀನನಕ್ರಸಮಾಕುಲಾಃ |
ಬಭೂವುಃ ಸಪ್ತ ದುರ್ಧರ್ಷಾಃ ಖಾದಿರೈಃ ಶಂಕುಭಿಶ್ಚಿತಾಃ ॥3॥
ಅಗಾಧವಾದ ನೀರುಳ್ಳ ಮೀನುಮೊಸಳೆಗಳಿಂದ ನಿಬಿಡವಾದ ಖದಿರವೃಕ್ಷದ ಗೂಟಗಳನ್ನು ನೆಟ್ಟಿರುವ ದಾಟಲು ಅಸಾಧ್ಯವಾದ ಏಳು ಕಂದಕಗಳನ್ನು ವರ್ತುಲಾಕಾರವಾಗಿ ನಿರ್ಮಾಣ ಮಾಡಿಸಿದನು.
ಕರ್ಣಾಟ್ಟಯಂತ್ರೈರ್ದುರ್ಧರ್ಷಾ ಬಭೂವುಃ ಸಗುಲೋಪಲಾಃ |
ಸಾಶೀವಿಷಘಟಾಯೋಧಾಃ ಸಸರ್ಜರಸಪಾಂಸವಃ ॥4॥
ಆ ಕೋಟೆಗಳು ತನ್ನ ಯೋಧರಿಗೆ ರಕ್ಷಣೆಯನ್ನು ಕೊಡುವ, ಪರಯೋಧರಿಂದ ರಕ್ಷಿಸುವ ವರ್ತುಲಾಕಾರ ಗೋಪುರಗಳಿಂದಲೂ, ಗಟ್ಟಿಯಾದ ವೃಕ್ಷರಸಗಳಿಂದಲೂ, ಸರ್ಜರಸವನ್ನು ಸೇರಿಸಿದ ಮಣ್ಣಿನಿಂದಲೂ ಮಾಡಲ್ಪಟ್ಟು ಸರ್ಪಗಳ ವಿಷದಂತೆ ಘೋರರಾದ ಸೈನಿಕರಿಂದ ಕೂಡಿದ್ದವು.
ಮುಸಲಾಲಾತನಾರಾಚತೋಮರಾಸಿಪರಶ್ವಧೈಃ |
ಅನ್ವಿತಾಶ್ಚ ಶತಘ್ನೀಭಿಃ ಸಮಧೂಚ್ಛಿಷ್ಟಮುದ್ಗರಾಃ ॥5॥
ಆ ಕೋಟೆಗಳಲ್ಲಿ ಮುಸಲ, ಅಲಾತ, ನಾರಾಚ, ತೋಮರ, ಅಸಿ, ಪರಶು ಮೊದಲಾದ ಆಯುಧಗಳು, ಶತಘ್ನೀ ಮೊದಲಾದ ಯಂತ್ರಗಳು ಜೇನುಮೇಣಗಳಿಂದ ಅಂಟಿಸಿದ ಮುದ್ಗರಗಳು ತುಂಬಿದ್ದವು.
ಪುರದ್ವಾರೇಷು ಸರ್ವೇಷು ಗುಲ್ಮಾಃ ಸ್ಥಾವರಜಂಗಮಾಃ |
ಬಭೂವುಃ ಪತ್ತಿಬಹುಲಾಃ ಪ್ರಭೂತಗಜವಾಜಿನಃ ॥6॥
ಪಟ್ಟಣದ ಎಲ್ಲಾ ದ್ವಾರಗಳಲ್ಲಿಯೂ ಅನೇಕ ಪದಾತಿಗಳನ್ನುಳ್ಳ, ಅನೇಕ ಗಜಾಶ್ವಗಳನ್ನುಳ್ಳ, ಅಲ್ಲಿಯೇ ನಿಂತು ಯುದ್ಧಮಾಡುವ ಮತ್ತು ಚಲಿಸುವ ಸೈನ್ಯದ ತುಕಡಿಗಳು ಇದ್ದವು.
ಅಂಗದಸ್ತ್ವಥ ಲಂಕಾಯಾ ದ್ವಾರದೇಶಮುಪಾಗತಃ |
ವಿದಿತೋ ರಾಕ್ಷಸೇಂದ್ರಸ್ಯ ಪ್ರವಿವೇಶ ಗತವ್ಯಥಃ ॥7॥
ಅನಂತರ ಅಂಗದನು ರಾಕ್ಷಸೇಂದ್ರನಾದ ರಾವಣನಿಗೆ ತಿಳಿಯುವಂತೆ ಲಂಕಾಪಟ್ಟಣದ ಕೋಟೆ ಬಾಗಿಲಿನ ಬಳಿಗೆ ಬಂದು ಯಾವ ವ್ಯಥೆಯೂ ಇಲ್ಲದೆ ನಗರವನ್ನು ಪ್ರವೇಶಿಸಿದನು.
ಮಧ್ಯೇ ರಾಕ್ಷಸಕೋಟೀನಾಂ ಬಹ್ವೀನಾಂ ಸುಮಹಾಬಲಃ |
ಶುಶುಭೇ ಮೇಘಮಾಲಾಭಿರಾದಿತ್ಯ ಇವ ಸಂವೃತಃ ॥8॥

ಅನೇಕ ಕೋಟಿ ರಾಕ್ಷಸರ ಮಧ್ಯದಲ್ಲಿ ಮಹಾಬಲಿಷ್ಠನಾದ ರಾವಣನು ಮೇಘಮಾಲೆಗಳ ಮಧ್ಯದಲ್ಲಿರುವ ಸೂರ್ಯನಂತೆ ಶೋಭಿಸುತ್ತಿದ್ದನು.
ಸ ಸಮಾಸಾದ್ಯ ಪೌಲಸ್ತ್ಯಮಮಾತ್ಯೈರಭಿಸಂವೃತಮ್ |
ರಾಮಸಂದೇಶಮಾಮಂತ್ರ್ಯ ವಾಗ್ಮೀ ವಕ್ತುಂ ಪ್ರಚಕ್ರಮೇ |
ಆಹ ತ್ವಾಂ ರಾಘವೋ ರಾಜನ್ ಕೋಸಲೇಂದ್ರೋ ಮಹಾಯಶಾಃ ॥9॥
ಪ್ರಾಪ್ತಕಾಲಮಿದಂ ವಾಕ್ಯಂ ತದಾದತ್ಸ್ವ ಕುರುಷ್ವ ಚ ॥10॥
ವಾಗ್ಮಿಯಾದ ಅವನು ಅಮಾತ್ಯರಿಂದ ಪರಿವೃತನಾದ ಪೌಲಸ್ತ್ಯಕುಲೋತ್ಪನ್ನನಾದ ರಾವಣನನ್ನು ಸಮೀಪಿಸಿ ಅವನ ಅನುಮತಿಯನ್ನು ಪಡೆದು ರಾಮನ ಸಂದೇಶವನ್ನು ಹೇಳಲು ಪ್ರಾರಂಭಿಸಿದನು. ಎಲೈ ರಾಜನೇ, ಕೋಸಲಾಧಿಪತಿಯಾದ ಮಹಾಕೀರ್ತಿಶಾಲಿಯಾದ ರಾಮನು ಈ ಸಂದರ್ಭಕ್ಕೆ ಉಚಿತವಾದ ಮಾತುಗಳನ್ನು ನಿನಗೆ ಹೇಳಿ ಕಳುಹಿಸಿದ್ದಾನೆ. ಆ ಮಾತುಗಳನ್ನು ಸ್ವೀಕರಿಸಿ ಅದರಂತೆ ನಡೆದುಕೋ.
ಅಕೃತಾತ್ಮಾನಮಾಸಾದ್ಯ ರಾಜಾನಮನಯೇ ರತಮ್ |
ವಿನಶ್ಯಂತ್ಯನಯಾವಿಷ್ಟಾ ದೇಶಾಶ್ಚ ನಗರಾಣಿ ಚ ॥11॥
ಇಂದ್ರಿಯ ಜಯವಿಲ್ಲದೆ ದುರ್ನೀತಿಯಲ್ಲಿ ರತನಾದ ರಾಜನನ್ನು ಅನುಸರಿಸುವ ದೇಶಗಳು ಮತ್ತು ನಗರಗಳು ದುರ್ನೀತಿಯಿಂದ ಕೂಡಿದವುಗಳಾಗಿ ನಾಶವನ್ನು ಹೊಂದುತ್ತವೆ.
ತ್ವಯೈಕೇನಾಪರಾದ್ಧಂ ಮೇ ಸೀತಾಮಾಹರತಾ ಬಲಾತ್ |
ವಧಾಯಾನಪರಾದ್ಧಾನಾಮನ್ಯೇಷಾಂ ತದ್ ಭವಿಷ್ಯತಿ ॥12॥
ಸೀತೆಯನ್ನು ಅಪಹಾರ ಬಲಾತ್ಕಾರದಿಂದ ಮಾಡಿ ತನಗೆ ಅಪರಾಧವನ್ನು ಮಾಡಿರುವವನು ನೀನೊಬ್ಬನೇ. ಆದರೆ ಆ ಅಪರಾಧವು ಅಪರಾಧವನ್ನು ಮಾಡದಿರುವ ಬೇರೆಯವರ ವಧೆಗೂ ಕಾರಣವಾಗುತ್ತದೆ.
ಯೇ ತ್ವಯಾ ಬಲದರ್ಪಾಭ್ಯಾಮಾವಿಷ್ಟೇನ ವನೇಚರಾಃ |
ಋಷಯೋ ಹಿಂಸಿತಾಃ ಪೂರ್ವಂ ದೇವಾಶ್ಚಾಪ್ಯವಮಾನಿತಾಃ ॥13॥
ರಾಜರ್ಷಯಶ್ಚ ನಿಹತಾ ರುದತ್ಯಶ್ಚ ಹೃತಾಃ ಸ್ತ್ರಿಯಃ |
ತದಿದಂ ಸಮನುಪ್ರಾಪ್ತಂ ಫಲಂ ತಸ್ಯಾನಯಸ್ಯ ತೇ ॥14॥
ಯಾವ ನೀನು ಬಲದರ್ಪಗಳಿಂದ ಕೂಡಿದವನಾಗಿ ವನವಾಸಿಗಳಾದ ಋಷಿಗಳನ್ನು ಹಿಂದೆ ಹಿಂಸೆ ಮಾಡಿದ್ದೀಯೋ, ದೇವತೆಗಳನ್ನು ಅವಮಾನ ಮಾಡಿದ್ದೀಯೋ, ರಾಜರ್ಷಿಗಳನ್ನು ಕೊಂದಿದ್ದೀಯೋ, ಅಳುತ್ತಿರುವ ಸ್ತ್ರೀಯರನ್ನು ಅಪಹರಿಸಿದ್ದೀಯೋ ಆ ಎಲ್ಲಾ ಅನ್ಯಾಯದ ಫಲವನ್ನು ಅನುಭವಿಸುವ ಕಾಲವು ಈಗ ನಿನಗೆ ಬಂದೊದಗಿದೆ.
ಹಂತಾಸ್ಮಿ ತ್ವಾಂ ಸಹಾಮಾತ್ಯೈರ್ಯುಧ್ಯಸ್ವ ಪುರುಷೋ ಭವ |
ಪಶ್ಯ ಮೇ ಧನುಷೋ ವೀರ್ಯಂ ಮಾನುಷಸ್ಯ ನಿಶಾಚರ ॥15॥
ನಿನ್ನನ್ನು ನಿನ್ನ ಮಂತ್ರಿಗಳ ಜೊತೆಯಲ್ಲಿ ಶೀಘ್ರದಲ್ಲಿ ಕೊಲ್ಲುವೆನು. ನೀನು ಗಂಡಸಾಗಿ ಯುದ್ಧವನ್ನು ಮಾಡು. ನಿಶಾಚರನೇ, ಮನುಷ್ಯನಾದ ನನ್ನ ಧನುಸ್ಸಿನ ಬಲವನ್ನು ನೋಡು.
ಮುಚ್ಯತಾಂ ಜಾನಕೀ ಸೀತಾ ನ ಮೇ ಮೋಕ್ಷ್ಯಸಿ ಕರ್ಹಿಚಿತ್ |
ಅರಾಕ್ಷಸಮಿಮಂ ಲೋಕಂ ಕರ್ತಾಸ್ಮಿ ನಿಶಿತೈಃ ಶರೈಃ ॥16॥
ಜನಕಕುಮಾರಿಯಾದ ಸೀತೆಯನ್ನು ಬಿಟ್ಟುಬಿಡು. ಇಲ್ಲದಿದ್ದರೆ ನೀನು ನನ್ನಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ನನ್ನ ನಿಶಿತವಾದ ಬಾಣಗಳಿಂದ ಈ ಲೋಕವನ್ನು ರಾಕ್ಷಸಶೂನ್ಯವನ್ನಾಗಿ ಮಾಡುವೆನು.
ಮಾರ್ಕಂಡೇಯಃ
ಇತಿ ತಸ್ಯ ಬ್ರುವಾಣಸ್ಯ ದೂತಸ್ಯ ಪರುಷಂ ವಚಃ |
ಶ್ರುತ್ವಾ ನ ಮಮೃಷೇ ರಾಜಾ ರಾವಣಃ ಕ್ರೋಧಮೂರ್ಚ್ಛಿತಃ ॥17॥
ಮಾರ್ಕಂಡೇಯರು ಹೀಗೆ ಹೇಳಿದ ದೂತನಾದ ಅಂಗದನ ಒರಟು ಮಾತನ್ನು ಕೇಳಿ ಕ್ರೋಧಮೂರ್ಛಿತನಾದ ರಾವಣನು ಆ ಮಾತುಗಳನ್ನು ಸಹಿಸಲಿಲ್ಲ.
ಇಂಗಿತಜ್ಞಾಸ್ತತೋ ಭರ್ತುಶ್ಚತ್ವಾರೋ ರಜನೀಚರಾಃ |
ಚತುರ್ಷ್ವಂಗೇಷು ಜಗೃಹುಃ ಶಾರ್ದೂಲಮಿವ ಪಕ್ಷಿಣಃ ॥18॥
ತಮ್ಮ ಪ್ರಭುವಿನ ಇಂಗಿತವನ್ನು ತಿಳಿದ ನಾಲ್ವರು ರಾಕ್ಷಸರು ಹುಲಿಯನ್ನು ಪಕ್ಷಿಗಳು ಹಿಡಿದಂತೆ ನಾಲ್ಕು ಅವಯವಗಳಲ್ಲಿ ಅಂಗದನನ್ನು ಹಿಡಿದರು.
ತಾಂಸ್ತಥಾಂಗೇಷು ಸಂಸಕ್ತಾನಂಗದೋ ರಜನೀಚರಾನ್ |
ಆದಾಯೈವ ಖಮುತ್ಪತ್ಯ ಪ್ರಾಸಾದತಳಮಾವಿಶತ್ ॥19॥
ತನ್ನ ದೇಹದ ಮೇಲೆ ಬಿದ್ದ ಆ ರಾಕ್ಷಸರನ್ನು ಹಾಗೆಯೇ ಎತ್ತಿಕೊಂಡು ಅಂಗದನು ಆಕಾಶಕ್ಕೆ ಹಾರಿ ಉಪ್ಪರಿಗೆಯ ಮೇಲ್ಭಾಗವನ್ನು ಪ್ರವೇಶಿಸಿದನು.
ವೇಗೇನೋತ್ಪತತಸ್ತಸ್ಯ ಪೇತುಸ್ತೇ ರಜನೀಚರಾಃ |
ಭುವಿ ಸಂಭಿನ್ನಹೃದಯಾಃ ಪ್ರಹಾರವರಪೀಡಿತಾಃ ॥20॥
ಅಂಗದನು ಹಾರಿದ ವೇಗಕ್ಕೆ ಅವನ ಶರೀರವನ್ನು ಹಿಡಿದುಕೊಂಡಿದ್ದ ರಾಕ್ಷಸರು ಭೂಮಿಯಲ್ಲಿ ಬಿದ್ದು ಆ ದೊಡ್ಡ ಪ್ರಹಾರದಿಂದ ಪೀಡಿತರಾಗಿ ಹೃದಯಭೇದನವನ್ನು ಹೊಂದಿದರು.

ಸಂಸಕ್ತೋ ಹರ್ಮ್ಯಶಿಖರಾತ್ ತಸ್ಮಾತ್ ಪುನರವಾಪತತ್ |
ಲಂಘಯಿತ್ವಾ ಪುರೀಂ ಲಂಕಾಂ ಸ್ವಬಲಸ್ಯ ಸಮೀಪತಃ ॥21॥
ಕೋಸಲೇಂದ್ರಮಥಾಗಮ್ಯ ಸರ್ವಮಾವೇದ್ಯ ವಾನರಃ |
ವಿಶಶ್ರಾಮ ಸ ತೇಜಸ್ವೀ ರಾಘವೇಣಾಭಿನಂದಿತಃ ॥22॥
ತೇಜಸ್ವಿಯಾದ ಆ ಅಂಗದನು ಉಪ್ಪರಿಗೆಯ ಮೇಲ್ಭಾಗದಿಂದ ಪುನಃ ಕೆಳಗೆ ಹಾರಿ ಲಂಕಾ ಪಟ್ಟಣವನ್ನು ದಾಟಿ ತನ್ನ ಸೈನ್ಯದ ಸಮೀಪಕ್ಕೆ ಬಂದು ಕೋಸಲೇಂದ್ರನಾದ ರಾಮನಿಗೆ ನಡೆದ ಘಟನೆ ಎಲ್ಲವನ್ನೂ ತಿಳಿಸಿ ರಾಮನಿಂದ ಅಭಿನಂದಿತನಾಗಿ ವಿಶ್ರಾಂತಿಯನ್ನು ಪಡೆದನು.
ತತಃ ಸರ್ವಾಭಿಸಾರೇಣ ಹರೀಣಾಂ ವಾತರಂಹಸಾಮ್ |
ಭೇದಯಾಮಾಸ ಲಂಕಾಯಾಃ ಪ್ರಾಕಾರಂ ರಘುನಂದನಃ ॥23॥
ಅನಂತರ ರಘುನಂದನನು ವಾಯುವೇಗವುಳ್ಳ ಕಪಿಗಳು ಎಲ್ಲಕಡೆಗಳಿಂದಲೂ ಮುತ್ತುವಂತೆ ಮಾಡಿ ಲಂಕಾಪಟ್ಟಣದ ಕೋಟೆಗಳನ್ನು ಒಡೆಸಿದನು.
ವಿಭೀಷಣರ್ಕ್ಷಾಧಿಪತೀ ಪುರಸ್ಕೃತ್ಯಾಥ ಲಕ್ಷ್ಮಣಃ |
ದಕ್ಷಿಣಂ ನಗರದ್ವಾರಮವಾಮ್ನೃದ್ನಾದ್ ದುರಾಸದಮ್ ॥24॥
ಲಕ್ಷ್ಮಣನು ವಿಭೀಷಣ ಮತ್ತು ಜಾಂಬವಂತನನ್ನು ಮುಂದೆ ಮಾಡಿಕೊಂಡು ದುರಾಸದವಾದ ನಗರದ ದಕ್ಷಿಣದ್ವಾರವನ್ನು ನಾಶಮಾಡಿದನು.
ಕರಭಾರುಣಗಾತ್ರಾಣಾಂ ಹರೀಣಾಂ ಯುದ್ಧಶಾಲಿನಾಮ್ |
ಕೋಟೀಶತಸಹಸ್ರೇಣ ಲಂಕಾಮಭ್ಯಪಪತ್ ತದಾ ॥25॥
ಅನಂತರ ಅಂಗೈಯಂತೆ ಕೆಂಪಾದ ಶರೀರವುಳ್ಳ ಯುದ್ಧಶಾಲಿಗಳಾದ ಒಂದು ಲಕ್ಷ ಕೋಟಿ ಕಪಿಗಳನ್ನು ತೆಗೆದುಕೊಂಡು ಲಂಕಾಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿದನು.
ಉತ್ಪತದ್ಭಿಃ ಪತದ್ಭಿಶ್ಚ ನಿಪತದ್ಭಿಶ್ಚ ವಾನರೈಃ |
ನಾದೃಶ್ಯತ ತದಾ ಸೂರ್ಯೋ ರಜಸಾ ನಾಶಿತಪ್ರಭಃ ॥26॥
ಮೇಲೆ ಹಾರಿ ಮುಂದೆ ನೆಗೆದು, ಕೆಳಗೆ ನೆಗೆಯುವ ಕಪಿಗಳಿಂದ ಉಂಟಾದ ಧೂಳಿನಿಂದ ಸೂರ್ಯಪ್ರಭೆಯು ನಾಶವನ್ನು ಹೊಂದಿ ಸೂರ್ಯನು ಕಾಣಲಿಲ್ಲ.
ಶಾಲಿಪ್ರಸೂನಸದೃಶೈಃ ಶಿರೀಷಕುಸುಮಪ್ರಭೈಃ |
ತರುಣಾದಿತ್ಯಸದೃಶೈಃ ಶಣಗೌರೈಶ್ಚ ವಾನರೈಃ ॥27॥
ಪ್ರಾಕಾರಂ ದದೃಶುಸ್ತೇ ತು ಸಮಂತಾತ್ ಕಪಿಲೀಕೃತಮ್ |
ರಾಕ್ಷಸಾ ವಿಸ್ಮಿತಾ ರಾಜನ್ ಸಸ್ತ್ರೀವೃದ್ಧಾಃ ಸಮಂತತಃ ॥28॥
ಉದಯಿಸುವ ಸೂರ್ಯನ ಬಣ್ಣವುಳ್ಳ, ಶಣದಂತೆ ಶ್ವೇತವರ್ಣದಿಂದ ಕೂಡಿದ ಭತ್ತದ ಚಿಗುರಿನ ಬಣ್ಣವುಳ್ಳ, ಶಿರೀಷ ಕುಸುಮಗಳ ಬಣ್ಣವುಳ್ಳ ಕಪಿಗಳಿಂದ ತುಂಬಿದ ಆ ಕೋಟೆಯ ಗೋಡೆಯು ಎಲ್ಲ ಕಡೆಯಲ್ಲಿಯೂ ಕಪಿಲವರ್ಣದಿಂದ ಕೂಡಿದಂತೆ ಕಂಡಿತು. ರಾಜನೇ, ಅದನ್ನು ನೋಡಿ ರಾಕ್ಷಸರು, ಅವರ ಸ್ತ್ರೀಯರು ಎಲ್ಲರೂ ವಿಸ್ಮಿತರಾದರು.
ಬಿಭಿದುಸ್ತೇ ಮಣಿಸ್ತಂಭಾನ್ ಕರ್ಣಾಟ್ಟಶಿಖರಾಣಿ ಚ |
ಭಗ್ನೋನ್ಮಥಿತಶೃಂಗಾಣಿ ಯಂತ್ರಾಣಿ ಚ ವಿಚಿಕ್ಷಿಪುಃ ॥29॥
ಆ ಕಪಿಗಳು ಮಣಿಸ್ತಂಭಗಳನ್ನೂ, ಕೋಟೆಯ ಮೇಲಿದ್ದ ವರ್ತುಲಾಕಾರದ ರಕ್ಷಣಾಸ್ಥಾನಗಳನ್ನೂ, ಶಿಖರಗಳನ್ನೂ ಒಡೆದು ಮುರಿಯಲ್ಪಟ್ಟ ಶಿಖರಗಳುಳ್ಳ ಅನೇಕ ಯಂತ್ರಗಳನ್ನೂ ಎಸೆದರು.
ಪರಿಗೃಹ್ಯ ಶತಘ್ನೀಶ್ಚ ಸಚಕ್ರಾಃ ಸಹುಡೋಪಲಾಃ |
ಚಿಕ್ಷಿಪುರ್ಭುಜವೇಗೇನ ಲಂಕಾಮಧ್ಯೇ ಮಹಾಸ್ವನಾಃ ॥30॥
ರಾಕ್ಷಸರು ಪ್ರಯೋಗಿಸಿದ ಶತಘ್ನೀಗಳನ್ನು ಅವುಗಳ ಚಕ್ರ ಮತ್ತು ಸಲಕರಣೆಗಳ ಸಹಿತ ಹಿಡಿದು ಮಹಾನಾದವನ್ನು ಮಾಡುತ್ತಾ ತಮ್ಮ ಭುಜವೇಗದಿಂದ ಅದನ್ನು ಲಂಕಾ ಪಟ್ಟಣದ ಮಧ್ಯದಲ್ಲಿ ಎಸೆದರು.
ಪ್ರಾಕಾರಸ್ಥಾಶ್ಚ ಯೇ ಕೇಚಿನ್ನಿಶಾಚರಗಣಾಸ್ತಥಾ |
ಪ್ರದುದ್ರುವುಸ್ತೇ ಶತಶಃ ಕಪಿಭಿಃ ಸಮಭಿದ್ರುತಾಃ ॥31॥
ಕೋಟೆಯ ಗೋಡೆಯ ಸಮೀಪದಲ್ಲಿದ್ದ ರಾಕ್ಷಸಗಣಗಳೆಲ್ಲವೂ ನೂರಾರು ಸಂಖ್ಯೆಯಲ್ಲಿದ್ದ ಕಪಿಗಳಿಂದ ಪೀಡಿತರಾಗಿ ಒಡಿಹೋದವು.
ತತಸ್ತು ರಾಜವಚನಾದ್ ರಾಕ್ಷಸಾಃ ಕಾಮರೂಪಿಣಃ |
ನಿರ್ಯಯುರ್ವಿಕೃತಾಕಾರಾಃ ಸಹಸ್ರಶತಸಂಘಶಃ ॥32॥
ಅನಂತರ ರಾಜವಚನದಿಂದ ಕಾಮರೂಪಿಗಳೂ, ವಿಕೃತಾಕಾರವನ್ನು ಧರಿಸಿದವರೂ ಆದ ರಾಕ್ಷಸರು ನೂರುಸಾವಿರ ಸಂಖ್ಯೆಗಳಲ್ಲಿ ಹೊರಗೆಬಂದರು.
ಶಸ್ತ್ರವರ್ಷಾಣಿ ವರ್ಷಂತೋ ದ್ರಾವಯಿತ್ವಾ ವನೌಕಸಃ |
ಪ್ರಾಕಾರಂ ಶೋಭಯಂತಸ್ತೇ ಪರಂ ವಿಕ್ರಮಮಾಸ್ಥಿತಾಃ ॥33॥
ಅವರು ಶಸ್ತ್ರಗಳ ಮಳೆಯನ್ನು ಸುರಿಸುತ್ತಾ ವನಚಾರಿಗಳಾದ ಕಪಿಗಳನ್ನು ಓಡಿಸಿ ಕೋಟೆಯ ಗೋಡೆಗೆ ಶೋಭೆಯನ್ನು ತರುತ್ತಾ ಬಹಳ ವಿಕ್ರಮವನ್ನು ಧರಿಸಿ ನಿಂತರು.
ಸ ಮಾಷರಾಶಿಸದೃಶೈರ್ಬಭೂವ ಕ್ಷಣದಾಚರೈಃ |

ಕೃತೋ ನಿರ್ವಾನರೋ ಭೂಯಃ ಪ್ರಾಕಾರೋ ಭೀಮದರ್ಶನೈಃ ॥34॥
ಭಯಂಕರರೂಪವುಳ್ಳ, ಉದ್ವಿನ ರಾಶಿಯನ್ನು ಹೋಲುವ ಬಣ್ಣವನ್ನು ಹೊಂದಿದ್ದ ಆ ನಿಶಾಚರರು ಕಪಿಗಳನ್ನೆಲ್ಲಾ ಓಡಿಸಿ ಆ ಪ್ರಾಕಾರವು ಪುನಃ ಕಪಿಶೂನ್ಯವಾಗುವಂತೆ ಮಾಡಿದರು.
ಪೇತುಃ ಶೂಲವಿಭಿನ್ನಾಂಗಾ ಬಹವೋ ವಾನರರ್ಷಭಾಃ |
ಸ್ತಂಭತೋರಣಭಗ್ನಾಶ್ಚ ಪೇತುಸ್ತತ್ರ ನಿಶಾಚರಾಃ ॥35॥
ಶೂಲಗಳಿಂದ ಚುಚ್ಚಲ್ಪಟ್ಟ ಅನೇಕ ವಾನರಶ್ರೇಷ್ಠರು ಅಲ್ಲಿ ಬಿದ್ದರು. ಕಂಬತೋರಣಗಳಿಂದ ಭಗ್ನರಾದ ರಾಕ್ಷಸರೂ ಅಲ್ಲಿ ಬಿದ್ದರು.
ಕೇಶಾಕೇಶ್ಯಭವದ್ ಯುದ್ಧಂ ರಕ್ಷಸಾಂ ವಾನರೈಃ ಸಹ |
ನಖೈರ್ದಂತೈಶ್ಚ ವೀರಾಣಾಂ ಖಾದತಾಂ ವೈ ಪರಸ್ಪರಮ್ ॥36॥
ಆ ರಾಕ್ಷಸರಿಗೂ ಮತ್ತು ಕಪಿಗಳಿಗೂ ಕೇಶಾಕೇಶಿ ಯುದ್ಧವು ನಡೆಯಿತು. ನಖಗಳಿಂದಲೂ, ದಂತಗಳಿಂದಲೂ ಪರಸ್ಪರವಾಗಿ ಕಚ್ಚುತ್ತಾ ಯುದ್ಧವು ನಡೆಯಿತು.
ನಿಷ್ಟನಂತೋ ಹ್ಯುಭಯತಸ್ತತ್ರ ವಾನರರಾಕ್ಷಸಾಃ |
ಹತಾ ನಿಪತಿತಾ ಭೂವೌ ನ ಮುಂಚಂತಿ ಪರಸ್ಪರಮ್ ॥37॥
ಶಸ್ತ್ರಗಳ ಏಟಿಗೆ ಸಿಲುಕಿ ಗರ್ಜನೆಯನ್ನು ಮಾಡುತ್ತಾ ಬೀಳುತ್ತಿದ್ದ ವಾನರರು ಮತ್ತು ರಾಕ್ಷಸರು ಭೂಮಿಯ ಮೇಲೆ ಬಿದ್ದರೂ ಒಬ್ಬರನ್ನೊಬ್ಬರು ಬಿಡುತ್ತಿರಲಿಲ್ಲ.
ರಾಮಸ್ತು ಶರಜಾಲಾನಿ ವವರ್ಷ ಜಲದೋ ಯಥಾ |
ತಾನಿ ಲಂಕಾಂ ಸಮಾಸಾದ್ಯ ಜಘ್ನುಸ್ತಾನ್ ರಜನೀಚರಾನ್ ॥38॥
ರಾಮನಾದರೂ ಮೋಡವು ಮಳೆಯನ್ನು ಸುರಿಸಿದಂತೆ ಬಾಣಸಮೂಹಗಳನ್ನು ಸೃಷ್ಟಿಸಿದನು. ಆ ಬಾಣಗಳು ಲಂಕಾಪಟ್ಟಣವನ್ನು ತಲುಪಿ ಅನೇಕ ರಾಕ್ಷಸರನ್ನು ಕೊಂದವು.
ಸೌಮಿತ್ರಿರಪಿ ನಾರಾಚೈರ್ದೃಢಧನ್ವಾ ಜಿತಕ್ಲಮಃ |
ಆದಿಶ್ಯಾದಿಶ್ಯ ದುರ್ಗಸ್ಥಾನ್ ಪಾತಯಾಮಾಸ ರಾಕ್ಷಸಾನ್ ॥39॥
ದೃಢ ಧನುಸ್ಸುಳ್ಳವನೂ, ಶ್ರಮರಹಿತನೂ ಆದ ಲಕ್ಷ್ಮಣನು ಕೋಟೆಯ ಮೇಲಿದ್ದ ರಾಕ್ಷಸರನ್ನು ನಿರ್ದೇಶಮಾಡಿ, ನಿರ್ದೇಶಮಾಡಿ ಬಾಣಗಳಿಂದ ಅವರನ್ನು ಉರುಳಿಸುತ್ತಿದ್ದನು.
ತತಃ ಪ್ರತ್ಯವಹಾರೋಽಭೂತ್ಸೈನ್ಯಾನಾಂ ರಾಘವಾಜ್ಞಯಾ |
ಕೃತೇ ವಿಮರ್ದೇ ಲಂಕಾಯಾಂ ಲಬ್ಧಲಕ್ಷ್ಯೋ ಜಯೋತ್ತರಃ ॥40॥
ಲಂಕೆಯಲ್ಲಿ ಜಯಸೂಚಕವಾದ ಇಂತಹ ಯುದ್ಧವು ಜರುಗುತ್ತಿರಲು ತನ್ನ ಲಕ್ಷ್ಯವನ್ನು ಸಾಧಿಸಿದ ರಾಮನು ತನ್ನ ಆಜ್ಞೆಯಿಂದ ಸೈನ್ಯಗಳ ಪ್ರತ್ಯಾವಹಾರವನ್ನು ಮಾಡಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಖ್ಯಾನಪರ್ವಣಿ ಲಂಕಾಪ್ರವೇಶೋ ನಾಮ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ಮೂರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ತನಾಲ್ಕನೆಯ ಅಧ್ಯಾಯ
ರಾವಣ ಇಂದ್ರಜಿತುಗಳ ಜೊತೆಯಲ್ಲಿ ರಾಮ-ಲಕ್ಷ್ಮಣರ ದ್ವಂದ್ವಯುದ್ಧ.
ಮಾರ್ಕಂಡೇಯಃ
ತತೋ ನಿವಿಶಮಾನಾಂಸ್ತಾನ್ ಸೈನಿಕಾನ್ ರಾವಣಾನುಗಾಃ |
ಅಭಿಜಗ್ಮುರ್ಗಣಾನೇಕೇ ಪಿಶಾಚಾ ಯಕ್ಷರಾಕ್ಷಸಾಃ ॥1॥
ಮಾರ್ಕಂಡೇಯ ಅನಂತರ ಪ್ರವೇಶಿಸುತ್ತಿದ್ದ ಆ ವಾನರ ಸೈನ್ಯದ ಸೈನಿಕರನ್ನು ಕುರಿತು ರಾವಣನ ಅನುಚರರಾದ ಪಿಶಾಚಿಗಳು, ಯಕ್ಷರು ಮತ್ತು ರಾಕ್ಷಸರು ಅಭಿಮುಖವಾಗಿ ಹೋದರು.
ಪರ್ವತಃ(ಣಃ) ಪತನೋ ಜಂಭಃ ಖರಃ ಕ್ರೋಧವಶೋ ಹರಿಃ |
ಪುರುಜಶ್ಚಾರುಜಶ್ಚೈವ ಪ್ರಘಸಶ್ಚೈವಮಾದಯಃ ॥2॥
ಪರ್ವತ, ಪತನ, ಜಂಭ, ಖರ, ಕ್ರೋಧವಶ, ಹರಿ, ಪುರುಜ, ಅರುಜ, ಪ್ರಘಸ ಮೊದಲಾದವರು (ವಾನರ ಸೈನ್ಯಕ್ಕೆ ಅಭಿಮುಖವಾಗಿ ಹೋದರು).
ತತೋಽಭಿಪತತಾಂ ತೇಷಾಮದೃಶ್ಯಾನಾಂ ದುರಾತ್ಮನಾಮ್ |
ಅಂತರ್ಧಾನವಧಂ ತಜ್ಜ್ಞಶ್ಚಕಾರ ಸ ವಿಭೀಷಣಃ ॥3॥
ಆಗ ಆ ದುರಾತ್ಮರು ಅದೃಶ್ಯರಾಗಿ ಮೇಲೆ ಎರಗುತ್ತಿರಲು ಆ ವಿದ್ಯೆಯನ್ನು ತಿಳಿದ ವಿಭೀಷಣನು ಅವರ ಅಂತರ್ಧಾನವನ್ನು ನಾಶಮಾಡಿದನು.
ತೇ ದೃಶ್ಯಮಾನಾ ಹರಿಭಿರ್ಬಲಿಭಿರ್ದೂರಪಾತಿಭಿಃ |
ನಿಹತಾಃ ಸರ್ವಶೋ ರಾಜನ್ಮಹೀಂ ಜಗ್ಮುರ್ಗತಾಸವಃ ॥4॥
ಎಲೈ ರಾಜನೇ, ದೃಶ್ಯಮಾನರಾದ ಅವರು ದೂರ ನೆಗೆಯುವ ಬಲಿಷ್ಠರಾದ ಕಪಿಗಳಿಂದ ನಿಹತರಾಗಿ ಎಲ್ಲರೂ ಪ್ರಾಣಗಳನ್ನು

ಕಳೆದುಕೊಡು ಭೂಮಿಯಮೇಲೆ ಬಿದ್ದರು.
ಅಮೃಷ್ಯಮಾಣಃ ಸಬಲೋ ರಾವಣೋ ನಿರ್ಯಯಾವಥ |
ವ್ಯೂಹ್ಯ ಚೌಶನಸಂ ವ್ಯೂಹಂ ಹರೀನಭ್ಯವಹಾರಯತ್ ॥5॥
ರಾವಣನು ಅದನ್ನು ಸಹಿಸದೆ ತನ್ನ ಸೈನ್ಯಸಹಿತನಾಗಿ ಹೊರಗೆ ಬಂದು ಶುಕ್ರವ್ಯೂಹವನ್ನು ರಚಿಸಿ ಕಪಿಗಳನ್ನು ಭಕ್ಷಿಸಲು (ಸಂಹರಿಸಲು) ಪ್ರಾರಂಭಿಸಿದನು.
ರಾಕ್ಷಸಾನಾಂ ಬಲ್ಯೆಘೋರ್ರೈಃ ಪಿಶಾಚಾನಾಂ ಚ ಸಂವೃತಃ |
ಯುದ್ಧಶಾಸ್ತ್ರವಿಧಾನಜ್ಞ ಉಶನಾ ಇವ ಚಾಪರಃ ॥6॥
ರಾಕ್ಷಸರ ಸೈನ್ಯದಿಂದಲೂ ಮತ್ತು ಘೋರವಾದ ಪಿಶಾಚಿಗಳ ಸೈನ್ಯದಿಂದಲೂ ಕೂಡಿದ ಯುದ್ಧಶಾಸ್ತ್ರವಿಧಾನವನ್ನು ಬಲ್ಲ ಅವನು ಇನ್ನೊಬ್ಬ ಶುಕ್ರನಂತೆ ಯುದ್ಧವನ್ನು ಮಾಡಿದನು.
ರಾಘವಸ್ತು ವಿನಿರ್ಯಾಂತಂ ವ್ಯೂಢಾನೀಕಂ ದಶಾನನಮ್ |
ಬಾರ್ಹಸ್ಪತ್ಯಂ ವಿಧಿಂ ಕೃತ್ವಾ ಪ್ರತ್ಯವ್ಯೂಹನ್ನಿಶಾಚರಮ್ ॥7॥
ರಾಘವನಾದರೂ ಸೈನ್ಯವನ್ನು ಒಂದುಗೂಡಿಸಿ ಯುದ್ಧಕ್ಕೆ ಹೊರಟುಬರುತ್ತಿದ್ದ ದಶಾನನನನ್ನು ನೋಡಿ ಬೃಹಸ್ಪತಿ ವ್ಯೂಹವನ್ನು ರಚಿಸಿ ಆ ನಿಶಾಚರನನ್ನು ತಡೆಗಟ್ಟಿದನು.
ಸಮೇತ್ಯ ಯುಯುಧೇ ತತ್ರ ತತೋ ರಾಮೇಣ ರಾವಣಃ |
ಯುಯುಧೇ ಲಕ್ಷ್ಮಣಶ್ಚಾಪಿ ತಥೈವೇಂದ್ರಜಿತಾ ಸಹ ॥8॥
ಆಗ ರಾವಣನು ರಾಮನ ಜೊತೆಯಲ್ಲಿಯೂ, ಲಕ್ಷ್ಮಣನು ಇಂದ್ರಜಿತುವಿನ ಜೊತೆಯಲ್ಲಿಯೂ ಸಂಧಿಸಿ ಯುದ್ಧವನ್ನು ಮಾಡಿದರು.
ವಿರೂಪಾಕ್ಷೇಣ ಸುಗ್ರೀವಸ್ತಾರೇಣ ಚ ನಿಖರ್ವಣಃ |
ತುಂಡೇನ ಚ ನಳಸ್ತತ್ರ ಪಟುಶಃ ಪನಸೇನ ಚ ॥9॥
ಅಲ್ಲಿ ವಿರೂಪಾಕ್ಷನು ಸುಗ್ರೀವನ ಜೊತೆಯಲ್ಲಿಯೂ, ತಾರನು ನಿಖರ್ವಣನ ಜೊತೆಯಲ್ಲಿಯೂ, ನಳನು ತುಂಡನ ಜೊತೆಯಲ್ಲಿಯೂ, ಪಟುಶನು ಪನಸನ ಜೊತೆಯಲ್ಲಿಯೂ ಯುದ್ಧವನ್ನು ಮಾಡಿದರು.
ವಿಷಹ್ಯಂ ಯಂ ಹಿ ಯೋ ಮೇನೇ ಸ ಸ ತೇನ ಸಮೇಯಿವಾನ್ |
ಯುಯುಧೇ ಯುದ್ಧವೇಲಾಯಾಂ ಸ್ವಬಾಹುಬಲಮಾಶ್ರಿತಃ ॥10॥
ಯಾವನನ್ನು ನಾನು ಇವನನ್ನು ಎದುರಿಸಬಹುದು ಎಂದು ತಿಳಿದನೋ ಅವನು ತನ್ನ ಬಾಹುಬಲವನ್ನು ಆಶ್ರಯಿಸಿ ಆ ಯುದ್ಧದ ಸಮಯದಲ್ಲಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸ ಸಂಪ್ರಹಾರೋ ವವೃಧೇ ಭೀರೂಣಾಂ ಭಯವರ್ಧನಃ |
ಲೋಮಸಂಹರ್ಷಣೋ ಘೋರಃ ಪುರಾ ದೇವಾಸುರೇ ಯಥಾ ॥11॥
ಹಿಂದೆ ದೇವಾಸುರ ಸಂಗ್ರಾಮದಲ್ಲಿ ಇದ್ದಂತಹ, ಭೀರುಗಳಿಗೆ ಭಯಜನಕವೂ, ರೋಮಾಂಚಕಾರಿಯೂ, ಘೋರವೂ ಆದ ಆ ಸಂಗ್ರಾಮವು ಜರುಗಿತು.
ರಾವಣೋ ರಾಮಮಾನಚ್ಛರ್ಚ್ಛಕ್ತಿಶೂಲಾಸಿವೃಷ್ಟಿಭಿಃ |
ನಿಶಿತೈರಾಯಸೈಸ್ತೀಕ್ಷ್ಣೈ ರಾವಣಂ ಚಾಪಿ ರಾಘವಃ ॥12॥
ರಾವಣನು ರಾಮನನ್ನು ನಿಶಿತವಾದ ಮತ್ತು ತೀಕ್ಷ್ಣವಾದ ಶಕ್ತಿ, ಶೂಲ, ಕತ್ತಿಗಳ ವೃಷ್ಟಿಗಳಿಂದ ಪೀಡಿಸಿದನು. ರಾಮನೂ ರಾವಣನನ್ನು ಹಾಗೆಯೇ ಪೀಡಿಸಿದನು.
ತಥೈವೇಂದ್ರಜಿತಂ ಯತ್ತಂ ಲಕ್ಷ್ಮಣೋ ಮರ್ಮಭೇದಿಭಿಃ |
ಇಂದ್ರಜಿಚ್ಚಾಪಿ ಸೌಮಿತ್ರಿಂ ಬಿಭೇದ ಬಹುಭಿಃ ಶರೈಃ ॥13॥
ಲಕ್ಷ್ಮಣನು ಮರ್ಮಭೇದಿಗಳಾದ ಶಸ್ತ್ರಗಳಿಂದ ಪ್ರಯತ್ನಶಾಲಿಯಾದ ಇಂದ್ರಜಿತುವನ್ನು ಪೀಡಿಸಿದನು. ಅದರಂತೆಯೇ ಇಂದ್ರಜಿತುವೂ ಸಹ ಲಕ್ಷ್ಮಣನನ್ನು ಅನೇಕ ಬಾಣಗಳಿಂದ ಪೀಡಿಸಿದನು.
ವಿಭೀಷಣಃ ಪ್ರಹಸ್ತಂ ಚ ಪ್ರಹಸ್ತಶ್ಚ ವಿಭೀಷಣಮ್ |
ಖಗಪತ್ರೈಃ ಶರೈಸ್ತೀಕ್ಷ್ಣೈರಭ್ಯವರ್ಷದ್ ಗತವ್ಯಥಃ ॥14॥
ವಿಭೀಷಣನು ಪ್ರಹಸ್ತನನ್ನು, ಪ್ರಹಸ್ತನು ವಿಭೀಷಣನನ್ನು ಪಕ್ಷಿಗಳ ಗರಿಗಳನ್ನು ಕಟ್ಟಿದ್ದ ತೀಕ್ಷ್ಣವಾದ ಬಾಣಗಳಿಂದ ವ್ಯಥೆಯಿಲ್ಲದೇ ಒಬ್ಬರ ಮೇಲೊಬ್ಬರು ಮಳೆಯನ್ನು ಸುರಿಸಿದರು.
ತೇಷಾಂ ಬಲವತಾಮಾಸೀನ್ಮಹಾಸ್ತ್ರಾಣಾಂ ಸಮಾಗಮಃ |
ವಿವ್ಯಥುಃ ಸಕಲಾ ಯೇನ ತ್ರಯೋ ಲೋಕಾಶ್ಚರಾಚರಾಃ ॥15॥
ಬಲಿಷ್ಠರಾದ ಅವರಿಗೆ ಮಹಾಸ್ತ್ರಗಳ ಸಮಾಗಮರೂಪವಾದ ಯುದ್ಧವು ಉಂಟಾಯಿತು. ಚರಾಚರವಾದ ಮೂರುಲೋಕಗಳಲ್ಲಿದ್ದ ಸಕಲರೂ ವ್ಯಥೆಯನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಃಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಖ್ಯಾನಪರ್ವಣಿ ರಾಮರಾವಣಯುದ್ಧಂ ನಾಮ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *

ಇನ್ನೂರ ಎಪ್ಪತ್ತೈದನೆಯ ಅಧ್ಯಾಯ
ಹನುಮಂತ ಮತ್ತು ವಿಭೀಷಣರಿಂದ ಧೂಮ್ರಾಕ್ಷ ಮತ್ತು ಪ್ರಹಸ್ತನ ವಧೆ. ಕುಂಭಕರ್ಣನ ಯುದ್ಧಭೂಮಿ ಪ್ರವೇಶ.
ಮಾರ್ಕಂಡೇಯಃ
ತತಃ ಪ್ರಹಸ್ತಃ ಸಹಸಾ ಸಮಭ್ಯೇತ್ಯ ವಿಭೀಷಣಮ್ |
ಗದಯಾ ತಾಡಯಾಮಾಸ ವಿನದ್ಯ ರಣಕರ್ಕಶಃ ॥1॥
ಮಾರ್ಕಂಡೇಯ ಅನಂತರ ರಣಕರ್ಕಶನಾದ ಪ್ರಹಸ್ತನು ಇದ್ದಕ್ಕಿದ್ದಂತೆಯೇ ಓಡಿಬಂದು ದೊಡ್ಡ ನಾದವನ್ನು ಮಾಡಿ ವಿಭೀಷಣನನ್ನು ತನ್ನ ಗದೆಯಿಂದ ಹೊಡೆದನು.
ಸ ತಯಾಽಭಿಹತೋ ಧೀಮಾನ್ ಗದಯಾ ಭೀಮವೇಗಯಾ |
ನಾಕಂಪತ ಮಹಾಬಾಹುರ್ಹಿಮವಾನಿವ ಸುಸ್ಥಿರಃ ॥2॥
ಮಹಾವೇಗವುಳ್ಳ ಗದೆಯಿಂದ ಅಭಿಹತನಾದ ಮಹಾಬಾಹುವೂ, ಮೇಧಾವಿಯೂ ಆದ ವಿಭೀಷಣನು ಸುಸ್ಥಿರವಾದ ಹಿಮಾಲಯದಂತೆ ಅಲುಗಾಡಲಿಲ್ಲ.
ತತಃ ಪ್ರಗೃಹ್ಯ ವಿಪುಲಾಂ ಶತಘಂಟಾಂ ವಿಭೀಷಣಃ |
ಅಭಿಮಂತ್ರ್ಯ ಮಹಾಶಕ್ತಿಂ ಚಿಕ್ಷೇಪಾಸ್ಯ ಶಿರಃ ಪ್ರತಿ ॥3॥
ಅನಂತರ ವಿಭೀಷಣನು ಮಾರು ಘಂಟೆಗಳಿದ್ದ ವಿಪುಲವಾದ ಒಂದು ಶಕ್ತ್ಯಾಯುಧವನ್ನು ತೆಗೆದುಕೊಂಡು ಅದನ್ನು ಅಭಿಮಂತ್ರಿಸಿ ಪ್ರಹಸ್ತನ ಶಿರಸ್ಸಿನ ಮೇಲೆ ಎಸೆದನು.
ಪತಂತ್ಯಾ ಸ ತಯಾ ವೇಗಾದ್ ರಾಕ್ಷಸೋಽಶನಿವೇಗಯಾ |
ಹೃತೋತ್ತಮಾಂಗೋ ದದೃಶೇ ವಾತರುಗ್ಣ ಇವ ದ್ರುಮಃ ॥4॥
ಸಿಡಿಲಿನ ವೇಗವನ್ನು ಹೊಂದಿದ್ದ ಆ ಶಕ್ತ್ಯಾಯುಧವು ವೇಗದಿಂದ ತನ್ನ ಮೇಲೆ ಬೀಳುತ್ತಿದ್ದಂತೆ ಆ ರಾಕ್ಷಸನು ಶಿರಸ್ಸನ್ನು ಕಳೆದುಕೊಂಡು ಬಿರುಗಾಳಿಯಿಂದ ಮುರಿದು ಬಿದ್ದ ಮರದಂತೆ ಕಂಡುಬಂದನು.
ತಂ ದೃಷ್ಟ್ವಾ ನಿಹತಂ ಸಂಖೇ ಪ್ರಹಸ್ತಂ ಕ್ಷಣದಾಚರಮ್ |
ಅಭಿದುದ್ರಾವ ಧೂಮ್ರಾಕ್ಷೋ ವೇಗೇನ ಮಹತಾ ಕಪೀನ್ ॥5॥
ನಿಶಾಚರನಾದ ಪ್ರಹಸ್ತನು ಯುದ್ಧದಲ್ಲಿ ಹತನಾದುದನ್ನು ನೋಡಿ ಧೂಮ್ರಾಕ್ಷನು ಬಹಳ ವೇಗದಿಂದ ಕಪಿಗಳ ಮೇಲೆ ಎರಗಿದನು.
ತಸ್ಯ ಮೇಘೋಪಮಂ ಸೈನ್ಯಮಾಪತದ್ ಭೀಮದರ್ಶನಮ್ |
ದೃಷ್ಟ್ವೈವ ಸಹಸಾ ದೀರ್ಣಾ ರಣೇ ವಾನರಪುಂಗವಾಃ ॥6॥
ಮೇಘಸದೃಶವಾದ ಭಯಂಕರ ರೂಪವನ್ನು ತಾಳಿದ ಅವನ ಸೈನ್ಯವು ಮೇಲೆ ಎರಗುವುದನ್ನು ನೋಡುತ್ತಿದ್ದಂತೆಯೇ ವಾನರಪುಂಗವರು ಯುದ್ಧದಲ್ಲಿ ಇದ್ದಕ್ಕಿದ್ದಂತೆಯೇ ಚದುರಿ ಹೋದರು.
ತತಸ್ತಾನ್ ಸಹಸಾ ದೀರ್ಣಾನ್ ದೃಷ್ಟ್ವಾ ವಾನರಪುಂಗವಾನ್ |
ನಿರ್ಯಯೌ ಕಪಿಶಾರ್ದೂಲೋ ಹನುಮಾನ್ ಮಾರುತಾತ್ಮಜಃ ॥7॥
ಆ ವಾನರಪುಂಗವರು ಶೀಘ್ರವಾಗಿ ಚದುರಿಹೋದುದನ್ನು ನೋಡಿ ಆಗ ಕಪಿಶಾರ್ದೂಲನಾದ ವಾಯುಪುತ್ರನಾದ ಹನುಮಂತನು ರಣಕ್ಕೆ ಹೊರಟು ಬಂದನು.
ತಂ ದೃಷ್ಟ್ವಾಽವಸ್ಥಿತಂ ಸಂಖೇ ಹರಯಃ ಪವನಾತ್ಮಜಮ್ |
ಮಹತ್ಯಾ ತ್ವರಯಾ ರಾಜನ್ ಸನ್ನ್ಯವರ್ತಂತ ಸರ್ವಶಃ ॥8॥
ಎಲೈ ರಾಜನೇ, ಪವನಾತ್ಮಜನಾದ ಅವನು ಯುದ್ಧದಲ್ಲಿ ನಿಂತಿರುವುದನ್ನು ನೋಡಿದ ಕಪಿಗಳು ಬಹಳ ಶೀಘ್ರವಾಗಿ ಹಿಂದಿರುಗಿ ಎಲ್ಲಕಡೆಗಳಿಂದಲೂ ಅವನನ್ನು ಸುತ್ತುವರಿದರು.
ತತಃ ಶಬ್ದೋ ಮಹಾನಾಸೀತ್ತುಮುಲೋ ಲೋಮಹರ್ಷಣಃ |
ರಾಮರಾವಣಸೈನ್ಯಾನಾಮನ್ಯೋನ್ಯಮಭಿಧಾವತಾಮ್ ॥9॥
ಅನಂತರ ಪರಸ್ಪರವಾಗಿ ಹೋರಾಡುವ ರಾಮರಾವಣರ ಸೈನ್ಯಗಳಲ್ಲಿ ತೀವ್ರವೂ ರೋಮಾಂಚನಕಾರಿಯೂ ಆದ ದೊಡ್ಡ ಶಬ್ದವು ಉಂಟಾಯಿತು.
ತಸ್ಮಿನ್ ಪ್ರವೃತ್ತೇ ಸಂಗ್ರಾಮೇ ಘೋರೇ ರುಧಿರಕರ್ದಮೇ |
ಧೂಮ್ರಾಕ್ಷಃ ಕಪಿಸೈನ್ಯಂ ತದ್ ದ್ರಾವಯಾಮಾಸ ಪತ್ರಿಭಿಃ ॥10॥
ರಕ್ತದ ಕೆಸರುಳ್ಳ ಆ ಘೋರಯುದ್ಧವು ನಡೆಯುತ್ತಿರಲು ಧೂಮ್ರಾಕ್ಷನು ಆ ಕಪಿಸೈನ್ಯವನ್ನು ತನ್ನ ಬಾಣಗಳಿಂದ ಚದುರಿಸಿದನು.
ತಂ ಸ ರಕ್ಷೋಮಹಾಮಾತ್ರಮಾಪತಂತಂ ಸಪತ್ನಜಿತ್ |
ಪ್ರತಿಜಗ್ರಾಹ ಹನುಮಾಂಸ್ತರಸಾ ಪವನಾತ್ಮಜಃ ॥11॥
ರಾವಣನ ಮಹಾಮಾತ್ರನಾದ ಅವನು ಮೇಲೆರಗುತ್ತಿರುವುದನ್ನು ನೋಡಿದ ಶತ್ರುಗಳ ಮೇಲೆ ಜಯವನ್ನು ಸಾಧಿಸುವ ಪವನಾತ್ಮಜನಾದ ಹನುಮಂತನು ಶೀಘ್ರವಾಗಿ ಅವನನ್ನು ಹಿಡಿದನು (ಸ್ವೀಕರಿಸಿದನು).
ತಯೋರ್ಯುದ್ಧಮಭೂದ್ ಘೋರಂ ಹರಿರಾಕ್ಷಸವೀರಯೋಃ |
ಜಿಗೀಷತೋರ್ಯುಧಾಽನ್ಯೋನ್ಯಮಿಂದ್ರಪ್ರಹ್ಲಾದಯೋರಿವ ॥12॥
ಜಯವನ್ನು ಬಯಸಿ ಯುದ್ಧವನ್ನು ಮಾಡುವ ಆ ಹರಿಶ್ರೇಷ್ಠರಾಕ್ಷಸ ವೀರರಿಬ್ಬರಿಗೂ ಇಂದ್ರಪ್ರಹ್ಲಾದರಿಗೆ ನಡೆದಂತೆ ಪರಸ್ಪರವಾಗಿ ಘೋರವಾದ ಯುದ್ಧವು ನಡೆಯಿತು.
ಗದಾಭಿಃ ಪರಿಘೈಶ್ಚೈವ ರಾಕ್ಷಸೋ ಜಘ್ನಿವಾನ್ ಕಪಿಮ್ |

ಕಪಿಶ್ಚ ಜಘ್ನಿವಾನ್ ರಕ್ಷಃ ಸಸ್ಕಂಧವಿಟಪೈರ್ದ್ರುಮೈಃ ॥13॥
ರಾಕ್ಷಸನು ಗದೆಗಳಿಂದಲೂ, ಪರಿಘಗಳಿಂದಲೂ ಕಪಿಯನ್ನು ಹೊಡೆದನು. ಕಪಿಯೂ ಸಹ ರಾಕ್ಷಸನನ್ನು ಕೊಂಬೆಗಳಿಂದ ಸಹಿತವಾದ ಮರಗಳಿಂದ ಹೊಡೆದನು.
ತತಸ್ತಮತಿಕೋಪೇನ ಸಾಶ್ವಂ ಸರಥಸಾರಥಿಮ್ |
ಧೂಮ್ರಾಕ್ಷಮವಧೀತ್ ಕ್ರುದ್ಧೋ ಹನೂಮಾನ್ ಮಾರುತಾತ್ಮಜಃ ॥14॥
ಅನಂತರ ಬಹಳ ಕೋಪವನ್ನು ಹೊಂದಿದ ಮಾರುತಾತ್ಮಜನಾದ ಹನುಮಂತನು ಕ್ರುದ್ಧನಾಗಿ ಅಶ್ವಸಾರಥಿರಥಸಹಿತವಾದ ಧೂಮ್ರಾಕ್ಷನನ್ನು ಕೊಂದನು.
ತತಸ್ತಂ ನಿಹತಂ ದೃಷ್ಟ್ವಾ ಧೂಮ್ರಾಕ್ಷಂ ರಾಕ್ಷಸೋತ್ತಮಮ್ |
ಹರಯೋ ಜಾತವಿಸ್ರಂಭಾ ಜಗ್ಮುರಭ್ಯೇತ್ಯ ಸೈನಿಕಾನ್ ॥15॥
ರಾಕ್ಷಸಶ್ರೇಷ್ಠನಾದ ಧೂಮ್ರಾಕ್ಷನು ಹತನಾದುದನ್ನು ನೋಡಿ ಕಪಿಗಳು ವಿಶ್ವಾಸ ಮತ್ತು ಧೈರ್ಯಗಳನ್ನು ಹೊಂದಿ ರಾವಣನ ಸೈನಿಕರನ್ನು ಸಮೀಪಿಸಿದರು.
ತೇ ವಧ್ಯಮಾನಾ ಹರಿಭಿರ್ಬಲಿಭಿರ್ಜಿತಕಾಶಿಭಿಃ |
ರಾಕ್ಷಸಾ ಭಗ್ನಸಂಕಲ್ಪಾ ಲಂಕಾಮಭ್ಯಪತನ್ ಭಯಾತ್ ॥16॥
ಜಯಾಕಾಂಕ್ಷಿಗಳಾದ ಬಲಿಷ್ಠರಾದ ಕಪಿಗಳಿಂದ ಪ್ರಹಾರಕ್ಕೆ ಒಳಗಾದ ರಾಕ್ಷಸರು ತಮ್ಮ ಉದ್ದೇಶವು ಭಗ್ನವಾಗುತ್ತಿರಲು ಭಯದಿಂದ ಲಂಕೆಯನ್ನು ಪ್ರವೇಶಿಸಿದರು.
ತೇಽಭಿಪತ್ಯ ಪುರಂ ಭಗ್ನಾ ಹತಶೇಷಾ ನಿಶಾಚರಾಃ |
ಸರ್ವಂ ರಾಜ್ಞೋ ಯಥಾವೃತ್ತಂ ರಾವಣಾಯ ನ್ಯವೇದಯನ್ ॥17॥
ಹತಶೇಷರಾದ ಅಂಗಭಂಗವನ್ನು ಹೊಂದಿದ ಆ ರಾಕ್ಷಸರು ಬೇಗ ಓಡಿ ರಾಜನಾದ ರಾವಣನಿಗೆ ನಡೆದುದೆಲ್ಲವನ್ನೂ ವಿವರಿಸಿದರು.
ಶ್ರುತ್ವಾ ತು ರಾವಣಸ್ತೇಭ್ಯಃ ಪ್ರಹಸ್ತಂ ನಿಹತಂ ಯುಧಿ |
ಧೂಮ್ರಾಕ್ಷಂ ಚ ಮಹೇಷ್ವಾಸಂ ಸಸೈನ್ಯಂ ವಾನರರ್ಷಭೈಃ ॥18॥
ಅಶೀತಮಿವ ನಿಃಶ್ವಸ್ಯ ಸಮುತ್ಪತ್ಯ ವರಾಸನಾತ್ |
ಉವಾಚ ಕುಂಭಕರ್ಣಸ್ಯ ಕರ್ಮಕಾಲೋಽಯಮಾಗತಃ ॥19॥
ರಾವಣನು ಅವರಿಂದ ಯುದ್ಧದಲ್ಲಿ ವಾನರಶ್ರೇಷ್ಠರಿಂದ ಸೈನ್ಯಸಹಿತವಾದ ಪ್ರಹಸ್ತನೂ ಮತ್ತು ಮಹಾಧನುರ್ಧಾರಿಯಾದ ಧೂಮ್ರಾಕ್ಷನೂ ಹತನಾದುದನ್ನು ಕೇಳಿ ಬಿಸಿಯಾದ ನಿಟ್ಟುಸಿರನ್ನು ಬಿಟ್ಟು ತನ್ನ ಶ್ರೇಷ್ಠವಾದ ಆಸನದಿಂದ ಮೇಲೆದ್ದು ಕುಂಭಕರ್ಣನು ತನ್ನ ಕಾರ್ಯವನ್ನು ಮಾಡಬೇಕಾದ ಕಾಲವು ಈಗ ಒದಗಿದೆ ಎಂದು ಹೇಳಿದನು.
ಇತ್ಯೇವಮುಕಕ್ತ್ವಾ ವಿವಿಧೈರ್ವಾದಿತ್ರೈಃ ಸುಮಹಾಸ್ವನೈಃ |
ಶಯಾನಮತಿನಿದ್ರಾಲುಂ ಕುಂಭಕರ್ಣಮಬೋಧಯತ್ ॥20॥
ಹೀಗೆ ಹೇಳಿ ಮಹಾಶಬ್ದವನ್ನು ಮಾಡುವ ಅನೇಕ ವಾದಿತ್ರಗಳ ಸಹಾಯದಿಂದ ಅತಿನಿದ್ರಾಶೀಲನಾಗಿ ಮಲಗಿದ್ದ ಕುಂಭಕರ್ಣನನ್ನು ಎಬ್ಬಿಸಿದನು.
ಪ್ರಬೋಧ್ಯ ಮಹತಾ ಚೈನಂ ಯತ್ನೇನಾಗತಸಾಧ್ವಸಃ |
ಸ್ವಸ್ಥಮಾಸೀನಮವ್ಯಗ್ರಂ ವಿನಿದ್ರಂ ರಾಕ್ಷಸಾಧಿಪಃ |
ತತೋಽಬ್ರುವೀದ್ ದಶಗ್ರೀವಃ ಕುಂಭಕರ್ಣಂ ಮಹಾಬಲಮ್ ॥21॥
ಧನ್ಯೋಽಸಿ ಯಸ್ಯ ತೇ ನಿದ್ರಾ ಕುಂಭಕರ್ಣೇಯಮೀದೃಶೀ |
ಯ ಇದಂ ದಾರುಣಾಕಾರಂ ನ ಜಾನೀಷೇ ಮಹಾಭಯಮ್ ॥22॥
ಬಹಳ ಪ್ರಯತ್ನದಿಂದ ಕುಂಭಕರ್ಣನನ್ನು ಎಬ್ಬಿಸಿ ನಿದ್ರೆಯನ್ನು ಕಳೆದುಕೊಂಡು ಸಮಾಧಾನದಿಂದ ಕುಳಿತಿದ್ದ ಮಹಾಬಲನಾದ ಅವನನ್ನು ಕುರಿತು ರಾಕ್ಷಸಾಧಿಪನಾದ ರಾವಣನು ಕುಂಭಕರ್ಣನೇ, ಹೀಗೆ ನಿದ್ರೆಯನ್ನು ಮಾಡುತ್ತಿರುವ ನೀನು ಧನ್ಯನಾಗಿದ್ದೀಯೆ. ಏಕೆಂದರೆ ದಾರುಣಾಕಾರವಾದ ಈ ಮಹಾಭಯವನ್ನು ನೀನು ತಿಳಿದೇ ಇಲ್ಲ.
ಏಷ ತೀರ್ತ್ವಾರ್ಣವಂ ರಾಮಃ ಸೇತುನಾ ಹರಿಭಿಃ ಸಹ |
ಅವಮನ್ಯೇಹ ನಃ ಸರ್ವಾನ್ ಕರೋತಿ ಕದನಂ ಮಹತ್ ॥23॥
ಈ ರಾಮನು ಕಪಿಗಳ ಜೊತೆಯಲ್ಲಿ ಸೇತುವೆಯ ಮೂಲಕ ಸಮುದ್ರವನ್ನು ದಾಟಿ ನಮ್ಮೆಲ್ಲರನ್ನೂ ಅವಮಾನ ಮಾಡಿ ದೊಡ್ಡ ಯುದ್ಧವನ್ನು ಮಾಡುತ್ತಿದ್ದಾನೆ.
ಮಯಾ ತ್ವಪಹೃತಾ ಭಾರ್ಯಾ ಸೀತಾನಾಮಾಽಸ್ಯ ಜಾನಕೀ |
ತಾಂ ನೇತುಂ ಸ ಇಹಾಯಾತೋ ಬದ್ಧ್ವಾ ಸೇತುಂ ಮಹಾರ್ಣವೇ ॥
ನಾನು ಅವನ ಪತ್ನಿಯಾದ ಜನಕರಾಜಕುಮಾರಿಯಾದ ಸೀತೆಯನ್ನು ಅಪಹರಿಸಿದೆ. ಅವಳನ್ನು ಕರೆದುಕೊಂಡು ಹೋಗಲು ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ ಅವನು ಇಲ್ಲಿ ಬಂದಿದ್ದಾನೆ.
ತೇನ ಚೈವ ಪ್ರಹಸ್ತಾದಿರ್ಮಹಾನ್ ನಃ ಸ್ವಜನೋ ಹತಃ |
ತಸ್ಯ ನಾನ್ಯೋ ನಿಹಂತಾಽಸ್ತಿ ತ್ವಾಮೃತೇ ಶತ್ರುಕರ್ಶನ ॥25॥
ಅವನು ನಮ್ಮ ಸ್ವಜನರಾದ ಪ್ರಹಸ್ತಾದಿಗಳನ್ನೆಲ್ಲಾ ಸಂಹರಿಸಿದ್ದಾನೆ. ಎಲೈ ಶತ್ರುಕರ್ಶನನೇ, ನಿನ್ನನ್ನು ಬಿಟ್ಟು ಅವನನ್ನು ಕೊಲ್ಲುವವರು ಬೇರೆ ಯಾರೂ ಇಲ್ಲ.
ಸ ದಂಶಿತೋಽಭಿನಿರ್ಯಾಯ ತ್ವಮದ್ಯ ಬಲಿನಾಂ ವರ |

ರಾಮಾದೀನ್ ಸಮರೇ ಸರ್ವಾನ್ ಜಹಿ ಶತ್ರೂನರಿಂದಮ ॥26॥
ಎಲ್ಲೈ ಬಲಿಷ್ಠರಲ್ಲಿ ಶ್ರೇಷ್ಠನೇ, ಅರಿಂದಮನೇ, ನೀನು ಈ ದಿನ ಕವಚವನ್ನು ಧರಿಸಿ ಹೊರಟು ಯುದ್ಧದಲ್ಲಿ ರಾಮ ಮೊದಲಾದ ಎಲ್ಲ ಶತ್ರುಗಳನ್ನೂ ಸಂಹರಿಸು.
ದೂಷಣಾವರಜೌ ಚೈವ ವಜ್ರವೇಗಪ್ರಮಾಥಿನೌ |
ತೌ ತ್ವಾಂ ಬಲೇನ ಮಹತಾ ಸಹಿತಾವನುಯಾಸ್ಯತಃ ॥27॥
ದೂಷಣನ ತಮ್ಮಂದಿರಾದ ವಜ್ರವೇಗ ಮತ್ತು ಪ್ರಮಾಥಿ ಎಂಬ ಇಬ್ಬರು ದೊಡ್ಡ ಸೈನ್ಯದಿಂದ ಸಹಿತರಾಗಿ ನಿನ್ನನ್ನು ಹಿಂಬಾಲಿಸುವ (ಎಂದು ಹೇಳಿದನು).
ಮಾರ್ಕಂಡೇಯಃ
ಇತ್ಯುಕ್ತ್ವಾ ರಾಕ್ಷಸಪತಿಃ ಕುಂಭಕರ್ಣಂ ತರಸ್ವಿನಮ್ |
ಸಂದಿದೇಶೇತಿಕರ್ತವ್ಯಂ ವಜ್ರವೇಗಪ್ರಮಾಥಿನೌ ॥28॥
ಮಾರ್ಕಂಡೇಯರು ರಾಕ್ಷಸ ಪತಿಯು ಹೀಗೆ ಹೇಳಿ ವೇಗಶಾಲಿಯಾದ ಕುಂಭಕರ್ಣನಿಗೂ ಮತ್ತು ವಜ್ರವೇಗಪ್ರಮಾಥಿಗಳಿಗೂ ಮಾಡಬೇಕಾದ ಕರ್ತವ್ಯದ ವಿಷಯವನ್ನು ಆದೇಶಿಸಿದನು.
ತಥೇತ್ಯುಕ್ತ್ವಾ ತು ತೌ ವೀರೌ ರಾವಣಂ ದೂಷಣಾನುಜೌ |
ಕುಂಭಕರ್ಣಂ ಪುರಸ್ಕೃತ್ಯ ತೂರ್ಣಂ ನಿರ್ಯಯತುಃ ಪುರಾತ್ ॥29॥
ರಾವಣನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ ದೂಷಣನ ತಮ್ಮಂದಿರಾದ ಆ ಇಬ್ಬರು ವೀರರು ಕುಂಭಕರ್ಣನನ್ನು ಮುಂದೆ ಮಾಡಿಕೊಂಡು ಪಟ್ಟಣದಿಂದ ಹೊರಗೆ ಬಂದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಕುಂಭಕರ್ಣನಿರ್ಗಮನಂ ನಾಮ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ತಾರನೆಯ ಅಧ್ಯಾಯ
ಲಕ್ಷ್ಮಣನಿಂದ ಅತಿಕಾಯನ ವಧೆ ಮತ್ತು ಹನುಮಂತ ಮತ್ತು ಅನಿಲರಿಂದ ವಜ್ರವೇಗ ಮತ್ತು ಪ್ರಮಾತಿಗಳ ವಧೆ.
ಮಾರ್ಕಂಡೇಯಃ
ತತೋ ನಿರ್ಯಾಯ ಸ್ವಪುರಾತ್ ಕುಂಭಕರ್ಣಃ ಸಹಾನುಗಃ |
ಅಪಶ್ಯತ್ ಕಪಿಸೈನ್ಯಂ ತಜ್ಜಿತಕಾಶ್ಯಗ್ರತಃ ಸ್ಥಿತಮ್ ॥1॥
ಮಾರ್ಕಂಡೇಯ ಅನಂತರ ತನ್ನ ಅನುಚರರಿಂದ ಸಹಿತನಾದ ಕುಂಭಕರ್ಣನು ನಗರದಿಂದ ಹೊರಗೆ ಬಂದು ಜಯಾಕಾಂಕ್ಷಿಗಳಾಗಿ ಎದುರಿನಲ್ಲಿ ನಿಂತಿದ್ದ ಕಪಿಸೈನ್ಯವನ್ನು ನೋಡಿದನು.
ತಮಭ್ಯೇತ್ಯಾಶು ಹರಯಃ ಪರಿವವ್ರುಃ ಸಮಂತತಃ |
ಶೈಲವೃಕ್ಷಾಯುಧಾ ನಾದಾನಮುಂಚನ್ ಭೀಷಣಾಸ್ತತಃ ॥2॥
ಕಪಿಗಳು ತಕ್ಷಣ ಅವನನ್ನು ಸುತ್ತುವರಿದು ಶೈಲವೃಕ್ಷ ಆಯುಧಗಳನ್ನು ಹಿಡಿದು ಭಯಂಕರವಾದ ನಾದಗಳನ್ನು ಮಾಡಿದರು.
ಅಭ್ಯಘ್ನಂಶ್ಚ ಮಹಾಕಾಯೈರ್ಬಹುಭಿರ್ಜಗತೀರುಹೈಃ |
ಕರಜೈರತುದಂಶ್ಚಾನ್ಯೇ ವಿಹಾಯ ಭಯಮುತ್ತಮಮ್ ॥3॥
ಅವರು ದೊಡ್ಡವೃಕ್ಷಗಳಿಂದ ಅವನನ್ನು ಹೊಡೆದರು ಮತ್ತು ಭಯವನ್ನು ಬಿಟ್ಟು ತಮ್ಮ ಉಗುರುಗಳಿಂದ ಅವನನ್ನು ಪರಚಿ ಹಿಂಸಿಸಿದರು.
ಬಹುಧಾ ಯುಧ್ಯಮಾನಾಸ್ತೇ ಯುದ್ಧಮಾರ್ಗೈಃ ಪ್ಲವಂಗಮಾಃ |
ನಾನಾಪ್ರಹರಣೈರ್ಭೀಮೈ ರಾಕ್ಷಸೇಂದ್ರಮತಾಡಯನ್ ॥4॥
ಆ ಕಪಿಗಳು ಅನೇಕ ಯುದ್ಧಪ್ರಕಾರಗಳಿಂದ ಅವನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಆ ರಾಕ್ಷಸೇಂದ್ರನನ್ನು ಅನೇಕ ಭಯಂಕರವಾದ ವೃಕ್ಷ ಮೊದಲಾದ ಪದಾರ್ಥಗಳಿಂದ ಹೊಡೆದರು.
ಸ ತಾಡ್ಯಮಾನಃ ಪ್ರಹಸನ್ ಭಕ್ಷಯಾಮಾಸ ವಾನರಾನ್ |
ಬಲಂ ಚಂಡಬಲಾಖ್ಯಂ ಚ ವಜ್ರಬಾಹುಂ ಚ ವಾನರಮ್ ॥5॥
ಅವರಿಂದ ಹೊಡೆಯಲ್ಪಟ್ಟ ಕುಂಭಕರ್ಣನು ನಗುತ್ತಾ ವಾನರರನ್ನು ಭಕ್ಷಿಸಿದನು. ಬಲ, ಚಂಡಬಲ ಮತ್ತು ವಜ್ರಬಾಹು ಎಂಬ ವಾನರರನ್ನು ಅವನು ಭಕ್ಷಿಸಿದನು.
ತದ್ ದೃಷ್ಟ್ವಾ ವ್ಯಥನಂ ಕರ್ಮ ಕುಂಭಕರ್ಣಸ್ಯ ರಕ್ಷಸಃ |
ಉದಕ್ರೋಶನ್ಪರಿತ್ರಸ್ತಾಸ್ತಾರಪ್ರಭೃತಯಸ್ತದಾ ॥6॥
ತಮಗೆ ವ್ಯಥೆಯನ್ನುಂಟು ಮಾಡುವ ಕುಂಭಕರ್ಣ ರಾಕ್ಷಸನ ಕ್ರೂರಕರ್ಮವನ್ನು ನೋಡಿ ಹೆದರಿದ ತಾರ ಮೊದಲಾದವರು ಗಟ್ಟಿಯಾಗಿ ಕಿರುಚಿದರು.
ತಾನುಚ್ಚೈಃ ಕ್ರೋಶತಃ ಸೈನ್ಯಾನ್ ಶ್ರುತ್ವಾ ಸ ಹರಿಯೂಥಪಾನ್ |
ಅಭಿದುದ್ರಾವ ಸುಗ್ರೀವಃ ಕುಂಭಕರ್ಣಮಪೇತಭೀಃ ॥7॥
ಕಪಿಶ್ರೇಷ್ಠರೂ ಮತ್ತು ಅವರಿಂದ ಒಡಗೂಡಿದ ಸೈನ್ಯಗಳು ಗಟ್ಟಿಯಾಗಿ ಕಿರುಚುತ್ತಿರುವುದನ್ನು ಕೇಳಿದ ಸುಗ್ರೀವನು ಯಾವ ಭಯವೂ

ಇಲ್ಲದೆ ಕುಂಭಕರ್ಣನ ಸಮೀಪಕ್ಕೆ ಓಡಿಬಂದನು.
ತತೋ ನಿಪತ್ಯ ವೇಗೇನ ಕುಂಭಕರ್ಣಂ ಮಹಾಮನಾಃ |
ಶಾಲೇನ ಜಘ್ನಿವಾನ್ಮೂರ್ಧ್ನಿ ಬಲೇನ ಕಪಿಕುಂಜರಃ ॥8॥
ಧೈರ್ಯಶಾಲಿಯಾದ ಆ ಕಪಿಶ್ರೇಷ್ಠನು ವೇಗದಿಂದ ಕುಂಭಕರ್ಣನ ಮೇಲೆ ಎರಗಿ ದೊಡ್ಡ ಶಾಲವೃಕ್ಷದಿಂದ ತನ್ನ ಸಂಪೂರ್ಣಬಲದಿಂದ ಅವನ ತಲೆಯ ಮೇಲೆ ಹೊಡೆದನು.
ಸ ಮಹಾತ್ಮಾ ಮಹಾವೇಗಃ ಕುಂಭಕರ್ಣಸ್ಯ ಮೂರ್ಧನಿ |
ಬಿಭೇದ ಶಾಲಂ ಸುಗ್ರೀವೋ ನ ಚೈವಾವ್ಯಥಯತ್ ಕಪಿಃ ॥9॥
ಮಹಾತ್ಮನೂ, ಮಹಾವೇಗವುಳ್ಳವನೂ ಆದ ಕಪಿಯಾದ ಸುಗ್ರೀವನು ಕುಂಭಕರ್ಣನ ತಲೆಯ ಮೇಲೆ ಶಾಲವೃಕ್ಷದಿಂದ ಹೊಡೆದಾಗ ಶಾಲವೃಕ್ಷವು ಮುರಿಯಿತು. ಆದರೆ ಕುಂಭಕರ್ಣನಿಗೆ ವ್ಯಥೆಯಾಗಲಿಲ್ಲ.
ತತೋ ವಿನದ್ಯ ಸಹಸಾ ಶಾಲಸ್ಪರ್ಶವಿಬೋಧಿತಃ |
ದೋರ್ಭ್ಯಾಮಾದಾಯ ಸುಗ್ರೀವಂ ಕುಂಭಕರ್ಣೋಽಹರದ್ ಬಲಾತ್ ॥
ಆ ಸಾಲವೃಕ್ಷದ ಸ್ಪರ್ಶದಿಂದ ಪೂರ್ಣವಾಗಿ ಎಚ್ಚರಗೊಂಡ ಕುಂಭಕರ್ಣನು ಸುಗ್ರೀವನನ್ನು ತನ್ನ ಬಾಹುಗಳಿಂದ ಎತ್ತಿಕೊಂಡು ತನ್ನ ಬಲದಿಂದ ಅವನನ್ನು ಅಪಹರಿಸಿದನು.
ಹ್ರಿಯಮಾಣಂ ತು ಸುಗ್ರೀವಂ ಕುಂಭಕರ್ಣೇನ ರಕ್ಷಸಾ |
ಅವೇಕ್ಷ್ಯಾಭ್ಯದ್ರವದ್ ವೀರಃ ಸೌಮಿತ್ರಿರ್ಮಿತ್ರನಂದನಃ ॥11॥
ಆ ಕುಂಭಕರ್ಣ ರಾಕ್ಷಸನು ಸುಗ್ರೀವನನ್ನು ಎತ್ತಿಕೊಂಡು ಹೋಗುತ್ತಿರುವುದನ್ನು ನೋಡಿ ಮಿತ್ರನಂದನನಾದ ಸುಮಿತ್ರೆಯ ಮಗನಾದ ವೀರನಾದ ಲಕ್ಷ್ಮಣನು ಅವನ ಕಡೆಗೆ ಓಡಿದನು.
ಸೋಽಭಿಪತ್ಯ ಮಹಾವೇಗಂ ರುಗ್ಮಪುಂಖಂ ಮಹಾಶರಮ್ |
ಪ್ರಾಹಿಣೋತ್ ಕುಂಭಕರ್ಣಾಯ ಲಕ್ಷ್ಮಣಃ ಪರವೀರಹಾ ॥12॥
ಸ ತಸ್ಯ ದೇಹಾವರಣಂ ಭಿತ್ತ್ವಾ ದೇಹಂ ಚ ಸಾಯಕಃ |
ಜಗಾಮ ದಾರಯನ್ ಭೂಮಿಂ ರುಧಿರೇಣ ಸಮುಕ್ಷಿತಃ ॥13॥
ಪರಶತ್ರುಘಾತಕನಾದ ಲಕ್ಷ್ಮಣನು ಕುಂಭಕರ್ಣನನ್ನು ಸಂಧಿಸಿ ಮಹಾವೇಗವುಳ್ಳ ಚಿನ್ನದ ಪುಂಖವನ್ನು ಹೊಂದಿದ ದೊಡ್ಡ ಬಾಣವನ್ನು ಕುಂಭಕರ್ಣನ ಮೇಲೆ ಪ್ರಯೋಗಿಸಿದನು (ಇಲ್ಲೆಲ್ಲಾ ಕುಂಭಕಣರ್ನಂದರೆ ಅತಿಕಾಯನೆಂದು ಅರ್ಥ ಮಾಡಬೇಕು. ಅತಿಕಾಯನ ಕರ್ಣಗಳು ಕುಂಭನಂತೆ ಇದುದ್ದರಿಂದ ಅವನಿಗೂ ಕುಂಭಕರ್ಣನೆಂದು ಹೆಸರಿದ್ದಿತು ಎಂದು ಮಧ್ವಾಚಾರ್ಯರು ಹೇಳಿದ್ದಾರೆ. ರಾಮನಲ್ಲದೇ ಲಕ್ಷ್ಮಣನು ಕುಂಭಕರ್ಣನನ್ನು ಸಂಹಾರ ಮಾಡಲು ಸಾಧ್ಯವಿಲ್ಲವಾದ್ದರಿಂದ ಹೀಗೆ ಅರ್ಥವನ್ನು ಮಾಡಬೇಕು. ಅದೇ ಕಾಲದಲ್ಲಿಯೇ ರಾಮನು ಕುಂಭಕರ್ಣನ ವಧೆಯನ್ನೂ ಮಾಡಿದನು ಎಂದು ಸೂಚಿಸುವುದಕ್ಕಾಗಿ ಇಲ್ಲಿ ಕುಂಭಕರ್ಣ ಶಬ್ದವನ್ನು ಪ್ರಯೋಗಿಸಿದ್ದಾರೆ ವಾದಿರಾಜರು).
ಆ ಬಾಣವು ಅವನ ದೇಹದ ಮೇಲೆ ಧರಿಸಿದ್ದ ಕವಚವನ್ನು ಸೀಳಿ ಆ ದೇಹವನ್ನೂ ಸೀಳಿ ರಕ್ತವು ಸೋರುತ್ತಾ ಭೂಮಿಯನ್ನೂ ಸೀಳಿಕೊಂಡು ಹೋಯಿತು.
ತಥಾ ಸ ಭಿನ್ನಹೃದಯಃ ಸಮುತ್ಸೃಜ್ಯ ಕಪೀಶ್ವರಮ್ |
ವೇಗೇನ ಮಹತಾಽಽವಿಷ್ಟಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥14॥
ಹಾಗೆ ಹೃದಯಭೇದನವನ್ನು ಹೊಂದಿದ ಕುಂಭಕರ್ಣನು ಕಪೀಶ್ವರನಾದ ಸುಗ್ರೀವನನ್ನು ಬಿಟ್ಟು ಲಕ್ಷ್ಮಣನನ್ನು ಕುರಿತು ನಿಲ್ಲು, ನಿಲ್ಲು ಎಂದು ಬಹಳ ವೇಗದಿಂದ ಹೇಳಿದನು.
ಕುಂಭಕರ್ಣೋ ಮಹೇಷ್ವಾಸಃ ಪ್ರಗೃಹೀತಶಿಲಾಯುಧಃ |
ಅಭಿದುದ್ರಾವ ಸೌಮಿತ್ರಿಮುದ್ಯಮ್ಯ ಮಹತೀಂ ಶಿಲಾಮ್ ॥15॥
ತಸ್ಯಾಭಿಪತತಸ್ತೂರ್ಣಂ ಕ್ಷುರಾಭ್ಯಾಮುಚ್ಛ್ರಿತೌ ಕರೌ |
ಚಿಚ್ಛೇದ ನಿಶಿತಾಗ್ರಾಭ್ಯಾಂ ಸ ಬಭೂವ ಚತುರ್ಭುಜಃ ॥16॥
ಮಹೇಷ್ವಾಸನಾದ ಶಿಲಾಯುಧವನ್ನು ಹಿಡಿದ ಕುಂಭಕರ್ಣನೂ ಸಹ ದೊಡ್ಡ ಶಿಲೆಯನ್ನು ಎತ್ತಿ ಹಿಡಿದು ಲಕ್ಷ್ಮಣನ ಕಡೆಗೆ ಓಡಿದನು. ಲಕ್ಷ್ಮಣನು ಅವನು ಎತ್ತಿದ ಎರಡು ಕೈಗಳನ್ನು ಶೀಘ್ರವಾಗಿ ಚೂರಿಗಳಂತಹ ಎರಡು ಹರಿತವಾದ ಬಾಣಗಳಿಂದ ಕತ್ತರಿಸಿದನು. ಆಗ ಅತಿಕಾಯನು ಚತುರ್ಭುಜನಾದನು.
ತಾನಪ್ಯಸ್ಯ ಭುಜಾನ್ ಸರ್ವಾನ್ ಪ್ರಗೃಹೀತಶಿಲಾಯುಧಾನ್ |
ಕ್ಷುರೈಶ್ಚಿಚ್ಛೇದ ಲಘ್ವಸ್ತ್ರಂ ಸೌಮಿತ್ರಿಃ ಪ್ರತಿದರ್ಶಯನ್ ॥17॥
ಎತ್ತಿದ ಶಿಲೆಗಳನ್ನು ಆಯುಧವಾಗಿ ಹಿಡಿದ ಆ ಎಲ್ಲ ಭುಜಗಳನ್ನೂ ತನ್ನ ಕ್ಷಿಪ್ರಕಾರಿತ್ವವನ್ನು ತೋರಿಸುತ್ತಾ ಲಕ್ಷ್ಮಣನು ಪುನಃ ಶೂಲಗಳಿಂದ ಕತ್ತರಿಸಿದನು.
ಸ ಬಭೂವಾತಿಕಾಯಶ್ಚ ಬಹುಪಾದಶಿರೋಭುಜಃ |
ತಂ ಬ್ರಹ್ಮಾಸ್ತ್ರೇಣ ಸೌಮಿತ್ರಿರ್ದದಾರಾದ್ರಿಚಯೋಪಮಮ್ ॥18॥
ಆ ಅತಿಕಾಯನಾದರೂ ಪುನಃ ಅನೇಕ ಪಾದಗಳು, ಶಿರಸ್ಸುಗಳು ಮತ್ತು ಭುಜಗಳನ್ನು ಹೊಂದಿದವನಾದನು. ಪರ್ವತದ ರಾಶಿಯಂತಿದ್ದ ಅವನನ್ನು ಲಕ್ಷ್ಮಣನು ಬ್ರಹ್ಮಾಸ್ತ್ರದಿಂದ ಸೀಳಿಹಾಕಿದನು.
ಸ ಪಪಾತ ಮಹಾವೀರ್ಯೋ ದಿವ್ಯಾಸ್ತ್ರಾಭಿಹತೋ ರಣೇ |
ಮಹಾಶನಿವಿನಿರ್ದಗ್ಧಃ ಪಾದಪೋಽಂಕುರವಾನಿವ ॥19॥

ಮಹಾವೀರ್ಯನಾದ ಅವನು ಯುದ್ಧದಲ್ಲಿ ದಿವ್ಯಾಸ್ತ್ರದಿಂದ ಅಭಿಹತನಾಗಿ ಸಿಡಿಲಿನಿಂದ ನಿರ್ದಗ್ಧವಾದ ಅಂಕುರವುಳ್ಳ ವೃಕ್ಷದಂತೆ ಬಿದ್ದನು.
ತಂ ದೃಷ್ಟ್ವಾ ವೃತ್ರಸಂಕಾಶಂ ಕುಂಭಕರ್ಣಂ ತರಸ್ವಿನಮ್ |
ಗತಾಸುಂ ಪತಿತಂ ಭೂಮೌ ರಾಕ್ಷಸಾಃ ಪ್ರಾದ್ರವನ್ ಭಯಾತ್ ॥20॥
ವೃತ್ರನಂತಿದ್ದ ವೇಗಶಾಲಿಯಾದ ಆ ಕುಂಭಕರ್ಣನು (ಅತಿಕಾಯನು) ಪ್ರಾಣವನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದುದನ್ನು ನೋಡಿ ರಾಕ್ಷಸರು ಭಯದಿಂದ ಓಡಿಹೋದರು.
ತಥಾ ತಾನ್ ದ್ರವತೋ ಯೋಧಾನ್ ದೃಷ್ಟ್ವಾ ತೌ ದೂಷಣಾನುಜೌ |
ಅವಸ್ಥಾಪ್ಯಾಥ ಸೌಮಿತ್ರಂ ಸಂಕ್ರುದ್ಧಾವಭ್ಯಧಾವತಾಮ್ ॥21॥
ಸೈನಿಕರು ಹಾಗೆ ಓಡುತ್ತಿರುವುದನ್ನು ನೋಡಿದ ದೂಷಣನ ತಮ್ಮಂದಿರಾದ ವಜ್ರವೇಗ ಮತ್ತು ಪ್ರಮಾಥಿಗಳು ಕೋಪಗೊಂಡವರಾಗಿ ಸೈನ್ಯವನ್ನು ನಿಲ್ಲಿಸಿ ಲಕ್ಷ್ಮಣನ ಕಡೆಗೆ ಓಡಿದರು.
ತಾವಾದ್ರವಂತೌ ಸಂಕ್ರುದ್ಧೌ ವಜ್ರವೇಗಪ್ರಮಾಥಿನೌ |
ಅಭಿಜಗ್ರಾಹ ಸೌಮಿತ್ರಿರ್ವಿನದ್ಯೋಭೌ ಪತತ್ರಿಭಿಃ ॥22॥
ತನ್ನ ಮೇಲೆ ಎರಗಿ ಬರುತ್ತಿರುವ ಕ್ರುದ್ಧರಾದ ವಜ್ರವೇಗ ಮತ್ತು ಪ್ರಮಾಥಿಗಳನ್ನು ಲಕ್ಷ್ಮಣನು ಸಿಂಹನಾದವನ್ನು ಮಾಡಿ ತನ್ನ ಬಾಣಗಳಿಂದ ತಡೆಹಿಡಿದು ಸ್ವೀಕರಿಸಿದನು.
ತತಃ ಸುತುಮುಲಂ ಯುದ್ಧಮಭವಲ್ಲೋಮಹರ್ಷಣಮ್ |
ದೂಷಣಾನುಜಯೋಃ ಪಾರ್ಥ ಲಕ್ಷ್ಮಣಸ್ಯ ಚ ಧೀಮತಃ ॥23॥
ಎಲೈ ಪಾರ್ಥನೇ, ಅನಂತರ ದೂಷಣನ ತಮ್ಮಂದಿರಿಗೂ ಮತ್ತು ಮೇಧಾವಿಯಾದ ಲಕ್ಷ್ಮಣನಿಗೂ ಘೋರವೂ, ರೋಮಹರ್ಷಣವೂ ಆದ ಯುದ್ಧವು ನಡೆಯಿತು.
ಮಹತಾ ಶರವರ್ಷೇಣ ರಾಕ್ಷಸೌ ಸೋಽಭ್ಯವರ್ಷತ |
ತೌ ಚಾಪಿ ವೀರೌ ಸಂಕ್ರುದ್ಧಾವುಭೌ ತಂ ಸಮವರ್ಷತಾಮ್ ॥24॥
ಲಕ್ಷ್ಮಣನು ದೊಡ್ಡಬಾಣಗಳ ಮಳೆಯನ್ನು ಆ ರಾಕ್ಷಸರ ಮೇಲೆ ಕರೆದನು. ವೀರರೂ, ಕ್ರುದ್ಧರೂ ಆದ ದೂಷಣನ ತಮ್ಮಂದಿರೂ ಸಹ ಅವನ ಮೇಲೆ ಬಾಣಗಳ ಮಳೆಗರೆದರು.
ಮುಹೂರ್ತಮೇವಮಭವದ್ ವಜ್ರವೇಗಪ್ರಮಾಥಿನೋಃ |
ಸೌಮಿತ್ರೇಶ್ಚ ಮಹಾಬಾಹೋಃ ಸಂಪ್ರಹಾರಃ ಸುದಾರುಣಃ ॥25॥
ಒಂದುಮುಹೂರ್ತದವರೆಗೆ ಮಹಾಬಾಹುವಾದ ಲಕ್ಷ್ಮಣನಿಗೂ ಮತ್ತು ವಜ್ರವೇಗ ಪ್ರಮಾಥಿಗಳಿಗೂ ದಾರುಣವಾದ ಪರಸ್ಪರ ಪ್ರಹಾರವು ನಡೆಯಿತು.
ಅಥಾದ್ರಿಶೃಂಗಮಾದಾಯ ಹನುಮಾನ್ ಮಾರುತಾತ್ಮಜಃ |
ಅಭಿದ್ರುತ್ಯಾದದೇ ಪ್ರಾಣಾನ್ ವಜ್ರವೇಗಸ್ಯ ರಕ್ಷಸಃ ॥26॥
ಅನಂತರ ಮಾರುತಾತ್ಮಜನಾದ ಹನುಮಂತನು ಒಂದು ಪರ್ವತದ ಶಿಖರವನ್ನು ಹಿಡಿದು ರಾಕ್ಷಸನಾದ ವಜ್ರವೇಗನ ಕಡೆಗೆ ಓಡಿ ಅದರಿಂದ ಅವನ ಪ್ರಾಣಗಳನ್ನು ಸಂಹರಿಸಿದನು.
ನೀಲಶ್ಚ ಮಹತಾ ಗ್ರಾವ್ಣಾ ದೂಷಣಾವರಜಂ ಹರಿಃ |
ಪ್ರಮಾಥಿನಮಭಿದ್ರುತ್ಯ ಪ್ರಮಮಾಥ ಮಹಾಬಲಃ ॥27॥
ಮಹಾಬಲನಾದ ನೀಲನೆಂಬ ಕಪಿಯೂ ಸಹ ದೊಡ್ಡ ಶಿಲೆಯನ್ನು ಹಿಡಿದು ದೂಷಣನ ತಮ್ಮನಾದ ಪ್ರಮಾಥಿಯನ್ನು ಹಿಂಸೆಗೊಳಿಸಿದನು (ಸಂಹರಿಸಿದನು).
ತತಃ ಪ್ರಾವರ್ತತ ಪುನಃ ಸಂಗ್ರಾಮಃ ಕಟುಕೋದಯಃ |
ರಾಮರಾವಣಸೈನ್ಯಾಮನ್ಯೋನ್ಯಮಭಿಧಾವತಾಮ್ ॥28॥
ಅನಂತರ ಪುನಃ ಪರಸ್ಪರ ಪ್ರಹಾರವನ್ನು ಮಾಡುವ ರಾಮರಾಮಣರ ಸೈನ್ಯಗಳಿಗೆ ಕಷ್ಟಕರವಾದ ಘೋರವಾದ ಸಂಗ್ರಾಮವು ಉಂಟಾಯಿತು.
ಶತಶೋ ನೈರ್ಋತಾ ವನ್ಯಾನ್ ಜಘ್ನುರ್ವನಾಶ್ಚ ನೈಋತಾನ್ |
ನೈರ್ಋತಾಸ್ತತ್ರ ವಧ್ಯಂತೇ ಪ್ರಾಯೇಣ ನ ತು ವಾನರಾಃ ॥29॥
ನೂರಾರು ಸಂಖ್ಯೆಯಲ್ಲಿ ರಾಕ್ಷಸರು ಕಪಿಗಳನ್ನೂ, ಕಪಿಗಳು ರಾಕ್ಷಸರನ್ನೂ ಹೊಡೆದರು. ರಾಕ್ಷಸರು ಅಲ್ಲಿ ಹೆಚ್ಚಾಗಿ ಮೃತರಾಗುತ್ತಿದ್ದರು. ಕಪಿಗಳು ಮೃತರಾಗುತ್ತಿರಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಅತಿಕಾಯಾದಿ ವಧೋ ನಾಮ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ತೇಳನೆಯ ಅಧ್ಯಾಯ
ಲಕ್ಷ್ಮಣ-ಇಂದ್ರಜಿತುಗಳ ಯುದ್ಧ. ಇಂದ್ರಜಿತುವಿನಿಂದ ಮಾಯಾಶ್ರಯಣ. ಅಲ್ಲಿಗೆ ರಾಮನ ಆಗಮನ.
ಮಾರ್ಕಂಡೇಯಃ

ಕುಂಭಕರ್ಣಂ ಹತಂ ಶ್ರುತ್ವಾ ಸ್ವಾನುಜಂ ರಾಕ್ಷಸಾಧಿಪಃ |
ಪ್ರಹಸ್ತಂ ಚ ಮಹೇಷ್ವಾಸಂ ಧೂಮ್ರಾಕ್ಷಂ ಚಾತಿತೇಜಸಮ್ |
ಪುತ್ರಮಿಂದ್ರಜಿತಂ ವೀರಂ ರಾವಣಃ ಪ್ರತ್ಯಭಾಷತ ॥1॥
ಮಾರ್ಕಂಡೇಯ ರಾಕ್ಷಸಾಧಿಪನು ತನ್ನ ತಮ್ಮನಾದ ಕುಂಭಕರ್ಣನು ಹತವಾದುದನ್ನು ಕೇಳಿ ಅದರಂತೆ ಮಹೇಷ್ವಾಸನಾದ ಪ್ರಹಸ್ತನು, ಅತಿತೇಜಸ್ವಿಯಾದ ಧೂಮ್ರಾಕ್ಷನು ಹತವಾದುದನ್ನು ಕೇಳಿ ವೀರನಾದ ತನ್ನ ಪುತ್ರನಾದ ಇಂದ್ರಜಿತುವನ್ನು ಕುರಿತು ರಾವಣನು ಮಾತನಾಡಿದನು.
ಜಹಿ ರಾಮಮಮಿತ್ರಘ್ನ ಸುಗ್ರೀವಂ ಚ ಸಲಕ್ಷ್ಮಣಮ್ ॥2॥
ತ್ವಯಾ ಹಿ ಮಮ ಸತ್ಪುತ್ರ ಯಶೋ ದೀಪ್ತಮುಪಾರ್ಜಿತಮ್ |
ಜಿತ್ವಾ ವಜ್ರಧರಂ ಸಂಖ್ಯೇ ಸಹಸ್ರಾಕ್ಷಂ ಶಚೀಪತಿಮ್ ॥3॥
ಶತ್ರುಸೂದನನೇ, ರಾಮನನ್ನೂ, ಲಕ್ಷ್ಮಣಸಹಿತನಾದ ಸುಗ್ರೀವನನ್ನೂ ಸಂಹಾರ ಮಾಡು. ಸತ್ಪುತ್ರನೇ, ನೀನು ಸಹಸ್ರಾಕ್ಷನೂ, ವಜ್ರಾಯುಧಧರನೂ ಆದ ಶಚೀಪತಿಯನ್ನು ಗೆದ್ದು ನನಗೆ ದೀಪ್ತವಾದ ಯಶಸ್ಸನ್ನು ತಂದುಕೊಟ್ಟಿದ್ದೀಯೆ.
ಅಂತರ್ಹಿತಃ ಪ್ರಕಾಶೋ ವಾ ದಿವ್ಯೈರ್ದತ್ತವರೈಃ ಶರೈಃ |
ಜಹಿ ಶತ್ರೂನಮಿತ್ರಘ್ನ ಮಮ ಶಸ್ತ್ರಭೃತಾಂ ವರ ॥4॥
ಅಮಿತ್ರಜ್ಞನೇ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೇ, ನೀನು ವರಗಳನ್ನು ಹೊಂದಿದ ದಿವ್ಯಬಾಣಗಳಿಂದ ದೃಶ್ಯನಾಗಿಯಾಗಲೀ ಅಥವಾ ಅದೃಶ್ಯನಾಗಿಯಾಗಲೀ ಶತ್ರುಗಳನ್ನು ಕೊಲ್ಲುವವನಾಗು.
ರಾಮಲಕ್ಷ್ಮಣಸುಗ್ರೀವಾಃ ಶರಸ್ಪರ್ಶಂ ನ ತೇಽನಘ |
ಸಮರ್ಥಾಃ ಪ್ರತಿಸೋಢುಂ ಚ ಕುತಸ್ತದನುಯಾಯಿನಃ ॥5॥
ಎಲೈ ಅನಘನೇ, ರಾಮಲಕ್ಷ್ಮಣಸುಗ್ರೀವರು ನಿನ್ನ ಬಾಣದ ಸ್ಪರ್ಶವನ್ನು ಸಹಿಸಲಾರರು. ಇನ್ನು ಅವರ ಅನುಯಾಯಿಗಳು ಹೇಗೆ ಸಹಿಸುವರು?
ಅಕೃತಾ ಯಾ ಪ್ರಹಸ್ತೇನ ಕುಂಭಕರ್ಣೇನ ಚಾನಘ |
ಖರಸ್ಯಾಪಚಿತಿಃ ಸಂಖ್ಯೇ ತಾಂ ಗಚ್ಛ ತ್ವಂ ಮಹಾಭುಜ ॥6॥
ಎಲೈ ಅನಘನೇ, ಪ್ರಹಸ್ತನಾಗಲೀ, ಕುಂಭಕರ್ಣನಾಗಲೀ ಯುದ್ಧದಲ್ಲಿ ಖರನ ವಧೆಗೆ ಪ್ರತೀಕಾರವನ್ನು ಮಾಡಲಿಲ್ಲ. ಮಹಾಭುಜನೇ, ನೀನು ಆ ಪ್ರತೀಕಾರವನ್ನು ಮಾಡುವವನಾಗು.
ತ್ವಮದ್ಯನಿಶಿತೈರ್ಬಾಣೈರ್ಹತ್ವಾ ಶತ್ರೂನ್ ಸಸೈನಿಕಾನ್ |
ಪ್ರತಿನಂದಯ ಮಾಂ ಪುತ್ರ ಪುರಾ ಜಿತ್ವೇವ ವಾಸವಮ್ ॥7॥
ಪುತ್ರನೇ, ನೀನು ಈ ದಿನ ನಿನ್ನ ಹರಿತವಾದ ಬಾಣಗಳಿಂದ ಸೈನಿಕರಿಂದ ಕೂಡಿದ ಶತ್ರುಗಳನ್ನು ಕೊಂದು ಹಿಂದೆ ಇಂದ್ರನನ್ನು ಗೆದ್ದು ನನ್ನನ್ನು ಸಂತೋಷಪಡಿಸಿದಂತೆ ಈ ದಿನವೂ ನನ್ನನ್ನು ಸಂತೋಷಪಡಿಸು.
ಮಾರ್ಕಂಡೇಯಃ
ಇತ್ಯುಕ್ತಃ ಸ ತಥೇತ್ಯುಕ್ತ್ವಾ ರಥಮಾಸ್ಥಾಯ ದಂಶಿತಃ |
ಪ್ರಯಯಾವಿಂದ್ರಜಿದ್ ರಾಜಂಸ್ತೂರ್ಣಮಾಯೋಧನಂ ಪ್ರತಿ ॥8॥
ಮಾರ್ಕಂಡೇಯ ಹೀಗೆ ಹೇಳಲ್ಪಟ್ಟ ಇಂದ್ರಜಿತುವು ಎಲೈ ರಾಜನೇ, ಹಾಗೆಯೇ ಆಗಲೀ ಎಂದು ಹೇಳಿ ಕವಚವನ್ನು ಧರಿಸಿ, ರಥವನ್ನು ಏರಿ ಶೀಘ್ರವಾಗಿ ರಣರಂಗದ ಕಡೆಗೆ ಹೋದನು.
ತತೋ ವಿಶ್ರಾವ್ಯ ವಿಸ್ಪಷ್ಟಂ ನಾಮ ರಾಕ್ಷಸಪುಂಗವಃ |
ಅಹ್ವಯಾಮಾಸ ಸಮರೇ ಲಕ್ಷ್ಮಣಂ ಶುಭಲಕ್ಷಣಮ್ ॥9॥
ಅನಂತರ ರಾಕ್ಷಸಶ್ರೇಷ್ಠನಾದ ಅವನು ತನ್ನ ಹೆಸರನ್ನು ಗಟ್ಟಿಯಾಗಿ ಹೇಳಿ ಶುಭಲಕ್ಷಣವುಳ್ಳ ಲಕ್ಷ್ಮಣನನ್ನು ಯುದ್ಧದಲ್ಲಿ ಆಹ್ವಾನ ಮಾಡಿದನು.
ತಂ ಲಕ್ಷ್ಮಣೋಽಭ್ಯಧಾವಚ್ಚ ಪ್ರಗೃಹ್ಯ ಸಶರಂ ಧನುಃ |
ತ್ರಾಸಯಂಸ್ತಳಘೋಷೇಣ ಸಿಂಹಃ ಕ್ಷುದ್ರಮೃಗಾನ್ ಯಥಾ ॥10॥
ಲಕ್ಷ್ಮಣನು ಧನುರ್ಬಾಣಗಳನ್ನು ಹಿಡಿದು ತಳಘೋಷದಿಂದ ಭಯವನ್ನು ಉಂಟು ಮಾಡುತ್ತಾ ಸಿಂಹವು ಕ್ಷುದ್ರಮೃಗದ ಕಡೆಗೆ ಧಾವಿಸಿದಂತೆ ಅವನ ಕಡೆಗೆ ಧಾವಿಸಿದನು.
ತಯೋಃ ಸಮಭವದ್ ಯುದ್ಧಂ ಸುಮಹಜ್ಜಯಗೃದ್ಧಿನೋಃ |
ದಿವ್ಯಾಸ್ತ್ರವಿದುಷೋಸ್ತೀವ್ರಮನ್ಯೋನ್ಯಸ್ಪರ್ಧಿನೋಸ್ತದಾ ॥11॥
ದಿವ್ಯಾಸ್ತ್ರಜ್ಞಾನವನ್ನು ಹೊಂದಿ ಪರಸ್ಪರವಾಗಿ ಜಯಿಸುವ ಇಚ್ಛೆಯಿಂದ ಪರಸ್ಪರವಾಗಿ ಸ್ಪರ್ಧಿಸುವ ಅವರಿಗೆ ಬಹಳ ದೊಡ್ಡದಾದ ಮತ್ತು ತೀವ್ರವಾದ ಯುದ್ಧವು ಜರುಗಿತು.
ರಾವಣಿಸ್ತು ಯದಾ ನೈನಂ ವಿಶೇಷಯತಿ ಸಾಯಕೈಃ |
ತತೋ ಗುರುತರಂ ಯತ್ನಮಾತಿಷ್ಠದ್ ಬಲಿನಾಂ ವರಃ ॥12॥
ರಾವಣನ ಪುತ್ರನಾದ ಇಂದ್ರಜಿತುವು ಲಕ್ಷ್ಮಣನನ್ನು ತನ್ನ ಬಾಣಪ್ರಯೋಗದಿಂದ ಅತಿಶಯಗೊಳಿಸಲು ಸಾಧ್ಯವಿಲ್ಲದಿದ್ದಾಗ ಬಲಿಷ್ಠರಲ್ಲಿ ಶ್ರೇಷ್ಠನಾದ ಅವನು ಇನ್ನೂ ಮಹಾಪ್ರಯತ್ನವನ್ನು ಮಾಡಿದನು.
ತತ ಏನಂ ಮಹಾವೇಗೈರರ್ದಯಾಮಾಸ ತೋಮರೈಃ |
ತಾನಾಗತಾನ್ ಸ ಚಿಚ್ಛೇದ ಸೌಮಿತ್ರಿರ್ನಿಶಿತೈಃ ಶರೈಃ ॥13॥

ಅನಂತರ ಈ ಲಕ್ಷ್ಮಣನನ್ನು ಮಹಾವೇಗವುಳ್ಳ ತೋಮರಗಳಿಂದ ಪೀಡಿಸಿದನು. ಲಕ್ಷ್ಮಣನು ಸಮೀಪಕ್ಕೆ ಬಂದ ಆ ತೋಮರಗಳನ್ನು ಹರಿತವಾದ ಬಾಣಗಳಿಂದ ಕತ್ತರಿಸಿದನು.
ತೇ ನಿಕೃತ್ತಾಃ ಶರೈಸ್ತೀಕ್ಷ್ಣೈರ್ನ್ಯಪತನ್ ಧರಣೀತಳೇ |
ಸಾಧಕಾ ರಾವಣೇರಾಜೌ ಶತಶಃ ಶಕಲೀಕೃತಾಃ ॥14॥
ರಾವಣನ ಪುತ್ರನಾದ ಇಂದ್ರಜಿತುವಿಗೆ ಯುದ್ಧದಲ್ಲಿ ಸಹಾಯಕವಾಗಿದ್ದ ಆ ತೋಮರಗಳು ಲಕ್ಷ್ಮಣನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ನೂರಾರು ಚೂರುಗಳಾಗಿ ಬಿದ್ದವು.
ತಮಂಗದೋ ವಾಲಿಸುತಃ ಶ್ರೀಮಾನುದ್ಯಮ್ಯ ಪಾದಪಮ್ |
ಅಭಿದ್ರುತ್ಯ ಮಹಾವೇಗಸ್ತಾಡಯಾಮಾಸ ಮೂರ್ಧನಿ ॥15॥
ವಾಲಿಸುತನಾದ ಕಾಂತಿಯುಕ್ತನಾದ ಅಂಗದನು ಒಂದುವೃಕ್ಷವನ್ನು ಎತ್ತಿಕೊಂಡು ಮಹಾವೇಗವುಳ್ಳವನಾಗಿ ಅದನ್ನು ಇಂದ್ರಜಿತುವಿನ ತಲೆಯ ಮೇಲೆ ಹೊಡೆದನು.
ತಸ್ಯೇಂದ್ರಜಿದಸಂಭ್ರಾಂತಃ ಪ್ರಾಸೇನೋರಸಿ ವೀರ್ಯವಾನ್ |
ಪ್ರಹರ್ತುಮೈಚ್ಛತ್ ತಂ ಚಾಸ್ಯ ಪ್ರಾಸಂ ಚಿಚ್ಛೇದ ಲಕ್ಷ್ಮಣಃ ॥16॥
ಅದಕ್ಕೆ ವೀರ್ಯಶಾಲಿಯಾದ ಇಂದ್ರಜಿತುವು ಯಾವ ಆತಂಕಕ್ಕೂ ಒಳಗಾಗದೆ ಪ್ರಾಸದಿಂದ ಅಂಗದನ ವಕ್ಷಸ್ಸ್ಥಲಕ್ಕೆ ಪ್ರಹಾರಮಾಡಲು ಇಚ್ಛಿಸಿದನು. ಅವನ ಆ ಪ್ರಾಸವನ್ನು ಲಕ್ಷ್ಮಣನು ಕತ್ತರಿಸಿದನು.
ತಮಭ್ಯಾಶಗತಂ ವೀರಮಂಗದಂ ರಾವಣಾತ್ಮಜಃ |
ಗದಯಾಽತಾಡಯತ್ ಸವ್ಯೇ ಪಾರ್ಶ್ವೇ ವಾನರಪುಂಗವಮ್ ॥17॥
ರಾವಣಪುತ್ರನಾದ ಇಂದ್ರಜಿತುವು ಸಮೀಪಕ್ಕೆ ಬಂದ ವೀರನಾದ ವಾನರ ಪುಂಗವನಾದ ಅಂಗದನ ಎಡಪಾರ್ಶ್ವದಲ್ಲಿ ಗದೆಯಿಂದ ಹೊಡೆದನು.
ತಮಚಿಂತ್ಯ ಪ್ರಹಾರಂ ಸ ಬಲವಾನ್ ವಾಲಿನಃ ಸುತಃ |
ಸಸರ್ಜೇಂದ್ರಜಿತಃ ಕ್ರೋಧಾಚ್ಛಾಲಸ್ಕಂಧಂ ತಥಾಽಂಗದಃ ॥18॥
ಆ ಪ್ರಹಾರವನ್ನು ಗಣನೆಗೇ ತಂದುಕೊಳ್ಳದೆ ವಾಲಿಪುತ್ರನಾದ ಬಲಿಷ್ಠನಾದ ಅಂಗದನು ಕ್ರೋಧದಿಂದ ಶಾಲವೃಕ್ಷದ ಒಂದು ದೊಡ್ಡ ಕೊಂಬೆಯನ್ನು ಇಂದ್ರಜಿತುವಿನ ಮೇಲೆ ಪ್ರಯೋಗಿಸಿದನು.
ಸೋಽಂಗದೇನ ರುಷೋತ್ಸೃಷ್ಟೋ ವಧಾಯೇಂದ್ರಜಿತಸ್ತರುಃ |
ಜಘಾನೇಂದ್ರಜಿತಃ ಪಾರ್ಥ ರಥಂ ಸಾಶ್ವಂ ಸಸಾರಥಿಮ್ ॥19॥
ಎಲೈ ಪಾರ್ಥನೇ, ಅಂಗದನಿಂದ ಇಂದ್ರಜಿತನ ವಧೆಗಾಗಿ ರೋಷದಿಂದ ಪ್ರಯೋಗಿಸಲ್ಪಟ್ಟ ಆ ವೃಕ್ಷವು ಅಶ್ವಸಾರಥಿಗಳಿಂದ ಸಹಿತನಾದ ಇಂದ್ರಜಿತುವಿನ ರಥವನ್ನು ಪುಡಿಮಾಡಿತು.
ತತೋ ಹತಾಶ್ವಾತ್ ಪ್ರಸ್ಕಂದ್ಯ ರಥಾತ್ ಸ ಹತಸಾರಥಿಃ |
ತತ್ರೈವಾಂತರ್ದಧೇ ರಾಜನ್ಮಾಯಯಾ ರಾವಣಾತ್ಮಜಃ ॥20॥
ಎಲೈ ರಾಜನೇ, ಅನಂತರ ಅಶ್ವಸಾರಥಿಗಳನ್ನು ಕಳೆದುಕೊಂಡ ರಥದಿಂದ ಆ ರಾವಣಪುತ್ರನು ಕೆಳಗೆ ಧುಮುಕಿ ಮಾಯೆಯಿಂದ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಅಂತರ್ಹಿತಂ ವಿದಿತ್ವಾ ತಂ ಬಹುಮಾಯಂ ಚ ರಾಕ್ಷಸಮ್ |
ರಾಮಸ್ತಂ ದೇಶಮಾಗಮ್ಯ ತತ್ಸೈನ್ಯಂ ಪರ್ಯರಕ್ಷತ ॥21॥
ಬಹುಮಾಯವುಳ್ಳ ಆ ರಾಕ್ಷಸನು ಅಂತರ್ಧಾನವನ್ನು ಹೊಂದಿದುದನ್ನು ತಿಳಿದು ರಾಮನು ಆ ಪ್ರದೇಶಕ್ಕೆ ಬಂದು ಆ ಕಪಿಸೈನ್ಯವನ್ನು ರಕ್ಷಿಸಿದನು.
ಸ ರಾಮಮುದ್ದಿಶ್ಯ ಶರೈಸ್ತತೋ ದತ್ತವರೈಸ್ತದಾ |
ವಿವ್ಯಾಧ ಸರ್ವಗಾತ್ರೇಷು ಲಕ್ಷ್ಮಣಂ ಚ ಮಹಾಬಲಮ್ ॥22॥
ಇಂದ್ರಜಿತುವು ರಾಮನನ್ನೂ, ಮಹಾಬಲನಾದ ಲಕ್ಷ್ಮಣನನ್ನೂ ಉದ್ದೇಶಿಸಿ ಅವರ ಸರ್ವಶರೀರದಲ್ಲಿ ವರಗಳಿಂದ ಕೂಡಿದ ಬಾಣಗಳಿಂದ ಪ್ರಹಾರವನ್ನು ಮಾಡಿದನು.
ತಮದೃಶ್ಯಂ ಶರೈಃ ಶೂರೌ ಮಾಯಯಾಽಂತರ್ಹಿತಂ ತದಾ |
ಯೋಧಯಾಮಾಸತುರುಭೌ ರಾವಣಿಂ ರಾಮಲಕ್ಷ್ಮಣೌ ॥23॥
ಮಹಾಶಕ್ತಿಯಿಂದ ಅಂತರ್ದಾನವನ್ನು ಹೊಂದಿ ಅದೃಶ್ಯನಾದ ರಾವಣನ ಪುತ್ರನ ಜೊತೆಯಲ್ಲಿ ಶೂರರಾದ ರಾಮಲಕ್ಷ್ಮಣರಿಬ್ಬರೂ ಬಾಣಗಳಿಂದ ಯುದ್ಧವನ್ನು ಮಾಡಿದರು.
ಸ ರುಷಾ ಸರ್ವಗಾತ್ರೇಷು ತಯೋಃ ಪುರುಷಸಿಂಹಯೋಃ |
ವ್ಯಸೃಜತ್ ಸಾಯಕಾನ್ ಭೂಯಃ ಶತಶೋಽಥ ಸಹಸ್ರಶಃ ॥24॥
ಅವನು ರೋಷದಿಂದ ಆ ಪುರುಷಸಿಂಹರಿಬ್ಬರ ಸರ್ವಶರೀರದಲ್ಲಿ ಪುನಃ ನೂರಾರು, ಸಹಸ್ರಾರು ಬಾಣಗಳನ್ನು ಪ್ರಯೋಗಿಸಿದನು.
ತಮದೃಶ್ಯಂ ವಿಚಿನ್ವಂತಃ ಸೃಜಂತಮನಿಶಂ ಶರಾನ್ |
ಹರಯೋ ವಿವಿಶುರ್ವ್ಯೋಮ ಪ್ರಗೃಹ್ಯ ಮಹತೀಃ ಶಿಲಾಃ ॥25॥
ಸತತವಾಗಿ ಬಾಣಪ್ರಯೋಗವನ್ನು ಮಾಡುತ್ತಾ ಅದೃಶ್ಯನಾಗಿದ್ದ ಅವನನ್ನು ಹುಡುಕಲು ಕಪಿಗಳು ದೊಡ್ಡ ಶಿಲೆಗಳನ್ನು ತೆಗೆದುಕೊಂಡು ಆಕಾಶವನ್ನು ಪ್ರವೇಶ ಮಾಡಿದರು.
ತಾಂಶ್ಚ ತೌ ಚಾಪ್ಯದೃಶ್ಯಃ ಸ ಶರೈರ್ವಿವ್ಯಾಧ ರಾಕ್ಷಸಃ |

ಸ ಭೃಶಂ ತಾಡಯಾಮಾಸ ರಾವಣಿರ್ಮಾಯಯಾಽಽವೃತಃ ॥26॥
ರಾವಣನ ಪುತ್ರನಾದ ಆ ರಾಕ್ಷಸನು ಮಾಯೆಯನ್ನು ಆಶ್ರಯಿಸಿ ರಾಮಲಕ್ಷ್ಮಣರನ್ನು ಮತ್ತು ಆ ಕಪಿಗಳನ್ನು ಅದೃಶ್ಯನಾಗಿಯೇ ಬಾಣಗಳಿಂದ ಚೆನ್ನಾಗಿ ಪೀಡಿಸಿದನು.
ತೌ ಶರೈರಾಚಿತೌ ವೀರೌ ಭ್ರಾತರೌ ರಾಮಲಕ್ಷ್ಮಣೌ |
ಪೇತತುರ್ಗಗನಾದ್ ಭೂಮಿಂ ಸೂರ್ಯಾಚಂದ್ರಮಸಾವಿವ ॥27॥
ಅವನ ಬಾಣಗಳಿಂದ ನೆಟ್ಟ ಶರೀರವುಳ್ಳ ವೀರರಾದ ಅಣ್ಣತಮ್ಮಂದಿರಾದ ರಾಮಲಕ್ಷ್ಮಣರು ಸೂರ್ಯಚಂದ್ರರಂತೆ ಆಕಾಶದಿಂದ ಭೂಮಿಗೆ ಬಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಇಂದ್ರಜಿದ್ಯುದ್ಧಂ ನಾಮ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * *

ಇನ್ನೂರ ಎಪ್ಪತ್ತೆಂಟನೆಯ ಅಧ್ಯಾಯ
ರಾಮಲಕ್ಷ್ಮಣರ ಮೂರ್ಛೆ. ವಿಭೀಷಣನಿಂದ ಪ್ರಜ್ಞಾನಾಸ್ತ್ರಪ್ರಯೋಗದಿಂದ ಅದರ ನಿವೃತ್ತಿ. ಸುಗ್ರೀವನಿಂದ ಅವರ ವಿಶಲ್ಲೀಕರಣ. ಕುಬೇರನು ಕಳುಹಿಸಿದ ಜಲದಿಂದ ರಾಮಾದಿಗಳಿಗೆ ಅತೀಂದ್ರಿಯ ದರ್ಶನ ಶಕ್ತಿ. ಲಕ್ಷ್ಮಣನಿಂದ ಇಂದ್ರಜಿತುವಿನ ವಧೆ. ಸೀತೆಯನ್ನು ಕೊಲ್ಲಲು ಉದ್ಯುಕ್ತನಾದ ರಾವಣನಿಗೆ ವೃದ್ಧಾಮಾತ್ಯನಾದ ಅವಿಂದ್ಯನಿಂದ ಪ್ರತಿನಿವರ್ತನ.
ಮಾರ್ಕಂಡೇಯಃ
ತಾವುಭೌ ಪತಿತೌ ದೃಷ್ಟ್ವಾ ಭ್ರಾತರೌ ರಾಮಲಕ್ಷ್ಮಣೌ |
ಬಬಂಧ ರಾವಣಿರ್ಭೂಯಃ ಶರೈರ್ದತ್ತವರೈಸ್ತದಾ ॥1॥
ಮಾರ್ಕಂಡೇಯರು ಅಣ್ಣತಮ್ಮಂದಿರಾದ ಆ ರಾಮಲಕ್ಷ್ಮಣರಿಬ್ಬರೂ ಬಿದ್ದುದನ್ನು ನೋಡಿ ರಾವಣಪುತ್ರನು ಪುನಃ ವರಗಳಿಂದ ಕೂಡಿದ ಬಾಣಗಳಿಂದ ಅವರನ್ನು ಬಂಧಿಸಿದನು.
ತೌ ವೀರೌ ಶರಬಂಧೇನ ಬದ್ಧಾವಿಂದ್ರಜಿತಾ ರಣೇ |
ರೇಜತುಃ ಪುರುಷವ್ಯಾಘ್ರೌ ಶಕುಂತಾವಿವ ಪಂಜರೇ ॥2॥
ಯುದ್ಧದಲ್ಲಿ ಇಂದ್ರಜಿತುವಿನ ಬಾಣಗಳಿಂದ ಬದ್ಧರಾದ ವೀರರಾದ ಆ ಪುರುಷವ್ಯಾಘ್ರರು ಪಂಜರದಲ್ಲಿಟ್ಟ ಎರಡು ಪಕ್ಷಿಗಳಂತೆ ಶೋಭಿಸಿದರು.
ತೌ ದೃಷ್ಟ್ವಾ ಪತಿತೌ ಭೂಮೌ ಶತಶಃ ಸಾಯಕೈಶ್ಚಿತೌ |
ಸುಗ್ರೀವಃ ಕಪಿಭಿಃ ಸಾರ್ಧಂ ಪರಿವಾರ್ಯ ತತಃ ಸ್ಥಿತಃ ॥3॥
ಸುಷೇಣಮೈಂದದ್ವಿವಿದೈಃ ಕುಮುದೇನಾಂಗದೇನ ಚ |
ಹನುಮನ್ನೀಲತಾರೈಶ್ಚ ನಳೇನ ಚ ಕಪೀಶ್ವರಃ ॥4॥
ಅವರಿಬ್ಬರೂ ನೂರಾರು ಬಾಣಗಳು ದೇಹದಲ್ಲಿ ನೆಟ್ಟು ಭೂಮಿಯಲ್ಲಿ ಬಿದ್ದುದನ್ನು ನೋಡಿದ ಕಪೀಶ್ವರನಾದ ಸುಗ್ರೀವನು ಕಪಿಗಳ ಪರಿವಾರದಿಂದ ಕೂಡಿದವನಾಗಿ ಅವನು ಸುಷೇಣ, ಮೈಹಿಂದ, ವಿವಿದ, ಕುಮುದ, ಅಂಗದ, ಹನುಮಂತ, ನೀಲ, ತಾರ, ನಳ ಇವರ ಜೊತೆಯಲ್ಲಿ ಅಲ್ಲಿಯೇ ನಿಂತನು.
ತತಸ್ತಂ ದೇಶಮಾಗಮ್ಯ ಕೃತಕರ್ಮಾ ವಿಭೀಷಣಃ |
ಬೋಧಯಾಮಾಸ ತೌ ವೀರೌ ಪ್ರಜ್ಞಾಸ್ತ್ರೇಣ ಪ್ರಬೋಧಿತೌ ॥5॥
ಅನಂತರ ವಿಭೀಷಣನು ತನ್ನ ಕಾರ್ಯವನ್ನು ಮಾಡಿ ಆ ಪ್ರದೇಶಕ್ಕೆ ಬಂದು ಆ ವೀರರನ್ನು ತನ್ನ ಪ್ರಜ್ಞಾನಾಸ್ತ್ರದಿಂದ ಎಚ್ಚರಗೊಳ್ಳುವಂತೆ ಮಾಡಿದನು.
ವಿಶಲ್ಯೌ ಚಾಪಿ ಸುಗ್ರೀವಃ ಕ್ಷಣೇನೈತೌ ಚಕಾರ ಹ |
ವಿಶಲ್ಯಯಾ ಮಹೌಷಧ್ಯಾ ದಿವ್ಯಮಂತ್ರಪ್ರಯುಕ್ತಯಾ ॥6॥
ಸುಗ್ರೀವನು ಮಂತ್ರಸಹಿತವಾದ ವಿಶಲ್ಯ ಎಂಬ ಮಹೌಷಧಿಯಿಂದ ಅವರ ದೇಹದಲ್ಲಿದ್ದ ವ್ರಣಗಳೆಲ್ಲವನ್ನೂ ಒಂದುಕ್ಷಣದಲ್ಲಿ ನಾಶಪಡಿಸಿದನು.
ತೌ ಲಬ್ಧಸಂಜ್ಞೌ ನೃವರೌ ವಿಶಲ್ಯಾವುದತಿಷ್ಠತಾಮ್ |
ಗತತಂದ್ರೀಕ್ಲಮೌ ಚಾಪಿ ಕ್ಷಣೇನೈತೌ ಮಹಾರಥೌ ॥7॥
ಮಹಾರಥರಾದ ಅವರಿಬ್ಬರೂ ಸಂಜ್ಞೆಯನ್ನು ಮರಳಿ ಪಡೆದು, ದೇಹದ ವ್ರಣಗಳೆಲ್ಲವನ್ನೂ ಕಳೆದುಕೊಂಡು ಆಲಸ್ಯವನ್ನೂ, ಆಯಾಸವನ್ನೂ ಕಳೆದುಕೊಂಡವರಾಗಿ ಒಂದು ಕ್ಷಣದಲ್ಲಿ ಆ ನರವೀರರು ಎದ್ದುನಿಂತರು.
ತತೋ ವಿಭೀಷಣಃ ಪಾರ್ಥ ರಾಮಮಿಕ್ಷ್ವಾಕುನಂದನಮ್ |
ಉವಾಚ ವಿಜ್ವರಂ ದೃಷ್ಟ್ವಾ ಕೃತಾಂಜಲಿರಿದಂ ವಚಃ ॥8॥
ಎಲೈ ಪಾರ್ಥನೇ, ಅನಂತರ ವಿಭೀಷಣನು ಇಕ್ಷ್ವಾಕುನಂದನನಾದ ರಾಮನು ತಾಪರಹಿತನಾದುದನ್ನು ನೋಡಿ ಕೈಗಳನ್ನು ಮುಗಿದು

ಈ ಮಾತನ್ನು ಆಡಿದನು.
ವಿಭೀಷಣಃ
ಇದಮಂಭೋ ಗೃಹೀತ್ವಾ ತು ರಾಜರಾಜಸ್ಯ ಶಾಸನಾತ್ |
ಗುಹ್ಯಕೋಽಭ್ಯಾಗತಃ ಶ್ವೇತಾತ್ ತ್ವತ್ಸಕಾಶಮರಿಂದಮ ॥9॥
ವಿಭೀಷಣ ಎಲೈ ಅರಿಂದಮನೇ, ಕುಬೇರನ ಶಾಸನದಂತೆ ಈ ಜಲವನ್ನು ತೆಗೆದುಕೊಂಡು ಒಬ್ಬ ಗುಹ್ಯಕನು ಶ್ವೇತಪರ್ವತದಿಂದ ನಿನ್ನ ಬಳಿಗೆ ಬಂದಿದ್ದಾನೆ.
ಇದಮಂಭಃ ಕುಬೇರಸ್ತೇ ಮಹಾರಾಜಃ ಪ್ರಯಚ್ಛತಿ |
ಅಂತರ್ಹಿತಾನಾಂ ಭೂತಾನಾಂ ದರ್ಶನಾರ್ಥಂ ಪರಂತಪಃ ॥10॥
ಪರಂತಪನಾದ ಮಹಾರಾಜನಾದ ಕುಬೇರನು ಅಂತರ್ಧಾನವನ್ನು ಹೊಂದಿದ ಭೂತಗಳ ದರ್ಶನಕ್ಕೋಸ್ಕರವಾಗಿ ಈ ಜಲವನ್ನು ನಿನಗೆ ಕಳುಹಿಸಿದ್ದಾನೆ.
ಅನೇನ ಮೃಷ್ಟನಯನೋ ಭೂತಾನ್ಯಂತರ್ಹಿತಾನ್ಯುತ |
ಭವಾನ್ ದ್ರಕ್ಷ್ಯತಿ ಯಸ್ಮೈ ಚ ಪ್ರದಾಸ್ಯತಿ ನರಃ ಸ ತು ॥11॥
ಈ ಜಲವನ್ನು ನೀನು ಕಣ್ಣಿಗೆ ಹಚ್ಚಿಕೊಂಡರೆ ಅಂತರ್ಧಾನವನ್ನು ಹೊಂದಿದ ಭೂತಗಳನ್ನು ನೋಡುವಿ. ಈ ಜಲವನ್ನು ಯಾವ ಮನುಷ್ಯರಿಗೆ ಕೊಟ್ಟರೂ ಅವನಿಗೂ ಅಂತಹ ಶಕ್ತಿಯುಂಟಾಗುತ್ತದೆ.
ಮಾರ್ಕಂಡೇಯಃ
ತಥೇತಿ ರಾಮಸ್ತದ್ವಾರಿ ಪ್ರತಿಗೃಹ್ಯಾಭಿಸಂಸ್ಕೃತಮ್ |
ಚಕಾರ ನೇತ್ರಯೋಃ ಶೌಚಂ ಲಕ್ಷ್ಮಣಶ್ಚ ಮಹಾಮನಾಃ ॥12॥
ಮಾರ್ಕಂಡೇಯ ಹಾಗೆಯೇ ಆಗಲಿ ಎಂದು ಹೇಳಿ ರಾಮನು ಮಂತ್ರಪೂತವಾದ ಆ ನೀರನ್ನು ತೆಗೆದುಕೊಂಡು ತನ್ನ ಕಣ್ಣುಗಳನ್ನು ತೊಳೆದುಕೊಂಡನು. ಮಹಾಮನನಾದ ಲಕ್ಷ್ಮಣನೂ ಸಹ ಹಾಗೆಯೇ ಮಾಡಿದನು.
ಸುಗ್ರೀವಜಾಂಬವಂತೌ ಚ ಹನುಮಾನಂಗದಸ್ತಥಾ |
ಮೈಂದದ್ವಿವಿದನೀಲಾಶ್ಚ ಪ್ರಾಯಃ ಪ್ಲವಗಸತ್ತಮಾಃ॥13॥
ತಥಾ ಸಮಭವಚ್ಚಾಪಿ ಯದುವಾಚ ವಿಭೀಷಣಃ |
ಕ್ಷಣೇನಾತೀಂದ್ರಿಯಾಣ್ಯೇಷಾಂ ಚಕ್ಷೂಂಷ್ಯಾಸನ್ ಯುಧಿಷ್ಠಿರ ॥14॥
ಸುಗ್ರೀವ-ಜಾಂಬವಂತರೂ, ಅದರಂತೆ ಹನುಮಂತ-ಅಂಗದರೂ, ಮೈಂದದ್ವಿವಿದನೀಲರೂ ಮತ್ತು ಹೆಚ್ಚಾಗಿ ಎಲ್ಲಾ ಕಪಿಶ್ರೇಷ್ಠರೂ ಹಾಗೆಯೇ ಮಾಡಿದರು. ಎಲೈ ಯುಧಿಷ್ಠಿರನೇ, ವಿಭೀಷಣನು ಹೇಳಿದಂತೆಯೇ ಅವರೆಲ್ಲರ ಕಣ್ಣುಗಳಿಗೂ ಅತೀಂದ್ರಿಯವಾದ ವಸ್ತುವನ್ನು ನೋಡುವ ಶಕ್ತಿಯುಂಟಾಯಿತು.
ಇಂದ್ರಜಿತ್ಕೃತಕರ್ಮಾ ಚ ಪಿತ್ರೇ ಕರ್ಮ ತದಾಽಽತ್ಮನಃ |
ನಿವೇದ್ಯ ಪುನರಾಗಚ್ಛತ್ ತ್ವರಯಾಽಜಿಶಿರಃ ಪ್ರತಿ ॥15॥
ಇಂದ್ರಜಿತುವು ತನ್ನ ಕಾರ್ಯವನ್ನು ಮಾಡಿ ತನ್ನ ತಂದೆಗೆ ಹೋಗಿ ಈ ವಿಷಯವನ್ನು ತಿಳಿಸಿ ಪುನಃ ಯುದ್ಧಭೂಮಿಗೆ ಶೀಘ್ರವಾಗಿ ಹಿಂದಿರುಗಿದನು.
ತಮಾಪತಂತಂ ಸಂಕ್ರುದ್ಧಂ ಪುನರೇವ ಯುಯುತ್ಸಯಾ |
ಅಭಿದುದ್ರಾವ ಸೌಮಿತ್ರಿರ್ವಿಭೀಷಣಮತೇ ಸ್ಥಿತಃ ॥16॥
ಪುನಃ ಬಹಳ ಕೋಪಗೊಂಡು ಬರುತ್ತಿರುವ ಅವನನ್ನು ನೋಡಿ ಲಕ್ಷ್ಮಣನು ವಿಭೀಷಣನ ಅಭಿಪ್ರಾಯದಂತೆ ಯುದ್ಧಮಾಡಲು ಬಯಸಿ ಅವನ ಕಡೆಗೆ ಓಡಿದನು.
ಅಕೃತಾಹ್ನಿಕಮೇವೈನಂ ಜಿಘಾಂಸುರ್ಜಿತಕಾಶಿನಮ್ |
ಶರೈರ್ಜಘಾನ ಸಂಕ್ರುದ್ಧಃ ಕೃತಸಂಜ್ಞೋಽಥ ಲಕ್ಷ್ಮಣಃ ॥17॥
ಅವನು ಆಹ್ನಿಕವನ್ನು ಮಾಡುವುದಕ್ಕಿಂತ ಮುಂಚೆಯೇ ಜಯಾಕಾಂಕ್ಷಿಯಾಗಿದ್ದ ಅವನನ್ನು ಕೊಲ್ಲಲು ಬಯಸಿ ಸಂಕ್ರುದ್ಧನಾದ ಲಕ್ಷ್ಮಣನು ಅವನಿಗೆ ಹೇಳಿ ಅವನಿಗೆ ಬಾಣಗಳಿಂದ ಹೊಡೆದನು.
ತಯೋಃ ಸಮಭವದ್ ಯುದ್ಧಂ ತದಾಽನ್ಯೋನ್ಯಂ ಜಿಗೀಷತೋಃ |
ಅತೀವ ಚಿತ್ರಮಾಶ್ಚರ್ಯಂ ಶಕ್ರಪ್ರಹ್ಲಾದಯೋರಿವ ॥18॥
ಆಗ ಪರಸ್ಪರ ಗೆಲ್ಲುವ ಆಸೆಯಿಂದ ಅವರಿಗೆ ವಿಚಿತ್ರವೂ, ಆಶ್ಚರ್ಯಕರವೂ ಆದ ಯುದ್ಧವು ಇಂದ್ರ ಮತ್ತು ಪ್ರಹ್ಲಾದರಿಗೆ ನಡೆದಂತೆ ಪರಸ್ಪರವಾಗಿ ನಡೆಯಿತು.
ಅವಿಧ್ಯದಿಂದ್ರಜಿತ್ ತೀಕ್ಷ್ಣೈಃ ಸೌಮಿತ್ರಿಂ ಮರ್ಮಭೇದಿಭಿಃ |
ಸೌಮಿತ್ರಿಶ್ಚಾನಲಸ್ಪರ್ಶೈರವಿಧ್ಯದ್ ರಾವಣಿಂ ಶರೈಃ ॥19॥
ಇಂದ್ರಜಿತುವು ಲಕ್ಷ್ಮಣನನ್ನು ಮರ್ಮಭೇದಕವಾದ ತೀಕ್ಷ್ಣವಾದ ಬಾಣಗಳಿಂದ ಹೊಡೆದನು. ಲಕ್ಷ್ಮಣನೂ ಸಹ ಅಗ್ನಿಯಂತಹ ಸ್ಪರ್ಶವುಳ್ಳ ಬಾಣಗಳಿಂದ ರಾವಣಪುತ್ರನನ್ನು ಹೊಡೆದನು.
ಸೌಮಿತ್ರಿಶರಸಂಸ್ಪರ್ಶಾದ್ ರಾವಣಿಃ ಕ್ರೋಧಮೂರ್ಛಿತಃ |
ವ್ಯಸೃಜಲ್ಲಕ್ಷ್ಮಣಾಯಾಷ್ಟೌ ಶರಾನಾಶೀವಿಷೋಪಮಾನ್ ॥20॥
ಲಕ್ಷ್ಮಣನ ಶರಸಂಸ್ಪರ್ಶದಿಂದ ಕ್ರೋಧಮೂರ್ಛಿತನಾದ ಇಂದ್ರಜಿತುವು ತನ್ನ ಬಿಲ್ಲಿನಲ್ಲಿ ಸರ್ಪಗಳಂತಿರುವ ಎಂಟುಬಾಣಗಳನ್ನು ಲಕ್ಷ್ಮಣನನ್ನು ಉದ್ದೇಶಿಸಿ ಹೂಡಿದನು.

ತಸ್ಯಾಸೂನ್ ಪಾವಕಸ್ಪರ್ಶೈಃ ಸೌಮಿತ್ರಿಃ ಪತ್ರಿಭಿಸ್ತ್ರಿಭಿಃ |
ಯಥಾ ನಿರಹರದ್ ವೀರಸ್ತನ್ಮೇ ನಿಗದತಃ ಶೃಣು ||21||
ವೀರನಾದ ಲಕ್ಷ್ಮಣನು ಅಗ್ನಿಸ್ಪರ್ಶವುಳ್ಳ ಮೂರುಬಾಣಗಳಿಂದ ಅವನ ಪ್ರಾಣಗಳನ್ನು ಹೇಗೆ ಅಪಹರಿಸಿದನೆಂಬುದನ್ನು ನನ್ನಿಂದ ಕೇಳು.
ಏಕೇನಾಸ್ಯ ಧನುಷ್ಮಂತಂ ಬಾಹುಂ ದೇಹಾದಪಾತಯತ್ |
ದ್ವಿತೀಯೇನ ಸನಾರಾಚಂ ಭುಜಂ ಭೂಮೌ ನ್ಯಪಾತಯತ್ ||22||
ತೃತೀಯೇನ ತು ಬಾಣೇನ ಪೃಥುಧಾರೇಣ ಭಾಸ್ವತಾ |
ಜಹಾರ ಸುನಸಂ ಚಾಪಿ ಶಿರೋ ಭ್ರಾಜಿಷ್ಣುಕುಂಡಲಮ್ ||23||
ವಿನಿಕೃತ್ತಭುಜಸ್ಕಂಧಂ ಕಬಂಧಂ ಭೀಮದರ್ಶನಮ್ |
ಪಪಾತ ವಸುಧಾಯಾಂ ತು ಭಿನ್ನಮೂಲ ಇವ ದ್ರುಮಃ ||24||
ಒಂದುಬಾಣದಿಂದ ಧನುಸ್ಸನ್ನು ಹಿಡಿದಿದ್ದ ಅವನ ತೋಳನ್ನು ನೆಲಕ್ಕೆ ಬೀಳಿಸಿದನು. ಎರಡನೆಯ ಬಾಣದಿಂದ ಬಾಣವನ್ನು ಹಿಡಿದಿದ್ದ ಅವನ ಬಲಭುಜವನ್ನು ಭೂಮಿಯಲ್ಲಿ ಬೀಳಿಸಿದನು. ಮೂರನೆಯ ವಿಶಾಲವಾದ ಅಲಗನ್ನುಳ್ಳ ಪ್ರಕಾಶಮಾನವಾದ ಬಾಣದಿಂದ ಅವನ ಸುಂದರ ನಾಸಿಕ ಮತ್ತು ಕುಂಡಲಗಳಿಂದ ಅಲಂಕೃತವಾದ ಶಿರಸ್ಸನ್ನು ಅಪಹರಿಸಿದನು. ಭುಜಗಳು ಮತ್ತು ಶಿರಸ್ಸಿಲ್ಲದೇ ಭಯಂಕರವಾಗಿ ತೋರುತ್ತಿದ್ದ ಇಂದ್ರಜಿತುವಿನ ಕಬಂದವು (ರುಂಡವು) ಬುಡವನ್ನು ಕಡಿದ ವೃಕ್ಷದಂತೆ ಭೂಮಿಯ ಮೇಲೆ ಉರುಳಿತು.
ತಂ ಹತ್ವಾ ಸುತಮಪ್ಯಸ್ತ್ರೈರ್ಜಘಾನ ಬಲಿನಾಂ ವರಃ |
ಲಂಕಾಂ ಪ್ರವೇಶಯಾಮಾಸುಸ್ತಂ ರಥಂ ವಾಜಿನಸ್ತದಾ |
ದದರ್ಶ ರಾವಣಸ್ತಂ ಚ ರಥಂ ಪುತ್ರವಿನಾಕೃತಮ್ ||25||
ಬಲಿಷ್ಠರಲ್ಲಿ ಶ್ರೇಷ್ಠನಾದ ಲಕ್ಷ್ಮಣನು ಅವನನ್ನು ಕೊಂದು ಅವನ ಮಗನನ್ನೂ ಅಸ್ತ್ರಗಳಿಂದ ಕೊಂದನು. ಇಂದ್ರಜಿತುವಿನ ಕುದುರೆಗಳು, ಅವನ ರಥವನ್ನು ಲಂಕೆಗೆ ಎಳೆದುಕೊಂಡು ಹೋದವು. ರಾವಣನು ಪುತ್ರನಿಲ್ಲದ ಅವನ ರಥವನ್ನು ನೋಡಿದನು.
ಸ ಪುತ್ರಂ ನಿಹತಂ ಜ್ಞಾತ್ವಾ ತ್ರಾಸಾತ್ ಸಂಭ್ರಾಂತಮಾನಸಃ |
ರಾವಣಃ ಶೋಕಮೋಹಾರ್ತೋ ವೈದೇಹೀಂ ಹಂತುಮುದ್ಯತಃ ||26||
ಆ ರಾವಣನು ಪುತ್ರನು ಹತನಾದುದನ್ನು ತಿಳಿದು ಹೆದರಿಕೆಯಿಂದ ಭ್ರಾಂತವಾದ ಮನಸ್ಸುಳ್ಳವನಾಗಿ ಶೋಕಮೋಹಿತನಾಗಿ ವೈದೇಹಿಯನ್ನು ಕೊಲ್ಲಲು ಉದ್ಯುಕ್ತನಾದನು.
ಅಶೋಕವನಿಕಾಸ್ಥಾಂ ತಾಂ ರಾಮದರ್ಶನಲಾಲಸಾಮ್ |
ಖಡ್ಗಮಾದಾಯ ದುಷ್ಟಾತ್ಮಾ ಜವೇನಾಭಿಪಪಾತ ಹ ||27||
ಅಶೋಕವನದಲ್ಲಿ ರಾಮದರ್ಶನಲಾಲಸೆಯಾಗಿದ್ದ ಅವಳ ಬಳಿಗೆ ದುಷ್ಟಾತ್ಮನಾದ ಅವನು ಖಡ್ಗವನ್ನು ತೆಗೆದುಕೊಂಡು ಶೀಘ್ರವಾಗಿ ಓಡಿದನು.
ತಂ ದೃಷ್ಟ್ವಾ ತಸ್ಯ ದುರ್ಬುದ್ಧೇರವಿಂಧ್ಯಃ ಪಾಪನಿಶ್ಚಯಮ್ |
ಶಮಯಾಮಾಸ ಸಂಕ್ರುದ್ಧಂ ಶ್ರೂಯತಾಂ ಯೇನ ಹೇತುನಾ ||28||
ಆ ದುರ್ಬುದ್ಧಿಯವುಳ್ಳ ರಾವಣನ ಪಾಪನಿಶ್ಚಯವನ್ನು ನೋಡಿದ ಅವಿಂಧ್ಯನು ಕೋಪಗೊಂಡ ಅವನನ್ನು ಯಾವ ಕಾರಣಗಳಿಂದ ಸಮಾಧಾನಮಾಡಿದನೆಂಬುದನ್ನು ಕೇಳು.
ಅವಿಂಧ್ಯಃ
ಮಹಾರಾಜ್ಯೇ ಸ್ಥಿತೋ ದೀಪ್ತೇ ನ ಸ್ತ್ರಿಯಂ ಹಂತುಮರ್ಹಸಿ |
ಹತೈವೈಷಾ ಯದಾ ಸ್ತ್ರೀ ಚ ಬಂಧನಸ್ಥಾ ಚ ತೇ ವಶೇ ||29||
ಅವಿಂಧ್ಯ ದೊಡ್ಡರಾಜ್ಯದಲ್ಲಿ ಪ್ರಕಾಶಮಾನನಾಗಿದ್ದು ನೀನು ಸ್ತ್ರೀಯನ್ನು ಕೊಲ್ಲುವುದು ಉಚಿತವಲ್ಲ. ಯಾವಾಗ ಈ ಸ್ತ್ರೀಯು ನಿನ್ನ ಬಂಧನಕ್ಕೆ ಒಳಗಾಗಿ ನಿನ್ನ ವಶದಲ್ಲಿ ಸಿಕ್ಕಿದಳೋ ಆಗಲೇ ಅವಳು ಹತಳಾಗಿದ್ದಾಳೆ.
ನ ಚೈಷಾ ದೇಹಭೇದೇನ ಹತಾ ಸ್ಯಾದಿತಿ ಮೇ ಮತಿಃ |
ಜಹಿ ಭರ್ತಾರಮೇವಾಸ್ಯಾ ಹತೇ ತಸ್ಮಿನ್ ಹತಾ ಭವೇತ್ ||30||
ಇವಳು ದೇಹಚ್ಛೇದದಿಂದ ಇನ್ನೊಮ್ಮೆ ಹತಳಾಗುವುದಿಲ್ಲವೆಂದು ನನ್ನ ಅಭಿಪ್ರಾಯ. ಇವಳ ಪತಿಯನ್ನೇ ಕೊಲ್ಲುವವನಾಗು. ಅವನನ್ನು ಕೊಂದರೆ ಇವಳು ಹತಳಾದಂತೆಯೇ ಸರಿ.
ನ ಹಿ ತೇ ವಿಕ್ರಮೇ ತುಲ್ಯಃ ಸಾಕ್ಷಾದಪಿ ಶತಕ್ರತುಃ |
ಅಸಕೃದ್ಧಿ ತ್ವಯಾ ಸೇಂದ್ರಾಸಸತ್ರಸಿತಾಸ್ತ್ರಿದಶಾ ಯುಧಿ ||31||
ನಿನ್ನ ವಿಕ್ರಮಕ್ಕೆ ಸಾಕ್ಷಾತ್ ಇಂದ್ರನೂ ಸಮಾನನಲ್ಲ. ನೀನು ಅನೇಕಬಾರಿ ಇಂದ್ರನನ್ನೂ ಸೇರಿ ಅನೇಕ ದೇವತೆಗಳನ್ನು ಯುದ್ಧದಲ್ಲಿ ಭಯಗ್ರಸ್ತರನ್ನಾಗಿ ಮಾಡಿದ್ದೀಯೆ.
ಮಾರ್ಕಂಡೇಯಃ
ಏವಂ ಬಹುವಿಧೈರ್ವಾಕ್ಯೈರವಿಂಧ್ಯೋ ರಾವಣಂ ತದಾ |
ಕ್ರುದ್ಧಂ ಸಂಶಮಯಾಮಾಸ ಜಗೃಹೇ ಚ ಸ ತದ್ವಚಃ ||32||
ಮಾರ್ಕಂಡೇಯರು ಹೀಗೆ ಬಹುವಿಧವಾದ ವಾಕ್ಯಗಳಿಂದ ಅವಿಂಧ್ಯನು ಕೋಪಗೊಂಡಿದ್ದ ರಾವಣನನ್ನು ಆಗ ಸಮಾಧಾನಪಡಿಸಿದನು. ರಾವಣನೂ ಸಹ ಆ ಮಾತುಗಳನ್ನು ಸ್ವೀಕರಿಸಿದನು.

ನಿರ್ಯಾಣೇ ಸ ಮತಿಂ ಕೃತ್ವಾ ನಿಧಾಯಾಸಿಂ ಕ್ಷಪಾಚರಃ |
ಆಜ್ಞಾಪಯಾಮಾಸ ತದಾ ರಥೋ ಮೇ ಕಲ್ಪ್ಯತಾಮಿತಿ ॥33॥
ಆ ರಾಕ್ಷಸನು ತನ್ನ ಕತ್ತಿಯನ್ನು ಒರೆಯಲ್ಲಿಟ್ಟು ಯುದ್ಧಕ್ಕೆ ತಾನೇ ಹೋಗುವುದೆಂದು ನಿಶ್ಚಯಿಸಿ ನನಗೆ ಒಂದು ರಥವನ್ನು ಅಣಿಗೊಳಿಸಿ ಎಂದು ಆಜ್ಞೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಅಷ್ಟಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಇಂದ್ರಜಿದ್ವಧೋ ನಾಮ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ
ರಣಭೂಮಿಗೆ ರಾವಣನ ಆಗಮನ. ಇಂದ್ರನಿಂದ ರಾಮನಿಗೆ ಮಾತಲಿಸಹಿತವಾಗಿ ರಥಪ್ರೇಷಣ. ಬ್ರಹ್ಮಾಸ್ತ್ರದಿಂದ ರಾವಣನ ಹನನ.
ಮಾರ್ಕಂಡೇಯಃ
ತತಃ ಕ್ರುದ್ಧೋ ದಶಗ್ರೀವಃ ಪ್ರಿಯೇ ಪುತ್ರೇ ನಿಪಾತಿತೇ |
ನಿರ್ಯಯೌ ರಥಮಾಸ್ಥಾಯ ಹೇಮರತ್ನವಿಭೂಷಿತಮ್ ॥1॥
ಮಾರ್ಕಂಡೇಯರು ತನ್ನ ಪ್ರಿಯಪುತ್ರನು ಹತನಾಗುತ್ತಿರಲು ಕ್ರುದ್ಧನಾದ ದಶಗ್ರೀವನು ಹೇಮರತ್ನವಿಭೂಷಿತವಾದ ರಥವನ್ನು ಏರಿ ಹೊರಟನು.
ಸ ವೃತೋ ರಾಕ್ಷಸೈರ್ಘೋರೈರ್ವಿವಿಧಾಯುಧಪಾಣಿಭಿಃ |
ಅಭಿದುದ್ರಾವ ರಾಮಂ ಸ ಯೋಧಯನ್ ಹರಿಯೂಥಪಾನ್ ॥2॥
ಅವನು ವಿವಿಧವಾದ ಆಯುಧಗಳನ್ನು ಕೈಯಲ್ಲಿ ಹಿಡಿದ ರಾಕ್ಷಸರಿಂದ ಸುತ್ತುವರಿಯಲ್ಪಟ್ಟು ಕಪಿಶ್ರೇಷ್ಠರ ಜೊತೆಯಲ್ಲಿ ಯುದ್ಧಮಾಡುತ್ತಾ ರಾಮನ ಕಡೆಗೆ ಓಡಿದನು.
ತಮಾದ್ರವಂತಂ ಸಂಕ್ರುದ್ಧಂ ಮೈಂದನೀಲನಳಾಂಗದಾಃ |
ಹನೂಮಾನ್ ಜಾಂಬವಾಂಶ್ಚೈವ ಸಸೈನ್ಯಾಃ ಪರ್ಯವಾರಯನ್ ॥3॥
ಹಾಗೆ ಕ್ರೋಧದಿಂದ ಓಡುತ್ತಿದ್ದ ಅವನನ್ನು ಸೈನ್ಯಸಹಿತರಾದ ಮೈಂದ, ನೀಲ, ನಳ, ಅಂಗದ, ಹನುಮಂತ, ಜಾಂಬವಂತ ಇವರು ತಡೆದರು.
ತೇ ದಶಗ್ರೀವಸೈನ್ಯಂ ತದೃಕ್ಷವಾನರಪುಂಗವಾಃ |
ದ್ರುಮೈರ್ವಿಧ್ವಂಸಯಾಂಚಕ್ರುರ್ದಶಗ್ರೀವಸ್ಯ ಪಶ್ಯತಃ ॥4॥
ಋಕ್ಷಶ್ರೇಷ್ಠರೂ ಮತ್ತು ವಾನರಶ್ರೇಷ್ಠರೂ ದಶಗ್ರೀವನು ನೋಡುತ್ತಿರುವಂತೆಯೇ ಅವನ ಸೈನ್ಯವನ್ನು ಮರಗಳಿಂದ ವಿಧ್ವಂಸಗೊಳಿಸಿದರು.
ತತಃ ಸ ಸೈನ್ಯಮಾಲೋಕ್ಯ ವಧ್ಯಮಾನಮರಾತಿಭಿಃ |
ಮಾಯಾವೀ ಚಾಸೃಜನ್ಮಾಯಾಂ ರಾವಣೋ ರಾಕ್ಷಸಾಧಿಪಃ ॥5॥
ತನ್ನ ಸೈನ್ಯವು ಶತ್ರುಗಳಿಂದ ಹತವಾಗುತ್ತಿರುವುದನ್ನು ನೋಡಿದ ಮಾಯಾವಿಯಾದ ರಾಕ್ಷಸೇಶ್ವರನಾದ ರಾವಣನು ಮಾಯೆಯನ್ನು ಸೃಷ್ಟಿಮಾಡಿದನು.
ತಸ್ಯ ದೇಹವಿನಿಷ್ಕ್ರಾಂತಾಃ ಶತಶೋಽಥ ಸಹಸ್ರಶಃ |
ರಾಕ್ಷಸಾಃ ಪ್ರತ್ಯದೃಶ್ಯಂತ ಶರಶಕ್ತ್ಯೃಷ್ಟಿಪಾಣಯಃ ॥6॥
ಅವನ ದೇಹದಿಂದ ನೂರಾರು ಸಾವಿರಾರು ಸಂಖ್ಯೆಯಲ್ಲಿ ಹೊರಗೆ ಬಂದ ರಾಕ್ಷಸರು ಬಾಣ, ಶಕ್ತಿ, ಋಷ್ಟಿಗಳನ್ನು ಕೈಯಲ್ಲಿ ಹಿಡಿದಿರುವುದು ಕಂಡುಬಂದಿತು.
ತಾನ್‌ರಾಮೋ ಜಘ್ನಿವಾನ್ ಸರ್ವಾನ್ ದಿವ್ಯೇನಾಸ್ತ್ರೇಣ ರಾಕ್ಷಸಾನ್ |
ಅಥ ಭೂಯೋಽಪಿ ಮಾಯಾಂ ಸ ವ್ಯದಧಾದ್ ರಾಕ್ಷಸಾಧಿಪಃ ॥7॥
ರಾಮನು ದಿವ್ಯಾಸ್ತ್ರದಿಂದ ಆ ರಾಕ್ಷಸರನ್ನೆಲ್ಲಾ ಹನನ ಮಾಡಿದನು. ಆಗ ರಾಕ್ಷಸಾಧಿಪನು ಪುನಃ ಮಾಯೆಯನ್ನು ಸೃಷ್ಟಿಮಾಡಿದನು.
ಕೃತ್ವಾ ರಾಮಸ್ಯ ರೂಪಾಣಿ ಲಕ್ಷ್ಮಣಸ್ಯ ಚ ಭಾರತ |
ಅಭಿದುದ್ರಾವ ರಾಮಂ ಚ ಲಕ್ಷ್ಮಣಂ ಚ ದಶಾನನಃ ॥8॥
ಎಲೈ ಭಾರತನೇ, ದಶಾನನನು ರಾಮನ ರೂಪಗಳನ್ನು, ಲಕ್ಷ್ಮಣನನ ರೂಪಗಳನ್ನು ತೆಗೆದುಕೊಂಡು ರಾಮಲಕ್ಷ್ಮಣರ ಕಡೆಗೆ ಓಡಿಬಂದನು.
ತತಸ್ತೇ ರಾಮಮಾರ್ಛಂತೋ ಲಕ್ಷ್ಮಣಂ ಚ ಕ್ಷಪಾಚರಾಃ |
ಅಭಿಪೇತುಸ್ತದಾ ರಾಮಂ ಪ್ರಗೃಹೀತಶರಾಸನಾಃ ॥9॥
ಆಗ ಆ ನಿಶಾಚರರು ಕೈಯಲ್ಲಿ ಧನುಸ್ಸನ್ನು ಹಿಡಿದು ರಾಮಲಕ್ಷ್ಮಣರನ್ನು ಹಿಂಸಿಸುತ್ತಾ ರಾಮನ ಕಡೆಗೆ ಬಂದರು.
ತಾಂ ದೃಷ್ಟ್ವಾ ರಾಕ್ಷಸೇಂದ್ರಸ್ಯ ಮಾಯಾಮಿಕ್ಷ್ವಾಕುನಂದನಃ |
ಉವಾಚ ರಾಮಂ ಸೌಮಿತ್ರಿರಸಂಭ್ರಾಂತೋ ಬೃಹದ್ವಚಃ |
ಜಹೀಮಾನ್ ರಾಕ್ಷಸಾನ್ ಪಾಪಾನಾತ್ಮನಃ ಪ್ರತಿರೂಪಕಾನ್ ॥10॥

ಆ ರಾಕ್ಷಸೇಂದ್ರನ ಮಾಯೆಯನ್ನು ನೋಡಿದ ಇಕ್ಷ್ವಾಕುನಂದನನಾದ ಲಕ್ಷ್ಮಣನು ಯಾವ ಕಳವಳವನ್ನೂ ಹೊಂದದೆ ರಾಮನನ್ನು ಕುರಿತು ನಿನ್ನ ಪ್ರತಿರೂಪವನ್ನು ಧರಿಸಿರುವ ಈ ರಾಕ್ಷಸರನ್ನು ಸಂಹಾರಮಾಡು ಎಂಬ ದೊಡ್ಡಮಾತನ್ನು ಆಡಿದನು.
ಮಾರ್ಕಂಡೇಯಃ
ಜಘಾನ ರಾಮಸ್ತಾಂಶ್ಚಾನ್ಯಾನಾತ್ಮನಃ ಪ್ರತಿರೂಪಕಾನ್ |
ತತೋ ಹರ್ಯಶ್ವಯುಕ್ತೇನ ರಥೇನಾದಿತ್ಯವರ್ಚಸಾ |
ಉಪತಸ್ಥೇ ರಣೇ ರಾಮಂ ಮಾತಲಿಃ ಶಕ್ರಸಾರಥಿಃ ॥11॥
ರಾಮನು ತನ್ನ ಪ್ರತಿರೂಪವನ್ನು ಧರಿಸಿದ್ದ ರಾಕ್ಷಸರನ್ನೂ ಮತ್ತು ಬೇರೆ ರಾಕ್ಷಸರನ್ನೂ ಸಂಹರಿಸಿದನು. ಆಗ ಶಕ್ರಸಾರಥಿಯಾದ ಮಾತಲಿಯು ಇಂದ್ರನ ಹರ್ಯಶ್ವಗಳನ್ನು ಹೂಡಿದ ಸೂರ್ಯಕಾಂತಿಯುಳ್ಳ ರಥವನ್ನು ತೆಗೆದುಕೊಂಡು ಯುದ್ಧಭೂಮಿಯಲ್ಲಿ ರಾಮನ ಬಳಿಗೆ ಬಂದನು.
ಮಾತಲಿಃ
ಅಯಂ ಹರ್ಯಶ್ವಯುಗ್ ಜೈತ್ರೋ ಮಘೋನಃ ಸ್ಯಂದನೋತ್ತಮಃ |
ತ್ವದರ್ಥಮಿಹ ಸಂಪ್ರಾಪ್ತಃ ಸಂದೇಹಾದ್ವೈ ಶತಕ್ರತೋಃ ॥12॥
ಮಾತಲಿ ಹರ್ಯಶ್ವಯುಕ್ತವಾದ ಜಯಶೀಲವಾದ ಇಂದ್ರನ ಈ ಶ್ರೇಷ್ಠರಥವನ್ನು ಇಂದ್ರನು ಸಂದೇಹದಿಂದ ನಿನ್ನ ಸಲುವಾಗಿ ಇಲ್ಲಿಗೆ ಕಳುಹಿಸಿದ್ದಾನೆ.
ಅನೇನ ಶಕ್ರಃ ಕಾಕುತ್ಸ್ಥ ಸಮರೇ ದೈತ್ಯದಾನವಾನ್ |
ಶತಶಃ ಪುರುಷವ್ಯಾಘ್ರ ರಥೋದಾರೇಣ ಜಘ್ನಿವಾನ್ ॥13॥
ಎಲೈ ಕಾಕುತ್ಸ್ಥನೇ, ಪುರುಷವ್ಯಾಘ್ರನೇ, ಈ ಶ್ರೇಷ್ಠವಾದ ರಥದ ಸಹಾಯದಿಂದ ಇಂದ್ರನು ಯುದ್ಧದಲ್ಲಿ ನೂರಾರು ಸಂಖ್ಯೆಯಲ್ಲಿ ದೈತ್ಯದಾನವರನ್ನು ಸಂಹರಿಸಿದ್ದಾನೆ.
ತದನೇನ ನರವ್ಯಾಘ್ರ ಮಯಾ ಯತ್ತೇನ ಸಂಯುಗೇ |
ಸ್ಯಂದನೇನ ಜಹಿ ಕ್ಷಿಪ್ರಂ ರಾವಣಂ ಮಾ ಚಿರಂ ಕೃಥಾಃ ॥14॥
ಎಲೈ ನರವ್ಯಾಘ್ರನೇ, ನಾನು ನಿಯಂತ್ರಿಸುವ ಈ ರಥದಲ್ಲಿ ಕುಳಿತು ಯುದ್ಧದಲ್ಲಿ ರಾವಣನನ್ನು ಬೇಗ ಸಂಹಾರ ಮಾಡು. ತಡಮಾಡಬೇಡ.
ಮಾರ್ಕಂಡೇಯಃ
ಇತ್ಯುಕ್ತೋ ರಾಘವಸ್ತಥ್ಯಂ ವಚೋಽಶಂಕತ ಮಾತಲೇಃ |
ಮಾಯೈಷಾ ರಾಕ್ಷಸಸ್ಯೇತಿ ತಮುವಾಚ ವಿಭೀಷಣಃ ॥15॥
ಮಾರ್ಕಂಡೇಯ ಹೀಗೆ ಮಾತಲಿಯ ಸತ್ಯವಚನಗಳನ್ನು ಕೇಳಿದ ರಾಮನು ಇದು ರಾಕ್ಷಸನ ಮಾಯೆ ಇರಬಹುದು ಎಂದು ಶಂಕಿಸಿದನು. ಆಗ ವಿಭೀಷಣನು ಅವನನ್ನು ಕುರಿತು ಹೇಳಿದನು.
ವಿಭೀಷಣಃ
ನೇಯಂ ಮಾಯಾ ನರವ್ಯಾಘ್ರ ರಾವಣಸ್ಯ ದುರಾತ್ಮನಃ |
ತದಾತಿಷ್ಠ ರಥಂ ಶೀಘ್ರಮಿಮಮೈಂದ್ರಂ ಮಹಾದ್ಯುತೇ ॥16॥
ವಿಭೀಷಣ ನರವ್ಯಾಘ್ರನೇ, ಇದು ದುರಾತ್ಮನಾದ ರಾವಣನ ಮಾಯೆಯಲ್ಲ. ಮಹಾದ್ಯುತಿಯೇ, ಇಂದ್ರನ ಈ ರಥವನ್ನು ಶೀಘ್ರವಾಗಿ ಏರುವವನಾಗು (ಎಂದು ಹೇಳಿದನು).
ಮಾರ್ಕಂಡೇಯಃ
ತತಃ ಪ್ರಹೃಷ್ಟಃ ಕಾಕುತ್ಸ್ಥಸ್ತಥೇತ್ಯುಕ್ತ್ವಾ ವಿಭೀಷಣಮ್ |
ರಥೇನಾಭಿಪಪಾತಾಥ ದಶಗ್ರೀವಂ ರುಷಾಽನ್ವಿತಃ ॥17॥
ಮಾರ್ಕಂಡೇಯ ಆಗ ಸಂತೋಷಗೊಂಡ ರಾಮನು ವಿಭೀಷಣನಿಗೆ ಹಾಗೆಯೇ ಆಗಲಿ ಎಂದು ಹೇಳಿ ರಥವನ್ನು ಏರಿ ರೋಷದಿಂದ ಕೂಡಿ ದಶಗ್ರೀವನ ಕಡೆಗೆ ಹೊರಟನು.
ಹಾಹಾಕೃತಾನಿ ಭೂತಾನಿ ರಾವಣೇ ಸಮಭಿದ್ರುತೇ |
ಸಿಂಹನಾದಾಃ ಸಪಟಹಾ ದಿವಿ ದಿವ್ಯಾಸ್ತಥಾಽನದನ್ ॥18॥
ರಾವಣನು ಹೀಗೆ ಅಭಿದ್ರುತನಾಗುತ್ತಿರಲು ಎಲ್ಲ ಭೂತಗಳೂ ಹಾಹಾಕಾರವನ್ನು ಮಾಡಿದವು. ದೇವಲೋಕದಲ್ಲಿ ಸಿಂಹನಾದಗಳು ಉಂಟಾದವು. ಪಟಹ ಮೊದಲಾದ ದಿವ್ಯವಾದ್ಯಗಳು ಮೊಳಗಿದವು.
ತತಃ ಪ್ರವವೃತೇ ಯುದ್ಧಂ ರಾಮರಾವಣಯೋರ್ಮಹತ್ |
ದಶಕಂಧರರಾಜಸೂನ್ವೋಸ್ತಥಾ ಯುದ್ಧಮಭೂನ್ಮಹತ್ ॥18.1॥
ಅಲಬ್ಧೋಪಮಮನ್ಯತ್ರ ತಯೋರೇವ ತಥಾಭವತ್ |
ಅನಂತರ ರಾಮರಾವಣರಿಗೆ ದೊಡ್ಡ ಯುದ್ಧವು ಪ್ರಾರಂಭವಾಯಿತು. ಬೇರೆ ಯಾವ ಉಪಮಾನವೂ ಇಲ್ಲದಾಗಿದ್ದು, ರಾಮರಾವಣರಿಗೇ ಉಂಟಾಯಿತು.
ಸ ರಾಮಾಯ ಮಹಾಘೋರಂ ವಿಸಸರ್ಜ ನಿಶಾಚರಃ |
ಶೂಲಮಿಂದ್ರಾಶನಿಪ್ರಖ್ಯಂ ಬ್ರಹ್ಮದಂಡಮಿವೋದ್ಯತಮ್ ॥19॥
ಆ ನಿಶಾಚರನು ರಾಮನನ್ನು ಉದ್ದೇಶಿಸಿ ಇಂದ್ರನ ವಜ್ರಾಯುಧದಂತಿರುವ ಉದ್ಯತವಾದ ಬ್ರಹ್ಮದಂಡದಂತಿರುವ ಮಹಾಘೋರವಾದ ಶೂಲವನ್ನು ಎಸೆದನು.

ತತ್ಶೂಲಂ ಸತ್ವರಂ ರಾಮಶ್ಚಿಚ್ಛೇದ ನಿಶಿತೈಃ ಶರೈಃ |
ತದ್ ದೃಷ್ಟ್ವಾ ದುಷ್ಕರಂ ಕರ್ಮ ರಾವಣಂ ಭಯಮಾವಿಶತ್ ॥20॥
ರಾಮನು ತನ್ನ ಹರಿತವಾದ ಬಾಣಗಳಿಂದ ಶೀಘ್ರವಾಗಿ ಆ ಶೂಲವನ್ನು ಕತ್ತರಿಸಿದನು. ರಾಮನ ಆ ದುಷ್ಕರವಾದ ಕರ್ಮವನ್ನು ನೋಡಿ ರಾವಣನಿಗೆ ಭಯವುಂಟಾಯಿತು.
ತತಃ ಕ್ರುದ್ಧಃ ಸಸರ್ಜಾಶು ದಶಗ್ರೀವಃ ಶಿತಾಂಛರಾನ್ |
ಸಹಸ್ರಾಯುತಶೋ ರಾಮೇ ಶಸತ್ರಣಿ ವಿವಿಧಾನಿ ಚ ॥21॥
ಅನಂತರ ಕ್ರುದ್ಧನಾದ ರಾವಣನು ರಾಮನ ಮೇಲೆ ಸಹಸ್ರಸಂಖ್ಯೆಯಲ್ಲಿ, ಹತ್ತುಸಾವಿರ ಸಂಖ್ಯೆಯಲ್ಲಿ ಹರಿತವಾದ ವಿವಿಧವಾದ ಶಸ್ತ್ರಗಳನ್ನೂ ಮತ್ತು ಬಾಣಗಳನ್ನೂ ಪ್ರಯೋಗಿಸಿದನು.
ತತೋ ಭುಶುಂಡೀಃ ಶೂಲಾನಿ ಮುಸಲಾನಿ ಪರಶ್ವಧಾನ್ |
ಶಕ್ತೀಶ್ಚ ವಿವಿಧಾರಾಃ ಕಾರ ಶತಘ್ನೀಶ್ಚ ಶಿತಾನ್ಕ್ಷುರಾನ್ ॥22॥
ಅನಂತರ ಭುಶುಂಡಿಗಳನ್ನೂ, ಶೂಲಗಳನ್ನೂ, ಮುಸಲಗಳನ್ನೂ, ಪರಶ್ವಧಗಳನ್ನೂ, ಶಕ್ತಿಗಳನ್ನೂ, ವಿವಿಧಾಕಾರದ ಶತಘ್ನಿಗಳನ್ನೂ ಮತ್ತು ಹರಿತವಾದ ಶೂಲಗಳನ್ನು ಪ್ರಯೋಗಿಸಿದನು.
ತಾಂ ಮಾಯಾಂ ವಿಕೃತಾಂ ದೃಷ್ಟ್ವಾ ದಶಗ್ರೀವಸ್ಯ ರಕ್ಷಸಃ |
ಭಯಾತ್ ಪ್ರದುದ್ರುವುಃ ಸರ್ವೇ ವಾನರಾಃ ಸರ್ವತೋ ದಿಶಮ್ ॥23॥
ರಾಕ್ಷಸನಾದ ರಾವಣನ ಆ ವಿಧವಿಧವಾದ ಮಾಯೆಯನ್ನು ನೋಡಿ ಎಲ್ಲ ಕಪಿಗಳು ಭಯದಿಂದ ದಿಕ್ಕುದಿಕ್ಕುಗಳಿಗೆ ಓಡಿಹೋದವು.
ತತಃ ಸುಪತ್ರಂ ಸುಮುಖಂ ಹೇಮಪುಂಖಂ ಶರೋತ್ತಮಮ್ |
ತೂಣಾದಾದಾಯ ಕಾಕುತ್ಸ್ಥೋ ಬ್ರಹ್ಮಾಸ್ತ್ರೇಣ ಯುಯೋಜ ಹ ॥24॥
ಆಗ ರಾಮನು ಒಳ್ಳೆಯ ಪತ್ರಸಹಿತವಾದ ಒಳೆಯ ತುದಿಯಿರುವ ಹೇಮದಂಡವಿರುವ ಒಂದು ಶ್ರೇಷ್ಠವಾದ ಬಾಣವನ್ನು ಬತ್ತಳಿಕೆಯಿಂದ ತೆಗೆದು ಅದನ್ನು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿದನು.
ತಂ ಬಾಣವರ್ಯಂ ರಾಮೇಣ ಬ್ರಹ್ಮಾಸ್ತ್ರೇಣಾನುಮಂತ್ರಿತಮ್ |
ಜಹೃಷುರ್ದೇವಗಂಧರ್ವಾ ದೃಷ್ಟ್ವಾ ಶಕ್ರಪುರೋಗಮಾಃ ॥25॥
ರಾಮನು ಆ ಶ್ರೇಷ್ಠವಾದ ಬಾಣವನ್ನು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸುತ್ತಿರುವುದನ್ನು ನೋಡಿದ ಇಂದ್ರ ಮೊದಲಾದ ದೇವತೆಗಳು ಮತ್ತು ದೇವಗಂಧರ್ವರು ಸಂತೋಷಪಟ್ಟರು.
ಅಲ್ಪಾವಶೇಷಮಾಯುಶ್ಚ ತತೋಽಮನ್ಯಂತ ರಕ್ಷಸಃ |
ಬ್ರಹ್ಮಾಸೊತ್ರದೀರಣಾಚ್ಛತ್ರೋರ್ದೇವದಾನವಕಿನ್ನರಾಃ ॥26॥
ಬ್ರಹ್ಮಾಸ್ತ್ರವನ್ನು ಸದ್ಯದಲ್ಲಿಯೇ ಪ್ರಯೋಗ ಮಾಡುವುದರಿಂದ ದೇವದಾನವ ಕಿನ್ನರರು ಶತ್ರುವಾದ ರಾಕ್ಷಸನಿಗೆ ಅಲ್ಪವೇ ಆಯುಷ್ಯವು ಉಳಿದಿದೆ ಎಂದು ತಿಳಿದರು.
ತತಃ ಸಸರ್ಜ ತಂ ರಾಮಃ ಶರಮಪ್ರತಿಮೌಜಸಮ್ |
ರಾವಣಾಂತಕರಂ ಘೋರಂ ಬ್ರಹ್ಮದಂಡಮಿವೋದ್ಯತಮ್ ॥27॥
ಅನಂತರ ಅಪ್ರತಿಮಶಕ್ತಿಸಾಮರ್ಥ್ಯವನ್ನು ಹೊಂದಿದ, ರಾವಣನ ವಿನಾಶವನ್ನು ಮಾಡುವ, ಉದ್ಯತಬ್ರಹ್ಮದಂಡದಂತಿರುವ, ಆ ಘೋರವಾದ ಬಾಣವನ್ನು ಪ್ರಯೋಗಿಸಿದನು.
ಸ ತೇನ ರಾಕ್ಷಸಶ್ರೇಷ್ಠಃ ಸರಥಃ ಸಾಶ್ವಸಾರಥಿಃ |
ಪ್ರಜಜ್ವಾಲ ಮಹಾಜ್ವಾಲೇನಾಗ್ನಿನಾಽಭಿಪರಿಪ್ಲುತಃ ॥28॥
ಆ ಬಾಣದಿಂದ ರಾಕ್ಷಸಶ್ರೇಷ್ಠನಾದ ರಾವಣನು ರಥಾಶ್ವಸಾರಥಿಗಳ ಜೊತೆಯಲ್ಲಿ ಮಹಾಜ್ವಾಲೆಗಳನ್ನುಳ್ಳ ಅಗ್ನಿಯಿಂದ ಸುತ್ತುವರಿಯಲ್ಪಟ್ಟವನಾಗಿ ಸುಟ್ಟುಹೋದನು (ಉರಿದುಬಿದ್ದನು).
ತತಃ ಪ್ರಹೃಷ್ಟಾಸ್ತ್ರಿದಶಾಃ ಸಹಗಂಧರ್ವಚಾರಣಾಃ |
ನಿಹತಂ ರಾವಣಂ ದೃಷ್ಟ್ವಾ ರಾಮೇಣಾಕ್ಲಿಷ್ಟಕರ್ಮಣಾ ॥29॥
ಆಗ ಅಕ್ಲಿಷ್ಟಕಾರಿಯಾದ ರಾಮನಿಂದ ರಾವಣನು ಹತನಾದುದನ್ನು ನೋಡಿದ ಗಂಧರ್ವಚಾರಣಸಹಿತರಾದ ದೇವತೆಗಳು ಸಂತೋಷಪಟ್ಟರು.
ತತ್ಯಜುಸ್ತಂ ಮಹಾಭಾಗಂ ಪಂಚ ಭೂತಾನಿ ರಾವಣಮ್ |
ಭ್ರಂಶಿತಃ ಸರ್ವಲೋಕೇಭ್ಯಃ ಸ ಹಿ ಬ್ರಹ್ಮಾಸ್ತ್ರತೇಜಸಾ ॥30॥
ಆ ಮಹಾಭಾಗನಾದ ರಾವಣನನ್ನು ಪಂಚಭೂತಗಳು ತ್ಯಜಿಸಿದವು. ಅವನು ಬ್ರಹ್ಮಾಸ್ತ್ರದ ಸಾಮರ್ಥ್ಯದಿಂದ ಸರ್ವಲೋಕಗಳಿಂದಲೂ ಭ್ರಷ್ಟನಾದನು.
ಶರೀರಧಾತವೋ ಹ್ಯಸ್ಯ ಮಾಂಸಂ ರುಧಿರಮೇವ ಚ |
ನೇಶುರ್ಬ್ರಹ್ಮಾಸ್ತ್ರನಿರ್ದಗ್ಧಾ ನ ಚ ಭಸ್ಮಾಪ್ಯದೃಶ್ಯತ ॥31॥
ಅವನ ಶರೀರಧಾತುಗಳು, ಮಾಂಸರಕ್ತಗಳು ಬ್ರಹ್ಮಾಸ್ತ್ರದಿಂದ ಸುಟ್ಟು ನಾಶವನ್ನು ಹೊಂದಿದವು. ಅವುಗಳ ಭಸ್ಮವೂ ಕಾಣಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಏಕೋನಾಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ರಾವಣವಧೋ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಪ್ಪತ್ತೊಂಬತ್ತನೆಯ

ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತನೆಯ ಅಧ್ಯಾಯ
ಅವಿಂಧ್ಯನಿಂದ ರಾಮನ ಬಳಿಗೆ ಸೀತೆಯ ಆನಯನ. ಸೀತೆಯ ಅಗ್ನಿಪರೀಕ್ಷೆ. ಸೀತಾಲಕ್ಷ್ಮಣ ಸಹಿತನಾದ ರಾಮನಿಂದ ಅಯೋಧ್ಯೆಗೆ ಆಗಮನ. ರಾಮನ ಪಟ್ಟಾಭಿಷೇಕ. ಎಲ್ಲರ ಸನ್ಮಾನ ಮತ್ತು ರಾಮನ ಪ್ರಜಾಪಾಲನ.
ಮಾರ್ಕಂಡೇಯಃ
ಸ ಹತ್ವಾ ರಾವಣಂ ಕ್ಷುದ್ರಂ ರಾಕ್ಷಸೇಂದ್ರಂ ಸುರದ್ವಿಷಮ್ |
ಬಭೂವ ಹೃಷ್ಟಃ ಸಸುಹೃದ್ ರಾಮಃ ಸೌಮಿತ್ರಿಣಾ ಸಹ ॥1॥
ಮಾರ್ಕಂಡೇಯ ಕ್ಷುದ್ರನೂ, ದೇವಶತ್ರುವೂ ಆದ ರಾಕ್ಷಸೇಂದ್ರನಾದ ರಾವಣನನ್ನು ಕೊಂದು ಲಕ್ಷ್ಮಣ ಮತ್ತು ಸುಹೃದರ ಜೊತೆಯಲ್ಲಿ ರಾಮನು ಸಂತುಷ್ಟನಾದನು.
ತತೋ ಹತೇ ದಶಗ್ರೀವೇ ದೇವಾಃ ಸರ್ಷಿಪುರೋಗಮಾಃ |
ಆಶೀರ್ಭಿರ್ಜಯಯುಕ್ತಾಭಿರಾನರ್ಚುಸ್ತಂ ಮಹಾಭುಜಮ್ ॥2॥
ರಾವಣನು ಹತನಾಗುತ್ತಿರಲು ಋಷಿಗಳನ್ನು ಮುಂದೆ ಮಾಡಿಕೊಂಡು ದೇವತೆಗಳು ಮಹಾಭುಜನಾದ ರಾಮನನ್ನು ಜಯಯುಕ್ತವಾದ ಆಶೀರ್ವಚನಗಳಿಂದ ಪೂಜಿಸಿದರು.
ರಾಮಂ ಕಮಲಪತ್ರಾಕ್ಷಂ ತುಷ್ಟುವುಃ ಸರ್ವದೇವತಾಃ |
ಗಂಧರ್ವಾಃ ಪುಷ್ಪವರ್ಷೈಶ್ಚ ವಾಗ್ಭಿಶ್ಚ ತ್ರಿದಶಾಲಯಾಃ ॥3॥
ಕಮಲನೇತ್ರನಾದ ರಾಮನನ್ನು ಎಲ್ಲ ದೇವತೆಗಳೂ ಸ್ತೋತ್ರಮಾಡಿದರು. ಗಂಧರ್ವರು ಪುಷ್ಪವೃಷ್ಟಿಯಿಂದಲೂ, ಸ್ವರ್ಗವಾಸಿಗಳು ಸ್ತೋತ್ರದಿಂದಲೂ ರಾಮನನ್ನು ಸತ್ಕರಿಸಿದರು.
ಪೂಜಯಿತ್ವಾ ಯಥಾ ರಾಮಂ ಪ್ರತಿಜಗ್ಮುರ್ಯಥಾಗತಮ್ |
ತನ್ಮೋಹತ್ಸವಸಂಕಾಶಮಾಸೀದಾಕಾಶಮಚ್ಯುತ ॥4॥
ಆಕಾಶದಲ್ಲಿದ್ದ ದೇವತೆಗಳು ಮತ್ತು ಗಂಧರ್ವರು ರಾಮನನ್ನು ಚೆನ್ನಾಗಿ ಪೂಜಿಸಿ ಬಂದಂತೆಯೇ ಹೊರಟುಹೋದರು. ಎಲೈ ಗುಣಗಳಿಂದ ಚ್ಯುತನಾಗದ ಯುಧಿಷ್ಠಿರನೇ, ಆಕಾಶವೇ ಒಂದು ಮಹೋತ್ಸವ ರೂಪವಾಗಿದ್ದಿತು.
ತತೋ ಹತ್ವಾ ದಶಗ್ರೀವಂ ಲಂಕಾಂ ರಾಮೋ ಮಹಾಯಶಾಃ |
ವಿಭೀಷಣಾಯ ಪ್ರದದೌ ಪ್ರಭುಃ ಪರಪುರಂಜಯಃ ॥5॥
ದಶಗ್ರೀವನನ್ನು ಸಂಹರಿಸಿ ಮಹಾಯಶಸ್ವಿಯೂ, ಪರಪುರಂಜಯನೂ, ಪ್ರಭುವೂ ಆದ ರಾಮನು ವಿಭೀಷಣನಿಗೆ ಲಂಕೆಯನ್ನು ಕೊಟ್ಟನು.
ತತಃ ಸೀತಾಂ ಪುರಸ್ಕೃತ್ಯ ವಿಭೀಷಣಪುರಸ್ಕೃತಾಮ್ |
ಅವಿಂಧ್ಯೋ ನಾಮ ಸುಪ್ರಜ್ಞೋ ವೃದ್ಧಾಮಾತ್ಯೋ ವಿನಿರ್ಯಯೌ ॥6॥
ಅನಂತರ ವಿಭೀಷಣನನ್ನು ಮುಂದೆ ಮಾಡಿಕೊಂಡ ಸೀತೆಯನ್ನು ಮುಂದೆ ಮಾಡಿಕೊಂಡು ಅವಿಂಧ್ಯನೆಂಬ ಮೇಧಾವಿಯಾದ ವೃದ್ಧಾಮಾತ್ಯನು ಹೊರಗೆ ಬಂದನು.
ಉವಾಚ ಚ ಮಹಾತ್ಮಾನಂ ಕಾಕುತ್ಸ್ಥಂ ದೈನ್ಯಮಾಸ್ಥಿತಃ |
ಪ್ರತೀಚ್ಛ ದೇವೀಂ ಸದ್ವೃತ್ತಾಂ ಮಹಾತ್ಮನ್ ಜಾನಕೀಮಿತಿ ॥7॥
ಅವನು ವಿನಯದಿಂದ ಕೂಡಿದವನಾಗಿ ಮಹಾತ್ಮನಾದ ರಾಮನನ್ನು ಕುರಿತು ಮಹಾತ್ಮನೇ, ಒಳ್ಳೆಯ ಚಾರಿತ್ರ್ಯವುಳ್ಳ ಈ ಜಾನಕೀದೇವಿಯನ್ನು ಸ್ವೀಕರಿಸು ಎಂದು ಹೇಳಿದನು.
ಏತತ್ಶ್ರುತ್ವಾ ವಚಸ್ತಸ್ಮಾದವತೀರ್ಯ ರಥೋತ್ತಮಾತ್ |
ಬಾಷ್ಪೇಣಾಪಿಹಿತಾಂ ಸೀತಾಂ ದದರ್ಶೇಕ್ಷ್ವಾಕುನಂದನಃ ॥8॥
ಈ ಮಾತುಗಳನ್ನು ಕೇಳಿದ ಇಕ್ಷ್ವಾಕುನಂದನನಾದ ರಾಮನು ತನ್ನ ಶ್ರೇಷ್ಠವಾದ ರಥದಿಂದ ಇಳಿದು ಬಾಷ್ಪಪೂರಿತ ನೇತ್ರಳಾದ ಸೀತೆಯನ್ನು ನೋಡಿದನು.
ತಾಂ ದೃಷ್ಟ್ವಾ ಚಾರುಸರ್ವಾಂಗೀಂ ಯಾನಸ್ಥಾಂ ಶೋಕಕರ್ಶಿತಾಮ್ |
ಮಲೋಪಚಿತಸರ್ವಾಂಗೀಂ ಜಟಿಲಾಂ ಕೃಷ್ಣವಾಸಸಮ್ ॥9॥
ಉವಾಚ ರಾಮೋ ವೈದೇಹೀಂ ಪರಾಮರ್ಶವಿಶಂಕಿತಃ |
ಗಚ್ಛ ವೈದೇಹಿ ಮುಕ್ತಾ ತ್ವಂ ಯತ್ ಕಾರ್ಯಂ ತನ್ಮಯಾ ಕೃತಮ್ ॥
ಸರ್ವಾಂಗ ಸುಂದರಿಯೂ, ಶೋಕಕರ್ಶಿತಳೂ, ಅಲಂಕಾರಮಾಡಿಕೊಳ್ಳದವಳೂ, ಜಟಿಲಳೂ, ಮಲಿನವಸ್ತ್ರಗಳನ್ನು ಧರಿಸಿದವಳೂ ಆದ ಯಾನದಲ್ಲಿ ಕುಳಿತಿದ್ದ ಸೀತೆಯನ್ನು ನೋಡಿ ರಾವಣನ ಪರಾಮರ್ಶವನ್ನು ಶಂಕಿಸಿ ರಾಮನು ಅವಳನ್ನು ಕುರಿತು ವೈದೇಹಿ, ನಿನ್ನನ್ನು ಬಿಡುಗಡೆಗೊಳಿಸಿದ್ದೇನೆ. ಅದಕ್ಕಾಗಿಯೇ ನಾನು ಈ ಕಾರ್ಯವನ್ನು ಮಾಡಿದೆ. ನೀನು ಎಲ್ಲಿಗೆ ಬೇಕಾದರೂ ಹೋಗಬಹುದು ಎಂದು ಹೇಳಿದನು.
ಮಾಮಾಸಾದ್ಯ ಪತಿಂ ಭದ್ರೇ ನ ತ್ವಂ ರಾಕ್ಷಸವೇಶ್ಮನಿ |
ಜರಾಂ ವ್ರಜೇಥಾ ಇತಿ ಮೇ ನಿಹತೋಽಸೌ ನಿಶಾಚರಃ ॥11॥
ಎಲೌ ಭದ್ರೆಯೇ, ನನ್ನನ್ನು ಪತಿಯಾಗಿ ಪಡೆದು ನೀನು ರಾಕ್ಷಸನ ಮನೆಯಲ್ಲಿ ಮುಪ್ಪನ್ನು ಹೊಂದಬಾರದು ಎಂಬ ಉದ್ದೇಶದಿಂದ ನಾನು ಆ ರಾಕ್ಷಸನನ್ನು ಕೊಂದೆನು.

ಕಥಂ ಹ್ಯಸ್ಮದ್ವಿಧೋ ಜಾತು ಜಾನನ್ ಧರ್ಮವಿನಿಶ್ಚಯಮ್ |
ಪರಹಸ್ತಗತಾಂ ನಾರೀಂ ಮುಹೂರ್ತಮಪಿ ಧಾರಯೇತ್ ॥12॥
ಧರ್ಮನಿರ್ಣಯವನ್ನು ತಿಳಿದ ನನ್ನಂತಹವನು ಪರಹಸ್ತಗತಳಾದ ನಾರಿಯನ್ನು ಒಂದು ಮುಹೂರ್ತವಾದರೂ ಜೊತೆಯಲ್ಲಿ ಇಟ್ಟುಕೊಳ್ಳುವುದು ಹೇಗೆ ಸಾಧ್ಯ?
ಸುವೃತ್ತಾಮಸುವೃತ್ತಾಂ ವಾಽಪ್ಯಹಂ ತ್ವಾಮದ್ಯ ಮೈಥಿಲಿ |
ನೋತ್ಸಹೇ ಪರಿಭೋಗಾಯ ಶ್ವಾವಲೀಢಂ ಹವಿರ್ಯಥಾ ॥13॥
ಮೈಥಿಲಿಯೇ, ನೀನು ಸುಚರಿತ್ರಳಾಗಿರಬಹುದು ಅಥವಾ ದುಶ್ಚರಿತ್ರಳಾಗಿರಬಹುದು. ಆದರೂ ನಾಯಿಯು ನೆಕ್ಕಿದ ಹವಿಸ್ಸಿನಂತೆ ನೀನು ಈ ದಿನ ನನ್ನ ಭೋಗಕ್ಕೆ ಅರ್ಹಳಲ್ಲ (ಎಂದು ಹೇಳಿದನು).
ಮಾರ್ಕಂಡೇಯಃ
ತತಃ ಸಾ ಸಹಸಾ ಬಾಲಾ ತತ್ ಶ್ರುತ್ವಾ ದಾರುಣಂ ವಚಃ |
ಪಪಾತ ದೇವೀ ವ್ಯಥಿತಾ ನಿಕೃತ್ತಾ ಕದಳೀ ಯಥಾ ॥14॥
ಮಾರ್ಕಂಡೇಯ ಆ ದಾರುಣವಾದ ಮಾತುಗಳನ್ನು ಕೇಳಿದ ಆ ಬಾಲೆಯು ಕತ್ತರಿಸಿದ ಕದಳೀ ವೃಕ್ಷದಂತೆ ತಕ್ಷಣ ನೆಲದ ಮೇಲೆ ವ್ಯಥೆಯಿಂದ ಬಿದ್ದಳು.
ಯೋಽಪ್ಯಸ್ಯಾ ಹರ್ಷಸಂಭೂತೋ ಮುಖರಾಗಸ್ತದಾಽಭವತ್ |
ಕ್ಷಣೇನ ಸ ಪುನರ್ನಷ್ಟೋ ನಿಃಶ್ವಾಸ ಇವ ದರ್ಪಣೇ ॥15॥
ರಾಮನ ದರ್ಶನದಿಂದ ಉಂಟಾದ ಸಂತೋಷದಿಂದ ಅವಳ ಮುಖದಲ್ಲಿ ಉಂಟಾಗಿದ್ದ ಕಾಂತಿಯು ಒಂದುಕ್ಷಣದಲ್ಲಿ ಕನ್ನಡಿಯ ಮೇಲೆ ಬಿಟ್ಟ ನಿಟ್ಟುಸಿರನಂತೆ ನಷ್ಟವಾಯಿತು.
ತತಸ್ತೇ ಹರಯಃ ಸರ್ವೇ ತತ್ಶ್ರುತ್ವಾ ರಾಮಭಾಷಿತಮ್ |
ಗತಾಸುಕಲ್ಪಾ ನಿಶ್ಚೇಷ್ಟಾ ಬಭೂವುಃ ಸಹಲಕ್ಷ್ಮಣಾಃ ॥16॥
ರಾಮನ ಆ ಮಾತುಗಳನ್ನು ಕೇಳಿದ ಎಲ್ಲಾ ಕಪಿಗಳೂ ಮತ್ತು ಲಕ್ಷ್ಮಣನೂ ಸಹ ಪ್ರಾಣಗಳನ್ನು ಕಳೆದುಕೊಂಡವರಂತೆ ನಿಶ್ಚೇಷ್ಟರಾದರು.
ತತೋ ದೇವೋ ವಿಶುದ್ಧಾತ್ಮಾ ವಿಮಾನೇನ ಚತುರ್ಮುಖಃ |
ಪದ್ಮಯೋನಿರ್ಜಗತ್ಸ್ರಷ್ಟಾ ದರ್ಶಯಾಮಾಸ ರಾಘವಮ್ ॥17॥
ಆಗ ವಿಶುದ್ಧಾತ್ಮರಾದ, ಜಗತ್ತಿನ ಸೃಷ್ಟಿಕರ್ತರಾದ, ಪದ್ಮಯೋನಿಗಳಾದ ಚತುರ್ಮುಖ ಬ್ರಹ್ಮದೇವರು ರಾಮನಿಗೆ ದರ್ಶನವನ್ನು ನೀಡಿದರು.
ಶಕ್ರಶ್ಚಾಗ್ನಿಶ್ಚ ವಾಯುಶ್ಚ ಯಮೋ ವರುಣ ಏವ ಚ |
ಯಕ್ಷಾಧಿಪಶ್ಚ ಭಗವಾಂಸ್ತಥಾ ಸಪ್ತರ್ಷಯೋಽಮಲಾಃ ॥18॥
ರಾಜಾ ದಶರಥಶ್ಚೈವ ದಿವ್ಯಭಾಸ್ವರಮೂರ್ತಿಮಾನ್ |
ವಿಮಾನೇನ ಮಹಾರ್ಹೇಣ ಹಂಸಯುಕ್ತೇನ ಭಾಸ್ವತಾ ॥19॥
ಇಂದ್ರ, ಅಗ್ನಿ, ವಾಯು, ಯಮ, ವರುಣ, ಕುಬೇರ ಅದರಂತೆ ನಿರ್ಮಲರಾದ ಸಪ್ತರ್ಷಿಗಳು ದಿವ್ಯವಾದ ಪ್ರಕಾಶರೂಪವನ್ನು ಧರಿಸಿದ್ದ ದಶರಥ ಇವರೆಲ್ಲರೂ ಪ್ರಕಾಶಿಸುವ ಹಂಸಯುಕ್ತವಾದ ವಿಮಾನಗಳಲ್ಲಿ ರಾಮನಿಗೆ ದರ್ಶನವನ್ನು ನೀಡಿದರು.
ತತೋಽಂತರಿಕ್ಷಂ ತತ್ಸರ್ವಂ ದೇವಗಂಧರ್ವಸಂಕುಲಮ್ |
ಶುಶುಭೇ ತಾರಕಾಚಿತ್ರಂ ಶರದೀವ ನಭಸ್ತಳಮ್ ॥20॥
ಆಗ ಆ ಅಂತರಿಕ್ಷವೆಲ್ಲವೂ ದೇವತೆಗಳಿಂದ ಮತ್ತು ಗಂಧರ್ವರಿಂದ ನಿಬಿಡವಾಗಿ ಶರತ್ಕಾಲದಲ್ಲಿ ನಕ್ಷತ್ರಗಳಿಂದ ಕಂಗೊಳಿಸುವ ಆಕಾಶದಂತೆ ಶೋಭಿಸಿತು.
ತತ ಉತ್ಥಾಯ ವೈದೇಹೀ ತೇಷಾಂ ಮಧ್ಯೇ ಯಶಸ್ವಿನೀ |
ಉವಾಚ ವಾಕ್ಯಂ ಕಲ್ಯಾಣೀ ರಾಮಂ ಪೃಥುಲವಕ್ಷಸಮ್ ॥21॥
ಆಗ ಅವರ ಮಧ್ಯೆ ಯಶಸ್ವಿಯೂ ಕಲ್ಯಾಣಿಯೂ ಆದ ವೈದೇಹಿಯು ಎದ್ದುನಿಂತು ವಿಶಾಲವಕ್ಷಸ್ಸ್ಥಲವುಳ್ಳ ರಾಮನನ್ನು ಕುರಿತು ಮಾತನಾಡಿದಳು.
ರಾಜಪುತ್ರ ನ ತೇ ದೋಷಂ ಕರೋಮಿ ವಿದಿತಾ ಹಿ ತೇ |
ಗತಿಃ ಸ್ತ್ರೀಣಾಂ ನರಾಣಾಂ ಚ ಶೃಣು ಚೇದಂ ವಚೋ ಮಮ ॥22॥
ರಾಜಪುತ್ರನೇ, ನಿನ್ನಲ್ಲಿ ನಾನು ದೋಷವನ್ನು ಎಣಿಸುವುದಿಲ್ಲ. ಮನುಷ್ಯಸ್ತ್ರೀಯರ ಗತಿ ಏನೆಂಬುದು ನಿನಗೆ ತಿಳಿದ ವಿಷಯ. ನನ್ನ ಈ ಮಾತನ್ನು ಕೇಳು.
ಅಂತಶ್ಚರತಿ ಭೂತಾನಾಂ ಮಾತರಿಶ್ವಾ ಸದಾಗತಿಃ |
ಸ ಮೇ ವಿಮುಂಚತು ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥
ಸದಾಗತಿಯಾದ ಮಾತರಿಶ್ವನು ಎಲ್ಲ ಜೀವರ ಒಳಗೆ ಸಂಚರಿಸುತ್ತಾನೆ. ನಾನು ಪಾಪವನ್ನು ಮಾಡಿದ್ದರೆ ಅವನು ನನ್ನ ಪ್ರಾಣವನ್ನು ಅಪಹಾರಮಾಡಲಿ.
ಅಗ್ನಿರಾಪಸ್ತಥಾಽಕಾಶಂ ಪೃಥಿವೀ ವಾಯುರೇವ ಚ |
ವಿಮುಂಚಂತು ಮಮ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥
ಅಗ್ನಿ, ಜಲ, ಆಕಾಶ, ಪೃಥಿವೀ ಮತ್ತು ವಾಯು ಇವು ನಾನು ಪಾಪವನ್ನು ಮಾಡಿದ್ದರೆ ನನ್ನ ಪ್ರಾಣಗಳನ್ನು ಅಪಹರಿಸಲಿ.

ಯಥಾಹಂ ತ್ವದೃತೇ ವೀರ ನಾನ್ಯಂ ಸ್ವಪ್ನೇಽಪ್ಯಚಿಂತಯಮ್ |
ತಥಾ ಮೇ ದೇವನಿರ್ದಿಷ್ಟಸ್ತ್ವಮೇವ ಹಿ ಪತಿರ್ಭವ ॥25॥
ವೀರನೇ, ನಾನು ಸ್ವಪ್ನದಲ್ಲಿಯೂ ಸಹ ನಿನ್ನನ್ನು ಬಿಟ್ಟು ಇನ್ನೊಬ್ಬ ಪುರುಷನನ್ನು ಚಿಂತಿಸದಿದ್ದೇ ಆದರೆ ನೀನೇ ನನಗೆ ಇನ್ನೊಂದು ಜನ್ಮದಲ್ಲಿಯೂ ದೇವನಿರ್ದಿಷ್ಟನಾದ ಪತಿಯಾಗು.
ತತೋಽಂತರಿಕ್ಷೇ ವಾಗಾಸೀತ್ ಸುಭಗಾ ಲೋಕಸಾಕ್ಷಿಣೀ |
ಪುಣ್ಯಾ ಸಂಹರ್ಷಣೀ ತೇಷಾಂ ವಾನರಾಣಾಂ ಮಹಾತ್ಮನಾಮ್ ॥26॥
ಆಗ ಅಂತರಿಕ್ಷದಲ್ಲಿ ಲೋಕಸಾಕ್ಷಿಯೂ, ಸುಂದರವೂ, ಪವಿತ್ರವೂ, ಮಹಾತ್ಮರಾದ ವಾನರರಿಗೆ ಸಂತೋಷವನ್ನು ಉಂಟುಮಾಡುವುದೂ ಆದ ವಾಣಿಯು ಉಂಟಾಯಿತು.
ವಾಯುಃ
ಭೋ ಭೋ ರಾಘವ ಸತ್ಯಂ ವೈ ವಾಯುರಸ್ಮಿ ಸದಾಗತಿಃ |
ಅಪಾಪಾ ಮೈಥಿಲೀ ರಾಜನ್ ಸಂಗಚ್ಛ ಸಹ ಭಾರ್ಯಯಾ ॥27॥
ವಾಯು ಎಲೈ ರಾಘವನೇ, ನಾನು ಸದಾಗತಿಯಾದ ವಾಯುವಾಗಿದ್ದೇನೆ. ಮೈಥಿಲಿಯು ಪಾಪರಹಿತಳು ಎಂಬುದು ಸತ್ಯವಾದ ವಿಷಯ. ರಾಜನೇ, ಪತ್ನಿಯ ಜೊತೆಯಲ್ಲಿ ಸಮಾಗಮವನ್ನು ಹೊಂದು.
ಅಗ್ನಿಃ
ಅಹಮಂತಃ ಶರೀರಸ್ಥೋ ಭೂತಾನಾಂ ರಘುನಂದನ |
ಸುಸೂಕ್ಷ್ಮಮಪಿ ಕಾಕುತ್ಸ್ಥ ಮೈಥಿಲೀ ನಾಪರಾಧ್ಯತಿ ॥28॥
ಅಗ್ನಿ ರಘುನಂದನನೇ, ನಾನು ಎಲ್ಲಾ ಪ್ರಾಣಿಗಳ ಶರೀರದ ಒಳಗೆ ಇರುವ ಅಗ್ನಿ. ಕಾಕುತ್ಸ್ಥನೇ, ಮೈಥಿಲಿಯು ಅತ್ಯಂತ ಸೂಕ್ಷ್ಮವಾದ ಅಪರಾಧವನ್ನೂ ಸಹ ಮಾಡಿಲ್ಲ.
ವರುಣಃ
ರಸಾ ವೈ ಮತ್ಪ್ರಸೂತಾ ಹಿ ಭೂತದೇಹೇಷು ರಾಘವ |
ಅಹಂ ವೈ ತ್ವಾಂ ಪ್ರಬ್ರವೀಮಿ ಮೈಥಿಲೀ ಪ್ರತಿಗೃಹ್ಯತಾಮ್ ॥29॥
ವರುಣ ಎಲೈ ರಾಘವನೇ, ಪ್ರಾಣಿಗಳ ಶರೀರಗಳಲ್ಲಿ ರಸಗಳು ನನ್ನಿಂದ ಉಂಟಾಗುತ್ತವೆ. ನಾನು ವಿಶ್ವಾಸದಿಂದ ಹೇಳುತ್ತಿದ್ದೇನೆ ಮೈಥಿಲಿಯನ್ನು ಸ್ವೀಕರಿಸು.
ಯಮಃ
ಧರ್ಮೋಽಹಮಸ್ಮಿ ಕಾಕುತ್ಸ್ಥ ಸಾಕ್ಷೀ ಲೋಕಸ್ಯ ಕರ್ಮಣಾಮ್ |
ಶುಭಾಶುಭಾನಾಂ ಸೀತೇಯಮಪಾಪಾ ಪ್ರತಿಗೃಹ್ಯತಾಮ್ ॥30॥
ಯಮ ಕಾಕುತ್ಸ್ಥನೇ, ನಾನು ಸರ್ವಲೋಕದ ಶುಭಾಶುಭ ಕರ್ಮಸಾಕ್ಷಿಯಾದ ಯಮ. ಸೀತೆಯು ಪಾಪರಹಿತಳು. ಇವಳನ್ನು ಸ್ವೀಕರಿಸು.
ಬ್ರಹ್ಮಾ
ಪುತ್ರ ನೈತದಿಹಾಶ್ಚರ್ಯಂ ತ್ವಯಿ ರಾಜರ್ಷಿಧರ್ಮಣಿ |
ಸಾಧೋ ಸದ್ವೃತ್ತ ಕಾಕುತ್ಸ್ಥ ಶೃಣು ಚೇದಂ ವಚೋ ಮಮ ॥31॥
ಬ್ರಹ್ಮ ಪುತ್ರನೇ, ರಾಜರ್ಷಿಧರ್ಮವನ್ನು ಅನುಸರಿಸುವ ನಿನ್ನಲ್ಲಿ ಇದು ಆಶ್ಚರ್ಯವಲ್ಲ. ಎಲೈ ಸಾಧುವೇ, ಸದ್ವೃತ್ತನಾದ ಕಾಕುತ್ಸ್ಥನೇ, ನನ್ನ ಈ ಮಾತನ್ನು ಕೇಳು.
ಶತ್ರುರೇಷ ತ್ವಯಾ ವೀರ ದೇವಗಂಧರ್ವಭೋಗಿನಾಮ್ |
ಯಕ್ಷಾಣಾಂ ದಾನವಾನಾಂ ಚ ಮಹರ್ಷೀಣಾಂ ಚ ಪಾತಿತಃ ॥32॥
ಎಲೈ ವೀರನೇ, ದೇವಗಂಧರ್ವಸರ್ಪಗಳಿಗೂ, ಯಕ್ಷದಾನವಮಹರ್ಷಿಗಳಿಗೂ ಶತ್ರುವಾದ ಇವನು ನಿನ್ನಿಂದ ಹತನಾಗಿದ್ದಾನೆ.
ಅವಧ್ಯಃ ಸರ್ವಭೂತಾನಾಂ ಮತ್ಪ್ರಸಾದಾತ್ ಪುರಾಽಭವತ್ |
ಕಸ್ಮಾಚ್ಚಿತ್ ಕಾರಣಾತ್ ಪಾಪಃ ಕಶ್ಚಿತ್ ಕಾಲಮುಪೇಕ್ಷಿತಃ ॥33॥
ಅವನು ಹಿಂದೆ ನನ್ನ ವರದಿಂದ ಎಲ್ಲ ಭೂತಗಳಿಂದಲೂ ಅವಧ್ಯನಾಗಿದ್ದನು. ಯಾವುದೋ ಕಾರಣದಿಂದ ಪಾಪವನ್ನು ಮಾಡಿದ ಅವನು ಸ್ವಲ್ಪಕಾಲದವರೆಗೆ ಉಪೇಕ್ಷೆ ಮಾಡಲ್ಪಟ್ಟನು.
ವಧಾರ್ಥಮಾತ್ಮನಸ್ತೇನ ಹೃತಾ ಸೀತಾ ದುರಾತ್ಮನಾ |
ನಳಕೂಬರಶಾಪೇನ ರಕ್ಷಾ ಚಾಸ್ಯಾಃ ಕೃತಾ ಮಯಾ ॥34॥
ಆ ದುರಾತ್ಮನು ತನ್ನ ವಧೆಯನ್ನು ಸಂಪಾದಿಸಿಕೊಳ್ಳುವುದಕ್ಕಾಗಿಯೇ ಸೀತೆಯನ್ನು ಅಪಹರಿಸಿದನು. ನಳಕೂಬರಶಾಪದ ಮೂಲಕ ನಾನು ಈ ಸೀತೆಯ ರಕ್ಷಣೆಯನ್ನು ಮಾಡಿದ್ದೇನೆ.
ಯದಿ ಹ್ಯಕಾಮಾಂ ಸೇವೇತ ಸ್ತ್ರಿಯಮನ್ಯಾಮಪಿ ಧ್ರುವಮ್ |
ಶತಧಾಽಸ್ಯ ಫಲೇನ್ಮೂರ್ಧಾ ಇತ್ಯುಕ್ತಃ ಸೋಽಭವತ್ ಪುರಾ ॥35॥
ನೀನು ಕಾಮರಹಿತಳಾದ ಅನ್ಯಸ್ತ್ರೀಯನ್ನು ಸೇವಿಸಿದರೆ ನಿನ್ನ ತಲೆಯು ನೂರು ಹೋಳಾಗುವುದು ಎಂದು ಅವನು ಹಿಂದೆ ಶಪಿಸಲ್ಪಟ್ಟಿದ್ದನು.
ನಾತ್ರ ಶಂಕಾ ತ್ವಯಾ ಕಾರ್ಯಾ ಪ್ರತೀಚ್ಛೇಮಾಂ ಮಹಾದ್ಯುತೇ |
ಕೃತಂ ತ್ವಯಾ ಮಹತ್ಕಾರ್ಯಂ ದೇವಾನಾಮಮರಪ್ರಭ ॥36॥
ಮಹಾದ್ಯುತಿಯೇ, ಇವಳ ವಿಷಯದಲ್ಲಿ ಶಂಕಿಸಬೇಡ. ಇವಳನ್ನು ಸ್ವೀಕರಿಸು. ಅಮರಪ್ರಭನೇ, ನೀನು ದೇವತೆಗಳಿಗೆ ದೊಡ್ಡ

ಉಪಕಾರವನ್ನು ಮಾಡಿದ್ದೀಯೆ.
ದಶರಥಃ
ಪ್ರೀತೋಽಸ್ಮಿ ವತ್ಸ ಭದ್ರಂ ತೇ ಪಿತಾ ದಶರಥೋಽಸ್ಮಿ ತೇ |
ಅನುಜಾನಾಮಿ ರಾಜ್ಯಂ ಚ ಪ್ರಶಾಧಿ ಪುರುಷೋತ್ತಮ ॥37॥
ದಶರಥ ಮಗು ನಾನು ನಿನಗೆ ಪ್ರೀತನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಾನು ನಿನ್ನ ತಂದೆಯಾದ ದಶರಥ. ನಾನು ನಿನಗೆ ರಾಜ್ಯವನ್ನಾಳಲು ಅನುಮತಿಯನ್ನು ನೀಡಿದ್ದೇನೆ. ಪುರುಷೋತ್ತಮನೇ, ನೀನು ರಾಜ್ಯವನ್ನು ಆಳುವವನಾಗು.
ರಾಮಃ
ಅಭಿವಾದಯೇ ತ್ವಾಂ ರಾಜೇಂದ್ರ ಯದಿ ತ್ವಂ ಜನಕೋ ಮಮ |
ಗಮಿಷ್ಯಾಮಿ ಪುರೀಂ ರಮ್ಯಾಮಯೋಧ್ಯಾಂ ಶಾಸನಾತ್ ತವ ॥38॥
ರಾಮ ರಾಜೇಂದ್ರನೇ, ನೀನು ನನ್ನ ತಂದೆಯಾಗಿದ್ದರೆ ನಿನಗೆ ನಮಸ್ಕಾರವನ್ನು ಮಾಡುತ್ತಿದ್ದೇನೆ. ನಿನ್ನ ಅಪ್ಪಣೆಯಂತೆ ನಾನು ಸುಂದರವಾದ ಅಯೋಧ್ಯಾ ಪಟ್ಟಣಕ್ಕೆ ಹೋಗುವೆನು.
ಮಾರ್ಕಂಡೇಯಃ
ತಮುವಾಚ ಪಿತಾ ಭೂಯಃ ಪ್ರಹೃಷ್ಟೋ ಭರತರ್ಷಭ |
ಗಚ್ಛಾಯೋಧ್ಯಾಂ ಪ್ರಶಾಧೀತಿ ರಾಮಂ ರಕ್ತಾಂತಲೋಚನಮ್ ॥39॥
ಮಾರ್ಕಂಡೇಯರು ಎಲೈ ಭರತರ್ಷಭನೇ, ಆಗ ಸಂತೋಷಗೊಂಡ ಆ ತಂದೆಯು ರಕ್ತತಂತಲೋಚನನಾದ ರಾಮನನ್ನು ಕುರಿತು ಪುನಃ ಅಯೋಧ್ಯೆಗೆ ಹೋಗಿ ರಾಜ್ಯವನ್ನಾಳು ಎಂದು ಹೇಳಿದನು.
ಮಾರ್ಕಂಡೇಯಃ
ತತೋ ದೇವಾನ್ ನಮಸ್ಕೃತ್ಯ ಸುಹೃದ್ಭಿರಭಿನಂದಿತಃ |
ಮಹೇಂದ್ರ ಇವ ಪೌಲೋಮ್ಯಾ ಭಾರ್ಯಯಾ ಸ ಸಮೇಯಿವಾನ್ ॥
ಮಾರ್ಕಂಡೇಯ ಆಗ ರಾಮನು ದೇವತೆಗಳಿಗೆ ನಮಸ್ಕರಿಸಿ ಸುಹೃದರಿಂದ ಅಭಿನಂದಿತನಾಗಿ ಇಂದ್ರನು ಶಚಿಯಿಂದ ಸಮಾಗಮವನ್ನು ಹೊಂದಿದಂತೆ ಪತ್ನಿಯಾದ ಸೀತೆಯ ಸಮಾಗಮ ಹೊಂದಿದನು.
ತತೋ ವರಂ ದದೌ ತಸ್ಮೈ ಹ್ಯವಿಂಧ್ಯಾಯ ಪರಂತಪಃ |
ತ್ರಿಜಟಾಂ ಚಾರ್ಥಮಾನಾಭ್ಯಾಂ ಯೋಜಯಾಮಾಸ ರಾಕ್ಷಸೀಮ್ ॥41॥
ಪರಂತಪನಾದ ರಾಮನು ಆಗ ಅವಿಂಧ್ಯನಿಗೆ ವರವನ್ನು ನೀಡಿದನು. ರಾಕ್ಷಸಿಯಾದ ತ್ರಿಜಟೆಗೂ ಅರ್ಥಮಾನಗಳನ್ನು ನೀಡಿದನು.
ತಮುವಾಚ ತತೋ ಬ್ರಹ್ಮಾ ದೇವೈಃ ಶಕ್ರಪುರೋಗಮೈಃ |
ಕೌಸಲ್ಯಾಮಾತರಿಷ್ಟಾಂಸ್ತೇ ವರಾನದ್ಯ ದದಾನಿ ಕಾನ್ ॥42॥
ಆಗ ಇಂದ್ರಾದಿ ದೇವತೆಗಳಿಂದ ಸಹಿತನಾದ ಬ್ರಹ್ಮನು ರಾಮನನ್ನು ಕುರಿತು ಕೌಸಲ್ಯಾಪುತ್ರನೇ, ನಿನಗೆ ಈ ದಿನ ನಾನು ಯಾವ ಇಷ್ಟವಾದ ವರಗಳನ್ನು ಕೊಡಲಿ ಎಂದು ಕೇಳಿದನು.
ಮಾರ್ಕಂಡೇಯಃ
ವವ್ರೇ ರಾಮಃ ಸ್ಥಿತಿಂ ಧರ್ಮೇ ಶತ್ರುಭಿಶ್ಚಾಪರಾಜಯಮ್ |
ರಾಕ್ಷಸೈರ್ನಿಹತಾನಾಂ ಚ ವಾನರಾಣಾಂ ಸಮುದ್ಭವಮ್ ॥43॥
ಮಾರ್ಕಂಡೇಯ ರಾಮನು ಸರ್ವದಾ ಧರ್ಮದಲ್ಲಿ ಸ್ಥಿತಿಯನ್ನೂ, ಶತ್ರುಗಳಿಂದ ಅಪರಾಜಯವನೂಿನ, ರಾಕ್ಷಸರಿಂದ ನಿಹತರಾದ ವಾನರರ ಪುನರುತ್ಥಾನವನ್ನೂ ವರವಾಗಿ ಬೇಡಿದನು.
ತತಸ್ತೇ ಬ್ರಹ್ಮಣಾ ಪ್ರೋಕ್ತೇ ತಥೇತಿ ವಚನೇ ತದಾ |
ಸಮುತ್ತಸ್ಥುರ್ಮಹಾರಾಜ ವಾನರಾ ಲಬ್ಧಚೇತಸಃ ॥44॥
ಆಗ ಬ್ರಹ್ಮನು ಹಾಗೆಯೇ ಆಗಲಿ ಎಂದು ಹೇಳುತ್ತಿರಲು ಎಲೈ ಮಹಾರಾಜನೇ, ಎಲ್ಲ ಕಪಿಗಳೂ ಲಬ್ಧಚೇತನರಾಗಿ ಎದ್ದರು.
ಸೀತಾ ಚಾಪಿ ಮಹಾಭಾಗಾ ವರಂ ಹನುಮತೇ ದದೌ |
ರಾಮಕೀರ್ತ್ಯಾ ಸಮಂ ಪುತ್ರ ಜೀವಿತಂ ತೇ ಭವಿಷ್ಯತಿ ॥45॥
ಮಹಾನುಭಾವಳಾದ ಸೀತೆಯೂ ಸಹ ಹನುಮಂತನಿಗೆ ಪುತ್ರನೇ, ರಾಮನ ಕೀರ್ತಿ ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ನೀನು ಜೀವಿಸಿರುವಿ ಎಂದು ವರವನ್ನು ಕೊಟ್ಟಳು.
ದಿವ್ಯಾಸ್ತ್ವಾಮುಪಭೋಗಾಶ್ಚ ಮತ್ಪ್ರಸಾದಕೃತಾಃ ಸದಾ |
ಉಪಸ್ಥಾಸ್ಯಂತಿ ಹನುಮನ್ನಿತಿ ಸ್ಮ ಹರಿಲೋಚನ ॥46॥
ಹರಿಲೋಚನನಾದ ಹನುಮಂತನೇ, ನನ್ನ ಅನುಗ್ರಹದಿಂದ ದಿವ್ಯವಾದ ಉಪಭೋಗಗಳು ಯಾವಾಗಲೂ ನಿನ್ನನ್ನು ಸೇವಿಸುತ್ತವೆ ಎಂದೂ ಹೇಳಿದಳು.
ತತಸ್ತೇ ಪ್ರೇಕ್ಷಮಾಣಾನಾಂ ತೇಷಾಮಕ್ಲಿಷ್ಟಕರ್ಮಣಾಮ್ |
ಅಂತರ್ಧಾನಂ ಯಯುರ್ದೇವಾಃ ಸರ್ವೇ ಶಕ್ರಪುರೋಗಮಾಃ ॥47॥
ಅನಂತರ ಅಕ್ಲಿಷ್ಟಕಾರಿಗಳಾದ ಅವರು ನೋಡುತ್ತಿದ್ದಂತೆಯೇ, ಇಂದ್ರನೇ ಮೊದಲಾದ ಎಲ್ಲಾ ದೇವತೆಗಳೂ ಅಂತರ್ಧಾನವನ್ನು ಹೊಂದಿದರು.
ದೃಷ್ಟ್ವಾ ರಾಮಂ ತು ಜಾನಕ್ಯಾ ಸಂಗತಂ ಶಕ್ರಸಾರಥಿಃ |
ಉವಾಚ ಪರಮಪ್ರೀತಃ ಸುಹೃನ್ಮಧ್ಯ ಇದಂ ವಚಃ ॥48॥

ಜಾನಕಿಯ ಜೊತೆಯಲ್ಲಿ ಸಮೇತನಾದ ರಾಮನನ್ನು ನೋಡಿ ಇಂದ್ರ ಸಾರಥಿಯಾದ ಮಾತಲಿಯು ಪರಮಸಂತೋಷದಿಂದ ಸುಹೃಜ್ಜನರ ಮಧ್ಯೆ ಈ ಮಾತನ್ನು ಆಡಿದನು.
ದೇವಗಂಧರ್ವಯಕ್ಷಾಣಾಂ ಮಾನುಷಾಸುರಭೋಗಿನಾಮ್ |
ಅಪನೀತಂ ತ್ವಯಾ ದುಃಖಮಿದಂ ಸತ್ಯಪರಾಕ್ರಮ ॥49॥
ಎಲೈ ಸತ್ಯಪರಾಕ್ರಮನೇ, ನೀನು ದೇವಗಂಧರ್ವಯಕ್ಷರಿಗೂ, ಮನುಷ್ಯ ಅಸುರ ಸರ್ಪಗಳಿಗೂ ಉಂಟಾಗಿದ್ದ ಈ ದುಃಖವನ್ನು ಪರಿಹರಿಸಿದ್ದೀಯೆ.
ಸದೇವಾಸುರಗಂಧರ್ವಾ ಯಕ್ಷರಾಕ್ಷಸಪನ್ನಗಾಃ |
ಕಥಯಿಷ್ಯಂತಿ ಲೋಕಾಸತ್ವಂ ಯಾವದ್ ಭೂಮಿರ್ಧರಿಷ್ಯತಿ ॥50॥
ಎಲ್ಲಿಯವರೆಗೆ ಭೂಮಿಯು ಇರುತ್ತದೆಯೋ ಅಲ್ಲಿಯವರೆಗೆ ದೇವಾಸುರ ಗಂಧರ್ವರೂ, ಯಕ್ಷಾಸುರಪನ್ನಗರೂ ಮತ್ತು ಎಲ್ಲ ಲೋಕಗಳೂ ನಿನ್ನ ಕೀರ್ತಿಯನ್ನು ಕೊಂಡಾಡುವವು.
ಮಾರ್ಕಂಡೇಯಃ
ಇತ್ಯೇವಮುಕತತ್ವಽನುಜ್ಞಾಪ್ಯ ರಾಮಂ ಶಸ್ತ್ರಭೃತಾಂ ವರಮ್ |
ಸಂಪೂಜ್ಯಾಪಾಕ್ರಮತ್ ತೇನ ರಥೇನಾದಿತ್ಯವರ್ಚಸಾ ॥51॥
ಮಾರ್ಕಂಡೇಯ ಹೀಗೆ ಹೇಳಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ರಾಮನ ಅಪ್ಪಣೆಯನ್ನು ಪಡೆದು ರಾಮನನ್ನು ಪೂಜಿಸಿ ಆದಿತ್ಯಪ್ರಕಾಶವುಳ್ಳ ರಥಸಹಿತನಾಗಿ ಅವನು ಅಲ್ಲಿಂದ ಹೊರಟು ಹೋದನು.
ತತಃ ಸೀತಾಂ ಪುರಸ್ಕೃತ್ಯ ರಾಮಃ ಸೌಮಿತ್ರಿಣಾ ಸಹ |
ಸುಗ್ರೀವಪ್ರಮುಖೈಶ್ಚೈವ ಸಹಿತಃ ಸರ್ವವಾನರೈಃ ॥52॥
ವಿಧಾಯ ರಕ್ಷಾಂ ಲಂಕಾಯಾಂ ವಿಭೀಷಣಪುರಸ್ಕೃತಃ |
ಸಂತತಾರ ಪುನಸ್ತೇನ ಸೇತುನಾ ಮಕರಾಲಯಮ್ ॥53॥
ಅನಂತರ ರಾಮನು ಸೀತೆಯನ್ನು ಮುಂದೆ ಮಾಡಿಕೊಂಡು ಲಕ್ಷ್ಮಣನಿಂದ ಮತ್ತು ಸುಗ್ರೀವ ಮೊದಲಾದ ಸರ್ವವಾನರರಿಂದಲೂ ಸಹಿತನಾಗಿ ವಿಭೀಷಣನನ್ನು ಮುಂದಿಟ್ಟು ಲಂಕೆಯನ್ನು ರಕ್ಷಣೆ ಮಾಡಿ ಪುನಃ ಅದೇ ಸೇತುವೆಯಿಂದ ಮಕರಾಲಯವಾದ ಸಮುದ್ರವನ್ನು ದಾಟಿದನು.
ಪುಷ್ಪಕೇಣ ವಿಮಾನೇನ ಖೇಚರೇಣ ವಿರಾಜತಾ |
ಕಾಮಗೇನ ಯಥಾಮುಖ್ಯೈರಮಾತ್ಯೈಃ ಸಂವೃತೋ ವಶೀ ॥54॥
ತತಸ್ತೀರೇ ಸಮುದ್ರಸ್ಯ ಯತ್ರ ಶಿಶ್ಯೇ ಸ ಪಾರ್ಥಿವಃ |
ತತ್ರೈವೋವಾಸ ಧರ್ಮಾತ್ಮಾ ಸಹಿತಃ ಸರ್ವವಾನರೈಃ ॥55॥
ಕಾಮಗಾಮಿಯಾದ ಪ್ರಕಾಶಮಾನವಾದ ಆಕಾಶದಲ್ಲಿ ಸಂಚರಿಸುವ ಪುಷ್ಪಕ ವಿಮಾನದಲ್ಲಿ ಮುಖ್ಯ ಅಮಾತ್ಯರ ಜೊತೆಯಲ್ಲಿ ಕೂಡಿದವನಾಗಿ ಸಮುದ್ರ ತೀರಕ್ಕೆ ಬಂದು ಮೊದಲು ಎಲ್ಲಿ ದರ್ಭಶಯನನಾಗಿ ಇದ್ದನೋ ಅಲ್ಲಿಯೇ ಆ ಧರ್ಮಾತ್ಮನಾದ ಸರ್ವವಶಿಯಾದ ರಾಜನಾದ ರಾಮನು ಎಲ್ಲ ವಾನರರ ಜೊತೆಯಲ್ಲಿ ವಾಸವನ್ನು ಮಾಡಿದನು.
ಅಥೈನಾನ್ ರಾಘವಃ ಕಾಲೇ ಸಮಾನೀಯಾಭಿಪೂಜ್ಯ ಚ |
ವಿಸರ್ಜಯಾಮಾಸ ತದಾ ರತ್ನೈಃ ಸಂತೋಷ್ಯ ಸರ್ವಶಃ ॥56॥
ಅನಂತರ ಯೋಗ್ಯಕಾಲದಲ್ಲಿ ರಾಮನು ಅವರೆಲ್ಲರನ್ನೂ ಕರೆದು ಪೂಜಿಸಿ ಅನೇಕ ವಿಧವಾದ ರತ್ನಗಳಿಂದ ಸಂತೋಷಪಡಿಸಿ ಎಲ್ಲರನ್ನೂ ಬೀಳ್ಕೊಟ್ಟನು.
ಗತೇಷು ತೇಷು ಸರ್ವೇಷು (ವಾನರೇಂದ್ರೇಷು)
ಗೋಪುಚ್ಛರ್ಕ್ಷೇಷು ತೇಷು ಚ |
ಸುಗ್ರೀವಸಹಿತೋ ರಾಮಃ ಕಿಷ್ಕಿಂಧಾಂ ಪುನರಾಗಮತ್ ॥57॥
ಎಲ್ಲಾ ವಾನರರು ಗೋಪುಚ್ಛರು ಮತ್ತು ಋಕ್ಷರು ಹೊರಟು ಹೋದಮೇಲೆ ರಾಮನು ಸುಗ್ರೀವ ಸಹಿತನಾಗಿ ಪುನಃ ಕಿಷ್ಕಿಂಧಾ ಪಟ್ಟಣಕ್ಕೆ ಬಂದನು.
ವಿಭೀಷಣೇನಾನುಗತಃ ಸುಗ್ರೀವಸಹಿತಸ್ತದಾ |
ಪುಷ್ಪಕೇಣ ವಿಮಾನೇನ ವೈದೇಹ್ಯಾ ದರ್ಶಯನ್ವನಮ್ ॥58॥
ಕಿಷ್ಕಿಂಧಾಂ ತು ಸಮಾಸಾದ್ಯ ರಾಮಃ ಪ್ರಹರತಾಂ ವರಃ |
ಅಂಗದಂ ಕೃತಕರ್ಮಾಣಂ ಯೌವರಾಜ್ಯೇಽಭ್ಯಷೇಚಯತ್ ॥59॥
ವಿಭೀಷಣನಿಂದ ಹಿಂಬಾಲಿಸಲ್ಪಟ್ಟು ಸುಗ್ರೀವ ಸಹಿತನಾಗಿ ಪುಷ್ಪಕವಿಮಾನದಲ್ಲಿ ಕುಳಿತು ಜಾನಕಿಗೆ ವನದ ಸೌಂದರ್ಯವನ್ನು ತೋರಿಸುತ್ತಾ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ರಾಮನು ಕಿಷ್ಕಿಂಧೆಯನ್ನು ತಲುಪಿ ತನ್ನ ಸೇವೆಯನ್ನು ಮಾಡಿದ ಅಂಗದನಿಗೆ ಯೌವರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು.
ತತಸ್ತೈರೇವ ಸಹಿತೋ ರಾಮಃ ಸೌಮಿತ್ರಿಣಾ ಸಹ |
ಯಥಾಗತೇನ ಮಾರ್ಗೇಣ ಪ್ರಯಯೌ ಸ್ವಪುರಂ ಪ್ರತಿ ॥60॥
ಅನಂತರ ಅವರಿಂದಲೂ ಮತ್ತು ಲಕ್ಷ್ಮಣನಿಂದಲೂ ಕೂಡಿಕೊಂಡು ತಾನು ಬಂದ ಮಾರ್ಗದಿಂದಲೇ ರಾಮನು ತನ್ನ ಪಟ್ಟಣವಾದ ಅಯೋಧ್ಯೆಗೆ ಹೊರಟನು.
ಅಯೋಧ್ಯಾಂ ಸ ಸಮಾಸಾದ್ಯ ಪುರೀಂ ರಾಷ್ಟ್ರಪತಿಸ್ತತಃ |

ಭರತಾಯ ಹನೂಮಂತಂ ದೂತಂ ಪ್ರಾಸ್ಥಾಪಯತ್ ತದಾ ॥61|
ರಾಷ್ಟ್ರಪತಿಯಾದ ಅವನು ಅಯೋಧ್ಯೆಯನ್ನು ತಲುಪಿ ಹನುಮಂತನನ್ನು ತನ್ನ ದೂತನನ್ನಾಗಿ ಭರತನ ಬಳಿಗೆ ಕಳುಹಿಸಿದನು.
ಲಕ್ಷಯಿತ್ವೇಂಗಿತಂ ಸರ್ವಂ ಪ್ರಿಯಂ ತಸ್ಮೈ ನಿವೇದ್ಯ ವೈ |
ವಾಯುಪುತ್ರೇ ಪುನಃ ಪ್ರಾಪ್ತೇ ನಂದಿಗ್ರಾಮಮುಪಾಗಮತ್ ॥62॥
ಹನುಮಂತನು ಅವನ ಇಂಗಿತವನ್ನು ಗಮನಿಸಿ ಅವನಿಗೆ ಪ್ರಿಯವಾದ ಎಲ್ಲ ವಾರ್ತೆಯನ್ನೂ ಹೇಳಿ ರಾಮನ ಬಳಿಗೆ ಹಿಂದಿರುಗಿದ ಮೇಲೆ ರಾಮನು ನಿಂದಿಗ್ರಾಮವನ್ನು ಪ್ರವೇಶಿಸಿದನು.
ಸ ತತ್ರ ಮಲದಿಗ್ಧಾಂಗಂ ಭರತಂ ಚೀರವಾಸಸಮ್ |
ನಂದಿಗ್ರಾಮಗತಂ ರಾಮಃ ಸಶತ್ರುಘ್ನಂ ಸ ರಾಘವಃ |
ಅಗ್ರತಃ ಪಾದುಕೇ ಕೃತ್ವಾ ದದರ್ಶಾಸೀನಮಾಸನೇ ॥63॥
ಅಲ್ಲಿ ರಘುವಂಶೋತ್ಪನ್ನನಾದ ಆ ರಾಮನು ಕೊಳೆಯಿಂದ ಕೂಡಿದ ಶರೀರವುಳ್ಳ ನಾರುಮಡಿಯನ್ನು ಧರಿಸಿದ ಶತ್ರುಘ್ನಸಹಿತನಾದ ಭರತನು ತನ್ನ ಪಾದುಕೆಗಳನ್ನು ಶ್ರೇಷ್ಠವಾದ ಆಸನದಲ್ಲಿ ಇಟ್ಟು ಮುಂದೆ ಕುಳಿತಿರುವುದನ್ನು ನೋಡಿದನು.
ಸಂಗತೋ ಭರತೇನಾಥ ಶತ್ರುಘ್ನೇನ ಚ ವೀರ್ಯವಾನ್ |
ರಾಘವಃ ಸಹಸೌಮಿತ್ರಿರ್ಮುಮುದೇ ಭರತರ್ಷಭ ॥64॥
ಎಲೈ ಭರತರ್ಷಭನೇ, ಪರಾಕ್ರಮಶಾಲಿಯಾದ ರಾಘವನು ಶತ್ರುಘ್ನನಿಂದಲೂ ಮತ್ತು ಭರತನಿಂದಲೂ ಸಂಗತನಾಗಿ ಲಕ್ಷ್ಮಣನ ಜೊತೆಯಲ್ಲಿ ಬಹಳ ಸಂತೋಷವನ್ನು ಪಟ್ಟನು.
ತತೋ ಭರತಶುತ್ರುಘ್ನೌ ಸಮೇತೌ ಗುರುಣಾ ತದಾ |
ವೈದೇಹ್ಯಾ ದರ್ಶನೇನೋಭೌ ಪ್ರಹರ್ಷಂ ಸಮವಾಪತುಃ ॥65॥
ಆಗ ಭರತಶತ್ರುಘ್ನರು ತಮ್ಮ ಹಿರಿಯ ಅಣ್ಣನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಸೀತೆಯ ದರ್ಶನವನ್ನು ಮಾಡಿ ಬಹಳ ಸಂತೋಷವನ್ನು ಹೊಂದಿದರು.
ತಸ್ಮೈ ತದ್ ಭರತೋ ರಾಜ್ಯಮಾಗತಾಯಾತಿಸತ್ಕೃತಮ್ |
ನ್ಯಾಸಂ ನಿರ್ಯಾತಯಾಮಾಸ ಯುಕ್ತಃ ಪರಮಯಾ ಮುದಾ ॥66॥
ಲಂಕಾಪಟ್ಟಣದಿಂದ ಹಿಂದಿರುಗಿದ ರಾಮನಿಗೆ ಭರತನು ತನ್ನ ಬಳಿ ನ್ಯಾಸವಾಗಿ ಇಟ್ಟಿದ್ದ ಅತ್ಯಂತ ಸತ್ಕೃತವಾದ ಆ ರಾಜ್ಯವನ್ನು ಪರಮಸಂತೋಷದಿಂದ ಹಿಂದಿರುಗಿಸಿದನು.
ತತಸ್ತಂ ವೈಷ್ಣವೇ ಶೂರಂ ನಕ್ಷತ್ರೇಽಭಿಮತೇಽಹನಿ |
ವಸಿಷ್ಠೋ ವಾಮದೇವಶ್ಚ ಸಹಿತಾವಭ್ಯಷಿಂಚತಾಮ್ ॥67॥
ಅನಂತರ ಒಂದು ಶುಭದಿವಸದಲ್ಲಿ ವೈಷ್ಣವ ನಕ್ಷತ್ರವಾದ ಶ್ರವಣ ನಕ್ಷತ್ರದಲ್ಲಿ ಶೂರನಾದ ರಾಮನಿಗೆ ವಸಿಷ್ಠವಾಮದೇವರು ಸಹಿತರಾಗಿ ಅಭಿಷೇಕವನ್ನು ಮಾಡಿದರು.
ಸೋಽಭಿಷಿಕ್ತಃ ಕಪಿಶ್ರೇಷ್ಠಂ ಸುಗ್ರೀವಂ ಸಸುಹೃಜ್ಜನಮ್ |
ವಿಭೀಷಣಂ ಚ ಪೌಲಸ್ತ್ಯಮನ್ವಜಾನಾದ್ ಗೃಹಾನ್ ಪ್ರತಿ ॥68॥
ಅಭಿಷಿಕ್ತನಾದ ರಾಮನು ಕಪಿಶ್ರೇಷ್ಠನಾದ ಸುಗ್ರೀವನಿಗೂ ಸುಹೃಜ್ಜನರಿಗಳಿಗೂ ಪೌಲಸ್ತ್ಯನಾದ ವಿಭೀಷಣನಿಗೂ ತಮ್ಮ ಗೃಹಗಳಿಗೆ ಹಿಂದಿರುಗಲು ಅನುಮತಿಯನ್ನು ನೀಡಿದನು.
ಅಭ್ಯರ್ಚ್ಯ ವಿವಿಧೈರ್ಭೋಗೈಃ ಪ್ರೀತಿಯುಕ್ತೌ ಮುದಾ ಯುತೌ |
ಸಮಾಧಾಯೇತಿಕರ್ತವ್ಯಂ ದುಃಖೇನ ವಿಸಸರ್ಜ ಹ ॥69॥
ಸುಗ್ರೀವ ಮತ್ತು ವಿಭೀಷಣರನ್ನು ಅನೇಕ ವಿಧವಾದ ಭೋಗಗಳಿಂದ ಅರ್ಚಿಸಿ ಸಂತೋಷದಿಂದ ಕೂಡಿದವರನ್ನಾಗಿ ಮಾಡಿ ಅವರಿಗೆ ಸಮಾಧಾನವನ್ನು ಮಾಡಿ ಅವರ ಕರ್ತವ್ಯವನ್ನು ತಿಳಿಸಿ ದುಃಖದಿಂದ ಅವರನ್ನು ಬೀಳ್ಕೊಟ್ಟನು.
ಪುಷ್ಪಕಂ ಚ ವಿಮಾನಂ ತತ್ ಪೂಜಯಿತ್ವಾ ಸ ರಾಘವಃ |
ಪ್ರಾದಾದ್ ವೈಶ್ರವಣಾಯೈವ ಪ್ರೀತ್ಯಾ ಸ ರಘುನಂದನಃ ॥70॥
ರಘುನಂದನನಾದ ರಾಘವನು ಆ ಪುಷ್ಪಕವಿಮಾನವನ್ನು ಪೂಜಿಸಿ ಅದನ್ನು ಪ್ರೀತಿಯಿಂದ ಕುಬೇರನಿಗೇ ಹಿಂದಿರುಗಿಸಿದನು.
ತತೋ ದೇವರ್ಷಿಸಹಿತಃ ಸರಿತಂ ಗೋಮತೀಮನು |
ದಶಾಶ್ವಮೇಧಾನಾಜಹ್ರೇ ಜಾರೂಥ್ಯಾಂ ಸ ನಿರರ್ಗಲಾನ್ ॥71॥
ಅನಂತರ ಗೋಮತಿ ನದಿಯ ತೀರದಲ್ಲಿ ಜಾರುಥಿ ಎಂಬ ಸ್ಥಳದಲ್ಲಿ ದೇವರ್ಷಿ ಸಹಿತವಾಗಿ ನಿರ್ಮಲವಾದ ಹತ್ತು ಅಶ್ವಮೇಧ ಯಾಗವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಶ್ರೀರಾಮಾಭಿಷೇಕೋ ನಾಮ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತೊಂದನೆಯ ಅಧ್ಯಾಯ
ಮಾರ್ಕಂಡೇಯರಿಂದ ಯುಧಿಷ್ಠಿರನಿಗೆ ಸಮಾಧಾನ ವಚನಗಳು.
ಮಾರ್ಕಂಡೇಯಃ

ಏವಮೇತನ್ಮಹಾಬಾಹೋ ರಾಮೇಣಾಮಿತತೇಜಸಾ |
ಪ್ರಾಪ್ತಂ ವ್ಯಸನಮತ್ಯುಗ್ರಂ ವನವಾಸಕೃತಂ ಪುರಾ ॥1॥
ಮಾರ್ಕಂಡೇಯ ಎಲ್ಲೈ ಮಹಾಬಾಹುವೇ, ಹೀಗೆ ಅಮಿತಪರಾಕ್ರಮಿಯಾದ ರಾಮನು ಹಿಂದೆ ವನವಾಸವನ್ನು ಮಾಡಿ ಅತ್ಯುಗ್ರವಾದ ವ್ಯಸನವನ್ನು ಹೊಂದಿದನು.
ಮಾ ಶುಚಃ ಪುರುಷವ್ಯಾಘ್ರ ಕ್ಷತ್ರಿಯೋಽಸಿ ಪರಂತಪ |
ಬಾಹುವೀರ್ಯಾಶ್ರಿತೇ ಮಾರ್ಗೇ ವರ್ತಸೇ ಪುರುಷರ್ಷಭ |
ನ ಹಿ ತೇ ವೃಜಿನಂ ಕಿಂಚಿದ್ ವರ್ತತೇ ಪರಮಾಣ್ವಪಿ ॥2॥
ಅಸ್ಮಿನ್ ಮಾರ್ಗೇ ನಿಷೀದೇಯುಃ ಸೇಂದ್ರಾ ಅಪಿ ಸುರಾಸುರಾಃ ॥3॥
ಪುರುಷವ್ಯಾಘ್ರನೇ, ನೀನು ಶೋಕಪಡಬೇಡ. ಪರಂತಪನೇ, ನೀನು ಕ್ಷತ್ರಿಯನಾಗಿದ್ದೀಯೆ. ಪುರುಷರ್ಷಭನೇ, ನೀನು ಬಾಹುವೀರ್ಯವನ್ನು ಆಶ್ರಯಿಸಿದ ಮಾರ್ಗವನ್ನು ಅನುಸರಿಸುತ್ತಿದ್ದೀಯೆ ಮತ್ತು ನಿನ್ನಲ್ಲಿ ಪರಮಾಣುವಿನಷ್ಟೂ ಪಾಪವಿಲ್ಲ. ನೀನು ಹೋದ ಮಾರ್ಗದಲ್ಲಿ ಹೋಗಲು ಇಂದ್ರ ಮೊದಲಾದ ದೇವತೆಗಳೂ ಮತ್ತು ಅಸುರರೂ ಹೋಗಲು ಪ್ರಯತ್ನಪಟ್ಟಾರು.
ಸಂಹತ್ಯ ನಿಹತೋ ವೃತ್ರೋ ಮರುದ್ಭಿರ್ವಜ್ರಪಾಣಿನಾ |
ನಮುಚಿಶ್ಚೈವ ದುರ್ಧರ್ಷೋ ದೀರ್ಘಜಿಹ್ವಾ ಚ ರಾಕ್ಷಸೀ ॥4॥
ಇಂದ್ರನು ಮರುತ್ತುಗಳ ಜೊತೆಯಲ್ಲಿ ಸೇರಿಕೊಂಡು ವೃತ್ರನನ್ನು ಕೊಂದನು. ದುರ್ಧರ್ಷನಾದ ನಮುಚಿಯೂ ದೀರ್ಘಜಿಹ್ವ ಎಂಬ ರಾಕ್ಷಸಿಯೂ ಇಂದ್ರನಿಂದ ಹಾಗೆಯೇ ಕೊಲ್ಲಲ್ಪಟ್ಟರು.
ಸಹಾಯವತಿ ಸರ್ವಾರ್ಥಾಃ ಸಂತಿಷ್ಠಂತೀಹ ಸರ್ವಶಃ |
ಕಿಂ ನು ತಸ್ಯಾಜಿತಂ ಸಂಖ್ಯೇ ಯಸ್ಯ ಭ್ರಾತಾ ಧನಂಜಯಃ ॥5॥
ಸಹಾಯವುಳ್ಳವನಿಗೆ ಎಲ್ಲಾ ಅರ್ಥಗಳು ಎಲ್ಲ ಕಡೆಯಲ್ಲಿಯೂ ಸಿದ್ಧಿಸುತ್ತವೆ. ಯಾರಿಗೆ ಅರ್ಜುನನು ತಮ್ಮನಾಗಿದ್ದಾನೋ ಅವನು ಯುದ್ಧದಲ್ಲಿ ಗೆಲ್ಲದಿರುವುದು ಯಾವುದಿದೆ?
ಅಯಂ ಚ ಬಲಿನಾಂ ಶ್ರೇಷ್ಠೋ ಭೀಮೋ ಭೀಮಪರಾಕ್ರಮಃ |
ಯುವಾನೌ ಚ ಮಹೇಷ್ವಾಸೌ ವೀರೌ ಮಾದ್ರವತೀಸುತೌ |
ಏಭಿಃ ಸಹಾಯೈಃ ಕಸ್ಮಾತ್ ತ್ವಂ ವಿಷೀದಸಿ ಪರಂತಪ ॥6॥
ಭೀಮ ಪರಾಕ್ರಮವುಳ್ಳ ಈ ಭೀಮನು ಬಲಿಷ್ಠರಲ್ಲಿ ಶ್ರೇಷ್ಠನಾದವನು. ಮಾದ್ರವತೀ ಸುತರಾದ ಯುವಕರಾದ ನಕುಲಸಹದೇವರು ಮಹಾಧನುರ್ಧಾರಿಗಳಾದ ವೀರರು. ಎಲ್ಲೈ ಪರಂತಪನೇ, ಇವರ ಸಹಾಯದಿಂದ ಸಹಿತನಾದ ನೀನು ಏಕೆ ವಿಷಾದವನ್ನು ಪಡುತ್ತೀಯೆ?

ಯ ಇಮೇ ವಜ್ರಿಣಃ ಸೇನಾಂ ಜಯೇಯುಃ ಸಮರುದ್ಗಣಾಮ್ |
ತ್ವಮಪ್ಯೇಭಿರ್ಮಹೇಷ್ವಾಸೈಃ ಸಹಾಯೈರ್ದೇವರೂಪಿಭಿಃ ॥7॥
ವಿಜೇಷ್ಯಸೇ ರಣೇ ಸರ್ವಾನಮಿತ್ರಾನ್ ಭರತರ್ಷಭ ॥8॥
ಇವರು ಮರುದ್ಗಣಗಳಿಂದ ಸಹಿತನಾದ ಇಂದ್ರನ ಸೈನ್ಯವನ್ನೂ ಗೆದ್ದಾರು. ಎಲ್ಲೈ ಭರತರ್ಷಭನೇ, ನೀನೂ ಸಹ ದೇವರೂಪವುಳ್ಳ ಈ ಮಹೇಷ್ವಾಸರ ಸಹಾಯದಿಂದ ಯುದ್ಧದಲ್ಲಿ ಎಲ್ಲಾ ಶತ್ರುಗಳನ್ನೂ ಗೆಲ್ಲುವಿ.
ಇತಶ್ಚ ತ್ವಮಿಮಾಂ ಪಶ್ಯ ಸೈಂಧವೇನ ದುರಾತ್ಮನಾ |
ಬಲಿನಾ ವೀರ್ಯಮತ್ತೇನ ಹೃತಾಮೇಭಿರ್ಮಹಾತ್ಮಭಿಃ ॥9॥
ಆನೀತಾಂ ದ್ರೌಪದೀಂ ಕೃಷ್ಣಾಂ ಕೃತ್ವಾ ಕರ್ಮ ಸುದುಷ್ಕರಮ್ |
ಜಯದ್ರಥಂ ಚ ರಾಜಾನಂ ವಿಜಿತಂ ವಶಮಾಗತಮ್ ॥10॥
ಈ ಕಾರಣದಿಂದಲೂ ನೀನು ಇದನ್ನು ಗಮನಿಸು. ದುರಾತ್ಮನಾದ ಬಲಿಷ್ಠನಾದ ವೀರ್ಯಮತ್ತನಾದ ಸೈಂಧವನು ದ್ರೌಪದಿಯನ್ನು ಅಪಹರಿಸಿದಾಗ ಮಹಾತ್ಮರಾದ ಭೀಮಾರ್ಜುನರು ಸುದುಷ್ಕರವಾದ ಕರ್ಮವನ್ನು ಮಾಡಿ ದ್ರೌಪದಿಯನ್ನು ಹಿಂದಕ್ಕೆ ತಂದರು. ಜಯದ್ರಥ ರಾಜನನ್ನೂ ಜಯಿಸಿ ವಶಪಡಿಸಿಕೊಂಡರು.
ಅಸಹಾಯೇನ ರಾಮೇಣ ವೈದೇಹೀ ಪುನರಾಹೃತಾ |
ಹತ್ವಾ ಸಂಖ್ಯೇ ದಶಗ್ರೀವಂ ರಾಕ್ಷಸಂ ಭೀಮವಿಕ್ರಮಮ್ ॥11॥
ರಾಮನು ಅಸಹಾಯನಾಗಿ ಯುದ್ಧದಲ್ಲಿ ಭೀಮಪರಾಕ್ರಮವುಳ್ಳ ರಾಕ್ಷಸನಾದ ರಾವಣನನ್ನು ಕೊಂದು ಜಾನಕಿಯನ್ನು ತಂದನು.
ಯಸ್ಯ ಶಾಖಾಮೃಗಾ ಮಿತ್ರಾಣ್ಯೃಕ್ಷಾಃ ಕಾಲಾಮುಖಾಸ್ತಥಾ |
ಜಾತ್ಯಂತರಗತಾ ರಾಜನ್ನೇತದ್ ಬುದ್ಧ್ಯಾಽನುಚಿಂತಯ ॥12॥
ಯಾವ ಅವನಿಗೆ ಕಪಿಗಳು, ಕರಡಿಗಳು, ಕಾಲಾಮುಖಗಳು ಹೀಗೆ ಜಾತ್ಯಂತರ ಪ್ರಾಣಿಗಳು ಮಿತ್ರರಾಗಿದ್ದರೋ ರಾಜನೇ, ಇದನ್ನು ಬುದ್ಧಿಯಿಂದ ಯೋಚಿಸು.
ತಸ್ಮಾತ್ಸ ತ್ವಂ ಕುರುಶ್ರೇಷ್ಠ ಮಾ ಶುಚೋ ಭರತರ್ಷಭ |
ತ್ವದ್ವಿಧಾ ಹಿ ಮಹಾತ್ಮಾನೋ ನ ಶೋಚಂತಿ ಪರಂತಪ ॥13॥
ಆದ್ದರಿಂದ ಎಲ್ಲೈ ಕುರುಶ್ರೇಷ್ಠನೇ, ಭರತರ್ಷಭನೇ, ಶೋಕವನ್ನು ಪಡಬೇಡ. ಎಲ್ಲೈ ಪರಂತಪನೇ, ನಿನ್ನಂತಹ ಮಹಾತ್ಮರು ಶೋಕವನ್ನು ಪಡುವುದಿಲ್ಲ.
ವೈಶಂಪಾಯನಃ
ಏವಮಾಶ್ವಾಸಿತೋ ರಾಜಾ ಮಾರ್ಕಂಡೇಯೇನ ಧೀಮತಾ |

ತ್ಯಕ್ತ್ವಾ ದುಃಖಮದೀನಾತ್ಮಾ ಪುನರಪ್ಯೇನಮಬ್ರವೀತ್ ॥14॥
ವೈಶಂಪಾಯನ ಹೀಗೆ ಮೇಧಾವಿಗಳಾದ ಮಾರ್ಕಂಡೇಯರಿಂದ ಸಮಾಧಾನ ಪಡಿಸಲ್ಪಟ್ಟ ರಾಜನು ದುಃಖವನ್ನು ತ್ಯಜಿಸಿ ಧೈರ್ಯವನ್ನು ಹೊಂದಿ ಪುನಃ ಅವರನ್ನು ಕುರಿತು ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಯಾಂ ವನಪರ್ವಣಿ
ಏಕಾಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ರಾಮೋಪಾಖ್ಯಾನಪರ್ವಣಿ ಯುಧಿಷ್ಠಿರಾಶ್ವಾಸನಂ ನಾಮ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಸಾವಿತ್ರ್ಯುಪಾಖ್ಯಾನಪರ್ವ
ಇನ್ನೂರ ಎಂಬತ್ತೆರಡನೆಯ ಅಧ್ಯಾಯ
ಮಾರ್ಕಂಡೇಯರಿಂದ ಯುಧಿಷ್ಠಿರನನ್ನು ಕುರಿತು ಸಾವಿತ್ರ್ಯುಪಾಖ್ಯಾನ ಪ್ರಾರಂಭ. ಗಾಯತ್ರಿಯ ಅನುಗ್ರಹದಿಂದ ಅಶ್ವಪತಿರಾಜನಿಗೆ ಕನ್ಯಾರತ್ನ ಜನನ. ವರಾನ್ವೇಷಣೆಗಾಗಿ ಮಂತ್ರಿಗಳ ಜೊತೆಯಲ್ಲಿ ಸಾವಿತ್ರಿಯ ಪ್ರಯಾಣ.
ಯುಧಿಷ್ಠಿರಃ
ನಾತ್ಮಾನಮನುಶೋಚಾಮಿ ನೇಮಾನ್ ಭ್ರಾತೄನ್ ಮಹಾಮುನೇ |
ಹರಣಂ ಚಾಪಿ ರಾಜ್ಯಸ್ಯ ಯಥೇಮಾಂ ದ್ರುಪದಾತ್ಮಜಾಮ್ ॥1॥
ಯುಧಿಷ್ಠಿರ ಎಲೈ ಮಹರ್ಷಿಗಳೇ, ನಾನು ಈ ದ್ರೌಪದಿಯನ್ನು ಕುರಿತು ಶೋಕಪಡುವಂತೆ ನನ್ನನಾಣನಗಲೀ, ಈ ತಮ್ಮಂದಿರನ್ನಾಗಲೀ ಅಥವಾ ಕಳೆದು ಹೋದ ರಾಜ್ಯವನ್ನಾಗಲೀ ಕುರಿತು ಶೋಕಪಡುವುದಿಲ್ಲ.
ದ್ಯೂತೇ ದುರಾತ್ಮಭಿಃ ಕ್ಲಿಷ್ಟಾಃ ಕೃಷ್ಣಯಾ ತಾರಿತಾ ವಯಮ್ |
ಜಯದ್ರಥೇನ ಚ ಪುನರ್ವನಾಚ್ಚಾಪಿ ಹೃತಾ ಬಲಾತ್ ॥2॥
ದ್ಯೂತ ಸಂದರ್ಭದಲ್ಲಿ ನಾವೆಲ್ಲರೂ ಕ್ಲೇಶಕ್ಕೆ ಒಳಗಾಗಿದ್ದೆವು. ದ್ರೌಪದಿಯು ನಮ್ಮನ್ನು ಪಾರುಮಾಡಿದಳು. ಕಾಡಿನಲ್ಲೂ ಕೂಡ ಸೈಂಧವನು ಅವಳನ್ನು ಬಲಾತ್ಕಾರದಿಂದ ಅಪಹರಿಸಿದನು.
ಅಸ್ತಿ ಸೀಮಂತಿನೀ ಕಾಚಿದ್ ದೃಷ್ಟಪೂರ್ವಾಪಿ ವಾ ಶ್ರುತಾ |
ಪತಿವ್ರತಾ ಮಹಾಭಾಗಾ ಯಥೇಯಂ ದ್ರುಪದಾತ್ಮಜಾ ॥3॥
ಎಲೈ ಮಹರ್ಷಿಗಳೇ, ದ್ರೌಪದಿಯಂತೆ ಮಹಾನುಭಾವಳೂ, ಪತಿವ್ರತೆಯೂ ಆದ ಇನ್ನೊಬ್ಬ ಸೀಮಂತಿನಿಯು ಇಂತಹ ಕಷ್ಟವನ್ನು ಅನುಭವಿಸಿರುವುದನ್ನು ನೀವು ನೋಡಿದ್ದೀರಾ ಅಥವಾ ಕೇಳಿದ್ದೀರಾ?
ಮಾರ್ಕಂಡೇಯಃ
ಶೃಣು ರಾಜನ್ ಕುಲಸ್ತ್ರೀಣಾಂ ಮಹಾಭಾಗ್ಯಂ ಯುಧಿಷ್ಠಿರ |
ಸರ್ವಮೇತತ್ ಯಥಾ ಪ್ರಾಪ್ತಂ ಸಾವಿತ್ರ್ಯಾ ರಾಜಕನ್ಯಯಾ ॥4॥
ಮಾರ್ಕಂಡೇಯರು ಎಲೈ ಯುಧಿಷ್ಠಿರನೇ, ಕುಲಸ್ತ್ರೀಯರ ಮಹಾತ್ಮೆಯನ್ನು ಕೇಳು. ಇವೆಲ್ಲವನ್ನೂ ರಾಜಕುಮಾರಿಯಾದ ಸಾವಿತ್ರಿಯು ಅನುಭವಿಸಿದ್ದಾಳೆ.
ಆಸೀನ್ಮದ್ರೇಷು ಧರ್ಮಾತ್ಮಾ ರಾಜಾ ಪರಮಧಾರ್ಮಿಕಃ |
ಬ್ರಹ್ಮಣ್ಯಶ್ಚ ಮಹಾತ್ಮಾ ಚ ಸತ್ಯಸಂಧೋ ಜಿತೇಂದ್ರಿಯಃ ॥5॥
ಯಜ್ವಾ ದಾನಪತಿರ್ದಕ್ಷಃ ಪೌರಜಾನಪದಪ್ರಿಯಃ |
ಪಾರ್ಥಿವೋಽಶ್ವಪತಿರ್ನಾಮ ಸರ್ವಭೂತಹಿತೇ ರತಃ ॥6॥
ಮದ್ರದೇಶದಲ್ಲಿ ಧರ್ಮಾತ್ಮನೂ, ಪರಮಧಾರ್ಮಿಕನೂ, ಬ್ರಾಹ್ಮಣ ವತ್ಸಲನೂ, ಮಹಾನುಭಾವನೂ, ಸತ್ಯಸಂಧನೂ, ಜಿತೇಂದ್ರಿಯನೂ, ಯಾಗಶೀಲನೂ, ದಾನಶೂರನೂ, ಪೌರಜಾನಪದಪ್ರಿಯನೂ ಮತ್ತು ಸರ್ವಭೂತಗಳ ಹಿತದಲ್ಲೂ ನಿರತನಾದವನೂ ಆದ ಅಶ್ವಪತಿ ಎಂಬ ರಾಜನಿದ್ದನು.
ಕ್ಷಮಾವಾನನಪತ್ಯಶ್ಚ ಸತ್ಯವಾಗ್ ವಿಜಿತೇಂದ್ರಿಯಃ |
ಅತಿಕ್ರಾಂತೇನ ವಯಸಾ ಸಂತಾಪಮುಪಜಗ್ಮಿವಾನ್ ॥7॥
ಕ್ಷಮಾವಂತನೂ, ಜಿತೇಂದ್ರಿಯನೂ, ಸತ್ಯವಚನನೂ ಆದ ಅವನು ವಯಸ್ಸು ಮೀರಿಹೋಗುತ್ತಿರಲು ಮಕ್ಕಳಿಲ್ಲದೇ ಸಂತಾಪಕ್ಕೆ ಒಳಗಾದನು.
ಅಪತ್ಯೋತ್ಪಾದನಾರ್ಥಂ ಚ ತೀವ್ರಂ ನಿಯಮಮಾಸ್ಥಿತಃ |
ಕಾಲೇ ಪರಿಮಿತಾಹಾರೋ ಬ್ರಹ್ಮಚಾರೀ ಜಿತೇಂದ್ರಿಯಃ ॥8॥
ಹುತ್ವಾ ಶತಸಹಸ್ರಂ ಸ ಸಾವಿತ್ರ್ಯಾ ರಾಜಸತ್ತಮ |
ಷಷ್ಠೇ ಷಷ್ಠೇ ತದಾ ಕಾಲೇ ಬಭೂವ ಮಿತಭೋಜನಃ ॥9॥
ಮಕ್ಕಳನ್ನು ಪಡೆಯಲು ಅವನು ತೀವ್ರವಾದ ನಿಯಮವನ್ನು ಆಶ್ರಯಿಸಿದನು. ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ ಯೋಗ್ಯಕಾಲದಲ್ಲಿ ಮಿತವಾದ ಆಹಾರವನ್ನು ಸೇವಿಸುತ್ತಿದ್ದನು. ಎಲೈ ರಾಜಶ್ರೇಷ್ಠನೇ, ಗಾಯತ್ರೀಮಂತ್ರದಿಂದ ಒಂದು ಲಕ್ಷ ಆಹುತಿಯನ್ನು ಕೊಟ್ಟು ಹೋಮವನ್ನು ಮಾಡಿ ಹಗಲಿನ ಕೊನೆಯ ಆರನೆಯ ಭಾಗದಲ್ಲಿ ಮಿತವಾದ ಆಹಾರವನ್ನು ಸೇವಿಸುತ್ತಿದ್ದನು.
ಏತೇನ ನಿಯಮೇನಾಸೀದ್ ವರ್ಷಾಣ್ಯಷ್ಟಾದಶೈವ ತು |

ಪೂರ್ಣೇ ತ್ವಷ್ಟಾದಶೇ ವರ್ಷೇ ಸಾವಿತ್ರೀ ತುಷ್ಟಿಮಭ್ಯಗಾತ್ ॥10॥
ಈ ನಿಯಮವನ್ನು ಅವನು ಹದಿನೆಂಟು ವರ್ಷಗಳ ಕಾಲ ಮಾಡಿದನು. ಹದಿನೆಂಟು ವರ್ಷಗಳು ತುಂಬಿದ ಮೇಲೆ ಗಾಯತ್ರೀ ಮಂತ್ರಾಭಿಮಾನಿಯಾದ ಸಾವಿತ್ರಿಯು ಸಂತುಷ್ಟಳಾದಳು.
ರೂಪಿಣೀ ತು ತದಾ ರಾಜನ್ ದರ್ಶಯಾಮಾಸ ತಂ ನೃಪಮ್ |
ಅಗ್ನಿಹೋತ್ರಾತ್ ಸಮುತ್ಥಾಯ ಹರ್ಷೇಣ ಮಹತಾಽನ್ವಿತಾ ॥11॥
ಎಲೈ ರಾಜನೇ, ಅವಳು ಶರೀರವನ್ನು ಧರಿಸಿ ಅಗ್ನಿಹೋತ್ರದಿಂದ ಮೇಲೆದ್ದು ಬಂದು ಬಹಳ ಸಂತೋಷದಿಂದ ಕೂಡಿದವಳಾಗಿ ರಾಜನಿಗೆ ಕಾಣಿಸಿಕೊಂಡಳು.
ಉವಾಚ ಚೈನಂ ವರದಾ ವಚನಂ ಪಾರ್ಥಿವಂ ತದಾ |
ಸಾ ತಮಶ್ವಪತಿಂ ರಾಜನ್ ಸಾವಿತ್ರೀ ನಿಯಮೇ ಸ್ಥಿತಮ್ ॥12॥
ಎಲೈ ರಾಜನೇ, ನಿಯಮನಿಷ್ಠನಾದ ಆ ಅಶ್ವಪತಿರಾಜನನ್ನು ಕುರಿತು ವರವನ್ನು ಕೊಡುವ ಆ ಸಾವಿತ್ರೀದೇವಿಯು ಮಾತನಾಡಿದಳು.
ಬ್ರಹ್ಮಚರ್ಯೇಣ ಶುದ್ಧೇನ ದಮೇನ ನಿಯಮೇನ ಚ |
ಸರ್ವಾತ್ಮನಾ ಚ ಭಕ್ತ್ಯಾ ಚ ತುಷ್ಟಾಽಸ್ಮಿ ತವ ಪಾರ್ಥಿವ ॥13॥
ಎಲೈ ರಾಜನೇ, ನಿನ್ನ ಶುದ್ಧವಾದ ಬ್ರಹ್ಮಚರ್ಯದಿಂದಲೂ, ನಿಯಮಗಳಿಂದಲೂ, ಇಂದ್ರಿಯನಿಗ್ರಹದಿಂದಲೂ ಮತ್ತು ಸರ್ವಪ್ರಕಾರದಿಂದ ಮಾಡಿದ ಭಕ್ತಿಯಿಂದಲೂ ನಾನು ಸಂತುಷ್ಟಳಾಗಿದ್ದೇನೆ.
ವರಂ ವೃಣೀಷ್ವಾಶ್ವಪತೇ ಮದ್ರರಾಜ ಯದೀಪ್ಸಿತಮ್ |
ನ ಪ್ರಮಾದಶ್ಚ ಧರ್ಮೇಷು ಕರ್ತವ್ಯಸ್ತೇ ಕಥಂಚನ ॥14॥
ಮದ್ರರಾಜನಾದ ಅಶ್ವಪತಿಯೇ, ನಿನಗೆ ಇಷ್ಟವಾದ ವರವನ್ನು ಕೇಳು. ಧರ್ಮದ ವಿಷಯದಲ್ಲಿ ಎಂದೂ ಪ್ರಮಾದವನ್ನು ಮಾಡಬಾರದು.
ಅಶ್ವಪತಿಃ
ಅಪತ್ಯಾರ್ಥಃ ಸಮಾರಂಭಃ ಕೃತೋ ಧರ್ಮೇಪ್ಸಯಾ ಮಯಾ |
ಪುತ್ರಾ ಮೇ ಬಹವೋ ದೇವಿ ಭವೇಯುಃ ಕುಲಭಾವನಾಃ ॥15॥
ಅಶ್ವಪತಿ ಎಲೌ ದೇವಿಯೇ, ನಾನು ಧರ್ಮವನ್ನು ಸಂಪಾದಿಸುವ ದೃಷ್ಟಿಯಿಂದ ಮಕ್ಕಳನ್ನು ಪಡೆಯಲು ಈ ಪ್ರಯತ್ನವನ್ನು ಮಾಡಿದೆ. ದೇವಿಯೇ, ನನಗೆ ನನ್ನ ವಂಶವನ್ನು ಬೆಳೆಸುವ ಅನೇಕ ಮಕ್ಕಳು ಆಗಬೇಕು.
ತುಷ್ಟಾಽಸಿ ಯದಿ ಮೇ ದೇವಿ ವರಮೇತಂ ವೃಣೋಮ್ಯಹಮ್ |
ಸಂತಾನಂ ಪರಮೋ ಧರ್ಮ ಇತ್ಯಾಹುರ್ಮಾಂ ದ್ವಿಜಾತಯಃ ॥16॥
ದೇವಿಯೇ, ನೀನು ಸಂತುಷ್ಟಳಾಗಿದ್ದರೆ ಇದೇ ವರವನ್ನು ಬೇಡುತ್ತೇನೆ. ಸಂತಾನವು ಉತ್ತಮವಾದ ಧರ್ಮವೆಂದು ಬ್ರಾಹ್ಮಣರು ನನಗೆ ಹೇಳುತ್ತಾರೆ.
ಸಾವಿತ್ರೀ
ಪೂರ್ವಮೇವ ಮಯಾ ರಾಜನ್ನಭಿಪ್ರಾಯಮಿಮಂ ತವ |
ಜ್ಞಾತ್ವಾ ಪುತ್ರಾರ್ಥಮುಕ್ತೋ ವೈ ಭಗವಾಂಸ್ತೇ ಪಿತಾಮಹಃ ॥17॥
ಸಾವಿತ್ರೀ ಎಲೈ ರಾಜನೇ, ನಿನ್ನ ಅಭಿಪ್ರಾಯವನ್ನು ಮೊದಲೇ ತಿಳಿದು ನಾನು ಬ್ರಹ್ಮದೇವರಿಗೆ ಮೊದಲೇ ನಿನಗೆ ಮಕ್ಕಳನ್ನು ಕೊಡುವ ಸಲುವಾಗಿ ತಿಳಿಸಿದ್ದೇನೆ.
ಪ್ರಸಾದಾಚ್ಚೈವ ತಸ್ಮಾತ್ ತೇ ಸ್ವಯಂಭುವಿಹಿತಾದ್ ಭುವಿ |
ಕನ್ಯಾ ತೇಜಸ್ವಿನೀ ಸೌಮ್ಯ ಕ್ಷಿಪ್ರಮೇವ ಭವಿಷ್ಯತಿ ॥18॥
ಎಲೈ ಸೌಮ್ಯನೇ, ಆ ಬ್ರಹ್ಮದೇವರ ಅನುಗ್ರಹದಿಂದ ನಿನಗೆ ಶೀಘ್ರದಲ್ಲಿಯೇ ತೇಜಸ್ವಿನಿಯಾದ ಕನ್ಯೆಯು ಜನಿಸುತ್ತಾಳೆ.
ಉತ್ತರಂ ಚ ನ ತೇ ಕಿಂಚಿದ್ ವ್ಯಾಹರ್ತವ್ಯಂ ಕಥಂಚನ |
ಪಿತಾಮಹನಿಸರ್ಗೇಣ ತುಷ್ಟಾ ಹ್ಯೇತದ್ ಬ್ರವೀಮಿ ತೇ ॥19॥
ಇದಕ್ಕೆ ನೀನು ಏನೂ ಮರುಮಾತಾಡಬೇಡ. ಬ್ರಹ್ಮದೇವರ ಆಜ್ಞೆಯಂತೆ ನಾನು ಸಂತುಷ್ಟಳಾಗಿ ಈ ವಿಷಯವನ್ನು ನಿನಗೆ ಹೇಳುತ್ತಿದ್ದೇನೆ.
ಮಾರ್ಕಂಡೇಯಃ
ಸ ತಥೇತಿ ಪ್ರತಿಜ್ಞಾಯ ಸಾವಿತ್ರ್ಯಾ ವಚನಂ ನೃಪಃ |
ಪ್ರಸಾದಯಾಮಾಸ ಪುನಃ ಕ್ಷಿಪ್ರಮೇವ ಭವೇದಿತಿ ॥20॥
ಮಾರ್ಕಂಡೇಯ ಆ ಅಶ್ವಪತಿರಾಜನು ಸಾವಿತ್ರಿಯ ಮಾತನ್ನು ಕೇಳಿ ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ ಬೇಗ ಶಿಶುವು ಜನಿಸಬೇಕು ಎಂದು ಅವಳನ್ನು ಪುನಃ ಪ್ರಾರ್ಥನೆ ಮಾಡಿದನು.
ಅಂತರ್ಹಿತಾಯಾಂ ಸಾವಿತ್ರ್ಯಾಂ ಜಗಾಮ ಸ್ವಪುರಂ ನೃಪಃ |
ಸ್ವರಾಜ್ಯೇ ಚಾವಸದ್ ವೀರಃ ಪ್ರಜಾ ಧರ್ಮೇಣ ಪಾಲಯನ್ ॥21॥
ಸಾವಿತ್ರಿಯು ಅಂತರ್ಧಾನವನ್ನು ಹೊಂದಿದ ಮೇಲೆ ವೀರನಾದ ಆ ರಾಜನು ತನ್ನ ಪಟ್ಟಣಕ್ಕೆ ಹಿಂದಿರುಗಿ ತನ್ನ ರಾಜ್ಯದ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಿದ್ದನು.
ಕಸ್ಮಿಂಶ್ಚಿತ್ತು ಗತೇ ಕಾಲೇ ಸ ರಾಜಾ ನಿಯತವ್ರತಃ |
ಜ್ಯೇಷ್ಠಾಯಾಂ ಧರ್ಮಚಾರಿಣ್ಯಾಂ ಮಹಿಷ್ಯಾಂ ಗರ್ಭಮಾದಧೇ ॥22॥

ಸ್ವಲ್ಪ ಕಾಲವು ಕಳೆದ ಮೇಲೆ ನಿಯತವ್ರತನಾದ ಆ ರಾಜನು ಧರ್ಮಿಷ್ಠಳಾದ ತನ್ನ ಜ್ಯೇಷ್ಠ ಪತ್ನಿಯಲ್ಲಿ ಗರ್ಭಾಧಾನವನ್ನು ಮಾಡಿದನು.
ರಾಜಪುತ್ರ್ಯಾಸ್ತು ಗರ್ಭಃ ಸ ಮಾಲವ್ಯಾ ಭರತರ್ಷಭ |
ವ್ಯವರ್ಧತ ತದಾ ಶುಕ್ಲೇ ತಾರಾಪತಿರಿವಾಂಬರೇ ॥23॥
ಎಲೈ ಭರತರ್ಷಭನೇ, ಮಾಲವ ದೇಶದ ರಾಜಕುಮಾರಿಯಾದ ಅವಳ ಉದರದಲ್ಲಿ ಆ ಗರ್ಭವು ಶುಕ್ಲಪಕ್ಷದಲ್ಲಿ ಆಕಾಶದಲ್ಲಿ ಚಂದ್ರನು ಬೆಳೆಯುವಂತೆ ಬೆಳೆಯಿತು.
ಪ್ರಾಪ್ತೇ ಕಾಲೇ ತು ಸುಷುವೇ ಕನ್ಯಾಂ ರಾಜೀವಲೋಚನಾಮ್ |
ಕ್ರಿಯಾಶ್ಚ ತಸ್ಯಾ ಮುದಿತಶ್ಚಕ್ರೇ ಚ ನೃಪಸತ್ತಮಃ ॥24॥
ಅವಳು ಯೋಗ್ಯವಾದ ಕಾಲದಲ್ಲಿ ರಾಜೀವ ಲೋಚನೆಯಾದ ಒಂದು ಹೆಣ್ಣು ಮಗುವನ್ನು ಪಡೆದಳು. ರಾಜಶ್ರೇಷ್ಠನು ಸಂತೋಷದಿಂದ ಮಗುವಿಗೆ ಎಲ್ಲಾ ಕ್ರಿಯೆಗಳನ್ನೂ ಮಾಡಿಸಿದನು.
ಸಾವಿತ್ರ್ಯಾ ಪ್ರೀತಯಾ ದತ್ತಾ ಸಾವಿತ್ರ್ಯಾ ಹುತಯಾ ಹ್ಯಪಿ |
ಸಾವಿತ್ರೀತ್ಯೇವ ನಾಮಾಸ್ಯಾಶ್ಚಕ್ರುರ್ವಿಪ್ರಾಸ್ತಥಾ ಪಿತಾ ॥25॥
ಸಾವಿತ್ರಿಯನ್ನು ಉದ್ದೇಶಿಸಿ ಹೋಮವನ್ನು ಮಾಡಿ ಪ್ರೀತಳಾದ ಸಾವಿತ್ರಿಯಿಂದಲೇ ಕೊಡಲ್ಪಟ್ಟ ಪ್ರಯುಕ್ತವಾಗಿ ಬ್ರಾಹ್ಮಣರು ಮತ್ತು ತಂದೆಯು ಆ ಮಗುವಿಗೆ ಸಾವಿತ್ರೀ ಎಂದೇ ನಾಮಕರಣ ಮಾಡಿದರು.
ಸಾ ವಿಗ್ರಹವತೀವ ಶ್ರೀರ್ವ್ಯವರ್ಧತ ನೃಪಾತ್ಮಜಾ |
ಕಾಲೇನ ಚಾಪಿ ಸಾ ಕನ್ಯಾ ಯೌವನಸ್ಥಾ ಬಭೂವ ಹ ॥26॥
ಆ ರಾಜಕುಮಾರಿಯು ದೇಹವನ್ನು ಧರಿಸಿದ ಲಕ್ಷ್ಮಿಯಂತೆ ಬೆಳೆದಳು. ಕಾಲಕ್ರಮದಲ್ಲಿ ಅವಳು ಯುವತಿಯಾದಳು.
ತಾಂ ಸುಮಧ್ಯಾಂ ಪೃಥುಶ್ರೋಣೀಂ ಪ್ರತಿಮಾಂ ಕಾಂಚನೀಮಿವ |
ಪ್ರಾಪ್ತೇಯಂ ದೇವಕನ್ಯೇತಿ ದೃಷ್ಟ್ವಾ ಸಮ್ಮೇನಿರೇ ಜನಾಃ ॥27॥
ಸುವರ್ಣಮಯ ಪ್ರತಿಮೆಯಂತೆ ಒಳ್ಳೆಯ ಮಧ್ಯಪ್ರದೇಶವನ್ನು ಮತ್ತು ನಿತಂಬವನ್ನು ಹೊಂದಿದ್ದ ಅವಳನ್ನು ನೋಡಿ ಜನರು ಇವಳು ಯಾವುದೋ ದೇವಕನ್ಯೆಯು ಬಂದಿದ್ದಾಳೆ ಎಂದು ತಿಳಿದರು.
ತಾಂ ತು ಪದ್ಮಪಲಾಶಾಕ್ಷೀಂ ಜ್ವಲಂತೀಮಿವ ತೇಜಸಾ |
ನ ಕಶ್ಚಿದ್ ವರಯಾಮಾಸ ತೇಜಸಾ ಪ್ರತಿವಾರಿತಃ ॥28॥
ಪದ್ಮದಲಾಯತಾಕ್ಷಿಯಾದ, ತೇಜಸ್ವಿನಿಯಾದ ಅವಳನ್ನು ನೋಡಿ ಅವಳ ತೇಜಸ್ಸಿನಿಂದ ಹೆದರಿದವರಾಗಿ ಯಾರೂ ಅವಳನ್ನು ವರಿಸಲಿಲ್ಲ.
ಅಥೋಪೋಷ್ಯ ಶಿರಃಸ್ನಾತಾ ದೇವತಾಮಭಿಗಮ್ಯ ಸಾ |
ಹುತ್ವಾಗ್ನಿಂ ವಿಧಿವದ್ ವಿಪ್ರಾನ್ ವಾಚಯಾಮಾಸ ಪರ್ವಣಿ ॥29॥
ಅನಂತರ ಅವಳು ಉಪವಾಸವನ್ನು ಮಾಡಿ ಶಿರಸ್ನಾನವನ್ನು ಮಾಡಿ, ದೇವತಾ ಪೂಜೆಯನ್ನೂ ಮಾಡಿ ಅಗ್ನಿಯಲ್ಲಿ ವಿಧಿವತ್ತಾಗಿ ಹೋಮವನ್ನು ಮಾಡಿ ಪರ್ವಕಾಲದಲ್ಲಿ ಬ್ರಾಹ್ಮಣರಿಂದ ಮಂಗಳಾಶೀರ್ವಾದವನ್ನು ಪಡೆದಳು.
ತತಃ ಸುಮನಸಃ ಶೇಷಾಃ ಪ್ರತಿಗೃಹ್ಯ ಮಹಾತ್ಮನಃ|
ಪಿತುಃ ಸಮೀಪಮಗಮದ್ ದೇವೀ ಶ್ರೀರಿವ ರೂಪಿಣೀ ॥30॥
ಅನಂತರ ದೇವರ ಪ್ರಸಾದಭೂತವಾದ ಹೂಗಳನ್ನು ತೆಗೆದುಕೊಂಡು ಶರೀರವನ್ನು ಧರಿಸಿದ ಲಕ್ಷ್ಮಿಯಂತೆ ಅವಳು ಮಹಾನುಭಾವನಾದ ತನ್ನ ತಂದೆಯ ಸಮೀಪಕ್ಕೆ ಬಂದಳು.
ಸಾಽಭಿವಾದ್ಯ ಪಿತುಃ ಪಾದೌ ಶೇಷಾಃ ಪೂರ್ವಂ ನಿವೇದ್ಯ ಚ |
ಕೃತಾಂಜಲಿರ್ವರಾರೋಹಾ ನೃಪತೇಃ ಪಾರ್ಶ್ವಮಾಸ್ಥಿತಾ ॥31॥
ಸುಂದರಿಯಾದ ಅವಳು ಮೊದಲು ದೇವತಾಪ್ರಸಾದವನ್ನು ಅವನಿಗೆ ಕೊಟ್ಟು ಕೈಗಳನ್ನು ಜೋಡಿಸಿ ರಾಜನ ಪಾರ್ಶ್ವದಲ್ಲಿ ನಿಂತಳು.
ಯೌವನಸ್ಥಾಂ ತು ತಾಂ ದೃಷ್ಟ್ವಾ ಸ್ವಾಂ ಸುತಾಂ ದೇವರೂಪಿಣೀಮ್ |
ಅಯಾಚ್ಯಮಾನಾಂ ಚ ವರೈರ್ನೃಪತಿರ್ದುಃಖಿತೋಽಭವತ್ ॥32॥
ದೇವರೂಪಿಣಿಯಾದ ಯೌವನಸ್ಥಳಾದ ತನ್ನ ಮಗಳನ್ನು ಯಾವ ವರನೂ ಯಾಚಿಸದಿರುವುದನ್ನು ನೋಡಿ ರಾಜನು ದುಃಖಿತನಾದನು.
ರಾಜಾ
ಪುತ್ರಿ ಪ್ರದಾನಕಾಲಸ್ತೇ ನ ಚ ಕಶ್ಚಿದ್ ವೃಣೋತಿ ಮಾಮ್ |
ಸ್ವಯಮನ್ವಿಚ್ಛ ಭರ್ತಾರಂ ಗುಣೈಃ ಸದೃಶಮಾತ್ಮನಃ ॥33॥
ರಾಜ ಮಗಳೇ, ನಿನಗೆ ವಿವಾಹಕಾಲವು ಪ್ರಾಪ್ತವಾಗಿದೆ. ಆದರೆ ಯಾರೂ ನನ್ನ ಬಳಿಗೆ ಬಂದು ನಿನ್ನನ್ನು ಬೇಡುತ್ತಿಲ್ಲ. ಆದ್ದರಿಂದ ನೀನೇ ನಿನಗೆ ಅನುರೂಪನಾದ ಗುಣವುಳ್ಳ ಪತಿಯನ್ನು ಅನ್ವೇಷಣೆ ಮಾಡು.
ಪ್ರಾರ್ಥಿತಃ ಪುರುಷೋ ಯಶ್ಚ ಸ ನಿವೇದ್ಯಸ್ತ್ವಯಾ ಮಮ |
ವಿಮೃಶ್ಯಾಹಂ ಪ್ರದಾಸ್ಯಾಮಿ ವರಸ್ಯ ತ್ವಂ ಯಥೇಪ್ಸಿತಮ್ ॥34॥
ನೀನು ಯಾರನ್ನು ಬಯಸುತ್ತೀಯೋ ಅವನನ್ನು ನನಗೆ ತಿಳಿಸಬೇಕು. ನಾನು ವಿಮರ್ಶೆ ಮಾಡಿ ದಾನವನ್ನು ಕೊಡುವೆನು. ನಿನಗೆ ಇಷ್ಟನಾದ ವರನನ್ನು ನೀನು ವರಿಸು.
ಶ್ರುತಂ ಹಿ ಧರ್ಮಶಾಸ್ತ್ರೇಷು ಪಠ್ಯಮಾನಂ ದ್ವಿಜಾತಿಭಿಃ |

ತಥಾ ತ್ವಮಪಿ ಕಲ್ಯಾಣಿ ಗದತೋ ಮೇ ವಚಃ ಶೃಣು ॥35॥
ಕಲ್ಯಾಣಿಯೇ, ಧರ್ಮಶಾಸ್ತ್ರಗಳಲ್ಲಿ ಬ್ರಾಹ್ಮಣರು ಹೇಳುವ ಈ ಮಾತುಗಳನ್ನು ನಾನು ಕೇಳಿದ್ದೇನೆ. ನಾನು ಅದನ್ನು ಹೇಳುತ್ತೇನೆ. ನೀನೂ ಕೇಳು.
ಅಪ್ರದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್ ಪತಿಃ ।
ಮೃತೇ ಭರ್ತರಿ ಪುತ್ರಶ್ಚ ವಾಚ್ಯೋ ಮಾತುರರಕ್ಷಿತಾ ॥36॥
ಮಗಳನ್ನು ದಾನಮಾಡದಿರುವ ತಂದೆಯು ನಿಂದಿತನಾಗುತ್ತಾನೆ. ಯೋಗ್ಯಕಾಲದಲ್ಲಿ ವಿವಾಹವನ್ನು ಮಾಡಿಕೊಂಡ ಪತ್ನಿಯನ್ನು ಸಮಾಗಮವನ್ನು ಮಾಡದಿರುವ ಪತಿಯು ನಿಂದಿತನಾಗುತ್ತಾನೆ. ತಂದೆಯು ಮರಣಹೊಂದಿದ ಮೇಲೆ ತಾಯಿಯನ್ನು ರಕ್ಷಣೆ ಮಾಡದಿರುವ ಪುತ್ರನು ನಿಂದಿತನಾಗುತ್ತಾನೆ.
ಇದಂ ಮೇ ವಚನಂ ಶ್ರುತ್ವಾ ಭರ್ತುರನ್ವೇಷಣೇ ತ್ವರ ।
ದೇವತಾನಾಂ ಯಥಾ ವಾಚ್ಯೋ ನ ಭವೇಯಂ ತಥಾ ಕುರು ॥37॥
ಈ ನನ್ನ ಮಾತನ್ನು ಕೇಳಿ ಬೇಗ ವರನ ಅನ್ವೇಷಣೆಯಲ್ಲಿ ತೊಡಗು. ದೇವತೆಗಳು ನನ್ನನ್ನು ನಿಂದಿಸದಂತೆ ಮಾಡು.
ಮಾರ್ಕಂಡೇಯಃ
ಏವಮುಕತ್ವ ದುಹಿತರಂ ತಥಾ ವೃದ್ಧಾಂಶ್ಚ ಮಂತ್ರಿಣಃ ।
ವ್ಯಾದಿದೇಶಾನುಯಾತ್ರಂ ಚ ಗಮ್ಯತಾಂ ಚೇತ್ಯಚೋದಯತ್ ॥38॥
ಮಾರ್ಕಂಡೇಯರು ಮಗಳನ್ನು ಕುರಿತು ಹೀಗೆ ಮಾತನಾಡಿ ಅದರಂತೆ ವೃದ್ಧರಾದ ಮಂತ್ರಿಗಳನ್ನು ಕುರಿತು ಅವಳ ಜೊತೆಯಲ್ಲಿ ಹೋಗಿ ಎಂದು ಪ್ರೇರಿಸಿದನು.
ಸಾಽಭಿವಾದ್ಯ ಪಿತುಃ ಪಾದೌ ವ್ರೀಡಿತೇವ ಮನಸ್ವಿನೀ ।
ಪಿತುರ್ವಚನಮಾಜ್ಞಾಯ ನಿರ್ಜಗಾಮಾವಿಚಾರಿತಮ್ ॥39॥
ಧೈರ್ಯಶಾಲಿನಿಯಾದ ಅವಳು ತಂದೆಯ ಪಾದಗಳಿಗೆ ನಮಸ್ಕಾರವನ್ನು ಮಾಡಿ ನಾಚಿಕೆಗೊಂಡಂತೆ ತಂದೆಯ ಮಾತುಗಳನ್ನು ಕೇಳಿ ಏನೂ ಸಂಶಯವನ್ನು ಪಡದೆ ಹೊರಟಳು.
ಸಾ ಹೈಮಂ ರಥಮಾಸ್ಥಾಯ ಸ್ಥವಿರೈಃ ಸಚಿವೈರ್ವೃತಾ ।
ತಪೋವನಾನಿ ರಮ್ಯಾಣಿ ರಾಜರ್ಷೀಣಾಂ ಜಗಾಮ ಹ ॥40॥
ಅವಳು ಸುವರ್ಣರಥದಲ್ಲಿ ಕುಳಿತು ವೃದ್ಧರಾದ ಮಂತ್ರಿಗಳಿಂದ ಪರಿವೃತಳಾಗಿ ರಾಜರ್ಷಿಗಳ ಸುಂದರವಾದ ತಪೋವನಗಳಿಗೆ ಹೋದಳು.
ಮಾನ್ಯಾನಾಂ ತತ್ರ ವೃದ್ಧಾನಾಂ ಕೃತ್ವಾ ಪಾದಾಭಿವಾದನಮ್ ।
ವನಾನಿ ಕ್ರಮಶಸ್ತಾತ ಸರ್ವಾಣ್ಯೇವಾಭ್ಯಗಚ್ಛತ ॥41॥
ಮಾನ್ಯರೂ, ವೃದ್ಧರೂ ಆದ ಅಲ್ಲಿದ್ದ ರಾಜರ್ಷಿಗಳಿಗೆ ಪಾದಾಭಿವಂದನೆಯನ್ನು ಮಾಡುತ್ತಾ ಕ್ರಮದಿಂದ ಎಲ್ಲಾ ಆಶ್ರಮಗಳಿಗೂ ಹೋದಳು.
ಏವಂ ತೀರ್ಥೇಷು ಸರ್ವೇಷು ಧನೋತ್ಸರ್ಗಂ ನೃಪಾತ್ಮಜಾ ।
ಕುರ್ವತೀ ದ್ವಿಜಮುಖ್ಯಾನಾಂ ತಂ ತಂ ದೇಶಂ ಜಗಾಮ ಹ ॥42॥
ಈ ರೀತಿಯಲ್ಲಿ ಎಲ್ಲ ತೀರ್ಥಗಳಲ್ಲಿಯೂ ಆ ರಾಜಕುಮಾರಿಯು ಶ್ರೇಷ್ಠರಾದ ಬ್ರಾಹ್ಮಣರಿಗೆ ದ್ರವ್ಯವನ್ನು ದಾನಮಾಡುತ್ತಾ ಆಯಾ ದೇಶಗಳಿಗೆ ಹೋದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ದ್ವ್ಯಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತೆರಡನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ಮೂರನೆಯ ಅಧ್ಯಾಯ
ದ್ಯುಮತ್ಸೇನನ ಪುತ್ರನಾದ ಸತ್ಯವಂತನನ್ನು ಮನಸಾ ವರಿಸಿ ಸಾವಿತ್ರಿಯ ಹಿಂದಿರುಗುವಿಕೆ. ನಾರದರ ಸಮಾಗಮ. ನಾರದರಿಂದ ವರನ ಅಲ್ಪಾಯುಸ್ಸನ್ನು ತಿಳಿದರೂ ಅವನನ್ನೇ ವರಿಸುವುದಾಗಿ ಸಾವಿತ್ರಿಯ ಆಗ್ರಹ.
ಮಾರ್ಕಂಡೇಯಃ
ಅಥ ಮದ್ರಾಧಿಪೋ ರಾಜಾ ನಾರದೇನ ಸಮಾಗತಃ ।
ಉಪವಿಷ್ಟಃ ಸಭಾಮಧ್ಯೇ ಕಥಾಯೋಗೇನ ಭಾರತ ॥1॥
ಮಾರ್ಕಂಡೇಯರು ಎಲೈ ಭಾರತನೇ, ಅನಂತರ ಮದ್ರಾಧಿಪತಿಯಾದ ಅಶ್ವಪತಿರಾಜನು ನಾರದರಿಂದ ಸಮಾಗಮವನ್ನು ಹೊಂದಿ ಸಭೆಯಲ್ಲಿ ಮಾತನಾಡುತ್ತಾ ಕುಳಿತಿದ್ದನು.
ತತೋಽಭಿಗಮ್ಯ ತೀರ್ಥಾನಿ ಸರ್ವಾಣ್ಯೇವಾಶ್ರಮಾಂಸ್ತಥಾ ।
ಆಜಗಾಮ ಪಿತುರ್ವೇಶ್ಮ ಸಾವಿತ್ರೀ ಸಹ ಮಂತ್ರಿಭಿಃ ॥2॥
ಸಾವಿತ್ರಿಯು ಎಲ್ಲಾ ಆಶ್ರಮಗಳಿಗೂ ಮತ್ತು ತೀರ್ಥಕ್ಷೇತ್ರಗಳಿಗೂ ಹೋಗಿ ಮಂತ್ರಿಗಳ ಜೊತೆಯಲ್ಲಿ ತಂದೆಯ ಅರಮನೆಗೆ ಹಿಂದಿರುಗಿದಳು.

ನಾರದೇನ ಸಹಾಸೀನಂ ಸಾ ದೃಷ್ಟ್ವಾ ಪಿತರಂ ತದಾ(ಶುಭಾ) |
ಉಭಯೋರೇವ ಶಿರಸಾ ಚಕ್ರೇ ಪಾದಾಭಿವಾದನಮ್ ॥3॥
ನಾರದರ ಜೊತೆಯಲ್ಲಿ ಕುಳಿತಿದ್ದ ತಂದೆಯನ್ನು ನೋಡಿ ಶುಭಳಾದ ಅವಳು ಇಬ್ಬರಿಗೂ ತಲೆಯನ್ನು ಬಗ್ಗಿಸಿ ಪಾದಾಭಿವಂದನವನ್ನು ಮಾಡಿದಳು.
ಕ್ವ ಗತಾಽಭೂತ್ ಸುತೇಯಂ ತೇ ಕುತಶ್ಚೈವಾಗತಾ ನೃಪ |
ಕಿಮರ್ಥಂ ಯುವತೀಂ ಭರ್ತ್ರೇ ನ ಚೈನಾಂ ಸಂಪ್ರಯಚ್ಛಸಿ ॥4॥
ನಾರದರು ಎಲೈ ರಾಜನೇ, ಇಲ್ಲಿಯವರೆಗೆ ನಿನ್ನ ಮಗಳು ಎಲ್ಲಿಗೆ ಹೋಗಿದ್ದಳು? ಎಲ್ಲಿಂದ ಬರುತಿತದ್ದಾಳೆ? ಯುವತಿಯಾದ ಅವಳನ್ನು ನೀನು ಏಕೆ ಯಾರಿಗೂ ದಾನಮಾಡುತ್ತಿಲ್ಲ?
ಅಶ್ವಪತಿಃ
ಕಾರ್ಯೇಣ ಖಲ್ವನೇನೈವ ಪ್ರೇಷಿತಾಽದ್ಯೈವ ಚಾಗತಾ |
ಏತಸ್ಯಾಃ ಶೃಣು ದೇವರ್ಷೇ ಭರ್ತಾರಂ ಯೋಽನಯಾ ವೃತಃ ॥5॥
ಅಶ್ವಪತಿ ಎಲೈ ದೇವರ್ಷಿಯೇ, ಇದೇ ಕಾರ್ಯಕ್ಕಾಗಿಯೇ ಅವಳನ್ನು ಕಳುಹಿಸಿದ್ದೆ. ಈ ದಿನವೇ ಹಿಂದಿರುಗಿದ್ದಾಳೆ. ಅವಳು ಎಂತಹ ಪತಿಯನ್ನು ವರಿಸಿದ್ದಾಳೆ ಎಂದು ಅವಳನ್ನೇ ಕೇಳು.
ಮಾರ್ಕಂಡೇಯಃ
ಸಾ ಬ್ರೂಹಿ ವಿಸ್ತರೇಣೇತಿ ಪಿತ್ರಾ ಸಂಚೋದಿತಾ ಶುಭಾ |
ತದೈವ ತಸ್ಯ ವಚನಂ ಪ್ರತಿಗೃಹ್ಯೇದಮಬ್ರವೀತ್ ॥6॥
ಮಾರ್ಕಂಡೇಯ ಎಲ್ಲವನ್ನೂ ವಿಸ್ತಾರವಾಗಿ ಹೇಳು ಎಂಬ ತಂದೆಯ ಮಾತಿನಿಂದ ಪ್ರೇರಿತಳಾದ ಶುಭಳಾದ ಅವಳು ಆ ಮಾತನ್ನು ಸ್ವೀಕರಿಸಿ ಹೀಗೆ ಮಾತನಾಡಿದಳು.
ಆಸೀಚ್ಛಾಲ್ವೇಷು ಧರ್ಮಾತ್ಮಾ ಕ್ಷತ್ರಿಯಃ ಪೃಥಿವೀಪತಿಃ |
ದ್ಯುಮತ್ಸೇನ ಇತಿ ಖ್ಯಾತಃ ಪಶ್ಚಾಚ್ಚಾಂಧೋ ಬಭೂವ ಹ ॥7॥
ಸಾಲ್ವದೇಶದಲ್ಲಿ ಧರ್ಮಾತ್ಮನಾದ ದ್ಯುಮತ್ಸೇನನೆಂದು ಪ್ರಖ್ಯಾತನಾದ ಕ್ಷತ್ರಿಯನಾದ ರಾಜನಿದ್ದನು. ಅವನು ಅನಂತರ ಕುರುಡನಾದನು.
ವಿನಷ್ಟಚಕ್ಷುಷಸ್ತಸ್ಯ ಬಾಲಪುತ್ರಸ್ಯ ಧೀಮತಃ |
ಸಾಮಂತೇನ ಹೃತಂ ರಾಜ್ಯಂ ಛಿದ್ರೇಽಸ್ಮಿನ್ ಪೂರ್ವವೈರಿಣಾ ॥8॥
ಅವನು ದೃಷ್ಟಿಯನ್ನು ಕಳೆದುಕೊಂಡ ಮೇಲೆ ಒಂದು ಅವಕಾಶಕ್ಕಾಗಿ ಕಾಯುತ್ತಿದ್ದ ಅವನ ಪೂರ್ವವೈರಿಯಾದ ಸಾಮಂತನೊಬ್ಬನು ಚಿಕ್ಕಮಗನನ್ನು ಹೊಂದಿದ್ದ ಮೇಧಾವಿಯಾದ ದ್ಯುಮತ್ಸೇನನ ರಾಜ್ಯವನ್ನು ಅಪಹರಿಸಿದನು.
ಸ ಬಾಲವತ್ಸಯಾ ಸಾರ್ಧಂ ಭಾರ್ಯಯಾ ಪ್ರಸ್ಥಿತೋ ವನಮ್ |
ಮಹಾರಣ್ಯಂ ಗತಶ್ಚಾಪಿ ತಪಸ್ತೇಪೇ ಮಹಾವ್ರತಃ ॥9॥
ಅವನು ಆ ಚಿಕ್ಕಮಗನಲ್ಲಿ ವಾತ್ಸಲ್ಯವುಳ್ಳ ತನ್ನ ಚಿಕ್ಕಪ್ರಾಯದ ಪತ್ನಿಯನ್ನು ಕರೆದುಕೊಂಡು ಮಹಾರಣ್ಯಕ್ಕೆ ಹೋಗಿ ಮಹಾವ್ರತನಿಷ್ಠನಾಗಿ ತಪಸ್ಸನ್ನು ಮಾಡಿದನು.
ತಸ್ಯ ಪುತ್ರಃ ಪುರೇ ಜಾತಃ ಸಂವೃದ್ಧಶ್ಚ ತಪೋವನೇ |
ಸತ್ಯವಾನನುರೂಪೋ ಮೇ ಭರ್ತೇತಿ ಮನಸಾ ವೃತಃ ॥10॥
ಪಟ್ಟಣದಲ್ಲಿ ಜನಿಸಿ ತಪೋವನದಲ್ಲಿ ಬೆಳೆದ ಸತ್ಯವಂತನೆಂಬ ಅವನ ಮಗನು ನನಗೆ ಅನುರೂಪನಾದ ಪತಿ ಎಂದು ನಾನು ಮನಸ್ಸಿನಲ್ಲಿಯೇ ವರಿಸಿದ್ದೇನೆ.
ನಾರದಃ
ಅಹೋ ಬತ ಮಹತ್ಪಾಪಂ ಸಾವಿತ್ರ್ಯಾ ನೃಪತೇ ಕೃತಮ್ |
ಅಜಾನಂತ್ಯಾ ಯದನಯಾ ಗುಣವಾನ್ ಸತ್ಯವಾನ್ ವೃತಃ ॥11॥
ನಾರದರು ಎಲೈ ರಾಜನೇ, ಗುಣವಂತನಾದ ಸತ್ಯವಂತನನ್ನು ಏನೂ ತಿಳಿಯದೇ ವರಿಸಿ ಸಾವಿತ್ರಿಯು ದೊಡ್ಡ ಕಷ್ಟದ ಕಾರ್ಯವನ್ನು ಮಾಡಿದ್ದಾಳೆ.
ಸತ್ಯಂ ವದತ್ಯಸ್ಯ ಪಿತಾ ಸತ್ಯಂ ಮಾತಾ ಪ್ರಭಾಷತೇ |
ತಥಾಽಸ್ಯ ಬ್ರಾಹ್ಮಣಾಶ್ಚಕ್ರುರ್ನಾಮೈತತ್ ಸತ್ಯವಾನಿತಿ ॥12॥
ಅವನ ತಂದೆಯೂ ಸತ್ಯವಚನನಾದವನು. ಅವನ ತಾಯಿಯೂ ಸತ್ಯವಚನಳಾದವಳು. ಆದ್ದರಿಂದ ಬ್ರಾಹ್ಮಣರು ಅವನಿಗೆ ಸತ್ಯವಾನ್ ಎಂದು ನಾಮಕರಣ ಮಾಡಿದರು.
ಬಾಲಸ್ಯಾಶ್ವಾಃ ಪ್ರಿಯಾಶ್ಚಾಸ್ಯ ಕರೋತ್ಯಶ್ವಾಂಶ್ಚ ಮೃನ್ಮಯಾನ್ |
ಚಿತ್ರೇಽಪಿ ವಿಲಿಖತ್ಯಶ್ವಾಂಶ್ಚಿತ್ರಾಶ್ವ ಇತಿ ಚೋಚ್ಯತೇ ॥13॥
ಬಾಲಕನಾಗಿದ್ದ ಅವನಿಗೆ ಅಶ್ವಗಳು ಪ್ರಿಯವಾಗಿದ್ದವು. ಆಟವಾಡುತ್ತಾ ಅವನು ಮಣ್ಣಿನಿಂದ ಅಶ್ವಗಳನ್ನು ಮಾಡುತ್ತಿದ್ದನು. ಅಶ್ವಗಳ ಚಿತ್ರಗಳನ್ನೂ ಬರೆಯುತ್ತಿದ್ದನು. ಆದ್ದರಿಂದ ಅವನನ್ನು ಚಿತ್ರಾಶ್ವ ಎಂದೂ ಕರೆಯುತ್ತಾರೆ.
ರಾಜಾ
ಅಪೀದಾನೀಂ ಸ ತೇಜಸ್ವೀ ಬುದ್ಧಿಮಾನ್ ವಾ ನೃಪಾತ್ಮಜಃ |
ಕ್ಷಮಾವಾನಪಿ ವಾ ಶೂರಃ ಸತ್ಯವಾನ್ ಪಿತೃವತ್ಸಲಃ ॥14॥

ರಾಜ ಈಗ ಆ ರಾಜಕುಮಾರನಾದ ಸತ್ಯವಂತನು ತೇಜಸ್ವಿಯೂ, ಮೇಧಾವಿಯೂ, ಕ್ಷಮಾವಂತನೂ, ಶೂರನೂ ಮತ್ತು ಪಿತೃವತ್ಸಲನೂ ಆಗಿರುವನಷ್ಟೆ?
ನಾರದಃ
ವಿವಸ್ವಾನಿವ ತೇಜಸ್ವೀ ಬೃಹಸ್ಪತಿಸಮೋ ಮತೌ |
ಮಹೇಂದ್ರ ಇವ ವೀರಶ್ಚ ವಸುಧೇವ ಕ್ಷಮಾನ್ವಿತಃ ॥15॥
ನಾರದರು ಸೂರ್ಯನಂತೆ ತೇಜಸ್ವಿ. ಬುದ್ಧಿಯಲ್ಲಿ ಬೃಹಸ್ಪತಿಯನ್ನು ಹೋಲುತ್ತಾನೆ. ಮಹೇಂದ್ರನಂತೆ ಪರಾಕ್ರಮಶಾಲಿ. ಭೂಮಿಯಂತೆ ಕ್ಷಮಾಗುಣವುಳ್ಳವನು.
ಅಶ್ವಪತಿಃ
ಅಪಿ ರಾಜಾತ್ಮಜೋ ದಾತಾ ಬ್ರಹ್ಮಣ್ಯಶ್ಚಾಪಿ ಸತ್ಯವಾನ್ |
ರೂಪವಾನಪ್ಯುದಾರೋ ವಾऽಪ್ಯಥವಾ ಪ್ರಿಯದರ್ಶನಃ ॥16॥
ಅಶ್ವಪತಿ ಆ ರಾಜಕುಮಾರನಾದ ಸತ್ಯವಂತನು ದಾನವನ್ನು ಮಾಡುವವನೂ ಬ್ರಾಹ್ಮಣ ವತ್ಸಲನೂ, ರೂಪವಂತನೂ, ಉದಾರಿಯೂ, ಪ್ರಿಯದರ್ಶನನೂ ಆಗಿದ್ದಾನಷ್ಟೆ?
ನಾರದಃ
ಸಾಂಕೃತೇ ರಂತಿದೇವಸ್ಯ ಸ್ವಶಕ್ತ್ಯಾ ದಾನತಃ ಸಮಃ |
ಬ್ರಹ್ಮಣ್ಯಃ ಸತ್ಯವಾದೀ ಚ ಶಿಬಿರೌಶೀನರೋ ಯಥಾ ॥17॥
ನಾರದರು ತನ್ನ ಶಕ್ತಿ ಇದ್ದಷ್ಟು ದಾನಮಾಡುವ ವಿಷಯದಲ್ಲಿ ಅವನು ಚೆನ್ನಾಗಿ ದಾನಮಾಡುವ ರಂತಿದೇವನನ್ನು ಹೋಲುತ್ತಾನೆ. ಔಶೀನರ ಶಿಬಿಯಂತೆ ಬ್ರಾಹ್ಮಣ ವತ್ಸಲನೂ ಮತ್ತು ಸತ್ಯವಾದಿಯೂ ಆಗಿದ್ದಾನೆ.
ಯಯಾತಿರಿವ ಚೋದಾರಃ ಸೋಮವತ್ ಪ್ರಿಯದರ್ಶನಃ |
ರೂಪೇಣಾನ್ಯತಮೋऽಶ್ವಿಭ್ಯಾಂ ದ್ಯುಮತ್ಸೇನಸುತೋ ಬಲೀ ॥18॥
ದ್ಯುಮತ್ಸೇನನ ಮಗನಾದ ಬಲಿಷ್ಠನಾದ ಅವನು ಯಯಾತಿಯಂತೆ ಉದಾರನೂ, ಚಂದ್ರನಂತೆ ಪ್ರಿಯದರ್ಶನನೂ, ರೂಪದಲ್ಲಿ ಅಶ್ವಿನಿಗಳಲ್ಲಿ ಒಬ್ಬರನ್ನು ಹೋಲುವವನೂ ಆಗಿದ್ದಾನೆ.
ಸ ವದಾನ್ಯಃ ಸ ತೇಜಸ್ವೀ ಸ ಧೀಮಾನ್ ಸ ಕ್ಷಮಾನ್ವಿತಃ |
ಸ ದಾಂತಃ ಸ ಮೃದುಃ ಶೂರಃ ಸ ಸತ್ಯಃ ಸಂಯತೇಂದ್ರಿಯಃ ॥19॥
ಅವನು ದಾನಶೂರನೂ, ತೆಜಸ್ವಿಯೂ, ಮೇಧಾವಿಯೂ, ಕ್ಷಮಾಶೀಲನೂ, ಇಂದ್ರನಿಗ್ರಹವುಳ್ಳವನೂ, ಮೃದುವೂ, ಶೂರನೂ, ಸತ್ಯವಚನನೂ, ಜಿತೇಂದ್ರಿಯನೂ ಆಗಿದ್ದಾನೆ.
ಸ ಮೈತ್ರಃ ಸೋऽನಸೂಯಶ್ಚ ಸ ಹ್ರೀಮಾನ್ ದ್ಯುತಿಮಾಂಶ್ಚ ಸಃ |
ನಿತ್ಯಶಶ್ಚಾರ್ಜವಂ ತಸ್ಮಿನ್ ಸ್ಥಿತಿಸ್ತಸ್ಯೈವ ಚ ಧ್ರುವಾ |
ಸಂಕ್ಷೇಪತಸ್ತಪೋವೃದ್ಧೈಃ ಶೀಲವೃದ್ಧೈಶ್ಚ ಕಥ್ಯತೇ ॥20॥
ಅವನು ಸ್ನೇಹಶೀಲನೂ, ಅಸೂಯಾ ರಹಿತನೂ ಆಗಿದ್ದಾನೆ. ಅವನು ಕಾಂತಿಯುಳ್ಳವನೂ ಮತ್ತು ನಾಚಿಕೆಯುಳ್ಳವನೂ ಆಗಿದ್ದಾನೆ. ಅವನು ಯಾವಾಗಲೂ ಆರ್ಜವದಿಂದ ಕೂಡಿದ್ದು ಅದರಲ್ಲಿಯೇ ಶಾಶ್ವತವಾಗಿ ನೆಲೆಸಿದ್ದಾನೆ. ಹೀಗೆ ತಪೋವೃದ್ಧರೂ ಮತ್ತು ಶೀಲವೃದ್ಧರೂ ಸಂಕ್ಷೇಪವಾಗಿ ಅವನ ಗುಣಗಳನ್ನು ಹೇಳುತ್ತಾರೆ.
ಅಶ್ವಪತಿಃ
ಗುಣೈರುಪೇತಂ ಸರ್ವೈಸ್ತಂ ಭಗವಾನ್ ಪ್ರಬ್ರವೀಷಿ ಮೇ |
ದೋಷಾನಪ್ಯಸ್ಯ ಮೇ ಬ್ರೂಹಿ ಯದಿ ಸಂತೀಹ ಕೇಚನ ॥21॥
ಅಶ್ವಪತಿ ಪೂಜ್ಯರೇ, ಅವನು ಎಲ್ಲಾ ಗುಣಗಳಿಂದ ಕೂಡಿದವನು ಎಂದು ನೀವು ನನಗೆ ಹೇಳುತಿತದ್ದೀರಿ. ಅವನಲ್ಲಿ ಯಾವುದಾದರೂ ದೋಷಗಳಿದ್ದರೆ ಅದನ್ನೂ ನನಗೆ ಹೇಳಿ.
ನಾರದಃ
ಏಕೋ ದೋಷೋऽಸ್ತಿ ನಾನ್ಯೋऽಸ್ಯ ಸೋದ್ಯಪ್ರಭೃತಿ ಸತ್ಯವಾನ್ |
ಸಂವತ್ಸರೇಣ ಕ್ಷೀಣಾಯುರ್ದೇಹನ್ಯಾಸಂ ಕರಿಷ್ಯತಿ ॥22॥
ಏಕ ಏವಾಸ್ಯ ದೋಷೋ ಹಿ ಗುಣಾನಾಕ್ರಮ್ಯ ತಿಷ್ಠತಿ |
ಸ ಚ ದೋಷಃ ಪ್ರಯತ್ನೇನ ನ ಶಕ್ಯಮತಿವರ್ತಿತುಮ್ |
ನಾರದರು ಅವನಲ್ಲಿ ಒಂದೇ ಒಂದು ದೋಷವಿದೆ. ಬೇರೆ ಯಾವುದೂ ಇಲ್ಲ. ಸತ್ಯವಂತನು ಈ ದಿನದಿಂದ ಒಂದು ವರ್ಷಕ್ಕೆ ಸರಿಯಾಗಿ ಆಯುಸ್ಸನ್ನು ಕಳೆದುಕೊಂಡು ದೇಹತ್ಯಾಗವನ್ನು ಮಾಡುವನು. ಇದೊಂದೇ ದೋಷವು ಅವನ ಗುಣಗಳನ್ನು ಮೆಟ್ಟಿ ನಿಂತಿದೆ. ಈ ದೋಷವನ್ನು ಪ್ರಯತ್ನಪಟ್ಟು ಪರಿಹರಿಸಲು ಸಾಧ್ಯವಿಲ್ಲ.
ರಾಜಾ
ಏಹಿ ಸಾವಿತ್ರಿ ಗಚ್ಛಸ್ವ ಅನ್ಯಂ ವರಯ ಶೋಭನೇ |
ತಸ್ಯ ದೋಷೋ ಮಹಾನೇಕೋ ಗುಣಾನಾಕ್ರಮ್ಯ ಚ ಸ್ಥಿತಃ ॥23॥
ರಾಜ ಸಾವಿತ್ರಿ ಇಲ್ಲಿ ಬಾ! ಶೋಭನಳೇ, ಹೋಗಿ ಬೇರೆ ವರನನ್ನು ಹುಡುಕು. ಅವನ ದೊಡ್ಡ ದೋಷವು ಎಲ್ಲಾ ಗುಣಗಳನ್ನೂ ಮೆಟ್ಟಿನಿಂತಿದೆ.
ಯಥಾ ಮೇ ಭಗವಾನಾಹ ನಾರದೋ ದೇವಸತ್ಕೃತಃ |

ಸಂವತ್ಸರೇಣ ಸೋಽಲ್ಪಾಯುರ್ದೇಹನ್ಯಾಸಂ ಕರಿಷ್ಯತಿ ॥24॥
ಪೂಜ್ಯರೂ, ದೇವಪೂಜಿತರೂ ಆದ ನಾರದರು ಹೇಳುವಂತೆ ಅಲ್ಪಾಯುವಾದ ಅವನು ಒಂದುವರ್ಷದಲ್ಲಿ ದೇಹತ್ಯಾಗವನ್ನು ಮಾಡುವನು.
ಸಾವಿತ್ರೀ
ಸಕೃದಂಭೋ ನಿಪತತಿ ಸಕೃತ್ ಕನ್ಯಾ ಪ್ರದೀಯತೇ।
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸಕೃತ್ಸಕೃತ್ ॥25॥
ಸಾವಿತ್ರೀ ಧಾರೋದಕವು ಒಂದೇ ಸಲ ಕೆಳಗೆ ಬೀಳುತ್ತದೆ. ಕನ್ಯೆಯು ಒಂದೇ ಬಾರಿ ಕೊಡಲ್ಪಡುತ್ತಾಳೆ. ಕೊಡುವೆನು ಎಂದು ಹೇಳುವವನು ಒಂದೇ ಬಾರಿ ಹೇಳುತ್ತಾನೆ. ಈ ಮೂರು ಒಂದೊಂದು ಬಾರಿ ನಡೆಯುವಂತಹವು.
ದೀರ್ಘಾಯುರಥವಾಽಲ್ಪಾಯುಃ ಸಗುಣೋ ನಿರ್ಗುಣೋಽಪಿ ವಾ।
ಸಕೃದ್ ವೃತೋ ಮಯಾ ಭರ್ತಾ ನ ದ್ವಿತೀಯಂ ವೃಣೋಮ್ಯಹಮ್ ॥
ಅವನು ದೀರ್ಘಾಯುವಾಗಿರಲಿ ಅಥವಾ ಅಲ್ಪಾಯುವಾಗಿರಲಿ, ಗುಣವಂತನಾಗಿರಲಿ ಅಥವಾ ನಿರ್ಗುಣನಾಗಿರಲಿ ನಾನು ಒಂದು ಸಲ ಅವನನ್ನು ಪತಿ ಎಂದು ವರಿಸಿದ ಮೇಲೆ ಇನ್ನೊಬ್ಬನನ್ನು ವರಿಸುವುದಿಲ್ಲ.
ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾಽಭಿಧೀಯತೇ।
ಕ್ರಿಯತೇ ಕರ್ಮಣಾ ಪಶ್ಚಾತ್ ಪ್ರಮಾಣಂ ಮೇ ಮನಸ್ತತಃ ॥27॥
ಮೊದಲು ಮನಸ್ಸಿನಲ್ಲಿ ನಿಶ್ಚಯಿಸಿ ಅನಂತರ ಅದನ್ನು ಬಾಯಿಯಿಂದ ಹೇಳುತ್ತಾರೆ. ಅನಂತರ ಅದನ್ನು ಕರ್ಮದಿಂದ ಮಾಡುತ್ತಾರೆ. ಆದ್ದರಿಂದ ಈ ವಿಷಯದಲ್ಲಿ ನನ್ನ ಮನಸ್ಸೇ ನನಗೆ ಪ್ರಮಾಣವಾದುದು.
ನಾರದಃ
ಸ್ಥಿರಾ ಬುದ್ಧಿರ್ನರಶ್ರೇಷ್ಠ ಸಾವಿತ್ರ್ಯಾ ದುಹಿತುಸ್ತವ।
ನೈಷಾ ವಾರಯಿತುಂ ಶಕ್ಯಾ ಧರ್ಮಾದಸ್ಮಾತ್ ಕಥಂಚನ।
ವಿಲಂಬೋ ನಾತ್ರ ಕರ್ತವ್ಯೋ ನಿಶ್ಚಿತೇ ಕರ್ಮಣಿ ಧ್ರುವಮ್ ॥28॥
ನಾರದರು ಎಲೈ ನರಶ್ರೇಷ್ಠನೇ, ನಿನ್ನ ಮಗಳಾದ ಸಾವಿತ್ರಿಯ ಬುದ್ಧಿಯು ಸ್ಥಿರವಾಗಿದೆ. ಅವಳನ್ನು ಈ ಧರ್ಮದಿಂದ ಅಲುಗಾಡಿಸಲು ಸಾಧ್ಯವಿಲ್ಲ. ಕಾರ್ಯವು ನಿಶ್ಚಯವಾದ ಮೇಲೆ ಈ ವಿಷಯದಲ್ಲಿ ವಿಳಂಬವನ್ನು ಮಾಡಬಾರದು.
ನಾನ್ಯಸ್ಮಿನ್ ಪುರುಷೇ ಸಂತಿ ಯೇ ಸತ್ಯವತಿ ವೈ ಗುಣಾಃ।
ಪ್ರದಾನಮೇವ ತಸ್ಮಾನ್ಮೇ ರೋಚತೇ ದುಹಿತುಸ್ತವ ॥29॥
ಸತ್ಯವಂತನಲ್ಲಿ ಇರುವ ಗುಣಗಳು ಇನ್ನೊಬ್ಬ ಪುರುಷನಲ್ಲಿ ಇಲ್ಲ. ಆದ್ದರಿಂದ ನಿನ್ನ ಮಗಳನ್ನು ಅವನಿಗೆ ಕೊಡುವುದೇ ಸೂಕ್ತವೆಂದು ನನಗೆ ತೋರುತ್ತದೆ.
ರಾಜಾ
ಅವಿಚಾಲ್ಯಂ ತದುಕ್ತಂ ಯತ್ ತಥ್ಯಂ ಭಗವತಾ ವಚಃ।
ಕರಿಷ್ಯಾಮ್ಯೇತದೇವಂ ಚ ಗುರುರ್ಹಿ ಭಗವಾನ್ ಮಮ ॥30॥
ರಾಜ ಪೂಜ್ಯರಾದ ತಾವು ಹೇಳಿದ ಸತ್ಯವಚನಗಳು ಅಚಾಲ್ಯವಾದವುಗಳು. ತಾವು ನನಗೆ ಗುರುಗಳಾಗಿದ್ದೀರಿ. ತಮ್ಮ ಮಾತಿನಂತೆಯೇ ಇದನ್ನು ಮಾಡುವೆನು.
ನಾರದಃ
ಅವಿಘ್ನಮಸ್ತು ಸಾವಿತ್ರ್ಯಾಃ ಪ್ರದಾನೇ ದುಹಿತುಸ್ತವ।
ಸಾಧಯಿಷ್ಯಾಮ್ಯಹಂ ತಾವತ್ ಸರ್ವೇಷಾಂ ಭದ್ರಮಸ್ತು ವಃ ॥31॥
ನಾರದರು ನಿನ್ನ ಮಗಳಾದ ಸಾವಿತ್ರಿಯ ವಿವಾಹ ಮಹೋತ್ಸವವು ನಿರ್ವಿಘ್ನವಾಗಿ ನಡೆಯಲಿ. ಸದ್ಯಕ್ಕೆ ನಾನು ಹೋಗಿ ಬರುತ್ತೇನೆ. ನಿಮ್ಮೆಲ್ಲರಿಗೂ ಮಂಗಳವಾಗಲಿ.
ಮಾರ್ಕಂಡೇಯಃ
ಏವಮುಕತ್ವ ಸಮುತ್ಪತ್ಯ ನಾರದಸ್ತ್ರಿದಿವಂ ಗತಃ।
ರಾಜಾಽಪಿ ದುಹಿತುಃ ಸಜ್ಜಂ ವೈವಾಹಿಕಮಕಾರಯತ್ ॥32॥
ಮಾರ್ಕಂಡೇಯರು ಹೀಗೆ ಹೇಳಿ ನಾರದರು ಆಕಾಶಕ್ಕೆ ಹಾರಿ ಸ್ವರ್ಗಕ್ಕೆ ಹೋದರು. ರಾಜನೂ ಸಹ ತನ್ನ ಮಗಳ ಮದುವೆಗೆ ಎಲ್ಲವನ್ನೂ ಸಿದ್ಧಗೊಳಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ತ್ರಿಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ಮೂರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತನಾಲ್ಕನೆಯ ಅಧ್ಯಾಯ
ಅಶ್ವಪತಿಯಿಂದ ದ್ಯುಮತ್ಸೇನನ ಆಶ್ರಮದಲ್ಲಿ ಸತ್ಯವಂತನಿಗೆ ಕನ್ಯಾಪ್ರದಾನ. ಅನಂತರ ತನ್ನ ನಗರಕ್ಕೆ ಹಿಂದಿರುಗುವಿಕೆ.
ಮಾರ್ಕಂಡೇಯಃ

ಅಥ ಕನ್ಯಾಪ್ರದಾನೇ ಸ ತಮೇವಾರ್ಥಂ ವಿಚಿಂತಯನ್ |
ಸಮಾನಿನ್ಯೇ ಚ ತತ್ಸರ್ವಂ ಭಾಂಡಂ ವೈವಾಹಿಕಂ ನೃಪಃ ॥1॥
ಮಾರ್ಕಂಡೇಯರು ಅನಂತರ ರಾಜನು ಅದೇ ವಿಷಯವನ್ನು ಆಲೋಚಿಸುತ್ತಾ ಕನ್ಯಾಪ್ರದಾನಕ್ಕೆ ಬೇಕಾದ ಎಲ್ಲ ವಸ್ತುಗಳನ್ನೂ ಅಣಿಗೊಳಿಸಿದನು.
ತತೋ ವೃದ್ಧಾನ್ ದ್ವಿಜಾನ್ ಸರ್ವಾನೃತ್ವಿಜಃ ಸಪುರೋಹಿತಾನ್ |
ಸಮಾಹೂಯ ದಿನೇ ಪುಣ್ಯೇ ಪ್ರಯಯೌ ಸಹ ಕನ್ಯಯಾ ॥2॥
ಅನಂತರ ಒಂದು ಶುಭದಿನದಲ್ಲಿ ಹಿರಿಯರನ್ನು, ಎಲ್ಲಾ ಋತ್ವಿಜರನ್ನು ಮತ್ತು ಪುರೋಹಿತರನ್ನು ಕರೆದುಕೊಂಡು ಕನ್ಯೆಯ ಜೊತೆಯಲ್ಲಿ ಹೊರಟನು.
ಮೇಧ್ಯಾರಣ್ಯಂ ಸ ಗತ್ವಾ ಚ ದ್ಯುಮತ್ಸೇನಾಶ್ರಮಂ ನೃಪಃ |
ಪದ್ಭ್ಯಾಮೇವ ದ್ವಿಜೈಃ ಸಾರ್ಧಂ ರಾಜರ್ಷಿಂ ತಮುಪಾಗಮತ್ ॥3॥
ಆ ರಾಜನು ಬ್ರಾಹ್ಮಣರ ಜೊತೆಯಲ್ಲಿ ಮೇಧ್ಯಾರಣ್ಯಕ್ಕೆ ಹೋಗಿ ಅಲ್ಲಿಂದ ನಡೆದುಕೊಂಡೇ ದ್ಯುಮತ್ಸೇನನ ಆಶ್ರಮವನ್ನು ತಲುಪಿದನು.
ತತ್ರಾಪಶ್ಯನ್ಮಹಾಭಾಗಂ ಶಾಲವೃಕ್ಷಮುಪಾಶ್ರಿತಮ್ |
ಕೌಶ್ಯಾಂ ಬೃಸ್ಯಾಂ ಸಮಾಸೀನಂ ಚಕ್ಷುರ್ಹೀನಂ ನೃಪಂ ತದಾ ॥4॥
ಅಲ್ಲಿ ಒಂದು ಶಾಲವೃಕ್ಷದ ಕೆಳಗೆ ರೇಷ್ಮೆಯ ಆಸನದಲ್ಲಿ ಕುಳಿತಿದ್ದ ಮಹಾನುಭಾವನೂ, ಅಂಧನೂ ಆದ ದ್ಯುಮತ್ಸೇನನನ್ನು ನೋಡಿದನು.
ಸ ರಾಜಾ ತಸ್ಯ ರಾಜರ್ಷೇಃ ಕೃತ್ವಾ ಪೂಜಾಂ ಯಥಾರ್ಹತಃ |
ವಾಚಾ ಸುನಿಯತೋ ಭೂತ್ವಾ ಚಕಾರಾತ್ಮನಿವೇದನಮ್ ॥5॥
ಆ ರಾಜನು ರಾಜರ್ಷಿಯಾದ ದ್ಯುಮತ್ಸೇನನಿಗೆ ಯಥೋಚಿತವಾದ ಪೂಜೆಯನ್ನು ಮಾಡಿ ಚೆನ್ನಾಗಿ ನಿಯಮಿತವಾದ ತನ್ನ ಮಾತುಗಳಿಂದ ತನ್ನನ್ನು ನಿವೇದಿಸಿಕೊಂಡನು.
ತಸ್ಯಾರ್ಘ್ಯಮಾಸನಂ ಚೈವ ಗಾಂ ಚಾವೇದ್ಯ ಸ ಧರ್ಮವಿತ್ |
ಕಿಮಾಗಮನಮಿತ್ಯೇವಂ ರಾಜಾ ರಾಜಾನಮಬ್ರವೀತ್ ॥6॥
ಧರ್ಮವನ್ನು ತಿಳಿದ ಆ ದ್ಯುಮತ್ಸೇನನು ಅವನಿಗೆ ಅರ್ಘ್ಯವನ್ನೂ, ಆಸನವನ್ನೂ ಕೊಟ್ಟು ಮತ್ತು ಗೋವನ್ನು ದಾನಮಾಡಿ ಆಗಮನದ ಕಾರಣವೇನು ಎಂದು ರಾಜನನ್ನು ಕೇಳಿದನು.
ತಸ್ಯ ಸರ್ವಮಭಿಪ್ರಾಯಮಿತಿಕರ್ತವ್ಯತಾಂ ಚ ತಾಮ್ |
ಸತ್ಯವಂತಂ ಸಮುದ್ದಿಶ್ಯ ಸರ್ವಮೇವ ನ್ಯವೇದಯತ್ ॥7॥
ಅವನಿಗೆ ತಮ್ಮ ಅಭಿಪ್ರಾಯವೆಲ್ಲವನ್ನೂ ಮತ್ತು ಸಾವಿತ್ರಿಯನ್ನು ಸತ್ಯವಂತನಿಗೆ ಕೊಡಬೇಕಾದರೆ ಮಾಡಬೇಕಾದ ಎಲ್ಲಾ ಕಾರ್ಯಗಳ ವಿವರಗಳನ್ನೂ ತಿಳಿಸಿದನು.
ಅಶ್ವಪತಿಃ
ಸಾವಿತ್ರೀ ನಾಮ ರಾಜರ್ಷೇ ಕನ್ಯೇಯಂ ಮಮ ಶೋಭನಾ |
ತಾಂ ಸ್ವಧರ್ಮೇಣ ಧರ್ಮಜ್ಞ ಸ್ನುಷಾರ್ಥೇ ತ್ವಂ ಗೃಹಾಣ ಮೇ ॥8॥
ಅಶ್ವಪತಿ ಎಲೈ ರಾಜರ್ಷಿಯೇ, ನನ್ನ ಮಗಳಾದ ಈ ಸಾವಿತ್ರಿಯು ಶುಭಳಾಗಿದ್ದಾಳೆ. ಧರ್ಮಜ್ಞನೇ, ನೀನು ಅವಳನ್ನು ನಿನ್ನ ಧರ್ಮದಿಂದ ಸೊಸೆಯಾಗಿ ಸ್ವೀಕರಿಸು.
ದ್ಯುಮತ್ಸೇನಃ
ಚ್ಯುತಾಃ ಸ್ಮ ರಾಜ್ಯಾದ್ವನವಾಸಮಾಶ್ರಿತ್ಯ
ಚರಾಮ ಧರ್ಮಂ ನಿಯತಾಸ್ತಪಸ್ವಿನಃ |
ಕಥಂ ತ್ವನರ್ಹಾ ವನವಾಸಮಾಶ್ರಮೇ
ನಿವತ್ಸ್ಯತೇ ಕ್ಲೇಶಮಿಮಂ ಸುತಾ ತವ ॥9॥
ದ್ಯುಮತ್ಸೇನ ನಾವು ರಾಜ್ಯವನ್ನು ಕಳೆದುಕೊಂಡು ವನವನ್ನು ಆಶ್ರಯಿಸಿ ತಪಸ್ವಿಗಳಾಗಿ ನಿಯಮದಿಂದ ಧರ್ಮವನ್ನು ಆಚರಿಸುತ್ತಿದ್ದೇವೆ. ಈ ನಿನ್ನ ಮಗಳು ವನವಾಸಕ್ಕೆ ಅನರ್ಹಳಾದವಳು. ಈ ಆಶ್ರಮದ ಕಷ್ಟವನ್ನು ಅವಳು ಹೇಗೆ ಸಹಿಸುವಳು?
ಅಶ್ವಪತಿಃ
ಸುಖಂ ಚ ದುಃಖಂ ಚ ಭವಾಭವಾತ್ಮಕಂ
ಯಥಾ ವಿಜಾನಾತಿ ಸುತಾ ಮಮೈವ |
ನ ಮದ್ವಿಧೇ ಯುಜ್ಯತಿ ವಾಕ್ಯಮೀದೃಶಂ
ವಿನಿಶ್ಚಯೇನಾಧಿಗತೋಽಸ್ಮಿ ತೇ ನೃಪ ॥10॥
ಅಶ್ವಪತಿ ಸುಖದುಃಖಗಳು, ಐಶ್ವರ್ಯದಾರಿದ್ರ್ಯಗಳು ಇವುಗಳನ್ನು ನನ್ನ ಮಗಳು ಚೆನ್ನಾಗಿ ತಿಳಿದಿದ್ದಾಳೆ. ನನ್ನಂತಹವನನ್ನು ಕುರಿತು ಇಂತಹ ಮಾತನ್ನು ಆಡುವುದು ಸರಿಯಲ್ಲ. ಎಲೈ ರಾಜನೇ, ನಾನು ನಿನ್ನ ಪುತ್ರನಿಗೆ ಕೊಡುವುದಾಗಿ ನಿಶ್ಚಯವನ್ನು ಮಾಡಿಕೊಂಡೇ ಬಂದಿದ್ದೇನೆ.
ಆಶಾಂ ನಾರ್ಹಸಿ ಮೇ ಹಂತುಂ ಸೌಹೃದಾತ್ ಪ್ರಣತಸ್ಯ ಚ |
ಅಭಿತಶ್ಚಾಗತಂ ಪ್ರೇಮ್ಣಾ ಪ್ರತ್ಯಾಖ್ಯಾತುಂ ನ ಮಾಽರ್ಹಸಿ ॥11॥

ವಿಶ್ವಾಸದಿಂದ ಮತ್ತು ಪ್ರೀತಿಯಿಂದ ಬಂದ ನನ್ನ ಆಸೆಯನ್ನು ನೀನು ಕಡಿಯಬೇಡ. ನಿನ್ನ ಮೇಲಿನ ಪ್ರೀತಿಯಿಂದ ದೂರದಿಂದ ಬಂದ ನನ್ನನ್ನು ನಿರಾಕರಿಸಬಾರದು.
ಅನುರೂಪೋ ಹಿ ಯುಕ್ತಶ್ಚ ತ್ವಂ ಮಮಾಹಂ ಚ ವೈ ತವ |
ಸ್ನುಷಾಂ ಪ್ರತೀಚ್ಛ ಮೇ ಕನ್ಯಾಂ ಭಾರ್ಯಾಂ ಸತ್ಯವತಸ್ತತಃ ॥12॥
ನೀನು ನನಗೂ ಮತ್ತು ನಾನು ನಿನಗೂ ಅನುರೂಪವಾಗಿದ್ದೇವೆ. ನನ್ನ ಮಗಳನ್ನು ನಿನ್ನ ಸೊಸೆಯಾಗಿ ಸತ್ಯವಂತನ ಪತ್ನಿಯಾಗಿ ಸ್ವೀಕರಿಸು.
ದ್ಯುಮತ್ಸೇನಃ
ಪೂರ್ವಮೇವಾಭಿಲಷಿತಃ ಸಂಬಂಧೋ ಮೇ ತ್ವಯಾ ಸಹ |
ಭ್ರಷ್ಟರಾಜ್ಯಸ್ತ್ವಹಮಿತಿ ತತ ಏತದ್ ವಿಚಾರಿತಮ್ ॥13॥
ಅಭಿಪ್ರಾಯಸ್ತ್ವಯಂ ಯೋ ಮೇ ಪೂರ್ವಮೇವಾಭಿಕಾಂಕ್ಷಿತಃ |
ಸ ನಿರ್ವರ್ತತು ಮೇಽದ್ಯೈವ ಕಾಂಕ್ಷಿತೋ ಹ್ಯಸಿ ಮೇಽತಿಥಿಃ ॥14॥
ದ್ಯುಮತ್ಸೇನ ನಿನ್ನ ಜೊತೆಯಲ್ಲಿ ಈ ಸಂಬಂಧವು ನನಗೆ ಮೊದಲೇ ಅಭಿಪ್ರೇತವಾಗಿದ್ದಿತು. ಆದರೆ ರಾಜ್ಯವನ್ನು ಕಳೆದುಕೊಂಡುದುದರಿಂದ ನಾನು ಇಷ್ಟು ವಿಚಾರವನ್ನು ಮಾಡಬೇಕಾಗಿದ್ದಿತು. ನನಗೆ ಮೊದಲೇ ಅಭಿಪ್ರೇತವಾಗಿದ್ದ ಈ ನಿನ್ನ ಸಂಬಂಧವು ಈ ದಿನವೇ ಜರುಗಲಿ. ನೀನು ನನಗೆ ಇಷ್ಟನಾದ ಅತಿಥಿಯಾಗಿದ್ದೀಯೆ.
ಮಾರ್ಕಂಡೇಯಃ
ತತಃ ಸರ್ವಾನ್ಸಮಾನಾಯ್ಯ ದ್ವಿಜಾನಾಶ್ರಮವಾಸಿನಃ |
ಯಥಾವಿಧಿ ಸಮುದ್ವಾಹಂ ಕಾರಯಾಮಾಸತುರ್ನೃಪೌ ॥15॥
ಮಾರ್ಕಂಡೇಯರು ಅನಂತರ ಆಶ್ರಮವಾಸಿಗಳಾದ ಎಲ್ಲಾ ಬ್ರಾಹ್ಮಣರನ್ನೂ ಕರೆಸಿ ಆ ರಾಜರಿಬ್ಬರೂ ಶಾಸ್ತ್ರವಿಧಿಯಂತೆ ವಿವಾಹವನ್ನು ನೆರವೇರಿಸಿದರು.
ದತ್ತ್ವಾ ಸೋಽಶ್ವಪತಿಃ ಕನ್ಯಾಂ ಯಥಾರ್ಹಂ ಸಪರಿಚ್ಛದಮ್ |
ಯಯೌ ಸ್ವಮೇವ ಭವನಂ ಯುಕ್ತಃ ಪರಮಯಾ ಮುದಾ ॥16॥
ಅಶ್ವಪತಿಯು ಕನ್ಯಾದಾನವನ್ನು ಮಾಡಿ ಯಥಾಯೋಗ್ಯವಾಗಿ ಉಡುಗೊರೆಗಳನ್ನೂ ಸಾಮಗ್ರಿಗಳನ್ನೂ ಕೊಟ್ಟು ಬಹಳ ಸಂತೋಷದಿಂದ ಕೂಡಿದವನಾಗಿ ತನ್ನ ಮನೆಗೆ ಹಿಂದಿರುಗಿದನು.
ಸತ್ಯವಾನಪಿ ತಾಂ ಭಾರ್ಯಾಂ ಲಬ್ಧ್ವಾ ಸರ್ವಗುಣಾನ್ವಿತಾಮ್ |
ಮುಮುದೇ ಸಾ ಚ ತಂ ಲಬ್ಧ್ವಾ ಭರ್ತಾರಂ ಮನಸೇಪ್ಸಿತಮ್ ॥17॥
ಸತ್ಯವಂತನೂ ಸಹ ಎಲ್ಲ ಗುಣಗಳಿಂದಲೂ ಕೂಡಿದ್ದ ಆ ಪತ್ನಿಯನ್ನು ಪಡೆದು ಸಂತೋಷಪಟ್ಟನು. ಸಾವಿತ್ರಿಯೂ ಸಹ ತನಗೆ ಇಷ್ಟನಾದ ಪತಿಯನ್ನು ಪಡೆದು ಸಂತೋಷಪಟ್ಟಳು.
ಗತೇ ಪಿತರಿ ಸರ್ವಾಣಿ ಸಂನ್ಯಸ್ಯಾಭರಣಾನಿ ಸಾ |
ಜಗೃಹೇ ವಲ್ಕಲಾನ್ಯೇವ ವಸ್ತ್ರಂ ಕಾಷಾಯಮೇವ ಚ ॥18॥
ತಂದೆಯು ಹಿಂದಿರುಗುತ್ತಿರಲು ಸಾವಿತ್ರಿಯು ಎಲ್ಲಾ ಆಭರಣಗಳನ್ನೂ ತೆಗೆದಿಟ್ಟು ನಾರುಮಡಿಗಳನ್ನೂ, ಕಾಷಾಯವಸ್ತ್ರವನ್ನೂ ಧರಿಸಿದಳು.
ಪರಿಚಾರೈರ್ಗುಣೈಶ್ಚೈವ ಪ್ರಶ್ರಯೇಣ ದಮೇನ ಚ |
ಸರ್ವಕಾಮಕ್ರಿಯಾಭಿಶ್ಚ ಸರ್ವೇಷಾಂ ತುಷ್ಟಿಮಾದಧೇ ॥19॥
ತನ್ನ ಪರಿಚರ್ಯೆಗುಣಗಳಿಂದಲೂ, ವಿನಯದಿಂದಲೂ, ಇಂದ್ರಿಯ ನಿಗ್ರಹದಿಂದಲೂ ಅವರಿಗೆ ಇಷ್ಟವಾದ ಎಲ್ಲಾ ಕಾರ್ಯವನ್ನು ಮಾಡುವುದರಿಂದಲೂ ಅವಳು ಎಲ್ಲರಿಗೂ ಸಂತೋಷವನ್ನು ಉಂಟುಮಾಡಿದಳು.
ಶ್ವಶ್ರೂಂ ಶರೀರಸತ್ಕಾರೈಃ ಸರ್ವೈರಾಚ್ಛಾದನಾದಿಭಿಃ |
ತಥೈವ ಪ್ರಿಯವಾದೇನ ನೈಪುಣೇನ ಶಮೇನ ಚ |
ರಹಶ್ಚೈವೋಪಚಾರೇಣ ಭರ್ತಾರಂ ಪರ್ಯತೋಷಯತ್ ॥20॥
ಅತ್ತೆಯನ್ನು ವಸತ್ರದಿ ಎಲ್ಲಾ ಶರೀರ ಸತ್ಕಾರದಿಂದಲೂ, ಮಾವನನ್ನು ಮಾತುಗಳನ್ನು ನಿಯಂತ್ರಿಸಿ ದೇವಪೂಜೆಗೆ ಸಹಾಯವನ್ನು ಮಾಡುವುದರಿಂದಲೂ, ಮತ್ತು ಪತಿಯನ್ನು ಪ್ರಿಯವಚನದಿಂದಲೂ, ಕೌಶಲದಿಂದಲೂ, ಶಾಂತಿಯಿಂದಲೂ ಮತ್ತು ರಹಸ್ಯೋಪಚಾರಗಳಿಂದಲೂ ಸಂತೋಷಪಡಿಸಿದಳು.
ಏವಂ ತತ್ರಾಶ್ರಮೇ ತೇಷಾಂ ತದಾ ನಿವಸತಾಂ ಸತಾಮ್ |
ಕಾಲಸ್ತಪಸ್ಯತಾಂ ಕಶ್ಚಿದಪಾಕ್ರಾಮತ ಭಾರತ ॥21॥
ಎಲೈ ಭಾರತನೇ, ಹೀಗೆ ಆಶ್ರಮದಲ್ಲಿ ವಾಸಮಾಡುತ್ತಾ ತಪಸ್ಸನ್ನು ಮಾಡುತ್ತಿದ್ದ ಅವರಿಗೆ ಸ್ವಲ್ಪಕಾಲವು ಕಳೆಯಿತು.
ಸಾವಿತ್ರ್ಯಾ ಗ್ಲಾಯಮಾನಾಯಾಸ್ತಿಷ್ಠಂತ್ಯಾಸ್ತು ದಿವಾನಿಶಮ್ |
ನಾರದೇನ ಯದುಕ್ತಂ ತದ್ವಾಕ್ಯಂ ಮನಸಿ ವರ್ತತೇ ॥22॥
ಹಗಲು-ಇರುಳು ಎಲ್ಲರ ಸೇವೆ ಮಾಡಿ ಬಳಲುತ್ತಿದ್ದ ಸಾವಿತ್ರಿಗೆ ನಾರದರು ಹೇಳಿದ ಮಾತುಗಳೇ ಮನಸ್ಸಿನಲ್ಲಿ ಯಾವಾಗಲೂ ಇರುತ್ತಿದ್ದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ಚತುಶೀತ್ಯಧಿಕದ್ವಿಶತತಮೋಽಧ್ಯಾಯಃ ॥

॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತೈದನೆಯ ಅಧ್ಯಾಯ
ನಾರದರು ಹೇಳಿದ ಪತಿಯ ಮರಣದ ದಿವಸದಲ್ಲಿ ಸಾವಿತ್ರಿಯಿಂದ ಪತಿಯ ಜೊತೆಯಲ್ಲಿ ವನಗಮನ.
ಮಾರ್ಕಂಡೇಯಃ
ತತಃ ಕಾಲೇ ಬಹುತಿಥೇ ವ್ಯತಿಕ್ರಾಂತೇ ಕದಾಚನ |
ಪ್ರಾಪ್ತಃ ಸ ಕಾಲೋ ಮರ್ತವ್ಯಂ ಯತ್ರ ಸತ್ಯವತಾ ನೃಪ ॥1॥
ಮಾರ್ಕಂಡೇಯರು ಎಲೈ ರಾಜನೇ, ಹೀಗೆ ಬಹಳ ಸಮಯವು ಕಳೆದ ಮೇಲೆ ಒಂದು ಸಲ ಸತ್ಯವಂತನು ಮರಣವನ್ನು
ಹೊಂದಬೇಕಾದ ದಿನವು ಪ್ರಾಪ್ತವಾಯಿತು.
ಗಣಯಂತ್ಯಾಶ್ಚ ಸಾವಿತ್ರ್ಯಾ ದಿವಸೇ ದಿವಸೇ ಗತೇ |
ಯದ್ವಾಕ್ಯಂ ನಾರದೇನೋಕ್ತಂ ವರ್ತತೇ ಹೃದಿ ನಿತ್ಯಶಃ ॥2॥
ಕಳೆದ ಒಂದೊಂದು ದಿವಸವನ್ನೂ ಎಣಿಸುತ್ತಿದ್ದ ಸಾವಿತ್ರಿಗೆ ನಾರದರ ಆ ಮಾತು ಯಾವಾಗಲೂ ಮನಸ್ಸಿನಲ್ಲಿ ಕೊರೆಯುತ್ತಿತ್ತು.
ಚತುರ್ಥೇಽಹನಿ ಮರ್ತವ್ಯಮಿತಿ ಸಂಚಿಂತ್ಯ ಭಾಮಿನೀ |
ವ್ರತಂ ತ್ರಿರಾತ್ರಮುದ್ದಿಶ್ಯ ದಿವಾರಾತ್ರಂ ಸ್ಥಿತಾಽಭವತ್ ॥3॥
ಇಂದಿನಿಂದ ನಾಲ್ಕನೆಯ ದಿವಸ ಮರಣದ ದಿನವೆಂದು ಯೋಚಿಸಿದ ಆ ಭಾಮಿನಿಯು ಮೂರು ದಿವಸದ ವ್ರತವನ್ನು ಸಂಕಲ್ಪಿಸಿ
ಹಗಲೂ ಮತ್ತು ರಾತ್ರಿಯೂ ಜಾಗರೂಕಳಾಗಿದ್ದಳು.
ತ್ರಯೋದಶ್ಯಾಂ ಚೋಪವಾಸಂ ಪ್ರತಿಪತ್ಸು ಚ ಪಾರಣಮ್ |
ತಂ ಶ್ರುತ್ವಾ ನಿಯಮಂ ತಸ್ಯಾ ಭೃಶಂ ದುಃಖಾನ್ವಿತೋ ನೃಪಃ |
ಉತ್ಥಾಯ ವಾಕ್ಯಂ ಸಾವಿತ್ರೀಮಬ್ರವೀತ್ ಪರಿಸಾಂತ್ವಯನ್ ॥4॥
ತ್ರಯೋದಶಿಯಿಂದ ಮೂರುದಿವಸಗಳ ಉಪವಾಸ ಮತ್ತು ಪ್ರತಿಪತ್‌ದಿನದ ಪಾರಣೆ ಅವಳ ಸಂಕಲ್ಪವಾಗಿದ್ದಿತು. ಅವಳ
ನಿಯಮವನ್ನು ಕೇಳಿದ ರಾಜನು ಬಹಳ ದುಃಖಾನ್ವಿತನಾಗಿ ಎದ್ದು ಬಂದು ಸಾವಿತ್ರಿಯನ್ನು ಸಮಾಧಾನ ಮಾಡುತ್ತಾ
ಮಾತನಾಡಿದನು.
ಅತಿತೀವ್ರೋಽಯಮಾರಂಭಸ್ತ್ವಯಾಽಽರಬ್ಧೋ ನೃಪಾತ್ಮಜೇ |
ತಿಸೃಣಾಂ ವಸತೀನಾಂ ಹಿ ಸ್ಥಾನಂ ಪರಮದುಶ್ಚರಮ್ ॥5॥
ಎಲೌ ರಾಜಕುಮಾರಿಯೇ, ನೀನು ಬಹಳ ಕಷ್ಟಕರವಾದ ವ್ರತವನ್ನು ಆರಂಭಿಸಿದ್ದೀಯೆ. ಮೂರುದಿನಗಳ ಉಪವಾಸದ ಅನುಷ್ಠಾನವು
ಬಹಳ ಕಷ್ಟಕರವಾದುದು.
ಸಾವಿತ್ರೀ
ನ ಕಾರ್ಯಸ್ತಾತ ಸಂತಾಪಃ ಪಾರಯಿಷ್ಯಾಮ್ಯಹಂ ವ್ರತಮ್ |
ವ್ಯವಸಾಯಕೃತಂ ಹೀದಂ ವ್ಯವಸಾಯಶ್ಚ ಕಾರಣಮ್ ॥6॥
ಸಾವಿತ್ರೀ ಪೂಜ್ಯರೇ, ಸಂತಾಪಪಡಬೇಡಿ. ನಾನು ಈ ವ್ರತವನ್ನು ಚೆನ್ನಾಗಿ ಮುಗಿಸುವೆನು. ಇಂತಹ ವ್ರತಗಳಿಗೆಲ್ಲಾ ಮನಸ್ಸಿನ
ಧೈರ್ಯವೇ ಮುಖ್ಯಕಾರಣ. ನಾನು ಆ ಧೈರ್ಯದಿಂದಲೇ ಹೀಗೆ ಸಂಕಲ್ಪಿಸಿದ್ದೇನೆ.
ದ್ಯುಮತ್ಸೇನಃ
ವ್ರತಂ ಭಿಂಧೀತಿ ವಕ್ತುಂ ತ್ವಾಂ ನಾಸ್ಮಿ ಶಕ್ತಃ ಕಥಂಚನ |
ಪಾರಯಸ್ವೇತಿ ವಚನಂ ಯುಕ್ತಮಸ್ಮದ್ವಿಧೋ ವದೇತ್ ॥7॥
ದ್ಯುಮತ್ಸೇನ ವ್ರತವನ್ನು ಬಿಡು ಎಂದು ಹೇಳಲು ನನ್ನಂತಹವನಿಂದ ಸಾಧ್ಯವಾಗುವುದಿಲ್ಲ. ನನ್ನಂತಹವನು ವ್ರತವನ್ನು
ಸಮಾಪ್ತಿಗೊಳಿಸು ಎಂದೇ ಹೇಳಬೇಕು.
ಮಾರ್ಕಂಡೇಯಃ
ಏವಮುಕತ್ವಾ ದ್ಯುಮತ್ಸೇನೋ ವಿರರಾಮ ಮಹಾಮನಾಃ |
ತಿಷ್ಠಂತೀ ಸಾಪಿ ಸಾವಿತ್ರೀ ಕಾಷ್ಠಭೂತೇವ ಲಕ್ಷ್ಯತೇ ॥8॥
ಮಾರ್ಕಂಡೇಯರು ಹೀಗೆ ಹೇಳಿ ಮಹಾಮನಸ್ಸುಳ್ಳ ದ್ಯುಮತ್ಸೇನನು ಸುಮ್ಮನಾದನು. ವ್ರತವನ್ನು ಹಿಡಿದ ಸಾವಿತ್ರಿಯು ಕಾಷ್ಠದಂತೆ
ಅಲುಗಾಡದೇ ವ್ರತವನ್ನು ಮಾಡಿದಳು.
ಶ್ವೋಭೂತೇ ಭರ್ತೃಮರಣೇ ಸಾವಿತ್ರ್ಯಾ ಭರತರ್ಷಭ |
ದುಃಖಾನ್ವಿತಾಯಾಸ್ತಿಷ್ಠಂತ್ಯಾಃ ಸಾ ರಾತ್ರಿರ್ವ್ಯತ್ಯವರ್ತತ ॥9॥
ಎಲೈ ಭರತರ್ಷಭನೇ, ನಾಳೆ ಮರಣ ದಿವಸ ಎಂದಾದಾಗ ದುಃಖಾನ್ವಿತಳಾದ ಸಾವಿತ್ರಿಗೆ ಆ ದಿನವು ಬಹಳ ಕಷ್ಟದಿಂದ ಕಳೆಯಿತು.
ಅದ್ಯ ತದ್ದಿವಸಂ ಚೇತಿ ಹುತ್ವಾ ದೀಪ್ತಂ ಹುತಾಶನಮ್ |
ಯುಗಮಾತ್ರೋದಿತೇ ಸೂರ್ಯೇ ಕೃತ್ವಾ ಪೌರ್ವಾಹ್ಣಿಕೀಃ ಕ್ರಿಯಾಃ ॥10॥
ತತಃ ಸರ್ವಾನ್ ದ್ವಿಜಾನ್ ವೃದ್ಧಾನ್ ಶ್ವಶ್ರೂಂ ಶ್ವಶುರಮೇವ ಚ |
ಅಭಿವಾದ್ಯಾನುಪೂರ್ವ್ಯೇಣ ಪ್ರಾಂಜಲಿರ್ನಿಯತಾ ಸ್ಥಿತಾ ॥11॥

ಈ ದಿನ ಮರಣ ದಿವಸವೆಂದು ತಿಳಿದು ಅವಳು ಅಗ್ನಿಯಲ್ಲಿ ಹೋಮವನ್ನು ಮಾಡಿ ಸೂರ್ಯನು ಒಂದು ನೊಗದಷ್ಟು ಮಾತ್ರ ಮೇಲೆ ಬಂದಿರುವಾಗ ಪೂರ್ವಾಹ್ನಿಕ ಕ್ರಿಯೆಗಳೆಲ್ಲವನ್ನೂ ಮಾಡಿ ಅನಂತರ ಎಲ್ಲ ಬ್ರಾಹ್ಮಣರಿಗೂ, ಹಿರಿಯರಿಗೂ, ಅತ್ತೆಗೂ, ಮಾವನಿಗೂ ಕ್ರಮವನ್ನು ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಮಾತನಾಡದೇ ನಿಂತಳು.
ಅವೈಧವ್ಯಾಶಿಷಸ್ತೇ ತು ಸಾವಿತ್ರ್ಯರ್ಥಂ ಹಿತಾಃ ಶುಭಾಃ |
ಊಚುಸ್ತಪಸ್ವಿನಃ ಸರ್ವೇ ತಪೋವನನಿವಾಸಿನಃ ॥12॥
ತಪೋವನ ನಿವಾಸಿಗಳಾದ ಅವರೆಲ್ಲರೂ ಸಾವಿತ್ರಿಗೆ ಹಿತವಾದ, ಶುಭವಾದ, ಸೌಮಂಗಲ್ಯವೃದ್ಧಿಯನ್ನು ಮಾಡುವ ಆಶೀರ್ವಾದಗಳನ್ನು ಮಾಡಿದರು.
ಏವಮಸ್ತ್ವಿತಿ ಸಾವಿತ್ರೀ ಧ್ಯಾನಯೋಗಪರಾಯಣಾ |
ಮನಸಾ ತಾ ಗಿರಃ ಸರ್ವಾ ಪ್ರತ್ಯಗೃಹ್ಣಾತ್ ತಪಸ್ವಿನಾಮ್ ॥13॥
ಧ್ಯಾನಯೋಗಪರಾಯಣಳಾದ ಸಾವಿತ್ರಿಯು ನೀವು ಆಶೀರ್ವಾದ ಮಾಡಿದಂತೆಯೇ ಆಗಲಿ ಎಂದು ಆ ತಪಸ್ವಿಗಳು ಆಡಿದ ಎಲ್ಲ ಮಾತುಗಳನ್ನೂ ಮನಸ್ಸಿನಿಂದಲೇ ಸ್ವೀಕರಿಸಿದಳು.
ತಂ ಕಾಲಂ ತಂ ಮುಹೂರ್ತಂ ಚ ಪ್ರತೀಕ್ಷಂತೀ ನೃಪಾತ್ಮಜಾ |
ಯಥೋಕ್ತಂ ನಾರದವಚಶ್ಚಿಂತಯಂತೀ ಸುದುಃಖಿತಾ ॥14॥
ಆ ರಾಜಕುಮಾರಿಯು ನಾರದರು ಹೇಳಿದ ಆ ಕಾಲವನ್ನು, ಆ ಮುಹೂರ್ತವನ್ನು ನಿರೀಕ್ಷಿಸುತ್ತಾ ಚಿಂತಾಕ್ರಾಂತಳಾಗಿ ದುಃಖದಿಂದ ಕೂಡಿದವಳಾಗಿದ್ದಳು.
ತತಸ್ತು ಶ್ವಶ್ರೂಶ್ವಶುರಾವೂಚತುಸ್ತಾಂ ನೃಪಾತ್ಮಜಾಮ್ |
ಏಕಾಂತಮಾಸ್ಥಿತಾಂ ವಾಕ್ಯಂ ಪ್ರೀತ್ಯಾ ಭರತಸತ್ತಮ ॥15॥
ಎಲೈ ಭರತಸತ್ತಮನೇ, ಆಗ ಅವಳ ಅತ್ತೆ ಮಾವಂದಿರು ಏಕಾಂತದಲ್ಲಿ ಇದ್ದ ಆ ರಾಜಕುಮಾರಿಯನ್ನು ಕುರಿತು ಹೀಗೆ ಹೇಳಿದರು.
ವ್ರತಂ ಯಥೋಪದಿಷ್ಟಂ ತು ಯಥಾ ತತ್ಪಾರಿತಂ ತ್ವಯಾ |
ಆಹಾರಕಾಲಃ ಸಂಪ್ರಾಪ್ತಃ ಕ್ರಿಯತಾಂ ಯದನಂತರಮ್ ॥16॥
ನೀನು ಸಂಕಲ್ಪ ಮಾಡಿದ್ದಂತೆ ಮೂರುದಿನದ ವ್ರತವನ್ನು ಮುಗಿಸಿದ್ದೀಯೆ. ಈಗ ಪಾರಣೆಯ (ಆಹಾರ ಸ್ವೀಕಾರ ಕಾಲವು) ಕಾಲವು ಪ್ರಾಪ್ತವಾಗಿದೆ. ಈಗ ಮಾಡಬೇಕಾದುದನ್ನು ಮಾಡು.
ಸಾವಿತ್ರೀ
ಅಸ್ತಂ ಗತೇ ಮಯಾಽಽದಿತ್ಯೇ ಭೋಕ್ತವ್ಯಂ ಕೃತಕಾಮಯಾ |
ಏಷ ಮೇ ಹೃದಿ ಸಂಕಲ್ಪಃ ಸಮಯಶ್ಚ ಕೃತೋ ಮಯಾ ॥17॥
ಸಾವಿತ್ರೀ ಸೂರ್ಯನು ಅಸ್ತಂಗತನಾದಮೇಲೆ ನಾನು ಆಹಾರವನ್ನು ಸ್ವೀಕಾರ ಮಾಡುತ್ತೇನೆ ಎಂದು ನಾನು ಸಂಕಲ್ಪವನ್ನೂ, ನಿಬಂಧನೆಯನ್ನೂ ಮಾಡಿಕೊಂಡಿದ್ದೇನೆ.
ಮಾರ್ಕಂಡೇಯಃ
ಏವಂ ಸಂಭಾಷಮಾಣಾಯಾಃ ಸಾವಿತ್ರ್ಯಾ ಭೋಜನಂ ಪ್ರತಿ |
ಸ್ಕಂಧೇ ಪರಶುಮಾದಾಯ ಸತ್ಯವಾನ್ ಪ್ರಸ್ಥಿತೋ ವನಮ್ ॥18॥
ಸಾವಿತ್ರೀ ತ್ವಾಹ ಭರ್ತಾರಂ ನೈಕಸ್ತ್ವಂ ಗಂತುಮರ್ಹಸಿ |
ಸಹ ತ್ವಯಾ ಗಮಿಷ್ಯಾಮಿ ನ ಹಿ ತ್ವಾಂ ಹಾತುಮುತ್ಸಹೇ ॥19॥
ಮಾರ್ಕಂಡೇಯ ಭೋಜನದ ವಿಷಯದಲ್ಲಿ ಸಾವಿತ್ರಿಯು ಹೀಗೆ ಮಾತನಾಡುತ್ತಿರುವಾಗ ಹೆಗಲಿನ ಮೇಲೆ ಕೊಡಲಿಯನ್ನು ಇಟ್ಟುಕೊಂಡು ಸತ್ಯವಂತನು ಕಾಡಿಗೆ ಹೊರಟನು. ಸಾವಿತ್ರಿಯು ಪತಿಯನ್ನು ಕುರಿತು ನೀವೊಬ್ಬರೇ ಹೋಗಬಾರದು, ನಾನೂ ಸಹ ಬರುವೆನು. ನಿಮ್ಮನ್ನು ನಾನು ಬಿಡಲಾರೆ ಎಂದು ಹೇಳಿದಳು.
ಸತ್ಯವಾನ್
ವನಂ ನ ಗತಪೂರ್ವಂ ತೇ ದುಃಖಃ ಪಂಥಾಶ್ಚ ಭಾವಿನಿ |
ವ್ರತೋಪವಾಸಕ್ಷಾಮಾ ಚ ಕಥಂ ಪದ್ಭ್ಯಾಂ ಗಮಿಷ್ಯಸಿ ॥20॥
ಸತ್ಯವಾನ್ ಭಾಮಿನಿಯೇ, ನೀನು ಆ ವನಕ್ಕೆ ಹಿಂದೆ ಹೋದವಳಲ್ಲ. ದಾರಿಯೂ ಕಷ್ಟಕರವಾಗಿದೆ. ನೀನು ಮೂರುದಿನದ ಉಪವಾಸಗಳನ್ನು ಮಾಡಿ ಕೃಶಳಾಗಿದ್ದೀಯೆ. ನೀನು ಹೇಗೆ ನಡೆದುಕೊಂಡು ಬರುವಿ?
ಸಾವಿತ್ರೀ
ಉಪವಾಸಾನ್ನ ಮೇ ಗ್ಲಾನಿರ್ನಾಸ್ತಿ ಚಾಪಿ ಪರಿಶ್ರಮಃ |
ಗಮನೇ ಚ ಕೃತೋತ್ಸಾಹಾಂ ಪ್ರತಿಷೇದ್ಧುಂ ನ ಮಾಽರ್ಹಸಿ ॥21॥
ಸಾವಿತ್ರೀ ಉಪವಾಸದಿಂದ ನನಗೆ ಏನೂ ಗ್ಲಾನಿಯಾಗಲೀ ಅಥವಾ ಸಂಕಟವಾಗಲೀ ಅಥವಾ ಆಯಾಸವಾಗಲೀ ಆಗಿಲ್ಲ. ಕಾಡಿನಲ್ಲಿ ಹೊರಡುವ ಉತ್ಸಾಹದಲ್ಲಿದ್ದೇನೆ. ನನ್ನನ್ನು ನಿರಾಕರಿಸಬಾರದು.
ಸತ್ಯವಾನ್
ಯದಿ ತೇ ಗಮನೋತ್ಸಾಹಃ ಕರಿಷ್ಯಾಮಿ ತವ ಪ್ರಿಯಮ್ |
ಮಮ ತ್ವಾಮಂತ್ರಯ ಗುರೂನ್ ನ ಮಾಂ ದೋಷಃ ಸ್ಪೃಶೇದಯಮ್ ॥
ಸತ್ಯವಾನ್ ನಿನಗೆ ಕಾಡಿಗೆ ಬರುವುದರಲ್ಲಿ ಆಸಕ್ತಿ ಇರುವುದಾದರೆ ನಿನಗೆ ಪ್ರಿಯವನ್ನು ಮಾಡುವೆನು. ಆದರೆ ನನ್ನ ಹಿರಿಯರ ಅಪ್ಪಣೆಯನ್ನು ಪಡೆದುಕೋ. ನನಗೆ ಈ ದೋಷವು ಬರಬಾರದು.

ಮಾರ್ಕಂಡೇಯಃ
ಸಾಭಿವಾದ್ಯಾಬ್ರವೀಚ್ಛ್ವಶ್ರೂಂ ಶ್ವಶುರಂ ಚ ಮಹಾವ್ರತಾ ॥23॥
ಅಯಂ ಗಚ್ಛತಿ ಮೇ ಭರ್ತಾ ಫಲಾಹಾರೋ ಮಹಾವನಮ್ |
ಇಚ್ಛೇಯಮಭ್ಯನುಜ್ಞಾತುಂ ಆರ್ಯಯಾ ಶ್ವಶುರೇಣ ಹ |
ಅನೇನ ಸಹ ನಿರ್ಗಂತುಂ ನ ಮೇಽದ್ಯ ವಿರಹಃ ಕ್ಷಮಃ ॥24॥
ಮಾರ್ಕಂಡೇಯರು ಮಹಾವ್ರತವನ್ನು ಧರಿಸಿದ ಆ ಸಾವಿತ್ರಿಯು ಅತ್ತೆ ಮಾವಂದಿರಿಗೆ ನಮಸ್ಕಾರವನ್ನು ಮಾಡಿ ನನ್ನ ಪತಿಯು ಹಣ್ಣುಗಳನ್ನು ತರಲು ದೊಡ್ಡ ಕಾಡಿಗೆ ಹೋಗುತ್ತಿದ್ದಾನೆ. ಪೂಜ್ಯರಾದ ನೀವು ಮತ್ತು ಮಾವನು ಪತಿಯ ಜೊತೆಯಲ್ಲಿ ಕಾಡಿಗೆ ಹೋಗಲು ನನಗೆ ಅನುಮತಿಯನ್ನು ಕೊಡಬೇಕು. ನಾನು ಈ ದಿನ ಪತಿಯನ್ನು ಬಿಟ್ಟಿರಲಾರೆ.
ಗುರ್ವಗ್ನಿಹೋತ್ರಾರ್ಥಕೃತೇ ಪ್ರಸ್ಥಿತಶ್ಚ ಸುತಸ್ತವ |
ನ ನಿವಾರ್ಯೋ ನಿವಾರ್ಯಃ ಸ್ಯಾದನ್ಯಥಾ ಪ್ರಸ್ಥಿತೋ ವನಮ್ ॥25॥
ನಿಮ್ಮ ಮಗನು ಹಿರಿಯರ ಮತ್ತು ಅಗ್ನಿಹೋತ್ರದ ಸಲುವಾಗಿ ಕಾಡಿಗೆ ಹೊರಟಿದ್ದಾನೆ. ಅವನನ್ನು ನಿವಾರಿಸಬಾರದು. ಬೇರೆ ಉದ್ದೇಶದಿಂದ ಹೊರಟಿದ್ದರೆ ನಿವಾರಿಸಬಹುದಾಗಿದ್ದಿತು.
ಸಂವತ್ಸರಃ ಕಿಂಚಿದೂನೋ ನ ನಿಷ್ಕ್ರಾಂತಾಽಹಮಾಶ್ರಮಾತ್ |
ವನಂ ಕುಸುಮಿತಂ ದ್ರಷ್ಟುಂ ಪರಂ ಕೌತೂಹಲಂ ಹಿ ಮೇ ॥26॥
ನಾನು ಆಶ್ರಮಕ್ಕೆ ಬಂದು ಸ್ವಲ್ಪ ಕಡಿಮೆ ಒಂದು ವರ್ಷವು ಕಳೆದಿದೆ. ಹೂವುಗಳು ಅರಳಿದ ಕಾಡನ್ನು ನೋಡಲು ನನಗೆ ಕುತೂಹಲವಿದೆ.
ದ್ಯುಮತ್ಸೇನಃ
ಯತಃ ಪ್ರಭೃತಿ ಸಾವಿತ್ರೀ ಪಿತ್ರಾ ದತ್ತಾ ಸ್ನುಷಾ ಮಮ |
ನಾನಯಾಭ್ಯರ್ಥನಾಯುಕ್ತಮುಕ್ತಪೂರ್ವಂ ಸ್ಮರಾಮ್ಯಹಮ್ ॥27॥
ದ್ಯುಮತ್ಸೇನ ಸಾವಿತ್ರಿಯು ನಿನ್ನ ತಂದೆಯು ಅವಳನ್ನು ಸೊಸೆಯಾಗಿ ದಾನಮಾಡಿದ ದಿನದಿಂದಲೂ ಯಾವುದೇ ಅನ್ಯಾಯ ಪ್ರಾರ್ಥನೆಯನ್ನು ಮಾಡಿರುವುದು ನನ್ನ ಸ್ಮರಣೆಗೆ ಬರುತ್ತಿಲ್ಲ.
ತದೇಷಾ ಲಭತಾಂ ಕಾಮಂ ಯಥಾಭಿಲಷಿತಂ ವಧೂಃ |
ಅಪ್ರಮಾದಶ್ಚ ಕರ್ತವ್ಯಃ ಪುತ್ರಿ ಸತ್ಯವತಃ ಪಥಿ ॥28॥
ಆದ್ದರಿಂದ ಸೊಸೆಯಾದ ಅವಳ ಅಭಿಲಾಷೆಯಂತೆ ಅವಳ ಆಸೆಯು ಪೂರ್ಣವಾಗಲಿ. ಮಗಳೇ, ಸತ್ಯವಂತನನ್ನು ದಾರಿಯಲ್ಲಿ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.
ಮಾರ್ಕಂಡೇಯಃ
ಉಭಾಭ್ಯಾಮಭ್ಯನುಜ್ಞಾತಾ ಸಾ ಜಗಾಮ ಯಶಸ್ವಿನೀ |
ಸಹ ಭರ್ತ್ರಾ ಹಸಂತೀವ ಹೃದಯೇನ ವಿದೂಯತಾ ॥29॥
ಮಾರ್ಕಂಡೇಯರು ಇಬ್ಬರಿಂದಲೂ ಅನುಜ್ಞೆಯನ್ನು ಪಡೆದ ಯಶಸ್ವಿನಿಯಾದ ಆ ಸಾವಿತ್ರಿಯು ಪತಿಯ ಜೊತೆಯಲ್ಲಿ ಮನಸ್ಸಿನಲ್ಲಿ ದುಃಖವನ್ನು ತುಂಬಿಟ್ಟುಕೊಂಡು ನಗುವವಳಂತೆ ನಡೆದಳು.
ಸಾ ವನಾನಿ ವಿಚಿತ್ರಾಣಿ ರಮಣೀಯಾನಿ ಸರ್ವಶಃ |
ಮಯೂರಗಣಜುಷ್ಟಾನಿ ದದರ್ಶ ವಿಪುಲೇಕ್ಷಣಾ ॥30॥
ವಿಶಾಲನೇತ್ರೆಯಾದ ಅವಳು ಎಲ್ಲ ಕಡೆಗಳಲ್ಲಿಯೂ ಸುಂದರವಾದ, ವಿಚಿತ್ರವಾದ, ನವಿಲುಗಳ ಸಮೂಹದಿಂದ ಸೇವಿತವಾದ ಕಾಡುಗಳನ್ನು ನೋಡಿದಳು.
ನದೀಃ ಪುಣ್ಯವಹಾಶ್ಚೈವ ಪುಷ್ಪಿತಾಂಶ್ಚ ನಗೋತ್ತಮಾನ್ |
ಸತ್ಯವಾನಾಹ ಪಶ್ಯೇತಿ ಸಾವಿತ್ರೀಂ ಮಧುರಂ ವಚಃ ॥31॥
ಸತ್ಯವಂತನು ಸಾವಿತ್ರಿಯನ್ನು ಕುರಿತು ಪವಿತ್ರವಾದ ನೀರಿನಿಂದ ಹರಿಯುತ್ತಿರುವ ನದಿಗಳನ್ನೂ, ಹೂ ಅರಳಿದ ಶ್ರೇಷ್ಠ ವೃಕ್ಷಗಳನ್ನೂ ನೋಡು ಎಂದು ಮಧುರವಾಗಿ ಮಾತನಾಡಿದನು.
ನಿರೀಕ್ಷಮಾಣಾ ಭರ್ತಾರಂ ಸರ್ವಾವಸ್ಥಮನಿಂದಿತಾ |
ಮೃತಮೇವ ಹಿ ತಂ ಮೇನೇ ಕಾಲೇ ಮುನಿವಚಃ ಸ್ಮರತ್ ॥32॥
ತನ್ನ ಪತಿಯನ್ನು ಅನಿಂದಿತಳಾದ ಅವಳು ಎಲ್ಲಾ ಅವಸ್ಥೆಯಲ್ಲಿಯೂ ಒಂದು ಕ್ಷಣವೂ ಬಿಡದೆ ನೋಡುತ್ತಾ ನಾರದರ ಮಾತುಗಳನ್ನು ಸ್ಮರಿಸಿಕೊಂಡು ತನ್ನ ಪತಿಯು ಮೃತನೇ ಆಗಿದ್ದಾನೆಂದು ತಿಳಿದಳು.
ಅನುವ್ರಜಂತೀ ಭರ್ತಾರಂ ಜಗಾಮ ಮೃದುಗಾಮಿನೀ |
ದ್ವಿಧೇವ ಹೃದಯಂ ಕೃತ್ವಾ ತಂ ಚ ಕಾಲಮವೇಕ್ಷತೀ ॥33॥
ಮೃದುಗಾಮಿನಿಯಾದ ಅವಳು ಆ ಕಾಲವನ್ನು ನಿರೀಕ್ಷಿಸುತ್ತಾ ಹೃದಯವು ಎರಡು ಹೋಳಾಗಿ ಬಿರಿದಂತೆ ಪತಿಯನ್ನು ಹಿಂಬಾಲಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ಪಂಚಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.

* * * *
ಇನ್ನೂರ ಎಂಬತ್ತಾರನೆಯ ಅಧ್ಯಾಯ
ಸತ್ಯವಂತನ ಜೊತೆಯಲ್ಲಿ ಸಾವಿತ್ರಿಯ ವನಗಮನ. ಮರವನ್ನು ಕಡಿದು ಸತ್ಯವಂತನಿಗೆ ಆಯಾಸ. ಯಮನ ಆಗಮನ. ಯಮ ಸಾವಿತ್ರಿಯ ಸಂವಾದ.
ಯಮನಿಂದ ಸತ್ಯವಂತನಿಗೆ ಪುನಃ ಪ್ರಾಣದಾನ.
ಮಾರ್ಕಂಡೇಯಃ
ಅಥ ಭಾರ್ಯಾಸಹಾಯಃ ಸ ಫಲಾನ್ಯಾದಾಯ ವೀರ್ಯವಾನ್ |
ಕಠಿನಂ ಪೂರಯಾಮಾಸ ತತಃ ಕಾಷ್ಠಾನ್ಯಪಾಟಯತ್ ॥1॥
ಮಾರ್ಕಂಡೇಯರು ಅನಂತರ ಪತ್ನಿಯ ಸಹಾಯವನ್ನು ಹೊಂದಿದ್ದ ಪರಾಕ್ರಮಶಾಲಿಯಾದ ಅವನು ಹಣ್ಣುಗಳನ್ನು ಆರಿಸಿಕೊಂಡು ಬುಟ್ಟಿಯಲ್ಲಿ ತುಂಬಿಸಿ ಅನಂತರ ಕಟ್ಟಿಗೆಯನ್ನು ಒಡೆದನು.
ತಸ್ಯ ಪಾಟಯತಃ ಕಾಷ್ಠಂ ಸ್ವೇದೋ ವೈ ಸಮಜಾಯತ |
ವ್ಯಾಯಾಮೇನ ಚ ತೇನಾಸ್ಯ ಜಜ್ಞೇ ಶಿರಸಿ ವೇದನಾ |
ಸೋಽಭಿಗಮ್ಯ ಪ್ರಿಯಾಂ ಭಾರ್ಯಾಮುವಾಚ ಶ್ರಮಪೀಡಿತಃ ॥2॥
ಕಟ್ಟಿಗೆಯನ್ನು ಒಡೆಯುತ್ತಿರುವಂತೆ ಅವನ ದೇಹವು ಬೆವರಿತು. ಕಾರ್ಯದಿಂದ ಉಂಟಾದ ಆಯಾಸದಿಂದ ಅವನಿಗೆ ಶಿರೋವೇದನೆ ಉಂಟಾಯಿತು. ಪೀಡಿತನಾದ ಅವನು ಪ್ರಿಯಳಾದ ಪತ್ನಿಯನ್ನು ಸಮೀಪಿಸಿ ಹೀಗೆ ಮಾತನಾಡಿದನು.
ವ್ಯಾಯಾಮೇನ ಮಮಾನೇನ ಜಾತಾ ಶಿರಸಿ ವೇದನಾ ॥3॥
ಅಂಗಾನಿ ಚೈವ ಸಾವಿತ್ರಿ ಹೃದಯಂ ದೂಯತೀವ ಚ |
ಅಸ್ವಸ್ಥಮಿವ ಚಾತ್ಮಾನಂ ಲಕ್ಷಯೇ ಮಿತಭಾಷಿಣಿ ॥4॥
ಶೂಲೈರಿವ ಶಿರೋ ವಿದ್ಧಮಿದಂ ಸಂಲಕ್ಷಯಾಮ್ಯಹಮ್ |
ತತ್ ಸ್ವಪ್ತುಮಿಚ್ಛೇ ಕಲ್ಯಾಣಿ ನ ಸ್ಥಾತುಂ ಶಕ್ತಿರಸ್ತಿ ಮೇ ॥5॥
ಈ ಕಟ್ಟಿಗೆಯನ್ನು ಒಡೆಯುವ ಕಾರ್ಯದಿಂದ ನನಗೆ ತಲೆಯಲ್ಲಿ ನೋವು ಉಂಟಾಗಿದೆ. ಸಾವಿತ್ರೀ, ನನ್ನ ಅಂಗಗಳೂ ಮತ್ತು ಹೃದಯವು ಸೋಲುತ್ತಿವೆ. ಮಿತಭಾಷಿಣಿಯೇ, ನಾನು ಅಸ್ವಸ್ಥನಾಗಿದ್ದೇನೆಂದು ತಿಳಿಯುತ್ತೇನೆ. ಈ ನನ್ನ ತಲೆಯನ್ನು ಶೂಲಗಳಿಂದ ಚುಚ್ಚಿದಂತೆ ನನಗೆ ಭಾಸವಾಗುತ್ತಿದೆ. ಕಲ್ಯಾಣಿಯೇ, ನನಗೆ ನಿಲ್ಲಲು ಶಕ್ತಿಯಿಲ್ಲ. ಮಲಗಿಕೊಳ್ಳಲು ಬಯಸುತ್ತೇನೆ.
ಮಾರ್ಕಂಡೇಯಃ
ಸಾ ಸಮಾಸಾದ್ಯ ಸಾವಿತ್ರೀ ಭರ್ತಾರಮುಪಗಮ್ಯ ಚ |
ಉತ್ಸಂಗೇಽಸ್ಯ ಶಿರಃ ಕೃತ್ವಾ ನಿಷಸಾದ ಮಹೀತಳೇ ॥6॥
ಮಾರ್ಕಂಡೇಯರು ಸಾವಿತ್ರಿಯು ಪತಿಯನ್ನು ಸಮೀಪಿಸಿ ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ನೆಲದ ಮೇಲೆ ಕುಳಿತಳು.
ತತಃ ಸಾ ನಾರದವಚೋ ವಿಮೃಶಂತೀ ತಪಸ್ವಿನೀ |
ತಂ ಮುಹೂರ್ತಂ ಕ್ಷಣಂ ವೇಲಾಂ ದಿವಸಂ ಚ ಯುಯೋಜ ಹ ॥7॥
ಆಗ ಶೋಚನೀಯಳಾದ ಅವಳು ನಾರದರ ಮಾತನ್ನು ವಿಮರ್ಶೆ ಮಾಡುತ್ತಾ ಆ ದಿವಸವು, ಆ ಮುಹೂರ್ತವು, ಆ ಕ್ಷಣವು ಒದಗಿದೆ ಎಂದು ತಿಳಿದಳು.
ಹಂತ ಪ್ರಾಪ್ತಃ ಸ ಕಾಲೋಽಯಮಿತಿ ಚಿಂತಾಪರಾ ಸತೀ |
ಮುಹೂರ್ತಾದೇವ ಚಾಪಶ್ಯತ್ ಪುರುಷಂ ರಕ್ತವಾಸಸಮ್ ॥8॥
ಅಯ್ಯೋ! ಆ ಕಾಲವು ಬಂದೇ ಬಿಟ್ಟಿತು ಎಂದು ಚಿಂತಾಪರಳಾದ ಆ ಪತಿವ್ರತೆಯು ಒಂದು ಮುಹೂರ್ತದಲ್ಲಿ ರಕ್ತವಸ್ತ್ರವನ್ನು ಧರಿಸಿದ ಒಬ್ಬ ಪುರುಷನನ್ನು ನೋಡಿದಳು.
ಬದ್ಧಮೌಲಿಂ ವಪುಷ್ಮಂತಮಾದಿತ್ಯಸಮತೇಜಸಮ್ |
ಶ್ಯಾಮಾವದಾತಂ ರಕ್ತಾಕ್ಷಂ ಪಾಶಹಸ್ತಂ ಭಯಾವಹಮ್ ॥9॥
ಸ್ಥಿತಂ ಸತ್ಯವತಃ ಪಾರ್ಶ್ವೇ ನಿರೀಕ್ಷಂತಂ ತಮೇವ ಚ |
ತಂ ದೃಷ್ಟ್ವಾ ಸಹಸೋತ್ಥಾಯ ಭರ್ತುರ್ನ್ಯಸ್ಯ ಶನೈಃ ಶಿರಃ |
ಕೃತಾಂಜಲಿರುವಾಚಾರ್ತಾ ಹೃದಯೇನ ಪ್ರವೇಪತೀ ॥10॥
ತಲೆಯ ಕೂದಲುಗಳನ್ನು ಕಟ್ಟಿದ, ಸಮೃದ್ಧವಾದ ಶರೀರವುಳ್ಳ, ಸೂರ್ಯನಂತೆ ತೇಜಸ್ಸುಳ್ಳ, ಶುಭ್ರ ಶ್ಯಾಮವರ್ಣವುಳ್ಳ, ರಕ್ತಾಕ್ಷನೂ, ಪಾಶಹಸ್ತನೂ, ಭಯಂಕರನೂ, ಸತ್ಯವಂತನ ಪಕ್ಕದಲ್ಲಿ ನಿಂತು ಅವನನ್ನೇ ನೋಡುತ್ತಿರುವವನೂ ಆದ ಆ ಪುರುಷನನ್ನು ನೋಡಿ ಪತಿಯ ತಲೆಯನ್ನು ಮೆಲ್ಲನೆ ನೆಲದ ಮೇಲಿರಿಸಿ ಬೇಗ ಎದ್ದು ಕೈಗಳನ್ನು ಮುಗಿದು ಆರ್ತಳಾಗಿ ನಡುಗುವ ಹೃದಯದಿಂದ ಅವನನ್ನು ಕುರಿತು ಮಾತನಾಡಿದಳು.
ದೈವತಂ ತ್ವಾಭಿಜಾನಾಮಿ ವಪುರೇತದ್ಧ್ಯಮಾನುಷಮ್ |
ಕಾಮಯಾ ಬ್ರೂಹಿ ದೇವೇಶ ಕಸ್ತ್ವಂ ಕಿಂ ಚ ಚಿಕೀರ್ಷಸಿ ॥11॥
ನಿನ್ನನ್ನು ದೇವತೆ ಎಂದು ಗುರುತಿಸುತ್ತೇನೆ. ಈ ರೂಪವು ಮನುಷ್ಯರೂಪವಲ್ಲ. ದೇವೇಶನೇ, ನೀನು ಯಾರು ಎಂದು ಮನಃಪೂರ್ವಕವಾಗಿ ಹೇಳು. ಏನು ಮಾಡಲು ಬಂದಿದ್ದೀಯೆ?
ಯಮಃ

ಪತಿವ್ರತಾಽಸಿ ಸಾವಿತ್ರಿ ತಥೈವ ಚ ತಪೋಽನ್ವಿತಾ |
ಅತಸ್ತ್ವಾಮಭಿಭಾಷಾಮಿ ವಿದ್ಧಿ ಮಾಂ ತ್ವಂ ಶುಭೇ ಯಮಮ್ ||12||
ಅಯಂ ತೇ ಸತ್ಯವಾನ್ ಭರ್ತಾ ಕ್ಷೀಣಾಯುಃ ಪಾರ್ಥಿವಾತ್ಮಜಃ |
ನೇಷ್ಯಾಮಿ ತಮಹಂ ಬದ್ಧ್ವಾ ವಿದ್ಧ್ಯೇತನ್ಮೇ ಚಿಕೀರ್ಷಿತಮ್ ||13||
ಯಮ ಸಾವಿತ್ರೀ, ನೀನು ಪತಿವ್ರತೆಯಾದವಳು. ಅದರಂತೆ ತಪಸ್ಸಿನಿಂದ ಅನ್ವಿತಳಾದವಳು. ಆದ್ದರಿಂದ ನಿನ್ನ ಜೊತೆಯಲ್ಲಿ ಮಾತನಾಡುತ್ತೇನೆ. ಶುಭಳಾದವಳೇ, ನನ್ನನ್ನು ಯಮನೆಂದು ತಿಳಿ. ಈ ನಿನ್ನ ಪತಿಯಾದ ರಾಜಕುಮಾರನ ಆಯಸ್ಸು ಮುಗಿದಿದೆ. ಅವನನ್ನು ನಾನು ಬಂಧಿಸಿ ಕರೆದುಕೊಂಡು ಹೋಗುವೆನು. ಈ ಕಾರ್ಯಕ್ಕೋಸ್ಕರ ಬಂದಿದ್ದೇನೆಂದು ತಿಳಿ.
ಸಾವಿತ್ರೀ
ಶ್ರೂಯತೇ ಭಗವನ್ ದೂತಾಸ್ತವಾಗಚ್ಛಂತಿ ಮಾನವಾನ್ |
ನೇತುಂ ಕಿಲ ಭವಾನ್ ಕಸ್ಮಾದಾಗತೋಽಸಿ ಸ್ವಯಂ ಪ್ರಭೋ ||13.1||
ಸಾವಿತ್ರೀ ಪೂಜ್ಯನೇ, ಮನುಷ್ಯರನ್ನು ಕರೆದೊಯ್ಯಲು ನಿನ್ನ ದೂತರು ಬರುತ್ತಾರೆಂದು ನಾನು ಕೇಳಿದ್ದೇನೆ. ಪ್ರಭುವೇ, ನೀನೇ ಸ್ವತಃ ಏಕೆ ಬಂದೆ?
ಮಾರ್ಕಂಡೇಯಃ
ಇತ್ಯುಕ್ತಃ ಪಿತೃರಾಜಸ್ತಾಂ ಭಗವಾನ್ ಸ್ವಚಿಕೀರ್ಷಿತಮ್ |
ಯಥಾವತ್ ಸರ್ವಮಾಖ್ಯಾತುಂ ತತ್ಪ್ರಿಯಾರ್ಥಂ ಪ್ರಚಕ್ರಮೇ ||14||
ಮಾರ್ಕಂಡೇಯರು ಹೀಗೆ ಅವಳಿಂದ ಹೇಳಲ್ಪಟ್ಟ ಪೂಜ್ಯನಾದ ಪಿತೃರಾಜನು ಅವಳಿಗೆ ಪ್ರಿಯವನ್ನು ಉಂಟುಮಾಡಲು ಉದ್ದೇಶಿಸಿ ತಾನು ಬಂದ ಕಾರ್ಯವೆಲ್ಲವನ್ನೂ ಸರಿಯಾಗಿ ವಿವರಿಸಲು ಪ್ರಾರಂಭಿಸಿದನು.
ಯಮಃ
ಅಯಂ ಚ ಧರ್ಮಸಂಯುಕ್ತೋ ರೂಪವಾನ್ ಗುಣಸಾಗರಃ |
ನಾರ್ಹೋ ಮತ್ಪುರುಷೈರ್ನೇತುಮತೋಽಸ್ಮಿ ಸ್ವಯಮಾಗತಃ ||15||
ಯಮ ಈ ನಿನ್ನ ಪತಿಯು ಧರ್ಮದಿಂದ ಕೂಡಿದವನು, ಸುಂದರನಾದವನು, ಗುಣಗಳಿಂದ ಸಮುದ್ರದಂತೆ ಇರುವವನು. ಇವನನ್ನು ನನ್ನ ಭೃತ್ಯರು ಕರೆದುಕೊಂಡು ಹೋಗುವುದು ಯೋಗ್ಯವಲ್ಲ. ಅದಕ್ಕಾಗಿ ನಾನೇ ಬಂದಿದ್ದೇನೆ.
ಮಾರ್ಕಂಡೇಯಃ
ತತಃ ಸತ್ಯವತಃ ಕಾಯಾತ್ ಪಾಶಬದ್ಧಂ ವಶಂಗತಮ್ |
ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ||16||
ಮಾರ್ಕಂಡೇಯ ಅನಂತರ ಯಮನು ತನ್ನ ವಶನಾಗಿದ್ದ ಸತ್ಯವಂತನ ಶರೀರದಿಂದ ಪಾಶದಿಂದ ಕಟ್ಟಿ ಅಂಗುಷ್ಠಮಾತ್ರ ಪರಿಮಾಣವುಳ್ಳ ಪುರುಷನನ್ನು ತನ್ನ ಬಲದಿಂದ ಅವನ ಶರೀರದಿಂದ ಹೊರಗೆ ತೆಗೆದನು.
ತತಃ ಸಮುದ್ಧೃತಪ್ರಾಣಂ ಗತಶ್ವಾಸಂ ಹತಪ್ರಭಮ್ |
ನಿರ್ವಿಚೇಷ್ಟಂ ಶವಂ ತತ್ ತು ಬಭೂವಾಪ್ರಿಯದರ್ಶನಮ್ ||17||
ಆಗ ಪ್ರಾಣವನ್ನೂ, ಶ್ವಾಸವನ್ನೂ, ಕಾಂತಿಯನ್ನೂ ಕಳೆದುಕೊಂಡು ಆ ಶರೀರವು (ಶವವು) ನೋಡುವುದಕ್ಕೆ ಅಪ್ರಿಯವಾಯಿತು.
ಯಮಸ್ತು ತಂ ತತೋ ಬದ್ಧ್ವಾ ಪ್ರಯಾತೋ ದಕ್ಷಿಣಾಮುಖಃ |
ಸಾವಿತ್ರೀ ಚೈವ ದುಃಖಾರ್ತಾ ಯಮಮೇವಾನ್ವವರ್ತತ ||18||
ಯಮನಾದರೂ ಅನಂತರ ಅವನನ್ನು ಬಂಧಿಸಿ ದಕ್ಷಿಣಾಭಿಮುಖವಾಗಿ ಹೊರಟನು. ಸಾವಿತ್ರಿಯೂ ಕೂಡ ದುಃಖಾರ್ತಳಾಗಿ ಅವನ ಹಿಂದೆ ಹೊರಟಳು.
ನಿಯಮವ್ರತಸಂಸಿದ್ಧಾ ಮಹಾಭಾಗಾ ಪತಿವ್ರತಾ |
ಭರ್ತುಃಶರೀರರಕ್ಷಾಂ ಚ ವಿಧಾಯ ಹಿ ತಪಸ್ವಿನೀ |
ಭರ್ತಾರಮನುಗಚ್ಛಂತೀ ತಥಾವಸ್ಥಂ ಸುಮಧ್ಯಮಾ ||19||
ನಿಯಮಗಳ ಮತ್ತು ವ್ರತಗಳ ಸಿದ್ಧಿಯನ್ನು ಪಡೆದ ಮಹಾನುಭಾವಳೂ, ಪತಿವ್ರತೆಯೂ, ತಪಸ್ವಿನಿಯೂ ಆದ ಅವಳು ಪತಿಯ ಶರೀರವನ್ನು ಒಂದು ಕಡೆಯಲ್ಲಿ ಮುಚ್ಚಿಟ್ಟು ಅಂತಹ ಅವಸ್ಥೆಯಲ್ಲಿದ್ದ ಪತಿಯನ್ನು ಹಿಂಬಾಲಿಸುತ್ತಾ ಸುಂದರಿಯಾದ ಅವಳು ನಡೆದಳು.
ಯಮಃ
ನಿವರ್ತ ಗಚ್ಛ ಸಾವಿತ್ರಿ ಕುರುಷ್ವಾಸ್ಯೌರ್ಧ್ವದೈಹಿಕಮ್ |
ಕೃತಂ ಭರ್ತುಸ್ತ್ವಯಾಽಽನೃಣ್ಯಂ ಯಾವದ್ ಗಮ್ಯಂ ಗತಂ ತ್ವಯಾ ||
ಏಷ ಮಾರ್ಗೋ ವಿಶಾಲಾಕ್ಷಿ ನ ಕೇನಾಪ್ಯನುಗಮ್ಯತೇ ||21||
ಯಮ ಸಾವಿತ್ರಿಯೇ, ಹಿಂದಿರುಗಿ ಹೋಗು. ಇವನ ಉತ್ತರಕ್ರಿಯೆಯನ್ನು ಮಾಡು. ನೀನು ನಿನ್ನ ಪತಿಯ ಋಣವನ್ನು ತೀರಿಸಿದ್ದೀಯೆ. ಎಲ್ಲಿಯವರೆಗೆ ಬರಬಹುದೋ ಅಲ್ಲಿಯವರೆಗೆ ನೀನು ಬಂದಿದ್ದೀಯೆ. ವಿಶಾಲಾಕ್ಷಿಯೇ, ಇನ್ನು ನಾನು ಆಕಾಶಮಾರ್ಗದಲ್ಲಿ ಹೋಗುತ್ತೇನೆ. ಅಲ್ಲಿ ನೀನು ಹಿಂಬಾಲಿಸಲು ಸಾಧ್ಯವಿಲ್ಲ.
ಸಾವಿತ್ರೀ
ಯತ್ರ ಮೇ ನೀಯತೇ ಭರ್ತಾ ಸ್ವಯಂ ವಾ ಯತ್ರ ಗಚ್ಛತಿ |
ಮಯಾ ಚ ತತ್ರ ಗಂತವ್ಯಮೇಷ ಧರ್ಮಃ ಸನಾತನಃ ||22||

ಸಾವಿತ್ರೀ ನನ್ನ ಪತಿಯು ತಾನೇ ಎಲ್ಲಿಗೆ ಹೋಗುತ್ತಾನೆಯೋ ಅಥವಾ ಇನ್ನೊಬ್ಬನಿಂದ ಎಲ್ಲಿಗೆ ಕರೆದುಕೊಂಡು ಹೋಗಲ್ಪಡುತ್ತಾನೆಯೋ ಆಗ ಅಲ್ಲಿಗೆ ನಾನು ಅವನನ್ನು ಹಿಂಬಾಲಿಸಬೇಕೆಂಬುದೇ ಸನಾತನವಾದ ಧರ್ಮ.
ತಪಸಾ ಗುರುಭಕ್ತ್ಯಾ ಚ ಭರ್ತುಃ ಸ್ನೇಹಾದ್ ವ್ರತೇನ ಚ |
ತವ ಚೈವ ಪ್ರಸಾದೇನ ನ ಮೇ ಪ್ರತಿಹತಾ ಗತಿಃ ॥23॥
ನಾನು ಮಾಡಿದ ತಪಸ್ಸಿನಿಂದ, ಗುರುಭಕ್ತಿಯಿಂದ, ಪತಿಯ ಪ್ರೇಮದಿಂದ, ವ್ರತಗಳಿಂದ ಮತ್ತು ನಿನ್ನ ಅನುಗ್ರಹದಿಂದ ನನ್ನ ಗಮನವು ಪ್ರತಿಹತವಾಗಿಲ್ಲ (ನಿನ್ನನ್ನು ಹಿಂಬಾಲಿಸಲು ಯಾವ ತೊಂದರೆಯೂ ಉಂಟಾಗಿಲ್ಲ).
ಪ್ರಾಹುಃ ಸಾಪ್ತಪದಂ ಮಿತ್ರಂ ಬುಧಾಸ್ತತ್ತ್ವಾರ್ಥದರ್ಶಿನಃ |
ಮಿತ್ರತಾಂ ಚ ಪುರಸ್ಕೃತ್ಯ ಕಿಂಚಿದ್ ವಕ್ಷ್ಯಾಮಿ ತತ್ಶೃಣು ॥24॥
ತತ್ತತ್ವಾರ್ಥದರ್ಶಿಗಳಾದ ಜ್ಞಾನಿಗಳು ಸಪ್ತಪದಗಳಿಂದ (ಜೊತೆಯಲ್ಲಿ ಏಳು ಹೆಜ್ಜೆ ನಡೆಯುವುದರಿಂದ ಅಥವಾ ಇನ್ನೊಬ್ಬರನ್ನು ಎದುರುಗೊಳ್ಳಲು ಏನು ಹೆಜ್ಜೆ ನಡೆಯುವುದರಿಂದ) ಮಿತ್ರತ್ವ ಉಂಟಾಗುತ್ತದೆ ಎಂದು ಹೇಳುತ್ತಾರೆ. ಆ ಮಿತ್ರತ್ವವನ್ನು ಮುಂದೆ ಮಾಡಿಕೊಂಡು ಸ್ವಲ್ಪ ಮಾತನಾಡುವೆನು, ಅದನ್ನು ಕೇಳು.
ನಾನಾತ್ಮವಂತಂ ಚ ವನೇ ಚರಂತಿ
ಧರ್ಮಂ ಚ ವಾಸಂ ಚ ಪರಿಶ್ರಮಂ ಚ |
ವಿಜ್ಞಾನತೋ ಧರ್ಮಮುದಾಹರಂತಿ
ತಸ್ಮಾತ್ಸಂತೋ ಧರ್ಮಮಾಹುಃ ಪ್ರಧಾನಮ್ ॥25॥
ವನದಲ್ಲಿ ವಾಸವನ್ನು ಮಾಡಿ ನಾನಾ ಪ್ರಯತ್ನಪೂರ್ವಕವಾದ ನಿಯಮಗಳನ್ನೂ, ಪರಿಶ್ರಮವನ್ನೂ, ವನವಾಸವನ್ನೂ ಯಾರು ಅನುಷ್ಠಾನ ಮಾಡುತ್ತಾರೆಯೋ ಅಂತಹ ಸಜ್ಜನರು ವಿವೇಕಿಯಾದ ಪುರುಷನಿಗೆ ಧರ್ಮವೇ ಸಹಾಯವೆಂದು ಹೇಳುತ್ತಾರೆ.
ಏಕಸ್ಯ ಧರ್ಮಸ್ಯ ಸತಾಂ ಮತೇನ ಸರ್ವೇ
ಸ್ಮ ತಂ ಮಾರ್ಗಮನುಪ್ರಪನ್ನಾಃ |
ಮಾ ವೈ ದ್ವಿತೀಯಂ ಮಾ ತೃತೀಯಂ ಚ
ತುರ್ಯಂ ತಸ್ಮಾತ್ಸಂತೋ ಧರ್ಮಮಾಹುಃ ಪ್ರಧಾನಮ್ ॥26॥
ಶ್ರುತಿಗಳಲ್ಲಿ ಪ್ರಸಿದ್ಧವಾದ ಮೋಕ್ಷಸಾಧನವಾದ ನಿವೃತ್ತಿರೂಪವಾದ ಧರ್ಮವಾದ ಪ್ರಧಾನ ಧರ್ಮವನ್ನು ನಾವೆಲ್ಲರೂ ಅನುಸರಿಸುತ್ತಿದ್ದೇವಷ್ಟೆ. ನಿವೃತ್ತಿಧರ್ಮಮಾರ್ಗದಿಂದ ಎರಡನೆಯದಾದ ಪ್ರವೃತ್ತಿ ಧರ್ಮಮಾರ್ಗವನ್ನಾಗಲೀ, ಮೂರನೆಯದಾದ ಅರ್ಥಮಾರ್ಗವನ್ನಾಗಲೀ, ನಾಲ್ಕನೆಯದಾದ ಕಾಮಮಾರ್ಗವನ್ನಾಗಲೀ ನಾವು ಅನುಸರಿಸುವುದಿಲ್ಲ. ಆ ಕಾರಣದಿಂದ ಸಜ್ಜನರು ನಿವೃತ್ತಿರೂಪವಾದ ಧರ್ಮವೇ ಪ್ರಧಾನವೆಂದು ಹೇಳುತ್ತಾರೆ.
ಯಮಃ
ನಿವರ್ತ ತುಷ್ಟೋಽಸ್ಮಿ ತವಾನಯಾ ಗಿರಾ
ಸ್ವರಾಕ್ಷರವ್ಯಂಜನಹೇತುಯುಕ್ತಯಾ |
ವರಂ ವೃಣೀಷ್ವೇಹ ವಿನಾಽಸ್ಯ ಜೀವಿತಂ
ದದಾನಿ ತೇ ಸರ್ವಮನಿಂದಿತೇ ವರಮ್ ॥27॥
ಯಮ ನಿನ್ನ ಈ ಸ್ವರವ್ಯಂಜನಗಳಿಂದ ಕೂಡಿದ ಮತ್ತು ಯುಕ್ತಿಯುಕ್ತವಾದ ಮಾತುಗಳಿಂದ ನನಗೆ ಸಂತೋಷವಾಗಿದೆ. ನೀನು ಹಿಂದಿರುಗು. ಇವನ ಪ್ರಾಣವನ್ನು ಬಿಟ್ಟು ಬೇರೆ ಏನಾದರೂ ವರವನ್ನು ಕೇಳು. ಅನಿಂದಿತೆಯೇ, ನೀನು ಕೇಳಿದ ಎಲ್ಲಾ ವರವನ್ನೂ ಕೊಡುವೆನು.
ಸಾವಿತ್ರೀ
ಚ್ಯುತಃ ಸ್ವರಾಜ್ಯಾದ್ ವನವಾಸಮಾಶ್ರಿತೋ
ವಿನಷ್ಟಚಕ್ಷುಃ ಶ್ವಶುರೋ ಮಮಾಶ್ರಮೇ |
ಸ ಲಬ್ಧಚಕ್ಷುರ್ಬಲವಾನ್ ಭವೇನ್ನೃಪಃ
ತವ ಪ್ರಸಾದಾಜ್ಜ್ವಲನಾರ್ಕಸಪ್ರಭಃ ॥28॥
ಸಾವಿತ್ರೀ ನನ್ನ ಮಾವನು ಅಂಧನಾಗಿ ರಾಜ್ಯಭ್ರಷ್ಟನಾಗಿ ವನವಾಸವನ್ನು ಮಾಡಿ ಆಶ್ರಮದಲ್ಲಿದ್ದಾನೆ. ಆ ರಾಜನು ನಿನ್ನ ಅನುಗ್ರಹದಿಂದ ಬೆಳಗುವ ಸೂರ್ಯನ ಕಾಂತಿಯುಳ್ಳವನೂ, ದೃಷ್ಟಿಯುಳ್ಳವನೂ ಮತ್ತು ಬಲಿಷ್ಠನೂ ಆಗಬೇಕು.
ಯಮಃ
ದದಾನಿ ತೇ ಸರ್ವಮನಿಂದಿತೇ ವರಂ
ಯಥಾ ತ್ವಯೋಕ್ತಂ ಭವಿತಾ ಚ ತತ್ತಥಾ |
ತವಾಧ್ವನಾ ಗ್ಲಾನಿಮಿವೋಪಲಕ್ಷಯೇ
ನಿವರ್ತ ಗಚ್ಛಸ್ವ ನ ತೇ ಶ್ರಮೋ ಭವೇತ್ ॥29॥
ಯಮ ಅನಿಂದಿತೆಯೇ, ನೀನು ಕೇಳಿದ ವರವನ್ನು ಕೊಡುವೆನು. ನೀನು ಕೇಳಿದುದು ಅದರಂತೆಯೇ ಆಗುವುದು. ನಿನಗೆ ಮಾರ್ಗಾಯಾಸವಾಗಿರುವಂತೆ ನನಗೆ ತೋರುತ್ತಿದೆ. ಹಿಂದಿರುಗಿ ಹೋಗು. ನಿನಗೆ ಶ್ರಮವಾಗದಿರಲಿ.
ಸಾವಿತ್ರೀ
ಶ್ರಮಃ ಕುತೋ ಭರ್ತೃಸಮೀಪತೋ ಹಿ ಮೇ
ಯತೋ ಹಿ ಭರ್ತಾ ಮಮ ಸಾ ಗತಿರ್ಧ್ರುವಾ |

ಯತಃ ಪತಿಂ ನೇಷ್ಯಸಿ ತತ್ರ ಮೇ ಗತಿಃ
ಸುರೇಶ ಭೂಯಶ್ಚ ವಚೋ ನಿಬೋಧ ಮೇ ॥30॥
ಸಾವಿತ್ರೀ ನನ್ನ ಪತಿಯ ಸಮೀಪದಲ್ಲಿ ನನಗೆ ಶ್ರಮವಾಗಲು ಹೇಗೆ ಸಾಧ್ಯ? ಪತಿಗೆ ಯಾವ ಪರಲೋಕಗತಿಯಾಗುವುದೋ ನನಗೂ ಅದೇ ಗತಿಯಾಗುವುದು. ಸುರೇಶನೇ, ನನ್ನ ಪತಿಯನ್ನು ಎಲ್ಲಿಗೆ ಒಯ್ಯುವೆಯೋ ಅಲ್ಲಿಗೆ ನಾನೂ ಬರುವೆನು. ಪುನಃ ನನ್ನ ಮಾತನ್ನು ಕೇಳು.
ಸತಾಂ ಸಕೃತ್ಸಂಗತಮೀಪ್ಸಿತಂ ಪರಂ
ತತಃ ಪರಂ ಮಿತ್ರಮಿತಿ ಪ್ರಚಕ್ಷತೇ |
ನ ಚಾಫಲಂ ಸತ್ಪುರುಷೇಣ ಸಂಗತಂ
ತತಃ ಸತಾಂ ಸನ್ನಿವಸೇತ್ ಸಮಾಗಮೇ ॥31॥
ಒಂದು ಬಾರಿ ಸಜ್ಜನರ ಸಂಗವು ಅಭೀಪ್ಸಿತವಾದುದು. ಅನಂತರ ಅವರು ಮಿತ್ರರಾಗುತ್ತಾರೆ ಎಂದು ಹೇಳುತ್ತಾರೆ. ಸತ್ಪುರುಷರ ಜೊತೆಯಲ್ಲಿ ಸಮಾಗಮವು ಎಂದೂ ನಿಷ್ಫಲವಾಗುವುದಿಲ್ಲ. ಆದ್ದರಿಂದ ಸಜ್ಜನರ ಸಮಾಗಮದಲ್ಲಿ ವಾಸ ಮಾಡಬೇಕು.
ಯಮಃ
ಮನೋಽನುಕೂಲಂ ಬುಧಬುದ್ಧಿವರ್ಧನಂ
ತ್ವಯಾ ಯದುಕ್ತಂ ವಚನಂ ಹಿತಾಶ್ರಯಮ್ |
ವಿನಾ ಪುನಃ ಸತ್ಯವತೋಽಸ್ಯ ಜೀವಿತಂ
ವರಂ ದ್ವಿತೀಯಂ ವರಯಸ್ವ ಭಾಮಿನಿ ॥32॥
ಯಮ ನೀನು ಆಡಿದ ಮಾತುಗಳು ಮನಸ್ಸಿಗೆ ಅನುಕೂಲವಾದವುಗಳು. ವಿವೇಕಿಗಳ ಬುದ್ಧಿಯನ್ನೂ ಹೆಚ್ಚಿಸುವಂತಹವು ಮತ್ತು ಹಿತವನ್ನು ಆಶ್ರಯಿಸಿದಂತಹವು. ಭಾಮಿನಿಯೇ, ಸತ್ಯವಂತನ ಜೀವಿತವನ್ನು ಬಿಟ್ಟು ಪುನಃ ಎರಡನೆಯ ವರವನ್ನು ಕೇಳು.
ಸಾವಿತ್ರೀ
ಹೃತಂ ಪುರಾ ಮೇ ಶ್ವಶುರಸ್ಯ ಧೀಮತಃ
ಸ್ವಮೇವ ರಾಜ್ಯಂ ಲಭತಾಂ ಸ ಪಾರ್ಥಿವಃ |
ಜಹ್ಯಾತ್ ಸ್ವಧರ್ಮಂ ನ ಚ ಮೇ ಗುರುರ್ಯಥಾ
ದ್ವಿತೀಯಮೇತದ್ವರಯಾಮಿ ತೇ ವರಮ್ ॥33॥
ಸಾವಿತ್ರೀ ರಾಜನೂ, ಮೇಧಾವಿಯೂ ಆದ ನನ್ನ ಮಾವನು ಹಿಂದೆ ಕಳೆದುಕೊಂಡ ತನ್ನದೇ ರಾಜ್ಯವನ್ನು ಮರಳಿ ಪಡೆಯಲಿ ಮತ್ತು ನನ್ನ ಗುರುಸ್ಥಾನದಲ್ಲಿರುವ ಅವನು ಎಂದೂ ತನ್ನ ಧರ್ಮವನ್ನು ಬಿಡದಿರಲಿ ಎಂದು ನಿನ್ನಿಂದ ಎರಡನೆಯ ವರವನ್ನು ಬೇಡುತ್ತೇನೆ.
ಯಮಃ
ಸ್ವಮೇವ ರಾಜ್ಯಂ ಪ್ರತಿಪತ್ಸ್ಯತೇಽಚಿರಂ
ನ ಚ ಸ್ವಧರ್ಮಾತ್ ಪರಿಹಾಸ್ಯತೇ ನೃಪಃ |
ಕೃತೇನ ಕಾರ್ಯೇಣ ಮಯಾ ನೃಪಾತ್ಮಜೇ
ನಿವರ್ತ ಗಚ್ಛಸ್ವ ನ ತೇ ಶ್ರಮೋ ಭವೇತ್ ॥34॥
ಯಮ ನಿನ್ನ ಮಾವನು ತನ್ನ ರಾಜ್ಯವನ್ನೇ ಶೀಘ್ರವಾಗಿ ಮರಳಿ ಪಡೆಯುವನು. ಆ ರಾಜನು ತನ್ನ ಧರ್ಮದಿಂದ ಚ್ಯುತಿಯನ್ನು ಹೊಂದುವುದಿಲ್ಲ. ರಾಜಕುಮಾರಿಯೇ, ನಿನ್ನ ಕಾರ್ಯವನ್ನು ಮಾಡಿದ್ದೇನೆ. ಹಿಂದಿರುಗಿ ಹೋಗು. ನಿನಗೆ ಶ್ರಮವಾಗದಿರಲಿ.
ಸಾವಿತ್ರೀ
ಪ್ರಜಾಸ್ತ್ವಯೈತಾ ನಿಯಮೇನ ಸಂಯತಾ
ನಿಯಮ್ಯ ಚೈತಾ ನಯಸೇ ನಿಕಾಮಯಾ |
ಅತೋ ಯಮತ್ವಂ ತವ ದೇವ ವಿಶ್ರುತಂ
ನಿಬೋಧ ಚೇಮಾಂ ಗಿರಮೀರಿತಾಂ ಮಯಾ ॥35॥
ಸಾವಿತ್ರೀ ನೀನು ಈ ಪ್ರಜೆಗಳನ್ನು ನಿಯಂತ್ರಿಸಿ ಕಟ್ಟಿಕೊಂಡು ನಿನ್ನ ಇಚ್ಛೆಗೆ ಅನುಗುಣವಾಗಿ ಕರೆದುಕೊಂಡು ಹೋಗುತ್ತೀಯೆ. ಆದ್ದರಿಂದ ಎಂದರೆ ನಿಯಮನವನ್ನು ಮಾಡುವುದರಿಂದ ನಿನಗೆ ಯಮನೆಂದು ಹೆಸರು ಪ್ರಖ್ಯಾತವಾಗಿದೆ. ನಾನು ಆಡುವ ಈ ಮಾತನ್ನು ಕೇಳು.
ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ |
ಅನುಗ್ರಹಶ್ಚ ದಾನಂ ಚ ಸತಾಂ ಧರ್ಮಃ ಸನಾತನಃ ॥36॥
ಏವಂಪ್ರಾಯಶ್ಚ ಲೋಕೋಽಯಂ ಮನುಷ್ಯಾಃ ಭ(ಶ)ಕ್ತಿಪೇಶಲಾಃ |
ಸಂತಸ್ತ್ವೇವಾಪ್ಯಮಿತ್ರೇಷು ದಯಾಂ ಪ್ರಾಪ್ತೇಷು ಕುರ್ವತೇ ॥37॥
ಎಲ್ಲ ಪ್ರಾಣಿಗಳ ವಿಷಯದಲ್ಲಿ ಮನಸ್ಸಿನಿಂದಲಾಗಲೀ, ಮಾತಿನಿಂದಲಾಗಲೀ ಅಥವಾ ಕ್ರಿಯೆಯಿಂದಲಾಗಲೀ ದ್ರೋಹವನ್ನು ಮಾಡದಿರುವುದು, ಅನುಗ್ರಹ, ದಾನ ಇವುಗಳು ಸಜ್ಜನರ ಸನಾತನ ಧರ್ಮಗಳು. ಲೋಕದಲ್ಲಿ ಸಾಧಾರಣವಾಗಿ ಸಜ್ಜನರು ಹೀಗಿರುತ್ತಾರೆ. ಭಕ್ತಿಭೂಯಿಷ್ಠರಾದ ಸಜ್ಜನರು ಮಾತ್ರ ಪ್ರಾಪ್ತರಾದ ಶತ್ರುಗಳಲ್ಲಿಯೂ ದಯೆಯನ್ನು ಮಾಡುತ್ತಾರೆ.
ಯಮಃ
ಪಿಪಾಸಿತಸ್ಯೇವ ಭವೇದ್ಯಥಾ ಪಯಃ
ತಥಾ ತ್ವಯಾ ವಾಕ್ಯಮಿದಂ ಸಮೀರಿತಮ್ |

ವಿನಾ ಪುನಃ ಸತ್ಯವತೋಽಸ್ಯ ಜೀವಿತಂ
ವರಂ ವೃಣೀಷ್ವೇಹ ಶುಭೇ ಯದಿಚ್ಛಸಿ ॥38॥
ಯಮ ನೀನು ಆಡಿದ ಈ ಮಾತುಗಳು ಬಾಯಾರಿದವನಿಗೆ ನೀರಿನಂತೆ ಇವೆ. ಶುಭಳಾದವಳೇ, ಸತ್ಯವಂತನ ಜೀವಿತವನ್ನು ಬಿಟ್ಟು ನೀನು ಬಯಸಿದ ವರವನ್ನು ಕೇಳು.
ಸಾವಿತ್ರೀ
ಮಮಾನಪತ್ಯಃ ಪೃಥಿವೀಪತಿಃ ಪಿತಾ
ಭವೇತ್ ಪಿತುಃ ಪುತ್ರಶತಂ ತಥೌರಸಮ್ ।
ಕುಲಸ್ಯ ಸಂತಾನಕರಂ ಚ ಯದ್
ಭವೇತ್ತೃತೀಯಮೇತದ್ ವರಯಾಮಿ ತೇ ವರಮ್ ॥39॥
ಸಾವಿತ್ರೀ ಮಕ್ಕಳಿಲ್ಲದ ನನ್ನ ತಂದೆಯಾದ ಅಶ್ವಪತಿರಾಜನು ನೂರುಮಂದಿ ಔರಸ ಪುತ್ರರನ್ನು ಪಡೆಯಲಿ. ವಂಶವನ್ನು ಅಭಿವೃದ್ಧಿಯನ್ನು ಮಾಡುವಂತಹ ಪುತ್ರರನ್ನು ನಾನು ತೃತೀಯ ವರವಾಗಿ ನಿನ್ನನ್ನು ಬೇಡುತ್ತೇನೆ.
ಯಮಃ
ಕುಲಸ್ಯ ಸಂತಾನಕರಂ ಸುವರ್ಚಸಂ
ಶತಂ ಸುತಾನಾಂ ಪಿತುರಸ್ತು ತೇ ಶುಭೇ ।
ಕೃತೇನ ಕಾಮೇನ ನರಾಧಿಪಾತ್ಮಜೇ
ನಿವರ್ತ ದೂರಂ ಹಿ ಪಥಸ್ತ್ವಮಾಗತಾ ॥40॥
ಯಮ ಶುಭಳಾದವಳೇ, ಕುಲವರ್ಧನರಾದ, ಒಳ್ಳೆಯ ವರ್ಚಸ್ವಿಗಳಾದ ನೂರು ಪುತ್ರರನ್ನು ನಿನ್ನ ತಂದೆಯು ಪಡೆಯಲಿ. ರಾಜಕುಮಾರಿಯೇ, ನಿನ್ನ ಕಾರ್ಯವನ್ನು ಮಾಡಿರುವುದರಿಂದ ನೀನು ಹಿಂದಿರುಗು. ನೀನು ಬಹಳ ದೂರಬಂದಿದ್ದೀಯಷ್ಟೆ.
ಸಾವಿತ್ರೀ
ನ ದೂರಮೇತನ್ಮಮ ಭರ್ತೃಸನ್ನಿಧೌ
ಮನೋ ಹಿ ಮೇ ದೂರತರಂ ಪ್ರಧಾವತಿ ।
ಅಥ ವ್ರಜನ್ನೇವ ಗಿರಂ ಸಮುದ್ಯತಾಂ
ಮಯೋಚ್ಯಮಾನಾಂ ಶೃಣು ಭೂಯ ಏವ ಚ ॥41॥
ನನ್ನ ಪತಿಯ ಸನ್ನಿಧಿಯಲ್ಲಿ ನನಗೆ ಇದೇನೂ ದೂರವಲ್ಲ. ನನ್ನ ಮನಸ್ಸು ಇದಕ್ಕಿಂತ ದೂರವಾಗಿ ಓಡುತ್ತದೆ. ನೀನು ನಡೆಯುತ್ತಲೇ ನಾನು ಹೇಳುವ ಈ ಮಾತುಗಳನ್ನು ಪುನಃ ಕೇಳುವವನಾಗು.
ವಿವಸ್ವತಸ್ತ್ವಂ ತನಯಃ ಪ್ರತಾಪವಾನ್
ತತೋ ಹಿ ವೈವಸ್ವತ ಉಚ್ಯಸೇ ಬುಧೈಃ ।
ಸಮೇನ ಧರ್ಮೇಣ ಚರಂತಿ ತಾಃ
ಪ್ರಜಾಸ್ತತಸ್ತವೇಹೇಶ್ವರ ಧರ್ಮರಾಜತಾ ॥42॥
ವಿವಸ್ವಾನ್ ನಾಮಕನಾದ ಸೂರ್ಯನ ಪ್ರತಾಪಶಾಲಿಯಾದ ಪುತ್ರನಾದುದರಿಂದ ನಿನ್ನನ್ನು ಜ್ಞಾನಿಗಳು ವೈವಸ್ವತ ಎಂದು ಕರೆಯುತ್ತಾರೆ. ನೀನು ಆ ಎಲ್ಲಾ ಪ್ರಜೆಗಳನ್ನೂ ಸಮಾನವಾದ ಧರ್ಮದಿಂದ ನೋಡಿಕೊಳ್ಳುತ್ತೀಯೆ. ಈಶ್ವರನೇ, ಆದ್ದರಿಂದ ನಿನ್ನನ್ನು ಧರ್ಮರಾಜ ಎಂದು ಕರೆಯುತ್ತಾರೆ.
ಆತ್ಮನ್ಯಪಿ ನ ವಿಶ್ವಾಸಸ್ತಥಾ ಭವತಿ ಸತ್ಸು ಯಃ ।
ತಸ್ಮಾತ್ ಸತ್ಸು ವಿಶೇಷೇಣ ಸರ್ವಃ ಪ್ರಣಯಮಿಚ್ಛತಿ ॥43॥
ಸೌಹೃದಾತ್ ಸರ್ವಭೂತಾನಾಂ ವಿಶ್ವಾಸೋ ನಾಮ ಜಾಯತೇ ।
ತಸ್ಮಾತ್ ಸತ್ಸು ವಿಶೇಷೇಣ ವಿಶ್ವಾಸಂ ಕುರುತೇ ಜನಃ ॥44॥
ಸಜ್ಜನರಲ್ಲಿ ಎಂತಹ ವಿಶ್ವಾಸವುಂಟಾಗುತ್ತದೆಯೋ ಅಂತಹ ವಿಶ್ವಾಸವು ತನ್ನಲ್ಲಿಯೂ ಉಂಟಾಗುವುದಿಲ್ಲ. ಆದ್ದರಿಂದ ಎಲ್ಲರೂ ವಿಶೇಷವಾಗಿ ಸಜ್ಜನರ ಸ್ನೇಹವನ್ನು ಬಯಸುತ್ತಾರೆ. ಎಲ್ಲ ಪ್ರಾಣಿಗಳಿಗೂ ಸೆನೇಹದಿಂದ ವಿಶ್ವಾಸವುಂಟಾಗುತ್ತದೆ. ಆದ್ದರಿಂದ ಮನುಷ್ಯರು ವಿಶೇಷವಾಗಿ ಸಜ್ಜನರಲ್ಲಿ ಸ್ನೇಹವನ್ನು ಮಾಡುತ್ತಾರೆ (ಅದರ ಫಲವಾಗಿ ವಿಶ್ವಾಸವನ್ನೂ ಮಾಡುತ್ತಾರೆ).
ಯಮಃ
ಉದಾಹೃತಂ ತೇ ವಚನಂ ಯದಂಗನೇ
ಶುಭೇ ನ ತಾದೃಕ್ತ್ವದೃತೇ ಶ್ರುತಂ ಮಯಾ ।
ಅನೇನ ತುಷ್ಟೋಽಸ್ಮಿ ವಿನಾಸ್ಯ ಜೀವಿತಂ
ವರಂ ಚತುರ್ಥಂ ವರಯಸ್ವ ಗಚ್ಛ ಚ ॥45॥
ಯಮ ಎಲೌ ಶುಭಳಾದವಳೇ, ಅಂಗನೆಯೇ, ನೀನು ಆಡಿದ ಮಾತುಗಳನ್ನು ನಾನು ನಿನ್ನನ್ನು ಬಿಟ್ಟು ಬೇರೆ ಯಾರ ಮುಖದಿಂದಲೂ ಕೇಳಲಿಲ್ಲ. ಈ ಮಾತುಗಳಿಂದ ಸಂತುಷ್ಟನಾಗಿದ್ದೇನೆ. ಇವನ ಜೀವಿತವನ್ನು ಬಿಟ್ಟು ನಾಲ್ಕನೆಯ ವರವನ್ನು ಕೇಳಿ ಹೊರಡು.
ಸಾವಿತ್ರೀ
ಮಮಾತ್ಮಜಂ ಸತ್ಯವತಸ್ತಥೌರಸಂ
ಭವೇದುಭಾಭ್ಯಾಮಿಹ ಯತ್ಕುಲೋದ್ವಹಮ್ ।
ಶತಂ ಸುತಾನಾಂ ಬಲವೀರ್ಯಶಾಲಿನಾಂ

ಚತುರ್ಥಮೇತಂ ವರಯಾಮಿ ತೇ ವರಮ್ |
ವರಂ ವೃಣೇ ಸತ್ಯವತೋ ಮಯಿ ಪ್ರಭೋ
ಭವೇತ್ ಸುತಾನಾಂ ಶತಮೇತದೀಪ್ಸಿತಮ್ ॥45.1॥
ಸಾವಿತ್ರೀ ಪ್ರಭುವೇ, ನಾನು ಮತ್ತು ಸತ್ಯವಾನ್ ಈ ನಮ್ಮಿಬ್ಬರಿಂದ ನಮ್ಮ ಕುಲವನ್ನು ಮುಂದುವರೆಸುವ ಬಲವೀರ್ಯಸಂಪನ್ನರಾದ ನೂರು ಮಕ್ಕಳನ್ನು ನಾನು ನಾಲ್ಕನೆಯ ವರವಾಗಿ ಬೇಡುತ್ತೇನೆ. ಇದು ನನಗೆ ಈಪ್ಸಿತವಾದುದು.
ಯಮಃ
ಶತಂ ಸುತಾನಾಂ ಬಲವೀರ್ಯಶಾಲಿನಾಂ
ಭವಿಷ್ಯತಿ ಪ್ರೀತಿಕರಂ ತವಾಬಲೇ |
ಪರಿಶ್ರಮಸ್ತೇ ನ ಭವೇನ್ನೃಪಾತ್ಮಜೇ
ನಿವರ್ತ ದೂರಂ ಹಿ ಪಥಸ್ತ್ವಮಾಗತಾ |
ತಥಾಸ್ತು ತೇ ಪುತ್ರಶತಂ ಶುಭಾನನೇ
ದ್ರುತಂ ನಿವರ್ತಸ್ವ ಪರಿಶ್ರಮೋ ನ ತೇ ॥46॥
ಯಮ ಎಲೌ ಅಬಲೆಯೇ, ನಿನಗೆ ಸಂತೋಷವನ್ನುಂಟು ಮಾಡುವ ಬಲವೀರ್ಯಶಾಲಿಗಳಾದ ನೂರು ಮಕ್ಕಳು ಜನಿಸುವರು. ರಾಜಕುಮಾರಿಯೇ, ನಿನಗೆ ದಣಿವಾಗುವುದು ಬೇಡ. ಹಿಂದಿರುಗು. ಬಹಳ ದೂರಬಂದಿದ್ದೀಯೆ. ಶುಭಾನನೆಯೇ, ನಿನಗೆ ಅಂತಹ ನೂರು ಮಕ್ಕಳೇ ಆಗಲಿ. ಬೇಗ ಹಿಂದಿರುಗು. ನಿನಗೆ ಆಯಾಸವಾಗುವುದು ಬೇಡ.
ಸಾವಿತ್ರೀ
ಸತಾಂ ಸದಾ ಶಾಶ್ವತಧರ್ಮವೃತ್ತಿಃ
ಸಂತೋ ನ ಸೀದಂತಿ ನ ಚ ವ್ಯಥಂತಿ |
ಸತಾಂ ಸದ್ಭಿರ್ನಾಫಲಂ ಸಂಗಮೋಽಸ್ತಿ
ಸದ್ಭ್ಯೋ ಭಯಂ ನಾನುವರ್ತಂತಿ ಸಂತಃ ॥47॥
ಸಾವಿತ್ರೀ ಸಜ್ಜನರು ಯಾವಾಗಲೂ ಶಾಶ್ವತವಾದ ಧರ್ಮದಲ್ಲಿಯೇ ನಡೆದುಕೊಳ್ಳುತ್ತಾರೆ. ಅವರು ವಿನಾಶವನ್ನು ಹೊಂದುವುದಿಲ್ಲ ಮತ್ತು ವ್ಯಥೆ ಪಡುವುದಿಲ್ಲ. ಸಜ್ಜನರಿಗೆ ಸಜ್ಜನರ ಸಮಾಗಮವು ನಿಷ್ಫಲವಾಗುವುದಿಲ್ಲ. ಸಜ್ಜನರು ಸಜ್ಜನರಿಂದ ಭಯವನ್ನೂ ಎಣಿಸುವುದಿಲ್ಲ.
ಸಂತೋ ಹಿ ಸತ್ಯೇನ ನಯಂತಿ ಸೂರ್ಯಂ
ಸಂತೋ ಭೂಮಿಂ ತಪಸಾ ಧಾರಯಂತಿ |
ಸಂತೋ ಗತಿರ್ಭೂತಭವ್ಯಸ್ಯ ರಾಜನ್
ಸತಾಂ ಮಧ್ಯೇ ನಾವಸೀದಂತಿ ಸಂತಃ ॥48॥
ಸಜ್ಜನರು ಸತ್ಯದಿಂದಲೇ ಸೂರ್ಯನನ್ನು ನಡೆಸುತ್ತಾರೆ. ಸಜ್ಜನರು ತಪಸ್ಸಿನಿಂದ ಭೂಮಿಯನ್ನು ಧರಿಸುತ್ತಾರೆ. ರಾಜನೇ, ಸಜ್ಜನರು ಅತೀತ ಭವಿಷ್ಯತ್ಕಾಲದವರಿಗೂ ಗತಿಯಾಗುತ್ತಾರೆ. ಸಜ್ಜನರ ಮಧ್ಯದಲ್ಲಿ ಸಜ್ಜನರು ವಿನಾಶವನ್ನು ಹೊಂದುವುದಿಲ್ಲ.
ಆರ್ಯಜುಷ್ಟಮಿದಂ ವೃತ್ತಮಿತಿ ವಿಜ್ಞಾಯ ಶಾಶ್ವತಮ್ |
ಸಂತಃ ಪರಾರ್ಥಂ ಕುರ್ವಾಣಾ ನಾವೇಕ್ಷಂತಿ ಪರಸ್ಪರಮ್ ॥49॥
ಇದು ಆರ್ಯರಿಂದ ಸೇವಿತವಾದ ಶಾಶ್ವತವಾದ ನಡತೆ ಎಂದು ತಿಳಿದು ಸಜ್ಜನರು ಬೇರೆ ಏನನ್ನೂ ನೋಡದೇ ಇನ್ನೊಬ್ಬರಿಗೆ ಉಪಕಾರವನ್ನು ಮಾಡುತ್ತಾರೆ.
ನ ಚ ಪ್ರಸಾದಃ ಸತ್ಪುರುಷೇಷು ಮೋಘೋ
ನ ಚಾಪ್ಯರ್ಥೋ ನಶ್ಯತಿ ನಾಪಿ ಮಾನಃ |
ಯಸ್ಮಾದೇತನ್ನಿಯತಂ ಸತ್ಸು ನಿತ್ಯಂ
ತಸ್ಮಾತ್ ಸಂತೋ ರಕ್ಷಿತಾರೋ ಭವಂತಿ ॥50॥
ಸಜ್ಜನರಿಗೆ ಮಾಡಿದ ಅನುಗ್ರಹವು ಎಂದೂ ವ್ಯರ್ಥವಾಗುವುದಿಲ್ಲ. ಆ ಮಾಡಿದ ಉಪಕಾರದಿಂದ ಧನಹಾನಿಯಾಗಲೀ, ಮಾನಹಾನಿಯಾಗಲೀ ಆಗುವುದಿಲ್ಲ. ಸಜ್ಜನರಿಗೆ ಪರೋಪಕಾರವು ಶಾಶ್ವತಧರ್ಮವಾಗಿರುವುದರಿಂದ ಸಜ್ಜನರು ರಕ್ಷಕರಾಗುತ್ತಾರೆ.
ಯಮಃ
ಯಥಾ ಯಥಾ ಭಾಷಸಿ ಧರ್ಮಸಂಹಿತಂ
ಮನೋಽನುಕೂಲಂ ಸುಪದಂ ಮಹಾರ್ಥವತ್ |
ತಥಾ ತಥಾ ಮೇ ತ್ವಯಿ ಭಕ್ತಿರುತ್ತಮಾ
ವರಂ ವೃಣೀಷ್ವಾಪ್ರತಿಮಂ ಪತಿವ್ರತೇ ॥51॥
ಯಮ ಎಲೌ ಪತಿವ್ರತೆಯೇ, ನೀನು ಧರ್ಮಸಮ್ಮಿತವಾದ, ಮಹಾರ್ಥಗರ್ಭಿತವಾದ, ಒಳ್ಳೆಯ ಪದಗಳಿಂದ ಕೂಡಿದ, ಮನಸ್ಸಿಗೆ ಹಿತವಾದ ಮಾತುಗಳನ್ನು ಆಡಿದಂತೆಲ್ಲಾ ನನಗೆ ನಿನ್ನಲ್ಲಿ ಶ್ರೇಷ್ಠವಾದ ಪ್ರೀತಿಯುಂಟಾಗುತ್ತಿದೆ. ಇನ್ನೊಂದು ಅಸದೃಶವಾದ ವರವನ್ನು ಕೇಳು.
ಸಾವಿತ್ರೀ
ನ ತೇಽಪವರ್ಗಃ ಸುಕೃತಾದ್ವಿನಾ ಕೃತಃ
ತಥಾ ಯಥಾನ್ಯೇಷು ವರೇಷು ಮಾನದ |

ವರಂ ವೃಣೇ ಜೀವತು ಸತ್ಯವಾನಯಂ
ಯಥಾ ಮೃತಾ ಹ್ಯೇವಮಹಂ ಪತಿಂ ವಿನಾ ॥52॥
ನ ಕಾಮಯೇ ಭರ್ತೃವಿನಾಕೃತಾ ಸುಖಂ
ನ ಕಾಮಯೇ ಭರ್ತೃವಿನಾಕೃತಾ ದಿವಮ್ ।
ನ ಕಾಮಯೇ ಭರ್ತೃವಿನಾಕೃತಾಂ ಶ್ರಿಯಂ
ನ ಭರ್ತೃಹೀನಾ ವ್ಯವಸಾಮಿ ಜೀವಿತುಮ್ ॥53॥
ಸಾವಿತ್ರೀ ಮಾನದನೇ, ಸುಕೃತವಿಲ್ಲದೇ ನಿನ್ನಿಂದ ವರಗಳು ದೊರೆಯುವುದಿಲ್ಲ. ನೀನು ನನಗೆ ಕೊಟ್ಟ ವರವು ಬೇರೆಯವರಿಗೆ ಕೊಟ್ಟ ವರದಂತೆ ಅಲ್ಲ. ನಾನು ಪತಿ ಇಲ್ಲದೆಯೇ ಜೀವಿಸುವುದಿಲ್ಲವಾದ್ದರಿಂದ (ಮೃತಳಾಗುವುದರಿಂದ) ಈ ನನ್ನ ಪತಿಯು ಬದುಕಲಿ. ನಾನು ನನ್ನ ಪತಿಯಿಲ್ಲದ ಸುಖವನ್ನು ಬಯಸುವುದಿಲ್ಲ. ಪತಿಯಿಲ್ಲದೇ ಸ್ವರ್ಗವನ್ನೂ ಬಯಸುವುದಿಲ್ಲ. ಪತಿಯಿಲ್ಲದೇ ಸಂಪತ್ತನ್ನೂ ಬಯಸುವುದಿಲ್ಲ. ಪತಿಯಿಲ್ಲದೇ ಬದುಕಲೂ ಬಯಸುವುದಿಲ್ಲ.
ವರಾತಿಸರ್ಗಃ ಶತಪುತ್ರತಾ ಮಮ
ತ್ವಯೈವ ದತ್ತೋ ಹ್ರಿಯತೇ ಚ ಮೇ ಪತಿಃ ।
ವರಂ ವೃಣೇ ಜೀವತು ಸತ್ಯವಾನಯಂ
ತವೈವ ಸತ್ಯಂ ವಚನಂ ಭವಿಷ್ಯತಿ ॥54॥
ನೀನೇ ನನಗೆ ನೂರುಮಕ್ಕಳಾಗಲಿ ಎಂದು ವರವನ್ನು ಕೊಟ್ಟಿದ್ದೀಯೆ ಮತ್ತು ನನ್ನ ಪತಿಯನ್ನೂ ಕರೆದುಕೊಂಡು ಹೋಗುತ್ತಿದ್ದೀಯೆ. ಈ ಸತ್ಯವಂತನು ಜೀವಂತನಾಗಲಿ ಎಂಬ ವರವನ್ನು ಬೇಡುತಿತದ್ದೇನೆ. ಹಾಗೆ ಮಾಡಿದರೆ ನಿನ್ನ ವಚನವೇ ಸತ್ಯವಾಗುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ಷಟ್‌ಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತೇಳನೆಯ ಅಧ್ಯಾಯ
ಸತ್ಯವಂತನನ್ನು ಪಾಶದಿಂದ ಬಿಡುಗಡೆ ಮಾಡಿದ ಯಮನ ಪ್ರಯಾಣ.
ಸಾವಿತ್ರೀ ಮತ್ತು ಸತ್ಯವಂತನ ಸಂವಾದ.
ಮಾರ್ಕಂಡೇಯಃ
ತಥೇತ್ಯುಕಾತ್ವ ತು ತಂ ಪಾಶಂ ಮುಕತ್ವ ವೈವಸ್ವತೋ ಯಮಃ ।
ಧರ್ಮರಾಜಃ ಪ್ರಹೃಷ್ಟಾತ್ಮಾ ಸಾವಿತ್ರೀಮಿದಮಬ್ರವೀತ್ ॥1॥
ಮಾರ್ಕಂಡೇಯ ವೈವಸ್ವತನಾದ ಯಮಧರ್ಮರಾಜನು ಹಾಗೆಯೇ ಆಗಲಿ ಎಂದು ಹೇಳಿ ತನ್ನ ಪಾಶವನ್ನು ಬಿಡುಗಡೆ ಮಾಡಿ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಸಾವಿತ್ರಿಯನ್ನು ಕುರಿತು ಹೀಗೆ ಮಾತನಾಡಿದನು.
ಏಷ ಭದ್ರೇ ಮಯಾ ಮುಕ್ತೋ ಭರ್ತಾ ತೇ ಕುಲನಂದಿನಿ ।
ತೋಷಿತೋಽಹಂ ತ್ವಯಾ ಸಾಧ್ವಿ ವಾಕ್ಯೈರ್ಧರ್ಮಾರ್ಥಸಂಹಿತೈಃ ॥2॥
ಎಲೌ ಮಂಗಳಸ್ವರೂಪಳೇ, ಕುಲನಂದಿನಿಯೇ, ಈ ನಿನ್ನ ಪತಿಯನ್ನು ಬಿಡುಗಡೆಗೊಳಿಸುತ್ತಿದ್ದೇನೆ. ಪತಿವ್ರತೆಯೇ, ನಿನ್ನ ಧರ್ಮಾರ್ಥ ಸಹಿತವಾದ ಮಾತುಗಳಿಂದ ನಾನು ಸಂತೋಷಪಟ್ಟಿದ್ದೇನೆ.
ಅರೋಗಸ್ತವ ನೇಯಶ್ಚ ಸಿದ್ಧಾರ್ಥಃ ಸ ಭವಿಷ್ಯತಿ ।
ಚತುರ್ವರ್ಷಶತಾಯುಶ್ಚ ತ್ವಯಾ ಸಾರ್ಧಮವಾಪ್ಸ್ಯತಿ ॥3॥
ನಿನ್ನ ಪತಿಯು ಆರೋಗ್ಯವಂತನೂ, ಸೇವನೀಯನೂ ಮತ್ತು ಸಿದ್ಧಾರ್ಥನೂ ಆಗುವನು. ನಿನ್ನ ಜೊತೆಯಲ್ಲಿ ನಾಲ್ಕುನೂರು ವರ್ಷಗಳ ಆಯಸ್ಸನ್ನೂ ಹೊಂದುವನು.
ಇಷ್ಟ್ವಾ ಯಜ್ಞೈಶ್ಚ ಧರ್ಮೇಣ ಖ್ಯಾತಿಂ ಲೋಕೇ ಗಮಿಷ್ಯತಿ ।
ತ್ವಯಿ ಪುತ್ರಶತಂ ಚಾಪಿ ಸತ್ಯವಾನ್ ಜನಯಿಷ್ಯತಿ ॥4॥
ಯಜ್ಞಗಳನ್ನು ಮಾಡಿ ಧರ್ಮಾನುಷ್ಠಾನಗಳಿಂದ ಲೋಕದಲ್ಲಿ ಖ್ಯಾತಿಯನ್ನು ಪಡೆಯುವನು ಮತ್ತು ಸತ್ಯವಂತನು ನಿನ್ನಲ್ಲಿ ನೂರುಮಕ್ಕಳನ್ನು ಪಡೆಯುವನು.
ತೇ ಚಾಪಿ ಸರ್ವೇ ರಾಜಾನಃ ಕ್ಷತ್ರಿಯಾಃ ಪುತ್ರಪೌತ್ರಿಣಃ ।
ಖ್ಯಾತಾಸ್ತ್ವನ್ನಾಮಧೇಯಾಶ್ಚ ಭವಿಷ್ಯಂತೀಹ ಶಾಶ್ವತಾಃ ॥5॥
ಅವರೆಲ್ಲರೂ ಮಕ್ಕಳು, ಮೊಮ್ಮಕ್ಕಳನ್ನು ಹೊಂದಿದ ಕ್ಷತ್ರಿಯ ರಾಜರಾಗಿ ನಿನ್ನ ಹೆಸರಿನಿಂದಲೇ ಪ್ರಸಿದ್ಧರಾಗಿ ದೀರ್ಘಾಯುಷ್ಯವನ್ನು ಹೊಂದುವರು.
ಪಿತುಶ್ಚ ತೇ ಪುತ್ರಶತಂ ಭವಿತಾ ತವ ಮಾತರಿ ।
ಮಾಲವ್ಯಾಂ ಮಾಲವಾ ನಾಮ ಶಾಶ್ವತಂ ಪುತ್ರಪೌತ್ರಿಣಃ ।
ಭ್ರಾತರಸ್ತೇ ಭವಿಷ್ಯಂತಿ ಕ್ಷತ್ರಿಯಾಸ್ತ್ರಿದಶೋಪಮಾಃ ॥6॥
ನಿನ್ನ ತಂದೆಗೆ ನಿನ್ನ ತಾಯಿಯಾದ ಮಾಲವಿಯಲ್ಲಿ ಮಾಲವ ಎಂಬ ಹೆಸರಿನ ನೂರುಮಕ್ಕಳು ಜನಿಸುವರು. ಆ ನಿನ್ನ ಸಹೋದರರೆಲ್ಲರೂ ದೀರ್ಘಾಯುಷ್ಯವನ್ನು ಹೊಂದಿ ಪುತ್ರಪೌತ್ರರಿಂದ ಸಹಿತರಾಗಿ ದೇವತೆಗಳನ್ನು ಹೋಲುವ ಕ್ಷತ್ರಿಯರಾಗುವರು.

ಮಾರ್ಕಂಡೇಯಃ
ಏವಂ ತಸ್ಯೈ ವರಂ ದತ್ತ್ವಾ ಧರ್ಮರಾಜಃ ಪ್ರತಾಪವಾನ್ |
ನಿವರ್ತಯಿತ್ವಾ ಸಾವಿತ್ರೀಂ ಸ್ವಮೇವ ಭವನಂ ಯಯೌ ॥7॥
ಮಾರ್ಕಂಡೇಯ ಪ್ರತಾಪಶಾಲಿಯಾದ ಯಮಧರ್ಮರಾಜನು ಹೀಗೆ ಸತ್ಯವತಿಗೆ ವರವನ್ನು ನೀಡಿ ಅವಳನ್ನು ಹಿಂದಿರುಗಿಸಿ ತನ್ನ ಮನೆಗೇ ಹೊರಟು ಹೋದನು.
ಸಾವಿತ್ರ್ಯಪಿ ಯಮೇ ಯಾತೇ ಭರ್ತಾರಂ ಪ್ರತಿಲಭ್ಯ ಚ |
ಜಗಾಮ ತತ್ರ ಯತ್ರಾಸ್ಯಾ ಭರ್ತುಃ ಶಾವಂ ಕಳೇಬರಮ್ ॥8॥
ಸಾವಿತ್ರಿಯೂ ಸಹ ಯಮನು ಹೊರಟ ಮೇಲೆ ತನ್ನ ಪತಿಯನ್ನು ಪಡೆದು ಪತಿಯ ನಿಶ್ಶೇಷ್ಟವಾದ ಶರೀರವನ್ನು ಇಟ್ಟಿದ್ದ ಸ್ಥಳಕ್ಕೆ ಹೋದಳು.
ಸಾ ಭೂಮೌ ಪ್ರೇಕ್ಷ್ಯ ಭರ್ತಾರಮುಪಸೃತ್ಯೋಪಗೃಹ್ಯ ಚ |
ಉತ್ಸಂಗೇ ಶಿರ ಆರೋಪ್ಯ ಭೂಮಾವುಪವಿವೇಶ ಹ ॥9॥
ಅವಳು ಭೂಮಿಯ ಮೇಲಿದ್ದ ತನ್ನ ಪತಿಯ ಶರೀರವನ್ನು ನೋಡಿ ಅದನ್ನು ಸಮೀಪಿಸಿ ಆಲಿಂಗಿಸಿ ತನ್ನ ತೊಡೆಯ ಮೇಲೆ ಅವನ ಶಿರಸ್ಸನ್ನು ಇಟ್ಟುಕೊಂಡು ನೆಲದ ಮೇಲೆ ಕುಳಿತಳು.
ಸಂಜ್ಞಾಂ ಚ ಸ ಪುನರ್ಲಬ್ಧ್ವಾ ಸಾವಿತ್ರೀಮಭ್ಯಭಾಷತ |
ಪ್ರೋಷ್ಯಾಗತ ಇವ ಪ್ರೇಮ್ಣಾ ಪುನಃ ಪುನರುದೀಕ್ಷ್ಯ ವೈ ॥10॥
ಅವನು ಮರಳಿ ಸಂಜ್ಞೆಯನ್ನು ಪಡೆದು ಪ್ರಯಾಣವನ್ನು ಮಾಡಿ ಹಿಂದಿರುಗಿದವನಂತೆ ಪ್ರೀತಿಯಿಂದ ಸಾವಿತ್ರಿಯನ್ನು ಪುನಃ ಪುನಃ ನೋಡುತ್ತಾ ಅವಳನ್ನು ಕುರಿತು ಮಾತನಾಡಿದನು.
ಸುಚಿರಂ ಬತ ಸುಪ್ತೋಽಸ್ಮಿ ಕಿಮರ್ಥಂ ನಾವಬೋಧಿತಃ |
ಕ್ವ ಚಾಸೌ ಪುರುಷಃ ಶ್ಯಾಮೋ ಯೋಽದ್ಯ ಮಾಂ ಸಂಚಕರ್ಷ ಹ ॥
ನಾನು ಮಲಗಿ ಬಹಳ ಸಮಯವಾಯಿತು. ಏಕೆ ನನ್ನನ್ನು ಎಬ್ಬಿಸಲಿಲ್ಲ? ನನ್ನನ್ನು ಎಳೆಯುತ್ತಿದ್ದ ಆ ಕೃಷ್ಣಪುರುಷನು ಎಲ್ಲಿ? (ಎಂದು ಕೇಳಿದನು).
ಸಾವಿತ್ರೀ
ಸುಚಿರಂ ತ್ವಂ ಪ್ರಸುಪ್ತೋಽಸಿ ಮಮಾಂಕೇ ಪುರುಷರ್ಷಭ |
ಗತಃ ಸ ಭಗವಾನ್ ದೇವಃ ಪ್ರಜಾಸಂಯಮನೋ ಯಮಃ ॥12॥
ಸಾವಿತ್ರೀ ಪುರುಷಶ್ರೇಷ್ಠನೇ, ನೀನು ನನ್ನ ತೊಡೆಯ ಮೇಲೆ ಬಹಳ ಸಮಯದಿಂದ ನಿದ್ರೆಯನ್ನು ಮಾಡಿದೆ. ಆ ಕೃಷ್ಣಪುರುಷನು ಪ್ರಜೆಗಳನ್ನು ನಿಯಂತ್ರಿಸುವ ಪೂಜ್ಯನಾದ ಯಮದೇವ. ಅವನು ಹೊರಟುಹೋದನು.
ವಿಶ್ರಾಂತೋಽಸಿ ಮಹಾಭಾಗ ವಿನಿದ್ರಶ್ಚ ನೃಪಾತ್ಮಜ |
ಯದಿ ಸಹ್ಯಂ ಸಮುತ್ತಿಷ್ಠ ವಿಗಾಢಾಂ ಪಶ್ಯ ಶರ್ವರೀಮ್ ॥13॥
ಮಹಾನುಭಾವನೇ, ರಾಜಕುಮಾರನೇ, ವಿಶ್ರಾಂತಿಯನ್ನು ಪಡೆದು ಎಚ್ಚರಗೊಂಡಿದ್ದೀಯೆ. ಸಾಧ್ಯವಾದರೆ ಎದ್ದೇಳು. ಗಾಢವಾದ ಈ ರಾತ್ರಿಯನ್ನು ನೋಡು.
ಮಾರ್ಕಂಡೇಯಃ
ಉಪಲಭ್ಯ ಸ ಸಂಜ್ಞಾಂ ಚ ಸುಖಸುಪ್ತ ಇವೋತ್ಥಿತಃ |
ದಿಶಃ ಸರ್ವಾ ವನಾಂತಾಂಶ್ಚ ನಿರೀಕ್ಷ್ಯೋವಾಚ ಸತ್ಯವಾನ್ ॥14॥
ಮಾರ್ಕಂಡೇಯ ಸತ್ಯವಂತನು ಸಂಜ್ಞೆಯನ್ನು ಪೂರ್ಣವಾಗಿ ಪಡೆದು ಸುಖವಾಗಿ ಮಲಗಿದ್ದವನಂತೆ ಎದ್ದು ಎಲ್ಲ ದಿಕ್ಕುಗಳನ್ನೂ ಮತ್ತು ಕಾಡುಪ್ರದೇಶಗಳನ್ನೂ ನೋಡಿ ಹೀಗೆ ಮಾತನಾಡಿದನು.
ಫಲಾಹಾರೋಽಸ್ಮಿ ನಿಷ್ಕ್ರಾಂತಸ್ತ್ವಯಾ ಸಹ ಸುಮಧ್ಯಮೇ |
ತತಃ ಪಾಟಯತಃ ಕಾಷ್ಠಂ ಶಿರಸೋ ಮೇ ರುಜಾಽಭವತ್ ॥15॥
ಸುಂದರಿಯೇ, ಹಣ್ಣುಗಳನ್ನು ತರಲು ನಿನ್ನ ಜೊತೆಯಲ್ಲಿ ಆಶ್ರಮದಿಂದ ಹೊರಟು ಬಂದೆನು. ಕಟ್ಟಿಗೆಗಳನ್ನು ಒಡೆಯುತ್ತಿದ್ದಂತೆ ನನಗೆ ಶಿರೋವೇದನೆಯು ಉಂಟಾಯಿತು.
ಶಿರೋಽಭಿತಾಪಸಂಯುಕ್ತಃ ಸ್ಥಾತುಂ ಚಿರಮಶಕ್ನುವನ್ |
ತವೋತ್ಸಂಗೇ ಪ್ರಸುಪ್ತೋಽಸ್ಮಿ ಇತಿ ಸರ್ವಂ ಸ್ಮರೇ ಶುಭೇ ॥16॥
ಎಲೌ ಶುಭಳಾದವಳೇ, ತಲೆಯ ಶೂಲೆಯಿಂದ ಸಂತಪ್ತನಾಗಿ ನಿಲ್ಲಲು ಸಾಧ್ಯವಾಗದೇ ನಿನ್ನ ತೊಡೆಯ ಮೇಲೆ ಮಲಗಿದೆನು ಎಂದು ಇವೆಲ್ಲದರ ಸ್ಮರಣೆ ಇದೆ.
ತ್ವಯೋಪಗೂಢಸ್ಯ ಚ ಮೇ ನಿದ್ರಯಾಽಪಹೃತಂ ಮನಃ |
ತತೋಽಪಶ್ಯಂ ತಮೋ ಘೋರಂ ಪುರುಷಂ ಚ ಮಹೌಜಸಮ್ ॥17॥
ನಿನ್ನಿಂದ ಆಲಿಂಗಿತನಾದ ನಾನು ನಿದ್ರೆಗೆ ವಶನಾದೆ. ಅನಂತರ ಗಾಢವಾದ ಕತ್ತಲೆಯನ್ನೂ ಮತ್ತು ಮಹಾಶಕ್ತಿಶಾಲಿಯಾದ ಒಬ್ಬ ಪುರುಷನನ್ನು ನೋಡಿದೆನು.
ತದ್ ಯದಿ ತ್ವಂ ವಿಜಾನಾಸಿ ಕಿಂ ತದ್ ಬ್ರೂಹಿ ಸುಮಧ್ಯಮೇ |
ಸ್ವಪ್ನೋ ಮೇ ಯದಿ ವಾ ದೃಷ್ಟೋ ಯದಿ ವಾ ಸತ್ಯಮೇವ ತತ್ ॥18॥
ಎಲೌ ಸುಮಧ್ಯಮೆಯೇ, ಅದೇನೆಂದು ನಿನಗೆ ತಿಳಿದಿದ್ದರೆ ನನಗೆ ಹೇಳು. ಅದೇನು ಸ್ವಪ್ನವೋ ಅಥವಾ ಸತ್ಯವಾದ ಘಟನೆಯೋ?

ಮಾರ್ಕಂಡೇಯಃ
ತಮುವಾಚಾಥ ಸಾವಿತ್ರೀ ರಜನೀ ವ್ಯವಗಾಹತೇ |
ಶ್ವಸ್ತೇ ಸರ್ವಂ ಯಥಾವೃತ್ತಮಾಖ್ಯಾಸ್ಯಾಮಿ ನೃಪಾತ್ಮಜ ॥19॥
ಮಾರ್ಕಂಡೇಯ ಸಾವಿತ್ರಿಯು ಅವನನ್ನು ಕುರಿತು ರಾಜಕುಮಾರನೇ, ರಾತ್ರಿಯು ಹಬ್ಬಿದೆ. ನಿನಗೆ ನಾಳೆ ನಡೆದ ಎಲ್ಲಾ ಘಟನೆಯನ್ನು ತಿಳಿಸುವೆನು ಎಂದು ಹೇಳಿದಳು.
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಪಿತರೌ ಪಶ್ಯ ಸುವ್ರತ |
ವಿಗಾಢಾ ರಜನೀ ಚೇಯಂ ನಿವೃತ್ತಶ್ಚ ದಿವಾಕರಃ ॥20॥
ಸುವ್ರತನೇ, ನಿನಗೆ ಮಂಗಳವಾಗಲಿ. ಏಳು ಏಳು, ತಂದೆ ತಾಯಿಗಳನ್ನು ನೋಡು. ಸೂರ್ಯನು ಮುಳುಗಿ ಈ ರಾತ್ರಿಯಲ್ಲಿ ಬಹಳ ಸಮಯವಾಗಿದೆ.
ನಕ್ತಂಚರಾಶ್ಚರಂತ್ಯೇತೇ ಹೃಷ್ಟಾಃ ಕ್ರೂರಾಭಿಭಾಷಿಣಃ |
ಶ್ರೂಯಂತೇ ಪರ್ಣಶಬ್ದಾಶ್ಚ ಮೃಗಾಣಾಂ ಚರತಾಂ ವನೇ ॥21॥
ಕ್ರೂರವಾಗಿ ಮಾತನಾಡುವ ಸಂತುಷ್ಟರಾದ ಈ ನಿಶಾಚರರು ತಿರುಗಾಡುತ್ತಿದ್ದಾರೆ ಮತ್ತು ಮೃಗಗಳು ತಿರುಗಾಡುವುದರಿಂದ ಎಲೆಗಳ ಶಬ್ದವು ಕೇಳಿ ಬರುತ್ತಿದೆ.
ಏತಾ ಘೋರಂ ಶಿವಾ ನಾದಾನ್ ದಿಶಂ ದಕ್ಷಿಣಪಶ್ಚಿಮಾಮ್ |
ಆಸ್ಥಾಯ ವಿರುವಂತ್ಯುಗ್ರಾಃ ಕಂಪಯಂತ್ಯೋ ಮನೋ ಮಮ ॥22॥
ಈ ಘೋರವಾದ ಹೆಣ್ಣು ನರಿಗಳು ನೈಋತ್ಯದಿಕ್ಕನ್ನು ಆಶ್ರಯಿಸಿ ಭಯಂಕರವಾದ ಅಳುವ ನಾದಗಳನ್ನು ಮಾಡುತ್ತಾ ನನ್ನ ಮನಸ್ಸನ್ನು ನಡುಗಿಸುತ್ತಿವೆ.
ಸತ್ಯವಾನ್
ವನಂ ಪ್ರತಿಭಯಾಕಾರಂ ಘನೇನ ತಮಸಾಽಽವೃತಮ್ |
ನ ವಿಜ್ಞಾಸ್ಯಸಿ ಪಂಥಾನಂ ಗಂತುಂ ಚೈವ ನ ಶಕ್ಷ್ಯಸಿ ॥23॥
ಸತ್ಯವಾನ್- ಕಾಡು ಭಯಂಕರವಾಗಿದೆ. ಗಾಢವಾದ ಕತ್ತಲೆಯು ಹಬ್ಬಿದೆ. ನೀನು ಮಾರ್ಗವನ್ನು ತಿಳಿಯುವುದಿಲ್ಲ. ಅದರಿಂದ ಆಶ್ರಮಕ್ಕೆ ಹೋಗಲು ನಿನಗೆ ಸಾಧ್ಯವಾಗುವುದಿಲ್ಲ.
ಸಾವಿತ್ರೀ
ಅಸ್ಮಿನ್ನದ್ಯ ವನೇ ದಗ್ಧೋ ಶುಷ್ಕವೃಕ್ಷಃ ಸ್ಥಿತೋ ಜ್ವಲನ್ |
ವಾಯುನಾ ಧೂಯಮಾನೋಽತ್ರ ದೃಶ್ಯತೇಽಗ್ನಿಃ ಕ್ವಚಿತ್ ಕ್ವಚಿತ್ ॥24॥
ಸಾವಿತ್ರೀ ಕಾಡಿನಲ್ಲಿ ಈ ದಿನ ದಗ್ಧವಾದ ಒಂದು ಶುಷ್ಕವೃಕ್ಷವಿದೆ. ವಾಯುವು ಜೋರಾಗಿ ಬೀಸಿದಾಗ ಅದರಲ್ಲಿ ಒಮ್ಮೊಮ್ಮೆ ಅಗ್ನಿಯು ಕಂಡುಬರುತ್ತದೆ.
ತತೋಽಗ್ನಿಮಾನಯಿತ್ವೇಹ ಜ್ವಾಲಯಿಷ್ಯಾಮಿ ಸರ್ವತಃ |
ಕಾಷ್ಠಾನೀಮಾನಿ ಸಂತೀಹ ಜಹಿ ಸಂತಾಪಮಾತ್ಮನಃ ॥25॥
ಅಲ್ಲಿಂದ ಅಗ್ನಿಯನ್ನು ತಂದು ಇಲ್ಲಿ ಎಲ್ಲ ಕಡೆಗಳಲ್ಲಿಯೂ ಅಗ್ನಿಯನ್ನು ಹೊತ್ತಿಸುತ್ತೇನೆ. ಇಲ್ಲಿ ಬೇಕಾದಷ್ಟು ಈ ಕಟ್ಟಿಗೆಗಳಿವೆ. ನಿನ್ನ ವಿಷಾದವನ್ನು ತ್ಯಜಿಸು.
ಯದಿ ನೋತ್ಸಹಸೇ ಗಂತುಂ ಸರುಜಂ ತ್ವಾಂ ಹಿ ಲಕ್ಷಯೇ |
ನ ಚ ಜ್ಞಾಸ್ಯಸಿ ಪಂಥಾನಂ ತಮಸಾ ಸಂವೃತೇ ವನೇ ॥26॥
ಶ್ವಃ ಪ್ರಭಾತೇ ವನೇ ದೃಶ್ಯೇ ಯಾಸ್ಯಾವೋಽನುಮತೇ ತವ |
ವಸಾವೇಹ ಕ್ಷಪಾಮೇಕಾಂ ರುಚಿತಂ ಯದಿ ತೇಽನಘ ॥27॥
ನೀನು ಶಿರೋವೇದನೆಯಿಂದ ಆಯಾಸಗೊಂಡಿರುವೆ ಎಂದು ನಾನು ತಿಳಿಯುತ್ತೇನೆ. ಕತ್ತಲೆಯಿಂದ ಆವೃತವಾದ ಈ ಕಾಡಿನಲ್ಲಿ ನನಗೆ ಮಾರ್ಗವೂ ತಿಳಿಯುವುದಿಲ್ಲ. ನಿನಗೆ ಈಗ ಆಶ್ರಮಕ್ಕೆ ಹಿಂದಿರುಗಲು ಇಷ್ಟವಿಲ್ಲದಿದ್ದರೆ ನಿನ್ನ ಅನುಮತಿ ಇದ್ದರೆ ನಾಳೆಯ ಬೆಳಿಗ್ಗೆ ಕಾಡಿನಲ್ಲಿ ಎಲ್ಲವೂ ಚೆನ್ನಾಗಿ ಕಾಣುವಾಗ ಇಲ್ಲಿಂದ ಹೊರಡೋಣ. ಅನಘನೇ, ನಿನಗೆ ಇಷ್ಟವಾದರೆ ಈ ಒಂದು ರಾತ್ರಿಯನ್ನು ಇಲ್ಲಿಯೇ ಕಳೆಯೋಣ.
ಸತ್ಯವಾನ್
ಶಿರೋರುಜಾ ನಿವೃತ್ತಾ ಮೇ ಸ್ವಸ್ಥಾನ್ಯಂಗಾನಿ ಲಕ್ಷಯೇ |
ಮಾತಾಪಿತೃಭ್ಯಾಮಿಚ್ಛಾಮಿ ಸಂಗಮಂ ತ್ವತ್ಪ್ರಸಾದಜಮ್ ॥28॥
ಸತ್ಯವಾನ್- ನನ್ನ ತಲೆಯ ಶೂಲೆಯು ನಿವೃತ್ತವಾಗಿದೆ. ದೇಹದ ಅವಯವಗಳು ಸ್ವಸ್ಥವಾಗಿವೆ. ನಿನ್ನ ಅನುಗ್ರಹದಿಂದ ತಂದೆ ತಾಯಿಯ ಜೊತೆಯಲ್ಲಿ ಸೇರಲು ಬಯಸುತ್ತೇನೆ.
ನ ಕದಾಚಿದ್ ವಿಕಾಲಂ ಹಿ ಗತಪೂರ್ವೋ ಮಯಾಽಽಶ್ರಮಃ |
ಅನಾಗತಾಯಾಂ ಸಂಧ್ಯಾಯಾಂ ಮಾತಾ ಮೇ ಪ್ರರುಣದ್ಧಿ ಮಾಮ್ ॥
ನಾನು ಹಿಂದೆ ಎಂದೂ ಆಶ್ರಮಕ್ಕೆ ಅಕಾಲದಲ್ಲಿ ಹಿಂದಿರುಗಿಲ್ಲ. ಸಂಜೆಯಾಗುವುದಕ್ಕಿಂತ ಮೊದಲೇ ನನ್ನ ತಾಯಿಯು ನಾನು ಹೊರಗೆ ಹೋಗದಂತೆ ತಡೆಯುತ್ತಿದ್ದಳು.
ದಿವಾಪಿ ಮಯಿ ನಿಷ್ಕ್ರಾಂತೇ ಸಂತಪ್ಯೇತೇ ಗುರೂ ಮಮ |
ವಿಚಿನೋತಿ ಹಿ ಮಾಂ ತಾತಃ ಸಹೈವಾಶ್ರಮವಾಸಿಭಿಃ ॥30॥

ಹಗಲಿನಲ್ಲಿಯೂ ಸಹ ನಾನು ಹೊರಗೆ ಹೋದರೆ ನನ್ನ ಹಿರಿಯರಾದ ಇವರಿಬ್ಬರೂ ಸಂತಾಪಪಡುತ್ತಾರೆ. ನನ್ನ ತಂದೆಯು ಆಶ್ರಮವಾಸಿಗಳ ಜೊತೆಯಲ್ಲಿ ನನ್ನನ್ನು ಹುಡುಕುತ್ತಾನೆ.
ಮಾತ್ರಾ ಪಿತ್ರಾ ಚ ಸುಭೃಶಂ ದುಃಖಿತಾಭ್ಯಾಮಹಂ ಪುರಾ |
ಉಪಾಲಬ್ಧಶ್ಚ ಬಹುಶಶ್ಚಿರೇಣಾಗಚ್ಛಸೀತಿ ಹ ॥31॥
ಹಿಂದೆ ನನ್ನ ತಂದೆತಾಯಿಗಳಿಬ್ಬರೂ ನೀನು ತಡವಾಗಿ ಹಿಂದಿರುಗುತ್ತೀಯೆ ಎಂದು ನನ್ನನ್ನು ನಿಂದಿಸಿದ್ದಾರೆ.
ಕಾ ತ್ವವಸ್ಥಾ ತಯೋರದ್ಯ ಮದರ್ಥಮಿತಿ ಚಿಂತಯೇ |
ತಯೋರದೃಶ್ಯೇ ಮಯಿ ಚ ಮಹದ್ದುಃಖಂ ಭವಿಷ್ಯತಿ ॥32॥
ಈ ದಿನ ಅವರು ನನ್ನ ಸಲುವಾಗಿ ಯಾವ ಅವಸ್ಥೆಯಲ್ಲಿದ್ದಾರೆ ಎಂದು ಯೋಚಿಸುತ್ತಿದ್ದೇನೆ. ನಾನು ಕಣ್ಣಿಗೆ ಕಾಣದಿದ್ದರೆ ಅವರಿಗೆ ಬಹಳ ದುಃಖವು ಉಂಟಾಗುವುದು.
ಪುರಾ ಮಾಮೂಚತುಶ್ಚೈವ ರಾತ್ರಾವಸ್ಥಾನಮಾಗತಮ್ |
ಸುಭೃಶಂ ದುಃಖಿತೌ ವೃದ್ಧೌ ಬಹುಶಃ ಪ್ರೀತಿಸಂಯುತೌ ॥33॥
ತ್ವಯಾ ಹೀನೌ ನ ಜೀವಾವ ಮುಹೂರ್ತಮಪಿ ಪುತ್ರಕ |
ಯಾವದ್ ಧರಿಷ್ಯಸೇ ಪುತ್ರ ತಾವನ್ನೌ ಜೀವಿತಂ ಧ್ರುವಮ್ ॥34॥
ನಾನು ಹಿಂದೆ ರಾತ್ರಿಯಲ್ಲಿ ಒಮ್ಮೆ ತಡವಾಗಿ ಬಂದಾಗ ಬಹಳ ದುಃಖಿತರಾದ ವೃದ್ಧರಾದ ಅವರು ಪ್ರೀತಿಯಿಂದ ಕೂಡಿದವರಾಗಿ ಪುನಃ ಪುನಃ ನನ್ನನ್ನು ಕುರಿತು ಪುತ್ರನೇ, ನೀನಿಲ್ಲದಿದ್ದರೆ ನಾವು ಒಂದು ಮುಹೂರ್ತವೂ ಬದುಕುವುದಿಲ್ಲ. ನೀನು ಎಲ್ಲಿಯವರೆಗೆ ಬದುಕಿರುತ್ತೀಯೋ ನಾವೂ ಸಹ ಅಲ್ಲಿಯವರೆಗೆ ಮಾತ್ರ ಬದುಕಿರುತ್ತೇವೆ ಎಂದು ಹೇಳಿದರು.
ವೃದ್ಧಯೋರಂಧಯೋರ್ದೃಷ್ಟಿಸ್ತ್ವಯಿ ವಂಶಃ ಪ್ರತಿಷ್ಠಿತಃ |
ತ್ವಯಿ ಪಿಂಡಶ್ಚ ಕೀರ್ತಿಶ್ಚ ಸಂತಾನಂ ಚಾವಯೋರಿತಿ ॥35॥
ವೃದ್ಧರೂ, ಅಂಧರೂ ಆದ ನಮ್ಮ ದೃಷ್ಟಿಯೂ, ನಮ್ಮ ವಂಶವೂ, ನಮ್ಮ ಪಿಂಡವೂ, ಕೀರ್ತಿಯೂ ಮತ್ತು ಸಂತಾನವೂ ನಿನ್ನನ್ನು ಅವಲಂಬಿಸಿದೆ (ಎಂದು ಹೇಳಿದರು).
ಮಾತಾ ವೃದ್ಧಾ ಪಿತಾ ತ್ವಂಧಸ್ತಯೋರ್ಯಷ್ಟಿರಹಂ ಕಿಲ |
ತೌರಾತ್ರೌ ಮಾಮಪಶ್ಯಂತೌ ಕಾಮವಸ್ಥಾಂ ಗಮಿಷ್ಯತಃ ॥36॥
ತಾಯಿಯು ವೃದ್ಧಳಾಗಿದ್ದಾಳೆ. ತಂದೆಯು ಅಂಧನಾಗಿದ್ದಾನೆ. ನಾನೊಬ್ಬನೇ ಅವರಿಗೆ ಊರುಗೋಲಷ್ಟೆ? ರಾತ್ರಿಯಲ್ಲಿ ಅವರು ನನ್ನನ್ನು ನೋಡದಿದ್ದರೆ ಅವರಿಗೆ ಎಂತಹ ಅವಸ್ಥೆಯು ಉಂಟಾಗುವುದು?
ನಿದ್ರಾಯಾಶ್ಚಾಭ್ಯಸೂಯಾಮಿ ಯಸ್ಯಾ ಹೇತೋಃ ಪಿತಾ ಮಮ |
ಮಾತಾ ಚ ಸಂಶಯಂ ಪ್ರಾಪ್ತಾ ಮತ್ಕೃತೇಽನಪಕಾರೀಣೇ ॥37॥
ನನ್ನ ಸಲುವಾಗಿ ನನ್ನ ತಂದೆತಾಯಿಗಳು ನನ್ನ ವಿಷಯದಲ್ಲಿ ಸಂಶಯವನ್ನು ಹೊಂದುವಂತೆ ಮಾಡಿದ ಈ ಪ್ರತಿಕೂಲವಾದ ನಿದ್ರೆಯ ಮೇಲೆಯೇ ನನಗೆ ಕೋಪವುಂಟಾಗುತ್ತಿದೆ.
ಅಹಂ ಚ ಸಂಶಯಂ ಪ್ರಾಪ್ತಃ ಕೃಚ್ಛ್ರಾಮಾಪದಮಾಸ್ಥಿತಃ |
ಮಾತಾಪಿತೃಭ್ಯಾಂ ಹಿ ವಿನಾ ನಾಹಂ ಜೀವಿತುಮುತ್ಸಹೇ ॥38॥
ದೊಡ್ಡ ಕಷ್ಟಕ್ಕೆ ಸಿಲುಕಿ ನಾನೂ ಸಹ ಪ್ರಾಣಸಂಶಯವನ್ನು ಹೊಂದಿದೆನು. ತಂದೆ ತಾಯಿಗಳಿಲ್ಲದೆ ನಾನು ಜೀವಿಸಲಾರೆ.
ವ್ಯಕ್ತಮಾಕುಲಯಾ ಬುದ್ಧ್ಯಾ ಪ್ರಜ್ಞಾಚಕ್ಷುಃ ಪಿತಾ ಮಮ |
ಏಕೈಕಮಸ್ಯಾಂ ವೇಲಾಯಾಂ ಪೃಚ್ಛತ್ಯಾಶ್ರಮವಾಸಿನಮ್ ॥39॥
ಪ್ರಜ್ಞಾಚಕ್ಷುವಾದ ನನ್ನ ತಂದೆಯು ಕಳವಳಗೊಂಡ ಮನಸ್ಸಿನಿಂದ ಈ ಸಮಯದಲ್ಲಿ ಆಶ್ರಮವಾಸಿಗಳಾದ ಪ್ರತಿಯೊಬ್ಬರನ್ನೂ ನನ್ನನ್ನು ಕುರಿತು ವಿಚಾರಿಸುತ್ತಾನೆ ಎಂಬುದು ನನಗೆ ಸ್ಪಷ್ಟವಾಗಿದೆ.
ನಾತ್ಮಾನಮನುಶೋಚಾಮಿ ಯಥಾಹಂ ಪಿತರಂ ಶುಭೇ |
ಭರ್ತಾರಂ ಚಾಪ್ಯನುಗತಾಂ ಮಾತರಂ ಪ್ರತಿದುರ್ಬಲಾಮ್ ॥40॥
ಶುಭಳಾದವಳೇ, ತಂದೆಯನ್ನು ಕುರಿತು ಶೋಕಪಡುವಂತೆ ಮತ್ತು ತಂದೆಯ ಹಿಂದೆ ಹೋಗುತ್ತಿರುವ ಅಶಕ್ತಳಾದ ತಾಯಿಯನ್ನು ಕುರಿತು ಶೋಕಪಡುವಂತೆ, ನನ್ನನ್ನು ಕುರಿತು ನಾನು ಶೋಕಿಸುವುದಿಲ್ಲ.
ಮತ್ಕೃತೇ ನಹಿ ತಾವದ್ಯ ಸಂತಾಪಂ ಪರಮೇಷ್ಯತಃ |
ಜೀವಂತಾವನುಜೀವಾಮಿ ಭರ್ತವ್ಯೌ ತೌ ಮಯೇತಿ ಹ ॥41॥
ಈ ದಿನ ನಾನು ಮಾಡಿದ ಕಾರ್ಯದಿಂದ ಅವರಿಗೆ ಬಹಳ ಸಂತಾಪವಾಗುವುದು. ಅವರು ಬದುಕಿದ್ದರೆ ಅವರನ್ನು ಪೋಷಿಸಬೇಕೆಂದು ನಾನೂ ಬದುಕುತ್ತೇನೆ.
ತಯೋಃ ಪ್ರಿಯಂ ಮೇ ಕರ್ತವ್ಯಮಿತಿ ಜಾನಾಮಿ ಚಾಪ್ಯಹಮ್ |
ಪರಮಂ ದೈವತಂ ತೌ ಮೇ ಪೂಜನೀಯೌ ಸದಾ ಮಯಾ ॥42॥
ತಯೋಸ್ತು ಮೇ ಸದಾಽಸ್ತ್ಯೇವಂ ವ್ರತಮೇತತ್ ಪುರಾತನಮ್ ॥43॥
ಅವರಿಗೆ ಪ್ರಿಯವನ್ನು ಮಾಡಬೇಕೆಂದು ಯಾವಾಗಲೂ ತಿಳಿದಿದ್ದೇನೆ. ಅವರು ನನ್ನ ಪರಮದೇವತೆಗಳು. ನನ್ನಿಂದ ಪೂಜಿಸಲ್ಪಡಬೇಕಾದವರು. ನಾನು ಬಹಳ ಹಿಂದಿನಿಂದಲೂ ಅವರ ವಿಷಯದಲ್ಲಿ ಇದನ್ನು ವ್ರತವೆಂದು ಆಚರಿಸುತ್ತಿದ್ದೇನೆ.
ಮಾರ್ಕಂಡೇಯಃ
ಏವಮುಕತ್ವ ಸ ಧರ್ಮಾತ್ಮಾ ಗುರುಭಕ್ತೋ ಗುರುಪ್ರಿಯಃ |

ಉಚ್ಛ್ರಿತ್ಯ ಬಾಹೂ ದುಃಖಾರ್ತಃ ಸುಸ್ವರಂ ಪ್ರುರುರೋದ ಹ ॥44॥
ಮಾರ್ಕಂಡೇಯರು ಹೀಗೆ ಹೇಳಿ ಧರ್ಮಾತ್ಮನೂ, ಗುರುಭಕ್ತನೂ, ಗುರುಪ್ರಿಯನೂ ಆದವನು ತನ್ನ ತೋಳುಗಳನ್ನು ಮೇಲೆತ್ತಿ ದುಃಖದಿಂದ ಆರ್ತನಾಗಿ ಸುಸ್ವರದಿಂದ ರೋದನವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ಸಪ್ತಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತೇಳನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತೆಂಟನೆಯ ಅಧ್ಯಾಯ
ಸಾವಿತ್ರಿ ಮತ್ತು ಸತ್ಯವಂತರಿಂದ ಪುನಃ ಆಶ್ರಮದ ಕಡೆಗೆ ಪ್ರಯಾಣ.
ಮಾರ್ಕಂಡೇಯಃ
ತತೋಽಬ್ರವೀತ್ ತಥಾ ದೃಷ್ಟ್ವಾ ಭರ್ತಾರಂ ಶೋಕಕರ್ಶಿತಮ್ ॥1॥
ಪ್ರಸೃಜ್ಯಾಶ್ರೂಣಿ ಪಾಣಿಭ್ಯಾಂ ಸಾವಿತ್ರೀ ಧರ್ಮಚಾರಿಣೀ ।
ಯದಿ ಮೇಽಸ್ತಿ ತಪಸ್ತಪ್ತಂ ಯದಿ ದತ್ತಂ ಹುತಂ ಯದಿ ।
ಶ್ವಶ್ರೂಶ್ವಶುರಭರ್ತೄಣಾಂ ಮಮ ಪುಣ್ಯಾಽಸ್ತು ಶರ್ವರೀ ॥2॥
ಮಾರ್ಕಂಡೇಯರು ಆಗ ಧರ್ಮಚಾರಿಣಿಯಾದ ಸಾವಿತ್ರಿಯು ಹಾಗೆ ಶೋಕಕರ್ಶಿತನಾದ ತನ್ನ ಪತಿಯನ್ನು ನೋಡಿ ಅವನ ಕಣ್ಣೀರನ್ನು ಒರೆಸಿ, ನಾನೇನಾದರೂ ತಪಸ್ಸನ್ನು ಮಾಡಿದ್ದರೆ, ದಾನವನ್ನು ಕೊಟ್ಟಿದ್ದರೆ, ಹೋಮವನ್ನು ಮಾಡಿದ್ದರೆ, ನನ್ನ ಅತ್ತೆ ಮಾವ ಪತಿಗಳಿಗೆ ಈ ರಾತ್ರಿಯು ಶುಭಕರವಾಗಿರಲಿ ಎಂದು ಹೇಳಿದಳು.
ನ ಸ್ಮರಾಮ್ಯುಕ್ತಪೂರ್ವಾಂ ವೈ ಸ್ವೈರೇಷ್ವಪ್ಯನೃತಾಂ ಗಿರಮ್ ।
ತೇನ ಸತ್ಯೇನ ತಾವದ್ಯ ಧ್ರಿಯೇತಾಂ ಶ್ವಶುರೌ ಮಮ ॥3॥
ನಾನು ವಿನೋದಕ್ಕಾಗಿಯೂ ಹಿಂದೆ ಎಂದೂ ಒಂದು ಸುಳ್ಳನ್ನೂ ಹೇಳಿದವಳಲ್ಲ. ಆ ಸತ್ಯದಿಂದ ಈ ದಿನ ನನ್ನ ಅತ್ತೆಮಾವಂದಿರು ಜೀವಿಸಿರಲಿ (ಎಂದು ಹೇಳಿದಳು).
ಸತ್ಯವಾನ್
ಕಾಮಯೇ ದರ್ಶನಂ ಪಿತ್ರೋರ್ಯಾಹಿ ಸಾವಿತ್ರಿ ಮಾಚಿರಮ್ ।
ಅಪಿ ನಾಮ ಗುರೂ ತೌ ಹಿ ಪಶ್ಯೇಯಂ ಧ್ರಿಯಮಾಣಕೌ ॥4॥
ಸತ್ಯವಾನ್- ಸಾವಿತ್ರಿ, ನನ್ನ ತಂದೆ ತಾಯಿಯ ದರ್ಶನವನ್ನು ಮಾಡಲು ಬಯಸುತ್ತೇನೆ. ಶೀಘ್ರವಾಗಿ ಹೊರಡು. ಈ ದಿನ ಸಂತೋಷದಲ್ಲಿರುವ ಆ ನನ್ನ ಹಿರಿಯರನ್ನು ನೋಡುತ್ತೇನೆಯೇ ಎಂಬ ಸಂಶಯವುಂಟಾಗಿದೆ.
ಪುರಾ ಮಾತುಃ ಪಿತುರ್ವಾಪಿ ಯದಿ ಪಶ್ಯಾಮಿ ವಿಪ್ರಿಯಮ್ ।
ನ ಜೀವಿಷ್ಯೇ ವರಾರೋಹೇ ಸತ್ಯೇನಾತ್ಮಾನಮಾಲಭೇ ॥5॥
ಎಲೌ ಸುಂದರಿಯೇ, ನಾನು ತಂದೆತಾಯಿಗಳಿಗೆ ಅಪ್ರಿಯ ಉಂಟಾಗುವುದನ್ನು ನೋಡುವುದಕ್ಕಿಂತ ಮೊದಲೇ ಮರಣವನ್ನು ಹೊಂದುವೆನು. ಇದನ್ನು ನನ್ನ ಮೇಲೆಯೇ ಪ್ರಮಾಣ ಮಾಡಿ ಹೇಳುತ್ತಿದ್ದೇನೆ.
ಯದಿ ಧರ್ಮೇ ಚ ತೇ ಬುದ್ಧಿರ್ಮಾಂ ಚೇಜ್ಜೀವಂತಮಿಚ್ಛಸಿ ।
ಮಮ ಪ್ರಿಯಂ ವಾ ಕರ್ತವ್ಯಂ ಗಚ್ಛಾವಾಶ್ರಮಮಂತಿಕಾತ್ ॥6॥
ನಿನಗೆ ಧರ್ಮದಲ್ಲಿ ಬುದ್ಧಿ ಇರುವುದಾದರೆ, ನಾನು ಬದುಕಿರಬೇಕೆಂದು ನೀನು ಬಯಸುವುದಾದರೆ, ನನಗೆ ಪ್ರಿಯವನ್ನು ಮಾಡಬೇಕೆಂದು ನೀನು ತಿಳಿದಿರುವುದಾದರೆ ಈಗಲೇ ಆಶ್ರಮಕ್ಕೆ ಹೊರಡೋಣ.
ಮಾರ್ಕಂಡೇಯಃ
ಸಾವಿತ್ರೀ ತತ ಉತ್ಥಾಯ ಕೇಶಾನ್ ಸಂಯಮ್ಯ ಭಾಮಿನೀ ।
ಪತಿಮುತ್ಥಾಪಯಾಮಾಸ ಬಾಹುಭ್ಯಾಂ ಪರಿಗೃಹ್ಯ ವೈ ॥7॥
ಮಾರ್ಕಂಡೇಯ ಅನಂತರ ಭಾಮಿನಿಯಾದ ಸಾವಿತ್ರಿಯು ಎದ್ದು ತಲೆಯ ಕೂದಲನ್ನು ಗಂಟಿಹಾಕಿಕೊಂಡು ತನ್ನ ತೋಳುಗಳಿಂದ ಪತಿಯನ್ನು ಆಲಿಂಗಿಸಿ ಅವನನ್ನು ಎತ್ತಿ ನಿಲ್ಲಿಸಿದಳು.
ಉತ್ಥಾಯ ಸತ್ಯವಾಂಶ್ಚಾಪಿ ಪ್ರಮೃಜ್ಯಾಂಗಾನಿ ಪಾಣಿನಾ ।
ಸರ್ವಾ ದಿಶಃ ಸಮಾಲೋಕ್ಯ ಕಠಿನೇ ದೃಷ್ಟಿಮಾದಧೇ ॥8॥
ಸತ್ಯವಂತನೂ ಸಹ ಎದ್ದು ತನ್ನ ಹಸ್ತದಿಂದ ತನ್ನ ಶರೀರದ ಧೂಳನ್ನು ಕೊಡವಿಕೊಂಡು ಎಲ್ಲಾ ದಿಕ್ಕುಗಳನ್ನೂ ನೋಡಿ ಹಣ್ಣಿನ ಬುಟ್ಟಿಯ ಕಡೆಗೆ ತನ್ನ ದೃಷ್ಟಿಯನ್ನು ಹಾಯಿಸಿದನು.
ತಮುವಾಚಾಥ ಸಾವಿತ್ರೀ ಶ್ವಃ ಫಲಾನ್ಯಾಹರಿಷ್ಯಸೇ ।
ಯೋಗಕ್ಷೇಮಾರ್ಥಮೇತಂ ತೇ ನೇಷ್ಯಾಮಿ ಪರಶುಂ ತ್ವಹಮ್ ॥9॥
ಆಗ ಅವನನ್ನು ಕುರಿತು ಸಾವಿತ್ರಿಯು ಹಣ್ಣುಗಳನ್ನು ನಾಳೆ ತೆಗೆದುಕೊಂಡು ಹೋಗುವಿಯಂತೆ. ಈಗ ಯೋಗಕ್ಷೇಮದ ಸಲುವಾಗಿ ನಾನು ಈ ಕೊಡಲಿಯನ್ನು ತೆಗೆದುಕೊಳ್ಳುವೆನು ಎಂದು ಹೇಳಿದಳು.
ಕೃತ್ವಾ ಕಠಿನಭಾರಂ ಸಾ ವೃಕ್ಷಶಾಖಾವಲಂಬಿನಮ್ ।

ಗೃಹೀತ್ವಾ ಪರಶುಂ ಭರ್ತುಃ ಸಕಾಶೇ ಪುನರಾಗಮತ್ ॥10॥
ಅವಳು ಹಣ್ಣಿನ ಬುಟ್ಟಿಯನ್ನು ಒಂದು ಮರದ ಕೊಂಬೆಗೆ ನೇತುಹಾಕಿ ಪರಶುವನ್ನು ತೆಗೆದುಕೊಂಡು ಪತಿಯ ಸಮೀಪಕ್ಕೆ ಬಂದಳು.
ವಾಮೇ ಸ್ಕಂಧೇ ತು ವಾಮೋರೂರ್ಭರ್ತುರ್ಬಾಹುಂ ನಿವೇಶ್ಯ ಚ |
ದಕ್ಷಿಣೇನ ಪರಿಷ್ವಜ್ಯ ಜಗಾಮ ಗಜಗಾಮಿನೀ ॥11॥
ಸುಂದರಿಯಾದ ಅವಳು ತನ್ನ ಎಡಭುಜದಲ್ಲಿ ಪತಿಯ ಬಾಹುವನ್ನು ಇಟ್ಟುಕೊಂಡು ಬಲಬಾಹುವಿನಿಂದ ಅವನನ್ನು ಆಲಂಗಿಸಿ ಗಜಗಾಮಿನಿಯಾದ ಅವಳು ಹೊರಟಳು.
ಸತ್ಯವಾನ್
ಅಭ್ಯಾಸಗಮನಾದ್ ಭೀರು ಪಂಥಾನೋ ವಿದಿತಾ ಮಮ |
ವೃಕ್ಷಾಂತರಾಲೋಕಿತಯಾ ಜ್ಯೋತ್ಸ್ನಯಾ ಚಾಪಿ ಲಕ್ಷಯೇ ॥12॥
ಸತ್ಯವಾನ್- ಭೀರುವೇ, ನಾನು ಇಲ್ಲಿಗೆ ಬಂದು ಅಭ್ಯಾಸವಿರುವುದರಿಂದ ದಾರಿಯನ್ನು ತಿಳಿದಿದ್ದೇನೆ ಮತ್ತು ಮರಗಳ ಸಂದಿಯಿಂದ ಬರುತ್ತಿರುವ ಬೆಳುದಿಂಗಳೂ ಸಹ ದಾರಿಯನ್ನು ತೋರಿಸುತ್ತಿದೆ.
ಆಗತೌ ಸ್ವಃ ಪಥಾ ಯೇನ ಫಲಾನ್ಯವಚಿತಾನಿ ಚ |
ಯಥಾಗತಂ ಶುಭೇ ಗಚ್ಛ ಪಂಥಾನಂ ಮಾ ವಿಚಾರಯ ॥13॥
ನಾವು ಹಣ್ಣುಗಳನ್ನು ಆರಿಸಿಕೊಂಡ ಮಾರ್ಗಕ್ಕೆ ಈಗ ನಾವು ಬಂದಿದ್ದೇವೆ. ಶುಭಳಾದವಳೇ, ನಾವು ಬಂದ ದಾರಿಯಲ್ಲಿಯೇ ಹಿಂದಿರುಗು. ದಾರಿಯ ವಿಷಯದಲ್ಲಿ ಯೋಚನೆಯನ್ನು ಮಾಡಬೇಡ.
ಪಲಾಶಖಂಡೇ ಚೈತಸ್ಮಿನ್ ಪಂಥಾ ವ್ಯಾವರ್ತತೇ ದ್ವಿಧಾ |
ತಸ್ಯೋತ್ತರೇಣ ಯಃ ಪಂಥಾಸ್ತೇನ ಗಚ್ಛ ತ್ವರಸ್ವ ಚ |
ಸ್ವಸ್ಥೋಽಸ್ಮಿ ಬಲವಾನಸ್ಮಿ ದಿದೃಕ್ಷುಃ ಪಿತರಾವುಭೌ ॥14॥
ಈ ಮುತ್ತುಗದ ಮರದ ಸಮೀಪದಲ್ಲಿ ದಾರಿಯು ಎರಡು ಕವಲಾಗಿ ಒಡೆಯುತ್ತದೆ. ಅದರಲ್ಲಿ ಉತ್ತರದ ಮಾರ್ಗವನ್ನು ಹಿಡಿದು ಶೀಘ್ರವಾಗಿ ಹೊರಡು. ನಾನು ಆರೋಗ್ಯವಾಗಿದ್ದೇನೆ, ಶಕ್ತಿಯುತನೂ ಆಗಿದ್ದೇನೆ ಮತ್ತು ತಂದೆ ತಾಯಿಗಳನ್ನು ನೋಡುವ ಇಚ್ಛೆಯನ್ನು ಉಳ್ಳವನಾಗಿದ್ದೇನೆ.
ಮಾರ್ಕಂಡೇಯಃ
ಬ್ರುವನ್ನೇವಂ ತ್ವರಾಯುಕ್ತಃ ಸಂಪ್ರಾಯಾದಾಶ್ರಮಂ ಪ್ರತಿ |
ಸಾವಿತ್ರೀಸಹಿತಃ ಶ್ರೀಮಾನ್ ಸತ್ಯವಾನ್ ಶಂಸಿತವ್ರತಃ ॥15॥
ಮಾರ್ಕಂಡೇಯರು ಹೀಗೆ ಹೇಳುತ್ತಲೇ ಶಂಸಿತವ್ರತನಾದ, ಕಾಂತಿಯುಕ್ತನಾದ ಸತ್ಯವಂತನು ಸಾವಿತ್ರೀ ಸಹಿತನಾಗಿ ಆಶ್ರಮದ ಕಡೆಗೆ ಪ್ರಯಾಣವನ್ನು ಬೆಳೆಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ಅಷ್ಟಶೀತ್ಯಧಿಕದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ಎಂಬತ್ತೊಂಬತ್ತನೆಯ ಅಧ್ಯಾಯ
ಪುತ್ರನನ್ನು ಕಾಣದೆ ಭಾರ್ಯಾಸಹಿತನಾದ ದ್ಯುಮತ್ಸೇನನ ವಿಲಾಪ. ಋಷಿಗಳಿಂದ ಮತ್ತು ಬ್ರಾಹ್ಮಣರಿಂದ ಅವನಿಗೆ ಸಮಾಧಾನ. ಸಾವಿತ್ರಿ ಮತ್ತು ಸತ್ಯವಂತರ ಆಗಮನ ಮತ್ತು ಅವರ ಜೊತೆಯಲ್ಲಿ ಸಂವಾದ.
ಮಾರ್ಕಂಡೇಯಃ
ಏತಸ್ಮಿನ್ನೇವ ಕಾಲೇ ತು ದ್ಯುಮತ್ಸೇನೋ ಮಹಾಬಲಃ |
ಲಬ್ಧಚಕ್ಷುಃ ಪ್ರಸನ್ನಾಯಾಂ ದೃಷ್ಟ್ಯಾಂ ಸರ್ವಂ ದದರ್ಶ ಹ ॥1॥
ಮಾರ್ಕಂಡೇಯ ಈ ಸಮಯದಲ್ಲಿಯೇ ಮಹಾಬಲನಾದ ದ್ಯುಮತ್ಸೇನನು ದೃಷ್ಟಿಯನ್ನು ಮರಳಿ ಪಡೆದು ಪ್ರಸನ್ನವಾದ ದೃಷ್ಟಿಯಿಂದ ಎಲ್ಲವನ್ನೂ ನೋಡಿದನು.
ಸ ಸರ್ವಾನಾಶ್ರಮಾನ್ ಗತ್ವಾ ಶೈಬ್ಯಯಾ ಸಹ ಭಾರ್ಯಯಾ |
ಪುತ್ರಹೇತೋಃ ಪರಾಮಾರ್ತಿಂ ಜಗಾಮ ಭರತರ್ಷಭ ॥2॥
ಎಲೈ ಭರತರ್ಷಭನೇ, ಅವನು ಮಗನನ್ನು ಹುಡುಕುವ ಸಲುವಾಗಿ ಪತ್ನಿಯಾದ ಶೈಬ್ಯೆಯ ಜೊತೆಯಲ್ಲಿ ಎಲ್ಲಾ ಆಶ್ರಮಗಳಿಗೂ ಹೋಗಿ ಬಹಳ ದುಃಖವನ್ನು ಹೊಂದಿದನು.
ತಾವಾಶ್ರಮಾನ್ ನದೀಶ್ಚೈವ ವನಾನಿ ಚ ಸರಾಂಸಿ ಚ |
ತಸ್ಯಾಂ ನಿಶಿ ವಿಚಿನ್ವಂತೌ ದಂಪತೀ ಪರಿಜಗ್ಮತುಃ ॥3॥
ಆ ದಂಪತಿಗಳು ಆ ರಾತ್ರಿಯಲ್ಲಿ ಎಲ್ಲಾ ಆಶ್ರಮಗಳನ್ನೂ, ಕಾಡುಪ್ರದೇಶಗಳನ್ನೂ, ನದಿಗಳನ್ನೂ, ಸರೋವರಗಳನ್ನೂ ಹುಡುಕುತ್ತಾ ಅಲೆದಾಡಿದರು.
ಶ್ರುತ್ವಾ ಶಬ್ದಂ ತು ಯಂ ಕಂಚಿದುನ್ಮುಖೌ ಸುತಶಂಕಯಾ |
ಸಾವಿತ್ರೀಸಹಿತೋಽಭ್ಯೇತಿ ಸತ್ಯವಾನಿತ್ಯಧಾವತಾಮ್ ॥4॥

ಯಾವುದೇ ಶಬ್ದ ಕೇಳಿದರೂ ತಮ್ಮ ಮಗನೆಂಬ ಶಂಕೆಯಿಂದ ಆ ಕಡೆಗೆ ಮುಖವನ್ನು ತಿರುಗಿಸಿ ಸಾವಿತ್ರೀ ಸಹಿತನಾಗಿ ಸತ್ಯವಂತನು ಬರುತ್ತಿದ್ದಾನೆಂದು ಆ ಕಡೆಗೆ ಓಡುತ್ತಿದ್ದರು.
ಭಿನ್ನೈಶ್ಚ ಪರುಷೈಃ ಪಾದೈಃ ಸವ್ರಣೈಃ ಶೋಣಿತೋಕ್ಷಿತೈಃ |
ಕುಶಕಂಟಕವಿದ್ಧಾಂಗಾವುನ್ಮತ್ತಾವಿವ ಧಾವತಃ ||5||
ಅವರ ಪಾದಗಳು ಸೀಳಿ ಗಾಯದಿಂದ ಕೂಡಿ ಕಲ್ಲುಮುಳ್ಳುಗಳನ್ನು ತುಳಿದು ರಕ್ತವು ಸೋರುತ್ತಿದ್ದರೂ ಅವರು ಹುಚ್ಚರಂತೆ ಓಡಿದರು.
ತತೋಽಭಿಸೃತ್ಯ ತೈರ್ವಿಪ್ರೈಃ ಸರ್ವೈರಾಶ್ರಮವಾಸಿಭಿಃ |
ಪರಿವಾರ್ಯ ಸಮಾಶ್ವಾಸ್ಯ ತಾವಾನೀತೌ ಸ್ವಮಾಶ್ರಮಮ್ ||6||
ಆಗ ಆ ಆಶ್ರಮವಾಸಿಗಳಾದ ಎಲ್ಲಾ ವಿಪ್ರರು ಅವರನ್ನು ಸಮೀಪಿಸಿ ಸುತ್ತುಗಟ್ಟಿ ಸಮಾಧಾನಪಡಿಸಿ ಆಶ್ರಮಕ್ಕೆ ಕರೆದುಕೊಂಡು ಬಂದರು.
ತತ್ರ ಭಾರ್ಯಾಸಹಾಯಃ ಸ ವೃತೋ ವೃದ್ಧೈಸ್ತಪೋಧನೈಃ |
ಆಶ್ವಾಸಿತೋ ವಿಚಿತ್ರಾರ್ಥೈಃ ಪೂರ್ವರಾಜ್ಞಾಂ ಕಥಾಶ್ರಯೈಃ ||7||
ಅಲ್ಲಿ ಭಾರ್ಯಾಸಹಿತನಾದ ಆ ತಂದೆಯನ್ನು ವೃದ್ಧರಾದ ತಪೋಧನರು ಪೂರ್ವರಾಜರ ವಿಚಿತ್ರಾರ್ಥವುಳ್ಳ ಕಥೆಗಳನ್ನು ಹೇಳಿ ಸಮಾಧಾನಪಡಿಸಿದರು.
ತತಸ್ತೌ ಪುನರಾಶ್ವಸ್ತೌ ವೃದ್ಧೌ ಪುತ್ರದಿದೃಕ್ಷಯಾ |
ಬಾಲ್ಯವೃತ್ತಾನಿ ಪುತ್ರಸ್ಯ ಸ್ಮರಂತೌ ಭೃಶದುಃಖಿತೌ ||8||
ಆಗ ಸಮಾಧಾನಗೊಂಡ ಆ ವೃದ್ಧ ದಂಪತಿಗಳು ಮಗನನ್ನು ನೋಡುವ ಇಚ್ಛೆಯಿಂದ ಪುತ್ರನ ಬಾಲ್ಯದಿಂದ ಹಿಡಿದು ನಡೆದ ಎಲ್ಲವನ್ನೂ ಸ್ಮರಿಸುತ್ತಾ ಬಹಳ ದುಃಖಪಟ್ಟರು.
ಪುನರುಕ್ತ್ವಾ ಚ ಕರುಣಾಂ ವಾಚಂ ತೌ ಶೋಕಕರ್ಶಿತೌ |
ಹಾ ಪುತ್ರ ಹಾ ಸಾಧ್ವಿ ವಧೂಃ ಕ್ವಾಸಿ ಕ್ವಾಸೀತ್ಯರೋದತಾಮ್ |
ಬ್ರಾಹ್ಮಣಃ ಸತ್ಯವಾಕ್ ತೇಷಾಮುವಾಚೇದಂ ತಯೋರ್ವಚಃ ||9||
ಶೋಕಕರ್ಶಿತರಾದ ಅವರು ಪುನಃ ಕರುಣಾಜನಕವಾಗಿ ಅಯ್ಯೋ ಪುತ್ರನೇ! ಅಯ್ಯೋ ಪತಿವ್ರತೆಯಾದ ಸೊಸೆಯೇ! ಎಲ್ಲಿದ್ದೀಯೆ, ಎಲ್ಲಿದ್ದೀಯೆ ಎಂದು ಹೇಳುತ್ತಾ ರೋದನವನ್ನು ಮಾಡಿದರು. ಆಗ ಸತ್ಯವಚನನಾದ ಅವರಲ್ಲಿ ಒಬ್ಬ ಬ್ರಾಹ್ಮಣನು ಅವರನ್ನು ಕುರಿತು ಹೀಗೆ ಮಾತನಾಡಿದನು.
ಗೌತಮಃ
ಯಥಾಸ್ಯ ಭಾರ್ಯಾ ಸಾವಿತ್ರೀ ತಪಸಾ ಚ ದಮೇನ ಚ |
ಆಚಾರೇಣ ಚ ಸಂಯುಕ್ತಾ ತಥಾ ಜೀವತಿ ಸತ್ಯವಾನ್ ||10||
ಗೌತಮ ಹೇಗೆ ಅವನ ಪತ್ನಿಯಾದ ಸಾವಿತ್ರಿಯು ತಪಸ್ಸಿನಿಂದಲೂ, ಇಂದ್ರಿಯ ನಿಗ್ರಹದಿಂದಲೂ ಮತ್ತು ಸದಾಚಾರದಿಂದಲೂ ಯುಕ್ತಳಾಗಿದ್ದಾಳೆಯೋ ಆ ಸತ್ಯದಿಂದ ಸತ್ಯವಂತನು ಬದುಕಿದ್ದಾನೆ.
ವೇದಾಃ ಸಾಂಗಾ ಮಯಾಧೀತಾಸ್ತಪೋ ಮೇ ಸಂಚಿತಂ ಮಹತ್ |
ಕೌಮಾರಬ್ರಹ್ಮಚರ್ಯಂ ಚ ಗುರವೋಽಗ್ನಿಶ್ಚ ತೋಷಿತಾಃ ||11||
ನಾನು ಸಾಂಗವಾದ ವೇದಾಧ್ಯಯನವನ್ನು ಮಾಡಿದ್ದೇನೆ. ದೊಡ್ಡ ತಪಸ್ಸನ್ನು ಮಾಡಿದ್ದೇನೆ. ಕೌಮಾರಬ್ರಹ್ಮಚರ್ಯವನ್ನು ಮಾಡಿ ಗುರುಗಳನ್ನೂ ಮತ್ತು ಅಗ್ನಿಯನ್ನೂ ಸಂತೋಷಪಡಿಸಿದ್ದೇನೆ.
ಸಮಾಹಿತೇನ ಚೀರ್ಣಾನಿ ಸರ್ವಾಣ್ಯೇವ ವ್ರತಾನಿ ಮೇ |
ವಾಯುಭಕ್ಷೋಪವಾಸಶ್ಚ ಕೃತೋ ಮೇ ವಿಧಿವತ್ ಪುರಾ ||12||
ಸಮಾಧಾನವುಳ್ಳ ಮನಸ್ಸಿನಿಂದ ಎಲ್ಲ ವ್ರತಗಳನ್ನೂ ಮಾಡಿದ್ದೇನೆ. ಹಿಂದೆ ವಿಧಿ ಪ್ರಕಾರವಾಗಿ ಕೇವಲ ವಾಯುಸೇವನೆಯನ್ನು ಮಾಡಿ ಉಪವಾಸವನ್ನೂ ಮಾಡಿದ್ದೇನೆ.
ಅನೇನ ತಪಸಾ ವೇದ್ಮಿ ಸರ್ವಂ ಪರಚಿಕೀರ್ಷಿತಮ್ |
ಸತ್ಯಮೇತನ್ನಿಬೋಧಧ್ವಂ ಧ್ರಿಯತೇ ಸತ್ಯವಾನಿತಿ ||13||
ಈ ತಪಸ್ಸಿನ ಬಲದಿಂದ ನಾನು ಇನ್ನೊಬ್ಬರಿಗೆ ಸಂಬಂಧಿಸಿದ ವಿಷಯವನ್ನೆಲ್ಲಾ ತಿಳಿದಿದ್ದೇನೆ. ನಾನು ಸತ್ಯವನ್ನು ಹೇಳುತ್ತಿದ್ದೇನೆ. ಇದನ್ನು ತಿಳಿಯಿರಿ. ಸತ್ಯವಂತನು ಜೀವಿಸಿದ್ದಾನೆ.
ಶಿಷ್ಯಃ
ಉಪಾಧ್ಯಾಯಸ್ಯ ಮೇ ವಕ್ತ್ರಾದ್ಯಥಾ ವಾಕ್ಯಂ ವಿನಿಃಸೃತಮ್ |
ನೈವ ಜಾತು ಭವೇನ್ಮಿಥ್ಯಾ ತಥಾ ಜೀವತಿ ಸತ್ಯವಾನ್ ||14||
ಶಿಷ್ಯ ನನ್ನ ಗುರುಗಳ ಮುಖದಿಂದ ಯಾವ ಮಾತುಗಳು ಬಂದಿವೆಯೋ ಅವು ಎಂದೂ ಸುಳ್ಳಾಗಿಲ್ಲ. ಅದರಂತೆ ಸತ್ಯವಂತನು ಬದುಕಿದ್ದಾನೆ.
ಋಷಯಃ
ಯಥಾಽಸ್ಯ ಭಾರ್ಯಾ ಸಾವಿತ್ರೀ ಸರ್ವೈರೇವ ಸುಲಕ್ಷಣೈಃ |
ಅವೈಧವ್ಯಕರೈರ್ಯುಕ್ತಾ ತಥಾ ಜೀವತಿ ಸತ್ಯವಾನ್ ||15||
ಋಷಿಗಳು ಹೇಗೆ ಅವನ ಪತ್ನಿಯಾದ ಸಾವಿತ್ರಿಯು ಅವೈಧವ್ಯಕರವಾದ (ಸೌಮಾಂಗಲ್ಯವನ್ನು ಸೂಚಿಸುವ) ಎಲ್ಲಾ ಶುಭಲಕ್ಷಣಗಳಿಂದಲೂ ಕೂಡಿದ್ದಾಳೆಯೋ ಅದರಂತೆ ಸತ್ಯವಂತನು ಬದುಕಿದ್ದಾನೆ.

ಭಾರದ್ವಾಜಃ
ಯಥಾಽಸ್ಯ ಭಾರ್ಯಾ ಸಾವಿತ್ರೀ ತಪಸಾ ಚ ದಮೇನ ಚ |
ಆಚಾರೇಣ ಚ ಸಂಯುಕ್ತಾ ತಥಾ ಜೀವತಿ ಸತ್ಯವಾನ್ ॥16॥
ಭಾರದ್ವಾಜ ಅವನ ಪತ್ನಿಯಾದ ಸಾವಿತ್ರಿಯು ಹೇಗೆ ತಪಸ್ಸಿನಿಂದಲೂ, ಇಂದ್ರಿಯ ನಿಗ್ರಹದಿಂದಲೂ ಮತ್ತು ಸದಾಚಾರದಿಂದಲೂ ಯುಕ್ತಳಾಗಿದ್ದಾಳೆಯೋ ಅದರಂತೆ ಸತ್ಯವಂತನು ಬದುಕಿದ್ದಾನೆ.
ದಾಲ್ಭ್ಯಃ
ಯಥಾ ದೃಷ್ಟಿಃ ಪ್ರವೃತ್ತಾ ತೇ ಸಾವಿತ್ರ್ಯಾಶ್ಚ ಯಥಾ ವ್ರತಮ್ |
ಗತಾಽಽಹಾರಮಕೃತ್ವಾ ಚ ತಥಾ ಜೀವತಿ ಸತ್ಯವಾನ್ ॥17॥
ದಾಲ್ಭ್ಯ ನನ್ನ ಜ್ಞಾನಕ್ಕೆ ಗೋಚರಿಸುವಂತೆ ಸಾವಿತ್ರಿಯು ಹೇಗೆ ವ್ರತವನ್ನು ಧರಿಸಿ ಆಹಾರವನ್ನು ಸೇವಿಸದೆ ಉಪವಾಸದಿಂದ ಹೋಗಿದ್ದಾಳೆಯೋ ಅದರಂತೆ ಸತ್ಯವಂತನು ಬದುಕಿದ್ದಾನೆ.
ಆಪಸ್ತಂಬಃ
ಯಥಾ ವದಂತಿ ಶಾಂತಾಯಾಂ ದಿಶಿ ವೈ ಮೃಗಪಕ್ಷಿಣಃ |
ಪಾರ್ಥಿವೀ ಚೈವ ವೃದ್ಧಿಸ್ತೇ ತಥಾ ಜೀವತಿ ಸತ್ಯವಾನ್ ॥18॥
ಆಪಸ್ತಂಬ ಹೇಗೆ ಈಶಾನ್ಯ ದಿಕ್ಕಿನಲ್ಲಿ ಶುಭವಾದ ಮೃಗಪಕ್ಷಿಗಳು ಹೇಳುತ್ತಿರುವಂತೆ ನಿನಗೆ ರಾಜ್ಯಪ್ರಾಪ್ತಿ ಉಂಟಾಗುವುದೋ ಅದರಂತೆ ಸತ್ಯವಂತನೂ ಬದುಕಿದ್ದಾನೆ.
ಧೌಮ್ಯಃ
ಸರ್ವೈರ್ಗುಣೈರುಪೇತಸ್ತೇ ಯಥಾ ಪುತ್ರೋ ಜನಪ್ರಿಯಃ |
ದೀರ್ಘಾಯುರ್ಲಕ್ಷಣೋಪೇತಸ್ತಥಾ ಜೀವತಿ ಸತ್ಯವಾನ್ ॥19॥
ಧೌಮ್ಯ ನಿನ್ನ ಪುತ್ರನು ಎಲ್ಲಾ ಗುಣಗಳಿಂದ ಕೂಡಿದವನು, ಜಯಪ್ರಿಯನು, ದೀರ್ಘಾಯುಷ್ಯದ ಲಕ್ಷಣದಿಂದ ಕೂಡಿದವನು ಆಗಿದ್ದಾನೆ. ಅದರಂತೆ ಸತ್ಯವಂತನು ಬದುಕಿದ್ದಾನೆ.
ಮಾರ್ಕಂಡೇಯಃ
ಏವಮಾಶ್ವಾಸಿತಸ್ತೈಃ ಸ ಸತ್ಯವಾಗ್ಭಿಸ್ತಪಸ್ವಿಭಿಃ |
ತಾಂಸ್ತಾನ್ ವಿಗಣಯನ್ ಸರ್ವಾಂಸ್ತತಃ ಸ್ಥಿರ ಇವಾಭವತ್ ॥20॥
ಮಾರ್ಕಂಡೇಯರು ಆ ಸತ್ಯವಾದಿಗಳಾದ ತಪಸ್ವಿಗಳಿಂದ ಹೀಗೆ ಸಮಾಧಾನ ಪಡಿಸಲ್ಪಟ್ಟ ದ್ಯುಮತ್ಸೇನನು ಅವರ ಮಾತುಗಳನ್ನೆಲ್ಲಾ ಚಿಂತಿಸಿ ಧೈರ್ಯವನ್ನು ತಂದುಕೊಂಡವನಂತೆ ಆದನು.
ತತೋ ಮುಹೂರ್ತಾತ್ ಸಾವಿತ್ರೀ ಭರ್ತ್ರಾ ಸತ್ಯವತಾ ಸಹ |
ಆಜಗಾಮಾಶ್ರಮಂ ರಾತ್ರೌ ಪ್ರಹೃಷ್ಟಾ ಪ್ರವಿವೇಶ ಹ ॥21॥
ಅನಂತರ ಒಂದುಮುಹೂರ್ತವು ಕಳೆದ ಮೇಲೆ ರಾತ್ರಿಯಲ್ಲಿ ಸತ್ಯವಂತನ ಜೊತೆಯಲ್ಲಿ ಸಾವಿತ್ರಿಯು ಸಂತೋಷದಿಂದ ಆಶ್ರಮವನ್ನು ಪ್ರವೇಶಿಸಿದಳು.
ದೃಷ್ಟ್ವಾ ಚೋತ್ಪತಿತಾಃ ಸರ್ವೇ ಹರ್ಷಂ ಜಗ್ಮುಶ್ಚ ತೇ ದ್ವಿಜಾಃ |
ಕಂಠಂ ಮಾತಾ ಪಿತಾ ಚಾಸ್ಯ ಸಮಾಲಿಂಗ್ಯಾಭ್ಯರೋದತಾಮ್ ॥22॥
ಅವರನ್ನು ನೋಡಿ ಬ್ರಾಹ್ಮಣರೆಲ್ಲರೂ ತಮ್ಮ ಆಸನದಿಂದ ನೆಗೆದು ಸಂತೋಷವನ್ನು ಪಟ್ಟರು. ಸತ್ಯವಂತನ ತಂದೆ ತಾಯಿಗಳು ಅವನ ಕಂಠವನ್ನು ಆಲಿಂಗಿಸಿ ರೋದನವನ್ನು ಮಾಡಿದರು.
ಬ್ರಾಹ್ಮಣಾಃ
ಪುತ್ರೇಣ ಸಂಗತಂ ತ್ವಾಂ ತು ಚಕ್ಷುಷ್ಮಂತಂ ನಿರೀಕ್ಷ್ಯ ಚ |
ಸರ್ವೇ ವಯಂ ವೈ ಪೃಚ್ಛಾಮೋ ವೃದ್ಧಿಂ ವೈ ಪೃಥಿವೀಪತೇ ॥23॥
ಬ್ರಾಹ್ಮಣರು ಎಲೈ ರಾಜನೇ, ಕಣ್ಣಿನ ದೃಷ್ಟಿಯನ್ನು ಪಡೆದು ಪುತ್ರನಿಂದ ಸಂಗತನಾದ ನಿನ್ನನ್ನು ನೋಡಿ ನಾವೆಲ್ಲರೂ ಅಭಿವೃದ್ಧಿಯನ್ನು ಹಾರೈಸುತ್ತೇವೆ.
ಸಮಾಗಮೇನ ಪುತ್ರಸ್ಯ ಸಾವಿತ್ರ್ಯಾ ದರ್ಶನೇನ ಚ |
ಚಕ್ಷುಷಶ್ಚಾತ್ಮನೋ ಲಾಭಾತ್ ತ್ರಿಭಿರ್ದಿಷ್ಟ್ಯಾಽಭಿವರ್ಧಸೇ ॥24॥
ಪುತ್ರನ ಆಗಮನದಿಂದ ಸಾವಿತ್ರಿಯ ದರ್ಶನದಿಂದ ಮತ್ತು ನಿನ್ನ ದೃಷ್ಟಿ ಲಾಭದಿಂದ -ಈ ಮೂರು ಸೂಚನೆಗಳಿಂದ ದೇವರ ದಯೆಯಿಂದ ನೀನು ಅಭಿವೃದ್ಧಿಯನ್ನು ಹೊಂದುತ್ತಿದ್ದೀಯೆ.
ಸರ್ವೈರಸ್ಮಾಭಿರುಕ್ತಂ ತೇ ತತ್ ತಥಾ ನಾತ್ರ ಸಂಶಯಃ |
ಭೂಯೋಭೂಯಃ ಸಮೃದ್ಧಿಸ್ತೇ ಕ್ಷಿಪ್ರಮೇವ ಭವಿಷ್ಯತಿ ॥25॥
ನಾವೆಲ್ಲರೂ ಹೇಗೆ ಹೇಳಿದೆವೋ ಅದು ಹಾಗೆಯೇ ಸರಿ. ಅದರಲ್ಲಿ ಸಂಶಯವಿಲ್ಲ. ಶೀಘ್ರದಲ್ಲಿಯೇ ನಿನಗೆ ಇನ್ನೂ ಹೆಚ್ಚು ಹೆಚ್ಚು ಸಮೃದ್ಧಿ ಉಂಟಾಗುವುದು.
ತತೋಽಗ್ನಿಂ ತತ್ರ ಸಂಜ್ವಾಲ್ಯ ದ್ವಿಜಾಸ್ತೇ ಸರ್ವ ಏವ ಹಿ |
ಉಪಾಸಾಂಚಕ್ರಿರೇ ಪಾರ್ಥ ದ್ಯುಮತ್ಸೇನಂ ಮಹೀಪತಿಮ್ ॥26॥
ಎಲೈ ಪಾರ್ಥನೇ, ಆಗ ಬ್ರಾಹ್ಮಣರೆಲ್ಲರೂ ಅಲ್ಲಿ ಅಗ್ನಿಯನ್ನು ಉತ್ಪಾದನೆ ಮಾಡಿ ರಾಜನಾದ ದ್ಯುಮತ್ಸೇನನನ್ನು ಅದರ ಬಳಿಯಲ್ಲಿ ಕೂಡಿಸಿದರು.

ಶೈಬ್ಯಾ ಚ ಸತ್ಯವಾಂಶ್ಚೈವ ಸಾವಿತ್ರೀ ಚೈಕತಃ ಸ್ಥಿತಾಃ |
ಸರ್ವೈಸ್ತೈರಭ್ಯನುಜ್ಞಾತಾ ವಿಶೋಕಾಃ ಸಮುಪಾವಿಶನ್ ॥27॥
ತಾಯಿಯಾದ ಶೈಬ್ಯೆ, ಸತ್ಯವಾನ್ ಮತ್ತು ಸಾವಿತ್ರಿಯರು ಬ್ರಾಹ್ಮಣರ ಅಪ್ಪಣೆಯನ್ನು ಪಡೆದು ಶೋಕರಹಿತರಾಗಿ ಒಂದುಕಡೆಯಲ್ಲಿ ಕುಳಿತುಕೊಂಡರು.
ತತೋ ರಾಜ್ಞಾ ಸಹಾಸೀನಾಃ ಸರ್ವೇ ತೇ ವನವಾಸಿನಃ |
ಜಾತಕೌತೂಹಲಾಃ ಪಾರ್ಥ ಪಪ್ರಚ್ಛುರ್ನೃಪತೇಃ ಸುತಮ್ ॥28॥
ಎಲೈ ಪಾರ್ಥನೇ, ಆಗ ರಾಜನ ಜೊತೆಯಲ್ಲಿ ಕುಳಿತಿದ್ದ ಆ ವನವಾಸಿಗಳೆಲ್ಲರೂ ಕುತೂಹಲದಿಂದ ಕೂಡಿದವರಾಗಿ ರಾಜಪುತ್ರನಾದ ಸತ್ಯವಂತನನ್ನು ಪ್ರಶ್ನೆ ಮಾಡಿದರು.
ಪ್ರಾಗೇವ ನಾಗತಂ ಕಸ್ಮಾತ್ ಸಭಾರ್ಯೇಣ ತ್ವಯಾ ವಿಭೋ |
ವಿರಾತ್ರೇ ಚಾಗತಂ ಕಸ್ಮಾತ್ ಕೋऽನುಬಂಧಸ್ತವಾಭವತ್ ॥29॥
ಎಲೈ ವಿಭುವೇ, ನೀನು ಪತ್ನಿಯ ಜೊತೆಯಲ್ಲಿ ಮೊದಲೇ ಏಕೆ ಬರಲಿಲ್ಲ? ಈ ಅಪರಾತ್ರಿಯಲ್ಲಿ ಏಕೆ ಬಂದೆ? ನಿನಗೆ ಏನು ತೊಂದರೆಯಾಯಿತು?
ಸಂತಾಪಿತಃ ಪಿತಾ ಮಾತಾ ವಯಂ ಚೈವ ನೃಪಾತ್ಮಜ |
ನಾಕಸ್ಮಾದೇವ ಜಾನೀಮಸ್ತತ್ ಸರ್ವಂ ವಕ್ತುಮರ್ಹಸಿ ॥30॥
ಎಲೈ ರಾಜಕುಮಾರನೇ, ನಿನ್ನ ತಂದೆ ತಾಯಿ ಮತ್ತು ನಾವು ದುಃಖಕ್ಕೆ ಒಳಗಾದೆವು. ಇದಕ್ಕೆ ಕಾರಣವಿಲ್ಲದೇ ಇರಲು ಸಾಧ್ಯವಿಲ್ಲವೆಂದು ನಾವು ತಿಳಿದಿದ್ದೇವೆ. ಅದೆಲ್ಲವನ್ನೂ ನೀನು ಹೇಳು.
ಸತ್ಯವಾನ್
ಪಿತ್ರಾऽಹಮಭ್ಯನುಜ್ಞಾತಃ ಸಾವಿತ್ರೀಸಹಿತೋ ಗತಃ |
ಅಥ ಮೇऽಭೂಚ್ಛಿರೋದುಃಖಂ ವನೇ ಕಾಷ್ಠಾನಿ ಭಿಂದತಃ ॥31॥
ಸತ್ಯವಾನ್ ನಾನು ತಂದೆಯ ಅನುಮತಿಯನ್ನು ಪಡೆದು ಸಾವಿತ್ರಿಯ ಜೊತೆಯಲ್ಲಿ ಕಾಡಿಗೆ ಹೊರಟೆ. ಅನಂತರ ಕಾಡಿನಲ್ಲಿ ಕಟ್ಟಿಗೆಯನ್ನು ಸೀಳುತ್ತಿದ್ದ ನನಗೆ ತಲೆಯ ನೋವು ಉಂಟಾಯಿತು.
ಸುಪ್ತಶ್ಚಾಹಂ ವೇದನಯಾ ಚಿರಮಿತ್ಯುಪಲಕ್ಷಯೇ |
ತಾವತ್ಕಾಲಂ ನ ಚ ಮಯಾ ಸುಪ್ತಪೂರ್ವಂ ಕದಾಚನ ॥32॥
ನೋವಿಗೆ ಒಳಗಾಗಿ ನಾನು ಬಹಳ ಹೊತ್ತು ಮಲಗಿ ನಿದ್ದೆ ಮಾಡಿದೆ ಎಂದು ತಿಳಿಯುತ್ತೇನೆ. ಅಷ್ಟು ಸಮಯದವರೆಗೆ ನಾನು ಹಿಂದೆ ಎಂದೂ ನಿದ್ದೆ ಮಾಡಿರಲಿಲ್ಲ.
ಸರ್ವೇಷಾಮೇವ ಭವತಾಂ ಸಂತಾಪೋ ಮಾ ಭವೇದಿತಿ |
ಅತೋ ವಿರಾತ್ರಾಗಮನಂ ನಾನ್ಯದಸ್ತೀಹ ಕಾರಣಮ್ ॥33॥
ನಿಮ್ಮೆಲ್ಲರಿಗೂ ಸಂತಾಪವಾಗಬಾರದೆಂದು ಈ ಅಪರಾತ್ರಿಯಲ್ಲಿ ಬಂದಿದ್ದೇನೆ (ಆ ನಿದ್ರೆಯ ಕಾರಣದಿಂದ ಬೇಗ ಹಿಂದಿರುಗಲು ಸಾಧ್ಯವಾಗಲಿಲ್ಲ). ಇಲ್ಲಿ ಬೇರೆ ಯಾವ ಕಾರಣವೂ ಇಲ್ಲ.
ಗೌತಮಃ
ಅಕಸ್ಮಾಚ್ಚಕ್ಷುಷಃ ಪ್ರಾಪ್ತಿರ್ದ್ಯುಮತ್ಸೇನಸ್ಯ ತೇ ಪಿತುಃ |
ನಾಸ್ಯ ತ್ವಂ ಕಾರಣಂ ವೇತ್ಸಿ ಸಾವಿತ್ರೀ ವಕ್ತುಮರ್ಹತಿ ॥34॥
ಗೌತಮ ನಿನ್ನ ತಂದೆಯಾದ ದ್ಯುಮತ್ಸೇನನಿಗೆ ಇದ್ದಕ್ಕಿದ್ದಂತೆಯೇ ದೃಷ್ಟಿ ಪ್ರಾಪ್ತಿಯಾಗುವುದಕ್ಕೆ ನೀನು ಕಾರಣವನ್ನು ತಿಳಿದಿಲ್ಲ. ಸಾವಿತ್ರಿಯು ಅದನ್ನು ಹೇಳಬೇಕು?
ಶ್ರೋತುಮಿಚ್ಛಾಮಿ ಸಾವಿತ್ರಿ ತ್ವಂ ಹಿ ವೇತ್ಥ ಪರಾವರಮ್ |
ತ್ವಾಂ ಹಿ ಜಾನಾಮಿ ಸಾವಿತ್ರಿ ಸಾವಿತ್ರೀಮಿವ ತೇಜಸಾ ॥35॥
ಸಾವಿತ್ರಿ, ನೀನು ಸಣ್ಣಪುಟ್ಟ ವಿಷಯಗಳನ್ನೂ, ದೊಡ್ಡ ವಿಷಯಗಳನ್ನು ಎಲ್ಲವನ್ನೂ ತಿಳಿದಿದ್ದೀಯೆ. ಸಾವಿತ್ರಿಯಂತೆ ನೀನು ತೇಜಸ್ಸಿನಿಂದ ಕೂಡಿದವಳಾಗಿದ್ದೀಯೆ ಎಂದು ನಾನು ತಿಳಿದಿದ್ದೇನೆ. ನಿನ್ನ ಮಾತುಗಳನ್ನು ಕೇಳಲು ಬಯಸುತ್ತೇನೆ.
ತ್ವಮತ್ರ ಹೇತುಂ ಜಾನೀಷೇ ತಸ್ಮಾತ್ ಸತ್ಯಂ ನಿರುಚ್ಯತಾಮ್ |
ರಹಸ್ಯಂ ಯದಿ ತೇ ನಾಸ್ತಿ ಕಿಂಚಿದತ್ರ ವದಸ್ವ ನಃ ॥36॥
ನೀನು ಇದಕ್ಕೆ ಕಾರಣವನ್ನು ತಿಳಿದಿದ್ದೀಯೆ. ಅದು ರಹಸ್ಯವಾಗದಿದ್ದರೆ ನಮ್ಮನ್ನು ಕುರಿತು ಈ ವಿಷಯದಲ್ಲಿ ಸತ್ಯವನ್ನು ನುಡಿ.
ಸಾವಿತ್ರೀ
ಏವಮೇತದ್ ಯಥಾ ವೇತ್ಥ ಸಂಕಲ್ಪೋ ನಾನ್ಯಥಾ ಹಿ ವಃ |
ನ ಹಿ ಕಿಂಚಿದ್ ರಹಸ್ಯಂ ಮೇ ಶ್ರೂಯತಾಂ ತಥ್ಯಮೇವ ಯತ್ ॥37॥
ಸಾವಿತ್ರೀ ನಿಮ್ಮ ಸಂಕಲ್ಪವು ಹೇಗಿದೆಯೋ ಅದರಂತೆ ನೀವು ತಿಳಿದಿರುವಂತೆಯೇ ಎಲ್ಲವೂ ನಡೆದಿದೆ. ಇದರಲ್ಲಿ ಯಾವ ರಹಸ್ಯವೂ ಇಲ್ಲ. ನನ್ನ ಸತ್ಯವಚನಗಳನ್ನು ಕೇಳಿ.
ಮೃತ್ಯುರ್ಮೇ ಪತ್ಯುರಾಖ್ಯಾತೋ ನಾರದೇನ ಮಹಾತ್ಮನಾ |
ಸ ಚಾದ್ಯ ದಿವಸಃ ಪ್ರಾಪ್ತಸ್ತತೋ ನೈನಂ ಜಹಾಮ್ಯಹಮ್ ॥38॥
ಮಹಾತ್ಮರಾದ ನಾರದರು ನನ್ನ ಪತಿಯ ಮರಣದ ಕಾಲವನ್ನು ಸೂಚಿಸಿದ್ದರು. ಇಂದು ಆ ದಿನವು ಪ್ರಾಪ್ತವಾಯಿತು. ಆದ್ದರಿಂದ ನಾನು ಪತಿಯನ್ನು ಬಿಡಲಿಲ್ಲ.

ಸುಪ್ತಂ ಚೈನಂ ಯಮಃ ಸಾಕ್ಷಾದುಪಾಗಚ್ಛತ್ ಸಕಿಂಕರಃ|
ಸ ಏನಮನಯದ್ ಬದ್ಧ್ವಾ ದಿಶಂ ಪಿತೃನಿಷೇವಿತಾಮ್ ॥39॥
ಇವನು ಮಲಗಿ ನಿದ್ರಿಸುತ್ತಿದ್ದಾಗ ಸಾಕ್ಷಾತ್ ಯಮದೇವರು ತಮ್ಮ ಸೇವಕರ ಜೊತೆಯಲ್ಲಿ ಬಂದರು. ಅವರು ಇವನನ್ನು ಕಟ್ಟಿ ಪಿತೃಸೇವಿತವಾದ ದಕ್ಷಿಣ ದಿಕ್ಕಿಗೆ ಇವನನ್ನು ಕರೆದುಕೊಂಡು ಹೊರಟರು.
ಅಸ್ತೌಷಂ ತಮಹಂ ದೇವಂ ಸತ್ಯೇನ ವಚಸಾ ವಿಭುಮ್|
ಪಂಚ ವೈ ತೇನ ಮೇ ದತ್ತಾ ವರಾಃ ಶೃಣುತ ತಾನ್ ಮಮ ॥40॥
ನಾನು ವಿಭುವಾದ ಆ ದೇವನನ್ನು ಸತ್ಯವಚನಗಳಿಂದ ಸ್ತೋತ್ರವನ್ನು ಮಾಡಿದೆ. ಯಮನು ನನಗೆ ಐದು ವರಗಳನ್ನು ಕೊಟ್ಟನು. ಅದನ್ನು ನನ್ನಿಂದ ಕೇಳಿ.
ಚಕ್ಷುಷೀ ಚ ಸ್ವರಾಜ್ಯಂ ಚ ದ್ವೌ ವರೌ ಶ್ವಶುರಸ್ಯ ಮೇ|
ಲಬ್ಧಂ ಪಿತುಃ ಪುತ್ರಶತಂ ಪುತ್ರಾಣಾಂ ಚಾತ್ಮನಃ ಶತಮ್ ॥41॥
ಚತುರ್ವರ್ಷಶತಾಯುರ್ಮೇ ಭರ್ತುರ್ಲಬ್ಧಶ್ಚ ಸತ್ಯವಾನ್|
ಭರ್ತುರ್ಹಿ ಜೀವಿತಾರ್ಥಂ ತು ಮಯಾ ಚೀರ್ಣಂ ತ್ವಿದಂ ವ್ರತಮ್ ॥
ಮಾವನಿಗೆ ಸ್ವರಾಜ್ಯ ಪ್ರಾಪ್ತಿ ಮತ್ತು ದೃಷ್ಟಿ ಪ್ರಾಪ್ತಿ ಎಂಬ ಎರಡು ವರಗಳು. ತಂದೆಗೆ ನೂರು ಮಕ್ಕಳು, ನನಗೆ ನೂರು ಮಕ್ಕಳು, ಪತಿಯಾದ ಸತ್ಯವಂತನಿಗೆ ನಾಲ್ಕುನೂರು ವರ್ಷಗಳ ಆಯುಷ್ಯ (ಇವುಗಳನ್ನು ವರವಾಗಿ ಪಡೆದೆನು). ಪತಿಯ ಜೀವನದ ಸಲುವಾಗಿ ನಾನು ಈ ವ್ರತವನ್ನು ಆಚರಿಸಿದೆನು.
ಏತತ್ಸರ್ವಂ ಮಯಾಽಽಖ್ಯಾತಂ ಕಾರಣಂ ವಿಸ್ತರೇಣ ವಃ|
ಯಥಾವೃತ್ತಂ ಸುಖೋದರ್ಕಮಿದಂ ದುಃಖಂ ಮಹನ್ಮಮ ॥43॥
ನಾನು ನಿಮಗೆ ಎಲ್ಲ ಕಾರಣವನ್ನೂ ವಿಸ್ತಾರವಾಗಿ ನಡೆದಂತೆ ಹೇಳಿದ್ದೇನೆ. ಇಂತಹ ಸುಖಾಂತ್ಯವನ್ನು ಹೊಂದಿದ ಮಹಾದುಃಖವು ನನಗೆ ಪ್ರಾಪ್ತವಾಗಿದ್ದಿತು.
ಋಷಯಃ
ನಿಮಜ್ಜಮಾನಂ ವ್ಯಸನೈರಭಿದ್ರುತಂ
ಕುಲಂ ನರೇಂದ್ರಸ್ಯ ತಮೋಮಯೇ ಹ್ರದೇ|
ತ್ವಯಾ ಸುಶೀಲವ್ರತಪುಣ್ಯಯಾ ಕುಲಂ
ಸಮುದ್ಧೃತಂ ಸಾಧ್ವಿ ಪುನಃ ಕುಲೀನಯಾ ॥44॥
ಋಷಯಃ ಎಲೌ ಪತಿವ್ರತೆಯೇ, ವ್ಯಸನಗಳಿಗೆ ತುತ್ತಾಗಿ ಅಂಧಕಾರಮಯವಾದ ಸರೋವರದಲ್ಲಿ ಮುಳುಗುತ್ತಿದ್ದ ರಾಜನ ಕುಲವನ್ನು ಕುಲೀನಳೂ, ಒಳ್ಳೆಯ ಶೀಲ ಮತ್ತು ವ್ರತಸಂಪನ್ನಳೂ ಮತ್ತು ಪುಣ್ಯವಂತಳೂ ಆದ ನೀನು ಪುನಃ ಉದ್ಧರಿಸಿದ್ದೀಯೆ.
ಮಾರ್ಕಂಡೇಯಃ
ತಥಾ ಪ್ರಶಸ್ಯ ಹ್ಯಭಿಪೂಜ್ಯ ಚೈವ
ವರಸ್ತ್ರಿಯಂ ತಾಮೃಷಯಃ ಸಮಾಗತಾಃ|
ನರೇಂದ್ರಮಾಮಂತ್ರ್ಯ ಸಪುತ್ರಮಂಜಸಾ
ಶಿವೇನ ಜಗ್ಮುರ್ಮುದಿತಾಃ ಸ್ವಮಾಲಯಮ್ ॥45॥
ಮಾರ್ಕಂಡೇಯರು ಅಲ್ಲಿಗೆ ಪ್ರಾಪ್ತರಾಗಿದ್ದ ಋಷಿಗಳು ಆ ಶ್ರೇಷ್ಠವನಿತೆಯನ್ನು ಹಾಗೆ ಹೊಗಳಿ ಸತ್ಕರಿಸಿ, ಪುತ್ರಸಹಿತನಾದ ದ್ಯುಮತ್ಸೇನ ರಾಜನ ಅನುಮತಿಯನ್ನು ಪಡೆದು ಸುಖದಿಂದ ಕೂಡಿ ತಮ್ಮ ತಮ್ಮ ನಿವಾಸಗಳಿಗೆ ನಿರ್ವಿಘ್ನವಾಗಿ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ಏಕೋನನವತಿತದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ಎಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ತನೆಯ ಅಧ್ಯಾಯ
ದ್ಯುಮತ್ಸೇನನಿಗೆ ಸ್ವರಾಜ್ಯಪ್ರಾಪ್ತಿ ಮತ್ತು ಸತ್ಯವಂತನಿಗೆ ಪಟ್ಟಾಭಿಷೇಕ.
ಮಾರ್ಕಂಡೇಯಃ
ತಸ್ಯಾಂ ರಾತ್ರ್ಯಾಂ ವ್ಯತೀತಾಯಾಮುದಿತೇ ಸೂರ್ಯಮಂಡಲೇ|
ಕೃತಪೌರ್ವಾಹ್ಣಿಕಾಃ ಸರ್ವೇ ಸಮೀಯುಸ್ತೇ ತಪೋಧನಾಃ ॥1॥
ಮಾರ್ಕಂಡೇಯರು ಆ ರಾತ್ರಿಯು ಕಳೆದು ಸೂರ್ಯೋದಯವಾಗುತ್ತಿರಲು ತಪೋಧನರೆಲ್ಲರೂ ಪೂರ್ವಾಹ್ನಿಕ ಕ್ರಿಯೆಗಳನ್ನು ಮಾಡಿ ಒಂದುಕಡೆ ಸೇರಿದರು.
ತದೇವ ಸರ್ವಂ ಸಾವಿತ್ರ್ಯಾ ಮಹಾಭಾಗ್ಯಂ ಮಹರ್ಷಯಃ|
ದ್ಯುಮತ್ಸೇನಾಯ ನಾತೃಪ್ಯನ್ ಕಥಯಂತಃ ಪುನಃ ಪುನಃ ॥2॥
ಮಹರ್ಷಿಗಳು ಸಾವಿತ್ರಿಯ ಮತ್ತು ದ್ಯುಮತ್ಸೇನನ ಅದೇ ಸೌಭಾಗ್ಯವೆಲ್ಲವನ್ನೂ ಪುನಃ ಪುನಃ ಹೇಳುತ್ತಾ ತೃಪ್ತಿಯನ್ನೇ ಹೊಂದಲಿಲ್ಲ.
ತತಃ ಪ್ರಕೃತಯಃ ಸರ್ವಾಃ ಸಾಲ್ವೇಭ್ಯೋಽಭ್ಯಾಗತಾ ನೃಪ|

ಆಚಕ್ಷುರ್ನಿಹತಂ ಚೈವ ಸ್ವೇನಾಮಾತ್ಯೇನ ತಂ ದ್ವಿಷಮ್ ॥3॥
ಎಲೈ ರಾಜನೇ, ಅನಂತರ ಸಾಲ್ವ ದೇಶದಿಂದ ಬಂದ ಎಲ್ಲಾ ಪ್ರಜೆಗಳು ತಮ್ಮ ಅಮಾತ್ಯನಿಂದ ಶತ್ರುವು ಹತನಾದ ವಿಷಯವನ್ನು ಹೇಳಿದರು.
ತಂ ಮಂತ್ರಿಣಾ ಹತಂ ಶ್ರುತ್ವಾ ಸಸಹಾಯಂ ಸಬಾಂಧವಮ್ |
ನ್ಯವೇದಯನ್ ಯಥಾವೃತ್ತಂ ವಿದ್ರುತಂ ಚ ದ್ವಿಷದ್ಬಲಮ್ ॥4॥
ಮಂತ್ರಿಯು ತನ್ನ ಬಂಧು ಮತ್ತು ಸೈನಿಕರೊಂದಿಗೆ ಹತನಾದ ವಿಷಯವನ್ನು ತಿಳಿಸಿ ಶತ್ರುಗಳ ಸೈನ್ಯವು ಓಡಿಹೋಯಿತೆಂಬ ವಾರ್ತೆಯನ್ನು ಯಥಾರ್ಥವಾಗಿ ತಿಳಿಸಿದರು.
ಪ್ರಜಾಃ
ಐಕಮತ್ಯಂ ಚ ಸರ್ವಸ್ಯ ಜನಸ್ಯಾಥ ನೃಪಂ ಪ್ರತಿ |
ಸಚಕ್ಷುರ್ವಾಪ್ಯಚಕ್ಷುರ್ವಾ ಸ ನೋ ರಾಜಾ ಭವತ್ವಿತಿ ॥5॥
ಪ್ರಜೆಗಳು ಪ್ರಜೆಗಳೆಲ್ಲರೂ ಐಕಮತ್ಯದಿಂದ ನಮ್ಮ ರಾಜನು ಕಣ್ಣಿದ್ದವನಾಗಿರಲಿ ಅಥವಾ ಇಲ್ಲದವನಾಗಿರಲಿ ಅವನೇ ನಮಗೆ ರಾಜನಾಗಬೇಕು ಎಂದು ಹೇಳುತ್ತಾರೆ.
ಅನೇನ ನಿಶ್ಚಯೇನೇಹ ವಯಂ ಪ್ರಸ್ಥಾಪಿತಾ ನೃಪ |
ಪ್ರಾಪ್ತಾನೀಮಾನಿ ಯಾನಾನಿ ಚತುರಂಗಂ ಚ ತೇ ಬಲಮ್ ॥6॥
ಎಲೈ ರಾಜನೇ, ಈ ಒಂದು ನಿಶ್ಚಯದಿಂದ ನಾವು ಇಲ್ಲಿಗೆ ಕಳುಹಿಸಲ್ಪಟ್ಟಿದ್ದೇವೆ. ನಿನ್ನ ಚತುರಂಗ ಸೈನ್ಯವು ಮತ್ತು ಈ ವಾಹನಗಳು ಇಲ್ಲಿಗೆ ಬಂದಿವೆ.
ಪ್ರಯಾಹಿ ರಾಜನ್ ಭದ್ರಂ ತು ಘುಷ್ಟಸ್ತೇ ನಗರೇ ಜಯಃ |
ಅಧ್ಯಾಸ್ಸ್ವ ಚಿರರಾತ್ರಾಯ ಪಿತೃಪೈತಾಮಹಂ ಪದಮ್ ॥7॥
ರಾಜನೇ, ನಿನಗೆ ಮಂಗಳವಾಗಲಿ. ನಗರದಲ್ಲಿ ನಿನ್ನ ಜಯವನ್ನು ಘೋಷಿಸಿದ್ದಾಗಿದೆ. ನೀನು ಇಲ್ಲಿಂದ ಹೊರಡು. ಬಹುಕಾಲದವರೆಗೆ ಪಿತೃಪಿತಾಮಹರಿಂದ ಬಂದ ಸ್ಥಾನವನ್ನು ಅಲಂಕರಿಸು.
ಮಾರ್ಕಂಡೇಯಃ
ಚಕ್ಷುಷ್ಮಂತಂ ಚ ತಂ ದೃಷ್ಟ್ವಾ ರಾಜಾನಂ ವಪುಷಾಽನ್ವಿತಮ್ |
ಮೂರ್ಧಭಿಃ ಪತಿತಾಃ ಸರ್ವೇ ವಿಸ್ಮಯೋತ್ಫುಲ್ಲಲೋಚನಾಃ ॥8॥
ಮಾರ್ಕಂಡೇಯರು ಆ ರಾಜನು ಒಳ್ಳೆಯ ಶರೀರವನ್ನು ಹೊಂದಿ ದೃಷ್ಟಿಯನ್ನು ಹೊಂದಿರುವುದನ್ನು ಕಂಡು ಎಲ್ಲರೂ ಆಶ್ಚರ್ಯದಿಂದ ವಿಕಸಿತ ನಯನರಾಗಿ ಶಿರಸಾ ನಮಸ್ಕಾರವನ್ನು ಮಾಡಿದರು.
ತತೋಽಭಿವಾದ್ಯ ತಾನ್ವೃದ್ಧಾನ್ ದ್ವಿಜಾನಾಶ್ರಮವಾಸಿನಃ |
ತೈಶ್ಚಾಭಿಪೂಜಿತಃ ಸರ್ವೈಃ ಪ್ರಯಯೌ ನಗರಂ ಪ್ರತಿ ॥9॥
ಅನಂತರ ಆಶ್ರಮವಾಸಿಗಳಾದ ಎಲ್ಲಾ ಬ್ರಾಹ್ಮಣರನ್ನೂ ಮತ್ತು ವೃದ್ಧರನ್ನೂ ನಮಸ್ಕರಿಸಿ ಅವರೆಲ್ಲರಿಂದಲೂ ಸತ್ಕರಿಸಲ್ಪಟ್ಟು ರಾಜನು ತನ್ನ ನಗರಕ್ಕೆ ಹೊರಟನು.
ಶೈಬ್ಯಾ ಚ ಸಹ ಸಾವಿತ್ರ್ಯಾ ಸ್ವಾಸ್ತೀರ್ಣೇನ ಸುವರ್ಚಸಾ |
ನರಯುಕ್ತೇನ ಯಾನೇನ ಪ್ರಯಯೌ ಸೇನಯಾ ವೃತಾ ॥10॥
ಒಳ್ಳೆಯ ಹಾಸುಗಳನ್ನು ಹಾಸಿದ್ದ ನರಯಾನದಲ್ಲಿ (ಪಲ್ಲಕ್ಕಿಯಲ್ಲಿ) ಶೈಬ್ಯೆಯೂ ಸಾವಿತ್ರಿಯಿಂದ ಕೂಡಿ ಸೇನೆಯಿಂದ ಆವೃತಳಾಗಿ ಹೊರಟಳು.
ತತೋಽಭಿಷಿಷಿಚುಃ ಪ್ರೀತ್ಯಾ ದ್ಯುಮತ್ಸೇನಂ ಪುರೋಹಿತಾಃ |
ಪುತ್ರಂ ಚಾಸ್ಯ ಮಹಾತ್ಮಾನಂ ಯೌವರಾಜ್ಯೇಽಭ್ಯಷೇಚಯನ್ ॥11॥
ಅನಂತರ ಅವನ ಪುರೋಹಿತರು ದ್ಯುಮತ್ಸೇನನಿಗೆ ಸಂತೋಷದಿಂದ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿ ಅವನ ಪುತ್ರನಾದ ಮಹಾತ್ಮನಾದ ಸತ್ಯವಂತನಿಗೆ ಯೌವರಾಜ್ಯದಲ್ಲಿ ಅಭಿಷೇಕವನ್ನು ಮಾಡಿದರು.
ತತಃ ಕಾಲೇನ ಮಹತಾ ಸಾವಿತ್ರ್ಯಾಃ ಕೀರ್ತಿವರ್ಧನಮ್ |
ತದ್ವೈ ಪುತ್ರಶತಂ ಜಜ್ಞೇ ಶೂರಾಣಾಮನಿವರ್ತಿನಾಮ್ ॥12॥
ಕಾಲಕ್ರಮದಲ್ಲಿ ಸಾವಿತ್ರಿಗೆ ಕೀರ್ತಿವರ್ಧನರೂ, ಶೂರರೂ, ಯುದ್ಧದಿಂದ ಹಿಮ್ಮೆಟ್ಟದವರೂ ಆದ ನೂರು ಪುತ್ರರು ಜನಿಸಿದರು.
ಭ್ರಾತೄಣಾಂ ಸೋದರಾಣಾಂ ಚ ತಥೈವಾಸ್ಯಾಭವಚ್ಛತಮ್ |
ಮದ್ರಾಧಿಪಸ್ಯಾಶ್ವಪತೇರ್ಮಾಲವ್ಯಾಂ ಸುಮಹದ್ಬಲಮ್ ॥13॥
ಮದ್ರಾದೇಶಾದಿಪತಿಯಾದ ಅಶ್ವಪತಿಗೂ ಸಹ ತನ್ನ ಪತ್ನಿಯಾದ ಮಾಲವಿಯಲ್ಲಿ ಮಹಾಬಲಶಾಲಿಗಳಾದ ನೂರುಪುತ್ರರು ಪರಸ್ಪರ ಸೋದರರಾಗಿ ಜನಿಸಿದರು.
ಏವಮಾತ್ಮಾ ಪಿತಾ ಮಾತಾ ಶ್ವಶ್ರೂಃ ಶ್ವಶುರ ಏವ ಚ |
ಭರ್ತುಃ ಕುಲಂ ಚ ಸಾವಿತ್ರ್ಯಾ ಸರ್ವಂ ಕೃಚ್ಛ್ರಾತ್ ಸಮುದ್ಧೃತಮ್ ॥
ಹೀಗೆ ಸಾವಿತ್ರಿಯು ತಾನು, ತಂದೆತಾಯಿಗಳು, ಅತ್ತೆಮಾವಂದಿರು, ಪತಿಯ ಕುಲ ಈ ಎಲ್ಲವನ್ನೂ ಕಷ್ಟದಿಂದ ಪಾರುಮಾಡಿದಳು.
ತಥೈವೈಷಾ ಹಿ ಕಲ್ಯಾಣೀ ದ್ರೌಪದೀ ಶೀಲಸಮ್ಮತಾ |
ತಾರಯಿಷ್ಯತಿ ವಃ ಸರ್ವಾನ್ ಸಾವಿತ್ರೀವ ಕುಲಾಂಗನಾ ॥15॥
ಅದರಂತೆಯೇ, ಒಳ್ಳೆಯ ಶೀಲವುಳ್ಳ ಕಲ್ಯಾಣಿಯಾದ ಈ ದ್ರೌಪದಿಯು ಕುಲಾಂಗನೆಯಾದ ಸಾವಿತ್ರಿಯಂತೆ ನಿಮ್ಮೆಲ್ಲರನ್ನೂ ಕಷ್ಟದಿಂದ

ಪಾರುಮಾಡುವಳು.
ವೈಶಂಪಾಯನಃ
ಏವಂ ಸ ಪಾಂಡವಸ್ತೇನ ಅನುನೀತೋ ಮಹಾತ್ಮನಾ |
ವಿಶೋಕೋ ವಿಜ್ವರೋ ರಾಜನ್ ಕಾಮ್ಯಕೇ ನ್ಯವಸನ್ ತದಾ ॥16॥
ವೈಶಂಪಾಯನ ಎಲೈ ಜನಮೇಜಯರಾಜನೇ, ಹೀಗೆ ಮಹಾತ್ಮರಾದ ಮಾರ್ಕಂಡೇಯರಿಂದ ಸಮಾಧಾನಪಡಿಸಲ್ಪಟ್ಟ ಯುಧಿಷ್ಠಿರನು ತನ್ನ ಶೋಕ ಮತ್ತು ಸಂತಾಪಗಳನ್ನು ತ್ಯಜಿಸಿ ಕಾಮ್ಯಕವನದಲ್ಲಿ ವಾಸಮಾಡಿದನು.
ಯಶ್ಚೇದಂ ಶೃಣುಯಾದ್ ಭಕ್ತ್ಯಾ ಸಾವಿತ್ರ್ಯಾಖ್ಯಾನಮುತ್ತಮಮ್ |
ಸ ಸುಖೀ ಸರ್ವಸಿದ್ಧಾರ್ಥೋ ನ ದುಃಖಂ ಪ್ರಾಪ್ನುಯಾನ್ನರಃ ॥17॥
ಯಾವನು ಸಾವಿತ್ರಿಯ ಶ್ರೇಷ್ಠವಾದ ಈ ಆಖ್ಯಾನವನ್ನು ಭಕ್ತಿಯಿಂದ ಕೇಳುವನೋ ಅವನು ಸುಖಿಯೂ, ತನ್ನ ಅಪೇಕ್ಷೆಯನ್ನು ಪೂರ್ಣಮಾಡಿಕೊಳ್ಳುವವನೂ ಆಗುವನು. ಅವನು ದುಃಖವನ್ನು ಹೊಂದುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪತಿವ್ರತಾಮಹಾತ್ಮ್ಯಪರ್ವಣಿ ನವತಿತದ್ವಿಶತತಮೋಽಧ್ಯಾಯಃ ॥
॥ ಇತಿ ಸಾವಿತ್ರ್ಯುಪಾಖ್ಯಾನಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತನೆಯ
ಅಧ್ಯಾಯ ಮುಗಿಯಿತು.
॥ ಸಾವಿತ್ರ್ಯುಪಾಖ್ಯಾನಂ ಸಮಾಪ್ತಮ್ ॥
* * * *
ಕುಂಡಲಾಹರಣಪರ್ವ
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಸಕುಂಡಲಂ ಸಕವಚಮವಧ್ಯಂ ಸೂರ್ಯನಂದನಮ್ |
ಜ್ಞಾತ್ವೇಂದ್ರ ಉಭಯಂ ತಸ್ಮಾದ್ವೈಚ್ಛಾದಾದಾತುಮುತ್ತಮಮ್ ॥414॥
ಕರ್ಣಕುಂಡಲಯುಕ್ತನಾಗಿಯೂ ಕವಚಯುಕ್ತನಾಗಿಯೂ ಇರುವಷ್ಟು ಕಾಲ ಅವಧ್ಯನಾಗಿರುತ್ತಾನೆ ಎಂದು ತಿಳಿದು ಇಂದ್ರ ಉತ್ತಮವಾದ ಆ ಎರಡನ್ನೂ ಅವನಿಂದ ತೆಗೆದುಕೊಳ್ಳಲು ಬಯಸಿದ.
ತದ್ ವಿಜ್ಞಾಯ ರವಿಃ ಕರ್ಣಂ ಸ್ವಪ್ನ ಉಕತ್ವ ನ್ಯವಾರಯತ್ |
ಸರ್ವಥಾ ದಾಸ್ಯ ಇತ್ಯುಕ್ತೇ ಪ್ರಾಹಾಽದೇಯಂ ವರಾಯುಧಮ್ ॥415॥
ಇಂದ್ರನ ಸಂಕಲ್ಪವನ್ನು ತಿಳಿದ ಸೂರ್ಯ ಕರ್ಣನಿಗೆ ಸ್ವಪ್ನದಲ್ಲಿ ಇಂದ್ರನ ಬಯಕೆಯನ್ನು ತಿಳಿಸಿ `ಅವನು ಕೇಳುವುದನ್ನು ಕೊಡಬೇಡ' ಎಂದು ತಡೆದ. `ಸರ್ವಥಾ ಕೊಡುವೆನೆಂದು' ಕರ್ಣ ಹೇಳಿದಾಗ `ಹಾಗಾದರೆ ಶ್ರೇಷ್ಠವಾದ ಆಯುಧವನ್ನು ಇಂದ್ರನಿಂದ ಪಡೆ' ಎಂದ.
ದದೌ ಚೋತ್ಕೃತ್ಯ ಕವಚಂ ಕುಂಡಲೇ ಚ ಶಚೀಪತೇಃ |
ಅಮೋಘಾಂ ಶಕ್ತಿಮಾದಾಯ ಜ್ಞಾತ್ವೇಂದ್ರಂ ದ್ವಿಜರೂಪಿಣಮ್ ॥416॥
ಕರ್ಣ ಬ್ರಾಹ್ಮಣ ರೂಪಿಯಾಗಿ ಬಂದವನನ್ನು ಇಂದ್ರನೆಂದು ತಿಳಿದು ಅವನಿಂದ ಅಮೋಘವಾದ ಶಕ್ತ್ಯಾಯುಧವನ್ನು ಪಡೆದು ಕವಚವನ್ನೂ ಕುಂಡಲವನ್ನೂ ಶರೀರದಿಂದ ಕತ್ತರಿಸಿ ಅವನಿಗೆ ಕೊಟ್ಟ.
ಋತೇಽರ್ಜುನಾದೇಕಮೇವ ವಧಿಷ್ಯಸ್ಯನಯೇತಿ ಸಃ |
ದತ್ವಾ ಶಕ್ತಿಂ ಯಯೌ ಶಕ್ರಃ ಸಾರ್ದ್ಧಂ ಕವಚಕುಂಡಲೈಃ ॥417॥
ಅರ್ಜುನನನ್ನು ಹೊರತು ಒಬ್ಬನನ್ನು ಮಾತ್ರ ಈ ಶಕ್ತ್ಯಾಯುಧದಿಂದ ನೀನು ಕೊಲ್ಲುವಿ ಎನ್ನುತ್ತ ಇಂದ್ರ ಶಕ್ತ್ಯಾಯುಧವನ್ನಿತ್ತು ಕವಚ ಕುಂಡಲಗಳೊಂದಿಗೆ ಹೊರಟು ಹೋದ.
* * * *
ಇನ್ನೂರ ತೊಂಬತ್ತೊಂದನೆಯ ಅಧ್ಯಾಯ
ಕರ್ಣನ ಸ್ವಪ್ನದಲ್ಲಿ ಸೂರ್ಯನಿಂದ ಬ್ರಾಹ್ಮಣವೇಷಧಾರಿಯಾದ
ಇಂದ್ರನಿಗೆ ಕವಚ ಕುಂಡಲಗಳನ್ನು ಕೊಡದಂತೆ ಪ್ರತಿಷೇಧ.
ಕರ್ಣನಿಂದ ಸೂರ್ಯನ ಒತ್ತಾಯದ ನಿರಾಕರಣೆ.
ಜನಮೇಜಯಃ
ಯತ್ತದಾ ಹ ಮಹದ್ ಬ್ರಹ್ಮನ್ ಲೋಮಶೋ ವಾಕ್ಯಮಬ್ರವೀತ್ |
ಇಂದ್ರಸ್ಯ ವಚನಾದೇವ ಪಾಂಡುಪುತ್ರಂ ಯುಧಿಷ್ಠಿರಮ್ ॥1॥
ಯಚ್ಚಾಪಿ ತೇ ಭಯಂ ತೀವ್ರಂ ನ ಚ ಕೀರ್ತಯಸೇ ಕ್ವಚಿತ್ |
ತಚ್ಚಾಪ್ಯಪಹರಿಷ್ಯಾಮಿ ಧನಂಜಯ ಇತೋ ಗತೇ ॥2॥
ಕಿಂ ನು ತಜ್ಜಪತಾಂ ಶ್ರೇಷ್ಠ ಕರ್ಣಂ ಪ್ರತಿ ಮಹದ್ಭಯಮ್ |
ಆಸೀನ್ನ ಚ ಸ ಧರ್ಮಾತ್ಮಾ ಕಥಯಾಮಾಸ ಕಸ್ಯಚಿತ್ ॥3॥
ಜನಮೇಜಯ ವೈಶಂಪಾಯನರೇ, ಇಂದ್ರನ ವಾಕ್ಯದಂತೆ ಲೋಮಶರು ಪಾಂಡುಪುತ್ರನಾದ ಯುಧಿಷ್ಠಿರನನ್ನು ಕುರಿತು ನಿನ್ನ ಮನಸ್ಸಿನಲ್ಲಿ ತೀವ್ರವಾದ ಯಾವ ಭಯವನ್ನಿಟ್ಟುಕೊಂಡು ಅದನ್ನು ಮಾತಿನಿಂದ ಹೇಳುತ್ತಿಲ್ಲವೋ ಆ ಭಯವನ್ನೂ ಸಹ

ಧನಂಜಯನು ಇಲ್ಲಿಂದ ಹೋದಮೇಲೆ ಹೇಳುವೆನು ಎಂದು ಆಗ ಹೇಳಿದರಷ್ಟೆ? ಎಲೈ ಜಪಮಾಡುವುದರಲ್ಲಿ ಶ್ರೇಷ್ಠರಾದವರೇ, ಕರ್ಣನ ವಿಷಯದಲ್ಲಿ ಯುಧಿಷ್ಠಿರನಿಗೆ ಇನ್ನೊಬ್ಬರಿಗೆ ಹೇಳದಂತಹ ಅಂತಹ ಯಾವ ದೊಡ್ಡ ಭಯವಿದ್ದಿತು?

ವೈಶಂಪಾಯನಃ

ಅಹಂ ತೇ ರಾಜಶಾರ್ದೂಲ ಕಥಯಾಮಿ ಕಥಾಮಿಮಾಮ್ |

ಪೃಚ್ಛತೇ ಭರತಶ್ರೇಷ್ಠ ಶುಶ್ರೂಷಸ್ವ ಗಿರಂ ಮಮ ॥4॥

ವೈಶಂಪಾಯನ ರಾಜಶಾರ್ದೂಲನೇ, ಪ್ರಶ್ನೆಯನ್ನು ಕೇಳಿದ ನಿನಗೆ ನಾನು ಈ ಕಥೆಯನ್ನು ಹೇಳುತೆತೇನೆ. ಭರತಶ್ರೇಷ್ಠನೇ, ನನ್ನ ಮಾತನ್ನು ಆಲಿಸು.

ದ್ವಾದಶೇ ಸಮತಿಕ್ರಾಂತೇ ವರ್ಷೇ ಪ್ರಾಪ್ತೇ ತ್ರಯೋದಶೇ |

ಪಾಂಡೂನಾಂ ಹಿತಕೃಚ್ಛಕ್ರಃ ಕರ್ಣಂ ಭಿಕ್ಷಿತುಮುದ್ಯತಃ ॥5॥

ಹನ್ನೆರಡು ವರ್ಷಗಳು ಕಳೆದು ಹದಿಮೂರನೆಯ ವರ್ಷವು ಪ್ರಾಪ್ತವಾಗುತ್ತಿರಲು ಪಾಂಡವರಿಗೆ ಹಿತವನ್ನು ಮಾಡುವವನಾಗಿ ಇಂದ್ರನು ಕರ್ಣನನ್ನು ಯಾಚಿಸಲು ಉದ್ಯುಕ್ತನಾದನು.

ಅಭಿಪ್ರಾಯಮಥೋ ಜ್ಞಾತ್ವಾ ಮಹೇಂದ್ರಸ್ಯ ವಿಭಾವಸುಃ |

ಕುಂಡಲಾರ್ಥೇ ಮಹಾರಾಜ ಸೂರ್ಯಃ ಕರ್ಣಮುಪಾಗತಃ ॥6॥

ಎಲೈ ಮಹಾರಾಜನೇ, ಕುಂಡಲಗಳ ವಿಷಯದಲ್ಲಿ ಇಂದ್ರನ ಅಭಿಪ್ರಾಯವನ್ನು ತಿಳಿದ ಸೂರ್ಯನು ಕರ್ಣನ ಬಳಿಗೆ ಬಂದನು.

ಮಹಾರ್ಹೇ ಶಯನೇ ವೀರಂ ಸ್ಪರ್ಧ್ಯಾಸ್ತರಣಸಂವೃತೇ |

ಶಯಾನಮತಿವಿಶ್ವಸ್ತಂ ಬ್ರಹ್ಮಣ್ಯಂ ಸತ್ಯವಾದಿನಮ್ ॥7॥

ಸ್ವಪ್ನಾಂತೇ ನಿಶಿ ರಾಜೇಂದ್ರ ದರ್ಶಯಾಮಾಸ ರಶ್ಮಿವಾನ್ |

ಕೃಪಯಾ ಪರಯಾಽಽವಿಷ್ಟಃ ಪುತ್ರಸ್ನೇಹಾಚ್ಚ ಭಾರತ ॥8॥

ಎಲೈ ರಾಜೇಂದ್ರನೇ, ಭಾರತನೇ, ಬೆಲೆಬಾಳುವ (ಬಯಸಲ್ಪಡುವ) ಒಳ್ಳೆಯ ಹಾಸುಗಳಿದ್ದ ಶಯನದಲ್ಲಿ ವಿಶ್ವಾಸದಿಂದ ನಿದ್ರಿಸುತ್ತಿದ್ದ ಬ್ರಾಹ್ಮಣವತ್ಸಲನೂ, ಸತ್ಯವಾದಿಯೂ ಆದ ಆ ವೀರನ ಬಳಿಗೆ ರಾತ್ರಿಯಲ್ಲಿ ಸ್ವಪ್ನದಲ್ಲಿ ಬಂದು ಪುತ್ರಸ್ನೇಹದಿಂದಲೂ, ಪರಮ ದಯೆಯಿಂದಲೂ ಕೂಡಿದ ಸೂರ್ಯನು ತನ್ನನ್ನು ತೋರಿಸಿಕೊಂಡನು (ಕರ್ಣನಿಗೆ ದರ್ಶನವನ್ನು ನೀಡಿದನು).

ಬ್ರಾಹ್ಮಣೋ ವೇದವಿದ್ ಭೂತ್ವಾ ಸೂರ್ಯೋ ಯೋಗರ್ದ್ಧಿರೂಪವಾನ್|

ಹಿತಾರ್ಥಮಬ್ರವೀತ್ ಕರ್ಣಂ ಸಾಂತ್ವಪೂರ್ವಮಿದಂ ವಚಃ ॥9॥

ಯೋಗಸಮೃದ್ಧಿ ಸಂಪನ್ನನಾದ, ವೇದಜ್ಞನಾದ ಬ್ರಾಹ್ಮಣರೂಪವನ್ನು ಧರಿಸಿ ಸೂರ್ಯನು ಕರ್ಣನ ಹಿತವನ್ನು ಬಯಸಿ ಸಮಾಧಾನಪೂರ್ವಕವಾಗಿ ಈ ಮಾತುಗಳನ್ನು ಆಡಿದನು.

ಕರ್ಣ ಮದ್ವಚನಂ ತಾತ ಶೃಣು ಧರ್ಮಭೃತಾಂ ವರ |

ಬ್ರುವತೋಽದ್ಯ ಮಹಾಬಾಹೋ ಸೌಹೃದಾತ್ ಪರಮಂ ಹಿತಮ್ ॥

ಪ್ರೀತಿಪಾತ್ರನೇ, ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಮಹಾಬಾಹುವೇ, ಕರ್ಣನೇ, ನಿನ್ನ ಮೇಲಿನ ಪ್ರೀತಿಯಿಂದ ನಿನಗೆ ಈ ದಿನ ಪರಮಹಿತವನ್ನು ಹೇಳುತ್ತಿರುವ ನನ್ನ ಮಾತುಗಳನ್ನು ಕೇಳು.

ಉಪಾಯಾಸ್ಯತಿ ಶಕ್ರಸ್ತ್ವಾಂ ಪಾಂಡವಾನಾಂ ಹಿತೇಪ್ಸಯಾ |

ಬ್ರಾಹ್ಮಣಚ್ಛದ್ಮನಾ ಕರ್ಣ ಕುಂಡಲಾಪಜಿಹೀರ್ಷಯಾ ॥11॥

ಕರ್ಣನೇ, ಪಾಂಡವರ ಹಿತವನ್ನು ಬಯಸಿ ಇಂದ್ರನು ಬ್ರಾಹ್ಮಣವೇಷವನ್ನು ಧರಿಸಿ ನಿನ್ನ ಕುಂಡಲವನ್ನು ಅಪಹರಿಸುವ ಇಚ್ಛೆಯಿಂದ ನಿನ್ನ ಬಳಿಗೆ ಬರುವನು.

ವಿದಿತಂ ತೇನ ಶೀಲಂ ತೇ ಸರ್ವಸ್ಯ ಜಗತಸ್ತಥಾ |

ಯಥಾ ತ್ವಂ ಭಿಕ್ಷಿತಃ ಸದ್ಭಿರ್ದದಾಸ್ಯೇವ ನ ಯಾಚಸೇ ॥12॥

ನೀನು ಯಾಚನೆಯನ್ನು ಮಾಡುವವರಿಗೆ ಯಾಚಿಸಿದ ವಸ್ತುವನ್ನು ಕೊಟ್ಟೇ ಕೊಡುತ್ತೀಯೆ ಮತ್ತು ನೀನು ಯಾರನ್ನು ಬೇಡುವುದಿಲ್ಲ ಎಂಬ ನಿನ್ನ ಸ್ವಭಾವವನ್ನು ಇಂದ್ರನೂ ತಿಳಿದಿದ್ದಾನೆ ಮತ್ತು ಸರ್ವಜಗತ್ತೂ ತಿಳಿದಿದೆ.

ತ್ವಂ ಹಿ ದಾತಾ ದದಾಸ್ಯೇವ ಬ್ರಾಹ್ಮಣೇಭ್ಯಃ ಪ್ರಯಾಚಿತಮ್ |

ವಿತ್ತಂ ಯಚ್ಚಾನ್ಯದಪ್ಯಾಹುರ್ನ ಪ್ರತ್ಯಾಖ್ಯಾಸಿ ಕಸ್ಯಚಿತ್ ॥13॥

ದಾತೃವಾದ ನೀನು ಬ್ರಾಹ್ಮಣರು ಯಾಚನೆ ಮಾಡಿದುದನ್ನು ಕೊಟ್ಟೇ ಕೊಡುತ್ತೀಯೆ. ಅದು ಧನವಾಗಲೀ ಅಥವಾ ಬೇರೆ ವಸ್ತುವಾಗಲೀ ಏನು ಹೇಳಿದರೂ ಅದನ್ನು ನೀನು ನಿರಾಕರಿಸುವುದಿಲ್ಲ.

ತ್ವಾಂ ಸ ಚೈವಂವಿಧಂ ಜಾನನ್ ಸ್ವಯಂ ವೈ ಪಾಕಶಾಸನಃ |

ಆಗಂತಾ ಕುಂಡಲಾರ್ಥಾಯ ಕವಚಂ ಚೈವ ಭಿಕ್ಷಿತುಮ್ ॥14॥

ನೀನು ಇಂತಹವನು ಎಂದು ತಿಳಿದು ಪಾಕಶಾಸನನಾದ ಇಂದ್ರನು ನಿನ್ನ ಕವಚ ಮತ್ತು ಕುಂಡಲಗಳನ್ನು ಬೇಡಲು ಸ್ವತಃ ತಾನೇ ನಿನ್ನ ಬಳಿಗೆ ಬರುವನು.

ತಸ್ಮೈ ಪ್ರಯಾಚಮಾನಾಯ ನ ದೇಯೇ ಕುಂಡಲೇ ತ್ವಯಾ |

ಅನುನೇಯಃ ಪರಂ ಶಕ್ತ್ಯಾ ಶ್ರೇಯ ಏತದ್ಧಿ ತೇ ಪರಮ್ ॥15॥

ಬೇಡುವ ಅವನಿಗೆ ನೀನು ಕುಂಡಲಗಳನ್ನು ಕೊಡಬಾರದು. ಅವನನ್ನು ಆದಷ್ಟು ಸಮಾಧಾನಮಾಡಿ ಕಳುಹಿಸಬೇಕು. ಇದರಿಂದ ನಿನಗೆ ಶ್ರೇಷ್ಠವಾದ ಶ್ರೇಯಸ್ಸು ಉಂಟಾಗುತ್ತದೆ.

ಕುಂಡಲಾರ್ಥೇ ಬ್ರುವಂಸ್ತಾತ ಕಾರಣೈರ್ಬಹುಭಿಸ್ತ್ವಯಾ |

ಅನ್ಯೈರ್ಬಹುವಿಧೈರ್ವಿತ್ತೈಃ ಸ ನಿವಾರ್ಯಃ ಪುನಃ ಪುನಃ ॥16॥
ಪ್ರೀತಿಪಾತ್ರನೇ, ಕುಂಡಲಗಳ ಸಲುವಾಗಿ ಬಂದು ಯಾಚಿಸುವ ಅವನನ್ನು ಕುರಿತು ನೀನು ಅನೇಕ ಕಾರಣಗಳನ್ನು ಪುನಃ ಪುನಃ ಹೇಳಿ ಬೇರೆ ಬಹುವಿಧವಾದ ವಿತ್ತವನ್ನು ಕೊಟ್ಟು ಕಳುಹಿಸಬೇಕು.
ರತ್ನೈಃ ಸ್ತ್ರೀಭಿಸ್ತಥಾ ಗೋಭಿರ್ಧನೈರ್ಬಹುವಿಧೈರಪಿ |
ನಿದರ್ಶನೈಶ್ಚ ಬಹುಭಿಃ ಕುಂಡಲೇಪ್ಸುಃ ಪುರಂದರಃ ॥17॥
ಕುಂಡಲವನ್ನು ಬಯಸುವ ಇಂದ್ರನಿಗೆ ನೀನು ರತ್ನಗಳನ್ನಾಗಲೀ, ಸ್ತ್ರೀಯರನ್ನಾಗಲೀ, ಗೋವುಗಳನ್ನಾಗಲೀ, ಬಹುವಿಧ ಧನವನ್ನಾಗಲೀ ನೀಡಿ ಬಹುವಿಧವಾದ ಉದಾಹರಣೆಯ ಮಾತುಗಳಿಂದ ಅವನನ್ನು ಹಿಂದಿರುಗಿಸಬೇಕು.
ಯದಿ ದಾಸ್ಯಸಿ ಕರ್ಣ ತ್ವಂ ಸಹಜೇ ಕುಂಡಲೇ ಶುಭೇ |
ಆಯುಷಃ ಪ್ರಕ್ಷಯಂ ಕೃತ್ವಾ ಮೃತ್ಯೋರ್ವಶಮುಪೈಷ್ಯಸಿ ॥18॥
ಎಲೈ ಕರ್ಣನೇ, ನೀನು ಒಂದುಪಕ್ಷ ಅವನಿಗೆ ನಿನ್ನ ಸಹಜವಾದ ಶುಭ ಕರ್ಣಕುಂಡಲಗಳನ್ನು ಕೊಟ್ಟರೆ ನೀನು ಆಯುಸ್ಸನ್ನು ಕಳೆದುಕೊಂಡು ಮೃತ್ಯುವಶವಾಗುವಿ.
ಕವಚೇನ ಸಮಾಯುಕ್ತಃ ಕುಂಡಲಾಭ್ಯಾಂ ಚ ಮಾನದ |
ಅವಧ್ಯಸ್ತ್ವಂ ರಣೇಽರೀಣಾಮಿತಿ ವಿದ್ಧಿ ವಚೋ ಮಮ ॥19॥
ಎಲೈ ಮಾನದನೇ, ಕವಚಕುಂಡಲಗಳನ್ನು ಧರಿಸಿದ ನೀನು ಯುದ್ಧದಲ್ಲಿ ಶತ್ರುಗಳಿಗೆ ಅವಧ್ಯನಾದವನು ಎಂಬ ನನ್ನ ಮಾತನ್ನು ತಿಳಿ.
ಅಮೃತಾದುತ್ಥಿತಂ ಹ್ಯೇತದುಭಯಂ ರತ್ನಸಂಭವಮ್ |
ತಸ್ಮಾದ್ ರಕ್ಷ್ಯಂ ತ್ವಯಾ ಕರ್ಣ ಜೀವಿತಂ ಚೇತ್ ಪ್ರಿಯಂ ತವ ॥20॥
ಇವೆರಡೂ ಶ್ರೇಷ್ಠವಸ್ತುಗಳು. ಅಮೃತದಿಂದ ಜನಿಸಿದವು. ಆದ್ದರಿಂದ ಎಲೈ ಕರ್ಣನೇ, ನಿನ್ನ ಜೀವನವು ನಿನಗೆ ಪ್ರಿಯವಾದರೆ ನೀನು ಅವುಗಳನ್ನು ರಕ್ಷಿಸಬೇಕು.
ಕರ್ಣಃ
ಕೋ ಮಾಮೇವಂ ಭವಾನ್ ಪ್ರಾಹ ದರ್ಶಯನ್ ಸೌಹೃದಂ ಪರಮ್ |
ಕಾಮಯಾ ಭಗವನ್ ಬ್ರೂಹಿ ಕೋ ಭವಾನ್ ದ್ವಿಜವೇಷಧೃಕ್ ॥21॥
ಕರ್ಣ ನನ್ನ ಮೇಲೆ ಹೀಗೆ ಪ್ರೀತಿಯನ್ನು ತೋರಿಸುತ್ತಾ ಮಾತನಾಡುತ್ತಿರುವ ನೀನು ಯಾರು? ಪೂಜ್ಯನೇ, ಬ್ರಾಹ್ಮಣವೇಷವನ್ನು ಧರಿಸಿದ ನೀನು ಯಾರೆಂದು ಮನಃಪೂರ್ವಕವಾಗಿ ಹೇಳು.
ಬ್ರಾಹ್ಮಣಃ
ಅಹಂ ತಾತ ಸಹಸ್ರಾಂಶುಃ ಸೌಹೃದಾತ್ ತ್ವಾಂ ನಿದರ್ಶಯೇ |
ಕುರುಷ್ವೈತದ್ ವಚೋ ಮೇ ತ್ವಮೇತಚ್ಛ್ರೇಯಃ ಪರಂ ಹಿ ತೇ ॥22॥
ಬ್ರಾಹ್ಮಣ ಪ್ರೀತಿಪಾತ್ರನೇ, ನಾನು ಸೂರ್ಯ. ಪ್ರೀತಿಯಿಂದ ನಿನಗೆ ಈ ಮಾತುಗಳನ್ನು ಹೇಳುತ್ತಿದ್ದೇನೆ. ನೀನು ಈ ನನ್ನ ಮಾತುಗಳನ್ನು ನಡೆಸಿಕೊಡು. ಇದು ನಿನಗೆ ಪರಮಶ್ರೇಯಸ್ಸು.
ಕರ್ಣಃ
ಶ್ರೇಯ ಏವ ಮಮಾತ್ಯಂತಂ ಯಸ್ಯ ಮೇ ಗೋಪತಿಃ ಪ್ರಭುಃ |
ಪ್ರವಕ್ತಾಽದ್ಯ ಹಿತಾನ್ವೇಷೀ ಶೃಣು ಚೇದಂ ವಚೋ ಮಮ ॥23॥
ಕರ್ಣ ಯಾವ ನನಗೆ ಪ್ರಭುವಾದ ಸೂರ್ಯನು ನನ್ನ ಹಿತವನ್ನು ಬಯಸಿ ಮಾತನಾಡುತ್ತಾನೆಯೋ ಅಂತಹ ನನಗೆ ಅತ್ಯಂತ ಶ್ರೇಯಸ್ಸೇ ಸರಿ. ಈ ನನ್ನ ಮಾತನ್ನು ನೀನು ಕೇಳು.
ಪ್ರಸಾದಯೇ ತ್ವಾಂ ವರದಂ ಪ್ರಣಯಾಚ್ಚ ಬ್ರವೀಮ್ಯಹಮ್ |
ನ ನಿವಾರ್ಯೋ ವ್ರತಾದಸ್ಮಾದಹಂ ಯದ್ಯಸ್ಮಿ ತೇ ಪ್ರಿಯಃ ॥24॥
ವರಪ್ರದನಾದ ನಿನ್ನನ್ನು ನಾನು ಪ್ರಸನ್ನೀಕರಿಸಿಕೊಂಡು ಪ್ರೀತಿಯಿಂದ ಈ ಮಾತನ್ನು ಹೇಳುತ್ತಿದ್ದೇನೆ. ನಾನು ನಿನಗೆ ಪ್ರಿಯನಾಗಿದ್ದರೆ ನನ್ನ ಈ ವ್ರತದಿಂದ ನನ್ನನ್ನು ನಿವಾರಣೆ ಮಾಡಬಾರದು.
ವ್ರತಂ ವೈ ಮಮ ಲೋಕೋಽಯಂ ವೇತ್ತಿ ಕೃತ್ಸ್ನಂ ವಿಭಾವಸೋ |
ಯಥಾಽಹಂ ದ್ವಿಜಮುಖ್ಯೇಭ್ಯೋ ದದ್ಯಾಂ ಪ್ರಾಣಾನಪಿ ಧ್ರುವಮ್ ॥
ಎಲೈ ಸೂರ್ಯನೇ, ನಾನು ದ್ವಿಜಶ್ರೇಷ್ಠರಿಗೆ ಖಂಡಿತವಾಗಿ ಪ್ರಾಣವನ್ನಾದರೂ ಕೊಟ್ಟೇನು ಎಂಬ ಈ ನನ್ನ ವ್ರತವನ್ನು ಎಲ್ಲ ಜಗತ್ತೂ ತಿಳಿದಿದೆ.
ಯದ್ಯಾಗಚ್ಛತಿ ಶಕ್ರೋ ಮಾಂ ಬ್ರಾಹ್ಮಣಚ್ಛದ್ಮನಾ ವೃತಃ |
ಹಿತಾರ್ಥಂ ಪಾಂಡುಪುತ್ರಾಣಾಂ ಖೇಚರೋತ್ತಮ ಭಿಕ್ಷಿತುಮ್ ॥26॥
ದಾಸ್ಯಾಮಿ ವಿಬುಧಶ್ರೇಷ್ಠ ಕುಂಡಲೇ ವರ್ಮ ಚೋತ್ತಮಮ್ |
ನ ಮೇ ಕೀರ್ತಿಃ ಪ್ರಣಶ್ಯೇತ ತ್ರಿಷು ಲೋಕೇಷು ವಿಶ್ರುತಾ ॥27॥
ಎಲೈ ಖೇಚರೋತ್ತಮನೇ, ಪಾಂಡುಪುತ್ರರ ಹಿತವನ್ನು ಬಯಸಿ ಬ್ರಾಹ್ಮಣ ವೇಷಧಾರಿಯಾಗಿ ಇಂದ್ರನು ನನ್ನ ಬಳಿಗೆ ಬೇಡಲು ಬಂದರೆ ನಾನು ಶ್ರೇಷ್ಠವಾದ ಕವಚವನ್ನೂ ಮತ್ತು ಕುಂಡಲಗಳನ್ನೂ ಕೊಡುವೆನು. ಎಲೈ ವಿಬುಧಶ್ರೇಷ್ಠನೇ, ಮೂರುಲೋಕಗಳಲ್ಲಿಯೂ ಹರಡಿದ ನನ್ನ ಕೀರ್ತಿಯು ನಾಶವಾಗದಿರಲಿ.
ಮದ್ವಿಧಸ್ಯ ಯಶಸ್ಯಂ ಹಿ ನ ಯುಕ್ತಂ ಪ್ರಾಣರಕ್ಷಣಮ್ |
ಯುಕ್ತಂ ಹಿ ಯಶಸಾ ಯುಕ್ತಂ ಮರಣಂ ಲೋಕಸಮ್ಮತಮ್ ॥28॥

ನನ್ನಂತಹವನಿಗೆ ಪ್ರಾಣವನ್ನು ರಕ್ಷಿಸಿಕೊಳ್ಳುವುದು ಕೀರ್ತಿಕರವಾದುದಲ್ಲ. ಲೋಕದಲ್ಲಿ ಮರಣವನ್ನು ಹೊಂದಿ ಕೀರ್ತಿಯನ್ನು ಉಳಿಸಿಕೊಳ್ಳುವುದೇ ಉಚಿತವಾದುದು.
ಸೋಽಹಮಿಂದ್ರಾಯ ದಾಸ್ಯಾಮಿ ಕುಂಡಲೇ ಸಹ ವರ್ಮಣಾ |
ಯದಿ ಮಾಂ ಬಲವೃತ್ರಘ್ನೋ ಭಿಕ್ಷಾರ್ಥಮುಪಯಾಸ್ಯತಿ ||29||
ಬಲಸಂಹಾರಿಯಾದ, ವೃತ್ರಸಂಹಾರಿಯಾದ ಇಂದ್ರನು ನನ್ನ ಬಳಿಗೆ ಬೇಡಲು ಬಂದರೆ ನಾನು ಅವನಿಗೆ ಕವಚದ ಜೊತೆಯಲ್ಲಿ ಕುಂಡಲಗಳನ್ನೂ ಕೊಡುವೆನು.
ಹಿತಾರ್ಥಂ ಪಾಂಡುಪುತ್ರಾಣಾಂ ಕುಂಡಲೇ ಮೇ ಪ್ರಯಾಚಿತಮ್ |
ತನ್ಮೇ ಕೀರ್ತಿಕರಂ ಲೋಕೇ ತಸ್ಯಾಕೀರ್ತಿರ್ಭವಿಷ್ಯತಿ||30||
ಪಾಂಡವರ ಹಿತಕ್ಕಾಗಿ ಅವನು ಕುಂಡಲಗಳನ್ನು ಯಾಚಿಸಿದರೆ ಲೋಕದಲ್ಲಿ ನನಗೆ ಕೀರ್ತಿಯೂ, ಅವನಿಗೆ ಅಪಕೀರ್ತಿಯೂ ಉಂಟಾಗುವುದು.
ವೃಣೋಮಿ ಕೀರ್ತಿಂ ಲೋಕೇ ಹಿ ಜೀವಿತೇನಾಪಿ ಭಾನುಮನ್ |
ಕೀರ್ತಿಮಾನಶ್ನುತೇ ಸ್ವರ್ಗಂ ನಷ್ಟಕೀರ್ತಿಸ್ತು ನಶ್ಯತಿ||31||
ಎಲೈ ಸೂರ್ಯನೇ, ನಾನು ಜೀವನಕ್ಕಿಂತಲೂ ಹೆಚ್ಚಾಗಿ ಲೋಕದಲ್ಲಿ ಕೀರ್ತಿಯನ್ನು ವರಿಸುತ್ತೇನೆ. ಕೀರ್ತಿಶಾಲಿಯಾದವನು ಸ್ವರ್ಗವನ್ನು ಹೊಂದುತ್ತಾನೆ. ಅಪಕೀರ್ತಿಯನ್ನು ಹೊಂದಿದವನು ನಾಶವನ್ನು ಹೊಂದುತ್ತಾನೆ.
ಕೀರ್ತಿರ್ಹಿ ಪುರುಷಂ ಲೋಕೇ ಸಂಜೀವಯತಿ ಮಾತೃವತ್ |
ಅಕೀರ್ತಿರ್ಜೀವಿತಂ ಹಂತಿ ಜೀವತೋಽಪಿ ಶರೀರಿಣಃ||32||
ಲೋಕದಲ್ಲಿ ಕೀರ್ತಿಯು ತಾಯಿಯಂತೆ ಮನುಷ್ಯನನ್ನು ಬದುಕಿಸುತ್ತದೆ. ಅಕೀರ್ತಿಯಾದರೂ ಬದುಕಿದ್ದವನಿಗೂ ಕೂಡ ಜೀವಿತವನ್ನು ನಾಶಮಾಡುತ್ತದೆ.
ಅಯಂ ಪರಾಣಃ ಶ್ಲೋಕೋ ಹಿ ಸ್ವಯಂ ಗೀತೋ ವಿಭಾವಸೋ |
ಧಾತ್ರಾ ಲೋಕೇಶ್ವರ ಯಥಾ ಕೀರ್ತಿರಾಯುರ್ನರಸ್ಯ ವೈ ||33||
ಎಲೈ ಸೂರ್ಯನೇ, ಮನುಷ್ಯನ ಕೀರ್ತಿ ಮತ್ತು ಆಯುಸ್ಸುಗಳನ್ನು ಕುರಿತು ಲೋಕೇಶ್ವರರಾದ ಬ್ರಹ್ಮದೇವರೇ ಸ್ವತಃ ಈ ಪ್ರಾಚೀನವಾದ ಶ್ಲೋಕವನ್ನು ಹಾಡಿದ್ದಾರೆ.
ಪುರುಷಸ್ಯ ಪರೇ ಲೋಕೇ ಕೀರ್ತಿರೇವ ಪರಾಯಣಮ್ |
ಇಹ ಲೋಕೇ ವಿಶುದ್ಧಾ ಚ ಕೀರ್ತಿರಾಯುರ್ವಿವರ್ಧನೀ ||34||
ಪರಲೋಕದಲ್ಲಿ ಮನುಷ್ಯನಿಗೆ ಕೀರ್ತಿಯೇ ಪರಮಾಶ್ರಯವಾದುದು. ವಿಶುದ್ಧವಾದ ಕೀರ್ತಿಯು ಈ ಲೋಕದಲ್ಲಿ ಆಯುಷ್ಯವನ್ನು ಹೆಚ್ಚಿಸುವಂತಹದು.
ಸೋಽಹಂ ಶರಿರಜೇ ದತ್ತ್ವಾ ಕೀರ್ತಿಂ ಪ್ರಾಪ್ಸ್ಯಾಮಿ ಶಾಶ್ವತೀಮ್ |
ದತ್ತ್ವಾ ಚ ವಿವಿಧಂ ದಾನಂ ಬ್ರಾಹ್ಮಣೇಭ್ಯೋ ಯಥಾವಿಧಿ ||35||
ನಾನು ನನ್ನ ಶರೀರದ ಜೊತೆಯಲ್ಲಿ ಜನಿಸಿದ ಈ ಕವಚಕುಂಡಲಗಳನ್ನೂ ಬೇರೆ ವಿಧವಿಧವಾದ ದಾನಗಳನ್ನೂ ಶಾಸ್ತ್ರ ರೀತಿಯಲ್ಲಿ ಬ್ರಾಹ್ಮಣರಿಗೆ ಕೊಟ್ಟು ಶಾಶ್ವತವಾದ ಕೀರ್ತಿಯನ್ನು ಸಂಪಾದಿಸುವೆನು.
ಹುತ್ವಾ ಶರೀರಂ ಸಂಗ್ರಾಮೇ ಕೃತ್ವಾ ಕರ್ಮ ಸುದುಷ್ಕರಮ್ |
ವಿಜಿತ್ಯ ಚ ಪರಾನಾಜೌ ಯಶಃ ಪ್ರಾಪ್ಸ್ಯಾಮಿ ಕೇವಲಮ್ ||36||
ದುಷ್ಕರವಾದ ಕರ್ಮವನ್ನು ಮಾಡಿ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ, ಯುದ್ಧದಲ್ಲಿ ಶರೀರವನ್ನು ಹೋಮಮಾಡಿ ಶ್ರೇಷ್ಠವಾದ ಕೀರ್ತಿಯನ್ನು ಸಂಪಾದಿಸುವೆನು.
ಭೀತಾನಾಮಭಯಂ ದತ್ತ್ವಾ ಸಂಗ್ರಾಮೇ ಜೀವಿತಾರ್ಥಿನಾಮ್ |
ವೃದ್ಧಾನ್ ಬಾಲಾನ್ ದ್ವಿಜಾತೀಂಶ್ಚ ಮೋಕ್ಷಯಿತ್ವಾ ಮಹಾಭಯಾತ್ ||
ಪ್ರಾಪ್ಸ್ಯಾಮಿ ಪರಮಂ ಲೋಕೇ ಯಶಃ ಸ್ವರ್ಗ್ಯಮನುತ್ತಮಮ್ |
ಜೀವಿತೇನಾಪಿ ಮೇ ರಕ್ಷ್ಯಾ ಕೀರ್ತಿಸ್ತದ್ ವಿದ್ಧಿ ಮೇ ವ್ರತಮ್ ||38||
ಯುದ್ಧದಲ್ಲಿ ಭೀತರಾಗಿ ಜೀವನವನ್ನು ಬಯಸುವವರಿಗೆ ಅಭಯವನ್ನು ನೀಡಿ ವೃದ್ಧರನ್ನೂ, ಬಾಲರನ್ನೂ, ದ್ವಿಜರನ್ನೂ ಮಹಾಭಯದಿಂದ ಪಾರುಮಾಡಿ ಲೋಕದಲ್ಲಿ ಸ್ವರ್ಗಕ್ಕೆ ಕಾರಣವಾದ ಶ್ರೇಷ್ಠವಾದ ಯಶಸ್ಸನ್ನು ಪಡೆಯುವೆನು. ನನಗೆ ಜೀವಿತಕ್ಕಿಂತಲೂ ಕೀರ್ತಿಯೇ ರಕ್ಷಿಸಲ್ಪಡಬೇಕಾದುದು. ಈ ನನ್ನ ವ್ರತವನ್ನು ತಿಳಿ.
ಸೋಽಹಂ ದತ್ತ್ವಾ ಮಘವತೇ ಭಿಕ್ಷಾಮೇತಾಮನುತ್ತಮಾಮ್ |
ಬ್ರಹ್ಮರೂಪಧರಾಯೇಹ ಲೋಕೇ ಗಂತಾ ಪರಾಂ ಗತಿಮ್ ||39||
ಅಂತಹ ನಾನು ಬ್ರಾಹ್ಮಣವೇಷಧಾರಿಯಾದ ಇಂದ್ರನಿಗೆ ಈ ಶ್ರೇಷ್ಠವಾದ ಭಿಕ್ಷೆಯನ್ನು ನೀಡಿ ಪರಲೋಕದಲ್ಲಿ ಶ್ರೇಷ್ಠವಾದ ಗತಿಯನ್ನು ಹೊಂದುವೆನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕನವತಿತದ್ವಿಶತತಮೋಽಧ್ಯಾಯಃ ||
|| ಇತಿ ಕುಂಡಲಾಹರಣಪರ್ವಣಿ ಸೂರ್ಯಕರ್ಣಸಂವಾದೋ ನಾಮ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * *

ಇನ್ನೂರ ತೊಂಬತ್ತೆರಡನೆಯ ಅಧ್ಯಾಯ
ಸೂರ್ಯನಿಂದ ಪುನಃ ಕರ್ಣನಿಗೆ ಕವಚ ಕುಂಡಲಗಳನ್ನು ಕೊಡದಿರುವಂತೆ ಒತ್ತಾಯ.
ಸೂರ್ಯಃ
ಮಾಽಹಿತಂ ಕರ್ಣ ಕಾರ್ಷೀಸ್ತ್ವಮಾತ್ಮನಃ ಸುಹೃದಾಂ ತಥಾ |
ಪುತ್ರಾಣಾಮಥ ಭಾರ್ಯಾಣಾಮಥೋ ಮಾತುರಥೋ ಪಿತುಃ ॥1॥
ಸೂರ್ಯ ಎಲೈ ಕರ್ಣನೇ, ನೀನು ನಿನಗೂ, ನಿನ್ನ ಸಹೃದರಿಗೂ, ಪುತ್ರರಿಗೂ, ಭಾರ್ಯೆಯರಿಗೂ, ತಾಯಿಗೂ ಮತ್ತು ತಂದೆಗೂ ಅಹಿತವನ್ನು ಮಾಡಬೇಡ.
ಶರೀರಸ್ಯಾವಿರೋಧೇನ ಪ್ರಾಣಿನಾಂ ಪ್ರಾಣಭೃತ್ ಪರಮ್ |
ಇಷ್ಯತೇ ಯಶಸಃ ಪ್ರಾಪ್ತಿಃ ಕೀರ್ತಿಶ್ಚ ತ್ರಿದಿವೇ ಸ್ಥಿರಾ ॥2॥
ಈ ಲೋಕದಲ್ಲಿ ಕಾಣುವ ವ್ಯಕ್ತಿಗಳಲ್ಲಿ ಯಾವನು ಪ್ರಾಣಗಳನ್ನು ಧರಿಸಿದ್ದಾನೆಯೋ ಅವನು ಶರೀರಕ್ಕೆ ತೊಂದರೆಯಾಗದಂತೆ ಈ ಲೋಕದಲ್ಲಿ ಯಶಸ್ಸನ್ನೂ, ಸ್ವರ್ಗದಲ್ಲಿ ಶಾಶ್ವತವಾದ ಕೀರ್ತಿಯನ್ನೂ ಬಯಸುತ್ತಾನೆ.
ಯಸ್ತ್ವಂ ಪ್ರಾಣವಿರೋಧೇನ ಕೀರ್ತಿಮಿಚ್ಛಸಿ ಶಾಶ್ವತೀಮ್ |
ಸಾ ತೇ ಪ್ರಾಣಾನ್ ಸಮಾದಾಯ ಗಮಿಷ್ಯತಿ ಶಮಕ್ಷಯಮ್ ॥3॥
ಯಾವ ನೀನು ನಿನ್ನ ಪ್ರಾಣಕ್ಕೆ ವಿರೋಧವನ್ನು ಮಾಡಿಕೊಂಡು ಶಾಶ್ವತ ಕೀರ್ತಿಯನ್ನು ಪಡೆಯಲು ಬಯಸುತ್ತೀಯೋ ಆ ಕೀರ್ತಿಯು ನಿನ್ನ ಪ್ರಾಣಗಳನ್ನು ಮತ್ತು ಅಕ್ಷಯವಾದ ಸುಖವನ್ನು ತೆಗೆದುಕೊಂಡು ಹೊರಟುಹೋಗುತ್ತದೆ.
ಜೀವತಾ ಕ್ರಿಯತೇ ಕಾರ್ಯಂ ಪಿತಾ ದಾರಾಃ ಸುತಾಸ್ತಥಾ |
ಯೇ ಚಾನ್ಯೇ ಬಾಂಧವಾಃ ಕೇಚಿಲ್ಲೋಕೇಽಸ್ಮಿನ್ ಪುರುಷರ್ಷಭ ॥4॥
ರಾಜಾನಶ್ಚ ನರವ್ಯಾಘ್ರ ಪುರುಷೇಣ ನಿಬೋಧ ತತ್ |
ಕೀರ್ತಿಶ್ಚ ಜೀವತಃ ಸಾಧ್ವೀ ಪುರುಷಸ್ಯ ಮಹಾದ್ಯುತೇ ॥5॥
ಎಲೈ ಪುರುಷರ್ಷಭನೇ, ತಂದೆಯಾಗಲೀ, ತಾಯಿಯಾಗಲೀ, ಮಕ್ಕಳಾಗಲೀ, ಬೇರೆ ಬಂಧುಗಳಾಗಲೀ ಅಥವಾ ರಾಜರಾಗಲೀ ಈ ಲೋಕದಲ್ಲಿ ಬದುಕಿರುವ ಮನುಷ್ಯನು ಕೀರ್ತಿಯನ್ನು ಸಂಪಾದಿಸುತ್ತಾನೆ ಎಂದು ತಿಳಿ. ಎಲೈ ನರವ್ಯಾಘ್ರನೇ, ಮಹಾದ್ಯುತಿಯೇ, ಬದುಕಿರುವ ಪುರುಷನಿಗೆ ಈ ಲೋಕದಲ್ಲಿ ಕೀರ್ತಿಯು ಸುಖಕರವಾದುದು.
ಮೃತಸ್ಯ ಕೀರ್ತ್ಯಾ ಕಿಂ ಕಾರ್ಯಂ ಭಸ್ಮೀಭೂತಸ್ಯ ದೇಹಿನಃ |
ಮೃತಃ ಕೀರ್ತಿಂ ನ ಜಾನೀತೇ ಜೀವನ್ಕೀರ್ತಿಂ ಸಮಶ್ನುತೇ ॥6॥
ದೇಹವು ಭಸ್ಮವಾಗಿ ಮೃತನಾದಮೇಲೆ ಕೀರ್ತಿಯಿಂದ ಏನು ಮಾಡಬೇಕು? ಮೃತನಾದ ಜೀವನು ಕೀರ್ತಿಯನ್ನು ತಿಳಿಯುವುದಿಲ್ಲ. ಬದುಕಿದ್ದವನು ಮಾತ್ರ ಕೀರ್ತಿಯನ್ನು ಪಡೆಯುತ್ತಾನೆ.
ಮೃತಸ್ಯ ಕೀರ್ತಿರ್ಮರ್ತ್ಯಸ್ಯ ಯಥಾ ಮಾಲಾ ಗತಾಯುಷಃ |
ಅಹಂ ತು ತ್ವಾಂ ಬ್ರವೀಮ್ಯೇತದ್ ಭಕ್ತೋಽಸೀತಿ ಹಿತೇಪ್ಸಯಾ ॥7॥
ಮೃತನಾದ ಮನುಷ್ಯನ ಕೀರ್ತಿಯು ಶವಕ್ಕೆ ಮಾಲೆಯನ್ನು ಹಾಕಿದಂತೆ. ನೀನು ನನ್ನ ಭಕ್ತನೆಂದು ತಿಳಿದು ನಿನ್ನ ಹಿತವನ್ನು ಬಯಸಿ ನಾನು ಈ ಮಾತನ್ನು ಆಡುತ್ತಿದ್ದೇನೆ.
ಭಕ್ತಿಮಂತೋ ಹಿ ಮೇ ರಕ್ಷ್ಯಾ ಇತ್ಯೇತೇನಾಪಿ ಹೇತುನಾ |
ಭಕ್ತೋಽಯಂ ಪರಯಾ ಭಕ್ತ್ಯಾ ಮಾಮಿತ್ಯೇವ ಮಹಾಭುಜ |
ಮಮಾಪಿ ಭಕ್ತಿರುತ್ಪನ್ನಾ ಸ ತ್ವಂ ಕುರು ವಚೋ ಮಮ ॥8॥
ನನ್ನಲ್ಲಿ ಭಕ್ತಿಯುಳ್ಳವರನ್ನು ನಾನು ರಕ್ಷಿಸಬೇಕು ಎಂದು ಕಾರಣದಿಂದಲೂ ನಾನು ನಿನ್ನನ್ನು ರಕ್ಷಿಸಬೇಕು. ಎಲೈ ಮಹಾಭುಜನೇ, ಈ ನೀನು ನನ್ನಲ್ಲಿ ಪರಮಭಕ್ತಿಯುಳ್ಳವನು ಎಂಬ ಕಾರಣದಿಂದಲೂ ನಿನ್ನಲ್ಲಿ ನನಗೆ ಭಕ್ತಿ (ಪ್ರೀತಿ) ಉಂಟಾಗಿದೆ. ಅಂತಹ ನೀನು ನನ್ನ ಮಾತನ್ನು ನಡೆಸಿಕೊಡು.
ಅಸ್ತಿ ಚಾತ್ರ ಪರಂ ಕಿಂಚಿದಧ್ಯಾತ್ಮಂ ದೇವನಿರ್ಮಿತಮ್ |
ಅತಶ್ಚ ತ್ವಾಂ ಬ್ರವೀಮ್ಯೇತತ್ ಕ್ರಿಯತಾಮವಿಶಂಕಯಾ ॥9॥
ಅಷ್ಟೇ ಅಲ್ಲದೇ ಇಲ್ಲಿ ದೇವನಿರ್ಮಿತವಾದ ಒಂದು ಅಧ್ಯಾತ್ಮರಹಸ್ಯವಿದೆ. ಆದ್ದರಿಂದಲೂ ನೀನು ನಿಶ್ಶಂಕೆಯಿಂದ ನನ್ನ ಮಾತನ್ನು ನಡೆಸಿಕೊಡು ಎಂದು ಹೇಳುತ್ತಿದ್ದೇನೆ.
ದೇವಗುಹ್ಯಂ ತ್ವಯಾ ಜ್ಞಾತುಂ ನ ಶಕ್ಯಂ ಪುರುಷರ್ಷಭ |
ತಸ್ಮಾನ್ನಾಖ್ಯಾಮಿ ತೇ ಗುಹ್ಯಂ ಕಾಲೇ ವೇತ್ಸ್ಯತಿ ತದ್ಭವಾನ್ ॥10॥
ಎಲೈ ಪುರುಷರ್ಷಭನೇ, ಆ ದೇವರಹಸ್ಯವನ್ನು ನೀನು ಈಗ ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ನಿನಗೆ ಆ ರಹಸ್ಯವನ್ನು ಹೇಳುವುದಿಲ್ಲ. ಯೋಗ್ಯಕಾಲದಲ್ಲಿ ಮುಂದೆ ಅದನ್ನು ನೀನು ತಿಳಿಯುವಿ.
ಪುನರುಕ್ತಂ ಚ ವಕ್ಷ್ಯಾಮಿ ತ್ವಂ ರಾಧೇಯ ನಿಬೋಧ ತತ್ |
ಮಾಸ್ಮೈ ತೇ ಕುಂಡಲೇಽದಾಸ್ತ್ವಂ ಭಿಕ್ಷಿತೇ ವಜ್ರಪಾಣಿನಾ ॥11॥
ಎಲೈ ರಾಧೇಯನೇ, ಮೊದಲು ಹೇಳಿದುದನ್ನೇ ಇನ್ನೊಮ್ಮೆ ಹೇಳುವೆನು. ಅದನ್ನು ತಿಳಿ. ವಜ್ರಪಾಣಿಯಾದ ಇಂದ್ರನು ಭಿಕ್ಷೆಯನ್ನು ಬೇಡಿದರೆ ಅವನಿಗೆ ನೀನು ಕುಂಡಗಳವನ್ನು ಕೊಡಬೇಡ.
ಶೋಭತೇ ಕುಂಡಲಾಭ್ಯಾಂ ಚ ರುಚಿರಾಭ್ಯಾಂ ಮಹಾದ್ಯುತೇ |
ವಿಶಾಖಯೋರ್ಮಧ್ಯಗತಃ ಶಶೀವ ವಿಮಲೇ ದಿವಿ ॥12॥

ಎಲೈ ಮಹಾದ್ಯುತಿಯೇ, ಈ ಮನೋಹರವಾದ ಕುಂಡಲಗಳಿಂದ ನೀನು ವಿಶಾಖಾ ನಕ್ಷತ್ರದ ಸಮೂಹದಲ್ಲಿರುವ ಎರಡು ನಕ್ಷತ್ರಗಳ ಮಧ್ಯದಲ್ಲಿ ಚಂದ್ರನು ಆಕಾಶದಲ್ಲಿ ಶೋಭಿಸಿದಂತೆ ಶೋಭಿಸುತ್ತೀಯೆ.
ಕೀರ್ತಿಶ್ಚ ಜೀವತಃ ಸಾಧ್ವೀ ಪುರುಷಸ್ಯೇತಿ ವಿದ್ಧಿ ತತ್ ॥13॥
ಪ್ರತ್ಯಾಖ್ಯೇಯಸ್ತ್ವಯಾ ತಾತ ಕುಂಡಲಾರ್ಥೇ ಸುರೇಶ್ವರಃ।
ಪಾಂಡವಾನಾಂ ಹಿತೇ ಯುಕ್ತೋ ಭಿಕ್ಷನ್ ಬ್ರಾಹ್ಮಣವೇಷಧೃಕ್ ॥14॥
ಬದುಕಿರುವ ಮನುಷ್ಯನಿಗೆ ಕೀರ್ತಿಯು ಹಿತಕರವಾದುದು ಎಂದು ತಿಳಿ. ಪ್ರೀತಿಪಾತ್ರನೇ, ಪಾಂಡವರ ಹಿತದಲ್ಲಿ ರತನಾಗಿ ಬ್ರಾಹ್ಮಣವೇಷವನ್ನು ಧರಿಸಿ ಬಂದು ಕುಂಡಲಗಳ ಭಿಕ್ಷೆಯನ್ನು ಬೇಡಲು ಬಂದ ದೇವೇಂದ್ರನು ನಿನ್ನಿಂದ ನಿರಾಕರಿಸಲ್ಪಡಬೇಕು.
ಶಕ್ಯಾ ಬಹುವಿಧೈರ್ವಾಕ್ಯೈಃ ಕುಂಡಲೇಪ್ಸಾ ತ್ವಯಾಽನಘ।
ವಿಹಂತುಂ ದೇವರಾಜಸ್ಯ ಹೇತುಯುಕ್ತೈಃ ಪುನಃ ಪುನಃ।
ಹೇತುಮದುಪಪನ್ನಾರ್ಥೈರ್ಮಾಧುರ್ಯಕೃತಭೂಷಣೈಃ ॥15॥
ಪುರಂದರಸ್ಯ ಕರ್ಣ ತ್ವಂ ಬುದ್ಧಿಮೇತಾಮಪಾನುದ ॥16॥
ಅನಘನೇ, ದೇವರಾಜನ ಈ ಕುಂಡಲದ ಆಸೆಯನ್ನು ನೀನು ಪುನಃ ಪುನಃ ಹೇತುಯುಕ್ತವಾದ ಮಾತುಗಳಿಂದ ನಿವಾರಿಸಲು ಸಾಧ್ಯವಾಗುತ್ತದೆ. ಎಲೈ ಕರ್ಣನೇ, ಹೇತುಗಳಿಂದ ಕೂಡಿದ ಯುಕ್ತವಾದ ಮತ್ತು ಮಾಧುರ್ಯದಿಂದ ಅಲಂಕರಿಸಲ್ಪಟ್ಟ ಮಾತುಗಳಿಂದ ಪುರಂದರನ ಈ ಬುದ್ಧಿಯನ್ನು ನೀನು ನಿವಾರಿಸು.
ತ್ವಂ ಹಿ ನಿತ್ಯಂ ನರವ್ಯಾಘ್ರ ಸ್ಪರ್ಧಸೇ ಸವ್ಯಸಾಚಿನಾ।
ಸವ್ಯಸಾಚೀ ತ್ವಯಾ ಚೇಹ ಯುಧಿ ಶೂರಃ ಸಮೇಷ್ಯತಿ ॥17॥
ಎಲೈ ನರವ್ಯಾಘ್ರನೇ, ನೀನು ಯಾವಾಗಲೂ ಸವ್ಯಸಾಚಿಯಾದ ಅರ್ಜುನನ ಜೊತೆಯಲ್ಲಿ ಸ್ಪರ್ಧಿಸುತ್ತೀಯೆ. ಯುದ್ಧದಲ್ಲಿ ಶೂರನೂ, ಸವ್ಯಸಾಚಿಯೂ ಆದ ಅರ್ಜುನನು ನಿನ್ನನ್ನು ಎದುರಿಸುವನು.
ನ ತು ತ್ವಾಮರ್ಜುನಃ ಶಕ್ತಃ ಕುಂಡಲಾಭ್ಯಾಂ ಸಮನ್ವಿತಮ್।
ವಿಜೇತುಂ ಯುಧಿ ಯದ್ಯಸ್ಯ ಸ್ವಯಮಿಂದ್ರಃ ಸಖಾ ಭವೇತ್ ॥18॥
ನೀನು ಕುಂಡಲಗಳಿಂದ ಸಮನ್ವಿತನಾಗಿದ್ದರೆ ಅರ್ಜುನನಿಗೆ ಸಹಾಯಕನಾಗಿ ಸ್ವತಃ ಇಂದ್ರನೇ ಬಂದರೂ ಅರ್ಜುನನು ನಿನ್ನನ್ನು ಯುದ್ಧದಲ್ಲಿ ಗೆಲ್ಲಲು ಸಮರ್ಥನಾಗುವುದಿಲ್ಲ.
ತಸ್ಮಾನ್ನ ದೇಯೇ ಶಕ್ರಾಯ ತ್ವಯೈತೇ ಕುಂಡಲೇ ಶುಭೇ।
ಸಂಗ್ರಾಮೇ ಯದಿ ನಿರ್ಜೇತುಂ ಕರ್ಣ ಕಾಮಯಸೇಽರ್ಜುನಮ್ ॥
ಎಲೈ ಕರ್ಣನೇ, ಆದ್ದರಿಂದ ನಿನಗೆ ಯುದ್ಧದಲ್ಲಿ ಅರ್ಜುನನನ್ನು ಜಯಿಸಬೇಕೆಂಬ ಆಸೆಯಿದ್ದರೆ ನೀನು ಈ ಶುಭವಾದ ಕುಂಡಲಗಳನ್ನು ಇಂದ್ರನಿಗೆ ಕೊಡಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವಿನವತಿತದ್ವಿಶತತಮೋಽಧ್ಯಾಯಃ ॥
॥ ಇತಿ ಕುಂಡಲಾಹರಣಪರ್ವಣಿ ಸೂರ್ಯಕರ್ಣಸಂವಾದೋ ನಾಮ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತೆರಡನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ಮೂರನೆಯ ಅಧ್ಯಾಯ
ಕವಚಕುಂಡಲಗಳನ್ನು ಕೊಡುವುದಾದರೆ ಇಂದ್ರನಿಂದ ಶಕ್ತ್ಯಾಯುಧವನ್ನು
ಪಡೆದು ಅವುಗಳನನ್ನು ಕೊಡಬೇಕೆಂದು ಕರ್ಣನಿಗೆ ಸೂರ್ಯನ
ಒತ್ತಾಯ ಮತ್ತು ಅದಕ್ಕೆ ಕರ್ಣನ ಒಪ್ಪಿಗೆ.
ಕರ್ಣಃ
ಭಗವಂತಮಹಂ ಭಕ್ತೋ ಯಥಾ ಮಾಮಾತ್ಥ ಗೋಪತೇ।
ತಥಾ ಪರಮತಿಗ್ಮಾಂಶೋ ನಾನ್ಯಂ ದೇವಂ ಕಥಂಚನ ॥1॥
ಕರ್ಣ ಎಲೈ ಗೋಪತಿಯೇ, ಎಲೈ ತಿಗ್ಮಾಂಶುವೇ, ನಾನು ನಿನ್ನಲ್ಲಿ ಹೇಗೆ ಭಕ್ತಿಯನ್ನು ಮಾಡುತ್ತೇನೆಯೋ ಅದರಂತೆ ಬೇರೆ ಯಾವ ದೇವತೆಯಲ್ಲಿಯೂ ಭಕ್ತಿಯನ್ನು ಮಾಡುವುದಿಲ್ಲವೆಂದು ನೀನು ತಿಳಿದಿದ್ದೀಯೆ.
ನ ಮೇ ದಾರಾ ನ ಮೇ ಪುತ್ರಾ ನ ಚಾತ್ಮಾ ಸುಹೃದೋ ನ ಚ।
ತಥೇಷ್ಟಾ ವೈ ಸದಾ ಭಕ್ತ್ಯಾ ಯಥಾ ತ್ವಂ ಗೋಪತೇ ಮಮ ॥2॥
ಎಲೈ ಗೋಪತಿಯೇ, ನೀನು ನನಗೆ ಭಕ್ತಿಯಿಂದ ಹೇಗೆ ಸದಾ ಪ್ರಿಯನಾಗಿದ್ದೀಯೋ ಹಾಗೆ ಹೆಂಡತಿಯಾಗಲೀ, ಮಕ್ಕಳಾಗಲೀ, ಬಾಂಧವರಾಗಲೀ ಅಥವಾ ನಾನೇ ಆಗಲಿ ನನಗೆ ಪ್ರಿಯವಲ್ಲ.
ಇಷ್ಟಾನಾಂ ಚ ಮಹಾತ್ಮಾನೋ ಭಕ್ತಾನಾಂ ಚ ನ ಸಂಶಯಃ।
ಕುರ್ವಂತಿ ಭಕ್ತಿಮಿಷ್ಟಾಂ ವೈ ಜಾನೀಷೇ ತ್ವಂ ಚ ಭಾಸ್ಕರ ॥3॥
ಎಲೈ ಭಾಸ್ಕರನೇ, ಮಹಾತ್ಮರಾದವರು ತಮ್ಮ ಪ್ರಿಯರಾದ ಭಕ್ತರಿಗೆ ಪ್ರೀತಿಯನ್ನು ತೋರಿಸಿ ಇಷ್ಟವನ್ನು ಮಾಡುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ. ಇದನ್ನು ನೀನು ಸಹ ತಿಳಿದಿದ್ದೀಯೆ.
ಇಷ್ಟೋ ಭಕ್ತಶ್ಚ ಮೇ ಕರ್ಣೋ ನ ಚಾನ್ಯದ್ ದೈವತಂ ದಿವಿ।
ಜಾನೀತ ಇತಿ ವೈ ಕೃತ್ವಾ ಭಗವಾನಾಹ ಮದ್ಧಿತಮ್ ॥4॥

ಕರ್ಣನು ನನ್ನಲ್ಲಿ ಮಾಡುವಷ್ಟು ಭಕ್ತಿಯನ್ನು ಸ್ವರ್ಗದಲ್ಲಿರುವ ಬೇರೆ ದೇವತೆಗಳಲ್ಲಿ ಮಾಡುವುದಿಲ್ಲ. ಆದ್ದರಿಂದ ಅವನು ನನಗೆ ಪ್ರಿಯನಾದವನು ಎಂದು ಭಾವಿಸಿ ಪೂಜ್ಯನಾದ ನೀನು ನನ್ನ ಹಿತವನ್ನು ಹೇಳಿದ್ದೀಯೆ.
ಭೂಯಶ್ಚ ಶಿರಸಾ ಯಾಚೇ ಪ್ರಸಾದ್ಯ ಚ ಪುನಃ ಪುನಃ |
ಇತಿ ಬ್ರುವೀಮಿ ತಿಗ್ಮಾಂಶೋ ತ್ವಂ ತು ಮೇ ಕ್ಷಂತುಮರ್ಹಸಿ ॥5॥
ಎಲೈ ತಿಗ್ಮಾಂಶುವೇ, ಪುನಃಪುನಃ ನಿನ್ನನ್ನು ಪ್ರಸನ್ನೀಕರಿಸಿಕೊಂಡು ತಲೆಯನ್ನು ಬಗ್ಗಿಸಿ ಯಾಚಿಸುತ್ತಿದ್ದೇನೆ. ನೀನು ನನ್ನನ್ನು ಕ್ಷಮಿಸಬೇಕು.
ಬಿಭೇಮಿ ನ ತಥಾ ಮೃತ್ಯೋರ್ಯಥಾ ಬಿಭ್ಯೇಽನೃತಾದಹಮ್ |
ವಿಶೇಷೇಣ ದ್ವಿಜಾತೀನಾಂ ಸರ್ವೇಷಾಂ ಸರ್ವದಾ ಸತಾಮ್ ॥6॥
ನಾನು ಯಾವಾಗಲೂ ಎಲ್ಲ ಸಜ್ಜನರಿಗೂ ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರಿಗೆ ಅನೃತವನ್ನು ಮಾತನಾಡುವುದಕ್ಕೆ ಹೇಗೆ ಹೆದರುತ್ತೇನೆಯೋ ಹಾಗೆ ಮರಣಕ್ಕೂ ಹೆದರುವುದಿಲ್ಲ.
ಪ್ರದಾನೇ ಜೀವಿತಸ್ಯಾಪಿ ನ ಮೇಽತ್ರಾಸ್ತಿ ವಿಚಾರಣಾ |
ಯಚ್ಚ ಮಾಮಾತ್ಥ ದೇವ ತ್ವಂ ಪಾಂಡವಂ ಫಲ್ಗುನಂ ಪ್ರತಿ ॥7॥
ವ್ಯೇತು ಸಂತಾಪಜಂ ದುಃಖಂ ತವ ಭಾಸ್ಕರ ಮಾನಸಮ್ |
ಅರ್ಜುನಪ್ರತಿಮಂ ಚೈವ ವಿಜೇಷ್ಯಾಮಿ ರಣೇಽರ್ಜುನಮ್ ॥8॥
ನನ್ನ ಪ್ರಾಣವನ್ನು ಕೊಡುವ ವಿಷಯದಲ್ಲಿಯೂ ನನಗೆ ಯಾವ ಸಂಶಯವೂ ಇಲ್ಲ. ಎಲೈ ದೇವನೇ, ಪಾಂಡವನಾದ ಅರ್ಜುನನ ವಿಷಯದಲ್ಲಿ ನೀನು ಏನು ಮಾತನಾಡಿದೆಯೋ ಆ ಸಂತಾಪದಿಂದ ಉಂಟಾದ ಮಾನಸ ವ್ಯಥೆಯನ್ನು ತ್ಯಜಿಸು. ಭಾಸ್ಕರನೇ, ನಾನು ಕಾರ್ತವೀರ್ಯಾರ್ಜುನನಿಗೆ ಸಮನಾದ ಅರ್ಜುನನನ್ನು ಯುದ್ಧದಲ್ಲಿ ಗೆಲ್ಲುವೆನು.
ತವಾಪಿ ವಿದಿತಂ ದೇವ ಮಮಾಪ್ಯಸ್ತ್ರಬಲಂ ಮಹತ್ |
ಜಾಮದಗ್ನ್ಯಾದುಪಾತ್ತಂ ಯತ್ತಥಾ ದ್ರೋಣಾನ್ಮಹಾತ್ಮನಃ ॥9॥
ದೇವನೇ, ನಾನು ಜಮದಗ್ನಿಗಳ ಪುತ್ರರಾದ ಪರಶುರಾಮರಿಂದಲೂ ಮತ್ತು ಮಹಾತ್ಮರಾದ ದ್ರೋಣರಿಂದಲೂ ಪಡೆದ ಮಹಾಸ್ತ್ರಗಳ ಸಾಮರ್ಥ್ಯವನ್ನು ನೀನೂ ತಿಳಿದಿದ್ದೀಯೆ.
ಇದಂ ತ್ವಮನುಜಾನೀಹಿ ಸುರಶ್ರೇಷ್ಠ ವ್ರತಂ ಮಮ |
ಭಿಕ್ಷತೇ ವಜ್ರಿಣೇ ದದ್ಯಾಮಪಿ ಜೀವಿತಮಾತ್ಮನಃ ॥10॥
ಸುರಶ್ರೇಷ್ಠನೇ, ಈ ನನ್ನ ವ್ರತಕ್ಕೆ ನೀನು ಅನುಮತಿಯನ್ನು ಕೊಡು. ಯಾಚಿಸುವ ಇಂದ್ರನಿಗೆ ನಾನು ನನ್ನ ಪ್ರಾಣವನ್ನಾದರೂ ಕೊಟ್ಟೇನು.
ಸೂರ್ಯಃ
ಯದಿ ತಾತ ದದಾಸ್ಯೇತೇ ವಜ್ರಿಣೇ ಕುಂಡಲೇ ಶುಭೇ |
ತ್ವಮಪ್ಯೇನಮಥೋ ಬ್ರೂಯಾ ವಿಜಯಾರ್ಥಂ ಮಹಾಬಲಮ್ ॥11॥
ಸೂರ್ಯ ಎಲೈ ಪ್ರೀತಿಪಾತ್ರನೇ, ನೀನು ಇಂದ್ರನಿಗೆ ಈ ಶುಭಕುಂಡಲಗಳನ್ನು ಕೊಡುವುದಾದರೆ ನೀನೂ ಸಹ ವಿಜಯದ ಸಲುವಾಗಿ ಮಹಾಬಲನಾದ ಅವನನ್ನು ಕುರಿತು ಹೀಗೆ ಮಾತನಾಡು.
ನಿಯಮೇನ ಪ್ರದದ್ಯಾಂ ತೇ ಕುಂಡಲೇ ವೈ ಶತಕ್ರತೋ |
ಅವಧ್ಯೋ ಹ್ಯಸಿ ಭೂತಾನಾಂ ಕುಂಡಲಾಭ್ಯಾಂ ಸಮನ್ವಿತಃ ॥12॥
ಅರ್ಜುನೇನ ವಿನಾಶಂ ಹಿ ತವ ದಾನವಸೂದನಃ |
ಪ್ರಾರ್ಥಯಾನೋ ರಣೇ ವತ್ಸ ಕುಂಡಲೇ ತೇ ಜಿಹೀರ್ಷತಿ ॥13॥
ಎಲೈ ಇಂದ್ರನೇ, ನಿನಗೆ ಕುಂಡಲಗಳನ್ನು ನಾನು ಒಂದು ನಿಬಂಧನೆಯ ಮೇರೆಗೆ ಕೊಡುವೆನೆಂದು ಹೇಳು. ಕರ್ಣನೇ, ನೀನು ಕುಂಡಲಗಳಿಂದ ಸಮನ್ವಿತನಾದರೆ ಯಾವ ಪುರುಷನಿಂದಲೂ (ಪ್ರಾಣಿಯಿಂದಲೂ) ವಧ್ಯನಾಗುವುದಿಲ್ಲ. ವತ್ಸನೇ, ದಾನವಸೂದನನಾದ ಇಂದ್ರನು ಅರ್ಜುನನಿಂದ ನಿನ್ನ ವಿನಾಶವನ್ನು ಆಲೋಚಿಸಿ ನಿನ್ನ ಕುಂಡಲಗಳನ್ನು ಅಪಹರಿಸಲು ಬಯಸುತ್ತಾನೆ.
ಸ ತ್ವಮಪ್ಯೇನಮಾರಾಧ್ಯ ಸೂನೃತಾಭಿಃ ಪುನಃ ಪುನಃ |
ಅಭ್ಯರ್ಥಯೇಥಾ ದೇವೇಶಮಮೋಘಾರ್ಥಂ ಪುರಂದರಮ್ ॥14॥
ನೀನು ಅವನನ್ನು ಮತ್ತೆ ಮತ್ತೆ ಒಳ್ಳೆಯ ಮಾತುಗಳಿಂದ ಆರಾಧಿಸಿ ದೇವೇಶನಾದ ಪುರಂದರನನ್ನು ಒಂದು ವ್ಯರ್ಥವಾಗದ ಅಮೋಘವಾದ ಪದಾರ್ಥವನ್ನು ಕೊಡುವಂತೆ ಪ್ರಾರ್ಥಿಸು.
ಅಮೋಘಾಂ ದೇಹಿ ಮೇ ಶಕ್ತಿಮಮಿತ್ರವಿನಿಬರ್ಹಿಣೀಮ್ |
ದಾಸ್ಯಾಮಿ ತೇ ಸಹಸ್ರಾಕ್ಷ ಕುಂಡಲೇ ವರ್ಮ ಚೋತ್ತಮಮ್ ॥15॥
ಇತ್ಯೇವಂನಿಯಮೇನ ತ್ವಂ ದದ್ಯಾಃ ಶಕ್ರಾಯ ಕುಂಡಲೇ |
ತಯಾ ತ್ವಂ ಕರ್ಣ ಸಂಗ್ರಾಮೇ ಹನಿಷ್ಯಸಿ ರಣೇ ರಿಪೂನ್ ॥16॥
ಎಲೈ ಸಹಸ್ರಾಕ್ಷನೇ, ನೀನು ನನಗೆ ಶತ್ರುಸಂಹಾರಕವಾದ ಅಮೋಘವಾದ ಶಕ್ತ್ಯಾಯುಧವನ್ನು ಕೊಡು. ನಾನು ನಿನಗೆ ಕುಂಡಲಗಳನ್ನೂ, ಶ್ರೇಷ್ಠವಾದ ಕವಚವನ್ನೂ ಕೊಡುವೆನು ಎಂಬ ಈ ನಿಯಮದಿಂದ ನೀನು ಇಂದ್ರನಿಗೆ ಕುಂಡಲಗಳನ್ನು ಕೊಡುವವನಾಗು. ಎಲೈ ಕರ್ಣನೇ, ಆ ಶಕ್ತ್ಯಾಯುಧದಿಂದ ನೀನು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವಿ.
ನಾಹತ್ವಾ ಹಿ ಮಹಾಬಾಹೋ ಶತ್ರೂನೇತಿ ಕರಂ ಪುನಃ |

ಸಾ ಶಕ್ತಿರ್ದೇವರಾಜಸ್ಯ ಶತಶೋಽಥ ಸಹಸ್ರಶಃ ॥17॥
ಎಲೈ ಮಹಾಬಾಹುವೇ, ಇಂದ್ರನು ಪ್ರಯೋಗಿಸುವ ಆ ಶಕ್ತ್ಯಾಯುಧವು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಶತ್ರುಗಳನ್ನು ಕೊಲ್ಲದೇ ದೇವರಾಜನ ಕೈಗೆ ಪುನಃ ಬಂದು ಸೇರುವುದಿಲ್ಲ.
ವೈಶಂಪಾಯನಃ
ಏವಮುಕತ್ವ ಸಹಸ್ರಾಂಶುಃ ಸಹಸಾಽಂತರಧೀಯತ |
ಕರ್ಣಸ್ತು ಬುಬುಧೇ ರಾಜನ್ ಸ್ವಪ್ನಾಂತೇ ಪ್ರವ್ಯಥನ್ನಿವ ॥18॥
ವೈಶಂಪಾಯನ ಸಹಸ್ರಾಂಶುವಾದ ಸೂರ್ಯನು ಹೀಗೆ ಹೇಳಿ ತಕ್ಷಣ ಅಂತರ್ಧಾನವನ್ನು ಹೊಂದಿದನು. ಎಲೈ ರಾಜನೇ, ಕರ್ಣನಾದರೂ ವ್ಯಥೆಯನ್ನು ಪಡುತ್ತಾ ಸ್ವಪ್ನದಿಂದ ಎಚ್ಚರಗೊಂಡನು.
ಪ್ರತಿಬುದ್ಧಸ್ತು ರಾಧೇಯಃ ಸ್ವಪ್ನಂ ಸಂಚಿತ್ಯ ಭಾರತ |
ಚಕಾರ ನಿಶ್ಚಯಂ ರಾಜನ್ ಶಕ್ತ್ಯರ್ಥಂ ವದತಾಂ ವರಃ ॥19॥
ಎಲೈ ಭಾರತನೇ, ಮಾತನಾಡುವವರಲ್ಲಿ ಶ್ರೇಷ್ಠನಾದ ಎಚ್ಚರಗೊಂಡ ಕರ್ಣನು ಆ ಸ್ವಪ್ನವನ್ನು ಆಲೋಚಿಸಿ ಶಕ್ತ್ಯಾಯುಧವನ್ನು ಬೇಡುವುದಾಗಿ ನಿಶ್ಚಯಿಸಿದನು.
ಯದಿ ಮಾಮಿಂದ್ರ ಆಯಾತಿ ಕುಂಡಲಾರ್ಥಂ ಪರಂತಪಃ |
ಶಕ್ತ್ಯಾ ತಸ್ಮೈ ಪ್ರದಾಸ್ಯಾಮಿ ಕುಂಡಲೇ ವರ್ಮ ಚೈವ ಹ ॥20॥
ಒಂದುಪಕ್ಷ ಪರಂತಪನಾದ ಇಂದ್ರನು ಕುಂಡಲಗಳ ಸಲುವಾಗಿ ನನ್ನ ಬಳಿಗೆ ಬಂದರೆ ಶಕ್ತಿಯನ್ನು ತೆಗೆದುಕೊಂಡು ಅವನಿಗೆ ಕವಚಕುಂಡಲಗಳನ್ನು ಕೊಡುವೆನು.
ಸ ಕೃತ್ವಾ ಪ್ರಾತರುತ್ಥಾಯ ಕಾರ್ಯಾಣಿ ಭರತರ್ಷಭ |
ಬ್ರಾಹ್ಮಣಾನ್ ವಾಚಯಿತ್ವಾಽಥ ಯಥಾಕಾರ್ಯಮುಪಾಕ್ರಮಮ್ ॥
ಭರತರ್ಷಭನೇ, ಅವನು ಪ್ರಾತಃಕಾಲದಲ್ಲಿ ಎದ್ದು ತನ್ನ ಕಾರ್ಯಗಳನ್ನು ಮಾಡಿಕೊಂಡು ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ದಿನನಿತ್ಯದಂತೆ ತನ್ನ ಕಾರ್ಯಗಳನ್ನು ಪ್ರಾರಂಭಿಸಿದನು.
ವಿಧಿನಾ ರಾಜಶಾರ್ದೂಲ ಮುಹೂರ್ತಮಜಪತ್ ತತಃ |
ತತಃ ಸೂರ್ಯಾಯ ಜಪ್ಯಾಂತೇ ಕರ್ಣಃ ಸ್ವಪ್ನಂ ನ್ಯವೇದಯತ್ ॥22॥
ಎಲೈ ರಾಜಶಾರ್ದೂಲನೇ, ವಿಧಿಗೆ ಅನುಸಾರವಾಗಿ ಒಂದು ಮುಹೂರ್ತದವರೆಗೆ ಅವನು ಜಪವನ್ನು ಮಾಡಿದನು. ಜಪವು ಮುಗಿದ ಮೇಲೆ ಕರ್ಣನು ಸೂರ್ಯನಿಗೆ ತನ್ನ ಸ್ವಪ್ನವನ್ನು ನಿವೇದಿಸಿದನು.
ಯಥಾ ದೃಷ್ಟಂ ಯಥಾತತ್ತ್ವಂ ಯದ್ ವೃತ್ತಮುಭಯೋರ್ನಿಶಿ |
ತತ್ ಸರ್ವಮಾನುಪೂರ್ವ್ಯೇಣ ಶಶಂಸಾಸ್ಮೈ ವೃಷಸ್ತದಾ ॥23॥
ಕರ್ಣನು ಹೇಗೆ ಸ್ವಪ್ನವನ್ನು ನೋಡಿದನೋ, ಕರ್ಣ ಮತ್ತು ಸೂರ್ಯರ ಮಧ್ಯೆ ಹೇಗೆ ರಾತ್ರಿ ಮಾತುಕಥೆಯಾಯಿತೋ ಅವೆಲ್ಲವನ್ನೂ ಕ್ರಮವಾಗಿ ಕರ್ಣಪುತ್ರನು ಸೂರ್ಯನ ಬಳಿಗೆ ಹೋಗಿ ಸೂರ್ಯನಿಗೆ ನಿವೇದಿಸಿದನು. (ವಾದಿರಾಜರು)
ತತ್ಶ್ರುತ್ವಾ ಭಗವಾನ್ ದೇವೋ ಭಾನುಃ ಸ್ವರ್ಭಾನುಸೂದನಃ |
ಉವಾಚ ತಂ ತಥೇತ್ಯೇವ ಕರ್ಣಂ ಸೂರ್ಯಃ ಸ್ಮಯನ್ನಿವ ॥24॥
ಅದನ್ನು ಕೇಳಿದ ರಾಹುಶತ್ರುವಾದ ಭಗವಂತನಾದ ಸೂರ್ಯದೇವನು ನಗುತ್ತಾ ಕರ್ಣ (ಪುತ್ರ)ನನ್ನು ಕುರಿತು ಅದೆಲ್ಲವೂ ಹಾಗೆಯೇ ಸರಿ ಎಂದು ಹೇಳಿದನು.
ತತಸ್ತತ್ತ್ವಮಿತಿ ಜ್ಞಾತ್ವಾ ರಾಧೇಯಃ ಪರವೀರಹಾ |
ಶಕ್ತಿಮೇವಾಭಿಕಾಂಕ್ಷನ್ ವೈ ವಾಸವಂ ಪ್ರತ್ಯಪಾಲಯತ್ ॥25॥
ಶತ್ರುಸಂಹಾರಕನಾದ ಕರ್ಣನು ಸ್ವಪ್ನದ ಘಟನೆಯನ್ನು ಸತ್ಯವೆಂದು ತಿಳಿದು ಶಕ್ತ್ಯಾಯುಧದ ಪ್ರಾಪ್ತಿತಯನ್ನು ಆಶಿಸುತ್ತಾ ಇಂದ್ರನ ನಿರೀಕ್ಷೆಯಲ್ಲಿ ಇದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿನವತಿತದ್ವಿಶತತಮೋಽಧ್ಯಾಯಃ ॥
॥ ಇತಿ ಕುಂಡಲಾಹರಣಪರ್ವಣಿ ಸೂರ್ಯಕರ್ಣಸಂವಾದೋ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ಮೂರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ನಾಲ್ಕನೆಯ ಅಧ್ಯಾಯ
ಕುಂತಿಭೋಜನ ಅರಮನೆಗೆ ದುರ್ವಾಸರ ಆಗಮನ ಮತ್ತು ನಿವಾಸ. ಕುಂತಿಭೋಜನಿಂದ ಅವರ ಸೇವೆಗೆ ಕುಂತಿಯ ನಿಯೋಜನೆ.
ಜನಮೇಜಯಃ
ಕಿಂ ತದ್ ಗುಹ್ಯಂ ನ ಚಾಖ್ಯಾತಂ ಕರ್ಣಾಯೇಹೋಷ್ಣರಶ್ಮಿನಾ |
ಕೀದೃಶೇ ಕುಂಡಲೇ ತೇ ಚ ಕವಚಂ ಚೈವ ಕೀದೃಶಮ್ ॥1॥
ಕುತಶ್ಚ ಕವಚಂ ತಸ್ಯ ಕುಂಡಲೇ ಚೈವ ಸತ್ತಮ |
ಏತದಿಚ್ಛಾಮ್ಯಹಂ ಶ್ರೋತುಂ ತನ್ಮೇ ಬ್ರೂಹಿ ತಪೋಧನ ॥2॥
ಜನಮೇಜಯ ಎಲೈ ಸಜ್ಜನರಲ್ಲಿ ಶ್ರೇಷ್ಠರೇ, ಸೂರ್ಯನು ಕರ್ಣನಿಗೆ ಹೇಳದಿದ್ದ ಆ ರಹಸ್ಯವು ಯಾವುದು? ಆ ಕುಂಡಲಗಳು ಎಂತಹವು ಮತ್ತು ಕವಚವು ಎಂತಹದು? ಎಲೈ ತಪೋಧನರೇ, ಆ ಕರ್ಣನಿಗೆ ಕವಚಕುಂಡಲಗಳು ಎಲ್ಲಿಂದ ದೊರೆತವು? ಇದನ್ನೂ ಸಹ ನಾನು

ತಿಳಿಯಲು ಇಚ್ಛಿಸುತ್ತೇನೆ. ಅದನ್ನು ನನಗೆ ಹೇಳಿ.
ವೈಶಂಪಾಯನಃ
ಅಥ ರಾಜನ್ ಬ್ರವೀಮ್ಯೇತತ್ ತಸ್ಯ ಗುಹ್ಯಂ ವಿಭಾವಸೋಃ |
ಯಾದೃಶೇ ಕುಂಡಲೇ ತೇ ಚ ಕವಚಂ ಚೈವ ಯಾದೃಶಮ್ ||3||
ವೈಶಂಪಾಯನ ರಾಜನೇ, ನಿನಗೆ ಮಂಗಳವಾಗಲಿ. ನಿನಗೆ ಸೂರ್ಯನ ಆ ರಹಸ್ಯವನ್ನೂ ಮತ್ತು ಆ ಕವಚಕುಂಡಲಗಳು ಎಂತಹವು ಎಂಬುದನ್ನೂ ಹೇಳುತ್ತೇನೆ.
ಕುಂತಿಭೋಜಂ ಪುರಾ ರಾಜನ್ ಬ್ರಾಹ್ಮಣಃ ಪರ್ಯುಪಸ್ಥಿತಃ |
ತಿಗ್ಮತೇಜಾ ಮಹಾಪ್ರಾಂಶುಃ ಶ್ಮಶ್ರುದಂಡಜಟಾಧರಃ ||4||
ದರ್ಶನೀಯೋಽನವದ್ಯಾಂಗಸ್ತೇಜಸಾ ಪ್ರಜ್ವಲನ್ನಿವ |
ಮಧುಪಿಂಗೋ ಮಧುರವಾಕ್ ತಪಃಸ್ವಾಧ್ಯಾಯಭೂಷಣಃ ||5||
ಎಲೈ ರಾಜನೇ, ಹಿಂದೆ ಕುಂತಿಭೋಜನು ಒಬ್ಬ ಬ್ರಾಹ್ಮಣರ ಸೇವೆಯನ್ನು ಮಾಡಿದನು. ಆ ಬ್ರಾಹ್ಮಣನು ಪ್ರಖರವಾದ ತೇಜಸ್ಸುಳ್ಳವನೂ, ಎತ್ತರವಾದವನೂ, ದಂಡವನ್ನು ಮತ್ತು ಜಟೆಗಳನ್ನು ಧರಿಸಿದವನೂ, ಸುಂದರನಾದವನೂ, ನಿರ್ದುಷ್ಟವಾದ ಅವಯವವುಳ್ಳವನೂ, ತನ್ನ ಕಾಂತಿಯಿಂದ ಜ್ವಲಿಸುವವನೂ, ಜೇನಿನಂತೆ ಕಂದುಬಣ್ಣ ಉಳ್ಳವನೂ, ಮಧುರವಾಗಿ ಮಾತನಾಡುವವನೂ, ತಪಸ್ಸು ಮತ್ತು ಸ್ವಾಧ್ಯಾಯ ಎಂಬ ಅಲಂಕಾರದಿಂದ ಭೂಷಿತನಾದವನೂ ಆಗಿದ್ದನು.
ಸ ರಾಜಾನಂ ಕುಂತಿಭೋಜಮಬ್ರವೀತ್ ಸುಮಹಾತಪಾಃ |
ಭಿಕ್ಷಾಮಿಚ್ಛಾಮಿ ವೈ ಭೋಕ್ತುಂ ತವ ಗೇಹೇ ವಿಮತ್ಸರಃ ||6||
ಮಹಾತಪಸ್ವಿಯಾದ ಅವನು ಕುಂತಿಭೋಜನನ್ನು ಸಮೀಪಿಸಿ ನಿನ್ನ ಮನೆಯಲ್ಲಿ ಯಾವ ಅಸೂಯೆಯೂ ಇಲ್ಲದೆ ಭಿಕ್ಷೆಯನ್ನು ಸ್ವೀಕರಿಸಲು ಇಚ್ಛಿಸುತ್ತೇನೆ ಎಂದು ಹೇಳಿದನು.
ನ ಮೇ ವ್ಯಲೀಕಂ ಕರ್ತವ್ಯಂ ತ್ವಯಾ ವಾ ತವ ಚಾನುಗೈಃ |
ಏವಂ ವತ್ಸ್ಯಾಮಿ ತೇ ಗೇಹೇ ಯದಿ ತೇ ರೋಚತೇಽನಘ ||7||
ಎಲೈ ಅನಘನೇ, ನಿನ್ನ ಮನೆಯಲ್ಲಿ ನೀನಾಗಲೀ ಅಥವಾ ನಿನ್ನ ಅನುಚರರಾಗಲೀ ನನಗೆ ಅಪಚಾರವನ್ನು ಮಾಡದಿದ್ದರೆ ನಿನಗೆ ಇಷ್ಟವಾದರೆ ನಾನು ನಿನ್ನ ಮನೆಯಲ್ಲಿ ವಾಸಿಸುವೆನು.
ಯಥಾಕಾಮಂ ಚ ಗಚ್ಛೇಯಮಾಗಚ್ಛೇಯಂ ತಥೈವ ಚ |
ಶಯ್ಯಾಸಾನೇ ಚ ಮೇ ರಾಜನ್ ನಾಪರಾಧ್ಯೇತ ಕಶ್ಚನ ||8||
ನನಗೆ ಇಷ್ಟವಾದಂತೆ ನಾನು ಬರುತ್ತೇನೆ ಮತ್ತು ಹೋಗುತ್ತೇನೆ. ಎಲೈ ರಾಜನೇ, ನನ್ನ ಶಯ್ಯಾಸನಗಳ ವಿಷಯದಲ್ಲಿ ಯಾರೂ ನನಗೆ ಅಪರಾಧವನ್ನು ಮಾಡಬಾರದು.
ವೈಶಂಪಾಯನಃ
ತಮಬ್ರವೀತ್ಕುಂತಿಭೋಜಃ ಪ್ರೀತಿಯುಕ್ತಮಿದಂ ವಚಃ |
ಏವಮಸ್ತು ಪರಂ ಚೇತಿ ಪುನಶ್ಚೈನಮಥಾಬ್ರವೀತ್ ||9||
ವೈಶಂಪಾಯನ ಕುಂತಿಭೋಜರಾಜನು ವಿಶ್ವಾಸದಿಂದ ಹಾಗೆಯೇ ಆಗಲಿ ಎಂದು ಹೇಳಿ ಅನಂತರ ಅವನನ್ನು ಕುರಿತು ಪುನಃ ಹೀಗೆ ಮಾತನಾಡಿದನು.
ಮಮ ಕನ್ಯಾ ಮಹಾಪ್ರಾಜ್ಞ ಪೃಥಾ ನಾಮ ಯಶಸ್ವಿನೀ |
ಶೀಲವೃತ್ತಾನ್ವಿತಾ ಸಾಧ್ವೀ ನಿಯತಾ ನಾತಿಮಾನಿನೀ ||10||
ಮಹಾಪ್ರಾಜ್ಞನೇ, ನನ್ನ ಮಗಳಾದ ಪೃಥಾ ಎಂಬ ಯಶಸ್ವಿನಿಯು. ಶೀಲವೃತ್ತದಿಂದ ಕೂಡಿದವಳು. ಸಾಧುಸ್ವಭಾವದವಳು. ಮೌನಶೀಲಳು ಮತ್ತು ಅಹಂಕಾರರಹಿತಳು.
ಉಪಸ್ಥಾಸ್ಯತಿ ಸಾ ತ್ವಾಂ ವೈ ಪೂಜಯಾ ಸುಮಹಾದ್ಯುತೇ |
ತಸ್ಯಾಸ್ತ್ವಂ ಶೀಲವೃತ್ತೇನ ತುಷ್ಟಿಂ ಸಮುಪಯಾಸ್ಯಸಿ ||11||
ಎಲೈ ಮಹಾದ್ಯುತಿಯೇ, ನಿನ್ನನ್ನು ಸತ್ಕರಿಸುತ್ತಾ ಅವಳು ನಿನ್ನ ಸೇವೆಯಲ್ಲಿ ಇರುವಳು. ಅವಳ ಶೀಲವೃತ್ತಗಳಿಂದ ನೀನು ಸಂತೋಷವನ್ನು ಹೊಂದುವಿ.
ವೈಶಂಪಾಯನಃ
ಏವಮುಕತ್ವ ತು ತಂ ವಿಪ್ರಮಭಿಪೂಜ್ಯ ಯಥಾವಿಧಿ |
ಉವಾಚ ಕನ್ಯಾಮಭ್ಯೇತ್ಯ ಪೃಥಾಂ ಪೃಥುಲಲೋಚನಾಮ್ ||12||
ವೈಶಂಪಾಯನ ಹೀಗೆ ಹೇಳಿ ಬ್ರಾಹ್ಮಣನನ್ನು ಶಾಸ್ತ್ರಪ್ರಕಾರದಿಂದ ಸತ್ಕರಿಸಿ ವಿಶಾಲನೇತ್ರೆಯಾದ ಪೃಥೆಯನ್ನು ಸಮೀಪಿಸಿ ಆ ಕನ್ಯೆಯನ್ನು ಕುರಿತು ಹೀಗೆ ಹೇಳಿದನು.
ಅಯಂ ವತ್ಸೇ ಮಹಾಭಾಗೋ ಬ್ರಾಹ್ಮಣೋ ವಸ್ತುಮಿಚ್ಛತಿ |
ಮಮ ಗೇಹೇ ಮಯಾ ಚಾಸ್ಯ ತಥೇತ್ಯೇವಂ ಪ್ರತಿಶ್ರುತಮ್ ||13||
ಮಗಳೇ, ಈ ಮಹಾನುಭಾವನಾದ ಬ್ರಾಹ್ಮಣನು ನನ್ನ ಮನೆಯಲ್ಲಿ ವಾಸ ಮಾಡಲು ಬಯಸುತ್ತಾನೆ. ನಾನು ಇವನಿಗೆ ಹಾಗೆಯೇ ಆಗಲಿ ಎಂದು ಮಾತನ್ನು ಕೊಟ್ಟಿದ್ದೇನೆ.
ತ್ವಯಿ ವತ್ಸೇ ಪರಾಯತ್ತಂ ಬ್ರಾಹ್ಮಣಸ್ಯಾಭಿರಾಧನಮ್ |
ತನ್ಮೇ ವಾಕ್ಯಮಮಿಥ್ಯಾ ತ್ವಂ ಕರ್ತುಮರ್ಹಸಿ ಕರ್ಹಿಚಿತ್ ||14||

ಮಗಳೇ, ಅವನನ್ನು ಪೂಜಿಸುವ ಭಾರವು ನಿನ್ನ ಮೇಲಿದೆ. ನನ್ನ ಮಾತನ್ನು ನೀನು ಯಾವಕಾರಣದಿಂದಲೂ ಸುಳ್ಳು ಮಾಡಬಾರದು.
ಅಯಂ ತಪಸ್ವೀ ಭಗವಾನ್ ಸ್ವಾಧ್ಯಾಯನಿಯತೋ ದ್ವಿಜಃ |
ಯದ್ಯದ್ ಬ್ರೂಯಾನ್ಮಹಾತೇಜಾಸ್ತದೆ ದೇಯಮಮತ್ಸರಾತ್ ॥15॥
ಈ ತಪಸ್ವಿಯಾದ ಸ್ವಾಧ್ಯಾಯನಿಯತನಾದ ಪೂಜ್ಯನಾದ ಮಹಾತೇಜಸ್ವಿಯಾದ ಬ್ರಾಹ್ಮಣನು ಏನೇನು ಹೇಳುತ್ತಾನೆಯೋ ಅದೆಲ್ಲವನ್ನೂ ಅವನಿಗೆ ಮಾತ್ಸರ್ಯವಿಲ್ಲದೇ ಒದಗಿಸಬೇಕು.
ಬ್ರಾಹ್ಮಣೋ ಹಿ ಪರಂ ತೇಜೋ ಬ್ರಾಹ್ಮಣೋ ಹಿ ಪರಂ ತಪಃ |
ಬ್ರಾಹ್ಮಣಾನಾಂ ನಮಸ್ಕಾರೈಃ ಸೂರ್ಯೋ ದಿವಿ ವಿರಾಜತೇಃ ॥16॥
ಬ್ರಾಹ್ಮಣನೇ ದಿವ್ಯವಾದ ಶ್ರೇಷ್ಠವಾದ ತೇಜಸ್ಸು. ಬ್ರಾಹ್ಮಣನೇ ಶ್ರೇಷ್ಠವಾದ ತಪಸ್ಸೂ ಕೂಡ. ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡಿ ಅದರಿಂದ ಸೂರ್ಯನು ಆಕಾಶದಲ್ಲಿ ಮೆರೆಯುತ್ತಾನೆ.
ಅಮಾನಯನ್ ಹಿ ಮಾನಾರ್ಹಾನ್ ವಾತಾಪಿಶ್ಚ ಮಹಾಸುರಃ |
ನಿಹತೋ ಬ್ರಹ್ಮದಂಡೇನ ತಾಳಜಂಘಸ್ತಥೈವ ಚ ॥17॥
ಸತ್ಕಾರಕ್ಕೆ ಯೋಗ್ಯರಾದವರನ್ನು ಸತ್ಕರಿಸದೆ ಮಹಾಸುರನಾದ ವಾತಾಪಿಯು ನಿಧನವನ್ನು ಹೊಂದಿದನು. ಅದರಂತೆಯೇ ತಾಳಜಂಘನೂ ಸಹ ಬ್ರಹ್ಮದಂಡದಿಂದ ನಿಧನ ಹೊಂದಿದನು.
ಸೋಽಯಂ ವತ್ಸೇ ಮಹಾಭಾರ ಆಹಿತಸ್ತ್ವಯಿ ಸಾಂಪ್ರತಮ್ |
ತ್ವಂ ಸದಾ ನಿಯತಾ ಕುರ್ಯಾ ಬ್ರಾಹ್ಮಣಸ್ಯಾಭಿರಾಧನಮ್ ॥18॥
ಜಾನಾಮಿ ಪ್ರಣಿಧಾನಂ ತೇ ಬಾಲ್ಯಾತ್ ಪ್ರಭೃತಿ ನಂದಿನಿ ॥19॥
ಮಗಳೇ, ಈಗ ಈ ದೊಡ್ಡ ಭಾರವು ನಿನ್ನ ಮೇಲೆ ಹೊರಿಸಲ್ಪಟ್ಟಿದೆ. ನೀನು ಯಾವಾಗಲೂ ಎಚ್ಚರಿಕೆಯಿಂದ ಈ ಬ್ರಾಹ್ಮಣನ ಸತ್ಕಾರವನ್ನು ಮಾಡು. ಪ್ರೀತಿಯ ಮಗಳೇ, ಬಾಲ್ಯದಿಂದಲೂ ನಿನಗಿರುವ ಏಕಾಗ್ರತೆಯನ್ನು ನಾನು ತಿಳಿದಿದ್ದೇನೆ.
ಬ್ರಾಹ್ಮಣೇಷ್ವಿಹ ಸರ್ವೇಷು ಗುರುಬಂಧುಷು ಚೈವ ಹ |
ತಥಾ ಪ್ರೇಷ್ಯೇಷು ಸರ್ವೇಷು ಮಿತ್ರಸಂಬಂಧಿಮಾತೃಷು |
ಮಯಿ ಚೈವ ಯಥಾವತ್ತ್ವಂ ಸರ್ವಮಾವೃತ್ಯ ವರ್ತಸೇ ॥20॥
ಎಲ್ಲ ಬ್ರಾಹ್ಮಣರ ವಿಷಯಲ್ಲಿಯೂ, ಗುರುಗಳು ಮತ್ತು ಬಂಧುಗಳಲ್ಲಿಯೂ, ಎಲ್ಲಾ ಸೇವಕರ ವಿಷಯದಲ್ಲಿಯೂ, ಮಿತ್ರಸಂಬಂಧಿ ಮಾತೃಗಳ ವಿಷಯದಲ್ಲಿಯೂ ಮತ್ತು ನನ್ನ ವಿಷಯದಲ್ಲಿಯೂ ನೀನು ಬೇರೆಲ್ಲವನ್ನೂ ಬಿಟ್ಟು ಏಕಾಗ್ರತೆಯಿಂದ ಸರಿಯಾಗಿ ನಡೆದುಕೊಳ್ಳುವವಳಾಗಿದ್ದೀಯೆ.
ನ ಹ್ಯತುಷ್ಟೋ ಜನೋಽಸ್ತೀಹ ಪುರೇ ಚಾಂತಃಪುರೇ ಚ ತೇ |
ಸಮ್ಯಗ್ವೃತ್ತ್ಯಾಽನವದ್ಯಾಂಗಿ ತವ ಭೃತ್ಯಜನೇಷ್ವಪಿ ॥21॥
ಎಲೌ ಅನವದ್ಯಾಂಗಿಯೇ, ಈ ಪಟ್ಟಣದಲ್ಲಿ ಮತ್ತು ಅಂತಃಪುರದಲ್ಲಿ ಮತ್ತು ಸೇವಕಜನರಲ್ಲಿ ನಿನ್ನ ನಡತೆಯಿಂದ ಸಂತೋಷಗೊಳ್ಳದಿರುವ ಯಾವ ವ್ಯಕ್ತಿಯೂ ಇಲ್ಲ.
ಸಂದೇಷ್ಟವ್ಯಾಂ ತು ಮನ್ಯೇ ತ್ವಾಂ ದ್ವಿಜಾತಿಂ ಕೋಪನಂ ಪ್ರತಿ |
ಪೃಥೇ ಬಾಲೇತಿ ಕೃತ್ವಾ ವೈ ಸುತಾ ವಾಽಸಿ ಮಮೇತಿ ಚ ॥22॥
ಎಲೌ ಪೃಥೆಯೇ, ನೀನು ಚಿಕ್ಕವಳು ಮತ್ತು ನನ್ನ ಮಗಳು ಎಂದು ತಿಳಿದು ನಾನು ಕೋಪಶೀಲನಾದ ಬ್ರಾಹ್ಮಣನ ಸೇವೆಯಲ್ಲಿ ನಿನಗೆ ಸಂದೇಶವನ್ನು ನೀಡುತ್ತಿದ್ದೇನೆ.
ವೃಷ್ಣೀನಾಂ ಚ ಕುಲೇ ಜಾತಾ ಶೂರಸ್ಯ ದಯಿತಾ ಸುತಾ |
ದತ್ತಾ ಪ್ರೀತಿಮತಾ ಮಹ್ಯಂ ಪಿತ್ರಾ ಬಾಲಾ ಪುರಾ ಸ್ವಯಮ್ ॥23॥
ನೀನು ವೃಷ್ಣಿಗಳ ಕುಲದಲ್ಲಿ ಹುಟ್ಟಿದವಳು. ಶೂರನ ಪ್ರೀತಿಯ ಪುತ್ರಿ. ನೀನು ಮಗುವಾಗಿದ್ದಾಗಲೇ ನಿನ್ನ ತಂದೆಯು ಪ್ರೀತಿಯಿಂದ ನಿನ್ನನ್ನು ಸ್ವತಃ ತಾನೇ ನನಗೆ ಕೊಟ್ಟನು.
ವಸುದೇವಸ್ಯ ಭಗಿನೀ ಸುತಾನಾಂ ಪ್ರವರಾ ಮಮ |
ಅಗ್ರ್ಯಮಗ್ರೇ ಪ್ರತಿಜ್ಞಾಯ ತೇನಾಸಿ ದುಹಿತಾ ಮಮ ॥24॥
ನೀನು ವಸುದೇವನ ಸಹೋದರಿ. ಶೂರನ ಮಕ್ಕಳಲ್ಲಿ ಶ್ರೇಷ್ಠಳಾದವಳು. ನೀನು ಜನಿಸುವುದಕ್ಕಿಂತ ಮೊದಲೇ ಶೂರನು ನಿನ್ನನ್ನು ನನಗೆ ಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿ ಅನಂತರ ಕೊಟ್ಟನು.ಅದರಿಂದ ನೀನು ನನ್ನ ಮಗಳಾಗಿದ್ದೀಯೆ.
ತಾದೃಶೇ ಹಿ ಕುಲೇ ಜಾತಾ ಕುಲೇ ಚೇಹ ವಿವರ್ಧಿತಾ |
ಸುಖಾತ್ ಸುಖಮನುಪ್ರಾಪ್ತಾ ಹ್ರದಾದ್ ಹ್ರದಮಿವಾಗತಾ ॥25॥
ನೀನು ಅಂತಹ ಕುಲದಲ್ಲಿ ಹುಟ್ಟಿ ಈ ಕುಲದಲ್ಲಿ ಬೆಳೆದು ಒಂದು ಸರೋವರದಿಂದ ಇನ್ನೊಂದು ಸರೋವರಕ್ಕೆ ಹೋದಂತೆ ಒಂದು ಸುಖದಿಂದ ಇನ್ನೊಂದು ಸುಖವನ್ನು ಪಡೆದಿದ್ದೀಯೆ.
ದೌಷ್ಕುಲೇಯಾ ವಿಶೇಷೇಣ ಕಥಂಚಿತ್ ಪ್ರಗ್ರಹಂ ಗತಾಃ |
ಬಾಲಭಾವಾದ್ ವಿಕುರ್ವಂತಿ ಪ್ರಾಯಶಃ ಪ್ರಮದಾಃ ಶುಭೇ ॥26॥
ಶುಭಳಾದವಳೇ, ದುಷ್ಕುಲದಲ್ಲಿ ಹುಟ್ಟಿದ ಸ್ತ್ರೀಯರು ಹೇಗೋ ಒಂದು ಒಳ್ಳೆಯ ಸ್ಥಾನವನ್ನು ತಲುಪಿದ ಮೇಲೆ ಬಾಲ್ಯದಲ್ಲಿ ಇದ್ದ ರೀತಿಗಿಂತ ಹೆಚ್ಚಾಗಿ ವಿಕಾರವನ್ನು ಹೊಂದುತ್ತಾರೆ.
ಪೃಥೇ ರಾಜಕುಲೇ ಜನ್ಮ ರೂಪಂ ಚಾಪಿ ತವಾದ್ಭುತಮ್ |
ತೇನ ತೇನಾಸಿ ಸಂಪನ್ನಾ ಸಮುಪೇತಾ ಚ ಭಾಮಿನೀ ॥27॥

ಪೃಥೆಯೇ, ಆದರೆ ನೀನು ಒಳ್ಳೆಯ ರಾಜಕುಲದಲ್ಲಿ ಜನಿಸಿದ್ದೀಯೆ. ನಿನ್ನ ರೂಪವೂ ಅದ್ಭುತವಾಗಿದೆ. ಆ ಎರಡು ಕಾರಣಗಳಿಂದಲೂ ಒಳ್ಳೆಯ ಗುಣಗಳಿಂದ ಕೂಡಿದ ಕನ್ಯೆಯಾಗಿದ್ದೀಯೆ.
ಸಾ ತ್ವಂ ದರ್ಪಂ ಪರಿತ್ಯಜ್ಯ ಡಂಭಂ ಮಾನಂ ಚ ಮಾನಿನಿ |
ಆರಾಧ್ಯ ವರದಂ ವಿಪ್ರಂ ಶ್ರೇಯಸಾ ಯೋಕ್ಷ್ಯಸೇ ಪೃಥೇ ॥28॥
ಮಾನಿನಿಯೇ, ಪೃಥೆಯೇ, ಅಂತಹ ನೀನು ದರ್ಪವನ್ನೂ, ಡಂಭವನ್ನೂ, ಅಹಂಕಾರವನ್ನೂ ಬಿಟ್ಟು ವರಪ್ರದನಾದ ಬ್ರಾಹ್ಮಣನನ್ನು ಆರಾಧಿಸಿ ಶ್ರೇಯಸ್ಸನ್ನು ಹೊಂದುವಿ.
ಏವಂ ಪ್ರಾಪ್ಸ್ಯಸಿ ಕಲ್ಯಾಣಿ ಕಲ್ಯಾಣಂ ಮನಸೇಪ್ಸಿತಮ್ |
ಕೋಪಿತೇ ತು ದ್ವಿಜಶ್ರೇಷ್ಠೇ ಕೃತ್ಸ್ನಂ ದಹ್ಯೇತ ಮೇ ಕುಲಮ್ ॥29॥
ಕಲ್ಯಾಣಿಯೇ, ಹೀಗೆ ಮಾಡಿದರೆ ನಿನ್ನ ಮನಸ್ಸಿಗೆ ಅಭೀಷ್ಟವಾದ ಎಲ್ಲಾ ಕಲ್ಯಾಣವನ್ನೂ ಹೊಂದುವಿ. ದ್ವಿಜಶ್ರೇಷ್ಠನು ಕೋಪಗೊಂಡರೆ ಮಾತ್ರ ನನ್ನ ಕುಲವೆಲ್ಲವೂ ನಾಶವಾದೀತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಚತುಃನವತಿತದ್ವಿಶತತಮೋಽಧ್ಯಾಯಃ ॥
॥ಇತಿ ಕುಂಡಲಾಹರಣಪರ್ವಣಿ ಕುಂತಿಭೋಜವಾಕ್ಯಂ ನಾಮ ಚತುರ್ಥೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತನಾಲ್ಕನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ತೈದನೆಯ ಅಧ್ಯಾಯ
ಕುಂತಿಯ ಆಶ್ವಾಸನೆ ಮತ್ತು ಕುಂತಿಭೋಜನ ಅರಮನೆಯಲ್ಲಿ
ದುರ್ವಾಸರ ನಿವಾಸಕ್ಕಾಗಿ ಸರ್ವ ವ್ಯವಸ್ಥೆ.
ಕುಂತೀ
ಬ್ರಾಹ್ಮಣಂ ಯಂತ್ರಿತಾ ರಾಜನ್ನುಪಸ್ಥಾಸ್ಯಾಮಿ ಪೂಜಯೇ |
ಯಥಾಪ್ರತಿಜ್ಞಂ ರಾಜೇಂದ್ರ ನ ಚ ಮಿಥ್ಯಾ ಬ್ರವೀಮ್ಯಹಮ್ ॥1॥
ಕುಂತೀ ರಾಜನೇ, ನಾನು ಆ ಬ್ರಾಹ್ಮಣನನ್ನು ನಿಯಮಬದ್ಧಳಾಗಿ ಸತ್ಕರಿಸಿ ನಿನ್ನ ಪ್ರತಿಜ್ಞೆಗೆ ಅನುಗುಣವಾಗಿ ಅವನ ಸೇವೆಯನ್ನು ಮಾಡುವೆನು. ರಾಜೇಂದ್ರನೇ, ನಾನು ಸುಳ್ಳನ್ನು ಮಾತನಾಡುವುದಿಲ್ಲ.
ಏಷ ಚೈವ ಸ್ವಭಾವೋ ಮೇ ಪೂಜಯೇಯಂ ದ್ವಿಜಾನಿತಿ |
ತವ ಚೈವ ಪ್ರಿಯಂ ಕಾರ್ಯಂ ಶ್ರೇಯಶ್ಚ ಪರಮಂ ಮಮ ॥2॥
ಬ್ರಾಹ್ಮಣರನ್ನು ಪೂಜಿಸಬೇಕು ಎಂಬ ಈ ವಿಷಯವು ನನ್ನ ಸ್ವಭಾವವೇ ಆಗಿದೆ ಮತ್ತು ನಿನಗೂ ಪ್ರಿಯವನ್ನುಂಟುಮಾಡಬೇಕು ಎಂಬುದು ಸಹ ನನ್ನ ಆಸೆ. ಇದರಿಂದ ನನಗೆ ಪರಮ ಶ್ರೇಯಸ್ಸಾಗುತ್ತದೆ.
ಯದ್ಯೇವೈಷ್ಯತಿ ಸಾಯಾಹ್ನೇ ಯದಿ ಪ್ರಾತರಥೋ ನಿಶಿ |
ಯದ್ಯರ್ಧರಾತ್ರೇ ಭಗವಾನ್ ನ ಮೇ ಕೋಪಂ ಕರಿಷ್ಯತಿ ॥3॥
ಪೂಜ್ಯನಾದ ಅವನು ಸಾಯಂಕಾಲದಲ್ಲಾಗಲೀ, ಪ್ರಾತಃಕಾಲದಲ್ಲಾಗಲೀ, ರಾತ್ರಿಯಲ್ಲಾಗಲೀ, ಅರ್ಧರಾತ್ರಿಯಲ್ಲಾಗಲೀ ಬಂದರೂ ನನ್ನ ಮೇಲೆ ಕೋಪ ಮಾಡುವುದಿಲ್ಲ. (ವಿಭಕ್ತಿವ್ಯತ್ಯಾಸದಿಂದ ನಾನು ಅವನ ಮೇಲೆ ಕೋಪ ಮಾಡುವುದಿಲ್ಲ- ವಾದಿರಾಜರು)
ಲಾಭೋ ಮಮೈಷ ವೈಭೂಯಾನ್ ಯದ್ವೈ ಪೂಜಯತೀ ದ್ವಿಜಾನ್ |
ಆದೇಶೇ ತವ ತಿಷ್ಠಂತೀ ತೋಷಯಿಷ್ಯೇ ದ್ವಿಜೋತ್ತಮಮ್ ॥4॥
ನಾನು ನಿನ್ನ ಆದೇಶದಂತೆ ನಡೆದುಕೊಂಡು ಬ್ರಾಹ್ಮಣರನ್ನು ಪೂಜಿಸುವುದರಿಂದ ನನಗೇ ದೊಡ್ಡ ಲಾಭವಿದೆ. ನಾನು ಆ ಬ್ರಾಹ್ಮಣಶ್ರೇಷ್ಠನನ್ನು ಸಂತೋಷಪಡಿಸುವೆನು.
ವಿಸ್ರಬ್ಧೋ ಭವ ರಾಜೇಂದ್ರ ನ ವ್ಯಲೀಕಂ ದ್ವಿಜೋತ್ತಮಃ |
ವಸನ್ ಪ್ರಾಪ್ಸ್ಯತಿ ತೇ ಗೇಹೇ ಸತ್ಯಮೇತದ್ ಬ್ರವೀಮಿ ತೇ ॥5॥
ರಾಜೇಂದ್ರನೇ, ನೀನು ಸಮಾಧಾನದಿಂದಿರು. ನಿನ್ನ ಮನೆಯಲ್ಲಿ ವಾಸಮಾಡುವ ಆ ಬ್ರಾಹ್ಮಣೋತ್ತಮನಿಗೆ ಯಾವ ಅಪಚಾರವೂ ಆಗುವುದಿಲ್ಲ. ನಾನು ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಯತ್ ಪ್ರಿಯಂ ಚ ದ್ವಿಜಸ್ಯಾಸ್ಯ ಹಿತಂ ಚೈವ ತವಾನಘ |
ಯತಿಷ್ಯಾಮಿ ತಥಾ ರಾಜನ್ ವ್ಯೇತು ತೇ ಮಾನಸೋ ಜ್ವರಃ ॥6॥
ಎಲೈ ರಾಜನೇ, ಎಲೈ ಅನಘನೇ, ಬ್ರಾಹ್ಮಣನಿಗೆ ಯಾವುದು ಪ್ರಿಯವೋ ಮತ್ತು ನಿನಗೆ ಯಾವುದು ಹಿತವೋ ನಾನು ಅದನ್ನೇ ಮಾಡಲು ಪ್ರಯತ್ನಿಸುವೆನು. ನಿನ್ನ ಮನಸ್ಸಿನ ಸಂತಾಪವು ದೂರವಾಗಲಿ.
ಬ್ರಾಹ್ಮಣಾ ಹಿ ಮಹಾಭಾಗಾಃ ಪೂಜಿತಾಃ ಪೃಥಿವೀಪತೇ |
ತಾರಣಾಯ ಸಮರ್ಥಾಃ ಸ್ಯುರ್ವಿಪರೀತೇ ವಧಾಯ ಚ ॥7॥
ಎಲೈ ಪೃಥಿವೀಪತಿಯೇ, ಮಹಾನುಭಾವರಾದ ಬ್ರಾಹ್ಮಣರನ್ನು ಪೂಜಿಸಿದರೆ ಅವರು ನಮ್ಮನ್ನು ಆಪತ್ತಿನಿಂದ ಪಾರುಮಾಡಲು ಸಮರ್ಥರಾಗುತ್ತಾರೆ. ಅದಕ್ಕೆ ವಿಪರೀತವಾಗಿ ನಡೆದುಕೊಂಡರೆ ನಮ್ಮನ್ನು ನಾಶಮಾಡಲೂ ಸಮರ್ಥರಾಗುತ್ತಾರೆ.
ಸಾಹಮೇತದ್ ವಿಜಾನಂತೀ ತೋಷಯಿಷ್ಯೇ ದ್ವಿಜೋತ್ತಮಮ್ |
ನ ಮತ್ಕೃತೇ ವ್ಯಥಾಂ ರಾಜನ್ ಪ್ರಾಪ್ಸ್ಯಸಿ ದ್ವಿಜಸತ್ತಮಾತ್ ॥8॥

ಇದನ್ನು ತಿಳಿದ ನಾನು ಆ ದ್ವಿಜಶ್ರೇಷ್ಠನನ್ನು ಸಂತೋಷಪಡಿಸುವೆನು. ರಾಜನೇ, ನನ್ನ ಸಲುವಾಗಿ ನೀನು ಆ ಬ್ರಾಹ್ಮಣಶ್ರೇಷ್ಠರಿಂದ ವ್ಯಥೆಯನ್ನು ಪಡುವ ಪ್ರಸಂಗವು ಬರುವುದಿಲ್ಲ.
ಅಪರಾಧೇಽಪಿ ರಾಜೇಂದ್ರ ರಾಜ್ಞಾಮಶ್ರೇಯಸೇ ದ್ವಿಜಾಃ |
ಭವಂತಿ ಚ್ಯವನೋ ಯದ್ವತ್ ಸುಕನ್ಯಾಯಾಃ ಕೃತೇ ಪುರಾ ॥9॥
ರಾಜೇಂದ್ರನೇ, ಬ್ರಾಹ್ಮಣರಿಗೆ ಅಪರಾಧವನ್ನು ಮಾಡಿದರೆ ಹಿಂದೆ ಸುಕನ್ಯೆಯ ವಿಷಯದಲ್ಲಿ ಚ್ಯವನರು ನಡೆದುಕೊಂಡಂತೆ ಬ್ರಾಹ್ಮಣರು ರಾಜರ ಅಶ್ರೇಯಸ್ಸಿಗೂ ಕಾರಣರಾಗುತ್ತಾರೆ.
ನಿಯಮೇನ ಪರೇಣಾಹಮುಪಸ್ಥಾಸ್ಯೇ ದ್ವಿಜೋತ್ತಮಮ್ |
ಯಥಾ ತ್ವಯಾ ನರೇಂದ್ರೇದಂ ಭಾಷಿತಂ ಬ್ರಾಹ್ಮಣಂ ಪ್ರತಿ ॥10॥
ನರೇಂದ್ರನೇ, ನೀನು ಆ ಬ್ರಾಹ್ಮಣರಿಗೆ ಮಾತುಕೊಟ್ಟಂತೆ ನಾನು ಬಹಳ ನಿಯಮದಿಂದ ಆ ಬ್ರಾಹ್ಮಣರ ಸೇವೆಯನ್ನು ಮಾಡುವೆನು.
ಏವಂ ಬ್ರುವಂತೀಂ ಬಹುಶಃ ಪರಿಷ್ವಜ್ಯ ಸಮರ್ಥ್ಯ ಚ |
ಇತಿ ಚೇತಿ ಚ ಕರ್ತವ್ಯಂ ರಾಜಾ ಸರ್ವಮಥಾದಿಶತ್ ॥10.1॥
ಹೀಗೆ ಮಾತನಾಡಿದ ಕುಂತಿಯನ್ನು ರಾಜನು ಅನುಮೋದಿಸಿ ಅನೇಕ ಬಾರಿ ಆಲಿಂಗಿಸಿ ಹೀಗೆ ಹೀಗೆ ಮಾಡಬೇಕು ಎಂದು ಆದೇಶವನ್ನು ನೀಡಿದನು.
ರಾಜಾ
ಏವಮೇತತ್ ತ್ವಯಾ ಭದ್ರೇ ಕರ್ತವ್ಯಮವಿಶಂಕಯಾ |
ಮದ್ಧಿತಾರ್ಥಂ ತಥಾಽಽತ್ಮಾರ್ಥಂ ಕುಲಾರ್ಥಂ ಚಾಪ್ಯನಿಂದಿತೇ ॥11॥
ರಾಜ ಎಲೌ ಮಂಗಳಸ್ವರೂಪಳೇ, ಅನಿಂದಿತೆಯೇ, ನೀನು ಯಾವ ಸಂಶಯವನ್ನೂ ಪಡದೆ ನನ್ನ ಹಿತದ ಸಲುವಾಗಿ, ನಿನ್ನ ಹಿತದ ಸಲುವಾಗಿ ಮತ್ತು ಕುಲದ ಸಲುವಾಗಿ ಹೀಗೆ ನಡೆದುಕೊಳ್ಳಬೇಕು.
ಏವಮುಕತ್ವ ತು ತಾಂ ಕನ್ಯಾಂ ಕುಂತಿಭೋಜೋ ಮಹಾಯಶಾಃ |
ಪೃಥಾಂ ಪರಿದದೌ ತಸ್ಮೈ ದ್ವಿಜಾಯ ದ್ವಿಜವತ್ಸಲಃ ॥12॥
ಹೀಗೆ ಹೇಳಿ ಮಹಾಕೀರ್ತಿವಂತನಾದ ಬ್ರಾಹ್ಮಣ ವತ್ಸಲನಾದ ಕುಂತಿಭೋಜನು ಆ ಕನ್ಯೆಯನ್ನು ಆ ಬ್ರಾಹ್ಮಣನಿಗೆ ಸೇವೆಗಾಗಿ ನೀಡಿದನು.
ಇಯಂ ಬ್ರಹ್ಮನ್ ಮಮ ಸುತಾ ಬಾಲಾ ಸುಖವಿವರ್ಧಿತಾ |
ಅಪರಾಧ್ಯೇತ ಯತ್ಕಿಂಚಿನ್ನ ತತ್ ಕಾರ್ಯಂ ಹೃದಿ ತ್ವಯಾ ॥13॥
ಬ್ರಾಹ್ಮಣರೇ, ಇವಳು ನನ್ನ ಮಗಳು. ಚಿಕ್ಕವಳು ಮತ್ತು ಸುಖವಾಗಿ ಬೆಳೆದವಳು. ಅವಳು ಏನಾದರೂ ಅಪರಾಧವನ್ನು ಮಾಡಿದರೆ ಅದನ್ನು ನೀವು ಮನಸ್ಸಿಗೆ ತಂದುಕೊಳ್ಳಬಾರದು.
ದ್ವಿಜಾತಯೋ ಮಹಾಭಾಗಾ ವೃದ್ಧಬಾಲತಪಸ್ವಿಷು |
ಭವಂತ್ಯಕ್ರೋಧನಾಃ ಪ್ರಾಯೋ ಹ್ಯಪರಾದ್ಧೇಷು ನಿತ್ಯದಾ ॥14॥
ಮಹಾನುಭಾವರಾದ ಬ್ರಾಹ್ಮಣರು ವೃದ್ಧರ ವಿಷಯದಲ್ಲಿ, ಬಾಲರ ವಿಷಯದಲ್ಲಿ, ತಪಸ್ವಿಗಳ ವಿಷಯದಲ್ಲಿ ನಿತ್ಯವೂ ಕ್ಷಮೆಯುಳ್ಳವರಾಗುತ್ತಾರೆ. ಅಪರಾಧವನ್ನು ಮಾಡಿದವರ ವಿಷಯದಲ್ಲಿಯೂ ಹೆಚ್ಚಾಗಿ ಕ್ಷಮೆಯನ್ನು ಹೊಂದಿರುತ್ತಾರೆ.
ಸುಮಹತ್ಯಪರಾಧೇಽಪಿ ಕ್ಷಾಂತಿಃ ಕಾರ್ಯಾ ದ್ವಿಜಾತಿಭಿಃ |
ಯಥಾಶಕ್ತಿ ಯಥೋತ್ಸಾಹಂ ಪೂಜಾ ಗ್ರಾಹ್ಯಾ ದ್ವಿಜೋತ್ತಮ ॥15॥
ದೊಡ್ಡ ಅಪರಾಧವನ್ನು ಮಾಡಿದರೂ ಸಹ ಬ್ರಾಹ್ಮಣರು ಕ್ಷಮೆಯನ್ನೇ ಮಾಡಬೇಕು. ಎಲೈ ದ್ವಿಜೋತ್ತಮನೇ, ಅವಳ ಶಕ್ತಿಗೆ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ಮಾಡಿದ ಪೂಜೆಯನ್ನು ಸ್ವೀಕರಿಸಬೇಕು.
ವೈಶಂಪಾಯನಃ
ತಥೇತಿ ಬ್ರಾಹ್ಮಣೇನೋಕ್ತೇ ಸ ರಾಜಾ ಪ್ರೀತಮಾನಸಃ |
ಹಂಸಚಂದ್ರಾಂಶುಸಂಕಾಶಂ ಗೃಹಮಸ್ಮೈ ನ್ಯವೇದಯತ ॥16॥
ವೈಶಂಪಾಯನ ಆ ಬ್ರಾಹ್ಮಣನು ಹಾಗೆಯೇ ಆಗಲಿ ಎಂದು ಹೇಳಲು ರಾಜನು ಸಂತೋಷಗೊಂಡ ಮನಸ್ಸುಳ್ಳವನಾಗಿ ಹಂಸದಂತೆ ಅಥವಾ ಚಂದ್ರಕಿರಣಗಳಂತೆ ಶುಭ್ರವಾದ ಒಂದು ಮನೆಯನ್ನು ಅವರಿಗೆ ನಿವೇದಿಸಿದನು.
ತತ್ರಾಗ್ನಿಶರಣೇ ಕ್ಲೃಪ್ತಮಾಸನಂ ತಸ್ಯ ಭಾನುಮತ್ |
ಆಹಾರಾದಿ ಚ ಸರ್ವಂ ತತ್ತಥೈವ ಪ್ರತ್ಯವೇದಯತ್ ॥17॥
ಅಲ್ಲಿ ಅಗ್ನಿಶಾನೆಯಲ್ಲಿ ಅವರಿಗೆ ಕ್ಲಪ್ತವಾದ ಪ್ರಕಾಶಮಾನವಾದ ಒಂದು ಆಸನವನ್ನು ಕಲ್ಪಿಸಿ ಮತ್ತು ಆಹಾರಾದಿ ಎಲ್ಲ ವಿಷಯಗಳನ್ನೂ ಅವನು ಹೇಳಿದಂತೆಯೇ ಅವನಿಗೆ ನಿವೇದಿಸಿದನು.
ನಿಕ್ಷಿಪ್ಯ ರಾಜಪುತ್ರೀ ತು ತಂದ್ರೀಂ ಮಾನಂ ತಥೈವ ಚ |
ಆತಸ್ಥೇ ಪರಮಂ ಯತ್ನಂ ಬ್ರಾಹ್ಮಣಸ್ಯಾಭಿರಾಧನೇ ॥18॥
ರಾಜಪುತ್ರಿಯಾದರೂ ಆಲಸ್ಯವನ್ನೂ, ಅಹಂಕಾರವನ್ನೂ ದೂರದಲ್ಲಿಟ್ಟು ಬ್ರಾಹ್ಮಣನನ್ನು ಆರಾಧಿಸುವ ವಿಷಯದಲ್ಲಿ ಪರಮಪ್ರಯತ್ನವನ್ನು ಮಾಡಿದಳು.
ತತ್ರ ಸಾ ಬ್ರಾಹ್ಮಣಂ ಗತ್ವಾ ಪೃಥಾ ಶೌಚಪರಾ ಸತೀ |
ವಿಧಿವತ್ಪರಿಚಾರಾರ್ಹಂ ದೇವವತ್ ಕುರ್ಯತೋಷಯತ್ ॥19॥
ಆ ಗೃಹದಲ್ಲಿ ಶೌಚಪರಳಾದ ಪೃಥೆಯು ಆ ಬ್ರಾಹ್ಮಣರ ಸಮೀಪಕ್ಕೆ ಹೋಗಿ ಸತ್ಕಾರಕ್ಕೆ ಯೋಗ್ಯವಾದ ಅವರನ್ನು ವಿಧಿವತ್ತಾಗಿ

ದೇವತೆಯಂತೆ ಸಂತೋಷಪಡಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ
ಪಂಚನವತಿತದ್ವಿಶತತಮೋಽಧ್ಯಾಯಃ ॥
॥ ಇತಿ ಕುಂಡಲಾಹರಣಪರ್ವಣಿ ಕುಂತೀವಾಕ್ಯಂ ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತೈದನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ತಾರನೆಯ ಅಧ್ಯಾಯ
ಕುಂತಿಯ ಸೇವೆಯಿಂದ ಸಂತುಷ್ಟರಾದ ದುರ್ವಾಸರಿಂದ ಅವಳಿಗೆ ಮಂತ್ರೋಪದೇಶ. ಕುಂತಿಭೋಜನ ಜೊತೆಯಲ್ಲಿ ಮಾತನಾಡಿ
ಅಂತರ್ಧಾನ.
ವೈಶಂಪಾಯನಃ
ಸಾ ತು ಕನ್ಯಾ ಮಹಾರಾಜ ಬ್ರಾಹ್ಮಣಂ ಸಂಶಿತವ್ರತಮ್ |
ತೋಷಯಾಮಾಸ ಶುದ್ಧೇನ ಮನಸಾ ಸಂಶಿತವ್ರತಾ ॥1॥
ವೈಶಂಪಾಯನ ಮಹಾರಾಜನೇ, ಆ ವ್ರತಶೀಲೆಯಾದ ಕನ್ಯೆಯಾದರೂ ವ್ರತನಿಷ್ಠನಾದ ಆ ಬ್ರಾಹ್ಮಣನನ್ನು ಶುದ್ಧಮನಸ್ಸಿನಿಂದ
ಸಂತೋಷಪಡಿಸಿದಳು.
ಪ್ರಾತರೇಷ್ಯಾಮ್ಯಥೇತ್ಯುಕ್ತ್ವಾ ಕದಾಚಿದ್ ದ್ವಿಜಸತ್ತಮಃ |
ತತ ಆಯಾತಿ ರಾಜೇಂದ್ರ ಸಾಯಂ ರಾತ್ರಾವಥೋ ಪುನಃ ॥2॥
ಎಲೈ ರಾಜೇಂದ್ರನೇ, ಆ ದ್ವಿಜಶ್ರೇಷ್ಠನು ಒಮ್ಮೊಮ್ಮೆ ನಾಳೆಯ ಬೆಳಿಗ್ಗೆ ಬರುತ್ತೇನೆಂದು ಹೇಳಿ ಸಾಯಂಕಾಲದಲ್ಲಿಯೋ ಅಥವಾ
ಮರುರಾತ್ರಿಯಲ್ಲಿಯೋ ಬರುತ್ತಾನೆ.
ತಂ ಚ ಸರ್ವಾಸು ವೇಲಾಸು ಭಕ್ಷ್ಯಭೋಜ್ಯಪ್ರತಿಶ್ರಯೈಃ |
ಪೂಜಯಾಮಾಸ ಸಾ ಕನ್ಯಾ ವರ್ಧಮಾನೈಸ್ತು ಸರ್ವದಾ ॥3॥
ಆ ಬ್ರಾಹ್ಮಣನನ್ನು ಆ ಕನ್ಯೆಯು ಎಲ್ಲ ಸಮಯಗಳಲ್ಲಿಯೂ ಪ್ರತಿದಿನವೂ ಅಭಿವೃದ್ಧಿಯನ್ನು ಹೊಂದುವ ಭಕ್ಷ್ಯಭೋಜ್ಯಗಳಿಂದಲೂ
ವಿನಯದ ಮಾತುಗಳಿಂದಲೂ ಪೂಜಿಸಿದಳು.
ಅನ್ನಾದಿಸಮುದಾಚಾರಃ ಶಯ್ಯಾಸನಕೃತಸ್ತಥಾ |
ದಿವಸೇ ದಿವಸೇ ತಸ್ಯ ವರ್ಧತೇ ನ ತು ಹೀಯತೇ ॥4॥
ಅನ್ನಾದಿ ಉಪಚಾರವೂ, ಶಯ್ಯಾಸನಾದಿ ಉಪಚಾರವೂ ಅವನಿಗೆ ದಿನದಿನಕ್ಕೂ ಅಭಿವೃದ್ಧಿಯಾಯಿತೇ ಹೊರತು ಕಡಿಮೆಯಾಗಲಿಲ್ಲ.
ನಿರ್ಭರ್ತ್ಸನಾಪವಾದೈಶ್ಚ ತಥೈವಾಪ್ರಿಯಯಾ ಗಿರಾ |
ಬ್ರಾಹ್ಮಣಸ್ಯ ಪೃಥಾ ರಾಜನ್ ನ ಚಕಾರಾಪ್ರಿಯಂ ತದಾ ॥5॥
ಎಲೈ ರಾಜನೇ, ಕುಂತಿಯು ಗದರಿಸುವುದರಿಂದಲಾಗಲೀ, ನಿಂದಿಸುವುದರಿಂದಲಾಗಲೀ ಅಥವಾ ಅಹಿತವಾದ ಮಾತುಗಳಿಂದಲಾಗಲೀ
ಆ ಬ್ರಾಹ್ಮಣನಿಗೆ ಅಪ್ರಿಯವನ್ನು ಮಾಡಲಿಲ್ಲ.
ವ್ಯಸ್ತೇ ಕಾಲೇ ಪುನಶ್ಚೈತಿ ನ ಚೈತಿ ಬಹುಶೋ ದ್ವಿಜಃ |
ಸುದುರ್ಲಭಮಿದಂ ಚಾನ್ನಂ ದೀಯತಾಮಿತಿ ಸೋಽಬ್ರವೀತ್ |
ಕೃತಮೇವ ಹಿ ತತ್ಸರ್ವಂ ಪೃಥಾ ತಸ್ಮೈ ನ್ಯವೇದಯತ್ ॥6॥
ಅಕಾಲದಲ್ಲಿ ಬರುತ್ತಾನೆ, ಆ ಬ್ರಾಹ್ಮಣನು ಎಷ್ಟೋ ಸಮಯದಲ್ಲಿ ಬರುವುದೇ ಇಲ್ಲ. ದುರ್ಲಭವಾದ ಆಹಾರವನ್ನು ಉದ್ದೇಶಿಸಿ
ಇದನ್ನು ಕೊಡು ಎಂದು ಕೇಳುತ್ತಾನೆ. ಅವನು ಕೇಳಿದಾಗಲೆಲ್ಲಾ ಪೃಥೆಯು ಅವನಿಗೆ ಎಲ್ಲವೂ ಸಿದ್ಧವಾಗಿದೆ ಎಂದು ಹೇಳಿ
ನಿವೇದಿಸಿದಳು.
ಶಿಷ್ಯವತ್ ಪುತ್ರವಚ್ಚೈವ ಸ್ವಸೃವಚ್ಚ ಸುಸಂಯತಾ |
ಯಥೋಪಜೋಷಂ ರಾಜೇಂದ್ರ ದ್ವಿಜಾತಿಪ್ರವರಸ್ಯ ಸಾ ॥7॥
ಪ್ರೀತಿಮುತ್ಪಾದಯಾಮಾಸ ಕನ್ಯಾರತ್ನಮತಂದ್ರಿತಾ ॥8॥
ಎಲೈ ರಾಜೇಂದ್ರನೇ, ಅವಳು ಆ ಬ್ರಾಹ್ಮಣಶ್ರೇಷ್ಠನಿಗೆ ಶಿಷ್ಯಳಂತೆ, ಪುತ್ರನಂತೆ, ಸೊಸೆಯಂತೆ ಯಾವಾಗಲೂ ನಿಯತವಾದ
ಮಾತನ್ನುಳ್ಳವಳಾಗಿ ಅವನಿಗೆ ಹಿತವಾಗುವಂತೆ ಆಲಸ್ಯವಿಲ್ಲದೆ ನಡೆದುಕೊಂಡು ಕನ್ಯಾರತ್ನಳಾದ ಅವಳು ಅವನ ಪ್ರೀತಿಯನ್ನು
ಸಂಪಾದಿಸಿದಳು.
ತಸ್ಯಾಸ್ತು ಶೀಲವೃತ್ತೇನ ತುತೋಷ ದ್ವಿಜಸತ್ತಮಃ |
ಅವಧಾನೇನ ಭೂಯೋಽಸ್ಯಾಃ ಪರಂ ಯತ್ನಮಥಾಕರೋತ್ ॥9॥
ಆ ದ್ವಿಜಶ್ರೇಷ್ಠನು ಅವಳ ಶೀಲವೃತ್ತಗಳಿಂದಲೂ ಮತ್ತು ಏಕಾಗ್ರತೆಯಿಂದಲೂ ಸಂತೋಷಪಟ್ಟನು. ಅವನು ಅವಳಿಗೆ ಅನುಗ್ರಹವನ್ನು
ಮಾಡಲು ಪ್ರಯತ್ನಪಟ್ಟನು.
ತಾಂ ಪ್ರಭಾತೇ ಚ ಸಾಯಂ ಚ ಪಿತಾ ಪಪ್ರಚ್ಛ ಭಾರತ |
ಅಪಿ ತುಷ್ಯತಿ ತೇ ಪುತ್ರಿ ಬ್ರಾಹ್ಮಣಃ ಪರಿಚರ್ಯಯಾ ॥10॥
ಎಲೈ ಭಾರತನೇ, ಅವಳನ್ನು ತಂದೆಯು ಪ್ರಾತಃಕಾಲದಲ್ಲಿಯೂ ಮತ್ತು ಸಾಯಂಕಾಲದಲ್ಲಿಯೂ ಮಗಳೇ, ನಿನ್ನ ಸೇವೆಯಿಂದ
ಬ್ರಾಹ್ಮಣನು ಸಂತೋಷದಿಂದಿದ್ದಾನೆಯೇ ಎಂದು ಕೇಳುತ್ತಿದ್ದನು.

ತಂ ತು ಪರಮಿತ್ಯೇವ ಪ್ರತ್ಯುವಾಚ ಯಶಸ್ವಿನೀ |
ತತಃ ಪ್ರೀತಿಮವಾಪಾಗ್ರ್ಯಾಂ ಕುಂತಿಭೋಜೋ ಮಹಾಮನಾಃ ॥11॥
ಯಶಸ್ವಿನಿಯಾದ ಅವಳು ಪರಮಸಂತೋಷದಿಂದ ಇದ್ದಾನೆ ಎಂದು ಉತ್ತರವನ್ನು ಕೊಡುತ್ತಿದ್ದಳು. ಆಗ ಮಹಾಮನನಾದ ಕುಂತಿಭೋಜನು ಶ್ರೇಷ್ಠವಾದ ಸಂತೋಷವನ್ನು ಹೊಂದಿದನು.
ತತಃ ಸಂವತ್ಸರೇ ಪೂರ್ಣೇ ಯದಾಽಸೌ ಜಪತಾಂ ವರಃ |
ನಾಪಶ್ಯದ್ ದುಷ್ಕೃತಂ ಕಿಂಚಿತ್ ಪೃಥಾಯಾಃ ಸೌಹೃದೇ ರತಃ |
ತತಃ ಪ್ರೀತಮನಾ ಭೂತ್ವಾ ಸ ಏನಾಂ ಬ್ರಾಹ್ಮಣೋಽಬ್ರವೀತ್ ॥12॥
ಒಂದು ಸಂವತ್ಸರವು ಪೂರ್ಣವಾಗುತ್ತಿರಲು ಜಪಮಾಡುವವರಲ್ಲಿ ಶ್ರೇಷ್ಠನಾದ ಆ ಬ್ರಾಹ್ಮಣನು ಕುಂತಿಯಲ್ಲಿ ಯಾವ ಅಪರಾಧವನ್ನೂ ಕಾಣದೆ ಅವಳ ಮೇಲೆ ಪ್ರೀತಿಯುಳ್ಳವನಾಗಿ ಅವಳನ್ನು ಕುರಿತು ಮಾತನಾಡಿದನು.
ಪ್ರೀತೋಽಸ್ಮಿ ಪರಮಂ ಭದ್ರೇ ಪರಿಚಾರೇಣ ತೇ ಶುಭೇ |
ವರಾನ್ ವೃಣೀಷ್ವ ಕಲ್ಯಾಣಿ ದುರಾಪಾನ್ ಮಾನುಷೈರಿಹ ॥13॥
ಯೈಸ್ತ್ವಂ ಸೀಮಂತಿನೀಃ ಸರ್ವಾ ಯಶಸಾಭಿಭವಿಷ್ಯಸಿ ॥14॥
ಮಂಗಳಸ್ವರೂಪಳೇ, ಶುಭಳಾದವಳೇ, ನಿನ್ನ ಸೇವೆಯಿಂದ ನಾನು ಸಂತುಷ್ಟನಾಗಿದ್ದೇನೆ. ಕಲ್ಯಾಣಿಯೇ, ನೀನು ಮನುಷ್ಯರು ಪಡೆಯಲು ಸಾಧ್ಯವಿಲ್ಲದ ವರಗಳನ್ನು ನನ್ನಿಂದ ಪಡೆ. ಆ ವರಗಳಿಂದ ನೀನು ನಿನ್ನ ಕೀರ್ತಿಯಿಂದ ಎಲ್ಲಾ ಸುಮಂಗಲಿಯರನ್ನೂ ಮೀರಿ ನಿಲ್ಲುವೆ (ಎಂದು ಹೇಳಿದನು).
ಕುಂತೀ
ಕೃತಾನಿ ಮಮ ಸರ್ವಾಣಿ ಯಸ್ಯಾ ಮೇ ವೇದವಿತ್ತಮ |
ತ್ವಂ ಪ್ರಸನ್ನಃ ಪಿತಾ ಚೈವ ಕೃತಂ ವಿಪ್ರ ವರೈರ್ಮಮ ॥15॥
ಕುಂತೀ ಎಲೈ ವೇದಜ್ಞರಲ್ಲಿ ಶ್ರೇಷ್ಠನಾದವನೇ, ನಾನು ಮಾಡಿದ ಎಲ್ಲಾ ಸೇವೆಗಳಿಂದ ನೀನೂ ಪ್ರಸನ್ನನಾಗಿ, ತಂದೆಯೂ ಸಂತುಷ್ಟನಾಗಿದ್ದರೆ ಅಷ್ಟೇ ಸಾಕು. ನನಗೆ ಯಾವ ವರಗಳೂ ಬೇಡ.
ಬ್ರಾಹ್ಮಣಃ
ಯದಿ ನೇಚ್ಛಸಿ ಮತ್ತಸ್ತ್ವಂ ವರಂ ಭದ್ರೇ ಶುಚಿಸ್ಮಿತೇ |
ಇಮಂ ಮಂತ್ರಂ ಗೃಹಾಣ ತ್ವಮಾಹ್ವಾನಾಯ ದಿವೌಕಸಾಮ್ ॥16॥
ಬ್ರಾಹ್ಮಣ ಭದ್ರಳೇ, ಶುಚಿಸ್ಮಿತೆಯೇ, ನಿನಗೆ ಯಾವ ವರವೂ ಬೇಡದಿದ್ದರೆ ದೇವತೆಗಳನ್ನು ಆಹ್ವಾನಮಾಡುವ ಈ ಮಂತ್ರವನ್ನು ನನ್ನಿಂದ ತೆಗೆದುಕೋ.
ಯಂ ಯಂ ದೇವಂ ತ್ವಮೇತೇನ ಮಂತ್ರೇಣಾವಾಹಯಿಷ್ಯಸಿ |
ತೇನ ತೇನ ವಶೇ ಭದ್ರೇ ಸ್ಥಾತವ್ಯಂ ತೇ ಭವಿಷ್ಯತಿ ॥17॥
ಈ ಮಂತ್ರದಿಂದ ನೀನು ಯಾವ ಯಾವ ದೇವತೆಗಳನ್ನು ಆಹ್ವಾನ ಮಾಡುವೆಯೋ ಭದ್ರೆಯೇ, ನೀನು ಆಯಾ ದೇವತೆಗಳ ವಶದಲ್ಲಿ ಇರಬೇಕಾಗುವುದು.
ಅಕಾಮೋ ವಾ ಸಕಾಮೋ ವಾ ಸ ಸಮೇಷ್ಯತಿ ತೇ ವಶೇ |
(ತಸ್ಯ ತಸ್ಯ ಪ್ರಸಾದಾತ್ ತೇ ರಾಜ್ಞಿ ಪುತ್ರೋ ಭವಿಷ್ಯತಿ)
ವಿಬುಧೋ ಮಂತ್ರಸಂಶಾಂತೋ ಭವೇದ್ ಭೃತ್ಯ ಇವಾನತಃ ॥18॥
ಆ ದೇವತೆಯು ತನಗೆ ಇಷ್ಟವಿರಲಿ, ಇಲ್ಲದಿರಲಿ ನಿನಗೆ ವಶನಾಗುವನು. ಈ ಮಂತ್ರದ ಪ್ರಭಾವದಿಂದ ದೇವತೆಯು ಶಾಂತನಾಗಿ ಭೃತ್ಯನಂತೆ ನಿನಗೆ ವಶನಾಗುವನು.
ವೈಶಂಪಾಯನಃ
ನ ಶಶಾಕ ದ್ವಿತೀಯಂ ಸಾ ಪ್ರತ್ಯಾಖ್ಯಾತುಮನಿಂದಿತಾ |
ತಂ ವೈ ದ್ವಿಜಾತಿಪ್ರವರಂ ತದಾ ಶಾಪಭಯಾನ್ನೃಪ ॥19॥
ವೈಶಂಪಾಯನ ಎಲೈ ರಾಜನೇ, ಆ ದ್ವಿಜಶ್ರೇಷ್ಠನು ಶಾಪವನ್ನು ಕೊಡಬಹುದೆಂಬ ಭಯದಿಂದ ಅನಿಂದಿತೆಯಾದ ಅವಳು ಅವನ ಈ ಎರಡನೆಯ ಸಲಹೆಯನ್ನು ನಿರಾಕರಿಸಲು ಸಾಧ್ಯವಾಗಲಿಲ್ಲ.
ತತಸ್ತಾಮನವದ್ಯಾಂಗೀಂ ಗ್ರಾಹಯಾಮಾಸ ಸ ದ್ವಿಜಃ |
ಮಂತ್ರಗ್ರಾಮಂ ತದಾ ರಾಜನ್ನಥರ್ವಶಿರಸಿ ಶ್ರುತಮ್ |
ತಂ ಪ್ರದಾಯ ತು ರಾಜೇಂದ್ರ ಕುಂತಿಭೋಜಮುವಾಚ ಹ ॥20॥
ಎಲೈ ರಾಜನೇ, ಅನಂತರ ಆ ಬ್ರಾಹ್ಮಣನು ಅನವದ್ಯಾಂಗಿಯಾದ ಅವಳಿಗೆ ಅಥರ್ವವೇದದಲ್ಲಿ ಪ್ರಸಿದ್ಧವಾದ ಮಂತ್ರಸಮೂಹವನ್ನು ಉಪದೇಶ ಮಾಡಿದನು. ಎಲೈ ರಾಜೇಂದ್ರನೇ, ಅವಳಿಗೆ ಮಂತ್ರೋಪದೇಶವನ್ನು ನೀಡಿ ಕುಂತಿಭೋಜನನ್ನು ಕುರಿತು ಹೀಗೆ ಮಾತನಾಡಿದನು.
ಉಷಿತೋಽಸ್ಮಿ ಸುಖಂ ರಾಜನ್ ಕನ್ಯಯಾ ಪರಿತೋಷಿತಃ |
ತವ ಗೇಹೇಷು ವಿಹಿತಃ ಸದಾ ಸುಪ್ರತಿಪೂಜಿತಃ ॥21॥
ಸಾಧಯಿಷ್ಯಾಮಹೇ ತಾವದಿತ್ಯುಕ್ತ್ವಾಽಂತರಧೀಯತ ॥22॥
ಎಲೈ ರಾಜನೇ, ನಿನ್ನ ಮನೆಯಲ್ಲಿ ನಾನು ಸುಖವಾಗಿ ವಾಸಮಾಡಿದ್ದೇನೆ. ನಿನ್ನ ಪುತ್ರಿಯಿಂದಲೂ ಚೆನ್ನಾಗಿ ಪೂಜಿಸಲ್ಪಟ್ಟು ನಿನ್ನ ಮನೆಯಲ್ಲಿ ಸಂತೋಷಪಟ್ಟಿದ್ದೇನೆ. ಈಗ ನಾನು ಹೋಗಿಬರುತ್ತೇನೆ ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು.

ಸ ತು ರಾಜಾ ದ್ವಿಜಂ ದೃಷ್ಟ್ವಾ ತತ್ರೈವಾಂತರ್ಹಿತಂ ತದಾ |
ಬಭೂವ ವಿಸ್ಮಯಾವಿಷ್ಟಃ ಪೃಥಾಂ ಚ ಸಮಪೂಜಯತ್ ॥23॥
ಆ ರಾಜನಾದರೂ ಬ್ರಾಹ್ಮಣನು ಅಂತರ್ಧಾನವನ್ನು ಹೊಂದಿದ್ದನ್ನು ನೋಡಿ ವಿಸ್ಮಯಾವಿಷ್ಟನಾಗಿ ಕುಂತಿಯನ್ನು ಸತ್ಕರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಟ್‌ನವತಿತದ್ವಿಶತತಮೋಽಧ್ಯಾಯಃ ॥
॥ ಇತಿ ಕುಂಡಲಾಹರಣಪರ್ವಣಿ ಪೃಥಯಾಮಂತ್ರಪ್ರಾಪ್ತಿನಾಮಾ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತಾರನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ತೇಳನೆಯ ಅಧ್ಯಾಯ
ಕುಂತಿಯಿಂದ ದುರ್ವಾಸರ ಮಂತ್ರದ ಪರೀಕ್ಷೆ. ಸೂರ್ಯನ ಆಗಮನ
ಮತ್ತು ಕುಂತಿ- ಸೂರ್ಯರ ಸಂವಾದ.
ವೈಶಂಪಾಯನಃ
ಗತೇ ತಸ್ಮಿನ್ ದ್ವಿಜಶ್ರೇಷ್ಠೇ ಕಸ್ಮಿಂಶ್ಚಿತ್ ಕಾರಣಾಂತರೇ |
ಚಿಂತಯಾಮಾಸ ಸಾ ಕನ್ಯಾ ಮಂತ್ರಗ್ರಾಮಬಲಾಬಲಮ್ ॥1॥
ವೈಶಂಪಾಯನ ಆ ದ್ವಿಜಶ್ರೇಷ್ಠನು ಯಾವುದೋ ಕಾರಣಾಂತರದಿಂದ ಹೊರಟು ಹೋಗುತ್ತಿರಲು ಕನ್ಯೆಯಾದ ಆ ಕುಂತಿಯು ಆ ಮಂತ್ರಸಮೂಹದ ಬಲಾಬಲವನ್ನು ಕುರಿತು ಚಿಂತಿಸಿದಳು.
ಅಯಂ ವೈ ಕೀದೃಶಸ್ತೇನ ಮಮ ದತ್ತೋ ಮಹಾತ್ಮನಾ |
ಮಂತ್ರಗ್ರಾಮೋ ಬಲಂ ತಸ್ಯ ಜ್ಞಾಸ್ಯೇ ನಾತಿಚಿರಾದಿತಿ ॥2॥
ಆ ಮಹಾತ್ಮನು ನನಗೆ ಎಂತಹ ಮಂತ್ರಗ್ರಾಮವನ್ನು ಕೊಟ್ಟಿದ್ದಾನೆ? ಅದರ ಸಾಮರ್ಥ್ಯವನ್ನು ನಾನು ಸದ್ಯದಲ್ಲಿಯೇ ತಿಳಿಯುವೆನು.
ಏವಂ ಸಂಚಿಂತಯಂತೀ ಸಾ ದದರ್ಶರ್ತುಂ ಯದೃಚ್ಛಯಾ |
ವ್ರೀಡಿತಾ ಸಾಽಭವಾದ್ ಬಾಲಾ ಕನ್ಯಾಭಾವೇ ರಜಸ್ವಲಾ ॥3॥
ಹೀಗೆ ಚಿಂತಿಸುತ್ತಿದ್ದ ಅವಳು ತಾನು ಇದ್ದಕ್ಕಿದ್ದಂತೆಯೇ ಋತುಮತಿಯಾದುದನ್ನು ಗಮನಿಸಿದಳು. ಕನ್ಯಾವಸ್ಥೆಯಲ್ಲಿಯೇ ರಜಸ್ವಲೆಯಾದ ತನ್ನನ್ನು ನೋಡಿ ಅವಳು ನಾಚಿಕೆಗೊಂಡಳು.
ತತೋ ಹರ್ಮ್ಯತಳಸ್ಥಾ ಸಾ ಮಹಾರ್ಹಶಯನೋಚಿತಾ |
ಪ್ರಾಚ್ಯಾಂ ದಿಶಿ ಸಮುದ್ಯಂತಂ ದದರ್ಶಾದಿತ್ಯಮಂಡಲಮ್ ॥3.1॥
ಅನಂತರ ಉಪ್ಪರಿಗೆಯಲ್ಲಿ ಬೆಲೆಬಾಳುವ ಹಾಸಿಗೆಯಲ್ಲಿರಲು ಯೋಗ್ಯಳಾದ ಅವಳು ಪೂರ್ವದಿಕ್ಕಿನಲ್ಲಿ ಉದಯಿಸುತ್ತಿರುವ ಸೂರ್ಯಮಂಡಲವನ್ನು ನೋಡಿದಳು.
ಅಥೋದ್ಯಂತಂ ಸಹಸ್ರಾಂಶುಂ ಪೃಥಾ ದೀಪ್ತಂ ದದರ್ಶ ಹ |
ನ ತತರ್ಪ ಚ ರೂಪೇಣ ಭಾನೋಃ ಸಂಧ್ಯಾಗತಸ್ಯ ಸಾ |
ತತ್ರ ಬದ್ಧಮನೋದೃಷ್ಟಿರಭವತ್ ಸಾ ಸುಮಧ್ಯಮಾ ॥4॥
ಅನಂತರ ಉದಯಿಸುತ್ತಿದ್ದ ದೀಪ್ತನಾದ ಸೂರ್ಯನನ್ನೂ ನೋಡಿದಳು. ಸಂಧ್ಯಾಕಾಲದಲ್ಲಿದ್ದ ಸೂರ್ಯನ ಆ ರೂಪವನ್ನು ನೋಡಿ ಅವಳಿಗೆ ತೃಪ್ತಿಯಾಗಲಿಲ್ಲ. ಸುಮಧ್ಯಮಳಾದ (ಸುಂದರಿಯಾದ) ಅವಳು ಅವನಲ್ಲಿಯೇ ನೆಟ್ಟ ಮನಸ್ಸು ಮತ್ತು ದೃಷ್ಟಿಯುಳ್ಳವಳಾದಳು.
ತಸ್ಯಾ ದೃಷ್ಟಿರಭೂದ್ ದಿವ್ಯಾ ಸಾಽಪಶ್ಯದ್ ದಿವ್ಯದರ್ಶನಮ್ |
ಆಮುಕ್ತಕವಚಂ ದೇವಂ ಕುಂಡಲಾಭ್ಯಾಂ ವಿಭೂಷಿತಮ್ ॥5॥
ಅವಳಿಗೆ ದಿವ್ಯದೃಷ್ಟಿ ಉಂಟಾಯಿತು. ಅವಳು ಕವಚಕುಂಡಲಗಳಿಂದ ಅಲಂಕೃತನಾದ ದಿವ್ಯದರ್ಶನನಾದ ಸೂರ್ಯನನ್ನೂ ನೋಡಿದಳು.
ತಸ್ಯಾಃ ಕೌತೂಹಲಂ ತ್ವಾಸೀನ್ಮಂತ್ರಾನ್ ಪ್ರತಿ ನರಾಧಿಪ |
ಆಹ್ವಾನಮಕರೋತ್‌ಸಾಽಥ ತಸ್ಯ ದೇವಸ್ಯ ಭಾಮಿನೀ ॥6॥
ಎಲೈ ರಾಜನೇ, ಅವಳಿಗೆ ತಾನು ಪಡೆದ ಮಂತ್ರಗಳ ವಿಷಯದಲ್ಲಿ ಕುತೂಹಲವು ಇದ್ದಿತು. ಆ ಭಾಮಿನಿಯೂ ಆಗ ಆ ಸೂರ್ಯದೇವನನ್ನು ಆಹ್ವಾನಿಸಿದಳು.
ಪ್ರಾಣಾನುಪಸ್ಪೃಶ್ಯ ತದಾ ಹ್ಯಾಜುಹಾವ ದಿವಾಕರಮ್ |
ಆಜಗಾಮ ತತೋ ರಾಜಂಸ್ತ್ವರಮಾಣೋ ದಿವಾಕರಃ ॥7॥
ಅವಳು ಪ್ರಾಣಾಯಾಮವನ್ನು ಮಾಡಿ ಸೂರ್ಯನನ್ನು ಆಹ್ವಾನ ಮಾಡಿದಳು. ರಾಜನೇ, ದಿವಾಕರನಾದರೂ ತ್ವರೆಮಾಡುತ್ತಾ ಅಲ್ಲಿಗೆ ಬಂದನು.
ಮಧುಪಿಂಗೋ ಮಹಾಬಾಹುಃ ಕಂಬುಗ್ರೀವೋ ಹಸನ್ನಿವ |
ಅಂಗದೀ ಬದ್ಧಮುಕುಟೋ ದಿಶಃ ಪ್ರಜ್ವಾಲಯನ್ನಿವ ॥8॥
ಯೋಗಾತ್‌ಕೃತ್ವಾ ದ್ವಿಧಾಽಽತ್ಮಾನಮಾಜಗಾಮ ತತೋರವಿಃ |
ಆಬಭಾಷೇ ತತಃ ಕುಂತೀಂ ಸಾಮ್ನಾ ಪರಮವಲ್ಗುನಾ ॥9॥

ಜೇನುತುಪ್ಪದಂತೆ ಪಿಂಗಳವರ್ಣನೂ, ಮಹಾಬಾಹುವೂ, ಕಂಬುಗ್ರೀವನೂ, ಅಂಗದವನ್ನೂ ಕಿರೀಟವನ್ನೂ ಧರಿಸಿದವನೂ ಆದ ಅವನು ದಿಕ್ಕುಗಳನ್ನು ಬೆಳಗುತ್ತಾ ನಗುತ್ತಿರುವವನಂತೆ ತೋರಿಬಂದನು. ಅವನು ಯೋಗಸಾಮರ್ಥ್ಯದಿಂದ ತನ್ನ ರೂಪವನ್ನು ಎರಡಾಗಿ ಪರಿವರ್ತಿಸಿ ಕುಂತಿಯ ಬಳಿಗೆ ಬಂದು ಪರಮ ಮಧುರವಾದ ಶಾಂತವಾದ ಮಾತುಗಳನ್ನು ಆಡಿದನು.
ಆಗತೋಽಸ್ಮಿ ವಶಂ ಭದ್ರೇ ತವ ಮಂತ್ರಬಲಾತ್ಕೃತಃ |
ಕಿಂ ಕರೋಮಿ ವಶೋ ರಾಜ್ಞಿ ಬ್ರೂಹಿ ಕರ್ತಾ ತದಸ್ಮಿ ತೇ ॥10॥
ಎಲೌ ಭದ್ರೆಯೇ, ನಾನು ನಿನ್ನ ಮಂತ್ರದಿಂದ ಬಲಾತ್ಕೃತನಾಗಿ ನಿನಗೆ ವಶನಾಗಿ ಬಂದಿದ್ದೇನೆ. ರಾಣಿಯೇ, ನಿನಗೆ ವಶನಾದ ನಾನು ಏನು ಮಾಡಬೇಕೆಂದು ಹೇಳು. ನಾನು ನಿನಗೆ ಅದನ್ನು ಮಾಡುವೆನು.
ಕುಂತೀ
ಗಮ್ಯತಾಂ ಭಗವಂಸ್ತತ್ರ ಯತ ಏವಾಗತೋ ಹ್ಯಸಿ |
ಕೌತೂಹಲಾತ್ ಸಮಾಹೂತಃ ಪ್ರಸೀದ ಭಗವನ್ನಿತಿ ॥11॥
ಕುಂತೀ ಪೂಜ್ಯನೇ, ನೀನು ಎಲ್ಲಿಂದ ಬಂದೆಯೋ ಅಲ್ಲಿಗೇ ಹೊರಟುಹೋಗು. ಪೂಜ್ಯನೇ, ನಾನು ಕುತೂಹಲದಿಂದ ನಿನ್ನನ್ನು ಆಹ್ವಾನ ಮಾಡಿದೆ. ನನ್ನ ಮೇಲೆ ಪ್ರಸನ್ನನಾಗು.
ಸೂರ್ಯಃ
ಗಮಿಷ್ಯೇಽಹಂ ಯಥಾ ಮಾಂ ತ್ವಂ ಬ್ರವೀಷಿ ತನುಮಧ್ಯಮೇ |
ನ ತು ದೇವಂ ಸಮಾಹೂಯ ನ್ಯಾಯ್ಯಂ ಪ್ರೇಷಯಿತುಂ ವೃಥಾ ॥12॥
ಸೂರ್ಯ ಎಲೌ ಕೃಶಾಂಗಿಯೇ, ನೀನು ಹೇಳುವಂತೆ ನಾನು ಹೊರಟು ಹೋಗುವೆನು. ಆದರೆ ದೇವತೆಯನ್ನು ಆಹ್ವಾನ ಮಾಡಿ ವ್ಯರ್ಥವಾಗಿ ಕಳುಹಿಸುವುದು ನ್ಯಾಯವಲ್ಲ.
ತವಾಪಿ ಬುದ್ಧಿಃ ಸುಭಗೇ ಸೂರ್ಯಾತ್ ಪುತ್ರೋ ಭವೇದಿತಿ |
ವೀರ್ಯೇಣಾಪ್ರತಿಮೋ ಲೋಕೇ ಕವಚೀ ಕುಂಡಲೀತಿ ಚ ॥13॥
ಸುಭಗೆಯೇ, ಲೋಕದಲ್ಲಿ ಅಪ್ರತಿಮ ಪರಾಕ್ರಮಿಯೂ, ಕವಚ ಕುಂಡಲಧಾರಿಯೂ ಆದ ಒಬ್ಬ ಪುತ್ರನು ಸೂರ್ಯನಿಂದ ಬೇಕೆಂದು ನಿನ್ನ ಅಭಿಪ್ರಾಯವಿದ್ದಿತು.
ಸಾ ತ್ವಮಾತ್ಮಪ್ರದಾನಂ ವೈ ಕುರುಷ್ವ ಗಜಗಾಮಿನಿ |
ಉತ್ಪತ್ಸ್ಯಸಿ ಹಿ ಪುತ್ರಸ್ತೇ ಯಥಾಸಂಕಲ್ಪಮಂಗನೇ ॥14॥
ಗಜಗಾಮಿನಿಯೇ ನೀನು ನಿನ್ನನ್ನೇ ನನಗೆ ಪ್ರದಾನವನ್ನು ಮಾಡು. ಅಂಗನೆಯೇ, ನಿನ್ನ ಸಂಕಲ್ಪವಿದ್ದಂತೆ ನಿನಗೆ ಒಬ್ಬ ಪುತ್ರನು ಜನಿಸುವನು.
ಅಥ ಗಚ್ಛಾಮ್ಯಹಂ ಭದ್ರೇ ತ್ವಯಾ ಸಂಗಮ್ಯ ಸುಸ್ಮಿತೇ |
ಶಪಿಷ್ಯೇ ತ್ವಾಮಹಂ ಕ್ರುದ್ಧೋ ಬ್ರಾಹ್ಮಣಂ ಪಿತರಂ ಚ ತೇ |
ಯದಿ ತ್ವಂ ವಚನಂ ನಾದ್ಯ ಕರಿಷ್ಯಸಿ ಮಮ ಪ್ರಿಯಮ್ ॥15॥
ಭದ್ರಳೇ, ಸುಸ್ಮಿತೆಯೇ, ನಿನ್ನ ಸಂಗವನ್ನು ಮಾಡಿ ನಾನು ಅನಂತರ ಹೋಗುತ್ತೇನೆ. ನೀನು ನನ್ನ ಮಾತನ್ನು ನಡೆಸದಿದ್ದರೆ ಕೋಪಗೊಂಡು ನಿನಗೂ, ನಿನ್ನ ತಂದೆಗೂ ಮತ್ತು ಆ ಬ್ರಾಹ್ಮಣನಿಗೂ ಶಾಪವನ್ನು ಕೊಡುವೆನು.
ತ್ವತ್ಕೃತೇ ತಾನ್ ಪ್ರಧಕ್ಷ್ಯಾಮಿ ಸರ್ವಾನಪಿ ನ ಸಂಶಯಃ |
ಪಿತರಂ ಚೈವ ತೇ ಮೂಢಂ ಯೋ ನ ವೇತ್ತಿ ತವಾನಯಮ್ ॥16॥
ನಿನ್ನ ಸಲುವಾಗಿ ನಾನು ಅವರೆಲ್ಲರನ್ನೂ ಸುಡುವೆನು. ಇದರಲ್ಲಿ ಸಂಶಯವಿಲ್ಲ. ನೀನು ಮಾಡುವ ಅನ್ಯಾಯವನ್ನು ತಿಳಿಯದಿರುವ ಮೂಢನಾದ ನಿನ್ನ ತಂದೆಯನ್ನೂ ಸುಡುವೆನು.
ತಸ್ಯ ಚ ಬ್ರಾಹ್ಮಣಸ್ಯಾದ್ಯ ಯೋಽಸೌ ಮಂತ್ರಮದಾತ್ ತವ |
ಶೀಲವೃತ್ತಮವಿಜ್ಞಾಯ ಧಾಸ್ಯಾಮಿ ವಿನಯಂ ಪರಮ್ ॥17॥
ನಿನ್ನ ಶೀಲವೃತ್ತಗಳನ್ನು ತಿಳಿಯದೆ ನಿನಗೆ ಮಂತ್ರದಾನವನ್ನು ಮಾಡಿದ ಆ ಬ್ರಾಹ್ಮಣನು ಯಾವನಿದ್ದಾನೆಯೋ ಅವನಿಗೆ ಈ ದಿವಸ ವಿನಯವುಂಟಾಗುವಂತೆ ಮಾಡುವೆನು.
ಏತೇ ಹಿ ವಿಬುಧಾಃ ಸರ್ವೇ ಪುರಂದರಮುಖಾ ದಿವಿ |
ತ್ವಯಾ ಪ್ರಲಬ್ಧಂ ಪಶ್ಯಂತಿ ಸ್ಮಯಂತ ಇವ ಭಾಮಿನಿ ॥18॥
ಎಲೌ ಭಾಮಿನಿಯೇ, ನೀನು ಮಾಡಿದ ಈ ವಂಚನೆಯನ್ನು ಆಕಾಶದಲ್ಲಿ ಇಂದ್ರಾದಿ ದೇವತೆಗಳೆಲ್ಲಾ ನೋಡುತ್ತಾ ನಗುತ್ತಿದ್ದಾರೆ.
ಪಶ್ಯ ಚೈನಾನ್ ಸುರಗಣಾನ್ ದಿವ್ಯಂ ಚಕ್ಷುರಿದಂ ಹಿ ತೇ |
ಪೂರ್ವಮೇವ ಮಯಾ ದತ್ತಂ ದೃಷ್ಟವತ್ಯಸಿ ಯೇನ ಮಾಮ್ ॥19॥
ಈ ದೇವತೆಗಳ ಸಮೂಹವನ್ನು ನೋಡು. ಅದಕ್ಕಾಗಿ ನಿನಗೆ ಈ ದಿವ್ಯಚಕ್ಷುಸ್ಸನ್ನು ನಾನು ಮೊದಲೇ ಕೊಟ್ಟಿದ್ದೇನೆ. ಅದರಿಂದಲೇ ನೀನು ನನ್ನನ್ನು ನೋಡಿದೆ.
ವೈಶಂಪಾಯನಃ
ತತೋಽಪಶ್ಯತ್ ತ್ರಿದಶಾನ್ ರಾಜಪುತ್ರೀ
ಸರ್ವಾನೇವ ಸ್ವೇಷು ಧಿಷ್ಣ್ಯೇಷು ಸ್ವಸ್ಥಾನ್ |
ಪ್ರಭಾವಂತಂ ಭಾನುಮಂತಂ ಮಹಾಂತಂ
ಯಥಾಽಽದಿತ್ಯಂ ರೋಚಮಾನಾಂಸ್ತಥೈವ ॥20॥

ವೈಶಂಪಾಯನ ಆಗ ಆ ರಾಜಪುತ್ರಿಯು ತಮ್ಮ ತಮ್ಮ ಆವಾಸಸ್ಥಾನಗಳಲ್ಲಿ ಕುಳಿತಿರುವ ಕಿರಣಗಳಿಂದ ಕೂಡಿದ ಮತ್ತು ಪ್ರಭೆಯಿಂದ ಕೂಡಿದ ಸೂರ್ಯನಂತೆ ಬೆಳಗುತ್ತಿರುವ ಎಲ್ಲಾ ದೇವತೆಗಳನ್ನೂ ನೋಡಿದಳು.
ಸಾ ತಾನ್ ದೃಷ್ಟ್ವಾ ವೇಪಮಾನೇವ ಬಾಲಾ
ಸೂರ್ಯಂ ದೇವೀ ವಚನಂ ಪ್ರಾಹ ಭೀತಾ |
ಗಚ್ಛ ತ್ವಂ ವೈ ಗೋಪತೇ ಸ್ವಂ ವಿಮಾನಂ
ಕನ್ಯಾಭಾವಾದ್ ದುಃಖ ಏವಾಪಚಾರಃ ||21||
ಆ ಬಾಲೆಯು ಅವರನ್ನು ನೋಡಿ ನಡುಗುತ್ತಾ ಸೂರ್ಯನನ್ನು ಕುರಿತು ಗೋಪತಿಯೇ, ನೀನು ನಿನ್ನ ವಿಮಾನಕ್ಕೆ ಹೋಗು. ಕನ್ಯಾಭಾವದಿಂದ ನಿನಗೆ ಈ ದುಃಖಕರವಾದ ಅಪಚಾರವನ್ನು ಮಾಡಿದೆ ಎಂದು ಭಯದಿಂದ ಹೇಳಿದಳು.
ಪಿತಾ ಮಾತಾ ಗುರವಶ್ಚೈವ ಯೇಽನ್ಯೇ
ದೇಹಸ್ಯಾಸ್ಯ ಪ್ರಭವಂತಿ ಪ್ರದಾನೇ |
ನಾಹಂ ಧರ್ಮಂ ಲೋಪಯಿಷ್ಯಾಮಿ ಲೋಕೇ
ಸ್ತ್ರೀಣಾಂ ವೃತ್ತಂ ಪೂಜ್ಯತೇ ದೇಹರಕ್ಷಾ ||22||
ಈ ದೇಹವನ್ನು ಕೊಡುವ ವಿಷಯದಲ್ಲಿ ತಂದೆ, ತಾಯಿ, ಗುರುಗಳು ಮತ್ತು ಇನ್ನು ಕೆಲವರು ಅಧಿಕಾರವುಳ್ಳವರಾಗುತ್ತಾರೆ. ನಾನು ಧರ್ಮಲೋಪವನ್ನು ಮಾಡುವುದಿಲ್ಲ. ಲೋಕದಲ್ಲಿ ಸ್ತ್ರೀಯರ ಒಳ್ಳೆಯ ನಡತೆವಾದ ದೇಹಪಾವಿತ್ರ್ಯವು ಪೂಜಿಸಲ್ಪಡುತ್ತದೆ.
ಮಯಾ ಮಂತ್ರಬಲಂ ಜ್ಞಾತುಮಾಹೂತಸ್ತ್ವಂ ವಿಭಾವಸೋ |
ಬಾಲ್ಯಾದ್ ಬಾಲೇತಿ ತತ್ಕೃತ್ವಾ ಕ್ಷಂತುಮರ್ಹಸಿ ಮೇ ವಿಭೋ ||23||
ಎಲೈ ಸೂರ್ಯನೇ, ನಾನು ಮಂತ್ರದ ಸಾಮರ್ಥ್ಯವನ್ನು ತಿಳಿಯಲು ಬಾಲ್ಯ ಬುದ್ಧಿಯಿಂದ ನಿನ್ನನ್ನು ಆಹ್ವಾನಿಸಿದೆ. ವಿಭುವೇ, ನನ್ನನ್ನು ಚಿಕ್ಕಬಾಲಕಿ ಎಂದು ತಿಳಿದು ನೀನು ಕ್ಷಮಿಸಬೇಕು.
ಸೂರ್ಯಃ
ಬಾಲೇತಿ ಕೃತ್ವಾಽನುನಯಂ ತವಾಹಂ
ದದಾನಿ ನಾನ್ಯಾಽನುನಯಂ ಲಭೇತ |
ಆತ್ಮಪ್ರದಾನಂ ಕುರು ಕುಂತಿ ಮನ್ಯೇ
ಶಾಂತಿಸ್ತ್ವೈವಂ ಹಿ ಭವೇತ್ ಚ ಭೀರು ||24||
ಸೂರ್ಯ ನೀನು ಬಾಲಕಿ ಎಂದು ತಿಳಿದೇ ನಿನಗೆ ಮೃದುವಾದ ಮಾತುಗಳನ್ನು ಆಡುತ್ತಿದ್ದೇನೆ. ಇನ್ನೊಬ್ಬಳು ಇಂತಹ ಅನುನಯದ ಮಾತುಗಳಿಗೆ ಅರ್ಹಳಾಗುತ್ತಿರಲಿಲ್ಲ. ಕುಂತಿಯೇ, ನೀನು ನಿನ್ನ ದೇಹಪ್ರದಾನವನ್ನು ಮಾಡು. ಭೀರುವೇ, ಹಾಗೆ ಮಾಡಿದರೆ ನಿನಗೆ ಸುಖವುಂಟಾಗುವುದೆಂದು ನಾನು ಭಾವಿಸುತ್ತೇನೆ.
ನ ಚಾಪಿ ಗಂತುಂ ಯುಕ್ತಂ ಹಿ ಮಯಾ ಮಿಥ್ಯಾಕೃತೇನ ವೈ |
ಗಮಿಷ್ಯಾಮ್ಯನವದ್ಯಾಂಗಿ ಲೋಕೇ ಸಮವಹಾಸ್ಯತಾಮ್ ||25||
ನಿನ್ನಿಂದ ವಂಚಿತನಾಗಿ ನಾನು ಹಾಗೆಯೇ ಹೋಗುವುದು ಉಚಿತವಲ್ಲ. ಎಲೌ ಅನವದ್ಯಾಂಗಿಯೇ, ಹಾಗೆ ಮಾಡಿದರೆ ನಾನು ಲೋಕದಲ್ಲಿ ಹಾಸ್ಯಾಸ್ಪದನಾಗುವೆನು.
ಗಚ್ಛೇಯಮೇವಂ ಸುಶ್ರೋಣಿ ಗತೋಹಂ ವೈ ನಿರಾಕೃತಃ |
ಸರ್ವೇಷಾಂ ವಿಬುಧಾನಾಂ ಚ ವಕ್ತವ್ಯಃ ಸ್ಯಾಂ ತಥಾ ಶುಭೇ ||26||
ಎಲೌ ಸುಶ್ರೋಣಿಯೇ, ನಿನ್ನಿಂದ ನಿರಾಕೃತನಾಗಿ ನಾನು ಹೀಗೆಯೇ ಹೋಗುವುದಾದರೆ ಎಲೌ ಶುಭಳಾದವಳೇ, ನಾನು ಎಲ್ಲ ದೇವತೆಗಳಿಗೂ ಉತ್ತರವನ್ನು ಹೇಳಬೇಕಾಗುತ್ತದೆ.
ಸಾ ತ್ವಂ ಮಯಾ ಸಮಾಗಚ್ಛ ಪುತ್ರಂ ಲಪ್ಸ್ಯಸಿ ಮಾದೃಶಮ್ |
ವಿಶಿಷ್ಟಾ ಸರ್ವಲೋಕೇಷು ಭವಿಷ್ಯಸಿ ನ ಸಂಶಯಃ ||27||
ಅಂತಹ ನೀನು ನನ್ನ ಸಮಾಗಮವನ್ನು ಮಾಡು. ನನ್ನಂತಹ ಪುತ್ರನನ್ನು ಪಡೆಯುವಿ. ಎಲ್ಲ ಲೋಕಗಳಲ್ಲಿಯೂ ನೀನು ಶ್ರೇಷ್ಠಳೆನಿಸುವಿ. ಇದರಲ್ಲಿ ಸಂಶಯವಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಸಪ್ತನವತಿತದ್ವಿಶತತಮೋಽಧ್ಯಾಯಃ ||
|| ಇತಿ ಕುಂಡಲಾಹರಣಪರ್ವಣಿ ಸೂರ್ಯಾಹ್ವಾನಂ ನಾಮ ಸಪ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತೇಳನೆಯ
ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ತೆಂಟನೆಯ ಅಧ್ಯಾಯ
ಸೂರ್ಯ-ಕುಂತೀ ಸಮಾಗಮ. ಸೂರ್ಯನಿಂದ ಕುಂತಿಯಲ್ಲಿ ಗರ್ಭಾಧಾನ.
ವೈಶಂಪಾಯನಃ
ಸಾ ತು ಕನ್ಯಾ ಬಹುವಿಧಂ ಬ್ರುವಂತೀ ಮಧುರಂ ವಚಃ |
ಅನುನೇತುಂ ಸಹಸ್ರಾಂಶುಂ ನ ಶಶಾಕ ಮನಸ್ವಿನೀ ||1||
ವೈಶಂಪಾಯನ ಆ ಧೈರ್ಯಶಾಲಿನಿಯಾದ ಕನ್ಯೆಯು ಅನೇಕ ವಿಧವಾಗಿ ಮಧುರ ಮಾತುಗಳನ್ನಾಡಿ ಸೂರ್ಯನನ್ನು ನಿವಾರಿಸಲು

ಪ್ರಯತ್ನಿಸಿದರೂ ಅವಳಿಗೆ ಅದು ಸಾಧ್ಯವಾಗಲಿಲ್ಲ.
ನ ಶಶಾಕ ಯದಾ ಬಾಲಾ ಪ್ರತ್ಯಾಖ್ಯಾತುಂ ತಮೋನುದಮ್ |
ಭೀತಾ ಶಾಪಾತ್ ತತೋ ರಾಜನ್ ದಧ್ಯೌ ದೀರ್ಘಮಥಾಂತರಮ್ ||
ಎಲೈ ರಾಜನೇ, ಆ ಬಾಲೆಯು ಅಂಧಕಾರನಾಶಕನಾದ ಸೂರ್ಯನನ್ನು ನಿವಾರಿಸಲು ಸಾಧ್ಯವಾಗದಿದ್ದಾಗ ಅವಳು ಶಾಪದಿಂದ ಭೀತಳಾಗಿ ಮನಸ್ಸಿನಲ್ಲಿಯೇ ದೀರ್ಘವಾಗಿ ಆಲೋಚಿಸಿದಳು.
ಅನಾಗಸಃ ಪಿತುಃ ಶಾಪೋ ಬ್ರಾಹ್ಮಣಸ್ಯ ತಥೈವ ಚ |
ಮನ್ನಿಮಿತ್ತಃ ಕಥಂ ನ ಸ್ಯಾತ್ ಕ್ರುದ್ಧಾದಸ್ಮಾದ್ ವಿಭಾವಸೋಃ ||3||
ನನ್ನ ನಿಮಿತ್ತದಿಂದ ನಿರಪರಾಧಿಯಾದ ತಂದೆಗೂ ಮತ್ತು ಬ್ರಾಹ್ಮಣನಿಗೂ ಕ್ರೋಧಗೊಂಡ ಸೂರ್ಯನಿಂದ ಶಾಪವು ಬರದೇ ಇರಲು ಹೇಗೆ ಸಾಧ್ಯ?
ಬಾಲೇನಾಪಿ ಸತಾ ಮೋಹಾದ್ ಭೃಶಂ ಸಾಪಹ್ನವಾನ್ಯಪಿ |
ನಾಭ್ಯಾಸಾದಯಿತವ್ಯಾನಿ ತೇಜಾಂಸಿ ಚ ತಪಾಂಸಿ ಚ ||4||
ಬಾಲಕನೂ ಸಹ ಮೋಹದಿಂದ ದೊಡ್ಡವರ ತೇಜಸ್ಸಿಗೂ ಮತ್ತು ತಪಸ್ಸಿಗೂ ತೊಂದರೆಯನ್ನು ಮತ್ತು ಭಯವನ್ನು ತಂದೊಡ್ಡಬಾರದು.
ಸಾಹಮದ್ಯ ಭೃಶಂ ಭೀತಾ ಗೃಹೀತಾ ಚ ಕರೇ ಭೃಶಮ್ |
ಕಥಂ ತ್ವಕಾರ್ಯಂ ಕುರ್ಯಾಂ ವೈ ಪ್ರದಾನಂ ಹ್ಯಾತ್ಮನಃ ಸ್ವಯಮ್ ||5||
ನಾನು ಈ ದಿನ ಸೂರ್ಯನಿಂದ ಕೈಯಲ್ಲಿ ಹಿಡಿಯಲ್ಪಟ್ಟಿದ್ದರೂ ಬಹಳ ಹೆದರಿದವಳಾಗಿ ನನ್ನನ್ನೇ ನಾನು ದಾನಮಾಡಿಕೊಳ್ಳುವಂತಹ ಅಕಾರ್ಯವನ್ನು ಹೇಗೆ ಮಾಡಲಿ?
ವೈಶಂಪಾಯನಃ
ಸಾ ವೈ ಶಾಪಪರಿತ್ರಸ್ತಾ ಬಹು ಚಿಂತಯತೀ ಹೃದಾ |
ಮೋಹೇನಾಭಿಪರೀತಾಂಗೀ ಸ್ಮಯಮಾನಾ ಪುನಃ ಪುನಃ ||6||
ತಂ ದೇವಮಬ್ರುವೀದ್ ಭೀತಾ ಬಂಧೂನಾಂ ರಾಜಸತ್ತಮ |
ವ್ರೀಡಾವಿಹ್ವಲಯಾ ವಾಚಾ ಶಾಪತ್ರಸ್ತಾ ವಿಶಾಂಪತೇ ||7||
ವೈಶಂಪಾಯನ ಎಲೈ ರಾಜಶ್ರೇಷ್ಠನೇ, ಆ ಕನ್ಯೆಯು ಶಾಪಭೀತಳಾಗಿ ಮನಸ್ಸಿನಲ್ಲಿ ಬಹಳವಾಗಿ ಚಿಂತಿಸುತ್ತಾ ಸೂರ್ಯನನ್ನು ನೋಡಿ ಮತ್ತೆ ಮತ್ತೆ (ಕಷ್ಟದಿಂದ) ನಗುತ್ತಾ ತನ್ನ ಬಂಧುಗಳಿಗೆ ಒದಗಬಹುದಾದ ಶಾಪದಿಂದ ಭೀತಳಾಗಿ ನಾಚಿಕೆಯಿಂದ ವಿಹ್ವಲಳಾಗಿ ಸೂರ್ಯನನ್ನು ಕುರಿತು ಮಾತನಾಡಿದಳು.
ಪಿತಾ ಮೇ ಧ್ರಿಯತೇ ದೇವ ಮಾತಾ ಚಾನ್ಯೇ ಚ ಬಾಂಧವಾಃ |
ನ ತೇಷು ಧ್ರಿಯಮಾಣೇಷು ವಿಧಿಲೋಪೋ ಭವೇದಯಮ್ ||8||
ದೇವನೇ, ನನ್ನ ತಂದೆಯು ಬದುಕಿದ್ದಾನೆ. ನನ್ನ ತಾಯಿಯೂ ಮತ್ತು ಬೇರೆ ಬಂಧುಗಳೂ ಬದುಕಿದ್ದಾರೆ. ಅವರು ಬದುಕಿರುವಾಗ ನನಗೆ ಇದು ವಿಧಿಲೋಪವಾಗಬಾರದು.
ಮನ್ನಿಮಿತ್ತಂ ಕುಲಸ್ಯಾಸ್ಯ ಲೋಕೇ ಕೀರ್ತಿಕ್ಷಯಸ್ತಥಾ ||9||
ಅಥವಾ ಧರ್ಮಮೇತಂ ತ್ವಂ ಮನ್ಯಸೇ ತಪತಾಂ ವರ |
ಋತೇ ಪ್ರದಾನಾದ್ ಬಂಧುಭ್ಯಸ್ತವ ಕಾಮಂ ಕರೋಮ್ಯಹಮ್ ||10||
ನನ್ನ ನಿಮಿತ್ತದಿಂದ ಈ ಕುಲಕ್ಕೆ ಲೋಕದಲ್ಲಿ ಕೀರ್ತಿಯು ನಾಶವನ್ನು ಹೊಂದಬಾರದು. ಅಥವಾ ಎಲೈ ಪ್ರಕಾಶಿಸುವವರಲ್ಲಿ ಶ್ರೇಷ್ಠನೇ, ಬಂಧುಗಳು ದಾನವನ್ನು ಮಾಡದಿದ್ದರೂ ಇದನ್ನು ನೀನು ಧರ್ಮವೆಂದು ತಿಳಿಯುವುದಾದರೆ ನಾನು ನಿನ್ನ ಆಸೆಯನ್ನು ನಾನು ಪೂರೈಸುತ್ತೇನೆ.
ಆತ್ಮಪ್ರದಾನಂ ದುರ್ಧರ್ಷ ತವ ಕೃತ್ವಾ ಸತೀ ತ್ವಹಮ್ |
ತ್ವಯಿ ಧರ್ಮೋ ಯಶಶ್ಚೈವ ಕೀರ್ತಿರಾಯುಶ್ಚ ದೇಹಿನಾಮ್ ||11||
ಎಲೈ ದುರ್ಧರ್ಷನೇ, ನಿನಗೆ ಆತ್ಮಪ್ರದಾನವನ್ನು ಮಾಡಿ ಶುದ್ಧಳಾಗಿರುತ್ತೇನೆ. ಜೀವರ ಧರ್ಮ, ಯಶಸ್ಸು, ಕೀರ್ತಿ, ಆಯುಸ್ಸು ಇವೆಲ್ಲವೂ ನಿನ್ನನ್ನು ಅವಲಂಬಿಸಿವೆ.
ಸೂರ್ಯಃ
ನ ತೇ ಪಿತಾ ನ ತೇ ಮಾತಾ ಗುರವೋ ವಾ ಶುಚಿಸ್ಮಿತೇ |
ಪ್ರಭವಂತಿ ವರಾರೋಹೇ ಭದ್ರಂ ತೇ ಶೃಣು ಮೇ ವಚಃ ||12||
ಸೂರ್ಯ ಶುಚಿಸ್ಮಿತೆಯೇ, ನಿನ್ನ ತಂದೆಯಾಗಲೀ, ತಾಯಿಯಾಗಲೀ, ಗುರುಗಳಾಗಲೀ ಈ ವಿಷಯದಲ್ಲಿ ಸಮರ್ಥರಾಗುವುದಿಲ್ಲ. ಸುಂದರಿಯೇ, ನಿನಗೆ ಮಂಗಳವಾಗಲಿ. ನನ್ನ ಮಾತನ್ನು ಕೇಳು.
ಸರ್ವಾನ್ ಕಾಮಯತೇ ಯಸ್ಮಾತ್ ಕಮೇರ್ಧಾತೋಶ್ಚ ಭಾಮಿನಿ |
ತಸ್ಮಾತ್ ಕನ್ಯೇಹ ಸುಶ್ರೋಣಿ ಸ್ವತಂತ್ರಾ ವರವರ್ಣಿನಿ ||13||
ಎಲೌ ಭಾಮಿನಿಯೇ, ಕಮು ಕಾಂತೌ ಎಂಬ ಧಾತುವಿನಿಂದ ಎಲ್ಲವನ್ನೂ ಬಯಸುವವಳು ಎಂಬ ಅರ್ಥದಲ್ಲಿ ಕನ್ಯಾ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಆದ್ದರಿಂದ ವರವರ್ಣಿನಿಯೇ, ಸುಶ್ರೋಣಿಯೇ, ನಿನ್ನನ್ನು ದಾನ ಮಾಡುವ ವಿಷಯದಲ್ಲಿ ನೀನು ಸ್ವತಂತ್ರಳಾಗಿದ್ದೀಯೆ.
ನಾಧರ್ಮಶ್ಚರಿತಃ ಕಶ್ಚಿತ್ ತ್ವಯಾ ಭವತಿ ಭಾಮಿನಿ |

ಅಧರ್ಮಂ ಕುತ ಏವಾಹಂ ವರೇಯಂ ಲೋಕಕಾಮ್ಯಯಾ ॥14॥
ಭಾಮಿನಿಯೇ, ಇದರಿಂದ ನೀನು ಯಾವ ಅಧರ್ಮವನ್ನೂ ಮಾಡಿದಂತಾಗುವುದಿಲ್ಲ. ನಾನಾದರೂ ಸಲ್ಲೋಕಪ್ರಾಪ್ತಿಗಾಗಿ ನಿನಗೆ ಅಧರ್ಮವನ್ನು ವರಿಸುವಂತೆ ಹೇಗೆ ಹೇಳಲಿ?
ಅನಾವೃತಾಃ ಸ್ತ್ರಿಯಃ ಸರ್ವಾ ನರಾಶ್ಚ ವರವರ್ಣಿನಿ |
ಸ್ವಭಾವ ಏಷ ಲೋಕಾನಾಂ ವಿಕಾರೋಽನ್ಯ ಇತಿ ಸ್ಮೃತಃ ॥15॥
ಸುಂದರಿಯೇ, ಎಲ್ಲ ಸ್ತ್ರೀಯರು ಮತ್ತು ಪುರುಷರು ಅನಾವೃತರಾದವರು. ಇದು ಲೋಕದ ಸ್ವಭಾವ. ಉಳಿದ ನಿಯಮಗಳು ಅಸ್ವಾಭಾವಿಕವಾದವು ಎಂದು ಹೇಳಲ್ಪಡುತ್ತದೆ.
ಸಾ ಮಯಾ ಸಹ ಸಂಗಮ್ಯ ಪುನಃ ಕನ್ಯಾ ಭವಿಷ್ಯಸಿ |
ಪುತ್ರಶ್ಚ ತೇ ಮಹಾಬಾಹುರ್ಭವಿಷ್ಯತಿ ಮಹಾಯಶಾಃ ॥16॥
ಅಂತಹ ನೀನು ನನ್ನ ಸಮಾಗಮವನ್ನು ಮಾಡಿ ಪುನಃ ಕನ್ಯೆಯೇ ಆಗುವಿ. ನಿನಗೆ ಮಹಾಯಶಸ್ವಿಯೂ, ಮಹಾಬಾಹುವೂ ಆದ ಪುತ್ರನು ಜನಿಸುವನು.
ಕುಂತೀ
ಯದಿ ಪುತ್ರೋ ಮಮ ಭವೇತ್ ತ್ವತ್ತಃ ಸರ್ವತಮೋನುದ |
ಕುಂಡಲೀ ಕವಚೀ ಶೂರೋ ಮಹಾಬಾಹುರ್ಮಹಾಬಲಃ |
ಅಸ್ತು ಮೇ ಸಂಗಮೋ ದೇವ ಯಥೋಕ್ತಂ ಭಗವಂಸ್ತ್ವಯಾ ॥17॥
ಕುಂತೀ ಸರ್ವಾಂಧಕಾರನಾಶಕನಾದ ಸೂರ್ಯನೇ, ನೀನು ಹೇಳಿದಂತೆ ನನಗೆ ನಿನ್ನಿಂದ ಪುತ್ರನು ಜನಿಸುವುದಾದರೆ ಅವನು ಕವಚ ಕುಂಡಲ ಉಳ್ಳವನೂ, ಶೂರನೂ, ಮಹಾಬಾಹುವೂ, ಮಹಾಬಲನೂ ಆಗಿರಬೇಕು. ದೇವನೇ, ಪೂಜ್ಯನೇ, ಹಾಗಾಗುವುದಾದರೆ ನಿನ್ನ ಜೊತೆಯಲ್ಲಿ ಸಂಗಮವುಂಟಾಗಲಿ.
ತಿಗ್ಮರಶ್ಮೇ  ಮಹಾಬಾಹೋ ಸಂಗಮಿಷ್ಯೇ ದುರಾಸದ |
ಅಸ್ತಿ ಮೇ ಸಂಗಮೋ ದೇವ ಅನೇನ ಸಮಯೇನ ತೇ ॥18॥
ತೀಕ್ಷ್ಣಕಿರಣವುಳ್ಳವನೇ, ದುರಾಸದನೇ, ಮಹಾಬಾಹುವೇ, ದೇವನೇ, ಈ ಶರತ್ತಿನ ಮೇಲೆ ನಾನು ನಿನ್ನ ಸಂಗಮವನ್ನು ಮಾಡುವೆನು.
ಸೂರ್ಯಃ
ಭವಿಷ್ಯತಿ ಮಹಾಬಾಹುಃ ಕುಂಡಲೀ ದಿವ್ಯವರ್ಮಭೃತ್ |
ಉಭಯಂ ಚಾಮೃತಮಯಂ ತಸ್ಯ ಭದ್ರೇ ಭವಿಷ್ಯತಿ ॥19॥
ಸೂರ್ಯ ಮಂಗಳಸ್ವರೂಪಳೇ, ದಿವ್ಯವಾದ ಕವಚವನ್ನೂ ಮತ್ತು ಕುಂಡಲಗಳನ್ನೂ ಧರಿಸಿದ ಮಹಾಬಾಹುವು ಜನಿಸುವನು. ಅಮೃತದಿಂದ ಉದ್ಭವಿಸಿದ ಅವೆರಡು ಅವನಿಗೆ ಉಂಟಾಗುವುವು.
ಕುಂತೀ
ಯದ್ಯೇತದಮೃತಾದಸ್ತಿ ಕುಂಡಲೇ ವರ್ಮ ಚೋತ್ತಮಮ್ |
ಮಮ ಪುತ್ರಸ್ಯ ಯಂ ವೈ ತ್ವಂ ಮತ್ತ ಉತ್ಪಾದಯಿಷ್ಯಸಿ |
ತ್ವದ್ವೀರ್ಯರೂಪಸತ್ತ್ವೌಜಾ ಧರ್ಮಯುಕ್ತೋ ಭವೇತ್ ಸ ಚ ॥20॥
ಕುಂತೀ ನೀನು ನನ್ನಲ್ಲಿ ಅಮೃತದಿಂದ ಉದ್ಭವಿಸಿದ ಕುಂಡಲಗಳನ್ನೂ ಮತ್ತು ಶ್ರೇಷ್ಠವಾದ ಕವಚವನ್ನೂ ಹೊಂದಿರುವ ಪುತ್ರನನ್ನು ಉತ್ಪಾದಿಸುವುದಾದರೆ ಅವನು ನಿನ್ನ ವೀರ್ಯ, ರೂಪ, ಸತ್ತ್ವ ಮತ್ತು ಪರಾಕ್ರಮಗಳನ್ನು ಹೊಂದಿದವನೂ ಧರ್ಮಯುಕ್ತನೂ ಆಗಿರಬೇಕು.
ಸೂರ್ಯಃ
ಅದಿತ್ಯೇ ಕುಂಡಲೇ ರಾಜ್ಞಿ ಮತ್ಸಮೇ ಮತ್ತಕಾಶಿನಿ |
ತೇಽಸ್ಯ ದಾಸ್ಯಾಮಿ ವೈ ಭೀರು ವರ್ಮ ಚೈವೇದಮುತ್ತಮಮ್ ॥21॥
ಸೂರ್ಯ ಎಲೌ ಮತ್ತಕಾಶಿನಿಯೇ, ಎಲೌ ರಾಣಿಯೇ, ಎಲೌ ಭೀರುವೇ, ನಾನು ಮೂಲರೂಪದಲ್ಲಿ ಹೊಂದಿದ ನನ್ನ ಕುಂಡಲಗಳನ್ನೂ ಮತ್ತು ಈ ಶ್ರೇಷ್ಠವಾದ ಕವಚವನ್ನೂ ಅವನಿಗೆ ಕೊಡುವೆನು (ವಾದಿರಾಜರು).
ಕುಂತೀ
ಪರಮಂ ಭಗವನ್ನೇವಂ ಸಂಗಮಿಷ್ಯೇ ತ್ವಯಾ ಸಹ |
ಯದಿ ಪುತ್ರೋ ಭವೇದೇವಂ ಯಥಾ ವದಸಿ ಗೋಪತೇ ॥22॥
ಕುಂತೀ ಪೂಜ್ಯನೇ, ಇದು ಶ್ರೇಷ್ಠವಾದ ಮಾರ್ಗ. ಗೋಪತಿಯೇ, ನೀನು ಹೇಳುವಂತೆ ಪುತ್ರನು ಜನಿಸುವುದಾದರೆ ನಿನ್ನ ಸಂಗವನ್ನು ಮಾಡುವೆನು.
ವೈಶಂಪಾಯನಃ
ತಥೇಯ್ಯುಕ್ತ್ವಾ ತು ತಾಂ ಕುಂತೀಮಾವಿವೇಶ ವಿಹಂಗಮಃ |
ಸ್ವರ್ಭಾನುಶತ್ರುರ್ಯೋಗಾತ್ಮಾ ನಾಭ್ಯಾಂ ಪಸ್ಪರ್ಶ ಚೈವ ತಾಮ್ ॥23॥
ವೈಶಂಪಾಯನ ಹಾಗೆಯೇ ಆಗಲಿ ಎಂದು ಹೇಳಿ ಆಕಾಶದಲ್ಲಿ ಸಂಚರಿಸುವವನೂ, ರಾಹುವಿಗೆ ಶತ್ರುವೂ, ಯೋಗಾತ್ಮನೂ ಆದ ಸೂರ್ಯನು ಕುಂತಿಯ ಸಮೀಪಕ್ಕೆ ಬಂದು ಅವಳ ನಾಭಿಯನ್ನು ಸ್ಪರ್ಶಮಾಡಿದನು.
ತತಃ ಸಾ ವಿಹ್ವಲೇವಾಸೀತ್ ಕನ್ಯಾ ಸೂರ್ಯಸ್ಯ ತೇಜಸಾ |
ಪಪಾತ ಚಾಥ ಸಾ ದೇವೀ ಶಯನೇ ಮೂಢಚೇತನಾ ॥24॥

ಆಗ ಆ ಕನ್ಯೆಯು ಸೂರ್ಯನ ತೇಜಸ್ಸಿನಿಂದ ವಿಹ್ವಲಳಾಗಿ ತನ್ನ ಪ್ರಜ್ಞೆಯನ್ನು ಕಳೆದುಕೊಂಡು ಹಾಸಿಗೆಯಲ್ಲಿ ಬಿದ್ದಳು.
ಸೂರ್ಯಃ
ಸಾಧಯಿಷ್ಯಾಮಿ ಸುಶ್ರೋಣಿ ಪುತ್ರಂ ವೈ ಜನಯಿಷ್ಯಸಿ |
ಸರ್ವಶಸ್ತ್ರಭೃತಾಂ ಶ್ರೇಷ್ಠಂ ಕನ್ಯಾ ಚೈವ ಭವಿಷ್ಯಸಿ ||25||
ಸೂರ್ಯ ಸುಶ್ರೋಣಿಯೇ, ನಾನು ಹೋಗಿಬರುತ್ತೇನೆ. ನೀನು ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪುತ್ರನನ್ನು ಪಡೆಯುವಿ ಮತ್ತು ಪುನಃ ಕನ್ಯೆಯೇ ಆಗುವಿ.
ವೈಶಂಪಾಯನಃ
ತತಃ ಸಾ ವ್ರೀಡಿತಾ ಬಾಲಾ ತದಾ ಸೂರ್ಯಮಥಾಬ್ರವೀತ್ |
ಏವಮಸ್ತ್ವಿತಿ ರಾಜೇಂದ್ರ ಪ್ರಸ್ಥಿತಂ ಭೂರಿವರ್ಚಸಮ್ ||26||
ವೈಶಂಪಾಯನ ಎಲೈ ರಾಜೇಂದ್ರನೇ, ಆಗ ನಾಚಿಕೆಯಿಂದ ಕೂಡಿದ ಆ ಬಾಲೆಯು ಮಹಾವರ್ಚಸ್ವಿಯಾದ ಹೊರಟುನಿಂತ ಸೂರ್ಯನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದಳು.
ಇತಿ ಸ್ಮೋಕ್ತಾ ಕುಂತಿರಾಜಾತ್ಮಜಾ ಸಾ
ವಿವಸ್ವಂತಂ ಯಾಚಮಾನಾ ಸಲಜ್ಜಾ |
ತಸ್ಮಿನ್ ಪುಣ್ಯೇ ಶಯನೀಯೇ ಪಪಾತ
ಮೋಹಾವಿಷ್ಟಾ ಭಜ್ಯಮಾನಾ ಲತೇವ ||27||
ಹೀಗೆ ಹೇಳಲ್ಪಟ್ಟ ಕುಂತಿರಾಜಕುಮಾರಿಯಾದ ಅವಳು ಲಜ್ಜೆಯಿಂದ ಕೂಡಿ ಸೂರ್ಯನನ್ನು ಬೇಡುತ್ತಾ ಆ ಪವಿತ್ರವಾದ ಶಯನದಲ್ಲಿ ಮುರಿದುಬೀಳುವ ಲತೆಯಂತೆ ಮೋಹಾವಿಷ್ಟಳಾಗಿ ಬಿದ್ದಳು.
ತಿಗ್ಮಾಂಶುಸ್ತಾಂ ತೇಜಸಾ ಮೋಹಯಿತ್ವಾ
ಯೋಗೇನಾವಿಶ್ಯಾತ್ಮಸಂಸ್ಥಾಂ ಚಕಾರ |
ನ ಚೈವೈನಾಂ ದೂಷಯಾಮಾಸ ಭಾನುಃ
ಸಂಜ್ಞಾಂ ಲೇಭೇ ಭೂಯ ಏವಾಥ ಬಾಲಾ ||28||
ಸೂರ್ಯನು ತನ್ನ ತೇಜಸ್ಸಿನಿಂದ ಅವಳಿಗೆ ಮೋಹವನ್ನುಂಟುಮಾಡಿ ಯೋಗಶಕ್ತಿಯಿಂದ ಅವಳನ್ನು ಪ್ರವೇಶಿಸಿ ಅವಳನ್ನು ತನ್ನ ಅಧೀನಳನ್ನಾಗಿ ಮಾಡಿಕೊಂಡನು. ಸೂರ್ಯನು ಅವಳಿಗೆ ದೋಷವನ್ನು ಉಂಟುಮಾಡಲಿಲ್ಲ. ಅನಂತರ ಆ ಬಾಲೆಯು ಪುನಃ ಸಂಜ್ಞೆಯನ್ನು ಮರಳಿ ಪಡೆದಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಅಷ್ಟನವತಿತದ್ವಿಶತತಮೋऽಧ್ಯಾಯಃ ||
|| ಇತಿ ಕುಂಡಲಾಹರಣಪರ್ವಣಿ ಸೂರ್ಯಕುಂತೀಸಮಾಗಮೋ ನಾಮಾಷ್ಟಮೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಇನ್ನೂರ ತೊಂಬತ್ತೊಂಬತ್ತನೆಯ ಅಧ್ಯಾಯ
ಕರ್ಣನ ಜನನ ಮತ್ತು ಕುಂತಿಯಿಂದ ಅವನ ಪರಿತ್ಯಾಗ.
ವೈಶಂಪಾಯನಃ
ತತೋ ಗರ್ಭಃ ಸಮಭವತ್ ಪೃಥಾಯಾಃ ಪೃಥಿವೀಪತೇ |
ಶುಕ್ಲೇ ದಶೋತ್ತರೇ ಪಕ್ಷೇ ತಾರಾಪತಿರಿವಾಂಬರೇ ||1||
ವೈಶಂಪಾಯನ ಎಲೈ ರಾಜನೇ, ಅನಂತರ ಕುಂತಿಯ ಗರ್ಭವು ಶುಕ್ಲಪಕ್ಷದ ದಶಮಿಯ ನಂತರ ಆಕಾಶದಲ್ಲಿ ಚಂದ್ರನು ಬೆಳೆಯುವಂತೆ ಬೆಳೆಯಿತು.
ಸಾ ಬಾಂಧವಭಯಾದ್ ಬಲಾ ಗರ್ಭಂ ತು ವಿನಿಗೂಹತೀ |
ಧಾರಯಾಮಾಸ ಸುಶ್ರೋಣೀ ನ ಚೈನಾಂ ಬುಬುಧೇ ಜನಃ ||2||
ಆ ಸುಶ್ರೋಣಿಯಾದ ಬಾಲೆಯು ಬಂಧುಗಳ ಭಯದಿಂದ ಗರ್ಭವನ್ನು ಮುಚ್ಚಿಟ್ಟುಕೊಂಡೇ ಧರಿಸಿದಳು. ಯಾರಿಗೂ ಅದು ತಿಳಿಯಲಿಲ್ಲ.
ನ ಹಿ ತಾಂ ವೇದ ನಾರ್ಯನ್ಯಾ ಕಾಚಿದ್ ಧಾತ್ರೇಯಿಕಾಮೃತೇ |
ಕನ್ಯಾಪುರಗತಾಂ ಬಾಲಾಂ ನಿಪುಣಾಂ ಪರಿರಕ್ಷಣೇ ||3||
ಕನ್ಯಾ ಅಂತಃಪುರದಲ್ಲಿ ಇದ್ದ ಕುಂತಿಯನ್ನು ರಕ್ಷಿಸುವುದರಲ್ಲಿ ನಿಪುಣಳಾದ ಧಾತ್ರಿಯ (ದಾದಿಯ) ಮಗಳೊಬ್ಬಳನ್ನು ಬಿಟ್ಟರೆ ಬೇರೆ ಯಾವ ಸ್ತ್ರೀಯರಿಗೂ ಕುಂತಿಯು ಗರ್ಭಿಣಿ ಎಂದು ತಿಳಿಯಲಿಲ್ಲ.
ತತಃ ಕಾಲೇನ ಸಾ ಗರ್ಭಂ ಸುಷುವೇ ವರವರ್ಣಿನೀ |
ಕನ್ಯೈವ ತಸ್ಯ ದೇವಸ್ಯ ಪ್ರಸಾದಾದಮರಪ್ರಭಮ್ ||4||
ಅನಂತರ ಕಾಲಕ್ರಮದಲ್ಲಿ ಆ ವರವರ್ಣಿನಿಯು ಸೂರ್ಯನ ಅನುಗ್ರಹದಿಂದ ಕನ್ಯೆಯಾಗಿಯೇ ದೇವತಾ ಕಾಂತಿಯನ್ನು ಹೊಂದಿದ್ದ ಮಗನನ್ನು ಪಡೆದಳು.
ತಥೈವಾಬದ್ಧಕವಚಂ ಕನಕೋಜ್ಜ್ವಲಕುಂಡಲಮ್ |

ಹರ್ಯಕ್ಷಂ ವೃಷಭಸ್ಕಂಧಂ ಯಥಾಽಸ್ಯ ಪಿತರಂ ತಥಾ ॥5॥
ಅವನ ತಂದೆಯಂತೆಯೇ ಕವಚವನ್ನು ಧರಿಸಿದ್ದ ಉಜ್ವಲ ಕನಕಕುಂಡಲಗಳನ್ನು ಧರಿಸಿದ್ದ ಸಿಂಹದ ದೃಷ್ಟಿಯನ್ನು, ವೃಷಭ ಸ್ಕಂದವನ್ನು ಹೊಂದಿದ್ದ ಶಿಶುವನ್ನು ಪಡೆದಳು.
ಜಾತಮಾತ್ರಂ ಚ ತಂ ಗರ್ಭಂ ಧಾತ್ರ್ಯಾ ಸಮ್ಮಂತ್ರ್ಯ ಭಾಮಿನೀ |
ಉತ್ಸಸ್ರಷ್ಟುಕಾಮಾ ತಂ ಗರ್ಭಂ ಕಾರಯಾಮಾಸ ಭಾರತ ॥6॥
ಎಲೈ ಭಾರತನೇ, ಆ ಭಾಮಿನಿಯು ಶಿಶುವು ಜನಿಸಿದ ತಕ್ಷಣವೇ ತನ್ನ ಧಾತ್ರಿಯ ಜೊತೆಯಲ್ಲಿ ಸಮಾಲೋಚನೆಯನ್ನು ಮಾಡಿ ಆ ಗರ್ಭವನ್ನು ಪರಿತ್ಯಾಗವನ್ನು ಮಾಡಲು ಬಯಸಿ ಒಂದು ಪೆಟ್ಟಿಗೆಯನ್ನು ನಿರ್ಮಿಸಿದಳು.
ಮಂಜೂಷಾಂ ಶಿಲ್ಪಿಭಿಸ್ತೂರ್ಣಂ ಸುನದ್ಧಾಂ ಸುಪ್ರತಿಷ್ಠಿತಾಮ್ |
ಪ್ಲವೈರ್ಬಹುವಿಧೈರ್ಬದ್ಧಾಂ ಪ್ಲವನಾರ್ಥಂ ಜಲೇ ನೃಪ ॥7॥
ಎಲೈ ರಾಜನೇ, ಶಿಲ್ಪಿಗಳಿಂದ ಚೆನ್ನಾಗಿ ಕಟ್ಟಲ್ಪಟ್ಟ ಸುಪ್ರತಿಷ್ಠಿತವಾದ ನೀರಿನಲ್ಲಿ ತೇಲಲು ಸಹಕಾರಿಯಾದ ಅನೇಕ ತೇಲುವ ವಸ್ತುಗಳಿಂದ ಕಟ್ಟಲ್ಪಟ್ಟ ಪೆಟ್ಟಿಗೆಯನ್ನು ಮಾಡಿಸಿದಳು.
ಅಜಿನೈರ್ಮೃದುಭಿಶ್ಚೈವಂ ಸಂಸ್ತೀರ್ಣಶಯನಾಂ ತಥಾ |
ಮಂಜೂಷಾಯಾಂ ಸಮಾಧಾಯ ಸ್ವಾಸ್ತೀರ್ಣಾಯಾಂ ಸಮಂತತಃ ॥8॥
ಮಧೂಚ್ಛಿಷ್ಟಸ್ಥಿತಾಯಾಂ ಸಾ ಸುಖಾಯಾಂ ರುದತೀ ತಥಾ |
ಶ್ಲಕ್ಷ್ಣಾಯಾಂ ಸುಪಿಧಾನಾಯಾಮಶ್ವನದ್ಯಾಮವಾಸೃಜತ್ ॥9॥
ಮೃದುವಾದ ಚರ್ಮಗಳಿಂದ ಮಾಡಿದ ಹಾಸಿಗೆಯನ್ನು ಆ ಪೆಟ್ಟಿಗೆಯಲ್ಲಿ ಎಲ್ಲ ಕಡೆಗಳಲ್ಲಿಯೂ ಚೆನ್ನಾಗಿ ಹಾಸಿ ಅದನ್ನು ಜೇಣುಮೇಣದಿಂದ ಭದ್ರವಾಗಿ ಅಂಟಿಸಿ ಸುಂದರವಾಗಿ ಚೆನ್ನಾಗಿ ಮುಟ್ಟಲ್ಪಟ್ಟ ಆ ಪೆಟ್ಟಿಗೆಯನ್ನು ಅಳುತ್ತಾ ಅಶ್ವನದಿಯಲ್ಲಿ ತೇಲಿ ಬಿಟ್ಟಳು.
ಜಾನತೀ ಚಾಪ್ಯಕರ್ತವ್ಯಂ ಕನ್ಯಾಯಾ ಗರ್ಭಧಾರಣಮ್ |
ಪುತ್ರಸ್ನೇಹೇನ ಸಾ ರಾಜನ್ ಕರುಣಂ ಪರ್ಯದೇವಯತ್ ॥10॥
ಕನ್ಯೆಯು ಗರ್ಭವನ್ನು ಧರಿಸುವುದು ಅಕಾರ್ಯವೆಂದು ಅವಳು ತಿಳಿದಿದ್ದರೂ ಎಲೈ ರಾಜನೇ, ಪುತ್ರಸೆನೇಹದಿಂದ ಅವಳು ಕರುಣಾಜನಕವಾಗಿ ಗೋಳಾಡಿದಳು.
ಸಮುತ್ಸೃಜಂತೀ ಮಂಜೂಷಾಮಶ್ವನದ್ಯಾಂ ತದಾ ಜಲೇ |
ಉವಾಚ ರುದತೀ ಕುಂತೀ ಯಾನಿ ವಾಕ್ಯಾನಿ ತಚ್ಛೃಣು ॥11॥
ಆ ಪೆಟ್ಟಿಗೆಯನ್ನು ಅಶ್ವನದಿಯ ನೀರಿನಲ್ಲಿ ತೇಲಿಬಿಡುತ್ತಾ ಕುಂತಿಯು ಅಳುತ್ತಾ ಯಾವ ಮಾತುಗಳನ್ನು ಆಡಿದಳೆಂದು ಹೇಳುತ್ತೇನೆ ಕೇಳು.
ಸ್ವಸ್ತಿ ತೇ ಚಾಂತರಿಕ್ಷೇಭ್ಯಃ ಪಾರ್ಥಿವೇಭ್ಯಶ್ಚ ಪುತ್ರಕ |
ದಿವ್ಯೇಭ್ಯಶ್ಚೈವ ಭೂತೇಭ್ಯಸ್ತಥಾ ತೋಯಚರಾಶ್ಚ ಯೇ ॥12॥
ಎಲೈ ಚಿಕ್ಕಶಿಶುವೇ, ನಿನಗೆ ಅಂತರಿಕ್ಷದಲ್ಲಿರುವ ಪ್ರಾಣಿಗಳಿಂದ, ಭೂಮಿಯ ಮೇಲಿರುವ ಪ್ರಾಣಿಗಳಿಂದ, ಆಕಾಶಗಳಿಗೆ ಪ್ರಾಣಿಗಳಿಂದ ಮತ್ತು ಅದರಂತೆ ಜಲಚರ ಪ್ರಾಣಿಗಳಿಂದ ಶುಭವಾಗಲಿ.
ಶಿವಾಸ್ತೇ ಸಂತು ಪಂಥಾನೋ ಮಾ ಚ ತೇ ಪರಿಪಂಥಿನಃ |
ಆಗತಾಶ್ಚ ತಥಾ ಪುತ್ರ ಭವಂತ್ವದ್ರೋಹಚೇತಸಃ ॥13॥
ಮಗುವೇ, ನಿನ್ನ ಮಾರ್ಗವು ಸುಖವಾಗಿರಲಿ. ನಿನಗೆ ಯಾರೂ ವಿರೋಧಿಗಳು ಬರುವುದು ಬೇಡ. ಬಂದವರು ನಿನಗೆ ದ್ರೋಹವನ್ನು ಮಾಡದಿರಲಿ.
ಪಾತು ತ್ವಾಂ ವರುಣೋ ರಾಜಾ ಸಲಿಲೇ ಸಲಿಲೇಶ್ವರಃ |
ಅಂತರಿಕ್ಷೇಽಂತರಿಕ್ಷಸ್ಥಃ ಪವನಃ ಸರ್ವಗಸ್ತಥಾ ॥14॥
ಜಲೇಶ್ವರನಾದ ವರುಣರಾಜನು ಜಲದಲ್ಲಿ ನಿನ್ನನ್ನು ರಕ್ಷಿಸಲಿ. ಅಂತರಿಕ್ಷದಲ್ಲಿ ಸರ್ವವ್ಯಾಪ್ತನೂ, ಅಂತರಿಕ್ಷಸ್ಥಿತನೂ ಆದ ವಾಯುವು ರಕ್ಷಿಸಲಿ.
ಪಿತಾ ತ್ವಾಂ ಪಾತು ಸರ್ವತ್ರ ತಪನಸ್ತಪತಾಂ ವರಃ |
ಯೇನ ದತ್ತೋಽಸಿ ಮೇ ಪುತ್ರ ದಿವ್ಯೇನ ವಿಧಿನಾ ಕಿಲ ॥15॥
ಎಲೈ ಪುತ್ರನೇ, ಯಾವ ಸೂರ್ಯನು ದಿವ್ಯವಾದ ವಿಧಿಯಿಂದ ನಿನ್ನನ್ನು ನನಗೆ ಕೊಟ್ಟಿದ್ದಾನೆಯೋ, ಅಂತಹ ಪ್ರಕಾಶಿಸುವವರಲ್ಲಿ ಶ್ರೇಷ್ಠನಾದ ತಂದೆಯಾದ ಸೂರ್ಯನು ನಿನ್ನನ್ನು ಎಲ್ಲಾ ಕಡೆಯಲ್ಲಿಯೂ ರಕ್ಷಿಸಲಿ.
ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿಶ್ವೇ ಚ ದೇವತಾಃ |
ಮರುತಶ್ಚ ಮಹೇಂದ್ರೇಣ ದಿಶಶ್ಚ ಸದಿಗೀಶ್ವರಾಃ ॥16॥
ರಕ್ಷಂತು ತ್ವಾಂ ಸುರಾಃ ಸರ್ವೇ ಸಮೇಷು ವಿಷಮೇಷು ಚ |
ವೇತ್ಸ್ಯಾಮಿ ತ್ವಾಂ ವಿದೇಶೇಽಪಿ ಕವಚೇನಾಭಿಸೂಚಿತಮ್ ॥17॥
ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ವಿಶ್ವೇದೇವತೆಗಳು, ಇಂದ್ರನಿಂದ ಸಹಿತರಾದ ಮರುತತತಗಳು, ಎಲ್ಲಾ ದಿಕ್ಕುಗಳೂ, ಎಲ್ಲಾ ದಿಕ್ಪಾಲಕರು, ಎಲ್ಲ ದೇವತೆಗಳು ನಿನ್ನನ್ನು ಸಮವಾದ ಅವಸ್ಥೆಯಲ್ಲಿಯೂ, ವಿಷಮವಾದ ಅವಸ್ಥೆಯಲ್ಲಿಯೂ ರಕ್ಷಿಸಲಿ. ನೀನು ವಿದೇಶದಲ್ಲಿದ್ದರೂ ಈ ಕವಚದ ಸೂಚನೆಯಿಂದ ನಾನು ನಿನ್ನನ್ನು ತಿಳಿಯುವೆನು.
ಧನ್ಯಸ್ತೇ ಪುತ್ರ ಜನಕೋ ದೇವೋ ಭಾನುರ್ವಿಭಾವಸುಃ |

ಯಸಹತ್ವಂ ದ್ರಕ್ಷ್ಯತಿ ದಿವ್ಯೇನ ಚಕ್ಷುಷಾ ವಾಹಿನೀಗತಮ್ ॥18॥
ಮಗುವೇ, ನಿನ್ನನ್ನು ಪಡೆದ ನಿನ್ನ ತಂದೆಯಾದ ಸೂರ್ಯದೇವನು ಧನ್ಯನಾದವನು. ಏಕೆಂದರೆ ಅವನು ನದಿಯಲ್ಲಿ ಹೋಗುವ ನಿನ್ನನ್ನು ತನ್ನ ದಿವ್ಯದೃಷ್ಟಿಯಿಂದ ನೋಡುತ್ತಾನೆ.
ಧನ್ಯಾ ಸಾ ಪ್ರಮದಾ ಯಾ ತ್ವಾಂ ಪುತ್ರತ್ವೇ ಕಲ್ಪಯಿಷ್ಯತಿ |
ಯಸ್ಯಾಸ್ತ್ವಂ ತೃಷಿತಃ ಪುತ್ರ ಸ್ತನಂ ಪಾಸ್ಯಸಿ ದೇವಜ ॥19॥
ಎಲೈ ಮಗುವೇ, ಯಾವ ವನಿತೆಯು ನಿನ್ನನ್ನು ಪುತ್ರನೆಂದು ಸ್ವೀಕರಿಸುತ್ತಾಳೆಯೋ ದೇವಕುಮಾರನೇ, ಯಾರ ಸ್ತನವನ್ನು ಬಾಯಾರಿದ ನೀನು ಕುಡಿಯುವೆಯೋ ಅಂತಹ ವನಿತೆಯು ಧನ್ಯಳಾದವಳು.
ಕೋ ನು ಸ್ವಪ್ನಸ್ತಯಾ ದೃಷ್ಟೋ ಯಾ ತ್ವಾಮಾದಿತ್ಯವರ್ಚಸಮ್ |
ದಿವ್ಯವರ್ಮಸಮಾಯುಕ್ತಂ ದಿವ್ಯಕುಂಡಲಭೂಷಿತಮ್ ॥20॥
ಪದ್ಮಾಯತವಿಶಾಲಾಕ್ಷಂ ಪದ್ಮತಾಮ್ರದಲೋಜ್ಜ್ವಲಮ್ |
ಸುಲಲಾಟಂ ಸುಕೇಶಾಂತಂ ಪುತ್ರತ್ವೇ ಕಲ್ಪಯಿಷ್ಯತಿ ॥21॥
ದಿವ್ಯಕವಚದಿಂದ ಕೂಡಿದವನೂ, ಆದಿತ್ಯನ ಕಾಂತಿಯಿಂದ ಕೂಡಿದವನೂ, ದಿವ್ಯ ಕುಂಡಲಭೂಷಿತನೂ, ಪದ್ಮದಳದಂತೆ ವಿಶಾಲನೇತ್ರನೂ, ಪದ್ಮದಳದಂತೆ ತಾಮ್ರದಂತೆ ಹೊಳೆಯುವವನೂ, ಒಳ್ಳೆಯ ಹಣೆಯನ್ನೂ, ಒಳ್ಳೆಯ ಕೇಶವನ್ನೂ ಹೊಂದಿದವನಾದ ನಿನ್ನನ್ನು ಯಾವ ವನಿತೆಯು ಪುತ್ರನನ್ನಾಗಿ ಸ್ವೀಕರಿಸುವಳೋ ಅವಳು ಎಂತಹ ಸ್ವಪ್ನವನ್ನು ನೋಡಿರಬೇಕು!
ಧನ್ಯಾ ದ್ರಕ್ಷ್ಯಂತಿ ಪುತ್ರ ತ್ವಾಂ ಭೂಮೌ ಸರ್ಪಂತಮಾತ್ಮಜ |
ಅವ್ಯಕ್ತಕಲವಾಕ್ಯಾನಿ ಭಾಷಂತಂ ಪಾಂಸುಗುಂಠಿತಮ್ ॥22॥
ಎಲೈ ನನ್ನ ಮಗುವೇ, ಭೂಮಿಯಲ್ಲಿ ಹರಿದಾಡುತ್ತಾ ಅವ್ಯಕ್ತ ಮಧುರವಾಗಿ ಮಾತನಾಡುತ್ತಾ ಮಣ್ಣಿನಿಂದ ಕೂಡಿದ ಶರೀರವುಳ್ಳ ನಿನ್ನನ್ನು ನೋಡುವವರು ಧನ್ಯರು.
ಧನ್ಯಾ ದ್ರಕ್ಷ್ಯಂತಿ ಪುತ್ರ ತ್ವಾಂ ಪುನರ್ಯೌವನಗೋಚರಮ್ |
ಹಿಮವದ್ವನಸಂಭೂತಂ ಸಿಂಹಂ ಕೇಸರಿಣಂ ಯಥಾ ॥23॥
ಪುತ್ರನೇ, ನೀನು ಯೌವನಸ್ಥನಾದಮೇಲೆ ಹಿಮಾಲಯದ ವನದಲ್ಲಿ ಹುಟ್ಟಿದ ಸಿಂಹದಂತಿರುವ ನಿನ್ನನ್ನು ನೋಡುವವರು ಧನ್ಯರು.
ವೈಶಂಪಾಯನಃ
ಏವಂ ಬಹುವಿಧಂ ರಾಜನ್ ವಿಲಪ್ಯ ಕರುಣಂ ಪೃಥಾ |
ಅವಾಸೃಜತ ಮಂಜೂಷಾಮಶ್ವನದ್ಯಾಸ್ತದಾ ಜಲೇ ॥24॥
ವೈಶಂಪಾಯನ ಎಲೈ ರಾಜನೇ, ಹೀಗೆ ಕುಂತಿಯು ಬಹುವಿಧವಾಗಿ ಕರುಣಾಜನಕವಾಗಿ ವಿಲಾಪವನ್ನು ಮಾಡಿ ಆ ಪೆಟ್ಟಿಗೆಯನ್ನು ಆಗ ಅಶ್ವನದಿಯ ಜಲದಲ್ಲಿ ತೇಲಿಬಿಟ್ಟಳು.
ರುದತೀ ಪುತ್ರಶೋಕಾರ್ತಾ ನಿಶೀಥೇ ಕಮಲೇಕ್ಷಣಾ |
ಧಾತ್ರ್ಯಾ ಸಹ ಪೃಥಾ ರಾಜನ್ ಪುತ್ರದರ್ಶನಲಾಲಸಾ ॥25॥
ವಿಸರ್ಜಯಿತ್ವಾ ಮಂಜೂಷಾಂ ಸಂಬೋಧನಭಯಾತ್ ಪಿತುಃ |
ವಿವೇಶ ರಾಜಭವನಂ ಪುನಃ ಶೋಕಾತುರಾ ತತಃ ॥26॥
ರಾಜನೇ, ಶಿಶುವನ್ನು ನೋಡುವ ಹಿರಿಯ ಬಯಕೆ ಉಳ್ಳವಳಾಗಿ, ಪುತ್ರಶೋಕದಿಂದ ಆರ್ತಳಾಗಿ ಅಳುತ್ತಾ ಕಮಲನೇತ್ರೆಯಾದ ಆ ಕುಂತಿಯು ರಾತ್ರಿಯಲ್ಲಿ ಆ ಪೆಟ್ಟಿಗೆಯನ್ನು ವಿಸರ್ಜಿಸಿ ತಂದೆಗೆ ತಿಳಿಯಬಹುದೆಂದು ಭಯಪಟ್ಟು ಶೋಕಾತುರಳಾಗಿ ಪುನಃ ರಾಜಭವನವನ್ನು ಪ್ರವೇಶಿಸಿದಳು.
ಮಂಜೂಷಾ ತ್ವಶ್ವನದ್ಯಾಃ ಸಾ ಯಯೌ ಚರ್ಮಣ್ವತೀಂ ನದೀಮ್ |
ಚರ್ಮಣ್ವತ್ಯಾಶ್ಚ ಯಮುನಾಂ ತತೋ ಗಂಗಾಂ ಜಗಾಮ ಹ ॥27॥
ಆ ಪೆಟ್ಟಿಗೆಯಾದರೂ ಅಶ್ವನದಿಯಿಂದ ತೇಲಿಕೊಂಡು ಚರ್ಮಣ್ವತೀ ನದಿಗೆ ಹೋಯಿತು. ಚರ್ಮಣ್ವತೀ ನದಿಯಿಂದ ಯಮುನೆಗೂ ಅಲ್ಲಿಂದ ಗಂಗೆಗೂ ಹೋಯಿತು.
ಗಂಗಾಯಾಂ ಸೂತವಿಷಯಂ ಚಂಪಾಮನುಯಯೌ ಪುರೀಮ್ |
ಸ ಮಂಜೂಷಾಗತೋ ಗರ್ಭಸ್ತರಂಗೈರುಹ್ಯಮಾನಕಃ ॥28॥
ಗಂಗೆಯಲ್ಲಿ ತೇಲಿಕೊಂಡು ಆ ಪೆಟ್ಟಿಗೆಯು ಸೂತನ ರಾಜ್ಯಪ್ರದೇಶವಾದ ಚಂಪಾಪುರಿಗೆ ಹೋಯಿತು. ಪೆಟ್ಟಿಗೆಯಲ್ಲಿದ್ದ ಶಿಶುವೂ ಸಹ ಅಲೆಗಳಿಂದ ಒಯ್ಯಲ್ಪಟ್ಟು ಅಲ್ಲಿ ತಲುಪಿತು.
ಅಮೃತಾದುತ್ಥಿತಂ ದಿವ್ಯಂ ತನುವರ್ಮ ಸಕುಂಡಲಮ್ |
ಧಾರಯಾಮಾಸ ತಂ ಗರ್ಭಂ ದಿವ್ಯಂ ಚ ವಿಧಿನಿರ್ಮಿತಮ್ ॥29॥
ವಿಧಿನಿರ್ಮಿತವಾದ ಆ ದಿವ್ಯವಾದ ಗರ್ಭವು ಅಮೃತದಿಂದ ಉದ್ಭವಿಸಿದ ದಿವ್ಯವಾದ ಶರೀರ ಕವಚ ಮತ್ತು ಕುಂಡಲಗಳಿಂದ ರಕ್ಷಿಸಲ್ಪಟ್ಟಿತು.
ಏತದ್ ಗುಹ್ಯಂ ಮಹಾರಾಜ ಸೂರ್ಯಸ್ಯಾಸೀನ್ಮಹಾತ್ಮನಃ |
ಸ ಸೂರ್ಯಸಂಭವೋ ಗರ್ಭಃ ಕುಂತ್ಯಾ ಗರ್ಭೇಣ ಧಾರಿತಃ ॥30॥
ಮಹಾರಾಜನೇ, ಇದು ಮಹಾತ್ಮನಾದ ಸೂರ್ಯನ ರಹಸ್ಯವಾದ ವಿಷಯ. ಸೂರ್ಯನಿಂದ ಸಂಭವಿಸಿದ ಆ ಶಿಶುವನ್ನು ಕುಂತಿಯು ತನ್ನ ಗರ್ಭದಲ್ಲಿ ಧರಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕೋನತ್ರಿಶತತಮೋಽಧ್ಯಾಯಃ ॥

॥ ಇತಿ ಕುಂಡಲಾಹರಣಪರ್ವಣಿ ಕುಂತ್ಯಾಃ ಕರ್ಣಪರಿತ್ಯಾಗೋನಾಮ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಇನ್ನೂರ ತೊಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ಮುನ್ನೂರನೆಯ ಅಧ್ಯಾಯ
ಅಧಿರಥನಿಂದ ಶಿಶುರೂಪ ಕರ್ಣ ಪ್ರಾಪ್ತಿ. ರಾಧೆಯಿಂದ ಪಾಲನೆ. ಪರಶುರಾಮಾದಿಗಳಲ್ಲಿ
ಅವನ ಅಸ್ತ್ರಾಭ್ಯಾಸ. ದುರ್ಯೋಧನ ಸಖ್ಯ ಮತ್ತು ದೇವೇಂದ್ರನ ಆಗಮನ.
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ಧೃತರಾಷ್ಟ್ರಸ್ಯ ವೈ ಸಖಾ |
ಸೂತೋಽಧಿರಥ ಇತ್ಯೇವ ಸದಾರೋ ಜಾಹ್ನವೀಂ ಯಯೌ ॥1॥
ವೈಶಂಪಾಯನ ಇದೇ ಕಾಲದಲ್ಲಿ ಧೃತರಾಷ್ಟ್ರನ ಸ್ನೇಹಿತನಾದ ಸೂತನಾದ ಅಧಿರಥನು ಪತ್ನೀ ಸಹಿತನಾಗಿ ಗಂಗೆಗೆ ಹೋದನು.

ತಸ್ಯ ಭಾರ್ಯಾಭವದ್ ರಾಜನ್ ರೂಪೇಣಾಸದೃಶೀ ಭುವಿ |
ರಾಧಾ ನಾಮ ಮಹಾಭಾಗಾ ನ ಸಾ ಪುತ್ರಮವಿಂದತ |
ಅಪತ್ಯಾರ್ಥೇ ಪರಂ ಯತ್ನಮಕರೋಚ್ಚ ವಿಶೇಷತಃ ॥2॥
ಅವನಿಗೆ ಅಸದೃಶರೂಪವುಳ್ಳ ರಾಧಾ ಎಂಬ ಮಹಾನುಭಾವಳಾದ ಪತ್ನಿ ಇದ್ದಳು. ಅವರಿಗೆ ಮಕ್ಕಳಿರಲಿಲ್ಲ. ಮಕ್ಕಳನ್ನು ಪಡೆಯುವ ಸಲುವಾಗಿ ಅವಳು ವಿಶೇಷ ಪ್ರಯತ್ನವನ್ನು ಮಾಡಿದಳು.
ಸಾ ದದರ್ಶಾಥ ಮಂಜೂಷಾಮುಹ್ಯಮಾನಾಂ ಯದೃಚ್ಛಯಾ |
ದತ್ತರಕ್ಷಪ್ರತಿಸರಾಮನ್ವಾಲಂಭನಶೋಭನಾಮ್ ॥3॥
ಅನಂತರ ಅವಳು ಗಂಗೆಯಲ್ಲಿ ತೇಲಿಬರುತ್ತಿದ್ದ, ಕೆಳಗೆ ತೇಲುವಂತೆ ಅನೇಕ ಸಲಕರಣೆಗಳನ್ನು ಜೋಡಿಸಿದ್ದ, ನೋಡುವುದಕ್ಕೆ ಸುಂದರವಾಗಿದ್ದ ಒಂದು ಪೆಟ್ಟಿಗೆಯನ್ನು ನೋಡಿದಳು.
ಊರ್ಮಿತುಂಗೈರುಹ್ಯಮಾನಾಮುಪನೀತಾಮುಪಹ್ವರೇ |
ವಿವರ್ತಮಾನಾಂ ಬಹುಶಃ ಪುನಃ ಪುನರಿತಸ್ತತಃ ॥4॥
ಎತ್ತರವಾದ ಅಲೆಗಳಿಂದ ಹೊಡೆಯಲ್ಪಟ್ಟು ದಡದ ಸಮೀಪದಲ್ಲಿ ಪುನಃ ಪುನಃ ಅನೇಕ ಬಾರಿ ಓಲಾಡುತ್ತಿದ್ದ ಆ ಪೆಟ್ಟಿಗೆಯನ್ನು ನೋಡಿದಳು.
ತತಃ ಸಾ ವಾಯುನಾ ರಾಜನ್ಸ್ರೋತಸಾ ಚ ಬಲೀಯಸಾ |
ಊರ್ಮೀತರಂಗೈರ್ಜಾಹ್ನವ್ಯಾಃ ಸಮಾನೀತಾಮುಪಹ್ವರಮ್ ॥5॥
ಅವಳು ತರಂಗ ಮತ್ತು ವಾಯುಗಳ ವೇಗದಿಂದಲೂ ಮತ್ತು ಗಂಗೆಯ ಪ್ರವಾಹದಿಂದಲೂ ತನ್ನ ಸಮೀಪಕ್ಕೆ ತರಲ್ಪಟ್ಟ ಆ ಪೆಟ್ಟಿಗೆಯನ್ನು ನೋಡಿದಳು.
ಸಾ ತು ಕೌತೂಹಲಾತ್ ಪ್ರಾಪ್ತಾಂ ಗ್ರಾಹಯಾಮಾಸ ಭಾಮಿನೀ |
ತತೋ ನಿವೇದಯಾಮಾಸ ಸೂತಸ್ಯಾಧಿರಥಸ್ಯ ವೈ ॥6॥
ಅವಳು ಕುತೂಹಲದಿಂದ ಆ ಪೆಟ್ಟಿಗೆಯನ್ನು ಇನ್ನೊಬ್ಬರ ಕೈಯಲ್ಲಿ ಹಿಡಿಸಿ ಅದನ್ನು ಸೂತನಾದ ಅಧಿರಥನಿಗೆ ನಿವೇದಿಸಿದಳು.
ಸ ತಾಮುದ್ಧೃತ್ಯ ಮಂಜೂಷಾಮುತ್ಸಾರ್ಯ ಜಲಮಂತಿಕಾತ್ |
ಯಂತ್ರೈರುದ್ಘಾಟಯಾಮಾಸ ಸೋಽಪಶ್ಯತ್ ತತ್ರ ಬಾಲಕಮ್ ॥7॥
ಅವನು ಆ ಪೆಟ್ಟಿಗೆಯನ್ನು ಎತ್ತಿಕೊಂಡು ಕೆಳಭಾಗದಲ್ಲಿದ್ದ ನೀರನ್ನು ಒರೆಸಿ ಯಂತ್ರಗಳಿಂದ ಪೆಟ್ಟಿಗೆಯನ್ನು ತೆಗೆದು ಅದರಲ್ಲಿ ಒಂದು ಶಿಶುವನ್ನು ನೋಡಿದನು.
ತರುಣಾದಿತ್ಯಸಂಕಾಶಂ ವದನೇನ ವಿರಾಜತಾ |
ಪರಿಮ್ಲಾನಮುಖಂ ಬಾಲಂ ರುದಂತಂ ಕ್ಷುಧಿತಂ ಭೃಶಮ್ |
ಸ ತು ತಂ ಪರಯಾ ಲಕ್ಷ್ಮ್ಯಾ ದೃಷ್ಟ್ವಾ ಯುಕ್ತಂ ವರಾತ್ಮಜಮ್ ॥8॥
ಉದಯಿಸುವ ಸೂರ್ಯನ ಕಾಂತಿಯನ್ನು ಹೊಂದಿದ, ಸುವರ್ಣಮಯವಾದ ಕವಚವನ್ನು ಧರಿಸಿದ, ಹೊಳೆಯುವ ಕರ್ಣಕುಂಡಲಗಳಿಂದ ಕೂಡಿದ, ಸುಂದರವಾದ ಮುಖವುಳ್ಳವದಾಗಿದ್ದರೂ ಬಾಡಿದ, ಹಸಿದು ಬಹಳವಾಗಿ ಅಳುತ್ತಿದ್ದ ಶಿಶುವನ್ನು ನೋಡಿದನು.
ಸ ಸೂತೋ ಭಾರ್ಯಯಾ ಸಾರ್ಧಂ ವಿಸ್ಮಯೋತ್ ಫುಲ್ಲಲೋಚನಃ ॥
ಅಂಕಮಾರೋಪ್ಯ ತಂ ಬಾಲಂ ಭಾರ್ಯಾಂ ವಚನಮಬ್ರವೀತ್ ॥10॥
ಅವನು ಬಹಳ ಕಾಂತಿಯುಕ್ತವಾದ ಆ ಶಿಶುವನ್ನು ಪತ್ನಿಯ ಜೊತೆಯಲ್ಲಿ ನೋಡಿ ಎತ್ತಿ ತೊಡೆಯ ಮೇಲೆ ಹಾಕಿಕೊಂಡು ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿ ಪತ್ನಿಯನ್ನು ಕುರಿತು ಮಾತನಾಡಿದನು.
ಇದಮತ್ಯದ್ಭುತಂ ಭೀರು ಜಾತೋ ಜಾತೋಽಸ್ಮಿ ಭಾಮಿನಿ |
ದಿಷ್ಟ್ಯಾವಾನ್ ದೇವಗರ್ಭೋಽಯಂ ಮನ್ಯೇಽಸ್ಮಾನ್ ಸಮುಪಾಗತಃ ॥
ಅನಪತ್ಯಸ್ಯ ಪುತ್ರೋಽಯಂ ದೇವೈರ್ದತ್ತೋ ಧ್ರುವಂ ಮಮ ॥12॥
ಭೀರುವೇ, ಇದು ಅದ್ಭುತವಾದ ಘಟನೆ. ನಾನು ಜನಿಸಿ ಬಹುಕಾಲವಾದ ಮೇಲೆ ಮಗನನ್ನು ಪಡೆದು ಈಗ ಭಾಗ್ಯವಂತನಾಗಿದ್ದೇನೆ.

ದೇವರು ಕೊಟ್ಟ ಈ ಶಿಶುವು ನಮ್ಮ ಬಳಿಗೆ ಬಂದಿದೆ ಎಂದು ಭಾವಿಸುತ್ತೇನೆ. ಮಕ್ಕಳಿಲ್ಲದ ನನಗೆ ಇದು ನಿಶ್ಚಿತವಾಗಿ ದೇವತೆಗಳೇ ಕೊಟ್ಟ ಮಗು.
ವೈಶಂಪಾಯನಃ
ಇತ್ಯುಕ್ತ್ವಾ ತಂ ದದೌ ಪುತ್ರಂ ರಾಧಾಯೈ ಸ ಮಹೀಪತಿಃ |
ಪ್ರತಿಜಗ್ರಾಹ ತಂ ರಾಧಾ ವಿಧಿವದ್ ದಿವ್ಯರೂಪಿಣಮ್ |
ಪುತ್ರಂ ಕಮಲಗರ್ಭಾಭಂ ದೇವಗರ್ಭಂ ಶ್ರಿಯಾ ವೃತಮ್ ॥13॥
ವೈಶಂಪಾಯನ ಹೀಗೆ ಹೇಳಿ ಆ ರಾಜನಾದ ಅಧಿರಥನು ಆ ಶಿಶುವನ್ನು ರಾಧೆಗೆ ನೀಡಿದನು. ರಾಧೆಯಾದರೂ ದಿವ್ಯರೂಪವನ್ನು ಹೊಂದಿದ್ದ, ಕಮಲಗರ್ಭದ ಕಾಂತಿಯನ್ನು ಹೊಂದಿದ್ದ, ಸಂಪತ್ತಿನಿಂದ ಕೂಡಿದ್ದ, ದೇವಗರ್ಭವಾದ ಆ ಶಿಶುವನ್ನು ವಿಧಿಪ್ರಕಾರವಾಗಿ ಸ್ವೀಕರಿಸಿದಳು.
ಸ್ತನ್ಯಂ ಸಮಾಸ್ರವಚ್ಚಾಸ್ಯಾ ದೈವಾದಿತ್ಯಥ ನಿಶ್ಚಯಃ |
ಪುಪೋಷ ಚೈನಂ ವಿಧಿವದ್ ವವೃಧೇ ಸ ಚ ವೀರ್ಯವಾನ್ ॥14॥
ತತಃ ಪ್ರಭೃತಿ ಚಾಪ್ಯನ್ಯೇ ಪ್ರಾಭವನ್ನೌರಸಾಃ ಸುತಾಃ ॥15॥
ಅವಳಿಗೆ ಆಗ ಸ್ತನಗಳಿಂದ ಹಾಲು ಹರಿಯಿತು. ನಿಶ್ಚಯವಾಗಿಯೂ ಅದು ದೈವ ಘಟನೆಯೇ. ಅವಳು ಆ ಶಿಶುವನ್ನು ಪೋಷಿಸಿದಳು. ಅವನು ಪರಾಕ್ರಮಶಾಲಿಯಾಗಿ ಬೆಳೆದನು. ಅನಂತರ ಅವರಿಗೆ ಬೇರೆ ಔರಸ ಪುತ್ರರೂ ಜನಿಸಿದರು.
ನಾಮಕರ್ಮ ಚ ಚಕ್ರಾತೇ ಕುಂಡಲೇ ತಸ್ಯ ದೃಶ್ಯತೇ |
ಕರ್ಣ ಇತ್ಯೇವಂ ತಂ ಬಾಲಂ ದೃಷ್ಟ್ವಾ ಕರ್ಣಂ ಸಕುಂಡಲಮ್ ॥16॥
ಆ ಶಿಶುವಿನ ಕುಂಡಲದಲ್ಲಿ ಕರ್ಣ ಎಂಬ ಅಕ್ಷರಗಳು ಕಾಣುತ್ತಿದ್ದವು. ಅದನ್ನು ನೋಡಿ ಅವರು ಕುಂಡಲ ಸಹಿತವಾದ ಆ ಶಿಶುವಿಗೆ ಕರ್ಣನೆಂದು ನಾಮಕರಣ ಮಾಡಿದರು.
ವಸುವರ್ಮಧರಂ ದೃಷ್ಟ್ವಾ ತಂ ಬಾಲಂ ಹೇಮಕುಂಡಲಮ್ |
ನಾಮಾಸ್ಯ ವಸುಷೇಣೇತಿ ತತಶ್ಚಕ್ರುರ್ದ್ವಿಜಾತಯಃ ॥17॥
ಆ ಶಿಶುವು ಸುವರ್ಣಮಯವಾದ ಕವಚವನ್ನೂ, ಹೇಮಕುಂಡಲಗಳನ್ನೂ ಧರಿಸಿ ಸಂಪತ್ತಿನೊಡನೆ ಇದ್ದುದನ್ನು ನೋಡಿ ಬ್ರಾಹ್ಮಣರು ಅವನಿಗೆ ವಸುಷೇಣ ಎಂದು ನಾಮಕರಣ ಮಾಡಿದರು (ವಾದಿರಾಜರು).
ಏವಂ ಸ ಸೂತಪುತ್ರತ್ವಂ ಜಗಾಮಾಮಿತವಿಕ್ರಮಃ |
ವಸುಷೇಣ ಇತಿ ಖ್ಯಾತೋ ವೃಷ ಇತ್ಯೇವ ಚ ಪ್ರಭುಃ ॥18॥
ಹೀಗೆ ಅಮಿತವಿಕ್ರಮಿಯೂ ಮತ್ತು ಪ್ರಭುವೂ ಆದ ಅವನು ಸೂತನ ಮಗನಾಗಿ ವಸುಷೇಣನೆಂದೂ, ವೃಷ ಎಂದೂ, ಪ್ರಖ್ಯಾತನಾದನು.
ಸೂತಸ್ಯ ವವೃಧೇಽಂಗೇಷು ಶ್ರೇಷ್ಠಃ ಪುತ್ರಃ ಸ ವೀರ್ಯವಾನ್ |
ಚಾರೇಣ ವಿದಿತಶ್ಚಾಸೀತ್ ಪೃಥಯಾ ದಿವ್ಯವರ್ಮಭೃತ್ ॥19॥
ಆ ಶ್ರೇಷ್ಠಪುತ್ರನು ಸೂತನ ಆಳ್ವಿಕೆಗೆ ಒಳಪಟ್ಟ ಅಂಗದೇಶದಲ್ಲಿ ಪರಾಕ್ರಮಶಾಲಿಯಾಗಿ ಬೆಳೆದನು. ದಿವ್ಯಕವಚವನ್ನು ಧರಿಸಿದ ಆ ಶಿಶುವು ಅಧಿರಥನ ಬಳಿ ಇದೆ ಎಂದು ಕುಂತಿಯು ಗೂಢಚಾರರ ಮೂಲಕ ತಿಳಿದಳು.
ಸೂತಸ್ತ್ವಧಿರಥಃ ಪುತ್ರಂ ವಿವೃದ್ಧಂ ಸಮಯೇನ ತಮ್ |
ದೃಷ್ಟ್ವಾ ಪ್ರಸ್ಥಾಪಯಾಮಾಸ ಪುರಂ ವಾರಣಸಾಹ್ವಯಮ್ ॥20॥
ಸೂತನಾದ ಅಧಿರಥನು ಪುತ್ರನು ಬೆಳೆದಿರುವುದನ್ನು ನೋಡಿ ಯೋಗ್ಯ ಸಮಯದಲ್ಲಿ ಅವನನ್ನು ಹಸ್ತಿನಪುರಕ್ಕೆ ಕಳುಹಿಸಿದನು.
ತತ್ರೋಪಸದನಂ ಚಕ್ರೇ ದ್ರೋಣಸ್ಯೇಷ್ವಸ್ತ್ರಕರ್ಮಣಿ |
ಸಖ್ಯಂ ದುರ್ಯೋಧನೇನಾಪಿ ಸಮಾಗಚ್ಛತ್ ಸುವೀರ್ಯವಾನ್ ॥21॥
ಅಲ್ಲಿ ಕರ್ಣನು ದ್ರೋಣರ ಉಪಸತ್ತಿಯನ್ನು ಮಾಡಿ ಶಸ್ತ್ರಾಸ್ತ್ರಗಳನ್ನು ಕಲಿತು ಮಹಾಪರಾಕ್ರಮಶಾಲಿಯಾಗಿ ದುರ್ಯೋಧನನ ಸಖ್ಯವನ್ನು ಸಂಪಾದಿಸಿದನು.
ದ್ರೋಣಾತ್ ಕೃಪಾಚ್ಚ ರಾಮಾಚ್ಚ ಸೋಽಸ್ತ್ರಗ್ರಾಮಂ ಚತುರ್ವಿಧಮ್ |
ಲಬ್ಧ್ವಾ ಲೋಕೇಽಭವತ್ ಖ್ಯಾತಃ ಪರಮೇಷ್ವಾಸತಾಂ ಗತಃ ॥22॥
ದ್ರೋಣರಿಂದಲೂ, ಕೃಪರಿಂದಲೂ, ಪರಶುರಾಮನಿಂದಲೂ ಅವನು ನಾಲ್ಕು ವಿಧವಾದ ಅಸ್ತ್ರಸಮೂಹಗಳನ್ನು ಪಡೆದು ಲೋಕದಲ್ಲಿ ಪರಮಧನ್ವೀ ಎಂದು ಪ್ರಖ್ಯಾತನಾದನು.
ಸಂಧಾಯ ಧಾರ್ತರಾಷ್ಟ್ರೇಣ ಪಾರ್ಥಾನಾಂ ವಿಪ್ರಿಯೇ ರತಃ |
ಯೋದ್ಧುಮಾಶಂಸತೇ ನಿತ್ಯಂ ಫಲ್ಗುನೇನ ಮಹಾತ್ಮನಾ ॥23॥
ದುರ್ಯೋಧನನ ಜೊತೆಯಲ್ಲಿ ಸಖ್ಯವನ್ನು ಹೊಂದಿ ಪಾಂಡವರಿಗೆ ಅಪ್ರಿಯವನ್ನು ಮಾಡುವುದರಲ್ಲಿ ನಿರತನಾಗಿ ಯಾವಾಗಲೂ ಮಹಾತ್ಮನಾದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತಿದ್ದನು.
ಸದಾ ಹಿ ತಸ್ಯ ಸ್ಪರ್ಧಾಽಽಸೀದರ್ಜುನೇನ ವಿಶಾಂಪತೇ |
ಅರ್ಜುನಸ್ಯ ಚ ಕರ್ಣೇನ ಯತೋ ದೃಷ್ಟೋ ಬಭೂವ ಸಃ ॥23.1॥
ಎಲೈ ರಾಜನೇ, ಅರ್ಜುನನು ಕರ್ಣನನ್ನು ನೋಡಿದ ದಿವಸದಿಂದಲೂ ಅರ್ಜುನನಿಗೆ ಕರ್ಣನ ಮೇಲೆಯೂ, ಕರ್ಣನಿಗೆ ಅರ್ಜುನನ ಮೇಲೆಯೂ ಸ್ಪರ್ಧೆ ಇದ್ದಿತು.
ಏತದ್ಗುಹ್ಯಂ ಮಹಾರಾಜ ಸೂರ್ಯಸ್ಯಾಸೀನ್ನ ಸಂಶಯಃ |

ಯಃ ಸೂರ್ಯಸಂಭವಃ ಕರ್ಣಃ ಕುಂತ್ಯಾಂ ಸೂತಕುಲೇ ತಥಾ ॥23.2॥
ಮಹಾರಾಜನೇ, ಸೂರ್ಯನಿಂದ ಕುಂತಿಯಲ್ಲಿ ಜನಿಸಿದ ಕರ್ಣನು ಸೂತಕುಲದಲ್ಲಿ ಅಭಿವೃದ್ಧಿಯನ್ನು ಹೊಂದಿದ ಈ ವಿಷಯವು ಸೂರ್ಯನು ತಿಳಿದಿದ್ದ ರಹಸ್ಯ ಎಂಬ ವಿಷಯದಲ್ಲಿ ಸಂಶಯವಿಲ್ಲ.
ತಂ ತು ಕುಂಡಲಿನಂ ದೃಷ್ಟ್ವಾ ವರ್ಮಣಾ ಚ ಸಮನ್ವಿತಮ್ |
ಅವಧ್ಯಂ ಸಮರೇ ಮತ್ವಾ ಪರ್ಯತಪ್ಯದ್ ಯುಧಿಷ್ಠಿರಃ ॥24॥
ಕರ್ಣನು ಕವಚ ಕುಂಡಲಗಳಿಂದ ಯುಕ್ತವಾಗಿರುವುದನ್ನು ನೋಡಿ ಅವನು ಯುದ್ಧದಲ್ಲಿ ಅವಧ್ಯನೆಂದು ತಿಳಿದು ಯುಧಿಷ್ಠಿರನು ಪರಿತಾಪವನ್ನು ಪಟ್ಟನು.
ಯದಾ ಚ ಕರ್ಣೋ ರಾಜೇಂದ್ರ ಭಾನುಮಂತಂ ದಿವಾಕರಮ್ |
ಸ್ತೌತಿ ಮಧ್ಯಂದಿನೇ ಪ್ರಾಪ್ತೇ ಪ್ರಾಂಜಲಿಃ ಸಲಿಲೇ ಸ್ಥಿತಃ ॥25॥
ತತ್ರೈನಮುಪತಿಷ್ಠಂತಿ ಬ್ರಾಹ್ಮಣಾ ಧನಹೇತವೇ |
ನಾದೇಯಂ ತಸ್ಯ ತತ್ಕಾಲೇ ಕಿಂಚಿದಸ್ತಿ ದ್ವಿಜಾತಿಷು ॥26॥
ರಾಜೇಂದ್ರನೇ, ಕರ್ಣನು ಮಧ್ಯಾಹ್ನವು ಪ್ರಾಪ್ತವಾದಾಗ ನೀರಿನಲ್ಲಿ ನಿಂತು ಕೈಗಳನ್ನು ಮುಗಿದು ಸೂರ್ಯನನ್ನು ಪ್ರಾರ್ಥಿಸುವಾಗ ಬ್ರಾಹ್ಮಣರು ಧನವನ್ನು ಸ್ವೀಕರಿಸುವ ದೃಷ್ಟಿಯಿಂದ ಅವನ ಬಳಿಗೆ ಬರುತ್ತಾರೆ. ಆ ಕಾಲದಲ್ಲಿ ಬ್ರಾಹ್ಮಣರಿಗೆ ಕೊಡಲಾರದ ವಸ್ತುವು ಅವನ ಬಳಿ ಯಾವುದೂ ಇರುವುದಿಲ್ಲ.
ಏತಸ್ಮಿನ್ನೇವ ಕಾಲೇ ತು ಪಾಂಡವಾನಾಂ ಹಿತೇ ರತಃ |
ತಮಿಂದ್ರೋ ಬ್ರಾಹ್ಮಣೋ ಭೂತ್ವಾ ಭಿಕ್ಷಾಂ ದೇಹಿತ್ಯುಪಸ್ಥಿತಃ |
ಸ್ವಾಗತಂ ಚೇತಿ ರಾಧೇಯಸ್ತಮಥ ಪ್ರತ್ಯಭಾಷತ ॥27॥
ಇದೇ ಕಾಲದಲ್ಲಿ ಪಾಂಡವರ ಹಿತದಲ್ಲಿ ರತನಾದ ಇಂದ್ರನು ಬ್ರಾಹ್ಮಣವೇಷವನ್ನು ಧರಿಸಿ ಭಿಕ್ಷೆಯನ್ನು ನೀಡು ಎಂದು ಕರ್ಣನ ಬಳಿಗೆ ಬಂದನು. ಕರ್ಣನು ಅವನಿಗೆ ಸ್ವಾಗತವನ್ನು ಕೋರಿ ಅನಂತರ ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರಿಶತತಮೋಽಧ್ಯಾಯಃ ॥
॥ ಇತಿ ಕುಂಡಲಾಹರಣಪರ್ವಣಿ ರಾಧಾಯಾಃ ಕರ್ಣಪ್ರಾಪ್ತಿರ್ನಾಮ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರನೆಯ
ಅಧ್ಯಾಯ ಮುಗಿಯಿತು.
* * * *
ಮುನ್ನೂರ ಒಂದನೆಯ ಅಧ್ಯಾಯ
ಬ್ರಾಹ್ಮಣ ರೂಪದ ಇಂದ್ರನಿಂದ ಕವಚಕುಂಡಲಗಳ ಯಾಚನೆ. ಶಕ್ತ್ಯಾಯುಧವನ್ನು ಕೊಟ್ಟು ಕವಚ-ಕುಂಡಲಗಳ ಸ್ವೀಕಾರ.
ವೈಶಂಪಾಯನಃ
ದೇವರಾಜಮನುಪ್ರಾಪ್ತಂ ಬ್ರಾಹ್ಮಣಚ್ಛದ್ಮನಾ ವೃಷಃ |
ದೃಷ್ಟ್ವಾ ಸ್ವಾಗತಮಿತ್ಯಾಹ ನ ಬುಬೋಧಾಸ್ಯ ಮಾನಸಮ್ ॥1॥
ವೈಶಂಪಾಯನ ಬ್ರಾಹ್ಮಣ ವೇಷದಿಂದ ಬಂದ ದೇವರಾಜನಾದ ಇಂದ್ರನನ್ನು ನೋಡಿ ಕರ್ಣನು ಅವನಿಗೆ ಸ್ವಾಗತವನ್ನು ಹೇಳಿದನು. ಇಂದ್ರನ ಅಭಿಪ್ರಾಯವನ್ನು ಕರ್ಣನು ತಿಳಿದಿರಲಿಲ್ಲ.
ಹಿರಣ್ಯಕಂಠೀಃ ಪ್ರಮದಾ ಗ್ರಾಮಾನ್ ವಾ ಬಹುಗೋಕುಲಾನ್ |
ಕಿಂ ದದಾನೀತಿ ತಂ ವಿಪ್ರಮುವಾಚಾಧಿರಥಿಸ್ತತಃ ॥2॥
ಸುವರ್ಣಾಭರಣಗಳನ್ನು ಧರಿಸಿದ ವನಿತೆಯರನ್ನು, ಗ್ರಾಮಗಳನ್ನು, ಅನೇಕ ಗೋ ಸಮೂಹಗಳನ್ನು ಇವುಗಳಲ್ಲಿ ನಿನಗೆ ಏನನ್ನು ಕೊಡಲಿ ಎಂದು ಕರ್ಣನು ಆಗ ಆ ಬ್ರಾಹ್ಮಣನನ್ನು ಕೇಳಿದನು.
ಬ್ರಾಹ್ಮಣಃ
ಹಿರಣ್ಯಕಂಠ್ಯಃ ಪ್ರಮದಾ ಯಚ್ಚಾನ್ಯದ್ ವಿದ್ಯತೇ ವಸು |
ನಾಹಂ ದತ್ತಮಭೀಪ್ಸಾಮಿ ತದರ್ಥಿಭ್ಯಃ ಪ್ರದೀಯತಾಮ್ ॥3॥
ಬ್ರಾಹ್ಮಣ ಹಿರಣ್ಯಾಭರಣಗಳನ್ನು ಧರಿಸಿದ ವನಿತೆಯರನ್ನಾಗಲೀ ಅಥವಾ ನಿನ್ನ ಬಳಿ ಇರುವ ಬೇರೆ ಧನಗಳನ್ನಾಗಲೀ ನಾನು ಬಯಸುವುದಿಲ್ಲ. ಅದನ್ನು ಅಪೇಕ್ಷೆ ಇದ್ದವರಿಗೆ ಕೊಡು.
ಯದೇತತ್ ಸಹಜಂ ವರ್ಮ ಕುಂಡಲೇ ಚ ತವಾನಘ |
ಏತದುತ್ಕೃತ್ಯ ಮೇ ದೇಹಿ ಯದಿ ಸತ್ಯವ್ರತೋ ಭವಾನ್ ॥4॥
ಎಲೈ ಅನಘನೇ, ನಿನ್ನ ಜೊತೆಯಲ್ಲಿಯೇ ಜನಿಸಿರುವ ಈ ಕವಚ ಕುಂಡಲಗಳನ್ನು ನೀನು ಸತ್ಯವ್ರತನಾದರೆ ನಿನ್ನ ದೇಹದಿಂದ ಕತ್ತರಿಸಿ ಕೊಡು.
ಏತದಿಚ್ಛಾಮ್ಯಹಂ ಕ್ಷಿಪ್ರಂ ತ್ವಯಾ ದತ್ತಂ ಪರಂತಪ |
ಏಷ ಮೇ ಸರ್ವಲಾಭಾನಾಂ ಲಾಭಃ ಪರಮಕೋ ಮತಃ ॥5॥
ಎಲೈ ಪರಂತಪನೇ, ಇದನ್ನು ನೀನು ಶೀಘ್ರವಾಗಿ ಕೊಡಬೇಕೆಂದು ಬಯಸುತ್ತೇನೆ. ನನಗೆ ಎಲ್ಲಾ ಲಾಭಗಳಿಗಿಂತಲೂ ಇದು ಶ್ರೇಷ್ಠವಾದ ಲಾಭ.
ಕರ್ಣಃ
ಅವನಿಂ ಪ್ರಮದಾ ಗಾಶ್ಚ ನಿರ್ವಾಪಂ ಬಹುವಾರ್ಷಿಕೀಮ್ |

ತತ್ತೇ ವಿಪ್ರ ಪ್ರದಾಸ್ಯಾಮಿ ನ ತು ವರ್ಮ ಸಕುಂಡಲಮ್ ॥6॥
ಕರ್ಣ ನಿನಗೆ ವನಿತೆಯರನ್ನಾಗಲೀ, ಗೋವುಗಳನ್ನಾಗಲೀ, ಒಮ್ಮೆ ಬೀಜವನ್ನು ಬಿತ್ತಿದರೆ ಇನ್ನೊಮ್ಮೆ ಬೀಜವನ್ನು ಬಿತ್ತದೆ ಅನೇಕ ವರ್ಷಗಳ ಕಾಲ ಫಲಗಳನ್ನು ಕೊಡುವ ಭೂಮಿಯನ್ನಾಗಲೀ ಕೊಡುವೆನು. ಆದರೆ ಕವಚ ಮತ್ತು ಕರ್ಣಕುಂಡಲಗಳನ್ನು ಕೊಡುವುದಿಲ್ಲ.
ವೈಶಂಪಾಯನಃ
ಏವಂ ಬಹುವಿಧೈರ್ವಾಕ್ಯೈರ್ಯಾಚ್ಯಮಾನಃ ಸ ತು ದ್ವಿಜಃ |
ಕರ್ಣೇನ ಭರತಶ್ರೇಷ್ಠ ನಾನ್ಯಂ ವರಮಯಾಚತ ॥7॥
ವೈಶಂಪಾಯನ ಎಲೈ ಭರತಶ್ರೇಷ್ಠನೇ, ಹೀಗೆ ಕರ್ಣನು ಆ ಬ್ರಾಹ್ಮಣನನ್ನು ಅನೇಕ ವಿಧವಾದ ವಾಕ್ಯಗಳಿಂದ ಬೇಡಿದರೂ ಆ ಬ್ರಾಹ್ಮಣನು ಬೇರೆಯ ವರವನ್ನು ಕೇಳಲಿಲ್ಲ.
ಸಾಂತ್ವಿತಶ್ಚ ಯಥಾಶಕ್ತಿ ಪೂಜಿತಶ್ಚ ಯಥಾವಿಧಿ |
ನ ಚಾನ್ಯಂ ಸ ದ್ವಿಜಶ್ರೇಷ್ಠಃ ಕಾಮಯಾಮಾಸ ವೈ ವರಮ್ ॥8॥
ಆ ದ್ವಿಜಶ್ರೇಷ್ಠನನ್ನು ಶಕ್ತಿಯಿದ್ದಷ್ಟು ಸಮಾಧಾನಗೊಳಿಸಿದರೂ, ವಿಧಿಗೆ ಅನುಸಾರವಾಗಿ ಪೂಜಿಸಿದರೂ ಅವನು ಬೇರೆ ವರವನ್ನು ಬಯಸಲಿಲ್ಲ.
ಯದಾ ನಾನ್ಯಂ ಪ್ರವೃಣುತೇ ವರಂ ವೈ ದ್ವಿಜಸತ್ತಮಃ |
ತದೈನಮಬ್ರುವೀತ್ ಭೂಯೋ ರಾಧೇಯಃ ಪ್ರಹಸನ್ನಿವ ॥9॥
ಆ ದ್ವಿಜಶ್ರೇಷ್ಠನು ಬೇರೆ ವರವನ್ನು ಕೇಳದಿದ್ದಾಗ ಪುನಃ ಕರ್ಣನು ನಗುತ್ತಾ ಅವನನ್ನು ಕುರಿತು ಮಾತನಾಡಿದನು.
ತದೈನಮಬ್ರುವೀತ್ ಕರ್ಣಃ ಸಹಜಂ ಕವಚಂ ಹಿ ಮೇ |
ಸಹಜಂ ವರ್ಮ ಮೇ ವಿಪ್ರ ಕುಂಡಲೇ ಚಾಮೃತೋದ್ಭವೇ |
ತೇನಾವಧ್ಯೋಽಸ್ಮಿ ಲೋಕೇಷು ತತೋ ನೈತಜ್ಜಹಾಮ್ಯಹಮ್ ॥10॥
ಆಗ ಕರ್ಣನು ಅವನನ್ನು ಕುರಿತು ಬ್ರಾಹ್ಮಣನೇ, ಈ ಕವಚಕುಂಡಲಗಳು ನನ್ನ ಜೊತೆಯಲ್ಲೇ ಹುಟ್ಟಿದವುಗಳು (ನಾನು ಜನಿಸುವಾಗಲೇ ನನ್ನ ಶರೀರದಲ್ಲಿ ಇದ್ದವುಗಳು). ಇವು ಅಮೃತದಿಂದ ಜನಿಸಿದ ಪದಾರ್ಥಗಳು. ಇವುಗಳ ಬಲದಿಂದ ನಾನು ಲೋಕಗಳಲ್ಲಿ ಅವಧ್ಯನಾಗಿದ್ದೇನೆ. ಆದ್ದರಿಂದ ನಾನು ಇವುಗಳನ್ನು ಕೊಡುವುದಿಲ್ಲ.
ವಿಶಾಲಂ ಪೃಥಿವೀರಾಜ್ಯಂ ಕ್ಷೇಮಂ ನಿಹತಕಂಟಕಮ್ |
ಪ್ರತಿಗೃಹ್ಣೀಷ್ವ ಮತ್ತಸ್ತ್ವಂ ಸಾಧು ಬ್ರಾಹ್ಮಣಪುಂಗವ ॥11॥
ಎಲೈ ಬ್ರಾಹ್ಮಣಶ್ರೇಷ್ಠನೇ, ವಿಶಾಲವಾದ ಕ್ಷೇಮದಿಂದ ಕೂಡಿದ, ಶತ್ರುರಹಿತವಾದ ಪೃಥಿವೀರಾಜ್ಯವನ್ನು ನನ್ನಿಂದ ಚೆನ್ನಾಗಿ ಸ್ವೀಕರಿಸು.

ಕುಂಡಲಾಭ್ಯಾಂ ವಿಮುಕ್ತೋಽಹಂ ವರ್ಮಣಾ ಸಹಜೇನ ಚ |
ಗಮನೀಯೋ ಭವಿಷ್ಯಾಮಿ ಶತ್ರೂಣಾಂ ದ್ವಿಜಸತ್ತಮ ॥12॥
ಎಲೈ ದ್ವಿಜಶ್ರೇಷ್ಠನೇ, ಈ ಸಹಜವಾದ ಕವಚ ಮತ್ತು ಕುಂಡಲಗಳಿಲ್ಲದಿದ್ದರೆ ನಾನು ಶತ್ರುಗಳಿಗೆ ವಶನಾಗುವೆನು.
ವೈಶಂಪಾಯನಃ
ಯದಾಽನ್ಯಂ ನ ವರಂ ವವ್ರೇ ಭಗವಾನ್ ಪಾಕಶಾಸನಃ |
ತತಃ ಪ್ರಹಸ್ಯ ಕರ್ಣಸ್ತಂ ಪುನರಿತ್ಯಬ್ರವೀದ್ ವಚಃ ॥13॥
ವೈಶಂಪಾಯನ ಪೂಜ್ಯನಾದ ಇಂದ್ರನು ಇನ್ನೊಂದು ವರವನ್ನು ಕೇಳದಿದ್ದಾಗ ಕರ್ಣನು ನಕ್ಕು ಪುನಃ ಅವನನ್ನು ಕುರಿತು ಹೀಗೆ ಮಾತನಾಡಿದನು.
ವಿದಿತೋ ದೇವದೇವೇಶ ಪ್ರಾಗೇವಾಸಿ ಮಮ ಪ್ರಭೋ |
ನ ತು ನ್ಯಾಯ್ಯಂ ಮಯಾ ದಾತುಂ ತವ ಶಕ್ರ ವೃಥಾ ವರಮ್ ॥14॥
ದೇವದೇವೇಶನಾದ ಇಂದ್ರನೇ, ಪ್ರಭುವೇ, ನಾನು ಮೊದಲೇ ನೀನು ಯಾರೆಂದು ತಿಳಿದಿದ್ದೇನೆ. ಆದರೂ ನಿನಗೆ ವರವನ್ನು ಕೊಟ್ಟು ಅದನ್ನು ವ್ಯರ್ಥಮಾಡುವುದು ನನಗೆ ಉಚಿತವಲ್ಲ.
ತ್ವ ಹಿಂ ದೇವೇಶ್ವರಃ ಸಾಕ್ಷಾತ್ ತ್ವಯಾ ದೇಯೋ ವರೋ ಮಮ |
ಅನ್ಯೇಷಾಂ ಚೈವ ಭೂತಾನಾಮೀಶ್ವರೋ ಹ್ಯಸಿ ಭೂತಕೃತ್ ॥15॥
ನೀನು ದೇವೇಶ್ವರನಾದ ಇಂದ್ರ. ನೀನೇ ನನಗೆ ವರವನ್ನು ಕೊಡಬೇಕಾದವನು. ಎಲ್ಲ ಪ್ರಾಣಿಗಳನ್ನೂ ಸೃಷ್ಟಿಸುವ ನೀನು ಬೇರೆ ಎಲ್ಲರಿಗೂ ಸಹ ಒಡೆಯನಾಗಿದ್ದೀಯೆ.
ಯದಿ ದಾಸ್ಯಾಮಿ ತೇ ದೇವ ಕುಂಡಲೇ ಕವಚಂ ತಥಾ |
ವಧ್ಯತಾಮುಪಯಾಸ್ಯಾಮಿ ತ್ವಂ ಚ ಶಕ್ರಾವಹಾಸ್ಯತಾಮ್ ॥16॥
ಎಲೈ ದೇವೇಂದ್ರನೇ, ಕವಚ ಕುಂಡಲಗಳನ್ನು ನಿನಗೆ ಕೊಟ್ಟರೆ ನಾನು ವಧ್ಯನಾಗುವೆನು ಮತ್ತು ನೀನು ಹಾಸ್ಯಕ್ಕೆ ವಿಷಯನಾಗುವಿ.
ತಸ್ಮಾದ್ ವಿನಿಮಯಂ ಕೃತ್ವಾ ಕುಂಡಲೇ ವರ್ಮ ಚೋತ್ತಮಮ್ |
ಹರಸ್ವ ಶಕ್ರ ಕಾಮಂ ಮೇ ನ ದದ್ಯಾಮಹಮನ್ಯಥಾ ॥17॥
ಆದ್ದರಿಂದ ವಿನಿಮಯವನ್ನು ಮಾಡಿಕೊಂಡು (ಅದಲು-ಬದಲು ಮಾಡಿಕೊಂಡು) ಕುಂಡಲಗಳನ್ನೂ ಮತ್ತು ಶ್ರೇಷ್ಠವಾದ ಕವಚವನ್ನೂ ತೆಗೆದುಕೋ. ಇದು ನನ್ನ ಆಸೆ. ನಾನು ಬೇರೆ ರೀತಿಯಲ್ಲಿ ಕೊಡುವುದಿಲ್ಲ.
ಶಕ್ರಃ

ವಿದಿತೋಽಹಂ ರವೇಃ ಪೂರ್ವಮಾಯಾನ್ ದೇವಸ್ತವಾಂತಿಕಮ್ |
ತೇನ ತೇ ಸರ್ವಮಾಖ್ಯಾತಮೇವಮೇತನ್ನ ಸಂಶಯಃ ॥18॥
ಇಂದ್ರ ನಾನು ನಿನ್ನ ಬಳಿಗೆ ಬರುವುದಕ್ಕಿಂತ ಮೊದಲೇ ಸೂರ್ಯನು ಈ ವಿಷಯವನ್ನು ತಿಳಿದಿದ್ದಾನೆ. ಅವನು ನಿನಗೆ ಎಲ್ಲವನ್ನೂ ಹೇಳಿದ್ದಾನೆ. ಇದು ಹೀಗೆಯೇ ಆಗಿರಬೇಕು. ಇದರಲ್ಲಿ ಸಂಶಯವಿಲ್ಲ.
ಕಾಮಮಸ್ತು ತಥಾ ತಾತ ತವ ಕರ್ಣ ಯಥೇಚ್ಛಸಿ |
ವರ್ಜಯಿತ್ವಾ ತು ಮೇ ವಜ್ರಂ ಪ್ರವೃಣೀಷ್ವ ಯಥೇಚ್ಛಸಿ ॥19॥
ಪ್ರೀತಿಪಾತ್ರನಾದ ಕರ್ಣನೇ, ನಿನ್ನ ಇಷ್ಟದಂತೆಯೇ ಆಗಲಿ. ನನ್ನ ವಜ್ರಾಯುಧವನ್ನು ಬಿಟ್ಟು ಏನು ಬಯಸುತ್ತೀಯೋ ಅದನ್ನು ಕೇಳು.
ವೈಶಂಪಾಯನಃ
ತತಃ ಕರ್ಣಃ ಪ್ರಹೃಷ್ಟಸ್ತು ಉಪಸಂಗಮ್ಯ ವಾಸವಮ್ |
ಅಮೋಘಾಂ ಶಕ್ತಿಮಭ್ಯೇತ್ಯ ವವ್ರೇ ಸಂಪೂರ್ಣಮಾನಸಃ ॥20॥
ವೈಶಂಪಾಯನ ಆಗ ಕರ್ಣನು ಸಂತೋಷಗೊಂಡು ಸಂಪೂರ್ಣ ಮನಸ್ಸುಳ್ಳವನಾಗಿ ಇಂದ್ರನನ್ನು ಸಮೀಪಿಸಿ ಅಮೋಘವಾದ ಶಕ್ತ್ಯಾಯುಧವನ್ನು ಬೇಡಿದನು.
ವರ್ಮಣಾ ಕುಂಡಲಾಭ್ಯಾಂ ಚ ಶಕ್ತಿಂ ಮೇ ದೇಹಿ ವಾಸವ |
ಅಮೋಘಾಂ ಶತ್ರುಸಂಘಾನಾಂ ಘಾತಿನೀಂ ಪೃತನಾಮುಖೇ ॥21॥
ಇಂದ್ರನೇ, ನನ್ನ ಕವಚ ಕುಂಡಲಗಳಿಗೆ ಬದಲಾಗಿ ರಣರಂಗದಲ್ಲಿ ಶತ್ರುಸಮೂಹವನ್ನು ನಾಶಮಾಡುವ ಅಮೋಘವಾದ ಶಕ್ತ್ಯಾಯುಧವನ್ನು ನನಗೆ ಕೊಡು.
ವೈಶಂಪಾಯನಃ
ತತಃ ಸಂಚಿಂತ್ಯ ಮನಸಾ ಮುಹೂರ್ತಮಿವ ವಾಸವಃ |
ಶಕ್ತ್ಯರ್ಥಂ ಪೃಥಿವೀಪಾಲ ಕರ್ಣಂ ವಾಕ್ಯಮಥಾಬ್ರವೀತ್ ॥22॥
ವೈಶಂಪಾಯನ ಎಲೈ ಪೃಥಿವೀಪಾಲನೇ, ಅನಂತರ ಇಂದ್ರನು ಒಂದು ಮುಹೂರ್ತದಷ್ಟು ಸಮಯ ಮನಸ್ಸಿನಲ್ಲಿ ಯೋಚಿಸಿ ಶಕ್ತಿಯ ವಿಷಯದಲ್ಲಿ ಕರ್ಣನನ್ನು ಕುರಿತು ಹೀಗೆ ಮಾತನಾಡಿದನು.
ಕುಂಡಲೇ ಮೇ ಪ್ರಯಚ್ಛಸ್ವ ವರ್ಮ ಚೈವ ಶರೀರಜಮ್ |
ಗೃಹಾಣ ಕರ್ಣ ಶಕ್ತಿಂ ತ್ವಮನೇನ ಸಮಯೇನ ಚ ॥23॥
ಕರ್ಣನೇ, ನೀನು ನಿನ್ನ ಶರೀರದಲ್ಲಿ ಸಹಜವಾದ ಕವಚ-ಕುಂಡಲಗಳನ್ನು ನನಗೆ ಕೊಡು. ಶಕ್ತಿಯನ್ನು ಈ ನಿಬಂಧನೆಯ ಮೇಲೆ ಸ್ವೀಕರಿಸು.
ಅಮೋಘಾ ಹಂತಿ ಶತಶಃ ಶತ್ರೂನ್ ಮಮ ಕರಚ್ಯುತಾ |
ಪುನಶ್ಚ ಪಾಣಿಮಭ್ಯೇತಿ ಮಮ ದೈತ್ಯಾನ್ ವಿನಿಘ್ನತಃ ॥24॥
ಈ ಶಕ್ತಿಯು ಅಮೋಘವಾದುದು. ನಾನು ದೈತ್ಯರನ್ನು ಸಂಹರಿಸುವಾಗ ನನ್ನ ಹಸ್ತದಿಂದ ಬಿಡುಗಡೆ ಹೊಂದಿದ ಈ ಅಸ್ತ್ರವು ನೂರಾರು ಸಂಖ್ಯೆಯಲ್ಲಿ ಶತ್ರುಗಳಾದ ದೈತ್ಯರನ್ನು ಕೊಂದು ಪುನಃ ನನ್ನ ಕೈಗೇ ಬಂದುಸೇರುತ್ತದೆ.
ಸೇಯಂ ತವ ಕರಪ್ರಾಪ್ತಾ ಹತ್ವೈಕಂ ರಿಪುಮೂರ್ಜಿತಮ್ |
ಗರ್ಜಂತಂ ಪ್ರತಪಂತಂ ಚ ಮಾಮೇವೈಷ್ಯತಿ ಸೂತಜ ॥25॥
ಎಲೈ ಸೂತಪುತ್ರನೇ, ಅಂತಹ ಈ ಶಕ್ತಿಯು ನಿನ್ನ ಕೈಯನ್ನು ಸೇರಿದ ಮೇಲೆ ಅಭಿವೃದ್ಧನಾದ, ಗರ್ಜಿಸುತಿತರುವ, ಪ್ರತಾಪಶಾಲಿಯಾದ ಒಬ್ಬ ಶತ್ರುವನ್ನು ಸಂಹರಿಸಿ ಪುನಃ ನನ್ನನ್ನೇ ಬಂದು ಸೇರುತ್ತದೆ.
ಕರ್ಣಃ
ಏಕಮೇವಾಹಮಿಚ್ಛಾಮಿ ರಿಪುಂ ಹಂತುಂ ಮಹಾಹವೇ |
ಗರ್ಜಂತಂ ಪ್ರತಪಂತಂ ಚ ಯತೋ ಮಮ ಭಯಂ ಭವೇತ್ ॥26॥
ಕರ್ಣ ನಾನು ದೊಡ್ಡ ಯುದ್ಧದಲ್ಲಿ ಗರ್ಜಿಸುತ್ತಿರುವ ಪ್ರತಾಪಶಾಲಿಯಾದ ನನಗೆ ಭಯವನ್ನು ಉಂಟುಮಾಡುವ ಒಬ್ಬನೇ ಶತ್ರುವನ್ನು ಇದರಿಂದ ಕೊಲ್ಲಲು ಬಯಸುತ್ತೇನೆ.
ಇಂದ್ರಃ
ಏಕಂ ಹನಿಷ್ಯಸಿ ರಿಪುಂ ಗರ್ಜಂತಂ ಬಲಿನಂ ರಣೇ |
ತ್ವಂ ತು ಯಂ ಸ್ಪರ್ಧಸೇ ಹ್ಯೇಕಂ ರಕ್ಷ್ಯತೇ ಸ ಮಹಾತ್ಮನಾ ॥27॥
ಯಮಾಹುರ್ವೇದವಿದ್ವಾಂಸೋ ವರಾಹಮಪರಾಜಿತಮ್ |
ನಾರಾಯಣಮಚಿಂತ್ಯಂ ಚ ತೇನ ಕೃಷ್ಣೇನ ರಕ್ಷ್ಯತೇ ॥28॥
ಇಂದ್ರ ಈ ಶಕ್ತಿಯು ಯುದ್ಧದಲ್ಲಿ ಗರ್ಜಿಸುತ್ತಿರುವ ಬಲಿಷ್ಠನಾದ ಒಬ್ಬ ಶತ್ರುವನ್ನು ಕೊಲ್ಲುವುದು. ಆದರೆ ನೀನು ಯಾರ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತಿದ್ದಿಯೋ ಅವನು ಯಾವನನ್ನು ವೇದವಿದ್ವಾಂಸರು ಅಪರಾಜಿತನಾದ ವರಾಹನೆಂದೂ, ಅಚಿಂತ್ಯ ಮಹಿಮೆಯುಳ್ಳ ನಾರಾಯಣನೆಂದೂ ಕರೆಯುತ್ತಾರೆಯೋ ಅಂತಹ ಮಹಾತ್ಮನಾದ ಕೃಷ್ಣನಿಂದ ರಕ್ಷಿಸಲ್ಪಡುತ್ತಾನೆ.
ಕರ್ಣಃ
ಏವಮಪ್ಯಸ್ತು ಭಗವನ್ನೇಕವೀರವಧೇ ಮಮ |
ಅಮೋಘಾಂ ದೇಹಿ ಮೇ ಶಕ್ತಿಂ ಯಥಾ ಹನ್ಯಾಂ ಪ್ರತಾಪಿನಮ್ ॥29॥
ಕರ್ಣ ಪೂಜ್ಯನೇ, ಹಾಗೆಯೇ ಆಗಲಿ. ಒಬ್ಬ ವೀರನನ್ನು ವಧೆ ಮಾಡುವುದಕ್ಕಾಗಿಯೇ ಅಮೋಘವಾದ ಶಕ್ತಿಯನ್ನು ಕೊಡು. ನಾನು

ಅದರಿಂದ ಪ್ರತಾಪಶಾಲಿಯನ್ನೇ ಕೊಲ್ಲುವೆನು.
ಏವಮೇತದ್ಯಥಾಽಽತ್ಥ ತ್ವಂ ದಾನವಾನಾಂ ನಿಷೂದನ |
ವಧಿಷ್ಯಾಮಿ ರಣೇ ಶತ್ರುಂ ಯೋ ಮೇ ಸ್ಥಾತಾ ಪುರಃಸರಃ ॥30॥
ದಾನವಸೂದನನೇ, ನೀನು ಹೇಳಿದಂತೆಯೇ ಎಲ್ಲವೂ ಸರಿ. ನಾನು ಯುದ್ಧದಲ್ಲಿ ನನ್ನ ಮುಂದೆ ನಿಲ್ಲುವ ಶತ್ರುವನ್ನೇ ಅದರಿಂದ ಕೊಲ್ಲುವೆನು.
ಉತ್ಕೃತ್ಯ ತು ಪ್ರದಾಸ್ಯಾಮಿ ಕುಂಡಲೇ ಕವಚಂ ಚ ತೇ |
ನಿಕೃತ್ತೇಷು ತು ಗಾತ್ರೇಷು ನ ಮೇ ಬೀಭತ್ಸತಾ ಭವೇತ್ ॥31॥
ನಾನು ನನ್ನ ಶರೀರದಿಂದ ಶಸ್ತ್ರದಿಂದ ಕಿತ್ತು ಕವಚ-ಕುಂಡಲಗಳನ್ನು ನಿನಗೆ ಕೊಡುವೆನು. ಶಸ್ತ್ರದ ವ್ರಣದಿಂದ ನನ್ನ ಶರೀರವು ಬೀಭತ್ಸವಾಗಬಾರದು.
ಇಂದ್ರಃ
ನ ತೇ ಬೀಭತ್ಸತಾ ಕರ್ಣ ಭವಿಷ್ಯತಿ ಕಥಂಚನ |
ನ ವ್ರಣಾನಿಚ ಗಾತ್ರೇಷು ಯಸ್ತ್ವಂ ನಾನೃತಮಿಚ್ಛಸಿ ॥32॥
ಇಂದ್ರ ಕರ್ಣನೇ, ಅನೃತವನ್ನು ಬಯಸದಿರುವ ನಿನಗೆ ಶರೀರದಲ್ಲಿ ಬೀಭತ್ಸತೆಯು ಉಂಟಾಗುವುದಿಲ್ಲ. ದೇಹದಲ್ಲಿ ಗಾಯಗಳೂ ಉಂಟಾಗುವುದಿಲ್ಲ.
ಯಾದೃಶಸ್ತೇ ಪಿತುರ್ವರ್ಣಸ್ತೇಜಶ್ಚ ವದತಾಂ ವರ |
ತಾದೃಶೇನೈವ ವರ್ಣೇನ ತ್ವಂ ಕರ್ಣ ಭವಿತಾ ಪುನಃ ॥33॥
ಮಾತನಾಡುವವರಲ್ಲಿ ಶ್ರೇಷ್ಠನಾದವನೇ, ನಿನ್ನ ತಂದೆಯ ವರ್ಣ ಮತ್ತು ತೇಜಸ್ಸುಗಳು ಹೇಗಿವೆಯೋ ನೀನೂ ಸಹ ಪುನಃ ಅಂತಹ ವರ್ಣ ಮತ್ತು ತೇಜಸ್ಸಿನಿಂದ ಕೂಡಿರುವನಾಗುವಿ.
ವಿದ್ಯಮಾನೇಷು ಶಸ್ತ್ರೇಷು ಯದ್ಯಮೋಘಾಮಸಂಶಯೇ |
ಪ್ರಮತ್ತೋ ಮೋಕ್ಷ್ಯಸೇ ಚಾಪಿ ತ್ವಯ್ಯೇವೈಷಾ ಪತಿಷ್ಯತಿ ॥34॥
ನಿನ್ನ ಬಳಿಯಲ್ಲಿ ಬೇರೆ ಶಸ್ತ್ರಗಳು ಇರುವಾಗ ಪ್ರಾಣಸಂಶಯವಿಲ್ಲದಿದ್ದಾಗ ಈ ಅಮೋಘವಾದ ಶಕ್ತಿಯನ್ನು ಪ್ರಯೋಗ ಮಾಡಿದರೆ ಅದು ನಿನ್ನ ಮೇಲೆಯೇ ಎರಗುವುದು.
ಕರ್ಣಃ
ಸಂಶಯಂ ಪರಮಂ ಪ್ರಾಪ್ಯ ವಿಮೋಕ್ಷ್ಯೇ ವಾಸವೀಮಿಮಾಮ್ |
ಯಥಾ ಮಾಮಾತ್ಥ ಶಕ್ರ ತ್ವಂ ಸತ್ಯಮೇತದ್ ಬ್ರವೀಮಿ ತೇ ॥35॥
ಕರ್ಣ ಇಂದ್ರನೇ, ನೀನು ಹೇಳಿದಂತೆ ಪ್ರಾಣಸಂಶಯವುಂಟಾದಾಗಲೇ ಈ ನಿನ್ನ ಶಕ್ತ್ಯಾಯುಧವನ್ನು ಪ್ರಯೋಗಿಸುವೆನು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ವೈಶಂಪಾಯನಃ
ತತಃ ಶಕ್ತಿಂ ಪ್ರಜ್ವಲಿತಾಂ ಪ್ರತಿಗೃಹ್ಯ ವಿಶಾಂಪತೇ |
ಶಸ್ತ್ರಂ ಗೃಹೀತ್ವಾ ನಿಶಿತಂ ಸರ್ವಗಾತ್ರಾಣ್ಯಕೃಂತತ ॥36॥
ವೈಶಂಪಾಯನ ಎಲೈ ಜನಮೇಜಯರಾಜನೇ, ಅನಂತರ ಇಂದ್ರನಿಂದ ಪ್ರಜ್ವಲಿತವಾದ ಶಕ್ತಿಯನ್ನು ಸ್ವೀಕರಿಸಿ ಒಂದು ಹರಿತವಾದ ಶಸ್ತ್ರವನ್ನು ತೆಗೆದುಕೊಂಡು ತನ್ನ ಶರೀರವನ್ನು ಎಲ್ಲ ಕಡೆಗಳಲ್ಲಿಯೂ ಕತ್ತರಿಸಿದನು.
ತತೋ ದೇವಾ ಮಾನವಾ ದಾನವಾಶ್ಚ
ನಿಕೃಂತಂತಂ ಕರ್ಣಮಾತ್ಮಾನಮೇವಮ್ |
ದೃಷ್ಟ್ವಾ ಸರ್ವೇ ಸಿಂಹನಾದಾನ್ ಪ್ರಣೇದುಃ
ನಹ್ಯಸ್ಯಾಸೀನ್ ಮುಖಜೋ ವೈ ವಿಕಾರಃ ॥37॥
ಆಗ ಶಸ್ತ್ರದಿಂದ (ಸಿಪ್ಪೆಯನ್ನು ತೆಗೆಯುವಂತೆ) ಕತ್ತರಿಸಿ ಕವಚವನ್ನು ತೆಗೆಯುತ್ತಿದ್ದ ಕರ್ಣನನ್ನು ನೋಡಿ ಎಲ್ಲ ದೇವತೆಗಳೂ, ಮಾನವರೂ, ದಾನವರೆಲ್ಲರೂ ಸಿಂಹನಾದವನ್ನು ಮಾಡಿ ದೊಡ್ಡ ಗರ್ಜನೆಯನ್ನು ಮಾಡಿದರು. ಆದರೆ ಕರ್ಣನ ಮುಖದಲ್ಲಿ ಯಾವ ವಿಕಾರವೂ ಇರಲಿಲ್ಲ.
ತತೋ ದಿವ್ಯಾ ದುಂದುಭಯಃ ಪ್ರಣೇದುಃ
ಪಪಾತೋಚ್ಚೈಃ ಪುಷ್ಪವರ್ಷಂ ಚ ದಿವ್ಯಮ್ |
ದೃಷ್ಟ್ವಾ ಕರ್ಣಂ ಶಸ್ತ್ರಸಂಕೃತ್ತಗಾತ್ರಂ
ಮುಹುಶ್ಚಾಪಿ ಸ್ಮಯಮಾನಂ ನೃವೀರಮ್ ॥38॥
ಆಗ ಕರ್ಣನು ತನ್ನ ದೇಹವನ್ನು ಶಸ್ತ್ರದಿಂದ ಕತ್ತರಿಸಿಕೊಳ್ಳುತ್ತಿದ್ದರೂ ನಗುತ್ತಿರುವುದನ್ನು ನೋಡಿ ದೇವತೆಗಳು ದುಂದುಭಿಗಳನ್ನು ಮೊಳಗಿಸಿದರು. ಆ ನರಶ್ರೇಷ್ಠನ ಮೇಲೆ ದಿವ್ಯವಾದ ಪುಷ್ಪವೃಷ್ಟಿಯು ಉಂಟಾಯಿತು.
ತತಶ್ಛಿತ್ತ್ವಾ ಕವಚಂ ದಿವ್ಯಮಂಗಾತ್
ತಥೈವಾರ್ದ್ರಂ ಪ್ರದದೌ ವಾಸವಾಯ |
ತಥೋತ್ಕೃತ್ಯ ಪ್ರದದೌ ಕುಂಡಲೇ ಚ
ಕರ್ಣಾತ್ತಸ್ಮಾತ್ ಕರ್ಮಣಾ ತೇನ ಕರ್ಣಃ ॥39॥
ಅನಂತರ ಆ ದಿವ್ಯವಾದ ಕವಚವನ್ನು ತನ್ನ ದೇಹದಿಂದ ಕತ್ತರಿಸಿ ರಕ್ತದಿಂದ ಆರ್ದ್ರವಾದ ಅದನ್ನು ಇಂದ್ರನಿಗೆ ನೀಡಿದನು. ಹಾಗೆಯೇ

ಕಿವಿಗಳನ್ನು ಕತ್ತರಿಸಿ ಕುಂಡಲಗಳನ್ನು ಕಿವಿಗಳಿಂದ ತೆಗೆದು ನೀಡಿದನು. ಈ ಕರ್ಮದಿಂದಲೂ ಅವನು ಕರ್ಣ ಎನಿಸಿಕೊಂಡನು.
ತತೋ ದೇವೋ ಮುದಿತೋ ವಜ್ರಪಾಣಿ
ದೃಷ್ಟ್ವಾ ಕರ್ಣಂ ಶಸ್ತ್ರನಿಕೃತ್ತಗಾತ್ರಮ್ ।
ತತಃ ಶಕ್ರಃ ಪ್ರಹಸನ್ ವಂಚಯಿತ್ವಾ
ಕರ್ಣಂ ಲೋಕೇ ಯಶಸಾ ಯೋಜಯಿತ್ವಾ ॥40॥
ಕೃತಂ ಕಾರ್ಯಂ ಪಾಂಡವಾನಾಂ ಹಿ ಮೇನೇ
ತತಃ ಪಶ್ಚಾದ್ ದಿವಮೇವೋತ್ಪಪಾತ ॥41॥
ಆಗ ವಜ್ರಪಾಣಿಯಾದ ಇಂದ್ರದೇವನು ಕರ್ಣನನ್ನು ವಂಚಿಸಿ ನಗುತ್ತಾ ಶಸ್ತ್ರದಿಂದ ಕತ್ತರಿಸಲ್ಪಟ್ಟ ಶರೀರವುಳ್ಳ ಅವನನ್ನು ನೋಡಿ ಸಂತೋಷಗೊಂಡವನಾಗಿ ಲೋಕದಲ್ಲಿ ಅವನನ್ನು ಅಪಾರವಾದ ಯಶಸ್ಸಿನಿಂದ ಕೂಡಿದವನನ್ನಾಗಿ ಮಾಡಿ ಪಾಂಡವರ ಕಾರ್ಯವನ್ನು ಮಾಡಿದ್ದಾಯಿತು ಎಂದು ತಿಳಿದನು. ಅನಂತರ ಸ್ವರ್ಗಲೋಕಕ್ಕೆ ಹಾರಿ ಹೋದನು.
ಶ್ರುತ್ವಾ ಕರ್ಣಂ ಮುಷಿತಂ ಧಾರ್ತರಾಷ್ಟ್ರಾ
ದೀನಾಃ ಸರ್ವೇ ಭಗ್ನದರ್ಪಾ ಇವಾಸನ್ ।
ತಾಂ ಚಾವಸ್ಥಾಂ ಗಮಿತಂ ಸೂತಪುತ್ರಂ
ಶ್ರುತ್ವಾ ಪಾರ್ಥಾ ಜಹೃಷುಃ ಕಾನನಸ್ಥಾಃ ॥42॥
ಕರ್ಣನು ಕವಚ ಕುಂಡಲಗಳನ್ನು ಕಳೆದುಕೊಂಡ ವಾರ್ತೆಯನ್ನು ಕೇಳಿ ಧೃತರಾಷ್ಟ್ರ ಪುತ್ರರೆಲ್ಲರೂ ದೀನರೂ, ಭಗ್ನದರ್ಪರೂ ಆದರು. ಸೂತಪುತ್ರನಾದ ಕರ್ಣನಿಗೆ ಉಂಟಾದ ಆ ಅವಸ್ಥೆಯನ್ನು ಕೇಳಿ ಕಾಡಿನಲ್ಲಿದ್ದ ಪಾಂಡವರು ಸಂತೋಷಪಟ್ಟರು.
ಜನಮೇಜಯಃ
ಕ್ವಸ್ಥಾ ವೀರಾಃ ಪಾಂಡವಾಸ್ತೇ ಬಭೂವುಃ
ಕುತಶ್ಚೈವ ಶ್ರುತವಂತಃ ಪ್ರಿಯಂ ತತ್ ।
ಕಿಂ ವಾಕಾರ್ಷುರ್ದ್ವಾದಶೇಽಬ್ದೇ ವ್ಯತೀತೇ
ತನ್ಮೇ ಸರ್ವಂ ಭಗವಾನ್ ವ್ಯಾಕರೋತ್ ॥43॥
ಜನಮೇಜಯ ವೀರರಾದ ಪಾಂಡವರು ಆಗ ಎಲ್ಲಿದ್ದರು? ಮತ್ತು ಯಾರಿಂದ ತಮಗೆ ಪ್ರಿಯವಾದ ಈ ವಾರ್ತೆಯನ್ನು ಕೇಳಿದರು? ಹನ್ನೆರಡು ವರ್ಷಗಳು ಕಳೆದ ಮೇಲೆ ಏನನ್ನು ಮಾಡಿದರು? ಇದೆಲ್ಲವನ್ನೂ ಪೂಜ್ಯರಾದ ನೀವು ನನಗೆ ಹೇಳಬೇಕು.
ವೈಶಂಪಾಯನಃ
ಲಬ್ಧ್ವಾ ಕೃಷ್ಣಾಂ ಸೈಂಧವಂ ದ್ರಾವಯಿತ್ವಾ
ದ್ವಿಜೈಃ ಸಾರ್ಧಂ ಕಾಮ್ಯಕಾದಾಶ್ರಮಾತ್ ತೇ ।
ಮಾರ್ಕಂಡೇಯಾಚ್ಛ್ರುತವಂತಃ ಪುರಾಣಂ
ದೇವರ್ಷೀಣಾಂ ಚರಿತಂ ವಿಸ್ತರೇಣ ॥44॥
ಪ್ರತ್ಯಾಜಗ್ಮುಃ ಸರಥಾಃ ಸಾನುಯಾತ್ರಾಃ
ಸರ್ವೈಃ ಸಾರ್ಧಂ ಸೂತಪೌರೋಗವೈಸ್ತೇ ।
ತತಃ ಪುಣ್ಯಂ ದ್ವೈತವನಂ ನೃವೀರಾ
ನಿಸ್ತೀರ್ಯೋಗ್ರಂ ವನವಾಸಂ ಸಮಗ್ರಮ್ ॥45॥
ವೈಶಂಪಾಯನ ಸೈಂಧವನನ್ನು ಓಡಿಸಿ, ದ್ರೌಪದಿಯನ್ನು ಪಡೆದು, ಮಾರ್ಕಂಡೇಯರಿಂದ ಪುಣ್ಯಕಥೆಗಳನ್ನು, ದೇವತೆಗಳ ಮತ್ತು ಋಷಿಗಳ ಚರಿತ್ರೆಯನ್ನು ವಿಸ್ತಾರವಾಗಿ ಕೇಳಿ ಅವರು ಕಾಮ್ಯಕವನದ ಆಶ್ರಮದಿಂದ ರಥಗಳು, ತಮ್ಮ ಪರಿವಾರ, ಸೂತಪೌರೋಗವರು ಇವರೆಲ್ಲರ ಸಹಿತವಾಗಿ ಸಮಗ್ರವಾದ ವನವಾಸವನ್ನು ಪೂರೈಸಿ ದ್ವೈತವನಕ್ಕೆ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಏಕತ್ರಿಶತತಮೋಽಧ್ಯಾಯಃ ॥
॥ ಇತಿ ಕುಂಡಲಾಹರಣಪರ್ವಣಿ ಇಂದ್ರೇಣ ಕುಂಡಲಾಹರಣಂ ನಾಮ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರ ಒಂದನೆಯ
ಅಧ್ಯಾಯ ಮುಗಿಯಿತು.
॥ ಕುಂಡಲಾಹರಣಪರ್ವ ಸಮಾಪ್ತಮ್ ॥
* * * *
ಆರಣೇಯಪರ್ವ
ಮಹಾಭಾರತ ತಾತ್ಪರ್ಯನಿರ್ಣಯ -22 ಅಧ್ಯಾಯ
ಪಾರ್ಥಾ ವಿಮುಚ್ಯೈವ ಸುಯೋಧನಂ
ತಂ ವನೇ ವಸಂತೋ ಮುದಿತಾಃ ಸದೈವ ।
ಸಹಾರಣೀಭಾಂಡಮಥೋ ಮೃಗೇಣ
ಹೃತಂ ದ್ವಿಜಸ್ಯಾಽಶು ನಿಶಮ್ಯ ಚಾನ್ವಯುಃ ॥418॥
ಪಾಂಡವರು ದುರ್ಯೋಧನನನ್ನು ಬಿಡುಗಡೆ ಮಾಡಿ ವನದಲ್ಲಿ ಸುಖಿಗಳಾಗಿ ವಾಸ ಮಾಡಿದರು. ಒಬ್ಬ ಬ್ರಾಹ್ಮಣನ ಅರಣಿ ಮತ್ತು ಪಾತ್ರೆಯನ್ನು ಜಿಂಕೆ ಅಪಹರಿಸಿದ್ದನ್ನು ಕೇಳಿ ಅದನ್ನು ಬೆನ್ನಟ್ಟಿದರು.
ತಸ್ಮಿನ್ನದೃಶ್ಯೇ ತೃಷಿತಾ ಏಕೈಕಮುದಕಾರ್ಥಿನಃ ।

ಯಯುರ್ಯುಧಿಷ್ಠಿರಮೃತೇ ಸುಪ್ತಾಸ್ತೇ ಧರ್ಮಮಾಯಯಾ |
ಅದೃಶ್ಯೇನೈವ ಧರ್ಮೇಣ ವಾರಿತಾ ವಾರಿಪಾಯಿನಃ ॥419॥
ಕ್ಷತ್ರಧರ್ಮಸ್ಯ ರಕ್ಷಾರ್ಥಂ ನ ತತ್ಪ್ರಶ್ನಾನ್ ವಿದಾಂ ವರಾಃ |
ವ್ಯಾಚಕ್ರುಃ ಶಕ್ತಿಮಂತೋऽಪಿ ಪಾನೀಯಾರ್ಥಮರಿಂದಮಾಃ ॥420॥
ಜಿಂಕೆ ಅದೃಶ್ಯವಾದಾಗ ಪಾಂಡವರು ಬಾಯಾರಿದ್ದರು. ಯುಧಿಷ್ಠಿರ ಹೊರತು ಎಲ್ಲರೂ ಒಬ್ಬೊಬ್ಬರಾಗಿ ಜಲಾರ್ಥಿಗಳಾಗಿ ಹೋದರು. ಯಮನ ಮಾಯೆಯಿಂದ ಸುಪ್ತರಾದರು. ಏಕೆಂದರೆ ಯಮ ಅದೃಶ್ಯನಾಗಿ ನಿಂತು ತಡೆದರೂ ಅವರು ನೀರು ಕುಡಿದರು. ಜ್ಞಾನಿಶ್ರೇಷ್ಠರೂ ಶತ್ರುನಾಶಕರೂ ಆದ ಅವರು ಯಮನ ಪ್ರಶ್ನೆಗಳನ್ನು ಉತ್ತರಿಸಲು ಶಕ್ತಿ ಉಳ್ಳವರಾಗಿದ್ದರೂ ನೀರಿಗಾಗಿ ಆ ಪ್ರಶ್ನೆಗಳನ್ನು ಉತ್ತರಿಸಲಿಲ್ಲ. ಇದು ತಮ್ಮ ಕ್ಷಾತ್ರಧರ್ಮರಕ್ಷಣೆಗಾಗಿ.
ನ ವಿಪ್ರಾಣಾಂ ಚ ಧರ್ಮೋऽಯಂ ವಿದ್ಯಾಯಾ ಉಪಜೀವನಮ್ |
ಕ್ಷತ್ರಿಯಾಣಾಂ ತು ಕಿಮುತ ಪ್ರಸಭಂ ತೇನ ತೇ ಪಪುಃ ॥421॥
ಜೀವನಕ್ಕೆ ವಿದ್ಯೆಯನ್ನು ಅವಲಂಬಿಸುವುದು ಬ್ರಾಹ್ಮಣರಿಗೂ ಧರ್ಮವಲ್ಲದಿರುವಾಗ ಕ್ಷತ್ರಿಯರಿಗೆ ಇನ್ನೇನು ಹೇಳಬೇಕು? ಅದರಿಂದ ಪಾಂಡವರು ಬಲಾತ್ಕಾರದಿಂದ ನೀರನ್ನು ಕುಡಿದರು.
ದೇವಾ ಅಪಿ ಮನುಷ್ಯೇಷು ಜಾತಾಃ ಸುಬಲಿನೋऽಪಿ ಹಿ |
ಮಾನುಷೇಣೈವ ಭಾವೇನ ಯುಕ್ತಾಃ ಸ್ಯುಃ ಕೇಶವಾದೃತೇ ॥422॥
ದೇವತೆಗಳೂ ಕೂಡ ಮನುಷ್ಯರಲ್ಲಿ ಹುಟ್ಟಿದಾಗ ಹೆಚ್ಚು ಬಲಉಳ್ಳವರಾದರೂ ಮನುಷ್ಯ ಸ್ವಭಾವವನ್ನೇ ತೋರಬೇಕು. ಈ ನಿಯಮಕ್ಕೆ ಶ್ರೀಹರಿಯೊಬ್ಬನೇ ಹೊರತಾಗಿದ್ದಾನೆ.
ಕಾರ್ಯೇಷ್ವೇಷಾಂ ಕ್ರಮೇಣೈವ ವ್ಯಕ್ತಿಮಾಯಾಂತಿ ಸದ್ಗುಣಾಃ |
ಅತೋ ಭೀಮಾರ್ಜುನೌ ಧರ್ಮಾದತ್ಯುತ್ತಮಬಲಾವಪಿ |
ದೇವಮಾಯಾಂ ಸಮಾಶ್ರಿತ್ಯ ಧರ್ಮೇಣ ಸ್ವಾಪಿತೌ ಕ್ಷಣಾತ್ ॥423॥
ಪ್ರಸಂಗ ಬಂದಾಗ ಮಾತ್ರ ದೇವತೆಗಳ ಸದ್ಗುಣಗಳು ಕ್ರಮದಿಂದ ಅಭಿವ್ಯಕ್ತಿ ಹೊಂದುತ್ತವೆ. ಅದರಿಂದ ಭೀಮಾರ್ಜುನರು ಯಮನಿಗಿಂತ ಅತ್ಯುತ್ತಮ ಬಲ ಉಳ್ಳವರಾಗಿದ್ದರೂ ದೇವಮಾಯೆಯ ಬಲವನ್ನಾಶ್ರಯಿಸಿ ಯಮನಿಂದ ಕ್ಷಣದಲ್ಲಿ ನಿದ್ರೆಗೊಳಿಸಲ್ಪಟ್ಟರು.
ಮುಹೂರ್ತಮೇವ ಸಾ ಮಾಯಾ ತಯೋರಾಚ್ಛಾದನೇ ಕ್ಷಮಾ |
ತತಃ ಪ್ರಬುದ್ಧಯೋರ್ಧರ್ಮೋ ನೈವ ಶಕ್ತಿಶತಾಂಶಭಾಕ್ ॥424॥
ಆ ದೇವಮಾಯೆ ಒಂದು ಮುಹೂರ್ತಕಾಲ ಮಾತ್ರ ಭೀಮಾರ್ಜುನರನ್ನು ಆವರಿಸಲು ಶಕ್ತವಾಗಿರುತ್ತದೆ. ಅನಂತರ ಅವರು ಎಚ್ಚೆತ್ತರೆ ಅವರ ಶಕ್ತಿಯಲ್ಲಿ ನೂರನೆ ಒಂದಂಶದಷ್ಟೂ ಉಳ್ಳವನಲ್ಲ, ಯಮ.
ಉಕ್ತಂ ಪದ್ಮಪುರಾಣೇ ಚ ತದೇತತ್ ಸರ್ವಮಂಜಸಾ |
ತಸ್ಮಾನ್ನಾಶಕ್ತಿರನಯೋಃ ಸಂಭಾವ್ಯಾಃ ಭೀಮಪಾರ್ಥಯೋಃ ॥425॥
ಇದೆಲ್ಲವೂ ಪಾದ್ಮಪುರಾಣದಲ್ಲಿ ಚೆನ್ನಾಗಿ ಉಕ್ತವಾಗಿದೆ. ಅದರಿಂದ ಭೀಮಾರ್ಜುನರಿಗೆ ಅಶಕ್ತಿಯನ್ನು ಶಂಕಿಸಬಾರದು.
ಧರ್ಮಾತ್ಮಜೋऽಥಾऽಜಗಾಮೋದಕಾಂತಂ
ದೃಷ್ಟ್ವಾ ಭ್ರಾತೄಂಸ್ತತ್ರ ದುಃಖಾಭಿತಪ್ತಃ |
ಇಚ್ಛನ್ ಪಾತುಂ ವಾರಿ ಸಂವಾರಿತಶ್ಚ
ಪಿತ್ರಾ ಬಕಾಕಾರಮಿತೇನ ನಾಪಾತ್ ॥426॥
ಬಳಿಕ ಧರ್ಮರಾಜ ನೀರಿನ ಬಳಿಗೆ ಸೋದರರು ಮಲಗಿರುವುದನ್ನು ಕಂಡು ದುಃಖದಿಂದ ಸಂತಪ್ತನಾದ. ನೀರು ಕುಡಿಯಲು ಬಯಸಿದ. ಬಳಿಕ ಆಕಾರವನ್ನು ಧರಿಸಿದ್ದ ತಂದೆ ಯಮ ತಡೆದುದರಿಂದ ಕುಡಿಯಲಿಲ್ಲ.
ಅರ್ಥೇ ಭ್ರಾತೄಣಾಮೈಚ್ಛದಸೌ
ತದೀಪ್ರಶ್ನಪ್ರತಿವ್ಯಾಹರಣಂ ದಯಾಲುಃ |
ತತೋ ಧರ್ಮೋ ಯಕ್ಷತನುಃ ಸ ಭೂತ್ವಾ
ಪ್ರಶ್ನಾಂಶ್ಚಕ್ರೇ ವ್ಯಾಕರೋತ್ ತಾನ್ ಸ ಪಾರ್ಥಃ ॥427॥
ದಯಾಳುವಾದ ಧರ್ಮರಾಜ ಸೋದರರ ಸಲುವಾಗಿ ಯಮನ ಪ್ರಶ್ನೆಗಳಿಗೆ ಉತ್ತರಿಸಲು ಬಯಸಿದ. ಆಗ ಯಮ ಯಕ್ಷಶರೀರಿಯಾಗಿ ಪ್ರಶ್ನೆಗಳನ್ನು ಕೇಳಿದ. ಧರ್ಮರಾಜ ಅವುಗಳನ್ನು ಉತ್ತರಿಸಿದ.
ತತಸ್ತುಷ್ಟೋ ವರಮಸ್ಮೈ ದದೌ ಸ
ಏಕೋತ್ಥಾನಂ ಭ್ರಾತೃಮಧ್ಯೇ ಸ ವವ್ರೇ |
ಯದ್ಯೇಕಃ ಸ್ಯಾನ್ನಕುಲೋऽಸಿತ್ವತ್ಯಥಾऽಹ
ತುಷ್ಟೋ ಧರ್ಮಃ ಕಥಮೇತತ್ ಕೃತಂ ತೇ ॥428॥
ಅತಿಪ್ರೀತಿರ್ಭೀಮಸೇನೇ ತವಾಸ್ತಿ ಬಲೀ
ಚಾಸೌ ರಾಜ್ಯಹೇತುಸ್ತವ ಸ್ಯಾತ್|
ಇತ್ಯುಕ್ತ ಊಚೇ ಮಾದ್ರಿಪುತ್ರಂ ವಿಹಾಯ
ಕುಂತೀಪುತ್ರೋ ನ ಮಯೋತ್ಥಾಪನೀಯಃ ॥429॥
ಆಗ ಯಮ ಸಂತುಷ್ಟನಾಗಿ ಧರ್ಮರಾಜನಿಗೆ ನಿನ್ನ ತಮ್ಮಂದಿರಲ್ಲಿ ಯಾರಾದರೂ ಒಬ್ಬ ಮಾತ್ರ ಎದ್ದು ಬರುವನೆಂದು ವರ ನೀಡಿದ.

ಒಬ್ಬ ಏಳುವುದಾದರೆ ನಕುಲ ಏಳಲಿ ಎಂದ ಧರ್ಮರಾಜ. ಯಮ ಸಂತುಷ್ಟನಾಗಿ ಕೇಳಿದ. `ನೀನೇಕೆ ಹೀಗೆ ಮಾಡಿದೆ? ನಿನಗೆ ಅತ್ಯಂತ ಪ್ರೀತಿ ಭೀಮನಲ್ಲಿ ಇದೆ. ಬಲಿಷ್ಠನಾದ ಅವನೇ ನಿನಗೆ ರಾಜ್ಯ ಲಾಭಕ್ಕೆ ಕಾರಣನಾಗುವನು' ಹೀಗೆ ಯಮ ಕೇಳಿದಾಗ ಧರ್ಮರಾಜನೆಂದ, `ಮಾದ್ರಿ ಪುತ್ರನನ್ನು ಬಿಟ್ಟು ಕುಂತೀಪುತ್ರನನ್ನು ನಾನು ಎಬ್ಬಿಸುವುದು ಉಚಿತವಲ್ಲ'.

ಸ ಏವಮುಕ್ತೋ ನಿತರಾಂ ಪ್ರೀಯಮಾಣ

ಉತ್ಥಾಪಯಾಮಾಸ ಸ ತಾನ್ ಸಮಸ್ತಾನ್ |

ಯಥೇಷ್ಟರೂಪಪ್ರಾಪ್ತಿಮೇಷಾಂ ಪುನಶ್ಚ

ಸ್ವಕಾಮತೋ ನಿಜರೂಪಾಪ್ತಿಮಾದಾತ್ ॥430॥

ಧರ್ಮರಾಜ ಹೀಗೆ ಹೇಳಿದಾಗ ಬಹಳ ಸಂತುಷ್ಟನಾಗಿ ಎಲ್ಲ ಪಾಂಡವರನ್ನೂ ಎಬ್ಬಿಸಿದ. ಅವರಿಗೆ ತಾವು ಬಯಸಿದ ರೂಪ ಪ್ರಾಪ್ತಿ ವರವನ್ನೂ ನೀಡಿದ. ಸ್ವೇಚ್ಛೆಯಿಂದ ನಿಜರೂಪ ಪ್ರಾಪ್ತಿಯ ವರವನ್ನೂ ನೀಡಿದ.

ಅಜ್ಞಾತವಾಸೇಽಜ್ಞಾತತಾಂ ಸರ್ವದೈವ ದದೌ

ತೇಷಾಂ ಪ್ರೀತ ಏವಾಽನೃಶಂಸ್ಯಾತ್ |

ಏವಂ ಕ್ರೀಡಾನ್ ಪುತ್ರ ಇತ್ಯಾತ್ಮನೈವ

ಯಶೋಧರ್ಮಾವಾತ್ಮನೋ ವರ್ದ್ಧಯನ್ ಸಃ ॥431॥

ಯುಧಿಷ್ಠಿರನ ದಯಾಧರ್ಮದಿಂದ ಸಂತುಷ್ಟನಾದ ಯಮ ಹೀಗೆ ಮಗನೆಂದು ತನ್ನೊಡನೆಯೆ ತಾನು ಕ್ರೀಡಿಸುತ್ತಾ, ಪಾಂಡವರಿಗೆ ಅಜ್ಞಾತವಾಸಕಾಲದಲ್ಲಿ ಸದಾ ಅಜ್ಞಾತರಾಗಿರುವಂತೆ ವರನೀಡಿದ.

ಯುಧಿಷ್ಠಿರಾತ್ಮನಸ್ತಸ್ಯ ಯಶೋಧರ್ಮವಿವೃದ್ಧಯೇ |

ಕೃತ್ವಾಽರಣ್ಯಪಹಾರಾದಿ ಪುನರ್ದತ್ವಾ ಚ ತತ್ ಸ್ವಯಮ್ |

ದಾತುಂ ವಿಪ್ರಾಯ ತದ್ಧಸ್ತೇ ಯಯೌ ಧರ್ಮೋ ದಿವಂ ಪುನಃ ॥432॥

ಯುಧಿಷ್ಠಿರರೂಪದಲ್ಲಿದ್ದ ತನ್ನ ಯಶಸ್ಸು ಪುಣ್ಯಗಳ ವೃದ್ಧಿಗಾಗಿ ಅರಣಿಯ ಅಪಹಾರಾದಿಗಳನ್ನು ತಾನೇ ಮಾಡಿ, ಪುನಃ ತಾನೇ ಅದನ್ನು ಬ್ರಾಹ್ಮಣನಿಗೆ ಕೊಡುವುದಕ್ಕಾಗಿ ಯುಧಿಷ್ಠಿರನ ಕೈಯಲ್ಲಿ ಕೊಟ್ಟು ಪುನಃ ಯಮ ಸ್ವರ್ಗಕ್ಕೆ ತೆರಳಿದ.

ತತೋ ರಾಜಾ ಭೀಮಸೇನಾರ್ಜುನೌ ಚ

ಸಾರ್ದ್ಧಂ ಯಮಾಭ್ಯಾಮರಣೀಂ ಪ್ರದಾಯ |

ಮುದಾ ಯುತಾಃ ಕೃಷ್ಣಯಾ ಸಾರ್ದ್ಧಮೇವ

ಸಂತುಷ್ಟುವುಃ ಕೃಷ್ಣಮನಂತಮಚ್ಯುತಮ್ ॥433॥

ಬಳಿಕ ರಾಜಾ ಯುಧಿಷ್ಠಿರ ಮತ್ತು ಭೀಮಾರ್ಜುನರು ನಕುಲ ಸಹದೇವರೊಂದಿಗೆ ಬ್ರಾಹ್ಮಣನಿಗೆ ಅರಣಿಯನ್ನು ಕೊಟ್ಟು ಆನಂದಯುಕ್ತರಾಗಿ ದ್ರೌಪದಿಯೊಂದಿಗೆ ಅನಂತ ಅಚ್ಯುತನೆನಿಸಿದ ಶ್ರೀಕೃಷ್ಣನನ್ನು ಚೆನ್ನಾಗಿ ಸ್ತುತಿಸಿದರು.

* * * *

ಮುನ್ನೂರ ಎರಡನೆಯ ಅಧ್ಯಾಯ

ಯುಧಿಷ್ಠಿರಾದಿಗಳಿಂದ ದ್ವೈತವನಕ್ಕೆ ಆಗಮನ.

ಮೃಗದಿಂದ ಬ್ರಾಹ್ಮಣನ ಅರಣಿಯ ಅಪಹರಣ.

ಪಾಂಡವರ ಅನುಧಾವನ ಮತ್ತು ವಟಮೂಲದಲ್ಲಿ ಉಪವೇಶನ.

ಜನಮೇಜಯಃ

ಏವಂ ಹೃತಾಯಾಂ ಕೃಷ್ಣಾಯಾಂ ಪ್ರಾಪ್ಯ ಕ್ಲೇಶಮನುತ್ತಮಮ್ |

ಪ್ರತಿಪದ್ಯ ತತಃ ಕೃಷ್ಣಾಂ ಕಿಮಕುರ್ವತ ಪಾಂಡವಾಃ॥1॥

ಜನಮೇಜಯ ಹೀಗೆ ದ್ರೌಪದಿಯು ಅಪಹರಿಸಲ್ಪಟ್ಟಿರಲು ದೊಡ್ಡ ಕ್ಲೇಶವನ್ನು ಅನುಭವಿಸಿ ಪುನಃ ಅವಳನ್ನು ಪಡೆದು ಅನಂತರ ಪಾಂಡವರು ಏನು ಮಾಡಿದರು?

ವೈಶಂಪಾಯನಃ

ಏವಂ ಹೃತಾಯಾಂ ಕೃಷ್ಣಾಯಾಂ ಪ್ರಾಪ್ಯ ಕ್ಲೇಶಮನುತ್ತಮಮ್ |

ವಿಹಾಯ ಕಾಮ್ಯಕಂ ರಾಜಾ ಸಹ ಭ್ರಾತೃಭಿರಚ್ಯುತಃ ॥2॥

ಪುನರ್ದ್ವೈತವನಂ ರಮ್ಯಮಾಜಗಾಮ ಯುಧಿಷ್ಠಿರಃ |

ಸ್ವಾದುಮೂಲಫಲಂ ರಮ್ಯಂ ವಿಚಿತ್ರಬಹುಪಾದಪಮ್ ॥3॥

ವೈಶಂಪಾಯನ ಹೀಗೆ ದ್ರೌಪದಿಯು ಅಪಹರಿಸಲ್ಪಟ್ಟಾಗ ದೊಡ್ಡ ಕ್ಲೇಶವನ್ನು ಅನುಭವಿಸಿ ಅನಂತರ ರಾಜನಾದ ಯುಧಿಷ್ಠಿರನು ತನ್ನ ಗುಣಗಳಿಂದ ಚ್ಯುತನಾಗದೆ ಕಾಮ್ಯಕವನವನ್ನು ಬಿಟ್ಟು ಮಧುರವಾದ ಮೂಲಫಲಗಳನ್ನುಳ್ಳ ವಿಚಿತ್ರವಾದ ವೃಕ್ಷಗಳಿಂದ ಕೂಡಿದ ಮನೋಹರವಾದ ದ್ವೈತವನಕ್ಕೆ ಪುನಃ ಹಿಂದಿರುಗಿದನು.

ಅನುಭುಕ್ತಫಲಾಹಾರಾಃ ಸರ್ವ ಏವ ಮಿತಾಶನಾಃ |

ನ್ಯವಸನ್ ಪಾಂಡವಾಸ್ತತ್ರ ಕೃಷ್ಣಯಾ ಸಹ ಭಾರ್ಯಯಾ ॥4॥

ಪಾಂಡವರೆಲ್ಲರೂ ಫಲಾಹಾರವನ್ನು ಮಾಡುತ್ತಾ ಮಿತಭೋಜನರಾಗಿ ಪತ್ನಿಯಾದ ದ್ರೌಪದಿಯ ಜೊತೆಯಲ್ಲಿ ಅಲ್ಲಿ ವಾಸವನ್ನು ಮಾಡಿದರು.

ವಸನ್ ದ್ವೈತವನೇ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |

ಭೀಮಸೇನೋಽರ್ಜುನಶ್ಚೈವ ಮಾದ್ರೀಪುತ್ರೌ ಚ ಪಾಂಡವೌ ॥5॥
ಬ್ರಾಹ್ಮಣಾರ್ಥೇ ಪರಾಕ್ರಾಂತಾ ಧರ್ಮಾತ್ಮಾನೋ ಯತವ್ರತಾಃ।
ಕ್ಲೇಶಮಾರ್ಚ್ಛಂತ ವಿಪುಲಂ ಸುಖೋದರ್ಕಂ ಪರಂತಪಾಃ ॥6॥
ದ್ವೈತವನದಲ್ಲಿ ವಾಸಮಾಡುತ್ತಾ ರಾಜನಾದ ಕುಂತೀಪುತ್ರನಾದ ಯುಧಿಷ್ಠಿರನು ಭೀಮಸೇನನು, ಪಾಂಡುಪುತ್ರರಾದ ನಕುಲ-ಸಹದೇವರು ಬ್ರಾಹ್ಮಣರಿಗೆ ಉಪಕಾರವನ್ನು ಮಾಡುವ ಸಲುವಾಗಿ ಕಾರ್ಯಗಳನ್ನು ಮಾಡಿದರು. ಧರ್ಮಿಷ್ಠರೂ, ಸತ್ಯವ್ರತರೂ, ಪರಂತಪರೂ ಆದ ಅವರು ಸುಖಾಂತ್ಯವನ್ನು ಕಾಣುವ ವಿಪುಲವಾದ ಕ್ಲೇಶವನ್ನು ಹೊಂದಿದರು.
ತಸ್ಮಿನ್ ಪ್ರತಿವಸಂತಸ್ತೇ ಯತ್ ಪ್ರಾಪುಃ ಕುರುಸತ್ತಮಾಃ।
ವನೇ ಕ್ಲೇಶಂ ಸುಖೋದರ್ಕಂ ತತ್ ಪ್ರವಕ್ಷ್ಯಾಮಿ ತೇ ಶೃಣು ॥7॥
ಆ ದ್ವೈತವನದಲ್ಲಿ ವಾಸಮಾಡುತ್ತಾ ಕುರುಶ್ರೇಷ್ಠರಾದ ಅವರು ಸುಖಾಂತವಾದ ಯಾವ ಕ್ಲೇಶವನ್ನು ಅನುಭವಿಸಿದರೂ ಎಂದು ನಾನು ಹೇಳುವೆನು ಅದನ್ನು ಕೇಳು.
ಅರಣೀಸಹಿತಂ ಮಂಥಂ ಬ್ರಾಹ್ಮಣಸ್ಯ ತಪಸ್ವಿನಃ।
ಮೃಗಸ್ಯ ಘರ್ಷಮಾಣಸ್ಯ ವಿಷಾಣೇ ಸಮಸಜ್ಜತ ॥8॥
ತಪಸ್ವಿಯಾದ ಒಬ್ಬ ಬ್ರಾಹ್ಮಣನ ಅರಣೀ ಸಹಿತವಾದ ದಂಡವು ಅದಕ್ಕೆ ತನ್ನ ದೇಹವನ್ನು ಉಜ್ಜುತ್ತಿದ್ದ ಜಿಂಕೆಯ ಕೊಂಬಿನಲ್ಲಿ ಸಿಲುಕಿಕೊಂಡಿತು.
ತದಾದಾಯ ಗತೋ ರಾಜಂಸ್ತ್ವರಮಾಣೋ ಮಹಾಮೃಗಃ।
ಆಶ್ರಮಾಂತರಿತಃ ಶೀಘ್ರಂ ಪ್ಲವಮಾನೋ ಮಹಾಜವಃ ॥9॥
ಎಲೈ ರಾಜನೇ, ಬಹಳ ವೇಗವುಳ್ಳ ಆ ಮಹಾಮೃಗವು ಆ ಅರಣಿಮಂಥಗಳನ್ನು ತೆಗೆದುಕೊಂಡು ತ್ವರೆಯಿಂದ ಶೀಘ್ರವಾಗಿ ಓಡುತ್ತಾ ಇನ್ನೊಂದು ಆಶ್ರಮವನ್ನು ತಲುಪಿತು.
ಹ್ರಿಯಮಾಣಂ ತು ತಂ ದೃಷ್ಟ್ವಾ ಸ ವಿಪ್ರಃ ಕುರುಸತ್ತಮ।
ತ್ವರಿತೋಽಭ್ಯಾಗಮತ್ತತ್ರ ಅಗ್ನಿಹೋತ್ರಪರೀಪ್ಸಯಾ ॥10॥
ಎಲೈ ಕುರುಶ್ರೇಷ್ಠನೇ, ತನ್ನ ಅರಣೀದಂಡಗಳು ತೆಗೆದುಕೊಂಡು ಹೋಗಲ್ಪಡುತ್ತಿರುವುದನ್ನು ನೋಡಿದ ಆ ಬ್ರಾಹ್ಮಣನು ತನ್ನ ಅಗ್ನಿಹೋತ್ರವನ್ನು ರಕ್ಷಿಸಿಕೊಳ್ಳುವ ಸಲುವಾಗಿ ದ್ವೈತವನದಲ್ಲಿ ಪಾಂಡವರು ಇದ್ದ ಸ್ಥಳಕ್ಕೆ ಬಂದನು.
ಅಜಾತಶತ್ರುಮಾಸೀನಂ ಭ್ರಾತೃಭಿಃ ಸಹಿತಂ ವನೇ।
ಆಗಮ್ಯ ಬ್ರಾಹ್ಮಣಸ್ತೂರ್ಣಂ ಸಂತಪ್ತಶ್ಚೇದಮಬ್ರವೀತ್ ॥11॥
ತಮ್ಮಂದಿರ ಜೊತೆಯಲ್ಲಿ ಕಾಡಿನಲ್ಲಿ ಕುಳಿತಿದ್ದ ಅಜಾತಶತ್ರುವಾದ ಯುಧಿಷ್ಠಿರನನ್ನು ಬ್ರಾಹ್ಮಣನು ಶೀಘ್ರವಾಗಿ ತಲುಪಿ ಸಂತಾಪದಿಂದ ಹೀಗೆ ಮಾತನಾಡಿದನು.
ಅರಣೀಸಹಿತಂ ಮಂಥಂ ಸಮಾಸಕ್ತಂ ವನಸ್ಪತೌ।
ಮೃಗಸ್ಯ ಘರ್ಷಮಾಣಸ್ಯ ವಿಷಾಣೇ ಸಮಸಜ್ಜತ ॥12॥
ಅರಣೀಸಹಿತವಾದ ದಂಡವನ್ನು ನಾನು ಒಂದು ಮರಕ್ಕೆ ತೂಗುಹಾಕಿದ್ದೆನು. ಅದು ಆ ವೃಕ್ಷಕ್ಕೆ ತನ್ನ ಶರೀರವನ್ನು ಉಜ್ಜುವ ಒಂದು ಜಿಂಕೆಯ ಕೊಂಬಿನಲ್ಲಿ ಸಿಲುಕಿಕೊಂಡಿತು.
ತಮಾದಾಯ ಗತೋ ರಾಜಂಸ್ತ್ವರಮಾಣೋ ಮಹಾಮೃಗಃ।
ಆಶ್ರಮಾತ್ ತ್ವರಿತಃ ಶೀಘ್ರಂ ಪ್ಲವಮಾನೋ ಮಹಾಜವಃ ॥13॥
ಎಲೈ ರಾಜನೇ, ಆ ಮಹಾಮೃಗವು ಅದನ್ನು ತೆಗೆದುಕೊಂಡು ತ್ವರೆಮಾಡುತ್ತಾ ಈ ಆಶ್ರಮದಿಂದ ಮಹಾವೇಗವನ್ನು ಹೊಂದಿ ಹಾರುತ್ತಾ ಶೀಘ್ರವಾಗಿ ಹೊರಟು ಹೋಯಿತು.
ತಸ್ಯ ಗತ್ವಾ ಪದಂ ರಾಜನ್ನಾಸಾದ್ಯ ಚ ಮಹಾಮೃಗಮ್।
ಅಗ್ನಿಹೋತ್ರಂ ನ ಲುಪ್ಯೇತ ತದಾನಯತ ಪಾಂಡವಾಃ ॥14॥
ಪಾಂಡವರೇ, ಅದರ ಹಾದಿಯನ್ನು ಹಿಡಿದುಕೊಂಡು ಹೋಗಿ ಆ ಮಹಾಮೃಗವನ್ನು ತಲುಪಿ ಅರಣಿಮಂಥಗಳನ್ನು ಹಿಂದೆ ತನ್ನಿ. ನನ್ನ ಅಗ್ನಿಹೋತ್ರಕ್ಕೆ ಲೋಪ ಉಂಟಾಗಬಾರದು.
ಬ್ರಾಹ್ಮಣಸ್ಯ ವಚಃ ಶ್ರುತ್ವಾ ಸಂತಪ್ತೋಽಥ ಯುಧಿಷ್ಠಿರಃ।
ಧನುರಾದಾಯ ಕೌಂತೇಯಃ ಪ್ರಾದ್ರವದ್ ಭ್ರಾತೃಭಿಃ ಸಹ ॥15॥
ಬ್ರಾಹ್ಮಣನ ಮಾತನ್ನು ಕೇಳಿ ಸಂತಪ್ತನಾದ ಕುಂತೀಪುತ್ರನಾದ ಯುಧಿಷ್ಠಿರನು ಆಗ ಧನುಸ್ಸನ್ನು ತೆಗೆದುಕೊಂಡು ತಮ್ಮಂದಿರ ಜೊತೆಯಲ್ಲಿ ಧಾವಿಸಿದನು.
ಸನ್ನದ್ಧಧನ್ವಿನಃ ಸರ್ವೇ ಪ್ರಾದ್ರವನ್ ನರಪುಂಗವಾಃ।
ಬ್ರಾಹ್ಮಣಾರ್ಥೇ ಯತಂತಸ್ತೇ ಶೀಘ್ರಮನ್ವಗಮನ್ ಮೃಗಮ್ ॥16॥
ಆ ನರಶ್ರೇಷ್ಠರೆಲ್ಲರೂ ಸನ್ನದ್ಧರಾಗಿ ಧನುಸ್ಸುಗಳನ್ನು ಧರಿಸಿ ಧಾವಿಸಿದರು. ಬ್ರಾಹ್ಮಣರಿಗೆ ಉಪಕಾರವನ್ನು ಮಾಡಲು ಪ್ರಯತ್ನಪಡುವ ಅವರು ಶೀಘ್ರವಾಗಿ ಆ ಮೃಗವನ್ನು ಹಿಂಬಾಲಿಸಿದರು.
ಕರ್ಣಿನಾಲೀಕನಾರಾಚಾನುತ್ಸೃಜಂತೋ ಮಹಾರಥಾಃ।
ನಾವಿಧ್ಯನ್ ಪಾಂಡವಾಸ್ತತ್ರ ಪಶ್ಯಂತೋ ಮೃಗಮಂತಿಕಾತ್ ॥17॥
ಆ ಮಹಾರಥರು ಮೃಗವನ್ನು ಸಮೀಪದಲ್ಲಿಯೇ ನೋಡುತ್ತಾ ಕರ್ಣಿ, ನಾಲೀಕ, ನಾರಾಚ ಮೊದಲಾದ ಬಾಣ ವಿಶೇಷಗಳನ್ನು ಪ್ರಯೋಗಿಸಿದರು. ಆದರೆ ಪಾಂಡವರು ಆ ಮೃಗವನ್ನು ಹೊಡೆಯಲಿಲ್ಲ.

ತೇಷಾಂ ಪ್ರಯತಮಾನಾನಾಂ ನಾದೃಶ್ಯತ ಮಹಾಮೃಗಃ |
ಅಪಶ್ಯಂತೋ ಮೃಗಂ ಶ್ರಾಂತಾ ದುಃಖಂ ಪ್ರಾಪ್ತಾ ಮನಸ್ವಿನಃ ॥18॥
ಅವರು ಹಾಗೆ ಪ್ರಯತ್ನಪಡುತ್ತಿರುವಾಗ ಆ ಮಹಾಮೃಗವು ಅದೃಶ್ಯವಾಯಿತು. ಮೃಗವನ್ನು ಕಾಣದೆ ಧೈರ್ಯಶಾಲಿಗಳಾದ ಅವರು ದಣಿವಿನಿಂದಲೂ ಮತ್ತು ದುಃಖದಿಂದಲೂ ಕೂಡಿದವರಾದರು.
ಶೀತಲಚ್ಛಾಯಮಾಗಮ್ಯ ನ್ಯಗ್ರೋಧಂ ಗಹನೇ ವನೇ |
ಕ್ಷುತ್ಪಿಪಾಸಾಪರೀತಾಂಗಾಃ ಪಾಂಡವಾಃ ಸಮುಪಾವಿಶನ್ ॥19॥
ಕಾಡಿನಲ್ಲಿ ಒಂದು ವಟವೃಕ್ಷದ ತಂಪಾದ ನೆರಳನ್ನು ತಲುಪಿ ಪಾಂಡವರು ಹಸಿವು ಬಾಯಾರಿಕೆಗಳಿಂದ ಬಳಲಿದವರಾಗಿ ಅಲ್ಲಿ ಕುಳಿತುಕೊಂಡರು.
ತೇಷಾಂ ಸಮುಪವಿಷ್ಟಾನಾಂ ನಕುಲೋ ದುಃಖಿತಸ್ತದಾ |
ಅಬ್ರವೀದ್ ಭ್ರಾತರಂ ಶ್ರೇಷ್ಠಮಮರ್ಷಾತ್ ಕುರುನಂದನಮ್ ॥20॥
ಅವರು ಹಾಗೆ ಕುಳಿತಿರಲು ಆಗ ದುಃಖಗೊಂಡ ನಕುಲನು ಸಿಟ್ಟಿನಿಂದ ಕುರುನಂದನನಾದ ಹಿರಿಯ ಅಣ್ಣನನ್ನು ಕುರಿತು ಹೀಗೆ ಮಾತನಾಡಿದನು.
ನಾಸ್ಮಿನ್ ಕುಲೇ ಜಾತು ಮಮಜ್ಜ ಧರ್ಮೋ
ನ ಚಾಲಸ್ಯಾದರ್ಥಲೋಪೋ ಬಭೂವ |
ಅನುತ್ತರಾಃ ಸರ್ವವರ್ಣೇಷ್ವಭೂಮ
ಸಂಪ್ರಾಪ್ತಾಃ ಸ್ಮಃ ಸಂಶಯಂ ಕಿನ್ನು ರಾಜನ್ ॥21॥
ಈ ಕುಲದಲ್ಲಿ ಧರ್ಮವು ಎಂದೂ ಮುಳುಗಿಹೋಗಲಿಲ್ಲ ಮತ್ತು ಆಲಸ್ಯದಿಂದ ಅರ್ಥದ ಲೋಪವೂ ಉಂಟಾಗಲಿಲ್ಲ. ಎಲ್ಲ ವರ್ಣದವರಿಗಿಂತಲೂ ಶ್ರೇಷ್ಠರಾಗಿದ್ದವರಾಗಿ ಈಗ ನಾವು ಸಂಶಯವನ್ನು ಹೊಂದಿದವರಾಗಿದ್ದೇವೆ. ರಾಜನೇ, ಇದೇನು ಸ್ಥಿತಿ? (ವಾದಿರಾಜರು)
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ದ್ವ್ಯಧಿಕತ್ರಿಶತತಮೋಽಧ್ಯಾಯಃ ॥
॥ ಇತಿ ಆರಣೇಯಪರ್ವಣಿ ಮೃಗಾನ್ವೇಷಣಂ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರ ಎರಡನೆಯ ಅಧ್ಯಾಯ ಮುಗಿಯಿತು.
* * * *
ಮುನ್ನೂರ ಮೂರನೆಯ ಅಧ್ಯಾಯ
ಧರ್ಮರಾಜನ ಆದೇಶದಂತೆ ನಕುಲನಿಂದ ಸರೋವರ ದರ್ಶನ. ಯಕ್ಷನ ಆದೇಶವನ್ನು ತಿರಸ್ಕರಿಸಿ ನಕುಲ-ಸಹದೇವ ಅರ್ಜುನ-ಭೀಮರ ದೀರ್ಘನಿದ್ರಾಪ್ರಾಪ್ತಿ.
ಯುಧಿಷ್ಠಿರನಿಂದ ಸರೋವರ ಗಮನ.
ಯುಧಿಷ್ಠಿರಃ
ನಾಪದಾಮಸ್ತಿ ಮರ್ಯಾದಾ ನ ನಿಮಿತ್ತಂ ನ ಕಾರಣಮ್ |
ಧರ್ಮಸ್ತು ವಿಭಜತ್ಯರ್ಥಮುಭಯೋಃ ಪುಣ್ಯಪಾಪಯೋಃ ॥1॥
ಯುಧಿಷ್ಠಿರ ಆಪತ್ತುಗಳಿಗೆ ಒಂದು ಎಲ್ಲೆಯಾಗಲೀ, ನಿಮಿತ್ತಕಾರಣವಾಗಲೀ ಅಥವಾ ಉಪಾದಾನಕಾರಣವಾಗಲೀ ಇಲ್ಲ. ಪುಣ್ಯಪಾಪ ಕರ್ಮಗಳಿಂದ ಉಂಟಾದ ಧರ್ಮಾಧರ್ಮಗಳು ಅವೆರಡರ ಫಲಗಳನ್ನು ವಿಭಜಿಸುತ್ತವೆ. (ವಾದಿರಾಜರು).
ಭೀಮಃ
ಪ್ರಾತಿಕಾಮ್ಯೇನ ಯತ್ಕೃಷ್ಣಾಂ ಸಭಾಯಾಂ ಪ್ರೇಷ್ಯವತ್ ತದಾ |
ನ ಮಯಾ ನಿಹತಸ್ತತ್ರ ತೇನ ಪ್ರಾಪ್ತಾಃ ಸ್ಮ ಸಂಶಯಮ್ ॥2॥
ಭೀಮ ಪ್ರಾತಿಕಾಮಿಯು ದ್ರೌಪದಿಯನ್ನು ಸಭೆಯಲ್ಲಿ ದಾಸಿಯಂತೆ ಎಳೆದು ತಂದನು. ಅಲ್ಲಿ ಅವನನ್ನು ನಾನು ಕೊಲ್ಲಲಿಲ್ಲ. ಅದರಿಂದ ಇಂತಹ ಸಂಕಟಕ್ಕೆ ಸಿಲುಕಿದ್ದೇವೆ.
ಅರ್ಜುನಃ
ವಾಚಸ್ತೀಕ್ಷ್ಣಾಸ್ಥಿಭೇದಿನ್ಯಃ ಸೂತಪುತ್ರೇಣ ಭಾಷಿತಾಃ |
ಅತಿತೀವ್ರಾ ಮಯಾ ಕ್ಷಾಂತಾಸ್ತೇನ ಪ್ರಾಪ್ತಾಃ ಸ್ಮ ಸಂಶಯಮ್ ॥3॥
ಅರ್ಜುನ ಸೂತಪುತ್ರನಾದ ಕರ್ಣನು ಅಸ್ಥಿಯನ್ನು ಭೇದಿಸುವಂತಹ ತೀಕ್ಷ್ಣವಾದ ಮಾತುಗಳನ್ನು ಆಡಿದನು. ಅತಿತೀಕ್ಷ್ಣವಾದ ಆ ಮಾತುಗಳನ್ನು ನಾನು ಸಹಿಸಿದೆ. ಆದ್ದರಿಂದ ಇಂತಹ ಸಂಕಟವು ಪ್ರಾಪ್ತವಾಗಿದೆ.
ನಕುಲಃ
ಧಾರ್ತರಾಷ್ಟ್ರಾಃ ಕುತ್ಸಯಂತೋ ಯನ್ಮೇ ನ ನಿಹತಾಸ್ತದಾ |
ದ್ಯೂತಕಾಲೇ ಮಹಾರಾಜ ತೇನೇಮಾಮಾಪದಂ ಗತಾಃ ॥3.1॥
ನಕುಲ ಮಹಾರಾಜನೇ, ದ್ಯೂತಕಾಲದಲ್ಲಿ ಧೃತರಾಷ್ಟ್ರಪುತ್ರರು ನಮ್ಮನ್ನು ಹಿಯಾಳಿಸಿದರು. ಆಗ ಅವರನ್ನು ನಾನು ಕೊಲ್ಲದಿದ್ದುದರಿಂದ ಈ ಆಪತ್ತಿಗೆ ಸಿಲುಕಿದ್ದೇವೆ.
ಸಹದೇವಃ
ಶಕುನಿಸ್ತ್ವಂ ಯದಾಽಜೈಷೀದಕ್ಷದ್ಯೂತೇನ ಭಾರತ |
ಸ ಮಯಾ ನ ಹತಸ್ತತ್ರ ತೇನ ಪ್ರಾಪ್ತಾಃ ಸ್ಮ ಸಂಶಯಮ್ ॥4॥

ಸಹದೇವ ಎಲೈ ಭಾರತನೇ, ಅಕ್ಷದ್ಯೂತದಿಂದ ಶಕುನಿಯು ನಿನ್ನನ್ನು ಜಯಿಸಿದನು. ನಾನು ಅಲ್ಲಿ ಅವನನ್ನು ಕೊಲ್ಲಲಿಲ್ಲ. ಆದ್ದರಿಂದ ಇಂತಹ ಆಪತ್ತು (ಪ್ರಾಣಸಂಶಯವು) ಪ್ರಾಪ್ತವಾಗಿದೆ.
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ನಕುಲಂ ವಾಕ್ಯಮಬ್ರವೀತ್ |
ಆರುಹ್ಯ ವೃಕ್ಷಂ ಮಾದ್ರೇಯ ನಿರೀಕ್ಷಸ್ವ ದಿಶೋ ದಶ ||5||
ಪಾನೀಯಮಂತಿಕೇ ಪಶ್ಯ ವೃಕ್ಷಾಂಶ್ಚಾಪ್ಯುದಕಾಶ್ರಿತಾನ್ |
ಇಮೇ ವೈ ಭ್ರಾತರಃ ಶ್ರಾಂತಾಸ್ತವ ಸರ್ವೇ ಪಿಪಾಸಿತಾಃ ||6||
ವೈಶಂಪಾಯನ ಆಗ ರಾಜನಾದ ಯುಧಿಷ್ಠಿರನು ನಕುಲನನ್ನು ಕುರಿತು ಮಾದ್ರೀಪುತ್ರನೇ, ಮರವನ್ನು ಹತ್ತಿ ಎಲ್ಲಾದರೂ ಸಮೀಪದಲ್ಲಿ ನೀರು ಇದೆಯೇ ನೋಡು. ನೀರನ್ನು ಅವಲಂಬಿಸಿದ ವೃಕ್ಷಗಳು ಇವೆಯೇ ನೋಡು. ಈ ನಿನ್ನ ಸೋದರರೆಲ್ಲರೂ ಬಾಯಾರಿ ಬಳಲಿದ್ದಾರೆ ಎಂದು ಹೇಳಿದನು.
ನಕುಲಸ್ತು ತಥೇತ್ಯುಕ್ತ್ವಾ ಭ್ರಾತುರ್ಜ್ಯೇಷ್ಠಸ್ಯ ಪಾದಪಮ್ |
ತತ ಉತ್ಥಾಯ ಮತಿಮಾನ್ ಶೀಘ್ರಮಾರುಹ್ಯ ಪಾದಪಮ್ |
ಅಬ್ರವೀದ್ ಭ್ರಾತರಂ ಜ್ಯೇಷ್ಠಮಭಿವೀಕ್ಷ್ಯ ಸಮಂತತಃ ||7||
ಮೇಧಾವಿಯಾದ ನಕುಲನು ಅಣ್ಣನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ ಅಲ್ಲಿಂದ ಎದ್ದು ಶೀಘ್ರವಾಗಿ ಒಂದು ಮರವನ್ನು ಏರಿ ಸುತ್ತಲೂ ನೋಡಿ ಅಣ್ಣನನ್ನು ಕುರಿತು ಹೀಗೆ ಮಾತನಾಡಿದನು.
ನಕುಲಃ
ಪಶ್ಯಾಮಿ ಬಹುಲಚ್ಛಾಯಾನ್ ವೃಕ್ಷಾನುದಕಸಂಶ್ರಯಾನ್ |
ಸಾರಸಾನಾಂ ಚ ನಿನದಮತ್ರೋದಕಮಸಂಶಯಮ್ ||8||
ನಕುಲ ಬಹಳ ನೆರಳಿರುವ, ನೀರನ್ನೇ ವಿಶೇಷವಾಗಿ ಅವಲಂಬಿಸಿದ, ವೃಕ್ಷಗಳನ್ನು ನೋಡುತ್ತಿದ್ದೇನೆ. ಜಲಪಕ್ಷಿಗಳಾದ ಸಾರಸಗಳ ಧ್ವನಿಯು ಕೇಳಿಬರುತ್ತಿದೆ. ಇಲ್ಲಿ ನಿಸ್ಸಂಶಯವಾಗಿ ಜಲವಿದೆ.
ವೈಶಂಪಾಯನಃ
ತತೋऽಬ್ರವೀತ್ ಸತ್ಯಧೃತಿಃ ಕುಂತೀಪುತ್ರೋ ಯುಧಿಷ್ಠಿರಃ |
ಗಚ್ಛ ಸೌಮ್ಯ ತತಃ ಶೀಘ್ರಂ ತೂಣೈಃ ಪಾನೀಯಮಾನಯ ||9||
ವೈಶಂಪಾಯನ ಆಗ ಸತ್ಯಧೃತಿಯಾದ ಕುಂತೀಪುತ್ರನಾದ ಯುಧಿಷ್ಠಿರನು ಪ್ರೀತಿಪಾತ್ರನೇ, ಬೇಗ ಹೋಗಿ ಬತ್ತಳಿಕೆಗಳಲ್ಲಿ ನೀರನ್ನು ತೆಗೆದುಕೊಂಡು ಬಾ ಎಂದು ಹೇಳಿದನು.
ನಕುಲಶ್ಚ ತಥೇತ್ಯುಕ್ತ್ವಾ ಭ್ರಾತುರ್ಜ್ಯೇಷ್ಠಸ್ಯ ಶಾಸನಾತ್ |
ಪ್ರಾದ್ರವದ್ ಯತ್ರ ಪಾನೀಯಂ ಶೀಘ್ರಂ ಚೈವಾನ್ವಪದ್ಯತ ||10||
ನಕುಲನು ಹಾಗೆಯೇ ಆಗಲಿ ಎಂದು ಹೇಳಿ ಅಣ್ಣನ ಅಪ್ಪಣೆಯಂತೆ ಶೀಘ್ರವಾಗಿ ಓಡಿಹೋಗಿ ಜಲವಿದ್ದ ಸ್ಥಳವನ್ನು ತಲುಪಿದನು.
ಸ ದೃಷ್ಟ್ವಾ ವಿಮಲಂ ತೋಯಂ ಖಗಮ್ಯೈಃ ಪರಿವಾರಿತಮ್ |
ಪಾತುಕಾಮಸ್ತತೋ ವಾಚಮಂತರಿಕ್ಷಾಚ್ಛ ಶುಶ್ರುವೇ ||11||
ಅವನು ಪಕ್ಷಿಗಳಿಂದ ಪರಿವೃವಾದ ಸ್ವಚ್ಛವಾದ ನೀರಿನಿಂದ ಕೂಡಿದ ಸರೋವರದ ನೀರನ್ನು ನೋಡಿ ಕುಡಿಯಲು ಹೊರಡುವಷ್ಟರಲ್ಲಿ ಅಂತರಿಕ್ಷದಿಂದ ಬಂದ ಒಂದು ಮಾತನ್ನು ಕೇಳಿದನು.
ಯಕ್ಷಃ
ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವ ಪರಿಗ್ರಹಃ |
ಪ್ರಶ್ನಾನೂಕ್ತ್ವಾ ತು ಮಾದ್ರೇಯ ತತಃ ಪಿಬ ಹರಸ್ವ ಚ ||12||
ಯಕ್ಷ ಪ್ರೀತಿಪಾತ್ರನೇ, ಸಾಹಸವನ್ನು ಮಾಡಬೇಡ. ಈ ಸರೋವರವು ಹಿಂದಿನಿಂದಲೂ ನನ್ನ ಅಧೀನವಾಗಿದೆ. ಮಾದ್ರೀಪುತ್ರನೇ, ನಾನು ಕೇಳಿದ ಪ್ರಶ್ನೆಗಳಿಗೆ ಅನಂತರದಲ್ಲಿ ಉತ್ತರವನ್ನು ಹೇಳಿ ಅನಂತರ ನೀರನ್ನು ಕುಡಿದು ತೆಗೆದುಕೊಂಡು ಹೋಗು.
ವೈಶಂಪಾಯನಃ
ಅನಾದೃತ್ಯ ತು ತದ್ವಾಕ್ಯಂ ನಕುಲಃ ಸುಪಿಪಾಸಿತಃ |
ಅಪಿಬಚ್ಛೀತಲಂ ತೋಯಂ ಪೀತ್ವಾ ಭೂಮ್ಯಾಂ ಪಪಾತ ಹ ||13||
ವೈಶಂಪಾಯನ ಬಹಳ ಬಾಯಾರಿಕೆಯಿಂದ ಕೂಡಿದ್ದ ನಕುಲನು ಆ ಮಾತನ್ನು ತಿರಸ್ಕರಿಸಿ ಶೀತಲವಾದ ಜಲವನ್ನು ಕುಡಿದು ಭೂಮಿಯಲ್ಲಿ ಬಿದ್ದನು.
ಚಿರಾಯಮಾಣೇ ನಕುಲೇ ಕುಂತೀಪುತ್ರೋ ಯುಧಿಷ್ಠಿರಃ |
ಅಬ್ರವೀದ್ ಭ್ರಾತರಂ ವೀರಂ ಸಹದೇವಮರಿಂದಮಮ್ ||14||
ನಕುಲನು ಬರುವುದು ತಡವಾಗುತ್ತಿರಲು ಕುಂತೀಪುತ್ರನಾದ ಯುಧಿಷ್ಠಿರನು ಅರಿಂದಮನಾದ ವೀರನಾದ ತಮ್ಮನಾದ ಸಹದೇವನನ್ನು ಕುರಿತು ಹೀಗೆ ಹೇಳಿದನು.
ಚಿರಾಯತೇ ತವ ಭ್ರಾತಾ ಸಹದೇವ ಮಹಾಭುಜ |
ತಥೈವಾನಯ ಸೋದರ್ಯಂ ಪಾನೀಯಂ ಚ ತ್ವಮಾನಯ ||15||
ಮಹಾಭುಜನಾದ ಸಹದೇವನೇ, ನಿನ್ನ ತಮ್ಮನ್ನು ತಡಮಾಡುತ್ತಿದ್ದಾನೆ. ನೀನು ಅವನನ್ನೂ ಕರೆದುಕೊಂಡು ನೀರನ್ನೂ ತೆಗೆದುಕೊಂಡು ಬಾ.

ವೈಶಂಪಾಯನಃ
ಸಹದೇವಸ್ತಥೇತ್ಯುಕ್ತ್ವಾ ತಾಂ ದಿಶಂ ಪ್ರತ್ಯಪದ್ಯತ |
ದದರ್ಶ ಪತಿತಂ ಭೂಮೌ ಭ್ರಾತರಂ ನಕುಲಂ ತದಾ ||16||
ವೈಶಂಪಾಯನ ಸಹದೇವನು ಹಾಗೆಯೇ ಆಗಲಿ ಎಂದು ಹೇಳಿ ಅದೇ ದಿಕ್ಕಿನಲ್ಲಿ ಹೊರಟು ಭೂಮಿಯಲ್ಲಿ ಬಿದ್ದಿದ್ದ ನಕುಲನನ್ನು ನೋಡಿದನು.
ಭ್ರಾತೃಶೋಕಾಭಿಸಂತಪ್ತಸ್ತೃಷಯಾ ಚ ಪ್ರಪೀಡಿತಃ |
ಅಭಿದುದ್ರಾವ ಪಾನೀಯಂ ತತೋ ವಾಗಭ್ಯಭಾಷತ ||17||
ತಮ್ಮನ ಶೋಕದಿಂದ ಸಂತಪ್ತನಾಗಿ ಬಾಯಾರಿಕೆಯಿಂದಲೂ ಬಹಳ ಪೀಡಿತನಾಗಿ ನೀರಿನ ಕಡೆಗೆ ಓಡಿದನು. ಆಗ ಅದೇ ವಾಣಿಯು ಮಾತನಾಡಿತು.
ಯಕ್ಷಃ
ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ |
ಪ್ರಶ್ನಾನುಕ್ತ್ವಾ ಯಥಾಕಾಮಂ ಪಿಬಸ್ವ ಚ ಹರಸ್ವ ಚ ||18||
ಯಕ್ಷ ಪ್ರೀತಿಪಾತ್ರನೇ, ಸಾಹಸವನ್ನು ಮಾಡಬೇಡ. ಈ ಸರೋವರವು ನನಗೆ ಮೊದಲಿನಿಂದಲೂ ಅಧೀನವಾದುದು. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ನೀಡಿ ನೀರನ್ನು ಕುಡಿದು ತೆಗೆದುಕೊಂಡು ಹೋಗು.
ವೈಶಂಪಾಯನಃ
ಅನಾದೃತ್ಯ ತು ತದ್ವಾಕ್ಯಂ ಸಹದೇವಃ ಪಿಪಾಸಿತಃ |
ಅಪಿಬಚ್ಚೀತಲಂ ತೋಯಂ ಪೀತ್ವಾ ಚ ನಿಪಪಾತ ಹ ||19||
ವೈಶಂಪಾಯನ ಬಾಯಾರಿಕೆಯಿಂದ ಕೂಡಿದ್ದ ಸಹದೇವನು ಆ ಮಾತುಗಳನ್ನು ಆದರಿಸದೇ ಶೀತಲವಾದ ನೀರನ್ನು ಕುಡಿದು ಭೂಮಿಯ ಮೇಲೆ ಬಿದ್ದನು.
ಅಥಾಬ್ರವೀತ್ ಸ ವಿಜಯಂ ಕುಂತೀಪುತ್ರೋ ಯುಧಿಷ್ಠಿರಃ ||20||
ಭ್ರಾತರೌ ತೇ ಚಿರಗತೌ ಬೀಭತ್ಸೋ ಶತ್ರುಕರ್ಶನ |
ತೌ ಚೈವಾನಯ ಭದ್ರಂ ತೇ ಪಾನೀಯಂ ಚ ತ್ವಮಾನಯ |
ತ್ವಂ ಹಿ ನಸ್ತಾತ ಸರ್ವೇಷಾಂ ದುಃಖಿತಾನಾಂವ್ಯಪಾಶ್ರಯಃ ||21||
ಅನಂತರ ಕುಂತೀಪುತ್ರನಾದ ಯುಧಿಷ್ಠಿರನು ಅರ್ಜುನನನ್ನು ಕುರಿತು ಎಲೈ ಶತ್ರುಕರ್ಶನನಾದ ಭೀಭತ್ಸುವೇ, ನಿನ್ನ ತಮ್ಮಂದಿರು ಹೋಗಿ ಬಹಳ ಸಮಯವಾಯಿತು. ನೀನು ಹೋಗಿ ಅವರನ್ನೂ ಮತ್ತು ಜಲವನ್ನೂ ತೆಗೆದುಕೊಂಡು ಬಾ. ಪ್ರೀತಿಪಾತ್ರನೇ, ದುಃಖದಲ್ಲಿರುವ ನಮ್ಮೆಲ್ಲರಿಗೂ ನೀನೇ ಆಶ್ರಯನಾಗಿದ್ದೀಯೆ ಎಂದು ಹೇಳಿದನು.
ಏವಮುಕ್ತೋ ಗುಡಾಕೇಶಃ ಪ್ರಗೃಹ್ಯ ಸಶರಂ ಧನುಃ |
ಆಮುಕ್ತಖಡ್ಗೋ ಮೇಧಾವೀ ತತ್ಸರಃ ಪ್ರತ್ಯಪದ್ಯತ ||22||
ಹೀಗೆ ಹೇಳಲ್ಪಟ್ಟ ಗುಡಾಕೇಶನಾದ ಮೇಧಾವಿಯಾದ ಅರ್ಜುನನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಖಡ್ಗವನ್ನು ಸೊಂಟಕ್ಕೆ ಬಿಗಿದು ಆ ಸರೋವರವನ್ನು ತಲುಪಿದನು.
ತತಃ ಪುರುಷಶಾರ್ದೂಲೌ ಪಾನೀಯಹರಣೇ ಗತೌ |
ತೌ ದದರ್ಶ ಹತೌ ತತ್ರ ಭ್ರಾತರೌ ಶ್ವೇತವಾಹನಃ ||23||
ಅನಂತರ ಶ್ವೇತವಾಹನನಾದ ಅವನು ನೀರನ್ನು ತರಲು ಹೊರಟಿದ್ದ ಪುರುಷಶಾರ್ದೂಲರಾದ ತನ್ನ ತಮ್ಮಂದಿರು ಅಲ್ಲಿ ಬಿದ್ದಿರುವುದನ್ನು ನೋಡಿದನು.
ವಿಗತಾಸೂ ನರವ್ಯಾಘ್ರೌ ಶಯಾನೌ ವಸುಧಾತಳೇ |
ಪ್ರಸುಪ್ತಾವಿವ ತೌ ದೃಷ್ಟ್ವಾ ನರಸಿಂಹಃ ಸುದುಃಖಿತಃ |
ಧನುರುದ್ಯಮ್ಯ ಕೌಂತೇಯೋ ವ್ಯಲೋಕಯತ ತದ್ವನಮ್ ||24||
ಪ್ರಾಣವಾಯುವೇ ಕಾಣದೇ ಭೂತಲದಲ್ಲಿ ನಿದ್ರಿಸುತ್ತಿರುವವರಂತೆ ಮಲಗಿದ್ದ ಆ ನರವ್ಯಾಘ್ರರನ್ನು ಕಂಡು ನರಸಿಂಹನಾದ ಅವನು ಬಹಳ ದುಃಖಿತನಾದನು. ಕೌಂತೇಯನಾದ ಅರ್ಜುನನು ಧನುಸ್ಸನ್ನು ಎತ್ತಿ ಆ ವನವನ್ನು ಸುತ್ತಲೂ ನೋಡಿದನು.
ನಾಪಶ್ಯತ್ ತತ್ರ ಕಿಂಚಿತ್ ಸ ಭೂತಮಸ್ಮಿನ್ ಮಹಾವನೇ |
ಸವ್ಯಸಾಚೀ ತತಃ ಶ್ರಾಂತಃ ಪಾನೀಯಂ ಸೋಽಭ್ಯಧಾವತ |
ಆ ಮಹಾವನದಲ್ಲಿ ಅವನಿಗೆ ಯಾವ ಪ್ರಾಣಿಯೂ ಕಾಣಲಿಲ್ಲ. ಅನಂತರ ದಣಿದಿದ್ದ ಅರ್ಜುನನು ನೀರಿನ ಬಳಿಗೆ ಹೋದನು.
ಯಕ್ಷಃ
ಅಭಿಧಾವಂಸ್ತತೋ ವಾಕ್ಯಮಂತರಿಕ್ಷಾತ್ ಸ ಶುಶ್ರುವೇ ||25||
ಯತ್ ತ್ವಮಿಚ್ಛಸಿ ಪಾನೀಯಂ ನೈತಚ್ಛಕ್ಯಂ ನರರ್ಷಭ ||26||
ಕೌಂತೇಯ ಯದಿ ಪ್ರಶ್ನಾಂಸ್ತಾನ್ ಮಯೋಕ್ತಾನ್ ಪ್ರತಿಪತ್ಸ್ಯಸೇ |
ತತಃ ಪಾಸ್ಯಸಿ ಪಾನೀಯಂ ಹರಿಷ್ಯಸಿ ಚ ಭಾರತ ||27||
ಅವನು ನೀರಿನ ಕಡೆಗೆ ಓಡುತ್ತಿದ್ದಂತೆ ಅಂತರಿಕ್ಷದಿಂದ ಬಂದ ಈ ಮಾತುಗಳನ್ನು ಕೇಳಿದನು ನರಶ್ರೇಷ್ಠನೇ, ನೀನು ಯಾವ ಜಲವನ್ನು ಅಪೇಕ್ಷಿಸುತ್ತಿದ್ದೀಯೋ ಅದನ್ನು ನೀನು ಪಡೆಯಲು ಸಾಧ್ಯವಿಲ್ಲ. ಕೌಂತೇಯನೇ, ಭಾರತನೇ, ನೀನು ನಾನು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ನೀಡಿ ನೀರನ್ನು ಕುಡಿದು ತೆಗೆದುಕೊಂಡು ಹೋಗು.

ವೈಶಂಪಾಯನಃ
ವಾರಿತಸ್ತ್ವಬ್ರುವೀತ್ ಪಾರ್ಥೋ ದೃಶ್ಯಮಾನೋ ನಿವಾರಯ |
ಯಾವದ್ ಬಾಣೈರ್ವಿನಿರ್ಭಿನ್ನಃ ಪುನರ್ನೈವಂ ವದಿಷ್ಯಸಿ ॥28॥
ವೈಶಂಪಾಯನ ಹೀಗೆ ನಿವಾರಿಸಲ್ಪಟ್ಟ ಅರ್ಜುನನು ಕಣ್ಣೆದುರಿಗೆ ಬಂದು ನಿಷೇಧ ಮಾಡು. ಅಷ್ಟರಲ್ಲಿ ಬಾಣಗಳಿಂದ ನಿನ್ನನ್ನು ಕತ್ತರಿಸುತ್ತೇನೆ. ಆಗ ನೀನು ಇನ್ನೊಮ್ಮೆ ಹೀಗೆ ಮಾತನಾಡುವುದಿಲ್ಲ ಎಂದು ಹೇಳಿದನು.
ಏವಮುಕ್ತ್ವಾ ತತಃ ಪಾರ್ಥಃ ಶರೈರಸ್ತ್ರಾನುಮಂತ್ರಿತೈಃ |
ಪ್ರವವರ್ಷ ದಿಶಃ ಕೃತ್ಸ್ನಾಃ ಶಬ್ದವೇಧಂ ಚ ದರ್ಶಯನ್ ॥29॥
ಹೀಗೆ ಹೇಳಿ ಅರ್ಜುನನು ಅಸ್ತ್ರಗಳಿಂದ ಮಂತ್ರಿತವಾದ ಶರಗಳನ್ನು ಪ್ರಯೋಗಿಸಿ ತನ್ನ ಶಬ್ದವೇಧಿ ಕೌಶಲವನ್ನು ಪ್ರದರ್ಶಿಸುತ್ತಾ ಎಲ್ಲ ದಿಕ್ಕುಗಳನ್ನೂ ಬಾಣಗಳ ಮಳೆಯಿಂದ ತುಂಬಿದನು.
ಕರ್ಣಿನಾಲೀಕನಾರಾಚಾನುತ್ಸೃಜನ್ ಭರತರ್ಷಭ |
ಅನೇಕೈರಿಷುಸಂಪಾತೈರಂತರಿಕ್ಷೇ ವವರ್ಷ ಹ ॥30॥
ಎಲ್ಲೈ ಭರತರ್ಷಭನೇ, ಕರ್ಣೀ, ನಾಲೀಕ, ನಾರಾಚ ಮೊದಲಾದ ಬಾಣ ವಿಶೇಷಗಳ ಅನೇಕ ಸಮೂಹಗಳನ್ನು ಸೃಷ್ಟಿಸುತ್ತಾ ಅವನು ಅವುಗಳಿಂದ ಅಂತರಿಕ್ಷದಲ್ಲಿ ಮಳೆಯನ್ನು ಸುರಿಸಿದನು.
ಸೋಽಪ್ಯದೃಶ್ಯಾಯ ಭೂತಾಯ ನಭಸ್ಯಮಿತತೇಜಸೇ |
ಉತ್ಸಸರ್ಜ ಮಹಾಬಾಹುರ್ಬಾಣಜಾಲಂ ಧನಂಜಯಃ ॥30.1॥
ಮಹಾಬಾಹುವಾದ ಧನಂಜಯನು ಅಂತರಿಕ್ಷದಲ್ಲಿ ಇದ್ದು ಅಮಿತಪರಾಕ್ರಮಿಯಾದ ಅದೃಶ್ಯವಾದ ಆ ಭೂತವನ್ನು ಉದ್ದೇಶಿಸಿ ಬಾಣಗಳ ಮಳೆಯನ್ನು ಸುರಿಸಿದನು.
ತತಸ್ತಾನಿಷುಸಂಘಾತಾನ್ ಗಾಂಡೀವಧನುಷಶ್ಚ್ಯುತಾನ್ |
ಮೋಘಾನ್ ಕೃತ್ವಾ ಜಹಾಸೋಚ್ಚೈಸ್ತದದ್ಭುತಮಿವಾಭವತ್ ॥30.2॥
ಆಗ ಆ ಯಕ್ಷನು ಗಾಂಡೀವಧನುಸ್ಸಿನಿಂದ ಹೊರಟ ಆ ಬಾಣಸಮೂಹಗಳನ್ನು ವ್ಯರ್ಥಗೊಳಿಸಿ ಗಟ್ಟಿಯಾಗಿ ನಕ್ಕನು. ಅದು ಅದ್ಭುತವಾಗಿದ್ದಿತು.
ಯಕ್ಷಃ
ಕಿಂ ವಿದ್ಯಾ ವೈ ನ ತೇ ಪಾರ್ಥ ಪ್ರಶ್ನಾನುಕ್ತ್ವಾ ತತಃ ಪಿಬ |
ಅನುಕ್ತ್ವಾ ತು ತತಃ ಪ್ರಶ್ನಾನ್ ಪೀತ್ವೈವ ನ ಭವಿಷ್ಯಸಿ ॥31॥
ಯಕ್ಷ ಎಲ್ಲೈ ಅರ್ಜುನನೇ, ನಿನಗೇನು ವಿದ್ಯೆಯಿಲ್ಲವೇ? ನನ್ನ ಪ್ರಶ್ನೆಗಳಿಗೆ ಉತ್ತರವನ್ನು ನೀಡಿ ಅನಂತರ ನೀರನ್ನು ಕುಡಿ. ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳದೇ ನೀರನ್ನು ಕುಡಿದರೆ ನೀನು ಉಳಿಯುವುದಿಲ್ಲ.
ವೈಶಂಪಾಯನಃ
ಸ ಚ ಮೋಘಾನಿಷೂನ್ ದೃಷ್ಟ್ವಾ ತೃಷ್ಣಯಾ ಚ ಪ್ರಪೀಡಿತಃ |
ಅವಜ್ಞಾಯೈವ ತಾಂ ವಾಚಂ ಪೀತ್ವೈವ ನಿಪಪಾತ ಹ ॥32॥
ವೈಶಂಪಾಯನ ಅವನು ತನ್ನ ಬಾಣಗಳು ವ್ಯರ್ಥವಾದುದನ್ನು ನೋಡಿ ಬಾಯಾರಿಕೆಯಿಂದಲೂ ಪೀಡಿತನಾಗಿ ಯಕ್ಷನ ಮಾತನ್ನು ತಿರಸ್ಕರಿಸಿ ನೀರನ್ನು ಕುಡಿದು ತಕ್ಷಣ ಭೂಮಿಯ ಮೇಲೆ ಬಿದ್ದನು.
ಅಥಾಬ್ರುವೀದ್ ಭೀಮಸೇನಂ ಕುಂತೀಪುತ್ರೋ ಯುಧಿಷ್ಠಿರಃ ॥33॥
ನಕುಲಃ ಸಹದೇವಶ್ಚ ಬೀಭತ್ಸುಶ್ಚ ಪರಂತಪ |
ಚಿರಂ ಗತಾ ವೈ ಕೋಯಾರ್ಥಂ ನ ಚಾಗಚ್ಛಂತಿ ಭಾರತ |
ತಾಂಶ್ಚೈವಾನಯ ಭದ್ರಂ ತೇ ಪಾನೀಯಂ ಚ ತ್ವಮಾನಯ ॥34॥
ಆಗ ಕುಂತೀಪುತ್ರನಾದ ಯುಧಿಷ್ಠಿರನು ಭೀಮಸೇನನನ್ನು ಕುರಿತು ಪರಂತಪನೇ, ನಕುಲ-ಸಹದೇವ ಮತ್ತು ಅರ್ಜುನರು ನೀರಿನ ಸಲುವಾಗಿ ಹೋಗಿ ಬಹಳ ಹೊತ್ತಾದರೂ ಯಾರೂ ಹಿಂದೆ ಬರುತ್ತಿಲ್ಲ. ಎಲ್ಲೈ ಭಾರತನೇ, ನಿನಗೆ ಮಂಗಳವಾಗಲಿ. ನೀನು ಅವರನ್ನು ಕರೆದುಕೊಂಡು ನೀರನ್ನೂ ತೆಗೆದುಕೊಂಡು ಬಾ ಎಂದು ಹೇಳಿದನು.
ಭೀಮಸೇನಸ್ತಥೇತ್ಯುಕ್ತ್ವಾ ತಂ ದೇಶಂ ಪ್ರತ್ಯಪದ್ಯತ |
ಯತ್ರ ತೇ ಪುರುಷವ್ಯಾಘ್ರಾ ಭ್ರಾತರೋಽಸ್ಯ ನಿಪಾತಿತಾಃ ॥35॥
ಭೀಮಸೇನನು ಹಾಗೆಯೇ ಆಗಲಿ ಎಂದು ಹೇಳಿ ಎಲ್ಲಿ ಪುರುಷವ್ಯಾಘ್ರರಾದ ತನ್ನ ತಮ್ಮಂದಿರು ಬಿದ್ದಿದ್ದರೋ ಆ ದೇಶವನ್ನು ತಲುಪಿದನು.
ತಾನ್ ದೃಷ್ಟ್ವಾ ದುಃಖಿತೋ ಭೀಮಸ್ತೃಷಯಾ ಚ ಪ್ರಪೀಡಿತಃ |
ಅಮನ್ಯತ ಮಹಾಬಾಹುಃ ಕರ್ಮ ತದ್ಯಕ್ಷರಕ್ಷಸಾಮ್ ॥36॥
ಅವರನ್ನು ನೋಡಿ ದುಃಖಿತನಾದ ಮಹಾಬಾಹುವಾದ ಭೀಮನು ಬಾಯಾರಿಕೆಯಿಂದಲೂ ಪೀಡಿತನಾಗಿ ಇದು ಯಕ್ಷರಾಕ್ಷಸರ ಕೆಲಸವೆಂದು ಭಾವಿಸಿದನು.
ಸ ಚಿಂತಯಾಮಾಸ ತದಾ ಯೋದ್ಧವ್ಯಂ ಧ್ರುವಮದ್ಯ ವೈ |
ಪಾಸ್ಯಾಮಿ ತಾವತ್ ಪಾನೀಯಮಿತಿ ಪಾರ್ಥೋ ವೃಕೋದರಃ ॥37॥
ತತೋಽಭ್ಯಧಾವತ್ ಪಾನೀಯಂ ಪಿಪಾಸುಃ ಪುರಷರ್ಷಭಃ |
ವಾಗುವಾಚಾಥ ಸುಸ್ಪಷ್ಟಮದೃಶ್ಯಾ ಪಾಂಡುನಂದನಮ್ ॥38॥

ಆಗ ಕುಂತೀಪುತ್ರನಾದ ವೃಕೋದರನು ನಾನು ಈ ದಿನ ಅವಶ್ಯವಾಗಿ ಯುದ್ಧವನ್ನು ಮಾಡಬೇಕಾಗುತ್ತದೆ. ಮೊದಲು ನೀರನ್ನು ಕುಡಿಯುತ್ತೇನೆ ಎಂದು ಚಿಂತಿಸಿ ಆ ಪುರುಷರ್ಷಭನು ಪಿಪಾಸುವಾಗಿ ನೀರಿನ ಸಮೀಪಕ್ಕೆ ಶೀಘ್ರವಾಗಿ ಬಂದನು. ಆಗ ಅದೃಶ್ಯವಾದ ವಾಣಿಯು ಪಾಂಡುನಂದನನಾದ ಅವನನ್ನು ಕುರಿತು ಬಹಳ ಸ್ಪಷ್ಟವಾಗಿ ಹೀಗೆ ಹೇಳಿತು.
ಯಕ್ಷಃ
ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ |
ಪ್ರಶ್ನಾನೂಕತ್ತ್ವ ತು ಕೌಂತೇಯ ತತಃ ಪಿಬ ಹರಸ್ವ ಚ ॥39॥
ಯಕ್ಷ ಪ್ರೀತಿಪಾತ್ರನೇ, ಸಾಹಸವನ್ನು ಮಾಡಬೇಡ. ಈ ಸರೋವರವು ನನಗೆ ಅಧೀನವಾದುದು. ಕೌಂತೇಯನೇ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ನೀಡಿ ಅನಂತರ ನೀರನ್ನು ಕುಡಿದು ತೆಗೆದುಕೊಂಡು ಹೋಗು.
ವೈಶಂಪಾಯನಃ
ಏವಮುಕ್ತಸ್ತದಾ ಭೀಮೋ ಯಕ್ಷೇಣಾಮಿತತೇಜಸಾ |
ಅವಜ್ಞಾಯ್ಯೆವತಾನ್ ಪ್ರಶ್ನಾನ್ ಪೀತ್ವೈವ ನಿಪಪಾತ ಹ ॥40॥
ವೈಶಂಪಾಯನ ಅಮಿತತೇಜಸ್ವಿಯಾದ ಯಕ್ಷನಿಂದ ಹೀಗೆ ಹೇಳಲ್ಪಟ್ಟ ಭೀಮನು ಆಗ ಅವನ ಪ್ರಶೆನಗಳಿಗೆ ಉತ್ತರವನ್ನು ಹೇಳದೆ ನೀರನ್ನು ಕುಡಿದು ಬಿದ್ದನು.
ತತಃ ಕುಂತೀಸುತೋ ರಾಜಾ ಧರ್ಮಪುತ್ರೋ ಯುಧಿಷ್ಠಿರಃ |
ತತಶ್ಚಿರಗತಾನ್ ಭ್ರಾತ್ರೂನಥ ಜ್ಞಾತುಂ ಯುಧಿಷ್ಠಿರಃ |
ಚಿರಾಯಮಾಣಾನ್ ಬಹುಶಃ ಪುನಃ ಪುನರುವಾಚ ಹ ॥41॥
ಆಗ ಕುಂತೀಪುತ್ರನಾದ ಧರ್ಮಪುತ್ರನಾದ ರಾಜನಾದ ಯುಧಿಷ್ಠಿರನು ಹೋಗಿ ಬಹಳ ಸಮಯವಾದ ತನ್ನ ತಮ್ಮಂದಿರ ಕ್ಷೇಮವನ್ನು ತಿಳಿದುಕೊಳ್ಳಲು ಪುನಃ ಪುನಃ ಗಟ್ಟಿಯಾಗಿ ಕರೆದನು.
ಮಾದ್ರೇಯೌ ಕಿಂ ಚಿರಾಯೇತೇ ಗಾಂಡೀವೀ ಕಿಂ ಚಿರಾಯತೇ |
ಮಹಾಬಲಧರಸ್ತತ್ರ ಕಿಂ ನು ಭೀಮಶ್ಚಿರಾಯತೇ ॥42॥
ಮಾದ್ರೇಯರು ಏಕೆ ತಡಮಾಡುತ್ತಿದ್ದಾರೆ? ಅರ್ಜುನನು ಏಕೆ ತಡಮಾಡುತ್ತಿದ್ದಾನೆ? ಮಹಾಬಲಿಷ್ಠನಾದ ಭೀಮಸೇನನು ಏಕೆ ತಡಮಾಡುತ್ತಿದ್ದಾನೆ?
ತತಃ ಕುಂತೀಸುತೋ ರಾಜಾ ವಿಚಿಂತ್ಯ ಪುರಷರ್ಷಭ |
ಗಚ್ಛಾಮ್ಯೇಷಾಂ ಪದಂ ದೃಷ್ಟ್ವುಮಿತಿ ಕೃತ್ವಾ ಯುಧಿಷ್ಠಿರಃ |
ಸಮುತ್ಥಾಯ ಮಹಾಬಾಹುರ್ದಹ್ಯಮಾನೇನ ಚೇತಸಾ ॥43॥
ಆತ್ಮನಾಽನ್ವಿಷ್ಯ ಚ ಚಿರಂ ವಿಚಾರಮಕರೋತ್ ಪ್ರಭುಃ |
ಅನಂತರ ಪುರುಷರ್ಷಭನೂ, ಕುಂತೀಪುತ್ರನೂ, ರಾಜನೂ ಆದ ಯುಧಿಷ್ಠಿರನು ನಾನೇ ಇವರ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಹೋಗುತ್ತೇನೆ ಎಂದು ನಿಶ್ಚಯಿಸಿ ಮಹಾಬಾಹುವಾದ ಅವನು ಮನಸ್ಸಿನಲ್ಲಿಯೇ ಬೇಯುತ್ತಾ ಅಲ್ಲಿಂದ ಎದ್ದು ತನ್ನನ್ನು ತಾನು ವಿಮರ್ಶಿಸುತ್ತಾ ವಿಚಾರವನ್ನು ಮಾಡಿದನು.
ಕಿಂ ಸ್ವಿದ್ವನಮಿದಂ ದುಷ್ಟಂ ಕಿಂ ಸ್ವಿದ್ ದುಷ್ಟೋ ಮೃಗೋ ಭವೇತ್ |
ಪ್ರಾಹಸನ್ ವಾ ಮಹಾಭೂತಂ ಶಪ್ತಾಸ್ತೇನಾಥ ತೇಽಪತನ್ ॥44॥
ಇದೇನು ಈ ವನವೇ ದುಷ್ಟವಾಗಿದೆಯೋ ಅಥವಾ ಇಲ್ಲಿ ಯಾವುದಾದರೂ ದುಷ್ಟಮೃಗವಿದೆಯೋ ಅಥವಾ ಈ ನನ್ನ ತಮ್ಮಂದಿರು ಮಹಾಭೂತವನ್ನು ಕುರಿತು ಅಪಹಾಸವನ್ನು ಮಾಡಿ ಅದರಿಂದ ಶಪ್ತರಾಗಿ ಹೀಗೆ ಬಿದ್ದಿದ್ದಾರೆಯೋ?
ನ ಪಶ್ಯಂತ್ಯಥ ವಾ ವೀರಾಃ ಪಾನೀಯಂ ಯತ್ರ ತೇ ಗತಾಃ |
ಅನ್ವಿಷದ್ಭಿರ್ವನೇ ತೋಯಂ ಕಾಲೋಽಯಮತಿಪಾತಿತಃ ॥45॥
ಅಥವಾ ನೀರನ್ನು ಹುಡುಕಲು ಹೋದ ಆ ವೀರರು ಎಲ್ಲೂ ನೀರನ್ನು ಕಾಣಲಿಲ್ಲವೋ? ಅವರು ನೀರನ್ನು ಹುಡುಕಲು ಹೊರಟು ಬಹಳ ಕಾಲವಾಯಿತು.
ಕಿಂ ನು ತತ್ಕಾರಣಂ ಯೇನ ನಾಯಾಂತಿ ಪುರುಷರ್ಷಭಾಃ |
ಗಚ್ಛಾಮ್ಯೇಷಾಂ ಪದಂ ದ್ರಷ್ಟುಮಿತಿ ಕೃತ್ವಾ ಯುಧಿಷ್ಠಿರಃ ॥45.1॥
ಪುರುಷರ್ಷಭರು ಬರದಿರುವುದಕ್ಕೆ ಏನು ಕಾರಣವಿರಬಹುದು? ಅವರ ಪರಿಸ್ಥಿತಿಯನ್ನು ತಿಳಿಯಲು ನಾನೇ ಹೋಗುತ್ತೇನೆ ಎಂದು ನಿಶ್ಚಯಿಸಿದನು.
ಏವಮಾದೀನಿ ವಾಕ್ಯಾನಿ ವಿಮೃಶನ್ ನೃಪಸತ್ತಮಃ |
ವ್ಯಪೇತಜನನಿರ್ಘೋಷಂ ಪ್ರವಿವೇಶ ಮಹಾವನಮ್ ॥46॥
ಇಂತಹ ವಾಕ್ಯಗಳನ್ನು ವಿಮರ್ಶೆ ಮಾಡುತ್ತಾ ಆ ರಾಜಶ್ರೇಷ್ಠನು ಮನುಷ್ಯ ಧ್ವನಿಯಿಂದ ರಹಿತವಾದ ಆ ಮಹಾವನವನ್ನು ಪ್ರವೇಶಿಸಿದನು.
ರುರುಭಿಶ್ಚ ವರಾಹೈಶ್ಚ ಮಹಿಷೈಶ್ಚ ನಿಷೇವಿತಮ್ |
ನೀಲಭಾಸ್ವರವರ್ಣೈಶ್ಚ ಪಾದಪೈರುಪಶೋಭಿತಮ್ ॥47॥
ಭ್ರಮರೈರುಪಗೀತಂ ಚ ಪಕ್ಷಿಭಿಶ್ಚ ಸಮಾಕುಲಮ್ ॥48॥
ರುರು, ವರಾಹ ಮತ್ತು ಮಹಿಷಗಳಿಂದ ಸೇವಿತವಾದ, ಪ್ರಕಾಶಿಸುವ ಕಪ್ಪು ವರ್ಣದ ಮರಗಳಿಂದ ಶೋಭಿತವಾದ, ದುಂಬಿಗಳ ಗಾನದಿಂದ ಕೂಡಿದ, ಪಕ್ಷಿಗಳಿಂದ ಸಮಾಕುಲವಾದ ವನವನ್ನು ಪ್ರವೇಶಿಸಿದನು.

ಸ ಗಚ್ಛನ್ ಕಾನನೇ ತಸ್ಮಿನ್ ಹೇಮಜಾಲಪರಿಷ್ಕೃತಮ್ |
ದದರ್ಶ ತತ್ಸರಃ ಶ್ರೀಮಾನ್ ವಿಶ್ವಕರ್ಮಕೃತಂ ಯಥಾ ||49||
ಆ ಕಾಡಿನಲ್ಲಿ ಹೋಗುತ್ತಾ ವಿಶ್ವಕರ್ಮದಿಂದ ನಿರ್ಮಿತವಾದಂತೆ ಹೇಮಜಾಲದಿಂದ ಸುತುತವರಿಯಲ್ಪಟ್ಟಂತಹ ಆ ಸರೋವರವನ್ನು ನೋಡಿದನು.
ಉಪೇತಂ ನಲಿನೀಜಾಲೈಃ ಸಿಂಧುವಾರೈಃ ಸವೇತಸೈಃ |
ಕೇತಕೈಃ ಕರವೀರೈಶ್ಚ ಪಿಪ್ಪಲೈಶ್ಚೈವ ಸಂವೃತಮ್ ||50||
ನಲಿನೀ ಪುಷ್ಪಗಳ ಸಮೂಹದಿಂದಲೂ, ಸಿಂಧುವಾರ, ವೇತಸ, ಕೇತಕ, ಕರವೀರ, ಮತ್ತು ಪಿಪ್ಪಲವೃಕ್ಷಗಳಿಂದಲೂ ಸಮಾವೃತವಾದ ಆ ಸರೋವರದ ಸಮೀಪಕ್ಕೆ ಹೋಗಿ ಅದನ್ನು ನೋಡಿ ದಣಿದಿದ್ದ ಅವನು ವಿಸ್ಮಿತನಾದನು.
ಶ್ರೀಮಾರ್ತಸ್ತದುಪಗಮ್ಯ ಸರೋ ದೃಷ್ಟ್ವಾಥ ವಿಸ್ಮಿತಃ |
ತತೋ ಧರ್ಮಸುತಃ ಶ್ರೀಮಾನ್ ಭ್ರಾತೃದರ್ಶನಲಾಲಸಃ |
ಶ್ರಮಾರ್ತಸ್ತದುಪಾಕ್ರಾಮತ್ ಸರೋ ದೃಷ್ಟ್ವಾ ತು ವಿಸ್ಮಿತಃ ||51||
ಅನಂತರ ಶ್ರೀಮಂತನಾದ ಆ ಧರ್ಮಪುತ್ರನು ತಮ್ಮಂದಿರನ್ನು ನೋಡುವ ಆಸೆಯಿಂದ ಶ್ರಮದಿಂದ ಮುಂದೆ ಹೋಗುತ್ತಾ ಆ ಸರೋವರವನ್ನು ನೋಡಿ ಬಹಳ ವಿಸ್ಮಯವನ್ನು ಹೊಂದಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ತ್ರ್ಯಧಿಕತ್ರಿಶತತಮೋಽಧ್ಯಾಯಃ ||
|| ಇತಿ ಆರಣೇಯಪರ್ವಣಿ ನಕುಲಾದಿಪತನಂ ನಾಮ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರ ಮೂರನೆಯ
ಅಧ್ಯಾಯ ಮುಗಿಯಿತು.
* * * *
ಮುನ್ನೂರ ನಾಲ್ಕನೆಯ ಅಧ್ಯಾಯ
ಯುಧಿಷ್ಠಿರನ ವಿಲಾಪ. ಯುಧಿಷ್ಠಿರ-ಯಕ್ಷ ಸಂವಾದ ನಕುಲಾದಿಗಳ ಉತ್ಥಾನ.
ವೈಶಂಪಾಯನಃ
ಸ ದದರ್ಶ ಹತಾನ್ ಭ್ರಾತೄಂಲ್ಲೋಕಪಾಲಾನಿವ ಚ್ಯುತಾನ್ |
ಯುಗಾಂತೇ ಸಮನುಪ್ರಾಪ್ತೇ ಶಕ್ರಪ್ರತಿಮಗೌರವಾನ್ ||1||
ಅವನು ತಮ್ಮ ಸ್ಥಾನದಿಂದ ಚ್ಯುತರಾದ ಯುಗಾಂತಕಾಲದಲ್ಲಿ ಲೋಕಪಾಲರಂತೆ ಭೂಮಿಯಲ್ಲಿ ಬಿದ್ದಿರುವ ಇಂದ್ರನಂತಿರುವ ತನ್ನ ತಮ್ಮಂದಿರನ್ನು ನೋಡಿದನು.
ವಿನಿಕೀರ್ಣಧನುರ್ಬಾಣಾಂ ದೃಷ್ಟ್ವಾ ನಿಹತಮರ್ಜುನಮ್ |
ಭೀಮಸೇನಂ ಯಮೌ ಚೈವ ನಿರ್ವಿಚೇಷ್ಟಾನ್ ಗತಾಯುಷಃ ||2||
ಧರ್ಮಪುತ್ರೋ ಮಹಾಬಾಹುರ್ವಿಲಲಾಪ ಸುವಿಸ್ತರಮ್ |
ನನು ತ್ವಯಾ ಮಹಾಬಾಹೋ ಪ್ರತಿಜ್ಞಾತಂ ವೃಕೋದರ ||2.1||
ಸುಯೋಧನಸ್ಯ ಭೇತ್ಸ್ಯಾಮಿ ಗದಯಾ ಸಕ್ಥಿನೀ ರಣೇ |
ಧನುರ್ಬಾಣಗಳನ್ನು ಭೂಮಿಯ ಮೇಲೆ ಚೆಲ್ಲಾಡಿ ಭೂಮಿಯಲ್ಲಿ ಬಿದ್ದಿರುವ ಅರ್ಜುನನನ್ನೂ ನಿಶ್ಚೇಷ್ಟರಾಗಿ ಕ್ಷೀಣಾಯುಷರಂತೆ ಇರುವ ಭೀಮಸೇನ ನಕುಲ ಸಹದೇವರನ್ನೂ ನೋಡಿ ಮಹಾಬಾಹುವಾದ ಧರ್ಮಪುತ್ರನಾದ ಯುಧಿಷ್ಠಿರನು ವಿಸ್ತಾರವಾಗಿ ವಿಲಾಪವನ್ನು ಮಾಡಿದನು. ಮಹಾಬಾಹುವಾದ ವೃಕೋದರನೇ, ನೀನು ಯುದ್ಧದಲ್ಲಿ ಸುಯೋಧನನ ತೊಡೆಗಳನ್ನು ಗದೆಯಿಂದ ಭೇದಿಸುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದೆಯಷ್ಟೆ.
ವ್ಯರ್ಥಂ ತದದ್ಯ ಮೇ ಸರ್ವಂ ತ್ವಯಿ ವೀರ ನಿಪಾತಿತೇ ||2.2||
ಮಹಾತ್ಮನಿ ಮಹಾಬಾಹೋ ಕುರೂಣಾಂ ಕೀರ್ತಿವರ್ಧನೇ |
ಮನುಷ್ಯಸಂಭವಾ ವಾಚೋ ವಿಧರ್ಮಿಣ್ಯಃ ಪ್ರತಿಶ್ರುತಾಃ ||2.3||
ಎಲೈ ವೀರನೇ, ಮಹಾಬಾಹುವೂ, ಕುರುವಂಶದ ಕೀರ್ತಿವರ್ಧನನೂ, ಮಹಾತ್ಮನೂ ಆದ ನೀನು ಹೀಗೆ ಬಿದ್ದಿರಲು ಅವೆಲ್ಲವೂ ನನಗೆ ವ್ಯರ್ಥವೇ ಆಯಿತು. ಮನುಷ್ಯರಿಗೆ ಸಹಜವಾದ ಮಾತುಗಳಂತೆ ವಿರುದ್ಧವಾಗಿ ಪರ್ಯವಸಾನವನ್ನು ಹೊಂದುವ ಪ್ರತಿಜ್ಞೆಗಳು ಮಾಡಲ್ಪಟ್ಟವು.
ಭವತಾಂ ದಿವ್ಯವಾಚಸ್ತು ತಾ ಭವಂತು ಕಥಂ ಮೃಷಾ |
ದೇವಾಶ್ಚಾಪಿ ಯದಾಽವೋಚನ್ ಸೂತಕೇ ತ್ವಾಂ ಧನಂಜಯ ||2.4||
ಸಹಸ್ರಾಕ್ಷಾದನವರಃ ಕುಂತೀ ಪುತ್ರಸ್ತವೇತಿ ವೈ |
ಉತ್ತರೇ ಪಾರಿಯಾತ್ರೇ ಚ ಜಗುರ್ಭೂತಾನಿ ಸರ್ವಶಃ ||2.5||
ವಿಪ್ರಣಷ್ಟಾಂ ಶ್ರಿಯಂ ಚೈಷಾಮಾಹರ್ತಾ ಪುನರಂಜಸಾ |
ನಾಸ್ಯ ಜೇತಾ ರಣೇ ಕಶ್ಚಿದಜೇತಾ ನೈಷ ಕಸ್ಯಚಿತ್ ||2.6||
ನಿಮ್ಮ ದಿವ್ಯವಾಕ್ಯಗಳು ಹೇಗೆ ಸುಳ್ಳಾಗಲು ಸಾಧ್ಯ? ಧನಂಜಯನೇ, ನೀನು ಜನಿಸಿದಾಗ ದೇವತೆಗಳೂ ಸಹ ಕುಂತಿಯೇ, ನಿನ್ನ ಪುತ್ರನು ಇಂದ್ರನಿಗೆ ಏನೂ ಕಡಿಮೆ ಇಲ್ಲದವನಾಗುತ್ತಾನೆ ಎಂದು ಹೇಳಿದರಷ್ಟೆ. ಉತ್ತರ ಪಾರಿಯಾತ್ರದಲ್ಲಿ ಎಲ್ಲ ಭೂತಗಳೂ ಇವನು ನಷ್ಟವಾದ ಕುರುಕುಲದ ಸಂಪತ್ತನ್ನು ಪುನಃ ಜಯಿಸಿ ತರುತ್ತಾನೆ. ಇವನನ್ನು ಯುದ್ಧದಲ್ಲಿ ಯಾರೂ ಜಯಿಸಲಾರರು. ಇವನು ಯಾರನ್ನೂ ಜಯಿಸದೇ ಇರುವುದಿಲ್ಲ ಎಂದು ಹೇಳಿದರಷ್ಟೆ.

ಸೋಽಯಂ ಮೃತ್ಯುವಶಂ ಯಾತಃ ಕಥಂ ಜಿಷ್ಣುರ್ಮಹಾಬಲಃ |
ಅಯಂ ಮಮಾಶಾಂ ಸಂಹತ್ಯ ಶೇತೇ ಭೂಮೌ ಧನಂಜಯಃ ॥2.7॥
ಅಂತಹ ಈ ಮಹಾಬಲನಾದ ಅರ್ಜುನನು ಹೇಗೆ ಮೃತ್ಯುವಶನಾಗುತ್ತಾನೆ? ನನ್ನ ಎಲ್ಲಾ ಆಶೆಗಳನ್ನೂ ನಾಶಮಾಡಿ ಈ ಅರ್ಜುನನು ಭೂಮಿಯಲ್ಲಿ ಮಲಗಿದ್ದಾನೆ.
ಆಶ್ರಿತ್ಯ ಯಂ ವಯಂ ನಾಥಂ ದುಃಖಾನ್ಯೇತಾನಿ ಸೇಹಿಮ |
ರಣೇಽಪ್ರಮತ್ತೌ ವೀರೌ ಚ ಸದಾ ಶತ್ರುನಿಬರ್ಹಣೌ ॥2.8॥
ಕಥಂ ರಿಪುವಶಂ ಯಾತೌ ಕುಂತೀಪುತ್ರೌ ಮಹಾಬಲೌ |
ಯೌ ಸರ್ವಸಶತ್ರಪ್ರತಿಹತೌ ಭೀಮಸೇನಧನಂಜಯೌ ॥2.9॥
ಯಾವನ ಬಲವನ್ನು ಆಶ್ರಯಿಸಿ ನಾವು ಈ ಎಲ್ಲ ದುಃಖಗಳನ್ನೂ ಸಹಿಸಿದೆವೋ ಅಂತಹ ಅರ್ಜುನನು ಭೂಮಿಯಲ್ಲಿ ಬಿದ್ದಿದ್ದಾನೆ. ಯುದ್ಧದಲ್ಲಿ ಯಾವಾಗಲೂ ಎಚ್ಚರಿಕೆಯಿಂದಿರುವವರೂ, ವೀರರೂ, ಶತ್ರುಸಂಹಾರಕರೂ ಆದ ಈ ಮಹಾಬಲರಾದ ಕುಂತೀಪುತ್ರರಾದ ಯಾವ ಅಸ್ತ್ರಕ್ಕೂ ವಶವಾಗದ ಭೀಮಸೇನ ಧನಂಜಯರು ಹೇಗೆ ಶತ್ರುಗಳ ವಶವಾಗಿದ್ದಾರೆ?
ಅಶ್ಮಸಾರಮಯಂ ನೂನಂ ಹೃದಯಂ ಮಮ ದುರ್ಹೃದಃ |
ಯವೌ ಯದೇತೌ ದೃಷ್ಟ್ವಾದ್ಯ ಪತಿತೌ ನಾವದೀರ್ಯತೇ ॥2.10॥
ಈ ನಕುಲಸಹದೇವರು ಭೂಮಿಯಲ್ಲಿ ಬಿದ್ದಿರುವುದನ್ನು ನೋಡಿ ನನ್ನ ಹೃದಯವು ಬಿರುದು ಹೋಗುತ್ತಿಲ್ಲ. ದುಷ್ಟನಾದ ನನ್ನ ಹೃದಯವು ನಿಜವಾಗಿಯೂ ಕಲ್ಲಿನಿಂದ ಮಾಡಲ್ಪಟ್ಟಿದೆ.
ಶಾಸ್ತ್ರಜ್ಞಾ ದೇಶಕಾಲಜ್ಞಾಸ್ತಪೋಯುಕ್ತಾಃ ಕ್ರಿಯಾನ್ವಿತಾಃ |
ಅಕೃತ್ವಾ ಸದೃಶಂ ಕರ್ಮ ಕಿಂ ಶೇಧ್ವಂ ಪುರುಷರ್ಷಭಾಃ ॥2.11॥
ಶಾಸ್ತ್ರಜ್ಞರೂ, ದೇಶಕಾಲವನ್ನು ತಿಳಿದವರೂ, ತಪೋಯುಕ್ತರೂ, ಯೋಗ್ಯ ಕ್ರಿಯಾನ್ವಿತರೂ ಆದ ಎಲೈ ಪುರುಷರ್ಷಭರೇ, ನೀವು ನಿಮಗೆ ಯೋಗ್ಯವಾದ ಕಾರ್ಯವನ್ನು ಮಾಡದೆ ಏಕೆ ಮಲಗಿದ್ದೀರಿ?
ಅವಿಕ್ಷತಶರೀರಾಶ್ಚಾಪ್ಯಪ್ರಮೃಷ್ಟಶರಾಸನಾಃ |
ಅಸಂಜ್ಞಾ ಭುವಿ ಸಂಗಮ್ಯ ಕಿಂ ಶೇಧ್ವಮಪರಾಜಿತಾಃ ॥2.12॥
ಶರೀರದಲ್ಲಿ ಯಾವ ವ್ರಣವೂ ಇಲ್ಲದೆ ನಿಮ್ಮ ಬಿಲ್ಲುಗಳನ್ನು ಸರಿಯಾಗಿ ಉಜ್ಜಿಕೊಳ್ಳದೇ ಸಂಜ್ಞೆಯನ್ನು ಕಳೆದುಕೊಂಡು ಯಾರಿಂದಲೂ ಪರಾಜಿತರಾಗದ ನೀವು ಏಕೆ ಭೂಮಿಯ ಮೇಲೆ ಒಟ್ಟಿಗೆ ಮಲಗಿದ್ದೀರಿ?
ವೈಶಂಪಾಯನಃ
ಸಾನೂನಿವಾದ್ರೇಃ ಸಂಸುಪ್ತಾನ್ ದೃಷ್ಟ್ವಾ ಭ್ರಾತೄನ್ ಮಹಾಮತಿಃ |
ಸುಖಂ ಪ್ರಸುಪ್ತಾನ್ ಪ್ರಸ್ವಿನ್ನಃ ಖಿನ್ನಃ ಕಷ್ಟಾಂ ದಶಾಂ ಗತಃ ॥2.13॥
ವೈಶಂಪಾಯನ ಪರ್ವತದ ಶಿಖರಗಳಂತೆ ಸಂಸುಪ್ತರಾದ ತನ್ನ ತಮ್ಮಂದಿರನ್ನು ನೋಡಿ ಮಹಾಮತಿಯಾದ ಧರ್ಮರಾಜನು ಬಹಳ ಖಿನ್ನನಾಗಿ ಶರೀರವೆಲ್ಲಾ ಬೆವರಿ ದುಃಖದ ಅವಸ್ಥೆಯನ್ನು ತಲುಪಿದರು.
ಏವಮೇವೇದಮಿತ್ಯುಕ್ತ್ವಾ ಧರ್ಮಾತ್ಮಾ ಸ ನರೇಶ್ವರಃ |
ಶೋಕಸಾಗರಮಧ್ಯಸ್ಥೋ ದಧ್ಯೌ ಕಾರಣಮಾಕುಲಃ ॥2.14॥
ಇದು ಹೀಗೆಯೇ ಆಗಿರಬೇಕು ಎನ್ನುತ್ತಾ ರಾಜನಾದ ಯುಧಿಷ್ಠಿರನು ಶೋಕ ಸಾಗರದಲ್ಲಿ ಮುಳುಗಿ ಆಕುಲವಾದ ಹೃದಯದಿಂದ ಕಾರಣವನ್ನು ಕುರಿತು ಯೋಚಿಸಿದನು.
ಇತಿಕರ್ತವ್ಯತಾಂ ಚೇತಿ ದೇಶಕಾಲವಿಭಾಗವಿತ್ |
ನಾಭಿಪೇದೇ ಮಹಾಬಾಹುಶ್ಚಿಂತಯಾನೋ ಮಹಾಮತಿಃ ॥2.15॥
ದೇಶಕಾಲ ವಿಭಾಗವನ್ನು ತಿಳಿದು ಇವರು ಮಲಗಿರುವ ಪ್ರಕಾರವನ್ನು ಯೋಚಿಸಿದರೂ ಸಹ ಆ ಮಹಾಮತಿಯೂ, ಮಹಾಬಾಹುವೂ ಆದ ಯುಧಿಷ್ಠಿರನಿಗೆ ಯಾವ ಕಾರಣವೂ ತಿಳಿಯಲಿಲ್ಲ.
ಅಥ ಸಂಸ್ತಭ್ಯ ಧರ್ಮಾತ್ಮಾ ತದಾಽಽತ್ಮಾನಂ ತಪಃ ಸುತಃ (ತಪೋಯುತಃ) |
ಏವಂ ವಿಲಪ್ಯ ಬಹುಧಾ ಧರ್ಮಪುತ್ರೋ ಯುಧಿಷ್ಠಿರಃ ॥2.16॥
ಅನಂತರ ಹೀಗೆ ಬಹಳ ವಿಲಾಪವನ್ನು ಮಾಡಿ ಧರ್ಮಪುತ್ರನೂ, ತಪೋಯುಕ್ತನೂ ಆದ ಯುಧಿಷ್ಠಿರನು ಮನಸ್ಸನ್ನು ಸಮಾಧಾನ ಮಾಡಿಕೊಂಡು ಯೋಚಿಸಿದನು.
ಸ ದೀರ್ಘಮುಷ್ಣಂ ನಿಃಶ್ವಸ್ಯ ಶೋಚನ್ ಬಾಷ್ಪಪರಿಪ್ಲುತಃ |
ಬುದ್ಧ್ಯಾ ವಿಚಿಂತಯಾಮಾಸ ವೀರಾಃ ಕೇನ ನಿಪಾತಿತಾಃ ॥3॥
ಅವನು ಶೋಕದಿಂದಲೂ, ಬಾಷ್ಪದಿಂದಲೂ ಕೂಡಿದವನಾಗಿ ದೀರ್ಘವಾದ ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ ಈ ವೀರರು ಯಾರ ಕಾರಣದಿಂದ ಬಿದ್ದಿದ್ದಾರೆಂದು ತನ್ನಬುದ್ಧಿಯಿಂದ ಆಲೋಚಿಸಿದನು.
ನೈಷಾಂ ಶಸ್ತ್ರಪ್ರಹಾರೋಽಸ್ತಿ ಪದಂ ನೇಹಾಸ್ತಿ ಕಸ್ಯಚಿತ್ |
ಭೂತಂ ಮಹದಿದಂ ಮನ್ಯೇ ಭ್ರಾತರೋ ಯೇನ ಮೇ ಹತಾಃ ॥4॥
ಇವರ ದೇಹದ ಮೇಲೆ ಶಸ್ತ್ರದಿಂದ ಉಂಟಾದ ಗಾಯವಿಲ್ಲ. ಇಲ್ಲಿ ಬೇರೆ ಯಾರ ಪಾದಚಿಹ್ನೆಗಳೂ ಇಲ್ಲ. ಆದ್ದರಿಂದ ಯಾವುದೋ ಒಂದು ದೊಡ್ಡ ಭೂತವು ನನ್ನ ತಮ್ಮಂದಿರನ್ನು ಕೊಂದಿರಬೇಕು.
ಏಕಾಗ್ರಂ ಚಿಂತಯಿಷ್ಯಾಮಿ ಪೀತ್ವಾ ವೇತ್ಸ್ಯಾಮಿ ವಾ ಜಲಮ್ |
ಭ್ರಾತೄಣಾಂ ವ್ಯಸನಂ ಘೋರಂ ಸಮಮೇವ ಮಹಾತ್ಮನಾಮ್ ॥5॥

ನೀರನ್ನು ಕುಡಿದು ಏಕಾಗ್ರವಾಗಿ ಯೋಚಿಸುವೆನು ಮತ್ತು ಕಾರಣವನ್ನು ತಿಳಿಯುವೆನು. ಈ ಮಹಾತ್ಮರಾದ ತಮ್ಮಂದಿರಿಗೆಲ್ಲಾ ಒಂದೇ ವಿಧವಾದ ಘೋರ ವ್ಯಸನವು ಉಂಟಾಗಿರುವುದೆಂದು ತೋರುತ್ತದೆ.
ಸ್ಯಾತ್ತು ದುರ್ಯೋಧನೇನೇದಮುಪಾಂಶು ವಿಹಿತಂ ಕೃತಮ್ |
ಗಾಂಧಾರರಾಜರಚಿತಂ ಸತತಂ ಜಿಹ್ಮಬುದ್ಧಿನಾ ॥6॥
ಇದು ಕುಟಿಲ ಬುದ್ಧಿಯುಳ್ಳ ಶಕುನಿಯಿಂದ ಕೂಡಿದ ದುರ್ಯೋಧನನು ಮಾಡಿದ ಅಹಿತವಾದ ಕಾರ್ಯವಾಗಿರಬಹುದು.
ಯಸ್ಯ ಕಾರ್ಯಮಕಾರ್ಯಂ ವಾ ಸಮಮೇವ ಭವತ್ಯುತ |
ಕಸ್ತಸ್ಯ ವಿಶ್ವಸೇದ್ ವೀರೋ ದುಷ್ಕೃತೇರಕೃತಾತ್ಮನಃ ॥7॥
ಯಾವ ದುಷ್ಟನೂ, ಅಸಂಸ್ಕೃತ ಮನಸ್ಸುಳ್ಳವನೂ ಆದ ಅವನಿಗೆ ಕಾರ್ಯಾಕಾರ್ಯಗಳಲ್ಲಿ ವ್ಯತ್ಯಾಸವೇ ಇಲ್ಲವೋ ಅಂತಹವನನ್ನು ಯಾವ ವೀರನು ನಂಬಲು ಸಾಧ್ಯ?
ಅಥವಾ ಪುರುಷೈರ್ಗೂಢೈಃ ಪ್ರಯೋಗೋಽಯಂ ದುರಾತ್ಮನಃ |
ಭವೇದಿತಿ ಮಹಾಬುದ್ಧಿರ್ಬಹುಧಾ ತದಚಿಂತಯತ್ ॥8॥
ಅಥವಾ ತನ್ನ ಗೂಢಪುರುಷರಿಂದ ಆ ದುರಾತ್ಮನು ಈ ಜಲದಲ್ಲಿ ವಿಷಾದಿಪ್ರಯೋಗವನ್ನೂ ಮಾಡಿರಬಹುದು ಎಂದು ಮಹಾಬುದ್ಧಿಯುಳ್ಳ ಧರ್ಮರಾಜನು ವಿಧವಿಧವಾಗಿ ಚಿಂತಿಸಿದನು (ವಾದಿರಾಜರು)
ಆಚಾರ್ಯಂ ಕಿಂ ನು ವಕ್ಷ್ಯಾಮಿ ಕೃಪಂ ಭೀಷ್ಮಮಹಂ ನು ಕಿಮ್ |
ವಿದುರಂ ಕಿಂ ನು ವಕ್ಷ್ಯಾಮಿ ಬೃಹಸ್ಪತಿಸಮಂ ನಯೇ ॥9॥
ನಾನು ದ್ರೋಣರಿಗೆ ಏನು ಹೇಳಲಿ? ಕೃಪಾಚಾರ್ಯರಿಗೆ ಮತ್ತು ಭೀಷ್ಮರಿಗೆ ಏನು ಹೇಳಲಿ? ನೀತಿಶಾಸ್ತ್ರದಲ್ಲಿ ಬೃಹಸ್ಪತಿಗೆ ಸಮನಾದ ವಿದುರನನ್ನು ಕುರಿತಾದರೂ ಏನು ಹೇಳಲಿ?
ಅಂಬಾಂ ಚ ಕಿಂ ನು ವಕ್ಷ್ಯಾಮಿ ಸರ್ವದಾ ದುಃಖಭಾಗಿನೀಮ್ |
ದೃಷ್ಟ್ವಾ ಮಾಂ ಭ್ರಾತೃಭಿರ್ಹೀನಂ ಪೃಚ್ಛಂತೀಂ ಪುತ್ರಗೃದ್ಧಿನೀಮ್ ॥10॥
ಸಹೋದರರಿಲ್ಲದೇ ಒಬ್ಬನೇ ಇರುವ ನನ್ನನ್ನು ಪುತ್ರವಾತ್ಸಲ್ಯವುಳ್ಳ ಸರ್ವದಾ ದುಃಖವನ್ನೇ ಅನುಭವಿಸಿರುವ ತಾಯಿಯು ಕೇಳಿದರೆ ಅವಳಿಗೆ ಏನು ಉತ್ತರವನ್ನು ಹೇಳಲಿ?
ಯದಾ ತ್ವಂ ಭ್ರಾತೃಭಿಃ ಸರ್ವೈಃ ಶಕ್ರತುಲ್ಯಪರಾಕ್ರಮೈಃ |
ಸಾರ್ಧಂ ವನಂ ಗತೋ ವೀರೈಃ ಕಥಮೇಕಃ ಸಮಾಗತಃ ॥11॥
ವೀರನೇ, ನೀನು ನಾಲ್ಕುಜನ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ತಮ್ಮಂದಿರ ಜೊತೆಯಲ್ಲಿ ಕಾಡಿಗೆ ಹೋದವನು ಒಬ್ಬನೇ ಹೇಗೆ ಬಂದೆ (ಎಂದು ಕುಂತಿಯು ಕೇಳಿದರೆ ಏನು ಹೇಳಲಿ).
ತಸ್ಯಾಸೀನ್ನ ವಿಷೇಣೇದಮುದಕಂ ದೂಷಿತಂ ಯಥಾ |
ಮೃತಾನಾಮಪಿ ಚೈತೇಷಾಂ ವಿಕೃತಂ ನೈವ ಜಾಯತೇ |
ಮುಖವರ್ಣಾಃ ಪ್ರಸನ್ನಾ ಮೇ ಭ್ರಾತೄಣಾಮಿತಿ ಚಿಂತಯೇ ॥12॥
ಇವರು ಮೃತರಾಗಿದ್ದರೂ ಇವರ ಮುಖದ ಕಾಂತಿಯಲ್ಲಿ ವ್ಯತ್ಯಾಸವಾಗಿಲ್ಲ. ಈ ನನ್ನ ತಮ್ಮಂದಿರ ಮುಖಗಳು ಪ್ರಸನ್ನವಾಗಿಯೇ ಇದೆ. ಆದ್ದರಿಂದ ಈ ಜಲವು ವಿಷದಿಂದ ದೂಷಿತವಲ್ಲ ಎಂದು ನಾನು ತಿಳಿಯುತ್ತೇನೆ.
ಏಕೈಕಶಶ್ಚೌಘಬಲಾನಿಮಾನ್ ಪುರುಷಸತ್ತಮಾನ್ |
ಕೋಽನ್ಯಃ ಪ್ರತಿ ಸಮಾಸೇನ ಕಾಲಾಂತಕಯಮಾದೃತೇ ॥13॥
ಈ ನನ್ನ ತಮ್ಮಂದಿರಲ್ಲಿ ಪ್ರತಿಯೊಬ್ಬರೂ ಅಪಾರವಾದ ಬಲವುಳ್ಳ ಪುರುಷ ಶ್ರೇಷ್ಠರು. ಯಮನನ್ನು ಬಿಟ್ಟು ಇವರೆಲ್ಲರನ್ನೂ ಯಾರು ಒಟ್ಟಿಗೆ ಎದುರಿಸಿರಬಹುದು?
ಏತೇನ ವ್ಯವಸಾಯೇನ ತತ್ತೋಯಂ ವ್ಯವಗಾಢವಾನ್ |
ಗಾಹಮಾನಶ್ಚ ತತ್ತೋಯಮಂತರಿಕ್ಷಾತ್ ಸ ಶುಶ್ರುವೇ ॥14॥
ಈ ನಿರ್ಧಾರದೊಂದಿಗೆ ಆ ನೀರಿನಲ್ಲಿ ಇಳಿದನು. ನೀರಿನಲ್ಲಿ ಇಳಿಯುತ್ತಿರುವಂತೆಯೇ ಅಂತರಿಕ್ಷದಿಂದ ಒಂದು ವಾಣಿಯು ಕೇಳಿ ಬಂದಿತು.
ಯಕ್ಷಃ
ಅಹಂ ಬಕಃ ಶೈವಲಮತ್ಸ್ಯಭಕ್ಷೋ
ನೀತಾ ಮಯಾ ಪ್ರೇತವಶಂ ತವಾನುಜಾಃ |
ತ್ವಂ ಪಂಚಮೋ ಭವಿತಾ ರಾಜಪುತ್ರ
ನ ಚೇತ್ಪ್ರಶ್ನಾನ್ ಪೃಚ್ಛತೋ ವ್ಯಾಕರೋಷಿ ॥15॥
ಯಕ್ಷ ನಾನು ನೀರಿನ ಪಾಚಿ (ಶೈವಲ) ಮತ್ತು ಮತ್ಸ್ಯಗಳನ್ನು ಭಕ್ಷಿಸುವ ಒಂದು ಬಕಪಕ್ಷಿ. ನಾನು ನಿನ್ನ ತಮ್ಮಂದಿರನ್ನು ಪ್ರೇತವಶರಾಗಿ ಮಾಡಿದ್ದೇನೆ. ರಾಜಪುತ್ರನೇ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳದಿದ್ದರೆ ನೀನು ಐದನೆಯವನಾಗುವಿ.
ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ |
ಪ್ರಶ್ನಾನುಕ್ತ್ವಾ ತು ಕೌಂತೇಯ ತತಃ ಪಿಬ ಹರಸ್ವ ಚ ॥16॥
ಪ್ರೀತಿಪಾತ್ರನೇ, ಸಾಹಸವನ್ನು ಮಾಡಬೇಡ. ಈ ಸರೋವರವು ನನಗೆ ಮೊದಲೇ ಸೇರಿದುದು. ಕುಂತೀಪುತ್ರನೇ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ಅನಂತರ ನೀರನ್ನು ಕುಡಿದು ತೆಗೆದುಕೊಂಡು (ಕರೆದುಕೊಂಡು) ಹೋಗು.
ಯುಧಿಷ್ಠಿರಃ

ರುದ್ರಾಣಾಂ ವಾ ವಸೂನಾಂ ವಾ ಮಾರುತಾನಾಂ ವಾ ಪ್ರಧಾನಧೃಕ್ |
ಪೃಚ್ಛಾಮಿ ಕೋ ಭವಾನ್ದೇವೋ ನೈತಚ್ಛಕುನಿನಾ ಕೃತಮ್ ॥17॥
ಯುಧಿಷ್ಠಿರ ರುದ್ರರ, ವಸುಗಳ ಅಥವಾ ಮರುತ್ತುಗಳ ಪ್ರಧಾನವೇಷವನ್ನು ಧರಿಸಿರಬಹುದಾದ ನೀನು ಯಾವ ದೇವತೆ ಎಂದು ಕೇಳುತ್ತಿದ್ದೇನೆ. ಈ ಕಾರ್ಯವನ್ನು ಒಂದು ಪಕ್ಷಿಯು ಮಾಡಲು ಸಾಧ್ಯವಿಲ್ಲ.
ಹಿಮವಾನ್ ಪಾರಿಯಾತ್ರಶ್ಚ ವಿಂಧ್ಯೋ ಮಲಯ ಏವ ಚ |
ಚತ್ವಾರಃ ಪರ್ವತಾಃ ಕೇನ ಪಾತಿತಾ ಧರಣೀತಳೇ ॥18॥
ಹಿಮಾಲಯ, ಪಾರಿಯಾತ್ರ, ವಿಂಧ್ಯ, ಮಲಯ ಈ ನಾಲ್ಕು ಪರ್ವತಗಳು ಯಾರಿಂದ ಭೂಮಿಯಲ್ಲಿ ಬೀಳಿಸಲ್ಪಟ್ಟವು?
ಅತೀವ ತೇ ಮಹತ್ಕರ್ಮ ಕೃತಂ ಚ ಬಲಿನಾಂ ವರ |
ಯಾನ್ನ ದೇವಾ ನ ಗಂಧರ್ವಾ ನಾಸುರಾ ನ ಚ ರಾಕ್ಷಸಾಃ |
ವಿಷಹೇರನ್ಮಹಾಬುದ್ಧೇ ಕೃತಂ ಹ್ಯೇತನ್ಮಹಾದ್ಭುತಮ್ |
ವಿನಿಘ್ನತಾ ಮಹೇಷ್ವಾಸಾಂಶ್ಚತುರೋಽಪಿ ಮಮಾತ್ಮಜಾನ್ ॥19॥
ಬಲಿಷ್ಠರಲ್ಲಿ ಶ್ರೇಷ್ಠನೇ, ಯಾರನ್ನು ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ, ರಾಕ್ಷಸರಾಗಲೀ, ಮಹಾಯುದ್ಧದಲ್ಲಿ ಎದುರಿಸಲು ಸಾಧ್ಯವಿಲ್ಲವೋ ಅಂತಹ ಮಹಾಧನುರ್ಧಾರಿಗಳಾದ ನನ್ನ ತಮ್ಮಂದಿರನ್ನು ಕೆಡವಿ ನೀನು ಅದ್ಭುತವಾದ ಮಹಾಕಾರ್ಯವನ್ನು ಮಾಡಿದ್ದೀಯೆ.
ನ ತೇ ಜಾನಾಮಿ ಯತ್ ಕಾರ್ಯಂ ನಾಭಿಜಾನಾಮಿ ಕಾಂಕ್ಷಿತಮ್ |
ಕೌತೂಹಲಂ ಮಹಜ್ಜಾತಂ ಸಾಧ್ವಸಂ ಚಾಗತಂ ಮಮ ॥20॥
ನಿನಗೆ ಇದರಿಂದ ಏನಾಗಬೇಕಾಗಿದೆ ಎಂದು ನಾನು ತಿಳಿಯುವುದಿಲ್ಲ. ನಿನಗೆ ಅಭಿಪ್ರೇತವಾದುದು ಏನು ಎಂದೂ ತಿಳಿಯಲಾರೆ. ನನಗೆ ದೊಡ್ಡ ಕುತೂಹಲವೂ ಮತ್ತು ಭಯವೂ ಉಂಟಾಗಿದೆ.
ಯೇನಾಸ್ಮ್ಯುದ್ವಿಗ್ನಹೃದಯಃ ಸಮುತ್ಪನ್ನಶಿರೋಜ್ವರಃ |
ಪೃಚ್ಛಾಮಿ ಭಗವಂಸ್ತಸ್ಮಾತ್ ಕೋ ಭವಾನಿಹ ತಿಷ್ಠತಿ ॥21॥
ಅದರಿಂದ ನಾನು ಉದ್ವಿಗ್ನ ಮನಸ್ಸುಳ್ಳವನಾಗಿ ಶಿರೋವೇದನೆಯನ್ನು ಅನುಭವಿಸುತ್ತಿದ್ದೇನೆ. ಪೂಜ್ಯನೇ, ಆದ್ದರಿಂದ ಇಲ್ಲಿರುವ ನೀನು ಯಾರು ಎಂದು ಕೇಳುತ್ತಿದ್ದೇನೆ.
ಯಕ್ಷಃ
ಯಕ್ಷೋಽಹಮಸ್ಮಿ ಭದ್ರಂ ತೇ ನಾಸ್ಮಿ ಪಕ್ಷೀ ಜಲೇಚರಃ |
ಮಯೈತೇ ನಿಹತಾಃ ಸರ್ವೇ ಭ್ರಾತರಸ್ತೇ ಮಹೌಜಸಃ ॥22॥
ಯಕ್ಷ ನಿನಗೆ ಮಂಗಳವಾಗಲಿ. ನಾನು ಒಬ್ಬ ಯಕ್ಷ. ಜಲಚರಪಕ್ಷಿಯಲ್ಲ. ಮಹಾಪರಾಕ್ರಮಶಾಲಿಗಳಾದ ನಿನ್ನ ತಮ್ಮಂದಿರೆಲ್ಲರೂ ನನ್ನಿಂದಲೇ ನಿಹತರಾಗಿದ್ದಾರೆ.
ವೈಶಂಪಾಯನಃ
ತತಸ್ತಾಮಶಿವಾಂ ಶ್ರುತ್ವಾ ವಾಚಂ ಸ ಪರುಷಾಕ್ಷರಾಮ್ |
ಯಕ್ಷಸ್ಯ ಬ್ರುವತೋ ರಾಜನ್ನುಪಾಕ್ರಮ್ಯ ತದಾ ಸ್ಥಿತಃ ॥23॥
ವೈಶಂಪಾಯನ ರಾಜನೇ, ಆಗ ಆ ಅಮಂಗಳವಾದ ಮತ್ತು ಕ್ರೂರವಾದ ಮಾತುಗಳನ್ನು ಯಕ್ಷನು ಆಡುವುದನ್ನು ಕೇಳಿ ಧರ್ಮರಾಜನು (ನೀರಿನಿಂದ) ಹಿಂದೆ ಸರಿದು ನಿಂತನು.
ವಿರೂಪಾಕ್ಷಂ ಮಹಾಕಾಯಂ ಯಕ್ಷಂ ತಾಳಸಮುಚ್ಛ್ರಯಮ್ |
ಜ್ವಲನಾರ್ಕಪ್ರತೀಕಾಶಮಧೃಷ್ಯಂ ಪರ್ವತೋಪಮಮ್ ॥24॥
ವೃಕ್ಷಮಾಶ್ರಿತ್ಯ ತಿಷ್ಠಂತಂ ದದರ್ಶ ಭರತರ್ಷಭಃ |
ಮೇಘಗಂಭೀರನಾದೇನ ತರ್ಜಯಂತಂ ಮಹಾಸ್ವನಮ್ |
ಉವಾಚ ಯಕ್ಷಃ ಕೌಂತೇಯಂ ಭ್ರಾತೃಶೋಕಾಭಿಪೀಡಿತಮ್ ॥25॥
ಭರತರ್ಷಭನಾದ ಧರ್ಮರಾಜನು ವಿರೂಪಾಕ್ಷನೂ, ಮಹಾಕಾಯನೂ, ತಾಳವೃಕ್ಷದಂತೆ ಉನ್ನತನಾದವನೂ, ಜ್ವಲಿಸುವ ಸೂರ್ಯನಂತೆ ಪ್ರಕಾಶವುಳ್ಳವನೂ, ಅಧೃಷ್ಯನೂ, ಪರ್ವತಸದೃಶನೂ, ಒಂದು ವೃಕ್ಷವನ್ನು ಒರಗಿಕೊಂಡು ನಿಂತಿರುವವನೂ, ತನ್ನ ಮೇಘ ಗಂಭೀರವಾದ ಮಹಾಸ್ವನವುಳ್ಳ ನಾದದಿಂದ ಹೆದರಿಸುತ್ತಿರುವವನೂ ಆದ ಯಕ್ಷನನ್ನು ನೋಡಿದನು. ಆಗ ಯಕ್ಷನು ಭ್ರಾತೃಶೋಕಪೀಡಿತನಾದ ಕೌಂತೇಯನಾದ ಧರ್ಮರಾಜನನ್ನು ಕುರಿತು ಮಾತನಾಡಿದನು.
ಯಕ್ಷಃ
ಇಮೇ ತೇ ಭ್ರಾತರೋ ರಾಜನ್ ವಾರ್ಯಮಾಣಾ ಮಯಾಽಸಕೃತ್ |
ಬಲಾತ್ತೋಯಂ ಜಿಹೀರ್ಷಂತಸ್ತತೋ ವೈ ಮೃದಿತಾ ಮಯಾ ॥26॥
ಯಕ್ಷ ಎಲೈ ರಾಜನೇ, ಈ ನಿನ್ನ ತಮ್ಮಂದಿರು ನಾನು ಅನೇಕ ಬಾರಿ ನಿವಾರಣೆ ಮಾಡಿದರೂ ಬಲಾತ್ಕಾರದಿಂದ ಜಲವನ್ನು ತೆಗೆದುಕೊಳ್ಳಲು ಹೋದರು. ಆದ್ದರಿಂದ ನಾನು ಅವರನ್ನು ಮರ್ದಿಸಿದ್ದೇನೆ.
ನ ಪೇಯಮುದಕಂ ರಾಜನ್ ಪ್ರಾಣಾನಿಹ ಪರೀಪ್ಸತಾ |
ಪಾರ್ಥ ಮಾ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ ॥27॥
ಪ್ರಶ್ನಾನುಕ್ತ್ವಾ ತು ಕೌಂತೇಯ ತತಃ ಪಿಬ ಹರಸ್ವ ಚ |
ರಾಜನೇ, ಪ್ರಾಣಗಳನ್ನು ಉಳಿಸಿಕೊಳ್ಳಬೇಕೆಂದು ಬಯಸಿದರೆ ಈ ನೀರನ್ನು ಕುಡಿಯಬಾರದು. ಕುಂತೀಪುತ್ರನೇ, ಸಾಹಸವನ್ನು

ಮಾಡಬೇಡ. ಈ ಸರೋವರವು ಮೊದಲಿನಿಂದಲೂ ನನಗೇ ಸೇರಿದುದು. ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ನೀರನ್ನು ಕುಡಿದು, ತೆಗೆದುಕೊಂಡು ಹೋಗು.
ಯುಧಿಷ್ಠಿರಃ
ನ ಚಾಹಂ ಕಾಮಯೇ ಯಕ್ಷ ತವ ಪೂರ್ವಪರಿಗ್ರಹಮ್ ॥28॥
ಕಾಮಂ ನೈತತ್ ಪ್ರಶಂಸಂತಿ ಸಂತೋ ಹಿ ಪುರುಷಾಃ ಸದಾ |
ಯದಾತ್ಮನಾ ಸ್ವಮಾತ್ಮಾನಂ ಪ್ರಶಂಸೇತ್ ಪುರುಷರ್ಷಭ ॥29॥
ಯಥಾಪ್ರಜ್ಞಂ ತು ತೇ ಪ್ರಶ್ನಾನ್ ಪ್ರತಿವಕ್ಷ್ಯಾಮಿ ಪೃಚ್ಛ ಮಾಮ್ ॥30॥
ಯುಧಿಷ್ಠಿರ ಯಕ್ಷನೇ, ಮೊದಲಿನಿಂದಲೂ ನಿನಗೆ ಅಧೀನವಾದ ಈ ಜಲವು ನನಗೆ ಬೇಕಾಗಿಲ್ಲ. ಎಲೈ ಪುರುಷರ್ಷಭನೇ, ಹೀಗೆ ತಮ್ಮನ್ನು ತಾವೇ ಹೊಗಳಿಕೊಳ್ಳುವುದನ್ನು ಸತ್ಪುರುಷರು ಎಂದೂ ಪ್ರಶಂಸಿಸುವುದಿಲ್ಲ. ನಿನ್ನ ಪ್ರಶ್ನೆಗಳಿಗೆ ನನ್ನ ಬುದ್ಧಿಗೆ ತಿಳಿದಂತೆ ಉತ್ತರವನ್ನು ಹೇಳುವೆನು. ನನ್ನನ್ನು ಕೇಳು.
ಯಕ್ಷಃ
ಕಿಂ ಸ್ವಿದಾದಿತ್ಯಮುನ್ನಯತಿ ಕೇ ಚ ತಸ್ಯಾಭಿತಶ್ಚರಾಃ |
ಕಶ್ಚೈನಮಸ್ತಂ ನಯತಿ ಕಸ್ಮಿಂಶ್ಚ ಪ್ರತಿತಿಷ್ಠತಿ ॥31॥
ಯಕ್ಷ ಆದಿತ್ಯನನ್ನು ಯಾವ ವಸ್ತುವು ಮೇಲಕ್ಕೆ ತೆಗೆದುಕೊಂಡು ಹೋಗುತ್ತದೆ? ಆದಿತ್ಯನ ಸುತ್ತಲೂ ಚಲಿಸುವವರು ಯಾರು? ಆದಿತ್ಯನನ್ನು ಅಸ್ತಮಯಕ್ಕೆ ಕೊಂಡೊಯ್ಯುವವರು ಯಾರು? ಮತ್ತು ಆದಿತ್ಯನು ಎಲ್ಲಿ ಪ್ರತಿಷ್ಠಿತನಾಗಿದ್ದಾನೆ?
ಯುಧಿಷ್ಠಿರಃ
ಬ್ರಹ್ಮಾ ಹ್ಯಾದಿತ್ಯಮುನ್ನಯತಿ ದೇವಾಸ್ತಸ್ಯಾಭಿತಶ್ಚರಾಃ |
ಧರ್ಮಶ್ಚಾಸ್ತಂ ನಯತಿ ಚ ಸತ್ಯೇ ಚ ಪ್ರತಿತಿಷ್ಠತಿ ॥32॥
ಸೂರ್ಯೋದಯಕ್ಕಿಂತ ಮೊದಲು ಪ್ರತಿಬಂಧಕರಾದ ರಾಕ್ಷಸರ ವಧೆಗಾಗಿ ಗಾಯತ್ರಿಯಿಂದ ಅರ್ಘ್ಯವನ್ನು ಕೊಡುವ ಬ್ರಾಹ್ಮಣ ಕುಲವು ಆದಿತ್ಯನನ್ನು ಮೇಲೊಯ್ಯುತ್ತದೆ. ಆದಿತ್ಯನ ಸುತ್ತಲೂ ದೇವತೆಗಳು ಚಲಿಸುತ್ತಾರೆ. ಸಾಯಂಕಾಲಕ್ಕಿಂತ ಮುಂಚೆಯೇ ಪ್ರತಿಬಂಧಕರಾದ ರಾಕ್ಷಸರ ವಿನಾಶಕ್ಕಾಗಿ ಕೊಡುವ ಗಾಯತ್ರಿ ಮಂತ್ರ ಸಹಿತವಾದ ಅರ್ಘ್ಯರೂಪವಾದ ಧರ್ಮವು ಸೂರ್ಯನನ್ನು ಅಸ್ತಮಯಕ್ಕೆ ಕರೆದುಕೊಂಡು ಹೋಗುತ್ತದೆ. ಆದಿತ್ಯನು ಸತ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ.
ಯಕ್ಷಃ
ಕೇನಸ್ವಿಚ್ಛ್ರೋತ್ರಿಯೋ ಭವತಿ ಕೇನಸ್ವಿದ್ ವಿಂದತೇ ಮಹತ್ |
ಕೇನಸ್ವಿದ್ ದ್ವಿತೀಯವಾನ್ ಭವತಿ ರಾಜನ್ ಕೇನ ಚ ಬುದ್ಧಿಮಾನ್ ॥
ಯಕ್ಷ ಮನುಷ್ಯನು ಯಾವುದರಿಂದ ಶ್ರೋತ್ರಿಯನಾಗುತ್ತಾನೆ? ಯಾವುದರಿಂದ ಮಹಾಫಲವನ್ನು ಪಡೆಯುತ್ತಾನೆ? ಯಾವುದರಿಂದ ಸದ್ವಿತೀಯನಾಗುತ್ತಾನೆ? ರಾಜನೇ, ಯಾವುದರಿಂದ ಬುದ್ಧಿವಂತನಾಗುತ್ತಾನೆ?
ಯುಧಿಷ್ಠಿರಃ
ಶ್ರುತೇನ ಶ್ರೋತ್ರಿಯೋ ಭವತಿ ತಪಸಾ ವಿಂದತೇ ಮಹತ್ |
ಧೃತ್ಯಾ ದ್ವಿತೀಯವಾನ್ ಭವತಿ ಬುದ್ಧಿಮಾನ್ ವೃದ್ಧಸೇವಯಾ ॥34॥
ಯುಧಿಷ್ಠಿರ ವೇದಾಧ್ಯಯನದಿಂದ ಶ್ರೋತ್ರಿಯನಾಗುತ್ತಾನೆ. ತಪಸ್ಸಿನಿಂದ ಮಹಾಫಲವನ್ನು ಪಡೆಯುತ್ತಾನೆ. ಧೈರ್ಯದಿಂದ ಸದ್ವಿತೀಯನಾಗುತ್ತಾನೆ. ಹಿರಿಯರ ಸೇವೆಯಿಂದ ಬುದ್ಧಿವಂತನಾಗುತ್ತಾನೆ.
ಯಕ್ಷಃ
ಕಿಂ ಬ್ರಾಹ್ಮಣಾನಾಂ ದೇವತ್ವಂ ಕಶ್ಚ ಧರ್ಮಃ ಸತಾಮಿವ |
ಕಶ್ಚೈಷಾಂ ಮಾನುಷೋ ಭಾವಃ ಕಿಮೇಷಾಮಸತಾಮಿವ ॥35॥
ಯಕ್ಷ ಬ್ರಾಹ್ಮಣರಿಗೆ ದೇವತ್ವವು ಯಾವುದು? ಸಜ್ಜನರಂತಿರುವ ಧರ್ಮವು ಯಾವುದು? ಮನುಷ್ಯರಿಗೆ ಸಮಾನವಾದ ಅವರ ಅಭಿಪ್ರಾಯವು ಯಾವುದು? ಅಸಜ್ಜನರಿಗೆ ಸಾಧಾರಣವಾದ ನಡತೆಯು ಯಾವುದು?
ಯುಧಿಷ್ಠಿರಃ
ಸ್ವಾಧ್ಯಾಯ ಏಷಾಂ ದೇವತ್ವಂ ತಪ ಏಷಾಂ ಸತಾಮಿವ |
ಮರಣಂ ಮಾನುಷೋ ಭಾವಃ ಪರಿತ್ಯಾಗೋಽಸತಾಮಿವ ॥36॥
ಯುಧಿಷ್ಠಿರ ವೇದಾಧ್ಯಯನವು ಇವರಿಗೆ ದೇವಸ್ವಭಾವವಾದುದು. ತಪಸ್ಸು ಸಜ್ಜನರಿಗೆ ಸಮಾನವಾದ ಧರ್ಮ. ಮರಣವು ಅವರ ಮಾನುಷ ಭಾವ. ಪರನಿಂದನೆಯು ಅಸಜ್ಜನರಿಗೆ ಸಮಾನವಾದ ಧರ್ಮ.
ಯಕ್ಷಃ
ಕಿಂ ಕ್ಷತ್ರಿಯಾಣಾಂ ದೇವತ್ವಂ ಕಶ್ಚ ಧರ್ಮಃ ಸತಾಮಿವ |
ಕಶ್ಚೈಷಾಂ ಮಾನುಷೋ ಭಾವಃ ಕಿಮೇಷಾಮಸತಾಮಿವ ॥37॥
ಯಕ್ಷ ಕ್ಷತ್ರಿಯರಿಗೆ ದೇವತ್ವವು ಯಾವುದು? ಅವರಿಗೆ ಸಜ್ಜನರಿಗೆ ಸಮಾನವಾದ ಧರ್ಮವು ಯಾವುದು? ಮಾನುಷ ಭಾವವು ಯಾವುದು? ಅವರಿಗೆ ಅಸಜ್ಜನರಿಗೆ ಸಮಾನವಾದ ಧರ್ಮವು (ದೂಷಣವು) ಯಾವುದು?
ಯುಧಿಷ್ಠಿರಃ
ಇಷ್ವಸ್ತ್ರಮೇಷಾಂ ದೇವತ್ವಂ ಯಜ್ಞ ಏಷಾಂ ಸತಾಮಿವ |
ಭಯಂ ವೈ ಮಾನುಷೋಭಾವಃ ಪರಿತ್ಯಾಗೋಽಸತಾಮಿವ ॥38॥

ಯುಧಿಷ್ಠಿರ ಸರ್ವಜನ ಪೂಜ್ಯತ್ವವು ಕ್ಷತ್ರಿಯರ ದೇವತ್ವವು. ಯಜ್ಞವು ಸಜ್ಜನರಿಗೆ ಸಮಾನವಾದ ಅವರ ಧರ್ಮ. ಭಯವು ಮಾನುಷ ಭಾವ. ಅಸಜ್ಜನರಿಗೆ ಇರುವಂತಹ ಧರ್ಮವು ಪರಿತ್ಯಾಗ (ಬ್ರಾಹ್ಮಣರಿಗೂ ಒಂದು ಪರಿತ್ಯಾಗವಿದೆ. ಆ ಪರಿತ್ಯಾಗವೆಂದರೆ ಪುತ್ರಮಿತ್ರಕಳತಾದಿಗಳನ್ನು ಪರಿತ್ಯಜಿಸಿ ಸಂನ್ಯಾಸಾಶ್ರಮವನ್ನು ಸ್ವೀಕಾರ ಮಾಡುವುದು. ಅದು ಅವರ ಶ್ರೇಷ್ಠವಾದ ಧರ್ಮ. ಪರಿತ್ಯಾಗ ಎಂದರೆ ಅಲ್ಲಿ ಮಹಾತ್ಯಾಗ ಎಂದು ಅರ್ಥ. ಕ್ಷತ್ರಿಯರಿಗೆ ರಾಜ್ಯವನ್ನು ಬಿಟ್ಟು ತಪಸ್ಸಿಗೆ ಹೋಗುವುದು ಪರಿತ್ಯಾಗ ಮತ್ತು ಮಹಾಧರ್ಮ. ಆದರೆ ಸಜ್ಜನರನ್ನು ಪರಿತ್ಯಾಗಮಾಡುವುದು ಬ್ರಾಹ್ಮಣರಿಗಾಗಲೀ, ಕ್ಷತ್ರಿಯರಿಗಾಗಲೀ ಇಲ್ಲದಿರುವ ಅಸಜ್ಜನರಿಗೆ ಮಾತ್ರ ಸಮಾನವಾದ ಧರ್ಮ).

ಯಕ್ಷಃ
ಕಿಮೇಕಂ ಯಜ್ಞಿಯಂ ಸಾಮ ಕಿಮೇಕಂ ಯಜ್ಞಿಯಂ ಯಜುಃ |
ಕಾ ಚೈಷಾ ವೃಶ್ಚತೇ ಯಜ್ಞಂ ಕಾಂ ಯಜ್ಞೋ ನಾತಿವರ್ತತೇ ॥39॥
ಯಕ್ಷ ಯಜ್ಞಯಂ ಸಾಮ ಎಂಬುದು ಯಾವುದು? ಯಜ್ಞಯ ಯಜುಸ್ಸು ಯಾವುದು? ಯಾವುದು ಯಜ್ಞವನ್ನು ನಾಶಮಾಡುತ್ತದೆ? ಯಜ್ಞವು ಯಾವುದನ್ನು ಮೀರುವುದಿಲ್ಲ?

ಯುಧಿಷ್ಠಿರಃ
ಪ್ರಾಣೋ ವೈ ಯಜ್ಞಿಯಂ ಸಾಮ ಮನೋ ವೈ ಯಜ್ಞಿಯಂ ಯಜುಃ
ವಾಗೇಷಾವೃಶ್ಚತೇಽಯಜ್ಞಂ ತಾಂ ಯಜ್ಞೋ ನಾತಿವರ್ತತೇ ॥40॥
ಯುಧಿಷ್ಠಿರ ಯಜ್ಞಯ ಸಾಮವೆಂದರೆ ಪ್ರಾಣ. ಯಜ್ಞಯ ಯಜುಸ್ಸು ಎಂದರೆ ಮನಸ್ಸು (ಯಾವ ಸಾಮವನ್ನು ಗಾನಮಾಡಿದರೆ, ಯಾವ ಯಜುಸ್ಸನ್ನು ಪಾಠಮಾಡಿದರೆ ಯಜ್ಞವಿರೋಧಿಗಳು ನಾಶವನ್ನು ಹೊಂದುತ್ತಾರೆಯೋ ಅದು ಯಜ್ಞೀಯ ಸಾಮ ಮತ್ತು ಯಜ್ಞೀಯ ಮನಸ್ಸು. ಅವು ಕ್ರಮವಾಗಿ ವಾಯುದೇವರು ಮತ್ತು ರುದ್ರದೇವರು ಎಂದು ತಿಳಿಯಬೇಕು). ವೇದವಾಕ್ಯವು ಅಯಜ್ಞನನ್ನು, ಅಂದರೆ ಯಜ್ಞವಿರೋಧಿಯನ್ನು ನಾಶಮಾಡುತ್ತದೆ. ಯಜ್ಞವು ಸಾಮ, ಯಜುಸ್ಸಿನ ಮಾತುಗಳನ್ನು ಮೀರುವುದಿಲ್ಲ.

ಯಕ್ಷಃ
ಕಿಂ ಸ್ವಿದಾವಪತಾಂ ಶ್ರೇಷ್ಠಂ ಕಿಂಸ್ವಿನ್ನಿವಪತಾಂ ವರಮ್ |
ಕಿಂಸ್ವಿತ್ ಪ್ರತಿಷ್ಠಮಾನಾನಾಂ ಕಿಂಸ್ವಿತ್ ಪ್ರಸವತಾಂ ವರಮ್ ॥41॥
ಯಕ್ಷ ಬೀಜಾವಾಪವನ್ನು ಮಾಡುವವರಿಗೆ ಯಾವುದು ಶ್ರೇಷ್ಠವಾದ ವಸ್ತು? ಬೀಜಾವಾಪ ಮಾಡುವವರಿಗೆ ತಮ್ಮ ಪ್ರಯತ್ನದಿಂದ ಪಡೆಯಬಹುದಾದ ಶ್ರೇಷ್ಠವಾದ ವಸ್ತುವು ಯಾವುದು? ಸಂಚರಿಸುವವುಗಳಲ್ಲಿ ಶ್ರೇಷ್ಠವಾದುದು ಯಾವುದು? ಹುಟ್ಟುವ ವಸ್ತುಗಳಲ್ಲಿ ಶ್ರೇಷ್ಠವಾದುದು ಯಾವುದು?

ಯುಧಿಷ್ಠಿರಃ
ವರ್ಷಮಾವಪತಾಂ ಶ್ರೇಷ್ಠಂ ಬೀಜಂ ನಿವಪತಾಂ ವರಮ್ |
ಗಾವಃ ಪ್ರತಿಷ್ಠಮಾನಾನಾಂ ಪುತ್ರಃ ಪ್ರಸವತಾಂ ವರಃ ॥42॥
ಯುಧಿಷ್ಠಿರ ಮಳೆಯು ಬೀಜಾವಾಪವನ್ನು ಮಾಡುವವರಿಗೆ ತಮ್ಮ ಪ್ರಯತ್ನದಿಂದ ಸಾಧ್ಯವಲ್ಲದ ಶ್ರೇಷ್ಠವಾದ ವಸ್ತು. ಬೀಜಗಳು ಬೀಜಾವಾಪ (ಬಿತ್ತುವವರಿಗೆ) ಮಾಡುವವರಿಗೆ ತಮ್ಮ ಪ್ರಯತ್ನ ಸಾಧ್ಯವಾದ ಶ್ರೇಷ್ಠವಾದ ವಸ್ತು. ಸಂಚರಿಸುವವುಗಳಲ್ಲಿ ಗೋವುಗಳು ಶ್ರೇಷ್ಠವಾದವು. ಜನಿಸುವವರಲ್ಲಿ ಪುತ್ರನು ಶ್ರೇಷ್ಠನಾದವನು.

ಯಕ್ಷಃ
ಇಂದ್ರಿಯಾರ್ಥಾನನುಭವನ್ ಬುದ್ಧಿಮಾಂಲ್ಲೋಕಪೂಜಿತಃ |
ಸಮ್ಮತಃ ಸರ್ವಭೂತಾನಾಮುಚ್ಛ್ವಸನ್ ಕೋ ನ ಜೀವತಿ ॥43॥
ಇಂದ್ರಿಯಾರ್ಥಗಳನ್ನು ಅನುಭವಿಸುತ್ತಾ ಮೇಧಾವಿಯೂ ಲೋಕಪೂಜಿತನೂ ಆಗಿದ್ದು, ಸರ್ವಭೂತಗಳಿಗೂ ಸಮ್ಮತನಾಗಿದ್ದು ಉಸಿರಾಡುವ ಯಾವನು ಜೀವಿಸುವುದಿಲ್ಲ?

ಯುಧಿಷ್ಠಿರಃ
ದೇವತಾತಿಥಿಭೃತ್ಯಾನಾಂ ಪಿತೄಣಾಮಾತ್ಮನಶ್ಚ ಯಃ |
ನ ನಿರ್ವಪತಿ ಪಂಚಾನಾಮುಚ್ಛ್ವಸನ್ನ ಸ ಜೀವತಿ ॥44॥
ಯುಧಿಷ್ಠಿರ ದೇವತೆಗಳು, ಅತಿಥಿಗಳು, ಭೃತ್ಯರು, ಪಿತೃಗಳು ಮತ್ತು ತಾನು ಈ ಐದುಜನರಿಗೆ ಯಾವನು ಯೋಗ್ಯವಾದ ಪೂಜೆಯನ್ನು ಸಲ್ಲಿಸುವುದಿಲ್ಲವೋ ಅವನು ಉಸಿರಾಡುತ್ತಿದ್ದರೂ ಜೀವಿಸುವುದಿಲ್ಲ.

ಯಕ್ಷಃ
ಕಿಂಸ್ವಿದ್ಗುರುತರಂ ಭೂಮೇಃ ಕಿಂಸ್ವಿದುಚ್ಚತರಂ ಚ ಖಾತ್ |
ಕಿಂಸ್ವಿಚ್ಛೀಘ್ರತರಂ ವಾಯೋಃ ಕಿಂಸ್ವಿದ್ ಬಹುತರಂ ನೃಣಾಮ್(ತೃಣಾತ್) ॥
ಭೂಮಿಗಿಂತ ಭಾರವಾದುದು ಯಾವುದು? ಆಕಾಶಕ್ಕಿಂತ ಎತ್ತರವಾದುದು ಯಾವುದು? ವಾಯುವಿಗಿಂತ ಶೀಘ್ರವಾದುದು ಯಾವುದು? ಮನುಷ್ಯರಿಗೆ ಬಹುತರವಾದುದು ಯಾವುದು?

ಯುಧಿಷ್ಠಿರಃ
ಮಾತಾ ಗುರುತರಾ ಭೂಮೇಃ ಖಾತ್ ಪಿತೋಚ್ಚತರಸ್ತಥಾ |
ಮನಃ ಶೀಘ್ರತರಂ ವಾತಾಚ್ಚಿಂತಾ ಬಹುತರೀ ನೃಣಾಮ್ (ತೃಣಾತ್) ॥
ಯುಧಿಷ್ಠಿರ ತಾಯಿಯು ಭೂಮಿಗಿಂತ ಭಾರಳಾದವಳು. ತಂದೆಯು ಆಕಾಶಕ್ಕಿಂತಲೂ ಎತ್ತರವಾದವನು. ಮನಸ್ಸು ವಾಯುವಿಗಿಂತ ಶೀಘ್ರವಾದುದು. ಮನುಷ್ಯರಿಗೆ ಚಿಂತೆಯು ಬಹುತರವಾದುದು (ಅನೇಕ ಚಿಂತೆಗಳು ಯಾವಾಗಲೂ ಇರುತ್ತವೆ).

ಯಕ್ಷಃ
ಕಿಂಸ್ವಿತ್ಸುಪ್ತಂ ನ ನಿಮಿಷತಿ ಕಿಂಸ್ವಿಜ್ಜಾತಂ ನ ಚೋಪತಿ |
ಕಸ್ಯಸ್ವಿದ್ಧೃದಯಂ ನಾಸ್ತಿ ಕಿಂಸ್ವಿದ್ ವೇಗೇನ ವರ್ಧತೇ ॥47॥
ಯಕ್ಷ ಯಾವುದು ನಿದ್ರಿಸುವಾಗ ಕಣ್ಣನ್ನು ಮುಚ್ಚುವುದಿಲ್ಲ? ಯಾವುದು ಜನಿಸಿದಾಗ ಶಿಶುವಿನಂತೆ ಚಲಿಸುವುದಿಲ್ಲ? ಯಾವುದಕ್ಕೆ ಹೃದಯವಿಲ್ಲ? ಯಾವುದು ವೇಗದಿಂದ ವರ್ಧಿಸುತ್ತದೆ?
ಯುಧಿಷ್ಠಿರಃ
ಮತ್ಸ್ಯಃ ಸುಪ್ತೋ ನ ನಿಮಿಷತ್ಯಂಡಂ ಜಾತಂ ನ ಚೋಪತಿ |
ಅಶ್ಮನೋ ಹೃದಯಂ ನಾಸ್ತಿ ನದೀ ವೇಗೇನ ವರ್ಧತೇ ॥48॥
ಯುಧಿಷ್ಠಿರ ಮೀನು ನಿದ್ರಿಸುವಾಗ ಕಣ್ಣುಮುಚ್ಚುವುದಿಲ್ಲ. ಮೊಟ್ಟೆಯು ಜನಿಸಿದಾಗ ಶಿಶುವಿನಂತೆ ಚಲಿಸುವುದಿಲ್ಲ. ಶಿಲೆಗೆ ಹೃದಯವಿಲ್ಲ. ನದಿಯು ವೇಗದಿಂದ ಹೆಚ್ಚಾಗುತ್ತದೆ.
ಯಕ್ಷಃ
ಕಿಂಸ್ವಿತ್ ಪ್ರವಸತೋ ಮಿತ್ರಂ ಕಿಂಸ್ವಿನ್ಮಿತ್ರಂ ಗೃಹೇ ಸತಃ |
ಆತುರಸ್ಯ ಚ ಕಿಂ  ಮಿತ್ರಂ ಕಿಂಸ್ವಿನ್ಮಿತ್ರಂ ಮರಿಷ್ಯತಃ ॥49॥
ಯಕ್ಷ ಪ್ರವಾಸವನ್ನು ಮಾಡುವವನಿಗೆ ಯಾವುದು ಮಿತ್ರ? (ಸಹಾಯವನ್ನು ಮಾಡುವವನು) ಮನೆಯಲ್ಲಿ ಇರುವವನಿಗೆ ಯಾವುದು ಮಿತ್ರ? ರೋಗಿಯಾದವನಿಗೆ ಯಾವುದು ಮಿತ್ರ? ಮರಣವನ್ನು ಹೊಂದುವವನಿಗೆ ಯಾವುದು ಮಿತ್ರ?
ಯುಧಿಷ್ಠಿರಃ
ವಿದ್ಯಾ(ಸಾರ್ಥಃ) ಪ್ರವಸತೋ ಮಿತ್ರಂ ಭಾರ್ಯಾ ಮಿತ್ರಂ ಗೃಹೇ ಸತಃ |
ಆತುರಸ್ಯ ಭಿಷಗ್ ಮಿತ್ರಂ ದಾನಂ ಮಿತ್ರಂ ಮರಿಷ್ಯತಃ ॥50॥
ಯುಧಿಷ್ಠಿರ ಪ್ರವಾಸವನ್ನು ಮಾಡುವವನಿಗೆ ವಿದ್ಯೆಯು ಮಿತ್ರ. ಮನೆಯಲ್ಲಿ ಇರುವವನಿಗೆ ಪತ್ನಿಯು ಮಿತ್ರಳು. ರೋಗಿಯಾದವನಿಗೆ ವೈದ್ಯನು ಮಿತ್ರ. ಮರಣವನ್ನು ಹೊಂದುವವನಿಗೆ ದಾನವು ಮಿತ್ರ.
ಯಕ್ಷಃ
ಕೋಽತಿಥಿಃ ಸರ್ವಭೂತಾನಾಂ ಕಿಂ ಸ್ವಿದ್ಧರ್ಮಂ ಸನಾತನಮ್ |
ಅಮೃತಂ ಕಿಂ ಸ್ವಿದ್ರಾಜೇಂದ್ರ ಕಿಂ ಸ್ವಿತ್ಸರ್ವಮಿದಂ ಜಗತ್ ॥51॥
ಯಕ್ಷ ಸರ್ವಭೂತಗಳಿಗೆ ಅತಿಥಿಯು ಯಾವನು? ಸನಾತನ ಧರ್ಮವು ಯಾವುದು? ರಾಜೇಂದ್ರನೇ, ಅಮೃತವು ಯಾವುದು? ಈ ಸರ್ವಜಗತ್ತು ಯಾವುದು?
ಯುಧಿಷ್ಠಿರಃ
ಅತಿಥಿಃ ಸರ್ವಭೂತಾನಾಮಗ್ನಿಃ ಸೋಮೋ ಗವಾಮೃತಮ್ |
ಸನಾತನೋಽಮೃತೋ ಧರ್ಮೋ ವಾಯುಃ ಸರ್ವಮಿದಂ ಜಗತ್ ॥
ಯುಧಿಷ್ಠಿರ ಅಗ್ನಿಯು ಎಲ್ಲರಿಗೂ ಅತಿಥಿ. ಗೋರಸಗಳಾದ ಕ್ಷೀರಾದಿಗಳು ಅಮೃತ. ವೇದಪ್ರತಿಪಾದ್ಯವಾದುದು ಸನಾತನವಾದ ಧರ್ಮ. ಎಲ್ಲ ಜಗತ್ತೂ ವಾಯ್ವಾತ್ಮಕವಾಗಿದೆ.
ಯಕ್ಷಃ
ಕಿಂಸ್ವಿದೇಕೋ ವಿಚರತೇ ಜಾತಃ ಕೋ ಜಾಯತೇ ಪುನಃ |
ಕಿಂಸ್ವಿದ್ಧಿಮಸ್ಯ ಭೈಷಜ್ಯಂ ಕಿಂಸ್ವಿದಾವಪನಂ ಮಹತ್ ॥52॥
ಯಕ್ಷ ಯಾವುದು ಒಂದೇ ಚಲಿಸುತ್ತದೆ? ಜನಿಸಿದ ಯಾವುದು ಪುನಃ ಜನಿಸುತ್ತದೆ? ಹಿಮಕ್ಕೆ ಯಾವುದು ಔಷಧಿ? ಬೀಜಾವಪನವನ್ನು ಮಾಡುವ ದೊಡ್ಡ ವಸ್ತುವು ಯಾವುದು?
ಯುಧಿಷ್ಠಿರಃ
ಸೂರ್ಯ ಏಕೋ ವಿಚರತೇ ಚಂದ್ರಮಾ ಜಾಯತೇ ಪುನಃ |
ಅಗ್ನಿರ್ಹಿಮಸ್ಯ ಭೈಷಜ್ಯಂ ಭೂಮಿರಾವಪನಂ ಮಹತ್ ॥53॥
ಯುಧಿಷ್ಠಿರ ಸೂರ್ಯನು ಒಬ್ಬನೇ ಸಂಚರಿಸುತ್ತಾನೆ. ಚಂದ್ರನು ಪುನಃ ಪುನಃ ಹುಟ್ಟುತ್ತಾನೆ. ಅಗ್ನಿಯು ಹಿಮಕ್ಕೆ ಔಷಧಿ. ಭೂಮಿಯು ದೊಡ್ಡ ಆವಪನ (ಬಿತ್ತುವ ಸ್ಥಳ).
ಯಕ್ಷಃ
ಕಿಂಸ್ವಿದೇಕಪದಂ ಧರ್ಮ್ಯಂ ಕಿಂಸ್ವಿದೇಕಪದಂ ಯಶಃ |
ಕಿಂಸ್ವಿದೇಕಪದಂ ಸ್ವರ್ಗ್ಯಂ ಕಿಂಸ್ವಿದೇಕಪದಂ ಸುಖಮ್ ॥54॥
ಯಕ್ಷ ಒಂದು ಪದದಲ್ಲಿ ಧರ್ಮವೆಂದರೆ (ಧರ್ಮಸಾಧನ) ಯಾವುದು? ಒಂದು ಪದದಲ್ಲಿ ಯಶಸ್ಸು ಯಾವುದು? ಒಂದು ಪದದಲ್ಲಿ ಸ್ವರ್ಗಸಾಧನವು ಯಾವುದು? ಒಂದು ಪದದಲ್ಲಿ ಸುಖವು ಯಾವುದು?
ಯುಧಿಷ್ಠಿರಃ
ದಾಕ್ಷ್ಯಮೇಕಪದಂ ಧರ್ಮ್ಯಂ ದಾನಮೇಕಪದಂ ಯಶಃ |
ಸತ್ಯಮೇಕಪದಂ ಸ್ವರ್ಗ್ಯಂ ಶೀಲಮೇಕಪದಂ ಸುಖಮ್ ॥55॥
ದಾಕ್ಷ್ಯ ಎಂದರೆ ದಾಕ್ಷಿಣ್ಯ ಎಂದರೆ ದಯೆಯು ಒಂದು ಪದದಲ್ಲಿ ಧರ್ಮಸಾಧನ ಎಂದು ಹೇಳಬಹುದು. ದಾನವು ಒಂದು ಪದದಲ್ಲಿ ಯಶಸ್ಸು. ಸತ್ಯವು ಒಂದು ಪದದಲ್ಲಿ ಸ್ವರ್ಗಸಾಧನ. ಶೀಲವು ಒಂದು ಪದದಲ್ಲಿ ಸುಖ.

ಯಕ್ಷಃ
ಕಿಂಸ್ವಿದಾತ್ಮಾ ಮನುಷ್ಯಸ್ಯ ಕಿಂಸ್ವಿದ್ ದೈವಕೃತಃ ಸಖಾ |
ಉಪಜೀವನಂ ಕಿಂಸ್ವಿದಸ್ಯ ಕಿಂಸ್ವಿದಸ್ಯ ಪರಾಯಣಮ್ ॥56॥
ಯಕ್ಷ ಮನುಷ್ಯನ ಆತ್ಮ ಎಂದರೆ ಯಾವುದು? ಮನುಷ್ಯನಿಗೆ ದೈವಕೃತವಾದ ಸ್ನೇಹಿತನು ಯಾರು? ಮನುಷ್ಯನ ಉಪಜೀವನವು ಯಾವುದು? ಅವನಿಗೆ ಶ್ರೇಷ್ಠವಾದ ಆಶ್ರಯವು ಯಾವುದು?
ಯುಧಿಷ್ಠಿರಃ
ಪುತ್ರ ಆತ್ಮಾ ಮನುಷ್ಯಸ್ಯ ಭಾರ್ಯಾ ದೈವಕೃತಃ ಸಖಾ |
ಉಪಜೀವನಂ ಚ ಪರ್ಜನ್ಯೋ ದಾನಮಸ್ಯ ಪರಾಯಣಮ್ ॥57॥
ಯುಧಿಷ್ಠಿರ ಮನುಷ್ಯನಿಗೆ ಪುತ್ರನು ಆತ್ಮ. ಪತ್ನಿಯು ದೈವಕೃತವಾದ ಸ್ನೇಹಿತಳು. ಪರ್ಜನ್ಯನು (ಪರ್ಜನ್ಯನಿಂದ ಉಂಟಾಗುವ ಮಳೆಯು) ಉಪಜೀವನ. ದಾನವು ಅವನ ಶ್ರೇಷ್ಠವಾದ ಆಶ್ರಯ.
ಯಕ್ಷಃ
ಧನ್ಯಾನಾಮುತ್ತಮಂ ಕಿಂಸ್ವಿದ್ ಧನಾನಾಂ ಸ್ಯಾತ್ ಕಿಮುತ್ತಮಮ್ |
ಲಾಭಾನಾಮುತ್ತಮಂ ಕಿಂ ಸ್ಯಾತ್ ಸುಖಾನಾಂ ಸ್ಯಾತ್ ಕಿಮುತ್ತಮಮ್ ॥
ಯಕ್ಷ ಧನ್ಯರಲ್ಲಿ ಶ್ರೇಷ್ಠವಾದುದು ಯಾವುದು? ಧನಗಳಲ್ಲಿ ಶ್ರೇಷ್ಠವಾದುದು ಯಾವುದು? ಲಾಭಗಳಲ್ಲಿ ಉತ್ತಮವಾದುದು ಯಾವುದು? ಸುಖಗಳಲ್ಲಿ ಉತ್ತಮವಾದುದು ಯಾವುದು?
ಯುಧಿಷ್ಠಿರಃ
ಧನ್ಯಾನಾಮುತ್ತಮಂ ದಾಕ್ಷ್ಯಂ ಧನಾನಾಮುತ್ತಮಂ ಶ್ರುತಮ್ |
ಲಾಭಾನಾಂ ಶ್ರೇಯ ಆರೋಗ್ಯಂ ಸುಖಾನಾಂ ತುಷ್ಟಿರುತ್ತಮಾ ॥59॥
ಯುಧಿಷ್ಠಿರ ಧನ್ಯರಲ್ಲಿ (ಧನವುಳ್ಳವರಲ್ಲಿ) ಉತ್ತಮವಾದುದು ದಕ್ಷತೆ. ಧನಗಳಲ್ಲಿ ಉತ್ತಮವಾದುದು ವಿದ್ಯೆ. ಲಾಭಗಳಲ್ಲಿ ಉತ್ತಮವಾದುದು ಆರೋಗ್ಯ. ಸುಖಗಳಲ್ಲಿ ಉತ್ತಮವಾದುದು ತೃಪ್ತಿ.
ಯಕ್ಷಃ
ಕಿಂಸ್ವಿದ್ಧರ್ಮಃ ಪರೋ ಲೋಕೇ ಕಶ್ಚ ಧರ್ಮಃ ಸದಾಫಲಃ |
ಕಿಂ ನಿಯಮ್ಯ ನ ಶೋಚಂತಿ ಕೈಶ್ಚ ಸಂಧಿರ್ನ ಜೀರ್ಯತೇ ॥60॥
ಯಕ್ಷ ಲೋಕದಲ್ಲಿ ಶ್ರೇಷ್ಠವಾದ ಧರ್ಮವು ಯಾವುದು? ಸದಾಫಲವುಳ್ಳ ಧರ್ಮವು ಯಾವುದು? ಯಾವುದನ್ನು ನಿಯಮನ ಮಾಡಿದರೆ ಶೋಕವುಂಟಾಗುವುದಿಲ್ಲ? ಯಾರ ಜೊತೆಯಲ್ಲಿ ಮಾಡಿದ ಸೆನೇಹವು ನಶಿಸಿ ಹೋಗುವುದಿಲ್ಲ?
ಯುಧಿಷ್ಠಿರಃ
ಆನೃಶಂಸ್ಯಂ ಪರೋ ಧರ್ಮಸ್ತ್ರಯೀಧರ್ಮಃ ಸದಾಫಲಃ |
ಮನೋ ಯಮ್ಯ ನ ಶೋಚಂತಿ ಸಂಧಿಃ ಸದ್ಭಿರ್ನ ಜೀರ್ಯತೇ ॥61॥
ದಯೆಯು ಶ್ರೇಷ್ಠವಾದ ಧರ್ಮ. ವೇದೋಕ್ತವಾದ ಧರ್ಮವು ಸದಾ ಫಲವನ್ನು ಕೊಡುವಂತಹದು. ಮನಸ್ಸನ್ನು ನಿಗ್ರಹಿಸಿದವರು ಶೋಕಪಡುವುದಿಲ್ಲ. ಸಜ್ಜನರ ಜೊತೆಯಲ್ಲಿ ಮಾಡಿದ ಸ್ನೇಹವು ನಾಶಹೊಂದುವುದಿಲ್ಲ.
(ಸದಾಫಲವನ್ನು ಕೊಡುವ ಧರ್ಮ ಎಂದರೆ ಅದು ತ್ರೇತಾಯುಗದ ಧರ್ಮ. ಕೃತಯುಗದಲ್ಲಿ ಧರ್ಮಫಲವು ನಿಶ್ಚಿತವಾಗಿರುವುದರಿಂದ ಅದರಲ್ಲಿ ಧರ್ಮದ ಫಲದ ಪ್ರಶ್ನೆಯು ಕೂಡುವುದಿಲ್ಲ. ದ್ವಾಪರ ಮತ್ತು ಕಲಿಯುಗಗಳಲ್ಲಿ ಸಂಶಯ ಮತ್ತು ವಿಪರೀತ ಜ್ಞಾನವಿರುವುದರಿಂದ ಧರ್ಮವು ವಿಫಲವೇ ಆಗುತ್ತದೆ ಎಂದು ನಿಶ್ಚಯ. ತ್ರೇತಾಯುಗದಲ್ಲಿ ಮಾತ್ರ ಪುಣ್ಯಶ್ಲೋಕರಾದ ಚಕ್ರವರ್ತಿಗಳು ಮೊದಲಾದವರು ಆತ್ಮಪ್ರಶಂಸಾ ರಹಿತರಾಗಿರುವುದರಿಂದ ಮಾಡಿದ ಧರ್ಮಕ್ಕೆ ಕ್ಷಯವುಂಟಾಗದೇ ಇರುವ ಕಾರಣದಿಂದ ಅದು ಸದಾ ಫಲವನ್ನು ಕೊಡುವಂತಹದು ಎಂದು ಧರ್ಮ ರಾಜನ ಉತ್ತರದ ಅಭಿಪ್ರಾಯ-ವಾದಿರಾಜರು).
ಯಕ್ಷಃ
ಕಿಂ ನು ಹಿತ್ವಾ ಪ್ರಿಯೋ ಭವತಿ ಕಿಂ ನು ಹಿತ್ವಾ ನ ಶೋಚತಿ |
ಕಿಂ ನು ಹಿತ್ವಾಽರ್ಥವಾನ್ ಭವತಿ ಕಿಂ ನು ಹಿತ್ವಾ ಸುಖೀ ಭವೇತ್ ॥
ಯಕ್ಷ ಯಾವುದನ್ನು ಬಿಟ್ಟರೆ ಪ್ರಿಯನಾಗುತ್ತಾನೆ? ಯಾವುದನ್ನು ಬಿಟ್ಟರೆ ಶೋಕ ಪಡುವುದಿಲ್ಲ? ಯಾವುದನ್ನು ಬಿಟ್ಟರೆ ಧನವಂತನಾಗುತ್ತಾನೆ? ಯಾವುದನ್ನು ಬಿಟ್ಟರೆ ಸುಖಿಯಾಗುತ್ತಾನೆ?
ಯುಧಿಷ್ಠಿರಃ
ಮಾನಂ ಹಿತ್ವಾ ಪ್ರಿಯೋ ಭವತಿ ಕ್ರೋಧಂ ಹಿತ್ವಾ ನ ಶೋಚತಿ |
ಕಾಮಂ ಹಿತ್ವಾಽರ್ಥವಾನ್ ಭವತಿ ಲೋಭಂ ಹಿತ್ವಾ ಸುಖೀ ಭವೇತ್ ॥
ಯುಧಿಷ್ಠಿರ ಅಹಂಕಾರವನ್ನು ಬಿಟ್ಟು ಪ್ರಿಯನಾಗುತ್ತಾನೆ. ಕ್ರೋಧವನ್ನು ಬಿಟ್ಟವನು ಶೋಕಪಡುವುದಿಲ್ಲ. ಕಾಮವನ್ನು ಬಿಟ್ಟವನು ಧನವಂತನಾಗುತ್ತಾನೆ. ಲೋಭವನ್ನು ಬಿಟ್ಟವನು ಸುಖಿಯಾಗುತ್ತಾನೆ.
ಯಕ್ಷಃ
ಕಿಮರ್ಥಂ ಬ್ರಾಹ್ಮಣೇ ದಾನಂ ಕಿಮರ್ಥಂ ನಟನರ್ತಕೇ |
ಕಿಮರ್ಥಂ ಚೈವ ಭೃತ್ಯೇಷು ಕಿಮರ್ಥಂ ಚೈವ ರಾಜಸು ॥64॥
ಯಕ್ಷ ಬ್ರಾಹ್ಮಣರಿಗೆ ದಾನವು ಏತಕ್ಕಾಗಿ? ನಟನರ್ತಕರಿಗೆ ಏತಕ್ಕಾಗಿ? ಭೃತ್ಯರಿಗೆ ಏತಕ್ಕಾಗಿ? ಮತ್ತು ರಾಜರಿಗೆ ಏತಕ್ಕಾಗಿ?
ಯುಧಿಷ್ಠಿರಃ

ಧರ್ಮಾರ್ಥಂ ಬ್ರಾಹ್ಮಣೇ ದಾನಂ ಯಶೋಽರ್ಥಂ ನಟನರ್ತಕೇ |
ಭೃತ್ಯೇಷು ಭರಣಾರ್ಥಂ ವೈ ಭಯಾರ್ಥಂ ಚೈವ ರಾಜಸು ॥65॥
ಯುಧಿಷ್ಠಿರ ಧರ್ಮಕ್ಕಾಗಿ ಬ್ರಾಹ್ಮಣರಿಗೆ ದಾನ. ಕೀರ್ತಿಗಾಗಿ ನಟನರ್ತಕರಿಗೆ. ಪೋಷಣೆ ಮಾಡುವುದಕ್ಕೋಸ್ಕರ ಭೃತ್ಯರಿಗೆ ಮತ್ತು ಭಯದಿಂದ ರಾಜರಿಗೆ.
ಯಕ್ಷಃ
ಕೇನ ಸ್ವಿದಾವೃತೋ ಲೋಕಃ ಕೇನ ಸ್ವಿನ್ನ ಪ್ರಕಾಶತೇ |
ಕೇನ ತ್ಯಜತಿ ಮಿತ್ರಾಣಿ ಕೇನ ಸ್ವರ್ಗಂ ನ ಗಚ್ಛತಿ ॥66॥
ಯಕ್ಷ ಲೋಕವು ಯಾವುದರಿಂದ ಆವೃತವಾಗಿದೆ? ಯಾವುದರಿಂದ ಪ್ರಕಾಶಿಸುವುದಿಲ್ಲ? ಯಾವುದರಿಂದ ಮಿತ್ರರು ದೂರವಾಗುತ್ತಾರೆ? ಯಾವುದರಿಂದ ಸ್ವರ್ಗವು ತಪ್ಪಿಹೋಗುತ್ತದೆ?
ಯುಧಿಷ್ಠಿರಃ
ಅಜ್ಞಾನೇನಾವೃತೋ ಲೋಕಸ್ತಮಸಾ ನ ಪ್ರಕಾಶತೇ |
ಲೋಭಾತ್ ತ್ಯಜತಿ ಮಿತ್ರಾಣಿ ಸಂಗಾತ್ ಸ್ವರ್ಗಂ ನ ಗಚ್ಛತಿ ॥67॥
ಯುಧಿಷ್ಠಿರ ಲೋಕವು ಅಜ್ಞಾನದಿಂದ ಆವೃತವಾಗಿದೆ. ಕತ್ತಲೆಯಲ್ಲಿ ಯಾವುದೂ ಪ್ರಕಾಶಿಸುವುದಿಲ್ಲ. ಲೋಭದಿಂದ ಮಿತ್ರರು ದೂರಹೋಗುತ್ತಾರೆ. ವಿಷಯಾಸಕ್ತಿಯಿಂದ ಸ್ವರ್ಗವನ್ನು ಹೊಂದುವುದಿಲ್ಲ.
ಯಕ್ಷಃ
ಮೃತಃ ಕಥಂ ಸ್ಯಾತ್ ಪುರುಷಃ ಕಥಂ ರಾಷ್ಟ್ರಂ ಮೃತಂ ಭವೇತ್ |
ಶ್ರಾದ್ಧಂ ಮೃತಂ ಕಥಂ ವಾ ಸ್ಯಾತ್ ಕಥಂ ಯಜ್ಞೋ ಮೃತೋ ಭವೇತ್ ॥
ಯಕ್ಷ ಪುರುಷನು ಯಾವುದರಿಂದ ಮೃತನಾಗುತ್ತಾನೆ? ರಾಷ್ಟ್ರವು ಹೇಗೆ ಮೃತವಾಗುತ್ತದೆ? ಶ್ರಾದ್ಧವು ಹೇಗೆ ಮೃತವಾಗುತ್ತದೆ? ಯಜ್ಞವು ಹೇಗೆ ಮೃತವಾಗುತ್ತದೆ?
ಯುಧಿಷ್ಠಿರಃ
ಮೃತೋ ದರಿದ್ರಃ ಪುರುಷೋ ಮೃತಂ ರಾಷ್ಟ್ರಮರಾಜಕಮ್ |
ಮೃತಮಶ್ರೋತ್ರಿಯಂ ಶ್ರಾದ್ಧಂ ಮೃತೋ ಯಜ್ಞಸ್ತ್ವದಕ್ಷಿಣಃ ॥69॥
ದರಿದ್ರನಾದ ಪುರುಷನು ಮೃತನೆನಿಸುತ್ತಾನೆ. ಅರಾಜಕವಾದ ರಾಷ್ಟ್ರ ಮೃತವಾಗುತ್ತದೆ. ಶ್ರೋತ್ರಿಯನಿಲ್ಲದ ಶ್ರಾದ್ಧವು ಮೃತವಾಗುತ್ತದೆ. ದಕ್ಷಿಣೆಯಿಲ್ಲದ ಯಜ್ಞವು ಮೃತವಾಗುತ್ತದೆ.
ಯಕ್ಷಃ
ಕಾ ದಿಕ್ಕಿಮುದಕಂ ಪ್ರೋಕ್ತಂ ಕಿಮನ್ನಂ ಕಿಂ ಚ ವೈ ವಿಷಮ್ |
ಶ್ರಾದ್ಧಸ್ಯ ಕಾಲಮಾಖ್ಯಾಹಿ ತತಃ ಪಿಬ ಹರಸ್ವ ಚ ॥70॥
ಯಕ್ಷ ದಿಕ್ಕು ಎಂದರೆ ಯಾವುದು? ಉದಕವೆಂದರೆ ಯಾವುದು? ಅನ್ನವು ಯಾವುದು? ವಿಷವು ಯಾವುದು? ಶ್ರಾದ್ಧದ ಕಾಲವನ್ನು ಹೇಳು? ಅನಂತರ ನೀರನ್ನು ಕುಡಿದು ತೆಗೆದುಕೊಂಡು ಹೋಗು.
ಯುಧಿಷ್ಠಿರಃ
ಸಂತೋ ದಿಗ್ಜಲಮಾಕಾಶಂ ಗೌರನ್ನಂ ಪ್ರಾರ್ಥನಾ ವಿಷಮ್ |
ಶ್ರಾದ್ಧಸ್ಯ ಬ್ರಾಹ್ಮಣಃ ಕಾಲಃ ಕಥಂ ವಾ ಯಕ್ಷ ಮನ್ಯಸೇ ॥71॥
ಯುಧಿಷ್ಠಿರ ಸಜ್ಜನರು ದಿಕ್ಕು. ಆಕಾಶವು ಜಲ. ಗೋವುಗಳು ಅನ್ನ. ಬೇಡುವುದು ವಿಷ. ಯೋಗ್ಯಬ್ರಾಹ್ಮಣನೇ ಶ್ರಾದ್ಧಕಾಲ. ಯಕ್ಷನೇ ನಿನ್ನ ಅಭಿಪ್ರಾಯವೇನು?
ಯಕ್ಷಃ
ವ್ಯಾಖ್ಯಾತಾ ಮೇ ತ್ವಯಾ ಪ್ರಶ್ನಾ ಯಥಾತಥ್ಯಂ ಪರಂತಪ |
ಪುರುಷಂ ತ್ವಿದಾನೀಮಾಖ್ಯಾಹಿ ಯಶ್ಚ ಸರ್ವಧನೀಃ ನರಃ ॥72॥
ಯಕ್ಷ ಪರಂತಪನೇ, ನನ್ನ ಪ್ರಶ್ನೆಗಳಿಗೆ ನೀನು ಸರಿಯಾಗಿ ಉತ್ತರವನ್ನು ಹೇಳಿದ್ದೀಯೆ. ಈಗ ಪುರುಷ ಎಂದರೆ ಯಾರು? ಸರ್ವಧನವುಳ್ಳ ನರನು ಯಾರು ಎಂದು ಹೇಳು.
ಯಕ್ಷಃ
ತಪಃ ಕಿಂಲಕ್ಷಣಂ ಪ್ರೋಕ್ತಂ ಕೋ ದಮಶ್ಚ ಪ್ರಕೀರ್ತಿತಃ |
ಕ್ಷಮಾ ಚ ಕಾ ಪರಾ ಪ್ರೋಕ್ತಾ ಕಾ ಚ ಹ್ರೀಃ ಪರಿಕೀರ್ತಿತಾ ॥72.1॥
ಯಕ್ಷ ತಪಸ್ಸಿನ ಲಕ್ಷಣವೇನು? ಯಾವುದನ್ನು ದಮದ ಲಕ್ಷಣವೆಂದು ಹೇಳುತ್ತಾರೆ? ಯಾವುದು ಶ್ರೇಷ್ಠವಾದ ಕ್ಷಮೆ? ನಾಚಿಕೆ ಎಂದರೆ ಯಾವುದು?
ಯುಧಿಷ್ಠಿರಃ
ತಪಃ ಸ್ವಧರ್ಮವರ್ತಿತ್ವಂ ಮನಸೋ ದಮನಂ ದಮಃ |
ಕ್ಷಮಾ ದ್ವಂದ್ವಸಹಿಷ್ಣುತ್ವಂ ಹ್ರೀರಕಾರ್ಯನಿವರ್ತನಮ್ ॥72.2॥
ಯುಧಿಷ್ಠಿರ ತನ್ನ ಧರ್ಮವನ್ನು ಆಚರಿಸುವುದೇ ತಪಸ್ಸು. ಮನಸ್ಸನ್ನು ನಿಗ್ರಹಿಸುವುದು ದಮ. ದ್ವಂದ್ವಸಹಿಷ್ಣುತೆಯೇ ಕ್ಷಮೆ. ಅಕಾರ್ಯವನ್ನು ಮಾಡದಿರುವುದೇ ನಾಚಿಕೆ.
ಯಕ್ಷಃ

ಕಿಂ ಜ್ಞಾನಂ ಪ್ರೋಚ್ಯತೇ ರಾಜನ್ ಕಃ ಶಮಶ್ಚ ಪ್ರಕೀರ್ತಿತಃ|
ದಯಾ ಚ ಕಾ ಪರಾ ಪ್ರೋಕ್ತಾ ಕಿಂ ಚಾರ್ಜವಮುದಾಹೃತಮ್ ॥72.3॥
ಯಕ್ಷ ರಾಜನೇ, ಜ್ಞಾನವು ಯಾವುದು? ಶ್ರಮವೆಂದರೆ ಯಾವುದು? ಶ್ರೇಷ್ಠವಾದ ದಯೆಯಾವುದು? ಯಾವುದನ್ನು ಆರ್ಜವೆಂದು ಕರೆಯುತ್ತಾರೆ?
ಯುಧಿಷ್ಠಿರಃ
ಜ್ಞಾನಂ ತತ್ತತ್ವಾರ್ಥಸಂಬೋಧಃ ಶಮಶ್ಚಿತ್ತಪ್ರಶಾಂತತಾ|
ದಯಾ ಸರ್ವಸುಖೈಷಿತ್ವಮಾರ್ಜವಂ ಸಮಚಿತ್ತತಾ ॥72.4॥
ಯುಧಿಷ್ಠಿರ ತತ್ತತ್ವಾರ್ಥವಿಷಯಕವಾದುದು ಜ್ಞಾನ. ಮನಸ್ಸಿನ ಶಾಂತಿಯು ಶಮ. ಎಲ್ಲರಿಗೂ ಸುಖವನ್ನು ಬಯಸುವುದು ದಯೆ. ಸಮಚಿತ್ತತೆಯು ಆರ್ಜವ.
ಯಕ್ಷಃ
ಕಃ ಶತ್ರುರ್ದುರ್ಜಯಃ ಪುಂಸಾಂ ಕಶ್ಚ ವ್ಯಾಧಿರನಂತಕಃ|
ಕೀದೃಶಶ್ಚ ಸ್ಮೃತಃ ಸಾಧುರಸಾಧುಃ ಕೀದೃಶಃ ಸ್ಮೃತಃ॥72.5॥
ಯಕ್ಷ ಮನುಷ್ಯರಿಗೆ ದುರ್ಜಯನಾದ ಶತ್ರುವು ಯಾವನು? ಅಂತವಿಲ್ಲದ ವ್ಯಾಧಿಯು ಯಾವುದು? ಯಾವನನ್ನು ಸಾಧುವೆಂದು ಕರೆಯುತ್ತಾರೆ? ಅಸಾಧುವು ಎಂತಹವನು?
ಯುಧಿಷ್ಠಿರಃ
ಕ್ರೋಧಃ ಸುದುರ್ಜಯಃ ಶತ್ರುರ್ಲೋಭೋ ವ್ಯಾಧಿರನಂತಕಃ|
ಸರ್ವಭೂತಹಿತಃ ಸಾಧುರಸಾಧುರ್ನಿರ್ದಯಃ ಸ್ಮೃತಃ ॥72.6॥
ಯುಧಿಷ್ಠಿರ ಕ್ರೋಧವು ದುರ್ಜಯನಾದ ಶತ್ರು. ಲೋಭವು ಅಂತವಿಲ್ಲದ ವ್ಯಾಧಿ. ಸರ್ವಭೂತಗಳಲ್ಲಿ ಹಿತನಾದವನು ಸಾಧು. ನಿರ್ದಯನಾದವನು ಅಸಾಧುವೆಂದು ಕರೆಯಲ್ಪಡುತ್ತಾನೆ.
ಯಕ್ಷಃ
ಕೋ ಮೋಹಃ ಪ್ರೋಚ್ಯತೇ ರಾಜನ್ ಕಶ್ಚ ಮಾನಃ ಪ್ರಕೀರ್ತಿತಃ|
ಕಿಮಾಲಸ್ಯಂ ಚ ವಿಜ್ಞೇಯಂ ಕಶ್ಚ ಶೋಕಃ ಪ್ರಕೀರ್ತಿತಃ ॥72.7॥
ಯಕ್ಷ ರಾಜನೇ, ಮೋಹವೆಂದರೆ ಯಾವುದು? ಮಾನ ಎಂದರೆ ಏನು? ಯಾವುದನ್ನು ಆಲಸ್ಯವೆಂದು ತಿಳಿಯಬೇಕು? ಯಾವುದು ಶೋಕವೆಂದು ಹೇಳಲ್ಪಡುತ್ತದೆ?
ಯುಧಿಷ್ಠಿರಃ
ಮೋಹೋ ಹಿ ಧರ್ಮಮೂಢತ್ವಂ ಮಾನಸ್ತತ್ವಾತ್ಮಾಭಿಮಾನಿತಾ|
ಧರ್ಮನಿಷ್ಕ್ರಿಯತಾಽಽಲಸ್ಯಂ ಶೋಕಸ್ತ್ವಜ್ಞಾನಮುಚ್ಯತೇ ॥72.8॥
ಯುಧಿಷ್ಠಿರ ಮೋಹವೆಂದರೆ ಧರ್ಮಜ್ಞಾನದ ಅಭಾವ. ಮಾನವೆಂದರೆ ಆತ್ಮಾಭಿಮಾನ- ಅಹಂಕಾರ. ಆಲಸ್ಯವೆಂದರೆ ಧರ್ಮಕಾರ್ಯದಲ್ಲಿ ತೊಡಗದಿರುವುದು. ಅಜ್ಞಾನವು ಶೋಕವೆಂದು ಕರೆಯಲ್ಪಡುತ್ತದೆ.
ಯಕ್ಷಃ
ಕಿಂ ಸ್ಥೈರ್ಯಮೃಷಿಭಿಃ ಪ್ರೋಕ್ತಂ ಕಿಂ ಚ ಧೈರ್ಯಮುದಾಹೃತಮ್|
ಸ್ನಾನಂ ಚ ಕಿಂ ಪರಂ ಪ್ರೋಕ್ತಂ ದಾನಂ ಚ ಕಿಮಿಹೋಚ್ಯತೇ ॥72.9॥
ಯಕ್ಷ ಋಷಿಗಳು ಹೇಳಿದ ಸ್ಥೈರ್ಯವು ಯಾವುದು? ಯಾವುದನ್ನು ಧೈರ್ಯವೆಂದು ಕರೆಯುತ್ತಾರೆ? ಶ್ರೇಷ್ಠವಾದ ಸ್ನಾನವು ಯಾವುದು? ಶ್ರೇಷ್ಠವಾದ ದಾನವು ಯಾವುದು?
ಯುಧಿಷ್ಠಿರಃ
ಸ್ವಧರ್ಮೇ ಸ್ಥಿರತಾ ಸ್ಥೈರ್ಯಂ ಧೈರ್ಯಮಿಂದ್ರಿಯನಿಗ್ರಹಃ|
ಸ್ನಾನಂ ಮನೋಮಲತ್ಯಾಗೋ ದಾನಂ ವೈ ಭೂತರಕ್ಷಣಮ್ ॥72.10॥
ಯುಧಿಷ್ಠಿರ ತನ್ನ ಧರ್ಮದಿಂದ ವಿಚಲಿತನಾಗದಿರುವುದು ಸ್ಥೈರ್ಯ. ಧೈರ್ಯವೆಂದರೆ ಇಂದ್ರಿಯನಿಗ್ರಹ. ಮನಸ್ಸಿನ ಶುದ್ಧಿಯು ಸ್ನಾನ. ಎಲ್ಲ ಪ್ರಾಣಿಗಳ ರಕ್ಷಣೆಯು ದಾನ.
ಯಕ್ಷಃ
ಕಃ ಪಂಡಿತಃ ಪುಮಾನ್ ಜ್ಞೇಯೋ ನಾಸ್ತಿಕಃ ಕಶ್ಚ ಉಚ್ಯತೇ|
ಕೋ ಮೂರ್ಖಃ ಕಶ್ಚ ಕಾಮಃ ಸ್ಯಾತ್ ಕೋ ಮತ್ಸರ ಇತಿ ಸ್ಮೃತಃ ॥
ಯಕ್ಷ ಯಾವನನ್ನು ಪಂಡಿತನೆಂದು ತಿಳಿಯಬೇಕು? ಯಾವನು ನಾಸ್ತಿಕನೆಂದು ಕರೆಯಲ್ಪಡುತ್ತಾನೆ? ಮೂರ್ಖನು ಯಾರು? ಕಾಮವು ಯಾವುದು? ಯಾವುದನ್ನು ಮತ್ಸರವೆಂದು ಕರೆಯುತ್ತಾರೆ?
ಯುಧಿಷ್ಠಿರಃ
ಧರ್ಮಜ್ಞಃ ಪಂಡಿತೋ ಜ್ಞೇಯೋ ನಾಸ್ತಿಕೋ ಮೂರ್ಖ ಉಚ್ಯತೇ|
ಕಾಮಃ ಸಂಸಾರಹೇತುಶ್ಚ ಹೃತ್ತಾಪೋ ಮತ್ಸರಃ ಸ್ಮೃತಃ ॥72.12॥
ಯುಧಿಷ್ಠಿರ ಧರ್ಮಜ್ಞನನ್ನು ಪಂಡಿತನೆಂದು ತಿಳಿಯಬೇಕು. ಮೂರ್ಖನು ನಾಸ್ತಿಕನೆಂದು ಕರೆಯಲ್ಪಡುತ್ತಾನೆ. ಸಂಸಾರಕ್ಕೆ ಕಾರಣವಾದುದಕ್ಕೆ ಕಾಮ ಎಂದು ಹೆಸರು. ಮನುಷ್ಯನ ಹೃದಯ ತಾಪವು ಮತ್ಸರವೆಂದು ಕರೆಯಲ್ಪಡುತ್ತದೆ.
ಯಕ್ಷಃ

ಕೋಽಹಂಕಾರ ಇತಿ ಪ್ರೋಕ್ತಃ ಕಶ್ಚ ಡಂಭಃ ಪ್ರಕೀರ್ತಿತಃ |
ಕಿಂ ತದ್ ದೈವಂ ಪರಂ ಪ್ರೋಕ್ತಂ ಕಿಂ ತತ್ ಪೈಶುನ್ಯಮುಚ್ಯತೇ ||
ಯಕ್ಷ ಅಹಂಕಾರವೆಂದರೆ ಯಾವುದು? ಡಂಭವೆಂದು ಯಾವುದನ್ನು ಕರೆಯುತ್ತಾರೆ? ಶ್ರೇಷ್ಠವಾದ ದೈವವೆಂದರೆ ಯಾವುದು? ಪೈಶುನ್ಯವೆಂದರೆ ಯಾವುದು?
ಯುಧಿಷ್ಠಿರಃ
ಮಹಾಜ್ಞಾನಮಹಂಕಾರೋ ಡಂಭೋ ಧರ್ಮಧ್ವಜೋಚ್ಛ್ರಯಃ |
ದೈವಂ ದಾನಫಲಂ ಪ್ರೋಕ್ತಂ ಪೈಶುನ್ಯಂ ಪರದೂಷಣಮ್ ||72.14||
ಯುಧಿಷ್ಠಿರ ಮಹಾ ಜ್ಞಾನವನ್ನು ಅಹಂಕಾರವೆಂದು ಕರೆಯುತ್ತಾರೆ. ಧರ್ಮದಂತೆ ಕಾಣುವ ಧರ್ಮವಲ್ಲದ ಕಾರ್ಯವನ್ನು ಆಚರಿಸುವುದು ಡಂಭ. ಯಾವುದು ಮಾಡಿದ ದಾನಕ್ಕೆ ಫಲವನ್ನು ಕೊಡುವುದೋ ಅದು ಶ್ರೇಷ್ಠವಾದ ದೈವ. ಪರನಿಂದೆಯು ಪೈಶುನ್ಯವೆನಿಸುತ್ತದೆ.
ಯಕ್ಷಃ
ಧರ್ಮಶ್ಚಾರ್ಥಶ್ಚ ಕಾಮಶ್ಚ ಪರಸ್ಪರವಿರೋಧಿನಃ |
ಏಷಾಂ ನಿತ್ಯವಿರುದ್ಧಾನಾಂ ಕಥಮೇಕತ್ರ ಸಂಗಮಃ ||72.15||
ಯಕ್ಷ ಧರ್ಮ ಅರ್ಥ ಮತ್ತು ಕಾಮಗಳು ಪರಸ್ಪರ ವಿರೋಧಿಗಳು. ಯಾವಾಗಲೂ ವಿರುದ್ಧವಾದ ಇವುಗಳು ಒಂದುಕಡೆ ಹೇಗೆ ಸೇರುತ್ತವೆ?
ಯುಧಿಷ್ಠಿರಃ
ಯದಾ ಧರ್ಮಶ್ಚ ಭಾರ್ಯಾ ಚ ಪರಸ್ಪರವಶಾನುಗೌ |
ತದಾ ಧರ್ಮಾರ್ಥಕಾಮಾನಾಂ ತ್ರಯಾಣಾಮಪಿ ಸಂಗಮಃ ||72.16||
ಯುಧಿಷ್ಠಿರ ಯಾವಾಗ ಧರ್ಮವು ಮತ್ತು ಪತ್ನಿಯು ಪರಸ್ಪರ ವಶರಾಗಿರುತ್ತಾರೆಯೋ ಆಗ ಧರ್ಮಾರ್ಥಕಾಮ ಈ ಮೂರಕ್ಕೂ ಸಂಗಮ ಉಂಟಾಗುತ್ತದೆ.
ಯಕ್ಷಃ
ಅಕ್ಷಯೋ ನರಕಃ ಕೇನ ಪ್ರಾಪ್ಯತೇ ಭರತರ್ಷಭ |
ಏತನ್ಮೇ ಪೃಚ್ಛತಃ ಪ್ರಶ್ನಂ ತಚ್ಛೀಘ್ರಂ ವಕ್ತುಮರ್ಹಸಿ ||72.17||
ಯಕ್ಷ ಭರತರ್ಷಭನೇ, ಅಕ್ಷಯವಾದ ನರಕವು ಯಾವುದರಿಂದ ಪ್ರಾಪ್ತವಾಗುತ್ತದೆ? ಈ ಪ್ರಶ್ನೆಯನ್ನು ಕೇಳುತ್ತಿರುವ ನನಗೆ ಶೀಘ್ರವಾಗಿ ಉತ್ತರವನ್ನು ಹೇಳು.
ಯುಧಿಷ್ಠಿರಃ
ಬ್ರಾಹ್ಮಣಂ ಸ್ವಯಮಾಹೂಯ ಯಾಚಮಾನಮಕಿಂಚನಮ್ |
ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ ಸೋಽಕ್ಷಯಂ ನರಕಂ ವ್ರಜೇತ್ ||
ಯುಧಿಷ್ಠಿರ ಭಿಕ್ಷೆಯನ್ನು ಬೇಡುವ ಧನಹೀನನಾದ ಬ್ರಾಹ್ಮಣನನ್ನು ತಾನಾಗಿಯೇ ಆಹ್ವಾನವನ್ನು ಮಾಡಿ ಅನಂತರ ಯಾವನು ಇಲ್ಲವೆಂದು ಹೇಳುತ್ತಾನೆಯೋ ಅವನು ಅಕ್ಷಯವಾದ ನರಕವನ್ನು ಹೊಂದುತ್ತಾನೆ.
ವೇದೇಷು ಧರ್ಮಶಾಸ್ತ್ರೇಷು ಮಿಥ್ಯಾ ಯೋ ವೈ ದ್ವಿಜಾತಿಷು |
ದೇವೇಷು ಪಿತೃಧರ್ಮೇಷು ಸೋಽಕ್ಷಯಂ ನರಕಂ ವ್ರಜೇತ್ ||72.19||
ಯಾವನು ವೇದಗಳ ವಿಷಯದಲ್ಲಿಯೂ, ಧರ್ಮಶಾಸ್ತ್ರವ ವಿಷಯದಲ್ಲಿಯೂ, ಬ್ರಾಹ್ಮಣರ ವಿಷಯದಲ್ಲಿಯೂ, ದೇವತೆಗಳ ವಿಷಯದಲ್ಲಿಯೂ, ಪಿತೃಧರ್ಮಗಳ ವಿಷಯದಲ್ಲಿಯೂ ಸುಳ್ಳಾಗಿ ನಡೆದುಕೊಳ್ಳುತ್ತಾನೆಯೋ ಅವನು ನರಕಕ್ಕೆ ಹೋಗುತ್ತಾನೆ.
ವಿದ್ಯಮಾನೇ ಧನೇ ಲೋಭಾದ್ ದಾನಭೋಗವಿವರ್ಜಿತಃ |
ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ ಸೋಽಕ್ಷಯಂ ನರಕಂ ವ್ರಜೇತ್ ||
ತನ್ನ ಬಳಿ ಧನವಿದ್ದರೂ ಲೋಭದಿಂದ ದಾನವನ್ನು ಕೊಡದೆ ಭೋಗವನ್ನೂ ಮಾಡದೆ ಯಾವನು ತನ್ನ ಬಳಿ ಧನವಿಲ್ಲವೆಂದು ಹೇಳುತ್ತಾನೆಯೋ ಅವನು ಅಕ್ಷಯವಾದ ನರಕವನ್ನು ಹೊಂದುತ್ತಾನೆ.
ಯಕ್ಷಃ
ರಾಜನ್ ಕುಲೇನ ವೃತ್ತೇನ ಸ್ವಾಧ್ಯಾಯೇನ ಶ್ರುತೇನ ವಾ |
ಬ್ರಾಹ್ಮಣ್ಯಂ ಕೇನ ಭವತಿ ಪ್ರಬ್ರೂಹ್ಯೇತತ್ ಸುನಿಶ್ಚಿತಮ್ ||72.21||
ಯಕ್ಷ ರಾಜನೇ, ಕುಲದಿಂದಲೋ, ನಡತೆಯಿಂದಲೋ, ಸ್ವಾಧ್ಯಾಯದಿಂದಲೋ ಅಥವಾ ವಿದ್ಯೆಯಿಂದಲೋ ಬ್ರಾಹ್ಮಣ್ಯವು ಹೇಗೆ ಉಂಟಾಗುತ್ತದೆ ಎಂಬುದನ್ನು ಸುನಿಶ್ಚಿತವಾಗಿ ಹೇಳು.
ಯುಧಿಷ್ಠಿರಃ
ಶೃಣು ಯಕ್ಷ ಕುಲಂ ತಾತ ನ ಸ್ವಾಧ್ಯಾಯೋ ನ ಚ ಶ್ರುತಮ್ |
ಕಾರಣಂ ಹಿ ದ್ವಿಜತ್ವೇ ಚ ವೃತ್ತಮೇವ ನ ಸಂಶಯಃ ||72.22||
ಯುಧಿಷ್ಠಿರ ಯಕ್ಷನೇ ಕೇಳು. ಪ್ರೀತಿಪಾತ್ರನೇ, ಕುಲವಾಗಲೀ, ಸ್ವಾಧ್ಯಾಯವಾಗಲೀ, ವಿದ್ಯೆಯಾಗಲೀ ಬ್ರಾಹ್ಮಣ್ಯವನ್ನು ಕುರಿತು ಕಾರಣವಲ್ಲ. ಶೀಲವೇ ಕಾರಣ. ಇದರಲ್ಲಿ ಸಂಶಯವಿಲ್ಲ.
ವೃತ್ತಂ ಯತ್ನೇನ ಸಂರಕ್ಷ್ಯಂ ಬ್ರಾಹ್ಮಣೇನ ವಿಶೇಷತಃ |
ಅಕ್ಷೀಣವೃತ್ತೋ ನ ಕ್ಷೀಣೋ ವೃತ್ತತಸ್ತು ಹತೋ ಹತಃ ||72.23||

ಬ್ರಾಹ್ಮಣನಾದವನು ವಿಶೇಷವಾಗಿ ಪ್ರಯತ್ನಪೂರ್ವಕವಾಗಿ ತನ್ನ ಶೀಲವನ್ನು ರಕ್ಷಿಸಿಕೊಳ್ಳಬೇಕು. ಯಾವನು ತನ್ನ ಶೀಲವನ್ನು ಕಳೆದುಕೊಂಡಿಲ್ಲವೋ ಅವನು ಕ್ಷೀಣನಲ್ಲ. ಶೀಲಹೀನನಾದವನು ನಿಜವಾಗಿಯೂ ಹತನಾದವನು.
ಪಠಕಾಃ ಪಾಠಕಾಶ್ಚೈವ ಯೇ ಚಾನ್ಯೇ ಶಾಸ್ತ್ರಚಿಂತಕಾಃ |
ಸರ್ವೇ ವ್ಯಸನಿನೋ ಮೂರ್ಖಾ ಯಃ ಕ್ರಿಯಾವಾನ್ ಸ ಪಂಡಿತಃ ||
ಚಟಗಳಿಗೆ ತುತ್ತಾಗಿ ಅಧ್ಯಯನ ಮಾಡುವವರು, ಅಧ್ಯಾಪನ ಮಾಡುವವರೂ ಮತ್ತು ಉಳಿದ ಶಾಸ್ತ್ರಚಿಂತಕರೂ ಎಲ್ಲರೂ ಮೂರ್ಖರು. ಯಾವನು ಸತ್ಕ್ರಿಯೆಯನ್ನು ಆಚರಿಸುತ್ತಾನೆಯೋ ಅವನೇ ಪಂಡಿತ.
ಚತುರ್ವೇದೋಽಪಿ ದುರ್ವೃತ್ತಃ ಸ ಶೂದ್ರಾದತಿರಿಚ್ಯತೇ |
ಯೋಽಗ್ನಿಹೋತ್ರಪರೋ ದಾಂತಃ ಸ ಬ್ರಾಹ್ಮಣ ಇತಿ ಸ್ಮೃತಃ ||72.25||
ನಾಲ್ಕುವೇದಗಳನ್ನು ಹೊಂದಿದ್ದರೂ ಯಾವನು ದುರ್ನಡತೆಯನ್ನು ಹೊಂದಿದ್ದಾನೆಯೋ ಅವನು ಶೂದ್ರನಿಗಿಂತ ಕೆಳಗಿನವನು. ಯಾವನು ಇಂದ್ರಿಯ ನಿಗ್ರಹವನ್ನು ಹೊಂದಿ ಅಗ್ನಿಹೋತ್ರಪರನಾಗಿರುತ್ತಾನೆಯೋ ಅವನು ಬ್ರಾಹ್ಮಣನೆಂದು ಕರೆಯಲ್ಪಡುತ್ತಾನೆ.
ಯಕ್ಷಃ
ಪ್ರಿಯವಚನವಾದೀ ಕಿಂ ಲಭತೇ ವಿಮೃಶಿತಕಾರ್ಯಕರಃ ಕಿಂ ಲಭತೇ |
ಬಹುಮಿತ್ರಕರಃ ಕಿಂ ಲಭತೇ ಧರ್ಮರತಃ ಕಿಂ ಲಭತೇ ಕಥಯ ||
ಯಕ್ಷ ಪ್ರಿಯವಚನವನ್ನು ಮಾತನಾಡುವವನು ಏನನ್ನು ಪಡೆಯುತ್ತಾನೆ? ವಿಮರ್ಶೆ ಮಾಡಿ ಕಾರ್ಯವನ್ನು ಮಾಡುವವನು ಏನನ್ನು ಪಡೆಯುತ್ತಾನೆ? ಅನೇಕ ಮಿತ್ರರನ್ನು ಸಂಪಾದಿಸುವವನು ಏನನ್ನು ಪಡೆಯುತ್ತಾನೆ? ಧರ್ಮರತನಾದವನು ಏನನ್ನು ಪಡೆಯುತ್ತಾನೆ ಎಂದು ಹೇಳು.
ಯುಧಿಷ್ಠಿರಃ
ಪ್ರಿಯವಚನವಾದೀ ಪ್ರಿಯೋ ಭವತಿ
ವಿಮೃಶಿತಕಾರ್ಯಕರೋಽಧಿಕಂ ಜಯತಿ |
ಬಹುಮಿತ್ರಕರಃ ಸುಖಂ ವಸತೇ
ಯಶ್ಚ ಧರ್ಮರತಃ ಸ ಗತಿಂ ಲಭತೇ ||72.27||
ಯುಧಿಷ್ಠಿರ ಪ್ರಿಯವಚನವಾದಿಯು ಪ್ರಿಯನಾಗುತ್ತಾನೆ. ವಿಮರ್ಶೆ ಮಾಡಿ ಕಾರ್ಯವನ್ನು ಮಾಡುವವನು ಎಲ್ಲರಿಗಿಂತಲೂ ಹೆಚ್ಚಾಗಿ ಜಯಿಸುತ್ತಾನೆ. ಅನೇಕ ಮಿತ್ರರನ್ನು ಸಂಪಾದಿಸಿದವನು ಸುಖವಾಗಿ ವಾಸಮಾಡುತ್ತಾನೆ. ಧರ್ಮರತನಾದವನು ಮಾತ್ರ ಸದ್ಗತಿಯನ್ನು ಪಡೆಯುತ್ತಾನೆ.
ಯಕ್ಷಃ
ಕೋ ಮೋದತೇ ಕಿಮಾಶ್ಚರ್ಯಂ ಕಃ ಪಂಥಾಃ ಕಾ ಚ ವಾರ್ತಿಕಾ |
ಮಮೈತಾಂಶ್ಚತುರಃ ಪ್ರಶ್ನಾನ್ ಕಥಯಿತ್ವಾ ಜಲಂ ಪಿಬ |
(ವದ ಮೇ ಚತುರಃ ಪ್ರಶ್ನಾನ್ಮೃತಾ ಜೀವಂತು ಬಾಂಧವಾಃ) ||
ಯಕ್ಷ ಸಂತೋಷಪಡುವವನು ಯಾವನು? ಆಶ್ಚರ್ಯವೆಂದರೆ ಯಾವುದು? ಮಾರ್ಗವು ಯಾವುದು? ವಾರ್ತಿಕ ಎಂದರೆ ಯಾವುದು? ಈ ನಾಲ್ಕು ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ನೀರನ್ನು ಕುಡಿ ಮತ್ತು ಮೃತರಾದ ನಿನ್ನ ಬಂಧುಗಳು ಜೀವಂತರಾಗಲಿ.
ಯುಧಿಷ್ಠಿರಃ
ಪಂಚಮೇಽಹನಿ ಷಷ್ಠೇ ವಾ ಶಾಕಂ ಪಚತಿ ಸ್ವೇ ಗೃಹೇ |
ಅನೃಣೀ ಚಾಪ್ರವಾಸೀ ಚ ಸ ವಾರಿಚರ ಮೋದತೇ ||72.29||
ಯುಧಿಷ್ಠಿರ ಎಲೈ ಯಕ್ಷನೇ (ವಾರಿಚರನೇ), ಯಾವನು ತನ್ನ ಮನೆಯಲ್ಲಿಯೇ ಇದ್ದು ದಿವಸದ ಐದನೆಯ ಅಥವಾ ಆರನೆಯ ಭಾಗದಲ್ಲಿ ಶಾಕವನ್ನು ಬೇಯಿಸಿಕೊಂಡು ಜೀವಿಸಿ ಸಾಲವನ್ನು ಮಾಡದೆ ಪ್ರವಾಸವನ್ನು ಮಾಡದೆ ಇರುತ್ತಾನೆಯೋ ಅವನು ಸುಖವಾಗಿ ಇರುತ್ತಾನೆ.
ಅಹನ್ಯಹನಿ ಭೂತಾನಿ ಗಚ್ಛಂತೀಹ ಯಮಾಲಯಮ್ |
ಶೇಷಾಃ ಸ್ಥಾವರಮಿಚ್ಛಂತಿ ಕಿಮಾಶ್ಚರ್ಯಮತಃ ಪರಮ್ ||72.30||
ಪ್ರತಿದಿನವೂ ಪ್ರಾಣಿಗಳು ಈ ಲೋಕದಿಂದ ಯಮಲೋಕಕ್ಕೆ ಹೋಗುತ್ತವೆ. ಇಲ್ಲಿ ಇರುವವರು ಮಾತ್ರ ಸ್ಥಿರವಾಗಿರುತ್ತೇವೆಂದು ಬಯಸುತ್ತಾರೆ. ಇದಕ್ಕಿಂತ ಆಶ್ಚರ್ಯವಾದುದು ಯಾವುದು?
ತರ್ಕೋಽಪ್ರತಿಷ್ಠಃ ಶ್ರುತಯೋ ವಿಭಿನ್ನಾ ನೈಕೋ
ಋಷಿರ್ಯಸ್ಯ ಮತಂ ಪ್ರಮಾಣಮ್ |
ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಂ
ಮಹಾಜನೋ ಯೇನ ಗತಃ ಸ ಪಂಥಾಃ ||72.31||
ತರ್ಕವು ನೆಲೆ ಇಲ್ಲದುದು. ಶ್ರುತಿಗಳು ಭಿನ್ನಭಿನ್ನವಾಗಿವೆ. ನಿರ್ವಿವಾದದಿಂದ ಅಂಗೀಕರಿಸಲ್ಪಡುವ ಯಾವ ಋಷಿಯ ಅಭಿಪ್ರಾಯವೂ ಇಲ್ಲ. ಧರ್ಮದ ತತ್ತ್ವವು ಗುಹೆಯಲ್ಲಿ ಅಡಗಿದೆ (ಬಹಳ ರಹಸ್ಯವಾಗಿದೆ). ಮಹಾಜನರು ಎಲ್ಲಿ ನಡೆಯುತ್ತಾರೆಯೋ ಅದೇ ಮಾರ್ಗ.
ಅಸ್ಮಿನ್ಮಹಾಮೋಹಮಯೇ ಕಟಾಹೇ
ಸೂರ್ಯಾಗ್ನಿನಾ ರಾತ್ರಿದಿವೇಂಧನೇನ |
ಮಾಸರ್ತುದರ್ವೀಪರಿಘಟ್ಟನೇನ
ಭೂತಾನಿ ಕಾಲಃ ಪಚತೀತಿ ವಾರ್ತಾ ||72.32||

ಈ ಮಹಾಮೋಹಮಯವಾದ ದೊಡ್ಡ ಬ್ರಹ್ಮಾಂಡ ಕಟಾಹದಲ್ಲಿ ಸೂರ್ಯ ರೂಪವಾದ ಅಗ್ನಿಯಿಂದ ರಾತ್ರಿ ಮತ್ತು ಹಗಲುಗಳು ಎಂಬ ಇಂಧನಗಳಿಂದ ಮಾಸಗಳು ಮತ್ತು ಋತುಗಳು ಎಂಬ ಸಟ್ಟುಗದ (ಸೌಟು) ಪರಿವರ್ತನೆಯಿಂದ ಕಾಲವು ಎಲ್ಲ ಪ್ರಾಣಿಗಳನ್ನೂ ಬೇಯಿಸುತ್ತದೆ ಎಂಬುದೇ ವಾರ್ತೆ.
ಯುಧಿಷ್ಠಿರಃ
ದಿವಂ ಸ್ಪೃಶತಿ ಭೂಮಿಂ ಚ ಶಬ್ದಃ ಪುಣ್ಯಸ್ಯ ಕರ್ಮಣಃ |
ಯಾವತ್ ಸ ಶಬ್ದೋ ಭವತಿ ತಾವತ್ ಪುರುಷ ಉಚ್ಯತೇ ॥73॥
ಯುಧಿಷ್ಠಿರ ಪುಣ್ಯಕರ್ಮವನ್ನು ಮಾಡಿದ ಯಾವನ ಕೀರ್ತಿ ಶಬ್ದವು ಭೂಮಿಯನ್ನು ಮತ್ತು ಸ್ವರ್ಗವನ್ನು ಮುಟ್ಟುತ್ತದೆಯೋ ಎಂದರೆ ಎಲ್ಲಿಯವರೆಗೆ ಭೂಮಿ ಮತ್ತು ಸ್ವರ್ಗಗಳಲ್ಲಿ ಅವನ ಕೀರ್ತಿ ಇರುತ್ತದೆಯೋ ಅಲ್ಲಿಯವರೆಗೆ ಅವನನ್ನು ಪುರುಷನೆಂದು ಕರೆಯುತ್ತಾರೆ.
ತುಲ್ಯೇ ಪ್ರಿಯಾಪ್ರಿಯೇ ಯಸ್ಯ ಸುಖದುಃಖೇ ತಥೈವ ಚ |
ಅತೀತಾನಾಗತೇ ಚೋಭೇ ಸ ವೈ ಸರ್ವಧನೀ ನರಃ ॥74॥
ಯಾವ ಮನುಷ್ಯನಿಗೆ ಪ್ರಿಯಾಪ್ರಿಯಗಳು, ಸುಖದುಃಖಗಳು, ಭೂತ ಭವಿಷ್ಯತ್ತುಗಳು ಸಮಾನವಾಗಿರುತ್ತವೆಯೋ ಅವನೇ ಸರ್ವಧನವುಳ್ಳವನು.
ಸಮತ್ವಂ ಯಸ್ಯ ಸರ್ವೇಷು ನಿಃಸ್ಪೃಹಃ ಶಾಂತಮಾನಸಃ |
ಸುಪ್ರಸನ್ನಃ ಸದಾ ಯೋಗೀ ಸ ವೈ ಸರ್ವಧನೀ ನರಃ ॥75॥
ಯಾವನು ಎಲ್ಲರ ವಿಷಯದಲ್ಲಿಯೂ ಸಮನಾಗಿದ್ದು, ನಿಃಸ್ಪೃಹನೂ, ಶಾಂತಮನಸ್ಸುಳ್ಳವನೂ, ಸುಪ್ರಸನ್ನನಾದವನೂ, ಸದಾ ಯೋಗನಿರತನೂ ಆಗಿರುತ್ತಾನೆಯೋ ಅವನೇ ಸರ್ವಧನವನ್ನು ಹೊಂದಿದ ಮನುಷ್ಯ.
ಯಕ್ಷಃ
ವ್ಯಾಖ್ಯಾತಃ ಪುರುಷೋ ರಾಜನ್ಯಶ್ಚ ಸರ್ವಧನೀ ನರಃ |
ತಸ್ಮಾತ್ ತ್ವಮೇಕಂ ಭ್ರಾತೄಣಾಂ ಯಮಿಚ್ಛಸಿ ಸ ಜೀವತು ॥76॥
ಯಕ್ಷ ರಾಜನೇ, ಪುರುಷನನ್ನೂ ಮತ್ತು ಸರ್ವಧನವುಳ್ಳ ಮನುಷ್ಯನನ್ನೂ ನೀನು ವಿವರಿಸಿದ್ದೀಯೆ. ಆದ್ದರಿಂದ ನಿನ್ನ ತಮ್ಮಂದಿರಲ್ಲಿ ನೀನು ಬಯಸುವ ಒಬ್ಬನು ಜೀವಂತನಾಗಲಿ.
ಯುಧಿಷ್ಠಿರಃ
ಶ್ಯಾಮೋಯ ಏಷ ರಕ್ತಾಕ್ಷೋ ಬೃಹಚ್ಛಾಲ ಇವೋತ್ಥಿತಃ |
ವ್ಯೂಢೋರಸ್ಕೋ ಮಹಾಬಾಹುರ್ನಕುಲೋ ಯಕ್ಷ ಜೀವತು ॥77॥
ಯುಧಿಷ್ಠಿರ ಎಲೈ ಯಕ್ಷನೇ, ಶ್ಯಾಮವರ್ಣದವನೂ, ರಕ್ತಾಕ್ಷನಾದವನೂ, ದೊಡ್ಡ ಶಾಲವೃಕ್ಷದಂತೆ ಎತ್ತರನಾದವನೂ, ವಿಸ್ತಾರವಾದ ವಕ್ಷಸ್ಸ್ಥಲವುಳ್ಳವನೂ ಆದ ಈ ನಕುಲನು ಜೀವಂತನಾಗಲಿ.
ಯಕ್ಷಃ
ಪ್ರಿಯಸ್ತೇ ಭೀಮಸೇನೋಽಯಮರ್ಜುನೋ ವಃ ಪರಾಯಣಮ್ |
ಸ ಕಸ್ಮಾನ್ನಕುಲಂ ರಾಜನ್ ಸಾಪತ್ನಂ ಜೀವಮಿಚ್ಛಸಿ ॥78॥
ಯಕ್ಷ ನಿನಗೆ ಭೀಮಸೇನನು ಪ್ರಿಯನಾದವನು. ಅರ್ಜುನನು ನಿಮ್ಮೆಲ್ಲರಿಗೂ ಆಶ್ರಯನಾದವನು. ರಾಜನೇ, ಹೀಗಿರುವಾಗ ನಿನ್ನ ತಾಯಿಯ ಸವತಿಯ ಮಗನಾದ ನಕುಲನು ಬದುಕಬೇಕೆಂದು ಏಕೆ ಬಯಸುತ್ತೀಯೆ?
ಯಸ್ಯ ನಾಗಸಹಸ್ರೇಣ ದಶಸಂಖ್ಯೇನ ವೈ ಬಲಮ್ |
ತುಲ್ಯಂ ತಂ ಭೀಮಮುತ್ಸೃಜ್ಯ ನಕುಲಂ ಜೀವಮಿಚ್ಛಸಿ ॥79॥
ಯಾವನಿಗೆ ಹತ್ತುಸಹಸ್ರ ಆನೆಗಳ ಬಲವಿದೆಯೋ ಅಂತಹ ಭೀಮನನ್ನು ಬಿಟ್ಟು ನಕುಲನನ್ನು ಏಕೆ ಬಯಸುತ್ತಿದ್ದೀಯೆ?
ತಥೈನಂ ಮನುಜಾಃ ಪ್ರಾಹುರ್ಭೀಮಸೇನಂ ಪ್ರಿಯಂ ತವ |
ಅಥ ಕೇನಾನುಭಾವೇನ ಸಾಪತ್ನಂ ಜೀವಮಿಚ್ಛಸಿ ॥80॥
ಎಲ್ಲ ಮನುಷ್ಯರೂ ಭೀಮಸೇನನನ್ನು ನಿನಗೆ ಪ್ರಿಯನಾದವನು ಎಂದು ಹೇಳುತ್ತಾರೆ. ಹಾಗಾದರೆ ಯಾವ ಅಭಿಪ್ರಾಯದಿಂದ ತಾಯಿಯ ಸವತಿಯ ಮಗನು ಬದುಕಬೇಕೆಂದು ಬಯಸುತ್ತೀಯೆ?
ಯಸ್ಯ ಬಾಹುಬಲಂ ಸರ್ವೇ ಪಾಂಡವಾಃ ಸಮುಪಾಸತೇ |
ಅರ್ಜುನಂ ತಮಪಾಹಾಯ ನಕುಲಂ ಜೀವಮಿಚ್ಛಸಿ ॥81॥
ಯಾವನ ಬಾಹುಬಲವನ್ನು ಎಲ್ಲ ಪಾಂಡವರೂ ಪೂಜಿಸುತ್ತಾರೆಯೋ ಅಂತಹ ಅರ್ಜುನನನ್ನು ಬಿಟ್ಟು ನಕುಲನು ಬದುಕಬೇಕೆಂದು ಏಕೆ ಬಯಸುತ್ತೀಯೆ?
ಯುಧಿಷ್ಠಿರಃ
ಅನೃಶಂಸ್ಯಂ ಪರೋ ಧರ್ಮಃ ಪರಮರ್ಥಾಚ್ಚ ಮೇ ಮತಮ್ |
ಅನೃಶಂಸ್ಯಂ ಚಿಕೀರ್ಷಾಮಿ ನಕುಲೋ ಯಕ್ಷ ಜೀವತು ॥82॥
ಯುಧಿಷ್ಠಿರ ದಯೆಯು ಶ್ರೇಷ್ಠವಾದ ಧರ್ಮ. ಅದು ಧನಕ್ಕಿಂತಲೂ ಅಥವಾ ಪರಮಾರ್ಥವಾದ ಮೋಕ್ಷಕ್ಕಿಂತಲೂ ದೊಡ್ಡದು ಎಂದು ನನ್ನ ಅಭಿಪ್ರಾಯ. ನಾನು ಆ ದಯೆಯನ್ನು ತೋರಿಸಲು ಬಯಸುತ್ತೇನೆ. ಯಕ್ಷನೇ, ನಕುಲನು ಜೀವಿಸಲಿ.
ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ |
ತಸ್ಮಾದ್ ಧರ್ಮಂ ನ ತ್ಯಜಾಮಿ ಮಾ ನೋ ಧರ್ಮೋ ಹತೋ ವಧೀತ್ ॥83॥
ನಾವು ಧರ್ಮವನ್ನು ಕೊಂದರೆ ಅದು ನಮ್ಮನ್ನು ಕೊಲ್ಲುತ್ತದೆ. ನಾವು ಧರ್ಮವನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ.

ಆದ್ದರಿಂದ ನಾನು ಧರ್ಮವನ್ನು ತ್ಯಜಿಸುವುದಿಲ್ಲ. ನಾಶಗೊಂಡ ಧರ್ಮವು ನಮ್ಮನ್ನು ಕೊಲ್ಲದಿರಲಿ.
ಧರ್ಮಶೀಲಃ ಸದಾ ರಾಜಾ ಇತಿ ಮಾಂ ಮಾನವಾ ವಿದುಃ |
ಸ್ವಧರ್ಮಾನ್ನ ಚಲಿಷ್ಯಾಮಿ ನಕುಲೋ ಯಕ್ಷ ಜೀವತು ॥84॥
ರಾಜನು ಸದಾ ಧರ್ಮಶೀಲನೆಂದು ನನ್ನನ್ನು ಎಲ್ಲ ಜನರೂ ತಿಳಿಯುತ್ತಾರೆ. ನನ್ನ ಧರ್ಮದಿಂದ ನಾನು ಚ್ಯುತನಾಗುವುದಿಲ್ಲ. ಯಕ್ಷನೇ ನಕುಲನು ಜೀವಿಸಲಿ.
ಕುಂತೀ ಚೈವ ತು ಮಾದ್ರೀ ಚ ದ್ವೇ ಭಾರ್ಯೇ ತು ಪಿತುರ್ಮಮ |
ಉಭೇ ಸಪುತ್ರೇ ಸ್ಯಾತಾಂ ವೈ ಇತಿ ಮೇ ಧೀಯತೇ ಮತಿಃ ॥84.1॥
ನನ್ನ ತಂದೆಗೆ ಕುಂತೀ ಮತ್ತು ಮಾದ್ರೀ ಇಬ್ಬರು ಪತ್ನಿಯರು (ನಕುಲನು ಬದುಕಿದರೆ) ಇಬ್ಬರೂ ಪುತ್ರವಂತರಾಗುವರು ಎಂದು ನನ್ನ ಅಭಿಪ್ರಾಯ.
ಯಥಾ ಕುಂತೀ ತಥಾ ಮಾದ್ರೀ ವಿಶೇಷೋ ನಾಸ್ತಿ ಮೇ ತಯೋಃ |
ಮಾತೃಭ್ಯಾಂ ಸಮಮಿಚ್ಛಾಮಿ ನಕುಲೋ ಯಕ್ಷ ಜೀವತು ॥85॥
ನನಗೆ ಕುಂತಿಯು ಹೇಗೋ ಮಾದ್ರಿಯೂ ಹಾಗೆಯೇ. ಅವರಿಬ್ಬರಲ್ಲಿ ನನಗೆ ಯಾವ ವ್ಯತ್ಯಾಸವೂ ಇಲ್ಲ. ಪುತ್ರರೂಪವಾದ ತಾಯಿಯ ಸಂಪತ್ತು ಇಬ್ಬರಿಗೂ ಸಮನಾಗಿರಬೇಕು. ಆದ್ದರಿಂದ ಯಕ್ಷನೇ, ನಕುಲನು ಜೀವಿಸಲಿ.
ಯಕ್ಷಃ
ಯಸ್ಯ ತೇಽರ್ಥಾಚ್ಚ ಕಾಮಾಚ್ಚ ಆನೃಶಂಸ್ಯಂ ಪರಂ ಮತಮ್ |
ತಸ್ಮಾತ್ ತೇ ಭ್ರಾತರಃ ಸರ್ವೇ ಜೀವಂತು ಭರತರ್ಷಭ ॥86॥
ಯಕ್ಷ ಯಾವ ನಿನಗೆ ಅರ್ಥಕ್ಕಿಂತಲೂ, ಕಾಮಕ್ಕಿಂತಲೂ, ದಯೆಯೇ ಶ್ರೇಷ್ಠವಾದ ಧರ್ಮವೋ ಆ ಕಾರಣದಿಂದ ಎಲೈ ಭರತರ್ಷಭನೇ, ನಿನ್ನ ತಮ್ಮಂದಿರೆಲ್ಲರೂ ಜೀವಿಸಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಚತುರಧಿಕತ್ರಿಶತತಮೋಽಧ್ಯಾಯಃ ॥
॥ ಇತಿ ಆರಣೇಯಪರ್ವಣಿ ನಕುಲಾದ್ಯುತ್ಥಾನಂ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ಮುನ್ನೂರ ಐದನೆಯ ಅಧ್ಯಾಯ
ಯಕ್ಷನಿಂದ ಯುಧಿಷ್ಠಿರನಿಗೆ ತನ್ನ ಸ್ವರೂಪ ಪರಿಚಯ ಮತ್ತು ವರದಾನ.
ವೈಶಂಪಾಯನಃ
ತತಸ್ತೇ ಯಕ್ಷವಚನಾದುದತಿಷ್ಠಂತ ಪಾಂಡವಾಃ |
ಕ್ಷುತ್ಪಿಪಾಸೇ ಚ ಸರ್ವೇಷಾಂ ಕ್ಷಣೇನ ವ್ಯಪಗಚ್ಛತಾಮ್ ॥1॥
ವೈಶಂಪಾಯನ ಅನಂತರ ಯಕ್ಷನ ಮಾತಿನಿಂದ ಪಾಂಡವರೆಲ್ಲರೂ ಎದ್ದರು. ಅವರೆಲ್ಲರಿಗೂ ಒಂದೇಕ್ಷಣದಲ್ಲಿ ಹಸಿವು ನೀರಡಿಕೆಗಳು ಹೊರಟುಹೋದವು.
ಯುಧಿಷ್ಠಿರಃ
ಸರಸ್ಯೇಕೇನ ಪಾದೇನ ತಿಷ್ಠಂತಮಪರಾಜಿತಮ್ |
ಪೃಚ್ಛಾಮಿ ಕೋ ಭವಾನ್‌ದೇವೋ ನ ಮೇ ಯಕ್ಷೋ ಮತೋ ಭವಾನ್ ॥
ಯುಧಿಷ್ಠಿರ ಸರೋವರದಲ್ಲಿ ಒಂದು ಪಾದದಿಂದ ನಿಂತಿರುವ ನೀನು ಯಾವ ದೇವತೆ ಎಂದು ಕೇಳುತ್ತಿದ್ದೇನೆ. ನನ್ನ ಅಭಿಪ್ರಾಯದಲ್ಲಿ ನೀನು ಯಕ್ಷನಲ್ಲ.
ವಸೂನಾಂ ವಾ ಭವಾನೇಕೋ ರುದ್ರಾಣಾಮಥವಾ ಭವಾನ್ |
ಅಥವಾ ಮರುತಾಂ ಶ್ರೇಷ್ಠೋ ವಜ್ರೀ ವಾ ತ್ರಿದಶೇಶ್ವರಃ ॥2.1॥
ನೀನು ವಸುಗಳಲ್ಲಿ ಒಬ್ಬನೋ ಅಥವಾ ರುದ್ರರಲ್ಲಿ ಒಬ್ಬನೋ, ಅಥವಾ ಮರುತ್ತುಗಳಲ್ಲಿ ಶ್ರೇಷ್ಠನಾದವನೋ ಅಥವಾ ಸ್ವರ್ಗಾಧಿಪತಿಯಾದ ವಜ್ರಿಯಾದ ಇಂದ್ರನೋ?
ಮಮ ಹಿ ಭ್ರಾತರ ಇಮೇ ಸಹಸ್ರಶತಯೋಧಿನಃ |
ತಂ ಯೋಧಂ ನ ಪ್ರಪಶ್ಯಾಮಿ ಯೇನ ಸರ್ವೇ ನಿಪಾತಿತಾಃ ॥3॥
ನನ್ನ ತಮ್ಮಂದಿರೆಲ್ಲರೂ ಒಂದು ಲಕ್ಷ ಯೋಧರ ಜೊತೆಯಲ್ಲಿ ಯುದ್ಧ ಮಾಡುವಂತಹವರು. ಇವರೆಲ್ಲರನ್ನೂ ಬೀಳಿಸುವಂತಹ ಒಬ್ಬ ಯೋಧನು ನನಗೆ ಗೋಚರನಾಗುವುದಿಲ್ಲ.
ಸುಖಪ್ರತಿಮಬುದ್ಧಾನಾಮಿಂದ್ರಿಯಾಣ್ಯುಪಲಕ್ಷಯೇ |
ಸ ಭವಾನ್ ಸುಹೃದೋಽಸ್ಮಾಕಮಥವಾ ನಃ ಪಿತಾ ಭವಾನ್ ॥4॥
ನಿದ್ದೆಯನ್ನು ಮಾಡಿ ಸುಖವಾಗಿ ಎದ್ದವರಂತೆ ಅವರ ಇಂದ್ರಿಯಗಳು ಪ್ರಸನ್ನವಾಗಿರುವುದನ್ನು ನಾನು ಗಮನಿಸುತ್ತಿದ್ದೇನೆ. ಅಂತಹ ನೀನು ನಮ್ಮ ವಿಶ್ವಾಸಿಯೋ ಅಥವಾ ನಮ್ಮ ತಂದೆಯೋ?
ಯಕ್ಷಃ
ಅಹಂ ತೇ ಜನಕಸ್ತಾತ ಧರ್ಮೋಽಮೃದುಪರಾಕ್ರಮ |
ತ್ವಾಂ ದಿದೃಕ್ಷುರನುಪ್ರಾಪ್ತೋ ವಿದ್ಧಿ ಮಾಂ ಭರತರ್ಷಭ ॥5॥
ಯಕ್ಷ ಪ್ರೀತಿಪಾತ್ರನೇ, ಉಗ್ರಪರಾಕ್ರಮಿಯೇ, ಭರತರ್ಷಭನೇ, ನಾನು ನಿನ್ನ ತಂದೆಯಾದ ಯಮ. ನಿನ್ನನ್ನು ನೋಡಲು ಇಲ್ಲಿಗೆ

ಬಂದಿದ್ದೇನೆಂದು ತಿಳಿ.
ಯಶಃ ಸತ್ಯಂ ದಮಃ ಶೌಚಮಾರ್ಜವಂ ಹ್ರೀರಚಾಪಲಮ್ |
ದಾನಂ ತಪೋ ಬ್ರಹ್ಮಚರ್ಯಮಿತ್ಯೇತಾಸ್ತನವೋ ಮಮ ||6||
ಯಶಸ್ಸು, ಸತ್ಯ, ದಮ, ಶೌಚ, ಆರ್ಜವ, ಲಜ್ಜಾ, ಅಚಾಂಚಲ್ಯ, ದಾನ, ತಪಸ್ಸು, ಬ್ರಹ್ಮಚರ್ಯ ಇವು ನನ್ನ ಶರೀರಗಳು.
ಅಹಿಂಸಾ ಸಮತಾ ಶಾಂತಿರಾನೃಶಂಸ್ಯಮಮತ್ಸರಃ |
ದ್ವಾರಾಣ್ಯೇತಾನಿ ಮೇ ವಿದ್ಧಿ ಪ್ರಿಯೋ ಹ್ಯಸಿ ಸದಾ ಮಮ ||7||
ಅಹಿಂಸೆ, ಸಮತಾ, ಶಾಂತಿ, ದಯಾ, ಅಮತ್ಸರ ಇವುಗಳು ನನ್ನನ್ನು ಹೊಂದುವ ದ್ವಾರಗಳು. ನೀನು ನನಗೆ ಯಾವಾಗಲೂ ಪ್ರಿಯನಾಗಿದ್ದೀಯೆ.
ದಿಷ್ಟ್ಯಾ ಪಂಚಸು ರಕ್ತೋಽಸಿ ದಿಷ್ಟ್ಯಾ ತೇ ಷಟ್ ಸದಾ ಜಿತಾ |
ದ್ವೇ ಪೂರ್ವೇ ಮಧ್ಯಮೇ ದ್ವೇ ಚ ದ್ವೇ ಚಾಂತೇಽಸಾಂಪರಾಯಕೇ ||8||
ನೀನು ಪಂಚಮಹಾಯಜ್ಞಗಳಲ್ಲಿ ಅಥವಾ ನಾಲ್ಕುವೇದಗಳು ಮತ್ತು ಪಂಚರಾತ್ರ ಎಂಬ ಐದುವಿದ್ಯೆಗಳಲ್ಲಿ ಅನುರಕ್ತನಾಗಿದ್ದೀಯೆ. ಶೈಶವದಿಂದ ಇರುವ ಕಾಮಕ್ರೋಧಗಳು ಮಧ್ಯದಲ್ಲಿ ಬರುವ ಧನಲೋಭ ಮತ್ತು ಪುತ್ರಮಿತ್ರಾದಿ ಮೋಹರೂಪವಾದ ಮಮತೆ ಮತ್ತು ಮೋಕ್ಷವಿರೋಧಿಯಾದ ಕೊನೆಯಲ್ಲಿ ಬರುವ ಎಂದರೆ ಪುತ್ರಾದಿ ಸಂಪತ್ತಿಯಿಂದ ಉಂಟಾಗುವ ಮದಮತ್ಸರಗಳು ಎರಡು ಈ ಆರನ್ನೂ ನೀನು ಯಾವಾಗಲೂ ತ್ಯಜಿಸಿದ್ದೀಯೆ.
ಧರ್ಮೋಽಹಮಿತಿ ಭದ್ರಂ ತೇ ಜಿಜ್ಞಾಸುಸ್ತ್ವಮಿಹಾಗತಃ |
ಆನೃಶಂಸ್ಯೇನ ತುಷ್ಟೋಽಸ್ಮಿ ವರಂ ದಾಸ್ಯಾಮಿ ತೇಽನಘ ||9||
ನಾನು ಯಮಧರ್ಮರಾಜ. ನಿನ್ನನ್ನು ನೋಡಲು ಇಲ್ಲಿಗೆ ಬಂದೆನು. ನಿನ್ನ ದಯಾರೂಪವಾದ ಧರ್ಮದಿಂದ ಸಂತುಷ್ಟನಾಗಿದ್ದೇನೆ. ಅನಘನೇ, ನಿನಗೆ ವರವನ್ನು ಕೊಡುವೆನು.
ವರಂ ವೃಣೀಷ್ವ ರಾಜೇಂದ್ರ ದಾತಾ ಹ್ಯಸ್ಮಿ ತವಾನಘ |
ಯೇ ಹಿ ಮೇ ಪುರುಷಾ ಭಕ್ತಾ ನ ತೇಷಾಮಸ್ತಿ ದುರ್ಗತಿಃ ||10||
ರಾಜೇಂದ್ರನೇ, ವರವನ್ನು ಕೇಳು. ಅನಘನೇ, ನಾನು ವರವನ್ನು ಕೊಡುವವನಾಗಿದ್ದೇನೆ. ಯಾರು ನನ್ನ ಭಕ್ತರಾದ ಪುರುಷರಿದ್ದಾರೋ ಅವರಿಗೆ ಎಂದೂ ದುರ್ಗತಿಯಿಲ್ಲ.
ಯುಧಿಷ್ಠಿರಃ
ಅರಣೀಸಹಿತಂ ಯಸ್ಯ ಮೃಗೋ ಹ್ಯಾದಾಯ ಗಚ್ಛತಿ |
ತಸ್ಯಾಗ್ನಯೋ ನ ಲುಪ್ಯೇರನ್ ಪ್ರಥಮೋಽಸ್ತು ವರೋ ಮಮ ||11||
ಯುಧಿಷ್ಠಿರ ಬ್ರಾಹ್ಮಣನ ಅರಣೀಸಹಿತವಾದ ಮಂಥವನ್ನು ತೆಗೆದುಕೊಂಡು ಜಿಂಕೆಯು ಓಡುತ್ತಿದೆ. ಬ್ರಾಹ್ಮಣನ ಅಗ್ನಿಗೆ ಲೋಪವಾಗದಿರಲಿ. ಇದು ನಾನು ಕೇಳುವ ಪ್ರಥಮ ವರ.
ಯಕ್ಷಃ
ಅರಣೀಸಹಿತಂ ಹ್ಯಸ್ಯ ಬ್ರಾಹ್ಮಣಸ್ಯ ಹೃತಂ ಮಯಾ |
ಮೃಗವೇಷೇಣ ಕೌಂತೇಯ ಜಿಜ್ಞಾಸಾರ್ಥಂ ತವ ಪ್ರಭೋ ||12||
ಯಕ್ಷ ಪ್ರಭುವೇ, ಕುಂತೀಪುತ್ರನೇ, ನಾನೇ ಮೃಗವೇಷವನ್ನು ಧರಿಸಿ ನಿನ್ನನ್ನು ಪರೀಕ್ಷಿಸುವುದಕ್ಕೋಸ್ಕರ ಬ್ರಾಹ್ಮಣನ ಅರಣೀಸಹಿತವಾದ ಮಂಥವನ್ನು ತೆಗೆದುಕೊಂಡು ಹೋದೆನು.
ವೈಶಂಪಾಯನಃ
ದದಾನೀತ್ಯೇವ ಭಗವಾನುತ್ತರಂ ಪ್ರತ್ಯಪದ್ಯತ |
ಅನ್ಯಂ ವರಯ ಭದ್ರಂ ತೇ ವರಂ ತ್ವಮಮರೋಮಪ ||13||
ವೈಶಂಪಾಯನ ಪೂಜ್ಯನಾದ ಯಮನು ನಾನು ಕೊಡುವೆನು ಎಂದೇ ಉತ್ತರವನ್ನು ನೀಡಿದನು. ದೇವತಾಸದೃಶನಾದವನೇ ನಿನಗೆ ಮಂಗಳವಾಗಲಿ. ಇನ್ನೊಂದು ವರವನ್ನು ಕೇಳು (ಎಂದು ಹೇಳಿದನು).
ಯುಧಿಷ್ಠಿರಃ
ವರ್ಷಾಣಿ ದ್ವಾದಶಾರಣ್ಯೇ ತ್ರಯೋದಶಮುಸ್ಥಿತಮ್ |
ತತ್ರ ನೋ ನಾಭಿಜಾನೀಯುರ್ವಸತೋ ಮನುಜಾಃ ಕ್ವಚಿತ್ ||14||
ಯುಧಿಷ್ಠಿರ ಅರಣ್ಯದಲ್ಲಿ ಹನ್ನೆರಡು ವರ್ಷಗಳನ್ನು ನಾವು ಕಳೆದಿದ್ದಾಯಿತು. ಹದಿಮೂರನೆಯ ವರ್ಷವು ಪ್ರಾಪ್ತವಾಗುತ್ತಿದೆ. ಅಜ್ಞಾತವಾಸವನ್ನು ಮಾಡುವ ನಮ್ಮನ್ನು ಯಾವ ಮನುಷ್ಯರೂ ಗುರುತಿಸಬಾರದು.
ವೈಶಂಪಾಯನಃ
ದದಾನೀತ್ಯೇವ ಭಗವಾನುತ್ತರಂ ಪ್ರತ್ಯಪದ್ಯತ |
ಭೂಯಶ್ಚಾಶ್ವಾಸಯಾಮಾಸ ಕೌಂತೇಯಂ ಸತ್ಯವಿಕ್ರಮಮ್ ||15||
ವೈಶಂಪಾಯನ ಕೊಡುವೆನು ಎಂದೇ ಪೂಜ್ಯನಾದ ಯಮನು ಉತ್ತರವನ್ನು ಕೊಟ್ಟನು. ಮತ್ತು ಸತ್ಯವಿಕ್ರಮನಾದ ಕೌಂತೇಯನಿಗೆ ಮತ್ತೂ ಆಶ್ವಾಸನೆಯನ್ನು ನೀಡಿದನು.
ಯಕ್ಷಃ
ಯದ್ಯಪಿ ಸ್ವೇನ ರೂಪೇಣ ಚರಿಷ್ಯಥ ಮಹೀಮಿಮಾಮ್ |
ನ ವೋ ವಿಜ್ಞಾಸ್ಯತೇ ಕಶ್ಚಿತ್ತ್ರಿಷು ಲೋಕೇಷು ಭಾರತ ||16||

ಯಕ್ಷ ಎಲೈ ಭಾರತನೇ, ನೀವು ನಿಮ್ಮ ನಿಜರೂಪದಿಂದಲೇ ಭೂಮಿಯಲ್ಲೆಲ್ಲಾ ತಿರುಗಿದರೂ, ಮೂರುಲೋಕದಲ್ಲಿಯೂ ಯಾರೂ ನಿಮ್ಮನ್ನು ಗುರುತಿಸುವುದಿಲ್ಲ.
ವರ್ಷಂ ತ್ರಯೋದಶಮಿದಂ ಮತ್ಪ್ರಸಾದಾತ್ ಕುರೂದ್ವಹಾಃ |
ವಿರಾಟನಗರೇ ಗೂಢಾ ಅವಿಜ್ಞಾತಾಶ್ಚರಿಷ್ಯಥ ॥17॥
ಕುರೂದ್ವಹರೇ, ನನ್ನ ಅನುಗ್ರಹದಿಂದ ನೀವು ಈ ಹದಿಮೂರನೆಯ ವರ್ಷವನ್ನು ವಿರಾಟನಗರದಲ್ಲಿ ಯಾರಿಗೂ ತಿಳಿಯದಂತೆ ಗೂಢವಾಗಿ ಕಳೆಯುವಿರಿ.
ಯದ್ವಃ ಸಂಕಲ್ಪಿತಂ ರೂಪಂ ಮನಸಾ ಯಸ್ಯ ಯಾದೃಶಮ್ |
ತಾದೃಶಂ ತಾದೃಶಂ ಸರ್ವೇ ಚ್ಛಂದತೋ ಧಾರಯಿಷ್ಯಥ ॥18॥
ನಿಮ್ಮಲ್ಲಿ ಯಾರು ಯಾರು ಯಾವ ರೂಪವನ್ನು ಪಡೆಯಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸುತ್ತಾರೋ ಅಂತಹ ರೂಪಗಳು ಅವರೆಲ್ಲರಿಗೂ ಇಚ್ಛಾಮಾತ್ರದಿಂದಲೇ ಉಂಟಾಗುತ್ತವೆ. ಆ ರೂಪಗಳನ್ನು ಧರಿಸುವವರಾಗುವಿರಿ.
ಅರಣೀಸಹಿತಂ ಚೇದಂ ಬ್ರಾಹ್ಮಣಾಯ ಪ್ರಯಚ್ಛತ |
ಜಿಜ್ಞಾಸಾರ್ಥಂ ಮಯಾ ಹ್ಯೇತದಾಹೃತಂ ಮೃಗರೂಪಿಣಾ ॥19॥
ಅರಣೀಸಹಿತವಾದ ಈ ಮಂಥವನ್ನು ಬ್ರಾಹ್ಮಣನಿಗೆ ಕೊಡಿ. ನಿಮ್ಮನ್ನು ಪರೀಕ್ಷಿಸುವ ಸಲುವಾಗಿ ಮೃಗರೂಪದಿಂದ ನಾನು ಇದನ್ನು ಅಪಹರಿಸಿದೆನು.
ತೃತೀಯಂ ಗೃಹ್ಯತಾಂ ಪುತ್ರ ಪರಮಪ್ರತಿಮಂ ಮಹತ್ |
ತ್ವಂ ಹಿ ಮತ್ಪ್ರಭವೋ ರಾಜನ್ ವಿದುರಶ್ಚ ಮಮಾಂಶಜಃ ॥20॥
ಪುತ್ರನೇ, ಮೂರನೆಯ ಅಪ್ರತಿಮವಾದ ದೊಡ್ಡ ವರವನ್ನು ಕೇಳು. ನೀನು ಮತ್ತು ವಿದುರನು ನನ್ನ ಅಂಶದಿಂದ ಜನಿಸಿದವರು.
ಯುಧಿಷ್ಠಿರಃ
ದೇವದೇವೋ ಮಯಾ ದೃಷ್ಟೋ ಭವಾನ್ ಸಾಕ್ಷಾತ್ ಸನಾತನಃ |
ಯಂ ದದಾಸಿ ವರಂ ತುಷ್ಟಸ್ತಂ ಗ್ರಹೀಷ್ಯಾಮ್ಯಹಂ ಪಿತಃ ॥21॥
ಯುಧಿಷ್ಠಿರ ದೇವದೇವನೂ, ಸನಾತನನೂ ಆದ ನಿನ್ನನ್ನು ನಾನು ಸಾಕ್ಷಾತ್ ಆಗಿ ನೋಡಿದೆನು. ತಂದೆಯೇ, ನೀನು ಸಂತೋಷದಿಂದ ಯಾವ ವರವನ್ನು ಕೊಡುತ್ತೀಯೋ ಅದನ್ನು ಸ್ವೀಕರಿಸುವೆನು.
ಜಯೇಯಂ ಲೋಭಮೋಹೌ ಚ ಕ್ರೋಧಂ ಚಾಹಂ ಸದಾ ವಿಭೋ |
ದಾನೇ ತಪಸಿ ಸತ್ಯೇ ಚ ಮನೋ ಮೇ ಸತತಂ ಭವೇತ್ ॥22॥
ವಿಭುವೇ, ಲೋಭಮೋಹಗಳನ್ನು ಮತ್ತು ಕ್ರೋಧವನ್ನೂ ನಾನು ಯಾವಾಗಲೂ ಗೆಲ್ಲುವವನಾಗಬೇಕು. ದಾನದಲ್ಲಿಯೂ, ತಪಸ್ಸಿನಲ್ಲಿಯೂ ಮತ್ತು ಸತ್ಯದಲ್ಲಿಯೂ ನನ್ನ ಮನಸ್ಸು ಯಾವಾಗಲೂ ಸ್ಥಿರವಾಗಿರಬೇಕು.
ಧರ್ಮಃ
ಉಪಪನ್ನೋ ಗುಣೈರೇತೈಃ ಸ್ವಭಾವೇನಾಪಿ ಪಾಂಡವ |
ಭವಾನ್ ಧರ್ಮೋ ಪುನಶ್ಚೈವ ಯಥೋಕ್ತಂ ತೇ ಭವಿಷ್ಯತಿ ॥23॥
ಧರ್ಮ ಎಲೈ ಪಾಂಡವನೇ, ನೀನು ಸ್ವಾಭಾವಿಕವಾಗಿಯೇ ಈ ಗುಣಗಳಿಂದ ಕೂಡಿದವನಾಗಿದ್ದೀಯೆ. ನೀನೇ ಧರ್ಮಸ್ವರೂಪನು. ಆದರೂ ನೀನು ಕೇಳಿದಂತೆಯೇ ಆಗುವುದು.
ವೈಶಂಪಾಯನಃ
ಇತ್ಯುಕ್ತ್ವಾಽಂತರ್ದಧೇ ಧರ್ಮೋ ಭಗವಾಂಲ್ಲೋಕಭಾವನಃ |
ಸಮೇತಾಃ ಪಾಂಡವಾಶ್ಚೈವ ಸುಖಂ ಪ್ರಾಪ್ತಾ ಮನಸ್ವಿನಃ ॥24॥
ವೈಶಂಪಾಯನ ಲೋಕಭಾವನನಾದ ಭಗವಂತನಾದ ಯಮಧರ್ಮನು ಹೀಗೆ ಹೇಳಿ ಅಂತರ್ಧಾನವನ್ನು ಹೊಂದಿದನು. ಧೈರ್ಯಶಾಲಿಗಳಾದ ಪಾಂಡವರೆಲ್ಲರೂ ಒಟ್ಟಿಗೆ ಸುಖವನ್ನು ಹೊಂದಿದರು.
ಉಪೇತ್ಯ ಚಾಶ್ರಮಂ ವೀರಾಃ ಸರ್ವ ಏವ ಗತಕ್ಲಮಾಃ |
ಅರಣೀಂ ಪ್ರದದುಸ್ತಸ್ಮೈ ಬ್ರಾಹ್ಮಣಾಯ ತಪಸ್ವಿನೇ ॥25॥
ಆ ಎಲ್ಲ ವೀರರೂ ಆಯಾಸರಹಿತರಾಗಿ ಆಶ್ರಮಕ್ಕೆ ಹಿಂದಿರುಗಿ ತಪಸ್ವಿಯಾದ ಆ ಬ್ರಾಹ್ಮಣನಿಗೆ ಅವನ ಅರಣಿಯನ್ನು ಕೊಟ್ಟರು.
ಇದಂ ಸಮುತ್ಥಾನಸಮಾಗತಂ ಮಹತ್
ಪಿತುಶ್ಚ ಪುತ್ರಸ್ಯ ಚ ಕೀರ್ತಿವರ್ಧನಮ್ |
ಪಠನ್ ನರಃ ಸ್ಯಾದ್ ವಿಜಿತೇಂದ್ರಿಯೋ ಧನೀ
ಸಪುತ್ರಪೌತ್ರಃ ಶತವರ್ಷಭಾಕ್ ತಥಾ ॥26॥
ತಂದೆ ಮತ್ತು ಮಗನ ನಡುವೆ ನಡೆದ ಈ ಪಾಂಡವರ ಉತ್ಥಾನಸಹಿತವಾದ ಸಮಾಗಮದ ಆಖ್ಯಾನವು ಕೀರ್ತಿಯನ್ನು ಹೆಚ್ಚಿಸುವಂತಹದು. ಇದನ್ನು ಪಠಿಸುವ ಅಧಿಕಾರಿಯು ಜಿತೇಂದ್ರಿಯನೂ, ಧನವಂತನೂ, ಪುತ್ರಪೌತ್ರಸಹಿತನೂ, ಶತವರ್ಷಾಯುಷ್ಯವನ್ನು ಉಳ್ಳವನೂ ಆಗುವನು.
ನ ಚಾಪ್ಯಧರ್ಮೇ ನ ಸುಹೃದ್ವಿಭೇದೇ
ಪರಸ್ವಹಾರೇ ಪರದಾರಧರ್ಷಣೇ |
ಕದರ್ಯಭಾವೇ ನ ರಮೇನ್ಮನಃ ಸದಾ
ನೃಣಾಂ ಸದಾಖ್ಯಾನಮಿದಂ ವಿಜಾನತಾಮ್ ॥27॥

ಈ ಆಖ್ಯಾನವನ್ನು ಯಾವಾಗಲೂ ಚಿಂತನೆ ಮಾಡುವವನಿಗೆ ಅಧರ್ಮದಲ್ಲಾಗಲೀ ಬಾಂಧವರನ್ನು ಭೇದಿಸುವುದರಲ್ಲಾಗಲೀ, ಪರಸ್ವತ್ತನ್ನು ಅಪಹಾರ ಮಾಡುವುದರಲ್ಲಾಗಲೀ, ಪರಪತ್ನಿಯನ್ನು ಸ್ಪರ್ಶಮಾಡುವುದರಲ್ಲಾಗಲೀ, ದೈನ್ಯಭಾವದಲ್ಲಾಗಲೀ ಎಂದೂ ಮನಸ್ಸು ಉಂಟಾಗುವುದಿಲ್ಲ (ಸಂತೋಷಪಡುವುದಿಲ್ಲ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಪಂಚಾಧಿಕತ್ರಿಶತತಮೋಽಧ್ಯಾಯಃ ॥
॥ ಇತಿ ಆರಣೇಯಪರ್ವಣಿ ಯುಧಿಷ್ಠಿರ ಪ್ರಾಪ್ತಿರ್ನಾಮ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರ ಐದನೆಯ ಅಧ್ಯಾಯ ಮುಗಿಯಿತು.
* * * *
ಮುನ್ನೂರ ಆರನೆಯ ಅಧ್ಯಾಯ
ಅಜ್ಞಾತವಾಸವನ್ನು ಚಿಂತಿಸಿ ಶೋಕಪರನಾದ ಧರ್ಮರಾಜನಿಗೆ
ಧೌಮ್ಯರಿಂದ ಸಮಾಶ್ವಾಸನೆ. ಪಾಂಡವರಿಂದ ಒಂದುಕಡೆಯಲ್ಲಿ
ಕುಳಿತು ಅಜ್ಞಾತವಾಸಕ್ಕಾಗಿ ಮಂತ್ರಾಲೋಚನೆ.
ವೈಶಂಪಾಯನಃ
ಧರ್ಮೇಣ ತೇಽಭ್ಯನುಜ್ಞಾತಾಃ ಪಾಂಡವಾಃ ಸತ್ಯವಾದಿನಃ |
ಅಜ್ಞಾತವಾಸಂ ವತ್ಸ್ಯಂತಶ್ಛನ್ನಾ ವರ್ಷಂ ತ್ರಯೋದಶಮ್ |
ಉಪೋಪವಿಷ್ಟಾ ವಿದ್ವಾಂಸಃ ಸಹಿತಾಃ ಸಂಶ್ರಿತವ್ರತಾಃ ॥1॥
ವೈಶಂಪಾಯನ ಸತ್ಯವಾದಿಗಳಾದ ಆ ಪಾಂಡವರು ಯಮಧರ್ಮರಾಜನಿಂದ ಅಪ್ಪಣೆಯನ್ನು ಪಡೆದು ವೇಷಾಂತರದಿಂದ ಹದಿಮೂರನೆಯ ವರ್ಷ ಅಜ್ಞಾತವಾಸವನ್ನು ಮಾಡಲು ಬಯಸಿದವರಾಗಿ ವಿದ್ವಾಂಸರೂ, ಒಳ್ಳೆಯ ವ್ರತಗಳಿಂದ ಕೂಡಿದವರೂ ಆದ ಅವರು ಒಂದೆಡೆಯಲ್ಲಿ ಒಟ್ಟಿಗೆ ಕುಳಿತರು.
ತಾನಬ್ರುವನ್ ಮಹಾತ್ಮಾನಃ ಸ್ಥಿತಾಃ ಪ್ರಾಂಜಲಯಸ್ತದಾ |
ಅಭ್ಯನುಜ್ಞಾಪಯಿಷ್ಯಂತಃ ಸ್ವನಿವಾಸಂ ಧೃತವ್ರತಾಃ ॥2॥
ಮಹಾತ್ಮರೂ, ಧೃತವ್ರತರೂ ಆದ ಅವರು ತಮ್ಮ ಅಜ್ಞಾತವಾಸವನ್ನು ಮಾಡುವವರಾಗಿ ಆ ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆಯಲು ಅವರಿಗೆ ಕೈಗಳನ್ನು ಮುಗಿದು ಹೀಗೆ ಮಾತನಾಡಿದರು.
ವಿದಿತಂ ಭವತಾಂ ಸರ್ವಂ ಧಾರ್ತರಾಷ್ಟ್ರೈರ್ಯಥಾ ವಯಮ್ |
ಛದ್ಮನಾ ಹೃತರಾಜ್ಯಾಶ್ಚ ನಿಃಸ್ವಾಶ್ಚ ಬಹುಶಃ ಕೃತಾಃ ॥3॥
ಧೃತರಾಷ್ಟ್ರಪುತ್ರರಿಂದ ನಾವು ಹೇಗೆ ರಾಜ್ಯವನ್ನು ಕಸಿದುಕೊಳ್ಳಲ್ಪಟ್ಟೆವು ಮತ್ತು ಹೇಗೆ ಅನೇಕ ರೀತಿಯ ಸಂಪತ್ತಿನಿಂದ ರಹಿತರಾದೆವು ಎಂಬುದು ನಿಮಗೆಲ್ಲರಿಗೂ ತಿಳಿದ ವಿಷಯ.
ಉಷಿತಾಶ್ಚ ವನೇ ಕೃಚ್ಛ್ರಂ ವಯಂ ದ್ವಾದಶ ವತ್ಸರಾನ್ |
ಅಜ್ಞಾತವಾಸಸಮಯಂ ಶೇಷಂ ವರ್ಷಂ ತ್ರಯೋದಶಮ್ |
ತದ್ ವಸಾಮೋ ವಯಂ ಛನ್ನಾಸ್ತದನುಜ್ಞಾತುಮರ್ಹಥ ॥4॥
ಕಾಡಿನಲ್ಲಿ ಕಷ್ಟದಿಂದ  ಹನ್ನೆರಡು ವರ್ಷಗಳನ್ನು ಕಳೆದಿದ್ದಾಯಿತು. ಇನ್ನು ಉಳಿದ ಹದಿಮೂರನೆಯ ವರ್ಷ ಅಜ್ಞಾತವಾಸದ ಸಮಯ. ನಾವು ಛದ್ಮರೂಪದಿಂದ ಎಲ್ಲಾದರೂ ವಾಸಮಾಡುತ್ತೇವೆ. ನೀವು ಅದಕ್ಕೆ ಅನುಮತಿಯನ್ನು ಕೊಡಬೇಕು.
ಸುಯೋಧನಶ್ಚ ದುಷ್ಟಾತ್ಮಾ ಕರ್ಣಶ್ಚ ಸಹಸೌಬಲಃ |
ಜಾನಂತೋ ವಿಷಮಂ ಕುರ್ಯುರಸ್ಮಾಸ್ವತ್ಯಂತವೈರಿಣಃ |
ಯುಕ್ತಚಾರಾಶ್ಚ ಯುಕ್ತಾಶ್ಚ ಪೌರಸ್ಯ ಸ್ವಜನಸ್ಯ ಚ ॥5॥
ಸುಯೋಧನನೂ, ಶಕುನಿಯೂ ಮತ್ತು ಕರ್ಣನೂ ದುಷ್ಟರಾದವರು. ನಾವು ಇರುವುದು ಅವರಿಗೆ ತಿಳಿದರೆ ಅತ್ಯಂತ ವೈರಿಗಳಾದ ಅವರು ನಮಗೆ ತೊಂದರೆಯನ್ನೇ ಮಾಡಬಹುದು. ಅವರು ತಮ್ಮ ಪೌರರ ಮೇಲೆಯೂ ಮತ್ತು ತಮ್ಮ ಜನರ ಮೇಲೆಯೂ ಗೂಢಚಾರರನ್ನಿಟ್ಟು ಎಚ್ಚರಿಕೆಯಿಂದ ಇರುವವರು.
ಅಪಿ ನಸ್ತದ್ ಭವೇದ್ ಭೂಯೋ ಯದ್ ವಯಂ ಬ್ರಾಹ್ಮಣೈಃ ಸಹ |
ಸಮಸ್ತಾಃ ಸ್ವೇಷು ರಾಷ್ಟ್ರೇಷು ಸ್ವರಾಜ್ಯಸ್ಥಾ ಭವೇಮಹಿ ॥6॥
ನಮಗೆ ಇನ್ನೊಮ್ಮೆ ಎಲ್ಲಿ ಹನ್ನೆರಡುವರ್ಷದ ವನವಾಸವಾಗುವುದೋ ಎಂದು ಶಂಕೆಯಾಗುತ್ತಿದೆ. ನಾವು ಬ್ರಾಹ್ಮಣರ ಜೊತೆಯಲ್ಲಿ ನಮ್ಮ ರಾಷ್ಟ್ರಗಳಲ್ಲಿ ಇರುತ್ತೇವೆಯೋ ಇಲ್ಲವೋ (ಎಂಬುದೂ ಸಂಶಯಗ್ರಸ್ತ ವಿಷಯವಾಗಿದೆ).
ವೈಶಂಪಾಯನಃ
ಇತ್ಯುಕ್ತೌತ್ವ ದುಃಖಶೋಕಾರ್ತಃ ಶುಚಿರ್ಧರ್ಮಸುತಸ್ತದಾ |
ಸಮ್ಮೂರ್ಛಿತೋಽಭವದ್ ರಾಜಾ ಸಾಶ್ರುಕಂಠೋ ಯುಧಿಷ್ಠಿರಃ ॥7॥
ವೈಶಂಪಾಯನ ಹೀಗೆ ಹೇಳಿ ಶುಚಿಯೂ, ಧರ್ಮಪುತ್ರನೂ ಆದ ಯುಧಿಷ್ಠಿರ ರಾಜನು ದುಃಖಶೋಕಗಳಿಗೆ ಒಳಗಾಗಿ ಕಣ್ಣೀರಿನಿಂದ ಗದ್ಗದವಾದ ಸ್ವರದಿಂದ ಮೂರ್ಛಿತನಾದನು.
ತಮಥಾಶ್ವಾಸಯನ್ ಸರ್ವೇ ಬ್ರಾಹ್ಮಣಾ ಭ್ರಾತೃಭಿಃ ಸಹ |
ಅಥ ಧೌಮ್ಯೋಽಬ್ರವೀದ್ ವಾಕ್ಯಂ ಮಹಾರ್ಥಂ ನೃಪತಿಂ ತದಾ ॥8॥
ಆಗ ಅವನನ್ನು ಎಲ್ಲ ತಮ್ಮಂದಿರೂ ಮತ್ತು ಬ್ರಾಹ್ಮಣರೂ ಸಮಾಧಾನ ಪಡಿಸಿದರು. ಅನಂತರ ಧೌಮ್ಯರು ರಾಜನನ್ನು ಕುರಿತು ಬಹ್ವರ್ಥಗರ್ಭಿತವಾದ ಮಾತುಗಳನ್ನು ಆಡಿದರು.

ರಾಜನ್ ವಿದ್ವಾನ್ ಭವಾನ್ ದಾಂತಃ ಸತ್ಯಸಂಧೋ ಜಿತೇಂದ್ರಿಯಃ |
ನೈವಂವಿಧಾಃ ಪ್ರಮುಹ್ಯಂತೇ ನರಾಃ ಕಸ್ಯಾಂಚಿದಾಪದಿ ||9||
ರಾಜನೇ, ನೀನು ವಿದ್ವಾಂಸನೂ, ಇಂದ್ರಿಯನಿಗ್ರಹವುಳ್ಳವನೂ, ಜಿತೇಂದ್ರಿಯನೂ ಆಗಿದ್ದೀಯೆ. ಇಂತಹ ಪುರುಷರು ಯಾವ ಆಪತ್ತಿನಲ್ಲಿಯೂ ಮೋಹಕ್ಕೆ ಒಳಗಾಗುವುದಿಲ್ಲ.
ದೇವೈರಪ್ಯಾಪದಃ ಪ್ರಾಪ್ತಾಶ್ಛನ್ನೈಶ್ಚ ಬಹುಶಸ್ತಥಾ |
ತತ್ರ ತತ್ರ ಸಪತ್ನಾನಾಂ ನಿಗ್ರಹಾರ್ಥಂ ಮಹಾತ್ಮಭಿಃ ||10||
ಮಹಾತ್ಮರಾದ ದೇವತೆಗಳೂ ಸಹ ಶತ್ರುಗಳ ನಿಗ್ರಹಕ್ಕೋಸ್ಕರವಾಗಿ ಅನೇಕಬಾರಿ ಛದ್ಮರೂಪವನ್ನು ಧರಿಸಿ ಆಪತ್ತಿಗೆ ಒಳಗಾಗಿದ್ದಾರೆ.
ಇಂದ್ರೇಣ ನಿಷಧಾನ್ ಪ್ರಾಪ್ಯ ಗಿರಿಪ್ರಸ್ಥಾಶ್ರಮೇ ತದಾ |
ಛನ್ನೇನೋಷ್ಯ ಕೃತಂ ಕರ್ಮ ದ್ವಿಷತಾಂ ಚ ವಿನಿಗ್ರಹೇ ||11||
ಇಂದ್ರನು ಶತ್ರುಗಳ ನಿಗ್ರಹಕ್ಕಾಗಿ ನಿಷಧದೇಶಕ್ಕೆ ಹೋಗಿ ಗಿರಿಪ್ರಸ್ಥಾಶ್ರಮದಲ್ಲಿ ಛದ್ಮರೂಪದಿಂದ ವಾಸವನ್ನು ಮಾಡಿ ತನ್ನ ಕಾರ್ಯವನ್ನು ಸಾಧಿಸಿದನು.
ವಿಷ್ಣುನಾಽಶ್ವಶಿರಃ ಪ್ರಾಪ್ಯ ತಥಾ ದಿತ್ಯಾಂ ನಿವತ್ಸ್ಯತಾ |
ಗರ್ಭೇ ವಧಾರ್ಥಂ ದೈತ್ಯಾನಾಮಜ್ಞಾತೇನೋಷಿತಂ ಚಿರಮ್ ||12||
ವಿಷ್ಣುವು ಒಮ್ಮೆ ಅಶ್ವಶಿರಸ್ಸನ್ನು ಹೊಂದಿ, ಇನ್ನೊಮ್ಮೆ ದೈತ್ಯರ ವಧೆಯನ್ನು ಮಾಡುವುದಕ್ಕೋಸ್ಕರ ಅದಿತಿಯ ಗರ್ಭದಲ್ಲಿ, ಅಜ್ಞಾತವಾಗಿ ಬಹುಕಾಲ ವಾಸಮಾಡಿದನು.
ಪ್ರಾಪ್ಯ ವಾಮನರೂಪೇಣ ಪ್ರಚ್ಛನ್ನಂ ಬ್ರಹ್ಮರೂಪಿಣಾ |
ಬಲೇರಪಹೃತಂ ರಾಜ್ಯಂ ವಿಕ್ರಮೈಸ್ತಚ್ಚ ತೇ ಶ್ರುತಮ್ ||13||
ವಾಮನರೂಪದಿಂದ ಛದ್ಮಬ್ರಹ್ಮಚಾರಿಯ ವೇಷವನ್ನು ಧರಿಸಿ ತನ್ನ ಮೂರು ಹೆಜ್ಜೆಗಳಿಂದ ಬಲಿಯ ರಾಜ್ಯವನ್ನು ಅಪಹರಿಸಿದ ವಿಷಯವನ್ನು ನೀನು ಕೇಳಿದ್ದೀಯೆ.
ಪ್ರಚ್ಛನ್ನಮೇವ ಹರಿಣಾ ಧರ್ಮಜ್ಞೋ ಬಲನಿಗ್ರಹೇ |
ಮುನಿರೂಪಾಯ ವಜ್ರೇಣ ಯತ್ಕೃತಂ ತಚ್ಚ ತೇ ಶ್ರುತಮ್ ||14||
ಇಂದ್ರನು ಶತ್ರುಸೈನ್ಯವನ್ನು ನಿಗ್ರಹಿಸುವಾಗ ಪ್ರಚ್ಛನ್ನನಾಗಿಯೇ ಮುನಿಯಂತೆ ಹರಿಸ್ಮರಣೆ ಮಾಡುತ್ತಿದ್ದ ವೃತ್ರಾಸುರನಿಗೆ ಏನು ಮಾಡಿದನೆಂಬ ವಿಷಯವನ್ನು ನೀನು ಕೇಳಿದ್ದೀಯೆ (ವಾದಿರಾಜರು).
ಹುತಾಶನೇನ ಯಚ್ಚಾಪಃ ಪ್ರವಿಶ್ಯ ಛನ್ನಮಾಸತಾ |
ವಿಬುಧಾನಾಂ ಕೃತಂ ಕರ್ಮ ತಚ್ಚ ಸರ್ವಂ ಶ್ರುತಂ ತ್ವಯಾ ||15||
ಅಗ್ನಿಯು ಯಾರಿಗೂ ತಿಳಿಯದಂತೆ ಸಮುದ್ರೋದಕವನ್ನು ಪ್ರವೇಶಿಸಿ ದೇವತೆಗಳಿಗೆ ಮಾಡಿದ ಉಪಕಾರವೆಲ್ಲವನ್ನೂ ನೀನು ಕೇಳಿದ್ದೀಯೆ.
ಔರ್ವೇಣ ವಸತಾ ಛನ್ನಮೂರೌ ಬ್ರಹ್ಮರ್ಷಿಣಾ ತದಾ |
ಯತ್ಕೃತಂ ತಾತ ಲೋಕೇಷು ಕರ್ಮ ತತ್ತೇಽನಘ ಶ್ರುತಮ್ ||16||
ಎಲೈ ಅನಘನೇ, ಪ್ರೀತಿಪಾತ್ರನೇ, ಬ್ರಹ್ಮರ್ಷಿಗಳಾದ ಔರ್ವರು ತಾಯಿಯ ತೊಡೆಯಲ್ಲಿ ಅಡಗಿಕೊಂಡು ಲೋಕದಲ್ಲಿ ಯಾವ ಕಾರ್ಯವನ್ನು ಮಾಡಿದರು ಎಂಬ ವಿಷಯವನ್ನು ನೀನು ಕೇಳಿದ್ದೀಯೆ.
ಏವಂ ವಿವಸ್ವತಾ ತಾತ ಛನ್ನೇನೋತ್ತಮತೇಜಸಾ |
ನಿರ್ದಗ್ಧಾಃ ಶಾತ್ರವಾಃ ಸರ್ವೇ ವಸತಾ ಭುವಿ ಸರ್ವಶಃ ||17||
ಎಲೈ ಪ್ರೀತಿಪಾತ್ರನೇ, ಅದರಂತೆ ಉತ್ತಮ ತೇಜಸ್ಸುಳ್ಳ ಸೂರ್ಯನು ಛದ್ಮರೂಪದಿಂದ ಭೂಮಿಯಲ್ಲಿ ವಾಸವನ್ನು ಮಾಡಿ ಎಲ್ಲ ಶತ್ರುಗಳನ್ನೂ ಸಂಪೂರ್ಣವಾಗಿ ದಹಿಸಿದನು.
ವಿಷ್ಣುನಾ ವಸತಾ ಚಾಪಿ ಗೃಹೇ ದಶರಥಸ್ಯ ವೈ |
ದಶಗ್ರೀವೋ ಹತಶ್ಛನ್ನಂ ಸಂಯುಗೇ ಭೀಮಕರ್ಮಣಾ ||18||
ಭಯಂಕರ ಕರ್ಮವನ್ನು ಮಾಡುವ ವಿಷ್ಣುವೂ ಸಹ ದಶರಥನ ಮನೆಯಲ್ಲಿ ಮನುಷ್ಯರೂಪದಿಂದ ವಾಸವನ್ನು ಮಾಡಿ ಛನ್ನನಾಗಿ ಯುದ್ಧದಲ್ಲಿ ರಾವಣನನ್ನು ಸಂಹರಿಸಿದನು.
ಏವಮೇವ ಮಹಾತ್ಮಾನಃ ಪ್ರಚ್ಛನ್ನಾಸ್ತತ್ರ ತತ್ರ ಹ |
ಅಜಯಂಛಾತ್ರವಾನ್ ಯುದ್ಧೇ ತಥಾ ತ್ವಮಪಿ ಜೇಷ್ಯಸಿ ||19||
ಈ ರೀತಿಯಲ್ಲಿ ಅಲ್ಲಲ್ಲಿ ಅನೇಕ ಮಹಾತ್ಮರು ಪ್ರಚ್ಛನ್ನರಾಗಿ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದರು. ಅದರಂತೆ ನೀನೂ ಜಯಿಸುವಿ.
ವೈಶಂಪಾಯನಃ
ತಥಾ ಧೌಮ್ಯೇನ ಧರ್ಮಜ್ಞೋ ವಾಕ್ಯೈಃ ಸಂಪರಿತೋಷಿತಃ |
ಶಾಸ್ತ್ರದೃಷ್ಟ್ಯಾಪುನರ್ಬುದ್ಧಿಂ ಪ್ರತಿಪೇದೇ ಯುಧಿಷ್ಠಿರಃ ||20||
ವೈಶಂಪಾಯನ ಹೀಗೆ ಧೌಮ್ಯರ ವಾಕ್ಯಗಳಿಂದ ಸಂತೋಷಗೊಂಡ ಧರ್ಮಜ್ಞನಾದ ಯುಧಿಷ್ಠಿರನು ಶಾಸ್ತ್ರದೃಷ್ಟಿಯನ್ನು ಹೊಂದಿ ತನ್ನ ಸದ್ಬುದ್ಧಿಯನ್ನು ಮರಳಿ ಪಡೆದನು.
ಅಥಾಬ್ರವೀನ್ಮಹಾಬಾಹುರ್ಭೀಮಸೇನೋ ಮಹಾಬಲಃ |
ರಾಜಾನಂ ಬಲಿನಾಂ ಶ್ರೇಷ್ಠೋ ಗಿರಾ ಸಂಪರಿಹರ್ಷಯನ್ ||21||
ಅನಂತರ ಮಹಾಬಾಹುವೂ, ಮಹಾಬಲನೂ, ಬಲಿಷ್ಠರಲ್ಲಿ ಶ್ರೇಷ್ಠನೂ ಆದ ಭೀಮಸೇನನು ತನ್ನ ಮಾತುಗಳಿಂದ ರಾಜನನ್ನು

ಸಂತೋಷಪಡಿಸುತ್ತಾ ಹೀಗೆ ಮಾತನಾಡಿದನು.
ಅವೇಕ್ಷಯಾ ಮಹಾರಾಜ ತವ ಗಾಂಡೀವಧನ್ವನಾ |
ಧರ್ಮಾನುಗತಯಾ ಬುದ್ಧ್ಯಾ ನ ಕಿಂಚಿತ್ ಸಾಹಸಂ ಕೃತಮ್ ॥22॥
ಎಲೈ ಮಹಾರಾಜನೇ, ನಿನ್ನ ಉಪೇಕ್ಷೆಯಿಂದಲೂ ಮತ್ತು ಧರ್ಮಾನುಗತ ಬುದ್ಧಿಯಿಂದಲೂ (ನಿವಾರಿತನಾಗಿ) ಗಾಂಡೀವಧನುಸ್ಸನ್ನು ಹೊಂದಿದ ಅರ್ಜುನನು ಯಾವ ಸಾಹಸಕಾರ್ಯವನ್ನೂ ಮಾಡಲಿಲ್ಲ.
ಸಹದೇವೋ ಮಯಾ ನಿತ್ಯಂ ನಕುಲಶ್ಚ ನಿವಾರಿತೌ |
ಶಕ್ತೌ ವಿಧ್ವಂಸನೇ ತೇಷಾಂ ಶತ್ರೂಣಾಂ ಭೀಮವಿಕ್ರಮೌ ॥23॥
ಭೀಮಪರಾಕ್ರಮವುಳ್ಳ ನಕುಲಸಹದೇವರು ಶತ್ರುಗಳನ್ನು ವಿನಾಶಮಾಡಲು ಸಮರ್ಥರಾದವರು. ನಾನು ಅವರಿಬ್ಬರನ್ನೂ ಯಾವಾಗಲೂ ತಡೆದಿದ್ದೇನೆ.
ನ ವಯಂ ತತ್ ಪ್ರಹಾಸ್ಯಾಮೋ ಯಸ್ಮಿನ್ ಯೋಕ್ಷ್ಯತಿ ನೋ ಭವಾನ್ |
ಭವಾನ್ ವಿಧತ್ತಾಂ ತತ್ಸರ್ವಂ ಕ್ಷಿಪ್ರಂ ಜೇಷ್ಯಾಮಹೇ ರಿಪೂನ್ ॥24॥
ನೀನು ನಮಗೆ ಏನನ್ನು ವಿಧಿಸುತ್ತೀಯೋ ಅದನ್ನು ನಾವು ಎಂದೂ ಪರಿತ್ಯಜಿಸಿಲ್ಲ. ಆದ್ದರಿಂದ ಈಗ ನೀನು ಎಲ್ಲವನ್ನೂ ವಿಧಾನಮಾಡು. ಶತ್ರುಗಳನ್ನು ಶೀಘ್ರವಾಗಿ ಜಯಿಸುತ್ತೇವೆ.
ಇತ್ಯುಕ್ತೇ ಭೀಮಸೇನೇನ ಬ್ರಾಹ್ಮಣಾಃ ಪರಮಾಶಿಷಃ |
ಉಕ್ತ್ವಾ ಚಾಪೃಚ್ಛ್ಯ ಭರತಾನ್ ಯಥಾಸ್ವಾನ್ ಜಗ್ಮುರಾಶ್ರಮಾನ್ ॥25॥
ಭೀಮಸೇನನು ಹೀಗೆ ಹೇಳುತ್ತಿರಲು ಬ್ರಾಹ್ಮಣರು ಶ್ರೇಷ್ಠವಾದ ಆಶೀರ್ವಾದವನ್ನು ಮಾಡಿ ಆ ಭರತವಂಶೋತ್ಪನ್ನರ ಅನುಮತಿಯನ್ನು ಪಡೆದು ತಮ್ಮ ತಮ್ಮ ಆಶ್ರಮಗಳಿಗೆ ಹಿಂದಿರುಗಿದರು.
ಸರ್ವೇ ವೇದವಿದೋ ಮುಖ್ಯಾ ಯತಯೋ ಮುನಯಸ್ತಥಾ |
ಆಶೀರ್ಯುಕ್ತ್ವಾ ಯಥಾಕಾಮಂ ಪುನರ್ದರ್ಶನಕಾಂಕ್ಷಯಾ ॥26॥
ಸಹ ಧೌಮ್ಯೇನ ವಿದ್ವಾಂಸಸ್ತತಸ್ತೇ ಪಂಚ ಪಾಂಡವಾಃ |
ಉತ್ಥಾಯ ಪ್ರಯಯುರ್ವೀರಾಃ ಕೃಷ್ಣಾಮಾದಾಯ ಧನ್ವಿನಃ ॥27॥
ವೇದಜ್ಞರಾದ ಎಲ್ಲಾ ಮುನಿಗಳೂ, ಪ್ರಧಾನರಾದ ಸಂನ್ಯಾಸಿಗಳು ಆಶೀರ್ವಾದಗಳನ್ನು ಮಾಡಿ ಪುನಃ ಬೇಗ ದರ್ಶನವಾಗಲೆಂದು ಹಾರೈಸಿ ವಿದ್ವಾಂಸರಾದ ಧೌಮ್ಯರ ಜೊತೆಯಲ್ಲಿ ಹೊರಟರು. ಅದರಂತೆ ವೀರರಾದ ಪಂಚಪಾಂಡವರೂ ಸಹ ಎದ್ದು ಧನುಸ್ಸನ್ನು ಧರಿಸಿ ದ್ರೌಪದಿಯನ್ನು ಕರೆದುಕೊಂಡು ಹೊರಟರು.
ಕ್ರೋಶಮಾತ್ರಮುಪಾಗಮ್ಯ ತಸ್ಮಾದ್ದೇಶಾನ್ನಿಮಿತ್ತತಃ |
ಶ್ವೋಭೂತೇ ಮನುಜವ್ಯಾಘ್ರಾಶ್ಛನ್ನವಾಸಾರ್ಥಮುದ್ಯತಾಃ ॥28॥
ಮೊದಲನೆಯ ಸ್ಥಳದಿಂದ ಒಂದು ಕ್ರೋಶದೂರ ನಡೆದು ಮಾರನೆಯ ದಿವಸ ಅಜ್ಞಾತವಾಸವನ್ನು ಮಾಡುವ ನಿಮಿತ್ತದಿಂದ ಆ ಮನುಜವ್ಯಾಘ್ರರೆಲ್ಲರೂ ಉದ್ಯುಕ್ತರಾದರು.
ಪೃಥಕ್ಶಾಸ್ತ್ರವಿದಃ ಸರ್ವೇ ಸರ್ವೇ ಮಂತ್ರವಿಶಾರದಾಃ |
ಸಂಧಿವಿಗ್ರಹಕಾಲಜ್ಞಾ ಮಂತ್ರಾಯ ಸಮುಪಾವಿಶನ್ ॥29॥
ಅವರೆಲ್ಲರೂ ಅನೇಕ ಶಾಸ್ತ್ರಗಳನ್ನು ಬಲ್ಲವರು, ಅನೇಕ ಮಂತ್ರಗಳಲ್ಲಿ ವಿಶಾರದರಾದವರು. ಸಂಧಿವಿಗ್ರಹಕಾಲವನ್ನು ತಿಳಿದವರು. ಅವರು ಅಜ್ಞಾತವಾಸಕ್ಕಾಗಿ ಮಂತ್ರಾಲೋಚನೆಯನ್ನು ಮಾಡಲು ಅಲ್ಲಿ ಕುಳಿತುಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಂ ವೈಯಾಸಿಕ್ಯಾಂ ವನಪರ್ವಣಿ ಷಡಧಿಕತ್ರಿಶತತಮೋಽಧ್ಯಾಯಃ ॥
॥ ಇತಿ ಆರಣೇಯಪರ್ವಣಿ ಅಜ್ಞಾತವಾಸಮಂತ್ರಣಂ ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವನಪರ್ವದಲ್ಲಿ ಮುನ್ನೂರ ಆರನೆಯ
ಅಧ್ಯಾಯ ಮುಗಿಯಿತು.
* * * *
ಪರಿಶಿಷ್ಟ1
ಮುನ್ನೂರ ಏಳನೆಯ ಅಧ್ಯಾಯ
ವನಪರ್ವದ ವಿಷಯಾನುಕ್ರಮಣಿಕೆ
ಇತಿ ಸಮಾಪ್ತಮಾರಣ್ಯಕಂ ಪರ್ವ | ಅಸ್ಮಿನ್ ಪರ್ವಣ್ಯಮೀ ವೃತ್ತಾಂತಾಃ|
ವನಪರ್ವವು ಸಮಾಪ್ತವಾಯಿತು. ಇದರಲ್ಲಿ ಈ ವಿಷಯಗಳಿವೆ.
1. ಪಾಂಡವಪ್ರಸ್ಥಾನಮ್, 2. ಪೌರಾನುಗಮನಮ್, 3. ಪೌರಮಂತ್ರಃ, 4. ಪೌರವಿಸರ್ಜನಮ್, 5. ಬ್ರಾಹ್ಮಣಾನುಗಮನಮ್, 6. ಯುಧಿಷ್ಠಿರಚಿಂತಾ, 7. ಶೌನಕವಾಕ್ಯಮ್, 8. ಧೌಮ್ಯಸ್ತವಃ, 9. ಆದಿತ್ಯನಾಮಾಷ್ಟಶತಮ್, 10. ವಿದುರನಿರ್ವಾಸನಮ್, 11. ವಿದುರಾಗಮನಮ್, 12. ಧೃತರಾಷ್ಟ್ರಸಂತಾಪಃ, 13. ಸುರಭಿವಿಪ್ರಸಂವಾದಃ, 14. ಅರ್ಜುನವಾಕ್ಯಮ್, 15. ಭೀಮಸೇನವಾಕ್ಯಮ್, 16. ವ್ಯಾಸದರ್ಶನಮ್, 18. ಲೋಕಪಾಲಾಗಮನಮ್, 19. ಮೈತ್ರೇಯಗಮನಮ್, 20. ತಚ್ಛಾಪಃ, 21. ಕಿರ್ಮೀರವಧಃ, 22. ವೃಷ್ಣಿಪಾಂಡವಸಮಾಗಮಃ, 23. ಸೌಭವಧಃ, 23. ದ್ವೈತವನ ಪ್ರವೇಶಃ, 24. ದ್ರೌಪದೀವಾಕ್ಯಮ್, 25. ವಿದ್ಯಾಲಾಭಃ, 26. ಶಸ್ತ್ರಪ್ರಾಪ್ತಿಃ, 27. ಇಂದ್ರಲೋಕಾಭಿಗಮನಮ್, 28. ಕೈರಾತಮ್, 29. ಉಲೂಕಾಭಿಗಮನಮ್, 30. ಧೃತರಾಷ್ಟ್ರಚಿಂತಾ, 31. ಸಂಜಯವಾಕ್ಯಮ್, 32. ಬೃಹದಶ್ವಾಗಮನಮ್, 33. ನಲೋಪಾಖ್ಯಾನಮ್, 34. ಅಕ್ಷಜ್ಞಾನಪ್ರಾಪ್ತಿಃ, 35. ನಾರದಾಗಮನಮ್, 36. ಪೌಲಸ್ತ್ಯತೀರ್ಥಯಾತ್ರಾ, 37. ತೀರ್ಥಯಾತ್ರಾರ್ಥಂ ಪಾಂಡವಪ್ರಸ್ಥಾನಮ್,

38. ಲೋಮಶವಾಕ್ಯಮ್, 39. ತತ್ತೀರ್ಥಯಾತ್ರಾಪ್ರಸ್ಥಾನಮ್, 40. ಲೋಪಾಮುದ್ರೋಪಾಖ್ಯಾನಮ್, 41. ವಿಂಧ್ಯಶೈಲಚರಿತಮ್, 42. ವಾತಾಪಿನಾಶನಮ್, 43. ಸಮುದ್ರಶೋಷಣಮ್, 44. ಕಾಲಯವನವಧಃ, 45. ಸಗರಪುತ್ರವಿನಾಶಃ, 46. ಗಂಗಾವತಾರಃ, 47. ಋಷ್ಯಶೃಂಗೋಪಾಖ್ಯಾನಮ್, 48. ವೃಷ್ಣಿಪಾಂಚಾಲಾಗಮನಮ್ಂ 49. ಹಲಧರವಾಕ್ಯಮ್, 50. ವಾಸುದೇವವಾಕ್ಯಮ್, 51. ಜಾಮದಗ್ನ್ಯಚರಿತಮ್, 52. ಬದರೀವಾಸಃ, 53. ಕದಳೀಷಂಡಮ್, 54. ಹನುಮದ್ಭೀಮಸಮಾಗಮಃ, 55. ಸೌಕನ್ಯೋಪಾಖ್ಯಾನಮ್, 56. ಮಂಧಾತ್ರುಪಾಖ್ಯಾನಮ್, 57. ಶ್ಯೇನಕಪೋತೀಯಮ್, 58. ಅಷ್ಟಾವಕ್ರೀಯಮ್, 59. ಯಾವಕ್ರೀತಮ್, 60. ಗಂಧಮಾದನಪ್ರವೇಶಃ, 61. ಔತ್ಪತಿಕಮ್, 62. ಘಟೋತ್ಕಚಾಗಮನಮ್, 63. ಜಟಾಸುರವಧಃ, 64. ಗಂಧಮಾದನನಿವಾಸಃ, 65. ಮಣಿಮದ್ವಧಃ, 66. ಸೌಗಂಧಿಕಾಹರಣಮ್, 67. ವೈಶ್ರವಣಸಮಾಗಮಃ, 68. ಅರ್ಷ್ಟಿಷೇಣಾಶ್ರಮನಿವಾಸಃ, 69. ಇಂದ್ರಲೋಕಾದರ್ಜುನಾಗಮನಮ್, 70. ನಿವಾತಕವಚವಧಃ, 71. ಪಾಶುಪತದರ್ಶನಪ್ರರ್ಥಾನಾ, 72. ರಾಜ್ಞಃ ಪ್ರಶ್ನಃ, 73. ಶಸ್ತ್ರದರ್ಶನಮ್, 74. ಆಜಗರಮ್, 75. ಮಾರ್ಕಂಡೇಯಸಮಾಸ್ಯಾ, 76. ಕಾಮ್ಯಕೇ ವಾಸುದೇವ ಸಮಾಗಮಃ, 77. ಬ್ರಾಹ್ಮಣಮಾಹಾತ್ಮ್ಯಕಥನಮ್, 78. ತಾರ್ಕ್ಷ್ಯಸರಸ್ವತೀಸಂವಾದಃ, 79. ಮಾರ್ಕಂಡೇಯಪುರಾಣಮ್, 80. ಮಾರ್ಕಂಡೇಯೋಕ್ತಭವಿಷ್ಯಮ್, 81. ಮಾಂಡೂಕೋಪಾಖ್ಯಾನಮ್, 82. ಇಂದ್ರದ್ಯುಮ್ನೋಪಾಖ್ಯಾನಮ್, 83. ಧುಂಧುಮಾರೋಪಾಖ್ಯಾನಮ್, 84. ಪತಿವ್ರತಾಮಾಹಾತ್ಮ್ಯೋಪಾಖ್ಯಾನಮ್, 85. ಶಿಬಿಚರಿತಮ್, 86. ಬಕೋಪಾಖ್ಯಾನಮ್, 87. ಆಂಗಿರಸಮ್, 88. ಸ್ಕಂದಜನನಮ್, 88. ದ್ರೌಪದೀಸತ್ಯಭಾಮಾ ಸಂವಾದಃ, 90. ಘೋಷಯಾತ್ರಾಯಾಂ ದುರ್ಯೋಧನಪ್ರತಿಜ್ಞಾ, 91. ಕರ್ಣಪಲಾಯನಮ್, 92. ಪಾಂಡವೈರ್ಧಾರ್ತರಾಷ್ಟ್ರಾದೀನಾಂ ವಿಮೋಕ್ಷಣಮ್, 93. ದುರ್ಯೋಧನ ಯಜ್ಞಃ, 94. ರಾಮೋಪಾಖ್ಯಾನಮ್, 95. ಸಾವಿತ್ರ್ಯುಪಾಖ್ಯಾನಮ್, 96. ಕುಂಡಲಾಹರಣಮ್, 97. ಆರಣೇಯಮ್, 98. ಯಕ್ಷಪ್ರಶ್ನಾ ಇತಿ ಶಮ್॥

॥ ಇತಿ ವನಪರ್ವ ಸಮಾಪ್ತಮ್ ॥

ಪರಿಶಿಷ್ಟ2 ಅಧ್ಯಾಯ-1

ಜನಮೇಜಯಃ

ವಸತ್ಸ್ವೇವಂ ವನೇ ತೇಷು ಪಾಂಡವೇಷು ಮಹಾತ್ಮಸು |
ರಮಮಾಣೇಷು ಚಿತ್ರಾಭಿಃ ಕಥಾಭಿಃ ಮುನಿಭಿಃ ಸಹ ॥1॥
ಸೂರ್ಯದತ್ತಾಕ್ಷಯಾನ್ನೇನ ಕೃಷ್ಣಾಯಾ ಭೋಜನಾವಧಿ |
ಬ್ರಾಹ್ಮಣಾಂಸ್ತರ್ಪಮಾಣೇಷು ಯೇ ಚಾನ್ನಾರ್ಥಮುಪಾಗತಾಃ ॥2॥
ಆರಣ್ಯಾನಾಂ ಮೃಗಾಣಾಂ ಚ ಮಾಂಸೈರ್ನಾನಾವಿಧೈರಪಿ |
ಧಾರ್ತರಾಷ್ಟ್ರಾ ದುರಾತ್ಮಾನಃ ಸರ್ವೇ ದುರ್ಯೋಧನಾದಯಃ |
ಕಥಂತೇಷ್ವನ್ವವರ್ತಂತ ಪಾಪಾಚಾರಾ ಮಹಾಮುನೇ ॥3॥
ದುಃಶಾಸನಸ್ಯ ಕರ್ಣಸ್ಯ ಶಕುನೇಶ್ಚ ಮತೇ ಸ್ಥಿತಾಃ |
ಏಕದಾಚಕ್ಷ್ವ ಭಗವನ್ ವೈಶಂಪಾಯನ ಪೃಚ್ಛತಃ ॥4॥

ವೈಶಂಪಾಯನಃ

ಶ್ರುತ್ವಾ ಶೇಷಾಂ ಕಥಾ ವೃತ್ತಿಂ ನಗರೇ ವಸತಾಮಿವ |
ದುರ್ಯೋಧನೋ ಮಹಾರಾಜ ತೇಷು ಪಾಪಮರೋಚಯತ್ ॥5॥
ತಥಾ ತೈರ್ನಿಕೃತಿಪ್ರಜ್ಞೈಃ ಕರ್ಣದುಃಶಾಸನಾದಿಭಿಃ |
ನಾನೋಪಾಯೈರಘಂ ತೇಷು ಚಿಂತಯತ್ಸು ದುರಾತ್ಮಸು ॥6॥
ಅಭ್ಯಗಚ್ಛತ್ ಸ ಧರ್ಮಾತ್ಮಾ ದುರ್ವಾಸಾ ನಾಮ ಕಾಮತಃ |
ಶಿಷ್ಯಾಯುತಸಮೋಪೇತೋ ತಪಸ್ವೀ ಸುಮಹಾಯಶಾಃ ॥7॥
ತಮಾಗತ ಮಭಿಪ್ರೇಕ್ಷ್ಯಮುನಿಂ ಪರಮಕೋಪನಮ್ |
ದುರ್ಯೋಧನೋ ವಿನೀತಾತ್ಮಾ ಪ್ರಶ್ರಯೇಣ ದಮೇನ ಚ |
ಸಹಿತೋ ಭ್ರಾತೃಭಿಃ ಶ್ರೀಮಾನಾತಿಥ್ಯೇನ ನ್ಯಮಂಕ್ರಯತ್ ॥8॥
ವಿಧಿವತ್ ಪೂಜಯಾಮಾಸ ಸ್ವಯಂ ಕಿಂಕರವತ್ ಸ್ಥಿತಃ |
ಅಹಾನಿ ಕ್ವಚಿತ್ ತತ್ರ ತಸ್ಥೌ ಸ ಮುನಿಪುಂಗವಃ ॥9॥
ತಂ ಚ ಪರ್ಯಚರದ್ ರಾಜಾ ದಿವಾರಾತ್ರಮತಂದ್ರಿತಃ |
ದುರ್ಯೋಧನೋ ಮಹಾರಾಜ ಶಾಪಾತ್ ತಸ್ಯ ವಿಶಂಕಿತಃ ॥10॥
ಕ್ಷುಧಿತೋಸ್ಮಿ ದದಸ್ವಾನ್ನಂ ಶೀಘ್ರಂ ಮಮ ನರಾಧಿಪ |
ಇತ್ಯುಕತ್ವ ಗಚ್ಛತಿ ಸ್ನಾತುಂ ಪ್ರತ್ಯಾಗಚ್ಛತಿ ವೈ ಚಿರಾತ್ ॥11॥
ನ ಭೋಕ್ಷ್ಯಾಮ್ಯದ್ಯ ಮೇ ನಾಸ್ತಿ ಕ್ಷುಧೇತ್ಯುಕ್ತ್ವೈತ್ಯ ದರ್ಶನಮ್ |
ಅಕಸ್ಮಾದೇತ್ಯ ಚ ಬ್ರೂತೇ ಭೋಜಯಾಸ್ಮಾನ್ ತ್ವರಾನ್ವಿತಃ ॥12॥
ಕದಾಚಿಚ್ಚ ನಿಶೀಥೇ ಸ ಉತ್ಥಾಯ ನಿಕೃತೌ ಸ್ಥಿತಃ |
ಪೂರ್ವವತ್ ಕಾರಯಿತ್ವಾನ್ನಂ ನ ಭುಂಕ್ತೇ ಗರ್ಹಯನ್ ಸ್ಮ ಸಃ ॥13॥
ವರ್ತಮಾನೇ ತಥಾ ತಸ್ಮಿನ್ ಯದಾ ದುರ್ಯೋಧನೋ ನೃಪಃ |

ನಿಕೃತಿಂ ನೈತಿ ನ ಕ್ರೋಧಂ ತದಾ ತುಷ್ಟೋಽಭವನ್ಮುನಿಃ ॥14॥
ಆಹ ಚೈನಂ ದುರಾಧರ್ಷೋ ವರದೋಽಸ್ಮೀತಿ ಭಾರತ ॥15॥
ವರಂ ವರಯ ಭದ್ರಂತೇ ಯಚ್ಚ ಮನಸಿ ವರ್ತತೇ ।
ಮಯಿ ಪ್ರೀತೇ ತು ಯದ್ಧರ್ಮ್ಯಂ ನಾಲಭ್ಯಂ ವಿದ್ಯತೇ ತವ ॥16॥
ವೈಶಂಪಾಯನಃ
ಏತಚ್ಛ್ರುತ್ವಾ ವಚಸ್ತಸ್ಯ ಮಹರ್ಷೇರ್ಭಾವಿತಾತ್ಮನಃ ।
ಅಮನ್ಯತ ಪುನರ್ಜಾತಮಾತ್ಮಾನಂ ಸ ಸುಯೋಧನಃ ॥17॥
ಪ್ರಾಗೇವ ಮಂತ್ರಿತಂ ಚಾಸೀತ್ ಕರ್ಣದುಃಶಾಸನಾದಿಭಿಃ ।
ಯಾಚನೀಯಂ ಮುನೇಸ್ತುಷ್ಟಾದಿತಿ ನಿಶ್ಚಿತ್ಯ ದುರ್ಮತಿಃ ॥18॥
ಅತಿಹರ್ಷಾನ್ವಿತೋ ರಾಜನ್ ವರಮೇನಮಯಾಚತ ।
ಶಿಷ್ಯೈಃ ಸಹ ಮಮಬ್ರಹ್ಮನ್ ಯಥಾಜಾತೋಽತಿಥಿರ್ಭವಾನ್ ॥19॥
ಅಸ್ಮತ್ಕುಲೇ ಮಹಾರಾಜೋ ಜ್ಯೇಷ್ಠಃ ಶ್ರೇಷ್ಠೋ ಯುಧಿಷ್ಠಿರಃ ।
ವನೇ ವಸತಿ ಧರ್ಮಾತ್ಮಾ ಭ್ರಾತೃಭಿಃ ಪರಿವಾರಿತಃ ।
ಗುಣವಾನ್ ಶೀಲಸಂಪನ್ನಸ್ತಸ್ಯ ತ್ವಮತಿಥಿರ್ಭವ ॥20॥
ಯದಾ ಚ ರಾಜಪುತ್ರೀ ಸಾ ಸುಕುಮಾರೀ ಯಶಸ್ವಿನೀ ।
ಭೋಜಯಿತ್ವಾ ದ್ವಿಜಾನ್ ಸರ್ವಾನ್ ಪತೀಂಶ್ಚ ವರವರ್ಣಿನೀ ॥21॥
ವಿಶ್ರಾಂತಾ ಚ ಸ್ವಯಂ ಭುಕ್ತ್ವಾ ಸುಖಾಸೀನಾ ಭವೇತ್ ಯದಾ ।
ತದಾ ತ್ವಂ ತತ್ರ ಗಚ್ಛೇಥಾ ಯದ್ಯನುಗ್ರಾಹ್ಯತಾ ಮಯಿ ॥22॥
ತಥಾಕರಿಷ್ಯೇ ತ್ವತ್ಪ್ರೀತ್ಯೇತ್ಯೇವಮುಕ್ತ್ವಾ ಸುಯೋಧನಮ್ ।
ದುರ್ವಾಸಾ ಅಪಿ ವಿಪ್ರೇಂದ್ರೋ ಯಥಾಗತಮಗಾತ್ ತತಃ ॥23॥
ಕೃತಾರ್ಥಮಪಿ ಚಾತ್ಮಾನಂ ತದಾ ಮೇನೇ ಸುಯೋಧನಃ ।
ಕರೇಣ ಚ ಕರಂ ಗೃಹ್ಯ ಕರ್ಣಸ್ಯ ಮುದಿತೋ ಭೃಶಮ್ ॥24॥
ಕರ್ಣೋಽಪಿ ಭ್ರಾತೃಸಹಿತಮಿತ್ಯುವಾಚ ನೃಪಂ ಮುದಾ ।
ದಿಷ್ಟ್ಯಾಕಾಮಃ ಸುಸಂವೃತ್ತೋ ದಿಷ್ಟ್ಯಾ ಕೌರವ ವರ್ಧಸೇ ॥25॥
ದಿಷ್ಟ್ಯಾ ತೇ ಶತ್ರವೋ ಮಗ್ನಾ ದುಸ್ತರೇ ವ್ಯಸನಾರ್ಣವೇ ॥26॥
ದುರ್ವಾಸಃ ಕ್ರೋಧಜೇ ವಹ್ನೌ ಪತಿತಾಃ ಪಾಂಡುನಂದನಾಃ ।
ಸ್ವೈರೇವ ತೇ ಮಹಾಪಾಪೈರ್ಗತಾ ವೈ ದುಸ್ತರಂ ತಮಃ ॥27॥
ವೈಶಂಪಾಯನಃ
ಇತ್ಥಂ ತೇ ನಿಕೃತಿಪ್ರಜ್ಞಾ ರಾಜನ್ ದುರ್ಯೋಧನಾದಯಃ ।
ಹಸಂತಃ ಪ್ರೀತಮನಸೋ ಜಗ್ಮುಃ ಸ್ವಂಸ್ವಂ ನಿಕೇತನಮ್ ॥28॥
॥ ಇತಿ ಪ್ರಥಮೋಧ್ಯಾಯಃ ॥
* * * *
ವೈಶಂಪಾಯನಃ
ತತಃ ಕದಾಚಿದ್ ದುರ್ವಾಸಾಃ ಸುಖಾಸೀನಾಂಸ್ತು ಪಾಂಡವಾನ್ ।
ಭುಕ್ತ್ವಾ ಚಾವಸ್ಥಿತಾಂ ಕೃಷ್ಣಾಂ ಜ್ಞಾತ್ವಾ ತಸ್ಮಿನ್ ವನೇ ಮುನಿಃ ।
ಅಭ್ಯಾಗಚ್ಛತ್ ಪರಿವೃತಃ ಶಿಷ್ಯೈರಯುತಸಮ್ಮಿತೈಃ ॥1॥
ದೃಷ್ಟ್ವಾಽಽಯಾಂತಂ ತಮತಿಥಿಂ ಸ ಚ ರಾಜಾ ಯುಧಿಷ್ಠಿರಃ ।
ಜಗಾಮಾಭಿಮುಖಃ ಶ್ರೀಮಾನ್ ಸಹ ಭ್ರಾತೃಭಿರಚ್ಯುತಃ ॥2॥
ತಸ್ಮೈ ಬದ್ಧ್ವಾಂಜಲಿಂ ಸಮ್ಯಗುಪವೇಶ್ಯ ವರಾಸನೇ ।
ವಿಧಿವತ್ ಪೂಜಯಿತ್ವಾ ತಮಾತಿಥ್ಯೇನ ನ್ಯಮಂತ್ರಯತ್ ।
ಆಹ್ನಿಕಂ ಭಗವನ್ ಕೃತ್ವಾ ಶೀಘ್ರಮೇಹೀತಿ ಚಾಬ್ರವೀತ್ ॥3॥
ಜಗಾಮ ಚ ಮುನಿಃ ಸೋಽಪಿ ಸ್ನಾತುಂ ಶಿಷ್ಯೈಃ ಸಹಾನಘಃ ।
ಭೋಜಯೇತ್ ಸಹಶಿಷ್ಯಂ ಮಾಂ ಕಥಮಿತ್ಯವಿಚಿಂತಯನ್ ॥4॥
ನ್ಯಮಜ್ಜತ್ ಸಲಿಲೇ ಚಾಪಿ ಮುನಿಸಂಘಃ ಸಮಾಹಿತಃ ॥5॥
ಏತಸ್ಮಿನ್ನಂತರೇ ರಾಜನ್ ದ್ರೌಪದೀ ಯೋಷಿತಾಂ ವರಾ ।
ಚಿಂತಾಮವಾಪ ಪರಮಾಮನ್ನಹೇತೋಃ ಪತಿವ್ರತಾ ॥6॥
ಸಾ ಚಿಂತಯಂತೀ ಚ ಯದಾ ನಾನ್ನಹೇತುಮವಿಂದತ ।
ಮನಸಾ ಚಿಂತಯಾಮಾಸ ಕೃಷ್ಣಂ ಕಂಸನಿಷೂದನಮ್ ॥7॥
ಕೃಷ್ಣಕೃಷ್ಣ ಮಹಾಬಾಹೋ ದೇವಕೀನಂದನಾವ್ಯಯ ।
ವಾಸುದೇವ ಜಗನ್ನಾಥ ಪ್ರಣತಾರ್ತಿವಿನಾಶನ ॥8॥

ವಿಶ್ವಾತ್ಮನ್ ವಿಶ್ವಜನಕ ವಿಶ್ವಹರ್ತಃ ಪ್ರಭೋವ್ಯಯ |
ಪ್ರಪನ್ನಪಾಲ ಗೋಪಾಲ ಪ್ರಜಾಪಾಲ ಪರಾತ್ಪರ ॥9॥
ಆಕೂತೀನಾಂ ಚ ಚಿತ್ತೀನಾಂ ಪ್ರವರ್ತಕ ನತಾಸ್ಮಿ ತೇ ॥10॥
ವರೇಣ್ಯ ವರದಾನಂತ ಅಗತೀನಾಂ ಗತಿಪ್ರದ |
ಪುರಾಣಪುರುಷ ಪ್ರಾಣಮನೋವೃತ್ತ್ಯಾದ್ಯಗೋಚರ ॥11॥
ಸರ್ವಾಧ್ಯಕ್ಷ ಪರಾಧ್ಯಕ್ಷ ತ್ವಾಮಹಂ ಶರಣಂ ಗತಾ |
ಪಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ ॥12॥
ನೀಲೋತ್ಪಲದಲಶ್ಯಾಮ ಪದ್ಮಗರ್ಭಾರುಣೇಕ್ಷಣ |
ಪೀತಾಂಬರಪರೀಧಾನ ಲಸತ್ಕೌಸ್ತುಭಭೂಷಣ ॥13॥
ತ್ವಮಾದಿರಂತೋ ಭೂತಾನಾಂ ತ್ವಮೇವ ಚ ಪರಾಯಣಮ್ |
ಪರಾತ್ಪರತರಂ ಜ್ಯೋತಿರ್ವಿಶ್ವಾತ್ಮಾ ಸರ್ವತೋಮುಖಃ ॥14॥
ತ್ವಾಮೇವಾಹುಃ ಪರಂ ಬೀಜಂ ನಿಧಾನಂ ಸರ್ವಸಂಪದಾಮ್ |
ತ್ವಯಾ ನಾಥೇನ ದೇವೇಶ ಸರ್ವಾಪದ್ಭ್ಯೋ ಭಯಂ ನ ಹಿ ॥15॥
ದುಃಶಾಸನಾದಹಂ ಪೂರ್ವಂ ಸಭಾಯಾಂ ಮೋಚಿತಾ ಯಥಾ |
ತಥೈವ ಸಂಕಟಾದಸ್ಮಾತ್ ಮಾಮುದ್ಧರ್ತುಮಿಹಾರ್ಹಸಿ ॥16॥
ವೈಶಂಪಾಯನಃ
ಏವಂ ಸ್ತುತಸ್ತದಾ ದೇವಃ ಕೃಷ್ಣಯಾ ಭಕ್ತವತ್ಸಲಃ |
ದ್ರೌಪದ್ಯಾಃ ಸಂಕಟಂ ಜ್ಞಾತ್ವಾ ದೇವದೇವೋ ಜಗತ್ಪತಿಃ ॥17॥
ಪಾರ್ಶ್ವಸ್ಥಾಂ ಶಯನೇ ತ್ಯಕ್ತ್ವಾ ರುಗ್ಮಿಣೀಂ ಕೇಶವಃ ಪ್ರಭುಃ |
ತತ್ರಾಜಗಾಮ ತ್ವರಿತೋ ಹ್ಯಚಿಂತ್ಯಗತಿರೀಶ್ವರಃ ॥18॥
ತತಸ್ತಂ ದ್ರೌಪದೀ ದೃಷ್ಟ್ವಾ ಪ್ರಣಮ್ಯ ಪರಯಾ ಮುದಾ |
ಅಬ್ರವೀದ್ ವಾಸುದೇವಸ್ಯ ಮುನೇರಾಗಮನಾದಿಕಮ್ ॥19॥
ತತಸ್ತಾಮಬ್ರವೀತ್ ಕೃಷ್ಣಃ ಕ್ಷುಧಿತೋಸ್ಮಿ ಭೃಶಾತುರಃ |
ಶೀಘ್ರಃ ಭೋಜಯ ಮಾಂ ಕೃಷ್ಣೇ ಪಶ್ಚಾತ್ ಸರ್ವಂ ಕರಿಷ್ಯಸಿ ॥20॥
ನಿಶಮ್ಯ ತದ್ವಚಃ ಕೃಷ್ಣಾ ಲಜ್ಜಿತಾ ವಾಕ್ಯಮಬ್ರವೀತ್ |
ಸ್ಥಾಲ್ಯಾಂ ಭಾಸ್ಕರದತ್ತಾಯಾಮನ್ನಂ ಮದ್ಭೋಜನಾವಧಿ ॥21॥
ಭುಕ್ತವತ್ಯಸ್ಮ್ಯಹಂ ದೇವ ತಸ್ಮಾದನ್ನಂ ನ ವಿದ್ಯತೇ |
ತತಃ ಪ್ರೋವಾಚ ಭಗವಾನ್ ಕೃಷ್ಣಾಂ ಕಮಲಲೋಚನಃ ॥22॥
ಕೃಷ್ಣೇ ನ ನರ್ಮಕಾಲೋಯಂ ಕ್ಷುಚ್ಛ್ರಮೇಣಾತುರೇ ಮಯಿ |
ಶೀಘ್ರಂ ಗಚ್ಛ ಮಮ ಸ್ಥಾಲೀಮಾನಯಿತ್ವಾ ಪ್ರದರ್ಶಯ ॥23॥
ಇತಿ ನಿರ್ಬಂಧತಃ ಸ್ಥಾಲೀಮಾನಾಯ್ಯ ಸ ಯದೂದ್ವಹಃ |
ಸ್ಥಾಲ್ಯಾಃ ಕಂಠೇಥ ಸಂಲಗ್ನಂ ಶಾಕಾನ್ನಂ ವೀಕ್ಷ್ಯ ಕೇಶವಃ ॥24॥
ಉಪಯುಜ್ಯಾಬ್ರವೀದೇನಾಮನೇನ ಹರಿರೀಶ್ವರಃ |
ವಿಶ್ವಾತ್ಮಾ ಪ್ರೀಯತಾಂ ದೇವಸ್ತುಷ್ಟಶ್ಚಾಸಿತ್ವತಿ ಯಜ್ಞಭುಕ್ ॥25॥
ಆಕಾರಯ ಮುನೀನ್ ಶೀಘ್ರಂ ಭೋಜನಾಯೇತಿ ಚಾಬ್ರವೀತ್ |
ಭೀಮಸೇನಂ ಮಹಾಬಾಹುಃ ಕೃಷ್ಣಃ ಕ್ಲೇಶವಿನಾಶನಃ ॥26॥
ತತೋ ಜಗಾಮ ತ್ವರಿತೋ ಭೀಮಸೇನೋ ಮಹಾಯಶಾಃ |
ಆಕಾರಿತುಂ ತು ತಾನ್ ಸರ್ವಾನ್ ಭೋಜನಾರ್ಥಂ ನೃಪೋತ್ತಮ ॥
ತೇ ಚಾವಕೀರ್ಣಾಃ ಸಲೀಲೇಽಕೃತವಂತೋಽಘಮರ್ಷಣಮ್ |
ದೃಷ್ಟ್ವೋದ್ಗಾರಾನ್ ಸಾನ್ನರಸಾನ್ ತೃಪ್ತ್ಯಾ ಪರಮಯಾ ಯುತಾಃ |
ಉತ್ತೀರ್ಯ ಸಲಿಲಾತ್ ತಸ್ಮಾದ್ ದೃಷ್ಟವಂತಃ ಪರಸ್ಪರಮ್ ॥28॥
ದುರ್ವಾಸಸಮಭಿಪ್ರೇಕ್ಷ್ಯತೇ ಸರ್ವೇ ಮುನಯೋಽಬ್ರುವನ್ |
ರಾಜ್ಞಾ ಹಿ ಕಾರಯಿತ್ವಾನ್ನಂ ವಯಂ ಸ್ನಾತುಂ ಸಮಾಗತಾಃ ॥29॥
ಆಕಂಠತೃಪ್ತಾ ವಿಪ್ರರ್ಷೇ ಕಿಂಸ್ವಿದ್ ಭುಂಜಾಮಹೇ ವಯಮ್ |
ವೃಥಾಪಾಕಃ ಕೃತೋಸ್ಮಾಭಿಸ್ತತ್ರ ಕಿಂ ಕರವಾಮಹೇ ॥30॥
ದುರ್ವಾಸಾಃ
ವೃಥಾಪಾಕೇನ ರಾಜರ್ಷೇರಪರಾಧಃ ಕೃತೋ ಮಹಾನ್ |
ಮಾಽಸ್ಮಾನಧಾಕ್ಷುರ್ದೃಷ್ಟ್ವೈವ ಪಾಂಡವಾಃ ಕ್ರೂರಚಕ್ಷುಷಃ ॥31॥
ಸ್ಮೃತ್ವಾಽನುಭಾವಂ ರಾಜರ್ಷೇರಂಬರೀಷಸ್ಯ ಧೀಮತಃ |
ಬಿಭೇಮಿ ಸುತರಾಂ ವಿಪ್ರಾ ಹರಿಪಾದಾಶ್ರಯಾಜ್ಜನಾತ್ ॥32॥

ಪಾಂಡವಾಶ್ಚ ಮಹಾತ್ಮಾನಃ ಸರ್ವೇ ಧರ್ಮಪರಾಯಣಾಃ |
ಶೂರಾಶ್ಚ ಕೃತವಿದ್ಯಾಶ್ಚ ವ್ರತಿನಃ ತಪಸಿ ಸ್ಥಿತಾಃ ॥33॥
ಸದಾಚಾರರತಾ ನಿತ್ಯಂ ವಾಸುದೇವಪರಾಯಣಾಃ |
ಕ್ರುದ್ಧಾಸ್ತೇ ನಿರ್ದಹೇಯುರ್ವೈ ತೂಲರಾಶಿಮಿವಾನಲಃ |
ತತ ಏತಾನಪೃಷ್ಟ್ವೈವ ಶಿಷ್ಯಾಃ ಶೀಘ್ರಂ ಪಲಾಯತ ॥34॥
ವೈಶಂಪಾಯನಃ
ಇತ್ಯುಕ್ತಾಸ್ತೇ ದ್ವಿಜಾಃ ಸರ್ವೇ ಮುನಿನಾ ಗುರುಣಾ ತದಾ |
ಪಾಂಡವೇಭ್ಯೋ ಭೃಶಂ ಭೀತಾ ದುದ್ರುವುಸ್ತೇ ದಿಶೋ ದಶ ॥35॥
ಭೀಮಸೇನೋ ದೇವನದ್ಯಾಮಪಶ್ಯನ್ ಮುನಿಸತ್ತಮಾನ್ |
ತೀರ್ಥೇಷ್ವಿತಸ್ತತಸ್ತಸ್ಯಾ ವಿಚಚಾರ ಗವೇಷಯನ್ ॥36॥
ತತ್ರಸ್ಥೇಭ್ಯಸ್ತಾಪಸೇಭ್ಯಃ ಶ್ರುತ್ವಾ ತಾಂಶ್ಚೈವ ವಿದ್ರುತಾನ್ |
ಯುಧಿಷ್ಠಿರಮಥಾಭ್ಯೇತ್ಯ ತಂ ವೃತ್ತಾಂತಂ ನ್ಯವೇದಯತ್ ॥37॥
ತತಸ್ತೇ ಪಾಂಡವಾಃ ಸರ್ವೇ ಪ್ರತ್ಯಾಗಮನಕಾಂಕ್ಷಿಣಃ |
ಪ್ರತೀಕ್ಷಂತಃ ಕಿಯತ್ಕಾಲಂ ಜಿತಾತ್ಮಾನೋಽವತಸ್ಥಿರೇ ॥38॥
ನಿಶೀಥೇಽಭ್ಯೇತ್ಯ ಚಾಕಸ್ಮಾದಸ್ಮಾನ್ ಸ ಛಲಯಿಷ್ಯತಿ |
ಕಥಂ ಚ ನಿಸ್ತರೇಮಾಸ್ಮಾತ್ ಕೃಚ್ಛ್ರಾದ್ ದೈವೋಪಪಾದಿತಾತ್ ॥39॥
ಇತಿ ಚಿಂತಾಪರಾನ್ ದೃಷ್ಟ್ವಾ ನಿಃಶ್ವಸಂತೋ ಮುಹುರ್ಮುಹುಃ |
ಉವಾಚ ವಚನಂ ಶ್ರೀಮಾನ್ ಕೃಷ್ಣಃ ಪ್ರತ್ಯಕ್ಷತಾಂ ಗತಃ ॥40॥
ಭವತಾಮಾಪದಂ ಜ್ಞಾತ್ವಾ ಋಷೇಃ ಪರಮಕೋಪನಾತ್ |
ದ್ರೌಪದ್ಯಾ ಚಿಂತಿತಃ ಪಾರ್ಥಾ ಅಹಂ ಸತ್ವರಮಾಗತಃ ॥41॥
ನ ಭಯಂ ವಿದ್ಯತೇ ತಸ್ಮಾದ್ ಋಷೇರ್ದುರ್ವಾಸಸೋಽಲ್ಪಕಮ್ |
ತೇಜಸಾ ಭವತಾಂ ಭೀತಃ ಪೂರ್ವಮೇವ ಪಲಾಯಿತಃ ॥42॥
ಧರ್ಮನಿತ್ಯಾಸ್ತು ಯೇ ಕೇಚಿನ್ನ ತೇ ಸೀದಂತಿ ತರ್ಹಿಚಿತ್ |
ಆಪೃಚ್ಛೇ ವೋ ಗಮಿಷ್ಯಾಮಿ ನಿಯತಂ ಭದ್ರಮಸ್ತು ತೇ ॥43॥
ವೈಶಂಪಾಯನಃ
ಶ್ರುತ್ವೇರಿತಂ ಕೇಶವಸ್ಯ ಬಭೂವುಃ ಸ್ವಸ್ಥಮಾನಸಾಃ |
ದ್ರೌಪದ್ಯಾ ಸಹಿತಾಃ ಪಾರ್ಥಾಸ್ತಮೂಚುರ್ವಿಗತಜ್ವರಾಃ ॥44॥
ತ್ವಯಾ ನಾಥೇನ ಗೋವಿಂದ ದುಸ್ತರಾಮಾಪದಂ ವಿಭೋ |
ತೀರ್ಣಾಃ ಪ್ಲವಮಿವಾಸಾದ್ಯ ಮಜ್ಜಮಾನಾ ಮಹಾರ್ಣವೇ ॥45॥
ಸ್ವಸ್ತಿ ಸಾಧಯ ಭದ್ರಂತೇ ಇತ್ಯಾಜ್ಞಾತೋ ಯಯೌ ಪುರೀಮ್ ॥46॥
ಪಾಂಡವಾಶ್ಚ ಮಹಾಭಾಗಾ ದ್ರೌಪದ್ಯಾ ಸಹಿತಾಃ ಪ್ರಭೋ |
ಊಷುಃ ಪ್ರಹೃಷ್ಟಮನಸೋ ವಿಹರಂತೋ ವನಾದ್ ವನಮ್ ॥47॥
ಇತಿ ತೇಽಭಿಹಿತಂ ರಾಜನ್ ಯತ್ಪೃಷ್ಟೋಹಮಿಹ ತ್ವಯಾ |
ಏವಂ ವಿಧಾನ್ಯಲೀಕಾನಿ ಧಾರ್ತರಾಷ್ಟ್ರೈರ್ದುರಾತ್ಮಭಿಃ |
ಪಾಂಡವೇಷು ವನಸ್ಥೇಷು ಪ್ರಯುಕ್ತಾನಿ ವೃಥಾಽಭವನ್ ॥48॥
॥ ಇತಿ ದ್ವಿತೀಯೋಧ್ಯಾಯಃ ॥
* * * *

# ಮಹಾಭಾರತ

## ವಿರಾಟಪರ್ವ

### 1. ವೈರಾಟಪರ್ವ

### ಒಂದನೆಯ ಅಧ್ಯಾಯ

ಸೂದರನ್ನು ಮತ್ತು ಬಾಣಸಿಗರನ್ನು ಕಳುಹಿಸಿಕೊಟ್ಟು ಬ್ರಾಹ್ಮಣರ ಅನುಮತಿಯನ್ನು ಪಡೆದು ದ್ರೌಪದಿ ಮತ್ತು ಧೌಮ್ಯರಿಂದ ಯುಕ್ತರಾಗಿ ಯುಧಿಷ್ಠಿರಾದಿಗಳ ಪ್ರಯಾಣ.

ಜನಮೇಜಯಃ
ಕಥಂ ವಿರಾಟನಗರೇ ಮಮ ಪೂರ್ವಪಿತಾಮಹಾಃ |
ಅಜ್ಞಾತವಾಸಮುಷಿತಾ ದುರ್ಯೋಧನಭಯಾರ್ದಿತಾಃ ॥1॥
ಜನಮೇಜಯ ನನ್ನ ಪೂರ್ವಪಿತಾಮಹರಾದ ಯುಧಿಷ್ಠಿರಾದಿಗಳು ದುರ್ಯೋಧನನ ಭಯದಿಂದ ಪೀಡಿತರಾಗಿ ವಿರಾಟನಗರದಲ್ಲಿ ಹೇಗೆ ಅಜ್ಞಾತವಾಸವನ್ನು ಮಾಡಿದರು?
ಪತಿವ್ರತಾ ಮಹಾಭಾಗಾ ಸತತಂ ಸತ್ಯವಾದಿನೀ |

ದ್ರೌಪದೀ ವಾ ಕಥಂ ಬ್ರಹ್ಮನ್ನಜ್ಞಾತಂ ದುಃಖಮಾವಸತ್ ॥2॥
ಪತಿವ್ರತೆಯೂ, ಮಹಾನುಭಾವಳೂ, ಯಾವಾಗಲೂ ಸತ್ಯವನ್ನೇ ನುಡಿಯುವವಳೂ ಆದ ದ್ರೌಪದಿಯು ಎಲ್ಲೈ ಬ್ರಾಹ್ಮಣರೇ, ಹೇಗೆ ಅಜ್ಞಾತವಾಸ ದುಃಖವನ್ನು ಅನುಭವಿಸಿದಳು?
ತೇ ಚ ಬ್ರಾಹ್ಮಣಮುಖ್ಯಾಶ್ಚ ಸೂತಾಃ ಪೌರೋಗವೈಃ ಸಹ |
ಅಜ್ಞಾತವಾಸಮೂಷುಸ್ತೇ ಕಥಂ ಚ ಪರಿಚಾರಕಾಃ ॥3॥
ಆ ಬ್ರಾಹ್ಮಣಪ್ರಧಾನರು, ಸೂತರು, ಬಾಣಸಿಗರು ಮತ್ತು ಪರಿಚಾರಕರೂ ಸಹ ಹೇಗೆ ಅಜ್ಞಾತವಾಸದ ಸಮಯವನ್ನು ಕಳೆದರು?
ವೈಶಂಪಾಯನಃ
ತದಾ ಸರ್ವಾನ್ ವರಾನ್ ಲಬ್ಧ್ವಾ ಧರ್ಮರಾಜೋ ಯುಧಿಷ್ಠಿರಃ |
ಗತ್ವಾಽಽಶ್ರಮಂ ಬ್ರಾಹ್ಮಣೇಭ್ಯೋ ಹ್ಯಾಚಖ್ಯೌ ಸರ್ವಮೇವ ತತ್ ॥4॥
ವೈಶಂಪಾಯನ ಆಗ ಧರ್ಮರಾಜನಾದ ಯುಧಿಷ್ಠಿರನು ಎಲ್ಲಾ ವರಗಳನ್ನು ಪಡೆದು ಆಶ್ರಮಕ್ಕೆ ಹೋಗಿ ಬ್ರಾಹ್ಮಣರಿಗೆ ಎಲ್ಲವನ್ನೂ ವಿವರಿಸಿದನು.
ಕಥಯಿತ್ವಾ ತು ತತ್ಸರ್ವಂ ಬ್ರಾಹ್ಮಣೇಭ್ಯೋ ಯುಧಿಷ್ಠಿರಃ |
ಅರಣೀಸಹಿತಂ ಭಾಂಡಂ ಬ್ರಾಹ್ಮಣಾಯ ನ್ಯವೇದಯತ್ ॥5॥
ಯುಧಿಷ್ಠಿರನು ಆಶ್ರಮವಾಸಿಗಳಾದ ಬ್ರಾಹ್ಮಣರಿಗೆ ಎಲ್ಲವನ್ನು ಅರಿಕೆ ಮಾಡಿ ಅರಣೀಸಹಿತವಾದ ಭಾಂಡವನ್ನು ಆ ಬ್ರಾಹ್ಮಣನಿಗೆ ಒಪ್ಪಿಸಿದನು.
ಧರ್ಮೇಣ ತೇಽಭ್ಯನುಜ್ಞಾತಾಃ ಪಾಂಡವಾಃ ಸತ್ಯವಾದಿನಃ |
ಅಜ್ಞಾತವಾಸಂ ವತ್ಸ್ಯಂತಃ ಛನ್ನಾ ವರ್ಷಂ ತ್ರಯೋದಶಮ್ ॥6॥
ಉಪೋಪವಿಶ್ಯ ವಿದ್ವಾಂಸಃ ಸಹಿತಾಃ ಸಂಶಿತವ್ರತಾಃ |
ಯೇ ತದ್ಭಕ್ತಾಃ ವಸಂತಿ ಸ್ಮ ವನವಾಸೇ ತಪಸ್ವಿನಃ ॥7॥
ತಾನಬ್ರುವನ್ ಮಹಾತ್ಮಾನಃ ಶಿಷ್ಟಾಃ ಪ್ರಾಂಜಲಯಸ್ತದಾ |
ಅಭ್ಯನುಜ್ಞಾಪಯಿಷ್ಯಂತಸ್ತಂ ವಿವಾಸಂ ಧೃತವ್ರತಾಃ ॥8॥
ಯಮಧರ್ಮರಾಜನಿಂದ ಅನುಮತಿಯನ್ನು ಪಡೆದ ಸತ್ಯವಾದಿಗಳಾದ ಆ ಪಾಂಡವರು ಪ್ರಚ್ಛನ್ನವೇಷದಿಂದ ಅಜ್ಞಾತವಾಸವನ್ನು ಕಳೆಯುವವರಾಗಿ ಒಳ್ಳೆಯ ವ್ರತಶೀಲರೂ, ವಿದ್ವಾಂಸರೂ ಆದ ಅವರೆಲ್ಲರೂ ಸಮೀಪದಲ್ಲಿ ಒಟ್ಟಿಗೆ ಕುಳಿತು ತಮ್ಮಲ್ಲಿ ಅನುರಾಗವುಳ್ಳ ಮಹಾತ್ಮರಾದ ಆ ತಪಸ್ವಿಗಳಿಗೆ ಕೈಮುಗಿದು ತಮ್ಮ ಅಜ್ಞಾತವಾಸಕ್ಕೆ ಅವರಿಂದ ಅನುಮತಿಯನ್ನು ಪಡೆಯುವವರಾಗಿ ಅವರನ್ನು ಕುರಿತು ಶಿಷ್ಟರೂ, ಧೃತವ್ರತರೂ ಆದ ಪಾಂಡವರು ಮಾತನಾಡಿದರು.
ಯುಧಿಷ್ಠಿರಃ
ವಿದಿತಂ ಭವತಾ ಸರ್ವಂ ಧಾರ್ತರಾಷ್ಟ್ರೈರ್ಯಥಾ ವಯಮ್ |
ಛದ್ಮನಾ ಹೃತರಾಜ್ಯಾಶ್ಚ ನಿಃಸ್ವಾಶ್ಚ ಬಹುಶಃ ಕೃತಾಃ ॥9॥
ಉಷಿತಾಶ್ಚ ವನೇ ವಾಸಂ ಯಥಾ ದ್ವಾದಶ ವತ್ಸರಾನ್ |
ಭವದ್ಭಿರೇವ ಸಹಿತಾ ವನ್ಯಾಹಾರಾ ದ್ವಿಜೋತ್ತಮಾಃ ॥10॥
ಯುಧಿಷ್ಠಿರ ನಾವು ಧೃತರಾಷ್ಟ್ರನ ಪುತ್ರರಿಂದ ಹೇಗೆ ಮೋಸದಿಂದ ರಾಜ್ಯಾಪಹಾರವನ್ನು ಹೊಂದಿ ನಿರ್ಧನರಾಗಿ ಮಾಡಲ್ಪಟ್ಟೆವು? ಹೇಗೆ ಹನ್ನೆರಡು ವರ್ಷಗಳ ಕಾಲ ನಿಮ್ಮ ಜೊತೆಯಲ್ಲಿಯೇ ಕಾಡಿನ ಆಹಾರವನ್ನು ಸೇವಿಸಿ ವನವಾಸವನ್ನು ಮಾಡಿದೆವು? ಎಲ್ಲೈ ದ್ವಿಜೋತ್ತಮರೇ, ನಿಮಗೆ ತಿಳಿದಿದೆ.
ಅಜ್ಞಾತವಾಸಸಮಯಂ ಶೇಷಂ ವರ್ಷಂ ತ್ರಯೋದಶಮ್ |
ತದ್ ವತ್ಸ್ಯಾಮೋ ವಯಂ ಛನ್ನಾಸ್ತದನುಜ್ಞಾತುಮರ್ಹತ ॥11॥
ನಾವು ಈಗಿರುವ ಹದಿಮೂರನೆಯ ವರ್ಷವನ್ನು ಅಜ್ಞಾತವಾಸದ ನಿಯಮದಲ್ಲಿ ಛನ್ನವೇಷವನ್ನು ಧರಿಸಿ ಎಲ್ಲಾದರೂ ವಾಸಮಾಡುವೆವು. ಅದಕ್ಕೆ ನೀವು ಅನುಮತಿಯನ್ನು ಕೊಡಬೇಕು.
ಸುಯೋಧನಶ್ಚ ದುಷ್ಟಾತ್ಮಾ ಕರ್ಣಶ್ಚ ಸಹಸೌಬಲಃ |
ಜಾನಂತೋ ವಿಷಮಂ ಕುರ್ಯುರಸ್ಮಾಸ್ವತ್ಯಂತವೈರಿಣಃ ॥12॥
ಗುಪ್ತಾಕಾರಾಶ್ಚ ಮತ್ತಾಶ್ಚ ಕ್ಷಯೇ ತ್ವಸ್ಯ ಜನಸ್ಯ ಚ |
ದುಷ್ಟಾತ್ಮನಾಂ ಹಿ ಕಸ್ತೇಷಾಂ ಪ್ರಾಜ್ಞೋ ವೈ ವಿಶ್ವಸೇದ್ ಭುವಿ ॥13॥
ನಮಗೆ ಪರಮವೈರಿಗಳಾದ ದುಷ್ಟಾತ್ಮನಾದ ಸುಯೋಧನನು, ಶಕುನಿ ಮತ್ತು ಕರ್ಣರೂ ಸಹ ಅಜ್ಞಾತವಾಸದ ಸಮಯದಲ್ಲಿ ನಮ್ಮನ್ನು ಹುಡುಕಿಸುವುದಾದರೆ ನಮಗೆ ಇನ್ನೂ ಹೆಚ್ಚಿನ ದುಃಖವನ್ನು ಒಡ್ಡುವರು. ದುರ್ಯೋಧನನ ಮನೆಯಲ್ಲಿ ರಹಸ್ಯವಾಗಿ ದ್ರೋಹವನ್ನು ಮಾಡುವವರೂ, ಮತ್ತರಂತೆ ಇರುವವರೂ ಆದ ಅನೇಕ ಚಾರರು ಇದ್ದಾರೆ.
ಅಪಿ ನಸ್ತದ್ ಭವೇದ್ ಭೂಯೋ ಯದ್ವಯಂ ಬ್ರಾಹ್ಮಣೈಃ ಸಹ |
ಸಮರ್ಥಾಸ್ತೇಷು ರಾಷ್ಟ್ರೇಷು ಸ್ವರಾಜ್ಯಂ ಸ್ಥಾಪಯಾಮ ಹಿ ॥14॥
ನಾವು ಹಿಂದೆ ಇದ್ದಂತೆ ಇನ್ನೊಮ್ಮೆ ಬ್ರಾಹ್ಮಣರ ಜೊತೆಯಲ್ಲಿ ಸೇರಿ ನಮ್ಮ ಆ ರಾಷ್ಟ್ರಗಳಲ್ಲಿ ಪ್ರತಿಷ್ಠಿತರಾಗುತ್ತೇವೆಯೇ?
ವೈಶಂಪಾಯನಃ
ಇತ್ಯುಕ್ತತ್ವಾ ದುಃಖಮೋಹಾರ್ತಃ ಶುಚಿರ್ಧರ್ಮಸುತಸ್ತದಾ |
ಸಮ್ಮೂರ್ಚ್ಛಿತೋಽಭವದ್ ರಾಜಾ ಸಾಶ್ರುಕಂಠೋ ಯುಧಿಷ್ಠಿರಃ ॥15॥

ವೈಶಂಪಾಯನ ಹೀಗೆ ಹೇಳಿ ಶುಚಿಯೂ, ಯಮಧರ್ಮಪುತ್ರನೂ, ರಾಜನೂ ಆದ ಯುಧಿಷ್ಠಿರನು ಕಣ್ಣೀರಿನಿಂದ ಬಿಗಿದ ಕಂಠವುಳ್ಳವನಾಗಿ ದುಃಖ ಮೋಹಗಳಿಂದ ಪೀಡಿಸಲ್ಪಟ್ಟು ಮೂರ್ಛಿತನಾದನು.

ತಸ್ಮಿನ್ ಸಮ್ಮೂರ್ಚ್ಛಿತೇ ಭೂರಿ ಭ್ರಾತರಶ್ಚಾಸ್ಯ ಸರ್ವಶಃ |
ಶೋಕಮಾಪೇದಿರೇ ತತ್ರ ದೃಷ್ಟ್ವಾ ರಾಜಾನಮಾತುರಮ್ ॥16॥
ರಾಜನು ಹೀಗೆ ದುಃಖಿತನಾಗಿ ಮೂರ್ಛೆ ಹೊಂದಿದುದನ್ನು ನೋಡಿ ಅವನ ಎಲ್ಲಾ ತಮ್ಮಂದಿರೂ ದುಃಖವನ್ನು ಪಟ್ಟರು.

ಅಥ ಧೌಮ್ಯೋಽಬ್ರವೀದ್ ವಾಕ್ಯಂ ಮಹಾರ್ಥಂ ನೃಪತಿಂ ತದಾ ॥17॥
ರಾಜನ್ ವಿದ್ವಾನ್ ಭವಾನ್ ದಾಂತಃ ಸತ್ಯಸಂಧೋ ಜಿತೇಂದ್ರಿಯಃ |
ನೈವಂವಿಧಾಃ ಪ್ರಮುಹ್ಯಂತಿ ನರಾಃ ಕಸ್ಯಾಂಚಿದಾಪದಿ ॥18॥
ಆಗ ಧೌಮ್ಯರು ರಾಜನನ್ನು ಕುರಿತು ದೊಡ್ಡ ಅರ್ಥವುಳ್ಳ ಈ ಮಾತುಗಳನ್ನು ಆಡಿದರು. ರಾಜನೇ, ನೀನು ವಿದ್ವಾಂಸ, ಸತ್ಯಸಂಧ, ಜಿತೇಂದ್ರಿಯ ಮತ್ತು ಇಂದ್ರಿಯ ನಿಗ್ರಹವುಳ್ಳವನು. ಇಂತಹವರು ಯಾವ ವಿಪತ್ತಿನಲ್ಲಿಯೂ ಮೋಹಕ್ಕೆ ಒಳಗಾಗುವುದಿಲ್ಲ.

ದೇವೈರಪ್ಯಾಪದಃ ಪ್ರಾಪ್ತಾಃ ಛನ್ನೈಶ್ಚ ಬಹುಭಿಸ್ತದಾ |
ತತ್ರ ತತ್ರ ಸಪತ್ನಾನಾಂ ನಿಗ್ರಹಾರ್ಥಂ ಮಹಾತ್ಮಭಿಃ ॥19॥
ಮಹಾತ್ಮರಾದ ದೇವತೆಗಳೂ ಕೂಡ ಅನೇಕ ಆಪತ್ತುಗಳನ್ನು ಹೊಂದಿ ಶತ್ರುಗಳನ್ನು ನಿಗ್ರಹಿಸಲು ಅಲ್ಲಲ್ಲಿ ಛನ್ನವೇಷವನ್ನು ಧರಿಸಿದರು.

ಇಂದ್ರೇಣ ನಿಷಧಂ ಪ್ರಾಪ್ಯ ಗಿರಿಪ್ರಸ್ಥಾಶ್ರಯೇ ತದಾ |
ಛನ್ನೇನೋಷ್ಯ ಕೃತಂ ಕರ್ಮ ದ್ವಿಷತಾಂ ಬಲನಿಗ್ರಹೇ ॥20॥
ಇಂದ್ರನು ನಿಷಧ ದೇಶದಲ್ಲಿ ಗಿರಿಪ್ರಸ್ಥ ಎಂಬ ಸ್ಥಳದಲ್ಲಿ ಶತ್ರುಗಳ ಬಲವನ್ನು ನಿಗ್ರಹಿಸಲು ಛನ್ನವೇಷವನ್ನು ಧರಿಸಿ ಆ ಕಾರ್ಯವನ್ನು ಮಾಡಿದನು.

ದಿತಿಪುತ್ರೈರ್ಹೃತೇ ರಾಜ್ಯೇ ದೇವರಾಜೋಽಪಿ ದುಃಖಿತಃ |
ಬ್ರಹ್ಮಾಣಂ ತೋಷಯಿಷ್ಯಂಶ್ಚ ಬ್ರಹ್ಮರೂಪಂ ವಿಧಾಯ ಚ ॥21॥
ಪ್ರಸಾದಾದ್ ಬ್ರಹ್ಮಣೋ ರಾಜನ್ ದಿತೇಃ ಪುತ್ರಾನ್ ಮಹಾಬಲಾನ್ |
ವಿಜಿತ್ಯ ತರಸಾ ಶತ್ರೂನ್ ಪುನರ್ಲೋಕಾನವಾಪ ಹ ॥22॥
ಎಲೈ ರಾಜನೇ, ದಿತಿಯ ಪುತ್ರರು ತನ್ನ ರಾಜ್ಯವನ್ನು ಅಪಹರಿಸುತ್ತಿರಲು ದೇವರಾಜನಾದ ಇಂದ್ರನೂ ಸಹ ಬ್ರಹ್ಮದೇವರನ್ನು ಸಂತೋಷಪಡಿಸಿ ತಾನು ಬ್ರಾಹ್ಮಣರೂಪವನ್ನು ಧರಿಸಿ ಬ್ರಹ್ಮದೇವರ ಅನುಗ್ರಹದಿಂದ ಮಹಾಬಲಿಷ್ಠರಾದ ಶತ್ರುಗಳಾದ ದಿತಿಪುತ್ರರನ್ನು ಶೀಘ್ರವಾಗಿ ಸೋಲಿಸಿ ಪುನಃ ತನ್ನ ಲೋಕವನ್ನು ಪಡೆದನು.

ವಿಷ್ಣುನಾಽಶ್ಮಗಿರಿಂ ಪ್ರಾಪ್ಯ ತದಾಽದಿತ್ಯಾಂ ನಿವತ್ಸ್ಯತಾ |
ಗರ್ಭೇ ವಧಾರ್ಥಂ ದೈತ್ಯಾನಾಮಜ್ಞಾತಂ ಚೋಷಿತಂ ಚಿರಮ್ ॥23॥
ವಿಷ್ಣುವು ಅಶ್ಮಗಿರಿಯ ಆಶ್ರಮದಲ್ಲಿ ಅದಿತಿಯ ಗರ್ಭದಲ್ಲಿ ನಿವಾಸ ಮಾಡಿ ದೈತ್ಯರ ವಧೆಗೋಸ್ಕರ ದೈತ್ಯರಿಗೆ ತಿಳಿಯದಂತೆ ಬಹುಕಾಲ ಇದ್ದನು.

ಪ್ರೋಷ್ಯ ವಾಮನರೂಪೇಣ ಪ್ರಚ್ಛನ್ನಬ್ರಹ್ಮಚಾರಿಣಾ |
ಬಲೇರಥಾಹೃತಂ ರಾಜ್ಯಂ ವಿಕ್ರಮೈಸ್ತಚ್ಚ ತೇ ಶ್ರುತಮ್ ॥24॥
ಬ್ರಾಹ್ಮಣ ವಟುವಿನ ರೂಪವನ್ನು ಧರಿಸಿ ವಾಮನನಾಗಿ ಬಲಿಯ ಯಜ್ಞಕ್ಕೆ ಹೋಗಿ ತನ್ನ ಮೂರು ಹೆಜ್ಜೆಗಳಿಂದ ಬಲಿಯ ರಾಜ್ಯವನ್ನು ಅಪಹರಿಸಿದ ವಿಷಯವನ್ನು ನೀನು ಕೇಳಿದ್ದೀಯೆ.

ಔರ್ವೇಣ ವಸತಾ ಚ್ಛನ್ನಮೂರೌ ಬ್ರಹ್ಮರ್ಷಿಣಾ ಪುರಾ |
ಯತ್ ಕೃತಂ ತಾತ ಲೋಕೇಷು ತಚ್ಚ ಸರ್ವಂ ಶ್ರುತಂ ತ್ವಯಾ ॥25॥
ಎಲೈ ಪ್ರೀತಿಪಾತ್ರನೇ, ಹಿಂದೆ ಬ್ರಹ್ಮರ್ಷಿಗಳಾದ ಔರ್ವರು ತನ್ನ ತಾಯಿಯ ತೊಡೆಯಲ್ಲಿ ಛನ್ನರಾಗಿ ವಾಸಮಾಡಿ ಲೋಕದಲ್ಲಿ ಏನು ಮಾಡಿದರು ಎಂಬ ಎಲ್ಲವನ್ನು ನೀನು ಕೇಳಿದ್ದೀಯೆ.

ಅಜ್ಞಾತಂ ಚಾಪಿ ಧರ್ಮಜ್ಞ ಹರಿಣಾ ವೃತ್ರನಿಗ್ರಹೇ |
ವಜ್ರಂ ಪ್ರವಿಶ್ಯ ಶಕ್ರಸ್ಯ ಯತ್ ಕೃತಂ ತಚ್ಚ ತೇ ಶ್ರುತಮ್ ॥26॥
ನಾರಾಯಣನು ವೃತ್ರನ ನಿಗ್ರಹದ ಸಮಯದಲ್ಲಿ ಅಜ್ಞಾತನಾಗಿ ಇಂದ್ರನ ವಜ್ರಾಯುಧವನ್ನು ಪ್ರವೇಶಿಸಿ ಏನು ಮಾಡಿದನೆಂಬ ವಿಷಯವನ್ನು ನೀನು ಕೇಳಿದ್ದೀಯೆ.

ಹುತಾಶನೇನ ಯಚ್ಚಾಪಃ ಪ್ರವಿಶ್ಯ ಚ್ಛನ್ನಮಾಸತಾ |
ವಿಬುಧಾನಾಂ ಹಿತಂ ಕರ್ಮ ಕೃತಂ ತಚ್ಚಾಪಿ ತೇ ಶ್ರುತಮ್ ॥27॥
ಅಗ್ನಿಯು ಜಲವನ್ನು ಪ್ರವೇಶಿಸಿ ಛನ್ನರೂಪದಿಂದ ಇದ್ದು ದೇವತೆಗಳಿಗೆ ಏನು ಉಪಕಾರವನ್ನು ಮಾಡಿದನೆಂಬುದನ್ನೂ ನೀನು ಕೇಳಿದ್ದೀಯೆ.

ತಥಾ ವಿವಸ್ವತಾ ಚಾಪಿ ಛನ್ನೇನೋತ್ತಮತೇಜಸಾ |
ನಿರ್ದಗ್ಧಾ ರಿಪವಃ ಸರ್ವೇ ವಸತಾ ಭುವಿ ವರ್ಷತಃ ॥28॥
ಹಾಗೆಯೇ, ಸೂರ್ಯನೂ ಒಂದು ವರ್ಷಕಾಲ ಭೂಮಿಯಲ್ಲಿ ಛನ್ನವೇಷದಿಂದ ವಾಸಮಾಡಿ ತನ್ನ ಉತ್ತಮವಾದ ತೇಜಸ್ಸಿನಿಂದ ಎಲ್ಲ ಶತ್ರುಗಳನ್ನೂ ಜಯಿಸಿದನು.

ವಿಷ್ಣುನಾ ವಸತಾ ಚಾಪಿ ಗೃಹೇ ದಶರಥಸ್ಯ ಚ |

ದಶಗ್ರೀವೋ ಹತಶ್ಚನ್ನಂ ಸಂಯುಗೇ ಭೀಮಕರ್ಮಣಾ ॥29॥
ಭಯಂಕರವಾದ ಕಾರ್ಯಗಳನ್ನು ಮಾಡುವ ವಿಷ್ಣುವೂ ಸಹ ದಶರಥನ ಮನೆಯಲ್ಲಿ ತಾನು ವಿಷ್ಣುವೆಂದು ತಿಳಿಯಗೊಡದೇ ಛನ್ನನಾಗಿ ವಾಸಮಾಡಿ ಯುದ್ಧದಲ್ಲಿ ದಶಶಿರನಾದ ರಾವಣನನ್ನು ಕೊಂದನು.
ಏವಮೇತೇ ಮಹಾತ್ಮಾನಃ ಪ್ರಚ್ಛನ್ನಾಸ್ತತ್ರ ತತ್ರ ಹ |
ಅಜಯನ್ ಶಾತ್ರವಾನ್ ಮುಖ್ಯಾಂಸ್ತಥಾ ತ್ವಮಪಿ ಜೇಷ್ಯಸಿ ॥30॥
ಹೀಗೆ ಈ ಮಹಾತ್ಮರು ಅಲ್ಲಲ್ಲಿ ಪ್ರಚ್ಛನ್ನರಾಗಿ ತಮ್ಮ ಪ್ರಧಾನ ಶತ್ರುಗಳನ್ನು ಜಯಿಸಿದರು. ಅದರಂತೆ ನೀನೂ ಜಯಿಸುವಿ.
ಇತಿ ಧೌಮ್ಯೇನ ಧರ್ಮಜ್ಞೋ ವಾಕ್ಯೈಃ ಸಂಪರಿಹರ್ಷಿತಃ |
ಶಾಸ್ತ್ರಬುದ್ಧ್ಯಾ ಪುನರ್ಭೂತ್ವಾ ವ್ಯಷ್ಟಂಭತ ಯುಧಿಷ್ಠಿರಃ ॥31॥
ಧರ್ಮಜ್ಞನಾದ ಯುಧಿಷ್ಠಿರನು ಹೀಗೆ ಧೌಮ್ಯರಿಂದ ಬೋಧಿಸಲ್ಪಟ್ಟವನಾಗಿ ಸಂತೋಷಗೊಂಡು ಶಾಸ್ತ್ರಬುದ್ಧಿಯುಳ್ಳವನಾಗಿ ಸಮಾಧಾನವನ್ನು ತಂದುಕೊಂಡನು.
ಅಥಾಬ್ರವೀನ್ಮಹಾಬಾಹುರ್ಭೀಮಸೇನೋ ಮಹಾಬಲಃ |
ರಾಜಾನಂ ಬಲಿನಾಂ ಶ್ರೇಷ್ಠೋ ಗಿರಾ ಸಂಪರಿಹರ್ಷಯನ್ ॥32॥
ಆಗ ಮಹಾಬಾಹುವೂ, ಮಹಾಬಲನೂ, ಬಲಿಷ್ಠರಲ್ಲಿ ಶ್ರೇಷ್ಠನೂ ಆದ ಭೀಮಸೇನನು ರಾಜನನ್ನು ಸಂತೋಷಪಡಿಸುತ್ತಾ ರಾಜನನ್ನು ಕುರಿತು ಹೀಗೆ ಮಾತನಾಡಿದನು.
ಅವೇಕ್ಷಯ ಮಹಾರಾಜ ತವ ಗಾಂಡೀವಧನ್ವನಾ |
ಧರ್ಮಾನುಗತಯಾ ಬುದ್ಧ್ಯಾ ನ ಕಿಂಚಿತ್ ಸಾಹಸಂ ಕೃತಮ್ ॥33॥
ಎಲೈ ಮಹಾರಾಜನೇ, ನಿನ್ನ ಧರ್ಮಾನುಗತವಾದ ಬುದ್ಧಿಯನ್ನು ಅನುಸರಿಸುತ್ತಾ ಗಾಂಡೀವ ಧನುಸ್ಸನ್ನು ಹೊಂದಿದ ಅರ್ಜುನನು ಇದುವರೆಗೆ ಯಾವ ಸಾಹಸಕಾರ್ಯವನ್ನು ಮಾಡಲಿಲ್ಲವೆಂಬುದನ್ನು ಗಮನಿಸು.
ಸಹದೇವೋ ಮಯಾ ನಿತ್ಯಂ ನಕುಲಶ್ಚ ನಿವಾರಿತಃ |
ಶಕ್ತೋ ವಿಧ್ವಂಸನೇ ತೇಷಾಂ ಶತ್ರುಘ್ನೌ ಭೀಮವಿಕ್ರಮೌ ॥34॥
ನಕುಲ-ಸಹದೇವರಿಬ್ಬರೂ ಶತ್ರುಗಳಿಗೆ ಭಯಂಕರವಾದ ಪರಾಕ್ರಮವುಳ್ಳವರು ಮತ್ತು ಅವರನ್ನು ನಾಶಮಾಡಲು ಸಮರ್ಥರಾದವರು. ನಾನು ಅವರನ್ನು ಯಾವಾಗಲೂ ತಡೆದಿದ್ದೇನೆ.
ನ ವಯಂ ವರ್ತ್ಮ ಹಾಸ್ಯಾಮೋ ಯಸ್ಮಿನ್ ಯೋಕ್ಷ್ಯತಿ ನೋ ಭವಾನ್ |
ತದ್ವಿಧತ್ತಾಂ ಭವಾನ್ ಸರ್ವಂ ಕ್ಷಿಪ್ರಂ ಜೇಷ್ಯಾಮಹೇ ಪರಾನ್ ॥35॥
ನೀನು ಹಾಕಿಕೊಟ್ಟ ದಾರಿಯನ್ನು ನಾವು ಯಾವಾಗಲೂ ಪರಿತ್ಯಾಗಮಾಡಿಲ್ಲ. ಆದ್ದರಿಂದ ನೀನು ಅಪ್ಪಣೆಯನ್ನು ಕೊಡು. ಶೀಘ್ರವಾಗಿ ಶತ್ರುಗಳನ್ನು ಜಯಿಸುವೆವು.
ಇತ್ಯುಕ್ತೋ ಭೀಮಸೇನೇನ ಧರ್ಮರಾಜೋ ಯುಧಿಷ್ಠಿರಃ |
ಸುಖೋಪವಿಷ್ಟೋ ವಿದ್ವದ್ಭಿಸ್ತಾಪಸೈಃ ಸಂಶಿತವ್ರತೈಃ ॥36॥
ಯೇ ತದ್ಭಕ್ತ್ಯಾಽಭವಂಸ್ತಸ್ಮಿನ್ ವನವಾಸೇ ತಪಸ್ವಿನಃ |
ತಾನಬ್ರವೀನ್ ಮಹಾಪ್ರಾಜ್ಞಃ ಶಿಷ್ಟಾನ್ ರಾಜಾ ಕೃತಾಂಜಲಿಃ ॥37॥
ಹೀಗೆ ಭೀಮಸೇನನಿಂದ ಹೇಳಲ್ಪಟ್ಟ ಧರ್ಮರಾಜನಾದ ಯುಧಿಷ್ಠಿರನು ಒಳ್ಳೆಯ ವ್ರತಧಾರಿಗಳಾದ, ತಮ್ಮಲ್ಲಿ ಅನುರಾಗವುಳ್ಳ, ವನವಾಸದಲ್ಲಿ ತಮ್ಮ ಜೊತೆಯಲ್ಲೇ ಇದ್ದ, ವಿದ್ವಾಂಸರಾದ, ಶಿಷ್ಟರಾದ, ತಾಪಸರನ್ನು ಕುರಿತು ಕೈಗಳನ್ನು ಮುಗಿದು ಮಹಾಪ್ರಾಜ್ಞನಾದ ಅವನು ಮಾತನಾಡಿದನು.
ವಿದಿತಂ ಭವತಾಂ ಸರ್ವಂ ಧಾರ್ತರಾಷ್ಟ್ರೈರ್ಯಥಾ ವಯಮ್ |
ಛದ್ಮನಾ ಹೃತರಾಜ್ಯಾಶ್ಚ ನಿಃಸ್ವಾಶ್ಚ ಬಹುಶಃ ಕೃತಾಃ ॥38॥
ಉಷಿತಾಃ ಸ್ಮೋ ವನೇ ಕೃಚ್ಛ್ರೇ ಯತ್ನಾದ್ ದ್ವಾದಶ ವತ್ಸರಾನ್ |
ಅಜ್ಞಾತಚರ್ಯಾಂ ಸಮಯೇ ಶೇಷಂ ವರ್ಷಂ ತ್ರಯೋದಶಮ್ ॥39॥
ತದ್ವತ್ಸ್ಯಾಮಃ ಕ್ವಚಿಚ್ಛನ್ನಾಸ್ತದನುಜ್ಞಾಪಯಾಮಹೇ ॥40॥
ನಾವು ಧೃತರಾಷ್ಟ್ರ ಪುತ್ರರಿಂದ ಹೇಗೆ ಮೋಸದಿಂದ ರಾಜ್ಯಾಪಹಾರಕ್ಕೆ ಒಳಗಾಗಿ ನಿರ್ಧನರಾಗಿ ಮಾಡಲ್ಪಟ್ಟೆವು ಮತ್ತು ಕಾಡಿನಲ್ಲಿ ಬಹಳ ಕಷ್ಟವಾದ ವನವಾಸವನ್ನು ಹನ್ನೆರಡು ವರ್ಷಗಳ ಕಾಲ ಹೇಗೆ ಕಳೆದೆವು ಎಂಬ ಎಲ್ಲಾ ವಿಷಯವೂ ನಿಮಗೆ ತಿಳಿದಿದೆ. ನಾವು ಉಳಿದಿರುವ ಹದಿಮೂರನೆಯ ವರ್ಷವನ್ನು ಅಜ್ಞಾತಚರ್ಯೆಯಿಂದ ಎಲ್ಲಿಯಾದರೂ ಕಳೆಯುವೆವು. ನೀವು ಅದಕ್ಕೆ ಅನುಮತಿಯನ್ನು ನೀಡಬೇಕು.
ಇತ್ಯುಕ್ತಾ ಧರ್ಮರಾಜೇನ ಬ್ರಾಹ್ಮಣಾಃ ಪರಮಾಶಿಷಃ |
ಪ್ರಯುಜ್ಯಾಪೃಚ್ಛ್ಯ ಭರತಾನ್ ಯಥಾಸ್ವಾನ್ ಪ್ರಯಯುರ್ಗೃಹಾನ್ ॥
ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಆ ಬ್ರಾಹ್ಮಣರು ಆ ಭರತವಂಶೋತ್ಪನ್ನರಿಗೆ ಶ್ರೇಷ್ಠವಾದ ಆಶೀರ್ವಾದವನ್ನು ಮಾಡಿ ಅವರ ಅನುಮತಿಯನ್ನು ಪಡೆದು ತಮ್ಮ ತಮ್ಮ ಮನೆಗಳಿಗೆ ಹೋದರು.
ಸರ್ವೇ ವೇದವಿದೋ ವಿಪ್ರಾ ಯತಯೋ ಮುನಯಸ್ತಥಾ |
ಆಶೀರುಕತ್ವ ಯಥಾನ್ಯಾಯಂ ಪುನರ್ದರ್ಶನಕಾಂಕ್ಷಿಣಃ ॥42॥
ತೇ ತದ್‌ಭೃತ್ಯಾಶ್ಚ ಸೂದಾಶ್ಚ ಶಿಲ್ಪಿನಃ ಪರಿಚಾರಕಾಃ |
ಅನುಜ್ಞಾಪ್ಯ ಯಥಾನ್ಯಾಯಂ ಪುನರ್ದರ್ಶನಭಾಷಿಣಃ ॥43॥

ಎಲ್ಲಾ ವೇದಜ್ಞರಾದ ವಿಪ್ರರೂ, ಸಂನ್ಯಾಸಿಗಳೂ, ಋಷಿಗಳೂ ಆಶೀರ್ವಾದವನ್ನು ಮಾಡಿ ಪುನಃ ಬೇಗ ನಿಮ್ಮ ದರ್ಶನವಾಗಲಿ ಎಂದು ಆಶಿಸಿ ಹೊರಟರು. ಪಾಂಡವರ ಸೇವಕರೂ, ಸೂದರೂ, ಕುಶಲಕರ್ಮಿಗಳೂ, ಪರಿಚಾರಕರೂ ಸಹ ಅವರಿಗೆ ಯೋಗ್ಯವಾದ ರೀತಿಯಲ್ಲಿ ಪಾಂಡವರ ಅನುಮತಿಯನ್ನು ಪಡೆದು ಪುನಃ ಬೇಗ ದರ್ಶನವನ್ನು ಬಯಸುತ್ತೇವೆಂದು ಹೇಳುತ್ತಾ ಹೊರಟರು.
ಸಹ ಧೌಮ್ಯೇನ ವಿದ್ವಾಂಸಸ್ತಥಾ ತೇ ಪಂಚ ಪಾಂಡವಾಃ |
ಉತ್ಥಾಯ ಪ್ರಯಯುರ್ವೀರಾಃ ಕೃಷ್ಣಾಮಾದಾಯ ಭಾರತ ॥44॥
ಎಲೈ ಭಾರತನೇ, ವೀರರೂ, ವಿದ್ವಾಂಸರೂ ಆದ ಆ ಪಂಚಪಾಂಡವರು ದ್ರೌಪದಿಯನ್ನು ಮತ್ತು ಧೌಮ್ಯರನ್ನು ಕರೆದುಕೊಂಡು ಅಲ್ಲಿಂದ ಎದ್ದು ಮುಂದಕ್ಕೆ ಹೊರಟರು.
ಕ್ರೋಶಮಾತ್ರಮತಿಕ್ರಮ್ಯ ತಸ್ಮಾದ್ ವಾಸಾನ್ನಿಮಿತ್ತತಃ |
ಶ್ವೋಭೂತೇ ಮನುಜವ್ಯಾಘ್ರಾಶ್ಛನ್ನವಾಸಾರ್ಥಮುದ್ಯತಾಃ ॥45॥
ಪೃಥಕ್ ಶಾಸ್ತ್ರವಿದಃ ಸರ್ವೇ ಸರ್ವೇ ಮಂತ್ರವಿಶಾರದಾಃ |
ಸಂಧಿವಿಗ್ರಹಕಾಲಜ್ಞಾಃ ಮಂತ್ರಾಯ ಸಮುಪಾವಿಶನ್ ॥46॥
ತಮ್ಮ ವಾಸಸ್ಥಳದಿಂದ ಒಂದು ಕ್ರೋಶಮಾತ್ರ ನಡೆದು ಮರುದಿನದಿಂದ ಅಜ್ಞಾತವಾಸವನ್ನು ಮಾಡಲು ಉದ್ಯುಕ್ತರಾಗಿ ಮನುಜವ್ಯಾಘ್ರರೂ, ಶಾಸ್ತ್ರಜ್ಞರೂ, ಮಂತ್ರವಿಶಾರದರೂ, ಸಂದಿವಿಗ್ರಹಕಾಲವನ್ನು ತಿಳಿದವರೂ ಆದ ಪಾಂಡವರು ಮಂತ್ರಾಲೋಚನೆಯನ್ನು ಮಾಡಲು ಒಂದು ಕಡೆಯಲ್ಲಿ ಕುಳಿತರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ಪ್ರಥಮೋಽಧ್ಯಾಯಃ ॥
॥ ವೈರಾಟಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ
ನಾರಾಯಣಾನುಗ್ರಹತೋ ಯಥಾವತ್
ನಿಸ್ತೀರ್ಯ ತಾನ್ ದ್ವಾದಶಾಬ್ದಾನ್ ವನೇ ತೇ |
ವಿಸೃಜ್ಯ ಚ ಬ್ರಾಹ್ಮಣಾದೀನ್ ಸಧೌಮ್ಯಾನ್
ಅಜ್ಞಾತವಾಸಾಯ ತತೋ ಮನೋ ದಧುಃ ॥1॥
ಶ್ರೀಹರಿಯ ಅನುಗ್ರಹದಿಂದ ಪಾಂಡವರು ಸರಿಯಾದ ರೀತಿಯಲ್ಲಿ ಹನ್ನೆರಡು ವರ್ಷಗಳನ್ನು ವನವಾಸದಲ್ಲಿ ಕಳೆದು ಧೌಮ್ಯರನ್ನೂ ಋಷಿಮುನಿಗಳು ಮುಂತಾದವರನ್ನೂ ಬೀಳ್ಕೊಟ್ಟು ಕ್ಷತ್ರಿಯ ವೇಷವನ್ನು ಬಿಟ್ಟು ಅಜ್ಞಾತವಾಸಕ್ಕೆ ಸಂಕಲ್ಪಿಸಿದರು.
ಗತ್ವಾ ವಿರಾಟಸ್ಯ ಪುರೀಂ ನಿಧಾಯ
ಹೇತೀಃ ಶಮ್ಯಾಂ ಛನ್ನರೂಪಾ ಬಭೂವುಃ |
ಯತಿಸ್ಸೂದಃ ಷಂಡವೇಷೋಽಶ್ವಸೂತ
ವೇಷೋ ಗೋಪೋ ಗಂಧಕರ್ತ್ರೀ ಚ ಜಾತಾಃ ॥2॥
ಪಾಂಡವರು ವಿರಾಟನಗರದ ಬಳಿಗೆ ಹೋಗಿ ಬನ್ನಿಮರದಲ್ಲಿ ಆಯುಧಗಳನ್ನಿರಿಸಿ ಮಾರುವೇಷ ತೊಟ್ಟರು. ಕ್ರಮವಾಗಿ ಸಂನ್ಯಾಸಿ, ಅಡಿಗೆಯವ, ನಪುಂಸಕ, ಸೂತ, ಗೋವಳ ಮತ್ತು ಸೈರಂಧ್ರಿಗಳಾದರು.
ಸರ್ವೇ ವಿರಾಟಂ ಯಯುರತ್ರ ದೇವವತ್
ಸಂಭಾವಿತಾಸ್ತೇನ ಶುಭೋರುಲಕ್ಷಣಾಃ |
ಯುಧಿಷ್ಠಿರಸ್ಯೈವ ಶುಶ್ರೂಷಣಂ ತೇ
ಚಕ್ರುರ್ಹೃದಾ ವಾಸುದೇವಸ್ಯ ನಾನ್ಯತ್ ॥3॥
ಪಾಂಡವರೂ ದ್ರೌಪದಿಯೂ ಎಲ್ಲರೂ ವಿರಾಟರಾಜನ ಬಳಿಗೆ ಹೋದರು. ಉತ್ತಮ ಶುಭಲಕ್ಷಣಯುಕ್ತರಾದ ಅವರು ದೇವತೆಗಳಂತೆ ರಾಜನಿಂದ ಸತ್ಕರಿಸಲ್ಪಟ್ಟರು. ಅವರು ರಾಜನ ಸೇವೆ ಮಾಡಲಿಲ್ಲ. ಯುಧಿಷ್ಠಿರನೊಳಗೆ ಶ್ರೀಹರಿ ಇರುವನೆಂಬ ಭಾವನೆಯಿಂದ ಅವನ ಸೇವೆಯನ್ನೇ ಮಾಡಿದರು.
ಪರಪಾಕೋ ಗೃಹಸ್ಥಸ್ಯ ಕ್ಷತ್ರಿಯಸ್ಯ ವಿಶೇಷತಃ |
ನ ಯೋಗ್ಯ ಇತಿ ಸೂದಸ್ಯ ಬಭ್ರೇ ವೇಷಂ ವೃಕೋದರಃ ॥4॥
ಗೃಹಸ್ಥನಾದ ಕ್ಷತ್ರಿಯನಿಗೆ ವಿಶೇಷ ಕಾರಣವಿದ್ದಾಗ ಹೊರತು ಬೇರೆ ಸಮಯದಲ್ಲಿ ಪರಾನ್ನ ಭೋಜನ ಉಚಿತವಲ್ಲ ಎಂದು ಭೀಮ ಅಡಿಗೆಯವನ ವೇಷ ಧರಿಸಿದ.
ವೈದಿಕವ್ಯವಹಾರೇಷು ಜ್ಞಾನಾಧಿಕ್ಯಪ್ರಸಿದ್ಧಿತಃ |
ಜಾನೀಯುರ್ಭೀಮ ಇತ್ಯೇವ ಸೂದವೇಷಸ್ತತೋಽಭವತ್ ॥5॥
ವೈದಿಕ ವ್ಯವಹಾರಗಳಲ್ಲಿ ಜ್ಞಾನದ ಹೆಚ್ಚಳ ಎದ್ದು ಕಾಣುವುದರಿಂದ ಈತ ಭೀಮ ಎಂದು ಜನರು ತಿಳಿಯುವ ಸಂಭವವಿದ್ದಿತು. ಅದರಿಂದ ಶೂದ್ರವೇಷ ಧರಿಸಿದ.
ಸ್ವೀಯಂ ವೇದವಿದಾಂ ಸರ್ವಂ ದೇವೇಶಾನಾಂ ಚ ಕಿಂ ಪುನಃ|
ಅತಸ್ತೇಽನ್ಯಾಶ್ರಯಂ ನೈವ ಚಕ್ರುಃ ಸ್ವಬಲಸಂಶ್ರಯಾತ್ ॥ 6 ॥
ವೇದವೇತ್ತರಾದ ಮಾನವರಿಗೂ ಋಷಿಗಳಿಗೂ ತಮಗಿಂತ ಕೆಳಗಿನವರ ಎಲ್ಲವೂ ತಮ್ಮ ಸೊತ್ತೇ ಆಗುವುದೆಂದಮೇಲೆ ದೇವೋತ್ತಮರಿಗೆ

ಏನು ಹೇಳಬೇಕು? ಅದರಿಂದಲೂ ತಮ್ಮ ಬಲವನ್ನೇ ಆಶ್ರಯಿಸಿದ್ದ ಪ್ರಯುಕ್ತವೂ ಪಾಂಡವರು ಪರಾಶ್ರಯವನ್ನು ಮಾಡಲೇ ಇಲ್ಲ.
ಶಾಪಾದೇವಾರ್ಜುನಃ ಷಂಡವೇಷೋಽಭೂನ್ನಕುಲಸ್ತಥಾ |
ಕ್ಷತ್ರಿಯಾನಂತರತ್ವಾತ್ತು ಸೂತಜಾತೇಸ್ತಥಾಽಭವತ್ ॥ 7 ॥
ಊರ್ವಶಿಯ ಶಾಪದಿಂದಲೆ ಅರ್ಜುನ ನಪುಂಸಕ ವೇಷದವನಾದ. ಕ್ಷತ್ರಿಯ ಜಾತಿಗೆ ಹತ್ತಿರ ಜಾತಿಯವನು ಸೂತನಾದ್ದರಿಂದ ನಕುಲ ಸೂತ ಜಾತಿಯವನಾದ.
ಸೂತಸ್ಯಾನಂತರತ್ವಾತ್ತು ವೈಶ್ಯಜಾತೇಸ್ತಥಾಽಭವತ್ |
ಸಹದೇವೋ ವೈಶ್ಯಜಾತಿರ್ಗೋಪಾಲಸ್ತೇಷು ಚೋತ್ತಮಃ |
ತತೋ ಗೋಪಾಲತಾಮಾಪ ಯತಿಃ ಪೂಜ್ಯೋಽಖಿಲೈರ್ಯತಃ ॥ 8 ॥
ಯತಿರಾಸೀದ್ಧರ್ಮಜೋಽತಃ ಸೋಽಭ್ಯಾಸಾರ್ಥಂ ಸದೈವ ಚ |
ಅಕ್ಷಾಸಕ್ತೋಽಭವತ್ ಪಶ್ಚಾದ್ದರ್ಶಯಿಷ್ಯನ್ ಸ್ವಶಿಷ್ಟತಾಮ್ ॥ 9 ॥
ಸೂತ ಜಾತಿಯ ಅನಂತರದವನು ವೈಶ್ಯ ಜಾತಿಯಾದ್ದರಿಂದ ಸಹದೇವ ವೈಶ್ಯನಾದ. ವೈಶರಲ್ಲಿಯೂ ಗೋಪಾಲಕ ಉತ್ತಮನಾದ್ದರಿಂದ ಗೋಪಾಲಕನಾದ. ಯತಿ ಎಲ್ಲ ವರ್ಣ, ಎಲ್ಲ ಆಶ್ರಮದವರಿಗೂ ಪೂಜ್ಯನಾಗಿರುವುದರಿಂದ ಧರ್ಮರಾಜ ಯತಿಯಾದ. ಜೂಜಾಟದಲ್ಲಿ ತನ್ನ ಅದ್ವಿತೀಯತ್ವವನ್ನು ತೋರುವುದಕ್ಕಾಗಿ ತನ್ನ ಅಭ್ಯಾಸ ಕೌಶಲವನ್ನು ಮೆರೆಸಬೇಕೆಂದು ಸದಾ ಜೂಜಿನಲ್ಲಿ ನಿರತನಾದ.
ಭೀಮಸೇನಸಧರ್ಮಾರ್ಥಂ ಶೂದ್ರಾ ಸೈರಂಧ್ರಿಕಾಽಭವತ್ |
ದ್ರೌಪದೀ ಭರ್ತೃಸಾಧರ್ಮ್ಯಂ ಸ್ತ್ರೀಣಾಂ ಧರ್ಮೋ ಯತಸ್ಸದಾ ॥ 10 ॥
ದ್ರೌಪದಿ ಭೀಮಸೇನನಿಗೆ ಸಮಾನಧರ್ಮಿಣಿ ಎನಿಸುವ ಉದ್ದೇಶದಿಂದ ಶೂದ್ರ ವೇಷದ ಸೈರಂಧ್ರಿಯಾದಳು. ಏಕೆಂದರೆ ಪತಿಗೆ ಸಮಾನಧರ್ಮಿಣಿಯೆನಿಸುವುದೇ ಸ್ತ್ರೀಯರಿಗೆ ಸದಾ ಧರ್ಮವಾಗಿದೆ.
* * * * *
ಎರಡನೆಯ ಅಧ್ಯಾಯ
ತಮ್ಮಂದಿರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ವಿರಾಟನಗರದಲ್ಲಿ ಛನ್ನವೇಷದಿಂದ ವಾಸಮಾಡಲು ಯುಧಿಷ್ಠಿರನ ನಿರ್ಧಾರ
ವೈಶಂಪಾಯನಃ
ನಿವೃತ್ತವನವಾಸಾಸ್ತೇ ಸತ್ಯಸಂಧಾ ಯಶಸ್ವಿನಃ |
ಅಕುರ್ವಂತ ಪುನರ್ಮಂತ್ರಂ ಸಹ ಧೌಮ್ಯೇನ ಪಾಂಡವಾಃ ॥1॥
ವೈಶಂಪಾಯನ ವನವಾಸವನ್ನು ಮುಗಿಸಿದ ಸತ್ಯಸಂಧರೂ, ಯಶಸ್ವಿಗಳೂ ಆದ ಆ ಪಾಂಡವರು ಧೌಮ್ಯರ ಜೊತೆಯಲ್ಲಿ ಸೇರಿ ಪುನಃ ಮಂತ್ರಾಲೋಚನೆಯನ್ನು ಮಾಡಿದರು.
ಅಥಾಬ್ರವೀನ್ಮಹಾರಾಜ ಕುಂತೀಪುತ್ರೋ ಯುಧಿಷ್ಠಿರಃ |
ಭ್ರಾತೄನ್ ಕೃಷ್ಣಾಂ ಚ ಸಂಪ್ರೇಕ್ಷ್ಯ ಧೌಮ್ಯಂ ಚ ಕುರುನಂದನ ॥2॥
ಎಲೈ ಮಹಾರಾಜನೇ, ಕುರುನಂದನನೇ, ಕುಂತೀಪುತ್ರನಾದ ಯುಧಿಷ್ಠಿರನು ತಮ್ಮಂದಿರನ್ನೂ, ದ್ರೌಪದಿಯನ್ನೂ ಮತ್ತು ಧೌಮ್ಯರನ್ನು ನೋಡುತ್ತಾ ಮಾತನಾಡಿದನು.
ದ್ವಾದಶೇಮಾನಿ ವರ್ಷಾಣಿ ರಾಷ್ಟ್ರಾದ್ ವಿಪ್ರೋಷಿತಾ ವಯಮ್ ॥3॥
ತ್ರಯೋದಶಮಿಮಂ ಪ್ರಾಪ್ತಂ ಕ್ವ ನು ವತ್ಸ್ಯಾಮಹೇಽರ್ಜುನ |
ಅಬುದ್ಧಾ ಧಾರ್ತರಾಷ್ಟ್ರೈಶ್ಚ ಸಮಗ್ರಾಃ ಸಹ ಕೃಷ್ಣಯಾ ॥4॥
ಈ ಹನ್ನೆರಡು ವರ್ಷಗಳ ಕಾಲ ನಾವು ರಾಜ್ಯವನ್ನು ಬಿಟ್ಟು ವಾಸಮಾಡಿದೆವು. ಎಲೈ ಅರ್ಜುನನೇ, ಪ್ರಾಪ್ತವಾದ ಈ ಹದಿಮೂರನೆಯ ವರ್ಷವನ್ನು ದ್ರೌಪದಿಯ ಜೊತೆಯಲ್ಲಿ ನಾವೆಲ್ಲರೂ ಧೃತರಾಷ್ಟ್ರಪುತ್ರರಿಗೆ ತಿಳಿಯದಂತೆ ಎಲ್ಲಿ ಕಳೆಯೋಣ?
ಅರ್ಜುನಃ
ತಸ್ಯೈವ ವರದಾನೇನ ಧರ್ಮಸ್ಯ ಮನುಜಾಧಿಪ |
ಅಜ್ಞಾತಾ ವಿಚರಿಷ್ಯಾಮೋ ನರಾಣಾಂ ಭರತರ್ಷಭ ॥5॥
ಅರ್ಜುನ ಎಲೈ ಮನುಜಾಧಿಪನೇ, ಭರತಶ್ರೇಷ್ಠನೇ, ಆ ಯಮದೇವರ ವರದಿಂದಲೇ ನಾವು ಬೇರೆ ಮನುಷ್ಯರಿಗೆ ತಿಳಿಯದಂತೆ ಅಜ್ಞಾತವಾಸವನ್ನು ಆಚರಿಸುವೆವು.
ತಾನಿ ರಾಷ್ಟ್ರಾಣಿ ವಾಸಾಯ ಕೀರ್ತಯಿಷ್ಯಾಮಿ ಕಾನಿಚಿತ್ |
ರಮಣೀಯಾನಿ ಗುಪ್ತಾನಿ ತೇಷಾಂ ಕಿಂಚಿತ್ತು ರೋಚಯ ॥6॥
ಅಜ್ಞಾತವಾಸಕ್ಕೆ ಯೋಗ್ಯವಾದ, ಸುಂದರವಾದ ಮತ್ತು ಸುರಕ್ಷಿತವಾದ ಕೆಲವು ರಾಷ್ಟ್ರಗಳನ್ನು ಹೇಳುವೆನು. ಅವುಗಳಲ್ಲಿ ಯಾವುದನ್ನಾದರೂ ಆರಿಸು.
ಸಂತಿ ರಮ್ಯಾ ಜನಪದಾ ಬಹವಸ್ತ್ವಭಿತಃ ಕುರೂನ್ |
ಪಾಂಚಾಲಾಶ್ಚೈವ ಮತ್ಸ್ಯಾಶ್ಚ ಸಾಲ್ವವೈದೇಹಬಾಹ್ಲಿಕಾಃ ॥7॥
ದಶಾರ್ಣಾಃ ಶೂರಸೇನಾಶ್ಚ ಕಳಿಂಗಾ ಮಗಧಾ ಅಪಿ ॥8॥
ಕುರುರಾಜ್ಯದ ಸುತ್ತಲೂ ಅನೇಕ ಸುಂದರವಾದ ರಾಜ್ಯಗಳಿವೆ. ಪಾಂಚಾಲದೇಶ, ಮತ್ಸ್ಯದೇಶ, ಸಾಲ್ವವಿದೇಹ ಬಾಹ್ಲಿಕದೇಶಗಳು, ದಶಾರ್ಣ, ಶೂರಸೇನ, ಕಳಿಂಗ, ಮತ್ತು ಮಗಧ ದೇಶಗಳೂ ಇವೆ.
ವಿರಾಟನಗರಂ ಚಾಪಿ ಶ್ರೂಯತೇ ಶತ್ರುಕರ್ಶನ |

ರಮಣೀಯಂ ಜನಾಕೀರ್ಣಂ ಸುಭಿಕ್ಷಂ ಸ್ಫೀತಮೇವ ಚ ॥9॥
ನಾನಾರಾಷ್ಟ್ರಾಣಿ ಚಾನ್ಯಾನಿ ಶ್ರೂಯಂತೇ ಸುಬಹೂನ್ಯಪಿ ॥10॥
ಶತ್ರುಕರ್ಶನನಾದವನೇ, ವಿರಾಟನಗರವಾದರೂ ರಮಣೀಯವೂ, ಜನನಿಬಿಡವೂ, ಶುದ್ಧವೂ ಮತ್ತು ಸುಭಿಕ್ಷೆಯಿಂದ ಕೂಡಿದುದೂ ಎಂದು ಕೇಳಿಬರುತ್ತಿದೆ. ಅಲ್ಲದೇ ಇನ್ನೂ ಅನೇಕ ರಾಷ್ಟ್ರಗಳೂ ಕೇಳಿ ಬರುತ್ತಿವೆ.
ಯತ್ರ ತೇ ರೋಚತೇ ರಾಜಂಸ್ತತ್ರ ಗಚ್ಛಾಮಹೇ ವಯಮ್ |
ಕತಮಸ್ಮಿನ್ ಜನಪದೇ ಮಹಾರಾಜ ನಿವತ್ಸ್ಯಸಿ ॥11॥
ಎಲೈ ರಾಜನೇ, ನಿನಗೆ ಇಷ್ಟವಾದಲ್ಲಿ ನಾವು ಹೋಗೋಣ. ಮಹಾರಾಜನೇ, ಯಾವ ದೇಶದಲ್ಲಿ ನೀನು ವಾಸಮಾಡುವಿ?
ಯುಧಿಷ್ಠಿರಃ
ಏವಮೇತನ್ಮಹಾಬಾಹೋ ಯಥಾ ಸ ಭಗವಾನ್ ಪ್ರಭುಃ |
ಅಬ್ರವೀತ್ ಸರ್ವಭೂತೇಶಸ್ತಥೈತನ್ನ ತದನ್ಯಥಾ ॥12॥
ಯುಧಿಷ್ಠಿರ ಎಲೈ ಮಹಾಬಾಹುವೇ, ಭಗವಂತನೂ, ಪ್ರಭುವೂ ಮತ್ತು ಸರ್ವಭೂತೇಶನೂ ಆದ ಯಮನು ಹೇಳಿದಂತೆಯೇ ಎಲ್ಲವೂ ಆಗುತ್ತದೆ. ಅದರಲ್ಲಿ ವ್ಯತ್ಯಾಸವಿಲ್ಲ.
ಅವಶ್ಯಂ ತ್ವೇವ ವಾಸಾರ್ಥಂ ರಮಣೀಯಂ ಶಿವಂ ಸುಖಮ್ |
ಸಮ್ಮಂತ್ರ್ಯ ಸಹಿತೈಃ ಸರ್ವೈರ್ದ್ರಷ್ಟವ್ಯಮಕುತೋಭಯಮ್ ॥13॥
ಅಜ್ಞಾತವಾಸದ ಸಲುವಾಗಿ ರಮಣೀಯವೂ, ಮಂಗಳವೂ, ಸುಖಕರವೂ, ಭಯರಹಿತವೂ ಆದ ಒಂದು ದೇಶವನ್ನು ನಾವೆಲ್ಲರೂ ಮಂತ್ರಾಲೋಚನೆಯನ್ನು ಮಾಡಿ ನಿರ್ಧರಿಸಬೇಕು.
ಮಾತ್ಸ್ಯೋ ವಿರಾಟೋ ಬಲವಾನ್ ಸಾರ್ವಭೌಮಶ್ಚ ವಿಶ್ರುತಃ |
ದಾನಶೀಲೋ ವದಾನ್ಯಶ್ಚ ವೃದ್ಧಃ ಸತ್ಸು ಸುಸಮ್ಮತಃ ॥14॥
ಮತ್ಸ್ಯ ದೇಶದ ರಾಜನಾದ ವಿರಾಟನು ಬಲಿಷ್ಠನೂ, ಸಾರ್ವಭೌಮನೂ ಆಗಿ ಪ್ರಖ್ಯಾತನಾಗಿದ್ದಾನೆ. ಅವನು ದಾನಶೀಲನೂ, ಉದಾರಿಯೂ, ವೃದ್ಧನೂ, ಸಜ್ಜನರಿಗೆ ಸಮ್ಮತನೂ ಆಗಿದ್ದಾನೆ.
ಗುಣವಾನ್ ಲೋಕವಿಖ್ಯಾತೋ ದೃಢಭಕ್ತಿರ್ವಿಶಾರದಃ |
ತತ್ರ ಮೇ ರೋಚತೇ ಪಾರ್ಥ ಮತ್ಸ್ಯರಾಜಾಂತಿಕೇಽನಘ ॥15॥
ಅವನು ಗುಣವಂತನೂ, ಲೋಕವಿಖ್ಯಾತನೂ, ವಿದ್ವಾಂಸನೂ, ದೃಢಭಕ್ತಿಯುಳ್ಳವನೂ ಆಗಿದ್ದಾನೆ. ಎಲೈ ಅನಘನೇ, ಅವನ ಬಳಿಯಲ್ಲಿ ವಾಸವು ನನಗೆ ಇಷ್ಟವಾಗುತ್ತದೆ.
ವಿರಾಟನಗರೇ ತಾತ ಮಾಸಾನ್ ದ್ವಾದಶ ಸಂಶ್ರಿತಾಃ |
ಕುರ್ವಂತಸ್ತಸ್ಯ ಕರ್ಮಾಣಿ ವಸಾಮೇತಿ ಹ ರೋಚಯೇ ॥16॥
ಎಲೈ ಪ್ರೀತಿಪಾತ್ರನೇ, ವಿರಾಟನಗರದಲ್ಲಿ ಅವನ ಪರಿಚರ್ಯೆಯನ್ನು ಮಾಡುತ್ತಾ ಹನ್ನೆರಡು ತಿಂಗಳುಗಳ ಕಾಲ ನಾವು ವಾಸಮಾಡುವೆವೆಂದು ನನಗೆ ಇಷ್ಟವಾಗುತ್ತದೆ.
ಯಾನಿ ಯಾನೀಹ ಕರ್ಮಾಣಿ ತಸ್ಯೈ ಚಕ್ರುಮಹೇ ವಯಮ್ |
ಕರ್ತುಂ ಯೋ ಯತ್ ಸ ತತ್ ಕರ್ಮ ಬ್ರವೀತು ಕುರುನಂದನ ॥
ಎಲೈ ಕುರುನಂದನನೇ, ನಮ್ಮಲ್ಲಿ ಯಾರು ಯಾರು ಅವನ ಏನೇನು ಕರ್ಮವನ್ನು ಮಾಡುವೆವು ಎಂದು ಎಲ್ಲರೂ ಹೇಳಿ.
ಅರ್ಜುನಃ
ನರದೇವ ಕಥಂ ಕರ್ಮ ತಸ್ಯ ರಾಷ್ಟ್ರೇ ಚರಿಷ್ಯಸಿ |
ಮಾನುಷೇಂದ್ರ ವಿರಾಟಸ್ಯ ರಂಸ್ಯಸೇ ಕೇನ ಕರ್ಮಣಾ ॥18॥
ಅರ್ಜುನ ನರದೇವನೇ, ಮನುಷ್ಯಶ್ರೇಷ್ಠನೇ, ವಿರಾಟನ ದೇಶದಲ್ಲಿ ನೀನು ಹೇಗೆ ಕರ್ಮವನ್ನು ಮಾಡುತ್ತೀಯೆ? ವಿರಾಟನಿಗೆ ಯಾವ ಕಾರ್ಯವನ್ನು ಮಾಡಿಕೊಟ್ಟು ನೀನು ಸಂತೋಷಪಡುವಿ?
ಅಕ್ಲಿಷ್ಟವೇಷಧಾರೀ ಚ ಧಾರ್ಮಿಕೋ ಹ್ಯನಸೂಯಕಃ |
ನ ತವಾಭ್ಯುಚಿತಂ ಕರ್ಮ ನೃಶಂಸಂ ನಾಪಿ ಕೈತವಮ್ ॥19॥
ನೀನು ಸರಳವೇಷವನ್ನು ಧರಿಸುವವನೂ, ಧಾರ್ಮಿಕನೂ ಮತ್ತು ಅಸೂಯಾ ರಹಿತನೂ ಆಗಿದ್ದೀಯೆ. ಕ್ರೂರವಾದ ಅಥವಾ ಕಪಟದಿಂದ ಕೂಡಿದ ಯಾವ ಕಾರ್ಯವೂ ನಿನಗೆ ಯೋಗ್ಯವಾದುದಲ್ಲ.
ಸತ್ಯವಾಗಸಿ ಯಾಜ್ಞೀಯೋ ರಾಗಕ್ರೋಧವಿವರ್ಜಿತಃ |
ಮೃದುರ್ವದಾನ್ಯೋ ಹ್ರೀಮಾಂಶ್ಚ ಧಾರ್ಮಿಕಃ ಸತ್ಯವಿಕ್ರಮಃ ॥20॥
ನೀನು ಸತ್ಯವಚನನೂ, ಯಜ್ಞಪ್ರಿಯನೂ, ಕಾಮಕ್ರೋಧರಹಿತನೂ, ಮೃದುವೂ, ಉದಾರಿಯೂ, ನಾಚಿಕೆಸ್ವಭಾವದವನೂ, ಧಾರ್ಮಿಕನೂ ಮತ್ತು ನಿಜವಾದ ವಿಕ್ರಮವನ್ನು ಹೊಂದಿದವನೂ ಆಗಿದ್ದೀಯೆ.
ರಾಜನ್ ತ್ವಂ ತಪಸಾ ಕ್ಲಿಷ್ಟಃ ಕಥಂ ತಸ್ಯ ಚರಿಷ್ಯತಿ |
ನ ದುಃಖಮುಚಿತಂ ಕಿಂಚಿದ್ ರಾಜನ್ ಪಾಪಮತೇರ್ಯಥಾ ॥21॥
ಸ ಇಮಾಮಾಪದಂ ಪ್ರಾಪ್ಯ ಕಥಂ ಘೋರಾಂ ತರಿಷ್ಯಸಿ ॥22॥
ಎಲೈ ರಾಜನೇ, ತಪಸ್ಸಿನಿಂದ ದಣಿದ ನೀನು ಹೇಗೆ ಅವನ ಕರ್ಮವನ್ನು ಮಾಡುವಿ? ರಾಜನೇ, ದುಷ್ಟಬುದ್ಧಿಯುಳ್ಳವನಿಗೆ ಯೋಗ್ಯವಾದ ಯಾವ ದುಃಖದ ಕಾರ್ಯವೂ ನಿನಗೆ ಉಚಿತವಲ್ಲ. ಇಂತಹ ಘೋರವಾದ ಆಪತ್ತಿಗೆ ಸಿಲುಕಿದ ನೀನು ಇದನ್ನು ಹೇಗೆ ದಾಟುವಿ?
ಯುಧಿಷ್ಠಿರಃ

ಶೃಣುಧ್ವಂ ಯಚ್ಚರಿಷ್ಯಾಮಿ ಅಹಂ ವೈ ಕುರುನಂದನ ॥23॥
ವಿರಾಟಂ ಸಮನುಪ್ರಾಪ್ಯ ರಾಜಾನಂ ಮತ್ಸ್ಯನಂದನಮ್ ।
ಸಭಾಸ್ತಾರೋ ಭವಿಷ್ಯಾಮಿ ವಿರಾಟಸ್ಯೇತಿ ಮೇ ಮತಿಃ ॥24॥
ಯುಧಿಷ್ಠಿರ ಎಲ್ಲೈ ಕುರುನಂದನನೇ, ನಾನು ಏನು ಮಾಡುವೆನೆಂದು ಎಲ್ಲರೂ ಕೇಳಿ. ನಾನು ಮತ್ಸ್ಯನಂದನನಾದ ವಿರಾಟನನ್ನು ಸಮೀಪಿಸಿ ಅವನ ಸಭೆಯ ಗಣ್ಯವ್ಯಕ್ತಿಯಾಗುವೆನೆಂದು ನನ್ನ ಅಭಿಪ್ರಾಯ.
ಕಂಕೋ ನಾಮ ಬ್ರುವಾಣೋಽಹಂ ಮತಾಕ್ಷಃ ಸಾಧುದೇವಿತಾ ॥25॥
ವೈಡೂರ್ಯಕಾಂಚನಾನ್ ದಾಂತಾನ್ ಸ್ಫಾಟಿಕಾನ್ ರಾಜತಾನಪಿ ।
ಕೃಷ್ಣಾಕ್ಷಾನ್ ಲೋಹಿತಾಕ್ಷಾಂಶ್ಚ ಧಾರಯಿಷ್ಯೇ ಸುವೇಷ್ಟಿತಾನ್ ॥26॥
ಅರಿಷ್ಟಾನ್ ರಾಜಗೋಲಿಂಗಾನ್ ದರ್ಶನೀಯಾನ್ ಸುವರ್ಚಸಃ ॥27॥
ನಾನು ಕಂಕ ಎಂಬ ಹೆಸರಿನವನು ಎಂದು ಹೇಳಿಕೊಳ್ಳುತ್ತಾ, ಅಕ್ಷವಿದ್ಯೆಯನ್ನು ತಿಳಿದು ಚೆನ್ನಾಗಿ ಆಡುವವನು ಎಂದು ಹೇಳುತ್ತಾ, ವೈಡೂರ್ಯದಿಂದ ಮಾಡಿದ ಕಾಂಚನ ಮಯವಾದ, ದಂತಮಯವಾದ, ಸ್ಫಟಿಕಮಯವಾದ, ರಜತಮಯವಾದ, ಕಪ್ಪು ಚುಕ್ಕೆಗಳನ್ನು ಹೊಂದಿರುವ, ಕೆಂಪುಚುಕ್ಕೆಯನ್ನು ಹೊಂದಿರುವ, ಎಲ್ಲಿಯೂ ಸೀಳದಿರುವ ರಾಜಚಿಹ್ನೆಗಳನ್ನು, ಗೋಚಿಹ್ನೆಗಳನ್ನು ಒಳಗೊಂಡ, ಕಾಂತಿಯುಕ್ತವಾದ ಮನೋಹರವಾದ ದಾಳಗಳನ್ನು ಬಟ್ಟೆಯಲ್ಲಿ ಚೆನ್ನಾಗಿ ಸುತ್ತಿ ಅವನಿಗೆ ಕೊಡುವೆನು.
ಲೋಹಿತಾಕ್ಷಾಶ್ಮಗರ್ಭಾಶ್ಚ ಸಂತಿ ತಾತ ಧನಾನಿ ಮೇ ।
ದರ್ಶನೀಯಾನ್ ಸಭಾನಂದಾನ್ ಕುಶಲೈಃ ಸಾಧು ನಿಷ್ಠಿತಾನ್ ॥28॥
ಅಪ್ಯೇತಾನ್ ಪಾಣಿನಾ ಸ್ಪೃಷ್ಟ್ವಾ ಸಂಪ್ರಹೃಷ್ಯಂತಿ ಮಾನವಾಃ ॥29॥
ಮನೋಹರವೂ, ಸಭೆಯಲ್ಲಿದ್ದವರಿಗೆ ಸಂತೋಷವನ್ನು ಕೊಡುವವೂ, ಕುಶಲರಿಂದ ಪ್ರಶಂಸಿಸಲ್ಪಟ್ಟವೂ ಆದ ಈ ದಾಳಗಳನ್ನು ಕೈಯಿಂದ ಮುಟ್ಟಿದರೂ ಮನುಷ್ಯರು ಸಂತೋಷ ಪಡುತ್ತಾರೆ.
ತಾನ್ ವಿಕೀರ್ಯ ಸಮೇ ದೇಶೇ ರಮಣೀಯಾನ್ ವಿಪಾಂಸುಲೇ ।
ದೇವಿಷ್ಯಾಮಿ ಯಥಾಕಾಮಂ ಸ ವಿಹಾರೋ ಭವಿಷ್ಯತಿ ॥30॥
ಅಂತಹ ಹಾಸು ಮತ್ತು ದಾಳಗಳನ್ನು ಧೂಳಿಲ್ಲದ, ಮನೋಹರವಾದ, ಸಮತಟ್ಟಾದ ನೆಲದ ಮೇಲೆ ಹರಡಿ ನನಗೆ ಇಷ್ಟಬಂದಂತೆ ದ್ಯೂತವನ್ನು ಆಡುವೆನು. ಅದು ನನ್ನ ವಿಹಾರವಾಗುವುದು.
ಕಂಕೋ ನಾಮ್ನಾ ಪರಿವ್ರಾಜೋ ವಿರಾಟಸ್ಯ ಸಭಾಸದಃ ।
ಜ್ಯೌತಿಷೇ ಶಕುನಜ್ಞಾನೇ ನಿಮಿತ್ತೋ ಚಾಕ್ಷಕೌಶಲೇ ॥31॥
ನಾನು ಕಂಕ ಎಂಬ ಪರಿವ್ರಾಜಕನಾಗಿ ಜ್ಯೌತಿಷದಲ್ಲಿಯೂ, ಶಕುನಗಳಲ್ಲಿಯೂ, ಅಕ್ಷಕೌಶಲದಲ್ಲಿಯೂ ಮತ್ತು ದೈವಸೂಚನೆಗಳಲ್ಲಿಯೂ ಪರಿಣಿತನಾದ ಸಭಾಸದನಾಗಿ ವಿರಾಟನ ಜೊತೆಯಲ್ಲಿ ಇರುತ್ತೇನೆ.
ಬ್ರಾಹ್ಮೋ ವೇದೋ ಮಯಾಽಧೀತೋ ವೇದಾಂಗಾನಿ ಚ ಸರ್ವಶಃ ॥
ಧರ್ಮಕಾಮಾರ್ಥಮೋಕ್ಷೇಷು ನೀತಿಶಾಸ್ತ್ರೇಷು ಪಾರಗಃ ।
ಪೃಷ್ಟೋಽಹಂ ಕಥಯಿಷ್ಯಾಮಿ ರಾಜ್ಞಃ ಪ್ರಿಯಹಿತಂ ವಚಃ ॥33॥
ನಾನು ಬ್ರಹ್ಮವಿಷಯಕವಾದ ವೇದಗಳನ್ನೂ, ವೇದಾಂಗಗಳನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಿದ್ದೇನೆ. ಧರ್ಮಾರ್ಥಕಾಮಮೋಕ್ಷಶಾಸ್ತ್ರಗಳಲ್ಲಿ ಮತ್ತು ನೀತಿಶಾಸ್ತ್ರಗಳಲ್ಲಿ ಪಾರಂಗತನಾಗಿದ್ದೇನೆ ಎಂದು ಹೇಳುತ್ತಾ ರಾಜನು ಕೇಳಿದಾಗ ಅವನಿಗೆ ಪ್ರಿಯವೂ, ಹಿತವೂ ಆದ ವಚನಗಳನ್ನು ಹೇಳುವೆನು.
ಆಸಂ ಯುಧಿಷ್ಠಿರಸ್ಯಾಹಂ ಪುರಾ ಪ್ರಾಣಸಮಃ ಸಖಾ ।
ಇತಿ ವಕ್ಷ್ಯಾಮಿ ರಾಜಾನಂ ಯದಿ ಮಾಮನುಯೋಕ್ಷ್ಯತೇ ॥34॥
ರಾಜನು ನನ್ನನ್ನು ಕೇಳಿದರೆ ಅವನನ್ನು ಕುರಿತು ನಾನು ಹಿಂದೆ ಯುಧಿಷ್ಠಿರನಿಗೆ ಪ್ರಾಣಪ್ರಿಯನಾದ ಸ್ನೇಹಿತನಾಗಿದ್ದೆ ಎಂದು ಹೇಳುವೆನು.
ವಿರಾಟನಗರೇ ಚ್ಛನ್ನಃ ಕೃಷ್ಣಯಾ ಚ ಸಹಾನುಗೈಃ ।
ಇತ್ಯೇವ ಮತ್ಪ್ರತಿಜ್ಞಾತಂ ವಿಚರಿಷ್ಯಾಮ್ಯಹಂ ಯಥಾ ॥35॥
ವಿರಾಟನಗರದಲ್ಲಿ ಈ ರೀತಿ ಛನ್ನನಾಗಿ ದ್ರೌಪದಿ ಮತ್ತು ತಮ್ಮಂದಿರಿಂದ ಒಡಗೂಡಿ ನಾನು ವಾಸವನ್ನು ಮಾಡಿ ಸಂಚರಿಸುವೆನು ಎಂದು ನನ್ನ ಅಭಿಪ್ರಾಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ದ್ವಿತೀಯೋಽಧ್ಯಾಯಃ ॥
॥ ವೈರಾಟಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಭೀಮಾರ್ಜುನರಿಂದ ಕ್ರಮವಾಗಿ ಸೂದವೇಷ ಮತ್ತು
ಷಂಡವೇಷಧಾರಣ ಕಥನ
ವೈಶಂಪಾಯನಃ
ಏವಂ ನಿರ್ದಿಶ್ಯ ಚಾತ್ಮಾನಂ ಭೀಮಸೇನಮುವಾಚ ಹ ।

ಭೀಮಸೇನ ಕಥಂ ಕರ್ಮ್ಮ ಮತ್ಸ್ಯರಾಷ್ಟ್ರೇ ಚರಿಷ್ಯಸಿ ॥1॥
ವೈಶಂಪಾಯನ ಯುಧಿಷ್ಠಿರನು ಹೀಗೆ ತನ್ನ ವಿಷಯದಲ್ಲಿ ಮಾತನಾಡಿ ಭೀಮಸೇನನನ್ನು ಕುರಿತು- `ಭೀಮಸೇನನೇ, ಮತ್ಸ್ಯದೇಶದಲ್ಲಿ ನೀನು ಹೇಗೆ ಕರ್ಮವನ್ನು ಮಾಡುವಿ?' ಎಂದು ಕೇಳಿದನು.
ಹತ್ವಾ ಕ್ರೋಧವಶಾಂಸ್ತಾತ ಪರ್ವತೇ ಗಂಧಮಾದನೇ |
ಯಕ್ಷಾನ್ ಕ್ರೋಧಾಭಿತಾಮ್ರಾಕ್ಷಾನ್ ರಾಕ್ಷಸಾಂಶ್ಚಾತಿಪೌರುಷಾನ್ ॥2॥
ಪ್ರಾದಾಃ ಪಾಂಚಾಲಕನ್ಯಾಯೈ ಪದ್ಮಾನಿ ಸುಬಹೂನ್ಯಪಿ ॥3॥
ಪ್ರೀತಿಪಾತ್ರನೇ, ಗಂಧಮಾದನ ಪರ್ವತದಲ್ಲಿ ಕ್ರೋಧವಶ ದೈತ್ಯರನ್ನೂ ಕ್ರೋಧದಿಂದ ಕೆಂಪಾದ ಕಣ್ಣುಗಳುಳ್ಳ ಯಕ್ಷರನ್ನೂ ಮತ್ತು ಮಹಾಪೌರುಷವುಳ್ಳ ರಾಕ್ಷಸರನ್ನೂ ಸಂಹರಿಸಿ, ಪಾಂಚಾಲಕುಮಾರಿಯಾದ ದ್ರೌಪದಿಗೆ ಅನೇಕ ಪದ್ಮಪುಷ್ಪಗಳನ್ನು ತಂದುಕೊಟ್ಟಿದ್ದೀಯೆ.
ಬಕಂ ರಾಕ್ಷಸರಾಜಾನಂ ಭೀಷಣಂ ಪುರುಷಾದಕಮ್ |
ಜಘ್ನಿವಾನಸಿ ಕೌಂತೇಯ ಬ್ರಾಹ್ಮಣಾರ್ಥಮರಿಂದಮ ॥4॥
ಕ್ಷೇಮಾ ಚಾಭಯಸಂವೀತಾ ಹ್ಯೇಕಚಕ್ರಾ ತ್ವಯಾ ಕೃತಾ ॥5॥
ಎಲೈ ಕೌಂತೇಯನೇ, ಎಲೈ ಅರಿಂದಮನೇ, ಏಕಚಕ್ರನಗರದಲ್ಲಿ ಮಹಾಭಯಂಕರನೂ, ಮನುಷ್ಯ ಭಕ್ಷಕನೂ ಮತ್ತು ರಾಕ್ಷಸರಾಜನೂ ಆದ ಬಕಾಸುರನನ್ನು ಬ್ರಾಹ್ಮಣರ ಹಿತಕ್ಕಾಗಿ ಸಂಹರಿಸಿ ಏಕಚಕ್ರನಗರಕ್ಕೆ ಕ್ಷೇಮವನ್ನು ಮತ್ತು ಅಭಯವನ್ನು ಉಂಟುಮಾಡಿದ್ದೀಯೆ.

ಹಿಡಿಂಬಂ ಚ ಮಹಾವೀರ್ಯಂ ಕಿರ್ಮ್ಮೀರಂ ಚಾತಿಪೌರುಷಮ್ |
ತ್ವಯಾ ಹತ್ವಾ ಮಹಾಬಾಹೋ ವನಂ ನಿಷ್ಕಂಟಕಂ ಕೃತಮ್ ॥6॥
ಎಲೈ ಮಹಾಬಾಹುವೇ, ಮಹಾಬಲಶಾಲಿಯೂ ಮತ್ತು ಮಹಾಪೌರುಷವುಳ್ಳವನೂ ಆದ ಹಿಡಿಂಬ ಮತ್ತು ಕಿರ್ಮ್ಮೀರರನ್ನು ಕೊಂದು ವನವನ್ನು ನಿಷ್ಕಂಟಕವನ್ನಾಗಿ ಮಾಡಿದ್ದೀಯೆ.
ಆಪದಂ ಚಾಪಿ ಸಂಪ್ರಾಪ್ತಾ ದ್ರೌಪದೀ ಚಾರುಹಾಸಿನೀ |
ಜಟಾಸುರವಧಂ ಕೃತ್ವಾ ತ್ವಯಾ ಚ ಪರಿಮೋಕ್ಷಿತಾ ॥7॥
ಚಾರುಹಾಸಿನಿಯಾದ ದ್ರೌಪದಿಯು ಜಟಾಸುರನಿಂದ ಆಪತ್ತಿಗೆ ಒಳಗಾಗುತ್ತಿರಲು ಅವನನ್ನು ಸಂಹರಿಸಿ ದ್ರೌಪದಿಯನ್ನು ಬಿಡಿಸಿದ್ದೀಯೆ.
ಮತ್ಸ್ಯರಾಜಾಂತಿಕೇ ತಾತ ವೀರ್ಯಪೂರ್ಣೋಽತ್ಯಮರ್ಷಣಃ |
ವೃಕೋದರ ವಿರಾಟಸ್ಯ ಬಲವಾನಬಲೀಯಸಃ ॥8॥
ಸಮೀಪೇ ನಗರೇ ತಸ್ಯ ರಂಸ್ಯತೇ ಕೇನ ಕರ್ಮಣಾ ॥9॥
ಮನ್ಯೇ ನಿವಾಸಂ ಭೀಮಸ್ಯ ದುಷ್ಕರಂ ತಸ್ಯ ಭೂಪತೇಃ ॥10॥
ಪ್ರೀತಿಪಾತ್ರನೇ, ನೀನು ವೀರ್ಯಪೂರ್ಣನೂ, ಬಹಳ ಕ್ರೋಧಶೀಲನೂ ಮತ್ತು ಬಲಿಷ್ಠನೂ ಆಗಿದ್ದೀಯೆ. ಅಂತಹ ನೀನು ದುರ್ಬಲನಾದ ಮತ್ಸ್ಯರಾಜನಾದ ವಿರಾಟನ ಸಮೀಪದಲ್ಲಿ ಅವನ ಪಟ್ಟಣದಲ್ಲಿ ಯಾವ ಕಾರ್ಯವನ್ನು ಮಾಡಿ ಸಂತೋಷಪಡುತ್ತೀಯೆ? ಆ ರಾಜನ ಸಮೀಪದಲ್ಲಿ ಭೀಮಸೇನನ ವಾಸವು ಕಷ್ಟಕರವಾದುದೆಂದು ನನಗೆ ತೋರುತ್ತದೆ.
ಭೀಮಃ
ಪೌರೋಗವೋ ಬ್ರುವಾಣೋಽಹಂ ವಲಲೋ ನಾಮ ಭಾರತ |
ಉಪಸ್ಥಾಸ್ಯಾಮಿ ರಾಜಾನಂ ವಿರಾಟಮಿತಿ ರೋಚಯೇ ॥11॥
ಭೀಮ ಎಲೈ ಭಾರತನೇ, ನಾನು ವಲಲನೆಂಬ ಬಾಣಸಿಗ ಅಧ್ಯಕ್ಷನೆಂದು ಹೇಳಿಕೊಳ್ಳುತ್ತಾ ವಿರಾಟನ ಸಮೀಪದಲ್ಲಿ ಅವನ ಕಾರ್ಯವನ್ನು ಮಾಡುವೆನು.
ರಸಾನ್ ನಾನಾವಿಧಾಂಶ್ಚಾಪಿ ಸ್ವಾದೂನ್ ಸುಮಧುರಾಂಸ್ತದಾ |
ಸೂಪಾಂಶ್ಚಾಪಿ ಕರಿಷ್ಯಾಮಿ ಕುಶಲೋಽಸ್ಮಿ ಮಹಾನಸೇ ॥12॥
ಅನೇಕ ವಿಧವಾದ ರುಚಿಕರವಾದ ಮಧುರವಾದ ರಸಗಳನ್ನು ಮತ್ತು ಸೂಪಗಳನ್ನು ಮಾಡುವೆನು. ನಾನು ಅಡಿಗೆಯ ಮನೆ ಕೆಲಸದಲ್ಲಿ ನಿಪುಣನಾಗಿದ್ದೇನೆ.
ಪೂರ್ವಮಪ್ರಾಶಿತಾಂಸ್ತೇನ ಕರ್ತಾಸ್ಮಿ ಸುಗುಣಾನ್ವಿತಾನ್ |
ಸ್ವಾದು ವ್ಯಂಜನಮಾಸ್ವಾದ್ಯ ಮನ್ಯೇ ಪ್ರೀತೋ ಭವಿಷ್ಯತಿ ॥13॥
ಅವನು ಹಿಂದೆ ಎಂದೂ ಸೇವಿಸದಂತಹ ರುಚಿಕರವಾದ ಗುಣಾನ್ವಿತವಾದ ವ್ಯಂಜನಗಳನ್ನು ಮಾಡುವವನಾಗುತ್ತೇನೆ. ಅವುಗಳ ಸವಿಯನ್ನು ನೋಡಿ ವಿರಾಟನು ಸಂತೋಷಗೊಳ್ಳುವನು ಎಂದು ಭಾವಿಸುತ್ತೇನೆ.
ಆಹರಿಷ್ಯಾಮಿ ದಾರೂಣಾಂ ಪಾಟಿತಾನಾಂ ಶತಂ ಶತಮ್ |
ರಾಜಾ ಕರ್ಮಾಣಿ ಮೇ ದೃಷ್ಟ್ವಾ ನ ಮಾಂ ಪರಿಭವಿಷ್ಯತಿ ॥14॥
ಒಡೆದ ಸೌದೆಗಳ ನೂರು ನೂರರ ಕಟ್ಟನ್ನು ಹೊತ್ತು ತರುವೆನು. ನನ್ನ ಕಾರ್ಯವನ್ನು ನೋಡುವ ರಾಜನು ನನ್ನನ್ನು ಅವಮಾನಗೊಳಿಸುವುದಿಲ್ಲ.
ಯೇ ಚ ತಸ್ಯ ಮಹಾಮಲ್ಲಾಃ ಸಮರೇಷ್ವಪರಾಜಿತಾಃ |
ಕೃತಪ್ರತಾಪಾ ಬಹುಶೋ ರಾಜ್ಞಃ ಪ್ರತ್ಯಾಯಿಕಾ ಬಲೇ ॥15॥
ರಾಜೋಪಜೀವಿನಃ ಸರ್ವೇ ಪರೇಷಾಂ ಚ ಭಯಾವಹಾಃ |

ಸರ್ವಾಂಸ್ತಾನ್ ನಿಹನಿಷ್ಯಾಮಿ ರತಿಂ ರಾಜ್ಞಃ ಪ್ರವರ್ಧಯನ್ ॥16॥
ಮಲ್ಲಯುದ್ಧದಲ್ಲಿ ಅಪರಾಜಿತರಾದ, ಅನೇಕ ಬಾರಿ ತಮ್ಮ ಪ್ರತಾಪವನ್ನು ತೋರಿಸಿರುವ, ರಾಜನಿಗೆ ಪ್ರೀತಿಪಾತ್ರರಾದ ಉಳಿದ ಮಲ್ಲರಿಗೆ ಭಯವನ್ನು ಉಂಟುಮಾಡುವ ಎಲ್ಲಾ ಮಹಾಮಲ್ಲರನ್ನೂ ಉರುಳಿಸಿ ರಾಜನಿಗೆ ಸಂತೋಷವನ್ನು ಉಂಟುಮಾಡುತ್ತೇನೆ.
ನ ಚ ತಾನ್ ಯುಧ್ಯಮಾನೋಽಹಂ ನಯಿಷ್ಯೇ ಯಮಸಾದನಮ್ |
ತಥಾ ತಾನ್ ನಿಹನಿಷ್ಯಾಮಿ ಜೀವಿಷ್ಯಂತಿ ಯಥಾಽಽತುರಾಃ ॥17॥
ಹಾಗೆ ಮಲ್ಲಯುದ್ಧವನ್ನು ಮಾಡುತ್ತಾ ನಾನು ಅವರನ್ನು ಯಮಲೋಕಕ್ಕೆ ಕಳುಹಿಸುವುದಿಲ್ಲ. ಅವರು ದುರ್ಬಲರಾಗಿ ಬದುಕಿರುವ ಹಾಗೆ ಮಾಡುವೆನು.
ವೃಷೋ ವಾ ಮಹಿಷೋ ವಾಽಪಿ ನಾಗೋ ವಾ ಷಷ್ಟಿಹಾಯನಃ |
ಸಿಂಹೋ ವ್ಯಾಘ್ರೋ ಯದಾ ಚಾನ್ಯೋ ಗೃಹೀತವ್ಯೋ ಭವಿಷ್ಯತಿ ॥18॥
ತಾನ್ ಸರ್ವಾನ್ ದುರ್ಗ್ರಹಾನನ್ಯೈರಾಶೀವಿಷವಿಷೋಪಮಾನ್ |
ಬಲಾದಹಂ ಗೃಹೀಷ್ಯಾಮಿ ಮತ್ಸ್ಯರಾಜಸ್ಯ ಪಶ್ಯತಃ ॥19॥
ಗೂಳಿಯಾಗಲಿ ಅಥವಾ ಕೋಣವಾಗಲಿ ಅಥವಾ ಅರವತ್ತು ವರ್ಷ ವಯಸ್ಸಿನ ಆನೆಯಾಗಲಿ, ಸಿಂಹವಾಗಲಿ ಅಥವಾ ವ್ಯಾಘ್ರವಾಗಲಿ ಅಥವಾ ಬೇರೆ ಯಾವುದೇ ಪ್ರಾಣಿಯಾಗಲಿ ಹಿಡಿಯಬೇಕಾಗಿ ಬಂದಾಗ ವಿಷಸರ್ಪದಂತೆ ಹಿಡಿಯಲು ಅಸಾಧ್ಯವಾದ ಅವೆಲ್ಲವನ್ನೂ ಮತ್ಸ್ಯರಾಜನ ಕಣ್ಣೆದುರಿಗೆ ನಾನು ನನ್ನ ಬಲದಿಂದ ಹಿಡಿಯುವೆನು.
ಆರಾಳಿಕಾ ವಾ ಸೂದಾ ವಾ ಯೇಽಸ್ಯ ಯುಕ್ತಾ ಮಹಾನಸೇ |
ತಾನಹಂ ಪ್ರೀಣಯಿಷ್ಯಾಮಿ ಮಾನುಷಾನ್ ಸ್ವೇನ ಕರ್ಮಣಾ ॥20॥
ಅವನ ಅಡುಗೆಯ ಮನೆಯಲ್ಲಿರುವ ಅನ್ನವನ್ನು ಮಾಡುವವರೂ, ಕ್ಷೀರಾದಿ ಪಾಕವನ್ನು ಮಾಡುವವರೂ, ಸೂಪಾದಿಗಳನ್ನು ಮಾಡುವವರೂ ಆದ ಮನುಷ್ಯರನ್ನು ನನ್ನ ಕಾರ್ಯದಿಂದ ಸಂತೋಷಪಡಿಸುವೆನು.
ಆರಾಳಿಕೋ ಗೋವಿಕರ್ತಾ ಸೂಪಕರ್ತಾ ನಿಯೋಧಕಃ |
ಆಸಂ ಯುಧಿಷ್ಠಿರಸ್ಯಾಹಮಿತಿ ವಕ್ಷ್ಯಾಮಿ ಮಾನುಷಾನ್ ॥21॥
ನಾನು ಹಿಂದೆ ಯುಧಿಷ್ಠಿರನ ಮನೆಯಲ್ಲಿ ಅನ್ನಕರ್ತನೂ, ಸೂಪಕರ್ತನೂ, ಕ್ಷೀರಾದಿ ಪಾಕಕರ್ತನೂ ಮತ್ತು ಕುಸ್ತಿಯನ್ನು ಮಾಡುವವನೂ ಆಗಿದ್ದೆನು ಎಂದು ಆ ಮನುಷ್ಯರಿಗೆ ಹೇಳುವೆನು.
ಇತ್ಯೇವಂ ಮತ್ಪ್ರತಿಜ್ಞಾತಂ ವಿಹರಿಷ್ಯಾಮ್ಯಹಂ ಯಥಾ |
ವಿರಾಟನಗರೇ ಚ್ಛನ್ನೋ ಮತ್ಸ್ಯರಾಜಸಮೀಪತಃ ॥22॥
ಇದು ವಿರಾಟನಗರದಲ್ಲಿ ಮತ್ಸ್ಯರಾಜ್ಯದ ಸಮೀಪದಲ್ಲಿ ಛನ್ನವೇಷವನ್ನು ಧರಿಸಿ ನಾನು ಹೇಗೆ ಇರುತ್ತೇನೆ ಎಂಬ ವಿಷಯದಲ್ಲಿ ನನ್ನ ಅಭಿಪ್ರಾಯ.
ಯುಧಿಷ್ಠಿರಃ
ಅಗ್ನಿರ್ಬ್ರಾಹ್ಮಣರೂಪೇಣ ಪ್ರಚ್ಛನ್ನೋ ಯಮಯಾಚತ |
ಮಹಾಶನಂ ಬ್ರಾಹ್ಮಣಂ ಮಾಂ ಪ್ರಮುಂಚಾರ್ಜುನ ಖಾಂಡವೇ ॥23॥
ಸಂಶುಶ್ರುವೇ ಚ ಧರ್ಮಾತ್ಮಾ ಯಸ್ತಮರ್ಥಂ ಚಕಾರ ಹ |
ತಸ್ಮೈ ಬ್ರಾಹ್ಮಣರೂಪಾಯ ಹುತಾಶಾಯ ಮಹಾಯಶಾಃ ॥24॥
ಯುಧಿಷ್ಠಿರ ಅಗ್ನಿಯು ಬ್ರಾಹ್ಮಣರೂಪವನ್ನು ಧರಿಸಿ ಪ್ರಚ್ಛನ್ನನಾಗಿ ಯಾವ ಅರ್ಜುನನನ್ನು, ಖಾಂಡವವನದಲ್ಲಿ ನಾನು ಬಹಳ ಊಟವನ್ನು ಮಾಡುವ ಬ್ರಾಹ್ಮಣನಾಗಿದ್ದೇನೆ. ನನ್ನನ್ನು ಖಾಂಡವವನದಲ್ಲಿ ಬಿಟ್ಟುಬಿಡು ಎಂದು ಬೇಡಿದಾಗ, ಯಾವ ಧರ್ಮಾತ್ಮನಾದ ಅರ್ಜುನನು ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ, ಆ ಬ್ರಾಹ್ಮಣರೂಪನಾದ ಅಗ್ನಿಗೆ ಮಹಾಯಶಸ್ವಿಯಾದ ಅರ್ಜುನನು ಆ ಕಾರ್ಯವನ್ನು ನೆರವೇರಿಸಿದನೋ,
ಯಶ್ಚ ದೇವಾನ್ ಮನುಷ್ಯಾಂಶ್ಚ ಸರ್ವಾಂಶ್ಚೈಕರಥೋಽಜಯತ್ |
ಸ ಭೀಮಧನ್ವಾ ಶ್ವೇತಾಶ್ವಃ ಪಾಂಡವಃ ಕಿಂ ಕರಿಷ್ಯತಿ ॥25॥
ಯಾವನು ದೇವತೆಗಳನ್ನೂ ಮತ್ತು ಮನುಷ್ಯರೆಲ್ಲರನ್ನೂ ಒಂದೇ ರಥದಲ್ಲಿ ಯುದ್ಧಮಾಡಿ ಜಯಿಸಿದನೋ ಅಂತಹ ಭಯಂಕರ ಧನುಸ್ಸುಳ್ಳವನೂ, ಶ್ವೇತಾಶ್ವನೂ, ಪಾಂಡುಪುತ್ರನೂ ಆದ ಅರ್ಜುನನು ಏನು ಮಾಡುವನು?
ಆಶೀವಿಷಸಮಸ್ಪರ್ಶೋ ನಾಗಾನಾಮಿವ ವಾಸುಕಿಃ |
ಅಹೀನಾಂ ದೃಷ್ಟಿವಿಷವದ್ ಅಗ್ನಿಸ್ತೇಜಸ್ವಿನಾಮಿವ ॥26॥
ಸಮುದ್ರ ಇವ ಸಿಂಧೂನಾಂ ಶೈಲಾನಾಂ ಹಿಮವಾನಿವ |
ಮಹೇಂದ್ರ ಇವ ದೇವಾನಾಂ ದಾನವಾನಾಂ ಬಲಿರ್ಯಥಾ ॥27॥
ಸರ್ಪಗಳಲ್ಲಿ ವಾಸುಕಿ ಇದ್ದಂತೆ, ಅಹಿಗಳಲ್ಲಿ ದೃಷ್ಟಿ ವಿಷವುಳ್ಳ ಅಹಿಯಂತೆ, ತೇಜಸ್ವಿಗಳಲ್ಲಿ ಅಗ್ನಿಯಂತೆ ಇರುವವನೂ, ಸರೋವರಗಳಲ್ಲಿ ಸಮುದ್ರದಂತೆ ಇರುವವನೂ, ಪರ್ವತಗಳಲ್ಲಿ ಹಿಮಾಲಯದಂತೆಯೂ, ದೇವತೆಗಳಲ್ಲಿ ಮಹೇಂದ್ರನಂತೆಯೂ, ದಾನವರಲ್ಲಿ ಬಲಿಯಂತೆಯೂ ಇರುವವನೂ,
ಸುಪ್ರತೀಕೋ ಗಜಾನಾಂ ಚ ಯುಗ್ಯಾನಾಂ ತುರಗೋ ಯಥಾ |
ಕುಬೇರ ಇವ ಯಕ್ಷಾಣಾಂ ಮೃಗಾಣಾಂ ಕೇಸರೀ ಯಥಾ ॥28॥
ರಾಕ್ಷಸಾನಾಂ ದಶಗ್ರೀವೋ ದೈತ್ಯಾನಾಮಿವ ಶಂಬರಃ |
ರುದ್ರಾಣಾಮಿವ ಕಾಪಾಲೀ ವಿಷ್ಣುರ್ಬಲವತಾಮಿವ ॥29॥

ಗಜಗಳಲ್ಲಿ ಸುಪ್ರತೀಕದಂತೆಯೂ, ನೊಗಕ್ಕೆ ಹೂಡುವ ಪ್ರಾಣಿಗಳಲ್ಲಿ ಅಶ್ವದಂತೆಯೂ, ಯಕ್ಷರಲ್ಲಿ ಕುಬೇರನಂತೆಯೂ, ಮೃಗಗಳಲ್ಲಿ ಸಿಂಹದಂತೆಯೂ, ರಾಕ್ಷಸರಲ್ಲಿ ರಾವಣನಂತೆಯೂ, ದೈತ್ಯರಲ್ಲಿ ಶಂಬರನಂತೆಯೂ, ರುದ್ರರಲ್ಲಿ ಕಪಾಲಿಯಂತೆಯೂ, ಬಲಿಷ್ಠರಲ್ಲಿ ವಿಷ್ಣುವಿನಂತೆಯೂ ಇರುವವನೂ,

ರೋಷಾಮರ್ಷಸಮಾಯುಕ್ತೋ ಭುಜಂಗಾನಾಂ ಚ ತಕ್ಷಕಃ |
ವಾಯುವೇಗಬಲೋದ್ಧೂತೋ ಗರುಡಃ ಪತತಾಮಿವ ॥30॥
ತಪತಾಮಿವ ಚಾದಿತ್ಯಃ ಪ್ರಜಾನಾಂ ಬ್ರಾಹ್ಮಣೋ ಯಥಾ |
ಹ್ರದಾನಾಮಿವ ಪಾತಾಳಂ ಪರ್ಜನ್ಯೋ ನದತಾಮಿವ ॥31॥

ರೋಷಾಮರ್ಷಯುಕ್ತನಾಗಿ ಭುಜಂಗಗಳಲ್ಲಿ ತಕ್ಷಕನಂತೆಯೂ, ವಾಯುವೇಗ ಮತ್ತು ಬಲಗಳನ್ನು ಹೊಂದಿದವನಾಗಿ ಪಕ್ಷಿಗಳಲ್ಲಿ ಗರುಡನಂತೆಯೂ, ಪ್ರಕಾಶಿಸುವವರಲ್ಲಿ ಸೂರ್ಯನಂತೆಯೂ, ಪ್ರಜೆಗಳಲ್ಲಿ ಬ್ರಾಹ್ಮಣನಂತೆಯೂ, ನಿಮ್ನ ಪ್ರದೇಶಗಳಲ್ಲಿ ಪಾತಾಳದಂತೆಯೂ, ಗುಡುಗುವುದರಲ್ಲಿ ಪರ್ಜನ್ಯನಂತೆಯೂ ಇರುವವನೂ (ಆದ ಅರ್ಜುನನು),

ಆಯುಧಾನಾಂ ವರೋ ವಜ್ರಃ ಕಕುದ್ಮಾಂಶ್ಚ ಗವಾಂ ವರಃ |
ಧೃತರಾಷ್ಟ್ರಶ್ಚ ನಾಗಾನಾಂ ಹಸ್ತಿಷ್ವೈರಾವತೋ ವರಃ ॥32॥
ಪುತ್ರಃ ಪ್ರಿಯಾಣಾಮಧಿಕೋ ಭಾರ್ಯಾ ಚ ಸುಹೃದಾಂ ವರಾ |
ಗಿರೀಣಾಂ ಪ್ರವರೋ ಮೇರುರ್ದೇವಾನಾಂ ಮಧುಸೂದನಃ ॥33॥
ಗ್ರಹಾಣಾಂ ಪ್ರವರಶ್ಚಂದ್ರಃ ಸರಸಾಂ ಮಾನಸಂ ವರಮ್ ॥34॥

ಆಯುಧಗಳಲ್ಲಿ ವಜ್ರವು ಶ್ರೇಷ್ಠವಾದುದು, ಗೋವುಗಳಲ್ಲಿ ಗೂಳಿಯು ಶ್ರೇಷ್ಠವಾದುದು, ನಾಗಗಳಲ್ಲಿ ಧೃತರಾಷ್ಟ್ರನು ಶ್ರೇಷ್ಠನಾದವನು, ಗಜಗಳಲ್ಲಿ ಐರಾವತವು ಶ್ರೇಷ್ಠವಾದುದು, ಪ್ರಿಯರಲ್ಲಿ ಪುತ್ರನು ಶ್ರೇಷ್ಠನಾದವನು, ಸ್ನೇಹಿತರಲ್ಲಿ ಪತ್ನಿಯು ಶ್ರೇಷ್ಠಳಾದವಳು, ಪರ್ವತಗಳಲ್ಲಿ ಮೇರುವು ಶ್ರೇಷ್ಠವಾದುದು, ದೇವತೆಗಳಲ್ಲಿ ಮಧುಸೂದನನು ಶ್ರೇಷ್ಠನಾದವನು, ಗ್ರಹಗಳಲ್ಲಿ ಚಂದ್ರನು ಶ್ರೇಷ್ಠನಾದವನು, ಸರೋವರಗಳಲ್ಲಿ ಮಾನಸ ಸರೋವರವು ಶ್ರೇಷ್ಠವಾದುದು.

ಯಥೈತಾನಿ ವಿಶಿಷ್ಟಾನಿ ಸ್ವಸ್ವಜಾತ್ಯಾಂ ವೃಕೋದರ |
ಏವಂ ಯುವಾಂ ಗುಡಾಕೇಶಃ ಶ್ರೇಷ್ಠಃ ಸರ್ವಧನುಷ್ಮತಾಮ್ ॥35॥
ಸೋಽಯಮಿಂದ್ರಾದನವಮೋ ವಾಸುದೇವಾಚ್ಚ ಭಾರತ ॥36॥

ಎಲೈ ವೃಕೋದರನೇ, ಹೇಗೆ ಇವು ತಮ್ಮ ತಮ್ಮ ಜಾತಿಗಳಲ್ಲಿ ಶ್ರೇಷ್ಠವಾಗಿವೆಯೋ ಹಾಗೆ ಯುವಕನಾದ ಗುಡಾಕೇಶನು ಎಲ್ಲ ಧನುರ್ಧಾರಿಗಳಲ್ಲಿ ಶ್ರೇಷ್ಠನಾದವನು. ಎಲೈ ಭಾರತನೇ, ಅವನು ಇಂದ್ರನಿಗೂ ಮತ್ತು ವಾಸುದೇವನಿಗೂ ಕಡಿಮೆಯಾದವನಲ್ಲ.

ಉಷಿತ್ವಾ ಪಂಚ ವರ್ಷಾಣಿ ಸಹಸ್ರಾಕ್ಷಸ್ಯ ವೇಶ್ಮನಿ |
ಬ್ರಹ್ಮಚರ್ಯವ್ರತೇ ಯುಕ್ತಃ ಸರ್ವಶಸ್ತ್ರಭೃತಾಂ ವರಃ ॥37॥

ಅವನು ಐದುವರ್ಷಗಳ ಕಾಲ ಇಂದ್ರನ ಮನೆಯಲ್ಲಿದ್ದು ಬ್ರಹ್ಮಚರ್ಯ ವ್ರತವನ್ನು ಧರಿಸಿ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾಗಿದ್ದಾನೆ.

ಅವಾಪ ಚಾಸ್ತ್ರಮಸ್ತ್ರಜ್ಞಃ ಸರ್ವಂ ಸರ್ವಜ್ಞಸಮ್ಮತಃ |
ಕ್ಷಿಪ್ರಂ ಚಾಣು ಚ ಚಿತ್ರಂ ಚ ಧ್ರುವಂ ಚ ವದತಾಂ ವರಃ ॥38॥
ಅನುಜ್ಞಾತಃ ಸುರೇಂದ್ರೇಣ ಪುನಃ ಪ್ರತ್ಯಾಗತೋ ಮಹೀಮ್ ॥39॥

ಅಸ್ತ್ರಜ್ಞನೂ ಮತ್ತು ಸರ್ವಜ್ಞನೆಂದೂ ಎಲ್ಲರಿಗೂ ಸಮ್ಮತನಾದ ಅವನು ಶೀಘ್ರವಾದ, ಸಣ್ಣದಾದ ಮತ್ತು ದೊಡ್ಡದಾದ ಮತ್ತು ವಿಚಿತ್ರವಾದ ಎಲ್ಲಾ ಅಸ್ತ್ರಗಳನ್ನು ಸಂಪಾದಿಸಿದ್ದಾನೆ. ನಿಶ್ಚಯವಾಗಿ ಅವನು ಮಾತನಾಡುವವರಲ್ಲಿ ಶ್ರೇಷ್ಠನಾಗಿದ್ದಾನೆ. ದೇವೇಂದ್ರನ ಅನುಮತಿಯನ್ನು ಪಡೆದು ಅವನು ಪುನಃ ಭೂಮಿಗೆ ಬಂದಿದ್ದಾನೆ.

ಯಸ್ಯ ದೀರ್ಘೌ ಸಮೌ ಬಾಹೂ ಜ್ಯಾಘಾತಕಠಿನತ್ವಚೌ ॥40॥
ದಕ್ಷಿಣೇ ಚೈವ ಸವ್ಯೇ ಚ ಗವಾಮಿವ ಹವಿಷ್ಕೃತೌ |
ತಲಾಂಗುಲಿತ್ರಾಭ್ಯುಚಿತೌ ನಾಗರಾಜಕರೋಪಮೌ ॥41॥

ಅವನ ಎರಡು ಬಾಹುಗಳು ಸಮವಾಗಿ, ದೀರ್ಘವಾಗಿ ಇದ್ದು ಎದೆಯ ಉಜ್ಜುವಿಕೆಯಿಂದ ಕಠಿಣವಾಗಿವೆ. ಬಲ ಮತ್ತು ಎಡ ಬಾಹುಗಳು ಬಾಣಗಳಿಗೆ ಶತ್ರುರೂಪವಾದ ಹವಿಸ್ಸನ್ನು ಕೊಡುವಂತಹವುಗಳಾಗಿವೆ. ಆನೆಯ ಸೊಂಡಿಲಿನಂತಿರುವ ಕೈಗಳು ಒಳ್ಳೆಯ ಹಸ್ತರಕ್ಷೆಗಳಿಗೆ (ಗ್ಲೌಸ್) ಉಚಿತವಾಗಿವೆ.

ಶ್ಯಾಮೋ ಯುವಾ ಗುಡಾಕೇಶೋ ದರ್ಶನೀಯಶ್ಚ ಪಾಂಡವಃ |
ಗಾಂಡೀವಧನ್ವಾ ಶ್ವೇತಾಶ್ವಃ ಕಿರೀಟೀ ವಾನರಧ್ವಜಃ ॥42॥

ಶ್ಯಾಮವರ್ಣನೂ, ಯುವಕನೂ, ನಿದ್ದೆಯನ್ನು ಗೆದ್ದವನೂ, ಸುಂದರನೂ, ಗಾಂಡೀವ ಧನುಸ್ಸುಳ್ಳವನೂ, ಶ್ವೇತಾಶ್ವನೂ, ವಾನರಧ್ವಜವುಳ್ಳವನೂ, ಪಾಂಡುಪುತ್ರನೂ ಆದ ಅರ್ಜುನನು,

ಕಿಂರೂಪಧಾರೀ ಕಿಂಕರ್ಮಾ ಕಿಂಚೇಷ್ಟಃ ಕಿಂಪರಾಯಣಃ |
ಬೀಭತ್ಸುರ್ಭೀಮಧನ್ವಾ ಚ ಕಿಂ ಕರಿಷ್ಯತಿ ಚಾರ್ಜುನಃ ॥43॥
ಕುಂತೀಪುತ್ರೋ ವಿರಾಟಸ್ಯ ರಮತೇ ಕೇನ ಕರ್ಮಣಾ ॥44॥

ಎಂತಹ ರೂಪವನ್ನು ಧರಿಸುತ್ತಾನೆ? ಎಂತಹ ಕರ್ಮವನ್ನು ಮಾಡುತ್ತಾನೆ?ಎಂತಹ ನಡವಳಿಕೆಯನ್ನು ತೋರಿಸುತ್ತಾನೆ? ಏನನ್ನು ಅವಲಂಬಿಸುತ್ತಾನೆ? ಕುಂತೀಪುತ್ರನೂ, ಭಯಂಕರ ಧನುಸ್ಸುಳ್ಳವನೂ, ಬೀಭತ್ಸುವೂ ಆದ ಅರ್ಜುನನು ವಿರಾಟನ ಸಮೀಪದಲ್ಲಿ ಯಾವ ಕರ್ಮವನ್ನು ಮಾಡಿ ವಿಹರಿಸುತ್ತಾನೆ?

ಅರ್ಜುನಃ

ಇವೌ ಕಿಣಕೃತೌ ಬಾಹೂ ಜ್ಯಾಘಾತಕಠಿನತ್ವಚೌ |
ನಿತ್ಯಂ ಕಂಚುಕಸಂಛನ್ನೌ ನಾನ್ಯಥಾ ಗೋಪ್ತುಮುತ್ಸಹೇ ॥45॥
ಅರ್ಜುನ ಈ ನನ್ನ ಎರಡು ಬಾಹುಗಳು ಜ್ಯಾಘಾತದಿಂದ ಜಡ್ಡು ಕಟ್ಟಿವೆ. ಇದನ್ನು ನಾನು ಯಾವಾಗಲೂ ಕಂಚುಕದಿಂದ ಮುಚ್ಚಿಕೊಳ್ಳಬೇಕು. ಬೇರೆಯ ರೀತಿಯಲ್ಲಿ ಅವುಗಳನ್ನು ಮರೆಮಾಡಲು ಸಾಧ್ಯವಿಲ್ಲ.
ಕಿಂತು ಕಾರ್ಯವಶಾದೇತದಾಚರಿಷ್ಯಾಮಿ ಕುತ್ಸಿತಮ್ |
ಆಖ್ಯಾತಃ ಷಂಡಕೋಽಸ್ಮೀತಿ ಪ್ರತಿಜ್ಞಾತಂ ಹಿ ಪಾಪಕಮ್ ॥46॥
ಆದರೆ ಕಾರ್ಯವಶದಿಂದ ಇಂತಹ ಒಂದು ಹೀನ ಕೆಲಸವನ್ನು ಮಾಡುವೆನು. ನಾನು ಷಂಡನಾದವನು ಎಂದು ಹೇಳಿಕೊಂಡು ಇಂತಹ ಹೀನ ಕೆಲಸವನ್ನು ಮಾಡುತ್ತೇನೆ.
ಬಾಹೂ ಮೇ ಭರತಶ್ರೇಷ್ಠ ಮಹಾವ್ಯಂಜನಲಕ್ಷಿತೌ |
ಜ್ಯಾಘಾತೌ ಚ ಮಹಾಂತೌ ಮೇ ಸಂವರ್ತುಂ ನೃಪ ದುಷ್ಕರೌ ॥47॥
ಎಲ್ಲೈ ರಾಜನೇ, ಭರತಶ್ರೇಷ್ಠನೇ, ನನ್ನ ಎರಡು ದೀರ್ಘ ಬಾಹುಗಳು ಒಳ್ಳೆಯ ಲಕ್ಷಣಗಳಿಂದ ಕೂಡಿ ಹೆದೆಯ ಸ್ಪರ್ಶದಿಂದ ಜಡ್ಡುಕಟ್ಟಿವೆ. ಅವುಗಳನ್ನು ಮುಚ್ಚಿಕೊಳ್ಳಲು ಬಹಳ ಕಷ್ಟವಾಗುತ್ತದೆ.
ಉಭೌ ಕಂಚುಕಸಂಛನ್ನೌ ಲಂಬಿನೌ ಜಾನುದೇಶತಃ |
ವಲಯ್ಯೈಃ ಛಾದಯಿಷ್ಯಾಮಿ ಬಾಹೂ ಕಿಣಕೃತಾವುಭೌ ॥48॥
ಜಡ್ಡುಕಟ್ಟಿದ ಈ ಎರಡು ಬಾಹುಗಳನ್ನು ಮಂಡಿಯವರೆಗೂ ಇಳಿಬಿದ್ದಿರುವ ಕಂಚುಕದಿಂದ ಮುಚ್ಚಿ ಬಳೆಗಳಿಂದಲೂ ಆಚ್ಛಾದಿಸುವೆನು.
ಉಭೌ ಕಂಬೂ ಸಮಾಯುಜ್ಯ ಕುಂಡಲೇ ಪರಿಪಾತುಕೇ |
ವೇಣೀಕೃತಶಿರಾ ಭೂತ್ವಾ ಭವಿಷ್ಯಾಮಿ ಬೃಹನ್ನಳಾ ॥49॥
ಎರಡು ಕೈಗಳಲ್ಲಿಯೂ ಶಂಖಗಳಿಂದ ಮಾಡಿದ ಬಳೆಗಳನ್ನು ಧರಿಸಿ, ಕಿವಿಗಳಿಗೆ ಕುಂಡಲಗಳನ್ನು ಹಾಕಿಕೊಂಡು, ತಲೆ ಕೂದಲುಗಳನ್ನು ದೀರ್ಘವಾಗಿ ಮಾಡಿಕೊಂಡು ನಾನು ಬೃಹನ್ನಳೆಯಾಗುವೆನು.
ಪಠನ್ನಾಖ್ಯಾಯಿಕಾಂ ನಾಮ ಸ್ತ್ರೀಭಾವೇನ ಪುನಃ ಪುನಃ |
ಪ್ರಜಾನಾಂ ಸಮುದಾಚಾರಂ ಬಹು ನರ್ಮಕೃತಂ ವದನ್ ॥50॥
ರಮಯಿಷ್ಯಾಮಿ ರಾಜಾನಮನ್ಯಂ ಚಾಂತಃಪುರೇ ಜನಮ್ ॥51॥
ನಾನು ಸ್ತ್ರೀಸ್ವಭಾವಕ್ಕೆ ಅನುಗುಣವಾಗಿ ಅನೇಕ ಕಥೆಗಳನ್ನು ಮತ್ತೆ ಮತ್ತೆ ಹೇಳುತ್ತಾ, ಪ್ರಜೆಗಳ ಆಚರಣೆಗಳನ್ನು ಬಹಳ ವಿನೋದವುಂಟಾಗುವಂತೆ ಹೇಳುತ್ತಾ ರಾಜನನ್ನು ಮತ್ತು ಉಳಿದ ಅಂತಃಪುರದ ಜನರನ್ನು ಸಂತೋಷಪಡಿಸುವೆನು.
ನೃತ್ತಂ ಗೀತಂ ಚ ವಾದಿತ್ರಂ ದಿವ್ಯಂ ಚ ವಿವಿಧಂ ತಥಾ |
ಶಿಕ್ಷಯಿಷ್ಯಾಮ್ಯಹಂ ರಾಜನ್ ವಿರಾಟನಗರೇ ಸ್ತ್ರಿಯಃ ॥52॥
ಎಲೈ ರಾಜನೇ, ನಾನು ವಿರಾಟನಗರದಲ್ಲಿ ಸ್ತ್ರೀಯರಿಗೆ ನೃತ್ಯವನ್ನೂ, ಗೀತವನ್ನೂ ಮತ್ತು ದಿವ್ಯವಾದ ವಿವಿಧವಾದ ವಾದ್ಯಗಳನ್ನೂ ಕಲಿಸುವೆನು.
ಸ್ತ್ರೀಭಾವಸಮುದಾಚಾರಾನ್ ನೃತ್ತಗೀತಕಥಾಶ್ರಯೈಃ |
ಛಾದಯಿಷ್ಯಾಮಿ ರಾಜೇಂದ್ರ ಮಾಯಯಾಽಽತ್ಮಾನಮಾತ್ಮನಾ ॥53॥
ಎಲೈ ರಾಜೇಂದ್ರನೇ, ನಾನು ನೃತ್ಯ, ಗೀತ ಮತ್ತು ಕಥೆಗಳಿಂದ ಸ್ತ್ರೀಯರ ಸ್ವಭಾವ ಮತ್ತು ಆಚಾರಗಳನ್ನು ಬಿಂಬಿಸುತ್ತಾ, ನನ್ನ ಸಾಮರ್ಥ್ಯದಿಂದ ನನ್ನನ್ನು ನಾನೇ ಆಚ್ಛಾದನೆ ಮಾಡಿಕೊಳ್ಳುವೆನು.
ಯುಧಿಷ್ಠಿರಸ್ಯ ಗೇಹೇಽಸ್ಮಿನ್ ದ್ರೌಪದೀಪರಿಚಾರಿಕಾ |
ಉಷಿತಾಽಸ್ಮೀತಿ ವಕ್ಷ್ಯಾಮಿ ಧರ್ಮರಾಜಸ್ಯ ಸಮ್ಮತಾ ॥54॥
ನಾನು ಧರ್ಮರಾಜನ ಮನೆಯಲ್ಲಿ ಧರ್ಮರಾಜನಿಗೆ ಸಮ್ಮತಳಾದ ದ್ರೌಪದಿಯ ಪರಿಚಾರಿಕೆಯಾಗಿ ವಾಸಮಾಡುತ್ತಿದ್ದೆನೆಂದು ಹೇಳುವೆನು.
ಉರ್ವಶ್ಯಾ ಅಪಿ ಶಾಪೇನ ಪ್ರಾಪ್ತೋಽಸ್ಮಿ ನೃಪ ಷಂಡತಾಮ್ |
ಶಕ್ರಪ್ರಸಾದಾನ್ಮುಕ್ತೋಽಹಂ ವರ್ಷಾಣಾಂ ತತ್‌ತ್ರಯೋದಶಮ್ ॥55॥
ಏತೇನ ವಿಧಿನಾ ಛನ್ನಃ ಕೃತಕೇನ ಯಥಾಬಲಮ್ |
ವಿಹರಿಷ್ಯಾಮಿ ರಾಜೇಂದ್ರ ವಿರಾಟನಗರೇ ಸುಖಮ್ ॥56॥
ಎಲೈ ರಾಜನೇ, ಊರ್ವಶಿಯ ಶಾಪದಿಂದ ನಾನು ಷಂಡನಾಗಿದ್ದೇನೆ. ಇಂದ್ರನ ಅನುಗ್ರಹದಿಂದ ನಾನು ಶಾಪದಿಂದ ನಿರ್ಮುಕ್ತನಾದೆ. ಆದ್ದರಿಂದ ಎಲೈ ರಾಜೇಂದ್ರನೇ, ಈ ಹದಿಮೂರನೆಯ ವರ್ಷವನ್ನು ಈ ರೀತಿಯಾಗಿ ಒಂದು ಕೃತಕವೇಷವನ್ನು ಧರಿಸಿ ವಿರಾಟನಗರದಲ್ಲಿ ನನ್ನ ಶಕ್ತಿ ಇದ್ದಷ್ಟು ಸುಖವಾಗಿ ವಿಹರಿಸುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತೃತೀಯೋಽಧ್ಯಾಯಃ ॥
॥ ವೈರಾಟಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *

## ನಾಲ್ಕನೆಯ ಅಧ್ಯಾಯ

ನಕುಲ ಸಹದೇವರಿಂದ ಅಶ್ವಪಾಲ ಮತ್ತು ಗೋಪಾಲವೇಷಗಳ ಧಾರಣಕಥನ ಮತ್ತು ದ್ರೌಪದಿಯಿಂದ ಸೈರಂಧ್ರೀವೇಷಗ್ರಹಣಕಥನ.
ಯುಧಿಷ್ಠಿರಃ
ಕಿಂಕರ್ತಾ ಕಿಂಸಮಾಚಾರೋ ನಕುಲೋಽಯಂ ಭವಿಷ್ಯತಿ |
ಸುಕುಮಾರಶ್ಚ ಶೂರಶ್ಚ ದರ್ಶನೀಯಃ ಸುಖೈಧಿತಃ ||1||
ಅದುಃಖಾರ್ಹಶ್ಚ ಬಾಲಶ್ಚ ಲಾಲಿತಶ್ಚಾಪಿ ನಿತ್ಯಶಃ |
ಸೋಽಯಮಾರ್ತಶ್ಚ ಶಾಂತಶ್ಚ ಕಿಂ ನು ರೋಚಯಿತಾ ತ್ವಿಹ ||2||
ಯುಧಿಷ್ಠಿರ ಸುಕುಮಾರನೂ, ಶೂರನೂ, ಸುಂದರನೂ, ಸುಖವಾಗಿ ಬೆಳೆದ ಈ ನಕುಲನು ಯಾವ ಕಾರ್ಯವನ್ನು ಮತ್ತು ಯಾವ ಆಚಾರವನ್ನು ಮಾಡುವನು? ಅವನು ಚಿಕ್ಕವನೂ, ದುಃಖಕ್ಕೆ ಯೋಗ್ಯನಲ್ಲದವನೂ, ನಿತ್ಯವೂ ಪ್ರೀತಿಯಿಂದ ಲಾಲಿತನೂ ಆದವನು. ಅಂತಹ ಅವನು ಈಗ ಆರ್ತನೂ, ಶಾಂತನೂ ಆಗಿ ಏನನ್ನು ಮಾಡಲು ಬಯಸುವನು?
ನಕುಲಃ
ಅಶ್ವಾಧ್ಯಕ್ಷೋ ಭವಿಷ್ಯಾಮಿ ವಿರಾಟಸ್ಯೇತಿ ಮೇ ಮತಿಃ |
ದಾಮಗ್ರಂಥೀತಿ ನಾಮ್ನಾಽಹಂ ಕರ್ಮೈತತ್ ಸುಪ್ರಿಯಂ ಮಮ ||3||
ದಾಮಗ್ರಂಥೀ ಪರಿಜ್ಞಾತಾ ಕುಶಲೋ ದಾಮಕರ್ಮಣಿ ||4||
ನಕುಲ ನಾನು ವಿರಾಟನ ಅಶ್ವಾಧ್ಯಕ್ಷನಾಗುವೆನು ಎಂದು ನನ್ನ ಅಭಿಪ್ರಾಯ. ದಾಮಗ್ರಂಥಿ ಎಂಬ ಹೆಸರನ್ನು ಇಟ್ಟುಕೊಂಡು ಎಲ್ಲರಿಂದಲೂ ಹಾಗೆಯೇ ತಿಳಿಯಲ್ಪಟ್ಟವನಾಗಿ ಅಶ್ವಗಳ ಕಾರ್ಯಗಳಲ್ಲಿ ಕುಶಲನಾಗಿರುವೆನು. ಈ ಕಾರ್ಯವು ನನಗೆ ಬಹಳ ಪ್ರಿಯವಾದುದು.
ಕುಶಲೋಸ್ಮ್ಯಶ್ವಶಿಕ್ಷಾಯಾಂ ತಥೈವಾಶ್ವಚಿಕಿತ್ಸಿತೇ |
ಅಶ್ವಾನ್ ಪರಿಭವಿಷ್ಯಂತಿ ವಡವಾ ಜಾತು ನ ಕ್ವಚಿತ್ |
ಪ್ರಿಯಾಶ್ಚ ಸತತಂ ಮೇಽಶ್ವಾಃ ಕುರುರಾಜ ಯಥಾ ತವ ||5||
ನಾನು ಅಶ್ವಶಿಕ್ಷೆಯಲ್ಲಿಯೂ ಮತ್ತು ಅಶ್ವಗಳ ಚಿಕಿತ್ಸೆಯಲ್ಲಿಯೂ ಪರಿಣತನಾದವನು. ಎಲೈ ಕುರುರಾಜನೇ, ನಿನಗೆ ಅಶ್ವಗಳು ಪ್ರಿಯವಾದಂತೆ ನನಗೂ ಅಶ್ವಗಳು ಸತತವಾಗಿ ಪ್ರಿಯವಾದವುಗಳು. ನಾನು ಸಾಕಿದ ಹೆಣ್ಣು ಕುದುರೆಗಳು ಗಂಡು ಕುದುರೆಗಳ ಮೇಲೆ ಎಂದೂ ಆಕ್ರಮಣ ಮಾಡುವುದಿಲ್ಲ.
ನ ಮಾಂ ಪರಿಹರಿಷ್ಯಂತಿ ಕಿಶೋರಾ ವಡವಾಸ್ತಥಾ |
ನ ಧೃಷ್ಟಾಶ್ಚ ಭವಿಷ್ಯಂತಿ ಪೃಷ್ಠೇ ಧುರಿ ಚ ಮದ್ಗತಾಃ ||6||
ಸಣ್ಣ ಕುದುರೆಗಳಾಗಲೀ ಅಥವಾ ಹೆಣ್ಣು ಕುದುರೆಗಳಾಗಲೀ ನನ್ನಿಂದ ದೂರ ಹೋಗುವುದಿಲ್ಲ. ನನ್ನ ವಶದಲ್ಲಿರುವ ಕುದುರೆಗಳು ಸವಾರಿಯಲ್ಲಿಯೂ ಮತ್ತು ನೊಗದಲ್ಲಿಯೂ ದುಷ್ಟಗಳಾಗುವುದಿಲ್ಲ.
ಪ್ರೇಕ್ಷಂತೇ ಯೇ ಚ ಮಾಂ ಕೇಚಿದ್ ವಿರಾಟನಗರೇ ಜನಾಃ |
ತೇಭ್ಯ ಏವಂ ಪ್ರವಕ್ಷ್ಯಾಮಿ ವಿಚರಿಷ್ಯಾಮ್ಯಹಂ ಸುಖಮ್ ||7||
ವಿರಾಟನಗರದಲ್ಲಿ ಯಾವ ಜನರು ನನ್ನನ್ನು ನೋಡುತ್ತಾರೋ ಅವರಿಗೆ ಹೀಗೆ ಹೇಳುತ್ತಾ ಸುಖವಾಗಿ ಸಂಚರಿಸುವೆನು.
ನಕುಲೇನೈವಮುಕ್ತಸ್ತು ಧರ್ಮರಾಜೋಽಬ್ರವೀದ್ ವಚಃ ||8||
ಬೃಹಸ್ಪತಿಸಮೋ ಬುದ್ಧ್ಯಾ ನಯೇ ಚೋಶನಸಾ ಸಮಃ |
ಮಂತ್ರೈರ್ನಾನಾವಿಧೈರ್ನೀತಃ ಪಥ್ಯೈಃ ಸುಪರಿನಿಷ್ಠಿತಃ ||9||
ನಕುಲನಿಂದ ಹೀಗೆ ಹೇಳಲ್ಪಟ್ಟ ಧರ್ಮರಾಜನು ಹೀಗೆ ಮಾತನಾಡಿದನು `ಬುದ್ಧಿಯಲ್ಲಿ ಬೃಹಸ್ಪತಿಗೆ ಸಮನಾದವನೂ, ನೀತಿಯಲ್ಲಿ ಶುಕ್ರನಿಗೆ ಸಮನಾದವನೂ, ನಾನಾ ವಿಧವಾದ ಹಿತವಾದ ಮಂತ್ರಗಳಲ್ಲಿ (ಮಂತ್ರಾಲೋಚನೆಯಲ್ಲಿ) ಪರಿಣತನಾಗಿ ಪಳಗಿದವನೂ,
ಸುಪ್ರಣೀತೈಃ ಸುಮಾರ್ಗಸ್ಥೋ ರಾಜತಂತ್ರಮಪಾಲಯತ್ ||10||
ತಥಾ ಸಜ್ವಲಿತಂ ಕಿಂಚಿದ್ ದದೃಶುಸ್ತದ್ವಿದೋ ಜನಾಃ |
ಸುನೀತಿಮಾಯೀ ಸುಶೂರಶ್ಚ ಸರ್ವಮಂತ್ರವಿಶಾರದಃ ||11||
ಚೆನ್ನಾಗಿ ಪ್ರಯೋಗಿಸಲ್ಪಟ್ಟ ರಾಜತಂತ್ರಗಳನ್ನು ಸನ್ಮಾರ್ಗದಲ್ಲಿದ್ದು ಪಾಲಿಸುವವನೂ, ಎಲ್ಲ ಮಾಯಿಗಳನ್ನೂ ಒಳ್ಳೆಯ ಮಾರ್ಗಕ್ಕೆ ತರುವವನೂ, ಶೂರನೂ, ಸರ್ವಮಂತ್ರ ವಿಶಾರದನೂ, ಜನರ ಕಣ್ಣಿಗೆ ಯಾವಾಗಲೂ ಅಧಿಕನಾಗಿ ಕಾಣುವವನೂ,
ಅಧಿಕಂ ಮಾತುರಸ್ಮಾಕಂ ಕುಂತ್ಯಾಃ ಪ್ರಿಯತರಃ ಸದಾ |
ಸಹದೇವ ಕಥಂ ಕರ್ಮ ತಸ್ಯ ರಾಷ್ಟ್ರೇ ಕರಿಷ್ಯತಿ ||12||
ಕಿಂ ವಾ ತ್ವಂ ತಾತ ಕುರ್ವಾಣಃ ಪ್ರಚ್ಛನ್ನೋ ವಿಚರಿಷ್ಯಸಿ ||13||
ನಮ್ಮ ತಾಯಿಯಾದ ಕುಂತಿಗೆ ಯಾವಾಗಲೂ ಬಹಳವಾಗಿ ಪ್ರಿಯನಾದವನೂ ಆದ ಸಹದೇವನು ವಿರಾಟನ ರಾಷ್ಟ್ರದಲ್ಲಿ ಹೇಗೆ ಕಾರ್ಯವನ್ನು ಮಾಡುವನು? ಪ್ರೀತಿಪಾತ್ರನೇ, ಯಾವ ಕರ್ಮವನ್ನು ಮಾಡಿ ನೀನು ಪ್ರಚ್ಛನ್ನನಾಗಿ ಸಂಚರಿಸುವಿ?'
ಸಹದೇವಃ
ಗೋಸಂಖ್ಯಾತಾ ಭವಿಷ್ಯಾಮಿ ವಿರಾಟಸ್ಯೇತಿ ರೋಚಯೇ ||14||
ಪ್ರತಿಮೋಕ್ತಾ ಚ ದೋಗ್ಧಾ ಚ ಸಂಖ್ಯಾನಕುಶಲೋ ಗವಾಮ್ |
ತಂತ್ರೀಪಾಲೇತಿ ಮೇ ನಾಮ ಸ್ವಯಂ ಪ್ರೋಕ್ತಂ ಭವಿಷ್ಯತಿ ||15||
ಸಹದೇವ ನಾನು ವಿರಾಟನ ಗೋಗಣನೆ ಮಾಡುವವನಾಗಿ ಇರುವೆನು ಎಂದು ನನ್ನ ಅಭಿಪ್ರಾಯ. ಹಸುಗಳನ್ನು ಬಿಡುವವನೂ, ಹಾಲನ್ನು ಕರೆಯುವವನೂ, ಗೋವುಗಳ ಗಣನೆಯನ್ನು ಮಾಡುವವನೂ ಆದ ನನಗೆ ತಂತ್ರೀಪಾಲನೆಂದು ನಾನೇ ಹೆಸರನ್ನು

ಇಟ್ಟುಕೊಳ್ಳುವೆನು.
ಅರೋಗಾ ಬಹುಲಾಃ ಪುಷ್ಟಾಃ ಕ್ಷೀರವತ್ಯೋ ಬಹುಪ್ರಜಾಃ |
ನಿಷ್ಪನ್ನಸತತ್ತ್ವಾಃ ಸುಭೃತಾ ವ್ಯಪೇತಜ್ವರಕಿಲ್ಬಿಷಾಃ ॥16॥
ನಷ್ಟಚೋರಭಯಾ ನಿತ್ಯಂ ವ್ಯಾಧಿವ್ಯಾಘ್ರವಿವರ್ಜಿತಾಃ |
ಗಾವಶ್ಚ ಸುಸುಖಾ ರಾಜನ್ ನಿರುದ್ವಿಗ್ನಾ ನಿರಾಮಯಾಃ ॥17॥
ಭವಿಷ್ಯಂತಿ ಮಯಾ ಗುಪ್ತಾ ವಿರಾಟಪಶವೋ ನೃಪ |
ನಿಪುಣಶ್ಚ ಚರಿಷ್ಯಾಮಿ ಪ್ರೀತಿರತ್ರ ಪರಾ ಹಿ ಮೇ ॥18॥
ನನ್ನಿಂದ ರಕ್ಷಿಸಲ್ಪಟ್ಟ ಗೋವುಗಳು ರೋಗರಹಿತವಾಗಿ ಬಹಳವಾಗಿ, ಪುಷ್ಟವಾಗಿ ಹಾಲನ್ನು ಕೊಡುವವುಗಳಾಗಿ, ಅನೇಕ ಕರುಗಳನ್ನು ಉಳ್ಳವುಗಳಾಗಿ, ಬಲಿಷ್ಠವಾಗಿ ಚೆನ್ನಾಗಿ ಸಾಕಲ್ಪಟ್ಟು ಜ್ವರಾದಿ ರೋಗರಹಿತವಾಗಿರುತ್ತವೆ. ಚೋರಭಯವು ಇರುವುದಿಲ್ಲ. ವ್ಯಾಧಿ ಅಥವಾ ವ್ಯಾಘ್ರಗಳ ಭಯವೂ ಇರುವುದಿಲ್ಲ. ಎಲೈ ರಾಜನೇ, ವಿರಾಟನ ಗೋವುಗಳು ಯಾವ ಆತಂಕವೂ ಇಲ್ಲದೆ ರೋಗವೂ ಇಲ್ಲದೇ ನನ್ನ ಬಳಿಯಲ್ಲಿ ಸುಖವಾಗಿ ಇರುತ್ತವೆ. ಎಲೈ ರಾಜನೇ, ನಾನು ಈ ಕೆಲಸವನ್ನು ನಿಪುಣತೆಯಿಂದ ಮಾಡುವೆನು. ಇದರಲ್ಲಿ ನನಗೆ ಬಹಳ ಸಂತೋಷವಿದೆ.
ಅಹಂ ಹಿ ಭವತೋ ಗೋಷು ಪ್ರಕೃತಃ ಸತತಂ ಪುರಾ |
ತತ್ರ ಮೇ ಕೌಶಲಂ ಸರ್ವಮ್ ಅವಬುದ್ಧಂ ವಿಶಾಂಪತೇ ॥19॥
ಎಲೈ ರಾಜನೇ, ನಾನು ಹಿಂದೆ ಸತತವಾಗಿ ನಿನ್ನ ಗೋವುಗಳನ್ನು ನೋಡಿಕೊಳ್ಳುತ್ತಿದ್ದೆ. ಅದರಲ್ಲಿ ನನಗಿರುವ ಕೌಶಲವು ನಿನಗೆ ತಿಳಿದಿದೆ.
ರಕ್ಷಣಂ ಚರಿತಂ ಚೈವ ಗವಾಂ ಮಂಗಲಲಕ್ಷಣಮ್ |
ತತ್ಸರ್ವಂ ಮೇ ಸುವಿದಿತಮ್ ಅನ್ಯಚ್ಚಾಪಿ ಮಹೀಪತೇ ॥20॥
ವೃಷಭಾನಪಿ ಜಾನಾಮಿ ರಾಜನ್ ಪೂಜಿತಲಕ್ಷಣಾನ್ |
ಯೇಷಾಂ ಮೂತ್ರಮುಪಾಘ್ರಾಯ ಅಪಿ ವಂಧ್ಯಾ ಪ್ರಸೂಯತೇ ॥21॥
ಗೋವುಗಳ ರಕ್ಷಣೆ, ಗೋವುಗಳ ನಡತೆ, ಗೋವುಗಳ ಸಲ್ಲಕ್ಷಣಗಳು ಎಲ್ಲವನ್ನೂ ನಾನು ತಿಳಿದಿದ್ದೇನೆ. ಅದೂ ಅಲ್ಲದೇ, ಎಲೈ ರಾಜನೇ, ನಾನು ವೃಷಭಗಳನ್ನೂ ತಿಳಿದಿದ್ದೇನೆ. ಯಾವ ವೃಷಭಗಳ ಮೂತ್ರವನ್ನು ಆಘ್ರಾಣಿಸಿದರೆ ವಂಧ್ಯೆಯೂ ಮಕ್ಕಳನ್ನು ಪಡೆಯುತ್ತಾಳೋ ಅಂತಹ ವೃಷಭಗಳ ಶ್ರೇಷ್ಠವಾದ ಲಕ್ಷಣಗಳನ್ನು ತಿಳಿದಿದ್ದೇನೆ.
ಸೋಽಹಮೇವಂ ಚರಿಷ್ಯಾಮಿ ಪ್ರೀತಿರತ್ರ ಪರಾ ಹಿ ಮೇ |
ನ ಚ ಮಾಂ ವೇತ್ಸ್ಯತಿ ಪರಃ ತತ್ತೇ ರೋಚತು ಪಾರ್ಥಿವ ॥22॥
ನಾನು ಹೀಗೆ ಸಂಚರಿಸುವೆನು. ಈ ವಿಷಯದಲ್ಲಿ ನನಗೆ ಸಂತೋಷವಿದೆ. ಅಲ್ಲಿ ಇನ್ನೊಬ್ಬರು ಯಾರೂ ನನ್ನನ್ನು ಗುರುತಿಸುವುದಿಲ್ಲ. ಇದಕ್ಕೆ ನೀನು ಅನುಮತಿಯನ್ನು ಕೊಡು.
ಯುಧಿಷ್ಠಿರಃ
ಕೇನಾತ್ರ ಕರ್ಮಣಾ ಕೃಷ್ಣಾ ದ್ರೌಪದೀ ವಿಚರಿಷ್ಯತಿ |
ನ ಹಿ ಕಿಂಚನ ಜಾನಾತಿ ಕರ್ಮ ಕರ್ತುಂ ಯಥಾ ಸ್ತ್ರಿಯಃ ॥23॥
ಯುಧಿಷ್ಠಿರ ದ್ರುಪದ ಕುಮಾರಿಯಾದ ಕೃಷ್ಣೆಯು ಯಾವ ಕರ್ಮವನ್ನು ಮಾಡಿ ಅಲ್ಲಿ ಕಾಲವನ್ನು ಕಳೆಯುವಳು? ಎಲ್ಲ ಸ್ತ್ರೀಯರೂ ಮಾಡುವ ಯಾವ ಕರ್ಮಗಳನ್ನೂ ಮಾಡಲು ಅವಳು ತಿಳಿದಿಲ್ಲ.
ಮಾಲ್ಯಾನ್ ಗಂಧಾನಲಂಕಾರಾನ್ ವಸತ್ರಣಿ ವಿವಿಧಾನಿ ಚ |
ಏತಾನ್ಯೇವಾಭಿಜಾನಾತಿ ಯತೋ ಜಾತಾ ಚ ಭಾಮಿನೀ ॥24॥
ಅವಳು ಜನ್ಮತಳೆದ ರೀತಿಯಲ್ಲಿ ಆ ಭಾಮೆಯು ಮಾಲೆಗಳು, ಗಂಧಗಳು, ಅಲಂಕಾರಗಳು, ವಿವಿಧವಾದ ವಸ್ತ್ರಗಳು ಇಷ್ಟನ್ನೇ ತಿಳಿದಿದ್ದಾಳೆ.
ಇಯಂ ತು ನಃ ಪ್ರಿಯಾ ಭಾರ್ಯಾ ಪ್ರಾಣೇಭ್ಯೋಽಪಿ ಗರೀಯಸೀ |
ಮಾತೇವ ಪರಿಪಾಲ್ಯಾ ಚ ಪೂಜ್ಯಾ ಜ್ಯೇಷ್ಠಾ ಸ್ವಸೇವ ಚ ॥25॥
ಇವಳು ನಮ್ಮ ಪ್ರಾಣಕ್ಕಿಂತಲೂ ಪ್ರಿಯಳಾದ ನಮ್ಮ ಪತ್ನಿ. ಅವಳನ್ನು ತಾಯಿಯಂತೆ ಪರಿಪಾಲಿಸಬೇಕು ಮತ್ತು ಅಕ್ಕನಂತೆ ಪೂಜಿಸಬೇಕು.
ಸುಕುಮಾರೀ ಸುಶೀಲಾ ಚ ರಾಜಪುತ್ರೀ ಯಶಸ್ವಿನೀ |
ಕಥಂ ವತ್ಸ್ಯತಿ ಕಲ್ಯಾಣೀ ವಿರಾಟನಗರೇ ಸತೀ ॥26॥
ರಾಜಕುಮಾರಿಯಾದ ಅವಳು ಸುಕುಮಾರಿ, ಸುಶೀಲೆ, ಯಶಸ್ವಿನಿಯಾದವಳು. ಕಲ್ಯಾಣಿಯಾದ ಅವಳು ವಿರಾಟನಗರದಲ್ಲಿ ಹೇಗೆ ವಾಸಿಸುವಳು?
ದ್ರೌಪದೀ
ಅಹಂ ವತ್ಸ್ಯಾಮಿ ರಾಜೇಂದ್ರ ನಿರ್ವೃತೋ ಭವ ಪಾರ್ಥಿವ |
ಯಥಾ ತೇ ಮತ್ಕೃತೇ ಶೋಕೋ ನ ಭವೇನ್ನೃಪ ತಚ್ಛೃಣು ॥27॥
ದ್ರೌಪದಿ ಎಲೈ ರಾಜೇಂದ್ರನೇ, ನಾನು ಅಲ್ಲಿ ವಾಸಮಾಡುವೆನು. ನೀನು ಸಮಾಧಾನದಿಂದಿರು. ನನ್ನ ಸಲುವಾಗಿ ನಿನಗೆ ಯಾವ ಶೋಕವೂ ಆಗದಿರುವ ಬಗೆಯನ್ನು ಹೇಳುತ್ತೇನೆ, ಅದನ್ನು ಕೇಳು.
ಯಥಾ ತು ಮಾಂ ನ ಜಾನಂತಿ ತತ್ಕರಿಷ್ಯಾಮ್ಯಹಂ ವಿಭೋ |

ಛನ್ನಾ ವತ್ಸ್ಯಾಮ್ಯಹಂ ಯನ್ಮಾಂ ನ ವಿಜ್ಞಾಸ್ಯಂತಿ ಕೇಚನ ॥28॥
ಪ್ರಭುವೇ, ನಾನು ಯಾರೂ ತಿಳಿಯದಿರುವಂತೆ ಪ್ರಚ್ಛನ್ನಳಾಗಿ ಅಲ್ಲಿ ವಾಸ ಮಾಡುವೆನು. ಯಾರೂ ನನ್ನನ್ನು ಗುರುತಿಸುವುದಿಲ್ಲ.
ವೃತ್ತಂ ತಚ್ಚ ಸಮಾಖ್ಯಾಸ್ಯೇ ಶಮಾಪ್ನುಹಿ ವಿಶಾಂಪತೇ |
ಸೈರಂಧ್ರೀಜಾತಿಸಂಪನ್ನಾ ನಾಮ್ನಾಽಹಂ ವ್ರತಚಾರಿಣೀ ॥29॥
ನಾನು ಏನು ಮಾಡುವೆನೆಂದು ಹೇಳುವೆನು, ರಾಜನೇ, ಸಂತೋಷವನ್ನು ಹೊಂದು. ಸೈರಂಧ್ರೀಜಾತಿಯಲ್ಲಿ ಹುಟ್ಟಿದ ನಾನು ವ್ರತಚಾರಿಣಿ ಎಂದು ಹೇಳಿಕೊಳ್ಳುತ್ತೇನೆ.
ಸೈರಂಧ್ರ್ಯೋ ರಕ್ಷಿತಾಃ ಸ್ತ್ರೀಣಾಂ ಭುಜಿಷ್ಯಾಃ ಸಂತಿ ಭಾರತ |
ಏಕಪತ್ನ್ಯಃ ಸ್ತ್ರಿಯಶ್ಚೈತಾ ಇತಿ ಲೋಕಸ್ಯ ನಿಶ್ಚಯಃ ॥30॥
ಎಲೈ ಭಾರತನೇ, ಸೈರಂಧ್ರಿಯರು ರಾಜಕುಲದಲ್ಲಿ ರಕ್ಷಿತರಾದ ಸೇವಕಿಯರು. ಅವರು ಒಬ್ಬನೇ ಪತಿಯನ್ನುಳ್ಳವರು ಎಂದು ಲೋಕದಲ್ಲಿ ವಿದಿತವಾಗಿದೆ.
ಸಾಽಹಂ ಬ್ರುವಾಣಾ ಸೈರಂಧ್ರೀ ಕುಶಲಾ ಕೇಶಕರ್ಮಣಿ |
ನಾಽಹಂ ತವ ಭವಿಷ್ಯಾಮಿ ದುರ್ಭರಾ ರಾಜವೇಶ್ಮನಿ ॥31॥
ನಾನು ಕೇಶಪ್ರಸಾಧನದಲ್ಲಿ ನಿಪುಣಳಾದ ಸೈರಂಧ್ರೀ ಎಂದು ಹೇಳಿಕೊಳ್ಳುತ್ತಾ ಅಲ್ಲಿ ಇರುವೆನು. ರಾಜನ ಮನೆಯಲ್ಲಿ ನಾನು ನಿನಗೆ ದುರ್ಭರಳಾಗಿ ಇರುವುದಿಲ್ಲ.
ಕೃತಾ ಚೈವ ಸದಾ ರಕ್ಷಾ ವ್ರತೇನೈವ ನರಾಧಿಪ |
ಸುದೇಷ್ಣಾಂ ಪ್ರತ್ಯುಪಸ್ಥಾಸ್ಯೇ ರಾಜಭಾರ್ಯಾಂ ಯಶಸ್ವಿನೀಮ್ ॥32॥
ಎಲೈ ನರಾಧಿಪನೇ, ನನ್ನ ವ್ರತವೇ ನನಗೆ ಸದಾ ರಕ್ಷಣೆಯನ್ನು ನೀಡಿದೆ. ನಾನು ರಾಜಭಾರ್ಯೆಯಾದ ಕೀರ್ತಿವಂತಳಾದ ಸುದೇಷ್ಣೆಯ ಸಮೀಪದಲ್ಲಿ ಇರುವೆನು.
ಸಾ ರಕ್ಷಿಷ್ಯತಿ ಮಾಂ ಪ್ರಾಪ್ತಾಂ ಮಾ ತೇ ಭೂದ್ದುಃಖಮೀದೃಶಮ್ |
ಅನುಗುಪ್ತಾ ಚರಿಷ್ಯಾಮಿ ಯನ್ಮಾಂ ತ್ವಮನುಪೃಚ್ಛಸಿ ॥33॥
ಸಮೀಪಕ್ಕೆ ಬಂದ ನನ್ನನ್ನು ಅವಳು ರಕ್ಷಿಸುವಳು. ನನ್ನ ವಿಷಯದಲ್ಲಿ ನೀನು ಹೀಗೆ ದುಃಖಪಡಬೇಡ. ವ್ರತಗಳಿಂದ ರಕ್ಷಿತಳಾದಂತೆ ಅನಂತರ ಸುದೇಷ್ಣೆಯಿಂದಲೂ ರಕ್ಷಿತಳಾಗಿ ನಾನು ಅಲ್ಲಿ ವಾಸಮಾಡುವೆನು. ನೀನು ನನ್ನನ್ನು ಕೇಳಿದ ಪ್ರಶ್ನೆಗೆ ಇದು ಉತ್ತರ.
ಯುಧಿಷ್ಠಿರಃ
ಯಥಾ ನ ದುರ್ಹೃದಃ ಪಾಪಾ ಭವಂತಿ ಸುಖಿನಃ ಪುನಃ |
ಕುರ್ಯಾಸ್ತಥಾ ತ್ವಂ ಕಲ್ಯಾಣಿ ಲಕ್ಷಯೇಯುರ್ನ ವರ್ಣತಃ ॥
ಯುಧಿಷ್ಠಿರ ನಿನ್ನನ್ನು ನೋಡಿ ಕೆಟ್ಟ ಮನಸ್ಸುಳ್ಳವರು ಮತ್ತು ಪಾಪಿಗಳು ಪುನಃ ಸುಖವಾಗಿ ಇರದಂತೆ ನೀನು ನಡೆದುಕೋ. ಎಲೌ ಕಲ್ಯಾಣಿಯೇ, ನೀನು ಕ್ಷತ್ರಿಯ ವರ್ಣದವಳೆಂದು ಯಾರೂ ಗುರುತಿಸದಂತೆ ನಿನ್ನನ್ನು ನೀನು ನೋಡಿಕೊಳ್ಳಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ಚತುರ್ಥೋಽಧ್ಯಾಯಃ ॥
॥ ವೈರಾಟಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

## ಐದನೆಯ ಅಧ್ಯಾಯ
ಪಾಂಡವರಿಗೆ ಧೌಮ್ಯರಿಂದ ರಾಜನ ಮನೆಯಲ್ಲಿ ವಾಸಮಾಡುವ
ಪ್ರಕಾರದ ಕಥನ.
ಯುಧಿಷ್ಠಿರಃ
ಕರ್ಮಾಣ್ಯುಕ್ತಾನಿ ಯುಷ್ಮಾಭಿರ್ಯಾನಿ ತಾನಿ ಚರಿಷ್ಯಥ |
ಮಮ ಚಾಪಿ ಯಥಾ ಬುದ್ಧಿರುಚಿತಾ ಹಿ ವಿನಿಶ್ಚಯಾತ್ ॥1॥
ಯುಧಿಷ್ಠಿರ ನೀವು ಯಾವ ಯಾವ ಕರ್ಮಗಳನ್ನು ಹೇಳಿದ್ದೀರೋ ಅವೆಲ್ಲವನ್ನೂ ಮಾಡುವಿರಿ. ನನ್ನ ಬುದ್ಧಿಯೂ ಕೂಡ ನಾನು ಮಾಡುವ ಕರ್ಮದ ವಿಷಯದಲ್ಲಿ ನಾನು ಹೇಳಿದಂತೆಯೇ ನಿಶ್ಚಿತವಾಗಿದೆ.
ಪುರೋಹಿತೋಽಯಮಸ್ಮಾಕಮ್ ಅಗ್ನಿಹೋತ್ರಾಣಿ ರಕ್ಷತು |
ಸೂದಾಃ ಪೌರೋಗವೈಃ ಸಾರ್ಧಂ ದ್ರುಪದಸ್ಯ ನಿವೇಶನೇ ॥2॥
ಈ ನಮ್ಮ ಪುರೋಹಿತರು ದ್ರುಪದನ ಮನೆಯಲ್ಲಿ ಸೂದರ ಮತ್ತು ಪೌರೋಗವರ ಜೊತೆಯಲ್ಲಿ ನಮ್ಮ ಅಗ್ನಿಹೋತ್ರಗಳನ್ನು ರಕ್ಷಿಸಲಿ.
ಇಂದ್ರಸೇನಮುಖಾಶ್ಚೈತೇ ರಥಾನಾದಾಯ ಕೇವಲಾನ್ |
ಯಾಂತು ದ್ವಾರವತೀಂ ಶೀಘ್ರಮಿತಿ ಮೇ ವರ್ತತೇ ಮತಿಃ ॥3॥
ಇಂದ್ರಸೇನ ಮೊದಲಾದ ನಮ್ಮ ಸಾರಥಿಗಳು ರಥಗಳನ್ನು ಮಾತ್ರ ತೆಗೆದುಕೊಂಡು ದ್ವಾರಾವತಿಗೆ ಶೀಘ್ರವಾಗಿ ಹೊರಡಲಿ ಎಂದು ನನ್ನ ಅಭಿಪ್ರಾಯ.
ಇಮಾಶ್ಚ ನಾರ್ಯೋ ದ್ರೌಪದ್ಯಾಃ ಸರ್ವತಃ ಪರಿಚಾರಿಕಾಃ |
ಪಾಂಚಾಲಾನೇವ ಗಚ್ಛಂತು ಸೂದಾಃ ಪೌರೋಗವೈಃ ಸಹ ॥4॥
ದ್ರೌಪದಿಯ ಪರಿಚಾರಿಕೆಯರಾದ ಈ ಎಲ್ಲಾ ನಾರಿಯರು ಸೂದರ ಮತ್ತು ಪೌರೋಗವರ ಜೊತೆಯಲ್ಲಿ ಪಾಂಚಾಲದೇಶಕ್ಕೆ ಹೋಗಲಿ.

ಸರ್ವೈರಪಿ ಚ ವಕ್ತವ್ಯಂ ನ ಪ್ರಾಜ್ಞಾಯಂತ ಪಾಂಡವಾಃ |
ಗತಾ ಹ್ಯಸ್ಮಾನಪಾಹಾಯ ಸರ್ವೇ ದ್ವೈತವನಾದಿತಿ ॥5॥
ಎಲ್ಲರೂ ಸಹ ದ್ವೈತವನದಲ್ಲಿ ನಮ್ಮನ್ನು ಬಿಟ್ಟು ಎಲ್ಲ ಪಾಂಡವರೂ ಅಲ್ಲಿಂದ ಹೊರಟು ಹೋದರು. ಈಗ ಅವರು ಎಲ್ಲಿದ್ದಾರೆಯೋ ತಿಳಿದಿಲ್ಲ ಎಂದು ಹೇಳಬೇಕು.
ವೈಶಂಪಾಯನಃ
ತಾನನ್ವಶಾಸದ್ ಧರ್ಮಾತ್ಮಾ ಸರ್ವಧರ್ಮವಿಶೇಷವಿತ್ |
ಧೌಮ್ಯಃ ಪುರೋಹಿತೋ ರಾಜನ್ ಪಾಂಡವಾನ್ ಪುರುಷರ್ಷಭಾನ್ ॥
ವೈಶಂಪಾಯನ ರಾಜನ್, ಪುರುಷರ್ಷಭರಾದ ಆ ಪಾಂಡವರಿಗೆ ಎಲ್ಲಾ ಧರ್ಮಗಳನ್ನೂ ತಿಳಿದ, ಸ್ವತಃ ಧರ್ಮಾತ್ಮರಾದ ಪುರೋಹಿತರಾದ ಧೌಮ್ಯರು ಉಪದೇಶವನ್ನು ಮಾಡಿದರು.
ಧೌಮ್ಯಃ
ವಿದಿತೇ ಚಾಪಿ ವಕ್ತವ್ಯಂ ಸುಹೃದ್ಭಿರನುರಾಗತಃ |
ಅತೋಽಹಮಪಿ ವಕ್ಷ್ಯಾಮಿ ಹೇತುಮಾತ್ರಂ ನಿಬೋಧತ ॥7॥
ಧೌಮ್ಯರು ವಿಶ್ವಾಸಪಾತ್ರರಾದವರು ಶ್ರೋತೃಗಳಿಗೆ ತಿಳಿದಿದ್ದರೂ ಸಹ ಪ್ರೀತಿಯಿಂದ ವಿಷಯಗಳನ್ನು ಹೇಳಬೇಕು. ಆದ್ದರಿಂದ ನಾನೂ ಸಹ ನಿಮಿತ್ತ ಮಾತ್ರನಾಗಿ ಹೇಳುವೆನು. ಅದನ್ನು ತಿಳಿಯಿರಿ.
ಹಂತೇಮಾಂ ರಾಜವಸತಿಂ ರಾಜಪುತ್ರಾ ಬ್ರವೀಮಿ ವಃ |
ಯಥಾ ರಾಜಕುಲಂ ಪ್ರಾಪ್ಯ ಚರನ್ ಪ್ರೇಷ್ಯೋ ನ ದುಷ್ಯತಿ ॥8॥
ಸಂತೋಷ. ರಾಜಪುತ್ರರೇ, ರಾಜನ ಮನೆಯಲ್ಲಿ ಸೇವಕನು ಹೇಗೆ ವಾಸ ಮಾಡಿದರೆ ದೋಷಕ್ಕೆ ಪಾತ್ರನಾಗುವುದಿಲ್ಲವೋ ಅಂತಹ ಪ್ರಕಾರವನ್ನು ನಿಮಗೆ ಹೇಳುತ್ತೇನೆ.
ದುರ್ವಸನ್ನೇವ ಕೌರವ್ಯಾಜಾನತಾ ರಾಜವೇಶ್ಮನಿ |
ಅಮಾನಿತೇನ ಮಾನಾರ್ಹ ಗೂಢೇನ ಪರಿವತ್ಸರಮ್ ॥9॥
ಎಲೈ ಕೌರವ್ಯನೇ, ಮಾನಾರ್ಹನೇ, ರಾಜನ ಮನೆಯಲ್ಲಿ ಸನ್ಮಾನಿತನಾಗದಿದ್ದರೂ ಗೂಢವಾಗಿ ಇನ್ನೊಬ್ಬರಿಗೆ ತಿಳಿಯದಂತೆ ಒಂದು ವರ್ಷ ಕಷ್ಟದ ವಾಸವನ್ನು ಮಾಡಬೇಕು.
ದೃಷ್ಟದ್ವಾರೋ ಲಭೇದ್ ದ್ರಷ್ಟುಂ ರಾಜಸ್ವೇಷು ನ ವಿಶ್ವಸೇತ್ |
ನ ಚಾನುಶಿಷ್ಯಾದ್ ರಾಜಾನಮಪೃಚ್ಛಂತಂ ಕದಾಚನ ॥10॥
ದ್ವಾರದಲ್ಲಿ ರಾಜನು ತನ್ನನ್ನು ನೋಡಿದ ಮೇಲೆ ರಾಜನು ತನ್ನನ್ನು ನೋಡುವಂತೆ ಒಳಗೆ ಪ್ರವೇಶಿಸಬೇಕು. ರಾಜನ ಯಾವ ಸ್ವತ್ತುಗಳಲ್ಲಿಯೂ ತನ್ನದೆಂಬ ಭಾವನೆಯನ್ನು ತಳೆಯಬಾರದು. ರಾಜನು ಕೇಳದಿದ್ದ ವಿಷಯದಲ್ಲಿ ಎಂದೂ ಅವನಿಗೆ ಉಪದೇಶವನ್ನು ಮಾಡಬಾರದು.
ತೂಷ್ಣೀಂ ತ್ವೇನಮುಪಾಸೀತ ಕಾಲೇ ಸಮಭಿಪೂಜಯನ್ |
ತದೇವಾಸನಮಾತಿಷ್ಠೇದ್ ಯತ್ರ ನಾಭಿಷಜೇತ್ ಪರಃ ॥11॥
ಮೌನವನ್ನು ಧರಿಸಿ ಕಾಲಕಾಲಗಳಲ್ಲಿ ರಾಜನಿಗೆ ಪೂಜೆಯನ್ನು ಸಲ್ಲಿಸಿ ಅವನ ಸಮೀಪದಲ್ಲಿರಬೇಕು. ಯಾವ ಆಸನದಲ್ಲಿ ಇನ್ನೊಬ್ಬನು ಬಂದು ಕುಳಿತುಕೊಳ್ಳಲಾರನೋ ಅಂತಹ ಆಸನವನ್ನೇ ಸ್ವೀಕರಿಸಬೇಕು.
ಯೋ ನಯಾನಯಪರ್ಯಂಕಂ ನ ಪೀಠಂ ನ ಗಜಂ ರಥಮ್ |
ಆರೋಹೇತ್ ಸಮ್ಮತೋಸ್ಮೀತಿ ಸ ರಾಜವಸತಿಂ ವಸೇತ್ ॥12॥
ಯಾವನು ರಾಜನಿಗೆ ತಾನು ಸಮ್ಮತನಾದರೂ ತಾನು ರಾಜನಿಗೆ ಸಮ್ಮತ ಎಂಬ ಕಾರಣದಿಂದ ಅವನ ಆಸನಗಳನ್ನಾಗಲೀ, ಪೀಠವನ್ನಾಗಲೀ, ಗಜವನ್ನಾಗಲೀ, ರಥವನ್ನಾಗಲೀ ಏರುವುದಿಲ್ಲವೋ ಅಂತಹವನು ರಾಜನ ಮನೆಯಲ್ಲಿ ವಾಸ ಮಾಡಬೇಕು.
ನೈಷಾಂ ದಾರೇಷು ಕುರ್ವೀತ ಮೈತ್ರೀಂ ಪ್ರಾಜ್ಞಃ ಕದಾಚನ |
ಅಂತಃಪುರಚರಾ ಯೇ ಚ ದ್ವೇಷ್ಟಿ ಯಾನಹಿತಾಶ್ಚ ತೇ ॥13॥
ರಾಜನ ಪತ್ನಿಯರಲ್ಲಿ ಅಥವಾ ಅಂತಃಪುರದ ದಾಸಿಯರ ಜೊತೆಯಲ್ಲಿ ಸ್ನೇಹವನ್ನು ಮಾಡಬಾರದು. ಅವರು ಯಾವ ಅಹಿತರನ್ನು ದ್ವೇಷ ಮಾಡುತ್ತಾರೆಯೋ ಅವರ ಜೊತೆಯಲ್ಲಿಯೂ ಸ್ನೇಹವನ್ನು ಮಾಡಬಾರದು.
ಪಾಂಡವಾಗ್ನಿರಯಂ ಲೋಕೇ ಸರ್ವಶಸ್ತ್ರಮಯೋ ಮಹಾನ್ |
ಭರ್ತಾ ಗೋಪ್ತಾ ಚ ಭೂತಾನಾಂ ರಾಜಾ ಪುರುಷವಿಗ್ರಹಃ ॥14॥
ಎಲೈ ಪಾಂಡವನೇ, ಎಲ್ಲಾ ಪ್ರಜೆಗಳನ್ನೂ ಪೋಷಿಸುವ ಮತ್ತು ರಕ್ಷಿಸುವ ಈ ರಾಜನು ಪುರುಷರೂಪವನ್ನು ಧರಿಸಿದ ಸರ್ವಶಸ್ತ್ರಮಯವಾದ ದೊಡ್ಡ ಅಗ್ನಿ ಎಂದು ತಿಳಿಯಬೇಕು.
ಸರ್ವಾತ್ಮನಾ ವರ್ತಮಾನಂ ಯಥಾ ದೋಷೋ ನ ಸಂಸ್ಪೃಶೇತ್ |
ರಾಜಾನಮುಪಜೀವಂತಂ ತಸ್ಯ ವೃತ್ತಿಂ ನಿಬೋಧತ ॥15॥
ರಾಜನನ್ನು ಉಪಜೀವಿಸಿಕೊಂಡು ಸರ್ವರೀತಿಯಿಂದ ಅವನ ಜೊತೆಯಲ್ಲಿಯೇ ಇರುವವನಿಗೆ ದೋಷವು ಉಂಟಾಗದಿರುವ ನಡವಳಿಕೆಯನ್ನು ಹೇಳುತ್ತೇನೆ, ಕೇಳಿ.
ನಾತಿವರ್ತೇತ ಮರ್ಯಾದಾಂ ಪುರುಷೋ ರಾಜಸಮ್ಮತಃ |
ವ್ಯವಹಾರಂ ಪುನರ್ಲೋಕೇ ಮರ್ಯಾದಾಂ ಪಂಡಿತಾ ವಿದುಃ ॥16॥
ರಾಜನಿಗೆ ಸಮ್ಮತನಾದ ಪುರುಷನು ತನ್ನ ಮರ್ಯಾದೆಯನ್ನು (ಎಲ್ಲೆಯನ್ನು) ಮೀರಬಾರದು. ರಾಜನ ಜೊತೆಯಲ್ಲಿ ಮಾಡುವ

ವ್ಯವಹಾರದ ರೀತಿಯನ್ನು ಮತ್ತು ಸೇವಕರ ಎಲ್ಲೆಯನ್ನು ಲೋಕದಲ್ಲಿ ಪಂಡಿತರು ತಿಳಿದಿರುತ್ತಾರೆ.
ನ ಹಿ ಪುತ್ರಂ ನ ನಪ್ತಾರಂ ನ ಭ್ರಾತರಮರಿಂದಮ |
ಸಮತಿಕ್ರಾಂತಮರ್ಯಾದಂ ಪೂಜಯಂತಿ ನರಾಧಿಪಾಃ ॥17॥
ಎಲೈ ಅರಿಂದಮನೇ, ತನ್ನ ಮರ್ಯಾದೆಯನ್ನು ಮೀರಿದವನು ಪುತ್ರನಾಗಲೀ ಅಥವಾ ಪೌತ್ರನಾಗಲೀ ಅಥವಾ ತಮ್ಮನೇ ಆದರೂ ಸಹ ರಾಜರು ಅವನನ್ನು ಸತ್ಕರಿಸುವುದಿಲ್ಲ.
ಗಚ್ಛನ್ನಪಿ ಪರಾಂ ಭೂಮಿಂ ಭೂಮಿಪಾಲನಿಯೋಜಿತಃ |
ಜಾತ್ಯಂಧ ಇವ ಮನ್ಯೇತ ಮರ್ಯಾದಾಮನುಚಿಂತಯನ್ ॥18॥
ರಾಜನ ಪ್ರೀತಿಗೆ ಒಳಗಾಗಿ, ರಾಜನಿಂದ ನಿಯೋಜಿಸಲ್ಪಟ್ಟು ಬಹಳ ವೈಭವೋಪೇತವಾದ ಸ್ಥಳಕ್ಕೆ ಹೋದರೂ ತನ್ನ ಮರ್ಯಾದೆಯನ್ನು ಸ್ಮರಿಸಿಕೊಂಡು ಸೇವಕನು ಹುಟ್ಟುಕುರುಡನಂತೆ ಇರಬೇಕು.
ಯತ್ರೋಪವಿಷ್ಟಃ ಸಂಕಲ್ಪಂ ನೋಪಹನ್ಯಾದ್ ಬಲೀಯಸಃ |
ತದಾಸನಂ ರಾಜಕುಲೇ ಈಪ್ಸೇತ ಪುರುಷೋ ವಸನ್ ॥19॥
ಎಲ್ಲಿ ಕುಳಿತುಕೊಂಡರೆ ಅಲ್ಲಿ ಕುಳಿತುಕೊಳ್ಳಲು ಬಯಸಿದ ತನಗಿಂತ ಪ್ರಬಲನಾದವನ ಸಂಕಲ್ಪವನ್ನು ಮುರಿಯುವುದಿಲ್ಲವೋ ಅಂತಹ ಆಸನವನ್ನೇ ರಾಜಕುಲದಲ್ಲಿ ವಾಸಮಾಡುವ ಪುರುಷನು ಅಪೇಕ್ಷಿಸಬೇಕು.
ಯತ್ರ ಯತ್ರೈನಮಾಸೀನಂ ಶಂಕೇರನ್ ದೃಷ್ಟಚಾರಿಣಃ |
ನ ತತ್ರೋಪವಿಶೇದ್ ಯೋ ವೈ ಸ ರಾಜವಸತಿಂ ಭವೇತ್ ॥20॥
ಎಲ್ಲಿ ಕುಳಿತುಕೊಂಡರೆ ಅಂತಃಪುರ ಜನರು ಇವನನ್ನು ಶಂಕಿಸುವುದಿಲ್ಲವೋ ರಾಜನ ಮನೆಯಲ್ಲಿ ವಾಸಮಾಡುವವನು ಅಂತಹ ಸ್ಥಳದಲ್ಲಿಯೇ ಕುಳಿತುಕೊಳ್ಳಬೇಕು.
ಸ ಭೂಮೌ ಕಾಮಮಾಸೀತ ತಿಷ್ಠೇದ್ ವಾ ರಾಜಸನ್ನಿಧೌ |
ನ ತ್ವೇವಾಸನಮನ್ಯಸ್ಯ ಪ್ರಾರ್ಥಯೀತ ಕದಾಚನ ॥21॥
ಮನಸ್ಸಿಗೆ ಬಂದಂತೆ ರಾಜನ ಎದುರಿಗೆ ಭೂಮಿಯ ಮೇಲೆ ಕುಳಿತುಕೊಳ್ಳಬಹುದು. ಅಥವಾ ರಾಜಸನ್ನಿಧಿಯಲ್ಲಿ ನಿಲ್ಲಲೂ ಬಹುದು. ಆದರೆ ಇನ್ನೊಬ್ಬನ ಆಸನವನ್ನು ಎಂದೂ ಬಯಸಲೂ ಬಾರದು.
ಪರಾಸನಗತಂ ಹ್ಯೇನಂ ಪರಸ್ಯ ಪರಿಚಾರಕಾಃ |
ಪರಿಷದಪ್ಯಕರ್ಷೇಯುಃ ಪರಿಹಾಸ್ಯೇತ ಶತ್ರುಭಿಃ ॥22॥
ಇನ್ನೊಬ್ಬನ ಆಸನದಲ್ಲಿ ಕುಳಿತುಕೊಂಡ ಸೇವಕನನ್ನು ಆ ಇನ್ನೊಬ್ಬನ ಸೇವಕರು ಸಭೆಯಲ್ಲಿ ಕೆಳಗೆ ಎಳೆಯುತ್ತಾರೆ. ಆಗ ಶತ್ರುಗಳಿಂದ ಹಾಸ್ಯಕ್ಕೆ ಈಡಾಗಬೇಕಾಗುತ್ತದೆ.
ನಿತ್ಯಂ ವಿಪ್ರತಿಷಿದ್ಧಂ ತು ಪುರಸ್ತಾದಾಸನಂ ಮತಮ್ |
ಅರ್ಥಾರ್ಥೇ ಹಿ ಯದಾ ಭೃತ್ಯೋ ರಾಜಾನಮುಪತಿಷ್ಠತೇ ॥23॥
ಯಾವುದಾದರೂ ಒಂದು ಪ್ರಯೋಜನದ ಅಪೇಕ್ಷೆಯಿಂದ ಭೃತ್ಯನು ರಾಜನನ್ನು ಸಮೀಪಿಸಿದರೆ ರಾಜನ ಮುಂದಿನ ಆಸನವು ಅವನಿಗೆ ಯಾವಾಗಲೂ ನಿಷಿದ್ಧವಾದುದು.
ಯತ್ನಾಚ್ಚೋಪಚರೇದೇನಮಗ್ನಿವತ್ ದೇವವಚ್ಚ ಹ |
ಅನೃತೇನೋಪಚೀರ್ಣಾ ಹಿ ಹಿಂಸ್ಯಾದೇನಮಸಂಶಯಮ್ ॥24॥
ಅಗ್ನಿಯನ್ನು ಮತ್ತು ದೇವತೆಯನ್ನು ಉಪಚರಿಸಿದಂತೆ ರಾಜನನ್ನು ಪ್ರಯತ್ನ ಪೂರ್ವಕವಾಗಿ ಉಪಚರಿಸಬೇಕು. ಮೋಸದ ಉಪಚಾರವನ್ನು ಮಾಡಿದರೆ ರಾಜನು ಅವನನ್ನು ಖಂಡಿತವಾಗಿ ಹಿಂಸಿಸುತ್ತಾನೆ.
ಯಸ್ಯ ಭರ್ತಾಽನುಯುಂಜೀತ ತದೇವಾಭ್ಯನುವರ್ಣಯೇತ್ |
ಪ್ರಮಾದಮವಹೇಲಾಂ ಚ ಕೋಪಂ ಚ ಪರಿವರ್ಜಯೇತ್ ॥25॥
ರಾಜನು ಯಾವ ಪುರುಷನ ಬಗ್ಗೆ ಪ್ರಶ್ನೆ ಮಾಡುತ್ತಾನೆಯೋ ಅದೇ ವಿಷಯವನ್ನು ಅವನಿಗೆ ಹೇಳಬೇಕು. ರಾಜಕಾರ್ಯದಲ್ಲಿ ಪ್ರಮಾದವನ್ನಾಗಲೀ ಅಥವಾ ರಾಜನಿಗೆ ಅವಹೇಳನವನ್ನಾಗಲೀ ಅಥವಾ ರಾಜನ ಸನ್ನಿಧಿಯಲ್ಲಿ ಕೋಪವನ್ನಾಗಲೀ ಮಾಡಬಾರದು.
ಸಮರ್ಥನಾಸು ಸರ್ವಾಸು ಹಿತಂ ಚ ಪ್ರಿಯಮೇವ ಚ |
ಸಂವರ್ಣಯೇತ್ ತದೇವಾಸ್ಯ ಪ್ರಿಯಾದಪಿ ಹಿತಂ ಭವೇತ್ ॥26॥
ಯಾವುದಾದರೂ ಒಂದು ಕಾರ್ಯವನ್ನು ಸಮರ್ಥಿಸುವಾಗ ರಾಜನಿಗೆ ಹಿತವಾದುದನ್ನೂ ಮತ್ತು ಪ್ರಿಯವಾದುದನ್ನೂ ವರ್ಣಿಸಬೇಕು. ಅದೇ ಅವನಿಗೆ ಪ್ರಿಯಕ್ಕಿಂತಲೂ ಹೆಚ್ಚು ಹಿತವಾಗಿರುತ್ತದೆ.
ಅನುಕೂಲೋ ಭವೇಚ್ಚಾಸ್ಯ ಸರ್ವಾರ್ಥೇಷು ಕಥಾಸು ಚ |
ಅಪ್ರಿಯಂ ಚಾಹಿತಂ ಯತ್ ಸ್ಯಾತ್ ತದಸ್ಮೈ ನಾನುವರ್ಣಯೇತ್ ॥
ಎಲ್ಲ ಕಾರ್ಯಗಳಲ್ಲಿಯೂ ಮತ್ತು ಎಲ್ಲ ಮಾತುಗಳಲ್ಲಿಯೂ ರಾಜನಿಗೆ ಅನುಕೂಲವಾಗಿರಬೇಕು. ರಾಜನಿಗೆ ಯಾವುದು ಅಪ್ರಿಯವೋ ಅಥವಾ ಅಹಿತವೋ ಅವನಿಗೆ ಅದನ್ನು ವರ್ಣಿಸಬಾರದು.
ನಾಹಮಸ್ಯ ಪ್ರಿಯೋಽಸ್ಮೀತಿ ಮತ್ವಾ ಸೇವೇತ ಪಂಡಿತಃ |
ಅಪ್ರಮತ್ತಶ್ಚ ಯತ್ತಶ್ಚ ಹಿತಂ ಕುರ್ಯಾತ್ ಪ್ರಿಯಂ ಚ ತತ್ ॥28॥
ಪಂಡಿತನಾದವನೂ ಸಹ ನಾನು ರಾಜನಿಗೆ ಪ್ರಿಯನಾದವನು ಎಂಬ ಭಾವನೆಯಿಂದ ಸೇವೆಯನ್ನು ಮಾಡಬಾರದು. ಪ್ರಮಾದಕ್ಕೆ ಒಳಗಾಗದೇ ಪ್ರಯತ್ನ ಪೂರ್ವಕವಾಗಿ ರಾಜನಿಗೆ ಹಿತವನ್ನು ಮಾಡಬೇಕು. ಅದೇ ರಾಜನಿಗೆ ಪ್ರಿಯವಾಗಿರುತ್ತದೆ.
ದಕ್ಷಿಣಂ ವಾಽಥ ವಾಮಂ ವಾ ಭಾಗಮಾಸೀತ ಪಂಡಿತಃ |

ರಕ್ಷಿಣಾಮಾತ್ತಶಸಿತ್ರಣಾಂ ಪಶ್ಚಾತ್ ಸ್ಥಾನಂ ವಿಧೀಯತೇ ॥29॥
ಪಂಡಿತನಾದವನು ರಾಜನ ಮುಂದೆ ಎಡಭಾಗದಲ್ಲಿ ಅಥವಾ ಬಲಭಾಗದಲ್ಲಿ ಕುಳಿತುಕೊಳ್ಳಬೇಕು. ರಾಜನ ಹಿಂದುಗಡೆಯ ಸ್ಥಾನವು ಶಸ್ತ್ರಧಾರಿಗಳಾದ ಅಂಗರಕ್ಷಕರಿಗೆ ಸೇರಿದುದು ಎಂದು ಹೇಳಲ್ಪಡುತ್ತದೆ.
ಪೂಜ್ಯಮಾನೋಽಪಿ ಯೋ ರಾಜಾ ನರೋ ನ ಪ್ರತಿಪೂಜಯೇತ್ |
ನೈತಮಾರಾಧಯೇಜ್ಜಾತು ಶಾಸ್ತಾ ಶಿಷ್ಯಾನಿವಾಲಸಾನ್ ॥30॥
ಯಾವನು ರಾಜನು ತನ್ನನ್ನು ಪೂಜಿಸಿದರೂ ರಾಜನಿಗೆ ಪ್ರತಿಯಾಗಿ ಪೂಜೆಯನ್ನು ಸಲ್ಲಿಸುವುದಿಲ್ಲವೋ ಅಂತಹವನನ್ನು ಸೋಮಾರಿಗಳಾದ ಶಿಷ್ಯರನ್ನು ಗುರುವು ಹೇಗೆ ಪೂಜಿಸುವುದಿಲ್ಲವೋ ಹಾಗೆ ಎಂದೂ ಪೂಜಿಸಬಾರದು.
ನಾಸ್ಯ ಯುಗ್ಯಂ ನ ಪರ್ಯಂಕಂ ನಾಸನಂ ನ ರಥಂ ತಥಾ |
ಆರೋಹೇತ್ ಸಾಂತ್ವಿತೋಽಸ್ಮೀತಿ ಯೋ ರಾಜವಸತಿಂ ಭವೇತ್ ॥31॥
ಯೋ ವೈ ಗೃಹೇಭ್ಯಃ ಪ್ರವಸನ್ ಚಾತ್ಮಾನಮನುಸಂಸ್ಮರೇತ್ |
ಉತ್ಥಾನೇ ನಿತ್ಯಸಂಕಲ್ಪೋ ನಿಸ್ತಂದ್ರೀ ಸಂಯತಾತ್ಮವಾನ್ ॥32॥
ರಾಜನ ಅರಮನೆಯಲ್ಲಿ ವಾಸಮಾಡುವವನು ರಾಜನು ತನಗೆ ಸಮಾಧಾನ ಮಾಡಿದ್ದಾನೆಂದು ತಿಳಿದು ಅವನ ಅಶ್ವಗಳನ್ನಾಗಲೀ, ಆಸನವನ್ನಾಗಲೀ, ಮಂಚವನ್ನಾಗಲೀ, ರಥವನ್ನಾಗಲೀ ಏರಬಾರದು. ಯಾವನು ರಾಜನು ತನಗೆ ಒಪ್ಪಿಸಿದ ಕಾರ್ಯವನ್ನು ಮಾಡಲು ಅದನ್ನು ಸ್ಮರಿಸಿಕೊಂಡು ಮನೆಯಿಂದ ಹೊರಗೆ ಪ್ರವೇಶ ಮಾಡುತ್ತಾನೋ ಅವನು ಯಾವಾಗಲೂ ಪ್ರಯತ್ನಶೀಲನಾಗಿದ್ದು ಆ ಕಾರ್ಯದ ನಿತ್ಯಸಂಕಲ್ಪವನ್ನು ಹೊಂದಿದ್ದು ಸೋಮಾರಿತನವನ್ನು ಬಿಟ್ಟು ಮನೋನಿಗ್ರಹದಿಂದ ಕೂಡಿದವನಾಗಿರಬೇಕು.
ಪರೀತಃ ಕ್ಷುತ್ಪಿಪಾಸಾಭ್ಯಾಂ ವಿಹಾಯ ಪರಿದೇವನಮ್ |
ದುಃಖೇನ ಸುಖಮನ್ವಿಚ್ಛೇದ್ ಯೋ ರಾಜವಸತಿಂ ವಸೇತ್ ॥33॥
ರಾಜನ ಮನೆಯಲ್ಲಿ ವಾಸಮಾಡುವ ಸೇವಕನು ಹಸಿವು, ನೀರಡಿಕೆಗಳಿಂದ ಪೀಡಿತನಾದರೂ ಗೋಳಾಡುವುದನ್ನು ಬಿಟ್ಟು ದುಃಖದಿಂದ ಸುಖವನ್ನು ಸಂಪಾದಿಸಲು ಪ್ರಯತ್ನ ಪಡಬೇಕು.
ಅನ್ಯೇಷು ಪ್ರೇಷ್ಯಮಾಣೇಷು ಪುರಸ್ತಾದ್ ಧೀರ ಉತ್ಪತೇತ್ |
ಕರಿಷ್ಯಾಮ್ಯಹಮಿತ್ಯೇವಂ ಯಃ ಸ ರಾಜಸು ಸಿದ್ಧ್ಯತಿ ॥34॥
ಒಂದು ಕಾರ್ಯಕ್ಕಾಗಿ ಬೇರೆಯವರು ಕಳುಹಿಸಲ್ಪಡುತ್ತಿರಲು ಯಾವ ಧೀರನಾದವನು ತಾನೇ ರಾಜನ ಮುಂದೆ ನಿಂತು ನಾನೇ ಈ ಕೆಲಸವನ್ನು ಮಾಡುವೆನು ಎಂದು ಹೇಳುವನೋ ಅಂತಹವನು ರಾಜನ ಬಳಿಯಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ಉಷ್ಣೇ ವಾ ಯದಿ ವಾ ಶೀತೇ ರಾತ್ರೌ ವಾ ಯದಿ ವಾ ದಿವಾ |
ಆದಿಷ್ಟೋ ನ ವಿಕಲ್ಪೇತ ಯಃ ಸ ರಾಜಸು ಸಿದ್ಧ್ಯತಿ ॥35॥
ಋಜುರ್ಮೃದುಃ ಸತ್ಯವಾದೀ ಯಃ ಸ ರಾಜಸು ಸಿದ್ಧ್ಯತಿ ॥36॥
ಉಷ್ಣವಾಗಲೀ ಅಥವಾ ಶೀತವಾಗಲೀ, ರಾತ್ರಿಯಾಗಲೀ ಅಥವಾ ಹಗಲಾಗಲೀ ರಾಜನು ಆದೇಶವನ್ನು ಕೊಟ್ಟಾಗ ಯಾವನು ವಿಚಾರ ಮಾಡುವುದಿಲ್ಲವೋ ಅಂತಹವನು ರಾಜನ ಮನೆಯಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ. ನೇರಸ್ವಭಾವದವನೂ, ಮೃದುವೂ, ಸತ್ಯವಾದಿಯಾದವನೂ ರಾಜನ ಮನೆಯಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ನೈವ ಲಾಭಾದ್ಧರ್ಷಮಿಯಾನ್ನ ವ್ಯಥೇಚ್ಚ ವಿಮಾನಿತಃ |
ಸಮಃ ಪೂರ್ಣತುಲೇವ ಸ್ಯಾದ್ ಯೋ ರಾಜವಸತಿಂ ವಸೇತ್ ॥37॥
ರಾಜನ ಮನೆಯಲ್ಲಿ ವಾಸಮಾಡುವವನು ಲಾಭದಿಂದ ಸಂತೋಷವನ್ನು ಪಡಬಾರದು. ಅವಮಾನ ಮಾಡಿದಾಗ ದುಃಖವನ್ನು ಪಡಬಾರದು. ಪೂರ್ಣವಾದ ತಕ್ಕಡಿಯಂತೆ ಯಾವಾಗಲೂ ಸಮಾಧಾನದಿಂದ ಇರಬೇಕು.
ಅಲ್ಪೇಚ್ಛೋ ಧೃತಿಮಾನ್ ರಾಜ್ಞಃ ಛಾಯೇವಾನಪಗಃ ಸದಾ |
ದಕ್ಷಃ ಪ್ರದಕ್ಷಿಣೋ ಧೀರೋ ಯೋ ರಾಜವಸತಿಂ ವಸೇತ್ ॥38॥
ರಾಜನ ಮನೆಯಲ್ಲಿ ವಾಸಮಾಡುವವನು ಅಲ್ಪತೃಪ್ತನಾಗಿದ್ದು, ಧೈರ್ಯಶಾಲಿಯಾಗಿದ್ದು, ರಾಜನನ್ನು ಯಾವಾಗಲೂ ನೆರಳಿನಂತೆ ಅನುಸರಿಸಿ ದಕ್ಷನೂ ಮತ್ತು ಅನುಕೂಲನೂ ಆಗಿರಬೇಕು.
ಇತಿಹಾಸಪುರಾಣಜ್ಞಃ ಕುಶಲಃ ಸತ್ಕಥಾಸು ಚ |
ವದಾನ್ಯಃ ಸತ್ಯವಾಕ್ ಚಾಪಿ ಯೋ ರಾಜವಸತಿಂ ವಸೇತ್ ॥39॥
ರಾಜನ ಮನೆಯಲ್ಲಿ ವಾಸಮಾಡುವವನು ಇತಿಹಾಸ ಪುರಾಣಗಳನ್ನು ತಿಳಿದವನೂ, ಸತ್ಕಥೆಯಲ್ಲಿ ಕುಶಲನಾದವನೂ, ಉದಾರಿಯೂ, ಸತ್ಯವಚನನೂ ಆಗಿರಬೇಕು.
ನ ಮಿಥೋ ಭಾಷಿತಂ ರಾಜ್ಞೋ ಮನುಷ್ಯೇಷು ಪ್ರಕಾಶಯೇತ್ |
ಯಂ ಚಾಸೂಯಂತಿ ರಾಜಾನಃ ಪುರುಷಂ ನ ವದೇಚ್ಚ ತಮ್ ॥40॥
ರಾಜನಿಗೂ ಮತ್ತು ತನಗೂ ನಡೆದ ಸಂಭಾಷಣೆಯನ್ನು ಬೇರೆ ಯಾರಿಗೂ ತಿಳಿಸಬಾರದು. ರಾಜನು ಯಾರ ಮೇಲೆ ಅಸೂಯೆಪಡುತ್ತಾನೋ ಅಂತಹ ಪುರುಷನ ಜೊತೆಯಲ್ಲಿ ಮಾತನಾಡಬಾರದು.
ನೈಷಾಂ ಕರ್ಮಸು ಸಂಯುಕ್ತೋ ಧನಂ ಕಿಂಚಿದಪಿ ಸ್ಪೃಶೇತ್ |
ಪ್ರಾಪ್ನುಯಾದಾದದಾನೋ ಹಿ ಬಂಧಂ ವಾ ವಧಮೇವ ವಾ ॥41॥
ರಾಜಕಾರ್ಯದಲ್ಲಿ ನಿರತನಾದವನು ಕಣ್ಣಿಗೆ ಕಾಣುವ ಯಾವ ಧನವನ್ನೂ ಮುಟ್ಟಬಾರದು. ಹಾಗೇನಾದರೂ ಧನವನ್ನು ತೆಗೆದುಕೊಂಡರೆ ರಾಜನಿಂದ ಬಂಧನವನ್ನಾಗಲೀ ಅಥವಾ ವಧೆಯನ್ನಾಗಲೀ ಪಡೆಯುತ್ತಾನೆ. (ಅವನು ಪ್ರಸನ್ನನಾದ ರಾಜನಿಂದಲೇ ಧನ, ವಸ್ತ್ರ ಮೊದಲಾದ ಎಲ್ಲವನ್ನೂ ಪಡೆಯುತ್ತಾನೆ).

ಯಾನಂ ವಸ್ತ್ರಮಲಂಕಾರಂ ಯಚ್ಚಾನ್ಯತ್ ಸಂಪ್ರಯಚ್ಛತಿ |
ತದೇವ ಧಾರಯನ್ನಿತ್ಯಮೇವಂ ಪ್ರಿಯತರೋ ಭವೇತ್ ॥42॥
ರಾಜನು ಯಾವ ವಾಹನವನ್ನು ಅಥವಾ ವಸ್ತ್ರವನ್ನು ಅಥವಾ ಅಲಂಕಾರವನ್ನು ಕೊಡುತ್ತಾನೆಯೋ ಅದನ್ನೇ ಯಾವಾಗಲೂ ಧರಿಸಬೇಕು. ಹೀಗೆ ಮಾಡಿದರೆ ರಾಜನಿಗೆ ಬಹಳ ಪ್ರಿಯನಾಗುತ್ತಾನೆ.
ತುಲ್ಯೋಪಸ್ಥಿತಯೋಃ ಪಶ್ಯನ್ ಮಮ ಚಾನ್ಯಸ್ಯ ಚೋಭಯೋಃ |
ಅನ್ಯಂ ಪುಷ್ಣಾತಿ ಮದ್ಧೀನಮಿತಿ ಧೀರೋ ನ ಮುಹ್ಯತಿ ॥43॥
ಇಬ್ಬರು ಸೇವಕರೂ ಸಮಾನರಾಗಿರುವಾಗ ರಾಜನು ನನಗಿಂತ ಹೀನನಾದವನನ್ನು ಪೋಷಿಸುತ್ತಿದ್ದಾನೆ ಎಂದು ಧೀರನಾದವನು ಮೋಹಕ್ಕೆ ಒಳಗಾಗಬಾರದು.
ಶ್ರೇಯಾಂಸಂ ಹಿ ಪರಿತ್ಯಜ್ಯ ವೈದ್ಯಂ ಕರ್ಮಣಿ ನಿಷ್ಠಿತಮ್ |
ಪಾಪೀಯಾಂಸಂ ಪ್ರಕುರ್ವೀರನ್ ಶೀಲಮೇಷಾಂ ತಥಾವಿಧಮ್ ॥44॥
ವಿದ್ವಾಂಸನನ್ನೂ, ಶ್ರೇಷ್ಠನನ್ನೂ ಮತ್ತು ಕಾರ್ಯದಕ್ಷನನ್ನೂ ಬಿಟ್ಟು ರಾಜರು ಒಬ್ಬ ಪಾಪಿಷ್ಠನನ್ನು ಆ ಕಾರ್ಯಕ್ಕೆ ನೇಮಿಸುತ್ತಾರೆ. ರಾಜರ ಸ್ವಭಾವವು ಹೀಗಿರುತ್ತದೆ.
ನೈಷಾಂ ದಾರೇಷು ಕುರ್ವೀತ ಪ್ರಾಜ್ಞೋ ಮೈತ್ರೀಂ ಕಥಂಚನ |
ರಕ್ಷಿಣಶ್ಚ ನ ಸೇವೇತ ಯೋ ರಾಜವಸತಿಂ ವಸೇತ್ ॥45॥
ರಾಜನ ಮನೆಯಲ್ಲಿ ವಾಸಮಾಡುವವನು ರಾಜನ ಪತ್ನಿಯರಲ್ಲಿ ಯಾವ ಕಾರಣದಿಂದಲೂ ಸ್ನೇಹವನ್ನು ಮಾಡಬಾರದು. ರಾಜನ ಅಂಗರಕ್ಷಕರ ಸೇವೆಯನ್ನೂ ಮಾಡಬಾರದು.
ಯದಾ ಹ್ಯಭಿಸಮೀಕ್ಷೇತ ಪ್ರೇಷ್ಯಂ ಸ್ತ್ರೀಭಿಃ ಸಮಾಗತಮ್ |
ಬುದ್ಧಿಃ ಪರಿಭವೇತ್ ತಸ್ಯ ರಾಜಾ ಶಂಕೇತ ವಾ ಪುನಃ ॥46॥
ತನ್ನ ಸೇವಕನು ಅಂತಃಪುರದ ಸ್ತ್ರೀಯರ ಜೊತೆಯಲ್ಲಿ ಮಾತನಾಡುವುದನ್ನು ರಾಜನು ನೋಡಿದರೆ ಅವನ ಬುದ್ಧಿಯು ಕೆಡುತ್ತದೆ ಮತ್ತು ಅವನು ಸೇವಕನನ್ನು ಶಂಕಿಸಲೂ ಬಹುದು.
ಶಂಕಿತಸ್ಯ ಪುನಃ ಸ್ತ್ರೀಷು ಕಸ್ಯ ಭೃತ್ಯಸ್ಯ ಭೂಮಿಪಃ |
ಜೀವಿತಂ ಸಾಧು ಮನ್ಯೇತ ಪ್ರಕೃತಿಭ್ಯೋ ಬಲಾತ್ ಕೃತಃ ॥47॥
ತನ್ನ ಸ್ತ್ರೀಯರ ವಿಷಯದಲ್ಲಿ ಸೇವಕನ ಮೇಲೆ ಶಂಕೆಯುಂಟಾದರೆ ಯಾವ ಸಮಾಧಾನಚಿತ್ತನಾದ ರಾಜನು ಆ ಸೇವಕನ ಜೀವನವನ್ನು ಒಳ್ಳೆಯದು ಎಂದು ಭಾವಿಸಿಯಾನು?
ಹರ್ಷವಸ್ತುಷು ಚಾಪ್ಯತ್ರ ವರ್ತಮಾನೇಷು ಕೇಷುಚಿತ್ |
ನಾತಿಗಾಢಂ ಪ್ರಹೃಷ್ಟಃ ಸ್ಯಾತ್ ತಾನ್ಯೇವಾಸ್ಯಾನುಪೂಜಯೇತ್ ॥48॥
ತನಗೆ ಸಂತೋಷವನ್ನು ಕೊಡುವ ಅನೇಕ ವಸ್ತುಗಳು ಸುತ್ತಲೂ ಇದ್ದರೂ ಬಹಳವಾಗಿ ಸಂತೋಷಗೊಳ್ಳಬಾರದು ಮತ್ತು ಅವುಗಳಿಂದ ರಾಜನನ್ನೇ ಪೂಜಿಸಬೇಕು.
ಹರ್ಷಾದ್ಧಿ ಮಂದಃ ಪುರುಷಃ ಸ್ವೈರಂ ಕುರ್ವೀತ ವೈಕೃತಮ್ |
ತಸ್ಯ ಚಾಂತಃಪುರೇ ವೃತ್ತಿಮೀಕ್ಷ್ಯಾಂಕುರ್ವೀತ ಭೂಮಿಪಃ ॥49॥
ಅಧಮನಾದ ಪುರುಷನು ಸಂತೋಷದಿಂದ ತನ್ನ ಮನಸ್ಸಿಗೆ ಬಂದಂತೆ ವಿಕಾರವನ್ನು ಮಾಡುತ್ತಾನೆ. ಅಂತಃಪುರದಲ್ಲಿದ್ದ ರಾಜನು ಅವನನ್ನು ಗಮನಿಸುತ್ತಾನೆ.
ಅಂತಃಪುರಗತಂ ಹ್ಯೇನಂ ಸ್ತ್ರಿಯಃ ಕ್ಲೀಬಾಶ್ಚ ಸರ್ವಶಃ |
ವರ್ತಮಾನಂ ಯಥಾವಚ್ಚ ಕುತ್ಸಯೇಯುರಸಂಶಯಮ್ ॥50॥
ಹೀಗೆ ತನ್ನ ಮನಸ್ಸಿಗೆ ಬಂದಂತೆ ಇರುವ ಪುರುಷನನ್ನು ಅಂತಃಪುರದಲ್ಲಿರುವ ಎಲ್ಲ ಸ್ತ್ರೀಯರು ಮತ್ತು ನಪುಂಸಕರು ಖಂಡಿತವಾಗಿ ಮೂದಲಿಸುತ್ತಾರೆ.
ತಸ್ಮಾತ್ ಗಂಭೀರಮಾತ್ಮಾನಂ ಕೃತ್ವಾ ಹರ್ಷಂ ನಿಯಮ್ಯ ಚ |
ನಿತ್ಯಮಂತಃಪುರೇ ರಾಜ್ಞೋ ನ ವೃತ್ತಂ ಕೀರ್ತಯೇದ್ ಬಹಿಃ ॥51॥
ಆದ್ದರಿಂದ ತನ್ನ ಸಂತೋಷವನ್ನು ನಿಯಂತ್ರಿಸಿಕೊಂಡು ಗಂಭೀರವಾಗಿದ್ದು, ನಿತ್ಯವೂ ಅಂತಃಪುರದಲ್ಲಿ ನಡೆಯುವ ರಾಜನ ಸಮಾಚಾರವನ್ನು ಹೊರಗೆ ಹೇಳಬಾರದು.
ಯಥಾ ಹಿ ಸುಮಹಾಮಂತ್ರೋ ಭಿದ್ಯಮಾನೋ ಹರೇತ್ ಸುಖಮ್ |
ಏವಮಂತಃಪುರೇ ವೃತ್ತಂ ಶ್ರೂಯಮಾಣಂ ಬಹಿರ್ಭವೇತ್ ॥52॥
ಹೀಗೆ ಮಂತ್ರಾಲೋಚನೆಯನ್ನು ಮಾಡಿದ ವಿಷಯವು ಬಹಿರಂಗವಾದರೆ ಶುಭವನ್ನು ತರುವುದಿಲ್ಲವೋ ಅದರಂತೆ ಅಂತಃಪುರದ ಸಮಾಚಾರವು ಹೊರಗೆ ಹೇಳಲ್ಪಟ್ಟರೆ ಸುಖವನ್ನು ತರುವುದಿಲ್ಲ.
ಯಾ ತು ವೃತ್ತಿರಬಾಹ್ಯಾನಾಂ ಬಾಹ್ಯಾನಾಮಪಿ ಕೇವಲಮ್ |
ಉಭಯೇಷಾಂ ಸಮಸ್ತಾನಾಂ ಶೃಣು ರಾಜೋಪಜೀವಿನಾಮ್ ॥53॥
ರಾಜನನ್ನು ಉಪಜೀವಿಸುವ ರಾಜನ ಸಮೀಪದಲ್ಲಿ ಅರಮನೆಯಲ್ಲಿರುವ ಮತ್ತು ದೂರದಲ್ಲಿರುವ ಎಲ್ಲ ಸೇವಕರ ನಡತೆಯನ್ನು ಹೇಳುತ್ತೇನೆ, ಕೇಳು.
ನ ಸ್ತ್ರಿಯೋ ಜಾತು ಮನ್ಯೇತ ಬಾಹ್ಯೋ ವಾಽಽಭ್ಯಂತರೋಽಪಿ ವಾ |
ಅನುಜೀವಿನಾಂ ನರೇಂದ್ರಸ್ತು ಸೃಜೇದ್ಧಿ ಸುಮಹದ್ಭಯಮ್ ॥54॥

ಅಂತಃಪುರದ ಸ್ತ್ರೀಯರ ಜೊತೆಯಲ್ಲಿ ಆಂತರಿಕನಾದವನಾಗಲೀ, ಬಾಹ್ಯನಾದವನಾಗಲೀ ಹೆಚ್ಚಿನ ಸಂಪರ್ಕವನ್ನು ಹೊಂದಬಾರದು. ಇಲ್ಲದಿದ್ದರೆ ರಾಜನು ಅಂತಹ ತನ್ನ ಸೇವಕರಿಗೆ ದೊಡ್ಡ ಭಯವನ್ನು ಉಂಟುಮಾಡಿಯಾನು.

ಮತ್ವಾऽಸ್ಯ ಪ್ರಿಯಮಾತ್ಮಾನಂ ರಾಜರತ್ನಾನಿ ರಾಜವತ್ |
ಅರಾಜಾ ರಾಜಯೋಗ್ಯಾನಿ ನೋಪಯುಂಜೀತ ಪಂಡಿತಃ ॥55॥

ಪಂಡಿತನಾದವನೂ ಸಹ ತಾನು ರಾಜನಲ್ಲದಿದ್ದರೂ ರಾಜನಿಗೆ ಪ್ರಿಯನೆಂದು ತಿಳಿದು ರಾಜನಿಗೆ ಯೋಗ್ಯವಾದ ರತ್ನಗಳನ್ನು ರಾಜನಂತೆ ಎಂದೂ ಉಪಯೋಗಿಸಬಾರದು.

ಅರಾಜಾನಂ ಹಿ ರತ್ನಾನಿ ರಾಜಕಾಂತಾನಿ ರಾಜವತ್ |
ಭುಂಜಾನಂ ನ ನರಂ ರಾಜಾ ತಿತಿಕ್ಷೇತಾನುಜೀವಿನಮ್ ॥56॥

ತನ್ನ ಸೇವಕನು ರಾಜನಂತೆ ರಾಜನಿಗೆ ಪ್ರಿಯವಾದ ರತ್ನಗಳನ್ನು ಉಪಯೋಗಿಸುವುದನ್ನು ನೋಡಿದರೆ ರಾಜನು ಎಂದೂ ಸಹಿಸುವುದಿಲ್ಲ.

ತಸ್ಮಾದವ್ಯಕ್ತಭೋಗೇನ ಭೋಕ್ತವ್ಯಂ ಭೂತಿಮಿಚ್ಛತಾ |
ತುಲ್ಯಭೋಗಂ ಹಿ ರಾಜಾ ತು ಭೃತ್ಯಂ ಕೋಪೇನ ಯೋಜಯೇತ್ ॥

ಆದ್ದರಿಂದ ತನ್ನ ಶ್ರೇಯಸ್ಸನ್ನು ಬಯಸುವವನು ಇನ್ನೊಬ್ಬರಿಗೆ ಗೊತ್ತಿಲ್ಲದ್ದಂತೆ ತನ್ನ ಭೋಗವನ್ನು ಭೋಗಿಸಬೇಕು. ರಾಜನು ತನ್ನ ಸಮಾನವಾದ ಭೋಗವುಳ್ಳ ಭೃತ್ಯನ ಮೇಲೆ ಕೋಪವನ್ನು ತೋರಿಸುತ್ತಾನೆ.

ನ ಚಾಪತ್ಯೇನ ಸಂಪ್ರೀತಿಂ ರಾಜ್ಞಃ ಕುರ್ವೀತ ಕೇನಚಿತ್ |
ಅಧಿಕ್ಷಿಪ್ತಮನರ್ಥಂ ಚ ದ್ವೇಷ್ಯಂ ಚ ಪರಿವರ್ಜಯೇತ್ ॥58॥

ರಾಜನ ಮಕ್ಕಳ ಜೊತೆಯಲ್ಲಿ ಎಂದೂ ಬಹಳ ಸಲಿಗೆಯನ್ನು ಮಾಡಬಾರದು. ರಾಜನಿಂದ ನಿಂದಿತರಾದವರನ್ನು ಮತ್ತು ರಾಜನ ಶತ್ರುಗಳನ್ನು ಮತ್ತು ರಾಜನು ಕೆಟ್ಟದೆಂದು ಹೇಳಿದ ವಸ್ತುಗಳನ್ನು ಪರಿತ್ಯಾಗ ಮಾಡಬೇಕು.

ಏನಾನ್ ತು ಸೇವಮಾನಸ್ಯ ನರಸೀಮಾಂ ಚತುರ್ವಿಧಾಮ್ |
ದ್ವಿಧಾ ವಿಭಿದ್ಯತೇ ಮೂಲಂ ರಾಜಮೂಲೋಪಸೇವಿನಃ ॥59॥

ರಾಜ ಸ್ತ್ರೀಯರಿಂದ ದೂರವಿರುವುದು, ರಾಜಭೋಗವನ್ನು ಭೋಗಿಸದಿರುವುದು, ರಾಜನಿಗೆ ಸಮಾನವಾದ ಭೋಗವನ್ನು ಭೋಗಿಸದಿರುವುದು ಮತ್ತು ರಾಜನ ದ್ವೇಷಿಗಳನ್ನು ಪರಿತ್ಯಾಗ ಮಾಡುವುದು ಈ ನಾಲ್ಕು ಸೇವಕರ ಮರ್ಯಾದೆಯ ಸ್ಥಳ (ಎಲ್ಲೆ). ಈ ಎಲ್ಲೆಗಳನ್ನು ಮೀರಿದರೆ ರಾಜಸೇವಕನಿಗೆ ತನ್ನ ಮೂಲವು ಎರಡು ಸೀಳಾಗಿ ಒಡೆಯುತ್ತದೆ.

ಏತೈಸ್ತು ವಿಪರೀತಾ ಯಾ ನರಸೀಮಾ ನರಾಧಿಪೈಃ |
ತಯಾ ಕುರ್ವೀತ ಸಂಸರ್ಗಂ ನ ವಿರೋಧಂ ಕಥಂಚನ ॥60॥

ಈ ಎಲ್ಲೆಗಳನ್ನು ಮೀರದಂತೆ ರಾಜರು ಹಾಕಿಕೊಟ್ಟ ಒಳಭಾಗದಲ್ಲಿ ಇರುವ ಜನರ ಜೊತೆಯಲ್ಲಿ ಸಂಸರ್ಗವನ್ನು ಮಾಡಿದರೆ ಯಾವ ವಿರೋಧವೂ ಉಂಟಾಗುವುದಿಲ್ಲ.

ಬಂಧುಭಿಶ್ಚ ನರೇಂದ್ರಶ್ಚ ಬಲವದ್ಭಿಶ್ಚ ಮಾನವೈಃ |
ಸಾಧು ಮನ್ಯೇತ ಸಂಸರ್ಗಂ ನ ವಿರೋಧಂ ಕಥಂಚನ ॥61॥

ರಾಜನ ಬಂಧುಗಳ ಜೊತೆಯಲ್ಲಿಯೂ ಮತ್ತು ಬಲಿಷ್ಠರಾದ ಪುರುಷರ ಜೊತೆಯಲ್ಲಿಯೂ ಸಂಬಂಧವು ಶ್ರೇಷ್ಠವೆಂದು ತಿಳಿಯಬೇಕು. ಅವರ ಜೊತೆಯಲ್ಲಿ ಎಂದೂ ವಿರೋಧವನ್ನು ಮಾಡಬಾರದು.

ಆಭ್ಯಾಂ ತು ನರಸೀಮಾಭ್ಯಾಂ ವಿರುದ್ಧಸ್ಯಾಲ್ಪಚೇತಸಃ |
ಪ್ರಥಮಂ ಛಿದ್ಯತೇ ನಿದ್ರಾ ದ್ವಿತೀಯಂ ಜಾಯತೇ ಭಯಮ್ ॥62॥

ಸೇವಕರ ಈ ಎರಡು ಎಲ್ಲೆಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವ ಅಲ್ಪ ಮನುಷ್ಯನಿಗೆ ಮೊದಲು ನಿದ್ರೆಯು ನಾಶವಾಗುತ್ತದೆ, ಅನಂತರ ಭಯವು ಉಂಟಾಗುತ್ತದೆ.

ಉದ್ಧತಾನಾಂ ಚ ಯೋ ವೇಷಃ ಕುಹಕಾನಾಂ ಚ ಯೋ ಭವೇತ್ |
ರಾಜವೇಷಂ ಚ ವಿಸ್ಪಷ್ಟಂ ಸೇವಮಾನೋ ನ ವರ್ಧತೇ ॥63॥
ಇತರಾಭ್ಯಾಂ ತು ವೇಷಾಭ್ಯಾಂ ಪರಿಹಾಸ್ಯೇತ ಬಾಂಧವೈಃ ॥64॥

ರಾಜನಿಗೆ ಉದ್ಧತರಾಗಿರುವವರ ವೇಷವನ್ನು ಮತ್ತು ಕುಹಕಿಗಳ ವೇಷವನ್ನು ಎಂದೂ ಧರಿಸಬಾರದು. ರಾಜವೇಷವನ್ನು ಸ್ಪಷ್ಟವಾಗಿ ಧರಿಸುವ ಸೇವಕನು ಎಂದೂ ಅಭಿವೃದ್ಧಿಯನ್ನು ಹೊಂದುವುದಿಲ್ಲ. ಉಳಿದ ಎರಡು ವೇಷಗಳನ್ನು ಧರಿಸಿದರೆ ಬಂಧುಗಳಿಂದ ಪರಿಹಾಸಕ್ಕೆ ಈಡಾಗುತ್ತಾನೆ.

ಅಪುಂಭಿಶ್ಚೈವ ಪುಂಭಿಶ್ಚ ಸ್ತ್ರೀಭಿಃ ಸ್ತ್ರೀದರ್ಶಿಭಿರ್ನರೈಃ |
ಶಕ್ಯೇ ಸತಿ ನ ಸಂಭಾಷಾಂ ಜಾತು ಕುರ್ವೀತ ಕರ್ಹಿಚಿತ್ ॥65॥

ನಪುಂಸಕರ ಜೊತೆಯಲ್ಲಿ, ಸ್ತ್ರೀಯರ ಜೊತೆಯಲ್ಲಿ ಮತ್ತು ಸ್ತ್ರೀಲೋಲರ ಜೊತೆಯಲ್ಲಿ ಸಾಧ್ಯವಾದರೆ ಯಾವ ಕಾರಣದಿಂದಲೂ ಸಂಭಾಷಣೆಯನ್ನು ಮಾಡಬಾರದು.

ಪ್ರತಿಸಂಭಾಷಮಾಣೋऽಪಿ ತ್ರಿಭಿರೇತೈರಚೇತನಃ |
ಶ್ಯೇನಃ ಪೇಶೀಮಿವಾದತ್ತೇ ಪುರುಷೋ ಭೂತಿಮಾತ್ಮನಃ ॥66॥

ಎಚ್ಚರವಿಲ್ಲದೇ ಈ ಮೂರು ಜನರ ಜೊತೆಯಲ್ಲಿ ಮಾತನಾಡುವ ಮನುಷ್ಯನು ಗಿಡುಗವು ಮಾಂಸವನ್ನು ಎತ್ತಿಕೊಂಡು ಹೋದಂತೆ ತನ್ನ ಐಶ್ವರ್ಯವನ್ನು ತಾನೇ ನಾಶಮಾಡಿಕೊಳ್ಳುತ್ತಾನೆ.

ಯೇ ತು ರಾಜ್ಞಾ ಹ್ಯಸತ್ಕಾರಂ ಲಭೇರನ್ ಕಾರಣಾರ್ಥಿನಃ |

ತೈಶ್ಚ ಸಾಮಂತದೂತೈಶ್ಚ ನ ಸಂಸಜ್ಜೇತ ಕರ್ಹಿಚಿತ್ ॥67॥
ಯಾರು ತಾವು ಮಾಡಿದ ಕಾರ್ಯಗಳಿಂದಾಗಿ ರಾಜನಿಂದ ಅಸತ್ಕಾರವನ್ನು ಪಡೆಯುವರೋ ಅವರ ಜೊತೆಯಲ್ಲಿ ಮತ್ತು ಸಾಮಂತರಾಜರ ದೂತರ ಜೊತೆಯಲ್ಲಿ ಎಂದೂ ಸಂಸರ್ಗವನ್ನು ಹೊಂದಬಾರದು.

ನ ಚಾನ್ಯಾಚರಿತಾಂ ಭೂಮಿಮಸಂದಿಷ್ಟೋ ಮಹೀಪತೇಃ |
ಉಪಸೇವೇತ ಮೇಧಾವೀ ಯೋ ರಾಜವಸತಿಂ ವಸೇತ್ ॥68॥
ಮೇಧಾವಿಯಾದ ರಾಜಸೇವಕನು ರಾಜನ ಅಪ್ಪಣೆಯಿಲ್ಲದೆ ಇನ್ನೊಬ್ಬರು ನಿಲ್ಲುವ ಪ್ರದೇಶದಲ್ಲಿ ಎಂದೂ ನಿಲ್ಲಬಾರದು.

ನ ಚ ಸಂದರ್ಶನೇ ಕಿಂಚಿತ್ ಪ್ರವೃದ್ಧಮಭಿಸಂಜಪೇತ್ |
ಅಪಿ ಹ್ಯೆತದ್ ದರಿದ್ರಾಣಾಂ ವ್ಯಲೀಕಸ್ಥಾನಮುತ್ತಮಮ್ ॥69॥
ರಾಜನನ್ನು ನೋಡಿ ತನ್ನ ಕಾರ್ಯವನ್ನು ಹೇಳಿದ ಮೇಲೆ ಬಹಳ ಹೊತ್ತು ಮಾತನಾಡಬಾರದು. ತಮ್ಮ ಕಾರ್ಯವು ಮುಗಿದ ಮೇಲೆ ಮಾತನಾಡುವುದನ್ನು ದರಿದ್ರರೂ ಸಹಿಸುವುದಿಲ್ಲ, ಇನ್ನು ರಾಜರು ಹೇಗೆ ಸಹಿಸಿಯಾರು?

ಅರ್ಥಕಾಮಾ ಚ ಯಾ ನಾರೀ ರಾಜಾನಂ ಸ್ಯಾದುಪಸ್ಥಿತಾ |
ಅನುಜೀವೀ ತಥಾ ಯುಕ್ತಾಂ ನಿಧ್ಯಾಯನ್ ದುಷ್ಯತೇ ಚ ಸಃ ॥70॥
ಯಾವ ಹೆಂಗಸು ಧನಕಾಮನೆಯಿಂದ ರಾಜನ ಸಮೀಪಕ್ಕೆ ಬರುತ್ತಾಳೋ ಸೇವಕನಾದವನು ಅಂತಹ ನಾರಿಯನ್ನು ಹೆಚ್ಚು ಚಿಂತನೆಯನ್ನು ಮಾಡಬಾರದು. ಹಾಗೆ ಮಾಡಿದರೆ ಅವನು ದೋಷಕ್ಕೆ ಒಳಗಾಗುತ್ತಾನೆ.

ತಸ್ಮಾನ್ನಾರೀಂ ನ ನಿಧ್ಯಾಯೇತ್ ತಥಾ ಯುಕ್ತಾಂ ವಿಚಕ್ಷಣಃ |
ತಥಾ ಕ್ಷುತಂ ಚ ವಾತಂ ಚ ನಿಷ್ಠೀವಂ ಚಾಚರೇಚ್ಛನೈಃ ॥71॥
ಆದ್ದರಿಂದ ವಿಚಕ್ಷಣನಾದವನು ಅಂತಹ ನಾರಿಯರ ಚಿಂತೆಯನ್ನು ಬಿಡಬೇಕು. ಅದರಂತೆ ರಾಜನ ಸಮೀಪದಲ್ಲಿ ಸೀನುವುದನ್ನಾಗಲೀ, ಅಪಾನವಾಯುವನ್ನು ಬಿಡುವುದಾಗಲೀ ಅಥವಾ ಉಗುಳುವುದನ್ನಾಗಲೀ ಮಾಡಿದರೆ ಮೆಲ್ಲಗೆ ಮಾಡಬೇಕು.

ನ ನರ್ಮಸು ಹಸೇಜ್ಜಾತು ಮೂಢವೃತ್ತಿರ್ಹಿ ಸಾ ಸ್ಮೃತಾ |
ಸ್ಮಿತಂ ತು ಮೃದುಪೂರ್ವೇಣ ದರ್ಶಯೀತ ಪ್ರಸಾದಜಮ್ ॥72॥
ಹಾಸ್ಯ ಪ್ರಸಂಗಗಳಲ್ಲಿ ಗಟ್ಟಿಯಾಗಿ ನಗಬಾರದು. ಅದು ಅಧಮಜನರ ನಡವಳಿಕೆ ಎಂದು ಹೇಳಲ್ಪಡುತ್ತದೆ. ತನ್ನ ಸಂತೋಷದಿಂದ ಉಂಟಾದ ನಗುವನ್ನು ಮಂದಹಾಸದಿಂದಲೇ ತೋರಿಸಬೇಕು.

ನ ಚಾಕ್ಷೌ ನ ಭುಜೌ ಜಾತು ನ ಚ ವಕ್ತ್ರಂ ಸಮಾಕ್ಷಿಪೇತ್ |
ನ ಚ ತಿರ್ಯಗವೇಕ್ಷೇತ ಚಕ್ಷುರ್ಭ್ಯಾಂ ಸಮ್ಯಗಾಚರೇತ್ ॥73॥
ರಾಜನ ಎದುರಿನಲ್ಲಿ ಕಣ್ಣುಗಳನ್ನಾಗಲೀ, ಭುಜಗಳನ್ನಾಗಲೀ ಅಥವಾ ಮುಖವನ್ನಾಗಲೀ ಕುಣಿಸಬಾರದು. ಓರೆನೋಟದಿಂದ ನೋಡಬಾರದು. ನೇರವಾಗಿ ನೋಡಬೇಕು.

ಭ್ರುಕುಟಿಂ ಚ ನ ಕುರ್ವೀತ ನ ಚಾಂಗುಷ್ಠೈರ್ಮಹೀಂ ಲಿಖೇತ್ |
ನಾತಿಗಾಢಂ ಪ್ರಹೃಷ್ಯೇತ ಜಾತು ರಾಜ್ಞಃ ಸಮೀಪತಃ ॥74॥
ರಾಜನ ಸಮೀಪದಲ್ಲಿ ಇರುವವನು ಹುಬ್ಬುಗಳನ್ನು ಗಂಟುಹಾಕಬಾರದು. ಅಂಗುಷ್ಠದಿಂದ ಭೂಮಿಯನ್ನು ಬರೆಯಬಾರದು ಮತ್ತು ಗಟ್ಟಿಯಾಗಿ ಸದ್ದುಮಾಡುತ್ತಾ ಸಂತೋಷವನ್ನು ವ್ಯಕ್ತಪಡಿಸಬಾರದು.

ನ ಪ್ರಶಂಸೇನ್ನ ಚಾಸೂಯೇತ್ ಪ್ರಿಯೇಷು ಚ ಹಿತೇಷು ಚ |
ಸ್ತೂಯಮಾನೇಷು ವಾ ತತ್ರ ದೂಷ್ಯಮಾಣೇಷು ವಾ ಪುನಃ ॥75॥
ರಾಜನಿಗೆ ಪ್ರಿಯರಾದವರು ಮತ್ತು ಹಿತರಾದವರು ಪ್ರಶಂಸಿಸಲ್ಪಡುವಾಗ ಅಥವಾ ಅಹಿತರಾದವರು ದೂಷಿಸಲ್ಪಡುವಾಗ ತಾನು ಪ್ರಶಂಸೆಯನ್ನಾಗಲೀ, ಅಸೂಯೆಯನ್ನಾಗಲೀ ಮಾಡಬಾರದು.

ಅಥ ಸಂದೃಶ್ಯಮಾನೇಷು ಪ್ರಿಯೇಷು ಚ ಹಿತೇಷು ಚ |
ಶ್ರೂಯಮಾಣೇಷು ವಾಕ್ಯೇಷು ವರ್ಣಯೇದಮೃತಂ ಯಥಾ ॥76॥
ರಾಜನಿಗೆ ಪ್ರಿಯರಾದವರು ಮತ್ತು ಹಿತರಾದವರು ಕಣ್ಣಿಗೆ ಬಿದ್ದು ಸೇವಕನ ವಾಕ್ಯವನ್ನು ಕೇಳುವುದಾದರೆ ಅವರಿಗೆ ಅಮೃತದಂತೆ ಹಿತವಾಗುವಂತೆ ಮಾತನಾಡಬೇಕು.

ನ ರಾಜ್ಞಃ ಪ್ರತಿಕೂಲಾನಿ ಸೇವಮಾನಃ ಸುಖೀ ಭವೇತ್ |
ಪುತ್ರೋ ವಾ ಯದಿ ವಾ ಭ್ರಾತಾ ಯದ್ಯಪ್ಯಾತ್ಮಸಮೋ ಭವೇತ್ ॥77॥
ರಾಜನಿಗೆ ಪ್ರತಿಕೂಲವನ್ನು ಆಚರಿಸುವ ಸೇವಕನು ಎಂದೂ ಸುಖಿಯಾಗುವುದಿಲ್ಲ. ಅವನು ರಾಜಪುತ್ರನೇ ಆಗಲಿ ಅಥವಾ ರಾಜಭ್ರಾತೃವೇ ಆಗಲಿ ಅಥವಾ ರಾಜನಿಗೆ ಸಮಾನನಾದವನೇ ಆಗಲಿ ರಾಜನು ಅದನ್ನು ಸಹಿಸುವುದಿಲ್ಲ.

ಅಪ್ರಮತ್ತೋ ಹಿ ರಾಜಾನಂ ರಂಜಯೇತ್ ಶೀಲಸಂಪದಾ |
ಉತ್ಥಾನೇನ ತು ಮೇಧಾವೀ ಶೌಚೇನ ದ್ವಿವಿಧೇನ ತಮ್ ॥78॥
ಮೇಧಾವಿಯಾದ ಸೇವಕನಾದವನು ಜಾಗರೂಕನಾಗಿ ತನ್ನ ಶೀಲ, ಸಂಪತ್ತುಗಳಿಂದ, ಉದ್ಯಮ ಶೀಲತೆಯಿಂದ ಮತ್ತು ಉಭಯವಿದವಾದ (ಆಂತರಿಕ ಮತ್ತು ಬಾಹ್ಯ) ಶೌಚದಿಂದ ರಾಜನನ್ನು ಸಂತೋಷ ಪಡಿಸಬೇಕು.

ಸ್ನಾನಂ ಹಿ ವಸ್ತ್ರಶುದ್ಧಿಶ್ಚ ಶಾರೀರಂ ಶೌಚಮುಚ್ಯತೇ |
ಅಸಕ್ತಿಃ ಪ್ರಾಕೃತಾರ್ಥೇಷು ದ್ವಿತೀಯಂ ಶೌಚಮುಚ್ಯತೇ ॥79॥
ಸ್ನಾನ, ಮತ್ತು ಶುದ್ಧವಾದ ವಸ್ತ್ರಧಾರಣ ಇದು ಶರೀರದ ಶುದ್ಧಿ ಎನಿಸುತ್ತದೆ. ಸುತ್ತಲೂ ಕಾಣುವ ವಸ್ತುಗಳಲ್ಲಿ ಆಸಕ್ತಿ ಇಲ್ಲದಿರುವುದು ಆಂತರಿಕವಾದ ಶೌಚವೆನಿಸುತ್ತದೆ.

ರಾಜಾ ಭೋಜೋ ವಿರಾಟ್ ಸಮ್ರಾಟ್ ಕ್ಷತ್ರಿಯೋ ಭೂಪತಿರ್ನೃಪಃ |
ಯ ಏತೈಃ ಸ್ತೂಯತೇ ಶಬ್ದೈಃ ಕಸ್ತಂ ನಾರ್ಚಿತುಮರ್ಹತಿ ॥80॥
ರಾಜ, ಭೋಜ, ವಿರಾಟ್, ಸಮ್ರಾಟ್, ಕ್ಷತ್ರಿಯ, ಭೂಪತಿ, ನೃಪ ಇಂತಹ ಶಬ್ದಗಳಿಂದ ಸ್ತೋತ್ರ ಮಾಡಲ್ಪಡುವ ರಾಜನನ್ನು ಯಾರು ತಾನೆ ಅರ್ಚಿಸುವುದಿಲ್ಲ?
ತಸ್ಮಾದ್ ಭಕ್ತೋ ಹಿ ಯುಕ್ತಃ ಸನ್ ಸತ್ಯವಾದೀ ಜಿತೇಂದ್ರಿಯಃ |
ಮೇಧಾವೀ ಧೃತಿಮಾನ್ ಪ್ರಾಜ್ಞಃ ಸಂಶ್ರಯೀತ ಮಹೀಪತಿಮ್ ॥81॥
ಆದ್ದರಿಂದ ಪ್ರಾಜ್ಞನಾದ ಸೇವಕನು ರಾಜನಲ್ಲಿ ಅನುರಾಗವನ್ನು ಹೊಂದಿದವನಾಗಿ ಸತ್ಯವಾದಿಯೂ, ಜಿತೇಂದ್ರಿಯನೂ, ಮೇಧಾವಿಯೂ, ಧೈರ್ಯಶಾಲಿಯೂ ಆಗಿ ರಾಜನನ್ನು ಆಶ್ರಯಿಸಬೇಕು.
ಏಷ ವಃ ಸಮುದಾಚಾರಃ ಸಮುದ್ದಿಷ್ಟೋ ಯಥಾವಿಧಿ |
ಯಥಾಽರ್ಥಾನ್ ಸಂಪ್ರಪತ್ಸ್ಯಂತೇ ಪಾರ್ಥ ರಾಜೋಪಜೀವಿನಃ ॥82॥
ಎಲೈ ಯುಧಿಷ್ಠಿರನೇ, ರಾಜನನ್ನು ಉಪಜೀವಿಸುವವರು ಹೇಗೆ ಅಭಿವೃದ್ಧಿಯನ್ನು ಹೊಂದುತ್ತಾರೆ ಎಂಬ ವಿಷಯದಲ್ಲಿ ನಾನು ನಿಮಗೆ ಶಾಸ್ತ್ರವಿಧಿಯಂತೆ ನಡೆದುಕೊಳ್ಳಬೇಕಾದ ಸಮಾಚಾರವನ್ನು ತಿಳಿಸಿದ್ದೇನೆ.
ಸಂವತ್ಸರಮಿಮಂ ತಾವದ್ ಏವಂಶೀಲಾ ಬುಭೂಷತ |
ತತಃ ಸ್ವವಿಷಯಂ ಪ್ರಾಪ್ಯ ಯಥಾಕಾಮಂ ಚರಿಷ್ಯಥ ॥83॥
ಈ ಒಂದು ವರ್ಷವನ್ನು ಇಂತಹ ನಡವಳಿಕೆ ಉಳ್ಳವರಾಗಿ ಕಳೆಯಿರಿ. ಅನಂತರ ನಿಮ್ಮ ರಾಜ್ಯವನ್ನು ಮರಳಿ ಪಡೆದು ನಿಮಗೆ ಇಷ್ಟಬಂದಂತೆ ನಡೆದುಕೊಳ್ಳಬಹುದು.
ವೈಶಂಪಾಯನಃ
ತಂ ತಥೇತ್ಯಬ್ರುವನ್ ಪಾರ್ಥಾಃ ಋಷಿಕಲ್ಪಂ ಯಶಸ್ವಿನಮ್ |
ಪ್ರಹೃಷ್ಟಾಶ್ಚಾಭಿವಾದ್ಯೈನಮುಪಾತಿಷ್ಠನ್ ಪರಂತಪಾಃ ॥84॥
ವೈಶಂಪಾಯನ ಪರಂತಪರಾದ ಪಾರ್ಥರು ಋಷಿಸಮಾನರಾದ, ಕೀರ್ತಿವಂತರಾದ ಧೌಮ್ಯರ ಮಾತುಗಳನ್ನು ಕೇಳಿ ಸಂತೋಷಗೊಂಡು ಹಾಗೆಯೇ ಆಗಲಿ ಎಂದು ಹೇಳಿ ಅವರಿಗೆ ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟರು.
ತೇಷಾಂ ಪ್ರತಿಷ್ಠಮಾನಾನಾಂ ಮಂತ್ರಾಂಶ್ಚ ಬ್ರಾಹ್ಮಣೋಽಜಪತ್ |
ಸರ್ವವಿಘ್ನಪ್ರಶಮನಾನರ್ಥಸಿದ್ಧಿಕರಾಂಸ್ತಥಾ ॥85॥
ಭವಾಯ ರಾಷ್ಟ್ರಲಾಭಾಯ ಪರಾಯ ವಿಜಯಾಯ ಚ ॥86॥
ಅವರು ಹೊರಟಂತೆ ಬ್ರಾಹ್ಮಣರಾದ ಧೌಮ್ಯರು ಎಲ್ಲ ವಿಘ್ನಗಳನ್ನೂ ಪರಿಹಾರ ಮಾಡುವಂತಹ, ಅರ್ಥಸಿದ್ಧಿಯನ್ನು ಉಂಟುಮಾಡತಕ್ಕಂತಹ, ಸಮೃದ್ಧಿಯನ್ನೂ, ರಾಷ್ಟ್ರಲಾಭವನ್ನೂ ಮತ್ತು ಶ್ರೇಷ್ಠವಾದ ವಿಜಯವನ್ನೂ ಸಂಪಾದಿಸಿಕೊಡುವಂತಹ ಮಂತ್ರಗಳನ್ನು ಜಪಿಸಿದರು.
ತತೋಽಬ್ರವೀದಸೌ ವಿಪ್ರೋ ವಾಚಮಾಶೀಃ ಪ್ರಯುಜ್ಯ ಚ |
ಸ್ವದ್ರವ್ಯಪ್ರತಿಲಾಭಾಯ ಶತ್ರೂಣಾಂ ವಿನಯಾಯ ಚ ॥87॥
ಸ್ವಸ್ತಿ ವೋಽಸ್ತು ಶಿವಃ ಪಂಥಾ ದ್ರಕ್ಷ್ಯಾಮಿ ಪುನರಾಗತಾನ್ |
ಅನಂತರ ತಮ್ಮ ದ್ರವ್ಯವನ್ನು ಪುನಃ ಪಡೆಯುವುದಕ್ಕೆ ಮತ್ತು ಶತ್ರುಗಳನ್ನು ಸದೆ ಬಡಿಯುವುದಕ್ಕೆ ಯೋಗ್ಯವಾದ ಆಶೀರ್ವಾದಗಳನ್ನು ಮಾಡಿ `ನಿಮಗೆ ಮಂಗಳವಾಗಲಿ, ನಿಮ್ಮ ಮಾರ್ಗವು ಕ್ಷೇಮದಿಂದಿರಲಿ, ಪುನಃ ಹಿಂದಿರುಗಿದ ನಿಮ್ಮನ್ನು ನೋಡುವೆನು' ಎಂದು ಹೇಳಿದರು.
ಇತ್ಯುಕ್ತ್ವಾ ಹೃಷ್ಟಮನಸೋ ಗುರುಣಾ ತೇನ ಧೀಮತಾ ॥88॥
ಯುಧಿಷ್ಠಿರಮುಖಾಃ ಸರ್ವೇ ಗಂತುಂ ಸಮುಪಚಕ್ರಮುಃ ॥89॥
ಮೇಧಾವಿಗಳಾದ ಗುರುಗಳಿಂದ ಹೀಗೆ ಹೇಳಲ್ಪಟ್ಟವರಾಗಿ ಸಂತೋಷಗೊಂಡ ಮನಸ್ಸುಳ್ಳ ಯುಧಿಷ್ಠಿರ ಮೊದಲಾದವರೆಲ್ಲರೂ ಅಲ್ಲಿಂದ ಹೊರಡಲು ಉದ್ಯುಕ್ತರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚಮೋಽಧ್ಯಾಯಃ ॥
॥ ವೈರಾಟಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * *
ಆರನೆಯ ಅಧ್ಯಾಯ
ದ್ರೌಪದಿಯ ಜೊತೆಯಲ್ಲಿ ಪಾಂಡವರಿಂದ ವಿರಾಟನಗರ ಪ್ರಾಪ್ತಿ
ವೈಶಂಪಾಯನಃ
ತತಃಪಾವಕಮುಜ್ಜ್ವಾಲ್ಯ ಮಂತ್ರಹವ್ಯಪುರಸ್ಕೃತಮ್ ॥1॥
ತೇಽಗ್ನಿಂ ಪ್ರದಕ್ಷಿಣಂ ಕೃತ್ವಾ ಬ್ರಾಹ್ಮಣಂ ಚ ಪುರೋಹಿತಮ್ |
ಅಭಿವಾದ್ಯ ತತಃ ಸರ್ವೇ ಪ್ರಾದ್ರವನ್ ಸಹ ಕೃಷ್ಣಯಾ ॥2॥
ವೈಶಂಪಾಯನ ಅನಂತರ ಮಂತ್ರ ಮತ್ತು ಹವಿಸ್ಸುಗಳಿಂದ ಅಗ್ನಿಯನ್ನು ಪ್ರಜ್ವಲಗೊಳಿಸಿ ಪಾಂಡವರು ಅಗ್ನಿಯನ್ನು ಮತ್ತು ಪುರೋಹಿತರಾದ ಬ್ರಾಹ್ಮಣರನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಎಲ್ಲರೂ ದ್ರೌಪದಿಯ ಜೊತೆಯಲ್ಲಿ ಅಲ್ಲಿಂದ ಹೊರಟರು.

ಯುಧಿಷ್ಠಿರಃ
ಅನುಶಿಷ್ಟೋಽಸ್ಮಿ ಭದ್ರಂ ತೇ ನೈತದ್ ವಕ್ತಾಽಸ್ತಿ ಕಶ್ಚನ |
ಕುಂತೀಮೃತೇ ಮಾತರಂ ಚ ವಿದುರಂ ಚ ಮಹಾಮತಿಮ್ ||3||
ಯದೇವಾನಂತರಂ ಕಾರ್ಯಂ ತದ್ ಭವಾನ್ ಕರ್ತುಮರ್ಹತಿ |
ತಾರಣಾಯ ಸುದುಃಖಸ್ಯ ಪ್ರಸ್ಥಾನಾಯಾಭಯಾಯ ಚ ||4||
ಯುಧಿಷ್ಠಿರ ನಮಗೆ ಒಳ್ಳೆಯ ಉಪದೇಶವನ್ನು ನೀಡಿದ್ದೀರಿ. ನಿಮಗೆ ಮಂಗಳವಾಗಲಿ. ತಾಯಿಯಾದ ಕುಂತಿಯನ್ನು ಬಿಟ್ಟು ಮತ್ತು ಮಹಾಮತಿಯಾದ ವಿದುರನನ್ನು ಬಿಟ್ಟು ನಮಗೆ ಇಂತಹ ಮಾತನ್ನು ಹೇಳುವವರು ಯಾರೂ ಇಲ್ಲ. ನಾವು ಈ ದುಃಖವನ್ನು ದಾಟುವುದಕ್ಕೆ ಮತ್ತು ಪ್ರಯಾಣ ಮಾಡುವುದಕ್ಕೆ ಮತ್ತು ಕ್ಷೇಮದಿಂದಿರುವುದಕ್ಕೆ ಮುಂದೆ ಮಾಡಬೇಕಾದ ಕಾರ್ಯಗಳನ್ನು ತಾವು ಮಾಡಬೇಕು.
ವೈಶಂಪಾಯನಃ
ತೇಷಾಂ ಪ್ರತಿಷ್ಠಮಾನಾನಾಂ ಧೌಮ್ಯೋ ಮಂತ್ರಾನಥಾಜಪತ್ |
ಸರ್ವವಿಘ್ನಪ್ರಶಮನಾನ್ ಅರ್ಥಸಿದ್ಧಿಕರಾಂಸ್ತಥಾ ||5||
ವೈಶಂಪಾಯನ ಪಾಂಡವರು ಹೊರಟಂತೆ ಧೌಮ್ಯರು ಸರ್ವವಿಘ್ನಗಳನ್ನು ಪರಿಹಾರ ಮಾಡುವ ಮತ್ತು ಅರ್ಥಸಿದ್ಧಿಯನ್ನು ಉಂಟುಮಾಡುವ ಮಂತ್ರಗಳನ್ನು ಜಪಿಸಿದರು.
ಯಾಜ್ಞಸೇನೀಂ ಪುರಸ್ಕೃತ್ಯ ಸರ್ವ ಏವ ಮಹಾರಥಾಃ |
ಪ್ರಾದ್ರವನ್ ಸಹ ಧೌಮ್ಯೇನ ಬದ್ಧಶಸತತ್ರ ವನಾದ್ ವನಮ್ ||6||
ಮಹಾರಥರಾದ ಅವರೆಲ್ಲರೂ ಶಸ್ತ್ರಗಳನ್ನು ಕಟ್ಟಿಕೊಂಡು, ದ್ರೌಪದಿಯನ್ನು ಮುಂದೆ ಮಾಡಿಕೊಂಡು ಧೌಮ್ಯರ ಜೊತೆಯಲ್ಲಿ ವನದಿಂದ ವನಕ್ಕೆ ಓಡಿದರು.
ತೇ ವೀರಾ ಬದ್ಧನಿಸ್ತ್ರಿಂಶಾ ಧನುರ್ಬಾಣಕಲಾಪಿನಃ |
ಅಗಚ್ಛನ್ ಭೀಮಧನ್ವಾನಃ ಕಾಮ್ಯಕಾದ್ ಯಮುನಾಂ ನದೀಮ್ ||7||
ಕತ್ತಿಗಳನ್ನು ಕಟ್ಟಿಕೊಂಡು ಧನುರ್ಬಾಣಕಲಾಪಗಳನ್ನು ಧರಿಸಿದ ಆ ವೀರರು ಕೈಯಲ್ಲಿ ಭಯಂಕರವಾದ ಧನುಸ್ಸನ್ನು ಹಿಡಿದು ದ್ವೈತವನದಿಂದ ಕಾಮ್ಯಕವನಕ್ಕೂ, ಅಲ್ಲಿಂದ ಮುಂದೆ ಯಮುನಾ ನದಿಗೂ ಹೋದರು.
ಉತ್ತರೇಣ ದಶಾರ್ಣಾನಾಂ ಪಾಂಚಾಲಾನ್ ದಕ್ಷಿಣೇನ ತು |
ಅಂತರೇಣ ಯಕೃಲ್ಲೋಮಾನ್ ಶೂರಸೇನಾಂಶ್ಚ ಪಾಂಡವಾಃ ||8||
ಕಾಳಿಂದೀದಕ್ಷಿಣಂ ತೀರಮನ್ವಗಚ್ಛನ್ ಪದಾತಯಃ |
ತತಃ ಪ್ರತ್ಯಕ್ ಪ್ರಯಾತಾಸ್ತೇ ಸಂಕ್ರಾಮಂತೋ ವನಾದ್ ವನಮ್ ||9||
ದಶಾರ್ಣದೇಶದ ಉತ್ತರಭಾಗದಲ್ಲಿ ಮತ್ತು ಪಾಂಚಾಲದೇಶದ ದಕ್ಷಿಣ ಭಾಗದಲ್ಲಿ ಯಕೃಲ್ಲೋಮ ಮತ್ತು ಶೂರಸೇನ ದೇಶಗಳ ಮಧ್ಯದಲ್ಲಿ ಪಾದದಿಂದಲೇ ನಡೆದ ಪಾಂಡವರು ಯಮುನಾ ನದಿಯ ದಕ್ಷಿಣ ತೀರವನ್ನು ತಲುಪಿದರು. ಅಲ್ಲಿಂದ ಅವರು ಪಶ್ಚಿಮಾಭಿಮುಖವಾಗಿ ನಡೆಯುತ್ತಾ ಕಾಡಿನಿಂದ ಕಾಡಿಗೆ ಹೊರಟರು.
ವಸಾನಾ ವನದುರ್ಗೇಷು ರಮಣೀಯೇಷು ಧನ್ವಿನಃ |
ಪಲ್ವಲೇಷು ಚ ರಮ್ಯೇಷು ನದೀನಾಂ ಸಂಗಮೇಷು ಚ ||10||
ಧನುಸ್ಸನ್ನು ಧರಿಸಿದ ಅವರು ಮನೋಹರವಾದ ವನದುರ್ಗಗಳಲ್ಲಿಯೂ, ಮನೋಹರವಾದ ಜೌಗು ಪ್ರದೇಶದಲ್ಲಿಯೂ ಮತ್ತು ನದಿಗಳ ಸಂಗಮಗಳಲ್ಲಿಯೂ ವಿಶ್ರಮಿಸಿಕೊಳ್ಳುತ್ತಾ ಮುಂದೆ ನಡೆದರು.
ದ್ರುಮಾನ್ ನಾನಾವಿಧಾಕಾರಾನ್ ನಾನಾವಿಧಲತಾಕುಲಾನ್ |
ಕುಸುಮಾಢ್ಯಾನ್ ಮನಃಕಾಂತಾನ್ ಶುಭಗಂಧಾನ್ ಮನೋರಮಾನ್||
ಪಾರ್ಥಾ ನಿರೀಕ್ಷಮಾಣಾಶ್ಚ ತಾನ್ ದ್ರುಮಾನ್ ಪುಷ್ಪಶಾಲಿನಃ |
ಜಿಘ್ರಂತಃ ಪುಷ್ಪಗಂಧಾಂಶ್ಚ ಸುಸುಗಂಧಾನ್ ಮನೋರಮಾನ್ ||12||
ನಾನಾ ವಿಧವಾದ ಆಕಾರವನ್ನು ಹೊಂದಿದ, ನಾನಾ ವಿಧವಾದ ಲತೆಗಳಿಂದ ತುಂಬಿದ ಪುಷ್ಪಭರಿತವಾದ, ಮನೋಹರವಾದ ಶುಭಗಂಧವುಳ್ಳ ಮರಗಳನ್ನು ನೋಡುತ್ತಾ ಆ ಪುಷ್ಪಗಳ ಮನೋಹರವಾದ ಸುವಾಸನೆಯನ್ನು ಆಘ್ರಾಣಿಸುತ್ತಾ ಪಾಂಡವರು ಮುಂದೆ ಸಾಗಿದರು.
ವಿಧ್ಯಂತೋ ಮೃಗಜಾತಾನಿ ಮಹೇಷ್ವಾಸಾ ಮಹಾಬಲಾಃ |
ಉಷಿತ್ವಾ ದ್ವಾದಶ ಸಮಾ ವನೇ ಪರಪುರಂಜಯಾಃ ||13||
ಲುಬ್ಧಾನ್ ಬ್ರುವಾಣಾ ಮಾತ್ಸ್ಯಸ್ಯ ವಿಷಯಂ ಪ್ರಾವಿಶಂಸ್ತದಾ ||14||
ಮಹಾಧನುಷ್ಕರೂ ಮತ್ತು ಮಹಾಬಲರೂ ಮತ್ತು ಪರಪುರಂಜಯರೂ ಆದ ಅವರು ಹನ್ನೆರಡು ವರ್ಷಗಳ ಕಾಲ ಕಾಡಿನಲ್ಲಿ ವಾಸಮಾಡಿದವರಾಗಿ ಸದ್ಯದಲ್ಲಿ ಅನೇಕ ಮೃಗಗಳನ್ನು ಸಂಹರಿಸುತ್ತಾ ತಮ್ಮನ್ನು ಬೇಡರೆಂದು ಹೇಳಿಕೊಂಡು ಮತ್ಸ್ಯದೇಶವನ್ನು ಪ್ರವೇಶಿಸಿದರು.
ತತ್ರ ಧೌಮ್ಯಂ ಮಹಾತ್ಮಾನಂ ಪಾಂಡವೇಯಾ ವ್ಯಸರ್ಜಯನ್ |
ಅಗ್ನಿಹೋತ್ರಂ ಪರಿಚರನ್ ಸೋಽಬುದ್ಧೋಽವಸದಾಶ್ರಮೇ ||15||
ಅಲ್ಲಿ ಪಾಂಡುಪುತ್ರರು ಮಹಾತ್ಮರಾದ ಧೌಮ್ಯರನ್ನು ಬೀಳ್ಕೊಟ್ಟರು. ಅವರಾದರೂ ಅಗ್ನಿಹೋತ್ರವನ್ನು ರಕ್ಷಣೆ ಮಾಡುತ್ತಾ ಯಾರಿಗೂ ತಿಳಿಯದಂತೆ ತಮ್ಮ ಆಶ್ರಮದಲ್ಲಿ ವಾಸಮಾಡಿದರು.

ತತೋ ಜನಪದಂ ಪ್ರಾಪ್ಯ ಕೃಷ್ಣಾ ರಾಜಾನಮಬ್ರವೀತ್ ॥16॥
ಪಶ್ಯೈಕಪದ್ಯೋ ದೃಶ್ಯಂತೇ ಕ್ಷೇತ್ರೇ ಗೋಷ್ಠಂ ಸಮಾವೃತಾಃ |
ವೃಕ್ಷಾಂಶ್ಚೋಪವನೋಪೇತಾನ್ ಗ್ರಾಮಾಣಾಂ ನಗರಸ್ಯ ಚ ॥17॥
ಅನಂತರ ಮತ್ಸ್ಯದೇಶವನ್ನು ತಲುಪಿದ ದ್ರೌಪದಿಯು ರಾಜನನ್ನು ಕುರಿತು `ನೋಡು, ಗೋಷ್ಠಗಳ ಸುತ್ತಲೂ ಇರುವ ಫಲಗಳಲ್ಲಿ ಏಕಪದಿ ಹುಳುಗಳು ಕಂಡುಬರುತ್ತಿವೆ. ವೃಕ್ಷಗಳು ಗ್ರಾಮಗಳ ಮತ್ತು ನಗರಗಳ ಉಪವನಗಳಿಂದ ಮಿಶ್ರಿತವಾಗಿರುವುದು ಕಂಡುಬರುತ್ತಿದೆ.
ವ್ಯಕ್ತಂ ದೂರೇ ವಿರಾಟಸ್ಯ ರಾಜಧಾನೀ ಭವಿಷ್ಯತಿ |
ವಸಾಮೇಹಾಪರಾಂ ರಾತ್ರಿಂ ಬಲವಾನ್ ಮೇ ಪರಿಶ್ರಮಃ ॥18॥
ಬಹುಶಃ ವಿರಾಟನ ರಾಜಧಾನಿಯು ದೂರದಲ್ಲಿದೆ ಎಂದು ತೋರುತ್ತದೆ. ಇದೊಂದು ರಾತ್ರಿ ಇಲ್ಲಿಯೇ ವಾಸಮಾಡೋಣ. ನನಗೆ ಬಹಳ ದಣಿವಾಗಿದೆ' (ಎಂದು ಹೇಳಿದಳು)
ಯುಧಿಷ್ಠಿರಃ
ಇಮಾಂ ಕಮಲಪತ್ರಾಕ್ಷೀಂ ದ್ರೌಪದೀಂ ಮಾದ್ರಿನಂದನ |
ಬಾಹುಭ್ಯಾಂ ನಕುಲಾದಾಯ ಮುಹೂರ್ತಂ ದ್ರೌಪದೀಂ ನಯ ॥19॥
ತತೋಽದೂರೇ ವಿರಾಟಸ್ಯ ನಗರಂ ಭರತರ್ಷಭ |
ರಾಜಧಾನ್ಯಾಂ ನಿವತ್ಸ್ಯಾಮಃ ಸುಮುಕ್ತಮಿವ ನೋ ವನಮ್ ॥20॥
ಯುಧಿಷ್ಠಿರ ಎಲೈ ಮಾದ್ರಿನಂದನನಾದ ನಕುಲನೇ, ಈ ಕಮಲಾಕ್ಷಿಯಾದ ದ್ರೌಪದಿಯನ್ನು ಒಂದು ಮುಹೂರ್ತದ ಕಾಲ ನಿನ್ನ ಬಾಹುಗಳಿಂದ ಎತ್ತಿಕೊಂಡು ನಡೆಯುವವನಾಗು. ಎಲೈ ಭರತರ್ಷಭನೇ, ವಿರಾಟನ ನಗರವು ಇಲ್ಲಿಯೇ ಸಮೀಪದಲ್ಲಿರುವಂತೆ ಕಾಣುತ್ತದೆ. ನಾವು ರಾಜಧಾನಿಯಲ್ಲಿ ವಾಸಮಾಡೋಣ. ನಾವು ಕಾಡನ್ನು ದಾಟಿಬಂದಂತೆಯೇ ಆಗಿದೆ.
ನಕುಲಃ
ಪೂರ್ವಾಹ್ನೇ ಮೃಗಯಾಂ ಗತ್ವಾ ವನೇ ವಿದ್ಧಾ ಮಹಾಮೃಗಾಃ |
ಅಟವೀ ಚ ಮಯಾ ದೂರಂ ಸೃತಾ ಮೃಗವಧೇಪ್ಸಯಾ ॥21॥
ವಿಷಮಾ ಹ್ಯತಿದುರ್ಗಾ ಚ ವೇಗವತ್ ಪರಿಧಾವತಾ |
ಸೋಽಹಂ ಘರ್ಮಾಭಿತಪ್ತೋ ವೈ ನೈನಾಮಾದಾತುಮುತ್ಸಹೇ ॥22॥
ನಕುಲ ಈ ದಿನ ಬೆಳಿಗ್ಗೆ ನಾನು ಬೇಟೆಗೆ ಹೋಗಿ ಅನೇಕ ಮೃಗಗಳನ್ನು ಬೇಟೆಯಾಡಿದೆ. ಮೃಗಗಳ ವಧೆಯನ್ನು ಉದ್ದೇಶಿಸಿ ನಾನು ವಿಷಮವೂ, ಬಹಳ ಕಠಿಣವೂ ಆದ ಕಾಡಿನಲ್ಲಿ ಬಹಳ ವೇಗದಿಂದ ಬಹುದೂರದವರೆಗೆ ಓಡಿ ಬೇಟೆಯಾಡಿದೆ. ನನಗೆ ಬಹಳ ಉಷ್ಣವೂ ಮತ್ತು ದಣಿವೂ ಆಗಿದೆ. ನಾನು ಇವಳನ್ನು ಎತ್ತಿಕೊಳ್ಳಲಾರೆ.
ಯುಧಿಷ್ಠಿರಃ
ಸಹದೇವ ತ್ವಮಾದಾಯ ಮುಹೂರ್ತಂ ದ್ರೌಪದೀಂ ನಯ |
ರಾಜಧಾನ್ಯಾಂ ನಿವತ್ಸ್ಯಾಮಃ ಸುಮುಕ್ತಮಿವ ನೋ ವನಮ್ ॥23॥
ಯುಧಿಷ್ಠಿರ ಸಹದೇವನೇ, ನೀನು ಒಂದು ಮುಹೂರ್ತದ ಕಾಲ ದ್ರೌಪದಿಯನ್ನು ಎತ್ತಿಕೊಂಡು ಮುಂದೆ ನಡೆ. ನಾವು ರಾಜಧಾನಿಯಲ್ಲಿಯೇ ವಾಸ ಮಾಡೋಣ. ಕಾಡನ್ನು ಬಿಟ್ಟುಬಂದಂತೆಯೇ ಆಗಿದೆ.
ಸಹದೇವಃ
ಅಹಮಪ್ಯಸ್ಮಿ ತೃಷಿತಃ ಕ್ಷುಧಯಾ ಚ ಪ್ರಪೀಡಿತಃ |
ಪರಿಶ್ರಾಂತಶ್ಚ ಭದ್ರಂ ತೇ ನೈನಾಮಾದಾತುಮುತ್ಸಹೇ ॥24॥
ಸಹದೇವ ನಾನೂ ಸಹ ಹಸಿವು ಮತ್ತು ನೀರಡಿಕೆಗಳಿಂದ ಪೀಡಿತನಾಗಿದ್ದೇನೆ. ಬಹಳ ದಣಿವೂ ಆಗಿದೆ. ನಿನಗೆ ಮಂಗಳವಾಗಲಿ. ನಾನು ಇವಳನ್ನು ಎತ್ತಿಕೊಳ್ಳಲಾರೆ.
ಯುಧಿಷ್ಠಿರಃ
ಏಹಿ ವೀರ ವಿಶಾಲಾಕ್ಷ ವೀರಸಿಂಹ ಇವಾರ್ಜುನ ॥25॥
ಇಮಾಂ ಕಮಲಪತ್ರಾಕ್ಷೀಂ ದ್ರೌಪದೀಂ ದ್ರುಪದಾತ್ಮಜಾಮ್ |
ಪರಿಗೃಹ್ಯ ಮುಹೂರ್ತಂ ತ್ವಂ ಬಾಹುಭ್ಯಾಂ ಕುಶಲಂ ವ್ರಜ ॥26॥
ರಾಜಧಾನ್ಯಾಂ ನಿವತ್ಸ್ಯಾಮಃ ಸುಮುಕ್ತಮಿವ ನೋ ವನಮ್ ॥27॥
ಯುಧಿಷ್ಠಿರ ವಿಶಾಲಾಕ್ಷನಾದ ವೀರಸಿಂಹನಂತಿರುವ ವೀರನಾದ ಅರ್ಜುನನೇ ಇಲ್ಲಿ ಬಾ. ದ್ರುಪದ ಕುಮಾರಿಯಾದ ಕಮಲಾಕ್ಷಿಯಾದ ಈ ದ್ರೌಪದಿಯನ್ನು ಬಾಹುಗಳಿಂದ ಎತ್ತಿಕೊಂಡು ಒಂದು ಮುಹೂರ್ತದವರೆಗೆ ಕ್ಷೇಮದಿಂದ ಮುಂದೆ ನಡೆ. ನಾವು ರಾಜಧಾನಿಯಲ್ಲಿಯೇ ವಾಸಮಾಡೋಣ. ಕಾಡನ್ನು ಬಿಟ್ಟಂತೆಯೇ ಆಗಿದೆ.
ವೈಶಂಪಾಯನಃ
ಗುರೋರ್ವಚನಮಾಜ್ಞಾಯ ಸಂಪ್ರಹೃಷ್ಟೋ ಧನಂಜಯಃ |
ತಾಮಾದಾಯಾರ್ಜುನಸ್ತೂರ್ಣಂ ಶಾರ್ದೂಲಃ ಪೃಷತೀಮಿವ ॥28॥
ವೈಶಂಪಾಯನ ಅಣ್ಣನ ಮಾತನ್ನು ಕೇಳಿ ಸಂತೋಷಗೊಂಡ ಅರ್ಜುನನು ಹುಲಿಯು ಒಂದು ಹೆಣ್ಣು ಜಿಂಕೆಯನ್ನು ಎತ್ತಿದಂತೆ ಅವಳನ್ನು ಎತ್ತಿಕೊಂಡನು.
ಪ್ರವವ್ರಾಜ ಮಹಾಬಾಹುರರ್ಜುನಃ ಪ್ರಿಯದರ್ಶನಃ |

ಜಟಿಲೋ ವಲ್ಕಲಧರಃ ಶರತೂಣೀಧನುರ್ಧರಃ ॥29॥
ಸ್ಕಂಧೇ ಕೃತ್ವಾ ವರಾರೋಹಾಂ ಬಾಲಾಮಾಯತಲೋಚನಾಮ್ ।
ಆನೀಯ ನಗರಾಭ್ಯಾಶಮವಾತಾರಯದರ್ಜುನಃ ॥30॥
ಮಹಾಬಾಹುವೂ, ಪ್ರಿಯದರ್ಶನನೂ ಜಟಿಲನೂ, ವಲ್ಕಲಧಾರಿಯೂ, ಬಿಲ್ಲುಬಾಣಬತ್ತಳಿಕೆಗಳನ್ನು ಧರಿಸಿದವನೂ ಆದ ಅರ್ಜುನನು ವಿಶಾಲಾಕ್ಷಿಯೂ, ಸುಂದರಿಯೂ ಆದ ಆ ಬಾಲೆಯನ್ನು ಹೆಗಲಿನ ಮೇಲೆ ಎತ್ತಿಕೊಂಡು ನಗರದ ಸಮೀಪಕ್ಕೆ ಬಂದು ಅವಳನ್ನು ಇಳಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ಷಷ್ಠೋಽಧ್ಯಾಯಃ ॥
॥ ವೈರಾಟಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ತಮ್ಮ ಆಯುಧಗಳನ್ನು ಶಮೀವೃಕ್ಷದಲ್ಲಿ ಕಟ್ಟಿಟ್ಟು
ಪಾಂಡವರಿಂದ ವಿರಾಟನಗರಪ್ರವೇಶ
ವೈಶಂಪಾಯನಃ
ಸ ರಾಜಧಾನೀಂ ಸಂಪ್ರಾಪ್ಯ ಪಾರ್ಥಿವೋಽರ್ಜುನಮಬ್ರವೀತ್ ॥1॥
ಇಮಾನಿ ಪುರುಷವ್ಯಾಘ್ರ ಆಯುಧಾನಿ ಪರಂತಪ ।
ಕಸ್ಮಿನ್ ನ್ಯಾಸಯಿತವ್ಯಾನಿ ಗುಪ್ತಿಶ್ಚೈಷಾಂ ಕಥಂ ಭವೇತ್ ॥2॥
ವೈಶಂಪಾಯನ ರಾಜನಾದ ಯುಧಿಷ್ಠಿರನು ವಿರಾಟರಾಜಧಾನಿಯನ್ನು ತಲುಪಿ ಅರ್ಜುನನನ್ನು ಕುರಿತು, `ಎಲೈ ಪುರುಷವ್ಯಾಘ್ರನೇ, ಪರಂತಪನೇ, ಈ ಆಯುಧಗಳನ್ನು ಎಲ್ಲಿ ನ್ಯಾಸವಾಗಿ ಇಡಬೇಕು? ಇವುಗಳ ರಕ್ಷಣೆಯಾದರೂ ಹೇಗೆ ಆದೀತು?
ಸಾಯುಧಾ ಹಿ ವಯಂ ತಾತ ಪ್ರವೇಕ್ಷ್ಯಾಮಃ ಪುರಂ ಯದಿ ।
ಸಮುದ್ವೇಗಂ ಜನಸ್ಯಾಸ್ಯ ಕರಿಷ್ಯಾಮೋ ನ ಸಂಶಯಃ ॥3॥
ಪ್ರೀತಿಪಾತ್ರನೇ, ನಾವು ಆಯುಧಸಹಿತರಾಗಿ ನಗರವನ್ನು ಪ್ರವೇಶಿಸಿದರೆ ನಗರದ ಜನರಿಗೆ ಭಯವನ್ನು ಉಂಟುಮಾಡುವೆವು. ಇದರಲ್ಲಿ ಸಂಶಯವಿಲ್ಲ.
ಗಾಂಡೀವಂ ಹಿ ನರವ್ಯಾಘ್ರ ತ್ರಿಷು ಲೋಕೇಷು ವಿಶ್ರುತಮ್ ।
ಕಥಂ ನಾವಿಷ್ಕೃತಾಃ ಸ್ಯಾಮೋ ಧಾರ್ತರಾಷ್ಟ್ರಸ್ಯ ಮಾರಿಷ ॥4॥
ನರವ್ಯಾಘ್ರನೇ, ವೀರನೇ, ಗಾಂಡೀವ ಧನುಸ್ಸಾದರೂ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದುದು. ನಾವು ಹೇಗೆ ದುರ್ಯೋಧನನಿಂದ ಗುರುತಿಸಲ್ಪಡದೇ ಇರುತ್ತೇವೆ?
ಯದಿದಂ ಧನುರಾದಾಯ ಚರೇಮ ಸಜನೇ ಪುರೇ ।
ಕ್ಷಿಪ್ರಂ ನಃ ಪ್ರತಿಜಾನೀಯುರ್ಮನುಷ್ಯಾ ನಾತ್ರ ಸಂಶಯಃ ॥5॥
ನಾವು ಜನನಿಬಿಡವಾದ ಈ ಪಟ್ಟಣದಲ್ಲಿ ಧನುಸ್ಸುಗಳನ್ನು ತೆಗೆದುಕೊಂಡು ತಿರುಗಿದರೆ ಜನರು ಬಹುಬೇಗ ನಮ್ಮನ್ನು ಗುರುತಿಸುವರು. ಇದರಲ್ಲಿ ಸಂಶಯವಿಲ್ಲ.
ಏಕಸ್ಮಿನ್ನಪಿ ವಿಜ್ಞಾತೇ ಸಮಯಂ ನ ವ್ಯತೀತ್ಯ ಚ ।
ಭೂಯೋ ದ್ವಾದಶ ವರ್ಷಾಣಿ ಪ್ರವಿಶೇಮ ವನಂ ವಯಮ್ ॥6॥
ಸಮಯವು ಕಳೆಯುವುದಕ್ಕಿಂತ ಮುಂಚೆಯೇ ನಮ್ಮಲ್ಲಿ ಒಬ್ಬರನ್ನಾದರೂ ಅವರು ಗುರುತಿಸಿದರೆ ನಾವು ಪುನಃ ಹನ್ನೆರಡು ವರ್ಷಗಳ ಕಾಲ ಕಾಡಿಗೆ ಹೋಗಬೇಕಾದೀತು!
ತಸ್ಮಾತ್ ಸರ್ವಾಣಿ ಶಸ್ತ್ರಾಣಿ ಪ್ರಚ್ಛನ್ನಂ ನ್ಯಸ್ಯ ಕುತ್ರಚಿತ್ ।
ಪ್ರವಿಶೇಮ ಪುರಶ್ರೇಷ್ಠಂ ತದಾ ಸಮ್ಯಕ್ ಕೃತಂ ಭವೇತ್ ॥7॥
ಆದ್ದರಿಂದ ಎಲ್ಲ ಶಸ್ತ್ರಗಳನ್ನೂ ಎಲ್ಲಿಯಾದರೂ ಒಂದು ಕಡೆಯಲ್ಲಿ ಮುಚ್ಚಿಟ್ಟು ನಾವು ಶ್ರೇಷ್ಠವಾದ ನಗರವನ್ನು ಪ್ರವೇಶಿಸೋಣ. ಆಗ ಒಳ್ಳೆಯದಾಗುತ್ತದೆ' ಎಂದು ಹೇಳಿದನು.
ಅಜಾತಶತ್ರೋರ್ವಚನಂ ಶ್ರುತ್ವಾ ಚೈವ ಮಹಾಯಶಾಃ ।
ಉವಾಚ ಧರ್ಮಪುತ್ರಂ ತಮರ್ಜುನಃ ಪರವೀರಹಾ ॥8॥
ಅಜಾತಶತ್ರುವಾದ ಯುಧಿಷ್ಠಿರನ ಮಾತನ್ನು ಕೇಳಿ ಮಹಾಕೀರ್ತಿವಂತನೂ, ಪರವೀರರನ್ನು ಹನನ ಮಾಡುವವನೂ ಆದ ಅರ್ಜುನನು ಧರ್ಮಪುತ್ರನನ್ನು ಕುರಿತು ಮಾತನಾಡಿದನು.
ಇಯಂ ವನೇ ಮನುಷ್ಯೇಂದ್ರ ಮಹತೀ ದೃಶ್ಯತೇ ಶಮೀ ।
ಭೀಮಶಾಖಾ ದುರಾರೋಹಾ ಶ್ಮಶಾನಸ್ಯ ಸಮೀಪತಃ ॥9॥
ವಿಪುಲಾಕೀರ್ಣಶಾಖಾ ಚ ವಾಯಸೈರುಪಸೇವಿತಾ ।
ಸಮೀಪೇ ಚ ಶ್ಮಶಾನಸ್ಯ ಗೃಹಂ ನಾಸ್ಯ ವಿಶೇಷತಃ ॥10॥
ಸಮಾಸಜ್ಯಾಯುಧಾನ್ಯಸ್ಯಾಂ ಗಚ್ಛಾಮೋ ನಗರಂ ಪ್ರತಿ ॥11॥
ಮನುಷ್ಯೇಂದ್ರನೇ, ಕಾಡಿನಲ್ಲಿ ಇಲ್ಲಿ ಈ ದೊಡ್ಡ ಶಮೀವೃಕ್ಷವು ಕಾಣುತ್ತಿದೆ. ಇದು ಭಯಂಕರವಾದ ಕೊಂಬೆಗಳಿಂದ ಕೂಡಿದ್ದು

ಹತ್ತಲು ಬಹಳ ಕಷ್ಟವಾಗಿದ್ದು ಶ್ಮಶಾನದ ಸಮೀಪದಲ್ಲಿದೆ. ವಿಸ್ತಾರವಾದ ಕೊಂಬೆಗಳು ಎಲ್ಲ ಕಡೆಗಳಲ್ಲಿಯೂ ಹರಡಿಕೊಂಡು ಕಾಗೆಗಳಿಗೆ ಆಶ್ರಯವಾಗಿವೆ. ಈ ಸ್ಮಶಾನದ ಸಮೀಪದಲ್ಲಿ ಯಾವ ಮನೆಯೂ ಇಲ್ಲ ಎಂಬುದು ವಿಶೇಷ. ಆದ್ದರಿಂದ ಈ ಶಮೀವೃಕ್ಷದಲ್ಲಿ ನಮ್ಮ ಆಯುಧಗಳನ್ನು ತೂಗು ಹಾಕಿ ನಗರಕ್ಕೆ ಹೋಗೋಣ.

ಉತ್ಪಥೇನಾಪಿ ಜಾತೇಯಮಮನುಷ್ಯನಿಷೇವಿತೇ |
ನ ಚಾಸ್ಯಾಂ ಸಂಚರಿಷ್ಯಂತಿ ಮನುಷ್ಯಾಃ ಪಾರ್ಥ ಕೇಚನ ॥12॥

ಇದು ದಾರಿಯನ್ನು ಬಿಟ್ಟು ಪಕ್ಕದಲ್ಲಿ ಜನರು ಸಂಚಾರ ಮಾಡದಿರುವ ಸ್ಥಳದಲ್ಲಿ ಬೆಳೆದಿದೆ. ಎಲೈ ಪಾರ್ಥನೇ, ಇಲ್ಲಿ ಯಾವ ಜನರೂ ತಿರುಗಾಡುವುದಿಲ್ಲ.

ಧನುರ್ಭಿಃ ಪುರುಷಂ ಕೃತ್ವಾ ಚರ್ಮಕೋಶಾಸ್ಥಿಸಂವೃತಮ್ |
ಉದ್ಬಂಧಮಿವ ಕೃಷ್ಣಂ ಚ ಧನೂಂಷ್ಯಾವಹ ಸಂವೃತಮ್ ॥13॥

ಧನುಸ್ಸುಗಳಿಂದ ಚರ್ಮ, ಕೋಶ ಮತ್ತು ಅಸ್ಥಿಗಳಿಂದ ಕೂಡಿದ ಒಂದು ಕಪ್ಪು ಪುರುಷಾಕಾರವನ್ನು ಮಾಡಿ ಧನುಸ್ಸುಗಳನ್ನು ಮುಚ್ಚಿ ಅದರೊಳಗೆ ಸೇರಿಸಿ ಆ ಮನುಷ್ಯನು ನೇಣುಹಾಕಿಕೊಂಡಂತೆ ಮಾಡು.

ಅಸ್ಯಾಮಾಯುಧಮಾಸಜ್ಯ ಗಚ್ಛೇಮ ನಗರಂ ವಯಮ್ ॥14॥
ಏವಂ ಪರಿಹರಿಷ್ಯಂತಿ ಮನುಷ್ಯಾ ವನಚಾರಿಣಃ ॥15॥
ಅತ್ರೈವಂ ನಾವಬುದ್ಧ್ಯಂತೇ ಮನುಷ್ಯಾಃ ಕೇಚಿದಾಯುಧಮ್ ॥16॥

ಈ ಶಾಖೆಯಲ್ಲಿ ಆಯುಧಗಳನ್ನು ತೂಗುಹಾಕಿ ನಾವು ನಗರಕ್ಕೆ ಹೋಗೋಣ. ಹಾಗೆ ಮಾಡಿದರೆ ವನಚಾರಿಗಳಾದ ಜನರು ಈ ವೃಕ್ಷದಿಂದ ದೂರದಲ್ಲಿಯೇ ಹೋಗುತ್ತಾರೆ. ಯಾವ ಮನುಷ್ಯರೂ ಇಲ್ಲಿ ಆಯುಧಗಳಿರುವುದನ್ನು ತಿಳಿಯುವುದಿಲ್ಲ.

ವೈಶಂಪಾಯನಃ
ಏವಮುಕತ್ತ್ವಾ ಸ ರಾಜಾನಂ ಧರ್ಮಾತ್ಮಾನಂ ಧನಂಜಯಃ |
ಪ್ರಚಕ್ರಮೇ ನಿಧಾನಾಯ ಶಸತ್ರಣಾಂ ಭರತರ್ಷಭ ॥17॥

ವೈಶಂಪಾಯನ ಎಲೈ ಭರತರ್ಷಭನೇ, ಧನಂಜಯನು ಧರ್ಮಿಷ್ಠನಾದ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿ ಶಸ್ತ್ರಗಳನ್ನು ಇಡಲು ಉದ್ಯುಕ್ತನಾದನು.

ತಾನಿ ಸರ್ವಾಣಿ ಸನ್ನಹ್ಯ ಪಂಚ ಪಂಚಾಚಲೋಪಮಾಃ |
ಆಯುಧಾನಿ ಕಲಾಪಾಂಶ್ಚ ನಿಸಿತ್ರಂಶಾಂಶ್ಚಾತುಲಪ್ರಭಾನ್ ॥18॥

ಐದು ಸಣ್ಣಪರ್ವತಗಳಂತಿದ್ದ ಆ ಎಲ್ಲಾ ಆಯುಧಗಳನ್ನೂ, ಅದರ ಪರಿಕರಗಳನ್ನೂ ಮತ್ತು ಮಹಾಪ್ರಭೆಯುಳ್ಳ ಕತ್ತಿಗಳನ್ನೂ ಚೆನ್ನಾಗಿ ಕಟ್ಟಿ ಇಡಲು ಉದ್ಯುಕ್ತನಾದನು.

ತತೋ ಯುಧಿಷ್ಠಿರೋ ರಾಜಾ ಸಹದೇವಮುವಾಚ ಹ |
ಆರುಹ್ಯೇಮಾಂ ಶಮೀಂ ವೀರ ನಿಧತ್ಸ್ವೇಹಾಯುಧಾನಿ ನಃ ॥19॥

ಆಗ ರಾಜನಾದ ಯುಧಿಷ್ಠಿರನು ಸಹದೇವನನ್ನು ಕುರಿತು ವೀರನೇ, ಈ ವೃಕ್ಷವನ್ನು ಏರಿ ನಮ್ಮ ಆಯುಧಗಳನ್ನು ಅದರಲ್ಲಿ ಇಡು.

ಇತಿ ಸಂದಿಶ್ಯ ತಂ ಪಾರ್ಥಃ ಪುನರೇವ ಧನಂಜಯಮ್ |
ಅಬ್ರುವೀದಾಯುಧಾನೀಹ ನಿಧಾತುಂ ಭರತರ್ಷಭ ॥20॥

ಹೀಗೆ ಸಹದೇವನಿಗೆ ಸಂದೇಶವನ್ನು ನೀಡಿ ಯುಧಿಷ್ಠಿರನು ಪುನಃ ಅರ್ಜುನನನ್ನು ಕುರಿತು ಭರತರ್ಷಭನೇ, ನಿನ್ನ ಆಯುಧಗಳನ್ನು ಇಲ್ಲಿ ಇಡು ಎಂದು ಹೇಳಿದನು.

ಯೇನ ದೇವಾನ್ ಮನುಷ್ಯಾಂಶ್ಚ ಪಿಶಾಚೋರಗರಾಕ್ಷಸಾನ್ |
ನಿವಾತಕವಚಾಂಶ್ಚಾಪಿ ಪೌಲೋಮಾಂಶ್ಚ ಪರಂತಪ ॥21॥
ಕಾಲಕೇಯಾಂಶ್ಚ ದುರ್ಧರ್ಷಾನ್ ಸರ್ವಾಂಶ್ಚೈಕರಥೋಽಜಯತ್ |
ಸ್ಫೀತಾನ್ ಜನಪದಾಂಶ್ಚಾನ್ಯಾನಜಯತ್ ಕುರುನಂದನಃ ॥22॥

ಯಾವ ಆಯುಧಗಳಿಂದ (ಗಾಂಡೀವ ಧನುಸ್ಸಿನಿಂದ) ಮನುಷ್ಯರನ್ನು, ಪಿಶಾಚಿಗಳನ್ನು, ಸರ್ಪರಾಕ್ಷಸರನ್ನು, ನಿವಾತಕವಚರನ್ನು, ಪೌಲೋಮರನ್ನು, ಸೋಲಿಸಲು ಅಸಾಧ್ಯರಾದ ಕಾಲಕೇಯರನ್ನು ಇವರೆಲ್ಲರನ್ನೂ ಒಂದೇ ರಥದಲ್ಲಿ ಕುಳಿತು ಕುರುನಂದನನೂ, ಪರಂತಪನೂ ಆದ ಅರ್ಜುನನು ಇವರನ್ನು ಜಯಿಸಿ ಶುಭ್ರವಾದ ಬೇರೆ ದೇಶಗಳನ್ನೂ ಗೆದ್ದನೋ;

ಏತದುಗ್ರಂ ಮಹಾಘೋರಂ ಸಪತ್ನಗಣಸೂದನಮ್ |
ಅಪಜ್ಯಮಕರೋತ್ ಪಾರ್ಥೋ ಗಾಂಡೀವಮಭಯಂಕರಮ್ ॥23॥
ಯೇನ ವೀರಃ ಕುರುಕ್ಷೇತ್ರಮಭ್ಯರಕ್ಷತ್ ಪರಂತಪಃ |

ಅಂತಹ ಉಗ್ರವೂ ಮಹಾಘೋರವೂ, ಶತ್ರುಸಂಹಾರಕವೂ, ಸ್ವಕೀಯರಿಗೆ ಅಭಯಪ್ರದವೂ ಆದಂತಹ ಯಾವ ಧನುಸ್ಸಿನಿಂದ ಪರಂತಪನೂ, ವೀರನೂ ಆದ ಅವನು (ಉತ್ತರ) ಕುರುಕ್ಷೇತ್ರವನ್ನು ಜಯಿಸಿದನೋ ಅಂತಹ ಗಾಂಡೀವ ಧನುಸ್ಸಿನ ಹೆದೆಯನ್ನು ಬಿಚ್ಚಿದನು.

ಜೃಂಭಿತೇ ಚ ಧನುಃಶ್ರೇಷ್ಠೇ ನ್ಯಾಸಾರ್ಥಂ ನೃಪಸತ್ತಮಃ ॥24॥
ಧರ್ಮಪುತ್ರೋ ಮಹಾತೇಜಾಃ ಸರ್ವಲೋಕವಶಂಕರಮ್ |
ಭುಜಂಗಭೋಗಸದೃಶಂ ಮಣಿಕಾಂಚನಭೂಷಣಮ್ ॥25॥
ವಿತ್ರಾಸನಂ ದಾನವಾನಾಂ ರಾಕ್ಷಸಾನಾಂ ಚ ನಿತ್ಯಶಃ |
ಧನೂರತ್ನಂ ಮಹಾತೇಜಾ ಜೃಂಭಯಾಮಾಸ ಪಾಂಡವಃ ॥26॥

ಅರ್ಜುನನು ತನ್ನ ಶ್ರೇಷ್ಠವಾದ ಧನುಸನ್ನು ನ್ಯಾಸವಾಗಿಡುವ ಸಲುವಾಗಿ ನೇರವಾಗಿ ಮಾಡುತ್ತಿರಲು ನೃಪಶ್ರೇಷ್ಠನೂ, ಮಹಾತೇಜಸ್ವಿಯೂ, ಪಾಂಡುಪುತ್ರನೂ ಆದ ಯುಧಿಷ್ಠಿರನು ಎಲ್ಲ ಲೋಕವನ್ನು ವಶಪಡಿಸಿಕೊಳ್ಳುವಂತಹ ಸರ್ವಶರೀರಕ್ಕೆ ಸದೃಶವಾದ, ಮಣಿಕಾಂಚನಗಳಿಂದ ಅಲಂಕೃತವಾದ, ದಾನವರಿಗೂ ಮತ್ತು ರಾಕ್ಷಸರಿಗೂ ಯಾವಾಗಲೂ ಭಯವನ್ನು ಉಂಟುಮಾಡುವ ತನ್ನ ಶ್ರೇಷ್ಠವಾದ ಧನುಸ್ಸನ್ನು ಹೆದೆಯನ್ನು ಸಡಲಿಸಿ ನೇರವಾಗಿ ಮಾಡಿದನು.
ಪಾಂಚಾಲಾನ್ ಯೇನ ಸಂಗ್ರಾಮೇ ಭೀಮಸೇನೋಽಜಯತ್ ಪ್ರಭುಃ |
ಪ್ರತ್ಯಷೇಧದ್ ಬಹೂನೇಕಃ ಸಪತ್ನಾಂಶ್ಚಾಪಿ ದಿಗ್ಜಯೇ ॥27॥
ನಿಶಮ್ಯ ಯಸ್ಯ ವಿಷ್ಫಾರಂ ವಿದ್ರವಂತಿ ರಣೇ ಪರೇ |
ಪರ್ವತಸ್ಯೇವ ದೀರ್ಣಸ್ಯ ವಿಸ್ಫೋಟಮಶನೇರಿವ ॥28॥
ಸೈಂಧವಂ ಯೇನ ರಾಜಾನಂ ಜಿತ್ವಾ ಕ್ರುದ್ಧಃ ಪರಾಮೃಶತ್ |
ಯೇನ ಕ್ರೋಧವಶಾನ್ ಜ್ಘ್ನೇ ರಾಕ್ಷಸಾನ್ ಗಂಧಮಾದನೇ ॥29॥
ದಿವ್ಯಂ ಸೌಗಂಧಿಕಂ ಪುಷ್ಪಂ ಯೇನಾಜ್ಜೈಷೀತ್ ಸ ಪಾಂಡವಃ |
ತ್ರಿಗರ್ತಾನ್ ಯೇನ ಸಂಗ್ರಾಮೇ ಜಿತ್ವಾ ತ್ರೈಗರ್ತಮಾನಯತ್ ॥30॥
ಇಂದ್ರಾಯುಧಸಮಸ್ಪರ್ಶಂ ವಜ್ರಹಾಟಕಭೂಷಿತಮ್ |
ಜ್ಯಾಪಾಶಂ ಧನುಷಸ್ತಸ್ಯ ಭೀಮಸೇನೋಽವತಾರಯತ್ ॥31॥
ಪ್ರಭುವಾದ ಭೀಮಸೇನನು ಯಾವ ಧನುಸ್ಸಿನಿಂದ ಯುದ್ಧದಲ್ಲಿ ಅನೇಕ ಮಂದಿ ಪಾಂಚಾಲರನ್ನು ಒಬ್ಬನೇ ಜಯಿಸಿದನೋ, ದಿಗ್ವಿಜಯಕಾಲದಲ್ಲಿಯೂ ಸಹ ಅನೇಕ ಶತ್ರುಗಳನ್ನು ಜಯಿಸಿದನೋ, ಯಾವ ಧನುಸ್ಸಿನ ಝೇಂಕಾರವನ್ನು ಕೇಳಿ ಶತ್ರುಗಳು ಯುದ್ಧದಲ್ಲಿ ಓಡಿಹೋಗುತ್ತಾರೆಯೋ, ಯಾವ ಧನುಸ್ಸಿನ ಶಬ್ದವು ಪರ್ವತವು ಬಿರಿಯುವಂತೆ ಮತ್ತು ಸಿಡಿಲಿನಂತೆ ಕೇಳಿಬರುತ್ತದೆಯೋ, ಯಾವ ಧನುಸ್ಸಿನಿಂದ ಕೋಪಗೊಂಡ ಅವನು ಸೈಂಧವನಾದ ಜಯದ್ರಥನನ್ನು ಸೋಲಿಸಿ ಕೈಯಿಂದ ಹಿಡಿದನೋ, ಯಾವ ಧನುಸ್ಸಿನಿಂದ ಗಂಧಮಾದನ ಪರ್ವತದಲ್ಲಿ ಕ್ರೋಧವಶ ರಾಕ್ಷಸರನ್ನು ಸಂಹರಿಸಿ ದಿವ್ಯವಾದ ಸೌಗಂಧಿಕ ಪುಷ್ಪವನ್ನು ಸಂಪಾದಿಸಿದನೋ, ಯಾವ ಧನುಸ್ಸಿನಿಂದ ತ್ರಿಗರ್ತರನ್ನು ಗೆದ್ದು ಆ ದೇಶದ ರಾಜನನ್ನು ಹಿಡಿದು ತಂದನೋ, ಅಂತಹ ಇಂದ್ರಾಯುಧಕ್ಕೆ ಸಮವಾದ ಒರಟಾದ ಸ್ಪರ್ಶವುಳ್ಳ, ವಜ್ರಸುವರ್ಣಗಳಿಂದ ಅಲಂಕೃತವಾದ ತನ್ನ ಧನುಸ್ಸಿನ ಹೆದೆಯನ್ನು ಬಿಚ್ಚಿದನು.
ನಕುಲಂ ಪುನರಾಹೂಯ ಧರ್ಮರಾಜೋ ಯುಧಿಷ್ಠಿರಃ |
ಉವಾಚ ಚೈನಂ ಸಂಗ್ರಾಮೇ ಸರ್ವಾನ್ ಶತ್ರೂನ್ ಜಿಘಾಂಸಸಿ ॥32॥
ಸುರಾಷ್ಟ್ರಾನ್ ಜಿತವಾನ್ ಯೇನ ಶಾರ್ಙ್ಗಗಾಂಡೀವಸನ್ನಿಭಮ್ |
ಸುವರ್ಣವಿಕೃತಂ ಸಾರಮಿಂದ್ರಾಯುಧನಿಭಂ ವರಮ್ ॥33॥
ತವಾನುರೂಪಂ ಸುದೃಢಂ ಚಾಪಮೇತದಲಂಕೃತಮ್ |
ತತ್ ಸ್ರಂಸಯಿತ್ವಾ ಜ್ಯಾಪಾಶಂ ನಿಧಾತುಂ ಧನುರಾಹರ ॥34॥
ಧರ್ಮರಾಜನಾದ ಯುಧಿಷ್ಠಿರನು ಪುನಃ ಅನಂತರ ನಕುಲನನ್ನು ಕರೆದು, `ಯಾವ ಧನುಸ್ಸಿನಿಂದ ನೀನು ಶತ್ರುಗಳನ್ನು ಕೊಲ್ಲಲು ಬಯಸುತ್ತೀಯೋ, ಯಾವ ಶಾರ್ಙ್ಗ ಗಾಂಡೀವ ಧನುಸ್ಸಿನ ಕಾಂತಿಯುಳ್ಳ ಧನುಸ್ಸಿನಿಂದ ಸೌರಾಷ್ಟ್ರ ದೇಶವನ್ನು ಗೆದ್ದೆಯೋ, ಅಂತಹ ಸುವರ್ಣದಿಂದ ಅಲಂಕೃತವಾದ ಇಂದ್ರಾಯುಧದ ಕಾಂತಿಯುಳ್ಳ ಶ್ರೇಷ್ಠವಾದ, ಬಲಿಷ್ಠವಾದ, ಸುದೃಢವಾದ ನಿನಗೆ ಯೋಗ್ಯವಾದ ಅಲಂಕೃತವಾದ ಈ ಧನುಸ್ಸಿನ ಹೆದೆಯನ್ನು ಸಡಿಲಿಸಿ ಇಲ್ಲಿ ಇಡಲು ತೆಗೆದುಕೊಂಡು ಬಾ' ಎಂದು ಹೇಳಿದನು.
ವೈಶಂಪಾಯನಃ
ಮಾದ್ರೀಪುತ್ರೋ ಮಹಾಬಾಹುಸ್ತಾಮ್ರಾಸ್ಯೋ ಮಿತಭಾಷಿತಾ |
ಕುಲೇ ನಾಸ್ತಿ ಸಮೋ ರೂಪೇ ಯಸ್ಯೇತಿ ನಕುಲಃ ಸ್ಮೃತಃ ॥35॥
ಅಜಯತ್ ಪಶ್ಚಿಮಾಮಾಶಾಂ ಧನುಷಾ ಯೇನ ಪಾಂಡವಃ |
ಸುವರ್ಣವಿಕೃತಂ ಸಾರಮಿಂದ್ರಾಯುಧವರೋಪಮಮ್ ॥36॥
ತತ್ ಸ್ರಂಸಯಿತ್ವಾ ಜ್ಯಾಪಾಶಂ ನಿಧಾತುಂ ಧನುರಾಹರತ್ ॥37॥
ವೈಶಂಪಾಯನ ಮಹಾಬಾಹುವೂ, ಮಿತವಾಗಿ ಮಾತನಾಡುವವನೂ, ತಾಮ್ರಾಸ್ಯನೂ, ಯಾವನಿಗೆ ಸೌಂದರ್ಯದಲ್ಲಿ ಮತ್ತು ಕುಲದಲ್ಲಿ ಸಮಾನನಾದವನು ಇಲ್ಲದಿರುವ ಕಾರಣ ನಕುಲ ಎಂಬ ಹೆಸರಿದೆಯೋ, ಅಂತಹ ಮಾದ್ರೀಪುತ್ರನಾದ ಪಾಂಡವನಾದ ನಕುಲನು ಯಾವ ಧನುಸ್ಸಿನಿಂದ ಪಶ್ಚಿಮ ದಿಕ್ಕನ್ನು ಜಯಿಸಿದನೋ ಅಂತಹ ಸುವರ್ಣಭೂಷಿತವಾದ ಬಲಿಷ್ಠವಾದ ಇಂದ್ರನ ವಜ್ರಾಯುಧವನ್ನು ಹೋಲುವ ತನ್ನ ಧನುಸ್ಸಿನ ಜ್ಯಾ ಪಾಶವನ್ನು ಸಡಿಲಿಸಿ ಅಲ್ಲಿ ಇಡುವುದಕ್ಕೋಸ್ಕರ ಧನುಸ್ಸನ್ನು ತಂದನು.
ಸಹದೇವಂ ಚ ಸಂಪ್ರೇಕ್ಷ್ಯ ಪುನರ್ಧರ್ಮಸುತೋಽಬ್ರವೀತ್ ॥38॥
ಅನಂತರ ಧರ್ಮರಾಜನು ಸಹದೇವನನ್ನು ನೋಡಿ ಮಾತನಾಡಿದನು.
ಕಳಿಂಗಾನ್ ದಾಕ್ಷಿಣಾತ್ಯಾಂಶ್ಚ ಮಗಧಾಂಶ್ಚಾಪಿ ದಿಗ್ಜಯೇ |
ಯೇನೈವ ಶತ್ರೂನ್ ಸಮರೇಷ್ವಧಾಕ್ಷೀರರಿಮರ್ದನ ॥39॥
ತತ್ ಸ್ರಂಸಯಿತ್ವಾ ಜ್ಯಾಪಾಶಂ ನಿಧಾತುಂ ಧನುರಾಹರ ॥40॥
ಎಲೈ ಶತ್ರುಮರ್ದನನೇ, ದಿಗ್ವಿಜಯ ಕಾಲದಲ್ಲಿ ಕಳಿಂಗರನ್ನೂ, ದಾಕ್ಷಿಣಾತ್ಯರನ್ನೂ ಮತ್ತು ಮಗಧರನ್ನೂ ಯಾವ ನಿನ್ನ ಧನುಸ್ಸಿನಿಂದ ಯುದ್ಧದಲ್ಲಿ ಸುಟ್ಟುಹಾಕಿದೆಯೋ ಅಂತಹ ನಿನ್ನ ಧನುಸ್ಸಿನ ಜ್ಯಾ ಪಾಶವನ್ನು ಸಡಿಲಿಸಿ ಇಲ್ಲಿ ಇಡಲು ತೆಗೆದುಕೊಂಡು ಬಾ' ಎಂದು ಹೇಳಿದನು.

ವೈಶಂಪಾಯನಃ
ಅಜಯದ್ ದಕ್ಷಿಣಾಮಾಶಾಂ ಧನುಷಾ ಯೇನ ಪಾಂಡವಃ |
ತತ್ ಸ್ರಂಸಯಿತ್ವಾ ಜ್ಯಾಪಾಶಂ ನಿಧಾತುಂ ಧನುರಾಹರತ್ ||41||
ವೈಶಂಪಾಯನ ಪಾಂಡುಪುತ್ರನಾದ ಸಹದೇವನು ತನ್ನ ಯಾವ ಧನುಸ್ಸಿನಿಂದ ದಕ್ಷಿಣ ದಿಕ್ಕನ್ನು ಗೆದ್ದನೋ, ಅಂತಹ ಧನುಸ್ಸಿನ ಹೆದೆಯನ್ನು ಸಡಿಲಿಸಿ ಅಲ್ಲಿ ಇಡಲು ತೆಗೆದುಕೊಂಡು ಬಂದನು.
ದೀರ್ಘಾಂಶ್ಚ ಖಡ್ಗಾನ್ ಸುದೃಢಾನ್ ನಿಶಿತಾನ್ ಕನಕತ್ಸರೂನ್ |
ವಿವಿಧಾನ್ ಕ್ಷುರನಾರಾಚಾನ್ ನಿಸಿತ್ರಂಶಾಂಶ್ಚ ಶರಾನಪಿ ||42||
ಆಯುಧಾನಿ ಕಲಾಪಾಂಶ್ಚ ಗದಾಶ್ಚ ನಿದಧುಃ ಸಹ |
ಅಥಾಬ್ರವೀದ್ ಧರ್ಮರಾಜಃ ಸಹದೇವಂ ಪರಂತಪಃ ||43||
ದೀರ್ಘವಾದ, ಸುದೃಢವಾದ, ಹರಿತವಾದ ಚಿನ್ನದ ಹಿಡಿಯಿರುವ ಖಡ್ಗಗಳನ್ನೂ ಅನೇಕ ವಿಧವಾದ ಕ್ಷುರನಾರಾಚಗಳನ್ನೂ, ಅಸಿಗಳನ್ನೂ, ಬಾಣಗಳನ್ನೂ, ಬೇರೆ ಆಯುಧಗಳನ್ನೂ ಮತ್ತು ಆಯುಧದ ಸಲಕರಣೆಗಳನ್ನೂ ಮತ್ತು ಗದೆಗಳನ್ನೂ ಎಲ್ಲರೂ ಸೇರಿ ಒಟ್ಟಿಗೆ ಇಟ್ಟರು. ಅನಂತರ ಪರಂತಪನಾದ ಧರ್ಮರಾಜನು ಸಹದೇವನನ್ನು ಕುರಿತು ಮಾತನಾಡಿದನು.
ಆಯುಧಾನಿ ಕಲಾಪಾಂಶ್ಚ ಗದಾಶ್ಚ ವಿಪುಲಾಸ್ತಥಾ |
ತಾನಿ ಸರ್ವಾಣಿ ಸನ್ನಹ್ಯ ವಾಸೋಭಿಃ ಪರಿವೇಷ್ಟ್ಯ ಚ ||44||
ಆರೋಹ ಯಾವದೇತಾನಿ ನಿಧಾತುಂ ವಿಹಗೈರ್ವೃತಾಮ್ |
ಶಮೀಮಾರುಹ್ಯ ಮಹತೀಂ ನಿಕ್ಷಿಪಾದ್ಯಾಯುಧಾನಿ ನಃ ||45||
ಈ ಎಲ್ಲಾ ಆಯುಧಗಳನ್ನೂ, ಆಯುಧದ ಸಲಕರಣೆಗಳನ್ನೂ, ಹಾಗೆಯೇ ವಿಪುಲವಾದ ಗದೆಗಳನ್ನೂ, ಎಲ್ಲವನ್ನೂ ಬಟ್ಟೆಯಿಂದ ಚೆನ್ನಾಗಿ ಬಿಗಿದು ಈ ಪಕ್ಷಿಗಳಿಂದ ತುಂಬಿದ ಮರದ ಮೇಲೆ ಇಡಲು ಈ ಮರವನ್ನು ಹತ್ತು. ಈಗ ಈ ದೊಡ್ಡ ಶಮೀವೃಕ್ಷವನ್ನು ಹತ್ತಿ ನಮ್ಮ ಆಯುಧಗಳನ್ನು ಅಲ್ಲಿ ಇಡು.
ಇದಂ ಗೋಮೃಗಮಭ್ಯಾಶೇ ಗತಸತ್ತ್ವಮಚೇತನಮ್ |
ಹಾರ್ಯಮುತ್ಕೃತ್ಯ ವೈ ವೀರ ಧನೂಂಷಿ ಪರಿವೇಷ್ಟಯ ||46||
ಇಲ್ಲಿ ಸಮೀಪದಲ್ಲಿ ಒಂದು ಗೋವು ಮೃತವಾಗಿದೆ. ವೀರನೇ, ಅದರ ಚರ್ಮವನ್ನು ತೆಗೆದು ಬಿಲ್ಲುಗಳಿಗೆ ಸುತ್ತು.
ಏವಮುಕ್ತೋ ಮಹಾಬಾಹುಃ ಸಹದೇವೋ ಯಥೋಕ್ತವತ್ |
ಶಮೀಮಾರುಹ್ಯ ತ್ವರಿತೋ ಧನೂಂಷಿ ಪರಿವೇಷ್ಟಯತ್ ||47||
ಹೀಗೆ ಹೇಳಲ್ಪಟ್ಟ ಮಹಾಬಾಹುವಾದ ಸಹದೇವನು ಯುಧಿಷ್ಠಿರನು ಹೇಳಿದಂತೆಯೇ ಶಮೀವೃಕ್ಷವನ್ನು ಹತ್ತಿ ಶೀಘ್ರವಾಗಿ ಧನುಸ್ಸುಗಳನ್ನು ಗೋಚರ್ಮದಿಂದ ಸುತ್ತಿದನು.
ಶೀತವಾತಾತಪಭಯಾದ್ ವರ್ಷತ್ರಾಣಾಯ ದುರ್ಜಯಃ |
ತಾನಿ ವೀರಯಶೋಜ್ಞಾನನಿರಾಬಾಧಾನಿ ಸರ್ವಶಃ ||48||
ಪುನಃ ಪುನಃ ಸುಸಂವೇಷ್ಟ್ಯ ಕೃತ್ವಾ ಸುದೃಢಮಾವರಮ್ ||49||
ಚಳಿ ಗಾಳಿ ಬಿಸಿಲುಗಳ ಭಯದಿಂದ ರಕ್ಷಣೆಯನ್ನು ಮಾಡಲು ದುರ್ಜಯನಾದ ಸಹದೇವನು ಪಾಂಡವರ ಕೀರ್ತಿಯಿಂದಲೂ ಮತ್ತು ಜ್ಞಾನದಿಂದಲೂ ನಿರ್ಬಾಧವಾದ ಆ ಆಯುಧಗಳನ್ನು ಪುನಃಪುನಃ ಎಲ್ಲಕಡೆಗಳಲ್ಲಿಯೂ ಚೆನ್ನಾಗಿ ಸುತ್ತಿ ದೃಢವಾದ ಆವರಣವನ್ನು ಮಾಡಿದನು.
ಅಥಾಪರಮದೂರಸ್ಥಮುಂಛವೃತ್ತಿಕಲೇಬರಮ್ |
ಪ್ರಾಯೋಪವೇಶಾದುಚ್ಛುಷ್ಕಂ ಸ್ನಾಯುಚರ್ಮಾಸ್ಥಿಸಂಯುತಮ್ ||50||
ತಚ್ಚಾನೀಯ ಧನುರ್ಮಧ್ಯೇ ನಿಬಬಂಧುಶ್ಚ ಪಾಂಡವಾಃ |
ಉಪಾಯಕುಶಲಾಃ ಸರ್ವೇ ಸಪ್ರಹಾಸಮಥಾಬ್ರುವನ್ ||51||
ಅನಂತರ ಅಲ್ಲಿಯೇ ಸಮೀಪದಲ್ಲಿದ್ದ ಪ್ರಾಯೋಪ್ರವೇಶವನ್ನು ಮಾಡಿ ತನ್ನ ಶರೀರವನ್ನು ತ್ಯಜಿಸಿದ್ದ ಒಬ್ಬ ಉಂಛವೃತ್ತಿ ಬ್ರಾಹ್ಮಣನ ಸ್ನಾಯು ಚರ್ಮ ಅಸ್ಥಿಗಳಿಂದ ಕೂಡಿದ ಒಣಗಿದ ಶರೀರವನ್ನು ತಂದು ಅದನ್ನು ಧನುಸ್ಸುಗಳ ಮಧ್ಯದಲ್ಲಿಟ್ಟು ಉಪಾಯ ಕುಶಲರಾದ ಪಾಂಡವರು ಚೆನ್ನಾಗಿ ಕಟ್ಟಿ ಎಲ್ಲರೂ ನಗುತ್ತಾ ಮಾತನಾಡಿದರು.
ಅಸ್ಯ ಬದ್ಧಸ್ಯ ದೌರ್ಗಂಧ್ಯಾನ್ಮನುಷ್ಯಾ ವನಚಾರಿಣಃ |
ದೂರಾತ್ ಪರಿಹರಿಷ್ಯಂತಿ ಸಸತ್ತ್ವೇಯಂ ಶಮೀತಿ ಹ ||52||
ಇಲ್ಲಿ ಕಟ್ಟಲ್ಪಟ್ಟ ದೇಹದ ದುರ್ವಾಸನೆಯಿಂದ ವನಚಾರಿಗಳಾದ ಮನುಷ್ಯರು ಈ ಶಮಿಯಲ್ಲಿ ಶವವಿದೆ ಎಂದು ತಿಳಿದು ದೂರದಿಂದಲೇ ಇದನ್ನು ಬಿಟ್ಟು ಹೋಗುತ್ತಾರೆ.
ಅಥಾಬ್ರವೀನ್ಮಹಾರಾಜೋ ಧರ್ಮಾತ್ಮಾ ಸ ಯುಧಿಷ್ಠಿರಃ ||53||
ರಜ್ಜುಭಿಃ ಸುಕೃತಂ ಪ್ರಾಜ್ಞ ವಿನಿರ್ಬಧ್ನೀಹಿ ಪಾಂಡವ ||54||
ಯಾನಿ ಚಾತ್ರ ವಿಶಾಲಾನಿ ರೂಢಮೂಲಾನಿ ಮನ್ಯಸೇ |
ತೇಷಾಮುಪರಿ ಬಧ್ನೀಹಿ ಇದಂ ವಿಪ್ರಕಲೇಬರಮ್ ||55||
ಅನಂತರ ಮಹಾರಾಜನಾದ ಧರ್ಮಾತ್ಮನಾದ ಯುಧಿಷ್ಠಿರನು ಸಹದೇವನನ್ನು ಕುರಿತು, `ಪಾಂಡವನೇ, ಪ್ರಾಜ್ಞನೇ, ಎಲ್ಲಿ ಎಲ್ಲಿ ರಂಧ್ರಗಳು ಕಾಣುತ್ತದೆಯೋ ಅಲ್ಲೆಲ್ಲಾ ಹಗ್ಗಗಳಿಂದ ಚೆನ್ನಾಗಿ ಬಿಗಿದು ಅದರ ಮೇಲೆ ಈ ಬ್ರಾಹ್ಮಣನ ಕಳೇಬರವನ್ನು ಇಡು' ಎಂದು ಹೇಳಿದನು.

ವೈಶಂಪಾಯನಃ
ತಚ್ಚ್ರುತ್ವಾ ಸಹದೇವಸ್ತು ಪರ್ಯಬಧ್ನತ ತಚ್ಛವಮ್ ॥56॥
ವೈಶಂಪಾಯನ ಅದನ್ನು ಕೇಳಿ ಸಹದೇವನು ಆ ಶವವನ್ನು ಕಟ್ಟಿದನು.
ಸಹ ಧರ್ಮೇಣ ಧರ್ಮಾತ್ಮಾ ಭ್ರಾತೃಭಿಶ್ಚ ವಿವಿತ್ಸತಾ |
ಅರಣೀಗ್ರಹಣೇ ಕಾಲೇ ವರಾನ್ ದತ್ತಃ ಪರಂತಪಃ ॥57॥
ತಾನ್ಯಾಯುಧಾನ್ಯುಪಾಧಾಯ ಪ್ರೋವಾಚ ಮಧುರಾಕ್ಷರಮ್ |
ಯುಧಿಷ್ಠಿರಃ ಶುಚಿರ್ಭೂತ್ವಾ ಮನಸಾಽಭಿಪ್ರಣಮ್ಯ ಚ ॥58॥
ಅರಣೀಗ್ರಹಣ ಕಾಲದಲ್ಲಿ ತನ್ನನ್ನು ಪರೀಕ್ಷಿಸಲು ಬಂದ ಯಮದೇವನಿಂದ ತನ್ನ ತಮ್ಮಂದಿರ ಜೊತೆಯಲ್ಲಿ ವರಗಳನ್ನು ಪಡೆದ ಧರ್ಮಾತ್ಮನಾದ ಯುಧಿಷ್ಠಿರನು ಆ ಆಯುಧಗಳನ್ನು ಹಾಗೆ ಇಟ್ಟು ಶುಚಿರ್ಭೂತನಾಗಿ ಮನಸ್ಸಿನಲ್ಲಿಯೇ ನಮಸ್ಕರಿಸಿ ಮಧುರವಾದ ಅಕ್ಷರಗಳಿಂದ ಗಟ್ಟಿಯಾಗಿ ಹೇಳಿದನು.
ಯುಧಿಷ್ಠಿರಃ
ಬ್ರಹ್ಮಾಣಮಿಂದ್ರಂ ವರದಂ ಕುಬೇರಂ ವರುಣಾನಿಲೌ |
ರುದ್ರಂ ಯಮಂ ಚ ವಿಷ್ಣುಂ ಚ ಸೋಮಾರ್ಕೌ ಧರ್ಮಮೇವ ಚ ॥
ಪೃಥಿವೀಮಂತರಿಕ್ಷಂ ಚ ದಿಶಶ್ಚೋಪದಿಶಸ್ತಥಾ |
ವಸೂಂಶ್ಚ ಮರುತಶ್ಚೈವ ಜ್ವಲನಂ ಚಾತಿತೇಜಸಮ್ ॥60॥
ದಿವಾಚರಾ ರಾತ್ರಿಚರಾಣಿ ವಾಽಪಿ
ಯಾನೀಹ ಭೂತಾನ್ಯನುಕೀರ್ತಿತಾನಿ |
ತೇಭ್ಯೋ ನಮಸ್ಕೃತ್ಯ ಚ ಸುವ್ರತೇಭ್ಯಃ
ಪ್ರಣಮ್ಯ ತೇಷಾಂ ಶರಣಂ ಗತೋಽಹಮ್ ॥61॥
ಯುಧಿಷ್ಠಿರ ಬ್ರಹ್ಮದೇವರು, ಇಂದ್ರ, ವರದನಾದ ಕುಬೇರ, ವರುಣಾನಿಲರು, ರುದ್ರ, ಯಮ, ವಿಷ್ಣು, ಚಂದ್ರಸೂರ್ಯರು, ಯಮಧರ್ಮ, ಪೃಥಿವೀ, ಅಂತರಿಕ್ಷ, ದಿಕ್ಕುಗಳು, ಅವಾಂತರ ದಿಕ್ಕುಗಳು, ವಸುಗಳು, ಮರುತ್ತುಗಳು, ಅತಿತೇಜಸ್ವಿಯಾದ ಅಗ್ನಿ, ದಿವಾಚರರು ಮತ್ತು ನಿಶಾಚರರು ಮತ್ತು ನಾನು ಮುಂಚೆ ಹೇಳಿದ ಎಲ್ಲಾ ಭೂತಗಳು- ಈ ಎಲ್ಲಾ ಒಳ್ಳೆಯ ವ್ರತಧಾರಿಗಳಿಗೆ ನಮಸ್ಕರಿಸಿ ನಾನು ಅವರಿಗೆ ಶರಣಾಗತನಾಗಿದ್ದೇನೆ.
ಸರ್ವಾಯುಧಾನೀಹ ಮಹಾಬಲಾನಿ
ನ್ಯಾಸಂ ಮಹಾದೇವಸಮೀಪತೋ ವೈ |
ನ್ಯಸ್ಯಾಮ್ಯಹಂ ವಾಯುಸಮೀಪತಶ್ಚ
ವನಸ್ಪತೀನಾಂ ಚ ಸಪರ್ವತಾನಾಮ್ ॥62॥
ಮಹಾಬಲಿಷ್ಠವಾದ ಈ ಎಲ್ಲಾ ಆಯುಧಗಳನ್ನೂ ನಾನು ಮಹಾದೇವನಾದ ನಾರಾಯಣನ ಸಮೀಪದಲ್ಲಿಯೂ, ವಾಯುದೇವರ ಸಮೀಪದಲ್ಲಿಯೂ, ವನಸ್ಪತಿ ಮತ್ತು ಪರ್ವತಗಳ ಸಮೀಪದಲ್ಲಿಯೂ ನ್ಯಾಸವಾಗಿ ಇಡುತ್ತಿದ್ದೇನೆ (ಲಕ್ಷಾಲಂಕಾರ).
ಏಷ ನ್ಯಾಸೋ ಮಯಾ ನ್ಯಸ್ತಃ ಸೂರ್ಯಸೋಮಾನಿಲಾಂತಿಕೇ |
ಮಹ್ಯಂ ಪಾರ್ಥಾಯ ವಾ ದೇಯಂ ಪೂರ್ಣೇ ವರ್ಷೇ ತ್ರಯೋದಶೇ ॥
ಇದನ್ನು ನಾನು ಸೂರ್ಯಚಂದ್ರ ಅಗ್ನಿಗಳ ಸಮೀಪದಲ್ಲಿ ನ್ಯಾಸವಾಗಿ ಇಡುತ್ತಿದ್ದೇನೆ. ಹದಿಮೂರನೆಯ ವರ್ಷವು ಪೂರ್ಣವಾದ ಮೇಲೆ ಇದನ್ನು ನನಗಾಗಲೀ ಅಥವಾ ಅರ್ಜುನನಿಗಾಗಲೀ ಕೊಡಬೇಕು.
ನೇದಂ ಭೀಮಾಯ ದಾತವ್ಯಮಯಂ ಕ್ರುದ್ಧೋ ವೃಕೋದರಃ ॥64॥
ಅಮರ್ಷಾತ್ ನಿತ್ಯಸಂಕ್ರುದ್ಧೋ ಧೃತರಾಷ್ಟ್ರಸುತಾನ್ ಪ್ರತಿ |
ಅಪೂರ್ಣಕಾಲೇ ಪ್ರಹರೇತ್ ಕ್ರೋಧಸಂಜಾತಮತ್ಸರಃ ॥65॥
ಇದನ್ನು ಭೀಮಸೇನನಿಗೆ ಕೊಡಬಾರದು. ಅವನು ಕೋಪಿಷ್ಠನಾದವನು. ಧೃತರಾಷ್ಟ್ರನ ಪುತ್ರರ ಮೇಲೆ ಸರ್ವದಾ ಬಹಳ ಕ್ರುದ್ಧನಾದ ಅವನು ತನ್ನ ಕೋಪದಿಂದ ಉಂಟಾದ ಮಾತ್ಸರ್ಯದಿಂದ ಕಾಲವು ಪೂರ್ಣವಾಗುವುದಕ್ಕೆ ಮೊದಲೇ ಅವರನ್ನು ಸಂಹರಿಸಬಹುದು.
ಪುನಃ ಪ್ರವೇಶೋ ನಃ ಸ್ಯಾತ್ ತು ವನವಾಸಾಯ ಸರ್ವದಾ |
ಸಮಯೇ ಪರಿಪೂರ್ಣೇ ತು ಧಾರ್ತರಾಷ್ಟ್ರಾನ್ ನಿಹನ್ಮಹಿ ॥66॥
ಏಷ ಚಾರ್ಥಶ್ಚ ಧರ್ಮಶ್ಚ ಕಾಮಃ ಕೀರ್ತಿಃ ಕುಲಂ ಯಶಃ |
ಮಮಾಯತ್ತಮಿದಂ ಸರ್ವಂ ಜೀವಿತಂ ಚ ನ ಸಂಶಯಃ ॥67॥
ಆಗ ನಮಗೆ ಪುನಃ ಸರ್ವದಾ ವನವಾಸವೇ ಪ್ರಾಪ್ತವಾಗುತ್ತದೆ. ಹದಿಮೂರನೆಯ ವರ್ಷದ ಸಮಯವು ಪರಿಪೂರ್ಣವಾದ ಮೇಲೆ ನಾವು ಧಾರ್ತರಾಷ್ಟ್ರರನ್ನು ಕೊಲ್ಲುವೆವು. ನನ್ನ ಅರ್ಥ, ಧರ್ಮ, ಕಾಮ, ಕೀರ್ತಿ, ಕುಲ, ಯಶಸ್ಸು ಮತ್ತು ಪ್ರಾಣ ಎಲ್ಲವನ್ನೂ ಒತ್ತೆಯಾಗಿ ಇಡುತ್ತಿದ್ದೇನೆ. ಇದರಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ದೇವತೇಭ್ಯೋ ನಮಸ್ಕೃತ್ಯ ಶಮೀಂ ಕೃತ್ವಾ ಪ್ರದಕ್ಷಿಣಮ್ |
ನಗರಂ ಗಂತುಮಾಯಾತಾಃ ಸರ್ವೇ ತೇ ಭ್ರಾತರಃ ಸಹ ॥68॥
ವೈಶಂಪಾಯನ ಆ ಎಲ್ಲಾ ಸಹೋದರರೂ ಜೊತೆಯಲ್ಲಿ ದೇವತೆಗಳಿಗೆ ನಮಸ್ಕಾರವನ್ನು ಮಾಡಿ ಶಮಿಗೆ ಪ್ರದಕ್ಷಿಣೆಯನ್ನು ಮಾಡಿ ನಗರವನ್ನು ಪ್ರವೇಶಿಸಲು ಹೊರಟರು.

ಆಗೋಪಾಲವಿಪಾಲೇಭ್ಯಃ ಕರ್ಷಕೇಭ್ಯಃ ಪರಂತಪಾಃ |
ಆಜಗ್ಮುರ್ನಗರಾಭ್ಯಾಶಂ ಶ್ರಾವಯಂತಃ ಪುನಃ ಪುನಃ ॥69॥
ಗೋಪಾಲಕರು ಮತ್ತು ಕುರಿ ಕಾಯುವವರಿಂದ ಹಿಡಿದು ಎಲ್ಲ ಕೃಷೀವಲರಿಗೆ ಪರಂತಪರಾದ ಅವರು ಪುನಃಪುನಃ ಹೀಗೆಯೇ ಪ್ರಸಿದ್ಧಿ ಪಡಿಸುತ್ತಾ ನಗರದ ಸಮೀಪಕ್ಕೆ ಬಂದರು.
ಅಶೀತಿಶತವರ್ಷೇಯಂ ಮಾತಾಽಸ್ಮಾಕಮಿಹಾಂತಿಕೇ |
ಹಂತ ಕಾಲಪರೀಣಾಮಾ ಮೃತ್ಯೋಽಸ್ತು ವಶಮೇಯುಷೀ ॥70॥
ನ ಚಾಗ್ನಿಸಂಸ್ಕಾರಮಿಯಂ ಪ್ರಾಪಿತಾ ಕುಲಧರ್ಮತಃ ॥71॥
ಎಂಬತ್ತು ವರ್ಷದ ನಮ್ಮ ತಾಯಿಯು ಇಲ್ಲಿಯೇ ಸಮೀಪದಲ್ಲಿ ಕಾಲವಶಳಾಗಿ ಮೃತ್ಯುವನ್ನು ಹೊಂದಿದಳು. ನಮ್ಮ ಕುಲಧರ್ಮಕ್ಕೆ ಅನುಸಾರವಾಗಿ ನಾವು ಅವಳಿಗೆ ಅಗ್ನಿಸಂಸ್ಕಾರವನ್ನು ಮಾಡಲಿಲ್ಲ.
ಯಃ ಸಮಾಸಾದ್ಯತೇ ಕಶ್ಚಿತ್ ತಸ್ಮಿನ್ ದೇಶೇ ಯದೃಚ್ಛಯಾ |
ಅಚಿರಾತ್ ತಸ್ಯ ಮರಣಂ ಭವಿಷ್ಯತಿ ನ ಸಂಶಯಃ ॥72॥
ತದ್ಯೈವಮೂಚುಸ್ತೇ ತತ್ರ ಕುಲಧರ್ಮೋ ನ ಈದೃಶಃ ॥73॥
ಯಾರಾದರೂ ಈ ಸ್ಥಳಕ್ಕೆ ಅಕಸ್ಮಾತ್ತಾಗಿ ಬಂದರೆ ತಕ್ಷಣವೇ ಅವರಿಗೆ ಮರಣ ಉಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಇದು ನಮ್ಮ ಕುಲಧರ್ಮ ಎಂದು ಅವರು ಹೇಳಿಕೊಂಡು ಬಂದರು.
ವೈಶಂಪಾಯನಃ
ವಿಶ್ರಾವಯಂತಸ್ತೇ ಸರ್ವೇ ದಿಶಃ ಸರ್ವಾ ವ್ಯನಾದಯನ್ |
ಸ್ವರ್ಗತೇಯಮಿಹಾಸ್ಮಾಕಂ ಜನನೀ ಶೋಕವಿಹ್ವಲಾ ॥74॥
ವನೇ ವಿಚರಮಾಣಾನಾಂ ಲುಬ್ಧಾನಾಂ ವನಚಾರಿಣಾಮ್ |
ಕುಲಧರ್ಮೋಽಯಮಸ್ಮಾಕಂ ಪೂರ್ವೈರಾಚರಿತಃ ಪುರಾ ॥75॥
ವೈಶಂಪಾಯನ ಹೀಗೆ ಅವರು ಎಲ್ಲ ದಿಕ್ಕುಗಳು ಪ್ರತಿಧ್ವನಿಸುವಂತೆ ಈ ನಮ್ಮ ತಾಯಿಯು ಶೋಕವಿಹ್ವಲಳಾಗಿ ಇಲ್ಲಿ ಸ್ವರ್ಗಸ್ಥಳಾದಳು. ವನದಲ್ಲಿ ವಾಸಿಸುವ, ವನದಲ್ಲಿಯೇ ಸಂಚರಿಸುವ ಬೇಡರಾದ ನಮಗೆ ಹೀಗೆ ಅಗ್ನಿಸಂಸ್ಕಾರವನ್ನು ಮಾಡದಿರುವುದು ಹಿಂದಿನಿಂದ ನಡೆದುಕೊಂಡು ಬಂದ ನಮ್ಮ ಕುಲಧರ್ಮ ಎಂದು ಘೋಷಣೆ ಮಾಡುತ್ತಾ ನಡೆದರು.
ಏವಂ ತೇ ಸಮಯಂ ಕೃತ್ವಾ ಸಮಂತಾದವಘುಷ್ಯ ಚ |
ಭೀಮಸೇನಾರ್ಜುನೌ ಚೈವ ಮಾದ್ರೀಪುತ್ರಾವುಭಾವಪಿ ॥76॥
ಯುಧಿಷ್ಠಿರಶ್ಚ ಕೃಷ್ಣಾ ಚ ರಾಜಪುತ್ರೀ ಸುಮಧ್ಯಮಾ |
ತತೋ ಯಥಾಸಮಾಜ್ಞಪ್ತಂ ನಗರಂ ಪ್ರಾವಿಶಂಸ್ತದಾ ॥77॥
ಹೀಗೆ ನಿಯಮವನ್ನು ಮಾಡಿಕೊಂಡು ಎಲ್ಲ ಕಡೆಯಲ್ಲಿಯೂ ಘೋಷಣೆಯನ್ನು ಮಾಡುತ್ತಾ ಭೀಮಸೇನ, ಅರ್ಜುನ, ಮಾದ್ರೀಪುತ್ರರಾದ ನಕುಲ ಸಹದೇವರು, ಯುಧಿಷ್ಠಿರ, ರಾಜಪುತ್ರಿಯೂ ಸುಮಧ್ಯಮೆಯೂ ಆದ ದ್ರೌಪದಿ ಅವರೆಲ್ಲರೂ ಮೊದಲು ಸಮಾಲೋಚನೆ ಮಾಡಿದಂತೆ ಆಗ ನಗರವನ್ನು ಪ್ರವೇಶಿಸಿದರು.
ಮತ್ಸ್ಯರಾಜ್ಞೋ ವಿರಾಟಸ್ಯ ಸಮೀಪಂ ವಸ್ತುಮಂಜಸಾ |
ಅಜ್ಞಾತಚರ್ಯಾಂ ಚರಿತುಂ ವರ್ಷಂ ರಾಷ್ಟ್ರೇ ತ್ರಯೋದಶಮ್ ॥78॥
ಅವರು ಮತ್ಸ್ಯರಾಜನಾದ ವಿರಾಟನ ಸಮೀಪದಲ್ಲಿ ವಾಸ ಮಾಡಿ ಅವನ ರಾಷ್ಟ್ರದಲ್ಲಿ ಹದಿಮೂರನೆಯ ವರ್ಷದ ಅಜ್ಞಾತವಾಸವನ್ನು ಮಾಡಲು ಪ್ರವೇಶಿಸಿದರು.
ಅಥ ಚ್ಛನ್ನಾನಿ ನಾಮಾನಿ ಚಕಾರ್ಯೆಷಾಂ ಯುಧಿಷ್ಠಿರಃ |
ಜಯೋ ಜಯೇಶೋ ವಿಜಯೋ ಜಯತ್ಸೇನೋ ಜಯದ್ಬಲಃ ॥79॥
ಆಪತ್ಸು ನಾಮಭಿಸ್ತ್ವೇತೈಃ ಸಮಾಹೂತಾಃ ಪರಸ್ಪರಮ್ ॥80॥
ಆಗ ಯುಧಿಷ್ಠಿರನು ಅವರಿಗೆ ಜಯ, ಜಯೇಶ, ವಿಜಯ, ಜಯತ್ಸೇನ ಮತ್ತು ಜಯದ್ಬಲ ಎಂಬ ಪ್ರಚ್ಛನ್ನ ನಾಮಗಳನ್ನು ಹೊಸದಾಗಿ ಇಟ್ಟನು. ಆಪತ್ತು ಒದಗಿದಾಗ ಅವರು ಪರಸ್ಪರವಾಗಿ ಈ ಹೆಸರುಗಳಿಂದ ಕರೆಯುತ್ತಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತಮೋಽಧ್ಯಾಯಃ ॥
॥ ವೈರಾಟಪರ್ವಣಿ ವಿರಾಟನಗರಪ್ರವೇಶೋ ನಾಮ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ಯುಧಿಷ್ಠಿರನು ಮಾಡಿದ ದುರ್ಗಾಸ್ತುತಿ
ವೈಶಂಪಾಯನಃ
ವಿರಾಟನಗರಂ ರಮ್ಯಂ ಗಚ್ಛಮಾನೋ ಯುಧಿಷ್ಠಿರಃ |
ಅಸ್ತುವನ್ಮನಸಾ ದೇವೀಂ ದುರ್ಗಾಂ ತ್ರಿಭುವನೇಶ್ವರೀಮ್ ॥1॥
ಯಶೋದಾಗರ್ಭಸಂಭೂತಾಂ ನಾರಾಯಣವರಪ್ರಿಯಾಮ್ |
ನಂದಗೋಪಕುಲೇ ಜಾತಾಂ ಮಾಂಗಲ್ಯಾಂ ಕುಲವರ್ಧನೀಮ್ ॥2॥
ಕಂಸವಿದ್ರಾವಣಕರೀಮಸುರಾಣಾಂ ಭಯಂಕರೀಮ್ |

ಶಿಲಾತಳವಿನಿಕ್ಷಿಪ್ತಾಮಾಕಾಶಾಂತರಗಾಮಿನೀಮ್ ॥3॥
ವಾಸುದೇವಸ್ಯ ಭಗಿನೀಂ ದಿವ್ಯಮಾಲ್ಯವಿಭೂಷಿತಾಮ್ |
ದಿವ್ಯಾಂಬರಧರಾಂ ದೇವೀಂ ಖಡ್ಗಖೇಟಕಧಾರಿಣೀಮ್ ॥4॥
ವೈಶಂಪಾಯನ ವಿರಾಟ ನಗರಕ್ಕೆ ಹೋಗುತ್ತಾ ಯುಧಿಷ್ಠಿರನು ತ್ರಿಭುವನೇಶ್ವರಿಯಾದ, ಯಶೋದಾ ಗರ್ಭಸಂಭೂತಳಾದ, ನಾರಾಯಣನಿಗೆ ಬಹಳ ಪ್ರಿಯಳಾದ, ನಂದಗೋಪಕುಲದಲ್ಲಿ ಜನಿಸಿದ, ಮಂಗಳಪ್ರದಳಾದ, ವಂಶವರ್ಧಿನಿಯಾದ, ಕಂಸನಿಗೆ ನಾಶವನ್ನು ಉಂಟು ಮಾಡಿದ, ಅಸುರರಿಗೆ ಭಯಂಕರಳಾದ, ಕಲ್ಲಿನ ಬಂಡೆಯ ಮೇಲೆ ಅಪ್ಪಳಿಸಿದಾಗ ಆಕಾಶಕ್ಕೆ ಹಾರಿದ, ದಿವ್ಯಮಾಲೆಗಳಿಂದ ಭೂಷಿತಳಾದ, ದಿವ್ಯಾಂಬರಳಾದ, ಖಡ್ಗಖೇಟಗಳನ್ನು ಧರಿಸಿದ ದುರ್ಗಾದೇವಿಯನ್ನು ಮನಸ್ಸಿನಲ್ಲಿಯೇ ಸ್ತೋತ್ರ ಮಾಡಿದನು.
ಸ್ತೋತುಂ ಪ್ರಚಕ್ರಮೇ ಭೂಯೋ ವಿವಿಧೈಃ ಸ್ತೋತ್ರಸಂಭವೈಃ |
ಆಮಂತ್ರ್ಯ ದರ್ಶನಾಕಾಂಕ್ಷೀ ರಾಜಾ ದೇವೀಂ ಸಹಾನುಜಃ |
ನಮೋಸ್ತು ವರದೇ ಕೃಷ್ಣೇ ಕೌಮಾರವ್ರತಚಾರಿಣಿ ॥5॥
ರಾಜನು ತಮ್ಮಂದಿರ ಜೊತೆಯಲ್ಲಿ ದುರ್ಗಾದೇವಿಯ ದರ್ಶನಾಕಾಂಕ್ಷಿಯಾಗಿ ಅವಳನ್ನು ಮನಸ್ಸಿನಲ್ಲಿಯೇ ಆಮಂತ್ರಿಸಿ ಅನೇಕ ವಿಧವಾದ ಸ್ತೋತ್ರದಿಂದ ಸ್ತೋತ್ರ ಮಾಡಲು ಪ್ರಾರಂಭಿಸಿದನು. ವರಪ್ರದಳಾದ ಕೃಷ್ಣೆಯೇ, ಕುಮಾರವ್ರತವನ್ನು ಧರಿಸಿದವಳೇ ನಿನಗೆ ನಮಸ್ಕಾರ.
ಬಾಲಾರ್ಕಸದೃಶಾಕಾರೇ ಪೂರ್ಣಚಂದ್ರನಿಭಾನನೇ |
ಚತುರ್ಭುಜೇ ಚತುರ್ವಕ್ತ್ರೇ ಪೀನಶ್ರೋಣಿಪಯೋಧರೇ ॥6॥
ಮಯೂರಪಿಚ್ಛವಲಯೇ ಗದಾಚಕ್ರಾಸಿಧಾರಿಣಿ |
ನಮಸ್ತೇಂಬುಜಪತ್ರಾಕ್ಷಿ ನಮಸ್ತೇ ತ್ರಿದಶಾರ್ಚಿತೇ ॥7॥
ಎಳೆಯ ಸೂರ್ಯನನ್ನು ಹೋಲುವವಳೇ, ಪೂರ್ಣಚಂದ್ರನಂತಹ ಮುಖವುಳ್ಳವಳೇ, ನಾಲ್ಕು ಭುಜಗಳುಳ್ಳವಳೇ, ನಾಲ್ಕು ಮುಖವುಳ್ಳವಳೇ, ಉನ್ನತವಾದ ನಿತಂಬ ಮತ್ತು ಸ್ತನಗಳುಳ್ಳವಳೇ, ನವಿಲಿನ ಬಣ್ಣದ ಬಳೆಗಳನ್ನು ತೊಟ್ಟವಳೇ, ಗದೆ ಚಕ್ರ ಮತ್ತು ಖಡ್ಗಗಳನ್ನು ಧರಿಸಿದವಳೇ, ಕಮಲಾಕ್ಷಿಯೇ ನಿನಗೆ ನಮಸ್ಕಾರ. ದೇವತೆಗಳಿಂದ ಅರ್ಚಿತಳಾದವಳೇ ನಿನಗೆ ನಮಸ್ಕಾರ.
ದೈತ್ಯದಾನವದರ್ಪಘ್ನೇ ದೈತ್ಯದಾನವಪೂಜಿತೇ |
ಶೈಲರಾಜಸುತೇ ದೇವಿ ನಮಸ್ತೇ ವಿಂಧ್ಯವಾಸಿನಿ ॥8॥
ದೈತ್ಯದಾನವರ ದರ್ಪವನ್ನು ನಾಶಮಾಡಿದವಳೇ, ದೈತ್ಯದಾನವರಿಂದ ಪೂಜಿತಳಾದವಳೇ, ಶೈಲರಾಜನಾದ ಹಿಮಾಲಯನ ಸುತೆಯೇ, ವಿಂಧ್ಯಶೈಲವಾಸಿನಿಯೇ, ದೇವಿಯೇ ನಿನಗೆ ನಮಸ್ಕಾರ.
ಸರ್ವಪ್ರಹರಣೋಪೇತೇ ಸರ್ವಜ್ಞೇ ಸರ್ವಗೇ ಶುಭೇ |
ಅಜಿತೇ ವಿಜಯೇ ಭದ್ರೇ ಭದ್ರಕಾಳಿ ರಣಪ್ರಿಯೇ ॥9॥
ಕೃಷ್ಣೇ ದೇವಿ ನಮಸ್ತುಭ್ಯಂ ನಮಃ ಕೈಟಭಮರ್ದಿನಿ |
ನಮೋ ಗಾಯತ್ರಿ ಸಾವಿತ್ರಿ ನಮಸ್ತೇ ಜಾತವೇದಸಿ ॥10॥
ಎಲ್ಲ ಆಯುಧಗಳನ್ನು ಧರಿಸಿದವಳೇ, ಸರ್ವಜ್ಞಳಾದವಳೇ, ಸರ್ವತ್ರ ವ್ಯಾಪ್ತಳಾದವಳೇ, ಶುಭಳಾದವಳೇ, ಯಾರಿಗೂ ಸೋಲದವಳೇ, ವಿಜಯಶೀಲಳಾದವಳೇ, ಮಂಗಳಪ್ರದಳಾದವಳೇ, ರಣಪ್ರಿಯಳೇ, ಭದ್ರಕಾಳಿಯೇ, ಕೃಷ್ಣೆಯೇ, ದೇವಿಯೇ ನಿನಗೆ ನಮಸ್ಕಾರ. ಕೈಟಭ ಸಂಹಾರಿಣಿಯೇ ನಿನಗೆ ನಮಸ್ಕಾರ. ಗಾಯತ್ರಿಯೇ, ಸಾವಿತ್ರಿಯೇ, ಸರ್ವಜ್ಞಳೇ ನಿನಗೆ ನಮಸ್ಕಾರ.
ವಾಗೀಶ್ವರಿ ನಮಸ್ತುಭ್ಯಂ ಮೇನಕಾಯಾಃ ಸುತೇ ನಮಃ |
ಶಂಕರಾರ್ಧಶರೀರಸ್ಥೇ ನಮಸ್ತೇ ವಿಷ್ಣುಪೂಜಿತೇ ॥11॥
ವಾಗೀಶ್ವರಿಯೇ ನಿನಗೆ ನಮಸ್ಕಾರ. ಮೇನಕೆಯ ಮಗಳೇ ನಿನಗೆ ನಮಸ್ಕಾರ. ಶಂಕರನ ಅರ್ಧಶರೀರಳಾದವಳೇ, ವಿಷ್ಣುವನ್ನು ಪೂಜಿಸುವವಳೇ ನಿನಗೆ ನಮಸ್ಕಾರ.
ನಮೋ ಬ್ರಹ್ಮಾಣಿ ರುದ್ರಾಣಿ ನಮೋ ನಾರಾಯಣಪ್ರಿಯೇ |
ನಮಸ್ತ್ರೈಲೋಕ್ಯವಿಖ್ಯಾತೇ ನಮಸ್ತೇಽಮರಪೂಜಿತೇ ॥12॥
ಬ್ರಹ್ಮಾಣಿಯೇ, ರುದ್ರಾಣಿಯೇ, ನಾರಾಯಣಪ್ರಿಯಳೇ ನಿನಗೆ ನಮಸ್ಕಾರ. ಮೂರುಲೋಕಗಳಲ್ಲಿಯೂ ಪ್ರಖ್ಯಾತಳಾದವಳೇ ನಿನಗೆ ನಮಸ್ಕಾರ. ದೇವತೆಗಳಿಂದ ಪೂಜಿತಳಾದವಳೇ ನಿನಗೆ ನಮಸ್ಕಾರ.
ಪದ್ಮಕಿಂಜಲ್ಕವರ್ಣಾಭೇ ಚಾರುಪದ್ಮನಿಭಾನನೇ |
ಮಹಾಸಿಂಹರಥಾರೂಢೇ ನಮಃ ಶಾರ್ದೂಲವಾಹಿನಿ ॥13॥
ಪದ್ಮಕೇಸರದ ವರ್ಣವುಳ್ಳವಳೇ, ಸುಂದರವಾದ ಪದ್ಮದಂತಹ ಮುಖವುಳ್ಳವಳೇ, ಮಹಾಸಿಂಹಗಳನ್ನು ಹೂಡಿದ ರಥದಲ್ಲಿ ಕುಳಿತವಳೇ, ಶಾರ್ದೂಲವಾಹಿನಿಯೇ ನಿನಗೆ ನಮಸ್ಕಾರ.
ಮಹೇಂದ್ರಾಣಿ ನಮಸ್ತುಭ್ಯಂ ನಮಸ್ತೇ ಭಕ್ತವತ್ಸಲೇ |
ಮಹಿಷಾಸುರದರ್ಪಘ್ನಿ ಕಂಸಾಸುರಭಯಂಕರಿ ॥14॥
ಮಹೇಂದ್ರಾಣಿಯೇ (ಇಂದ್ರನ ಪತ್ನಿಯಾದ ಶಚಿಯಲ್ಲಿ ಸನ್ನಿಹಿತಳಾದವಳೇ) ನಿನಗೆ ನಮಸ್ಕಾರ. ಭಕ್ತವತ್ಸಲೆಯೇ ನಿನಗೆ ನಮಸ್ಕಾರ. ಮಹಿಷಾಸುರನ ದರ್ಪವನ್ನು ಕಳೆದವಳೇ, ಕಂಸಾಸುರನಿಗೆ ಭಯಂಕರಳಾದವಳೇ ನಿನಗೆ ನಮಸ್ಕಾರ.
ಕಾಳರಾತ್ರಿ ಮಹಾರಾತ್ರಿ ಯಶಸ್ಕರಿ ಶುಭಾನನೇ |
ಕೌಮಾರಂ ವ್ರತಮಾಸ್ಥಾಯ ತ್ರಿದಿವಂ ಪಾಲಿತಂ ತ್ವಯಾ ॥15॥

ತೇನ ತ್ವಂ ಸ್ತೂಯಸೇ ದೇವಿ ತ್ರಿದಶೈಃ ಪೂಜ್ಯಸೇಽಪಿ ಚ |
ಸುರೇಶ್ವರಿ ಮಹಾದೇವಿ ಮಹಿಷಾಸುರಘಾತಿನಿ ||16||
ಕಾಳರಾತ್ರಿಯೇ, ಮಹಾರಾತ್ರಿಯೇ, ಕೀರ್ತಿಪ್ರದಳೇ, ಶುಭಾನನೆಯೇ, ಕೌಮಾರವ್ರತವನ್ನು ಧರಿಸಿ ಸ್ವರ್ಗವನ್ನು ರಕ್ಷಿಸಿದವಳೇ, ಆ ಕಾರಣದಿಂದ ನೀನು ದೇವತೆಗಳಿಂದ ಪೂಜಿಸಲ್ಪಡುತ್ತೀಯೆ. ಸುರೇಶ್ವರಿಯೇ, ಮಹಿಷಾಸುರ ಮರ್ದಿನಿಯೇ ಮಹಾದೇವಿಯೇ ನಿನಗೆ ನಮಸ್ಕಾರ.
ಪ್ರಪನ್ನೋಽಹಂ ಸುರಶ್ರೇಷ್ಠೇ ದಯಾಂ ಕುರು ಶಿವಾ ಭವ |
ಜಯಾ ತ್ವಂ ವಿಜಯಾ ತ್ವಂ ಚ ಸಂಗ್ರಾಮೇ ವಿಜಯಪ್ರದಾ ||17||
ಭವಿಷ್ಯಸಿ ಸುಸಂಪ್ರೀತಾ ವರದಾ ಭವ ಸಾಂಪ್ರತಮ್ |
ವಿಂಧ್ಯಾಚಲೇ ನಗಶ್ರೇಷ್ಠೇ ತವ ಸ್ಥಾನಂ ಹಿ ಶಾಶ್ವತಮ್ ||18||
ಸುರೋತ್ತಮಳೇ ನಾನು ನಿನಗೆ ಶರಣಾಗತನಾಗಿದ್ದೇನೆ. ನನ್ನಲ್ಲಿ ದಯೆಯನ್ನು ತೋರು. ಮಂಗಳಪ್ರದಳಾಗು. ನೀನು ಜಯ-ವಿಜಯ ಎಂದು ಕರೆಸಿಕೊಳ್ಳುತ್ತೀಯೆ. ನೀನು ಯುದ್ಧದಲ್ಲಿ ಜಯವನ್ನು ಕೊಡುವವಳಾಗುವಿ. ಈಗ ನನಗೆ ಪ್ರಸನ್ನಳಾಗಿ ವರವನ್ನು ಕೊಡುವವಳಾಗು. ಶ್ರೇಷ್ಠವಾದ ವಿಂಧ್ಯಪರ್ವತವು ನಿನ್ನ ಶಾಶ್ವತವಾದ ವಾಸಸ್ಥಾನ.
ಕಾಳಿ ಕಾಳಿ ಮಹಾಕಾಳಿ ಸೀಧುಮಾಂಸವಸಾಪ್ರಿಯೇ |
ತ್ರೈಲೋಕ್ಯಮಾತರ್ಜನನಿ ಮಮೇಹ ವರದಾ ಭವ ||19||
ಕಾಳಿ ಕಾಳಿ ಮಹಾಕಾಳಿಯೇ, ಅಮೃತ, ಮಾಂಸ ಮತ್ತು ವಸೆಗಳಲ್ಲಿ ಪ್ರೀತಿಯುಳ್ಳವಳೇ, ಮೂರುಲೋಕಗಳ ತಾಯಿಯೇ, ನನ್ನ ತಾಯಿಯೇ ಈಗ ನನಗೆ ವರವನ್ನು ಕೊಡು.
ಭಾರಾವತರಣೇ ಯೇ ತ್ವಾಂ ಸಂಸ್ಮರಿಷ್ಯಂತಿ ಮಾನವಾಃ |
ಪ್ರಣಮಂತಿ ಚ ಯೇ ನಿತ್ಯಂ ಪ್ರಭಾತೇ ಚ ನರಾ ಭುವಿ ||20||
ನ ತೇಷಾಂ ದುರ್ಲಭಂ ಕಿಂಚಿತ್ ಪುತ್ರತೋ ಧನತೋಽಪಿ ವಾ |
ದುರ್ಗಾತ್ ತಾರಯಸೇ ನಿತ್ಯಂ ತೇನ ದುರ್ಗಾ ಸ್ಮೃತಾ ಪುರಾ ||21||
ಕಷ್ಟವು ಒದಗಿದಾಗ ಅದನ್ನು ಕಳೆಯಲು ಯಾವ ಮಾನವರು ನಿನ್ನನ್ನು ಸ್ಮರಿಸುವರೋ, ಯಾವ ಮಾನವರು ಭೂಮಿಯಲ್ಲಿ, ಪ್ರಾತಃಕಾಲದಲ್ಲಿ ನಿನಗೆ ನಮಸ್ಕಾರವನ್ನು ಮಾಡುವರೋ ಅವರಿಗೆ ಮಕ್ಕಳಾಗಲೀ, ಧನವಾಗಲೀ ಯಾವುದೂ ದುರ್ಲಭವಲ್ಲ. ಕಷ್ಟದಿಂದ ದಾಟಿಸುವ ಕಾರಣದಿಂದ ನಿನಗೆ ಇಂದಿನಿಂದ ಯಾವಾಗಲೂ ದುರ್ಗಾ ಎಂಬ ಹೆಸರು ಬಂದಿದೆ.
ಕಾಂತಾರೇಷ್ವವಸನ್ನಾನಾಂ ಮಗ್ನಾನಾಂ ಚ ಮಹಾರ್ಣವೇ |
ದಸ್ಯುಭಿಃ ಸನ್ನಿರುದ್ಧಾನಾಂ ತ್ವಂ ಗತಿಃ ಪರಮಾ ನೃಣಾಮ್ ||22||
ಕಾಡಿನಲ್ಲಿ ಸಿಲುಕಿಕೊಂಡವರಿಗೆ, ಸಮುದ್ರದಲ್ಲಿ ಮುಳುಗುವವರಿಗೆ, ಕಳ್ಳರಿಂದ ಬಂಧನಕ್ಕೆ ಒಳಗಾದ ಪುರುಷರಿಗೆ ನೀನೇ ಪರಮಗತಿ.
ಜಲಪ್ರತರಣೇ ದೇವಿ ಕಾಂತಾರೇಷ್ವಟವೀಷು ಚ |
ಯೇ ಸ್ಮರಂತಿ ಮಹಾದೇವೀಂ ನೈವ ಸೀದಂತಿ ತೇ ನರಾಃ ||23||
ದೇವಿಯೇ, ನೀರನ್ನು ದಾಟುವಾಗ, ಕಾಡುಗಳನ್ನು ದಾಟುವಾಗ ಯಾರು ಮಹಾದೇವಿಯಾದ ನಿನ್ನನ್ನು ಸ್ಮರಿಸುತ್ತಾರೋ ಅಂತಹ ಮನುಷ್ಯರು ಎಂದೂ ಕಷ್ಟಕ್ಕೆ ಒಳಗಾಗುವುದಿಲ್ಲ.
ತ್ವಂ ಕೀರ್ತಿಃ ಶ್ರೀರ್ಧೃತಿಃ ಸಿದ್ಧಿರ್ಹ್ರೀರ್ವಿದ್ಯಾ ಸಂತತಿರ್ಮತಿಃ |
ಸಂಧ್ಯಾ ರಾತ್ರಿಃ ಪ್ರಭಾ ನಿದ್ರಾ ಜ್ಯೋತ್ಸ್ನಾ ಕಾಂತಿಃ ಕ್ಷಮಾ ದಯಾ ||24||
ನೀನೇ ಕೀರ್ತಿ, ಸಂಪತ್ತು, ಧೈರ್ಯ, ಸಿದ್ಧಿ, ಹ್ರೀ, ವಿದ್ಯಾ, ಸಂತತಿ, ಮತಿ, ಸಂಧ್ಯಾಕಾಲ, ರಾತ್ರಿ, ಪ್ರಭಾ, ನಿದ್ರಾ, ಬೆಳದಿಂಗಳು, ಕಾಂತಿ, ಕ್ಷಮಾ, ದಯಾ (ಇವೆಲ್ಲವೂ ನಿನ್ನ ಅಧೀನ ಎಂದು ಅಭಿಪ್ರಾಯ).
ನೃಣಾಂ ಬಂಧುವಧಕ್ಲೇಶಂ ಪುತ್ರದಾರಧನಕ್ಷಯಮ್ |
ವ್ಯಾಧಿಮೃತ್ಯುಭಯಂ ಘೋರಂ ಪೂಜಿತಾ ನಾಶಯಿಷ್ಯಸಿ ||25||
ನಿನ್ನನ್ನು ಪೂಜಿಸಿದರೆ ಮನುಷ್ಯರಿಗೆ ಉಂಟಾಗುವ ಬಂಧುವಧದ ಕ್ಲೇಶವನ್ನೂ ಭಾರ್ಯಾಪುತ್ರ ಧನಕ್ಷಯವನ್ನೂ, ವ್ಯಾಧಿ ಭಯ ಮತ್ತು ಮೃತ್ಯು ಭಯವನ್ನೂ ನಾಶ ಮಾಡುವಿ.
ಸೋಽಹಂ ರಾಜ್ಯಪರಿಭ್ರಷ್ಟಃ ಶರಣಂ ತ್ವಾಮುಪಾಗತಃ |
ಪ್ರಣತಶ್ಚ ತಥಾ ಮೂರ್ಧ್ನಾ ಚರಣೌ ತೇ ಸುರೇಶ್ವರಿ ||26||
ಎಲೌ ಸುರೇಶ್ವರಿಯೇ, ನಾನು ಈಗ ರಾಜ್ಯಭ್ರಷ್ಟನಾಗಿ ನಿನಗೆ ಶರಣಾಗತನಾಗಿ ಬಂದು ನಿನ್ನ ಪಾದಗಳಿಗೆ ಶಿರಸಾ ನಮಸ್ಕಾರವನ್ನು ಮಾಡಿದ್ದೇನೆ.
ತ್ರಾಹಿ ಮಾಂ ಪದ್ಮಪತ್ರಾಕ್ಷಿ ಸತ್ಯೇ ಸತ್ಯಾ ಭವಸ್ವ ನಃ |
ಶರಣಂ ಭವ ಮೇ ದುರ್ಗೇ ಶರಣ್ಯೇ ಭಕ್ತವತ್ಸಲೇ ||27||
ಸತ್ಯನಾಮಕಳೇ, ಕಮಲಪತ್ರಾಕ್ಷಿಯೇ, ನನ್ನನ್ನು ರಕ್ಷಣೆ ಮಾಡಿ ನಮ್ಮ ವಿಷಯದಲ್ಲಿ ಸತ್ಯಳಾಗು. ದುರ್ಗೆಯೇ, ಶರಣ್ಯೆಯೇ, ಭಕ್ತವತ್ಸಲಳೇ, ನನಗೆ ರಕ್ಷಣೆಯನ್ನು ನೀಡುವವಳಾಗು.
ಆಪನ್ಮಹಾರ್ಣವೇ ಘೋರೇ ಅಸ್ಮಿನ್ ವಿಷಮದುರ್ಗಮೇ |
ದುಸ್ತರೇ ತ್ರಾಹಿ ಮಾಂ ಭದ್ರೇ ಪರಕೀಯನಿವೇಶನೇ ||28||
ಮಂಗಳಪ್ರದಳೇ, ದಾಟಲು ಅಸಾಧ್ಯವಾದ ಬಹಳ ಕ್ರೂರವಾದ ಇನ್ನೊಬ್ಬರ ಮನೆಯಲ್ಲಿ ವಾಸ ಮಾಡುವ ಈ ದೊಡ್ಡ ಆಪತ್ತೆಂಬ ಸಮುದ್ರದಲ್ಲಿ ನನ್ನನ್ನು ರಕ್ಷಿಸು.

ಯಥಾ ನ ಜಾನಾತಿ ನರೋಽತ್ರ ಕಶ್ಚಿದ್
ಯುಧಿಷ್ಠಿರೋಽತ್ರಾವಸತೀತಿ ದುರ್ಗೇ |
ತಥಾ ಕುರು ಸ್ವರ್ಗಸದಾಂ ವರಿಷ್ಠೇ
ತ್ವಚ್ಚಾರುಪದ್ಮಾಬ್ಜಪುರಃ ಸ್ಥಿತೋಽಹಮ್ ॥29॥
ದುರ್ಗೆಯೇ, ಸ್ವರ್ಗವಾಸಿಗಳಲ್ಲಿ ಶ್ರೇಷ್ಠಳಾದವಳೇ, ಇಲ್ಲಿ ಯುಧಿಷ್ಠಿರನು ವಾಸ ಮಾಡುತ್ತಿದ್ದಾನೆ ಎಂದು ಯಾರಿಗೂ ತಿಳಿಯದಂತೆ ಮಾಡು. ನಾನು ನಿನ್ನ ಪಾದಕಮಲಗಳ ಎದುರಿನಲ್ಲಿ ನಿಂತಿದ್ದೇನೆ.
ದುಃಖಾನ್ವಿತೋಽಹಂ ಪ್ರಲಪಾಮಿ ದುರ್ಗೇ
ಉನ್ಮತ್ತವದ್ ದೀನಮನಾ ನಿರಾಶಃ |
ಪ್ರಸೀದ ದುರ್ಗೇ ಮಮ ಸಾನುಜಸ್ಯ
ಸಮೀಹಿತಂ ತತ್ ಕುರು ತೇ ನಮೋಽಸ್ತು ॥30॥
ಎಲೌ ದುರ್ಗೆಯೇ, ನಾನು ಹುಚ್ಚನಂತೆ ಮನೋದೈನ್ಯದಿಂದ ನಿರಾಶೆಯಿಂದಲೂ, ದುಃಖದಿಂದಲೂ ಕೂಡಿದವನಾಗಿ ಬಡಬಡಿಸುತ್ತಿದ್ದೇನೆ. ದುರ್ಗೆಯೇ, ನನಗೂ, ನನ್ನ ತಮ್ಮಂದಿರಿಗೂ ಪ್ರಸನ್ನಳಾಗು. ನಮ್ಮ ಮನೋಭೀಷ್ಟವನ್ನು ನೆರವೇರಿಸು. ನಿನಗೆ ನಮಸ್ಕಾರ.
ವೈಶಂಪಾಯನಃ
ಏವಂ ಸ್ತುತಾ ಹಿ ಸಾ ದೇವೀ ದರ್ಶಯಾಮಾಸ ಪಾಂಡವಮ್ |
ಉಪಸಂಗಮ್ಯ ರಾಜಾನಂ ವಚನಂ ಚೇದಮಬ್ರವೀತ್ ॥31॥
ವೈಶಂಪಾಯನ ಹೀಗೆ ಸ್ತೋತ್ರ ಮಾಡಲ್ಪಟ್ಟ ದುರ್ಗಾದೇವಿಯು ಪಾಂಡವನಾದ ಯುಧಿಷ್ಠಿರನಿಗೆ ಪ್ರತ್ಯಕ್ಷಳಾಗಿ ಅವನ ಸಮೀಪಕ್ಕೆ ಬಂದು ರಾಜನಾದ ಅವನನ್ನು ಕುರಿತು ಈ ಮಾತನ್ನಾಡಿದಳು.
ಶೃಣು ರಾಜನ್ ಮಹಾಬಾಹೋ ಮದೀಯಂ ವಚನಂ ಪ್ರಭೋ |
ಭವಿಷ್ಯತ್ಯಚಿರಾದೇವ ಸಂಗ್ರಾಮೇ ವಿಜಯಸ್ತವ ॥32॥
ರಾಜನೇ, ಮಹಾಬಾಹುವೇ, ಪ್ರಭುವೇ, ನನ್ನ ಮಾತನ್ನು ಕೇಳು. ಶೀಘ್ರವಾಗಿಯೇ ಯುದ್ಧದಲ್ಲಿ ನಿನಗೆ ಜಯ ಉಂಟಾಗುವುದು.
ಕ್ಷೋಭಯಿಷ್ಯಾಮಿ ಸಂಪ್ರಾಪ್ತಾಂ ಸಮಸ್ತಾಂ ಕುರುವಾಹಿನೀಮ್ |
ಯುದ್ಧಕ್ಕೆ ಬಂದ ಸಮಗ್ರವಾದ ಕುರುಸೈನ್ಯವನ್ನು ನಾನು ತಲ್ಲಣಗೊಳಿಸುತ್ತೇನೆ.
ದೇವೀ
(ಮಮ ಪ್ರಸಾದಾತ್ ನಿರ್ಜಿತ್ಯ ಹತ್ವಾ ಕೌರವವಾಹಿನೀಮ್)
ರಾಜ್ಯಂ ನಿಷ್ಕಂಟಕಂ ಕೃತ್ವಾ ಭೋಕ್ಷ್ಯಸೇ ಪೃಥಿವೀಂ ಪುನಃ ॥33॥
ದೇವಿ ನೀನು ನನ್ನ ಅನುಗ್ರಹದಿಂದ ಕೌರವ ಸೈನ್ಯವನ್ನು ಗೆದ್ದು ಸಂಹಾರ ಮಾಡಿ ನಿಷ್ಕಂಟಕವಾದ ರಾಜ್ಯವನ್ನು ಆಳುತ್ತಾ ಪುನಃ ಪೃಥಿವಿಯನ್ನು ಭೋಗಿಸುವಿ.
ಭ್ರಾತೃಭಿಃ ಸಹಿತೋ ವೀರ ವೃದ್ಧಿಂ ಪ್ರಾಪ್ಸ್ಯಸಿ ಪುಷ್ಕಲಾಮ್ |
ಮತ್ಪ್ರಸಾದಾಚ್ಚ ತೇ ಸೌಖ್ಯಮಾರೋಗ್ಯಂ ಚ ಭವಿಷ್ಯತಿ ॥34॥
ವೀರನೇ, ತಮ್ಮಂದಿರ ಜೊತೆಯಲ್ಲಿ ನೀನು ಪುಷ್ಕಳವಾದ ಸಮೃದ್ಧಿಯನ್ನು ಹೊಂದುವಿ. ನನ್ನ ಅನುಗ್ರಹದಿಂದ ನಿನಗೆ ಸೌಖ್ಯವೂ, ಆರೋಗ್ಯವೂ ಉಂಟಾಗುವುದು.
ಯೇ ಚ ಮಾಂ ಕೀರ್ತಯಿಷ್ಯಂತಿ ಲೋಕೇ ವಿಗತಮತ್ಸರಾಃ |
ತೇಷಾಂ ತುಷ್ಟಿಂ ಪ್ರದಾಸ್ಯಾಮಿ ರಾಜ್ಯಮಾಯುರ್ಬಲಂ ಸುತಾನ್ ॥35॥
ಲೋಕದಲ್ಲಿ ಯಾರು ಮಾತ್ಸರ್ಯರಹಿತರಾಗಿ ನನ್ನನ್ನು ಸ್ತೋತ್ರ ಮಾಡುವರೋ ಅವರಿಗೆ ತೃಪ್ತಿಯನ್ನೂ, ರಾಜ್ಯವನ್ನೂ, ಆಯುಸ್ಸನ್ನೂ, ಬಲವನ್ನೂ ಮತ್ತು ಪುತ್ರರನ್ನೂ ಕೊಡುವೆನು.
ಪ್ರವಾಸೇ ನಗರೇ ವಾಽಪಿ ಸಂಗ್ರಾಮೇ ಶತ್ರುಸಂಗರೇ |
ಅಟವ್ಯಾಂ ದುರ್ಗಕಾಂತಾರೇ ಸಾಗರೇ ಗಿರಿಗಹ್ವರೇ ॥36॥
ಯೇ ಸ್ಮರಿಷ್ಯಂತಿ ಮಾಂ ರಾಜನ್ ಯಥಾಹಂ ಭವತಾ ಸ್ಮೃತಾ |
ನ ತೇಷಾಂ ದುರ್ಲಭಂ ಕಿಂಚಿದಸ್ಮಿನ್ ಲೋಕೇ ಭವಿಷ್ಯತಿ ॥37॥
ಪ್ರವಾಸ ಕಾಲದಲ್ಲಿ, ನಗರದಲ್ಲಿ, ಯುದ್ಧದಲ್ಲಿ, ಶತ್ರುಗಳ ಮಧ್ಯದಲ್ಲಿ, ಕಾಡಿನಲ್ಲಿ, ದಾಟಲು ಅಸಾಧ್ಯವಾದ ಕಾಡಿನಲ್ಲಿ, ಸಮುದ್ರದಲ್ಲಿ, ಪರ್ವತದ ಗುಹೆಗಳಲ್ಲಿ ನೀನು ನನ್ನನ್ನು ಸ್ಮರಿಸಿದಂತೆ ಯಾರು ನನ್ನನ್ನು ಸ್ಮರಿಸುವರೋ ಅವರಿಗೆ, ಎಲೈ ರಾಜನೇ, ಈ ಲೋಕದಲ್ಲಿ ದುರ್ಲಭವಾದುದು ಯಾವುದೂ ಇಲ್ಲ.
ಇದಂ ಸ್ತೋತ್ರವರಂ ಭಕ್ತ್ಯಾ ಶೃಣುಯಾದ್ ವಾ ಪಠೇತ ವಾ |
ತಸ್ಯ ಸರ್ವಾಣಿ ಕಾರ್ಯಾಣಿ ಸಿದ್ಧಿಂ ಯಾಸ್ಯಂತಿ ಪಾಂಡವ ॥38॥
ಎಲೈ ಪಾಂಡವನೇ, ಈ ಶ್ರೇಷ್ಠವಾದ ಸ್ತೋತ್ರವನ್ನು ಯಾರು ಶ್ರವಣ ಮಾಡುವರೋ ಅಥವಾ ಪಠಣ ಮಾಡುವರೋ ಅವರ ಎಲ್ಲಾ ಕಾರ್ಯಗಳೂ ಸಿದ್ಧಿಸುವುವು.
ಮತ್ಪ್ರಸಾದಾಚ್ಚ ವಃ ಸರ್ವಾನ್ ವಿರಾಟನಗರೇ ಸ್ಥಿತಾನ್ |
ನೈವ ಜ್ಞಾಸ್ಯಂತಿ ಕುರವೋ ನರೋ ವಾ ತನ್ನಿವಾಸಿನಃ ॥39॥
ವಿರಾಟ ನಗರದಲ್ಲಿ ನೀನು ವಾಸ ಮಾಡುವಾಗ ನನ್ನ ಅನುಗ್ರಹದಿಂದ ಕುರುಗಳಾಗಲೀ, ಆ ನಗರ ವಾಸಿಗಳಾದ ಯಾವ ಮನುಷ್ಯರೇ

ಆಗಲಿ ನಿಮ್ಮನ್ನು ಗುರುತಿಸುವುದಿಲ್ಲ.
ಇತ್ಯುಕತ್ವ ಸಾ ತದಾ ದೇವಿ ಯುಧಿಷ್ಠಿರಮರಿಂದಮಮ್ |
ರಕ್ಷಾಂ ಕೃತ್ವಾ ಚ ಪಾಂಡೂನಾಂ ತತ್ರೈವಾಂತರಧೀಯತ ॥40॥
ಅರಿಂದಮನಾದ ಯುಧಿಷ್ಠಿರನಿಗೆ ಹೀಗೆ ಹೇಳಿ ಆ ದೇವಿಯು ಪಾಂಡವರಿಗೆಲ್ಲಾ ರಕ್ಷಣೆಯನ್ನು ನೀಡಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ಅಷ್ಟಮೋಽಧ್ಯಾಯಃ ॥
॥ ವೈರಾಟಪರ್ವಣಿ ದುರ್ಗಾಸ್ತುತಿ ನಾಮ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಯತಿ ವೇಷದಿಂದ ಯುಧಿಷ್ಠಿರನ ವಿರಾಟಸಭಾಪ್ರವೇಶ ಮತ್ತು ನಿವಾಸ
ವೈಶಂಪಾಯನಃ
ತತಸ್ತು ತೇ ಪುಣ್ಯತಮಾಂ ಶಿವಾಂ ಶುಭಾಂ
ಮಹರ್ಷಿಗಂಧರ್ವನಿಷೇವಿತೋದಕಾಮ್ |
ತ್ರಿಲೋಕಕಾಂತಾಮವತೀರ್ಯ ಜಾಹ್ನವೀಮ್
ಋಷೀಂಶ್ಚ ದೇವಾಂಶ್ಚ ಪಿತೄನತರ್ಪಯನ್ ॥1॥
ವೈಶಂಪಾಯನ ಅನಂತರ ಅವರು ಅತ್ಯಂತ ಪವಿತ್ರವಾದ, ಮಂಗಳಪ್ರದವಾದ, ಶುಭಳಾದ, ಮಹರ್ಷಿ-ಗಂಧರ್ವರಿಂದ ಸೇವಿತವಾದ ಜಲವುಳ್ಳ, ಮೂರುಲೋಕಗಳಲ್ಲಿಯೂ ಪ್ರಿಯಳಾದ ಜಾಹ್ನವಿಯಲ್ಲಿ ಇಳಿದು ದೇವತೆಗಳಿಗೂ, ಋಷಿಗಳಿಗೂ ಮತ್ತು ಪಿತೃಗಳಿಗೂ ತರ್ಪಣವನ್ನು ನೀಡಿದರು.
ವರಪ್ರದಾನಂ ಹ್ಯನುಮಂತ್ರ್ಯ ಪಾರ್ಥಿವೋ
ಹುತಾಗ್ನಿಹೋತ್ರಃ ಕೃತಜಪ್ಯಮಂಗಲಃ |
ದಿಶಂ ತಥೈಂದ್ರೀಮಭಿತಃ ಪ್ರಪೇದಿವಾನ್
ಕೃತಾಂಜಲಿರ್ಧರ್ಮಮುಪಾಹ್ವಯಚ್ಛನೈಃ ॥2॥
ಯಮದೇವರು ತನಗೆ ಕೊಟ್ಟ ವರವನ್ನು ಚಿಂತಿಸುತ್ತಾ ಧರ್ಮರಾಜನು ಅಗ್ನಿಹೋತ್ರವನ್ನು ಮಾಡಿ ಆಹ್ನಿಕ ಮತ್ತು ಪ್ರಾತಃಮಂಗಲಗಳನ್ನು ಪೂರೈಸಿ ಕೈಗಳನ್ನು ಮುಗಿದುಕೊಂಡು ಯಮನನ್ನು ಆಹ್ವಾನ ಮಾಡುತ್ತಾ ನಿಧಾನವಾಗಿ ಪೂರ್ವದಿಕ್ಕಿನ ಕಡೆಗೆ ನಡೆದನು.
ವರಪ್ರದಾನಂ ಮಮ ದತ್ತವಾನ್ ಪಿತಾ
ಪ್ರಸನ್ನಚೇತಾ ವರದಃ ಪ್ರಜಾಪತಿಃ |
ಜಲಾರ್ಥಿನೋ ಮೇ ತೃಷಿತಸ್ಯ ಸೋದರಾ
ಮಯಾ ಪ್ರಯುಕ್ತಾ ವಿವಿಶುರ್ಜಲಾಶಯಮ್ ॥3॥
ಪ್ರಸನ್ನಚಿತ್ತನೂ, ವರಪ್ರದನೂ, ಪ್ರಜಾಪತಿಯೂ ಆದ ನನ್ನ ತಂದೆಯು ನನಗೆ ವರಗಳನ್ನು ನೀಡಿದನು. ಬಾಯಾರಿದ ನನಗೆ ನೀರನ್ನು ತರಲು ಆದೇಶಿಸಲ್ಪಟ್ಟ ನನ್ನ ತಮ್ಮಂದಿರು ನೀರಿನಲ್ಲಿ ಇಳಿದರು.
ನಿಪಾತಿತಾ ಯಕ್ಷವರೇಣ ತೇ ವನೇ
ಮಹಾಹವೇ ಯಜ್ಞಭೃತೇವ ದಾನವಾಃ |
ಮಯಾ ಚ ಗತ್ವಾ ವರದೋ ಹಿ ತೋಷಿತೋ
ವಿವಕ್ಷತಾ ಪ್ರಶ್ನಸಮುಚ್ಚಯಂ ಗುರುಃ ॥4॥
ದೊಡ್ಡ ಯುದ್ಧದಲ್ಲಿ ನಾರಾಯಣನು ದಾನವರನ್ನು ಉರುಳಿಸಿದಂತೆ ಕಾಡಿನಲ್ಲಿ ಅವರು ಒಬ್ಬ ಶ್ರೇಷ್ಠನಾದ ಯಕ್ಷನಿಂದ ಉರುಳಿಸಲ್ಪಟ್ಟರು. ಹಿರಿಯನಾದ ಆ ಯಕ್ಷನು ಕೇಳಿದ ಪ್ರಶ್ನೆಗಳಿಗೆ ನಾನು ಉತ್ತರವನ್ನು ನೀಡಿ ವರಪ್ರದನಾದ ಅವನನ್ನು ಸಂತೋಷಪಡಿಸಿದೆನು.
ಸ ಮೇ ಪ್ರಸನ್ನೋ ಭಗವಾನ್ ವರಂ
ದದೌ ಪರಿಷ್ವಜಂಶ್ಚಾಹ ತಥೈವ ಸೌಹೃದಾತ್ |
ವೃಣೀಷ್ವ ಯದ್ ವಾಂಛಸಿ ಪಾಂಡುನಂದನ
ಸ್ಥಿತೋಽಂತರಿಕ್ಷೇ ವರದೋಽಸ್ಮಿ ಪಶ್ಯ ಮಾಮ್ ॥5॥
ಪ್ರಸನ್ನನಾದ ಆ ಪೂಜ್ಯನು ನನಗೆ ವರವನ್ನು ನೀಡಿದನು. ಹಾಗೆಯೇ ಪ್ರೀತಿಯಿಂದ ನನ್ನನ್ನು ಆಲಂಗಿಸಿ, `ಪಾಂಡುನಂದನನೇ, ಇಷ್ಟವಾದ ವರವನ್ನು ಕೇಳು. ನಾನು ವರಪ್ರದನಾಗಿ ಬಂದಿದ್ದೇನೆ. ಅಂತರಿಕ್ಷದಲ್ಲಿ ನಿಂತಿದ್ದೇನೆ. ನನ್ನನ್ನು ನೋಡು' ಎಂದು ಹೇಳಿದನು.
ಸ ವೈ ಮಯೋಕ್ತೋ ವರದಃ ಪಿತಾ ಪ್ರಭುಃ
ಸದೈವ ಮೇ ಧರ್ಮರತಾ ಮತಿರ್ಭವೇತ್ |
ಇಮೇ ಚ ಜೀವಂತು ಮಮಾನುಜಾಃ ಪ್ರಭೋ

ವಯಶ್ಚ ರೂಪಂ ಚ ಬಲಂ ತಥಾऽऽಪ್ನುಯುಃ ॥6॥
ವರಪ್ರದನೂ, ಪ್ರಭುವೂ, ತಂದೆಯೂ ಆದ ಅವನಿಗೆ, `ನಾನು ನನಗೆ ಯಾವಾಗಲೂ ಧರ್ಮದಲ್ಲಿ ರತಿ ಇರುವ ಬುದ್ಧಿ ಉಂಟಾಗಲಿ ಎಂದು ಕೇಳಿದೆನು. ಪ್ರಭುವೇ, ಈ ನನ್ನ ತಮ್ಮಂದಿರು ಪುನಃ ಜೀವಿಸಿ ವಯಸ್ಸನ್ನು, ರೂಪವನ್ನು ಮತ್ತು ಬಲವನ್ನು ಹೊಂದುವವರಾಗಲಿ' (ಎಂದೂ ಕೇಳಿದೆನು).
ಕ್ಷಮಾ ಚ ಕೀರ್ತಿಶ್ಚ ಯಥೇಷ್ಟತೋ ಭವೇದ್
ವ್ರತಸ್ಯ ಸತ್ಯಸ್ಯ ಸಮಾಪ್ತಿರೇವ ಚ |
ವರೋ ಮಯೈಷೋऽಸ್ತು ಯಥಾ ತು ಕೀರ್ತಿತೋ
ನ ತನ್ಮೃಷಾ ದೇವವರೋ ಯಥಾऽಬ್ರವೀತ್ ॥7॥
ಕ್ಷಮೆ ಮತ್ತು ಕೀರ್ತಿಗಳು ವಿಪುಲವಾಗಿ ಉಂಟಾಗಬೇಕು. ನಾವು ಮಾಡಿದ ಪ್ರತಿಜ್ಞೆಯು ಸಮಾಪ್ತಿಗೊಳ್ಳಬೇಕು. ಇದು ನಾನು ಕೇಳುತ್ತಿರುವ ವರ. ಈ ವರವನ್ನು ನೀಡು ಎಂದು ಕೇಳಿದೆನು. ಹಾಗೆಯೇ ಆಗಲಿ ಎಂದು ಆ ದೇವಶ್ರೇಷ್ಠನು ನೀಡಿದ ವರವು ಎಂದೂ ಸುಳ್ಳಾಗುವುದಿಲ್ಲ.
ಸ ಚ ದ್ವಿಜಾತಿಸ್ತರುಣಸ್ತ್ರಿದಂಡಿಭೃತ್
ಕಮಂಡಲೂಷ್ಣೀಷಧರೋ ವ್ಯಜಾಯತ |
ಸುರಕ್ತಮಾಂಜಿಷ್ಠವರಾಂಬರಃ ಶಿಖೀ
ಪವಿತ್ರಪಾಣಿರ್ದದೃಶೇ ತದದ್ಭುತಮ್ ॥8॥
ಆಗ ಇದ್ದಕ್ಕಿದ್ದಂತೆಯೇ ಧರ್ಮರಾಜನು ತರುಣನೂ, ತ್ರಿದಂಡಧಾರಿಯೂ, ಕಮಂಡಲು ಮತ್ತು ಉಷ್ಣೀಷ (ರುಮಾಲು) ಧರಿಸಿದ ಬ್ರಾಹ್ಮಣನೂ ಆಗಿ ಮಾರ್ಪಟ್ಟನು. ಮಂಜಿಷ್ಠದಂತೆ ಕೆಂಪಾದ ವಸ್ತ್ರವನ್ನು ಉಟ್ಟವನಾಗಿ ಶಿಖೆಯನ್ನು ಧರಿಸಿ ಪವಿತ್ರ ಪಾಣಿಯಾಗಿ ಕಾಣಿಸಿಕೊಂಡನು. ಆ ದೃಶ್ಯವು ಅದ್ಭುತವಾಗಿದ್ದಿತು.
ತಥೈವ ತೇಷಾಮಪಿ ಧರ್ಮಚಾರಿಣಾಂ
ಯಥೇಪ್ಸಿತಾಹಾರ್ಯಾಭರಣಾಂಬರಸ್ರಜಃ |
ಕ್ಷಣೇನ ರಾಜನ್ನಭವನ್ಮಹಾತ್ಮನಾಂ
ಪ್ರಶಸ್ತಧರ್ಮಾಗ್ರ್ಯಫಲಾಭಿಕಾಂಕ್ಷಿಣಾಮ್ ॥9॥
ಅದರಂತೆಯೇ ಧರ್ಮಚಾರಿಗಳಾದ ಅವನ ತಮ್ಮಂದಿರು ಮತ್ತು ದ್ರೌಪದಿಗೂ ಅವರಿಗೆ ಅಭೀಷ್ಟವಾದ, ಅವರಿಗೆ ಯೋಗ್ಯವಾದ ವಸ್ತ್ರ ಮತ್ತು ಮಾಲೆಗಳು ಒಂದು ಕ್ಷಣದಲ್ಲಿ ಉಂಟಾದವು. ಎಲೈ ರಾಜನೇ, ಮಹಾತ್ಮರಾದ ಪ್ರಶಸ್ತವಾದ ಧರ್ಮವನ್ನು ಆಚರಣೆ ಮಾಡುವುದರಿಂದ ಉಂಟಾಗುವ ಫಲವನ್ನು ಆಶಿಸುವ ಅವರಿಗೆ ಎಲ್ಲವೂ ಒಂದು ಕ್ಷಣದಲ್ಲಿ ಸಿದ್ಧವಾಯಿತು.
ನವೇನ ರೂಪೇಣ ವಿಶಾಂಪತಿರ್ವೃತಃ
ಸ್ವಧರ್ಮರೂಪೇಣ ಬಭೌ ಪ್ರತಾಪವಾನ್ |
ನಿಬದ್ಧವೈಡೂರ್ಯಸಿತಾನ್ ಸಕಾಂಚನಾನ್
ನೃಪಸ್ತಥಾऽಕ್ಷಾನ್ ಪರಿವೇಷ್ಟ್ಯ ವಾಸಸಾ ॥10॥
ರಾಜನಾದ ಯುಧಿಷ್ಠಿರನು ಹೊಸ ರೂಪವನ್ನು ಧರಿಸಿ ಪ್ರತಾಪಶಾಲಿಯಾದ ಅವನು ತನ್ನ ಧರ್ಮದ ರೂಪದಿಂದಲೇ ಕಂಗೊಳಿಸಿದನು. ಅವನು ವೈಡೂರ್ಯವನ್ನು ಮೆಟ್ಟಿದ, ಸುವರ್ಣದಿಂದ ಕೂಡಿದ ದಾಳಗಳನ್ನು ಚೆನ್ನಾಗಿ ಬಟ್ಟೆಯಲ್ಲಿ ಸುತಿತಕೊಂಡನು.
ತತೋ ವಿರಾಟಂ ಪ್ರಥಮಂ ಯುಧಿಷ್ಠಿರೋ
ದದರ್ಶ ದೂರಾತ್ ಸುಸಮೃದ್ಧತೇಜಸಮ್ |
ಅನಂತತೇಜೋಜ್ವಲಿತಂ ಯಥಾऽನಲಂ
ದುರಾಸದಂ ತೀಕ್ಷ್ಣವಿಷಂ ಯಥೋರಗಮ್ ॥11॥
ಅನಂತರ ಯುಧಿಷ್ಠಿರನು ಮೊದಲು ದೂರದಿಂದಲೇ ವಿಪುಲವಾದ ತೇಜಸ್ಸುಳ್ಳ ಅಗ್ನಿಯಂತೆ ಅನಂತ ತೇಜಸ್ಸಿನಿಂದ ಜ್ವಲಿಸುವ, ತೀಕ್ಷ್ಣ ವಿಷವುಳ್ಳ ಸರ್ಪದಂತೆ ದುರಾಸದನಾದ ವಿರಾಟನನ್ನು ನೋಡಿದನು.
ಸಭಾಗತಂ ಪ್ರಾಂಜಲಿಭಿರ್ಜನೈರ್ವೃತಂ
ವಿಚಿತ್ರನಾನಾವಿಧಶಸ್ತ್ರಧಾರಿಭಿಃ |
ಉಪಾಯನೌೈರ್ಃ ಪ್ರವಿಶದ್ಭಿರಾಚಿತಂ
ದ್ವಿಜೈಶ್ಚ ಶಿಕ್ಷಾಕ್ಷರಮಂತ್ರಧಾರಿಭಿಃ ॥12॥
ಸಿತೋಚ್ಛ್ರಿತೋಷ್ಣೀಷನಿರುದ್ಧಮೂರ್ಧಜಂ
ವಿಚಿತ್ರವೈಡೂರ್ಯವಿಕಾರಕುಂಡಲಮ್ |
ವಿರಾಟಮಾಯಾಚ್ಛ ಯುಧಿಷ್ಠಿರಸ್ತದಾ
ಬೃಹಸ್ಪತಿಃ ಶಕ್ರಮಿವ ತ್ರಿವಿಷ್ಟಪೇ ॥13॥
ಸಭೆಯಲ್ಲಿ ಕೈಮುಗಿದ ಜನರಿಂದ ಸುತ್ತುವರಿಯಲ್ಪಟ್ಟಂತಹ, ವಿಚಿತ್ರವಾದ ನಾನಾ ವಿಧವಾದ ಶಸ್ತ್ರಗಳನ್ನು ಧರಿಸಿದವರಿಂದ ಸುತ್ತುವರಿಯಲ್ಪಟ್ಟಂತಹ, ಕೈಯಲ್ಲಿ ಕಾಣಿಕೆಯನ್ನು ಹಿಡಿದು ಪ್ರವೇಶ ಮಾಡುವ ಜನರಿಂದ ತುಂಬಿದ ಸಭೆಯಲ್ಲಿದ್ದ, ವೇದ ಮಂತ್ರ ಮತ್ತು ಪಾಠಗಳಿಂದ ಕೂಡಿದ ಬ್ರಾಹ್ಮಣರಿಂದ ಸುತ್ತುವರಿಯಲ್ಪಟ್ಟ ಉನ್ನತವಾದ ಬಿಳಿಯ ರುಮಾಲನ್ನು ತಲೆಯ ಮೇಲೆ ಧರಿಸಿದ, ವಿಚಿತ್ರವಾದ ವೈಡೂರ್ಯಗಳನ್ನು ಕೆತ್ತಿದ ಕುಂಡಲಗಳನ್ನು ಧರಿಸಿದ ವಿರಾಟನನ್ನು, ಸ್ವರ್ಗಲೋಕದಲ್ಲಿ ಬೃಹಸ್ಪತಿಯು ಇಂದ್ರನನ್ನು

ಸಮೀಪಿಸುವಂತೆ ಯುಧಿಷ್ಠಿರನು ಸಮೀಪಿಸಿದನು.
ತಮಾವ್ರಜಂತಂ ಪ್ರಸಮೀಕ್ಷ್ಯ ಪಾಂಡವಂ
ವಿರಾಟರಾಜೋ ಮುದಿತೇನ ಚಕ್ಷುಷಾ |
ಪಪ್ರಚ್ಛ ಚೈನಂ ಸ ನರಾಧಿಪೋ ಮುಹುಃ
ದ್ವಿಜಾಶ್ಚ ಯೇ ಚಾಸ್ಯ ಸಭಾಸದಸ್ತದಾ ॥14॥
ಹತ್ತಿರ ಬರುತ್ತಿದ್ದ ಆ ಪಾಂಡವನನ್ನು ವಿರಾಟರಾಜನು ಸಂತೋಷಗೊಂಡ ಕಣ್ಣುಗಳಿಂದ ಚೆನ್ನಾಗಿ ನೋಡಿ ನರಾಧಿಪನಾದ ಇವನು ಯಾರು ಎಂದು ಮತ್ತೆ ಮತ್ತೆ ಕೇಳಿದನು. ಅಲ್ಲಿದ್ದ ಬ್ರಾಹ್ಮಣರು ಮತ್ತು ಅವನ ಸಭಾಸದರೂ ಸಹ ಹಾಗೆಯೇ ಕೇಳಿದರು.
ಕೋ ವಾ ವಿಜಾನಾತಿ ಪುರಾಽಸ್ಯ ದರ್ಶನಂ
ಯುವಾಂ ಸಭಾಂ ಯೋಽಯಮುಪೈತಿ ಮಾಮಿಕಾಮ್ |
ರೂಪೇಣ ಸಾರೇಣ ವಿದಾರಯನ್ ಮಹೀಂ
ಶ್ರಿಯಾ ಹ್ಯಯಂ ವೈಶ್ರವಣೋ ದ್ವಿಜೋ ಯಥಾ ॥15॥
ಈ ಯಾವ ವ್ಯಕ್ತಿಯು ನನ್ನ ಸಭೆಯನ್ನು ಪ್ರವೇಶಿಸುತ್ತಿದ್ದಾನೆಯೋ ಅವನನ್ನು ನಿಮ್ಮಲ್ಲಿ ಯಾರು ಇದಕ್ಕಿಂತ ಮೊದಲು ನೋಡಿದ್ದೀರಿ? ಇವನು ರೂಪದಿಂದಲೂ ಮತ್ತು ಬಲದಿಂದಲೂ ಭೂಮಿಯನ್ನು ಸೀಳುವಂತೆ ತೋರುತ್ತಿದೆ. ಈ ಬ್ರಾಹ್ಮಣನು ಕುಬೇರನಂತೆ ಕಾಂತಿಯಿಂದ ಕಂಗೊಳಿಸುತ್ತಿದ್ದಾನೆ.
ಮೃಗೇಂದ್ರರಾಡ್ ವಾರಣಯೂಥಪೋಪಮಃ
ಪ್ರಭಾತ್ಯಯಂ ಕಾಂಚನಪರ್ವತೋ ಯಥಾ |
ವಿರಾಜತೇ ಪಾವಕಸೂರ್ಯಸನ್ನಿಭಃ
ಸಚಂದ್ರನಕ್ಷತ್ರ ಇವಾಂಶುಮಾನಹಃ ॥16॥
ಮೃಗರಾಜನಾದ ಸಿಂಹದಂತೆ, ಯೂಥಪತಿಯಾದ ಗಜದಂತೆ, ಕಾಂಚನ ಪರ್ವತದಂತೆ ಇವನು ಹೊಳೆಯುತ್ತಿದ್ದಾನೆ. ಅಗ್ನಿಸೂರ್ಯರನ್ನು ಹೋಲುವ ಇವನು ಹಗಲು ಸೂರ್ಯಚಂದ್ರ ಮತ್ತು ನಕ್ಷತ್ರಗಳಿಂದ ಕೂಡಿದಂತೆ ವಿರಾಜಿಸುತ್ತಿದ್ದಾನೆ. (ಅವನ ಮಂದಹಾಸವು ಚಂದ್ರನಂತೆ, ದಂತಪಂಕ್ತಿಯು ನಕ್ಷತ್ರದಂತೆ, ಸ್ವತಃ ಸೂರ್ಯನಂತೆ ಇದ್ದಾನೆ ಎಂದು ಅಭಿಪ್ರಾಯ-ವಾದಿರಾಜರು).
ನ ದೃಶ್ಯತೇಽಸ್ಯಾನುಚರೋ ನ ಕುಂಜರೋ
ನ ಚೋಷ್ಣರಶ್ಮಿಃ ಕಿರಣೈಃ ಸಮುಚ್ಛ್ರಿತಃ |
ನ ಕುಂಡಲೇ ನಾಂಗದಮಸ್ಯ ನ ಸ್ರಜೋ
ವಿಚಿತ್ರಿತಾಂಗಶ್ಚ ರಥಶ್ಚತುರ್ಯುಜಃ ॥17॥
ಇವನಿಗೆ ಯಾವ ಅನುಚರರಾಗಲೀ ಅಥವಾ ಗಜಗಳಾಗಲೀ ಕಾಣುತ್ತಿಲ್ಲ. ಇವನು ಕಿರಣಗಳಿಂದ ಕೂಡಿದ ಉನ್ನತನಾದ ಉಷ್ಣರಶ್ಮಿಯಾದ ಸೂರ್ಯನಲ್ಲ. ಇವನು ಕುಂಡಲಗಳನ್ನಾಗಲೀ, ಮಾಲೆಗಳನ್ನಾಗಲೀ ಧರಿಸಿಲ್ಲ. ನಾಲ್ಕು ಕುದುರೆಗಳನ್ನು ಹೂಡಿದ ರಥವೂ ಇಲ್ಲ. ಆದರೂ ತನ್ನ ತೇಜಸ್ಸಿನಿಂದಲೇ ಅತ್ಯಂತ ಆಶ್ಚರ್ಯಕರವಾಗಿ ಶೋಭಿಸುತ್ತಿದ್ದಾನೆ.
ಕ್ಷಾತ್ರಂ ಚ ರೂಪಂ ಹಿ ಬಿಭರ್ತ್ಯಯಂ ಭೃಶಂ
ಗಜೇಂದ್ರಶಾರ್ದೂಲಮಹರ್ಷಭೋಪಮಃ |
ಅಭ್ಯಾಗತೋಽಸ್ಮಾನನಲಂಕೃತೋಽಪಿ ಸನ್
ವಿರಾಜತೇ ಭಾನುರಿವಾಚಿರೋದಯಃ ॥18॥
ವಿಭಾತ್ಯಯಂ ಕ್ಷತ್ರಿಯ ಏವ ಸರ್ವಥಾ
ವಿರಾಟ ಇತ್ಯೇವಮುವಾಚ ತಂ ಪ್ರತಿ ॥19॥
ಗಜೇಂದ್ರನನ್ನು, ವ್ಯಾಘ್ರವನ್ನು, ಮಹಾವೃಷಭನನ್ನು ಹೋಲುವ ಇವನು ಸ್ಪಷ್ಟವಾಗಿ ಕ್ಷತ್ರಿಯ ರೂಪವನ್ನು ಧರಿಸಿದವನು. ನಮ್ಮನ್ನು ಸಮೀಪಿಸುತ್ತಿರುವ ಇವನು ಯಾವ ಅಲಂಕಾರವಿಲ್ಲದಿದ್ದರೂ ಆಗ ತಾನೇ ಉದಯಿಸಿದ ಸೂರ್ಯನಂತೆ ಕಂಗೊಳಿಸುತಿತದ್ದಾನೆ. ಇವನು ನಿಶ್ಚಿತವಾಗಿ ಕ್ಷತ್ರಿಯನೆಂದೇ ತೋರುತ್ತಿದೆ ಎಂದು ವಿರಾಟನು ಅವನ ವಿಷಯದಲ್ಲಿ ಹೇಳಿದನು.
ಸಸಾಗರಾಂತಾಮಯಮದ್ಯ ಮೇದಿನೀಂ
ಪ್ರಶಾಸಿತುಂ ಚಾರ್ಹತಿ ವಾಸವೋಪಮಃ |
ನಾಕ್ಷತ್ರಿಯೋ ನೂನಮಯಂ ಭವಿಷ್ಯತಿ
ಮೂರ್ಧಾಭಿಷಿಕ್ತಃ ಪ್ರತಿಭಾತಿ ಮಾಂ ಪ್ರತಿ ॥20॥
ತುಲ್ಯಂ ಹಿ ರೂಪಂ ಪ್ರತಿದೃಶ್ಯತೇಽಸ್ಯ
ವ್ಯಾಘ್ರಸ್ಯ ಸಿಂಹಸ್ಯ ನರರ್ಷಭಸ್ಯ ॥21॥
ಇಂದ್ರನಿಗೆ ಸಮಾನವಾದ ಇವನು ಸಾಗರಾಂತವಾದ ಭೂಮಿಯನ್ನು ಆಳಲು ಯೋಗ್ಯನಾಗಿದ್ದಾನೆ. ಇವನು ಕ್ಷತ್ರಿಯನಾಗದಿರಲು ಸಾಧ್ಯವಿಲ್ಲ. ಮೂರ್ಧಾಭಿಷಿಕ್ತನಾದ ರಾಜನಂತೆ ನನಗೆ ತೋರುತ್ತಿದ್ದಾನೆ. ಅವನ ಆಕಾರವು ವ್ಯಾಘ್ರಕ್ಕೆ, ಸಿಂಹಕ್ಕೆ ಮತ್ತು ದೊಡ್ಡ ಗೂಳಿಗೆ ಸಮಾನವಾಗಿ ತೋರುತ್ತಿದೆ.
ಯದೇಷ ಕಾಮಂ ಪರಿಮಾರ್ಗತೇ ದ್ವಿಜಃ
ತದಸ್ಯ ಸರ್ವಂ ಕ್ರಿಯತಾಮಸಂಶಯಮ್ |
ಪ್ರಿಯಂ ಚ ಮೇ ದರ್ಶನಮೀದೃಶೇ ಜನೇ
ದ್ವಿಜೇಷು ಮುಖ್ಯೇಷು ತಥಾಽತಿಥಿಷ್ವಪಿ ॥22॥

ಧನೇಷು ರತ್ನೇಷ್ವಥ ಗೋಷು ವೇಶ್ಮಸು
ಪ್ರಕಾಮತೋ ಮೇ ವಿಚರತ್ವವಾರಿತಃ ॥23॥
ಈ ಬ್ರಾಹ್ಮಣನು ಯಾವ ಅಭೀಷ್ಟವನ್ನು ಬಯಸುತ್ತಾನೆಯೋ ಅವೆಲ್ಲವನ್ನೂ ಅವನಿಗೆ ನಿಸ್ಸಂಶಯವಾಗಿ ನೆರವೇರಿಸಿ. ನನಗೆ ಇಂತಹ ಜನರನ್ನು ನೋಡಲು, ಶ್ರೇಷ್ಠ ಬ್ರಾಹ್ಮಣರನ್ನು ನೋಡಲು, ಹಾಗೆಯೇ ಅತಿಥಿಗಳನ್ನು ನೋಡಲು ಬಹಳ ಸಂತೋಷವಾಗುತ್ತದೆ. ಇವನು ನನ್ನ ಧನಗಳಲ್ಲಿಯೂ, ರತ್ನಗಳಲ್ಲಿಯೂ, ಗೋವುಗಳಲ್ಲಿಯೂ, ಮನೆಗಳಲ್ಲಿಯೂ ತನಗೆ ಇಷ್ಟ ಬಂದಂತೆ ಯಾರಿಂದಲೂ ತಡೆಯಲ್ಪಡದೆ ಸಂಚರಿಸುವವನಾಗಲಿ.
ವೈಶಂಪಾಯನಃ
ಏವಂ ಬ್ರುವಾಣಸ್ತಮನಂತತೇಜಸಾ
ವಿರಾಜಮಾನಂ ಸಹಸೋತ್ಥಿತೋ ನೃಪಃ |
ಅನೇನ ರೂಪೇಣ ಸಮೀಪಮಾಗತಂ
ತ್ರಿದಂಡಕುಂಡ್ಯಂಕುಶಶಿಕ್ಯಧಾರಿಣಮ್ ॥24॥
ವೈಶಂಪಾಯನ ಹೀಗೆ ಹೇಳುತ್ತಾ ರಾಜನು ಅಂತಹ ರೂಪದಿಂದ ಸಮೀಪಕ್ಕೆ ಬಂದ ತ್ರಿದಂಡ, ಕಮಂಡಲು ಮತ್ತು ಅಂಕುಶ ಧಾರಿಯಾದ, ಅನಂತ ತೇಜಸ್ಸಿನಿಂದ ಕಂಗೊಳಿಸುವ ಆ ಬ್ರಾಹ್ಮಣನನ್ನು ನೋಡಿ ಹೀಗೆ ಹೇಳುತ್ತಾ ತಕ್ಷಣದಲ್ಲಿ ಎದ್ದು ನಿಂತನು.
ಸಮುದ್ಯತಾ ಸಾಽಽಸ ಸಭಾ ಸಪಾರ್ಥಿವಾ
ಸವಿಪ್ರರಾಜನ್ಯವಿಶಾ ಸಶೂದ್ರಕಾ |
ಸಭಾಗತಂ ಪ್ರೇಕ್ಷ್ಯ ತಪಂತಮರ್ಚಿಷಾ
ವಿನಿಃಸೃತಂ ರಾಹುಮುಖಾದ್ಯಥಾ ರವಿಮ್ ॥25॥
ತನ್ನ ಕಾಂತಿಯಿಂದ ಕಂಗೊಳಿಸುತ್ತಾ ಸಭೆಯನ್ನು ಪ್ರವೇಶಿಸಿ ರಾಹುಮುಖದಿಂದ ಮುಕ್ತನಾದ ಸೂರ್ಯನಂತಿದ್ದ ಆ ಯತಿಯನ್ನು ನೋಡಿ ರಾಜರು ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಈ ಎಲ್ಲರಿಂದಲೂ ಕೂಡಿದ ಆ ಸಭೆಯು ಎದ್ದು ನಿಂತಿತು.
ಸ ತೇನ ಪೂರ್ವಂ ಜಯತಾದ್ ಭವಾನಿತಿ
ದ್ವಿಜಾತಿನೋಕ್ತೋಽಭಿಮುಖಂ ಕೃತಾಂಜಲಿಃ |
ಜಯಂ ಜಯಾರ್ಹೇಣ ಸಮೇತ್ಯ ವರ್ಧಿತೋ
ವಿರಾಟರಾಜೋ ಹ್ಯಭಿವಾದಯಚ್ಚ ತಮ್ ॥26॥
ಆ ಯತಿಯು ಮೊದಲು ರಾಜನನ್ನು ಕುರಿತು ನಿನಗೆ ಜಯವಾಗಲಿ ಎಂದು ಅವನಿಗೆ ಜಯವನ್ನು ವರ್ಧಿಸಿದನು. ವಿರಾಟರಾಜನು ಅವನಿಗೆ ಅಭಿಮುಖನಾಗಿ ಕೈಗಳನ್ನು ಜೋಡಿಸಿ ಅವನಿಗೆ ನಮಸ್ಕಾರವನ್ನು ಮಾಡಿದನು.
ತಮಬ್ರವೀತ್ ಪ್ರಾಂಜಲಿರೇವ ಪಾರ್ಥಿವೋ
ವಿರಾಟರಾಜೋ ಮಧುರಾಕ್ಷರಂ ವಚಃ ॥27॥
ಪ್ರಾಪ್ತಃ ಕುತಸ್ತ್ವಂ ಭಗವನ್ ಕಿಮಿಚ್ಛಸಿ
ಕ್ವ ವಾಸ್ಯಸೇ ಕಿಂ ಕರವಾಣಿ ತೇ ದ್ವಿಜ ॥28॥
ಕೈಗಳನ್ನು ಮುಗಿದುಕೊಂಡೇ ಪಾರ್ಥಿವನಾದ ವಿರಾಟರಾಜನು ಮಧುರವಾದ ಮಾತುಗಳಿಂದ ನೀವು ಎಲ್ಲಿಂದ ಬಂದಿದ್ದೀರಿ? ಏನು ಬಯಸುತ್ತೀರಿ? ಯಾರಿಂದ ವಾಸಿಸಲ್ಪಡುತ್ತೀರಿ? (ಯತಿಗಳು ಇನ್ನೊಬ್ಬರಿಂದಲೇ ವಾಸಿಸಲ್ಪಡಬೇಕು). ಬ್ರಾಹ್ಮಣರೇ, ನಿಮಗೆ ನಾನು ಏನು ಮಾಡಲಿ? ಎಂದು ಕೇಳಿದನು.
ಶ್ರುತಂ ಚ ಶೀಲಂ ಚ ಕುಲಂ ಚ ಶಂಸ ಮೇ
ಗೋತ್ರಂ ತಥಾ ನಾಮ ಚ ದೇಶಮೇವ ಚ |
ಸತ್ಯಪ್ರತಿಜ್ಞಾ ಹಿ ಭವಂತಿ ಸಾಧವೋ
ವಿಶೇಷತಃ ಪ್ರವ್ರಜಿತಾ ದ್ವಿಜಾತಯಃ ॥29॥
ನಿಮ್ಮ ವಿದ್ಯೆಯನ್ನು, ಶೀಲವನ್ನು ಮತ್ತು ಕುಲವನ್ನು ನನಗೆ ಹೇಳಿ. ನಿಮ್ಮ ಗೋತ್ರ, ನಾಮ ಮತ್ತು ದೇಶವನ್ನು ಹೇಳಿ. ಸಜ್ಜನರು ಸತ್ಯವನ್ನೇ ನುಡಿಯುವವರಾಗುತ್ತಾರೆ. ಅದರಲ್ಲಿಯೂ ಸಂನ್ಯಾಸಿಗಳಾದ ಬ್ರಾಹ್ಮಣರು ವಿಶೇಷವಾಗಿ ಸತ್ಯವನ್ನು ನುಡಿಯುವರು.
ತವಾನುರೂಪಂ ಪ್ರಚರಾಮಿ ತೇ ಹ್ಯಹಂ
ನ ಚಾವಮಂತಾ ಹಿ ಶುಭಾಭಿಭಾಷಿತಾ |
ಅಪೂಜಿತಾ ಹ್ಯಗ್ನಿಸಮಾ ದ್ವಿಜಾತಯಃ
ಕುಲಂ ದಹೇಯುಃ ಸವಿಷಾ ಇವೋರಗಾಃ ॥30॥
ನಿಮಗೆ ಯೋಗ್ಯವಾದ ರೀತಿಯಲ್ಲಿ ನಾನು ನಿಮ್ಮ ಜೊತೆಯಲ್ಲಿ ನಡೆದುಕೊಳ್ಳುತ್ತೇನೆ. ನಿಮಗೆ ಎಂದೂ ಅವಮಾನವನ್ನು ಮಾಡುವುದಿಲ್ಲ. ಶುಭವನ್ನೇ ಮಾತನಾಡುತ್ತೇನೆ. ಬ್ರಾಹ್ಮಣರನ್ನು ಪೂಜೆ ಮಾಡದಿದ್ದರೆ ಅವರು ಅಗ್ನಿಗೆ ಸಮಾನರಾದವರು. ವಿಷದಿಂದ ಕೂಡಿದ ಸರ್ಪಗಳಂತೆ ಅವರು ಕುಲವನ್ನೇ ದಹಿಸಿಯಾರು!
ಸರ್ವಾಂ ಚ ಭೂಮಿಂ ತವ ದಾತುಮುತ್ಸಹೇ
ಸದಂಡಕೋಶಂ ವಿಸೃಜಾಮಿ ತೇ ಪುರಮ್ |
ಕಸ್ಯಾಸಿ ರಾಜ್ಞೋ ವಿಷಯಾದಿಹಾಗತಃ
ಕಿಂ ಕರ್ಮ ಚಾತ್ರಾಚರಸಿ ದ್ವಿಜೋತ್ತಮ ॥31॥
ನಾನು ನನ್ನ ಎಲ್ಲಾ ಭೂಮಿಯನ್ನೂ ನಿಮಗೆ ಕೊಡಲು ಬಯಸುತ್ತೇನೆ. ಸೈನ್ಯ ಮತ್ತು ಕೋಶದಿಂದ ಕೂಡಿದ ಈ ನಗರವನ್ನು ನಿಮ್ಮ

ಸಲುವಾಗಿ ಬಿಟ್ಟು ಕೊಡುತ್ತೇನೆ. ಯಾವ ರಾಜನ ಉದ್ದೇಶದಿಂದ ನೀವು ಇಲ್ಲಿಗೆ ಬಂದಿದ್ದೀರಿ? ಬ್ರಾಹ್ಮಣಶ್ರೇಷ್ಠರೇ, ನೀವು ಇಲ್ಲಿ ಯಾವ ಕಾರ್ಯವನ್ನು ಮಾಡುತ್ತೀರಿ?

ಏವಂ ಬ್ರುವಾಣಂ ತಮುವಾಚ ಪಾರ್ಥಿವೋ
ಯುಧಿಷ್ಠಿರೋ ಧರ್ಮಮವೇಕ್ಷ್ಯ ಚಾಸಕೃತ್ |
ಸತ್ಯಂ ವಚಃ ಕೋ ನ್ವಿಹ ವಕ್ತುಮುತ್ಸಹೇದ್
ಯಥಾಪ್ರತಿಜ್ಞಂ ತು ಶೃಣುಷ್ವ ಪಾರ್ಥಿವ |
ಶ್ರುತಂ ಚ ಶೀಲಂ ಚ ಕುಲಂ ಚ ಕರ್ಮ ಚ
ಶೃಣುಷ್ವ ಮೇ ಜನ್ಮ ಚ ದೇಶಮೇವ ಚ ॥32॥

ಹೀಗೆ ಹೇಳುತ್ತಿದ್ದ ರಾಜನನ್ನು ಕುರಿತು ಸ್ವತಃ ರಾಜನಾದ ಯುಧಿಷ್ಠಿರನು ಅನೇಕ ಬಾರಿ ಧರ್ಮವನ್ನು ವಿಮರ್ಶೆ ಮಾಡಿ ಇಲ್ಲಿ ಸತ್ಯವಚನವನ್ನು ಯಾರು ಹೇಳಲು ಸಾಧ್ಯ ಎಂದು (ವಿಮರ್ಶೆ ಮಾಡಿ) ರಾಜನೇ, ನಮ್ಮ ಪ್ರತಿಜ್ಞೆಗೆ ಅನುಗುಣವಾಗಿ ಹೇಳುತೆತೇನೆ, ಕೇಳು. ನನ್ನ ವಿದ್ಯೆಯನ್ನೂ ಶೀಲವನ್ನೂ, ಕುಲವನ್ನೂ, ಕರ್ಮವನ್ನೂ, ಜನ್ಮವನ್ನೂ ಮತ್ತು ದೇಶವನ್ನೂ ಕೇಳಿ ತಿಳಿದುಕೋ ಎಂದು ಹೇಳಿದನು (ತಾವು ಧರ್ಮರಾಜಾದಿಗಳು ಎಂದು ಸತ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಜ್ಞಾತ ವಾಸದಲ್ಲಿ ಹೇಗೆ ಕಾಲ ಕಳೆಯಬೇಕೆಂದು ಅಣ್ಣತಮ್ಮಂದಿರು ಪರಸ್ಪರ ಪ್ರತಿಜ್ಞೆ ಮಾಡಿದಂತೆ ಹೇಳುತ್ತೇನೆ. ಸ್ವತಃ ಯತಿಯಾಗದಿದ್ದರೂ ಪ್ರತಿಜ್ಞೆಗೆ ಅನುಗುಣವಾಗಿ ಯತಿಯಾಗಿದ್ದೇನೆ ಎಂದು ಯುಧಿಷ್ಠಿರನ ಅಭಿಪ್ರಾಯ- ಲಕ್ಷಾಲಂಕಾರ).

ಗುರೂಪದೇಶಾನ್ನಿಯಮಾದ್ ದೃಢವ್ರತಂ
ಕುಲಕ್ರಮಾರ್ಥಂ ಪಿತೃಭಿರ್ನಿಯೋಜಿತಮ್ |
ದ್ವಿಜೋ ವ್ರತೇನಾಸ್ಮಿ ನ ಚ ದ್ವಿಜಃ ಪ್ರಭೋ
ಸುಮುಂಡಿತಃ ಪ್ರವ್ರಜಿತಸ್ತ್ರಿದಂಡಭೃತ್ ॥33॥

ಗುರುಗಳ ಉಪದೇಶದಿಂದ ಕುಲಕ್ರಮಕ್ಕೆ ಅನುಸಾರವಾಗಿ ಪಿತೃಗಳಿಂದ ನಿಯೋಜಿತನಾಗಿ ನಿಯಮದಿಂದ ದೃಢವ್ರತನಾಗಿದ್ದೇನೆ. ವ್ರತದಿಂದ ಬ್ರಾಹ್ಮಣನಾಗಿದ್ದೇನೆ. ಆದರೆ ಪ್ರಭುವೇ, ನಾನು ಶಿರಸ್ಸನ್ನು ಮುಂಡನ ಮಾಡಿಕೊಂಡು ತ್ರಿದಂಡವನ್ನು ಹಿಡಿದು ಸಂನ್ಯಾಸಿಯಾದುದರಿಂದ ಬ್ರಾಹ್ಮಣನಲ್ಲ ಎಂದು ಹೇಳಬಹುದು (ಗುರೂಪದೇಶ ಎಂದರೆ ಗುರುಗಳಾದ ಧೌಮ್ಯರ ಉಪದೇಶದಂತೆ ಎಂದು ಅರ್ಥ. ಪಿತೃಭಿರ್ನಿಯೋಜಿತಮ್ ಎಂದರೆ ತಂದೆಯಾದ ಯಮದೇವರ ಆದೇಶಕ್ಕೆ ಅನುಗುಣವಾಗಿ ಎಂದರ್ಥ. ಕುಲಕ್ರಮಾರ್ಥಂ ಎಂದರೆ ಬ್ರಾಹ್ಮಣ ಕುಲದಲ್ಲಿ ಯತಿಯಾಗಿ ಕಾಲಿಡಲು ಎಂದರ್ಥ. ವ್ರತದಿಂದ ದ್ವಿಜನಾಗಿದ್ದೇನೆ, ಆದರೆ ನಿಜವಾಗಿ ದ್ವಿಜನಲ್ಲ, ನಾನು ಕ್ಷತ್ರಿಯ ಎಂದು ಅಭಿಪ್ರಾಯ. ಆದ್ದರಿಂದ ಧರ್ಮರಾಜನ ಯಾವ ಮಾತೂ ಸಹ ಅನೃತವಲ್ಲ- ಲಕ್ಷಾಲಂಕಾರ).

ಇದಂ ಶರೀರಂ ಮಮ ಪಶ್ಯ ಮಾನುಷಂ
ಸಮಾವೃತಂ ಪಂಚಭಿರೇವ ಧಾತುಭಿಃ |
ಮಮೈವ ಪಂಚೇಂದ್ರಿಯಗಾತ್ರದರ್ಶಿನೋ
ವದಂತಿ ಪಂಚೈವ ಪಿತೄನ್ ಯಥಾಶ್ರುತಿ ॥34॥

ಈ ನನ್ನ ಮನುಷ್ಯ ಶರೀರವನ್ನು ನೋಡು. ಇದು ಪಂಚಧಾತುಗಳಿಂದ ಕೂಡಿದುದಾಗಿದೆ. ಪಂಚೇಂದ್ರಿಯದಿಂದ ಕೂಡಿದ ನನ್ನ ಶರೀರವನ್ನು ನೋಡುವ ಜನರು ನನಗೆ ಪಂಚ ಪಿತೃಗಳೆಂದು ತಾವು ತಿಳಿದಂತೆ ಹೇಳುತ್ತಾರೆ (ದೇಹವು ತಂದೆಯ ವೀರ್ಯದಿಂದ ಉಂಟಾದರೂ ದೇಹದಲ್ಲಿ ಆಕಾಶಾದಿಪಂಚಭೂತಗಳೇ ಪ್ರಧಾನವಾಗಿರುವುದರಿಂದ ಆ ಭೂತಾಭಿಮಾನಿದೇವತೆಗಳೇ ಮುಖ್ಯವಾದ ತಂದೆಯರೆಂದು ವೇದದ ಅಭಿಪ್ರಾಯ. ತಾನು ಪಾಂಡುಪುತ್ರನೆಂದು ಹೇಳಿದರೆ ಅಜ್ಞಾತವಾಸದ ಭಂಗವಾಗುತ್ತದೆ. ಬೇರೆಯವರ ಪುತ್ರನೆಂದು ಹೇಳಿದರೆ ಸುಳ್ಳನ್ನು ಹೇಳಿದಂತಾಗುತ್ತದೆ. ಆದ್ದರಿಂದ ಯುಧಿಷ್ಠಿರನು ಹೀಗೆ ಹೇಳುತ್ತಾನೆ- ವಾದಿರಾಜರು).

ಮನುಷ್ಯಜಾತಿತ್ವಮಚಿಂತಯನ್ನಹಂ
ನ ಚಾಸ್ಮ್ಯತುಲ್ಯಃ ಪಿತೃಭಿಃ ಸ್ವಭಾವತಃ |
ಕಂಕೋಽಸ್ಮಿ ನಾಮ್ನಾ ವಿಷಯಂ ತವಾಗತೋ
ವ್ರತೀ ದ್ವಿಜಾತಿಃ ಸ್ವಕೃತೇನ ಕರ್ಮಣಾ ॥35॥

ಈ ಮನುಷ್ಯ ಜಾತಿಯನ್ನು ಚಿಂತಿಸದಿದ್ದರೆ ನಾನು ಸ್ವಾಭಾವಿಕವಾಗಿ ನನ್ನ ಪಿತೃಗಳಿಗೆ ಅಸಮಾನನಾದವನಲ್ಲ (ಮನುಷ್ಯತ್ವವು ಔಪಾಧಿಕವಾದುದು. ತನ್ನ ಪಿತೃಗಳಾದ ಪಂಚ ಮಹಾಭೂತಾದಿ ದೇವತೆಗಳಂತೆ ತಾನೂ ಒಬ್ಬ ದೇವತೆ ಎಂದು ಆಂತರಿಕ ಅಭಿಪ್ರಾಯ). ನಾನು ಕಂಕ ಎಂಬ ಹೆಸರಿನಿಂದ ನನ್ನ ಕರ್ಮದಿಂದ ಬ್ರಾಹ್ಮಣನಾಗಿ ಮತ್ತು ಸಂನ್ಯಾಸಿಯಾಗಿ ನಿನ್ನ ದೇಶಕ್ಕೆ ಬಂದಿದ್ದೇನೆ (ನನ್ನ ಕರ್ಮ ಎಂದರೆ ತಾವು ಮಾಡಿಕೊಂಡ ಸಂಕೇತ ಎಂದು ಆಂತರಿಕ ಅಭಿಪ್ರಾಯ).

ದ್ಯೂತಪ್ರಸಂಗಾದ್ ವನಗೋಽಸ್ಮಿ ರಾಜನ್
ಸತ್ಯಪ್ರತಿಜ್ಞಾ ವ್ರತಿನಶ್ಚರಾಮ ಹ |
ಯುಧಿಷ್ಠಿರಸ್ಯಾಸ್ಮಿ ಸಖಾಽಭವಂ ಪುರಾ
ಗೃಹಪ್ರವೇಶೀ ಚ ಶರೀರಮೇವ ॥36॥
ಗೃಹೇ ಚ ತಸ್ಯೋಷಿತವಾನಹಂ ಚಿರಂ
ರಾಜಾಽಸ್ಮಿ ತಸ್ಯ ಸ್ಮ ಪುರೇ ಭವನ್ ಪುರಾ ॥37॥

ರಾಜನೇ, ನಾನು ದ್ಯೂತಪ್ರಸಂಗದಿಂದ ಪಣದಲ್ಲಿ ಎಲ್ಲವನ್ನೂ ಕಳೆದುಕೊಂಡು ಕಾಡಿಗೆ ಬಂದಿದ್ದೇನೆ (ಶಕುನಿಯ ಜೊತೆಯಲ್ಲಿ ದ್ಯೂತವನ್ನು ಆಡಿ ರಾಜ್ಯವನ್ನು ಕಳೆದುಕೊಂಡು ಸಂನ್ಯಾಸಿಯಾಗಿ ಬಂದಿದ್ದೇನೆ ಎಂದು ಆಂತರಿಕ ಅಭಿಪ್ರಾಯ). ನಾನು ಸತ್ಯಪ್ರತಿಜ್ಞನಾಗಿ ವ್ರತವನ್ನು ಧರಿಸಿ ನಿನ್ನ ಬಳಿಗೆ ಬಂದಿದ್ದೇನೆ. ನಾನು ಹಿಂದೆ ಯುಧಿಷ್ಠಿರನ ಸ್ನೇಹಿತನಾಗಿದ್ದೆ. ಅವನ

ಮನೆಯಲ್ಲಿಯೇ ಇರುತ್ತಿದ್ದೆ. ಅವನ ಶರೀರವೇ ನಾನೆಂದು ತಿಳಿ (ತನಗೆ ತಾನು ಪ್ರಿಯನಾದುದರಿಂದ ಯುಧಿಷ್ಠಿರನ ಸ್ನೇಹಿತ ಎಂದೂ, ತಾನೇ ಯುಧಿಷ್ಠಿರನಾದುದರಿಂದ ಅವನ ಶರೀರವೇ ತನ್ನ ಶರೀರವೆಂದೂ, ಅವನ ಗೃಹವೇ ತನ್ನ ಗೃಹವೆಂದೂ ಆಂತರಿಕ ಅಭಿಪ್ರಾಯ). ಅವನ ಮನೆಯಲ್ಲಿ ನಾನು ಬಹುಕಾಲ ವಾಸವನ್ನು ಮಾಡಿದೆ. ಅವನ ಪಟ್ಟಣದಲ್ಲಿ ನಾನೇ ರಾಜನಾಗಿದ್ದೆ (ರಾಜನಂತೆ ಎಲ್ಲರಿಂದಲೂ ಪೂಜ್ಯನಾಗಿದ್ದೆ ಎಂದು ಬಾಹ್ಯ ಅಭಿಪ್ರಾಯ. ತಾನೇ ಯುಧಿಷ್ಠಿರನೆಂದು ಒಳಗಿನ ಅಭಿಪ್ರಾಯ).

ಮದಾಜ್ಞಯಾ ತತ್ರ ವಿಚೇರುರಂಗನಾ
ಮಮ ಪ್ರಿಯಾರ್ಥಂ ದಮಯಂತಿ ವಾಜಿನಃ |
ಮಯಾ ಕೃತಂ ತಸ್ಯ ಪುರೇ ತು ಯತ್ ಪುರಾ
ನ ತತ್ ಕದಾಚಿತ್ ಕೃತವಾನ್ ಜನೋಽನ್ಯಥಾ ॥38॥

ನನ್ನ ಆಜ್ಞೆಯಂತೆ ಅಲ್ಲಿ ವನಿತೆಯರು ತಿರುಗಾಡುತ್ತಿದ್ದರು. ನನ್ನ ಸಂತೋಷಕ್ಕಾಗಿ ಕುದುರೆಗಳನ್ನು ಪಳಗಿಸುತ್ತಿದ್ದರು. ನಾನು ಆ ಪಟ್ಟಣದಲ್ಲಿ ಹಿಂದೆ ಮಾಡಿದ ಯಾವ ಕಾರ್ಯವನ್ನೂ ಯಾರೂ ನಿಷೇಧ ಮಾಡುತ್ತಿರಲಿಲ್ಲ.

ಸೋಽಹಂ ಪುರಾ ತಸ್ಯ ವಯಃಸಮಃ ಸಖಾ
ಚರಾಮಿ ಸರ್ವಾಂ ವಸುಧಾಂ ಸುದುಃಖಿತಃ |
ನ ವೈ ಪ್ರಶಾಂತಿಂ ಕ್ವಚಿದಾಪ್ನುವಾನಹಂ
ವ್ರತೋಪದೇಶಾನ್ನಿಯಮೇನ ಮಾರಿತಃ ॥39॥

ನಾನು ಹಿಂದೆ ಅವನ ಸಮಾನ ವಯಸ್ಸಿನ ಸ್ನೇಹಿತನಾಗಿದ್ದೆ. ಈಗ ದುಃಖದಿಂದ ಭೂಮಿಯಲ್ಲೆಲ್ಲಾ ತಿರುಗುತ್ತಿದ್ದೇನೆ. ಎಲ್ಲಿಯೂ ಶಾಂತಿಯು ದೊರಕುತ್ತಿಲ್ಲ. ವ್ರತೋಪದೇಶದಿಂದಲೂ ಮತ್ತು ನಿಯಮದಿಂದಲೂ ನಾನು ಬಾಧಿತನಾಗಿದ್ದೇನೆ (ತಾನೇ ಯುಧಿಷ್ಠಿರನಾದ್ದರಿಂದ ಯುಧಿಷ್ಠಿರನ ಜನ್ಮದಿನವೇ ತನ್ನ ಜನ್ಮದಿನ. ಯುಧಿಷ್ಠಿರನ ಮರಣದಿನವೇ ತನ್ನ ಮರಣದಿನ. ಆದ್ದರಿಂದ ಯುಧಿಷ್ಠಿರನಿಗೆ ಸಮಾನವಾದ ವಯಸ್ಸು ಎಂದು ಹೇಳುತ್ತಾನೆ. ಧೌಮ್ಯರ ಉಪದೇಶದಿಂದಲೂ ಮತ್ತು ತಾವು ಮಾಡಿಕೊಂಡ ನಿಯಮದಿಂದಲೂ ಪೀಡಿತನಾಗಿ ದುಃಖಿತನಾಗಿದ್ದೇನೆ ಎಂದು ಒಳಗಿನ ಅಭಿಪ್ರಾಯ).

ವೈಯಾಘ್ರಪಾದ್ಯೋಽಸ್ಮಿ ನರೇಂದ್ರ ಗೋತ್ರತಃ
ತದೇವ ಸೌಖ್ಯಂ ಮೃಗಯಾಮಹೇ ಪುನಃ |
ಕೃತಜ್ಞಭಾವೇನ ಮಯಾಽನುಕೀರ್ತಿತಂ
ಯುಧಿಷ್ಠಿರಸ್ಯಾತ್ಮಸಮಸ್ಯ ಚೇಷ್ಟಿತಮ್ ॥40॥

ನಾನು ವೈಯಾಘ್ರಪಾದ ಗೋತ್ರಕ್ಕೆ ಸೇರಿದವನು. ನಾನು ಮೊದಲು ಅನುಭವಿಸಿದ ಸುಖವನ್ನೇ ಇನ್ನೊಮ್ಮೆ ನಿನ್ನ ಬಳಿಯಲ್ಲಿ ಅಪೇಕ್ಷಿಸುತ್ತೇನೆ. ಯುಧಿಷ್ಠಿರನ ಮೇಲಿನ ಕೃತಜ್ಞಭಾವದಿಂದ ನನ್ನ ಆತ್ಮಸಮನಾದ ಅವನ ವಿಷಯವನ್ನು ನಾನು ನಿನ್ನ ಬಳಿ ಪ್ರಸತಪ ಮಾಡಿದೆ (ವ್ಯಾಘ್ರಪಾತ್ ಎಂಬ ಋಷಿಯ ಗೋತ್ರಕ್ಕೆ ಸೇರಿದವನು ಎಂದು ಹೊರಗಿನ ಅಭಿಪ್ರಾಯ. ವೈಯಾಘ್ರಪಾದ್ಯ ಎಂದರೆ ಭೀಷ್ಮರಂತೆ ಕುರುವಂಶಕ್ಕೆ ಸೇರಿದವನು ಎಂದು ಒಳಗಿನ ಅಭಿಪ್ರಾಯ).

ಇಮಂ ಹಿ ಮೋಕ್ಷಾಶ್ರಮಮಾಶ್ರಿತಸ್ಯ ಮೇ
ಯುಧಿಷ್ಠಿರಸ್ತುಲ್ಯಗುಣೋ ಭವಾನಪಿ |
ನ ಮೇಽದ್ಯ ಮಾತಾ ನ ಪಿತಾ ನ ಬಾಂಧವಾ
ನ ಮೇಽಸ್ತಿ ರೂಪಂ ನ ರತಿರ್ನ ಸಂತತಿಃ ॥41॥

ಈ ಮೋಕ್ಷಾಶ್ರಮವನ್ನು ಆಶ್ರಯಿಸಿದ ನನಗೆ ಯುಧಿಷ್ಠಿರನು ಸಮಾನವಾದ ಗುಣವುಳ್ಳವನು. ನೀನೂ ಸಹ ಅವನಂತೆಯೇ. ಈ ದಿನ ನನಗೆ ತಾಯಿಯಾಗಲೀ, ತಂದೆಯಾಗಲೀ, ಬಂಧುಗಳಾಗಲೀ, ರೂಪವಾಗಲೀ, ಸಂತೋಷವಾಗಲೀ ಅಥವಾ ಸಂತತಿಯಾಗಲೀ ಇಲ್ಲ (ತಾನು ಯತಿಯಾಗಿರುವುದರಿಂದ ಎಲ್ಲವನ್ನೂ ತೊರೆದಿದ್ದೇನೆ ಎಂದು ಹೊರಗಿನ ಅಭಿಪ್ರಾಯ. ಎಲ್ಲರೂ ಇದ್ದರೂ ಈ ದಿನ ಯಾರೂ ಉಪಕಾರ ಮಾಡಲು ಸಾಧ್ಯವಿಲ್ಲವಾದ್ದರಿಂದ ಯಾರೂ ಇಲ್ಲವೆಂದು ಒಳಗಿನ ಅಭಿಪ್ರಾಯ).

ಸುಖಂ ಚ ದುಃಖಂ ಚ ಹಿ ತುಲ್ಯಮದ್ಯ ಮೇ
ಪ್ರಿಯಾಪ್ರಿಯೇ ತುಲ್ಯಗತಿರ್ಗತಾಗತೇ |
ಮುಕ್ತೋಽಸ್ಮಿ ಕಾಮಾಚ್ಚ ಧನಾಚ್ಚ ಸಾಂಪ್ರತಂ
ತ್ವದಾಶ್ರಮೇ ವಸ್ತುಮಿಹಾಭ್ಯುಪಾಗತಃ ॥42॥

ಈ ದಿನ ನನಗೆ ಸುಖದುಃಖಗಳೆರಡೂ ಸಮಾನವಾದವುಗಳು. ಪ್ರಿಯಾಪ್ರಿಯಗಳು ಗಮನಾಗಮನಗಳು ಎಲ್ಲವೂ ಸಮಾನವಾದವು. ಸದ್ಯಕ್ಕೆ ಭೋಗದಿಂದಲೂ ಮತ್ತು ಧನದಿಂದಲೂ ನಿರ್ಮುಕ್ತನಾಗಿದ್ದೇನೆ. ನಿನ್ನ ಆಶ್ರಯದಲ್ಲಿ ವಾಸ ಮಾಡಲು ಇಲ್ಲಿಗೆ ಬಂದಿದ್ದೇನೆ.

ಸಂವತ್ಸರೇಣೇಹ ಸಮಾಪ್ಯತೇ ತ್ವಿದಂ
ಮಮ ವ್ರತಂ ದುಷ್ಕೃತಕರ್ಮಕಾರಿಣಃ |
ತತೋ ಭವಂತಂ ಪರಿತೋಷ್ಯ ಕರ್ಮಭಿಃ
ಪುನರ್ವ್ರಜಿಷ್ಯಾಮಿ ಕುತೂಹಲಂ ಯತಃ ॥43॥

ದುಷ್ಕಾರ್ಯವನ್ನು ಮಾಡಿದ ನನ್ನ ಈ ವ್ರತವು ಒಂದು ವರ್ಷಕ್ಕೆ ಸಮಾಪ್ತಿಗೊಳ್ಳುತ್ತದೆ. ಅನಂತರ ನನ್ನ ಕಾರ್ಯಗಳಿಂದ ನಿನ್ನನ್ನು ಸಂತೋಷ ಪಡಿಸಿ ನನ್ನ ಮನಸ್ಸಿಗೆ ಬಂದ ಕಡೆ ನಾನು ಹೋಗುವೆನು.

ಅಕ್ಷಾನ್ ನಿವಪ್ತುಂ ಕುಶಲೋಽಸ್ಮ್ಯಹಂ ಸದಾ
ಪರಾಜಿತಃ ಶಕುನಿರುತಾನಿ ಚಿಂತಯನ್ |
ಮೃಗದ್ವಿಜಾನಾಂ ಚ ರುತಾನಿ ಚಿಂತಯನ್

ನಿರಾಶ್ರಯಃ ಪ್ರವ್ರಜಿತೋಽಸ್ಮಿ ಭಿಕ್ಷುಕಃ ॥44॥
ನಾನು ದಾಳಗಳನ್ನು ಉರುಳಿಸುವುದರಲ್ಲಿ ಕುಶಲನಾಗಿದ್ದೇನೆ. ಶಕುನ ಪಕ್ಷಿಗಳ ಅಪಶಬ್ದಗಳನ್ನು ಚಿಂತಿಸುತ್ತಾ ಪರಾಜಿತನಾದೆ. ಮೃಗಪಕ್ಷಿಗಳ ಶಬ್ದವನ್ನು ಚಿಂತಿಸುತ್ತಾ ನಿರಾಶ್ರಯನಾಗಿ ಸಂನ್ಯಾಸಿಯಾಗಿ ಹೊರಟುಬಂದಿದ್ದೇನೆ. (ಶಕುನಿರುತ ಎಂದರೆ ಸೌಬಲನಾದ ಶಕುನಿಯ ಕೆಟ್ಟ ಮಾತುಗಳು ಎಂದು ಅಭಿಪ್ರಾಯ. ಮೃಗದ್ವಿಜಗಳು ಎಂದರೆ ಅರಣೀಹರಣ ಸಮದಲ್ಲಿ ಮೃಗರೂಪವನ್ನು ಧರಿಸಿದ ಯಮನ ಮತ್ತು ದ್ವಿಜರು ಎಂದರೆ ಧೌಮ್ಯಾದಿ ಬ್ರಾಹ್ಮಣರ ವಾಕ್ಯವನ್ನು ಸ್ಮರಿಸುತ್ತಾ ಅವರ ಆದೇಶದಂತೆ ಸಂನ್ಯಾಸಿಯಾಗಿದ್ದೇನೆ ಎಂದು ಆಂತರಿಕ ಅಭಿಪ್ರಾಯ).
ತಮೇವಮುಕ್ತೇ ವಚನೇ ನರಾಧಿಪಃ
ಕೃತಾಂಜಲಿಃ ಪ್ರವ್ರಜಿತಂ ಸಮೀಕ್ಷ್ಯ ಚ |
ಅಥಾಬ್ರವೀದ್ ಹೃಷ್ಟಮನಾಃ ಶುಭಾಕ್ಷರಂ
ಮನೋಽನುಗಂ ಸರ್ವಸಭಾಗತಂ ವಚಃ ॥45॥
ಆ ಸಂನ್ಯಾಸಿಯು ಹೀಗೆ ಹೇಳುತ್ತಿರಲು ರಾಜನು ಕೈಗಳನ್ನು ಮುಗಿದು ಅವನನ್ನು ನೋಡಿ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಎಲ್ಲ ಸಭಾಸದರ ಮನಸ್ಸಿಗೆ ಅನುಗುಣವಾದಂತಹ ಶುಭವಾದ ಮಾತುಗಳನ್ನು ಆಡಿದನು.
ದದಾನಿ ತೇ ಹಂತ ವರಂ ಯದೀಪ್ಸಿತಂ
ಪ್ರಶಾಧಿ ಮತ್ಸ್ಯಾನ್ ಯದಿ ಮನ್ಯತೇ ಭವಾನ್ |
ಪ್ರಿಯಾ ಹಿ ಧೂರ್ತಾ ಮಮ ಚಾಕ್ಷಕೋವಿದಾಃ |
ತ್ವಂ ಚಾಪಿ ದೇವೋಪಮ ರಾಜ್ಯಮರ್ಹತಿ ॥46॥
ದೇವಸದೃಶನಾದವನೇ, ನೀನು ಇಷ್ಟಪಟ್ಟ ವರಗಳನ್ನು ಸಂತೋಷದಿಂದ ಕೊಡುವೆನು. ನಿನಗೆ ಇಷ್ಟವಾಗುವುದಾದರೆ ಮತ್ಸ್ಯದೇಶವನ್ನೇ ಆಳು. ಅಕ್ಷಕೋವಿದರಾದವರು ನನಗೆ ಪ್ರಿಯರಾದವರು. ನೀನಾದರೂ ರಾಜ್ಯಕ್ಕೆ ಅರ್ಹನಾದವನು.
ಸಮಾನಯಾನಾಸನವಸ್ತ್ರಭೋಜನಂ
ಪ್ರಭೂತಮಾಲ್ಯಾಭರಣಾನುಲೇಪನಮ್ |
ಸಾ ಸಾರ್ವಭೌಮೋಪಮ ಸರ್ವದಾಽರ್ಹಸಿ
ಪ್ರಿಯಂ ಹಿ ಮನ್ಯೇ ತವ ನಿತ್ಯದರ್ಶನಮ್ ॥47॥
ಸಾರ್ವಭೌಮಸದೃಶನಾದವನೇ, ನೀನು ನನಗೆ ಸಮಾನವಾದ ಯಾನಾಸನ, ವಸ್ತ್ರಭೋಜನಗಳನ್ನು ಸ್ವೀಕರಿಸಲು, ಗಂಧಮಾಲೆಯ ಆಭರಣಗಳನ್ನು ಸ್ವೀಕರಿಸಲು ಯಾವಾಗಲೂ ಯೋಗ್ಯನಾಗಿದ್ದೀಯೆ. ನಿತ್ಯವೂ ನಿನ್ನ ದರ್ಶನವು ನನಗೆ ಸಂತೋಷಕರವಾದುದು ಎಂದು ಭಾವಿಸುತ್ತೇನೆ.
ಯೇ ತ್ವಾಽಭಿಧಾವೇಯುರನರ್ಥಪೀಡಿತಾ
ದ್ವಿಜಾತಿಮುಖ್ಯಾ ಯದಿ ವೇತರೇ ಜನಾಃ |
ಸರ್ವಾಣಿ ಕಾರ್ಯಾಣ್ಯಹಮರ್ಥಿತಸ್ತ್ವಯಾ
ತೇಷಾಂ ಕರಿಷ್ಯಾಮಿ ನ ಮೇಽತ್ರ ಸಂಶಯಃ ॥48॥
ಬ್ರಾಹ್ಮಣರಾಗಲೀ, ಇತರರಾಗಲೀ ಕಷ್ಟದಿಂದ ಪೀಡಿತರಾಗಿ ನಿನ್ನ ಬಳಿಗೆ ಓಡಿಬಂದು ನಿನಗೆ ಶರಣಾಗತನಾದರೆ ನೀನು ಹೇಳುವ ಎಲ್ಲಾ ಉಪಕಾರವನ್ನೂ ನಾನು ಅವರಿಗೆ ಮಾಡುವೆನು. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಮಮಾಂತಿಕೇ ಯಶ್ಚ ತವಾಪ್ರಿಯಂ ಚರೇತ್
ಪ್ರವಾಸಯೇ ತಂ ಪ್ರವಿಚಿಂತ್ಯ ಮಾನವಮ್ |
ಯಚ್ಚಾಪಿ ಕಿಂಚಿದ್ ವಸು ವಿದ್ಯತೇ ಮಮ
ಪ್ರಭುರ್ಭವಾಂಸ್ತಸ್ಯ ವಶೀ ವಸೇಹ ಚ ॥49॥
ನನ್ನ ಸಮೀಪದಲ್ಲಿ ನಿನಗೆ ಯಾರಾದರೂ ಅಪ್ರಿಯವನ್ನು ಮಾಡಿದರೆ ಅಂತಹ ಮನುಷ್ಯರನ್ನು ನಾನು ವಿಚಾರ ಮಾಡಿ ಗಡಿಪಾರು ಮಾಡುತ್ತೇನೆ. ನನ್ನ ಬಳಿ ಏನು ಸಂಪತ್ತು ಇದೆಯೋ ಅವೆಲ್ಲಕ್ಕೂ ನೀನು ಒಡೆಯ. ಆದ್ದರಿಂದ ಇಲ್ಲಿ ವಾಸಮಾಡು.
ಯುಧಿಷ್ಠಿರಃ
ಅತೋಽತಿಲಾಭಃ ಪರಮೋ ನ ವಿದ್ಯತೇ
ನ ಮೇ ಜಿತಂ ಕಿಂಚನ ಧಾರಯೇ ಧನಮ್ (ಮನಃ) |
ನ ಭೋಜನಂ ಕಿಂಚನ ಸಂಸ್ಪೃಶೇ ತ್ವಿಹ
ಹವಿಷ್ಯಭೋಜೀ ನಿಶಿ ಚ ಕ್ಷಿತೀಶಯಃ ॥50॥
ಯುಧಿಷ್ಠಿರ ಇದಕ್ಕಿಂತ ಹೆಚ್ಚಿನ ಲಾಭವು ನನಗೆ ಯಾವುದೂ ಇಲ್ಲ. ವೈರಾಗ್ಯದಿಂದ ವಶೀಕರಿಸಲ್ಪಟ್ಟ ನನ್ನ ಮನಸ್ಸಿಗೆ ಯಾರೂ ವಿರೋಧ ಮಾಡಲಾರರು. ನಿನ್ನ ಮನೆಯಲ್ಲಿ ನಾನು ಯಾವ ಭೋಜನವನ್ನೂ ಸ್ವೀಕರಿಸುವುದಿಲ್ಲ. ನಾನು ಹವಿಷ್ಯಾನ್ನ ಭೋಜಿಯಾಗಿ ರಾತ್ರಿಯಲ್ಲಿ ನೆಲದ ಮೇಲೆ ಮಲಗಿಕೊಳ್ಳುತ್ತೇನೆ.
ವ್ರತೋಪದೇಶಾತ್ ಸಮಯೋ ಹಿ ನೈಷ್ಠಿಕೋ
ನ ಕ್ರೋಧಿತವ್ಯಂ ನರದೇವ ಕಸ್ಯಚಿತ್ |
ಏವಂಪ್ರತಿಜ್ಞಸ್ಯ ಮಮೇಹ ಭೂಪತೇ
ನಿವಾಸಬುದ್ಧಿರ್ಭವಿತಾ ತು ನಾನ್ಯಥಾ ॥51॥
ಏವಂ ವರಂ ಮಾತ್ಸ್ಯ ವೃಣೇ ಪ್ರವಾರಿತಂ

ಕೃತೀ ಭವಿಷ್ಯಾಮಿ ವರೇಣ ತೇನ ವೈ ॥52॥
ಗುರುಗಳು ಉಪದೇಶ ಮಾಡಿದ ವ್ರತಕ್ಕೆ ಅನುಸಾರವಾಗಿ ಇದು ನನ್ನ ನೈಷ್ಠಿಕ ವ್ರತ. ರಾಜನೇ, ಇದರಿಂದ ಯಾರ ಮೇಲೂ ಕೋಪಗೊಳ್ಳಬಾರದು. ರಾಜನೇ, ಈ ನನ್ನ ಪ್ರತಿಜ್ಞೆಯನ್ನು ನಡೆಸಿಕೊಡುವುದಾದರೆ ಇಲ್ಲಿ ವಾಸ ಮಾಡುವ ಮನಸ್ಸನ್ನು ಮಾಡುತೆತೇನೆ. ಇಲ್ಲದಿದ್ದರೆ ಇಲ್ಲ. ಮತ್ಸ್ಯರಾಜನೇ, ಈ ವರವನ್ನು ನಾನು ನಿನ್ನನ್ನು ಬೇಡುತ್ತೇನೆ. ಈ ವರವನ್ನು ನೀಡಿದರೆ ನಾನು ಕೃತಕೃತ್ಯನಾಗುವೆನು.
ವೈಶಂಪಾಯನಃ
ಏವಂ ತು ರಾಜ್ಞಃ ಪ್ರಥಮಃ ಸಮಾಗಮೋ
ಬಭೂವ ಮಾತ್ಸ್ಯಸ್ಯ ಯುಧಿಷ್ಠಿರಸ್ಯ ಚ |
ವಿರಾಟರಾಜ್ಞಃ ಸ ಹಿ ತೇನ ಸಂಗಮೋ
ಬಭೂವ ವಿಷ್ಣೋರಿವ ವಜ್ರಪಾಣಿನಾ ॥53॥
ವೈಶಂಪಾಯನ ಹೀಗೆ ಮತ್ಸ್ಯರಾಜನಾದ ವಿರಾಟನಿಗೂ ಮತ್ತು ಯುಧಿಷ್ಠಿರನಿಗೂ ಪ್ರಥಮ ಸಮಾಗಮ ಉಂಟಾಯಿತು. ಆ ಸಮಾಗಮವು ವಿಷ್ಣುವಿಗೂ ಮತ್ತು ವಜ್ರಪಾಣಿಯಾದ ಇಂದ್ರನಿಗೂ ಆದ ಸಮಾಗಮದಂತೆ ಇದ್ದಿತು.
ತಮಾಸನಸ್ಥಂ ಪ್ರಿಯರೂಪದರ್ಶನಂ
ನಿರೀಕ್ಷಮಾಣೋ ನ ತತರ್ಪ ಭೂಮಿಪಃ |
ಸಭಾಂ ಚ ತಾಂ ಪ್ರಜ್ವಲಯನ್ ಯುಧಿಷ್ಠಿರಃ
ಶ್ರಿಯಾ ಯಥಾ ಶಕ್ರ ಇವ ತ್ರಿವಿಷ್ಟಪಮ್ ॥54॥
ಆಸನದಲ್ಲಿ ಪ್ರಿಯರೂಪವನ್ನು ಧರಿಸಿಕುಳಿತ ಆ ಯತಿಯನ್ನು ಎಷ್ಟು ನೋಡಿದರೂ ರಾಜನಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ಯುಧಿಷ್ಠಿರನು ಆ ಸಭೆಯನ್ನು ಇಂದ್ರನು ಸ್ವರ್ಗಲೋಕವನ್ನು ತನ್ನ ಕಾಂತಿಯಿಂದ ಬೆಳಗುವಂತೆ ಬೆಳಗುತ್ತಾ ಅಲ್ಲಿ ಇದ್ದನು.
ಏವಂ ಸ ಲಬ್ಧ್ವಾ ನೃಪತಿಃ ಸಮಾಗಮಂ
ವಿರಾಟರಾಜೇನ ನರರ್ಷಭಸ್ತದಾ |
ಉವಾಸ ವೀರಃ ಪರಮಾರ್ಚಿತಃ ಸುಖೀ
ಸ ವಾಽಸ್ಯ ಕಶ್ಚಿಚ್ಚ ನ ತತ್ ಬುಬೋಧ ॥55॥
ನರಶ್ರೇಷ್ಠನೂ, ರಾಜನೂ ಆದ ಯುಧಿಷ್ಠಿರನು ಹೀಗೆ ವಿರಾಟರಾಜನ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಅವನಿಂದ ಚೆನ್ನಾಗಿ ಪೂಜಿಸಲ್ಪಟ್ಟು, ವೀರನಾದ ಅವನು ಸುಖದಿಂದ ಅಲ್ಲಿ ವಾಸಮಾಡಿದನು. ಯಾವ ಜನರೂ ಅವನನ್ನು ಯುಧಿಷ್ಠಿರನೆಂದು ತಿಳಿಯಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ದ್ವಿತೀಯೋಽಧ್ಯಾಯಃ ॥
ವೈರಾಟಪರ್ವಣಿ ಯುಧಿಷ್ಠಿರಮಾತ್ಸ್ಯಸಮಾಗಮೋ ನಾಮ ನವಮೋಽಧ್ಯಾಯಃ
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ವಿರಾಟಸಭೆಗೆ ಸೂದವೇಷದಿಂದ ಭೀಮಸೇನನ ಪ್ರವೇಶ
ವೈಶಂಪಾಯನಃ
ಅಥಾಪರೋ ಭೀಮಬಲಃ ಶ್ರಿಯಾ ಜ್ವಲನ್
ನೃಪಾಯಯೌ ಸಿಂಹವಿಲಾಸವಿಕ್ರಮಃ |
ಅಸಿಪ್ರವೇಕೇ ಪ್ರತಿಮುಚ್ಯ ಶಾಣಿತೇ
ಖಜಂ ಚ ದರ್ವೀಂ ಚ ಕರೇಣ ಧಾರಯನ್ ॥1॥
ವೈಶಂಪಾಯನ ಎಲೈ ರಾಜನೇ, ಅನಂತರ ಮಹಾಬಲವುಳ್ಳವನೂ, ಕಾಂತಿಯಿಂದ ಬೆಳಗುವವನೂ, ಸಿಂಹದ ವಿಲಾಸ ಮತ್ತು ವಿಕ್ರಮವನ್ನು ಹೊಂದಿದವನೂ ಆದ ಇನ್ನೊಬ್ಬನು ಬಾಣಸಿಗರು ಉಪಯೋಗಿಸುವ ಸಾಣೆ ಹಿಡಿದ ಚಾಕು, ಚೂರಿಗಳು, ಸೌಟು ಮತ್ತು ಅನ್ನ ಬಸಿಯುವ ಮುತ್ತಲು ಮೊದಲಾದ ಸಾಧನವನ್ನು ಕೈಯಲ್ಲಿ ಹಿಡಿದು ಪ್ರವೇಶಿಸಿದನು.
ಗಭೀರರೂಪಃ ಪರಮೇಣ ವರ್ಚಸಾ
ರವಿರ್ಯಥಾ ಲೋಕಮಿಮಂ ವಿಭಾಸಯನ್ |
ಸುಕೃಷ್ಣವಾಸಾ ಗಿರಿರಾಜಸಾರವಾನ್
ಸ ಮತ್ಸ್ಯರಾಜಂ ಸಮುಪೇತ್ಯ ತಸ್ಥಿವಾನ್ ॥2॥
ಗಂಭೀರ ರೂಪವುಳ್ಳ ಅವನು, ಸೂರ್ಯನು ತನ್ನ ತೀವ್ರ ಪ್ರಕಾಶದಿಂದ ಲೋಕವನ್ನು ಬೆಳಗುವಂತೆ ಸಭೆಯನ್ನು ಬೆಳಗುತ್ತಾ ಬಹಳ ಮಲಿನವಾದ ವಸ್ತ್ರವನ್ನು ಧರಿಸಿ ಪರ್ವತ ಸಾರದ ಬಲವುಳ್ಳವನಾಗಿ ಮತ್ಸ್ಯರಾಜನನ್ನು ಸಮೀಪಿಸಿ ನಿಂತನು.
ಸಭಾಗತೋ ವಾರಣಯೂಥಪೋಪಮಃ
ತಮಿಸ್ರಯಾ ರಾತ್ರಿಮಿವಾವಭಾಸಯನ್ |
ಸಹಸ್ರನೇತ್ರಾವರಜಾಂತಕೋಪಮಃ
ತ್ರಿಲೋಕಪಾಲಾಧಿಪತಿರ್ಯಥಾ ಹರಿಃ ॥3॥

ಗಜಯೂಥ ಪತಿಗೆ ಸದೃಶನಾದ ಅವನು ಸಭೆಗೆ ಬಂದಾಗ ಭಯದಿಂದ ಎಲ್ಲರೂ ಕಣ್ಣುಮುಚ್ಚಲು ಅವರಿಗೆ ರಾತ್ರಿಯಂತೆ ಭಾಸವಾಯಿತು. ಅವನು ಇಂದ್ರನ ಅನಂತರದ ದಿಕ್ಕಿಗೆ ಅಧಿಪತಿಯಾದ ಯಮನಂತೆ, ತ್ರಿಲೋಕಪಾಲನಕ್ಕೆ ಅಧಿಪತಿಯಾದ ಹರಿಯಂತೆ ಸಭೆಗೆ ಬಂದನು.

ತಮಾವ್ರಜಂತಂ ಗಜಯೂಥಪೋಪಮಂ
ನಿರೀಕ್ಷಮಾಣೋ ನವಸೂರ್ಯವರ್ಚಸಮ್ ।
ಭಯಾತ್ ಸಮುದ್ವಿಗ್ನವಿಷಣ್ಣಚೇತನೋ
ದಿಶಶ್ಚ ಸರ್ವಾಃ ಪ್ರಸಮೀಕ್ಷ್ಯ ಚಾಸಕೃತ್ ॥4॥

ಆನೆಯ ಸಲಗನಂತೆ, ಉದಿಸಿದ ಸೂರ್ಯನಂತೆ, ಕಾಂತಿಯನ್ನು ಹೊಂದಿ ಬರುತ್ತಿದ್ದ ಅವನನ್ನು ನೋಡಿದ ಜನರು ಭಯದಿಂದಲೂ ಉದ್ವೇಗದಿಂದಲೂ, ವಿಷಾದದಿಂದಲೂ ಕೂಡಿದ ಮನಸ್ಸುಳ್ಳವರಾಗಿ ಎಲ್ಲ ದಿಕ್ಕುಗಳಲ್ಲಿಯೂ ಪುನಃಪುನಃ ನೋಡಿದರು.

ತಮೇಕವಸ್ತ್ರಂ ಪರಸೈನ್ಯವಾರಣಂ
ಸಭಾಽವಿದೂರಾನ್ನೃಪತಿರ್ನೃಪಾತ್ಮಜಮ್ ।
ಸಮೀಕ್ಷ್ಯ ವೈಕ್ಲವ್ಯಮುಪೇಯಿವಾನ್ ಶನೈಃ
ಜನಾಶ್ಚ ಭೀತಾಃ ಪರಿತಃ ಪ್ರಸರ್ಪಿರೇ ॥5॥
ಅಥಾಬ್ರವೀನ್ಮತ್ಸ್ಯಪತಿಃ ಸಭಾಗತಾನ್
ಭೃಶಾತುರೋಷ್ಣಂ ಪರಿನಿಶ್ವಸನ್ನಿವ ॥6॥

ಏಕವಸ್ತ್ರವನ್ನು ಧರಿಸಿದವನೂ, ಶತ್ರುಸೈನ್ಯ ನಿವಾರಣನೂ ಆದ ಆ ರಾಜಕುಮಾರನು ಸಭೆಗೆ ಸಮೀಪದಲ್ಲಿ ಬರುತ್ತಿರುವುದನ್ನು ನೋಡಿದ ವಿರಾಟ ರಾಜನು ಮನಸ್ಸಿನಲ್ಲಿ ವೈಕ್ಲವ್ಯವನ್ನು ಹೊಂದಿದನು. ಸಭೆಯಲ್ಲಿದ್ದ ಜನರೂ ಸಹ ಭಯದಿಂದ ಮೆಲ್ಲಗೆ ಅಲ್ಲಲ್ಲಿ ಸಂಚರಿಸಲು ಪ್ರಾರಂಭಿಸಿದರು. ಅನಂತರ ಮತ್ಸ್ಯರಾಜನು ಭಯದಿಂದ ಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತಾ ಸಭೆಯಲ್ಲಿದ್ದವರನ್ನು ಕುರಿತು ಕೇಳಿದನು.

ಕೋಽಯಂ ಯುವಾ ವಾರಣರಾಜಸನ್ನಿಭಃ
ಸಭಾಮಭಿಪ್ರೈತಿ ಹಿ ಮಾಮಿಕಾಂ ಶುಭಾಮ್ ।
ಕೋ ವಾ ವಿಜಾನಾತಿ ಪುರಾಽಸ್ಯ ದರ್ಶನಂ
ಮೃಗೇಂದ್ರಶಾರ್ದೂಲಗತೇರ್ಹಿ ಮಾಮಕಃ ॥7॥

ನನ್ನ ಶುಭವಾದ ಸಭೆಗೆ ಬರುತ್ತಿರುವ ಗಜರಾಜನನ್ನು ಹೋಲುವ ಈ ಯುವಕನು ಯಾರು? ಸಿಂಹದಂತೆ, ಶಾರ್ದೂಲದಂತೆ ನಡಿಗೆಯುಳ್ಳ ಇವನನ್ನು ನನ್ನವರು ಯಾರಾದರೂ ಇದಕ್ಕಿಂತ ಮೊದಲು ನೋಡಿದ್ದೀರಾ?

ವ್ಯೂಢಾಂತರಾಂಸೋ ಮೃಗರಾಡಿವೋತ್ಕಟೋ
ಯ ಏಷ ದಿವ್ಯಃ ಪುರುಷಃ ಪ್ರಕಾಶತೇ ।
ರಾಜಶ್ರಿಯಾ ಹ್ಯೇಷ ವಿಭಾತಿ ರಾಜವದ್
ವಿರಾಜತೇ ರುಗ್ಮಗಿರಿಪ್ರಭೋಪಮಃ ॥8॥
ನಾಕ್ಷತ್ರಿಯೋ ನೂನಮಯಂ ಭವಿಷ್ಯತಿ
ಸಹಸ್ರನೇತ್ರಪ್ರತಿಮಸ್ತಥಾ ಹ್ಯಸೌ ॥9॥

ಪುಷ್ಟವಾದ ಭುಜವುಳ್ಳವನೂ, ಮೃಗರಾಜನಾದ ಸಿಂಹದಂತೆ ಉತ್ಕಟನೂ ಆಗಿ ಈ ಧೀರಪುರುಷನು ಕಂಗೊಳಿಸುತ್ತಿದ್ದಾನೆ. ಇವನು ರಾಜನಂತೆ ರಾಜನ ಕಾಂತಿಯಿಂದ ಹೊಳೆಯುತ್ತಿದ್ದಾನೆ. ಸುವರ್ಣಗಿರಿಯ ಕಾಂತಿಯಂತೆ ಬೆಳಗುತ್ತಿದ್ದಾನೆ. ಇವನು ಕ್ಷತ್ರಿಯನಾಗದಿರಲು ಸಾಧ್ಯವಿಲ್ಲ. ಏಕೆಂದರೆ ಇವನು ಇಂದ್ರನಿಗೆ ಸಮಾನವಾಗಿ ಕಾಣುತ್ತಿದ್ದಾನೆ.

ರೂಪೇಣ ಯಶ್ಚಾಪ್ರತಿಮೋ ಹ್ಯಯಂ ಮಹಾನ್
ಮಹೀಮಿಮಾಂ ಶಕ್ರ ಇವಾಭಿಪಾಲಯೇತ್ ।
ನಾಭೂಮಿಪೋಽಯಂ ಹಿ ಮತಿರ್ಮಮೇತಿ ಚ
ಚ್ಯುತಃ ಸಮೃದ್ಧ್ಯಾ ನಭಸೀವ ನಾಹುಷಃ ॥10॥

ರೂಪದಿಂದ ಅಪ್ರತಿಮನಾದ ಇವನು ಬಹಳ ದೊಡ್ಡ ಆಕೃತಿಯನ್ನು ಹೊಂದಿದ್ದಾನೆ. ಇವನು ಈ ಭೂಮಿಯನ್ನು ಇಂದ್ರನಂತೆ ಆಳಬಹುದು. ಇವನು ರಾಜನಲ್ಲದಿರಲು ಸಾಧ್ಯವಿಲ್ಲ ಎಂದು ನನ್ನ ಅಭಿಪ್ರಾಯ. ತನ್ನ ಸಮೃದ್ಧಿಯಿಂದ ಆಕಾಶದಿಂದ ಕೆಳಗೆ ಉರುಳಿದ ನಹುಷ ಪುತ್ರನಾದ ಯಯಾತಿಯಂತೆ ಕಾಣುತ್ತಿದ್ದಾನೆ.

ವೈಶಂಪಾಯನಃ

ವಿತರ್ಕಮಾಣಸ್ಯ ಚ ತಸ್ಯ ಪಾಂಡವಃ
ಸಭಾಮತಿಕ್ರಮ್ಯ ವೃಕೋದರೋಽಬ್ರವೀತ್ ।
ಜಯೇತಿ ರಾಜಾನಮಭಿಪ್ರಮೋದಯನ್
ಸುಖೇನ ಸಭ್ಯಂ ಚ ಸಮಾಗತಂ ಜನಮ್ ॥11॥
ತತೋ ನೃಪಂ ವಾಕ್ಯಮುವಾಚ ಪಾಂಡವೋ
ಯಥಾಽಽನುಪೂರ್ವ್ಯಾತ್ ಕೃಪಯಾಽನ್ವಿತೋತ್ತರಮ್ ॥12॥

ವೈಶಂಪಾಯನ ವಿರಾಟ ರಾಜನು ಹೀಗೆ ತರ್ಕಮಾಡುತ್ತಿರಲು ಪಾಂಡವನಾದ ವೃಕೋದರನು ಸಭೆಯನ್ನು ದಾಟಿ ಅವನ ಬಳಿಗೆ ಬಂದು ನಿನಗೆ ಜಯವಾಗಲಿ ಎಂದು ಅಭಿನಂದಿಸಿ ರಾಜನನ್ನು ಸಂತೋಷಪಡಿಸಿದನು. ಅವನ ಆ ಧೋರಣೆಯನ್ನು ನೋಡಿ

ಸಭಾಸದರೂ ಸಹ ಸುಖದಿಂದ ಕೂಡಿದರು. ಅನಂತರ ಪಾಂಡವನು ರಾಜನನ್ನು ಕುರಿತು ಅವನು ಉತ್ತರವನ್ನು ಅವಶ್ಯವಾಗಿ ಹೇಳುವಂತೆ ಕೃಪೆಯಿಂದ ಅವನನ್ನು ಕುರಿತು ಮೊದಲಿನಿಂದ ಮಾತನಾಡಿದನು.

ತ್ವಾಂ ಜೀವಿತುಂ ಶತ್ರುದಮಾಗತೋಽಸ್ಮ್ಯಹಂ

ತ್ವಮೇವ ಲೋಕೇ ಪರಮೋ ಹಿ ಸಂಶ್ರಯಃ |

ನರೇಂದ್ರ ಸೂದೋಽಸ್ಮಿ ಚತುರ್ಥವರ್ಣಭಾಗ್

ಗುರೂಪದೇಶಾತ್ ಪರಿಚಾರಕರ್ಮಕೃತ್ ॥13॥

ಎಲೈ ಶತ್ರುದಮನಾದ ರಾಜನೇ, ನಾನು ನಿನ್ನನ್ನು ಆಶ್ರಯಿಸಿ ಜೀವಿಸಲು ಬಂದಿದ್ದೇನೆ. ಏಕೆಂದರೆ ಈ ಲೋಕದಲ್ಲಿ ನೀನೇ ದೊಡ್ಡ ಆಶ್ರಯದಾತನಾಗಿದ್ದೀಯೆ. ನರೇಂದ್ರನೇ, ನಾನು ನಾಲ್ಕನೆಯ ವರ್ಣದವನಾದ ಸೂದನಾಗಿದ್ದೇನೆ. ಗುರುವಿನ ಉಪದೇಶದಂತೆ (ಧರ್ಮರಾಜನ ಆಜ್ಞೆಯಂತೆ) ಪರಿಚಾರ ಕರ್ಮವನ್ನು ಮಾಡುವವನು.

ಜಾನಾಮಿ ಸೂಪಾಂಶ್ಚ ರಸಾಂಶ್ಚ ಸಂಸ್ಕೃತಾನ್

ಮಾಂಸಾನ್ಯಪೂಪಾಂಶ್ಚ ಪಚಾಮಿ ಶೋಭನಾನ್ |

ರಾಗಪ್ರಕಾರಾಂಶ್ಚ ಬಹೂನ್ ಫಲಾಶ್ರಯಾನ್

ಮಹಾನಸೇ ಮೇ ನ ಸಮೋಽಸ್ತಿ ಸೂಪಕೃತ್ ॥14॥

ನಾನು ಒಳ್ಳೆಯ ಸೂಪಗಳನ್ನು, ಸುಸಂಸ್ಕೃತವಾದ ರಸಗಳನ್ನು ಮಾಡಲು ತಿಳಿದಿದ್ದೇನೆ. ಮಾಂಸವನ್ನೂ ಮತ್ತು ಒಳ್ಳೆಯ ಅಪೂಪಗಳನ್ನೂ ಸಿದ್ಧಪಡಿಸುತ್ತೇನೆ. ಫಲರಸಗಳಿಂದ ಅನೇಕ ವಿಧವಾದ ಪೇಯಗಳನ್ನು ತಯಾರಿಸುತ್ತೇನೆ. ಅಡುಗೆ ಮನೆಯಲ್ಲಿ ನನ್ನಂತೆ ಸೂಪವನ್ನು ಮಾಡುವವರು ಯಾರೂ ಇಲ್ಲ.

ತಮಬ್ರವೀನ್ಮತ್ಸ್ಯಪತಿಃ ಪ್ರಹೃಷ್ಟವತ್

ಪ್ರಿಯಂ ಪ್ರಗಲ್ಭಂ ಮಧುರಂ ವಿನೀತವತ್ ॥15॥

ಅವನನ್ನು ಕುರಿತು ಮತ್ಸ್ಯಪತಿಯಾದ ವಿರಾಟನು ಸಂತೋಷದಿಂದ ಕೂಡಿ ವಿನಯದಿಂದ ಪ್ರಿಯವೂ, ಉದಾರವೂ ಆದ ಮಧುರವಾದ ಮಾತನ್ನು ಆಡಿದನು.

ನ ಶೂದ್ರತಾಂ ಕಾಂಚನ ಲಕ್ಷಯಾಮಿ ತೇ

ಕುಬೇರಚಂದ್ರೇಂದ್ರದಿವಾಕರಪ್ರಭ ॥16॥

ಎಲೈ ಕುಬೇರನಿಗೆ, ಚಂದ್ರನಿಗೆ, ಇಂದ್ರನಿಗೆ, ಸೂರ್ಯನಿಗೆ ಸಮಾನವಾದ ಪ್ರಭೆಯುಳ್ಳವನೇ, ನಿನ್ನಲ್ಲಿ ನಾನು ಯಾವ ಶೂದ್ರಲಕ್ಷಣಗಳನ್ನೂ ಕಾಣುತ್ತಿಲ್ಲ.

ಹುತಾಶನಾಶೀವಿಷತುಲ್ಯತೇಜಸೋ

ನ ಕರ್ಮ ತೇ ಯೋಗ್ಯಮಿದಂ ಮಹಾನಸೇ |

ನ ಸೂಪಕಾರೀ ಭವಿತುಂ ತ್ವಮರ್ಹಸಿ

ಸುಪರ್ಣಗಂಧರ್ವಮಹೋರಗೋಪಮ ॥17॥

ನಿನ್ನ ತೇಜಸ್ಸು ಅಗ್ನಿಗೆ ಮತ್ತು ಆಶೀವಿಷಸರ್ಪಕ್ಕೆ ಸಮಾನವಾಗಿದೆ. ಅಡುಗೆ ಮನೆಯ ಕೆಲಸವು ನಿನಗೆ ಯೋಗ್ಯವಾದುದಲ್ಲ. ಗರುಡ, ಗಂಧರ್ವ, ಮಹೋರಗಗಳನ್ನು ಹೋಲುವವನೇ, ನೀನು ಸೂದನಾಗಿ ಸೂಪವನ್ನು ಮಾಡಲು ಅರ್ಹನಲ್ಲ.

ಅನೀಕಕರ್ಣಾಗ್ರಧರೋ ಧ್ವಜೀ ರಥೀ

ಭವಾರ್ಯ ಮೇ ವಾರಣವಾಹಿನೀಪತಿಃ |

ನ ನೀಚಕರ್ಮಾ ಭವಿತುಂ ತ್ವಮರ್ಹಸಿ

ಪ್ರಶಾಸಿತುಂ ಭೂಮಿಮಿಮಾಂ ತ್ವಮರ್ಹಸಿ ॥18॥

ಎಲೈ ಪೂಜ್ಯನೇ, ನೀನು ಧ್ವಜರಥಗಳನ್ನು ಹೊಂದಿ ನನ್ನ ಸೇನಾನಾಯಕನಾಗು ಅಥವಾ ನನ್ನ ಗಜಯೂಥಕ್ಕೆ ಅಧಿಪತಿಯಾಗು. ನೀನು ನೀಚಕರ್ಮವನ್ನು ಮಾಡಬಾರದು. ಈ ಭೂಮಿಯನ್ನು ಆಳಲು ನೀನು ಯೋಗ್ಯನಾಗಿದ್ದೀಯೆ.

ವೈಶಂಪಾಯನಃ/ಭೀಮಃ

ಚತುರ್ಥವರ್ಣೋಽಸ್ಮ್ಯಹಮಿತ್ಯುವಾಚ ತಂ

ನಾನ್ಯಂ ವೃಣೇ ತ್ವಾಮಹಮೀದೃಶಂ ಪದಮ್ |

ಜಾತ್ಯಾ ಹಿ ಶೂದ್ರೋ ವಲಲೋ ಹಿ ನಾಮ್ನಾ

ಜಿಜೀವಿಷುಸ್ತ್ವದ್ವಿಷಯಂ ಸಮಾಗತಃ ॥19॥

ವೈಶಂಪಾಯನ/ ಭೀಮ ಆಗ ಭೀಮಸೇನನು, ನಾನು ನಾಲ್ಕನೆಯ ವರ್ಣವಾದ ಶೂದ್ರವರ್ಣಕ್ಕೆ ಸೇರಿದವನು. ನೀನು ಹೇಳಿದಂತಹ ಪದವಿಗಳನ್ನು ನಾನು ಬಯಸುವುದಿಲ್ಲ. ನಾನು ಶೂದ್ರಜಾತಿಯವನು. ವಲಲ ಎಂದು ಹೆಸರು. ನಿನ್ನನ್ನು ಆಶ್ರಯಿಸಿ ಜೀವಿಸಲು ನಿನ್ನ ರಾಜ್ಯಕ್ಕೆ ಬಂದಿದ್ದೇನೆ ಎಂದು ಹೇಳಿದನು.

ರಾಜ್ಞಾ ನಿಯುಕ್ತೋಽಸ್ಮಿ ಮಹಾನಸೇ ಪುರಾ

ಬಭೂವ ಸರ್ವಪ್ರಭುರನ್ನಪಾನದಃ |

ಅಥಾಪಿ ಮಾಮುತ್ಸೃಜಸೇ ಮಹೀಪತೇ

ವ್ರಜಾಮ್ಯಹಂ ಯಾವದಿತೋ ಯಥಾಗತಮ್ ॥20॥

ನಾನು ಹಿಂದೆ ರಾಜನಿಂದ (ಧರ್ಮರಾಜನಿಂದ) ಅಡಿಗೆ ಮನೆಯಲ್ಲಿ ನಿಯೋಜಿತನಾಗಿ ಅನ್ನಪಾನಗಳನ್ನು ಕೊಡುತ್ತಾ ಎಲ್ಲರಿಗೂ ಪ್ರಭುವಾಗಿದ್ದೆನು. ಎಲೈ ರಾಜನೇ, ಹಾಗಾದರೂ ನನ್ನನ್ನು ನೀನು ಪರಿತ್ಯಾಗ ಮಾಡುವುದಾದರೆ ನಾನು ಬಂದಂತೆಯೇ ಇಲ್ಲಿಂದ

ಹೊರಟು ಹೋಗುತ್ತೇನೆ.
ತ್ವಮನ್ನಸಂಸ್ಕಾರವಿಧೌ ಪ್ರಶಾಧಿ ಮಾಂ
ಭವಾಮಿ ತೇಽಹಂ ನರದೇವ ಸೂಪಕೃತ್ |
ಬಲೇನ ತುಲ್ಯಶ್ಚ ನ ವಿದ್ಯತೇ ಮಯಾ
ನಿಯುದ್ಧಶೀಲೋಽಸ್ಮಿ ಸದಾ ಹಿ ಪಾರ್ಥಿವ ॥21॥
ಎಲೈ ರಾಜನೇ, ನನಗೆ ನಿನ್ನ ಅನ್ನಸಂಸ್ಕಾರದ ವಿಷಯದಲ್ಲಿ ಆಜ್ಞೆಯನ್ನು ಮಾಡು. ನಾನು ನಿನ್ನ ಸೂಪಕಾರಿಯಾಗುತ್ತೇನೆ. ನನಗೆ ಬಲದಲ್ಲಿ ಸಮಾನರಾದವರು ಯಾರೂ ಇಲ್ಲ. ಎಲೈ ರಾಜನೇ, ಕುಸ್ತಿಯು ನನಗೆ ಬಹಳ ಪ್ರಿಯವಾದುದು (ಅದು ನನ್ನ ಹವ್ಯಾಸ).
ಗಜಾಂಶ್ಚ ಸಿಂಹಾಂಶ್ಚ ಸಮೇಯಿವಾನಹಂ
ಸದಾ ಕರಿಷ್ಯಾಮಿ ತವಾನಘ ಪ್ರಿಯಮ್ |
ನ ನೀಚಕರ್ಮಾ ತವ ಮಾದೃಶಃ ಪ್ರಭೋ
ಬಲಸ್ಯ ಮತ್ತಃ ಪ್ರಬಲೋ ಭವೇದಿತಿ ॥22॥
ಎಲೈ ಅನಘನೇ, ನಾನು ಆನೆಗಳ ಮತ್ತು ಸಿಂಹಗಳ ಜೊತೆಯಲ್ಲಿ ಸೆಣೆಸಿ ನಿನಗೆ ಯಾವಾಗಲೂ ಪ್ರಿಯವನ್ನು ಮಾಡುವೆನು. ನಾನು ನೀಚಕಾರ್ಯವನ್ನು ಮಾಡುವುದಿಲ್ಲ. ಪ್ರಭುವೇ, ಬಲದಲ್ಲಿ ನನಗಿಂತ ಅಧಿಕರಾದವರು ಇನ್ನೊಬ್ಬರು ಇರಬಾರದೆಂದು ನಾನು ಹೀಗೆ ಮಾಡುತ್ತೇನೆ.
ಸ್ವಕರ್ಮತುಷ್ಟಾಶ್ಚ ವಯಂ ನರಾಧಿಪ
ಪ್ರಶಾಧಿ ಮಾಂ ಸೂಪಪದೇ ಯದೀಚ್ಛಸಿ |
ಯೇ ಸಂತಿ ಮಲ್ಲಾ ಬಲವೀರ್ಯಸಮ್ಮತಾಃ
ತಾನೇವ ಯೋತ್ಸ್ಯಾಮಿ ತವಾಭಿಹರ್ಷಯನ್ ॥23॥
ತಮೇವಮುಕ್ತೇ ವಚನೇ ನರಾಧಿಪಃ
ಪ್ರತ್ಯಬ್ರವೀನ್ ಮತ್ಸ್ಯಪತಿಃ ಪ್ರಹೃಷ್ಟವತ್ ॥24॥
ಎಲೈ ರಾಜನೇ, ನನ್ನ ಕಾರ್ಯದಿಂದ ನಾನು ತೃಪ್ತಿಯಿಂದಿರುತ್ತೇನೆ. ನಿನಗೆ ಇಷ್ಟವಾಗುವುದಾದರೆ ನನ್ನನ್ನು ಸೂದನಾಗಿ ನೇಮಿಸು. ನಿನ್ನ ರಾಜ್ಯದಲ್ಲಿ ಬಲವೀರ್ಯ ಸಮ್ಮತರಾದ ಯಾವ ಮಲ್ಲರು ಇದ್ದಾರೆಯೋ ನಾನು ನಿನಗೆ ಸಂತೋಷವನ್ನು ಉಂಟುಮಾಡುತ್ತಾ ಅವರ ಜೊತೆಯಲ್ಲಿಯೇ ಯುದ್ಧವನ್ನು (ಕುಸ್ತಿಯನ್ನು) ಮಾಡುವೆನು. ಅವನು ಹೀಗೆ ಹೇಳುತ್ತಿರಲು ಮತ್ಸ್ಯಪತಿಯಾದ ವಿರಾಟರಾಜನು ಸಂತೋಷದಿಂದ ಹೀಗೆ ಮಾತನಾಡಿದನು.
ಏವಂ ನ ಮನ್ಯೇ ತವ ಕರ್ಮ ತತ್ಸಮಂ
ಸಮುದ್ರನೇಮಿಂ ಪೃಥಿವೀಂ ತ್ವಮರ್ಹಸಿ |
ತ್ರಿಲೋಕಪಾಲೋ ಹಿ ಯದಾ ವಿರೋಚತೇ
ತಥಾಽದ್ಯ ಮೇ ವಿಷ್ಣುರಿವಾಭಿರೋಚಸೇ ॥25॥
ಇಷ್ಟು ಹೇಳಿದರೂ ನಿನಗೆ ಸೂದಕರ್ಮವು ಯೋಗ್ಯವಾದುದಲ್ಲ ಎಂದು ನನ್ನ ಅಭಿಪ್ರಾಯ. ನೀನು ಸಮುದ್ರವನ್ನೇ ಪರಿಧಿಯಾಗಿ ಉಳ್ಳ ಭೂಮಿಯನ್ನು ಆಳಲು ಅರ್ಹನಾದವನು. ನೀನು ಮೂರುಲೋಕಕ್ಕೆ ಪಾಲಕನಾಗಿ ಕಂಗೊಳಿಸುವುದಾದರೆ ಆಗ ನನಗೆ ಅದು ವಿಷ್ಣುವಿನಂತೆ ಪ್ರಿಯವಾಗುತ್ತದೆ.
ಯಥಾ ತು ಕಾಮಸ್ತವ ತತ್ ತಥಾ ಕೃತಂ
ಮಹಾನಸೇ ಮೇ ಭವ ವೈ ಪುರಸ್ಕೃತಃ |
ನರಾಶ್ಚ ಮೇ ತತ್ರ ಮಯಾ ಸದಾಽರ್ಚಿತಾ
ಭವಸ್ವ ತೇಷಾಮಧಿಪೋ ಮಯಾ ಕೃತಃ ॥26॥
ನಿನ್ನ ಆಸೆಯು ಹೇಗಿದೆಯೋ ಅದನ್ನು ಹಾಗೆಯೇ ನೆರವೇರಿಸುತ್ತೇನೆ. ನನ್ನ ಮಹಾನಸದಲ್ಲಿ ನೀನು ಎಲ್ಲರಿಂದಲೂ ಪುರಸ್ಕಾರವನ್ನು ಹೊಂದಿ ಇರು. ಅಲ್ಲಿರುವ ಜನರು ನನ್ನಿಂದ ಯಾವಾಗಲೂ ಸತ್ಕಾರವನ್ನು ಹೊಂದುವವರು. ನನ್ನ ಅಪ್ಪಣೆಯಂತೆ ನೀನು ಅವರಿಗೆ ಅಧಿಪತಿಯಾಗಿ ಇರು.
ವೈಶಂಪಾಯನಃ
ತಥಾ ಸ ಭೀಮೋ ವಿಹಿತೋ ಮಹಾನಸೇ
ವಿರಾಟರಾಜಸ್ಯ ಬಭೂವ ವೈ ಪ್ರಿಯಃ |
ಉವಾಸ ರಾಜನ್ ನ ಚ ತಂ ಪೃಥಗ್ ಜನೋ
ಬುಬೋಧ ತಸ್ಯಾನುಚರಶ್ಚ ಕಶ್ಚನ ॥27॥
ವೈಶಂಪಾಯನ ಹೀಗೆ ಭೀಮನು ಮಹಾನಸದಲ್ಲಿ ನಿಯುಕ್ತನಾಗಿ ವಿರಾಟ ರಾಜನಿಗೆ ಪ್ರಿಯನಾದವನಾದನು. ರಾಜನೇ, ಅವನು ವಿರಾಟರಾಜನ ಬಳಿಯಲ್ಲಿ ವಾಸಮಾಡಿದನು. ಸಾಮಾನ್ಯಜನರಾಗಲೀ ಅಥವಾ ವಿರಾಟನ ಅನುಚರರಾಗಲೀ ಯಾರೂ ಅವನನ್ನು ಭೀಮಸೇನನೆಂದು ತಿಳಿಯಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ವಿರಾಟಪರ್ವಣಿ ದಶಮೋಽಧ್ಯಾಯಃ ॥
॥ ವೈರಾಟಪರ್ವಣಿ ಭೀಮಸೇನಪ್ರವೇಶೋ ನಾಮ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.

* * * * *

हನ್ನೊಂದನೆಯ ಅಧ್ಯಾಯ

ಷಂಡವೇಷದಿಂದ ಅರ್ಜುನನ ಸಭಾಪ್ರವೇಶ

ವೈಶಂಪಾಯನಃ

ಅಥಾಪರೋಽದೃಶ್ಯತ ವರ್ಣವಾನ್ ಯುವಾ
ಸ್ತ್ರೀವೇಷಧಾರೀ ಸಮಲಂಕೃತೋ ಭೃಶಮ್ |
ಪ್ರವಾಲಚಿತ್ರೇ ಪ್ರವಿಮುಚ್ಯ ಕುಂಡಲೇ
ಉಭೇ ಚ ಕಂಬೂ ಪರಿವರ್ತಕೇ ತಥಾ ॥1॥

ವೈಶಂಪಾಯನ ಅನಂತರ ಇನ್ನೊಬ್ಬ ಯುವಕನು ಒಳ್ಳೆಯ ಬಣ್ಣದಿಂದ ಕೂಡಿದವನಾಗಿ, ಸ್ತ್ರೀವೇಷಧಾರಿಯಾಗಿ, ಚೆನ್ನಾಗಿ ಅಲಂಕಾರವನ್ನು ಮಾಡಿಕೊಂಡು ಹವಳಗಳಿಂದ ಕೂಡಿದ ವಿಚಿತ್ರವಾದ ಕರ್ಣಕುಂಡಲಗಳನ್ನು ಧರಿಸಿ ಶಂಖದಿಂದ ಮಾಡಿದ ಗುಂಡಗಿರುವ ಬಿಚ್ಚೋಲೆಗಳನ್ನು ಧರಿಸಿ ಕಂಡುಬಂದನು.

ಕೃಷ್ಣೇ ಚ ರಕ್ತೇ ಚ ನಿಬಂಧ ವಾಸಸೀ
ಶರೀರವಾನ್ ಶಕ್ರಬೃಹಸ್ಪತಿಪ್ರಭಃ |
ಬಹೂಂಶ್ಚ ದೀರ್ಘಾಂಶ್ಚ ವಿಕೀರ್ಯ ಮೂರ್ಧಜಾನ್
ಮಹಾಭುಜೋ ಮತ್ತಗಜೇಂದ್ರವಿಕ್ರಮಃ ॥2॥

ಕಪ್ಪು ಮತ್ತು ಕೆಂಪು ಬಣ್ಣದ ವಸ್ತ್ರಗಳನ್ನು ಉಟ್ಟು ಶ್ರೇಷ್ಠವಾದ ಶರೀರವನ್ನು ಉಳ್ಳವನಾಗಿ, ಶುಕ್ರ ಬೃಹಸ್ಪತಿಗಳಿಗೆ ಸಮಾನವಾದ ಕಾಂತಿಯನ್ನು ಹೊಂದಿ ತನ್ನ ದೀರ್ಘವಾದ ವಿಪುಲವಾದ ಕೇಶಗಳನ್ನು ಕೆದರಿಕೊಂಡು ಮಹಾಭುಜವುಳ್ಳವನಾಗಿ ಮತ್ತ ಗಜೇಂದ್ರನ ವಿಕ್ರಮವನ್ನು ಹೊಂದಿ ಸಭೆಯನ್ನು ಪ್ರವೇಶಿಸಿದನು.

ಕ್ಲೈಬ್ಯೇನ ವೇಷೇಣ ನ ಭಾತಿ ಭಾತಿ ಚ
ಗ್ರಹಾಭಿಪನ್ನೋ ನಭಸೀವ ಚಂದ್ರಮಾಃ |
ಗತೇನ ಚೋರ್ವೀಂ ಪರಿಕಂಪಯಂಸ್ತದಾ
ವಿರಾಟಮಾಸಾದ್ಯ ಸಭಾಸಮೀಪತಃ ॥3॥

ಅವನು ಆಕಾಶದಲ್ಲಿ ಗ್ರಹಗಳಿಂದ ಪೀಡೆಗೆ ಒಳಗಾದ ಚಂದ್ರನಂತೆ ತನ್ನ ಷಂಡವೇಷದಿಂದ ಶೋಭಿಸುವುದಿಲ್ಲ. ಆದರೂ ದೇಹದ ನಿಲುವಿನಿಂದ ಪ್ರಕಾಶಿಸುತ್ತಾನೆ. ಅವನು ತನ್ನ ನಡಿಗೆಯಿಂದ ಭೂಮಿಯನ್ನು ನಡುಗಿಸುತ್ತಾ ಸಭೆಯ ಸಮೀಪದಿಂದ ವಿರಾಟರಾಜನ ಸಮೀಪಕ್ಕೆ ಬಂದನು.

ತಂ ಪ್ರೇಕ್ಷ್ಯ ರಾಜೋಪಗತಂ ಸಭಾತಳೇ
ತತಃ ಪ್ರತಿಚ್ಛನ್ನಮಮಿತ್ರಮರ್ದನಮ್ |
ವಿರಾಜಮಾನಂ ಸುರರಾಜವರ್ಚಸಂ
ಸುತಂ ಸುರೇಂದ್ರಸ್ಯ ಗಜೇಂದ್ರವಿಕ್ರಮಮ್ ॥4॥

ಸರ್ವಾನಪೃಚ್ಛಚ್ಚ ಸಮೀಪಚಾರಿಣಃ
ಕುತೋಽಯಮಾಯಾತಿ ನ ಮೇ ಪುರಾ ಶ್ರುತಃ |
ನ ಚೈನಮೂಚುರ್ವಿದಿತಂ ನರಾಸ್ತದಾ
ಸವಿಸ್ಮಯಂ ವಾಕ್ಯಮಿದಂ ನೃಪೋಽಬ್ರವೀತ್ ॥5॥

ರಾಜನು ಮಾರುವೇಷದಿಂದ ಬಂದಿದ್ದ ಶತ್ರುಮರ್ದನನೂ, ಸುರರಾಜನಂತೆ ಕಂಗೊಳಿಸುವವನೂ, ಇಂದ್ರನ ಪುತ್ರನಂತೆ ವಿರಾಜಮಾನನಾದವನೂ, ಗಜೇಂದ್ರ ವಿಕ್ರಮನೂ ಆದ ಅವನು ಸಭೆಯ ಸಮೀಪಕ್ಕೆ ಬಂದುದನ್ನು ನೋಡಿ ಸಮೀಪದಲ್ಲಿದ್ದ ಎಲ್ಲರನ್ನೂ ಕುರಿತು ಇವನು ಎಲ್ಲಿಂದ ಬರುತ್ತಿದ್ದಾನೆ? ಇವನನ್ನು ನಾನು ಹಿಂದೆ ಎಂದೂ ಕೇಳಲಿಲ್ಲ (ಕಾಣಲಿಲ್ಲ) ಎಂದು ಹೇಳಿದನು. ಆ ಜನರು ನಮಗೆ ಈ ವ್ಯಕ್ತಿಯು ತಿಳಿದಿಲ್ಲ ಎಂದು ಹೇಳಿದರು. ಆಗ ರಾಜನು ವಿಸ್ಮಯದಿಂದ ಹೀಗೆ ಮಾತನಾಡಿದನು.

ಗಜೇಂದ್ರಲೀಲೋ ಮೃಗರಾಜಗಾಮೀ
ವೃಷೇಕ್ಷಣೋ ದೇವಸುತೋಗ್ರತೇಜಾಃ |
ಪೀನಾಂಸಬಾಹುಃ ಕನಕಾವದಾತಃ
ಕೋಽಯಂ ನರೋ ಮೇ ನಗರಂ ಪ್ರವಿಷ್ಟಃ ॥6॥

ಗಜೇಂದ್ರ ಲೀಲೆಯುಳ್ಳವನೂ, ಸಿಂಹದಂತೆ ನಡೆಯುವವನೂ, ವೃಷಭದಂತೆ ಕಣ್ಣುಳ್ಳವನೂ, ದೇವಸುತರಂತೆ ಉಗ್ರವಾದ ತೇಜಸ್ಸುಳ್ಳವನೂ, ಪುಷ್ಟವಾದ ವಕ್ಷಸ್ಸ್ಥಲ ಮತ್ತು ಬಾಹುಗಳನ್ನು ಉಳ್ಳವನೂ, ಸುವರ್ಣದಂತೆ ಶುಭ್ರನಾದವನೂ ಆಗಿ ನನ್ನ ನಗರವನ್ನು ಪ್ರವೇಶಿಸಿದ ಈ ಮನುಷ್ಯನು ಯಾರು?

ಕಿಮೇಷ ದೇವೇಂದ್ರಸುತಃ ಕಿಮೇಷ
ಬ್ರಹ್ಮಾತ್ಮಜೋ ವಾ ಕಿಮಯಂ ಸ್ವಯಂಭೂಃ |
ಉಮಾಸುತೋ ವೈಶ್ರವಣಾತ್ಮಜೋ ವಾ
ಪ್ರೇಕ್ಷ್ಯೈನಮಾಸೀದಿತಿ ಮೇ ಪ್ರತರ್ಕಃ ॥7॥

ಇವನೇನು ದೇವೇಂದ್ರನ ಪುತ್ರನೋ? ಅಥವಾ ಬ್ರಹ್ಮದೇವರ ಮಗನೋ? ಅಥವಾ ಸ್ವಯಂ ಬ್ರಹ್ಮದೇವನೋ? ಅಥವಾ ಉಮಾಸುತನಾದ ಷಣ್ಮುಖನೋ? ಅಥವಾ ಕುಬೇರನ ಮಗನೋ? ಎಂದು ಇವನನ್ನು ನೋಡಿದ ನನಗೆ ತರ್ಕ ಉಂಟಾಗುತ್ತಿದೆ.

ವೈಶಂಪಾಯನಃ
ಸಭಾಮತಿಕ್ರಮ್ಯ ಸ ವಾಸವೋಪಮೋ
ನಿರೀಕ್ಷ್ಯಮಾಣೋ ಬಹುಭಿಃ ಸಭಾಗತೈಃ |
ಸ ತತ್ರ ರಾಜಾನಮಮಿತ್ರಹಾಽಬ್ರವೀದ್
ಬೃಹನ್ನಳಾಽಹಂ ನರದೇವ ನರ್ತಕೀ ॥8॥
ವೈಶಂಪಾಯನ ಅನೇಕ ಸಭಾಸದರಿಂದ ನಿರೀಕ್ಷಿಸಲ್ಪಟ್ಟವನಾಗಿ ಇಂದ್ರನಿಗೆ ಸದೃಶನಾದ ಅರ್ಜುನನು ಸಭೆಯನ್ನು ದಾಟಿ ಶತ್ರುಸೂದನನಾದ ಅವನು ರಾಜನನ್ನು ಕುರಿತು, `ರಾಜನೇ, ನಾನು ಬೃಹನ್ನಳೆ ಎಂಬ ನರ್ತಕಿ ಎಂದು ಹೇಳಿದನು.
ವೇಣೀಂ ಪ್ರಕುರ್ಯಾಂ ರುಚಿರೇ ಚ ಕುಂಡಲೇ
ತಥಾ ಸ್ರಜಃ ಪ್ರಾವರಣಾನಿ ಸಂಹರೇ |
ಸ್ನಾನಂ ಚರೇಯಂ ವಿಮೃಜೇ ಚ ದರ್ಪಣಂ
ವಿಶೇಷಕೇಷ್ವಸ್ತ್ಯಪಿ ಕೌಶಲಂ ಮಮ ॥9॥
ನಾನು ಹೆರಳುಗಳನ್ನು ಹಾಕುವೆನು. ಒಳ್ಳೆಯ ಕರ್ಣಕುಂಡಲಗಳನ್ನು ಮಾಡಬಲ್ಲೆ. ಒಳ್ಳೆಯ ಮಾಲೆಗಳನ್ನು ಕಟ್ಟಬಲ್ಲೆ. ಒಳ್ಳೆಯ ಪರದೆಗಳನ್ನೂ ನಿರ್ವಹಿಸುತ್ತೇನೆ. ಸ್ನಾನವನ್ನು ಮಾಡಿಸುತ್ತೇನೆ. ಕನ್ನಡಿಗಳನ್ನು ಒರೆಸುತ್ತೇನೆ. ತಿಲಕಗಳನ್ನು ಇಡುವುದರಲ್ಲಿ ನನಗೆ ಕೌಶಲವಿದೆ.
ಕ್ಲೀಬೇಷು ಬಾಲೇಷು ಜನೇಷು ನರ್ತನೇ
ಶಿಕ್ಷಾಪ್ರದಾನೇಷು ಚ ಯೋಗ್ಯತಾ ಮಮ |
ಕರೋಮಿ ವೇಣೀಷು ಚ ಪುಷ್ಪಪೂರಣಂ
ನ ಮೇ ಸ್ತ್ರಿಯಃ ಕರ್ಮಣಿ ಕೌಶಲಾಧಿಕಾಃ ॥10॥
ನಪುಂಸಕರಿಗೆ, ಬಾಲಕರಿಗೆ ಮತ್ತು ಉಳಿದ ಜನರಿಗೆ ನರ್ತನವನ್ನು ಹೇಳಿಕೊಡಲು ನನಗೆ ಯೋಗ್ಯತೆ ಇದೆ. ನಾನು ಹೂವುಗಳಿಂದ ತುಂಬಿದ ಹೆರಳುಗಳನ್ನು ಮಾಡುತ್ತೇನೆ. ಈ ಕರ್ಮಗಳಲ್ಲಿ ಬೇಕಾದ ಕೌಶಲದಲ್ಲಿ ಸ್ತ್ರೀಯರು ನನಗಿಂತಲೂ ಅಧಿಕರಲ್ಲ.
ವೈಶಂಪಾಯನಃ
ತಮಬ್ರವೀತ್ ಪ್ರಾಂಶುಮುದೀಕ್ಷ್ಯ ವಿಸ್ಮಿತೋ
ವಿರಾಟರಾಜೋಪಸೃತಂ ಮಹಾಯಶಾಃ ॥11॥
ವೈಶಂಪಾಯನ ಎತ್ತರವಾಗಿದ್ದ ಅವನು ಸಮೀಪಿಸುವುದನ್ನು ನೋಡಿ ಮಹಾಕೀರ್ತಿವಂತನಾದ ವಿರಾಟರಾಜನು ಆಶ್ಚರ್ಯಗೊಂಡು ಅವನನ್ನು ಕುರಿತು ಹೇಳಿದನು.
ನಾರ್ಹಸ್ತು ವೇಷೋಽಯಮನೂರ್ಜಿತಸ್ತೇ
ನಾಪುಂಸ್ತ್ವಮರ್ಹೋ ನರದೇವಸಿಂಹ |
ತವೈಷ ವೇಷಃ ಶುಭವೇಷಭೂಷಣೈಃ
ವಿಭೂಷಿತೋ ಭೂತಪತೇರಿವ ಪ್ರಭೋ ॥12॥
ಈ ವೇಷವು ನಿನಗೆ ಯೋಗ್ಯವಾದುದಲ್ಲ. ಇದು ಪ್ರಶಂಸನೀಯವೂ ಅಲ್ಲ. ನರದೇವಸಿಂಹನೇ, ನೀನು ನಪುಂಸಕನಾಗಿರಲು ಅರ್ಹನಲ್ಲ. ಈ ನಿನ್ನ ವೇಷವು ಶುಭವೇಷಭೂಷಣಗಳಿಂದ ಅಲಂಕರಿಸಲ್ಪಟ್ಟರೆ ರುದ್ರದೇವನಂತೆ ತೋರುತ್ತದೆ.
ವಿಭಾತಿ ಭಾನೋರಿವ ರಶ್ಮಿಮಾಲಿನೋ
ಘನಾವರುದ್ಧೋ ಗಗನೇ ಘನೈರಿವ |
ಧನುರ್ಹಿ ಮನ್ಯೇ ತವ ಶೋಭಯೇದ್ ಭುಜೌ
ತಥಾಹಿ ಪೀನಾವತಿಮಾತ್ರಮಾಯತೌ ॥13॥
ನಿನ್ನ ವೇಷವು ಆಕಾಶದಲ್ಲಿ ಮೋಡಗಳಿಂದ ಮುಚ್ಚಲ್ಪಟ್ಟ ರಶ್ಮಿಮಾಲೆಯಾದ ಸೂರ್ಯನಂತೆ ತೋರುತ್ತದೆ. ನಿನ್ನ ಭುಜಗಳಿಗೆ ಧನುಸ್ಸು ಒಪ್ಪುವುದೆಂದು ತೋರುತ್ತದೆ. ನಿನ್ನ ಭುಜಗಳು ಹಾಗೆಯೇ ಪುಷ್ಟವೂ ವಿಸ್ತಾರವಾಗಿಯೂ ಇವೆ.
ಪ್ರಗೃಹ್ಯ ಚಾಪಂ ಪ್ರತಿರೂಪಮಾತ್ಮನೋ
ರಕ್ಷಸ್ವ ದೇಶಂ ಪುರಮದ್ಯ ಸಂಶ್ರಿತಃ |
ಪುತ್ರೇಣ ತುಲ್ಯಂ ಭವ ಮೇ ಬೃಹನ್ನಳೇ
ವೃದ್ಧೋಽಸ್ಮಿ ವಿತ್ತಂ ಪ್ರತಿಪಾದಯಾಮಿ ತೇ ॥14॥
ನೀನು ನನ್ನ ಪಟ್ಟಣದಲ್ಲಿ ನೆಲೆಸಿ ನಿನಗೆ ಯೋಗ್ಯವಾದ ಬಿಲ್ಲನ್ನು ಹಿಡಿದು ನನ್ನ ದೇಶವನ್ನು ರಕ್ಷಣೆ ಮಾಡು. ಬೃಹನ್ನಳೆಯೇ, ನೀನು ನನ್ನ ಪುತ್ರನಿಗೆ ಸಮಾನವಾಗಿರು. ನನಗೆ ವಯಸ್ಸಾಗಿದೆ. ನಿನಗೆ ಬೇಕಾದ ಧನವನ್ನು ಕೊಡುತ್ತೇನೆ.
ತ್ವಂ ರಕ್ಷ ಮೇ ಸರ್ವಮಿದಂ ಪುರಂ ಪ್ರಭೋ
ನ ಷಂಡತಾಂ ಕಾಂಚನ ಲಕ್ಷಯಾಮಿ ತೇ |
ಪ್ರಶಾಧಿ ಮತ್ಸ್ಯಾಂಸ್ತರಸಾ ವಿವರ್ಧಯನ್
ದದಾಮಿ ರಾಜ್ಯಂ ತವ ಸತ್ಯವಾಗಹಮ್ ॥15॥
ಪ್ರಭುವೇ, ನನ್ನ ಈ ಎಲ್ಲಾ ಸಂಪತ್ತನ್ನೂ ರಕ್ಷಿಸು. ನಿನ್ನಲ್ಲಿ ನಪುಂಸಕನ ಯಾವ ಲಕ್ಷಣಗಳೂ ನನಗೆ ಕಾಣುತ್ತಿಲ್ಲ. ಮತ್ಸ್ಯದೇಶವನ್ನು ಶೀಘ್ರವಾಗಿ ಅಭಿವೃದ್ಧಿ ಪಡಿಸುತ್ತಾ ಆಳುವವನಾಗು. ನಾನು ನಿನಗೆ ನನ್ನ ರಾಜ್ಯವನ್ನೇ ಕೊಡುತ್ತೇನೆ. ನಾನು ಯಾವಾಗಲೂ ಸತ್ಯವನ್ನೇ ಮಾತನಾಡುವವನು.

ವೈಶಂಪಾಯನಃ
ತಸ್ಯಾಗ್ರತಃ ಸ್ವಾನಿ ಧನೂಂಷಿ ಪಾರ್ಥಿವೋ
ಬಹೂನಿ ದೀರ್ಘಾಣಿ ಚ ವರ್ಣವಂತಿ ಚ |
ದದೌ ಸ ಸಜ್ಯಾನಿ ಬಲಾನ್ವಿತಾನಿ
ಜಿಜ್ಞಾಸಮಾನಃ ಕಿಮಯಂ ಕರಿಷ್ಯತಿ ||16||
ವೈಶಂಪಾಯನ ಆ ರಾಜನು ಇವನು ಏನು ಮಾಡುತ್ತಾನೆ ಎಂದು ಪರೀಕ್ಷಿಸಲು ಅವನ ಎದುರಿಗೆ ದೀರ್ಘವಾದ ಒಳ್ಳೆಯ ಬಣ್ಣದಿಂದ ಕೂಡಿದ ಹೆದೆ ಏರಿಸಿದ ಬಲಿಷ್ಠವಾದ ಅನೇಕ ಧನುಸ್ಸುಗಳನ್ನು ಇಟ್ಟನು.
ತತೋಽರ್ಜುನಃ ಕ್ಲೀಬತರಂ ವಚೋಽಬ್ರವೀತ್
ನ ಮೇ ಧನುರ್ಧಾರಿತಮೀದೃಶಂ ಪ್ರಭೋ |
ನ ಚಾಪಿ ದೃಷ್ಟಂ ಧನುರೀದೃಶಂ ಕ್ವಚಿತ್
ನ ಮಾದೃಶಾಃ ಸಂತಿ ಧನುರ್ಧರಾ ಭುವಿ ||17||
ಆಗ ಅರ್ಜುನನು ಹೇಡಿಯಂತೆ ಮಾತನಾಡಿದನು. ಪ್ರಭುವೇ, ನಾನು ಇಂತಹ ಧನುಸ್ಸನ್ನು ಎಂದೂ ಹಿಡಿದಿಲ್ಲ. ಅಥವಾ ನೋಡಿಯೂ ಇಲ್ಲ ಮತ್ತು ನನ್ನಂತಹ ನಪುಂಸಕರು ಭೂಮಿಯಲ್ಲಿ ಧನುರ್ಧಾರಿಗಳಾಗಿರುವುದಿಲ್ಲ.
ನೃತ್ಯಾಮಿ ಗಾಯಾಮಿ ಚ ವಾದಯಾಮ್ಯಹಂ
ಪುನರ್ತನೇ ಕೌಶಲನೈಪುಣಂ ಮಮ |
ತದುತ್ತರಾಯಾಃ ಪರಿದತ್ಸ್ವ ನರ್ತನೇ
ಭವಾಮಿ ದೇವ್ಯಾ ನರದೇವ ನರ್ತಕೀ ||18||
ನೃತ್ಯವನ್ನು ಮಾಡುತ್ತೇನೆ. ಗಾಯನವನ್ನು ಮಾಡುತ್ತೇನೆ. ವಾದ್ಯಗಳನ್ನು ನುಡಿಸುತ್ತೇನೆ. ನೃತ್ಯದಲ್ಲಿ ನನಗೆ ಬಹಳ ಕೌಶಲವಿದೆ. ಆದ್ದರಿಂದ ನನ್ನನ್ನು ನರ್ತನವನ್ನು ಕಲಿಸಲು ಉತ್ತರೆಗೆ ಕೊಡುವವನಾಗು. ರಾಜನೇ, ನಾನು ಅವಳ ನರ್ತಕಿಯಾಗುತ್ತೇನೆ.
ವಿರಾಟಃ
ದದಾಮಿ ತೇ ತಂ ಹಿ ವರಂ ಬೃಹನ್ನಳೇ
ಸುತಾಂ ಹಿ ಮೇ ನರ್ತಯ ಯಾಶ್ಚ ತಾದೃಶೀಃ ||19||
ಬೃಹನ್ನಳೆಯೇ, ನಿನಗೆ ಆ ವರವನ್ನು ಕೊಡುತ್ತೇನೆ. ನನ್ನ ಮಗಳಿಗೂ ಮತ್ತು ಅವಳಂತಹ ಬೇರೆ ಕನ್ಯೆಯರಿಗೂ ನರ್ತನವನ್ನು ಕಲಿಸು.
ವೈಶಂಪಾಯನಃ
ತತೋ ವಿರಾಟಃ ಸ್ವಯಮಾಹ್ವಯತ್ ಸುತಾಂ
ನರಾಧಿಪಸ್ತಾಂ ಚ ಸುಮಧ್ಯಸುಂದರೀಮ್ |
ಉವಾಚ ಚೈನಾಂ ಮುದಿತೇನ ಚೇತಸಾ
ಬೃಹನ್ನಳಾ ನಾಮ ಸಖೀ ಭವತ್ವಿಯಮ್ ||20||
ಸುಗಾತ್ರಿ ಸಂಪ್ರೀತಿನಿಬದ್ಧಸೌಹೃದಾ
ತವಾಂಗನೇ ಪ್ರಾಣಸಮಾ ಚ ನಿತ್ಯದಾ ||21||
ವೈಶಂಪಾಯನ ಅನಂತರ ರಾಜನಾದ ವಿರಾಟನು ತನುಮಧ್ಯಮಳಾದ ಸುಂದರಿಯಾದ ತನ್ನ ಮಗಳನ್ನು ತಾನೇ ಕರೆದು ಅವಳನ್ನು ಕುರಿತು ಸಂತೋಷ ತುಂಬಿದ ಮನಸ್ಸಿನಿಂದ ಈ ಬೃಹನ್ನಳೆಯು ನಿನ್ನ ಸ್ನೇಹಿತೆಯಾಗಲಿ. ಸುಂದರಿಯೇ, ಅವಳಲ್ಲಿ ಪ್ರೀತಿಯನ್ನೂ ವಿಶ್ವಾಸವನ್ನೂ ಮಾಡುವವಳಾಗು. ಅಂಗನೆಯೇ, ಅವಳು ಯಾವಾಗಲೂ ನಿನಗೆ ಪ್ರಾಣಸಮಳಾಗಿರುತ್ತಾಳೆ.
ಪ್ರಕಾಮಭಕ್ಷ್ಯಾಭರಣಾಂಬರಾ ಶುಭಾ
ಚರತ್ವಿಯಂ ಸರ್ವಜನೇಷ್ವವಾರಿತಾ |
ನ ದುಷ್ಕುಲೀನಾ ತ್ವಿಯಾಮಕೃತಿರ್ಭವೇತ್
ನ ನೃತ್ತಭೇದೇ ಭವತೀದೃಶೋ ಜನಃ ||22||
ಅವಳಿಗೆ ಬೇಕಾದ ಭಕ್ಷ್ಯಗಳನ್ನು, ಆಭರಣಗಳನ್ನು ಮತ್ತು ವಸ್ತ್ರಗಳನ್ನು ತೆಗೆದುಕೊಂಡು ಶುಭಳಾದ ಈ ಬೃಹನ್ನಳೆಯು ಎಲ್ಲ ಜನರಲ್ಲಿಯೂ ಯಾವ ತಡೆಯೂ ಇಲ್ಲದಂತೆ ಸಂಚರಿಸಲಿ. ಇಂತಹ ಆಕೃತಿಯನ್ನು ಹೊಂದಿದವರು ಎಂದೂ ಕೆಟ್ಟ ಕುಲದಿಂದ ಬಂದವರಾಗಿರುವುದಿಲ್ಲ. ನೃತ್ಯದ ವಿಷಯದಲ್ಲಿಯೂ ಇಂತಹ ವ್ಯಕ್ತಿಯು ಇರುವುದಿಲ್ಲ (ಇವಳೇ ಮಹಾನರ್ತಕಿ).
ತಥಾ ಸಮಾದಿಶ್ಯ ಸುತಾಂ ನರಾಧಿಪಃ
ಪ್ರವೇಶ್ಯತಾಂ ಸಾಧು ಗೃಹಂ ತವೇತಿ ಚ |
ಸ ಶಿಕ್ಷಯಾಮಾಸ ಚ ಗೀತವಾದಿತಂ
ಸುತಾಂ ವಿರಾಟಸ್ಯ ಧನಂಜಯಃ ಪ್ರಭುಃ ||23||
ರಾಜನು ತನ್ನ ಮಗಳಿಗೆ ಹಾಗೆ ಆದೇಶವನ್ನು ನೀಡಿ, ನಿನ್ನ ಮನೆಯಲ್ಲಿ ಅವಳಿಗೆ ಚೆನ್ನಾಗಿ ಪ್ರವೇಶವನ್ನು ಕೊಡು ಎಂದು ಹೇಳಿದನು. ಪ್ರಭುವಾದ ಧನಂಜಯನಾದರೂ ವಿರಾಟ ಪುತ್ರಿಗೆ ಗೀತ-ವಾದ್ಯಗಳಲ್ಲಿ ಶಿಕ್ಷಣವನ್ನು ನೀಡಿದನು.
ಸಖೀಶ್ಚ ತಸ್ಯಾಃ ಪರಿಚಾರಿಕಾಸ್ತಥಾ
ಪ್ರಿಯಶ್ಚ ತಸ್ಯಾಃ ಪ್ರಬಭೂವ ಪಾಂಡವಃ ||24||
ಅವಳ ಸಖಿಯರಿಗೂ ಮತ್ತು ಪರಿಚಾರಿಕೆಯರಿಗೂ ಗೀತ-ವಾದ್ಯಗಳನ್ನು ಕಲಿಸಿ ಪಾಂಡವನಾದ ಅರ್ಜುನನು ಅವಳಿಗೆ ಪ್ರಿಯನಾದನು.
ತಥಾ ಸ ತತ್ರೈವ ಧನಂಜಯೋಽವಸತ್

ಪ್ರಿಯಾಣಿ ಕುರ್ವನ್ ಸಹ ತಾಭಿರಾತ್ಮವಾನ್ |
ತಥಾ ಗತಂ ತತ್ರ ನ ಜಜ್ಞಿರೇ ಜನಾ
ಬಹಿಶ್ಚರಾ ವಾऽಪ್ಯಥವೇತರೇ ಜನಾಃ ||25||
ಈ ರೀತಿಯಲ್ಲಿ ಧನಂಜಯನು ರಾಜಕುಮಾರಿಗೆ ಪ್ರಿಯವನ್ನು ಮಾಡುತ್ತಾ, ರಾಜಕುಮಾರಿ ಮತ್ತು ಅವರ ಸೇವಕಿಯರ ಜೊತೆಯಲ್ಲಿ ಧೈರ್ಯಶಾಲಿಯಾದ ಅವನು ವಾಸಮಾಡಿದನು. ಅಲ್ಲಿ ಅಂತಃಪುರ ಜನರಾಗಲೀ ಅಥವಾ ಹೊರಗಿನ ಜನರಾಗಲೀ ಯಾರೂ ಅವನ ನಿಜಸ್ವರೂಪವನ್ನು ತಿಳಿಯಲಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕಾದಶೋऽಧ್ಯಾಯಃ ||
ವೈರಾಟಪರ್ವಣಿ ಅರ್ಜುನಪ್ರವೇಶೋ ನಾಮ ಏಕಾದಶೋऽಧ್ಯಾಯಃ
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ನಕುಲನ ವಿರಾಟಸಭಾ ಪ್ರವೇಶ
ವೈಶಂಪಾಯನಃ
ಅಥಾಪರೋऽದೃಶ್ಯತ ಪಾಂಡವಃ ಪ್ರಭುಃ
ವಿರಾಟರಾಜ್ಞಃ ತುರಗಾನವೇಕ್ಷಿತಾ |
ತಮಾಪತಂತಂ ದದೃಶುಃ ಪೃಥಗ್ ಜನಾಃ
ಪ್ರಮುಕ್ತಮಭ್ರಾದಿವ ಚಂದ್ರಮಂಡಲಮ್ ||1||
ವೈಶಂಪಾಯನ ಅನಂತರ ಪ್ರಭುವಾದ ಇನ್ನೊಬ್ಬ ಪಾಂಡವನು ವಿರಾಟ ರಾಜನ ಅಶ್ವಗಳನ್ನು ನೋಡಿಕೊಳ್ಳುವವನಾಗಿ ಕಂಡುಬಂದನು. ಸಾಮಾನ್ಯ ಜನರು ಮೋಡದಿಂದ ಚಂದ್ರಮಂಡಲವು ಬಿದ್ದಂತೆ ಅವನ ಬರುವಿಕೆಯನ್ನು ಗಮನಿಸಿದರು.
ಸ ವೈ ಹಯಾನೈಕ್ಷತ ತಾನಿತಸ್ತತಃ
ಸಮೀಕ್ಷಮಾಣಂ ಚ ದದರ್ಶ ಮತ್ಸ್ಯರಾಟ್ |
ದೃಷ್ಟ್ವಾ ತಥೈನಂ ಹಿ ಕುರೂತ್ತಮಂ ತತಃ
ಪಪ್ರಚ್ಛ ತಾನ್ ಸರ್ವಸಭಾಸದಸ್ತದಾ ||2||
ಅವನು ಬರುತ್ತಲೇ ವಿರಾಟ ರಾಜನ ಕುದುರೆಗಳನ್ನು ನೋಡುತ್ತಿದ್ದನು. ಅಲ್ಲಲ್ಲಿ ಕುದುರೆಗಳನ್ನು ನೋಡುತ್ತಿದ್ದ ಅವನನ್ನು ಗಮನಿಸಿದ ಮತ್ಸ್ಯರಾಜನಾದ ವಿರಾಟನು ಆ ಕುರೂತ್ತಮನನ್ನು ನೋಡಿ ಅಲ್ಲಿದ್ದ ಎಲ್ಲಾ ಸಭಾಸದರನ್ನೂ ಆಗ ಪ್ರಶ್ನೆ ಮಾಡಿದನು.
ಕೋ ವಾ ವಿಜಾನಾತಿ ಪುರಾऽಸ್ಯ ದರ್ಶನಂ
ಯೋऽಯಂ ಯುವಾऽಭ್ಯೇತಿ ಹಿ ಮಾಮಿಕಾಂ ಸಭಾಮ್ |
ಪ್ರಿಯೋ ಹಿ ಮೇ ದರ್ಶನತೋऽಪಿ ಸಮ್ಮತೋ
ಬ್ರವೀತು ಕಶ್ಚಿದ್ ಯದಿ ದೃಷ್ಟವಾನಿಮಮ್ ||3||
ಯಾವ ಯುವಕನು ನನ್ನ ಸಭೆಗೆ ಬರುತ್ತಿದ್ದಾನೆಯೋ ಅವನನ್ನು ಹಿಂದೆ ಯಾರಾದರೂ ನೋಡಿದ್ದೀರಾ? ಅವನು ನನಗೆ ಪ್ರಿಯನೂ ಮತ್ತು ಸುಂದರನಾಗಿಯೂ ಕಾಣುತ್ತಿದ್ದಾನೆ. ಅವನನ್ನು ಯಾರಾದರೂ ಮೊದಲು ನೋಡಿದ್ದರೆ ನನಗೆ ಹೇಳಿ.
ಅಯಂ ಹಯಾನ್ ಪಶ್ಯತಿ ಮಾಮಕಾನ್ ಮುಹುಃ
ಧ್ರುವಂ ಹಯಜ್ಞೋ ಭವಿತಾ ವಿಚಕ್ಷಣಃ |
ಪ್ರವೇಶ್ಯತಾಮೇಷ ಸಮೀಪಮಾಶು ವೈ
ವಿಭಾತಿ ವೀರೋ ಹಿ ಯಥಾऽಮರಸ್ತಥಾ ||4||
ಅವನು ನನ್ನ ಕುದುರೆಗಳನ್ನು ಮತ್ತೆ ಮತ್ತೆ ನೋಡುತ್ತಿದ್ದಾನೆ. ಖಂಡಿತವಾಗಿಯೂ ಅವನು ಕುದುರೆಯ ಲಕ್ಷಣಗಳನ್ನು ತಿಳಿದ ವಿಚಕ್ಷಣನಾಗಿದ್ದಾನೆ. ಅವನನ್ನು ನನ್ನ ಸಮೀಪಕ್ಕೆ ಕರೆತನ್ನಿ. ಆ ವೀರನು ದೇವತೆಯಂತೆ ಕಂಗೊಳಿಸುತ್ತಿದ್ದಾನೆ.
ವಿತರ್ಕಯತ್ಯೇವ ಹಿ ಮತ್ಸ್ಯರಾಜನಿ
ತ್ವರನ್ ಕುರೂಣಾಮೃಷಭಃ ಸಮಾಗಮತ್ |
ಅಭ್ಯೇತ್ಯ ರಾಜಾನಮಮಿತ್ರಹಾऽಬ್ರವೀತ್
ಜಯೋಸ್ತು ತೇ ಪಾರ್ಥಿವ ಭದ್ರಮಸ್ತು ಚ ||5||
ತತಃ ಪ್ರಣಮ್ಯೋಪನತಃ ಕುರೂತ್ತಮೋ
ವಿರಾಟರಾಜಾನಮುವಾಚ ಪಾರ್ಥಿವಃ ||6||
ಮತ್ಸ್ಯರಾಜನು ಹೀಗೆ ಊಹೆ ಮಾಡುತ್ತಿರುವಾಗಲೇ ಕುರುಶ್ರೇಷ್ಠನಾದ ನಕುಲನು ಅವನ ಸಮೀಪಕ್ಕೆ ಬಂದನು. ಶತ್ರುಸಂಹಾರಕನಾದ ಅವನು ರಾಜನನ್ನು ಸಮೀಪಿಸಿ ರಾಜನೇ, ನಿನಗೆ ಜಯವಾಗಲಿ ಮತ್ತು ಮಂಗಳವಾಗಲಿ ಎಂದು ಹೇಳಿದನು. ಅನಂತರ ಹತ್ತಿರದಲ್ಲಿದ್ದ ಕುರೂತ್ತಮನಾದ ನಕುಲನು ವಿರಾಟ ರಾಜನನ್ನು ನಮಸ್ಕರಿಸಿ ಅವನನ್ನು ಉದ್ದೇಶಿಸಿ ಮಾತನಾಡಿದನು.
ತವಾಗತೋಹಂ ಪುರಮದ್ಯ ಭೂಪತೇ
ಜಿಜೀವಿಷುರ್ವೇತನಭೋಜನಾರ್ಥಿಕಃ |
ತವಾಶ್ವಬಂಧಃ ಸುಭೃತೋ ಭವಾಮ್ಯಹಂ
ಕುರುಷ್ವ ಮಾಮಶ್ವಪತಿಂ ಯದೀಚ್ಛಸಿ ||7||

ರಾಜನೇ, ನಾನು ವೇತನ ಮತ್ತು ಭೋಜನವನ್ನು ಅರಸಿ ಜೀವಿಸಲು ನಿನ್ನ ಪಟ್ಟಣಕ್ಕೆ ಬಂದಿದ್ದೇನೆ. ಚೆನ್ನಾಗಿ ಪೋಷಿಸಿದರೆ ನಾನು ನಿನ್ನ ಅಶ್ವಬಂಧನಾಗುತ್ತೇನೆ. ನಿನಗೆ ಇಷ್ಟವಾದರೆ ನನ್ನನ್ನು ನಿನ್ನ ಅಶ್ವಪತಿಯನ್ನಾಗಿ ಮಾಡು.
ವಿರಾಟಃ
ರಥಾನಿ ಯಾನಾನಿ ಧನಂ ನಿವೇಶನಂ
ನ ಮೇಽಶ್ವಸೂತೋ ಭವಿತುಂ ತ್ವಮರ್ಹಸಿ |
ಕುತೋಽಸಿ ಕಸ್ಯಾಸಿ ಕಥಂ ತ್ವಮರ್ಹಸಿ
ಬ್ರವೀಹಿ ಶಿಲ್ಪಂ ತವ ವಿದ್ಯತೇ ಚ ಯತ್ ॥8॥
ವಿರಾಟ ರಥವನ್ನಾಗಲೀ, ಯಾನಗಳನ್ನಾಗಲೀ, ಧನವನ್ನಾಗಲೀ, ಮನೆಗಳನ್ನಾಗಲೀ ಕೊಡುತ್ತೇನೆ. ನೀನು ಅಶ್ವಸೂತನಾಗಲು ಅರ್ಹನಲ್ಲ. ಎಲ್ಲಿಂದ ಬಂದಿದ್ದೀಯೆ? ಯಾರಿಗೆ ಸೇರಿದವನು? ಏನು ಕೆಲಸವನ್ನು ಮಾಡಲು ಯೋಗ್ಯನಾಗಿದ್ದೀಯೆ? ನಿನ್ನ ಬಳಿ ಯಾವ ನಿಪುಣತೆ ಇದೆ? ಎಲ್ಲವನ್ನೂ ನನಗೆ ಹೇಳು.
ನಕುಲಃ
ಪಂಚಾನಾಂ ಪಾಂಡುಪುತ್ರಾಣಾಂ ಜ್ಯೇಷ್ಠೋ ರಾಜಾ ಯುಧಿಷ್ಠಿರಃ |
ತೇನಾಹಮಶ್ವೇಷು ಪುರಾ ಪ್ರಯುಕ್ತಃ ಶತ್ರುಕರ್ಶನ ॥9॥
ನಕುಲ ಐದು ಜನ ಪಾಂಡುಪುತ್ರರಲ್ಲಿ ಯುಧಿಷ್ಠಿರ ರಾಜನು ಹಿರಿಯನಾದವನು. ಎಲೈ ಶತ್ರುಕರ್ಶನನೇ, ನಾನು ಹಿಂದೆ ಅವನ ಬಳಿ ಅಶ್ವಗಳ ಮೇಲ್ವಿಚಾರಣೆಯಲ್ಲಿ ನಿಯೋಜಿತನಾಗಿದ್ದೆನು.
ಅಶ್ವಾನಾಂ ಪ್ರಕೃತಿಂ ವೇದ್ಮಿ ವಿನಯಂ ಚಾಪಿ ಸರ್ವಶಃ |
ದುಷ್ಟಾನಾಂ ಪ್ರತಿಪತ್ತಿಂ ಚ ಕೃತ್ಸ್ನಂ ಚಾಪಿ ಚಿಕಿತ್ಸಿತಮ್ ॥10॥
ಅಶ್ವಗಳ ಸ್ವಭಾವಗಳನ್ನು ತಿಳಿದಿದ್ದೇನೆ. ಅವುಗಳನ್ನು ಎಲ್ಲಾ ರೀತಿಯಲ್ಲಿಯೂ ಪಳಗಿಸುವುದನ್ನು ತಿಳಿದಿದ್ದೇನೆ. ದುಷ್ಟಾಶ್ವಗಳ ಲಕ್ಷಣಗಳನ್ನೂ, ಅವುಗಳನ್ನು ಪಳಗಿಸುವ ರೀತಿಯನ್ನೂ ಮತ್ತು ಎಲ್ಲಾ ಅಶ್ವ ಚಿಕಿತ್ಸೆಗಳನ್ನೂ ತಿಳಿದಿದ್ದೇನೆ.
ನ ಕಾತರಂ ಸ್ಯಾನ್ಮಮ ಜಾತು ವಾಹನಂ
ನ ಮೇಽಸ್ತಿ ದುಷ್ಟಾ ಬಡವಾ ಕುತೋ ಹಯಾಃ |
ಜಾನಂಸ್ತು ಮಾಮಾಹ ಸ ಚಾಪಿ ಪಾಂಡವೋ
ಯುಧಿಷ್ಠಿರೋ ಗ್ರಾಂಥಿಕಮೇವ ನಾಮತಃ ॥11॥
ನನ್ನ ವಾಹನವಾದ ಅಶ್ವಗಳು ಎಂದೂ ಗಾಬರಿಗೊಳ್ಳುವುದಿಲ್ಲ. ನನ್ನ ಬಳಿ ಹೆಣ್ಣು ಕುದುರೆಗಳೇ ದುಷ್ಟವಾಗುವುದಿಲ್ಲ. ಇನ್ನು ಗಂಡು ಕುದುರೆಗಳು ಹೇಗೆ ದುಷ್ಟವಾದಾವು? ಇದನ್ನು ತಿಳಿದ ಪಾಂಡವನಾದ ಯುಧಿಷ್ಠಿರನು ನನ್ನನ್ನು ಅಶ್ವಗ್ರಂಥಿ ಎಂಬ ನಾಮದಿಂದಲೇ ಕರೆದನು.
ಮಾತಲಿರಿವ ದೇವಪತೇಃ ದಶರಥನೃಪತೇಃ ಸುಮಂತ್ರ ಇವ ಯಂತಾ |
ಸಹಸಾಹ ಇವ ಜಾಮದಗ್ನೇಃ ತಥೈವ ತವ ಶಿಕ್ಷಯಾಮ್ಯಶ್ವಾನ್ ॥12॥
ದೇವಪತಿಯಾದ ಇಂದ್ರನಿಗೆ ಮಾತಲಿಯು ಸಾರಥಿಯಾಗಿದ್ದಂತೆ, ದಶರಥ ರಾಜನಿಗೆ ಸುಮಂತ್ರನಂತೆ, ಜಮದಗ್ನಿಪುತ್ರನಾದ ಪರಶುರಾಮನಿಗೆ ಸಹಸಾಹನಂತೆ ನಾನು ನಿನ್ನ ಅಶ್ವಗಳಿಗೆ ಶಿಕ್ಷಣವನ್ನು ಕೊಡುವೆನು.
ಯುಧಿಷ್ಠಿರಸ್ಯ ರಾಜೇಂದ್ರ ನರರಾಜಸ್ಯ ಶಾಸನಾತ್ |
ಶತಸಾಹಸ್ರಕೋಟೀನಾಮಶ್ವಾನಾಮಸ್ಮಿ ರಕ್ಷಿತಾ ॥13॥
ಎಲೈ ರಾಜೇಂದ್ರನೇ, ನಾನು ಹಿಂದೆ ರಾಜನಾದ ಯುಧಿಷ್ಠಿರನ ಶಾಸನದಂತೆ ಅವನ ನೂರಾರು ಸಹಸ್ರಕೋಟಿ ಅಶ್ವಗಳಿಗೆ ರಕ್ಷಕನಾಗಿದ್ದೆ.

ವಿರಾಟಃ
ಯದಸ್ತಿ ಕಿಂಚಿನ್ಮಮ ವಾಜಿವಾಹನಂ
ತದಸ್ತು ಸರ್ವಂ ತ್ವದಧೀನಮದ್ಯ ವೈ |
ಯೇ ಚಾಪಿ ಕೇಚಿನ್ಮಮ ವಾಜಿಯೋಧಾಃ
ತ್ವದಾಶ್ರಯಾಃ ಸಾರಥಯಶ್ಚ ಸಂತು ಮೇ ॥14॥
ವಿರಾಟ ನನ್ನ ಬಳಿ ಏನೇನು ಅಶ್ವವಾಹನಗಳಿವೆಯೋ ಅವೆಲ್ಲವೂ ಈ ದಿನ ನಿನ್ನ ವಶವಾಗಲಿ. ನನ್ನ ಅಶ್ವಯೋಧರು ಯಾರಿದ್ದಾರೆಯೋ ಮತ್ತು ಸಾರಥಿಗಳು ಯಾರಿದ್ದಾರೆಯೋ ಅವರೆಲ್ಲರೂ ನಿನ್ನ ವಶದಲ್ಲಿರಲಿ.
ಇದಂ ತವೇಷ್ಟಂ ವಿಹಿತಂ ಸುರೋಪಮ
ಪ್ರಬ್ರೂಹಿ ಯತ್ ತೇ ಪ್ರಸಮೀಕ್ಷಿತಂ ವರಮ್ |
ನ ತೇಽನುರೂಪಂ ಹಯಕರ್ಮ ದೃಶ್ಯತೇ
ವಿಭಾಸಿ ರಾಜೇವ ನ ಕರ್ಮ ವಾಜಿನಾಮ್ ॥15॥
ಎಲೈ ದೇವಸದೃಶನೇ, ನಿನ್ನ ಈ ಇಷ್ಟವನ್ನು ನಾನು ನೆರವೇರಿಸಿದ್ದೇನೆ. ನಿನಗೆ ಬೇಕಾದ ಬೇರೆ ವರವನ್ನು ಕೇಳು. ಈ ಅಶ್ವಕಾರ್ಯವು ನಿನಗೆ ಅನುರೂಪವಾಗಿ ತೋರುವುದಿಲ್ಲ. ನೀನು ರಾಜನಂತೆ ಕಾಣುತ್ತಿರುವಿ. ಅಶ್ವಕರ್ಮಕಾರಕನಲ್ಲ.
ಯುಧಿಷ್ಠಿರಸ್ಯೇವ ಹಿ ದರ್ಶನೇನ ಮೇ
ಸಮಂ ತವೇದಂ ಪ್ರಿಯದರ್ಶ ದರ್ಶನಮ್ |
ಕಥಂ ನು ಭೃತ್ಯೈಃ ಸ ವಿನಾಕೃತೋ ವನೇ

ಚರತ್ಯನಿಂದ್ಯೋ ರಮತೇ ಚ ಪಾಂಡವಃ ॥16॥
ನಿನ್ನನ್ನು ನೋಡಿದರೆ ಯುಧಿಷ್ಠಿರನನ್ನು ನೋಡಿದಂತೆಯೇ ನನಗೆ ಸಂತೋಷವಾಗುತ್ತಿದೆ. ಪ್ರಿಯದರ್ಶನನೇ, ಆ ಪಾಂಡುಪುತ್ರನೂ, ಅನಿಂದ್ಯನೂ ಆದ ಯುಧಿಷ್ಠಿರನು ಭೃತ್ಯರಿಲ್ಲದೆ ಆ ಕಾಡಿನಲ್ಲಿ ಹೇಗೆ ಸಂಚರಿಸುತ್ತಾನೆ? ಹೇಗೆ ವಿಹರಿಸುತ್ತಾನೆ?
ವೈಶಂಪಾಯನಃ
ತಥಾ ಸ ಗಂಧರ್ವವರೋಪಮೋ ಯುವಾ
ವಿರಾಟರಾಜ್ಞಾ ಮುದಿತೇನ ಪೂಜಿತಃ |
ನ ಚೈವಮನ್ಯೇಽಪಿ ವಿದುಃ ಕಥಂಚನ
ಪ್ರಿಯಾಭಿರಾಮಂ ವಿಚರಂತಮೇಕದಾ ॥17॥
ವೈಶಂಪಾಯನ ಹೀಗೆ ಗಂಧರ್ವಶ್ರೇಷ್ಠನಿಗೆ ಸದೃಶನಾದ ಯುವಕನಾದ ನಕುಲನು ಸಂತೋಷಗೊಂಡ ವಿರಾಟರಾಜನಿಂದ ಪೂಜಿತನಾದನು. ವಿರಾಟ ರಾಜನಿಗೆ ಪ್ರಿಯನಾಗಿ ಸಂತೋಷದಿಂದ ತಿರುಗಾಡುವ ಅವನನ್ನು ಅಲ್ಲಿ ಯಾರೂ ತಿಳಿಯಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಾದಶೋಽಧ್ಯಾಯಃ ॥
॥ ವೈರಾಟಪರ್ವಣಿ ನಕುಲಪ್ರವೇಶೋ ನಾಮ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ಗೋಪಾಲಕವೇಷದಿಂದ ಸಹದೇವನ ಸಭಾಪ್ರವೇಶ
ವೈಶಂಪಾಯನಃ
ಅಥಾಪರೋಽದೃಶ್ಯತ ವೈ ಶಶೀ ಯಥಾ
ಹುತೋ ಹವಿರ್ಭಿರ್ಹಿ ಯಥಾಽಧ್ವರೇ ಶಿಖೀ |
ಯಥಾ ಸಮಾಲಕ್ಷ್ಯತ ಚಾರುದರ್ಶನಃ
ಪ್ರಕಾಶವಾನ್ ಸೂರ್ಯ ಇವಾಚಿರೋದಿತಃ ॥1॥
ಅನಂತರ ಇನ್ನೊಬ್ಬನು ಚಂದ್ರನಂತೆ, ಯಜ್ಞದಲ್ಲಿ ಹವಿಸ್ಸುಗಳಿಂದ ಹುತವಾದ ಅಗ್ನಿಯಂತೆ ಕಂಡುಬಂದನು. ಸುಂದರನಾದ ಅವನು ಆಗ ತಾನೇ ಉದಯಿಸಿದ ಸೂರ್ಯನಂತೆ ಪ್ರಕಾಶವುಳ್ಳವನಾಗಿ ಎಲ್ಲರಿಂದಲೂ ಗಮನಿಸಲ್ಪಟ್ಟನು.
ತಮಾವ್ರಜಂತಂ ಸಹದೇವಮಗ್ರಣೀಃ
ನೃಪೋ ವಿರಾಟೋ ನಚಿರಾತ್ ಸಮೈಕ್ಷತ |
ಪ್ರೈಕ್ಷಂತ ತಂ ತತ್ರ ಪೃಥಕ್ ಸಮಾಗತಾಃ
ಸಭಾಸದಃ ಸರ್ವಮನೋಹರಪ್ರಭಮ್ ॥2॥
ಯುವಾನಮಾಯಾಂತಮಮಿತ್ರಕರ್ಶನಂ
ಪ್ರಮುಕ್ತಮಭ್ರಾದಿವ ಚಂದ್ರಮಂಡಲಮ್ ॥3॥
ಹಾಗೆ ಬರುತ್ತಿದ್ದ ಸಹದೇವನನ್ನು ನಾಯಕನಾದ ವಿರಾಟರಾಜನು ಶೀಘ್ರವಾಗಿ ನೋಡಿದನು. ಅಲ್ಲಿ ಬಂದ ಉಳಿದ ಸಭಾಸದರೂ ಸಹ ಮನೋಹರ ಕಾಂತಿಯುಳ್ಳ ಯುವಕನೂ, ಶತ್ರುಕರ್ಶನನೂ ಆದ ಅವನನ್ನು ಮೋಡದಿಂದ ಬಿದ್ದ ಚಂದ್ರಮಂಡಲದಂತೆ ನೋಡಿದರು.
ಯಷ್ಟ್ಯಾ ಪ್ರಮಾಣಾನ್ವಿತಯಾ ಸುದರ್ಶನಂ
ದಾಮಾನಿ ಪಾಶಂ ಚ ನಿಬದ್ಧ್ಯ ಪೃಷ್ಠತಃ |
ಮೌಂಜೀಂ ಚ ತಂತ್ರೀಂ ಮಹತೀಂ ಸುಸಂಹಿತಾಂ
ಬಾಲೈಶ್ಚ ದಾಮೈರ್ಬಹುಭಿಃ ಸಮಾವೃತಾಮ್ ॥4॥
ಕೈಯಲ್ಲಿ ಸರಿಯಾದ ಅಳತೆಯ ಕೋಲನ್ನು ಹಿಡಿದು ಮನೋಹರನಾಗಿದ್ದಂತಹ, ಸಣ್ಣ ಮತ್ತು ದೊಡ್ಡ ಹಗ್ಗಗಳನ್ನು ಹಿಂದೆ ಕಟ್ಟಿಕೊಂಡಿದ್ದಂತಹ, ಮೌಂಜಿಯನ್ನು ಮತ್ತು ದೊಡ್ಡ ತಂತಿಯನ್ನು ಚೆನ್ನಾಗಿ ಜೋಡಿಸಿಕೊಂಡಿದ್ದಂತಹ ಬಾಲದ ಲೋಮಗಳಿಂದ ಮಾಡಿದ ಹಗ್ಗಗಳಿಂದಲೂ ಕೂಡಿದಂತಹ ಅವನನ್ನು ನೋಡಿದರು.
ಸ ಚಾಪಿ ರಾಜಾನಮುವಾಚ ವೀರ್ಯವಾನ್
ಕುರುಷ್ವ ಮಾಂ ಪಾರ್ಥಿವ ಗೋಷ್ವವಸ್ಥಿತಮ್ |
ಮಯಾ ಹಿ ಗುಪ್ತಾಃ ಪಶವೋ ಭವಂತು ತೇ
ಸಂತಃ ಸುನಿದ್ರಾಃ ಪ್ರಭವೋಽಸ್ಮಿ ವಲ್ಲವಃ ॥5॥
ಪರಾಕ್ರಮಶಾಲಿಯಾದ ಅವನಾದರೂ ರಾಜನನ್ನು ಕುರಿತು ರಾಜನೇ, ನೀನು ನನ್ನನ್ನು ನಿನ್ನ ಗವಾಧ್ಯಕ್ಷನನ್ನಾಗಿ ಮಾಡು. ನನ್ನಿಂದ ರಕ್ಷಿತವಾದ ನಿನ್ನ ಗೋವುಗಳು ಸಾಧುವೂ ಮತ್ತು ಒಳ್ಳೆಯ ನಿದ್ರೆಯನ್ನು ಮಾಡುವವೂ ಆಗಲಿ. ನಾನು ವಲ್ಲವ ಜಾತಿಗೆ ಸೇರಿದವನು.
ನ ಶ್ವಾಪದೇಭ್ಯೋ ನ ಚ ರೋಗತೋ ಭಯಂ
ನ ಚಾಪಿ ತಾಸಾಮುತ ತಸ್ಕರಾದ್ ಭಯಮ್ |
ಪಯಃಪ್ರಭೂತಾ ಬಹುಲಾ ನಿರಾಮಯಾ
ಭವಂತಿ ಗಾವಃ ಸುಭೃತಾ ನರಾಧಿಪ ॥6॥
ನಾನು ಗವಾಧ್ಯಕ್ಷನಾಗಿದ್ದರೆ ಎಲೈ ರಾಜನೇ, ನನ್ನಿಂದ ಸುರಕ್ಷಿತವಾದ ಗೋವುಗಳಿಗೆ ಕ್ರೂರ ಮೃಗಗಳ ಭಯವಿರುವುದಿಲ್ಲ. ರೋಗಗಳ

ಭಯವಾಗಲೀ ಅಥವಾ ಕಳ್ಳರ ಭಯವಾಗಲೀ ಇರುವುದಿಲ್ಲ. ಬಹಳ ಹಾಲನ್ನು ಕೊಡುತ್ತವೆ, ಬೇಗ ಬೆಳೆಯುತ್ತವೆ ಮತ್ತು ಆರೋಗ್ಯವಾಗಿರುತ್ತವೆ.

ನಿಶಮ್ಯ ರಾಜಾ ಸಹದೇವಭಾಷಿತಂ
ನಿರೀಕ್ಷ್ಯ ಮಾದ್ರೀಸುತಮಭ್ಯನಂದತ್ |
ಉವಾಚ ಹೃಷ್ಟೋ ಮುದಿತೇನ ಚೇತಸಾ
ಅವಲ್ಲವತ್ವಂ ತ್ವಯಿ ವೀರ ಲಕ್ಷಯೇ ॥7॥

ರಾಜನು ಸಹದೇವನ ಮಾತುಗಳನ್ನು ಕೇಳಿ ಮತ್ತು ಅವನನ್ನು ನೋಡಿ ಸಂತೋಷ ಪಟ್ಟನು. ಅವನು ಸಂತುಷ್ಟಗೊಂಡ ಮನಸ್ಸಿನಿಂದ ಸಹದೇವನನ್ನು ಕುರಿತು ವೀರನೇ, ನಿನ್ನಲ್ಲಿ ಯಾವ ಗೋಪಾಲಕನ ಲಕ್ಷಣಗಳೂ ಕಾಣುವುದಿಲ್ಲ ಎಂದು ಹೇಳಿದನು.

ಧೈರ್ಯಾದ್ ವಪುಃ ಕ್ಷಾತ್ರಮಿವೇಹ ತೇ ದೃಢಂ
ಪ್ರಕಾಶತೇ ಕೌರವವಂಶಜಸ್ಯ ವಾ |
ನಾಪಂಡಿತೇಯಂ ತವ ದೃಶ್ಯತೇ ತನುಃ
ಭವೇಹ ರಾಜ್ಯೇ ಮಮ ಮಂತ್ರಧರ್ಮಭೃತ್ ॥8॥

ನಿನ್ನ ಧೈರ್ಯವನ್ನು ನೋಡಿದರೆ ಈ ನಿನ್ನ ದೃಢವಾದ ಶರೀರವು ಕ್ಷತ್ರಿಯ ಶರೀರವೆಂದು ಪ್ರಕಾಶಿಸುತ್ತದೆ. ಅಥವಾ ನೀನು ಕೌರವವಂಶಕ್ಕೆ ಸೇರಿದವನೇ ಆಗಿರಬೇಕು. ನಿನ್ನ ಶರೀರವನ್ನು ನೋಡಿದರೆ ನೀನು ವಿದ್ವಾಂಸನೆಂದು ತೋರುತ್ತದೆ. ಆದ್ದರಿಂದ ನನ್ನ ರಾಜ್ಯದಲ್ಲಿ ಮಂತ್ರಧರ್ಮವನ್ನು ಧರಿಸಿದ ನನ್ನ ಮಂತ್ರಿಯಾಗು.

ಪ್ರಶಾಧಿ ಮತ್ಸ್ಯಾನ್ ಸಹರಾಜಕಾನಿಮಾನ್
ಬೃಹಸ್ಪತಿಃ ಶಕ್ರಯುತಾನಿವಾಮರಾನ್ |
ಬಲಂ ಚ ಮೇ ರಕ್ಷ ಸುವೇಷ ಸರ್ವಶೋ
ಗೃಹಾಣ ಖಡ್ಗಂ ಪ್ರತಿರೂಪಮಾತ್ಮನಃ ॥9॥
ಅನೀಕಕರ್ಣಾಗ್ರಧರೋ ಬಲಸ್ಯ ಮೇ
ಪ್ರಭುರ್ಭವಾನಸ್ತು ಗೃಹಾಣ ಕಾರ್ಮುಕಮ್ ॥10॥

ಬೃಹಸ್ಪತಿಯು ಇಂದ್ರನಿಂದ ಕೂಡಿದ ದೇವತೆಗಳನ್ನು ರಕ್ಷಿಸಿದಂತೆ ಈ ಮತ್ಸ್ಯದೇಶ ಮತ್ತು ರಾಜಕ ದೇಶಗಳನ್ನು ಆಳುವವನಾಗು. ಒಳ್ಳೆಯ ವೇಷವನ್ನು ಹೊಂದಿದವನೇ, ನನ್ನ ಸೈನ್ಯವನ್ನು ಸರ್ವರೀತಿಯಲ್ಲಿ ರಕ್ಷಣೆ ಮಾಡು. ನಿನಗೆ ಯೋಗ್ಯವಾದ ಖಡ್ಗವನ್ನು ತೆಗೆದುಕೊ. ನೀನು ನನ್ನ ಸೈನ್ಯದ ಪ್ರಭುವಾಗಿ ಸೇನಾನಾಯಕನಾಗು. ಕೈಗೆ ಬಿಲ್ಲನ್ನು ತೆಗೆದುಕೊ.

ವಿರಾಟರಾಜ್ಞಾಽಭಿಹಿತಃ ಕುರೂತ್ತಮಃ
ಪ್ರಶಸ್ಯ ರಾಜಾನಮಭಿಪ್ರಣಮ್ಯ ಚ |
ಉವಾಚ ಮಾತ್ಸ್ಯಪ್ರವರಂ ಮಹಾಮತಿಃ
ಶೃಣುಷ್ವ ರಾಜನ್ ಮಮ ವಾಕ್ಯಮುತ್ತಮಮ್ ॥11॥

ವಿರಾಟರಾಜನಿಂದ ಹೀಗೆ ಹೇಳಲ್ಪಟ್ಟ ಆ ಕುರುಶ್ರೇಷ್ಠನು ರಾಜನನ್ನು ಪ್ರಶಂಸಿಸಿ ಅವನಿಗೆ ನಮಸ್ಕರಿಸಿ ಆ ಮತ್ಸ್ಯಶ್ರೇಷ್ಠನನ್ನು ಕುರಿತು ಮಹಾಮತಿಯಾದ ಸಹದೇವನು ರಾಜನೇ, ನನ್ನ ಶ್ರೇಷ್ಠವಾದ ಮಾತನ್ನು ಕೇಳು ಎಂದು ಹೇಳಿದನು.

ಬಾಲೋ ಹ್ಯಹಂ ಜಾತಿವಿಶೇಷದೂಷಿತಃ
ಕುತೋಽದ್ಯ ಮೇ ನೀತಿಷು ಯುಕ್ತಮಂತ್ರತಾ |
ಸ್ವಕರ್ಮಯುಕ್ತಾಶ್ಚ ವಯಂ ನರಾಧಿಪ
ಪ್ರಶಾಧಿ ಮಾಂ ಗೋಪರಿರಕ್ಷಣೇಽನಘ ॥12॥

ನಾನು ಬಾಲಕ. ಜಾತಿವಿಶೇಷದಿಂದ ದೂಷಿತನಾದವನು. ರಾಜನೀತಿಗಳಲ್ಲಿ ಮಂತ್ರಾಲೋಚನೆಯನ್ನು ನೀಡುವ ಸಾಮರ್ಥ್ಯವು ನನಗೆ ಎಲ್ಲಿಂದ ಬರಬೇಕು? ರಾಜನೇ ನಾವು ನಮ್ಮ ಕರ್ಮದಲ್ಲಿ ನಿರತರಾಗಿ ತೃಪ್ತರಾಗಿರುತ್ತೇವೆ. ಅನಘನೇ, ನನ್ನನ್ನು ನಿನ್ನ ಗೋರಕ್ಷಣೆಯ ವಿಷಯದಲ್ಲಿ ಶಾಸನವನ್ನು ಮಾಡು.

ವೈಶ್ಯೋಽಸ್ಮಿ ನಾಮ್ನಾಽಹಮರಿಷ್ಟನೇಮಿಃ
ಗೋಸಂಖ್ಯ ಆಸಂ ಕುರುಪುಂಗವಾನಾಮ್ |
ವಸ್ತುಂ ತ್ವಯೀಚ್ಛಾಮಿ ವಿಶಾಂ ವರಿಷ್ಠ
ರಾಜನ್ಯಸಿಂಹಾನ್ ನ ಹಿ ವೇದ್ಮಿ ಪಾರ್ಥಿವಾನ್ ॥13॥
ನ ಜೀವಿತುಂ ಶಕ್ಯಮತೋಽನ್ಯಕರ್ಮಣಾ
ನ ಚ ತ್ವದನ್ಯೋ ಮಮ ರೋಚತೇ ನೃಪಃ ॥14॥

ನಾನು ಅರಿಷ್ಟನೇಮಿ ಎಂಬ ವೈಶ್ಯನಾಗಿದ್ದೆ. ನಾನು ಕುರುಪುಂಗವರಾದ ಯುಧಿಷ್ಠಿರಾದಿಗಳಿಗೆ ಗೋಸಂಖ್ಯನಾಗಿದ್ದೆ. ಮನುಷ್ಯರಲ್ಲಿ ಶ್ರೇಷ್ಠನಾದವನೇ, ನಾನು ನಿನ್ನಲ್ಲಿ ವಾಸಮಾಡಲು ಇಚ್ಛಿಸುತ್ತೇನೆ. ನನಗೆ ಬೇರೆ ರಾಜಸಿಂಹರ ಪರಿಚಯವಿಲ್ಲ. ನನಗೆ ಗೊತ್ತಿರುವ ಕರ್ಮವನ್ನು ಬಿಟ್ಟು ಬೇರೆಯ ಕರ್ಮದಿಂದ ಬದುಕಲು ಸಾಧ್ಯವಿಲ್ಲ. ನಿನ್ನನ್ನು ಬಿಟ್ಟು ಬೇರೆ ಯಾವ ರಾಜನೂ ನನಗೆ ಇಷ್ಟವಾಗುವುದೂ ಇಲ್ಲ.

ವಿರಾಟಃ
ತ್ವಂ ಬ್ರಾಹ್ಮಣೋ ವಾ ಯದಿ ಭೂಮಿಪಾಲಃ
ಸುಭದ್ರನೇಮೀಶ್ವರರೂಪವಾನಸಿ |

ಆಚಕ್ಷ್ವ  ಮೇ ತತ್ತ್ವಮಮಿತ್ರಕರ್ಶನ
ನ ವಲ್ಲವತ್ವಂ ತ್ವಯಿ ದೃಶ್ಯತೇ ಸಮಮ್ ॥15॥
ವಿರಾಟ ನೀನು ಬ್ರಾಹ್ಮಣನೋ ಅಥವಾ ಭೂಮಿಪಾಲನೋ ಅಥವಾ ರಾಜನೋ ಇರಬೇಕು. ಸುಭದ್ರುವಾದ ಪರಿಚಯವುಳ್ಳ ದೇಶದ ರಾಜನಂತೆ (ಸಮುದ್ರ ಪರಿಖೆಯುಳ್ಳ ಭೂಪತಿಯಂತೆ) ರೂಪವನ್ನು ಹೊಂದಿದ್ದೀಯೆ. ಶತ್ರುಕರ್ಶನನೇ, ನಿನ್ನ ನಿಜವಾದ ಸ್ವರೂಪವನ್ನು ಹೇಳು. ನನಗೆ ನಿನ್ನಲ್ಲಿ ಗೋಪಾಲಕನ ಲಕ್ಷಣವು ಕಾಣುವುದಿಲ್ಲ.
ಕಸ್ಯಾಸಿ ರಾಜ್ಞೋ ವಿಷಯಾದಿಹಾಗತಃ
ಕಿಂ ಚಾಪಿ ಶಿಲ್ಪಂ ತವ ವಿದ್ಯತೇ ಕೃತಮ್ |
ಕಥಂ ತ್ವಮಸ್ಮಾಸು ನಿವತ್ಸ್ಯಸೇ ಸದಾ
ವದಸ್ವ ಕಿಂ ಚಾಪಿ ತವೇಹ ವೇತನಮ್ ॥16॥
ಯಾವ ರಾಜನ ದೇಶದಿಂದ ಇಲ್ಲಿಗೆ ಬಂದಿದ್ದೀಯೆ? ಎಂತಹ ವಿಧವಾದ ನೈಪುಣ್ಯವನ್ನು ಸಂಪಾದಿಸಿದ್ದೀಯೆ? ನೀನು ಯಾವ ರೀತಿಯಿಂದ ನಮ್ಮಲ್ಲಿ ವಾಸ ಮಾಡುವಿ? ನಿನಗೆ ವೇತನವಾದರೂ ಏನು? ಎಲ್ಲವನ್ನೂ ನನಗೆ ಹೇಳು.
ಸಹದೇವಃ
ಪಂಚಾನಾಂ ಪಾಂಡುಪುತ್ರಾಣಾಂ ಜ್ಯೇಷ್ಠೋ ರಾಜಾ ಯುಧಿಷ್ಠಿರಃ |
ತಸ್ಯಾಷ್ಟಶತಸಾಹಸ್ರಾ ಗವಾಂ ವರ್ಗಾಃ ಶತಂ ಶತಮ್ ॥17॥
ಸಹದೇವ ಐದು ಜನ ಪಾಂಡುಪುತ್ರರಲ್ಲಿ ಯುಧಿಷ್ಠಿರನು ಹಿರಿಯನಾದವನು. ಅವನಿಗೆ ಎಂಟುಲಕ್ಷ ಗೋವುಗಳಿದ್ದ ನೂರು ನೂರು ಗುಂಪುಗಳು ಅನೇಕವಿದ್ದವು.
ಅಪರೇ ದಶಸಾಹಸ್ರಾ ದ್ವಿಸ್ತಾವಂತಸ್ತಥಾ ಪರೇ |
ತೇಷಾಂ ಗೋಸಂಖ್ಯ ಆಸಂ ವೈ ತಂತ್ರೀಪಾಲೇತಿ ಮಾಂ ವಿದುಃ ॥18॥
ಅಲ್ಲದೇ ಹತ್ತುಸಹಸ್ರ ಸಂಖ್ಯೆಯ ಬೇರೆ ಗುಂಪುಗಳೂ ಇದ್ದವು. ಅದರಂತೆ ಇಪ್ಪತ್ತು ಸಾವಿರ ಸಂಖ್ಯೆಯ ಬೇರೆ ಗುಂಪುಗಳೂ ಇದ್ದವು. ನಾನು ಅವೆಲ್ಲದರ ಗಣನೆಯನ್ನು ಮಾಡುತ್ತಿದ್ದೆ. ನನ್ನನ್ನು ತಂತ್ರೀಪಾಲನೆಂದು ಕರೆಯುತ್ತಾರೆ.
ಭೂತಂ ಭವ್ಯಂ ಭವಿಷ್ಯಚ್ಚ ಯಚ್ಚಾನ್ಯತ್ ಗೋಧನಂ ಕ್ವಚಿತ್ |
ನ ಮೇಽಸ್ತ್ಯವಿದಿತಂ ಕಿಂಚಿತ್ ಸಮಂತಾದ್ ದಶಯೋಜನಮ್ ॥19॥
ಇಲ್ಲಿಂದ ಹತ್ತು ಯೋಜನ ವಿಸ್ತಾರದಲ್ಲಿ ಇರುವ ಮತ್ತೆ ಮುಂದೆ ಬರುವ ಎಲ್ಲ ಗೋಧನಗಳನ್ನು ನಾನು ತಿಳಿದಿದ್ದೇನೆ. ಗೋವುಗಳ ವಿಷಯದಲ್ಲಿ ನನಗೆ ತಿಳಿಯದಿರುವುದು ಏನೂ ಇಲ್ಲ.
ಗುಣಾಃ ಸುವಿದಿತಾ ಹ್ಯಾಸನ್ ಮಯಾ ತಸ್ಯ ಮಹಾತ್ಮನಃ |
ಅಸಕೃತ್ ಸ ಮಯಾ ದೃಷ್ಟಃ ಕುರುರಾಜೋ ಯುಧಿಷ್ಠಿರಃ ॥20॥
ನಾನು ಮಹಾತ್ಮನಾದ ಯುಧಿಷ್ಠಿರನ ಗುಣಗಳನ್ನು ಚೆನ್ನಾಗಿ ತಿಳಿದಿದ್ದೆ ಮತ್ತು ಆ ಕುರುರಾಜನನ್ನು ಅನೇಕ ಬಾರಿ ನೋಡಿದ್ದೆ. ನಾನು ಎಣಿಸಿದ ಗೋವುಗಳ ಸಂಖ್ಯೆ ಅಪಾರವಾದದ್ದು ಮತ್ತು ತಿಳಿಯಲು ಅಸಾಧ್ಯವಾದದ್ದು. ನನ್ನ ಗೋವುಗಳೆಲ್ಲವೂ ಬೇಗ ಇಮ್ಮಡಿಗೊಳ್ಳುತ್ತವೆ, ಸಾಧುವಾಗಿರುತ್ತವೆ ಮತ್ತು ಒಳ್ಳೆಯ ಕರುಗಳನ್ನು ಪಡೆಯುತ್ತವೆ.
ಅನೇಕಕ(ನ ಗ)ಣಿತಾ ಗಾವೋ ದುರ್ವಿಜ್ಞೇಯಾ ಮಹತ್ತರಾಃ |
ಬಹುಕ್ಷೀರತರಾಸ್ತಾ ವೈ ವಹ್ನ್ಯಃ ಸತ್ಯಃ ಸುಪುತ್ರಿಕಾಃ ॥21॥
ಕ್ಷಿಪ್ರಂ ಚ ಗಾವೋ ಬಹುಲಾ ಭವಂತಿ
ನ ತಾಸು ರೋಗೋ ಭವತೀಹ ಕಶ್ಚಿತ್ |
ಅಜ್ಞಾತಚರ್ಯಾಮವಸನ್ಮಹಾತ್ಮಾ
ಯಥಾ ರವಿಶ್ಚಾಸ್ತಗಿರಿಂ ಪ್ರವಿಷ್ಟಃ ॥22॥
ನನ್ನ ಕೈಯಲ್ಲಿ ಗೋವುಗಳು ಬೇಗ ಸಂಖ್ಯೆಯಲ್ಲಿ ಬೆಳೆಯುತ್ತವೆ. ಅವುಗಳಲ್ಲಿ ಯಾವ ರೋಗವೂ ಉಂಟಾಗುವುದಿಲ್ಲ. ಹೀಗೆ ಪಾಂಡವನಾದ ಸಹದೇವನು ತನಗೆ ಇಷ್ಟವಾದಂತೆ ವಿರಾಟನಿಂದ ಗೋವಲ್ಲವ ಪದವಿಯನ್ನು ಪಡೆದು ಮಹಾತ್ಮನಾದ ಅವನು ರವಿಯು ಅಸ್ತಗಿರಿಯನ್ನು ಪ್ರವೇಶಿಸಿದಂತೆ ಅಜ್ಞಾತವಾಸವನ್ನು ಮಾಡಿದನು.
ಏವಂ ವಿರಾಟೇ ನ್ಯವಸಂಶ್ಚ ಪಾಂಡವಾ
ಯಥಾ ಪ್ರತಿಜ್ಞಾಭಿರಮೋಘವಿಕ್ರಮಾಃ |
ಅಬುದ್ಧಚರ್ಯಾಂ ಚರಿತುಂ ಯಥಾಯಥಂ
ಸಮುದ್ರನೇಮೀಮಭಿಶಾಸ್ತುಮೀಶ್ವರಾಃ ॥23॥
ಅಮೋಘ ವಿಕ್ರಮರಾದ ಪಾಂಡವರು ಹೀಗೆ ತಮ್ಮ ಪ್ರತಿಜ್ಞೆಗೆ ಅನುಸಾರವಾಗಿ ವಿರಾಟನಲ್ಲಿ ವಾಸವನ್ನು ಮಾಡಿದರು. ಯಾರಿಗೂ ತಿಳಿಯದಂತೆ ತಮಗೆ ಯೋಗ್ಯವಾದ ಕಾರ್ಯಗಳನ್ನು ಮಾಡುತ್ತಾ ಸಮುದ್ರನೇಮಿಯಾದ ಭೂಮಿಯನ್ನು ಆಳಲು ಸಮರ್ಥರಾದ ಅವರು ಹೀಗೆ ಅಜ್ಞಾತವಾಸವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಯೋದಶೋಽಧ್ಯಾಯಃ ॥
॥ ವೈರಾಟಪರ್ವಣಿ ಸಹದೇವಪ್ರವೇಶೋ ನಾಮ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ

ಸೈರಂಧ್ರಿಯ ವೇಷವನ್ನು ಧರಿಸಿ ದ್ರೌಪದಿಯಿಂದ
ಸುದೇಷ್ಣೆಯ ಗೃಹದಲ್ಲಿ ಪ್ರವೇಶ
ವೈಶಂಪಾಯನಃ
ತತಃ ಕೃಷ್ಣಾ ಸುಕೇಶೀ ಸಾ ದರ್ಶನೀಯಾ ಶುಚಿಸ್ಮಿತಾ |
ವೇಣೀಕೇಶಾಂತಮುತ್ಕ್ಷಿಪ್ಯ ಪೀನವೃತ್ತಪಯೋಧರಾ ॥1॥
ಜುಗೂಹ ದಕ್ಷಿಣೇ ಪಾರ್ಶ್ವೇ ಮೃದೂನಸಿತಲೋಚನಾ ॥2॥
ವೈಶಂಪಾಯನ ಅನಂತರ ಒಳ್ಳೆಯ ಕೇಶವುಳ್ಳವಳೂ, ಸುಂದರಿಯೂ, ಶುಚಿಸ್ಮಿತೆಯೂ, ಪೀನವೃತ್ತಪಯೋಧರೆಯೂ ಆದ ದ್ರೌಪದಿಯು ತನ್ನ ಮೃದುವಾದ ಕೂದಲುಗಳನ್ನು ತಿರುಚಿ ಉಂಡೆ ಮಾಡಿ ಬಲಪಾರ್ಶ್ವದಲ್ಲಿ ಒಳಗೆ ಸಿಕ್ಕಿಸಿಕೊಂಡಳು (ವಾರೆ ದುರುಬಿನಂತೆ ಮಾಡಿಕೊಂಡಳು).
ವಾಸಶ್ಚ ಪರಿಧಾಯೈಕಂ ಕೃಷ್ಣಂ ಸುಮಲಿನಂ ಮಹತ್ |
ಕೃತ್ವಾ ವೇಷಂ ಚ ಸೈರಂಧ್ರ್ಯಾಃ ಕೃಷ್ಣಾ ವ್ಯಚರದಾರ್ತವತ್ ॥3॥
ಬಹಳ ಕೊಳೆಯಾದ ಒಂದು ಕೃಷ್ಣ ವಸ್ತ್ರವನ್ನು ಹೊದ್ದುಕೊಂಡು ಸೈರಂಧ್ರಿಯ ವೇಷವನ್ನು ಹಾಕಿಕೊಂಡು ದ್ರೌಪದಿಯು ಆರ್ತಳಂತೆ ತಿರುಗಾಡಿದಳು.
ಪ್ರವಿಷ್ಟಾ ನಗರಂ ಭೀರುಃ ಸೈರಂಧ್ರೀವೇಷಸಂಯುತಾ |
ತಾಂ ನರಾಃ ಗಚ್ಛಮಾನಾಂ ತು ಸ್ತ್ರಿಯಶ್ಚ ಸಮುಪಾದ್ರವನ್ ॥4॥
ಅಪೃಚ್ಛಂಸ್ತೇ ಚ ತಾಂ ದೃಷ್ಟ್ವಾ ಕಾ ತ್ವಂ ಕಿಂ ಚ ಚಿಕೀರ್ಷಸಿ ॥5॥
ಸೈರಂಧ್ರಿಯ ವೇಷವನ್ನು ಹೊಂದಿ ನಗರವನ್ನು ಪ್ರವೇಶಿಸಿ ತಿರುಗಾಡುತ್ತಿದ್ದ ಆ ಭೀರುವನ್ನು ಸ್ತ್ರೀಯರು ಮತ್ತು ಪುರುಷರು ಓಡಿಬಂದು ಸಮೀಪಿಸಿ ನೀನು ಯಾರು? ಮತ್ತು ಏನು ಮಾಡಲು ಇಚ್ಛಿಸುತ್ತೀಯೆ? ಎಂದು ಕೇಳಿದರು.
ಸಾ ತಾನುವಾಚ ರಾಜೇಂದ್ರ ಸೈರಂಧ್ರ್ಯಹಮುಪಾಗತಾ |
ಕರ್ಮ ಚೇಚ್ಛಾಮಿ ವೈ ಕರ್ತುಂ ತಸ್ಯಾ ಯಾ ಮಾಂ ಭರಿಷ್ಯತಿ ॥6॥
ರಾಜೇಂದ್ರನೇ, ಅವಳು ಅವರನ್ನು ಕುರಿತು, ನಾನು ಸೈರಂಧ್ರಿಯಾಗಿ ಬಂದಿದ್ದೇನೆ. ಯಾರು ನನ್ನನ್ನು ಪೋಷಿಸುತ್ತಾರೋ ಅವರ ಸೇವೆಯನ್ನು ಮಾಡಲು ಇಚ್ಛಿಸುತ್ತೇನೆ ಎಂದು ಹೇಳಿದಳು.
ತಸ್ಯಾ ವೇಷೇಣ ರೂಪೇಣ ಶ್ಲಕ್ಷ್ಣಯಾ ಚ ಗಿರಾ ತಥಾ |
ನ ಚ ಶ್ರದ್ದಧತಾಂ ದಾಸೀಮನ್ನಹೇತೋರುಪಸ್ಥಿತಾಮ್ ॥7॥
ಅವಳ ವೇಷವನ್ನು, ರೂಪವನ್ನು, ಮಧುರವಾದ ಮಾತುಗಳನ್ನು ಕೇಳಿದ ಜನರು ಅವಳನ್ನು ಅನ್ನಕ್ಕೋಸ್ಕರವಾಗಿ ಬಂದ ದಾಸಿ ಎಂದು ಯಾರೂ ನಂಬಲಿಲ್ಲ.
ವಿರಾಟಸ್ಯ ತು ಕೈಕೇಯೀ ಭಾರ್ಯಾ ಪರಮಸಮ್ಮತಾ |
ಆಲೋಕಯಂತೀ ದದೃಶೇ ಪ್ರಾಸಾದಾದ್ ದ್ರುಪದಾತ್ಮಜಾಮ್ ॥8॥
ಕೇಕೇಯ ದೇಶದ ರಾಜಕುಮಾರಿಯಾದ, ವಿರಾಟನಿಗೆ ಅತಿಸಮ್ಮತಳಾದ ವಿರಾಟನ ಭಾರ್ಯೆಯು ತನ್ನ ಅರಮನೆಯ ಉಪ್ಪರಿಗೆಯಿಂದ ದ್ರೌಪದಿಯನ್ನು ನೋಡಿದಳು.
ಸಾ ಸಮೀಕ್ಷ್ಯ ತಥಾರೂಪಾಮನಾಥಾಮೇಕವಾಸಸೀಮ್ |
ಸ್ತ್ರೀಭಿಶ್ಚ ಪುರುಷೈಶ್ಚಾಪಿ ಸರ್ವತಃ ಪರಿವಾರಿತಾಮ್ ॥9॥
ವಿರಾಟಭಾರ್ಯಾ ತಾಂ ದೇವೀಂ ಕಾರುಣ್ಯಾಜ್ಜಾತಸಂಭ್ರಮಾ |
ಅಪ್ರೇಷಯತ್ ಸಮೀಪಸ್ಥಾಃ ಸ್ತ್ರಿಯೋ ವೃದ್ಧಾಶ್ಚ ಸಮ್ಮತಾಃ ॥10॥
ಅನಾಥಳಾಗಿ ಒಂದು ವಸ್ತ್ರವನ್ನು ಧರಿಸಿ ಸ್ತ್ರೀಯರಿಂದಲೂ ಮತ್ತು ಪುರುಷರಿಂದಲೂ ಎಲ್ಲ ಕಡೆಗಳಿಂದಲೂ ಸುತ್ತುವರಿಯಲ್ಪಟ್ಟ ಆ ರೀತಿಯಿಂದ ಇದ್ದ ಆ ದೇವಿಯನ್ನು ನೋಡಿ ವಿರಾಟರಾಜನ ಭಾರ್ಯೆಯು ಕರುಣೆಯಿಂದ ಸಂಭ್ರಮ ಉಂಟಾದವಳಾಗಿ ಸಮೀಪದಲ್ಲಿದ್ದ ಸ್ತ್ರೀಯರನ್ನೂ ಮತ್ತು ಸಮ್ಮತರಾದ ವೃದ್ಧರನ್ನೂ ಅವಳ ಬಳಿಗೆ ಕಳುಹಿಸಿದಳು.
ಅನುನೀಯ ತತಃ ಸರ್ವಾ ಆನಯಧ್ವಮಿಹೈವ ತಾಮ್ |
ಯದಾ ದೃಷ್ಟಾ ಮಯಾ ಸಾಧ್ವೀ ಕಂಪತೇ ಮೇ ಮನಸ್ತದಾ ॥11॥
ತಸ್ಮಾಚ್ಛೀಘ್ರಮಿಹಾನಾಯ್ಯ ದರ್ಶಯಧ್ವಂ ಯದೀಚ್ಛತಿ ॥12॥
ಎಲ್ಲ ಜನರನ್ನು ದೂರ ಸರಿಸಿ ಅವಳನ್ನು ನೀವೆಲ್ಲರೂ ಇಲ್ಲಿಗೇ ಕರೆದುಕೊಂಡು ಬನ್ನಿ. ನಾನು ಆ ಸಾಧ್ವಿಯನ್ನು ನೋಡಿದಾಗ ನನ್ನ ಮನಸ್ಸು ನಡುಗುತ್ತದೆ. ಆದ್ದರಿಂದ ಅವಳು ಬಯಸಿದರೆ ಶೀಘ್ರವಾಗಿ ಇಲ್ಲಿಗೆ ಕರೆದುಕೊಂಡು ಬಂದು ನನಗೆ ತೋರಿಸಿ ಎಂದು ಹೇಳಿದಳು.
ತಾಸ್ತಥೋಕ್ತಾ ಉಪಾಗಮ್ಯ ದ್ರೌಪದೀಂ ಪರಿಸಂಗತಾಃ |
ಆನೀಯ ಸರ್ವಥಾ ತ್ವೇನಾಮಬ್ರುವನ್ ಮಧುರಾಂ ಗಿರಮ್ ॥13॥
ಸುದೇಷ್ಣೆಯಿಂದ ಹಾಗೆ ಹೇಳಲ್ಪಟ್ಟ ಅವರು ದ್ರೌಪದಿಯ ಸಮೀಪಕ್ಕೆ ಬಂದು ಅವಳನ್ನು ಕುರಿತು ಬಹಳ ಮಧುರವಾದ ಮಾತನ್ನು ಆಡಿದರು.
ಭದ್ರೇ ತ್ವಾಂ ದ್ರಷ್ಟುಮಿಚ್ಛಂತೀ ಸುದೇಷ್ಣಾ ಹರ್ಮ್ಯಭೂತಳೇ |
ಸ್ಥಿತಾ ತ್ವದರ್ಥಂ ಹಿ ವಯಂ ತ್ವತ್ಸಮೀಪಮುಪಾಗತಾಃ ॥14॥
ಮಂಗಳಸ್ವರೂಪಳೇ, ನಿನ್ನನ್ನು ನೋಡಲು ಬಯಸಿ ಸುದೇಷ್ಣೆಯು ಅರಮನೆಯ ಉಪ್ಪರಿಗೆಯಲ್ಲಿ ಕಾದಿದ್ದಾಳೆ. ನಿನ್ನನ್ನು ಕರೆತರುವ

ಸಲುವಾಗಿ ನಾವು ನಿನ್ನ ಬಳಿಗೆ ಬಂದಿದ್ದೇವೆ.
ತ್ವದರ್ಥಂ ಪ್ರೈಷಯಚ್ಚಾಸ್ಮಾನ್ ದ್ರಷ್ಟುಂ ತಾಂ ತ್ವಂ ಯದೀಚ್ಛಸಿ |
ಆಯಾಹ್ಯಸ್ಮಾಭಿರೇವಾದ್ಯ ರಕ್ಷ್ಯಮಾಣಾ ಯಥೇಷ್ಟತಃ ॥15॥
ನಿನ್ನ ಸಲುವಾಗಿ ಅವಳು ನಮ್ಮನ್ನು ಕಳುಹಿಸಿದ್ದಾಳೆ. ನೀನು ಅವಳನ್ನು ನೋಡಲು ಬಯಸುವುದಾದರೆ ನಮ್ಮ ಜೊತೆಯಲ್ಲಿ ಈಗಲೇ ಪೂರ್ಣರಕ್ಷಣೆಯುಳ್ಳವಳಾಗಿ ನಿನ್ನ ಇಷ್ಟದಂತೆ ಬಾ.
ವೈಶಂಪಾಯನಃ
ತಚ್ಛ್ರುತ್ವಾ ದ್ರೌಪದೀ ತಾಸಾಂ ವಚನಂ ವಾಕ್ಯಕೋವಿದಾ |
ಈಪ್ಸಿತಾರ್ಥಾತಿಲಾಭೇನ ಹೃಷ್ಟಾ ಯಾತಾ ಗೃಹೋತ್ತಮಮ್ ॥16॥
ವೈಶಂಪಾಯನ ಅವರ ಮಾತನ್ನು ಕೇಳಿದ ವಾಕ್ಯವಿಶಾರದೆಯಾದ ದ್ರೌಪದಿಯು ಅಭೀಷ್ಟವಾದ ಅರ್ಥವು ದೊರೆತುದರ ಸಂತೋಷದಿಂದ ಶ್ರೇಷ್ಠವಾದ ಅರಮನೆಗೆ ಹೋದಳು.
ಅಥ ಸಾ ಛಿನ್ನಪಟ್ಟಾಭ್ಯಾಂ ವಲ್ಕಲಾಜಿನಸಂವೃತಾ |
ರಾಜವೇಶ್ಮ ಸಮಾಗಮ್ಯ ಯತ್ರಾಗ್ರ್ಯಮಹಿಷೀ ಸ್ಥಿತಾ ॥17॥
ಸುದೇಷ್ಣಾಮಗಮತ್ ಕೃಷ್ಣಾ ರಾಜಭಾರ್ಯಾಂ ಯಶಸ್ವಿನೀಮ್ ॥18॥
ಮೊದಲು ಖಂಡಿಸದ ರೇಷ್ಮೆ ವಸ್ತ್ರಗಳನ್ನು ಉಡುತ್ತಿದ್ದ ಅವಳು ಎರಡು ತುಂಡು ರೇಷ್ಮೆಯ ಬಟ್ಟೆಯನ್ನು ಧರಿಸಿ, ನಾರುಮಡಿ ಮತ್ತು ಕೃಷ್ಣಾಜಿನದಿಂದ ಸಂಭೃತಳಾಗಿ ಅರಮನೆಗೆ ಬಂದು ಎಲ್ಲಿ ಪಟ್ಟದ ರಾಣಿಯಾದ ಸುದೇಷ್ಣ ಇದ್ದಳೋ ಆ ಪ್ರದೇಶಕ್ಕೆ ಯಶಸ್ವಿನಿಯಾದ ದ್ರೌಪದಿಯು ಹೋದಳು.
ಕೃಷ್ಣಾನ್ ಕೇಶಾನ್ ಮೃದೂನ್ ದೀರ್ಘಾನ್ ಸಮುದ್ಗ್ರಥ್ಯಾಸಿತೇಕ್ಷಣಾ |
ಕುಂಚಿತಾಗ್ರಾನ್ ಸುಸೂಕ್ಷ್ಮಾಗ್ರಾನ್ ದರ್ಶನೀಯಾನ್ ನಿಬದ್ಧ್ಯ ಚ ॥
ಜುಗೂಹ ದಕ್ಷಿಣೇ ಪಾರ್ಶ್ವೇ ಮೃದೂನಸಿತಲೋಚನಾ ॥20॥
ತನ್ನ ಕಪ್ಪಾದ, ಮೃದುವಾದ, ತೆಳುವಾದ ಮತ್ತು ಸುಂದರವಾದ ಕೇಶರಾಶಿಯನ್ನು ವಾರೆತುರುಬಿನಂತೆ ಗಂಟುಮಾಡಿ ಕೃಷ್ಣಲೋಚನೆಯಾದ ಅವಳು ಬಲಗಡೆಯ ಪಾರ್ಶ್ವದಲ್ಲಿ ಒಳಗೆ ಸೇರಿಸಿದಳು.
ಸಾ ಪ್ರವಿಶ್ಯ ವಿರಾಟಸ್ಯ ದ್ರೌಪದ್ಯಂತಃಪುರಂ ಶುಭಾ |
ಹ್ರೀನಿಷೇವಾನ್ವಿತಾ ಬಾಲಾ ಕಂಪಮಾನಾ ಲತೇವ ಸಾ ॥21॥
ನಾಚಿಕೆ ಸ್ವಭಾವದವಳಾದ, ಬಾಲೆಯಾದ ಮತ್ತು ಶುಭಳಾದ ದ್ರೌಪದಿಯು ವಿರಾಟನ ಅಂತಃಪುರವನ್ನು ಪ್ರವೇಶಿಸಿ ನಡುಗುವ ಬಳ್ಳಿಯಂತೆ ಇದ್ದಳು.
ಅಭಿಗಮ್ಯ ಚ ಸುಶ್ರೋಣೀ ಸರ್ವಲಕ್ಷಣಸಂಯುತಾ |
ದದರ್ಶಾವಸ್ಥಿತಾಂ ಹೈಮೇ ಪೀಠೇ ರತ್ನಪರಿಚ್ಛದೇ ॥22॥
ರಕ್ತಸೂಕ್ಷ್ಮಾಂಶುಕಧರಾಂ ಮೇಘೇ ಸೌದಾಮಿನೀಮಿವ |
ನಾನಾವರ್ಣವಿಚಿತ್ರಾಂ ಚ ಸರ್ವಾಭರಣಭೂಷಿತಾಮ್ ॥23॥
ಸುಭ್ರೂಂ ಸುಕೇಶೀಂ ಸುಶ್ರೋಣೀಂ ಕುಬ್ಜವಾಮನಮಧ್ಯಗಾಮ್ |
ಬಹುಪುಷ್ಪೋಪಕೀರ್ಣಾಯಾಂ ಭೂಮ್ಯಾಂ ವೇದೀಮಿವಾಧ್ವರೇ ॥24॥
ಸುದೇಷ್ಣಾಂ ರಾಜಮಹಿಷೀಂ ಸರ್ವಾಲಂಕಾರಸಂಯುತಾಮ್ ॥25॥
ಎಲ್ಲ ಲಕ್ಷಣಗಳಿಂದ ಕೂಡಿದ ಸುಶ್ರೋಣಿಯಾದ ಅವಳು ಎದುರಿಗೆ ಬಂದು ರತ್ನದ ಹಾಸಿಗೆ ಹಾಸಿದ್ದ ಸುವರ್ಣಪೀಠದಲ್ಲಿ ಕುಳಿತಿದ್ದ, ಕೆಂಪಾದ ಸೂಕ್ಷ್ಮವಸ್ತ್ರವನ್ನು ಧರಿಸಿದ್ದ ಮೇಘಗಳ ಮಧ್ಯದಲ್ಲಿ ಮಿಂಚಿನಂತೆ ಹೊಳೆಯುತ್ತಿದ್ದ, ಅನೇಕ ವರ್ಣಗಳಿಂದ ಕೂಡಿದ್ದ ಆಭರಣದಿಂದ ಅಲಂಕೃತಳಾದ, ಒಳ್ಳೆಯ ಹುಬ್ಬು ಕೇಶ ಮತ್ತು ಶ್ರೋಣಿ ಪ್ರದೇಶವುಳ್ಳ, ಕುಬ್ಜರ ಮತ್ತು ವಾಮನರ ಮಧ್ಯದಲ್ಲಿದ್ದ ಯಜ್ಞದ ವೇದಿಕೆಯಂತೆ ಅನೇಕ ಪುಷ್ಪಗಳನ್ನು ಹರಡಿದ ಭೂಮಿಯ ಮೇಲೆ ಪೀಠದಲ್ಲಿ ಕುಳಿತಿದ್ದ ಸರ್ವಾಲಂಕಾರಗಳಿಂದ ಅಲಂಕೃತಳಾಗಿದ್ದ ರಾಜಮಹಿಷಿಯಾದ ಸುದೇಷ್ಣೆಯನ್ನು ನೋಡಿದಳು.
ತಾಃ ಸರ್ವಾ ದ್ರೌಪದೀಂ ದೃಷ್ಟ್ವಾ ಸಂತಪ್ತಾಃ ಪರಮಾಂಗನಾಃ |
ತ್ವರಿತಾಶ್ಚೋಪತಸ್ಥುಸ್ತಾಂ ಸಹಸೋತ್ಥಾಯ ಚಾಸನಾತ್ ॥26॥
ಆ ಎಲ್ಲಾ ಶ್ರೇಷ್ಠ ವನಿತೆಯರೂ ದ್ರೌಪದಿಯನ್ನು ನೋಡಿ ಸಂತಾಪಗೊಂಡು ತಮ್ಮ ಆಸನಗಳಿಂದ ಬೇಗ ಎದ್ದು ಶೀಘ್ರವಾಗಿ ಅವಳ ಸಮೀಪಕ್ಕೆ ಬಂದರು.
ನಿರೀಕ್ಷಮಾಣಾಸ್ತಾಃ ಸರ್ವಾಃ ಶಚೀಂ ದೇವೀಮಿವಾಗತಾಮ್ |
ಗೂಢಗುಲ್ಫಾಂ ವರಾರೋಹಾಂ ಕೃಷ್ಣಾಂ ತಾಮ್ರಾಯತೇಕ್ಷಣಾಮ್ ॥27॥
ಅತಿಸರ್ವಾನವದ್ಯಾಂಗೀಂ ತನುಗಾತ್ರೀಂ ಸುಮಧ್ಯಮಾಮ್ ॥28॥
ಅವರೆಲ್ಲರೂ ಶಚಿದೇವಿಯಂತೆ ಬಂದಿದ್ದ ಗೂಢವಾದ ಮಣಿಗಂಟುಳ್ಳ, ಒಳ್ಳೆಯ ತೊಡೆಗಳನ್ನುಳ್ಳ ಕೆಂಪಾದ ಕಣ್ಣುಳ್ಳ ಸರ್ವಥಾ ದೋಷರಹಿತವಾದ ಅವಯವಗಳಿಂದ ಕೂಡಿದ ಕೃಶಳಾದಂತಹ ಒಳ್ಳೆಯ ಮಧ್ಯಪ್ರದೇಶವನ್ನು ಉಳ್ಳಂತಹ ದ್ರೌಪದಿಯನ್ನು ನೋಡಿದರು.
ನಾತಿಹ್ರಸ್ವಾಂ ನ ಮಹತೀಂ ಜಾತಾಂ ಬಹುತೃಣೇ ವನೇ |
ಮೃಗರೋಹೀಮಿವಾನಿಂದ್ಯಾಂ ಸುಕೇಶೀಂ ಮೃಗಲೋಚನಾಮ್ ॥29॥
ಮೃಗರೋಹೀಮಿವಾನೀತಾಂ ಯೂಥಭ್ರಷ್ಟಾಮಿವ ದ್ವಿಪಾಮ್ |

ಲಕ್ಷ್ಮೀಮಿವ ವಿಶಾಲಾಕ್ಷೀಂ ವಿದ್ಯಾಮಿವ ಯಶಸ್ವಿನೀಮ್ ॥30॥
ಬಹಳ ಕುಬ್ಜಳಲ್ಲದ, ಬಹಳ ಸ್ಥೂಲಳಲ್ಲದ, ಬಹಳ ಹುಲ್ಲುಗಳಿರುವ ಕಾಡಿನಲ್ಲಿ ಜಿಂಕೆಯ ಮರಿಯಂತೆ ಬೆಳೆದ, ಅನಿಂದಿತಳಾದ, ಒಳ್ಳೆಯ ಕೇಶವನ್ನು ಹೊಂದಿದ, ಮೃಗಲೋಚನೆಯಾದ, ಗುಂಪಿನಿಂದ ಚದುರಿ ಎಳೆದು ತರಲ್ಪಟ್ಟ ಜಿಂಕೆಯ ಮರಿಯಂತೆ ಹೆಣ್ಣಾನೆಯಂತೆ ಇದ್ದಂತಹ, ವಿಶಾಲಾಕ್ಷಿಯಾದ ಯಶಸ್ವಿನಿಯಾದ ವಿದ್ಯಾಸ್ವರೂಪಳಂತಿದ್ದ ಲಕ್ಷ್ಮೀಯಂತಿದ್ದ ಅವಳನ್ನು ನೋಡಿದರು (ದ್ರೌಪದಿಯನ್ನು ನೋಡಿದರು).
ರೋಹಿಣೀಮಿವ ತಾರಾಣಾಂ ದೀಪ್ತಾಮಗ್ನಿಶಿಖಾಮಿವ |
ಪಾರ್ವತೀಮಿವ ರುದ್ರಾಣೀಂ ವೇಲಾಮಿವ ಮಹೋದಧೇಃ ॥31॥
ಸುಲಭಾಮಿವ ನಾಗೀನಾಂ ಮೃಗೀಣಾಮಿವ ಕಿನ್ನರೀಮ್ |
ಗಂಗಾಮಿವ ವಿಶುದ್ಧಾಂಗೀಂ ಶಾರದೀಮಿವ ಶಾರ್ವರೀಮ್ ॥32॥
ನಕ್ಷತ್ರಗಳಲ್ಲಿ ರೋಹಿಣಿಯಂತೆ, ಜ್ವಲಿಸುವ ಅಗ್ನಿಶಿಖೆಯಂತೆ, ರುದ್ರನ ಪತ್ನಿಯಾದ ಪಾರ್ವತಿಯಂತೆ, ಸಾಗರದ ತೀರವಿದ್ದಂತೆ, ನಾಗಿಗಳಲ್ಲಿ ಸುಲಭಳಿದ್ದಂತೆ, ಮೃಗಗಳಲ್ಲಿ ಕಿನ್ನರಿಯಂತೆ, ವಿಶುದ್ಧಾಂಗಳಾದ, ಗಂಗೆಯಂತೆ, ಶರತ್ಕಾಲದ ರಾತ್ರಿಯಂತೆ (ಇದ್ದ ದ್ರೌಪದಿಯನ್ನು ನೋಡಿದರು).
ತಾಮಚಿಂತ್ಯತಮಾಂ ಲೋಕೇ ಇಲಾಮಿವ ಯಶಸ್ವಿನೀಮ್ |
ಸಾವಿತ್ರೀಮಿವ ದುರ್ಧರ್ಷಾಂ ಬ್ರಾಹ್ಮ್ಯಾ ಲಕ್ಷ್ಮ್ಯಾ ಸಮನ್ವಿತಾಮ್ ॥
ಸುದೇಷ್ಣಾ ಪರ್ಯಪೃಚ್ಛತ್ ತಾಂ ವಿಸ್ಮಯೋತ್ಫುಲ್ಲಲೋಚನಾ ॥34॥
ಲೋಕದಲ್ಲಿ ಬುದ್ಧಿಗೆ ನಿಲುಕದ ಸೌಂದರ್ಯವುಳ್ಳ, ಯಶಸ್ವಿನಿಯಾದ ಇಲಾದೇವಿಯಂತಿದ್ದ, ದುರ್ಧರ್ಷಳಾದ, ಸಾವಿತ್ರಿಯಂತೆ ಬ್ರಾಹ್ಮತೇಜಸ್ಸಿನಿಂದ ಶೋಭಿಸುತ್ತಿದ್ದ, ಅವಳನ್ನು ನೋಡಿ ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವಳಾಗಿ ಸುದೇಷ್ಣೆಯು ಪ್ರಶ್ನೆ ಮಾಡಿದಳು.
ಕಾ ತ್ವಂ ಸರ್ವಾನವದ್ಯಾಂಗಿ ಕುತೋಽಸಿ ತ್ವಮಿಹಾಗತಾ |
ಕಸ್ಯ ವಾ ತ್ವಂ ವಿಶಾಲಾಕ್ಷಿ ಕಿಂ ವಾ ತೇ ಕರವಾಣ್ಯಹಮ್ ॥35॥
ಗೂಢಗುಲ್ಫಾ ಸಮಾನೋರೂಃ ತ್ರಿಗಂಭೀರಾ ಷಡುನ್ನತಾ |
ರಕ್ತಾ ಪಂಚಸು ರಕ್ತೇಷು ಹಂಸಗದ್ಗದಭಾಷಿಣೀ ॥36॥
ಅನವದ್ಯಾಂಗಿಯೇ ನೀನು ಯಾರು? ಎಲ್ಲಿಂದ ಇಲ್ಲಿಗೆ ಬಂದಿದ್ದೀಯೆ? ವಿಶಾಲಾಕ್ಷಿಯೇ, ನೀನು ಯಾರಿಗೆ ಸೇರಿದವಳು? (ಯಾರ ಪತ್ನಿ?) ನಾನು ನಿನಗೆ ಏನು ಮಾಡಲಿ? ನೀನು ನಾಭಿ ಮತ್ತು ಎರಡು ಶ್ರೋತ್ರಗಳಲ್ಲಿ ಗಂಭೀರವಾಗಿಯೂ, ಎರಡು ಕಪೋಲಗಳು, ಕುಚಗಳು, ಶ್ರೋಣಿಪ್ರದೇಶ ಮತ್ತು ಅಂಗುಲಿಗಳ ತುದಿ ಇವುಗಳಲ್ಲಿ ಉನ್ನತವಾಗಿಯೂ ಕೆಳತುಟಿ, ಅಂಗೈಗಳು, ಪಾದತಳಗಳು ಈ ಐದು ಪ್ರದೇಶಗಳಲ್ಲಿ ಕೆಂಪಾಗಿಯೂ ಇರುವ ದೇಹವನ್ನು ಧರಿಸಿದವಳಾಗಿ ಹಂಸದಂತೆ ಗದ್ಗದವಾದ ಮಾತುಗಳನ್ನು ಆಡುತ್ತಿದ್ದೀಯೆ.
ಸುಕೇಶೀ ಸುಸ್ವರಾ ಶ್ಯಾಮಾ ಪೀನಶ್ರೋಣಿಪಯೋಧರಾ |
ಅರಾಲಪಕ್ಷ್ಮನಯನಾ ಬಿಂಬೋಷ್ಠೀ ತನುಮಧ್ಯಮಾ ॥37॥
ಕಂಬುಗ್ರೀವಾ ಗೂಢಸಿರಾ ಪೂರ್ಣಚಂದ್ರನಿಭಾನನಾ |
ದಾನವೀ ಕಿನ್ನರೀ ವಾ ತ್ವಂ ಗಂಧರ್ವೀ ವನದೇವತಾ ॥38॥
ಒಳ್ಳೆಯ ಕೇಶಗಳನ್ನು, ಒಳ್ಳೆಯ ಸ್ವರವನ್ನು ಹೊಂದಿ ಶ್ಯಾಮವರ್ಣದವಳೂ ಆಗಿ ಪೀನವಾದ ಶ್ರೋಣಿ ಮತ್ತು ಪಯೋಧರವನ್ನು ಹೊಂದಿ, ಬಾಗಿದ ಹುಬ್ಬುಗಳನ್ನುಳ್ಳ ಕಣ್ಣನ್ನೂ ಬಿಂಬಫಲದಂತಹ ತುಟಿಯನ್ನೂ, ಕೃಶವಾದ ಮಧ್ಯವನ್ನೂ, ಶಂಖದಂತಿರುವ ಕಂಠವನ್ನೂ, ಚರ್ಮದೊಳಗೆ ಮುಳುಗಿರುವ ಧಮನಿಗಳನ್ನೂ, ಪೂರ್ಣಚಂದ್ರನನ್ನು ಹೋಲುವ ಮುಖವನ್ನೂ ಹೊಂದಿದ್ದೀಯೆ. ನೀನು ದಾನವಿಯೇ? ಅಥವಾ ಕಿನ್ನರಿಯೇ? ಅಥವಾ ಗಂಧರ್ವಿಯೇ? ಅಥವಾ ವನದೇವತೆಯೇ?
ಅಪ್ಸರಾ ವಾಽಸಿ ನಾಗೀ ವಾ ತಾರಾ ವಾ ತ್ವಂ ವಿಲಾಸಿನೀ |
ಅಲಂಬುಸಾ ಮಿಶ್ರಕೇಶೀ ಪುಂಡರೀಕಾಽಕ್ಷಮಾಲಿನೀ ॥39॥
ತೇನ ತೇನೈವ ಸಂಪನ್ನಾ ಕಾಶ್ಮೀರೀವ ತುರಂಗಮಾ |
ಇಂದ್ರಾಣೀ ತ್ವಥ ರುದ್ರಾಣೀ ಸ್ವಾಹಾ ವಾಽಪ್ಯಥವಾ ರತಿಃ ॥40॥
ದೇವಿ ದೇವೀಷು ವಿಖ್ಯಾತಾ ಬ್ರೂಹಿ ಕಾ ತ್ವಮಿಹಾಗತಾ |
ತವ ಹ್ಯನುಪಮಂ ರೂಪಂ ಭೂಷಣೈರಪಿ ವರ್ಜಿತಮ್ ॥41॥
ಅಥವಾ ಅಪ್ಸರೆಯೇ? ಅಥವಾ ಸರ್ಪಕನ್ಯೆಯೇ? ಅಥವಾ ತಾರೆಯೇ? ಅಥವಾ ವಿಲಾಸಿನಿಯೇ? ಅಥವಾ ಅಲಂಬುಸಾ, ಮಿಶ್ರಕೇಶೀ, ಪುಂಡರೀಕಾ, ಅಕ್ಷಮಾಲಿನೀ ಈ ಅಪ್ಸರೆಯರಲ್ಲಿ ಒಬ್ಬಳೇ? ಕಾಶ್ಮೀರದೇಶದ ಹೆಣ್ಣುಕುದುರೆಯಂತೆ ಎಲ್ಲ ಲಕ್ಷಣದಿಂದಲೂ ಸಂಪನ್ನಳಾಗಿರುವ ನೀನು ಇಂದ್ರನ ಪತ್ನಿಯೇ? ರುದ್ರನ ಪತ್ನಿಯೇ? ಸ್ವಾಹಾ ದೇವಿಯೇ? ಅಥವಾ ರತಿಯೇ? ಎಲೌ ದೇವಿಯೇ, ದೇವತೆಗಳಲ್ಲಿ ವಿಖ್ಯಾತಳಾದ ನೀನು ಯಾರು? ಮತ್ತು ಏಕೆ ಇಲ್ಲಿ ಬಂದಿದ್ದೀಯೆ? ಎಂದು ಹೇಳು. ನಿನ್ನ ಈ ರೂಪವು ಅಲಂಕಾರವಿಲ್ಲದಿದ್ದರೂ ಅಸದೃಶವಾಗಿ ಕಂಗೊಳಿಸುತ್ತಿದೆ.
ತ್ವಾಂ ಸೃಷ್ಟ್ವೋಪರತಂ ಮನ್ಯೇ ಲೋಕಕರ್ತಾರಮೀಶ್ವರಮ್ |
ನ ತೃಪ್ಯಂತಿ ಸ್ತ್ರಿಯೋ ದೃಷ್ಟ್ವಾ ಕಾ ನ ಪುಂಸಾಂ ರತಿರ್ಭವೇತ್ ॥42॥
ನಿನ್ನನ್ನು ಸೃಷ್ಟಿ ಮಾಡಿ ಲೋಕಸೃಷ್ಟಿ ಮಾಡುವ ಈಶ್ವರನು ಸೃಷ್ಟಿಯನ್ನು ನಿಲ್ಲಿಸಿ ಧನ್ಯನಾಗಿದ್ದಾನೆಂದು ನಾನು ಭಾವಿಸುತ್ತೇನೆ. ಸ್ತ್ರೀಯರಿಗೂ ಸಹ ನಿನ್ನನ್ನು ನೋಡಿ ತೃಪ್ತಿಯುಂಟಾಗುತ್ತಿಲ್ಲ. ನಿನ್ನ ದರ್ಶನದಿಂದ ಹೇಗೆ ಪುರುಷರಿಗೆ ಸುಖವಾಗದೇ ಇದ್ದೀತು?
ದ್ರೌಪದೀ

ನಾಸ್ಮಿ ದೇವೀ ನ ಗಂಧರ್ವೀ ನ ಯಕ್ಷೀ ನ ಚ ಕಿನ್ನರೀ |
ಸೈರಂಧ್ರೀ ನಾಮ ಮೇ ಜಾತಿರ್ವನ್ಯಮೂಲಫಲಾಶನಾ ॥43॥
ದ್ರೌಪದೀ ನಾನು ದೇವತೆಯಲ್ಲ; ಗಂಧರ್ವಿಯಲ್ಲ; ಯಕ್ಷಿಯಲ್ಲ; ಕಿನ್ನರಿಯಲ್ಲ. ನಾನು ಸೈರಂಧ್ರೀ ಜಾತಿಗೆ ಸೇರಿದವಳು. ಕಾಡಿನಲ್ಲಿ ದೊರೆಯುವ ಗೆಡ್ಡೆ ಮತ್ತು ಫಲಗಳನ್ನು ಆಹಾರವಾಗಿ ಸೇವಿಸುವವಳು.
ಪತೀನಾಂ ಪ್ರೇಕ್ಷಮಾಣಾನಾಂ ಕಸ್ಮಿಂಶ್ಚಿತ್ ಕಾರಣಾಂತರೇ |
ಕೇಶಪಕ್ಷೇ ಪರಾಮೃಷ್ಟಾ ಸಾಽಹಂ ತ್ರಸ್ತಾ ವನಂ ಗತಾ ॥44॥
ಯಾವುದೋ ಒಂದು ಸಂದರ್ಭದಲ್ಲಿ ನನ್ನ ಪತಿಗಳು ನೋಡುತ್ತಿರುವಂತೆಯೇ ನಾನು ನನ್ನ ಕೇಶಗಳಲ್ಲಿ ಎಳೆದಾಡಲ್ಪಟ್ಟೆ. ಅದರಿಂದ ಹೆದರಿ ಕಾಡಿಗೆ ಬಂದೆನು.
ತತ್ರ ದ್ವಾದಶವರ್ಷಾಣಿ ವನ್ಯಮೂಲಫಲಾಶನಾ |
ಚರಾಮ್ಯನಿಲಯಾ ಸುಭ್ರು ಸಾ ತವಾಂತಿಕಮಾಗತಾ ॥45॥
ಅಲ್ಲಿ ಕಾಡಿನಲ್ಲಿ ನಾನು ಗೆಡ್ಡೆಗೆಣಸುಗಳು ಮತ್ತು ಫಲಗಳನ್ನು ಆಹಾರವಾಗಿ ಸೇವಿಸಿ ಹನ್ನೆರಡು ವರ್ಷವನ್ನು ಕಳೆದೆ. ಎಲೌ ಸುಂದರಿಯೇ, ನಾನು ಮನೆ ಇಲ್ಲದೆ ತಿರುಗಾಡುತ್ತಾ ಈಗ ನಿನ್ನ ಸಮೀಪಕ್ಕೆ ಬಂದಿದ್ದೇನೆ.
ಜಾನಾಮಿ ಕೇಶಾನ್ ಗ್ರಥಿತುಂ ಜಾನಾಮಿ ಗ್ರಥಿತುಂ ಮಣೀನ್ |
ಮಲ್ಲಿಕೋತ್ಪಲಪದ್ಮಾನಾಂ ಜಾನಾಮಿ ಗ್ರಥಿತುಂ ಸ್ರಜಃ ॥46॥
ಸಿಂಧುವಾರಕಜಾತೀನಾಂ ರಚಯಾಮ್ಯವತಂಸಕಾನ್ ॥47॥
ನನಗೆ ಹೆರಳನ್ನು ಹಾಕಲು ಬರುತ್ತದೆ. ಮಣಿಗಳಿಂದ ಹಾರವನ್ನು ಮಾಡಲು ಬರುತ್ತದೆ. ಮಲ್ಲಿಗೆ, ಉತ್ಪಲ ಮತ್ತು ಪದ್ಮಗಳಿಂದ ಪುಷ್ಪಮಾಲೆಯನ್ನು ಕಟ್ಟುವುದನ್ನು ನಾನು ತಿಳಿದಿದ್ದೇನೆ. ಸಿಂಧುವಾರ ಮೊದಲಾದ ಪುಷ್ಪಗಳ ಪುಷ್ಪಗುಚ್ಛವನ್ನೂ ಸಹ ನಾನು ಮಾಡುತ್ತೇನೆ.
ಪತ್ರಂ ಮೃಗಾಂಗಮಗರುಂ ಪಿಂಕ್ವೇ ಚ ಹರಿಚಂದನಮ್ |
ಪ್ರಥಯಿಷ್ಯಾಮಿ ಚಿತ್ರಾಶ್ಚ ಸ್ರಜಃ ಪರಮಶೋಭನಾಃ ॥48॥
ಪತ್ರ (ಪತ್ರೆ), ಕಸ್ತೂರಿ, ಅಗರು, ಶ್ರೀಗಂಧ ಇವುಗಳನ್ನು ತೇಯುತ್ತೇನೆ. ವಿಚಿತ್ರ ಮತ್ತು ಬಹಳ ಸುಂದರವಾದ ಮಾಲೆಗಳನ್ನು ಹೆಣೆಯುತ್ತೇನೆ.
ಆರಾಧಯಂ ಸತ್ಯಭಾಮಾಂ ಕೃಷ್ಣಸ್ಯ ಮಹಿಷೀಂ ಪ್ರಿಯಾಮ್ |
ಕೃಷ್ಣಾಂ ಚ ಭಾರ್ಯಾಂ ಪಾರ್ಥಾನಾಂ ನಾರೀಣಾಮುತ್ತಮಾಂ ತಥಾ ॥
ನಾನು ಹಿಂದೆ ಕೃಷ್ಣನ ಪ್ರಿಯ ಮಹಿಷಿಯಾದ ಸತ್ಯಭಾಮೆಯನ್ನೂ, ಪಾಂಡವರ ಪತ್ನಿಯಾದ ನಾರಿಯರಲ್ಲಿ ಶ್ರೇಷ್ಠಳಾದ ದ್ರೌಪದಿಯನ್ನೂ ಆರಾಧಿಸಿದ್ದೇನೆ.
ತಯಾಽಸ್ಮಿ ಸುಭೃತಾ ಚಾಹಮಿಷ್ಟಲಾಭೇನ ತೋಷಿತಾ |
ಮಾಲಿನೀತಿ ಚ ಮೇ ನಾಮ ಸ್ವಯಂ ದೇವೀ ಚಕಾರ ಹ ॥50॥
ಕೃಷ್ಣಾ ಕಮಲಪತ್ರಾಕ್ಷೀ ಸಾ ಮೇ ಪ್ರಾಣಸಮಾ ಸಖೀ ॥51॥
ನಾನು ಅವರಿಬ್ಬರಿಂದಲೂ ನನ್ನ ಅಭೀಷ್ಟಗಳನ್ನು ಪೂರೈಸಿ ಚೆನ್ನಾಗಿ ಪೂಜಿಸಲ್ಪಟ್ಟು ಸಂತೋಷಪಡಿಸಲ್ಪಟ್ಟಿದ್ದೇನೆ. ಸತ್ಯಭಾಮಾದೇವಿಯು ಸ್ವತಃ ನನಗೆ ಮಾಲಿನೀ ಎಂದು ಹೆಸರಿಟ್ಟಳು. ಕಮಲಾಕ್ಷಿಯಾದ ದ್ರೌಪದಿಯು ನನಗೆ ಪ್ರಾಣಸಮಳಾದ ಸ್ನೇಹಿತೆ.

ನ ಚಾಹಂ ಚಿರಮಿಚ್ಛಾಮಿ ಕ್ವಚಿದ್ ವಸ್ತುಂ ಶುಭಾನನೇ |
ವ್ರತಂ ಕಿಲೈತದಸ್ಮಾಕಂ ಕುಲಧರ್ಮೋಽಯಮೀದೃಶಃ ॥52॥
ಯೋ ಹ್ಯಸ್ಮಾಕಂ ತು ಹರೇದ್ ದ್ರವ್ಯಂ ದೇಶಂ ವಸನಮೇವ ವಾ |
ನ ಕ್ರೋದ್ಧವ್ಯಂ ಕಿಲಾಸ್ಮಾಭಿರಸ್ಮದ್ಭುರುರಮರ್ಷಣಃ ॥53॥
ಎಲೌ ಶುಭಾನನೆಯೇ, ನಾನು ಬಹಳ ಕಾಲ ಇಲ್ಲಿ ವಾಸಿಸಲು ಇಷ್ಟ ಪಡುವುದಿಲ್ಲ. ಇದು ನಮ್ಮ ವ್ರತ. ನಮ್ಮ ಕುಲಧರ್ಮವು ಹೀಗೆಯೇ ಇರುತ್ತದೆ. ಯಾರು ನಮ್ಮ ಧರ್ಮವನ್ನಾಗಲೀ, ದೇಶವನ್ನಾಗಲೀ ಅಥವಾ ವಸ್ತ್ರವನ್ನಾಗಲೀ ಅಪಹರಿಸುತ್ತಾರೋ ಅವರ ಮೇಲೆ ಕೋಪವನ್ನು ಮಾಡಬಾರದು. ಏಕೆಂದರೆ ನನ್ನ ಪತಿಯು ಶಾಂತಸ್ವಭಾವದವನು (ಮತ್ತು ಇದು ನಮ್ಮ ಕುಲಧರ್ಮ).
ಸಾಽಹಂ ವನಾನಿ ದುರ್ಗಾಣಿ ತೀರ್ಥಾನಿ ಚ ಸರಾಂಸಿ ಚ |
ಶೈಲಾಂಶ್ಚ ವಿವಿಧಾನ್ ರಮ್ಯಾನ್ ಸರಿತಶ್ಚ ಸಮುದ್ರಗಾಃ ॥54॥
ಭರ್ತೃಶೋಕಪರೀತಾಂಗೀ ಭರ್ತುಶ್ಚ ಬ್ರಹ್ಮಚಾರಿಣೀ |
ವಿಚರಾಮಿ ಮಹೀಂ ದುರ್ಗಾಂ ಯತ್ರಸಾಯಂನಿವೇಶನಾ ॥55॥
ಅಂತಹ ನಾನು ವನಗಳನ್ನೂ, ದುರ್ಗಗಳನ್ನೂ, ತೀರ್ಥಗಳನ್ನೂ, ಸರೋವರಗಳನ್ನೂ, ಪರ್ವತಗಳನ್ನೂ, ಸುಂದರವಾದ ಸಮುದ್ರವನ್ನು ಸೇರುವ ಅನೇಕ ನದಿಗಳನ್ನೂ ಸಮೀಪಿಸಿ ಸಂಚರಿಸುತ್ತಾ ಪತಿಯ ಶೋಕದಿಂದ ಮರುಗುತ್ತಾ ಪತಿಯ ನಿಮಿತ್ತ ಬ್ರಹ್ಮಚಾರಿಣಿಯಾಗಿ ಸಾಯಂಕಾಲದಲ್ಲಿ ಎಲ್ಲಿರುವೆನೋ ಅಲ್ಲಿಯೇ ಬಿಡಾರವನ್ನು ಮಾಡುವವಳಾಗಿ ಭೂಮಿಯಲ್ಲಿ ದುರ್ಗಗಳಲ್ಲಿ ಸಂಚರಿಸುತ್ತಿದ್ದೇನೆ.
ವೀರಪತ್ನೀ ಯಥಾ ದೇವೀ ಚರಮಾಣೇಷು ಭರ್ತೃಷು |
ಸಾಽಹಂ ವಿವತ್ಸಾ ವಿಧಿನಾ ಗಂಧಮಾದನಪರ್ವತಾತ್ ॥56॥
ಶೃಣೋಮಿ ತವ ಸೌಶೀಲ್ಯಂ ಭರ್ತುರ್ಮಧುರಭಾಷಿಣಿ ॥57॥

ಎಲೌ ಮಧುರಭಾಷಿಣಿಯೇ, ಪತಿಗಳು ಸಂಚರಿಸುವಾಗ ವೀರಪತ್ನಿಯಾದ ದ್ರೌಪದಿಯು ಸಂಚರಿಸಿದಂತೆ ನಾನೂ ಸಹ ವಿವತ್ಸಳಾಗಿ (ಮಕ್ಕಳ ಜೊತೆಯಲ್ಲಿಲ್ಲದೆ) ನನ್ನ ವಿಧಿಯಂತೆ ಗಂಧಮಾದನ ಪರ್ವತದಲ್ಲಿದ್ದಾಗ ನಿನ್ನ ಮತ್ತು ನಿನ್ನ ಪತಿಯ ಒಳ್ಳೆಯ ಶೀಲವನ್ನು ಕೇಳಿದೆ.
ಮಾಹಾತ್ಮ್ಯಂ ಚ ತತಃ ಶ್ರುತ್ವಾ ಬ್ರಾಹ್ಮಣಾನಾಂ ಸಮೀಪತಃ |
ತ್ವಾಮುಪಸ್ಥಾತುಮಿಚ್ಛಾಮಿ ತತಶ್ಚಾಹಮಿಹಾಗತಾ ॥58॥
ಅಲ್ಲಿ ಬ್ರಾಹ್ಮಣರ ಮುಖದಿಂದ ನಿನ್ನ ಮಹಿಮೆಯನ್ನು ಕೇಳಿ ನಿನ್ನನ್ನು ಆಶ್ರಯಿಸಲು ಬಯಸಿ ಇಲ್ಲಿಗೆ ಬಂದಿದ್ದೇನೆ.
ಗುರವೋ ಮಮ ಧರ್ಮಶ್ಚ ವಾಯುಃ ಶಕ್ರಸ್ತಥಾಽಶ್ವಿನೌ |
ತೇಷಾಂ ಪ್ರಸಾದಾಚ್ಚ ನ ಮಾಂ ಕಶ್ಚಿದ್ ಧರ್ಷಯತೇ ಪುಮಾನ್ ॥59॥
ನನಗೆ ಯಮ, ವಾಯು, ಇಂದ್ರ ಮತ್ತು ಅಶ್ವಿನಿಗಳು ಗುರುಗಳು. ಅವರ ಅನುಗ್ರಹದಿಂದ ಯಾವ ಪುರುಷನೂ ನನ್ನನ್ನು ಅವಮಾನ ಮಾಡಲಾರ.
ಸುದೇಷ್ಣಾ
ನ ಭರೇಯಮಹಂ ಭದ್ರೇ ಸಂಶಯೋ ಮಮ ವಿದ್ಯತೇ |
ರಾಜಾ ತ್ವಯಂ ಹಿ ತ್ವಾಂ ದೃಷ್ಟ್ವಾ ಮತಿಂ ಪಾಪಾಂ ಕರಿಷ್ಯತಿ ॥60॥
ಸುದೇಷ್ಣೆ ಮಂಗಳಸ್ವರೂಪಳೇ, ನಾನು ನಿನ್ನನ್ನು ಭರಿಸಲಾರೆ. ನನಗೆ ಸಂಶಯ ಉಂಟಾಗಿದೆ. ಈ ರಾಜನು ನಿನ್ನನ್ನು ನೋಡಿ ಕೆಟ್ಟಬುದ್ಧಿಯನ್ನು ಮಾಡಬಹುದು.
ಸಾಽಹಂ ತ್ವಾಂ ನ ಕ್ಷಮಾಂ ಮನ್ಯೇ ವಸಂತೀಮಿಹ ವೇಶ್ಮನಿ |
ಏಷ ದೋಷೋಽತ್ರ ಸುಶ್ರೋಣಿ ಕಥಂ ವಾ ಭೀರು ಮನ್ಯಸೇ ॥61॥
ಆದ್ದರಿಂದ ನೀನು ನನ್ನ ಮನೆಯಲ್ಲಿ ವಾಸಮಾಡುವುದು ಯೋಗ್ಯವಲ್ಲವೆಂದು ಭಾವಿಸುತ್ತೇನೆ. ಸುಶ್ರೋಣಿಯೇ, ಈ ವಿಷಯದಲ್ಲಿ ಈ ದೋಷವಿದೆ. ಭೀರುವೇ, ನಿನ್ನ ಅಭಿಪ್ರಾಯವಾದರೂ ಏನು?
ಸ್ಥಿತಾ ರಾಜಕುಲೇ ನಾರ್ಯೋ ಯಾಶ್ಚೇಮಾ ಮಮ ವೇಶ್ಮನಿ |
ತ್ವಾಮೇವೈತಾ ನಿರೀಕ್ಷಂತೇ ವಿಸ್ಮಯಾದ್ ವರವರ್ಣಿನಿ ॥62॥
ಎಲೌ ಸುಂದರಿಯೇ, ರಾಜಕುಲದಲ್ಲಿ ಜನಿಸಿ ನನ್ನ ಮನೆಯಲ್ಲಿರುವ ವನಿತೆಯರೆಲ್ಲರೂ ಆಶ್ಚರ್ಯದಿಂದ ನಿನ್ನನ್ನೇ ನೋಡುತ್ತಿದ್ದಾರೆ.
ವೃಕ್ಷಾಂಶ್ಚೋಪಸ್ಥಿತಾನ್ ಪಶ್ಯ ಯ ಇಮೇ ಮಮ ವೇಶ್ಮನಿ |
ವಿನಮಂತೇ ಹಿ ತ್ವಾಂ ದೃಷ್ಟ್ವಾ ಪುಮಾಂಸಂ ಕಂ ನ ಲೋಭಯೇಃ ॥
ನನ್ನ ಮನೆಯ ಸಮೀಪದಲ್ಲಿರುವ ಈ ವೃಕ್ಷಗಳನ್ನು ನೋಡು. ಅವೂ ಸಹ ನಿನ್ನನ್ನು ನೋಡಲು ನಿನ್ನ ಕಡೆಗೆ ಬಾಗಿವೆ. ಹೀಗಿರುವಾಗ ಯಾವ ಪುರುಷನನ್ನು ನೀನು ಪ್ರಲೋಭಗೊಳಿಸಲಾರೆ?
ರಾಜಾ ವಿರಾಟಃ ಸುಶ್ರೋಣಿ ದೃಷ್ಟ್ವಾ ತೇ ಪರಮಂ ವಪುಃ |
ಮಾಂ ವಿಹಾಯ ವರಾರೋಹೇ ತ್ವಾಂ ಗಚ್ಛೇತ್ ಸರ್ವಚೇತಸಾ ॥64॥
ಎಲೌ ಸುಂದರಿಯೇ, ವಿರಾಟರಾಜನು ನಿನ್ನ ಶ್ರೇಷ್ಠವಾದ ಶರೀರವನ್ನು ನೋಡಿ ನನ್ನನ್ನು ಬಿಟ್ಟು ಪೂರ್ಣವಾದ ಮನಸ್ಸಿನಿಂದ ನಿನ್ನನ್ನೇ ಹೊಂದಬಹುದು.
ಯಂ ಹಿ ತ್ವಮನವದ್ಯಾಂಗೀ ನರಮಾಯತಲೋಚನೇ |
ಸುಪ್ರಸನ್ನಾ ಹಿ ವೀಕ್ಷೇಥಾಃ ಸ ಕಾಮವಶಗೋ ಭವೇತ್ ॥65॥
ಎಲೌ ಅನವದ್ಯಾಂಗಿಯೇ, ವಿಶಾಲವಾದ ಕಣ್ಣುಳ್ಳವಳೇ, ಯಾವ ಪುರುಷನನ್ನು ನೀನು ಪ್ರಸನ್ನಳಾಗಿ ನೋಡುವಿಯೋ ಅವನು ಕಾಮವಶನಾಗುವನು.
ಸುಸ್ನಾತಾಽಲಂಕೃತಾ ಚ ತ್ವಂ ಯಮೀಕ್ಷೇಥಾ ಹಿ ಮಾನವಮ್ |
ಗ್ಲಾನಿರ್ನ ತಸ್ಯ ದುಃಖಂ ವಾ ನ ತಂದ್ರಿರ್ನ ಪರಾಜಯಃ ॥66॥
ನ ಶೋಚೇನ್ನ ಚ ಸಂಪಶ್ಯೇನ್ನ ಚ ಕ್ರುದ್ಧ್ಯೇನ್ನಾನೃತಂ ವದೇತ್ ॥67॥
ಸುಸ್ನಾತಳೂ, ಅಲಂಕೃತಳೂ ಆದ ನೀನು ಯಾವ ಪತಿಯನ್ನು ನೋಡುವೆಯೋ ಅವನಿಗೆ ಆಯಾಸವಾಗಲೀ, ದುಃಖವಾಗಲೀ, ಆಲಸ್ಯವಾಗಲೀ, ಪರಾಜಯವಾಗಲೀ ಇರುವುದಿಲ್ಲ. ಅವನು ಶೋಕಪಡುವುದಿಲ್ಲ. ಸಂತಾಪಪಡುವುದಿಲ್ಲ. ಕೋಪಗೊಳ್ಳುವುದಿಲ್ಲ ಮತ್ತು ಅನೃತವನ್ನು ನುಡಿಯುವುದಿಲ್ಲ.
ಯಂ ತ್ವಂ ಸರ್ವಾನವದ್ಯಾಂಗಿ ಭಜೇಥಾಃ ಸಮಲಂಕೃತಾ |
ನ ವ್ಯಾಧಿರ್ನ ಜರಾ ತಸ್ಯ ನ ಚ ತೃಷ್ಣಾ ನ ಕ್ಷುಧಾ ಭವೇತ್ ॥68॥
ಎಲೌ ಅನವಂದ್ಯಾಂಗಿಯೇ, ನೀನು ಅಲಂಕೃತಳಾಗಿ ಯಾವ ಪತಿಯನ್ನು ಭಜಿಸುವಿಯೋ ಅವನಿಗೆ ವ್ಯಾಧಿಯಾಗಲೀ, ಜರೆಯಾಗಲೀ, ಹಸಿವು ನೀರಡಿಕೆಗಳಾಗಲೀ ಇರುವುದಿಲ್ಲ.
ಯಸ್ಯ ತ್ವಂ ವಶಗಾ ಸುಭ್ರು ಭವೇರಂಕಗತಾ ಸತೀ |
ಪಂಚತ್ವಮಪಿ ಸಂಪ್ರಾಪ್ತಂ ಯಂ ಚ ತ್ವಂ ಪುರುಷಂ ಸ್ವಜೇಃ ॥69॥
ಬಾಹುಭ್ಯಾಮನುರೂಪಾಭ್ಯಾಂ ಸ ಜೀವೇದಿತಿ ಮೇ ಮತಿಃ ॥70॥
ಎಲೌ ಸುಂದರಿಯೇ, ಸಾಧ್ವಿಯಾದ ನೀನು ಯಾವ ಪತಿಯ ತೊಡೆಯ ಮೇಲೆ ಕುಳಿತುಕೊಳ್ಳುವಿಯೋ ಅಥವಾ ಪಂಚತ್ವವನ್ನು ಹೊಂದಿದ ಯಾವನನ್ನು ನಿನ್ನ ಅನುರೂಪವಾದ ಬಾಹುಗಳಿಂದ ಆಲಂಗಿಸುವಿಯೋ ಅವನು ಪುನಃ ಬದುಕುವನು ಎಂದು ನನ್ನ ಅಭಿಪ್ರಾಯ.

ಯಸ್ಯ ತು ತ್ವಂ ಭವೇರ್ಭಾರ್ಯಾ ಯಂ ಚ ಹೃಷ್ಟಾ ಪರಿಷ್ವಜೇಃ |
ಅತಿಜೀವೇತ್ ಸ ಸರ್ವೇಷು ದೇವೇಷ್ವಿವ ಪುರಂದರಃ ॥71॥
ಯಾರಿಗೆ ನೀನು ಪತ್ನಿಯಾಗುವಿಯೋ, ಯಾರನ್ನು ನೀನು ಆಲಂಗಿಸುವೆಯೋ ಅವನು ಎಲ್ಲ ದೇವತೆಗಳಲ್ಲಿ ಇಂದ್ರನಂತೆ ಉಳಿದೆಲ್ಲರನ್ನೂ ಮೀರಿ ಬದುಕುವನು.
ಅಧ್ಯಾರೋಹೇದ್ ಯಥಾ ವೃಕ್ಷಂ ವಧಾಯಾರುಹ್ಯ ತಿಷ್ಠತಿ |
ರಾಜವೇಶ್ಮನಿ ಲೇಖಾಗ್ರ್ಯಾ ನನು ಸ್ಯಾಸ್ತ್ವಂ ತಥಾ ಮಮ ॥72॥
ರಾಜನ ಅರಮನೆಯಲ್ಲಿ ಸುಂದರಿಯಾದ ನೀನು ವಾಸವನ್ನು ಮಾಡಿದರೆ ಅದು ನನ್ನನ್ನು ಕೊಲ್ಲುವ ಶತ್ರುವು ಮರವನ್ನು ಏರಿ ಕುಳಿತಿರುವಾಗ ಅದೇ ಮರವನ್ನು ಹತ್ತಿದಂತೆ ಆಗುವುದಷ್ಟೆ.
ಯಥಾ ಕರ್ಕಟಕೀ ಗರ್ಭಮಾಧತ್ತೇ ಮೃತ್ಯುಮಾತ್ಮನಃ |
ತಥಾವಿಧಮಹಂ ಮನ್ಯೇ ತವ ಸುಭ್ರು ಸಮಾಗಮಮ್ ॥73॥
ಎಲೌ ಸುಂದರಿಯೇ, ಹೇಗೆ ಹೆಣ್ಣು ಚೇಳು ತನ್ನ ಮರಣಕ್ಕಾಗಿಯೇ ಗರ್ಭವನ್ನು ಧರಿಸುತ್ತದೆಯೋ ಹಾಗೆ ನಿನ್ನ ಸಮಾಗಮವೆಂದು ಭಾವಿಸುತ್ತೇನೆ.
ಅನುಮಾನಯೇ ತ್ವಾಂ ಸೈರಂಧ್ರಿ ನಾವಮನ್ಯೇ ಕಥಂಚನ |
ಭರ್ತೃಶೀಲಭಯಾದ್ ಭದ್ರೇ ತವ ವಾಸಂ ನ ರೋಚಯೇ ॥74॥
ಸೈರಂಧ್ರಿಯೇ, (ಇಲ್ಲಿಂದ ಹೋಗಲು) ನಿನಗೆ ಅನುಮತಿಯನ್ನು ಕೊಡುತ್ತೇನೆ. ನಿನ್ನನ್ನು ಅವಮಾನ ಮಾಡುತ್ತಿಲ್ಲ.
ಮಂಗಳಸ್ವರೂಪಳೇ, ಪತಿಯ ಶೀಲದ ಭಯದಿಂದಾಗಿ ನನ್ನ ಮನೆಯಲ್ಲಿ ನಿನ್ನ ವಾಸವು ನನಗೆ ಇಷ್ಟವಾಗುವುದಿಲ್ಲ.
ಸೈರಂಧ್ರೀ
ನಾಹಂ ಶಕ್ಯಾ ವಿರಾಟೇನ ನಾಪಿ ಚಾನ್ಯೇನ ಕೇನಚಿತ್ |
ದೇವಗಂಧರ್ವಯಕ್ಷೈರ್ವಾ ದ್ರಷ್ಟುಂ ದುಷ್ಟೇನ ಚೇತಸಾ ॥75॥
ಸೈರಂಧ್ರೀ ವಿರಾಟನಾಗಲೀ ಅಥವಾ ಇನ್ನೊಬ್ಬ ಪುರುಷನಾಗಲೀ ಅಥವಾ ದೇವಗಂಧರ್ವ ಯಕ್ಷನಾಗಲೀ ನನ್ನನ್ನು ದುಷ್ಟ ಮನಸ್ಸಿನಿಂದ ನೋಡಲು ಸಾಧ್ಯವಿಲ್ಲ.
ಗಂಧರ್ವಾಃ ಪಾಲಯಂತೇ ಮಾಂ ಸುಕುಲ್ಯಾಃ ಪಂಚ ಸುವ್ರತಾಃ |
ಪುತ್ರಾ ದೇವಾದಿದೇವಾನಾಂ ಸೂರ್ಯಪಾವಕವರ್ಚಸಃ ॥76॥
ಒಳ್ಳೆಯ ಕುಲದಲ್ಲಿ ಜನಿಸಿದ ಒಳ್ಳೆಯ ವ್ರತನಿಷ್ಠರಾದ ಐದು ಜನ ಗಂಧರ್ವರು ನನ್ನನ್ನು ರಕ್ಷಿಸುತ್ತಾರೆ. ಅವರು ದೇವಾದಿ ದೇವತೆಗಳ ಪುತ್ರರು ಮತ್ತು ಸೂರ್ಯಾಗ್ನಿಗಳಿಗೆ ಸಮವಾದ ಪ್ರಭಾವವುಳ್ಳವರು.
ಯಶ್ಚ ದುಃಶೀಲವಾನ್ ಮರ್ತ್ಯೋ ಮಾಂ ಸ್ಪೃಶೇದ್ ದುಷ್ಟಚೇತಸಾ |
ಸ ತಾಮೇವ ನಿಶಾಂ ಶೀಘ್ರಂ ಶಯೀತ ಮುಸಲೈರ್ಹತಃ ॥77॥
ಯಾವ ದುಷ್ಟಶೀಲವುಳ್ಳ ಪುರುಷನು ದುಷ್ಟಭಾವನೆಯಿಂದ ನನ್ನನ್ನು ಮುಟ್ಟುತ್ತಾನೆಯೋ ಅವನು ಅದೇ ರಾತ್ರಿ ಶೀಘ್ರವಾಗಿ ಒನಕೆಗಳಿಂದ ಹೊಡೆಯಲ್ಪಟ್ಟು ಸತ್ತು ಮಲಗುತ್ತಾನೆ.
ಯಸ್ಯಾಪಿ ಹಿ ಶತಂ ಪೂರ್ಣಂ ಬಾಂಧವಾನಾಂ ಭವೇದಿಹ |
ಸಹಸ್ರಂ ವಾ ವಿಶಾಲಾಕ್ಷಿ ಕೋಟಿರ್ವಾऽಪಿ ಸಹಸ್ರಿಕಾ ॥78॥
ದುಷ್ಟಚಿತ್ತಸ್ಯ ಮಾಂ ಬ್ರೂಯಾನ್ನ ಸ ಜೀವೇತ್ ತವಾಗ್ರತಃ ॥79॥
ಯಾವನಿಗೆ ನೂರು ಜನ ಬಾಂಧವರು ಇಲ್ಲಿ ಸಹಾಯವಾಗಿರುತ್ತಾರೆಯೋ ಅಥವಾ ಸಹಸ್ರ ಬಾಂಧವರು ಅಥವಾ ಸಹಸ್ರಕೋಟಿ ಬಾಂಧವರು ಸಹಾಯರಾಗಿದ್ದರೂ ಸಹ ಎಲೌ ವಿಶಾಲಾಕ್ಷಿಯೇ, ದುಷ್ಟ ಮನಸ್ಸಿನಿಂದ ನನ್ನ ಜೊತೆ ಮಾತನಾಡಿದರೆ ಅವನು ನಿನ್ನ ಮುಂದೆ ಬದುಕಿರುವುದಿಲ್ಲ.
ನ ತಸ್ಯ ತ್ರಿದಶಾ ದೇವಾ ನಾಸುರಾ ನ ಚ ಪನ್ನಗಾಃ |
ತೇಭ್ಯೋ ಗಂಧರ್ವರಾಜೇಭ್ಯಃ ತ್ರಾಣಂ ಕುರ್ಯುರಸಂಶಯಮ್ ॥80॥
ಅಂತಹವನಿಗೆ ದೇವತೆಗಳಾಗಲೀ, ಅಸುರರಾಗಲೀ, ಸರ್ಪಗಳಾಗಲೀ ನನ್ನ ಪತಿಗಳಾದ ಗಂಧರ್ವರಾಜರಿಂದ ರಕ್ಷಣೆಯನ್ನು ಕೊಡುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.
ಸುತೇಷು ಚ ವಿಸತ್ವಂ ಮೇ ಸ್ವಜನೇ ಬಾಂಧವೇಷು ವಾ |
ನಾಹಂ ಶಕ್ಯಾ ನರೈಃ ಸ್ಪ್ರಷ್ಟುಂ ನ ಚ ಮೇ ವೃತ್ತಿಮೀದೃಶಮ್ ॥81॥
ನನ್ನ ಮಕ್ಕಳಲ್ಲಿ ವಿಶೇಷವಾದ ಬಲವಿದೆ. ನನ್ನ ಸ್ವಜನರಲ್ಲಿಯೂ ಮತ್ತು ಬಂಧುಗಳಲ್ಲಿಯೂ ಹಾಗೆಯೇ. ನನ್ನನ್ನು ಇನ್ನೊಬ್ಬನು ಸ್ಪರ್ಶಿಸಲು ಸಾಧ್ಯವಿಲ್ಲ. ನನ್ನ ನಡವಳಿಕೆ ಅಂತಹದಲ್ಲ.
ಯಾ ಮೇ ನ ದದ್ಯಾದುಚ್ಛಿಷ್ಟಂ ನ ಚ ಪಾದೌ ಪ್ರಧಾವಯೇತ್ |
ಪ್ರಿಯೈ ರತ್ನೈನ ವಸ್ತ್ರೈರ್ವಾ ಗಂಧರ್ವಾಃ ಪತಯೋ ಮಮ ॥82॥
ಯಾರು ನನಗೆ ಪ್ರಿಯವಾದ ವಸ್ತ್ರಗಳನ್ನು ಮತ್ತು ರತ್ನಗಳನ್ನು ನೀಡಿದರೂ ನನಗೆ ಉಚ್ಛಿಷ್ಟವನ್ನು ಕೊಡುವುದಿಲ್ಲವೋ ಅಥವಾ ತಮ್ಮ ಪಾದಗಳನ್ನು ತೊಳೆಸಿಕೊಳ್ಳುವುದಿಲ್ಲವೋ ಅಂತಹವರಿಗೆ ನನ್ನ ಪತಿಗಳಾದ ಗಂಧರ್ವರು ರಕ್ಷಣೆಯನ್ನು ಕೊಡುತ್ತಾರೆ.
ಯೋ ಮಾಂ ಹಿ ಪುರುಷೋ ಗೃಧ್ಯೇತ್ ಯಥಾऽನ್ಯಾಂ ಪ್ರಾಕೃತಾಂ ಸ್ತ್ರಿಯಾಮ್ |
ತಾಮೇವ ಸ ಇಮಾಂ ರಾತ್ರಿಂ ಪ್ರವಿಶೇದಪರಂ ತನುಮ್ ॥83॥
ಯಾವ ಪುರುಷನು ನನ್ನನ್ನು ಬೇರೆ ಪ್ರಾಕೃತ ವನಿತೆಯಂತೆ ಆಸೆ ಪಡುತ್ತಾನೆಯೋ ಅವನು ಅದೇ ರಾತ್ರಿ ಇನ್ನೊಂದು ಶರೀರವನ್ನು

ಹೊಂದುತ್ತಾನೆ.
ನ ಚಾಪ್ಯಹಂ ಚಾಲಯಿತುಂ ಶಕ್ಯಾ ಕೇನಚಿದಂಗನೇ |
ದುಃಖಶೀಲಾ ಹಿ ಗಂಧರ್ವಾಃ ತೇ ಚ ಮೇ ಬಲಿನಃ ಪ್ರಿಯಾಃ ॥84॥
ಏವಂ ನಿವಸಮಾನಾಯಾಂ ಮಯಿ ಮಾ ತೇ ಭಯಂ ಹಿ ಭೂತ್ ॥
ಎಲೌ ಅಂಗನೆಯೇ, ನನ್ನನ್ನು ಯಾರೂ ಅಲುಗಾಡಿಸಲು ಸಾಧ್ಯವಿಲ್ಲ. ನನ್ನ ಪತಿಗಳಾದ ಗಂಧರ್ವರು ಕಷ್ಟಸಹಿಷ್ಣುಗಳು, ಬಲಿಷ್ಠರು ಮತ್ತು ನನಗೆ ಬಹಳ ಪ್ರಿಯರಾದವರು. ನಾನು ಹೀಗೆ ವಾಸವನ್ನು ಮಾಡುವಾಗ ನನ್ನಿಂದ ನಿನಗೆ ಯಾವ ಭಯವೂ ಉಂಟಾಗುವುದಿಲ್ಲ.
ವೈಶಂಪಾಯನಃ
ಏವಮುಕ್ತಾ ತು ಸೈರಂಧ್ರ್ಯಾ ಸುದೇಷ್ಣಾ ವಾಕ್ಯಮಬ್ರವೀತ್ ॥86॥
ವಸೇಹ ಮಯಿ ಕಲ್ಯಾಣಿ ಯದಿ ತೇ ವೃತ್ತಮೀದೃಶಮ್ |
ಕಶ್ಚ ತೇ ದಾತುಮುಚ್ಛಿಷ್ಟಂ ಪುಮಾನರ್ಹತಿ ಶೋಭನೇ ॥87॥
ಪ್ರಧಾವಯೇಚ್ಚ ಕಃ ಪಾದೌ ಲಕ್ಷ್ಮೀಂ ದೃಷ್ಟ್ವೈವ ಬುದ್ಧಿಮಾನ್ ॥88॥
ವೈಶಂಪಾಯನ ಸೈರಂಧ್ರಿಯಿಂದ ಹೀಗೆ ಹೇಳಲ್ಪಟ್ಟ ಸುದೇಷ್ಣೆಯು ಮಾತನಾಡಿದಳು. ಕಲ್ಯಾಣಿಯೇ, ನಿನ್ನ ನಡತೆಯು ಹೀಗಿರುವುದಾದರೆ ಇಲ್ಲಿ ನನ್ನ ಬಳಿಯಲ್ಲಿ ವಾಸವನ್ನು ಮಾಡು. ಎಲೌ ಶೋಭನೆಯೇ, ಯಾವ ಮನುಷ್ಯನು ನಿನಗೆ ಉಚ್ಛಿಷ್ಟವನ್ನು ಕೊಟ್ಟಾನು? ಮತ್ತು ಲಕ್ಷ್ಮಿಯಂತಿರುವ ನಿನ್ನನ್ನು ನೋಡಿ ಯಾವ ವಿವೇಕಿಯಾದವನು ತನ್ನ ಪಾದವನ್ನು ತೊಳೆಸಿಕೊಂಡಾನು?
ಏವಮಾಚಾರಸಂಪನ್ನಾ ಏವಂ ದೇವಪರಾಯಣಾ |
ವಾಕ್ ಚ ತ್ವಮಸಿ ಭೂತಾನಾಂ ಸಾವಿತ್ರೀವ ದ್ವಿಜನ್ಮನಾಮ್ ॥89॥
ಇಂತಹ ಆಚಾರಸಂಪನ್ನಳಾದ ದೇವಪರಾಯಣಳಾದ, ನೀನು ಬ್ರಾಹ್ಮಣರಿಗೆ ಗಾಯತ್ರಿ ಇದ್ದಂತೆ, ಎಲ್ಲ ಪ್ರಾಣಿಗಳಿಂದಲೂ ಸ್ತೋತ್ರಕ್ಕೆ ಅರ್ಹಳಾಗಿದ್ದೀಯೆ.
ದೇವತೇವ ಹಿ ಕಲ್ಯಾಣೀ ಪೂಜಿತಾ ವರವರ್ಣಿನೀ |
ವಸ ಭದ್ರೇ ಮಯಾ ಪ್ರೀತಾ ಪ್ರೀತಿರ್ಹಿ ಮಮ ವರ್ತತೇ ॥90॥
ಸರ್ವಕಾಮ್ಯೈಃ ಪ್ರಮುದಿತಾ ನಿರುದ್ವಿಗ್ನಮನಾಃ ಸುಖಮ್ ॥91॥
ಎಲೌ ಸುಂದರಿಯೇ, ಕಲ್ಯಾಣಿಯೇ, ದೇವತೆಯಂತೆ ಪೂಜಿಸಲ್ಪಟ್ಟು ನನ್ನ ಜೊತೆಯಲ್ಲಿ ಸಂತೋಷದಿಂದ ವಾಸಮಾಡು. ನಿನ್ನನ್ನು ನೋಡಿದರೆ ನನಗೂ ಸಂತೋಷ ಉಂಟಾಗುತ್ತದೆ. ಎಲ್ಲ ಭೋಗಗಳಿಂದಲೂ ಕೂಡಿದವಳಾಗಿ ಯಾವ ಉದ್ವೇಗವಿಲ್ಲದೆ ಸುಖಸಂತೋಷದಿಂದ ನನ್ನ ಮನೆಯಲ್ಲಿ ವಾಸಮಾಡು.
ಸುದೇಷ್ಣಯೈವಮುಕ್ತಾ ಸಾ ಸುಪ್ರೀತಾ ಚಾರುಹಾಸಿನೀ |
ನಿರ್ವಿಶಂಕಾ ವಿರಾಟಸ್ಯ ವಿವೇಶಾಂತಃಪುರಂ ತದಾ ॥92॥
ಸುದೇಷ್ಣೆಯಿಂದ ಹೀಗೆ ಹೇಳಲ್ಪಟ್ಟ ಚಾರುಹಾಸಿನಿಯಾದ ದ್ರೌಪದಿಯು ಬಹಳ ಸಂತೋಷಗೊಂಡವಳಾಗಿ ಯಾವ ಶಂಕೆಯೂ ಇಲ್ಲದೆ ಆಗ ವಿರಾಟನ ಅಂತಃಪುರವನ್ನು ಪ್ರವೇಶಿಸಿದಳು.
ಯಾಜ್ಞಸೇನೀ ಸುದೇಷ್ಣಾಂ ತು ಶಿಶ್ರೂಷಂತೀ ವಿಶಾಂಪತೇ |
ಅವಸತ್ ಪರಿಚಾರಾರ್ಹಾ ಸುದುಃಖಂ ಜನಮೇಜಯ ॥93॥
ಎಲೈ ರಾಜನಾದ ಜನಮೇಜಯನೇ, ಯಜ್ಞಸೇನನ ಪುತ್ರಿಯಾದ ದ್ರೌಪದಿಯು ತಾನೇ ಪರಿಚಾರಕ್ಕೆ ಅರ್ಹಳಾದರೂ ಸಹ ಸುದೇಷ್ಣೆಯ ಸೇವೆಯನ್ನು ಮಾಡುತ್ತಾ ದುಃಖದಿಂದ ವಾಸಿಸಿದಳು.
ಏವಂ ವಿರಾಟೇ ನ್ಯವಸಂತ ಪಾಂಡವಾಃ
ಕೃಷ್ಣಾ ತಥಾಽಂತಃಪುರಮೇತ್ಯ ಶೋಭನಾ |
ಅಜ್ಞಾತಚರ್ಯಾಂ ಪ್ರತಿರುದ್ಧಮಾನಸಾ
ಯಥಾಽಗ್ನಯೋ ಭಸ್ಮನಿ ಗೂಢಚೇತಸಃ ॥94॥
ಹೀಗೆ ವಿರಾಟನ ಬಳಿಯಲ್ಲಿ ಪಾಂಡವರೂ, ಅದರಂತೆ ಅಂತಃಪುರವನ್ನು ಸೇರಿ ಶೋಭನಳಾದ ದ್ರೌಪದಿಯೂ ಅಜ್ಞಾತಚರ್ಯೆಯ ಕಾಲದಲ್ಲಿ ಮುದುಡಿದ ಮನಸ್ಸುಳ್ಳವಳಾಗಿ ಭಸ್ಮದಿಂದ ಮರೆಯಾದ ತೇಜಸ್ಸುಳ್ಳ ಅಗ್ನಿಯಂತೆ ವಾಸಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುರ್ದಶೋಽಧ್ಯಾಯಃ ॥
॥ ವೈರಾಟಪರ್ವಣಿ ಸೈರಂಧ್ರೀನಿವಾಸೋ ನಾಮ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
॥ ಪಾಂಡವ ಪ್ರವೇಶ ಪರ್ವ ಮುಗಿಯಿತು ॥
* * * *
ಸಮಯಪಾಲನ ಪರ್ವ
ಮಹಾಭಾರತತಾತ್ಪರ್ಯನಿರ್ಣಯಃ
ಅಥಾಜಗಾಮ ಮಲ್ಲಕಃ ಸಮಸ್ತಭೂಮಿಮಂಡಲೇ |
ವರೇಣ ಯೋಽಜಿತೋ ಜಯೀ ಶಿವಸ್ಯ ಸಂಜಗರ್ಜ ಚ ॥ 11 ॥
ಬಳಿಕ ಶಿವನ ವರ ಬಲದಿಂದ ಸಮಸ್ತ ಭೂಮಂಡಲದಲ್ಲಿ ಯಾರಿಗೂ ಸೋಲದ ವಿಜಯಿಯಾಗುತ್ತಿದ್ದ ದುಷ್ಟಮಲ್ಲನೊಬ್ಬ ಬಂದ, ಸಿಂಹನಾದಗೈದ.

ತಮೀಕ್ಷ್ಯ ಸರ್ವಮಲ್ಲಕಾ ವಿರಾಟರಾಜಸಂಶ್ರಯಾಃ |
ಪ್ರದುದ್ರುವುರ್ಭಯಾರ್ದಿತಾಸ್ತದಾಽವದದ್ ಯುಧಿಷ್ಠಿರಃ ॥ 12 ॥
ಆ ಮಲ್ಲನನ್ನು ಕಂಡು ವಿರಾಟರಾಜನ ಆಶ್ರಯದಲ್ಲಿದ್ದ ಎಲ್ಲ ಮಲ್ಲರೂ ಭಯದಿಂದ ಕಂಗೆಟ್ಟು ಓಡಿದರು. ಆಗ ಯುಧಿಷ್ಠಿರ ನುಡಿದ.
ಯ ಏಷ ಸೂದ ಆಶು ತಂ ನಿಹತ್ಯ ಮಲ್ಲಮೋಜಸಾ |
ಯಶಸ್ತವಾಭಿವರ್ಧಯೇತ್ ಸಮಾಹ್ವಯಾದ್ಯ ತಂ ನೃಪ ॥ 13 ॥
`ರಾಜನೆ, ನಮ್ಮ ಅಡಿಗೆಯವನು ಈ ಮಲ್ಲನನ್ನು ತನ್ನ ಬಲದಿಂದ ಬೇಗನೆ ಕೊಂದು ನಿನ್ನ ಕೀರ್ತಿಯನ್ನು ಹೆಚ್ಚಿಸಬಲ್ಲ. ಅವನನ್ನು ಕರೆಸು'.
ಇತೀರಿತೇ ಸಮಾಹುತೋ ಜಗಾದ ಮಾರುತಿರ್ವಚಃ |
ಪ್ರಸಾದತೋ ಹರೇರಹಂ ನಿಸೂದಯೇಽದ್ಯ ಮಲ್ಲಕಮ್ ॥ 14 ॥
ಯುಧಿಷ್ಠಿರ ಹೀಗೆ ಹೇಳಿದಾಗ ವಿರಾಟ ಭೀಮನನ್ನು ಕರೆಸಿದ. ಭೀಮನೆಂದ `ಹರಿಯ ಅನುಗ್ರಹದಿಂದ ನಾನೀಗಲೇ ಮಲ್ಲನನ್ನು ಸಂಹರಿಸುವೆನು'.
ಸಮಸ್ತದೇವವೃಂದತೋ ಮಹಾನ್ ಯ ಏವ ಕೇಶವಃ |
ಸಮಸ್ತದೇವನಾಮವಾಂಸ್ತದೀಯಭಕ್ತಿತೋ ಬಲಮ್ ॥ 15 ॥
ಸಮಸ್ತ ದೇವಸಮೂಹಕ್ಕಿಂತಲೂ ಯಾರು ಉತ್ತಮನೋ, ಯಾರು ಸಮಸ್ತದೇವತೆಗಳ ನಾಮಗಳಿಂದಲೂ ಕರೆಸಿಕೊಳ್ಳುವನೋ ಅವನು ಶ್ರೀಕೇಶವ. ಅವನ ಭಕ್ತಿಯಿಂದಲೇ ನನ್ನಲ್ಲಿ ಬಲ ವ್ಯಕ್ತವಾಗುತ್ತದೆ.
ಯ ಏವ ದೇವನಾಮಧಾ ಇತಿ ಶ್ರುತಿರ್ಜಗಾದ ಹಿ |
ಮಹಾಂಶ್ಚ ದೇವ ಏಷ ತತ್ ಸ ಮೇ ಜಯಂ ವಿಧಾಸ್ಯತಿ ॥ 16 ॥
ಶ್ರೀಹರಿಯೇ ಎಲ್ಲ ದೇವತೆಗಳ ನಾಮವನ್ನು ಹೊತ್ತವನೆಂದು ಶ್ರುತಿ ಹೇಳಿದೆ. ಅದರಿಂದಲೂ ಎಲ್ಲ ದೇವತೆಗಳಿಗಿಂತ ಉತ್ತಮನಾದ್ದರಿಂದಲೂ ಮಹಾದೇವನೆನಿಸಿದವನು ಶ್ರೀಹರಿ. ಅವನೆ ನನಗೆ ಜಯ ಉಂಟುಮಾಡುವನು.
ಯುಧಿಷ್ಠಿರಾಭಿಧಶ್ಚ ಯೋ ಯುಧಿಷ್ಠಿರೇ ಸ್ಥಿತಃ ಸದಾ |
ತ್ವಯಿ ಸ್ಥಿತಸ್ತ್ವಮಿತ್ಯಸೌ ಸದಾಽಭಿಧೀಯತೇ ಹರಿಃ ॥ 17 ॥
ಆ ಹರಿಯೇ ಸದಾ ಯುಧಿಷ್ಠಿರನಲ್ಲಿದ್ದು ಯುಧಿಷ್ಠಿರನ ನಾಮದಿಂದ ಕರೆಸಿಕೊಳ್ಳುತ್ತಾನೆ. ನಿನ್ನಲ್ಲಿದ್ದು `ತ್ವಂ' ಎಂಬ ನಾಮದಿಂದಲೂ ಕರೆಸಿಕೊಳ್ಳುತ್ತಾನೆ.
ಇತಿ ಬ್ರುವಾಣೋ ಮಲ್ಲಂ ತಮಭಿಯಾತೋ ವೃಕೋದರಃ |
ಅನಯನ್ಮೃತ್ಯುಲೋಕಾಯ ಬಲಾಢ್ಯೈರಪಿ ದುರ್ಜಯಮ್ ॥ 18 ॥
ಭೀಮಸೇನ ಹೀಗೆ ಹೇಳುತ್ತ, ಬಲಾಢ್ಯರಿಗೂ ಗೆಲ್ಲಲಾಗದಿದ್ದ ಆ ಮಲ್ಲನನ್ನು ಆಕ್ರಮಿಸಿ ಮೃತ್ಯುಲೋಕಕ್ಕೆ ಕಳುಹಿಸಿಕೊಟ್ಟ.
* * * *
ಹದಿನೈದನೆಯ ಅಧ್ಯಾಯ
ಪಾಂಡವರಿಂದ ತಮ್ಮ ತಮ್ಮ ವ್ಯಾಪಾರಗಳಿಂದ ವಿರಾಟನ ತೋಷಣ ಮತ್ತು ಶಂಕರೋತ್ಸವದಲ್ಲಿ ಭೀಮಸೇನನಿಂದ ಮಹಾಮಲ್ಲನ ವಧೆ
ಜನಮೇಜಯಃ
ಏವಂ ವಿರಾಟನಗರೇ ವಸಂತಃ ಸತ್ಯವಿಕ್ರಮಾಃ |
ಅತ ಊರ್ಧ್ವಂ ನರವ್ಯಾಘ್ರಾಃ ಕಿಮಕುರ್ವತ ಪಾಂಡವಾಃ ॥1॥
ಜನಮೇಜಯ ಸತ್ಯವಿಕ್ರಮರೂ, ನರಶ್ರೇಷ್ಠರೂ ಆದ ಪಾಂಡವರು ಹೀಗೆ ವಿರಾಟನಗರದಲ್ಲಿ ವಾಸಮಾಡುತ್ತಾ ಮುಂದೆ ಏನು ಮಾಡಿದರು?
ವೈಶಂಪಾಯನಃ
ಏವಂ ತೇ ನ್ಯವಸಂಸ್ತತ್ರ ಪ್ರಚ್ಛನ್ನಾಃ ಕುರುನಂದನಾಃ |
ಆರಾಧಯಂತೋ ರಾಜಾನಂ ಯದಕುರ್ವತ ತಚ್ಛೃಣು ॥2॥
ವೈಶಂಪಾಯನ ಆ ಕುರುನಂದನು ಪ್ರಚ್ಛನ್ನವೇಷವನ್ನು ಧರಿಸಿ ವಾಸಮಾಡಿ ರಾಜನನ್ನು ಸಂತೋಷಪಡಿಸುತ್ತಾ ಏನು ಮಾಡಿದರು ಎಂಬುದನ್ನು ಕೇಳು.
ತೃಣಬಿಂದುಪ್ರಸಾದಾಚ್ಚ ಧರ್ಮಸ್ಯ ಚ ಮಹಾತ್ಮನಃ |
ಅಜ್ಞಾತವಾಸಮೇವಂ ತೇ ವಿರಾಟನಗರೇಽವಸನ್ ॥3॥
ತೃಣಬಿಂದು ಋಷಿಗಳ ಅನುಗ್ರಹದಿಂದಲೂ ಮತ್ತು ಮಹಾತ್ಮನಾದ ಯಮಧರ್ಮನ ಅನುಗ್ರಹದಿಂದಲೂ ಅವರು ಹೀಗೆ ವಿರಾಟನಗರದಲ್ಲಿ ಅಜ್ಞಾತವಾಸವನ್ನು ಮಾಡಿದರು.
ಯುಧಿಷ್ಠಿರಃ ಸಭಾಸ್ತಾರಃ ಸಭ್ಯಾನಾಮಭವತ್ ಪ್ರಿಯಃ |
ತಥೈವ ಚ ವಿರಾಟಸ್ಯ ಸಪುತ್ರಸ್ಯ ವಿಶಾಂಪತೇ ॥4॥
ಎಲೈ ರಾಜನೇ, ಯುಧಿಷ್ಠಿರನು ಸಭಾಸ್ತಾರನಾಗಿ ಎಲ್ಲಾ ಸಭಾಸದರಿಗೂ ವಿರಾಟನಿಗೂ ಮತ್ತು ಅವನ ಪುತ್ರರಿಗೂ ಪ್ರಿಯನಾದನು.
ಸ ಹ್ಯಕ್ಷಹೃದಯಜ್ಞಸ್ತಾನ್ ಕ್ರೀಡಯಾಮಾಸ ಪಾಂಡವಃ |
ಅಕ್ಷವತ್ಯಾಂ ಯಥಾಕಾಮಂ ಸೂತ್ರಬದ್ಧಾನಿವ ದ್ವಿಜಾನ್ ॥5॥
ಈಗ ಅಕ್ಷಹೃದಯವನ್ನು ತಿಳಿದ ಪಾಂಡವನು ಪಗಡೆಯ ಆಟದಲ್ಲಿ ತನಗೆ ಇಷ್ಟ ಬಂದಂತೆ ದಾರದಿಂದ ಕಟ್ಟಿದ ಪಕ್ಷಿಗಳಂತೆ

ಅವರಿಂದ ಪಗಡೆ ಆಟವನ್ನು ಆಡಿಸಿದನು.
ಅಜ್ಞಾತಂ ಚ ವಿರಾಟಸ್ಯ ವಿಜಿತ್ಯ ವಸು ಧರ್ಮರಾಟ್ |
ಭ್ರಾತೃಭ್ಯಃ ಪುರುಷವ್ಯಾಘ್ರೋ ಯಥೇಷ್ಟಂ ಸಂಪ್ರಯಚ್ಛತಿ ॥6॥
ವಿರಾಟನಿಗೆ ತಿಳಿಯದಂತೆ ಪುರುಷವ್ಯಾಘ್ರನಾದ ಧರ್ಮರಾಜನು ಬೇರೆಯವರ ಜೊತೆಯಲ್ಲಿಯೂ ಆಟವಾಡಿ ಧನವನ್ನು ಗೆದ್ದು ಅದನ್ನು ತಮ್ಮಂದಿರಿಗೆ ಯಥೇಷ್ಟವಾಗಿ ಕೊಡುತ್ತಿದ್ದನು.
ಭೀಮಸೇನೋಽಪಿ ಮಾಂಸಾನಿ ಭಕ್ಷ್ಯಾಣಿ ವಿವಿಧಾನಿ ಚ |
ಅತಿಸೃಷ್ಟಾನಿ ಮಾತ್ಸ್ಯೇನ ವಿಕ್ರೀಣನ್ನಿವ ಭ್ರಾತೃಷು ॥7॥
ಭೀಮಸೇನನೂ ಸಹ ವಿರಾಟನು ಕೊಟ್ಟ ಮಾಂಸಗಳನ್ನು, ವಿವಿಧವಾದ ಭಕ್ಷ್ಯಗಳನ್ನು ಉಳಿದುದನ್ನು ತಮ್ಮಂದಿರಿಗೆ ಮಾರುವಂತೆ ಕೊಡುತ್ತಿದ್ದನು (ಸುಮ್ಮನೆ ಕೊಟ್ಟರೆ ಯಾರಾದರೂ ಪರಸ್ಪರ ಸಂಬಂಧವನ್ನು ತಿಳಿಯಬಹುದು ಎಂದು ಮಾರುವ ಸೋಗಿನಿಂದ ಕೊಡುತ್ತಿದ್ದನು ಎಂದು ಅಭಿಪ್ರಾಯ-ವಾದಿರಾಜರು).
ವಾಸಾಂಸಿ ಪರಿಜೀರ್ಣಾನಿ ಲಬ್ಧಾನ್ಯಂತಃಪುರೇಽರ್ಜುನಃ |
ವಿಕ್ರೀಣನ್ ನಾಮ ಸರ್ವೇಭ್ಯಃ ಪಾಂಡವೇಭ್ಯಃ ಪ್ರಯಚ್ಛತಿ ॥8॥
ಅರ್ಜುನನೂ ಸಹ ಅಂತಃಪುರದಲ್ಲಿ ತನಗೆ ಕೊಟ್ಟ ಸ್ವಲ್ಪ ಹಳೆಯ ವಸ್ತ್ರಗಳನ್ನು ಮಾರುವವನಂತೆ ಎಲ್ಲ ಸಹೋದರರಿಗೂ ಕೊಡುತ್ತಿದ್ದನು.
ಬೀಭತ್ಸುರಪಿ ಗೀತೇನ ಸೂನೃತೇನ ಚ ಪಾಂಡವಃ |
ವಿರಾಟಂ ತೋಷಯಾಮಾಸ ಸರ್ವಾಶ್ಚಾಂತಃಪುರೇ ಸ್ತ್ರಿಯಃ ॥9॥
ಪಾಂಡುಪುತ್ರನಾದ ಅರ್ಜುನನೂ ತನ್ನ ಗಾನದಿಂದ ಮತ್ತು ಒಳ್ಳೆಯ ಮಾತಿನಿಂದ ವಿರಾಟನನ್ನು ಮತ್ತು ಅಂತಃಪುರದ ಎಲ್ಲಾ ಸ್ತ್ರೀಯರನ್ನು ಸಂತೋಷಪಡಿಸುತ್ತಿದ್ದನು.
ಅಶ್ವೈರ್ವಿನೀತೈರ್ಜವನೈಸ್ತತ್ರ ತತ್ರ ಸಮಾಗತೈಃ |
ತೋಷಯಾಮಾಸ ನಕುಲೋ ರಾಜಾನಂ ರಾಜಸತ್ತಮ ॥10॥
ನಕುಲೋಽಪಿ ಧನಂ ಲಬ್ಧ್ವಾ ಕೃತೇ ಕರ್ಮಣಿ ವಾಜಿನಾಮ್ |
ತುಷ್ಟೇ ತಸ್ಮಿನ್ ನರಪತೌ ಪಾಂಡವೇಭ್ಯಃ ಪ್ರಯಚ್ಛತಿ ॥11॥
ಎಲೈ ರಾಜಶ್ರೇಷ್ಠನೇ, ನಕುಲನು ಅವನ ಬಳಿಗೆ ಬಂದ ಅಶ್ವಗಳನ್ನು ಪಳಗಿಸಿ ಒಳ್ಳೆಯ ವೇಗವನ್ನು ಕಲಿಸಿ ರಾಜನನ್ನು ಸಂತೋಷಪಡಿಸುತ್ತಿದ್ದನು. ನಕುಲನೂ ಸಹ ಅಶ್ವಕಾರ್ಯವನ್ನು ಮಾಡಿ ಸಂತೋಷಗೊಂಡ ರಾಜನು ಕೊಟ್ಟ ಧನವನ್ನು ಉಳಿದ ಪಾಂಡವರಿಗೆ ಕೊಡುತ್ತಿದ್ದನು.
ವಿನೀತಾನ್ ಋಷಭಾನ್ ದೃಷ್ಟ್ವಾ ಸಹದೇವೇನ ಭಾವಿತಾನ್ |
ಸ ತು ಹೃಷ್ಟಶ್ಚ ಸಂಪ್ರಾದಾತ್ ತದಾ ರಾಜಾ ಧನಂ ಬಹು ॥12॥
ಸಹದೇವನು ಎತ್ತುಗಳನ್ನು ಪಳಗಿಸುವುದನ್ನು ನೋಡಿ ಸಂತೋಷಗೊಂಡ ರಾಜನು ಅವನಿಗೆ ಬಹಳ ಧನವನ್ನು ಕೊಡುತ್ತಿದ್ದನು.
ಸಹದೇವೋ ಗವಾಂ ನಿತ್ಯಂ ಕೃತೇ ಮಂಗಲಕರ್ಮಣಿ |
ಅಧ್ಯಕ್ಷತ್ವಾಚ್ಚ ಯಲ್ಲೇಭೇ ರಾಜ್ಞಃ ಕಲ್ಯಾಣಕಾರ್ಯವಾನ್ ॥13॥
ಸಹದೇವೋಪಿ ಗೋಪಾನಾಂ ವೇಷಮಾಸ್ಥಾಯ ಪಾಂಡವಃ |
ದಧಿ ಕ್ಷೀರಂ ಘೃತಂ ಚೈವ ಪಾಂಡವೇಭ್ಯಃ ಪ್ರಯಚ್ಛತಿ ॥14॥
ಗವಾಧ್ಯಕ್ಷನಾದ ಸಹದೇವನು ಗೋವುಗಳಿಗೆ ನಿತ್ಯವೂ ಮಂಗಳಕಾರ್ಯವನ್ನು ಮಾಡಿ, ರಾಜನಿಗೆ ಕಲ್ಯಾಣವನ್ನು ಉಂಟುಮಾಡಿ ಅವನಿಂದ ಧನವನ್ನು ಪಡೆಯುತ್ತಿದ್ದನು. ಗೋಪಾಲಕರ ವೇಷವನ್ನು ಧರಿಸಿದ ಪಾಂಡವನಾದ ಸಹದೇವನೂ ಸಹ ಪಾಂಡವರಿಗೆ ದಧಿ-ಕ್ಷೀರ ಮತ್ತು ಘೃತಗಳನ್ನು ಕೊಡುತ್ತಿದ್ದನು.
ಕೃಷ್ಣಾಽಪಿ ಸರ್ವಾನ್ ಭ್ರಾತೄಂಸ್ತಾನ್ ನಿರೀಕ್ಷಂತೀ ತಪಸ್ವಿನೀ |
ಯಥಾ ಪುನರವಿಜ್ಞಾತಾ ತಥಾ ಚರತಿ ಭಾಮಿನೀ ॥15॥
ದ್ರೌಪದಿಯೂ ಸಹ ದುಃಖದಿಂದ ಕೂಡಿದವಳಾಗಿ ಯಾರಿಗೂ ತಿಳಿಯದಂತೆ ಆ ಎಲ್ಲ ಸಹೋದರರನ್ನು ನೋಡುತ್ತಾ (ಕೋಪದಿಂದ) ಅಸಮಾಧಾನದಿಂದ ಸಂಚರಿಸುತ್ತಿದ್ದಳು.
ಏವಂ ಸಂಛಾದಯಂತಸ್ತೇ ತದಾಽನ್ಯೋನ್ಯಂ ಮಹಾರಥಾಃ |
ಪ್ರೇಕ್ಷಮಾಣಾಸ್ತದಾ ಕೃಷ್ಣಾಮೂಷುಶ್ಛನ್ನಾ ನರಾಧಿಪ ॥16॥
ಎಲೈ ರಾಜನೇ, ಹೀಗೆ ಆ ಮಹಾರಥರು ತಮ್ಮ ನಿಜರೂಪವನ್ನು ಮರೆಸಿ ದ್ರೌಪದಿಯನ್ನು ಮತ್ತು ಪರಸ್ಪರವಾಗಿ ಸಹೋದರರನ್ನೂ ನೋಡುತ್ತಾ ಪ್ರಚ್ಛನ್ನ ವೇಷದಿಂದ ಕಾಲವನ್ನು ಕಳೆದರು.
ವಿರಾಟನಗರೇ ಚೇರುಃ ಪುನರ್ಗರ್ಭಧೃತಾ ಇವ |
ಸಶಂಕಾ ಧಾರ್ತರಾಷ್ಟ್ರಸ್ಯ ಭಯಾತ್ ಪಾಂಡುಸುತಾಸ್ತದಾ ॥17॥
ಪಾಂಡುಸುತರು ವಿರಾಟನಗರದಲ್ಲಿ ಪುನಃ ಗರ್ಭದಲ್ಲಿ ಬೆಳೆದಂತೆ ದುರ್ಯೋಧನನ ಭಯವನ್ನು ಯಾವಾಗಲೂ ಶಂಕಿಸುತ್ತಾ ಕಳೆದರು.
ಅಥ ಮಾಸೇ ಚತುರ್ಥೇ ತು ಶಂಕರಸ್ಯ ಮಹೋತ್ಸವಃ |
ಆಸೀತ್ ಸಮೃದ್ಧೋ ಮತ್ಸ್ಯೇಷು ಪುರುಷಾಣಾಂ ಸುಸಮ್ಮತಃ ॥18॥
ಅನಂತರ ನಾಲ್ಕನೆಯ ತಿಂಗಳಿನಲ್ಲಿ ಮತ್ಸ್ಯದೇಶದಲ್ಲಿ ಎಲ್ಲರಿಗೂ ಸಮ್ಮತವಾದ ಶಂಕರನ ಮಹೋತ್ಸವವು ಜರುಗಿತು.

ತತ್ರ ಮಲ್ಲಾಃ ಸಮಾಪೇತುರ್ದಿಗ್ಭ್ಯೋ ರಾಜನ್ ಮಹಾಬಲಾಃ ॥19॥
ಮಹಾಕಾಯಾ ಮಹಾವೀರ್ಯಾಃ ಕಾಲಕೇಯಾ ಇವಾಸುರಾಃ।
ವೀರ್ಯವಂತೋ ಬಲೋದಗ್ರಾ ರಾಜ್ಞಾ ಸಮಭಿಪೂಜಿತಾಃ ॥20॥
ರಾಜನೇ, ಅಲ್ಲಿಗೆ ಮಹಾಬಲರೂ, ದೊಡ್ಡ ದೇಹವುಳ್ಳವರೂ ಕಾಲಕೇಯ ರಾಕ್ಷಸರಂತೆ ಮಹಾಪರಾಕ್ರಮಿಗಳೂ, ಬಲದಿಂದ ಉನ್ನತರೂ ರಾಜನಿಂದ ಅನೇಕ ಬಾರಿ ಗೌರವವನ್ನು ಸ್ವೀಕರಿಸಿದವರೂ ಆದ ಅನೇಕ ಮಲ್ಲರು ಎಲ್ಲ ದಿಕ್ಕುಗಳಿಂದಲೂ ಬಂದರು.
ಸಿಂಹಸ್ಕಂಧಕಟಿಗ್ರೀವಾಃ ಸ್ವವದಾತಾ ಮನಸ್ವಿನಃ।
ಅಸಕೃಲ್ಲಬ್ಧಲಕ್ಷ್ಯಾಸ್ತೇ ರಂಗೇ ಪಾರ್ಥಿವಸನ್ನಿಧೌ ॥21॥
ಅವರು ಸಿಂಹದಂತಹ ಭುಜ, ಕಟಿ ಮತ್ತು ಕತ್ತುಗಳನ್ನು ಉಳ್ಳವರಾಗಿ ಒಳ್ಳೆಯ ವಸ್ತ್ರಗಳನ್ನು ಧರಿಸಿ ಧೈರ್ಯಶಾಲಿಗಳಾಗಿ ಅನೇಕ ಬಾರಿ ರಾಜಸನ್ನಿಧಿಯಲ್ಲಿ ಮಲ್ಲಯುದ್ಧದಲ್ಲಿ ಪರಾಜಿತರೂ ಆಗಿದ್ದವರಾಗಿದ್ದರು.
ತೇಷಾಮೇಕೋ ಮಹಾನಾಸೀತ್ ಸರ್ವಮಲ್ಲಾನ್ ಸಮಾಹ್ವಯತ್।
ವ್ಯಾವಲ್ಗಮಾನೋ ದದೃಶೇ ಗರ್ಜಿತೋದ್ಗತಿಭಿಃ ಸ್ಥಿತಃ ॥22॥
ಅವರಲ್ಲಿ ಒಬ್ಬ ಮಹಾಮಲ್ಲನಿದ್ದನು. ಅವನು ಗಟ್ಟಿಯಾಗಿ ಮಾತನಾಡುತ್ತಾ, ಗರ್ಜನೆಯನ್ನು ಮಾಡುತ್ತಾ, ಗರ್ವದಿಂದ ನಡೆದಾಡುತ್ತಾ ಉಳಿದ ಎಲ್ಲಾ ಮಲ್ಲರನ್ನೂ ಆಹ್ವಾನ ಮಾಡುತ್ತಿದ್ದುದು ಕಂಡುಬಂದಿತು.
ವಿತ್ರಸ್ತಮನಸಃ ಸರ್ವೇ ಮಲ್ಲಾಸ್ತೇ ಹತಚೇತಸಃ।
ಅವಾಙ್ಮುಖಾಶ್ಚ ಭೀತಾಶ್ಚ ಮಲ್ಲಾಶ್ಚಾನ್ಯೇ ವಿಚೇತಸಃ ॥23॥
ಉಳಿದ ಮಲ್ಲರೆಲ್ಲರೂ ಮನಸ್ಸಿನಲ್ಲಿ ಹೆದರಿ ತಮ್ಮ ಚೇತಸ್ಸನ್ನೇ ಕಳೆದುಕೊಂಡವರಂತೆ ಭೀತರಾಗಿ ಮುಖವನ್ನು ಕೆಳಗೆ ಮಾಡಿದರು. ಇನ್ನೂ ಕೆಲವು ಮಲ್ಲರು ಮೂರ್ಛೆ ಹೋದರು.
ಅಣುತ್ವಮಪರೇ ಚೈವ ವಾಂಛಂತೀವ ಪ್ರವಿಹ್ವಲಾಃ।
ಗಾಂ ಪ್ರವೇಷ್ಟುಮಿವೇಚ್ಛಂತಿ ಖಂ ಗಂತುಮಿವ ಚೋತ್ಥಿತಾಃ ॥24॥
ಇನ್ನು ಕೆಲವರು ಮನಸ್ಸಿನಲ್ಲಿ ಬಹಳ ವಿಹ್ವಲರಾಗಿ ತಾವು ಬಾಲಕರಾಗಲು ಬಯಸಿದಂತೆ ಕಂಡುಬಂದಿತು. ಕೆಲವರು ಭೂಮಿಯೊಳಗೆ ಪ್ರವೇಶ ಮಾಡಲು ಇಚ್ಛಿಸಿದರು. ಇನ್ನು ಕೆಲವರು ಆಕಾಶಕ್ಕೆ ಹಾರುವಂತೆ ಎದ್ದುನಿಂತರು.
ತ್ರಸ್ತಾಃ ಶಾಂತಾ ವಿಷಣ್ಣಾಶ್ಚ ನಿಃಶಬ್ದಾ ವಿಹ್ವಲೇಕ್ಷಣಾಃ।
ವಿರಾಟರಾಜಮಲ್ಲಾಸ್ತೇ ಭಗ್ನಚಿತ್ತಾ ಹತಪ್ರಭಾಃ ॥25॥
ವಿರಾಟರಾಜನ ಮಲ್ಲರೆಲ್ಲರೂ ಹೆದರಿ ಶಾಂತರಾಗಿ, ವಿಷಾದದಿಂದ ಕೂಡಿ ನಿಶ್ಶಬ್ದರಾಗಿ ಅಧೀರಕಣ್ಣುಗಳನ್ನು ಹೊಂದಿದವರಾಗಿ ತಮ್ಮ ಕಾಂತಿಯನ್ನು ಕಳೆದುಕೊಂಡು ಭಗ್ನಚಿತ್ತರಾದರು.
ಮಲ್ಲೇಂದ್ರನಿಹತಾಃ ಸರ್ವೇ ನ ಕಿಂಚಿತ್ ಪ್ರವದಂತಿ ತೇ।
ಮಲ್ಲ ಉದ್ವೀಕ್ಷ್ಯ ತಾನ್ ಮಲ್ಲಾನ್ ತ್ರಸ್ತಾನ್ ವಾಕ್ಯಮುವಾಚ ಹ ॥
ಆ ದೊಡ್ಡ ಮಲ್ಲನನ್ನು ನೋಡಿ ಹೆದರಿದ ಅವರು ಯಾರೂ ಮಾತನಾಡಲಿಲ್ಲ. ಅವರೆಲ್ಲರೂ ಹೆದರುವುದನ್ನು ನೋಡಿ ಆ ಮಹಾಮಲ್ಲನು ಅವರನ್ನು ಕುರಿತು ಕೇಳಿದನು.
ಆಗತಂ ಮಲ್ಲರಾಜಂ ಮಾಂ ಕೃತ್ಸ್ನೇ ಪೃಥಿವಿಮಂಡಲೇ।
ಸಿಂಹವ್ಯಾಘ್ರಗಜೈಃ ಸಾರ್ಧಂ ಕ್ರೀಡಂತಂ ವಿದ್ಧಿ ಭೂಪತೇ ॥27॥
ರಾಜನೇ, ನಾನು ಸಮಗ್ರವಾದ ಪೃಥಿವಿ ಮಂಡಲದಲ್ಲಿ ಶ್ರೇಷ್ಠನಾದ ಮಲ್ಲರಾಜನು. ನಾನು ಸಿಂಹ, ವ್ಯಾಘ್ರ, ಗಜಗಳ ಜೊತೆಯಲ್ಲಿ ಆಡುತ್ತೇನೆ ಎಂದು ನೀನು ತಿಳಿ.
ಮಲ್ಲೇಂದ್ರಸ್ಯ ವಚಃ ಶ್ರುತ್ವಾ ಬಲದರ್ಪಸಮನ್ವಿತಮ್।
ವಿರಾಟೋ ವೀಕ್ಷ್ಯ ತಾನ್ ಮಲ್ಲಾನ್ ತ್ರಸ್ತಾನ್ ವಾಕ್ಯಮುವಾಚ ಹ ॥
ಅನೇನ ಸಹ ಮಲ್ಲೇನ ಕೋ ಯೋದ್ಧುಂ ಶಕ್ತಿಮಾನ್ ನರಃ ॥29॥
ಆ ಮಲ್ಲರಾಜನ ಬಲದರ್ಪಸಹಿತವಾದ ಮಾತನ್ನು ಕೇಳಿ ವಿರಾಟರಾಜನು ತನ್ನ ಎಲ್ಲಾ ಮಲ್ಲರೂ ಹೆದರಿರುವುದನ್ನು ನೋಡಿ ಈ ಮಲ್ಲನ ಜೊತೆಯಲ್ಲಿ ಯುದ್ಧ ಮಾಡಲು ಯಾರಿಗೆ ಶಕ್ತಿ ಇದೆ ಎಂದು ಕೇಳಿದನು.
ವೈಶಂಪಾಯನಃ
ತತೋ ಯುಧಿಷ್ಠಿರೋಽವಾದೀತ್ ಶ್ರುತ್ವಾ ಮತ್ಸ್ಯಪತೇರ್ವಚಃ ॥30॥
ಅಸ್ತಿ ಮಲ್ಲೋ ಮಹಾರಾಜ ಮಯಾ ದೃಷ್ಟೋ ಯುಧಿಷ್ಠಿರೇ।
ಅನೇನ ಸಹ ಮಲ್ಲೇನ ಯೋದ್ಧುಂ ಶಕ್ನೋತಿ ಭೂಪತೇ ॥31॥
ವೈಶಂಪಾಯನ ಮತ್ಸ್ಯರಾಜನ ಮಾತನ್ನು ಕೇಳಿ ಯುಧಿಷ್ಠಿರನು ಹೇಳಿದನು `ಮಹಾರಾಜನೇ, ನಾನು ಯುಧಿಷ್ಠಿರನ ಸಮೀಪದಲ್ಲಿ ನೋಡಿದ ಒಬ್ಬ ಮಲ್ಲನಿದ್ದಾನೆ. ಭೂಪತಿಯೇ, ಅವನಿಗೆ ಈ ಮಲ್ಲನ ಜೊತೆಯಲ್ಲಿ ಯುದ್ಧಮಾಡಲು ಸಾಧ್ಯವಾಗುತ್ತದೆ'.
ಯೋಽಸೌ ಮಲ್ಲೋ ಮಯಾ ದೃಷ್ಟಃ ಪೂರ್ವಂ ಯೌಧಿಷ್ಠಿರೇ ಬಲೇ।
ಸೋಽಯಂ ಮಲ್ಲೋ ವಸತ್ಯೇಷ ರಾಜಂಸ್ತವ ಮಹಾನಸೇ ॥32॥
ನಾನು ಯುಧಿಷ್ಠಿರನ ಸಮೀಪದಲ್ಲಿ ಹಿಂದೆ ಯಾವ ಮಲ್ಲನನ್ನು ನೋಡಿದ್ದೆನೋ ರಾಜನೇ, ಅವನು ಈಗ ನಿನ್ನ ಮಹಾನಸ (ಅಡುಗೆಯ ಮನೆ)ದಲ್ಲಿ ವಾಸಿಸುತ್ತಿದ್ದಾನೆ.
ಯುಧಿಷ್ಠಿರವಚಃ ಶ್ರುತ್ವಾ ವ್ಯಕ್ತಮಾಹೇತಿ ಪಾರ್ಥಿವಃ।
ಸೋಽಪ್ಯಥಾಹೂಯತಾಂ ಕ್ಷಿಪ್ರಂ ಯೋದ್ಧುಂ ಮಲ್ಲೇನ ಸಂಸದಿ ॥33॥

ಯುಧಿಷ್ಠಿರನ ಮಾತನ್ನು ಕೇಳಿ ಯುಕ್ತವಾದ ಮಾತುಗಳು ಎಂದು ತಿಳಿದ ರಾಜನು ಈ ಮಲ್ಲನ ಜೊತೆಯಲ್ಲಿ ಸಭೆಯಲ್ಲಿ ಯುದ್ಧಮಾಡಲು ಅವನನ್ನೂ ಬೇಗ ಕರೆಯಿರಿ (ಎಂದು ಆಜ್ಞೆಯನ್ನು ಮಾಡಿದನು).
ಭೀಮಸೇನೋ ವಿರಾಟೇನ ಆಹೂತಶ್ಚೋದಿತಸ್ತಥಾ |
ಯೋದ್ಧುಂ ತತೋಽಬ್ರವೀದ್ ವಾಕ್ಯಂ ಯೋದ್ಧುಂ ಶಕ್ನೋಮಿ ಭೂಪತೇ
ನರೇಂದ್ರ ತೇ ಪ್ರಭಾವೇನ ಶ್ರಿಯಾ ಶಕ್ತ್ಯಾ ಚ ಶಾಸನಾತ್ |
ಅನೇನ ಸಹ ಮಲ್ಲೇನ ಯೋದ್ಧುಂ ರಾಜೇಂದ್ರ ಶಕ್ನುಯಾಮ್ ॥35॥
ಭೀಮಸೇನನು ವಿರಾಟನಿಂದ ಆಹೂತನಾಗಿ ಯುದ್ಧವನ್ನು ಮಾಡಲು ಪ್ರೇರಿಸಲ್ಪಟ್ಟವನಾಗಿ ರಾಜನನ್ನು ಕುರಿತು, ಎಲೈ ಭೂಪತಿಯೇ, ನರೇಂದ್ರನೇ, ನಿನ್ನ ಪ್ರಭಾವದಿಂದ, ಐಶ್ವರ್ಯದಿಂದ, ಶಕ್ತಿಯಿಂದ ಮತ್ತು ಆಜ್ಞೆಯಿಂದ ನಾನು ಈ ಮಲ್ಲನ ಜೊತೆಯಲ್ಲಿ ಯುದ್ಧವನ್ನು ಮಾಡಲು ಸಮರ್ಥನಾಗುತ್ತೇನೆ ಎಂದು ಹೇಳಿದನು.
ಯುಧಿಷ್ಠಿರಕೃತಶ್ರೇಯಾ ವಿಶ್ರಮಶ್ಚ ವಿಶಾಂಪತೇ |
ಮಹಾದೇವಸ್ಯ ಭಕ್ತ್ಯಾ ಚ ತಂ ಮಲ್ಲಂ ಪಾತಯಾಮ್ಯಹಮ್ ॥36॥
ಎಲೈ ರಾಜನೇ, ಯುಧಿಷ್ಠಿರನು ಹಿಂದೆ ನನಗೆ ಮಾಡಿದ ಶ್ರೇಯಸ್ಸಿನಿಂದಲೂ ಮತ್ತು ಮಹಾದೇವನಾದ ನಾರಾಯಣನ ಭಕ್ತಿಯ ಬಲದಿಂದಲೂ ನಾನು ಯಾವುದೇ ಶ್ರಮವಿಲ್ಲದೇ ಈ ಮಲ್ಲನನ್ನು ಕೆಡವುತ್ತೇನೆ (ಲಕ್ಷಾಲಂಕಾರ).
ವೈಶಂಪಾಯನಃ
ಚೋದಿತೋ ಭೀಮಸೇನಸ್ತು ಮಲ್ಲಮಾಹೂಯ ಮಂಡಲೇ |
ಯೋದ್ಧುಂ ವ್ಯವಸ್ಥಿತೋ ವೀರೋ ರೇಣುಂ ಸಮ್ಮೃಜ್ಯ ಹಸ್ತಯೋಃ ॥
ಅಥ ಸೂದೇನ ತಂ ಮಲ್ಲಂ ಯೋಧಯಾಮಾಸ ಪಾರ್ಥಿವಃ ॥38॥
ವೈಶಂಪಾಯನ ಹಾಗೆ ಪ್ರೇರಿಸಲ್ಪಟ್ಟ ಭೀಮಸೇನನು ಮಂಡಲದಲ್ಲಿ ಮಲ್ಲನನ್ನು ಕರೆದು ಯುದ್ಧವನ್ನು ಮಾಡಲು ನಿಶ್ಚಯಿಸಿ, ವೀರನಾದ ಅವನು ಕೈಗಳಿಗೆ ಧೂಳು ಮಣ್ಣನ್ನು ಸವರಿಕೊಂಡನು. ಅನಂತರ ರಾಜನು ತನ್ನ ಸೂದನಿಂದ ಆ ಮಲ್ಲನ ಜೊತೆಯಲ್ಲಿ ಯುದ್ಧವನ್ನು ಮಾಡಿಸಿದನು.
ನೋದ್ಯಮಾನಸ್ತತೋ ಭೀಮೋ ದುಃಖೇನೇವಾಕರೋತ್ ಪದಮ್ |
ನ ಹಿ ಶಕ್ನೋಮಿ ವಿವೃತಂ ಪ್ರತ್ಯಾಖ್ಯಾತುಂ ನರಾಧಿಪಮ್ ॥39॥
ಆಗ ಯುದ್ಧ ಮಾಡಲು ಪ್ರೇರಿಸಲ್ಪಟ್ಟ ಭೀಮನು ಮೊದಲು ರಾಜನನ್ನು ಸ್ಪಷ್ಟವಾಗಿ ನಿರಾಕರಿಸಲು ಸಾಧ್ಯವಾಗುವುದಿಲ್ಲ ಎಂದು ಹೇಳುತ್ತಾ ಕಷ್ಟದಿಂದಲೋ ಎಂಬಂತೆ ನಡೆದಾಡಿದನು.
ತತಃ ಸ ಪುರುಷವ್ಯಾಘ್ರಃ ಶಾರ್ದೂಲಶಿಥಿಲಂ ಚರನ್ |
ಪ್ರವಿವೇಶ ಮಹಾರಂಗಂ ವಿರಾಟಮಭಿಹರ್ಷಯನ್ ॥40॥
ಅನಂತರ ಪುರುಷವ್ಯಾಘ್ರನಾದ ಅವನು ವ್ಯಾಘ್ರದಂತೆ ನಿಧಾನವಾಗಿ ಚಲಿಸುತ್ತಾ ಮಹಾರಂಗವನ್ನು ಪ್ರವೇಶಿಸಿ ವಿರಾಟನಿಗೆ ಸಂತೋಷವನ್ನು ಉಂಟುಮಾಡಿದನು.
ಬದ್ಧಕಕ್ಷೋಽಥ ಕೌಂತೇಯಃ ತತಸ್ತಾನ್ ಹರ್ಷಯನ್ ಜನಾನ್ |
ತತ್ರ ತಂ ವೃತ್ರಸಂಕಾಶಂ ಭೀಮೋ ಮಲ್ಲಂ ಸಮಾಹ್ವಯತ್ ॥41॥
ಕಕ್ಷೇ ಮಲ್ಲಂ ಗೃಹೀತ್ವಾ ತು ನನಾದ ಭುವಿ ಸಿಂಹವತ್ ॥42॥
ಕೌಂತೇಯನಾದ ಭೀಮಸೇನನು ವಸ್ತ್ರವನ್ನು ಸರಿಯಾಗಿ ಸಿಕ್ಕಿಸಿಕೊಂಡು ಆ ಸಭಾಸದರನ್ನು ಸಂತೋಷಪಡಿಸುತ್ತಾ ವೃತ್ರಾಸುರನಂತಿದ್ದ ಆ ಮಲ್ಲನನ್ನು ಆಹ್ವಾನ ಮಾಡಿ ಪಕ್ಕೆಯಲ್ಲಿ ಅವನನ್ನು ಹಿಡಿದು ಸಿಂಹದಂತೆ ಗರ್ಜನೆ ಮಾಡಿದನು.
ತಾವುಭೌ ಸುಮಹೋತ್ಸಾಹಾವುಭೌ ಭೀಮಪರಾಕ್ರಮೌ |
ಮತ್ತಾವಿವ ಮಹಾಕಾಯೌ ವಾರಣೌ ಸನ್ನಿಪೇತತುಃ ॥43॥
ಅವರಿಬ್ಬರೂ ಬಹಳ ಉತ್ಸಾಹ ಉಳ್ಳವರೂ, ಭಯಂಕರ ಪರಾಕ್ರಮ ಉಳ್ಳವರೂ, ದೊಡ್ಡ ಶರೀರ ಉಳ್ಳವರೂ ಆಗಿ ಮದಗಜಗಳಂತೆ ಪರಸ್ಪರವಾಗಿ ಎರಗಿದರು.
ತತಸ್ತೌ ನರಶಾರ್ದೂಲೌ ಬಾಹುಯುದ್ಧಂ ಸಮೀಯತುಃ |
ವೀರೌ ಪರಮಸಂಹೃಷ್ಟಾವನ್ಯೋನ್ಯಜಯಕಾಂಕ್ಷಿಣೌ ॥44॥
ಆಸೀತ್ ಸುಭೀಮಃ ಸಂಪಾತೋ ವಜ್ರಪರ್ವತಯೋರಿವ |
ಉಭೌ ಪರಮಸಂಹೃಷ್ಟೌ ಬಲೇನಾತಿಬಲಾವುಭೌ ॥45॥
ಅನ್ಯೋನ್ಯಸ್ಯಾಂತರಂ ಪ್ರೇಪ್ಸೂ ಪರಸ್ಪರಜಯೇಷಿಣೌ |
ಉಭೌ ಪರಮಸಂಹೃಷ್ಟೌ ಮತ್ತಾವಿವ ಮಹಾಗಜೌ ॥46॥
ಅನಂತರ ಪರಮಸಂತೋಷದಿಂದ ಕೂಡಿದ ನರಶಾರ್ದೂಲರಾದ ಆ ವೀರರು ಪರಸ್ಪರ ಜಯಾಕಾಂಕ್ಷಿಗಳಾಗಿ ಬಾಹುಯುದ್ಧವನ್ನು ಮಾಡಿದರು. ಅವರಿಬ್ಬರೂ ಬಹಳ ಸಂತೋಷದಿಂದ ಕೂಡಿದವರಾಗಿ ಬಲದಲ್ಲಿ ಬಹಳ ಶ್ರೇಷ್ಠರಾಗಿದ್ದರು. ಅವರ ಪರಸ್ಪರ ಎರಗುವಿಕೆಯು ಪರ್ವತದ ಮೇಲೆ ವಜ್ರಾಯುಧವು ಬಿದ್ದಂತೆ ಬಹಳ ಭಯಂಕರವಾಗಿದ್ದಿತು. ಪರಸ್ಪರ ಜಯಾಕಾಂಕ್ಷಿಗಳಾದ ಅವರು ಪರಮಸಂತುಷ್ಟರಾಗಿ ಮದಿಸಿದ ಮಹಾಗಜಗಳಂತೆ ಇನ್ನೊಬ್ಬರ ದೌರ್ಬಲ್ಯವನ್ನು ಹುಡುಕುತ್ತಾ ಹೋರಾಡಿದರು.
ಕೃತಪ್ರತಿಕೃತೈಶ್ಚಿತ್ರೈರ್ಬಾಹುಭಿಶ್ಚ ಸುಸಂಕಟೈಃ |
ಸನ್ನಿಪಾತಾವಧೂತೈಶ್ಚ ಪ್ರಮಾಥೋನ್ಮಥನೈಸ್ತಥಾ ॥47॥
ಕ್ಷೇಪಣೈರ್ಮುಷ್ಟಿಭಿಶ್ಚೈವ ವರಾಹೋದ್ಧತನಿಸ್ವನೈಃ |

ತಲೈರ್ವಜ್ರನಿಪಾತೈಶ್ಚ ಪ್ರಸೃಷ್ಟಾಭಿಸ್ತಥೈವ ಚ ॥48॥
ಶಲಾಕಹಸ್ತಪಾತೈಶ್ಚ ಪಾದೋದ್ಧೂತೈಶ್ಚ ದಾರುಣೈಃ।
ಜಾನುಭಿಶ್ಚಾಶ್ಮನಿರ್ಘೋಷೈಃ ಶಿರೋಭಿಶ್ಚಾವಘಟ್ಟನೈಃ ॥49॥
ಒಬ್ಬರು ಮಾಡಿದ ಕಾರ್ಯಕ್ಕೆ ಇನ್ನೊಬ್ಬರು ಪ್ರತಿಕಾರ್ಯವನ್ನು ಮಾಡುತ್ತಿದ್ದರು. ವಿಚಿತ್ರವಾದ ಪಟ್ಟುಗಳನ್ನು ಬಾಹುಗಳಿಂದ ಹಾಕಿ, ಸನ್ನಿಪಾತ, ಅವಧೂತ, ಪ್ರಮಾಥ, ಉನ್ಮಂಥನ, ಕ್ಷೇಪಣ, ಮುಷ್ಟಿ, ವರಾಹೋದ್ಧೃತ, ನಿಸ್ವನ ಮೊದಲಾದ ಕುಸ್ತಿಯ ಪ್ರಕಾರದಿಂದಲೂ; ವಜ್ರಗಳ ಪಾತದಂತಿರುವ ಹಸ್ತತಲ ಪ್ರಹಾರದಿಂದಲೂ; ಶಲಾಕ ಮತ್ತು ಹಸ್ತಗಳ ಪಾತದಿಂದಲೂ ದಾರುಣವಾದ ಪಾದಘಾತಕಗಳಿಂದಲೂ; ಬಂಡೆಯ ಶಬ್ದದಂತೆ ಕೇಳಿಬರುವ ಮಂಡಿಗಳ ಮತ್ತು ತಲೆಗಳ ಅವಘಟ್ಟನದಿಂದಲೂ ಯುದ್ಧವನ್ನು ಮಾಡಿದರು.
ತದ್ಯುದ್ಧಮಭವದ್ ಘೋರಮಶಸ್ತ್ರಂ ಬಾಹುತೇಜಸಾ।
ಬಲಪ್ರಾಣೇನ ಶೂರಾಣಾಂ ಸಮಾಜೋತ್ಸವಸನ್ನಿಧೌ ॥50॥
ಸಮಾಜೋತ್ಸವದ ಸಂದರ್ಭದಲ್ಲಿ ಬಲ ಮತ್ತು ಪ್ರಾಣಗಳಿಂದ ಶೂರರಾದ ಅವರಿಗೆ ಶಸ್ತ್ರರಹಿತವಾದ ಬಾಹುಯುದ್ಧವು ಹೀಗೆ ಘೋರವಾಗಿ ನಡೆಯಿತು.
ಅರಜ್ಯತ ಜನಃ ಸರ್ವಃ ಸೋತ್ಕೃಷ್ಟನಿನದೋತ್ಥಿತಃ।
ಬಲಿನೋಃ ಸಂಯುಗೇ ರಾಜನ್ ವೃತ್ರವಾಸವಯೋರಿವ ॥51॥
ಬಲಿಷ್ಠರಾದ ಅವರಿಬ್ಬರೂ ವೃತ್ರವಾಸವರಂತೆ ಯುದ್ಧವನ್ನು ಮಾಡುವಾಗ ಎಲೈ ರಾಜನೇ, ಎಲ್ಲ ಜನರೂ ಸಂತೋಷಗೊಂಡರು. ಶ್ರೇಷ್ಠವಾದ ಸಂತೋಷ ಶಬ್ದವು ಎಲ್ಲ ಕಡೆಯಲ್ಲಿಯೂ ಕೇಳಿ ಬಂದಿತು.
ಪ್ರಕರ್ಷಣಾಕರ್ಷಣಯೋರಭ್ಯಾಕರ್ಷವಿಕರ್ಷಣೈಃ।
ಆಕರ್ಷತುರಥಾನ್ಯೋನ್ಯಂ ಜಾನುಭಿಶ್ಚಾಪಿ ಜಘ್ನತುಃ ॥52॥
ಒಬ್ಬರನ್ನೊಬ್ಬರು ಎಳೆದಾಡುವುದು ಮೊದಲಾದ ಕುಸ್ತಿಯ ಪ್ರಕಾರದಿಂದ ಅವರು ಯುದ್ಧವನ್ನು ಮಾಡಿ ಮಂಡಿಗಳಿಂದಲೂ ಒಬ್ಬರನ್ನೊಬ್ಬರು ಹೊಡೆದರು.
ತತಃ ಶಬ್ದೇನ ಮಹತಾ ಭರ್ತ್ಸಯಂತೌ ಪರಸ್ಪರಮ್।
ವ್ಯೂಢೋರಸ್ಕೌ ದೀರ್ಘಭುಜೌ ನಿಯುದ್ಧಕುಶಲಾವುಭೌ ॥53॥
ಬಾಹುಭಿಃ ಸಮಸಜ್ಜೇತಾಮಾಯಸೈಃ ಪರ್ಿಿರಿವ ॥54॥
ಅನಂತರ ದೊಡ್ಡ ಸ್ವರದಿಂದ ಒಬ್ಬರನ್ನೊಬ್ಬರು ಹೀಯಾಳಿಸುತ್ತಾ ಪುಷ್ಟವಾದ ವಕ್ಷಸ್ಸ್ಥಲ ಮತ್ತು ಭುಜಗಳುಳ್ಳ ಕುಸ್ತಿಯ ಪಟುಗಳಾದ ಅವರಿಬ್ಬರೂ ಕಬ್ಬಿಣದ ಒನಕೆಗಳಂತಹ ಬಾಹುಗಳಿಂದ ಒಬ್ಬರನ್ನೊಬ್ಬರು ಹಿಡಿದರು.
ಉತ್ಪಪಾತಾಥ ಭೀಮಸ್ತು ಮಲ್ಲಂ ಕಕ್ಷೇ ಗೃಹೀತವಾನ್।
ಪಾರ್ಶ್ವಂ ನಿಗೃಹ್ಯ ಹಸ್ತೇನ ಪಾತಯಾಮಾಸ ಮಲ್ಲಕಮ್ ॥55॥
ಚಕರ್ಷ ದೋರ್ಭ್ಯಾಮುತ್ಪಾಟ್ಯ ಭೀಮೋ ಮಲ್ಲಮಮಿತ್ರಹಾ ॥56॥
ಆಗ ಭೀಮಸೇನನು ಮೇಲೆ ಹಾರಿ ಮಲ್ಲನನ್ನು ಪಕ್ಕೆಯಲ್ಲಿ ಹಿಡಿದನು. ಅವನ ಪಕ್ಕೆಯನ್ನು ಸ್ವಾಧೀನ ಮಾಡಿಕೊಂಡು ತನ್ನ ಕೈಯಿಂದ ಅವನನ್ನು ಕೆಡವಿ ತನ್ನ ಬಾಹುಗಳಿಂದ ಮೇಲಕ್ಕೆ ಎತ್ತಿ ಶತ್ರುಸೂದನನಾದ ಭೀಮನು ಆ ಮಲ್ಲನನ್ನು ರಂಗದಲ್ಲಿ ಎಳೆದಾಡಿದನು.
ವಿನದಂತಮಭಿಕ್ರೋಧಾತ್ ಶಾರ್ದೂಲ ಇವ ದಾರುಣಃ।
ತಮುದ್ಯಮ್ಯ ಮಹಾಬಾಹುರ್ಭ್ರಾಮಯಾಮಾಸ ಪಾಂಡವಃ ॥57॥
ತತೋ ಮಲ್ಲಾಶ್ಚ ಮತ್ಸ್ಯಾಶ್ಚ ವಿಸ್ಮಯಂ ಚಕ್ರಿರೇ ಭೃಶಮ್ ॥58॥
ಕ್ರೋಧದಿಂದ ಕಿರುಚುತ್ತಿದ್ದ ಆ ಮಲ್ಲನನ್ನು ಘೋರವಾದ ವ್ಯಾಘ್ರದಂತೆ ಮಹಾಬಾಹುವಾದ ಭೀಮಸೇನನು ಮೇಲೆತ್ತಿ ತಿರುಗಿಸಿದನು. ಆಗ ಉಳಿದ ಮಲ್ಲರು ಮತ್ಸ್ಯದೇಶದ ಪ್ರಜೆಗಳೂ ಸಹ ಬಹಳ ಆಶ್ಚರ್ಯಪಟ್ಟರು.
ಭ್ರಾಮಯಿತ್ವಾ ಶತಗುಣಂ ಗತಸತ್ವಮಚೇತನಮ್।
ಪ್ರತ್ಯಪಿಂಷನ್ ಮಹಾಬಾಹುರ್ಮಲ್ಲಂ ಭುವಿ ವೃಕೋದರಃ ॥59॥
ಮಹಾಬಾಹುವಾದ ವೃಕೋದರನು ಹಾಗೆ ನೂರು ಬಾರಿ ಮಲ್ಲನನ್ನು ತಿರುಗಿಸಿ ತನ್ನ ಬಲವನ್ನು ಕಳೆದುಕೊಂಡು ವಿಚೇತನನಾದ ಆ ಮಲ್ಲನನ್ನು ಭೂಮಿಯಲ್ಲಿ ಹಾಕಿ ಅವನನ್ನು ಹಿಟ್ಟಿನಂತೆ ಒರೆಸಿದನು.
ತಸ್ಮಿನ್ ವಿನಿಹತೇ ಮಲ್ಲೇ ವಜ್ರಿಣೇವ ಮಹಾಚಲೇ।
ವಿರಾಟಃ ಪರಮಂ ಹರ್ಷಮಗಚ್ಛತ್ ಸಹ ಬಂಧುಭಿಃ ॥60॥
ಮಹಾಪರ್ವತವು ಇಂದ್ರನಿಂದ ಹತವಾದಂತೆ (ಬಿರಿದಂತೆ) ಆ ಮಹಾಮಲ್ಲನು ಹತನಾಗುತ್ತಿರಲು ವಿರಾಟರಾಜನೂ ಮತ್ತು ಅವನ ಬಂಧುಗಳೂ ಬಹಳ ಸಂತೋಷಗೊಂಡರು.
ಪ್ರಹರ್ಷಾತ್ ಪ್ರದದೌ ವಿತ್ತಂ ಬಹು ರಾಜಾ ಮಹಾಮನಾಃ।
ವಲಲಾಯ ಮಹಾರಂಗೇ ಯಥಾ ವೈಶ್ರವಣಸ್ತಥಾ ॥61॥
ಉದಾರಿಯಾದ ಆ ರಾಜನು ಸಂತೋಷದಿಂದ ಮಹಾರಂಗದಲ್ಲಿ ವಲಲನಿಗೆ ಕುಬೇರನು ಕೊಡುವಂತೆ ಬಹಳ ಧನವನ್ನು ಕೊಟ್ಟನು.
ಏವಂ ಸ ಸುಬಹೂನ್ ಮಲ್ಲಾನ್ ಪುರುಷಾಂಶ್ಚ ಮಹಾಬಲಾನ್।
ವಿನಿಘ್ನನ್ ಮತ್ಸ್ಯರಾಜಸ್ಯ ಪ್ರೀತಿಮಾವಹದುತ್ತಮಾಮ್ ॥62॥
ಹೀಗೆ ಮಹಾಬಲಿಷ್ಠನಾದ ಭೀಮಸೇನನು ಮಹಾಬಲಿಷ್ಠರಾದ ಅನೇಕ ಮಲ್ಲರನ್ನೂ ಮತ್ತು ಪುರುಷರನ್ನೂ ಸಂಹಾರ ಮಾಡುತ್ತಾ ವಿರಾಟರಾಜನಿಗೆ ಬಹಳ ಸಂತೋಷವನ್ನು ಉಂಟುಮಾಡಿದನು.

ಯದಾऽಸ್ಯ ತುಲ್ಯಃ ಪುರುಷೋ ನ ಕಶ್ಚಿತ್ ತತ್ರ ದೃಶ್ಯತೇ |
ತತೋ ವ್ಯ್ಯಾಘ್ರೈಶ್ಚ ಸಿಂಹೈಶ್ಚ ದ್ವಿರದೈಶ್ಚಾಪ್ಯಯುಧ್ಯತ ॥63॥
ಅವನ ಜೊತೆಯಲ್ಲಿ ಯುದ್ಧವನ್ನು ಮಾಡುವ ಸಮಾನನಾದ ಪುರುಷನು ದೊರೆಯದಿದ್ದಾಗ ಭೀಮಸೇನನು ವ್ಯಾಘ್ರ, ಸಿಂಹ ಮತ್ತು ಗಜಗಳ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ವಿರಾಟೇನ ತು ದತ್ತಾನಿ ಚಿತ್ರಾಣಿ ವಿವಿಧಾನಿ ಚ |
ಸ್ಥಿತೇಭ್ಯಃ ಪುರುಷೇಭ್ಯಶ್ಚ ದತ್ತತತ್ವ ದ್ರವ್ಯಾಣಿ ಜಗ್ಮಿವಾನ್ ॥64॥
ವಿರಾಟನು ಕೊಟ್ಟ ಚಿತ್ರವಾದ ಮತ್ತು ವಿವಿಧವಾದ ಮತ್ತು ವಿಚಿತ್ರವಾದ ದ್ರವ್ಯಗಳನ್ನು ಅವನು ಸಭೆಯಲ್ಲಿ ಕುಳಿತಿದ್ದ ಪುರುಷರಿಗೇ ಕೊಟ್ಟು ಹೊರಟು ಹೋಗುತ್ತಿದ್ದನು.
ಪುನರಂತಃಪುರಗತಃ ಸ್ತ್ರೀಣಾಂ ಮಧ್ಯೇ ವೃಕೋದರಃ |
ಯುಧ್ಯತೇ ಸ್ಮ ವಿರಾಟಸ್ಯ ಗಜೈಃ ಸಿಂಹೈರ್ಮಹಾಬಲೈಃ ॥65॥
ಪುನಃ ಅಂತಃಪುರಕ್ಕೆ ಹೋಗಿ ವನಿತೆಯರನ್ನು ಸಂತೋಷಪಡಿಸಲು ವೃಕೋದರನು ಅವರ ಎದುರಿಗೆ ಸಿಂಹ, ಗಜಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದನು.
ಬೀಭತ್ಸುರಪಿ ಗೀತೇನ ನೃತ್ತೇನಾಪಿ ಚ ಪಾಂಡವಃ |
ವಿರಾಟಂ ತೋಷಯಾಮಾಸ ಸರ್ವಾಶ್ಚಾಂತಃಪುರಸ್ತ್ರಿಯಃ ॥66॥
ಪಾಂಡವನಾದ ಅರ್ಜುನನೂ ಸಹ ತನ್ನ ನೃತ್ಯ-ಗೀತಗಳಿಂದ ವಿರಾಟನನ್ನೂ ಮತ್ತು ಅಂತಃಪುರದಲ್ಲಿರುವ ಎಲ್ಲಾ ಸ್ತ್ರೀಯರನ್ನೂ ಸಂತೋಷಪಡಿಸುತ್ತಿದ್ದನು.
ಅಶ್ವೈರ್ವಿನೀತೈರ್ಜವನೈಸ್ತತ್ರ ತತ್ರ ಸಮಾಗತೈಃ |
ತೋಷಯಾಮಾಸ ನಕುಲೋ ವಿರಾಟಂ ರಾಜಸತ್ತಮ ॥67॥
ತಸ್ಮೈ ದೇಯಂ ದದೌ ರಾಜಾ ಬಹು ದ್ರವ್ಯಂ ಶುಭಂ ಮುದಾ ॥68॥
ಎಲೈ ರಾಜಸತ್ತಮನೇ, ನಕುಲನೂ ಸಹ ಅಶ್ವಗಳನ್ನು ಪಳಗಿಸಿ ವೇಗವನ್ನು ಕಲಿಸಿ ವಿರಾಟನನ್ನು ಸಂತೋಷಪಡಿಸಿದನು. ಅವನಿಗೆ ವಿರಾಟನು ಸಂತೋಷದಿಂದ ಬಹಳ ಶುಭ ದ್ರವ್ಯಗಳನ್ನು ನೀಡಿದನು.
ವಿನೀತತ್ವಂ ಗವಾಂ ದೃಷ್ಟ್ವಾ ಸಹದೇವಂ ಚ ತುಷ್ಟವಾನ್ |
ತಸ್ಮಿನ್ ಕಾಲೇ ನೃಪಃ ಪ್ರಾದಾತ್ ತಸ್ಯ ಪ್ರೀತೋ ಧನಂ ಬಹು ॥69॥
ಗೋವುಗಳು ಸಾಧುವಾಗಿರುವುದನ್ನು ನೋಡಿ ಸಂತೋಷಗೊಂಡು ವಿರಾಟನು ಸಹದೇವನಿಗೆ ಆ ಕಾಲದಲ್ಲಿ ಬಹಳ ಧನವನ್ನು ಕೊಟ್ಟನು.
ದ್ರೌಪದೀ ಪ್ರೇಕ್ಷ್ಯ ತಾನ್ ಸರ್ವಾನ್ ಕ್ಲಿಶ್ಯಮಾನಾನ್ ಮಹಾರಥಾನ್ |
ನಾತಿಪ್ರೀತಮನಾ ರಾಜನ್ ನಿಃಶ್ವಾಸಪರಮಾऽಭವತ್ ॥70॥
ದ್ರೌಪದಿಯು ಕಷ್ಟಪಡುತ್ತಿದ್ದ ಆ ಎಲ್ಲಾ ಮಹಾರಥರನ್ನೂ ನೋಡಿ ಬಹಳ ಸಂತೋಷವಿಲ್ಲದೆ ಯಾವಾಗಲೂ ನಿಟ್ಟುಸಿರನ್ನು ಬಿಡುತ್ತಿದ್ದಳು.
ಏವಂ ತೇ ನ್ಯವಸಂಸ್ತತ್ರ ಪ್ರಚ್ಛನ್ನಾಃ ಪುರುಷರ್ಷಭಾಃ |
ಕರ್ಮಾಣಿ ತಾನಿ ಕುರ್ವಾಣಾ ವಿರಾಟನೃಪತೇಸ್ತದಾ ॥71॥
ಎಲೈ ರಾಜನೇ, ಹೀಗೆ ವಿರಾಟರಾಜನ ಸೇವೆಯನ್ನು ಮಾಡುತ್ತಾ ಪುರುಷರ್ಷಭರಾದ ಪಾಂಡವರು ಪ್ರಚ್ಛನ್ನರಾಗಿ ವಿರಾಟನಗರದಲ್ಲಿ ವಾಸವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚದಶೋऽಧ್ಯಾಯಃ ॥
॥ ವೈರಾಟಪರ್ವಣಿ ಪಂಚದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
॥ ಸಮಯಪಾಲನಪರ್ವ ಸಮಾಪ್ತಂ ॥
* * * * *
ಕೀಚಕವಧಪರ್ವ
ಮಹಾಭಾರತತಾತ್ಪರ್ಯನಿರ್ಣಯಃ
ಏವಂ ನಿವಸತಾಂ ತತ್ರ ಪಾಂಡವಾನಾಂ ಮಹಾತ್ಮನಾಮ್ |
ಸಂವತ್ಸರೇ ದ್ವಿಮಾಸೋನೇ ವಿಜಿತ್ಯ ದಿಶ ಆಗತಃ |
ಕೀಚಕೋ ಮತ್ಸ್ಯನೃಪತೇಃ ಸ್ಯಾಲೋ ಬಲವತಾಂ ವರಃ ॥ 19 ॥
ಹೀಗೆ ಮಹಾತ್ಮರಾದ ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸ ಮಾಡುತ್ತಿದ್ದಾಗ ಒಂದು ವರ್ಷ ತುಂಬಲು ಎರಡೇ ತಿಂಗಳುಗಳಿದ್ದಾಗ ವಿರಾಟರಾಜನ ಭಾವನಾದ, ಬಲಶಾಲಿಗಳಲ್ಲಿ ಶ್ರೇಷ್ಠನಾದ ಕೀಚಕ ದಿಗ್ವಿಜಯ ಮಾಡಿ ಹಿಂತಿರುಗಿ ಬಂದ.
ಸ ದ್ರೌಪದೀಮೀಕ್ಷ್ಯ ಮನೋಭವಾರ್ತಃ
ಸಂಪ್ರಾರ್ಥಯಾಮಾಸ ತಯಾ ನಿರಸ್ತಃ |
ಮಾಸೇ ಗತೇ ಭಗಿನೀಂ ಸ್ವಾಂ ಸುದೇಷ್ಣಾಂ
ಸಂಪ್ರಾರ್ಥಯಾಮಾಸ ತದರ್ಥಮೇವ ॥ 20 ॥
ಕೀಚಕ ದ್ರೌಪದಿಯನ್ನು ಕಂಡು ಕಾಮಾರ್ತನಾಗಿ ಬೇಡಿದ. ಅವಳು ತಿರಸ್ಕರಿಸಿದಳು. ಒಂದು ತಿಂಗಳು ಕಳೆದ ಬಳಿಕ ಕೀಚಕ

ದ್ರೌಪದೀಸಂಗಕ್ಕಾಗಿ ತನ್ನ ಸೋದರಿಯಾದ ಸುದೇಷ್ಣೆಯನ್ನು ಕೇಳಿಕೊಂಡ.
ತಯಾ ನಿಷಿದ್ಧೋಽಪಿ ಪುನಃ ಪುನಸ್ತಾಂ
ಯದಾ ಯಯಾಚೇಽಥ ಚ ಸಾಽಽಹ ಕೃಷ್ಣಾಮ್ ।
ಸಮಾನಯಾಶ್ವೇವ ಸುರಾಂ ಮದರ್ಥ
ಮಿತೀರಿತಾ ನೇತಿ ಭೀತಾಽವದತ್ಸಾ ॥ 21 ॥
ಸುದೇಷ್ಣೆ ಮೊದಲಿಗೆ ಬೇಡವೆಂದಳು. ಆದರೂ ಕೀಚಕ ಮತ್ತೆ ಮತ್ತೆ ಕೇಳಿಕೊಂಡಾಗ ಅವಳು ದ್ರೌಪದಿಗೆ ಹೇಳಿದಳು `ಕೀಚಕನ ಮನೆಯಿಂದ ನನಗೆ ಮದ್ಯ ತಂದುಕೊಡು'. ಅವಳು ಹೀಗೆ ಹೇಳಿದಾಗ ದ್ರೌಪದಿ ಭೀತಳಾಗಿ ಬೇಡ ಎಂದಳು.
* * * * *
ಹದಿನಾರನೆಯ ಅಧ್ಯಾಯ
ಕೀಚಕನಿಂದ ದ್ರೌಪದಿಯ ಮುಂದೆ ತನ್ನ ಕಾಮದ ಆವಿಷ್ಕಾರ.
ವೈಶಂಪಾಯನಃ
ವಸಮಾನೇಷು ಪಾರ್ಥೇಷು ಮಾತ್ಸ್ಯಸ್ಯ ನಗರೇ ತದಾ ।
ಮಹಾರಥೇಷು ಚ್ಛನ್ನೇಷು ಮಾಸಾ ದಶ ಸಮತ್ಯಯುಃ ॥1॥
ವೈಶಂಪಾಯನ ಮಹಾರಥರಾದ ಪಾಂಡವರು ವಿರಾಟನಗರದಲ್ಲಿ ಛನ್ನರಾಗಿ ವಾಸಮಾಡುತ್ತಾ ಹತ್ತು ತಿಂಗಳುಗಳು ಕಳೆದವು.
ಯಾಜ್ಞಸೇನೀ ಸುದೇಷ್ಣಾಂ ತು ಶಿಶ್ರೂಷಂತೀ ಶುಚಿಸ್ಮಿತಾ ।
ಅವಸತ್ ಪರಿಚಾರಾರ್ಹಾ ಸುದುಃಖಂ ಜನಮೇಜಯ ॥2॥
ಜನಮೇಜಯನೇ, ತಾನು ಸ್ವತಃ ಪರಿಚರಿಸಲ್ಪಡಬೇಕಾದ ಶುಚಿಸ್ಮಿತೆಯಾದ ದ್ರೌಪದಿಯು ಸುದೇಷ್ಣೆಯ ಸೇವೆ ಮಾಡುತ್ತಾ ದುಃಖದಿಂದ ವಾಸಮಾಡಿದಳು.
ತಾಂ ದೇವೀಂ ತೋಷಯಾಮಾಸ ತಥಾ ಚಾಂತಃಪುರೇ ಸ್ತ್ರಿಯಃ ।
ತಸ್ಮಿನ್ ವರ್ಷೇ ಗತಪ್ರಾಯೇ ಕೀಚಕಸ್ತು ಮಹಾಬಲಃ ॥3॥
ತಥಾ ಚರಂತೀಂ ಪಾಂಚಾಲೀಂ ಸುದೇಷ್ಣಾಯಾ ನಿವೇಶನೇ ।
ಸೇನಾಪತಿರ್ವಿರಾಟಸ್ಯ ದದರ್ಶ ಜಲಜೇಕ್ಷಣಾಮ್ ॥4॥
ಅವಳು ಆ ದೇವಿಯನ್ನು ಮತ್ತು ಅಂತಃಪುರ ಸ್ತ್ರೀಯರನ್ನು ಸಂತೋಷ ಪಡಿಸಿದಳು. ವರ್ಷವು ಮುಗಿಯುತ್ತಾ ಬರುತ್ತಿರಲು ವಿರಾಟನ ಸೇನಾಪತಿಯೂ, ಮಹಾಬಲನೂ ಆದ ಕೀಚಕನು ಸುದೇಷ್ಣೆಯ ಮನೆಯಲ್ಲಿ ಸಂಚರಿಸುತ್ತಿದ್ದಂತಹ ಪದ್ಮನೇತ್ರೆಯಾದ ದ್ರೌಪದಿಯನ್ನು ನೋಡಿದನು.
ತಾಂ ದೃಷ್ಟ್ವಾ ದೇವಗರ್ಭಾಭಾಂ ಚರಂತೀಂ ದೇವತಾಮಿವ ।
ಕೀಚಕಃ ಕಾಮಯಾಮಾಸ ಕಾಮಬಾಣಪ್ರಪೀಡಿತಃ ॥5॥
ದೇವಕನ್ಯೆಯನ್ನು ಹೋಲುವ, ದೇವತೆಯಂತೆ ತಿರುಗಾಡುವ ಅವಳನ್ನು ನೋಡಿ ಕಾಮಬಾಣ ಪೀಡಿತನಾದ ಕೀಚಕನು ಅವಳನ್ನು ಕಾಮಿಸಿದನು.
ಸ ತು ಕಾಮಾಗ್ನಿಸಂತಪ್ತಃ ಸುದೇಷ್ಣಾಮಭಿಗಮ್ಯ ಚ ।
ಪ್ರಹಸನ್ನಿವ ಸೇನಾನೀರಿದಂ ವಚನಮಬ್ರವೀತ್ ॥6॥
ಸೇನಾನಿಯಾದ ಅವನು ಕಾಮಾಗ್ನಿ ಸಂತಪ್ತನಾಗಿ ಸುದೇಷ್ಣೆಯ ಬಳಿಗೆ ಬಂದು ಹೀಗೆ ಮಾತನಾಡಿದನು.
ರೂಪೇಣ ಚೋನ್ಮಾದಯತೀವ ಮಾಂ ಭೃಶಮ್
ಗಂಧೇನ ಜಾತಾ ಮದಿರೇವ ಭಾಮಿನೀ ।
ಕಾ ದೇವರೂಪಾ ಹೃದಯಂಗಮಾ ಶುಭೇ
ಹ್ಯಾಚಕ್ಷ್ವ ಮೇ ಕಸ್ಯ ಕುತೋಽತ್ರ ಶೋಭನೇ ॥7॥
ಶೋಭನಳೇ, ಇವಳು ತನ್ನ ರೂಪದಿಂದ ನನಗೆ ಹುಚ್ಚುಹಿಡಿಸುತ್ತಿದ್ದಾಳೆ. ಇವಳು ಸುಗಂಧದಿಂದ ಕೂಡಿ ಜನಿಸಿದ ಮದಿರೆಯಂತೆ ಹುಚ್ಚುಹಿಡಿಸುತ್ತಿದ್ದಾಳೆ. ಶುಭಳಾದವಳೇ, ಹೃದಯಂಗಮಳಾದ ದೇವರೂಪವನ್ನು ಧರಿಸಿದ ಇವಳು ಯಾರು? ಇಲ್ಲಿಗೆ ಹೇಗೆ ಬಂದಳು ಎಂದು ಹೇಳು.
ಚಿತ್ತಂ ಹಿ ನಿರ್ಮಥ್ಯ ಕರೋತಿ ಮಾಂ ವಶೇ
ನ ಚಾನ್ಯದತ್ರೌಷಧಮಸ್ತಿ ಮೇ ಮತಮ್ ।
ಅಹೋ ತವೇಯಂ ಪರಿಚಾರಿಕಾ ಶುಭಾ
ಪ್ರತ್ಯಗ್ರರೂಪಾ ಪ್ರತಿಭಾತಿ ಮಾಮಿಯಮ್ ॥8॥
ಇವಳು ನನ್ನ ಮನಸ್ಸನ್ನು ಮರ್ದಿಸಿ ನನ್ನನ್ನು ವಶಪಡಿಸಿಕೊಂಡಿದ್ದಾಳೆ. ಇದಕ್ಕೆ ಬೇರೆ ಔಷಧವಿಲ್ಲವೆಂದು ನನ್ನ ಅಭಿಪ್ರಾಯ. ಅಯ್ಯೋ! ಈ ನಿನ್ನ ಶುಭಳಾದ ಪರಿಚಾರಿಕೆಯು ಹೊಸದಾದ ಸೌಂದರ್ಯವನ್ನು ತಳೆದುಕೊಂಡವಳಂತೆ ನನಗೆ ತೋರುತ್ತಿದೆ.
ಅಯುಕ್ತರೂಪಂ ಹಿ ಕರೋತಿ ಕರ್ಮ ತೇ
ಪ್ರಶಾಸ್ತು ಮಾಂ ಯಚ್ಚ ಮಮಾಸ್ತಿ ಕಿಂಚನ ।
ಪ್ರಭೂತರತ್ನಾಶ್ವರಥಂ ಮಹಾಗಜಂ
ಸಮೃದ್ಧಿಯುಕ್ತಂ ಬಹುಪಾನಭೋಜನಮ್ ॥9॥
ಅವಳು ತನಗೆ ಅರ್ಹವಲ್ಲದ ರೀತಿಯಲ್ಲಿ ನಿನ್ನ ಸೇವೆಯನ್ನು ಮಾಡುತ್ತಿದ್ದಾಳೆ. ಅದರ ಬದಲು ನನ್ನ ಬಳಿ ಇರುವ ಅನೇಕ ರತ್ನ,

ಅಶ್ವರಥಗಳು, ಮಹಾಗಜಗಳು, ಸಮೃದ್ಧಿಯುತವಾದ ಪಾನ, ಭೋಜನಗಳು ಇವುಗಳ ಜೊತೆಯಲ್ಲಿ ನನ್ನನ್ನು ಆಳುವವಳಾಗಲಿ.
ಮನೋಹರಂ ಕಾಂಚನಚಿತ್ರಭೂಷಣಂ
ಗೃಹಂ ಮಹತ್ ಶೋಭಯತಾಮಿಯಂ ಮಮ |
ತಥಾ ಸುದೇಷ್ಣಾಮನುಮಂತ್ರ್ಯ ಕೀಚಕಃ
ತತಃ ಸಮೇತ್ಯೈತ್ಯ ನರಾಧಿಪಾತ್ಮಜಾಮ್ ॥10॥
ಉವಾಚ ಕೃಷ್ಣಾಮತಿಸಾಂತ್ವಯಂಸ್ತದಾ
ಮೃಗೇಂದ್ರಕನ್ಯಾಮಿವ ಜಂಬುಕೋ ವನೇ ॥11॥
ಮನೋಹರವಾದ ಸುವರ್ಣಾಲಂಕೃತವಾದ ನನ್ನ ದೊಡ್ಡ ಮನೆಯನ್ನು ಇವಳು ಶೋಭಿಸಲಿ. ಹೀಗೆ ಸುದೇಷ್ಣೆಯ ಜೊತೆಯಲ್ಲಿ ಮಾತನಾಡಿ ಕೀಚಕನು ದ್ರುಪದ ರಾಜಕುಮಾರಿಯಾದ ಕೃಷ್ಣೆಯನ್ನು ನರಿಯು ಸಿಂಹದ ಮರಿಯನ್ನು ಸಮೀಪಿಸುವಂತೆ ಸಮೀಪಿಸಿ ಅವಳನ್ನು ಸಮಾಧಾನಪಡಿಸುತ್ತಾ ಮಾತನಾಡಿದನು.
ಕಾ ತ್ವಂ ಕಸ್ಯಾಸಿ ಕಲ್ಯಾಣಿ ಕುತೋ ವಾ ತ್ವಂ ವರಾನನೇ |
ಪ್ರಾಪ್ತಾ ವಿರಾಟನಗರಂ ತತ್ತ್ವಮಾಚಕ್ಷ್ವ ಶೋಭನೇ ॥12॥
ಕಲ್ಯಾಣಿಯೇ, ಶುಭಾನನೆಯೇ, ಶೋಭನಸ್ವರೂಪಳೇ ನೀನು ಯಾರು? ಯಾರಿಗೆ ಸೇರಿದವಳು? ವಿರಾಟನಗರಕ್ಕೆ ಎಲ್ಲಿಂದ ಬಂದೆ? ಎಲ್ಲವನ್ನೂ ನಿಜವಾಗಿ ಹೇಳು.
ರೂಪಮಗ್ರ್ಯಂ ತಥಾ ಕಾಂತಿಃ ಸೌಕುಮಾರ್ಯಮನುತ್ತಮಮ್ |
ಏವಂರೂಪಾ ಮಯಾ ನಾರೀ ಕಾಚಿದನ್ಯಾ ಮಹೀತಳೇ ॥13॥
ನ ದೃಷ್ಟಪೂರ್ವಾ ಸುಶ್ರೋಣಿ ಯಾದೃಶೀ ತ್ವಮನಿಂದಿತೇ |
ಲಕ್ಷ್ಮೀಃ ಪದ್ಮಾಲಯಾ ವಾ ತ್ವಮಥ ಭೂತಿಃ ಸುಮಧ್ಯಮೇ ॥14॥
ಹ್ರೀಃ ಶ್ರೀಃ ಕೀರ್ತಿರಥೋ ಕಾಂತಿಸ್ತವ ರೂಪಂ ಮನೋರಮಮ್ ॥
ನಿನ್ನ ರೂಪವೂ, ಕಾಂತಿಯೂ ಬಹಳ ಶ್ರೇಷ್ಠವಾಗಿದೆ. ನಿನ್ನ ಸೌಕುಮಾರ್ಯವು ಬಹಳ ಉತ್ತಮವಾಗಿದೆ. ಅನಿಂದಿತೆಯೇ, ನಿನ್ನಂತಹ ವನಿತೆಯನ್ನು ನಾನು ಭೂಮಿಯ ಮೇಲೆ ಈ ಹಿಂದೆ ಯಾರನ್ನೂ ನೋಡಲಿಲ್ಲ. ನೀನು ಪದ್ಮಾಲಯಳಾದ ಲಕ್ಷ್ಮಿಯೇ? ಭೂತಿಯೇ? ಅಥವಾ ಸುಮಧ್ಯಮೆಯಾದ ನೀನು ಶ್ರೀದೇವಿಯೇ? ಕೀರ್ತಿಯೇ? ಅಥವಾ ಕಾಂತಿಯೇ? ನಿನ್ನ ರೂಪವು ಮನೋಹರವಾಗಿದೆ.
ನಿರೀಕ್ಷ್ಯ ವಕ್ತ್ರಚಂದ್ರಂ ತೇ ಲಕ್ಷ್ಮ್ಯಾಽನುಪಮಯಾ ಯುತಮ್ |
ಕೃತ್ಸ್ನೇ ಜಗತಿ ಕೋ ನೇಹ ಕಾಮಸ್ಯ ವಶಗೋ ಭವೇತ್ ॥16॥
ಅನುಪಮ ಕಾಂತಿಯಿಂದ ಕೂಡಿದ ನಿನ್ನ ಮುಖಚಂದ್ರವನ್ನು ನೋಡಿ ಈ ಸಮಸ್ತ ಜಗತ್ತಿನಲ್ಲಿ ಯಾರು ತಾನೇ ಕಾಮವಶರಾಗುವುದಿಲ್ಲ?
ಹಾರಾಲಂಕಾರಯೋಗ್ಯೌ ತು ಸ್ತನೌ ಚೋಭೌ ಸುಶೋಭನೌ |
ಸುಜಾತೌ ಸಹಿತೌ ಲಕ್ಷ್ಮ್ಯಾ ಪೀನೌ ವೃತ್ತೌ ನಿರಂತರೌ ॥17॥
ಕುಡ್ಮಲಾಂಬುರುಹಾಕಾರೌ ತವ ಸುಭ್ರೂರಥೋದ್ಯತೌ |
ಕಾಮಪ್ರತೋದಾವಿವ ಮಾಂ ತುದತಶ್ಚಾರುಹಾಸಿನಿ ॥18॥
ನಿನ್ನ ಸುಂದರವಾದ ಸ್ತನಗಳು ಚೆನ್ನಾಗಿ ಬೆಳೆದಿವೆ. ಪುಷ್ಟವಾಗಿ ದುಂಡಗೆ ನಿರಂತರವಾಗಿ ಕಮಲದ ಮೊಗ್ಗಿನಂತಿದ್ದು ಹಾರಾಲಂಕಾರಕ್ಕೆ ಯೋಗ್ಯವಾಗಿವೆ. ಚಾರುಹಾಸಿನಿಯೇ, ನಿನ್ನ ಸುಂದರವಾದ ಹುಬ್ಬುಗಳು ಮೇಲೆ ಬಾಗಿದ್ದು ಮನ್ಮಥನ ಚಾವಟಿಯಂತೆ ನನ್ನನ್ನು ಪೀಡಿಸುತ್ತಿವೆ.
ವಲೀವಿಭಾಗಚತುರಂ ಸ್ತನಭಾರವಿನಾಮಿತಮ್ |
ಕರಾಗ್ರಸಮಿತಂ ಮಧ್ಯಂ ತವೇದಂ ತನುಮಧ್ಯಮೇ ॥19॥
ಎಲೌ ತನುಮಧ್ಯಮೆಯೇ, ನಿನ್ನ ಉದರವು ಕೈಯಲ್ಲಿ ಹಿಡಿಯಬಹುದಾದಷ್ಟು ತೆಳುವಾಗಿದ್ದು ವಲಿಯ ವಿಭಾಗಗಳಿಂದಲೂ, ಮೇಲಿನ ಸ್ತನಗಳ ಭಾರದಿಂದಲೂ ಬಾಗಿದೆ.
ದೃಷ್ಟ್ವೈವ ಚಾರುಜಘನಂ ಸರಿತ್ಪುಲಿನಸನ್ನಿಭಮ್ |
ಕಾಮವ್ಯಾಧಿರಸಹ್ಯೋ ಮಾಮುಪಾಕ್ರಮತಿ ಭಾಮಿನಿ ॥20॥
ಭಾಮಿನಿಯೇ, ನದಿಯ ಮರಳಿನಂತಿರುವ ನಿನ್ನ ಸುಂದರವಾದ ಜಘನವನ್ನು ನೋಡಿ ನನಗೆ ಸಹಿಸಲು ಅಸಾಧ್ಯವಾದ ಕಾಮವ್ಯಾಧಿಯು ಬೆಳೆಯುತ್ತಿದೆ.
ಜಜ್ವಾಲ ಚಾಗ್ನಿಮದನೋ ದಾವಾಗ್ನಿರಿವ ನಿರ್ದಯಃ |
ತ್ವತ್ಸಂಗಮಾಭಿಸಂಕಲ್ಪವಿವೃದ್ಧೋ ಮೇ ದಹತ್ಯಯಮ್ ॥21॥
ಆತ್ಮಪ್ರದಾನವರ್ಷೇಣ ಸಂಗಮಾಂಭೋಧರೇಣ ಚ |
ಶಮಯಸ್ವ ವರಾರೋಹೇ ಜ್ವಲಂತಂ ಮನ್ಮಥಾನಲಮ್ ॥22॥
ಕಾಮಾಗ್ನಿ ಎಂಬ ದಾವಾಗ್ನಿಯು ನಿರ್ದಯವಾಗಿ ಪ್ರಜ್ವಲಿಸುತ್ತಾ ನಿನ್ನ ಸಂಗಮದ ಆಸೆಯಿಂದ ವಿವೃದ್ಧವಾಗಿ ನನ್ನನ್ನು ಸುಡುತ್ತಿದೆ. ಆತ್ಮಪ್ರದಾನ ಎಂಬ ಮಳೆಯಿಂದ ಮತ್ತು ಸಂಗಮ ಎಂಬ ಮೋಡದಿಂದ ಎಲೌ ವರಾರೋಹೆಯೇ, ಆ ಸುಡುತ್ತಿರುವ ಮನ್ಮಥಾಗ್ನಿಯನ್ನು ಶಾಂತಗೊಳಿಸುವವಳಾಗು.
ಮಚ್ಚಿತ್ತೋನ್ಮಾದನಕರಾ ಮನ್ಮಥಸ್ಯ ಶರೋತ್ಕರಾಃ |
ತ್ವತ್ಸಂಗಮಾಶಾನಿಶಿತಾಸ್ತೀವ್ರಾಃ ಶಶಿನಿಭಾನನೇ ॥23॥

ಮಹ್ಯಂ ವಿದಾರ್ಯ ಹೃದಯಮಿದಂ ನಿರ್ದಯವೇಗಿನಃ |
ಪ್ರವಿಶಂತ್ಯಸಿತಾಪಾಂಗಿ ಪ್ರಚಂಡಾಶ್ಚೈವ ದಾರುಣಾಃ ॥24॥
ಅತ್ಯುನ್ಮಾದಸಮಾರಂಭಾಃ ಪ್ರೀತ್ಯುನ್ಮಾದಕರಾ ಮಮ |
ಆತ್ಮಪ್ರದಾನಸಂಭೋಗೈರ್ಮಾಮುದ್ಧರ್ತುಮಿಹಾರ್ಹಸಿ ॥25॥
ಎಲೌ ಚಂದ್ರಮುಖಿಯೇ, ನನ್ನ ಮನಸ್ಸಿಗೆ ಹುಚ್ಚನ್ನು ಹಿಡಿಸಿರುವಂತಹ ನಿನ್ನ ಸಂಗಮದ ಆಸೆಯಿಂದ ಹರಿತವಾದಂತಹ ಮನ್ಮಥನ ಶ್ರೇಷ್ಠವಾದ ಬಾಣಗಳು ನಿರ್ದಯವಾದ ವೇಗವುಳ್ಳವುಗಳಾಗಿ ಪ್ರಚಂಡವಾಗಿ ದಾರುಣವಾಗಿ ನನ್ನ ಹೃದಯವನ್ನು ಪ್ರವೇಶಿಸಿ ಭೇದಿಸುತ್ತಿವೆ. ಎಲೌ ಅಸಿತಾಪಾಂಗಿಯೇ, ಅವು ಬಹಳ ಹೆಚ್ಚಿನ ಹುಚ್ಚನ್ನು ಹಿಡಿಸುವವಳಾಗಿ ಪ್ರೀತಿಯ ಹುಚ್ಚನ್ನು ಹಿಡಿಸುತ್ತಿವೆ. ಆತ್ಮಪ್ರದಾನ ಮತ್ತು ಸಂಭೋಗಗಳಿಂದ ನೀನು ನನ್ನನ್ನು ಉದ್ಧಾರ ಮಾಡು.
ಚಿತ್ರಮಾಲ್ಯಾಂಬರಧರಾ ಸರ್ವಾಭರಣಭೂಷಿತಾ |
ಕಾಮಂ ಪ್ರಕಾಮಂ ಸೇವ ತ್ವಂ ಮಯಾ ಸಹ ವಿಲಾಸಿನಿ ॥26॥
ವಿಲಾಸಿನಿಯೇ, ನೀನು ಚಿತ್ರಮಾಲ್ಯವಸ್ತ್ರಗಳನ್ನು ಧರಿಸಿ ಸರ್ವಾಭರಣ ಭೂಷಿತಳಾಗಿ ನನ್ನ ಜೊತೆಯಲ್ಲಿ ಶ್ರೇಷ್ಠವಾದ ಭೋಗಗಳನ್ನು ಅನುಭವಿಸುವವಳಾಗು.
ನಾರ್ಹಸೀಹಾಸುಖಂ ವಸ್ತುಂ ಸುಖಾರ್ಹಾ ಸುಖವರ್ಜಿತಾ |
ಪ್ರಾಪ್ನುಹ್ಯನುತ್ತಮಂ ಸೌಖ್ಯಂ ಮತ್ತಸ್ತ್ವಂ ಮತ್ತಗಾಮಿನಿ ॥27॥
ಸುಖಕ್ಕೆ ಅರ್ಹಳಾದ ನೀನು ಸುಖವರ್ಜಿತಳಾಗಿ ಇಲ್ಲಿ ದುಃಖದಿಂದ ಕಾಲವನ್ನು ಕಳೆಯುವುದು ಯುಕ್ತವಲ್ಲ. ಮತ್ತಗಾಮಿನಿಯೇ, ನನ್ನಿಂದ ನೀನು ಶ್ರೇಷ್ಠವಾದ ಸುಖವನ್ನು ಪಡೆಯುವವಳಾಗು.
ಸ್ವಾದೂನ್ಯಮೃತಕಲ್ಪಾನಿ ಪೇಯಾನಿ ವಿವಿಧಾನಿ ಚ |
ಪಿಬಮಾನಾ ಮನೋಜ್ಞಾನಿ ರಮಮಾಣಾ ಯಥಾಸುಖಮ್ ॥28॥
ಭೋಗೋಪಚಾರಾನ್ ವಿವಿಧಾನ್ ಸೌಭಾಗ್ಯಂ ಚಾಪ್ಯನುತ್ತಮಮ್ |
ಪಾನಂ ಪಿಬ ಮಹಾಭಾಗೇ ಭೋಗೈಶ್ಚಾನುತ್ತಮೈಃ ಶುಭೈಃ ॥29॥
ಮಹಾಭಾಗ್ಯವಂತಳೇ, ರುಚಿಕರವಾದ ಅಮೃತದಂತಿರುವ ವಿವಿಧ ಮನೋಹರವಾದ ಪೇಯಗಳನ್ನು ಪಾನಮಾಡುತ್ತಾ ನಿನ್ನ ಮನಸ್ಸಿಗೆ ತೋರಿದಂತೆ ವಿವಿಧವಾದ ಭೋಗೋಪಚಾರಗಳನ್ನೂ ಶ್ರೇಷ್ಠವಾದ ಐಶ್ವರ್ಯವನ್ನೂ ಹೊಂದಿ ವಿಹರಿಸುತ್ತಾ, ಪಾನವನ್ನು ಮಾಡುತ್ತಾ ಅತ್ಯುತ್ತಮ ಶುಭ ಭೋಗಗಳನ್ನು ಪಡೆಯುವವಳಾಗು.
ತಥಾ ತು ದೃಷ್ಟ್ವಾ ಜ್ವಲಿತಾಂ ಚ ಕೀಚಕಃ
ತತಃ ಸಮಭ್ಯೇತ್ಯ ನೃಪಾಧಿಪಾತ್ಮಜಾಮ್ |
ಉವಾಚ ಕೃಷ್ಣಾಂ ಪರಿಸಾಂತ್ವಯಂಸ್ತದಾ
ಮೃಗೇಂದ್ರಕನ್ಯಾಮಿವ ಜಂಬುಕೋ ವನೇ ॥30॥
ಹೀಗೆ ಸೌಂದರ್ಯದಿಂದ ಬೆಳಗುತ್ತಿರುವ ಆ ರಾಜಕುಮಾರಿಯ ಬಳಿಗೆ ಸಿಂಹದ ಮರಿಯ ಬಳಿಗೆ ನರಿಯು ಬಂದಂತೆ ಕೀಚಕನು ಬಂದು ಅವಳನ್ನು ಸಮಾಧಾನ ಪಡಿಸುತ್ತಾ ಮಾತನಾಡಿದನು.
ಶುಭಂ ಚ ರೂಪಂ ಪ್ರಥಮಂ ಚ ತೇ ವಯೋ
ನಿರರ್ಥಕಂ ಕೇವಲಮದ್ಯ ಭಾಮಿನಿ |
ಅಧಾರ್ಯಮಾಣಾ ಸ್ರಗಿವೋತ್ತಮಾ ಯಥಾ
ನ ಶೋಭಸೇ ಸುಂದರಿ ಶೋಭನಾ ಸತೀ ॥31॥
ಎಲೌ ಭಾಮಿನಿಯೇ, ನಿನ್ನ ರೂಪವು ಶುಭವಾಗಿದೆ. ವಯಸ್ಸು ಚಿಕ್ಕದು. ಈ ದಿನ ಅವೆರಡೂ ವ್ಯರ್ಥವಾಗುತ್ತಿವೆ. ಎಲೌ ಸುಂದರಿಯೇ, ಮುಡಿಯದ ಮಾಲೆಯಂತೆ ನೀನು ಸುಂದರಿಯಾಗಿದ್ದರೂ ಶೋಭಿಸುತ್ತಿಲ್ಲ.
ನ ತ್ವಂ ಪುರಾ ಜಾತು ಮಯೇಹ ದೃಷ್ಟಾ
ರಾಜ್ಞೋ ವಿರಾಟಸ್ಯ ನಿವೇಶನೇ ಶುಭೇ |
ರೂಪೇಣ ಮೇ ನಂದಯಸೇ ಮನಸ್ತ್ವಂ
ಸುಗಾತ್ರಿ ಕಸ್ಯಾಸಿ ಕುತೋಽಸಿ ಕಾ ವಾ ॥32॥
ಎಲೌ ಶೋಭನಗಾತ್ರಿಯೇ, ನಾನು ವಿರಾಟನ ಮನೆಯಲ್ಲಿ ಹಿಂದೆ ಎಂದೂ ನಿನ್ನನ್ನು ನೋಡಿರಲಿಲ್ಲ. ನಿನ್ನ ರೂಪದಿಂದ ನನ್ನ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತಿದ್ದೀಯೆ. ನೀನು ಯಾರಿಗೆ ಸೇರಿದವಳು? ಯಾರು? ಮತ್ತು ಎಲ್ಲಿಂದ ಬಂದವಳು?
ದಾಸಸ್ತವಾಹಂ ಪೃಥುತಾಮ್ರಲೋಚನೇ
ವಶಾನುಗೋ ವಾರಣಖೇಲಗಾಮಿನಿ |
ಕಂದರ್ಪವೇಗಾಭಿಹತೋಽಸ್ಮ್ಯನಿಂದಿತೇ
ಖಗೋ ವಸಂತೇಷ್ವಿವ ಪುಷ್ಪಮೂರ್ಛಿತಃ ॥33॥
ವಿಸ್ತಾರವಾದ ಕೆಂಪಾದ ಕಣ್ಣುಳ್ಳವಳೇ, ಗಜಲೀಲೆಯ ನಡಿಗೆಯುಳ್ಳವಳೇ, ಅನಿಂದಿತಳೇ, ನಾನು ನಿನ್ನ ದಾಸನಾಗಿ ವಶವರ್ತಿಯಾಗಿದ್ದೇನೆ. ವಸಂತದ ಪುಷ್ಪಗಳಿಂದ ಪಕ್ಷಿಗಳು ಮೂರ್ಛೆ ಹೋದಂತೆ ನಾನು ಮನ್ಮಥದ ವೇಗದಿಂದ ಪೀಡಿತನಾಗಿದ್ದೇನೆ.
ತ್ವಮೀದೃಶೀ ಚಾರುಪರೀತದರ್ಶನಾ
ನಾನ್ಯಸ್ತ್ರಿಯಂ ಸಂಪರಿಚರ್ತುಮರ್ಹಸಿ |
ಕಿಂ ರಾಜವೇಶ್ಮನ್ಯಸಿತಾಯತೇಕ್ಷಣೇ

ಕರೋಷಿ ಕೇಶಾನ್ ಸ್ವಯಮೇವ ಭಾಮಿನಿ ॥34॥

ಎಲೌ ಭಾಮಿನಿಯೇ, ನೀನು ಇಂತಹ ಸುಂದರಿಯಾಗಿ ಕಾಣುತ್ತಿದ್ದೀಯೆ. ಅಂತಹ ನೀನು ಇನ್ನೊಬ್ಬ ವನಿತೆಯ ಸೇವೆಯನ್ನು ಮಾಡುವುದು ಯೋಗ್ಯವಲ್ಲ. ವಿಶಾಲ ನೇತ್ರೆಯೇ, ರಾಜನ ಮನೆಯಲ್ಲಿ ಇನ್ನೊಬ್ಬರಿಗೆ ಏಕೆ ನೀನೇ ಕೇಶಪ್ರಸಾಧನವನ್ನು ಮಾಡುತ್ತಿದ್ದೀಯೆ?

ಅನ್ಯಾ ಹಿ ನಾರ್ಯಸ್ತವ ಕರ್ಮ ಕುರ್ಯುಃ

ಪ್ರತೀತರೂಪಾಸ್ತವ ಚಾರುನೇತ್ರೇ |

ಅಥಾರ್ಯಮಾಣೇವ ಜನೇನ ಮಂಜರೀ

ಸುಗಾತ್ರಿ ಕಿಂ ಜೀರ್ಯಸಿ ಚಾರುಹಾಸಿನಿ ॥35॥

ಚಾರುನೇತ್ರೆಯೇ, ಉಳಿದ ಸುಂದರಿಯರು ನೀನು ಮಾಡುವ ಕೆಲಸವನ್ನು ಮಾಡುವರು. ಚಾರುಹಾಸಿನಿಯೇ, ಸುಗಾತ್ರಿಯೇ, ಮುಡಿಯದಿದ್ದ ಹೂಗೊಂಚಲಿನಂತೆ ಏಕೆ ಸವೆದು ಹೋಗುತ್ತಿದ್ದೀಯೆ?

ತ್ಯಜಾಮಿ ದಾರಾನ್ ಮಮ ಯೇ ಪುರಾತನಾನ್

ಭವಾಮಿ ದಾಸಶ್ಚ ವಶಾನುಗಶ್ಚ ತೇ |

ಸುಗಾತ್ರಿ ಮಹ್ಯಂ ಸುಕೃತೇನ ತೇ ಶಪೇ

ಯಥಾ ಮಮ ತ್ವಂ ಹೃದಯೇ ಪ್ರತಿಷ್ಠಿತಾ ॥36॥

ಸುಗಾತ್ರಿಯೇ, ನಾನು ನನ್ನ ಹಿಂದಿನ ಪತ್ನಿಯರೆಲ್ಲರನ್ನೂ ಬಿಟ್ಟು ನಿನ್ನ ದಾಸನೂ, ವಶವರ್ತಿಯೂ ಆಗುತ್ತೇನೆ. ನಾನು ನನ್ನ ಪುಣ್ಯದ ಮೇಲೆ ಪ್ರತಿಜ್ಞೆಯನ್ನು ಮಾಡಿ ಹೇಳುತ್ತಿದ್ದೇನೆ, ನೀನು ನನ್ನ ಹೃದಯದಲ್ಲಿ ಪ್ರತಿಷ್ಠಿತಳಾಗಿದ್ದೀಯೆ.

ಮಮಾನುರೂಪಾ ತ್ವಮನಿಂದ್ಯಲೋಚನೇ

ಸ್ವಯಂ ತಥಾಽಽತ್ಮಾನಮಿಹಾನುಚಿಂತಯ |

ಪ್ರತ್ಯಕ್ಷಮೇತತ್ ತವ ಚಾರುದರ್ಶನೇ

ಯಥಾ ವಯಸ್ತುಲ್ಯವಪುಸ್ತಥಾಽಽವಯೋಃ ॥37॥

ಅನಿಂದ್ಯನೇತ್ರೆಯೇ, ನೀನು ನನಗೆ ಅನುರೂಪಳಾದವಳು. ನೀನೇ ನಿನ್ನನ್ನು ವಿಮರ್ಶೆ ಮಾಡಿಕೊಂಡು ನೋಡು. ಚಾರುದರ್ಶಿನಿಯೇ, ನಮ್ಮಿಬ್ಬರಿಗೂ ವಯಸ್ಸು ಮತ್ತು ರೂಪಗಳು (ದೇಹಗಳು) ಸಮಾನವಾಗಿವೆ ಎಂಬುದು ಪ್ರತ್ಯಕ್ಷವಾಗಿದೆ.

ಪ್ರಭೂತರತ್ನೋಪಹಿತಂ ಸುಭಾಜನಂ

ಪರ್ಯೈಹಿ ಚಾದ್ಯೈವ ಮಮೋತ್ತಮಂ ಗೃಹಮ್ |

ಪ್ರಾಸಾದಮಾಲಾಗ್ರವಿಶಾಲತೋರಣಂ

ಕುಬೇರಪರ್ಜನ್ಯನಿವೇಶನೋಪಮಮ್ ॥38॥

ಶ್ರೇಷ್ಠಳಾದ ನೀನು ಅನೇಕ ರತ್ನಗಳಿಂದ ಮತ್ತು ಅಲಂಕಾರಗಳಿಂದ ಕೂಡಿದ ಉಪ್ಪರಿಗೆಗಳಿಂದಲೂ, ಶ್ರೇಷ್ಠವಾದ ಮಾಲೆಗಳಿಂದಲೂ, ವಿಶಾಲವಾದ ತೋರಣಗಳಿಂದಲೂ ಕೂಡಿದ, ಕುಬೇರನ ಮನೆಯಂತಿರುವ, ಪರ್ಜನ್ಯನ ಮನೆಯಂತಿರುವ ನನ್ನ ಶ್ರೇಷ್ಠವಾದ ಗೃಹಕ್ಕೆ ಉತ್ತಮಳಾದ ನೀನು ಈ ದಿನವೇ ಬರುವವಳಾಗು.

ಯದಸ್ತಿ ತತ್ರಾವಸಥೇ ಮದರ್ಹಣಂ

ವಸು ಪ್ರಭಾವೋಪಗತಂ ಮಮಾಂತಿಕೇ |

ದದಾನಿ ತತ್ಸರ್ವಮಧೀರಲೋಚನೇ

ತ್ವಮಸ್ಯ ಸರ್ವಸ್ಯ ಸುಗಾತ್ರಿ ಭಾಜನಮ್ ॥39॥

ಚಂಚಲಲೋಚನೆಯೇ, ಸುಗಾತ್ರಿಯೇ, ಆ ಮನೆಯಲ್ಲಿ ನನ್ನ ಸೌಖ್ಯಕ್ಕಾಗಿ ನನ್ನ ಪ್ರಭಾವದಿಂದ ಸಂಪಾದಿಸಿದ ಯಾವ ಧನ ಮೊದಲಾದವುಗಳು ಇವೆಯೋ ಅವುಗಳನ್ನು ನಿನಗೆ ಕೊಡುವೆನು. ಅವೆಲ್ಲಕ್ಕೂ ನೀನು ಪಾತ್ರಳಾಗಿದ್ದೀಯೆ.

ದೇವಂ ಪ್ರಪದ್ಯೇ ಶರಣಂ ವೃಷಧ್ವಜಂ

ತ್ರಿಲೋಚನಂ ದಕ್ಷಮಖಪ್ರಣಾಶನಮ್ |

ಹರಂ ಭವಂ ಸ್ಥಾಣುಮುಮಾಪತಿಂ ವಿಭುಂ

ತ್ವಯಾಽದ್ಯ ಮೇ ಸುಭ್ರು ದದಾತು ಸಂಗಮಮ್ ॥40॥

ಸುಂದರಿಯೇ (ಒಳ್ಳೆಯ ಹುಬ್ಬುಳ್ಳವಳೇ), ನಾನು ಈ ದಿನ ವೃಷಧ್ವಜನೂ, ತ್ರಿಲೋಚನನೂ, ದಕ್ಷಯಜ್ಞ ಭಂಜಕನೂ, ಉಮಾಪತಿಯೂ, ವಿಭುವೂ, ಭವನೂ, ದೇವನೂ ಆದ ಈಶ್ವರನನ್ನೂ ನಿನ್ನ ಸಂಗಮವನ್ನು ಕೊಡು ಎಂದು ಶರಣು ಹೊಂದುತ್ತೇನೆ.

ತ್ವಯಾ ಸಮಾಗಮ್ಯ ಚ ಚಾರುಲೋಚನೇ

ಷಡಾನನಂ ದ್ವಾದಶದೀಪ್ತಲೋಚನಮ್ |

ವರಂ ವರಾರ್ಹಂ ವರದೇಶ್ವರಂ ವೃಣೇ

ವರೇಣ ತುಷ್ಟೋ ವರಗಾತ್ರಿ ತೋಷಯೇ ॥41॥

ಚಾರುಲೋಚನೆಯೇ, ಈ ದಿನ ದ್ವಾದಶ ದೀಪ್ತನೇತ್ರನಾದ ವರದೇಶ್ವರನಾದ, ವರಾರ್ಹನಾದ ಷಣ್ಮುಖನನ್ನು ಸಮೀಪಿಸಿ ನಿನ್ನ ಸಮಾಗಮವನ್ನು ವರವಾಗಿ ಕೇಳುತ್ತೇನೆ. ಆ ವರದಾನವನ್ನು ಪಡೆದ ಮೇಲೆ ಶೋಭನಗಾತ್ರಿಯೇ, ಸಂತುಷ್ಟನಾಗಿ ಪುನಃ ಷಣ್ಮುಖನನ್ನು ಸಂತೋಷಪಡಿಸುತ್ತೇನೆ.

ಅಯಂ ತು ರಾಜಾ ಪರಸೈನ್ಯವಾರಣಃ

ಸ್ಯಾಲಪ್ರಿಯತ್ವಾನ್ಮಮ ಚಾದ್ಯ ಭಾಮಿನಿ |

ಕರಿಷ್ಯತೇ ಕಾಮಮಿಮಂ ಯಥೇಷ್ಟತೋ
ಹ್ಯನೀಕಕರ್ಣಾಗ್ರಧರೋಽಸ್ಮಿ ತಸ್ಯ ವೈ ॥42॥
ಎಲೌ ಭಾಮಿನಿಯೇ, ಪರಸೈನ್ಯನಿವಾರಕನಾದ ಈ ರಾಜನು ಭಾವಮೈದುನನ ಮೇಲಿನ ಪ್ರೀತಿಯಿಂದ ಈ ನನ್ನ ಆಸೆಯನ್ನು ನೆರವೇರಿಸಿಕೊಡುತ್ತಾನೆ. ನಾನು ಅವನ ಸೇನಾನಾಯಕನಾಗಿದ್ದೇನೆ.
ಅಪ್ರಾಪ್ಯ ತು ತ್ವಾಮಹಮದ್ಯ ಶೋಭನೇ
ಶ್ರಿಯಂ ಸಮೃದ್ಧಾಮಿವ ಪಾಪಮಾಚರನ್ ।
ವ್ರಜೇಯಮಿಂದ್ರಸ್ಯ ನಿವೇಶನಂ ಶುಭೇ
ತ್ವಯಾ ವಿಸೃಷ್ಟೋ ಹ್ಯಪುನರ್ಭವಾಂ ಗತಿಮ್ ॥43॥
ಶೋಭನೆಯೇ, ಪಾಪವನ್ನು ಮಾಡಿದವನು ಸಮೃದ್ಧವಾದ ಸಂಪತ್ತನ್ನು ಹೊಂದದಿರುವಂತೆ ನಾನು ಈ ದಿನ ನಿನ್ನನ್ನು ಹೊಂದದಿದ್ದರೆ, ನಿನ್ನಿಂದ ಪರಿತ್ಯಕ್ತನಾದರೆ ಇಂದ್ರನ ಮನೆಯನ್ನು ತಲುಪಿ ಪುನರ್ಭವವಿಲ್ಲದ ಗತಿಯನ್ನು ಪಡೆಯುತ್ತೇನೆ.
ಪ್ರಿಯಾಂಶ್ಚ ದಾರಾನ್ ಸಸುತಾನ್ ಕುಲಂ ಧನಂ
ಯಶಶ್ಚ ಕೀರ್ತಿಂ ಹ್ಯಥವಾಽಪಿ ಜೀವಿತಮ್ ।
ತ್ಯಜಾಮಿ ಸರ್ವಂ ಸುಕೃತಂ ತು ಯತ್ಕೃತಂ
ಪ್ರಿಯೇ ತ್ವದರ್ಥಂ ತು ಹಿ ಜೀವನಂ ಮಮ ॥44॥
ಎಲೌ ಪ್ರಿಯೆಯೇ, ನಾನು ನಿನ್ನ ಸಲುವಾಗಿ ಸ್ತ್ರೀಯರನ್ನೂ, ಪುತ್ರಸಹಿತರಾದ ಪತ್ನಿಯರನ್ನೂ, ಕುಲವನ್ನೂ, ಧನವನ್ನೂ, ಕೀರ್ತಿಯನ್ನೂ ಅಥವಾ ಜೀವಿತವನ್ನೂ, ನಾನು ಮಾಡಿದ ಸುಕೃತವನ್ನೂ ಎಲ್ಲವನ್ನೂ ತೊರೆಯುತ್ತೇನೆ. ನನ್ನ ಜೀವನವಿರುವುದೇ ನಿನ್ನ ಸಲುವಾಗಿ.
ಅವಾರಯಂತಂ ಬಲಶೋಕಮುದ್ಧತಂ
ಸಮುದ್ರವೇಗೋಪಮಮಾತುರಂ ಭೃಶಮ್ ।
ಭಜಸ್ವ ಮಾಮದ್ಯ ಶುಭೇನ ಚೇತಸಾ
ಯಥಾ ನ ಶುಷ್ಯೇ ನ ತಪಾಮ್ಯಚೇತನಃ ॥45॥
ತಡೆಯಲು ಸಾಧ್ಯವಾಗದಂತಹ, ಬಲಶೋಕಗಳಿಂದ ಪೀಡಿತವಾದಂತಹ, ಸಮುದ್ರದ ವೇಗದಂತೆ ಬಹಳವಾಗಿ ಕಾತುರನಾದ ನನ್ನನ್ನು ನಾನು ಒಣಗಿ ಹೋಗದಂತೆ ಅಥವಾ ವಿಷಣ್ಣನಾಗಿ ಬಳಲದಂತೆ ಒಳ್ಳೆಯ ಮನಸ್ಸಿನಿಂದ ಈ ದಿನ ಸೇವಿಸು.
ಯಥಾ ನ ಗಚ್ಛೇಯಮಹಂ ಯಮಕ್ಷಯಂ
ತಥಾ ಕುರುಷ್ವಾಶು ವಿಶಾಲಲೋಚನೇ ।
ಅಹಂ ಹಿ ಕಾಂತೇ ತ್ವದಧೀನಜೀವಿತಃ
ತ್ವಯಾ ವಿಮುಕ್ತೋ ನ ಚಿರಂ ಜಿಜೀವಿಷೇ ॥46॥
ವಿಶಾಲನೇತ್ರೆಯೇ, ಈ ದಿನ ನಾನು ಯಮನ ಪಟ್ಟಣಕ್ಕೆ ಹೋಗದಂತೆ ಮಾಡು. ಕಾಂತೆಯೇ, ನನ್ನ ಜೀವನವು ನಿನ್ನ ಅಧೀನವಾಗಿದೆ. ನೀನು ಪರಿತ್ಯಾಗ ಮಾಡಿದರೆ ನಾನು ಬಹಳ ಕಾಲ ಬದುಕಲು ಬಯಸುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷೋಡಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *

ಹದಿನೇಳನೆಯ ಅಧ್ಯಾಯ
ದ್ರೌಪದಿಯಿಂದ ಕೀಚಕನ ನಿರಾಕರಣೆ
ವೈಶಂಪಾಯನಃ
ಏವಮುಕ್ತಾಽನವದ್ಯಾಂಗೀ ಕೀಚಕೇನ ದುರಾತ್ಮನಾ ।
ದ್ರೌಪದೀ ತಮುವಾಚೇದಂ ಸೈರಂಧ್ರೀರೂಪಧಾರಿಣೀ ॥1॥
ವೈಶಂಪಾಯನ ದುರಾತ್ಮನಾದ ಕೀಚಕನಿಂದ ಹೀಗೆ ಹೇಳಲ್ಪಟ್ಟ ಅನವದ್ಯಾಂಗಿಯಾದ ಸೈರಂಧ್ರೀ ವೇಷಧಾರಿಣಿಯಾದ ದ್ರೌಪದಿಯು ಅವನನ್ನು ಕುರಿತು ಹೀಗೆ ಮಾತನಾಡಿದಳು;
ಅಪ್ರಾರ್ಥನೀಯಾಂ ಕಾಮಾರ್ತಃ ಸೂತಪುತ್ರಾಭಿಮನ್ಯಸೇ ।
ಚತುರ್ಥವರ್ಣಾಂ ಸೈರಂಧ್ರೀಂ ನಿಹೀನಾಂ ಕೇಶಕಾರಿಕಾಮ್ ॥2॥
ಸೂತಪುತ್ರನೇ, ನಾಲ್ಕನೆಯ ವರ್ಣಕ್ಕೆ ಸೇರಿದ, ಜಾತಿಯಲ್ಲಿ ಹೀನಳಾದ, ಕೇಶಕಾರಿಣಿಯಾದ, ಆರ್ಥಿಸಲು ಯೋಗ್ಯವಲ್ಲದ ಸೈರಂಧ್ರಿಯನ್ನು ನೀನು ಕಾಮಾರ್ಥನಾಗಿ ಬಯಸುತ್ತಿದ್ದೀಯೆ.
ಏತೇನೈವ ಚ ಯತ್ನೇನ ವಿತ್ತೇನ ಚ ಮನೋರಮಾ ।
ಅನ್ಯಾ ಶಕ್ಯಾ ತ್ವಯಾ ಪ್ರಾಪ್ತುಂ ಸ್ವಜಾತಿಕುಲವರ್ಧನೀ ॥3॥
ಇದೇ ಪ್ರಯತ್ನ ಮತ್ತು ಧನದಿಂದ ಸುಂದರಿಯಾದ ನಿನ್ನ ಜಾತಿ ಮತ್ತು ಕುಲಗಳನ್ನು ಅಭಿವೃದ್ಧಿ ಪಡಿಸುವ ಇನ್ನೊಬ್ಬ ವನಿತೆಯನ್ನು ನೀನು ಪಡೆಯಲು ಸಾಧ್ಯ.
ಸ್ವೇಷು ದಾರೇಷು ಮೇಧಾವೀ ಕುರುತೇ ಯತ್ನಮುತ್ತಮಮ್ ।

ಸ್ವದಾರನಿರತೋ ಹ್ಯಾಶು ನರೋ ಭದ್ರಾಣಿ ಪಶ್ಯತಿ ॥4॥
ನ ಚಾಧರ್ಮೇಣ ಲಿಪ್ಯೇತ ನ ಚಾಕೀರ್ತಿಮವಾಪ್ನುಯಾತ್ ।
ಸ್ವದಾರೇಷು ರತಿರ್ಧರ್ಮೋ ಮೃತಸ್ಯಾಪಿ ನ ಸಂಶಯಃ ॥5॥
ಮೇಧಾವಿಯಾದ ಪುರುಷನು ತನ್ನ ಪತ್ನಿಯಲ್ಲಿಯೇ ಪ್ರಯತ್ನಪಡುತ್ತಾನೆ. ತನ್ನ ಪತ್ನಿಯಲ್ಲಿ ನಿರತನಾದ ಮನುಷ್ಯನು ಬೇಗ ಕಲ್ಯಾಣವನ್ನು ಹೊಂದುತ್ತಾನೆ. ಅಧರ್ಮದಿಂದ ಲಿಪ್ತನಾಗುವುದಿಲ್ಲ. ಅಪಕೀರ್ತಿಯನ್ನು ಪಡೆಯುವುದಿಲ್ಲ. ಸತ್ತರೂ ಸಹ ತನ್ನ ಪತ್ನಿಯಲ್ಲಿ ರತಿಯು ಧರ್ಮವೆನಿಸುತ್ತದೆ. ಇದರಲ್ಲಿ ಸಂಶಯವಿಲ್ಲ.
ಸ್ವಜಾತಿದಾರಾ ಮರ್ತ್ಯಸ್ಯ ಇಹ ಲೋಕೇ ಪರತ್ರ ಚ ।
ಪ್ರೇತಕಾರ್ಯಾಣಿ ಕುರ್ವಂತಿ ನಿವಾಪೈಸ್ತರ್ಪಯಂತಿ ಚ ॥6॥
ತದಕ್ಷಯ್ಯಂ ಚ ಧರ್ಮ್ಯಂ ಚ ಸ್ವರ್ಗ್ಯಮಾಹುರ್ಮನೀಷಿಣಃ ॥7॥
ತಮ್ಮ ಜಾತಿಯ ಪತ್ನಿಯರು ಮನುಷ್ಯರಿಗೆ ಈ ಲೋಕದಲ್ಲಿಯೂ ಹಿತವನ್ನು ಮಾಡುತ್ತಾರೆ. ಪರಲೋಕಕ್ಕೆ ಹೋದಮೇಲೆ ಪ್ರೇತಕಾರ್ಯಗಳನ್ನೂ, ನಿವಾಪಗಳನ್ನೂ ಮತ್ತು ತರ್ಪಣವನ್ನೂ ಕೊಡುತ್ತಾರೆ. ಸ್ವಪತ್ನೀರತಿಯು ಅಕ್ಷಯವಾದ ಧರ್ಮದಾಯಕವೆಂದೂ, ಸ್ವರ್ಗಸಾಧನವೆಂದೂ ಜ್ಞಾನಿಗಳು ಹೇಳುತ್ತಾರೆ.
ಸ್ವಜಾತಿದಾರಜಾಃ ಪುತ್ರಾ ಜಾಯಂತೇ ಕುಲಪೂಜಿತಾಃ ॥8॥
ತೇ ಕ್ಷೇತ್ರಜಾಶ್ಚ ಪಿತ್ರ್ಯಾಶ್ಚ ಶ್ರೂಯಂತೇ ಕುಲವರ್ಧನಾಃ ।
ತಸ್ಮಾತ್ ಸ್ವದಾರನಿರತಾ ಭವಂತಿ ಪುರುಷಾಃ ಶುಭಾಃ ॥9॥
ಪ್ರಿಯಾ ಹಿ ಪ್ರಾಣಿನಾಂ ದಾರಾಃ ತಸ್ಮಾತ್ ತ್ವಂ ಧರ್ಮಭಾಗ್ ಭವ ॥
ತನ್ನ ಜಾತಿಯ ಪತ್ನಿಯಲ್ಲಿ ಹುಟ್ಟಿದ ಮಕ್ಕಳು ಕುಲದಲ್ಲಿ ಪೂಜಿತರಾಗುತ್ತಾರೆ. ಅವರು ಕ್ಷೇತ್ರಜರೆನಿಸುತ್ತಾರೆ. ಪಿತೃಗಳಿಗೆ ಸಮ್ಮತರಾಗುತ್ತಾರೆ ಮತ್ತು ಕುಲವರ್ಧನರಾಗುತ್ತಾರೆ ಎಂದು ಕೇಳಿಬರುತ್ತದೆ. ಆದ್ದರಿಂದ ಸತ್ಪುರುಷರು ತಮ್ಮ ಪತ್ನಿಯರಲ್ಲಿಯೇ ನಿರತರಾಗಿರುತ್ತಾರೆ. ಎಲ್ಲರಿಗೂ ತಮ್ಮ ಪತ್ನಿಯರು ಪ್ರಿಯರಷ್ಟೇ! ಆದ್ದರಿಂದ ನೀನು ಧರ್ಮಭಾಜನನಾಗು.
ಪರದಾರರತೋ ಮರ್ತ್ಯೋ ನ ಚ ಭದ್ರಾಣಿ ಪಶ್ಯತಿ ।
ನ ಚ ಧರ್ಮೇಣ ಲಿಪ್ಯೇತ ನ ಚ ಕೀರ್ತಿಮವಾಪ್ನುಯಾತ್ ॥11॥
ಪರದಾರರತನಾದ ಮನುಷ್ಯನು ಮಂಗಳವನ್ನು ನೋಡುವುದಿಲ್ಲ. ಧರ್ಮವನ್ನು ಸಂಪಾದಿಸುವುದಿಲ್ಲ ಮತ್ತು ಅಪಕೀರ್ತಿಯನ್ನು ಹೊಂದುವನು.
ಪರದಾರೇ ನ ತೇ ಬುದ್ಧಿರ್ಜಾತು ಕಾರ್ಯಾ ಕಥಂಚನ ।
ವಿವರ್ಜನಮಕಾರ್ಯಾಣಾಮೇತತ್ ಸತ್ಪುರುಷವ್ರತಮ್ ॥12॥
ಪರಪತ್ನಿಯರಲ್ಲಿ ಎಂದೂ ನೀನು ಮನಸ್ಸನ್ನು ಮಾಡಬಾರದು. ಅಕಾರ್ಯವನ್ನು ಪರಿತ್ಯಾಗಮಾಡುವುದು ಸತ್ಪುರುಷರ ವ್ರತ.
ಮಿಥ್ಯಾಭಿಲಾಷೀ ಚ ನರಃ ಕಾಮಾತ್ಮಾ ಮೋಹಸಂಸ್ಥಿತಃ ।
ಅಧರ್ಮಮಯಶಶ್ಚಾಪಿ ಪ್ರಾಪ್ನುಯಾಚ್ಚ ಮಹದ್ ಭಯಮ್ ॥13॥
ಅಯೋಗ್ಯವನ್ನು ಆಶಿಸುವ ಕಾಮಾತ್ಮನೂ, ಮೋಹಪರವಶನೂ ಆದ ಮನುಷ್ಯನು ಅಧರ್ಮವನ್ನೂ, ಅಪಕೀರ್ತಿಯನ್ನೂ ಮತ್ತು ಮಹಾಭಯವನ್ನೂ ಹೊಂದುವನು.
ಪರದಾರಾಸ್ಮಿ ಭದ್ರಂ ತೇ ನಾಹಂ ಶಕ್ಯಾ ತ್ವಯಾ ಸದಾ ।
ಸ್ಪ್ರಷ್ಟುಂ ದ್ರಷ್ಟುಂ ತಥಾ ಪ್ರಾಪ್ತುಂ ಕಾಮದಗ್ಧೇನ ಚೇತಸಾ ॥14॥
ನಾನು ಪರದಾರಳಾಗಿದ್ದೇನೆ. ನಿನಗೆ ಮಂಗಳವಾಗಲಿ. ನೀನು ಕಾಮದಗ್ಧವಾದ ಮನಸ್ಸಿನಿಂದ ನನ್ನನ್ನು ಎಂದಾದರೂ ನೋಡುವುದಾಗಲೀ, ಸ್ಪರ್ಶಿಸುವುದಾಗಲೀ ಅಥವಾ ಪಡೆಯುವುದಾಗಲೀ ಸಾಧ್ಯವಿಲ್ಲ.
ಮಾಂ ಹಿ ತ್ವಮವಮನ್ವಾನಃ ಸೂತಪುತ್ರ ವಿನಂಕ್ಷ್ಯಸಿ ।
ಆಶು ಚಾದ್ಯೈವ ನ ಚಿರಾತ್ ಸಪುತ್ರಃ ಸಹಬಾಂಧವಃ ॥15॥
ಸೂತಪುತ್ರನೇ, ನೀನು ನನ್ನನ್ನು ಬಯಸಿದರೆ ಈ ದಿನವೇ ಶೀಘ್ರವಾಗಿ ಪುತ್ರ-ಬಾಂಧವರ ಜೊತೆಯಲ್ಲಿ ವಿನಾಶವನ್ನು ಹೊಂದುವಿ.
ದುರ್ಲಭಾಮಭಿಮನ್ವಾನೋ ಮಾಂ ವೀರೈರಭಿರಕ್ಷಿತಾಮ್ ।
ಪತಿಷ್ಯಸ್ಯವಶಸ್ತೂರ್ಣಂ ವೃಂತಾತ್ ತಾಳಫಲಂ ಯಥಾ ॥16॥
ವೀರರಿಂದ ಚೆನ್ನಾಗಿ ರಕ್ಷಿತಳಾದ, ನಿನಗೆ ಎಂದೂ ಸಿಗಲಾರದ ನನ್ನನ್ನು ಬಯಸಿದರೆ ನೀನು ತಾಳೆಯ ಫಲವು ತೊಟ್ಟುಕಳಚಿ ಬೀಳುವಂತೆ ಶೀಘ್ರವಾಗಿ ವಿವಶನಾಗಿ ಬೀಳುವಿ.
ನ ಚಾಪ್ಯಹಂ ತ್ವಯಾ ಶಕ್ಯಾ ಸ್ಪ್ರಷ್ಟುಂ ದುಷ್ಟೇನ ಚೇತಸಾ ।
ಕಾಮವೇಗೋದ್ಧತಾಂಗೇನ ಗಂಧರ್ವಾಃ ಪತಯೋ ಮಮ ॥17॥
ಕಾಮವೇಗದಿಂದ ಕೂಡಿದ ಶರೀರವುಳ್ಳ ನಿನ್ನಿಂದ ದುಷ್ಟಮನಸ್ಸಿನಿಂದ ನನ್ನನ್ನು ಮುಟ್ಟಲೂ ಸಾಧ್ಯವಿಲ್ಲ. ನನ್ನ ಪತಿಗಳು ಗಂಧರ್ವರು.
ತೇ ತ್ವಾಂ ವಿಹನ್ಯುಃ ಕುಪಿತಾಃ ಸಾನುಬಂಧಮಮರ್ಷಣಾಃ ।
ಸೀತಾರ್ಥಂ ಹಿ ದಶಗ್ರೀವಂ ಯಥಾ ರಾಮಃ ಸಬಾಂಧವಮ್ ॥18॥
ಕ್ರೋಧಶೀಲರಾದ ಅವರು ಕೋಪಗೊಂಡು ಸೀತೆಯ ಸಲುವಾಗಿ ರಾಮನು ಸಬಾಂಧವನಾದ ರಾವಣನನ್ನು ಕೊಂದಂತೆ ನಿನ್ನ ಬಂಧುಗಳ ಜೊತೆಯಲ್ಲಿ ನಿನ್ನನ್ನು ಕೊಂದಾರು.
ಪತಿಷ್ಯಸಿ ತಥಾ ಮೂರ್ಖ ಪಾತಾಳೇ ಕ್ರೂರದರ್ಶನೇ ।

ಯಥಾ ನಿಶ಼್ೇತನೋ ಬಾಲಸ್ತೀರಸ್ಥಃ ಕೂಪಮುತ್ತರಮ್ ॥19॥
ಯಥಾ ಲಂಘಿತುಮಿಚ್ಛೇತ ತಥೈವ ತ್ವಂ ಮನೋಽದಧಾಃ ।
ಅಭವ್ಯರೂಪೈಃ ಪುರುಷೈಃ ಪಂಥಾನಂ ಗಂತುಮಿಚ್ಛಸಿ ॥20॥
ಮೂರ್ಖನೇ, ನೀನು ಕ್ರೂರದರ್ಶನವಾದ ಪಾತಾಳದಲ್ಲಿ ಬೀಳುವಿ. ದುರ್ಬಲನಾದ ಬಾಲಕನು ಕೂಪದ ತೀರದಲ್ಲಿ ನಿಂತು ದಾಟಲು ಇಚ್ಛೆಪಟ್ಟಂತೆ ನೀನು ನಿನ್ನ ಮನಸ್ಸನ್ನು ಮಾಡಿದ್ದೀಯೆ. ದುಷ್ಟಪುರುಷರು ನಡೆದ ದಾರಿಯಲ್ಲಿ ನಡೆಯುವುದಕ್ಕೆ ನೀನು ಬಯಸುತ್ತಿದ್ದೀಯೆ.
ಯೋ ಮಾಮಜ್ಞಾಯ ಕಾಮಾರ್ತ ಅಬದ್ಧಾನಿ ಪ್ರಭಾಷಸೇ ।
ಅಶಕ್ತಶ್ಚ ಪುಮಾನ್ ಶೀಲಂ ನ ಲಂಘಯಿತುಮರ್ಹತಿ ॥21॥
ಏಕೆಂದರೆ ನನ್ನ ಸ್ವರೂಪವನ್ನು ತಿಳಿಯದೆ ಕಾಮಾರ್ತನಾಗಿ ಅಬದ್ಧ ಮಾತುಗಳನ್ನು ಆಡುತ್ತಿದ್ದೀಯೆ. ದುರ್ಬಲನಾದ ಪುರುಷನು ಎಂದೂ ಶೀಲದ ಗೆರೆಯನ್ನು ದಾಟಬಾರದು.
ಪತನ್ ಹಿ ಪಾತಾಳಮುಖೇ ಮಹೋದಧೌ
ಕ್ಷಿತಿಂ ಪ್ರವಿಷ್ಟೋ ಯದಿ ಚೋರ್ಧ್ವಮುತ್ಪತೇತ್ ।
ದಿಶಃ ಪ್ರಪನ್ನೋ ಗಿರಿಗಹ್ವರಾಣಿ ವಾ
ಗುಹಾಂ ಪ್ರವಿಷ್ಟೋಽಂತರಿತೋಽಪಿ ವಾ ಕ್ಷಿತೇಃ ॥22॥
ಜುಹ್ವನ್ ಜಪನ್ ವಾ ಪ್ರಪತನ್ ಗಿರೇಸ್ತಟಾದ್
ಹುತಾಶನಾದಿತ್ಯಗತಿಂ ಗತೋಽಪಿ ವಾ ।
ಭಾರ್ಯಾಭಿಮತ್ತಃ ಪುರುಷೋ ಮಹಾತ್ಮಾ
ನ ಜಾತು ಮುಚ್ಯೇತ ಕಥಂಚನಾರ್ಹತಃ ॥23॥
ನೀನು ಪಾತಾಳದ ಆಳಕ್ಕಿಳಿದರೂ, ಮಹೋದಧಿಯಲ್ಲಿ ಮುಳುಗಿದರೂ, ಭೂಮಿಯಲ್ಲಿ ಪ್ರವೇಶ ಮಾಡಿದರೂ, ಆಕಾಶಕ್ಕೆ ಹಾರಿದರೂ, ದಿಕ್ಕುಗಳಲ್ಲಿ ಹೋಗಿ ಸೇರಿದರೂ, ಪರ್ವತದ ಗುಹೆಗಳಲ್ಲಿ ಅಡಗಿದರೂ, ಭೂಮಿಯಲ್ಲಿ ಮರೆಮಾಡಿಕೊಂಡರೂ, ಹೋಮವನ್ನು ಮಾಡಿದರೂ, ಜಪವನ್ನು ಮಾಡಿದರೂ, ಗಿರಿಶಿಖರದಿಂದ ಬಿದ್ದರೂ, ಅಗ್ನಿ ಮತ್ತು ಆದಿತ್ಯರ ಗತಿಯನ್ನು ಹೊಂದಿದರೂ, ಇನ್ನೊಬ್ಬರ ಭಾರ್ಯೆಯಲ್ಲಿ ಆಸಕ್ತನಾದ ದುಷ್ಟನಾದ ನೀನು ಪಾಪದಿಂದಲಾಗಲೀ ಅಥವಾ ಯೋಗ್ಯವ್ಯಕ್ತಿಯ ಹಸ್ತದ ಶಿಕ್ಷೆಯಿಂದಲಾಗಲೀ ಬಿಡುಗಡೆಯನ್ನು ಹೊಂದುವುದಿಲ್ಲ.
ಮೋಘಂ ತವೇದಂ ವಚನಂ ಭವಿಷ್ಯತಿ
ಪ್ರತೋಲನಂ ವಾ ತುಲಯಾ ಮಹಾಗಿರೇಃ ।
ಮಾ ತಾರಕಾಣಾಮಧಿಪಂ ಯಥಾ ಶಿಶುಃ
ಮಾಂ ಬಾಲವತ್ ಪ್ರಾಪ್ಸ್ಯಸಿ ದುರ್ಲಭಾಂ ಸತೀಮ್ ॥24॥
ಈ ನಿನ್ನ ಮಾತುಗಳು ದೊಡ್ಡ ಪರ್ವತವನ್ನು ತಕ್ಕಡಿಯಲ್ಲಿ ತೂಗುವ ಪ್ರಯತ್ನದಂತೆ ವ್ಯರ್ಥವಾಗುತ್ತವೆ. ಶಿಶುವು ನಕ್ಷತ್ರಾಧಿಪನಾದ ಚಂದ್ರನನ್ನು ಪಡೆಯಲು ಹೇಗೆ ಸಾಧ್ಯವಿಲ್ಲವೋ ಹಾಗೆ ನಾನು ನಿನ್ನಿಂದ ಪಡೆಯಲು ಸಾಧ್ಯವಿಲ್ಲದವಳು.
ದಾರಾಭಿಮರ್ಶೀ ಪುರುಷೋ ಮಹಾತ್ಮನಾಂ
ಗತ್ವಾಽಪಿ ದೇವಾನ್ ಶರಣಂ ನ ವಿಂದತಿ ।
ಇಮಾಂ ಮತಿಂ ಕೀಚಕ ಮುಂಚ ಕಾಮಿನಾಂ
ಮಾ ನೀನಶೋ ಜೀವಿತಮಾತ್ಮನಃ ಪ್ರಿಯಮ್ ॥25॥
ಮಹಾತ್ಮರ ಪತ್ನಿಯನ್ನು ಬಯಸುವವನು ದೇವತೆಗಳ ಬಳಿಗೆ ಹೋದರೂ ರಕ್ಷಣೆಯನ್ನು ಪಡೆಯುವುದಿಲ್ಲ. ಕೀಚಕನೇ, ಕಾಮಿಗಳ ಈ ಬುದ್ಧಿಯನ್ನು ಬಿಡು. ನಿನಗೆ ಪ್ರಿಯವಾದ ಜೀವಿತವನ್ನು ತೊರೆಯಬೇಡ.
ತ್ವಂ ಕಾಲಪಾಶಂ ಪ್ರತಿಮುಚ್ಯ ಕಂಠೇ
ಪ್ರವೇಷ್ಟುಮಿಚ್ಛಸ್ಯುತ ದುಷ್ಪ್ರವೇಶನಮ್ ।
ಹುತಾಶನಂ ಪ್ರಜ್ವಲಿತಂ ಮಹಾವನೇ
ನಿದಾಘಮಧ್ಯಾಹ್ನ ಇವಾತುರಃ ಸ್ವಯಮ್ ॥26॥
ಪ್ರವೇಷ್ಟುಕಾಮೋಽಸಿ ವಧಾಯ ಚಾತ್ಮನಃ
ಕುಲಸ್ಯ ಸರ್ವಸ್ಯ ವಿನಾಶನಾಯ ಚ ।
ನೀನು ಕತ್ತಿಗೆ ಕಾಲಪಾಶವನ್ನು ಕಟ್ಟಿಕೊಂಡು ಪ್ರವೇಶಿಸಲು ಸಾಧ್ಯವಿಲ್ಲದ ಮಹಾವನದಲ್ಲಿ ಬೇಸಿಗೆಯ ಸಮಯದಲ್ಲಿ ಮಧ್ಯಾಹ್ನದಲ್ಲಿ ಉರಿಯುತ್ತಿರುವ ಅಗ್ನಿಯನ್ನು ಆತುರನಾಗಿ ಪ್ರವೇಶಿಸಲು ಇಚ್ಛಿಸುತ್ತಿದ್ದೀಯೆ. ಅದರ ಫಲ ನಿನ್ನ ಕುಲದ ಮತ್ತು ಸರ್ವಸ್ವದ ವಿನಾಶ.
ನ ದೇವಗಂಧರ್ವಮಹರ್ಷಿಸನ್ನಿಧೌ
ನ ನಾಗಲೋಕಾಸುರರಾಕ್ಷಸಾಲಯೇ ॥27॥
ಗೂಢಸ್ಥಿತಾಂ ಮಾಮವಮತ್ಯ ಚೇತಸಾ
ನ ಜೀವಿತಾರ್ಥೀ ಶರಣಂ ತ್ವಮಾಪ್ಸ್ಯಸಿ ॥28॥
ಗೂಢಳಾಗಿರುವ ನನ್ನನ್ನು ನೀನು ಮನಸ್ಸಿನಿಂದ ಅವಮಾನವನ್ನು ಮಾಡಿದರೆ ದೇವ-ಗಂಧರ್ವ-ಮಹರ್ಷಿಗಳ ಸನ್ನಿಧಾನದಲ್ಲಾಗಲೀ, ನಾಗಲೋಕದಲ್ಲಾಗಲೀ, ಅಸುರರಾಕ್ಷಸರ ಆಲಯದಲ್ಲಾಗಲೀ ಜೀವಿತಾರ್ಥಿಯಾದ ನೀನು ರಕ್ಷಣೆಯನ್ನು ಪಡೆಯುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತದಶೋಽಧ್ಯಾಯಃ ॥

॥ ಕೀಚಕವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಕೀಚಕನ ಪ್ರೇರಣೆಯಂತೆ ಸುದೇಷ್ಣೆಯಿಂದ ದ್ರೌಪದಿಗೆ ಕೀಚಕನ ಮನೆಗೆ ಹೋಗುವಂತೆ ಒತ್ತಾಯ
ವೈಶಂಪಾಯನಃ
ಪ್ರತ್ಯಾಖ್ಯಾತಸ್ತು ಪಾಂಚಾಲ್ಯಾ ಕೀಚಕಃ ಕಾಮಮೂರ್ಚ್ಛಿತಃ |
ಪ್ರವಿಶ್ಯ ರಾಜಭವನಂ ಭಗಿನ್ಯಾಸ್ತ್ವಗ್ರತಃ ಸ್ಥಿತಃ ॥1॥
ವೈಶಂಪಾಯನ ಪಾಂಚಾಲಿಯಿಂದ ನಿರಾಕೃತನಾದ ಕೀಚಕನು ಕಾಮ ಮೂರ್ಛಿತನಾಗಿ ರಾಜನ ಭವನವನ್ನು ಪ್ರವೇಶಿಸಿ ಅಕ್ಕನ ಎದುರಿಗೆ ನಿಂತನು.
ಸೋಽಭಿವೀಕ್ಷ್ಯ ಸುಕೇಶಾಂತಾಂ ಸುದೇಷ್ಣಾಂ ಭಗಿನೀಂ ಪ್ರಿಯಾಮ್ |
ಅಮರ್ಯಾದೇನ ಕಾಮೇನ ಸ್ವಚಿತ್ತೇಽಭಿಪರಿಪ್ಲುತಃ ॥2॥
ಸ ತು ಮೂರ್ಧ್ನ್ಯಂಜಲಿಂ ಕೃತ್ವಾ ಭಗಿನ್ಯಾಶ್ಚರಣಾವುಭೌ |
ಸಮ್ಮೋಹಾಭಿಹತಸ್ತೂರ್ಣಂ ವಾತೋದ್ಧೂತ ಇವಾರ್ಣವಃ ॥3॥
ಪ್ರೋವಾಚ ಚ ಸುದುಃಖಾರ್ತೋ ಭಗಿನೀಂ ನಿಃಶ್ವಸನ್ ಮುಹುಃ |
ಅವ್ಯಕ್ತಮೃದುನಾ ನಾಮ್ನಾ ಶುಷ್ಯಮಾಣಃ ಪುನಃ ಪುನಃ ॥4॥
ಅವನು ಒಳ್ಳೆಯ ಬೈತಲೆ ಇರುವ, ಪ್ರಿಯಳಾದ ತನ್ನ ಅಕ್ಕನಾದ ಸುದೇಷ್ಣೆಯನ್ನು ನೋಡಿ ಮರ್ಯಾದೆಯನ್ನು ಮೀರಿದ ಕಾಮದಿಂದ ಪೂರ್ಣವಾದ ಚಿತ್ತವುಳ್ಳವನಾಗಿ ತಲೆ ಮೇಲೆ ಕೈಗಳನ್ನು ಜೋಡಿಸಿ ಅಕ್ಕನ ಚರಣಗಳನ್ನು ಮುಟ್ಟಿ ಬಿರುಗಾಳಿಗೆ ಉಕ್ಕಿದ ಸಮುದ್ರದಂತೆ ಮೋಹದಿಂದ ಅಭಿಹತನಾಗಿ ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತಾ ಒಣಗಿ ಹೋಗುತ್ತಾ ದುಃಖದಿಂದ ಆರ್ತನಾಗಿ ಅವ್ಯಕ್ತ ಮಧುರವಾದ ನಾಮದಿಂದ ಸುದೇಷ್ಣೆಯನ್ನು ಸಂಬೋಧಿಸಿ ಮಾತನಾಡಿದನು.
ಯಥಾ ಸುದೇಷ್ಣೇ ಸೈರಂಧ್ರ್ಯಾ ಸಂಗಚ್ಛೇಯಂ ಸಕಾಮಯಾ |
ತಥಾ ಶೀಘ್ರಂ ಕುರುಷ್ವಾದ್ಯ ಮಾಽಹಂ ಪ್ರಾಣಾನ್ ಪ್ರಹಾಸಿಷಮ್ ॥
ಸುದೇಷ್ಣೆಯೇ, ನಾನು ಈ ದಿನ ಸಕಾಮಳಾದ ಸೈರಂಧ್ರಿಯ ಜೊತೆಯಲ್ಲಿ ಸಮಾಗಮವನ್ನು ಹೊಂದುವಂತೆ ಶೀಘ್ರವಾಗಿ ಮಾಡು. ನಾನು ಪ್ರಾಣಗಳನ್ನು ಕಳೆದುಕೊಳ್ಳುವುದು ಬೇಡ.
ಯದೀಯಮನವದ್ಯಾಂಗೀ ನ ಮಾಮದ್ಯಾಭಿಕಾಂಕ್ಷತೇ |
ಚೇತಸಾಽಭಿಪ್ರಸನ್ನೇನ ಗತೋಽಸ್ಮ್ಯದ್ಯ ಯಮಾಲಯಮ್ ॥6॥
ಆ ಅನವದ್ಯಾಂಗಿಯು ಈ ದಿನ ಪ್ರಸನ್ನಚಿತ್ತಳಾಗಿ ನನ್ನನ್ನು ಕಾಮಿಸದಿದ್ದರೆ ಈ ದಿನ ನಾನು ಯಮಪಟ್ಟಣಕ್ಕೆ ಹೋದೆನೆಂದು ತಿಳಿ.
ತಮುವಾಚ ಪರಿಷ್ವಜ್ಯ ಸುದೇಷ್ಣಾ ಭ್ರಾತರಂ ಪ್ರಿಯಾಮ್ ॥7॥
ಶರಣಾಗತೇಯಂ ಸುಶ್ರೋಣೀ ಮಯಾ ದತ್ತಾಭಯಾ ಚ ಸಾ |
ಶುಭಾಚಾರಾ ಚ ಭದ್ರಂ ತೇ ನೈನಾಂ ವಕ್ತುಮಿಹೋತ್ಸಹೇ ॥8॥
ನೈಷಾ ಚ ಶಕ್ಯಾ ಹ್ಯನ್ಯೇನ ಸ್ಪ್ರಷ್ಟುಂ ದುಷ್ಟೇನ ಚೇತಸಾ |
ಗಂಧರ್ವಾಃ ಕಿಲ ಪಂಚೈನಾಂ ರಕ್ಷಂತಿ ರಮಯಂತಿ ಚ ॥9॥
ಏವಮೇಷಾ ಮಮಾಚಷ್ಟ ತಥಾ ಪ್ರಥಮಸಂಗಮೇ ॥10॥
ತನ್ನ ಪ್ರಿಯನಾದ ತಮ್ಮನನ್ನು ಆಲಿಂಗಿಸಿ ಸುದೇಷ್ಣೆಯು ಹೀಗೆ ಹೇಳಿದಳು `ಈ ಸುಂದರಿಯು ನನಗೆ ಶರಣಾಗತಳಾಗಿದ್ದಾಳೆ. ನಾನು ಅವಳಿಗೆ ಅಭಯವನ್ನು ಕೊಟ್ಟಿದ್ದೇನೆ. ಅವಳು ಒಳ್ಳೆಯ ಆಚಾರವುಳ್ಳವಳು. ನಿನಗೆ ಮಂಗಳವಾಗಲಿ. ನಾನು ಹೀಗೆ ಅವಳಿಗೆ ಹೇಳಲಾರೆ. ಮತ್ತು ಇನ್ನೊಬ್ಬನು ಅವಳನ್ನು ದುಷ್ಟಮನಸ್ಸಿನಿಂದ ಮುಟ್ಟಲೂ ಸಾಧ್ಯವಿಲ್ಲ. ಐದುಜನ ಗಂಧರ್ವರು ಅವಳನ್ನು ರಕ್ಷಿಸುತ್ತಾರೆ ಮತ್ತು ಸಂತೋಷಪಡಿಸುತ್ತಾರೆ. ನಮ್ಮ ಪ್ರಥಮ ಸಮಾಗಮದಲ್ಲಿ ಅವಳು ನನಗೆ ಹೀಗೆ ಹೇಳಿದಳು.
ತಥೈವ ಗಜನಾಸೋರೂಃ ಸತ್ಯಮಾಹ ಮಮಾಂತಿಕೇ |
ತೇಽಪಿ ಕ್ರುದ್ಧಾ ಮಹಾತ್ಮಾನೋ ನಾಶಯೇಯುರ್ಹಿ ಜೀವಿತಮ್ ॥11॥
ಸುಂದರವಾದ ಮೂಗುಳ್ಳ ಅವಳು ನನ್ನ ಸಮೀಪದಲ್ಲಿ ಸತ್ಯವನ್ನೇ ನುಡಿದಿದ್ದಾಳೆ. ಕೋಪಗೊಂಡ ಆ ಮಹಾತ್ಮರಾದರೂ ನಿನ್ನ ಜೀವಿತವನ್ನೇ ನಾಶಮಾಡಿಯಾರು.
ರಾಜಾ ಚೈವ ಸಮೀಕ್ಷ್ಯೈನಾಂ ಸಮ್ಮೋಹಂ ಗತವಾನಿಹ |
ಮಯಾ ಚ ಸತ್ಯವಚನೈರನುನೀತೋ ಮಹೀಪತಿಃ ॥12॥
ರಾಜನೂ ಕೂಡ ಇವಳನ್ನು ನೋಡಿ ಸಮ್ಮೋಹಕ್ಕೆ ಒಳಗಾದನು. ನಾನು ರಾಜನಿಗೆ ಸತ್ಯವಾದ ಹಿತವಚನಗಳನ್ನು ಹೇಳಿ ಸಮಾಧಾನಪಡಿಸಿದೆ.
ಸೋಽಪ್ಯೇನಾಮನಿಶಂ ದೃಷ್ಟ್ವಾ ಮನಸೈವಾಭ್ಯನಂದತ |
ಭಯಾದ್ ಗಂಧರ್ವಮುಖ್ಯಾನಾಂ ಜೀವಿತಸ್ಯೋಪಘಾತಿನಾಮ್ ॥13॥
ಮನಸಾಽಪಿ ತತಸ್ತ್ವೇನಾಂ ನ ಚಿಂತಯತಿ ಪಾರ್ಥಿವಃ ॥14॥
ಅವನೂ ಸಹ ಇವಳನ್ನು ಯಾವಾಗಲೂ ನೋಡಿ ಮನಸ್ಸಿನಲ್ಲಿಯೇ ಸಂತೋಷ ಪಡುತ್ತಿದ್ದನು. ಜೀವಿತವನ್ನೇ ನಾಶಮಾಡುವ ಗಂಧರ್ವಶ್ರೇಷ್ಠರನ್ನು ಕೇಳಿದ ಮೇಲೆ ಅವರ ಭಯದಿಂದ ಈಗ ಅವನು ಇವಳನ್ನು ಮನಸ್ಸಿನಲ್ಲಿಯೂ ಚಿಂತಿಸುವುದಿಲ್ಲ.

ತೇ ಹಿ ಕ್ರುದ್ಧಾ ಮಹಾತ್ಮಾನೋ ಗರುಡಾನಿಲತೇಜಸಃ |
ದಹೇಯುರಪಿ ಲೋಕಾಂಸ್ತ್ರೀನ್ ಯುಗಾಂತೇಷ್ವಿವ ಭಾಸ್ಕರಃ ||15||
ಕೋಪಗೊಂಡ ಆ ಮಹಾತ್ಮರು ಗರುಡನ, ಅಗ್ನಿಯ ತೇಜಸ್ಸನ್ನು ಹೊಂದಿದವರು. ಯುಗಾಂತಸಮಯದ ಸೂರ್ಯನಂತೆ ಅವರು ಮೂರುಲೋಕಗಳನ್ನೂ ಸುಟ್ಟಾರು.
ಸೈರಂಧ್ರ್ಯಾ ಹ್ಯೇತದಾಖ್ಯಾತಂ ಮಮ ತೇಷಾಂ ಮಹದ್ಬಲಮ್ |
ತವ ಚಾಹಮಿದಂ ಗುಹ್ಯಂ ಸ್ನೇಹಾದಾಖ್ಯಾಮಿ ಬಂಧುವತ್ ||16||
ಮಾ ಗಮಿಷ್ಯಸಿ ವೈ ಕೃಚ್ಛ್ರಾಂ ಗತಿಂ ಪರಮದುರ್ಗಮಾಮ್ |
ಬಲಿನಸ್ತೇ ರುಜಂ ಕುರ್ಯುಃ ಕುಲಸ್ಯ ಚ ಧನಸ್ಯ ಚ ||17||
ಸೈರಂಧ್ರಿಯೇ ಅವರ ಈ ಮಹಾಬಲವನ್ನು ನನಗೆ ಹೇಳಿದಳು. ನಾನು ಬಂಧುವಿನಂತೆ ನಿನಗೆ ಸ್ನೇಹದಿಂದ ಈ ರಹಸ್ಯವನ್ನು ಹೇಳುತ್ತಿದ್ದೇನೆ. ಪರಮ ದುರ್ಗಮವಾದ ನೀಚಗತಿಯನ್ನು ಹೊಂದಬೇಡ. ಬಲಿಷ್ಠರಾದ ಅವಳ ಪತಿಗಳು ಕುಲಕ್ಕೂ ಮತ್ತು ಧನಕ್ಕೂ ನಾಶವನ್ನು ತಂದೊಡ್ಡಬಹುದು.
ತಸ್ಮಾದಸ್ಯಾಂ ಮನಃ ಕರ್ತುಂ ಯದಿ ಪ್ರಾಣಾಃ ಪ್ರಿಯಸ್ತವ |
ಮಾ ಚಿಂತಯೇಥಾ ಮಾ ಗಾಸ್ತ್ವಂ ಮತ್ಪ್ರಿಯಂ ಚ ಯದೀಚ್ಛಸಿ ||18||
ಆದ್ದರಿಂದ ನಿನಗೆ ನಿನ್ನ ಪ್ರಾಣವು ಪ್ರಿಯವಾದರೆ ಅವಳನ್ನು ಚಿಂತಿಸಬೇಡ. ನನಗೆ ಪ್ರಿಯವನ್ನು ಮಾಡಲು ಬಯಸುವುದಾದರೆ ಅವಳ ಸಮೀಪಕ್ಕೆ ಹೋಗಬೇಡ.
ವೈಶಂಪಾಯನಃ
ಏವಮುಕ್ತಸ್ತು ದುಷ್ಟಾತ್ಮಾ ಭಗಿನೀಂ ಕೀಚಕೋಽಬ್ರವೀತ್ ||19||
ಗಂಧರ್ವಾಣಾಂ ಶತಂ ಚಾಪಿ ಸಹಸ್ರಮಯುತಾನಿ ವಾ |
ಅಹಮೇಕೋ ಹನಿಷ್ಯಾಮಿ ಗಂಧರ್ವಾನ್ ಪಂಚ ಕಿಂ ಪುನಃ ||10||
ವೈಶಂಪಾಯನ ಹೀಗೆ ಹೇಳಲ್ಪಟ್ಟ ಕೀಚಕನು ಅಕ್ಕನನ್ನು ಕುರಿತು ಮಾತನಾಡಿದನು. ಗಂಧರ್ವರು ನೂರುಜನ ಇರಲಿ, ಸಾವಿರವಿರಲಿ, ಹತ್ತುಸಾವಿರವಿರಲಿ, ನಾನೊಬ್ಬನೇ ಅವರನ್ನು ಕೊಲ್ಲುವೆನು. ಇನ್ನು ಐದುಜನ ಗಂಧರ್ವರು ಏನು ಮಾಡುವರು?
ನ ಚ ತ್ವಮಭಿಜಾನೀಷೇ ಸ್ತ್ರೀಣಾಂ ಗುಹ್ಯಮನುತ್ತಮಮ್ |
ಪುತ್ರಂ ವಾ ಕಿಲ ಪೌತ್ರಂ ವಾ ಭ್ರಾತರಂ ವಾ ವರಾನನಮ್ ||21||
ರಹಸೀಹ ನರಂ ದೃಷ್ಟ್ವಾ ನಾನಾಗಂಧವಿಭೂಷಿತಮ್ ||22||
ಯೋನಿರುತ್ಸ್ವಿದ್ಯತೇ ಸ್ತ್ರೀಣಾಮಸತೀನಾಮಿತಿ ಶ್ರುತಮ್ ||23||
ನೀನು ಸ್ತ್ರೀಯರ ಒಂದು ಶ್ರೇಷ್ಠವಾದ ರಹಸ್ಯವನ್ನು ತಿಳಿದಿಲ್ಲ. ನಾನಾಗಂಧ ವಿಭೂಷಿತನಾದ ಸುಂದರನಾದ ಪುತ್ರನನ್ನಾಗಲೀ, ಪೌತ್ರನನ್ನಾಗಲೀ, ಭ್ರಾತೃವನ್ನಾಗಲೀ ಏಕಾಂತದಲ್ಲಿ ನೋಡಿದರೆ ದುಷ್ಟಸ್ತ್ರೀಯರ ಯೋನಿಯು ದ್ರವಿಸುತ್ತದೆ ಎಂದು ನಾನು ಕೇಳಿದ್ದೇನೆ.
ಮಾಂ ನಿರೀಕ್ಷ್ಯಾನುಲಿಪ್ತಾಂಗಂ ಸರ್ವಾಭರಣಭೂಷಿತಮ್ |
ವಶಮೇಷ್ಯತಿ ಸೈರಂಧ್ರೀ ಮನ್ಮಥೇನ ಪ್ರಪೀಡಿತಾ ||24||
ಸಾ ತ್ವಂ ದೃಷ್ಟ್ವಾ ನಯಸ್ವೈನಾಂ ಜೀವಿತಂ ಮೇ ಯದೀಚ್ಛಸಿ ||25||
ನಾನು ದೇಹಕ್ಕೆ ಲೇಪವನ್ನು ಮಾಡಿಕೊಂಡು ಸರ್ವಾಭರಣಭೂಷಿತನಾದರೆ ನನ್ನನ್ನು ನೋಡಿ ಕಾಮಪೀಡಿತಳಾದ ಸೈರಂಧ್ರಿಯು ನನ್ನ ವಶವಾಗುವಳು. ನೀನು ನಾನು ಬದುಕುವುದನ್ನು ಬಯಸುವುದಾದರೆ ಅವಳನ್ನು ನೋಡಿ ನನ್ನ ಬಳಿಗೆ ಕಳುಹಿಸು.
ವೈಶಂಪಾಯನಃ
ಏವಮುಕ್ತಾ ಸುದೇಷ್ಣಾ ತು ಶೋಕೇನಾಭಿಪ್ರಪೀಡಿತಾ |
ಅಹೋ ದುಃಖಮಹೋ ಕೃಚ್ಛ್ರಮಹೋ ಪಾಪಮಿತಿ ಸ್ಮ ಹ ||26||
ಪ್ರಾರುದದ್ ಭೃಶದುಃಖಾರ್ತಾ ವಿಷಾದಂ ತಸ್ಯ ವೀಕ್ಷ್ಯ ಸಾ ||27||
ವೈಶಂಪಾಯನ ಹೀಗೆ ಹೇಳಲ್ಪಟ್ಟ ಸುದೇಷ್ಣೆಯು ಬಹಳ ಶೋಕದಿಂದ ಪೀಡಿತಳಾಗಿ- `ಅಯ್ಯೋ ದುಃಖವೇ, ಅಯ್ಯೋ ಕಷ್ಟವೇ, ಅಯ್ಯೋ ಪಾಪವೇ' ಎಂದು ಹೇಳುತ್ತಾ ಅವನ ವಿಷಾದವನ್ನು ನೋಡಿ ಬಹಳ ದುಃಖದಿಂದ ಆರ್ತಳಾಗಿ ಅತ್ತಳು.
ಪಾತಾಳೇಷು ಪತತ್ಯೇಷ ವಿಲಪನ್ ಬಡವಾಮುಖೇ |
ತ್ವತ್ಕೃತೇ ವಿನಶಿಷ್ಯಂತಿ ಭ್ರಾತರಃ ಸುಹೃದಶ್ಚ ಮೇ ||28||
ಕಿಂ ನು ಶಕ್ಯಂ ಮಯಾ ಕರ್ತುಂ ಯತ್ ತ್ವಮೇವಮಭೀಪ್ಸಿತಃ |
ನ ಚ ಶ್ರೇಯೋಽಭಿಜಾನೀಷೇ ಕಾಮಮೇವಾನುವರ್ತಸೇ ||29||
ಇವನು ವಿಲಾಪವನ್ನು ಮಾಡುತ್ತಾ ಪಾತಾಳದಲ್ಲಿ ಬಡವಾಗ್ನಿಯ ಮುಖದಲ್ಲಿ ಬೀಳುತ್ತಾನೆ. ಅವನ ಸಲುವಾಗಿ (ನಿನ್ನ ಸಲುವಾಗಿ) ನನ್ನ ಸಹೋದರರು ಮತ್ತು ಬಾಂಧವರು ನಾಶವನ್ನು ಹೊಂದುತ್ತಾರೆ. ನೀನು ಇಂತಹ ಅಭಿಪ್ರಾಯವನ್ನು ಹೊಂದಿರುವಾಗ ನಾನು ಏನು ಮಾಡಲು ಸಾಧ್ಯ? ನೀನು ಶ್ರೇಯಸ್ಸಿನ ಮಾರ್ಗವನ್ನು ಕಾಣುತ್ತಿಲ್ಲ, ಕಾಮವನ್ನೇ ಅನುಸರಿಸುತ್ತಿದ್ದೀಯೆ.
ಧ್ರುವಂ ಗತಾಯುಸ್ತ್ವಂ ಪಾಪ ಯದೇವಂ ಕಾಮಮೋಹಿತಃ |
ಅಕರ್ತವ್ಯೇ ಹಿ ಮಾಂ ಪಾಪೇ ನಿಯುನಂಕ್ಷಿ ನರಾಧಮ ||30||
ಪಾಪಿಷ್ಟನೇ, ನರಾಧಮನೇ, ಕಾಮಮೋಹಿತನಾಗಿ ನೀನು ನಿಶ್ಚಯವಾಗಿ ಆಯುಸ್ಸನ್ನು ಕಳೆದುಕೊಂಡಿದ್ದೀಯೆ. ಏಕೆಂದರೆ ಮಾಡಬಾರದ ಕೆಲಸವನ್ನು ಮಾಡುವಂತೆ ನನಗೆ ಆದೇಶವನ್ನು ಮಾಡುತ್ತಿದ್ದೀಯೆ.

ಅಪಿ ಚೈತತ್ ಪುರಾ ಪ್ರೋಕ್ತಂ ನಿಪುಣೈರ್ಮನುಜೋತ್ತಮೈಃ |
ಏಕಸ್ತು ಕುರುತೇ ಪಾಪಂ ಸ್ವಜಾತಿಸ್ತೇನ ಹನ್ಯತೇ ॥31॥
ನಿಪುಣನಾದ ಮನುಷ್ಯಶ್ರೇಷ್ಠರು ಹಿಂದೆಯೇ ಹೀಗೆ ಹೇಳಿದ್ದಾರೆ: ಒಬ್ಬ ವ್ಯಕ್ತಿಯು ಪಾಪವನ್ನು ಮಾಡುತ್ತಾನೆ. ಅದರಿಂದ ಅವನ ಜಾತಿಯವರೆಲ್ಲರೂ ವಧೆಗೆ ಈಡಾಗುತ್ತಾರೆ.
ಗತಸ್ತ್ವಂ ಧರ್ಮರಾಜಸ್ಯ ವಿಷಯಂ ನಾತ್ರ ಸಂಶಯಃ |
ಅದೂಷಿತಮಿಮಂ ಸರ್ವಂ ಸ್ವಜನಂ ಘಾತಯಿಷ್ಯಸಿ ॥32॥
ನೀನು ಯಮಧರ್ಮರಾಜನ ದೇಶವನ್ನು ತಲುಪಿದ್ದೀಯೆ ಎಂಬ ವಿಷಯದಲ್ಲಿ ಸಂಶಯವಿಲ್ಲ. ದುಷ್ಟರಲ್ಲದ ಈ ಎಲ್ಲಾ ಸ್ವಜನರನ್ನೂ ನೀನು ಕೊಲ್ಲಿಸುತ್ತಿದ್ದೀಯೆ.
ಏತತ್ ತು ಮೇ ದುಃಖತರಂ ಯೇನಾಹಂ ಭ್ರಾತೃಸೌಹೃದಾತ್ |
ವಿದಿತಾರ್ಥಾ ಭವಿಷ್ಯಾಮಿ ತುಷ್ಟೋ ಭವ ಕುಲಕ್ಷಯಾತ್ ॥33॥
ಇದು ನನಗೆ ಅತ್ಯಂತ ದುಃಖಕರವಾದದು. ಏಕೆಂದರೆ ನಿನ್ನ ಮೇಲಿನ ಸ್ನೇಹದಿಂದ ನಾನು ಹೇಳಿದ ಮಾತುಗಳು ನಿಜವಾಗುವುದನ್ನು ನಾನು ನೋಡುವೆನು. ಕುಲಕ್ಷಯವನ್ನು ಮಾಡಿ ಸಂತೋಷ ಪಡು.
ಗಚ್ಛ ಶೀಘ್ರಮಿತಸ್ತ್ವಂ ಹಿ ಸ್ವಮೇವ ಭವನಂ ಶುಭಮ್ |
ಕಿಂಚಿತ್ ಕಾರ್ಯಂ ಸಮುದ್ದಿಶ್ಯ ಸುರಾಮನ್ನಂ ಚ ಕಾರಯ ॥34॥
ಕೃತೇ ಚಾನ್ನೇ ಸುರಾಯಾಂ ಚ ಪ್ರೇಷಯಿಷ್ಯಸಿ ಮೇ ಪುನಃ |
ತಾಮಹಂ ಪ್ರೇಷಯಿಷ್ಯಾಮಿ ಮಧ್ವನ್ನಾರ್ಥಂ ತವಾಂತಿಕಮ್ ॥35॥
ನೀನು ಬೇಗ ನಿನ್ನ ಮನೆಗೆ ಹಿಂದಿರುಗು. ಯಾವುದೋ ಒಂದು ಉದ್ದೇಶದಿಂದ ಮದ್ಯವನ್ನು ಮತ್ತು ಅನ್ನವನ್ನು ಮಾಡಿಸು. ಅನ್ನವು ಮತ್ತು ಮದ್ಯವು ಸಿದ್ಧವಾಗುತ್ತಿರಲು ನನಗೆ ದೂತರನ್ನು ಕಳುಹಿಸು. ನಾನು ಅವಳನ್ನು ಅದನ್ನು ತರಲು ನಿನ್ನ ಬಳಿಗೆ ಕಳುಹಿಸುವೆನು.
ತತಃ ಸಂಪ್ರೇಷಿತಾಮೇನಾಂ ವಿಜನೇ ನಿರವಗ್ರಹಾಮ್ |
ಸಾಂತ್ವಯೇಥಾ ಯಥಾನ್ಯಾಯಂ ಯದಿ ಸಾ ಚ ಸಹಿಷ್ಯತಿ ॥36॥
ಸದ್ಯಃ ಕೃತಮಿದಂ ಸರ್ವಂ ಶೇಷಮತ್ರಾನುಚಿಂತಯ ॥37॥
ನಾನು ಅವಳನ್ನು ಕಳುಹಿಸಿದ ಮೇಲೆ ಏಕಾಂತದಲ್ಲಿ ಬಲಾತ್ಕಾರವನ್ನು ಮಾಡದೇ ಅವಳು ಸಹಿಸುವುದಾದರೆ ನ್ಯಾಯದಿಂದ ಅವಳನ್ನು ಸಮಾಧಾನಪಡಿಸು. ನಾನು ಇವೆಲ್ಲವನ್ನೂ ಈಗಲೇ ಮಾಡುತ್ತೇನೆ. ಉಳಿದ ಕಾರ್ಯವನ್ನು ನೀನು ಚಿಂತಿಸು.
ಸುದೇಷ್ಣಯೈವಮುಕ್ತಸ್ತು ಕೀಚಕಃ ಕಾಲಚೋದಿತಃ |
ತ್ವರಮಾಣಃ ಪ್ರಚಕ್ರಾಮ ಸ್ವಗೃಹಂ ರಾಜವೇಶ್ಮನಃ ॥38॥
ಸುದೇಷ್ಣೆಯಿಂದ ಹೀಗೆ ಹೇಳಲ್ಪಟ್ಟ ಕೀಚಕನು ಕಾಲಚೋದಿತನಾಗಿ ರಾಜನ ಅರಮನೆಯಿಂದ ತನ್ನ ಮನೆಗೆ ಶೀಘ್ರವಾಗಿ ಹೊರಟನು.
ಆಗಮ್ಯ ಚ ಗೃಹಂ ರಮ್ಯಂ ಸುರಾಮನ್ನಂ ಚಕಾರ ಹ |
ಅಜೈಡಕಂ ಚ ಸುಕೃತಂ ಬಹೂಂಶ್ಚೋಚ್ಚಾವಚಾನ್ ಮೃಗಾನ್ ॥39॥
ಭಕ್ಷ್ಯಾಂಶ್ಚ ವಿವಿಧಾಕಾರಾನ್ ಬಹೂಂಶ್ಚೋಚ್ಚಾವಚಾಂಸ್ತದಾ |
ಕಾರಯಾಮಾಸ ಕುಶಲೈರನ್ನಪಾನಂ ಸುಸಂಸ್ಕೃತಮ್ ॥40॥
ತನ್ನ ಮನೆಗೆ ಹಿಂದಿರುಗಿ ಅವನು ಸುರೆಯನ್ನೂ ಮತ್ತು ಆಡು ಕುರಿಗಳ ಮಾಂಸದಿಂದ ಮತ್ತು ಬೇರೆಯ ಮೃಗಗಳ ಮಾಂಸಗಳಿಂದ ವಿವಿಧವಾದ ಭಕ್ಷ್ಯಗಳನ್ನೂ ಅನೇಕವಿಧವಾಗಿ ಅನ್ನ-ಪಾನವನ್ನು ಮಾಡುವುದರಲ್ಲಿ ಕುಶಲರಾದವರಿಂದ ಮಾಡಿಸಿದನು.
ತ್ವರಾವಾನ್ ಕಾಲಪಾಶೇನ ಕಂಠೇ ಬದ್ಧಃ ಪಶುರ್ಯಥಾ |
ನಾವಬುಧ್ಯತ ಮೂಢಾತ್ಮಾ ಮರಣಂ ಸಮುಪಸ್ಥಿತಮ್ ॥41॥
ತ್ವರೆಯಿಂದ ಕೂಡಿದ ಆ ಮೂಢಾತ್ಮನು ಕಂಠದಲ್ಲಿ ಬದ್ಧವಾದ ಪಶುವಿನಂತೆ ಕಾಲಪಾಶದಿಂದ ಬದ್ಧನಾಗಿ ಸಮೀಪದಲ್ಲಿದ್ದ ಮರಣವನ್ನು ತಿಳಿಯಲಿಲ್ಲ.
ಸಂಪಾಕಾಯಾಂ ಸುರಾಯಾಂ ತು ಕೃತೇ ಚಾನ್ನೇ ಸುಸಂಸ್ಕೃತೇ |
ಕೀಚಕಃ ಪುನರಾಗಮ್ಯ ಸುದೇಷ್ಣಾಂ ವಾಕ್ಯಮಬ್ರವೀತ್ ॥42॥
ಅನ್ನ ಮತ್ತು ಮದ್ಯಗಳು ಚೆನ್ನಾಗಿ ಸಿದ್ಧವಾದ ಮೇಲೆ ಕೀಚಕನೇ ಪುನಃ ಬಂದು ಸುದೇಷ್ಣೆಯನ್ನು ಕುರಿತು ಹೇಳಿದನು.
ಮಧು ಮಾಂಸಂ ಬಹುವಿಧಂ ಭಕ್ಷ್ಯಾಶ್ಚ ವಿವಿಧಾಃ ಕೃತಾಃ |
ಸುದೇಷ್ಣೇ ಬ್ರೂಹಿ ಸೈರಂಧ್ರೀಂ ಯಥಾ ಸಾ ಮೇ ಗೃಹಂ ವ್ರಜೇತ್ ॥
ಕೇನಚಿತ್ತ್ವದ್ಯ ಕಾರ್ಯೇಣ ತ್ವರ ಶೀಘ್ರಂ ಮಮ ಪ್ರಿಯಮ್ ॥44॥
ಬಹುವಿಧವಾದ ಭಕ್ಷ್ಯಭೋಜ್ಯಗಳು, ಮಧುಮಾಂಸಗಳು ಸಿದ್ಧವಾಗಿವೆ. ಸುದೇಷ್ಣೆಯೇ, ಸೈರಂಧ್ರಿಯು ಯಾವುದಾದರೂ ಕಾರ್ಯವನ್ನು ಉದ್ದೇಶಿಸಿ ನನ್ನ ಮನೆಗೆ ಬರುವಂತೆ ಮಾಡು. ನನ್ನ ಪ್ರಿಯವನ್ನು ಉಂಟುಮಾಡುವುದಕ್ಕೆ ಶೀಘ್ರವಾಗಿ ತ್ವರೆ ಮಾಡು.
ಅಹಂ ಹಿ ಶರಣಂ ದೇವಂ ಪ್ರಪದ್ಯೇ ವೃಷಭಧ್ವಜಮ್ |
ಸಮಾಗಮಂ ಮೇ ಸೈರಂಧ್ರ್ಯಾ ಮರಣಂ ವಾ ದಿಶೇರಿತಿ ॥45॥
ನಾನು ಈ ದಿನ ದೇವನಾದ ವೃಷಧ್ವಜನನ್ನು ಶರಣುಹೊಂದಿ ನನಗೆ ಸೈರಂಧ್ರಿಯ ಸಮಾಗಮವನ್ನಾಗಲೀ, ಮರಣವನ್ನಾಗಲೀ ಕೊಡು ಎಂದು ಕೇಳುತ್ತೇನೆ.
ವೈಶಂಪಾಯನಃ
ಸಾ ತಮಾಹ ವಿನಿಃಶ್ವಸ್ಯ ಪ್ರತಿಗಚ್ಛ ಸ್ವಕಂ ಗೃಹಮ್ |

ಏಷಾऽಹಮಪಿ ಸೈರಂಧ್ರೀಂ ಸುರಾರ್ಥೇ ತೂರ್ಣಮಾದಿಶೇ ॥46॥
ವೈಶಂಪಾಯನ ಅವಳು ನಿಟ್ಟುಸಿರನ್ನು ಬಿಟ್ಟು ಅವನನ್ನು ಕುರಿತು ನಿನ್ನ ಮನೆಗೆ ಹಿಂದಿರುಗು. ನಾನು ಸುರೆಯನ್ನು ತರಲು ಸೈರಂಧ್ರಿಗೆ ಬೇಗನೇ ಆದೇಶ ಮಾಡುತ್ತೇನೆ ಎಂದು ಹೇಳಿದಳು.
ಏವಮುಕ್ತಸ್ತು ಪಾಪಾತ್ಮಾ ಕೀಚಕಸ್ತ್ವರಿತಂ ಪುನಃ |
ಸ್ವಗೃಹಂ ಪ್ರಾವಿಶತ್ ತೂರ್ಣಂ ಸೈರಂಧ್ರೀಗತಮಾನಸಃ ॥47॥
ಹೀಗೆ ಸುದೇಷ್ಣೆಯಿಂದ ಹೇಳಲ್ಪಟ್ಟ ಪಾಪಾತ್ಮನಾದ ಕೀಚಕನು ಸೈರಂಧ್ರಿಯಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ ಬೇಗ ತನ್ನ ಮನೆಗೆ ಹಿಂದಿರುಗಿದನು.
ಕೀಚಕಂ ತು ಗತಂ ಜ್ಞಾತ್ವಾ ತ್ವರಮಾಣಂ ಸ್ವಕಂ ಗೃಹಮ್ |
ಸೈರಂಧ್ರೀಂ ತತ ಆಹೂಯ ಸುದೇಷ್ಣಾ ವಾಕ್ಯಮಬ್ರವೀತ್ ॥48॥
ಗಚ್ಛ ಸೈರಂಧ್ರಿ ಮತ್ಪ್ರೀತ್ಯೈ ಕೀಚಕಸ್ಯ ನಿವೇಶನಮ್ |
ಸುರಾಮಾನಯ ಸುಶ್ರೋಣಿ ತೃಷಿತಾऽಹಂ ವಿಲಾಸಿನಿ ॥49॥
ಕೀಚಕನು ತ್ವರೆಯಿಂದ ತನ್ನ ಮನೆಗೆ ಹೊರಟುದುದನ್ನು ನೋಡಿ ಸುದೇಷ್ಣೆಯು ಸೈರಂಧ್ರಿಯನ್ನು ಕರೆದು, ಸೈರಂಧ್ರಿಯೇ, ನನ್ನ ಪ್ರೀತಿಗಾಗಿ ಕೀಚಕನ ಮನೆಗೆ ಹೋಗು. ಸುಶ್ರೋಣಿಯೇ, ವಿಲಾಸಿನಿಯೇ, ನನಗೆ ಬಾಯಾರಿಕೆಯಾಗಿದೆ, ಸುರೆಯನ್ನು ತೆಗೆದುಕೊಂಡು ಬಾ ಎಂದು ಹೇಳಿದಳು.
ವೈಶಂಪಾಯನಃ
ಸುದೇಷ್ಣಯೈವಮುಕ್ತಾ ಸಾ ನಿಃಶ್ವಸಂತೀ ನೃಪಾತ್ಮಜಾ |
ಅಬ್ರವೀತ್ ಶೋಕಸಂತಪ್ತಾ ನಾಹಂ ತತ್ರ ವ್ರಜಾಮಿ ವೈ ॥50॥
ವೈಶಂಪಾಯನ ಸುದೇಷ್ಣೆಯಿಂದ ಹೀಗೆ ಹೇಳಲ್ಪಟ್ಟ ರಾಜಕುಮಾರಿಯಾದ ದ್ರೌಪದಿಯು ನಿಟ್ಟುಸಿರನ್ನು ಬಿಡುತ್ತಾ ಶೋಕಸಂತಪ್ತಳಾಗಿ ನಾನು ಅಲ್ಲಿಗೆ ಹೋಗುವುದಿಲ್ಲ ಎಂದು ಹೇಳಿದಳು.
ಸೂತಪುತ್ರೋ ಹಿ ಮಾಂ ಭದ್ರೇ ಕಾಮಾತ್ಮಾ ಚಾಭಿಮನ್ಯತೇ |
ನ ಗಚ್ಛೇಯಮಹಂ ತಸ್ಯ ರಾಜಪುತ್ರಿ ನಿವೇಶನಮ್ ॥51॥
ತ್ವಮೇವ ಭದ್ರೇ ಜಾನಾಸಿ ಯಥಾ ಸ ನಿರಪತ್ರಪಃ ॥52॥
ಮಂಗಳಸ್ವರೂಪಳೇ, ಕಾಮಾತ್ಮನಾದ ಸೂತಪುತ್ರನು ನನ್ನನ್ನು ಬಯಸುತ್ತಾನೆ. ರಾಜಪುತ್ರಿಯೇ, ಆದ್ದರಿಂದ ಅವನ ಮನೆಗೆ ನಾನು ಹೋಗುವುದಿಲ್ಲ. ಭದ್ರಳೇ, ಅವನು ಹೀಗೆ ನಾಚಿಕೆಗೆಟ್ಟಿದ್ದಾನೆಂದು ನೀನೇ ತಿಳಿದಿದ್ದೀಯೆ.
ಸಮಯಶ್ಚ ಕೃತೋ ಭದ್ರೇ ತ್ವಯಾ ಪ್ರಥಮಸಂಗಮೇ |
ತಥಾ ನಿವಸಮಾನಾಯಾಂ ಯಥಾऽಹಂ ನಾನ್ಯಚಾರಿಣೀ ॥53॥
ಎಲೌ ಮಂಗಳಸ್ವರೂಪಳೇ, ನಮ್ಮ ಪ್ರಥಮ ಸಮಾಗಮದಲ್ಲಿಯೇ ನಾನು ನನ್ನ ಶರತ್ತುಗಳನ್ನು ಹೇಳಿದ್ದೇನೆ. ಹಾಗೆ ನಾನು ವಾಸಮಾಡುತ್ತಿರುವಾಗ ಇನ್ನೊಬ್ಬನ ಬಳಿಗೆ ಹೋಗುವುದಿಲ್ಲ.
ಕೀಚಕಸ್ತು ಸುಕೇಶಾಂತೇ ಮೂಢೋ ಮದನದರ್ಪಿತಃ |
ಸ ಮಾಮಿಹ ಗತಾಂ ದೃಷ್ಟ್ವಾ ವ್ಯವಸ್ಯತಿ ನಿರಾಕೃತಃ ॥54॥
ಕಥಂ ನು ವೈ ತತ್ರ ಗತಾಂ ಮರ್ಷಯೇನ್ಮಾಮಬಾಂಧವಾಮ್ ॥55॥
ಒಳ್ಳೆಯ ಬೈತಲೆ ಉಳ್ಳವಳೇ, ನನ್ನಿಂದ ನಿರಾಕೃತನಾಗಿರುವ ಕೀಚಕನು ನಾನು ಅಲ್ಲಿಗೆ ಹೋದರೆ ಮದನದರ್ಪಿತನಾಗಿ, ಮೂಢನಾಗಿ ಅಕಾರ್ಯವನ್ನು ಮಾಡಲು ನಿಶ್ಚಯಿಸುತ್ತಾನೆ. ನಾನು ಬಾಂಧವರಿಲ್ಲದೆ ಒಬ್ಬಳೇ ಅಲ್ಲಿಗೆ ಹೋದರೆ ಅವನು ಹೇಗೆ ಸಹಿಸುತ್ತಾನೆ?
ಬಹ್ವ್ಯಃ ಸಂತಿ ತವ ಪ್ರೇಷ್ಯಾ ರಾಜಪುತ್ರಿ ವಶಾನುಗಾಃ |
ಅನ್ಯಾಂ ಪ್ರೇಷಯ ಕೈಕೇಯಿ ಸಂರಕ್ಷ್ಯಾऽಹಮಿಹ ತ್ವಯಾ ॥56॥
ರಾಜಪುತ್ರಿಯೇ, ನಿನ್ನ ವಶವರ್ತಿಯರಾದ ಅನೇಕ ಸೇವಕಿಯರು ಇದ್ದಾರೆ. ಕೈಕೇಯಿಯೇ, ಬೇರೆ ಯಾರನ್ನಾದರೂ ಕಳುಹಿಸು. ನೀನು ನನ್ನನ್ನು ಇಲ್ಲಿ ಸಂರಕ್ಷಣೆ ಮಾಡಬೇಕಷ್ಟೆ?
ಕೀಚಕಸ್ಯಾಲಯಂ ದೇವಿ ನ ಯಾಮಿ ಭಯಕಂಪಿತಾ |
ಯದ್ಯಸ್ತ್ಯನ್ಯಚ್ಚ ತೇ ಕರ್ಮ ಕರೋಮ್ಯತಿಸುದುಷ್ಕರಮ್ ॥57॥
ದೇವಿಯೇ, ಭಯಕಂಪಿತಳಾದ ನಾನು ಕೀಚಕನ ಮನೆಗೆ ಹೋಗುವುದಿಲ್ಲ. ನಿನ್ನ ಬೇರೆ ಏನಾದರೂ ಕೆಲಸವಿದ್ದರೆ ಹೇಳು. ಕಷ್ಟವಾದರೂ ಅದನ್ನು ಮಾಡುತ್ತೇನೆ.
ವೈಶಂಪಾಯನಃ
ಏವಮುಕ್ತಾ ತು ಪಾಂಚಾಲ್ಯಾ ದೈವಯೋಗೇನ ಕೈಕಯೀ |
ತಾಂ ವಿರಾಟಸ್ಯ ಮಹಿಷೀ ಕ್ರುದ್ಧಾ ಭೂಯೋऽನ್ವಶಾಸತ ॥58॥
ವೈಶಂಪಾಯನ ಹೀಗೆ ದ್ರೌಪದಿಯಿಂದ ಹೇಳಲ್ಪಟ್ಟ ವಿರಾಟನ ಮಹಿಷಿಯಾದ ಕೈಕೇಯಿಯು ದೈವಪ್ರೇರಣೆಯಂತೆ ಕೋಪಗೊಂಡು ಪುನಃ ಆಜ್ಞೆಯನ್ನು ಮಾಡಿದಳು.
ಕೀಚಕಂ ಚೈವ ಗಚ್ಛ ತ್ವಂ ಬಲಾತ್ಕಾರೇಣ ಚೋದಿತಾ |
ನಾಸ್ತಿ ಮೇऽನ್ಯಾ ತ್ವಯಾ ತುಲ್ಯಾ ಸಾ ಮೇ ಶೀಘ್ರತರಂ ವ್ರಜ ॥59॥
ಅವಶ್ಯಂ ತ್ವೇವ ಗಂತವ್ಯಂ ಕಿಮರ್ಥಂ ಮಾಂ ವಿವಕ್ಷಸಿ |
ಶೀಘ್ರಂ ಗಚ್ಛ ತ್ವರಸ್ವೇತಿ ಮತ್ಪ್ರೀತಿವಶಮಾಚರ ॥60॥

ನ ಹೀದೃಶೋ ಮಮ ಭ್ರಾತಾ ಕಿಂ ತ್ವಂ ಸಮಭಿಶಂಕಸೇ ॥61॥
ನಾನು ಬಲಾತ್ಕಾರ ಮಾಡಿ ನಿನಗೆ ಹೇಳುತ್ತಿದ್ದೇನೆ, ಕೀಚಕನ ಮನೆಗೆ ಹೋಗು. ನಿನಗೆ ಸಮಾನಳಾದ ಯಾವ ಸೇವಕಿಯೂ ನನಗೆ ಇಲ್ಲ. ಆದ್ದರಿಂದ ಬೇಗ ಹೊರಡು. ನೀನು ಖಂಡಿತವಾಗಿ ಹೋಗಬೇಕು. ಏಕೆ ನನ್ನ ಜೊತೆಯಲ್ಲಿ ಮಾತನಾಡುತ್ತಿದ್ದೀಯೆ? ನೀನು ಬೇಗ ಹೋಗಿ ನನ್ನ ಪ್ರೀತಿಯನ್ನು ಸಂಪಾದಿಸಬೇಕು. ನೀನು ನನ್ನ ತಮ್ಮನನ್ನು ಶಂಕಿಸುವಂತೆ ಅವನು ಕೆಟ್ಟಸ್ವಭಾವದವನಲ್ಲ (ಎಂದು ಹೇಳಿದಳು).
ವೈಶಂಪಾಯನಃ
ಉಕತತ್ವ ಚೈನಾಂ ಬಲಾಚ್ಚೈವ ವಿನಿಯುಜ್ಯ ಪ್ರಭುತ್ವತಃ |
ಭಾಜನಂ ಪ್ರದದೌ ಚಾಸ್ಯೈ ಸಪಿಧಾನಂ ಹಿರಣ್ಮಯಮ್ ॥62॥
ಯಾ ಸುರಾ ಜಾತಮಂಥಾ ಚ ತಾಮಾನಯ ಸುರಾಮಿತಿ ॥63॥
ಹೀಗೆ ಬಲಾತ್ಕಾರದಿಂದ ಹೇಳಿ, ಒಡತಿಯಾದ್ದರಿಂದ ಆಜ್ಞೆಯನ್ನು ಮಾಡಿ, ಸಿದ್ದವಾದ ಸುರೆಯನ್ನು ತೆಗೆದುಕೊಂಡು ಬಾ ಎಂದು ಹೇಳಿ ಮುಚ್ಚಳವಿದ್ದ ಚಿನ್ನದ ಪಾತ್ರೆಯನ್ನು ಅವಳ ಕೈಗೆ ಕೊಟ್ಟಳು.
ಸಾ ಶಂಕಮಾನಾ ರುದತೀ ವೇಪಂತೀ ದ್ರುಪದಾತ್ಮಜಾ |
ದೈವತೇಭ್ಯೋ ನಮಸ್ಕೃತ್ಯ ಶ್ವಶುರೇಭ್ಯಸ್ತಥಾಽಬ್ರವೀತ್ ॥64॥
ಯಥಾಹಂ ಪಾಂಡುಪುತ್ರೇಭ್ಯಃ ಪಂಚಭ್ಯೋ ನಾನ್ಯಚಾರಿಣೀ |
ತೇನ ಸತ್ಯೇನ ಮಾಂ ದೃಷ್ಟ್ವಾ ಕೀಚಕೋ ಮಾ ವಶಂ ನಯೇತ್ ॥
ದ್ರುಪದಾತ್ಮಜೆಯು ಶಂಕಿಸುತ್ತಾ ಅಳುತ್ತಾ, ನಡುಗುತ್ತಾ ದೇವತೆಗಳಿಗೂ ತನ್ನ ಅತ್ತೆ ಮಾವರಿಗೂ (ಮನಸ್ಸಿನಲ್ಲಿ) ನಮಸ್ಕಾರವನ್ನು ಮಾಡಿ, ಹೇಗೆ ನಾನು ಐದುಜನ ಪಾಂಡುಪುತ್ರರನ್ನು ಬಿಟ್ಟು ಮನಸ್ಸಿನಲ್ಲಿಯೂ ಬೇರೆಯವರನ್ನು ಆಲೋಚಿಸಿಲ್ಲವೋ ಆ ಸತ್ಯವನ್ನು ಗಮನಿಸಿ ದೇವತೆಗಳು ನಾನು ಕೀಚಕನಿಗೆ ವಶವಾಗದಂತೆ ಮಾಡಲಿ ಎಂದು ಪ್ರಾರ್ಥಿಸಿಕೊಂಡಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಅಷ್ಟಾದಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ತೃತೀಯೋಽಧ್ಯಾಯಃ ॥|
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
ಮಹಾಭಾರತತಾತ್ಪರ್ಯನಿರ್ಣಯಃ
ಬಲಾತ್ ತಯಾ ಪ್ರೇರಿತಾ ತದ್ ಗೃಹಾಯ
ಯದಾಽಗಮತ್ ತೇನ ಹಸ್ತೇ ಗೃಹೀತಾ |
ವಿಧೂಯ ತಂ ಪ್ರಾದ್ರುವತ್ ಸಾ ಸಭಾಯೈ
ಸ್ಮೃತ್ವಾಽಽದಿತ್ಯಸ್ಥಂ ವಾಸುದೇವಂ ಪರೇಶಮ್ ॥22॥
ಸುದೇಷ್ಣೆ ಬಲಾತ್ಕಾರದಿಂದ ದ್ರೌಪದಿಯನ್ನು ಕೀಚಕನ ಮನೆಗೆ ಕಳಿಸಿದಳು. ದ್ರೌಪದಿ ಅಲ್ಲಿಗೆ ಹೋದಾಗ ಕೀಚಕ ಕೈಯಲ್ಲಿ ಹಿಡಿದ. ಅವಳು ಕೈಕೊಡವಿಕೊಂಡು ಪರಮೇಶ್ವರನಾದ ಸೂರ್ಯಾಂತರ್ಗತನಾದ ನಾರಾಯಣನನ್ನು ನೆನೆದು ಸಭೆಯ ಕಡೆಗೆ ಧಾವಿಸಿದಳು.
ಅನುದ್ರುತ್ಯೈನಾಂ ಪಾತಯಿತ್ವಾ ಪದಾ ಸ
ಸಂತಾಡಯಾಮಾಸ ತದಾ ರವಿಸ್ಥಿತಃ |
ನಾರಾಯಣೋ ಹೇತಿನಾಮ್ನೈವ ರಕ್ಷೋ
ನ್ಯಯೋಜಯತ್ ತದದೃಶ್ಯಂ ಸಮಾಗಾತ್ ॥23॥
ಕೀಚಕ ದ್ರೌಪದಿಯನ್ನು ಬೆನ್ನಟ್ಟಿಹೋಗಿ ಕೆಳಗೆ ಬೀಳಿಸಿ ಕಾಲಿಂದ ಒದ್ದ, ಆಗ ಸೂರ್ಯಾಂತರ್ಗತ ನಾರಾಯಣ ದ್ರೌಪದಿಯ ರಕ್ಷಣೆಗೆ ಹೇತಿ, ಎಂಬ ಹೆಸರಿನ ರಾಕ್ಷಸನನ್ನು ಕಳಿಸಿದ. ಆ ರಾಕ್ಷಸ ಅದೃಶ್ಯನಾಗಿ ಬಂದ.
ವಾಯುಸ್ತಮಾವಿಶ್ಯ ಚ ಕೀಚಕಂ ತಂ
ನ್ಯಪಾತಯತ್ತಾಂ ಸಮೀಕ್ಷ್ಯೈವ ಭೀಮಃ |
ಚುಕೋಪ ವೃಕ್ಷಂ ಚ ಸಮೀಕ್ಷಮಾಣಂ
ತಂ ವಾರಯಾಮಾಸ ಯುಧಿಷ್ಠಿರೋಽಗ್ರಜಃ ॥24॥
ರಾಕ್ಷಸನಲ್ಲಿ ವಾಯು ಆವೇಶಗೊಂಡು ಕೀಚಕನನ್ನು ಕೆಡವಿದ. ದ್ರೌಪದಿಯನ್ನು ಆ ಸ್ಥಿತಿಯಲ್ಲಿ ಕಂಡೊಡನೆ ಭೀಮ ಕುಪಿತನಾದ. ಒಂದು ಮರವನ್ನು ದಿಟ್ಟಿಸತೊಡಗಿದ. ಆ ಭೀಮನನ್ನು ಅಣ್ಣನಾದ ಯುಧಿಷ್ಠಿರ ತಡೆದ.
* * * * *
ಹತ್ತೊಂಬತ್ತನೆಯ ಅಧ್ಯಾಯ
ಕೀಚಕಗೃಹಕ್ಕೆ ದ್ರೌಪದಿಯ ಪ್ರಯಾಣ. ಸೂರ್ಯನಿಂದ ದ್ರೌಪದಿಯ ರಕ್ಷಣೆಗಾಗಿ ರಾಕ್ಷಸನ ಪ್ರೇಷಣ. ಕೀಚಕನಿಂದ ದ್ರೌಪದಿಗೆ ಪಾದಘಾತ.
ವಿರಾಟ ಮತ್ತು ಸುದೇಷ್ಣೆಯರನ್ನು ಕುರಿತು ದ್ರೌಪದಿಯ ರೋಷವಚನಗಳು.
ವೈಶಂಪಾಯನಃ
ಅಕೀರ್ತಯತ ಸುಶ್ರೋಣೀ ಧರ್ಮಂ ಶಕ್ರಂ ದಿವಾಕರಮ್ |
ಮಾರುತಂ ಚಾಶ್ವಿನೌ ದೇವೌ ಕುಬೇರಂ ವರುಣಂ ಯಮಮ್ ॥1॥
ರುದ್ರಮಗ್ನಿಂ ಭಗಂ ವಿಷ್ಣುಂ ಸ್ಕಂದಂ ಪೂಷಣಮೇವ ಚ |
ಸಾವಿತ್ರೀಸಹಿತಂ ಚಾಪಿ ಬ್ರಹ್ಮಾಣಂ ಪರ್ಯಕೀರ್ತಯತ್ ॥2॥

ವೈಶಂಪಾಯನ ಸುಂದರಿಯಾದ ದ್ರೌಪದಿಯು ಕೀಚಕನ ಮನೆಗೆ ಹೋಗುತ್ತಾ ಯಮನನ್ನೂ, ಇಂದ್ರನನ್ನೂ, ಸೂರ್ಯನನ್ನೂ, ವಾಯುವನ್ನೂ, ಅಶ್ವಿನೀದೇವತೆಗಳನ್ನೂ, ಕುಬೇರನನ್ನೂ, ವರುಣನನ್ನೂ, ರುದ್ರನನ್ನೂ, ಅಗ್ನಿಯನ್ನೂ, ಭಗನನ್ನೂ, ವಿಷ್ಣುವನ್ನೂ, ಸ್ಕಂದ-ಪೂಷಣರನ್ನೂ ಮತ್ತು ಸಾವಿತ್ರೀ ಸಹಿತನಾದ ಬ್ರಹ್ಮನನ್ನೂ ಸ್ಮರಿಸಿ ಕೀರ್ತಿಸಿದಳು.
ಇತ್ಯೇವಂ ಮೃಗಶಾವಾಕ್ಷೀ ಸುಶ್ರೋಣೀ ಧರ್ಮಚಾರಿಣೀ |
ಉಪಾತಿಷ್ಠತ ಸಾ ಸೂರ್ಯಂ ಮುಹೂರ್ತಮಬಲಾ ತದಾ ॥3॥
ಹರಿಣಾಕ್ಷಿಯೂ, ಸುಂದರಿಯೂ ಧರ್ಮಚಾರಿಣಿಯೂ ಆದ ಆ ಅಬಲೆಯು ಒಂದು ಮುಹೂರ್ತದ ಕಾಲ ಸೂರ್ಯನನ್ನು ಪ್ರಾರ್ಥಿಸಿದಳು.
ಸ ತಸ್ಯ ತನುಮಧ್ಯಾಯಾಃ ಸರ್ವಂ ಸೂರ್ಯೋಽವಬುದ್ಧವಾನ್ |
ಅಂತರ್ಹಿತಂ ತತಸ್ತಸ್ಯಾ ರಕ್ಷೋ ರಕ್ಷಾರ್ಥಮಾದಿಶತ್ ॥4॥
ತಚ್ಚೈನಾಂ ನಾಜಹಾತ್ ತತ್ರ ಸರ್ವಾವಸ್ಥಾಸ್ವನಿಂದಿತಾಮ್ ॥5॥
ಆ ತನುಮಧ್ಯಳಾದ ಸುಂದರಿಯ ಎಲ್ಲ ಅಭಿಪ್ರಾಯವನ್ನು ಸೂರ್ಯನು ತಿಳಿದು ಅದೃಶ್ಯನಾದ ಹೇತಿ ಎಂಬ ಒಬ್ಬ ರಾಕ್ಷಸನನ್ನು ಅವಳ ರಕ್ಷಣೆಗಾಗಿ ಕಳುಹಿಸಿದನು. ಆ ರಾಕ್ಷಸನಾದರೂ ಅನಿಂದಿತಳಾದ ಅವಳನ್ನು ಯಾವ ಕಾಲದಲ್ಲಿಯೂ ಬಿಡಲಿಲ್ಲ (ಬಿಡದೇ ರಕ್ಷಿಸಿದನು).
ಸಾ ಪ್ರುತಸ್ತೇ ಸುಕೇಶಾಂತಾ ತ್ವರಮಾಣಾ ಪುನಃ ಪುನಃ |
ವಿಳಂಬಮಾನಾ ವಿವಶಾ ಕೀಚಕಸ್ಯ ನಿವೇಶನಮ್ ॥6॥
ಒಳ್ಳೆಯ ಬೈತಲೆಯುಳ್ಳ ಅವಳು ಸುದೇಷ್ಣೆಯ ಆದೇಶಕ್ಕೆ ವಶಳಾಗಿ ಮತ್ತೆ ಮತ್ತೆ ಬೇಗ ನಡೆಯುತ್ತಾ ಮಧ್ಯೆ ಮಧ್ಯೆ ನಿಲ್ಲುತ್ತಾ ಕೀಚಕನ ಮನೆಯನ್ನು ಪ್ರವೇಶಿಸಿದಳು.
ತಾಂ ಮೃಗೀಮಿವ ವಿತ್ರಸ್ತಾಂ ದೃಷ್ಟ್ವಾ ಹೃಷ್ಟಃ ಸಮಾಗತಾಮ್ |
ಉತ್ಪಪಾತಾಸನಾತ್ ತೂರ್ಣಂ ನಾವಂ ಲಬ್ಧ್ವೇವ ಪಾರಗಃ ॥7॥
ಶ್ಲಕ್ಷ್ಣಂ ಚೋವಾಚ ವಾಕ್ಯಂ ಸ ಕೀಚಕಃ ಕಾಮಮೂರ್ಚ್ಛಿತಃ ॥8॥
ಹೆದರಿದ ಹೆಣ್ಣು ಜಿಂಕೆಯಂತೆ ತನ್ನ ಮನೆಗೆ ಬಂದ ಅವಳನ್ನು ನೋಡಿ ಸಂತೋಷಗೊಂಡ ಕೀಚಕನು ನದಿಯನ್ನು ದಾಟುವವನು ದೋಣಿಯನ್ನು ಪಡೆದಂತೆ ಬೇಗ ತನ್ನ ಆಸನದಿಂದ ಹಾರಿ ಮೇಲೆದ್ದನು. ಕಾಮಮೂರ್ಛಿತನಾದ ಕೀಚಕನು ಅವಳನ್ನು ಕುರಿತು ಮಧುರವಾಗಿ ಮಾತನಾಡಿದನು.
ಸ್ವಾಗತಂ ತೇ ಸುಕೇಶಾಂತೇ ಸುವ್ಯುಷ್ಟಾ ರಜನೀ ಮಮ |
ಸಾಧು ಮೇ ತ್ವಮನುಪ್ರಾಪ್ತಾ ಚಿರಸ್ಯ ಭವನಂ ತು ಮೇ ॥9॥
ಒಳ್ಳೆಯ ಬೈತಲೆಯುಳ್ಳವಳೇ, ನಿನಗೆ ಸ್ವಾಗತ. ಈ ದಿನ ರಾತ್ರಿಯು ಕಳೆದು ನನಗೆ ಸುಪ್ರಭಾತವಾಗಿದೆ. ಬಹಳ ಕಾಲದ ಮೇಲೆ ನೀನು ನನ್ನ ಮನೆಗೆ ಬಂದಿದ್ದೀಯೆ. ಬಹಳ ಒಳ್ಳೆಯದಾಯಿತು.
ಕುರುಷ್ವ ಚ ಮಯಿ ಪ್ರೀತಿಂ ವಶಂ ಚೋಪಾನಯಸ್ವ ಮಾಮ್ |
ಪ್ರತಿಗೃಹ್ಣೀಷ್ವ ಮೇ ಭೋಗಾನ್ ತ್ವದರ್ಥಮುಪಕಲ್ಪಿತಾನ್ ॥10॥
ನನ್ನಲ್ಲಿ ಪ್ರೀತಿಯನ್ನು ಮಾಡು. ನನ್ನನ್ನು ನಿನ್ನ ವಶನನ್ನಾಗಿ ಮಾಡಿಕೋ. ನಿನಗಾಗಿ ಸಿದ್ಧಪಡಿಸಿರುವ ಭೋಗಗಳನ್ನು ಸ್ವೀಕರಿಸು.
ಸರ್ವರುಗ್ಮಮಯೀಂ ಮಾಲಾಂ ಕುಂಡಲೇ ಚ ಹಿರಣ್ಮಯೇ ॥11॥
ಅನರ್ಘ್ಯಾನಿ ಚ ದಿವ್ಯಾನಿ ಕೌಶಿಕಾನ್ಯಜಿನಾನಿ ಚ |
ಅಸ್ತಿ ಮೇ ಶಯನಂ ದಿವ್ಯಂ ತ್ವದರ್ಥಮುಪಕಲ್ಪಿತಮ್ ॥12॥
ಪೂರ್ಣವಾಗಿ ಚಿನ್ನದಿಂದ ಮಾಡಿದ ಮಾಲೆಗಳು, ಸುವರ್ಣಮಯವಾದ ಕುಂಡಲಗಳು, ಬೆಲೆಬಾಳುವ ದಿವ್ಯವಾದ ರೇಷ್ಮೆ ವಸ್ತ್ರಗಳು ಮತ್ತು ಅಜಿನಗಳನ್ನು ಸ್ವೀಕರಿಸು. ನಿನಗಾಗಿ ನಾನು ದಿವ್ಯವಾದ ಶಯನವನ್ನು ಸಿದ್ಧಪಡಿಸಿದ್ದೇನೆ.
ರೋಹ ತತ್ರ ಮಯಾ ಸಾರ್ಧಂ ಪಿಬ ಶುದ್ಧಾಂ ಚ ವಾರುಣೀಮ್ |
ವಾಸಾಂಸಿ ಚಂದನಂ ಮಾಲ್ಯಂ ಧೂಪಶುದ್ಧಾಂ ಚ ವಾರುಣೀಮ್ ॥
ನನ್ನ ಜೊತೆಯಲ್ಲಿ ಆ ಶಯನವನ್ನು ಏರು. ಶುದ್ಧವಾದ ಸುರೆಯನ್ನು ಪಾನ ಮಾಡು. ವಸ್ತ್ರಗಳು, ಗಂಧಾದಿ ಲೇಪನಗಳು, ಮಾಲೆಗಳು, ಸುಗಂಧಯುಕ್ತವಾದ ಮದ್ಯ ಎಲ್ಲವನ್ನೂ ಸ್ವೀಕರಿಸು.
ಪ್ರತಿಗೃಹ್ಣೀಷ್ವ ಸುಶ್ರೋಣಿ ವಿಹರ ತ್ವಂ ಯಥೇಚ್ಛಸಿ ॥14॥
ಪ್ರೀತ್ಯಾ ಮೇ ಕುರು ಪದ್ಮಾಕ್ಷಿ ಪ್ರಸಾದಂ ಪ್ರಿಯದರ್ಶನೇ ॥15॥
ಸುಂದರಿಯೇ, ನಿನಗೆ ಇಷ್ಟಬಂದಂತೆ ವಿಹರಿಸು. ಪ್ರಿಯದರ್ಶನೆಯೇ, ಪದ್ಮಾಕ್ಷಿಯೇ, ಪ್ರೀತಿಯಿಂದ ನನಗೆ ಅನುಗ್ರಹವನ್ನು ಮಾಡು.
ಸ್ವಾಸ್ತೀರ್ಣಮಸ್ತಿ ಶಯನಂ ಸಿತಸೂಕ್ಷ್ಮೋತ್ತರಚ್ಛದಮ್ |
ಅತ್ರಾರುಹ್ಯ ಮಯಾ ಸಾರ್ಧಂ ಪಿಬೇಮಾಂ ವರವಾರುಣೀಮ್ ॥16॥
ಈ ಹಾಸಿಗೆಯು ಚೆನ್ನಾಗಿ ಹಾಸಲ್ಪಟ್ಟು ತೆಳುವಾದ ಬಿಳಿಯ ವಸ್ತ್ರದಿಂದ ಮುಚ್ಚಲ್ಪಟ್ಟಿದೆ. ನನ್ನ ಜೊತೆಯಲ್ಲಿ ಈ ಶಯನವನ್ನು ಏರಿ ಈ ಶ್ರೇಷ್ಠವಾದ ಮದ್ಯವನ್ನು ಪಾನ ಮಾಡು.
ಭಜಸ್ವ ಮಾಂ ವಿಶಾಲಾಕ್ಷಿ ಭರ್ತಾ ತೇ ಸದೃಶೋಽಸ್ಮ್ಯಹಮ್ |
ಉಪಸರ್ಪ ವರಾರೋಹೇ ಮೇರುಮರ್ಕಪ್ರಭಾ ಯಥಾ ॥17॥
ವಿಶಾಲಾಕ್ಷಿಯೇ, ನನ್ನನ್ನು ಸ್ವೀಕರಿಸು. ನಾನು ನಿನಗೆ ಸದೃಶನಾದ ಪತಿ. ವರಾರೋಹೆಯೇ, ಸೂರ್ಯನ ಕಾಂತಿಯು ಮೇರುಪರ್ವತವನ್ನು ಸೇರಿದಂತೆ ನನ್ನ ಬಳಿಗೆ ಬಾ.

ವೈಶಂಪಾಯನಃ
ಸಮ್ಮೂಢಃ ಕೀಚಕಸ್ತತ್ರ ಪ್ರಾಪ್ತಾಂ ರಾಜೀವಲೋಚನಾಮ್ |
ಅಬ್ರುವೀದ್ ದ್ರೌಪದೀಂ ದೃಷ್ಟ್ವಾ ದುರಾತ್ಮಾ ಹ್ಯಾತ್ಮಸಮ್ಮತೇಃ ||18||
ವೈಶಂಪಾಯನ ಸಮ್ಮೂಢನಾದ ದುರಾತ್ಮನಾದ ಕೀಚಕನು ಅಲ್ಲಿಗೆ ಬಂದ ರಾಜೀವಲೋಚನೆಯಾದ ದ್ರೌಪದಿಯನ್ನು ನೋಡಿ ತನ್ನನ್ನು ಅಂಗೀಕರಿಸುವಂತೆ ಕೇಳಿಕೊಂಡನು.
ಕೀಚಕೇನೈವಮುಕ್ತಾ ತು ಪಾಂಚಾಲೀ ವರಭಾಷಿಣೀ |
ಅಬ್ರುವೀತ್ ತಮನಾಚಾರಂ ನೇದೃಶಂ ವಕ್ತುಮರ್ಹಸಿ ||19||
ಕೀಚಕನಿಂದ ಹೀಗೆ ಹೇಳಲ್ಪಟ್ಟ ಶ್ರೇಷ್ಠವಾಗಿ ಮಾತನಾಡುವ ಪಾಂಚಾಲಿಯು ಆ ಅನಾಚಾರಿಯನ್ನು ಕುರಿತು ನೀನು ಹೀಗೆ ಮಾತನಾಡಬಾರದು ಎಂದು ಹೇಳಿದಳು.
ನಾಹಂ ಶಕ್ಯಾ ತ್ವಯಾ ಸ್ಪ್ರಷ್ಟುಂ ಶ್ವಪಾಕೇನೇವ ಬ್ರಾಹ್ಮಣೀ |
ಮಾ ಗಮಿಷ್ಯಸಿ ದುರ್ಬುದ್ಧೇ ಗತಿಂ ದುರ್ಗಾಂತರಾಂತರಾಮ್ ||20||
ಎಲೈ ದುರ್ಬುದ್ದಿಯೇ, ಚಂಡಾಲನು (ಶ್ವಪಚನು) ಬ್ರಾಹ್ಮಣ ಸ್ತ್ರೀಯನ್ನು ಮುಟ್ಟಲು ಸಾಧ್ಯವಿಲ್ಲದಂತೆ ನೀನು ನನ್ನನ್ನು ಮುಟ್ಟಲು ಸಾಧ್ಯವಿಲ್ಲ. ನೀನು ದುಃಖಮಯವಾದ ನರಕದ ಒಳಗಿರುವ ಅಂಧತಮಸ್ಸಿನ ಗತಿಯನ್ನು ಹೊಂದುವವನಾಗಬೇಡ.
ಯತ್ರ ಗಚ್ಛತಿ ಬಹವಃ ಪರದಾರಾಭಿಮರ್ಶಕಾಃ |
ನರಾಃ ಸಂಭಿನ್ನಮರ್ಯಾದಾಃ ಕೀಟಪುಂಜಗುಹಾಶಯಾಃ ||21||
ಧರ್ಮದ ಎಲ್ಲೆಯನ್ನು ಮೀರಿ ಪರಪತ್ನಿಯನ್ನು ಸ್ಪರ್ಶಮಾಡುವ ಎಲ್ಲ ಜನರೂ ಕಾಡಿನ ಗುಹೆಯಲ್ಲಿ ಸೇರಿದ ಕೀಟಸಮುದಾಯದಂತೆ ಹೋಗುವ ಸ್ಥಳಕ್ಕೆ ನೀನು ಹೋಗಬೇಡ.
ಅಪ್ರೈಷೀನ್ಮಾಂ ಸುರಾಹಾರೀಂ ಸುದೇಷ್ಣಾ ತ್ವನ್ನಿವೇಶನಮ್ |
ತಸ್ಯೈ ತ್ವಂ ದೇಹಿ ಮದಿರಾಂ ಭಗಿನೀ ತೃಷಿತಾ ತವ ||22||
ಸುದೇಷ್ಣೆಯು ಸುರೆಯನ್ನು ತರುವುದಕ್ಕೆ ನಿನ್ನ ಮನೆಗೆ ನನ್ನನ್ನು ಕಳುಹಿಸಿದ್ದಾಳೆ. ಅವಳಿಗಾಗಿ ಸುರೆಯನ್ನು ಕೊಡು. ನಿನ್ನ ಅಕ್ಕನು ಬಾಯಾರಿದ್ದಾಳೆ.
ಪಿಪಾಸಿತಾ ಚ ಕೈಕೇಯೀ ತೂರ್ಣಂ ಮಾಮಾದಿಶತ್ ತತಃ |
ದೀಯತಾಂ ಮೇ ಸುರಾ ಶೀಘ್ರಂ ಸೂತಪುತ್ರ ವ್ರಜಾಮ್ಯಹಮ್ ||23||
ಕೇಕೇಯ ದೇಶದವಳಾದ ಅವಳು ಬಾಯಾರಿಕೆಯಿಂದ ಕೂಡಿದವಳಾಗಿ ಬೇಗ ನಿನ್ನ ಮನೆಗೆ ಹೋಗುವಂತೆ ನನಗೆ ಆಜ್ಞೆ ಮಾಡಿದಳು. ಸೂತಪುತ್ರನೇ, ನನಗೆ ಬೇಗ ಸುರೆಯನ್ನು ಕೊಡು. ನಾನು ಇಲ್ಲಿಂದ ಹೊರಡುತ್ತೇನೆ.
ಕೀಚಕಃ
ಅನ್ಯಾ ಭದ್ರೇ ಹರಿಷ್ಯಂತಿ ರಾಜಪುತ್ರ್ಯಾಃ ಸುರಾಮಿಮಾಮ್ |
ಕಿಂ ತ್ವಂ ಯಾಸ್ಯಸಿ ಸುಶ್ರೋಣಿ ಮದರ್ಥಂ ತ್ವಮಿಹಾಗತಾ ||24||
ಸುಂದರಿಯೇ, ರಾಜಕುಮಾರಿಗೆ ಈ ಮದ್ಯವನ್ನು ಬೇರೆ ಯಾವಳಾದರೂ ತೆಗೆದುಕೊಂಡು ಹೋಗಿ ಕೊಡುವಳು. ಸುಂದರಿಯೇ, ನೀನು ಏಕೆ ಹೋಗುವಿ? ನೀನು ನನ್ನ ಸಲುವಾಗಿ ಇಲ್ಲಿಗೆ ಬಂದಿದ್ದೀಯೆ.
ವೈಶಂಪಾಯನಃ
ಇತ್ಯುಕ್ತಾತ್ವ ದಕ್ಷಿಣೇ ಪಾಣೌ ಸೂತಪುತ್ರಃ ಪರಾಮೃಶತ್ |
ಸಾ ಗೃಹೀತಾ ವಿಧೂನ್ವಂತೀ ಭೂಮೌ ನಿಕ್ಷಿಪ್ಯ ಭಾಜನಮ್ ||25||
ಸಭಾಂ ಶರಣಮಾಧಾವತ್ ಯತ್ರ ರಾಜಾ ಯುಧಿಷ್ಠಿರಃ ||26||
ವೈಶಂಪಾಯನ ಹೀಗೆ ಹೇಳಿ ಸೂತಪುತ್ರನಾದ ಕೀಚಕನು ಅವಳ ಬಲಗೈಯನ್ನು ಹಿಡಿದನು. ಅವಳು ಅವನ ಕೈಯನ್ನು ಝಾಡಿಸಿ ನೆಲದ ಮೇಲೆ ಪಾತ್ರೆಯನ್ನಿಟ್ಟು ಯುಧಿಷ್ಠಿರನಿದ್ದ ಸಭೆಯ ಬಳಿಗೆ ತನ್ನ ರಕ್ಷಣೆಗಾಗಿ ಓಡಿಬಂದಳು.
ತಾಂ ಕೀಚಕಃ ಪ್ರಧಾವಂತೀಂ ಕೇಶಪಕ್ಷೇ ಪರಾಮೃಶತ್ |
ಪಾತಯಿತ್ವಾ ಚ ತಾಂ ಭೂಮೌ ಸೂತಪುತ್ರಃ ಪದಾಽವಧೀತ್ ||27||
ಓಡುತ್ತಿದ್ದ ಅವಳನ್ನು ಕೀಚಕನು ಹಿಂದಿನಿಂದ ಧಾವಿಸಿ ಬಂದು ಅವಳ ತಲೆ ಕೂದಲನ್ನು ಹಿಡಿದು ನೆಲದ ಮೇಲೆ ಕೆಡವಿ ತನ್ನ ಕಾಲಿನಿಂದ ಒದ್ದನು.
ಸಭಾಯಾಂ ಪಶ್ಯತೋ ರಾಜ್ಞೋ ವಿರಾಟಸ್ಯ ಮಹಾತ್ಮನಃ |
ಬ್ರಾಹ್ಮಣಾನಾಂ ಚ ವೃದ್ಧಾನಾಂ ಕ್ಷತ್ರಿಯಾಣಾಂ ಚ ಪಶ್ಯತಾಮ್ ||28||
ತಸ್ಯಾಃ ಪದಾಭಿತಪ್ತಾಯಾ ಮುಖಾದ್ ರುಧಿರಮಾಸ್ರವತ್ ||29||
ಸಭೆಯಲ್ಲಿ ಕುಳಿತಿದ್ದ ಮಹಾತ್ಮನಾದ ವಿರಾಟರಾಜನೂ, ವೃದ್ಧರಾದ ಬ್ರಾಹ್ಮಣರೂ ಮತ್ತು ಕ್ಷತ್ರಿಯರೂ ನೋಡುತ್ತಿರುವಂತೆಯೇ ಒದೆಯಲ್ಪಟ್ಟ ಅವಳ ಬಾಯಿಂದ ರಕ್ತವು ಹರಿಯಿತು.
ತತೋ ದಿವಾಕರೇಣಾಶು ರಾಕ್ಷಸಃ ಸನ್ನಿಯೋಜಿತಃ |
ಸ ಕೀಚಕಮಪೋವಾಹ ವಾತವೇಗೇನ ಭಾರತ ||30||
ಎಲೈ ಭಾರತನೇ, ಆಗ ಸೂರ್ಯನಿಂದ ಅವಳ ರಕ್ಷಣೆಗಾಗಿ ಕಳುಹಿಸಲ್ಪಟ್ಟ ರಾಕ್ಷಸನು ದೊಡ್ಡ ಗಾಳಿಯು ಎಲೆಯನ್ನು ಹಾರಿಸುವಂತೆ ಕೀಚಕನನ್ನು ದೂರಕ್ಕೆ ಹಾರಿಸಿದನು.
ಸ ಪಪಾತ ತದಾ ಭೂಮೌ ರಕ್ಷೋಬಲಸಮೀರಿತಃ |

ವಿಘೂರ್ಣಮಾನೋ ನಿಶ್ಚೇಷ್ಟಃ ಛಿನ್ನಮೂಲ ಇವ ದ್ರುಮಃ ॥31॥
ಆಗ ರಾಕ್ಷಸನ ಬಲದಿಂದ ಎಸೆಯಲ್ಪಟ್ಟ ಆ ಕೀಚಕನು ಬುಡವನ್ನು ಕಡಿದ ಮರದಂತೆ ನಿಶ್ಚೇಷ್ಟನಾಗಿ ಕೋಪಗೊಂಡು ಭೂಮಿಯ ಮೇಲೆ ಬಿದ್ದನು.
ತಾಂ ದೃಷ್ಟ್ವಾ ತತ್ರ ತೇ ಸಭ್ಯಾ ಹಾಹಾಭೂತಾಃ ಸಮಂತತಃ |
ನ ಯುಕ್ತಂ ಸೂತಪುತ್ರೇಣ ಕೀಚಕೇತಿ ಚ ಮಾನವಾಃ ॥32॥
ಕಿಮಿದಂ ವಧ್ಯತೇ ಬಾಲಾ ಕೃಪಣಾ ಚಾಪ್ಯಬಾಂಧವಾ ॥33॥
ಅದನ್ನು ನೋಡಿದ ಆ ಸಭಾಸದರೆಲ್ಲರೂ ಹಾಹಾಕಾರವನ್ನು ಮಾಡಿದರು. ಅಲ್ಲಿದ್ದ ಆ ಜನರು ಸೂತಪುತ್ರನು ಮಾಡಿದ ಈ ಕಾರ್ಯವು ಯೋಗ್ಯವಾದುದಲ್ಲ ಎಂದು ಹೇಳಿ ಕೀಚಕನೇ, ಬಂಧುರಹಿತಳೂ, ಕೃಪಣಳೂ, ಬಾಲೆಯೂ ಆದ ಇವಳನ್ನು ಏಕೆ ಒದೆಯುತ್ತಿದ್ದೀಯೆ ಎಂದು ಕೇಳಿದರು.
ತತ್ರಾಸೀನೌ ದದೃಶತುರ್ಯುಧಿಷ್ಠಿರವೃಕೋದರೌ |
ಅಮೃಷ್ಯಮಾಣೌ ಕೃಷ್ಣಾಯಾಃ ಕೀಚಕೇನ ಪದಾ ವಧಮ್ ॥34॥
ಅಲ್ಲಿ ಕುಳಿತಿದ್ದ ಯುಧಿಷ್ಠಿರ ಮತ್ತು ಭೀಮಸೇನರು ಅದನ್ನು ನೋಡಿ ದ್ರೌಪದಿಗೆ ಕೀಚಕನಿಂದ ಉಂಟಾದ ಪಾದಘಾತವನ್ನು ಸಹಿಸಲಿಲ್ಲ.
ತಾಂ ದೃಷ್ಟ್ವಾ ಭೀಮಸೇನಸ್ಯ ಕ್ರೋಧಾದಸ್ತಮವರ್ತತ |
ಧೂಮೋಚ್ಛ್ವಾಸಃ ಸಮಭವನ್ನೇತ್ರೇ ಚೋಚ್ಛ್ರಿತಪಕ್ಷ್ಮಣೀ ॥35॥
ಸಸ್ವೇದಾ ಭ್ರುಕುಟೀ ಚೋಗ್ರಾ ಲಲಾಟೇ ಸಮವರ್ತತ ॥36॥
ದ್ರೌಪದಿಯನ್ನು ನೋಡಿದ ಭೀಮಸೇನನಿಗೆ ಕೀಚಕನ ಸಂಹಾರವಾಗುವಂತೆ ಕ್ರೋಧದಿಂದ ಧೂಮದ ಉಚ್ಛ್ವಾಸವು ಉಂಟಾಯಿತು. ಕ್ರೋಧದಿಂದ ತನ್ನ ಹುಬ್ಬನ್ನು ಮೇಲಕ್ಕೆತ್ತಿದನು. ಗಂಟಿಕ್ಕಿದ ಹುಬ್ಬುಗಳಲ್ಲಿ ಅವನ ಹಣೆಯಲ್ಲಿ ಬೆವರು ಉಂಟಾಯಿತು.
ತಸ್ಯ ಭೀಮೋ ವಧಪ್ರೇಪ್ಸುಃ ಕೀಚಕಸ್ಯ ಮಹಾಮನಾಃ |
ದಂತೈರ್ದಂತಾಂಸ್ತಥಾ ರೋಷಾನ್ನಿಷ್ಪಿಪೇಷ ಮಹಾಮನಾಃ ॥37॥
ಧೈರ್ಯಶಾಲಿಯಾದ ಭೀಮನು ಆ ಕೀಚಕನ ವಧೆಯನ್ನು ಬಯಸಿ ರೋಷದಿಂದ ತನ್ನ ಹಲ್ಲುಗಳನ್ನು ಕಡಿದನು.
ಅಂಗುಷ್ಠೇನ ಪರಾಮೃಷ್ಟ್ವಾ ಲಲಾಟಂ ಪರವೀರಹಾ ॥38॥
ಭೂಯಃ ಸಂತ್ವರಿತಃ ಕ್ರುದ್ಧಃ ಸಹಸೋತ್ಥಾಯ ಚಾಸನಾತ್ |
ನಿರೈಕ್ಷತ ದ್ರುಮಂ ದೀರ್ಘಂ ರಾಜಾನಂ ಚಾನ್ವವೈಕ್ಷತ ॥39॥
ಪರವೀರರನ್ನು ಕೊಲ್ಲುವ ಅವನು ತನ್ನ ಹಣೆಯನ್ನು ಅಂಗುಷ್ಠದಿಂದ ಮುಟ್ಟಿ ಪುನಃ ಕ್ರೋಧದಿಂದ ತನ್ನ ಆಸನದಿಂದ ತಕ್ಷಣ ಮೇಲೆದ್ದು ಒಂದು ದೊಡ್ಡ ಮರವನ್ನು ನೋಡಿ ಧರ್ಮರಾಜನ ಮುಖವನ್ನು ನೋಡಿದನು.
ವಧಮಾಕಾಂಕ್ಷಮಾಣಂ ತಂ ಕೀಚಕಸ್ಯ ದುರಾತ್ಮನಃ |
ಆಕಾರೇಣ ತು ಭೀಮಂ ಸ ಪ್ರತ್ಯಷೇಧದ್ ಯುಧಿಷ್ಠಿರಃ ॥40॥
ದುರಾತ್ಮನಾದ ಕೀಚಕನ ವಧೆಯನ್ನು ಬಯಸುವ ಭೀಮಸೇನನನ್ನು ನೋಡಿ ಯುಧಿಷ್ಠಿರನು ತನ್ನ ಸಂಜ್ಞೆಯಿಂದ ಅವನನ್ನು ನಿಷೇಧಿಸಿದನು.
ತಸ್ಯ ರಾಜಾ ಶನೈಃ ಸಂಜ್ಞಾಂ ಕುಂತೀಪುತ್ರೋ ಯುಧಿಷ್ಠಿರಃ |
ಚಕಾರ ಭೀಮಸೇನಸ್ಯ ಪಾಂಡುಪುತ್ರಸ್ಯ ಧೀಮತಃ ॥41॥
ಉಪಾಸೀನಂ ತದಾ ಚಾಹ ಕಂಕೋ ನಾಮ ಯುಧಿಷ್ಠಿರಃ ॥42॥
ಕುಂತೀಪುತ್ರನಾದ ಕಂಕ ಎಂಬ ಹೆಸರನ್ನು ಹೊಂದಿದ ಯುಧಿಷ್ಠಿರನು ಮೇಧಾವಿಯಾದ, ಪಾಂಡುಪುತ್ರನಾದ, ಸಮೀಪದಲ್ಲಿ ಕುಳಿತ ಭೀಮಸೇನನನ್ನು ನೋಡಿ ನಿಧಾನವಾಗಿ ಸಂಜ್ಞೆಯನ್ನು ಮಾಡಿ ಮಾತನಾಡಿದನು.
ಸೂದ ಮಾ ಸಾಹಸಂ ಕಾರ್ಷೀಃ ಫಲಿತೋಽಯಂ ವನಸ್ಪತಿಃ |
ನಾತ್ರ ಶುಷ್ಕಾಣಿ ಕಾಷ್ಠಾನಿ ಸಾಧನೀಯಾನಿ ಕಾನಿಚಿತ್ ॥43॥
ಸೂದನೇ, ಸಾಹಸವನ್ನು ಮಾಡಬೇಡ. ಈ ವೃಕ್ಷವು ಫಲಭರಿತವಾಗಿದೆ. ಇಲ್ಲಿ ನಿನ್ನ ಅಡುಗೆಗೆ ಯಾವ ಒಣ ಕಟ್ಟಿಗೆಯೂ ದೊರೆಯಲು ಸಾಧ್ಯವಿಲ್ಲ.
ಯದಿ ತೇ ದಾರುಕೃತ್ಯಂ ಸ್ಯಾನ್ನಿಷ್ಕ್ರಮ್ಯ ನಗರಾದ್ ಬಹಿಃ |
ಸಮೂಲಂ ಶಾತಯೇರ್ವೃಕ್ಷಂ ಶ್ರಮಸ್ತೇ ನ ಭವಿಷ್ಯತಿ ॥44॥
ನಿನಗೆ ಪಾಕಶಾಲೆಗೆ ಕಟ್ಟಿಗೆಯು ಬೇಕಾದರೆ ನಗರದ ಹೊರಗೆ ಹೋಗಿ ಮರವನ್ನು ಬೇರುಸಹಿತವಾಗಿ ಕಿತ್ತು ಒಗೆಯುವವನಾಗು. ಅದರಿಂದ ನಿನಗೆ ಶ್ರಮವಾಗುವುದಿಲ್ಲ.
ಯಸ್ಯ ಚಾರ್ದ್ರಸ್ಯ ವೃಕ್ಷಸ್ಯ ಶೀತಚ್ಛಾಯಾಂ ಸಮಾಶ್ರಯೇತ್ |
ನ ತಸ್ಯ ಪರ್ಣೇ ದ್ರುಹ್ಯೇತ ಪೂರ್ವವೃತ್ತಮನುಸ್ಮರನ್ ॥45॥
ಯಾವ ಹಸಿಯ ಮರದ ತಂಪಾದ ನೆರಳನ್ನು ಆಶ್ರಯಿಸುತ್ತೇವೆಯೋ ಅದು ನಮಗೆ ಮೊದಲು ನೀಡಿದ ನೆರಳನ್ನು ಚಿಂತಿಸಿ ಆ ಮರದ ಎಲೆಗೆ ದ್ರೋಹವನ್ನು ಮಾಡಬಾರದು.
ನ ಕ್ರೋಧಕಾಲಸಮಯೋ ಜಹಿ ಮಾ ಚಾಪಲಂ ಕುರು |
ಅಪೂರ್ಣೋಽಯಂ ವಿಪಕ್ವೋನೋ ನೈತದ್ ಬಲವತಾಂ ಬಹು ॥46॥
ಇದು ಕೋಪದ ಸಮಯವಲ್ಲ. ಕೋಪವನ್ನು ಸಂಹರಿಸು. ಚಪಲತೆಯಿಂದ ಏನೂ ಮಾಡಬೇಡ. ಈ ಮರವು ಪೂರ್ಣವಾಗಿಲ್ಲ. ನಿನ್ನ

ಅಡುಗೆಗೂ ಉಪಯೋಗಕ್ಕೆ ಬರುವುದಿಲ್ಲ. ಬಲಿಷ್ಠರಾದವರಿಗೆ ಇದನ್ನು ಕೀಳುವುದು ದೊಡ್ಡ ವಿಷಯವಲ್ಲ. (ಇಲ್ಲಿ ಕೀಚಕನು ಒಬ್ಬನೇ ಇರುವುದರಿಂದ ಉಳಿದ ಕೊಂಬೆಗಳಂತಿರುವ ನೂರೈದು ಜನ ಉಪಕೀಚಕರು ಇಲ್ಲಿ ಇಲ್ಲ. ಆದ್ದರಿಂದ ಅಪೂರ್ಣವಾಗಿದೆ. ಅಜ್ಞಾತವಾಸದಲ್ಲಿ ಇನ್ನೂ ಒಂದು ಪಕ್ಷವು ಉಳಿದಿದೆ. ಆದ್ದರಿಂದ ಯಾವ ಸಾಹಸವನ್ನೂ ಮಾಡಬೇಡ ಎಂದು ಸೂಚಿತವಾದ ಅಭಿಪ್ರಾಯ-ಲಕ್ಷ್ಯಾಲಂಕಾರ).
ವೈಶಂಪಾಯನಃ
ಅಥಾಂಗುಷ್ಠೇನೇವ ಗೃಹ್ಣನ್ ಅಂಗುಷ್ಠಂ ತತ್ರ ಧರ್ಮರಾಟ್ |
ಪ್ರಬೋಧನಭಯಾದ್ ರಾಜನ್ ಭೀಮಸ್ಯ ಪ್ರತ್ಯಷೇಧಯತ್ ॥47॥
ವೈಶಂಪಾಯನ ರಾಜನ್, ಅನಂತರ ಧರ್ಮರಾಜನು ತನ್ನ ಅಂಗುಷ್ಠವು ಇನ್ನೊಂದು ಅಂಗುಷ್ಠದಿಂದ ತಡೆಯುವವನಂತೆ ಮಾಡಿ ತಮ್ಮ ನಿಜಸ್ವರೂಪವು ಎಲ್ಲಿ ತಿಳಿದುಹೋಗುವುದೋ ಎಂಬ ಭಯದಿಂದ ಭೀಮಸೇನನನ್ನು ನಿಷೇಧಿಸಿದನು.
ಭೀಮಸೇನಸ್ತು ತದ್ವಾಕ್ಯಂ ಶ್ರುತ್ವಾ ಪರಪುರಂಜಯಃ |
ಸಹಸೋತ್ಪತಿತಂ ಕೋಪಂ ನ್ಯಯಚ್ಛದ್ ಧೃತಿಮಾನ್ ಬಲಾತ್ ॥48॥
ಭೀಮಸೇನನಾದರೂ ಆ ವಾಕ್ಯವನ್ನು ಕೇಳಿ ಪರಪುರಂಜಯನೂ, ಧೈರ್ಯಶಾಲಿಯೂ ಆದ ಅವನು ಇದ್ದಕ್ಕಿದ್ದಂತೆಯೇ ಉಂಟಾದ ಆ ಕೋಪವನ್ನು ತನ್ನ ಮನೋಬಲದಿಂದ ತಡೆದನು.
ಇಂಗಿತಜ್ಞಃ ಸ ತು ಭ್ರಾತುಃ ತೂಷ್ಣೀಮಾಸೀದ್ ವೃಕೋದರಃ ॥49॥
ಅಣ್ಣನ ಅಭಿಪ್ರಾಯವನ್ನು ತಿಳಿದ ವೃಕೋದರನು ಸುಮ್ಮನಾದನು.
ಭೀಮಸ್ಯ ಚ ಸಮಾರಂಭಂ ದೃಷ್ಟ್ವಾ ರಾಜ್ಞಸ್ಯ ಚೇಷ್ಟಿತಮ್ |
ದ್ರೌಪದ್ಯಭ್ಯಧಿಕಂ ಕ್ರುದ್ಧಾ ಪ್ರಾರುದತ್ ಸಾ ಪುನಃ ಪುನಃ ॥50॥
ಭೀಮಸೇನನ ಉಪಕ್ರಮವನ್ನೂ ಮತ್ತು ಧರ್ಮರಾಜನ ಸಂಜ್ಞೆಯನ್ನೂ ನೋಡಿದ ದ್ರೌಪದಿಯು ಬಹಳ ಕೋಪಗೊಂಡು ಪುನಃ ಪುನಃ ಗಟ್ಟಿಯಾಗಿ ರೋದನ ಮಾಡಿದಳು.
ಕೀಚಕೇನಾನುಗಮನಾತ್ ಕೃಷ್ಣಾ ತಾಮ್ರಾಯತೇಕ್ಷಣಾ |
ಸಭಾದ್ವಾರಮುಪಾಗಮ್ಯ ರುದಂತೀ ವಾಕ್ಯಮಬ್ರುವೀತ್ ॥51॥
ಅವೇಕ್ಷಮಾಣಾ ಸುಶ್ರೋಣೀ ಪತೀಂಸ್ತಾನ್ ದೀನಮಾನಸಾನ್ |
ಆಕಾರಂ ಪರಿರಕ್ಷಂತೀ ಪ್ರತಿಜ್ಞಾಂ ಧರ್ಮಸಂಯುತಾಮ್ ॥52॥
ದಹ್ಯಮಾನೇನ ರೌದ್ರೇಣ ಚಕ್ಷುಷಾ ದ್ರುಪದಾತ್ಮಜಾ ॥53॥
ಕೀಚಕನಿಂದ ಹಿಂಬಾಲಿಸಲ್ಪಟ್ಟ ರಕ್ತಾಕ್ಷಿಯೂ, ವಿಶಾಲಾಕ್ಷಿಯೂ, ಸುಂದರಿಯೂ, ದ್ರುಪದಕುಮಾರಿಯೂ ಆದ ದ್ರೌಪದಿಯು ಉರಿಯುತ್ತಿರುವ ತನ್ನ ಕ್ರೂರವಾದ ಕಣ್ಣುಗಳಿಂದ ದೀನಮನಸ್ಕರಾದ ತನ್ನ ಪತಿಗಳನ್ನು ನೋಡುತ್ತಾ ಸಭಾದ್ವಾರಕ್ಕೆ ಬಂದು ತಾವು ಮಾಡಿಕೊಂಡ ಪ್ರತಿಜ್ಞೆಯನ್ನು ರಕ್ಷಿಸುವ ಸಲುವಾಗಿ ಪ್ರತಿಜ್ಞೆಗೆ ಅನುಗುಣವಾಗಿ ತನ್ನ ಆಕಾರವನ್ನು ರಕ್ಷಿಸುತ್ತಾ ಮಾತನಾಡಿದಳು.
ದ್ರೌಪದೀ
ಪ್ರಜಾರಕ್ಷಣಶೀಲಾನಾಂ ರಾಜ್ಞಾಮಮಿತತೇಜಸಾಮ್ |
ಕಾರ್ಯಂ ಹಿ ಪಾಲನಂ ನಿತ್ಯಂ ಧರ್ಮೇ ಸತ್ಯೇ ಪ್ರತಿಷ್ಠಿತಾಮ್ ॥54॥
ಸ್ವಪ್ರಜಾಯಾಂ ಪ್ರಜಾಯಾಂ ಚ ವಿಶೇಷಂ ನಾಧಿಗಚ್ಛತಾಮ್ |
ಪ್ರಿಯೇಷ್ವಪಿ ಚ ದ್ವೇಷ್ಯೇಷು ಸಮತ್ವಂ ಯೇ ಸಮಾಶ್ರಿತಾಃ ॥55॥
ದ್ರೌಪದಿ ಪ್ರಜೆಗಳ ರಕ್ಷಣೆಗಳಲ್ಲಿ ನಿರತರಾದ, ಅಮಿತಪರಾಕ್ರಮಿಗಳಾದ ಸತ್ಯದಲ್ಲಿಯೂ ಧರ್ಮದಲ್ಲಿಯೂ ಪ್ರತಿಷ್ಠಿತರಾದ ರಾಜರು ಯಾವಾಗಲೂ ಪ್ರಜೆಗಳ ಪಾಲನೆಯನ್ನು ಮಾಡಬೇಕು. ಯಾವ ರಾಜರು ತಮ್ಮ ಮಕ್ಕಳಿಗೂ ಮತ್ತು ಪ್ರಜೆಗಳಿಗೂ ವಿಶೇಷವನ್ನು ತಿಳಿಯುವುದಿಲ್ಲವೋ, ಯಾವ ರಾಜರು ಪ್ರಿಯರಲ್ಲಿ ಮತ್ತು ದ್ವೇಷಿಗಳಲ್ಲಿ ಸಮವಾಗಿ ನಡೆದುಕೊಳ್ಳುತ್ತಾರೆಯೋ (ಅಂತಹ ರಾಜರು ಯಾವಾಗಲೂ ಪ್ರಜಾಪಾಲನೆಯನ್ನು ಮಾಡಬೇಕು).
ವಿವಾದೇಷು ಪ್ರವೃತ್ತೇಷು ಸಮಂ ಕಾರ್ಯಾನುದರ್ಶಿನಾ |
ರಾಜ್ಞಾ ಧರ್ಮಾಸನಸ್ಥೇನ ಜಿತೌ ಲೋಕಾವುಭಾವಪಿ ॥56॥
ರಾಜನ್ ಧರ್ಮಾಸನಸ್ಥೋಽಸಿ ರಕ್ಷ ಮಾಂ ತ್ವಮನಾಗಸೀಮ್ ॥57॥
ಯಾವ ರಾಜನು ಧರ್ಮಾಸನದಲ್ಲಿ ಕುಳಿತವನಾಗಿ ಕಾರ್ಯಾಕಾರ್ಯಗಳನ್ನು ತಿಳಿದು ವಿವಾದ ಉಂಟಾದಾಗ ಸಮನಾಗಿ ನಡೆದುಕೊಳ್ಳುತ್ತಾನೆಯೋ, ಅವನು ಈ ಲೋಕ ಮತ್ತು ಪರಲೋಕಗಳನ್ನು ಜಯಿಸುತ್ತಾನೆ. ರಾಜನೇ, ನೀನು ಧರ್ಮಾಸನದಲ್ಲಿ ಕುಳಿತಿದ್ದೀಯೆ. ನಿರಪರಾಧಿಯಾದ ನನ್ನನ್ನು ರಕ್ಷಿಸು.
ಅಹಂ ತ್ವನಪರಾಧಾ ಚ ಕೀಚಕೇನ ದುರಾತ್ಮನಾ |
ಪಶ್ಯತಸ್ತೇ ಮಹಾರಾಜ ಹತಾ ಪಾದೇನ ದಾಸಿವತ್ ॥58॥
ಮಹಾರಾಜನೇ, ನಾನು ಯಾವ ಅಪರಾಧವನ್ನೂ ಮಾಡಿಲ್ಲ. ದುರಾತ್ಮನಾದ ಕೀಚಕನು ನಿನ್ನ ಕಣ್ಣೆದುರಿಗೇ ದಾಸಿಯಂತೆ ನನ್ನನ್ನು ಕಾಲಿನಿಂದ ಒದ್ದಿದ್ದಾನೆ.
ತ್ವತ್ಸಮಕ್ಷಂ ನೃಪಶ್ರೇಷ್ಠ ನಿಷ್ಪಿಷ್ಟಾ ವಸುಧಾತಳೇ |
ಅನಾಗಸೀಂ ಕೃಪಾರ್ಹಾಂ ಮಾಂ ಸ್ತ್ರಿಯಂ ತ್ವಂ ಪರಿಪಾಲಯ ॥59॥
ನೃಪಶ್ರೇಷ್ಠನೇ, ನಿನ್ನ ಕಣ್ಣೆದುರಿಗೇ ನನ್ನನ್ನು ನೆಲದ ಮೇಲೆ ಕೆಡವಿ ಹಿಂಸಿಸಿದ್ದಾನೆ. ನಿರಪರಾಧಿನಿಯೂ, ಕೃಪಾಪಾತ್ರಳೂ, ವನಿತೆಯೂ ಆದ ನನ್ನನ್ನು ರಕ್ಷಿಸು.

ರಕ್ಷ ಮಾಂ ಕೀಚಕಾದ್ ಭೀತಾಂ ಧರ್ಮಂ ರಕ್ಷ ನರೇಶ್ವರ |
ಮತ್ಸ್ಯಾಧಿಪ ಪ್ರಜಾ ರಕ್ಷ ಪಿತಾ ಪುತ್ರಾನಿವೌರಸಾನ್ ||60||
ನರೇಶ್ವರನೇ, ಕೀಚಕನಿಂದ ಹೆದರಿದ ನನ್ನನ್ನು ರಕ್ಷಿಸು. ಅದರಿಂದ ನಿನ್ನ ಧರ್ಮವನ್ನು ರಕ್ಷಿಸು. ಮತ್ಸ್ಯಾಧಿಪನೇ, ತಂದೆಯು ತನ್ನ ಔರಸಪುತ್ರರನ್ನು ರಕ್ಷಿಸುವಂತೆ ಪ್ರಜೆಗಳನ್ನು ರಕ್ಷಿಸುವವನಾಗು.
ಯಸ್ತ್ವಧರ್ಮಾಣಿ ಕಾರ್ಯಾಣಿ ಮೋಹಾದ್ವಾ ಕುರುತೇ ನೃಪಃ |
ಅಚಿರಾತ್ ತಂ ದುರಾತ್ಮಾನಂ ವಶೇ ಕುರ್ವಂತಿ ಶತ್ರವಃ ||61||
ಯಾವ ರಾಜನು ಮೋಹದಿಂದ ಅಧರ್ಮಮಯವಾದ ಕಾರ್ಯಗಳನ್ನು ಎಸಗುತ್ತಾನೆಯೋ ಅಂತಹ ದುರಾತ್ಮನನ್ನು ಶತ್ರುಗಳು ಶೀಘ್ರದಲ್ಲಿಯೇ ವಶಪಡಿಸಿಕೊಳ್ಳುತ್ತಾರೆ.
ಮಾತ್ಸ್ಯಾನಾಂ ಕುಲಜಸ್ತ್ವಂ ಹಿ ತೇಷಾಂ ಸತ್ಯಂ ಪರಾಯಣಮ್ |
ತ್ವಂ ಕಿಲೈವಂವಿಧೇ ಜಾತಃ ಕುಲೇ ಧರ್ಮಪರಾಯಣೇ ||62||
ನೀನು ಮತ್ಸ್ಯದೇಶದ ರಾಜರ ಕುಲದಲ್ಲಿ ಜನಿಸಿದ್ದೀಯೆ. ಅವರು ಯಾವಾಗಲೂ ಸತ್ಯಪರಾಯಣರಾದವರು. ಧರ್ಮಪರಾಯಣರು ಇರುವ ಇಂತಹ ಕುಲದಲ್ಲಿ ನೀನು ಜನಿಸಿದ್ದೀಯೆ.
ಅತಸ್ತ್ವಾಽಹಮಭಿಕ್ರಂದೇ ಶರಣಾರ್ಥಂ ನರಾಧಿಪ |
ತ್ರಾಹಿ ಮಾಮದ್ಯ ರಾಜೇಂದ್ರ ಕೀಚಕಾತ್ ಪಾಪಪೂರುಷಾತ್ ||63||
ಎಲೈ ನರಾಧಿಪನೇ, ಆ ಕಾರಣದಿಂದ ನಿನ್ನ ಎದುರಿಗೆ ನಾನು ರಕ್ಷಣೆಗಾಗಿ ಗೋಳಾಡುತ್ತಿದ್ದೇನೆ. ರಾಜೇಂದ್ರನೇ, ಪಾಪಪುರುಷನಾದ ಕೀಚಕನಿಂದ ನನ್ನನ್ನು ರಕ್ಷಿಸು.
ಅನಾಥಾಮಿತಿ ಮಾಂ ಜ್ಞಾತ್ವಾ ಕೀಚಕಃ ಪುರುಷಾಧಮಃ |
ಪ್ರಹರತ್ಯೇವ ನೀಚಾತ್ಮಾ ನ ಚ ಧರ್ಮಮವೇಕ್ಷತೇ ||64||
ಪುರುಷಾಧಮನಾದ ಕೀಚಕನು ನಾನು ಅನಾಥೆ ಎಂದು ತಿಳಿದು ನನಗೆ ಒದೆಯುತ್ತಿದ್ದಾನೆ. ನೀಚಾತ್ಮನಾದ ಅವನು ಧರ್ಮವನ್ನು ಗಮನಿಸುತ್ತಿಲ್ಲ.
ಅಕಾರ್ಯಾಣಾಮನಾರಂಭಾತ್ ಕಾರ್ಯಾಣಾಮನುಪಾಲನಾತ್ |
ಪ್ರಜಾಸು ಯೇ ಪ್ರವೃತ್ತಾಸ್ತೇ ಸ್ವರ್ಗಮಾಯಾಂತಿ ಭೂಮಿಪಾಃ ||65||
ಯಾವ ರಾಜರು ನಿಷಿದ್ಧವಾದ ಕಾರ್ಯಗಳನ್ನು ಮಾಡದೆ ವಿಹಿತವಾದ ಕಾರ್ಯಗಳನ್ನು ಮಾಡಿ ಪ್ರಜೆಗಳ ರಕ್ಷಣೆಯಲ್ಲಿ ನಿರತರಾಗಿರುತ್ತಾರೆಯೋ ಅಂತಹ ರಾಜರು ಸ್ವರ್ಗವನ್ನು ಪಡೆಯುತ್ತಾರೆ.
ಕಾರ್ಯಾಕಾರ್ಯವಿಶೇಷಜ್ಞಾಃ ಕಾಮಕಾರೇಣ ಪಾರ್ಥಿವಾಃ |
ಪ್ರಜಾಸು ಕಿಲ್ಬಿಷಂ ಕೃತ್ವಾ ನರಕಂ ಯಾಂತ್ಯಧೋಮುಖಾಃ ||66||
ಕಾರ್ಯಾಕಾರ್ಯವಿಶೇಷಗಳನ್ನು ತಿಳಿದ ರಾಜರು ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಂಡು ಪ್ರಜೆಗಳಿಗೆ ಕೇಡನ್ನು ಮಾಡಿದರೆ ಅಧೋಮುಖವಾಗಿ ನರಕಕ್ಕೆ ಹೋಗುತ್ತಾರೆ.
ನೈವ ಯಜ್ಞೈರ್ನ ವಾ ದಾನೈರ್ನ ಗುರೋರುಪಸೇವಯಾ |
ಪ್ರಾಪ್ನುವಂತಿ ತಥಾ ಧರ್ಮಂ ಯಥಾ ಕಾರ್ಯಾನುಪಾಲನಾತ್ ||67||
ವಿಹಿತಕಾರ್ಯವಾದ ಪ್ರಜೆಗಳ ಅನುಪಾಲನೆಯಿಂದ ಎಂತಹ ಧರ್ಮವು ಉಂಟಾಗುತ್ತದೆಯೋ ಅಂತಹ ಧರ್ಮವು ಯಜ್ಞಗಳಿಂದಾಗಲೀ, ದಾನಗಳಿಂದಾಗಲೀ ಅಥವಾ ಗುರುಸೇವೆಯಿಂದಾಗಲೀ ಉಂಟಾಗುವುದಿಲ್ಲ.
ಅಪಿ ಚೈತತ್ ಪುರಾ ಬ್ರಹ್ಮಾ ಪ್ರೋವಾಚೇಂದ್ರಾಯ ಪೃಚ್ಛತೇ |
ದ್ವಂದ್ವಂ ಕಾರ್ಯಮಕಾರ್ಯಂ ಚ ಲೋಕೇಷ್ವಾಸೀತ್ ಪರಂ ಯಥಾ ||
ಧರ್ಮಾಧರ್ಮೌ ಪುನರ್ದ್ವಂದ್ವಂ ವಿನಿಯುಕ್ತಮಥಾಪಿ ವೈ |
ಕ್ರಿಯಾಣಾಮಕ್ರಿಯಾಣಾಂ ಚ ಪ್ರವಣೇ ಪುಣ್ಯಪಾಪಯೋಃ ||69||
ಲೋಕಗಳಲ್ಲಿ ಕಾರ್ಯ ಮತ್ತು ಅಕಾರ್ಯಗಳ ಜೋಡಿಯು ಹೇಗೆ ಪ್ರಧಾನವಾಯಿತು ಎಂಬ ಈ ವಿಷಯವನ್ನು ಹಿಂದೆ ಬ್ರಹ್ಮದೇವರು ಪ್ರಶ್ನೆಯನ್ನು ಮಾಡಿದ ಇಂದ್ರನಿಗೆ ಹೇಳಿದರು. ಕಾರ್ಯ ಮತ್ತು ಅಕಾರ್ಯಗಳಿಗೆ (ವಿಹಿತವಾದ ಮತ್ತು ನಿಷಿದ್ಧವಾದ ಕರ್ಮಗಳಿಗೆ) ಫಲವಾದ ಪುಣ್ಯಪಾಪಗಳಲ್ಲಿ ಸಜ್ಜನರ ಸಮುದಾಯ ಮತ್ತು ದುರ್ಜನರ ಸಮುದಾಯವು ನಿರತವಾಗಿರುತ್ತದೆ. ಕಾರ್ಯಾಕಾರ್ಯಗಳ ಸಮುದಾಯವಲ್ಲದೆ, ಪುಣ್ಯಪಾಪಗಳ ಸಮುದಾಯವಲ್ಲದೆ ಧರ್ಮಾಧರ್ಮಗಳ ಜೋಡಿಯು ಪ್ರಪಂಚದಲ್ಲಿ ವಿನಿಯೋಗವನ್ನು ಹೊಂದುತ್ತದೆ.
ಪ್ರಜಾಯಾಂ ಸೃಜ್ಯಮಾನಾಯಾಂ ಪುರಾ ಹ್ಯೇತದುದಾಹೃತಮ್ |
ಏತದ್ ವೈ ಮಾನುಷಂ ಸಮ್ಯಕ್ ಕಾರ್ಯಂ ದ್ವಂದ್ವತ್ರಯಂ ಭುವಿ ||
ಹಿಂದೆ ಪ್ರಜೆಗಳನ್ನು ಸೃಷ್ಟಿಮಾಡಿದ ಬ್ರಹ್ಮದೇವರು ಈ ವಿಷಯವನ್ನು ಹೇಳಿದರು. ಈ ಮೂರು ಜೋಡಿಗಳು ಮನುಷ್ಯರಿಗೆ ಸಂಬಂಧಿಸಿದವು. ಭೂಮಿಯಲ್ಲಿ ಮನುಷ್ಯರು ಈ ಮೂರು ದ್ವಂದ್ವಗಳ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕು.
ಅಸ್ಮಿನ್ ಸುನೀತೇ ದುರ್ನೀತೇ ಸಭ್ಯಾಸ್ತೇ ಕರ್ಮಜಂ ಫಲಮ್ |
ಕಲ್ಯಾಣಕಾರೀ ಕಲ್ಯಾಣಂ ಪಾಪಕಾರೀ ಚ ಪಾಪಕಮ್ ||71||
ಈ ಮೂರು ದ್ವಂದ್ವಗಳು ಚೆನ್ನಾಗಿ ಅಥವಾ ತಪ್ಪಾಗಿ ಅನುಷ್ಠಾನ ಮಾಡಲ್ಪಟ್ಟರೆ ಮನುಷ್ಯರು ಆ ಕರ್ಮದಿಂದ ಉಂಟಾದ ಫಲವನ್ನು ಅನುಭವಿಸುತ್ತಾರೆ. ಶುಭಕಾರ್ಯವನ್ನು ಮಾಡಿದವನು ಶುಭಫಲವನ್ನೂ, ಪಾಪವನ್ನು ಮಾಡಿದವನು ಅಶುಭಫಲವನ್ನೂ ಅನುಭವಿಸುತ್ತಾನೆ.

ತೇನ ಗಚ್ಛತಿ ನಿಃಸಂಗಂ ಸ್ವರ್ಗಾಯ ನರಕಾಯ ವಾ |
ಸುಕೃತಂ ದುಷ್ಕೃತಂ ವಾಽಪಿ ಕೃತ್ವಾ ಮೋಹೇನ ಮಾನವಃ ॥72॥
ಪಶ್ಚಾತ್ತಾಪೇನ ತಪ್ಯೇತ ಸುಬುದ್ಧೋ ಮರಣಂ ಗತಃ ॥73॥
ಸುಕೃತವನ್ನಾಗಲೀ ಅಥವಾ ಮೋಹದಿಂದ ದುಷ್ಕೃತವನ್ನಾಗಲೀ ಮಾಡಿದ ಮನುಷ್ಯನು ಏಕಾಕಿಯಾಗಿ ಆ ಕರ್ಮದ ಫಲವಾಗಿ ಸ್ವರ್ಗ ಅಥವಾ ನರಕಕ್ಕೆ ಹೋಗುತ್ತಾನೆ. ಅಕಾರ್ಯವನ್ನು ಮಾಡಿ ಎಚ್ಚರಗೊಂಡ ಸಜ್ಜನನು ಬಹಳ ಪಶ್ಚಾತ್ತಾಪವನ್ನು ಹೊಂದುತ್ತಾನೆ. ಅಪ್ರಬುದ್ಧನಾದ ದುರ್ಜನನಾದರೂ ಮರಣವನ್ನು ಹೊಂದಿದ ಮೇಲೆ ನರಕದ ದುಃಖಗಳಿಂದ ತಾಪವನ್ನು ಹೊಂದುತ್ತಾನೆ (ಲಕ್ಷಾಲಂಕಾರ).
ಏತದುಕ್ತ್ವಾ ಪರಂ ವಾಕ್ಯಂ ವಿಸಸರ್ಜ ಶತಕ್ರತುಮ್ |
ಶಕ್ರೋಽಪ್ಯಾಪೃಚ್ಛ್ಯ ಬ್ರಹ್ಮಾಣಂ ದೇವರಾಜ್ಯಮಪಾಲಯತ್ ॥74॥
ಬ್ರಹ್ಮದೇವರು ಇಂದ್ರನಿಗೆ ಹೀಗೆ ಹೇಳಿ ಅವನನ್ನು ಬೀಳ್ಕೊಟ್ಟರು. ಇಂದ್ರನಾದರೂ ಬ್ರಹ್ಮದೇವರ ಅನುಮತಿಯನ್ನು ಪಡೆದು ದೇವರಾಜ್ಯವನ್ನು ಪಾಲಿಸಿದನು.
ಯಥೋಕ್ತಂ ದೇವದೇವೇನ ಬ್ರಹ್ಮಣಾ ಪರಮೇಷ್ಠಿನಾ |
ತಥಾ ತ್ವಮಪಿ ರಾಜೇಂದ್ರ ಕಾರ್ಯಾಕಾರ್ಯಸ್ಥಿತೋ ಭವ ॥75॥
ದೇವದೇವನೂ, ಪರಮೇಷ್ಠಿಯೂ ಆದ ಬ್ರಹ್ಮನು ಹೇಳಿದಂತೆ ಎಲೈ ರಾಜೇಂದ್ರನೇ, ನೀನೂ ಸಹ ಕಾರ್ಯ ಮತ್ತು ಅಕಾರ್ಯಗಳ ವಿಷಯದಲ್ಲಿ ನಡೆದುಕೊ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಕೀಚಕನ ವಿಷಯದಲ್ಲಿ ಮೃದುವಾಗಿ ನಡೆದುಕೊಂಡ ವಿರಾಟನಿಗೆ ದ್ರೌಪದಿಯ ನಿಂದನೆ. ಯುಧಿಷ್ಠಿರನಿಂದ ಅವಳಿಗೆ ಸಮಾಧಾನ. ಸುದೇಷ್ಣೆಯ ಬಳಿಗೆ ಹೋಗಿ ದ್ರೌಪದಿಯಿಂದ ಸದ್ಯದಲ್ಲಿಯೇ ಕೀಚಕನ ವಿನಾಶದ ಕಥನ.
ವೈಶಂಪಾಯನಃ
ಏವಂ ವಿಲಪಮಾನಾಯಾಂ ಪಾಂಚಾಲ್ಯಾಂ ಮತ್ಸ್ಯಪುಂಗವಃ |
ಅಶಕ್ತಃ ಕೀಚಕಂ ತತ್ರ ಶಾಸಿತುಂ ವರದರ್ಪಿತಮ್ ॥1॥
ವಿರಾಟರಾಜಃ ಸೂತಂ ತು ಸಾಂತ್ವೇನೈವ ನ್ಯವಾರಯತ್ ॥2॥
ವೈಶಂಪಾಯನ ಹೀಗೆ ಗೋಳಾಡುತ್ತಿದ್ದ ಪಾಂಚಾಲಿಯನ್ನು ನೋಡಿ ಮತ್ಸ್ಯಪುಂಗವನಾದ ವಿರಾಟರಾಜನು ವರದರ್ಪಿತನಾದ ಕೀಚಕನನ್ನು ಶಾಸನಮಾಡಲು ಶಕ್ತನಾಗದೆ ಅವನನ್ನು ಮೃದುವಾಗಿಯೇ ಮಾತನಾಡಿ ನಿವಾರಿಸಿದನು.
ಕೀಚಕಂ ಮತ್ಸ್ಯರಾಜೇನ ಕೃತಾಗಸಮನಿಂದಿತಾ |
ನಾಪರಾಧಾನುರೂಪೇಣ ದಂಡೇನ ಪ್ರತಿಪಾದಿತಮ್ ॥3॥
ಪಾಂಚಾಲರಾಜಸ್ಯ ಸುತಾ ದೃಷ್ಟ್ವಾ ಸುರಸುತೋಪಮಾ |
ಧರ್ಮಜ್ಞಾ ವ್ಯವಹಾರಾಣಾಂ ಕೀಚಕಂ ಕೃತಕಿಲ್ಬಿಷಮ್ ॥4॥
ಪುನಃ ಪ್ರೋವಾಚ ರಾಜಾನಂ ಸ್ಮರಂತೀ ಧರ್ಮಮುತ್ತಮಮ್ ॥5॥
ಪಾಂಚಾಲರಾಜಕುಮಾರಿಯೂ, ಸುರಕನ್ಯೆಯಂತಿರುವವಳೂ, ಧರ್ಮಾಧರ್ಮಗಳ ವ್ಯವಹಾರವನ್ನು ತಿಳಿದವಳೂ, ಅನಿಂದಿತಳೂ ಆದ ದ್ರೌಪದಿಯು ಅಪರಾಧಕ್ಕೆ ಅನುಗುಣವಾಗಿ ಕೀಚಕನಿಗೆ ಮತ್ಸ್ಯರಾಜನು ಶಿಕ್ಷೆಯನ್ನು ಕೊಡದಿರುವುದನ್ನು ನೋಡಿ ಶ್ರೇಷ್ಠವಾದ ಧರ್ಮವನ್ನು ಸ್ಮರಿಸಿ ಕೀಚಕನು ಮಾಡಿದ ಅನ್ಯಾಯವನ್ನು ಸ್ಮರಿಸುತ್ತಾ ರಾಜನನ್ನು ಕುರಿತು ಪುನಃ ಮಾತನಾಡಿದಳು.
ಸಂಪ್ರೇಕ್ಷ್ಯ ಚ ವರಾರೋಹಾ ಸರ್ವಾಂಸ್ತತ್ರ ಸಭಾಸದಃ |
ವಿರಾಟಂ ಚಾಹ ಪಾಂಚಾಲೀ ದುಃಖೇನಾವಿಷ್ಟಚೇತನಾ ॥6॥
ಸುಂದರಿಯಾದ ಆ ಪಾಂಚಾಲಿಯು ಎಲ್ಲಾ ಸಭಾಸದರನ್ನೂ ಮತ್ತು ರಾಜನನ್ನೂ ನೋಡುತ್ತಾ ದುಃಖದಿಂದ ತುಂಬಿದ ಮನಸ್ಸುಳ್ಳವಳಾಗಿ ಮಾತನಾಡಿದಳು.
ನ ರಾಜನ್ ರಾಜವತ್ ಕಿಂಚಿತ್ ಸಮಾಚರಸಿ ಕೀಚಕೇ |
ದಸ್ಯೂನಾಮಿವ ತೇ ಧರ್ಮೇ ವಾಸಃ ಸ ಪರಿವರ್ತತೇ ॥7॥
ರಾಜನೇ, ಕೀಚಕನ ವಿಷಯದಲ್ಲಿ ನೀನು ಯಾವ ರೀತಿಯಲ್ಲಿಯೂ ರಾಜನಂತೆ ನಡೆದುಕೊಳ್ಳುತ್ತಿಲ್ಲ. ನಿನ್ನ ಧರ್ಮದ ಸಂಬಂಧವು ಕಳ್ಳರಿಗಿರುವ ಧರ್ಮದ ಸಂಬಂಧದಂತೆ ಓಲಾಡುತ್ತಿದೆ.
ನ ಕೀಚಕಃ ಸ್ವಧರ್ಮಸ್ಥೋ ನ ಚ ಮಾತ್ಸ್ಯಃ ಕಥಂಚನ |
ಸಭಾಸದೋಽಪ್ಯಧರ್ಮಜ್ಞಾ ಯ ಇದಂ ಪರ್ಯುಪಾಸತೇ ॥8॥
ಕೀಚಕನು ತನ್ನ ಧರ್ಮದಲ್ಲಿ ಉಳಿದಿಲ್ಲ. ಮತ್ಸ್ಯರಾಜನು ತನ್ನ ಧರ್ಮದಲ್ಲಿ ನಿಂತಿಲ್ಲ. ಈ ಘಟನೆಯನ್ನು ನೋಡಿ ಸುಮ್ಮನಿರುವ ಸಭಾಸದರೂ ಸಹ ಧರ್ಮವನ್ನು ತಿಳಿದವರಲ್ಲ.
ನ ಧರ್ಮಂ ಕೀಚಕೋ ವೇತ್ತಿ ರಾಜಭೃತ್ಯಾಸ್ತಥೈವ ಚ |
ನ ರಾಜಾ ವಿನಯಂ ಬ್ರೂತೇ ಅಮಾತ್ಯಾಶ್ಚ ನ ಜಾನತೇ ॥9॥

ಕೀಚಕನಿಗೆ ಧರ್ಮದ ಜ್ಞಾನವಿಲ್ಲ. ಅದರಂತೆ ರಾಜಭೃತ್ಯರೂ ಧರ್ಮವನ್ನು ತಿಳಿದಿಲ್ಲ. ರಾಜನೂ ಸಹ ಅಪರಾಧ ಮಾಡಿದವನಿಗೆ ಶಿಕ್ಷೆಯ ಬಗ್ಗೆ ಮಾತನಾಡುವುದಿಲ್ಲ. ಅಮಾತ್ಯರೂ ಧರ್ಮವನ್ನು ತಿಳಿದಿಲ್ಲ.
ನೋಪಾಲಭೇ ತ್ವಾಂ ನೃಪತೇ ವಿರಾಟ ನೃಪಸಂಸದಿ |
ನಾಹಮೇತೇನ ಯುಕ್ತಾ ವೈ ಹಂತುಂ ಮಾತ್ಸ್ಯ ತವಾಂತಿಕೇ ॥10॥
ವಿರಾಟರಾಜನೇ, ಈ ರಾಜಸಭೆಯಲ್ಲಿ ನಾನು ನಿನ್ನನ್ನು ನಿಂದಿಸುತ್ತಿಲ್ಲ. ಮತ್ಸ್ಯರಾಜನೇ, ನಿನ್ನ ಕಣ್ಣೆದುರಿಗೆ ನಾನು ಇವನಿಂದ ಒದೆಯಲ್ಪಡಲು ಯೋಗ್ಯಳಲ್ಲ ಎಂದಿಷ್ಟೇ ಹೇಳುತ್ತಿದ್ದೇನೆ.
ಸಭಾಸದಾಸ್ತು ಪಶ್ಯಂತು ಕೀಚಕಂ ಧರ್ಮಲಂಘಕಮ್ |
ವಿರಾಟನೃಪತೇ ಪಶ್ಯ ಮಾಮನಾಥಾಮನಾಗಸೀಮ್ ॥11॥
ಸಭಾಸದರು ಕೀಚಕನು ಧರ್ಮವನ್ನು ಮೀರುತ್ತಿರುವುದನ್ನು ನೋಡಲಿ. ವಿರಾಟರಾಜನೇ, ನಾನು ಅನಾಥಳು ಮತ್ತು ನಿರಪರಾಧಿ ಎಂದು ನೀನು ಗಮನಿಸು.
ವಿರಾಟಃ
ಪರೋಕ್ಷಂ ನಾಭಿಜಾನಾಮಿ ವಿಗ್ರಹಂ ಯುವಯೋರಹಮ್ |
ಅರ್ಥತತ್ತ್ವಮವಿಜ್ಞಾಯ ಕಿಂಸ್ವಿತ್ ಕುಶಲತಾ ಮಮ ॥12॥
ವಿರಾಟ ನಾನು ತಿಳಿಯದಂತೆ ನಿಮ್ಮಿಬ್ಬರಿಗೆ ಏನು ವಿರೋಧ ಉಂಟಾಗಿದೆಯೋ ಎಂದು ನನಗೆ ತಿಳಿದಿಲ್ಲ. ವಿಷಯವನ್ನು ಸರಿಯಾಗಿ ತಿಳಿಯದೇ ನನ್ನಲ್ಲಿ ಸರಿಯಾಗಲಿ, ತಪ್ಪಾಗಲೀ ಹೇಗೆ ಉಂಟಾಗುತ್ತದೆ?
ದ್ರೌಪದೀ
ಯೇಷಾಂ ನ ವೈರೀ ಸ್ವಪಿತಿ ಪದಾ ಭೂಮಿಮುಪಸ್ಪೃಶನ್ |
ತೇಷಾಂ ಮಾಂ ಮಾನಿನಾಂ ಭಾರ್ಯಾಂ ಸೂತಪುತ್ರಃ ಪದಾಽವಧೀತ್॥
ದ್ರೌಪದೀ ಯಾವ ನನ್ನ ಪತಿಗಳ ವೈರಿಯು ಭೂಮಿಯ ಮೇಲೆ ಪಾದವನ್ನು ಊರಿ ನಿದ್ರಿಸುವುದಿಲ್ಲವೋ ಅಂತಹ ಪತಿಗಳ ಮಾನವತಿಯಾದ ಪತ್ನಿಯಾದ ನನ್ನನ್ನು ಸೂತಪುತ್ರನಾದ ಕೀಚಕನು ಕಾಲಿನಿಂದ ಒದ್ದನು.
ಯೇ ವೈ ದದ್ಯುರ್ನ ಯಾಚೇಯುರ್ಬ್ರಹ್ಮಣ್ಯಾಃ ಸತ್ಯವಾದಿನಃ |
ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾಽವಧೀತ್॥
ಯಾರು ಎಂದೂ ಬೇಡುವುದಿಲ್ಲವೋ ಮತ್ತು ಯಾವಾಗಲೂ ದಾನವನ್ನು ಮಾಡುತ್ತಾರೆಯೋ, ಬ್ರಾಹ್ಮಣವತ್ಸಲರಾಗಿದ್ದಾರೆಯೋ, ಸತ್ಯವಾದಿಗಳೋ ಅಂತಹವರ ಮಾನವತಿಯಾದ ಪತ್ನಿಯಾದ ನನ್ನನ್ನು ಸೂತಪುತ್ರನು ಕಾಲಿನಿಂದ ಒದ್ದನು.
ಯೇಷಾಂ ದುಂದುಭಿನಿರ್ಘೋಷೋ
ಜ್ಯಾಘೋಷಃ ಶ್ರೂಯತೇಽನಿಶಮ್ |
ತೇಷಾಂ ಮಾಂ ಮಾನಿನೀಂ ಭಾರ್ಯಾಂ
ಸೂತಪುತ್ರಃ ಪದಾಽವಧೀತ್ ॥15॥
ಯಾರ ದುಂದುಭಿಘೋಷವು ಮತ್ತು ಜ್ಯಾಘೋಷವು ಸತತವಾಗಿ ಕೇಳಿ ಬರುತ್ತದೆಯೋ ಅಂತಹವರ ಮಾನವತಿಯಾದ ಪತ್ನಿಯನ್ನು ಸೂತಪುತ್ರನು ಕಾಲಿನಿಂದ ಒದ್ದನು.
ತೇಜಸ್ವಿನಸ್ತಥಾ ಕ್ಷಾಂತಾ ಬಲವಂತೋಽಭಿಮಾನಿನಃ |
ಮಹೇಷ್ವಾಸಾ ರಣೇ ಶೂರಾ ಗರ್ವಿತಾ ಮಾನಿತಾಃ ಪುರಾ ॥16॥
ತೇಷಾಂ ಮಾಂ ದಯಿತಾಂ ಭಾರ್ಯಾಂ ಸೂತಪುತ್ರಃ ಪದಾಽವಧೀತ್॥
ಯಾರು ತೇಜಸ್ವಿಗಳೋ ಆದರೂ ಕ್ಷಮಾಶೀಲರೋ, ಬಲಿಷ್ಠರೋ, ಆತ್ಮಾಭಿಮಾನ ಉಳ್ಳವರೋ, ಮಹಾಧನುರ್ಧಾರಿಗಳೋ, ರಣಶೂರರೋ, ಆತ್ಮಗರ್ವ ಉಳ್ಳವರೋ, ಹಿಂದೆ ಎಲ್ಲರಿಂದಲೂ ಸಮ್ಮಾನಿತರೋ ಅಂತಹವರ ಪ್ರೀತಿಯ ಪತ್ನಿಯಾದ ನನ್ನನ್ನು ಸೂತಪುತ್ರನು ಕಾಲಿನಿಂದ ಒದ್ದನು.
ಸರ್ವಲೋಕಮಿಮಂ ಹನ್ಯುರ್ಯದಿ ಕ್ರುದ್ಧಾ ಮಹಾಬಲಾಃ |
ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾಽವಧೀತ್॥
ಯಾವ ಮಹಾಬಲಿಷ್ಠರಾದ ನನ್ನ ಪತಿಗಳು ಕೋಪಗೊಂಡರೆ ಈ ಲೋಕವೆಲ್ಲವನ್ನೂ ನಾಶಪಡಿಸುವರೋ ಅಂತಹವರ ಮಾನವತಿಯಾದ ಪತ್ನಿಯಾದ ನನ್ನನ್ನು ಸೂತಪುತ್ರನು ಕಾಲಿನಿಂದ ಒದ್ದನು.
ಶರಣಂ ಯೇ ಪ್ರಪನ್ನಾನಾಂ ಭವಂತಿ ಶರಣಾರ್ಥಿನಾಮ್ |
ಚರಂತಿ ಲೋಕೇ ಪ್ರಚ್ಛನ್ನಾಃ ಕ್ವ ನು ತೇಽದ್ಯ ಮಹಾರಥಾಃ ॥19॥
ಯಾರು ರಕ್ಷಣೆಯನ್ನು ಬಯಸಿ ಬಂದವರಿಗೆ ಯಾವಾಗಲೂ ರಕ್ಷಣೆಯನ್ನು ನೀಡುವವರೋ, ಯಾರು ಲೋಕದಲ್ಲಿ ಪ್ರಚ್ಛನ್ನರಾಗಿ ಸಂಚರಿಸುತ್ತಾರೆಯೋ ಅಂತಹ ಮಹಾರಥರಾದ ನನ್ನ ಪತಿಗಳು ಈ ದಿನ ಎಲ್ಲಿ ಹೋಗಿದ್ದಾರೆ?
ಕಥಂ ತೇ ಸೂತಪುತ್ರೇಣ ವಧ್ಯಮಾನಾಂ ಪ್ರಿಯಾಂ ಸತೀಮ್ |
ಮರ್ಷಯಂತಿ ಯಥಾ ಕ್ಲೀಬಾ ಬಲವಂತೋಽತಿತೇಜಸಃ ॥20॥
ಬಲಿಷ್ಠರೂ, ಮಹಾತೇಜಸ್ವಿಗಳೂ ಆದ ಅವರು ತಮ್ಮ ಪ್ರಿಯಪತ್ನಿಯನ್ನು ಕೀಚಕನು ಒದೆಯುವುದನ್ನು ನೋಡಿ ನಪುಂಸಕರಂತೆ ಹೇಗೆ ಸಹಿಸಿಕೊಂಡಿದ್ದಾರೆ?
ಕ್ವ ನು ತೇಷಾಮಮರ್ಷಶ್ಚ ವೀರ್ಯಂ ತೇಜಶ್ಚ ತದ್ಬಲಮ್ |
ನ ಚ ರಕ್ಷಂತಿ ಯೇ ಭಾರ್ಯಾಂ ವಧ್ಯಮಾನಾಂ ದುರಾತ್ಮನಾ ॥21॥

ಅವರ ಕ್ರೋಧ, ವೀರ್ಯ, ತೇಜಸ್ಸು, ಬಲಗಳು ಎಲ್ಲಿ ಹೋದವು? ದುರಾತ್ಮನಿಂದ ಒದೆಯಲ್ಪಡುತ್ತಿರುವ ಅವರ ಪತ್ನಿಯನ್ನು ಅವರು ರಕ್ಷಿಸುತ್ತಿಲ್ಲ.
ಮಯಾಽಪಿ ಶಕ್ಯಂ ಕಿಂ ಕರ್ತುಂ ವಿರಾಟೇ ಧರ್ಮದೂಷಣೇ |
ಮಾಂ ಮರ್ಷಯತಿ ಯಃ ಪಶ್ಯನ್ ವಧ್ಯಮಾನಾಮನಾಗಸೀಮ್ ॥22॥
ಧರ್ಮೋ ವಿದ್ದೋ ಹ್ಯಧರ್ಮೇಣ ಸತ್ಯಂ ಯತ್ರಾನೃತೇನ ಚ |
ಹನ್ಯತೇ ಪ್ರೇಕ್ಷಮಾಣಾನಾಂ ಹತಾಸ್ತತ್ರ ಸಭಾಸದಃ ॥23॥
ಧರ್ಮದೂಷಣನಾದ ವಿರಾಟರಾಜನು ತನ್ನ ಕಣ್ಣೆದುರಿಗೇ ನಿರಪರಾಧಿಯಾದ ನಾನು ಒದೆಯಲ್ಪಡುವುದನ್ನು ನೋಡಿ ಸುಮ್ಮನೆ ಸಹಿಸಿಕೊಂಡಿರುವಾಗ ನಾನಾದರೂ ಏನು ಮಾಡಲಿ? ಯಾವ ಸಭೆಯಲ್ಲಿ ಧರ್ಮವು ಅಧರ್ಮದಿಂದ, ಸತ್ಯವು ಅನೃತದಿಂದ ಕಣ್ಣೆದುರಿಗೇ ಹಿಂಸಿಸಲ್ಪಡುತ್ತದೆಯೋ ಅಲ್ಲಿ ಸಭಾಸದರೆಲ್ಲರೂ ಸತ್ತಂತೆಯೇ ಸರಿ.
ವೈಶಂಪಾಯನಃ
ತಸ್ಯಾಸ್ತತ್ ಕೃಪಣಂ ಶ್ರುತ್ವಾ ಸೈರಂಧ್ರ್ಯಾಃ ಪರಿದೇವಿತಮ್ ॥24॥
ತತಃ ಸಭ್ಯಾಸ್ತು ವಿಜ್ಞಾಯ ಭೂಯಃ ಕೃಷ್ಣಾಮಪೂಜಯನ್ |
ಸಾಧು ಸಾಧ್ವಿತಿ ಚಾಪ್ಯಾಹುಃ ಕೀಚಕಂ ಚಾಪ್ಯಗರ್ಹಯನ್ ॥25॥
ವೈಶಂಪಾಯನ ಸೈರಂಧ್ರಿಯ ಆ ಕೃಪಣವಾದ ಗೋಳಾಟವನ್ನು ಕೇಳಿ ಸಭಾಸದರು ವಿಷಯವನ್ನು ತಿಳಿದು ದ್ರೌಪದಿಯನ್ನು ಪುನಃ ಪೂಜಿಸಿದರು. ದ್ರೌಪದಿಯ ಮಾತುಗಳು ಸರಿಯಾಗಿವೆ, ಸರಿಯಾಗಿವೆ ಎಂದು ಹೇಳಿದರು ಮತ್ತು ಕೀಚಕನನ್ನು ನಿಂದಿಸಿದರು.
ಕೇಚಿತ್ ಕೃಷ್ಣಾಂ ಪ್ರಶಂಸಂತಿ ಕೇಚಿನ್ನಿಂದಂತಿ ಕೀಚಕಮ್ |
ಕೇಚಿನ್ನಿಂದಂತಿ ರಾಜಾನಂ ಕೇಚಿದ್ ದೇವೀಂ ಚ ತಾಂ ನರಾಃ ॥26॥
ಕೆಲವರು ದ್ರೌಪದಿಯನ್ನು ಪ್ರಶಂಸಿಸಿದರು. ಕೆಲವರು ಕೀಚಕನನ್ನು ನಿಂದಿಸಿದರು. ಇನ್ನು ಕೆಲವರು ರಾಜನನ್ನೂ, ಇನ್ನು ಕೆಲವರು ಸುದೇಷ್ಣೆಯನ್ನೂ ನಿಂದಿಸಿದರು.
ಸಭ್ಯಾಃ
ಯಸ್ಯೇಯಂ ಚಾರುಸರ್ವಾಂಗೀ ಭಾರ್ಯಾ ಸ್ಯಾದಾಯತೇಕ್ಷಣಾ |
ಪರೋ ಲಾಭಸ್ತು ತಸ್ಯ ಸ್ಯಾನ್ನ ಸ ಶೋಚೇತ್ ಕದಾಚನ ॥27॥
ಸಭ್ಯರು  ವಿಶಾಲಾಕ್ಷಿಯೂ, ಸರ್ವಾಂಗಸುಂದರಳೂ ಆದ ಇವಳು ಯಾವನಿಗೆ ಪತ್ನಿಯೋ ಅವನು ಶ್ರೇಷ್ಠವಾದ ಲಾಭವನ್ನು ಪಡೆದವನು. ಅವನು ಎಂದೂ ದುಃಖಪಡಲಾರ.
ಯಸ್ಯಾ ಗಾತ್ರಂ ಶುಭಂ ಪೀನಂ ಮುಖಂ ಜಯತಿ ಪಂಕಜಮ್ |
ಗತಿರ್ಹಂಸಂ ಸ್ಮಿತಂ ಕುಂದಂ ಸೈಷಾ ನಾರ್ಹತಿ ಪದ್ವಧಮ್ ॥28॥
ಯಾವಳ ಶರೀರವು ಶುಭವೂ ಮತ್ತು ಪುಷ್ಟವೂ ಆಗಿದೆಯೋ, ಮುಖವು ಕಮಲವನ್ನು ಗೆಲ್ಲುತ್ತದೆಯೋ, ನಡಿಗೆಯು ಹಂಸವನ್ನೂ, ಮಂದಹಾಸವು ಕುಂದ ಪುಷ್ಪವನ್ನೂ ಗೆಲ್ಲುತ್ತದೆಯೋ ಅಂತಹ ಇವಳು ಪಾದಘಾತಕ್ಕೆ ಅರ್ಹಳಲ್ಲ.
ದ್ವಾತ್ರಿಂಶದ್ ದಶನಾ ಯಸ್ಯಾಃ ಶ್ವೇತಾ ಮಾಂಸನಿಬಂಧನಾಃ |
ಸ್ನಿಗ್ಧಾಶ್ಚ ಮೃದವಃ ಕೇಶಾಃ ಸೈಷಾ ನಾರ್ಹತಿ ಪದ್ವಧಮ್ ॥29॥
ಯಾವಳ ಮೂವತ್ತೆರಡು ದಂತಗಳು ಶ್ವೇತವಾಗಿದ್ದು ಮಾಂಸದಲ್ಲಿ ನೆಡಲ್ಪಟ್ಟಿದೆಯೋ, ಯಾವಳ ಕೇಶಗಳು ಮೃದುವಾಗಿಯೂ ಮತ್ತು ಒತ್ತಾಗಿಯೂ ಇವೆಯೋ ಅಂತಹ ಇವಳು ಪಾದಘಾತಕ್ಕೆ ಅರ್ಹಳಲ್ಲ.
ಪದ್ಮಂ ಚಕ್ರಂ ಧ್ವಜಃ ಶಂಖಃ ಪ್ರಾಸಾದೋ ಮಕರಸ್ತಥಾ |
ಯಸ್ಯಾಃ ಪಾಣಿತಳೇ ಸಂತಿ ಸೈಷಾ ನಾರ್ಹತಿ ಪದ್ವಧಮ್ ॥30॥
ಯಾವಳ ಹಸ್ತತಳದಲ್ಲಿ ಪದ್ಮ, ಚಕ್ರ, ಧ್ವಜ, ಶಂಖ, ಪ್ರಾಸಾದ ಮತ್ತು ಮಕರದ ಚಿಹ್ನೆಗಳು ಇವೆಯೋ ಅಂತಹ ಇವಳು ಪಾದಘಾತಕ್ಕೆ ಯೋಗ್ಯಳಲ್ಲ.
ಆವರ್ತಾಃ ಖಲು ಚತ್ವಾರಃ ಸರ್ವೇ ಚೈವ ಪ್ರದಕ್ಷಿಣಾಃ |
ಸಮಂ ಗಾತ್ರಂ ಶುಭಂ ಸ್ನಿಗ್ಧಂ ಇಯಂ ನಾರ್ಹತಿ ಪದ್ವಧಮ್ ॥31॥
ಯಾವಳ ಎಲ್ಲಾ ನಾಲ್ಕು ಸುಳಿಗಳು ಪ್ರದಕ್ಷಿಣಾಕಾರವಾಗಿವೆಯೋ, ಯಾವಳ ಶರೀರವು ಶುಭವಾಗಿಯೂ ಮತ್ತು ಸ್ನೇಹದಿಂದ ಕೂಡಿದವಾಗಿಯೂ ಇವೆಯೋ ಅಂತಹ ಇವಳು ಪಾದಘಾತಕ್ಕೆ ಯೋಗ್ಯಳಲ್ಲ.
ಅಚ್ಛಿದ್ರಹಸ್ತಪಾದಾ ಚ ಹ್ಯಚ್ಛಿದ್ರದಶನಾ ಚ ಯಾ |
ಕನ್ಯಾ ಕಮಲಪತ್ರಾಕ್ಷೀ ಕಥಮರ್ಹತಿ ಪದ್ವಧಮ್ ॥32॥
ಯಾವಳ ಹಸ್ತಪಾದಗಳ ಬೆರಳುಗಳ ಮಧ್ಯದಲ್ಲಿ ಅಥವಾ ದಂತಗಳ ಮಧ್ಯದಲ್ಲಿ ರಂಧ್ರಗಳಿಲ್ಲವೋ, ಯಾವಳು ಕಮಲಪತ್ರಾಕ್ಷಿಯೋ ಅಂತಹ ಈ ಕನ್ಯೆಯು ಹೇಗೆ ಪಾದಘಾತಕ್ಕೆ ಈಡಾಗುತ್ತಾಳೆ?
ಸರ್ವಲಕ್ಷಣಸಂಪೂರ್ಣಾ ಪೂರ್ಣಚಂದ್ರನಿಭಾನನಾ |
ಸುರೂಪಿಣೀ ಸುವದನಾ ನೇಯಂ ಯೋಗ್ಯಾ ಪದಾ ವಧಮ್ ॥33॥
ಎಲ್ಲ ಲಕ್ಷಣಗಳಿಂದ ಭರಿತಳಾದವಳೂ, ಪೂರ್ಣಚಂದ್ರನಂತೆ ಮುಖವುಳ್ಳವಳೂ, ಒಳ್ಳೆಯ ಸೌಂದರ್ಯವುಳ್ಳವಳೂ, ಒಳ್ಳೆಯ ಮಾತುಳ್ಳವಳೂ ಆದ ಇವಳು ಪಾದಘಾತಕ್ಕೆ ಯೋಗ್ಯಳಲ್ಲ.
ದೇವದೇವೀವ ಸುಭಗಾ ಶಕ್ರದೇವೀವ ಶೋಭನಾ |
ಅಪ್ಸರಾ ಇವ ಸಾರೂಪ್ಯಾನ್ನೇಯಂ ಯೋಗ್ಯಾ ಪದಾ ವಧಮ್ ॥34॥

ದೇವತೆಗಳಿಗೆ ದೇವಿಯಂತೆ ಸುಂದರವಾಗಿರುವ, ಶಕ್ರನ ಪತ್ನಿ ಶಚಿಯಂತೆ ಶೋಭನಳಾದ, ಅಪ್ಸರೆಯನ್ನು ಹೋಲುವ ಇವಳು ಪಾದಘಾತಕ್ಕೆ ಯೋಗ್ಯಳಲ್ಲ.
ನ ಹೀದೃಶೀ ಮನುಷ್ಯೇಷು ಸುಲಭಾ ವರವರ್ಣಿನೀ |
ನಾರೀ ಸರ್ವಾನವದ್ಯಾಂಗೀ ದೇವೀಂ ಮನ್ಯಾಮಹೇ ವಯಮ್ ॥35॥
ಇತಿ ಸ್ಮಾಪೂಜಯಂಸ್ತತ್ರ ಕೃಷ್ಣಾಂ ಪ್ರೇಕ್ಷ್ಯ ಸಭಾಸದಃ ॥36॥
ಇಂತಹ ಸುಂದರಿಯೂ, ಸರ್ವಾನವದ್ಯಾಂಗಿಯೂ ಆದ ನಾರಿಯು ಮನುಷ್ಯರಲ್ಲಿ ಕಾಣಸಿಗುವುದಿಲ್ಲ. ಇವಳನ್ನು ನಾವು ದೇವತೆ ಎಂದು ತಿಳಿಯುತ್ತೇವೆ. ಹೀಗೆ ಸಭಾಸದರು ದ್ರೌಪದಿಯನ್ನು ನೋಡಿ ತಮ್ಮ ಮಾತುಗಳಿಂದ ಅವಳನ್ನು ಪೂಜಿಸಿದರು.
ಸಾ ವಿನಿಃಶ್ವಸ್ಯ ಸುಶ್ರೋಣೀ ಭೂಯೋಽತಪ್ಯತ ದುರ್ಮುಖೀ |
ತೂಷ್ಣೀಮಾಸೀದ್ ತದಾ ಕೃಷ್ಣಾ ವಿವಕ್ಷಂತಂ ಯುಧಿಷ್ಠಿರಮ್ ॥37॥
ಆ ಸುಂದರಿಯು ನಿಟ್ಟುಸಿರನ್ನು ಬಿಟ್ಟು ಮುಖದ ಮೇಲೆ ದುಃಖದ ಕಳೆಯನ್ನು ಹೊಂದಿ ಮನಸ್ಸಿನಲ್ಲಿಯೇ ತಾಪವನ್ನು ಪಡುತ್ತಾ ಮಾತನಾಡಲು ಉದ್ಯುಕ್ತನಾದ ಯುಧಿಷ್ಠಿರನನ್ನು ನೋಡಿ ಸುಮ್ಮನಾದಳು.
ಯುಧಿಷ್ಠಿರಸ್ಯ ಕೋಪಾತ್ ತು ಲಲಾಟೇ ಸ್ವೇದ ಆಸ್ರವತ್ ॥38॥
ಅಬ್ರವೀತ್ ಧರ್ಮಪುತ್ರೋಽಥ ಸೈರಂಧ್ರೀಂ ಮಹಿಷೀಂ ಪ್ರಿಯಾಮ್ |
ಕೃಷ್ಣಾಂ ತತ್ರ ನೃಪಾಭ್ಯಾಶೇ ಪರಿವ್ರಾಜಕರೂಪಧೃಕ್ ॥39॥
ಯುಧಿಷ್ಠಿರನಿಗೆ ಕೋಪದಿಂದ ಹಣೆಯಿಂದ ಬೆವರು ಸುರಿಯಿತು. ಸಂನ್ಯಾಸಿಯ ರೂಪವನ್ನು ಧರಿಸಿದ ಧರ್ಮಪುತ್ರನಾದ ಅವನು ತನ್ನ ಪ್ರಿಯಪತ್ನಿಯಾದ ಸೈರಂಧ್ರಿಯ ವೇಷದಲ್ಲಿದ್ದ ದ್ರೌಪದಿಯನ್ನು ನೋಡಿ ರಾಜನ ಸಮೀಪದಲ್ಲಿ ಮಾತನಾಡಿದನು.
ಗಚ್ಛ ಸೈರಂಧ್ರಿ ಮಾ ಭೈಸ್ತ್ವಂ ಸುದೇಷ್ಣಾಯಾ ನಿವೇಶನಮ್ |
ರಾಜಾ ಹ್ಯಯಂ ಧರ್ಮಶೀಲೋ ವಿರಾಟಃ ಪರಲೋಕಭೀಃ ॥40॥
ಯತಸ್ತತ್ವಂ ನ ಪರಿತ್ರಾತಿ ಸತ್ಯೇ ಧರ್ಮಪಥೇ ಸ್ಥಿತಃ ॥41॥
ಸೈರಂಧ್ರಿಯೇ, ಹೆದರಬೇಡ. ವಿರಾಟರಾಜನು ಧರ್ಮಶೀಲನಾದರೂ ಪರಲೋಕಭಯವುಳ್ಳವನಾದರೂ, ಸತ್ಯದಲ್ಲಿ ಮತ್ತು ಧರ್ಮದ ಮಾರ್ಗದಲ್ಲಿ ಇದ್ದವನಾದರೂ ನಿನ್ನನ್ನು ರಕ್ಷಿಸುತ್ತಿಲ್ಲ. ಆದ್ದರಿಂದ ಸುದೇಷ್ಣೆಯ ಮನೆಗೆ ಹೋಗು.
ಭರ್ತಾರಸ್ತವ ಪಶ್ಯಂತಿ ಕ್ಲಿಶ್ಯಂತೇ ಧೀರಚೇತಸಃ |
ಶುಶ್ರೂಷಯಾ ಕ್ಲಿಶ್ಯಮಾನಾಃ ಪರಲೋಕಂ ಜಯಂತ್ಯುತ ॥42॥
ನಿನ್ನ ಪತಿಗಳು ಎಲ್ಲವನ್ನೂ ನೋಡುತ್ತಿದ್ದಾರೆ. ಧೀರಮನಸ್ಸುಳ್ಳ ಅವರು ಕ್ಲೇಶಕ್ಕೆ ಒಳಗಾಗಿದ್ದಾರೆ. ಶುಶ್ರೂಷೆಯಿಂದ ಕ್ಲೇಶಪಡುವವರು ಪರಲೋಕವನ್ನು ಜಯಿಸುತ್ತಾರೆ.
ಮನ್ಯೇ ನ ಕಾಲಃ ಕ್ರೋಧಸ್ಯ ಪಶ್ಯಂತಿ ಪತಯಸ್ತವ |
ತೇನ ತ್ವಾಂ ನಾಭಿಧಾವಂತಿ ಗಂಧರ್ವಾಃ ಸೂರ್ಯವರ್ಚಸಃ ॥43॥
ನಿನ್ನ ಪತಿಗಳು ಇದು ಕ್ರೋಧದ ಕಾಲವಲ್ಲವೆಂದು ತಿಳಿದಿದ್ದಾರೆಂದು ಭಾವಿಸುತ್ತೇನೆ. ಆದ್ದರಿಂದ ಸೂರ್ಯನ ತೇಜಸ್ಸುಳ್ಳ ನಿನ್ನ ಪತಿಗಳಾದ ಗಂಧರ್ವರು ನಿನ್ನ ಬಳಿಗೆ ಓಡಿಬರುತ್ತಿಲ್ಲ (ಈಗ ಹಗಲಿನ ಕಾಲವಾದ್ದರಿಂದ ಏನಾದರೂ ಮಾಡಿದರೆ ಅಜ್ಞಾತವಾಸದ ಭಂಗವಾಗುತ್ತದೆ. ಆದ್ದರಿಂದ ರಾತ್ರಿಯಲ್ಲಿ ಅವರು ಕಾರ್ಯಾಚರಣೆಯನ್ನು ಮಾಡುತ್ತಾರೆ ಎಂದು ಧ್ವನಿ-ಲಕ್ಷ್ಯಾಲಂಕಾರ).
ಭರ್ತುರ್ಭೀರು ಭಯಾದನ್ಯಾ ನ ಕ್ರುಧ್ಯಂತಿ ಕದಾಚನ |
ಬಹುಭಿಶ್ಚ ಪರಿಕ್ಲೇಶೈರವಜ್ಞಾತಾಶ್ಚ ಶತ್ರುಭಿಃ ॥44॥
ಎಲೌ ಭೀರುವೇ, ಶತ್ರುಗಳಿಂದ ಅನೇಕ ಕ್ಲೇಶಗಳಿಗೆ ಮತ್ತು ಅವಮಾನಗಳಿಗೆ ಒಳಗಾದರೂ ಶ್ರೇಷ್ಠರಾದ ಪತ್ನಿಯರು ಪತಿಗೆ ತೊಂದರೆಯಾಗಬಹುದೆಂಬ ಭಯದಿಂದ ಎಂದೂ ಕ್ರೋಧಕ್ಕೆ ಒಳಗಾಗುವುದಿಲ್ಲ.
ಶ್ರೂಯಂತಾಂ ತೇ ಸುಕೇಶಾಂತೇ ಮೋಕ್ಷಧರ್ಮಾಶ್ರಯಾಃ ಕಥಾಃ |
ಯಥಾ ಧರ್ಮಃ ಕುಲಸ್ತ್ರೀಣಾಂ ದೃಷ್ಟೋ ಧರ್ಮಾನುರೋಧನಾತ್ ॥
ಒಳ್ಳೆಯ ಬೈತಲೆಯುಳ್ಳವಳೇ, ಮೋಕ್ಷಧರ್ಮವನ್ನು ಆಶ್ರಯಿಸಿದ ಕಥೆಗಳನ್ನು ಕೇಳು. ಧರ್ಮಕ್ಕೆ ಅನುಸಾರವಾದ ಕುಲಸ್ತ್ರೀಯರ ಧರ್ಮಗಳನ್ನು ಋಷಿಗಳು ಹೇಗೆ ಹೇಳಿದ್ದಾರೆಯೋ ಅದನ್ನು ಕೇಳು.
ನಾಸ್ತಿ ಯಜ್ಞಃ ಸ್ತ್ರಿಯಃ ಕಶ್ಚಿತ್ ನ ಶ್ರಾದ್ಧಂ ನಾಪ್ಯುಪೋಷಣಮ್ |
ಯಾ ಚ ಭರ್ತರಿ ಶು(ಶಿ)ಶ್ರೂಷಾ ಸಾ ಸ್ವರ್ಗಾಯಾಭಿಜಾಯತೇ ॥46॥
ಸ್ತ್ರೀಯರಿಗೆ ಯಾವ ಯಜ್ಞವಾಗಲೀ, ಶ್ರಾದ್ಧವಾಗಲೀ ಅಥವಾ ಉಪವಾಸವಾಗಲೀ ವಿಹಿತವಾಗಿಲ್ಲ. ಪತಿಯ ಶುಶ್ರೂಷೆ ಏನಿದೆಯೋ ಅದರಿಂದಲೇ ಅವರು ಸ್ವರ್ಗವನ್ನು ಜಯಿಸುತ್ತಾರೆ.
ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ |
ಪುತ್ರಸ್ತು ಸ್ಥವಿರೇ ಭಾವೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥47॥
ಬಾಲ್ಯದಲ್ಲಿ ತಂದೆಯು ರಕ್ಷಿಸುತ್ತಾನೆ, ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ, ವಾರ್ಧಕ್ಯದಲ್ಲಿ ಪುತ್ರನು ರಕ್ಷಿಸುತ್ತಾನೆ. ಸ್ತ್ರೀಯು ಎಂದೂ ಸ್ವತಂತ್ರವಾಗಿರುವುದಿಲ್ಲ.
ಅನುರುಧ್ಯಮಾನಾ ಭರ್ತಾರಂ ದೃಶ್ಯಂತೇ ವೀರಪತ್ನಯಃ |
ಶಿ(ಶು)ಶ್ರೂಷಯಾ ಕ್ಲಿಶ್ಯಮಾನಾಃ ಪತಿಲೋಕಂ ಜಯಂತ್ಯುತ ॥48॥
ಅನನ್ಯಭಾವಶುಶ್ರೂಷಾಃ ಪುಣ್ಯಲೋಕಂ ವ್ರಜಂತ್ಯುತ ॥49॥
ವೀರಪತ್ನಿಯರು ಪತಿಗಳನ್ನು ಅನುಸರಿಸಿ ನಡೆಯುವುದು ಕಂಡುಬರುತ್ತದೆ. ಕಷ್ಟಪಟ್ಟು ಅನನ್ಯಭಾವದಿಂದ ಪತಿಸೇವೆಯನ್ನು ಮಾಡಿ

ಪತಿಲೋಕವಾದ ಪುಣ್ಯಲೋಕಗಳನ್ನು ಅವರು ಪಡೆಯುತ್ತಾರೆ.
ನ ಕ್ರೋಧಕಾಲಂ ನಿಯತಂ ಪಶ್ಯಂತಿ ಪತಯಸ್ತವ |
ನ ಕ್ರುದ್ಧೇ ಪ್ರತಿಯಾಯಾದ್ವ್ಯೈ ಪತೀಂಸ್ತೇ ವೃತ್ರಹಾ ಅಪಿ ॥50॥
ತೇನ ತ್ವಾಂ ನಾಭಿಧಾವಂತಿ ಗಂಧರ್ವಾಃ ಕಾಮರೂಪಿಣಃ ॥51॥
ನಿಶ್ಚಯವಾಗಿ ನಿನ್ನ ಪತಿಗಳು ಇದು ಕ್ರೋಧಕಾಲವೆಂದು ಭಾವಿಸಿಲ್ಲ. ಆದ್ದರಿಂದ ಕೀಚಕನ ಮೇಲೆ ಎರಗುತ್ತಿಲ್ಲ. ನಿನ್ನ ಪತಿಗಳು ಕ್ರುದ್ಧರಾದರೆ ವೃತ್ರಹಂತಕನಾದ ಇಂದ್ರನೂ ಸಹ ಅವರ ಎದುರಿಗೆ ಬರಲಾರ. ಆ ಕಾರಣದಿಂದ ಕಾಮರೂಪಿಗಳಾದ ನಿನ್ನ ಪತಿಗಳಾದ ಗಂಧರ್ವರು ನಿನ್ನ ಬಳಿಗೆ ಓಡಿಬರುತ್ತಿಲ್ಲ.
ಯದಿ ತೇ ಸಮಯಃ ಕಶ್ಚಿತ್ ಕೃತೋ ಹ್ಯಾಯತಲೋಚನೇ |
ತಂ ಸ್ಮರಸ್ವ ಕ್ಷಮಾಶೀಲೇ ಕ್ಷಮಾ ಧರ್ಮೋ ಹ್ಯನುತ್ತಮಃ ॥52॥
ವಿಶಾಲಾಕ್ಷಿಯೇ, ನೀನು ಹಿಂದೆ ಏನಾದರೂ ಪ್ರತಿಜ್ಞೆಯನ್ನು ಮಾಡಿದ್ದರೆ ಅದನ್ನು ಸ್ಮರಿಸಿಕೊ. ಕ್ಷಮಾಶೀಲಳೇ, ಕ್ಷಮೆಯು ಶ್ರೇಷ್ಠವಾದ ಧರ್ಮ.
ಕ್ಷಮಾ ಸತ್ಯಂ ಕ್ಷಮಾ ದಾನಂ ಕ್ಷಮಾ ಧರ್ಮಃ ಕ್ಷಮಾ ತಪಃ |
ಕ್ಷಮಾವತಾಮಯಂ ಲೋಕಃ ಪರಲೋಕಃ ಕ್ಷಮಾವತಾಮ್ ॥53॥
ಕ್ಷಮೆಯೇ ಸತ್ಯ, ಕ್ಷಮೆಯೇ ದಾನ, ಕ್ಷಮೆಯೇ ಧರ್ಮ, ಕ್ಷಮೆಯೇ ತಪಸ್ಸು. ಕ್ಷಮೆ ಉಳ್ಳವರಿಗೆ ಈ ಲೋಕವೂ ಇದೆ. ಪರಲೋಕವೂ ಇದೆ.
ವೈಶಂಪಾಯನಃ
ಇತ್ಯೇವಮುಕ್ತೇ ತಿಷ್ಠಂತೀಂ ಪುನರೇವಾಹ ಧರ್ಮರಾಟ್ ॥54॥
ದುಃಖಂ ರೋದಿಷಿ ವೈ ಭದ್ರೇ ದೀನಾ ತ್ವಂ ರಾಜಸಂಸದಿ |
ತಸ್ಮಾತ್ ತ್ವಮಪಿ ಸುಶ್ರೋಣಿ ಶೈಲೂಷೀವ ವಿಭಾಸಿ ನಃ ॥55॥
ಹೀಗೆ ಹೇಳಿದರೂ ಇನ್ನೂ ಅಲ್ಲಿಯೇ ನಿಂತಿರುವ ದ್ರೌಪದಿಯನ್ನು ನೋಡಿ ಧರ್ಮರಾಜನು, ಮಂಗಳಸ್ವರೂಪಳೇ, ನೀನು ದೀನಳಾಗಿ ರಾಜಸಭೆಯಲ್ಲಿ ದುಃಖವುಂಟಾಗುವಂತೆ ಅಳುತ್ತಿದ್ದೀಯೆ. ಆದ್ದರಿಂದ ಸುಂದರಿಯೇ, ನೀನೂ ಸಹ ನನಗೆ ಒಬ್ಬ ನಟಿಯಂತೆ ತೋರುತ್ತಿದ್ದೀಯೆ.
ಏವಮುಕ್ತಾ ತು ಸಾ ಭರ್ತ್ರಾ ಸಮುದ್ವೀಕ್ಷ್ಯಾಬ್ರವೀದಿದಮ್ ॥56॥
ಸತ್ಯಮುಕ್ತಂ ತ್ವಯಾ ವಿದ್ವನ್ ಶೈಲೂಷಂ ವಿದ್ಧಿ ಮಾಂ ಪುನಃ |
ಶೈಲೂಷಕಸ್ಯ ತಸ್ಯಾಹಂ ಯೇಷಾಂ ಜ್ಯೇಷ್ಠೋಽಕ್ಷಕೋವಿದಃ ॥57॥
ಹೀಗೆ ಹೇಳಲ್ಪಟ್ಟ ದ್ರೌಪದಿಯು ಪತಿಯನ್ನು ನೋಡುತ್ತಾ ವಿದ್ವಾಂಸನೇ, ನೀನು ಸತ್ಯವನ್ನು ನುಡಿದಿದ್ದೀಯೆ. ನನ್ನನ್ನು ಶೈಲೂಷಳೆಂದು (ಬಿಲ್ವಫಲವೆಂದು) ತಿಳಿ. ನಾನು ಯಾರ ಹಿರಿಯಣ್ಣನು ಅಕ್ಷಕೋವಿದನಾಗಿ ಶೈಲೂಷನಾಗಿದ್ದಾನೆಯೋ ಅಂತಹವನ ಪತ್ನಿಯಾಗಿ ಶೈಲೂಷಿಯಷ್ಟೇ. (ಶೈಲೂಷ ಎಂದರೆ ನಟ ಮತ್ತು ಬಿಲ್ವಫಲ ಎಂದು ಎರಡರ್ಥವಿದೆ. ಬಿಲ್ವಫಲವು ಸಜ್ಜನರಿಗೆ ಅಯೋಗ್ಯವಾದುದರಿಂದ ನಾನು ನಿನಗೆ ಉಪಕಾರವನ್ನು ಮಾಡುವ ಸ್ಥಿತಿಯಲ್ಲಿಲ್ಲ ಎಂದು ದ್ರೌಪದಿಯ ಒಳಗಿನ ಅಭಿಪ್ರಾಯ-ಲಕ್ಷ್ಯಾಲಂಕಾರ).
ಏವಮುಕತತ್ವ ವರಾರೋಹಾ ಪರಿಮೃಜ್ಯಾನನಂ ಶುಭಮ್ |
ಕೇಶಾನ್ ಪ್ರಮುಕ್ತಾನ್ ಸಂಯಮ್ಯ ರುಧಿರೇಣ ಸಮುಕ್ಷಿತಾನ್ ॥58॥
ಪಾಂಸುಕುಂಠಿತಸರ್ವಾಂಗೀ ಗಜರಾಜವಧೂರಿವ |
ಪ್ರತಸ್ಥೇ ನಾಗನಾಸೋರೂ ಭರ್ತುರಾಜ್ಞಾಯ ಶಾಸನಮ್ ॥59॥
ಆ ಸುಂದರಿಯು ಹೀಗೆ ಹೇಳಿ ತನ್ನ ಶುಭವಾದ ಮುಖವನ್ನು ಒರೆಸಿಕೊಂಡು ರಕ್ತದಿಂದ ತೊಯ್ದಿದ್ದ ತನ್ನ ಕೂದಲುಗಳನ್ನು ಗಂಟುಕಟ್ಟಿ ಮೈಯೆಲ್ಲಾ ಧೂಳಿನಿಂದ ತುಂಬಿದವಳಾಗಿ ಗಜರಾಜ ವಧುವಿನಂತಿದ್ದ ಸುಂದರವಾದ ನಾಸಿಕವುಳ್ಳ ಅವಳು ಪತಿಯ ಆಜ್ಞೆಯನ್ನು ತಿಳಿದು ಅಲ್ಲಿಂದ ಹೊರಟಳು.
ವಿಮುಕ್ತಾ ಮೃಗಶಾಬಾಕ್ಷೀ ನಿರಂತರಪಯೋಧರಾ |
ಪ್ರಭಾ ನಕ್ಷತ್ರರಾಜಸ್ಯ ಕಾಲಮೇಘೈರಿವಾವೃತಾ ॥60॥
ಏಣಾಕ್ಷಿಯೂ, ನಿರಂತರವಾದ ಸ್ತನವುಳ್ಳವಳೂ ಆದ ಅವಳು ಕಾಲಮೇಘಗಳಿಂದ ಆವೃತವಾದ ಚಂದ್ರನ ಪ್ರಭೆಯಂತೆ ಆ ಸಭೆಯಿಂದ ಹೊರಟಳು.
ಯಸ್ಯಾ ಹ್ಯರ್ಥೇ ಪಾಂಡವೇಯಾಃ ತ್ಯಜೇಯುರಪಿ ಜೀವಿತಮ್ |
ತಾಂ ತೇ ದೃಷ್ಟ್ವಾ ತಥಾ ಕೃಷ್ಣಾಂ ಕ್ಷಮಿಣೋ ಧರ್ಮಚಾರಿಣಃ ॥61॥
ಸಮಯಂ ನಾತಿವರ್ತಂತೇ ವೇಲಾಮಿವ ಮಹೋದಧಿಃ ॥62॥
ಯಾರ ಸಲುವಾಗಿ ಪಾಂಡುಪುತ್ರರು ತಮ್ಮ ಪ್ರಾಣವನ್ನೂ ಕೊಡುತ್ತಾರೆಯೋ ಅಂತಹ ಆ ದ್ರೌಪದಿಯನ್ನು ನೋಡಿ ಧರ್ಮಚಾರಿಗಳಾದ ಅವರು ಕ್ಷಮೆಯನ್ನು ತಾಳಿದರು. ಸಮುದ್ರವು ದಡವನ್ನು ಮೀರದಂತೆ ಅವರು ತಮ್ಮ ಪ್ರತಿಜ್ಞೆಯನ್ನು ಮೀರಲಿಲ್ಲ.
ಸಾ ಪ್ರವಿಶ್ಯ ಪ್ರವೇಪಂತೀ ಸುದೇಷ್ಣಾಯಾ ನಿವೇಶನಮ್ |
ರುದತೀ ಚಾರುತನ್ವಂಗೀ ತಸ್ಯಾಸ್ತಸ್ಥಾವಥಾಗ್ರತಃ ॥63॥
ಸುಂದರಿಯೂ, ಕೃಶಾಂಗಿಯೂ ಆದ ಅವಳು ಅಳುತ್ತಾ ಮತ್ತು ನಡುಗುತ್ತಾ ಸುದೇಷ್ಣೆಯ ಮನೆಯನ್ನು ತಲುಪಿ ಅವಳ ಎದುರಿಗೆ ನಿಂತಳು.

ತಮುವಾಚ ವಿರಾಟಸ್ಯ ಮಹಿಷೀ ಶಾಠ್ಯಮಾಸ್ಥಿತಾ ॥64॥
ಕಿಮಿದಂ ಪದ್ಮಸಂಕಾಶಂ ಸುದಂತೋಷ್ಠಾಕ್ಷಿನಾಸಿಕಮ್ |
ರುದಂತ್ಯಾ ಅವಮೃಷ್ಟಾಸ್ರಂ ಪೂರ್ಣೇಂದುಸಮವರ್ಚಸಮ್ ॥65॥
ಬಿಂಬೋಷ್ಠಂ ಕೃಷ್ಣತಾರಾಭ್ಯಾಮತ್ಯಂತಂ ರುಚಿರಪ್ರಭಮ್ |
ನಯನಾಭ್ಯಾಮಜಿಹ್ಮಾಭ್ಯಾಂ ಮುಖಂ ತೇ ಮುಂಚತೇ ಜಲಮ್ ॥
ವಿರಾಟನ ಮಹಿಷಿಯಾದ ಸುದೇಷ್ಣೆಯು ಶಾಠ್ಯವನ್ನು ಅವಲಂಬಿಸಿ ಅವಳನ್ನು ಕುರಿತು, ಇದೇನು ಪದ್ಮದಂತಿರುವ ಒಳ್ಳೆಯ ದಂತ, ತುಟಿ, ಅಕ್ಷಿ ಮತ್ತು ನಾಸಿಕಗಳಿರುವ, ಪೂರ್ಣಚಂದ್ರನಿಗೆ ಸಮಾನವಾದ ಕಾಂತಿಯುಳ್ಳ ನಿನ್ನ ಮುಖವು ಅಳುತ್ತಾ ಕಣ್ಣೀರನ್ನು ಸುರಿಸುತ್ತಿದೆ? ತೊಂಡೆಹಣ್ಣಿನಂತಿರುವ ತುಟಿಗಳನ್ನು ಹೊಂದಿರುವ, ಕಪ್ಪಾದ, ಸುಂದರವಾದ ನೇರವಾದ ನಯನಗಳನ್ನು ಹೊಂದಿರುವ ಸುಂದರವಾದ ನಿನ್ನ ಮುಖವು ಕಣ್ಣೀರನ್ನು ಸುರಿಸುತ್ತಿದೆ? ಎಂದು ಕೇಳಿದಳು.
ಕಸತ್ತ್ವಾಽವಧೀದ್ ವರಾರೋಹೇ ಕಸ್ಮಾದ್ ರೋದಿಷಿ ಶೋಭನೇ |
ಕೋ ವಿಪ್ರಯುಜ್ಯತೇ ದಾರೈಃ ಸಪುತ್ರಪಶುಬಾಂಧವಃ ॥67॥
ಸುಂದರಿಯೇ, ಯಾರು ನಿನಗೆ ಹೊಡೆದರು? ಶೋಭನಳೇ, ಏಕೆ ಅಳುತ್ತಿದ್ದೀಯೆ? ಈ ದಿನ ಯಾರು ಪತ್ನಿ, ಪುತ್ರ, ಪಶು ಬಾಂಧವರಿಂದ ವಿಯೋಗವನ್ನು ಹೊಂದಬೇಕು?
ಕಸ್ಯಾದ್ಯ ರಾಜಾ ಕುಪಿತೋ ವಧಮಾಜ್ಞಾಪಯಿಷ್ಯತಿ |
ಬ್ರೂಹಿ ಕಿಂ ತೇ ಪ್ರಿಯಂ ಕಾರ್ಯಂ ಕಂ ತ್ಯಜೇ ಘಾತಯಾಮಿ ವಾ ॥
ಈ ದಿನ ರಾಜನು ಕೋಪಗೊಂಡು ಯಾರಿಗೆ ವಧೆಯ ಆಜ್ಞೆಯನ್ನು ನೀಡಬೇಕು? ನಿನಗೆ ಯಾವುದು ಪ್ರಿಯವಾದ ಕಾರ್ಯ ಎಂದು ಹೇಳು. ಯಾರನ್ನು ಪರಿತ್ಯಾಗ ಮಾಡಲಿ? ಅಥವಾ ಯಾರನ್ನು ವಧೆ ಮಾಡಿಸಲಿ?
ವೈಶಂಪಾಯನಃ
ತಾಂ ನಿಃಶ್ವಸ್ಯಾಬ್ರವೀತ್ ಕೃಷ್ಣಾಽಜಾನಂತೀವ ಪೃಚ್ಛಸೇ |
ಭ್ರಾತುಸ್ತ್ವಂ ಮಾಮನುಪ್ರೇಷ್ಯ ಕಿಮೇವಂ ತ್ವಂ ವಿಕತ್ಥಸೇ ॥69॥
ವೈಶಂಪಾಯನ ದ್ರೌಪದಿಯು ನಿಟ್ಟುಸಿರನ್ನು ಬಿಟ್ಟು ಅವಳನ್ನು ಕುರಿತು ಏನೂ ತಿಳಿಯದವಳಂತೆ ನನ್ನನ್ನು ಕೇಳುತ್ತಿದ್ದೀಯೆ. ನಿನ್ನ ತಮ್ಮನ ಬಳಿಗೆ ನೀನೇ ನನ್ನನ್ನು ಕಳುಹಿಸಿ ಏಕೆ ಬಾಯಿಗೆ ಬಂದಂತೆ ಮಾತನಾಡುತ್ತಿದ್ದೀಯೆ ಎಂದು ಕೇಳಿದಳು.
ಕೀಚಕೋ ಮಾಽವಧೀತ್ ತತ್ರ ಸುರಾಹಾರೀಮಿತೋ ಗತಾಮ್ |
ಸಭಾಯಾಂ ಪಶ್ಯತೋ ರಾಜ್ಞೋ ಯಥಾ ವೈ ನಿರ್ಜನೇ ವನೇ ॥70॥
ಸುರೆಯನ್ನು ತರಲು ಇಲ್ಲಿಂದ ಅಲ್ಲಿಗೆ ಹೋದ ನನ್ನನ್ನು ರಾಜನು ನೋಡುತ್ತಿರುವಂತೆಯೇ ನಿರ್ಜನವಾದ ವನದಲ್ಲಿ ಹೇಗೋ ಹಾಗೆ ಕೀಚಕನು ನನ್ನನ್ನು ಒದ್ದನು.
ಸುದೇಷ್ಣಾ
ಘಾತಯಾಮಿ ಸುದಂತೋಷ್ಠಿ ಕೀಚಕಂ ಯದಿ ಮನ್ಯಸೇ ॥71॥
ಭ್ರಾತಾ ಯದ್ಯಪಿ ಮೇ ವ್ಯಕ್ತಂ ಯತಸ್ತ್ವಂ ಧರ್ಮಚಾರಿಣೀ |
ಯಸತ್ತ್ವಂ ಕಾಮಾಭಿಭೂತಾತ್ಮಾ ದುರ್ಲಭಾಮವಮನ್ಯತೇ ॥72॥
ಸುಂದರವಾದ ದಂತೋಷ್ಠವುಳ್ಳವಳೇ, ನಿನಗೆ ಅಭಿಪ್ರಾಯವಿದ್ದರೆ ನಾನು ಕೀಚಕನನ್ನು ಕೊಲ್ಲಿಸುತ್ತೇನೆ. ಯದ್ಯಪಿ ಅವನು ನನಗೆ ತಮ್ಮ. ಆದರೂ ನೀನು ಸ್ಪಷ್ಟವಾಗಿ ಧರ್ಮವನ್ನು ಆಚರಿಸುವವಳು. ಅವನು ಕಾಮದಿಂದ ತುಂಬಿದ ಮನಸ್ಸುಳ್ಳವನಾಗಿ ದುರ್ಲಭಳಾದ ನಿನ್ನನ್ನು ಅವಮಾನ ಮಾಡುವುದರಿಂದ ತಮ್ಮನಾದರೂ ಅವನನ್ನು ಕೊಲ್ಲಿಸುತ್ತೇನೆ.
ದ್ರೌಪದೀ
ಅದ್ಯೈವ ತಂ ಹನಿಷ್ಯಂತಿ ವಿಪ್ರಕರ್ತಾರಮಚ್ಯುತಾಃ |
ಮನ್ಯೇಹಮದ್ಯ ವಾ ಶ್ವೋ ವಾ ಪರಲೋಕಂ ಗಮಿಷ್ಯತಿ ॥73॥
ದ್ರೌಪದೀ ಗುಣಗಳಿಂದ ಚ್ಯುತರಾಗದ ನನ್ನ ಪತಿಗಳು ಈ ದಿನವೇ ಪ್ರತೀಕಾರವನ್ನು ಮಾಡಿ ಅವನನ್ನು ಕೊಲ್ಲುವರು. ಈ ದಿನ ಅಥವಾ ನಾಳೆ ಅವನು ಪರಲೋಕಕ್ಕೆ ಹೋಗುವನೆಂದು ನಾನು ಭಾವಿಸಿದ್ದೇನೆ.
ಭ್ರಾತುಃ ಪ್ರಯಚ್ಛ ತ್ವರಿತಂ ಜೀವಶ್ರಾದ್ಧಂ ತ್ವಮದ್ಯ ವೈ |
ಸುಹೃಷ್ಟಂ ಕುರು ಚೈವೈನಂ ನಾಸೂನ್ ಮನ್ಯೇ ಧರಿಷ್ಯತಿ ॥74॥
ಈ ದಿನವೇ ನೀನು ನಿನ್ನ ತಮ್ಮನಿಗೆ ಶೀಘ್ರವಾಗಿ ಜೀವಶ್ರಾದ್ಧವನ್ನು ಮಾಡು. ಅವನನ್ನು ಸಂತೋಷವಾಗಿಡು. ಅವನು ಬದುಕುವುದಿಲ್ಲವೆಂದು ನಾನು ತಿಳಿದಿದ್ದೇನೆ.
ತೇಷಾಂ ಹಿ ಮಮ ಭರ್ತೃಣಾಂ ಪಂಚಾನಾಂ ಧರ್ಮಚಾರಿಣಾಮ್ |
ಏಕೋ ದುರ್ಧರ್ಷಣೋಽತ್ಯರ್ಥಂ ಬಲೇ ಚಾಪ್ರತಿಮೋ ಭುವಿ ॥75॥
ನನ್ನ ಪತಿಗಳಾದ ಧರ್ಮಚಾರಿಗಳಾದ ಐವರಲ್ಲಿ ಒಬ್ಬನು ಯಾರಿಂದಲೂ ಸೋಲಿಸಲ್ಪಡದವನು. ಬಲದಲ್ಲಿ ಅವನು ಭೂಮಿಯಲ್ಲಿ ಅಸದೃಶನಾದವನು.
ನಿರ್ಮನುಷ್ಯಮಿಮಂ ಲೋಕಂ ಕುರ್ಯಾತ್ ಕ್ರುದ್ಧೋ ನಿಶಾಮಿಮಾಮ್
ಸ ನ ಸಂಕ್ರುದ್ಧ್ಯತೇ ತಾವದ್ ಗಂಧರ್ವಃ ಕಾಮರೂಪಧೃಕ್ ॥76॥
ಅವನು ಕೋಪಗೊಂಡರೆ ಈ ರಾತ್ರಿಯೇ ಈ ಲೋಕವನ್ನು ನಿರ್ಮನುಷ್ಯನನ್ನಾಗಿ ಮಾಡಿಯಾನು. ಕಾಮರೂಪಿಯಾದ ಗಂಧರ್ವನಾದ ಅವನು ಸದ್ಯಕ್ಕೆ ಕೋಪಗೊಂಡಿಲ್ಲ (ರಾತ್ರಿಯಾಗುವವರೆಗೆ ತನ್ನ ಕೋಪವನ್ನು ವ್ಯಕ್ತಗೊಳಿಸುವುದಿಲ್ಲ ಎಂದು ಧ್ವನಿ-ಲಕ್ಷ್ಯಾಲಂಕಾರ).

ನೂನಂ ಜ್ಞಾಸ್ಯತಿ ಯಾವದ್ವೈ ಮಮೈತತ್ ಪಾದಘಾತನಮ್ ॥77॥
ತತ್ಕ್ಷಣೇ ಕೀಚಕಃ ಪಾಪಃ ಸಪುತ್ರಭ್ರಾತೃಬಾಂಧವಃ |
ವಿನಶಿಷ್ಯತಿ ದುಷ್ಟಾತ್ಮಾ ಯಥಾ ದುಷ್ಕೃತಕರ್ಮಕೃತ್ ॥78॥
ಅವನು ಕೀಚಕನು ನನ್ನನ್ನು ಒದ್ದ ವಿಷಯವನ್ನು ತಿಳಿದ ತಕ್ಷಣವೇ ಪಾಪಿಯೂ ದುರಾತ್ಮನೂ ಮತ್ತು ದುಷ್ಕಾರ್ಯವನ್ನು ಮಾಡುವವನೂ ಆದ ಕೀಚಕನು ಪುತ್ರ ಭ್ರಾತೃಬಾಂಧವರ ಜೊತೆಯಲ್ಲಿ ವಿನಾಶವನ್ನು ಹೊಂದುವನು.
ಅಪಿ ಚೈತತ್ ಪುರಾ ಪ್ರೋಕ್ತಂ ನಿಪುಣೈರ್ಮನುಜೋತ್ತಮೈಃ ॥79॥
ಏಕಸ್ತು ಕುರುತೇ ಪಾಪಂ ಕಾಲಪಾಶವಶಂ ಗತಃ |
ನೀಚೋ ಹ್ಯಾತ್ಮಾಪರಾಧೇನ ಕುಲಂ ತೇನ ವಿನಶ್ಯತಿ ॥80॥
ನಿಪುಣರಾದ ಮನುಷ್ಯಶ್ರೇಷ್ಠರು ಇದನ್ನು ಹಿಂದೆಯೇ ಹೇಳಿದ್ದಾರಷ್ಟೆ? ಕಾಲಪಾಶವಶನಾದ ನೀಚನಾದ ಒಬ್ಬನು ಪಾಪವನ್ನು ಮಾಡುತ್ತಾನೆ. ಅವನು ಮಾಡಿದ ಅಪರಾಧದಿಂದ ಅವನ ಕುಲವೇ ನಾಶವನ್ನು ಹೊಂದುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ವಿಂಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * *
ಇಪ್ಪತ್ತೊಂದನೆಯ ಅಧ್ಯಾಯ
ಕೀಚಕನ ಜನ್ಮಾದಿಕಥನ
ವೈಶಂಪಾಯನಃ
ಸುದೇಷ್ಣಾಮೇವಮುಕ್ತ್ವಾ ತು ಸೈರಂಧ್ರೀ ದುಃಖಮೋಹಿತಾ |
ಕೀಚಕಸ್ಯ ವಧಾರ್ಥಾಯ ವ್ರತದೀಕ್ಷಾಮುಪಾಗಮತ್ ॥1॥
ವೈಶಂಪಾಯನ ಸೈರಂಧ್ರಿಯು ದುಃಖಮೋಹಿತಳಾಗಿ ಸುದೇಷ್ಣೆಯನ್ನು ಕುರಿತು ಹೀಗೆ ಮಾತನಾಡಿ ಕೀಚಕನ ವಧೆಗಾಗಿ ವ್ರತದೀಕ್ಷೆಯನ್ನು ತೊಟ್ಟಳು.
ಅಭ್ಯರ್ಥಿತಾ ಚ ನಾರೀಭಿರ್ಮಾನಿತಾ ಚ ಸುದೇಷ್ಣಯಾ |
ನ ಚ ಸ್ನಾತಿ ನ ಚಾಶ್ನಾತಿ ನ ಪಾಂಸೂನ್ ಪರಿಮಾರ್ಜತಿ ॥2॥
ರುಧಿರಕ್ಲಿನ್ನವದನಾ ಬಭೂವ ರುದಿತೇಕ್ಷಣಾ ॥3॥
ಬೇರೆ ಸ್ತ್ರೀಯರಿಂದ ಆರ್ಥಿತಳಾದರೂ ಸುದೇಷ್ಣೆಯಿಂದ ಸಮ್ಮಾನಿತಳಾದರೂ ಅವಳು ಸ್ನಾನವನ್ನು ಮಾಡಲಿಲ್ಲ. ಆಹಾರವನ್ನು ಸೇವಿಸಲಿಲ್ಲ. ಮೈಮೇಲಿನ ಧೂಳನ್ನು ಒರೆಸಿಕೊಳ್ಳಲಿಲ್ಲ. ರಕ್ತದಿಂದ ತೊಯ್ದ ಮುಖವುಳ್ಳವಳಾಗಿ ಅಳುತ್ತಾ ಕುಳಿತಳು.
ತಾಂ ತಥಾ ಶೋಕಸಂತಪ್ತಾಂ ದೃಷ್ಟ್ವಾ ಪ್ರರುದಿತಾಂ ಸ್ತ್ರಿಯಃ |
ಕೀಚಕಸ್ಯ ವಧಂ ಸರ್ವಾ ಮನೋಭಿಶ್ಚ ಶಶಂಸಿರೇ ॥4॥
ಹಾಗೆ ಅವಳು ಶೋಕಸಂತಪ್ತಳಾಗಿ ಅಳುತ್ತಿರುವುದನ್ನು ನೋಡಿದ ಎಲ್ಲಾ ಸ್ತ್ರೀಯರು ಕೀಚಕನ ವಧೆಯನ್ನು ಮನಸ್ಸಿನಲ್ಲಿಯೇ ಆಶಿಸಿ ಪ್ರಶಂಸಿಸಿದರು.
ಜನಮೇಜಯಃ
ಅಹೋ ದುಃಖತರಂ ಪ್ರಾಪ್ತಾ ಕೀಚಕೇನ ಪದಾ ಹತಾ |
ಪತಿವ್ರತಾ ಮಹಾಭಾಗಾ ದ್ರೌಪದೀ ಯೋಷಿತಾಂ ವರಾ ॥5॥
ಜನಮೇಜಯ ಅಯ್ಯೋ ಮಹಾನುಭಾವಳೂ, ಪತಿವ್ರತೆಯೂ, ಸ್ತ್ರೀಯರಲ್ಲಿ ಶ್ರೇಷ್ಠಳೂ ಆದ ದ್ರೌಪದಿಯು ಕೀಚಕನಿಂದ ಒದೆಯಲ್ಪಟ್ಟಳು.
ದುಃಶಲಾಂ ಮಾನಯಂತೀ ಯಾ ಭರ್ತೄಣಾಂ ಭಗಿನೀಂ ಶುಭಾಮ್ |
ನಾಶಪತ್ ಸಿಂಧುರಾಜಂ ತಂ ಬಲಾತ್ಕಾರೇಣ ವಾಹಿತಾ ॥6॥
ಕಿಮರ್ಥಂ ಧರ್ಷಣಂ ಪ್ರಾಪ್ತಾ ಕೀಚಕೇನ ದುರಾತ್ಮನಾ |
ನಾಶಪತ್ ತಂ ಮಹಾಭಾಗಾ ಕೃಷ್ಣಾ ಪಾದೇನ ತಾಡಿತಾ ॥7॥
ತನ್ನ ಪತಿಗಳ ತಂಗಿಯಾದ ದುಃಶಲೆಗೆ ಮಾನವನ್ನು ಕೊಟ್ಟು ಸಿಂಧುರಾಜನು ಅವಳನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋದಾಗ ಯಾವಳು ಶಾಪವನ್ನು ಕೊಡಲಿಲ್ಲವೋ,ಅಂತಹ ಮಹಾನುಭಾವಳಾದ ದ್ರೌಪದಿಯು ದುರಾತ್ಮನಾದ ಕೀಚಕನಿಂದ ಕಾಲಿನಿಂದ ಒದೆಯಲ್ಪಟ್ಟಾಗ ಏಕೆ ಶಾಪವನ್ನು ಕೊಡಲಿಲ್ಲ?
ತೇಜೋರಾಶಿರಿಯಂ ದೇವೀ ಧರ್ಮಜ್ಞಾ ಸತ್ಯವಾದಿನೀ |
ಕೇಶಪಕ್ಷೇ ಪರಾಮೃಷ್ಟಾ ಮರ್ಷಯಿಷ್ಯತ್ಯಶಕ್ತವತ್ ॥8॥
ಧರ್ಮಜ್ಞಳೂ, ಸತ್ಯವಂತಳೂ ಆದ ಆ ದೇವಿಯು ತೇಜೋರಾಶಿ ಇದ್ದಂತೆ. ತಲೆಯ ಕೂದಲನ್ನು ಹಿಡಿದು ಎಳೆದಾಗಲೂ ಅಶಕ್ತಳಂತೆ ಸಹಿಸುವಳಷ್ಟೆ!
ನೈತತ್ಕಾರಣಮಲ್ಪಂ ಹಿ ಶ್ರೋತುಕಾಮೋಽಸ್ಮಿ ಸತ್ತಮ |
ಕೃಷ್ಣಾಯಾಸ್ತು ಪರಿಕ್ಲೇಶಾನ್ಮನೋ ಮೇ ದೂಯತೇ ಭೃಶಮ್ ॥9॥
ಸಜ್ಜನರಲ್ಲಿ ಶ್ರೇಷ್ಠನಾದವನೇ, ಇದಕ್ಕೆ ಅಲ್ಪವಾದ ಕಾರಣವು ಇರಲಾರದು. ಆ ಕಾರಣವನ್ನು ಕೇಳಲು ಬಯಸುತ್ತೇನೆ. ದ್ರೌಪದಿಗೆ ಒದಗಿದ ಕ್ಲೇಶವನ್ನು ಕೇಳಿ ನನ್ನ ಮನಸ್ಸು ದುಃಖದಿಂದ ತುಂಬುತ್ತಿದೆ.

ಕಸ್ಯ ವಂಶೇ ಸಮುದ್ಭೂತಃ ಸ ಚ ದುರ್ಲಲಿತೋ ಮುನೇ |
ಬಲೋನ್ಮತ್ತಃ ಕಥಂ ಚಾಸೀತ್ ಸ್ಯಾಲೋ ಮಾತ್ಸ್ಯಸ್ಯ ಕೀಚಕಃ ॥10॥
ಎಲ್ಲೈ ಋಷಿಗಳೇ, ದುಷ್ಟನಡತೆಯುಳ್ಳ ಅವನು ಯಾವ ವಂಶದಲ್ಲಿ ಹುಟ್ಟಿದವನು? ವಿರಾಟನ ಭಾವಮೈದುನನಾದ ಆ ಕೀಚಕನು ಹೇಗೆ ಬಲೋನ್ಮತ್ತನಾದನು?
ದೃಷ್ಟ್ವಾಽಪಿ ತಾಂ ಪ್ರಿಯಾಂ ಭಾರ್ಯಾಂ ಸೂತಪುತ್ರೇಣ ತಾಡಿತಾಮ್ |
ನೈವ ಚುಕ್ಷುಭಿರೇ ವೀರಾಃ ಕಿಮಕುರ್ವತ ತಂ ಪ್ರತಿ ॥11॥
ವೀರರಾದ ಅವಳ ಪತಿಗಳು ತಮ್ಮ ಭಾರ್ಯೆಯು ಸೂತಪುತ್ರನಾದ ಕೀಚಕನಿಂದ ಒದೆಯಲ್ಪಟ್ಟರೂ ಕ್ಷೋಭೆಯನ್ನು ಹೊಂದಲಿಲ್ಲ. ಅವರು ಅವನಿಗೆ ಏನನ್ನು ಮಾಡಿದರು?
ವೈಶಂಪಾಯನಃ
ತ್ವದುಕ್ತೋಽಯಮನುಪ್ರಶ್ನಃ ಕುರೂಣಾಂ ಕೀರ್ತಿವರ್ಧನ |
ಏತತ್ ಸರ್ವಂ ಯಥಾ ವಕ್ಷ್ಯೇ ವಿಸ್ತರೇಣೈವ ಪಾರ್ಥಿವ ॥12॥
ವೈಶಂಪಾಯನ ಕುರುವಂಶದ ಕೀರ್ತಿವರ್ಧನನಾದ ಎಲ್ಲೈ ರಾಜನೇ, ನಿನ್ನ ಪ್ರಶ್ನೆಗೆ ಉತ್ತರವಾಗಿ ನಾನು ವಿಸ್ತಾರವಾಗಿ ಎಲ್ಲವನ್ನೂ ಹೇಳುವೆನು.
ಬ್ರಾಹ್ಮಣ್ಯಾಂ ಕ್ಷತ್ರಿಯಾಜ್ಜಾತಃ ಸೂತೋ ಭವತಿ ಪಾರ್ಥಿವ |
ಪ್ರಾತಿಲೋಮ್ಯೇನ ಜಾತಾನಾಂ ಸ ಹ್ಯೇಕೋ ದ್ವಿಜ ಏವ ತು ॥13॥
ರಾಜನೇ, ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಜನಿಸಿದವನು ಸೂತನಾಗುತ್ತಾನೆ. ಇದು ಪ್ರತಿಲೋಮದಿಂದ (ಸ್ತ್ರೀಯರಿಗಿಂತ ಕೆಳಗಿನ ಜಾತಿಯ ಪುರುಷನಿಂದ) ಉಂಟಾದ ಜನನ. ಈ ಸೂತನಿಗೆ ದ್ವಿಜತ್ವವಿದೆ.
ರಥಕಾರಮಿತೀಮಂ ಹಿ ಕ್ರಿಯಾಯುಕ್ತಂ ದ್ವಿಜನ್ಮನಾಮ್ |
ಕ್ಷತ್ರಿಯಾದವರಂ ವೈಶ್ಯಾದ್ ವಿಶಿಷ್ಟಮಿತಿ ಚಕ್ಷತೇ ॥14॥
ಇಂತಹ ಸೂತನನ್ನು ರಥಕಾರನೆಂದು ಕರೆಯುತ್ತಾರೆ. ಅವನಿಗೆ ದ್ವಿಜರ ಸಂಸ್ಕಾರವಿದೆ. ದ್ವಿಜರಿಗೆ ಯೋಗ್ಯವಾದ ಸಂಸ್ಕಾರವನ್ನು ಹೊಂದಿದವನಾಗುತ್ತಾನೆ. ಇವನು ಕ್ಷತ್ರಿಯರಿಗಿಂತ ನೀಚನು ಮತ್ತು ವೈಶ್ಯರಿಗಿಂತ ಉತ್ತಮನಾಗುತ್ತಾನೆ.
ಸಹ ಸೂತೇನ ಸಂಬಂಧಃ ಕೃತಪೂರ್ವೋ ನರೈಶ್ವರೈಃ |
ತಥಾಽಪಿ ತೈರ್ಮಹೀಪಾಲ ರಾಜಶಬ್ದೋ ನ ಲಭ್ಯತೇ ॥15॥
ತೇಷಾಂ ತು ಸೂತವಿಷಯಃ ಸೂತಾನಾಂ ನಾಮತಃ ಕೃತಃ ॥16॥
ಉಪಜೀವ್ಯ ಚ ಯತ್ ಕ್ಷತ್ರಂ ಲಬ್ಧಂ ಸೂತೇನ ಯತ್ ಪುರಾ |
ಹಿಂದಿನ ರಾಜರು ಸೂತರ ಜೊತೆಯಲ್ಲಿ ವಿವಾಹಸಂಬಂಧವನ್ನು ಹೊಂದಿದ್ದರು. ಆದರೂ ಸೂತರಿಗೆ ಎಂದೂ ರಾಜಶಬ್ದವು ಸಲ್ಲುವುದಿಲ್ಲ. ಅವರು ಕ್ಷತ್ರಿಯರನ್ನು ಉಪಜೀವಿಸಿ, ಕ್ಷತ್ರಿಯರಿಂದ ಪಡೆದ ರಾಜ್ಯಕ್ಕೆ ಸೂತರಾಜ್ಯ ಎಂದೇ ಹೆಸರು. ಹಿಂದೆ ಒಬ್ಬ ಸೂತನು ಅಲ್ಲಿ ಅಧಿಪತಿಯಾಗಿದ್ದನು.
ಸೂತಾನಾಮಧಿಪೋ ರಾಜಾ ಕೇಕಯೋ ನಾಮ ವಿಶ್ರುತಃ ॥17॥
ರಾಜಕನ್ಯಾಸಮುದ್ಭೂತಃ ಸಾರಥ್ಯೇಽನುಪಮೋಽಭವತ್ |
ಪುತ್ರಾಸ್ತಸ್ಯ ಕುರುಶ್ರೇಷ್ಠ ಮಾಲವ್ಯಾಂ ಜಜ್ಞಿರೇ ತದಾ ॥18॥
ಸದ್ಯದ ಸಮಯದಲ್ಲಿ ಸೂತರಾಜ್ಯದಲ್ಲಿ ಕೇಕಯನೆಂಬ ಪ್ರಸಿದ್ಧನಾದ ರಾಜನಿದ್ದನು. ಅವನೂ ಸಹ ರಾಜಕನ್ಯೆಯಲ್ಲಿ ಜನಿಸಿದವನಾಗಿ ಸಾರಥ್ಯದ ವಿಷಯದಲ್ಲಿ ಅಸದೃಶನಾಗಿದ್ದನು. ಎಲ್ಲೈ ಕುರುಶ್ರೇಷ್ಠನೇ, ಅವನಿಗೆ ಮಾಲವ ದೇಶದ ಪತ್ನಿಯಲ್ಲಿ ಅನೇಕ ಮಕ್ಕಳು ಜನಿಸಿದರು.
ತೇಷಾಮತಿಬಲೋ ಜ್ಯೇಷ್ಠಃ ಕೀಚಕಃ ಸರ್ವಜಿತ್ ಪ್ರಭೋ |
ಅಗ್ರಜೋ ಬಲಸಮ್ಮತ್ತಃ ತೇನಾಸೀತ್ ಸೂತಷಟ್ಶತಮ್ ॥19॥
ಎಲ್ಲೈ ಪ್ರಭುವೇ, ಅವರಲ್ಲಿ ಜ್ಯೇಷ್ಠನಾದ ಕೀಚಕನು ಅತಿಬಲವನ್ನು ಹೊಂದಿದವನಾಗಿ ಎಲ್ಲರನ್ನೂ ಜಯಿಸಿದನು. ಅವನು ಜ್ಯೇಷ್ಠನಾಗಿ ಬಲಸಮ್ಮತ್ತನಾಗಿದ್ದನು. ಅದರಂತೆ ಇನ್ನೂ ನೂರೈದು ಜನ ಅವನ ತಮ್ಮಂದಿರು, ಒಟ್ಟು ನೂರಾರು ಜನ ಸೂತರಾದರು.
ದ್ವಿತೀಯಾಯಾಂ ತು ಮಾಲವ್ಯಾಂ ಚಿತ್ರಾ ಹ್ಯವರಜಾಽಭವತ್ |
ತಾಂ ಸುದೇಷ್ಣೇತಿ ವೈ ಪ್ರಾಹುರ್ವಿರಾಟಮಹಿಷೀಂ ಪ್ರಿಯಾಮ್ ॥20॥
ಆ ಮಾಲವದೇಶದ ಎರಡನೆಯ ವನಿತೆಯಲ್ಲಿ ಆ ಸೂತನಿಗೆ ಚಿತ್ರಾ ಎಂಬ ಮಗಳು ಜನಿಸಿದಳು. ಅವಳನ್ನು ಸುದೇಷ್ಣೆ ಎಂದು ಕರೆಯುತ್ತಾರೆ. ಅವಳು ವಿರಾಟನಿಗೆ ಪ್ರಿಯಳಾದ ಪಟ್ಟದ ರಾಣಿ.
ತಾಂ ವಿರಾಟಸ್ಯ ಮಾತ್ಸ್ಯಸ್ಯ ಕೇಕಯಃ ಪ್ರದದೌ ಮುದಾ |
ಸುರಥಾಯಾಂ ಮೃತಾಯಾಂ ತು ಕೌಸಲ್ಯಾಂ ಶ್ವೇತಮಾತರಿ ॥21॥
ವಿರಾಟನ ಪ್ರಥಮಪತ್ನಿಯಾದ, ಶ್ವೇತ ಎಂಬ ಪುತ್ರನ ತಾಯಿಯಾದ ಕೌಸಲದೇಶದವಳಾದ ಸುರಥಾ ಎಂಬ ರಾಣಿಯು ಮೃತಳಾದ ಮೇಲೆ ಕೇಕಯಾಧಿಪತಿಯು ವಿರಾಟನಿಗೆ ಸುದೇಷ್ಣೆಯನ್ನು ಸಂತೋಷದಿಂದ ಕೊಟ್ಟನು.
ಶ್ವೇತೇ ವಿನಷ್ಟೇ ಶಂಖೇ ಚ ಗತೇ ಮಾತುಲವೇಶ್ಮನಿ |
ಸುದೇಷ್ಣಾಂ ಮಹಿಷೀಂ ಲಬ್ಧ್ವಾ ರಾಜಾ ದುಃಖಮಪಾನುದತ್ ॥22॥
ಕಾಲಕ್ರಮದಲ್ಲಿ ಶ್ವೇತನು ಮೃತನಾಗಿ ಅವನ ತಮ್ಮನಾದ ಶಂಖನು ಸೋದರ ಮಾವನ ಮನೆಯಲ್ಲಿ ಬೆಳೆಯುತ್ತಿರಲು ಸುದೇಷ್ಣೆಯನ್ನು ರಾಣಿಯಾಗಿ ಪಡೆದ ವಿರಾಟರಾಜನು ತನ್ನ ದುಃಖವನ್ನು ಪರಿಹರಿಸಿಕೊಂಡನು.

ಉತ್ತರಂ ಚೋತ್ತರಾಂ ಚೈವ ವಿರಾಟಾತ್ ಪೃಥಿವೀಪತೇ |
ಸುದೇಷ್ಣಾ ಸುಷುವೇ ದೇವೀ ಕೈಕಯೀ ಕುಲವೃದ್ಧಯೇ ॥23॥
ಎಲೈ ರಾಜನೇ, ಕೇಕಯಾಧಿಪತಿಯ ಮಗಳಾದ ಸುದೇಷ್ಣೆಯು ವಿರಾಟನ ಕುಲದ ಅಭಿವೃದ್ಧಿಗಾಗಿ ವಿರಾಟನಿಂದ ಉತ್ತರ ಮತ್ತು ಉತ್ತರೆ ಎಂಬ ಎರಡು ಮಕ್ಕಳನ್ನು ಪಡೆದಳು.
ಮಾತೃಷ್ವಸೃಸುತಾಂ ರಾಜನ್ ಕೀಚಕಸ್ತಾಮನಿಂದಿತಾಮ್ |
ಸದಾ ಪರಿಚರನ್ ಪ್ರೀತ್ಯಾ ವಿರಾಟೇ ನ್ಯವಸತ್ ಸುಖೀ ॥24॥
ಎಲೈ ರಾಜನೇ, ತನ್ನ ಚಿಕ್ಕಮ್ಮನ ಮಗಳಾದ ಅನಿಂದಿತಳಾದ ಆ ಸುದೇಷ್ಣೆಯನ್ನು ಪ್ರೀತಿಯಿಂದ ಪರಿಚರಿಸುತ್ತಾ ಕೀಚಕನು ವಿರಾಟನ ನಗರದಲ್ಲಿಯೇ ಸುಖವಾಗಿ ವಾಸ ಮಾಡಿದನು.
ಭ್ರಾತರಸ್ತಸ್ಯ ವಿಕ್ರಾಂತಾಃ ಸರ್ವೇ ಚ ತಮನುವ್ರತಾಃ |
ವಿರಾಟಸ್ಯೈವ ಸಂಹೃಷ್ಟಾಃ ಬಲಂ ಕೋಶಂ ಚ ವರ್ಧಯನ್ ॥25॥
ಅವನ ತಮ್ಮಂದಿರೆಲ್ಲರೂ ಪರಾಕ್ರಮಶಾಲಿಗಳೂ ಮತ್ತು ಅವನನ್ನೇ ಅನುಸರಿಸುವವರಾಗಿ ವಿರಾಟನ ಸೈನ್ಯವನ್ನು ಮತ್ತು ಕೋಶವನ್ನು ಸಂತೋಷದಿಂದ ಅಭಿವೃದ್ಧಿ ಪಡಿಸಿದರು.
ಕಾಲೇಯಾ ನಾಮ ದೈತೇಯಾಃ ಪ್ರಾಯಶೋ ಭುವಿ ವಿಶ್ರುತಾಃ |
ಜಜ್ಞಿರೇ ಕೀಚಕಾ ರಾಜನ್ ಬಾಣೋ ಜ್ಯೇಷ್ಠಸ್ತತೋಽಭವತ್ ॥26॥
ಎಲೈ ರಾಜನೇ, ಹಿಂದೆ ಭೂಮಿಯಲ್ಲಿ ಕಾಲೇಯನಾಮಕರಾಗಿ ಪ್ರಸಿದ್ಧರಾದ ದೈತ್ಯರು ಕೀಚಕರಾಗಿ ಜನಿಸಿದರು. ಹಿಂದೆ ಬಾಣಾಸುರನಾಗಿದ್ದವನು ಜ್ಯೇಷ್ಠನಾದ ಕೀಚಕನೆನಿಸಿಕೊಂಡನು.
ಸ ಹಿ ಸರ್ವಾಸ್ತ್ರಸಂಪನ್ನೋ ಬಲವಾನ್ ಭೀಮವಿಕ್ರಮಃ |
ಕೀಚಕೋ ನಷ್ಟಮರ್ಯಾದೋ ಬಭೂವ ಭಯದೋ ನೃಣಾಮ್ ॥27॥
ಸರ್ವಾಸ್ತ್ರಸಂಪನ್ನನೂ, ಬಲಿಷ್ಠನೂ, ಭಯಂಕರವಾದ ಪರಾಕ್ರಮವುಳ್ಳವನೂ ಆದ ಕೀಚಕನು ಎಲ್ಲಾ ನೀತಿಯ ಎಲ್ಲೆಯನ್ನು ಮೀರಿದವನಾಗಿ ಎಲ್ಲ ಮನುಷ್ಯರಿಗೆ ಭಯವನ್ನುಂಟುಮಾಡುವವನಾದನು.
ತಂ ಪ್ರಾಪ್ಯ ಬಲಸಮ್ಮತ್ತಂ ವಿರಾಟಃ ಪೃಥಿವೀಪತಿಃ |
ಜಿಗಾಯಸರ್ವಾಂಶ್ಚ ರಿಪೂನ್ ಯಥೇಂದ್ರೋ ದಾನವಾನ್ ಪುರಾ ॥28॥
ವಿರಾಟರಾಜನು ಬಲಸಮ್ಮತ್ತನಾದ ಅವನನ್ನು ಪಡೆದು ಹಿಂದೆ ಇಂದ್ರನು ದಾನವರನ್ನು ಗೆದ್ದಂತೆ ಎಲ್ಲ ಶತ್ರುಗಳನ್ನೂ ಗೆದ್ದನು.
ಮೇಖಲಾಂಶ್ಚ ತ್ರಿಗರ್ತಾಂಶ್ಚ ದಶಾರ್ಣಾಂಶ್ಚ ಕಶೇರುಕಾನ್ |
ಮಾಲವಾನ್ ಯವನಾಂಶ್ಚೈವ ಪುಳಿಂದಾನ್ ಕಾಶಿಕೋಸಲಾನ್ ॥29॥
ಅಂಗಾನ್ ವಂಗಾನ್ ಕಳಿಂಗಾಂಶ್ಚ ತಂಕಣಾನ್ ಪರತಂಕಣಾನ್ |
ಮಲದಾನ್ ನಿಷಧಾಂಶ್ಚೈವ ತುಂಡಿಕೇರಾಂಶ್ಚ ಕೋಂಕಣಾನ್ ॥30॥
ಕರದಾಂಶ್ಚ ನಿಷಿದ್ಧಾಂಶ್ಚ ಶಿವಾನ್ ದುಶ್ಶಿಲ್ಲಿಕಾಂಸ್ತಥಾ ॥31॥
ಮೇಖಲರು, ತ್ರಿಗರ್ತರು, ದಶಾರ್ಣರು, ಕಶೇರುಕರು, ಮಾಲವರು, ಯವನರು, ಪುಳಿಂದರು, ಕಾಶಿಕೋಸಲರು, ಅಂಗರು, ವಂಗರು, ಕಳಿಂಗರು, ತಂಕಣರು, ಪರತಂಕಣರು, ಮಲದರು, ನಿಷಧರು, ತುಂಡಿಕೇರರು, ಕೊಂಕಣರು, ಕರದರು, ನಿಷಿದ್ಧರು, ಶಿವರು, ದುಶ್ಶಿಲ್ಲಿಕರು ಮೊದಲಾದ ಎಲ್ಲ ಶತ್ರುಗಳನ್ನೂ ಗೆದ್ದನು.
ಅನ್ಯೇ ಚ ಬಹವಃ ಶೂರಾ ನಾನಾಜನಪದೇಶ್ವರಾಃ |
ಕೀಚಕೇನ ರಣೇ ಭಗ್ನಾ ವ್ಯದ್ರವಂತ ದಿಶೋ ದಶ ॥32॥
ಇನ್ನೂ ನಾನಾ ರಾಜ್ಯಗಳ ರಾಜರಾಗಿದ್ದ ಅನೇಕ ಶೂರರಾದ ರಾಜರು ಕೀಚಕನಿಗೆ ಯುದ್ಧದಲ್ಲಿ ಸೋತು ದಿಕ್ಕುದಿಕ್ಕುಗಳಿಗೆ ಓಡಿಹೋದರು.
ತಮೇವಂ ವೀರ್ಯಸಂಪನ್ನಂ ನಾಗಾಯುತಬಲಂ ರಣೇ |
ವಿರಾಟಸ್ತತ್ರ ಸೇನಾಯಾಃ ಚಕಾರ ಪತಿಮಾತ್ಮನಃ ॥33॥
ಹೀಗೆ ಹತ್ತುಸಾವಿರ ಆನೆಯ ಬಲವುಳ್ಳವನಾಗಿ ಯುದ್ಧದಲ್ಲಿ ಪರಾಕ್ರಮಶಾಲಿಯಾದ ಅವನನ್ನು ವಿರಾಟರಾಜನು ತನ್ನ ಸೇನಾಪತಿಯನ್ನಾಗಿ ಮಾಡಿದನು.
ವಿರಾಟಭ್ರಾತರಶ್ಚೈವ ದಶ ದಾಶರಥೋಪಮಾಃ |
ತೇ ಚೈನಾನನ್ವವರ್ತಂತ ಕೀಚಕಾನ್ ಬಲವತ್ತರಾನ್ ॥34॥
ವಿರಾಟನ ತಮ್ಮಂದಿರಾದ ದಾಶರಥಿ ರಾಮನನ್ನು ಹೋಲುವ ಹತ್ತುಮಂದಿಯೂ ಸಹ ಬಲಿಷ್ಠರಾದ ಈ ಕೀಚಕರನ್ನೇ ಅನುಸರಿಸಿದರು.
ಏವಂವಿಧಬಲೋಪೇತಾಃ ಕೀಚಕಾಸ್ತೇ ಚ ತದ್ವಿಧಾಃ |
ರಾಜ್ಞಃ ಸ್ಯಾಲಾ ಮಹಾತ್ಮನೋ ವಿರಾಟಸ್ಯ ಹಿತೈಷಿಣಃ ॥35॥
ಏತತ್ ತೇ ಕಥಿತಂ ಸರ್ವಂ ಕೀಚಕಸ್ಯ ಪರಾಕ್ರಮಮ್ ॥36॥
ಇಂತಹ ಬಲವುಳ್ಳ ಆ ಕೀಚಕರು ಇಂತಹ ಚರಿತ್ರೆಯುಳ್ಳವರು. ಎಲ್ಲರೂ ಮಹಾತ್ಮನಾದ ವಿರಾಟನಿಗೆ ಹಿತೈಷಿಗಳಾಗಿದ್ದು ಅವರ ಭಾವಮೈದುನರಾಗಿದ್ದರು. ಕೀಚಕನ ಪರಾಕ್ರಮದ ವಿಷಯದಲ್ಲಿ ನಾನು ನಿನಗೆ ಎಲ್ಲವನ್ನೂ ಹೇಳಿದ್ದೇನೆ.
ದ್ರೌಪದೀ ನ ಶಶಾಪೈನಂ ಯಸ್ಮಾದ್ ತದ್ ಗದತಃ ಶೃಣು ॥37॥
ಕ್ಷರತೀತಿ ತಪಃ ಕ್ರೋಧಾತ್ ಋಷಯೋ ನ ಶಪಂತಿ ಹಿ |

ಜಾನಂತೀ ತದ್ಯಥಾತತ್ತ್ವಂ ಪಾಂಚಾಲೀ ನ ಶಶಾಪ ತಮ್ ॥38॥
ದ್ರೌಪದಿಯು ಯಾವ ಕಾರಣದಿಂದ ಅವನಿಗೆ ಶಾಪವನ್ನು ನೀಡಲಿಲ್ಲ ಎಂದು ಹೇಳುತ್ತೇನೆ ಅದನ್ನು ಕೇಳು. ತಮ್ಮ ತಪಸ್ಸು ನಾಶವಾಗುವುದೆಂದು ತಿಳಿದು ಋಷಿಗಳು ಶಾಪವನ್ನು ಕೊಡುವುದಿಲ್ಲ. ಈ ಸತ್ಯವನ್ನು ತಿಳಿದ ಪಾಂಚಾಲಿಯು ಅವನನ್ನು ಶಪಿಸಲಿಲ್ಲ.
ಕ್ಷಮಾ ಧರ್ಮಃ ಕ್ಷಮಾ ದಾನಂ ಕ್ಷಮಾ ಯಜ್ಞಃ ಕ್ಷಮಾ ಯಶಃ |
ಕ್ಷಮಾ ಸತ್ಯಂ ಕ್ಷಮಾ ಶೀಲಂ ಕ್ಷಮಾ ಸತ್ಯಮಿತಿ ಶ್ರುತಿಃ ॥39॥
ಕ್ಷಮೆಯೇ ಧರ್ಮ, ಕ್ಷಮೆಯೇ ದಾನ, ಕ್ಷಮೆಯೇ ಯಜ್ಞ, ಕ್ಷಮೆಯೇ ಯಶಸ್ಸು, ಕ್ಷಮೆಯೇ ಸತ್ಯ, ಕ್ಷಮೆಯೇ ಶೀಲ, ಕ್ಷಮೆಯೇ ಸತ್ಯವೆಂದು ವೇದವಾಕ್ಯವಿದೆ.
ಕ್ಷಮಾವತಾಮಯಂ ಲೋಕಃ ಪರಶ್ಚೈವ ಕ್ಷಮಾವತಾಮ್ |
ಏತತ್ ಸರ್ವಂ ವಿಜಾನಂತೀ ಸಾ ಕ್ಷಮಾಮನ್ವಪದ್ಯತ ॥40॥
ಕ್ಷಮಾವಂತರಿಗೇ ಈ ಲೋಕವಿದೆ. ಪರಲೋಕವೂ ಕೂಡ ಕ್ಷಮಾವಂತರಿಗೇ ಸಲ್ಲುತ್ತದೆ. ಈ ಎಲ್ಲವನ್ನೂ ತಿಳಿದ ಆ ದ್ರೌಪದಿಯು ಕ್ಷಮೆಯನ್ನೇ ಆಶ್ರಯಿಸಿದಳು.
ಭ್ರಾತೄಣಾಂ ಮತಮಾಜ್ಞಾಯ ಕ್ಷಮಿಣಾಂ ಧರ್ಮಚಾರಿಣಾಮ್ |
ನಾಶಪತ್ ತಂ ವಿಶಾಲಾಕ್ಷೀ ಸತೀ ಶಕ್ತಾऽಪಿ ಭಾರತ ॥41॥
ಎಲೈ ಭಾರತನೇ, ಧರ್ಮಚಾರಿಗಳಾದ, ಕ್ಷಮಾಶೀಲರಾದ ತನ್ನ ಪತಿಗಳಾದ ಸಹೋದರರ ಅಭಿಪ್ರಾಯವನ್ನು ತಿಳಿದ ವಿಶಾಲಾಕ್ಷಿಯಾದ ದ್ರೌಪದಿಯು ಶಾಪವನ್ನು ಕೊಡಲು ಸಮರ್ಥಳಾಗಿದ್ದರೂ ಸಹ ಶಾಪವನ್ನು ಕೊಡಲಿಲ್ಲ.
ಪಾಂಡವಾಶ್ಚಾಪಿ ತೇ ಸರ್ವೇ ದ್ರೌಪದೀಂ ಪ್ರೇಕ್ಷ್ಯ ದುಃಖಿತಾಃ |
ಕ್ರೋಧಾಗ್ನಿನಾ ವ್ಯದಹ್ಯಂತ ತದಾ ಕಾಲವ್ಯಪೇಕ್ಷಯಾ ॥42॥
ಆ ಎಲ್ಲ ಪಾಂಡವರಾದರೂ ಸಹ ದ್ರೌಪದಿಯನ್ನು ನೋಡಿ ದುಃಖಿತರಾಗಿ ಸಮಯವನ್ನು ನಿರೀಕ್ಷಿಸುತ್ತಾ ಕ್ರೋಧಾಗ್ನಿಯಿಂದ ಆಗ ಬೆಂದುಹೋದರು.
ಅಯಂ ಭೀಮೋ ಮಹಾಬಾಹುಃ ಸೂದಯಿಷ್ಯಂಸ್ತು ಕೀಚಕಮ್ |
ವಾರಿತೋ ಧರ್ಮಪುತ್ರೇಣ ವೇಲಯೇವ ಮಹೋದಧಿಃ ॥43॥
ಆಗ ಮಹಾಬಾಹುವಾದ ಭೀಮನು ಕೀಚಕನನ್ನು ಸಂಹರಿಸುವ ಅಭಿಪ್ರಾಯವುಳ್ಳವನಾದರೂ ಯುಧಿಷ್ಠಿರನು ಸಾಗರವನ್ನು ದಡವು ತಡೆದಂತೆ ಅವನನ್ನು ತಡೆದನು.
ಸಂಧಾರ್ಯ ಮನಸಾ ರೋಷಂ ದಿವಾರಾತ್ರಿಂ ವಿನಿಃಶ್ವಸನ್ |
ಮಹಾನಸೇ ಸದಾ ಕೃಚ್ಛ್ರಾತ್ ಸುಷ್ವಾಪ ರಜನೀಂ ಚ ತಾಮ್ ॥44॥
ಭೀಮಸೇನನಾದರೂ ಆ ರೋಷವನ್ನು ಮನಸ್ಸಿನಲ್ಲಿಯೇ ಧರಿಸಿ ಹಗಲೂ ರಾತ್ರಿಯೂ ನಿಟ್ಟುಸಿರು ಬಿಡುತ್ತಾ ಬಹಳ ಕಷ್ಟದಿಂದ ಅಡುಗೆ ಮನೆಯಲ್ಲಿ ಆ ರಾತ್ರಿಯನ್ನು ದುಃಖದಿಂದ ಮಲಗಿ ಕಳೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕವಿಂಶೋऽಧ್ಯಾಯಃ ॥
॥ ಕೀಚಕವಧಪರ್ವಣಿ ಷಷ್ಠೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * *

ಮಹಾಭಾರತತಾತ್ಪರ್ಯನಿರ್ಣಯಃ
ಕೃಷ್ಣಾ ರಾತ್ರೌ ಭೀಮಸಕಾಶಮೇತ್ಯ ಹಂತುಂ
ಪಾಪಂ ಕೀಚಕಂ ಪ್ರೈರಯತ್ ತಮ್ |
ಭೀಮಸ್ಯ ಬುದ್ಧ್ಯಾ ನಿಶಿ ಸಾ ಕೀಚಕಂ ಚ
ಜಗಾದ ಗಂತುಂ ಶೂನ್ಯಗೃಹಂ ಸ ಚಾಗಾತ್ ॥25॥
ದ್ರೌಪದಿ ರಾತ್ರಿಯಲ್ಲಿ ಭೀಮನ ಬಳಿಗೆ ಬಂದು ಪಾಪಿ ಕೀಚಕನನ್ನು ಕೊಲ್ಲಲು ಪ್ರೇರಿಸಿದಳು. ಭೀಮ ಹೇಳಿಕೊಟ್ಟ ಬುದ್ಧಿಯಿಂದ ಕೀಚಕನಿಗೆ ರಾತ್ರಿಯಲ್ಲಿ ನಿರ್ಜನವಾದ ನರ್ತನಶಾಲೆಗೆ ಹೋಗಲು ಹೇಳಿದಳು. ಅದರಂತೆ ಕೀಚಕ ಹೋದ.
* * * *
ಇಪ್ಪತ್ತೆರಡನೆಯ ಅಧ್ಯಾಯ
ರಾತ್ರಿಯಲ್ಲಿ ದ್ರೌಪದಿ ಮತ್ತು ಭೀಮಸೇನರ ಸಂವಾದ. ಕೀಚಕನನ್ನು
ಕೊಲ್ಲುವಂತೆ ಭೀಮಸೇನನಿಗೆ ದ್ರೌಪದಿಯ ಒತ್ತಾಯ.
ವೈಶಂಪಾಯನಃ
ಸಾ ಸೂತಪುತ್ರಾಭಿಹತಾ ರಾಜಪುತ್ರೀ ಯಶಸ್ವಿನೀ |
ವಧಂ ಕೃಷ್ಣಾ ಪರೀಪ್ಸಂತೀ ಸೂತಪುತ್ರಸ್ಯ ಭಾಮಿನೀ ॥1॥
ಜಗಾಮಾವಾಸವೇಶ್ಮಾಥ ತದಾ ಸಾ ದ್ರುಪದಾತ್ಮಜಾ |
ವೈಶಂಪಾಯನ ಯಶಸ್ವಿನಿಯೂ, ಕೋಪಗೊಂಡವಳೂ ಆದ ರಾಜಕುಮಾರಿಯಾದ ಆ ದ್ರೌಪದಿಯು ಸೂತಪುತ್ರನಾದ ಕೀಚಕನ ವಧೆಯನ್ನು ಚಿಂತಿಸುತ್ತಾ ತನ್ನ ವಾಸದ ಮನೆಗೆ ಬಂದಳು.
ಕೃತ್ವಾ ಶೌಚಂ ಯಥಾನ್ಯಾಯಂ ಕೃಷ್ಣಾऽಪಿ ತನುಮಧ್ಯಮಾ ॥2॥

ಗಾತ್ರಾಣಿ ವಾಸಸೀ ಚೈವ ಪ್ರಕ್ಷಾಲ್ಯ ಸಲಿಲೇನ ಚ |
ಚಿಂತಯಾಮಾಸ ರುದತೀ ತಸ್ಯ ದುಃಖಸ್ಯ ನಿರ್ಣಯಮ್ ॥3॥
ಕೃಶಾಂಗಿಯಾದ ದ್ರೌಪದಿಯು ಯಥಾಯೋಗ್ಯವಾಗಿ ಶುದ್ಧಳಾಗಿ ತನ್ನ ದೇಹವನ್ನು ಮತ್ತು ವಸ್ತ್ರಗಳನ್ನು ನೀರಿನಿಂದ ತೊಳೆದು ಅಳುತ್ತಾ ಆ ದುಃಖದ ಪರಿಹಾರವನ್ನು ಕುರಿತು ಚಿಂತಿಸಿದಳು.
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಕಾರ್ಯಂ ಭವೇನ್ಮಮ |
ಇತ್ಯೇವಂ ಚಿಂತಯಿತ್ವಾ ಸಾ ಭೀಮಂ ತಂ ಮನಸಾಽಗಮತ್ ॥4॥
ನಾನ್ಯಃ ಕರ್ತಾ ವಿನಾ ಭೀಮಾನ್ಮಮಾದ್ಯ ಮನಸೇಪ್ಸಿತಮ್ ॥5॥
ನಾನು ಏನು ಮಾಡಲಿ? ಎಲ್ಲಿಗೆ ಹೋಗಲಿ? ಹೇಗೆ ನನ್ನ ಕಾರ್ಯವು ನೆರವೇರುತ್ತದೆ ಎಂದು ಚಿಂತಿಸುತ್ತಾ, ನನ್ನ ಮನಸ್ಸಿನ ಅಭೀಷ್ಟವನ್ನು ನೆರವೇರಿಸುವವನು ಭೀಮಸೇನನನ್ನು ಬಿಟ್ಟು ಬೇರೆ ಯಾರೂ ಇಲ್ಲ ಎಂದು ನಿಶ್ಚಯಿಸಿ, ಮನಸ್ಸಿನಲ್ಲಿಯೇ ಭೀಮಸೇನನನ್ನು ಸ್ಮರಿಸಿದಳು.
ಪ್ರಾದುರ್ಭೂತಕ್ಷಣಾ ರಾತ್ರೌ ವಿಹಾಯ ಶಯನಂ ಸ್ವಕಮ್ |
ದುಃಖೇನ ಮಹತಾ ಯುಕ್ತಾ ಮಾನಸೇನ ಮನಸ್ವಿನೀ ॥6॥
ಪ್ರಾದ್ರವನ್ನಾಥಮಿಚ್ಛಂತೀ ಯಥಾ ನಾಥವತೀ ಸತೀ ॥7॥
ರಾತ್ರಿಯಾದ ಮೇಲೆ ಒಂದು ಅವಕಾಶವನ್ನು ಪಡೆದವಳಾಗಿ ಮನಸ್ಸಿನಲ್ಲಿ ತುಂಬಾ ದುಃಖದಿಂದ ಕೂಡಿದವಳಾದ ಆ ಮಾನವತಿಯು ತನ್ನ ಹಾಸಿಗೆಯಿಂದ ಎದ್ದು ನಾಥರನ್ನು ಹೊಂದಿದ್ದ ಅವಳು ನಾಥನನ್ನು ಬಯಸುತ್ತಾ ಓಡಿದಳು.
ಸಾ ವೈ ಮಹಾನಸಂ ಪ್ರಾಪ್ಯ ಭೀಮಸೇನಂ ಶುಚಿಸ್ಮಿತಾ |
ಉಪಾಸರ್ಪತ ಪಾಂಚಾಲೀ ವಾಶಿತೇವ ಮಹಾಗಜಮ್ ॥8॥
ಶುಚಿಸ್ಮಿತೆಯಾದ ಆ ಪಾಂಚಾಲಿಯು ಅಡಿಗೆ ಮನೆಯನ್ನು ಪ್ರವೇಶಿಸಿ ಚಿಕ್ಕ ವಯಸ್ಸಿನ ಹೆಣ್ಣಾನೆಯು ಮಹಾಗಜವನ್ನು ಸಮೀಪಿಸುವಂತೆ ಭೀಮಸೇನನನ್ನು ಸಮೀಪಿಸಿದಳು.
ವೃಷೇಂದ್ರಮಿವ ಮಾಹೇಯೀ ವನೇ ವೃದ್ಧಾ ತ್ರಿಹಾಯನೀ |
ಉಪಾತಿಷ್ಠತ ಪಾಂಚಾಲೀ ಭೀಮಂ ಕೌರವ್ಯಮಚ್ಯುತಮ್ ॥9॥
ಸುರಭಿಧೇನುವಿನ ಕುಮಾರಿಯಾದ ಮೂರುವರ್ಷ ವಯಸ್ಸಿನ ಮಾಹೇಯಿಯು ಶ್ರೇಷ್ಠವಾದ ವೃಷಭದ ಕಡೆಗೆ ಹೋದಂತೆ ಪಾಂಚಾಲಿಯು ತನ್ನ ಗುಣಗಳಿಂದ ಎಂದೂ ಹೀನನಾಗದ ಕೌರವ್ಯನಾದ ಭೀಮಸೇನನನ್ನು ಸಮೀಪಿಸಿದಳು.
ಮೃಗರಾಜಂ ಯಥಾ ದೃಪ್ತಂ ಮಂಡನೀ ವನನಿರ್ಝರೇ |
ಸುಪ್ತಂ ಸಿಂಹಂ ತದಾ ಸ್ಥಾನೇ ಮೃಗರಾಜಂ ವಧೂರಿವ ॥10॥
ಕಾನನಕ್ಕೆ ಅಲಂಕಾರವಾಗಿರುವ ಹೆಣ್ಣು ಸಿಂಹವು ದರ್ಪದಿಂದ ಕೂಡಿ ಸುಪ್ತವಾಗಿರುವ ಸಿಂಹವನ್ನು ಕಾಡಿನಲ್ಲಿ ಸಮೀಪಿಸುವಂತೆ ಪಾಂಚಾಲಿಯು ಭೀಮಸೇನನನ್ನು ಸಮೀಪಿಸಿದಳು.
ಅಭಿಪ್ರಸಾರ್ಯ ಬಾಹುಭ್ಯಾಂ ಪತಿಂ ಸುಪ್ತಂ ಸಮಾಶ್ಲಿಷತ್ |
ಸುಜಾತಂ ಗೋಮತೀತೀರೇ ಸಾಲಂ ವಲ್ಲೀವ ಪುಷ್ಪಿತಾ ॥11॥
ಗೋಮತೀನದಿಯ ತೀರದಲ್ಲಿ ಬೆಳೆದ ದೊಡ್ಡ ಸಾಲವೃಕ್ಷವನ್ನು ಪುಷ್ಪಭರಿತವಾದ ಬಳ್ಳಿಯಂತೆ ತನ್ನ ಬಾಹುಗಳನ್ನು ಚಾಚಿ ನಿದ್ರಿಸುತ್ತಿದ್ದ ತನ್ನ ಪತಿಯಾದ ಭೀಮಸೇನನನ್ನು ಆಲಿಂಗಿಸಿದಳು.
ಪರಿಸ್ಪೃಶ್ಯ ಚ ಪಾಣಿಭ್ಯಾಂ ಪತಿಂ ಸುಪ್ತಮಬೋಧಯತ್ |
ಶ್ರೀರಿವಾನ್ಯಾ ಮಹೋತ್ಸಾಹಂ ಸುಪ್ತಂ ವಿಷ್ಣುಮಿವಾರ್ಣವೇ ॥12॥
ಕ್ಷೌಮಾವದಾತೇ ಶಯನೇ ಶಯಾನಮೃಷಭೇಕ್ಷಣಮ್ ॥13॥
ಲಕ್ಷ್ಮೀದೇವಿಯು ಸಮುದ್ರಶಾಯಿಯಾದ ಯೋಗನಿದ್ರಾರತನಾದ, ಮಹೋತ್ಸಾಹನಾದ ವಿಷ್ಣುವನ್ನು ಎಬ್ಬಿಸಿದಂತೆ ಶುಭ್ರ, ಶ್ವೇತವಸ್ತ್ರದ ಶಯನದಲ್ಲಿ ಮಲಗಿ ನಿದ್ರಿಸುತ್ತಿದ್ದ ವೃಷಭೇಕ್ಷಣನಾದ ತನ್ನ ಪತಿಯನ್ನು ಕೈಗಳಿಂದ ಸವರಿ ಎಬ್ಬಿಸಿದಳು.
ಯಥಾ ಶಚೀ ದೇವರಾಜಂ ರುದ್ರಾಣೀ ಶಂಕರಂ ಯಥಾ |
ಬ್ರಹ್ಮಾಣಮಿವ ಸಾವಿತ್ರೀ ಯಥಾ ಷಷ್ಠೀ ಗುಹಂ ತಥಾ ॥14॥
ಶಚಿಯು ದೇವೇಂದ್ರನನ್ನು ಎಬ್ಬಿಸಿದಂತೆ, ಪಾರ್ವತಿಯು ಶಂಕರನನ್ನು ಎಬ್ಬಿಸಿದಂತೆ, ಸಾವಿತ್ರಿಯು ಬ್ರಹ್ಮನನ್ನು ಎಬ್ಬಿಸಿದಂತೆ ಷಷ್ಠೀ ತಿಥಿಯಲ್ಲಿ ಬಂದ ದೇವಸೇನೆಯು ಷಣ್ಮುಖನನ್ನು ಎಬ್ಬಿಸಿದಂತೆ ಭೀಮಸೇನನನ್ನು ಎಬ್ಬಿಸಿದಳು.
ದಿಶಾಂಗಜಸಮಾಕಾರಂ ಗಜಂ ಗಜವಧೂರಿವ |
ಭೀಮಂ ಪ್ರಾಬೋಧಯತ್ ಕಾಂತಾ ಲಕ್ಷ್ಮೀರ್ದಾಮೋದರಂ ಯಥಾ ॥
ಗಜರಾಜನ ವಧುವು ಗಜರಾಜನನ್ನು ಎಬ್ಬಿಸಿದಂತೆ, ಲಕ್ಷ್ಮಿಯು ದಾಮೋದರನನ್ನು ಎಬ್ಬಿಸಿದಂತೆ, ಕಾಂತೆಯಾದ ದ್ರೌಪದಿಯು ದಿಗ್ಗಜದ ಆಕಾರವನ್ನು ಹೊಂದಿದ್ದ ಭೀಮಸೇನನನ್ನು ಎಬ್ಬಿಸಿದಳು.
ವೀಣೇವ ಮಧುರಾರಕ್ತಂ ಸ್ವರಂ ಗಾಂಧಾರಮಾಶ್ರಿತಾ |
ಅಭ್ಯಭಾಷತ ಪಾಂಚಾಲೀ ಕೌರವ್ಯಂ ಪಾಂಡುನಂದನಮ್ ॥16॥
ಪಾಂಚಾಲಿಯು ವೀಣೆಯ ಗಾಂಧಾರಸ್ವರದಂತೆ ಮಧುರವಾದ ಮತ್ತು ಪ್ರೀತಿಪೂರ್ವಕವಾದ ಸ್ವರದಿಂದ ಪಾಂಡುನಂದನನಾದ ಕುರುಕುಲದಲ್ಲಿ ಜನಿಸಿದ ಭೀಮಸೇನನನ್ನು ಕುರಿತು ಮಾತನಾಡಿದಳು.
ಉತ್ತಿಷ್ಠೋತ್ತಿಷ್ಠ ಕಿಂ ಶೇಷೇ ಭೀಮಸೇನ ಯಥಾ ಮೃತಃ |
ನ ಮೃತಃ ಸ ಹಿ ಪಾಪೀಯಾನ್ ಭಾರ್ಯಾಮಾಲಂಬ್ಯ ಜೀವತಿ ॥17॥

ಭೀಮಸೇನನೇ, ಏಕೆ ಮೃತನಾದವನಂತೆ ಮಲಗಿದ್ದೀಯೆ? ಎದ್ದೇಳು, ಎದ್ದೇಳು. ರಾಜಭಾರ್ಯೆಯನ್ನು ಆಶ್ರಯಿಸಿ ಬದುಕಿರುವ ಆ ಪಾಪಿಯಾದ ಕೀಚಕನು ಇನ್ನೂ ಮೃತನಾಗಿಲ್ಲವಷ್ಟೆ?
ತಸ್ಮಿನ್ ಜೀವತಿ ಪಾಪಿಷ್ಠೇ ಸೇನಾವಾಹೇ ಮಮ ದ್ವಿಷಿ |
ತತ್ ಕರ್ಮ ಕೃತವತ್ಯದ್ಯ ಕಥಂ ನಿದ್ರಾಂ ನಿಷೇವಸೇ ॥18॥
ಪಾಪಿಷ್ಠನೂ, ರಾಜನ ಸೇನಾಪತಿಯೂ, ನನ್ನ ಶತ್ರುವೂ ಆದ ಆ ಕೀಚಕನು ಅಂತಹ ಕೆಲಸವನ್ನು ಮಾಡಿ ಬದುಕಿರುವಾಗ ಈ ದಿನ ನೀನು ಹೇಗೆ ನಿದ್ರೆಯನ್ನು ಮಾಡುತ್ತಿದ್ದೀಯೆ?
ವೈಶಂಪಾಯನಃ
ಸುಖಸುಪ್ತಶ್ಚ ತಂ ಶಬ್ದಂ ನಿಶಮ್ಯ ಚ ವೃಕೋದರಃ |
ಸಂವೇಜಿತಃ ಕುರುಶ್ರೇಷ್ಠಃ ತೋತ್ತ್ರೈರಿವ ಮಹಾಗಜಃ ॥19॥
ವೈಶಂಪಾಯನ ಸುಖಸುಪ್ತನಾಗಿದ್ದ ಕುರುಶ್ರೇಷ್ಠನಾದ ವೃಕೋದರನು ಆ ಮಾತನ್ನು ಕೇಳಿ ಅಂಕುಶದ ಪ್ರಹಾರಕ್ಕೆ ಒಳಗಾದ ಮಹಾಗಜದಂತೆ ಕೋಪಗೊಂಡನು.
ಸ ವೈ ವಿಹಾಯ ಶಯನಂ ಯಸ್ಮಿನ್ ಸುಪ್ತಃ ಪ್ರಬೋಧಿತಃ |
ಉದತಿಷ್ಠದಮೇಯಾತ್ಮಾ ಪರ್ಯಂಕೇ ಸೋತ್ತರಚ್ಛದೇ ॥20॥
ಒಳ್ಳೆಯ ಹಾಸನ್ನು ಹಾಸಿದ್ದ ಪರ್ಯಂಕದಲ್ಲಿ ಮಲಗಿದ್ದ ಅಮೇಯಾತ್ಮನಾದ ಅವನು ಎಚ್ಚರಗೊಂಡು ಮೇಲೆದ್ದನು.
ಉಪವಿಶ್ಯ ಚ ದುರ್ಧರ್ಷಃ ಪಾಂಚಾಲಕುಲವರ್ಧನೀಮ್ |
ಅಥಾಬ್ರುವೀದ್ ರಾಜಪುತ್ರೀಂ ಕೌರವ್ಯೋ ಮಹಿಷೀಂ ಪ್ರಿಯಾಮ್ ॥
ದುರ್ಧರ್ಷನಾದ ಕೌರವ್ಯನಾದ ಅವನು ಹಾಸಿಗೆ ಮೇಲೆ ಕುಳಿತು ತನ್ನ ಪ್ರಿಯೆಯು ಮತ್ತು ರಾಣಿಯೂ ಆದ ಪಾಂಚಾಲಕುಲವರ್ಧಿನಿಯಾದ ರಾಜಕುಮಾರಿಯಾದ ದ್ರೌಪದಿಯನ್ನು ಕುರಿತು ಮಾತನಾಡಿದನು.
ಕೇನಾಸ್ಯರ್ಥೇನ ಸಂಪ್ರಾಪ್ತಾ ತ್ವರಿತೇನ ಮಮಾಂತಿಕಮ್ |
ನ ತೇ ಪ್ರಕೃತಿಮಾನ್ ವರ್ಣಃ ಕೃಶಾ ತ್ವಂ ಭೀರು ಲಕ್ಷಯೇ ॥22॥
ಭೀರುವೇ, ಯಾವ ಉದ್ದೇಶದಿಂದ ಹೀಗೆ ತ್ವರಿತವಾಗಿ ನನ್ನ ಸಮೀಪಕ್ಕೆ ಬಂದಿದ್ದೀಯೆ? ನಿನ್ನ ಬಣ್ಣವು ಎಂದಿನಂತೆ ಇಲ್ಲ. ಕೃಶಳಾಗಿ ಕಾಣುತ್ತಿದ್ದೀಯೆ.
ಪ್ರಕಾಶಂ ಯದಿ ವಾ ಗುಹ್ಯಂ ಸರ್ವಮಾಖ್ಯಾತುಮರ್ಹಸಿ |
ಆಚಕ್ಷ್ವ ತ್ವಮಶೇಷೇಣ ಸರ್ವಂ ವಿದ್ಯಾಮಹಂ ಯಥಾ ॥23॥
ಅದು ರಹಸ್ಯವಾಗಿರಲಿ ಅಥವಾ ಇಲ್ಲದಿರಲಿ, ನೀನು ಎಲ್ಲವನ್ನೂ ನನಗೆ ಹೇಳು. ನಾನು ಎಲ್ಲವನ್ನೂ ಪೂರ್ಣವಾಗಿ ತಿಳಿಯಬೇಕು.
ಸುಖಂ ವಾ ಯದಿ ವಾ ದುಃಖಂ ಶುಭಂ ವಾ ಯದಿ ವಾऽಶುಭಮ್ |
ಯದ್ಯಪ್ಯಸುಕೃತಂ ಕರ್ಮ ಕೃತಮಿತ್ಯವಧಾರಯ ॥24॥
ಅದು ಸುಖವಾಗಿರಲಿ ಅಥವಾ ದುಃಖವಾಗಿರಲಿ, ಶುಭವಾಗಿರಲಿ ಅಥವಾ ಅಶುಭವಾಗಿರಲಿ, ನೀನು ಯಾವ ಕಾರ್ಯವನ್ನು ಮಾಡಬೇಕೆಂದು ಬಯಸುತ್ತೀಯೋ ಅದು ಎಷ್ಟೇ ಕಷ್ಟವಾಗಿದ್ದರೂ ನಾನು ಅದನ್ನು ಮಾಡಿದ್ದೇನೆಂದು ತಿಳಿ.
ಅಹಮೇವ ಹಿ ತೇ ಕೃಷ್ಣೇ ವಿಶ್ವಾಸ್ಯಃ ಸರ್ವಕರ್ಮಸು |
ಅಹಮಾಪತ್ಸು ಚಾಪಿ ತ್ವಾಂ ಮೋಕ್ಷಯಾಮಿ ಪುನಃ ಪುನಃ ॥25॥
ದ್ರೌಪದಿಯೇ, ಎಲ್ಲ ಕಾರ್ಯಗಳಲ್ಲಿ ನಿನಗೆ ನಾನೇ ವಿಶ್ವಾಸಪ್ರದನಾದ ಆಶ್ರಯನಾಗಿದ್ದೇನೆ. ನಿನಗೆ ಬಂದೊದಗಿದ ಆಪತ್ತುಗಳನ್ನು ನಾನೇ ಪುನಃ ಪುನಃ ಬಿಡಿಸುತ್ತಿದ್ದೇನೆ.
ಶೀಘ್ರಮುಕತ್ತ್ವ ಯಥಾಕಾಮಂ ಯತ್ ತೇ ಕಾರ್ಯಂ ವಿವಕ್ಷಿತಮ್ |
ಗಚ್ಛ ವೈ ಶಯನಾಯೈವ ಯಾವದನ್ಯೋ ನ ಬುದ್ಧ್ಯತೇ ॥26॥
ನೀನು ಇಲ್ಲಿಗೆ ಬಂದ ಉದ್ದೇಶವನ್ನು ಶೀಘ್ರವಾಗಿ ಹೇಳಿ ಇನ್ನೊಬ್ಬರು ನೋಡುವುದಕ್ಕಿಂತ ಮೊದಲು ನಿನ್ನ ಹಾಸಿಗೆಯನ್ನೇ ಸೇರುವವಳಾಗು.
ವೈಶಂಪಾಯನಃ
ಸಾ ಲಜ್ಜಮಾನಾ ಭೀತಾ ಚ ಅಧೋಮುಖಮುಖೀ ತತಃ |
ನೋವಾಚ ಕಿಂಚಿದ್ ವಚನಂ ಬಾಷ್ಪದೂಷಿತಲೋಚನಾ ॥27॥
ವೈಶಂಪಾಯನ ಅವಳು ನಾಚಿಕೆಯಿಂದಲೂ ಭಯದಿಂದಲೂ ಕೂಡಿದವಳಾಗಿ ಮುಖವನ್ನು ಕೆಳಗೆ ಮಾಡಿ ಕಣ್ಣೀರಿನಿಂದ ತುಂಬಿದವಳಾಗಿ ಆಗ ಏನೂ ಮಾತನಾಡಲಿಲ್ಲ.
ಅಥಾಬ್ರುವೀದ್ ಭೀಮಪರಾಕ್ರಮೋ ಬಲೀ
ವೃಕೋದರಃ ಪಾಂಡವಮುಖ್ಯಸಮ್ಮತಃ |
ಪ್ರಬ್ರೂಹಿ ಕಿಂ ತೇ ಕರವಾಣಿ ಸುಂದರಿ
ಪ್ರಿಯಂ ಪ್ರಿಯೇ ವಾರಣಮತ್ತಗಾಮಿನಿ ॥28॥
ಆಗ ಭೀಮಪರಾಕ್ರಮವುಳ್ಳ, ಬಲಿಷ್ಠನಾದ, ಪಾಂಡುಸುತರಲ್ಲಿ ಶ್ರೇಷ್ಠನಾದ ವೃಕೋದರನು ಅವಳನ್ನು ಕುರಿತು ಸುಂದರಿಯೇ, ಪ್ರಿಯೆಯೇ, ಮತ್ತಗಜಗಾಮಿನಿಯೇ, ನಿನಗೆ ಏನು ಪ್ರಿಯವನ್ನು ಉಂಟುಮಾಡಲಿ ಹೇಳು ಎಂದು ಹೇಳಿದನು.
ದ್ರೌಪದೀ
ಅಶೋಚ್ಯತ್ವಂ ಕುತಸ್ತಸ್ಯ ಯಸ್ಯಾ ಭರ್ತಾ ಯುಧಿಷ್ಠಿರಃ |

ಜಾನನ್ ಸರ್ವಾಣಿ ದುಃಖಾನಿ ಕಿಂ ಮಾಂ ಭೀಮಾನುಪೃಚ್ಛಸಿ ॥29॥
ದ್ರೌಪದೀ ಯಾರಿಗೆ ಯುಧಿಷ್ಠಿರನು ಪತಿಯಾಗಿದ್ದಾನೆಯೋ ಅವಳು ದುಃಖವನ್ನು ಪಡದಿರಲು ಹೇಗೆ ಸಾಧ್ಯ? ಭೀಮಸೇನನೇ, ನೀನು ನನ್ನ ಎಲ್ಲಾ ದುಃಖಗಳನ್ನು ತಿಳಿದಿದ್ದರೂ ಏತಕ್ಕೆ ನನ್ನನ್ನು ಪ್ರಶ್ನೆ ಮಾಡುತ್ತಿದ್ದೀಯೆ?
ಯನ್ಮಾಂ ದಾಸೀಪ್ರವಾದೇನ ಪ್ರಾತಿಕಾಮೀ ತದಾಽನಯತ್ |
ಸಭಾಯಾಂ ಪರಿಷನ್ಮಧ್ಯೇ ತನ್ಮೇ ಮರ್ಮಾಣಿ ಕೃಂತತಿ ॥30॥
ಪ್ರಾತಿಕಾಮಿಯು ನನ್ನನ್ನು ದಾಸಿ ಎಂದು ಭಾವಿಸಿ ಸಭೆಯಲ್ಲಿ ಅಷ್ಟು ಜನರ ಮಧ್ಯೆ ಎಳೆದು ತಂದ ಘಟನೆಯು ನನ್ನ ಮರ್ಮಗಳನ್ನು ಭೇದಿಸುತ್ತಿದೆ.
ವಿಕೃಷ್ಟಾ ಹಸ್ತಿನಪುರೇ ಸಭಾಯಾಂ ರಾಜಸಂಸದಿ |
ದುಃಶಾಸನೇನ ಕೇಶಾಂತೇ ಪರಾಮೃಷ್ಟಾ ರಜಸ್ವಲಾ ॥31॥
ಹಸ್ತಿನಪುರದಲ್ಲಿ ರಾಜರ ಸಮಾವೇಶದಲ್ಲಿ ಸಭೆಯಲ್ಲಿ ಎಳೆದುತರಲ್ಪಟ್ಟು ರಜಸ್ವಲೆಯಾಗಿದ್ದ ನಾನು ದುಃಶಾಸನನಿಂದ ತಲೆಕೂದಲುಗಳಲ್ಲಿ ಹಿಡಿದು ಎಳೆಯಲ್ಪಟ್ಟೆ.
ಕ್ಷತ್ರಿಯೈಸ್ತತ್ರ ಕರ್ಣಾದ್ಯೈರ್ದೃಷ್ಟಾ ದುರ್ಯೋಧನೇನ ಚ |
ಶ್ವಶುರಾಭ್ಯಾಂ ಚ ಭೀಷ್ಮೇಣ ವಿದುರೇಣ ಚ ಧೀಮತಾ ॥32॥
ದ್ರೋಣೇನ ಚ ಮಹಾಬಾಹೋ ಕೃಪೇಣ ಚ ಪರಂತಪ ॥33॥
ಎಲೈ ಮಹಾಬಾಹುವೇ, ಪರಂತಪನೇ, ಆಗ ಕರ್ಣ ಮೊದಲಾದ ಎಲ್ಲ ಕ್ಷತ್ರಿಯರೂ, ದುರ್ಯೋಧನನೂ, ನನ್ನ ಅತ್ತೆ-ಮಾವಂದಿರೂ, ಭೀಷ್ಮನೂ, ಮೇಧಾವಿಯಾದ ವಿದುರನೂ ಮತ್ತು ದ್ರೋಣರೂ ನನ್ನನ್ನು ನೋಡಿದರು.
ಸಾಽಹಂ ಶ್ವಶುರಯೋರ್ಮಧ್ಯೇ ಭ್ರಾತೃಮಧ್ಯೇ ಚ ಪಾಂಡವ |
ಕೇಶೇ ಗೃಹ್ಯ ಸಭಾಂ ನೀತಾ ತ್ವಯಿ ಜೀವತಿ ಭಾರತ ॥34॥
ಭಾರತನೇ, ಪಾಂಡವನೇ, ಅಂತಹ ನಾನು ಅತ್ತೆ-ಮಾವಂದಿರ ಮಧ್ಯದಲ್ಲಿ ತನ್ನ ಸಹೋದರರ ಮಧ್ಯದಲ್ಲಿ ತಲೆಯಲ್ಲಿ ಹಿಡಿದು ನೀನು ಬದುಕಿರುವಾಗ ಸಭೆಗೆ ಎಳೆದುತರಲ್ಪಟ್ಟೆ.
ವಿಪ್ರಮುಕ್ತಾ ತತಶ್ಚಾಹಂ ಹೃತರಾಜ್ಯಾ ವನಂ ಗತಾ |
ಸಾಽಹಂ ವನೇ ದುರ್ವಸತೀರ್ವಸಂತೀ ಚಾಧ್ವಕರ್ಶಿತಾ ॥35॥
ಗಜಸ್ವರಪರಿಕ್ಲೇಶೇ ತತ್ರಾಪಿ ಸುಮಹದ್ ಭಯಮ್ ॥36॥
ಅಲ್ಲಿಂದ ಬಿಡುಗಡೆಯನ್ನು ಹೊಂದಿದ ನಾನು ರಾಜ್ಯವನ್ನು ಕಳೆದುಕೊಂಡು ಕಾಡನ್ನು ಬಂದು ಸೇರಿದೆ. ಅಲ್ಲಿಯೂ ಸಹ ಮಾರ್ಗಾಯಾಸದಿಂದ ಬಳಲಿ ಆನೆಗಳ ಘೀಂಕಾರದಿಂದ ಭಯಂಕರವಾದ ಕಾಡಿನಲ್ಲಿ ಕಷ್ಟಮಯವಾದ ವಾಸವನ್ನು ಮಾಡಿದೆ.
ಪಾರ್ಥಿವಸ್ಯ ಸುತಾ ನಾಮ ಕಾ ನು ಜೀವೇತ ಮಾದೃಶೀ |
ಅನುಭೂಯ ಭೃಶಂ ದುಃಖಮನ್ಯತ್ರ ದ್ರೌಪದೀಂ ಪ್ರಭೋ ॥37॥
ಪ್ರಭುವೇ, ಇಷ್ಟು ದುಃಖಗಳನ್ನು ಅನುಭವಿಸುತ್ತಿರುವ ದ್ರೌಪದಿಯಾದ ನನ್ನನ್ನು ಬಿಟ್ಟು ಬೇರೆ ಯಾವ ರಾಜಕುಮಾರಿಯು ಬದುಕಿರುತ್ತಾಳೆ?
ವನವಾಸಗತಾಯಾಶ್ಚ ಸೈಂಧವೇನ ದುರಾತ್ಮನಾ |
ಪರಾಮರ್ಶಂ ದ್ವಿತೀಯಂ ಚ ಸೋಢುಮುತ್ಸಹತೇ ನು ಕಾ ॥38॥
ವನವಾಸದ ಕಾಲದಲ್ಲಿ ದುರಾತ್ಮನಾದ ಸೈಂಧವನು ಎರಡನೆಯ ಬಾರಿಗೆ ನನ್ನನ್ನು ತಲೆಕೂದಲುಗಳಲ್ಲಿ ಹಿಡಿದು ಎಳೆದನು. ಅದನ್ನು ಯಾವಳು ಸಹಿಸುತ್ತಾಳೆ?
ಪದ್ಭ್ಯಾಂ ಪರ್ಯಚರಂ ಚಾಹಂ ದೇಶಾನ್ ವಿಷಮಸಂಸ್ಥಿತಾನ್ |
ದುರ್ಗಾನ್ ಶ್ವಾಪದಸಂಕೀರ್ಣಾನ್ ತ್ವಯಿ ಜೀವತಿ ಪಾಂಡವ ॥39॥
ಪಾಂಡವನೇ, ನೀನು ಬದುಕಿರುವಾಗ ದುರ್ಗಮವಾದ, ಕ್ರೂರಮೃಗಗಳಿಂದ ತುಂಬಿದ, ಸಮತಟ್ಟಲ್ಲದ ಕಾನನ ಪ್ರದೇಶಗಳಲ್ಲಿ ನಾನು ಕಾಲಿನಿಂದಲೇ ನಡೆದೆ.
ತತೋಽಹಂ ದ್ವಾದಶೇ ವರ್ಷೇ ಕಂದಮೂಲಫಲಾಶನಾ |
ಇಮಾಂ ಪುರಮನುಪ್ರಾಪ್ತಾ ಸುದೇಷ್ಣಾಪರಿಚಾರಿಕಾ ॥40॥
ಹನ್ನೆರಡು ವರ್ಷಗಳ ಕಾಲ ಕಂದಮೂಲಗಳ ಆಹಾರವನ್ನು ಸೇವಿಸಿ ಅನಂತರ ಈ ಪಟ್ಟಣಕ್ಕೆ ಬಂದು ಸುದೇಷ್ಣೆಯ ದಾಸಿಯಾಗಿದ್ದೇನೆ.
ಪರಸ್ತ್ರಿಯಮುಪಾತಿಷ್ಠೇ ಸತ್ಯಧರ್ಮಪಥೇ ಸ್ಥಿತಾ |
ಗೋಶೀರ್ಷಕಂ ಪದ್ಮಕಂ ಚ ಹರಿಂ ಪಿಂಕ್ಷೇ ಚ ಚಂದನಮ್ ॥41॥
ನಿತ್ಯಂ ಪಿಂಕ್ಷೇ ವಿರಾಟಸ್ಯ ತ್ವಯಿ ಜೀವತಿ ಪಾಂಡವ ॥42॥
ಸತ್ಯಧರ್ಮದ ಮಾರ್ಗದಲ್ಲಿ ಇರುವ ನಾನು ಇನ್ನೊಬ್ಬಳ ಪತ್ನಿಗೆ ಸೇವಕಿಯಾಗಿದ್ದೇನೆ. ಗೋಶೀರ್ಷಕ, ಪದ್ಮಕ, ಹರಿಚಂದನ ಮೊದಲಾದ ಸುಗಂಧ ದ್ರವ್ಯಗಳನ್ನು ನಿತ್ಯವೂ ಅರೆಯುತ್ತೇನೆ. ಪಾಂಡವನೇ, ನೀನು ಬದುಕಿರುವಾಗ ವಿರಾಟರಾಜನಿಗೋಸ್ಕರ ನಿತ್ಯವೂ ಗಂಧವನ್ನು ಅರೆಯುತ್ತಿದ್ದೇನೆ.
ಸಾಽಹಂ ಬಹೂನಿ ದುಃಖಾನಿ ಗಣಯಾಮಿ ಕೃತೇ ನ ತೇ ॥43॥
ನಾನು ಇನ್ನೂ ಅನೇಕ ದುಃಖಗಳನ್ನು ಅನುಭವಿಸಿದರೂ ಅದನ್ನು ಕೇಳಿದರೆ ನಿನಗೆ ಕ್ಲೇಶವಾಗುವುದೆಂಬ ಕಾರಣದಿಂದ ಅವುಗಳನ್ನು ಗಣನೆಗೇ ತಂದುಕೊಳ್ಳುತ್ತಿಲ್ಲ.

ಮತ್ಸ್ಯರಾಜಸಮಕ್ಷಂ ತು ತಸ್ಯ ಧೂರ್ತಸ್ಯ ಪಶ್ಯತಃ |
ಕೀಚಕೇನ ಪದಾ ಸ್ಪೃಷ್ಟಾ ಕಾ ನು ಜೀವೇತ ಮಾದೃಶೀ ||44||
ಮತ್ಸ್ಯರಾಜನ ಎದುರಿಗೆ ಆ ಧೂರ್ತನು ನೋಡುತ್ತಿರುವಂತೆಯೇ ಕೀಚಕನು ನನ್ನನ್ನು ಕಾಲಿನಿಂದ ಒದ್ದನು. ನನ್ನಂತಹ ಯಾವಳು ಬದುಕಿರುತ್ತಾಳೆ?
ಏವಂ ಬಹುವಿಧೈಃ ಕ್ಲೇಶೈಃ ಕ್ಲಿಶ್ಯಮಾನಾಂ ಚ ಪಾಂಡವ |
ನ ಮಾಂ ಜಾನಾಸಿ ಕೌಂತೇಯ ಕಿಂ ಫಲಂ ಜೀವಿತೇನ ಮೇ ||45||
ಪಾಂಡವನೇ, ಹೀಗೆ ಅನೇಕ ಕ್ಲೇಶಗಳಿಂದ ನಾನು ಬಳಲುತ್ತಿದ್ದರೂ ನೀನು ಅದನ್ನು ತಿಳಿಯುತ್ತಿಲ್ಲ. ಕೌಂತೇಯನೇ, ನಾನು ಬದುಕಿ ಏನು ಪ್ರಯೋಜನ?
ದ್ರುಪದಸ್ಯ ಸುತಾ ಚಾಹಂ ಧೃಷ್ಟದ್ಯುಮ್ನಸ್ಯ ಚಾನುಜಾ |
ಅಗ್ನಿಕುಂಡಾತ್ ಸಮುದ್ಭೂತಾ ನೋರ್ವ್ಯಾಂ ಜಾತು ಚರಾಮಿ ಭೋ ||
ಪೂಜ್ಯನೇ, ನಾನು ದ್ರುಪದರಾಜನ ಮಗಳು. ಧೃಷ್ಟದ್ಯುಮ್ನನ ತಂಗಿ. ಅಗ್ನಿಕುಂಡದ ವೇದಿಕೆಯಿಂದ ಎದ್ದುಬಂದವಳು. ಭೂಮಿಯ ಮೇಲೆ ಎಂದೂ ನಡೆದವಳಲ್ಲ.
ಕೀಚಕಂ ಚೇನ್ನ ಹನ್ಯಾಸ್ತ್ವಂ ಗ್ರೀವಾಂ ಬದ್ಧ್ವಾ ಜಲೇ ಮ್ರಿಯೇ |
ವಿಷಮಾಲೋಡ್ಯ ಪಾಸ್ಯಾಮಿ ಪ್ರವೇಕ್ಷ್ಯಾಮ್ಯಥವಾಽನಲಮ್ ||47||
ನೀನು ಕೀಚಕನನ್ನು ಕೊಲ್ಲದಿದ್ದರೆ ನಾನು ಕತ್ತನ್ನು ಬಿಗಿದುಕೊಂಡು ನೀರಿನಲ್ಲಿ ಬಿದ್ದು ಸಾಯುವೆನು. ವಿಷವನ್ನು ಕದಡಿ ಕುಡಿಯುವೆನು ಅಥವಾ ಅಗ್ನಿಯನ್ನು ಪ್ರವೇಶಿಸುವೆನು.
ಆತ್ಮಾನಂ ನಾಶಯಿಷ್ಯಾಮಿ ವೃಕ್ಷಮಾರುಹ್ಯ ವಾ ಪತೇ |
ಶಸ್ತ್ರೇಣಾಂಗಂ ಚ ಭೇತ್ಸ್ಯಾಮಿ ಕಿಂ ಫಲಂ ಜೀವಿತೇನ ಮೇ ||48||
ಅಥವಾ ಮರವನ್ನು ಏರಿ ಕೆಳಗೆ ಧುಮುಕಿ ನನ್ನನ್ನುನಾಶಮಾಡಿಕೊಳ್ಳುವೆನು. ಅಥವಾ ಶಸ್ತ್ರದಿಂದ ನನ್ನನ್ನೇ ಚುಚ್ಚಿಕೊಳ್ಳುವೆನು. ನಾನು ಬದುಕಿ ಏನು ಪ್ರಯೋಜನ?
ಯೋಽಯಂ ರಾಜ್ಞೋ ವಿರಾಟಸ್ಯ ಕೀಚಕೋ ನಾಮ ಭಾರತ |
ಸೇನಾನೀಃ ಪುರುಷವ್ಯಾಘ್ರ ಸ್ಯಾಲಃ ಪರಮದುರ್ಮತಿಃ ||49||
ಸ ಮಾಂ ಸೈರಂಧ್ರಿವೇಷೇಣ ಚರಂತೀಂ ರಾಜವೇಶ್ಮನಿ |
ನಿತ್ಯಮೇವಾಹ ದುಷ್ಟಾತ್ಮಾ ಭಾರ್ಯಾ ಭವ ಮಮೇತಿ ವೈ ||50||
ಪುರುಷವ್ಯಾಘ್ರನೇ, ವಿರಾಟರಾಜನ ಸೇನಾಧಿಪತಿಯಾದ, ಭಾವಮೈದುನನಾದ, ಪರಮದುರ್ಮತಿಯಾದ, ದುಷ್ಟಸ್ವಭಾವದವನಾದ ಈ ಕೀಚಕನು ಸೈರಂಧ್ರಿಯ ವೇಷದಿಂದ ಅರಮನೆಯಲ್ಲಿ ಚರಿಸುತ್ತಿರುವ ನನ್ನನ್ನು ಕುರಿತು ನಿತ್ಯವೂ ನನ್ನ ಪತ್ನಿಯಾಗು ಎಂದು ಹೇಳುತ್ತಾನೆ.
ತೇನೈವಂ ಚೋದ್ಯಮಾನಾಯಾ ವಧಾರ್ಹೇಣಾರಿಸೂದನ |
ಕಾಲೇನೇವ ಫಲಂ ಪಕ್ವಂ ಹೃದಯಂ ಮೇ ವಿದೀರ್ಯತೇ ||51||
ಶತ್ರುಸೂದನನೇ, ಅವನು ನಿತ್ಯವೂ ಹೀಗೆ ಒತ್ತಾಯ ಮಾಡುತ್ತಿರುವಾಗ ನನ್ನ ಹೃದಯವು ಪಕ್ವವಾದ ಹಣ್ಣು ಬಿರಿದುಹೋಗುವಂತೆ ಬಿರಿದುಹೋಗುತ್ತಿದೆ.
ಸ್ವರೂಪಂ ತವ ಕೌಂತೇಯ ಮಾ ಸ್ಮ ಗಚ್ಛ ಯುಧಿಷ್ಠಿರಮ್ |
ನಿರುದ್ಯೋಗಂ ನಿರಾಮರ್ಷಂ ನಿರ್ವೀರ್ಯಮರಿತುಷ್ಟಿದಮ್ ||52||
ಮಾ ಸ್ಮ ಸೀಮಂತಿನೀ ಕಾಚಿತ್ ಜನಯೇತ್ ಪುತ್ರಮೀದೃಶಮ್ ||53||
ಕೌಂತೇಯನೇ, ಯುಧಿಷ್ಠಿರನು ನಿರುದ್ಯಮಿ, ಸಿಟ್ಟಿಲ್ಲದವನು, ನಿರ್ವೀರ್ಯನಾದವನು ಮತ್ತು ಶತ್ರುಗಳಿಗೆ ಸಂತೋಷವನ್ನು ಕೊಡುವವನು. ನಿನ್ನ ಸ್ವಭಾವವು ಅಂತಹದಲ್ಲ. ಯಾವ ಮುತ್ತೈದೆಯೂ ಸಹ ಧರ್ಮರಾಜನಂತಹ ಪುತ್ರನನ್ನು ಪಡೆಯದಿರಲಿ.
ವಿಜಾನಾಮಿ ತವಾಮರ್ಷಂ ಬಲಂ ವೀರ್ಯಂ ಚ ಪಾಂಡವ |
ತತೋಽಹಂ ಪರಿದೇವಾಮಿ ಚಾಗ್ರತಸ್ತೇ ಮಹಾಬಲ ||54||
ಪಾಂಡವನೇ, ನಾನು ನಿನ್ನ ಕೋಪವನ್ನೂ, ಬಲವನ್ನೂ ಮತ್ತು ಪರಾಕ್ರಮವನ್ನೂ ತಿಳಿದಿದ್ದೇನೆ. ಮಹಾಬಲನೇ, ಆದ್ದರಿಂದ ನಿನ್ನ ಮುಂದೆ ಗೋಳಾಡುತ್ತಿದ್ದೇನೆ.
ಯಥಾ ಯೂಥಪತಿರ್ಮತ್ತಃ ಕುಂಜರಃ ಷಷ್ಟಿಹಾಯನಃ |
ಭೂಮೌ ನಿಪತಿತಂ ಬಿಲ್ವಂ ಪದ್ಭ್ಯಾಮಾಕ್ರಮ್ಯ ಪೀಡಯೇತ್ ||55||
ತಥೈವ ಚ ಶಿರಸ್ತಸ್ಯ ನಿಪಾತ್ಯ ಧರಣೀತಳೇ |
ಗಮನೇ ಪುರುಷವ್ಯಾಘ್ರ ಮರ್ದ ಪಾದೇನ ಪಾಂಡವ ||56||
ಪುರುಷವ್ಯಾಘ್ರನೇ, ಪಾಂಡವನೇ, ಮದಿಸಿದ ಅರವತ್ತು ವರ್ಷ ವಯಸ್ಸಿನ ಸಲಗವಾದ ಆನೆಯು ಭೂಮಿಯಲ್ಲಿ ಬಿಲ್ವಫಲವನ್ನು ಬೀಳಿಸಿ ಕಾಲಿನಿಂದ ತುಳಿದು ಪುಡಿಮಾಡುವಂತೆ, ಆ ಕೀಚಕನನ್ನು ನೆಲದ ಮೇಲೆ ದಾರಿಯಲ್ಲಿ ಕೆಡವಿ ಅವನ ತಲೆಯನ್ನು ನಿನ್ನ ಪಾದದಿಂದ ಮರ್ದಿಸುವವನಾಗು.
ಸ ಚೇದುದ್ಯಂತಮಾದಿತ್ಯಂ ಪ್ರಾತರುತ್ಥಾಯ ಪಶ್ಯತಿ |
ಕೀಚಕಃ ಶರ್ವರೀಂ ವ್ಯುಷ್ಟಾಂ ನಾಹಂ ಜೀವಿತುಮುತ್ಸಹೇ ||57||
ಒಂದುಪಕ್ಷ ಈ ರಾತ್ರಿಯು ಕಳೆದು ನಾಳೆಯ ಪ್ರಾತಃಕಾಲದಲ್ಲಿ ಕೀಚಕನು ಸೂರ್ಯೋದಯವನ್ನು ನೋಡುವವನಾದರೆ ನಾನು

ಬದುಕಲು ಇಷ್ಟಪಡುವುದಿಲ್ಲ.
ಶಾಪಿತೋಽಸಿ ಮಮ ಪ್ರಾಣೈಃ ಸುಕೃತೇನಾರ್ಜುನಸ್ಯ ಚ |
ಯುಧಿಷ್ಠಿರಸ್ಯ ಪಾದಾಭ್ಯಾಂ ಯಮಯೋರ್ಜೀವಿತೇನ ಚ |
ಯತ್ ಕೀಚಕವಧಂ ನಾದ್ಯ ಪ್ರತಿಜಾನಾಮಿ ಭಾರತ ॥58॥
ಭಾರತನೇ, ನೀನು ಈ ದಿನ ಕೀಚಕನನ್ನು ಕೊಲ್ಲದಿದ್ದರೆ ನನ್ನ ಪ್ರಾಣದ ಮೇಲೆ ಶಪಥವನ್ನು ಮಾಡುತ್ತಿದ್ದೇನೆ, ಅರ್ಜುನನ ಪುಣ್ಯದ ಮೇಲೆ ಆಣೆಯನ್ನು ಮಾಡುತ್ತಿದ್ದೇನೆ, ಯುಧಿಷ್ಠಿರನ ಪಾದಗಳ ಮೇಲೆ ಆಣೆಯನ್ನು ಮಾಡುತ್ತಿದ್ದೇನೆ, ನಕುಲಸಹದೇವರ ಜೀವದ ಮೇಲೆ ಆಣೆಯನ್ನು ಮಾಡುತ್ತಿದ್ದೇನೆ.
ಭ್ರಾತರಂ ಚ ವಿಗರ್ಹಸ್ವ ಜ್ಯೇಷ್ಠಂ ದುರ್ದ್ಯೂತದೇವಿನಮ್ |
ಯಸ್ಯಾಸ್ಮಿ ಕರ್ಮಣಾ ಪ್ರಾಪ್ತಾ ದುಃಖಮೇತದನಂತಕಮ್ ॥59॥
ಯಾವ ಕೆಟ್ಟ ಜೂಜಿನಲ್ಲಿ ನಿರತನಾದ ನಿನ್ನ ಅಣ್ಣನ ದುಷ್ಕರ್ಮದಿಂದ ಇಂತಹ ನಿರಂತರವಾದ ದುಃಖವನ್ನು ಹೊಂದಿದ್ದೇನೆಯೋ ಅಂತಹ ಅಣ್ಣನನ್ನು ನಿಂದಿಸುವವನಾಗು.
ಕೋ ಹಿ ರಾಜ್ಯಂ ಪರಿತ್ಯಜ್ಯ ಸಪುತ್ರಪಶುಬಾಂಧವಮ್ |
ಪ್ರವ್ರಜೇತ ಮಹಾರಣ್ಯಮಜನೈಃ ಪರಿವಾರಿತಮ್ ॥60॥
ಯಾವನು ರಾಜ್ಯವನ್ನೂ, ಪಶುಪುತ್ರಬಾಂಧವರನ್ನೂ ತೊರೆದು ಜನರಹಿತವಾದ ಮಹಾರಣ್ಯವನ್ನು ಪ್ರವೇಶಿಸುತ್ತಾನೆ?
ಯದಿ ನಿಷ್ಕಸಹಸ್ರಾಣಿ ಯಚ್ಚಾನ್ಯತ್ ಸಾರವದ್ಧನಮ್ |
ಸಾಯಂ ಪ್ರಾತರದೇವಿಷ್ಯದಪಿ ಸಂವತ್ಸರಾಯುತಮ್ ॥61॥
ರೂಪ್ಯಂ ಹಿರಣ್ಯಂ ವಾಸಾಂಸಿ ಯಾನಂ ಯುಗ್ಯಮಜಾವಿಕಮ್ |
ಅಶ್ವಾಶ್ಚ ರಥಸಂಘಾಶ್ಚ ನ ಜಾತು ಕ್ಷಯಮಾವ್ರಜೇತ್ ॥62॥
ಒಂದುಪಕ್ಷ ಸಹಸ್ರನಿಷ್ಕಗಳನ್ನು ಮತ್ತು ಶ್ರೇಷ್ಠವಾದ ಉಳಿದ ಧನವನ್ನು, ಚಿನ್ನಬೆಳ್ಳಿ ವಸ್ತ್ರಗಳು, ರಥ-ಕುದುರೆಗಳು, ಪಲ್ಲಕ್ಕಿಗಳು ಮುಂತಾದ ಯಾನಗಳು, ಆಡು-ಕುರಿ ಮೊದಲಾದ ಸಂಪತ್ತು ಇವುಗಳನ್ನು ಪಣವಾಗಿಟ್ಟು ಹತ್ತುಸಾವಿರ ವರ್ಷಗಳ ಕಾಲ ಹಗಲೂರಾತ್ರಿಯೂ ಜೂಜಾಡಿದ್ದರೂ ಆ ಸಂಪತ್ತು ಕ್ಷಯವನ್ನು ಹೊಂದುತ್ತಿರಲಿಲ್ಲ.
ಸೋಽಯಂ ದ್ಯೂತಪ್ರವಾದೇನ ಶ್ರಿಯಶ್ಚಾಪ್ಯವರೋಪಿತಃ |
ತೂಷ್ಣೀಮಾಸ್ತೇ ಯಥಾ ಮೂಢಃ ಸ್ವಾನಿ ಕರ್ಮಾಣ್ಯಚಿಂತಯನ್ ॥63॥
ಅಂತಹ ಇವನು ಜೂಜಿನ ನೆಲದಿಂದ ಎಲ್ಲ ಐಶ್ವರ್ಯವನ್ನೂ ಕಳೆದುಕೊಂಡು ತಾನು ಮಾಡಬೇಕಾದ ಕಾರ್ಯವನ್ನು ಚಿಂತಿಸದೆ ಮೂಢನಂತೆ ಸುಮ್ಮನಿದ್ದಾನೆ.
ಪುರಾ ಶತಸಹಸ್ರಾಣಿ ದಂತಿನಾಂ ಹೇಮಮಾಲಿನಾಮ್ |
ಯಂ ಯಾಂತಮನುಯಾಂತಿ ಸ್ಮ ಸೋಽಯಂ ದ್ಯೂತೇನ ಜೀವತಿ ॥
ಹಿಂದೆ ಯಾವನು ಹೊರಟರೆ ಅವನನ್ನು ಸುವರ್ಣಮಾಲೆಯುಳ್ಳ ಒಂದುಲಕ್ಷ ಆನೆಗಳು ಹಿಂಬಾಲಿಸುತ್ತಿದ್ದವೋ ಅಂತಹ ಅವನು ಈ ದಿನ ದ್ಯೂತದಿಂದ ಜೀವಿಸುತ್ತಿದ್ದಾನೆ.
ತಥಾ ದಶಸಹಸ್ರಾಣಿ ನೃಪಾಣಾಮತಿತೇಜಸಾಮ್ |
ಉಪಾಸತೇ ಸ್ಮ ರಾಜಾನಮಿಂದ್ರಪ್ರಸ್ಥೇ ಯುಧಿಷ್ಠಿರಮ್ ॥65॥
ಹಾಗೆಯೇ, ಅಮಿತಪರಾಕ್ರಮಿಗಳಾದ ಹತ್ತುಸಹಸ್ರರಾಜರು ಇಂದ್ರಪ್ರಸ್ಥದಲ್ಲಿ ಯುಧಿಷ್ಠಿರನು ರಾಜನಾಗಿದ್ದಾಗ ಅವನ ಸೇವೆಯನ್ನು ಮಾಡುತ್ತಿದ್ದರು.
ಶತಂ ದಾಸೀಸಹಸ್ರಾಣಾಂ ಯಸ್ಯ ನಿತ್ಯಂ ಮಹಾನಸೇ |
ಪಾತ್ರಹಸ್ತಂ ದಿವಾರಾತ್ರಮತಿಥೀನ್ ಭೋಜಯತ್ಯುತ ॥66॥
ಏಷ ನಿಷ್ಕಸಹಸ್ರಾಣಿ ದತ್ತ್ವಾ ಪ್ರಾತರ್ದಿನೇದಿನೇ |
ದ್ಯೂತಜೇನ ಹ್ಯನರ್ಥೇನ ಮಹತಾ ಸಮುಪಾಶ್ರಿತಃ ॥67॥
ಯಾವನ ಬಾಣಸದಲ್ಲಿ ಹತ್ತುಸಹಸ್ರ ದಾಸಿಯರು ಹಗಲೂ ಮತ್ತು ರಾತ್ರಿಯೂ ಕೈಯಲ್ಲಿ ಪಾತ್ರೆಗಳನ್ನು ಹಿಡಿದು ಅತಿಥಿಗಳಿಗೆ ಬಡಿಸುತ್ತಿದ್ದರೋ, ಯಾವನು ಪ್ರತಿದಿನವೂ ಪ್ರಾತಃಕಾಲದಲ್ಲಿ ಸಹಸ್ರನಿಷ್ಕಗಳನ್ನು ದಾನಮಾಡುತ್ತಿದ್ದನೋ ಅಂತಹ ಯುಧಿಷ್ಠಿರನು ದ್ಯೂತದಿಂದ ಉಂಟಾದ ದೊಡ್ಡ ಅನರ್ಥದಲ್ಲಿ ಸಿಲುಕಿದ್ದಾನೆ.
ಏನಂ ಸುಸ್ವರಸಂಪನ್ನಾ ಬಹವಃ ಸೂತಮಾಗಧಾಃ |
ಸುಪ್ತಂ ಪ್ರಾತರುಪಾತಿಷ್ಠನ್ ಸುಮೃಷ್ಟಮಣಿಕುಂಡಲಾಃ ॥68॥
ಹಿಂದೆ ಇವನನ್ನು ಮಧುರವಾದ ಕಂಠವುಳ್ಳ, ಒಳ್ಳೆಯ ಮಣಿಕುಂಡಲಗಳನ್ನು ಧರಿಸಿದ ಅನೇಕ ಮಂದಿ ಸೂತ-ಮಾಗಧರು ಪ್ರಾತಃಕಾಲದಲ್ಲಿ ಸ್ತೋತ್ರವನ್ನು ಮಾಡುತ್ತಿದ್ದರು.
ಸಹಸ್ರಮೃಷಯೋ ಯಸ್ಯ ನಿತ್ಯಮಾಸನ್ ಸಭಾಸದಃ |
ತಪಃಶ್ರುತೋಪಸಂಪನ್ನಾಃ ಸರ್ವಕಾಮೈರುಪಸ್ಥಿತಾಃ ॥69॥
ತಪಸ್ಸು ಮತ್ತು ವಿದ್ಯೆಗಳಿಂದ ಪೂರ್ಣರಾದ ಸಹಸ್ರ ಋಷಿಗಳು ಅವರ ಎಲ್ಲಾ ಅಭೀಷ್ಟಗಳೂ ನೆರವೇರಿಸಲ್ಪಟ್ಟು ನಿತ್ಯವೂ ಅವನ ಸಭಾಸದರಾಗಿರುತ್ತಿದ್ದರು.
ಅಷ್ಟಾಶೀತಿಸಹಸ್ರಾಣಿ ಸ್ನಾತಕಾ ಗೃಹಮೇಧಿನಃ |
ತ್ರಿಂಶದ್ದಾಸೀಕ ಏಕೈಕೋ ಯಾನ್ ಬಿಭರ್ತಿ ಯುಧಿಷ್ಠಿರಃ ॥70॥

ಎಂಬತ್ತೆಂಟು ಸಹಸ್ರ ಸ್ನಾತಕರು ಮತ್ತು ಗೃಹಸ್ಥರು ಇವರಲ್ಲಿ ಒಬ್ಬೊಬ್ಬರಿಗೂ ಮೂವತ್ತು ದಾಸಿಯರು - ಇಂತಹವರನ್ನು ಯುಧಿಷ್ಠಿರನು ಪೋಷಿಸುತ್ತಿದ್ದನು.
ಅಪ್ರತಿಗ್ರಾಹಿಣಾಂ ಚೈವ ಯತೀನಾಮೂರ್ಧ್ವರೇತಸಾಮ್ |
ದಶ ಚಾಪಿ ಸಹಸ್ರಾಣಿ ಸೋಽಯಮಾಸ್ತೇ ನರೇಶ್ವರಃ ॥71॥
ಪ್ರತಿಗ್ರಹಶೂನ್ಯರಾದ ಊರ್ಧ್ವರೇತಸ್ಕರಾದ ಹತ್ತುಸಾವಿರ ಸಂನ್ಯಾಸಿಗಳನ್ನು ಪೋಷಿಸುತ್ತಿದ್ದ ಈ ನರೇಶ್ವರನು ಈಗ ಸುಮ್ಮನಿದ್ದಾನೆ.
ಆನೃಶಂಸ್ಯಮನುಕ್ರೋಶಃ ಸಂವಿಭಾಗಸ್ತಥೈವ ಚ |
ಯಸ್ಮಿನ್ನೇತಾನಿ ಸರ್ವಾಣಿ ಸೋಽಯಮಾಸ್ತೇ ಯುಧಿಷ್ಠಿರಃ ॥72॥
ಮಾರ್ದವ, ದಯೆ, ತನ್ನ ಸಂಪತ್ತನ್ನು ಇನ್ನೊಬ್ಬರಿಗೆ ಹಂಚುವುದು ಮೊದಲಾದ ಎಲ್ಲ ಗುಣಗಳನ್ನೂ ಹೊಂದಿದ್ದ ಯುಧಿಷ್ಠಿರನು ಈಗ ಸುಮ್ಮನಿದ್ದಾನೆ.
ಅಂಧಾನ್ ವೃದ್ಧಾಂಸ್ತಥಾ ದೀನಾನ್ ಸರ್ವರಾಷ್ಟ್ರೇಷು ದುಃಖಿತಾನ್ |
ಬಿಭರ್ತ್ಯನ್ನಾರ್ಥಿನೋ ನಿತ್ಯಮಾನೃಶಂಸ್ಯಾದ್ ಯುಧಿಷ್ಠಿರಃ ॥73॥
ಯುಧಿಷ್ಠಿರನು ಕರುಣೆಯಿಂದ ಅಂಧರನ್ನು, ವೃದ್ಧರನ್ನು, ದೀನರನ್ನು, ಮತ್ತು ತನ್ನ ರಾಷ್ಟ್ರದಲ್ಲಿರುವ ಅನ್ನಾರ್ಥಿಗಳಾದ ಎಲ್ಲಾ ದುಃಖಿತರನ್ನು ಪೋಷಿಸುತ್ತಿದ್ದನು.
ಸ ಏಷ ನಿಲಯಂ ಪ್ರಾಪ್ತೋ ಮಾತ್ಸ್ಯಸ್ಯ ಪರಿಚಾರಕಃ |
ಸಭಾಯಾಂ ವಿದಿತೋ ರಾಜ್ಞಃ ಕಂಕೋ ನಾಮ ಯುಧಿಷ್ಠಿರಃ ॥74॥
ಅಂತಹ ಯುಧಿಷ್ಠಿರನು ಕಂಕ ಎಂಬ ಹೆಸರಿನಿಂದ ವಿರಾಟರಾಜನ ಸಭೆಯಲ್ಲಿ ಪ್ರಸಿದ್ಧನಾಗಿ, ಅವನ ಅರಮನೆಯನ್ನು ತಲುಪಿ ಅವನಿಗೆ ಪರಿಚಾರಕನಾಗಿದ್ದಾನೆ.
ಇಂದ್ರಪ್ರಸ್ಥೇ ನಿವಸತಃ ಸಮಯೇ ಯಸ್ಯ ಪಾರ್ಥಿವಾಃ |
ಆಸನ್ ಬಲಿಕರಾಃ ಸರ್ವೇ ಸೋಽನ್ಯೇಭ್ಯೋ ಭೂತಿಮಿಚ್ಛತಿ ॥75॥
ಒಂದು ಕಾಲದಲ್ಲಿ ಇಂದ್ರಪ್ರಸ್ಥದಲ್ಲಿ ವಾಸಿಸುತ್ತಿದ್ದ ಯಾವ ಅವನಿಗೆ ಎಲ್ಲ ರಾಜರೂ ಕಪ್ಪವನ್ನು ಒಪ್ಪಿಸುತ್ತಿದ್ದರೋ ಅಂತಹ ಅವನು ಇನ್ನೊಬ್ಬರಿಂದ ತನ್ನ ಸಂಪತ್ತನ್ನು ಬಯಸುತ್ತಿದ್ದಾನೆ.
ಪಾರ್ಥಿವಾಃ ಪೃಥಿವೀಪಾಲಾ ಯಸ್ಯಾಸನ್ ವಶವರ್ತಿನಃ |
ಸ ವಶೇ ವಿವಶೋ ರಾಜ್ಞಾಂ ಪರೇಷಾಮದ್ಯ ವರ್ತತೇ ॥76॥
ಭೂಮಿಗೆ ಒಡೆಯರಾದ ಅನೇಕ ರಾಜರು ಹಿಂದೆ ಯಾವನಿಗೆ ವಶವರ್ತಿಗಳಾಗಿದ್ದರೋ ಅವನು ಈ ದಿನ ವಿವಶನಾಗಿ ಬೇರೆ ರಾಜರ ವಶವರ್ತಿಯಾಗಿದ್ದಾನೆ.
ಸಂಪ್ರಾಪ್ಯ ಪೃಥಿವೀಂ ಸರ್ವಾಂ ರಶ್ಮಿಮಾನಿವ ತೇಜಸಾ |
ಸೋಽದ್ಯ ರಾಜ್ಞೋ ವಿರಾಟಸ್ಯ ಸಭಾಸ್ತಾರೋ ಯುಧಿಷ್ಠಿರಃ ॥77॥
ಯಾವನು ತನ್ನ ಸೂರ್ಯನಂತೆ ಬೆಳಗುವ ಪರಾಕ್ರಮದಿಂದ ಸಮಸ್ತವಾದ ಪೃಥಿವಿಯನ್ನು ಪಡೆದಿದ್ದನೋ ಅಂತಹ ಯುಧಿಷ್ಠಿರನು ಈ ದಿನ ವಿರಾಟನ ಸಭಾಸ್ತಾರನಾಗಿ ಕುಳಿತಿದ್ದಾನೆ.
ಯಮುಪಾಸತ ರಾಜಾನಂ ಸಭಾಯಾಮ್ ಋಷಿಸತ್ತಮಾಃ |
ತಮುಪಾಸಂತಮದ್ಯಾನ್ಯಂ ಪಶ್ಯ ಪಾಂಡವ ಪಾಂಡವಮ್ ॥78॥
ಪಾಂಡವನೇ, ಯಾವ ಧರ್ಮರಾಜನು ಸಭೆಯಲ್ಲಿ ಕುಳಿತಿದ್ದಾಗ ಋಷಿಶ್ರೇಷ್ಠರು ಅವನ ಉಪಾಸೆಯನ್ನು ಮಾಡುತ್ತಿದ್ದರೋ ಅಂತಹ ಯುಧಿಷ್ಠಿರನು ಈ ದಿನ ಇನ್ನೊಬ್ಬರ ಉಪಾಸನೆಯನ್ನು ಮಾಡುತ್ತಿರುವುದನ್ನು ನೋಡು.
ಸಹಸ್ರಂ ವಾಲಖಿಲ್ಯಾನಾಂ ಸಹಸ್ರಮುದವಾಸಿನಾಮ್ |
ಸಹಸ್ರಮಗ್ನಿಕುಂಡಾನಾಂ ಸಹಸ್ರಂ ವಾಯುಭೋಜಿನಾಮ್ ॥79॥
ಸಹಸ್ರಂ ಮುಕ್ತಪತ್ನೀನಾಂ ಸಹಸ್ರಂ ಬ್ರಹ್ಮಚಾರಿಣಾಮ್ |
ಸಹಸ್ರಮಾಹಿತಾಗ್ನೀನಾಂ ಸಹಸ್ರಂ ಗೃಹಮೇಧಿನಾಮ್ ॥80॥
ಹಂಸಾಃ ಪರಮಹಂಸಾಶ್ಚ ಯೋಗಿನಶ್ಚ ದ್ವಿಜಾತಯಃ |
ಕುಟೀಚಕಾ ಪರಿವ್ರಾಜೋ ಯೇ ಚಾನ್ಯೇ ವ್ರತಚಾರಿಣಃ ॥81॥
ಸಂವಿಭಕ್ತಾತ್ಮಕಾಶ್ಚೈವ ಬಹವಶ್ಚೋರ್ಧ್ವರೇತಸಃ |
ಚತುರ್ವೇದವಿದೋ ವಿಪ್ರಾಃ ಶಿಕ್ಷಾಮೀಮಾಂಸಪಾರಗಾಃ ॥82॥
ಕ್ರಮಪಾಠಾಶ್ಚ ಯೇ ವಿಪ್ರಾಃ ಸಾಮಾಧ್ಯಾಯನಿಕಾಶ್ಚ ಯೇ |
ಸ ಏಷ ನಿಲಯಂ ಪ್ರಾಪ್ತೋ ಮಾತ್ಸ್ಯಸ್ಯ ಪರಿಚಾರಕಃ ॥83॥
ಸಹಸ್ರ ವಾಲಖಿಲ್ಯರೂ, ಸಹಸ್ರ ಸಂಖ್ಯೆಯ ತ್ರಿಕಾಲಸ್ನಾನವನ್ನು ಮಾಡುವವರೂ, ಸಹಸ್ರ ಸಂಖ್ಯೆಯ ಪಂಚಾಗ್ನಿ ತಪಸ್ವಿಗಳೂ, ಸಹಸ್ರ ಸಂಖ್ಯೆಯ ವಾಯುಭಕ್ಷರೂ, ಸಹಸ್ರ ಸಂಖ್ಯೆಯ ಗೃಹಸ್ಥಾಶ್ರಮವನ್ನು ತೊರೆದ ಸಂನ್ಯಾಸಿಗಳೂ, ಸಹಸ್ರ ಬ್ರಹ್ಮಚಾರಿಗಳೂ, ಸಹಸ್ರ ಆಹಿತಾಗ್ನಿಗಳೂ, ಸಹಸ್ರ ಗೃಹಸ್ಥರೂ ಮತ್ತು ಹಂಸರೂ, ಪರಮಹಂಸರೂ, ಯೋಗಿಗಳೂ, ಕುಟೀಚಕರೂ, ಪರಿವ್ರಾಜಕರೂ, ವ್ರತಚಾರಿಗಳೂ ಆದ ಬ್ರಾಹ್ಮಣರು ತಮ್ಮ ಎಲ್ಲ ಆಸ್ತಿಯನ್ನು ಹಂಚಿ ಊರ್ಧ್ವರೇತಸ್ಕರಾದ ಅನೇಕ ಮಂದಿ ಸಂನ್ಯಾಸಿಗಳೂ, ಚತುರ್ವೇದಗಳನ್ನು ತಿಳಿದು ಶಿಕ್ಷಾಮೀಮಾಂಸಾದಿ ಪಾರಂಗತರಾದ ಅನೇಕ ಬ್ರಾಹ್ಮಣರೂ, ಕ್ರಮಪಾಠಗಳನ್ನು ಬಲ್ಲ ಬ್ರಾಹ್ಮಣರೂ, ಸಾಮಗಾನವನ್ನು ಮಾಡುವವರೂ ಇವರೆಲ್ಲರೂ ಯಾವನನ್ನು ಉಪಾಸನೆ ಮಾಡುತ್ತಿದ್ದರೋ ಅಂತಹ ಇವನು ವಿರಾಟರಾಜನ ಪರಿಚಾರಕನಾಗಿ ಅವನ ಮನೆಯನ್ನು ಸೇರಿದ್ದಾನೆ.

ಅನವದ್ಯಂ ಮಹಾಪ್ರಾಜ್ಞಂ ಜೀವಿತಾರ್ಥೇನ ಸಂವೃತಮ್ |
ದೃಷ್ಟ್ವಾ ಕಸ್ಯ ನ ದುಃಖಂ ಸ್ಯಾದ್ ಧರ್ಮರಾಜಂ ಯುಧಿಷ್ಠಿರಮ್ ॥
ನಿರ್ದೋಷಿಯೂ ಮಹಾಪ್ರಾಜ್ಞನೂ, ಜೀವನದ ಸಲುವಾಗಿ ಯತಿವೇಷವನ್ನು ಧರಿಸಿದವನೂ ಆದ ಧರ್ಮರಾಜನಾದ ಯುಧಿಷ್ಠಿರನನ್ನು ನೋಡಿ ಯಾರಿಗೆ ದುಃಖವಾಗುವುದಿಲ್ಲ?
ಉಪಾಸ್ತೇ ಸ್ಮ ಸಭಾಯಾಂ ಯಂ ಕೃತ್ಸ್ನಾ ಚೈವ ವಸುಂಧರಾ |
ತಮುಪಾಸಂತಮದ್ಯಾನ್ಯಂ ಪಶ್ಯ ಭಾರತ ಭಾರತಮ್ ॥85॥
ಯಾವನು ಸಭೆಯಲ್ಲಿ ಕುಳಿತಿದ್ದಾಗ ಸಮಗ್ರವಾದ ಭೂಮಿಯು ಅವನನ್ನು ಉಪಾಸನೆ ಮಾಡುತ್ತಿದ್ದಿತೋ ಎಲೈ ಭಾರತನೇ, ಅಂತಹ ಯುಧಿಷ್ಠಿರನು ಈ ದಿನ ಇನ್ನೊಬ್ಬರ ಉಪಾಸನೆಯನ್ನು ಮಾಡುವುದನ್ನು ನೋಡು.
ಏವಂ ಬಹುವಿಧೈರ್ದುಃಖೈಃ ಪೀಡ್ಯಮಾನಾಮನಾಥವತ್ |
ಶೋಕಸಾಗರಮಧ್ಯಸ್ಥಾಂ ಕಿಂ ಮಾಂ ಭೀಮ ನ ಪಶ್ಯಸಿ ॥86॥
ಭೀಮಸೇನನೇ, ಹೀಗೆ ನಾನು ಅನಾಥಳಂತೆ ಅನೇಕ ವಿಧವಾದ ದುಃಖಗಳಿಂದ ಪೀಡಿತಳಾಗಿ ಶೋಕಸಾಗರದಲ್ಲಿ ಮುಳುಗಿರುವುದು ನಿನಗೆ ಕಾಣಿಸುವುದಿಲ್ಲವೇ?
ಇದಂ ತು ಮೇ ದುಃಖತರಂ ಯತ್ ತ್ವಾಂ ವಕ್ಷ್ಯಾಮಿ ಭಾರತ |
ನ ಮೇ ಹ್ಯಸೂಯಾ ಕರ್ತವ್ಯಾ ದುಃಖಾದೇತದ್ ಬ್ರವೀಮ್ಯಹಮ್ ॥
ಭಾರತನೇ, ಇದು ನನಗೆ ಎಲ್ಲದ್ದಕ್ಕಿಂತಲೂ ದುಃಖಕರವಾದುದು. ಇದನ್ನು ದುಃಖದಿಂದ ಹೇಳುತ್ತಿದ್ದೇನೆ. ನನ್ನ ಮೇಲೆ ಅಸೂಯೆಯನ್ನು ಮಾಡಬೇಡ.
ಶಾರ್ದೂಲೈರ್ಮಹಿಷೈರ್ನಾಗೈರಗಾರೇ ಯೋತ್ಸ್ಯಸೇ ಸದಾ |
ಕೈಕೇಯ್ಯಾಃ ಪ್ರೇಕ್ಷಮಾಣಾಯಾಃ ತದಾ ಮೇ ಕಶ್ಮಲೋಽಭವತ್ ॥88॥
ನೀನು ಕೈಕೇಯಿಯ ಅರಮನೆಯಲ್ಲಿ ಅವಳ ಕಣ್ಣೆದುರಿಗೆ ಹುಲಿಗಳು, ಕಾಡು ಕೋಣಗಳು ಮತ್ತು ಗಜಗಳ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ನನಗೆ ಬಹಳ ದುಃಖವಾಗುತ್ತದೆ.
ಸೂದಕರ್ಮಣಿ ಭೀಮ ತ್ವಮಸಮೇ ಭರತರ್ಷಭ |
ಬ್ರುವನ್ ವಲ್ಲವಜಾತೀಯಃ ಕಸ್ಯ ಶೋಕಂ ನ ವರ್ಧಯೇಃ ॥89॥
ಭರತರ್ಷಭನೇ, ನಿನಗೆ ಯೋಗ್ಯವಲ್ಲದ ಅಡಿಗೆಯ ಕರ್ಮದಲ್ಲಿ ನಿರತನಾಗಿ ನಾನು ವಲ್ಲವ ಜಾತಿಯವನು ಎಂದು ಹೇಳಿಕೊಳ್ಳುವ ನೀನು ಯಾರಿಗೆ ದುಃಖವನ್ನು ಉಂಟುಮಾಡುವುದಿಲ್ಲ?
ಸೂಪಕಾರಂ ವಿರಾಟಸ್ಯ ವಲ್ಲವಂ ತ್ವಂ ವಿದುರ್ಜನಾಃ |
ಪ್ರೇಷ್ಯತ್ವಂ ಸಮನುಪ್ರಾಪ್ತಂ ತತೋ ದುಃಖತರಂ ನು ಕಿಮ್ ॥90॥
ನಿನ್ನನ್ನು ಜನರು ವಲ್ಲವನೆಂದೂ, ವಿರಾಟನ ಅಡುಗೆಯವನೆಂದೂ, ಅವನ ಸೇವಕನೆಂದೂ ತಿಳಿಯುತ್ತಾರೆ. ಇದಕ್ಕಿಂತ ದುಃಖಕರವಾದುದು ಏನಿದೆ?
ಯದಾ ಮಹಾನಸೇ ಸಿದ್ಧೇ ವಿರಾಟಮುಪತಿಷ್ಠಸಿ |
ಬ್ರುವಾಣೋ ವಲ್ಲವಃ ಸೂದಸ್ತದಾ ಸೀದತಿ ಮೇ ಮನಃ ॥91॥
ಬಾಣಸದಲ್ಲಿ ಪಾಕವು ಸಿದ್ಧವಾದಾಗ ನೀನು ವಿರಾಟನ ಬಳಿಗೆ ಬಂದು `ವಲ್ಲವನಾದ ನಾನು ಹೇಳುತ್ತಿದ್ದೇನೆ, ಅಡುಗೆಯು ಸಿದ್ಧವಾಗಿದೆ' ಎಂದು ಹೇಳುವಾಗ ನನ್ನ ಮನಸ್ಸು ಮುದುಡಿಹೋಗುತ್ತದೆ.
ಯದಾ ಪ್ರಹೃಷ್ಟಃ ಸಮ್ರಾಟ್ ತ್ವಾಂ ಸಂಯೋಧಯತಿ ಕುಂಜರೈಃ ॥92॥
ಹಸಂತ್ಯಂತಃಪುರೇ ನಾರ್ಯೋ ಮಮ ಚೇಷ್ಟಾಂ ನಿರೀಕ್ಷ್ಯ ಚ ॥93॥
ಸಂತೋಷಗೊಂಡ ರಾಜನು ನೀನು ಆನೆಗಳ ಜೊತೆಯಲ್ಲಿ ಯುದ್ಧವನ್ನು ಮಾಡುವಂತೆ ಆಜ್ಞಾಪಿಸಿದಾಗ ಅದನ್ನು ನೋಡಿ ನನ್ನ ಪ್ರತಿಕ್ರಿಯೆಯನ್ನು ನೋಡಿ ಅಂತಃಪುರದಲ್ಲಿರುವ ನಾರಿಯರು ಹಾಸ್ಯಮಾಡುತ್ತಾರೆ.
ತತ ಉತ್ಥಾಯ ಕೈಕೇಯೀ ಸರ್ವಾಸ್ತಾಃ ಪ್ರತ್ಯಭಾಷತ |
ಪ್ರೇಕ್ಷ್ಯ ಮಾಮನವದ್ಯಾಂಗೀಂ ಕಶ್ಮಲಾಭಿಹತಾಮಿವ ॥94॥
ಸ್ನೇಹಾತ್ ಸಂವಾಸಜಾದೇವ ಸದಾ ವೈ ಚಾರುಹಾಸಿನೀ |
ಯುಧ್ಯಮಾನಂ ಮಹಾವೀರ್ಯಮಿಮಂ ಸಮನುಶೋಚತಿ ॥95॥
ಆಗ ಸುದೇಷ್ಣೆಯು ಅನವದ್ಯಾಂಗಿಯಾದ ನಾನು ದುಃಖಪಡುತ್ತಿರುವುದನ್ನು ನೋಡಿ ಎದ್ದು ಅವರೆಲ್ಲರನ್ನೂ ಕುರಿತು ಒಂದೇ ಮನೆಯಲ್ಲಿ ವಾಸಮಾಡಿರುವುದರಿಂದ ಉಂಟಾದ ಸ್ನೇಹದಿಂದ ಚಾರುಹಾಸಿನಿಯಾದ ಸೈರಂಧ್ರಿಗೆ ಯುದ್ಧಮಾಡುವ ಮಹಾವೀರ್ಯನಾದ ಈ ವಲಲನನ್ನು ನೋಡಿ ಶೋಕವುಂಟಾಗುತ್ತದೆ ಎಂದು ಹೇಳುತ್ತಾಳೆ.
ಕಲ್ಯಾಣರೂಪಾ ಸೈರಂಧ್ರೀ ವಲಲಶ್ಚಾಪಿ ಸುಂದರಃ |
ಸ್ತ್ರೀಣಾಂ ಚಿತ್ತಂ ಹಿ ದುರ್ಜ್ಞೇಯಂ ಯುಕ್ತರೂಪೌ ಹಿ ಮೇ ಮತೌ ॥
ಸೈರಂಧ್ರೀ ಪ್ರಿಯಸಂವಾಸಾನ್ನಿತ್ಯಂ ಕರುಣವಾದಿನೀ |
ಅಸ್ಮಿನ್ ರಾಜಕುಲೇ ಚೇಮೌ ತುಲ್ಯಕಾಲನಿವಾಸಿನೌ ॥97॥
ಇತಿ ಬ್ರುವಾಣಾ ವಾಕ್ಯಾನಿ ಸಾ ಮಾಂ ನಿತ್ಯಮಜೀಜಪತ್ ॥98॥
ಕ್ರುಧ್ಯಂತೀಂ ಮಾಂ ಚ ಸಂಪ್ರೇಕ್ಷ್ಯ ಪರ್ಯಶಂಕತ ಮಾಂ ತ್ವಯಿ ॥
ಸೈರಂಧ್ರಿಯು ಸುಂದರರೂಪವುಳ್ಳವಳಾಗಿದ್ದಾಳೆ. ವಲಲನೂ ಸುಂದರನಾಗಿದ್ದಾನೆ. ಸ್ತ್ರೀಯರ ಮನಸ್ಸನ್ನು ತಿಳಿಯಲು ಸಾಧ್ಯವಿಲ್ಲ.

ಅವರು ಪರಸ್ಪರ ಅನುರೂಪರಾಗಿದ್ದಾರೆ ಎಂದು ನನ್ನ ಅಭಿಪ್ರಾಯ. ಸೈರಂಧ್ರಿಯು ಪ್ರಿಯರ ಜೊತೆಯಲ್ಲೇ ಮಾತನಾಡುತ್ತಾ ಯಾವಾಗಲೂ ಅವನ ವಿಷಯದಲ್ಲಿ ಕರುಣೆಯಿಂದಲೇ ಮಾತನಾಡುತ್ತಾಳೆ. ಇವರಿಬ್ಬರೂ ಸಹ ಈ ರಾಜಕುಲದಲ್ಲಿ ಸಮಾನವಾದ ಸಮಯದಲ್ಲಿಯೇ ವಾಸಿಸಿದ್ದಾರೆ ಎಂದು ಹೀಗೆ ಹೇಳುತ್ತಾ ಅವಳು ನಿತ್ಯವೂ ನನ್ನನ್ನು ಜಪಿಸುತ್ತಿದ್ದಳು (ಚಿಂತಿಸುತ್ತಿದ್ದಳು). ಕೋಪಗೊಳ್ಳುತ್ತಿರುವ ನನ್ನನ್ನು ನೋಡಿ ಅವಳು ನಿನ್ನಲ್ಲಿ ನನಗೆ ಪ್ರೀತಿ ಇದೆ ಎಂದೂ ಶಂಕಿಸುತ್ತಿದ್ದಳು.
ವೈಶಂಪಾಯನಃ
ತಸ್ಯಾಂ ತಥಾ ಬ್ರುವಂತ್ಯಾಂ ತು ಭೀಮೋ ಭೀಮಪರಾಕ್ರಮಃ ।
ನೋವಾಚ ಕಿಂಚಿದ್ ವಚನಂ ಸಂರಂಭಾತ್ ರಕ್ತಲೋಚನಃ ॥100॥
ವೈಶಂಪಾಯನ ಅವಳು ಹಾಗೆ ಮಾತನಾಡುತ್ತಿರುವಾಗ ಭೀಮಪರಾಕ್ರಮನೂ ಸಿಟ್ಟಿನಿಂದ ಕೆಂಪಾದ ಕಣ್ಣುಳ್ಳವನೂ ಆದ ಭೀಮಸೇನನು ಏನನ್ನೂ ಮಾತನಾಡಲಿಲ್ಲ.
ಜ್ಞಾತ್ವಾ ತು ರುಷಿತಂ ಭೀಮಂ ದ್ರೌಪದೀ ಪುನರಬ್ರವೀತ್ ।
ತ್ವಯ್ಯೇವ ನಿರಯಂ ಪ್ರಾಪ್ತೇ ಭೀಮ ಭೀಮಪರಾಕ್ರಮೇ ॥101॥
ಶೋಕೇ ಯೌಧಿಷ್ಠಿರೇ ಮಗ್ನಾ ನಾಹಂ ಜೀವಿತುಮುತ್ಸಹೇ ॥102॥
ಭೀಮಸೇನನು ರೋಷಗೊಂಡಿರುವುದನ್ನು ತಿಳಿದು ದ್ರೌಪದಿಯು ಪುನಃ ಅವನನ್ನು ಕುರಿತು ಭೀಮಸೇನನೇ, ಭೀಮಪರಾಕ್ರಮವುಳ್ಳವ ನೀನೇ ಇಂತಹ ದುರ್ಗತಿಯನ್ನು ಹೊಂದಿರುವಾಗ ಯುಧಿಷ್ಠಿರನಿಂದ ಉಂಟಾದ ಶೋಕಸಾಗರದಲ್ಲಿ ಮಗ್ನಳಾದ ನಾನು ಬದುಕಲು ಇಚ್ಛಿಸುವುದಿಲ್ಲ ಎಂದು ಹೇಳಿದಳು.
ಯಃ ಸ ದೇವಾನ್ ಮನುಷ್ಯಾಂಶ್ಚ ಸರ್ವಾನೇಕರಥೋಽಜಯತ್ ।
ಸೋಽಯಂ ರಾಜ್ಞೋ ವಿರಾಟಸ್ಯ ಕನ್ಯಾನರ್ತನಕೋ ಯುವಾ ॥103॥
ಯಾವ ಅರ್ಜುನನು ಏಕರಥದಲ್ಲಿ ಕುಳಿತು ಎಲ್ಲಾ ದೇವತೆಗಳನ್ನೂ ಮತ್ತು ಮನುಷ್ಯರನ್ನೂ ಜಯಿಸಿದನೋ ಅಂತಹ ಯುವಕನಾದ ಅವನು ಈ ದಿನ ವಿರಾಟರಾಜನ ಕನ್ಯೆಯರಿಗೆ ನಾಟ್ಯಾಚಾರ್ಯನಾಗಿದ್ದಾನೆ.
ಯೋಽತರ್ಪಯದಮೇಯಾತ್ಮಾ ಖಾಂಡವೇ ಜಾತವೇದಸಮ್ ।
ಸೋಽಂತಃಪುರಗತಃ ಪಾರ್ಥಃ ಕೂಪೇಽಗ್ನಿರಿವ ಸಂವೃತಃ ॥104॥
ಯಾವ ಅಪರಿಮಿತವಾದ ಮಹಿಮೆಯುಳ್ಳವನೂ ಖಾಂಡವವನದಲ್ಲಿ ಅಗ್ನಿದೇವನನ್ನು ಸಂತೋಷಪಡಿಸಿದನೂ ಆದ ಪಾರ್ಥನು ಅಂತಃಪುರದಲ್ಲಿ ಕೂಪದಲ್ಲಿರುವ ಅಗ್ನಿಯಂತೆ ಮುಚ್ಚಲ್ಪಟ್ಟಿದ್ದಾನೆ.
ಯಸ್ಮಾದ್ ಭಯಮಮಿತ್ರಾಣಾಂ ಸದೈವ ಪುರುಷರ್ಷಭಾತ್ ।
ಸ ಲೋಕಪರಿಭೂತೇನ ವೇಷೇಣಾಸ್ತೇ ಧನಂಜಯಃ ॥105॥
ಯಾವ ಪುರುಷಶ್ರೇಷ್ಠನಿಗೆ ಎಲ್ಲ ಶತ್ರುಗಳು ಯಾವಾಗಲೂ ಹೆದರುತ್ತಿದ್ದರೋ ಅಂತಹ ಧನಂಜಯನು ಲೋಕನಿಂದಿತವಾದ ನಪುಂಸಕವೇಷದಲ್ಲಿದ್ದಾನೆ.
ಯಸ್ಯ ಜ್ಯಾಕ್ಷೇಪಕಠಿನೌ ಬಾಹೂ ಪರಿಘಸನ್ನಿಭೌ ।
ಸ ಶಂಖಪರಿಪೂರ್ಣಾಭ್ಯಾಂ ಶೋಚನ್ನಾಸ್ತೇ ಧನಂಜಯಃ ॥106॥
ಯಾವನ ಒನಕೆಯಂತಹ ಬಾಹುಗಳು ಹೆದೆಯ ಘರ್ಷಣದಿಂದ ಕಠಿಣವಾಗಿವೆಯೋ ಅಂತಹ ಧನಂಜಯನು ಬಾಹುಗಳಲ್ಲಿ ಶಂಖದಿಂದ ಮಾಡಿದ ಬಳೆಗಳನ್ನು ಪೂರ್ಣವಾಗಿ ಧರಿಸಿ ದುಃಖಪಡುತ್ತಿದ್ದಾನೆ.
ಯಸ್ಯ ಜ್ಯಾತಳನಿರ್ಘೋಷಾತ್ ಸಮಕಂಪಂತ ಶತ್ರವಃ ।
ಷಂಡರೂಪಂ ವಹಂತಂ ತಂ ನೃತ್ಯಗೀತೈಶ್ಚ ಲಂಬಿನಮ್ ॥107॥
ಕುರ್ವಂತಮರ್ಜುನಂ ದೃಷ್ಟ್ವಾ ನ ಮೇ ಸ್ವಾಸ್ಥ್ಯಂ ಮನೋ ವ್ರಜೇತ್ ।
ಸ್ತ್ರಿಯೋ ಗೀತಸ್ವನಂ ತಸ್ಯ ಮುದಿತಾಃ ಪರ್ಯುಪಾಸತೇ ॥108॥
ಯಾವನ ಹೆದೆಯ ಘೋಷವನ್ನು ಕೇಳಿ ಶತ್ರುಗಳು ನಡುಗುತ್ತಿದ್ದರೋ ಅಂತಹ ಅರ್ಜುನನು ಷಂಡರೂಪವನ್ನು ಧರಿಸಿ ನೃತ್ಯಗೀತಗಳಿಂದ ವಿರಾಟನ ಅರಮನೆಯಲ್ಲಿ ಕುಣಿದಾಡುವುದನ್ನು ನೋಡಿ ನನ್ನ ಮನಸ್ಸಿಗೆ ಸಮಾಧಾನವೇ ಆಗುವುದಿಲ್ಲ. ಸ್ತ್ರೀಯರು ಅವನ ಸಂಗೀತಸ್ವರವನ್ನು ಕೇಳಿ ಸಂತೋಷಗೊಂಡು ಅವನನ್ನು ಸುತ್ತುವರಿಯುತ್ತಾರೆ.
ಕಿರೀಟಂ ಸೂರ್ಯಸಂಕಾಶಂ ಯಸ್ಯ ಮೂರ್ಧನ್ಯಶೋಭತ ।
ವೇಣೀವಿಕೃತಕೇಶಾಂತಃ ಸೋಽಯಮದ್ಯ ಧನಂಜಯಃ ॥109॥
ಯಾವನ ತಲೆಯ ಮೇಲೆ ಸೂರ್ಯನಂತಿರುವ ಕಿರೀಟವು ಶೋಭಿಸುತ್ತಿದ್ದಿತೋ ಅಂತಹ ಧನಂಜಯನು ಈ ದಿನ ವಿಕಾರವಾಗಿ ಕಾಣುವ ಜಡೆಗಳನ್ನು ಹಾಕಿಕೊಂಡಿದ್ದಾನೆ.
ಯಸ್ಮಿನ್ನಸ್ತ್ರಾಣಿ ದಿವ್ಯಾನಿ ಸುಬಹೂನಿ ಮಹಾತ್ಮನಿ ।
ಆಧಾರಃ ಸರ್ವವಿದ್ಯಾನಾಂ ಸ ಧಾರಯತಿ ಕುಂಡಲೇ ॥110॥
ಯಾವ ಮಹಾತ್ಮನಲ್ಲಿ ದಿವ್ಯವಾದ ಎಲ್ಲಾ ಅಸ್ತ್ರಗಳೂ ಮತ್ತು ಎಲ್ಲಾ ವಿದ್ಯೆಗಳೂ ಆಶ್ರಯವನ್ನು ಪಡೆದಿದ್ದವೋ ಅವನು ಓಲೆಗಳನ್ನು ಧರಿಸಿದ್ದಾನೆ.
ಯಂ ವೈ ರಾಜಸಹಸ್ರಾಣಿ ತೇಜಸಾಽಪ್ರತಿಮಂ ಭುವಿ ।
ಸಮರೇ ನಾತಿವರ್ತಂತೇ ವೇಲಾಮಿವ ಮಹೋರ್ಮಯಃ ॥111॥
ಸೋಽಯಂ ರಾಜ್ಞೋ ವಿರಾಟಸ್ಯ ಕನ್ಯಾನರ್ತನಕೋ ಯುವಾ ।
ಆಸ್ತೇ ವೇಷಪ್ರತಿಚ್ಛನ್ನಃ ಕನ್ಯಾನಾಂ ಪರಿಚಾರಕಃ ॥112॥

ತೇಜಸ್ಸಿನಲ್ಲಿ ಅಸದೃಶನಾದ ಯಾವನನ್ನು ಯುದ್ಧದಲ್ಲಿ ಭೂಮಿಯ ಮೇಲಿನ ಸಹಸ್ರರಾಜರು ಅಲೆಗಳು ದಡಗಳನ್ನು ದಾಟದಂತೆ ಮೀರುತ್ತಿರಲಿಲ್ಲವೋ ಅಂತಹ ಯುವಕನಾದ ಅರ್ಜುನನು ವಿರಾಟನ ಕನ್ಯಾನರ್ತಕನಾಗಿ ಕನ್ಯೆಯರ ಪರಿಚಾರಿಕೆಯನ್ನು ಮಾಡಿಕೊಂಡು ವೇಷವನ್ನು ಮರೆಸಿಕೊಂಡಿದ್ದಾನೆ.

ಯಸ್ಯ ಸ್ಮ ರಥಘೋಷೇಣ ಸಮಕಂಪತ ಮೇದಿನೀ |
ಸಪರ್ವತವನಾಕಾಶಾ ಸಹಸ್ಥಾವರಜಂಗಮಾ ॥113॥
ಯಸ್ಮಿನ್ ಜಾತೇ ಮಹೇಷ್ವಾಸೇ ಕುಂತ್ಯಾಃ ಪ್ರೀತಿರವರ್ಧತ |
ಸ ಸಂಶೋಚತಿ ಮಾಮದ್ಯ ಭೀಮಸೇನ ತವಾನುಜಃ ॥114॥

ಯಾವನ ರಥಘೋಷದಿಂದ ಪರ್ವತವನಸಹಿತವಾದ ಸ್ಥಾವರಜಂಗಮ ಸಹಿತವಾದ ಭೂಮಿಯು ನಡುಗುತ್ತಿದ್ದಿತೋ, ಯಾವ ಧನುರ್ಧಾರಿಯು ಜನಿಸಿದಾಗ ಕುಂತಿಗೆ ಬಹಳ ಸಂತೋಷವಾಯಿತೋ ಎಲೈ ಭೀಮಸೇನನೇ, ಅಂತಹ ನಿನ್ನ ತಮ್ಮನಾದ ಅರ್ಜುನನು ನನ್ನನ್ನು ಚಿಂತಿಸಿ ಶೋಕಪಡುತ್ತಿದ್ದಾನೆ.

ವಿಭೂಷಿತಮಲಂಕಾರೈಃ ಕುಂಡಲೈಃ ಪರಿಪಾದುಕೈಃ |
ಕಂಬುಪಾಣಿಮಥಾಯಾಂತಂ ದೃಷ್ಟ್ವಾ ಸೀದತಿ ಮೇ ಮನಃ ॥115॥

ಆಭರಣಗಳಿಂದ ಅಲಂಕೃತನಾಗಿ, ಓಲೆಗಳನ್ನು ಮತ್ತು ಕಿವಿಯ ಬೇರೆಯ ಆಭರಣಗಳನ್ನು ಧರಿಸಿ ಬಾಹುವಿನವರೆಗೂ ಶಂಖದಿಂದ ಮಾಡಿದ ಬಳೆಗಳನ್ನು ಧರಿಸಿ ಬರುವ ಅರ್ಜುನನನ್ನು ನೋಡಿ ನನ್ನ ಮನಸ್ಸು ಮುದುಡಿಹೋಗುತ್ತದೆ.

ವೇಣೀವಿಕೃತಕೇಶಾಂತಂ ಭೀಮಧನ್ವಾನಮರ್ಜುನಮ್ |
ಕನ್ಯಾಪರಿವೃತಂ ದೃಷ್ಟ್ವಾ ಶೋಕಂ ಗಚ್ಛತಿ ಮೇ ಮನಃ ॥116॥

ಭಯಂಕರವಾದ ಧನುಸ್ಸನ್ನು ಹೊಂದಿದ್ದ ಅರ್ಜುನನು ವಿಕಾರವಾದ ಜಡೆಗಳನ್ನು ಹಾಕಿಕೊಂಡು ಕನ್ಯೆಯರಿಂದ ಪರಿವೃತನಾಗಿರುವುದನ್ನು ನೋಡಿ ನನ್ನ ಮನಸ್ಸಿಗೆ ಶೋಕವುಂಟಾಗುತ್ತದೆ.

ಯದಾ ಹ್ಯೇನಂ ಪರಿವೃತಂ ಕನ್ಯಾಭಿರ್ದೇವರೂಪಿಣಮ್ |
ಪ್ರಭಿನ್ನಮಿವ ಮಾತಂಗಂ ಪರಿಕೀರ್ಣಂ ಕರೇಣುಭಿಃ ॥117॥
ಮಾತ್ಸ್ಯಂ ಪಾರ್ಥಿವಂ ಚ ಗಾಯಂತಂ ವಿರಾಟಂ ಸಮುಪಸ್ಥಿತಮ್ |
ಪಶ್ಯಾಮಿ ತೂರ್ಯಮಧ್ಯಸ್ಥಂ ದೃಷ್ಟ್ವಾ ಮುಹ್ಯತಿ ಮೇ ಮನಃ |118॥

ದೇವರೂಪವನ್ನು ಹೊಂದಿದ ಇವನು ಮದಿಸಿದ ಆನೆಯು ಕರೇಣುಗಳಿಂದ (ಚಿಕ್ಕವಯಸ್ಸಿನ ಹೆಣ್ಣಾನೆಗಳಿಂದ) ಸುತ್ತುವರಿಯಲ್ಪಟ್ಟಂತೆ ಕನ್ಯೆಯರಿಂದ ಸುತ್ತುವರಿಯಲ್ಪಟ್ಟು ಮತ್ಸ್ಯಪತಿಯಾದ ವಿರಾಟರಾಜನನ್ನು ಸಮೀಪಿಸಿ ವಾದ್ಯಗಳ ಮಧ್ಯದಲ್ಲಿ ಇದ್ದು ಗಾನವನ್ನು ಮಾಡುವುದನ್ನು ಯಾವಾಗ ನೋಡುತ್ತೇನೆಯೋ ಆಗ ನನ್ನ ಮನಸ್ಸಿಗೆ ಮೂರ್ಛೆಯೇ ಉಂಟಾಗುತ್ತದೆ.

ನೂನಮಾರ್ಯಾ ನ ಜಾನಾತಿ ಕೃಚ್ಛ್ರಂ ಪ್ರಾಪ್ತಂ ಧನಂಜಯಮ್ |
ಅಜಾತಶತ್ರುಂ ರಾಜಾನಂ ಮಗ್ನಂ ದುರ್ದ್ಯೂತದೇವನೇ ॥119॥

ಖಂಡಿತವಾಗಿ ಪೂಜ್ಯಳಾದ ಕುಂತಿಯು ಧನಂಜಯನಿಗೆ ಒದಗಿರುವ ಈ ಕಷ್ಟವನ್ನಾಗಲೀ, ಕೆಟ್ಟದ್ಯೂತದಲ್ಲಿ ಮುಳುಗಿರುವ ಅಜಾತಶತ್ರುವಾದ ಯುಧಿಷ್ಠಿರನನ್ನಾಗಲೀ ತಿಳಿದಿಲ್ಲ.

ಐಂದ್ರವಾರುಣವಾಯವ್ಯಬ್ರಾಹ್ಮಾಗ್ನೇಯೈಶ್ಚ ವೈಷ್ಣವೈಃ |
ಅಗ್ನೀನ್ ಸಂತರ್ಪಯನ್ ಪಾರ್ಥಃ ಸರ್ವಾಂಶ್ಚೈಕರಥೋಽಜಯತ್ ॥
ದಿವ್ಯೈರಸ್ತ್ರೈರಚಿಂತ್ಯಾತ್ಮಾ ಸರ್ವಶತ್ರುನಿಬರ್ಹಣಃ ॥121॥

ಪಾರ್ಥನು ಐಂದ್ರ, ವಾರುಣ, ವಾಯವ್ಯ, ಬ್ರಾಹ್ಮ, ಆಗ್ನೇಯ, ವೈಷ್ಣವಾಸ್ತ್ರಗಳಿಂದ ಏಕರಥದಲ್ಲಿ ಕುಳಿತು ಎಲ್ಲರನ್ನೂ ಜಯಿಸಿ ಅಗ್ನಿಯನ್ನು ಸಂತೋಷಪಡಿಸಿದನು. ಸರ್ವಶತ್ರುಸಂಹಾರಕನಾದ ಅಚಿಂತ್ಯಶಕ್ತಿಯುಳ್ಳ ಅವನು ದಿವ್ಯಾಸ್ತ್ರಗಳಿಂದ ಹೀಗೆ ಮಾಡಿದನು.

ದಿವ್ಯಂ ಗಾಂಧರ್ವಮಸ್ತ್ರಂ ಚ ವಾಯವ್ಯಮಥ ವೈಷ್ಣವಮ್ |
ಬ್ರಾಹ್ಮಂ ಪಾಶುಪತಂ ಚೈವ ಸ್ಥೂಣಾಕರ್ಣಂ ಚ ದರ್ಶಯನ್ ॥122॥
ಪೌಲೋಮಾನ್ ಕಾಲಕೇಯಾಂಶ್ಚ ಇಂದ್ರಶತ್ರೂನ್ ಮಹಾರಥಾನ್ |
ನಿವಾತಕವಚೈಃ ಸಾರ್ಧಂ ಘೋರಾನೇಕರಥೋಽಜಯತ್ ॥123॥
ಸೋಽಂತಃಪುರಗತಃ ಪಾರ್ಥಃ ಕೂಪೇಽಗ್ನಿರಿವ ಸಂವೃತಃ ॥124॥

ದಿವ್ಯವಾದ ಗಾಂಧರ್ವಾಸ್ತ್ರವನ್ನೂ, ವಾಯವ್ಯಾಸ್ತ್ರವನ್ನೂ, ವೈಷ್ಣವಾಸ್ತ್ರವನ್ನೂ, ಬ್ರಹ್ಮಾಸ್ತ್ರವನ್ನೂ, ಪಾಶುಪತಾಸ್ತ್ರವನ್ನೂ, ಸ್ಥೂಣಾಕರ್ಣಾಸ್ತ್ರವನ್ನೂ ಪ್ರದರ್ಶಿಸುತ್ತಾ ಇಂದ್ರಶತ್ರುಗಳೂ, ಮಹಾರಥರೂ ಆದ ಅನೇಕ ಪೋಲೋಮರನ್ನೂ ನಿವಾತಕವಚರಿಂದ ಸಹಿತರಾದ ಕಾಲಕೇಯರನ್ನೂ ಏಕರಥದಲ್ಲಿ ಕುಳಿತು ಜಯಿಸಿದನು. ಅಂತಹ ಅರ್ಜುನನು ಕೂಪದಲ್ಲಿ ಇರುವ ಅಗ್ನಿಯಂತೆ ಈ ದಿನ ಮುಚ್ಚಲ್ಪಟ್ಟಿದ್ದಾನೆ.

ಕನ್ಯಾಪುರಗತಂ ದೃಷ್ಟ್ವಾ ಗೋಷ್ಠೇಷ್ವಿವ ಮಹರ್ಷಭಮ್ |
ಸ್ತ್ರೀವೇಷವಿಕೃತಂ ಪಾರ್ಥಂ ಕುಂತೀಂ ಗಚ್ಛತಿ ಮೇ ಮನಃ ॥125॥

ಗೋಷ್ಠದಲ್ಲಿರುವ ದೊಡ್ಡ ವೃಷಭದಂತೆ ಕನ್ಯೆಯರ ಅಂತಃಪುರದಲ್ಲಿ ವಿಕಾರವಾದ ಸ್ತ್ರೀವೇಷವನ್ನು ಧರಿಸಿ ಇರುವ ಅರ್ಜುನನನ್ನು ನೋಡಿ ನನ್ನ ಮನಸ್ಸು ಕುಂತಿಯನ್ನು ಸ್ಮರಿಸುತ್ತದೆ.

ಯಃ ಸ್ತ್ರೀಭಿರ್ನಿತ್ಯಸಂಪನ್ನೋ ರೂಪೇಣಾಸ್ತ್ರೇಣ ಮೇಧಯಾ |
ಸೋಽಶ್ವಬಂಧೋ ವಿರಾಟಸ್ಯ ಪಶ್ಯ ಕಾಲಸ್ಯ ಪರ್ಯಯಮ್ ॥126॥

ಯಾವ ನಕುಲನು ತನ್ನ ರೂಪದಿಂದಲೂ, ತನ್ನ ಅಸ್ತ್ರಬಲದಿಂದಲೂ ಮತ್ತು ಮೇಧಾಶಕ್ತಿಯಿಂದಲೂ ಯಾವಾಗಲೂ ಸ್ತ್ರೀಯರಿಂದ

ಸುತ್ತುವರಿಯಲ್ಪಟ್ಟಿರುತ್ತಾನೆಯೋ ಅಂತಹ ಅವನು ವಿರಾಟನ ಅಶ್ವಬಂಧನಾಗಿದ್ದಾನೆ. ಕಾಲದ ವಿಪರ್ಯಯವನ್ನು ನೋಡು.
ರಾಜಕನ್ಯಾಶ್ಚ ವೇಶ್ಯಾಶ್ಚ ವಿಶಾಂ ದುಹಿತರಃ ಸ್ತ್ರಿಯಃ |
ಸರ್ವಾಃ ಸಾರಯುತಾ ನಾರ್ಯೋ ದಾಮಗ್ರಂಥಿವಶಂ ಗತಾಃ ॥127॥
ರಾಜಕನ್ಯೆಯರೂ, ವೇಶ್ಯೆಯರೂ, ವೈಶ್ಯಕುಮಾರಿಯರೂ, ಉಳಿದ ಎಲ್ಲಾ ಸುಂದರಿಯಾದ ಸ್ತ್ರೀಯರೂ ಸಹ ದಾಮಗ್ರಂಥಿಯಾದ ಅವನ ವಶವಾಗಿದ್ದಾರೆ.
ಪ್ರೇಷ್ಯಕರ್ಮಣಿ ತಂ ದೃಷ್ಟ್ವಾ ಶೋಚಾಮಿ ವಿಲಪಾಮಿ ಚ ॥128॥
ವಿರಾಟಮುಪತಿಷ್ಠಂತಂ ದರ್ಶಯಂತಂ ಚ ವಾಜಿನಃ |
ಅಭ್ಯಕೀರ್ಯಂತ ವೃಂದಾನಿ ದಾಮಗ್ರಂಥಿಮುದೀಕ್ಷಿತುಮ್ ॥129॥
ವಿನಯಂತಂ ಜವೇನಾಶ್ವಾನ್ ಮಾತ್ಸ್ಯರಾಜಸ್ಯ ಪಶ್ಯತಃ ॥130॥
ಸೇವಾಕರ್ಮದಲ್ಲಿ ನಿರತನಾದ ಅವನನ್ನು ನೋಡಿ ನಾನು ದುಃಖಪಟ್ಟು ಗೋಳಾಡುತ್ತೇನೆ. ವಿರಾಟನ ಸಮೀಪದಲ್ಲಿ ನಿಂತು ಅವನ ಕಣ್ಣೆದುರಿಗೇ ಕುದುರೆಗಳನ್ನು ಪಳಗಿಸುವ ಮತ್ತು ಅಂತಹ ಕುದುರೆಗಳನ್ನು ತೋರಿಸುವ ಆ ದಾಮಗ್ರಂಥಿಯನ್ನು ನೋಡಲು ಸ್ತ್ರೀಯರ ವೃಂದವೇ ಅವನ ಸುತ್ತಲೂ ನೆರೆಯಿತು.
ಕಿಂ ನು ಮಾಂ ಮನ್ಯಸೇ ಪಾರ್ಥ ಸುಖಿತೇತಿ ಪರಂತಪ |
ತಥಾ ದೃಷ್ಟ್ವಾ ಯವೀಯಾಂಸಂ ಸಹದೇವಂ ಯುಧಾಂಪತಿಮ್ ॥
ಪರಂತಪನೇ, ಅಂತಹ ನಿನ್ನ ತಮ್ಮನಾದ ಯುದ್ಧನಾಯಕನಾದ ಸಹದೇವನನ್ನು ನೋಡಿ ನಾನು ಸುಖವಾಗಿದ್ದೇನೆಂದು ತಿಳಿದೆಯಾ?
ತಂ ದೃಷ್ಟ್ವಾ ಗೋಷು ಗೋಸಂಖ್ಯಂ ವತ್ಸಚರ್ಮಕ್ಷಿತೀಶಯಮ್ |
ದುಃಖಶೋಕಪರೀತಾಂಗೀ ಪಾಂಡುಭೂತಾಽಸ್ಮಿ ಪಾಂಡವ ॥132॥
ಅವನು (ಸಹದೇವನು) ಕರುಗಳ ಚರ್ಮವನ್ನು ಹಾಸಿ ನೆಲದ ಮೇಲೆ ಮಲಗಿ ವಿರಾಟನ ಗೋರಕ್ಷಕನಾಗಿರುವುದನ್ನು ನೋಡಿ ಎಲೈ ಪಾಂಡವನೇ, ನಾನು ದುಃಖಶೋಕಗಳಿಂದ ಕೂಡಿದವಳಾಗಿ ಬಿಳುಚಿಕೊಂಡು ಹೋಗಿದ್ದೇನೆ.
ಸಹದೇವಸ್ಯ ವೃತ್ತಾನಿ ಚಿಂತಯಂತೀ ಪುನಃ ಪುನಃ |
ನ ನಿದ್ರಾಮಧಿಗಚ್ಛಾಮಿ ಭೀಮಸೇನ ಕುತೋ ರತಿಮ್ ॥133॥
ನ ಪಶ್ಯಾಮಿ ಮಹಾಬಾಹೋ ಸಹದೇವಸ್ಯ ದುಷ್ಕೃತಮ್ ॥134॥
ಯಸ್ಮಿನ್ನೇವಂವಿಧಂ ಕ್ಲೇಶಂ ಪ್ರಾಪ್ನುಯಾತ್ ಸತ್ಯವಿಕ್ರಮಃ |
ದೂಯಾಮಿ ಭರತಶ್ರೇಷ್ಠ ದೃಷ್ಟ್ವಾ ತೇ ಭ್ರಾತರಂ ಪ್ರಿಯಮ್ ॥135॥
ಭೀಮಸೇನನನೇ, ಸಹದೇವನ ನಡತೆಯನ್ನು ನೋಡಿ ಪುನಃ ಪುನಃ ಅದನ್ನು ಚಿಂತಿಸುತ್ತಾ ನನಗೆ ನಿದ್ರೆಯೇ ಬರುತ್ತಿಲ್ಲ. ಇನ್ನು ಸುಖವು ಎಲ್ಲಿಂದ ಬರಬೇಕು? ಮಹಾಬಾಹುವೇ, ಸತ್ಯವಿಕ್ರಮನಾದ ಸಹದೇವನಲ್ಲಿ ಇಂತಹ ಕ್ಲೇಶವುಂಟಾಗುವ ಯಾವ ದೋಷವನ್ನೂ ನಾನು ಕಾಣುವುದಿಲ್ಲ. ಭರತಶ್ರೇಷ್ಠನೇ, ನಿನ್ನ ಪ್ರಿಯನಾದ ತಮ್ಮನನ್ನು ನೋಡಿ ನಾನು ದುಃಖಪಡುತ್ತೇನೆ.
ಗೋಷು ಗೋವೃಷಸಂಕಾಶಂ ಮಾತ್ಸ್ಯೇನಾಭಿಸಮೀಕ್ಷಿತಮ್ |
ಸಂರಬ್ಧತರರಕ್ತಾಕ್ಷಂ ಗೋಪಾಲಾನಾಂ ಪುರೋಗಮಮ್ ॥136॥
ವಿರಾಟಮಭಿನಂದಂತಮಥ ಮೇ ಭವತಿ ಜ್ವರಃ ॥137॥
ಗೋವುಗಳ ಮಧ್ಯದಲ್ಲಿ ವೃಷಭದಂತಿರುವ, ಗೋಪಾಲಕರಿಗೆ ನಾಯಕನಾದ ಕೆಂಪಾದ ಕಣ್ಣುಳ್ಳ, ವಿರಾಟರಾಜನ ಕಣ್ಣೆದುರಿಗೆ ಅವನನ್ನು ಅಭಿನಂದಿಸುವ, ಸಹದೇವನನ್ನು ನೋಡಿ ನನಗೆ ಜ್ವರವುಂಟಾಗುತ್ತದೆ.
ಸಹದೇವಂ ಹಿ ಮೇ ನಿತ್ಯಂ ವೀರಮಾರ್ಯಾ ಪ್ರಶಂಸತಿ |
ಮಹಾಭಿಜನಸಂಪನ್ನೋ ನೀತಿಮಾನ್ ಶೀಲವಾನಪಿ ॥138॥
ಹ್ರೀನಿಷೇಧೋ ಹ್ಯನವಮೋ ಧಾರ್ಮಿಕಶ್ಚ ಪ್ರಿಯಶ್ಚ ಮೇ |
ಸ ತೇಽರಣ್ಯೇಷು ವೋಢವ್ಯಃ ಪಾಂಚಾಲಿ ರಜನೀಷ್ವಪಿ ॥139॥
ಸುಕುಮಾರಶ್ಚ ಶೂರಶ್ಚ ರಾಜಾನಂ ಚಾಪ್ಯನುವ್ರತಃ |
ಜ್ಯೇಷ್ಠಾಪಚಾಯಿನಂ ವೀರಂ ಸ್ವಯಂ ಪಾಂಚಾಲಿ ಭಾಜಯೇಃ ॥
ಇತ್ಯುವಾಚ ಹಿ ಮಾಂ ಕುಂತೀ ರುದತೀ ಪುತ್ರಗೃದ್ಧಿನೀ |
ಪ್ರವ್ರಜಂತಂ ಮಹಾರಣ್ಯಂ ತಂ ಪರಿಷ್ವಜ್ಯ ತಿಷ್ಠತೀ ॥141॥
ಸಹದೇವನ ವಿಷಯದಲ್ಲಿ ವೀರಮಾತೆಯಾದ ಕುಂತಿಯು ಯಾವಾಗಲೂ ಪ್ರಶಂಸೆಯ ಮಾತುಗಳನ್ನೇ ಆಡುತ್ತಿದ್ದಳು. ಅವನು ಒಳ್ಳೆಯ ಜನ್ಮವನ್ನು ಪಡೆದವನು, ನೀತಿವಂತ, ಶೀಲವಂತನು, ದಾಕ್ಷಿಣ್ಯಸ್ವಭಾವದವನು, ಶ್ರೇಷ್ಠನಾದವನು, ಧಾರ್ಮಿಕನಾದವನು ಮತ್ತು ನನಗೆ ಪ್ರಿಯನಾದವನು. ಪಾಂಚಾಲಿಯೇ, ಅರಣ್ಯದಲ್ಲಿ ರಾತ್ರಿಯ ಕಾಲಗಳಲ್ಲಿ ನೀನು ಅವನನ್ನು ನೋಡಿಕೊಳ್ಳಬೇಕು. ಅವನು ಸುಕುಮಾರನೂ, ಶೂರನೂ, ಯಾವಾಗಲೂ ಧರ್ಮರಾಜನನ್ನು ಅನುಸರಿಸಿದವನೂ ಆಗಿದ್ದಾನೆ. ಪಾಂಚಾಲಿಯೇ, ನೀನು ಸ್ವತಃ ಅವನನ್ನು ಧರ್ಮರಾಜನಿಗೆ ಒಪ್ಪಿಸಬೇಕು. ಹೀಗೆ ಹೇಳುತ್ತಾ ನಾವು ಅರಣ್ಯಕ್ಕೆ ಹೊರಟಾಗ ಪುತ್ರವತ್ಸಲೆಯಾದ ಕುಂತಿಯು ಅಳುತ್ತಾ ಅವನನ್ನು ಆಲಂಗಿಸಿ ನಿಂತು (ಹೇಳಿದಳು).
ತಂ ದೃಷ್ಟ್ವಾ ಗೋಷು ಗೋಪಾಲವೇಶಮಾಸ್ಥಾಯ ಧಿಷ್ಠಿತಮ್ |
ಸಹದೇವಂ ಯುಧಾಂ ಶ್ರೇಷ್ಠಂ ಕಿಂ ನು ಜೀವಾಮಿ ಪಾಂಡವ ॥142॥
ಏವಂ ದುಃಖಶತಾವಿಷ್ಟಾ ಯುಧಿಷ್ಠಿರನಿಮಿತ್ತತಃ ॥143॥
ಪಾಂಡವನೇ, ಅಂತಹ ಯೋಧರಲ್ಲಿ ಶ್ರೇಷ್ಠನಾದ ಸಹದೇವನು ಗೋಪಾಲವೇಷವನ್ನು ಧರಿಸಿ ನಿಂತಿರುವುದನ್ನು ನೋಡಿ ನಾನು

ಏತಕ್ಕೆ ಬದುಕಿದ್ದೇನೆ? ಹೀಗೆ ಯುಧಿಷ್ಠಿರನ ನಿಮಿತ್ತವಾಗಿ ನೂರಾರು ದುಃಖಗಳಿಗೆ ಒಳಗಾಗಿದ್ದೇನೆ.
ಪುನಃ ಪ್ರತಿಪ್ರಶಿಷ್ಟಾನಿ ದುಃಖಾನಿ ಶೃಣು ಭಾರತ |
ವರ್ತಂತೇ ಮಯಿ ಕೌಂತೇಯ ವಕ್ಷ್ಯಾಮ್ಯನ್ಯಾನಿ ತಾನಿ ತೇ ॥144॥
ಭಾರತನೇ, ಇನ್ನೂ ಉಳಿದಿರುವ ದುಃಖಗಳನ್ನು ಹೇಳುತ್ತೇನೆ, ಕೇಳು. ಕೌಂತೇಯನೇ, ನನ್ನಲ್ಲಿ ಇನ್ನೂ ಅನೇಕ ದುಃಖಗಳಿವೆ, ಅವುಗಳನ್ನು ನಿನಗೆ ಹೇಳುತ್ತೇನೆ, ಕೇಳು.
ಯುಷ್ಮಾಸು ಧ್ರಿಯಮಾಣೇಷು ದುಃಖಾನಿ ವಿವಿಧಾನ್ಯುತ |
ಶೋಷಯಂತಿ ಶರೀರಂ ಮೇ ಕಿಂ ನು ದುಃಖತರಂ ತತಃ ॥145॥
ನೀವೆಲ್ಲರೂ ಬದುಕಿರುವಾಗ ಈ ಅನೇಕ ದುಃಖಗಳು ನನ್ನ ಶರೀರವನ್ನು ಹಿಂಡುತ್ತಿವೆ. ನನಗೆ ಇದಕ್ಕಿಂತ ದುಃಖಕರವಾದುದು ಯಾವುದು?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಾವಿಂಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಇಪ್ಪತ್ತಮೂರನೆಯ ಅಧ್ಯಾಯ
ದ್ರೌಪದಿಯಿಂದ ತನ್ನ ಹಿಂದಿನ ವೈಭವವನ್ನು ನೆನೆದು ಶೋಕಪೂರ್ವಕವಾಗಿ ಭೀಮನ ಬಳಿಯಲ್ಲಿ ಕೀಚಕನನ್ನು ಕೊಲ್ಲುವಂತೆ ಒತ್ತಾಯ
ದ್ರೌಪದೀ
ಅಹಂ ಸೈರಂಧ್ರಿವೇಷೇಣ ವಸಂತೀ ರಾಜವೇಶ್ಮನಿ |
ವಶಗಾಽಸ್ಮಿ ಸುದೇಷ್ಣಾಯಾ ಹ್ಯಕ್ಷಧೂರ್ತಸ್ಯ ಕಾರಣಾತ್ ॥1॥
ದ್ರೌಪದೀ ನಾನು ಅಕ್ಷಕ್ರೀಡೆಯಲ್ಲಿ ನಿರತನಾದ ಯುಧಿಷ್ಠಿರನ ನಿಮಿತ್ತದಿಂದ ಸುದೇಷ್ಣೆಗೆ ವಶಳಾಗಿ ಅವಳ ಅರಮನೆಯಲ್ಲಿ ಸೈರಂಧ್ರಿಯ ವೇಷದಿಂದ ವಾಸಿಸುತ್ತಿದ್ದೇನೆ.
ವಿಕ್ರಿಯಾಂ ಪಶ್ಯ ಮೇ ತೀವ್ರಾಂ ರಾಜಪುತ್ರ್ಯಾಃ ಪರಂತಪ |
ಆಸೇ ಕಾಲಂ ಪರೀಕ್ಷಂತೀ ಸರ್ವದುಃಖಸಹಾ ಪುನಃ ॥2॥
ಪರಂತಪನೇ, ರಾಜಕುಮಾರಿಯಾದ ನನ್ನ ಶರೀರದಲ್ಲಿ ಉಂಟಾಗಿರುವ ತೀವ್ರವಾದ ವಿಕಾರವನ್ನು ನೋಡು. ನಾನು ಎಲ್ಲ ದುಃಖಗಳನ್ನೂ ತಡೆದುಕೊಂಡು ಪುನಃ ಒಳ್ಳೆಯ ಕಾಲವನ್ನು ನಿರೀಕ್ಷಿಸುತ್ತಾ ಇದ್ದೇನೆ.
ಅನಿತ್ಯಾಃ ಕಿಲ ಮರ್ತ್ಯಾನಾಮರ್ಥಾಶ್ಚ ವ್ಯಸನಾನಿ ಚ |
ಚಕ್ರವತ್ ಪರಿವರ್ತಂತೇ ಹ್ಯರ್ಥಾಶ್ಚ ವ್ಯಸನಾನಿ ಚ ॥3॥
ಇತಿ ಮತ್ವಾ ಪ್ರತೀಕ್ಷಾಮಿ ಭರ್ತೄಣಾಮುದಯಂ ಪುನಃ ॥4॥
ಮನುಷ್ಯರ ಸುಖ-ದುಃಖಗಳು ಅನಿತ್ಯವಾದವುಗಳು. ಅವು ಚಕ್ರದಂತೆ ತಿರುಗುತ್ತಿರುತ್ತವೆ ಎಂದು ತಿಳಿದು ಪುನಃ ಪತಿಗಳ ಭಾಗ್ಯೋದಯವನ್ನು ನಿರೀಕ್ಷಿಸುತ್ತಿದ್ದೇನೆ.
ಯ ಏವ ಹೇತುರ್ಭವತಿ ಪುರುಷಸ್ಯ ಜಯಾವಹಃ |
ಪರಾಜಯೇ ಚ ಹೇತುಃ ಸ ಇತಿ ಚ ಪ್ರತಿಪಾಲಯೇ ॥5॥
ಮನುಷ್ಯನಿಗೆ ಯಾವುದು ಜಯಕ್ಕೆ ಕಾರಣವಾಗುತ್ತದೆಯೋ ಅದೇ ಪರಾಜಯಕ್ಕೂ ಕಾರಣವಾಗುತ್ತದೆ ಎಂದು ತಿಳಿದು ಕಾಲವನ್ನು ನಿರೀಕ್ಷಿಸುತ್ತಿದ್ದೇನೆ.
ದತ್ವಾ ಯಾಚಂತಿ ಪುರುಷಾ ಹತ್ವಾ ವಧ್ಯಂತಿ ಚಾಪರೇ |
ಮಾನಯಿತ್ವಾ ನ ಮಾನ್ಯಂತೇ ಪರೈರಿತಿ ಚ ಮೇ ಶ್ರುತಮ್ ॥6॥
ಮನುಷ್ಯರು ದಾನವನ್ನು ಕೊಟ್ಟು ಯಾಚನೆ ಮಾಡುತ್ತಾರೆ. ಇನ್ನು ಕೆಲವರು ಶತ್ರುಗಳನ್ನು ಕೊಂದು ತಾವು ಕೊಲ್ಲಲ್ಪಡುತ್ತಾರೆ. ಇನ್ನೊಬ್ಬರಿಗೆ ಮರ್ಯಾದೆಯನ್ನು ಕೊಟ್ಟು ತಾವು ಅಪಮಾನಕ್ಕೆ ಒಳಗಾಗುತ್ತಾರೆ ಎಂದು ನಾನು ಕೇಳಿದ್ದೇನೆ.
ನ ದೈವಸ್ಯಾತಿಭಾರೋಽಸ್ತಿ ನ ದೈವಸ್ಯಾತಿವರ್ತನಮ್ |
ಇತಿ ಮತ್ವಾಽಽಗಮಂ ಭೂಯೋ ದೈವಸ್ಯ ಪ್ರತಿಪಾಲಯೇತ್ ॥7॥
ದೈವಕ್ಕೆ ಯಾವುದೂ ಅಸಾಧ್ಯವಲ್ಲ, ಯಾವುದೂ ಅತಿಯಾದುದೂ ಅಲ್ಲ ಎಂದು ತಿಳಿದು ದೈವದ ಆಗಮನವನ್ನು (ಅನುಕೂಲವಾದ ಅದೃಷ್ಟದ ಆಗಮನವನ್ನು) ನಿರೀಕ್ಷಿಸಬೇಕು.
ಸ್ಥಿತಂ ಪೂರ್ವಂ ಜಲಂ ಯತ್ರ ಪುನಸ್ತತ್ರೈವ ತಿಷ್ಠತಿ |
ಇತಿ ಪರ್ಯಾಯಮಿಚ್ಛಾಮಿ ಪ್ರತೀಚ್ಛಾಮ್ಯುದಯಂ ಪುನಃ ॥8॥
ಮೊದಲು ಯಾವ ಜಲಾಶಯದಲ್ಲಿ ನೀರಿದ್ದಿತೋ ಮುಂದಿನ ವರ್ಷಾಕಾಲದಲ್ಲಿಯೂ ಅಲ್ಲಿಯೇ ನೀರು ಬಂದು ಸೇರುತ್ತದೆ ಎಂದು ತಿಳಿದು ಪತಿಗಳ ಅಭ್ಯುದಯವನ್ನು ನಿರೀಕ್ಷಿಸುತ್ತಿದ್ದೇನೆ.
ದೈವೇನ ಕಿಲ ಯಸ್ಯಾರ್ಥಃ ಸುನೀತೋಽಪಿ ವಿಪದ್ಯತೇ |
ದೈವಸ್ಯೈವಾಗಮೇ ಯತ್ನಃ ತೇನ ಕಾರ್ಯೋ ವಿಜಾನತಾ ॥9॥
ಯಾವನ ಅರ್ಥವು ಒಳ್ಳೆಯ ಪ್ರಯತ್ನವನ್ನು ಮಾಡಿದ್ದರೂ ಸಹ ದೈವದ ವಿಕೋಪದಿಂದ ನಷ್ಟವಾಗುತ್ತದೆಯೋ ಅಂತಹ

ವಿವೇಕಿಯಾದವನು ದೈವದ ಅನುಕೂಲತೆಯನ್ನು ಸಂಪಾದಿಸುವುದಕ್ಕೇ ಪ್ರಯತ್ನವನ್ನು ಮಾಡಬೇಕು.
ಕಿಂ ನು ಮೇ ವಚನಸ್ಯಾದ್ಯ ಕಥಿತಸ್ಯ ಪ್ರಯೋಜನಮ್ |
ಪೃಚ್ಛ ಮಾಂ ದುಃಖಿತಾಮೇನಾಂ ಪೃಷ್ಟಾ ಚಾತ್ರ ಬ್ರವೀಮಿ ತೇ ॥10॥
ಈ ದಿನ ನಾನು ಮಾತನಾಡಿ ಏನು ಪ್ರಯೋಜನ? ಆದರೂ ದುಃಖಿತಳಾದ ನನ್ನನ್ನು ಕೇಳು. ನೀನು ಕೇಳಿದ ಮೇಲೆ ಎಲ್ಲ ವಿಷಯವನ್ನೂ ನಾನು ನಿನಗೆ ಹೇಳುತ್ತೇನೆ.
ಮಹಿಷೀ ಪಾಂಡುಪುತ್ರಾಣಾಂ ದುಹಿತಾ ದ್ರುಪದಸ್ಯ ಚ |
ಇಮಾಮವಸ್ಥಾಂ ಸಂಪ್ರಾಪ್ತಾ ಕಾ ಮದನ್ಯಾ ಜಿಜೀವಿಷೇತ್ ॥11॥
ಪಾಂಡವರ ಪಟ್ಟದರಾಣಿಯಾಗಿ, ದ್ರುಪದರಾಜನ ಮಗಳಾಗಿ ನಾನು ಇಂತಹ ದುರವಸ್ಥೆಯನ್ನು ಹೊಂದಿದ್ದೇನೆ. ಇಂತಹ ಪರಿಸ್ಥಿತಿಯಲ್ಲಿ ನನ್ನನ್ನು ಬಿಟ್ಟು ಬೇರೆ ಯಾರು ಬದುಕಿರಲು ಇಷ್ಟಪಡುವರು?
ಕುರೂನ್ ಪರಿಭವೇತ್ ಸರ್ವಾನ್ ಪಾಂಚಾಲಾನಪಿ ಭಾರತ |
ಪಾಂಡವೇಯಾಂಶ್ಚ ಸಂಪ್ರಾಪ್ತೋ ಮಮ ಕ್ಲೇಶೋ ಹ್ಯರಿಂದಮ ॥12॥
ಎಲೈ ಅರಿಂದಮನೇ, ಭಾರತನೇ, ನನಗೆ ಒದಗಿಬಂದ ಈ ಕ್ಲೇಶವು ಎಲ್ಲ ಕುರುಗಳನ್ನೂ, ಪಾಂಚಾಲರನ್ನೂ ಮತ್ತು ಪಾಂಡವರನ್ನೂ ಅವಮಾನಕ್ಕೆ ಈಡುಮಾಡಿಕೊಡುತ್ತದೆ.
ಭ್ರಾತೃಭಿಃ ಶ್ವಶುರೈಃ ಪುತ್ರೈಃ ಬಹುಭಿಃ ಪರವೀರಹನ್ |
ಏವಂ ಸಮುದಿತಾ ನಾರೀ ಕಾ ತ್ವೇವಂ ದುಃಖಭಾಗಿನೀ ॥13॥
ಶತ್ರುವೀರರನ್ನು ಕೊಲ್ಲುವವನೇ, ಸಹೋದರರಿಂದ, ಮಾವಂದಿರಿಂದ, ಅನೇಕ ಮಕ್ಕಳಿಂದ ಕೂಡಿದ ಯಾವ ವನಿತೆಯು ಹೀಗೆ ದುಃಖವನ್ನು ಅನುಭವಿಸುತ್ತಾಳೆ?
ನೂನಂ ಬಾಲತಯಾ ಧಾತುರ್ಮಯಾ ವೈ ವಿಪ್ರಿಯಂ ಕೃತಮ್ |
ಯಸ್ಯ ಪ್ರಭಾವಾದ್ ದುರ್ನೀತಂ ಪ್ರಾಪ್ತಾಽಸ್ಮಿ ಭರತರ್ಷಭ ॥14॥
ನಿಶ್ಚಿತವಾಗಿ ನಾನು ಬಾಲ್ಯದಲ್ಲಿ ವಿಧಿಗೆ ಬಹಳ ಅಪ್ರಿಯವನ್ನು ಮಾಡಿದ್ದೇನೆ. ಎಲೈ ಭರತರ್ಷಭನೇ, ಆ ಕಾರಣದಿಂದಾಗಿ ಈಗ ಈ ದುರವಸ್ಥೆಯನ್ನು ಹೊಂದಿದ್ದೇನೆ.
ವರ್ಣ(ರ್ಣಂ)ವಿಕಾರಮಪಿ ಮೇ ಪಶ್ಯ ಪಾಂಡವ ಪಾಂಡರಮ್ |
ಈದೃಶೋ ಮೇ ನ ತತ್ರಾಸೀದ್ ದುಃಖೇ ಪರಿಮಿತೇ ಪುರಾ ॥15॥
ಪಾಂಡವನೇ, ನನ್ನ ಬಣ್ಣವು ವಿಕಾರವನ್ನು ಹೊಂದಿ ಬಿಳುಚಿಕೊಂಡಿರುವುದನ್ನು ನೋಡು. ಹಿಂದೆ ಯಾವ ದೊಡ್ಡ ದುಃಖದಲ್ಲಿಯೂ ನನಗೆ ಹೀಗೆ ಆಗಿರಲಿಲ್ಲ.
ತ್ವಮೇವ ಭೀಮ ಜಾನೀಷೇ ಹ್ಯನುಭೂತಂ ಸುಖಂ ಪುರಾ |
ಸಾಽಹಂ ದಾಸೀತ್ವಮಾಪನ್ನಾ ನ ಶಾಂತಿಂ ಮನಸಾ ಲಭೇ ॥16॥
ಭೀಮಸೇನನೇ, ನಾನು ಹಿಂದೆ ಎಂತಹ ಸುಖವನ್ನು ಅನುಭವಿಸುತ್ತಿದ್ದೆನೆಂದು ನೀನೇ ತಿಳಿದಿದ್ದೀಯೆ. ಅಂತಹ ನಾನು ಈಗ ದಾಸಿಯಾಗಿ ಮನಸ್ಸಿನಲ್ಲಿ ಶಾಂತಿಯನ್ನೇ ಹೊಂದುತ್ತಿಲ್ಲ.
ನ ದೈವಿಕಮಿದಂ ಮನ್ಯೇ ಯತ್ರ ಪಾರ್ಥೋ ಧನಂಜಯಃ |
ಭೀಮಧನ್ವಾ ಮಹಾರಂಗೇ ಚಾಸ್ತೇ ಶಾಂತ ಇವಾನಲಃ ॥17॥
ಭಯಂಕರ ಧನುಸ್ಸುಳ್ಳವನೂ, ಕುಂತಿಯ ಸುತನೂ ಆದ ಧನಂಜಯನು ಮಹಾರಂಗಭೂಮಿಯಲ್ಲಿ ಶಾಂತವಾದ ಅಗ್ನಿಯಂತೆ ಇರುವಾಗ ಒದಗಿಬಂದ ಈ ಕ್ಲೇಶವು ಕೇವಲ ದೈವಿಕವಲ್ಲ (ಆದರೆ ದ್ಯೂತವ್ಯಸನಿಯಾದ ಯುಧಿಷ್ಠಿರನ ದೋಷದಿಂದ ಉಂಟಾದುದಾಗಿದೆ).
ಅಶಕ್ಯಾ ವೇದಿತುಂ ಪಾರ್ಥ ಪ್ರಾಣಿನಾಂ ವೈ ಗತಿರ್ನರೈಃ |
ವಿನಿಪಾತಮಿಮಂ ಪಶ್ಯ ಯುಷ್ಮಾಕಮವಿಚಿಂತಿತಮ್ ॥18॥
ಪಾರ್ಥನೇ, ಜೀವರಿಗೆ ಒದಗಿಬರುವ ಗತಿಯನ್ನು ಮನುಷ್ಯರು ತಿಳಿಯಲು ಸಾಧ್ಯವಿಲ್ಲ. ನಿಮಗೆ ಅತರ್ಕಿತವಾಗಿ ಒದಗಿಬಂದ ಈ ವಿನಿಪಾತವನ್ನು ನೋಡು.
ಯಸ್ಯಾ ಮಮ ಮುಖಪ್ರೇಕ್ಷಾ ಯೂಯಮಿಂದ್ರಸಮಾಃ ಸದಾ |
ಸಾ ಪ್ರೇಕ್ಷೇ ಮುಖಮನ್ಯಾಸಾಮವರಣಾನಾಂ ವರಾ ಸತೀ ॥19॥
ಇಂದ್ರನಿಗೆ ಸಮಾನರಾದ ನೀವು ಯಾವಾಗಲೂ ನನ್ನ ಮುಖವನ್ನು ನೋಡಿ ಸುಖಿಸುತ್ತಿದ್ದಿರೋ ಅಂತಹ ನಾನು ಶ್ರೇಷ್ಠಳಾಗಿದ್ದರೂ ಸಹ ನನಗಿಂತ ಅಧಮರಾದ ಮುಖವನ್ನು ನೋಡಿಕೊಂಡು ಕಾಲಕಳೆಯುತ್ತಿದ್ದೇನೆ.
ಪಶ್ಯ ಪಾಂಡವ ಮೇಽವಸ್ಥಾಂ ಯಥಾ ನಾರ್ಹಾಮಿ ವೈ ತಥಾ |
ಯುಷ್ಮಾಸು ಧ್ರಿಯಮಾಣೇಷು ಪಾಂಚಾಲೇಷು ಚ ಮಾನದ ॥20॥
ಪಾಂಡವನೇ, ಮಾನದನೇ, ನೀವೂ ಮತ್ತು ಪಾಂಚಾಲರೂ ಬದುಕಿರುವಾಗ ನನಗೆ ಯೋಗ್ಯವಲ್ಲದ ಇಂತಹ ದುರವಸ್ಥೆಯನ್ನು ನಾನು ಹೊಂದಿರುವುದನ್ನು ನೋಡು.
ಯಸ್ಯಾಃ ಸಾಗರಪರ್ಯಂತಾ ಪೃಥಿವೀ ವಶವರ್ತಿನೀ |
ಆಸೀತ್ ಸಾಽದ್ಯ ಸುದೇಷ್ಣಾಯಾಃ ಭೀತಾಽಹಂ ವಶವರ್ತಿನೀ ॥21॥
ಯಾವ ನನಗೆ ಸಾಗರಪರ್ಯಂತವಾದ ಭೂಮಿಯು ವಶವರ್ತಿಯಾಗಿದ್ದಿತೋ ಅಂತಹ ನಾನು ಈ ದಿನ ಸುದೇಷ್ಣೆಗೆ ಹೆದರಿ ಅವಳ ವಶವರ್ತಿಯಾಗಿದ್ದೇನೆ.

ಯಸ್ಯಾಃ ಪುರಸ್ಸರಾ ಆಸನ್ ಪೃಷ್ಠತಶ್ಚಾನುಗಾಮಿನಃ |
ಸಾಽಹಮದ್ಯ ಸುದೇಷ್ಣಾಯಾಃ ಪಶ್ಚಾದ್ ಯಾಮಿ ಭಯಾರ್ದಿತಾ ||22||
ಯಾವ ನನ್ನ ಹಿಂದೆ ಮತ್ತು ಮುಂದೆ ನನ್ನ ಅನುಗಾಮಿಗಳು ಇರುತ್ತಿದ್ದರೋ ಅಂತಹ ನಾನು ಈ ದಿನ ಭಯದಿಂದ ಕೂಡಿದವಳಾಗಿ ಸುದೇಷ್ಣೆಯ ಹಿಂದೆ ಹೋಗುತ್ತೇನೆ.
ಇದಂ ತು ದುಃಖಂ ಕೌಂತೇಯ ಮಮಾಸೀದ್ ಯನ್ನಿಬೋಧ ತತ್ |
ಯಾ ನ ಜಾತು ಸ್ವಯಂ ಪಿಂಕ್ಷೇ ಗಾತ್ರೋದ್ವರ್ತನಮಾತ್ಮನಃ ||23||
ಅನ್ಯತ್ರ ಕುಂತ್ಯಾ ಭದ್ರಂ ತೇ ಸಾಽದ್ಯ ಪಿಂಕ್ಷ್ಮಾಮಿ ಚಂದನಮ್ ||24||
ಕೌಂತೇಯನೇ, ನನಗೆ ಉಂಟಾದ ವಿಶೇಷವಾದ ಈ ದುಃಖವನ್ನು ತಿಳಿ. ಕುಂತಿಯನ್ನು ಬಿಟ್ಟು ಉಳಿದ ಯಾರ ಸಲುವಾಗಿಯೂ ಶರೀರ ಲೇಪನವಾದ ಗಂಧವನ್ನು ಅರೆಯದಿದ್ದ ನಾನು ಈ ದಿನ ಸ್ವತಃ ಹರಿಚಂದನವನ್ನು ಅರೆಯುತ್ತಿದ್ದೇನೆ. ನಿನಗೆ ಮಂಗಳವಾಗಲಿ.
ಪಶ್ಯ ಕೌಂತೇಯ ಮೇ ಪಾಣೀ ನೈವಾಭೂತಾಂ ಹಿ ಯೌ ಪುರಾ ||25||
ಇತ್ಯಸ್ಯೈ ದರ್ಶಯಾಮಾಸ ಕಿಣವಂತೌ ಕರಾವುಭೌ ||26||
ಕೌಂತೇಯನೇ, ನನ್ನ ಕೈಗಳನ್ನು ನೋಡು. ಇವು ಹಿಂದೆ ಎಂದೂ ಹೀಗಿರಲಿಲ್ಲ ಎಂದು ಹೇಳಿ ಜಡ್ಡುಗಟ್ಟಿದ ತನ್ನ ಎರಡು ಕೈಗಳನ್ನೂ ಭೀಮಸೇನನಿಗೆ ತೋರಿಸಿದಳು.
ಬಿಭೇಮಿ ಕುಂತ್ಯಾ ಯಾ ನಾಽಹಂ ಯುಷ್ಮಾಕಂ ವಾ ಕದಾಚನ |
ಸಾಽದ್ಯಾಗ್ರತೋ ವಿರಾಟಸ್ಯ ಭೀತಾ ತಿಷ್ಠಾಮಿ ಕಿಂಕರೀ ||27||
ಕುಂತಿಗಾಗಲೀ ಅಥವಾ ನಿಮಗಾಗಲೀ ಎಂದೂ ಹೆದರದಿದ್ದ ನಾನು ಈ ದಿನ ವಿರಾಟನಿಗೆ ಹೆದರಿ ಅವನ ಸೇವಕಿಯಾಗಿ ಅವನ ಮುಂದೆ ನಿಲ್ಲುತ್ತೇನೆ.
ಕಿಂ ನು ವಕ್ಷ್ಯತಿ ಸಮ್ರಾಣ್ಮಾಂ ವರ್ಣಕಃ ಸುಕರೋ ನ ವಾ |
ನಾನ್ಯಪಿಷ್ಟಂ ವಿರಾಟಸ್ಯ ಚಂದನಂ ಕಿಲ ರೋಚತೇ ||28||
ರಾಜನು ಈ ದಿನ ಏನು ಹೇಳುತ್ತಾನೆ? ಗಂಧವು ಚೆನ್ನಾಗಿದೆಯೋ ಅಥವಾ ಇಲ್ಲವೆಂದೋ? (ಎಂದು ಯೋಚಿಸುತ್ತೇನೆ) ಬೇರೆಯವರು ಅರೆದ ಗಂಧವು ವಿರಾಟನಿಗೆ ಪ್ರಿಯವಾಗುವುದಿಲ್ಲ ಎಂಬುದು ಪ್ರಸಿದ್ಧವಾಗಿದೆ.
ವೈಶಂಪಾಯನಃ
ಸಾ ಕೀರ್ತಯಂತೀ ದುಃಖಾನಿ ಭೀಮಸೇನಸ್ಯ ಭಾಮಿನೀ |
ರುರೋದ ಶನಕೈಃ ಕೃಷ್ಣಾ ಭೀಮಸ್ಯೋರಃ ಸಮಾಶ್ರಿತಾ ||29||
ವೈಶಂಪಾಯನ ಕೋಪಗೊಂಡಿದ್ದ ಆ ದ್ರೌಪದಿಯು ಭೀಮಸೇನನಿಗೆ ತನ್ನ ದುಃಖಗಳನ್ನು ಹೇಳಿಕೊಳ್ಳುತ್ತಾ ಅವನ ಎದೆಯನ್ನು ಆಶ್ರಯಿಸಿ ಮೆಲ್ಲನೆ ಅತ್ತಳು.
ಸಾ ಬಾಷ್ಪಕಲಯಾ ವಾಚಾ ನಿಃಶ್ವಸಂತೀ ಪುನಃ ಪುನಃ |
ಹೃದಯೇ ಭೀಮಸೇನಸ್ಯ ಘಟ್ಟಯಂತೀದಮಬ್ರವೀತ್ ||30||
ಅವಳು ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಾ ಭೀಮಸೇನನ ಎದೆಗೆ ತನ್ನ ಮುಖವನ್ನು ಘಟ್ಟಿಸುತ್ತಾ ಬಾಷ್ಪಕಲೆಯಿಂದ ಕೂಡಿದ ಮಾತುಗಳಿಂದ ಹೀಗೆ ಹೇಳಿದಳು.
ನಾಲ್ಪಂ ಕೃತಂ ಮಯಾ ಭೀಮ ದೇವಾನಾಂ ಕಿಲ್ಬಿಷಂ ಪುರಾ |
ಅಭಾಗ್ಯಾ ಯತ್ರ ಜೀವಾಮಿ ಮರ್ತವ್ಯೇ ಸತಿ ಪಾಂಡವ ||31||
ಭೀಮಸೇನನೇ, ನಾನು ಹಿಂದೆ ದೇವತೆಗಳಿಗೆ ಅಲ್ಪವಾದ ಅಪರಾಧವನ್ನು ಮಾಡಿಲ್ಲ. ಪಾಂಡವನೇ, ಆ ಕಾರಣದಿಂದ ದುರ್ಭಾಗ್ಯಳಾಗಿ ಮರಣವನ್ನು ಹೊಂದಬೇಕಾದ ನಾನು ಬದುಕಿದ್ದೇನೆ.
ಕೀಚಕಂ ಚೇನ್ನ ಹನ್ಯಾಸ್ತ್ವಮಾತ್ಮಾನಂ ನಾಶಯಾಮ್ಯಹಮ್ |
ವಿಷಮಾಲೋಡ್ಯ ಪಾಸ್ಯಾಮಿ ಪ್ರವೇಕ್ಷ್ಯಾಮ್ಯಥವಾಽನಲಮ್ ||32||
ನೀನು ಕೀಚಕನನ್ನು ಕೊಲ್ಲದಿದ್ದರೆ ನಾನು ಆತ್ಮಘಾತವನ್ನು ಮಾಡಿಕೊಳ್ಳುತ್ತೇನೆ. ವಿಷವನ್ನು ಕದಡಿ ಕುಡಿಯುವೆನು ಅಥವಾ ಅಗ್ನಿಯನ್ನು ಪ್ರವೇಶಿಸುವೆನು.
ಅಭಾಗ್ಯಾಽಹಮಪುಣ್ಯಾಽಹಂ ನಿತ್ಯದುಃಖಾ ಚ ವಿಕ್ಲವಾ |
ಪಾಪೇ ನಿಪತಿತಾಯಾಶ್ಚ ಕಿಂ ಫಲಂ ಜೀವಿತೇನ ಮೇ ||33||
ಇತ್ಯಸ್ಯೈ ದರ್ಶಯಾಮಾಸ ಕಿಣ್ವ(ಣ)ವಂತೌ ಕರಾವುಭೌ ||34||
ನಾನು ದೌರ್ಭಾಗ್ಯಶಾಲಿ, ಪುಣ್ಯರಹಿತಳಾದವಳೂ, ನಿತ್ಯದುಃಖಳೂ, ಭೀತಳಾದವಳೂ ಆಗಿ ಪಾಪದಲ್ಲಿ ಬಿದ್ದಿದ್ದೇನೆ. ನಾನು ಬದುಕಿ ಏನು ಪ್ರಯೋಜನ ಎಂದು ಹೇಳುತ್ತಾ ಜಡ್ಡುಗಟ್ಟಿದ ತನ್ನ ಎರಡು ಕೈಗಳನ್ನೂ ಅವನಿಗೆ ತೋರಿಸಿದಳು.
ವೈಶಂಪಾಯನಃ
ತತಸ್ತಸ್ಯಾಃ ಕರೌ ಪೀನೌ ಕಿಣಬದ್ಧೌ ವೃಕೋದರಃ |
ಮುಖಮಾನಾಯ್ಯ ವೇಪಂತ್ಯಾ ರುರೋದ ಪರವೀರಹಾ ||35||
ವೈಶಂಪಾಯನ ಆಗ ಶತ್ರುಸಂಹಾರಕನಾದ ವೃಕೋದರನು ಪುಷ್ಟವಾದ ಜಡ್ಡುಕಟ್ಟಿದ ನಡುಗುತ್ತಿದ್ದ ಅವಳ ಎರಡು ಕೈಗಳನ್ನೂ ಹಿಡಿದು ತನ್ನ ಮುಖಕ್ಕೆ ಒತ್ತಿಕೊಂಡು ಅತ್ತನು.
ತೌ ಗೃಹೀತ್ವಾ ಚ ಕೌಂತೇಯೋ ಬಾಷ್ಪಮುತ್ಸೃಜ್ಯ ವೀರ್ಯವಾನ್ |
ತತಃ ಪರಮದುಃಖಾರ್ತ ಇದಂ ವಚನಮಬ್ರವೀತ್ ||36||

ಕೌಂತೇಯನಾದ ವೀರ್ಯಶಾಲಿಯಾದ ಭೀಮಸೇನನು ಅವಳ ಎರಡು ಕೈಗಳನ್ನೂ ಹಿಡಿದುಕೊಂಡು ಕಣ್ಣೀರನ್ನು ಸುರಿಸುತ್ತಾ ಪರಮದುಃಖದಿಂದ ಪೀಡಿತನಾಗಿ ಈ ಮಾತುಗಳನ್ನು ಆಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಯೋವಿಂಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.
* * * *
ಇಪ್ಪತ್ತನಾಲ್ಕನೆಯ ಅಧ್ಯಾಯ
ದ್ರೌಪದಿ-ಭೀಮ ಸಂವಾದ. ದ್ರೌಪದಿಯಿಂದ ಕೀಚಕನನ್ನು ಕೊಲ್ಲುವಂತೆ ಭೀಮಸೇನನಿಗೆ ಒತ್ತಾಯ.
ಭೀಮಃ
ಶೃಣು ಭದ್ರೇ ವರಾರೋಹೇ ಕ್ರೋಧಾತ್ ತತ್ರ ತು ಚಿಂತಿತಮ್ |
ತ್ವಾಂ ವೈ ಸಭಾಗತಾಂ ದೃಷ್ಟ್ವಾ ಮತ್ಸ್ಯಾನಾಂ ಕದನಂ ಮಹತ್ ॥1॥
ಭೀಮ ಮಂಗಳಸ್ವರೂಪಳೇ, ಸುಂದರಿಯೇ, ನಾನು ಹೇಳುವುದನ್ನು ಕೇಳು. ನೀನು ವಿರಾಟರಾಜನ ಸಭೆಗೆ ಬಂದುದನ್ನು ನೋಡಿ ನಾನು ಕೋಪದಿಂದ ದೊಡ್ಡ ಕದನವನ್ನು ಮಾಡಲು ಚಿಂತಿಸಿದೆ.
ಕರ್ತುಕಾಮೇನ ಭದ್ರಂ ತೇ ವೃಕ್ಷಶ್ಚಾವೇಕ್ಷಿತೋ ಮಯಾ ॥2॥
ತತ್ರ ಮಾಂ ಧರ್ಮರಾಜಸ್ತು ಕಟಾಕ್ಷೇಣ ನ್ಯವಾರಯತ್ ॥3॥
ತಂ ಧ್ಯಾತ್ವಾಽವಾಙ್ಮುಖಸ್ತೂಷ್ಣೀಮಾಸ್ಥಿತೋಽಸ್ಮಿ ಮಹಾನಸಮ್ ॥4॥
ಶೃಣುಷ್ವಾನ್ಯತ್ ಪ್ರತಿಜ್ಞಾತಂ ಯದ್ ವದಾಮೀಹ ಭಾಮಿನಿ ॥5॥
ನಿನಗೆ ಮಂಗಳವಾಗಲಿ. ಕದನವನ್ನು ಮಾಡಲು ಬಯಸಿ ನಾನು ಒಂದು ಮರವನ್ನು ನೋಡಿದೆ. ಧರ್ಮರಾಜನು ತನ್ನ ಕಣ್ಣಿನ ಸನ್ನೆಯಿಂದ ನನ್ನನ್ನು ತಡೆದನು. ಅವನನ್ನು ಕುರಿತು ಚಿಂತಿಸುತ್ತಾ ಮುಖವನ್ನು ಕೆಳಗೆ ಮಾಡಿ ಮಹಾನಸಕ್ಕೆ ಹಿಂದಿರುಗಿದೆ. ಎಲೌ ಕೋಪಗೊಂಡವಳೇ, ನಾನು ಮಾಡಿದ ಇನ್ನೊಂದು ಪ್ರತಿಜ್ಞೆಯನ್ನು ಹೇಳುತ್ತೇನೆ, ಕೇಳು.
ವೈಶಂಪಾಯನಃ
ಆಶ್ವಾಸಯನ್ ಹಿ ಪಾಂಚಾಲೀಂ ಭೀಮಸೇನ ಉವಾಚ ಹ |
ಧಿಗಸ್ತು ಮೇ ಬಾಹುಬಲಂ ಗಾಂಡೀವಂ ಫಲ್ಗುನಸ್ಯ ಚ |
ಯತ್ ತೇ ರಕ್ತೌ ಪುರಾಭೂತ್ವಾ ಪಾಣೀ ಕೃತಕಿಣಾವುಭೌ ॥6॥
ವೈಶಂಪಾಯನ ದ್ರೌಪದಿಯನ್ನು ಸಮಾಧಾನಪಡಿಸುತ್ತಾ ಭೀಮಸೇನನು ಮಾತನಾಡಿದನು. ನಿನ್ನ ಕೆಂಪಾದ ಹಸ್ತತಳಗಳು ಎರಡೂ ಜಡ್ಡುಕಟ್ಟಿರುವ ಕಾರಣದಿಂದ ನನ್ನ ಬಾಹುಬಲಕ್ಕೆ ಧಿಕ್ಕಾರವಿರಲಿ. ಅರ್ಜುನನ ಗಾಂಡೀವ ಧನುಸ್ಸಿಗೂ ಧಿಕ್ಕಾರವಿರಲಿ.
ತದದ್ಯ ಮಾಂ ಸುತಪತಿ ಯತ್ ಕೃತಂ ನ ಮಯಾ ಪುರಾ ॥7॥
ಸಭಾಯಾಂ ಸ್ಮ ವಿರಾಟಸ್ಯ ಕರೋಮಿ ಕದನಂ ಮಹತ್ |
ತತ್ರ ಮಾಂ ಧರ್ಮರಾಜಸ್ತು ಕಟಾಕ್ಷೇಣ ನ್ಯವಾರಯತ್ ॥8॥
ತದಹಂ ತಸ್ಯ ವಿಜ್ಞಾಯ ಸ್ಥಿತವಾನಸ್ಮಿ ಶಾಸನಮ್ ॥9॥
ನಾನು ವಿರಾಟನ ಸಭೆಯಲ್ಲಿ ಹಿಂದೆ ಏನನ್ನು ಮಾಡಲಿಲ್ಲವೋ ಅದು ನನ್ನನ್ನು ಬಹಳವಾಗಿ ತಾಪಕ್ಕೆ ಈಡುಮಾಡಿದೆ. ನಾನು ಆಗಲೇ ದೊಡ್ಡ ಯುದ್ಧವನ್ನು ಮಾಡುತ್ತಿದ್ದೆ. ಆದರೆ ಧರ್ಮರಾಜನು ತನ್ನ ಕಣ್ಣಿನ ಸನ್ನೆಯಿಂದ ನನ್ನನ್ನು ತಡೆದನು. ಅವನ ಅಭಿಪ್ರಾಯವನ್ನು ತಿಳಿದ ನಾನು ಅವನ ಶಾಸನಕ್ಕೆ ಅಧೀನನಾಗಿ ಸುಮ್ಮನಾದೆ.
ಯಚ್ಚ ರಾಷ್ಟ್ರಾತ್ ಪ್ರಚ್ಯವನಂ ಕುರೂಣಾಮವಧಶ್ಚ ಯಃ |
ಸುಯೋಧನಸ್ಯ ಕರ್ಣಸ್ಯ ಶಕುನೇಃ ಸೌಬಲಸ್ಯ ಚ ॥10॥
ದುಃಶಾಸನಸ್ಯ ಪಾಪಸ್ಯ ಯನ್ಮಯಾ ನ ಹೃತಂ ಶಿರಃ |
ತನ್ಮಾಂ ದಹತಿ ಕಲ್ಯಾಣಿ ಹೃದಿ ಶಲ್ಯಮಿವಾರ್ಪಿತಮ್ ॥11॥
ರಾಜ್ಯಭ್ರಷ್ಟರಾಗಿರುವುದು, ಕುರುಗಳನ್ನು ವಧೆ ಮಾಡದಿರುವುದು, ದುರ್ಯೋಧನ, ಕರ್ಣ, ಸೌಬಲನಾದ ಶಕುನಿ ಮತ್ತು ಪಾಪಿಯಾದ ದುಃಶಾಸನ ಇವರ ಶಿರಸ್ಸನ್ನು ಕತ್ತರಿಸದಿರುವುದು ಎಲೌ ಕಲ್ಯಾಣಿಯೇ, ಇವು ಎದೆಗೆ ನೆಟ್ಟ ಶಲ್ಯದಂತೆ ನನ್ನನ್ನು (ಈಟಿಯಂತೆ) ಸುಡುತ್ತಿವೆ.
ಅಪಿ ಚಾನ್ಯದ್ ವರಾರೋಹೇ ಸ್ಮರಿಷ್ಯಸಿ ವಚೋ ಮಮ ॥12॥
ಪುಣ್ಯೇ ತೀರೇ ಸರಸ್ವತ್ಯಾ ಯತ್ ಪ್ರತಿಷ್ಠಾಮ ಸಂಗತಾಃ |
ತತ್ರಾಹಮಬ್ರುವಂ ಕೃಷ್ಣೇ ಸರ್ವಕ್ಲೇಶಾನನುಸ್ಮರನ್ ॥13॥
ಎಲೌ ಸುಂದರಿಯೇ, ನನ್ನ ಇನ್ನೊಂದು ಮಾತನ್ನು ಸ್ಮರಿಸಿಕೊ. ಎಲೌ ದ್ರೌಪದಿಯೇ, ನಾವು ಸರಸ್ವತೀ ನದಿಯ ಪುಣ್ಯತೀರದಲ್ಲಿ ನಡೆಯುತ್ತಿದ್ದಾಗ ಎಲ್ಲಾ ಕ್ಲೇಶಗಳನ್ನೂ ನೆನೆದುಕೊಂಡು ನಿನಗೆ ಹೇಳಿದೆ.
ನ ಚಾಹಮನುಗಚ್ಛೇಯಂ ಧರ್ಮರಾಜಂ ಯುಧಿಷ್ಠಿರಮ್ |
ಧನಂಜಯಂ ಚ ಪಾಂಚಾಲಿ ಮಾದ್ರೀಪುತ್ರೌ ಚ ಭ್ರಾತರೌ ॥14॥
ವೃತ್ತೈಷಾಂ ಚ ಮತಿಃ ಕೃಷ್ಣೇ ಯುಧಿಷ್ಠಿರಮಗರ್ಹಯಮ್ ॥15॥
ನಾನು ಧರ್ಮರಾಜನಾದ ಯುಧಿಷ್ಠಿರನನ್ನು ಅನುಸರಿಸುವುದಿಲ್ಲ. ಪಾಂಚಾಲಿಯೇ, ಅರ್ಜುನ ಮತ್ತು ಅಣ್ಣತಮ್ಮಂದಿರಾದ ನಕುಲಸಹದೇವರ ನಡತೆಯೂ ಧರ್ಮರಾಜನ ನಡತೆಯಂತೆಯೇ ಇದೆ ಎಂದು ಹೇಳಿ ಎಲೌ ದ್ರೌಪದಿಯೇ, ನಾನು ಯುಧಿಷ್ಠಿರನನ್ನು

ನಿಂದಿಸಿದೆನು.
ಪರುಷಂ ವಚನಂ ಶ್ರುತ್ವಾ ಮಮ ಧರ್ಮಾತ್ಮಜಸ್ತದಾ |
ಹ್ರೀಮಾನ್ ವಾಕ್ಯಮಹೀನಾರ್ಥಂ ಬ್ರುವನ್ ರಾಜಾ ಯುಧಿಷ್ಠಿರಃ ||
ಸರ್ವಾನನ್ವನಯದ್ ಭ್ರಾತೄನ್ ಮುನೇರ್ಧೌಮ್ಯಸ್ಯ ಶಾಸತಃ ||17||
ಧರ್ಮಾತ್ಮಜನಾದ ರಾಜನಾದ ಯುಧಿಷ್ಠಿರನು ನನ್ನ ಒರಟು ಮಾತುಗಳನ್ನು ಕೇಳಿ ನಾಚಿಕೊಂಡು ಉತ್ತಮಾರ್ಥವುಳ್ಳ ಮಾತುಗಳನ್ನು ಆಡುತ್ತಾ ಧೌಮ್ಯರ ಶಾಸನಕ್ಕೆ ಅನುಗುಣವಾಗಿ ತನ್ನ ಎಲ್ಲಾ ತಮ್ಮಂದಿರನ್ನೂ ಸಮಾಧಾನಪಡಿಸಿದನು.
ಮಾ ರೋದೀ ರಾಜ್ಞಿ ಲೋಕಾನಾಂ ಸರ್ವಾಗಮಗುಣಾನ್ವಿತೇ |
ರಕ್ಷಿತವ್ಯಂ ಸದಾಽಸ್ಮಾಭಿಃ ಸತ್ಯಮಪ್ರತಿಮಂ ಭುವಿ ||18||
ಲೋಕದಲ್ಲಿ ಮತ್ತು ವೇದದಲ್ಲಿ ಹೇಳಿದ ಎಲ್ಲ ಗುಣಗಳಿಂದ ಕೂಡಿದ ಎಲೌ ಮಹಾರಾಣಿಯೇ, ಅಳಬೇಡ. ನಾವು ಭೂಮಿಯಲ್ಲಿ ನಮ್ಮ ಸತ್ಯಪ್ರತಿಜ್ಞೆಯನ್ನು ಯಾವಾಗಲೂ ಪಾಲಿಸಬೇಕು.
ಅನುನೀತೇಷು ದಾರೇಷು ಅನುನೀತಾ ತ್ವಮಪ್ಯಸಿ |
ಮಾಽಧರ್ಮತೋ ವಚಃ ಕೃಷ್ಣೇ ಕ್ರೋಧಜಂ ಸಮುದಾಹರ ||19||
ಪತಿಗೆ ಅನುಕೂಲರಾಗಿರುವ ನೀತಿಯನ್ನು ಹೊಂದಿದ ಅರುಂಧತಿ ಮೊದಲಾದ ಸ್ತ್ರೀಯರ ಸಮೂಹದಲ್ಲಿ ನೀನೂ ಒಬ್ಬಳಾಗಿದ್ದೀಯೆ. ದ್ರೌಪದಿಯೇ, ಅಧರ್ಮದಿಂದ ರೋಷದ ಮಾತುಗಳನ್ನು ಆಡಬೇಡ.
ಇಮಂ ಚೋಕ್ತಮುಪಾಲಂಭಂ ತ್ವಯಾ ರಾಜಾ ಯುಧಿಷ್ಠಿರಃ |
ಶೃಣುಯಾದ್ ಯದಿ ಕಲ್ಯಾಣಿ ಕೃತ್ಸ್ನಂ ಜಹ್ಯಾತ್ ಸ ಜೀವಿತಮ್ ||
ಧನಂಜಯೋ ವಾ ಸುಶ್ರೋಣಿ ಯಮೌ ಚಾಪಿ ಸುಮಧ್ಯಮೇ |
ಲೋಕಾಂತರಗತೇಷ್ವೇಷು ನಾಹಂ ಶಕ್ಷ್ಯಾಮಿ ಜೀವಿತುಮ್ ||21||
ಕಲ್ಯಾಣಿಯೇ, ನೀನು ಆಡಿದ ಈ ಮಾತುಗಳನ್ನು ರಾಜನಾದ ಯುಧಿಷ್ಠಿರನು ಕೇಳಿದರೆ ಅವನು ತನ್ನ ಜೀವವನ್ನೇ ತೊರೆದಾನು. ಸುಮಧ್ಯಮೆಯೇ, ಸುಶ್ರೋಣಿಯೇ, ಅರ್ಜುನ ಮತ್ತು ನಕುಲಸಹದೇವರು ತಮ್ಮ ಜೀವವನ್ನು ತೊರೆದಾರು. ಇವರು ಲೋಕಾಂತರಕ್ಕೆ ಹೋದರೆ ನಾನು ಬದುಕಿರಲಾರೆ.
ಧರ್ಮಂ ಶೃಣುಷ್ವ ಪಾಂಚಾಲಿ ಯತ್ ತೇ ವಕ್ಷ್ಯಾಮಿ ಭಾಮಿನಿ ||
ಪಾಂಚಾಲಿಯೇ, ಭಾಮಿನಿಯೇ (ಕೋಪಗೊಂಡವಳೇ) ನಾನು ಹೇಳುವ ಧರ್ಮದ ಮಾತುಗಳನ್ನು ಕೇಳು.
ದುಹಿತಾ ಜನಕಸ್ಯಾಸೀದ್ ವೈದೇಹೀ ಯದಿ ತೇ ಶ್ರುತಾ |
ಪತಿಮನ್ವಚರತ್ ಸೀತಾ ಮಹಾರಣ್ಯನಿವಾಸಿನಮ್ ||23||
ನೀನು ಕೇಳಿದ್ದರೆ ಹಿಂದೆ ಜನಕರಾಜಕುಮಾರಿಯಾದ ವೈದೇಹಿಯು ಇದ್ದಳು. ಆ ಸೀತೆಯು ಮಹಾರಣ್ಯದಲ್ಲಿ ವಾಸಿಸಿದ ತನ್ನ ಪತಿಯನ್ನು ಅನುಸರಿಸಿದಳು.
ವಸಂತೀ ಚ ಮಹಾರಣ್ಯೇ ರಾಮಸ್ಯ ಮಹಿಷೀ ಪ್ರಿಯಾ |
ರಾವಣೇನ ಹೃತಾ ಸೀತಾ ರಾಕ್ಷಸೀಭಿಶ್ಚ ತರ್ಜಿತಾ ||24||
ಸಾ ಕ್ಲಿಶ್ಯಮಾನಾ ಸುಶ್ರೋಣಿ ರಾಮಮೇವಾನ್ವಪದ್ಯತ ||25||
ರಾಮನ ಪ್ರಿಯ ಮಹಿಷಿಯಾದ ಸೀತೆಯು ಮಹಾರಣ್ಯದಲ್ಲಿ ವಾಸಮಾಡುತ್ತಿರುವಾಗ ರಾವಣನಿಂದ ಅಪಹರಿಸಲ್ಪಟ್ಟು ರಾಕ್ಷಸಿಯರಿಂದ ಹೆದರಿಸಲ್ಪಟ್ಟಳು. ಸುಂದರಿಯಾದ ಅವಳು ಅಂತಹ ಕ್ಲೇಶಕ್ಕೆ ಒಳಗಾದರೂ ರಾಮನನ್ನೇ ಆಶ್ರಯಿಸಿದಳು.
ಲೋಪಾಮುದ್ರಾ ತು ವೈ ದೇವಿ ಭರ್ತಾರಮೃಷಿಸತ್ತಮಮ್ |
ಭಗವಂತಮಗಸ್ತ್ಯಂ ಸಾ ವನಾಯೈವಾನ್ವಪದ್ಯತ ||26||
ಎಲೌ ದೇವಿಯೇ, ಲೋಪಾಮುದ್ರೆಯಾದರೂ ಋಷಿಶ್ರೇಷ್ಠರೂ, ಪೂಜ್ಯರೂ ಮತ್ತು ತನ್ನ ಪತಿಯೂ ಆದ ಅಗಸ್ತ್ಯರನ್ನೇ ಅನುಸರಿಸಿ ಕಾಡಿಗೇ ಹೋದಳು.
ಸುಕನ್ಯಾ ನಾಮ ಶರ್ಯಾತೇರ್ಭಾರ್ಗವಚ್ಯವನಂ ವನೇ |
ವಲ್ಮೀಕಭೂತಂ ಶಾಮ್ಯಂ ತಮನ್ವಪದ್ಯತ ಭಾಮಿನೀ ||27||
ಭಾಮಿನಿಯಾದ ಸುಕನ್ಯೆ ಎಂಬ ಶರ್ಯಾತಿಕುಮಾರಿಯು ಒಂದು ವಲ್ಮೀಕ ರೂಪದಲ್ಲಿ ಇದ್ದು ತಪಸ್ಸನ್ನು ಮಾಡುತ್ತಿದ್ದ ಭೃಗುಕುಲೋತ್ಪನ್ನರಾದ ಚ್ಯವನರನ್ನೇ ಅನುಸರಿಸಿದಳು.
ನಾಳಾಯನೀ ಚೇಂದ್ರಸೇನಾ ರೂಪೇಣಾಪ್ರತಿಮಾ ಭುವಿ |
ಪತಿಮನ್ವಚರದ್ ವೃದ್ಧಂ ಪುರಾ ವರ್ಷಸಹಸ್ರಕಮ್ ||28||
ನಳನ ಮಗಳಾದ ಇಂದ್ರಸೇನೆಯು ತನ್ನ ರೂಪದಿಂದ ಭೂಮಿಯಲ್ಲಿ ಅಸದೃಶಳಾಗಿದ್ದಳು. ಅವಳು ಒಂದು ಸಹಸ್ರವರ್ಷಗಳ ಕಾಲ ವೃದ್ಧನಾದ ತನ್ನ ಪತಿಯನ್ನು ಅನುಸರಿಸಿದಳು.
ದ್ಯುಮತ್ಸೇನಸುತಂ ವೀರಂ ಸತ್ಯವಂತಮನಿಂದಿತಾ |
ಸಾವಿತ್ರ್ಯನುಚಚಾರೈಕಾ ಯಮಲೋಕಂ ಮನಸ್ವಿನೀ ||29||
ಯಥೈತಾಃ ಕೀರ್ತಿತಾಃ ನಾರ್ಯೋ ರೂಪವತ್ಯಃ ಪತಿವ್ರತಾಃ ||30||
ಧೈರ್ಯಶಾಲಿನಿಯಾದ ಅನಿಂದಿತೆಯಾದ ಸಾವಿತ್ರಿಯೂ ಸಹ ದ್ಯುಮತ್ಸೇನ ರಾಜನ ಮಗನಾದ ವೀರನಾದ ಸತ್ಯವಂತನನ್ನು ಯಮಲೋಕದವರೆಗೂ ಒಬ್ಬಳೇ ಹಿಂಬಾಲಿಸಿದಳು. ಈ ಹೇಳಿದ ನಾರಿಯರೆಲ್ಲರೂ ಸುಂದರಿಯರೂ ಮತ್ತು ಪತಿವ್ರತೆಯರೂ ಆಗಿದ್ದರು.

ನಳಂ ರಾಜಾನಮೇವಾಥ ದಮಯಂತೀ ವನಾಂತರೇ |
ಅನ್ವಗಚ್ಛತ್ ಪುರಾ ಕೃಷ್ಣೇ ಯಥಾ ಭರ್ತೄನ್ ತ್ವಮನ್ವಗಾಃ ॥31॥
ಎಲೌ ದ್ರೌಪದಿಯೇ, ನೀನು ನಿನ್ನ ಪತಿಗಳನ್ನು ಹಿಂಬಾಲಿಸಿದಂತೆ ದಮಯಂತಿಯೂ ಸಹ ಹಿಂದೆ ಅರಣ್ಯದಲ್ಲಿ ತನ್ನ ಪತಿಯಾದ ನಳಮಹಾರಾಜನನ್ನು ಹಿಂಬಾಲಿಸಿದಳು.
ತಥಾ ತ್ವಮಪಿ ಕಲ್ಯಾಣಿ ಸರ್ವೈಃ ಸಮುದಿತಾ ಗುಣೈಃ |
ಮಾ ದೀರ್ಘಂ ಕ್ಷಮ ಕಾಲಂ ತ್ವಂ ತ್ರಿಂಶದ್ರಾತ್ರಮನಿಂದಿತೇ ॥32॥
ಎಲೌ ಕಲ್ಯಾಣಿಯೇ, ಆ ಎಲ್ಲರಂತೆ ನೀನೂ ಸಹ ಎಲ್ಲ ಗುಣಗಳಿಂದಲೂ ಕೂಡಿದವಳಾಗಿದ್ದೀಯೆ. ಬಹಳ ಕಾಲದವರೆಗೆ ಈ ದುಃಖವನ್ನು ಸಹಿಸಬೇಕಾಗಿಲ್ಲ. ಅನಿಂದಿತೆಯೇ, ಮೂವತ್ತು ರಾತ್ರಿಗಳ ಕಾಲವನ್ನು ಮಾತ್ರ ಸಹಿಸುವವಳಾಗು.
ಪೂರ್ಣೇ ತ್ರಯೋದಶೇ ವರ್ಷೇ ರಾಜ್ಞಾಂ ರಾಜ್ಞೀ ಭವಿಷ್ಯಸಿ |
ಸತ್ಯೇನ ತೇ ಶಪೇ ಚಾಹಂ ಭವಿತಾ ನಾನ್ಯಥೇತಿ ಚ ॥33॥
ಹದಿಮೂರನೆಯ ವರ್ಷವು ಕಳೆದ ಮೇಲೆ ನೀನು ಪುನಃ ಐದುಜನರ ರಾಜರ ರಾಣಿಯೇ ಆಗುವಿ. ನಾನು ಸತ್ಯಪ್ರತಿಜ್ಞೆಯನ್ನು ಮಾಡಿ ಇದನ್ನು ಹೇಳುತ್ತಿದ್ದೇನೆ. ಇದೆಂದೂ ಸುಳ್ಳಾಗುವುದಿಲ್ಲ.
ಸರ್ವಾಸಾಂ ಪರಮಸ್ತ್ರೀಣಾಂ ಪ್ರಾಮಾಣ್ಯಂ ಕರ್ತುಮರ್ಹಸಿ |
ಸರ್ವೇಷಾಂ ಚ ನರೇಂದ್ರಾಣಾಂ ಮೂರ್ಧ್ನಿ ಸ್ಥಾಸ್ಯಸಿ ಭಾಮಿನಿ ॥34॥
ಎಲ್ಲ ಮಹಾಪತಿವ್ರತೆಯರ ನಡತೆಯು ಪರಮಶ್ರೇಷ್ಠವಾದುದು ಎಂದು ನೀನು ತೋರಿಸಿಕೊಡಬೇಕಾಗಿದೆ. ಎಲೌ ಭಾಮಿನಿಯೇ, ನೀನು ಎಲ್ಲ ರಾಜರ ತಲೆಯ ಮೇಲೆ ನಿಲ್ಲುವವಳಾಗುವಿ.
ಪೂರ್ಣಾಯಾಂ ತು ಪ್ರತಿಜ್ಞಾಯಾಂ ಮಹಾಂತಂ ಭೋಗಮಾಪ್ನುಯಾಃ ॥
ಗುರುಭರ್ತೃಕೃತಂ ಜ್ಞಾತ್ವಾ ರಾಜ್ಞಾಂ ಮೂರ್ಧ್ನಿ ಸ್ಥಿತಾ ಭವೇಃ ॥36॥
ನಮ್ಮ ಪ್ರತಿಜ್ಞೆಯನ್ನು ಈಡೇರಿಸಿದ ಮೇಲೆ ನೀನು ಮಹಾಭೋಗಗಳನ್ನು ಹೊಂದುವಿ. ಗುರುಗಳು ಮತ್ತು ಪತಿಗಳು ಮಾಡಿದ ಕಾರ್ಯಗಳನ್ನು ತಿಳಿದು ಮತ್ತು ಅದರಂತೆ ನಡೆದುಕೊಂಡು ನೀನು ರಾಜರೆಲ್ಲರ ತಲೆಯ ಮೇಲೆ ನಿಲ್ಲುವಿ.
ದ್ರೌಪದೀ
ಆರ್ತಯೈತತ್ ಕೃತಂ ಭೀಮ ಮಯಾ ಭಾಷಾಪ್ರಬೋಧನಮ್ ॥37॥
ಅಪಾರಯಂತ್ಯಾ ದುಃಖಾನಿ ಭೀಮಸೇನ ಮಹಾಬಲ |
ಇದಂ ತು ದುಃಖಂ ಕೌಂತೇಯ ಮಮಾಸಹ್ಯಂ ನಿಬೋಧ ತತ್ ॥38॥
ದ್ರೌಪದೀ ಭೀಮಸೇನನನೇ, ಮಹಾಬಲನೇ, ದುಃಖದಿಂದ ಕೂಡಿದ ನಾನು ದುಃಖವನ್ನು ಪರಿಹರಿಸಿಕೊಳ್ಳಲಾಗದೆ ಮಾತನಾಡಿದೆ. ಕೌಂತೇಯನನೇ, ಈ ದುಃಖವನ್ನು ಸಹಿಸಲು ನನ್ನಿಂದ ಸಾಧ್ಯವಿಲ್ಲ ಎಂದು ತಿಳಿ.
ಯೋಽಯಂ ರಾಜ್ಞೋ ವಿರಾಟಸ್ಯ ಸೂತಪುತ್ರಃ ಸ ಕೀಚಕಃ |
ಸ್ಯಾಲೋ ನಾಮ ಪ್ರವಾದೇನ ಭೋಜಸ್ತ್ರೈಗರ್ತದೇಶತಃ ॥39॥
ತ್ಯಕ್ತಧರ್ಮೋ ನೃಶಂಸಶ್ಚ ಸರ್ವಾರ್ಥೇಷು ಚ ವಲ್ಲಭಃ |
ನಿತ್ಯಮೇವಾಹ ದುಷ್ಟಾತ್ಮಾ ಭಾರ್ಯಾ ಮೇ ಭವ ಶೋಭನೇ ॥40॥
ಅವಿನೀತಃ ಸುದುಷ್ಟಾತ್ಮಾ ಮಾಮನಾಥೇತಿ ಚಿಂತ್ಯ ಸಃ ॥41॥
ವಿರಾಟರಾಜನ ಭಾವಮೈದುನನಾದ ಸೂತಪುತ್ರನಾದ, ಕೀಚಕನು ಯಾವನಿದ್ದಾನೆಯೋ, ತ್ರಿಗರ್ತದೇಶದವನಾದ ಅವನೇ ಜನರ ಮಾತಿನಂತೆ ಇಲ್ಲಿ ರಾಜನಾದವನು. ಅವನು ಧರ್ಮವನ್ನು ತ್ಯಜಿಸಿದವನು. ಕ್ರೂರಿ ಮತ್ತು ಎಲ್ಲಾ ಕಾರ್ಯಗಳನ್ನು ನೆರವೇರಿಸುವವನು. ಅವಿನೀತನೂ, ಬಹಳ ದುಷ್ಟನೂ ಆದ ಅವನು ನನ್ನನ್ನು ಅನಾಥಳೆಂದು ತಿಳಿದು ಸುಂದರಿಯೇ, ನನ್ನ ಪತ್ನಿಯಾಗು ಎಂದು ಯಾವಾಗಲೂ ಹೇಳುತ್ತಾನೆ.
ಕಿಮುಕ್ತೇನ ವ್ಯತೀತೇನ ಭೀಮಸೇನ ಮಹಾಬಲ |
ಪ್ರತ್ಯುಪಸ್ಥಿತಕಾಲಸ್ಯ ದುಃಖಸ್ಯಾಂತಕರೋ ಭವ ॥42॥
ಭೀಮಸೇನನನೇ, ಮಹಾಬಲನೇ, ಹಿಂದೆ ನಡೆದ ಘಟನೆಗಳನ್ನು ಹೇಳಿ ಏನು ಪ್ರಯೋಜನ? ಈಗ ಒದಗಿರುವ (ಕೀಚಕನಿಂದ ಉಂಟಾದ) ದುಃಖವನ್ನು ಪರಿಹಾರ ಮಾಡುವವನಾಗು.
ಮಮೈವ ಭೀಮ ಕೈಕೇಯೀ ರೂಪಾದ್ಧಿ ಪರಿಶಂಕಿತಾ |
ನಿತ್ಯಮುದ್ವಿಜತೇ ರಾಜಾ ಕಥಂ ನೇಯಾದಿಮಾಮಿತಿ ॥43॥
ಭೀಮಸೇನನನೇ, ಕೈಕೇಯಿಯಾದ ಸುದೇಷ್ಣೆಯು ನನ್ನ ರೂಪದಿಂದಲೇ ಶಂಕೆಪಡುತ್ತಾಳೆ. ರಾಜನು ಹೇಗೆ ಇವಳ ಸಮೀಪಕ್ಕೆ ಹೋಗದಿರಬಹುದು ಎಂದು ಯಾವಾಗಲೂ ಭಯಗ್ರಸ್ತಳಾಗಿದ್ದಾಳೆ.
ತಸ್ಯಾ ವಿದಿತ್ವಾ ತಂ ಭಾವಂ ಸ್ವಯಂ ಚಾವೃತದರ್ಶನಃ |
ಕೀಚಕೋಽಪಿ ಹಿ ದುಷ್ಟಾತ್ಮಾ ಪುನಃ ಪ್ರಾರ್ಥಯತೀಹ ಮಾಮ್ ॥44॥
ಅವಳ ಆ ಅಭಿಪ್ರಾಯವನ್ನು ತಿಳಿದ ಮಿಥ್ಯಾಜ್ಞಾನಿಯಾದ ದುಷ್ಟ ಮನಸ್ಸಿನ ಕೀಚಕನು ತಾನೇ ನನ್ನನ್ನು ಪ್ರಾರ್ಥಿಸುತ್ತಿದ್ದಾನೆ.
ತಮಹಂ ಕುಪಿತಾ ಭೀಮ ಪುನಃ ಕೋಪಂ ನಿಯಮ್ಯ ಚ |
ಅಬ್ರುವಂ ಕಾಮಸಮ್ಮೂಢಮಾತ್ಮಾನಂ ರಕ್ಷ ಕೀಚಕ ॥45॥
ಭೀಮಸೇನನನೇ, ಅವನ ಮಾತಿನಿಂದ ನನಗೆ ಕೋಪಬಂದರೂ ನನ್ನ ಕೋಪವನ್ನು ನಿಯಂತ್ರಿಸಿ ಕಾಮಮೋಹಿತನಾದ ಅವನನ್ನು ಕುರಿತು ಕೀಚಕನೇ, ನಿನ್ನನ್ನು ನೀನು ನಿಯಂತ್ರಿಸಿಕೊ ಎಂದು ಹೇಳಿದೆನು.

ಗಂಧರ್ವಾಣಾಮಹಂ ಭಾರ್ಯಾ ಪಂಚಾನಾಂ ಮಹಿಷೀ ಪ್ರಿಯಾ |
ತೇ ತ್ವಾಂ ನಿಹನ್ಯುರ್ದುರ್ಧರ್ಷಾಃ ಶೂರಾಃ ಸಾಹಸಕಾರಿಣಃ ॥46॥
ನಾನು ಐದುಜನ ಗಂಧರ್ವರಿಗೆ ಪ್ರಿಯಳಾದ ಪತ್ನಿ ಮತ್ತು ರಾಣಿ. ಯಾರಿಗೂ ಸೋಲದ ಆ ಶೂರರು ಯಾವುದಕ್ಕೂ ಹಿಂಜರಿಯದವರು ನಿನ್ನನ್ನು ಕೊಂದಾರು.
ಏವಮುಕ್ತಸ್ತು ಪಾಪಾತ್ಮಾ ಕೀಚಕಃ ಪ್ರತ್ಯುವಾಚ ಹ |
ನಾಹಂ ಬಿಭೇಮಿ ಸೈರಂಧ್ರಿ ಗಂಧರ್ವಾಣಾಂ ಶುಚಿಸ್ಮಿತೇ ॥47॥
ಶತಂ ಸಹಸ್ರಮಪಿ ವಾ ಗಂಧರ್ವಾಣಾಮಹಂ ರಣೇ |
ಸಮಾಗತಾನ್ ಹನಿಷ್ಯಾಮಿ ತ್ವಂ ಭೀರು ಕುರು ಮೇ ಕ್ಷಣಮ್ ॥48॥
ಹೀಗೆ ಹೇಳಲ್ಪಟ್ಟ ಪಾಪಾತ್ಮನಾದ ಕೀಚಕನು ನನ್ನನ್ನು ಕುರಿತು ಸೈರಂಧ್ರಿಯೇ, ಶುಚಿಸ್ಮಿತೆಯೇ, ನಾನು ಗಂಧರ್ವರಿಗೆ ಹೆದರುವವನಲ್ಲ. ಎಲೌ ಭೀರುವೇ, ನೂರು ಜನ ಅಥವಾ ಸಾವಿರ ಮಂದಿ ಗಂಧರ್ವರು ನನ್ನನ್ನು ಯುದ್ಧದಲ್ಲಿ ಎದುರಿಸಿದರೂ ನಾನು ಅವರನ್ನು ಕೊಲ್ಲುವೆನು. ನೀನು ನನಗೆ ಅನುಕೂಲಳಾಗಿರು.
ಇತ್ಯುಕಹತ್ವ ಚಾಬ್ರುವಂ ಸೂತಂ ಕಾಮಾತುರಮಹಂ ಪುನಃ |
ನ ತ್ವಂ ಪ್ರತಿಬಲಸ್ತೇಷಾಂ ಗಂಧರ್ವಾಣಾಂ ಯಶಸ್ವಿನಾಮ್ ॥49॥
ಹೀಗೆ ಹೇಳಲ್ಪಟ್ಟ ನಾನು ಕಾಮಾತುರನಾದ ಆ ಕೀಚಕನನ್ನು ಕುರಿತು ಕೀರ್ತಿವಂತರಾದ ಆ ಗಂಧರ್ವರಿಗೆ ನೀನು ಪ್ರತಿಬಲನಲ್ಲ ಎಂದು ಹೇಳಿದೆನು.
ಧರ್ಮೇ ಸ್ಥಿತಾಽಸ್ಮಿ ಸತತಂ ಕುಲಶೀಲಸಮನ್ವಿತಾ |
ನೇಚ್ಛಾಮಿ ಕಿಂಚಿದ್ ವಧ್ಯಂ ತ್ವಾಂ ತಸ್ಮಾಜ್ಜೀವಸಿ ಕೀಚಕ ॥50॥
ಕುಲಶೀಲಸಮನ್ವಿತಳಾದ ನಾನು ಯಾವಾಗಲೂ ಧರ್ಮಮಾರ್ಗದಲ್ಲೇ ಇರುವವಳಾಗಿದ್ದೇನೆ. ಕೀಚಕನೇ, ನಾನು ನಿನ್ನ ವಧೆಯನ್ನು ಬಯಸುವುದಿಲ್ಲ. ಆದ್ದರಿಂದ ಬದುಕಿದ್ದೀಯೆ.
ಏವಮುಕ್ತಸ್ತು ದುಷ್ಟಾತ್ಮಾ ಪ್ರಹಸ್ಯ ಸ್ವನವತ್ ತತಃ |
ನ ತಿಷ್ಠತಿ ಸ್ಮ ಸನ್ಮಾರ್ಗೇ ನ ಚ ಧರ್ಮಂ ಬುಭೂಷತಿ ॥51॥
ಹೀಗೆ ಹೇಳಲ್ಪಟ್ಟ ದುಷ್ಟಾತ್ಮನಾದ ಅವನು ಗಟ್ಟಿಯಾಗಿ ನಕ್ಕನು. ಅವನು ಸನ್ಮಾರ್ಗದಲ್ಲಿ ನಡೆಯುವುದಿಲ್ಲ, ಧರ್ಮವನ್ನು ಅನುಸರಿಸಲು ಬಯಸುವುದಿಲ್ಲ.
ಅಥ ಮಾಂ ತತ್ರ ಕೈಕೇಯೀ ಪ್ರೇಷಯತ್ ಪ್ರೇಷಣೇನ ತು |
ತೇನೈವ ಚೋದಿತಾ ಪೂರ್ವಂ ಭ್ರಾತೃಪ್ರಿಯಚಿಕೀರ್ಷಯಾ |
ಸುರಾಮಾನಯ ಸೈರಂಧ್ರಿ ಕೀಚಕಸ್ಯ ನಿವೇಶನಾತ್ ॥52॥
ಅನಂತರ ಕೈಕೇಯಿಯು ಮೊದಲೇ ಅವನಿಂದ ಪ್ರೇರಿತಳಾಗಿ ತಮ್ಮನಾದ ಅವನಿಗೆ ಹಿತವನ್ನು ಮಾಡಲು ನನ್ನನ್ನು ಕರೆದು ಸೈರಂಧ್ರಿಯೇ, ಕೀಚಕನ ಮನೆಯಿಂದ ಸುರೆಯನ್ನು ತೆಗೆದುಕೊಂಡು ಬಾ ಎಂಬ ಆದೇಶವನ್ನು ನೀಡಿ ಅಲ್ಲಿಗೆ ನನ್ನನ್ನು ಕಳುಹಿಸಿದಳು.
ಸೂತಪುತ್ರಸ್ತು ಮಾಂ ದೃಷ್ಟ್ವಾ ಮಮತ್ಸಾಂತ್ವಮವರ್ತಯತ್ |
ಸಾಂತ್ವೇ ಪ್ರತಿಹತೇ ಕ್ರುದ್ಧಃ ಪರಾಮರ್ಶಮನಾಽಭವತ್ ॥53॥
ಸೂತಪುತ್ರನಾದ ಕೀಚಕನಾದರೂ ನನ್ನನ್ನು ನೋಡಿ ಮಧುರವಾಗಿ ಒಲೈಸಲು ಪ್ರಾರಂಭಿಸಿದನು. ಅವನ ಮಧುರವಾದ ಮಾತುಗಳನ್ನು ನಾನು ತಿರಸ್ಕರಿಸಿದ ಮೇಲೆ ಕೋಪಗೊಂಡ ಅವನು ನನ್ನನ್ನು ಬಲಾತ್ಕಾರ ಮಾಡುವ ಮನಸ್ಸುಳ್ಳವನಾದನು.
ವಿದಿತ್ವಾ ತಸ್ಯ ಸಂಕಲ್ಪಂ ಕೀಚಕಸ್ಯ ದುರಾತ್ಮನಃ |
ತಥಾಹಂ ರಾಜಶರಣಂ ಜವೇನೈವ ಪ್ರಧಾವಿತಾ ॥54॥
ದುರಾತ್ಮನಾದ ಆ ಕೀಚಕನ ಅಂತಹ ಸಂಕಲ್ಪವನ್ನು ತಿಳಿದು ನಾನು ರಾಜನ ಅರಮನೆಗೆ ವೇಗವಾಗಿ ಓಡಿಬಂದೆನು.
ಸಂದರ್ಶನೇ ತು ಮಾಂ ರಾಜ್ಞಃ ಸೂತಪುತ್ರಃ ಪರಾಮೃಶತ್ |
ಪಾತಯಿತ್ವಾ ತು ದುಷ್ಟಾತ್ಮಾ ಪದಾಽಹಂ ತೇನ ತಾಡಿತಾ ॥55॥
ರಾಜನ ಕಣ್ಣೆದುರಿಗೇ ಸೂತಪುತ್ರನು ನನ್ನ ತಲೆ ಕೂದಲನ್ನು ಹಿಡಿದು ನೆಲದ ಮೇಲೆ ಕೆಡವಿ ದುಷ್ಟಾತ್ಮನಾದ ಅವನು ನನ್ನನ್ನು ಕಾಲಿನಿಂದ ಒದ್ದನು.
ಪ್ರೇಕ್ಷತೇ ಸ್ಮ ವಿರಾಟಸ್ತು ಕಂಕಶ್ಚ ಬಹವೋ ಜನಾಃ |
ರಥಿನಃ ಪೀಠಮರ್ದಾಶ್ಚ ಹಸ್ತ್ಯಾರೋಹಾಶ್ಚ ನೈಗಮಾಃ ॥56॥
ವಿರಾಟರಾಜನೂ, ಕಂಕನೂ, ರಥಿಕರೂ, ಪೀಠಮರ್ದರೂ, ಗಜಾರೋಹಿಗಳೂ, ವೇದನಿಷ್ಠರೂ ಮೊದಲಾದ ಅನೇಕ ಜನರು ಅದನ್ನು ನೋಡಿದರು.
ಉಪಾಲಬ್ಧೋ ಮಯಾ ರಾಜಾ ಕಂಕಶ್ಚಾಪಿ ಪುನಃ ಪುನಃ |
ತತೋ ನ ವಾರಿತೋ ರಾಜ್ಞಾ ನ ತಸ್ಯಾವಿನಯಃ ಕೃತಃ ॥57॥
ನಾನು ವಿರಾಟರಾಜನನ್ನು ಮತ್ತು ಕಂಕನನ್ನು ಮತ್ತೆ ಮತ್ತೆ ನಿಂದಿಸಿದೆನು. ಆದರೂ ರಾಜನು ಅವನನ್ನು ತಡೆಯಲಿಲ್ಲ ಮತ್ತು ಅವನಿಗೆ ಯಾವ ಶಿಕ್ಷೆಯನ್ನೂ ಕೊಡಲಿಲ್ಲ.
ಯೋಽಯಂ ರಾಜ್ಞೋ ವಿರಾಟಸ್ಯ ಕೀಚಕೋ ನಾಮ ಸಾರಥಿಃ |
ತ್ಯಕ್ತಧರ್ಮಾ ನೃಶಂಸಶ್ಚ ತರಸ್ವೀ ಸಮ್ಮತಃ ಪ್ರಿಯಃ ॥58॥
ಶೂರೋಭಿಮಾನೀ ಪಾಪಾತ್ಮಾ ಸರ್ವಾರ್ಥೇಷು ಚ ಮುಗ್ಧವಾನ್ |

ದಾರಾಮರ್ಶೀ ಮಹಾಭಾಗ ಲಭತೇಽರ್ಥಾನ್ ಬಹೂನಪಿ ॥59॥
ಹರೇದಪಿ ಚ ವಿತ್ತಾನಿ ಪರೇಷಾಂ ಕ್ರೋಶತಾಮಪಿ ॥60॥
ವಿರಾಟರಾಜನ ಸಾರಥಿಯಾದ ಈ ಕೀಚಕನು ಧರ್ಮವನ್ನು ಪರಿತ್ಯಾಗ ಮಾಡಿದವನು, ಕ್ರೂರಿ, ವೇಗಶಾಲಿ, ವಿರಾಟನಿಗೆ ಸಮ್ಮತನೂ ಪ್ರಿಯನೂ ಆದವನು. ಶೂರ, ಅಭಿಮಾನಿ, ಪಾಪಾತ್ಮನಾದವನು. ಎಲ್ಲ ವಿಷಯಗಳನ್ನೂ ತಪ್ಪಾಗಿ ತಿಳಿದವನು. ಇನ್ನೊಬ್ಬನ ಪತ್ನಿಯನ್ನು ಬಲಾತ್ಕಾರ ಮಾಡುವವನೂ ಆಗಿದ್ದಾನೆ. ಮಹಾಭಾಗನೇ, ಅವನು ವಿರಾಟರಾಜನಿಂದ ಬಹಳ ಸಂಪತ್ತನ್ನು ಪಡೆಯುತ್ತಾನೆ. ಇನ್ನೊಬ್ಬರು ಗೋಳಾಡುತ್ತಿದ್ದರೂ ಅವರ ಧನವನ್ನು ಅಪಹರಿಸುತ್ತಾನೆ.
ಪಾಪಾತ್ಮಾ ಪಾಪಕಾರೀ ಚ ಕಾಮರಾಗವಶಾನುಗಃ।
ಅವಿನೀತಶ್ಚ ದುಷ್ಟಾತ್ಮಾ ಪ್ರತ್ಯಾಖ್ಯಾತಃ ಪುನಃ ಪುನಃ ॥61॥
ದರ್ಶನೇ ದರ್ಶನೇ ದುಃಖಂ ತದಾ ಜಹ್ಯಾಂ ಚ ಜೀವಿತಮ್ ॥62॥
ಅವನು ಪಾಪಾತ್ಮನಾದವನು, ಪಾಪಕರ್ಮವನ್ನು ಮಾಡುವವನು, ಕಾಮ ಮತ್ತು ರಾಗಗಳಿಗೆ ವಶನಾಗಿ ಅದರಂತೆ ನಡೆದುಕೊಳ್ಳುವವನು. ಅವಿನೀತನೂ ಮತ್ತು ದುಷ್ಟನೂ ಆಗಿದ್ದಾನೆ. ಅವನನ್ನು ನಾನು ಅನೇಕ ಬಾರಿ ನಿರಾಕರಿಸಿದ್ದೇನೆ. ಅವನನ್ನು ಪ್ರತಿಯೊಂದು ಬಾರಿ ನೋಡಿದಾಗಲೂ ನನಗೆ ದುಃಖವುಂಟಾಗಿ ಜೀವನವನ್ನು ತೊರೆಯಬೇಕೆಂದು ಎನಿಸುತ್ತದೆ.
ಧರ್ಮೇ ಪ್ರಯತಮಾನಾನಾಂ ಮಹಾನ್ ಧರ್ಮೋ ನಶಿಷ್ಯತಿ।
ಸಮಯಂ ರಕ್ಷಮಾಣಾನಾಂ ದಾರಾಭಾವೋ ಭವಿಷ್ಯತಿ ॥63॥
ಧರ್ಮ ಸಂಪಾದನೆಯಲ್ಲಿ ಪ್ರಯತ್ನಪಡುತ್ತಿರುವ ನಿಮಗೆ ಹೀಗೆಯೇ ಆದರೆ ದೊಡ್ಡ ಧರ್ಮವೇ ನಾಶ ಹೊಂದುವುದು. ನೀವು ನಿಮ್ಮ ಪ್ರತಿಜ್ಞೆಯನ್ನು ರಕ್ಷಣೆ ಮಾಡುತ್ತಿರುವಷ್ಟರಲ್ಲಿ ನಿಮ್ಮ ಪತ್ನಿಯೇ ಇಲ್ಲದಂತಾಗುವಳು.
ಭಾರ್ಯಾಯಾಂ ರಕ್ಷ್ಯಮಾಣಾಯಾಂ ಪ್ರಜಾ ಭವತಿ ರಕ್ಷಿತಾ।
ಪ್ರಜಾಯಾಂ ರಕ್ಷ್ಯಮಾಣಾಯಾಮಾತ್ಮಾ ಭವತಿ ರಕ್ಷಿತಃ ॥64॥
ಪತ್ನಿಯನ್ನು ರಕ್ಷಿಸಿದರೆ ಪ್ರಜೆಯು ರಕ್ಷಿತವಾಗುತ್ತಾನೆ. ಪ್ರಜೆಯು ರಕ್ಷಿತವಾದರೆ ತಾನೇ ರಕ್ಷಿತನಾಗುತ್ತಾನೆ.
ಆತ್ಮಾ ಹಿ ಜಾಯತೇ ತಸ್ಯಾಂ ತೇನ ಜಾಯಾಂ ವಿದುರ್ಬುಧಾಃ।
ಭರ್ತಾ ತು ಭಾರ್ಯಯಾ ರಕ್ಷ್ಯಃ ಕಥಂ ಜಾಯಾನ್ಮಮೋದರೇ ॥65॥
ತಾನೇ ಭಾರ್ಯೆಯಲ್ಲಿ ಜನಿಸುವುದರಿಂದ ಪತ್ನಿಯನ್ನು ಜಾಯಾ ಎಂದು ಜ್ಞಾನಿಗಳು ಕರೆಯುತ್ತಾರೆ. ಪತ್ನಿಯೂ ಸಹ ಪತಿಯನ್ನು ರಕ್ಷಿಸಬೇಕು. ಇಲ್ಲದಿದ್ದರೆ ನಿಮಗೆ ಅನುರೂಪವಾದ ಪ್ರಜೆಯು ನನ್ನ ಉದರದಲ್ಲಿ ಹೇಗೆ ಜನಿಸಲು ಸಾಧ್ಯ?
ವದತಾಂ ವರ್ಣಧರ್ಮಾಂಶ್ಚ ಬ್ರಾಹ್ಮಣಾನಾಮಿತಿ ಶ್ರುತಮ್।
ಕ್ಷತ್ರಿಯಸ್ಯ ಸದಾ ಧರ್ಮೋ ನಾನ್ಯೋ ದಸ್ಯುನಿಬರ್ಹಣಾತ್ ॥66॥
ವರ್ಣಧರ್ಮಗಳನ್ನು ಪ್ರವಚನ ಮಾಡುವ ಬ್ರಾಹ್ಮಣರ ಮುಖದಿಂದ ನಾನು ಹೀಗೆ ಕೇಳಿದ್ದೇನೆ. ದುಷ್ಟರನ್ನು ಶಿಕ್ಷಣೆ ಮಾಡುವುದಕ್ಕಿಂತಲೂ ದೊಡ್ಡ ಧರ್ಮವು ಕ್ಷತ್ರಿಯರಿಗೆ ಯಾವುದೂ ಇಲ್ಲ.
ಪಶ್ಯತೋ ಧರ್ಮರಾಜಸ್ಯ ಕೀಚಕೋ ಮಾಂ ಪದಾಽವಧೀತ್।
ತವ ಚೈವ ಸಮಕ್ಷಂ ವೈ ಭೀಮಸೇನ ಮಹಾಬಲ ॥67॥
ಮಹಾಬಲನಾದ ಭೀಮಸೇನನೇ, ಧರ್ಮರಾಜನು ನೋಡುತ್ತಿರುವಂತೆಯೇ ಮತ್ತು ನೀನು ನೋಡುತ್ತಿರುವಂತೆಯೇ ಕೀಚಕನು ನನ್ನನ್ನು ಕಾಲಿನಿಂದ ಒದ್ದನು.
ತ್ವಯಾ ಚಾಹಂ ಪರಿತ್ರಾತಾ ತಸ್ಮಾದ್ ಭೀಮ ಜಟಾಸುರಾತ್।
ಜಯದ್ರಥಂ ತಥೈವ ತ್ವಮಜೈಷೀಃ ಭ್ರಾತೃಭಿಃ ಸಹ ॥68॥
ಭೀಮನೇ, ನೀನು ಆ ಜಟಾಸುರನಿಂದ ನನ್ನನ್ನು ರಕ್ಷಿಸಿದೆ. ಅದರಂತೆ ಸಹೋದರರನಿಂದ ಕೂಡಿ ಜಯದ್ರಥನನ್ನೂ ಜಯಿಸಿದೆ.
ಜಹೀಮಮಪಿ ಪಾಪಿಷ್ಠಂ ಯೋಽಸೌ ಮಾಮವಮನ್ಯತೇ।
ಕೀಚಕೋ ರಾಜವನ್ನಿತ್ಯಂ ಶೋಕಕೃನ್ಮಮ ಭಾರತ ॥69॥
ಎಲೈ ಭಾರತನೇ, ಧರ್ಮರಾಜನಂತೆ ಈ ಕೀಚಕನೂ ನನಗೆ ನಿತ್ಯವೂ ದುಃಖವನ್ನು ಕೊಡುವವನು. ನನಗೆ ಅವಮಾನವನ್ನು ಮಾಡುವ ಈ ಪಾಪಿಷ್ಠನನ್ನು ಸಂಹಾರ ಮಾಡು.
ಕೀಚಕಂ ಕಾಮಸಂತಪ್ತಂ ಭಿಂಧಿ ಕುಂಭಮಿವಾಶ್ಮನಿ।
ಯೋ ನಿಮಿತ್ತಮನರ್ಥಾನಾಂ ಬಹೂನಾಂ ಮಮ ಭಾರತ ॥70॥
ಎಲೈ ಭಾರತನೇ, ನನಗೆ ಉಂಟಾಗಿರುವ ಅನೇಕ ಅನರ್ಥಗಳಿಗೆ ಕಾರಣನಾದ ಈ ಕೀಚಕನನ್ನು ಮಣ್ಣಿನ ಮಡಕೆಯನ್ನು ಕಲ್ಲುಬಂಡೆಯ ಮೇಲೆ ಒಡೆಯುವಂತೆ ಪುಡಿಮಾಡು.
ತಂ ಚೇಜ್ಜೀವಂತಮಾದಿತ್ಯಃ ಪ್ರಾತರಭ್ಯುದಯಿಷ್ಯತಿ।
ವಿಷಮಾಲೋಡ್ಯ ಪಾಸ್ಯಾಮಿ ಕೀಚಕೋ ಮಾಂ ವಶಂ ನಯೇತ್ ॥71॥
ಶ್ರೇಯೋ ಹಿ ಮರಣಂ ಮನ್ಯೇ ಭೀಮಸೇನ ತವಾಗ್ರತಃ ॥72॥
ಅವನು ಜೀವಿಸಿರುವಂತೆಯೇ ನಾಳೆ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸಿದರೆ ವಿಷವನ್ನು ಕದಡಿಕುಡಿಯುವೆನು. ಇಲ್ಲದಿದ್ದರೆ ಕೀಚಕನು ನನ್ನನ್ನು ವಶಮಾಡಿಕೊಂಡಾನು. ಭೀಮಸೇನನೇ, ನಿನ್ನ ಎದುರಿಗೆ ಮರಣವನ್ನು ಹೊಂದುವುದೇ ಶ್ರೇಯಸ್ಸೆಂದು ನಾನು ಭಾವಿಸುತ್ತೇನೆ.
ವೈಶಂಪಾಯನಃ
ಇತ್ಯುಕ್ತ್ವಾ ಪ್ರಾರುದತ್ ಕೃಷ್ಣಾ ಭೀಮಸ್ಯೋರಸಿ ಸಂಶ್ರಿತಾ ॥73॥

ಹೀಗೆ ಹೇಳಿ ದ್ರೌಪದಿಯು ಭೀಮಸೇನನ ಎದೆಯನ್ನು ಆಶ್ರಯಿಸಿ ಗಟ್ಟಿಯಾಗಿ ಅತ್ತಳು.
ಭೀಮಶ್ಚ ತಾಂ ಪರಿಷ್ವಜ್ಯ ಮಹತ್ ಸಾಂತ್ವಂ ಪ್ರಯುಜ್ಯ ಚ |
ಕೀಚಕಂ ಮನಸಾಽಗಚ್ಛತ್ ಸೃಕ್ಕಿಣೀ ಪರಿಸಂಲಿಹನ್ ॥74॥
ಭೀಮನಾದರೂ ಅವಳನ್ನು ಆಲಿಂಗಿಸಿ ಸಮಾಧಾನದ ದೊಡ್ಡ ಮಾತುಗಳನ್ನು ಆಡಿ ತನ್ನ ನಾಲಿಗೆಯಿಂದ ಕಟಬಾಯಿಯನ್ನು ಸವರಿಕೊಳ್ಳುತ್ತಾ ಮನಸ್ಸಿನಲ್ಲಿಯೇ ಕೀಚಕನ ಬಳಿಗೆ ಹೋದನು.
ಆಶ್ವಾಸಯಿತ್ವಾ ಬಹುಶೋ ಭೃಶಮಾರ್ತಾಂ ಸುಮಧ್ಯಮಾಮ್ |
ಹೇತುತತ್ತ್ವಾರ್ಥಸಂಯುಕ್ತೈರ್ವಚೋಭಿಃ ದ್ರುಪದಾತ್ಮಜಾಮ್ ॥75॥
ಪ್ರಮೃಜ್ಯ ಪಾಣಿನಾ ತಸ್ಯ ವದನಂ ಸುಸಮಾಕುಲಮ್ |
ಉವಾಚ ಚೈನಾಂ ದುಃಖಾರ್ತಾಂ ಭೀಮಃ ಕ್ರೋಧಸಮನ್ವಿತಃ ॥76॥
ಬಹಳ ದುಃಖಕ್ಕೆ ಈಡಾಗಿದ್ದ ಸುಂದರಿಯಾದ ದ್ರುಪದಕುಮಾರಿಯಾದ ಕೃಷ್ಣೆಯನ್ನು ಅನೇಕ ಹೇತುತತ್ವಸಹಿತವಾದ ಮಾತುಗಳಿಂದ ಸಮಾಧಾನಪಡಿಸಿ ದುಃಖದಿಂದ ಕೂಡಿದ್ದ ಅವಳ ಮುಖವನ್ನು ತನ್ನ ಕೈಯಿಂದ ಸವರಿ ಕ್ರೋಧಸಮನ್ವಿತನಾದ ಅವನು ದುಃಖಾರ್ತಳಾದ ಅವಳನ್ನು ಕುರಿತು ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುರ್ವಿಂಶೋಽಧ್ಯಾಯಃ ॥
॥ ಕೀಚಕವಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
* * * *

ಮಹಾಭಾರತತಾತ್ಪರ್ಯನಿರ್ಣಯಃ
ತತ್ರೈನಮಾಸಾದ್ಯ ಚ ಭೀಮಸೇನೋ
ವಿಜಿತ್ಯ ತಂ ಬಾಹುಯುದ್ಧೇ ನಿಹತ್ಯ |
ಶಿರೋ ಗುದೇ ಪಾಣಿಪಾದೌ ಚ ತಸ್ಯ
ಪ್ರವೇಶಯಾಮಾಸ ವಿಮೃದ್ಯ ವೀರಃ ॥26॥
ನರ್ತನಶಾಲೆಯಲ್ಲಿ ಭೀಮ ಕೀಚಕನನ್ನು ಹಿಡಿದು, ಬಾಹುಯುದ್ಧದಲ್ಲಿ ಗೆದ್ದುಕೊಂಡು ಮರ್ದಿಸಿ ತಲೆ-ಕೈ-ಕಾಲುಗಳನ್ನು ಗುದದಲ್ಲಿ ಸೇರಿಸಿ ಮಾಂಸದ ಮುದ್ದೆಯಾಗಿ ಮಾಡಿದ.
* * * *
ಇಪ್ಪತ್ತೈದನೆಯ ಅಧ್ಯಾಯ
ನರ್ತನಾಗಾರದಲ್ಲಿ ಕೀಚಕನ ವಧೆ
ಭೀಮಃ
ತಥಾ ಭದ್ರೇ ಕರಿಷ್ಯಾಮಿ ಯಥಾ ತ್ವಂ ಭೀರು ಭಾಷಸೇ |
ಅದ್ಯೈನಂ ಸೂದಯಿಷ್ಯಾಮಿ ಕೀಚಕಂ ಸಹಬಾಂಧವಮ್ ॥1॥
ಭೀಮ ಎಲೌ ಭೀರುವೇ, ಮಂಗಳಸ್ವರೂಪಳೇ, ನೀನು ಹೇಳಿದಂತೆಯೇ ಮಾಡುವೆನು. ಈ ದಿನವೇ ನಾನು ಕೀಚಕನನ್ನು ಅವನ ಬಂಧುಗಳ ಜೊತೆಯಲ್ಲಿ ಕೊಲ್ಲುವೆನು.
ಅಸ್ಯಾಃ ಪ್ರದೋಷೇ ಶರ್ವರ್ಯಾಃ ಕುರುಷ್ವಾನೇನ ಸಂವಿದಮ್ |
ದುಃಖಂ ಶೋಕಂ ಚ ನಿರ್ಧೂಯ ಯಾಜ್ಞಸೇನಿ ಶುಚಿಸ್ಮಿತೇ ॥2॥
ಈ ರಾತ್ರಿಗಿಂತ ಮುಂಚೆ ಬರುವ ಪ್ರದೋಷಕಾಲದಲ್ಲಿ ಎಲೌ ಶುಚಿಸ್ಮಿತೆಯೇ, ಯಾಜ್ಞಸೇನಿಯೇ, ದುಃಖಶೋಕಗಳನ್ನು ತೊರೆದು ಅವನ ಜೊತೆಯಲ್ಲಿ ಮಾತನಾಡು.
ಯದೇತನ್ನರ್ತನಾಗಾರಂ ಮತ್ಸ್ಯರಾಜೇನ ಕಾರಿತಮ್ |
ದಿವಾಽತ್ರ ಕನ್ಯಾ ನೃತ್ಯಂತಿ ರಾತ್ರೌ ಯಾಂತಿ ಸ್ವಕಂ ಗೃಹಮ್ ॥3॥
ತತ್ರಾಸ್ತಿ ಶಯನಂ ದಿವ್ಯಂ ದೃಢಾಂಗಂ ಸುಪ್ರತಿಷ್ಠಿತಮ್ |
ತತ್ರೈನಂ ದರ್ಶಯಿಷ್ಯಾಮಿ ಪೂರ್ವಪ್ರೇತಾನ್ ಪಿತಾಮಹಾನ್ ॥4॥
ಮತ್ಸ್ಯರಾಜನು ಕಟ್ಟಿಸಿದ ಈ ನರ್ತನಾಗಾರವಿದೆಯಷ್ಟೆ. ಅಲ್ಲಿ ಹಗಲಿನ ವೇಳೆಯಲ್ಲಿ ಕನ್ಯೆಯರು ನರ್ತನವನ್ನು ಮಾಡಿ ರಾತ್ರಿಗೆ ತಮ್ಮ ಮನೆಗೆ ಹಿಂದಿರುಗುತ್ತಾರೆ. ಅಲ್ಲಿ ಭದ್ರವಾದ ದಿವ್ಯವಾದ ಒಳ್ಳೆಯ ಆಶ್ರಯವನ್ನು ಹೊಂದಿರುವ ಒಂದು ಶಯನವಿದೆ. ಅಲ್ಲಿ ಅವನಿಗೆ ಅವನಿಗಿಂತಲೂ ಮೊದಲು ಮೃತರಾದ ಅವನ ಪಿತಾಮಹರನ್ನು ತೋರಿಸುವೆನು.
ಸಂಕೇತಂ ಸೂತಪುತ್ರಸ್ಯ ಕಾರಯಸ್ವ ಶುಭಾನನೇ |
ಯಥಾ ಪರೇ ನ ಪಶ್ಯೇಯುಃ ಕುರ್ವಂತೀಂ ತೇನ ಸಂವಿದಮ್ ॥5॥
ತಥಾ ಕುರುಷ್ವ ಕಲ್ಯಾಣಿ ಯಥಾ ಸನ್ನಿಹಿತೋ ಭವೇತ್ ॥6॥
ಶುಭಾನನೆಯೇ, ನೀನು ಅವನ ಜೊತೆಯಲ್ಲಿ ಮಾತನಾಡುವುದನ್ನು ಇನ್ನೊಬ್ಬರು ನೋಡದಂತೆ ನಿರ್ವಾಹ ಮಾಡು. ಎಲೌ ಕಲ್ಯಾಣಿಯೇ, ಅವನು ಅಲ್ಲಿಗೆ ಬರುವಂತೆ ಮಾಡು.
ವೈಶಂಪಾಯನಃ
ತತ್ರ ತೌ ಕಥಯಿತ್ವಾ ತು ಬಾಷ್ಪಮುತ್ಸೃಜ್ಯ ದುಃಖಿತೌ ॥7॥

ಭೀಮೇನ ಚ ಪ್ರತಿಜ್ಞಾತೇ ಕೀಚಕಸ್ಯ ವಧೇ ತದಾ |
ದ್ರೌಪದೀ ಚ ಸುದೇಷ್ಣಾಯಾ ಪ್ರವಿವೇಶ ಪುನರ್ಗೃಹಮ್ ॥8॥
ರಾತ್ರಿಶೇಷಂ ತದವ್ಯಗ್ರಾ ಧಾರಯಾಮಾಸ ವೈ ಹೃದಿ ॥9॥
ವೈಶಂಪಾಯನ ಹೀಗೆ ದುಃಖಿತರಾದ ಅವರು ಕಣ್ಣೀರು ಸುರಿಸುವುದನ್ನು ಬಿಟ್ಟು ಪರಸ್ಪರವಾಗಿ ಮಾತನಾಡಿಕೊಂಡರು. ಭೀಮನು ಕೀಚಕನ ವಧೆಯನ್ನು ಪ್ರತಿಜ್ಞೆ ಮಾಡಿದ ಮೇಲೆ ದ್ರೌಪದಿಯು ಪುನಃ ಸುದೇಷ್ಣೆಯ ಮನೆಯನ್ನು ಪ್ರವೇಶಿಸಿ ಅವ್ಯಗ್ರಳಾಗಿ ಆ ಉಳಿದ ರಾತ್ರಿಯನ್ನು ತನ್ನ ಮನಸ್ಸಿನ ಸ್ಥೈರ್ಯದಿಂದಲೇ ಕಳೆದಳು.
ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಪ್ರಾತರುತ್ಥಾಯ ಕೀಚಕಃ |
ಗತ್ವಾ ರಾಜಕುಲಾಯೈವ ದ್ರೌಪದೀಮಿದಮಬ್ರವೀತ್ ॥10॥
ಆ ರಾತ್ರಿಯು ಕಳೆಯುತ್ತಿರಲು ಪ್ರಾತಃಕಾಲದಲ್ಲಿ ಕೀಚಕನು ಎದ್ದು ರಾಜನ ಮನೆಗೆ ಹೋಗಿ ದ್ರೌಪದಿಯನ್ನು ಕುರಿತು ಹೀಗೆ ಮಾತನಾಡಿದನು.
ಯತ್ ಸೋಽಹಂ ಪಶ್ಯತೋ ರಾಜ್ಞೋ ಪಾತಯಿತ್ವಾ ಪದಾಽಹನಮ್ |
ನ ಕಂಚಿಲ್ಲಭಸೇ ನಾಥಮಭಿಪನ್ನಾ ಬಲೀಯಸಾ ॥11॥
ನಾನು ರಾಜನು ನೋಡುತ್ತಿರುವಂತೆಯೇ ನಿನ್ನನ್ನು ಕೆಡವಿ ಕಾಲಿನಿಂದ ಒದ್ದೆನಷ್ಟೆ! ನನ್ನಂತಹ ಬಲಿಷ್ಠನಿಗೆ ವಶಳಾದ ನೀನು ರಕ್ಷಣೆಯನ್ನು ಮಾಡುವ ಯಾವ ನಾಥನನ್ನೂ ಪಡೆಯುವುದಿಲ್ಲ.
ಪ್ರವಾದೇನೇಹ ಮತ್ಸ್ಯಾನಾಮಯಂ ರಾಜೇತಿ ಚೋಚ್ಯತೇ |
ಅಹಮೇವ ಹಿ ರಾಜಾ ವೈ ಮತ್ಸ್ಯಾನಾಂ ವಾಹಿನೀಪತಿಃ ॥12॥
ಜನರು ಮಾತನಾಡುವಂತೆ ವಿರಾಟನು ಮತ್ಸ್ಯರಾಜನೆಂದು ಹೇಳಲ್ಪಡುತ್ತಾನೆ. ಆದರೆ ನಿಜವಾಗಿ ಮತ್ಸ್ಯರ ಸೇನಾಧಿಪತಿಯಾದ ನಾನೇ ರಾಜ.
ಸಾ ಸುಖಂ ಪ್ರತಿಪದ್ಯಸ್ವ ದಾಸೋ ಭೀರು ಭವಾಮಿ ತೇ |
ನ ಹ್ಯಹಂ ತ್ವಾಮೃತೇ ಭೀರು ಚಿರಂ ಜೀವಿತುಮುತ್ಸಹೇ ॥13॥
ಅಂತಹ ನೀನು ನನ್ನನ್ನು ಹೊಂದಿ ಸುಖವನ್ನು ಪಡು. ಎಲೌ ಭೀರುವೇ, ನಾನು ನಿನ್ನ ದಾಸನಾಗುತ್ತೇನೆ. ಭೀರುವೇ, ನಿನ್ನನ್ನು ಬಿಟ್ಟು ನಾನು ಬಹುಕಾಲ ಬದುಕಿರಲು ಇಚ್ಛಿಸುವುದಿಲ್ಲ.
ಅಹ್ನಾಯ ತವ ಸುಶ್ರೋಣಿ ಶತನಿಷ್ಕಂ ದದಾಮಿ ತೇ |
ದಾಸೀಶತಂ ಚ ತೇ ದದ್ಯಾಂ ದಾಸಾನಾಮಪಿ ಚಾಪರಮ್ ॥14॥
ತಥಾಶ್ವಾಂಶ್ಚ ತ್ವರಾಯುಕ್ತಾನಸ್ತು ನೌ ಭೀರು ಸಂಗಮಃ ॥15॥
ಎಲೌ ಸುಶ್ರೋಣಿಯೇ, ನಾನು ಈಗಲೇ ಶೀಘ್ರವಾಗಿ ನಿನಗೆ ನೂರುಚಿನ್ನದ ನಾಣ್ಯಗಳನ್ನು ಕೊಡುತ್ತೇನೆ. ನೂರು ದಾಸಿಯರನ್ನೂ ಮತ್ತು ದಾಸರ ಇನ್ನೊಂದು ಗುಂಪನ್ನು ಕೊಟ್ಟೇನು. ಅದರಂತೆ ವೇಗವುಳ್ಳ ಅನೇಕ ಅಶ್ವಗಳನ್ನು ಕೊಡುತ್ತೇನೆ. ಎಲೌ ಭೀರುವೇ, ನಮಗೆ ಸಂಗಮವುಂಟಾಗಲಿ.
ಸೈರಂಧ್ರೀ
ಏತನ್ಮೇ ವಚನಂ ಸತ್ಯಂ ಪ್ರತಿಪದ್ಯಸ್ವ ಕೀಚಕ |
ನ ತೇ ಸಖಾ ವಾ ಭ್ರಾತಾ ವಾ ಜಾನೀಯಾತ್ ಸಂಗಮಂ ಮಯಾ ॥
ಸೈರಂಧ್ರೀ ಕೀಚಕನೇ, ಈ ನನ್ನ ಮಾತನ್ನು ಕೇಳು. ನಿನ್ನ ಸ್ನೇಹಿತನಾಗಲೀ, ತಮ್ಮನಾಗಲೀ ನನ್ನ ಸಂಗಮವನ್ನು ತಿಳಿಯದಂತೆ ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ ಹೇಳು.
ಅನುಬೋಧಾದನರ್ಥಃ ಸ್ಯಾದ್ ಅಯಶಶ್ಚ ಮಹದ್ ಭವೇತ್ |
ಅನುಬೋಧಾದ್ಧಿ ಭೀತಾಽಸ್ಮಿ ಗಂಧರ್ವಾಣಾಂ ಯಶಸ್ವಿನಾಮ್ ॥17॥
ಏತನ್ಮೇ ಪ್ರತಿಜಾನೀಹಿ ತತೋಽಹಂ ವಶಗಾ ತವ ॥18॥
ಯಾರಾದರೂ ತಿಳಿದರೆ ದೊಡ್ಡ ಅನರ್ಥವೂ, ಅಪಕೀರ್ತಿಯೂ ಉಂಟಾದೀತು. ಕೀರ್ತಿವಂತರಾದ ಗಂಧರ್ವರಿಗೆ ತಿಳಿಯಬಹುದೆಂದು ನಾನು ಹೆದರಿದ್ದೇನೆ. ಈ ವಿಷಯದಲ್ಲಿ ನನಗೆ ಪ್ರತಿಜ್ಞೆಯನ್ನು ಮಾಡು. ಅನಂತರ ನಾನು ನಿನಗೆ ವಶಳಾಗುತ್ತೇನೆ.
ಕೀಚಕಃ
ಏವಮೇತತ್ ಕರಿಷ್ಯಾಮಿ ಯಥಾ ಸುಶ್ರೋಣಿ ಭಾಷಸೇ ॥19॥
ಏಕೋಽಹಮಾಗಮಿಷ್ಯಾಮಿ ಶೂನ್ಯಮಾವಸಥಂ ತವ |
ಸಮಾಗಮಾರ್ಥಂ ರಂಭೋರು ತ್ವಯಾ ಮದನಮೋಹಿತಃ ॥20॥
ಯಥಾ ತ್ವಾಂ ನಾವಬುಧ್ಯೇಯುರ್ಗಂಧರ್ವಾಃ ಸೂರ್ಯವರ್ಚಸಃ ॥21॥
ಕೀಚಕ ಸುಶ್ರೋಣಿಯೇ, ನೀನು ಹೇಳಿದಂತೆಯೇ ಇದನ್ನು ಮಾಡುವೆನು. ಎಲೌ ರಂಭೋರುವೇ, ಮದನಮೋಹಿತನಾದ ನಾನು ನಿನ್ನ ಸಮಾಗಮಕ್ಕಾಗಿ ಸೂರ್ಯನ ಕಾಂತಿಯುಳ್ಳ ಗಂಧರ್ವರು ತಿಳಿಯದಂತೆ ಒಬ್ಬನೇ ನಾಟ್ಯಾಗಾರಕ್ಕೆ ಬರುವೆನು.
ಸೈರಂಧ್ರೀ
ಯದಿದಂ ನರ್ತನಾಗಾರಂ ಮತ್ಸ್ಯರಾಜೇನ ಕಾರಿತಮ್ |
ದಿವಾ ತು ಕನ್ಯಾ ನೃತ್ಯಂತಿ ರಾತ್ರೌ ಯಾಂತಿ ಸ್ವಕಂ ಗೃಹಮ್ ॥22॥
ನಿಶಾಯಾಂ ತತ್ರ ಗಚ್ಛೇಥಾ ಗಂಧರ್ವಾಸ್ತನ್ನ ಜಾನತೇ |
ತತ್ರ ದೋಷಃ ಪರಿಹೃತೋ ಭವಿಷ್ಯತಿ ನ ಸಂಶಯಃ ॥23॥

ಸೈರಂಧ್ರೀ ಮತ್ಸ್ಯರಾಜನು ನಿರ್ಮಿಸಿದ ಈ ನರ್ತನಾಗಾರವು ಯಾವುದು ಇದೆಯೋ ಅಲ್ಲಿ ಹಗಲಿನಲ್ಲಿ ಕನ್ಯೆಯರು ನರ್ತನವನ್ನು ಮಾಡುತ್ತಾರೆ. ರಾತ್ರಿಯ ವೇಳೆಗೆ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ನೀನು ರಾತ್ರಿಯ ವೇಳೆಗೆ ಅಲ್ಲಿ ಬರುವವನಾಗು. ಗಂಧರ್ವರು ಆ ಸ್ಥಳವನ್ನು ತಿಳಿದಿಲ್ಲ. ಹಾಗೆ ಮಾಡಿದರೆ ನಿನ್ನ ದೋಷವು ಪರಿಹಾರವನ್ನು ಹೊಂದುವುದು. ಇದರಲ್ಲಿ ಸಂಶಯವಿಲ್ಲ.
ಏಕಸ್ತ್ವಂ ನರ್ತನಾಗಾರಂ ರಾತ್ರೌ ಸಂಕೇತಮಾವ್ರಜ |
ತತ್ರಾಹಂ ವಶಗಾ ತುಭ್ಯಂ ಭವಿತಾ ನಾತ್ರ ಸಂಶಯಃ ॥24॥
ನೀನೊಬ್ಬನೇ ರಾತ್ರಿಯಲ್ಲಿ ಸಂಕೇತಸ್ಥಾನವಾದ ನರ್ತನಾಗಾರಕ್ಕೆ ಬಾ. ನಾನು ಅಲ್ಲಿ ನಿನಗೆ ವಶಳಾಗುವೆನು. ಇದರಲ್ಲಿ ಸಂಶಯವಿಲ್ಲ.
ಕೀಚಕಃ
ತಥಾ ಭದ್ರೇ ಕರಿಷ್ಯಾಮಿ ಯಥಾ ತ್ವಂ ಭೀರು ಮನ್ಯಸೇ ॥25॥
ಏಕಃ ಸನ್ ನರ್ತನಾಗಾರಮಾಗಮಿಷ್ಯಾಮಿ ಭಾಮಿನಿ |
ಸಮಾಗಮಾರ್ಥಂ ಸುಶ್ರೋಣಿ ಶಪೇ ಚ ಸುಕೃತೇನ ಮೇ ॥26॥
ಕೀಚಕ ಎಲೌ ಭೀರುವೇ, ನಿನ್ನ ಅಭಿಪ್ರಾಯದಂತೆಯೇ ಮಾಡುವೆನು. ಭಾಮಿನಿಯೇ, ಸುಶ್ರೋಣಿಯೇ, ನಿನ್ನ ಸಮಾಗಮಕ್ಕಾಗಿ ನಾನೊಬ್ಬನೇ ನಾಟ್ಯಾಗಾರಕ್ಕೆ ಬರುವೆನು. ನನ್ನ ಪುಣ್ಯದ ಮೇಲೆ ಆಣೆಯನ್ನು ಮಾಡಿ ಹೇಳುತ್ತಿದ್ದೇನೆ.
ಯಥಾ ತ್ವಾಂ ನಾವಬುಧ್ಯಂತೇ ಗಂಧರ್ವಾ ವರವರ್ಣಿನಿ |
ಸತ್ಯಂ ಮೇ ಪ್ರತಿಜಾನೀಹಿ ಗಂಧರ್ವೇಭ್ಯೋ ನ ತೇ ಭಯಮ್ ॥27॥
ಅಲಂಕರಿಷ್ಯಾಮ್ಯದ್ಯಾಹಂ ತ್ವತ್ಸಮಾಗಮನಾಯ ವೈ ॥28॥
ವರವರ್ಣಿನಿಯೇ (ಸುಂದರಿಯೇ), ಗಂಧರ್ವರು ನಿನ್ನನ್ನು ತಿಳಿಯದಂತೆ ಮಾಡುವೆನು. ನಾನು ಶಪಥವನ್ನು ಮಾಡಿ ಹೇಳುತ್ತಿದ್ದೇನೆ. ನಿನಗೆ ಗಂಧರ್ವರಿಂದ ಭಯವು ಬೇಡ. ನಿನ್ನ ಸಮಾಗಮಕ್ಕೋಸ್ಕರವಾಗಿ ನಾನು ಅಲಂಕಾರವನ್ನು ಮಾಡಿಕೊಳ್ಳುವೆನು.
ವೈಶಂಪಾಯನಃ
ತಮರ್ಥಮಭಿಜಲ್ಪಂತ್ಯಾ ದ್ರೌಪದ್ಯಾಃ ಕೀಚಕಸ್ಯ ವೈ |
ಕ್ಷಣಮಾತ್ರಂ ತದಭವನ್ಮಾಸೇನೇವ ಸಮಂ ನೃಪ ॥29॥
ವೈಶಂಪಾಯನ ಎಲೈ ರಾಜನೇ, ಈ ವಿಷಯವನ್ನು ದ್ರೌಪದಿಯ ಜೊತೆಯಲ್ಲಿ ಮಾತನಾಡಿದ ಕೀಚಕನಿಗೆ ಅನಂತರ ಒಂದೊಂದು ಕ್ಷಣವೂ ಒಂದು ತಿಂಗಳಿನಂತೆ ಕಂಡಿತು.
ಕೀಚಕೋಽಥ ಗೃಹಂ ಗತ್ವಾ ಭೃಶಂ ಹರ್ಷಪರಿಪ್ಲುತಃ |
ಸೈರಂಧ್ರೀರೂಪಿಣಂ ಮೂಢೋ ಮೃತ್ಯುಂ ತಾಂ ನಾವಬುದ್ಧವಾನ್ ॥
ಅನಂತರ ಕೀಚಕನು ಮನೆಗೆ ಹೋಗಿ ಹರ್ಷದಿಂದ ಪೂರ್ಣವಾಗಿ ತುಂಬಿದವನಾದನು. ಆ ಮೂಢನು ಸೈರಂಧ್ರೀರೂಪವಾದ ತನ್ನ ಮೃತ್ಯುವನ್ನು ತಿಳಿಯಲಿಲ್ಲ.
ಗಂಧಾಭರಣಮಾಲ್ಯೇಷು ವ್ಯಾಸಕ್ತಃ ಸ ವಿಶೇಷತಃ |
ಅಲಂಕಾರಂ ಚಕಾರಾಶು ಸತ್ವರಃ ಕಾಲಚೋದಿತಃ ॥31॥
ಗಂಧಾಭರಣಮಾಲೆಗಳಲ್ಲಿ ಆಸಕ್ತನಾದ ಅವನು ಕಾಲಚೋದಿತನಾಗಿ ಶೀಘ್ರವಾಗಿ ತನ್ನನ್ನು ಅಲಂಕಾರ ಮಾಡಿಕೊಂಡನು.
ತಸ್ಯ ತತ್ ಕುರ್ವತಃ ಕರ್ಮ ಕಾಲೋ ದೀರ್ಘ ಇವಾಭವತ್ |
ಅನುಚಿಂತಯತಶ್ಚಾಪಿ ತಾಮೇವಾಯತಲೋಚನಾಮ್ ॥32॥
ಆ ವಿಶಾಲಾಕ್ಷಿಯನ್ನೇ ಚಿಂತಿಸುತ್ತಾ ಅಲಂಕಾರ ಮಾಡಿಕೊಳ್ಳುತ್ತಿದ್ದ ಅವನಿಗೆ ಆ ಕಾಲವು ದೀರ್ಘವಾಗಿ ಕಂಡಿತು.
ಆಸೀದಭ್ಯಧಿಕಾ ಸಾಽಪಿ ಶ್ರೀಃ ಶ್ರಿಯಂ ಪ್ರಮುಮುಕ್ಷತಃ |
ನಿರ್ವಾಣಕಾಲೇ ದೀಪಸ್ಯ ವರ್ತೀಮಿವ ದಿಧಕ್ಷತಃ ॥33॥
ದೀಪವು ಆರಿ ಬತ್ತಿಯನ್ನು ಸುಡುವ ಕಾಲಕ್ಕೆ ದೀಪದ ಪ್ರಕಾಶವು ಜಾಸ್ತಿಯಾದಂತೆ ತನ್ನ ಎಲ್ಲಾ ಸಂಪತ್ತನ್ನು ಕಳೆದುಕೊಳ್ಳಲು ಹೊರಟಿದ್ದ ಅವನಿಗೆ ಅಧಿಕವಾದ ಕಾಂತಿಯುಂಟಾಯಿತು.
ಶ್ರುತಸಂಪ್ರತ್ಯಯಸ್ತತ್ರ ಕೀಚಕೋಽಪಿ ಸಮಾಗಮೇ |
ನಾಜಾನಾತ್ ಪತನಂ ಸ್ವಸ್ಯ ಚಿಂತಯನ್ ಸ ಶುಭಾನನಾಮ್ ॥34॥
ಸಮಾಗಮದ ವಿಷಯದಲ್ಲಿ ದ್ರೌಪದಿಯ ನಂಬಿಕೆಯ ಮಾತುಗಳನ್ನು ಕೇಳಿದ ಆ ಕೀಚಕನು ಆ ಶುಭಾನನೆಯನ್ನೇ ಚಿಂತಿಸುತ್ತಾ ತನಗೆ ಉಂಟಾಗಲಿರುವ ಪತನವನ್ನು ತಿಳಿಯಲಿಲ್ಲ.
ತತಸ್ತು ದ್ರೌಪದೀ ಗತ್ವಾ ಭೀಮಸೇನಂ ಮಹಾನಸೇ |
ಉಪಾತಿಷ್ಠತ ಕಲ್ಯಾಣೀ ಕೌರವ್ಯಂ ಪತಿಮಂತಿಕಾತ್ ॥35॥
ಅನಂತರ ದ್ರೌಪದಿಯು ಅಡುಗೆ ಮನೆಗೆ ಹೋಗಿ ಕಲ್ಯಾಣಿಯಾದ ಅವಳು ಪತಿಯಾದ ಕೌರವ್ಯನಾದ ಭೀಮಸೇನನನ್ನು ಸಮೀಪದಿಂದ ಎಚ್ಚರಿಸಿದಳು.
ತಮುವಾಚ ಸುಕೇಶಾಂತಾ ಕೀಚಕಸ್ಯ ಕೃತೋ ಮಯಾ |
ಸಂಕೇತೋ ನರ್ತನಾಗಾರೇ ಯಥಾ ಚೋಕ್ತಂ ನರರ್ಷಭ ॥36॥
ಸುಕೇಶಾಂತಳಾದ ಅವಳು ಅವನನ್ನು ಕುರಿತು ಎಲೈ ನರರ್ಷಭನೇ, ನೀನು ಹೇಳಿದಂತೆ ಕೀಚಕನಿಗೆ ನರ್ತನಾಗಾರಕ್ಕೆ ಬರುವಂತೆ ಸೂಚನೆಯನ್ನು ನೀಡಿದ್ದೇನೆ ಎಂದು ಹೇಳಿದಳು.
ಕಾಲೇನ ನಿಯತಂ ಬದ್ಧಃ ಕಾಮೇನ ಚ ಬಲಾತ್ಕೃತಃ |
ಶೂನ್ಯಂ ಸ ನರ್ತನಾಗಾರಮಾಗಮಿಷ್ಯತಿ ಸೂತಜಃ ॥37॥

ಮೃತ್ಯುಪಾಶದಿಂದ ಬದ್ಧನಾಗಿ, ಕಾಮದಿಂದಲೂ ಬಲಾಕೃತನಾಗಿ ಸೂತಪುತ್ರನಾದ ಆ ಕೀಚಕನು ಶೂನ್ಯವಾದ ಆ ನರ್ತನಾಗಾರಕ್ಕೆ ಒಬ್ಬನೇ ಬರುವನು.
ಏಕೋ ನಿಶಿ ಮಹಾಬಾಹೋ ಕೀಚಕಂ ತಂ ನಿಷೂದಯ ॥38॥
ಎಲೈ ಮಹಾಬಾಹುವೇ, ಆ ಕೀಚಕನನ್ನು ರಾತ್ರಿಯಲ್ಲಿ ಸಂಹರಿಸು.
ತಂ ಸೂತಪುತ್ರಂ ಕೌಂತೇಯ ಕೀಚಕಂ ಮದದರ್ಪಿತಮ್ |
ಗತ್ವಾ ತಂ ನರ್ತನಾಗಾರೇ ವಿಭಿನ್ನಂ ಕುರು ಪಾಂಡವ ॥39॥
ಎಲೈ ಪಾಂಡವನೇ, ಕೌಂತೇಯನೇ, ನೀನು ನರ್ತನಾಗಾರಕ್ಕೆ ಹೋಗಿ ಮದದರ್ಪಿತನಾದ ಸೂತಪುತ್ರನಾದ ಕೀಚಕನನ್ನು ಭೇದಿಸುವವನಾಗು.
ಗರ್ವಿತಃ ಸೂತಪುತ್ರೋಽಸೌ ಗಂಧರ್ವಾನವಮನ್ಯತೇ |
ಸ ತ್ವಂ ಪ್ರಹರತಾಂ ಶ್ರೇಷ್ಠ ನಾಲಂ ನಾಗ ಇವಾರುಜ ॥40॥
ಗರ್ವಿತನಾದ ಈ ಸೂತಪುತ್ರನು ಗಂಧರ್ವರಿಗೆ ಅಪಮಾನವನ್ನು ಮಾಡುತ್ತಿದ್ದಾನೆ. ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಭೀಮಸೇನನೇ, ಆನೆಯು ನಾಲವನವನ್ನು ಧ್ವಂಸ ಮಾಡುವಂತೆ ನೀನು ಅವನನ್ನು ಧ್ವಂಸಮಾಡು.
ಆಸ್ರಂ ದುಃಖಾಭಿಭೂತಾಯಾ ಅಪಮಾರ್ಜಸ್ವ ಪಾಂಡವ ॥41॥
ಬಾಹುವೀರ್ಯಾನುರೂಪಂ ಚ ದರ್ಶಯಾದ್ಯ ಪರಾಕ್ರಮಮ್ |
ಆತ್ಮನಶ್ಚೈವ ಭದ್ರಂ ತೇ ಕುರು ಮಾನಂ ಕುಲಸ್ಯ ಚ ॥42॥
ಪಾಂಡವನೇ, ದುಃಖತಪ್ತಳಾದ ನನ್ನ ಕಣ್ಣೀರನ್ನು ಒರೆಸುವವನಾಗು. ನಿನ್ನ ಬಾಹುವೀರ್ಯಕ್ಕೆ ಅನುರೂಪವಾದ ಪರಾಕ್ರಮವನ್ನು ನೀನು ತೋರಿಸು. ನಿನಗೆ ಮಂಗಳವಾಗಲಿ. ನಿನಗೂ ಮತ್ತು ನಿನ್ನ ಕುಲಕ್ಕೂ ಮಾನವನ್ನು ಉಂಟುಮಾಡುವವನಾಗು (ಎಂದು ಹೇಳಿದಳು).
ಭೀಮಃ
ಸ್ವಾಗತಂ ತೇ ಸುಕೇಶಾಂತೇ ಯನ್ಮಾಂ ವೇದಯಸಿ ಪ್ರಿಯಮ್ |
ನ ಹ್ಯನ್ಯಂ ಕಂಚಿದಿಚ್ಛಾಮಿ ಸಹಾಯಂ ವರವರ್ಣಿನಿ ॥43॥
ಭೀಮ ಒಳ್ಳೆಯ ಬೈತಲೆಯುಳ್ಳವಳೇ, ನನಗೆ ಪ್ರಿಯವಾದ ವಿಷಯವನ್ನು ಹೇಳುವುದರಿಂದ ನಿನಗೆ ಸ್ವಾಗತ. ಸುಂದರಿಯೇ, ನಾನು ಈ ವಿಷಯದಲ್ಲಿ ಇನ್ನೊಬ್ಬರ ಸಹಾಯವನ್ನು ಬಯಸುವುದಿಲ್ಲ.
ಸಾ ಮೇ ಪ್ರೀತಿಸ್ತ್ವಯಾಽಽಖ್ಯಾತಾ ಕೀಚಕಸ್ಯ ಸಮಾಗಮೇ |
ಹತ್ವಾ ಹಿಡಿಂಬಂ ಯಾ ಪ್ರೀತಿಃ ಸಾ ಮಮಾಸೀಚ್ಛುಚಿಸ್ಮಿತೇ ॥44॥
ಶುಚಿಸ್ಮಿತೆಯೇ, ಹಿಡಿಂಬನ ಜೊತೆಯಲ್ಲಿ ಸೆಣೆಸಾಡಿ ಅವನನ್ನು ಕೊಂದಾಗ ಎಂತಹ ಸಂತೋಷವಾಯಿತೋ ಅಂತಹದೇ ಸಂತೋಷವು ಕೀಚಕನನ್ನು ಎದುರಿಸಿಕೊಲ್ಲುವಂತೆ ನೀನು ಹೇಳಿದಾಗ ನನಗೆ ಉಂಟಾಗುತ್ತಿದೆ.
ಸತ್ಯಂ ಭ್ರಾತೄನ್ ಸಪುತ್ರಾಂಶ್ಚ ಪುರಸ್ಕೃತ್ಯ ಶಪಾಮಿ ತೇ |
ಅಹಂ ಭದ್ರೇ ಹನಿಷ್ಯಾಮಿ ವೃತ್ರಂ ದೇವೇಶ್ವರೋ ಯಥಾ ॥45॥
ಮಂಗಳಸ್ವರೂಪಳೇ, ನನ್ನ ಸಹೋದರರ ಮೇಲೆ ಮತ್ತು ಮಕ್ಕಳ ಮೇಲೆ ಆಣೆಯನ್ನು ಮಾಡಿ ಹೇಳುತ್ತಿದ್ದೇನೆ. ದೇವೇಂದ್ರನು ವೃತ್ರನನ್ನು ಸಂಹರಿಸಿದಂತೆ ನಾನು ಕೀಚಕನನ್ನು ಕೊಲ್ಲುವೆನು.
ಕೀಚಕಂ ನಿಹನಿಷ್ಯಾಮಿ ವೃತ್ರಂ ದೇವಪತಿರ್ಯಥಾ ॥46॥
ದೇವೇಂದ್ರನು ವೃತ್ರನನ್ನು ಸಂಹರಿಸಿದಂತೆ ನಾನು ಕೀಚಕನನ್ನು ಖಂಡಿತವಾಗಿ ಕೊಲ್ಲುವೆನು.
ಪ್ರಸಹ್ಯ ಸೂದಯಿಷ್ಯಾಮಿ ಕೇಶವಃ ಕೇಶಿನಂ ಯಥಾ |
ರಹಸ್ಯಂ ವಾ ಪ್ರಕಾಶಂ ವಾ ಸೂದಯಿಷ್ಯಾಮಿ ಕೀಚಕಮ್ ॥47॥
ಕೇಶವನು ಕೇಶಿದೈತ್ಯನನ್ನು ಕೊಂದಂತೆ ನನ್ನ ಬಲದಿಂದ ಅವನನ್ನು ವಶಪಡಿಸಿಕೊಂಡು ಕೊಲ್ಲುವೆನು. ರಹಸ್ಯವಾಗಿ ಅಥವಾ ಎಲ್ಲರಿಗೂ ತಿಳಿಯುವಂತೆ ನಾನು ಕೀಚಕನನ್ನು ಕೊಲ್ಲುವೆನು.
ಯಸತ್ತ್ವಂ ಕಾಮಾಭಿಭೂತಾತ್ಮಾ ದುರ್ಲಭಾಮಭಿಮನ್ಯತೇ ॥48॥
ಏಕೆಂದರೆ ಕಾಮಪೂರ್ಣವಾದ ಮನಸ್ಸುಳ್ಳ ಅವನು ದುರ್ಲಭಳಾದ ನಿನ್ನನ್ನು ಬಯಸುತ್ತಾನೆ.
ಅಥ ಚೇದನುಬುಧ್ಯಂತಿ ಸೂತಪುತ್ರಂ ಮಯಾ ಹತಮ್ |
ನಿರ್ಮನುಷ್ಯಂ ಕರಿಷ್ಯಾಮಿ ಮತ್ಸ್ಯಾನಾಮಿಮಮಾಲಯಮ್ ॥49॥
ನಾನು ಸೂತಪುತ್ರನಾದ ಕೀಚಕನನ್ನು ಕೊಂದ ವಿಷಯವನ್ನು ಅನಂತರ ಬೇರೆಯವರು ತಿಳಿದರೆ ವಿರಾಟನ ಈ ಅರಮನೆಯನ್ನು ನಿರ್ಮನುಷ್ಯವನ್ನಾಗಿ ಮಾಡುವೆನು.
ಮಯಾ ಹತಾಂಶ್ಚೇನ್ಮಾತ್ಸ್ಯಾಂಸ್ತು ಧಾರ್ತರಾಷ್ಟ್ರೋಽನುಬುಧ್ಯತೇ ॥50॥
ದುರ್ಯೋಧನಂ ತತೋ ಹತ್ವಾ ಸಾನುಬಂಧಂ ಸಬಾಂಧವಮ್ |
ಕುರೂಣಾಮಖಿಲಂ ರಾಜ್ಯಂ ಪ್ರತಿಪತ್ಸ್ಯಾಮಿ ಭಾಮಿನಿ ॥51॥
ನನ್ನಿಂದ ಮತ್ಸ್ಯಪತಿಯ ಅಮಾತ್ಯಮೊದಲಾದವರೆಲ್ಲರೂ ಕೊಲ್ಲಲ್ಪಡುವುದನ್ನು ದುರ್ಯೋಧನನು ಒಂದುಪಕ್ಷ ತಿಳಿದರೆ ಆಗ ತನ್ನ ಮಿತ್ರ-ಬಾಂಧವರೊಡನೆ ದುರ್ಯೋಧನನ್ನು ಕೊಂದು ಎಲೌ ಭಾಮಿನಿಯೇ, ಕುರುಗಳ ಸಮಗ್ರರಾಜ್ಯವನ್ನು ಪಡೆಯುವೆನು.
ನಾಹಂ ಚೋಪಾಸಿತುಂ ಶಕ್ತಃ ಕುಂತೀಪುತ್ರಂ ಯುಧಿಷ್ಠಿರಮ್ |
ಕಾಮಂ ಸತ್ಯಮುಪಾಸೀತ ಕುಂತೀಪುತ್ರೋ ಯುಧಿಷ್ಠಿರಃ ॥52॥

ಕಾಮಮನ್ಯೇ ಹ್ಯುಪಾಸಂತು ವಿನೀತಂ ಧರ್ಮಚಾರಿಣಮ್ |
ತ್ವಾಂ ತು ದುಃಖಮಿದಂ ಪ್ರಾಪ್ತಾಂ ನಾಹಂ ಶಕ್ನೋಮ್ಯುಪೇಕ್ಷಿತುಮ್ ॥
ನಿರ್ವೃತಾ ಭವ ಪಾಂಚಾಲಿ ಕೀಚಕಸ್ಯ ವಧಾತ್ ಪುನಃ ॥54॥
ಕೀಚಕನಿಂದ ಇಂತಹ ವ್ಯಸನವು ಒದಗಿರುವಾಗ ನಾನು ಧರ್ಮರಾಜನ ಸೇವೆಯನ್ನು ಮಾಡಿಕೊಂಡು ಸುಮ್ಮನಿರಲಾರೆ. ಕುಂತೀಪುತ್ರನಾದ ಯುಧಿಷ್ಠಿರನು ತನಗೆ ಇಷ್ಟವಾದಂತೆ ತನ್ನ ಸತ್ಯಪ್ರತಿಜ್ಞೆಯನ್ನು ರಕ್ಷಿಸಿಕೊಂಡಿರಲಿ. ವಿನಯಶಾಲಿಯೂ, ಧರ್ಮಚಾರಿಯೂ ಆದ ಅವನನ್ನು ಅರ್ಜುನಾದಿಗಳು ಸೇವೆ ಮಾಡಿಕೊಂಡು ಇರಲಿ. ನಾನು ಮಾತ್ರ ನಿನಗೆ ಒದಗಿಬಂದ ಈ ದುಃಖವನ್ನು ಉಪೇಕ್ಷೆ ಮಾಡಲಾರೆ. ಪಾಂಚಾಲಿಯೇ, ಕೀಚಕನ ವಧೆಯನ್ನು ಮಾಡಿದ ಮೇಲೆ ನೀನು ಪುನಃ ಸಮಾಧಾನದಿಂದ ಇರುವವಳಾಗು.
ದ್ರೌಪದೀ
ಕೀಚಕಸ್ಯ ವಧಂ ಭೀಮ ಯದಿ ಜಾನಂತಿ ನಾಗರಾಃ |
ತ್ವಯಾ ಕೃತಂ ಮಹಾಬಾಹೋ ನಾಹಂ ಜೀವಿತುಮುತ್ಸಹೇ ॥55॥
ಕಥಂ ವಧಮುಪಾನೀಯಾಂ ರಾಜಾಽಯಂ ಮತ್ಕೃತೇ ಪ್ರಭೋ |
ದ್ರೌಪದೀ ಭೀಮಸೇನನೇ, ಮಹಾಬಾಹುವೇ, ನೀನು ಕೀಚಕನನ್ನು ಕೊಂದ ವಿಷಯವನ್ನು ನಗರದ ಜನರು ತಿಳಿದರೆ ನಾನು ಬದುಕಿರಲಾರೆ. ನಾನು ಧರ್ಮರಾಜನಿಗೆ ಹೇಗೆ ಮರಣವನ್ನುಂಟುಮಾಡಲಿ? ನನ್ನ ನಿಮಿತ್ತದಿಂದಾಗಿ ತನ್ನ ಪ್ರತಿಜ್ಞೆಯು ಪೂರ್ಣವಾಗದಿರುವುದರಿಂದ ಧರ್ಮರಾಜನು ಮರಣಹೊಂದುವನು.
ನಿಗೃಹ್ಣಂಸ್ತಂ ತಥಾ ಭೀಮ ಕೀಚಕಂ ವಿನಿಪಾತಯ ॥56॥
ಯಥಾ ನ ಕಶ್ಚಿಜ್ಜಾನೀತೇ ಸೂತಪುತ್ರಂ ತ್ವಯಾ ಹತಮ್ |
ತಥಾ ಕುರುಷ್ವ ಕೌರವ್ಯ ಬಲವನ್ನರಿಮರ್ದನ ॥57॥
ಅದೃಶ್ಯಮಾನಸ್ತ್ವಂ ತಸ್ಯ ಭಿಂಧಿ ಪ್ರಾಣಾನರಿಂದಮ ॥58॥
ಭೀಮಸೇನನೇ, ಕೀಚಕನನ್ನು ನಿಗ್ರಹಿಸಿ ಅವನನ್ನು ಕೆಡವು. ನೀನು ಕೀಚಕನನ್ನು ಕೊಂದ ವಿಷಯವು ಯಾರಿಗೂ ತಿಳಿಯದಂತೆ ಆ ಕಾರ್ಯವನ್ನು ಮಾಡಬೇಕು. ಎಲೈ ಕೌರವ್ಯನೇ, ಬಲಿಷ್ಠನೇ, ಶತ್ರುಮರ್ದನನೇ, ಅರಿಂದಮನೇ, ನೀನು ಯಾರಿಗೂ ಕಾಣದಂತೆ ಅವನನ್ನು ಪುಡಿಮಾಡು.
ಭೀಮಃ
ತಥಾ ಭದ್ರೇ ಕರಿಷ್ಯಾಮಿ ಯಥಾ ತ್ವಂ ಭೀರು ಭಾಷಸೇ |
ಅದೃಶ್ಯಮಾನಸ್ತಸ್ಯಾಹಂ ತಮಿಸ್ರಾಯಾಂ ಸಕುಂಡಲಮ್ ॥59॥
ನಾಗೋ ಬಿಲ್ವಮಿವಾಕ್ರಮ್ಯ ಪೋಥಯಿಷ್ಯಾಮಿ ತಚ್ಛಿರಃ |
ಅಲಭ್ಯಾಮಿಚ್ಛತಸ್ತಸ್ಯ ಕೀಚಕಸ್ಯ ದುರಾತ್ಮನಃ ॥60॥
ಭೀಮ ಮಂಗಳಸ್ವರೂಪಳೇ, ನೀನು ಹೇಳಿದಂತೆಯೇ ಮಾಡುವೆನು. ಯಾರಿಗೂ ಕಾಣದಂತೆ ನಾನು ಈ ರಾತ್ರಿಯಲ್ಲಿ ಆನೆಯು ಬಿಲ್ವಫಲವನ್ನು ನೆಲದ ಮೇಲೆ ಹಾಕಿ ತುಳಿದಂತೆ ಅಲಭ್ಯವಾದುದನ್ನು ಬಯಸುವ ದುರಾತ್ಮನಾದ ಕೀಚಕನ ಕರ್ಣಕುಂಡಲಸಹಿತವಾದ ಶಿರಸ್ಸನ್ನು ಆಕ್ರಮಿಸಿ ಪುಡಿಮಾಡುವೆನು.
ವೈಶಂಪಾಯನಃ
ಏವಮುಕತ್ವ  ಮಹಾಬಾಹುಸ್ತತ್ರ ಪಾಂಡವನಂದನಃ |
ಅರ್ಧರಾತ್ರೇ ತದೋತ್ಥಾಯ ಸತ್ವವಾನ್ ಭೀಮವಿಕ್ರಮಃ ॥61॥
ಅವದಾತೇನ ಮೃದುನಾ ಪಟೇನಾಚ್ಛಾದಿತಸ್ತಥಾ |
ದ್ರೌಪದೀಂ ಪೃಷ್ಠತಃ ಕೃತ್ವಾ ಯತ್ರಾಸೀನ್ನರ್ತನಾಲಯಃ ॥62॥
ವೈಶಂಪಾಯನ ಹೀಗೆ ಹೇಳಿ ಬಲಿಷ್ಠನೂ, ಭಯಂಕರ ಪರಾಕ್ರಮವುಳ್ಳವನೂ, ಮಹಾಬಾಹುವೂ ಆದ ಆ ಪಾಂಡುನಂದನನು ಆಗ ಅರ್ಧರಾತ್ರಿಯಲ್ಲಿ ಎದ್ದು ಮೃದುವಾದ ವಸ್ತ್ರವನ್ನು ಉಟ್ಟು ದ್ರೌಪದಿಯನ್ನು ಹಿಂದೆ ಮಾಡಿಕೊಂಡು ನಾಟ್ಯಾಗಾರದ ಕಡೆಗೆ ಹೊರಟನು.
ಸ ಭೀಮಃ ಪ್ರಥಮಂ ಗತ್ವಾ ತಮಿಸ್ರಾಯಾಮುಪಾವಿಶತ್ |
ಮೃಗಂ ಸಿಂಹ ಇವಾದೃಶ್ಯಃ ಪ್ರತ್ಯವೇಕ್ಷತ ಕೀಚಕಮ್ ॥63॥
ಭೀಮನು ರಾತ್ರಿಯಲ್ಲಿ ನಾಟ್ಯಾಗಾರವನ್ನು ತಲುಪಿ ಸಿಂಹವು ಅದೃಶ್ಯವಾಗಿ ಜಿಂಕೆಯನ್ನು ನಿರೀಕ್ಷಿಸುವಂತೆ (ಹೊಂಚು ಹಾಕುವಂತೆ) ಕೀಚಕನನ್ನು ನಿರೀಕ್ಷಿಸುತ್ತಾ ಕುಳಿತನು.
ಕೀಚಕಸ್ತು ಶಿರಃಸ್ನಾತೋ ನಿಶಾಯಾಂ ಸಮಲಂಕೃತಃ |
ಸಂಕೇತಮಗಮತ್ ತೂರ್ಣಂ ಶೂನ್ಯಾಗಾರಮಪಾವೃತಮ್ ॥64॥
ತಮೇವ ನರ್ತನಾಗಾರಂ ಪಾಂಚಾಲೀ ಯಮಭಾಷತ |
ರಾತ್ರಿಯಲ್ಲಿ ತಲೆಯ ಮೇಲೆ ಸ್ನಾನವನ್ನು ಮಾಡಿ, ಚೆನ್ನಾಗಿ ಅಲಂಕಾರವನ್ನು ಮಾಡಿಕೊಂಡು ಬಾಗಿಲನ್ನು ತೆರೆದಿದ್ದ, ಶೂನ್ಯವಾಗಿದ್ದ, ದ್ರೌಪದಿಯು ಹೇಳಿದ ಸಂಕೇತಸ್ಥಾನವಾಗಿದ್ದ ನಾಟ್ಯಾಗಾರಕ್ಕೆ ಕೀಚಕನು ಶೀಘ್ರವಾಗಿ ಬಂದನು.
ತಾಂ ಮನ್ಯಮಾನಃ ಸಂಕೇತೇ ಸೈರಂಧ್ರೀಂ ಕಾಮಮೋಹಿತಃ ॥65॥
ಪ್ರವಿಶ್ಯ ನರ್ತನಾಗಾರಂ ತತಸ್ತಂ ಪುರುಷಾಧಮಃ |
ಪೂರ್ವಾಗತಂ ಭೀಮಸೇನಂ ದೃಪ್ತಮಪ್ರತಿಮೌಜಸಮ್ ॥66॥

ಶಯಾನಂ ಶಯನೇ ತಂ ಸ ಮೃತ್ಯುಂ ಮೂಢಃ ಪರಾಮೃಶತ್ ॥67॥
ಕಾಮಮೋಹಿತನಾದ ಕೀಚಕನು ಸೈರಂಧ್ರಿಯು ಸಂಕೇತಸ್ಥಾನವಾದ ನಾಟ್ಯಾಗಾರಕ್ಕೆ ಬಂದಿರುವಳೆಂದು ತಿಳಿದು, ಪುರುಷಾಧಮನಾದ ಅವನು ನರ್ತನಾಗಾರವನ್ನು ಪ್ರವೇಶಿಸಿ ಮೊದಲೇ ಬಂದು ದರ್ಪದಿಂದ ಕೂಡಿದ್ದ, ಅಸದೃಶಪರಾಕ್ರಮವುಳ್ಳ, ಶಯನದಲ್ಲಿ ಮಲಗಿದ್ದ, ಭೀಮಸೇನನನ್ನು ಮೂಢನಾದ ಅವನು ಮೃತ್ಯುವನ್ನು ತಡಕಿದಂತೆ ತಡಕಿದನು.
ಜಾಜ್ವಲ್ಯಮಾನಂ ಕೋಪೇನ ಕೃಷ್ಣಾಯಾ ಧರ್ಷಣೇನ ಚ |
ಉಪಸಂಗಮ್ಯ ಚೈವೈನಂ ಕೀಚಕಃ ಕಾಮಮೋಹಿತಃ ॥68॥
ಹರ್ಷೋನ್ಮಥಿತಚಿತ್ತಾತ್ಮಾ ಸ್ಮಯಮಾನೋಽಭ್ಯಭಾಷತ ॥69॥
ಕಾಮಮೋಹಿತನಾದ ಕೀಚಕನು ಸಂತೋಷದಿಂದ ತುಂಬಿಹೋಗಿದ್ದ ತನ್ನ ಮನಸ್ಸಿನಿಂದ ಕೂಡಿದವನಾಗಿ ನಗುತ್ತಾ ತನ್ನ ಕೋಪದಿಂದಲೂ ಮತ್ತು ದ್ರೌಪದಿಯ ಧರ್ಷಣದಿಂದಲೂ ಉರಿಯುತ್ತಿದ್ದ ಭೀಮಸೇನನನ್ನು (ತಿಳಿಯದೆ) ಕುರಿತು ಮಾತನಾಡಿದನು.
ಏಕಾಂತೇ ಭೀಮಮಾಸಾದ್ಯ ಕೀಚಕಃ ಕಾಲಚೋದಿತಃ |
ಭೀಮಂ ಸಮುಪಸಂಗಮ್ಯ ಚಾಭ್ಯಭಾಷತ ದುರ್ಮತಿಃ ॥70॥
ಕಾಲಚೋದಿತನೂ, ದುರ್ಮತಿಯೂ ಆದ ಕೀಚಕನು ಏಕಾಂತದಲ್ಲಿ ಭೀಮನನ್ನು ಸಮೀಪಿಸಿ ಅವನನ್ನು ಕುರಿತು ಮಾತನಾಡಿದನು.
ಪ್ರಹಿತಂ ತೇ ಮಯಾ ಭದ್ರೇ ಬಹು ವಿತ್ತಂ ಶುಚಿಸ್ಮಿತೇ |
ತ್ವಯಿ ತಿಷ್ಠತು ತತ್ಸರ್ವಂ ಯಥಾಽಸಿ ಸ್ವಯಮಾಗತಾ ॥71॥
ಯತ್ ಕೃತಂ ಧನರತ್ನಾಢ್ಯಂ ದಾಸೀಶತಪರಿಚ್ಛದಮ್ |
ರೂಪಲಾವಣ್ಯಸಂಯುಕ್ತಂ ರೂಪವದ್ಭಿರಲಂಕೃತಮ್ ॥72॥
ಗೃಹಂ ಸಾಂತಃಪುರಂ ಸುಭ್ರು ಕ್ರೀಡಾರತಿವಿರಾಜಿತಮ್ |
ತತ್ ಸರ್ವಂ ತ್ವಾಂ ಸಮುದ್ದಿಶ್ಯ ಸಹಸಾಽಹಮುಪಾಗತಃ ॥73॥
ಮಂಗಳಸ್ವರೂಪಳೇ, ಶುಚಿಸ್ಮಿತೆಯೇ, ನೀನೇ ಸ್ವತಃ ನನ್ನ ಬಳಿಗೆ ಬಂದುದರಿಂದ ನಾನು ನಿನಗೆ ಬಹಳ ವಿತ್ತವನ್ನು ಕಳುಹಿಸಿದ್ದೇನೆ. ಅವೆಲ್ಲವೂ ನಿನ್ನ ಬಳಿಯಲ್ಲಿಯೇ ಇರಲಿ. ನಾನು ಮನೆಯನ್ನು ಧನರತ್ನದಿಂದ ತುಂಬಿದುದನ್ನಾಗಿ ಮಾಡಿ ರೂಪಲಾವಣ್ಯಗಳುಳ್ಳ ನೂರಾರು ದಾಸಿಯರ ಪರಿವಾರದಿಂದ ಅಲಂಕೃತವನ್ನಾಗಿ ಮಾಡಿ, ಎಲೌ ಸುಂದರಿಯೇ, ಅಂತಃಪುರವನ್ನೂ ಸಹ ಕ್ರೀಡಾರತಿಗಳಿಗೆ ಅನುಕೂಲವನ್ನಾಗಿ ಮಾಡಿ ಎಲ್ಲವನ್ನೂ ನಿನ್ನ ಉದ್ದೇಶದಿಂದ ಮಾಡಿ ಬೇಗ ಬಂದಿದ್ದೇನೆ.
ನಾಕಸ್ಮಾನ್ಮಾಂ ಪ್ರಶಂಸಂತಿ ಸದಾ ಗೃಹಗತಾಃ ಸ್ತ್ರಿಯಃ |
ಬಲವಾನ್ ದರ್ಶನೀಯಶ್ಚ ನಾನ್ಯೋಽಸ್ತಿ ಸದೃಶಃ ಪುಮಾನ್ ॥74॥
ನನ್ನ ಗೃಹದಲ್ಲಿದ್ದ ಸ್ತ್ರೀಯರು ಕೀಚಕನು ಬಲಿಷ್ಠನೂ, ಸುಂದರನೂ ಆಗಿದ್ದಾನೆ. ಅವನಂತಹ ಪುರುಷನು ಇನ್ನೊಬ್ಬನು ಇಲ್ಲ ಎಂದು ನನ್ನನ್ನು ಯಾವಾಗಲೂ ಪ್ರಶಂಸೆ ಮಾಡುವುದು ನಿಷ್ಕಾರಣವಲ್ಲ.
ಅಹಂ ರೂಪೇಣ ಸಂಪನ್ನಃ ಸ್ನಾತೋ ಭೂಷಣಭೂಷಿತಃ |
ನಿತ್ಯಮೇವ ಪ್ರಿಯಃ ಸ್ತ್ರೀಣಾಂ ಸೌಭಾಗ್ಯಾತ್ ಪ್ರಿಯದರ್ಶನಃ ॥75॥
ರೂಪಸ್ಯಾಸ್ಯ ಮಯಾ ಪ್ರಾಪ್ತಂ ಫಲಂ ಕಮಲಲೋಚನೇ ॥76॥
ನಾನು ಒಳ್ಳೆಯ ಸೌಂದರ್ಯದಿಂದ ಕೂಡಿದವನು. ಸ್ನಾನವನ್ನು ಮಾಡಿ ಅನೇಕ ಒಡವೆಗಳಿಂದ ಭೂಷಿತನಾಗಿದ್ದೇನೆ. ನನ್ನ ಸೌಂದರ್ಯ ಮತ್ತು ಪ್ರಿಯದರ್ಶನದಿಂದ ಸ್ತ್ರೀಯರಿಗೆ ನಾನು ಯಾವಾಗಲೂ ಪ್ರಿಯನಾದವನು. ಕಮಲಲೋಚನೆಯೇ, ಈ ದಿನ ನನ್ನ ಸೌಂದರ್ಯದ ಫಲವು ನನಗೆ ಪ್ರಾಪ್ತವಾಗಿದೆ.
ಭೀಮಃ
ದಿಷ್ಟ್ಯಾ ತ್ವಂ ದರ್ಶನೀಯೋಽಸಿ ದಿಷ್ಟ್ಯಾಽಽತ್ಮಾನಂ ಪ್ರಶಂಸಸಿ ॥77॥
ತ್ವಯಾಽಪೀದೃಗ್ಗುಣಾ ನಾರೀ ಶೀಲರೂಪಸಮನ್ವಿತಾ |
ಅದೃಷ್ಟಪೂರ್ವಾ ಪಶ್ಯೇಮಾಂ ಯತೋ ಜಾನಾಸಿ ಸೂತಜ ॥78॥
ಭೀಮ ದೇವರ ದಯೆಯಿಂದ ನೀನು ಸುಂದರನಾಗಿದ್ದೀಯೆ. ದೇವರ ದಯೆಯಿಂದ ನಿನ್ನನ್ನೇ ನೀನು ಹೊಗಳಿಕೊಳ್ಳುತ್ತಿದ್ದೀಯೆ. ಸೂತಪುತ್ರನೇ, ನೀನಾದರೂ ಶೀಲರೂಪಸಮನ್ವಿತಳಾದ ಇಂತಹ ಗುಣವುಳ್ಳ ನಾರಿಯನ್ನು ಹಿಂದೆಂದೂ ನೋಡಿಲ್ಲ. ಈಗ ನೋಡು. ನಿನಗೇ ತಿಳಿಯುತ್ತದೆ.
ದ್ರಕ್ಷ್ಯಸೇ ತ್ವಂ ಮುಹೂರ್ತೇನ ಯಥೇಯಂ ಸ್ತ್ರೀ ಗುಣಾನ್ವಿತಾ |
ಉಪರಂಸ್ಯತಿ ನಾರೀಷು ಶೀಘ್ರಂ ತ್ವಂ ದ್ರಷ್ಟುಮರ್ಹಸಿ ॥79॥
ಏವಮಂಗಸ್ಯ ಸಂಸ್ಪರ್ಶೋ ನ ತೇ ದೃಷ್ಟಃ ಕದಾಚನ ॥80॥
ಇನ್ನು ಒಂದು ಮುಹೂರ್ತದಲ್ಲಿ ಈ ವನಿತೆಯು ಎಂತಹ ಗುಣದಿಂದ ಕೂಡಿದವಳು ಎಂಬುದನ್ನು ನೀನು ನೋಡುವಿ. ಅನಂತರ ನಾರಿಯರಲ್ಲಿ ನಿನ್ನ ಇಚ್ಛೆಯು ಸಮಾಪ್ತಿಗೊಳ್ಳುವುದು. ಆದ್ದರಿಂದ ಬೇಗ ನೋಡು. ಇಂತಹ ಅವಯವದ ಸ್ಪರ್ಶವು ನಿನಗೆ ಹಿಂದೆ ಎಂದೂ ಆಗಿಲ್ಲ.
ಅದ್ಯ ತ್ವಾಂ ಭಗಿನೀ ಪಾಪ ಕೃಷ್ಯಮಾಣಂ ಮಯಾ ಭುವಿ |
ದ್ರಕ್ಷ್ಯತ್ಯದ್ರಿಪ್ರತೀಕಾಶಂ ಸಿಂಹೇನೇವ ಮಹಾಗಜಮ್ ॥81॥
ಪಾಪಿಯೇ, ಈ ದಿನ ಸಿಂಹವು ಪರ್ವತಾಕಾರದ ಮಹಾಗಜವನ್ನು ನೆಲದ ಮೇಲೆ ಎಳೆದಾಡಿದಂತೆ ನಾನು ನಿನ್ನನ್ನು ಭೂಮಿಯ ಮೇಲೆ ಎಳೆದಾಡುವುದನ್ನು ಈ ದಿನ ನಿನ್ನ ಸಹೋದರಿಯು ನೋಡುವಳು.
ನಿರಾಬಾಧಾ ತ್ವಯಿ ಹತೇ ಸೈರಂಧ್ರೀ ವಿಚರಿಷ್ಯತಿ |

ಸುಖಮೇವ ಚರಿಷ್ಯಂತಿ ಸೈರಂಧ್ರ್ಯಾಃ ಪತಯಃ ಸದಾ ॥82॥
ನೀನು ಹತನಾದ ಮೇಲೆ ಸೈರಂಧ್ರಿಯು ನಿರಾತಂಕವಾಗಿ ಸಂಚರಿಸುತ್ತಾಳೆ. ಸೈರಂಧ್ರಿಯ ಪತಿಗಳೂ ಸಹ ಯಾವಾಗಲೂ ಸುಖವಾಗಿಯೇ ಇರುತ್ತಾರೆ.
ವೈಶಂಪಾಯನಃ
ಇತ್ಯುಕ್ತ್ವಾ ತಂ ಮಹಾಬಾಹುರ್ಭೀಮೋ ಭೀಮಪರಾಕ್ರಮಃ।
ಸಮುತ್ಪತ್ಯ ಚ ಕೌಂತೇಯಃ ಪ್ರಹಸ್ಯ ಚ ನರಾಧಮಮ್ ॥83॥
ಭೀಮೋ ಜಗ್ರಾಹ ಕೇಶೇಷು ಮಾಲ್ಯವತ್ಸು ಸುಗಂಧಿಷು ॥84॥
ವೈಶಂಪಾಯನ ಹೀಗೆ ಮಾತನಾಡಿ ಭೀಮಪರಾಕ್ರಮವುಳ್ಳ ಮಹಾಬಾಹುವಾದ ಕುಂತೀಪುತ್ರನಾದ ಭೀಮಸೇನನು ನಕ್ಕು ತಾನು ಕುಳಿತ ಸ್ಥಳದಿಂದ ಹಾರಿ ನರಾಧಮನಾದ ಆ ಕೀಚಕನನ್ನು ಗಂಧಮಾಲ್ಯಗಳನ್ನು ಧರಿಸಿದ್ದ ಅವನ ಕೇಶಗಳಲ್ಲಿ ಹಿಡಿದನು.
ಗೃಹೀತ್ವಾ ಕೀಚಕಂ ಭೀಮೋ ವಿರರಾಜ ಮಹಾಬಲಃ।
ಮಹಾವನೇ ಗ್ರಾಸಕಾಮಃ ಸಿಂಹಃ ಕ್ಷುದ್ರಮೃಗಂ ಯಥಾ ॥85॥
ಆಹಾರವನ್ನು ಬಯಸುವ ಸಿಂಹವು ಮಹಾವನದಲ್ಲಿ ಕ್ಷುದ್ರಮೃಗವನ್ನು ಹಿಡಿದಂತೆ ಮಹಾಬಲನಾದ ಭೀಮನು ಕೀಚಕನನ್ನು ಹಿಡಿದು ವಿರಾಜಿಸಿದನು.
ಸ ಕೇಶೇಷು ಪರಾಮೃಷ್ಟೋ ಬಲೇನ ಬಲಿನಾಂ ವರಃ।
ಆಕ್ಷಿಪ್ಯ ಕೇಶಾನ್ ವೇಗೇನ ಬಾಹ್ವೋರ್ಜಗ್ರಾಹ ಪಾಂಡವಮ್ ॥86॥
ಬಲಿಷ್ಠರಲ್ಲಿ ಶ್ರೇಷ್ಠನಾದ ಕೀಚಕನೂ ಸಹ ಕೇಶಗಳಲ್ಲಿ ಎಳೆಯಲ್ಪಟ್ಟಾಗ ಶೀಘ್ರವಾಗಿ ತನ್ನ ಕೇಶಗಳನ್ನು ಕೊಡವಿ ಬಿಡಿಸಿಕೊಂಡು ಪಾಂಡವನ ಬಾಹುಗಳನ್ನು ಹಿಡಿದನು.
ಬಾಹುಯುದ್ಧಂ ತಯೋರಾಸೀತ್ ಕ್ರುದ್ಧಯೋರ್ನರಸಿಂಹಯೋಃ।
ವಸಂತೇ ವಾಶಿತಾಹೇತೋರ್ಬಲಿನೋರಿವ ನಾಗಯೋಃ ॥87॥
ಕೀಚಕಾನಾಂ ತು ಮುಖ್ಯಸ್ಯ ನರಾಣಾಮುತ್ತಮಸ್ಯ ಚ ॥88॥
ಕೀಚಕರಲ್ಲಿ ಮುಖ್ಯನಾದ ಅವನಿಗೂ ಮತ್ತು ಮನುಷ್ಯರಲ್ಲಿ ಶ್ರೇಷ್ಠನಾದ ಭೀಮಸೇನನಿಗೂ - ಈ ಇಬ್ಬರು ನರಶ್ರೇಷ್ಠರಿಗೂ ವಸಂತಮಾಸದಲ್ಲಿ ಸಿಕ್ಕ ಹೆಣ್ಣಾನೆಯ ಸಲುವಾಗಿ ಬಲಿಷ್ಠವಾದ ಗಜಗಳಿಗೆ ಉಂಟಾದಂತೆ ಕ್ರೋಧದಿಂದ ಕೂಡಿದ ಅವರಿಗೆ ಬಾಹುಯುದ್ಧವು ಜರುಗಿತು.
ಅನ್ಯೋನ್ಯಮಭಿಸಂರಬ್ಧೌ ಪರಸ್ಪರಜಯೈಷಿಣೌ।
ವಾಲಿಸುಗ್ರೀವಯೋರ್ಭ್ರಾತ್ರೋಃ ಪುರೇವ ಕಪಿಸಿಂಹಯೋಃ ॥89॥
ಪರಸ್ಪರವಾಗಿ ಕ್ರೋಧದೀಪ್ತರಾಗಿ ಪರಸ್ಪರವಾಗಿ ಜಯವನ್ನು ಬಯಸುವ ಅವರಿಬ್ಬರಿಗೂ ಹಿಂದೆ ಕಪಿಶ್ರೇಷ್ಠರಾದ ಸೋದರರಾದ ವಾಲಿಸುಗ್ರೀವರಿಗೆ ನಡೆದಂತೆ (ಬಾಹುಯುದ್ಧವು) ನಡೆಯಿತು.
ತತಃ ಸಮುತ್ಪತ್ಯ ಭುಜೌ ಪಂಚಶೀರ್ಷಾವಿವೋರಗೌ।
ನಖದಂಷ್ಟ್ರಾಭಿರನ್ಯೋನ್ಯಂ ಘ್ನತಃ ಕ್ರೋಧವಿಷೋದ್ಧತೌ ॥90॥
ಅನಂತರ ಇಬ್ಬರೂ ಮೇಲಕ್ಕೆ ನೆಗೆದು ಕ್ರೋಧವಿಷದಿಂದ ಉಲ್ಬಣವಾದ ಐದುಹೆಡೆಯ ಸರ್ಪದಂತಿರುವ ತಮ್ಮ ಭುಜಗಳನ್ನು ಮೇಲಕ್ಕೆತ್ತಿ ನಖಗಳಿಂದಲೂ ಮತ್ತು ಕೋರೆಹಲ್ಲುಗಳಿಂದಲೂ ಒಬ್ಬರನ್ನೊಬ್ಬರು ಘಾಸಿಮಾಡಿದರು.
ವೇಗೇನಾಭಿಹತೋ ಭೀಮಃ ಕೀಚಕೇನ ಬಲೀಯಸಾ।
ಸ್ಥಿರಪ್ರತಿಜ್ಞಃ ಸ ರಣೇ ಪದಾನ್ನ ಚಾಲಿತಃ ಪದಮ್ ॥91॥
ಬಲಿಷ್ಠನಾದ ಕೀಚಕನಿಂದ ವೇಗವಾಗಿ ಅಭಿಹತನಾದ ಭೀಮನು ಯುದ್ಧದಲ್ಲಿ ಸ್ಥಿರವಾಗಿ ನಿಂತನು. ಒಂದು ಹೆಜ್ಜೆಯನ್ನೂ ಅಲುಗಾಡಿಸಲಿಲ್ಲ.
ತಾವನ್ಯೋನ್ಯಂ ಸಮಾಶ್ಲಿಷ್ಯ ಪ್ರಕರ್ಷಂತೌ ಪರಸ್ಪರಮ್।
ಉಭಾವಪಿ ಪ್ರಕಾಶೇತೇ ಪ್ರವೃದ್ಧೌ ವೃಷಭಾವಿವ ॥92॥
ಅವರಿಬ್ಬರೂ ಪರಸ್ಪರವಾಗಿ ಆಲಿಂಗಿಸಿ ಒಬ್ಬರನ್ನೊಬ್ಬರು ಎಳೆಯುತ್ತಾ ದೊಡ್ಡ ವೃಷಭಗಳಂತೆ ಪ್ರಕಾಶಿಸಿದರು.
ತಯೋರಾಸೀತ್ ಸುತುಮುಲಃ ಸಂಪ್ರಹಾರಃ ಸುದಾರುಣಃ।
ನಖದಂತಾಯುಧವತೋರ್ವ್ಯಾಘ್ರಯೋರಿವ ದೃಪ್ತಯೋಃ ॥93॥
ನಖ, ದಂತವೇ ಆಯುಧವಾಗುಳ್ಳ ಅವರಿಗೆ ದರ್ಪಿಷ್ಠವಾದ ವ್ಯಾಘ್ರಗಳಿಗೆ ನಡೆಯುವಂತೆ ಪರಮದಾರುಣವೂ, ಘೋರವೂ ಆದ ಸಂಪ್ರಹಾರವು ಪರಸ್ಪರವಾಗಿ ಉಂಟಾಯಿತು.
ಅಭಿಪತ್ಯಾಥ ಬಾಹುಭ್ಯಾಂ ಪ್ರತ್ಯಗೃಹ್ಣಾದಮರ್ಷಿತಃ।
ಮಾತಂಗ ಇವ ಮಾತಂಗಂ ಪ್ರಭಿನ್ನಕರಟಾಮುಖಮ್ ॥94॥
ಕೋಪಗೊಂಡ ಕೀಚಕನು ಮೇಲಕ್ಕೆ ಹಾರಿ ತನ್ನ ಬಾಹುಗಳಿಂದ ಆನೆಯು ಮದಿಸಿದ ಆನೆಯನ್ನು ಹಿಡಿಯುವಂತೆ ಭೀಮಸೇನನನ್ನು ಹಿಡಿದನು.
ಸ ಚಾಪ್ಯೇನಂ ತದಾ ಭೀಮಃ ಪ್ರತಿಜಗ್ರಾಹ ವೀರ್ಯವಾನ್।
ತಮಾಕ್ಷಿಪತ್ ಕೀಚಕೋಽಥ ಬಲೇನ ಬಲಿನಾಂ ವರಃ ॥95॥
ಆಗ ಬಲಶಾಲಿಯಾದ ಭೀಮನೂ ಸಹ ಈ ಕೀಚಕನನ್ನು ಪ್ರತಿಯಾಗಿ ಹಿಡಿದನು. ಬಲಿಷ್ಠರಲ್ಲಿ ಶ್ರೇಷ್ಠನಾದ ಕೀಚಕನು ಅನಂತರ ತನ್ನ ಬಲದಿಂದ ಅವನಿಂದ ಬಿಡಿಸಿಕೊಂಡನು.

ತಯೋರ್ಭುಜವಿನಿಷ್ಪೇಷಾದುಭಯೋರ್ಬಲಿನೋಸ್ತದಾ |
ಶಬ್ದಃ ಸಮಭವತ್ ಘೋರೋ ವೇಣುಸ್ಫೋಟಸಮೋ ಯುಧಿ ॥96॥
ಬಲಿಷ್ಠರಾದ ಅವರಿಬ್ಬರೂ ತಮ್ಮ ಭುಜಗಳಿಂದ ಪರಸ್ಪರವಾಗಿ ಯುದ್ಧದಲ್ಲಿ ಘಟ್ಟಿಸುವಾಗ ಬಿದಿರು ಸ್ಫೋಟಗೊಂಡಂತೆ ಘೋರವಾದ ಶಬ್ದವುಂಟಾಯಿತು.
ಅಥೈನಮಾಕ್ಷಿಪ್ಯ ಬಲಾದ್ ಗೃಹಮಧ್ಯೇ ವೃಕೋದರಃ |
ಧೂನಯಾಮಾಸ ವೇಗೇನ ವಾಯುಶ್ಚಂಡ ಇವ ದ್ರುಮಮ್ ॥97॥
ಅನಂತರ ವೃಕೋದರನು ನಾಟ್ಯಾಗಾರದ ಮಧ್ಯದಲ್ಲಿ ತನ್ನ ಬಲದಿಂದ ಅವನನ್ನು ಎತ್ತಿ ಚಂಡವಾಯುವು ತನ್ನ ವೇಗದಿಂದ ವೃಕ್ಷವನ್ನು ತೂಗುವಂತೆ ಕೀಚಕನನ್ನು ತೂಗಾಡಿಸಿದನು.
ಭೀಮೇನ ಚ ಪರಾಮೃಷ್ಟೋ ದುರ್ಬಲೋ ಬಲಿನಾ ರಣೇ |
ವ್ಯ(ಪ್ರಾ)ಸ್ಪಂದತ ಯಥಾಪ್ರಾಣಂ ವಿಚಕರ್ಷ ಚ ಪಾಂಡವಮ್ ॥98॥
ಯುದ್ಧದಲ್ಲಿ ಬಲಿಷ್ಠನಾದ ಭೀಮನಿಂದ ಹಿಡಿಯಲ್ಪಟ್ಟ ದುರ್ಬಲನಾದ ಕೀಚಕನು ತನ್ನ ಶಕ್ತಿಗೆ ಅನುಗುಣವಾಗಿ ಭೀಮಸೇನನನ್ನು ಎಳೆದಾಡಿದನು.
ಈಷದಾಗಲಿತಂ ಚಾತಿಕ್ರೋಧಾಚ್ಚಲಪದಂ ಸ್ಥಿತಮ್ |
ಕೀಚಕೋ ಬಲವಾನ್ ಭೀಮಂ ಜಾನುಭ್ಯಾಂ ಪಾತಯದ್ ಭುವಿ ॥99॥
ತನ್ನ ಕೋಪದಿಂದ ಸ್ವಲ್ಪ ಶಿಥಿಲವಾಗಿ ನಿಂತು ಪಾದಗಳು ಅಲುಗಾಡುತ್ತಿದ್ದ ಭೀಮಸೇನನನ್ನು ಬಲಿಷ್ಠನಾದ ಕೀಚಕನು ತನ್ನ ಮಂಡಿಗಳಿಂದ ಗುದ್ದಿ ನೆಲದ ಮೇಲೆ ಕೆಡವಿದನು.
ಪಾತಿತೋ ಭೀಮಸೇನಸ್ತು ಕೀಚಕೇನ ಬಲೀಯಸಾ |
ಉತ್ಪಪಾತಾಥ ವೇಗೇನ ದಂಡಾಹತ ಇವೋರಗಃ ॥100॥
ಬಲಿಷ್ಠನಾದ ಕೀಚಕನಿಂದ ಕೆಡವಲ್ಪಟ್ಟ ಭೀಮಸೇನನಾದರೂ ದಂಡದಿಂದ ಹೊಡೆದ ಸರ್ಪದಂತೆ ವೇಗದಿಂದ ಮೇಲಕ್ಕೆದ್ದನು.
ಸ್ಪರ್ಧಯಾ ಚ ಬಲೋನ್ಮತ್ತೌ ತಾವುಭೌ ಭೀಮಕೀಚಕೌ |
ನಿಃಶಬ್ದಂ ಪರ್ಯಕರ್ಷೇತಾಮನ್ಯೋನ್ಯಸ್ಯ ವಿನಿರ್ಜಯೇ ॥101॥
ಬಲೋನ್ಮತ್ತರಾದ ಆ ಭೀಮಕೀಚಕರಿಬ್ಬರೂ ಪರಸ್ಪರ ಜಯವನ್ನು ಬಯಸುವವರಾಗಿ ಸ್ಪರ್ಧೆಯಿಂದ ನಿಶ್ಶಬ್ದವಾಗಿ ಒಬ್ಬರನ್ನೊಬ್ಬರು ಎಳೆದಾಡಿದರು.
ತತಸ್ತದ್ ಭವನಶ್ರೇಷ್ಠಂ ಪ್ರಾಕಂಪತ ತದಾ ಭೃಶಮ್ |
ತೌ ಕ್ರೋಧವಶಮಾಪನ್ನಾವನ್ಯೋನ್ಯಮಭಿಜಘ್ನತುಃ ॥102॥
ಆಗ ಆ ಶ್ರೇಷ್ಠವಾದ ನಾಟ್ಯಾಗಾರವು ಕಂಪಿಸಿತು. ಕ್ರೋಧವಶರಾದ ಅವರಿಬ್ಬರೂ ಪರಸ್ಪರವಾಗಿ ಹೊಡೆದಾಡಿದರು.
ತಳಾಭ್ಯಾಂ ಭೀಮಸೇನೇನ ವಕ್ಷಸ್ಯಭಿಹತೋ ಭೃಶಮ್ |
ಕೀಚಕೋ ರೋಷತಾಮ್ರಾಕ್ಷೋ ನ ಚಚಾಲ ಪದಾತ್ ಪದಮ್ ॥103॥
ತನ್ನ ಹಸ್ತತಳದಿಂದ ಭೀಮಸೇನನಿಂದ ಎದೆಯಲ್ಲಿ ಹೊಡೆಯಲ್ಪಟ್ಟ, ರೋಷದಿಂದ ಕೆಂಪಾದ ಕಣ್ಣುಳ್ಳ, ಕೀಚಕನು ತನ್ನ ಹೆಜ್ಜೆಯನ್ನೂ ಅಲುಗಾಡಿಸಲಿಲ್ಲ.
ಮುಹೂರ್ತಮಶಕತ್ ಸೋಢುಂ ವೇಗಂ ತಸ್ಯ ಮಹಾತ್ಮನಃ |
ಕೀಚಕೋ ಭೀಮಸೇನಸ್ಯ ಪಶ್ಚಾತ್ ಪಶ್ಚಾತ್ ತು ಹೀಯತೇ ॥104॥
ಕೀಚಕನು ಮಹಾತ್ಮನಾದ ಭೀಮಸೇನನ ವೇಗವನ್ನು ಒಂದು ಮುಹೂರ್ತದ ಕಾಲ ತಡೆದನು. ಅನಂತರ ಆಯಾಸಗೊಳ್ಳಲು ಪ್ರಾರಂಭಿಸಿದನು.
ತಂ ಹೀಯಮಾನಂ ವಿಜ್ಞಾಯ ಭೀಮಸೇನೋ ಮಹಾಬಲೀ |
ವಕ್ಷಸ್ಯಾನೀಯ ವೇಗೇನ ಪ್ರಮಮಾಥ ವಿಚೇತಸಮ್ ॥105॥
ಮಹಾಬಲಿಷ್ಠನಾದ ಭೀಮಸೇನನು ಅವನು ದಣಿಯುತ್ತಿರುವುದನ್ನು ನೋಡಿ ವಿಚೇತನನಾದ ಅವನಿಗೆ ತನ್ನ ಮುಷ್ಟಿಯಿಂದ ವೇಗವಾಗಿ ಎದೆಯಲ್ಲಿ ಹೊಡೆದನು.
ಕ್ರೋಧಾವಿಷ್ಟೋ ವಿನಿಃಶ್ವಸ್ಯ ಪುನಶ್ಚೈನಂ ವೃಕೋದರಃ |
ಜಗ್ರಾಹ ಜಯತಾಂ ಶ್ರೇಷ್ಠಃ ಕೇಶೇಷ್ವೇವ ಭೃಶಂ ತದಾ ॥106॥
ಕ್ರೋಧಾವಿಷ್ಟನಾದ, ಜಯಶಾಲಿಗಳಲ್ಲಿ ಶ್ರೇಷ್ಠನಾದ ವೃಕೋದರನು ನಿಟ್ಟುಸಿರನ್ನು ಬಿಟ್ಟು ಪುನಃ ಅವನನ್ನು ಕೇಶಗಳಲ್ಲಿಯೇ ಗಟ್ಟಿಯಾಗಿ ಹಿಡಿದನು.
ಗೃಹೀತ್ವಾ ಕೀಚಕಂ ಭೀಮೋ ವಿರರಾಜ ಮಹಾಬಲಃ |
ಆಮಿಷಾರ್ಥೇ ಗೃಹೀತ್ವೇವ ಶಾರ್ದೂಲೋ ಮೃಗಯೂಥಪಮ್ ॥
ಮಹಾಬಲನಾದ ಭೀಮನು ಕೀಚಕನನ್ನು ಹಿಡಿದು ಆಹಾರಾರ್ಥವಾಗಿ ಮೃಗರಾಜನನ್ನು ಹಿಡಿದ ಹುಲಿಯಂತೆ ಶೋಭಿಸಿದನು.
ಪುನಶ್ಚಾತಿಬಲಸ್ತತ್ರ ಕೀಚಕೋ ಬಲದರ್ಪಿತಃ |
ವ್ಯಾಯಚ್ಛನ್ನೇವ ದುರ್ಧರ್ಷಃ ಪಾಂಡವೇನ ಯಶಸ್ವಿನಾ ॥108॥
ಮುಷ್ಟಿನಾ ಭೀಮಸೇನೇನ ಶಿರಸ್ಯಭಿಹತೋ ಭೃಶಮ್ ॥109॥
ಅತಿಬಲನೂ, ಬಲದರ್ಪಿತನೂ, ದುರ್ಧರ್ಷನೂ ಆದ ಕೀಚಕನು ಪುನಃ ಬಿಡಿಸಿಕೊಳ್ಳಲು ಪ್ರಯತ್ನಪಡುತ್ತಿರುವಂತೆಯೇ, ಕೀರ್ತಿವಂತನೂ, ಪಾಂಡುಪುತ್ರನೂ ಆದ ಭೀಮಸೇನನು ತನ್ನ ಮುಷ್ಟಿಯಿಂದ ಅವನ ತಲೆಯ ಮೇಲೆ ಬಲವಾಗಿ ಹೊಡೆದನು.

ತತ ಏನಂ ಪರಿಶ್ರಾಂತಮುಪಲಭ್ಯ ವೃಕೋದರಃ |
ಯೋಕ್ತ್ರಯಾಮಾಸ ಬಾಹುಭ್ಯಾಂ ಪಶುಂ ರಶನಯಾ ಯಥಾ ॥110॥
ಅನಂತರ ವೃಕೋದರನು ಅವನು ದಣಿದಿರುವುದನ್ನು ಗಮನಿಸಿ ಪಶುವನ್ನು ಹಗ್ಗದಿಂದ ಕಟ್ಟಿದಂತೆ ತನ್ನ ಬಾಹುಗಳಿಂದ ಅವನನ್ನು ಕಟ್ಟಿದನು (ಪಟ್ಟು ಹಾಕಿದನು).
ನದಂತಂ ಚ ಮಹಾನಾದಂ ಭಿನ್ನಭೇರಿಸಮಸ್ವನಮ್ |
ಭ್ರಾಮಯಾಮಾಸ ಸುಚಿರಂ ವಿಷ್ಫುರಂತಮಚೇತಸಮ್ ॥111॥
ಅನಂತರ ಒಡೆದ ನಗಾರಿಯಂತೆ ಘೋರವಾದ ಶಬ್ದವನ್ನು ಮಾಡುತ್ತಿದ್ದ ಹಾಗೆಯೇ ಒದ್ದಾಡುತ್ತಿದ್ದ ಅಚೇತನನಾದ ಕೀಚಕನನ್ನು ಬಹಳ ಸಮಯದವರೆಗೆ ಎತ್ತಿ ತಿರುಗಿಸಿದನು.
ಪ್ರಗೃಹ್ಯ ತರಸಾ ದೋರ್ಭ್ಯಾಂ ಕಂಠಂ ತಸ್ಯ ವೃಕೋದರಃ |
ಅಪೀಡಯತ ಕೃಷ್ಣಾಯಾಸ್ತದಾ ಕೋಪೋಪಶಾಂತಯೇ ॥112॥
ಅನಂತರ ವೇಗದಿಂದ ಅವನನ್ನು ಹಿಡಿದು ವೃಕೋದರನು ದ್ರೌಪದಿಯ ಕೋಪಶಾಂತಿಗಾಗಿ ಅವನ ಕಂಠವನ್ನು ಬಲವಾಗಿ ಹಿಡಿದು ಪೀಡಿಸಿದನು.
ಅಥ ತಂ ಭಗ್ನಸರ್ವಾಂಗಂ ವ್ಯಾವಿದ್ಧನಯನಾಂಬರಮ್ |
ಆಕ್ರಮ್ಯ ಚ ಕಟಿದೇಶೇ ಜಾನುನಾ ಕೀಚಕಾಧಮಮ್ ॥113॥
ಅಪೀಡಯತ ಬಾಹುಭ್ಯಾಂ ಪಶುಮಾರಮಮಾರಯತ್ |
ಅನಂತರ ಜರ್ಝರಿತ ಸರ್ವಾಂಗವುಳ್ಳವನಾದ, ಹೊರಗೆ ಬಂದ ಕಣ್ಣುಗಳು ಮತ್ತು ಜಾರಿದ ವಸ್ತ್ರವುಳ್ಳ ಕೀಚಕಾಧಮನನ್ನು ಆಕ್ರಮಿಸಿ, ಅವನ ಸೊಂಟಪ್ರದೇಶದಲ್ಲಿ ತನ್ನ ಮಂಡಿಯನ್ನು ಊರಿ, ಬಾಹುಗಳಿಂದ ಅವನನ್ನು ಹಿಂದಕ್ಕೆ ಬಗ್ಗಿಸಿ ಪೀಡಿಸಿ ಪಶುವನ್ನು ಕೊಲ್ಲುವಂತೆ ಅವನನ್ನು ಕೊಂದನು.
ತಂ ವಿಷೀದಂತಮಾಜ್ಞಾಯ ಕೀಚಕಂ ಪಾಂಡುನಂದನಃ ॥114॥
ಭೂತಳೇ ಭ್ರಾಮಯಾಮಾಸ ವಾಕ್ಯಂ ಚೇದಮುವಾಚ ಹ ॥115॥
ಪಾಂಡುನಂದನನು, ಕೀಚಕನು ವಿಷಾದವನ್ನು ಹೊಂದುತ್ತಿರುವುದನ್ನು ಗಮನಿಸಿ ಭೂಮಿಯ ಮೇಲೆ ಅವನನ್ನು ತಿರುಗಿಸುತ್ತಾ ಹೀಗೆ ಮಾತನಾಡಿದನು.
ಅದ್ಯಾಹಮನೃಣೋ ಭೂತ್ವಾ ಭ್ರಾತುಭಾರ್ಯಾಪಹಾರಿಣಮ್ |
ಶಾಂತಿಂ ಲಬ್ಧಾಸ್ಮಿ ಪರಮಾಂ ಹತ್ವಾ ಸೈರಂಧ್ರಿಕಂಟಕಮ್ ॥116॥
ಸಹೋದರರಾದ ನಮ್ಮ ಪತ್ನಿಯನ್ನು ಅಪಹಾರ ಮಾಡಿದ, ಸೈರಂಧ್ರಿಯ ಕಂಟಕನಾದ ಕೀಚಕನನ್ನು ಕೊಂದು ಈ ದಿನ ನಾನು ಋಣಮುಕ್ತನಾಗಿದ್ದೇನೆ. ಮನಸ್ಸಿಗೆ ಒಳ್ಳೆಯ ಹರ್ಷ ಮತ್ತು ಸಮಾಧಾನವಾಗಿದೆ.
ಇತ್ಯೇವಮುಕತ್ತ್ವ ಪುರುಷಪ್ರವೀರಃ
ತಂ ಕೀಚಕಂ ಕ್ರೋಧಸರಾಗನೇತ್ರಃ |
ಆಸ್ರಸ್ತವಸತ್ರಭರಣಂ ಸ್ಫುರಂತಮ್
ಉದ್ಭ್ರಾಂತಚಿತ್ತಂ ವ್ಯಸುಮುತ್ಸಸರ್ಜ ॥117॥
ಆ ಪುರುಷಪ್ರವೀರನೂ, ಕ್ರೋಧದಿಂದ ಕೆಂಪಾದ ಕಣ್ಣುಳ್ಳವನೂ ಆದ ಭೀಮಸೇನನು ಹೀಗೆ ಹೇಳಿ ವಸತ್ರಭರಣಗಳು ಅಸ್ತವ್ಯಸ್ತವಾಗಿ ಇನ್ನೂ ನೆಲದ ಮೇಲೆ ಒದ್ದಾಡುತ್ತಾ ಉದ್ಭ್ರಾಂತಚಿತ್ತನಾಗಿ ಅಸುವನ್ನು ನೀಗಿದ ಆ ಕೀಚಕನನ್ನು ತ್ಯಜಿಸಿದನು.
ತಸ್ಯ ಪಾದೌ ಚ ಪಾಣೀ ಚ ಶಿರೋಗ್ರೀವಂ ಸಕುಂಡಲಮ್ |
ಕಾಯೇ ನಿವೇಶಯಾಮಾಸ ಮೃದಿತ್ವಾಽಂಗಾನಿ ಸರ್ವಶಃ ॥118॥
ಸ ತಂ ಮಥಿತಸರ್ವಾಂಗಂ ಮಾಂಸಪಿಂಡಮಿವಾಕರೋತ್ ॥119॥
ಅವನ ಹಸ್ತಗಳು, ಪಾದಗಳು, ಕತ್ತು, ಕುಂಡಲಸಹಿತವಾದ ಶಿರಸ್ಸು ಎಲ್ಲವನ್ನೂ ಗುದದ್ವಾರದ ಮೂಲಕ ಅವನ ದೇಹದೊಳಗೇ ಸೇರಿಸಿದನು. ಎಲ್ಲಾ ಅವಯವಗಳನ್ನೂ ಮುರಿದು ಅವನನ್ನು ಒಂದು ಮಾಂಸದ ಮುದ್ದೆಯನ್ನಾಗಿ ಮಾಡಿದನು.
ತತ್ರಾಗ್ನಿಂ ಸ್ವಯಮುಜ್ಜ್ವಾಲ್ಯ ದರ್ಶಯಾಮಾಸ ಕೀಚಕಮ್ |
ಕೃಷ್ಣಾಂ ಪ್ರೋವಾಚ ಭೀಮಸ್ತು ಪಶ್ಯೇಮಂ ಸುಭ್ರು ಕಾಮುಕಮ್ ॥
ಭೀಮಸೇನನು ಅಲ್ಲಿ ಸ್ವತಃ ತಾನೇ (ಕೈಗಳನ್ನು ಉಜ್ಜಿ) ಅಗ್ನಿಯನ್ನು ಉತ್ಪಾದನೆಯನ್ನು ಮಾಡಿ ದ್ರೌಪದಿಯನ್ನು ಕರೆದು ಸುಂದರಿಯೇ, ಕಾಮುಕನಾದ ಈ ಕೀಚಕನನ್ನು ನೋಡು ಎಂದು ಕೀಚಕನನ್ನು ತೋರಿಸಿದನು.
ಉವಾಚ ಚ ಮಹಾತೇಜಾ ದ್ರೌಪದೀಂ ಪಾಂಡುನಂದನಃ ॥121॥
ಪಶ್ಯೈನಮೇಹಿ ಪಾಂಚಾಲಿ ಕೀಚಕೋಽಯಂ ಯಥಾಕೃತಃ ॥122॥
ಮಹಾತೇಜಸ್ವಿಯಾದ ಪಾಂಡುನಂದನನಾದ ಅವನು ದ್ರೌಪದಿಯನ್ನು ಕುರಿತು ಪಾಂಚಾಲಿಯೇ, ಬಾ ಈ ಕೀಚಕನನ್ನು ಹೇಗೆ ಮಾಡಿದ್ದೇನೆ ಎಂದು ನೋಡು ಎಂದು ಹೇಳಿದನು.
ಪ್ರಾರ್ಥಯಂತೇ ಸುಕೇಶಾಂತೇ ಯೇ ತ್ವಾಂ ಶೀಲಗುಣಾನ್ವಿತಾಮ್ |
ಏವಂ ಸ್ವಪ್ಸ್ಯಂತಿ ತೇ ಭೀರು ಶೇತೇಽಯಂ ಕೀಚಕೋ ಯಥಾ ॥123॥
ಸುಂದರಿಯೇ, ಭೀರುವೇ, ಶೀಲಗುಣಾನ್ವಿತಳಾದ ನಿನ್ನನ್ನು ಯಾರು ಬಯಸುತ್ತಾರೆಯೋ ಅವರೆಲ್ಲರೂ ಕೀಚಕನು ಮಲಗಿದಂತೆ ಹೀಗೆಯೇ ಮಲಗುವರು.
ವೈಶಂಪಾಯನಃ

ತಥಾ ಸ ಕೀಚಕಂ ಹತ್ವಾ ಸ್ವಸ್ಯ ರೋಷಸ್ಯ ನಿಷ್ಕೃತಿಮ್ |
ಆಮಂತ್ರ್ಯ ದ್ರೌಪದೀಂ ಪಶ್ಚಾತ್ ಕ್ಷಿಪ್ರಮಾಯಾನ್ ಮಹಾನಸಮ್ ॥
ವೈಶಂಪಾಯನ ಭೀಮಸೇನನು ಆ ರೀತಿಯಲ್ಲಿ ಕೀಚಕನನ್ನು ಕೊಂದು ತನ್ನ ರೋಷಕ್ಕೆ ಪ್ರತೀಕಾರವನ್ನು ಮಾಡಿ ದ್ರೌಪದಿಯ ಅನುಮತಿಯನ್ನು ಪಡೆದು ಬೇಗ ಮಹಾನಸಕ್ಕೆ ನಡೆದನು.
ಸ್ನಾತ್ವಾಽನುಲೇಪನಂ ಕೃತ್ವಾ ಪ್ರಪೂರ್ಯ ಚ ಮನೋರಥಮ್ |
ಸುಖೋಪವಿಷ್ಟಃ ಶಯನೇ ಭೀಮೋ ಭೀಮಪರಾಕ್ರಮಃ ॥125॥
ತನ್ನ ಮನೋರಥವನ್ನು ಪೂರ್ಣಗೊಳಿಸಿ ಸ್ನಾನವನ್ನು ಮಾಡಿ ಗಂಧಾದಿ ಲೇಪನವನ್ನು ಮಾಡಿಕೊಂಡ ಭೀಮಪರಾಕ್ರಮವುಳ್ಳ ಭೀಮಸೇನನು ತನ್ನ ಹಾಸಿಗೆಯಲ್ಲಿ ಸುಖವಾಗಿ ಕುಳಿತನು.
ತತಃ ಕೃಷ್ಣಾ ಯದಾ ಮೇನೇ ಗತಂ ಭೀಮಂ ಮಹಾನಸೇ |
ಕೀಚಕಂ ಘಾತಯಿತ್ವಾ ಚ ದ್ರೌಪದೀ ಯೋಷಿತಾಂ ವರಾ ॥126॥
ಪ್ರಹೃಷ್ಟಾ ಗತಸಂತ್ರಾಸಾ ಸಭಾಪಾಲಾನುವಾಚ ಹ ॥127॥
ಕೀಚಕನು ಹತನಾದನು ಮತ್ತು ಭೀಮಸೇನನು ಮಹಾನಸಕ್ಕೆ ಹೋಗಿದ್ದಾನೆ ಎಂದು ತಿಳಿದಮೇಲೆ ಸ್ತ್ರೀಯರಲ್ಲಿ ಶ್ರೇಷ್ಠಳಾದ ಆ ದ್ರೌಪದಿಯು ಕೀಚಕನನ್ನು ಕೊಲ್ಲಿಸಿ ಭಯದಿಂದ ದೂರಳಾಗಿ ಸಂತೋಷಗೊಂಡು ಸಭಾಪಾಲಕರನ್ನು ಕುರಿತು ಹೇಳಿದಳು.
ಕೀಚಕೋಽಯಂ ಹತಃ ಶೇತೇ ಗಂಧರ್ವೈಃ ಪತಿಭಿರ್ಮಮ |
ಪರಸ್ತ್ರೀಕಾಮಸಂತಪ್ತಂ ತದಾಗಚ್ಛತ ಪಶ್ಯತ ॥128॥
ನನ್ನ ಪತಿಗಳಾದ ಗಂಧರ್ವರಿಂದ ಕೊಲ್ಲಲ್ಪಟ್ಟು ಕೀಚಕನು ಮಲಗಿದ್ದಾನೆ. ನೀವೆಲ್ಲರೂ ಬಂದು ಪರಸ್ತ್ರೀಕಾಮತಪ್ತನಾದ ಅವನನ್ನು ನೋಡಿ.
ತಚ್ಛ್ರುತ್ವಾ ಭಾಷಿತಂ ತಸ್ಯಾ ನರ್ತನಾಗಾರರಕ್ಷಿಣಃ |
ಸಹಸೈವ ತದಾ ಜಗ್ಮುರುಲ್ಕಾಮಾದಾಯ ಸರ್ವಶಃ ॥129॥
ಅವಳ ಮಾತನ್ನು ಕೇಳಿದ ನಾಟ್ಯಾಗಾರರಕ್ಷಕರು ಶೀಘ್ರವಾಗಿ ಪಂಜುಗಳನ್ನು ತೆಗೆದುಕೊಂಡು ಒಳಗೆ ಬಂದರು.
ತಸ್ಯ ತಂ ನಿನದಂ ಶ್ರುತ್ವಾ ಕೀಚಕಸ್ಯ ಸಹೋದರಾಃ |
ತತೋ ಗತ್ವಾಽಥ ತದ್ ವೇಶ್ಮ ಕೀಚಕಂ ವಿನಿಪಾತಿತಮ್ ॥130॥
ಗತಾಸುಂ ದದೃಶುರ್ಭೂಮೌ ರುಧಿರೇಣ ಸಮುಕ್ಷಿತಮ್ ॥131॥
ಪಾಣಿಪಾದಶಿರೋಹೀನಂ ದೃಷ್ಟ್ವಾ ತೇ ವಿಸ್ಮಯಂ ಗತಾಃ ॥132॥
ಸಾಯುವ ಮುಂಚೆ ಕೀಚಕನು ಮಾಡಿದ ಘೋರನಾದಗಳನ್ನು ಕೇಳಿದ ಅವನ ಸಹೋದರರು ತಮ್ಮ ಮನೆಯಿಂದ ಹೊರಟು ನಾಟ್ಯಾಗಾರವನ್ನು ತಲುಪಿ ರಕ್ತಸಿಕ್ತನಾಗಿ ಭೂಮಿಯ ಮೇಲೆ ಶವವಾಗಿ ಬಿದ್ದಿದ್ದ ಕೀಚಕನನ್ನು ನೋಡಿದರು. ಹಸ್ತಪಾದ ಶಿರಸ್ಸುಗಳಿಂದ ಹೀನನಾದ ಅವನನ್ನು ನೋಡಿ ಎಲ್ಲರೂ ವಿಸ್ಮಯವನ್ನು ಹೊಂದಿದರು.
ಕ್ವಾಸ್ಯ ಗ್ರೀವಾ ಕ್ವ ಚರಣೌ ಕ್ವ ಪಾಣೀ ಕ್ವ ಶಿರಃ ಕ್ವ ದೃಕ್ |
ಇತಿ ತಂ ಸುಪರೀಕ್ಷಂತ ಗಂಧರ್ವೇಣ ಹತಂ ತದಾ ॥133॥
ಅವನ ಕತ್ತು ಎಲ್ಲಿ? ಅವನ ಪಾದಗಳು ಎಲ್ಲಿ? ಹಸ್ತಗಳು ಎಲ್ಲಿ? ಶಿರಸ್ಸು ಎಲ್ಲಿ? ಕಣ್ಣುಗಳು ಎಲ್ಲಿ? ಎಂದು ಹೇಳುತ್ತಾ ಗಂಧರ್ವರಿಂದ ಹತನಾದ ಅವನನ್ನು ಪರೀಕ್ಷಿಸಿದರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚವಿಂಶೋಽಧ್ಯಾಯಃ ॥25॥
॥ ಕೀಚಕವಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ಅವಧ್ಯಂ ತಂ ನಿಹತಂ ವೀಕ್ಷ್ಯ ತಸ್ಯ
ಪಂಚೋತ್ತರಂ ಶತಮೇವಾನುಜಾನಾಮ್ |
ಸರ್ವಂ ವರಾಚ್ಛಂಕರಸ್ಯ ಹ್ಯವಧ್ಯಂ
ಸಹೈವ ಕೃಷ್ಣಾಂ ತೇನ ದಗ್ಧುಂ ಬಬಂಧ ॥27॥
ಅವಧ್ಯನಾದ ಕೀಚಕ ಹತನಾದುದನ್ನು ಕಂಡು ಶಿವವರದಿಂದ ಅವಧ್ಯರಾದ ಅವನ ನೂರೈದು ಮಂದಿ ತಮ್ಮಂದಿರು ಎಲ್ಲರೂ ಕೀಚಕನೊಂದಿಗೆ ದ್ರೌಪದಿಯನ್ನೂ ಸುಡಲು ಕಟ್ಟಿದರು.
ಸಾ ನೀಯಮಾನಾ ಕೀಚಕೈಃ ಸಂರುರಾವ
ಶ್ರುತ್ವೈವ ತಂ ಭೀಮಸೇನೋ ಮಹಾಂತಮ್ |
ಉದ್ವೃತ್ಯ ವೃಕ್ಷಂ ತೇನ ಜಘಾನ ಸರ್ವಾನ್
ಆದಾಯ ಕೃಷ್ಣಾಂ ಪುನರಾಗಾತ್ ಪುರಂ ಚ ॥28॥
ಉಪಕೀಚಕರು ದ್ರೌಪದಿಯನ್ನು ಒಯ್ಯುವಾಗ ಅವಳು ಕೂಗಿಕೊಂಡಳು. ಅದನ್ನು ಕೇಳಿ ಭೀಮ ದೊಡ್ಡ ಮರವನ್ನು ಕಿತ್ತು ಅದರಿಂದಲೇ ಅವರನ್ನು ಕೊಂದು ದ್ರೌಪದಿಯನ್ನು ಕರೆದುಕೊಂಡು ನಗರಕ್ಕೆ ಹಿಂತಿರುಗಿದ.
ಏವಂ ಯತ್ನಾತ್ ತಪಸಾ ತೈರವಾಪ್ತೋ ವರಃ ಶಿವಾದಜಯತ್ವಂ ರಣೇಷು |
ಅವಧ್ಯತಾ ಚೈವ ಷಡುತ್ತರಾಸ್ತೇ ಶತಂ ಹತಾ ಭೀಮಸೇನೇನ ಸಂಖ್ಯೇ ॥29॥

ಆ ಉಪಕೀಚಕರೂ ಕೂಡ ಪ್ರಯತ್ನ ಮಾಡಿ ತಪಸ್ಸಿನಿಂದ ಶಿವನನ್ನು ಒಲಿಸಿಕೊಂಡು ಯುದ್ಧಗಳಲ್ಲಿ ಅಜೇಯರಾಗುವ ವರ ಪಡೆದಿದ್ದರು. ಹೀಗೆ ನೂರ ಆರು ಮಂದಿ ಕೀಚಕರೆಲ್ಲರೂ ಯುದ್ಧದಲ್ಲಿ ಭೀಮಸೇನನಿಂದ ಹತರಾದರು.

* * * * *

ಇಪ್ಪತ್ತಾರನೆಯ ಅಧ್ಯಾಯ

ಭೀಮಸೇನನಿಂದ ಉಪಕೀಚಕರ ವಧೆ

ವೈಶಂಪಾಯನಃ

ತಸ್ಮಿನ್ ಕಾಲೇ ಸಮಾಗಮ್ಯ ಸರ್ವೇ ತಸ್ಯಾತ್ರ ಬಾಂಧವಾಃ |
ರುರುದುಃ ಕೀಚಕಂ ದೃಷ್ಟ್ವಾ ಪರಿವಾರ್ಯ ಸಮಂತತಃ ॥1॥

ವೈಶಂಪಾಯನ ಆ ಸಮಯದಲ್ಲಿ ಕೀಚಕನ ಬಾಂಧವರೆಲ್ಲರೂ ಅಲ್ಲಿ ಬಂದು ಸೇರಿ ಕೀಚಕನನ್ನು ನೋಡಿ ಸುತ್ತುವರಿದು ರೋದನವನ್ನು ಮಾಡಿದರು.

ಸರ್ವೇ ಸಂಹೃಷ್ಟರೋಮಾಣಃ ಸಂತ್ರಸ್ತಾಃ ಪ್ರೇಕ್ಷ್ಯ ಕೀಚಕಮ್ |
ತಥಾ ಸರ್ವಾಂಗಸಂಭುಗ್ನಂ ಕೂರ್ಮಂ ಸ್ಥಲ ಇವೋದ್ಧೃತಮ್ ॥2॥

ಎಲ್ಲ ಅಂಗಗಳೂ ಮುರಿಯಲ್ಪಟ್ಟು ನೆಲದ ಮೇಲಿನಿಂದ ಎತ್ತಿದ ಕೂರ್ಮದಂತೆ ಇರುವ ಕೀಚಕನನ್ನು ನೋಡಿ ಹೆದರಿಕೆಯಿಂದ ಎಲ್ಲರೂ ರೋಮಾಂಚನವನ್ನು ಹೊಂದಿದರು.

ತಂ ಹತಂ ಭೀಮಸೇನೇನ ಮಹೇಂದ್ರೇಣೇವ ದಾನವಮ್ |
ಕೀಚಕಂ ಬಲಸಮ್ಮತ್ತಂ ದುರ್ಧರ್ಷಂ ಯೇನ ಕೇನಚಿತ್ ॥3॥
ಗಂಧರ್ವೇಣ ಹತಂ ಶ್ರುತ್ವಾ ಕೀಚಕಂ ಪುರುಷರ್ಷಭಮ್ |
ಸಂಸ್ಕಾರಯಿತುಮಿಚ್ಛಂತೋ ಬಹಿರ್ನೇತುಂ ಪ್ರಚಕ್ರಮುಃ ॥4॥

ಬಲಸಮ್ಮತ್ತನಾದ, ಯಾರಿಂದಲೂ ಸೋಲಿಸಲ್ಪಡದ, ಪುರುಷರ್ಷಭನಾದ ಕೀಚಕನು ದೇವೇಂದ್ರನಿಂದ ದಾನವನು ಕೊಲ್ಲಲ್ಪಟ್ಟಂತೆ ಭೀಮಸೇನನಿಂದ (ಗಂಧರ್ವನಿಂದ) ಹತನಾದುದನ್ನು ಕೇಳಿ ಅವನಿಗೆ ಸಂಸ್ಕಾರ ಮಾಡಲು ಬಯಸಿ ಅವನ ಶರೀರವನ್ನು ಹೊರಗೆ ತೆಗೆದುಕೊಂಡು ಹೋಗಲು ಉಪಕ್ರಮಿಸಿದರು.

ಅಪಶ್ಯನ್ನಂತಿಕೇ ಕೃಷ್ಣಾಂ ಸೂತಪುತ್ರಾಃ ಸಮಾಗತಾಃ |
ಅದೂರಾದನವದ್ಯಾಂಗೀಂ ಸ್ತಂಭಮಾಲಂಬ್ಯ ತಿಷ್ಠತೀಮ್ ॥5॥

ಅಲ್ಲಿಗೆ ಬಂದ ಆ ಸೂತಪುತ್ರರು ಸಮೀಪದಲ್ಲಿಯೇ ಒಂದು ಸ್ತಂಭವನ್ನು ಒರಗಿಕೊಂಡು ನಿಂತಿದ್ದ ಅನವದ್ಯಾಂಗಿಯಾದ ದ್ರೌಪದಿಯನ್ನು ನೋಡಿದರು.

ಸಮವೇತೇಷು ಸರ್ವೇಷು ತಾನುವಾಚೋಪಕೀಚಕಃ |
ಹಸನ್ನಿವ ತದಾಽಮರ್ಷಾನ್ನಿರ್ದಹನ್ನಿವ ಚಕ್ಷುಷಾ ॥6॥

ಎಲ್ಲರೂ ಬಂದು ಸೇರಿದ ಮೇಲೆ ಉಪಕೀಚಕನು ಅವರೆಲ್ಲರನ್ನೂ ಉದ್ದೇಶಿಸಿ ದ್ರೌಪದಿಯನ್ನು ತನ್ನ ದೃಷ್ಟಿಯಿಂದ ಸುಟ್ಟುಬಿಡುವಂತೆ ನೋಡುತ್ತಾ ಕೋಪದಿಂದ ನಗುವವನಂತೆ ಮಾತನಾಡಿದನು.

ಹನ್ಯತಾಂ ಶೀಘ್ರಮಸತೀ ಯತ್ಕೃತೇ ಕೀಚಕೋ ಹತಃ |
ಅಥವಾ ನೈವ ಹಂತವ್ಯಾ ದಹ್ಯತಾಂ ಕಾಮಿನಾ ಸಹ ॥7॥

ಯಾವಳ ಸಲುವಾಗಿ ಕೀಚಕನು ಹತನಾದನೋ ಅಂತಹ ಈ ದುಷ್ಟ ವನಿತೆಯನ್ನು ಕೊಂದುಬಿಡಿ. ಅಥವಾ ಕೊಲ್ಲುವುದು ಬೇಡ. ಕಾಮಿಯಾದ ಕೀಚಕನ ಜೊತೆಯಲ್ಲಿ ಇವಳು ಸುಡಲ್ಪಡಲಿ.

ಮೃತಸ್ಯಾಪಿ ಪ್ರಿಯಂ ಕಾರ್ಯಂ ಸೂತಪುತ್ರಸ್ಯ ಸರ್ವಥಾ |
ಇಯಂ ಹಿ ದುಷ್ಟಚಾರಿತ್ರಾ ಮಮ ಭ್ರಾತುರಮಿತ್ರಿಣೀ ॥8॥
ಯತ್ಕೃತೇ ಮರಣಂ ಪ್ರಾಪ್ತೋ ನೇಯಂ ಜೀವಿತುಮರ್ಹತಿ |
ಸಹೇಯಂ ದಹ್ಯತಾಂ ಸೂತಾ ಆಪೃಚ್ಛ್ಯ ಚ ಜನಾಧಿಪಮ್ ॥9॥
ಹತಸ್ಯಾಪಿ ಚ ಗಂಧರ್ವೈಃ ಕೀಚಕಸ್ಯ ಪ್ರಿಯಂ ಭವೇತ್ ॥10॥

ಸೂತಪುತ್ರನಾದ ಕೀಚಕನು ಮೃತನಾದರೂ ಅವನಿಗೆ ನಾವು ಪ್ರಿಯವನ್ನು ಮಾಡಬೇಕು. ಇವಳಾದರೂ ನನ್ನ ಅಣ್ಣನ ಶತ್ರುವಾದವಳು ಮತ್ತು ದುಷ್ಟಚರಿತ್ರೆ ಉಳ್ಳವಳು. ಯಾವಳ ಸಲುವಾಗಿ ನನ್ನ ಅಣ್ಣನು ಮೃತನಾದನೋ ಅಂತಹ ಇವಳು ಜೀವಿಸಿರಬಾರದು. ಸೂತರೇ, ರಾಜನ ಅಪ್ಪಣೆಯನ್ನು ಪಡೆದು ಕೀಚಕನ ಜೊತೆಯಲ್ಲಿಯೇ ಇವಳನ್ನು ಸುಟ್ಟುಬಿಡಿ. ಹಾಗೆ ಮಾಡಿದರೆ ಗಂಧರ್ವರಿಂದ ಹತನಾದ ಕೀಚಕನಿಗೂ ಪ್ರಿಯವಾಗುತ್ತದೆ.

ತತೋ ವಿರಾಟಮಾಸಾದ್ಯ ಸೂತಾಃ ಪ್ರಾಂಜಲಯೋಽಬ್ರುವನ್ ॥11॥
ಕೀಚಕೋಽಯಂ ಹತಃ ಶೇತೇ ಗಂಧರ್ವೈಃ ಕಾಮರೂಪಿಭಿಃ |
ಸೈರಂಧ್ರ್ಯಾ ಸಹಿತಂ ರಾತ್ರೌ ತಂ ದಹೇಮ ಸಹಾನಯಾ ॥12॥
ಮಾನಿತಾಃ ಸ್ಮಸ್ತ್ವಯಾ ರಾಜನ್ ತದನುಜ್ಞಾತುಮರ್ಹಸಿ ॥13॥

ಅನಂತರ ಸೂತರು ವಿರಾಟನನ್ನು ಸಮೀಪಿಸಿ ಕೈಗಳನ್ನು ಮುಗಿದು ಸೈರಂಧ್ರಿಯ ಜೊತೆಯಲ್ಲಿ ಕಾಮರೂಪಿಗಳಾದ ಗಂಧರ್ವರಿಂದ ಈ ಕೀಚಕನು ರಾತ್ರಿಯಲ್ಲಿ ಹತನಾಗಿದ್ದಾನೆ. ಅವಳನ್ನು ಇವನ ಜೊತೆಯಲ್ಲಿಯೇ ಸುಡುತ್ತೇವೆ. ರಾಜನೇ, ನೀನು ಯಾವಾಗಲೂ ನಮಗೆ ಮರ್ಯಾದೆಯನ್ನು ಕೊಟ್ಟಿದ್ದೀಯೆ. ಆದ್ದರಿಂದ ಇದಕ್ಕೆ ಅನುಮತಿಯನ್ನು ಕೊಡು ಎಂದು ಹೇಳಿದರು.

ಪರಾಕ್ರಮಂ ತು ಸೂತಾನಾಂ ಜ್ಞಾತ್ವಾ ರಾಜಾಽನ್ವಮೋದತ |

ಸೈರಂಧ್ರ್ಯಾಃ ಸೂತಪುತ್ರೇಣ ಸಹ ದಾಹಂ ಜನಾಧಿಪಃ ॥14॥
ಸೂತರ ಪರಾಕ್ರಮವನ್ನು ತಿಳಿದ ಜನಾಧಿಪನಾದ ರಾಜನು ಕೀಚಕನ ಜೊತೆಯಲ್ಲಿ ಸೈರಂಧ್ರಿಯನ್ನು ದಹಿಸುವುದಕ್ಕೆ ಅನುಮತಿಯನ್ನು ನೀಡಿದನು.
ತತಸ್ತೇ ಸಮನುಜ್ಞಾತಾಃ ಸರ್ವೇ ತತ್ರಾಸ್ಯ ಬಾಂಧವಾಃ |
ರುರುದುಃ ಕೀಚಕಂ ದೃಷ್ಟ್ವಾ ಪರಿವಾರ್ಯಾಭಿತಃ ಸ್ಥಿತಾಃ ॥15॥
ಅನುಮತಿಯನ್ನು ಪಡೆದ ಆ ಬಾಂಧವರೆಲ್ಲರೂ ಅಲ್ಲಿ ಕೀಚಕನನ್ನು ನೋಡಿ ಸುತ್ತುವರಿದು ರೋದನವನ್ನು ಮಾಡಿದರು.
ತಾಂ ಸಮಾಸಾದ್ಯ ವಿತ್ರಸ್ತಾಂ ಕೃಷ್ಣಾಂ ಕಮಲಲೋಚನಾಮ್ |
ಮೋಮುಹ್ಯಮಾನಾಂ ತೇ ತತ್ರ ಜಗೃಹುಃ ಕೀಚಕಾ ಭೃಶಮ್ ॥16॥
ಕೀಚಕರು ಹೆದರಿ ಮೂರ್ಛೆಹೋಗುವಂತಿದ್ದ ಕಮಲಲೋಚನೆಯಾದ ದ್ರೌಪದಿಯನ್ನು ಸಮೀಪಿಸಿ ಅವಳನ್ನು ಹಿಡಿದರು.
ಆರೋಪ್ಯ ಕೃಷ್ಣಾಮಥ ಕೀಚಕೇನ
ನಿಬಧ್ಯ ಕೇಶೇಷು ಚ ಪಾದಯೋಶ್ಚ |
ತೇ ಚಾಪಿ ಸೂತಾ ವಚನೈರವೋಚನ್
ಉದ್ದಿಶ್ಯ ಸರ್ವೇ ಹ್ಯಭಿವೀಕ್ಷ್ಯ ಚೈನಾಮ್ ॥17॥
ಅನಂತರ ದ್ರೌಪದಿಯನ್ನು ಕೀಚಕನ ಜೊತೆಯಲ್ಲಿ ಶವವಾಹನದ ಮೇಲೆ ಕಟ್ಟಿ ಅವಳ ಕೇಶಗಳನ್ನೂ ಮತ್ತು ಪಾದಗಳನ್ನೂ ಬಿಗಿದು ಆ ಸೂತರೆಲ್ಲರೂ ಇವಳನ್ನು ನೋಡಿ ಮತ್ತು ಇವಳನ್ನು ಉದ್ದೇಶಿಸಿ ಮಾತನಾಡಿದರು.
ಯಸ್ಯಾಃ ಕೃತೇಽಯಂ ನಿಹತೋ ಮಹಾತ್ಮಾ
ತಸ್ಮಾತ್ ತು ಸಾ ಕೀಚಕಮಾರ್ಗಮೇತು |
ಅವಾರ್ಯಸತ್ವೇನ ಸಹಾದ್ಯ ಗಂತ್ರೀ
ಗತಾಸುನಾ ಸುಂದರಿ ಕೀಚಕೇನ ॥18॥
ಮಹಾತ್ಮನಾದ ಕೀಚಕನು ಇವಳ ನಿಮಿತ್ತದಿಂದಾಗಿ ಹತನಾದ ಕಾರಣದಿಂದ ಇವಳೂ ಸಹ ಕೀಚಕನ ಮಾರ್ಗದಲ್ಲಿಯೇ ಹೋಗಲಿ. ಸುಂದರಿಯೇ, ನೀನು ಈ ದಿನ ಮಹಾಬಲವುಳ್ಳ ಮೃತನಾದ ಕೀಚಕನ ಜೊತೆಯಲ್ಲಿ ಹೋಗುವವಳಾಗುವಿ.
ಸಾಽಶೇತ ಕೃಷ್ಣಾ ಶಯನೇ ನಿಬದ್ಧಾ
ಮನಸ್ವಿನೀ ಚೈವ ಯಶಸ್ವಿನೀ ಚ |
ನಿವೇಪಮಾನಾ ವಿವಶಾ ಹಿ ದುಷ್ಟೈಃ
ತಮೇವ ಪರ್ಯಂಕತಳೇ ಶುಭಾಂಗೀ ॥19॥
ತತಸ್ತು ತಾಂ ಸಮಾರೋಪ್ಯ ನಿಬಧ್ಯ ಚ ಸುಮಧ್ಯಮಾಮ್ |
ಜಗ್ಮುರುದ್ಯಮ್ಯ ತೇ ಸರ್ವೇ ಶ್ಮಶಾನಾಭಿಮುಖಾಸ್ತದಾ ॥20॥
ಶವವಾಹನದ ಮೇಲೆ ಶಯನದಲ್ಲಿ ಕಟ್ಟಲ್ಪಟ್ಟ ಮಾನವತಿಯೂ, ಕೀರ್ತಿವಂತೆಯೂ ಆದ ಆ ದ್ರೌಪದಿಯು ನಡುಗುತ್ತಾ ಆ ದುಷ್ಟರಿಗೆ ವಶಳಾಗಿ ಶುಭಾಂಗಿಯಾದ ಅವಳು ಆ ಪರ್ಯಂಕತಳದಲ್ಲಿ ಇರುತ್ತಿರಲು,
ಹ್ರಿಯಮಾಣಾಽಥ ಸುಶ್ರೋಣಿ ಸೂತಪುತ್ರೈರನಿಂದಿತಾ |
ಪ್ರಾಕ್ರೋಶನ್ನಾಥಮಿಚ್ಛಂತೀ ಕೃಷ್ಣಾ ನಾಥವತೀ ಸತೀ ॥21॥
ಹಾಗೆಯೇ ಸೂತಪುತ್ರರಿಂದ ಎಳೆದುಕೊಂಡು ಹೋಗಲ್ಪಡುತ್ತಿರಲು ಅನಾಥಳಾದ, ಅನಿಂದಿತಳಾದ ಆ ದ್ರೌಪದಿಯು ನಾಥನನ್ನು ಇಚ್ಛಿಸುತ್ತಾ ಕಿರುಚಿದಳು. ಆಗ ಅವರು ಆ ಸುಮಧ್ಯಮೆಯನ್ನು ಶವವಾಹನದಲ್ಲಿ ಏರಿಸಿ ಬಿಗಿದು ಎಲ್ಲರೂ ಎತ್ತಿಕೊಂಡು ಸ್ಮಶಾನಾಭಿಮುಖವಾಗಿ ಹೊರಟರು.
ಜಯೋ ಜಯೇಶೋ ವಿಜಯೋ ಜಯತ್ಸೇನೋ ಜಯದ್ಬಲಃ |
ತೇ ಮೇ ವಾಚಂ ವಿಜಾನಂತು ಸೂತಪುತ್ರಾ ನಯಂತಿ ಮಾಮ್ ॥22॥
ಜಯ, ಜಯೇಶ, ವಿಜಯ, ಜಯತ್ಸೇನ, ಜಯದ್ಬಲ ಇವರು ನನ್ನ ಮಾತನ್ನು ಕೇಳಿಸಿಕೊಳ್ಳಿ. ಸೂತಪುತ್ರರು ನನ್ನನ್ನು ಎಳೆದುಕೊಂಡು ಹೋಗುತ್ತಿದ್ದಾರೆ.
ಯೇಷಾಂ ದುಂದುಭಿನಿರ್ಘೋಷೋ ಜ್ಯಾಘೋಷಃ ಶ್ರೂಯತೇ ಮಹಾನ್ |
ತೇ ಮೇ ವಾಚಂ ವಿಜಾನಂತು ಸೂತಪುತ್ರಾ ನಯಂತಿ ಮಾಮ್ ॥23॥
ಯಾರ ದುಂದುಭಿಘೋಷವು ಮತ್ತು ಜ್ಯಾಘೋಷವು ದೊಡ್ಡದಾಗಿ ಕೇಳಿಬರುತ್ತದೆಯೋ ಅವರು ನನ್ನ ಮಾತನ್ನು ತಿಳಿಯಿರಿ. ಸೂತಪುತ್ರರು ನನ್ನನ್ನು ಎಳೆದುಕೊಂಡು ಹೋಗುತ್ತಿದ್ದಾರೆ.
ಯೇಷಾಂ ಜ್ಯಾತಳನಿರ್ಘೋಷೋ ವಿಸ್ಫೂರ್ಜಿತಮಿವಾಶನೇಃ |
ಅಶ್ರೂಯತ ಮಹಾನ್ ಯುದ್ಧೇ ಭೀಮಘೋಷಸ್ತರಸ್ವಿನಾಮ್ ॥24॥
ರಥಘೋಷಶ್ಚ ಬಲವಾನ್ ಗಂಧರ್ವಾಣಾಂ ತರಸ್ವಿನಾಮ್ |
ತೇ ಮೇ ವಾಚಂ ವಿಜಾನಂತು ಸೂತಪುತ್ರಾ ನಯಂತಿ ಮಾಮ್ ॥25॥
ಯಾವ ವೇಗಶಾಲಿಗಳ ಜ್ಯಾಘೋಷ ಮತ್ತು ತಳಘೋಷಗಳು ಸಿಡಿಲು ಬಡಿದಂತೆ ಇದ್ದವೋ ಮತ್ತು ಯುದ್ಧದಲ್ಲಿ ಯಾರ ಭಯಂಕರವಾದ ಘೋಷವು ದೊಡ್ಡದಾಗಿದ್ದಿತೋ, ರಥಘೋಷವೂ ದೊಡ್ಡದಾಗಿದ್ದಿತೋ ಅಂತಹ ಗಂಧರ್ವರು ನನ್ನ ಮಾತನ್ನು ತಿಳಿಯಿರಿ. ಸೂತಪುತ್ರರು ನನ್ನನ್ನು ಎಳೆದೊಯ್ಯುತ್ತಿದ್ದಾರೆ.
ಯೇಷಾಂ ವೀರ್ಯಮತುಲ್ಯಂ ತು ಶಕ್ರಸ್ಯೇವ ಬಲಂ ಯಶಃ |

ರಾಜಸಿಂಹಾ ಇವಾಗ್ರ್ಯಾಸ್ತೇ ಮಾಂ ಜಾನಂತು ಸುದುಃಖಿತಾಮ್ ॥26॥
ಯಾರ ವೀರ್ಯವೂ ಬಲವೂ ಮತ್ತು ಕೀರ್ತಿಯೂ ಇಂದ್ರನ ವೀರ್ಯಾದಿಗಳಂತೆ ಅಸದೃಶವಾಗಿವೆಯೋ ಅಂತಹ ಶ್ರೇಷ್ಠರಾದ ರಾಜಸಿಂಹರು ನಾನು ದುಃಖಿತಳಾಗಿದ್ದೇನೆಂದು ತಿಳಿಯಿರಿ.
ಸ ತಸ್ಯಾಃ ಕೃಪಣಾ ವಾಚಃ ಕೃಷ್ಣಾಯಾಃ ಪರಿದೇವಿತಮ್ |
ಶ್ರುತ್ವೈವಾಭ್ಯುತ್ಥಿತೋ ಭೀಮಃ ಶಯನಾದವಿಚಾರಯನ್ ॥27॥
ಆ ದ್ರೌಪದಿಯ ಕಾರ್ಪಣ್ಯದಿಂದ ಕೂಡಿದ ಗೋಳಾಟದ ಮಾತುಗಳನ್ನು ಕೇಳಿ ಏನೂ ವಿಚಾರವನ್ನು ಮಾಡದೆ ಭೀಮಸೇನನು ತನ್ನ ಹಾಸಿಗೆಯಿಂದ ಎದ್ದನು.
ಅಹಂ ಸೈರಂಧ್ರಿ ತೇ ವಾಚಃ ಶೃಣೋಮಿ ತವ ಭಾಷಿತಮ್ |
ತಸ್ಮಾತ್ ತೇ ಸೂತಪುತ್ರೇಭ್ಯೋ ಭಯಂ ಜಾತು ನ ವಿದ್ಯತೇ ॥28॥
ಇತ್ಯುಕ್ತ್ವಾ ಸ ಮಹಾಬಾಹುರ್ವಿಜಜೃಂಭೇ ಜಿಘಾಂಸಯಾ ॥29॥
ಸೈರಂಧ್ರಿಯೇ, ನೀನು ಆಡಿದ ಮಾತುಗಳನ್ನು ನಾನು ಕೇಳುತ್ತಿದ್ದೇನೆ. ಆದ್ದರಿಂದ ನಿನಗೆ ಸೂತಪುತ್ರರಿಂದ ಯಾವ ಭಯವೂ ಇಲ್ಲ ಎಂದು ಹೇಳಿ ಸೂತಪುತ್ರರನ್ನು ಕೊಲ್ಲುವ ಇಚ್ಛೆಯಿಂದ ಮಹಾಬಾಹುವಾದ ಅವನು ತನ್ನ ಮೈಮುರಿದನು.
ತತಃ ಸ ವ್ಯಾಯತಂ ಬದ್ಧ್ವಾ ವಸ್ತ್ರಂ ಚ ಪರಿವೇಷ್ಟ್ಯ ಚ |
ಅದ್ವಾರೇಣಾಭ್ಯವಸ್ಕಂದ್ಯ ನಿರ್ಜಗಾಮ ಬಹಿಸ್ತದಾ ॥30॥
ಅನಂತರ ಅವನು ಕೆಳಗೆ ಇಳಿಬಿದ್ದಿದ್ದ ತನ್ನ ವಸ್ತ್ರವನ್ನು ಕಟ್ಟಿ ಸುತ್ತಿಕೊಂಡು ಅದ್ವಾರದಿಂದ ನಿಷ್ಕ್ರಮಿಸಿ ಹೊರಗೆ ಬಂದನು.
ಚಿತಾಸಮೀಪಂ ಗತ್ವಾ ತು ತತ್ರಾಪಶ್ಯನ್ಮಹಾಬಲಃ |
ತಾಳಮಾತ್ರಂ ಮಹಾಸ್ಕಂಧಂ ಸಂಶುಷ್ಕಂ ವೈ ವನಸ್ಪತಿಮ್ ॥31॥
ಮಹಾಬಲನಾದ ಅವನು ಚಿತಾಸಮೀಪಕ್ಕೆ ಹೋಗಿ ತಾಳೆಯ ಮರದಷ್ಟು ಎತ್ತರವಾದ ದೊಡ್ಡ ಕೊಂಬೆಗಳಿಂದ ಕೂಡಿದ ಚೆನ್ನಾಗಿ ಒಣಗಿದ ಒಂದು ವೃಕ್ಷವನ್ನು ನೋಡಿದನು.
ತಂ ನಾಗವದುಪಕ್ರಮ್ಯ ಬಾಹುಭ್ಯಾಂ ಪರಿರಭ್ಯ ಚ |
ವೃಕ್ಷಮುತ್ಪಾಟಯಾಮಾಸ ಭೀಮೋ ಭೀಮಪರಾಕ್ರಮಃ ॥32॥
ಭೀಮಪರಾಕ್ರಮವುಳ್ಳ ಭೀಮನು ಗಜದಂತೆ ಆ ವೃಕ್ಷವನ್ನು ಸಮೀಪಿಸಿ ತನ್ನ ಬಾಹುಗಳಿಂದ ಅದನ್ನು ತಬ್ಬಿ ಕಿತ್ತನು.
ತತೋ ವೃಕ್ಷಂ ದಶವ್ಯಾಮಂ ನಿಷ್ಪತ್ರಮಕರೋತ್ ತದಾ |
ಸ್ಕಂಧಮಾರೋಪಯಾಮಾಸ ಸಸ್ಕಂಧವಿಟಪಂ ಬಲೀ ॥33॥
ಅನಂತರ ಹತ್ತುಮಾರು ಸುತ್ತಳತೆಯುಳ್ಳ ಆ ವೃಕ್ಷವನ್ನು ಪತ್ರರಹಿತವನ್ನಾಗಿ ಮಾಡಿ ಬಲಿಷ್ಠನಾದ ಅವನು ಕೊಂಬೆರೆಂಬೆಗಳಿಂದ ಕೂಡಿದ ಆ ಮರವನ್ನು ತನ್ನ ಹೆಗಲಿನ ಮೇಲೆ ಏರಿಸಿದನು.
ತಂ ಮಹಾಸಾಲಮುದ್ಯಮ್ಯ ಭ್ರಾಮಯಿತ್ವಾ ಚ ವೇಗತಃ |
ಪ್ರಗೃಹ್ಯಾಭ್ಯಪತತ್ ಸೂತಾನ್ ದಂಡಪಾಣಿರಿವಾಂತಕಃ ॥34॥
ಆ ಮಹಾಸಾಲವೃಕ್ಷವನ್ನು ಎತ್ತಿ ವೇಗದಿಂದ ತಿರುಗಿಸುತ್ತಾ ದಂಡಪಾಣಿಯಾದ ಯಮನಂತೆ ಸೂತರ ಕಡೆಗೆ ಧಾವಿಸಿದನು.
ಊರುವೇಗೇನ ತಸ್ಯಾಥ ನ್ಯಗ್ರೋಧಾಶ್ವತ್ಥಕಿಂಶುಕಾಃ |
ಭೂಮೌ ನಿಪತಿತಾ ವೃಕ್ಷಾ ಸಂಘಶಸ್ತತ್ರ ಶೇರತೇ ॥35॥
ಅವನ ತೊಡೆಯ ವೇಗದಿಂದ ತೊಡೆಗೆ ತಾಕಿದ ಆಲ, ಅಶ್ವತ್ಥ, ಮುತ್ತುಗ ಮೊದಲಾದ ಮರಗಳು ಭೂಮಿಯಲ್ಲಿ ಗುಂಪುಗುಂಪಾಗಿ ಬಿದ್ದವು.
ತಂ ಸಿಂಹಮಿವ ಸಂಕ್ರುದ್ಧಂ ಗಂಧರ್ವಂ ಪ್ರೇಕ್ಷ್ಯ ತೇ ತದಾ |
ವಿತ್ರೇಸುಃ ಸರ್ವತಃ ಸೂತಾ ವಿಷಾದಭಯಪೀಡಿತಾಃ ॥36॥
ಕೋಪಗೊಂಡ ಸಿಂಹದಂತಿರುವ ಆ ಗಂಧರ್ವನನ್ನು ನೋಡಿ ಆಗ ವಿಷಾದ ಪೀಡಿತರಾದ ಸೂತರೆಲ್ಲರೂ ಹೆದರಿದರು.
ತಮಂತಕಮಿವ ಕ್ರುದ್ಧಂ ಗಂಧರ್ವಭಯಶಂಕಿತಾಃ |
ದಿಧಕ್ಷಂತಸ್ತಥಾ ಜ್ಯೇಷ್ಠಂ ಭ್ರಾತರಂ ಚಾಪಿ ಕೀಚಕಾಃ ॥37॥
ಪರಸ್ಪರಮಥೋಚುಸ್ತೇ ವಿಷಾದಭಯಮೋಹಿತಾಃ ॥38॥
ಕೋಪಗೊಂಡ ಯಮನಂತೆ ಬರುತ್ತಿರುವ ಅವನನ್ನು ಗಂಧರ್ವನೆಂದು ತಿಳಿದು ಭಯದಿಂದ ಕೂಡಿದವರಾಗಿ ಕೀಚಕರು ತಮ್ಮ ಅಣ್ಣನನ್ನು ಸುಡಲು ಬಯಸಿಬಂದವರಾಗಿ ವಿಷಾದ ಭಯ ಮೋಹಿತರಾಗಿ ಪರಸ್ಪರವಾಗಿ ಮಾತನಾಡಿಕೊಂಡರು.
ಗಂಧರ್ವೋ ಬಲವಾನೇತಿ ಕ್ರುದ್ಧ ಉದ್ಯಮ್ಯ ಪಾದಪಮ್ |
ಪ್ರಬುದ್ಧಾಃ ಸುಮಹಾಭಾಗಾ ಗಂಧರ್ವಾಃ ಸೂರ್ಯವರ್ಚಸಃ ॥39॥
ಸೈರಂಧ್ರೀ ಮುಚ್ಯತಾಂ ಶೀಘ್ರಂ ಭಯಂ ನೋ ಮಹದಾಗತಮ್ ॥40॥
ಕೋಪಗೊಂಡ ಬಲಿಷ್ಠನಾದ ಗಂಧರ್ವನು ಮರವನ್ನು ಎತ್ತಿಕೊಂಡು ಬರುತ್ತಿದ್ದಾನೆ. ಸೂರ್ಯನ ವರ್ಚಸ್ಸುಳ್ಳ ಮಹಾನುಭಾವರಾದ ಗಂಧರ್ವರು ಈಗ ವಿಷಯವನ್ನು ತಿಳಿದಿದ್ದಾರೆ. ಬೇಗ ಸೈರಂಧ್ರಿಯನ್ನು ಬಿಟ್ಟು ಬಿಡಿ. ನಮಗೆ ದೊಡ್ಡ ಭಯವು ಪ್ರಾಪ್ತವಾಗಿದೆ.
ತೇಽಥ ದೃಷ್ಟ್ವಾ ತಮಾವಿದ್ಧಂ ಭೀಮಸೇನೇನ ಪಾದಪಮ್ |
ವಿಮುಚ್ಯ ದ್ರೌಪದೀಂ ತ್ರಸ್ತಾಃ ಪ್ರಾದ್ರುವನ್ ನಗರಂ ಪ್ರತಿ ॥41॥
ಅವರು ಭೀಮಸೇನನು ಆ ವೃಕ್ಷವನ್ನು ಕಿತ್ತುದುದನ್ನು ನೋಡಿ ಹೆದರಿ ದ್ರೌಪದಿಯನ್ನು ಬಿಟ್ಟು ನಗರದ ಕಡೆಗೆ ಓಡಿದರು.
ದ್ರುವತಸ್ತಾಂಶ್ಚ ಸಂಪ್ರೇಕ್ಷ್ಯ ಸ ವಜ್ರೀ ದಾನವಾನಿವ |

ಶತಂ ಪಂಚಾಧಿಕಂ ಭೀಮಃ ಪ್ರಾಹಿಣೋದ್ ಯಮಸಾದನಮ್ ॥42॥
ಓಡುತ್ತಿರುವ ಅವರನ್ನು ನೋಡಿ ಭೀಮಸೇನನು ಇಂದ್ರನು ದಾನವರನ್ನು ಸಂಹರಿಸಿದಂತೆ ಆ ನೂರೈದು ಮಂದಿ ಸೂತರನ್ನೂ ಯಮಪಟ್ಟಣಕ್ಕೆ ಅಟ್ಟಿದನು.
ವಾಯುವೇಗಸಮಃ ಶ್ರೀಮಾನ್ ಸರ್ವಾನ್ ಸೂತಾನಶೇಷತಃ |
ತಾನ್ ನಿಹತ್ಯ ಮಹಾಬಾಹುರ್ಭೀಮಸೇನೋ ಮಹಾಬಲಃ ॥43॥
ಆಶ್ವಾಸಯಂಸ್ತತಃ ಕೃಷ್ಣಾಂ ಪ್ರವಿಮುಚ್ಯ ಚ ಬಂಧನಾತ್ ॥44॥
ಉವಾಚ ಚ ಮಹಾಬಾಹುಃ ಪಾಂಚಾಲೀಂ ಭರತರ್ಷಭಃ |
ಅಶ್ರುಪೂರ್ಣಮುಖೀಂ ಭೀತಾಮ್ ಉದ್ಧರನ್ ಸ ವೃಕೋದರಃ ॥45॥
ವಾಯುವೇಗಸಮನೂ, ಕಾಂತಿಯುಕ್ತನೂ, ಮಹಾಬಲನೂ, ಮಹಾಬಾಹುವೂ ಆದ ಭೀಮಸೇನನು ಎಲ್ಲಾ ಸೂತರನ್ನೂ ನಿಶ್ಶೇಷವಾಗಿ ಸಂಹರಿಸಿ ದ್ರೌಪದಿಯ ಕಟ್ಟುಗಳನ್ನು ಬಿಡಿಸಿ ಅವಳಿಗೆ ಸಮಾಧಾನವನ್ನು ಮಾಡುತ್ತಾ ಕಣ್ಣೀರಿಂದ ತುಂಬಿದ ಮುಖವುಳ್ಳವಳಾಗಿ ಭೀತಳಾಗಿದ್ದ ಪಾಂಚಾಲಿಯನ್ನು ಎತ್ತುತ್ತಾ ಮಹಾಬಾಹುವೂ, ಭರತರ್ಷಭನೂ ಆದ ವೃಕೋದರನು ಮಾತನಾಡಿದನು.
ಏವಂ ತೇ ಭೀರು ವಧ್ಯಂತೇ ಯೇ ತ್ವಾಂ ಹಿಂಸಂತಿ ಮಾನವಾಃ |
ಗಚ್ಛ ತ್ವಂ ನಗರಂ ಕೃಷ್ಣೇ ನ ಭಯಂ ವಿದ್ಯತೇ ತವ ॥46॥
ದ್ರೌಪದಿಯೇ, ಭೀರುವೇ, ಯಾರು ನಿನಗೆ ಹಿಂಸೆಯನ್ನು ನೀಡುತ್ತಾರೋ ಅಂತಹ ಮನುಷ್ಯರು ಹೀಗೆಯೇ ಕೊಲ್ಲಲ್ಪಡುತ್ತಾರೆ. ನೀನು ನಗರಕ್ಕೆ ಹಿಂದಿರುಗು. ನಿನಗೆ ಯಾವ ಭಯವೂ ಇಲ್ಲ.
ಅನ್ಯೇನ ತ್ವಂ ಪಥಾ ಗಚ್ಛ ಸುದೇಷ್ಣಾಯಾ ನಿವೇಶನಮ್ |
ಅನ್ಯೇನಾಹಂ ಗಮಿಷ್ಯಾಮಿ ವಿರಾಟಸ್ಯ ಮಹಾನಸಮ್ ॥47॥
ಯಥಾ ನೌ ನಾವಬುದ್ಧ್ಯೇರನ್ ರಾತ್ರಾವೇವಂ ವ್ಯವಸ್ಥಿತೌ ॥48॥
ನಾವಿಬ್ಬರೂ ರಾತ್ರಿಯಲ್ಲಿ ಹೀಗೆ ಒಟ್ಟಿಗೆ ಇರುವುದನ್ನು ಯಾರೂ ತಿಳಿಯದಂತೆ ನೀನು ಬೇರೆ ಮಾರ್ಗದಿಂದ ಸುದೇಷ್ಣೆಯ ಮನೆಗೆ ಹೋಗು. ನಾನು ಬೇರೆಯ ಮಾರ್ಗದಿಂದ ವಿರಾಟನ ಮಹಾನಸಕ್ಕೆ ಹೋಗುವೆನು (ಎಂದು ಹೇಳಿದನು).
ವೈಶಂಪಾಯನಃ
ಸಾಽಗಚ್ಛನ್ನಗರಂ ಕೃಷ್ಣಾ ಭೀಮೇನಾಶ್ವಾಸಿತಾ ಸತೀ |
ಕೃತಕೃತ್ಯಾ ಸುದೇಷ್ಣಾಯಾ ಭವನಂ ಶುಭಲಕ್ಷಣಾ ॥49॥
ಶಚೀವ ನಹುಷೇ ಶಪ್ತೇ ಪ್ರವಿವೇಶ ತ್ರಿವಿಷ್ಟಪಮ್ ॥50॥
ವೈಶಂಪಾಯನ ಭೀಮನಿಂದ ಸಮಾಧಾನಪಡಿಸಲ್ಪಟ್ಟ ಪತಿವ್ರತೆಯಾದ ಶುಭಲಕ್ಷಣಗಳನ್ನು ಹೊಂದಿದ್ದ ದ್ರೌಪದಿಯು ಕೃತಕೃತ್ಯಳಾಗಿ ನಗರವನ್ನು ಪ್ರವೇಶಿಸಿ ನಹುಷನು ಶಾಪವನ್ನು ಹೊಂದಿದ ಮೇಲೆ ಶಚಿಯು ಸ್ವರ್ಗವನ್ನು ಪ್ರವೇಶಿಸಿದಂತೆ ಸುದೇಷ್ಣೆಯ ಮನೆಯನ್ನು ಪ್ರವೇಶಿಸಿದಳು.
ಭೀಮೋಽಪ್ಯಮಿತವೀರ್ಯಸ್ತು ಬಲವಾನರಿಮರ್ದನಃ |
ಸರ್ವಾಂಸ್ತಾನ್ ಕೀಚಕಾನ್ ಹತ್ವಾ ತತ್ರ ಧರ್ಮಾತ್ಮಜಾನುಜಃ ॥51॥
ನಿಃಶೇಷಂ ಕೀಚಕಾನ್ ಕೃತ್ವಾ ರಾಮೋ ರಾತ್ರಿಚರಾನಿವ |
ಹತಶತ್ರುರಮೇಯಾತ್ಮಾ ಪ್ರವಿವೇಶ ಪುರಂ ತತಃ ॥52॥
ಬಲಿಷ್ಠನೂ, ಅರಿಮರ್ದನನೂ, ಅಪರಿಮಿತವೀರ್ಯನೂ, ಯುಧಿಷ್ಠಿರನ ತಮ್ಮನೂ ಆದ ಭೀಮಸೇನನು ಆ ಎಲ್ಲ ಕೀಚಕರನ್ನೂ ರಾಮನು ರಾಕ್ಷಸರನ್ನು ಕೊಂದಂತೆ ನಿಶ್ಶೇಷವಾಗಿ ಕೊಂದು ಹತಶತ್ರುವಾಗಿ ಅಮೇಯಾತ್ಮನಾದ ಅವನು ಅನಂತರ ಪಟ್ಟಣವನ್ನು ಪ್ರವೇಶಿಸಿದನು.
ಪಂಚಾಧಿಕಂ ಶತಂ ತತ್ರ ನಿಹತಂ ತೇನ ಭಾರತ |
ಮಹಾವನಮಿವ ಚ್ಛಿನ್ನಂ ಶಿಶ್ಯೇ ವಿಗಳಿತದ್ರುಮಮ್ ॥53॥
ಎಲೈ ಭಾರತನೇ, ಅವನಿಂದ ಕೊಲ್ಲಲ್ಪಟ್ಟ ನೂರೈದು ಮಂದಿ ಕೀಚಕರು ಕಡಿದು ಉರುಳಿಸಿದ ಎಲ್ಲ ಮರಗಳನ್ನುಳ್ಳ ದೊಡ್ಡ ಕಾಡಿನಂತೆ ಕಾಣುತ್ತಿದ್ದರು.
ಏವಂ ತೇ ನಿಹತಾ ರಾಜನ್ ಶತಂ ಪಂಚೋಪಕೀಚಕಾಃ |
ಸ ಚ ಸೇನಾಪತಿಃ ಸೂತ ಇತ್ಯೇತತ್ ಸೂತಷಟ್ಶತಮ್ ॥54॥
ಎಲೈ ರಾಜನೇ, ಹೀಗೆ ನೂರೈದು ಮಂದಿ ಉಪಕೀಚಕರು ಅವನಿಂದ ಹತರಾದರು. ಸೇನಾಪತಿಯಾದ ಕೀಚಕನೂ ಹತನಾದನು. ಹೀಗೆ ಒಟ್ಟು ನೂರಾರು ಮಂದಿ ಹತರಾದರು.
ನ ಗಂಧರ್ವಭಯಾಚ್ಚೇಕುರ್ವಕ್ತುಂ ಕೀಚಕಬಾಂಧವಾಃ |
ಅಶಕ್ನುವಂತಸ್ತಾಂ ತತ್ರ ಭಯಾದಪ್ಯಭಿವೀಕ್ಷಿತುಮ್ ॥55॥
ಅನಂತರ ಕೀಚಕನ ಬಾಂಧವರು ಗಂಧರ್ವರ ಭಯದಿಂದ ದ್ರೌಪದಿಯ ಜೊತೆಯಲ್ಲಿ ಮಾತನಾಡುವುದಕ್ಕಾಗಲೀ, ಅವಳನ್ನು ನೋಡುವುದಕ್ಕಾಗಲೀ ಹೆದರಿದರು.
ವಿರಾಟನಗರೇ ಚಾಪಿ ಸರ್ವೇ ಮತ್ಸ್ಯಾಃ ಸಮಾಗತಾಃ |
ಕಲ್ಯಂ ಪಂಚಶತಂ ಚೈತಾನ್ ಅಪಶ್ಯನ್ ಸಾರಥೀನ್ ಹತಾನ್ ॥56॥
ವಿರಾಟನಗರದಲ್ಲಿ ಪ್ರಾತಃಕಾಲದಲ್ಲಿ ಮತ್ಸ್ಯದೇಶದ ಎಲ್ಲ ಜನರೂ ಬಂದು ಈ ನೂರೈದು ಜನ ಸೂತರು ಹತರಾಗಿರುವುದನ್ನು ನೋಡಿದರು.

ತಾನ್ ದೃಷ್ಟ್ವಾ ಮಹದಾಶ್ಚರ್ಯಂ ನರಾ ನಾರ್ಯಶ್ಚ ನಾಗರಾಃ|
ವಿಸ್ಮಯಂ ಪರಮಂ ಗತ್ವಾ ನೋಚುಃ ಕಿಂಚನ ಭಾರತ ॥57॥
ಎಲೈ ಭಾರತನೇ, ಈ ದೊಡ್ಡ ಆಶ್ಚರ್ಯಕರವಾದ ದೃಶ್ಯವನ್ನು ನೋಡಿ ನಗರವಾಸಿಗಳಾದ ನರ-ನಾರಿಯರು ಬಹಳ ವಿಸ್ಮಯವನ್ನು ಹೊಂದಿದರು. ಆದರೆ ಯಾರೂ ಏನೂ ಮಾತನಾಡಲಿಲ್ಲ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಡ್ವಿಂಶೋಽಧ್ಯಾಯಃ ॥26॥
॥ ಕೀಚಕವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ಗಂಧರ್ವ ಇತ್ಯೇವ ನಿಹತ್ಯ ಸರ್ವಾನ್
ಮುಮೋದ ಭೀಮೋ ದ್ರೌಪದೀ ಚಾಥ ಕೃಷ್ಣಾಮ್|
ಯಾಹೀತ್ಯೂಚೇ ಸುದೇಷ್ಣಾ ಭಯೇನ
ತ್ರಯೋದಶಾಹಂ ಪಾಲಯೇತ್ಯಾಹ ತಾಂ ಸಾ ॥30॥
ಭೀಮ ತನ್ನನ್ನು ಗಂಧರ್ವನೆಂದು ಹೇಳಿಕೊಂಡು ಎಲ್ಲ ಕೀಚಕರನ್ನೂ ಕೊಂದು ಆನಂದಿಸಿದ. ದ್ರೌಪದಿಯೂ ಸಂತೋಷಗೊಂಡಳು. ಬಳಿಕ ಸುದೇಷ್ಣೆ ಭಯದಿಂದ `ಹೋಗು!' ಎಂದಳು. `ಹದಿಮೂರು ದಿನಗಳ ಕಾಲ ಮಾತ್ರ ತಾಳು' ಎಂದಳು ದ್ರೌಪದಿ. ಸುದೇಷ್ಣೆ ಭಯದಿಂದ ಆಗಲಿ ಎಂದಳು. ಪಾಂಡವರು ಹೀಗೆ ಪೂರ್ಣ ಒಂದು ವರ್ಷ ವಿರಾಟನಗರದಲ್ಲಿ ಅಜ್ಞಾತವಾಸ ಪೂರೈಸಿದರು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಸುದೇಷ್ಣೆಯು ನಗರದಿಂದ ಹೊರಗೆ ಹೋಗುವಂತೆ ಹೇಳಿದಾಗ ಹದಿಮೂರು ದಿವಸ ಅವಕಾಶ ಕೊಡುವಂತೆ ದ್ರೌಪದಿಯ ಪ್ರಾರ್ಥನೆ
ವೈಶಂಪಾಯನಃ
ತೇ ದೃಷ್ಟ್ವಾ ನಿಹತಾನ್ ಸೂತಾನ್ ಗತ್ವಾ ರಾಜ್ಞೇ ನ್ಯವೇದಯನ್|
ಗಂಧರ್ವೈರ್ನಿಹತಾ ರಾಜನ್ ಸೂತಾಃ ಪಂಚಾಧಿಕಾಃ ಶತಾಃ ॥1॥
ವೈಶಂಪಾಯನ ಆ ಪೌರರು ಗಂಧರ್ವರಿಂದ ನಿಹತರಾದ ಸೂತರನ್ನು ನೋಡಿ ರಾಜನನ್ನು ಸಮೀಪಿಸಿ ರಾಜನೇ, ನೂರೈದು ಜನ ಸೂತರು ಗಂಧರ್ವರಿಂದ ನಿಹತರಾಗಿದ್ದಾರೆ ಎಂದು ಹೇಳಿದರು.
ಪೌರಾಃ
ಯಥಾ ವಜ್ರೇಣ ವೈ ಭಿನ್ನಂ ಪರ್ವತಸ್ಯ ಮಹಚ್ಛಿರಃ|
ವಿನಕೀರ್ಣಾಃ ಪ್ರದೃಶ್ಯಂತೇ ತಥಾ ಸೂತಾ ಮಹೀತಳೇ ॥2॥
ಪೌರರು ಹೇಗೆ ಪರ್ವತದ ದೊಡ್ಡ ಶಿಖರವು ವಜ್ರಾಯುಧದಿಂದ ಭಿನ್ನವಾಗಿ ಭೂಮಿಯಲ್ಲಿ ಚೆಲ್ಲಾಡಲ್ಪಡುತ್ತದೆಯೋ ಅದರಂತೆ ಸೂತರು ಭೂಮಿಯ ಮೇಲೆ ಕಾಣುತ್ತಿದ್ದಾರೆ.
ಸೈರಂಧ್ರೀ ಚಾಪಿ ಮುಕ್ತಾ ಸಾ ಪುನರಾಯಾತಿ ತೇ ಗೃಹಮ್|
ಸರ್ವಂ ಸಂಶಯಿತಂ ರಾಜನ್ ನಗರಂ ತೇ ಭವಿಷ್ಯತಿ ॥3॥
ಸೈರಂಧ್ರಿಯೂ ಸಹ ಬಿಡುಗಡೆಯನ್ನು ಹೊಂದಿ ನಿನ್ನ ಮನೆಗೆ ಪುನಃ ಬರುತ್ತಿದ್ದಾಳೆ. ರಾಜನೇ, ನಿನ್ನ ನಗರವೆಲ್ಲವೂ ಸಂಶಯದಿಂದ ಕೂಡಿದುದಾಗಿದೆ.
ತಥಾರೂಪಾ ಚ ಸೈರಂಧ್ರೀ ಗಂಧರ್ವಾಶ್ಚ ಮಹಾಬಲಾಃ|
ಪುಂಸಾಮಿಷ್ಟಶ್ಚ ವಿಷಯೋ ಮೈಥುನಾಯ ನ ಸಂಶಯಃ ॥4॥
ಸೈರಂಧ್ರಿಯಾದರೂ ಅಂತಹ ದಿವ್ಯರೂಪವುಳ್ಳವಳು. ಗಂಧರ್ವರೂ ಸಹ ಮಹಾಬಲಿಷ್ಠರಾದವರು. ಮೈಥುನವು ಎಲ್ಲ ಪುರುಷರಿಗೂ ಇಷ್ಟವಾದ ವಿಷಯ. ಇದರಲ್ಲಿ ಸಂಶಯವಿಲ್ಲ.
ಯಥಾ ಸೈರಂಧ್ರಿವೇಷೇಣ ನೇದಂ ರಾಜನ್ ಪುರಂ ತವ|
ವಿನಾಶಮೇತಿ ವೈ ಕ್ಷಿಪ್ರಂ ತಥಾ ನೀತಿರ್ವಿಧೀಯತಾಮ್ ॥5॥
ರಾಜನೇ, ಸೈರಂಧ್ರಿಯ ವೇಷದಿಂದ ಈ ನಿನ್ನ ಪಟ್ಟಣವು ನಾಶವಾಗದಂತೆ ಶೀಘ್ರವಾಗಿ ಏನಾದರೂ ನೀತಿಯನ್ನು ರೂಪಿಸು.
ವೈಶಂಪಾಯನಃ
ತೇಷಾಂ ತದ್ವಚನಂ ಶ್ರುತ್ವಾ ವಿರಾಟೋ ವಾಹಿನೀಪತಿಃ|
ಅಬ್ರವೀತ್ ಕ್ರಿಯತಾಮೇಷಾಂ ಸೂತಾನಾಂ ಚರಮಕ್ರಿಯಾ ॥6॥
ವೈಶಂಪಾಯನ ಅವರ ಆ ಮಾತನ್ನು ಕೇಳಿದ ವಿರಾಟರಾಜನು ಈ ಸೂತರಿಗೆ ಉತ್ತರಕ್ರಿಯೆಯನ್ನು ಮಾಡಿ ಎಂದು ಹೇಳಿದನು.
ಏಕಸ್ಮಿನ್ನೇವ ತೇ ಸರ್ವೇ ಸುಸಮಿದ್ಧೇ ಹುತಾಶನೇ|
ದಹ್ಯಂತಾಂ ಕೀಚಕಾಃ ಸರ್ವೇ ಸರ್ವಗಂಧೈಶ್ಚ ಸರ್ವಶಃ ॥7॥
ಈ ಎಲ್ಲ ಸೂತರು ಸಮಿದ್ಧವಾದ ಒಂದೇ ಅಗ್ನಿಯಲ್ಲಿ ಎಲ್ಲ ಗಂಧಗಳ ಜೊತೆಯಲ್ಲಿ ದಹಿಸಲ್ಪಡಲಿ (ಎಂದು ಹೇಳಿದನು).
ಸುದೇಷ್ಣಾಂ ಚಾಬ್ರವೀದ್ ರಾಜಾ ಮಹಿಷೀಂ ಜಾತಸಾಧ್ವಸಃ ॥8॥
ಸೈರಂಧ್ರೀಮಾಗತಾಂ ಬ್ರೂಯಾ ಮಮೈವ ವಚನಾದಿಹ|
ಗಚ್ಛ ಸೈರಂಧ್ರಿ ಭದ್ರಂ ತೇ ಯಥಾಕಾಮಂ ವರಾನನೇ ॥9॥

ಬಿಭೇತಿ ರಾಜಾ ಸುಶ್ರೋಣಿ ಗಂಧರ್ವೇಭ್ಯಃ ಪರಾಭವಾತ್ ॥10॥
ಹೆದರಿಕೆ ಉಂಟಾದ ರಾಜನು ರಾಣಿಯಾದ ಸುದೇಷ್ಣೆಯನ್ನು ಕುರಿತು ಸೈರಂಧ್ರಿಯು ಬಂದ ಮೇಲೆ ನನ್ನ ಮಾತಿನಂತೆ ಅವಳಿಗೆ ಸೈರಂಧ್ರಿಯೇ, ಸುಂದರಿಯೇ, ನಿನಗೆ ಇಷ್ಟಬಂದ ಕಡೆಗೆ ಹೋಗು. ಸುಂದರಿಯೇ, ಗಂಧರ್ವರಿಂದ ಎಲ್ಲಿ ತನಗೆ ಪರಾಭವವುಂಟಾಗುವುದೋ ಎಂದು ರಾಜನು ಹೆದರಿದ್ದಾನೆ ಎಂದು ಹೇಳು.
ನ ಹಿ ತಾಮುತ್ಸಹೇ ವಕ್ತುಂ ಸ್ವಯಂ ಗಂಧರ್ವರಕ್ಷಿತಾಮ್ |
ಸ್ತ್ರಿಯಾಸ್ತ್ವದೋಷಸ್ತಾಂ ವಕ್ತುಮತಸ್ತ್ವಂ ಪ್ರಬ್ರವೀಮ್ಯಹಮ್ ॥11॥
ಗಂಧರ್ವರಿಂದ ರಕ್ಷಿತವಾದ ಅವರಿಗೆ ನಾನೇ ಸ್ವತಃ ಹೇಳುವುದಕ್ಕೆ ಇಷ್ಟ ಪಡುವುದಿಲ್ಲ. ನೀನು ಸ್ತ್ರೀಯಾದ್ದರಿಂದ ಮಾತನಾಡಿದರೆ ದೋಷವಿಲ್ಲ. ಆದ್ದರಿಂದ ನಿನಗೆ ನಾನು ಹೇಳುತ್ತಿದ್ದೇನೆ (ಎಂದು ಹೇಳಿದನು).
ಅಥ ಮುಕ್ತಾ ಭಯಾತ್ ಕೃಷ್ಣಾ ಸೂತಪುತ್ರಾನ್ ನಿರಸ್ಯ ತು |
ಮೋಕ್ಷಿತಾ ಭೀಮಸೇನೇನ ಜಗಾಮ ನಗರಂ ಪ್ರತಿ ॥12॥
ಅತ್ತಕಡೆ ಭಯದಿಂದ ಮುಕ್ತಳಾದ ದ್ರೌಪದಿಯು ಭೀಮಸೇನನಿಂದ ಬಿಡುಗಡೆಯನ್ನು ಹೊಂದಿ ಸೂತಪುತ್ರರನ್ನು ಬಿಟ್ಟು ನಗರಕ್ಕೆ ಬಂದಳು.
ತ್ರಾಸಿತೇವ ಮೃಗೀ ಬಾಲಾ ಶಾರ್ದೂಲೇನ ಮನಸ್ವಿನೀ |
ಗಾತ್ರಾಣಿ ವಾಸಸೀ ಚೈವ ಪ್ರಕ್ಷಾಲ್ಯ ಪ್ರವಿವೇಶ ಹ ॥13॥
ಮಾನವತಿಯಾದ ಅವಳು ಹುಲಿಗೆ ಹೆದರಿದ ಹೆಣ್ಣುಜಿಂಕೆಯಂತೆ ನಗರವನ್ನು ಪ್ರವೇಶಿಸಿ ತನ್ನ ದೇಹವನ್ನು ಮತ್ತು ವಸ್ತ್ರಗಳನ್ನು ಪ್ರಕ್ಷಾಲನೆ ಮಾಡಿಕೊಂಡಳು.
ತಾಂ ದೃಷ್ಟ್ವಾ ಪುರುಷಾ ರಾಜನ್ ಪ್ರಾದ್ರವಂತಿ ದಿಶೋ ದಶ |
ಗಂಧರ್ವಾಣಾಂ ಭಯತ್ರಸ್ತಾಃ ಕೇಚಿದ್ ದೃಷ್ಟೀ ನ್ಯಮೀಲಯನ್ ॥14॥
ಎಲೈ ರಾಜನೇ, ಅವಳನ್ನು ನೋಡಿದ ಪುರುಷರು ಗಂಧರ್ವರ ಭಯದಿಂದ ನಡುಗುತ್ತಾ ದಿಕ್ಕುದಿಕ್ಕುಗಳಿಗೆ ಓಡಿದರು. ಇನ್ನು ಕೆಲವರು ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡರು.
ತತೋ ಮಹಾನಸದ್ವಾರೇ ಭೀಮಸೇನಮವಸ್ಥಿತಮ್ |
ದದರ್ಶ ರಾಜನ್ ಪಾಂಚಾಲೀ ಯಥಾ ಮತ್ತಂ ಮಹಾದ್ವಿಪಮ್ ॥15॥
ಅನಂತರ ಪಾಂಚಾಲಿಯು ಮಹಾನಸದ ದ್ವಾರದಲ್ಲಿ ಮದಿಸಿದ ಮಹಾಗಜದಂತೆ ಇದ್ದ ಭೀಮಸೇನನನ್ನು ನೋಡಿದಳು.
ಸಾಪಹಾಸಂ ತು ಶನಕೈಃ ಸಂಜ್ಞಾಭಿರಿದಮಬ್ರವೀತ್ ॥16॥
ನಮೋ ಗಂಧರ್ವರಾಜಾಯ ಯೇನಾಸ್ಮಿ ಪರಿಮೋಚಿತಾ |
ಕೀಚಕೇಭ್ಯೋ ವಿನಿರ್ದೋಷಾಮನಾಥಾಂ ವಸತೀಂ ಗೃಹೇ ॥17॥
ಯೋ ಮಾಂ ರಕ್ಷತಿ ಸಂತ್ರಸ್ತಾಂ ಗಂಧರ್ವಾಯ ನಮೋಽಸ್ತು ತೇ |18॥
ಅವಳು ಸಂತೋಷದಿಂದ ಕೂಡಿದ ಹಾಸ್ಯದಿಂದ ತನ್ನ ಸಂಜ್ಞೆಗಳ ಜೊತೆಯಲ್ಲಿ ಈ ಮಾತನ್ನು ಆಡಿದಳು. ಅನಾಥಳಾಗಿ ನಿರ್ದುಷ್ಟಳಾಗಿ ಮನೆಯಲ್ಲಿ ವಾಸಮಾಡುವ ನನ್ನನ್ನು ಕೀಚಕರಿಂದ ಬಿಡುಗಡೆಗೊಳಿಸಿದ ಗಂಧರ್ವರಾಜನಿಗೆ ನಮಸ್ಕಾರ. ಹೆದರಿದ ನನ್ನನ್ನು ರಕ್ಷಣೆ ಮಾಡುವ ಗಂಧರ್ವನಾದ ನಿನಗೆ ನಮಸ್ಕಾರ (ಎಂದು ಹೇಳಿದಳು).
ಭೀಮಃ
ಯೇ ಪುರಾ ಪುರುಷಾಸ್ತುಭ್ಯಂ ಭವಂತಿ ವಶವರ್ತಿನಃ |
ತೇಷಾಂ ವಶಗತಾ ನಿತ್ಯಂ ವಿಚರ ತ್ವಂ ಯಥೇಷ್ಟತಃ ॥19॥
ಭೀಮ ಯಾವ ಪುರುಷರು ನಿನಗೆ ಹಿಂದೆ ವಶವಾಗಿದ್ದರೋ ಅಂತಹ ಪುರುಷರ ವಶಳಾಗಿ ನೀನು ಯಾವಾಗಲೂ ನಿಶ್ಶಂಕೆಯಿಂದ ಸಂಚರಿಸುವವಳಾಗು.
ಯೇ ಯಸ್ಯಾ ವಿಚರಂತೀಹ ಪುರುಷಾ ವಶವರ್ತಿನಃ |
ತಸ್ಯಾಸ್ತೇ ವಚನಂ ಶ್ರುತ್ವಾ ಹ್ಯನೃಣಾ ವಿಹರಂತ್ಯುತ ॥20॥
ಯಾವ ಪುರುಷರು ಯಾವಳ ವಶವರ್ತಿಗಳಾಗಿ ಸಂಚರಿಸುತ್ತಾರೆಯೋ ಅವರು ಅಂತಹ ನಿನ್ನ ಮಾತನ್ನು ಕೇಳಿ ಋಣಮುಕ್ತರಾಗಿ ವಿಹರಿಸುತ್ತಾರೆ.
ವೈಶಂಪಾಯನಃ
ತಯೋಸ್ತದ್ವಚನಂ ಶ್ರುತ್ವಾ ಜಜ್ಞಿರೇ ನೇತರೇ ಜನಾಃ |
ತತಃ ಪಾಂಚಾಲರಾಜಸ್ಯ ಸುತಾ ಚಾಪಿ ಜಗಾಮ ಹ ॥21॥
ವೈಶಂಪಾಯನ ಅವರ ಆ ಮಾತುಗಳನ್ನು ಕೇಳಿದ ಯಾರಿಗೂ ಆ ಮಾತುಗಳು ಅರ್ಥವಾಗಲಿಲ್ಲ. ಅನಂತರ ಪಾಂಚಾಲರಾಜಕುಮಾರಿಯೂ ಸಹ ಅಲ್ಲಿಂದ ಹೊರಟಳು.
ತತಃ ಸಾ ನರ್ತನಾಗಾರೇ ಧನಂಜಯಮಪಶ್ಯತ |
ರಾಜ್ಞಃ ಕನ್ಯಾ ವಿರಾಟಸ್ಯ ನರ್ತಯಾನಂ ಮಹಾಭುಜಮ್ ॥22॥
ಅನಂತರ ಅವಳು ನರ್ತನಾಗಾರದಲ್ಲಿ ರಾಜಕನ್ಯೆಯರಿಗೆ ನರ್ತನವನ್ನು ಕಲಿಸುತ್ತಿದ್ದ ಮಹಾಭುಜನಾದ ಧನಂಜಯನನ್ನು ನೋಡಿದಳು.
ತತಸ್ತಾಂ ನರ್ತನಾಗಾರಾದ್ ವಿನಿಷ್ಕ್ರಮ್ಯ ಸಭಾಜನಾಃ |
ಕನ್ಯಾ ದದೃಶುರಾಯಾಂತೀಂ ಕೃಷ್ಣಾಂ ಕ್ಲಿಷ್ಟಾಮನಾಗಸೀಮ್ ॥23॥

ಆಗ ನರ್ತನಾಗಾರದಲ್ಲಿದ್ದ ಕನ್ಯೆಯರು ಅವಳಿಗೆ ಸಂತೋಷವನ್ನುಂಟು ಮಾಡುವವರಾಗಿ ಹೊರಗೆ ಬಂದು ನಿರಪರಾಧಿಯಾದ, ಕ್ಲೇಶಕ್ಕೆ ಒಳಗಾದ ದ್ರೌಪದಿಯು ಬರುತ್ತಿರುವುದನ್ನು ನೋಡಿದರು.
ಕನ್ಯಾಃ
ದಿಷ್ಟ್ಯಾ ಸೈರಂಧ್ರಿ ಮುಕ್ತಾಽಸಿ ದಿಷ್ಟ್ಯಾಽಸಿ ಪುನರಾಗತಾ |
ದಿಷ್ಟ್ಯಾ ಚ ನಿಹತಾಃ ಸೂತಾ ಯೇ ತ್ವಾಂ ಕ್ಲಿಶ್ಯಂತ್ಯನಾಗಸೀಮ್ ॥24॥
ಕನ್ಯೆಯರು ಸೈರಂಧ್ರಿಯೇ, ದೇವರ ದಯೆಯಿಂದ ಮುಕ್ತಳಾಗಿದ್ದೀಯೆ. ದೇವರ ದಯದಿಂದಲೇ ಹಿಂದೆ ಬರುತ್ತಿದ್ದೀಯೆ. ದೇವರ ದಯದಿಂದ ನಿರಪರಾಧಿಯಾದ ನಿನಗೆ ಕ್ಲೇಶವನ್ನು ಕೊಡುತ್ತಿದ್ದ ಸೂತರೆಲ್ಲರೂ ಹತರಾಗಿದ್ದಾರೆ.
ಬೃಹನ್ನಳಾ
ಕಥಂ ಸೈರಂಧ್ರಿ ಮುಕ್ತಾಽಸಿ ಕಥಂ ಪಾಪಾಶ್ಚ ತೇ ಹತಾಃ |
ಇಚ್ಛಾಮಿ ತೇ ಕಥಾಂ ಶ್ರೋತುಂ ಕಥಯಸ್ವ ಯಥಾತಥಮ್ ॥25॥
ಬೃಹನ್ನಳಾ ಸೈರಂಧ್ರಿಯೇ, ನೀನು ಹೇಗೆ ಮುಕ್ತಳಾದೆ? ಹೇಗೆ ಆ ಪಾಪಿಗಳು ಹತರಾದರು? ನಿನ್ನ ಕಥೆಯನ್ನು ಸರಿಯಾಗಿ ಕೇಳಲು ಬಯಸುತ್ತೇನೆ. ಅದನ್ನು ಹೇಳು.
ಸೈರಂಧ್ರೀ
ಬೃಹನ್ನಳೇ ಕಿಂ ನು ತವ ಸೈರಂಧ್ರ್ಯಾ ಕಾರ್ಯಮದ್ಯ ವೈ |
ಯಾ ತ್ವಂ ವಸಸಿ ಕಲ್ಯಾಣಿ ಸದಾ ಕನ್ಯಾಪುರೇ ಸುಖಮ್ ॥26॥
ನ ಹಿ ತದ್ ದುಃಖಮಾಪ್ನೋಷಿ ಸೈರಂಧ್ರೀ ಯದ್ ದುಃಖಮಾಪ್ನುತೇ |
ತೇನ ಮಾಂ ದುಃಖಿತಾಮೇವಂ ಪೃಚ್ಛಸೇ ಪ್ರಹಸನ್ನಿವ ॥27॥
ಸೈರಂಧ್ರೀ ಬೃಹನ್ನಳೆಯೇ, ಕಲ್ಯಾಣಿಯೇ, ಕನ್ಯಾಂತಃಪುರದಲ್ಲಿ ಸುಖವಾಗಿ ವಾಸಿಸುವ ನಿನಗೆ ಈ ದಿನ ಸೈರಂಧ್ರಿಯಿಂದ ಏನು ಆಗಬೇಕಾಗಿದೆ? ಸೈರಂಧ್ರಿಯು ಯಾವ ದುಃಖವನ್ನು ಅನುಭವಿಸುತ್ತಾಳೆಯೋ ಅಂತಹ ದುಃಖವು ನಿನಗೆ ಬರುವುದಿಲ್ಲ. ಆದ್ದರಿಂದ ನೀನು ದುಃಖಿತಳಾದ ನನ್ನನ್ನು ನಗುತ್ತಾ ಹೀಗೆ ಪ್ರಶ್ನೆ ಮಾಡುತ್ತಿದ್ದೀಯೆ.
ಬೃಹನ್ನಳಾ
ಬೃಹನ್ನಳಾಽಪಿ ಕಲ್ಯಾಣಿ ದುಃಖಮಾಪ್ನೋತ್ಯನಂತಕಮ್ |
ತಿರ್ಯಗ್ಯೋನಿಂ ಗತಾಂ ಬಾಲೇ ನ ಚೈನಾಮವಬುದ್ಧ್ಯಸೇ ॥28॥
ಬೃಹನ್ನಳಾ ಕಲ್ಯಾಣಿಯೇ, ಬೃಹನ್ನಳೆಯೂ ಕೂಡ ಅಪಾರವಾದ ದುಃಖವನ್ನು ಅನುಭವಿಸುತ್ತಾಳೆ. ನೀಚಯೋನಿಯನ್ನು ಪಡೆದಂತೆ ಇರುವ ಅವಳನ್ನು ಎಲೌ ಬಾಲೆಯೇ, ನೀನು ತಿಳಿಯುತ್ತಿಲ್ಲ.
ವೈಶಂಪಾಯನಃ
ತತಃ ಸಹೈವ ಕನ್ಯಾಭಿರ್ದ್ರೌಪದೀ ರಾಜವೇಶ್ಮ ತತ್ |
ಪ್ರವಿವೇಶ ಸುದೇಷ್ಣಾಯಾಃ ಸಮೀಪಮುಪಗಾಮಿನೀ ॥29॥
ತಾಮಬ್ರವೀದ್ ರಾಜಪತ್ನೀ ವಿರಾಟವಚನಾದಿದಮ್ ॥30॥
ವೈಶಂಪಾಯನ ಅನಂತರ ಕನ್ಯೆಯರ ಜೊತೆಯಲ್ಲಿಯೇ ದ್ರೌಪದಿಯು ರಾಜನ ಅರಮನೆಯನ್ನು ಪ್ರವೇಶಿಸಿ ಸುದೇಷ್ಣೆಯ ಸಮೀಪಕ್ಕೆ ಹೋದಳು. ರಾಜಪತ್ನಿಯು ವಿರಾಟನ ವಚನದಂತೆ ಅವಳನ್ನು ಕುರಿತು ಮಾತನಾಡಿದಳು.
ಸೈರಂಧ್ರಿ ಗಮ್ಯತಾಂ ಶೀಘ್ರಂ ಯತ್ರ ಕಾಮಯಸೇ ಗತಿಮ್ |
ರಾಜಾ ಬಿಭೇತಿ ಸೈರಂಧ್ರಿ ಗಂಧರ್ವೇಭ್ಯಃ ಪರಾಭವಾತ್ ॥31॥
ಸೈರಂಧ್ರಿಯೇ, ಶೀಘ್ರವಾಗಿ ನಿನಗೆ ಇಷ್ಟಬಂದ ಕಡೆಗೆ ಹೊರಟು ಹೋಗು. ಸೈರಂಧ್ರಿಯೇ, ಗಂಧರ್ವರಿಂದ ಎಲ್ಲಿ ಪರಾಭವ ಉಂಟಾಗುವುದೋ ಎಂದು ರಾಜನು ಹೆದರುತ್ತಾನೆ.
ತ್ವಂ ಚಾಪಿ ತರುಣೀ ಸುಭ್ರೂ ರೂಪೇಣಾಪ್ರತಿಮಾ ಭುವಿ |
ಚಿತ್ತಾನಿ ಚ ನೃಣಾಂ ಶುಭ್ರೇ ರಕ್ತಾನಿ ಸ್ಪರ್ಶಜೇ ಸುಖೇ ॥32॥
ಒಳ್ಳೆಯ ಹುಬ್ಬುಳ್ಳವಳೇ, ನೀನಾದರೂ ತರುಣಿ ಮತ್ತು ಸೌಂದರ್ಯದಿಂದ ಭೂಮಿಯಲ್ಲಿ ಅಸದೃಶಳಾದವಳು. ಶುಭ್ರಳಾದವಳೇ, ಪುರುಷರ ಮನಸ್ಸಾದರೂ ಸ್ಪರ್ಶಜನ್ಯಸುಖದಲ್ಲಿ ಆಸಕ್ತವಾಗಿರುತ್ತದೆ.
ತಸ್ಮಾತ್ ತ್ವತ್ತೋ ಭಯಂ ಮಹ್ಯಂ ರಾಷ್ಟ್ರಸ್ಯ ನಗರಸ್ಯ ಚ |
ಗಚ್ಛಾದ್ಯೈವ ಯಥೇಷ್ಟಂ ತ್ವಂ ನಗರಾದ್ ಯತ್ರ ರಂಸ್ಯಸೇ ॥33॥
ಆದ್ದರಿಂದ ನಿನ್ನಿಂದ ನನಗೂ, ನನ್ನ ನಗರಕ್ಕೂ, ರಾಷ್ಟ್ರಕ್ಕೂ ಭಯವುಂಟಾಗಿದೆ. ಆದ್ದರಿಂದ ಈ ದಿನವೇ ನಿನಗೆ ಸಂತೋಷಬಂದ ಕಡೆಗೆ ನಗರದಿಂದ ಹೊರಟುಹೋಗು.
ತ್ವನ್ನಿಮಿತ್ತೇ ಶುಭೇ ಮಹ್ಯಂ ಸರ್ವೋ ಬಂಧುಜನೋ ಹತಃ |
ನೃಶಂಸಾ ಖಲು ತೇ ಬುದ್ಧಿರ್ಭ್ರಾತೄಣಾಂ ಮೇ ಕೃತೋ ವಧಃ ॥34॥
ಶುಭಳಾದವಳೇ, ನಿನ್ನ ನಿಮಿತ್ತದಿಂದಾಗಿ ನನ್ನ ಬಂಧುಗಳು ಹತರಾದರು. ನಿನ್ನ ಬುದ್ಧಿಯು ಕ್ರೂರವಾದುದು. ಅದರಿಂದ ನನ್ನ ಸಹೋದರರಿಗೆ ಮರಣವುಂಟಾಯಿತು.
ತಸ್ಮಾದ್ ಗಂಧರ್ವರಾಜೇಭ್ಯೋ ಭಯಮತ್ರ ಪ್ರವರ್ತತೇ |
ಯಥೇಷ್ಟಂ ಗಚ್ಛ ಸೈರಂಧ್ರಿ ಇಹ ಸ್ವಸ್ತಿ ಯಥಾ ಭವೇತ್ ॥35॥
ಆದ್ದರಿಂದ ಗಂಧರ್ವರಾಜರಿಂದ ಇಲ್ಲಿ ಎಲ್ಲಾ ಕಡೆಯಲ್ಲಿಯೂ ಭಯವು ಹರಡಿದೆ. ಆದ್ದರಿಂದ ಸೈರಂಧ್ರಿಯೇ, ಇಲ್ಲಿ

ಕ್ಷೇಮವಾಗುವಂತೆ ನಿನಗೆ ಇಷ್ಟಬಂದಕಡೆಗೆ ಹೊರಟು ಹೋಗು.
ವೈಶಂಪಾಯನಃ
ಸುದೇಷ್ಣಾವಚನಂ ಶ್ರುತ್ವಾ ಸೈರಂಧ್ರೀ ಚೇದಮಬ್ರವೀತ್ ॥36॥
ವೈಶಂಪಾಯನ ಸುದೇಷ್ಣೆಯ ಮಾತುಗಳನ್ನು ಕೇಳಿ ಸೈರಂಧ್ರಿಯು ಹೀಗೆ ಹೇಳಿದಳು.
ತ್ರಯೋದಶಾಹಮಾತ್ರಂ ತು ರಾಜಾ ಕ್ಷಾಮ್ಯತು ಭಾಮಿನಿ |
ಕೃತಕೃತ್ಯಾ ಭವಿಷ್ಯಂತಿ ಗಂಧರ್ವಾಸ್ತೇ ನ ಸಂಶಯಃ ॥37॥
ತತೋ ಮಾಮುಪನೇಷ್ಯಂತಿ ಕರಿಷ್ಯಂತಿ ತವ ಪ್ರಿಯಮ್ |
ಧ್ರುವಂ ಚ ಶ್ರೇಯಸಾ ರಾಜಾ ಯೋಕ್ಷ್ಯತೇ ಸಹ ಬಾಂಧವೈಃ ॥38॥
ಭಾಮಿನಿಯೇ, ಇನ್ನು ಹದಿಮೂರು ದಿವಸಗಳು ಮಾತ್ರ ರಾಜನು ಸಹಿಸಿಕೊಳ್ಳಲಿ. ಆಗ ಗಂಧರ್ವರು ಕೃತಕೃತ್ಯರಾಗುವರು. ಇದರಲ್ಲಿ ಸಂಶಯವಿಲ್ಲ. ಅನಂತರ ಅವರು ನನ್ನನ್ನು ಕರೆದುಕೊಂಡು ಹೋಗುವರು. ನಿನಗೆ ಹಿತವನ್ನೂ ಮಾಡುವರು. ರಾಜನೂ ಮತ್ತು ಬಾಂಧವರು ನಿಶ್ಚಿತವಾಗಿ ಶ್ರೇಯಸ್ಸನ್ನು ಹೊಂದುವರು.
ರಾಜ್ಞಾ ಕೃತೋಪಕಾರಾಸ್ತು ಕೃತಜ್ಞಾಸ್ತು ಸದಾ ಶುಭೇ |
ಸಾಧವಶ್ಚ ಬಲೋತ್ಸಿಕ್ತಾಃ ಕೃತಪ್ರತಿಕೃತೇಪ್ಸವಃ ॥39॥
ಶುಭಳಾದವಳೇ, ಗಂಧರ್ವರು ಸಾಧುಗಳು, ಬಲದಿಂದ ಹೆಮ್ಮೆ ಪಡುವವರು, ಪಡೆದ ಉಪಕಾರಕ್ಕೆ ಪ್ರತಿಯಾಗಿ ಉಪಕಾರವನ್ನು ಮಾಡುವವರು. ರಾಜನು ಮಾಡಿರುವ ಉಪಕಾರಕ್ಕಾಗಿ ಅವರು ಯಾವಾಗಲೂ ಕೃತಜ್ಞರಾಗಿರುತ್ತಾರೆ.
ಅರ್ಥಿನೀ ಮಾಂ ಬ್ರವೀತ್ಯೇಷಾ ಯದ್ವಾ ತದ್ವೇತಿ ಚಿಂತಯ |
ಭರಸ್ವ ತದಹರ್ಮಾತ್ರಂ ತತಃ ಶ್ರೇಯೋ ಭವಿಷ್ಯತಿ ॥40॥
ತನ್ನ ಕಾರ್ಯದ ಸಲುವಾಗಿ ನನ್ನನ್ನು ಕುರಿತು ಏನೇನನ್ನೋ ಮಾತನಾಡುತ್ತಿದ್ದಾಳೆ ಎಂದು ಚಿಂತಿಸಬೇಡ. ಅಷ್ಟು ದಿವಸಗಳ ಕಾಲ ಮಾತ್ರ ನನ್ನನ್ನು ಪೋಷಿಸು. ಅನಂತರ ನಿನಗೆ ಶ್ರೇಯಸ್ಸು ಉಂಟಾಗುವುದು.
ವೈಶಂಪಾಯನಃ
ತಸ್ಯಾಸ್ತದ್ವಚನಂ ಶ್ರುತ್ವಾ ಕೈಕೇಯೀ ದುಃಖಮೋಹಿತಾ |
ಉವಾಚ ದ್ರೌಪದೀಮಾರ್ತಾ ಭ್ರಾತೃವ್ಯಸನಕರ್ಶಿತಾ ॥41॥
ವಸ ಭದ್ರೇ ಯಥೇಷ್ಟಂ ತ್ವಂ ತ್ವಾಮಹಂ ಶರಣಂ ಗತಾ |
ತ್ರಾಯಸ್ವ ಮಮ ಭರ್ತಾರಂ ಪುತ್ರಾಂಶ್ಚೈವ ವಿಶೇಷತಃ ॥42॥
ವೈಶಂಪಾಯನ ಅವಳ ಆ ಮಾತುಗಳನ್ನು ಕೇಳಿ ದುಃಖಮೋಹಿತಳೂ, ಸಹೋದರರ ಮರಣದ ಶೋಕದಿಂದ ಕರ್ಶಿತಳೂ ಆದ ಆರ್ತಳಾದ ಸುದೇಷ್ಣೆಯು ದ್ರೌಪದಿಯನ್ನು ಕುರಿತು, ನಿನಗೆ ಇಷ್ಟಬಂದಂತೆ ವಾಸ ಮಾಡು. ನಾನು ನಿನಗೆ ಶರಣಾಗತಳಾಗಿದ್ದೇನೆ. ನನ್ನ ಪತಿಯನ್ನು ಮತ್ತು ವಿಶೇಷವಾಗಿ ಪುತ್ರರನ್ನು ನೀನು ರಕ್ಷಿಸು ಎಂದು ಹೇಳಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ಕೀಚಕಪರ್ವಣಿ ದ್ವಾದಶೋಽಧ್ಯಾಯಃ ॥
॥ ಸಮಾಪ್ತಂ ಕೀಚಕಪರ್ವ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ಗೋಗ್ರಹಣ ಪರ್ವ
ಮಹಾಭಾರತತಾತ್ಪರ್ಯನಿರ್ಣಯಃ
ಅಸಿತ್ವತ್ಯೇನಾಮಾಹ ಭಯಾತ್ ಸುದೇಷ್ಣಾ
ಯಥಾಽವಸನ್ ಪೂರ್ಣಮಬ್ದಂ ಚ ತೇಽತ್ರ |
ತದಾ ಪಾರ್ಥಾನ್ ಪ್ರವಿಚಿಂತ್ಯಾಖಿಲಾಯಾಂ
ಪೃಥ್ವ್ಯಾಂ ಛನ್ನಾನ್ ಧಾರ್ತರಾಷ್ಟ್ರಸ್ಯ ದೂತಾಃ ॥31॥
ಆಗ ದುರ್ಯೋಧನನ ಗೂಢಚಾರರು ಮರೆಯಾಗಿದ್ದ ಪಾಂಡವರನ್ನು ಸಮಸ್ತ ಭೂ ಮಂಡಲದಲ್ಲಿ ಹುಡುಕಿ ಕಾಣದೆ ದುರ್ಯೋಧನನ ಬಳಿಗೆ ಬಂದರು. ಒಂದು ಹೆಣ್ಣಿಗಾಗಿ ಕೀಚಕ ಹತನಾದುದನ್ನು ತಿಳಿಸಿದರು.
ಅವಿಜ್ಞಾಯ ಪ್ರಯಯುರ್ಧಾರ್ತರಾಷ್ಟ್ರಮಂ
ಊಚುರ್ಹತಂ ಕೀಚಕಂ ಯೋಷಿದರ್ಥೇ |
ತೇನಾವದದ್ ದ್ರೌಪದೀಕಾರಣೇನ
ದುರ್ಯೋಧನೋ ನಿಹತಂ ಕೀಚಕಂ ತಮ್ ॥32॥
ಅದರಿಂದ ದುರ್ಯೋಧನನೆಂದ, `ದ್ರೌಪದೀ ನಿಮಿತ್ತವಾಗಿ ಭೀಮನಿಂದ ಕೀಚಕ ಹತನಾಗಿದ್ದಾನೆ'. ಬಳಿಕ ದುರ್ಯೋಧನ ಮುಂತಾದವರು ಭೀಷ್ಮ ಮುಂತಾದವರೊಡನೆ ಮತ್ತು ಕರ್ಣನೊಡನೆ ವಿರಾಟನಗರಕ್ಕೆ ಹೊರಟರು.
ಇಪ್ಪತ್ತೆಂಟನೆಯ ಅಧ್ಯಾಯ
ಹಸ್ತಿನಪುರಕ್ಕೆ ಹಿಂದಿರುಗಿದ ಚಾರರಿಂದ ದುರ್ಯೋಧನನಿಗೆ
ಕೀಚಕನ ವಧೆಯ ಕಥನ.
ವೈಶಂಪಾಯನಃ

ಕೀಚಕೇ ತು ಹತೇ ರಾಜಾ ವಿರಾಟಃ ಪರವೀರಹಾ |
ಶೋಕಮಾಹಾರಯತ್ ತೀವ್ರಂ ಸಾಮಾತ್ಯಃ ಸಪುರೋಹಿತಃ ॥1॥
ವೈಶಂಪಾಯನ ಕೀಚಕನು ಹತನಾಗುತ್ತಿರಲು ಶತ್ರುಸಂಹಾರಕನಾದ ವಿರಾಟರಾಜನು ಅಮಾತ್ಯರ ಮತ್ತು ಪುರೋಹಿತರ ಜೊತೆಯಲ್ಲಿ ತೀವ್ರವಾದ ಶೋಕಕ್ಕೆ ಒಳಗಾದನು.
ಕೀಚಕಸ್ಯ ವಧಂ ಘೋರಂ ಸಾನುಜಸ್ಯ ವಿಶಾಂಪತೇ |
ಆತ್ಮಾಹಿತಂ ಚಿಂತಯಿತ್ವಾ ವ್ಯಸ್ಮಯಂತ ಪೃಥಗ್ ಜನಾಃ ॥2॥
ಎಲ್ಲೈ ರಾಜನೇ, ಸಾಮಾನ್ಯಜನರು ಮಾತ್ರ ತಮ್ಮಂದಿರಿಂದ ಕೂಡಿದ ಕೀಚಕನ ಘೋರವಾದ ವಧೆಯು ಪರಮಾತ್ಮನಿಂದ ಮಾಡಲ್ಪಟ್ಟಿತು ಎಂದು ಚಿಂತಿಸಿ ಆಶ್ಚರ್ಯಪಟ್ಟರು.
ತಸ್ಮಿನ್ ಪುರೇ ಜನಪದೇ ಜಜಲ್ಪುಶ್ಚಾಪಿ ಸರ್ವಶಃ ॥3॥
ವೀರ್ಯವಾನ್ ದಯಿತೋ ರಾಜ್ಞೋ ದರ್ಪೋತ್ಸಿಕ್ತಶ್ಚ ಕೀಚಕಃ |
ಸಾಂಪರಾಯಾಪರಿಕ್ಲಿಷ್ಟೋ ಬಲವಾನ್ ದುರ್ಜಯೋ ರಣೇ ॥4॥
ಆಸೀತ್ ಪ್ರಹರ್ತಾ ಶತ್ರೂಣಾಂ ಚಾರುದರ್ಶೀ ಚ ದುರ್ಮತಿಃ |
ಸ ಹತಃ ಕಿಲ ಗಂಧರ್ವೈಃ ಸೈರಂಧ್ರೀಕಾರಣಾನ್ನಿಶಿ ॥5॥
ಆ ಪಟ್ಟಣದಲ್ಲಿಯೂ ಮತ್ತು ರಾಷ್ಟ್ರದಲ್ಲಿಯೂ ಎಲ್ಲ ಕಡೆಗಳಲ್ಲಿಯೂ ಜನರು ಮಾತನಾಡಿದರು. ಕೀಚಕನು ಪರಾಕ್ರಮಶಾಲಿಯೂ, ರಾಜನಿಗೆ ಪ್ರಿಯನಾದವನೂ ಮತ್ತು ದರ್ಪದಿಂದ ಮತ್ತನಾದವನೂ ಆಗಿದ್ದನು. ಯುದ್ಧದಲ್ಲಿ ಕ್ಲೇಶರಹಿತನೂ, ಶತ್ರುಗಳಿಂದ ದುರ್ಜಯನೂ, ಬಲಿಷ್ಠನೂ, ಶತ್ರುಗಳನ್ನು ಕೊಲ್ಲುವವನೂ ಆಗಿದ್ದನು. ಸುಂದರನೂ ಮತ್ತು ದುರ್ಮತಿಯೂ ಆದ ಅವನು ಸೈರಂಧ್ರಿಯ ನಿಮಿತ್ತದಿಂದಾಗಿ ರಾತ್ರಿಯ ವೇಳೆಯಲ್ಲಿ ಗಂಧರ್ವರಿಂದ ಹತನಾದನಷ್ಟೆ!
ಇತ್ಯಜಲ್ಪನ್ ಮಹಾರಾಜ ಕೀಚಕಾನಾಂ ಮಹಾವಧಮ್ |
ದೇಶೇ ದೇಶೇ ಮನುಷ್ಯಾಶ್ಚ ವ್ಯಸ್ಮಯನ್ ಕೀಚಕೇ ಹತೇ ॥6॥
ಮಹಾರಾಜನೇ, ಕೀಚಕರ ಮಹಾವಧೆಯನ್ನು ಕುರಿತು ಕೀಚಕನು ಹತನಾದಮೇಲೆ ದೇಶದೇಶಗಳಲ್ಲಿ ಜನರು ಹೀಗೆ ಮಾತನಾಡಿಕೊಂಡು ಆಶ್ಚರ್ಯಪಟ್ಟರು.
ಅಥ ತೇ ಧಾರ್ತರಾಷ್ಟ್ರೇಣ ಪ್ರಯುಕ್ತಾ ಬಹವಶ್ಚರಾಃ |
ಮೃಗಯಿತ್ವಾ ಬಹೂನ್ ದೇಶಾನ್ ಗ್ರಾಮಾಂಶ್ಚ ನಗರಾಣಿ ಚ ॥7॥
ಸಂವಿಧಾಯ ಯಥಾಽಽದಿಷ್ಟಂ ಯಥಾದೇಶಂ ಸದೇಶಕಾಃ |
ಕೃತಸಂಕೇತನಾಃ ಸರ್ವೇ ನ್ಯವರ್ತಂತ ಪುರಂ ಪ್ರತಿ ॥8॥
ಅನಂತರ ದುರ್ಯೋಧನನಿಂದ ನಿಯುಕ್ತರಾದ ಅನೇಕ ಗೂಢಚಾರರು ಅನೇಕ ದೇಶಗಳನ್ನೂ, ಗ್ರಾಮಗಳನ್ನೂ ಮತ್ತು ನಗರಗಳನ್ನೂ ತಿರುಗಿ ಹುಡುಕಿ ಅವರಿಗೆ ಅಪ್ಪಣೆ ಮಾಡಿದ್ದಂತೆ ಆಯಾ ದೇಶಗಳಲ್ಲಿ ಎಲ್ಲಾ ಕೆಲಸವನ್ನೂ ಮಾಡಿ ತಮ್ಮ ಸಂಕೇತಕ್ಕೆ ಅನುಗುಣವಾಗಿ ಎಲ್ಲರೂ ಹಸ್ತಿನಪುರಕ್ಕೆ ಹಿಂದಿರುಗಿದರು.
ಆಗಮ್ಯ ಹಸ್ತಿನಪುರಂ ಧಾರ್ತರಾಷ್ಟ್ರಮರಿಂದಮ |
ತತ್ರ ದೃಷ್ಟ್ವಾ ತು ರಾಜಾನಂ ಕೌರವ್ಯಂ ಧೃತರಾಷ್ಟ್ರಜಮ್ ॥9॥
ಪ್ರಣಮ್ಯ ಶಿರಸಾ ಭೂಮೌ ವರ್ಧಯಿತ್ವಾ ಜಯಾಶಿಷಾ |
ಆಸೀನಂ ಸೂರ್ಯಸಂಕಾಶೇ ಕಾಂಚನೇ ಪರಮಾಸನೇ ॥10॥
ಉಪಾಸ್ಯಮಾನಂ ಸಚಿವೈರ್ಮರುದ್ಭಿರಿವ ವಾಸವಮ್ |
ದ್ರೋಣಕರ್ಣಕೃಪೈಃ ಸಾರ್ಧಂ ಭೀಷ್ಮೇಣ ಚ ಮಹಾತ್ಮನಾ ॥11॥
ಸಂಗತಂ ಭ್ರಾತೃಭಿಶ್ಚಾಪಿ ತ್ರಿಗರ್ತೈಶ್ಚ ಮಹಾರಥೈಃ |
ದುರ್ಯೋಧನಂ ಸಭಾಮಧ್ಯೇ ಆಸೀನಮಿದಮಬ್ರುವನ್ ॥12॥
ಅರಿಂದಮನೇ, ಹಸ್ತಿನಪುರಕ್ಕೆ ಹಿಂದಿರುಗಿದ ಅವರು ಅಲ್ಲಿ ಕೌರವ್ಯನಾದ ಧೃತರಾಷ್ಟ್ರಪುತ್ರನಾದ ದುರ್ಯೋಧನನಿಗೆ ಶಿರಸಾ ನಮಸ್ಕಾರವನ್ನು ಮಾಡಿ ಜಯಾಶೀರ್ವಾದಗಳಿಂದ ಅವನ ಅಭಿವೃದ್ಧಿಯನ್ನು ಆಶಂಸಿಸಿ ಸೂರ್ಯನಂತೆ ಹೊಳೆಯುವ ಪರಮಾಸನದಲ್ಲಿ ಕುಳಿತು ಮರುತ್ತುಗಳಿಂದ ಸಹಿತನಾದ ಇಂದ್ರನಂತೆ ಸಚಿವರಿಂದ ಉಪಾಸ್ಯಮಾನನಾದಂತಹ ಮಹಾತ್ಮರಾದ ಭೀಷ್ಮರಿಂದಲೂ ಮತ್ತು ದ್ರೋಣ-ಕರ್ಣ-ಕೃಪರಿಂದಲೂ ಮತ್ತು ಸಹೋದರರಿಂದಲೂ ಮತ್ತು ಮಹಾರಥರಾದ ತ್ರಿಗರ್ತರಿಂದಲೂ ಸಂಗತನಾದ ದುರ್ಯೋಧನನನ್ನು ಕುರಿತು ಸಭೆಯ ಮಧ್ಯದಲ್ಲಿ ಹೀಗೆ ಮಾತನಾಡಿದರು.
ಕೃತೋಽಸ್ಮಾಭಿಃ ಪರೋ ಯತ್ನಸ್ತೇಷಾಮನ್ವೇಷಣೇ ಸದಾ |
ಪಾಂಡವಾನಾಂ ಮನುಷ್ಯೇಂದ್ರ ತಸ್ಮಿನ್ ಮಹತಿ ಕಾನನೇ ॥13॥
ಮನುಷ್ಯೇಂದ್ರನೇ, ನಾವು ಆ ಪಾಂಡವರ ಅನ್ವೇಷಣೆಗಾಗಿ ದೊಡ್ಡ ಕಾಡಿನಲ್ಲಿ ಮಹಾಪ್ರಯತ್ನವನ್ನು ಮಾಡಿದೆವು.
ನಿರ್ಜನೇ ವ್ಯಾಲಸಂಕೀರ್ಣೇ ನಾನಾದ್ರುಮಲತಾಕುಲೇ |
ಲತಾಪ್ರತಾನಬಹುಳೇ ನಾನಾಗುಲ್ಮಸಮಾಕುಲೇ ॥14॥
ನಿರ್ಜನವಾದ, ಸರ್ಪಾದಿಮೃಗಗಳಿಂದ ನಿಬಿಡವಾದ, ಅನೇಕ ದ್ರುಮ-ಲತೆಗಳಿಂದಲೂ, ಅನೇಕ ಪೊದೆಗಳಿಂದಲೂ ತುಂಬಿದ (ಮಹಾವನದಲ್ಲಿ ಹುಡುಕಿದೆವು).
ನ ಚ ವಿದ್ಮೋ ಗತಿಂ ತೇಷಾಂ ಪಾಂಡವಾನಾಮರಿಂದಮ |
ಮಾರ್ಗಮಾಣಾಃ ಪದನ್ಯಾಸಮ್ ಆಶ್ರಮೇಷು ವನೇಷು ಚ ॥15॥

ಗಿರಿಕೂಟೇಷು ದುರ್ಗೇಷು ನಾನಾಜನಪದೇಷು ಚ |
ಜನಾಕೀರ್ಣೇಷು ಸರ್ವೇಷು ಚತ್ವರೇಷು ಪುರೇಷು ಚ ॥16॥
ನರೇಂದ್ರ ಸಭಯಾನ್ ನಷ್ಟಾನ್ ನ ಚ ವಿದ್ಮಶ್ಚ ಪಾಂಡವಾನ್ |
ಅತ್ಯಂತಂ ವಾ ವಿನಷ್ಟಾಸ್ತೇ ಭದ್ರಂ ತುಭ್ಯಂ ನರರ್ಷಭ ॥17॥
ಅರಿಂದಮನೇ, ಅವರ ಹೆಜ್ಜೆಯ ಗುರುತುಗಳನ್ನು (ಅವರ ವಾಸದ ಚಿಹ್ನೆಗಳನ್ನು) ಆಶ್ರಮದಲ್ಲಿ, ವನಗಳಲ್ಲಿ, ಪರ್ವತದ ಶಿಖರಗಳಲ್ಲಿ, ದುರ್ಗಗಳಲ್ಲಿ, ಅನೇಕ ರಾಜ್ಯಗಳಲ್ಲಿ, ಜನನಿಬಿಡವಾದ ಅನೇಕ ಚತುಷ್ಪಥಗಳಲ್ಲಿ ಮತ್ತು ಪಟ್ಟಣಗಳಲ್ಲಿ ಹುಡುಕಿದೆವು. ನಮಗೆ ಪಾಂಡವರ ಸುದ್ದಿಯು ತಿಳಿಯಲಿಲ್ಲ. ಎಲೈ ನರೇಂದ್ರನೇ, ಭಯದಿಂದ ನಷ್ಟರಾದ ಆ ಪಾಂಡವರ ಗುರುತು ನಮಗೆ ಎಲ್ಲೂ ತಿಳಿಯಲಿಲ್ಲ. ಅಥವಾ ಅವರು ಅತ್ಯಂತ ವಿನಾಶವನ್ನು ಹೊಂದಿದ್ದಾರೆ. ರಾಜನೇ ನಿನಗೆ ಮಂಗಳವಾಗಲಿ.
ಗಿರೀಣಾಂ ಕೂಟಕುಂಜೇಷು ಕಂದರಾಂತರಸಾನುಷು |
ನದೀಪ್ರಸ್ರವಣೇಷ್ವೇವ ಹ್ರದೇಷು ಚ ಸರಸ್ಸು ಚ ॥18॥
ಗಹ್ವರೇಷು ಚ ದುರ್ಗೇಷು ಗ್ರಾಮೇಷು ಚ ವನೇಷು ಚ |
ದುರ್ವಿಜ್ಞೇಯಾ ಗತಿಸ್ತೇಷಾಂ ಮೃಗ್ಯತೇಽಸ್ಮಾಭಿರೇವ ಚ ॥19॥
ಪರ್ವತದ ತಪ್ಪಲುಗಳಲ್ಲಿ ಮತ್ತು ಕುಂಜಗಳಲ್ಲಿ, ಗುಹೆಗಳಲ್ಲಿ ಮತ್ತು ಶಿಖರಗಳಲ್ಲಿ, ನದಿಯು ಹರಿಯುವ ಸ್ಥಳಗಳಲ್ಲಿ, ಮಡುಗಳಲ್ಲಿ ಮತ್ತು ಸರೋವರಗಳಲ್ಲಿ, ಗುಹೆಗಳಲ್ಲಿ ಮತ್ತು ದುರ್ಗಗಳಲ್ಲಿ, ಗ್ರಾಮಗಳಲ್ಲಿ ಮತ್ತು ವನಗಳಲ್ಲಿ ನಮ್ಮಿಂದ ಎಲ್ಲೂ ಕಾಣಲ್ಪಡದ ಅವರ ಗತಿಯು ಹುಡುಕಲ್ಪಟ್ಟಿತು.
ಗಜವ್ಯಾಘ್ರಸಮೀಪೇಷು ಸಿಂಹಾಂತೇ ಶರಭಾಂತರೇ |
ಪದಾನ್ಯನ್ವಿಚ್ಛಮಾನಾಸ್ತು ರಥಾನಾಂ ರಥಿಸತ್ತಮ ॥20॥
ಕಂಚಿತ್ ಕಾಲಂ ಮನುಷ್ಯೇಂದ್ರ ಸೂತಾನನುಗತಾ ವಯಮ್ ॥21॥
ಮೃಗಯಿತ್ವಾ ಯಥಾನ್ಯಾಸಂ ವಿದಿತಾರ್ಥಾಶ್ಚ ತತ್ತ್ವತಃ |
ಪ್ರಾಪ್ತಾ ದ್ವಾರಾವತೀಂ ಪಾರ್ಥಾನ್ ಋತೇ ಸೂತಾಃ ಪರಂತಪ ॥22॥
ಗಜವ್ಯಾಘ್ರಗಳ ಸಮೀಪದಲ್ಲಿ, ಸಿಂಹ ಶರಭಗಳ ಸಮೀಪದಲ್ಲಿ, ರಥಗಳ ಸಮೀಪದಲ್ಲಿ ಅವರ ಹೆಜ್ಜೆಗಳನ್ನು ಹುಡುಕುತ್ತಾ ಎಲೈ ರಥಿಸತ್ತಮನೇ, ಮನುಷ್ಯೇಂದ್ರನೇ, ನಾವು ಸ್ವಲ್ಪಕಾಲ ಪಾಂಡವರ ಸಾರಥಿಗಳನ್ನು ಹಿಂಬಾಲಿಸಿದೆವು. ಹುಡುಕುವ ರೀತಿಯಲ್ಲಿ ಅವರನ್ನು ಹುಡುಕಿ ಅನಂತರ ಎಲೈ ಪರಂತಪನೇ, ಪಾಂಡವರಿಲ್ಲದೆ ಸೂತರು ದ್ವಾರಾವತಿಗೆ ಹಿಂದಿರುಗಿದ್ದಾರೆಂದು ನಾವು ಸರಿಯಾಗಿ ತಿಳಿದೆವು.
ನ ತತ್ರ ಪಾಂಡವಾ ರಾಜನ್ ನಾಪಿ ಕೃಷ್ಣಾ ಮಹಾವ್ರತಾ |
ಸರ್ವಥಾ ವಿಪ್ರನಷ್ಟಾಸ್ತೇ ನಮಸ್ತೇ ಭರತರ್ಷಭ ॥23॥
ರಾಜನೇ, ಅಲ್ಲಿ ಪಾಂಡವರಾಗಲೀ ಅಥವಾ ಮಹಾವ್ರತಳಾದ ದ್ರೌಪದಿಯಾಗಲೀ ಇಲ್ಲ. ಅವರು ಸರ್ವಥಾ ನಾಶಹೊಂದಿದ್ದಾರೆ. ಭರತರ್ಷಭನೇ, ನಿನಗೆ ನಮಸ್ಕಾರ.
ನರದೇವ ಯಥಾ ದೃಷ್ಟಂ ನ ಚ ವಿದ್ಮಾತ್ರ ಪಾಂಡವಾನ್ ॥24॥
ನಿರ್ವೃತ್ತೋ ಭವ ನಷ್ಟಾಸ್ತೇ ಸ್ವಸ್ಥೋ ಭವ ಪರಂತಪ |
ಸರ್ವಥೈವ ಪ್ರಣಷ್ಟಾಸ್ತೇ ನಮಸ್ತೇ ಭರತರ್ಷಭ ॥25॥
ನರದೇವನೇ, ನಾವು ನೋಡಿದಂತೆ ನಮಗೆ ಎಲ್ಲೂ ಪಾಂಡವರು ಕಾಣಲಿಲ್ಲ. ಸಂತೋಷದಿಂದ ಇರುವವನಾಗು. ಅವರು ನಾಶವನ್ನು ಹೊಂದಿದ್ದಾರೆ. ಪರಂತಪನೇ, ಸಮಾಧಾನದಿಂದ ಇರು. ಅವರು ಅತ್ಯಂತ ನಾಶವನ್ನು ಹೊಂದಿದ್ದಾರೆ. ಭರತರ್ಷಭನೇ, ನಿನಗೆ ನಮಸ್ಕಾರ.
ಸರ್ವಾ ಚ ಪೃಥಿವೀ ಕೃತ್ಸ್ನಾ ಸಶೈಲವನಕಾನನಾ |
ಸರಾಷ್ಟ್ರನಗರಗ್ರಾಮಾ ಪಟ್ಟಣೈಶ್ಚ ಸಮನ್ವಿತಾ ॥26॥
ಅನ್ವೇಷಿತಾ ಚ ಸರ್ವತ್ರ ನ ಚ ಪಶ್ಯಾಮ ಪಾಂಡವಾನ್ ॥27॥
ಎಲ್ಲಾ ಭೂಮಿಯನ್ನೂ, ಪರ್ವತವನಕಾನನಗಳನ್ನೂ, ಗ್ರಾಮನಗರರಾಷ್ಟ್ರಗಳನ್ನೂ, ಪಟ್ಟಣಗಳನ್ನೂ ಹುಡುಕಿದೆವು. ಎಲ್ಲಿಯೂ ಪಾಂಡವರು ಕಾಣಲಿಲ್ಲ.
ಪುನಃ ಶಾಧಿ ಮನುಷ್ಯೇಂದ್ರ ಅತ ಊರ್ಧ್ವಂ ವಿಶಾಂಪತೇ |
ಅನ್ವೇಷಣೇ ಪಾಂಡವಾನಾಂ ಭೂಯಃ ಕಿಂ ಕರವಾಮಹೇ ॥28॥
ಮನುಷ್ಯೇಂದ್ರನೇ, ಪುನಃ ನಮಗೆ ಆಜ್ಞೆಯನ್ನು ಮಾಡು. ರಾಜನೇ, ಇಲ್ಲಿಂದ ಮುಂದೆ ಪಾಂಡವರ ಅನ್ವೇಷಣೆಯ ವಿಷಯದಲ್ಲಿ ನಾವು ಏನನ್ನು ಮಾಡೋಣ?
ಇಮಾಂ ಚ ನಃ ಪ್ರಿಯಾಮೀಷದ್ ವಾಚಂ ಭದ್ರವತೀಂ ಶೃಣು ॥29॥
ಮತ್ತು ನಮಗೆಲ್ಲರಿಗೂ ಪ್ರಿಯವಾದ ಈ ಒಂದು ಸಣ್ಣ ಮಂಗಳಕರವಾದ ವಾರ್ತೆಯನ್ನು ಕೇಳು.
ಯೇನ ತ್ರಿಗರ್ತಾ ನಿಕೃತಾ ಬಲೇನ ಬಹುಶೋ ನೃಪ |
ಸೂತೇನ ರಾಜ್ಞೋ ಮತ್ಸ್ಯಸ್ಯ ಕೀಚಕೇನ ಮಹಾತ್ಮನಾ ॥30॥
ಸ ಹತಃ ಪತಿತಃ ಶೇತೇ ಗಂಧರ್ವೈರ್ನಿಶಿ ಭಾರತ ॥31॥
ಎಲೈ ರಾಜನೇ, ಮತ್ಸ್ಯರಾಜನ ಸೂತನಾದ, ಮಹಾತ್ಮನಾದ ಯಾವ ಕೀಚಕನು ತನ್ನ ಬಲದಿಂದ ತ್ರಿಗರ್ತರಿಗೆ ಅನೇಕ ಬಾರಿ ಅವಮಾನವನ್ನು ಮಾಡಿದ್ದನೋ, ಎಲೈ ಭಾರತನೇ, ಅಂತಹ ಕೀಚಕನು ಗಂಧರ್ವರಿಂದ ರಾತ್ರಿಯ ವೇಳೆಯಲ್ಲಿ ಕೊಲ್ಲಲ್ಪಟ್ಟು

ಮಲಗಿದ್ದಾನೆ.
ಸ್ಯಾಲೋ ರಾಜ್ಞೋ ವಿರಾಟಸ್ಯ ಸೇನಾಪತಿರುದಾರಧೀಃ|
ಸುದೇಷ್ಣಾವರಜಃ ಶ್ರೇಷ್ಠಃ ಶೂರೋ ವೀರೋ ಗತವ್ಯಥಃ ॥32॥
ಉತ್ಸಾಹವಾನ್ ಮಹಾವೀರ್ಯೋ ನೀತಿಮಾನ್ ಬಲವಾನಪಿ|
ಯುದ್ಧಜ್ಞೋ ರಿಪುವೀರಘ್ನಃ ಸಿಂಹತುಲ್ಯಪರಾಕ್ರಮಃ ॥33॥
ಪ್ರಜಾರಕ್ಷಣದಕ್ಷಶ್ಚ ಶತ್ರುಗ್ರಹಣಶಕ್ತಿಮಾನ್|
ವಿಜಿತಾರಿರ್ಮಹಾಯುದ್ಧೇ ಪ್ರಚಂಡೋ ಮಾನತತ್ಪರಃ ॥34॥
ನರನಾರೀಮನೋಹ್ಲಾದೀ ವೀರೋ ವಾಗ್ಮೀ ರಣಪ್ರಿಯಃ|
ಪುಣ್ಯೋ ಧರ್ಮಾऽರ್ಥಕಾಮಾನಾಂ ಭಾಜನಂ ಮನುಜೋತ್ತಮಃ ॥
ಸ ಹತೋ ನಿಶಿ ಗಂಧರ್ವೈಃ ಸ್ತ್ರೀನಿಮಿತ್ತಂ ನರಾಧಿಪ|
ಅದೃಶ್ಯಮಾನೈರ್ದುಷ್ಟಾತ್ಮಾ ನಿಶೀಥೇ ಸಹ ಸೋದರ್ಯೈಃ ॥36॥
ವಿರಾಟರಾಜನ ಭಾವಮೈದುನನನೂ, ಉದಾರಮತಿಯೂ, ಸೇನಾಪತಿಯೂ, ಸುದೇಷ್ಣೆಯ ತಮ್ಮನೂ, ಶ್ರೇಷ್ಠನೂ, ಶೂರನೂ, ವೀರನೂ, ಚಿಂತಾರಹಿತನೂ, ಉತ್ಸಾಹಶಾಲಿಯೂ, ಮಹಾವೀರ್ಯನೂ, ನೀತಿವಂತನೂ, ಬಲಿಷ್ಠನಾದವನೂ, ಯುದ್ಧವನ್ನು ತಿಳಿದವನೂ, ಶತ್ರುಗಳ ವೀರರನ್ನು ಸಂಹರಿಸುವವನೂ, ಸಿಂಹಕ್ಕೆ ಸದೃಶವಾದ ಪರಾಕ್ರಮವುಳ್ಳವನೂ, ಪ್ರಜಾರಕ್ಷಣೆಯಲ್ಲಿ ದಕ್ಷನಾದವನೂ, ಶತ್ರುಗಳನ್ನು ಹಿಡಿಯುವ ಶಕ್ತಿಯುಳ್ಳವನೂ, ಮಹಾಯುದ್ಧದಲ್ಲಿ ಶತ್ರುಗಳನ್ನು ಗೆದ್ದವನೂ, ಪ್ರಚಂಡನಾದವನೂ, ಅಹಂಕಾರಿಯೂ, ಸ್ತ್ರೀಪುರುಷರ ಮನಸ್ಸಂತೋಷಪಡಿಸುವವನೂ, ವೀರನೂ, ವಾಗ್ಮಿಯೂ, ರಣಪ್ರಿಯನೂ, ಪುಣ್ಯವಂತನೂ, ಧರ್ಮಾರ್ಥಕಾಮಗಳನ್ನು ಸಂಪಾದಿಸಿದವನೂ, ಮನುಜೋತ್ತಮನೂ, ದುಷ್ಟನೂ ಆದ ಆ ಕೀಚಕನು ಎಲೈ ನರಾಧಿಪನೇ, ಸ್ತ್ರೀನಿಮಿತ್ತವಾಗಿ ಅದೃಶ್ಯರಾದ ಗಂಧರ್ವರಿಂದ ರಾತ್ರಿಯ ವೇಳೆಯಲ್ಲಿ ತನ್ನ ಸಹೋದರರ ಜೊತೆಯಲ್ಲಿ ಕೊಲ್ಲಲ್ಪಟ್ಟಿದ್ದಾನೆ.
ಸುಹೃದಶ್ಚಾತ್ರ ನಿಹತಾ ಯೋಧಾಶ್ಚ ಪ್ರವರಾ ಹತಾಃ|
ಇತ್ಯೇವಂ ಶ್ರುತಮಸ್ಮಾಭಿರ್ಗಂಧರ್ವೈರ್ನಿಹತೋಽಭವತ್ ॥37॥
ಬಾಂಧವೈರ್ಬಹುಭಿಃ ಸಾರ್ಧಂ ಕೀಚಕೋ ನಿಹತೋ ನಿಶಿ ॥38॥
ಆ ಸಮಯದಲ್ಲಿ ಅವನ ಅನೇಕ ವಿಶ್ವಾಸಪಾತ್ರರೂ ಮತ್ತು ಶ್ರೇಷ್ಠರಾದ ಯೋಧರೂ ಹತರಾದರೆಂದು ನಾವು ಕೇಳಿದೆವು. ಆ ಕೀಚಕನು ಗಂಧರ್ವರಿಂದ ತನ್ನ ಅನೇಕ ಬಂಧುಗಳ ಜೊತೆಯಲ್ಲಿ ರಾತ್ರಿಯ ವೇಳೆಯಲ್ಲಿ ಹತನಾಗಿದ್ದಾನೆ.
ಅದ್ಯಪ್ರಭೃತಿ ರಾಜೇಂದ್ರ ಪಾಂಡವಾನ್ವೇಷಣಂ ಪ್ರತಿ|
ಚಾರಾಂಶ್ಚ ಸರ್ವತಃ ಸ ತ್ವಂ ಪ್ರೇಷಯೇತಿ ಮತಿರ್ಹಿ ನಃ ॥39॥
ನಿಹತೋ ನಿಶಿ ಗಂಧರ್ವೈರ್ದುಷ್ಟಾತ್ಮಾ ಭ್ರಾತೃಭಿಃ ಸಹ ॥40॥
ರಾಜೇಂದ್ರನೇ, ಈ ದಿನದಿಂದ ಆರಂಭಿಸಿ ಪಾಂಡವರ ಅನ್ವೇಷಣೆಗಾಗಿ ನೀನು ಎಲ್ಲಕಡೆಯಲ್ಲಿಯೂ ಬೇರೆ ಚಾರರನ್ನು ಕಳುಹಿಸಬೇಕು ಎಂದು ನಮ್ಮ ಅಭಿಪ್ರಾಯ. ದುಷ್ಟಾತ್ಮನಾದ ಕೀಚಕನು ತಮ್ಮಂದಿರ ಜೊತೆಯಲ್ಲಿ ರಾತ್ರಿಯ ವೇಳೆಯಲ್ಲಿ ಹತನಾಗಿದ್ದಾನೆ.
ಪ್ರಿಯಂ ತದುಪಸಂಶ್ರುತ್ಯ ಶತ್ರೂಣಾಂ ತು ಪರಾಭವಮ್|
ಕೃತಕೃತ್ಯಸ್ತು ಕೌರವ್ಯ ವಿಧಿವತ್ ಸ್ಯಾದನಂತರಮ್ ॥41॥
ಕೌರವ್ಯನೇ, ಶತ್ರುಗಳ ಪರಾಭವರೂಪವಾದ ಈ ಪ್ರಿಯವಾರ್ತೆಯನ್ನು ಕೇಳಿ ಕೃತಕೃತ್ಯನಾಗಿ ಈಗ ಅನಂತರ ಮಾಡಬೇಕಾದ ವಿಹಿತವಾದ ಕಾರ್ಯವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ದುರ್ಯೋಧನಾದಿಗಳಿಂದ ಪಾಂಡವರ ಅನ್ವೇಷಣೆಗೆ ಪುನಃ ಮಂತ್ರಾಲೋಚನೆ
ವೈಶಂಪಾಯನಃ
ತತೋ ದುರ್ಯೋಧನೋ ರಾಜಾ ಶ್ರುತ್ವಾ ತೇಷಾಂ ವಚಸ್ತದಾ|
ಚಿರಮಂತರ್ಮನಾ ಭೂತ್ವಾ ಪ್ರತ್ಯುವಾಚ ಸಭಾಸದಃ ॥1॥
ವೈಶಂಪಾಯನ ಆಗ ರಾಜನಾದ ದುರ್ಯೋಧನನು ಅವರ ಮಾತುಗಳನ್ನು ಕೇಳಿ ಬಹಳ ಸಮಯ ಮನಸ್ಸಿನಲ್ಲಿ ಯೋಚಿಸಿ ಸಭಾಸದರನ್ನು ಕುರಿತು ಮಾತನಾಡಿದನು.
ಅಶಕ್ಯಾ ಖಲು ಕಾರ್ಯಾಣಾಂ ಗತಿರ್ಜ್ಞಾತುಂ ಹಿ ತತ್ವತಃ|
ತಸ್ಮಾತ್ ಸರ್ವೇ ಪರೀಕ್ಷಧ್ವಂ ಕ್ವ ನು ಸ್ಯುಃ ಪಾಂಡವಾ ಗತಾಃ ॥2॥
ಕಾರ್ಯಗಳ ಗತಿಯನ್ನು ಸರಿಯಾಗಿ ತಿಳಿಯುವುದು ಅಶಕ್ಯವಾದುದು. ಆದ್ದರಿಂದ ಪಾಂಡವರು ಎಲ್ಲಿ ಹೋಗಿರಬಹುದು ಎಂದು ಎಲ್ಲರೂ ಸರಿಯಾಗಿ ಪರೀಕ್ಷಿಸಿ.
ಅಲ್ಪಾವಶಿಷ್ಟಃ ಕಾಲಸ್ತು ಗತಭೂಯಿಷ್ಠ ಏವ ಚ|
ತೇಷಾಮಜ್ಞಾತಚರ್ಯಾಯಾಮಸ್ಮಿನ್ ವರ್ಷೇ ತ್ರಯೋದಶೇ ॥3॥
ಅವರ ಅಜ್ಞಾತವಾಸದ ಈ ಹದಿಮೂರನೆಯ ವರ್ಷದಲ್ಲಿ ಬಹಳ ಭಾಗವು ಕಳೆದುಹೋಗಿ ಸ್ವಲ್ಪಕಾಲವೇ ಉಳಿದಿದೆ.

ಅಪಿ ವರ್ಷಂ ಚ ಶೇಷಂ ಚೇದ್ ವ್ಯತೀಯುರಿಹ ಪಾಂಡವಾಃ |
ನಿವೃತ್ತಸಮಯಾಸ್ತೇ ಹಿ ಸತ್ಯವ್ರತಪರಾಯಣಾಃ ||4||
ಕ್ಷರಂತ ಇವ ನಾಗೇಂದ್ರಾಃ ಸರ್ವೇ ಹ್ಯಾಶೀವಿಷೋಪಮಾಃ |
ದುಃಖಾದ್ ಭವೇಯುಃ ಸಂರಬ್ಧಾಃ ಕೌರವಾನ್ ಪ್ರತಿ ತೇ ಧ್ರುವಮ್ ||
ಪಾಂಡವರು ತಮ್ಮ ಪ್ರತಿಜ್ಞೆಯನ್ನು ನೆರವೇರಿಸಿ ಉಳಿದ ಕಾಲವನ್ನು ಹೀಗೆಯೇ ಕಳೆದರೆ ಸತ್ಯವ್ರತಪರಾಯಣರಾದ ಅವರು ಮದವನ್ನು ಸುರಿಸುವ ಆನೆಯಂತೆ ವಿಷವನ್ನು ಕಾರುವ ಸರ್ಪಗಳಂತೆ ತಾವು ಅನುಭವಿಸಿದ ದುಃಖದ ಕಾರಣದಿಂದಾಗಿ ಕೌರವರನ್ನು ಕುರಿತು ಕ್ರೋಧಗೊಳ್ಳುವುದರಲ್ಲಿ ಸಂಶಯವಿಲ್ಲ.
ವಿಜ್ಞಾತವ್ಯಾ ಮನುಷ್ಯೇಂದ್ರಾಸ್ತರ್ಕಯಾ ಸುಪ್ರಣೀತಯಾ |
ನಿಪುಣೈಶ್ಚಾರಪುರುಷೈಃ ಪ್ರಾಜ್ಞೈರ್ದಕ್ಷೈಃ ಸುಸಮ್ಮತೈಃ ||6||
ಚೆನ್ನಾಗಿ ಪ್ರಯೋಗಿಸಲ್ಪಟ್ಟ ಊಹೆಯಿಂದ ಪ್ರಾಜ್ಞರೂ, ದಕ್ಷರೂ, ನಮಗೆ ಸಮ್ಮತರೂ, ನಿಪುಣರೂ ಆದ ಚಾರಪುರುಷರು ಆ ಮನುಷ್ಯೇಂದ್ರರು ಎಲ್ಲಿದ್ದಾರೆ ಎಂದು ತಿಳಿಯಬೇಕು.
ಅಜ್ಞಾತಸಮಯೇ ಜ್ಞಾತಾಃ ಕೃಚ್ಛ್ರರೂಪಧರಾಃ ಪುನಃ |
ಪ್ರವಿಶೇಯುರ್ಜಿತಕ್ರೋಧಾಃ ತಾವದೇವ ಪುನರ್ವನಮ್ ||7||
ತಸ್ಮಾದಾಶು ಪರೀಕ್ಷಧ್ವಂ ಯಥಾ ಚಾತ್ಯಂತಮವ್ಯಯಮ್ |
ರಾಜ್ಯಂ ನಿರ್ದ್ವಂದ್ವಮವ್ಯಗ್ರಮಸಪತ್ನಂ ಸ್ಥಿರಂ ಭವೇತ್ ||8||
ಅಜ್ಞಾತವಾಸದ ಸಮಯದಲ್ಲಿ ಅವರು ಗುರುತಿಸಲ್ಪಟ್ಟರೆ ಪುನಃ ದುಃಖರೂಪವನ್ನು ಧರಿಸಿ ಅವರು ಕ್ರೋಧವನ್ನು ನುಂಗಿ (ಜಯಿಸಿ) ಅಷ್ಟೇ ವರ್ಷಗಳ ಕಾಲ ವನವಾಸಕ್ಕೆ ಹೋಗಬೇಕಾದೀತು. ಆದ್ದರಿಂದ ನಮಗೆ ದೊರಕಿರುವ ರಾಜ್ಯವು ಅತ್ಯಂತವಾಗಿ ಶಾಶ್ವತವೂ, ಪ್ರತಿಸ್ಪರ್ಧಿರಹಿತವೂ, ಸ್ಥಿರವೂ, ಶತ್ರುರಹಿತವೂ, ಅವ್ಯಗ್ರವೂ ಆಗುವಂತೆ ಬೇಗ ಪರೀಕ್ಷಿಸಿ.
ತತಃ ಕರ್ಣೋऽಬ್ರವೀದ್ ವಾಕ್ಯಂ ಕ್ಷಿಪ್ರಂ ಗಚ್ಛಂತು ಭಾರತ |
ಶೀಘ್ರವೃತ್ತಾ ನರಾ ಯೋಗ್ಯಾ ನಿಪುಣಾಶ್ಛನ್ನಚಾರಿಣಃ ||9||
ಚರಂತು ದೇಶಾನ್ ವಿವಿಧಾನ್ ಸ್ಫೀತಾನ್ ಜನಪದಾಕುಲಾನ್ ||10||
ಆಗ ಕರ್ಣನು ಎಲೈ ಭಾರತನೇ, ಶೀಘ್ರವಾಗಿ ಚಲಿಸುವ, ಯೋಗ್ಯರೂ, ನಿಪುಣರೂ, ವೇಷಾಂತರವನ್ನು ಧರಿಸಿದವರೂ ಆದ ಚಾರರು ಬೇರೆ ವಿವಿಧವಾದ ಸಮೃದ್ಧವಾದ ಜನಪದಗಳಿಂದ ನಿಬಿಡವಾದ ದೇಶಗಳಿಗೆ ಹೋಗಲಿ.
ತತ್ರ ಗೋಷ್ಠೇಷ್ವರಣ್ಯೇಷು ಸಿದ್ಧಾ ಬ್ರಾಹ್ಮಣರೂಪಿಣಃ |
ಪರಿವಾಹೇಷು ತೀರ್ಥೇಷು ವಿವಿಧೇಷ್ವಾಕರೇಷು ಚ ||11||
ಅನ್ವೇಷ್ಟವ್ಯಾ ಮನುಷ್ಯೇಂದ್ರ ಪಾಂಡವಾಶ್ಛನ್ನಚಾರಿಣಃ ||12||
ಅಲ್ಲಿ ಗೋಷ್ಠಗಳಲ್ಲಿಯೂ, ಅರಣ್ಯಗಳಲ್ಲಿಯೂ, ಸಮುದಾಯಗಳಲ್ಲಿಯೂ, ತೀರ್ಥಗಳಲ್ಲಿಯೂ, ಅನೇಕ ವಿಧವಾದ ಗಣಿಗಳಲ್ಲಿಯೂ, ಸಿದ್ಧರೂಪದಿಂದಲಾಗಲೀ, ಬ್ರಾಹ್ಮಣರೂಪದಿಂದಲಾಗಲೀ ಛದ್ಮವೇಷವನ್ನು ಧರಿಸಿದ ಪಾಂಡವರನ್ನು ಹುಡುಕಬೇಕು.
ನದೀಕೂಲೇಷು ತೀರ್ಥೇಷು ಗ್ರಾಮೇಷು ನಗರೇಷು ಚ |
ಆಶ್ರಮೇಷು ಚ ರಮ್ಯೇಷು ಪರ್ವತೇಷು ವನೇಷು ಚ ||13||
ವಿಜ್ಞಾತವ್ಯಾ ಮನುಷ್ಯೇಂದ್ರ ತರ್ಕಯಾ ಸುವಿನೀತಯಾ |
ವಿವಿಧೈಸ್ತತ್ಪರೈಃ ಸಮ್ಯಕ್ ನಿಪುಣೈಸ್ತಚ್ಚ ಸಮ್ಮತೈಃ ||14||
ಎಲೈ ಮನುಷ್ಯೇಂದ್ರನೇ, ನದಿತೀರಗಳಲ್ಲಿ, ತೀರ್ಥಗಳಲ್ಲಿ, ಗ್ರಾಮಗಳಲ್ಲಿ, ನಗರಗಳಲ್ಲಿ, ಮನೋಹರವಾದ ಆಶ್ರಮಗಳಲ್ಲಿ, ಪರ್ವತಗಳಲ್ಲಿ, ಕಾಡುಗಳಲ್ಲಿ, ಒಳ್ಳೆಯ ಶಕ್ತಿಯುಳ್ಳ, ನಿಪುಣರಾದ, ನಮಗೆ ಸಮ್ಮತರಾದ, ಬಹುವಿಧರಾದ ಗೂಢಚಾರರಿಂದ ಪಾಂಡವರನ್ನು ಚೆನ್ನಾಗಿ ಗುರುತಿಸಬೇಕು ಎಂದು ಹೇಳಿದನು.
ಅಥಾಗ್ರಜಾದವರಜೋ ಪಾಪಭಾವಃ ಸುದುರ್ಮತಿಃ |
ಜ್ಯೇಷ್ಠಂ ದುಃಶಾಸನಸ್ತತ್ರ ಭ್ರಾತಾ ಭ್ರಾತರಮಬ್ರವೀತ್ ||15||
ಅನಂತರ ಆ ಅಣ್ಣನ ತಮ್ಮನಾದ ಪಾಪದ ಅಭಿಪ್ರಾಯವುಳ್ಳವನೂ, ಬಹಳ ದುಷ್ಟಬುದ್ಧಿಯುಳ್ಳವನೂ ಆದ ದುಶ್ಶಾಸನನು ತನ್ನ ಅಣ್ಣನನ್ನು ಕುರಿತು ಮಾತನಾಡಿದನು.
ಯದಾಹ ಕರ್ಣೋ ರಾಜೇಂದ್ರ ಸರ್ವಮೇತದವೇಕ್ಷ್ಯತಾಮ್ |
ಯೇಷು ನಃ ಪ್ರತ್ಯಯೋ ರಾಜನ್ ಚಾರೇಷು ಮನುಜಾಧಿಪ ||16||
ತೇ ಯಾಂತು ದತ್ತದೇಯಾ ವೈ ಭೂಯಸ್ತಾನ್ ಪರಿಮಾರ್ಗಿತುಮ್ |
ಯಥೋದ್ದಿಷ್ಟಚರಾಃ ಸರ್ವೇ ಮೃಗಯಂತು ತತಸ್ತತಃ ||17||
ರಾಜೇಂದ್ರನೇ, ಕರ್ಣನು ಏನನ್ನು ಹೇಳಿದನೋ ಅದರಂತೆ ಎಲ್ಲವನ್ನೂ ನೋಡಿಕೊಳ್ಳಬೇಕು. ಮನುಜಾಧಿಪನೇ, ಯಾವ ಚಾರರಲ್ಲಿ ನಮಗೆ ವಿಶ್ವಾಸವಿದೆಯೋ ಅವರು ತಮ್ಮ ವೇತನವನ್ನು ಪಡೆದು ಪುನಃ ಪಾಂಡವರನ್ನು ಹುಡುಕಲು ಹೊರಡಲಿ. ನಮ್ಮ ಉದ್ದೇಶಕ್ಕೆ ಅನುಗುಣವಾಗಿ ಸಂಚರಿಸಿ ಅವರು ಎಲ್ಲ ಕಡೆಗಳಲ್ಲಿಯೂ ಪಾಂಡವರನ್ನು ಹುಡುಕಲಿ.
ಘ್ರಾಣೈಃ ಪಶ್ಯಂತಿ ಪಶವೋ ವೇದೈರೇವ ದ್ವಿಜೋತ್ತಮಾಃ |
ಚಾರೈಃ ಪಶ್ಯಂತಿ ರಾಜಾನಃ ಚಕ್ಷುರ್ಭ್ಯಾಮಿತರೇ ಜನಾಃ ||18||
ಪಶುಗಳು ಘ್ರಾಣದಿಂದ ನೋಡುತ್ತವೆ, ಬ್ರಾಹ್ಮಣಶ್ರೇಷ್ಠರು ವೇದದಿಂದ ನೋಡುತ್ತಾರೆ, ರಾಜರು ಚಾರರ ಮೂಲಕ ನೋಡುತ್ತಾರೆ, ಉಳಿದ ಜನರು ಕಣ್ಣಿನಿಂದ ನೋಡುತ್ತಾರೆ.

ಯಥೋಕ್ತಾಶ್ಚಾರಪುರುಷಾಃ ಮೃಗಯಂತು ಪುನಃ ಪುನಃ |
ಏತಾಂಶ್ಚಾನ್ಯಾಂಶ್ಚ ಸುಬಹೂನ್ ದೇಶಾನ್ ಜನಪದಾಂಸ್ತಥಾ ||19||
ನಾವು ಹೇಳಿದ ಗುಣವುಳ್ಳ ಚಾರಪುರುಷರು ನಾವು ಹೇಳಿದಂತೆ ಈ ಪ್ರದೇಶಗಳಲ್ಲಿಯೂ ಮತ್ತು ಇನ್ನೂ ಅನೇಕ ದೇಶ ಮತ್ತು ಜನಪದಗಳಲ್ಲಿಯೂ ಪುನಃ ಪುನಃ ಹುಡುಕಲಿ.
ನ ಚ ತೇಷಾಂ ಗತಿರ್ವಾಸಃ ಪ್ರವೃತ್ತಿಶ್ಚೋಪಲಕ್ಷ್ಯತೇ |
ಪ್ರತ್ಯಾಗತಾ ವಾ ಗೂಢಾಸ್ತೇ ಪರಮೂರ್ತಗುಣಾ ಇವ ||20||
ಅವರ ಗತಿಯಾಗಲೀ, ವಾಸವಾಗಲೀ, ಪ್ರವೃತ್ತಿಯಾಗಲೀ ಕಾಣಬರುತ್ತಿಲ್ಲ. ಅವರು ಯಾರಿಗಾದರೂ ಜನರಿಗೆ ತಿಳಿದಿರಬಹುದು ಅಥವಾ ಅಮೂರ್ತವಾದ ಆಕಾಶದಂತೆ ಗೂಢರಾಗಿ ನಾಶರಹಿತರಾಗಿಯೂ ಇರಬಹುದು.
ವ್ಯಾಲೈರ್ವಾಽಪಿ ಮಹಾರಣ್ಯೇ ನಿಹತಾಃ ಶೂರಮಾನಿನಃ |
ದ್ವೀಪಂ ವಾ ಪರಮಂ ಪ್ರಾಪ್ತಾ ಗಿರಿದುರ್ಗವನೇಷ್ವಪಿ ||21||
ತಮ್ಮನ್ನು ಶೂರರೆಂದು ತಿಳಿದುಕೊಳ್ಳುವ ಅವರು ಮಹಾರಣ್ಯದಲ್ಲಿ ವಿಷ ಸರ್ಪಗಳಿಂದಲೋ ಅಥವಾ ಮದಗಜಗಳಿಂದಲೋ ಹತರಾಗಿರಬಹುದು. ಅಥವಾ ಯಾವುದಾದರೂ ದ್ವೀಪದಲ್ಲಿ ಅಥವಾ ಗಿರಿದುರ್ಗವನಗಳಲ್ಲಿ ಅಡಗಿಕೊಂಡಿರಬಹುದು.
ಹೀನದರ್ಪಾ ನಿರಾಶಾಸ್ತೇ ಭಕ್ಷಿತಾ ವಾಽಪಿ ರಾಕ್ಷಸೈಃ |
ಅಥವಾ ವಿಷಮಂ ಪ್ರಾಪ್ಯ ವಿನಷ್ಟಾಃ ಶಾಶ್ವತೀಃ ಸಮಾಃ ||22||
ಅಥವಾ ದರ್ಪಹೀನರೂ, ನಿರಾಶರೂ ಆದ ಅವರು ರಾಕ್ಷಸರಿಂದ ಭಕ್ಷಿಸಲ್ಪಟ್ಟಿರಬಹುದು ಅಥವಾ ಬಹಳ ಕಷ್ಟಕ್ಕೆ ಸಿಲುಕಿ ಶಾಶ್ವತವಾಗಿ ನಾಶವನ್ನು ಹೊಂದಿರಬಹುದು.
ಯಥೋದ್ದಿಷ್ಟಾಶ್ಚರಾಃ ಕೇಚಿದ್ ದೇಶಾನ್ ಗಚ್ಛಂತು ಸಂವೃತಾಃ |
ಏತೇ ಚಾನ್ಯೇ ಚ ಭೂಯೋಽಪಿ ದೇಶಾದ್ ದೇಶಂ ಯಥಾವಿಧಿ ||23||
ಇತಿ ತೇಷಾಂ ಗತಿರ್ವಾಸಃ ಪ್ರವೃತ್ತಿಶ್ಚೋಪಲಭ್ಯತೇ ||24||
ನಮಗೆ ಅಭಿಪ್ರೇತರಾದ ಗೂಢಚಾರರು ವೇಷವನ್ನು ಮರೆಸಿಕೊಂಡು ಬೇರೆ ದೇಶಗಳಿಗೆ ಹೋಗಲಿ. ಈ ಚಾರರು ಮತ್ತು ಬೇರೆ ಚಾರರೂ ಸಹ ಪುನಃ ಒಂದು ದೇಶದಿಂದ ಒಂದು ದೇಶಕ್ಕೆ ಹೋಗಿ ವಿಧಿಪ್ರಕಾರವಾಗಿ ಅವರನ್ನು ಹುಡುಕಲಿ. ಆಗ ಅವರ ಗತಿಯಾಗಲೀ, ವಾಸವಾಗಲೀ, ಪ್ರವೃತ್ತಿಯಾಗಲೀ ತಿಳಿಯಬಹುದು.
ತಸ್ಮಾನ್ಮಾನಸಮವ್ಯಗ್ರಂ ಕೃತ್ವಾಽಽತ್ಮಾನಂ ನಿಯಮ್ಯ ಚ |
ಕುರು ಕಾರ್ಯಂ ಯಥೋತ್ಸಾಹಂ ಯನ್ಮನ್ಯಸಿ ನರಾಧಿಪ ||25||
ಆದ್ದರಿಂದ ಎಲೈ ನರಾಧಿಪನೇ, ಮನಸ್ಸಿನಲ್ಲಿ ಸಮಾಧಾನವನ್ನು ತಂದುಕೊಂಡು ನಿನ್ನನ್ನು ನೀನು ನಿಯಂತ್ರಿಸಿಕೊಂಡು ನಿನ್ನ ಉತ್ಸಾಹಕ್ಕೆ ಅನುಗುಣವಾಗಿ ಯಾವುದು ಯೋಗ್ಯವೆನಿಸುತ್ತದೆಯೋ ಅಂತಹ ಕಾರ್ಯವನ್ನು ಮಾಡುವವನಾಗು (ಎಂದು ಹೇಳಿದನು).
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕೋನತ್ರಿಂಶೋಽಧ್ಯಾಯಃ ||
|| ಗೋಗ್ರಹಣಪರ್ವಣಿ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *

## ಮೂವತ್ತನೆಯ ಅಧ್ಯಾಯ

### ದ್ರೋಣ ಮತ್ತು ಭೀಷ್ಮರಿಂದ ಪಾಂಡವರು ವಾಸಿಸುವ ದೇಶದ ಲಕ್ಷಣಕಥನ

ವೈಶಂಪಾಯನಃ
ಅಥಾಽಬ್ರುವೀತ್ ಸಭಾಮಧ್ಯೇ ದ್ರೋಣಃ ಸೂಕ್ಷ್ಮಾರ್ಥದರ್ಶಿವಾನ್ ||1||
ನ ತಾದೃಶಾ ವಿನಶ್ಯಂತಿ ನಾಪಿ ಯಾಂತಿ ಪರಾಭವಮ್ ||2||
ಶೂರಾಃ ಸುಕೃತವಿದ್ಯಾಶ್ಚ ಬುದ್ಧಿಮಂತೋ ಜಿತೇಂದ್ರಿಯಾಃ |
ಧರ್ಮಜ್ಞಾಃ ಸತ್ಯಸಂಧಾಶ್ಚ ಯುಧಿಷ್ಠಿರಮನುವ್ರತಾಃ ||3||
ವೈಶಂಪಾಯನ ಅನಂತರ ಸಭೆಯ ಮಧ್ಯದಲ್ಲಿ ಸೂಕ್ಷ್ಮಾರ್ಥದರ್ಶಿಗಳಾದ ದ್ರೋಣರು ಮಾತನಾಡಿದರು. ಶೂರರೂ, ಎಲ್ಲವಿದ್ಯೆಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದವರೂ, ಬುದ್ಧಿವಂತರೂ, ಧರ್ಮಜ್ಞರೂ, ಸತ್ಯಸಂಧರೂ, ಯುಧಿಷ್ಠಿರನ ಆಜ್ಞಾಪಾಲಕರೂ ಆದ ಅಂತಹ ಪಾಂಡವರು ನಾಶವನ್ನು ಹೊಂದುವುದಿಲ್ಲ ಅಥವಾ ಪರಾಭವವನ್ನೂ ಹೊಂದುವುದಿಲ್ಲ.
ನೀತಿಧರ್ಮಾರ್ಥತತ್ವಜ್ಞಂ ಪಿತೃವಚ್ಚ ಸಮಾಹಿತಮ್ |
ಧರ್ಮೇ ಸ್ಥಿತಂ ಸತ್ಯಧೃತಿಂ ಜ್ಯೇಷ್ಠಂ ಶ್ರೇಷ್ಠಾಪಚಾಯಿನಮ್ ||4||
ಅನುವ್ರತಾ ಮಹಾತ್ಮಾನೋ ಭ್ರಾತರೋ ಭ್ರಾತರಂ ಪ್ರಿಯಮ್ |
ಅಜಾತಶತ್ರುಂ ದುರ್ಧರ್ಷಂ ಸ ತಾನಪಿ ತಥಾಽನುಜಾನ್ ||5||
ತಮ್ಮಂದಿರಾದ ಭೀಮಾದಿಗಳು ನೀತಿಶಾಸ್ತ್ರವನ್ನೂ, ಧರ್ಮಶಾಸ್ತ್ರವನ್ನೂ, ಅರ್ಥಶಾಸ್ತ್ರವನ್ನೂ ತಿಳಿದಂತಹ ತಂದೆಯಂತೆ ಸಮಾಧಾನದಿಂದಿರುವ, ಧರ್ಮದಲ್ಲಿಯೇ ವ್ರತನಾದ, ಸತ್ಯದಲ್ಲಿ ಧೈರ್ಯವನ್ನು ಹೊಂದಿರುವ, ಪೂಜ್ಯರನ್ನು ಪೂಜಿಸುವ, ತಮ್ಮ ಪ್ರಿಯನಾದ ಅಣ್ಣನಾದ, ದುರ್ಧರ್ಷನಾದ, ಯಾರಿಗೂ ಸೋಲದಿರುವ, ಅಜಾತಶತ್ರುವಾದ, ಯುಧಿಷ್ಠಿರನನ್ನು ಅನುಸರಿಸಿದ್ದಾರೆ. ಆ ಯುಧಿಷ್ಠಿರನಾದರೂ ತಮ್ಮಂದಿರನ್ನು ಹಾಗೆಯೇ ನೋಡಿಕೊಳ್ಳುತ್ತಾನೆ.
ತೇಷಾಂ ತಥಾ ವಿಧೇಯಾನಾಂ ನಿಭೃತಾನಾಂ ಮಹಾತ್ಮನಾಮ್ |
ಕಿಮರ್ಥಂ ನೀತಿಮಾನ್ ಪ್ರಾಜ್ಞೋ ನಿಃಶ್ರೇಯೋ ನ ಕರಿಷ್ಯತಿ ||6||

ಹಾಗೆ ವಿಧೇಯರಾಗಿ ಎಚ್ಚರಿಕೆಯಿಂದ ಇರುವ ಮಹಾತ್ಮರಾದ ತಮ್ಮಂದಿರಿಗೆ ನೀತಿಜ್ಞನೂ, ಪ್ರಾಜ್ಞನೂ ಆದ ಯುಧಿಷ್ಠಿರನೂ ಏಕೆ ಶ್ರೇಯಸ್ಸನ್ನು ಮಾಡುವುದಿಲ್ಲ?
ತಸ್ಮಾದ್ ಯತ್ನಾತ್ ಪರೀಕ್ಷಧ್ವಂ ನ ತಾವತ್ ಸಮಯೋ ಗತಃ |
ನ ತೇ ವಿನಾಶಮೃಚ್ಛೇಯುರಿತಿ ಮೇ ನೈಷ್ಠಿಕೀ ಮತಿಃ ||7||
ಆದ್ದರಿಂದ ಪ್ರಯತ್ನಪೂರ್ವಕವಾಗಿ ಅವರು ಎಲ್ಲಿದ್ದಾರೆಂದು ಪರೀಕ್ಷಿಸಿ. ಸದ್ಯಕ್ಕೆ ಅಜ್ಞಾತವಾಸದ ಸಮಯವು ಮುಗಿದಿಲ್ಲ. ಅವರು ಎಂದೂ ನಾಶಹೊಂದಲಾರರು ಎಂಬುದು ನನ್ನ ದೃಢವಾದ ನಂಬಿಕೆ.
ಚಿಂತ್ಯತಾಂ ಚೈವ ಯತ್ ಕಾರ್ಯಂ ತಚ್ಚ ಕ್ಷಿಪ್ರಮಕಾಲಿಕಮ್ |
ಕ್ರಿಯತಾಂ ಸಾಧು ನಿಶ್ಚಿತ್ಯ ವಾಸಶ್ಚೈಷಾಂ ವಿಚಿಂತ್ಯತಾಮ್ ||8||
ಏನು ಮಾಡಬೇಕೆಂಬುದನ್ನು ಚಿಂತಿಸಿ. ವಿಳಂಬ ಮಾಡದೆ ಶೀಘ್ರವಾಗಿ ಅದನ್ನು ಮಾಡಿ. ಚೆನ್ನಾಗಿ ಆಲೋಚನೆ ಮಾಡಿ ಅವರು ಎಲ್ಲಿ ವಾಸವಾಗಿದ್ದಾರೆಂಬುದನ್ನು ಚಿಂತಿಸಿ.
ಯಥಾ ಚ ಪಾಂಡುಪುತ್ರಾಣಾಂ ಸರ್ವಾರ್ಥೇಷು ಹಿತಾತ್ಮನಾಮ್ |
ಪ್ರವೃತ್ತಿರುಪಲಭ್ಯೇತ ತಥಾ ನೀತಿರ್ವಿಧೀಯತಾಮ್ ||9||
ಎಲ್ಲ ವಿಷಯಗಳಲ್ಲಿಯೂ ಹಿತವಾಗಿಯೇ ನಡೆದುಕೊಳ್ಳುವ ಪಾಂಡುಪುತ್ರರ ಸುದ್ದಿಯು ಹೇಗೆ ತಿಳಿಯುತ್ತದೆಯೋ ಹಾಗೆ ನೀತಿಯನ್ನು ರೂಪಿಸಿ.
ಸರ್ವೋಪಾಯೈರ್ಯತಸ್ವ ತ್ವಂ ಯಥಾ ಪಶ್ಯಸಿ ಪಾಂಡವಾನ್ |
ದುರ್ಜ್ಞೇಯಾಃ ಖಲು ತೇ ವೀರಾ ರಕ್ಷ್ಯಾ ನಿತ್ಯಂ ಚ ದೈವತೈಃ ||10||
ಪಾಂಡವರನ್ನು ಕಾಣುವಂತೆ ನೀನು ಎಲ್ಲಾ ಉಪಾಯಗಳಿಂದಲೂ ಪ್ರಯತ್ನವನ್ನು ಮಾಡು. ಯಾವಾಗಲೂ ದೇವತೆಗಳಿಂದ ರಕ್ಷಿಸಲ್ಪಟ್ಟ ಅವರು ಕಾಣಸಿಗುವುದು ಬಹಳ ಕಷ್ಟ.
ಶುದ್ಧಾತ್ಮಾ ಜ್ಞಾನವಾನ್ ಪಾರ್ಥಃ ಸತ್ಯವಾನ್ ನೀತಿಮಾನ್ ಶುಚಿಃ |
ತೇಜೋರಾಶಿಭಿರಾಪೂರ್ಣೋ ದಹೇದಪಿ ಚ ಚಕ್ಷುಷಾ ||11||
ಶುದ್ಧ ಮನಸ್ಸುಳ್ಳವನೂ, ಜ್ಞಾನಿಯೂ, ಸತ್ಯವಂತನೂ, ನೀತಿವಂತನೂ, ಶುಚಿಯೂ, ತೇಜೋರಾಶಿಯಿಂದ ಪೂರ್ಣನೂ ಆದ ಯುಧಿಷ್ಠಿರನು ದೃಷ್ಟಿಯಿಂದಲೂ ಸುಟ್ಟಾನು.
ತಸ್ಮಾದ್ ಯತ್ನಶ್ಚ ಕ್ರಿಯತಾಂ ಭೂಯಶ್ಚ ಮೃಗಯಾಮಹೇ |
ಬ್ರಾಹ್ಮಣೈಶ್ಚಾರಪುರುಷೈಃ ಸಿದ್ಧೈಸ್ತಾಪಸನೈಪುಣ್ಯೈಃ ||12||
ಆದ್ದರಿಂದ ಪ್ರಯತ್ನವನ್ನು ಮಾಡು. ಬ್ರಾಹ್ಮಣರಿಂದಲೂ, ತಪಸ್ಸಿನಲ್ಲಿ ನಿಪುಣರಾದ ಸಿದ್ಧರಿಂದಲೂ, ಚಾರಪುರುಷರಿಂದಲೂ ಪುನಃ ಪಾಂಡವರನ್ನು ಹುಡುಕೋಣ.
ವೈಶಂಪಾಯನಃ
ತತಃ ಶಾಂತನವೋ ಧೀಮಾನ್ ಭಾರತಾನಾಂ ಪಿತಾಮಹಃ |
ಶ್ರುತವಾನ್ ದೇಶಕಾಲಜ್ಞೋ ನೀತಿಮಾಂಶ್ಚ ಮಹಾಮತಿಃ ||13||
ತಸ್ಮಿನ್ನುಪರತೇ ವಾಕ್ಯೇ ಆಚಾರ್ಯಸ್ಯ ಮಹಾತ್ಮನಃ |
ಅನಂತರಮುವಾಚೇದಂ ವಾಕ್ಯಂ ಹೇತ್ವರ್ಥಸಂಹಿತಮ್ ||14||
ವೈಶಂಪಾಯನ ಅನಂತರ ಮಹಾತ್ಮರಾದ ದ್ರೋಣರ ಮಾತು ಮುಗಿದ ಮೇಲೆ ಮೇಧಾವಿಯೂ, ಭಾರತ ಪಿತಾಮಹರೂ, ಬಹಳ ಶಾಸ್ತ್ರಗಳನ್ನು ಕೇಳಿದವರೂ, ದೇಶಕಾಲಗಳನ್ನು ತಿಳಿದವರೂ, ನೀತಿವಂತರೂ, ಮಹಾಬುದ್ಧಿಯುಳ್ಳವರೂ ಆದ ಭೀಷ್ಮರು ಯುಕ್ತಿಯುಕ್ತವಾದ ಈ ಮಾತುಗಳನ್ನು ಆಡಿದರು.
ಯುಧಿಷ್ಠಿರೇ ಸಮಾಸಕ್ತಾಂ ಧರ್ಮಜ್ಞೋ ಧರ್ಮಸಂವೃತಾಮ್ |
ಪಾಂಡವೇ ನಿತ್ಯಮವ್ಯಗ್ರಾಂ ಗಿರಂ ಭೀಷ್ಮಃ ಸಮಾದದೇ ||15||
ಭೀಷ್ಮರು ಧರ್ಮಜ್ಞನಾದ ಪಾಂಡುಪುತ್ರನಾದ ಯುಧಿಷ್ಠಿರನ ವಿಷಯದಲ್ಲಿ ಯಾವಾಗಲೂ ಅವರಿಗಿದ್ದ ಧರ್ಮಸಹಿತವಾದ ಅವ್ಯಗ್ರವಾದ ಮಾತುಗಳನ್ನು ಆಡಲು ಪ್ರಾರಂಭಿಸಿದರು.
ಅಸತ್ಸು ದುರ್ಲಭಾಂ ನಿತ್ಯಂ ಸತಾಂ ಚಾಭಿಮತಾಂ ಸದಾ |
ಭೀಷ್ಮಸ್ತ್ವಭ್ಯವದತ್ ತತ್ರ ಗಿರಂ ಸಾಧುಭಿರರ್ಚಿತಾಮ್ ||16||
ಭೀಷ್ಮರು ದುಷ್ಟರು ಎಂದೂ ಮಾತನಾಡಲಾರದಂತಹ, ಸಜ್ಜನರಿಗೆ ಅಭಿಮತವಾದ, ಸಜ್ಜನರಿಂದ ಪೂಜಿತವಾದ ಮಾತುಗಳನ್ನು ಅಲ್ಲಿ ಆಡಿದರು.
ಯಥಾ ನೋ ಬ್ರಾಹ್ಮಣೋಽವಾದೀದ್ ಆಚಾರ್ಯಃ ಸರ್ವಧರ್ಮವಿತ್|
ಶ್ರುತಶಾಸ್ತ್ರೋಪಸಂಪನ್ನಾ ನಾಶಂ ನಾಯಾಂತಿ ಪಾಂಡವಾಃ ||17||
ಸರ್ವಧರ್ಮಗಳನ್ನೂ ತಿಳಿದ ಬ್ರಾಹ್ಮಣರಾದ ದ್ರೋಣಾಚಾರ್ಯರು ಹೇಳಿದಂತೆ ಶ್ರುತಶಾಸ್ತ್ರಸಂಪನ್ನರಾದ ಪಾಂಡವರು ನಾಶವನ್ನು ಹೊಂದುವುದಿಲ್ಲ.
ಸರ್ವಲಕ್ಷಣಸಂಪನ್ನಾಃ ಸಾಧುವೃತ್ತಸಮನ್ವಿತಾಃ |
ವೃದ್ಧಾನುಶಾಸನೇ ಯತ್ತಾಃ ಸತ್ಯಧರ್ಮಪರಾಯಣಾಃ ||18||
ಅವರು ಸರ್ವಲಕ್ಷಣಸಂಪನ್ನರೂ, ಒಳ್ಳೆಯ ನಡತೆಯಿಂದ ಕೂಡಿದವರೂ, ಸತ್ಯಧರ್ಮಪರಾಯಣರೂ, ಹಿರಿಯರ ಅನುಶಾಸನದಲ್ಲಿ ಪ್ರಯತ್ನಪೂರ್ವಕವಾಗಿ ಇರುವವರೂ ಆಗಿದ್ದಾರೆ.

ಸಮಯಂ ಸಮಯಜ್ಞಾಸ್ತೇ ಪಾಲಯಂತಃ ಶುಭವ್ರತಾಃ |
ನ ವಿಷೀದಂತಿ ತೇ ಪಾರ್ಥಾ ಉದ್ವಹಂತಃ ಸತಾಂ ಧುರಮ್ ॥19॥
ಶುಭವ್ರತವನ್ನು ಧರಿಸಿ ಸಜ್ಜನರ ಜವಾಬ್ದಾರಿಯನ್ನು ಹೊತ್ತು ತಮ್ಮ ಪ್ರತಿಜ್ಞೆಯನ್ನು ಪಾಲಿಸುವ ಪಾಂಡವರು ವಿಷಾದವನ್ನು (ನಾಶವನ್ನು) ಹೊಂದುವುದಿಲ್ಲ.
ಕ್ಷತ್ರಧರ್ಮರತಾಃ ನಿತ್ಯಂ ಕೇಶವಾನುಗತಾಃ ಸದಾ |
ಪ್ರವೀರಪುರುಷಾಸ್ತೇ ವೈ ಮಹಾತ್ಮಾನೋ ಮಹಾವ್ರತಾಃ ॥20॥
ಅವರು ಕ್ಷತ್ರಧರ್ಮದಲ್ಲಿ ನಿರತರಾದವರು. ಯಾವಾಗಲೂ ಕೃಷ್ಣನನ್ನು ಅನುಸರಿಸುವವರು. ವೀರಪುರುಷರು, ಮಹಾತ್ಮರು ಮತ್ತು ಮಹಾವ್ರತಗಳನ್ನು ಕೈಗೊಂಡವರು.
ತಪಸಾ ಚೈವ ಗುಪ್ತಾಸ್ತೇ ಸ್ವವೀರ್ಯೇಣ ಚ ಪಾಂಡವಾಃ |
ನ ನಾಶಮಧಿಗಚ್ಛೇಯುರಿತಿ ಮೇ ನೈಷ್ಠಿಕೀ ಮತಿಃ ॥21॥
ಪಾಂಡವರು ತಮ್ಮ ಪರಾಕ್ರಮದಿಂದಲೂ ಮತ್ತು ತಪಸ್ಸಿನಿಂದಲೂ ರಕ್ಷಿತರಾಗಿದ್ದಾರೆ. ಅವರು ನಾಶವನ್ನು ಹೊಂದಲಾರರು ಎಂಬುದು ನನ್ನ ದೃಢವಾದ ನಿಶ್ಚಯ.
ತತ್ರ ಬುದ್ಧಿಂ ಪ್ರವಕ್ಷ್ಯಾಮಿ ಪಾಂಡವಾನ್ವೇಷಣೇ ಶೃಣು |
ನ ತು ನೀತಿಃ ಸುನೀತಸ್ಯ ಶಕ್ಯತೇ ವೇದಿತುಂ ಪರೈಃ ॥22॥
ಪಾಂಡವರನ್ನು ಹುಡುಕಲು ಉಪಯುಕ್ತವಾದ ಬುದ್ಧಿಯನ್ನು ಹೇಳುವೆನು. ಅದನ್ನು ಕೇಳು. ಒಳ್ಳೆಯ ನೀತಿ ಇರುವ ಮನುಷ್ಯನ ನೀತಿಯನ್ನು ಶತ್ರುಗಳು ತಿಳಿಯಲು ಸಾಧ್ಯವಿಲ್ಲ.
ಯತ್ತು ಶಕ್ಯಮಿಹಾಸ್ಮಾಭಿಸ್ತಾನ್ ವೈ ಸಂಚಿಂತ್ಯ ಪಾಂಡವಾನ್ |
ಬುದ್ಧ್ಯಾ ಪ್ರಣೇತುಂ ತದ್ವೋಽಹಂ ಪ್ರವಕ್ಷ್ಯಾಮಿ ನಿಬೋಧತ ॥23॥
ಪಾಂಡವರ ವಿಷಯದಲ್ಲಿ ಯೋಚಿಸಿ ನಾವು ಏನು ಮಾಡಲು ಸಾಧ್ಯವೋ ಅದನ್ನು ನಮ್ಮ ಬುದ್ಧಿಯಿಂದ ನೆರವೇರಿಸಲು ನಾನು ನಿಮಗೆ ಹೇಳುವೆನು. ಅದನ್ನು ತಿಳಿಯಿರಿ.
ನ ತ್ವಿಯಂ ಸಾಧು ವಕ್ತವ್ಯಾ ತಸ್ಯ ನೀತಿಃ ಕಥಂಚನ |
ವೃದ್ಧಾನುಶಾಸನೇ ತಾತ ತಿಷ್ಠತಃ ಸತ್ಯವಾದಿನಃ ॥24॥
ನಿಜವಾಗಿ ಸತ್ಯವಾದಿಯೂ, ಹಿರಿಯರ ಶಾಸನದಲ್ಲಿ ಇರುವವನೂ ಆದ ಯುಧಿಷ್ಠಿರನ ನೀತಿಯನ್ನು ನಾನು ಹೇಳಬಾರದು.
ಅಯುಕ್ತಂ ತು ಮಯಾ ವಕ್ತುಂ ತುಲ್ಯಾ ಮೇ ಕುರುಪಾಂಡವಾಃ |
ನಿವಾಸಂ ಪಾಂಡುಪುತ್ರಾಣಾಂ ಸಂಚಿಂತ್ಯ ಚ ವದಾಮ್ಯಹಮ್ ॥25॥
ಬಹುನಾ ಕಿಂ ಪ್ರಲಾಪೇನ ಯತೋ ಧರ್ಮಸ್ತತೋ ಜಯಃ ॥26॥
ನನಗೆ ಕುರುಪಾಂಡವರು ಸಮಾನರಾದವರು. ಆದ್ದರಿಂದ ನಾನು ಯುಧಿಷ್ಠಿರನ ನೀತಿಯನ್ನು ಹೇಳುವುದು (ಭೇದಿಸುವುದು) ಯುಕ್ತವಲ್ಲ. ಪಾಂಡವರ ವಾಸಸ್ಥಾನವನ್ನು ಚಿಂತಿಸಿ ಕೆಲವು ವಿಷಯಗಳನ್ನು ಹೇಳುತ್ತೇನೆ. ಹೆಚ್ಚು ಮಾತನಾಡಿ ಏನು ಪ್ರಯೋಜನ? ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವುಂಟಾಗುತ್ತದೆ.
ಅವಶ್ಯಂ ತು ನಿಯುಕ್ತೇನ ಸಭಾಮಧ್ಯೇ ವಿವಕ್ಷತಾ |
ಯಥಾಮತಿ ವಿವೇಕ್ತವ್ಯಂ ಸದೃಶಂ ಧರ್ಮಲಿಪ್ಸಯಾ ॥27॥
ತತ್ರ ನಾಹಂ ತಥಾ ಮನ್ಯೇ ಯಥಾಽನ್ಯೇ ಮೇನಿರೇ ಜನಾಃ ॥28॥
ಸಭೆಯ ಮಧ್ಯದಲ್ಲಿ ಮಾತನಾಡಲು ಅವಕಾಶವನ್ನು ನೀಡಿದಾಗ ಧರ್ಮವನ್ನು ಸಂಪಾದಿಸುವ ಇಚ್ಛೆಯುಳ್ಳವನು ತನ್ನ ಬುದ್ಧಿಗೆ ತೋರಿದಷ್ಟು ಗುಣದೋಷಗಳನ್ನು ಚಿಂತಿಸಿ ಯುಕ್ತವಾದುದನ್ನೇ ಮಾತನಾಡಬೇಕು. ಈ ವಿಷಯದಲ್ಲಿ ನಾನು ಉಳಿದವರು ತಿಳಿದಂತೆ (ಪಾಂಡವರು ನಾಶವಾಗಿದ್ದಾರೆಂದು) ಭಾವಿಸುವುದಿಲ್ಲ.
ನಿವಾಸಂ ಪಾಂಡುಪುತ್ರಾಣಾಂ ಶೃಣು ತ್ವಂ ಮನುಜಾಧಿಪ |
ಪುರೇ ಜನಪದೇ ವಾಽಪಿ ಯತ್ರ ರಾಜಾ ಯುಧಿಷ್ಠಿರಃ ॥29॥
ನಾಸೂಯಕೋ ನಾ ವಾಗ್ದುಷ್ಟೋ ನಾಲ್ಪಭೋಗ್ಯೋ ನ ಮತ್ಸರೀ |
ಭವಿಷ್ಯತಿ ಜನಸ್ತತ್ರ ಸ್ವಯಂ ಧರ್ಮಮನುವ್ರತಃ ॥30॥
ಎಲೈ ಮನುಜಾಧಿಪನೇ, ರಾಜನಾದ ಯುಧಿಷ್ಠಿರನು ಯಾವ ಪಟ್ಟಣದಲ್ಲಿ ಅಥವಾ ರಾಜ್ಯದಲ್ಲಿ ಇರುತ್ತಾನೆಯೋ ಅಲ್ಲಿ ಪಾಂಡುಪುತ್ರರ ನಿವಾಸದೇಶದಲ್ಲಿ ಅಸೂಯೆ ಪಡುವವನಾಗಲೀ, ದುಷ್ಟಮಾತುಗಳನ್ನು ಆಡುವವನಾಗಲೀ, ಅಲ್ಪಭೋಗವುಳ್ಳವನಾಗಲೀ, ಮಾತ್ಸರ್ಯವುಳ್ಳವನಾಗಲೀ ಇರುವುದಿಲ್ಲ. ಅಲ್ಲಿ ಜನರು ಸ್ವತಃ ಧರ್ಮದಲ್ಲಿ ಆಸಕ್ತರಾಗಿರುತ್ತಾರೆ.
ದಾನಶೀಲಃ ಕ್ಷಮಾಯುಕ್ತೋ ನಿಭೃತೋ ಹ್ರೀನಿಷೇಧನಃ |
ಪ್ರಿಯವಾಕ್ ಸತ್ಯವಾಕ್ ಶೂರೋ ಧರ್ಮಶೀಲೋ ಜಿತೇಂದ್ರಿಯಃ ॥
ಹೃಷ್ಟಸ್ತುಷ್ಟಃ ಶುಚಿರ್ದಾಂತೋ ಯತ್ರ ರಾಜಾ ಯುಧಿಷ್ಠಿರಃ |
ಪುರೇ ಜನಪದೇ ಭವ್ಯೋ ಯತ್ರ ರಾಜಾ ಯುಧಿಷ್ಠಿರಃ ॥32॥
ಎಲ್ಲಿ ಭವ್ಯನಾದ ಯುಧಿಷ್ಠಿರ ರಾಜನು ವಾಸಮಾಡುತ್ತಾನೆಯೋ ಅಂತಹ ದೇಶದಲ್ಲಿ ಜನರು ದಾನಶೀಲರೂ, ಕ್ಷಮೆಯಿಂದ ಕೂಡಿದವರೂ, ಸಂತುಷ್ಟರೂ, ದಾಕ್ಷಿಣ್ಯ ಸ್ವಭಾವವುಳ್ಳವರೂ, ಪ್ರಿಯವಾಗಿ ಮಾತನಾಡುವವರೂ, ಸತ್ಯವಾಗಿ ಮಾತನಾಡುವವರೂ, ಧರ್ಮಶೀಲರೂ, ಜಿತೇಂದ್ರಿಯರೂ, ಸಂತೋಷದಿಂದಲೂ ತೃಪ್ತಿಯಿಂದಲೂ ಕೂಡಿದವರೂ, ಶುದ್ಧರೂ, ಇಂದ್ರಿಯನಿಗ್ರಹವುಳ್ಳವರೂ ಆಗಿರುತ್ತಾರೆ.

ಬ್ರಹ್ಮಘೋಷಾಶ್ಚ ಭೂಯಾಂಸಃ ಶಬ್ದಾಃ ಪುಣ್ಯಾಸ್ತಥೈವ ಚ |
ಕ್ರತವಶ್ಚ ಭವಿಷ್ಯಂತಿ ಭೂಯಾಂಸೋ ಭೂರಿದಕ್ಷಿಣಾಃ ॥33॥
ಅಲ್ಲಿ ಬಹಳವಾದ ವೇದಘೋಷವೂ ಪುಣ್ಯಕರವಾದ ಶಬ್ದಗಳೂ, ಬಹಳ ದಕ್ಷಿಣೆಗಳಿಂದ ಅನೇಕ ಯಾಗಗಳೂ ಉಂಟಾಗುತ್ತವೆ.
ಸದಾ ಚ ತತ್ರ ಪರ್ಜನ್ಯಃ ಸಮ್ಯಗ್ ವರ್ಷೀ ನ ಸಂಶಯಃ |
ಸಂಪನ್ನಸಸ್ಯಾ ಚ ಮಹೀ ಭವಿಷ್ಯತಿ ನಿರೀತಿಕಾ ॥34॥
ಅಲ್ಲಿ ಯಾವಾಗಲೂ ಪರ್ಜನ್ಯನು ಚೆನ್ನಾಗಿ ಮಳೆಯನ್ನು ಸುರಿಸುತ್ತಾನೆ. ಭೂಮಿಯಲ್ಲಿ ಸಸ್ಯಗಳು ಚೆನ್ನಾಗಿ ಬೆಳೆಯುತ್ತವೆ. ಯಾವ ಈತಿಬಾಧೆಗಳೂ ಇರುವುದಿಲ್ಲ. ಇದರಲ್ಲಿ ಸಂಶಯವಿಲ್ಲ.
ಗುಣವಂತಿ ಚ ಧಾನ್ಯಾನಿ ರಸವಂತಿ ಫಲಾನಿ ಚ |
ಗಂಧವಂತಿ ಚ ಮಾಲ್ಯಾನಿ ಶುಭಶಬ್ದಾ ಚ ಭಾರತೀ ॥35॥
ಧಾನ್ಯಗಳು ಒಳ್ಳೆಯ ಗುಣದಿಂದ ಕೂಡಿರುತ್ತವೆ. ಫಲಗಳು ಒಳ್ಳೆಯ ರಸದಿಂದಲೂ, ಪುಷ್ಪಗಳು (ಮಾಲೆಗಳು) ಒಳ್ಳೆಯ ಗಂಧದಿಂದಲೂ ಕೂಡಿರುತ್ತವೆ. ಶುಭಶಬ್ದಗಳೇ ಕೇಳಿಬರುತ್ತವೆ.
ವಾಯುಶ್ಚ ಸುಖಸಂಸ್ಪರ್ಶೋ ಯತ್ರ ರಾಜಾ ಯುಧಿಷ್ಠಿರಃ |
ಭಯಂ ಚ ನಾವಿಶೇತ್ ತತ್ರ ನಿಷ್ಪ್ರತೀಪಂ ಚ ದರ್ಶನಮ್ ॥36॥
ರಾಜನಾದ ಯುಧಿಷ್ಠಿರನು ಇರುವಲ್ಲಿ ವಾಯುವು ಸುಖಸಂಸ್ಪರ್ಶವುಳ್ಳದ್ದಾಗಿ ಬೀಸುತ್ತದೆ. ಅಲ್ಲಿ ಯಾರಿಗೂ ಭಯವುಂಟಾಗುವುದಿಲ್ಲ. ಯಾರ ದರ್ಶನವು ಅಶುಭವನ್ನು ಉಂಟುಮಾಡುವುದಿಲ್ಲ.
ನ ರೋಗಾಸ್ತತ್ರ ದೃಶ್ಯಂತೇ ನಾಧಯೋ ವ್ಯಾಧಯೋ ನ ಚ |
ನ ಚೋರಾ ನಹಿ ಡಂಭಾಶ್ಚ ನ ಚ ಬಾಧಾ ಭವಂತಿ ಚ ॥37॥
ಅಲ್ಲಿ ದೇಹದ ರೋಗಗಳಾಗಲೀ, ಮಾನಸಿಕ ರೋಗಗಳಾಗಲೀ ಇರುವುದಿಲ್ಲ. ಚೋರರಾಗಲೀ, ಡಾಂಭಿಕರಾಗಲೀ ಇರುವುದಿಲ್ಲ. ಅಲ್ಲಿ ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಪ್ರಕೃತಿ ಬಾಧೆಗಳೂ ಇರುವುದಿಲ್ಲ.
ನಾಶಕ್ತಾ ನ ಚ ದುಷ್ಟಾಶ್ಚ ಯತ್ರ ರಾಜಾ ಯುಧಿಷ್ಠಿರಃ ॥38॥
ಬಹುಕ್ಷೀರದುಘಾ ಗಾವಃ ಸುಪುಷ್ಟಾಶ್ಚ ಸುದರ್ಶನಾಃ |
ಪಯಾಂಸಿ ದಧಿಸರ್ಪೀಂಷಿ ರಸವಂತಿ ಹಿತಾನಿ ಚ ॥39॥
ಯುಧಿಷ್ಠಿರ ರಾಜನು ಇರುವಲ್ಲಿ ದುರ್ಬಲರಾಗಲೀ, ದುಷ್ಟರಾಗಲೀ ಇರುವುದಿಲ್ಲ. ಗೋವುಗಳು ನೋಡುವುದಕ್ಕೆ ಸುಂದರವಾಗಿಯೂ, ಪುಷ್ಟವಾಗಿಯೂ ಇದ್ದು ಬಹಳ ಹಾಲನ್ನು ಕೊಡುತ್ತವೆ. ಹಾಲು ಮೊಸರು ಮತ್ತು ಘೃತಗಳಲ್ಲಿ ಒಳ್ಳೆಯ ರಸವಿದ್ದು ಹಿತವಾಗಿರುತ್ತವೆ.
ಸಲಿಲಾನಿ ಪ್ರಸನ್ನಾನಿ ಸರ್ವೇ ಭಾವಾಶ್ಚ ಶೋಭನಾಃ |
ಗುಣವಂತಿ ಚ ಪಾನಾನಿ ಭೋಜ್ಯಾನಿ ವಿವಿಧಾನಿ ಚ ॥40॥
ತತ್ರ ರಾಜನ್ ಭವಿಷ್ಯಂತಿ ಯತ್ರ ರಾಜಾ ಯುಧಿಷ್ಠಿರಃ ॥41॥
ಎಲ್ಲಿ ರಾಜನಾದ ಯುಧಿಷ್ಠಿರನು ಇರುವನೋ ಅಲ್ಲಿ ಜಲವು ಎಲ್ಲಕಡೆಯಲ್ಲಿಯೂ ಪ್ರಸನ್ನವಾಗಿರುತ್ತದೆ. ಎಲ್ಲ ಪದಾರ್ಥಗಳೂ ಸುಂದರವಾಗಿರುತ್ತವೆ. ಅನೇಕ ವಿಧವಾದ ಭೋಜ್ಯವಸ್ತುಗಳು ಮತ್ತು ಪಾನಗಳು ಒಳ್ಳೆಯ ಗುಣದಿಂದ ಕೂಡಿರುತ್ತವೆ.
ರಸಾಃ ಸ್ಪರ್ಶಾಶ್ಚ ಗಂಧಾಶ್ಚ ಶಬ್ದಾಶ್ಚಾಪಿ ಗುಣಾನ್ವಿತಾಃ |
ದೃಶ್ಯಾನಿ ಚ ಪ್ರಸನ್ನಾನಿ ಯತ್ರ ರಾಜಾ ಯುಧಿಷ್ಠಿರಃ ॥42॥
ಶಬ್ದಸ್ಪರ್ಶ ರಸಗಂಧಗಳು ಒಳ್ಳೆಯ ಗುಣದಿಂದ ಕೂಡಿರುತ್ತವೆ. ಯುಧಿಷ್ಠಿರ ರಾಜನು ಇರುವಲ್ಲಿ ಎಲ್ಲ ದೃಶ್ಯಗಳೂ ಸುಂದರವಾಗಿರುತ್ತವೆ.
ಧರ್ಮಶ್ಚ ತತ್ರ ವೈ ಸಂತಿ ಸೇವಿತಾಶ್ಚ ದ್ವಿಜಾತಿಭಿಃ ॥43॥
ಸ್ವೈಃಸ್ವೈರ್ಗುಣೈಶ್ಚ ಸಂಯುಕ್ತಾಃ ತಸ್ಮಿನ್ ವರ್ಷೇ ತ್ರಯೋದಶೇ |
ದೇಶೇ ತತ್ರ ಭವಿಷ್ಯಂತಿ ತಾತ ಪಾಂಡವಸಂಶ್ರಿತೇ ॥44॥
ಪಾಂಡವರು ತಮ್ಮ ಹದಿಮೂರನೆಯ ವರ್ಷದ ಅಜ್ಞಾತವಾಸದಲ್ಲಿ ಯಾವ ದೇಶದಲ್ಲಿ ಇರುತ್ತಾರೆಯೋ ಅಲ್ಲಿ ದ್ವಿಜರು ತಮ್ಮ ಧರ್ಮವನ್ನು ಆಚರಿಸುತ್ತಾರೆ. ಜನರು ತಮ್ಮ ತಮ್ಮ ಗುಣಗಳಿಂದ ಕೂಡಿದವರಾಗಿರುತ್ತಾರೆ.
ಸಂಪ್ರೀತಿಮಾನ್ ಜನಸ್ತತ್ರ ಸಂತುಷ್ಟಃ ಶುಚಿರವ್ಯಥಃ |
ದೇವತಾತಿಥಿಪೂಜಾಸು ಸರ್ವಭೂತಾನುರಾಗವಾನ್ ॥45॥
ಇಷ್ಟದಾನೇ ಮಹೋತ್ಸಾಹಾ ನಿತ್ಯಂ ಧರ್ಮಪರಾಯಣಾಃ |
ವ್ಯಕ್ತವಾಕ್ಯಾಸ್ತಥಾ ತಾತ ಶುಭಕಲ್ಯಾಣಮಂಗಲಾಃ ॥46॥
ಅಲ್ಲಿ ಜನರು ತೃಪ್ತಿಯಿಂದ ಇದ್ದು, ಸಂತುಷ್ಟರಾಗಿರುತ್ತಾರೆ. ಶುದ್ಧರಾಗಿ ವ್ಯಥೆಯಿಲ್ಲದೆ ಇರುತ್ತಾರೆ. ದೇವತಾತಿಥಿ ಪೂಜೆಗಳಲ್ಲಿ ನಿರತರಾಗಿರುತ್ತಾರೆ. ಸರ್ವಪ್ರಾಣಗಳಲ್ಲಿ ಪ್ರೀತಿಯುಳ್ಳವರಾಗಿರುತ್ತಾರೆ. ಇನ್ನೊಬ್ಬರಿಗೆ ಇಷ್ಟವಾದುದನ್ನು ದಾನಮಾಡುವುದರಲ್ಲಿ ಬಹಳ ಉತ್ಸಾಹವನ್ನು ಹೊಂದಿರುತ್ತಾರೆ. ಯಾವಾಗಲೂ ಧರ್ಮಪರಾಯಣರಾಗಿರುತ್ತಾರೆ.
ಅಶುಭದ್ವಿಟ್ ಶುಭಪ್ರೇಪ್ಸುರಿಷ್ಟಯಜ್ಞಃ ಶುಭವ್ರತಃ |
ಭವಿಷ್ಯತಿ ಜನಸ್ತತ್ರ ಯತ್ರ ರಾಜಾ ಯುಧಿಷ್ಠಿರಃ ॥47॥
ಎಲ್ಲಿ ರಾಜನಾದ ಯುಧಿಷ್ಠಿರನಿದ್ದಾನೆಯೋ ಅಲ್ಲಿಯ ಜನರು ಅಶುಭವನ್ನು ದ್ವೇಷಿಸುವವರೂ, ಶುಭವನ್ನು ಬಯಸುವವರೂ, ಯಜ್ಞಗಳನ್ನು ಆಚರಿಸುವವರೂ, ಶುಭವ್ರತವನ್ನು ಆಚರಿಸುವವರೂ ಆಗುವರು.
ನಿತ್ಯೋತ್ಸವಪ್ರಮುದಿತೋ ನಿತ್ಯಹೃಷ್ಟಃ ಶ್ರಿಯಾನ್ವಿತಃ |

ಭವಿಷ್ಯತಿ ನಿವಾಸೋಽಯಂ ಯತ್ರ ರಾಜಾ ಯುಧಿಷ್ಠಿರಃ ॥48॥
ಎಲ್ಲಿ ರಾಜನಾದ ಯುಧಿಷ್ಠಿರನಿದ್ದಾನೆಯೋ ಆ ವಾಸಸ್ಥಾನವು ನಿತ್ಯೋತ್ಸವಗಳಿಂದ ಕೂಡಿ, ಸಂಪತ್ತಿನಿಂದ ಕೂಡಿ ನಿತ್ಯಸಂತೋಷದಿಂದ ಕೂಡಿರುವುದು.
ಧರ್ಮಾತ್ಮಾ ಸ ತು ದುರ್ಜ್ಞೇಯಃ ಸರ್ವಜ್ಞೈಶ್ಚ ದ್ವಿಜಾತಿಭಿಃ |
ಕಿಂ ಪುನಃ ಪ್ರಾಕೃತೈಃ ಪಾರ್ಥಃ ಶಕ್ಯೋ ಜ್ಞಾತುಂ ವನೇ ವಸನ್ ॥49॥
ಧರ್ಮಾತ್ಮನಾದ ಅವನನ್ನು ಸರ್ವಜ್ಞರಾದ ಬ್ರಾಹ್ಮಣರು ತಿಳಿಯಲು ಸಾಧ್ಯವಿಲ್ಲ. ಇನ್ನು ಕಾಡಿನಲ್ಲಿ ವಾಸಿಸುವ ಅವನನ್ನು ಪ್ರಾಕೃತಜನರು ಹೇಗೆ ತಿಳಿಯಬಹುದು?
ತಸ್ಮಿನ್ ಸತ್ಯಂ ಧೃತಿರ್ದಾಕ್ಷ್ಯಂ ಪರಾ ಶಾಂತಿರ್ಧ್ರುವಾ ಕ್ಷಮಾ |
ಹ್ರೀಃ ಶ್ರೀಃ ಕೀರ್ತಿಃ ಪರಂ ತೇಜ ಆನೃಶಂಸ್ಯಂ ತಥಾಽಽರ್ಜವಮ್ ॥
ಅವನಲ್ಲಿ ಸತ್ಯ, ಧೈರ್ಯ, ದಕ್ಷತೆ, ಉತ್ತಮವಾದ ಶಾಂತಿ, ನಿತ್ಯವಾದ ಕ್ಷಮೆ, ನಾಚಿಕೆ, ಸಂಪತ್ತು, ಕೀರ್ತಿ, ಉತ್ತಮವಾದ ಪರಾಕ್ರಮ, ದಯೆ, ಆರ್ಜವ ಎಲ್ಲವೂ ನೆಲೆಸಿವೆ.
ತಸ್ಮಾನ್ನಿವಾಸಃ ಪಾರ್ಥಾನಾಂ ಚಿಂತ್ಯತಾಂ ಯದ್ ಬ್ರವೀಮಿ ವಃ |
ಗತಿರ್ವಾ ಪರಮಾ ತತ್ರ ನೋತ್ಸಹೇ ವಕ್ತುಮನ್ಯಥಾ ॥51॥
ಆದ್ದರಿಂದ ನಾನು ಹೇಳುವಂತೆ ಪಾಂಡವರ ವಾಸಸ್ಥಾನವನ್ನು ವಿಚಾರ ಮಾಡಿ. ಅಂತಹ ಸ್ಥಳಕ್ಕೆ ಹೋಗುವುದು ಶ್ರೇಷ್ಠವಾದುದು. ನಾನು ಬೇರೆಯ ರೀತಿಯಲ್ಲಿ ಮಾತನಾಡಲಾರೆ.
ಏವಮೇವ ತು ಸಂಚಿಂತ್ಯ ಯತ್ ಕೃತ್ಯಂ ಸಾಧು ಮನ್ಯಸೇ |
ತತ್ ಕ್ಷಿಪ್ರಂ ಕುರು ಕೌರವ್ಯ ಯದ್ಯೇತಚ್ಛ್ರದ್ದಧಾಸಿ ಮೇ ॥52॥
ಕುಲಸ್ಯ ಹಿ ಕ್ಷಮಂ ತಾತ ಯದಹಂ ತದ್ ಬ್ರವೀಮಿ ತೇ ॥53॥
ಎಲೈ ಕೌರವ್ಯನೇ, ನನ್ನ ಮಾತಿನಲ್ಲಿ ನಂಬಿಕೆ ಇರುವುದಾದರೆ ಹೀಗೆಯೇ ಆಲೋಚಿಸಿ ಏನನ್ನು ಮಾಡಿದರೆ ಒಳ್ಳೆಯದು ಎಂದು ಭಾವಿಸುತ್ತೀಯೋ ಅಂತಹ ಕಾರ್ಯವನ್ನು ಕ್ಷಿಪ್ರವಾಗಿ ಮಾಡು. ಎಲೈ ಪ್ರೀತಿಪಾತ್ರನೇ, ನಾನು ನಿನಗೆ ಹೇಳುವಂತೆ ನಮ್ಮ ಕುಲಕ್ಕೆ ಯೋಗ್ಯವಾದ ಕಾರ್ಯವನ್ನು ಮಾಡುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ಭೀಮೇನಾಗುಸ್ತತ್ರ ದುರ್ಯೋಧನಾದ್ಯಾ
ಭೀಷ್ಮಾದಿಭಿಃ ಸಹ ಕರ್ಣೇನ ಚೈವ |
ಅಗ್ರೇ ಯಯೌ ತತ್ರ ಯೋದ್ಧುಂ ಸುಶರ್ಮಾ
ಸ ಗಾ ವಿರಾಟಸ್ಯ ಸಮಾಜಹಾರ ॥33॥
ಮೊದಲಿಗೆ ಸುಶರ್ಮ ಯುದ್ಧ ಮಾಡಲು ವಿರಾಟ ನಗರಕ್ಕೆ ತೆರಳಿದ. ವಿರಾಟನ ಗೋವುಗಳನ್ನು ಅಪಹರಿಸಿದ. ಇದನ್ನು ಕೇಳಿ ವಿರಾಟ ಸೈನ್ಯ ಸಮೇತನಾಗಿ ಬಂದು ಸುಶರ್ಮನನ್ನು ಬೆನ್ನಟ್ಟಿದ.
* * * * *
ಮೂವತ್ತೊಂದನೆಯ ಅಧ್ಯಾಯ
ಕರ್ಣದುಶ್ಶಾಸನಾದಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ವಿರಾಟನ ಗೋಗ್ರಹಣವನ್ನು ಮಾಡಲು ದುರ್ಯೋಧನನ ನಿರ್ಧಾರ. ಸುಶರ್ಮನಿಂದ ಮೊದಲು ಗೋಗ್ರಹಣ.
ವೈಶಂಪಾಯನಃ
ತತಃ ಶಾರದ್ವತೋ ವಾಕ್ಯಮಿತ್ಯುವಾಚ ಕೃಪಸ್ತದಾ |
ಯುಕ್ತಂ ಪ್ರಾಪ್ತಂ ಚ ವೃದ್ಧೇನ ಪಾಂಡವಾನ್ ಪ್ರತಿ ಭಾಷಿತಮ್ ॥1॥
ಧರ್ಮಾರ್ಥಸಹಿತಂ ಶ್ಲಕ್ಷ್ಣಂ ಸರ್ವಂ ತಥ್ಯಂ ಸಹೇತುಕಮ್ ॥2॥
ತತ್ರಾನುರೂಪಂ ಭೀಷ್ಮಸ್ಯ ಮಮಾಪಿ ವಚನಂ ಶೃಣು ॥3॥
ವೈಶಂಪಾಯನ ಅನಂತರ ಶರದ್ವಂತರ ಪುತ್ರರಾದ ಕೃಪಾಚಾರ್ಯರು ಆಗ ಹೀಗೆ ಮಾತನಾಡಿದರು. ವೃದ್ಧರಾದ ಭೀಷ್ಮರು ಪಾಂಡವರ ವಿಷಯದಲ್ಲಿ ಯೋಗ್ಯವಾದುದನ್ನೇ ಮತ್ತು ಸಮಯೋಚಿತವಾದುದನ್ನೇ ಮಾತನಾಡಿದ್ದಾರೆ. ಧರ್ಮಾರ್ಥಸಹಿತವಾದ ಅವರ ಮಧುರವಾದ ಮಾತುಗಳೆಲ್ಲವೂ ಸತ್ಯವೂ ಮತ್ತು ಕಾರಣದಿಂದ ಕೂಡಿರುಅವೂ ಆಗಿವೆ. ಭೀಷ್ಮರ ಮಾತಿಗೆ ಅನುರೂಪವಾದ ನನ್ನ ಮಾತನ್ನೂ ಕೇಳು.
ತೇಷಾಂ ಚೈವ ಗತಿಸ್ತತ್ರ ನಿವಾಸಶ್ಚಾನುಚಿಂತ್ಯತಾಮ್ |
ನೀತಿರ್ವಿಧೀಯತಾಂ ಚಾತ್ರ ಸಾಂಪ್ರತಂ ಯಾ ಹಿತಾ ಭವೇತ್ ॥4॥
ಭೀಷ್ಮರು ಹೇಳಿದಂತಹ ಸ್ಥಳದಲ್ಲಿ ಪಾಂಡವರ ನಿವಾಸವನ್ನು ವಿಚಾರ ಮಾಡಿ. ಸದ್ಯಕ್ಕೆ ಏನು ಮಾಡಿದರೆ ನಮಗೆ ಹಿತವಾಗಬಹುದೋ ಅಂತಹ ನೀತಿಯನ್ನು ಮಾಡುವವರಾಗಿ.
ನಾವಜ್ಞೇಯೋ ರಿಪುಸ್ತಾತ ಪ್ರಾಕೃತೋಽಪಿ ಬುಭೂಷತಾ |

ಕಿಂ ಪುನಃ ಪಾಂಡವಾಃ ಶೂರಾ ವಿದ್ವಾಂಸೋ ಬಲಿನಸ್ತಥಾ ॥5॥
ಎಲೈ ಪ್ರೀತಿಪಾತ್ರನೇ, ಸಮೃದ್ಧಿಯನ್ನು ಬಯಸುವವನು ಅಲ್ಪನಾದ ಶತ್ರುವನ್ನೂ ಉಪೇಕ್ಷೆ ಮಾಡಬಾರದು. ಹೀಗಿರುವ ಶೂರರೂ, ವಿದ್ವಾಂಸರೂ, ಬಲಿಷ್ಠರೂ ಆದ ಪಾಂಡವರ ವಿಷಯದಲ್ಲಿ ಹೇಳುವುದೇನು?
ತಸ್ಮಾತ್ ಸತ್ರಂ ಪ್ರವಿಷ್ಟೇಷು ಪಾಂಡವೇಷು ಮಹಾತ್ಮಸು |
ಗೂಢಭಾವೇಷು ಛನ್ನೇಷು ಕಾಲೇ ಚೋದಯಮಾಗತೇ ॥6॥
ಸ್ವರಾಷ್ಟ್ರಪರರಾಷ್ಟ್ರೇಷು ಜ್ಞಾತವ್ಯಂ ಬಲಮಾತ್ಮನಃ |
ಉದಯಃ ಪಾಂಡವಾನಾಂ ಚ ಪ್ರಾಪ್ತಕಾಲೋ ನ ಸಂಶಯಃ ॥7॥
ಆದ್ದರಿಂದ ಕಾಡಿಗೆ ಹೋದ ಮಹಾತ್ಮರಾದ ಪಾಂಡವರು ಯೋಗ್ಯವಾದ ಹದಿಮೂರನೆಯ ವರ್ಷವು ಪ್ರಾಪ್ತವಾಗಿರುವಾಗ ವೇಷವನ್ನು ಮರೆಸಿಕೊಂಡು ಗೂಢವಾಗಿರುತ್ತಿರಲು ತನ್ನರಾಷ್ಟ್ರಗಳಲ್ಲಿ ಮತ್ತು ಪರರಾಷ್ಟ್ರಗಳಲ್ಲಿ ತನ್ನ ಬಲವನ್ನು ಮೊದಲು ತಿಳಿದುಕೊಳ್ಳಬೇಕು. ಪಾಂಡವರ ಉದಯ ಕಾಲವು ಸನ್ನಿಹಿತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.
ನಿವಾಸಂ ಪಾಂಡುಪುತ್ರಾಣಾಂ ದರ್ಶನೇ ಮೃಗಯಾಮಹೇ |
ನಿವೃತ್ತಸಮಯಾಃ ಪಾರ್ಥಾಃ ಮಹಾತ್ಮಾನೋ ಮಹಾಬಲಾಃ ॥8॥
ಮಹೋತ್ಸಾಹಾ ಭವಿಷ್ಯಂತಿ ನಿತ್ಯಂ ಧರ್ಮಪರಾಯಣಾಃ ॥9॥
ಪಾಂಡುಪುತ್ರರ ನಿವಾಸವನ್ನು ನಾವು ನೋಡಿ ಹುಡುಕೋಣ. ತಮ್ಮ ಪ್ರತಿಜ್ಞೆಯನ್ನು ಪೂರೈಸಿದ ಮಹಾತ್ಮರೂ, ಮಹಾಬಲರೂ, ನಿತ್ಯವೂ ಧರ್ಮಪರಾಯಣರೂ ಆದ ಪಾಂಡವರು ಈಗ ಮಹೋತ್ಸಾಹ ಉಳ್ಳವರಾಗುವರು.
ತಸ್ಮಾದ್ ಬಲಂ ಚ ಕೋಶಂ ಚ ನೀತಿಶ್ಚಾತ್ರ ವಿಧೀಯತಾಮ್ |
ಯಥಾ ಕಾಲೋದಯೇ ಪ್ರಾಪ್ತೇ ಸಮ್ಯಕ್ ಸಂದಧ್ಮಹೇ ಪರೈಃ ॥10॥
ತ್ವಂ ವೈ ತನ್ಮನಸಾ ಶ್ರೇಯೋ ಬುಧ್ಯಸ್ಯಹಿತಮಾತ್ಮನಃ ॥11॥
ಆದ್ದರಿಂದ ಸೈನ್ಯ ಮತ್ತು ಕೋಶಗಳ ವಿಷಯದಲ್ಲಿ ಯೋಗ್ಯವಾದ ನೀತಿಯನ್ನು ಅನುಸರಿಸು. ಹೇಗೆ ಕಾಲವು ಪ್ರಾಪ್ತವಾದಾಗ ನಾವು ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳಬಹುದೋ ಅಂತಹ ನೀತಿಯನ್ನು ಅನುಸರಿಸು. ಆದರೆ ನೀನು ಮಾತ್ರ ನಾವು ಶ್ರೇಯಸ್ಸೆಂದು ತಿಳಿದುದನ್ನು ನಿನಗೆ ಅಹಿತವೆಂದು ತಿಳಿದಿದ್ದೀಯೆ (ಲಕ್ಷ್ಯಾಲಂಕಾರ).
ನಿಶ್ಚಯಃ ಸರ್ವಮಿತ್ರೇಷು ಬಲವತ್ಸ್ವಬಲೇಷು ಚ |
ಸಾರಂ ವಲ್ಗುಫಲಂ ಜ್ಞಾತ್ವಾ ಮಧ್ಯಸ್ಥಂ ಚಾಪಿ ಭಾರತ ॥12॥
ಸ್ವರಾಷ್ಟ್ರಪರರಾಷ್ಟ್ರೇಷು ಜ್ಞಾತವ್ಯಂ ಬಲಮಾತ್ಮನಃ ॥13॥
ಎಲೈ ಭಾರತನೇ, ಸರ್ವಮಿತ್ರರಲ್ಲಿ ಯಾರು ಶ್ರೇಷ್ಠ ಬಲವುಳ್ಳವರು, ಯಾರು ಕನಿಷ್ಠ ಬಲವುಳ್ಳವರು, ಯಾರು ಮಧ್ಯಮಬಲವುಳ್ಳವರು ಎಂದು ತಿಳಿದು, ತನ್ನ ಸೈನ್ಯದಲ್ಲಿಯೂ ಯಾರು ಶ್ರೇಷ್ಠರು, ಯಾರು ಮಧ್ಯಮರು ಮತ್ತು ಯಾರು ಕನಿಷ್ಠರು ಎಂದು ತಿಳಿಯಬೇಕು. ತನ್ನ ರಾಷ್ಟ್ರದಲ್ಲಿ ಮತ್ತು ಪರರ ರಾಷ್ಟ್ರಗಳಲ್ಲಿ ತನ್ನ ಬಲವು ಎಷ್ಟು ಇದೆ ಎಂದು ತಿಳಿಯಬೇಕು.
ಪ್ರಹೃಷ್ಟಮಪ್ರಹೃಷ್ಟಂ ವಾ ತಥಾ ಸಂದಧ್ಮಹೇ ಪರೈಃ ॥14॥
ಸಾಮ್ನಾ ದಾನೇನ ಭೇದೇನ ದಂಡೇನ ಬಲಿಕರ್ಮಣಾ |
ಯಥಾಕಾಲಂ ಮನುಷ್ಯೇಂದ್ರ ಚಿರಂ ಸುಖಮವಾಪ್ಸ್ಯಸಿ ॥15॥
ನಿನಗೆ ಸಂತೋಷವಿರಲಿ ಇಲ್ಲದಿರಲಿ, ನಾವು ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳೋಣ.
ಸಾಮೋಪಾಯದಿಂದಲಾಗಲೀ, ದಾನ ಉಪಾಯದಿಂದಾಗಲೀ, ಭೇದೋಪಾಯದಿಂದಾಗಲೀ, ಯೋಗ್ಯಸೇವಾರೂಪವಾದ ದಂಡೋಪಾಯದಿಂದಲಾಗಲೀ ಎಲೈ ಮನುಷ್ಯೇಂದ್ರನೇ, ನೀನು ಯೋಗ್ಯವಾದ ಕಾಲದಲ್ಲಿ ಶಾಶ್ವತವಾದ ಸುಖವನ್ನು ಹೊಂದುವಿ.
ನ್ಯಾಯೇನಾನನ್ಯಬಲಿನೋ ಬಲಾಚ್ಚಾನನ್ಯದುರ್ಹೃದಃ |
ಸಾಂತಯಿತ್ವಾ ಚ ಮಿತ್ರಾಣಿ ಹೀನಸ್ವಬಲವಾಹನೈಃ ॥16॥
ಸ್ವಕೋಶಬಲಸಂವೃದ್ಧಃ ಸರ್ವಾಂ ಸಿದ್ಧಿಮವಾಪ್ಸ್ಯಸಿ ॥17॥
ಅತ್ಯಂತ ಬಲಿಷ್ಠರಾದವರನ್ನು ಮತ್ತು ಅತ್ಯಂತ ದುರ್ಬಲರಾದ ಮಿತ್ರರನ್ನು ನ್ಯಾಯ ರೀತಿಯಿಂದ ಸಮಾಧಾನಪಡಿಸಿ, ಅನಂತರ ಸೈನ್ಯವನ್ನು ಕುರಿತು ಸುಖವಾಗಿ ಮಾತನಾಡಬೇಕು. ನಿನ್ನ ಸೈನ್ಯ ಮತ್ತು ಕೋಶಗಳು ಸಮೃದ್ಧವಾದರೆ ನಿನಗೆ ಎಲ್ಲಾ ಸಿದ್ಧಿಗಳೂ ಉಂಟಾಗುವುವು.
ಯೋತ್ಸ್ಯಸೇ ಚಾಪಿ ಬಲಿಭಿರರಿಭಿಃ ಪ್ರತ್ಯುಪಸ್ಥಿತೈಃ |
ಅನ್ಯೈರ್ವಾ ಪಾಂಡವೈರ್ವಾऽಪಿ ಹೀನೈಃ ಸ್ವಬಲವಾಹನೈಃ ॥18॥
ಏವಂ ಸರ್ವಂ ವಿನಿಶ್ಚಿತ್ಯ ವ್ಯವಹರ್ತಾಸಿ ನ್ಯಾಯತಃ ॥19॥
ಆಗ ಬಲಿಷ್ಠರಾದ ಶತ್ರುಗಳು ಎದುರಾದರೂ, ಬೇರೆಯವರಾಗಲೀ ಅಥವಾ ಬಲ-ವಾಹನಗಳಿಂದ ಹೀನರಾದ ಪಾಂಡವರಾಗಲೀ ಎದುರಾದರೂ ನೀನು ಯುದ್ಧವನ್ನು ಮಾಡುವಿ. ಹೀಗೆ ಎಲ್ಲವನ್ನೂ ನ್ಯಾಯದಿಂದ ನಿಶ್ಚಯಿಸಿ ವ್ಯವಹಾರವನ್ನು ಮಾಡಬೇಕು.
ವೈಶಂಪಾಯನಃ
ತತೋ ದುರ್ಯೋಧನೋ ವಾಕ್ಯಂ ಶ್ರುತ್ವಾ ತೇಷಾಂ ಮಹಾತ್ಮನಾಮ್|
ಮುಹೂರ್ತಮಿವ ಸಂಚಿಂತ್ಯ ಸಚಿವಾನಿದಮಬ್ರವೀತ್ ॥20॥
ವೈಶಂಪಾಯನ ಆಗ ದುರ್ಯೋಧನನು ಆ ಮಹಾತ್ಮರ ಮಾತುಗಳನ್ನು ಕೇಳಿ ಒಂದು ಮುಹೂರ್ತಕಾಲ ಚೆನ್ನಾಗಿ ಯೋಚಿಸಿ ತನ್ನ ಸಚಿವರನ್ನು ಕುರಿತು ಹೀಗೆ ಮಾತನಾಡಿದನು.
ಶ್ರುತಂ ಹ್ಯೇತನ್ಮಯಾ ಪೂರ್ವಂ ಕಥಾಸು ಜನಸಂಸದಿ |

ವೀರಾಣಾಂ ಶಾಸ್ತ್ರವಿದುಷಾಂ ಕೃತಿನಾಂ ತತ್ವನಿರ್ಣಯೇ ॥21॥
ಕೃತಿನಾಂ ಸಾರಫಲ್ಗುತ್ವಂ ಜಾನಾಮಿ ನಯಚಕ್ಷುಷಾ ॥22॥
ಜನರ ಸಮೂಹದಲ್ಲಿ ಮಾತುಗಳು ಬಂದಾಗ ನಾನು ಈ ವಿಷಯವನ್ನು ಕೇಳಿದ್ದೇನೆ. ವೀರರೂ, ಶಾಸ್ತ್ರವಿದ್ವಾಂಸರೂ, ಕ್ರಿಯಾಶೀಲರೂ, ತತ್ವನಿರ್ಣಯ ಉಳ್ಳವರೂ, ಕುಶಲರೂ ಆದ ರಾಜರಲ್ಲಿ ಯಾರು ಶ್ರೇಷ್ಠ ಮತ್ತು ಯಾರು ಕನಿಷ್ಠರೆಂದು ನನ್ನ ನೀತಿಯ ಕಣ್ಣಿನಿಂದ ತಿಳಿದಿದ್ದೇನೆ.
ಸತ್ವೇ ಬಾಹುಬಲೇ ಧೈರ್ಯೇ ಪ್ರಾಣೇ ಶಾರೀರಸಂಭವೇ |
ಸಾಂಪ್ರತಂ ಮಾನುಷೇ ಲೋಕೇ ಸದೈತ್ಯನರರಾಕ್ಷಸೇ ॥23॥
ಚತ್ವಾರಃ ಪ್ರಾಣಿನಾಂ ಶ್ರೇಷ್ಠಾಃ ಸಂಪೂರ್ಣಬಲಪೌರುಷಾಃ ॥24॥
ಈ ಕಾಲದಲ್ಲಿ ದೈತ್ಯರೂ, ರಾಕ್ಷಸರೂ ಮತ್ತು ಮನುಷ್ಯರೂ ಇರುವ ಈ ಮನುಷ್ಯ ಲೋಕದಲ್ಲಿ ಸತ್ವ, ಬಾಹುಬಲ, ಧೈರ್ಯ, ಶರೀರಸಾಮರ್ಥ್ಯ ಇವುಗಳ ವಿಷಯದಲ್ಲಿ ಸಂಪೂರ್ಣ ಬಲ, ಪರಾಕ್ರಮವುಳ್ಳ ನಾಲ್ವರು ಎಲ್ಲರಿಗಿಂತಲೂ ಶ್ರೇಷ್ಠರಾಗಿದ್ದಾರೆ.
ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ |
ಚತುರ್ಥಃ ಕೀಚಕಸ್ತೇಷಾಂ ಪಂಚಮಂ ನಾನುಶುಶ್ರುಮಃ ॥25॥
ಭೀಮ, ಬಲರಾಮ, ವೀರ್ಯವಂತನಾದ ಮದ್ರರಾಜ ಮತ್ತು ಅವರಲ್ಲಿ ನಾಲ್ಕನೆಯವನಾದ ಕೀಚಕ. ಐದನೆಯವನು ಯಾವನೂ ಕೇಳಿಬರುವುದಿಲ್ಲ.
ಅನ್ಯೋನ್ಯಾನಂತರಬಲಾಃ ಕ್ರಮಾದೇವ ಪ್ರಕೀರ್ತಿತಾಃ |
ಬಾಹುಯುದ್ಧಮಭೀಪ್ಸಂತೇ ನಿತ್ಯಂ ಸಂರಬ್ಧಮಾನಸಾಃ ॥26॥
ಭೀಮನಿಂದ ಆರಂಭಿಸಿ ಕೀಚಕನವರೆಗೆ ಕ್ರಮೇಣ ಕಡಿಮೆಯಾಗುವ ಬಲವುಳ್ಳವರೆಂದು ಇವರು ಹೇಳಲ್ಪಡುತ್ತಾರೆ. ಯಾವಾಗಲೂ ಕ್ರೋಧದಿಂದ ಕೂಡಿದ ಮನಸ್ಸುಳ್ಳ ಇವರು ಬಾಹುಯುದ್ಧವನ್ನು ಬಯಸುತ್ತಾರೆ.
ತೇನಾಹಮವಗಚ್ಛಾಮಿ ಪ್ರತ್ಯಯೇನ ವೃಕೋದರಮ್ |
ಮನಸ್ಯಭಿನಿವಿಷ್ಟಂ ಮೇ ವ್ಯಕ್ತಂ ಜೀವಂತಿ ಪಾಂಡವಾಃ ॥27॥
ಅದರಿಂದ ನಾನು ನನ್ನ ಮನಸ್ಸಿನಲ್ಲಿ ಯಾವಾಗಲೂ ನೆಲೆಗೊಂಡಿರುವ ವೃಕೋದರನು ಮತ್ತು ಪಾಂಡವರು ಜೀವಿಸಿದ್ದಾರೆಂದು ಸ್ಪಷ್ಟವಾಗಿ ತಿಳಿಯುತ್ತೇನೆ.
ತತ್ರಾಹಂ ಕೀಚಕಂ ಮನ್ಯೇ ಭೀಮಸೇನೇನ ಮಾರಿತಮ್ |
ಸೈರಂಧ್ರೀಂ ದ್ರೌಪದೀಂ ಮನ್ಯೇ ನಾತ್ರ ಕಾರ್ಯಾ ವಿಚಾರಣಾ ॥28॥
ನಾನು ಕೀಚಕನು ಭೀಮಸೇನನಿಂದ ಕೊಲ್ಲಲ್ಪಟ್ಟಿದ್ದಾನೆ ಎಂದು ತಿಳಿಯುತ್ತೇನೆ. ಸೈರಂಧ್ರಿಯೇ ದ್ರೌಪದೀ ಎಂದು ತಿಳಿಯುತ್ತೇನೆ. ಇದರಲ್ಲಿ ಸಂಶಯವಿಲ್ಲ.
ಶಂಕೇ ಕೃಷ್ಣಾನಿಮಿತ್ತೇನ ಭೀಮಸೇನೇನ ಕೀಚಕಃ |
ಗಂಧರ್ವವ್ಯಪದೇಶೇನ ಹತೋ ನಿಶಿ ಮಹಾಬಲಃ ॥29॥
ಮಹಾಬಲನಾದ, ಪ್ರಸಿದ್ಧನಾದ ಕೀಚಕನು ದ್ರೌಪದಿಯ ನಿಮಿತ್ತವಾಗಿ ಭೀಮಸೇನನಿಂದ ರಾತ್ರಿಯ ಕಾಲದಲ್ಲಿ ಗಂಧರ್ವನೆಂಬ ಹೆಸರಿನಿಂದ ಹತನಾಗಿದ್ದಾನೆ ಎಂದು ನಾನು ಶಂಕಿಸುತ್ತೇನೆ.
ಕೋ ಹಿ ಶಕ್ತಃ ಪರೋ ಭೀಮಾತ್ ಕೀಚಕಂ ಹಂತುಮೋಜಸಾ |
ಶಸ್ತ್ರಂ ವಿನಾ ಬಾಹುವೀರ್ಯಾತ್ ತಥಾ ಸರ್ವಾಂಗಚೂರ್ಣನೇ ॥30॥
ಭೀಮನನ್ನು ಬಿಟ್ಟು ಕೀಚಕನನ್ನು ತನ್ನ ಶಕ್ತಿಯಿಂದ ಕೊಲ್ಲಲು, ಶಸ್ತ್ರವಿಲ್ಲದೆ ತನ್ನ ಬಾಹುಬಲದಿಂದಲೇ ಕೀಚಕನ ಸರ್ವಾಂಗಗಳನ್ನು ಪುಡಿಮಾಡಲು, ಯಾವನು ಸಮರ್ಥನಾಗುತ್ತಾನೆ?
ಮರ್ದಿತುಂ ವಾ ತಥಾ ಶೀಘ್ರಂ ಚರ್ಮಮಾಂಸಾಸ್ಥಿಚೂರ್ಣಿತಮ್ |
ರೂಪಮನ್ಯತ್ ಸಮಾಸ್ಥಾಯ ಭೀಮಸ್ಯೈತದ್ ವಿಚೇಷ್ಟಿತಮ್ ॥31॥
ಮತ್ತು ಕೀಚಕನ ಸರ್ವಮಾಂಸ, ಅಸ್ಥಿಗಳನ್ನು ಚೂರ್ಣಮಾಡಿ ಅಷ್ಟು ಶೀಘ್ರವಾಗಿ ಮರ್ದಿಸಲು ಯಾವನು ಸಮರ್ಥನಾಗುತ್ತಾನೆ? ಭೀಮನೇ ರೂಪಾಂತರವನ್ನು ಧರಿಸಿ ಈ ಕಾರ್ಯವನ್ನು ಎಸಗಿದ್ದಾನೆ.
ಧ್ರುವಂ ಕೃಷ್ಣಾನಿಮಿತ್ತಂ ತು ಭೀಮಸೇನೇನ ಸೂತಜಾಃ |
ಗಂಧರ್ವವ್ಯಪದೇಶೇನ ಹತಾ ನಿಶಿ ನ ಸಂಶಯಃ ॥32॥
ಖಂಡಿತವಾಗಿ ಸೂತಪುತ್ರರೆಲ್ಲರೂ ದ್ರೌಪದಿಯ ನಿಮಿತ್ತವಾಗಿ ಗಂಧರ್ವನೆಂದು ಕರೆಸಿಕೊಳ್ಳುವ ಭೀಮಸೇನನಿಂದ ರಾತ್ರಿಯ ಕಾಲದಲ್ಲಿ ಹತರಾಗಿದ್ದಾರೆ. ಇದರಲ್ಲಿ ಸಂಶಯವಿಲ್ಲ.
ಪಿತಾಮಹೇನ ಯೇ ಚೋಕ್ತಾ ದೇಶಸ್ಯ ಚ ಜನಸ್ಯ ಚ |
ಗುಣಾಸ್ತೇ ಮತ್ಸ್ಯರಾಷ್ಟ್ರಸ್ಯ ಬಹುಶೋಽಪಿ ಮಯಾ ಶ್ರುತಾಃ ॥33॥
ಪಿತಾಮಹರಾದ ಭೀಷ್ಮರು ಹೇಳಿದ ದೇಶದ ಮತ್ತು ಜನರ ಗುಣಗಳು ಮತ್ಸ್ಯರಾಷ್ಟ್ರದಲ್ಲಿ ಇವೆ ಎಂದು ನಾನು ಅನೇಕ ಬಾರಿ ಕೇಳಿದ್ದೇನೆ.
ವಿರಾಟನಗರೇ ಮನ್ಯೇ ಪಾಂಡವಾಶ್ಛನ್ನಚಾರಿಣಃ |
ನಿವಸಂತಿ ಪುರೇ ರಮ್ಯೇ ತತ್ರ ಯಾತ್ರಾ ವಿಧೀಯತಾಮ್ ॥34॥
ಸುಂದರವಾದ ವಿರಾಟನಗರದಲ್ಲಿ ವೇಷವನ್ನು ಮರೆಸಿಕೊಂಡ ಪಾಂಡವರು ವಾಸಮಾಡುತ್ತಿದ್ದಾರೆಂದು ಭಾವಿಸಿದ್ದೇನೆ. ಅಲ್ಲಿಗೆ ಸೈನ್ಯದ ಯಾತ್ರೆಯು ಉಂಟಾಗಲಿ.

ಮತ್ಸ್ಯರಾಷ್ಟ್ರಂ ಹನಿಷ್ಯಾಮೋ ಗ್ರಹೀಷ್ಯಾಮಶ್ಚ ಗೋಧನಮ್ |
ಗೃಹೀತೇ ಗೋಧನೇ ನೂನಂ ತೇಽಪಿ ಯೋತ್ಸ್ಯಂತಿ ಪಾಂಡವಾಃ ॥35॥
ಮತ್ಸ್ಯದೇಶವನ್ನು ಘಾಸಿಗೊಳಿಸಿ ರಾಜನ ಗೋಧನವನ್ನು ಹಿಡಿಯುವೆವು. ಗೋಧನವು ಗೃಹೀತವಾಗುತ್ತಿರಲು ಖಂಡಿತವಾಗಿಯೂ ಪಾಂಡವರು ಯುದ್ಧ ಮಾಡುವರು.
ಅಪೂರ್ಣೇ ಸಮಯೇ ಚಾಪಿ ಯದಿ ಪಶ್ಯೇಮ ಪಾಂಡವಾನ್ |
ದ್ವಾದಶಾನ್ಯಾನಿ ವರ್ಷಾಣಿ ಪ್ರವೇಕ್ಷ್ಯಂತಿ ಪುನರ್ವನಮ್ ॥36॥
ಅಜ್ಞಾತವಾಸದ ಸಮಯವು ಮುಗಿಯುವುದಕ್ಕಿಂತ ಮೊದಲೇ ನಾವು ಪಾಂಡವರನ್ನು ನೋಡಿದರೆ ಅವರು ಪುನಃ ಹನ್ನೆರಡು ವರ್ಷಗಳ ಕಾಲ ವನವನ್ನು ಪ್ರವೇಶಿಸುವರು.
ತಸ್ಮಾದನಂತರೇಣಾಪಿ ಲಾಭೋಽಸ್ಮಾಕಂ ಭವಿಷ್ಯತಿ |
ಕೋಶವೃದ್ಧಿರಿಹಾಸ್ಮಾಕಂ ಶತ್ರೂಣಾಂ ನಿಧನಂ ಭವೇತ್ ॥37॥
ಆದ್ದರಿಂದ ಗೋಗ್ರಹಣದ ಅನಂತರ ಉಂಟಾಗುವ ಪಾಂಡವರ ದರ್ಶನವು ನಮಗೆ ಲಾಭವೇ ಆಗುವುದು. ಮತ್ತು ನಮ್ಮ ಕೋಶದ ವೃದ್ಧಿ ಮತ್ತು ಶತ್ರುಗಳ ವಧೆಯೂ ಉಂಟಾದೀತು (ಲಕ್ಷ್ಮಾಲಂಕಾರ).
ಕಥಂ ಸುಯೋಧನಂ ಗಚ್ಛೇತ್ ಯುಧಿಷ್ಠಿರಭೃತಃ ಪುರಾ |
ಏತಚ್ಚಾಪಿ ವದತ್ಯೇಷ ಮಾತ್ಸ್ಯಃ ಪರಿಭವಾನ್ ಮಯಿ ॥38॥
ವಿರಾಟನು ನನಗೆ ಅವಮಾನ ಮಾಡುವ ದೃಷ್ಟಿಯಿಂದ ಯುಧಿಷ್ಠಿರನನ್ನು ಸಲಹಿರುವ ನಾನು ಯುದ್ಧವಿಲ್ಲದೆ ಏಕೆ ದುರ್ಯೋಧನನಿಗೆ ಶರಣಾಗತನಾಗುತ್ತೇನೆ ಎಂದು ಹೇಳುತ್ತಾನೆ (ಲಕ್ಷ್ಮಾಲಂಕಾರ).
ತಸ್ಮಾತ್ ಕರ್ತವ್ಯಮೇತದ್ ವೈ ತತ್ರ ಯಾತ್ರಾ ವಿಧೀಯತಾಮ್ |
ಏತತ್ ಸುನೀತಂ ಮನ್ಯೇಽಹಂ ಸರ್ವೇಷಾಂ ಯದಿ ರೋಚತೇ ॥39॥
ಆದ್ದರಿಂದ ಅಲ್ಲಿಗೆ ಸೈನ್ಯವನ್ನು ತೆಗೆದುಕೊಂಡು ಹೋಗಬೇಕು. ನಿಮ್ಮೆಲ್ಲರಿಗೂ ಇಷ್ಟವಾಗುವುದಾದರೆ ಇದು ಒಳ್ಳೆಯ ನೀತಿ ಎಂದು ಭಾವಿಸುತ್ತೇನೆ.
ವೈಶಂಪಾಯನಃ
ತತೋ ರಾಜಾ ತ್ರಿಗರ್ತಾನಾಂ ಸುಶರ್ಮಾ ರಥಯೂಥಪಃ |
ಪೂರ್ವಮಾಭಾಷ್ಯ ಕರ್ಣೇನ ತಥಾ ದುಃಶಾಸನೇನ ಚ ॥40॥
ಪ್ರಾಪ್ತಕಾಲಮಿದಂ ವಾಕ್ಯಮುವಾಚ ತ್ವರಿತೋ ಬಲೀ ॥41॥
ಅಸಕೃನ್ನಿಕೃತಃ ಪೂರ್ವಂ ಮಾತ್ಸ್ಯಸಾಲ್ವೇಯಕೈಕಯೈಃ |
ಸೂತೇನ ಚ ವಿರಾಟಸ್ಯ ಕೀಚಕೇನ ಪುನಃ ಪುನಃ ॥42॥
ವೈಶಂಪಾಯನ ಅನಂತರ ಹಿಂದೆ ವಿರಾಟ, ಸಾಲ್ವರಾಜ ಮತ್ತು ಕೈಕೆಯರಿಂದ ಅನೇಕ ಬಾರಿ ಅವಮಾನಗೊಂಡಿದ್ದ ಮತ್ತು ವಿರಾಟನ ಸೂತನಾದ ಕೀಚಕನಿಂದಲೂ ಮತ್ತೆ ಮತ್ತೆ ಅವಮಾನವನ್ನು ಅನುಭವಿಸಿದ್ದ ತ್ರಿಗರ್ತದೇಶದ ರಾಜನಾದ ರಥಯೂಥ ಪತಿಯಾದ ಸುಶರ್ಮನು, ಮೊದಲು ಕರ್ಣ ಮತ್ತು ದುಶ್ಶಾಸನನ ಜೊತೆಯಲ್ಲಿ ಮಾತನಾಡಿ ಅನಂತರ ಬಲಿಷ್ಠನಾದ ಅವನು ಶೀಘ್ರವಾಗಿ ಆ ಕಾಲಕ್ಕೆ ಉಚಿತವಾದ ಈ ಮಾತುಗಳನ್ನು ಆಡಿದನು.
ಬಾಧಿತೋ ಬಂಧುಭಿಃ ಸಾರ್ಧಂ ಬಲಾದ್ ಬಲವತಾ ವಿಭೋ |
ರಾಷ್ಟ್ರಂ ಮಾಮಸಕೃದ್ ರಾಜನ್ ರಾಜ್ಞಾ ಮಾತ್ಸ್ಯೇನ ಬಾಧಿತಮ್ ॥
ಎಲೈ ವಿಭುವೇ, ನನ್ನು ಬಂಧುಗಳ ಜೊತೆಯಲ್ಲಿ ನಾನೂ ಮತ್ತು ನನ್ನ ರಾಷ್ಟ್ರವೂ ಬಲಿಷ್ಠನಾದ ಮತ್ಸ್ಯರಾಜನಿಂದ ಅನೇಕಬಾರಿ ಬಾಧೆಗೆ ಒಳಗಾಗಿದ್ದೇವೆ.
ಪ್ರಣೇತಾ ಕೀಚಕಸ್ತಸ್ಯ ಬಲಮತ್ತೋಽಭವತ್ ಪುರಾ |
ಅಮರ್ಷೀ ದುರ್ಜಯೋ ಜೇತಾ ಪ್ರಖ್ಯಾತಬಲಪೌರುಷಃ ॥44॥
ಸ ಹತಸ್ತತ್ರ ಗಂಧರ್ವೈಃ ಪಾಪಕರ್ಮಾ ನೃಶಂಸಕೃತ್ ॥45॥
ಅವನಿಗೆ ಸೇನಾನಾಯಕನಾದ ಕೀಚಕನು ಬಲದಿಂದ ಮತ್ತನಾಗಿದ್ದನು. ಅವನು ಕ್ರೋಧಶೀಲನೂ, ಗೆಲ್ಲಲು ಅಸಾಧ್ಯನಾದವನೂ, ಎಲ್ಲರನ್ನೂ ಗೆಲ್ಲುವವನೂ ಮತ್ತು ಪ್ರಖ್ಯಾತ ಬಲಪರಾಕ್ರಮವುಳ್ಳವನೂ ಆಗಿದ್ದನು. ಪಾಪಕರ್ಮವನ್ನು ಮಾಡುವವನೂ ಮತ್ತು ಕ್ರೂರಿಯೂ ಆದ ಅವನು ಗಂಧರ್ವರಿಂದ ಕೊಲ್ಲಲ್ಪಟ್ಟಿದ್ದಾನೆ.
ತಸ್ಮಿನ್ ವಿನಿಹತೇ ರಾಜನ್ ಹೀನದರ್ಪೋ ನಿರಾಶ್ರಯಃ |
ಭವಿಷ್ಯತಿ ನಿರುತ್ಸಾಹೋ ವಿರಾಟ ಇತಿ ಮೇ ಮತಿಃ ॥46॥
ಎಲೈ ರಾಜನೇ, ಕೀಚಕನು ಮೃತನಾದಮೇಲೆ ವಿರಾಟನು ತನ್ನ ಆಶ್ರಯವನ್ನು ಕಳೆದುಕೊಂಡು, ತನ್ನ ದರ್ಪವನ್ನು ಕಳೆದುಕೊಂಡು ನಿರುತ್ಸಾಹನಾಗುವನು ಎಂದು ನನ್ನ ಅಭಿಪ್ರಾಯ.
ತತ್ರ ಯಾತ್ರಾ ಮಮ ಮತಾ ನಿಹತೇ ಕೀಚಕೋಽನಘ |
ಕೌರವಾಣಾಂ ಚ ಸರ್ವೇಷಾಂ ಕರ್ಣಸ್ಯ ಚ ಮಹಾತ್ಮನಃ ॥47॥
ಏತತ್ ಕಾರ್ಯಮಹಂ ಮನ್ಯೇ ಪರಮಾತ್ಯಯಿಕಂ ಮಹತ್ ॥48॥
ಎಲೈ ಅನಘನೇ, ಕೀಚಕನು ಹತನಾಗಿರುವಾಗ ಎಲ್ಲಾ ಕೌರವರ ಮತ್ತು ಮಹಾತ್ಮನಾದ ಕರ್ಣನ ವಿರಾಟನಗರ ಯಾತ್ರೆಯು ನನಗೆ ಅಭಿಮತವಾಗಿದೆ. ಇದು ಸದ್ಯದಲ್ಲಿ ಮಾಡಬೇಕಾದ ಶ್ರೇಷ್ಠವಾದ ಕಾರ್ಯವೆಂದು ನಾನು ಭಾವಿಸುತ್ತೇನೆ.
ರಾಷ್ಟ್ರಂ ತಸ್ಯಾಭಿಯಾತ್ವಾ ತು ಧನಧಾನ್ಯಸಮಾಕುಲಮ್ |

ಆದದಾಮೋ ಹಿ ರತ್ನಾನಿ ವಿವಿಧಾನಿ ವಸೂನಿ ಚ ॥49॥
ಗ್ರಾಮಾನ್ ರಾಷ್ಟ್ರಾಣಿ ವಾ ತಸ್ಯ ಹರಿಷ್ಯಾಮೋ ವಿಭಾಗಶಃ ॥50॥
ಧನಧಾನ್ಯಸಮೃದ್ಧವಾದ ವಿರಾಟನ ರಾಷ್ಟ್ರದ ಮೇಲೆ ದಂಡೆತ್ತಿ ಹೋಗಿ ರತ್ನವನ್ನು ಮತ್ತು ಅನೇಕ ವಿಧವಾದ ದ್ರವ್ಯಗಳನ್ನು ನಾವು ತೆಗೆದುಕೊಳ್ಳೋಣ ಅಥವಾ ಅವನ ಗ್ರಾಮವನ್ನಾಗಲೀ, ರಾಷ್ಟ್ರವನ್ನೇ ಆಗಲಿ ಭಾಗ ಭಾಗಗಳಾಗಿ ಅಪಹರಿಸೋಣ.
ಅಥವಾ ಗೋಸಹಸ್ರಾಣಿ ಬಹೂನಿ ಶುಭದರ್ಶನ |
ವಿವಿಧಂ ತದ್ವರಿಷ್ಯಾಮಃ ಪರಿಪೀಡ್ಯ ಪುರಂ ಬಲಾತ್ ॥51॥
ಎಲೈ ಶುಭದರ್ಶನನೇ, ಅಥವಾ ನಾವು ಅವನ ಪಟ್ಟಣವನ್ನು ನಮ್ಮ ಬಲದಿಂದ ಬಹಳವಾಗಿ ಪೀಡಿಸಿ, ಅವನ ವಿಧವಿಧವಾದ ಸಹಸ್ರಾರು ಗೋವುಗಳನ್ನು ಅಪಹರಿಸೋಣ.
ಕೌರವಾಃ ಸಹ ಸಂಹತ್ಯ ತ್ರಿಗರ್ತಾಶ್ಚ ವಿಶಾಂಪತೇ |
ಗಾಶ್ಚ ತಸ್ಯ ಹರಾಮಾಶು ಸಹ ಸರ್ವೈರ್ಮಹಾರಥೈಃ ॥52॥
ಎಲೈ ರಾಜನೇ, ಕೌರವರೂ ಮತ್ತು ತ್ರಿಗರ್ತರೂ ಸೇರಿ ಜೊತೆಗೆ ಸರ್ವಮಹಾರಥರನ್ನೂ ಕೂಡಿಕೊಂಡು ವಿರಾಟನ ಗೋವುಗಳನ್ನು ಹಿಡಿಯೋಣ.
ಸಂಧಿಂ ವಾ ತೇನ ಕೃತ್ವಾ ತು ನಿಬಧ್ನೀಮೋಽಸ್ಯ ಪೌರುಷಮ್ |
ಹತ್ವಾ ಚಾಸ್ಯ ಚಮೂಂ ಕೃತ್ಸ್ನಾಂ ವಶಮನ್ವಾನಯಾಮಹೇ ॥53॥
ಅಥವಾ ಅವನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಂಡು ಅವನ ಪೌರುಷವನ್ನು ಮುರಿಯೋಣ ಅಥವಾ ಅವನ ಸಮಗ್ರವಾದ ಸೈನ್ಯವನ್ನು ಕೊಂದು ಅವನನ್ನು ವಶಪಡಿಸಿಕೊಳ್ಳೋಣ.
ತಂ ವಶೇ ನ್ಯಾಯತಃ ಕೃತ್ವಾ ಸುಖಂ ವತ್ಸ್ಯಾಮಹೇ ವಯಮ್ |
ಭವತೋ ಬಲವೃದ್ಧಿಶ್ಚ ಭವಿಷ್ಯತಿ ನ ಸಂಶಯಃ ॥54॥
ನ್ಯಾಯದಿಂದ ಅವನನ್ನು ವಶಪಡಿಸಿಕೊಂಡರೆ ನಾವು ಸುಖವಾಗಿ ವಾಸಿಸಬಹುದು. ನಿನ್ನ ಬಲವೂ ಹೆಚ್ಚುತ್ತದೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ತಸ್ಯ ಕರ್ಣೋ ರಾಜಾನಮಬ್ರವೀತ್ ॥55॥
ಸೂಕ್ತಂ ಸುಶರ್ಮಣಾ ವಾಕ್ಯಂ ಪ್ರಾಪ್ತಕಾಲಮಿದಂ ಹಿ ನಃ |
ತಸ್ಮಾತ್ ಕ್ಷಿಪ್ರಂ ವಿನಿರ್ಯಾಮೋ ಯೋಜಯಿತ್ವಾ ವರೂಥಿನೀಮ್ ॥
ಯದೇತತ್ ತೇಽಭಿರುಚಿತಂ ಮಮ ಚೈತದ್ಧಿ ರೋಚತೇ |
ಪ್ರವಿಭಜ್ಯ ಚ ಸೈನ್ಯಾನಿ ಯಥಾ ವಾ ಮನ್ಯಸೇ ಭವಾನ್ ॥57॥
ವೈಶಂಪಾಯನ ಸುಶರ್ಮನ ಮಾತುಗಳನ್ನು ಕೇಳಿ ಕರ್ಣನು ರಾಜನನ್ನು ಕುರಿತು, ಸುಶರ್ಮನು ಸರಿಯಾಗಿ ಹೇಳಿದ್ದಾನೆ. ಇದು ನಾವು ಸದ್ಯದಲ್ಲಿ ಮಾಡಬೇಕಾದ ಕಾರ್ಯ. ಆದ್ದರಿಂದ ಸೈನ್ಯವನ್ನು ಸಂಘಟಿಸಿ ಬೇಗ ದಂಡೆತ್ತಿ ಹೋಗೋಣ. ಇದು ನಿನಗೂ ಇಷ್ಟವಾಗುತ್ತದೆ ಮತ್ತು ನನಗೂ ಇಷ್ಟವಾಗುತ್ತದೆ. ನಾವು ಸೈನ್ಯವನ್ನು ಭಾಗ ಮಾಡಿ ದಂಡೆತ್ತಿ ಹೋಗೋಣ ಅಥವಾ ನಿನ್ನ ಅಭಿಪ್ರಾಯವೇನು? (ಎಂದು ಹೇಳಿದನು).
ಪ್ರಜ್ಞಾವಾನ್ ಕುಲವೃದ್ಧಶ್ಚ ಸರ್ವೇಷಾಂ ನಃ ಪಿತಾಮಹಃ |
ಆಚಾರ್ಯಶ್ಚ ಕೃಪಶ್ಚಾಪಿ ಶಕುನಿಶ್ಚಾಪಿ ಸೌಬಲಃ ॥58॥
ಯಥಾ ತೇ ಮನ್ವತೇ ಸರ್ವೇ ತಥಾ ಯಾತ್ರಾ ವಿಧೀಯತಾಮ್ |
ಸಮ್ಮಂತ್ರ್ಯ ಚಾಶು ಗಚ್ಛಾಮಃ ಸಾಧನಾರ್ಥಂ ಮಹೀಪತೇ ॥59॥
ನಮ್ಮೆಲ್ಲರ ಪಿತಾಮಹನಾದ ಭೀಷ್ಮನು ಪ್ರಜ್ಞಾವಂತನೂ, ಕುಲವೃದ್ಧನೂ ಆಗಿದ್ದಾನೆ. ಕೃಪಾಚಾರ್ಯರು ಮತ್ತು ಶಕುನಿಯೂ ಪ್ರಜ್ಞಾವಂತರು. ಅವರು ಯೋಚನೆ ಮಾಡುವಂತೆ ಸೈನ್ಯದ ಯಾತ್ರೆಯನ್ನು ವಿಧಾನಮಾಡು. ಎಲೈ ರಾಜನೇ, ಎಲ್ಲರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ನಮ್ಮ ಕಾರ್ಯಸಿದ್ಧಿಗಾಗಿ ಹೋಗೋಣ.
ಕಿಂ ನು ನಃ ಪಾಂಡವೈಃ ಕಾರ್ಯಂ ಹೀನಾರ್ಥಬಲಪೌರುಷೈಃ |
ಅತ್ಯರ್ಥಂ ಹಿ ಪ್ರಣಷ್ಟಾಸ್ತೇ ಪ್ರಾಪ್ತಾ ವಾಽಪಿ ಯಮಕ್ಷಯಮ್ ॥60॥
ತಮ್ಮ ಅರ್ಥ, ಬಲ, ಪೌರುಷಗಳನ್ನು ಕಳೆದುಕೊಂಡಿರುವ ಪಾಂಡವರಿಂದ ನಮಗೆ ಏನಾಗಬೇಕಾಗಿದೆ? ಅವರು ಅತ್ಯಂತ ನಾಶವನ್ನು ಹೊಂದಿದ್ದಾರೆ ಅಥವಾ ಯಮಲೋಕವನ್ನೇ ಸೇರಿದ್ದಾರೆ.
ತದ್ ಭವಾಂಶ್ಚತುರಂಗೇಣ ಬಲೇನ ಮಹತಾ ವೃತಃ |
ವಿರಾಟನಗರಂ ಯಾತು ಸರ್ವಸೈನ್ಯೇನ ಭಾರತ ॥61॥
ಆದಾಸ್ಯಾಮೋ ಹಿ ಗಾಸ್ತಸ್ಯ ವಸೂನಿ ವಿವಿಧಾನಿ ಚ ॥62॥
ಎಲೈ ಭಾರತನೇ, ಆದ್ದರಿಂದ ನೀನು ದೊಡ್ಡ ಚತುರಂಗ ಸೈನ್ಯದಿಂದ ಕೂಡಿದವನಾಗಿ ಎಲ್ಲ ಸೈನ್ಯಗಳಿಂದಲೂ ಸಹಿತನಾಗಿ ವಿರಾಟನಗರಕ್ಕೆ ಹೊರಡು. ವಿರಾಟನ ಗೋವುಗಳನ್ನೂ, ವಿವಿಧವಾದ ಸಂಪತ್ತನ್ನೂ ನಾವು ಹಿಡಿಯುವೆವು.
ವೈಶಂಪಾಯನಃ
ತತೋ ದುರ್ಯೋಧನೋ ರಾಜಾ ವಚಃ ಶ್ರುತ್ವಾ ತು ತಸ್ಯ ತತ್ |
ವೈಕರ್ತನಸ್ಯ ಕರ್ಣಸ್ಯ ಕ್ಷಿಪ್ರಮಾಜ್ಞಾಪಯತ್ ತತಃ ॥63॥
ಶಾಸನೇ ನಿತ್ಯಯುಕ್ತಂ ತು ದುಃಶಾಸನಮನಂತರಮ್ ॥64॥

ವೈಶಂಪಾಯನ ಆಗ ರಾಜನಾದ ದುರ್ಯೋಧನನು ವೈಕರ್ತನನಾದ ಕರ್ಣನ ಆ ಮಾತುಗಳನ್ನು ಕೇಳಿ, ಯಾವಾಗಲೂ ಆಜ್ಞಾಧಾರಕನಾಗಿದ್ದ ದುಃಶಾಸನನನ್ನು ಕುರಿತು ಶೀಘ್ರವಾಗಿ ಅಪ್ಪಣೆಯನ್ನು ಮಾಡಿದನು.
ಸಹ ವೃದ್ಧೈಸ್ತು ಸಮ್ಮಂತ್ರ್ಯ ಕ್ಷಿಪ್ರಂ ಯೋಜಯ ವಾಹಿನೀಮ್ |
ಯಥೋದ್ದೇಶಂ ತು ಗಚ್ಛಾಮಃ ಸಹಿತಾಃ ಸರ್ವಕೌರವೈಃ ॥65॥
ಹಿರಿಯರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಶೀಘ್ರವಾಗಿ ಸೈನ್ಯವನ್ನು ಹೂಡುವವನಾಗು. ನಮ್ಮ ಉದ್ದೇಶಕ್ಕೆ ಅನುಗುಣವಾಗಿ ಎಲ್ಲ ಕೌರವರ ಜೊತೆಯಲ್ಲಿ ನಾವು ವಿರಾಟನ ನಗರಕ್ಕೆ ಹೋಗೋಣ.
ಸುಶರ್ಮಾ ತು ಯಥೋದ್ದಿಷ್ಟಂ ದೇಶಂ ಯಾತು ಮಹಾರಥಃ |
ತ್ರಿಗರ್ತೈಃ ಸಹಿತಃ ಸರ್ವೈಃ ಪ್ರಖ್ಯಾತಬಲಪೌರುಷೈಃ ॥66॥
ಪ್ರಾಗೇವ ತು ಸುಸಂಯತ್ತಃ ವಿರಾಟವಿಷಯಂ ಪ್ರತಿ ॥67॥
ನಮ್ಮ ಉದ್ದೇಶದಂತೆ ಮಹಾರಥನಾದ ಸುಶರ್ಮನು ಪ್ರಖ್ಯಾತ ಬಲಪೌರುಷವುಳ್ಳ ಎಲ್ಲಾ ತ್ರಿಗರ್ತ ಸೈನಿಕರಿಂದ ಸಹಿತನಾಗಿ ಮೊದಲೇ ಸಜ್ಜುಗೊಂಡು ವಿರಾಟನ ದೇಶಕ್ಕೆ ಹೋಗಲಿ.
ಜಘನ್ಯತೋ ವಯಂ ತಸ್ಯ ಯಾಸ್ಯಾಮೋ ದಿವಸಾಂತರಮ್ |
ವಿಷಯಂ ಮತ್ಸ್ಯರಾಜಸ್ಯ ಸುಸಮೃದ್ಧಂ ಸುಸಂಹಿತಮ್ ॥68॥
ಅನಂತರ ಮರುದಿವಸ ನಾವು ಅತ್ಯಂತ ಸಮೃದ್ಧವಾದ ಮತ್ತು ಒಂದುಗೂಡಿದ ಮತ್ಸ್ಯರಾಜನ ದೇಶಕ್ಕೆ ಹೋಗುವೆವು.
ಸುಶರ್ಮಣಾ ಗೃಹೀತೇ ತು ಮತ್ಸ್ಯರಾಜಸ್ಯ ಗೋಧನೇ |
ವಿರಾಟಃ ಸೈನ್ಯಮಾದಾಯ ತ್ರಿಗರ್ತೈಃ ಸಹ ಯೋತ್ಸ್ಯತೇ ॥69॥
ಸುಶರ್ಮನು ಮತ್ಸ್ಯರಾಜನ ಗೋಧನವನ್ನು ಹಿಡಿದರೆ ವಿರಾಟನು ಸೈನ್ಯವನ್ನು ತೆಗೆದುಕೊಂಡು ಬಂದು ತ್ರಿಗರ್ತದ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಅಪರಂ ದಿವಸಂ ಗಾಸ್ತು ತತ್ರ ಗೃಹ್ಣಂತು ಕೌರವಾಃ |
ಗವಾರ್ಥೇ ಪಾಂಡವಾಸ್ತತ್ರ ಯೋತ್ಸ್ಯಂತಿ ಕುರುಭಿಃ ಸಹ ॥70॥
ಕೌರವರು ಮರುದಿವಸ ಗೋಗ್ರಹಣ ಮಾಡಲಿ. ಆಗ ಪಾಂಡವರು ಗೋವುಗಳ ಸಲುವಾಗಿ ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬರುವರು.
ತಥಾ ಗತ್ವಾ ಯಥೋದ್ದೇಶಂ ವಿರಾಟನಗರಾಂತಿಕಮ್ |
ಕ್ಷಿಪ್ರಂ ಗೋಷ್ಠಂ ಸಮಾಸಾದ್ಯ ಗೃಹ್ಣಂತು ವಿಪುಲಂ ಧನಮ್ ॥71॥
ಆದ್ದರಿಂದ ವಿರಾಟ ನಗರದ ಅಂಚಿಗೆ ಹೋಗಿ ನಮ್ಮ ಉದ್ದೇಶಕ್ಕೆ ಅನುಗುಣವಾಗಿ ಶೀಘ್ರವಾಗಿ ವಿಪುಲವಾದ ಗೋಸಂಪತ್ತನ್ನು ನಮ್ಮ ಸೈನಿಕರು ಗ್ರಹಣ ಮಾಡಲಿ.
ಗವಾಂ ಶತಸಹಸ್ರಾಣಿ ಶ್ರೀಮಂತಿ ಗುಣವಂತಿ ಚ |
ವಯಮಸ್ಯ ನಿಗೃಹ್ಣೀಮೋ ದ್ವಿಧಾ ಕೃತ್ವಾ ವರೂಥಿನೀಮ್ ॥72॥
ನಾವು ಸೈನ್ಯವನ್ನು ಎರಡು ಭಾಗವನ್ನಾಗಿ ಮಾಡಿ ವಿರಾಟನ ಕಾಂತಿಯುಕ್ತವಾದ ಸದ್ಗುಣದಿಂದ ಕೂಡಿದ ನೂರಾರು ಸಹಸ್ರಾರು ಗೋವುಗಳನ್ನು ಹಿಡಿಯುತ್ತೇವೆ.
ವೈಶಂಪಾಯನಃ
ಸ ತು ಗತ್ವಾ ಯಥೋದ್ದಿಷ್ಟಂ ದೇಶಂ ಮತ್ಸ್ಯಮಹೀಪತೇಃ |
ಆದತ್ತ ಗಾಃ ಸುಶರ್ಮಾ ವೈ ಕೃಷ್ಣಪಕ್ಷಸ್ಯ ಚಾಷ್ಟಮೀ ॥73॥
ವೈಶಂಪಾಯನ ಆ ಸುಶರ್ಮನು ಉದ್ದೇಶಕ್ಕೆ ಅನುಗುಣವಾಗಿ ಮತ್ಸ್ಯರಾಜನ ದೇಶಕ್ಕೆ ಹೋಗಿ ಕೃಷ್ಣ ಪಕ್ಷದ ಅಷ್ಟಮಿಯಂದು ಗೋವುಗಳನ್ನು ಹಿಡಿದನು.
ಅಪರಂ ದಿವಸಂ ಚಾಪಿ ಸಹ ಸಂಭೂಯ ಕೌರವಾಃ |
ನವಮ್ಯಾಂ ತೇ ನ್ಯಗೃಹ್ಣಂತ ಗೋಕುಲಾನಿ ಸಹಸ್ರಶಃ ॥74॥
ಕೌರವಾಸ್ತು ಮಹಾವೀರ್ಯಾ ಮತ್ಸ್ಯಾನಾಂ ವಿಷಯಾಂತರೇ ॥75॥
ಮರುದಿವಸ ಎಂದರೆ ನವಮಿಯಂದು ಮಹಾಪರಾಕ್ರಮಿಗಳಾದ ಕೌರವರು ಒಟ್ಟು ಸೇರಿ ಮತ್ಸ್ಯರಾಜನ ದೇಶದ ಇನ್ನೊಂದು ಭಾಗದಲ್ಲಿ ಸಹಸ್ರಾರು ಗೋವುಗಳನ್ನು ಹಿಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕತ್ರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತೆರಡನೆಯ ಅಧ್ಯಾಯ
ಗೋಧನದ ರಕ್ಷಣೆಯನ್ನು ಮಾಡಲು ವಿರಾಟಪುತ್ರರ ಮತ್ತು ಪಾಂಡವರ ಗಮನ
ವೈಶಂಪಾಯನಃ
ತತಸ್ತೇಷಾಂ ತದಾ ರಾಜನ್ ತತ್ರೈವಾಮಿತತೇಜಸಾಮ್ |
ಛದ್ಮಲಿಂಗಪ್ರವಿಷ್ಟಾನಾಂ ಪಾಂಡವಾನಾಂ ಮಹಾತ್ಮನಾಮ್ ॥1॥
ವ್ಯತೀತಃ ಸಮಯಃ ಸಮ್ಯಗ್ ವಿರಾಟನಗರೇ ಸತಾಮ್ |

ಕುರ್ವತಾಂ ತಸ್ಯ ಕರ್ಮಾಣಿ ವಿರಾಟಸ್ಯ ಮಹೀಪತೇಃ ॥2॥
ವೈಶಂಪಾಯನ ಎಲ್ಲೈ ರಾಜನೇ, ಅಲ್ಲಿ ವಿರಾಟನಗರದಲ್ಲಿ ಛದ್ಮವೇಷದಿಂದ ವಾಸಮಾಡುತ್ತಾ, ವಿರಾಟರಾಜನ ಸೇವೆಯನ್ನು ಮಾಡುತ್ತಿದ್ದ ಪಾಂಡವರಿಗೆ ಅಜ್ಞಾತವಾಸದ ಸಮಯವು ಚೆನ್ನಾಗಿ ಕಳೆಯಿತು.
ತತಸ್ತ್ರಯೋದಶಸ್ಯಾಂತೇ ತಸ್ಯ ವರ್ಷಸ್ಯ ಭಾರತ |
ಸುಶರ್ಮಣಾ ಗೃಹೀತಂ ತು ಮತ್ಸ್ಯರಾಜಸ್ಯ ಗೋಧನಮ್ ॥3॥
ಎಲ್ಲೈ ಭಾರತನೇ, ಅನಂತರ ಆ ಹದಿಮೂರು ವರ್ಷದ ಕೊನೆಯಲ್ಲಿ ಸುಶರ್ಮನು ಮತ್ಸ್ಯರಾಜನ ಗೋಧನವನ್ನು ಹಿಡಿದನು.
ತತಃ ಶಬ್ದೋ ಮಹಾನಾಸೀದ್ ರೇಣುಶ್ಚ ದಿವಮಸ್ಪೃಶತ್ |
ಶಂಖದುಂದುಭಿಘೋಷಶ್ಚ ಭೇರೀಣಾಂ ಚ ಮಹಾಸ್ವನಃ ॥4॥
ಗವಾಶ್ವರಥನಾಗಾನಾಂ ನರಾಣಾಂ ಚ ಪದಾತಿನಾಮ್ ॥5॥
ಆಗ ಮಹಾನಾದ ಉಂಟಾಯಿತು. ಧೂಳು ಆಕಾಶವನ್ನು ಮುಟ್ಟಿತು. ಶಂಖ ದುಂದುಭಿ ಘೋಷಗಳೂ, ಭೇರಿಗಳ ಮಹಾಸ್ವನಗಳೂ ಅಶ್ವರಥ ಗಜಗಳ ಮಹಾಸ್ವನವೂ ಮತ್ತು ಪದಾತಿಗಳಾದ ಮನುಷ್ಯರ ಶಬ್ದವೂ ಉಂಟಾಯಿತು.
ಏವಂ ತೈಸ್ತ್ವಭಿನಿರ್ಯಾಯ ಮತ್ಸ್ಯರಾಜಸ್ಯ ಗೋಧನೇ |
ತ್ರಿಗರ್ತೈರ್ಗೃಹ್ಯಮಾಣೇ ತು ಗೋಪಾಲಾಃ ಪ್ರತ್ಯಷೇಧಯನ್ ॥6॥
ಹೀಗೆ ತ್ರಿಗರ್ತರು ತಮ್ಮ ದೇಶದಿಂದ ಹೊರಟು ಮತ್ಸ್ಯರಾಜನ ಗೋಧನವನ್ನು ಹಿಡಿಯುತ್ತಿರಲು ಗೋಪಾಲರು ಪ್ರತಿರೋಧವನ್ನು ಮಾಡಿದರು.
ಅಥ ತ್ರಿಗರ್ತಾ ಬಹವಃ ಪರಿಗೃಹ್ಯ ಧನಂ ಬಹು |
ಪರಿಕ್ಷಿಪ್ಯ ಹಯೈಃ ಶೀಘ್ರೈ ರಥವ್ರಾತೈಶ್ಚ ಭಾರತ ॥7॥
ಗೋಪಾಲಾನ್ ಪ್ರತ್ಯಯುಧ್ಯಂತ ರಣೇ ಕೃತ್ವಾ ಜಯೇ ಧೃತಿಮ್ ॥8॥
ಎಲ್ಲೈ ಭಾರತನೇ, ಆಗ ಅನೇಕ ತ್ರಿಗರ್ತರು ಗೋಧನವನ್ನು ತೆಗೆದುಕೊಂಡು, ತಮ್ಮ ಶೀಘ್ರವಾದ ಅಶ್ವಗಳಿಂದಲೂ ಮತ್ತು ರಥಸಮೂಹಗಳಿಂದಲೂ ಅವರನ್ನು ಸುತ್ತುಗಟ್ಟಿ ಯುದ್ಧದಲ್ಲಿ ಜಯವನ್ನು ಸಂಪಾದಿಸಲು ನಿರ್ಧರಿಸಿ ಗೋಪಾಲರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತೇ ಹನ್ಯಮಾನಾಃ ರಥಿಭಿಃ ಸಾದಿಭಿಃ ಪ್ರಾಸಧಾರಿಭಿಃ |
ಗೋಪಾಲಾ ಗೋಕುಲೇ ಭಕ್ತಾ ವಾರಯಾಮಾಸುರೋಜಸಾ ॥9॥
ರಥಿಕರಿಂದಲೂ ಮತ್ತು ಪ್ರಾಸಧಾರಿಗಳಾದ ಅಶ್ವಾರೋಹಿಗಳಿಂದಲೂ ಪ್ರಹಾರಕ್ಕೆ ಒಳಗಾದ ಗೋಪಾಲರು ಗೋವುಗಳ ಮೇಲಿನ ಭಕ್ತಿಯಿಂದ ತಮ್ಮ ಬಲದಿಂದ ಅವರನ್ನು ತಡೆದರು.
ಪರಶ್ವಧೈಶ್ಚ ಮುಸಲೈಃ ಭಿಂಡಿಪಾಲೈಶ್ಚ ಮುದ್ಗರೈಃ |
ಗೋಪಾಲಾಃ ಕರ್ಷಣೈಶ್ಚಿತ್ರೈರ್ಜಘ್ನುರಶ್ವಾನ್ ಸಮಂತತಃ ॥10॥
ಗೋಪಾಲರು ಪರಶ್ವಧಗಳಿಂದಲೂ, ಒನಕೆಗಳಿಂದಲೂ, ಭಿಂಡಿಪಾಲಗಳಿಂದಲೂ, ಮುದ್ಗರಗಳಿಂದಲೂ, ವಿಚಿತ್ರವಾದ ಕರ್ಷಣ ಯಂತ್ರಗಳಿಂದಲೂ ಎಲ್ಲಾ ಕಡೆಗಳಲ್ಲಿಯೂ ಅಶ್ವಗಳನ್ನು ಹೊಡೆದರು.
ತೇ ಹನ್ಯಮಾನಾ ಸಂಕ್ರುದ್ಧಾಃ ತ್ರಿಗರ್ತಾ ರಥಯೋಧಿನಃ |
ವಿಸೃಜ್ಯ ಶರವರ್ಷಾಣಿ ಗೋಪಾಲಾನ್ ದ್ರಾವಯನ್ ರಣೇ ॥11॥
ಗೋಪಾಲರ ಹೊಡೆತಕ್ಕೆ ಸಿಕ್ಕಿದ ತ್ರಿಗರ್ತರ ರಥಯೋಧಿಗಳು ಬಾಣಗಳ ಮಳೆಯನ್ನು ಸುರಿಸಿ ಯುದ್ಧದಲ್ಲಿ ಗೋಪಾಲರನ್ನು ಓಡಿಸಿದರು.
ತತೋ ಯುವಾನಃ ಸಂಭೀತಾಃ ಶ್ವಸಂತೋ ರೇಣುಕುಂಠಿತಾಃ ॥12॥
ಜವೇನ ಮಹತಾ ಚೈವ ಗೋಪಾಲಾಃ ಪುರಮಾವ್ರಜನ್ ॥13॥
ಆಗ ಯುವಕರಾದ ಗೋಪಾಲರು ಭೀತರಾಗಿ ಗಟ್ಟಿಯಾಗಿ ಉಸಿರಾಡುತ್ತಾ ಮೈಯೆಲ್ಲವೂ ಧೂಳಿನಿಂದ ತುಂಬಿ ವೇಗವಾಗಿ ಪಟ್ಟಣಕ್ಕೆ ಬಂದರು.
ವಿರಾಟನಗರಂ ಪ್ರಾಪ್ಯ ನರಾ ರಾಜಾನಮಬ್ರುವನ್ ॥14॥
ಸಭಾಯಾಂ ರಾಜಶಾರ್ದೂಲಮಾಸೀನಂ ಪಾಂಡವೈಃ ಸಹ |
ಶೂರೈಃ ಪರಿವೃತಂ ಯೋಧೈಃ ಕುಂಡಲಾಂಗದಧಾರಿಭಿಃ ॥15॥
ಸದ್ಭಿಶ್ಚ ಪಂಡಿತೈಃ ಸಾರ್ಧಂ ಮಂತ್ರಿಭಿಶ್ಚಾಪಿ ಸಂವೃತಮ್ |
ದೃಷ್ಟ್ವಾ ಶೀಘ್ರಂ ತು ಗೋಪಾಲಾ ವಿರಾಟಮಿದಮಬ್ರುವನ್ ॥16॥
ವಿರಾಟನಗರವನ್ನು ತಲುಪಿ ಆ ಗೋಪಾಲರು ಪಾಂಡವರ ಜೊತೆಯಲ್ಲಿ ಕುಳಿತು ಕುಂಡಲಗಳನ್ನೂ ಮತ್ತು ಅಂಗದಗಳನ್ನೂ ಧರಿಸಿದ ಶೂರರಾದ ಯೋಧರಿಂದ ಸುತ್ತುವರಿಯಲ್ಪಟ್ಟು ಸಜ್ಜನರಾದ ಪಂಡಿತರಿಂದಲೂ ಮತ್ತು ಮಂತ್ರಿಗಳಿಂದಲೂ ಕೂಡಿದ ವಿರಾಟರಾಜನನ್ನು ನೋಡಿ ಶೀಘ್ರವಾಗಿ ಈ ಮಾತುಗಳನ್ನು ಆಡಿದರು.
ಅಸ್ಮಾನ್ ಯುಧಿ ವಿನಿರ್ಜಿತ್ಯ ಪರಿಭೂಯ ಸಬಾಂಧವಾನ್ |
ಷಷ್ಟಿಂ ಗವಾಂ ಸಹಸ್ರಾಣಿ ತ್ರಿಗರ್ತಾಃ ಕಾಲಯಂತಿ ತೇ ॥17॥
ತಾಃ ಪರೀಪ್ಸ ಮಹಾರಾಜ ಮಾ ನೇಶುಃ ಪಶವಸ್ತವ ॥18॥
ಎಲ್ಲೈ ಮಹಾರಾಜನೇ, ತ್ರಿಗರ್ತರು ಬಾಂಧವ ಸಹಿತರಾದ ನಮ್ಮನ್ನು ಯುದ್ಧದಲ್ಲಿ ಸೋಲಿಸಿ ತಿರಸ್ಕರಿಸಿ ನಿನ್ನ ಆರುಸಾವಿರ ಗೋವುಗಳನ್ನು ಅಟ್ಟಿಸಿಕೊಂಡು ಹೋಗುತ್ತಿದ್ದಾರೆ. ಅವುಗಳನ್ನು ರಕ್ಷಿಸು. ನಿನ್ನ ಗೋವುಗಳು ನಾಶವನ್ನು ಹೊಂದದಿರಲಿ (ಎಂದು

ಹೇಳಿದರು).
ಶ್ರುತ್ವಾ ತು ವಚನಂ ತೇಷಾಂ ಗೋಪಾಲಾನಾಮರಿಂದಮಃ |
ಸ ರಾಜಾ ಮಹತೀಂ ಸೇನಾಂ ಮತ್ಸ್ಯಾನಾಂ ಸಮವಾಹಯತ್ ॥19॥
ರಥನಾಗಾಶ್ವಕಲಿಲಾಂ ಪತ್ತಿಧ್ವಜಸಮಾಕುಲಾಮ್ ॥20॥
ಗೋಪಾಲರ ಮಾತುಗಳನ್ನು ಕೇಳಿ ಅರಿಂದಮನಾದ ಆ ರಾಜನು ರಥ, ಗಜ, ಅಶ್ವಗಳಿಂದ ತುಂಬಿದ ಪದಾತಿ ಮತ್ತು ಧ್ವಜಗಳಿಂದ ನಿಬಿಡವಾದ ದೊಡ್ಡ ಸೈನ್ಯವನ್ನು ಹೊರಡಿಸಿದನು.
ರಾಜಾನೋ ರಾಜಪುತ್ರಾಶ್ಚ ತನುತ್ರಾಣ್ಯನುಭೇಜಿರೇ |
ಭಾನುಮಂತಿ ನಿವಾತಾನಿ ಸೂಪಸೇವ್ಯಾನಿ ಭಾಗಶಃ ॥21॥
ರಾಜರೂ ಮತ್ತು ರಾಜಪುತ್ರರೂ ಸಹ ಹೊಳೆಯುವ, ಗಾಳಿಯೂ ಒಳಗೆ ಹೋಗಲಾರದ, ಒಂದು ಭಾಗದಿಂದ ಹಾಕಿಕೊಳ್ಳಬಹುದಾದ ಕವಚಗಳನ್ನು ತೊಟ್ಟರು.
ಪೃಥಕ್ಕಾಂಚನಸನ್ನಾಹಾನ್ ರಥೇಷ್ವಶ್ವಾನಯೋಜಯನ್ |
ಉತ್ಕೃತ್ಯ ಪಾಶಾನ್ ಮೌರ್ವೀಣಾಂ ವೀರಾಶ್ಚಾಪೇಷ್ವಯೋಜಯನ್ ॥
ಸುವರ್ಣದಿಂದ ಅಲಂಕೃತವಾಗಿದ್ದ ಅಶ್ವಗಳನ್ನು ರಥಗಳಿಗೆ ಹೂಡಿದರು. ಹೆದೆಯ ಹಗ್ಗಗಳನ್ನು ಎತ್ತಿ ವೀರರಾದ ಅವರು ಧನುಸ್ಸುಗಳಿಗೆ ಜೋಡಿಸಿದರು.
ದೃಢಮಾಯಸಗರ್ಭಂ ತು ಕವಚಂ ತಪ್ತಕಾಂಚನಮ್ |
ವಿರಾಟಸ್ಯ ಪ್ರಿಯೋ ಭ್ರಾತಾ ಶತಾನೀಕೋಽಭ್ಯಹಾರಯತ್ ॥23॥
ಗಟ್ಟಿಯಾದ, ಒಳಗೆ ಕಬ್ಬಿಣದ ಪದರವುಳ್ಳ ತಪ್ತಕಾಂಚನಮಯವಾದ ಕವಚವನ್ನು ವಿರಾಟನ ಪ್ರಿಯ ಭ್ರಾತೃವಾದ ಶತಾನೀಕನು ಧರಿಸಿದನು.
ಸರ್ವಭಾರಸಹಂ ವರ್ಮ ಕಲ್ಯಾಣಪಟಲಂ ದೃಢಮ್ |
ಶತಾನೀಕಾದವರಜೋ ಮದಿರಾಶ್ವೋಽಭ್ಯಹಾರಯತ್ ॥24॥
ಶತಾನೀಕನ ತಮ್ಮನಾದ ಮದಿರಾಶ್ವನು ಎಲ್ಲ ಭಾರವನ್ನೂ ತಡೆಯುವ ಕಲ್ಯಾಣ ಪಟಲವುಳ್ಳ ದೃಢವಾದ ಕವಚವನ್ನು ಧರಿಸಿದನು.
ದೃಢಮಾಯಸಗರ್ಭಂ ತು ಶ್ವೇತಂ ರುಗ್ಮಪರಿಷ್ಕೃತಮ್ |
ವಿರಾಟಸ್ಯ ಸುತೋ ಜ್ಯೇಷ್ಠೋ ವೀರಃ ಶಂಖೋಽಭ್ಯಹಾರಯತ್ ॥25॥
ವಿರಾಟನ ಜ್ಯೇಷ್ಠಪುತ್ರನಾದ ವೀರನಾದ ಶಂಖನು ಒಳಗೆ ಕಬ್ಬಿಣದ ಪದರವನ್ನು ಹೊಂದಿದ ಸುವರ್ಣಾಲಂಕೃತವಾದ ಶ್ವೇತವರ್ಣದ ಕವಚವನ್ನು ಧರಿಸಿದನು.
ಶತಸೂರ್ಯಂ ಶತಾವರ್ತಂ ಶತಬಿಂದು ಶತಾಕ್ಷಿಮತ್ |
ಅಭೇದ್ಯಕಲ್ಪಂ ಮತ್ಸ್ಯಾನಾಂ ರಾಜಾ ಕವಚಮಾಹರತ್ ॥26॥
ಮತ್ಸ್ಯರಾಜನಾದ ವಿರಾಟನು ನೂರು ಚಂದ್ರರೂ, ನೂರು ಆವರ್ತಗಳೂ, ನೂರು ಬಿಂದುಗಳೂ ಮತ್ತು ನೂರು ಕಣ್ಣುಗಳೂ ಇರುವ ಅಭೇದ್ಯವಾದ ಕವಚವನ್ನು ಧರಿಸಿದನು.
ತತೋ ನಾನಾತನುತ್ರಾಣಿ ಸ್ವಾನಿ ಸ್ವಾನ್ಯತ್ರ ಕ್ಷತ್ರಿಯಾಃ |
ಯುಯುತ್ಸವೋಽಭ್ಯಪದ್ಯಂತ ದೇವಕಲ್ಪಾಃ ಪ್ರಹಾರಿಣಃ ॥27॥
ಅನಂತರ ದೇವತೆಗಳಿಗೆ ಸಮಾನರಾದ, ಪ್ರಹಾರಶೀಲರಾದ ಯುದ್ಧವನ್ನು ಮಾಡಲು ಬಯಸುವ ಕ್ಷತ್ರಿಯರು ತಮ್ಮ ತಮ್ಮ ಕವಚಗಳನ್ನು ಧರಿಸಿದರು.
ಸ್ವೋಪಸ್ಕರೇಷು ಶುಭ್ರೇಷು ಮಹತ್ಸು ಸಮಲಂಕೃತಾನ್ |
ಮಹತ್ಕಾಂಚನಸನ್ನಾಹಾನ್ ರಥೇಷ್ವಶ್ವಾನಯೋಜಯನ್ ॥28॥
ಎಲ್ಲಾ ಉಪಕರಣಗಳಿಂದ ಕೂಡಿದ ಶುಭವಾದ, ಅಲಂಕೃತವಾದ ದೊಡ್ಡ ರಥಗಳಲ್ಲಿ ಸುವರ್ಣಮಯವಾದ ಸನ್ನಾಹಗಳನ್ನು ಹೊಂದಿರುವ ಅಶ್ವಗಳನ್ನು ಹೂಡಿದರು.
ಸೂರ್ಯಚಂದ್ರಪ್ರತೀಕಾಶಂ ಮಣಿಕಾಂಚನಭೂಷಿತಮ್ |
ಮತ್ಸ್ಯಸ್ಯೋರುಪ್ರಮಾಣಂ ಚ ಧ್ವಜಮುಚ್ಛ್ರಿಯತೇ ರಥೇ ॥29॥
ಸೂರ್ಯಚಂದ್ರರಂತೆ ಪ್ರಕಾಶಿಸುವ, ಮಣಿಕಾಂಚನಗಳಿಂದ ಅಲಂಕೃತವಾದ ಮತ್ಸ್ಯರಾಜನ ದೊಡ್ಡ ಪ್ರಮಾಣದ ಧ್ವಜವು ರಥದಲ್ಲಿ ನಿಲ್ಲಿಸಲ್ಪಟ್ಟಿತು.
ಧ್ವಜಾನ್ ಬಹುವಿಧಾಕಾರಾನ್ ಸೌವರ್ಣಾನ್ ಹೇಮಮಾಲಿನಃ |
ಯಥಾಸ್ವಂ ಕ್ಷತ್ರಿಯಾಃ ಶೂರಾ ರಥೇಷು ಸಮಯೋಜಯನ್ ॥30॥
ಸುವರ್ಣಾಲಂಕೃತವಾದ, ಸುವರ್ಣಮಾಲೆಗಳಿಂದ ಕೂಡಿದ, ಬಹುವಿಧವಾದ ಆಕಾರವುಳ್ಳ, ತಮ್ಮ ತಮ್ಮ ಅಭಿರುಚಿಗೆ ಅಭಿಮತವಾದ ಧ್ವಜಗಳನ್ನು ಕ್ಷತ್ರಿಯ ಶೂರರು ರಥಗಳಲ್ಲಿ ಸಂಯೋಜಿಸಿದರು.
ರಥೇಷು ಯುಜ್ಯಮಾನೇಷು ಕಂಕೋ ರಾಜಾನಮಬ್ರವೀತ್ ॥31॥
ಮಯಾಽಪ್ಯಸ್ತ್ರಂ ಚತುರ್ಮಾರ್ಗಮವಾಪ್ತಮೃಷಿಸತ್ತಮಾತ್ |
ದಂಸಿತೋ ರಥಮಾಸ್ಥಾಯ ಪದಂ ನಿರ್ಯಾಮ್ಯಹಂ ಗವಾಮ್ ॥32॥
ರಥಗಳು ಸಿದ್ಧವಾಗುತ್ತಿರಲು ಕಂಕನು ರಾಜನನ್ನು ಕುರಿತು ನಾನೂ ಸಹ ನಾಲ್ಕು ವಿಭಾಗಗಳಿಂದ ಕೂಡಿದ ಅಸ್ತ್ರವಿದ್ಯೆಯನ್ನು ಒಬ್ಬ ಋಷಿಶ್ರೇಷ್ಠನಿಂದ ಪಡೆದಿದ್ದೇನೆ. ನಾನೂ ಸಹ ಕವಚವನ್ನು ಧರಿಸಿ ರಥವನ್ನು ಏರಿ ಗೋವುಗಳ ಮಾರ್ಗವನ್ನು ಅನುಸರಿಸಿ

ಹೊರಡುತ್ತೇನೆ.
ಅಯಂ ಚ ಬಲವಾನ್ ಶೂರೋ ವಲಲೋ ದೃಶ್ಯತೇಽನಘ |
ಗೋಸಂಖ್ಯಮಶ್ವಬಂಧಂ ಚ ಸಂಯೋಜಯ ರಥೇಷು ವೈ ॥33॥
ನೈತೇ ನ ಜಾತು ಯುದ್ಧ್ಯೇಯುರ್ಗವಾರ್ಥಮಿತಿ ಮೇ ಮತಿಃ ॥34॥
ಈ ಬಲಿಷ್ಠನೂ, ಶೂರನೂ ಆದ ವಲಲನು ಕಾಣುತ್ತಿದ್ದಾನೆ. ಎಲೈ ಅನಘನೇ, ನೀನು ಗೋಸಂಖ್ಯವನ್ನು ಮತ್ತು ಅಶ್ವಬಂಧನನನ್ನು ರಥಗಳಲ್ಲಿ ಸಂಯೋಜನೆಯನ್ನು ಮಾಡು. ಗೋವುಗಳ ಸಲುವಾಗಿ ಅವರು ಯುದ್ಧವನ್ನು ಮಾಡುವುದಿಲ್ಲ ಎಂದು ನನಗೆ ತೋರುವುದಿಲ್ಲ.
ವೈಶಂಪಾಯನಃ
ಅಥ ಮಾತ್ಸ್ಯೋಽಬ್ರವೀದ್ ರಾಜಾ ಶತಾನೀಕಂ ಜಘನ್ಯಜಮ್ ॥35॥
ಕಂಕಶ್ಚ ವಲಲಃ ಸೂದೋ ದಾಮಗ್ರಂಥಿಶ್ಚ ವೀರ್ಯವಾನ್ |
ಶೂರಾಃ ಸುವೀರಾಃ ಪುರುಷಾ ನಾಗರಾಜವರೋಪಮಾಃ ॥36॥
ಯುದ್ಧ್ಯೇಯುರಿತಿ ಮೇ ಬುದ್ಧಿರ್ವರ್ತತೇ ನಾತ್ರ ಸಂಶಯಃ ॥37॥
ವೈಶಂಪಾಯನ ಆಗ ಮತ್ಸ್ಯರಾಜನು ತನ್ನ ತಮ್ಮನಾದ ಶತಾನೀಕನನ್ನು ಕುರಿತು ಕಂಕ, ಸೂದನಾದ ವಲಲ, ಪರಾಕ್ರಮಶಾಲಿಯಾದ ದಾಮಗ್ರಂಥಿ ಈ ಪುರುಷರೆಲ್ಲರೂ ಶೂರರಾದವರು ಮತ್ತು ಮಹಾವೀರರಾದವರು. ಈ ಪುರುಷರು ಗಜರಾಜನಿಗೆ ಸಮಾನರಾಗಿದ್ದಾರೆ. ಇವರೂ ಯುದ್ಧವನ್ನು ಮಾಡುತ್ತಾರೆ ಎಂದು ನನಗೆ ತೋರುತ್ತದೆ. ಇದರಲ್ಲಿ ಸಂಶಯವಿಲ್ಲ.
ಏತೇಷಾಮಪಿ ದೀಯಂತಾಂ ರಥಾ ಧ್ವಜಪತಾಕಿನಃ |
ಕವಚಾನಿ ವಿಚಿತ್ರಾಣಿ ಸುದೃಢಾನಿ ಲಘೂನಿ ಚ ॥38॥
ಇವರಿಗೂ ಧ್ವಜಪತಾಕೆಗಳಿಂದ ಕೂಡಿದ ರಥಗಳನ್ನೂ, ಹಗುರವಾಗಿಯೂ ಮತ್ತು ದೃಢವಾಗಿಯೂ ಇರುವ ವಿಚಿತ್ರವಾದ ಕವಚಗಳನ್ನೂ ಕೊಡುವವನಾಗು.
ಪ್ರತಿಮುಂಚಂತು ಗಾತ್ರೇಷು ದೀಯಂತಾಮಾಯುಧಾನಿ ಚ |
ನೇಮೇ ಜಾತು ನ ಯುದ್ಧ್ಯೇಯುರಿತಿ ಮೇ ಧೀಯತೇ ಮತಿಃ ॥39॥
ವೀರಾಂಗರಾಗಾಃ ಪುರುಷಾ ನಾಗರಾಜಕರೋಪಮಾಃ ॥40॥
ಅವರು ಅದನ್ನು ಮತ್ತು ಆಯುಧಗಳನ್ನು ಶರೀರದಲ್ಲಿ ಧರಿಸಲಿ. ಇವರು ಯುದ್ಧವನ್ನು ಮಾಡುವುದಿಲ್ಲ ಎಂದು ನನಗೆ ಎಂದೂ ತೋರಲಿಲ್ಲ. ಅವರು ವೀರರಿಗೆ ಯೋಗ್ಯವಾದ ಚಂದನಾದಿಗಳನ್ನು ಧರಿಸಿ ಆನೆಯ ಸೊಂಡಿಲನಂತಿರುವ ಬಾಹುಗಳನ್ನು ಧರಿಸಿದ ಪುರುಷರು.
ವೈಶಂಪಾಯನಃ
ತಚ್ಛ್ರುತ್ವಾ ನೃಪತೇರ್ವಾಕ್ಯಂ ಶೀಘ್ರಂ ತ್ವರಿತಮಾನಸಃ |
ಶತಾನೀಕಃ ಸ ಪಾರ್ಥೇಭ್ಯೋ ರಥಾನ್ ರಾಜಾಜ್ಞಯಾಽಽದಿಶತ್ ॥41॥
ಸಹದೇವಾಯ ರಾಜ್ಞೇ ಚ ಭೀಮಾಯ ನಕುಲಾಯ ಚ ॥42॥
ವೈಶಂಪಾಯನ ರಾಜನ ಆ ಮಾತನ್ನು ಕೇಳಿ ಶತಾನೀಕನು ಮನಸ್ಸಿನಲ್ಲಿಯೇ ತ್ವರೆ ಉಂಟಾದವನಾಗಿ ಪಾರ್ಥನಿಗೆ ರಾಜಾಜ್ಞೆಯಂತೆ ರಥಗಳನ್ನು ನೀಡಿದನು. ಸಹದೇವನಿಗೂ, ಯುಧಿಷ್ಠಿರನಿಗೂ, ಭೀಮ ಮತ್ತು ನಕುಲರಿಗೂ ರಥಗಳನ್ನು ನೀಡಿದನು.
ತಾನ್ ದೃಷ್ಟ್ವಾ ಸಹಸಾ ಶೂರಾ ರಾಜಭಕ್ತಿಪುರಸ್ಸರಾಃ |
ನಿರ್ದಿಷ್ಟಾ ನರದೇವೇನ ರಥಾನ್ ಶೀಘ್ರಮಯೋಜಯನ್ ॥43॥
ಅವರನ್ನು ನೋಡಿದ ಶೂರರೂ, ರಾಜನಿಷ್ಠೆಯುಳ್ಳವರೂ ಆದ ಸೇವಕರು ರಾಜನಿಂದ ಆಜ್ಞಾಪಿಸಲ್ಪಟ್ಟವರಾಗಿ ಶೀಘ್ರವಾಗಿ ರಥಗಳಲ್ಲಿ ಅಶ್ವಗಳನ್ನು ಹೂಡಿದರು.
ಕವಚಾನಿ ವಿಚಿತ್ರಾಣಿ ನವಾನಿ ಚ ದೃಢಾನಿ ಚ |
ವಿರಾಟಃ ಪ್ರಾದಿಶದ್ ರಾಜಾ ತೇಷಾಮಕ್ಲಿಷ್ಟಕಾರಿಣಾಮ್ ॥44॥
ವಿರಾಟರಾಜನು ಅನಾಯಾಸವಾಗಿ ಎಲ್ಲವನ್ನೂ ಮಾಡುವ ಅವರಿಗೆ ಹೊಸದಾದ, ಗಟ್ಟಿಯಾದ ಮತ್ತು ವಿಚಿತ್ರವಾದ ಕವಚಗಳನ್ನು ಕೊಟ್ಟನು.
ತಾನ್ಯಾಮುಚ್ಯ ಶರೀರೇಷು ದಂಸಿತಾಸ್ತೇ ಮಹಾರಥಾಃ |
ತರಸ್ವಿನಶ್ಛನ್ನರೂಪಾಃ ಸರ್ವಶಸ್ತ್ರವಿಶಾರದಾಃ ॥45॥
ರಥಾನ್ ಹೇಮಪರಿಷ್ಕಾರಾನ್ ಸಮಾಸ್ಥಾಯ ಮಹಾರಥಾಃ |
ಪಾಂಡವಾ ನಿರ್ಯಯುರ್ಹೃಷ್ಟಾ ದಂಸಿತಾ ರಾಜಸತ್ತಮ ॥46॥
ಎಲೈ ರಾಜಶ್ರೇಷ್ಠನೇ, ಅದನ್ನು ಶರೀರಗಳಲ್ಲಿ ಧರಿಸಿ ಸಿದ್ಧರಾದ ಮಹಾರಥರೂ, ವೇಗವಂತರೂ, ಮಾರುವೇಷದಲ್ಲಿ ಇರುವವರೂ, ಸರ್ವಶಸ್ತ್ರವಿಶಾರದರೂ ಆದ ಮಹಾರಥರಾದ ಆ ಪಾಂಡವರು ಕವಚಾದಿಗಳಿಂದ ಸಿದ್ಧರಾಗಿ ಸುವರ್ಣಾಭರಣಗಳಿಂದ ಅಲಂಕೃತವಾದ ರಥಗಳನ್ನು ಏರಿ ನಗರದ ಹೊರಗೆ ಹೊರಟರು.
ವಿರಾಟಮನ್ವಯುಃ ಪಶ್ಚಾತ್ ಸಹಿತಾಃ ಕುರುಪುಂಗವಾಃ |
ಚತ್ವಾರೋ ಭ್ರಾತರಃ ಶೂರಾಃ ಪಾಂಡವಾಃ ಸತ್ಯವಿಕ್ರಮಾಃ ॥47॥
ದೀರ್ಘಾನಾಂ ಚ ದೃಢಾನಾಂ ಚ ಧನುಷಾಂ ತೇ ಯಥಾಬಲಮ್ |
ಉತ್ಕೃತ್ಯ ಪಾಶಾನ್ ಮೌರ್ವೀಣಾಂ ವೀರಾಶ್ಚಾಪೇಷ್ವಯೋಜಯನ್ ॥

ಆ ಕೌರವಶ್ರೇಷ್ಠರು ಒಟ್ಟಿಗೆ ವಿರಾಟನನ್ನು ಹಿಂಬಾಲಿಸಿದರು. ಶೂರರೂ, ಸತ್ಯವಿಕ್ರಮರೂ ಆದ ಸಹೋದರರಾದ ನಾಲ್ವರು ಪಾಂಡವರು ದೀರ್ಘವೂ, ದೃಢವೂ ಆದ ಧನುಸ್ಸನ್ನು ತಮ್ಮ ಶಕ್ತಿ ಇದ್ದಷ್ಟು ಹೆದೆಯ ಪಾಶವನ್ನು ಮೇಲೆತ್ತಿ ಕಟ್ಟಿ ಧನುಸ್ಸುಗಳನ್ನು ಸಂಯೋಜಿಸಿದರು.
ತತಃ ಸುವಾಸಸಃ ಸರ್ವೇ ತೇ ವೀರಾಶ್ಚಂದನೋಕ್ಷಿತಾಃ |
ಚೋದಿತಾ ನರದೇವೇನ ಕ್ಷಿಪ್ರಮಶ್ವಾನಯೋಜಯನ್ ॥49॥
ಅನಂತರ ಒಳ್ಳೆಯ ವಸ್ತ್ರಗಳನ್ನು ಧರಿಸಿ ಚಂದನಲೇಪಿತರಾಗಿದ್ದ ಆ ಎಲ್ಲ ವೀರರೂ ನರದೇವನಾದ ದುರ್ಯೋಧನನಿಂದ ಆದೇಶಿಸಲ್ಪಟ್ಟವರಾಗಿ ಶೀಘ್ರವಾಗಿ ರಥಗಳಲ್ಲಿ ಅಶ್ವಗಳನ್ನು ಹೂಡಿದರು.
ತೇ ಹಯಾ ಹೇಮಸಂಛನ್ನಾ ಬೃಹಂತಃ ಸಾಧುವಾಹಿನಃ |
ಚೋದಿತಾಃ ಪ್ರತ್ಯದೃಶ್ಯಂತ ಪತ್ರಿಣಾಮಿವ ಪಂಕ್ತಯಃ ॥50॥
ರಥಗಳಲ್ಲಿ ಜೋಡಿಸಲ್ಪಟ್ಟ ಸುವರ್ಣಾಭರಣದಿಂದ ತುಂಬಿಹೋದ ಚೆನ್ನಾಗಿ ರಥವನ್ನು ಎಳೆದು ಸಾಗುವ ದೊಡ್ಡ ಕುದುರೆಗಳು ಪಕ್ಷಿಗಳ ಪಂಕ್ತಿಗಳಂತೆ ಕಂಡುಬಂದವು.
ಭೀಮರೂಪಾಶ್ಚ ಮಾತಂಗಾಃ ಪ್ರಭಿನ್ನಕರಟೀಮುಖಾಃ |
ಸ್ವಾರೂಢಾ ಯುದ್ಧಕುಶಲೈರ್ಮಹಾಮಾತ್ರಾಧಿರೋಹಿತಾಃ ॥51॥
ಭಯಂಕರ ಆಕೃತಿಯನ್ನು ಧರಿಸಿದ, ಕುಂಭಸ್ಥಳದಿಂದ ಮದವನ್ನು ಸುರಿಸುವ ಗಜಗಳು, ಯುದ್ಧಕುಶಲರಾದ ಮಹಾಮಾತ್ರರಿಂದ ಚೆನ್ನಾಗಿ ಏರಲ್ಪಟ್ಟವು.
ಕ್ಷರಂತ ಇವ ಜೀಮೂತಾಃ ಸುದಂತಾಃ ಷಷ್ಟಿಹಾಯನಾಃ |
ರಾಜಾನಮನ್ವಯುಃ ಪಶ್ಚಾತ್ ಕ್ರಮಂತ ಇವ ಪರ್ವತಾಃ ॥52॥
ಒಳ್ಳೆಯ ದಂತಗಳನ್ನು ಹೊಂದಿದ್ದ ಅರವತ್ತು ವರ್ಷ ವಯಸ್ಸಿನ ಆ ಆನೆಗಳು ಮಳೆಯನ್ನು ಸುರಿಸುವ ಮೋಡಗಳಂತೆ ರಾಜನ ಹಿಂದೆ ಪರ್ವತಗಳಂತೆ ನಿಧಾನವಾಗಿ ಚಲಿಸಿದವು.
ದೃಢಾಯುಧಜನಾಕೀರ್ಣಂ ರಥಾಶ್ವಗಜಸಂಕುಲಮ್ |
ತದ್ ಬಲಾಗ್ರ್ಯಂ ವಿರಾಟಸ್ಯ ಶಕ್ರಸ್ಯೇವ ತದಾ ಬಭೌ ॥53॥
ದೃಢವಾದ ಆಯುಧಗಳಿಂದಲೂ, ವೀರರಾದ ಯೋಧರಿಂದಲೂ ತುಂಬಿಹೋಗಿದ್ದ ರಥಗಳು, ಅಶ್ವಗಳು ಮತ್ತು ಗಜಗಳಿಂದ ನಿಬಿಡವಾಗಿದ್ದ ವಿರಾಟನ ಶ್ರೇಷ್ಠವಾದ ಆ ಸೈನ್ಯವು ಇಂದ್ರನ ಸೈನ್ಯದಂತೆ ಆಗ ಕಂಗೊಳಿಸಿತು.
ತಂ ಪ್ರಯಾಂತಂ ಚ ರಾಜಾನಂ ನಿನೀಷಂತಂ ಗವಾಂ ಪದಮ್ ॥54॥
ವಿಶಾರದಾನಾಂ ವಶ್ಯಾನಾಂ ಪ್ರಕೃಷ್ಟಾನಾಂ ತದಾ ನೃಪ |
ವಿಂಶತಿಸ್ತು ಸಹಸ್ರಾಣಿ ನರಾಣಾಮನುಯಾಯಿರೇ ॥55॥
ಗೋವುಗಳ ಸ್ಥಾನಕ್ಕೆ ಹೋಗಿ ಅವುಗಳನ್ನು ಹಿಂದಿರುಗಿಸಲು ಹೊರಟ ಮಹಾರಾಜನನ್ನು ಆಗ ವಿಶಾರದರೂ, ರಾಜನ ಆಜ್ಞೆಯನ್ನು ಪಾಲಿಸುವವರೂ ಮತ್ತು ಶ್ರೇಷ್ಠರೂ ಆದ ಇಪ್ಪತ್ತು ಸಹಸ್ರ ಮನುಷ್ಯರು (ಯೋಧರು) ಹಿಂಬಾಲಿಸಿದರು.
ಅಷ್ಟೌ ರಥಸಹಸ್ರಾಣಿ ದಶ ನಾಗಶತಾನಿ ಚ |
ವಿಂಶಾಚ್ಚಾಶ್ವಸಹಸ್ರಾಣಿ ಮತ್ಸ್ಯಾನಾಂ ತ್ವರಿತಂ ಯಯುಃ ॥56॥
ಮತ್ಸ್ಯರ ಎಂಟುಸಹಸ್ರ ರಥಗಳೂ, ಒಂದು ಸಹಸ್ರಗಜಗಳೂ, ಇಪ್ಪತ್ತು ಸಹಸ್ರ ಅಶ್ವಗಳೂ ಶೀಘ್ರವಾಗಿ ನಡೆದವು.
ತದನೀಕಂ ವಿರಾಟಸ್ಯ ಶುಶುಭೇಽತೀವ ಭಾರತ |
ವಸಂತೇ ಬಹುಪುಷ್ಪಾಢ್ಯಂ ಕಾನನಂ ಚಿತ್ರಿತಂ ಯಥಾ ॥57॥
ಎಲೈ ಭಾರತನೇ, ವಸಂತ ಮಾಸದಲ್ಲಿ ಅನೇಕ ವಿಧವಾದ ಪುಷ್ಪಗಳಿಂದ ತುಂಬಿದ ವಿಚಿತ್ರವಾದ ಕಾಡಿನಂತೆ ವಿರಾಟನ ಸೈನ್ಯವು ಬಹಳವಾಗಿ ಶೋಭಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ಮೂರನೆಯ ಅಧ್ಯಾಯ
ವಿರಾಟ-ಸುಶರ್ಮರ ಹಾಗೂ ಅವರ ಸೈನ್ಯಗಳ ಯುದ್ಧ
ವೈಶಂಪಾಯನಃ
ನಿರ್ಯಯುರ್ನಗರಾತ್ ಶೂರಾ ವ್ಯೂಢಾನೀಕಾಃ ಪ್ರಹಾರಿಣಃ |
ತ್ರಿಗರ್ತಾನಸ್ಪೃಶನ್ ಮತ್ಸ್ಯಾಃ ಸೂರ್ಯೇ ಪರಿಣತೇ ಸತಿ ॥1॥
ವೈಶಂಪಾಯನ ಮತ್ಸ್ಯದೇಶದ ಶತ್ರುಪ್ರಹಾರಿಗಳಾದ ಶೂರರು ಸೈನ್ಯವನ್ನು ವ್ಯೂಹವನ್ನು ಮಾಡಿಕೊಂಡು ನಗರದಿಂದ ಹೊರಗೆ ಹೊರಟು ಸೂರ್ಯನು ಪಶ್ಚಿಮಾಭಿಮುಖನಾಗುತ್ತಿರಲು ತ್ರಿಗರ್ತರನ್ನು ಸಂಧಿಸಿದರು.
ತೇ ತ್ರಿಗರ್ತಾಶ್ಚ ಮತ್ಸ್ಯಾಶ್ಚ ವ್ಯೂಢಾನೀಕಾಃ ಪ್ರಹಾರಿಣಃ |
ಅನ್ಯೋನ್ಯಮಭಿವರ್ತಂತೇ ಗೋಷು ಗೃಧ್ರಾ ಮಹಾಬಲಾಃ ॥2॥
ಮಹಾಬಲರಾದ ಆ ತ್ರಿಗರ್ತರು ಮತ್ತು ಮತ್ಸ್ಯರು ಸೈನ್ಯವನ್ನು ವ್ಯೂಹವನ್ನು ಮಾಡಿ ಗೋಧನದಲ್ಲಿ ಆಸೆಯನ್ನು ಮಾಡುತ್ತಾ ಪರಸ್ಪರ ಪ್ರಹಾರವನ್ನು ಮಾಡುತ್ತಾ ಒಬ್ಬರ ಮೇಲೊಬ್ಬರು ಎರಗಿದರು.

ಭೀಮಾಶ್ಚ ಮತ್ತಮಾತಂಗಾಃ ತೋಮರಾಂಕುಶಚೋದಿತಾಃ |
ಗ್ರಾಮಣೀಯೈಃ ಸಮಾರೂಢಾಃ ಕುಶಲೈರ್ಹಸ್ತಿಸಾದಿಭಿಃ ||3||
ಭಯಂಕರವಾದ ಮದಗಜಗಳು ತೋಮರಗಳಿಂದ ಮತ್ತು ಅಂಕುಶಗಳಿಂದ ಪ್ರೇರಿತವಾಗಿ ಕುಶಲರಾದ ಮಾವುತರಿಂದಲೂ ಮತ್ತು ವಿರಾಟನ ಗಜಾರೋಹಿಗಳಿಂದಲೂ ಏರಲ್ಪಟ್ಟು ಮುಂದೆನಡೆದವು.
ತೇಷಾಂ ಸಮಾಗಮೋ ಘೋರಸ್ತುಮುಲೋ ರೋಮಹರ್ಷಣಃ |
ದೇವಾಸುರಸಮೋ ರಾಜನ್ನಾಸೀತ್ ಸೂರ್ಯೇಽವಲಂಬತಿ ||4||
ಎಲೈ ರಾಜನೇ, ಸೂರ್ಯನು ಕೆಳಗೆ ಜಾರುತ್ತಿರಲು ದೇವಾಸುರರ ಯುದ್ಧಕ್ಕೆ ಸಮನಾದ ಆ ಎರಡು ಸೈನ್ಯಗಳ ಯುದ್ಧವು ತೀವ್ರವೂ, ಘೋರವೂ ಮತ್ತು ರೋಮಹರ್ಷಣವೂ ಆಗಿದ್ದಿತು.
ಉದತಿಷ್ಠದ್ ರಜೋ ಭೌಮಂ ನ ಪ್ರಾಜ್ಞಾಯತ ಕಿಂಚನ |
ಪಕ್ಷಿಣಶ್ಚಾಪತನ್ ಭೂಮೌ ಸೈನ್ಯೇನ ರಜಸಾ ವೃತಾಃ ||5||
ಭೂಮಿಯಿಂದ ಧೂಳು ಮೇಲಕ್ಕೆದ್ದು ಯಾವುದೂ ಕಾಣಲಿಲ್ಲ. ಸೈನ್ಯದಿಂದ ಉಂಟಾದ ಧೂಳಿನಿಂದ ಆವೃತವಾದ ಪಕ್ಷಿಗಳು ಭೂಮಿಯಲ್ಲಿ ಬಿದ್ದವು.
ಇಷುಭಿರ್ವ್ಯತಿಸಂಯದ್ಭಿರಾದಿತ್ಯೋಽಂತರಧೀಯತ |
ಖದ್ಯೋತೈರಿವ ಸಂಪೃಕ್ತಮಂತರಿಕ್ಷಂ ವ್ಯರಾಜತ ||6||
ಬಾಣಗಳು ಸಂಚಾರ ಮಾಡುತ್ತಿರುವಷ್ಟರಲ್ಲಿ ಸೂರ್ಯನು ಅಂತರ್ಧಾನವನ್ನು ಹೊಂದಿದನು. ಮಿಣುಕುಹುಳುಗಳಂತಿರುವ ಬಾಣಗಳಿಂದ ಸಂಬದ್ಧವಾದ ಅಂತರಿಕ್ಷವು ಶೋಭಿಸಿತು.
ರುಗ್ಮಪೃಷ್ಠಾನಿ ಚಾಪಾನಿ ವಿಚೇರುರ್ವಿದ್ಯುತೋ ಯಥಾ |
ನರ್ದತಾಂ ಲೋಕವೀರಾಣಾಂ ಸವ್ಯಂ ದಕ್ಷಿಣಮಸ್ಯತಾಮ್ ||7||
ಗರ್ಜಿಸುವ ಮತ್ತು ಎಡಗೈಯಿಂದಲೂ ಮತ್ತು ಬಲಗೈಯಿಂದಲೂ ಬಾಣವನ್ನು ಪ್ರಯೋಗಿಸುವ ಲೋಕವೀರರ ಚಿನ್ನದ ಹಿಡಿಯುಳ್ಳ ಧನುಸ್ಸುಗಳು ಮಿಂಚುಗಳಂತೆ ಸಂಚರಿಸಿದವು.
ರಥಾ ರಥೈಃ ಸಮಾಜಗ್ಮುಃ ಪತ್ತಯಶ್ಚ ಪದಾತಿಭಿಃ |
ಸಾದಿಭಿಃ ಸಾದಿನೋ ಜಗ್ಮುರ್ಗಜೈಶ್ಚಾಪಿ ಮಹಾಗಜಾಃ ||8||
ರಥಗಳ ಜೊತೆಯಲ್ಲಿ ರಥಗಳು, ಪದಾತಿಗಳ ಜೊತೆಯಲ್ಲಿ ಪದಾತಿಗಳು, ಅಶ್ವಾರೋಹಿಗಳ ಜೊತೆಯಲ್ಲಿ ಅಶ್ವಾರೋಹಿಗಳು, ಗಜಗಳ ಜೊತೆಯಲ್ಲಿ ಮಹಾಗಜಗಳು, ಸಮಾಗಮವನ್ನು ಹೊಂದಿದವು.
ಅಸಿಭಿಃ ಪಟ್ಟಿಸೈಶ್ಚಾಪಿ ಶಕ್ತಿಭಿಸ್ತೋಮರೈರಪಿ |
ಸಂರಬ್ಧಾಃ ಸಮರೇ ಯೋಧಾ ನಿಜಘ್ನುರಿತರೇತರಮ್ ||9||
ಯುದ್ಧದಲ್ಲಿ ಕೋಪಗೊಂಡ ಯೋಧರು ಕತ್ತಿಗಳಿಂದಲೂ, ಪಟ್ಟಸಗಳಿಂದಲೂ, ಶಕ್ತಿ ತೋಮರಗಳಿಂದಲೂ ಒಬ್ಬರನ್ನೊಬ್ಬರು ಕೊಂದರು.
ನಿಘ್ನಂತಃ ಸಮರೇಽನ್ಯೋನ್ಯಂ ಹೃಷ್ಟಾಃ ಪರಿಘಬಾಹವಃ |
ನ ಶೇಕುರತಿಸಂರಬ್ಧಾಃ ಶೂರಾಃ ಕರ್ತುಂ ಪರಾಙ್ಮುಖಮ್ ||10||
ಒನಕೆಯಂತಹ ಬಾಹುಗಳುಳ್ಳ ಅವರು ಸಂತೋಷದಿಂದ ಒಬ್ಬರನ್ನೊಬ್ಬರು ಕೊಲ್ಲುತ್ತಾ ಬಹಳ ಕೋಪದಿಂದ ಕೂಡಿದ್ದರೂ ಇನ್ನೊಬ್ಬರನ್ನು ಯುದ್ಧದಿಂದ ವಿಮುಖರನ್ನಾಗಿ ಮಾಡಲು ಸಾಧ್ಯವಾಗಲಿಲ್ಲ.
ರಕ್ತಾಧರೋಷ್ಠಂ ಸುನಸಂ ರಕ್ತಶ್ಮಶ್ರು ಸ್ವಲಂಕೃತಮ್ |
ಅದೃಶ್ಯತ ಶಿರಚ್ಛಿನ್ನಂ ರಜೋಧ್ವಸ್ತಂ ಸಕುಂಡಲಮ್ ||11||
ಕೆಂಪಾದ ತುಟಿಯುಳ್ಳ, ಒಳ್ಳೆಯ ನಾಸಿಕದಿಂದ ಕೂಡಿದ, ಕೆಂಪಾದ ಮೀಸೆಯುಳ್ಳ ಅಲಂಕೃತವಾದ ಕುಂಡಲಸಹಿತವಾದ ಶಿರಸ್ಸು ಧೂಳಿನಲ್ಲಿ ಬಿದ್ದು ನಾಶವನ್ನು ಹೊಂದುವುದು ಕಂಡುಬಂದಿತು.
ದೃಶ್ಯಂತೇ ತತ್ರ ಗಾತ್ರಾಣಿ ಶರೈರ್ಭಿನ್ನಾನಿ ಭಾಗಶಃ |
ಸಾಲಸ್ಕಂಧನಿಕಾಶಾನಿ ಕ್ಷತ್ರಿಯಾಣಾಂ ಮಹಾಮೃಧೇ ||12||
ಆ ಮಹಾಯುದ್ಧದಲ್ಲಿ ವೀರರಿಂದ ಕತ್ತರಿಸಲ್ಪಟ್ಟ ಕ್ಷತ್ರಿಯರ ಶರೀರಗಳು ಸಾಲವೃಕ್ಷದ ಸ್ಕಂದದಂತೆ ಅಲ್ಲಲ್ಲಿ ಕಂಡುಬಂದವು.
ನಾಗಭೋಗನಿಕಾಶೈಶ್ಚ ಬಾಹುಭಿಶ್ಚಂದನೋಕ್ಷಿತೈಃ |
ಆಕೀರ್ಣಾ ವಸುಧಾ ತತ್ರ ಶಿರೋಭಿಶ್ಚ ಸಕುಂಡಲೈಃ ||13||
ಯಥಾ ವಾ ವಾಸಸೀ ಶ್ಲಕ್ಷ್ಣೇ ಮಹಾರಜನರಂಜಿತೇ |
ಬಿಭೃತೀ ಯುವತೀ ಶ್ಯಾಮಾ ಭಾತಿ ತದ್ವದ್ ವಸುಂಧರಾ ||14||
ಅಲ್ಲಿ ಭೂಮಿಯು ಸರ್ಪಶರೀರದಂತಿರುವ ಚಂದನಲೇಪಿತ ಬಾಹುಗಳಿಂದಲೂ, ಕುಂಡಲಸಹಿತವಾದ ಶಿರಸ್ಸುಗಳಿಂದಲೂ ತುಂಬಿಹೋಯಿತು. ಭೂಮಿಯು ಮಹಾರಜನ (ಕೆಂಪುಬಣ್ಣ) ವನ್ನು ಹಾಕಿದ ಸೂಕ್ಷ್ಮವಾದ ವಸ್ತ್ರಗಳನ್ನು ಧರಿಸಿದ ಸುಂದರಿಯಾದ ಯುವತಿಯಂತೆ ತೋರುತ್ತಿದ್ದಿತು.
ಉಪಶಾಮ್ಯ ರಜೋ ಭೌಮಂ ರುಧಿರೇಣ ಪ್ರವರ್ಷತಾ |
ಕಶ್ಮಲಂ ಪ್ರಾವಿಶದ್ ಘೋರಂ ನಿರ್ಮರ್ಯಾದಮವರ್ತತ ||15||
ಹರಿಯುವ ರಕ್ತದಿಂದ ಭೂಮಿಯ ಧೂಳು ಅಡಗಿ ಎಲ್ಲೆಯನ್ನು ಮೀರಿದ ಘೋರವಾದ ದೃಶ್ಯವು ಉಂಟಾಯಿತು.
ಯುಧಿಷ್ಠಿರೋಽಪಿ ಧರ್ಮಾತ್ಮಾ ಭ್ರಾತೃಭಿಃ ಸಹಿತಸ್ತದಾ |

ವ್ಯೂಹಂ ಕೃತ್ವಾ ವಿರಾಟಸ್ಯ ಅನ್ವಯುಧ್ಯತ ಪಾಂಡವಃ ॥16॥
ಧರ್ಮಾತ್ಮನಾದ ಭ್ರಾತೃಸಹಿತನಾದ ಪಾಂಡುಪುತ್ರನಾದ ಯುಧಿಷ್ಠಿರನೂ ಸಹ ವಿರಾಟನ ಸೈನ್ಯವನ್ನು ವ್ಯೂಹವನ್ನು ಮಾಡಿಕೊಂಡು ಯುದ್ಧವನ್ನು ಮಾಡಿದನು.
ಆತ್ಮಾನಂ ಶ್ಯೇನವತ್ ಕೃತ್ವಾ ತುಂಡಮಾಸೀತ್ ಯುಧಿಷ್ಠಿರಃ।
ಪಕ್ಷೌ ಯಮೌ ಚ ಭವತಃ ಪುಚ್ಛಮಾಸೀದ್ ವೃಕೋದರಃ ॥17॥
ಸಹಸ್ರಂ ನ್ಯಹನತ್ ತತ್ರ ಕುಂತೀಪುತ್ರೋ ಯುಧಿಷ್ಠಿರಃ ॥18॥
ತನ್ನನ್ನೇ ಒಂದು ಗಿಡುಗನಂತೆ ಮಾಡಿಕೊಂಡು ಯುಧಿಷ್ಠಿರನು ಕೊಕ್ಕಿನ ಸ್ಥಾನದಲ್ಲಿದ್ದನು. ಎರಡು ರೆಕ್ಕೆಗಳಲ್ಲಿ ನಕುಲ ಸಹದೇವರೂ ಮತ್ತು ಪುಚ್ಛಸ್ಥಾನದಲ್ಲಿ ವೃಕೋದರನೂ ಇದ್ದರು. ಕುಂತೀಪುತ್ರನಾದ ಯುಧಿಷ್ಠಿರನು ಸಹಸ್ರ ರಥಿಕರನ್ನು ಕೊಂದನು.
ಭೀಮಸೇನಃ ಸುಸಂಕ್ರುದ್ಧಃ ಸರ್ವಶಸ್ತ್ರಭೃತಾಂ ವರಃ।
ದ್ವಿಸಹಸ್ರಂ ರಥಾನ್ ವೀರಃ ಪರಲೋಕಂ ಪ್ರವೇಶಯತ್ ॥19॥
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಬಹಳ ಕ್ರೋಧವನ್ನು ಹೊಂದಿದ ವೀರನಾದ ಭೀಮಸೇನನು ಎರಡು ಸಹಸ್ರರಥಗಳನ್ನು ಪರಲೋಕಕ್ಕೆ ಕಳುಹಿಸಿದನು.
ನಕುಲಸ್ತ್ರಿಶತಂ ಜಘ್ನೇ ಸಹದೇವಶ್ಚತುಃಶತಮ್।
ಶತಾನೀಕಃ ಶತಂ ಹತ್ವಾ ಮದಿರಾಶ್ವಶ್ಚತುಃಶತಮ್ ॥20॥
ಪ್ರಹೃಷ್ಟಾಂ ಮಹತೀಂ ಸೇನಾಂ ತ್ರಿಗರ್ತಾನಾಂ ಮಹಾರಥೌ ॥21॥
ನಕುಲನು ಮುನ್ನೂರು ರಥಗಳನ್ನೂ, ಸಹದೇವನು ನಾಲ್ಕುನೂರು ರಥಗಳನ್ನೂ ಸಂಹರಿಸಿದರು. ಮಹಾರಥರಾದ ಶತಾನೀಕನು ಮತ್ತು ಮದಿರಾಶ್ವರು ಸಂತೋಷಗೊಂಡ ತ್ರಿಗರ್ತರ ದೊಡ್ಡ ಸೈನ್ಯವನ್ನು ಪ್ರವೇಶಿಸಿ ಅದರಲ್ಲಿ ಶತಾನೀಕನು ಮುನ್ನೂರು ರಥಗಳನ್ನೂ, ಮದಿರಾಶ್ವನು ನಾಲ್ಕುನೂರು ರಥಗಳನ್ನೂ ಕೊಂದರು.
ಆರ್ಚ್ಛತಾಂ ಬಹುಸಾಹಸ್ರಂ ಕೇಶಾಕೇಶಿ ರಥಾರಥಿ ॥22॥
ಅಲ್ಲಿ ಅನೇಕ ಸಹಸ್ರಯೋಧರಿಗೆ ಕೇಶಾಕೇಶಿ ಮತ್ತು ರಥಾರಥಿ ಯುದ್ಧವು ಉಂಟಾಯಿತು.
ಲಕ್ಷಯಿತ್ವಾ ತ್ರಿಗರ್ತಾನಾಂ ತೌ ಪ್ರವಿಷ್ಟೌ ಮಹಾಚಮೂಃ।
ಜಗ್ಮತುಃ ಸೂರ್ಯದತ್ತಶ್ಚ ಮದಿರಾಶ್ವಶ್ಚ ಪೃಷ್ಠತಃ ॥23॥
ತ್ರಿಗರ್ತರ ಸೈನ್ಯವನ್ನು ಗಮನಿಸಿ ಸೂರ್ಯದತ್ತ ಮತ್ತು ಮದಿರಾಶ್ವ ಇವರಿಬ್ಬರೂ ಹಿಂಭಾಗದಿಂದ ಆ ದೊಡ್ಡ ಸೈನ್ಯವನ್ನು ಪ್ರವೇಶಿಸಿದರು.
ಶಂಖೋ ವಿರಾಟಪುತ್ರಸ್ತು ಮಹೇಷ್ವಾಸೋ ಮಹಾಬಲಃ।
ವಿನಿಘ್ನನ್ ಸಮರೇ ಶತ್ರೂನ್ ಪ್ರವಿವೇಶ ಮಹಾಚಮೂಮ್ ॥24॥
ಮಹಾಧನುರ್ಧಾರಿಯೂ ಮತ್ತು ಮಹಾಬಲನೂ ಆದ ವಿರಾಟಪುತ್ರನಾದ ಶಂಖನು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುತ್ತಾ ಆ ದೊಡ್ಡ ಸೈನ್ಯವನ್ನು ಪ್ರವೇಶಿಸಿದನು.
ವಿರಾಟಸ್ತತ್ರ ಸಂಗ್ರಾಮೇ ಹತ್ವಾ ಪಂಚಶತಂ ರಥಾನ್।
ಕುಂಜರಾಣಾಂ ಶತಂ ಚೈವ ಸಹಸ್ರಂ ವಾಜಿನಾಮಪಿ ॥25॥
ಚರನ್ ಸ ವಿವಿಧಾನ್ ಮಾರ್ಗಾನ್ ರಥೇನ ರಥಯೂಥಪಃ।
ತ್ರಿಗರ್ತಾನಾಂ ಸುಶರ್ಮಾಣಮಾರ್ಚ್ಛದ್ ರುಗ್ಮರಥಂ ರಣೇ ॥26॥
ವಿರಾಟರಾಜನು ಆ ಯುದ್ಧದಲ್ಲಿ ಐದುನೂರು ರಥಗಳನ್ನೂ, ನೂರು ಆನೆಗಳನ್ನೂ ಒಂದು ಸಹಸ್ರ ಕುದುರೆಗಳನ್ನೂ ಕೊಂದು ರಥಯೂಥಪನಾದ ಅವನು ರಥದಿಂದ ವಿವಿಧ ಮಾರ್ಗಗಳನ್ನು ಸಂಚರಿಸುತ್ತಾ ತ್ರಿಗರ್ತರ ಅಧಿಪತಿಯಾಗಿದ್ದ, ಸುವರ್ಣಮಯವಾದ ರಥದಲ್ಲಿದ್ದ ಸುಶರ್ಮನನ್ನು ಸಮೀಪಿಸಿದನು.
ತೌ ತು ಪ್ರಾಹರತಾಂ ತತ್ರ ಮಹೇಷ್ವಾಸೌ ಮಹಾಬಲೌ।
ಅನ್ಯೋನ್ಯಮಭಿನಿಘ್ನಂತೌ ಗೋಷ್ಠೇ ಗೋವೃಷಭಾವಿವ ॥27॥
ಮಹಾಧನುರ್ಧಾರಿಗಳೂ ಮತ್ತು ಮಹಾಬಲರೂ ಆದ ಅವರಿಬ್ಬರೂ ಕೊಟ್ಟಿಗೆಯಲ್ಲಿ ಗೋವೃಷಭಗಳು ಹೋರಾಡಿದಂತೆ ಪರಸ್ಪರಸೈನ್ಯಗಳನ್ನು ಕೊಲ್ಲುತ್ತಾ ಪರಸ್ಪರವಾಗಿ ಪ್ರಹಾರವನ್ನು ಮಾಡಿದರು.
ರಾಜಸಿಂಹೌ ಸುಸಂರಬ್ಧೌ ದಂತಾಭ್ಯಾಮಿವ ಕುಂಜರೌ।
ಕೃತಾಸೌ ತ್ರ ನಿಶಿತೈರ್ಬಾಣೈರ್ವಾರಯಾಮಾಸತೂ ರಣೇ ॥28॥
ರಾಜಸಿಂಹರೂ, ಅಸ್ತ್ರವಿದ್ಯೆಯನ್ನು ಬಲ್ಲವರೂ ಮತ್ತು ಬಹಳ ಕೋಪಗೊಂಡವರೂ ಆದ ಅವರು ಆನೆಗಳು ದಂತಗಳಿಂದ ಹೋರಾಡುವಂತೆ ನಿಶಿತವಾದ ಬಾಣಗಳಿಂದ ಯುದ್ಧದಲ್ಲಿ ಒಬ್ಬರನ್ನೊಬ್ಬರು ತಡೆದರು.
ಮಾತ್ಸ್ಯೋ ರಾಜಾ ಸುಶರ್ಮಾಣಂ ವಿವ್ಯಾಧ ನಿಶಿತೈಃ ಶರೈಃ।
ಪಂಚಭಿಃ ಪಂಚಭಿರ್ಬಾಣೈರ್ವಿವ್ಯಾಧ ಚತುರೋ ಹಯಾನ್ ॥29॥
ದ್ವಾಭ್ಯಾಂ ಸೂತಂ ಚ ವಿವ್ಯಾಧ ಕೇತುಂ ಚ ತ್ರಿಭಿರಾಶುಗೈಃ ॥30॥
ಮತ್ಸ್ಯರಾಜನಾದ ವಿರಾಟನು ಸುಶರ್ಮನ ಮೇಲೆ ಹರಿತವಾದ ಬಾಣಗಳನ್ನು ಪ್ರಯೋಗಿಸಿದನು. ಇಪ್ಪತ್ತೈದು ಬಾಣಗಳಿಂದ ನಾಲ್ಕು ಕುದುರೆಗಳನ್ನೂ, ಎರಡು ಬಾಣಗಳಿಂದ ಸೂತನನ್ನೂ ಮತ್ತು ವೇಗವುಳ್ಳ ಮೂರು ಬಾಣಗಳಿಂದ ಅವರ ರಥದ ಧ್ವಜವನ್ನೂ ಹೊಡೆದು ಉರುಳಿಸಿದನು.
ತಥೈವ ಮತ್ಸ್ಯರಾಜಂ ತು ಸುಶರ್ಮಾ ಯುದ್ಧದುರ್ಮದಃ।

ಪಂಚಾಶದ್ಭಿಃ ಶಿತೈರ್ಬಾಣೈರ್ವಿವ್ಯಾಧ ಪರಮಾಸ್ತ್ರವಿತ್ ॥31॥
ಅದರಂತೆಯೇ ಯುದ್ಧದುರ್ಮದನಾದ ಪರಮಾಸ್ತ್ರವೇತ್ತನಾದ ಸುಶರ್ಮನೂ ಸಹ ಐವತ್ತು ಹರಿತವಾದ ಬಾಣಗಳಿಂದ ಮತ್ಸ್ಯರಾಜನನ್ನು ಹಿಂಸಿಸಿದನು.
ತಯೋರ್ಬಲಾನಿ ರಾಜೇಂದ್ರ ಸಮಸ್ತಾನಿ ಮಹಾರಣೇ |
ನಾಜಾನಂತ ತದಾಽನ್ಯೋನ್ಯಂ ಪ್ರದೋಷೇ ರಜಸಾ ವೃತೇ ॥32॥
ಎಲೈ ರಾಜೇಂದ್ರನೇ, ಪ್ರದೋಷಕಾಲವು ಧೂಳಿನಿಂದ ಆವೃತವಾಗುತ್ತಿರಲು ಆ ಮಹಾಯುದ್ಧದಲ್ಲಿ ಅವರಿಬ್ಬರ ಸೈನ್ಯಗಳು ಪರಸ್ಪರವಾಗಿ ಯಾರನ್ನೂ ತಿಳಿಯಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ವಿರಾಟಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ಶ್ರುತ್ವಾ ವಿರಾಟೋಽನುಯಯೌ ಸಸೇನಃ
ತಂ ಪಾಂಡವಾಶ್ಚಾನುಯಯುರ್ವಿನಾಽರ್ಜುನಮ್ |
ವಿಜಿತ್ಯ ಸಂಖ್ಯೇ ಜಗೃಹೇ ವಿರಾಟಂ
ತದಾ ಸುಶರ್ಮಾ ತಮಯಾದ್ ವೃಕೋದರಃ ॥34॥
ಅರ್ಜುನನ ಹೊರತು ಬೇರೆ ಪಾಂಡವರು ವಿರಾಟನನ್ನು ಹಿಂಬಾಲಿಸಿದರು. ಸುಶರ್ಮ ವಿರಾಟನನ್ನು ಗೆದ್ದು ಸೆರೆಹಿಡಿದ. ಆಗ ಅವನನ್ನು ಇದಿರಿಸಿದ.
ಸ ತಸ್ಯ ಸೇನಾಂ ವಿನಿಹತ್ಯ ಮಾತ್ಸ್ಯಂ
ವಿಮೋಚ್ಯ ಜಗ್ರಾಹ ಸುಶರ್ಮರಾಜಮ್ |
ಯುಧಿಷ್ಠಿರೋ ಮೋಚಯಾಮಾಸ ತಂ ಚ
ತತೋ ರಾತ್ರೌ ನ್ಯವಸನ್ ಬಾಹ್ಯತಸ್ತೇ ॥35॥
ಅವನ ಸೈನ್ಯವನ್ನು ಸಂಹರಿಸಿ ವಿರಾಟನನ್ನು ಬಿಡುಗಡೆ ಮಾಡಿ ಸುಶರ್ಮರಾಜನನ್ನು ಸೆರೆಹಿಡಿದ. ಧರ್ಮರಾಜ ಸುಶರ್ಮನನ್ನು ಬಿಡುಗಡೆ ಮಾಡಿಸಿದ. ಆ ರಾತ್ರಿಯಲ್ಲಿ ಕೌರವರು ನಗರದ ಹೊರಗೇ ಬೀಡುಬಿಟ್ಟಿದ್ದರು.
* * * *
ಮೂವತ್ನಾಲ್ಕನೆಯ ಅಧ್ಯಾಯ
ಭೀಮಸೇನನಿಂದ ಸುಶರ್ಮಗೃಹೀತನಾದ ವಿರಾಟನ ಬಿಡುಗಡೆ ಮತ್ತು ಅನಂತರ ಧರ್ಮರಾಜನಿಂದ ಭೀಮಸೇನಗೃಹೀತನಾದ ಸುಶರ್ಮನ ಬಿಡುಗಡೆ
ವೈಶಂಪಾಯನಃ
ತಮಸಾಽಭಿಪ್ಲುತೇ ಲೋಕೇ ರಜಸಾ ಚೈವ ಭಾರತ |
ವ್ಯತಿಷ್ಠಂತ ಮುಹೂರ್ತಂ ತೇ ವ್ಯೂಢಾನೀಕಾಃ ಪ್ರಹಾರಿಣಃ ॥1॥
ವೈಶಂಪಾಯನ ಎಲೈ ಭಾರತನೇ, ಲೋಕವೆಲ್ಲವೂ ಕತ್ತಲೆಯಿಂದಲೂ ಮತ್ತು ಧೂಳಿನಿಂದಲೂ ಆವೃತವಾಗುತ್ತಿರಲು ಸೈನ್ಯವನ್ನು ವ್ಯೂಹ ಮಾಡಿ ಪ್ರಹಾರ ಮಾಡುವ ಆ ಯೋಧರೆಲ್ಲರೂ ಒಂದು ಮುಹೂರ್ತದ ಕಾಲ ಸುಮ್ಮನಿದ್ದರು.
ತತೋಽಂಧಕಾರಂ ಪ್ರಣುದನ್ನುದತಿಷ್ಠನ್ನಿಶಾಕರಃ |
ಕುರ್ವಾಣೋ ವಿಮಲಾಂ ರಾತ್ರಿಂ ನಂದಯನ್ ಕ್ಷತ್ರಿಯಾನ್ ರಣೇ ॥
ಅನಂತರ ಚಂದ್ರನು ಅಂಧಕಾರವನ್ನು ನಾಶಮಾಡುತ್ತಾ ನಿರ್ಮಲವಾದ ರಾತ್ರಿಯನ್ನು ಉಂಟುಮಾಡುತ್ತಾ ಯುದ್ಧದಲ್ಲಿ ಕ್ಷತ್ರಿಯರಿಗೆ ಸಂತೋಷವನ್ನು ಕೊಡುತ್ತಾ ಉದಯಿಸಿದನು.
ತತಃ ಪ್ರಕಾಶಮಾಸಾದ್ಯ ಪುನರ್ಯುದ್ಧಮವರ್ತತ |
ಘೋರರೂಪಂ ತದಾ ತಸ್ಮಿನ್ನವೈಕ್ಷಂತ ಪರಸ್ಪರಮ್ ॥3॥
ಅನಂತರ ಚಂದ್ರನ ಬೆಳದಿಂಗಳು ಬರುತ್ತಿರಲು ಪುನಃ ಯುದ್ಧವು ಆರಂಭವಾಯಿತು. ಆಗ ಶತ್ರುಗಳ ಘೋರರೂಪಗಳನ್ನು ಅವರು ಪರಸ್ಪರವಾಗಿ ನಿರೀಕ್ಷಿಸಿದರು.
ತತಃ ಸುಶರ್ಮಾ ತ್ರೈಗರ್ತಃ ಸಹ ಭ್ರಾತ್ರಾ ಸುವರ್ಮಣಾ |
ಅಭ್ಯದ್ರವನ್ ಮತ್ಸ್ಯರಾಜಂ ಶರವ್ರಾತೇನ ಸರ್ವಶಃ ॥4॥
ಆಗ ತ್ರಿಗರ್ತಾಧಿಪತಿಯಾದ ಸುಶರ್ಮನು ತನ್ನ ತಮ್ಮನಾದ ಸುವರ್ಮನೊಂದಿಗೆ ಎಲ್ಲಕಡೆಗಳಲ್ಲಿಯೂ ಬಾಣಗಳ ಮಳೆಯನ್ನು ಸೃಷ್ಟಿಸುತ್ತಾ ಮತ್ಸ್ಯರಾಜನ ಕಡೆಗೆ ಓಡಿಬಂದನು.
ತತೋ ರಥಾಭ್ಯಾಂ ಪ್ರಸ್ಕಂದ್ಯ ಭ್ರಾತರೌ ಕ್ಷತ್ರಿಯಾವುಭೌ |
ಗದಾಪಾಣೀ ಸುಸಂರಬ್ಧೌ ಸಮಭ್ಯದ್ರವತಾಂ ಹಯಾನ್ ॥5॥
ಅನಂತರ ಸಹೋದರರಾದ ಆ ಕ್ಷತ್ರಿಯರಿಬ್ಬರೂ ರಥಗಳಿಂದ ಧುಮುಕಿ ಗದೆಗಳನ್ನು ಹಿಡಿದು ಬಹಳ ಕೋಪದಿಂದ ಕೂಡಿದವರಾಗಿ ಅಶ್ವಗಳನ್ನು ಓಡಿಸಿದರು.

ತಥೈವ ತೇಷಾಂ ತುಮುಲಾನಿ ತಾನಿ
ಕ್ರುದ್ಧಾನಿ ಚಾನ್ಯೋನ್ಯಮಭಿದ್ರವಂತಿ |
ಗದಾಸಿಪಟ್ಟೈಶ್ಚ ಪರಶ್ವಧೈಶ್ಚ
ಪ್ರಾಸೈಶ್ಚ ತೀಕ್ಷ್ಣಾಗ್ರಸುರೂಪಧಾರೈಃ ||6||
ಹಾಗೆಯೇ ಅವರ ಕ್ರೋಧಗೊಂಡ ತೀವ್ರವಾದ ಸೈನ್ಯಗಳು ಗದಾ, ಖಡ್ಗ ಮತ್ತು ಪಟ್ಟಿಸಗಳಿಂದಲೂ, ಪರಶ್ವಧಗಳಿಂದಲೂ, ಪ್ರಾಸಗಳಿಂದಲೂ, ತೀಕ್ಷ್ಣವಾದ ತುದಿಯುಳ್ಳ ಮತ್ತು ಸುಂದರವಾದ ಅಲುಗುಗಳುಳ್ಳ ಆಯುಧಗಳಿಂದಲೂ ಪರಸ್ಪರವಾಗಿ ಎರಗಿದವು.
ಬಲಂ ತು ಮತ್ಸ್ಯಸ್ಯ ಬಲೇನ ರಾಜಾ
ಸರ್ವಂ ತ್ರಿಗರ್ತಾಧಿಪತಿಃ ಸುಶರ್ಮಾ |
ಪ್ರಮಥ್ಯ ಜಿತ್ವಾ ಚ ನಿಪೀಡ್ಯ ಮತ್ಸ್ಯಾನ್
ವಿರಾಟಮೋಜಸ್ವಿನಮಭ್ಯಧಾವತ್ ||7||
ತ್ರಿಗರ್ತಾಧಿಪತಿಯಾದ ಸುಶರ್ಮರಾಜನು ತನ್ನ ಸೈನ್ಯದಿಂದ ಮತ್ಸ್ಯಸೈನ್ಯವನ್ನು ಹಿಂಸಿಸಿ ಅವರನ್ನು ಗೆದ್ದು ಪರಾಕ್ರಮಶಾಲಿಯಾದ ವಿರಾಟನನ್ನು (ಹಿಡಿಯಲು) ಅವನ ಕಡೆಗೆ ಓಡಿದನು.
ಮತ್ತಾವಿವ ವೃಷಾವೇತೌ ಗಜಾವಿವ ಮದೋದ್ಧತೌ |
ಸಿಂಹಾವಿವ ಗಜಗ್ರಾಹೌ ವೃತ್ರಶಕ್ರಾವಿವೋದ್ಧತೌ ||8||
ಉಭೌ ತುಲ್ಯಬಲೋತ್ಸಾಹಾವುಭೌ ತುಲ್ಯಪರಾಕ್ರಮೌ |
ಉಭೌ ತುಲ್ಯಾಸ್ತ್ರವಿದುಷಾವುಭೌ ಯುದ್ಧವಿಶಾರದೌ ||9||
ತೌ ನಿಹತ್ಯ ಪೃಥಗ್ಧುರ್ಯಾವುಭೌ ತೌ ಪಾರ್ಷ್ಣಿಸಾರಥೀ |
ಆಸ್ತಾಂ ತುಲ್ಯಧನುರ್ಗ್ರಾಹೌ ವಿಷ್ಣುಕಂಸಾವಿವೋದ್ಧತೌ ||10||
ಅವರಿಬ್ಬರೂ ಮದಿಸಿದ ವೃಷಭಗಳಂತೆ ಇರುವವರು. ಮದೋದ್ಧತವಾದ ಗಜಗಳಂತೆ, ಆನೆಗಳನ್ನು ಹಿಡಿಯುವ ಸಿಂಹಗಳಂತೆ, ಶಕ್ರ ಮತ್ತು ವೃತ್ರಾಸುರನಂತೆ ಉದ್ಧತರಾದವರು. ಇಬ್ಬರೂ ಸಮಾನ ಬಲ, ಉತ್ಸಾಹಗಳುಳ್ಳವರು. ಸಮಾನವಾದ ಪರಾಕ್ರಮವುಳ್ಳವರು. ಸಮಾನವಾದ ಅಸ್ತ್ರವಿದ್ಯೆಯುಳ್ಳವರು ಮತ್ತು ಸಮಾನವಾದ ಯುದ್ಧವಿಶಾರದರು. ಅವರಿಬ್ಬರೂ ಪರಸ್ಪರವಾಗಿ ಶತ್ರುವಿನ ರಥದ ಸಾರಥಿಯನ್ನೂ, ಪಕ್ಷಸಾರಥಿಯನ್ನೂ ಕೊಂದು ಸಮಾನವಾದ ಧನುಸ್ಸನ್ನು ಹಿಡಿದವರಾಗಿ ಕೃಷ್ಣ ಕಂಸರಂತೆ ಉದ್ಧತರಾಗಿ ನಿಂತರು.
ಸುಶರ್ಮಾ ಪರವೀರಘ್ನೋ ಬಲವಾನ್ ವೀರ್ಯವಾನ್ ಗದೀ |
ವಿರಥಂ ಮತ್ಸ್ಯರಾಜಾನಂ ಜೀವಗ್ರಾಹಮಥಾಗ್ರಹೀತ್ ||11||
ಪರವೀರಘ್ನನೂ, ಬಲಿಷ್ಠನೂ, ಪರಾಕ್ರಮಶಾಲಿಯೂ, ಗದೆಯನ್ನು ಧರಿಸಿದವನೂ ಆದ ಸುಶರ್ಮನು ಮತ್ಸ್ಯರಾಜನನ್ನು ವಿರಥನನ್ನಾಗಿ ಮಾಡಿ ಅವನನ್ನು ಜೀವಸಹಿತವಾಗಿ ಹಿಡಿದನು.
ತಮುನ್ಮಥ್ಯ ಸುಶರ್ಮಾ ತು ವಿರಾಟಂ ಭೀಮವಿಕ್ರಮಮ್ |
ಸ್ಯಂದನಂ ಸ್ವಂ ಸಮಾರೋಪ್ಯ ಪ್ರಯಯೌ ಶೀಘ್ರವಾಹನಃ ||12||
ಸುಶರ್ಮನು ಭೀಮಪರಾಕ್ರಮವುಳ್ಳ ವಿರಾಟನನ್ನು ಮರ್ದಿಸಿ ತನ್ನ ರಥದಲ್ಲಿ ಕೂಡಿಸಿಕೊಂಡು ಶೀಘ್ರವಾಹನವುಳ್ಳ ಅವನು ಅಲ್ಲಿಂದ ಹೊರಟನು.
ತಸ್ಮಿನ್ ಗೃಹೀತೇ ನೃಪತೌ ವಿರಾಟೇ ಬಲವತ್ತರೇ |
ಬಲಂ ಸರ್ವಂ ವಿಭಗ್ನಂ ತನ್ನಿರುತ್ಸಾಹಂ ನಿರಾಶಕಮ್ ||13||
ಬಲಿಷ್ಠನಾದ ಆ ವಿರಾಟರಾಜನು ಸೆರೆಸಿಕ್ಕುತ್ತಿರಲು ಅವನ ಸೈನ್ಯವೆಲ್ಲವೂ ಭಗ್ನವಾಗಿ ನಿರಾಶೆಯನ್ನು ಹೊಂದಿ ಉತ್ಸಾಹವನ್ನು ಕಳೆದುಕೊಂಡಿತು.
ಪ್ರಾದ್ರವಂತ ಭಯಾನ್ಮತ್ಸ್ಯಾಃ ತ್ರಿಗರ್ತೈರರ್ದಿತಾ ರಣೇ |
ವಿದಿಕ್ಷು ದಿಕ್ಷು ಸರ್ವಾಸು ಪಲಾಯಂತಿ ಚ ಯಾಂತಿ ಚ ||14||
ಯುದ್ಧದಲ್ಲಿ ತ್ರಿಗರ್ತರಿಂದ ಪೀಡಿತರಾದ ಮತ್ಸ್ಯಸೈನಿಕರು ಭಯದಿಂದ ಎಲ್ಲ ದಿಕ್ಕುಗಳಿಗೂ ವಿದಿಕ್ಕುಗಳಿಗೂ ಓಡಿಹೋದರು. ಯುದ್ಧವನ್ನು ಬಿಟ್ಟು ಪಲಾಯನ ಮಾಡಿದರು.
ತೇಷು ವಿದ್ರಾವ್ಯಮಾಣೇಷು ಕುಂತೀಪುತ್ರೋ ಯುಧಿಷ್ಠಿರಃ |
ಅಭ್ಯಭಾಷತ ಧರ್ಮಾತ್ಮಾ ಭೀಮಸೇನಮರಿಂದಮಮ್ ||15||
ಮತ್ಸ್ಯರಾಜಃ ಪರಾಮೃಷ್ಟಸ್ತ್ರಿಗರ್ತೇನ ಸುಶರ್ಮಣಾ |
ತಂ ಮೋಕ್ಷಯ ಮಹಾಬಾಹೋ ಮಾ ಗಮದ್ ದ್ವಿಷತಾಂ ವಶಮ್ ||
ಉಷಿತಾಃ ಸ್ಮ ಸುಖಂ ಸರ್ವೇ ಸರ್ವಕಾಮೈಃ ಸುಪೂಜಿತಾಃ ||17||
ವಿರಾಟಸೈನಿಕರು ಹಾಗೆ ಓಡುತ್ತಿರಲು ಧರ್ಮಾತ್ಮನಾದ ಕುಂತೀಪುತ್ರನಾದ ಯುಧಿಷ್ಠಿರನು ಅರಿಂದಮನಾದ ಭೀಮಸೇನನನ್ನು ಕುರಿತು ತ್ರಿಗರ್ತಾಧಿಪತಿಯಾದ ಸುಶರ್ಮನಿಂದ ಮತ್ಸ್ಯರಾಜನಾದ ವಿರಾಟನು ಸೆರೆಹಿಡಿಯಲ್ಪಟ್ಟಿದ್ದಾನೆ. ಎಲೈ ಮಹಾಬಾಹುವೇ, ಅವನನ್ನು ಬಿಡಿಸು. ಅವನು ಶತ್ರುವಶವಾಗುವುದು ಬೇಡ. ನಾವು ಎಲ್ಲ ಕಾಮಗಳಿಂದಲೂ ಸುಪೂಜಿತರಾಗಿ ಅವನ ಮನೆಯಲ್ಲಿ ಸುಖವಾಗಿ ವಾಸಿಸಿದ್ದೇವೆ.
ಭೀಮಸೇನ ಮಹಾಬಾಹೋ ಗೃಹೀತಂ ತು ಸುಶರ್ಮಣಾ |
ತ್ರಾಯಸ್ವ ಮೋಚಯ ಕ್ಷಿಪ್ರಮಸ್ಮತ್ಪ್ರೀತಿಕರಂ ನೃಪಮ್ ||18||
ಭೀಮಸೇನ ತ್ವಯಾ ಕಾರ್ಯಾ ತಸ್ಯ ವಾಸಸ್ಯ ನಿಷ್ಕೃತಿಃ ||19||

ಎಲೈ ಮಹಾಬಾಹುವಾದ ಭೀಮಸೇನನೇ, ಸುಶರ್ಮನಿಂದ ಗೃಹೀತನಾದ ವಿರಾಟನನ್ನು ರಕ್ಷಿಸಿ ನಮಗೆ ಪ್ರಿಯನಾದ ಆ ರಾಜನನ್ನು ಶೀಘ್ರವಾಗಿ ಬಿಡುಗಡೆಯನ್ನು ಮಾಡು. ಭೀಮಸೇನನೇ, ನಾವು ಅವನ ಮನೆಯಲ್ಲಿ ವಾಸಮಾಡಿದುದಕ್ಕೆ ಪ್ರತ್ಯುಪಕಾರ ರೂಪವಾಗಿ ನೀನು ಈ ಕಾರ್ಯವನ್ನು ಮಾಡಬೇಕು ಎಂದು ಹೇಳಿದನು.
ವೈಶಂಪಾಯನಃ
ತಂ ತಥಾವಾದಿನಂ ತತ್ರ ಭೀಮಸೇನೋ ಮಹಾಬಲಃ |
ಅಭ್ಯಭಾಷತ ದುರ್ಧರ್ಷೋ ರಣಮಧ್ಯೇ ಯುಧಿಷ್ಠಿರಮ್ ॥20॥
ಅಹಮೇನಂ ಪರಿತ್ರಾಸ್ಯೇ ಶಾಸನಾತ್ ತವ ಪಾರ್ಥಿವ |
ಪಶ್ಯೇದಂ ಸುಮಹತ್ ಕರ್ಮ ಯುಧ್ಯತೋ ಮಮ ಶತ್ರುಭಿಃ ॥21॥
ಸ್ವಬಾಹುಬಲಮಾಶ್ರಿತ್ಯ ಪರೇಷಾಮಸಮಂ ರಣೇ |
ವೈಶಂಪಾಯನ ಹಾಗೆ ಮಾತನಾಡುತ್ತಿದ್ದ ಯುಧಿಷ್ಠಿರನನ್ನು ಕುರಿತು, ಯುದ್ಧದಲ್ಲಿ ಯಾರಿಗೂ ಸೋಲದವನೂ, ಮಹಾಬಲನೂ ಆದ ಭೀಮಸೇನನು ಎಲೈ ರಾಜನೇ, ನಿನ್ನ ಅಪ್ಪಣೆಯಂತೆ ನಾನು ಇವನನ್ನು ರಕ್ಷಿಸುವೆನು. ಶತ್ರುಗಳಿಗೆ ಸಮನಲ್ಲದ ನಾನು ಯುದ್ಧದಲ್ಲಿ ನನ್ನ ಬಾಹುಬಲವನ್ನು ಆಶ್ರಯಿಸಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವ ನನ್ನ ಈ ಮಹಾಕಾರ್ಯವನ್ನು ನೋಡುವವನಾಗು.
ಏಕಾಂತಮಾಶ್ರಿತೋ ರಾಜನ್ ತಿಷ್ಠ ತ್ವಂ ಭ್ರಾತೃಭಿಃ ಸಹ ॥22॥
ಅಯಂ ವೃಕ್ಷೋ ಮಹಾಸಾರೋ ಗಿರಿಮಾತ್ರೋ ವನಸ್ಪತಿಃ |
ಅಹಮೇನಂ ಸಮಾರುಜ್ಯ ಪೋಥಯಿಷ್ಯಾಮಿ ಶಾತ್ರವಾನ್ ॥23॥
ಎಲೈ ರಾಜನೇ, ನೀನು ಏಕಾಂತದಲ್ಲಿ ಸಹೋದರರ ಜೊತೆಯಲ್ಲಿ ಇರುವವನಾಗು. ಈ ವೃಕ್ಷವು ಪರ್ವತದಂತೆ ಎತ್ತರವೂ ಮತ್ತು ಬಹಳ ಗಟ್ಟಿಯಾದುದ್ದೂ ಆಗಿದೆ. ಈ ವೃಕ್ಷವನ್ನು ಕಿತ್ತು ನಾನು ಶತ್ರುಗಳನ್ನು ಅದರಿಂದ ಬಡಿಯುವೆನು ಎಂದು ಹೇಳಿದನು.
ವೈಶಂಪಾಯನಃ
ತಂ ಮತ್ತಮಿವ ಮಾತಂಗಂ ವೀಕ್ಷಮಾಣಂ ವನಸ್ಪತಿಮ್ |
ಅಬ್ರವೀದ್ ಭ್ರಾತರಂ ವೀರಂ ಧರ್ಮರಾಜೋ ಯುಧಿಷ್ಠಿರಃ ॥24॥
ವೈಶಂಪಾಯನ ಮದಿಸಿದ ಗಜದಂತೆ ಆ ವೃಕ್ಷನನ್ನು ನೋಡುತ್ತಿದ್ದ ತನ್ನ ತಮ್ಮನಾದ ವೀರನಾದ ಭೀಮಸೇನನನ್ನು ಕುರಿತು ಧರ್ಮರಾಜನಾದ ಯುಧಿಷ್ಠಿರನು ಹೇಳಿದನು.
ಮಾ ಭೀಮ ಸಾಹಸಂ ಕಾರ್ಷೀಸ್ತಿಷ್ಠತ್ವೇಷ ವನಸ್ಪತಿಃ ॥25॥
ಮಾ ತ್ವಾಂ ವೃಕ್ಷೇಣ ಕರ್ಮಾಣಿ ಕುರ್ವಂತಮತಿಮಾನುಷಮ್ |
ಜನಾಃ ಸಮವಬುದ್ಧ್ಯೇರನ್ ಭೀಮೋಽಯಮಿತಿ ಭಾರತ ॥26॥
ಭೀಮನೇ, ಸಾಹಸವನ್ನು ಮಾಡಬೇಡ. ಈ ವೃಕ್ಷವು ಹಾಗೆಯೇ ಇರಲಿ. ಎಲೈ ಭಾರತನೇ, ಈ ವೃಕ್ಷದಿಂದ ಮನುಷ್ಯರಿಗೆ ಮೀರಿದ ಕರ್ಮಗಳನ್ನು ಮಾಡುವ ನಿನ್ನನ್ನು ಇವನು ಭೀಮನೆಂದು ಯಾವ ಜನರೂ ತಿಳಿಯದಿರಲಿ.
ಮಾ ಗೃಹೀಸ್ತ್ವಮಿಮಂ ವೃಕ್ಷಂ ಸಿಂಹನಾದಂ ಚ ಮಾನದ |
ವೃಕ್ಷಂ ಚೇತ್ ತ್ವಂ ನಯೇರ್ವೀರ ವಿಜ್ಞಾಸ್ಯತಿ ಜನೋ ಧ್ರುವಮ್ ॥27॥
ಅನ್ಯದೇವಾಯುಧಂ ಗೃಹ್ಯ ಪ್ರತಿಪದ್ಯಸ್ವ ಮಾನುಷಮ್ |
ಚಾಪಂ ವಾ ಯದಿ ವಾ ಶಕ್ತಿಂ ನಿಸಿತ್ರಂಶಂ ವಾ ಗೃಹಾಣ ಭೋ ॥28॥
ಎಲೈ ಮಾನದನೇ, ನೀನು ಈ ವೃಕ್ಷವನ್ನು ಕೀಳಬೇಡ. ಸಿಂಹನಾದವನ್ನೂ ಮಾಡಬೇಡ. ನೀನು ಈ ವೃಕ್ಷವನ್ನು ಹಿಡಿದುಕೊಂಡು ಹೋದರೆ ಜನರು ಖಂಡಿತವಾಗಿ ನಿನ್ನನ್ನು ಭೀಮನೆಂದು ತಿಳಿಯುವರು. ಮನುಷ್ಯರು ಉಪಯೋಗಿಸುವ ಬೇರೆ ಯಾವುದಾದರೂ ಆಯುಧವನ್ನು ಹಿಡಿಯುವವನಾಗು. ಧನುಸ್ಸನ್ನಾಗಲೀ, ಶಕ್ತಿಯನ್ನಾಗಲೀ, ಖಡ್ಗವನ್ನಾಗಲೀ ತೆಗೆದುಕೊ.
ಯದೇವ ಮಾನುಷಂ ಭೀಮ ಭವೇದನ್ಯೈರಲಕ್ಷಿತಮ್ |
ತದೇವಾಯುಧಮಾದಾಯ ಮೋಚಯಾಶು ಮಹೀಪತಿಮ್ ॥29॥
ಎಲೈ ಭೀಮನೇ, ಅನ್ಯರು ಗಮನಿಸದಿರುವ ಯಾವ ಮಾನುಷ ಆಯುಧವಿದೆಯೋ ಆ ಆಯುಧವನ್ನೇ ತೆಗೆದುಕೊಂಡು ರಾಜನನ್ನು ಶೀಘ್ರವಾಗಿ ಬಿಡುಗಡೆಗೊಳಿಸು.
ಯವೌ ಚ ಪಕ್ಷರಕ್ಷೌ ತೇ ಭವಿತಾರೌ ಮಹಾಬಲೌ |
ವ್ಯಾಯಚ್ಛತಸ್ತೇ ಸಮರೇ ಮತ್ಸ್ಯರಾಜಂ ಪರೀಪ್ಸತಃ ॥30॥
ಮತ್ಸ್ಯರಾಜನನ್ನು ರಕ್ಷಿಸಲು ಯುದ್ಧದಲ್ಲಿ ಉದ್ಯುಕ್ತನಾದ ನಿನಗೆ ಮಹಾಬಲರಾದ ನಕುಲ ಸಹದೇವರು ಉಭಯಪಾರ್ಶ್ವಗಳಲ್ಲಿ ರಕ್ಷಕರಾಗುತ್ತಾರೆ.
ವೈಶಂಪಾಯನಃ
ಇತ್ಯುಕ್ತತ್ವ ಭೀಮಸೇನಂ ತಂ ಸ್ವಯಮೇವ ಯುಧಿಷ್ಠಿರಃ |
ಅನ್ವಯಾಜ್ಜವನೈರಶ್ವೈಃ ಪರೀಪ್ಸನ್ ಮತ್ಸ್ಯಸತ್ತಮಮ್ ॥31॥
ವೈಶಂಪಾಯನ ಭೀಮಸೇನನನ್ನು ಕುರಿತು ಹೀಗೆ ಹೇಳಿ ಯುಧಿಷ್ಠಿರನು ತಾನೇ ಶೀಘ್ರಗಾಮಿಗಳಾದ ಅಶ್ವಗಳಿಂದ ಮತ್ಸ್ಯರಾಜನನ್ನು ರಕ್ಷಿಸಲು ಹೊರಟನು.
ಭ್ರಾತುರ್ವಚನಮಾದಾಯ ಭೀಮೋ ವೃಕ್ಷಂ ವಿಸೃಜ್ಯ ಚ |
ಚಾಪಮಾದಾಯ ಸಂಪ್ರಾಪ್ತೋ ರಥಮಾರುಹ್ಯ ಪಾಂಡವಃ ॥32॥

ಅಣ್ಣನ ಮಾತುಗಳನ್ನು ಕೇಳಿ ಪಾಂಡುಪುತ್ರನಾದ ಭೀಮಸೇನನು ವೃಕ್ಷವನ್ನು ಬಿಟ್ಟು ಕೈಯಲ್ಲಿ ಧನುಸ್ಸನ್ನು ಹಿಡಿದು ರಥವನ್ನು ಏರಿ ಹೊರಟುಬಂದನು.
ತೇ ಸಂಹತಾಃ ಸರ್ವ ಏವ ಹಯಾನ್ ಪಾರ್ಥಾ ಅಚೋದಯನ್ |
ದಿವ್ಯಾಸ್ತ್ರಕುಶಲಾಃ ಸರ್ವೇ ನೀತಿಜ್ಞಾಶ್ಚಾಸ್ಪೃಶನ್ ಪರಾನ್ ॥33॥
ದಿವ್ಯಾಸ್ತ್ರಕುಶಲರಾದ, ರಾಜನೀತಿಯನ್ನು ತಿಳಿದ ಆ ಪಾಂಡವರೆಲ್ಲರೂ ಒಟ್ಟಾಗಿ ತಮ್ಮ ಅಶ್ವಗಳನ್ನು ಪ್ರೇರಿಸಿ ಶತ್ರುಗಳನ್ನು ತಲುಪಿದರು.
ತತಃ ಸಮಸ್ತಾಸ್ತೇ ಸರ್ವೇ ತುರಗಾನಭ್ಯಚೋದಯನ್ |
ದಿವ್ಯಮಸ್ತ್ರಂ ವಿಕುರ್ವಾಣಾಃ ತ್ರಿಗರ್ತಾಂಶ್ಚಾಪ್ಯುಪಾದ್ರವನ್ ॥34॥
ಅನಂತರ ಅವರೆಲ್ಲರೂ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ತ್ರಿಗರ್ತರ ಕಡೆಗೆ ವೇಗವಾಗಿ ಓಡುವಂತೆ ತಮ್ಮ ಅಶ್ವಗಳನ್ನು ಪ್ರಚೋದಿಸಿದರು.
ತಾನ್ ನಿವೃತ್ತರಥಾನ್ ದೃಷ್ಟ್ವಾ ಪಾಂಡವಾನ್ ಮಹತೀಂ ಚಮೂಮ್|
ವೈರಾಟಿಃ ಪರಮಕ್ರುದ್ಧೋ ಯುಯುಧೇ ಪರಮಾದ್ಭುತಮ್ ॥35॥
ಪಾಂಡವರು ತಮ್ಮ ರಥದಿಂದ ಪುನಃ ಹಿಂದಿರುಗಿದುದನ್ನು ನೋಡಿ ವಿರಾಟಪುತ್ರನು ಪರಮಕ್ರುದ್ಧನಾಗಿ ಶತ್ರುಗಳ ಸೈನ್ಯದ ಜೊತೆಯಲ್ಲಿ ಅದ್ಭುತವಾಗಿ ಯುದ್ಧವನ್ನು ಮಾಡಿದನು.
ತ್ರಿಗರ್ತಾಃ ಸಮತಿಕ್ರಮ್ಯ ಅಯುಧ್ಯಂತ ಜಯೈಷಿಣಃ ॥36॥
ತಾನ್ ಭೀಮಸೇನಃ ಸಂಕ್ರುದ್ಧಃ ಸರ್ವಶಸ್ತ್ರಭೃತಾಂ ವರಃ |
ದ್ವಿಸಹಸ್ರಂ ರಥಾನ್ ವೀರಃ ಪರಲೋಕಂ ಪ್ರವೇಶಯತ್ ॥37॥
ಜಯವನ್ನು ಬಯಸುವ ತ್ರಿಗರ್ತರು ಅವನನ್ನು ಮೀರಿ ಯುದ್ಧವನ್ನು ಮಾಡಿದರು. ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ವೀರನಾದ ಕ್ರೋಧಗೊಂಡ ಭೀಮಸೇನನು ಅವರಲ್ಲಿ ಎರಡು ಸಹಸ್ರ ರಥಗಳನ್ನು ಪರಲೋಕಕ್ಕೆ ಕಳುಹಿಸಿದನು.
ಸಹಸ್ರಂ ಪ್ರಾಹಿಣೋದ್ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ನಕುಲಶ್ಚಾಪಿ ಸಪ್ತೈವ ಶತಾನಿ ಪ್ರಾಹಿಣೋಚ್ಛರೈಃ ॥38॥
ಕುಂತೀಪುತ್ರನಾದ ಯುಧಿಷ್ಠಿರರಾಜನು ಒಂದು ಸಹಸ್ರರಥಗಳನ್ನೂ ಮತ್ತು ನಕುಲನು ತನ್ನ ಬಾಣಗಳಿಂದ ಏಳನೂರು ರಥಗಳನ್ನು ಪರಲೋಕಕ್ಕೆ ಕಳುಹಿಸಿದನು.
ಶತಾನಿ ತ್ರೀಣಿ ಶೂರಾಣಾಂ ಸಹದೇವಃ ಪ್ರತಾಪವಾನ್ |
ಯುಧಿಷ್ಠಿರಸಮಾದಿಷ್ಟೋ ನಿಜಘ್ನೇ ಪುರುಷರ್ಷಭಃ ॥39॥
ಯುಧಿಷ್ಠಿರನಿಂದ ಆದೇಶವನ್ನು ಪಡೆದ ಪುರುಷರ್ಷಭನೂ, ಪ್ರತಾಪಶಾಲಿಯೂ ಆದ ಸಹದೇವನು ಮುನ್ನೂರು ಶೂರರನ್ನು ಸಂಹಾರ ಮಾಡಿದನು.
ಪ್ರವಿಶ್ಯ ಮಹತೀಂ ಸೇನಾಂ ತ್ರಿಗರ್ತಾನಾಂ ಮಹಾಬಲಾಃ |
ಕ್ಷೋಭಯಂತಶ್ಚ ಸೈನ್ಯಾನಿ ಸಿಂಹಾಃ ಕ್ಷುದ್ರಮೃಗಾನಿವ ॥40॥
ಮಹಾಬಲರಾದ ಪಾಂಡವರು ತ್ರಿಗರ್ತರ ದೊಡ್ಡ ಸೈನ್ಯವನ್ನು ಪ್ರವೇಶಿಸಿ, ಸಿಂಹವು ಕ್ಷುದ್ರಮೃಗಗಳನ್ನು ಹಿಡಿದು ಅವುಗಳನ್ನು ಅಲ್ಲೋಲಕಲ್ಲೋಲ ಮಾಡುವಂತೆ ಆ ಸೈನ್ಯವನ್ನು ಕ್ಷೋಭೆಗೊಳಿಸಿದರು.
ತತೋ ಯುಧಿಷ್ಠಿರೋ ರಾಜಾ ತ್ವರಮಾಣೋ ಮಹಾಬಲಃ |
ಅಭಿದ್ರುತ್ಯ ಸುಶರ್ಮಾಣಂ ಶರೈರಭ್ಯಹನದ್ ಭೃಶಮ್ ॥41॥
ಆಗ ಮಹಾಬಲನಾದ ಯುಧಿಷ್ಠಿರನು ತ್ವರೆಯಿಂದ ಮುಂದೆ ಹೋಗಿ ಸುಶರ್ಮನಿಗೆ ಬಾಣಗಳಿಂದ ಚೆನ್ನಾಗಿ ಹೊಡೆದನು.
ಸುಶರ್ಮಾಽಪಿ ಸುಸಂಕ್ರುದ್ಧಸ್ತ್ವರಮಾಣೋ ಯುಧಿಷ್ಠಿರಮ್ |
ಅವಿಧ್ಯದ್ ದಶಭಿರ್ಬಾಣೈಶ್ಚತುರ್ಭಿಶ್ಚತುರೋ ಹಯಾನ್ ॥42॥
ಕೋಪಗೊಂಡ ಸುಶರ್ಮನೂ ಕೂಡ ಯುಧಿಷ್ಠಿರನ ಮೇಲೆ ಹತ್ತು ಬಾಣಗಳನ್ನು ಅವನ ನಾಲ್ಕು ಅಶ್ವಗಳ ಮೇಲೆ ನಾಲ್ಕು ಬಾಣಗಳನ್ನು ಪ್ರಯೋಗಿಸಿದನು.
ತತೋ ರಾಜನ್ ಕ್ಷಿಪ್ರಕಾರೀ ಕುಂತೀಪುತ್ರೋ ವೃಕೋದರಃ |
ಸಮಾಸಾದ್ಯ ಸುಶರ್ಮಾಣಮಶ್ವಾಂಸ್ತಸ್ಯ ನ್ಯಪಾತಯತ್ ॥43॥
ಎಲೈ ರಾಜನೇ, ಆಗ ಶೀಘ್ರಕಾರಿಯಾದ ಕುಂತೀಪುತ್ರನಾದ ವೃಕೋದರನು ಸುಶರ್ಮನನ್ನು ಸಮೀಪಿಸಿ ಅವನ ಅಶ್ವಗಳನ್ನು ಹೊಡೆದು ಉರುಳಿಸಿದನು.
ಪೃಷ್ಠಗೋಪಾಂಸ್ತು ತಸ್ಯಾಥ ಹತ್ವಾ ಪರಮಸಾಯಕೈಃ |
ಅಥಾಸ್ಯ ಸಾರಥಿಂ ಕ್ರುದ್ಧೋ ರಥೋಪಸ್ಥಾದಪಾತಯತ್ ॥44॥
ಅವನ ಹಿಂದಿದ್ದ ರಕ್ಷಕರನ್ನು ಶ್ರೇಷ್ಠವಾದ ಬಾಣಗಳಿಂದ ಕೊಂದು ಅನಂತರ ಕ್ರುದ್ಧನಾದ ಅವನು ರಥದ ಮುಂಭಾಗದಲ್ಲಿದ್ದ ಅವನ ಸಾರಥಿಯನ್ನು ಕೆಡವಿದನು.
ಚಕ್ರರಕ್ಷಸ್ತು ಶೂರಶ್ಚ ಶೋಣಾಶ್ವೋ ನಾಮ ನಾಮತಃ |
ಸ ಭಯಾದ್ ವಿರಥಂ ದೃಷ್ಟ್ವಾ ತ್ರಿಗರ್ತಂ ವ್ಯಾಜಹಾತ್ ತದಾ ॥45॥
ತ್ರಿಗರ್ತನ ಚಕ್ರರಕ್ಷಕನಾಗಿದ್ದ ಶೂರನಾದ ಶೋಣಾಶ್ವನೆಂಬುವನು ವಿರಥನಾದ ತ್ರಿಗರ್ತನನ್ನು ನೋಡಿ ಭಯದಿಂದ ರಥವನ್ನು ತ್ಯಜಿಸಿ ಹೊರಟು ಹೋದನು.

ತತೋ ವಿರಾಟಃ ಪ್ರಸ್ಕಂದ್ಯ ರಥಾದಥ ಸುಶರ್ಮಣಃ |
ಗದಾಮಸ್ಯ ಪರಾಮೃಶ್ಯ ತಮೇವಾಭ್ಯಹನದ್ ಬಲೀ ॥46॥
ಆಗ ವಿರಾಟನು ಸುಶರ್ಮನ ರಥದಿಂದ ತಪ್ಪಿಸಿಕೊಂಡು ಅವನ ಗದೆಯನ್ನು ತೆಗೆದುಕೊಂಡು ಬಲಿಷ್ಠನಾದ ಅವನು ಅವನಿಗೇ ಹೊಡೆದನು.
ಸ ಚಚಾರ ಗದಾಪಾಣಿರ್ವೃದ್ಧೋಽಪಿ ತರುಣೋ ಯಥಾ ॥47॥
ಅವನು ಕೈಯಲ್ಲಿ ಗದೆಯನ್ನು ಹಿಡಿದು ವೃದ್ಧನಾದರೂ ತರುಣನಂತೆ ಸಂಚರಿಸಿದನು.
ಭೀಮಸ್ತು ಭೀಮಸಂಕಾಶೋ ರಥಾತ್ ಪ್ರಸ್ಕಂದ್ಯ ವೀರ್ಯವಾನ್ |
ತ್ರಿಗರ್ತರಾಜಮಾದತ್ತ ಸಿಂಹಃ ಕ್ಷುದ್ರಮೃಗಂ ಯಥಾ ॥48॥
ಸಂಹಾರಕನಾದ ರುದ್ರನಂತೆ ಕಾಣುತ್ತಿದ್ದ ಪರಾಕ್ರಮಶಾಲಿಯಾದ ಭೀಮನೂ ಸಹ ತನ್ನ ರಥದಿಂದ ನೆಗೆದು ಸಿಂಹವು ಕ್ಷುದ್ರಮೃಗವನ್ನು ಹಿಡಿಯುವಂತೆ ತ್ರಿಗರ್ತರಾಜನನ್ನು ಹಿಡಿದನು.
ತಸ್ಮಿನ್ ವೀರೇ ಗೃಹೀತೇ ತು ತ್ರಿಗರ್ತಾನಾಂ ಮಹಾರಥೇ |
ಅಭಜ್ಯತ ಬಲಂ ಸರ್ವಂ ತ್ರಿಗರ್ತಾನಾಂ ಭಯಾತುರಮ್ ॥49॥
ವೀರನೂ ಮಹಾರಥನೂ ಆದ ತ್ರಿಗರ್ತಾಧಿಪತಿಯು ಹಿಡಿಯಲ್ಪಡುತ್ತಿರಲು ತ್ರಿಗರ್ತರ ಸೈನ್ಯವೆಲ್ಲವೂ ಭಯದಿಂದ ಕೂಡಿದುದಾಗಿ ಭಗ್ನವಾಯಿತು.
ನಿವರ್ತ್ಯ ಗಾಸ್ತತಃ ಸರ್ವಾಃ ಪಾಂಡುಪುತ್ರಾಃ ಮಹಾಬಲಾಃ |
ಅವಜಿತ್ಯ ಸುಶರ್ಮಾಣಂ ಧನಂ ಚಾದಾಯ ಸರ್ವಶಃ ॥50॥
ಸ್ವಬಾಹುಬಲಸಂಪನ್ನಾ ಹ್ರೀನಿಷೇಧಾ ಯತವ್ರತಾಃ |
ವಿರಾಟಸ್ಯ ಮಹಾತ್ಮಾನಃ ಪರಿಕ್ಲೇಶವಿನಾಶನಾಃ ॥51॥
ಸ್ಥಿತಾಃ ಸಮಕ್ಷಂ ತೇ ಸರ್ವೇ ತ್ವಥ ಭೀಮೋಽಭ್ಯಭಾಷತ ॥52॥
ಮಹಾಬಲರಾದ ಪಾಂಡುಪುತ್ರರು ಸುಶರ್ಮನನ್ನು ಗೆದ್ದು ಎಲ್ಲಾ ಗೋವುಗಳನ್ನು ಹಿಂದಿರುಗಿಸಿ, ಎಲ್ಲಾ ಗೋಧನವನ್ನು ತೆಗೆದುಕೊಂಡು ತಮ್ಮ ಬಾಹುಬಲ ಸಂಪನ್ನರಾಗಿ ದಾಕ್ಷಿಣ್ಯವುಳ್ಳವರಾಗಿ ತಮ್ಮ ರಥದಲ್ಲಿ ತಾವು ಇರುವವರಾಗಿ ವಿರಾಟನ ಕ್ಲೇಶಗಳನ್ನು ಪರಿಹಾರ ಮಾಡಿ ಮಹಾತ್ಮರಾದ ಅವರೆಲ್ಲರೂ ನಿಂತಿರಲು ಆಗ ಭೀಮಸೇನನು ಮಾತನಾಡಿದನು.
ನಾಯಂ ಪಾಪಸಮಾಚಾರೋ ಮತ್ತೋ ಜೀವಿತುಮರ್ಹತಿ |
ಕಿಂ ನು ಶಕ್ಯಂ ಮಯಾ ಕರ್ತುಂ ಯದ್ ರಾಜಾ ಸತತಂ ಘೃಣೀ ॥53॥
ಈ ಪಾಪಕರ್ಮವನ್ನು ಆಚರಿಸುವ ಸುಶರ್ಮನು ನನ್ನಿಂದ ಬದುಕಲು ಯೋಗ್ಯನಲ್ಲ. ರಾಜನಾದ ಯುಧಿಷ್ಠಿರನು ಯಾವಾಗಲೂ ದಯಾಳುವಾಗಿದ್ದಾನೆ. ನಾನು ಏನು ಮಾಡಲು ಸಾಧ್ಯ? (ಎಂದು ಹೇಳಿದನು).
ಗಲೇ ಗೃಹೀತ್ವಾ ರಾಜಾನಮಾನೀಯ ವಿವಶಂ ವಶಮ್ |
ತತ ಏನಂ ವಿಚೇಷ್ಟಂತಂ ಬದ್ಧ್ವಾ ಪಾರ್ಥೋ ವೃಕೋದರಃ ॥54॥
ರಥಮಾರೋಪಯಾಮಾಸ ವಿಸಂಜ್ಞಂ ಪಾಂಸುಕುಂಠಿತಮ್ ॥55॥
ತನ್ನ ವಶನಾಗಿ ವಿವಶನಾಗಿದ್ದ ಸುಶರ್ಮರಾಜನನ್ನು ಕಂಠದಲ್ಲಿ ಹಿಡಿದು ಒದ್ದಾಡುತ್ತಿದ್ದ ಅವನನ್ನು ಬಂಧಿಸಿ ಕುಂತೀಪುತ್ರನಾದ ವೃಕೋದರನು ಸಂಜ್ಞೆಯನ್ನು ಕಳೆದುಕೊಂಡು ಧೂಳುಗಳಿಂದ ಆವೃತನಾಗಿದ್ದ ಅವನನ್ನು ತನ್ನ ರಥದಲ್ಲಿ ಏರಿಸಿದನು.
ಅಭ್ಯೇತ್ಯ ರಣಮಧ್ಯಸ್ಥಮಭ್ಯಾಗಚ್ಛದ್ ಯುಧಿಷ್ಠಿರಮ್ |
ದರ್ಶಯಾಮಾಸ ಭೀಮಸ್ತು ಸುಶರ್ಮಾಣಂ ನರಾಧಿಪಮ್ ॥56॥
ಪ್ರೋವಾಚ ಪುರುಷವ್ಯಾಘ್ರೋ ಭೀಮಮಾಹವಶೋಭಿನಮ್ ॥57॥
ತಂ ರಾಜಾ ಪ್ರಾಹಸದ್ ದೃಷ್ಟ್ವಾ ಮುಚ್ಯತಾಂ ವೈ ನರಾಧಮಃ ॥58॥
ಅವನು ರಣಮಧ್ಯದಲ್ಲಿದ್ದ ಯುಧಿಷ್ಠಿರನನ್ನು ಸಮೀಪಿಸಿ ಸುಶರ್ಮರಾಜನನ್ನು ಯುಧಿಷ್ಠಿರನಿಗೆ ತೋರಿಸಿದನು. ಪುರುಷವ್ಯಾಘ್ರನಾದ ಧರ್ಮರಾಜನು ಸುಶರ್ಮನನ್ನು ನೋಡಿ ನಕ್ಕು ಭೀಮಸೇನನನ್ನು ಕುರಿತು ಈ ನರಾಧಮನನ್ನು ಬಿಡುಗಡೆ ಮಾಡು ಎಂದು ಹೇಳಿದನು.
ವೈಶಂಪಾಯನಃ
ಏವಮುಕ್ತೋಽಬ್ರವೀದ್ ಭೀಮಃ ಸುಶರ್ಮಾಣಂ ಮಹಾಬಲಮ್ ॥
ಜೀವಿತುಂ ಚೇಚ್ಛಸೇ ಮೂಢ ಹೇತುಂ ಮೇ ಗದತಃ ಶೃಣು |
ದಾಸೋಽಸ್ಮೀತಿ ತ್ವಯಾ ವಾಚ್ಯಂ ಸಂಸತ್ಸು ಚ ಸಭಾಸು ಚ ॥60॥
ಏವಂ ತೇ ಜೀವಿತಂ ದದ್ಯಾಮೇಷ ಯುದ್ಧಜಿತೋ ವಿಧಿಃ ॥61॥
ಹೀಗೆ ಹೇಳಲ್ಪಟ್ಟ ಭೀಮಸೇನನು ಮಹಾಬಲನಾದ ಸುಶರ್ಮನನ್ನು ಕುರಿತು ಮೂಢನೇ, ನೀನು ಬದುಕಲು ಇಚ್ಛಿಸುತ್ತಿದ್ದೀಯೆ. ಬದುಕಬೇಕಾದರೆ ಷರತ್ತನ್ನು ಹೇಳುತ್ತೇನೆ, ಕೇಳು. ನಾನು ಯುಧಿಷ್ಠಿರನ ದಾಸನಾಗಿದ್ದೇನೆ ಎಂದು ಸಭೆಯಲ್ಲಿಯೂ ಸಂಸತ್ತಿನಲ್ಲಿಯೂ ಹೇಳಬೇಕು. ಹಾಗಾದರೆ ಮಾತ್ರ ನಿನಗೆ ಜೀವವನ್ನು ಕೊಡುತ್ತೇನೆ. ಇದು ಯುದ್ಧದಲ್ಲಿ ಪರಾಜಿತರಾದವರು ಅನುಸರಿಸಬೇಕಾದ ನೀತಿ ಎಂದು ಹೇಳಿದನು.
ವೈಶಂಪಾಯನಃ
ತಮುವಾಚ ತತೋ ಜ್ಯೇಷ್ಠೋ ಭ್ರಾತಾ ಸಪ್ರಣಯಂ ವಚಃ ॥62॥
ಮುಂಚ ಮುಂಚಾಧಮಾಚಾರಂ ಪ್ರಮಾಣಂ ಯದಿ ತೇ ವಯಮ್ |

ದಾಸಭಾವಂ ಗತೋ ಹ್ಯೇಷ ವಿರಾಟಸ್ಯ ಮಹೀಪತೇಃ ॥63॥
ಅದಾಸೋ ಗಚ್ಛ ಮುಕ್ತೋಽಸಿ ಮೈವಂ ಕಾರ್ಷೀಃ ಕದಾಚನ ॥64॥
ವೈಶಂಪಾಯನ ಆಗ ಭೀಮಸೇನನ ಅಣ್ಣನಾದ ಯುಧಿಷ್ಠಿರನು ಭೀಮಸೇನನನ್ನು ಕುರಿತು ಪ್ರೀತಿಪೂರ್ವಕವಾಗಿ, ನನ್ನ ಮೇಲೆ ಗೌರವವಿದ್ದರೆ ಈ ಅಧಮಕಾರ್ಯವನ್ನು ಮಾಡುವವನನ್ನು ಬಿಟ್ಟುಬಿಡು, ಬಿಟ್ಟುಬಿಡು. ಇವನು ವಿರಾಟನ ದಾಸನಾಗಿದ್ದಾನೆ. ಎಲೈ ಸುಶರ್ಮನೇ, ನೀನು ದಾಸಭಾವದಿಂದ ಮುಕ್ತನಾಗಿದ್ದೀಯೆ. ಹೋಗು, ಇನ್ನೊಮ್ಮೆ ಇಂತಹ ಕೆಲಸವನ್ನು ಮಾಡಬೇಡ ಎಂದು ಹೇಳಿದನು.
ವೈಶಂಪಾಯನಃ
ಏವಮುಕ್ತೇ ತು ಸವ್ರೀಡಃ ಸುಶರ್ಮಾಽಸೀದಧೋಮುಖಃ ॥65॥
ಮೋಚಯಿತ್ವಾ ವಿರಾಟಂ ತು ಪಾಂಡವಾಸ್ತೇ ಹತದ್ವಿಷಃ |
ಸ್ವಬಾಹುಬಲಸಂಪನ್ನಾ ಹ್ರೀನಿಷೇಧಾ ಯತವ್ರತಾಃ ॥66॥
ಸಂಗ್ರಾಮಶಿರಸೋ ಮಧ್ಯೇ ತಾಂ ರಾತ್ರಿಂ ಸುಖಿನೋಽವಸನ್ ॥67॥
ವೈಶಂಪಾಯನ ಯುಧಿಷ್ಠಿರನು ಹೀಗೆ ಹೇಳುತ್ತಿರಲು ಸುಶರ್ಮನು ನಾಚಿಕೆಯಿಂದ ತಲೆ ತಗ್ಗಿಸಿದನು. ತಮ್ಮ ಬಾಹುಬಲದಿಂದ ಸಂಪನ್ನರಾದ ದಾಕ್ಷಿಣ್ಯಸ್ವಭಾವದ ವ್ರತಾಚರಣ ನಿರತರಾದ ಪಾಂಡವರು ಶತ್ರುಗಳ ಸಂಹಾರವನ್ನು ಮಾಡಿ ವಿರಾಟನನ್ನೂ ಬಂಧನದಿಂದ ಬಿಡುಗಡೆಗೊಳಿಸಿ ರಣಾಂಗಣ ಮಧ್ಯದಲ್ಲಿಯೇ ಆ ರಾತ್ರಿಯನ್ನು ಸುಖವಾಗಿ ಕಳೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತೈದನೆಯ ಅಧ್ಯಾಯ
ಯುಧಿಷ್ಠಿರನ ಪ್ರೇರಣೆಯಂತೆ ವಿರಾಟನ ದೂತರಿಂದ ನಗರದಲ್ಲಿ
ವಿರಾಟನ ಜಯಘೋಷಣೆ
ವೈಶಂಪಾಯನಃ
ತತೋ ವಿರಾಟಃ ಕೌಂತೇಯಾನತಿಮಾನುಷವಿಕ್ರಮಾನ್ |
ಅರ್ಚಯಾಮಾಸ ವಿತ್ತೇನ ಮಾನೇನ ಚ ಮಹಾರಥಾನ್ ॥1॥
ವಚಸಾ ಚೈವ ಸಾಂತ್ವೇನ ಸ್ನೇಹೇನ ಚ ಮುದಾಽನ್ವಿತಃ ॥2॥
ವೈಶಂಪಾಯನ ಅನಂತರ ವಿರಾಟನು ಮನುಷ್ಯರಿಗೆ ಮೀರಿದ ಪರಾಕ್ರಮವುಳ್ಳ ಮಹಾರಥರಾದ ಕೌಂತೇಯರನ್ನು ಧನದಿಂದಲೂ, ಸನ್ಮಾನದಿಂದಲೂ, ವಿಧವಿಧವಾದ ಮಾತುಗಳಿಂದಲೂ, ಸ್ನೇಹದಿಂದಲೂ, ಸಂತೋಷದಿಂದಲೂ ಕೂಡಿದವನಾಗಿ ಅರ್ಚಿಸಿದನು.
ಯಥೈವ ಮಮ ರತ್ನಾನಿ ಯುಷ್ಮಾಕಂ ತಾನಿ ವೈ ತಥಾ |
ಕಾರ್ಯಂ ಕುರುತ ತೈಃ ಸರ್ವೈರ್ಯಥಾಕಾಮಂ ಯಥಾಸುಖಮ್ ॥3॥
ದದಾಮ್ಯಲಂಕೃತಾಃ ಕನ್ಯಾ ವಸೂನಿ ವಿವಿಧಾನಿ ಚ |
ಮನಸಾ ಚಾಪ್ಯಭಿಪ್ರೇತಂ ಯದ್ ವಃ ಶತ್ರುನಿಬರ್ಹಣಾಃ ॥4॥
ಯುಷ್ಮಾಕಂ ವಿಕ್ರಮಾದದ್ಯ ಮುಕ್ತೋಽಹಂ ಸ್ವಸ್ತಿಮಾನಿತಿ |
ತಸ್ಮಾದ್ ಭವಂತೋ ಮತ್ಸ್ಯಾನಾಮೀಶ್ವರಾಃ ಸರ್ವ ಏವ ಹಿ ॥5॥
ಈ ರತ್ನಗಳು ಹೇಗೆ ನನ್ನವೋ, ಅದರಂತೆ ನಿಮ್ಮವೂ ಆಗಿವೆ. ನಿಮಗೆ ಇಷ್ಟಬಂದಂತೆ ನಿಮಗೆ ಸುಖವಾಗುವಂತೆ ಅವುಗಳಿಂದ ಬೇಕಾದ ಕಾರ್ಯಗಳನ್ನು ಮಾಡಿ. ಎಲೈ ಶತ್ರುಸಂಹಾರಕರೇ, ಅಲಂಕೃತರಾದ ಕನ್ಯೆಯರನ್ನೂ, ವಿಧವಿಧವಾದ ಧನವನ್ನೂ ಮತ್ತು ನಿಮ್ಮ ಮನಸ್ಸಿಗೆ ಇಷ್ಟವಾದುದನ್ನೂ ಕೊಡುವೆನು. ಈ ದಿನ ನಿಮ್ಮ ಪರಾಕ್ರಮದಿಂದ ನಾನು ಕ್ಷೇಮದಿಂದ ಬಿಡುಗಡೆಯನ್ನು ಹೊಂದಿದ್ದೇನೆ. ಆದ್ದರಿಂದ ನೀವೆಲ್ಲರೂ ಮತ್ಸ್ಯದೇಶಕ್ಕೆ ಒಡೆಯರಾದವರು.
ವೈಶಂಪಾಯನಃ
ತಂ ತಥಾವಾದಿನಂ ಸರ್ವೇ ಕೌರವೇಯಾಃ ಪೃಥಕ್ ಪೃಥಕ್ |
ಊಚುಃ ಪ್ರಹೃಷ್ಟಮನಸೋ ಯುಧಿಷ್ಠಿರಪುರೋಗಮಾಃ ॥6॥
ಪ್ರತಿನಂದಾಮಹೇ ವಾಚಂ ಸರ್ವಥೈವ ವಿಶಾಂಪತೇ |
ಏತೇನೈವಾದ್ಯ ಪ್ರೀತಾಃ ಸ್ಮೋ ಯತ್ ತ್ವಂ ಮುಕ್ತೋಽಸಿ ಶತ್ರುಭಿಃ ॥7॥
ಯತ್ ತ್ವಂ ಮುಕ್ತೋಽಸಿ ಶತ್ರುಭ್ಯೋ ಹ್ಯೇತತ್ ಕಾರ್ಯಂ ಹಿತಂ ಹಿ ನಃ |
ನ ಕಿಂಚಿದ್ ಕಾರ್ಯಮಸ್ಮಾಕಂ ನ ಧನಂ ಮೃಗಯಾಮಹೇ ॥8॥
ವೈಶಂಪಾಯನ ಹಾಗೆ ಮಾತನಾಡುತ್ತಿದ್ದ ವಿರಾಟನನ್ನು ಕುರಿತು ಯುಧಿಷ್ಠಿರ ಮೊದಲಾದ ಪಾಂಡವರು ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಪ್ರತ್ಯೇಕವಾಗಿ ಅವನಿಗೆ ಹೇಳಿದರು `ಎಲೈ ರಾಜನೇ, ನಿನ್ನ ಮಾತುಗಳನ್ನು ನಾವು ಎಲ್ಲಾ ರೀತಿಯಿಂದಲೂ ಅಭಿನಂದಿಸುತ್ತೇವೆ. ನೀನು ಶತ್ರುಗಳಿಂದ ಮುಕ್ತನಾಗಿರುವುದರಿಂದಲೇ ನಾವು ಈ ದಿನ ಸಂತೋಷಗೊಂಡಿದ್ದೇವೆ. ನೀನು ಶತ್ರುಗಳಿಂದ ಮುಕ್ತನಾಗಿರುವುದು ನಮಗೆ ಅತ್ಯಂತ ಪ್ರಿಯವಾದ ಕಾರ್ಯ. ನಮಗೆ ಬೇರೆ ಏನೂ ಆಗಬೇಕಾಗಿಲ್ಲ. ನಿನ್ನ ಧನವನ್ನು ನಾವು ಅಪೇಕ್ಷಿಸುವುದಿಲ್ಲ'.
ವೈಶಂಪಾಯನಃ

ಅಥಾಬ್ರವೀತ್ ಪ್ರೀತಮನಾ ಮತ್ಸ್ಯರಾಜೋ ಯುಧಿಷ್ಠಿರಮ್ |
ಪುನರೇವ ಮಹಾಬಾಹುರ್ವಿರಾಟೋ ರಾಜಸತ್ತಮಃ ॥9॥
ವೈಶಂಪಾಯನ ಆಗ ಸಂತೋಷಗೊಂಡ ಮನಸ್ಸಿನಿಂದ ಮಹಾಬಾಹುವೂ, ರಾಜಶ್ರೇಷ್ಠನೂ, ಮತ್ಸ್ಯರಾಜನೂ ಆದ ವಿರಾಟನು ಪುನಃ ಯುಧಿಷ್ಠಿರನನ್ನು ಕುರಿತು ಮಾತನಾಡಿದನು.
ಏಹಿ ತ್ವಾಮಭಿಷೇಕ್ಷ್ಯಾಮಿ ಮತ್ಸ್ಯರಾಜಸ್ತು ನೋ ಭವಾನ್ ॥10॥
ಮನಸಾ ಚಾಪ್ಯಭಿಪ್ರೇತಂ ಯತ್ ತೇ ಶತ್ರುನಿಬರ್ಹಣ |
ತತ್ ತುಭ್ಯಂ ಸಂಪ್ರದಾಸ್ಯಾಮಿ ಸರ್ವಮರ್ಹತಿ ನೋ ಭವಾನ್ ॥11॥
ಬಾ, ನಾನು ನಿನಗೆ ಅಭಿಷೇಕವನ್ನು ಮಾಡುತ್ತೇನೆ. ನೀನೇ ನಮ್ಮ ಮತ್ಸ್ಯದೇಶದ ಅಧಿಪತಿ. ಎಲೈ ಶತ್ರುಸಂಹಾರಕನೇ, ನಿನ್ನ ಮನಸ್ಸಿಗೆ ಯಾವುದು ಅಭಿಪ್ರೇತವಾಗಿದೆಯೋ ಅದನ್ನು ನಿನಗೆ ಕೊಡುವೆನು. ನೀನು ನಮ್ಮಿಂದ ಎಲ್ಲವನ್ನೂ ಸ್ವೀಕರಿಸುವುದಕ್ಕೆ ಅರ್ಹನಾಗಿದ್ದೀಯೆ.
ರತ್ನಾನಿ ಗಾಃ ಸುವರ್ಣಂ ಚ ಮಣಿಮುಕ್ತಮಥಾಪಿ ಚ |
ವೈಯಾಘ್ರಪದ್ಯ ವಿಪ್ರೇಂದ್ರ ಸರ್ವಥೈವ ನಮೋಽಸ್ತು ತೇ ॥12॥
ರತ್ನಗಳು, ಗೋವುಗಳು, ಸುವರ್ಣ, ಮಣಿಗಳು, ಮುತ್ತುಗಳು (ಎಲ್ಲದಕ್ಕೂ ಅರ್ಹನಾಗಿದ್ದೀಯೆ). ಎಲೈ ವೈಯಾಘ್ರಪದ್ಯನಾದ ಬ್ರಾಹ್ಮಣಶ್ರೇಷ್ಠನೇ, ನಿನಗೆ ಸರ್ವರೀತಿಯಿಂದಲೂ ನನ್ನ ನಮಸ್ಕಾರ.
ತ್ವತ್ಕೃತೇ ಹ್ಯದ್ಯ ಪಶ್ಯಾಮಿ ರಾಜ್ಯಮಾತ್ಮಾನಮೇವ ಚ |
ಯತಶ್ಚ ಜಾತಃ ಸಂರಂಭಃ ಸ ಚ ಶತ್ರುರ್ವಶಂ ಗತಃ ॥13॥
ನಿನ್ನ ಅನುಗ್ರಹದಿಂದ ನಾನು ಈ ದಿನ ನನ್ನ ರಾಜ್ಯವನ್ನು ಮತ್ತು ನನ್ನನ್ನು ನೋಡುತ್ತಿದ್ದೇನೆ. ಯಾವ ಸುಶರ್ಮನಿಂದ ಕದನ ಉಂಟಾಯಿತೋ ಅಂತಹ ಶತ್ರುವು ವಶನಾಗಿದ್ದಾನೆ.
ವೈಶಂಪಾಯನಃ
ತತೋ ಯುಧಿಷ್ಠಿರೋ ಮಾತ್ಸ್ಯಂ ಪುನರೇವಾಬ್ರವೀದ್ ವಚಃ ॥14॥
ಪ್ರತಿನಂದಾಮಿ ತೇ ವಾಕ್ಯಂ ಮನೋಜ್ಞಂ ಮಾತ್ಸ್ಯ ಭಾಷಿತಮ್ |
ಆನೃಶಂಸ್ಯಪರೋ ನಿತ್ಯಂ ಸುಮುಖಃ ಸತತಂ ಭವ ॥15॥
ವೈಶಂಪಾಯನ ಆಗ ಯುಧಿಷ್ಠಿರನು ವಿರಾಟನನ್ನು ಕುರಿತು ಪುನಃ ಎಲೈ ಮತ್ಸ್ಯರಾಜನೇ, ನಿನ್ನ ಮನೋಹರವಾದ ಮಾತುಗಳನ್ನು ನಾನು ಅಭಿನಂದಿಸುತ್ತೇನೆ. ಯಾವಾಗಲೂ ದಯೆಯಿಂದ ಕೂಡಿದವನಾಗಿದ್ದು ಸುಮುಖನಾಗಿರು ಎಂದು ಹೇಳಿದನು.
ವೈಶಂಪಾಯನಃ
ಪುನರೇವ ವಿರಾಟಶ್ಚ ರಾಜಾ ಕಂಕಮಭಾಷತ ॥16॥
ಅಹೋ ಸೂದಸ್ಯ ಕರ್ಮಾಣಿ ವಲಲಸ್ಯ ದ್ವಿಜೋತ್ತಮ |
ಸೋಽಹಂ ಶೂದ್ರೇಣ ಸಂಗ್ರಾಮೇ ವಲಲೇನಾಭಿರಕ್ಷಿತಃ ॥17॥
ವೈಶಂಪಾಯನ ಪುನಃ ವಿರಾಟರಾಜನು ಕಂಕನನ್ನು ಕುರಿತು ಮಾತನಾಡಿದನು `ಎಲೈ ದ್ವಿಜೋತ್ತಮನೇ, ಸೂದನಾದ ವಲಲನ ಕರ್ಮಗಳು ಎಷ್ಟು ಆಶ್ಚರ್ಯಕರವಾದವು! ಅಂತಹ ನಾನು ಈ ದಿನ ಯುದ್ಧದಲ್ಲಿ ಒಬ್ಬ ಶೂದ್ರನಿಂದ ರಕ್ಷಿಸಲ್ಪಟ್ಟಿದ್ದೇನೆ'.
ತ್ವತ್ಕೃತೇ ಸರ್ವಮೇವೈತದುಪಪನ್ನಂ ಮಮಾನಘ |
ವರಂ ವೃಣೀಷ್ವ ಭದ್ರಂ ತೇ ಬ್ರೂಹಿ ಕಿಂ ಕರವಾಣಿ ತೇ ॥18॥
ಎಲೈ ಅನಘನೇ, ಇವೆಲ್ಲವೂ ನಿನ್ನ ನಿಮಿತ್ತದಿಂದ ಉಂಟಾಗಿವೆ. ನಿನಗೆ ಮಂಗಳವಾಗಲಿ, ವರವನ್ನು ಕೇಳು. ನಾನು ನಿನಗೆ ಏನನ್ನು ಮಾಡಲಿ ಎಂದು ಹೇಳು.
ದದಾಮಿ ತೇ ಮಹಾಪ್ರೀತ್ಯಾ ರತ್ನಾನ್ಯುಚ್ಚಾವಚಾನಿ ಚ |
ಶಯನಾಸನಯಾನಾನಿ ಕನ್ಯಾಶ್ಚ ಸಮಲಂಕೃತಾಃ ॥19॥
ನಾನು ನಿನಗೆ ಸಂತೋಷದಿಂದ ಶ್ರೇಷ್ಠವಾದ ಮತ್ತು ಕನಿಷ್ಟವಾದ ರತ್ನಗಳನ್ನೂ, ಶಯನ ಆಸನ ಮತ್ತು ವಾಹನಗಳನ್ನೂ, ಅಲಂಕೃತರಾದ ಕನ್ಯೆಯರನ್ನೂ ಕೊಡುವೆನು.
ಹಸ್ತ್ಯಶ್ವರಥಸಂಘಾಂಶ್ಚ ರಾಷ್ಟ್ರಾಣಿ ವಿವಿಧಾನಿ ಚ |
ಏತಾನಿ ಚ ಮಮ ಪ್ರೀತ್ಯಾ ಪ್ರತಿಗೃಹ್ಣೀಷ್ವ ಸುವ್ರತ ॥20॥
ಗಜಾಶ್ವರಥ ಸಮೂಹಗಳನ್ನೂ, ಅನೇಕ ಪಟ್ಟಣಗಳನ್ನೂ ಕೊಡುವೆನು. ಎಲೈ ಸುವ್ರತನೇ, ನನ್ನ ಮೇಲಿನ ಪ್ರೀತಿಯಿಂದ ಈ ವಸ್ತುಗಳನ್ನು ಸ್ವೀಕರಿಸುವವನಾಗು.
ವೈಶಂಪಾಯನಃ
ತಂ ತಥಾವಾದಿನಂ ತತ್ರ ಕೌರವ್ಯಃ ಪ್ರತ್ಯಭಾಷತ ॥21॥
ಏಷೈವ ತು ಮಮ ಪ್ರೀತಿರ್ಯತ್ ತ್ವಂ ಮುಕ್ತೋಽಸಿ ಶತ್ರುಭಿಃ |
ಪ್ರತೀಪಸ್ತೇ ಪುನಸ್ತುಷ್ಟಃ ಪ್ರವೇಕ್ಷ್ಯತಿ ತದಾಽನಘ ॥22॥
ದಾರೈಃ ಪುತ್ರೈಶ್ಚ ಸಂಶ್ಲಿಷ್ಟಃ ಸಾ ಹಿ ಪ್ರೀತಿರ್ಮಮಾತುಲಾ ॥23॥
ಸುಶರ್ಮಾಣಂ ತು ರಾಜೇಂದ್ರ ಸಭೃತ್ಯಬಲವಾಹನಮ್ |
ವಿಸರ್ಜಯ ನೃಪಶ್ರೇಷ್ಠ ಏತದೇವ ವರಂ ವೃಣೇ ॥24॥
ವೈಶಂಪಾಯನ ಹಾಗೆ ಹೇಳುತ್ತಿದ್ದ ವಿರಾಟನನ್ನು ಕುರಿತು ಕೌರವ್ಯನಾದ ಯುಧಿಷ್ಠಿರನು ಪುನಃ ಮಾತನಾಡಿದನು ನೀನು ಶತ್ರುಗಳಿಂದ

ಮುಕ್ತನಾಗಿರುವುದೇ ನನಗೆ ದೊಡ್ಡ ಸಂತೋಷದ ವಿಷಯ. ಎಲೈ ಅನಘನೇ, ನಿನಗೆ ಶತ್ರುವಾದವನು ಪುನಃ ಸಂತೋಷದಿಂದ ತನ್ನ ಮನೆಯನ್ನು ಪ್ರವೇಶಿಸಿ ತನ್ನ ಹೆಂಡತಿ ಮಕ್ಕಳೊಡನೆ ಸಮಾಗಮವನ್ನು ಹೊಂದುತ್ತಾನೆ. ಅದೇ ನನಗೆ ಬಹಳ ಸಂತೋಷಕ್ಕೆ ಕಾರಣವಾದುದು. ಎಲೈ ರಾಜೇಂದ್ರನೇ, ನೃಪಶ್ರೇಷ್ಠನೇ, ಭೃತ್ಯಬಲವಾಹನ ಸಹಿತನಾದ ಸುಶರ್ಮನನ್ನು ಬಿಡುಗಡೆ ಮಾಡು. ನಾನು ಇದೇ ವರವನ್ನು ಕೇಳುತ್ತೇನೆ.
ವೈಶಂಪಾಯನಃ
ಏವಮುಕ್ತಸ್ತು ಕಂಕೇನ ವಿರಾಟೋ ರಾಜಸತ್ತಮಃ |
ಪ್ರತ್ಯುವಾಚ ತತಃ ಕಂಕಂ ಸುಶರ್ಮಾ ಯಾತು ಚೇಷ್ಟತಃ ॥25॥
ವೈಶಂಪಾಯನ ಹೀಗೆ ಕಂಕನಿಂದ ಹೇಳಲ್ಪಟ್ಟ ರಾಜಶ್ರೇಷ್ಠನಾದ ವಿರಾಟನು ಕಂಕನನ್ನು ಕುರಿತು ಸುಶರ್ಮನು ಇಷ್ಟಬಂದ ಕಡೆಗೆ ಹೋಗಲಿ ಎಂದು ಹೇಳಿದನು.
ಯುಧಿಷ್ಠಿರಃ
ಗಚ್ಛಂತು ದೂತಾಸ್ತ್ವರಿತಾ ನಗರಂ ತವ ಪಾರ್ಥಿವ |
ಸುಹೃದಾಂ ಪ್ರಿಯಮಾಖ್ಯಾತುಂ ಘೋಷಯಂತು ಚ ತೇ ಜಯಮ್ ॥
ಎಲೈ ರಾಜನೇ, ನಿನ್ನ ದೂತರು ಸುಹೃಜ್ಜನರಿಗೆ ಪ್ರಿಯವನ್ನು ಹೇಳಲು ಶೀಘ್ರವಾಗಿ ನಗರಕ್ಕೆ ಹೋಗಲಿ ಮತ್ತು ನಿನ್ನ ವಿಜಯವನ್ನು ಘೋಷಣೆ ಮಾಡಲಿ.
ವೈಶಂಪಾಯನಃ
ತತಸ್ತದ್ವಚನಾನ್ಮಾತ್ಸ್ಯೋ ದೂತಾನ್ ರಾಜಾ ಸಮಾದಿಶತ್ ॥27॥
ಆಚಕ್ಷಧ್ವಂ ಪುರಂ ಗತ್ವಾ ಸಂಗ್ರಾಮೇ ವಿಜಯಂ ಮಮ |
ಕುಮಾರ್ಯಃ ಸಮಲಂಕೃತ್ಯ ಪರ್ಯಾಗಚ್ಛಂತು ಮೇ ಪುರಾತ್ ॥28॥
ವಾದಿತ್ರಾಣಿ ಚ ಸರ್ವಾಣಿ ಗಣಿಕಾಶ್ಚ ಸ್ವಲಂಕೃತಾಃ |
ಪ್ರತ್ಯಾಯಂತು ಚ ಮೇ ಶೀಘ್ರಂ ನಾಗರಾಃ ಸರ್ವ ಏವ ಹಿ ॥29॥
ವೈಶಂಪಾಯನ ಆಗ ಯುಧಿಷ್ಠಿರನ ಮಾತಿನಂತೆ ಮತ್ಸ್ಯರಾಜನಾದ ವಿರಾಟನು ದೂತರಿಗೆ ಆದೇಶವನ್ನು ನೀಡಿದನು ನಗರಕ್ಕೆ ಹೋಗಿ ಯುದ್ಧದಲ್ಲಿ ನನ್ನ ವಿಜಯವನ್ನು ಘೋಷಣೆ ಮಾಡಿ. ಕುಮಾರಿಯರು ಅಲಂಕಾರವನ್ನು ಮಾಡಿಕೊಂಡು ನನ್ನನ್ನು ಎದುರುಗೊಳ್ಳಲು ಪಟ್ಟಣದಿಂದ ಹೊರಗೆ ಬರಲಿ. ಎಲ್ಲ ವಾದ್ಯಗಳು, ಅಲಂಕೃತವಾದ ಗಣಿಕೆಯರು ಮತ್ತು ಎಲ್ಲ ನಾಗರಿಕರು ಶೀಘ್ರವಾಗಿ ನನ್ನನ್ನು ಎದುರುಗೊಳ್ಳಲು ಬರಲಿ.
ವೈಶಂಪಾಯನಃ
ಏವಮುಕ್ತಾಸ್ತಥಾ ದೂತಾ ರಾತ್ರೌ ಯಾತ್ವಾ ತು ಕೇವಲಮ್ |
ತತೋಽಂತರಾ ವೈ ಉಷಿತಾ ದೂತಾ ಶೀಘ್ರಾನುಯಾಯಿನಃ ॥30॥
ನಗರಂ ಪ್ರಾವಿಶಂಸ್ತೇ ವೈ ಸಮ್ಯಗಭ್ಯುದಿತೇ ರವೌ ॥31॥
ವಿರಾಟನಗರಂ ಪ್ರಾಪ್ಯ ಶೀಘ್ರಂ ನಾಂದೀಮಘೋಷಯನ್ |
ಪತಾಕೋತ್ತರಮಾಲಾಢ್ಯಂ ಪುರಮಪ್ರತಿಮಂ ಯಥಾ ॥32॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಶೀಘ್ರಗಾಮಿಗಳಾದ ದೂತರು ರಾತ್ರಿಯಲ್ಲಿ ಹೊರಟು ಮಧ್ಯದಲ್ಲಿಯೇ ವಾಸ ಮಾಡಿದರು. ಅನಂತರ ಸೂರ್ಯೋದಯವಾಗುತ್ತಿರಲು ಅವರು ನಗರವನ್ನು ಪ್ರವೇಶಿಸಿದರು. ಅವರು ವಿರಾಟನಗರವನ್ನು ಪ್ರವೇಶಿಸಿ ಧ್ವಜಪತಾಕಾದಿಗಳಿಂದ ಪುರವು ಅಪ್ರತಿಮವಾಗಿ ಅಲಂಕರಿಸಲ್ಪಡುವಂತೆ ಸಂತೋಷ ವಾರ್ತೆಯನ್ನು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ತತೋಽಪರದಿನೇ ಸರ್ವೇ ಭೀಷ್ಮದ್ರೋಣಪುರಸ್ಸರಾಃ |
ರಹಿತಂ ಕೀಚಕೈರ್ಮಾತ್ಸ್ಯಂ ಶಕ್ಯಂ ಮತ್ವಾಽಭಿನಿರ್ಯಯುಃ ॥36॥
ಮರುದಿನ ಕೀಚಕರ ಬಲವಿಲ್ಲದ ವಿರಾಟರಾಜನನ್ನು ಸುಲಭವಾಗಿ ಸೆರೆ ಹಿಡಿಯಲು ಶಕ್ಯವೆಂದು ಬಗೆದು ಭೀಷ್ಮದ್ರೋಣ ಮುಂತಾದವರೆಲ್ಲರೂ ಹೊರಟರು.
ಕೀಚಕಸ್ಯ ಹಿಡಿಂಬಸ್ಯ ಬಕಕಿರ್ಮೀರಯೋರಪಿ |
ಜರಾಸಂಧಸ್ಯ ನೃಪತೇಃ ಕಂಸಾದೀನಾಂ ಚ ಸರ್ವಶಃ ॥37॥
ನ ಬಾಧನಾಯ ಭೀಷ್ಮಾದ್ಯಾ ಅಪಿ ಶೇಕುಃ ಕಥಂಚನ |
ತಸ್ಮಾತ್ತೇ ಕೀಚಕಂ ಶಾಂತಂ ಶ್ರುತ್ವಾ ಮಾತ್ಸ್ಯಂ ಯಯುರ್ಯುಧೇ ॥
ಕೀಚಕ ಹಿಡಿಂಬ ಬಕ ಕಿರ್ಮೀರ ಜರಾಸಂಧ ಕಂಸ ಮುಂತಾದವರನ್ನೆಲ್ಲ ನಿಗ್ರಹಿಸಲು ಭೀಷ್ಮ ಮುಂತಾದವರು ಯಾವ ರೀತಿಯಿಂದಲೂ ಶಕ್ತರಾಗಿರಲಿಲ್ಲ. ಅದರಿಂದ ಕೀಚಕ ಹತನಾದುದನ್ನು ಕೇಳಿ ಅವರು ವಿರಾಟನೊಡನೆ ಯುದ್ಧಕ್ಕೆ ಹೋದರು.
ಯತಿಷ್ಯೇ ರಕ್ಷಿತುಂ ಭೀಮಾದ್ ಧಾರ್ತರಾಷ್ಟ್ರಾನಿತಿ ಸ್ವಕಾಮ್ |
ಸತ್ಯಾಂ ಕರ್ತುಂ ಪ್ರತಿಜ್ಞಾಂ ತು ಯಯೌ ದ್ರೋಣಃ ಸಪುತ್ರಕಃ ॥39॥

ಕೌರವರನ್ನು ಭೀಮನಿಂದ ರಕ್ಷಿಸಲು ಯತ್ನಿಸುವನೆಂದು ತಾನು ಮಾಡಿದ ಪ್ರತಿಜ್ಞೆಯನ್ನು ಸತ್ಯವಾಗಿಸಲು ದ್ರೋಣ ಪುತ್ರಸಮೇತನಾಗಿ ಯುದ್ಧಕ್ಕೆ ಹೋದ.

ಯದಿ ಯುದ್ಧಾಯ ನಿರ್ಯಾಂತಿ ಜ್ಞಾತಾಃ ಸ್ಯುಃ ಪಾಂಡವಾಸ್ತದಾ |
ನ ಚೇದ್ವಿರಾಟಮನತಂ ನಮಯಿಷ್ಯಾಮಹೇ ವಯಮ್ ॥40॥
ಇತಿ ಮತ್ವಾ ವಿರಾಟಸ್ಯ ಜಗೃಹುರ್ಗಾಃ ಸಮಂತತಃ ॥41॥
ಪಾಂಡವರು ಯುದ್ಧಕ್ಕೆ ಬಂದರೆ ಅವರ ಪತ್ತೆಯಾಗುವುದು. ಇಲ್ಲದಿದ್ದರೂ ನಮಗೆ ತಲೆಬಾಗದಿದ್ದ ವಿರಾಟನನ್ನು ಬಾಗಿಸುವೆವು ಎಂದು ಬಗೆದು ವಿರಾಟನ ಗೋವುಗಳನ್ನು ಎಲ್ಲೆಡೆಯಿಂದಲೂ ಆಕ್ರಮಿಸಿದರು.

* * * *

ಮೂವತ್ತಾರನೆಯ ಅಧ್ಯಾಯ

ದುರ್ಯೋಧನನಿಂದ ಉತ್ತರ ಗೋಗ್ರಹಣ.

ಗವಾಧ್ಯಕ್ಷನಿಂದ ಉತ್ತರನಿಗೆ ಆ ವಾರ್ತೆಯ ನಿವೇದನ.

ವೈಶಂಪಾಯನಃ
ಯಾತೇ ತ್ರಿಗರ್ತಾನ್ಮಾತ್ಸ್ಯೇ ತು ಪಶೂಂಸ್ತಾನ್ ಸ್ವಾನ್ ಪರೀಪ್ಸತಿ |
ದುರ್ಯೋಧನಃ ಸಹಾಮಾತ್ಯೋ ವಿರಾಟಪುರಮಭ್ಯಗಾತ್ ॥1॥
ವೈಶಂಪಾಯನ ಸುಶರ್ಮನು ತ್ರಿಗರ್ತದೇಶಕ್ಕೆ ಹಿಂದಿರುಗಿ ವಿರಾಟನು ತನ್ನ ಪಶುಗಳನ್ನು ಹೊಂದುತ್ತಿರಲು ಮಂತ್ರಿಗಳಿಂದ ಕೂಡಿದ ದುರ್ಯೋಧನನು ವಿರಾಟನ ಪಟ್ಟಣಕ್ಕೆ ಬಂದನು.

ಭೀಷ್ಮದ್ರೋಣೌ ಚ ಕರ್ಣಶ್ಚ ಕೃಪೋಽಪಿ ಪರಮಾಸ್ತ್ರವಿತ್ |
ದ್ರೌಣಿಶ್ಚ ಸೌಬಲಶ್ಚೈವ ತಥಾ ದುಃಶಾಸನಃ ಶಲಃ ॥2॥
ವಿವಿಂಶತಿರ್ವಿಕರ್ಣಶ್ಚ ಚಿತ್ರಸೇನಶ್ಚ ವೀರ್ಯವಾನ್ |
ದುಃಸಹೋ ದುರ್ಮುಖಶ್ಚೈವ ಏತೇ ಚಾನ್ಯೇ ಮಹಾರಥಾಃ ॥3॥
ಸರ್ವೇ ಮತ್ಸ್ಯಾನುಪಾಗಮ್ಯ ವಿರಾಟಸ್ಯ ಮಹೀಪತೇಃ |
ಗೋಪಾನ್ ವಿದ್ರಾವ್ಯ ತರಸಾ ಗೋಧನಂ ಜಹ್ರುರೋಜಸಾ ॥4॥
ಭೀಷ್ಮದ್ರೋಣರು, ಕರ್ಣ, ಪರಮಾಸ್ತ್ರವೇತ್ತರಾದ ಕೃಪರು, ಅಶ್ವತ್ಥಾಮಾ, ಶಕುನಿ, ದುಃಶಾಸನ, ಶಲ, ವಿವಿಂಶತಿ, ವಿಕರ್ಣ, ಪರಾಕ್ರಮಿಯಾದ ಚಿತ್ರಸೇನ, ದುಃಸಹ, ದುರ್ಮುಖ ಇವರೂ ಮತ್ತು ಇನ್ನೂ ಬೇರೆ ಮಹಾರಥರೂ ಎಲ್ಲರೂ ಮತ್ಸ್ಯದೇಶಕ್ಕೆ ಬಂದು ವಿರಾಟರಾಜನ ಗೋಪಾಲರನ್ನು ಓಡಿಸಿ ತಮ್ಮ ಸಾಮರ್ಥ್ಯದಿಂದ ಶೀಘ್ರವಾಗಿ ವಿರಾಟನ ಗೋಧನವನ್ನು ಹಿಡಿದರು.

ಗವಾಂ ಶತಸಹಸ್ರಾಣಿ ಕುರವಃ ಕಾಲಯಂತಿ ಚ |
ಮಹತಾ ರಥವಂಶೇನ ಪರಿಗೃಹ್ಯ ಸಮಂತತಃ ॥5॥
ದೊಡ್ಡ ರಥಸಮೂಹಗಳಿಂದ ಗೋವುಗಳನ್ನು ಸುತ್ತುವರಿದು ಕೌರವರು ವಿರಾಟನ ಹತ್ತಾರು ಸಾವಿರ ಗೋವುಗಳನ್ನು ಅಟ್ಟಾಡಿದರು.

ಗೋಪಾಲಾನಾಂ ತು ರೋಷೇಣ ಹನ್ಯತಾಂ ವೈ ಮಹಾರಥೈಃ |
ಆರಾವಃ ಸುಮಹಾನಾಸೀತ್ ಸಂಪ್ರಹಾರೇ ಭಯಂಕರೇ ॥6॥
ಮಹಾರಥದಿಂದ ರೋಷದಿಂದ ಕೊಲ್ಲಲ್ಪಡುವವರ ಆಕ್ರಂದನವು ಆ ಭಯಂಕರವಾದ ಸಂಘರ್ಷದಲ್ಲಿ ಬಹಳ ದೊಡ್ಡದಾಗಿದ್ದಿತು.

ಗವಾಧ್ಯಕ್ಷಸ್ತು ಸಂತ್ರಸ್ತೋ ರಥಮಾಸ್ಥಾಯ ಸತ್ವರಃ |
ಜಗಾಮ ನಗರಾಯೈವ ಪರಿಕ್ರೋಶಂಸ್ತದಾಽಽರ್ತವತ್ ॥7॥
ಗವಾಧ್ಯಕ್ಷನಾದರೂ ಹೆದರಿ ಶೀಘ್ರವಾಗಿ ರಥವನ್ನು ಹೂಡಿ ದಾರಿಯಲ್ಲಿ ಆರ್ತನಂತೆ ಕಿರುಚಿಕೊಳ್ಳುತ್ತಾ ನಗರಕ್ಕೇ ಹೊರಟನು.

ಸಂಪ್ರವಿಶ್ಯ ಪುರಂ ರಾಜ್ಞೋ ನೃಪವೇಶ್ಮಾಭ್ಯಯಾತ್ ತತಃ |
ಅವತೀರ್ಯ ರಥಾತ್ ತೂರ್ಣಮಾಖ್ಯಾತುಂ ಪ್ರವಿವೇಶ ಹ ॥8॥
ಅವನು ರಾಜಧಾನಿಯನ್ನು ಸೇರಿ ಅಲ್ಲಿಂದ ಅರಮನೆಯ ಕಡೆಗೆ ಹೊರಟನು. ಶೀಘ್ರವಾಗಿ ರಥದಿಂದ ಇಳಿದು ವಿಷಯವನ್ನು ಹೇಳಲು ಅರಮನೆಯನ್ನು ಪ್ರವೇಶಿಸಿದನು.

ದೃಷ್ಟ್ವಾ ಭೂಮಿಂಜಯಂ ನಾಮ ಪುತ್ರಂ ಮಾತ್ಸ್ಯಸ್ಯ ಮಾನಿನಮ್ |
ತಸ್ಮೈ ತತ್ ಸರ್ವಮಾಚಷ್ಟ ರಾಷ್ಟ್ರಸ್ಯ ಪಶುಕರ್ಷಣಮ್ ॥9॥
ಮತ್ಸ್ಯರಾಜನ ಪುತ್ರನಾದ ಸಮ್ಮಾನಿತನಾದ ಭೂಮಿಂಜಯನನ್ನು (ಇವನೇ ಉತ್ತರ) ನೋಡಿ ಅವನಿಗೆ ರಾಷ್ಟ್ರದ ಪಶುಗಳ ಅಪಹಾರವೆಲ್ಲವನ್ನೂ ಹೇಳಿದನು.

ಗವಾಂ ಶತಸಹಸ್ರಾಣಿ ಕುರವಃ ಕಾಲಯಂತಿ ತೇ |
ಪ್ರತಿಜೇತುಂ ಸಮುತ್ತಿಷ್ಠ ಗೋಧನಂ ರಾಷ್ಟ್ರವರ್ಧನಮ್ ॥10॥
ನಿನ್ನ ಹತ್ತಾರುಸಾವಿರ ಗೋವುಗಳನ್ನು ಕುರುಗಳು ಅಟ್ಟಾಡುತ್ತಿದ್ದಾರೆ. ರಾಷ್ಟ್ರವರ್ಧನವಾದ ಗೋಧನವನ್ನು ಜಯಿಸಲು ಎದ್ದೇಳು.

ರಾಜಪುತ್ರ ಹಿತಪ್ರೇಪ್ಸುಃ ಕ್ಷಿಪ್ರಂ ನಿರ್ಯಾಹಿ ವೈ ಸ್ವಯಮ್ |
ತ್ವಾಂ ಹಿ ಮಾತ್ಸ್ಯೋ ಮಹೀಪಾಲಃ ಶೂನ್ಯಪಾಲಮಿಹಾಕರೋತ್ ॥11॥
ಎಲೈ ರಾಜಪುತ್ರನೇ, ರಾಜ್ಯದ ಹಿತವನ್ನು ಬಯಸಿ ಸ್ವತಃ ನೀನೇ ಬೇಗ ಹೊರಡುವವನಾಗು. ಏಕೆಂದರೆ ವಿರಾಟರಾಜನು ಇಲ್ಲಿ ನಿನ್ನನ್ನು ಶೂನ್ಯಪಾಲನನ್ನಾಗಿ ಮಾಡಿದ್ದಾನೆ (ರಾಜನು ರಾಜಧಾನಿಯಲ್ಲಿಲ್ಲದಿದ್ದಾಗ ರಾಜ್ಯಭಾರವನ್ನು ನೋಡಿಕೊಳ್ಳುವವನು ಶೂನ್ಯಪಾಲನೆಂದು ಕರೆಯಲ್ಪಡುತ್ತಾನೆ).

ತ್ವಾಂ ವೈ ಪರಿಷದೋ ಮನ್ಯೇ ಶ್ಲಾಘತೇ ಹಿ ನರಾಧಿಪಃ |
ಪುತ್ರೋ ಮಮಾನುರೂಪಶ್ಚ ಶೂರಶ್ಚೇತಿ ಕುಲೋದ್ವಹಃ ॥12॥
ಇಷ್ವಸ್ತ್ರನಿಪುಣೋ ಯೋದ್ಧಾ ಸರ್ವಶಸ್ತ್ರವಿಶಾರದಃ |
ಸಮರ್ಥಃ ಸಮರೇ ಯೋದ್ಧುಂ ಕೌರವ್ಯೈಃ ಸಹ ತಾದೃಶೈಃ ॥13॥
ರಾಜನು ಸಭೆಯ ಮಧ್ಯದಲ್ಲಿ ನನ್ನ ಪುತ್ರನು ನನಗೆ ಅನುರೂಪನಾಗಿದ್ದಾನೆ. ಅವನು ಶೂರನೂ ಮತ್ತು ಕುಲೋದ್ವಹನೂ ಆಗಿದ್ದಾನೆ. ಧನುಸ್ಸಿನಲ್ಲಿಯೂ, ಅಸ್ತ್ರಗಳಲ್ಲಿಯೂ ನಿಪುಣನಾಗಿದ್ದಾನೆ. ಒಳ್ಳೆಯ ಯೋಧ. ಸರ್ವಶಸ್ತ್ರವಿಶಾರದ. ಅಂತಹ ಕೌರವರ ಜೊತೆಯಲ್ಲಿಯೂ ಯುದ್ಧವನ್ನು ಮಾಡಲು ಸಮರ್ಥನಾಗಿದ್ದಾನೆ ಎಂದು ನಿನ್ನನ್ನೇ ಹೊಗಳುತ್ತಾನೆ.
ತಸ್ಯ ತತ್ ಸತ್ಯಮೇವಾಸ್ತು ಮನುಷ್ಯೇಂದ್ರಸ್ಯ ಭಾಷಿತಮ್ |
ಜಯಶ್ಚ ನಿಯತೋ ಯುದ್ಧೇ ಕೌರವಾ ಯಾಂತು ವಿದ್ರುತಾಃ ॥14॥
ಆ ರಾಜನ ಆ ನುಡಿಗಳು ಸತ್ಯವೇ ಆಗಲಿ. ಸತ್ಯವಾದರೆ ಯುದ್ಧದಲ್ಲಿ ನಿನ್ನ ಜಯವು ನಿಶ್ಚಿತವಾದುದು. ಕೌರವರು ಓಡಿ ಹೋಗಲಿ.
ಆವರ್ತಯ ಕುರೂನ್ ಜಿತ್ವಾ ಪಶೂನ್ ಪಶುಪತಿರ್ಯಥಾ |
ನಿರ್ದಹೈಷಾಮನೀಕಾನಿ ಭೀಮೇನೇಶ್ವರತೇಜಸಾ ॥15॥
ಕುರುಗಳನ್ನು ಗೆದ್ದು ಪಶುಪತಿಯಂತೆ ನಿನ್ನ ಪಶುಗಳನ್ನು ಹಿಂದಿರುಗಿಸು. ಭಯಂಕರವಾದ ನಿನ್ನ ಪ್ರಭುತೇಜಸ್ಸಿನಿಂದ ಅವರ ಆ ಸೈನ್ಯವನ್ನು ಸುಡುವವನಾಗು.
ಧನುಶ್ಚ್ಯುತೈ ರುಗ್ಮಪುಂಖೈಃ ಚಿತ್ರೈಃ ಸನ್ನತಪರ್ವಭಿಃ |
ದ್ವಿಷತಾಂ ಭಿಂಧ್ಯನೀಕಾನಿ ಗಜಾನಾಮಿವ ಯೂಥಪಃ ॥16॥
ನಿನ್ನ ಧನುಸ್ಸಿನಿಂದ ಹೊರಹೊಮ್ಮಿದ ವಿಚಿತ್ರವಾದ ಪುಂಖಗಳನ್ನುಳ್ಳ ಬಾಗಿದ ಅಲುಗುಗಳನ್ನುಳ್ಳ ಬಾಣಗಳಿಂದ ಸಲಗದಂತೆ ಶತ್ರುಸೈನ್ಯವನ್ನು ಭೇದಿಸುವವನಾಗು.
ಪಾಶೋಪಧಾನಾಂ ಜ್ಯಾತಂತ್ರೀಂ ಪ್ರಾಪ್ಯದಂಡಸಮಸ್ವರಾಮ್ |
ಪ್ರವಿಶ್ಯ ಮಹತೀಂ ಸೇನಾಂ ಧನುರ್ವೀಣಾಂ ಪ್ರವಾದಯ ॥17॥
ಧನುಸ್ಸಿನ ಹಗ್ಗಗಳೇ ಉಪಧಾನವಾಗಿ ಉಳ್ಳ, ಹೆದೆಯೇ ತಂತಿಯಾಗುಳ್ಳ ದಂಡದಿಂದ ಆಹತವಾದ ಗಂಟೆಯಂತೆ ಸ್ವರವನ್ನು ಹೊಂದಿರುವ ದೊಡ್ಡ ಸೈನ್ಯವನ್ನು ಪ್ರವೇಶಿಸಿ ಧನುರ್ವೀಣೆಯನ್ನು ನುಡಿಸುವವನಾಗು (ಲಕ್ಷಾಲಂಕಾರ).
ನಿರ್ಯಾಹಿ ನಗರಾತ್ ತೂರ್ಣಂ ರಾಜಪುತ್ರ ಕಿಮಾಸ್ಯತೇ |
ಶ್ವೇತಾಃ ಕಾಂಚನಸನ್ನಾಹಾ ರಥೇ ಯುಂಜಂತು ತೇ ಹಯಾಃ ॥18॥
ಧ್ವಜಂ ಚ ಸಿಂಹಸೌವರ್ಣಮುಚ್ಛ್ರಯಸ್ವ ರಥೇ ವಿಭೋ ॥19॥
ಎಲೈ ರಾಜಪುತ್ರನೇ, ಬೇಗ ನಗರದಿಂದ ಹೊರಡು. ಏಕೆ ಕುಳಿತಿದ್ದೀಯೆ? ನಿನ್ನ ಸುವರ್ಣಾಲಂಕೃತವಾದ ಶ್ವೇತಾಶ್ವಗಳು ರಥದಲ್ಲಿ ಹೂಡಲ್ಪಡಲಿ. ಎಲೈ ವಿಭುವೇ, ಸುವರ್ಣಮಯವಾದ ಸಿಂಹದಿಂದ ಕೂಡಿದ ನಿನ್ನ ಧ್ವಜವು ರಥದಲ್ಲಿ ಎತ್ತರಕ್ಕೆ ಎತ್ತಲ್ಪಡಲಿ.
ರುಗ್ಮಪುಂಖಾಃ ಪ್ರಸನ್ನಾಗ್ರಾ ಮುಕ್ತಾ ಹಸ್ತವತಾ ತ್ವಯಾ |
ಛಾದಯಂತು ಶರಾಃ ಸೂರ್ಯಂ ರಾಜ್ಞಾಮಾಯುರ್ನಿರೋಧಕಾಃ ॥20॥
ಪ್ರಶಸ್ತರಥವನ್ನುಳ್ಳ ನೀನು ಪ್ರಯೋಗಿಸುವ ಸುವರ್ಣಮಯವಾದ ಪುಂಖಗಳನ್ನುಳ್ಳ ಒಳ್ಳೆಯ ತುದಿಗಳುಳ್ಳ ಶತ್ರುರಾಜರ ಆಯಸ್ಸನ್ನು ನಾಶಮಾಡುವ ಬಾಣಗಳು ಸೂರ್ಯನನ್ನು ಆವರಿಸಲಿ.
ರಣೇ ಜಿತ್ವಾ ಕುರೂನ್ ಸರ್ವಾನ್ ವಜ್ರಪಾಣಿರಿವಾಸುರಾನ್ |
ಯಶೋ ಮಹದವಾಪ್ಯ ತ್ವಂ ಪ್ರವಿಶೇದಂ ಪುರಂ ಪುನಃ ॥21॥
ವಜ್ರಪಾಣಿಯಾದ ಇಂದ್ರನು ಅಸುರನನ್ನು ಗೆದ್ದಂತೆ ಶೀಘ್ರದಲ್ಲಿ ಎಲ್ಲಾ ಕೌರವರನ್ನೂ ಗೆದ್ದು ದೊಡ್ಡ ಕೀರ್ತಿಯನ್ನು ಸಂಪಾದಿಸಿ ಪುನಃ ಈ ನಗರವನ್ನು ಪ್ರವೇಶಿಸು.
ತ್ವಂ ಹಿ ರಾಷ್ಟ್ರಸ್ಯ ಪರಮಾ ಗತಿರ್ಮತ್ಸ್ಯಪತೇಃ ಸುತ |
ಗತಿಮಂತೋ ಭವಂತ್ವದ್ಯ ಸರ್ವೇ ವಿಷಯವಾಸಿನಃ ॥22॥
ಎಲೈ ಮತ್ಸ್ಯರಾಜನ ಪುತ್ರನೇ, ನೀನೇ ಈ ರಾಷ್ಟ್ರಕ್ಕೆ ಪರಮಗತಿಯಾದವನು. ನಿನ್ನ ರಾಷ್ಟ್ರದಲ್ಲಿರುವ ಎಲ್ಲರೂ ಈಗ ನಿನ್ನಿಂದ ಅಂತಹ ಗತಿಯನ್ನು ಹೊಂದುವವರಾಗಲಿ (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಗೋಗ್ರಹಣಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತೇಳನೆಯ ಅಧ್ಯಾಯ
ಉತ್ತರನ ಪೌರುಷ. ಬೃಹನ್ನಳೆಯಿಂದ ಸಾರಥ್ಯ ಸ್ವೀಕಾರ. ಗೋಗ್ರಹಣಕ್ಕಾಗಿ ಗಮನ
ವೈಶಂಪಾಯನಃ
ಸ್ತ್ರೀಮಧ್ಯ ಉಕ್ತಸ್ತೇನಾಸೌ ವಾಕ್ಯಂ ತೇಜಃಪ್ರವರ್ಧನಮ್ |
ಅಂತಃಪುರೇ ಶ್ಲಾಘಮಾನ ಇದಂ ವಚನಮಬ್ರವೀತ್ ॥1॥
ವೈಶಂಪಾಯನ ಅಂತಃಪುರದಲ್ಲಿ ಸ್ತ್ರೀಯರ ಮಧ್ಯದಲ್ಲಿ ಇಂತಹ ತೇಜೋವರ್ಧಕವಾದ ಮಾತುಗಳನ್ನು ಕೇಳಿದ ಉತ್ತರನು ತನ್ನನ್ನು ತಾನೇ ಹೊಗಳಿಕೊಳ್ಳುತ್ತಾ ಹೀಗೆ ಮಾತನಾಡಿದನು.

ಅದ್ಯಾಹಮನುಗಚ್ಛೇಯಂ ದೃಢಧನ್ವಾ ಗವಾಂ ಪದಮ್ |
ಯದಿ ಮೇ ಸಾರಥಿಃ ಕಶ್ಚಿದ್ ಭವೇದಶ್ವೇಷು ಕೋವಿದಃ ||2||
ನನಗೆ ಅಶ್ವಕೋವಿದನಾದ ಒಬ್ಬ ಸಾರಥಿ ಇದ್ದಿದ್ದರೆ ನಾನು ಈ ದಿನ ದೃಢವಾದ ಧನುಸ್ಸನ್ನು ತೆಗೆದುಕೊಂಡು ಗೋವುಗಳ ಸ್ಥಾನಕ್ಕೆ ಹೋಗುತ್ತಿದ್ದೆ.
ತಮಹಂ ನಾಧಿಗಚ್ಛಾಮಿ ಯೋ ಮೇ ಯಂತಾ ಸಮೋ ಭವೇತ್ |
ಪಶ್ಯಧ್ವಂ ಸಾರಥಿಂ ಶೀಘ್ರಂ ಮಮ ಯುದ್ಧಂ ಪ್ರದಾಸ್ಯತಃ ||3||
ಆದರೆ ನನಗೆ ಅನುರೂಪವಾದ ಸಾರಥಿಯನ್ನು ನಾನು ಕಾಣುತ್ತಿಲ್ಲ. ಯುದ್ಧವನ್ನು ಮಾಡಲು ಹೊರಡುವ ನನಗೆ ಶೀಘ್ರವಾಗಿ ಒಳ್ಳೆಯ ಸಾರಥಿಯನ್ನು ನೋಡಿ.
ಅಷ್ಟಾವಿಂಶತಿರಾತ್ರಂ ವಾ ಮಾಸಂ ವಾಽಪಿ ಭವೇತ್ ತತಃ |
ಯತ್ರ ಚಾಸೀನ್ಮಹಾಯುದ್ಧಂ ತತ್ರ ಮೇ ಸಾರಥಿರ್ಹತಃ ||4||
ಹಿಂದೆ ಇಪ್ಪತ್ತೆಂಟು ದಿವಸಗಳೋ ಅಥವಾ ಒಂದು ತಿಂಗಳೋ ನಡೆದ ಮಹಾಯುದ್ಧದಲ್ಲಿ ನನ್ನ ಸಾರಥಿಯು ಹತನಾದನು.
ಯದ್ಯಹಂ ತ್ವಭಿಗಚ್ಛೇಯಂ ಯೋ ಮೇ ಯಂತಾ ಭವೇದ್ ಯುಧಿ |
ತ್ವರಾವಾನದ್ಯ ಯಾಸ್ಯಾಮಿ ಸಮುಚ್ಛ್ರಿತಮಹಾಧ್ವಜಃ ||5||
ಯುದ್ಧದಲ್ಲಿ ನನ್ನ ರಥವನ್ನು ನಡೆಸುವ ಒಬ್ಬ ಸಾರಥಿಯು ದೊರೆತರೆ ನಾನು ಶೀಘ್ರವಾಗಿ ರಥದಲ್ಲಿ ಧ್ವಜವನ್ನು ಏರಿಸಿ ಯುದ್ಧಕ್ಕೆ ಹೊರಡುವೆನು.
ವಿಗಾಹ್ಯ ತತ್ ಪರಾನೀಕಂ ಗಜವಾಜಿರಥಾಕುಲಮ್ |
ಶಸ್ತ್ರಪ್ರತಾಪಾನ್ನಿರ್ವೀರ್ಯಾನ್ ಕುರೂನ್ ಜಿತ್ವಾಽಽನಯೇ ಪಶೂನ್ ||
ಗಜಾಶ್ವರಥಗಳಿಂದ ಕೂಡಿದ ಪರಸೈನ್ಯವನ್ನು ಪ್ರವೇಶಿಸಿ ನನ್ನ ಶಸ್ತ್ರ ಪ್ರತಾಪದಿಂದ ನಿರ್ವೀರ್ಯರಾದ ಕುರುಗಳನ್ನು ಗೆದ್ದು ಗೋವುಗಳನ್ನು ಹಿಂದೆ ತಂದೇನು.
ದುರ್ಯೋಧನಂ ಶಾಂತನವಂ ಕರ್ಣಂ ವೈಕರ್ತನಂ ಕೃಪಮ್ |
ದ್ರೋಣಂ ಚ ಸಹ ಪುತ್ರೇಣ ಮಹೇಷ್ವಾಸಾನ್ ಸಮಾಗತಾನ್ ||7||
ವಿತ್ರಾಸಯಿತ್ವಾ ಸಂಗ್ರಾಮೇ ದಾನವಾನ್ ಮಘವಾನಿವ |
ಅನೇನೈವ ಮುಹೂರ್ತೇನ ಪುನಃ ಪ್ರತ್ಯಾನಯೇ ಪಶೂನ್ ||8||
ದುರ್ಯೋಧನ, ಭೀಷ್ಮ, ವೈಕರ್ತನನಾದ ಕರ್ಣ, ಕೃಪ, ಅಶ್ವತ್ಥಾಮರಿಂದ ಕೂಡಿದ ದ್ರೋಣ- ಯುದ್ಧಕ್ಕೆ ಬಂದ ಈ ಮಹಾಧನುರ್ಧಾರಿಗಳನ್ನೆಲ್ಲಾ ಇಂದ್ರನು ಯುದ್ಧದಲ್ಲಿ ದಾನವರನ್ನು ಹೆದರಿಸಿದಂತೆ ಹೆದರಿಸಿ ಈ ಮುಹೂರ್ತದಲ್ಲಿ ಗೋವುಗಳನ್ನು ಪುನಃ ಹಿಂದಕ್ಕೆ ತರುವೆನು.
ಶೂನ್ಯಮಾಜ್ಞಾಯ ಕುರವಃ ಪ್ರಯಾಂತ್ಯಾದಾಯ ಗೋಧನಮ್ |
ಕಿಂ ನು ಶಕ್ಯಂ ಚ ತೈಃ ಕರ್ತುಂ ಯದಹಂ ತತ್ರ ನಾಭವಮ್ ||9||
ರಾಜಧಾನಿಯಲ್ಲಿ ರಾಜನಿಲ್ಲದುದನ್ನು ತಿಳಿದು ಕುರುಗಳು ಗೋಧನಗಳನ್ನು ತೆಗೆದುಕೊಂಡು ಹೋಗುತ್ತಿದ್ದಾರೆ. ನಾನು ಅಲ್ಲಿ ಇಲ್ಲದಿದ್ದುದರಿಂದ ನಾನು ಅವರಿಗೆ ಏನು ಮಾಡಲು ಸಾಧ್ಯ?
ಪಶ್ಯೇಯುರದ್ಯ ಮೇ ವೀರ್ಯಂ ಕುರವಸ್ತೇ ಸಮಾಗತಾಃ |
ಕಿಂ ನು ಪಾರ್ಥೋಽರ್ಜುನಃ ಸಾಕ್ಷಾದಿತಿ ಮಂಸ್ಯಂತಿ ಮಾಂ ಪರೇ ||
ಯುದ್ಧಕ್ಕೆ ಸಮಾಗತರಾದ ಕುರುಗಳು ಈ ದಿನ ನನ್ನ ಪರಾಕ್ರಮವನ್ನು ನೋಡಿಯಾರು. ಶತ್ರುಗಳು ಇವನೇ ಸಾಕ್ಷಾತ್ ಅರ್ಜುನನೋ ಎಂದು ನನ್ನನ್ನು ಭಾವಿಸುವರು.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಸ್ತ್ರೀಷು ಚಾತ್ಮಪ್ರಶಂಸನಮ್ |
ನಾಮರ್ಷಯತ ಪಾಂಚಾಲೀ ಬೀಭತ್ಸೋಃ ಪರಿಕೀರ್ತನಮ್ ||11||
ವೈಶಂಪಾಯನ ಸ್ತ್ರೀಯರ ಎದುರಿನಲ್ಲಿ ಅವನ ಆತ್ಮಪ್ರಶಂಸೆಯ ಮಾತುಗಳನ್ನು ಕೇಳಿ ಮತ್ತು ಅರ್ಜುನನ ಹೆಸರನ್ನು ಅವನು ತೆಗೆದುಕೊಂಡುದನ್ನು ಕೇಳಿ ಪಾಂಚಾಲಿಯು ಸಹಿಸಲಿಲ್ಲ.
ಶ್ರುತ್ವಾ ತದರ್ಜುನೋ ವಾಕ್ಯಮುತ್ತರೇಣ ಪ್ರಭಾಷಿತಮ್ ||12||
ಸ ನೀತಸಮಯೇ ಕಾಲೇ ಪ್ರಿಯಾಂ ಭಾರ್ಯಾಮಭಾಷತ |
ದ್ರುಪದಸ್ಯ ಸುತಾಂ ರಾಜ್ಞಃ ಪಾಂಚಾಲೀಂ ರೂಪಸಮ್ಮತಾಮ್ ||13||
ಉತ್ತರನು ಆಡಿದ ಮಾತುಗಳನ್ನು ಕೇಳಿ ಅರ್ಜುನನು ಅಜ್ಞಾತವಾಸದ ಸಮಯವು ಮುಗಿದುಹೋಗಿರಲು ರೂಪಸಂಪನ್ನಳಾದ ದ್ರುಪದರಾಜಕುಮಾರಿಯಾದ ಪ್ರಿಯ ಪತ್ನಿಯಾದ ಪಾಂಚಾಲಿಯನ್ನು ಕುರಿತು ಮಾತನಾಡಿದನು (ಲಕ್ಷಾಲಂಕಾರ).
ಸತ್ಯಾರ್ಜವಗುಣೋಪೇತಾಂ ಭರ್ತುಃ ಪ್ರಿಯಹಿತೈಷಿಣೀಮ್ ||14||
ಉತ್ತರಾಂ ಬ್ರೂಹಿ ಪಾಂಚಾಲಿ ಗತ್ವಾ ಕ್ಷಿಪ್ರಂ ಶುಚಿಸ್ಮಿತೇ |
ಇಯಂ ಕಿಲ ಪುರಾ ಯುದ್ಧೇ ಖಾಂಡವೇ ಸವ್ಯಸಾಚಿನಃ ||15||
ಸಾರಥಿಃ ಪಾಂಡುಪುತ್ರಸ್ಯ ಪಾರ್ಥಸ್ಯ ತು ಬೃಹನ್ನಳಾ ||16||
ಮಹಾನ್ ಜಯೋ ಭವೇದ್ ಯುದ್ಧೇ ಸಾ ಚೇದ್ ಯಂತಾ ಬೃಹನ್ನಳಾ ||
ಪಾಂಚಾಲಿಯೇ, ಶುಚಿಸ್ಮಿತೆಯೇ, ಸತ್ಯಾರ್ಜವಗುಣಗಳಿಂದ ಕೂಡಿದ ರಾಜನ ಹಿತದಲ್ಲಿ ಮತ್ತು ಪ್ರಿಯದಲ್ಲಿ ಆಸಕ್ತಳಾದ ಉತ್ತರೆಯ

ಬಳಿಗೆ ಬೇಗ ಹೋಗಿ ಹೀಗೆ ಹೇಳುವವಳಾಗು- `ಈ ಬೃಹನ್ನಳೆಯು ಹಿಂದೆ ಪಾಂಡುಪುತ್ರನಾದ ಸವ್ಯಸಾಚಿಯಾದ ಅರ್ಜುನನು ಖಾಂಡವವನವನ್ನು ದಹನ ಮಾಡುವಾಗ ನಡೆದ ಯುದ್ಧದಲ್ಲಿ ಸಾರಥಿಯಾಗಿದ್ದಳು. ಆ ಬೃಹನ್ನಳೆಯು ಸಾರಥಿಯಾದರೆ ಯುದ್ಧದಲ್ಲಿ ದೊಡ್ಡ ಜಯವು ಉಂಟಾದೀತು'.
ವೈಶಂಪಾಯನಃ
ಸಾ ಚೋದಿತಾ ತದಾ ತೇನ ಹ್ಯರ್ಜುನೇನ ಶುಚಿಸ್ಮಿತಾ |
ಪಾಂಚಾಲೀ ಚ ತದಾऽऽಗಮ್ಯ ಉತ್ತರಾಯಾ ನಿವೇಶನಮ್ ॥18॥
ಜ್ಞಾತ್ವಾ ತು ಸಮಯಾನ್ಮುಕ್ತಂ ಚಂದ್ರಂ ರಾಹುಮುಖಾದಿವ ॥19॥
ಯುಧಿಷ್ಠಿರಂ ಧರ್ಮಪರಂ ಸತ್ಯಾರ್ಜವಪಥೇ ಸ್ಥಿತಮ್ |
ಅಮರ್ಷಯಂತೀ ಸೈರಂಧ್ರೀ ಕೃಷ್ಣಾ ಕಮಲಲೋಚನಾ ॥20॥
ಉತ್ತರಾಮಾಹ ವಚನಂ ಸಖೀಮಧ್ಯೇ ವಿಲಾಸಿನೀಮ್ ॥21॥
ವೈಶಂಪಾಯನ ಹೀಗೆ ಅರ್ಜುನನಿಂದ ಪ್ರೇರಿಸಲ್ಪಟ್ಟ ಶುಚಿಸ್ಮಿತೆಯಾದ ಪಾಂಚಾಲಿಯು ಆಗ ರಾಹುವಿನ ಮುಖದಿಂದ ಚಂದ್ರನು ಮುಕ್ತನಾದಂತೆ ತಾವು ಅಜ್ಞಾತವಾಸದ ಸಮಯದಿಂದ ಮುಕ್ತರಾಗಿದ್ದೇವೆಂದು ತಿಳಿದು, ಆದರೂ ಯತಿವೇಷದಲ್ಲಿದ್ದ ಸತ್ಯ ಮತ್ತು ಆರ್ಜವ ಮಾರ್ಗದಲ್ಲಿ ಸ್ಥಿತನಾದ ಯುಧಿಷ್ಠಿರನನ್ನು ನೋಡಿ ಸಹಿಸದೆ ಉತ್ತರೆಯ ಮನೆಗೆ ಬಂದು ಕಮಲಲೋಚನೆಯಾದ ದ್ರೌಪದಿಯು ಸಖೀ ಮಧ್ಯದಲ್ಲಿ ಇದ್ದ ವಿಲಾಸಿನಿಯಾದ ಉತ್ತರೆಯನ್ನು ಕುರಿತು ಮಾತನಾಡಿದಳು.
ಯೋऽಯಂ ಯುವಾ ವಾರಣಯೂಥಪೋಪಮೋ
　　ಬೃಹನ್ನಳಾऽಸ್ಮೀತಿ ಜನೋऽಭ್ಯಭಾಷತ |
ಪುರಾ ಹಿ ಪಾರ್ಥಸ್ಯ ಸ ಸಾರಥಿಃ ಸದಾ
　　ಧನುರ್ವರಾಣಾಂ ಪ್ರವರಸ್ಯ ಮನ್ಯೇ ॥22॥
ಸ ದೃಷ್ಟಪೂರ್ವೋऽಹಿ ಮಯಾ ಚರಂತ್ಯಾ ಪಾಂಡವಾಲಯೇ ॥23॥
ಗಜಯೂಥಪತಿಯಂತಿರುವ ತಾನು ಬೃಹನ್ನಳೆ ಎಂದು ಹೇಳುವ ಈ ಯುವಕನು ಯಾವನಿದ್ದಾನೆಯೋ ಅವನು ಹಿಂದೆ ಯಾವಾಗಲೂ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನ ಸಾರಥಿಯಾಗಿದ್ದನೆಂದು ನಾನು ತಿಳಿದಿದ್ದೇನೆ. ನಾನು ಪಾಂಡವರ ಮನೆಯಲ್ಲಿ ಇರುವ ಕಾಲದಲ್ಲಿ ಹಿಂದೆ ಅವನನ್ನು ನೋಡಿದ್ದೇನೆ.
ಯದಾऽನೇನ ಸಹಾಯೇನ ಖಾಂಡವಂ ಚಾದಹತ್ ಪುರಾ |
ಅರ್ಜುನಸ್ಯ ತದಾ ತೇನ ಸಂಗೃಹೀತಾ ಹಯೋತ್ತಮಾಃ ॥24॥
ಇವನ ಸಹಾಯದಿಂದ ಅರ್ಜುನನು ಹಿಂದೆ ಖಾಂಡವವನವನ್ನು ದಹನ ಮಾಡಿದಾಗ ಈ ಯುವಕನೇ ಅವನ ಶ್ರೇಷ್ಠವಾದ ಹಯಗಳನ್ನು ನಿಯಂತ್ರಿಸಿದನು.
ತೇನ ಸಾರಥಿನಾ ಪಾರ್ಥಃ ಸರ್ವಭೂತಾನಿ ಸರ್ವಶಃ |
ಅಜಯತ್ ಖಾಂಡವಪ್ರಸ್ಥೇ ನ ಹಿ ಯಂತಾऽಸ್ತಿ ತಾದೃಶಃ ॥25॥
ಅರ್ಜುನನು ಇವನನ್ನು ಸಾರಥಿಯಾಗಿ ಹೊಂದಿ ಖಾಂಡವಪ್ರಸ್ಥದಲ್ಲಿ ಎಲ್ಲಾ ಪ್ರಾಣಿಗಳನ್ನೂ (ಮತ್ತು ದೇವತೆಗಳನ್ನೂ) ಜಯಿಸಿದನು. ಅವನಂತಹ ಸಾರಥಿಯು ಇನ್ನೊಬ್ಬನಿಲ್ಲ.
ವೈಶಂಪಾಯನಃ
ತತಃ ಸೈರಂಧ್ರಿಸಹಿತಾ ಉತ್ತರಾ ಭ್ರಾತುರಬ್ರವೀತ್ ॥26॥
ಅಭ್ಯರ್ಥಯೇಮಾಂ ಸಾರಥ್ಯೇ ವೀರ ಶೀಘ್ರಂ ಬೃಹನ್ನಳಾಮ್ ॥27॥
ಶಿಕ್ಷಿತೈಷಾ ಹಿ ಸಾರಥ್ಯೇ ನರ್ತನೇ ಗೀತವಾದನೇ |
ಸೈರಂಧ್ರ್ಯಾಹ ಮಹಾಪ್ರಾಜ್ಞಾ ಸ್ತುವಂತೀ ವೈ ಬೃಹನ್ನಳಾಮ್ ॥28॥
ವೈಶಂಪಾಯನ ಆಗ ಸೈರಂಧ್ರಿ ಸಹಿತಳಾದ ಉತ್ತರೆಯು ಅಣ್ಣನನ್ನು ಕುರಿತು ಎಲೈ ವೀರನೇ, ಈ ಬೃಹನ್ನಳೆಯನ್ನು ಸಾರಥ್ಯವನ್ನು ಸ್ವೀಕರಿಸುವಂತೆ ಶೀಘ್ರವಾಗಿ ಪ್ರಾರ್ಥಿಸು. ಇವಳು ಸಾರಥ್ಯದಲ್ಲಿಯೂ ನರ್ತನದಲ್ಲಿಯೂ ಸಂಗೀತ ಮತ್ತು ವಾದ್ಯಗಳಲ್ಲಿಯೂ ಪರಿಣತಳಾಗಿದ್ದಾಳೆ. ಬೃಹನ್ನಳೆಯನ್ನು ಪ್ರಶಂಸಿಸುತ್ತಾ ಮಹಾಪ್ರಾಜ್ಞಳಾದ ಸೈರಂಧ್ರಿಯು ನನಗೆ ಹಾಗೆ ಹೇಳಿದಳು ಎಂದು ಹೇಳಿದಳು.
ಉತ್ತರಃ
ಸೈರಂಧ್ರಿ ಜಾನಾಸಿ ಮಮ ವ್ರತಂ ಯಥಾ
　　ಕ್ಲೀಬಂ ನ ಭಾಷೇ ಪುರುಷಃ ಸ್ವಯಂ ಹಿ |
ಸೋऽಹಂ ನ ಶಕ್ಷ್ಯಾಮಿ ಬೃಹನ್ನಳಾ ಶುಭೇ
　　ವಕ್ತುಂ ಸ್ವಯಂ ಯಚ್ಛ ಹಯಾನ್ ಮಮೇತಿ ॥29॥
ಉತ್ತರ ಎಲೌ ಸೈರಂಧ್ರಿಯೇ, ಪುರುಷನಾದ ನಾನು ನಪುಂಸಕರ ಜೊತೆಯಲ್ಲಿ ಸ್ವತಃ ಮಾತನಾಡುವುದಿಲ್ಲವೆಂಬ ನನ್ನ ವ್ರತವನ್ನು ನೀನು ತಿಳಿದಿದ್ದೀಯೆ. ಆದ್ದರಿಂದ ಶುಭಳಾದವಳೇ, ನಾನು ಬೃಹನ್ನಳೆಯನ್ನು ಕುರಿತು ನನ್ನ ಅಶ್ವಗಳನ್ನು ನಿಯಂತ್ರಿಸು ಎಂದು ಸ್ವತಃ ಹೇಳಲಾರೆ.
ಸೈರಂಧ್ರೀ
ಭಯಕಾಲೇ ತು ಸಂಪ್ರಾಪ್ತೇ ನ ವ್ರತಂ ನಾವ್ರತಂ ಪುನಃ |
ಯಥಾ ದುಃಖಂ ಪ್ರತರತಿ ತಥಾ ಯುಕ್ತಂ ಚರೇದ್ ಬುಧಃ ॥30॥
ಇತಿ ಧರ್ಮವಿದಃ ಪ್ರಾಹುಸ್ತಸ್ಮಾದ್ ವಾಚ್ಯಾ ಬೃಹನ್ನಳಾ ॥31॥

ಸೈರಂಧ್ರೀ ಭಯ ಕಾಲವು ಪ್ರಾಪ್ತವಾದಾಗ ವ್ರತವೂ ಇಲ್ಲ, ಅವ್ರತವೂ ಇಲ್ಲ. ಹೇಗೆ ಮಾಡಿದರೆ ದುಃಖವು ಪರಿಹಾರವಾಗುತ್ತದೆಯೋ ವಿವೇಕಿಯಾದವನು ಹಾಗೆ ಮಾಡಬೇಕು ಎಂದು ಧರ್ಮವನ್ನು ತಿಳಿದವರು ಹೇಳುತ್ತಾರೆ. ಆದ್ದರಿಂದ ಬೃಹನ್ನಳೆಯ ಜೊತೆಯಲ್ಲಿ ನೀನು ಮಾತನಾಡು.
ಯೇಯಂ ಕುಮಾರೀ ಸುಶ್ರೋಣೀ ಭಗಿನೀ ತೇ ಕವೀಯಸೀ |
ಅಸ್ಯಾಸ್ತು ವಚನಂ ವೀರ ಕರಿಷ್ಯತಿ ನ ಸಂಶಯಃ ॥32॥
ಈ ಸುಶ್ರೋಣಿಯೂ, ಕುಮಾರಿಯೂ ಆದ ನಿನ್ನ ತಂಗಿಯ ಮಾತುಗಳನ್ನು ಅವಳು ನಡೆಸುವಳು. ಎಲೈ ವೀರನೇ, ಇದರಲ್ಲಿ ಸಂಶಯವಿಲ್ಲ.
ಯದಿ ತೇ ಸಾರಥಿಃ ಸಾ ಸ್ಯಾತ್ ಕುರೂನ್ ಸರ್ವಾನಸಂಶಯಮ್ |
ಜಿತ್ವಾ ಗಾಶ್ಚ ಸಮಾದಾಯ ಧ್ರುವಮಾಗಮನಂ ಭವೇತ್ ॥33॥
ಒಂದು ಪಕ್ಷ ನಿನಗೆ ಅವಳು ಸಾರಥಿಯಾದರೆ ನಿಸ್ಸಂಶಯವಾಗಿ ಎಲ್ಲಾ ಕೌರವರನ್ನೂ ಗೆದ್ದು, ಗೋವುಗಳನ್ನು ತೆಗೆದುಕೊಂಡು ಖಂಡಿತವಾಗಿ ಹಿಂದೆ ಬರುವಿ.
ವೈಶಂಪಾಯನಃ
ಏವಮುಕ್ತಃ ಸ ಸೈರಂಧ್ರ್ಯಾ ಭಗಿನೀಂ ಪ್ರತ್ಯಭಾಷತ ॥34॥
ಗಚ್ಛ ತ್ವಮನವದ್ಯಾಂಗಿ ತಾಮಾನಯ ಬೃಹನ್ನಳಾಮ್ ॥35॥
ವೈಶಂಪಾಯನ ಸೈರಂಧ್ರಿಯಿಂದ ಹೀಗೆ ಹೇಳಲ್ಪಟ್ಟ ಉತ್ತರನು ತನ್ನ ತಂಗಿಯನ್ನು ಕುರಿತು ಅನವದ್ಯಾಂಗಿಯೇ, ಹೋಗಿ ಆ ಬೃಹನ್ನಳೆಯನ್ನು ಕರೆದುಕೊಂಡು ಬಾ ಎಂದು ಹೇಳಿದನು.
ವೈಶಂಪಾಯನಃ
ಸಾ ಪ್ರಾದ್ರವತ್ ಕಾಂಚನಮಾಲ್ಯಧಾರಿಣೀ
ಜ್ಯೇಷ್ಠೇನ ಭ್ರಾತ್ರಾ ಪ್ರಹಿತಾ ಯಶಸ್ವಿನೀ |
ಭ್ರಾತುರ್ನಿಯೋಗಂ ತು ನಿಶಮ್ಯ ಸುಭ್ರೂಃ
ಶುಭಾನನಾ ಹಾಟಕರತ್ನಭೂಷಿತಾ ॥36॥
ವೈಶಂಪಾಯನ ಸುವರ್ಣಮಾಲೆಗಳನ್ನು ಧರಿಸಿದ ಯಶಸ್ವಿನಿಯಾದ ಸುಂದರವಾದ ಮುಖವುಳ್ಳ ಸುವರ್ಣರತ್ನಗಳಿಂದ ಭೂಷಿತಳಾದ ಒಳ್ಳೆಯ ಹುಬ್ಬುಗಳನ್ನುಳ್ಳ ಕೀರ್ತಿವಂತಳಾದ ಅವಳು ಅಣ್ಣನ ಆಜ್ಞೆಯನ್ನು ಕೇಳಿ ಅವನಿಂದ ಕಳುಹಿಸಲ್ಪಟ್ಟವಳಾಗಿ ಶೀಘ್ರವಾಗಿ ಅಲ್ಲಿಂದ ಓಡಿದಳು.
ಸಾ ವಜ್ರಮುಕ್ತಾಮಣಿಹೇಮಕುಂಡಲಾ
ಮೃದುಕ್ರಮಾ ಭ್ರಾತೃನಿಯೋಗಚೋದಿತಾ |
ಪ್ರದಕ್ಷಿಣಾವರ್ತತನುಃ ಶಿಖಂಡಿನೀ
ಪದ್ಮಾನನಾ ಪದ್ಮದಲಾಯತಾಕ್ಷೀ ॥37॥
ವಜ್ರ, ಮುತ್ತು ಮತ್ತು ಮಣಿಗಳಿಂದ ಖಚಿತವಾದ ಸುವರ್ಣಮಯವಾದ ಕರ್ಣಕುಂಡಲಗಳನ್ನು ಧರಿಸಿದ, ಮೃದುವಾದ ನಡಿಗೆ ಉಳ್ಳ, ತಲೆಯ ಮೇಲೆ ಪ್ರದಕ್ಷಿಣಾಕಾರವಾಗಿ ಕೇಶಗಳನ್ನು ಗಂಟು ಹಾಕಿಕೊಂಡ, ಪದ್ಮದಂತೆ ಮುಖವುಳ್ಳ ಪದ್ಮದಳಾಯತಾಕ್ಷಿಯಾದ ಅವಳು (ಶೀಘ್ರವಾಗಿ ಹೊರಟಳು).
ತನ್ವೀ ಸಮಾಂಗೀ ಮೃದುಮಂದ್ರಲೋಚನಾ
ಮಾತ್ಸ್ಯಸ್ಯ ರಾಜ್ಞೋ ದುಹಿತಾ ವಿಲಾಸಿನೀ |
ಸಾ ನರ್ತನಾಗಾರಮರಾಲಪಕ್ಷ್ಮಾ
ಶತಹ್ರದಾ ಮೇಘಮಿವಾನ್ವಪದ್ಯತ ॥38॥
ಕೃಶಾಂಗಿಯೂ, ಸಮವಾದ ಅವಯವವುಳ್ಳವಳೂ, ಮೃದುವೂ ಮತ್ತು ನಿಧಾನವೂ ಆದ ಲೋಚನಗಳುಳ್ಳವಳೂ, ವಿಲಾಸಿನಿಯೂ, ಸುಂದರವಾದ ಹುಬ್ಬುಳ್ಳವಳೂ ಆದ ವಿರಾಟರಾಜನ ಮಗಳಾದ ಅವಳು, ಮಿಂಚು ಮೇಘವನ್ನು ಸೇರುವಂತೆ ನರ್ತನಾಗಾರಕ್ಕೆ ಬಂದಳು.
ಸಾ ನಾಗನಾಸೋಪಮಸಂಹಿತೋರುಃ
ಅನಿಂದಿತಾ ವೇದಿವಿಲಗ್ನಮಧ್ಯಾ |
ಆಸಾದ್ಯ ತಸ್ಮೌ ವರಮಾಲ್ಯಧಾರಿಣೀ
ಪಾರ್ಥಂ ಶುಭಾ ನಾಗವಧೂರಿವ ದ್ವಿಪಮ್ ॥39॥
ಆನೆಯ ಸೊಂಡಿಲಿನಂತೆ ದುಂಡಾದ ತೊಡೆಗಳುಳ್ಳ, ಅನಿಂದಿತಳಾದ, ವೇದಿಯಂತೆ ಕೃಶವಾದ ನಡುವನ್ನು ಹೊಂದಿದ, ಶ್ರೇಷ್ಠವಾದ ಮಾಲೆಗಳನ್ನು ಧರಿಸಿದ, ಶುಭಳಾದ ಅವಳು ಹೆಣ್ಣಾನೆಯು ಗಂಡಾನೆಯನ್ನು ಸಮೀಪಿಸುವಂತೆ ಅರ್ಜುನನನ್ನು ಸಮೀಪಿಸಿದಳು.
ತಾಮಾಗತಾಮಾಯತತಾಮ್ರಲೋಚನಾಮ್
ಅವೇಕ್ಷ್ಯ ಪಾರ್ಥಃ ಸಮಯೇಽಭ್ಯಭಾಷತ ॥40॥
ಕಿಮಾಗತಾ ಕಾಂಚನಮಾಲ್ಯಧಾರಿಣಿ
ಸುಗಾತ್ರಿ ಕಿಂಚಿತ್ ತ್ವರಿತಾಽಸಿ ಸುಭ್ರು |
ಕಿಂ ತೇ ಮುಖಂ ಸುಂದರಿ ನ ಪ್ರಸನ್ನಮ್
ಆಚಕ್ಷ್ವ ಶೀಘ್ರಂ ಮಮ ಚಾರುಹಾಸಿನಿ ॥41॥

ಅಲ್ಲಿಗೆ ಬಂದ ಆ ವಿಶಾಲರಕ್ತನೇತ್ರೆಯನ್ನು ನೋಡಿ ಆ ಸಮಯದಲ್ಲಿ ಅರ್ಜುನನು ಅವಳನ್ನು ಕುರಿತು, ಎಲೌ ಸುವರ್ಣಮಾಲೆಗಳನ್ನು ಧರಿಸಿದ ಸುಂದರಶರೀರವುಳ್ಳವಳೇ, ಸುಂದರಿಯೇ, ಸುಂದರಮುಗುಳ್ನಗೆ ಉಳ್ಳವಳೇ, ಒಳ್ಳೆಯ ಹುಬ್ಬುಳ್ಳವಳೇ, ಏತಕ್ಕೆ ಬಂದೆ? ಏನೋ ತ್ವರೆಯಿಂದ ಕೂಡಿದಂತೆ ಕಾಣುತ್ತಿದೆ. ನಿನ್ನ ಮುಖವು ಪ್ರಸನ್ನವಾಗಿಲ್ಲ. ನನಗೆ ಅದಕ್ಕೆ ಕಾರಣವನ್ನು ಹೇಳು ಎಂದು ಕೇಳಿದನು.
ವೈಶಂಪಾಯನಃ
ಸಾ ವಜ್ರವೈಡೂರ್ಯವಿಕಾರಕುಂಡಲಾ
ವಿನಿದ್ರಪದ್ಮೋತ್ಪಲಪತ್ರಗಂಧಿನೀ |
ಪ್ರಸನ್ನತಾರಾಧಿಪಸನ್ನಿಭಾನನಾ
ಪಾರ್ಥಂ ಕುಮಾರೀ ವಚನಂ ಬಭಾಷೇ ॥42॥
ವಜ್ರವೈಢೂರ್ಯಗಳಿಂದ ಮೆಟ್ಟಿದ ಕರ್ಣಕುಂಡಲಗಳುಳ್ಳ, ಅರಳಿದ ಪದ್ಮ ಮತ್ತು ಉತ್ಪಲದಗಳಂತೆ ಗಂಧವನ್ನುಳ್ಳ, ಪೂರ್ಣಚಂದಿರನಂತೆ ಮುಖವುಳ್ಳ, ಆ ಕುಮಾರಿಯು ಅರ್ಜುನನನ್ನು ಕುರಿತು ಮಾತನಾಡಿದಳು.
ಹರಂತಿ ವಿತ್ತಂ ಕುರವಃ ಪಿತುರ್ಮೇ
ಶತಂ ಸಹಸ್ರಾಣಿ ಗವಾಂ ಬೃಹನ್ನಳೇ |
ಸಾ ಭ್ರಾತುರಶ್ವಾನ್ ಮಮ ಸಂಯಮಸ್ವ
ಪುರಾ ಪರೇ ದೂರತರಂ ಹರಂತಿ ಗಾಃ ॥43॥
ಎಲೌ ಬೃಹನ್ನಳೆಯೇ, ಕೌರವರು ನನ್ನ ತಂದೆಯ ಲಕ್ಷಾಂತರ ಗೋಧನವನ್ನು ಅಪಹರಿಸುತ್ತಿದ್ದಾರೆ. ಅವರು ಗೋವುಗಳನ್ನು ತೆಗೆದುಕೊಂಡು ದೂರ ಹೋಗುವುದಕ್ಕಿಂತ ಮೊದಲೇ ಅಂತಹ ನೀನು ನನ್ನ ಅಣ್ಣನ ಅಶ್ವಗಳನ್ನು ನಿಯಂತ್ರಿಸಿ ಸಾರಥಿಯಾಗು.
ಸೈರಂಧ್ರಿರಾಖ್ಯಾತಿ ಬೃಹನ್ನಳೇ ತ್ವಾಂ
ಸುಶಿಕ್ಷಿತಾಂ ಸಂಗ್ರಹಣೇ ರಥಾಶ್ವಯೋಃ |
ಅಹಂ ಮರಿಷ್ಯಾಮಿ ನ ಮೇಽತ್ರ ಸಂಶಯೋ
ಮಯಾ ವೃತಾ ತತ್ರ ನ ಚೇದ್ ಗಮಿಷ್ಯಸಿ ॥44॥
ಎಲೌ ಬೃಹನ್ನಳೆಯೇ, ಸೈರಂಧ್ರಿಯು ರಥಾಶ್ವಗಳನ್ನು ನಿಯಂತ್ರಿಸುವುದರಲ್ಲಿ ನೀನು ಸುಶಿಕ್ಷಿತಳಾಗಿದ್ದೀಯೆ ಎಂದು ಹೇಳುತ್ತಾಳೆ. ನಾನು ಪ್ರಾರ್ಥಿಸಿದರೂ ನೀನು ಹೋಗದಿದ್ದರೆ ನಾನು ಮರಣವನ್ನು ಹೊಂದುವೆನು. ಇದರಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ತಥಾ ನಿಯುಕ್ತೋ ನರದೇವಕನ್ಯಯಾ
ನರೋತ್ತಮಃ ಪ್ರೀತಮನಾ ಧನಂಜಯಃ |
ಉವಾಚ ಪಾರ್ಥಃ ಶುಭಮಂದ್ರಯಾ ಗಿರಾ
ಶುಭಾನನಾಂ ಶುಕ್ಲದತೀಂ ಶುಚಿಸ್ಮಿತಾಮ್ ॥45॥
ವೈಶಂಪಾಯನ ರಾಜಕುಮಾರಿಯಿಂದ ಹಾಗೆ ಹೇಳಲ್ಪಟ್ಟ ನರೋತ್ತಮನಾದ ಧನಂಜಯನು ಮನದಲ್ಲಿ ಸಂತೋಷಗೊಂಡು ಸುಂದರಮುಖವುಳ್ಳವಳೂ, ಶುಕ್ಲದಂತವುಳ್ಳವಳೂ, ಶುಚಿಸ್ಮಿತೆಯೂ ಆದ ಅವಳನ್ನು ಕುರಿತು ಶುಭವಾದ ಮೆಲು ದನಿಯಿಂದ ಮಾತನಾಡಿದನು.
ಗಚ್ಛಾಮಿ ಯತ್ರೇಚ್ಛಸಿ ಚಾರುಹಾಸಿನಿ
ಹುತಾಶನಂ ಪ್ರಜ್ವಲಿತಂ ವಿಶಾಮಿ ವಾ |
ಇಚ್ಛಾಮಿ ತೇಽಹಂ ವರಗಾತ್ರಿ ಜೀವಿತಂ
ಕರೋಮಿ ಕಿಂ ತೇ ಪ್ರಿಯಮದ್ಯ ಸುಂದರಿ ॥46॥
ನ ಮತ್ಕೃತೇ ದ್ರಕ್ಷ್ಯಸಿ ತತ್ಪುರಂ ಪ್ರಿಯೇ
ವೈವಸ್ವತಂ ಪ್ರೇತಪತೇರ್ಮಹಾಭಯಮ್ ॥47॥
ಎಲೌ ಚಾರುಹಾಸಿನಿಯೇ, ನೀನು ಬಯಸಿದಲ್ಲಿ ನಾನು ಹೋಗುತ್ತೇನೆ. ಬೇಕಾದರೆ ಪ್ರಜ್ವಲಿಸುವ ಅಗ್ನಿಯನ್ನೂ ಪ್ರವೇಶಿಸುತ್ತೇನೆ. ಎಲೌ ಶೋಭನ ಶರೀರವುಳ್ಳವಳೇ, ನೀನು ಬದುಕಿರುವುದನ್ನು ನಾನು ಬಯಸುತ್ತೇನೆ. ಸುಂದರಿಯೇ, ಈ ದಿನ ನಿನಗೆ ಪ್ರಿಯವಾದ ಏನನ್ನು ಮಾಡಲಿ? ಎಲೌ ಪ್ರಿಯೆಯೇ, ನನ್ನ ಸಲುವಾಗಿ ನೀನು ಮಹಾಭಯಂಕರವಾದ ಪ್ರೇತಪತಿಯಾದ ಯಮನ ಪಟ್ಟಣವನ್ನು ನೋಡುವುದು ಬೇಡ.
ವೈಶಂಪಾಯನಃ
ಸ ಏವಮುಕತತ್ವ ಕುರುವೀರಪುಂಗವೋ
ವಿಲಾಸಿನಿಂ ಶುಕ್ಲದತೀಂ ಶುಚಿಸ್ಮಿತಾಮ್ |
ಬೃಹನ್ನಳಾರೂಪವಿಭೂಷಿತಾನನೋ
ವಿರಾಟಪುತ್ರಸ್ಯ ಸಮೀಪಮಾವ್ರಜತ್ ॥48॥
ವೈಶಂಪಾಯನ ವಿಲಾಸಿನಿಯೂ, ಶುಕ್ಲದಂತಳೂ, ಶುಚಿಸ್ಮಿತೆಯೂ ಆದ ಅವಳನ್ನು ಕುರಿತು ಬೃಹನ್ನಳೆಯ ರೂಪದಿಂದ ವೇಷವನ್ನು ಮಾಡಿಕೊಂಡಿದ್ದ ಕುರುವೀರ ಶ್ರೇಷ್ಠನು ವಿರಾಟನ ಪುತ್ರನಾದ ಉತ್ತರನ ಬಳಿಗೆ ಶೀಘ್ರವಾಗಿ ಬಂದನು.
ತಂ ಸಾ ವ್ರಜಂತಂ ತ್ವರಿತಂ ಪ್ರಭಿನ್ನಮಿವ ಕುಂಜರಮ್ |
ಅನ್ವಗಚ್ಛದ್ ವಿಶಾಲಾಕ್ಷೀ ಗಜಂ ಗಜವಧೂರಿವ ॥49॥
ಮದಿಸಿದ ಆನೆಯಂತೆ ಶೀಘ್ರವಾಗಿ ಹೋಗುತ್ತಿದ್ದ ಅವನನ್ನು ವಿಶಾಲಾಕ್ಷಿಯಾದ ಉತ್ತರೆಯು ಗಜವನ್ನು ಹೆಣ್ಣಾನೆಯು

ಅನುಸರಿಸಿದಂತೆ ಅನುಸರಿಸಿ ಹಿಂದೆ ಬಂದಳು.
ದೂರಾದೇವ ತು ಸಂಪ್ರೇಕ್ಷ್ಯ ರಾಜಪುತ್ರೋಽಭ್ಯಭಾಷತ ॥50॥
ತ್ವಯಾ ಸಾರಥಿನಾ ಪಾರ್ಥಃ ಖಾಂಡವೇಽಗ್ನಿಮತರ್ಪಯತ್ |
ಪೃಥಿವೀಂ ಚಾಜಯತ್ ಕೃತ್ಸ್ನಾಂ ಕುಂತೀಪುತ್ರೋ ಧನಂಜಯಃ ॥51॥
ಸೈರಂಧ್ರೀ ತ್ವಾಂ ಮಮಾಚಷ್ಟ ಸಾ ಹಿ ಜಾನಾತಿ ಪಾಂಡವಾನ್ ॥52॥
ದೂರದಿಂದಲೇ ಅವಳನ್ನು ನೋಡಿದ ರಾಜಪುತ್ರನು ಅವಳನ್ನು ಕುರಿತು ಖಾಂಡವವನದಲ್ಲಿ ಅರ್ಜುನನು ನಿನ್ನ ಸಾರಥ್ಯದಿಂದ ಅಗ್ನಿಯನ್ನು ಸಂತೋಷ ಪಡಿಸಿದನು ಮತ್ತು ಕುಂತೀಪುತ್ರನಾದ ಧನಂಜಯನು ನಿನ್ನ ಸಹಾಯದಿಂದ ಭೂಮಿಯನ್ನು ಜಯಿಸಿದನು ಎಂದು ಸೈರಂಧ್ರಿಯು ಹೇಳಿದಳು. ಏಕೆಂದರೆ ಅವಳು ಪಾಂಡವರನ್ನು ಚೆನ್ನಾಗಿ ತಿಳಿದಿದ್ದಾಳೆ.
ದೇವೇಂದ್ರಸಾರಥಿರ್ವೀರೋ ಮಾತಲಿಃ ಖ್ಯಾತವಿಕ್ರಮಃ |
ಸುಹೋತ್ರೋ ಜಾಮದಗ್ನೇಶ್ಚ ವಿಷ್ಣೋರ್ಯಂತಾ ಚ ದಾರುಕಃ ॥53॥
ಅರುಣಃ ಸೂರ್ಯಯಂತಾ ಚ ಸುಮಂತ್ರೋ ದಶರಥಸ್ಯ ಚ |
ಸರ್ವೇ ಸಾರಥಯಃ ಖ್ಯಾತಾ ನ ಬೃಹನ್ನಳಯಾ ಸಮಾಃ ॥54॥
ಇತ್ಯುಕ್ತೋಽಹಂ ಚ ಸೈರಂಧ್ರ್ಯಾ ತೇನ ತ್ವಾಮಾಹ್ವಯಾಮಿ ವೈ ॥55॥
ದೇವೇಂದ್ರನ ಸಾರಥಿಯಾದ ಪ್ರಸಿದ್ಧ ಪರಾಕ್ರಮವುಳ್ಳ ವೀರನಾದ ಮಾತಲಿ, ಪರಶುರಾಮನ ಸಾರಥಿಯಾದ ಸುಹೋತ್ರ, ಕೃಷ್ಣನ ಸಾರಥಿಯಾದ ದಾರುಕ, ಸೂರ್ಯನ ಸಾರಥಿಯಾದ ಅರುಣ, ದಶರಥನ ಸಾರಥಿಯಾದ ಸುಮಂತ ಮತ್ತು ಪ್ರಸಿದ್ಧರಾದ ಎಲ್ಲಾ ಸಾರಥಿಗಳೂ ಬೃಹನ್ನಳೆಗೆ ಸಮನಾದವರಲ್ಲ ಎಂದು ಸೈರಂಧ್ರಿಯು ನನಗೆ ಹೇಳಿದಳು. ಆದ್ದರಿಂದ ನಿನ್ನನ್ನು ಕರೆಯುತ್ತಿದ್ದೇನೆ.
ಆಹೂತಾ ತ್ವಂ ಮಯಾ ಸಾರ್ಧಂ ಯೋದ್ದುಂ ಯಾಹಿ ಬೃಹನ್ನಳೇ |
ದೂರಾದ್ ದೂರತರಂ ಗಾವೋ ಭವಂತಿ ಕುರುಭಿರ್ಹೃತಾಃ ॥56॥
ಎಲೌ ಬೃಹನ್ನಳೆಯೇ, ನನ್ನಿಂದ ಆಹ್ವಾನ ಮಾಡಲ್ಪಟ್ಟ ನೀನು ನನ್ನ ಜೊತೆಯಲ್ಲಿ ಯುದ್ಧಕ್ಕೆ ಹೊರಡುವವಳಾಗು. ಕೌರವರು ನಮ್ಮ ಗೋವುಗಳನ್ನು ಬಹಳ ದೂರ ಕರೆದುಕೊಂಡು ಹೋಗುತ್ತಿದ್ದಾರೆ.
ವೈಶಂಪಾಯನಃ
ತಥೋಕ್ತಾ ಪ್ರತ್ಯುವಾಚೈನಂ ರಾಜಪುತ್ರಂ ಬೃಹನ್ನಳಾ ॥57॥
ಕಾ ಶಕ್ತಿರ್ಮಮ ಸಾರಥ್ಯಂ ಕರ್ತುಂ ಸಂಗ್ರಾಮಮೂರ್ಧನಿ ॥58॥
ನೃತ್ತಂ ವಾ ಯದಿವಾ ಗೀತಂ ವಾದಿತ್ರಂ ವಾ ಪೃಥಗ್ವಿಧಮ್ |
ತತ್ ಕರಿಷ್ಯಾಮಿ ಭದ್ರಂ ತೇ ಸಾರಥ್ಯಂ ತು ಕುತೋ ಮಮ ॥59॥
ಹಾಗೆ ಹೇಳಲ್ಪಟ್ಟ ಬೃಹನ್ನಳೆಯು ರಾಜಪುತ್ರನನ್ನು ಕುರಿತು ದೊಡ್ಡ ಯುದ್ಧದಲ್ಲಿ ಸಾರಥ್ಯವನ್ನು ಮಾಡಲು ನನಗೆಲ್ಲಿ ಶಕ್ತಿ ಇದೆ? ನೃತ್ಯವನ್ನಾಗಲೀ, ಗೀತವನ್ನಾಗಲೀ, ವಿಧವಿಧವಾದ ವಾದ್ಯವನ್ನಾಗಲೀ ಹೇಳು. ನಾನು ಅವುಗಳನ್ನು ಮಾಡುವೆನು. ನಿನಗೆ ಮಂಗಳವಾಗಲಿ. ನನಗೆ ಸಾರಥ್ಯವು ಎಲ್ಲಿಂದ ಬರಬೇಕು ಎಂದು ಹೇಳಿದಳು.
ಉತ್ತರಃ
ತ್ವಂ ನರ್ತನೋ ವಾ ಯದಿ ವಾಽಪಿ ಗಾಯಕಃ
    ಕ್ಷಿಪ್ರಂ ತನುತ್ರಂ ಪರಿಧತ್ಸ್ವ ಭಾನುಮತ್ |
ಅಭೀಕ್ಷ್ಣಮಾಹುಸ್ತವ ಕರ್ಮ ಪೌರುಷಂ
    ಸ್ತ್ರಿಯಃ ಪ್ರಶಂಸಂತಿ ಮಮಾದ್ಯ ಚಾಂತಿಕೇ ॥60॥
ಉತ್ತರ ನೀನು ನರ್ತಕಿಯಾಗಿರು ಅಥವಾ ಗಾಯಕಿಯಾಗಿರು. ಆದರೆ ಬೇಗ ಪ್ರಕಾಶಮಾನವಾದ ಕವಚವನ್ನು ಧರಿಸು. ನನ್ನ ಸಮೀಪದಲ್ಲಿ ಸ್ತ್ರೀಯರು ನಿನ್ನ ಪೌರುಷ ಯುಕ್ತವಾದ ಕರ್ಮಗಳನ್ನು ಯಾವಾಗಲೂ ಪ್ರಶಂಸೆ ಮಾಡುತ್ತಾರೆ.
ವೈಶಂಪಾಯನಃ
ಇತ್ಯೇವಮುಕತ್ವ ನೃಪಸೂನುಸತ್ತಮಃ
    ತದಾ ಸ್ಮಯಿತ್ವಾಽರ್ಜುನಮಭ್ಯನಂದತ್ |
ಅಥೋತ್ತರಃ ಪಾರಶವಂ ಶತಾಕ್ಷಿಮ್
    ಸುವರ್ಣಚಿತ್ರಂ ಪರಿಗೃಹ್ಯ ಭಾನುಮತ್ ॥61॥
ಬೃಹನ್ನಳಾಯ್ಯೈ ಪ್ರದದೌ ಸ್ವಯಂ ತದಾ
    ವಿರಾಟಪುತ್ರಃ ಪರವೀರಘಾತಿನೇ |
ತದಾಜ್ಞಯಾ ಮಾತ್ಸ್ಯಸುತಸ್ಯ ವೀರ್ಯವಾನ್
    ಸಾ ಕರ್ತುಕಾಮೇವ ಸಮಾದದೇ ತದಾ ॥62॥
ವೈಶಂಪಾಯನ ಹೀಗೆ ಹೇಳಿ ಶ್ರೇಷ್ಠನಾದ ರಾಜಕುಮಾರನು ನಕ್ಕು ಅರ್ಜುನನನ್ನು ಅಭಿನಂದಿಸಿದನು. ಅನಂತರ ಉತ್ತರನು ಕಬ್ಬಿಣದಿಂದ ಮಾಡಿದ ಸುವರ್ಣದಿಂದ ಅಲಂಕರಿಸಿದ ನೂರು ಕಣ್ಣುಗಳುಳ್ಳ ಪ್ರಕಾಶಮಾನವಾದ ಕವಚವನ್ನು ಸ್ವತಃ ತಾನೇ ಬೃಹನ್ನಳೆಗೆ ಕೊಟ್ಟನು. ವಿರಾಟಪುತ್ರನಾದ ಉತ್ತರನು ಪರವೀರಘಾತಕನಾದ ಅರ್ಜುನನಿಗೆ ಕವಚವನ್ನು ಕೊಡುತ್ತಿರಲು ಪರಾಕ್ರಮಶಾಲಿಯಾದ ವಿರಾಟ ರಾಜಕುಮಾರನ ಆಜ್ಞೆಯನ್ನು ನೆರವೇರಿಸುವವನಂತೆ ಅರ್ಜುನನು ಆಗ ಆ ಕವಚವನ್ನು ಸ್ವೀಕರಿಸಿದನು.

ಬೃಹನ್ನಳಾ
ಯದ್ಯಸ್ತಿ ಚ ರಣೇ ಶೌರ್ಯಂ ಶಕ್ಯಂ ಚೇದ್ ದ್ವಿಷತಾಂ ವಧಃ |
ಅಹಂ ತ್ವಾಮಭಿಗಚ್ಛಾಮಿ ಯತ್ರ ತ್ವಂ ಯಾಸಿ ತತ್ರ ಭೋ ॥63॥
ಬೃಹನ್ನಳಾ ಎಲೈ ರಾಜಕುಮಾರನೇ, ನನಗೆ ರಣದಲ್ಲಿ ಪರಾಕ್ರಮವಿದ್ದರೆ, ಶತ್ರುಗಳ ವಧೆಯನ್ನು ಮಾಡಲು ಸಾಧ್ಯವಾದರೆ ನೀನು ಎಲ್ಲಿ ಹೋಗುವೆಯೋ ನಾನು ಅಲ್ಲಿಗೆ ನಿನ್ನನ್ನು ಹಿಂಬಾಲಿಸುತ್ತೇನೆ.
ವೈಶಂಪಾಯನಃ
ಸ ತತ್ರ ನರ್ಮಸಂಯುಕ್ತಮಕರೋತ್ ಪಾಂಡವೋ ಬಹು |
ಉತ್ತರಾಯಾಃ ಪ್ರಮುಖತಃ ಸರ್ವಂ ಜಾನನ್ನರಿಂದಮಃ ॥64॥
ಅಲ್ಲಿ ಪಾಂಡವನೂ, ಅರಿಂದಮನೂ ಆದ ಅರ್ಜುನನು ಎಲ್ಲವನ್ನೂ ತಿಳಿದಿದ್ದರೂ ಉತ್ತರೆಯ ಎದುರಿನಲ್ಲಿ ಬಹಳ ವಿನೋದಯುಕ್ತ ಚೇಷ್ಟೆಗಳನ್ನು ಮಾಡಿದನು.
ತಮಾದದಾನಂ ಪ್ರಮದಾ ಜಹಾಸಿರೇ
ಹ್ಯಧೋಮುಖಂ ವೀರವರೋಽಭ್ಯಹಾರಯತ್ |
ತತಃ ಶಿರಃಖಂ ನಿಕೃತಃ ಸಪತ್ನಹಾ
ಹ್ಯಧೋಮುಖಂ ಕವಚಮಥಾಭ್ಯಕರ್ಷತ ॥65॥
ತಲೆಕೆಳಗಾಗಿ ಕವಚವನ್ನು ಸ್ವೀಕರಿಸಿದ ಅವನನ್ನು ನೋಡಿ ಸ್ತ್ರೀಯರು ಹಾಸ್ಯವನ್ನು ಮಾಡಿದರು. ಕವಚವನ್ನು ಧರಿಸಲು ಹೊರಟ ಶತ್ರುಸಂಹಾರಕನಾದ ವೀರಶ್ರೇಷ್ಠನು ಕಪಟವನ್ನು ಮಾಡುತ್ತಾ ತಲೆಯನ್ನು ತೂರಿಸಬೇಕಾದ ಸ್ಥಳವನ್ನು ಕೆಳಮುಖವನ್ನಾಗಿ ಮಾಡಿಕೊಂಡು ಕವಚವನ್ನು ಎಳೆದನು.
ಸಮ್ಯಕ್ ಪ್ರಜಾನನ್ನಪಿ ಸತ್ಯವಿಕ್ರಮೋ
ಹ್ಯಜ್ಞಾತವತ್ ಸರ್ವಕುರುಪ್ರವೀರಃ |
ಊರ್ಧ್ವಂ ಕ್ಷಿಪನ್ ವೀರವರೋಽಭ್ಯಹಾರಯತ್
ಪುನಶ್ಚ ಯತ್ನಾತ್ ಕವಚಂ ಧನಂಜಯಃ ॥66॥
ಸತ್ಯವಿಕ್ರಮನಾದ ಸರ್ವಕುರುಶ್ರೇಷ್ಠನಾದ ಅವನು ಸರಿಯಾಗಿ ತಿಳಿದಿದ್ದರೂ ಸಹ ಏನೂ ತಿಳಿಯದವನಂತೆ ಪುನಃ ಪ್ರಯತ್ನಪೂರ್ವಕವಾಗಿ ಕವಚವನ್ನು ಮೇಲ್ಮುಖವಾಗಿ ಮಾಡಿ ಧರಿಸಲು ಪ್ರಯತ್ನಿಸಿದನು.
ಏವಂಪ್ರಕಾರಾಣಿ ಬಹೂನಿ ಕುರ್ವತಿ
ತಸ್ಮಿನ್ ಕುಮಾರ್ಯಃ ಪ್ರಮದಾ ಜಹಾಸಿರೇ |
ತಥಾಽಪಿ ಕುರ್ವಂತಮಮಿತ್ರಕರ್ಶನಂ
ನ ಚೋತ್ತರಃ ಪರ್ಯಭವದ್ ಧನಂಜಯಮ್ ॥67॥
ಹೀಗೆ ಅವನು ಅನೇಕ ವಿಧವಾಗಿ ಮಾಡುತ್ತಿರಲು ಕುಮಾರಿಯರು ಮತ್ತು ಹೆಂಗಸರು ಹಾಸ್ಯವನ್ನು ಮಾಡಿದರು. ಆದರೂ ಹಾಗೆ ಮಾಡುತ್ತಿದ್ದ ಶತ್ರುಕರ್ಶನನಾದ ಅರ್ಜುನನನ್ನು ನೋಡಿ ಉತ್ತರನು ಅವಮಾನ ಮಾಡಲಿಲ್ಲ.
ತಂ ರಾಜಪುತ್ರಃ ಸಮನಹ್ಯಯತ್ ಸ್ವಯಂ
ಜಾಂಬೂನದಾಂತೇನ ದೃಢೇನ ವರ್ಮಣಾ |
ಕೃಶಾನುತಪ್ತಪ್ರತಿಮೇನ ಭಾಸ್ವತಾ
ಜಾಜ್ವಲ್ಯಮಾನೇನ ಸಹಸ್ರರಾಜಿನಾ(ರಶ್ಮಿನಾ) ॥68॥
ಆ ರಾಜಕುಮಾರನು ಚಿನ್ನದ ಅಂಚನ್ನು ಹೊಂದಿದ, ತಪ್ತ ಚಿನ್ನದಂತೆ ಹೊಳೆಯುವ, ಜಾಜ್ವಲ್ಯಮಾನವಾಗಿ ಪ್ರಕಾಶಿಸುವ ಸಹಸ್ರರಶ್ಮಿಗಳುಳ್ಳ, ಆ ದೃಢವಾದ ಕವಚವನ್ನು ತಾನೇ ತೊಡಿಸಿದನು.
ಅಥಾಸ್ಯ ಶೀಘ್ರಂ ಪ್ರಸಮೀಕ್ಷ್ಯ ಯೋಜಯದ್
ರಥೇ ಹಯಾನ್ ಕಾಂಚನಜಾಲಸಂವೃತಾನ್ |
ಸುವರ್ಣಜಾಲಾಂತರಯೋಕ್ತ್ರಭೂಷಣಂ
ಸಿಂಹಂ ಚ ಸೌವರ್ಣಮುಪಾಶ್ರಯದ್ ರಥೇ ॥69॥
ಅನಂತರ ಅರ್ಜುನನು ಸುವರ್ಣಮಯವಾದ ಜಾಲಗಳಿಂದ ಹೊದ್ದಿಸಲ್ಪಟ್ಟ ಅಶ್ವಗಳನ್ನು ರಥದಲ್ಲಿ ಹೂಡಿದನು. ಸುವರ್ಣಜಾಲಗಳ ಮಧ್ಯದಲ್ಲಿ ಭೂಷಣಗಳುಳ್ಳ ಸುವರ್ಣಮಯವಾದ ಸಿಂಹವನ್ನೂ ಸಹ ರಥದಲ್ಲಿ ಏರಿಸಿದನು.
ಧನೂಂಷಿ ಚ ವಿಚಿತ್ರಾಣಿ ಬಾಣಾಂಶ್ಚ ರುಚಿರಾನ್ ಬಹೂನ್ |
ಆಯುಧಾನಿ ಚ ತತ್ರೈವ ರಥೋಪಸ್ಥೇ ನ್ಯಯೋಜಯತ್ ॥70॥
ವಿಚಿತ್ರವಾದ ಧನುಸ್ಸುಗಳನ್ನು ಮನೋಹರವಾದ ಅನೇಕ ಬಾಣಗಳನ್ನೂ ಮತ್ತು ಆಯುಧಗಳನ್ನು ಅಲ್ಲಿಯೇ ರಥದಲ್ಲಿ ಜೋಡಿಸಿದನು.
ಆರುಹ್ಯ ಪ್ರಯಯೌ ವೀರಃ ಸಬೃಹನ್ನಳಸಾರಥಿಃ |
ಅಥೋತ್ತರಾ ಚ ಕನ್ಯಾಶ್ಚ ಸಖ್ಯಶ್ಚೈವಾಬ್ರುವಂಸ್ತದಾ ॥71॥
ಬೃಹನ್ನಳೇ ಆನಯೇಥಾ ವಾಸಾಂಸಿ ರುಚಿರಾಣಿ ನಃ |
ಪಾಲಿತಾರ್ಥಾನಿ ಸೂಕ್ಷ್ಮಾಣಿ ರತ್ನಾನಿ ವಿವಿಧಾನಿ ಚ ॥72॥
ವಿಜಿತ್ಯ ಸಂಗ್ರಾಮಗತಾನ್ ಭೀಷ್ಮದ್ರೋಣಮುಖಾನ್ ಕುರೂನ್ ॥73॥

ವೀರನಾದ ಉತ್ತರನು ಬೃಹನ್ನಳೆಯನ್ನು ಸಾರಥಿಯನ್ನಾಗಿ ಮಾಡಿಕೊಂಡು ರಥವನ್ನೇರಿ ಹೊರಟನು. ಆಗ ಉತ್ತರೆಯೂ ಅವಳ ಸಖಿಯರಾದ ಕನ್ಯೆಯರೂ ಬೃಹನ್ನಳೆಯನ್ನು ಕುರಿತು, ಬೃಹನ್ನಳೆಯೇ, ನಮಗೆ ಸುಂದರವಾದ ವಸ್ತ್ರಗಳನ್ನು ತೆಗೆದುಕೊಂಡು ಬಾ. ಬೆಲೆಬಾಳುವ ಸೂಕ್ಷ್ಮವಾದ ವಸ್ತುಗಳನ್ನು, ವಿವಿಧವಾದ ರತ್ನಗಳನ್ನು ತೆಗೆದುಕೊಂಡು ಬಾ. ಯುದ್ಧಕ್ಕೆ ಬಂದ ಭೀಷ್ಮದ್ರೋಣ ಮೊದಲಾದ ಕೌರವರನ್ನು (ಗೆದ್ದು ವಸ್ತ್ರ ಮತ್ತು ರತ್ನಗಳನ್ನು ತೆಗೆದುಕೊಂಡು ಬಾ) ಎಂದು ಹೇಳಿದರು.

ಅಥಾನುಬ್ರುವತೀಃ ಕನ್ಯಾಃ ಸಹಿತಾಃ ಪಾಂಡುನಂದನಃ |<br>
ಪ್ರತ್ಯುವಾಚ ಹಸನ್ ಪಾರ್ಥೋ ಮೇಘದುಂದುಭಿನಿಸ್ವನಃ ॥74॥<br>
ಯದ್ಯುತ್ತರೋಽಯಂ ಸಂಗ್ರಾಮೇ ವಿಜೇಷ್ಯತಿ ಮಹಾರಥಾನ್ |<br>
ಅಥಾಹರಿಷ್ಯೇ ವಾಸಾಂಸಿ ಸೂಕ್ಷ್ಮಾಣ್ಯಾಭರಣಾನಿ ಚ ॥75॥

ಹಾಗೆ ಒಟ್ಟಿಗೆ ಮಾತನಾಡುವ ಕನ್ಯೆಯರನ್ನು ಕುರಿತು, ಮೇಘದುಂದುಭಿ ಸ್ವನವುಳ್ಳ ಪಾಂಡುನಂದನನಾದ ಅರ್ಜುನನು ನಗುತ್ತಾ, ಈ ಉತ್ತರನು ಯುದ್ಧದಲ್ಲಿ ಮಹಾರಥರನ್ನು ಸೋಲಿಸಿದರೆ ಆಗ ನಾನು ಸೂಕ್ಷ್ಮವಾದ ವಸ್ತ್ರಗಳನ್ನೂ ಮತ್ತು ಆಭರಣಗಳನ್ನೂ ತರುವೆನು ಎಂದು ಹೇಳಿದನು.

ಅಥೋತ್ತರೋ ವರ್ಮ ಮಹಾಪ್ರಭಾವವತ್<br>
ಸುವರ್ಣವೈಡೂರ್ಯಪರಿಷ್ಕೃತಂ ದೃಢಮ್ |<br>
ಆಮುಚ್ಯ ವೀರಃ ಪ್ರಯಯೌ ರಥೋತ್ತಮಂ<br>
ಧನಂಜಯಂ ಸಾರಥಿನಂ ಪ್ರಗೃಹ್ಯ ॥76॥

ಅನಂತರ ಉತ್ತರನು ಮಹಾಸಾಮರ್ಥ್ಯವುಳ್ಳ ಸುವರ್ಣವೈಡೂರ್ಯಗಳಿಂದ ಅಲಂಕೃತವಾಗಿ ದೃಢವಾಗಿದ್ದ ಕವಚವನ್ನು ಧರಿಸಿ ವೀರನಾದ ಅವನು ಶ್ರೇಷ್ಠವಾದ ರಥವನ್ನು ಏರಿ ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ಹೊರಟನು.

ತಮುತ್ತರಂ ಪ್ರೇಕ್ಷ್ಯ ರಥೋತ್ತಮೇ ಸ್ಥಿತಂ<br>
ಬೃಹನ್ನಳಾಂ ಚೈವ ಮಹಾಜನಸ್ತದಾ |<br>
ಸ್ತ್ರಿಯಶ್ಚ ಕನ್ಯಾಶ್ಚ ದ್ವಿಜಾಶ್ಚ ಸುವ್ರತಾಃ<br>
ಪ್ರದಕ್ಷಿಣಂ ಮಂಗಲಿನೋಽಭ್ಯಪೂಜಯನ್ ॥77॥

ಶ್ರೇಷ್ಠವಾದ ರಥದಲ್ಲಿ ಕುಳಿತ ಉತ್ತರನನ್ನೂ ಮತ್ತು ಸಾರಥಿಯಾದ ಬೃಹನ್ನಳೆಯನ್ನೂ ನೋಡಿದ ಮಹಾಜನರೂ, ಸ್ತ್ರೀಯರೂ, ಕನ್ಯೆಯರೂ ಮತ್ತು ವ್ರತಶೀಲರಾದ ಬ್ರಾಹ್ಮಣರೂ ಸಹ ಅವನಿಗೆ ಮಂಗಳಪದಾರ್ಥಗಳನ್ನು ಕೈಯಲ್ಲಿ ಹಿಡಿದು ಪ್ರದಕ್ಷಿಣೆಯನ್ನು ಮಾಡಿ ಅವರನ್ನು ಪೂಜಿಸಿದರು.

ಪೌರಾಃ<br>
ಯದರ್ಜುನಸ್ಯರ್ಷಭತುಲ್ಯಗಾಮಿನಃ<br>
ಪುರಾಽಭವತ್ ಖಾಂಡವದಾಹಮಂಗಲಮ್ |<br>
ಕುರೂನ್ ಸಮಾಸಾದ್ಯ ರಣೇ ಬೃಹನ್ನಳೇ<br>
ಸಹೋತ್ತರೇಣಾಸ್ತು ತವಾದ್ಯ ಮಂಗಲಮ್ ॥78॥

ಎಲೌ ಬೃಹನ್ನಳೆಯೇ, ಹಿಂದೆ ವೃಷಭದ ನಡಿಗೆಯುಳ್ಳ ಪಾಂಡವನಾದ ಅರ್ಜುನನು ಖಾಂಡವವನವನ್ನು ದಹಿಸಿದಾಗ ಎಂತಹ ಮಂಗಳವಾಯಿತೋ ಈ ದಿನ ಕುರುಗಳನ್ನು ಎದುರಿಸಿ ಯುದ್ಧವನ್ನು ಮಾಡುವ ನಿನಗೆ ಉತ್ತರನ ಜೊತೆಯಲ್ಲಿ ಅಂತಹದೇ ಮಂಗಳ ಉಂಟಾಗಲಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥<br>
ಗೋಗ್ರಹಣಪರ್ವಣಿ ದಶಮೋಽಧ್ಯಾಯಃ ॥<br>
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.

* * * *

## ಮೂವತ್ತೆಂಟನೆಯ ಅಧ್ಯಾಯ

ಕುರುಸೈನ್ಯವನ್ನು ನೋಡಿ ಭಯದಿಂದ ಪಲಾಯನ ಮಾಡುವ ಉತ್ತರನನ್ನು ಹಿಡಿದು ಅರ್ಜುನನ ಶಮೀವೃಕ್ಷದ ಸಮೀಪಗಮನ

ವೈಶಂಪಾಯನಃ<br>
ಸ ರಾಜಧಾನ್ಯಾ ನಿರ್ಯಾಯ ವೈರಾಟಿಃ ಪೃಥಿವೀಂಜಯಃ |<br>
ಪ್ರಯಾಹೀತ್ಯಬ್ರವೀತ್ ಸೂತಂ ಯತ್ರ ತೇ ಕುರವೋ ಗತಾಃ ॥1॥<br>
ಸಮವೇತಾನ್ ಕುರೂನ್ ಯಾವದ್ ಜಿಗೀಷೂನವಜಿತ್ಯ ಚ |<br>
ಗಾಶ್ಚೈತಾಃ ಕ್ಷಿಪ್ರಮಾದಾಯ ಪುನರಾಯಾಮಿ ಮತ್ಪುರಮ್ ॥2॥

ವೈಶಂಪಾಯನ ರಾಜಧಾನಿಯಿಂದ ಹೊರಟ ವಿರಾಟಪುತ್ರನಾದ ಭೂಮಿಂಜಯನು (ಉತ್ತರನು) ಸೂತನಾದ ಬೃಹನ್ನಳೆಯನ್ನು ಕುರಿತು ಕುರುಗಳು ಇದ್ದಲ್ಲಿಗೆ ರಥವನ್ನು ನಡೆಸು. ಜಯವನ್ನು ಬಯಸುವ ಇಚ್ಛೆಯಿಂದ ಸೇರಿರುವ ಕೌರವರನ್ನು ಗೆದ್ದು ಈ ನನ್ನ ಗೋವುಗಳನ್ನು ಕ್ಷಿಪ್ರವಾಗಿ ತೆಗೆದುಕೊಂಡು ಪುನಃ ನನ್ನ ಪಟ್ಟಣಕ್ಕೆ ಬರುತ್ತೇನೆ ಎಂದು ಹೇಳಿದನು.

ತತಸ್ತಾಂಶ್ಚೋದಯಾಮಾಸ ಸದಶ್ವಾನ್ ಪಾಂಡುನಂದನಃ ॥3॥<br>
ತೇ ಹಯಾ ನರಸಿಂಹೇನ ಚೋದಿತಾಃ ಶೀಘ್ರಗಾಮಿನಃ |<br>
ಆಲಿಖಂತ ಇವಾಕಾಶಮೂಹುಃ ಕಾಂಚನಮಾಲಿನಃ ॥4॥

ಆ ಪಾಂಡುನಂದನನಾದ ಅರ್ಜುನನು ಆ ಅಶ್ವಗಳನ್ನು ಪ್ರಚೋದಿಸಿದನು. ಶೀಘ್ರಗಾಮಿಗಳಾದ ನರಶ್ರೇಷ್ಠನಾದ ಅರ್ಜುನನಿಂದ

ಪ್ರೇರಿಸಲ್ಪಟ್ಟ ಸುವರ್ಣ ಮಾಲೆಗಳನ್ನು ಧರಿಸಿದ ಆ ಅಶ್ವಗಳು ಆಕಾಶವನ್ನು ಬರೆಯುವಂತೆ ಅವರನ್ನು ಹೊತ್ತು ಸಾಗಿದವು.
ನಾತಿದೂರಮಥೋ ಯಾತ್ವಾ ಮಾತ್ಸ್ಯಪುತ್ರಧನಂಜಯೌ |
ಅವೈಕ್ಷೇತಾಮಮಿತ್ರಸ್ತೌ ಕುರೂಣಾಮುತ್ತಮಂ ಬಲಮ್ ॥5॥
ಸ್ವಲ್ಪ ದೂರವೇ ಪ್ರಯಾಣವನ್ನು ಮಾಡಿ ಉತ್ತರ ಮತ್ತು ಧನಂಜಯರು ನಿರ್ಭಯರಾಗಿ ಕುರುಗಳ ಶ್ರೇಷ್ಠವಾದ ಸೈನ್ಯವನ್ನು ನೋಡಿದರು.
ಶ್ಮಶಾನಮಭಿತೋ ಗತ್ವಾ ಶೂರೌ ದದೃಶತುಃ ಕುರೂನ್ ॥6॥
ತದನೀಕಂ ಮಹತ್ ತೇಷಾಂ ವಿಬಭೌ ಸಾಗರಸ್ವನಮ್ ॥7॥
ಸಂಸರ್ಪಮಾಣಮಾಕಾಶೇ ವನಂ ಬಹುಲಪಾದಪಮ್ ॥8॥
ಸ್ಮಶಾನದ ಸಮೀಪಕ್ಕೆ ಹೋಗಿ ಶೂರರಾದ ಅವರಿಬ್ಬರೂ ಕುರುಗಳನ್ನು ನೋಡಿದರು. ಸಮುದ್ರದಂತೆ ಘೋಷವುಳ್ಳ ಆ ದೊಡ್ಡ ಸೈನ್ಯವು ಅವರಿಗೆ ಆಕಾಶದಲ್ಲಿ ಸಂಚರಿಸುವ ಅನೇಕ ವೃಕ್ಷಗಳಿರುವ ಕಾಡಿನಂತೆ ಕಂಡಿತು.
ದದೃಶೇ ಪಾರ್ಥಿವೋ ರೇಣುರ್ಜನಿತಸ್ತೇನ ಸರ್ವತಃ |
ದೃಷ್ಟಿಪ್ರಣಾಶೋ ಭೂತಾನಾಂ ದಿವಃಸ್ಪೃಕ್ ನರಸತ್ತಮ ॥9॥
ಎಲೈ ನರಶ್ರೇಷ್ಠನೇ, ಆ ಸೈನ್ಯದ ಚಲನದಿಂದ ಭೂಮಿಯ ಧೂಳು ಎದ್ದು ಆಕಾಶದವರೆಗೆ ಹಬ್ಬಿ ಜನರ ಮತ್ತು ಪ್ರಾಣಿಗಳ ದೃಷ್ಟಿಯನ್ನು ಹಾಳು ಮಾಡಿತು.
ತದನೀಕಮಥ ಪ್ರೇಕ್ಷ್ಯ ಗಜಾಶ್ವರಥಸಂಕುಲಮ್ |
ಕರ್ಣದುರ್ಯೋಧನಕೃಪೈರ್ಗುಪ್ತಂ ಶಾಂತನವೇನ ಚ ॥10॥
ದ್ರೋಣೇನ ಚ ಸಪುತ್ರೇಣ ಮಹೇಷ್ವಾಸೇನ ಧೀಮತಾ |
ಹೃಷ್ಟರೋಮಾ ಭಯೋದ್ವಿಗ್ನಃ ಪಾರ್ಥಂ ವೈರಾಟಿರಬ್ರವೀತ್ ॥11॥
ಕರ್ಣ, ದುರ್ಯೋಧನ, ಕೃಪ, ಭೀಷ್ಮ ಮೊದಲಾದವರಿಂದಲೂ ದ್ರೋಣರಿಂದಲೂ, ಮೇಧಾವಿಯಾದ ಮಹಾಧನುರ್ಧಾರಿಯಾದ ಅಶ್ವತ್ಥಾಮರಿಂದಲೂ ರಕ್ಷಿತವಾದ, ಗಜಾಶ್ವರಥಗಳಿಂದ ನಿಬಿಡವಾದ, ಆ ಸೈನ್ಯವನ್ನು ನೋಡಿ ಭಯೋದ್ವಿಗ್ನನಾಗಿ ರೋಮಾಂಚನಗೊಂಡ ಉತ್ತರನು ಅರ್ಜುನನನ್ನು ಕುರಿತು ಹೇಳಿದನು.
ನೋತ್ಸಹೇ ಕುರುಭಿರ್ಯೋದ್ಧುಂ ರೋಮಹರ್ಷಂ ಚ ಪಶ್ಯ ಮೇ ॥12॥
ಬಹುಪ್ರವೀರಮತ್ಯುಗ್ರಂ ದೇವೈರಪಿ ದುರಾಸದಮ್ |
ಪ್ರತಿಯೋದ್ಧುಂ ನ ಶಕ್ನೋಮಿ ಕುರುಸೈನ್ಯಂ ಭಯಾನಕಮ್ ॥13॥
ನಾನು ಕೌರವರ ಜೊತೆ ಯುದ್ಧವನ್ನು ಮಾಡಲಾರೆ. ನನ್ನ ರೋಮಾಂಚನವನ್ನು ನೋಡು. ಅನೇಕ ವೀರರನ್ನು ಹೊಂದಿ, ಉಗ್ರರಾಗಿರುವ ದೇವತೆಗಳಿಂದಲೂ ಜಯಿಸಲು ಅಸಾಧ್ಯವಾದ, ಭಯಂಕರವಾದ ಕುರುಸೈನ್ಯದ ಜೊತೆಯಲ್ಲಿ ಯುದ್ಧ ಮಾಡಲು ನಾನು ಸಮರ್ಥನಲ್ಲ.
ನಾಶಂಸೇ ಭಾರತೀಂ ಸೇನಾಂ ಪ್ರವೇಷ್ಟುಂ ಭೀಮಕಾರ್ಮುಕಮ್ |
ದೇವೈರಪಿ ಸಹೇಂದ್ರೇಣ ನ ಶಕ್ಯಂ ಕಿಂಪುನರ್ನರೈಃ ॥14॥
ಭಯಂಕರವಾದ ಧನುಸ್ಸುಗಳನ್ನು ಹೊಂದಿದ ಭರತರ ಸೈನ್ಯವನ್ನು ಪ್ರವೇಶಿಸಲು ನಾನು ಇಷ್ಟ ಪಡುವುದಿಲ್ಲ. ಇಂದ್ರನಿಂದ ಸಹಿತರಾದ ದೇವತೆಗಳಿಂದಲೂ ಆ ಸೈನ್ಯವನ್ನು ಪ್ರವೇಶಿಸಲು ಸಾಧ್ಯವಿಲ್ಲ. ಇನ್ನು ಮನುಷ್ಯರು ಹೇಗೆ ಪ್ರವೇಶಿಸಲು ಸಾಧ್ಯ?
ರಥನಾಗಾಶ್ವಕಲಿಲಂ ಪತ್ತಿಧ್ವಜಸಮಾಕುಲಮ್ |
ದೃಷ್ಟ್ವೈವ ಹಿ ಪರಾನೀಕಂ ಮನಃ ಪ್ರವ್ಯಥತೀವ ಮೇ ॥15॥
ರಥಾಶ್ವಗಜಗಳಿಂದ ತುಂಬಿಹೋಗಿರುವ, ಪದಾತಿ ಮತ್ತು ಧ್ವಜಗಳಿಂದ ನಿಬಿಡವಾದ ಶತ್ರುಸೈನ್ಯವನ್ನು ನೋಡಿಯೇ ನನ್ನ ಮನಸ್ಸಿಗೆ ಬಹಳ ವ್ಯಥೆಯಾಗುತ್ತಿದೆ.
ಯತ್ರ ಭೀಷ್ಮಶ್ಚ ದ್ರೋಣಶ್ಚ ಕೃಪಃ ಕರ್ಣೋ ವಿವಿಂಶತಿಃ |
ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತಶ್ಚ ಬಾಹ್ಲಿಕಃ ॥16॥
ದುರ್ಯೋಧನಸ್ತಥಾ ರಾಜಾ ವೀರೋ ದುರ್ಮರ್ಷಣಃ ಪಟುಃ ॥17॥
ಧೃತಿಮಂತೋ ಮಹೇಷ್ವಾಸಾ ಸರ್ವೇ ಯುದ್ಧವಿಶಾರದಾಃ |
ಮತ್ತಾ ಇವ ಮಹಾನಾಗಾ ಯುಕ್ತಧ್ವಜಪತಾಕಿನಃ ॥18॥
ನೀತಿಮಂತೋ ಮಹೇಷ್ವಾಸಾ ಸರ್ವಾಸ್ತ್ರಕೃತನಿಶ್ಚಯಾಃ |
ದುರ್ಜಯಾಃ ಸರ್ವಸೈನ್ಯಾನಾಂ ದೇವೈರಪಿ ಸವಾಸವೈಃ ॥19॥
ಪತಾಕಿನಶ್ಚ ಮಾತಂಗಾಃ ಸಧ್ವಜಾಶ್ಚ ಮಹಾರಥಾಃ |
ವಿಪ್ರಕೀರ್ಣಾಃ ಕೃತೋದ್ಯೋಗಾ ವಾಜಿನಶ್ಚಿತ್ರಭೂಷಿತಾಃ ॥20॥
ತಾನ್ ಜೇತುಂ ಸಮರೇ ಶೂರಾನ್ ದುರ್ಬುದ್ಧಿರಹಮಾಗತಃ ॥21॥
ಎಲ್ಲಿ ಭೀಷ್ಮ, ದ್ರೋಣ, ಕೃಪ, ಕರ್ಣ, ವಿವಿಂಶತಿ, ಅಶ್ವತ್ಥಾಮ, ವಿಕರ್ಣ, ಸೋಮದತ್ತ, ಬಾಹ್ಲಿಕ, ರಾಜನಾದ ದುರ್ಯೋಧನ, ವೀರನಾದ ನಿಪುಣನಾದ ದುರ್ಮರ್ಷಣ- ಇವರೆಲ್ಲರೂ ಧೈರ್ಯಶಾಲಿಗಳು, ಮಹಾಧನುರ್ಧಾರಿಗಳು, ಯುದ್ಧವಿಶಾರದರು, ಮದಿಸಿದ ಮಹಾಗಜಗಳಂತೆ ಇರುವವರು, ರಥಗಳಲ್ಲಿ ಧ್ವಜಪತಾಕೆಗಳನ್ನು ಏರಿಸಿದವರು, ರಾಜನೀತಿಗಳನ್ನು ತಿಳಿದವರು, ಸರ್ವಾಸ್ತ್ರಗಳನ್ನು ಹೊಂದಿದವರು, ಇಂದ್ರನಿಂದ ಕೂಡಿದ ದೇವತೆಗಳ ಸಮಗ್ರ ಸೈನ್ಯದಿಂದಲೂ ದುರ್ಜಯರಾದವರು. ಆನೆಗಳು ಪತಾಕೆಗಳನ್ನು ಹೊಂದಿವೆ. ಮಹಾರಥಗಳು ಧ್ವಜಗಳಿಂದ ಕೂಡಿವೆ. ವಿಚಿತ್ರವಾಗಿ ಅಲಂಕೃತವಾದ ಅಶ್ವಗಳು ಪ್ರಯತ್ನಶೀಲವಾಗಿ ಎಲ್ಲ

ಕಡೆಗಳಲ್ಲಿಯೂ ಹರಡಿವೆ. ಆ ಶೂರರನ್ನು ಯುದ್ಧದಲ್ಲಿ ಗೆಲ್ಲಲು ದುರ್ಬುದ್ಧಿಯುಳ್ಳ ನಾನು ಇಲ್ಲಿಗೆ ಬಂದೆನು.
ದೃಷ್ಟ್ವೈವ ಹಿ ಕುರೂನ್ ಸರ್ವಾನ್ ವ್ಯೂಢಾನೀಕಾನ್ ಪ್ರಹಾರಿಣಃ |
ಹೃಷಿತಾನಿ ಚ ರೋಮಾಣಿ ಕಶ್ಮಲಂ ಚಾಗಮನ್ಮಹತ್ ॥22॥
ಸೈನ್ಯವನ್ನು ವ್ಯೂಹಮಾಡಿ ಪ್ರಹಾರ ಮಾಡಲು ಸಿದ್ಧರಾದ ಎಲ್ಲಾ ಕೌರವರನ್ನೂ ನೋಡಿಯೇ ನನಗೆ ರೋಮಾಂಚವಾಗಿದೆ. ಬಹಳ ವಿಷಾದವೂ ಆಗುತ್ತಿದೆ.
ವೈಶಂಪಾಯನಃ
ದೃಷ್ಟ್ವಾ ಚ ಮಹತೀಂ ಸೇನಾಂ ಕುರೂಣಾಂ ದೃಢಧನ್ವಿನಾಮ್ |
ಪರಿದೇವಯತೇ ಮಂದಃ ಸಕಾಶೇ ಸವ್ಯಸಾಚಿನಃ ॥23॥
ವೈಶಂಪಾಯನ ದೃಢ ಧನುಸ್ಸುಳ್ಳ ಕೌರವರ ಮಹಾಸೈನ್ಯವನ್ನು ನೋಡಿ ಮಂದನಾದ ಉತ್ತರನು ಅರ್ಜುನನ ಸಮೀಪದಲ್ಲಿ ಗೋಳಾಡಿದನು.
ತ್ರಿಗರ್ತಾನ್ ಮೇ ಪಿತಾ ಯಾತಃ ಶೂನ್ಯೇ ವೈ ಪ್ರಣಿಧಾಯ ಮಾಮ್ |
ಸರ್ವಾಂ ಸೇನಾಂ ಸಮಾದಾಯ ನ ಮೇ ಸಂತೀಹ ಸೈನಿಕಾಃ ॥24॥
ಅಹಮೇಕೋ ಬಹೂನ್ ಬಾಲಃ ಕೃತಾಸ್ತ್ರಾನಕೃತಶ್ರಮಃ |
ಪ್ರತಿಯೋದ್ಧುಂ ನ ಶಕ್ನೋಮಿ ನಿವರ್ತಯ ಬೃಹನ್ನಳೇ ॥25॥
ನನ್ನನ್ನು ಶೂನ್ಯಪಾಲನನ್ನಾಗಿ ಮಾಡಿ ನನ್ನ ತಂದೆಯು ಎಲ್ಲಾ ಸೈನ್ಯವನ್ನೂ ತೆಗೆದುಕೊಂಡು ತ್ರಿಗರ್ತರ ಜೊತೆಯಲ್ಲಿ ಯುದ್ಧ ಮಾಡಲು ಹೋದನು. ಇಲ್ಲಿ ನನಗೆ ಸೈನಿಕರೇ ಇಲ್ಲ. ಬಾಲಕನಾದ ಪರಿಶ್ರಮವಿಲ್ಲದ ನಾನೊಬ್ಬನೇ ಅಸ್ತ್ರಜ್ಞರಾದ ಅವರ ಜೊತೆಯಲ್ಲಿ ಯುದ್ಧ ಮಾಡಲು ಸಮರ್ಥನಲ್ಲ. ಬೃಹನ್ನಳೆಯೇ, ರಥವನ್ನು ಹಿಂದಿರುಗಿಸು.
ವೈಶಂಪಾಯನಃ
ತಂ ತಥಾವಾದಿನಂ ತತ್ರ ಬೀಭತ್ಸುಃ ಪ್ರತ್ಯಭಾಷತ |
ಸಂಪ್ರಹಸ್ಯ ಪುನಸ್ತಂ ವೈ ಸರ್ವಲೋಕಮಹಾರಥಃ ॥26॥
ವೈಶಂಪಾಯನ ಹಾಗೆ ಮಾತನಾಡುತ್ತಿದ್ದ ಉತ್ತರನನ್ನು ನೋಡಿ ನಕ್ಕು ಸರ್ವಲೋಕ ಮಹಾರಥನಾದ ಅರ್ಜುನನು ಅವನನ್ನು ಕುರಿತು ಪುನಃ ಮಾತನಾಡಿದನು.
ಭಯಾದುದೀರ್ಣರೂಪೋಽಸಿ ದ್ವಿಷತಾಂ ಹರ್ಷವರ್ಧನಃ |
ನ ಚ ತಾವತ್ ಕೃತಂ ಕಿಂಚಿತ್ ಪರೈಃ ಕರ್ಮ ರಣಾಜಿರೇ ॥27॥
ಭಯದಿಂದ ವ್ಯಗ್ರವಾದ ರೂಪವನ್ನು ಹೊಂದಿ ಶತ್ರುಗಳಿಗೆ ಸಂತೋಷವನ್ನುಂಟು ಮಾಡುತ್ತಿದ್ದೀಯೆ. ಶತ್ರುಗಳು ರಣರಂಗದಲ್ಲಿ ಇನ್ನೂ ಯಾವ ಕಾರ್ಯವನ್ನೂ ಮಾಡಿಲ್ಲ.
ಸ್ವಯಮೇವ ಚ ಮಾಮಾತ್ಥ ವಹ ಮಾಂ ಕೌರವಾನ್ ಪ್ರತಿ |
ಸೋಽಹಂ ತ್ವಾಂ ತತ್ರ ನೇಷ್ಯಾಮಿ ಯತ್ರೈತೇ ಬಹುಲಾ ಧ್ವಜಾಃ ॥28॥
ನನ್ನನ್ನು ಕೌರವರ ಬಳಿಗೆ ಕರೆದುಕೊಂಡು ಹೋಗು ಎಂದು ನೀನೇ ನನ್ನನ್ನು ಕುರಿತು ಹೇಳಿದೆ. ಆದ್ದರಿಂದ ಈ ಅನೇಕ ಧ್ವಜಗಳು ಎಲ್ಲಿ ಕಂಡುಬರುತ್ತವೆಯೋ ಅಲ್ಲಿಗೆ ನಿನ್ನನ್ನು ಕೊಂಡೊಯ್ಯುವೆನು.
ಮಧ್ಯಮಾಮಿಷಗೃಧ್ರಾಣಾಂ ಕುರೂಣಾಮಾತತಾಯಿನಾಮ್ |
ನೇಷ್ಯಾಮಿ ತ್ವಾಂ ಮಹಾಬಾಹೋ ಮಾ ತ್ವಂ ಹಿ ವಿಮನಾ ಭವ ॥29॥
ಸಮುದ್ರಮಿವ ಗಂಭೀರಂ ಕುರುಸೈನ್ಯಮರಿಂದಮ ॥30॥
ಎಲೈ ಮಹಾಬಾಹುವೇ, ಶತ್ರುಗಳ ಮಾಂಸದಲ್ಲಿ ಆಸೆಯನ್ನು ಹೊಂದಿರುವ ಶಸ್ತ್ರಧಾರಿಗಳಾದ ಕೌರವರ, ಸಮುದ್ರದಂತೆ ಅಗಾಧವಾದ ಸೈನ್ಯವೆಲ್ಲಿದೆಯೋ ಅಂತಹ ಕುರುಸೈನ್ಯದ ಬಳಿಗೆ ನಿನ್ನನ್ನು ಕರೆದುಕೊಂಡು ಹೋಗುವೆನು. ಎಲೈ ಅರಿಂದಮನೇ, ನೀನು ವಿಷಾದವನ್ನು ಹೊಂದಬೇಡ.
ಸ್ತ್ರೀಸಕಾಶೇ ಪ್ರತಿಜ್ಞಾಯ ಪುರುಷಾಣಾಂ ಹಿ ಶೃಣ್ವತಾಮ್ |
ವಿಕತ್ಥಮಾನೋ ನಿರ್ಯಾತ್ವಾ ಬ್ರೂಷಿ ಕಿಂ ನಾತ್ರ ಯುದ್ಧ್ಯಸೇ ॥31॥
ಸ್ತ್ರೀಯರ ಎದುರಿಗೆ ಪುರುಷರು ಕೇಳುತ್ತಿರುವಂತೆ ನಿನ್ನನ್ನೇ ನೀನು ಶ್ಲಾಘಿಸಿಕೊಂಡು ಪ್ರತಿಜ್ಞೆಯನ್ನು ಮಾಡಿ ಹೊರಗೆ ಬಂದು ಈಗ ಏಕೆ ಯುದ್ಧವನ್ನು ಮಾಡುವುದಿಲ್ಲ ಎಂದು ಹೇಳುತ್ತಿದ್ದೀಯೆ?
ತಥಾ ಸ್ತ್ರೀಷು ಪ್ರತಿಶ್ರುತ್ಯ ಪೌರುಷಂ ಪುರುಷೇಷು ಚ |
ರಥಮಾರುಹ್ಯ ನಿರ್ಯಾಯ ಕಿಮರ್ಥಂ ನ ಚ ಯೋತ್ಸ್ಯಸೇ ॥32॥
ಸ್ತ್ರೀಯರ ಸಮೀಪದಲ್ಲಿ ಮತ್ತು ಪುರುಷರ ಸಮೀಪದಲ್ಲಿ ನಿನ್ನ ಪೌರುಷವನ್ನು ಆ ರೀತಿಯಲ್ಲಿ ಪ್ರತಿಜ್ಞೆ ಮಾಡಿ ರಥವನ್ನೇರಿ ಹೊರಗೆ ಬಂದು ಈಗ ಏಕೆ ಯುದ್ಧವನ್ನು ಮಾಡುವುದಿಲ್ಲ?
ನ ಚೇದ್ ವಿಜಿತ್ಯ ಗಾಸ್ತ್ವಂ ಹಿ ನಗರಂ ಪ್ರತಿಯಾಸ್ಯಸಿ |
ಪ್ರಹಸಿಷ್ಯಂತಿ ಧೀರಾಸ್ತ್ವಾಂ ನರಾ ನಾರ್ಯಶ್ಚ ಸಂಗತಾಃ ॥33॥
ಗೋವುಗಳನ್ನು ಗೆಲ್ಲದೆ ನೀನು ನಗರಕ್ಕೆ ಹಿಂದಿರುಗಿದರೆ ಧೀರರಾದ ಪುರುಷರು ಮತ್ತು ಸ್ತ್ರೀಯರು ಒಟ್ಟಿಗೆ ಸೇರಿ ನಿನ್ನನ್ನು ಹಾಸ್ಯಮಾಡುವರು.
ಅಹಮಪ್ಯಸ್ಮಿ ಸೈರಂಧ್ರ್ಯಾ ಸ್ತುತಃ ಸಾರಥ್ಯಕರ್ಮಣಿ |
ನಾಹಂ ಶಕ್ನೋಮ್ಯನಿರ್ಜಿತ್ಯ ಗಾಃ ಪ್ರಯಾತುಂ ಪುರಂ ಪ್ರತಿ ॥34॥

ಸೈರಂಧ್ರಿಯು ನನ್ನನ್ನೂ ಕೂಡ ಸಾರಥ್ಯಕರ್ಮದ ವಿಷಯದಲ್ಲಿ ಹೊಗಳಿದ್ದಾಳೆ. ಗೋವುಗಳನ್ನು ಗೆಲ್ಲದೆ ನಾನು ಪುನಃ ಪಟ್ಟಣಕ್ಕೆ ಹೋಗಲಾರೆ.
ಸ್ತೋತ್ರೇಣ ಚೈವ ಸೈರಂಧ್ರ್ಯಾಸ್ತವ ವಾಕ್ಯೇನ ಚೋದಿತಃ |
ಕಥಂ ನ ಯುದ್ಧ್ಯೇಯಮಹಂ ಕುರೂನೇತಾನ್ ಸ್ಥಿರೋ ಭವ ||35||
ಸೈರಂಧ್ರಿಯ ಪ್ರಶಂಸೆಯ ಮಾತುಗಳಿಂದಲೂ ಮತ್ತು ನಿನ್ನ ಮಾತುಗಳಿಂದಲೂ ಪ್ರೇರಿಸಲ್ಪಟ್ಟ ನಾನು ಈ ಕೌರವರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡದೆ ಇದ್ದೇನು? ನೀನು ಧೈರ್ಯದಿಂದಿರು.
ಉತ್ತರಃ
ಕಾಮಂ ಹರಂತು ಮಾತ್ಸ್ಯಾನಾಂ ಭೂಯಾಂಸಃ ಕುರವೋ ಧನಮ್ |
ಪ್ರಹಸಂತು ಚ ಮಾಂ ನಾರ್ಯೋ ನರಾಶ್ಚಾಪಿ ಬೃಹನ್ನಳೇ ||36||
ಸಂಗ್ರಾಮೇಣ ನ ಮೇ ಕಾರ್ಯಂ ಗಾವೋ ಗಚ್ಛಂತು ಚಾಪಿ ಮೇ |
ನಗರಂ ಚ ಪ್ರವೇಕ್ಷ್ಯಾಮಿ ಪಶ್ಯತಸ್ತೇ ಬೃಹನ್ನಳೇ ||37||
ಉತ್ತರ ಬಹುಸಂಖ್ಯೆಯಲ್ಲಿರುವ ಕೌರವರು ನಮ್ಮ ಗೋಧನವನ್ನು ತೆಗೆದುಕೊಂಡು ಹೋಗಲಿ. ಬೃಹನ್ನಳೆಯೇ, ಸ್ತ್ರೀಯರು ಮತ್ತು ಪುರುಷರು ನನ್ನನ್ನು ಹಾಸ್ಯವನ್ನು ಮಾಡಲಿ. ಯುದ್ಧದಿಂದ ನನಗೆ ಏನೂ ಆಗಬೇಕಾಗಿಲ್ಲ. ಗೋವುಗಳು ಹೋಗಲಿ. ಎಲೌ ಬೃಹನ್ನಳೆಯೇ, ನೀನು ನೋಡುತ್ತಿರುವಂತೆಯೇ ನಾನು ನಗರಕ್ಕೆ ಹೋಗುವೆನು.
ವೈಶಂಪಾಯನಃ
ಇತ್ಯುಕ್ತ್ವಾ ಪ್ರಾದ್ರವತ್ ಭೀತೋ ರಥಾತ್ ಪ್ರಸ್ಕಂದ್ಯ ಕುಂಡಲೀ |
ತ್ಯಕ್ತ್ವಾ ಮಾನಂ ಸುಸಂತ್ರಸ್ತೋ ವಿಸೃಜ್ಯ ಸಶರಂ ಧನುಃ ||38||
ವೈಶಂಪಾಯನ ಹೀಗೆ ಹೇಳಿ ಕರ್ಣಕುಂಡಲಗಳನ್ನು ಧರಿಸಿದ ಉತ್ತರನು ಬಹಳ ಹೆದರಿ ಮಾನವನ್ನು ಬಿಟ್ಟು ಬಿಲ್ಲು ಬಾಣಗಳನ್ನು ತ್ಯಜಿಸಿ ರಥದಿಂದ ಧುಮುಕಿ ಓಡಲು ಪ್ರಾರಂಭಿಸಿದನು.
ನೈಷ ಶೂರೈಃ ಸ್ಮೃತೋ ಧರ್ಮಃ ಕ್ಷತ್ರಿಯಸ್ಯ ಪಲಾಯನಮ್ |
ಶ್ರೇಯೋ ಹಿ ಮರಣಂ ಯುದ್ಧೇ ಕ್ಷತ್ರಿಯಸ್ಯ ಪಲಾಯನಾತ್ ||39||
ಇತಿ ಚೋಕ್ತ್ವಾ ತು ಕೌಂತೇಯೋ ರಥಾದವತತಾರ ಹ |
ದೀರ್ಘಾಂ ವೇಣೀಂ ವಿಧೂನ್ವಾನಃ ಸಾಧು ರಕ್ತೇ ಚ ವಾಸಸೀ ||40||
ಅನ್ವಧಾವನ್ಮಹಾಬಾಹೂ ರಾಜಪುತ್ರಂ ಧನಂಜಯಃ ||41||
ಕ್ಷತ್ರಿಯನಾದವನು ಪಲಾಯನ ಮಾಡುವುದು ಧರ್ಮವೆಂದು ಯಾವ ಶೂರರೂ ಹೇಳುವುದಿಲ್ಲ. ಪಲಾಯನ ಮಾಡುವುದಕ್ಕಿಂತ ಯುದ್ಧದಲ್ಲಿ ಮರಣವೇ ಕ್ಷತ್ರಿಯನಿಗೆ ಶ್ರೇಷ್ಠವಾದುದು ಎಂದು ಹೇಳುತ್ತಾ ಅರ್ಜುನನು ರಥದಿಂದ ಇಳಿದನು. ಉದ್ದವಾದ ಕೇಶವನ್ನು ಮತ್ತು ಧರಿಸಿದ ರಕ್ತವಸ್ತ್ರಗಳನ್ನು ಕೊಡವಿಕೊಳ್ಳುತ್ತಾ ಮಹಾಬಾಹುವಾದ ಅರ್ಜುನನು ರಾಜಪುತ್ರನಾದ ಉತ್ತರನ ಹಿಂದೆ ಓಡಿದನು.
ವಿಕ್ರಮಂತಂ ಪದನ್ಯಾಸೈಃ ಕಂಪಯಂತಂ ಚ ಮೇದಿನೀಮ್ |
ವಿಧೂಯ ವೇಣೀಂ ಧಾವಂತಮಜಾನಂತೋಽರ್ಜುನಂ ತದಾ ||42||
ಸೈನಿಕಾಃ ಪ್ರಾಹಸನ್ ಕೇಚಿತ್ ತಸ್ಯ ರೂಪಮವೇಕ್ಷ್ಯ ಚ ||43||
ತನ್ನ ಪದನ್ಯಾಸದಿಂದ ಭೂಮಿಯನ್ನು ನಡುಗಿಸುತ್ತಾ ಪರಾಕ್ರಮವನ್ನು ತೋರಿಸುತ್ತಿದ್ದ, ತಲೆಕೂದಲುಗಳನ್ನು ಕೊಡವಿಕೊಂಡು ಓಡುತ್ತಿದ್ದಂತಹ ಅರ್ಜುನನನ್ನು ತಿಳಿಯದೇ ಆಗ ಕೆಲವು ಕೌರವ ಸೈನಿಕರು ಅವನ ರೂಪವನ್ನು ನೋಡಿ ಹಾಸ್ಯವನ್ನು ಮಾಡಿದರು.
ತಂ ಚ ಶೀಘ್ರಂ ಪ್ರಧಾವಂತಂ ಸಂಪ್ರೇಕ್ಷ್ಯ ಕುರವೋಽಬ್ರುವನ್ ||44||
ಕೋಽಯಂ ಧಾವತ್ಯಸಂಗೇನ ಪೂರ್ವಂ ಮುಕ್ತ್ವಾ ರಥೋತ್ತಮಮ್ |
ಕ ಏಷ ವೇಷಪ್ರಚ್ಛನ್ನೋ ಭಸ್ಮಚ್ಛನ್ನ ಇವಾನಲಃ ||45||
ಕಿಂಚಿತ್ ತಸ್ಯ ತಥಾ ಪುಂಸಃ ಕಿಂಚಿತ್ ತಸ್ಯ ಯಥಾ ಸ್ತ್ರಿಯಃ ||46||
ಶೀಘ್ರವಾಗಿ ಓಡುತ್ತಿದ್ದ ಅವನನ್ನು ನೋಡಿ ಅವರು ಯುದ್ಧದ ಪ್ರಸಂಗವಿಲ್ಲದೆಯೇ ಮೊದಲೇ ಶ್ರೇಷ್ಠವಾದ ರಥದಿಂದ ಇಳಿದು ಓಡುತ್ತಿರುವ ಇವನು ಯಾವನು? ಬೂದಿ ಮುಚ್ಚಿದ ಕೆಂಡದಂತೆ ಇರುವ, ವೇಷದಿಂದ ಪ್ರಚ್ಛನ್ನನಾದ ಇನ್ನೊಬ್ಬನು ಯಾವನು? ಅವನ ಸ್ವಲ್ಪ ಅಂಶವು (ಆಕಾರವು) ಸ್ತ್ರೀಯಂತೆಯೂ, ಸ್ವಲ್ಪ ಅಂಶವು (ಶೀಲವು) ಪುರುಷನಂತೆಯೂ ಇದೆ ಎಂದು ಮಾತನಾಡಿಕೊಂಡರು.
ವೈಶಂಪಾಯನಃ
ಇತ್ಯೇವಂ ಸೈನಿಕಾಃ ಪ್ರಾಹುರ್ದ್ರೋಣಸ್ತಾನಿದಮಬ್ರವೀತ್ |
ಆಚಾರ್ಯಃ ಕುರುಪಾಂಡೂನಾಂ ಮತೌ ಶುಕ್ರಾಂಗಿರೋಪಮಃ ||47||
ವೈಶಂಪಾಯನ ಸೈನಿಕರು ಹೀಗೆ ಮಾತನಾಡುತ್ತಿದ್ದಾಗ ಕುರುಪಾಂಡವರ ಆಚಾರ್ಯರಾದ ಬುದ್ಧಿಯಲ್ಲಿ ಶುಕ್ರ ಬೃಹಸ್ಪತಿಗೆ ಹೋಲುವವರೂ ಆದ ದ್ರೋಣರು ಆ ಸೈನಿಕರನ್ನು ಕುರಿತು ಹೀಗೆ ಮಾತನಾಡಿದರು.
ಕಿಂ ವಿಚಾರಣಯಾ ಕಾರ್ಯಮೇತೇನಾನುಸೃತೇನ ವೈ ||48||
ಧಾವಂತಮನುಧಾವಂತಶ್ಚ ನಿರ್ಭಯೋ ಭಯವಿಪ್ಲುತಮ್ |
ವೇಣೀಕಲಾಪಂ ನಿರ್ಧೂಯ ಪ್ರತಿಭಾತಿ ನರರ್ಷಭಃ ||49||
ಮುಂದೆ ಓಡುತ್ತಿರುವ ಮತ್ತು ಅವನ ಹಿಂದೆ ಓಡುತ್ತಿರುವ ಇವರು ಯಾರು ಎಂದು ವಿಚಾರವನ್ನು ಮಾಡಿ ಏನು ಪ್ರಯೋಜನ? ಭಯಗ್ರಸ್ತನಾಗಿ ಮುಂದೆ ಓಡುತ್ತಿರುವ ಆ ವ್ಯಕ್ತಿಯನ್ನು ನಿರ್ಭಯನಾಗಿ ತನ್ನ ಕೇಶಕಲಾಪವನ್ನು ಕೊಡವಿಕೊಳ್ಳುತ್ತಾ ನರಶ್ರೇಷ್ಠನಾದ ಅರ್ಜುನನು ಹಿಂಬಾಲಿಸಿ ಓಡುತ್ತಿದ್ದಾನೆ ಎಂದು ನನಗೆ ತೋರುತ್ತದೆ.

ಆಕಾರಮರ್ಜುನಸ್ಯೈತತ್ ಕ್ಲೀಬರೂಪಂ ಬಿಭರ್ತಿ ಚ |
ರೂಪೇಣ ಪಾರ್ಥಸದೃಶಃ ಸ್ತ್ರೀವೇಷಸಮಲಂಕೃತಃ ॥50॥
ಈ ಆಕಾರವು ಅರ್ಜುನನದ್ದು. ನಪುಂಸಕರ ರೂಪವನ್ನು ಧರಿಸಿದ್ದಾನೆ. ಈ ವ್ಯಕ್ತಿಯು ಆಕಾರದಿಂದ ಅರ್ಜುನನಿಗೆ ಸದೃಶನೂ, ಸ್ತ್ರೀವೇಷದಿಂದ ಅಲಂಕೃತನೂ ಆಗಿದ್ದಾನೆ.
ನಟೇ ವೈತಚ್ಛಿರೋಗ್ರೀವಂ ತೌ ಬಾಹೂ ಪರಿಘೋಪಮೌ |
ತತ್ತದೇವಾಸ್ಯ ವಿಕ್ರಾಂತಂ ನಾಯಮನ್ಯೋ ಧನಂಜಯಾತ್ ॥51॥
ಈತನ ಶಿರಸ್ಸು ಮತ್ತು ಕತ್ತುಗಳು ನಟನ ಶಿರಸ್ಸು ಮತ್ತು ಕತ್ತುಗಳಂತಿವೆ. ಆ ಬಾಹುಗಳು ಒನಕೆಯಂತಿವೆ. ಅದೇ ವಿಕ್ರಮದ ನಡಿಗೆ ಇವನಿಗಿದೆ. ಇವನು ಅರ್ಜುನನನ್ನು ಬಿಟ್ಟು ಬೇರೆ ಯಾರೂ ಆಗಲಾರ.
ಅಮರೇಷ್ವಿವ ದೇವೇಂದ್ರೋ ಮಾನುಷೇಷು ಧನಂಜಯಃ |
ಏಕೋಽಸ್ಮಾನನುಯಾತ್ಯೇಷ ನಾಯಮನ್ಯೋ ಧನಂಜಯಾತ್ ॥52॥
ದೇವತೆಗಳಲ್ಲಿ ದೇವೇಂದ್ರನಂತೆ ಮನುಷ್ಯರಲ್ಲಿ ಧನಂಜಯನೊಬ್ಬನೇ ನಮಗೆ ಪ್ರತಿಯಾಗಿ ಯುದ್ಧವನ್ನು ಮಾಡಲು ಬರುತ್ತಿದ್ದಾನೆ. ಇವನು ಅರ್ಜುನನನ್ನು ಬಿಟ್ಟು ಬೇರೆ ಯಾರೂ ಅಲ್ಲ.
ವೈಶಂಪಾಯನಃ
ದ್ರೋಣೇನ ಚೈವಮುಕ್ತಸ್ತು ಕರ್ಣಃ ಪ್ರೋವಾಚ ಬುದ್ಧಿಮಾನ್ ॥53॥
ವೈಶಂಪಾಯನ ದ್ರೋಣರಿಂದ ಹೀಗೆ ಹೇಳಲ್ಪಟ್ಟ ಮೇಧಾವಿಯಾದ ಕರ್ಣನು ಮಾತನಾಡಿದನು.
ಏಕಃ ಪುತ್ರೋ ವಿರಾಟಸ್ಯ ಶೂನ್ಯೇ ಸನ್ನಿಹಿತಃ ಪುರೇ |
ಸ ಏಷ ಕಿಲ ನಿರ್ಯಾತೋ ಬಾಲಭಾವಾನ್ನ ಪೌರುಷಾತ್ ॥54॥
ಕ್ಲೀಬಂ ವೈ ಸಾರಥಿಂ ಕೃತ್ವಾ ನಿರ್ಯಾತೋ ನಗರಾದ್ ಬಹಿಃ ॥55॥
ಛನ್ನಂ ಗಾತ್ರೇಣ ವಾ ನೂನಂ ಜಾನೀಧ್ವಂ ಯಾಂತಮರ್ಜುನಮ್ |
ತೇ ಹಿ ನಃ ಪ್ರತಿಸಂಯಾತುಂ ಸಂಗ್ರಾಮೇ ನ ಹಿ ಶಕ್ನುಯುಃ ॥56॥
ಕಥಮೇಕತರಸ್ತೇಷಾಂ ಸಮಸ್ತಾನ್ ಯೋಧಯೇತ್ ಕುರೂನ್ ॥57॥
ವಿರಾಟನ ಒಬ್ಬ ಪುತ್ರನು ರಾಜಧಾನಿಯಲ್ಲಿ ಶೂನ್ಯಪಾಲನಾಗಿದ್ದನು. ಅಂತಹ ಅವನೇ ಬಾಲಭಾವದಿಂದ ಯುದ್ಧಕ್ಕೆ ಬಂದಿದ್ದಾನೆ. ಪೌರುಷದಿಂದಲ್ಲ. ನಪುಂಸಕನನ್ನು ಸಾರಥಿಯನ್ನಾಗಿ ಮಾಡಿಕೊಂಡು ನಗರದಿಂದ ಹೊರಗೆ ಬಂದಿದ್ದಾನೆ. ಈ ಹಿಂಬಾಲಿಸುವವನನ್ನು ವೇಷವನ್ನು ಮರೆಸಿಕೊಂಡ ಅರ್ಜುನನೆಂದು ಸ್ಪಷ್ಟವಾಗಿ ತಿಳಿಯಿರಿ. ಮತ್ಸ್ಯರು ಯುದ್ಧದಲ್ಲಿ ನಮ್ಮನ್ನು ಎದುರಿಸಲು ಖಂಡಿತವಾಗಿಯೂ ಸಮರ್ಥರಲ್ಲ. ಅವರಲ್ಲಿ ಒಬ್ಬನು ಹೇಗೆ ಸಮಸ್ತ ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡಿಯಾನು?
ಉತ್ತರಃ ಸಾರಥಿಂ ಕೃತ್ವಾ ನಿರ್ಯಾತೋ ನಗರಾದ್ ಬಹಿಃ |
ಸ ನೋ ಮನೋ ಧ್ವಜಾನ್ ದೃಷ್ಟ್ವಾ ಭೀತ ಏಷ ಪಲಾಯತೇ ॥58॥
ಉತ್ತರನು ಅವನನ್ನು ಸಾರಥಿಯನ್ನಾಗಿ ಮಾಡಿಕೊಂಡು ನಗರದಿಂದ ಹೊರಗೆ ಬಂದಿದ್ದಾನೆ. ಈ ಉತ್ತರನಾದರೂ ನಮ್ಮ ಧೈರ್ಯಯುಕ್ತವಾದ ಮನಸ್ಸನ್ನು ಮತ್ತು ಧ್ವಜಗಳನ್ನು ನೋಡಿ ಪಲಾಯನ ಮಾಡುತ್ತಿದ್ದಾನೆ.
ಕೃಪಃ
ನೂನಂ ತಮೇವ ಧಾವಂತಂ ಜಿಘೃಕ್ಷತಿ ಧನಂಜಯಃ |
ಉತ್ತರಂ ಸಾರಥಿಂ ಕೃತ್ವಾ ಸ್ವಯಂ ಯೋದ್ಧುಮಿಹೇಚ್ಛತಿ ॥59॥
ಕೃಪ ನಿಶ್ಚಿತವಾಗಿ ಆ ಓಡುತ್ತಿರುವವನನ್ನು ಅರ್ಜುನನು ಹಿಂಬಾಲಿಸಿ ಹಿಡಿಯಲು ಬಯಸುತ್ತಿದ್ದಾನೆ. ಉತ್ತರನನ್ನು ಸಾರಥಿಯನ್ನಾಗಿ ಮಾಡಿಕೊಂಡು ತಾನೇ ಯುದ್ಧವನ್ನು ಮಾಡಲು ಅರ್ಜುನನು ಅಪೇಕ್ಷಿಸುತ್ತಾನೆ.
ವೈಶಂಪಾಯನಃ
ಇತಿ ಸ್ಮ ಕುರವಃ ಸರ್ವೇ ವಿಮೃಶಂತಃ ಪುನಃ ಪುನಃ |
ನ ಚ ವ್ಯವಸಿತುಂ ವೀರಾ ಅರ್ಜುನಂ ಶಕ್ನುವಂತಿ ತೇ ॥60॥
ವೈಶಂಪಾಯನ ಹೀಗೆ ವೀರರಾದ ಕೌರವರೆಲ್ಲರೂ ಪುನಃ ಪುನಃ ವಿಮರ್ಶೆ ಮಾಡಿದರೂ ಇವನು ಅರ್ಜುನನೆಂದು ನಿರ್ಣಯಿಸಲು ಸಮರ್ಥರಾಗಲಿಲ್ಲ.
ದುರ್ಯೋಧನ ಉವಾಚೇದಂ ಸೈನಿಕಾನ್ ರಥಸತ್ತಮಾನ್ ॥61॥
ಅರ್ಜುನೋ ವಾಸುದೇವೋ ವಾ ರಾಮಃ ಪ್ರದ್ಯುಮ್ನ ಏವ ವಾ |
ತೇ ಹಿ ನಃ ಪ್ರತಿಸಂಯಾತುಂ ಸಂಗ್ರಾಮೇ ನ ಚ ಶಕ್ನುಯುಃ ॥62॥
ಆಗ ದುರ್ಯೋಧನನು ರಥಶ್ರೇಷ್ಠರಾದ ಸೈನಿಕರನ್ನು ಕುರಿತು ಅರ್ಜುನನಾಗಲೀ, ಕೃಷ್ಣನಾಗಲೀ, ರಾಮನಾಗಲೀ ಅಥವಾ ಪ್ರದ್ಯುಮ್ನನೇ ಆಗಲಿ, ಅವರು ಯುದ್ಧದಲ್ಲಿ ನಮ್ಮನ್ನು ಎದುರಿಸಲು ಸಮರ್ಥರಲ್ಲ.
ಅನ್ಯೋ ವಾ ಕ್ಲೀಬರೂಪೇಣ ಯದ್ಯಾಗಚ್ಛೇದ್ ಗವಾಂ ಪದಮ್ |
ಅರ್ಪಯಿತ್ವಾ ಶರೈಸ್ತೀಕ್ಷ್ಣೈಃ ಪಾತಯಿಷ್ಯಾಮಿ ಭೂತಳೇ ॥63॥
ಕಥಮೇಕತರಸ್ತೇಷಾಂ ಸಮಸ್ತಾನ್ ಯೋಧಯೇತ್ ಕುರೂನ್ ॥64॥
ನಪುಂಸಕ ವೇಷದಿಂದ ಬೇರೆ ಯಾವನಾದರೂ ಗೋವುಗಳ ಸಮೀಪಕ್ಕೆ ಬಂದರೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಅವನನ್ನು ಭೂಮಿಯ ಮೇಲೆ ಕೆಡವುವೆನು. ಅವರಲ್ಲಿ ಒಬ್ಬನು ಹೇಗೆ ಎಲ್ಲಾ ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡಿಯಾನು?
ವೈಶಂಪಾಯನಃ

ಛನ್ನಂ ತಥಾಗತಂ ಸರ್ವೇ ಪಾಂಡವಂ ಪ್ರೇಕ್ಷ್ಯ ಸೈನಿಕಾಃ |
ಅರ್ಜುನೋ ನೇತಿ ಚೇತ್ಯೇನಂ ನ ವ್ಯವಸ್ಯಂತಿ ತೇ ಪುನಃ ॥65॥
ವೈಶಂಪಾಯನ ಆ ರೀತಿಯಲ್ಲಿ ವೇಷಚ್ಛನ್ನನಾದ ಅರ್ಜುನನನ್ನು ನೋಡಿ ಎಲ್ಲಾ ಸೈನಿಕರು ಇವನು ಅರ್ಜುನ ಅಥವಾ ಅಲ್ಲ ಎಂದು ನಿರ್ಧರಿಸಲು ಸಾಧ್ಯವಾಗಲಿಲ್ಲ.
ಇತಿ ಸ್ಮ ಕುರವಃ ಸರ್ವೇ ಮಂತ್ರಯಂತೋ ಮಹಾರಥಾಃ ॥66॥
ದೃಢವೇಧೀ ಮಹಾಸತ್ತ್ವಃ ಶಕ್ರತುಲ್ಯಪರಾಕ್ರಮಃ |
ಅದ್ಯಾಗಚ್ಛತಿ ಚೇದ್ ಯೋದ್ಧುಂ ಸರ್ವಂ ಸಂಶಯಿತಂ ಬಲಮ್ ॥67॥
ನ ಚಾಪ್ಯನ್ಯಂ ನರಂ ತತ್ರ ವ್ಯವಸ್ಯಂತಿ ಧನಂಜಯಾತ್ ॥68॥
ದೃಢವೇದಿಯೂ ಮಹಾಬಲಶಾಲಿಯೂ ಇಂದ್ರನಿಗೆ ಸಮನಾದ ಪರಾಕ್ರಮವುಳ್ಳವನೂ ಆದ ಅರ್ಜುನನು ಈ ದಿನ ಯುದ್ಧಕ್ಕೆ ಬಂದರೆ ನಮ್ಮ ಸೈನ್ಯವೆಲ್ಲಾ ಸಂಶಯಗ್ರಸ್ತವಾಗುತ್ತದೆ ಎಂದು ಮಹಾರಥರಾದ ಎಲ್ಲಾ ಕೌರವರು ಪರಸ್ಪರವಾಗಿ ಮಾತನಾಡಿಕೊಂಡರು. ಇವನು ಅರ್ಜುನನಲ್ಲದೆ ಬೇರೆಯವನು ಎಂದೂ ಅವರಿಗೆ ನಿರ್ಧರಿಸಲು ಸಾಧ್ಯವಾಗಲಿಲ್ಲ.
ಉತ್ತರಂ ತು ಪ್ರಧಾವಂತಮನುದ್ರುತ್ಯ ಧನಂಜಯಃ |
ಗತ್ವಾ ಶತಪದಂ ತೂರ್ಣಂ ಕೇಶಪಕ್ಷೇ ಪರಾಮೃಶತ್ ॥69॥
ವಿರಾಟಪುತ್ರಂ ಬೀಭತ್ಸುರ್ಬಲವಾನರಿಮರ್ದನಃ ॥70॥
ಓಡುತ್ತಿದ್ದ ಉತ್ತರನನ್ನು ಹಿಂಬಾಲಿಸಿ ಬಲಿಷ್ಠನೂ, ಶತ್ರುಮರ್ದನನೂ ಆದ ಅರ್ಜುನನು ನೂರು ಹೆಜ್ಜೆಗಳನ್ನು ಹೋಗಿ ಶೀಘ್ರವಾಗಿ ವಿರಾಟಪುತ್ರನನ್ನು ಅವನ ತಲೆ ಕೂದಲುಗಳನ್ನು ಹಿಡಿದನು.
ಮಾ ಮಾ ಗೃಹಾಣ ಭದ್ರಂ ತೇ ದಾಸೋಽಹಂ ತೇ ಬೃಹನ್ನಳೇ |
ಇತಿ ವಾದಿನಮೇವಾಶು ಧಾವಂತಂ ತರಸಾಽಗ್ರಹೀತ್ ॥71॥
ನನ್ನನ್ನು ಹಿಡಿಯಬೇಡ. ನಿನಗೆ ಮಂಗಳವಾಗಲಿ. ಬೃಹನ್ನಳೆಯೇ, ನಾನು ನಿನಗೆ ದಾಸನಾಗಿದ್ದೇನೆ ಎಂದು ಹೇಳುತ್ತಾ ಓಡುತ್ತಿದ್ದ ಉತ್ತರನನ್ನು ಅರ್ಜುನನು ಶೀಘ್ರವಾಗಿ ಹಿಡಿದನು.
ಸೋಽರ್ಜುನೇನ ಪರಾಮೃಷ್ಟಃ ಪರ್ಯದೇವಯದಾರ್ತವತ್ |
ಬಹುಲಂ ಕೃಪಣಂ ಚೈವ ವಿತ್ತಂ ಪ್ರಾವೇದಯದ್ ಬಹು ॥72॥
ಅರ್ಜುನನಿಂದ ಹಿಡಿಯಲ್ಪಟ್ಟ ಉತ್ತರನು ದೈನ್ಯದಿಂದ ಕೂಡಿ ಆರ್ತನಾಗಿ ಬಹಳವಾಗಿ ಗೋಳಾಡಿದನು. ತನ್ನನ್ನು ಬಿಟ್ಟರೆ ಬಹಳ ಧನವನ್ನು ಕೊಡುವುದಾಗಿಯೂ ಹೇಳಿದನು.
ಮಾ ಮಾ ಮಾರಯ ಭದ್ರಂ ತೇ ಮುಂಚ ಮಾಮೇವ ಮೇ ಗೃಹಮ್|
ಮುಂಚ ಮಾಂ ಮುಂಚ ಮುಂಚೇತಿ ತತ್ಪಾದಾವಗ್ರಹೀತ್ ಬ್ರುವನ್ ॥
ನನ್ನನ್ನು ಕೊಲ್ಲಬೇಡ. ನಿನಗೆ ಮಂಗಳವಾಗಲಿ. ನನ್ನನ್ನು ಮನೆಗೆ ಹೋಗಲು ಬಿಟ್ಟುಬಿಡು. ನನ್ನನ್ನು ಬಿಡು. ನನ್ನನ್ನು ಬಿಡು ಎಂದು ಹೇಳುತ್ತಾ ಅರ್ಜುನನ ಪಾದಗಳನ್ನು ಹಿಡಿದುಕೊಂಡನು.
ಸುವರ್ಣಮಣಿಮುಕ್ತಾನಾಂ ಯದ್ಯದಿಚ್ಛಸಿ ದದ್ಮಿ ತೇ |
ಹಸ್ತಿನೋಽಶ್ವಾನ್ ರಥಾನ್ ಗಾವಃ ಸ್ತ್ರಿಯಶ್ಚ ಸಮಲಂಕೃತಾಃ ॥74॥
ಶಾತಕುಂಭಸ್ಯ ಶುದ್ಧಸ್ಯ ಶ್ರೇಷ್ಠಸ್ಯ ರಜತಸ್ಯ ಚ |
ದದಾಮಿ ಶತನಿಷ್ಕಂ ತೇ ಮುಂಚ ಮಾಂ ತ್ವಂ ಬೃಹನ್ನಳೇ ॥75॥
ಸುವರ್ಣ, ಮಣಿಗಳು ಮತ್ತು ಮುತ್ತುಗಳನ್ನು ಮತ್ತು ನೀನು ಏನೇನು ಬಯಸುತ್ತೀಯೋ - ಗಜಗಳು, ಅಶ್ವಗಳು, ರಥಗಳು, ಗೋವುಗಳು, ಅಲಂಕೃತರಾದ ಸ್ತ್ರೀಯರು - ಅವೆಲ್ಲವನ್ನೂ ಕೊಡುವೆನು. ಶುದ್ಧವಾದ ಸುವರ್ಣಮಯವಾದ ನೂರು ನಿಷ್ಕಗಳನ್ನು, ಒಳ್ಳೆಯ ರಜತಮಯವಾದ ನೂರುನಿಷ್ಕಗಳನ್ನು ನಿನಗೆ ಕೊಡುವೆನು. ಬೃಹನ್ನಳೆಯೇ, ನೀನು ನನ್ನನ್ನು ಬಿಟ್ಟುಬಿಡು.
ಮಣೀನಷ್ಟೌ ಚ ವೈಡೂರ್ಯಾನ್ ಹೇಮಬದ್ಧಾನ್ ಮಹಾಪ್ರಭಾನ್ |
ಹೇಮದಂಡಪ್ರತಿಚ್ಛನ್ನಂ ರಥಂ ಯುಕ್ತಂ ತು ವಾಜಿಭಿಃ ॥76॥
ಮತ್ತಾಂಶ್ಚ ದಶ ಮಾತಂಗಾನ್ ಮುಂಚ ಮಾಂ ತ್ವಂ ಬೃಹನ್ನಳೇ ॥77॥
ಚಿನ್ನದಲ್ಲಿ ಖಚಿತವಾದ ಮಹಾಪ್ರಭೆಯುಳ್ಳ ಎಂಟುಮಣಿಗಳನ್ನೂ, ವೈಡೂರ್ಯಗಳನ್ನೂ, ಹೇಮದಂಡದಿಂದ ಕೂಡಿದ ಅಶ್ವಯುಕ್ತವಾದ ರಥವನ್ನೂ ಕೊಡುವೆನು, ಹತ್ತು ಮದಗಜಗಳನ್ನು ಕೊಡುವೆನು. ಬೃಹನ್ನಳೆಯೇ, ನನ್ನನ್ನು ಬಿಟ್ಟು ಬಿಡು.
ಷಷ್ಟಿಂ ಸ್ವಲಂಕೃತಾಃ ಕನ್ಯಾ ಗ್ರಾಮಮೇಕಂ ದದಾಮಿ ತೇ ॥78॥
ಮುಂಚ ಮಾಂ ತ್ವಂ ಭೃಶಂ ದೀನಂ ವಿಹ್ವಲಂ ಭಯಕಂಪಿತಮ್ |
ಗಮಿಷ್ಯಾಮಿ ಪುರಂ ಶೀಘ್ರಂ ದ್ರಷ್ಟುಂ ಮಾತರಮರ್ದಿತಾಮ್ ॥79॥
ಅರವತ್ತು ಅಲಂಕೃತರಾದ ಕನ್ಯೆಯರನ್ನು ಕೊಡುವೆನು. ಒಂದು ಗ್ರಾಮವನ್ನು ಕೊಡುವೆನು. ಬಹಳ ದೀನನೂ, ವಿಹ್ವಲನೂ, ಭಯದಿಂದ ನಡುಗುತ್ತಿರುವವನೂ ಆದ ನನ್ನನ್ನು ಬಿಟ್ಟುಬಿಡು. ನಾನು ದುಃಖಿತಳಾದ ನನ್ನ ತಾಯಿಯನ್ನು ನೋಡಲು ಶೀಘ್ರವಾಗಿ ನಗರಕ್ಕೆ ಹೋಗುವೆನು (ಎಂದು ಗೋಳಾಡಿದನು).
ವೈಶಂಪಾಯನಃ
ಏವಮಾದೀನಿ ವಾಕ್ಯಾನಿ ವಿಲಪಂತಮ್ ಅಚೇತನಮ್ |
ಪ್ರಹಸ್ಯ ಪುರುಷವ್ಯಾಘ್ರೋ ರಥಸ್ಯಾಂತಿಕಮಾನಯತ್ ॥80॥
ವೈಶಂಪಾಯನ ಹೀಗೆಲ್ಲಾ ಮಾತನಾಡಿ ಅಚೇತನನಾಗಿ ಗೋಳಾಡುತ್ತಿದ್ದ ಅವನನ್ನು ನಗುತ್ತಾ ಪುರುಷವ್ಯಾಘ್ರನಾದ ಅರ್ಜುನನು

ರಥದ ಸಮೀಪಕ್ಕೆ ಕರೆತಂದನು.
ಅಥೈನಮಬ್ರುವೀತ್ ಪಾರ್ಥೋ ಭಯಾರ್ತಂ ನಷ್ಟಚೇತಸಮ್ ॥81॥
ಸಂಗಚ್ಛಾಮಿ ಪದಾನ್ಯಸ್ಯ ನ ಸ ಭೀತಃ ಪಲಾಯತಿ ॥82॥
ಆಗ ಅರ್ಜುನನು ಭೀತನಾಗಿ ತನ್ನ ಬುದ್ಧಿಯನ್ನು ಕಳೆದುಕೊಂಡಿದ್ದ ಉತ್ತರನನ್ನು ಯೋಚಿಸಿ ನಾನು ಇವನ ಮಾರ್ಗವನ್ನು ಅನುಸರಿಸುವುದಿಲ್ಲ. ಇವನಾದರೂ ಭೀತನಾಗಿ ಪಲಾಯನ ಮಾಡುತ್ತಿದ್ದಾನೆ ಎಂದು ಹೇಳಿದನು.
ಯದಿ ನೋತ್ಸಹಸೇ ಯೋದ್ಧುಂ ಶತ್ರುಭಿಃ ಶತ್ರುಕರ್ಶನ |
ಏಹಿ ಮೇ ತ್ವಂ ಹಯಾನ್ ಯಚ್ಛ ಯುದ್ಧ್ಯಮಾನಸ್ಯ ಶತ್ರುಭಿಃ ॥83॥
ಮತ್ತು ಉತ್ತರನನ್ನು ಕುರಿತು ಎಲೈ ಶತ್ರುಕರ್ಶನನೇ, ಶತ್ರುಗಳ ಜೊತೆ ನೀನು ಯುದ್ಧವನ್ನು ಮಾಡಲು ಬಯಸದಿದ್ದರೆ, ಶತ್ರುಗಳ ಜೊತೆ ಯುದ್ಧವನ್ನು ಮಾಡುವ ನನ್ನ ಅಶ್ವಗಳನ್ನು ಬಂದು ನಿಯಂತ್ರಿಸುವವನಾಗು.
ಪ್ರಯಾಹ್ಯೇತದ್ ರಥಾನೀಕಂ ಮದ್ಬಾಹುಪರಿರಕ್ಷಿತಃ |
ಅಪ್ರಧೃಷ್ಯತಮಂ ಘೋರಂ ಗುಪ್ತಂ ಘೋರೈರ್ಮಹಾರಥೈಃ ॥84॥
ನನ್ನ ಭುಜಗಳಿಂದ ಚೆನ್ನಾಗಿ ರಕ್ಷಿತನಾಗಿ, ಸೋಲಿಸಲು ಅಸಾಧ್ಯವಾದ, ಘೋರರಾದ ಮಹಾರಥರಿಂದ ರಕ್ಷಿತವಾದ, ಈ ಶತ್ರುಸೈನ್ಯವನ್ನು ಪ್ರವೇಶಿಸುವವನಾಗು.
ಮಾ ಭೈಸ್ತ್ವಂ ರಾಜಪುತ್ರಾಗ್ರ್ಯ ಕ್ಷತ್ರಿಯೋಽಸಿ ಪರಂತಪ |
ಅಹಂ ತೈಃ ಕುರುಭಿರ್ಯೋತ್ಸ್ಯೇ ಪ್ರತ್ಯಾನೇಷ್ಯಾಮಿ ತೇ ಪಶೂನ್ ॥85॥
ಎಲೈ ಶ್ರೇಷ್ಠನಾದ ರಾಜಪುತ್ರನೇ, ಹೆದರಬೇಡ. ನೀನು ಕ್ಷತ್ರಿಯನಾಗಿದ್ದೀಯೆ. ನಾನು ಆ ಕೌರವರ ಜೊತೆ ಯುದ್ಧವನ್ನು ಮಾಡುವೆನು. ನಿನ್ನ ಗೋಧನವನ್ನು ಹಿಂದಕ್ಕೆ ತರುವೆನು.
ಪ್ರವಿಶ್ಯೈತದ್ ರಥಾನೀಕಮಪ್ರಧೃಷ್ಯಂ ದುರಾಸದಮ್ |
ಯಂತಾ ಭೂಸ್ತ್ವಂ ನರಶ್ರೇಷ್ಠ ಯೋತ್ಸ್ಯೇಽಹಂ ಕುರುಭಿಃ ಸಹ ॥86॥
ಶೂರಾನ್ ಸಮರಚಂಡಾಂಶ್ಚ ನೇಷ್ಯಾಮಿ ಯಮಸಾದನಮ್ ॥87॥
ಸೋಲಿಸಲು ಅಸಾಧ್ಯವಾದ, ಸಮೀಪಕ್ಕೆ ಹೋಗಲು ಅಸಾಧ್ಯವಾದ, ಈ ರಥಸಮೂಹವನ್ನು ಪ್ರವೇಶಿಸು. ಎಲೈ ನರಶ್ರೇಷ್ಠನೇ, ನೀನು ನನ್ನ ಸಾರಥಿಯಾಗು. ನಾನು ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಸಮರಚಂಡರಾದ ಶೂರರನ್ನು ಯಮಲೋಕಕ್ಕೆ ಕಳುಹಿಸುವೆನು.
ವೈಶಂಪಾಯನಃ
ಏವಂ ಬ್ರುವಾಣೋ ಬೀಭತ್ಸುರ್ವೈರಾಟಿಮಪರಾಜಿತಃ |
ಸಮಾಶ್ವಾಸ್ಯ ಭಯಾರ್ತಂ ತಮುತ್ತರಂ ಭರತರ್ಷಭ ॥88॥
ತತ ಏನಂ ವಿಚೇಷ್ಟಂತಮಕಾಮಂ ಭಯಪೀಡಿತಮ್ |
ರಥಮಾರೋಪಯಾಮಾಸ ಪಾರ್ಥಃ ಪರಪುರಂಜಯಃ ॥89॥
ವೈಶಂಪಾಯನ ಎಲೈ ಭರತರ್ಷಭನೇ, ಅಪರಾಜಿತನಾದ ಅರ್ಜುನನು ಹೀಗೆ ಮಾತನಾಡುತ್ತಾ ಭಯಾರ್ತನಾದ ಉತ್ತರನನ್ನು ಸಮಾಧಾನ ಮಾಡಿ ಆದರೂ ಭಯಪೀಡಿತನಾಗಿ ಯುದ್ಧವನ್ನು ಮಾಡಲು ಇಷ್ಟವಿಲ್ಲದೆ ಒದ್ದಾಡುತ್ತಿದ್ದ ಉತ್ತರನನ್ನು ಪರಪುರಂಜಯನಾದ ಅವನು ರಥವನ್ನು ಏರಿಸಿದನು.
ತಮಾರೋಪ್ಯ ರಥೋಪಸ್ಥೇ ವಿಲಪಂತಂ ಧನಂಜಯಃ |
ಗಾಂಡೀವಂ ಪುನರಾದಾತುಂ ಸಮಾಯಾತಾಂ ಶಮೀಂ ಪ್ರತಿ ॥90॥
ಉತ್ತರಂ ಸ ಸಮಾಶ್ವಾಸ್ಯ ಕೃತ್ವಾ ಸಾರಥಿಮರ್ಜುನಃ ॥91॥
ಧನಂಜಯನು ಇನ್ನೂ ಗೋಳಾಡುತ್ತಿದ್ದ ಉತ್ತರನನ್ನು ಸಮಾಧಾನಪಡಿಸಿ ಅವನನ್ನು ಸಾರಥಿಯನ್ನಾಗಿ ಮಾಡಿಕೊಂಡು ಗಾಂಡೀವವನ್ನು ಪುನಃ ತೆಗೆದುಕೊಳ್ಳಲು ಶಮೀವೃಕ್ಷದ ಸಮೀಪಕ್ಕೆ ಹೋದನು (ಇಬ್ಬರೂ ಶಮೀವೃಕ್ಷದ ಸಮೀಪಕ್ಕೆ ಹೋದರು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
ಗೋಗ್ರಹಣಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಮೂವತ್ತೊಂಬತ್ತನೆಯ ಅಧ್ಯಾಯ
ಅರ್ಜುನನ ಆದೇಶದಂತೆ ಉತ್ತರನಿಂದ ಶಮೀವೃಕ್ಷವನ್ನು
ಏರಿ ಆಯುಧಗಳ ಆನಯನ
ವೈಶಂಪಾಯನಃ
ತಂ ದೃಷ್ಟ್ವಾ ಕ್ಲೀಬರೂಪೇಣ ರಥಸ್ಥಂ ರಥಿಪುಂಗವಮ್ |
ಶಮೀಮಭಿಮುಖಂ ಯಾಂತಂ ರಥಮಾರೋಪ್ಯ ಚೋತ್ತರಮ್ ॥1॥
ದ್ರೋಣಭೀಷ್ಮಾದಯಃ ಶೂರಾಃ ಕುರೂಣಾಂ ರಥಿಸತ್ತಮಾಃ |
ವಿತ್ರಸ್ತಮನಸಶ್ಚಾಸನ್ ಧನಂಜಯಕೃತಾದ್ ಭಯಾತ್ ॥2॥
ವೈಶಂಪಾಯನ ನಪುಂಸಕರೂಪದಿಂದ ರಥದಲ್ಲಿ ಕುಳಿತಿದ್ದ ರಥಪುಂಗವನು ಉತ್ತರನನ್ನು ರಥದಲ್ಲಿ ಕೂಡಿಸಿಕೊಂಡು ಶಮೀವೃಕ್ಷದ ಬಳಿಗೆ ಹೋಗುವುದನ್ನು ನೋಡಿದ ಕೌರವರ ರಥಿಶ್ರೇಷ್ಠರಾದ ಶೂರರಾದ ದ್ರೋಣಭೀಷ್ಮಾದಿಗಳು ಅರ್ಜುನನ ಭಯದಿಂದ

ಮನಸ್ಸಿನಲ್ಲಿ ವಿತ್ರಸ್ತರಾದರು.
ತಾನವೇಕ್ಷ್ಯ ಮಹೋತ್ಪಾತಾನ್ ಉತ್ಪಾತಾನಪಿ ಚಾದ್ಭುತಾನ್ |
ಗುರುಃ ಶಸ್ತ್ರಭೃತಾಂ ಶ್ರೇಷ್ಠೋ ಭಾರದ್ವಾಜೋಽಭ್ಯಭಾಷತ ॥3॥
ಆಗ ಉಂಟಾದ ಅದ್ಭುತವಾದ ಉಲ್ಕಾಪಾತಾದಿ ಮಹೋತ್ಪಾತಗಳನ್ನೂ ಮತ್ತು ನರಿಗಳ ರೋದನ ಮುಂತಾದ ಉತ್ಪಾತಗಳನ್ನೂ ನೋಡಿದ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಎಲ್ಲರಿಗೂ ಗುರುಗಳಾದ ದ್ರೋಣರು ಮಾತನಾಡಿದರು.
ಖರಾಶ್ಚ ವಾತಾಃ ಸಂವಾಂತಿ ರೂಕ್ಷಾಃ ಪರುಷನಿಸ್ವನಾಃ |
ಭಸ್ಮವರ್ಷಪ್ರಕಾಶೇನ ತಮಸಾ ಸಂವೃತಂ ನಭಃ ॥4॥
ರೂಕ್ಷವರ್ಣಾಶ್ಚ ಜಲದಾ ದೃಶ್ಯಂತೇಽದ್ಭುತದರ್ಶನಾಃ |
ನಿಃಸರಂತಿ ಚ ಕೋಶೇಭ್ಯಃ ಶಸತ್ರಣಿ ವಿವಿಧಾನಿ ಚ ॥5॥
ವಾಯುವು ಒರಟಾಗಿ ಬೀಸುತ್ತಿದೆ. ಕ್ರೂರವಾದ ಮತ್ತು ಒರಟಾದ ಶಬ್ದಗಳು ಕೇಳಿ ಬರುತ್ತಿವೆ. ಭಸ್ಮದ ಮಳೆಯಿಂದ ಉಂಟಾದ ಕತ್ತಲೆಯಿಂದ ಆಕಾಶವು ಆವೃತವಾಗಿದೆ. ಮೋಡಗಳು ಕ್ರೂರವರ್ಣದಿಂದ ಕೂಡಿ ಅದ್ಭುತವಾಗಿ ಕಾಣುತ್ತಿವೆ. ವಿಧವಿಧವಾದ ಶಸ್ತ್ರಗಳು ಕೋಶಗಳಿಂದ ತಾವಾಗಿಯೇ ಹೊರಗೆ ಬರುತ್ತಿವೆ.
ಶಿವಾಶ್ಚ ವಿನದಂತ್ಯೇತಾ ದೀಪ್ತಾಯಾಂ ದಿಶಿ ದಕ್ಷಿಣಾಃ |
ಹಯಾಶ್ಚಾಶ್ರೂಣಿ ಮುಂಚಂತಿ ಧ್ವಜಾಃ ಕಂಪಂತ್ಯಕಂಪಿತಾಃ ॥6॥
ಜ್ವಲಿಸುತ್ತಿರುವ ದಕ್ಷಿಣದಿಕ್ಕಿನಲ್ಲಿ ಹೆಣ್ಣು ನರಿಗಳು ರೋದನ ಮಾಡುತ್ತಿವೆ. ಕುದುರೆಗಳು ಕಣ್ಣೀರನ್ನು ಸುರಿಸುತ್ತಿವೆ. ಅಲ್ಲಾಡಿಸದಿದ್ದರೂ ಧ್ವಜಗಳು ಕಂಪಿಸುತ್ತಿವೆ.
ಯಾದೃಶಾನೀಹ ದೃಶ್ಯಂತೇ ರೂಪಾಣಿ ವಿವಿಧಾನಿ ಚ |
ಏಕೈಕಮೇಷಾಂ ಪರ್ಯಾಪ್ತಮಖಿಲಕ್ಷಯಕಾರಣಮ್ ॥7॥
ಇಲ್ಲಿ ವಿಧವಿಧವಾದ ಎಂತಹ ಶಕುನಗಳು ಕಂಡುಬರುತ್ತಿವೆಯೋ ಅವುಗಳಲ್ಲಿ ಒಂದೊಂದೂ ಲೋಕನಾಶವನ್ನು ಸೂಚಿಸಲು ಸಮರ್ಥವಾಗಿವೆ.
ಏತೇ ಭಯಂ ಚ ತಿಷ್ಠಂತಿ ಯುದ್ಧಂ ಸ್ಯಾತ್ ಸಮುಪಸ್ಥಿತಮ್ |
ರಕ್ಷಧ್ವಮಪಿ ಚಾತ್ಮಾನಂ ವ್ಯೂಹಧ್ವಂ ವಾಹಿನೀಮಪಿ ॥8॥
ವೈಶಸಂ ಚ ಪ್ರತೀಕ್ಷಧ್ವಂ ರಕ್ಷಧ್ವಂ ಚಾಪಿ ಗೋಧನಮ್ ॥9॥
ಇವುಗಳು ನಮಗೆ ಭಯವುಂಟಾಗುವಂತೆ ಸೂಚನೆಯನ್ನು ನೀಡುತ್ತಿವೆ. ಯುದ್ಧವು ಉಪಸ್ಥಿತವಾಗುತ್ತಿದೆ ಎಂದು ತೋರುತ್ತಿದೆ. ನಿಮ್ಮನ್ನು ನೀವು ರಕ್ಷಿಸಿಕೊಂಡು ಸೈನ್ಯವನ್ನು ವ್ಯೂಹವಾಗಿ ರಚಿಸಿ. ದೊಡ್ಡ ಹಿಂಸೆಯನ್ನು ನಿರೀಕ್ಷಿಸಿ ಮತ್ತು ಗೋಧನವನ್ನೂ ರಕ್ಷಿಸುವವರಾಗಿ.
ವೈಶಂಪಾಯನಃ
ಏತಾವದುಕತ್ವ ವಚನಂ ಭೀಷ್ಮಮಾಲೋಕ್ಯ ಚಾಬ್ರುವೀತ್ ॥10॥
ನದೀಜ ಲಂಕೇಶವನಾರಿಕೇತುಃ
ನಗಾಹ್ವಯೋ ನಾಮ ನಗಾರಿಸೂನುಃ |
ಗತ್ಯಾ ಸುರೇಶಃ ಕ್ವಚಿದಂಗನೇವ
ಗುರುರ್ಬಭಾಷೇ ವಚನಂ ತದಾನೀಮ್ ॥11॥
ವೈಶಂಪಾಯನ ಇಷ್ಟನ್ನು ಹೇಳಿ ಭೀಷ್ಮರನ್ನು ಕುರಿತು ಮಾತನಾಡಿದರು. ನದೀಜ= ಎಲೈ ಗಂಗಾಪುತ್ರನಾದ ಭೀಷ್ಮನೇ, ಲಂಕೇಶವನಾರಿಕೇತುಃ= ಲಂಕೇಶನಾದ ರಾವಣನ ವನ= ಅಶೋಕವನಕ್ಕೆ, ಅರಿ= ಶತ್ರುವಾದ ಹನುಮಂತನನ್ನು, ಕೇತುಃ= ಧ್ವಜವಾಗಿ ಉಳ್ಳ, ನಗಾರಿಸೂನುಃ; ನಗಾರಿ= ಪರ್ವತಗಳಿಗೆ ಶತ್ರುವಾದ ಇಂದ್ರನ, ಸೂನುಃ= ಮಗನಾದ; ನಗಾಹ್ವಯೋ ನಾಮ= ಅರ್ಜುನನೆಂಬ ವೃಕ್ಷದ ಹೆಸರುಳ್ಳ ಅರ್ಜುನನು; ಗತ್ಯಾ= ತನ್ನ ನಡಿಗೆಯಲ್ಲಿ; ಸುರೇಶಃ= ಇಂದ್ರನಂತಿದ್ದಾನೆ; ಕ್ವಚಿತ್= ಕತ್ತಿನ ಮೇಲ್ಭಾಗದಲ್ಲಿ; ಅಂಗನೇವ= ಸ್ತ್ರೀಯಂತೆ ಇದ್ದಾನೆ ಎಂದು ದ್ರೋಣಾಚಾರ್ಯರು ಆಗ ಮಾತನಾಡಿದರು.
ಇತ್ಯುಕತ್ವ ಸಂಜ್ಞಯಾ ದ್ರೋಣಃ ತೂಷ್ಣೀಮಾಸೀದ್ ವಿಶಾಂಪತೇ |
ಭಾರದ್ವಾಜವಚಃ ಶ್ರುತ್ವಾ ಗಾಂಗೇಯಃ ಸಂಜ್ಞಯಾಽಬ್ರುವೀತ್ ॥12॥
ಎಲೈ ರಾಜನೇ, ದ್ರೋಣರು ಸಂಕೇತಭಾಷೆಯಿಂದ ಇಷ್ಟನ್ನು ಹೇಳಿ ಸುಮ್ಮನಾದರು. ದ್ರೋಣರ ಮಾತನ್ನು ಕೇಳಿ ಭೀಷ್ಮರೂ ಸಂಕೇತದಿಂದಲೇ ಮಾತನಾಡಿದರು.
ಭೀಷ್ಮಃ
ಅತೀತಂ ಚಕ್ರಮಸ್ಮಾಕಂ ವಿಷಯಾಂತರಮಾಗತಾಃ |
ಅತೀತಃ ಸಮಯಶ್ಚೋಕ್ತೋ ಹ್ಯಸ್ಮಾಭಿರ್ಯತ್ ಸಭಾತಳೇ ॥13॥
ನ ಭಯಂ ಶತ್ರುತಃ ಕಾರ್ಯಂ ಶಂಕಾಂ ತ್ಯಜ ನರರ್ಷಭ ॥14॥
ನಮ್ಮ ರಾಜ್ಯದ ಎಲ್ಲೆಯು ಮುಗಿದಿದೆ. ನಾವು ಬೇರೆ ದೇಶಕ್ಕೆ ಬಂದಿದ್ದೇವೆ. ನಾವು ಸಭೆಯಲ್ಲಿ ಹೇಳಿದ ಸಮಯವು ಮೀರಿಹೋಗಿದೆ. ಶತ್ರುವಿಗೆ ಹೆದರಬಾರದು. ಎಲೈ ನರಶ್ರೇಷ್ಠನೇ, ಶಂಕೆಯನ್ನು ಬಿಡು (ಚಕ್ರದಂತೆ ಪುನಃ ಪುನಃ ವನವಾಸಕ್ಕೆ ಹೋಗಬೇಕಾಗುತ್ತದೆ ಎಂಬ ನಮ್ಮ ನಿಶ್ಚಯವು ಹೊರಟುಹೋಯಿತು. ಹದಿಮೂರನೆಯ ವರ್ಷರೂಪವಾದ ಕಾಲವೂ ಹೊರಟುಹೋಯಿತು. ನಮ್ಮ ಪಾಂಡವರು ಅಜ್ಞಾತವಾಸವನ್ನು ಬಿಟ್ಟು ಜ್ಞಾತವಾಸವೆಂಬ ಬೇರೆಯ ಸ್ಥಿತಿಗೆ ಬಂದಿದ್ದಾರೆ. ಶತ್ರುತಃ ಎಂದರೆ ಪಾಂಡವಶತ್ರುವಾದ ದುರ್ಯೋಧನನ ನಿಮಿತ್ತವಾಗಿ; ನ ಭಯಂ= ಭಯವಿಲ್ಲ= ಪುನಃ ವನವಾಸಕ್ಕೆ ಹೋಗಬೇಕಾಗುತ್ತದೆ ಎಂಬ ಭಯವಿಲ್ಲ. ಎಲೈ

ನರಶ್ರೇಷ್ಠನೇ, ಎಲ್ಲವೂ ಸ್ಪಷ್ಟವಾಗಿದೆ. ಯಾವುದರಲ್ಲೂ ಸಂಶಯವನ್ನು ಪಡುವ ಅಗತ್ಯವಿಲ್ಲ-ಲಕ್ಷಾಲಂಕಾರ).
ವೈಶಂಪಾಯನಃ
ದೇವವ್ರತೇನೈವಮುಕ್ತೇ ವಚನೇ ಹಿತಕಾರಿಣಾ |
ದುರ್ಯೋಧನಮಥಾಲೋಕ್ಯ ಸಂಜ್ಞಯಾ ದ್ರೋಣ ಅಬ್ರವೀತ್ ॥15॥
ವೈಶಂಪಾಯನ ಹಿತಕಾರಿಗಳಾದ ದೇವವ್ರತರಾದ ಭೀಷ್ಮರು ದುರ್ಯೋಧನನನ್ನು ನೋಡುತ್ತಾ ಸಂಜ್ಞೆಯಿಂದ ಈ ಮಾತನ್ನು ಹೇಳುತ್ತಿರಲು ದ್ರೋಣರು ಮಾತನಾಡಿದರು.
ಏಷ ವೀರೋ ಮಹೇಷ್ವಾಸಃ ಸರ್ವಶಸ್ತ್ರಭೃತಾಂ ವರಃ |
ಆಗತಃ ಕ್ಲೀಬರೂಪೇಣ ಪಾರ್ಥೋ ನಾಸ್ತ್ಯತ್ರ ಸಂಶಯಃ ॥16॥
ನಪುಂಸಕರೂಪದಿಂದ ಬಂದಿರುವ ಈ ವೀರನು ಮಹಾಧನುರ್ಧಾರಿಯೂ ಮತ್ತು ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ ಆದ ಅರ್ಜುನನೇ. ಈ ವಿಷಯದಲ್ಲಿ ಸಂಶಯವಿಲ್ಲ.
ಏಷ ಪಾರ್ಥೋ ಹಿ ವಿಕ್ರಾಂತಃ ಸವ್ಯಸಾಚೀ ಪರಂತಪಃ |
ನಾಜಿತ್ವಾ ವಿನಿವರ್ತೇತ ಸರ್ವಾನಪಿ ಮರುದ್ಗಣಾನ್ ॥17॥
ಪರಂತಪನೂ, ಸವ್ಯಸಾಚಿಯೂ, ಪರಾಕ್ರಮಶಾಲಿಯೂ ಆದ ಈ ಅರ್ಜುನನು ಎಲ್ಲಾ ಮರುದ್ಗಣಗಳನ್ನು ಗೆಲ್ಲದೇ ಹಿಂದಿರುಗುವವನಲ್ಲ.
ಕ್ಲೇಶಿತಶ್ಚ ವನೇ ಶೂರೋ ವಾಸವೇನ ಚ ಶಿಕ್ಷಿತಃ |
ಅಮರ್ಷವಶಮಾಪನ್ನೋ ಯೋತ್ಸ್ಯತೇ ನಾತ್ರ ಸಂಶಯಃ ॥18॥
ಶೂರನಾದ ಅವನು ಕಾಡಿನಲ್ಲಿ ಕ್ಲೇಶವನ್ನು ಪಟ್ಟಿದ್ದಾನೆ. ಇಂದ್ರನಿಂದ ಅಸ್ತ್ರವಿದ್ಯೆಯಲ್ಲಿ ಶಿಕ್ಷಿತನಾಗಿದ್ದಾನೆ. ಕ್ರೋಧವಶನಾದ ಅವನು ಯುದ್ಧವನ್ನು ಮಾಡುವನು. ಇದರಲ್ಲಿ ಸಂಶಯವಿಲ್ಲ.
ನ ಹ್ಯಸ್ಯ ಪ್ರತಿಯೋದ್ಧಾರಮನ್ಯಂ ಪಶ್ಯಾಮಿ ಕೌರವಮ್ ॥19॥
ಮಹಾದೇವೋಪಿ ಪಾರ್ಥೇನ ಶ್ರೂಯತೇ ಯುದ್ಧತೋಷಿತಃ ॥20॥
ಇವನಿಗೆ ಎದುರಾಗಿ ನಿಂತು ಯುದ್ಧವನ್ನು ಮಾಡುವ ಒಬ್ಬ ಕೌರವನನ್ನು ನಾನು ಕಾಣುತ್ತಿಲ್ಲ. ರುದ್ರದೇವರೂ ಸಹ ಅರ್ಜುನನಿಂದ ಯುದ್ಧದಲ್ಲಿ ಸಂತೋಷ ಪಡಿಸಲ್ಪಟ್ಟರು ಎಂದು ನಾವು ಕೇಳಿದ್ದೇವೆ.
ವೈಶಂಪಾಯನಃ
ಇತ್ಯೇವಂವಾದಿನಂ ದ್ರೋಣಂ ಕರ್ಣಃ ಕ್ರುದ್ಧೋಽಭ್ಯಭಾಷತ ॥21॥
ಸದಾ ಭವಾನರ್ಜುನಸ್ಯ ಗುಣಾನಸ್ಮಾಸು ಕತ್ಥತೇ |
ನ ಚಾರ್ಜುನಃ ಕಿಲಾಪೂರ್ಣೋ ಮಮ ದುರ್ಯೋಧನಸ್ಯ ಚ ॥22॥
ವೈಶಂಪಾಯನ ಹೀಗೆ ಮಾತನಾಡುತ್ತಿದ್ದ ದ್ರೋಣರನ್ನು ಕುರಿತು ಕ್ರೋಧಗೊಂಡ ಕರ್ಣನು ನೀನು ಯಾವಾಗಲೂ ನಮ್ಮ ಎದುರಿಗೆ ಅರ್ಜುನನ ಗುಣಗಳನ್ನೇ ವರ್ಣಿಸುತ್ತೀಯೆ. ಅರ್ಜುನನು ನನಗೆ ಮತ್ತು ದುರ್ಯೋಧನನಿಗೆ ಅಪೂರ್ಣನಲ್ಲವಷ್ಟೆ? (ನಾನಾಗಲೀ ಅಥವಾ ದುರ್ಯೋಧನನಾಗಲೀ ಅಥವಾ ನಾವಿಬ್ಬರೂ ಸೇರಿಯಾಗಲಿ ಅವನನ್ನು ಎದುರಿಸಲು ಸಮರ್ಥರಾಗಿದ್ದೇವೆ).
ದುರ್ಯೋಧನಃ
ಯದ್ಯೇಷ ಪಾರ್ಥೋ ರಾಧೇಯ ಕೃತಂ ಕಾರ್ಯಂ ಮಹನ್ಮಮ |
ಜ್ಞಾತಾಃ ಪುನಶ್ಚರಿಷ್ಯಂತಿ ದ್ವಾದಶಾನ್ಯಾಂಶ್ಚ ವತ್ಸರಾನ್ ॥23॥
ಅಥೈಷ ಕಶ್ಚಿದೇವಾನ್ಯಃ ಕ್ಲೀಬರೂಪೇಣ ದೇವರಾಟ್ |
ಶರೈರೇನಂ ಸುನಿಶಿತೈಃ ಪಾತಯಿಷ್ಯಾಮಿ ಭೂತಳೇ ॥24॥
ದುರ್ಯೋಧನ ಎಲೈ ಕರ್ಣನೇ, ಇವನು ಒಂದು ಪಕ್ಷ ಅರ್ಜುನನೇ ಆದರೆ ನಾವು ದೊಡ್ಡ ಕಾರ್ಯವನ್ನು ಮಾಡಿದಂತಾಯಿತು. ನಮ್ಮಿಂದ ನೋಡಲ್ಪಟ್ಟ ಪಾಂಡವರು ಪುನಃ ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮಾಡುವರು. ಹಾಗಲ್ಲದೇ ಇವನು ಬೇರೆ ಯಾರಾದರೂ ಆಗಿದ್ದರೆ, ದೇವೇಂದ್ರನೇ ನಪುಂಸಕ ರೂಪದಿಂದ ಬಂದಿದ್ದರೂ, ಬಹಳ ತೀಕ್ಷ್ಣವಾದ ನನ್ನ ಬಾಣಗಳಿಂದ ಹೊಡೆದು ಅವನನ್ನು ಭೂಮಿಯ ಮೇಲೆ ಉರುಳಿಸುವೆನು.
ವೈಶಂಪಾಯನಃ
ತಸ್ಮಿನ್ ವದತಿ ತಾಂ ವಾಚಂ ಧಾರ್ತರಾಷ್ಟ್ರೇ ಪರಂತಪೇ |
ಭೀಷ್ಮೋ ದ್ರೋಣಃ ಕೃಪೋ ದ್ರೌಣಿಃ ಪೌರುಷಂ ತದವಮರ್ಶತಾಮ್ ॥
ವೈಶಂಪಾಯನ ಪರಂತಪನಾದ ದುರ್ಯೋಧನನು ಆ ಮಾತುಗಳನ್ನು ಆಡುತ್ತಿರಲು ಭೀಷ್ಮದ್ರೋಣರು ಅಶ್ವತ್ಥಾಮ ಕೃಪರೂ ಅವನ ಪೌರುಷವನ್ನು ವಿಮರ್ಶೆ ಮಾಡಿದರು.
ತಾಂ ಶಮೀಮಭಿಸಂಗಮ್ಯ ಪಾರ್ಥೋ ವೈರಾಟಿಮಬ್ರವೀತ್ |
ಸುಖಸಂವರ್ಧಿತಂ ಪಿತ್ರಾ ಸಮರಾಣಾಮಕೋವಿದಮ್ ॥26॥
ತಂದೆಯಿಂದ ಸುಖವಾಗಿ ಬೆಳೆಸಲ್ಪಟ್ಟಿದ್ದ, ಯುದ್ಧದಲ್ಲಿ ಕುಶಲನಲ್ಲದ, ಆ ಉತ್ತರನನ್ನು ಕರೆದುಕೊಂಡು ಶಮೀವೃಕ್ಷದ ಬಳಿಗೆ ಹೋಗಿ ಅರ್ಜುನನು ಹೇಳಿದನು.
ಏಹಿ ಭೂಮಿಂಜಯಾರುಹ್ಯ ವೈರಾಟೇ ಮಹತೀಂ ಶಮೀಮ್ |
ಸಮಾದಿಷ್ಟೋ ಮಯಾ ಕ್ಷಿಪ್ರಂ ಧನುರ್ಗಾಂಡೀವಮಾನಯ ॥27॥
ಎಲೈ ಭೂಮಿಂಜಯನೇ ಬಾ. ನನ್ನ ಆದೇಶದಂತೆ ಈ ದೊಡ್ಡ ಶಮೀವೃಕ್ಷವನ್ನು ಹತ್ತಿ ಶೀಘ್ರವಾಗಿ ಗಾಂಡೀವ ಧನುಸ್ಸನ್ನು

ತೆಗೆದುಕೊಂಡು ಬಾ.
ಅನೇನ ಧನುಷಾ ಚೇಹ ಸೋಢುಂ ಶಕ್ಷ್ಯಂತಿ ಮೇ ಬಲಮ್ |
ನಾಲಂ ಭಾರಂ ಗುರುಂ ಭರ್ತುಂ ಕುಂಜರಂ ವಾ ಪ್ರಮರ್ದಿತುಮ್ ॥
ಈ ನಿನ್ನ ಧನುಸ್ಸಿನಿಂದ (ನಾನು ಯುದ್ಧ ಮಾಡಿದರೆ) ಶತ್ರುಗಳು ನನ್ನ ಬಲವನ್ನು ಸಹಿಸಲು ಸಮರ್ಥರಾಗುತ್ತಾರೆ. ಇದರಿಂದ ದೊಡ್ಡ ಸೇನಾಭಾರವನ್ನು ಎದುರಿಸಲು ಅಥವಾ ಆನೆಗಳನ್ನು ಮರ್ದಿಸಲು ಸಾಧ್ಯವಿಲ್ಲ.
ಮಮ ವಾ ಬಾಹುವಿಕ್ಷೇಪಂ ಶತ್ರೂನಿಹ ವಿಜೇಷ್ಯತಃ |
ನೈಭಿಃ ಕಾಮಮಲಂ ಕರ್ತುಂ ಕರ್ಮ ವೈಜಯಿಕಂ ತ್ವಿಹ ॥29॥
ಶತ್ರುಗಳನ್ನು ಗೆಲ್ಲಲು ಬಯಸುವ ನನ್ನ ಬಾಹುವಿಕ್ಷೇಪವನ್ನು ಈ ನಿನ್ನ ಆಯುಧಗಳು ಸಹಿಸಲಾರವು. ಈ ನಿನ್ನ ಆಯುಧಗಳಿಂದ ವಿಜಯಸಾಧಕವಾದ ಕರ್ಮವನ್ನು ಮಾಡಲಾಗುವುದಿಲ್ಲ.
ಅತಿಸೂಕ್ಷ್ಮಾಣಿ ಹ್ರಸ್ವಾನಿ ಸರ್ವಾಣಿ ಚ ಮೃದೂನಿ ಚ |
ಆಯುಧಾನಿ ಮಹಾಬಾಹೋ ತವೈತಾನಿ ಪರಂತಪ ॥30॥
ತಸ್ಮಾದ್ ಭೂಮಿಂಜಯಾರೋಹ ಶಮೀಮೇನಾಂ ಪಲಾಶಿನೀಮ್ ॥
ಎಲೈ ಮಹಾಬಾಹುವೇ, ಪರಂತಪನೇ, ಈ ನಿನ್ನ ಆಯುಧಗಳು ಬಹಳ ಚಿಕ್ಕವು, ಮತ್ತು ಬಹಳ ಸೂಕ್ಷ್ಮವೂ ಮತ್ತು ಮೃದುವೂ ಆಗಿವೆ. ಆದ್ದರಿಂದ ಎಲೈ ಭೂಮಿಂಜಯನೇ, ಬಹಳ ಪತ್ರಗಳಿರುವ ಈ ಶಮೀವೃಕ್ಷವನ್ನು ಏರುವವನಾಗು.
ಅಸ್ಮಾಭಿಃ ಪಾಂಡುಪುತ್ರಾಣಾಂ ಧನೂಂಷಿ ನಿಹತಾನ್ಯುತ |
ಯುಧಿಷ್ಠಿರಸ್ಯ ಭೀಮಸ್ಯ ಬೀಭತ್ಸೋರ್ಯಮಯೋಸ್ತಥಾ ॥32॥
ಧ್ವಜಾಃ ಶರಾಶ್ಚ ಶೂರಾಣಾಂ ದಿವ್ಯಾನಿ ಕವಚಾನಿ ಚ ॥33॥
ನಾವು ಇಲ್ಲಿ ಪಾಂಡುಪುತ್ರರಾದ ಯುಧಿಷ್ಠಿರ ಭೀಮ ಅರ್ಜುನ ಮತ್ತು ನಕುಲ ಸಹದೇವರ ಧನುಸ್ಸುಗಳನ್ನೂ ಮತ್ತು ಆ ಶೂರರ ದಿವ್ಯವಾದ ಕವಚಗಳನ್ನೂ ಮತ್ತು ಧ್ವಜಗಳನ್ನೂ ಮತ್ತು ಬಾಣಗಳನ್ನೂ ಇಟ್ಟಿದ್ದೇವೆ.
ಅತ್ರ ಚೈವ ಮಹಾವೀರ್ಯಂ ಧನುಃ ಪಾರ್ಥಸ್ಯ ಗಾಂಡಿವಮ್ |
ಏಕಂ ಶತಸಹಸ್ರೇಣ ಸಮ್ಮಿತಂ ರಾಷ್ಟ್ರವರ್ಧನಮ್ ॥34॥
ವ್ಯಾಯಾಮಸಹಮತ್ಯರ್ಥಂ ತೃಣರಾಜಸಮಂ ಮಹತ್ |
ಸರ್ವಾಯುಧಮಹಾಮಾತ್ರಂ ಸರ್ವಾರಿಕ್ಷಯಕಾರಣಮ್ ॥35॥
ಸುವರ್ಣವಿಕೃತಂ ದಿವ್ಯಂ ಶ್ಲಕ್ಷ್ಣಮಾಯಾತಮವ್ರಣಮ್ |
ಅಲಂ ಭಾರಂ ಗುರು ಚೈತದ್ ವಾರುಣಂ ಚಾರುದರ್ಶನಮ್ ॥36॥
ಇಲ್ಲಿಯೇ ಪರಾಕ್ರಮವನ್ನು ಹೊಂದಿದ ಒಂದೇ ನೂರು ಸಹಸ್ರ ಆಯುಧಗಳಿಗೆ ಸಮನಾದ ರಾಷ್ಟ್ರವರ್ಧಕವಾದ ಅರ್ಜುನನ ಗಾಂಡೀವ ಧನುಸ್ಸಿದೆ. ಅದನ್ನು ಎಷ್ಟು ಎಳೆದರೂ ಸಹಿಸುವಂತಹದು. ಅದು ಬಿದಿರಿಗೆ ಸಮವಾಗಿ ಶ್ರೇಷ್ಠವಾಗಿದೆ. ಅದು ಎಲ್ಲಾ ಆಯುಧಗಳಿಗೆ ಮಹಾಮಾತ್ರರೂಪದಲ್ಲಿದ್ದು ಪ್ರಧಾನವಾಗಿದೆ. ಎಲ್ಲಾ ಶತ್ರುಗಳ ಕ್ಷಯಕ್ಕೆ ಅದು ಕಾರಣವಾಗಿದೆ.
ವರುಣಸಂಬಂಧಿಯೂ ಸುಂದರವೂ ಆಗಿರುವ ಈ ಧನುಸ್ಸು ದಿವ್ಯವೂ, ಸುವರ್ಣಾಲಂಕೃತವೂ, ಮೃದುಸ್ಪರ್ಶವುಳ್ಳದ್ದೂ, ದೀರ್ಘವಾದದ್ದೂ ಮತ್ತು ಯಾವ ಗಾಯವೂ ಇಲ್ಲದ್ದೂ ಆಗಿದೆ. ಅದನ್ನು ತರುವುದು ದೊಡ್ಡ ಕೆಲಸ. ಆದರೂ ಅದು ಯುದ್ಧದ ಭಾರವನ್ನು ಹೊರಲು ಸಮರ್ಥವಾಗಿದೆ.
ತಾದೃಶಾನ್ಯೇವ ಸರ್ವಾಣಿ ದರ್ಶನಾನಿ ದೃಢಾನಿ ಚ |
ಪ್ರಧಾನಾನಿ ನಿವಿಷ್ಟಾನಿ ದುರ್ದರ್ಶಾನಿ ಭವಂತಿ ಚ ॥37॥
ಇನ್ನು ಉಳಿದ ಆಯುಧಗಳೂ ಸಹ ಹಾಗೆಯೇ ನೋಡಲು ಸುಂದರವಾಗಿಯೂ ಮತ್ತು ದೃಢವಾಗಿಯೂ ಇವೆ. ಅವು ಶ್ರೇಷ್ಠವಾಗಿಯೂ ಮತ್ತು ನೋಡಲು ಭಯಂಕರವಾಗಿಯೂ ಇವೆ. ಅಂತಹ ಆಯುಧಗಳು ಇಲ್ಲಿ ಇಡಲ್ಪಟ್ಟಿವೆ.
ಉತ್ತರಃ
ಶರೀರಮಿವ ಚಾಸಕ್ತಂ ಶಮ್ಯಾಂ ಶುಷ್ಕಂ ಪುರಾತನಮ್ |
ತದಹಂ ರಾಜಪುತ್ರಃ ಸನ್ ಸ್ಪೃಶೇಯಂ ಪಾಣಿನಾ ಕಥಮ್ ॥38॥
ನ ಮಾಮೇವಂವಿಧಂ ಕರ್ಮ ಕಾರಯಸ್ವ ಬೃಹನ್ನಳೇ |
ಕಥಂ ವಾ ಶಕ್ಯತೇ ಕರ್ತುಂ ಬುದ್ಧ್ಯಾ ತ್ವಂ ಮನ್ಯಸೇ ಕಥಮ್ ॥39॥
ಉತ್ತರ ಈ ಶಮೀವೃಕ್ಷದಲ್ಲಿ ಒಣಗಿಹೋದ ಒಂದು ಹಳೆಯ ಶರೀರದಂತಿರುವುದು ಕಾಣುತ್ತಿದೆ. ರಾಜಪುತ್ರನಾದ ನಾನು ಅದನ್ನು ಕೈಯಿಂದ ಹೇಗೆ ಮುಟ್ಟಲಿ? ಎಲೌ ಬೃಹನ್ನಳೆಯೇ, ನನ್ನಿಂದ ಇಂತಹ ಕೆಲಸಗಳನ್ನು ಮಾಡಿಸಬೇಡ. ನಾನು ಅದನ್ನು ಹೇಗೆ ಮಾಡಲು ಸಾಧ್ಯ? ನೀನಾದರೂ ನಿನ್ನ ಮನಸ್ಸಿನಲ್ಲಿ ಹೇಗೆ ಭಾವಿಸುತ್ತೀಯೆ?
ವೈಶಂಪಾಯನಃ
ತಮುವಾಚ ತತಃ ಶೂರಃ ಪಾರ್ಥಃ ಪರಪುರಂಜಯಃ |
ದಾಯಾದಂ ಸರ್ವಮತ್ಸ್ಯಾನಾಂ ಕುಲೇ ಜಾತಂ ವಿಶಾರದಮ್ ॥40॥
ವೈಶಂಪಾಯನ ಆಗ ಶೂರನೂ, ಪರಪುರಂಜಯನೂ ಆದ ಅರ್ಜುನನು ಮತ್ಸ್ಯಕುಲದಲ್ಲಿ ಜನಿಸಿದ ಮತ್ಸ್ಯರಾಜನ ದಾಯಾದಿಯಾದ ವಿಶಾರದನಾದ ಅವನನ್ನು ಕುರಿತು ಮಾತನಾಡಿದನು.
ಜಾನಾಮಿ ತ್ವಾಂ ಮಹಾಪ್ರಾಜ್ಞ ಕುಲೇ ಜಾತಂ ಮನಸ್ವಿನಮ್ |
ಕಥಂ ನು ಪಾಪಕಂ ಕರ್ಮ ಬ್ರೂಯಾಂ ಚಾಹಂ ಪರಂತಪ ॥41॥

ಎಲೈ ಮಹಾಪ್ರಾಜ್ಞನೇ, ನೀನು ದೊಡ್ಡ ಕುಲದಲ್ಲಿ ಜನಿಸಿದ ಧೈರ್ಯಶಾಲಿ ಎಂದು ನಾನು ತಿಳಿದಿದ್ದೇನೆ. ಎಲೈ ಪರಂತಪನೇ, ನಾನು ನಿನಗೆ ಹೇಗೆ ಒಂದು ಪಾಪಕಾರ್ಯವನ್ನು ಹೇಳಿಯೇನು?
ವ್ಯವಹಾರ್ಯಶ್ಚ ರಾಜೇಂದ್ರ ಶುದ್ಧಶ್ಚೈವ ಭವಿಷ್ಯಸಿ |
ಧನೂಂಷ್ಯೇತಾನಿ ಮಾ ಭೈಸ್ತ್ವಂ ಶರೀರಂ ನಾತ್ರ ವಿದ್ಯತೇ ॥42॥
ಎಲೈ ರಾಜೇಂದ್ರನೇ, ನೀನು ಶುದ್ಧನೂ ಮತ್ತು ವ್ಯವಹಾರಕ್ಕೆ ಯೋಗ್ಯನೂ ಆಗುವಿ. ಇವು ಧನುಸ್ಸುಗಳು. ನೀನು ಹೆದರಬೇಡ. ಇಲ್ಲಿ ಯಾವ ಶರೀರವೂ ಇಲ್ಲ.
ದಾಯಾದಂ ಮತ್ಸ್ಯರಾಜಸ್ಯ ಕುಲೇ ಜಾತಂ ಮನಸ್ವಿನಮ್ |
ಕಥಂ ವಾ ನಿಂದಿತಂ ಕರ್ಮ ಕಾರಯೇ ತ್ವಾಂ ನೃಪಾತ್ಮಜ ॥43॥
ಎಲೈ ರಾಜಕುಮಾರನೇ, ಮತ್ಸ್ಯರಾಜನ ಕುಲದಲ್ಲಿ ದಾಯಾದಿಯಾಗಿ ಜನಿಸಿದ ಧೈರ್ಯಶಾಲಿಯಾದ ನಿನ್ನಿಂದ ನಾನು ಹೇಗೆ ನಿಂದಿತಕರ್ಮವನ್ನು ಮಾಡಿಸಲಿ?
ಏವಮುಕ್ತಃ ಸ ಪಾರ್ಥೇನ ರಥಾತ್ ಪ್ರಸ್ಕಂದ್ಯ ಕುಂಡಲೀ |
ಆರುರೋಹ ಶಮೀವೃಕ್ಷಂ ವೈರಾಟಿರವಶಸ್ತದಾ ॥44॥
ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಕುಂಡಲಧಾರಿಯಾದ ಉತ್ತರನು ಅವಶನಾಗಿ (ಬೇರೆ ಮಾತನಾಡಲು ಸಾಧ್ಯವಾಗದೆ) ರಥದಿಂದ ಧುಮುಕಿ ಶಮೀವೃಕ್ಷವನ್ನು ಏರಿದನು.
ತಮನ್ವಶಾಸಚ್ಛತ್ರುಘ್ನೋ ರಥೇ ತಿಷ್ಠನ್ ಧನಂಜಯಃ ॥45॥
ಪರಿವೇಷ್ಟನಮೇತೇಷಾಂ ಸರ್ವಂ ಮುಂಚಸ್ವ ಮಾ ಚಿರಮ್ ॥46॥
ಶತ್ರುಸಂಹಾರಕನಾದ ಧನಂಜಯನು ರಥದಲ್ಲೇ ಕುಳಿತು ಅವನನ್ನು ಕುರಿತು ಅವುಗಳಿಗೆ ಸುತ್ತಿರುವ ಆವರಣವೆಲ್ಲವನ್ನೂ ಶೀಘ್ರವಾಗಿ ಬಿಡಿಸು ಎಂದು ಆದೇಶವನ್ನು ನೀಡಿದನು.
ತೇಷಾಂ ಸನ್ನಹನೀಯಾನಿ ವಿಪ್ರಮುಚ್ಯ ಪರಂತಪಃ |
ಅಪಶ್ಯತ್ ತತ್ರ ಗಾಂಡೀವಂ ಚತುರ್ಭಿರಪರೈಃ ಸಹ ॥47॥
ಅವುಗಳ ಕಟ್ಟುಗಳನ್ನು ಬಿಡಿಸಿದ ಪರಂತಪನಾದ ಉತ್ತರನು ಬೇರೆ ನಾಲ್ಕು ಧನುಸ್ಸುಗಳ ಜೊತೆಯಲ್ಲಿದ್ದ ಗಾಂಡೀವ ಧನುಸ್ಸನ್ನು ಅಲ್ಲಿ ನೋಡಿದನು.
ತೇಷಾಂ ವಿಮುಚ್ಯಮಾನಾನಾಂ ಧನುಷಾಮರ್ಕವರ್ಚಸಾಮ್ |
ವಿನಿಶ್ಚೇರುಃ ಪ್ರಭಾ ದಿವ್ಯಾ ಗ್ರಹಾಣಾಮುದಯೇಷ್ವಿವ ॥48॥
ಸೂರ್ಯನ ಕಾಂತಿಯನ್ನು ಹೊಂದಿದ್ದ ಆ ಧನುಸ್ಸುಗಳನ್ನು ಬಿಡಿಸುತ್ತಿದ್ದಂತೆ ಅವುಗಳಿಂದ ಉದಯಿಸುವ ಗ್ರಹಗಳ ಪ್ರಭೆಯಂತೆ ದಿವ್ಯವಾದ ಪ್ರಭೆಯು ಹೊರಹೊಮ್ಮಿತು.
ಸ ತೇಷಾಂ ರೂಪಮಾಲೋಕ್ಯ ಭೋಗಿನಾಮಿವ ಜೃಂಭತಾಮ್ |
ಹೃಷ್ಟರೋಮಾ ಭಯೋದ್ವಿಗ್ನಃ ಪ್ರವೇಪಿತತನುಸ್ತದಾ ॥49॥
ಅರ್ಜುನೇನ ಸಮಾಶ್ವಸ್ತಃ ಕಿಂಚಿದ್ ಧೃಷ್ಟೋ ನೃಪಾತ್ಮಜಃ ॥50॥
ಅವನು ಮೈಮುರಿಯುವ ಸರ್ಪಗಳಂತಿರುವ ಧನುಸ್ಸುಗಳ ಆ ಆಕಾರವನ್ನು ನೋಡಿ ರೋಮಾಂಚಗೊಂಡು ಭಯೋದ್ವಿಗ್ನನಾಗಿ ಶರೀರದಲ್ಲಿ ನಡುಕವನ್ನು ಹೊಂದಿದನು. ಅರ್ಜುನನಿಂದ ಸಮಾಧಾನಪಡಿಸಲ್ಪಟ್ಟ ಮೇಲೆ ರಾಜಕುಮಾರನು ಸ್ವಲ್ಪ ಧೈರ್ಯವನ್ನು ತಂದುಕೊಂಡನು.
ಆಮೀಲ್ಯ ಪುನರುನ್ಮೀಲ್ಯ ಸ್ಪೃಷ್ಟ್ವಾ ಸ್ಪೃಷ್ಟ್ವಾ ಚಕಾರ ಸಃ ॥51॥
ಸಮ್ಯಗ್ ಧೃಷ್ಟಸ್ತದಾಽಽಶ್ವಸ್ತಃ ಕ್ಷಣೇನ ಸಮಪದ್ಯತ ॥52॥
ಕಣ್ಣುಗಳನ್ನು ಮುಚ್ಚಿ ತೆರೆದು ಕೈಗಳಿಂದ ಮತ್ತೆ ಮತ್ತೆ ಮುಟ್ಟಿ ಚೆನ್ನಾಗಿ ಧೈರ್ಯವನ್ನು ತೆಗೆದುಕೊಂಡು ಅವನು ಒಂದು ಕ್ಷಣದಲ್ಲಿ ಸಮಾಧಾನವನ್ನು ಹೊಂದಿದನು.
ಸಂಸ್ಪೃಶ್ಯ ತಾನಿ ಚಾಪಾನಿ ಭಾನುಮಂತಿ ಬೃಹಂತಿ ಚ |
ವೈರಾಟಿರರ್ಜುನಂ ರಾಜನ್ನಿದಂ ವಚನಮಬ್ರವೀತ್ ॥53॥
ಎಲೈ ರಾಜನೇ, ಪ್ರಕಾಶಮಾನವಾದ ದೊಡ್ಡದಾದ ಆ ಧನುಸ್ಸುಗಳನ್ನು ಮುಟ್ಟಿ ವಿರಾಟಪುತ್ರನಾದ ಉತ್ತರನು ಅರ್ಜುನನನ್ನು ಕುರಿತು ಹೀಗೆ ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ
ಏಕೋನಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತನೆಯ ಅಧ್ಯಾಯ
ವಿವಿಧ ಆಯುಧಗಳನ್ನು ನೋಡಿ ಉತ್ತರನ ಪ್ರಶ್ನೆ
ಉತ್ತರಃ
ಸಾರಥೇ ಕಿಮಿದಂ ದಿವ್ಯಂ ನಾಗೋ ವಾ ಯದಿ ವಾ ಧನುಃ |
ಸೌವರ್ಣಾನ್ಯತ್ರ ಪದ್ಮಾನಿ ಶತಪತ್ರಾಣಿ ಭಾಗಶಃ ॥1॥

ಕುಶಾಗ್ನಿಪ್ರತಿತಪ್ತಾನಿ ಭಾನುಮಂತಿ ಬೃಹಂತಿ ಚ ॥2॥
ಉತ್ತರ ಎಲೈ ಸಾರಥಿಯೇ, ಇದೇನು ಸರ್ಪವೇ ಅಥವಾ ಧನುಸ್ಸೇ? ಇಲ್ಲಿ ಒಂದು ಭಾಗದಲ್ಲಿ ಕುಶಾಗ್ನಿಯಿಂದ ತಪ್ತವಾದ ಪ್ರಕಾಶಮಾನವಾದ ದೊಡ್ಡದಾದ ನೂರುದಳಗಳಿಂದ ಕೂಡಿದ ಸುವರ್ಣಮಯವಾದ ಪದ್ಮಗಳಿವೆ.
ಬಿಂದವಶ್ಚಾತ್ರ ಸೌವರ್ಣಾ ಮಣಿಪ್ರೋತಾಃ ಸಮಂತತಃ |
ಶಶಿಸೂರ್ಯಪ್ರಭಾಃ ಪೃಷ್ಠೇ ಭಾಂತಿ ರುಗ್ಮವಿಭೂಷಿತಾಃ ॥3॥
ಪುಷ್ಪಾಣ್ಯತ್ರ ಸುವರ್ಣಸ್ಯ ಶತಪತ್ರಾಣಿ ಭಾಗಶಃ ॥4॥
ಇಲ್ಲಿ ಮಣಿಗಳನ್ನು ಮಧ್ಯದಲ್ಲಿಟ್ಟಿರುವ ಸುವರ್ಣಬಿಂದುಗಳು ಸೂರ್ಯಚಂದ್ರರ ಕಾಂತಿಯುಳ್ಳವುಗಳಾಗಿ ಸುವರ್ಣವಿಭೂಷಿತವಾಗಿ ಹಿಂಭಾಗದಲ್ಲಿ ಎಲ್ಲ ಕಡೆಗಳಲ್ಲಿಯೂ ಇವೆ ಮತ್ತು ಕೆಲವು ಭಾಗದಲ್ಲಿ ನೂರುದಳವುಳ್ಳ ಸುವರ್ಣಪುಷ್ಪಗಳಿವೆ.
ವಿಸ್ಮಾಪನೀಯರೂಪಂ ಚ ಭೀಮಂ ಭೀಮಪ್ರದರ್ಶನಮ್ |
ನೀಲೋತ್ಪಲನಿಭಂ ಕಸ್ಯ ಶಾತಕುಂಭಪರಿಷ್ಕೃತಮ್ ॥5॥
ಆಶ್ಚರ್ಯಕರವಾಗಿರುವ ನೋಡುವುದಕ್ಕೇ ಭಯಂಕರವಾಗಿರುವ ನೀಲೋತ್ಪಲದಂತೆ ತೋರುವ ಸುವರ್ಣಾಲಂಕೃತವಾದ ಈ ಧನುಸ್ಸು ಯಾರದು?
ಋಷಭಾ ಯಸ್ಯ ಸೌವರ್ಣಾಃ ಪೃಷ್ಠೇ ತಿಷ್ಠಂತಿ ಶೃಂಗಿಣಃ |
ತಾಳಪ್ರಮಾಣಂ ಕಸ್ಯೇದಂ ಮಣಿರುಗ್ಮವಿಭೂಷಿತಮ್ ॥6॥
ಯಾವ ಧನುಸ್ಸಿನ ಹಿಂಭಾಗದಲ್ಲಿ ಸುವರ್ಣಮಯವಾದ ಕೊಂಬುಗಳುಳ್ಳ ವೃಷಭಗಳಿವೆಯೋ ಅಂತಹ ತಾಳವೃಕ್ಷಪ್ರಮಾಣದ ಮಣಿಸ್ವರ್ಣಗಳಿಂದ ವಿಭೂಷಿತವಾದ ಈ ಧನುಸ್ಸು ಯಾರದು?
ಹಾಟಕಸ್ಯ ಸುವರ್ಣಸ್ಯ ಯಸ್ಮಿನ್ ಶಾಖಾಮೃಗಾ ದಶ |
ದುರಾನಮಂ ಮಹಾದೀರ್ಘಂ ಸುರೂಪಂ ದುಷ್ಪ್ರಧರ್ಷಣಮ್ ॥7॥
ಕಸ್ಯೇದಮೀದೃಶಂ ಚಿತ್ರಂ ಧನುಃ ಸರ್ವೇ ಚ ದಂಸಿತಾಃ ॥8॥
ಶ್ರೇಷ್ಠಜಾತಿಯ ಸುವರ್ಣದ ಎಲ್ಲವೂ ಕವಚಾದಿಗಳಿಂದ ಕೂಡಿರುವ ಹತ್ತು ಶಾಖಾಮೃಗವಿರುವ ಬಗ್ಗಿಸಲು ಅಸಾಧ್ಯವಾದ ಬಹಳ ದೀರ್ಘವಾಗಿರುವ ಸುಂದರವಾದ ಸೋಲಿಸಲು ಅಸಾಧ್ಯವಾದ ಇಂತಹ ವಿಚಿತ್ರವಾದ ಧನುಸ್ಸು ಯಾರದು?
ಚಂದ್ರಾರ್ಕವಿಮಲಾಭಾಸಾಃ ಸುರೂಪಾಃ ಸುಪ್ರದರ್ಶನಾಃ |
ಹಂಸಾ ಪೃಷ್ಠಾಶ್ರಿತಾ ಯಸ್ಯ ಕುಶಾಗ್ನಿಪ್ರತಿಮಾರ್ಚಿಷಃ ॥9॥
ಶಾರ್ಙ್ಗಗಾಂಡೀವಸದೃಶಂ ಕಸ್ಯೇದಂ ಸಾರಥೇ ಧನುಃ ॥10॥
ಎಲೈ ಸಾರಥಿಯೇ, ಸೂರ್ಯಚಂದ್ರರಂತೆ ಸ್ಪಷ್ಟವಾದ ಕಾಂತಿಯನ್ನು ಹೊಂದಿರುವ, ಒಳ್ಳೆಯ ಆಕಾರವನ್ನು ಹೊಂದಿರುವ, ನೋಡಲು ಸುಂದರವಾಗಿರುವ, ಕುಶಾಗ್ನಿಯಂತೆ ಕಿರಣಗಳನ್ನು ಸೂಸುವ, ಹಂಸಗಳನ್ನು ಹಿಂಭಾಗದಲ್ಲಿ ಹೊಂದಿರುವ, ಶಾರ್ಙ್ಗ ಮತ್ತು ಗಾಂಡೀವವನ್ನು ಹೋಲುವ ಈ ಧನುಸ್ಸು ಯಾರದು? ಇಲ್ಲಿ ಎಲ್ಲಾ ಕಪಿಗಳೂ ಕವಚಗಳನ್ನು ಹೊಂದಿವೆ.
ಚತುರ್ಥಂ ಕಾಂಚನವಪುರ್ಭಾತಿ ವಿದ್ಯುದ್ಗಣೋಪಮಮ್ |
ನೀಲೋಪಲಿಪ್ತಮಚ್ಛಿದ್ರಂ ಜಾತರೂಪಮಯಂ ಧನುಃ ॥11॥
ಈ ನಾಲ್ಕನೆಯ ಧನುಸ್ಸು ಮಿಂಚಿನ ಸಮೂಹಗಳನ್ನು ಹೋಲುವ ಸುವರ್ಣಮಯ ಶರೀರವುಳ್ಳದ್ದಾಗಿ ನೀಲ ಮಣಿಗಳಿಂದ ಖಚಿತವಾಗಿ ಯಾವ ವ್ರಣವೂ ಇಲ್ಲದೆ ಶೋಭಿಸುತ್ತಿದೆ.
ಮತ್ಸ್ಯಾಶ್ಚಾಸ್ಯ ಹಿರಣ್ಯಸ್ಯ ಪೃಷ್ಠೇ ತಿಷ್ಠಂತಿ ದಂಸಿತಾಃ |
ಶಕ್ರಚಾಪೋಪಮಂ ದಿವ್ಯಂ ಕಸ್ಯೇದಂ ಸಾರಥೇ ಧನುಃ ॥12॥
ಇದರ ಹಿಂಭಾಗದಲ್ಲಿ ಯುದ್ಧಸನ್ನದ್ಧವಾದಂತಹ ಸುವರ್ಣಮಯವಾದ ಮತ್ಸ್ಯಗಳು ಇವೆ. ಸಾರಥಿಯೇ, ಇಂದ್ರನ ಧನುಸ್ಸಿನಂತಿರುವ ಈ ದಿವ್ಯವಾದ ಧನುಸ್ಸು ಯಾರದು?
ಉಚ್ಛ್ರಿತಂ ಫಣಿವದ್ ದೀರ್ಘಂ ಸಾರವತ್ತತ್ವತ್ ದುರಾನಮಮ್ ॥13॥
ಸಹಸ್ರಗೋಧಾಃ ಸೌವರ್ಣಾ ದ್ವೀಪಿನಶ್ಚ ಚತುರ್ದಶ |
ಬರ್ಹಿಣಶ್ಚಾತ್ರ ಸೌವರ್ಣಾಃ ಶತಚಂದ್ರವಿಭೂಷಿತಾಃ ॥14॥
ಜಾಂಬೂನದವಿಚಿತ್ರಾಂಗಂ ಕಸ್ಯೇದಂ ಪಂಚಮಂ ಧನುಃ ॥15॥
ಸರ್ಪದಂತೆ ಎದ್ದಿರುವ ದೀರ್ಘವೂ, ಬಲಿಷ್ಠವೂ ಮತ್ತು ಬಗ್ಗಿಸಲು ಅಸಾಧ್ಯವೂ ಆದ ಸುವರ್ಣಮಯವಾದ ಸಹಸ್ರಗೋಧಗಳನ್ನು (ಉಡಗಳನ್ನು) ಮತ್ತು ಹದಿನಾಲ್ಕು ಹುಲಿಗಳನ್ನು ಹೊಂದಿರುವ; ಸುವರ್ಣಮಯವಾದ ಶತಚಂದ್ರವಿಭೂಷಿತವಾದ ನವಿಲುಗಳನ್ನು ಹೊಂದಿರುವ; ಸುವರ್ಣ ಅಲಂಕಾರದಿಂದ ವಿಚಿತ್ರವಾಗಿ ಕಾಣುವ ಈ ಐದನೆಯ ಧನುಸ್ಸು ಯಾರದು?
ಕಸ್ಯೇಮೇ ಕ್ಷುರನಾರಾಚಾಃ ಸಹಸ್ರಂ ಲೋಮವಾಹಿನಃ |
ಪ್ರತ್ಯಕ್ತಾಸ್ತೀಕ್ಷ್ಣತುಂಡಾಗ್ರಾ ಉಪಾಸಂಗೇ ಹಿರಣ್ಮಯೇ ॥16॥
ಪ್ರತ್ಯೇಕವಾಗಿ ತೈಲದಲ್ಲಿ ಸಾಣೆಯನ್ನು ಹಿಡಿದಿರುವ ತೀಕ್ಷ್ಣವಾದ ತುದಿ ಮತ್ತು ಅಲುಗುಗಳನ್ನು ಹೊಂದಿರುವ ಸುವರ್ಣಮಯವಾದ ಬತ್ತಳಿಕೆಯಲ್ಲಿರುವ ಕೂದಲುಗಳನ್ನು ಕತ್ತರಿಸಲು ಸಮರ್ಥವಾದ ಸಹಸ್ರಸಂಖ್ಯೆಯಲ್ಲಿರುವ ಕ್ಷುರ (ಚಾಕುವಿನಂತಹ ಸಣ್ಣ ಬಾಣಗಳು) ಮತ್ತು ನಾರಾಚಗಳು ಯಾರವು?
ಹರಿದ್ರವರ್ಣಾಃ ಕಸ್ಯೇಮೇ ಶಿತಾಃ ಪಂಚಶತಂ ಶರಾಃ |
ಆಶೀವಿಷಸಮಸ್ಪರ್ಶಾಃ ಶಿತಾಶ್ಚಾಜಿಹ್ಮಗಾ ದೃಢಾಃ ॥17॥
ಸರ್ಪದ ಸ್ಪರ್ಶವನ್ನು ಹೋಲುವ ಹರಿತವಾದ, ನೇರವಾದ ಮತ್ತು ದೃಢವಾದ ಹಳದಿಯ ಬಣ್ಣದಿಂದ ಕೂಡಿದ ಈ ಐದುನೂರು

ಬಾಣಗಳು ಯಾರವು?
ವಿಪಾಠಾಃ ಪೃಥವಃ ಕಸ್ಯ ಗೃಧ್ರಪತ್ರಾರ್ಧವಾಜಿತಾಃ |
ವರಾಹಕರ್ಣಾಸ್ತೀಕ್ಷ್ಣಾಗ್ರಾ ಕಸ್ಯೇಮೇ ರುಚಿರಾಃ ಸಮಾಃ ॥18॥
ಅರ್ಧದವರೆಗೂ ಹದ್ದಿನ ಗರಿಗಳನ್ನು ಹೊಂದಿರುವ ಈ ಅಗಲವಾದ ವಿಪಾಠಗಳು ಯಾರವು? ಸಮವೂ, ಮನೋಹರವೂ, ತೀಕ್ಷ್ಣವಾದ ತುದಿಯನ್ನು ಹೊಂದಿರುವವೂ ಆದ ಈ ವರಾಹಕರ್ಣಗಳು ಯಾರವು?
ವಜ್ರಾಶನಿಸಮಸ್ಪರ್ಶಾ ವೈಶ್ವಾನರಶಿಖೋಪಮಾಃ |
ಸುವರ್ಣಪುಂಖಾಸ್ತೀಕ್ಷ್ಣಾಗ್ರಾಃ ಕಸ್ಯ ಸಪ್ತಶತಂ ಶರಾಃ ॥19॥
ವಜ್ರಾಯುಧ ಮತ್ತು ಸಿಡಿಲಿನ ಸ್ಪರ್ಶವುಳ್ಳ, ಅಗ್ನಿಯ ಜ್ವಾಲೆಯನ್ನು ಹೋಲುವ, ಸುವರ್ಣಮಯವಾದ ಪುಂಖವನ್ನೂ, ತೀಕ್ಷ್ಣವಾದ ತುದಿಯನ್ನೂ ಹೊಂದಿರುವ ಈ ಏಳುನೂರು ಬಾಣಗಳು ಯಾರವು?
ಕಸ್ಯಾಯಂ ಸಾಯಕೋ ದೀರ್ಘೋ ಗವ್ಯೇ ಕೋಶೇ ಚ ದಂಸಿತಃ |
ಕಸ್ಯ ದಂಡೋ ದೃಢಃ ಶ್ಲಕ್ಷ್ಣೋ ರುಚಿರೋಽಯಂ ಪ್ರಕಾಶತೇ ॥20॥
ವೈಯಾಘ್ರಕೋಶಃ ಕಸ್ಯಾಯಂ ದಿವ್ಯಶಾಖೋ ಮಹಾಪ್ರಭಃ |
ಕಸ್ಯಾಯಮಸಿರಾವಾಸಃ ಪಂಚಶಾರ್ದೂಲಲಕ್ಷಣಃ ॥21॥
ಗೋಚರ್ಮದ ಕೋಶದಲ್ಲಿರುವ ಸಿದ್ಧವಾದ ಈ ದೀರ್ಘವಾದ ಬಾಣವು ಯಾರದು? ವ್ಯಾಘ್ರಚರ್ಮದ ಕೋಶದಲ್ಲಿರುವ ಸುಂದರವಾದ ನಯವಾದ ಈ ದಿವ್ಯಶಾಖೆಯ ರೂಪದಲ್ಲಿರುವ ದೃಢವಾದ ದಂಡವು ಯಾರದು? ಒರೆಯಲ್ಲಿರುವ ಐದುಹುಲಿಗಳ ಲಕ್ಷಣವನ್ನು ಹೊಂದಿರುವ ಈ ಖಡ್ಗವು ಯಾರದು?
ಕಸ್ಯಾಯಂ ನಿರ್ಮಲಃ ಖಡ್ಗೋ ದ್ವೀಪಿಚರ್ಮನಿವಾಸಿತಃ |
ನೀಲೋತ್ಪಲಸವರ್ಣೋಽಯಂ ಕಸ್ಯ ಖಡ್ಗಃ ಪೃಥುರ್ಮಹಾನ್ ॥22॥
ವ್ಯಾಘ್ರಚರ್ಮದಲ್ಲಿ ಇಟ್ಟಿರುವ ನಿರ್ಮಲವಾದ ಈ ಖಡ್ಗವು ಯಾರದು? ದೀರ್ಘವು ಮತ್ತು ಅಗಲವೂ ಆಗಿರುವ ನೀಲೋತ್ಪಲ ಸಮಾನವರ್ಣವುಳ್ಳ ಖಡ್ಗವು ಯಾರದು?
ಮೃಗೇಂದ್ರಚರ್ಮಾವಸಿತಸ್ತೀಕ್ಷ್ಣಧಾರಃ ಸುನಿರ್ಮಲಃ |
ಋಷಭಾಜಿನಕೋಶಸ್ತು ಕಸ್ಯ ಖಡ್ಗೋ ಮಹಾನಯಮ್ ॥23॥
ಸಿಂಹಚರ್ಮದಲ್ಲಿ ಇಡಲ್ಪಟ್ಟ ಹರಿತವಾದ ಅಲಗನ್ನುಳ್ಳ ನಿರ್ಮಲವಾದ ಈ ಖಡ್ಗವು ಯಾರದು? ವೃಷಭಚರ್ಮದ ಕೋಶದಲ್ಲಿ ಇರುವ ಈ ದೊಡ್ಡ ಖಡ್ಗವು ಯಾರದು?
ಯಸ್ಯಾಪಿಧಾನೇ ದೃಶ್ಯಂತೇ ಸೂರ್ಯಾಃ ಪಂಚ ಪರಿಷ್ಕೃತಾಃ |
ಕಸ್ಯಾಯಂ ವಿಪುಲಃ ಖಡ್ಗಃ ಶೃಂಗತ್ಸರುಮನೋಹರಃ ॥24॥
ಯಾವ ಒರೆಯಲ್ಲಿ ಅಲಂಕೃತವಾದ ಸೂರ್ಯನ ಐದುಚಿಹ್ನೆಗಳಿವೆಯೋ ಅಂತಹ ವಿಪುಲವಾದ ಮನೋಹರವಾದ ಶೃಂಗದ ಹಿಡಿಯುಳ್ಳ ಈ ಖಡ್ಗವು ಯಾರದು?
ನಿಹಿತಃ ಪಾರ್ಷತೇ ಕೋಶೇ ತೈಲಧೌತಃ ಸಮಾಹಿತಃ |
ಪ್ರಮಾಣವರ್ಣಯುಕ್ತಶ್ಚ ಕಸ್ಯ ಖಡ್ಗೋ ಮಹಾನಯಮ್ ॥25॥
ಜಿಂಕೆಯ ಚರ್ಮದ ಕೋಶದಲ್ಲಿರುವ, ಎಣ್ಣೆಯಲ್ಲಿ ಸಾಣೆಯನ್ನು ಹಿಡಿದ, ಸರಿಯಾದ ಉದ್ದ ಮತ್ತು ಅಗಲ ಮತ್ತು ಬಣ್ಣಗಳಿಂದ ಕೂಡಿದ ಈ ದೊಡ್ಡ ಖಡ್ಗವು ಯಾರದು?
ಏತೇನ ಪ್ರತಿವಿದ್ಧಃ ಸನ್ ಜೀವೇತ್ ಕಶ್ಚನ ಕುಂಜರಃ |
ನಿರ್ದಿಶಸ್ವ ಯಥಾಮಾರ್ಗಂ ಮಯಾ ಪೃಷ್ಟಾ ಬೃಹನ್ನಳೇ |
ವಿಸ್ಮಯೋ ಮೇ ಪರೋ ಜಾತೋ ದೃಷ್ಟ್ವಾ ಸರ್ವಮಿದಂ ಮಹತ್ ॥
ಈ ಖಡ್ಗಗಳಿಂದ ಹೊಡೆಯಲ್ಪಟ್ಟರೆ ಯಾವ ಆನೆಯೂ ಸಹ ಜೀವಿಸಲಾರದು. ಎಲೈ ಬೃಹನ್ನಳೆಯೇ, ನಾನು ಕೇಳಿದ ಪ್ರಶ್ನೆಗಳಿಗೆ ಅನುಗುಣವಾಗಿ ಈ ಆಯುಧಗಳನ್ನು ನಿರ್ದೇಶಿಸುವವಳಾಗು. ಈ ದೊಡ್ಡ ಆಯುಧಗಳನ್ನೆಲ್ಲಾ ನೋಡಿ ನನಗೆ ಬಹಳ ವಿಸ್ಮಯವುಂಟಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೊಂದನೆಯ ಅಧ್ಯಾಯ
ಅರ್ಜುನನಿಂದ ಉತ್ತರನಿಗೆ ಪಾಂಡವರ ಆಯುಧಗಳ ಪರಿಚಯ
ವೈಶಂಪಾಯನಃ
ಉತ್ತರೇಣೈವಮುಕ್ತಸ್ತು ಪಾರ್ಥೋ ವೈರಾಟಿಮಬ್ರವೀತ್ |
ಮೃದ್ವಾವ್ಯ ಪ್ರತ್ಯಾಯಯನ್ ವಾಚಾ ಭೀತಂ ಶಂಕಾವಶಂ ಗತಮ್ ॥1॥
ವೈಶಂಪಾಯನ ಉತ್ತರನಿಂದ ಹೀಗೆ ಕೇಳಲ್ಪಟ್ಟ ಅರ್ಜುನನು ಭೀತನೂ, ಸಂಶಯಗ್ರಸ್ತನೂ ಆದ ಅವನನ್ನು ಕುರಿತು ಮೃದುವಾದ ಮಾತುಗಳಿಂದ ವಿಶ್ವಾಸವನ್ನು ಮೂಡಿಸುತ್ತಾ ಮಾತನಾಡಿದನು.
ಯತ್ ತ್ವಯಾ ಪ್ರಥಮಂ ಪೃಷ್ಟಂ ಶತ್ರುಸೇನಾಂಗಮರ್ದನಮ್ |

ಪಾರ್ಥಸ್ಯೇದಂ ಧನುರ್ದಿವ್ಯಂ ಗಾಂಡೀವಮಿತಿ ವಿಶ್ರುತಮ್ ॥2॥
ನೀನು ಮೊದಲು ಕೇಳಿದ ಶತ್ರುಸೇನೆಯನ್ನು ಮರ್ದಿಸುವ ದಿವ್ಯವಾದ ಧನುಸ್ಸು ಏನಿದೆಯೋ ಇದು ಗಾಂಡೀವವೆಂದು ಪ್ರಖ್ಯಾತವಾದ ಅರ್ಜುನನ ಧನುಸ್ಸು.
ಅಭೇದ್ಯಮಭಯಂ ಶ್ರೀಮದ್ ದಿವ್ಯಮಚ್ಛೇದ್ಯಮವ್ರಣಮ್ ।
ಸರ್ವಾಯುಧಮಹಾಮಾತ್ರಂ ಶಾತಕುಂಭಮಯಂ ಧನುಃ ॥3॥
ಈ ಧನುಸ್ಸು ಅಭೇದ್ಯವಾದುದು. ಅಭಯವನ್ನು ಕೊಡುವಂತಹುದು. ಕಾಂತಿಯುಕ್ತವಾದುದು. ದಿವ್ಯವೂ ಅಚ್ಛೇದ್ಯವೂ ಆಗಿ ಯಾವ ವ್ರಣಗಳೂ ಇಲ್ಲದಿರುವುದು. ಎಲ್ಲಾ ಆಯುಧಗಳಲ್ಲಿ ಪ್ರಧಾನವಾದ ಈ ಧನುಸ್ಸು ಸುವರ್ಣಮಯವಾಗಿದೆ.
ಏತಚ್ಛತಸಹಸ್ರೇಣ ಸಮ್ಮಿತಂ ರಾಷ್ಟ್ರವರ್ಧನಮ್ ।
ದೇವದಾನವಗಂಧರ್ವೈಃ ಪೂಜಿತಂ ಶಾಶ್ವತೀಃ ಸಮಾಃ ॥4॥
ಯೇನ ದೇವಾಸುರಾನ್ ಪಾರ್ಥಃ ಸರ್ವಾನ್ ವಿಷಹತೇ ರಣೇ ।
ಇದು ಒಂದುಲಕ್ಷ ಆಯುಧಗಳಿಗೆ ಸಮಾನವಾದುದು. ರಾಷ್ಟ್ರಕ್ಕೆ ಅಭಿವೃದ್ಧಿಯನ್ನು ಕೊಡುವಂತಹದು. ದೇವದಾನವಗಂಧರ್ವರಿಂದ ಬಹುಕಾಲದಿಂದ ಪೂಜಿಸಲ್ಪಡುವುದು. ಈ ಧನುಸ್ಸಿನ ಬಲದಿಂದಲೇ ಅರ್ಜುನನು ಯುದ್ಧದಲ್ಲಿ ಎಲ್ಲಾ ದೇವತೆಗಳನ್ನು ಮತ್ತು ಅಸುರರನ್ನು ಎದುರಿಸುತ್ತಾನೆ.
ಏತದ್ ವರ್ಷಸಹಸ್ರಂ ತು ಬ್ರಹ್ಮಾ ಪೂರ್ವಮಧಾರಯತ್ ॥5॥
ತತೋಽನಂತರಮೇವಾಥ ಪ್ರಜಾಪತಿರಧಾರಯತ್ ।
ಸೋಮಃ ಪಂಚಸಹಸ್ರಾಣಿ ತಥಾ ಚ ವರುಣಃ ಶತಮ್ ॥6॥
ತಸ್ಮಾಚ್ಚ ವರುಣಾದಗ್ನಿಃ ಪ್ರೇಮ್ಣಾ ಪ್ರಾಹೃತ್ಯ ತಚ್ಛುಭಮ್ ।
ಅಗ್ನಿನಾ ಪ್ರಾತಿಭಾವ್ಯೇನ ದತ್ತಂ ಪಾರ್ಥಾಯ ಗಾಂಡಿವಮ್ ।
ಪಂಚಷಷ್ಟಿ ಚ ವರ್ಷಾಣಿ ಕೌಂತೇಯೋ ಧಾರಯಿಷ್ಯತಿ ॥7॥
ಹಿಂದೆ ಬ್ರಹ್ಮದೇವರು ಇದನ್ನು ಒಂದುಸಹಸ್ರವರ್ಷಗಳ ಕಾಲ ಧರಿಸಿದ್ದರು. ಅನಂತರ ಈ ಧನುಸ್ಸನ್ನು ಸ್ವಾಯಂಭುವ ಮನುವು ಧರಿಸಿದನು. ಅನಂತರ ಚಂದ್ರನು ಐದುಸಹಸ್ರವರ್ಷಗಳೂ, ವರುಣನು ನೂರುವರ್ಷವೂ ಧರಿಸಿದರು. ಅಗ್ನಿಯು ವರುಣನಿಂದ ಪ್ರೀತಿಪೂರ್ವಕವಾಗಿ ಆ ಧನುಸ್ಸನ್ನು ತೆಗೆದುಕೊಂಡನು. ಪ್ರಾತಿಭಾವ್ಯನಾಮಕನಾದ ಅಗ್ನಿಯು ಅರ್ಜುನನಿಗೆ ಗಾಂಡೀವವನ್ನು ತಂದುಕೊಟ್ಟನು. ಅರ್ಜುನನು ಅರವತ್ತೈದು ವರ್ಷಗಳ ಕಾಲ ಗಾಂಡೀವ ಧನುಸ್ಸನ್ನು ಧರಿಸುವನು.
ಏವಂ ವೀರ್ಯಂ ಮಹಾವೇಗಮೇತಚ್ಚ ಧನುರುತ್ತಮಮ್ ॥8॥
ಈ ಮಹಾವೇಗವುಳ್ಳ ಶ್ರೇಷ್ಠವಾದ ಧನುಸ್ಸು ಇಂತಹ ಪರಾಕ್ರಮವುಳ್ಳದ್ದು.
ನೀಲೋತ್ಪಲಸಮಂ ರಾಜ್ಞಃ ಕೌರವ್ಯಸ್ಯ ಮಹಾತ್ಮನಃ ।
ಬಿಂದವಶ್ಚಾತ್ರ ಸೌವರ್ಣಾಃ ಪೃಷ್ಠೇ ಸಾಧುನಿಯೋಜಿತಾಃ ॥9॥
ನೀಲೋತ್ಪಲ ಸದೃಶವಾದ ಧನುಸ್ಸು ಮಹಾತ್ಮನಾದ ಯುಧಿಷ್ಠಿರನದು. ಆ ಧನುಸ್ಸಿನ ಹಿಂಭಾಗದಲ್ಲಿ ಸುವರ್ಣಮಯವಾದ ಬಿಂದುಗಳು ಚೆನ್ನಾಗಿ ಇಡಲ್ಪಟ್ಟಿವೆ.
ವಿಶ್ರುತಂ ಭೀಮಸೇನಸ್ಯ ಜಾತರೂಪಮಯಂ ದೃಢಮ್ ॥10॥
ಸಹಸ್ರಯೋಧಾಃ ಸೌವರ್ಣಾ ದ್ವೀಪಿನಶ್ಚ ಚತುರ್ದಶ ।
ಋಷಭಾ ಯತ್ರ ಸೌವರ್ಣಾಃ ಪೃಷ್ಠೇ ತಿಷ್ಠಂತಿ ಶೃಂಗಿಣಃ ॥11॥
ಸುವರ್ಣಮಯವಾದ ಈ ಇನ್ನೊಂದು ಪ್ರಖ್ಯಾತವಾದ ಧನುಸ್ಸು ಭೀಮಸೇನನದು. ಅದರಲ್ಲಿ ಸುವರ್ಣಮಯವಾದ ಸಹಸ್ರಯೋಧರು, ಹದಿನಾಲ್ಕು ವ್ಯಾಘ್ರಗಳು ಮತ್ತು ಹಿಂಭಾಗದಲ್ಲಿ ಶೃಂಗಗಳಿಂದ ಕೂಡಿದ ಸುವರ್ಣಮಯವಾದ ವೃಷಭಗಳೂ ಇವೆ.
ಯೇನ ಭೀಮೋಽಜಯತ್ ಕೃತ್ಸ್ನಾಂ ದಿಶಂ ಪ್ರಾಚೀಂ ಪರಂತಪಃ ।
ಪೃಷ್ಠೇ ವಿಭಕ್ತಾಃ ಶೋಭಂತೇ ಕುಶಾಗ್ನಿಪ್ರತಿದೀಪಿತಾಃ ॥12॥
ಪೂಜಿತಂ ಸುರಮರ್ತ್ಯೇಷು ಪ್ರಥಿತಂ ಧನುರುತ್ತಮಮ್ ।
ತಾಲಪ್ರಮಾಣಂ ಭೀಮಸ್ಯ ರತ್ನರುಗ್ಮವಿಭೂಷಿತಮ್ ॥13॥
ಪರಂತಪನಾದ ಭೀಮಸೇನನು ಅದರಿಂದ ಸಮಗ್ರವಾದ ಪೂರ್ವದಿಕ್ಕನ್ನು ಜಯಿಸಿದನು. ಹಿಂಭಾಗದಲ್ಲಿ ಇರುವ ವೃಷಭಗಳು ಕುಶಾಗ್ನಿಯಿಂದ ಕಾಯಿಸಲ್ಪಟ್ಟು ಬಿಡಿಬಿಡಿಯಾಗಿ ಕಾಣುತ್ತವೆ. ಒಂದು ತಾಳ ಪ್ರಮಾಣದ ಸುವರ್ಣರತ್ನ ಭೂಷಿತವಾದ ಭೀಮಸೇನನ ಈ ಶ್ರೇಷ್ಠವಾದ ಧನುಸ್ಸು ದೇವತೆಗಳಿಂದಲೂ ಮತ್ತು ಮನುಷ್ಯರಿಂದಲೂ ಪೂಜಿತವಾಗಿದೆ.
ದುರಾನಮಂ ಮಹದ್ ದೀರ್ಘಂ ಸುರೂಪಂ ದುಷ್ಪ್ರದರ್ಷಣಮ್ ।
ಬರ್ಹಿಣಶ್ಚಾತ್ರ ಸೌವರ್ಣಾಃ ಶತಚಂದ್ರಕಭೂಷಣಾಃ ॥14॥
ನಕುಲಸ್ಯ ಧನುಸ್ತ್ವೇತದ್ ಮಾದ್ರೀಪುತ್ರಸ್ಯ ಧೀಮತಃ ।
ಏತೇನ ಸದೃಶಂ ಚಿತ್ರಂ ಧನುರೇತದ್ ಯವೀಯಸಃ ॥15॥
ಬಗ್ಗಿಸಲು ಅಸಾಧ್ಯವಾದ, ಒಳ್ಳೆಯ ರೂಪವನ್ನು ಹೊಂದಿದ, ಸೋಲಿಸಲು ಅಸಾಧ್ಯವಾದ ದೀರ್ಘವಾದ ಈ ದೊಡ್ಡ ಧನುಸ್ಸು ಮಾದ್ರಿಪುತ್ರನಾದ ಮೇಧಾವಿಯಾದ ನಕುಲನದು. ಈ ಧನುಸ್ಸಿನಲ್ಲಿ ಸುವರ್ಣಮಯವಾದ ನವಿಲುಗಳೂ ಮತ್ತು ನೂರು ಚಂದ್ರಪ್ರತಿಮೆಗಳೂ ಇವೆ. ಇದಕ್ಕೆ ಸದೃಶವಾದ ಇನ್ನೊಂದು ಧನುಸ್ಸು ತಮ್ಮನಾದ ಸಹದೇವನದು.
ಹಾರಿದ್ರವರ್ಣಾ ರಾಜ್ಞಸ್ತು ಕೌರವ್ಯಸ್ಯ ಮಹಾತ್ಮನಃ ।
ವಿಪಠತತ್ರ ಭೀಮಸೇನಸ್ಯ ಗಿರೀಣಾಮಪಿ ದಾರಣಾಃ ॥16॥

ಸುಪ್ರಭಾಃ ಸುಮಹಾಕಾಯಾಸ್ತೀಕ್ಷ್ಣಾಗ್ರಾಃ ಸುತರಾಂ ದೃಢಾಃ |
ಭೀಮೇನ ಪ್ರಹಿತಾ ಹ್ಯೇತೇ ವಾರಣಾನಾಂ ನಿವಾರಣಾಃ ॥17॥
ಹರಿದ್ರುವರ್ಣದ ಬಾಣಗಳು ಮಹಾತ್ಮನಾದ ಯುಧಿಷ್ಠಿರನವು. ವಿಪತ್ತಿನಿಂದ ರಕ್ಷಣೆ ಮಾಡುವ ಈ ಬಾಣಗಳು ಭೀಮಸೇನನವು, ಅವು ಪರ್ವತವನ್ನೂ ಭೇದಿಸುತ್ತವೆ. ಒಳ್ಳೆಯ ಕಾಂತಿಯುಕ್ತವಾದ ಹರಿತವಾದ ತುದಿಯನ್ನುಳ್ಳ ದೊಡ್ಡ ಪರಿಮಾಣವನ್ನುಳ್ಳ ಅತ್ಯಂತ ದೃಢವಾದ ಈ ಬಾಣಗಳು ಭೀಮನಿಂದ ಪ್ರಯೋಗಿಸಲ್ಪಟ್ಟು ಆನೆಗಳನ್ನೂ ಸಂಹರಿಸುತ್ತವೆ.
ಸುವರ್ಣದಂಡರುಚಿರಾಃ ಕಾಲದಂಡೋಪಮಾಃ ಶಿತಾಃ |
ನಕುಲಸ್ಯ ಶರಾ ಹ್ಯೇತೇ ವಜ್ರಾಶನಿಸಮಪ್ರಭಾಃ ॥18॥
ಯಮದಂಡದಂತಿರುವ ಶ್ವೇತವರ್ಣದ ಸುವರ್ಣದಂಡದಿಂದ ಕೂಡಿರುವ ಈ ಬಾಣಗಳು ನಕುಲನವು. ಇವು ವಜ್ರಾಯುಧದ ಮತ್ತು ಸಿಡಿಲಿನ ಸಮಾನ  ಕಾಂತಿಯನ್ನು ಹೊಂದಿವೆ.
ಯಾಂಶ್ಚ ತ್ವಂ ಪೃಚ್ಛಸೇ ದೀಪ್ತಾನ್ ಸಮಧಾರಾನ್ ಸಮಾಹಿತಾನ್ |
ವರಾಹಕರ್ಣಾಸ್ತೀಕ್ಷ್ಣಾಗ್ರಾಃ ಸಹದೇವಸ್ಯ ತೇ ಶರಾಃ ॥19॥
ನೀನು ನೇರವಾದ ಅಲಗುಳ್ಳ ಒಂದು ಕಡೆ ಜೋಡಿಸಿರುವ ಕಾಂತಿಯಿಂದ ಬೆಳಗುವ ಯಾವ ಬಾಣಗಳನ್ನು ಕೇಳುತ್ತಿದ್ದೀಯೋ ಅವು ಸಹದೇವನ ವರಾಹಕರ್ಣವೆಂದು ಕರೆಯಲ್ಪಡುವ ತೀಕ್ಷ್ಣವಾದ ತುದಿಯುಳ್ಳ ಬಾಣಗಳು.
ಯಸ್ತ್ವಯಂ ಸಾಯಕೋ ದೀರ್ಘೋ ಗವ್ಯೇ ಕೋಶೇ ಚ ದಂಸಿತಃ |
ಪಾರ್ಥಸ್ಯಾಯಂ ಮಹಾಘೋರಃ ಸರ್ವಭಾರಸಹೋ ಮಹಾನ್ ॥20॥
ಗೋಚರ್ಮದ ಕೋಶದಲ್ಲಿ ಸಿದ್ಧಮಾಡಿಟ್ಟಿರುವ ಮಹಾಘೋರವಾದ ಎಲ್ಲ ಭಾರಗಳನ್ನು ತಡೆಯುವ ಈ ದೊಡ್ಡ ಬಾಣವೇನಿದೆಯೋ ಅದು ಅರ್ಜುನನದು.
ಯಸ್ತ್ವಯಂ ನಿರ್ಮಲಃ ಖಡ್ಗೋ ದ್ವೀಪಿಚರ್ಮಣಿ ದಂಸಿತಃ |
ರಾಜ್ಞೋ ಯುಧಿಷ್ಠಿರಸ್ಯಾಯಂ ಕುಂತೀಪುತ್ರಸ್ಯ ಧೀಮತಃ ॥21॥
ವ್ಯಾಘ್ರಚರ್ಮದಲ್ಲಿ ಇಟ್ಟಿರುವ ನಿರ್ಮಲವಾದ ಖಡ್ಗವು ಕುಂತೀಪುತ್ರನಾದ ಮೇಧಾವಿಯಾದ ಯುಧಿಷ್ಠಿರ ರಾಜನದು.
ವೈಯಾಘ್ರಕೋಶೋ ಭೀಮಸ್ಯ ಪಂಚಶಾರ್ದೂಲಲಕ್ಷಣಃ |
ವಾರಣಾನಾಂ ಸುದೃಪ್ತಾನಾಂ ಶಿಕ್ಷಿತಃ ಸ್ಕಂಧಶಾತನೇ ॥22॥
ಐದು ವ್ಯಾಘ್ರಗಳ ಚಿಹ್ನೆಗಳನ್ನು ಹೊಂದಿರುವ ವ್ಯಾಘ್ರಚರ್ಮದ ಕೋಶದಲ್ಲಿರುವ ಈ ಖಡ್ಗವು ಭೀಮಸೇನನದು. ಅದು ಮದಿಸಿದ ಆನೆಗಳ ಭುಜವನ್ನು ಕತ್ತರಿಸುವುದರಲ್ಲಿ ಪಳಗಿದೆ.
ನೀಲೋತ್ಪಲಸವರ್ಣೋಽಯಂ ಖಡ್ಗಃ ಪಾರ್ಥಸ್ಯ ಧೀಮತಃ |
ಮೃಗೇಂದ್ರಚರ್ಮಪಿಹಿತಸ್ತೀಕ್ಷ್ಣಧಾರಃ ಸುನಿರ್ಮಲಃ ॥23॥
ದರ್ಶನೀಯಃ ಸುತೀಕ್ಷ್ಣಾಗ್ರಃ ಕುಂತೀಪುತ್ರಸ್ಯ ಧೀಮತಃ |
ಅರ್ಜುನಸ್ಯೈವ ನಿಸಿತ್ರಂಶಃ ಪರಸೈನ್ಯಪ್ರದೂಷಣಃ ॥24॥
ಸಿಂಹ ಚರ್ಮದಲ್ಲಿ ಇಡಲ್ಪಟ್ಟ, ತೀಕ್ಷ್ಣವಾದ ಅಲುಗುಳ್ಳ, ಶುಭ್ರವಾದ ನೀಲೋತ್ಪಲಕ್ಕೆ ಸಮಾನವಾದ ಕಾಂತಿಯನ್ನು ಹೊಂದಿರುವ, ಈ ಖಡ್ಗವು ಅರ್ಜುನನದು. ಸುಂದರವೂ, ತೀಕ್ಷ್ಣವಾದ ತುದಿಯುಳ್ಳದ್ದೂ, ಶತ್ರುಸೈನ್ಯವನ್ನು ವಿನಾಶಮಾಡುವಂತಹದೂ ಆದ ಈ (ಇನ್ನೊಂದು) ಖಡ್ಗವೂ ಕುಂತೀಪುತ್ರನಾದ ಮೇಧಾವಿಯಾದ ಅರ್ಜುನನದೇ.
ಯಸ್ತ್ವಯಂ ಪಾರ್ಷತೇ ಕೋಶೇ ನಿಕ್ಷಿಪ್ತಃ ರುಚಿರತ್ಸರುಃ |
ನಕುಲಸ್ಯೈಷ ನಿಸಿತ್ರಂಶೋ ವೈಶ್ವಾನರಸಮಪ್ರಭಃ ॥25॥
ಜಿಂಕೆಯ ಚರ್ಮದ ಕೋಶದಲ್ಲಿರುವ ಮನೋಹರವಾದ ಹಿಡಿಯನ್ನು ಹೊಂದಿರುವ ಅಗ್ನಿಯ ಕಾಂತಿಯನ್ನು ಹೊಂದಿರುವ ಈ ಖಡ್ಗವು ನಕುಲನದು.
ಯಸ್ತ್ವಯಂ ಪಿಂಗಲಃ ಖಡ್ಗಶ್ಚಿತ್ರೋ ಮಣಿಮಯತ್ಸರುಃ |
ಸಹದೇವಸ್ಯ ಖಡ್ಗೋಽಯಂ ಭಾರಸಾಹೋಽತಿದಂಸಿತಃ |
ಭೀಮಸ್ಯಾಯಂ ಮಹಾದಂಡಃ ಸರ್ವಾಮಿತ್ರವಿನಾಶನಃ ॥26॥
ಮಣಿಮಯವಾದ ಹಿಡಿಯುಳ್ಳ ವಿಚಿತ್ರವಾದ ಪಿಂಗಲವರ್ಣದ ಈ ಖಡ್ಗವು ಎದುರಾಳಿಯ ಎಲ್ಲ ಭಾರವನ್ನೂ ಸಹಿಸುವ ಅತ್ಯಂತ ಸನ್ನದ್ಧವಾದ ಸಹದೇವನ ಖಡ್ಗ. ಇದು ಎಲ್ಲ ಶತ್ರುಗಳನ್ನೂ ವಿನಾಶಗೊಳಿಸುವ ಭೀಮಸೇನನ ಮಹಾದಂಡ.
ವೈಶಂಪಾಯನಃ
ಭೇದತೋ ಹ್ಯರ್ಜುನಸ್ತೂರ್ಣಂ ಕಥಯಾಮಾಸ ತತ್ವತಃ |
ಆಯುಧಾನಿ ಕಲಾಪಾನಿ ನಿಸಿತ್ರಂಶಾಂಶ್ಚಾತುಲಪ್ರಭಾನ್ ॥27॥
ವೈಶಂಪಾಯನ ಹೀಗೆ ಅರ್ಜುನನು ಶೀಘ್ರವಾಗಿ ಅಸದೃಶ ಕಾಂತಿಯುಳ್ಳ ಖಡ್ಗಗಳನ್ನು, ಆಯುಧಗಳನ್ನು, ಬತ್ತಳಿಕೆಗಳನ್ನು ಶೀಘ್ರವಾಗಿ ಅವುಗಳ ಲಕ್ಷಣ ವ್ಯತ್ಯಾಸದಿಂದ ಉತ್ತರನಿಗೆ ನಿರೂಪಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೆರಡನೆಯ ಅಧ್ಯಾಯ

ಅರ್ಜುನನಿಂದ ಉತ್ತರನಿಗೆ ತಾವು ಪಾಂಡವರೆಂದು ಕಥನ.
ವೈಶಂಪಾಯನಃ
ಏತಸ್ಮಿನ್ನಂತರೇ ಪಾರ್ಥಂ ನ ಮೂಢಾತ್ಮಾ ವ್ಯಜಾನತ |
ವಿರಾಟಪುತ್ರಃ ಪ್ರಮುಖೇ ಪಪ್ರಚ್ಛ ಪುನರೇವ ತು ॥1॥
ವೈಶಂಪಾಯನ ಈ ಮಧ್ಯದಲ್ಲಿ ಮೂಢಾತ್ಮನಾದ ವಿರಾಟಪುತ್ರನು ಅರ್ಜುನನನ್ನು ಎದುರಿಗಿದ್ದರೂ ಗುರುತಿಸಲಿಲ್ಲ. ಮತ್ತು ಪುನಃ ಪ್ರಶ್ನೆಯನ್ನು ಮಾಡಿದನು.
ಸುವರ್ಣರುಚಿರಾಣ್ಯೇಷಾಮಾಯುಧಾನಿ ಮಹಾತ್ಮನಾಮ್ |
ರುಚಿರಾಣಿ ಪ್ರಕಾಶಂತೇ ಪಾರ್ಥಾನಾಮಾಶುಕಾರಿಣಾಮ್ ॥2॥
ಮಹಾತ್ಮರಾದ ಶೀಘ್ರಕಾರಿಗಳಾದ ಪಾಂಡವರ ಸುವರ್ಣಾಲಂಕೃತವಾದ ಈ ಮನೋಹರವಾದ ಆಯುಧಗಳು ಶೋಭಿಸುತ್ತಿವೆ.
ಕ್ವ ನು ತೇ ಪಾಂಡವಾಃ ಶೂರಾಃ ಸಂಗ್ರಾಮೇಷ್ವಪರಾಜಿತಾಃ |
ಯೇಷಾಮಿಮಾನಿ ದಿವ್ಯಾನಿ ಶ್ರಿಯಾ ದೀಪ್ಯಂತಿ ಭಾಂತಿ ಚ ॥3॥
ದೀರ್ಘವಾದ, ದಿವ್ಯವಾದ ಕಾಂತಿಯಿಂದ ಬೆಳಗುವ ಈ ಆಯುಧಗಳು ಯಾವ ಪಾಂಡವರಿಗೆ ಸೇರಿದವೋ ಅಂತಹ ಯುದ್ಧದಲ್ಲಿ ಎಂದೂ ಸೋಲಲದ ಶೂರರಾದ ಪಾಂಡವರು ಎಲ್ಲಿದ್ದಾರೆ?
ಕಸ್ಮಿನ್ ವಸಂತಿ ತೇ ದೇಶೇ ಧರ್ಮಜ್ಞಾ ಬಂಧುವತ್ಸಲಾಃ |
ಕ್ವ ಧರ್ಮರಾಜಃ ಕೌರವ್ಯೋ ಧರ್ಮಪುತ್ರೋ ಯುಧಿಷ್ಠಿರಃ ॥4॥
ಭೀಮಸೇನಾರ್ಜುನೌ ಚಾಪಿ ಸರ್ವೇ ತೇ ಮಮ ಮಾತುಲಾಃ |
ನಕುಲಃ ಸಹದೇವೋ ವಾ ಸರ್ವಾಸ್ತ್ರಕುಶಲೋ ರಣೇ ॥5॥
ಧರ್ಮಜ್ಞರೂ, ಬಂಧುವತ್ಸಲರೂ ಆದ ಅವರು ಯಾವ ದೇಶದಲ್ಲಿ ವಾಸ ಮಾಡುತ್ತಿದ್ದಾರೆ? ಕೌರವ್ಯನೂ, ಧರ್ಮಪುತ್ರನೂ, ಧರ್ಮರಾಜನೂ ಆದ ಯುಧಿಷ್ಠಿರನು ಎಲ್ಲಿದ್ದಾನೆ? ಯುದ್ಧದಲ್ಲಿ ಸರ್ವಾಸ್ತ್ರ ಕುಶಲರಾದ ಭೀಮಸೇನಾರ್ಜುನರು, ನಕುಲ ಸಹದೇವರು ಎಲ್ಲಿದ್ದಾರೆ? ಅವರೆಲ್ಲರೂ ನನ್ನ ಸೋದರ ಮಾವಂದಿರು.
ಸರ್ವ ಏವ ಮಹಾತ್ಮಾನಃ ಸರ್ವಾಮಿತ್ರವಿನಾಶನಾಃ |
ರಾಜ್ಯಮಕ್ಷೈಃ ಪರಿತ್ಯಜ್ಯ ನಃ ಶ್ರೂಯಂತೇ ವನಂ ಗತಾಃ ॥6॥
ಮಹಾತ್ಮರೂ ಮತ್ತು ಸರ್ವಶತ್ರುಸಂಹಾರಕರೂ ಆದ ಅವರು ಅಕ್ಷದ್ಯೂತದಲ್ಲಿ ರಾಜ್ಯವನ್ನು ಕಳೆದುಕೊಂಡು ಕಾಡಿಗೆ ಹೋದರೆಂದು ನಾವು ಕೇಳಿದ್ದೇವೆ.
ದ್ರೌಪದೀ ಚಾಪಿ ಪಾಂಚಾಲೀ ಸ್ತ್ರೀರತ್ನಮಿತಿ ವಿಶ್ರುತಾ |
ಜಿತಾ ಚಾಕ್ಷೈಸ್ತದಾ ಕೃಷ್ಣಾ ತಾನೇವಾನ್ವಗಮದ್ ವನೇ ॥7॥
ದ್ರುಪದರಾಜಕುಮಾರಿಯಾದ ಪಾಂಚಾಲಿಯಾದ ಕೃಷ್ಣೆಯು ಸ್ತ್ರೀರತ್ನವೆಂದು ಪ್ರಖ್ಯಾತಳಾಗಿದ್ದಾಳೆ. ಅಕ್ಷಕ್ರೀಡೆಯಲ್ಲಿ ಪಣಕ್ಕಿಟ್ಟು ಕಳೆದುಕೊಳ್ಳಲ್ಪಟ್ಟ ಅವಳು ಕಾಡಿನಲ್ಲಿ ಆ ಪಾಂಡವರನ್ನೇ ಹಿಂಬಾಲಿಸಿದಳು.
ಉತ್ಸೃಜ್ಯ ಧರ್ಮ್ಯಂ ರಾಜ್ಯಂ ತೇ ನಃ ಶ್ರೂಯಂತೇ ವನಂ ಗತಾಃ ॥8॥
ಪಾಂಡವರು ಧರ್ಮದಿಂದ ಬಂದ ರಾಜ್ಯವನ್ನು ತ್ಯಜಿಸಿ ಕಾಡಿಗೆ ಹೋದರೆಂದು ನಾವು ಕೇಳಿದ್ದೇವೆ.
ಪಾಂಡವಾನ್ ಯದಿ ಜಾನೀಷೇ ಕ್ವ ನು ತೇ ಧರ್ಮಚಾರಿಣಃ |
ಕ್ವ ಚಾದ್ಯ ನಿವಸಂತೀತಿ ಸತ್ಯಂ ಬ್ರೂಹಿ ಬೃಹನ್ನಳೇ ॥9॥
ಪಾಂಡವರನ್ನು ನೀನು ತಿಳಿದಿದ್ದರೆ ಆ ಧರ್ಮಚಾರಿಗಳು ಎಲ್ಲಿದ್ದಾರೆ? ಎಲೈ ಬೃಹನ್ನಳೆಯೇ, ಅವರು ಈ ದಿನ ಎಲ್ಲಿ ವಾಸಮಾಡುತ್ತಿದ್ದಾರೆಂದು ನನಗೆ ಸತ್ಯವನ್ನು ಹೇಳು.
ವೈಶಂಪಾಯನಃ
ತತಃ ಪ್ರಹಸ್ಯ ಬೀಭತ್ಸುಃ ಕೌಂತೇಯಃ ಶ್ವೇತವಾಹನಃ |
ಉವಾಚ ರಾಜಪುತ್ರಂ ತಮುತ್ತರಂ ಶೃಣು ಮೇ ವಚಃ ॥10॥
ವೈಶಂಪಾಯನ ಆಗ ಕುಂತೀಪುತ್ರನೂ, ಶ್ವೇತವಾಹನನೂ ಆದ ಅರ್ಜುನನು ನಕ್ಕು ಆ ರಾಜಪುತ್ರನಾದ ಉತ್ತರನನ್ನು ಕುರಿತು ನನ್ನ ಮಾತನ್ನು ಕೇಳು ಎಂದು ಹೇಳಿದನು.
ಅಹಮಸ್ಮ್ಯರ್ಜುನೋ ನಾಮ್ನಾ ಕಂಕೋ ನಾಮ ಯುಧಿಷ್ಠಿರಃ |
ಭೀಮಸೇನಸ್ತು ವಲಲಃ ಪಿತುಸ್ತೇ ಪರಿಚಾರಕಃ ॥11॥
ನಾನೇ ಅರ್ಜುನನೆಂಬುವನು. ಕಂಕನು ಯುಧಿಷ್ಠಿರ. ನಿನ್ನ ತಂದೆಯ ಪರಿಚಾರಕನಾದ ವಲಲನು ಭೀಮಸೇನ.
ಅಶ್ವಬಂಧಸ್ತು ನಕುಲಃ ಸಹದೇವಸ್ತು ಗೋಪತಿಃ |
ಸೈರಂಧ್ರೀಂ ದ್ರೌಪದೀಂ ವಿದ್ಧಿ ಯದರ್ಥೇ ಕೀಚಕೋ ಹತಃ ॥12॥
ಭೀಮಸೇನೇನ ದುರ್ವೃತ್ತಃ ಸಹ ಭ್ರಾತೃಭಿರಾಹವೇ ॥13॥
ಅಶ್ವಬಂಧನಾದವನು ನಕುಲ, ಗೋಪತಿಯಾದವನು ಸಹದೇವ. ಯಾವಳ ಸಲುವಾಗಿ ದುರ್ನಡತೆಯುಳ್ಳ ಕೀಚಕನು ತಮ್ಮಂದಿರ ಸಹಿತವಾಗಿ ಯುದ್ಧದಲ್ಲಿ ಭೀಮನಿಂದ ಮೃತನಾದನೋ ಆ ಸೈರಂಧ್ರಿಯು ದ್ರೌಪದಿ ಎಂದು ತಿಳಿ.
ಉತ್ತರಃ
ದಶ ಪಾರ್ಥಸ್ಯ ನಾಮಾನಿ ಶ್ರೂಯಂತೇ ಮೇ ಕಥಾಸು ಚ |
ಬ್ರೂಹಿ ತ್ವಂ ಯದಿ ಜಾನೀಷೇ ಶ್ರದ್ಧಧೇಯಂ ವಚಸ್ತವ ॥14॥

ಉತ್ತರ ನಾನು ಕಥೆಗಳಲ್ಲಿ ಅರ್ಜುನನಿಗೆ ಹತ್ತು ನಾಮಗಳಿವೆ ಎಂದು ಕೇಳಿದ್ದೇನೆ. ಅದನ್ನು ತಿಳಿದಿದ್ದರೆ ನನಗೆ ಹೇಳು. ಆಗ ನಿನ್ನ ಮಾತನ್ನು ನಂಬುವೆನು.
ಅರ್ಜುನಃ
ಹಂತ ತರ್ಹಿ ತವಾಚಕ್ಷ್ಯೇ ದಶ ನಾಮಾನಿ ಯಾನಿ ಮೇ |
ಈಶಾನೋ ವಿದಧೇ ದೇವಸ್ತ್ರಿದಿವಸ್ಯೇಶ್ವರೋ ದಿವಃ ॥15॥
ಅರ್ಜುನ ಸಂತೋಷ. ಅಂತರಿಕ್ಷಾಧಿಪತಿಯಾದ ಶಿವನು ನನಗೆ ಯಾವ ಹೆಸರುಗಳನ್ನು ಇಟ್ಟನೋ ಅಂತಹ ಹತ್ತು ನಾಮಗಳನ್ನು ನಿನಗೆ ನಾನು ಹೇಳುತ್ತೇನೆ.
ಅರ್ಜುನಃ ಫಲ್ಗುನೋ ಜಿಷ್ಣುಃ ಕಿರೀಟೀ ಶ್ವೇತವಾಹನಃ |
ಬೀಭತ್ಸುರ್ವಿಜಯಃ ಪಾರ್ಥಃ ಸವ್ಯಸಾಚೀ ಧನಂಜಯಃ ॥16॥
ಏತಾನಿ ಮಮ ನಾಮಾನಿ ಸ್ಥಾಪಿತಾನಿ ಸುರೋತ್ತಮೈಃ ॥17॥
ಅರ್ಜುನ, ಫಲ್ಗುನ, ಜಿಷ್ಣು, ಕಿರೀಟೀ, ಶ್ವೇತವಾಹನ, ಬೀಭತ್ಸು, ವಿಜಯ, ಪಾರ್ಥ, ಸವ್ಯಸಾಚೀ, ಧನಂಜಯ ಇವೇ ನನಗೆ ಶ್ರೇಷ್ಠರಾದ ದೇವತೆಗಳು ಇಟ್ಟ ಹತ್ತು ನಾಮಗಳು.
ಉತ್ತರಃ
ಗುಣತೋ ದಶ ನಾಮಾನಿ ಸಮವೇತಾನಿ ಪಾಂಡವೇ |
ಚರಂತಿ ಲೋಕೇ ಖ್ಯಾತಾನಿ ವಿದಿತಾನಿ ಮಮಾನಘ ॥18॥
ಉತ್ತರ ಎಲೈ ಅನಘನೇ, ಪಾಂಡವನಾದ ಅರ್ಜುನನಲ್ಲಿ ಹತ್ತು ಹೆಸರುಗಳು ಅನ್ವರ್ಥವಾಗಿ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿವೆ ಎಂದು ನಾನು ತಿಳಿದಿದ್ದೀನೆ.
ಕೇನಾಸಿ ವಿಜಯೋ ನಾಮ ಕೇನಾಸಿ ಶ್ವೇತವಾಹನಃ |
ಸವ್ಯಸಾಚೀತಿ ಕೇನಾಸಿ ಜಿಷ್ಣುರ್ಬೀಭತ್ಸುರೇವ ಚ ॥19॥
ನೀನು ಯಾವ ಕಾರಣದಿಂದ ವಿಜಯನೆಂಬ ನಾಮವನ್ನು ಹೊಂದಿದ್ದೀಯೆ? ಯಾವ ಕಾರಣದಿಂದ ಶ್ವೇತವಾಹನನೆಂಬ ನಾಮವನ್ನು ಹೊಂದಿದ್ದೀಯೆ? ಯಾವ ಕಾರಣದಿಂದ ಸವ್ಯಸಾಚೀ, ಜಿಷ್ಣು ಮತ್ತು ಬೀಭತ್ಸು ಎಂಬ ನಾಮಗಳನ್ನು ಹೊಂದಿದ್ದೀಯೆ?
ಅರ್ಜುನಃ ಫಲ್ಗುನಃ ಪಾರ್ಥಃ ಕಿರೀಟೀ ಶ್ವೇತವಾಹನಃ |
ಧನಂಜಯಶ್ಚ ಕೇನಾಸಿ ಶೀಘ್ರಂ ವದ ಬೃಹನ್ನಳೇ ॥20॥
ಎಲೌ ಬೃಹನ್ನಳೆಯೇ, ಯಾವ ಕಾರಣದಿಂದ ಅರ್ಜುನ, ಫಲ್ಗುನ, ಪಾರ್ಥ, ಕಿರೀಟಿ, ಶ್ವೇತವಾಹನ, ಧನಂಜಯ ಎಂಬ ನಾಮಗಳನ್ನು ಹೊಂದಿದ್ದೀಯೆ? ಶೀಘ್ರವಾಗಿ ಹೇಳು.
ಶ್ರುತಾ ಮೇ ತಸ್ಯ ವೀರಸ್ಯ ಕೇವಲಾ ನಾಮಹೇತವಃ ॥21॥
ತತ್ಸರ್ವಂ ಯದಿ ಮೇ ಬ್ರೂಯಾಃ ಶ್ರದ್ದಧ್ಯಾಂ ಸರ್ವಮೇವ ತೇ ॥22॥
ನಾನು ಆ ವೀರನ ಎಲ್ಲಾ ನಾಮಗಳಿಗೂ ಕಾರಣಗಳಿವೆ ಎಂದು ಮಾತ್ರ ಕೇಳಿದ್ದೇನೆ. ನೀನು ಅದೆಲ್ಲವನ್ನೂ ನನಗೆ ಹೇಳಿದರೆ ನಿನ್ನನ್ನು ಪೂರ್ಣವಾಗಿ ನಂಬುವೆನು.
ಅರ್ಜುನಃ
ಸರ್ವಾನ್ ಜನಪದಾನ್ ಜಿತ್ವಾ ಧನಾನ್ಯಾಚ್ಛಿದ್ಯ ಸರ್ವಶಃ |
ಮಧ್ಯೇ ಧನಸ್ಯ ತಿಷ್ಠಂತಂ ತೇನಾಹುರ್ಮಾಂ ಧನಂಜಯಮ್ ॥23॥
ಅರ್ಜುನ ಎಲ್ಲ ದೇಶಗಳನ್ನು ಗೆದ್ದು ಎಲ್ಲ ಕಡೆಗಳಲ್ಲಿಯೂ ಧನಗಳನ್ನು ಸಂಪಾದಿಸಿ ಧನದ ಮಧ್ಯೆ ಇರುವ ಕಾರಣದಿಂದ ನನ್ನನ್ನು ಧನಂಜಯನೆಂದು ಕರೆಯುತ್ತಾರೆ.
ಅಭಿಪ್ರಯಾಮಿ ಸಂಗ್ರಾಮೇ ಯದಾಽಹಂ ಯುದ್ಧದುರ್ಮದಾನ್ |
ಅಜಿತ್ವಾ ನ ನಿವರ್ತೇಯಂ ತೇನ ಮಾಂ ವಿಜಯಂ ವಿದುಃ ॥24॥
ಯುದ್ಧದುರ್ಮದರಾದವರನ್ನು ಯುದ್ಧದಲ್ಲಿ ಎದುರಿಸಲು ನಾನು ಯಾವಾಗ ಹೊರಡುತ್ತೇನೆಯೋ ಆಗ ಅವರನ್ನು ಗೆಲ್ಲದೆ ಹಿಂದಿರುಗುವುದಿಲ್ಲ. ಆದ್ದರಿಂದ ನನ್ನನ್ನು ವಿಜಯನೆಂದು ಕರೆಯುತ್ತಾರೆ.
ಶ್ವೇತಾಃ ಕಾಂಚನಸನ್ನಾಹಾ ರಥೇ ಯುಂಜಂತಿ ಮೇ ಹಯಾಃ |
ಶತ್ರುಭಿರ್ಯುದ್ಧಮಾನಸ್ಯ ತೇನಾಹಂ ಶ್ವೇತವಾಹನಃ ॥25॥
ನಾನು ಶತ್ರುಗಳ ಜೊತೆ ಯುದ್ಧವನ್ನು ಮಾಡುವಾಗ ಸುವರ್ಣಾಲಂಕೃತವಾದ ಶ್ವೇತವರ್ಣದ ಅಶ್ವಗಳು ನನ್ನ ರಥದಲ್ಲಿ ಹೂಡಲ್ಪಡುತ್ತವೆ. ಆದ್ದರಿಂದ ಶ್ವೇತವಾಹನನಾಗಿದ್ದೇನೆ.
ಕಿರೀಟಂ ಸೂರ್ಯಸಂಕಾಶಂ ಭ್ರಾಜತೇ ಮೇ ಶಿರೋಗತಮ್ |
ರಣಮಧ್ಯೇ ರಥಸ್ಥಸ್ಯ ಸೂರ್ಯಪಾವಕಸನ್ನಿಭಮ್ ॥26॥
ಅಚ್ಛೇದ್ಯಂ ರುಚಿರಂ ಚಿತ್ರಂ ಜಾಂಬೂನದಪರಿಷ್ಕೃತಮ್ |
ಇಂದ್ರದತ್ತಮನಾಹಾರ್ಯಂ ತೇನಾಹುರ್ಮಾಂ ಕಿರೀಟಿನಮ್ ॥27॥
ರಣಮಧ್ಯದಲ್ಲಿ ರಥದಲ್ಲಿ ಇರುವ ನನಗೆ ಸೂರ್ಯಾಗ್ನಿಗಳ ಪ್ರಭೆಯನ್ನುಳ್ಳ ಸೂರ್ಯನಂತೆ ಹೊಳೆಯುವ ಕಿರೀಟವು ಶಿರಸ್ಸಿನಲ್ಲಿ ರಾರಾಜಿಸುತ್ತದೆ. ಇಂದ್ರದತ್ತವಾದ ಆ ಕಿರೀಟವು ಅಚ್ಛೇದ್ಯವಾದುದು, ಮನೋಹರವಾದುದು, ಆಶ್ಚರ್ಯಕರವಾದುದು, ಸುವರ್ಣಾಲಂಕೃತವಾದುದು ಮತ್ತು ಯಾರಿಂದಲೂ ಕದಿಯಲು ಸಾಧ್ಯವಿಲ್ಲದುದು. ಆದ್ದರಿಂದ ನನ್ನನ್ನು ಕಿರೀಟೀ ಎಂದು ಹೇಳುತ್ತಾರೆ.

ನ ಕುರ್ಯಾಂ ಕರ್ಮ ಬೀಭತ್ಸಂ ಯುಧ್ಯಮಾನಃ ಕಥಂಚನ |
ತೇನ ದೇವಮನುಷ್ಯೇಷು ಬೀಭತ್ಸುರಿತಿ ಮಾಂ ವಿದುಃ ॥28॥
ಯುದ್ಧವನ್ನು ಮಾಡುವಾಗ ನಾನು ಯಾವ ಬೀಭತ್ಸವಾದ ಕಾರ್ಯವನ್ನೂ ಮಾಡುವುದಿಲ್ಲ. ಆದ್ದರಿಂದ ದೇವತೆಗಳೂ ಮತ್ತು ಮನುಷ್ಯರೂ ನನ್ನನ್ನು ಬೀಭತ್ಸು ಎಂದು ತಿಳಿಯುತ್ತಾರೆ. (ಬೀಭತ್ಸವಾದ ಕರ್ಮಗಳಿಗೇ ಬೀಭತ್ಸ ಎಂದರೆ ಜುಗುಪ್ಸೆಯನ್ನು ಉಂಟುಮಾಡುವುದರಿಂದ ನನ್ನನ್ನು ಬೀಭತ್ಸು ಎಂದು ಕರೆಯುತ್ತಾರೆ-ಲಕ್ಷಾಲಂಕಾರ).
ಉಭೌ ಮೇ ತುಲ್ಯಕರ್ಮಾಣೌ ಗಾಂಡೀವಸ್ಯ ವಿಕರ್ಷಣೇ |
ಭುಜೌ ಮೇ ಭವತಃ ಸಂಖೇ ಪರಸೈನ್ಯವಿನಾಶನೌ ॥29॥
ತಯೋಃ ಸವ್ಯೋಽಧಿಕಸ್ತಸ್ಮಾತ್ ಸವ್ಯಸಾಚೀತಿ ಮಾಂ ವಿದುಃ ॥30॥
ಗಾಂಡೀವವನ್ನು ಎಳೆಯುವುದರಲ್ಲಿ ಮತ್ತು ಪರಸೈನ್ಯವನ್ನು ವಿನಾಶ ಮಾಡುವುದರಲ್ಲಿ ಯುದ್ಧದಲ್ಲಿ ನನ್ನ ಎರಡು ಭುಜಗಳೂ ಸಮಾನವಾದ ಕಾರ್ಯವನ್ನು ಮಾಡುತ್ತವೆ. ಅದರಲ್ಲಿಯೂ ಎಡಭುಜವು ಅಧಿಕವಾಗಿದೆ. ಆದ್ದರಿಂದ ನನ್ನನ್ನು ಸವ್ಯಸಾಚೀ ಎಂದು ಕರೆಯುತ್ತಾರೆ.
ಪೃಥಿವ್ಯಾಂ ಸಾಗರಾಂತಾಯಾಂ ವರ್ಣೋ ಮೇ ದುರ್ಲಭಃ ಸಮಃ |
ಶುದ್ಧತ್ವಾದ್‌ರೂಪವದ್ವಾಚ್ಚ ತೇನ ಮಾಮರ್ಜುನಂ ವಿದುಃ ॥31॥
ಸಾಗರಾಂತವಾದ ಭೂಮಿಯಲ್ಲಿ ನನ್ನ ಶರೀರವರ್ಣಕ್ಕೆ ಸಮಾನವಾದ ವರ್ಣವು ದುರ್ಲಭವಾದುದು. ಶುದ್ಧವಾದ ಅಂತಹ ರೂಪವನ್ನು ಹೊಂದಿರುವುದರಿಂದ ನನ್ನನ್ನು ಅರ್ಜುನನೆಂದು ಕರೆಯುತ್ತಾರೆ.
ಉತ್ತರಾಭ್ಯಾಂ ತು ಪೂರ್ವಾಭ್ಯಾಂ ಫಲ್ಗುನೀಭ್ಯಾಮಹಂ ದಿವಾ |
ಜಾತೋ ಹಿಮವತಃ ಪೃಷ್ಠೇ ತೇನ ಮಾಂ ಫಲ್ಗುನಂ ವಿದುಃ ॥32॥
ಹಗಲಿನಲ್ಲಿ ಪೂರ್ವಫಲ್ಗುಣಿಯೂ, ರಾತ್ರಿಯಲ್ಲಿ ಉತ್ತರಫಲ್ಗುಣಿಯೂ ಇರುವ ದಿವಸ ಹಗಲಿನ ಕೊನೆಯ ಭಾಗದಲ್ಲಿ ನಾನು ಹಿಮಾಲಯದ ತಪ್ಪಲಿನಲ್ಲಿ ಜನಿಸಿದೆ. ಆದ್ದರಿಂದ ನನ್ನನ್ನು ಫಲ್ಗುನ ಎಂದು ಕರೆಯುತ್ತಾರೆ (ಲಕ್ಷಾಲಂಕಾರ).
ಯೋ ಮಮಾಂಗೇ ವ್ರಣಂ ಕುರ್ಯಾದ್ ಭ್ರಾತುರ್ಜ್ಯೇಷ್ಠಸ್ಯ ಪಶ್ಯತಃ |
ಯುಧಿಷ್ಠಿರಸ್ಯ ರುಧಿರಂ ದರ್ಶಯೇದ್ ವಾ ಕದಾಚನ ॥33॥
ಪರಾಜಯಮಹಂ ತಸ್ಯ ಕುಲೇ ಕುರ್ಯಾಂ ನ ಸಂಶಯಃ ॥34॥
ಯಾಸ್ಯಾಮಿ ತೈರಹಂ ಸರ್ವೈರ್ನ ಮೇ ತೇಭ್ಯಃ ಪರಾಭವಃ |
ತೇನ ದೇವಮನುಷ್ಯೇಷು ಜಿಷ್ಣುರ್ನಾಮಾಽಸ್ಮಿ ವಿಶ್ರುತಃ ॥35॥
ಯಾವನು ನಾನು ನೋಡುತ್ತಿರುವಂತೆ ನನ್ನ ಅಣ್ಣನಾದ ಯುಧಿಷ್ಠಿರನ ದೇಹದಲ್ಲಿ ಯಾವಾಗಲಾದರೂ ಗಾಯವನ್ನು ಮಾಡಿ ರಕ್ತವನ್ನು ಸೋರಿಸುತ್ತಾನೆಯೋ ನಾನು ಅವನ ಕುಲವನ್ನು ಪರಾಭವಗೊಳಿಸುತ್ತೇನೆ. ಇದರಲ್ಲಿ ಸಂಶಯವಿಲ್ಲ. ನಾನು ಅವರೆಲ್ಲರ ಜೊತೆಯಲ್ಲಿ ಯುದ್ಧಕ್ಕೆ ಹೊರಡುತ್ತೇನೆ. ನನಗೆ ಎಂದೂ ಸೋಲು ಇರುವುದಿಲ್ಲ. ಆದ್ದರಿಂದ ದೇವತೆಗಳಲ್ಲಿ ಮತ್ತು ಮನುಷ್ಯರಲ್ಲಿ ನಾನು ಜಿಷ್ಣು ಎಂದರೆ ಜಯಶೀಲ ಎಂದು ಪ್ರಖ್ಯಾತನಾಗಿದ್ದೇನೆ.
ಮಾತಾ ಮಮ ಪೃಥಾ ನಾಮ ತೇನ ಮಾಂ ಪಾರ್ಥಮಬ್ರುವನ್ ॥36॥
ನನ್ನ ತಾಯಿಯ ಹೆಸರು ಪೃಥಾ ಎಂದು. ಪೃಥೆಯ ಪುತ್ರನಾದುದರಿಂದ ನನ್ನನ್ನು ಪಾರ್ಥನೆಂದು ಕರೆದರು.
ದೇವದಾನವಗಂಧರ್ವಪಿಶಾಚೋರಗರಾಕ್ಷಸಾನ್ |
ಅಹಂ ಪುರಾ ರಣೇ ಜಿತ್ವಾ ಖಾಂಡವೇಽಗ್ನಿಮತರ್ಪಯಮ್ ॥37॥
ನಾನು ಹಿಂದೆ ಖಾಂಡವವನದಲ್ಲಿ ದೇವತೆಗಳನ್ನು, ದಾನವರನ್ನು, ಗಂಧರ್ವರನ್ನು, ಪಿಶಾಚಿಉರಗರಾಕ್ಷಸರನ್ನು ಗೆದ್ದು ಅಗ್ನಿಯನ್ನು ತೃಪ್ತಿಪಡಿಸಿದೆ.
ಹುತಾಶನಂ ತರ್ಪಯಿತ್ವಾ ಸಹಿತಃ ಶಾರ್ಙ್ಗಧನ್ವನಾ |
ತ್ರಿವಿಷ್ಟಪಗತೌ ದೃಷ್ಟ್ವಾ ಪಿತಾಮಹಮಹೇಶ್ವರೌ ॥38॥
ಮೂರ್ಛಯಾ ಪತಿತಂ ಭೂಮೌ ಸಾಗರೋಪಮಸತ್ತಮೌ |
ದೃಷ್ಟ್ವಾ ತೌ ವರದೌ ದೇವೌ ಸಂಜ್ಞಾಂ ಲಬ್ಧ್ವೋತ್ಥಿತಃ ಪುನಃ ॥39॥
ಮೂರ್ಧ್ನಾಽಭಿಪ್ರಣತಂ ಭೂಮೌ ತೌ ತದಾ ವರದೌ ವರೌ |
ಕೃಷ್ಣೇತ್ಯೇಕಾದಶಂ ನಾಮ ಪ್ರೀತ್ಯಾ ಮೇ ತತ್ರ ಚಕ್ರತುಃ ॥40॥
ಅಗ್ನಿಯನ್ನು ತೃಪ್ತಿಪಡಿಸಿ ಕೃಷ್ಣನ ಜೊತೆಯಲ್ಲಿ ಸ್ವರ್ಗಕ್ಕೆ ಹೋಗಿ ಬ್ರಹ್ಮದೇವರನ್ನೂ ಮತ್ತು ರುದ್ರದೇವರನ್ನು ನೋಡಿ ಮೂರ್ಛೆಯಿಂದ ಭೂಮಿಯ ಮೇಲೆ ಬಿದ್ದ ನನ್ನನ್ನು ಸಮುದ್ರದಂತಹ ಗುಣವುಳ್ಳವರೂ, ಸಜ್ಜನರಲ್ಲಿ ಶ್ರೇಷ್ಠರೂ ಮತ್ತು ವರಪ್ರದರೂ ಆದ ಆ ಇಬ್ಬರು ದೇವತೆಗಳ ಕೃಪಾದೃಷ್ಟಿಯಿಂದ ನಾನು ಪುನಃ ಜ್ಞಾನವನ್ನು ಪಡೆದು ಎದ್ದೆ. ಭೂಮಿಯ ಮೇಲೆ ಶಿರಸಾನಮಸ್ಕಾರವನ್ನು ಮಾಡಿದ ನನ್ನನ್ನು ಕುರಿತು ವರಪ್ರದರಾದ ಶ್ರೇಷ್ಠರಾದ ದೇವತೆಗಳು ಪ್ರೀತಿಯಿಂದ ಕೃಷ್ಣ ಎಂಬ ಹನ್ನೊಂದನೆಯ ನಾಮವನ್ನು ಕೊಟ್ಟರು.
ತುಷ್ಟೌ ಚ ಮಮ ವೀರ್ಯೇಣ ಕರ್ಮಣಾ ಚಾಭಿರಾಧಿತೌ |
ಸರ್ವದೇವೈಃ ಪರಿವೃತೌ ಭೂಯೋ ಮಾಂ ಸ್ವಯಮೂಚತುಃ ॥41॥
ವರಂ ತಾತ ವೃಣೀಷ್ವೇತಿ ಯಂ ಪ್ರಾರ್ಥಯಸಿ ಪಾಂಡವ ॥42॥
ನನ್ನ ಪರಾಕ್ರಮದಿಂದ ಸಂತುಷ್ಟರಾದ ಮತ್ತು ನನ್ನ ಕರ್ಮದಿಂದ ಪೂಜಿಸಲ್ಪಟ್ಟ ಸರ್ವದೇವತೆಗಳಿಂದ ಪರಿವೃತರಾದ ಆ ಇಬ್ಬರು ದೇವತೆಗಳು ಪುನಃ ನನ್ನನ್ನು ಕುರಿತು ತಾವಾಗಿಯೇ ಎಲೈ ಪಾಂಡವನೇ, ಪ್ರೀತಿಪಾತ್ರನೇ, ಯಾವ ವರವನ್ನು ಬಯಸುತ್ತೀಯೋ ಅಂತಹ

ವರವನ್ನು ಕೇಳು ಎಂದು ಹೇಳಿದರು.
ತತೋಽಹಮಸ್ತ್ರಾಣ್ಯಲಭಂ ದಿವ್ಯಾನಿ ಚ ದೃಢಾನಿ ಚ |
ಬ್ರಾಹ್ಮಂ ಪಾಶುಪತಂ ಚೈವ ಸ್ಥೂಣಾಕರ್ಣಂ ಚ ದುರ್ಜಯಮ್ ॥43॥
ಐಂದ್ರಂ ವಾರುಣಮಾಗ್ನೇಯಂ ವಾಯವ್ಯಮಥ ವೈಷ್ಣವಮ್ ॥44॥
ಆಗ ನಾನು ದಿವ್ಯವೂ, ದೃಢವೂ ಆದ ಬ್ರಾಹ್ಮ, ಪಾಶುಪತ, ದುರ್ಜಯವಾದ ಸ್ಥೂಣಾಕರ್ಣ, ಐಂದ್ರ, ವಾರುಣ, ಆಗ್ನೇಯ, ವಾಯವ್ಯ ಮತ್ತು ವೈಷ್ಣವ ಮೊದಲಾದ ಅಸ್ತ್ರಗಳನ್ನು ಪಡೆದೆನು.
ತತೋಽಹಮಜಯಂ ಭೂಯೋ ರಥೇನೈಂದ್ರೇಣ ದುರ್ಜಯಾನ್ |
ಮಾತಲಿಂ ಸಾರಥಿಂ ಕೃತ್ವಾ ನಿವಾತಕವಚಾನ್ ರಣೇ ॥45॥
ಅವಧ್ಯಕವಚಾನ್ ದೇವೈರ್ವರದತ್ತಾನ್ ಮಹಾಸುರಾನ್ ॥46॥
ಅನಂತರ ನಾನು ಇಂದ್ರನ ರಥದಲ್ಲಿ ಕುಳಿತು ಮಾತಲಿಯನ್ನು ಸಾರಥಿಯನ್ನಾಗಿ ಮಾಡಿಕೊಂಡು ಜಯಿಸಲು ಅಸಾಧ್ಯರಾದ ನಿವಾತಕವಚರನ್ನು ಯುದ್ಧದಲ್ಲಿ ಸೋಲಿಸಿದೆನು. ಅವರು ದೇವತೆಗಳಿಂದ ವರವನ್ನು ಪಡೆದ ಅವಧ್ಯಕವಚರಾದ ದೊಡ್ಡ ಅಸುರರಾಗಿದ್ದರು.
ತಿಸ್ರಃ ಕೋಟೀರ್ದಾನವಾನಾಂ ಸಂಯುಗೇಷ್ವನಿವರ್ತಿನಾಮ್ |
ಏಕೋ ನಿರ್ಜಿತ್ಯ ಸಂಗ್ರಾಮೇ ಭೂಯೋ ದೇವಾನತೋಷಯಮ್ ॥
ಯುದ್ಧದಿಂದ ಎಂದೂ ಹಿಮ್ಮೆಟ್ಟದಿರುವ ನೂರುಕೋಟಿ ದಾನವರ ಸೈನ್ಯವನ್ನು ಯುದ್ಧದಲ್ಲಿ ಒಬ್ಬನೇ ಸೋಲಿಸಿ ಪುನಃ ದೇವತೆಗಳನ್ನು ಸಂತೋಷಪಡಿಸಿದೆನು.
ತತೋ ಮೇ ಭಗವಾನಿಂದ್ರಃ ಕಿರೀಟಮದದಾತ್ ಸ್ವಯಮ್ |
ದೇವಾಶ್ಚ ಶಂಖಮದದುಃ ಶತ್ರುಸೈನ್ಯನಿವಾರಣಮ್ ॥48॥
ಆಗ ಪೂಜ್ಯನಾದ ಇಂದ್ರನು ಸಂತೋಷಗೊಂಡು ಸ್ವಯಂ ನನಗೆ ಕಿರೀಟವನ್ನು ಕೊಟ್ಟನು. ದೇವತೆಗಳೂ ಸಹ ಶತ್ರುಸೈನ್ಯವನ್ನು ಓಡಿಸುವ ಶಂಖವನ್ನು ಕೊಟ್ಟರು.
ಅಹಂ ಪಾರೇ ಸಮುದ್ರಸ್ಯ ಹಿರಣ್ಯಪುರವಾಸಿನಾಮ್ |
ಹತ್ವಾ ಷಷ್ಟಿಸಹಸ್ರಾಣಿ ಜಯಂ ಸಂಪ್ರಾಪ್ತವಾನಪಿ ॥49॥
ನಾನು ಸಮುದ್ರದ ದಡದಲ್ಲಿ ಇದ್ದ ಹಿರಣ್ಯಪುರ ನಿವಾಸಿಗಳಾದ ಅರವತ್ತು ಸಹಸ್ರ ದೈತ್ಯರನ್ನು ಕೊಂದು ಜಯವನ್ನು ಪಡೆದೆನು.
ಅಸಂಭ್ರಾಂತೋ ರಥೇ ತಿಷ್ಠನ್ ಸಹಸ್ರೇಷು ಶತೇಷು ಚ |
ಶತ್ರುಮಧ್ಯೇ ದುರಾಧರ್ಷೋ ನ ಚ ಮುಹ್ಯೇ ಕಥಂಚನ ॥50॥
ನೂರು ಸಂಖ್ಯೆಯಲ್ಲಿರುವ ಅಥವಾ ಸಾವಿರ ಸಂಖ್ಯೆಯಲ್ಲಿರುವ ಶತ್ರುಗಳ ಮಧ್ಯದಲ್ಲಿ ರಥದಲ್ಲಿ ಕುಳಿತರೂ ಯಾವ ಗಾಬರಿಯೂ ಇಲ್ಲದೆ ಸೋಲಿಸಲು ಅಸಾಧ್ಯನಾಗಿ ನಾನು ಯಾವ ಭ್ರಾಂತಿಗೂ ಒಳಗಾಗುವುದಿಲ್ಲ.
ಅಹಂ ಗಂಧರ್ವರಾಜೇನ ಹ್ರಿಯಮಾಣಂ ಸುಯೋಧನಮ್ |
ಭ್ರಾತೃಭಿಃ ಸಹಿತಂ ತಾತ ಗಂಧರ್ವೈಃ ಸಮರೇ ಜಿತಮ್ ॥51॥
ಚತುರ್ದಶ ಸಹಸ್ರಾಣಿ ಹತ್ವಾ ಚೈನಮಮೋಚಯಮ್ ॥52॥
ಎಲೈ ಪ್ರೀತಿಪಾತ್ರನೇ, ಗಂಧರ್ವರಾಜನಾದ ಚಿತ್ರಸೇನನು ತಮ್ಮಂದಿರ ಸಹಿತವಾಗಿ ಸುಯೋಧನನನ್ನು ಎಳೆದುಕೊಂಡು ಹೋಗುತ್ತಿರಲು ನಾನು ಹದಿನಾಲ್ಕು ಸಾವಿರ ಗಂಧರ್ವರನ್ನು ಯುದ್ಧದಲ್ಲಿ ಗೆದ್ದು ಈ ಸುಯೋಧನನನ್ನು ಬಿಡಿಸಿದೆನು.
ಅದ್ಯ ಪಶ್ಯ ಮಹಾಬಾಹೋ ಮಮ ವೀರ್ಯಂ ಸುದುಃಸಹಮ್ |
ಮಾ ಭೈಷೀರ್ಗತಸಂತ್ರಾಸಃ ಕುರೂನೇತಾನ್ ಸಮಾಗತಾನ್ ॥53॥
ಸುಯೋಧನಸ್ಯ ಮಿಷತಃ ಕರ್ಣಸ್ಯ ಚ ಕೃಪಸ್ಯ ಚ |
ಪಿತಾಮಹಸ್ಯ ಭೀಷ್ಮಸ್ಯ ದ್ರೌಣೇರ್ದ್ರೋಣಸ್ಯ ಚ ಸ್ವಯಮ್ ॥54॥
ಸರ್ವಾನೇವ ಕುರೂನ್ ಜಿತ್ವಾ ಪ್ರತ್ಯಾನೇಷ್ಯಾಮಿ ತೇ ಪಶೂನ್ ॥55॥
ಎಲೈ ಮಹಾಬಾಹುವೇ, ಈ ದಿನ ಅತ್ಯಂತ ದುಸ್ತರವಾದ ನನ್ನ ಪರಾಕ್ರಮವನ್ನು ನೋಡು. ಹೆದರಬೇಡ. ನಾನು ಯಾವ ಭಯವೂ ಇಲ್ಲದೆ ಸುಯೋಧನನೂ, ಕರ್ಣನೂ, ಕೃಪರೂ, ಪಿತಾಮಹರಾದ ಭೀಷ್ಮರೂ, ದ್ರೋಣರೂ, ಅಶ್ವತ್ಥಾಮರೂ ನೋಡುತ್ತಿರುವಂತೆಯೇ ಯುದ್ಧಕ್ಕೆ ಬಂದ ಈ ಕುರುಗಳೆಲ್ಲರನ್ನೂ ಗೆದ್ದು ನಿನ್ನ ಗೋಧನವನ್ನು ಹಿಂದಕ್ಕೆ ತರುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಪಂಚಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ನಲವತ್ಮೂರನೆಯ ಅಧ್ಯಾಯ
ಉತ್ತರನಿಂದ ಅರ್ಜುನನ ಕ್ಷಮಾಯಾಚನೆ ಮತ್ತು ಸಾರಥಿತ್ವ ಸ್ವೀಕಾರ.
ವೈಶಂಪಾಯನಃ
ತತಃ ಪಾರ್ಥಂ ಚ ವೈರಾಟಿಃ ಪ್ರಾಂಜಲಿಸ್ತ್ವಭ್ಯವಾದಯತ್ ॥1॥
ಅಹಂ ಭೂಮಿಂಜಯೋ ನಾಮ್ನಾ ಪ್ರಣತೋಽಸ್ಮಿ ಧನಂಜಯ ॥2॥
ದಿಷ್ಟ್ಯಾ ತ್ವಾಂ ಪಾರ್ಥ ಪಶ್ಯಾಮಿ ಸ್ವಾಗತಂ ತೇ ಧನಂಜಯ |

ಲೋಹಿತಾಕ್ಷ ಮಹಾಬಾಹೋ ನಾಗರಾಜವರೋಪಮ ॥3॥
ವೈಶಂಪಾಯನ ಆಗ ವಿರಾಟಪುತ್ರನಾದ ಉತ್ತರನು ಅರ್ಜುನನಿಗೆ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿದನು. ಎಲೈ ಧನಂಜಯನೇ, ಭೂಮಿಂಜಯನೆಂಬ ನಾನು ನಮಸ್ಕಾರವನ್ನು ಮಾಡುತ್ತಿದ್ದೇನೆ. ಅರ್ಜುನನೇ, ನನ್ನ ಅದೃಷ್ಟವಿಶೇಷದಿಂದ ನಿನ್ನನ್ನು ನೋಡುತ್ತಿದ್ದೇನೆ. ಲೋಹಿತಾಕ್ಷನೇ, ಮಹಾಬಾಹುವೇ, ಶ್ರೇಷ್ಠನಾದ ಗಜರಾಜನಂತಿರುವವನೇ, ಅರ್ಜುನನೇ, ನಿನಗೆ ಸ್ವಾಗತ.
ಯದಜ್ಞಾನಾದವೋಚಂ ತ್ವಾಂ ಪ್ರಮಾದೇನ ನರೋತ್ತಮ |
ಅಕೃತ್ವಾ ಹೃದಯೇ ಸರ್ವಂ ಕ್ಷಂತುಮರ್ಹಸಿ ತನ್ಮಮ ॥4॥
ಎಲೈ ನರೋತ್ತಮನೇ, ನಾನು ಅಜ್ಞಾನದಿಂದ ಮತ್ತು ಪ್ರಮಾದದಿಂದ ಏನನ್ನು ಮಾತನಾಡಿದೆನೋ ಅದಾವುದನ್ನೂ ಮನಸ್ಸಿಗೆ ತಂದುಕೊಳ್ಳದೆ ಎಲ್ಲವನ್ನೂ ಕ್ಷಮಿಸಬೇಕು.
ಯತ್ತು ತ್ವಯಾ ಕೃತಂ ಕರ್ಮ ವಿಚಿತ್ರಂ ವೈ ಸುದುಷ್ಕರಮ್ |
ಅತೋ ಭಯಂ ವ್ಯಪೇತಂ ಮೇ ಪ್ರೀತಿಶ್ಚ ಪರಮಾ ತ್ವಯಿ ॥5॥
ದಾಸೋಽಹಂ ತೇ ಭವಿಷ್ಯಾಮಿ ಪಶ್ಯ ಮಾಮನುಕಂಪಯಾ ॥6॥
ನೀನು ಮಾಡಿದ ದುಷ್ಕರವಾದ ಮತ್ತು ವಿಚಿತ್ರವಾದ ಕರ್ಮಗಳನ್ನು ಗಮನಿಸಿ ನನ್ನ ಭಯವು ಹೊರಟುಹೋಯಿತು ಮತ್ತು ನಿನ್ನಲ್ಲಿ ಬಹಳ ಪ್ರೀತಿಯುಂಟಾಗಿದೆ. ನಾನು ನಿನ್ನ ದಾಸನಾಗುವೆನು. ನನ್ನನ್ನು ಕೃಪಾದೃಷ್ಟಿಯಿಂದ ನೋಡು.
ಯಾ ಪ್ರತಿಜ್ಞಾ ಕೃತಾ ಪೂರ್ವಂ ತವ ಸಾರಥ್ಯಕರ್ಮಣಿ |
ಮನಃಸ್ವಾಸ್ಥ್ಯಂ ಚ ಮೇ ಜಾತಂ ಜಾತಂ ಭಾಗ್ಯಂ ಚ ಮೇ ಮಹತ್ ॥
ನಾನು ನಿನ್ನ ಸಾರಥ್ಯದ ವಿಷಯದಲ್ಲಿ ಹಿಂದೆ ಯಾವ ಪ್ರತಿಜ್ಞೆಯನ್ನು ಮಾಡಿದ್ದೆನೋ ಆ ವಿಷಯದಲ್ಲಿ ಮನಸ್ಸಮಾಧಾನವನ್ನು ಹೊಂದಿದ್ದೇನೆ. ನನಗೆ ದೊಡ್ಡ ಭಾಗ್ಯವು ಪ್ರಾಪ್ತವಾಗಿದೆ.
ಆಸ್ಥಾಯ ವಿಪುಲಂ ವೀರ ರಥಂ ಸಾರಥಿನಾ ಮಯಾ |
ದುರ್ಯೋಧನಂ ಚ ಜಿತ್ವಾಽಽಜೌ ನಿವರ್ತಯ ಪಶೂನ್ ಮಮ ॥8॥
ಎಲೈ ವೀರನೇ, ಈ ವಿಸ್ತಾರವಾದ ರಥವನ್ನು ಏರಿ ನನ್ನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧದಲ್ಲಿ ದುರ್ಯೋಧನನನ್ನು ಗೆದ್ದು ನನ್ನ ಪಶುಗಳನ್ನು ಹಿಂದಿರುಗಿಸು.
ಅರ್ಜುನಃ
ಪ್ರೀತೋಽಸ್ಮಿ ರಾಜಪುತ್ರಾದ್ಯ ನ ಭಯಂ ವಿದ್ಯತೇ ತವ |
ಸರ್ವಾನ್ ನುದಾಮಿ ತೇ ಶತ್ರೂನ್ ರಣೇ ರಣಕೃತಾಂ ವರ ॥9॥
ಅರ್ಜುನ ಎಲೈ ರಾಜಪುತ್ರನೇ, ನಾನು ಪ್ರಸನ್ನನಾಗಿದ್ದೇನೆ. ನಿನಗೆ ಯಾವ ಭಯವೂ ಇಲ್ಲ. ಎಲೈ ಯುದ್ಧ ಮಾಡುವವರಲ್ಲಿ ಶ್ರೇಷ್ಠನೇ, ನಾನು ಯುದ್ಧದಲ್ಲಿ ಎಲ್ಲಾ ಶತ್ರುಗಳನ್ನೂ ಓಡಿಸುತ್ತೇನೆ.
ಸ್ವಸ್ಥೋ ಭವ ಮಹಾಬುದ್ಧೇ ಪಶ್ಯ ಮಾಂ ಶತ್ರುಭಿಃ ಸಹ |
ಯುಧ್ಯಮಾನಂ ವಿಮರ್ದೇಽಸ್ಮಿನ್ ಕುರ್ವಾಣಂ ಭೈರವಂ ಸ್ವನಮ್ ॥
ಮಹಾಬುದ್ಧಿಯುಳ್ಳವನೇ ಸಮಾಧಾನದಿಂದಿರು. ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವ ನನ್ನನ್ನು ನೋಡು. ಈ ಸಂಘರ್ಷದಲ್ಲಿ ನಾನು ಮಾಡುವ ಭೈರವನಾದಗಳನ್ನೂ ಕೇಳು.
ಗಾಂಡೀವಂ ದೇವದತ್ತಂ ಚ ಶರಾನ್ ಕನಕಭೂಷಿತಾನ್ |
ಏತಾನ್ ಸರ್ವಾನುಪಾಸಂಗಾನ್ ಕ್ಷಿಪ್ರಂ ಬಧ್ನೀಹಿ ಮೇ ರಥೇ ॥11॥
ಏತಂ ಚಾಹರ ನಿಸ್ತ್ರಿಂಶಂ ಜಾತರೂಪಪರಿಷ್ಕೃತಮ್ ॥12॥
ಗಾಂಡೀವ ಧನುಸ್ಸು, ದೇವದತ್ತ ಶಂಖ, ಸ್ವರ್ಣಾಲಂಕೃತವಾದ ಬಾಣಗಳು, ಬತ್ತಳಿಕೆಗಳು ಇವೆಲ್ಲವನ್ನೂ ನನ್ನ ರಥದಲ್ಲಿ ಕಟ್ಟುವವನಾಗು. ಸುವರ್ಣಾಲಂಕೃತವಾದ ಈ ಖಡ್ಗವನ್ನೂ ತೆಗೆದುಕೊಂಡು ಬಾ.
ಅಹಂ ವೈ ಕುರುಭಿರ್ಯೋತ್ಸ್ಯೇ ಮೋಕ್ಷಯಿಷ್ಯಾಮಿ ತೇ ಪಶೂನ್ |
ತೋಷಯಿಷ್ಯಾಮಿ ರಾಜಾನಂ ಪ್ರವೇಕ್ಷ್ಯಾಮಿ ಪುರಂ ಪುನಃ ॥13॥
ನಾನು ಕುರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ನಿನ್ನ ಪಶುಗಳನ್ನು ಬಿಡಿಸುವೆನು. ಪುನಃ ನಗರವನ್ನು ಪ್ರವೇಶಿಸಿ ರಾಜನನ್ನು ಸಂತೋಷಗೊಳಿಸುವೆನು.
ಸಂಕಲ್ಪಗಾಢಪರಿಖಂ ಬಾಹುಪ್ರಾಕಾರತೋರಣಮ್ |
ತ್ರಿದಂಡತೂಣಸಂಬಾಧಂ ನೈಕಧ್ವಜಸಮಾಕುಲಮ್ ॥14॥
ಜ್ಯಾಕ್ಷೇಪನಿನದಾರಾವಂ ನೇಮೀನಿನದದುಂದುಭಿ |
ಶರಜಾಲವಿತಾನಾಢ್ಯಮಾಕ್ಷ್ವೇಳಿತಮಹಾಸ್ವನಮ್ ॥15॥
ನಗರಂ ತೇ ಮಯಾ ಗುಪ್ತಂ ರಥೋಪಸ್ಥಂ ಭವಿಷ್ಯತಿ ॥16॥
ಸರಿಯಾಗಿ ಮಾಡಿದ ವ್ಯೂಹವೇ ಪರಿಖೆಯಾಗುಳ್ಳ (ಕಂದುಕ), ಮೂರು ದಂಡಗಳೆಂಬ ಬತ್ತಳಿಕೆಗಳಿಂದ ನಿಬಿಡವಾಗಿರುವ, ಬಾಹುಗಳೆಂಬ ಪ್ರಾಕಾರ ತೋರಣಗಳಿಂದ ಕೂಡಿರುವ, ಅನೇಕ ಧ್ವಜಗಳಿಂದ ಪೂರ್ಣವಾಗಿ ತುಂಬಿದ, ಹೆದೆಯನ್ನು ಎಳೆಯುವುದರಿಂದ ಉಂಟಾದ ಘೋರಶಬ್ದವುಳ್ಳ, ದುಂದುಭಿಯ ಜೊತೆಯಲ್ಲಿ ಸೇರಿದ ರಥನೇಮಿ ಶಬ್ದಗಳಿಂದ ಕೂಡಿದ, ಬಾಣಗಳ ಸಮೂಹವೆಂಬ ಮಂಟಪದ ಛಾವಣಿಗಳಿಂದ ಕೂಡಿದ, ಯೋಧರ ಸಿಂಹನಾದರೂಪ ಮಹಾಸ್ವನವುಳ್ಳ ನನ್ನಿಂದ ಗುಪ್ತವಾದ, ರಥದ ಮಧ್ಯಭಾಗವೇ ನನಗೆ ನಗರವಾಗುವುದು.
ಅಧಿಷ್ಠಿತೋ ಮಯಾ ಸಂಖೇ ರಥೋ ಗಾಂಡೀವಧನ್ವನಾ |

ಅಜಯ್ಯಃ ಶತ್ರುಸೈನ್ಯಾನಾಂ ವೈರಾಟ ವ್ಯೇತು ತೇ ಭಯಮ್ ॥17॥
ಗಾಂಡೀವ ಧನುರ್ಧಾರಿಯಾದ ನನ್ನಿಂದ ಅಧಿಷ್ಠಿತವಾದ ರಥವು ಯುದ್ಧದಲ್ಲಿ ಶತ್ರುಸೈನ್ಯಗಳಿಗೆ ಅಜೇಯವಾಗುವುದು. ಎಲೈ ವಿರಾಟಪುತ್ರನೇ, ನಿನ್ನ ಭಯವು ದೂರವಾಗಲಿ.
ಉತ್ತರಃ
ಬಿಭೇಮಿ ನಾಹಮೇತೇಭ್ಯೋ ಜಾನಾಮಿ ತ್ವಾಂ ಸ್ಥಿರಂ ಯುಧಿ |
ಕೇಶವೇನಾಪಿ ಸಂಗ್ರಾಮೇ ಸಾಕ್ಷಾದಿಂದ್ರೇಣ ವಾ ಸಮಮ್ ॥18॥
ಉತ್ತರ ನಾನು ಈ ಯಾವುದಕ್ಕೂ ಹೆದರುವುದಿಲ್ಲ. ನೀನು ಯುದ್ಧದಲ್ಲಿ ಕೃಷ್ಣನಿಗೆ ಅಥವಾ ಸಾಕ್ಷಾತ್ ಇಂದ್ರನಿಗೆ ಸಮನಾದವನು ಎಂದು ನಾನು ತಿಳಿದಿದ್ದೇನೆ.
ಇದಂ ತು ಚಿಂತಯನ್ನೇವ ಪರಿಮುಹ್ಯಾಮಿ ಕೇವಲಮ್ |
ನಿಶ್ಚಯಂ ನಾಧಿಗಚ್ಛಾಮಿ ನಾವಗಚ್ಛಾಮಿ ಕಿಂಚನ ॥19॥
ಆದರೆ ಇದೊಂದು ವಿಷಯವನ್ನು ಯೋಚಿಸುತ್ತಾ ಮೋಹಕ್ಕೆ ಒಳಗಾಗಿದ್ದೇನೆ. ಯಾವ ನಿಶ್ಚಯವನ್ನೂ ಮಾಡಲು ಸಾಧ್ಯವಾಗುತ್ತಿಲ್ಲ. ಏನೂ ತಿಳಿಯುತ್ತಿಲ್ಲ.
ಏವಂ ವೀರಾಂಗರೂಪಸ್ಯ ಲಕ್ಷಣೈರುದಿತಸ್ಯ ತೇ |
ಕೇನ ಕರ್ಮವಿಪಾಕೇನ ಕ್ಲೀಬತ್ವಂ ಸಮುಪಾಗತಮ್ ॥20॥
ಇಂತಹ ವೀರನಿಗೆ ಉಚಿತವಾದ ಅಂಗಗಳನ್ನುಳ್ಳ, ಲಕ್ಷಣಗಳಿಂದ ಕೂಡಿದ, ನಿನಗೆ ಯಾವ ಕರ್ಮವಿಪಾಕದಿಂದ ನಪುಂಸಕತ್ವವು ಉಂಟಾಯಿತು?
ಮನ್ಯೇ ತ್ವಾಂ ಕ್ಲೀಬವೇಷೇಣ ಚರಂತಂ ಶೂಲಪಾಣಿನಮ್ |
ಗಂಧರ್ವರಾಜಪ್ರತಿಮಂ ದೇವಂ ವಾಽಪಿ ಶತಕ್ರತುಮ್ ॥21॥
ನೀನು ನಪುಂಸಕ ವೇಷದಿಂದ ಸಂಚರಿಸುತ್ತಿರುವ ರುದ್ರದೇವನೆಂದು ನಿನ್ನನ್ನು ತಿಳಿಯುತ್ತೇನೆ. ಅಥವಾ ಗಂಧರ್ವರಾಜ ಸದೃಶನಾದ ನೀನು ದೇವೇಂದ್ರನೆಂದು ಭಾವಿಸುತ್ತೇನೆ.
ಅರ್ಜುನಃ
ಭ್ರಾತುರ್ನಿಯೋಗಾಜ್ಜ್ಯೇಷ್ಠಸ್ಯ ಸಂವತ್ಸರಮಿದಂ ವ್ರತಮ್ |
ಚರಾಮಿ ಬ್ರಹ್ಮಚರ್ಯಂ ವೈ ಸತ್ಯಮೇತದ್ ಬ್ರವೀಮಿ ತೇ ॥22॥
ಅರ್ಜುನ ಅಣ್ಣನ ಅಪ್ಪಣೆಯಂತೆ ಒಂದು ವರ್ಷದ ಕಾಲ ಈ ಬ್ರಹ್ಮಚರ್ಯವ್ರತವನ್ನು ಆಚರಿಸುತ್ತಿದ್ದೇನೆ. ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ನಾಸ್ಮಿ ಕ್ಲೀಬೋ ಮಹಾಬಾಹೋ ಪರವಾನ್ ಧರ್ಮಸಂಯುತಃ |
ಊರ್ವಶೀಶಾಪವಶತಃ ಕ್ಲೈಬ್ಯಂ ಮಾಂ ಸಮುಪಸ್ಥಿತಮ್ ॥23॥
ಎಲೈ ಮಹಾಬಾಹುವೇ, ನಾನು ನಪುಂಸಕನಲ್ಲ. ಧರ್ಮಕ್ಕೆ ಅನುಗುಣವಾಗಿ ನಾನು ಅಣ್ಣನ ಅಧೀನನಾಗಿದ್ದೇನೆ. ಊರ್ವಶಿಯ ಶಾಪದಿಂದ ನನಗೆ ನಪುಂಸಕತ್ವವು ಉಂಟಾಯಿತು.
ಪುರಾಽಹಮಾಜ್ಞಯಾ ಭ್ರಾತುರ್ಜ್ಯೇಷ್ಠಸ್ಯಾಪಿ ಸುರಾಲಯಮ್ |
ಪ್ರಾಪ್ತವಾನೂರ್ವಶೀ ದೃಷ್ಟಾ ಸುಧರ್ಮಾಯಾಂ ಮಯಾ ತದಾ ॥24॥
ನಾನು ಹಿಂದೆ ಅಣ್ಣನ ಆಜ್ಞೆಯಂತೆ ದೇವಲೋಕಕ್ಕೆ ಹೋಗಿ ಸುಧರ್ಮಾ ಸಭೆಯಲ್ಲಿ ಊರ್ವಶಿಯನ್ನು ನೋಡಿದೆ.
ನೃತ್ಯಂತೀಂ ಪರಮಂ ರೂಪಂ ಬಿಭ್ರತೀಂ ವಜ್ರಿಸನ್ನಿಧೌ |
ಅಪಶ್ಯಂ ತಾಮನಿಮಿಷಂ ಕೂಟಸ್ಥಾಮನ್ವಯಸ್ಯ ಮೇ ॥25॥
ದಿವ್ಯವಾದ ರೂಪವನ್ನು ಧರಿಸಿ ಇಂದ್ರನ ಸನ್ನಿಧಿಯಲ್ಲಿ ನರ್ತನವನ್ನು ಮಾಡುತ್ತಿದ್ದಂತಹ, ನಮ್ಮ ಕುಲದ ಮೂಲಮಾತೆಯಾದ ಅವಳನ್ನು ರೆಪ್ಪೆಯನ್ನು ಮುಚ್ಚದೆ ನೋಡಿದೆನು.
ರಾತ್ರೌ ಸಮಾಗತಾ ಮಹ್ಯಂ ಶಯಾನಂ ರಂತುಮಿಚ್ಛಯಾ |
ಅಹಂ ತಾಮಭಿವಾದ್ಯೈವ ಮಾತೃಸತ್ಕಾರಮಾಚರಮ್ ॥26॥
ಅವಳು ರಾತ್ರಿಯಲ್ಲಿ ನನ್ನ ಜೊತೆಯಲ್ಲಿ ರಮಿಸಲು ಬಯಸಿ ಮಲಗಿದ್ದ ನನ್ನ ಬಳಿಗೆ ಬಂದಳು. ನಾನು ಅವಳಿಗೆ ನಮಸ್ಕಾರವನ್ನು ಮಾಡಿ ತಾಯಿಗೆ ಯೋಗ್ಯವಾದ ಪೂಜೆಯನ್ನು ಮಾಡಿದೆನು.
ಸಾ ಚ ಮಾಮಶಪತ್ ಕ್ರುದ್ಧಾ ಶಿಖಂಡೀ ತ್ವಂ ಭವೇರಿತಿ |
ಶ್ರುತ್ವಾ ತಮಿಂದ್ರೋ ಮಾಮಾಹ ಮಾ ಭೈಸ್ತ್ವಂ ಪಾರ್ಥ ಷಂಡತಾ ॥
ಉಪಕಾರೋ ಭವೇತ್ ತುಭ್ಯಮಜ್ಞಾತವಸತೌ ಪುರಾ |
ಇತೀಂದ್ರೋ ಮಾಮನುಗ್ರಾಹ್ಯ ತತಃ ಪ್ರೇಷಿತವಾನ್ ವೃಷಾ ॥28॥
ಅವಳು ಕೋಪಗೊಂಡು ನೀನು ನಪುಂಸಕನಾಗು ಎಂದು ನನಗೆ ಶಾಪವನ್ನು ಕೊಟ್ಟಳು. ಆ ಶಾಪವನ್ನು ಕೇಳಿದ ಇಂದ್ರನು ನನ್ನನ್ನು ಕುರಿತು ಅರ್ಜುನನೇ ಹೆದರಬೇಡ. ನಿನಗೆ ಅಜ್ಞಾತವಾಸದ ಸಮಯದಲ್ಲಿ ಈ ನಪುಂಸಕತ್ವವು ಉಪಕಾರವೇ ಆಗುತ್ತದೆ ಎಂದು ಹೇಳಿ ನನ್ನನ್ನು ಅನುಗ್ರಹಿಸಿ ಶ್ರೇಷ್ಠನಾದ ಅವನು ನನ್ನನ್ನು ಹಿಂದಕ್ಕೆ ಕಳುಹಿಸಿದನು.
ತದಿದಂ ಸಮನುಪ್ರಾಪ್ತಂ ವ್ರತಂ ತೀರ್ಣಂ ಮಯಾಽನಘ |
ಸಮಾಪ್ತವ್ರತಮುತ್ತೀರ್ಣಂ ವಿದ್ಧಿ ಮಾಂ ತ್ವಂ ನೃಪಾತ್ಮಜ ॥29॥
ಎಲೈ ಅನಘನೇ, ನಪುಂಸಕತ್ವವು ಹೀಗೆ ಉಂಟಾಯಿತು. ಈ ವ್ರತವನ್ನೂ ನಾನು ಆಚರಿಸಿ ಮುಗಿಸಿದ್ದೇನೆ. ಎಲೈ ರಾಜಕುಮಾರನೇ,

ನಾನು ವ್ರತವನ್ನು ಯಶಸ್ವಿಯಾಗಿ ಮುಗಿಸಿರುವವನು ಎಂದು ನನ್ನನ್ನು ತಿಳಿ.
ಉತ್ತರಃ
ಪರಮೋಽನುಗ್ರಹೋ ಮೇಽದ್ಯ ಯತ್ ಪ್ರತರ್ಕೋ ನ ಮೇ ವೃಥಾ |
ನ ಹೀದೃಶಾಃ ಕ್ಲೀಬರೂಪಾ ಭವಂತೀಹ ನರೋತ್ತಮಾಃ ॥30॥
ಉತ್ತರ ನೀನು ನನಗೆ ಪರಮಾನುಗ್ರಹವನ್ನು ಮಾಡಿದೆ. ಏಕೆಂದರೆ ನನ್ನ ಊಹೆಯು ಸುಳ್ಳಾಗಲಿಲ್ಲ. ಇಂತಹ ನರಶ್ರೇಷ್ಠರು ಎಂದೂ ನಪುಂಸಕರಾಗಿರುವುದಿಲ್ಲ.
ಸಹಾಯವಾನಸ್ಮಿ ರಣೇ ಯುದ್ಧ್ಯೇಯಮಮರೈರಪಿ |
ಸಾಧ್ವಸಂ ತತ್ ಪ್ರಣಷ್ಟಂ ಮೇ ಕಿಂ ಕರೋಮಿ ಪ್ರಶಾಧಿ ಮಾಮ್ ॥31॥
ನಾನು ಈಗ ಸಹಾಯವುಳ್ಳವನಾಗಿದ್ದೇನೆ. ದೇವತೆಗಳ ಜೊತೆಯಲ್ಲಿ ಬೇಕಾದರೂ ಯುದ್ಧವನ್ನು ಮಾಡಿಯೇನು. ನನ್ನ ಭಯವು ನಾಶ ಹೊಂದಿತು. ನಾನು ಏನು ಮಾಡಲಿ ಎಂದು ನನಗೆ ಆಜ್ಞೆಯನ್ನು ಮಾಡು.
ಅಹಂ ತೇ ಸಂಗ್ರಹೀಷ್ಯಾಮಿ ಹಯಾನ್ ಶತ್ರೂನಥಾರುಜ |
ಶಿಕ್ಷಿತೋ ಹ್ಯಸ್ಮಿ ಸಾರಥ್ಯೇ ನಿಷ್ಠಿತಃ ಪುರುಷರ್ಷಭ ॥32॥
ಎಲೈ ಪುರುಷರ್ಷಭನೇ, ನಾನು ನಿನ್ನ ಕುದುರೆಗಳನ್ನು ನಿಯಂತ್ರಿಸುವೆನು. ಅನಂತರ ಶತ್ರುಗಳನ್ನು ಮರ್ದಿಸುವವನಾಗು. ನಾನು ಸಾರಥ್ಯದಲ್ಲಿ ಶಿಕ್ಷಿತನಾಗಿ ನಿಷ್ಠೆಯನ್ನು ಪಡೆದಿದ್ದೇನೆ.
ದಾರುಕೋ ವಾಸುದೇವಸ್ಯ ಯಥಾ ಶಕ್ರಸ್ಯ ಮಾತಲಿಃ |
ತಥಾ ಮಾಂ ವಿದ್ಧಿ ಸಾರಥ್ಯೇ ಶಿಕ್ಷಿತಂ ನರಪುಂಗವ ॥33॥
ಕೃಷ್ಣನಿಗೆ ಹೇಗೆ ದಾರುಕನೋ, ಇಂದ್ರನಿಗೆ ಹೇಗೆ ಮಾತಲಿಯೋ, ಎಲೈ ನರಶ್ರೇಷ್ಠನೇ, ಅದರಂತೆ ನಾನು ಸಾರಥ್ಯದಲ್ಲಿ ಶಿಕ್ಷಿತನಾದವನು ಎಂದು ನನ್ನನ್ನು ತಿಳಿ.
ಅಶ್ವಾ ಹ್ಯೇತೇ ಮಹಾಬಾಹೋ ತವೈವಾಹವದುರ್ಜಯಾಃ |
ಯೋಗ್ಯಾ ರಥವರೇ ಯುಕ್ತಾಃ ಪ್ರಾಣವಂತೋ ಜಿತಶ್ರಮಾಃ ॥34॥
ಎಲೈ ಮಹಾಬಾಹುವೇ, ರಥದಲ್ಲಿ ಹೂಡಿದ ಈ ಅಶ್ವಗಳು ಪ್ರಾಣಶಕ್ತಿಯಿಂದ ಕೂಡಿ ಶ್ರಮರಹಿತವಾಗಿವೆ. ಯುದ್ಧದಲ್ಲಿ ಸೋಲನ್ನು ಅನುಭವಿಸದಿರುವ ಅವು ನಿನ್ನ ಶ್ರೇಷ್ಠವಾದ ರಥಕ್ಕೇ ಯೋಗ್ಯವಾಗಿವೆ.
ಯಸ್ಯ ಯಾತೋ ನ ಪಶ್ಯಂತಿ ಭೂಮೌ ಪ್ರಾಪ್ತಂ ಪದಂ ಪದಮ್ |
ದಕ್ಷಿಣಾಂ ಯೋ ಧುರಂ ವೋಢಾ ಸುಗ್ರೀವೇಣ ಸಮೋ ಹಯಃ ॥35॥
ಯಾವ ಕುದುರೆಯು ಹೋಗುವಾಗ ಅದರ ಪಾದವನ್ನು ಭೂಮಿಯ ಮೇಲೆ ಇಡುವುದನ್ನು ಯಾರೂ ನೋಡಲಾರರೋ ಅಂತಹ ಸುಗ್ರೀವಾಶ್ವಕ್ಕೆ ಸಮವಾದ ಈ ಕುದುರೆಯು ಬಲಭಾಗದಲ್ಲಿ ನೊಗವನ್ನು ಹೊರುತ್ತದೆ.
ಯೋಽಯಂ ಧುರಂ ಧುರ್ಯವರೋ ವಾಮಾಂ ವಹತಿ ಶೋಭನಃ |
ತಂ ಮನ್ಯೇ ಮೇಘಪುಷ್ಪಸ್ಯ ಜವೇನ ಸದೃಶಂ ಹಯಮ್ ॥36॥
ಭಾರವನ್ನು ಹೊರುವುದರಲ್ಲಿ ಶ್ರೇಷ್ಠವಾದ ಯಾವ ಈ ಸುಂದರವಾದ ಕುದುರೆಯು ವಾಮಭಾಗದಲ್ಲಿ ನೊಗವನ್ನು ಹೊರುತ್ತದೆಯೋ ಅದನ್ನು ವೇಗದಲ್ಲಿ ಮೇಘಪುಷ್ಪಕ್ಕೆ ಸಮವಾದ ಅಶ್ವವೆಂದು ನಾನು ತಿಳಿಯುತ್ತೇನೆ.
ಯೋಽಯಂ ವಹತಿ ವೈ ಪಾರ್ಷ್ಣಿಂ ದಕ್ಷಿಣಾಮಂಚಿತೋದ್ಯಮಃ |
ಬಲಾಹಕಾದಪಿ ಮತಸ್ತೇಜಸಾ ವೀರ್ಯವತ್ತರಃ ॥37॥
ನನ್ನ ರಥದ ಬಲಭಾಗವನ್ನು ಹೊರುವ ಪೂಜ್ಯವಾದ ಪ್ರಯತ್ನವುಳ್ಳ ವೀರವತ್ತಾದ ಈ ಅಶ್ವವು ತೇಜಸ್ಸಿನಲ್ಲಿ ಬಲಾಹಕಕ್ಕಿಂತಲೂ ಮಿಗಿಲಾಗಿದೆ.
ಯೋಽಯಂ ಕಾಂಚನಸನ್ನಾಹೋ ವಾಮಂ ವಹತಿ ಶೋಭನಃ |
ಧುರ್ಯಂ ಸೈನ್ಯಸ್ಯ ತಂ ಮನ್ಯೇ ಜವೇನ ಬಲವತ್ತರಮ್ ॥38॥
ಯಾವ ಸುವರ್ಣಾಲಂಕೃತವಾದ ಸುಂದರವಾದ ಕುದುರೆಯು ಸೈನ್ಯದ ಭಾರವನ್ನು ಹೊತ್ತು ರಥದ ವಾಮಭಾಗವನ್ನು ಹೊರುತ್ತದೆಯೋ ಅದನ್ನು ವೇಗದಲ್ಲಿ ಸೈನ್ಯಕ್ಕಿಂತಲೂ ಅಧಿಕವಾದುದು ಎಂದು ತಿಳಿಯುತ್ತೇನೆ (ಸೈನ್ಯ, ಸುಗ್ರೀವ, ಮೇಘಪುಷ್ಪ ಮತ್ತು ಬಲಾಹಕ - ಇವು ಕೃಷ್ಣನ ರಥದ ನಾಲ್ಕು ಕುದುರೆಗಳ ಹೆಸರುಗಳು).
ತ್ವಾಮೇವಾಯಂ ರಥೋ ವೋಢುಂ ಸಂಗ್ರಾಮೇಽರ್ಹತಿ ಧನ್ವಿನಮ್ |
ತ್ವಂ ಚೇಮಂ ರಥಮಾಸ್ಥಾಯ ಯೋದ್ಧುಮರ್ಹೋ ಮತೋ ಮಮ ॥
ಸರ್ವಶತ್ರುಭಿರಾಯಾತೈರ್ದೇವರಾಜ ಇವಾಸುರೈಃ ॥40॥
ಈ ರಥವು ಯುದ್ಧದಲ್ಲಿ ಧನುರ್ಧಾರಿಯಾದ ನಿನ್ನನ್ನೇ ಕರೆದುಕೊಂಡು ಹೋಗಲು ಯೋಗ್ಯವಾಗಿದೆ. ನೀನಾದರೋ ಈ ರಥವನ್ನು ಏರಿ ದೇವರಾಜನಾದ ಇಂದ್ರನು ಯುದ್ಧಕ್ಕೆ ಬಂದ ಸರ್ವಶತ್ರುಗಳಾದ ಅಸುರರ ಜೊತೆಯಲ್ಲಿ ಯುದ್ಧವನ್ನು ಮಾಡಿದಂತೆ ಯುದ್ಧ ಮಾಡಲು ಸಮರ್ಥನಾಗಿದ್ದೀಯೆ ಎಂದು ನನ್ನ ಅಭಿಪ್ರಾಯ.
ವೈಶಂಪಾಯನಃ
ತತೋ ರಥಾದವಸ್ಕಂದ್ಯ ವೀರ್ಯವಾನರಿಮರ್ದನಃ |
ಪ್ರಣಮ್ಯ ದೇವಾನ್ ಗಾಂಡೀವಮಾದಾಯ ರುರುಚೇ ಶ್ರಿಯಾ ॥41॥
ವೈಶಂಪಾಯನ ಆಗ ಅರಿಮರ್ದನನೂ, ಶೂರನೂ ಆದ ಅರ್ಜುನನು ರಥದಿಂದ ಕೆಳಗಿಳಿದು ದೇವತೆಗಳಿಗೆ ನಮಸ್ಕರಿಸಿ ಗಾಂಡೀವವನ್ನು ತೆಗೆದುಕೊಂಡು ಕಾಂತಿಯಿಂದ ಬೆಳಗಿದನು.

ತತೋ ವಿಮುಚ್ಯ ಬಾಹುಭ್ಯಾಂ ಶಂಖಚೂಳಾನಿ ಪಾಂಡವಃ |
ತೌ ಚ ದುಂದುಭಿಸನ್ನಾದೌ ಪ್ರತಿಬದ್ಧ್ಯ ತಳಾವುಭೌ ||42||
ಇಂದ್ರದತ್ತೇ ಚ ತೇ ದಿವ್ಯೇ ಉದ್ವೃತ್ಯಾಮುಚ್ಯ ಕುಂಡಲೇ |
ಶ್ಲಕ್ಷ್ಣಾನ್ ಕೇಶಾನ್ ಮೃದೂನ್ ಸ್ನಿಗ್ಧಾನ್ ಶ್ವೇತೇನೋದ್ಗ್ರಥ್ಯ ವಾಸಸಾ ||
ಅಧಿಜ್ಯಂ ತರಸಾ ಕೃತ್ವಾ ಗಾಂಡೀವಂ ವ್ಯಾಕ್ಷಿಪದ್ ಧನುಃ ||44||
ಅನಂತರ ತನ್ನ ಬಾಹುಗಳಿಂದ ಶವಾಕಾರದಲ್ಲಿದ್ದ ಚರ್ಮದ ಗಂಟುಗಳನ್ನು ಬಿಚ್ಚಿ ಶಂಖಚೂಡಗಳನ್ನು ತೆಗೆದು ಅರ್ಜುನನು ದುಂದುಭಿಯಂತೆ ನಾದವನ್ನು ಮಾಡುವ ಹಸ್ತತಳ ರಕ್ಷೆಗಳನ್ನು ಧರಿಸಿ ಇಂದ್ರನಿಂದ ಕೊಡಲ್ಪಟ್ಟ ದಿವ್ಯವಾದ ಕುಂಡಲಗಳನ್ನು ಎತ್ತಿ ಧರಿಸಿ ಸುಂದರವಾದ ಮೃದುವಾದ ಒತ್ತಾದ ಕೇಶಗಳನ್ನು ಒಂದು ಬಿಳಿಯ ವಸ್ತ್ರದಿಂದ ಕಟ್ಟಿ ಗಾಂಡೀವವನ್ನು ಹೆದೆ ಏರಿಸಿ ಧನುಸ್ಸನ್ನು ಒಮ್ಮೆ ಮಿಡಿದನು.
ತಸ್ಯ ವಿಕ್ಷಿಪ್ಯಮಾಣಸ್ಯ ಧನುಷೋಽಭೂನ್ಮಹಾಸ್ವನಃ |
ಯಥಾ ಶೈಲಸ್ಯ ಮಹತಃ ಶೈಲಾನಪ್ಯಭಿಜಘ್ನತಃ ||45||
ಹಾಗೆ ಧನುಸ್ಸಿನ ಹೆದೆಯನ್ನು ಮೀಟಿದಾಗ ಆ ಧನುಸ್ಸಿನಿಂದ ಒಂದು ಬೆಟ್ಟದಿಂದ ದೊಡ್ಡದಾದ ಇನ್ನೊಂದು ಬೆಟ್ಟವನ್ನು ಹೊಡೆದರೆ ಹೇಗೋ ಹಾಗೆ ದೊಡ್ಡ ಶಬ್ದವು ಹೊರಬಂದಿತು.
ಸನಿರ್ಘಾತಾಽಭವದ್ ಭೂಮಿರ್ದಿಕ್ಷು ವಾಯುರ್ವವೌ ಭೃಶಮ್ |
ಭ್ರಾಂತದ್ವಿಜಂ ಖಮಭವತ್ ಪ್ರಾಕಂಪಿತಮಹಾದ್ರುಮಮ್ ||46||
ಭೂಮಿಯಲ್ಲಿ ಸಿಡಿಲುಗಳು ತುಂಬಿದವು. ದಿಕ್ಕುಗಳಲ್ಲಿ ವಾಯುವು ಪ್ರಬಲವಾಗಿ ಬೀಸಿತು. ಆಕಾಶದಲ್ಲಿದ್ದ ಪಕ್ಷಿಗಳು ಭ್ರಾಂತಿಗೊಂಡವು. ಮಹಾವೃಕ್ಷಗಳು ನಡುಗಿದವು.
ತಂ ಶಬ್ದಂ ಕುರವೋ ರಾಜನ್ ವಿಸ್ಫೋಟಮಶನೇರಿವ |
ತಾರ್ಕ್ಷ್ಯಶಬ್ದಮಿವ ಶ್ರುತ್ವಾ ವಿತ್ರೇಸುರ್ದೀನಮಾನಸಾಃ ||47||
ಎಲೈ ರಾಜನೇ, ಸಿಡಿಲಿನ ಸ್ಫೋಟದಂತಿದ್ದ, ಗರುಡನ ಶಬ್ದದಂತಿದ್ದ ಆ ಶಬ್ದವನ್ನು ಕೇಳಿ ಕೌರವರು ಹೆದರಿ ದೀನಮಾನಸರಾದರು.
ಯಥೇಂದ್ರೋ ವ್ಯಾಕ್ಷಿಪದ್ ಭೀಮಂ ವಿಸ್ಫೋಟಮಶನೇಃ ಪ್ರಭುಃ |
ತಥಾಽರ್ಜುನೋ ಧನುಃಶ್ರೇಷ್ಠಂ ಬಾಹುಭ್ಯಾಮಾಕ್ಷಿಪದ್ ರಥೇ ||48||
ಪ್ರಭುವಾದ ಇಂದ್ರನು ಭಯಂಕರವಾದ ಸಿಡಿಲಿನ ಶಬ್ದಗಳನ್ನು ಮಾಡಿದಂತೆ ಅರ್ಜುನನು ರಥದಲ್ಲಿ ಕುಳಿತು ತನ್ನ ಬಾಹುಗಳಿಂದ ಆ ಶ್ರೇಷ್ಠವಾದ ಧನುಸ್ಸನ್ನು ಬಗ್ಗಿಸಿ ಶಬ್ದವನ್ನು ಮಾಡಿದನು.
ಮಹಾಶನಿಮಹಾಶಬ್ದಸದೃಶೋ ಜ್ಯಾಸ್ವನೋ ಮಹಾನ್ |
ಶತ್ರೂನ್ ವೀರಾಂಶ್ಚ ಸಂತರ್ಜ್ಯ ನಿಗ್ರಹಸ್ಯೋ ರಥೇ ಸ್ಥಿತಃ ||49||
ದೊಡ್ಡ ಸಿಡಿಲಿನ ಮಹಾಶಬ್ದಕ್ಕೆ ಸದೃಶವಾದ ಹೆದೆಯ ಆ ದೊಡ್ಡ ದನಿಯು ಶತ್ರುಗಳಿಗೂ ಮತ್ತು ವೀರರಿಗೂ ಭಯವನ್ನು ಉಂಟು ಮಾಡಿ ರಥದಲ್ಲಿ ಮೂಡಿಬಂದಿತು.
ಅಥಾಸೌ ಪ್ರಾಙ್ಮುಖೌ ಭೂತ್ವಾ ಶುಚಿಃ ಪ್ರಯತಮಾನಸಃ |
ಅಭಿದಧ್ಯೌ ಮಹಾಬಾಹುಃ ಸರ್ವಾಸ್ತ್ರಾಣಿ ರಥೋತ್ತಮೇ ||50||
ಅನಂತರ ಮಹಾಬಾಹುವಾದ ಅರ್ಜುನನು ಶುಚಿಯಾಗಿ, ಮನೋನಿಗ್ರಹವನ್ನು ಹೊಂದಿದವನಾಗಿ ಶ್ರೇಷ್ಠವಾದ ರಥದಲ್ಲಿ ಪೂರ್ವಾಭಿಮುಖವಾಗಿ ಕುಳಿತು ಎಲ್ಲಾ ಅಸ್ತ್ರಗಳನ್ನೂ ಧ್ಯಾನ ಮಾಡಿದನು.
ಊಚುಶ್ಚ ಪಾರ್ಥಂ ಸರ್ವಾಣಿ ಪ್ರಾಂಜಲೀನಿ ನೃಪಾತ್ಮಜಮ್ |
ಇಮೇ ಸ್ಮ ಪರಮೋದಾರ ಕಿಂಕರಾಃ ಪಾಂಡುನಂದನ ||51||
ಆ ಎಲ್ಲಾ ಅಸ್ತ್ರದೇವತೆಗಳು ರಾಜಪುತ್ರನಾದ ಪಾಂಡುನಂದನನಾದ ಅರ್ಜುನನಿಗೆ ಕೈಗಳನ್ನು ಮುಗಿದು ಪರಮೋದಾರನೇ ಈ ನಾವು ನಿನ್ನ ಕಿಂಕರರಾಗಿದ್ದೇವೆ ಎಂದು ಹೇಳಿದರು.
ಪ್ರಣಿಪತ್ಯ ತತಃ ಪಾರ್ಥಃ ಸಮಾಲಭ್ಯ ಚ ಪಾಣಿನಾ |
ಸರ್ವಾಣಿ ಮಾನಸಾನೀಹ ಭವತೇತ್ಯಭ್ಯಭಾಷತ ||52||
ಪ್ರತಿಗೃಹ್ಯ ತತೋಽಸ್ತ್ರಾಣಿ ಪ್ರಹೃಷ್ಟವದನೋಽಭವತ್ ||53||
ಅರ್ಜುನನು ಆ ಅಸ್ತ್ರಗಳಿಗೆ ನಮಸ್ಕರಿಸಿ, ಹಸ್ತದಿಂದ ಸ್ಪರ್ಶಮಾಡಿ ನೀವೆಲ್ಲರೂ ನನ್ನ ಮನಸ್ಸಿನಲ್ಲಿ ಯಾವಾಗಲೂ ಸನ್ನಿಹಿತರಾಗಿರಬೇಕು ಎಂದು ಹೇಳಿದನು. ಅನಂತರ ಅಸ್ತ್ರಗಳನ್ನು ತೆಗೆದುಕೊಂಡು ಸಂತೋಷವುಳ್ಳ ಮುಖವುಳ್ಳವನಾದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ||
|| ಗೋಗ್ರಹಣಪರ್ವಣಿ ಷೋಡಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತನಾಲ್ಕನೆಯ ಅಧ್ಯಾಯ
ರಥವನ್ನು ಸಿದ್ಧಪಡಿಸಿ ಅರ್ಜುನನಿಂದ ಯುದ್ಧಭೂಮಿಗೆ ಗಮನ.
ವೈಶಂಪಾಯನಃ
ಉತ್ತರಂ ಸಾರಥಿಂ ಕೃತ್ವಾ ಶಮೀಂ ಕೃತ್ವಾ ಪ್ರದಕ್ಷಿಣಮ್ |
ಆಯುಧಂ ಸರ್ವಮಾದಾಯ ತತಃ ಪ್ರಾಯಾದ್ ಧನಂಜಯಃ ||1||

ವೈಶಂಪಾಯನ ಅರ್ಜುನನು ಉತ್ತರನನ್ನು ಸಾರಥಿಯನ್ನಾಗಿ ಮಾಡಿಕೊಂಡು ಶಮೀವೃಕ್ಷಕ್ಕೆ ಪ್ರದಕ್ಷಿಣೆಯನ್ನು ಮಾಡಿ ಎಲ್ಲಾ ಆಯುಧಗಳನ್ನು ತೆಗೆದುಕೊಂಡು ಅಲ್ಲಿಂದ ಹೊರಟನು.
ಧ್ವಜಂ ಚ ಸಿಂಹಂ ಮಾತ್ಸ್ಯಸ್ಯ ಭ್ರಾತೄಣಾಮಾಯುಧಾನಿ ಚ |
ಪ್ರಣಿಧಾಯ ಶಮೀಮಧ್ಯೇ ಪ್ರಯಾತುಮುಪಚಕ್ರಮೇ ||2||
ವಿರಾಟನ ಧ್ವಜವನ್ನೂ, ಸಿಂಹವನ್ನೂ, ತನ್ನ ಸಹೋದರರ ಆಯುಧಗಳನ್ನೂ ಶಮಿಯ ಮಧ್ಯದಲ್ಲಿಯೇ ಇಟ್ಟು ಹೊರಡಲು ಉಪಕ್ರಮಿಸಿದನು.
ತತಃ ಕಾಂಚನಲಾಂಗೂಲಂ ಧ್ವಜಂ ವಾನರಲಕ್ಷಣಮ್ |
ದಿವ್ಯಂ ಮಾಯಾಮಯಂ ಯುಕ್ತಂ ವಿಹಿತಂ ವಿಶ್ವಕರ್ಮಣಾ ||3||
ಅನಂತರ ಸುವರ್ಣಮಯವಾದ ಲಾಂಗೂಲವಿದ್ದ, ವಾನರಚಿಹ್ನೆಯನ್ನು ಹೊಂದಿದ್ದ ವಿಶ್ವಕರ್ಮನಿರ್ಮಿತವಾದ ದಿವ್ಯವಾದ ಮಾಯಾಮಯವಾದ ಧ್ವಜವನ್ನು ಸ್ಮರಿಸಿದನು.
ಮನಸಾ ಚಿಂತಯಾಮಾಸ ಪ್ರಸಾದಂ ಪಾವಕಸ್ಯ ಚ ||4||
ಹಾಗೆಯೇ ಅಗ್ನಿದೇವನ ಪ್ರಸಾದವನ್ನೂ ಮನಸ್ಸಿನಲ್ಲಿ ಚಿಂತಿಸಿದನು.
ಸ ಚ ತಚ್ಚಿಂತಿತಂ ಜ್ಞಾತ್ವಾ ಧ್ವಜೇ ಭೂತಾನ್ಯಚೋದಯತ್ |
ರಥೇ ವಾನರಮುಚ್ಛ್ರಿತ್ಯ ಗಾಂಡೀವಂ ವಿಕ್ಷಪದ್ ಧನುಃ ||5||
ಅಗ್ನಿಯು ಅವನು ಚಿಂತಿಸುತ್ತಿರುವುದನ್ನು ತಿಳಿದು ಧ್ವಜದಲ್ಲಿ ಭೂತಗಳನ್ನು ಸಂಯೋಜಿಸಿದನು. ಅರ್ಜುನನು ರಥದಲ್ಲಿ ವಾನರಧ್ವಜವನ್ನು ಎತ್ತಿಕಟ್ಟಿ ಗಾಂಡೀವ ಧನುಸ್ಸನ್ನು ಹೆದೆ ಏರಿಸಿ ಎಳೆದನು.
ಸಪತಾಕಂ ವಿಚಿತ್ರಾಂಗಂ ಸೋಪಾಸಂಗಂ ಮಹಾಬಲಮ್ |
ರಥಮಾಸ್ಥಾಯ ಬೀಭತ್ಸುಃ ಕೌಂತೇಯಃ ಶ್ವೇತವಾಹನಃ ||6||
ಬದ್ಧಾಸಿಃ ಸತಳತ್ರಾಣಃ ಪ್ರಗೃಹೀತಶರಾಸನಃ |
ತತಃ ಪ್ರಾಯಾದುದೀಚೀಂ ಸ ಕಪಿಪ್ರವರಕೇತನಃ ||7||
ಕುಂತೀಪುತ್ರನಾದ ಶ್ವೇತವಾಹನನಾದ ಅರ್ಜುನನು ಸೊಂಟದಲ್ಲಿ ಕತ್ತಿಯನ್ನು ಕಟ್ಟಿಕೊಂಡು ಕೈಗಳಿಗೆ ಚರ್ಮದ ರಕ್ಷಣೆಯನ್ನು ಹಾಕಿಕೊಂಡು ಧನುಸ್ಸನ್ನು ಹಿಡಿದು ವಿಚಿತ್ರವಾದ ಆಯುಧಗಳಿಂದಲೂ ಮತ್ತು ಬತ್ತಳಿಕೆಗಳಿಂದಲೂ ಕೂಡಿದ ಮಹಾಬಲಿಷ್ಠವಾದ ರಥವನ್ನು ಏರಿ ಕಪಿಶ್ರೇಷ್ಠ ಧ್ವಜವುಳ್ಳ ಅವನು ಅಲ್ಲಿಂದ ಉತ್ತರ ದಿಕ್ಕಿಗೆ ಹೊರಟನು.
ಸ್ವನವಂತಂ ಮಹಾಶಂಖಂ ದೇವದತ್ತಂ ಧನಂಜಯಃ |
ಶಶಾಂಕರೂಪಂ ಬೀಭತ್ಸುಃ ಪ್ರಾಧ್ಮಾಪಯದರಿಂದಮಃ ||8||
ಶಂಖಶಬ್ದೋಽಸ್ಯ ಸೋಽತ್ಯರ್ಥಂ ಶ್ರೂಯತೇ ಕಾಲಮೇಘವತ್ ||9||
ಅರಿಂದಮನೂ ಬೀಭತ್ಸುವೂ ಆದ ಧನಂಜಯನು ಒಳ್ಳೆಯ ನಾದದಿಂದ ಕೂಡಿದ ಮತ್ತು ಚಂದ್ರನನ್ನು ಹೋಲುವ ದೇವದತ್ತ ಶಂಖವನ್ನು ಊದಿದನು. ಅವನ ಶಂಖದ ಶಬ್ದವು ಪ್ರಳಯಕಾಲದ ಮೇಘದ ಗರ್ಜನೆಯಂತೆ ಕೇಳಿಬರುತ್ತಿದ್ದಿತು.
ತಸ್ಯ ಶಂಖಸ್ಯ ಶಬ್ದೇನ ಧನುಷೋಽಭಿಸ್ವನೇನ ಚ |
ವಾನರಸ್ಯ ಚ ನಾದೇನ ರಥನೇಮಿಸ್ವನೇನ ಚ ||10||
ಜಂಗಮಸ್ಯ ಭಯಂ ಘೋರಮಕರೋತ್ ಪಾಕಶಾಸನಿಃ ||11||
ಪಾಕಶಾಸನಪುತ್ರನಾದ ಅರ್ಜುನನು ತನ್ನ ಶಂಖದ ನಾದದಿಂದ, ಧನುಸ್ಸಿನ ಠೇಂಕಾರ ಸ್ವರದಿಂದ ಮತ್ತು ಧ್ವಜದಲ್ಲಿದ್ದ ಕಪಿಯ ನಾದದಿಂದ, ಚಲಿಸುವ ಎಲ್ಲಾ ಪ್ರಾಣಿಗಳಿಗೂ ಘೋರವಾದ ಭಯವನ್ನು ಉಂಟುಮಾಡಿದನು.
ಶಂಖಶಬ್ದೇನ ಪಾರ್ಥಸ್ಯ ಮುಖೇನಾಶ್ವಾಸಯನ್ ಕ್ಷಿತೌ |
ತತಸ್ತೇ ಜವನಾ ಯುಗ್ಯಾ ಜಾನುಭ್ಯಾಮಗಮನ್ ಮಹೀಮ್ ||12||
ಅರ್ಜುನನ ಶಂಖ ಶಬ್ದವನ್ನು ಕೇಳಿ ಬಳಲಿದ ವೇಗಶಾಲಿಗಳಾದ ರಥಕ್ಕೆ ಹೂಡಿದ ಅಶ್ವಗಳು ಮುಖದಿಂದ ದೀರ್ಘಶ್ವಾಸವನ್ನು ಮಾಡುತ್ತಾ ಮಂಡಿಗಳ ಮೇಲೆ ಭೂಮಿಯ ಮೇಲೆ ಕುಸಿದವು.
ಉತ್ತರಶ್ಚಾಪಿ ಸಂತ್ರಸ್ತೋ ರಥೋಪಸ್ಥ ಉಪಾವಿಶತ್ ||13||
ಉತ್ತರನೂ ಸಹ ಬಹಳ ಹೆದರಿ ರಥದ ಮಧ್ಯಭಾಗದಲ್ಲಿ ಕುಳಿತನು.
ಅಥಾಶ್ವಾನ್ ರಶ್ಮಿಭಿಃ ಪಾರ್ಥಃ ಸಮುದ್ಯಮ್ಯ ಪರಂತಪಃ |
ವ್ಯಭ್ರಾಜತ ರಥೋಪಸ್ಥೇ ಭಾನುರ್ಮೇರಾವಿವೋತ್ತರೇ ||14||
ಆಗ ಪರಂತಪನಾದ ಅರ್ಜುನನು ಕಡಿವಾಣಗಳಿಂದ ಅಶ್ವಗಳನ್ನು ಹಿಡಿದು ರಥದ ಮಧ್ಯದಲ್ಲಿ ನಿಂತು ಸೂರ್ಯನು ಉತ್ತರ ಮೇರುವಿನಲ್ಲಿ ಶೋಭಿಸಿದಂತೆ ಶೋಭಿಸಿದನು.
ಶಂಖಶಬ್ದೇನ ವಿತ್ರಸ್ತಂ ಜ್ಯಾಸ್ವನೇನ ಚ ಮೂರ್ಚ್ಛಿತಮ್ |
ಉತ್ತರಂ ಸಂಪರಿಷ್ವಜ್ಯ ಸಮಾಶ್ವಾಸಯದರ್ಜುನಃ ||15||
ಅರ್ಜುನನು ಶಂಖಶಬ್ದದಿಂದ ಹೆದರಿದ, ಹೆದೆಯ ಶಬ್ದದಿಂದ ಮೂರ್ಛಿತನಾದ, ಉತ್ತರನನ್ನು ಆಲಿಂಗಿಸಿ ಸಮಾಧಾನ ಮಾಡಿದನು.
ಮಾ ಭೈಸ್ತ್ವಂ ರಾಜಪುತ್ರಾಗ್ರ್ಯ ಕ್ಷತ್ರಿಯೋಽಸಿ ಪರಂತಪ |
ಕಥಂ ಪುರುಷಶಾರ್ದೂಲ ಶತ್ರುಮಧ್ಯೇ ವಿಷೀದಸಿ ||16||
ಶ್ರುತಾಸ್ತೇ ಶಂಖಶಬ್ದಾಶ್ಚ ಭೇರೀಶಬ್ದಾಶ್ಚ ಸರ್ವಶಃ |
ಕುಂಜರಾಣಾಂ ಚ ನದತಾಂ ವ್ಯೂಢಾನೀಕೇಷು ತಿಷ್ಠತಾಮ್ ||17||

ಎಲೈ ರಾಜಪುತ್ರ ಶ್ರೇಷ್ಠನೇ, ಹೆದರಬೇಡ. ಪರಂತಪನೇ, ನೀನು ಕ್ಷತ್ರಿಯನಾಗಿದ್ದೀಯೆ. ಪುರುಷಶಾರ್ದೂಲನೇ, ಶತ್ರುಗಳ ಮಧ್ಯದಲ್ಲಿ ಹೇಗೆ ವಿಷಾದವನ್ನು ಹೊಂದುತ್ತಿದ್ದೀಯೆ? ನೀನು ವ್ಯೂಹವನ್ನು ರಚಿಸಿದ ಸೈನ್ಯಗಳಲ್ಲಿ ಶಂಖ ಶಬ್ದಗಳನ್ನೂ, ಭೇರೀ ಶಬ್ದಗಳನ್ನೂ ಮತ್ತು ಆನೆಗಳ ನಾದವನ್ನು ಎಲ್ಲ ಕಡೆಗಳಲ್ಲಿಯೂ ಕೇಳಿದ್ದೀಯೆ.
ಸ ತ್ವಂ ಕಥಮಿವಾನೇನ ಶಂಖಶಬ್ದೇನ ಭೀಷಿತಃ |
ವಿಷಣ್ಣರೂಪೋ ವಿತ್ರಸ್ತಃ ಪುರುಷಃ ಪ್ರಾಕೃತೋ ಯಥಾ ॥18॥
ಅಂತಹ ನೀನು ಹೀಗೆ ಈ ಶಂಖಶಬ್ದಕ್ಕೆ ಹೆದರಿ ವಿಷಾದವನ್ನು ಹೊಂದಿ ಸಾಧಾರಣ ಮನುಷ್ಯನಂತೆ ಏಕೆ ಭಯಪಡುತ್ತಿದ್ದೀಯೆ?
ಉತ್ತರಃ
ಶ್ರುತಾ ಮೇ ಶಂಖಶಬ್ದಾಶ್ಚ ಭೇರೀನಾದಾಶ್ಚ ಸರ್ವಶಃ |
ಕುಂಜರಾಣಾಂ ಚ ನಿನದಾ ವ್ಯೂಢಾನೀಕೇಷು ತಿಷ್ಠತಾಮ್ ॥19॥
ನೈವಂವಿಧಾಃ ಶಂಖಶಬ್ದಾಃ ಪುರಾ ಜಾತು ಮಯಾ ಶ್ರುತಾಃ |
ಧ್ವಜಸ್ಯ ಚಾಪಿ ರೂಪಂ ಮೇ ದೃಷ್ಟಪೂರ್ವಂ ನ ಹೀದೃಶಮ್ ॥20॥
ಧನುಷಶ್ಚೈವ ಘೋಷೋ ಯಃ ಶ್ರುತಪೂರ್ವೋ ನ ಮೇ ಕ್ವಚಿತ್ ॥21॥
ಉತ್ತರ ನಾನು ಹಿಂದೆ ಶಂಖಶಬ್ದಗಳನ್ನೂ ಮತ್ತು ಬೇರೆಯ ನಾದಗಳನ್ನೂ ಮತ್ತು ವ್ಯೂಹಗೊಂಡ ಸೈನ್ಯದಲ್ಲಿ ನಿಂತ ಕುಂಜರಗಳ ನಾದಗಳನ್ನೂ ಅನೇಕ ಬಾರಿ ಕೇಳಿದ್ದೇನೆ. ಆದರೆ ಇಂತಹ ಶಬ್ದಗಳನ್ನು ನಾನು ಹಿಂದೆ ಎಂದೂ ಕೇಳಲಿಲ್ಲ ಮತ್ತು ಇಂತಹ ಧ್ವಜರೂಪವನ್ನಾದರೂ ಸಹ ಹಿಂದೆ ಎಂದೂ ನೋಡಲಿಲ್ಲ. ಹಾಗೆಯೇ ಈ ಧನುಸ್ಸಿನ ಘೋಷದಂತಹ ಘೋಷವನ್ನೂ ಸಹ ಯಾವಾಗಲೂ ಕೇಳಲಿಲ್ಲ.
ಅಸ್ಯ ಶಂಖಸ್ಯ ಶಬ್ದೇನ ಧನುಷೋ ನಿಸ್ವನೇನ ಚ |
ಅಮಾನುಷಾಣಾಂ ಶಬ್ದೇನ ಭೂತಾನಾಂ ಧ್ವಜವಾಸಿನಾಮ್ ॥22॥
ರಥನೇಮಿಪ್ರಣಾದೇನ ಮನೋ ಮೇ ಮುಹ್ಯತೇ ಭೃಶಮ್ ॥23॥
ಈ ಶಂಖಶಬ್ದದಿಂದಲೂ, ಧನುಸ್ಸಿನ ಶಬ್ದದಿಂದಲೂ, ಧ್ವಜದಲ್ಲಿ ಇರುವ ಅಮಾನುಷರಾದ ಭೂತಗಳ ಶಬ್ದದಿಂದಲೂ ಮತ್ತು ರಥದ ಚಕ್ರದ ದೊಡ್ಡ ನಾದದಿಂದಲೂ ನನ್ನ ಮನಸ್ಸು ಬಹಳ ಮೋಹಕ್ಕೆ ಒಳಗಾಗಿದೆ.
ವ್ಯಾಕುಲಾಶ್ಚ ದಿಶಃ ಸರ್ವಾ ಹೃದಯಂ ವ್ಯಥತೀವ ಚ |
ಧ್ವಜೇನ ಪಿಹಿತಾಃ ಸರ್ವಾ ದಿಶೋ ನ ಪ್ರತಿಭಾಂತಿ ಮೇ ॥24॥
ಗಾಂಡೀವಸ್ಯ ಚ ಶಬ್ದೇನ ಕರ್ಣೌ ಮೇ ಬಧಿರೀಕೃತೌ ॥25॥
ನನಗೆ ದಿಕ್ಕುಗಳು ವ್ಯತ್ಯಾಸಗೊಂಡಂತೆ ಕಾಣುತ್ತಿವೆ. ಮನಸ್ಸು ವ್ಯಥೆಯಿಂದ ಕೂಡಿದೆ. ಧ್ವಜವು ಎಲ್ಲ ದಿಕ್ಕುಗಳಲ್ಲಿಯೂ ಆವರಿಸಿರುವುದರಿಂದ ನನಗೆ ಯಾವ ದಿಕ್ಕೂ ತೋರುತ್ತಿಲ್ಲ. ಗಾಂಡೀವ ಶಬ್ದದಿಂದ ನನ್ನ ಎರಡೂ ಕಿವಿಗಳು ಕಿವುಡಾಗಿವೆ.
ವೈಶಂಪಾಯನಃ
ಪುನರ್ಧ್ವಜಂ ಪುನಃಶಂಖಂ ಧನುಶ್ಚೈವ ಪುನಃ ಪುನಃ |
ಸಮ್ಮೂಢಚೇತಾ ವೈರಾಟಿರರ್ಜುನಂ ಸಮುದೈಕ್ಷತ ॥26॥
ವೈಶಂಪಾಯನ ವಿರಾಟಪುತ್ರನಾದ ಉತ್ತರನು ಮೋಹಕ್ಕೆ ಒಳಗಾಗಿ ಪುನಃ ಪುನಃ ಧ್ವಜವನ್ನೂ, ಶಂಖವನ್ನೂ, ಧನುಸ್ಸನ್ನೂ ಮತ್ತು ಅರ್ಜುನನನ್ನೂ ನೋಡಿದನು.
ತತೋಽರ್ಜುನೋಽಬ್ರವೀದ್ ವಾಕ್ಯಂ ರಾಜಪುತ್ರಂ ಪರಂತಪಃ ॥27॥
ಸ್ಥಿರೋ ಭವ ಮಹಾಬಾಹೋ ಸಂಜ್ಞಾಂ ಚಾತ್ಮಾನಮಾನಯ |
ಏಕಾಂತೇ ರಥಮಾಸ್ಥಾಯ ಪದ್ಭ್ಯಾಂ ತ್ವಮವಪೀಡ್ಯ ಚ ॥28॥
ದೃಢಂ ರಶ್ಮೀಂಶ್ಚ ಸಂಯಚ್ಛ ಶಂಖಂ ಧ್ಮಾಸ್ಯಾಮ್ಯಹಂ ಪುನಃ ॥29॥
ಆಗ ಪರಂತಪನಾದ ಅರ್ಜುನನು ರಾಜಪುತ್ರನನ್ನು ಕುರಿತು ಮಹಾಬಾಹುವೇ, ಸ್ಥೈರ್ಯವನ್ನು ಹೊಂದು. ಮನಸ್ಸಿಗೆ ಸರಿಯಾದ ಎಚ್ಚರವನ್ನು ತಂದುಕೋ. ರಥದ ಒಂದು ಮೂಲೆಯಲ್ಲಿ ನಿಂತು ಪಾದಗಳನ್ನು ಗಟ್ಟಿಯಾಗಿ ಊರಿ, ಕಡಿವಾಣವನ್ನು ಗಟ್ಟಿಯಾಗಿ ಹಿಡಿದು ಕುದುರೆಗಳನ್ನು ನಿಯಂತ್ರಿಸು. ನಾನು ಪುನಃ ಶಂಖವನ್ನು ಊದುವೆನು ಎಂದು ಹೇಳಿದನು.
ವೈಶಂಪಾಯನಃ
ತತಃ ಸ ಪುನರೇವಾಥ ತಂ ಶಂಖಂ ಪೂರಯದ್ ಬಲೀ |
ದ್ವಿಷತಾಂ ದುಃಖಜನನಂ ಸುಹೃದಾಂ ಹರ್ಷವರ್ಧನಮ್ ॥30॥
ವೈಶಂಪಾಯನ ಅನಂತರ ಬಲಿಷ್ಠನಾದ ಅರ್ಜುನನು ಶತ್ರುಗಳಿಗೆ ದುಃಖವನ್ನು ಉಂಟುಮಾಡುವ ಮತ್ತು ಸುಹೃಜ್ಜನರಿಗೆ ಸಂತೋಷವನ್ನು ಉಂಟುಮಾಡುವ ಆ ಶಂಖವನ್ನು ಪುನಃ ಊದಿದನು.
ತತಃ ಶಂಖಮುಪಾಧ್ಮಾಸೀದ್ ದಾರಯನ್ನಿವ ಪರ್ವತಾನ್ |
ಗುಹಾ ಗಿರೀಣಾಂ ಚ ತಥಾ ದಿಶಃ ಶೈಲಾಂಸ್ತಥೈವ ಚ ॥31॥
ಉತ್ತರಶ್ಚಾಪಿ ಸಂಲೀನೋ ರಥೋಪಸ್ಥ ಉಪಾವಿಶತ್ ॥32॥
ಅನಂತರ ಪರ್ವತಗಳನ್ನು ಸೀಳುವವನಂತೆ, ಹಾಗೆಯೇ ಪರ್ವತದ ಗುಹೆಗಳನ್ನೂ ಮತ್ತು ದಿಕ್ಕುಗಳನ್ನೂ ಪರ್ವತಗಳನ್ನು ಸೀಳುವಂತೆ ಶಂಖವನ್ನು ಊದಿದನು. ಉತ್ತರನಾದರೂ ರಥದ ಮಧ್ಯದಲ್ಲಿ ಅಡಗಿಕೊಂಡು ಕುಳಿತನು.
ತಸ್ಯ ಶಂಖಸ್ಯ ಶಬ್ದೇನ ರಥನೇಮಿಸ್ವನೇನ ಚ |
ಗಾಂಡೀವಸ್ಯ ಚ ಶಬ್ದೇನ ಪೃಥಿವೀ ಸಮಕಂಪತ ॥33॥

ಆ ಶಂಖಶಬ್ದದಿಂದಲೂ, ರಥದ ಚಕ್ರದ ಶಬ್ದದಿಂದಲೂ ಮತ್ತು ಗಾಂಡೀವದ ಶಬ್ದದಿಂದಲೂ ಭೂಮಿಯು ನಡುಗಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೈದನೆಯ ಅಧ್ಯಾಯ
ಅರ್ಜುನನನ್ನು ಗುರುತಿಸಿ ದ್ರೋಣರಿಂದ ದುರ್ಯೋಧನನಿಗೆ ನಿವೇದನೆ
ಮತ್ತು ತಮ್ಮ ಸೈನ್ಯದಲ್ಲಿ ಸೋಲಿನ ಶಕುನಗಳ ನಿರೂಪಣೆ
ವೈಶಂಪಾಯನಃ
ಭಾರದ್ವಾಜಸ್ತತೋ ದ್ರೋಣಃ ಸರ್ವಶಸ್ತ್ರಭೃತಾಂ ವರಃ |
ರಾಜಾನಂ ಚಾಹ ಸಂಪ್ರೇಕ್ಷ್ಯ ದುರ್ಯೋಧನಮರಿಂದಮ ॥1॥
ವೈಶಂಪಾಯನ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ, ಅರಿಂದಮರೂ, ಭರದ್ವಾಜ ಪುತ್ರರೂ ಆದ ದ್ರೋಣರು ರಾಜನಾದ ದುರ್ಯೋಧನನನ್ನು ನೋಡಿ ಮಾತನಾಡಿದರು.
ಯಥಾ ರಥಸ್ಯ ನಿರ್ಘೋಷೋ ಯಥಾ ಶಂಖ ಉದೀರ್ಯತೇ |
ಕಂಪತೇ ಚ ಯಥಾ ಭೂಮಿಃ ನೈಷೋಽನ್ಯಃ ಸವ್ಯಸಾಚಿನಃ ॥2॥
ರಥನಿರ್ಘೋಷವನ್ನೂ, ಶಂಖದ ಧ್ವನಿಯನ್ನೂ ಮತ್ತು ಭೂಮಿಯು ಕಂಪಿಸುವುದನ್ನೂ ಗಮನಿಸಿದರೆ ಇವನು ಅರ್ಜುನನನ್ನು ಬಿಟ್ಟು ಬೇರೆ ಯಾವನೂ ಅಲ್ಲ.
ಔತ್ಪತ್ತಿಕಮಿದಂ ರಾಜನ್ ನಿಮಿತ್ತಂ ಭವತೀಹ ನಃ |
ನ ಹಿ ಪಶ್ಯಾಮಿ ವಿಜಯಂ ಸೈನ್ಯೇಽಸ್ಮಾಕಂ ಪರಂತಪ ॥3॥
ಎಲೈ ರಾಜನೇ, ನಮ್ಮ ಸೈನ್ಯದಲ್ಲಿ ಸ್ವಾಭಾವಿಕವಾದ ಅಪಶಕುನಗಳಾಗುತ್ತಿವೆ. ಎಲೈ ಪರಂತಪನೇ, ನಮ್ಮ ಸೈನ್ಯಕ್ಕೆ ವಿಜಯ ಉಂಟಾಗುವುದು ಕಾಣುತ್ತಿಲ್ಲ.
ಶಸ್ತ್ರಾಣಿ ನ ಪ್ರಕಾಶಂತೇ ನ ಪ್ರಹೃಷ್ಯಂತಿ ವಾಹನಾಃ |
ಅಗ್ನಯಶ್ಚ ನ ಭಾಸಂತೇ ಸುಸಮಿದ್ಧಾಶ್ಚ ಶೋಭನಾಃ ॥4॥
ಶಸ್ತ್ರಗಳು ಮಂಕಾಗಿವೆ. ಗಜಾಶ್ವಗಳಿಗೆ ಸಂತೋಷವಿಲ್ಲ. ಶೋಭನವಾದ ಅಗ್ನಿಗಳನ್ನು ಎಷ್ಟು ಉದ್ದೀಪನಗೊಳಿಸಿದರೂ ಅವು ಪ್ರಕಾಶಿಸುತ್ತಿಲ್ಲ.
ಪ್ರತ್ಯಾದಿತ್ಯಂ ಚ ನಃ ಸರ್ವೇ ಮೃಗಾ ಘೋರಾ ನದಂತಿ ಚ |
ಶಕುನಾಶ್ಚಾಪಸವ್ಯಾಶ್ಚ ವೇದಯಂತಿ ಮಹದ್ಭಯಮ್ ॥5॥
ಸೂರ್ಯನ ಎದುರಾಗಿ ನಿಂತು ಎಲ್ಲಾ ಘೋರಮೃಗಗಳೂ ಗರ್ಜಿಸುತ್ತಿವೆ. ಅಪಸವ್ಯದಲ್ಲಿ ಬರುತ್ತಿರುವ ಪಕ್ಷಿಗಳು ಮಹಾಭಯವನ್ನು ಸೂಚಿಸುತ್ತಿವೆ.
ಗೋಮಾಯುರೇಷ ಸೇನಾಯಾಂ ರುವನ್ ಮಧ್ಯೇಽನುಧಾವತಿ |
ಚಾಷಾ ನದಂತಿ ಚಾಕಾಶೇ ವೇದಯಂತೋ ಮಹದ್ಭಯಮ್ ॥6॥
ಈ ನರಿಯು ಅಳುತ್ತಾ ಸೈನ್ಯದ ಮಧ್ಯದಲ್ಲಿ ಓಡಾಡುತ್ತಿದೆ. ಅಂಗನ ಹಕ್ಕಿಗಳು ಆಕಾಶದಲ್ಲಿ ಗರ್ಜಿಸುತ್ತಾ ದೊಡ್ಡ ಭಯವನ್ನು ಸೂಚಿಸುತ್ತಿವೆ.
ಭವತಾಂ ಚೈವ ರೋಮಾಣಿ ಸಂಪ್ರಹೃಷ್ಟಾನಿ ಲಕ್ಷಯೇ |
ಅನುಷ್ಣಾಂಗಾಶ್ಚ ಸಂಸ್ವಿನ್ನಾ ಜೃಂಭಂತೇ ಚಾಪ್ಯಭೀಕ್ಷ್ಣಶಃ ॥7॥
ನೀವೆಲ್ಲಾ ರೋಮಾಂಚಗೊಂಡಿರುವುದನ್ನು ಗಮನಿಸುತ್ತಿದ್ದೇನೆ. ಯೋಧರು ಉಷ್ಣವಿಲ್ಲದಿದ್ದರೂ ಬೆವರಿ ಪುನಃ ಪುನಃ ಆಕಳಿಸುತ್ತಿದ್ದಾರೆ.
ವಿಷ್ಟಂಭಂತೀವ ಮಾತಂಗಾ ಮುಂಚಂತ್ಯಶ್ರೂಣಿ ವಾಜಿನಃ |
ಸದಾ ಮೂತ್ರಂ ಪುರೀಷಂ ಚ ಉತ್ಸೃಜಂತಿ ಪುನಃ ಪುನಃ ॥8॥
ಆನೆಗಳು ಮುಗ್ಗರಿಸುವಂತೆ ನಡೆಯುತ್ತಿವೆ. ಅಶ್ವಗಳು ಕಣ್ಣೀರನ್ನು ಸುರಿಸುತ್ತಿವೆ. ಅವು ಪುನಃ ಪುನಃ ಮಲಮೂತ್ರಗಳನ್ನು ವಿಸರ್ಜಿಸುತ್ತಿವೆ.
ಲೋಹಿತಾರ್ದ್ರಾ ಚ ಪೃಥಿವೀ ದಿಶಃ ಸರ್ವಾಃ ಪ್ರಧೂಪಿತಾಃ |
ನ ಚ ಸೂರ್ಯಃ ಪ್ರತಪತಿ ಮಹದ್ ವೇದಯತೇ ಭಯಮ್ ॥9॥
ಭೂಮಿಯು ಕೆಂಪು ಬಣ್ಣದಿಂದ ಕೂಡಿ ಒದ್ದೆಯಾಗಿ ಕಾಣುತ್ತಿದೆ. ಎಲ್ಲ ದಿಕ್ಕುಗಳಲ್ಲಿಯೂ ಹೊಗೆಯು ತುಂಬಿಕೊಂಡಿದೆ. ಸೂರ್ಯನು ಪ್ರಕಾಶಿಸುತ್ತಿಲ್ಲ. ಇದು ದೊಡ್ಡ ಭಯವನ್ನು ಸೂಚಿಸುತ್ತದೆ.
ಹಸ್ತಿನಶ್ಚಾಪಿ ವಿತ್ರಸ್ತಾ ಯೋಧಾಶ್ಚಾಪಿ ವಿತತ್ರಸುಃ |
ಪರಾಭೂತಾ ಚ ನಃ ಸೇನಾ ನ ಕಶ್ಚಿದ್ ಯೋದ್ಧುಮಿಚ್ಛತಿ ॥10॥
ಆನೆಗಳು ಹೆದರಿವೆ. ಯೋಧರೂ ಹೆದರಿದ್ದಾರೆ. ನಮ್ಮ ಸೈನ್ಯವು ಆಗಲೇ ಸೋತಂತಿದೆ. ಯುದ್ಧವನ್ನು ಮಾಡಲು ಯಾರಿಗೂ ಇಷ್ಟವಿಲ್ಲ.

ವಿಷಣ್ಣಮುಖಭೂಯಿಷ್ಠಾಃ ಸರ್ವೇ ಯೋಧಾ ವಿಚೇತಸಃ |

ದಿಶಂ ತೇ ದಕ್ಷಿಣಾಂ ಸರ್ವೇ ವಿಪ್ರೇಕ್ಷಂತೇ ಪುನಃ ಪುನಃ ॥11॥
ಯೋಧರೆಲ್ಲರೂ ಬಹಳ ವಿಷಾದದಿಂದ ಕೂಡಿದ ಮುಖವುಳ್ಳವರಾಗಿ ಪ್ರಜ್ಞಾಹೀನರಾಗಿದ್ದಾರೆ. ಅವರೆಲ್ಲರೂ ಪುನಃ ಪುನಃ ದಕ್ಷಿಣದಿಕ್ಕನ್ನು ನೋಡುತ್ತಿದ್ದಾರೆ.
ಮೃಗಾಶ್ಚ ಪಕ್ಷಿಣಶ್ಚೈವ ಸವ್ಯಮೇವ ಪತಂತಿ ನಃ |
ವಾದಿತ್ರೋದ್ಘುಷ್ಟಘೋಷಾಶ್ಚ ನ ಚ ಗಾಢಂ ಸ್ವನಂತಿ ನಃ ॥12॥
ಧ್ವಜಾಗ್ರೇಷು ನಿಲೀಯಂತೇ ವಾಯಸಾಸ್ತನ್ನ ಶೋಭನಮ್ ॥13॥
ಮೃಗಪಕ್ಷಿಗಳು ನಮ್ಮ ಎಡಭಾಗಕ್ಕೇ ಬರುತ್ತಿವೆ. ವಾದ್ಯಗಳನ್ನು ಬಾರಿಸಿದರೂ ಗಾಢವಾದ ಶಬ್ದವು ಬರುತ್ತಿಲ್ಲ. ಧ್ವಜದ ತುದಿಗಳಲ್ಲಿ ಕಾಗೆಗಳು ಅಡಗಿಕುಳಿತಿವೆ. ಇದು ಒಳ್ಳೆಯದಲ್ಲ.
ಜ್ಯೋತೀಂಷಿ ನ ಪ್ರಕಾಶಂತೇ ದಾರುಣಾ ಮೃಗಪಕ್ಷಿಣಃ |
ಉತ್ಪಾತಾ ವಿವಿಧಾ ಘೋರಾ ದೃಶ್ಯಂತೇ ಚಾತ್ರ ನಾಶನಾಃ ॥14॥
ಆಕಾಶದಲ್ಲಿ ಜ್ಯೋತಿಸ್ಸುಗಳು ಪ್ರಕಾಶಿಸುತ್ತಿಲ್ಲ. ಮೃಗಪಕ್ಷಿಗಳು ಘೋರವಾಗಿವೆ. ಅನೇಕವಿಧವಾದ ಘೋರವಾದ ನಮ್ಮ ನಾಶವನ್ನು ಸೂಚಿಸುವ ಅಪಶಕುನಗಳು ಕಂಡುಬರುತ್ತಿವೆ.
ವಿಶೇಷತ ಇಹಾಸ್ಮಾಕಂ ನಿಮಿತ್ತಾನಿ ವಿನಾಶನೇ |
ಉಲ್ಕಾಭಿಶ್ಚ ಪ್ರದೀಪ್ತಾಭಿರ್ವಧ್ಯತೇ ಪೃತನಾ ತವ ॥15॥
ವಿಶೇಷವಾಗಿ ನಮ್ಮ ಸೈನ್ಯದಲ್ಲಿಯೇ ವಿನಾಶದ ಶಕುನಗಳು ಕಂಡುಬರುತ್ತಿವೆ. ಉರಿಯುತ್ತಿರುವ ಉಲ್ಕೆಗಳು ನಮ್ಮ ಸೈನ್ಯದ ಮೇಲೆ ಬೀಳುತ್ತಿವೆ.
ವಾಹನಾನ್ಯಪ್ರಹೃಷ್ಟಾನಿ ರುದಂತೀವ ವಿಶಾಂಪತೇ |
ಉಪಾಸತೇ ಚ ಸೈನ್ಯಾನಿ ಗೃಧ್ರಾಸ್ತವ ಸಮಂತತಃ ॥16॥
ಅಶ್ವಗಜ ಮೊದಲಾದ ವಾಹನಗಳು ಸಂತೋಷದಿಂದಿಲ್ಲ. ರೋದನ ಮಾಡುವಂತೆ ತೋರುತ್ತಿವೆ. ಎಲ್ಲ ಕಡೆಗಳಿಂದಲೂ ಸೈನ್ಯದ ಮೇಲೆ ಹದ್ದುಗಳು ಓಡಾಡುತ್ತಿವೆ.
ಯಥಾ ಮೇಘಸ್ಯ ನಿನದೋ ಗಂಭೀರಃ ಸ್ಥೂಣಮಾಯತಃ |
ಶ್ರೂಯತೇ ರಥನಿರ್ಘೋಷೋ ನಾಯಮನ್ಯೋ ಧನಂಜಯಾತ್ |17॥
ಮೇಘದ ನಿನಾದವು ಗಂಭೀರವೂ ಮತ್ತು ವಿಸ್ತಾರವೂ ಆಗಿರುವಂತೆ ಇವನ ರಥದ ನಿರ್ಘೋಷವು ಕೇಳಿಬರುತ್ತಿದೆ. ಇವನು ಧನಂಜಯನಲ್ಲದೇ ಬೇರೊಬ್ಬನಲ್ಲ.
ಅಶ್ವಾನಾಂ ಸ್ವನತಾಂ ಶಬ್ದೋ ವಹತಾಂ ಪಾಕಶಾಸನಿಮ್ |
ವಾನರಶ್ಚ ಧ್ವಜೋ ದಿವ್ಯೋ ನಿಃಸಂಗಂ ಧೂಯತೇ ಮಹಾನ್ ॥18॥
ಅರ್ಜುನನನ್ನು ರಥದಲ್ಲಿ ಒಯ್ಯುವ ಅಶ್ವಗಳ ಕೆನೆಯುವ ಶಬ್ದವು ದೊಡ್ಡದಾಗಿದೆ. ಯಾವುದಕ್ಕೂ ಸಿಲುಕದ ದಿವ್ಯವಾದ ಅವನ ವಾನರ ಧ್ವಜವು ಬಹಳವಾಗಿ ಓಲಾಡುತ್ತಿದೆ.
ಶಂಖಶಬ್ದೇನ ಪಾರ್ಥಸ್ಯ ಕರ್ಣೌ ಮೇ ಬಧಿರೀಕೃತೌ |
ಸರ್ವಸೈನ್ಯಂ ಚ ವಿತ್ರಸ್ತಂ ನಾಯಮನ್ಯೋ ಧನಂಜಯಾತ್ ॥19॥
ಅರ್ಜುನನ ಶಂಖಶಬ್ದದಿಂದ ನನ್ನ ಕಿವಿಗಳು ಕಿವುಡಾಗಿವೆ. ಎಲ್ಲ ಸೈನ್ಯವೂ ಹೆದರಿದೆ. ಇವನು ಧನಂಜಯನನ್ನು ಬಿಟ್ಟು ಬೇರೆ ಯಾವನೂ ಅಲ್ಲ.
ರಾಜಾನಮಗ್ರತಃ ಕೃತ್ವಾ ದುರ್ಯೋಧನಮರಿಂದಮಮ್ |
ಗಾಃ ಪ್ರಸ್ಥಾಪ್ಯ ಚ ತಿಷ್ಠಾಮೋ ವ್ಯೂಢಾನೀಕಾಃ ಪ್ರಹಾರಿಣಃ ॥20॥
ಅರಿಂದಮನಾದ ದುರ್ಯೋಧನ ರಾಜನನ್ನು ಮುಂದೆ ಮಾಡಿಕೊಂಡು ಗೋವುಗಳನ್ನು ಕಳುಹಿಸಿ ಸೈನ್ಯವ್ಯೂಹವನ್ನು ರಚಿಸಿ ಶತ್ರುಗಳ ಮೇಲೆ ಎರಗಲು ಸಿದ್ಧರಾಗಿ ನಿಲ್ಲೋಣ.
ಪ್ರವಿಭಜ್ಯ ತ್ರಿಧಾ ಸೇನಾಂ ಸಮುಚ್ಛ್ರಿತ್ಯ ಧ್ವಜಾನಪಿ |
ದಿಕ್ಷು ಗುಲ್ಮಾ ನಿವೇಶ್ಯಂತಾಂ ಯತ್ತಾ ಯೋತ್ಸ್ಯಾಮಹೇಽರ್ಜುನಮ್ ॥
ಸೈನ್ಯವನ್ನು ಮೂರುಭಾಗವನ್ನಾಗಿ ಮಾಡಿ ಧ್ವಜಗಳನ್ನು ಮೇಲಕ್ಕೆತ್ತಿ ಬೇರೆ ಬೇರೆ ದಿಕ್ಕುಗಳಲ್ಲಿ ಸೈನ್ಯದ ಭಾಗಗಳನ್ನು ಸ್ಥಾಪಿಸಿ. ನಾವು ಎಚ್ಚರಿಕೆಯಿಂದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತಾರನೆಯ ಅಧ್ಯಾಯ
ದ್ರೋಣರ ಮಾತನ್ನು ಕೇಳಿ ಸೈನ್ಯದ ಮೌನ.
ದುರ್ಯೋಧನನ ಪ್ರೋತ್ಸಾಹವಚನಗಳು. ಕರ್ಣನ ಆಕ್ಷೇಪ.
ವೈಶಂಪಾಯನಃ
ತತೋ ದುರ್ಯೋಧನೋ ರಾಜಾ ಸಮರೇ ಭೀಷ್ಮಮಬ್ರವೀತ್ |

ದ್ರೋಣಂ ಚ ರಥಶಾರ್ದೂಲಂ ಕೃಪಂ ಚ ಸುಮಹಾರಥಮ್ ॥1॥
ವೈಶಂಪಾಯನ ಆಗ ರಾಜನಾದ ದುರ್ಯೋಧನನು ಯುದ್ಧದಲ್ಲಿ ಸುಮಹಾರಥರಾದ ಭೀಷ್ಮರನ್ನೂ ದ್ರೋಣರನ್ನೂ ಮತ್ತು ಕೃಪರನ್ನೂ ಕುರಿತು ಮಾತನಾಡಿದನು.
ಉಕ್ತೋಽಯಮರ್ಥ ಆಚಾರ್ಯ ಮಯಾ ಕರ್ಣೇನ ಚಾಸಕೃತ್ |
ಪುನರೇವ ಚ ವಕ್ಷ್ಯಾಮಿ ನ ಹಿ ತೃಪ್ಯಾಮಿ ತಂ ಬ್ರುವನ್ ॥2॥
ಆಚಾರ್ಯರೇ, ಈ ವಿಷಯವನ್ನು ನಾನೂ ಮತ್ತು ಕರ್ಣನೂ ಸಹ ಅನೇಕ ಬಾರಿ ಹೇಳಿದ್ದೇವೆ. ಅದನ್ನು ಪುನಃ ಹೇಳುವೆನು. ಏಕೆಂದರೆ ಅದನ್ನು ಎಷ್ಟುಬಾರಿ ಹೇಳಿದರೂ ನನಗೆ ತೃಪ್ತಿ ಇಲ್ಲ.
ಪರಾಜಿತೈರ್ವಿವಸ್ತವ್ಯಂ ತೈಶ್ಚ ದ್ವಾದಶವತ್ಸರಾನ್ |
ವನೇ ಜನಪದೇಽಜ್ಞಾತೈರೇಕ ಏಷ ಪಣೋ ಹಿ ನಃ ॥3॥
ದ್ಯೂತದಲ್ಲಿ ಪರಾಜಿತರಾದರೆ ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮತ್ತು ಒಂದು ವರ್ಷದ ಕಾಲದ ಅಜ್ಞಾತವಾಸವನ್ನು ಮಾಡಬೇಕೆಂದು ಇದೊಂದೇ ನಮ್ಮ ಪಣವಾಗಿದ್ದಿತು.
ಏಷಾಂ ನ ತಾವನ್ನಿರ್ವೃತ್ತೋ ವತ್ಸರಸ್ತು ತ್ರಯೋದಶಃ |
ಅಜ್ಞಾತವಾಸೇ ಬೀಭತ್ಸುರಥಾಸ್ಮಾಭಿಃ ಪರಿಶ್ರುತಃ ॥4॥
ಈ ಪಾಂಡವರಿಗೆ ಹದಿಮೂರನೆಯ ವರ್ಷವು ಇನ್ನೂ ಕಳೆದಿಲ್ಲ. ಅಜ್ಞಾತವಾಸದ ಸಮಯದಲ್ಲಿಯೇ ಅರ್ಜುನನನ್ನು ನಾವು ನೋಡಿದ್ದೇವೆ.
ಅನಿರ್ವೃತ್ತೇ ತು ನಿರ್ವಾಸೇ ಯದಿ ಬೀಭತ್ಸುರಾಗತಃ |
ಪುನರ್ದ್ವಾದಶವರ್ಷಾಣಿ ವನೇ ವತ್ಸ್ಯಂತಿ ಪಾಂಡವಾಃ ॥5॥
ಅಜ್ಞಾತವಾಸವು ಮುಗಿಯುವುದಕ್ಕೆ ಮೊದಲೇ ಅರ್ಜುನನು ಬಂದರೆ ಪಾಂಡವರು ಪುನಃ ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮಾಡಬೇಕಾಗುವುದು.
ಲೋಭಾದ್ ವಾ ತೇ ನ ಜಾನೀಯುರಸ್ಮಾನ್ ವಾ ಮೋಹ ಆವಿಶತ್ |
ಹೀನಾತಿರಿಕ್ತಮೇತೇಷಾಂ ಭೀಷ್ಮೋ ವೇದಿತುಮರ್ಹತಿ ॥6॥
ಒಂದು ಪಕ್ಷ ರಾಜ್ಯದ ಮೇಲಿನ ಲೋಭದಿಂದ ಅವರಿಗೆ ಇದು ತಿಳಿಯದಿದ್ದರೆ ಅಥವಾ ನಮಗಾದರೂ ಮೋಹವುಂಟಾದರೆ ಅಜ್ಞಾತವಾಸದ ಸಮಯವು ನ್ಯೂನವಾಗಿದೆಯೇ ಅಥವಾ ಕಳೆದಿದೆಯೇ ಎಂದು ಭೀಷ್ಮರು ತಿಳಿದಿರುತ್ತಾರೆ.
ಅರ್ಥಾನಾಂ ಹಿ ಪುನರ್ದ್ವೈಧೇ ನಿತ್ಯಂ ಭವತಿ ಸಂಶಯಃ |
ಅನ್ಯಥಾ ಚಿಂತಿತೋ ಹ್ಯರ್ಥಃ ಪುನರ್ಭವತಿ ಚಾನ್ಯಥಾ ॥7॥
ಒಂದು ವಿಷಯವು ಎರಡು ರೀತಿಯಲ್ಲಿ ಪರ್ಯವಸಾನವನ್ನು ಹೊಂದಬಹುದಾದಾಗ ಯಾವಾಗಲೂ ಸಂಶಯವುಂಟಾಗುತ್ತದೆ. ಒಂದು ರೀತಿಯಲ್ಲಿ ಚಿಂತಿಸಿದ ಅರ್ಥವು ಇನ್ನೊಂದು ರೀತಿಯಾಗುತ್ತದೆ.
ಉತ್ತರಂ ಮಾರ್ಗಮಾಣಾನಾಂ ಮತ್ಸ್ಯಸೇನಾಂ ಯುಯುತ್ಸತಾಮ್ |
ಯದಿ ಬೀಭತ್ಸುರಾಯಾತಃ ಕಿಂ ನಃ ಕೃತ್ಯಮತಃ ಪರಮ್ ॥8॥
ಉತ್ತರಕುಮಾರನನ್ನು ಹುಡುಕುತ್ತಾ ಮತ್ಸ್ಯರ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡಲು ಇಚ್ಛಿಸುವ ನಮಗೆ ಒಂದು ಪಕ್ಷ ಅರ್ಜುನನು ಎದುರಿಗೆ ಬಂದರೆ ಅದಕ್ಕಿಂತ ದೊಡ್ಡ ಪ್ರಯೋಜನವು ಯಾವುದು?
ತ್ರಿಗರ್ತಾನಾಮಿದಂ ಕಾರ್ಯಂ ಪಾಂಡವಾನಾಂ ಚ ಮಾರ್ಗಣಮ್ |
ವಿಪ್ರಕಾರೈರ್ಹಿ ಮಾತ್ಸ್ಯೇನ ಸುಶರ್ಮಾ ಬಾಧಿತಃ ಪುರಾ ॥9॥
ಪಾಂಡವರ ಈ ಅನ್ವೇಷಣೆಯನ್ನು ತ್ರಿಗರ್ತರೂ ಮಾಡಬೇಕಾಗಿದೆ. ಏಕೆಂದರೆ ಮತ್ಸ್ಯರಾಜನಾದ ವಿರಾಟನು ಅನೇಕ ಕಪಟಗಳನ್ನು ಮಾಡಿ ಹಿಂದೆ ಸುಶರ್ಮನನ್ನು ಬಾಧಿಸಿದ್ದಾನೆ.
ತೇಷಾಂ ಭಯಾಭಿಪನ್ನಾನಾಂ ತ್ರಸ್ತಾನಾಂ ತ್ರಾಣಮಿಚ್ಛತಾಮ್ |
ಅಭಯಂ ಯಾಚಮಾನಾನಾಂ ತದಾಽಸ್ಮಾಭಿಃ ಪರಿಶ್ರುತಮ್ ॥10॥
ಭಯಗ್ರಸ್ತರಾಗಿ ನಮ್ಮಿಂದ ರಕ್ಷಣೆಯನ್ನು ಬಯಸಿ ಅಭಯವನ್ನು ಬೇಡುವ ತ್ರಿಗರ್ತರಿಗೆ ನಾವು ರಕ್ಷಣೆಯನ್ನೂ ವಾಗ್ದಾನವನ್ನು ಮಾಡಿದ್ದೇವೆ.
ಪ್ರಥಮಂ ತೈರ್ಗೃಹೀತವ್ಯಂ ಮತ್ಸ್ಯಾನಾಂ ಗೋಧನಂ ಮಹತ್ |
ಅಷ್ಟಮ್ಯಾಂ ಚಾಪರಾಹ್ಣೇ ತು ಇತಿ ನಸ್ತೈಃ ಸಮಾಹಿತಮ್ ॥11॥
ಮೊದಲು ಅವರು ಮತ್ಸ್ಯರ ದೊಡ್ಡ ಗೋಧನವನ್ನು ಅಷ್ಟಮಿಯ ಮಧ್ಯಾಹ್ನದಲ್ಲಿ ಹಿಡಿಯಬೇಕೆಂದು ನಾವು ಅವರ ಜೊತೆಯಲ್ಲಿ ಒಪ್ಪಂದಕ್ಕೆ ಬಂದಿದ್ದೇವೆ.
ನವಮ್ಯಾಂ ಪುನರಸ್ಮಾಭಿಃ ಸೂರ್ಯಸ್ಯೋದಯನಂ ಪ್ರತಿ |
ಇಮಾ ಗಾವೋ ಗೃಹೀತವ್ಯಾ ಯಾತೇ ಮಾತ್ಸ್ಯೇ ಗವಾಂ ಪದಮ್ ॥
ಪುನಃ ನವಮಿಯ ಪ್ರಾತಃಕಾಲದಲ್ಲಿ ಸೂರ್ಯೋದಯದ ಸಮಯದಲ್ಲಿ ವಿರಾಟನು ತ್ರಿಗರ್ತರ ಜೊತೆಯಲ್ಲಿ ಯುದ್ಧವನ್ನು ಮಾಡಲು ಹೋಗಿರುವಾಗ ನಾವು ಈ ಗೋವುಗಳನ್ನು ಹಿಡಿಯಬೇಕು.
ಇತ್ಯೇಷ ನಿಶ್ಚಯೋಽಸ್ಮಾಕಂ ಮಂತ್ರೋಽಭೂನ್ನಾಗಸಾಹ್ವಯೇ |
ಪಾಂಡವಾನಾಂ ಪರಿಜ್ಞಾನೇ ಸರ್ವೇಷಾಂ ನಃ ಪರಸ್ಪರಮ್ ॥13॥
ಪಾಂಡವರನ್ನು ಗುರುತಿಸುವ ವಿಷಯದಲ್ಲಿ ನಾವೆಲ್ಲರೂ ಪರಸ್ಪರವಾಗಿ ಮಂತ್ರಾಲೋಚನೆಯನ್ನು ಮಾಡಿ ಹಸ್ತಿನಪುರದಲ್ಲಿ ಹೀಗೆ

ನಿಶ್ಚಯಿಸಿದ್ದೆವು.
ತೇ ವಾ ಗಾವ ನಯಿಷ್ಯಂತಿ ಯದಿ ವಾ ಸ್ಯುಃ ಪರಾಜಿತಾಃ |
ಅಸ್ಮಾನ್ ವಾಽಪ್ಯತಿಸಂಧಾಯ ಕುರ್ಯುರ್ಮಾತ್ಸ್ಯೇನ ಸಂಗಮಮ್ ॥
ಪಾಂಡವರಾದರೂ ಗೋವುಗಳನ್ನು ತೆಗೆದುಕೊಂಡು ಹೋಗುತ್ತಾರೆ ಅಥವಾ ಅವರು ಪರಾಜಿತರಾದರೆ ನಮ್ಮನ್ನು ಬಿಟ್ಟು ಅವರು ವಿರಾಟನ ಜೊತೆಯಲ್ಲಿ ಸಮಾಗಮವನ್ನು ಹೊಂದುತ್ತಾರೆ.
ಅಥವಾ ತಾನುಪಾದಾಯ ಮಾತ್ಸ್ಯೋ ಜಾನಪದ್ಯೈಃ ಸಹ |
ಸರ್ವಥಾ ಸೇನಯಾ ಸಾರ್ಧಮಸ್ಮಾನೇವ ಯುಯುತ್ಸತಿ ॥15॥
ಅಥವಾ ವಿರಾಟನೇ ಅವರನ್ನು ಮತ್ತು ತನ್ನ ಸೈನ್ಯವನ್ನು ತೆಗೆದುಕೊಂಡು ನಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಬರುತ್ತಾನೆ (ಎಂದು ನಿಶ್ಚಯ ಮಾಡಿದ್ದೇವೆ).
ತೇಷಾಮೇಕೋ ಮಹಾವೀರ್ಯಃ ಕಶ್ಚಿದೇವ ಪುರಸ್ಸರಃ |
ಅಸ್ಮಾನ್ ಜೇತುಮಿಹಾಯಾತೋ ಮಾತ್ಸ್ಯೋ ವಾಽಪಿ ಸ್ವಯಂ ಭವೇತ್
ಅವರಲ್ಲಿ ಮಹಾಪರಾಕ್ರಮಿಯಾದ ಒಬ್ಬನು ನಮ್ಮನ್ನು ಜಯಿಸಲು ಮುಂದೆ ಬರುತ್ತಿದ್ದಾನೆ. ಅಥವಾ ಇವನು ಸ್ವಯಂ ವಿರಾಟನೇ ಇರಬಹುದು.
ಯದ್ಯೇಷ ರಾಜಾ ಮತ್ಸ್ಯಾನಾಂ ಯದಿ ಬೀಭತ್ಸುರಾಗತಃ |
ಸರ್ವೈರ್ಯೋದ್ಧವ್ಯಮಸ್ಮಾಭಿರಿತಿ ನಃ ಸಮಯಃ ಕೃತಃ ॥17॥
ಇವನು ಮತ್ಸ್ಯರಾಜನಾಗಲಿ ಅಥವಾ ಅರ್ಜುನನಾಗಲಿ ನಾವೆಲ್ಲರೂ ಒಟ್ಟಿಗೆ ಯುದ್ಧವನ್ನು ಮಾಡಬೇಕೆಂದು ನಿಶ್ಚಯವನ್ನು ಮಾಡಿದ್ದೆವು.
ಅಥ ಕಸ್ಮಾತ್ ಸ್ಥಿತಾ ಹ್ಯೇತೇ ರಥೇಷು ರಥಿಸತ್ತಮಾಃ |
ಭೀಷ್ಮೋ ದ್ರೋಣಃ ಕೃಪಃ ಕರ್ಣೋ ವಿಕರ್ಣೋ ದ್ರೌಣಿರೇವ ಚ ॥
ಹೀಗಿರುವಾಗ ಭೀಷ್ಮ, ದ್ರೋಣ, ಕೃಪ, ಕರ್ಣ, ವಿಕರ್ಣ, ಅಶ್ವತ್ಥಾಮ ಈ ರಥಿಶ್ರೇಷ್ಠರೆಲ್ಲರೂ ತಮ್ಮ ರಥಗಳಲ್ಲಿ ಏಕೆ ಸುಮ್ಮನೆ ಕುಳಿತಿದ್ದಾರೆ?
ಸಂಭ್ರಾಂತಮನಸಃ ಸರ್ವೇ ಪ್ರಾಪ್ತೇ ಹ್ಯಸ್ಮಿನ್ ಧನಂಜಯೇ |
ನಾನ್ಯತ್ರ ಯುದ್ಧಾತ್ ಶ್ರೇಯೋಽಸ್ತಿ ತಥಾಽಽತ್ಮಾ ಪ್ರಣಿಧೀಯತಾಮ್॥
ಈ ಅರ್ಜುನನು ಪ್ರಾಪ್ತನಾದಾಗ ಎಲ್ಲರ ಮನಸ್ಸೂ ಸಂಭ್ರಾಂತವಾಗಿದೆ. ಯುದ್ಧವನ್ನು ಬಿಟ್ಟು ಬೇರೆ ಶ್ರೇಯೋಮಾರ್ಗವಿಲ್ಲ ಎಂದು ಎಲ್ಲರೂ ಮನಸ್ಸಿನಲ್ಲಿ ಗಟ್ಟಿಮಾಡಿಕೊಳ್ಳಿ.
ದುರ್ಯೋಧನವಚಃ ಶ್ರುತ್ವಾ ರಾಧೇಯಸ್ತ್ವಬ್ರವೀದ್ ವಚಃ ॥20॥
ಸರ್ವಲೋಕೇನ ವಾ ಯುದ್ಧಂ ದೇವೈರ್ವಾಽಸ್ತು ಸವಾಸವೈಃ |
ಅನಾಚ್ಛಿನ್ನೇ ಪುನರ್ದ್ರವ್ಯೇ ಕೋ ಹಸ್ತಿನಪುರಂ ವ್ರಜೇತ್ ॥21॥
ದುರ್ಯೋಧನನ ಮಾತುಗಳನ್ನು ಕೇಳಿ ಕರ್ಣನು ಮಾತನಾಡಿದನು ಸರ್ವಲೋಕದ ಜೊತೆ ಯುದ್ಧವಾಗಲಿ, ಅಥವಾ ಇಂದ್ರನಿಂದ ಕೂಡಿದ ದೇವತೆಗಳಿಂದಲೇ ಯುದ್ಧವಾಗಲಿ, ಗೋಧನವನ್ನು ಅಪಹರಿಸದೆ ಹಸ್ತಿನಪುರಕ್ಕೆ ಯಾರು ಹೋಗುತ್ತಾರೆ?
ಶರೈರಪಿ ಪ್ರಣುನ್ನಾನಾಂ ಭಗ್ನಾನಾಂ ಗಹನೇ ವನೇ |
ಕೋ ಹಿ ಜೀವೇತ್ ಪದಾತೀನಾಂ ಭವೇದಶ್ವೇಷು ಸಂಶಯಃ ॥22॥
ನನ್ನ ಬಾಣಗಳಿಂದ ಪೀಡಿತರಾಗಿ ದಟ್ಟವಾದ ಕಾಡಿನಲ್ಲಿ ಚದುರಿಹೋಗುವ ಪದಾತಿಗಳಲ್ಲಿ ಯಾವನು ಉಳಿಯುತ್ತಾನೆ? ಅಶ್ವಗಳ ವಿಷಯದಲ್ಲಿ ಸಂಶಯವಿರಬಹುದು.
ಆಚಾರ್ಯಂ ಪೃಷ್ಠತಃ ಕೃತ್ವಾ ತಥಾ ನೀತಿರ್ವಿಧೀಯತಾಮ್ |
ಜಾನಾಮಿ ವಿಜಿತಂ ತೇಷಾಮತಸಂತ್ರಸಯತೀವ ನಃ ॥23॥
ದ್ರೋಣರ ಮಾತುಗಳನ್ನು ತಿರಸ್ಕರಿಸಿ ಯುದ್ಧದ ನೀತಿಯನ್ನು ರೂಪಿಸುವವರಾಗಿ. ನಾನು ಭೀಷ್ಮಾದಿಗಳ ವಿಜಯವನ್ನು ತಿಳಿದಿದ್ದೇನೆ. ಆದ್ದರಿಂದ ದ್ರೋಣರು ನಮ್ಮನ್ನು ಹೆದರಿಸುತ್ತಿದ್ದಾರೆ.
ಅರ್ಜುನೇ ಚಾಪಿ ಸಂಪ್ರೀತಿಮಧಿಕಾಮುಪಲಕ್ಷಯೇ |
ತಥಾ ದೃಷ್ಟ್ವಾ ಹಿ ಬೀಭತ್ಸುಮುಪಾಯಾಂತಂ ಪ್ರಶಂಸತಿ ॥24॥
ಯಥಾ ಸೇನಾ ನ ಭಜ್ಯೇತ ತಥಾ ನೀತಿರ್ವಿಧೀಯತಾಮ್ ॥25॥
ಆಚಾರ್ಯರಿಗೆ ಅರ್ಜುನನಲ್ಲಿ ಬಹಳ ಪ್ರೀತಿ ಇದೆ ಎಂದು ನಾನು ಗಮನಿಸುತ್ತಿದ್ದೇನೆ. ಆದ್ದರಿಂದ ಯುದ್ಧಕ್ಕೆ ಬರುವ ಅರ್ಜುನನನ್ನು ಅವರು ಪ್ರಶಂಸೆ ಮಾಡುತ್ತಿದ್ದಾರೆ. ನಮ್ಮ ಸೈನ್ಯವು ಭಗ್ನವಾಗದಂತೆ ನೀತಿಯನ್ನು ರೂಪಿಸಿ.
ಅಶ್ವಾನಾಂ ಹೇಷಿತಂ ಶ್ರುತ್ವಾ ಕಾ ಪ್ರಶಂಸಾ ಭವೇತ್ ಪರೇ |
ಸ್ಥಾನೇ ವಾಽಪಿ ವ್ರಜಂತೋ ವಾ ಸದಾ ಹೇಷಂತಿ ವಾಜಿನಃ ॥26॥
ಕುದುರೆಗಳು ಕೆನೆಯುವ ಶಬ್ದಗಳನ್ನು ಕೇಳಿ ಯಾವನು ಶತ್ರುವನ್ನು ಪ್ರಶಂಸಿಸುತ್ತಾನೆ? ಕುದುರೆಗಳು ನಿಂತಿರುವಾಗಲೂ ಅಥವಾ ನಡೆಯುವಾಗಲೂ ಯಾವಾಗಲೂ ಕೆೆನೆಯುತ್ತವೆ.
ಸದಾ ಚ ವಾಯವೋ ಯಾಂತಿ ನಿತ್ಯಂ ವರ್ಷತಿ ವಾಸವಃ |
ಸ್ತನಯಿತ್ನೋಶ್ಚ ನಿರ್ಘೋಷಃ ಶ್ರೂಯತೇ ಬಹುಶಸ್ತಥಾ ॥27॥
ವಾಯುವು ಸದಾ ಬೀಸುತ್ತದೆ. ಇಂದ್ರನು ಯಾವಾಗಲೂ ಮಳೆಯನ್ನು ಸುರಿಸುತ್ತಾನೆ. ಹಾಗೆಯೇ ಗುಡುಗುಗಳ ಆರ್ಭಟವು ಅನೇಕಬಾರಿ

ಕೇಳಿಬರುತ್ತದೆ.
ಭೀಷಯನ್ ಪಾಂಡವೇಯೇಭ್ಯೋ ಭವಾನ್ ಸರ್ವಾನಿಮಾನ್ ಜನಾನ್ |
ಪ್ರಮುಖೇ ಸರ್ವಸೈನ್ಯಾನಾಮಬದ್ಧಂ ಬಹು ಭಾಷತೇ ॥28॥
ಎಲೈ ದ್ರೋಣರೇ, ನೀವು ನಮ್ಮ ಸೈನ್ಯದ ಎದುರಿನಲ್ಲಿ ನಿಂತು ಈ ಎಲ್ಲಾ ಯೋಧರನ್ನೂ ಪಾಂಡವರ ನಿಮಿತ್ತದಿಂದಾಗಿ ಹೆದರಿಸಿ ಅಬದ್ಧವಾಗಿ ಬಹಳ ಮಾತನಾಡುತ್ತಿದ್ದೀರಿ.
ಯಥೈವಾಶ್ವಾನ್ ಮಾರ್ಗಮಾಣಾಸ್ತಾನೇವಾಭಿಪರೀಪ್ಸವಃ |
ಹೇಷಿತಾನ್ಯೇವ ಶೃಣ್ವಂತಿ ಸ್ಯಾದಿದಂ ಭವತಸ್ತಥಾ ॥29॥
ಅಶ್ವಗಳನ್ನು ಕರೆದುಕೊಂಡು ಹೋಗಲು ಬಯಸಿ ಅವುಗಳನ್ನು ಹುಡುಕುವವರು ಹೇಗೆ ಅವುಗಳ ಕೆನೆಯುವ ಶಬ್ದವನ್ನೇ ಅರಸುತ್ತಾರೋ ಅದರಂತೆ ನಿಮ್ಮ ಪ್ರವೃತ್ತಿಯಾಗಿದೆ.
ಕಿಮತ್ರ ಕಾರ್ಯಂ ಪಾರ್ಥಸ್ಯ ಕಥಂ ವಾ ಸಂಪ್ರಶಸ್ಯತೇ |
ಅನ್ಯತ್ರ ಕಾಮಾದ್ ದ್ವೇಷಾದ್ವಾ ರೋಷಾದ್ವಾಽಸ್ಮಾಸು ಕೇವಲಮ್ ॥
ಇದರಲ್ಲಿ ಅರ್ಜುನನ ಕಾರ್ಯವು ಎಲ್ಲಿದೆ? ಅರ್ಜುನನ ಮೇಲಿನ ಪ್ರೀತಿಯನ್ನು ಬಿಟ್ಟು ಅಥವಾ ನಮ್ಮ ಮೇಲಿನ ದ್ವೇಷರೋಷಗಳನ್ನು ಬಿಟ್ಟು ಅರ್ಜುನನನ್ನು ಹೊಗಳುವುದಕ್ಕೆ ಏನು ಕಾರಣವಿದೆ?
ಆಚಾರ್ಯಾ ವೈ ಕಾರುಣಿಕಾಃ ಪ್ರಾಜ್ಞಾಶ್ಚಾಪಾಯದರ್ಶಿನಃ |
ನೈತೇ ಮಹಾಹವೇ ಘೋರೇ ಸಂಪ್ರಷ್ಟವ್ಯಾಃ ಕಥಂಚನ ॥31॥
ಆಚಾರ್ಯರು ಕರುಣಾಪೂರ್ಣರು, ಪ್ರಾಜ್ಞರು ಮತ್ತು ಮುಂದೆ ಒದಗುವ ಅಪಾಯವನ್ನು ಗಮನಿಸುವವರು. ಘೋರವಾದ ಯುದ್ಧವು ಒದಗಿದಾಗ ಎಂದೂ ಅವರ ಸಲಹೆಯನ್ನು ಕೇಳಬಾರದು.
ಪ್ರಾಸಾದೇಷು ವಿಚಿತ್ರೇಷು ಗೋಷ್ಠೀಪಾನಾಶನೇಷು ಚ |
ಕಥಾ ವಿಚಿತ್ರಾಃ ಕುರ್ವಾಣಾಃ ಪಂಡಿತಾಸ್ತತ್ರ ಶೋಭನಾಃ ॥32॥
ವಿಚಿತ್ರವಾದ ಉಪ್ಪರಿಗೆಗಳಲ್ಲಿ, ಅನ್ನಪಾನದ ಗೋಷ್ಠಿಗಳಲ್ಲಿ, ವಿಚಿತ್ರವಾಗಿ ಮಾತನಾಡುವ ಪಂಡಿತರು ಅಲ್ಲಿ ಶೋಭಿಸುತ್ತಾರೆ.
ಬಹೂನ್ಯಾಶ್ಚರ್ಯರೂಪಾಣಿ ಕುರ್ವತೇ ಜನಸಂಸದಿ |
ಇಷ್ವಾಸ್ತ್ರೇ ಚಾಪಸಂಧಾನೇ ಪಂಡಿತಾಸ್ತತ್ರ ಶೋಭನಾಃ ॥33॥
ಜನರ ಎದುರಿನಲ್ಲಿ ಆಶ್ಚರ್ಯಕರವಾದ ಅನೇಕ ಕಾರ್ಯಗಳನ್ನು ಮಾಡುತ್ತಾರೆ. ಅಂತಹ ಪಂಡಿತರು ಧನುರ್ವಿದ್ಯಾಭ್ಯಾಸಕಾಲದಲ್ಲಿ ಮಾತ್ರ ಶೋಭಿಸುವವರು (ಯುದ್ಧಕಾಲದಲ್ಲಲ್ಲ).
ಪರೇಷಾಂ ವಿವರಜ್ಞಾನೇ ಮನುಷ್ಯಾಚರಿತೇಷು ಚ |
ಅನ್ನಸಂಸ್ಕಾರದೋಷೇ ಚ ಪಂಡಿತಾಸ್ತತ್ರ ಶೋಭನಾಃ ॥34॥
ಇನ್ನೊಬ್ಬರ ದೋಷಗಳನ್ನು ಹುಡುಕುವುದರಲ್ಲಿ, ಮನುಷ್ಯ ನಡತೆಗಳನ್ನು ಪರೀಕ್ಷಿಸುವಲ್ಲಿ, ಮತ್ತು ಪಾಕದ ಗುಣದೋಷಗಳನ್ನೂ ಹೇಳುವ ವಿಷಯದಲ್ಲಿ ಮಾತ್ರ ಪಂಡಿತರು ಶೋಭಿಸುತ್ತಾರೆ.
ಪಂಡಿತಾನ್ ಪೃಷ್ಠತಃ ಕೃತ್ವಾ ಪರೇಷಾಂ ಗುಣವಾದಿನಃ |
ವಿಧೀಯತಾಂ ತಥಾ ನೀತಿರ್ಯಥಾ ವಧ್ಯೇತ ವೈ ಪರಃ ॥35॥
ಶತ್ರುಗಳ ಗುಣವನ್ನು ಪ್ರಶಂಸಿಸುವ ಪಂಡಿತರನ್ನು ಹಿಂದೆ ಹಾಕಿ ಶತ್ರುವು ನಾಶವನ್ನು ಹೊಂದುವಂತೆ ನೀತಿಯನ್ನು ಮಾಡುವವರಾಗಿ.
ಗಾಶ್ಚೈತಾಃ ಪ್ರತಿರಕ್ಷಂತು ಸೇನಾಂ ವ್ಯೂಹಂತು ಮಾ ಚಿರಮ್ |
ಸಂರಕ್ಷಾಶ್ಚ ವಿಧೀಯಂತಾಂ ಯತ್ರ ಯೋತ್ಸ್ಯಾಮಹೇ ಪರೈಃ ॥36॥
ತ(ಯ)ಥಾಽಸ್ಮಾಕಂ ಜಯೋ ವೀರ ಚಿಂತನೀಯಸ್ತಥಾ ತ್ವಯಾ ॥
ಈ ಗೋವುಗಳನ್ನು ರಕ್ಷಿಸಿ ಶೀಘ್ರವಾಗಿ ಸೈನ್ಯವನ್ನು ವ್ಯೂಹವನ್ನಾಗಿ ಮಾಡಿ. ನಾವು ಶತ್ರುಗಳ ಜೊತೆಯಲ್ಲಿ ಯುದ್ಧಮಾಡುವ ಕಡೆಯಲ್ಲಿ ಒಳ್ಳೆಯ ರಕ್ಷಣೆಯನ್ನು ಮಾಡುವವರಾಗಿ. ಎಲೈ ವೀರನಾದ ದುರ್ಯೋಧನನೇ, ನಮ್ಮ ಜಯವನ್ನು ಚಿಂತಿಸಿ ಅದರಂತೆ ನೀನು ಎಲ್ಲವನ್ನೂ ಮಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೇಳನೆಯ ಅಧ್ಯಾಯ
ಕರ್ಣನ ಆತ್ಮಶ್ಲಾಘನೆ ಮತ್ತು ಅರ್ಜುನನನ್ನು ಕೊಲ್ಲುವ ಮಿಥ್ಯಾಪ್ರತಿಜ್ಞೆ
ಕರ್ಣಃ
ಸರ್ವಾನಾಯುಷ್ಮತೋ ಭೀತಾನ್ ಸಂತ್ರಸ್ತಾನಿವ ಲಕ್ಷಯೇ |
ಅಯುದ್ಧಮನಸಶ್ಚೈವ ಸರ್ವಾನೇತಾನವಸ್ಥಿತಾನ್ ॥1॥
ಕರ್ಣ ಆಯುಷ್ಮಂತರಾದ ನೀವೆಲ್ಲರೂ ಭೀತರೂ ಸಂತ್ರಸ್ತರೂ ಆಗಿರುವುದನ್ನು ಗಮನಿಸುತ್ತಿದ್ದೇನೆ. ಎಲ್ಲರೂ ಯುದ್ದ ಮಾಡಲು ಮನಸ್ಸಿಲ್ಲದೆ ಕುಳಿತಿದ್ದೀರಿ.
ಯದ್ಯೇಷ ಜಾಮದಗ್ನ್ಯೋ ವಾ ಯದಿ ವೇಂದ್ರಃ ಪುರಂದರಃ |
ವಾಸುದೇವನ ಸಹಿತೋ ಯದಿ ಬೀಭತ್ಸುರಾಗತಃ ॥2॥

ಅಹಮೇನಂ ನಿರೋತ್ಸ್ಯಾಮಿ ವೇಲೇವ ವರುಣಾಲಯಮ್ ॥3॥
ಇವನು ಪರಶುರಾಮನೇ ಆಗಲಿ ಅಥವಾ ಪುರಂದರನಾದ ಇಂದ್ರನೇ ಆಗಲಿ ಅಥವಾ ಕೃಷ್ಣನಿಂದ ಸಹಿತನಾದ ಅರ್ಜುನನೇ ಆಗಲಿ, ತೀರವು ಸಮುದ್ರವನ್ನು ತಡೆದಂತೆ ನಾನು ಇವನನ್ನು ತಡೆಯುವೆನು.
ರುಗ್ಮಪುಂಖಾಃ ಪ್ರಸನ್ನಾಗ್ರಾ ಮುಕ್ತಾ ಹಸ್ತವತಾ ಮಯಾ |
ಛಾದಯಂತು ಶರಾಃ ಸೂರ್ಯಂ ಪಾರ್ಥಸ್ಯಾಯುರ್ನಿರೋಧಕಾಃ ॥4॥
ಪ್ರಶಸ್ತವಾದ ಹಸ್ತವುಳ್ಳ ನಾನು ಪ್ರಯೋಗಿಸುವ ಸುವರ್ಣಮಯವಾದ ಪುಂಖವನ್ನು ಹೊಂದಿರುವ, ಒಳ್ಳೆಯ ಅಗ್ರಭಾಗವನ್ನು ಹೊಂದಿರುವ ಅರ್ಜುನನ ಆಯುಃಕ್ಷಯಕಾರಕವಾದ ಬಾಣಗಳು ಸೂರ್ಯನನ್ನು ಮುಚ್ಚಲಿ.
ಮಮ ಚಾಪಪ್ರಯುಕ್ತಾನಾಂ ಶರಾಣಾಂ ನತಪರ್ವಣಾಮ್ |
ನಿರ್ವೃತ್ತಿರ್ಗಚ್ಛತಾಂ ನಾಸ್ತಿ ಸರ್ಪಾಣಾಂ ಶ್ವಸತಾಮಿವ ॥5॥
ನನ್ನ ಬಿಲ್ಲಿನಿಂದ ಹೊರಹೊಮ್ಮಿದ ಬಾಗಿದ ತುದಿಯುಳ್ಳ ಬಾಣಗಳಿಗೆ ಭುಸುಗುಟ್ಟುವ ಸರ್ಪಗಳಂತೆ ಉದ್ದೇಶವನ್ನು ಸಾಧಿಸದೆ ಸಮಾಧಾನವೇ ಇರುವುದಿಲ್ಲ.
ಶರಾಣಾಂ ಪುಂಖಸಕ್ತಾನಾಂ ಮೌರ್ವ್ಯಾಽಭಿಹತಯೋರ್ಭೃಶಮ್ |
ಶ್ರೂಯತೇ ತಳಯೋಃ ಶಬ್ದೋ ಭೇರ್ಯೋರಾಹತಯೋರಿವ ॥6॥
ಹೆದೆಯಿಂದ ಚಿಮ್ಮಿದ ಪುಂಖಗಳಿಂದ ಕೂಡಿದ ಬಾಣದ ಮತ್ತು ಹಸ್ತತಳಗಳ ಶಬ್ದವು ಹೊಡೆಯುವ ನಗಾರಿಯ ಶಬ್ದದಂತೆ ಕೇಳಿಬರುತ್ತದೆ.
ಏಕೋ ದ್ವೌ ಚತುರಃ ಪಂಚ ಕ್ವಚಿತ್ ಷಷ್ಟಿಂ ಕ್ವಚಿಚ್ಛತಮ್ |
ಹತಾನ್ ಪಶ್ಯತ ಮಾತಂಗಾನ್ ಕೀರ್ಣಾನೇಕೇಷುಣಾ ಮಯಾ ॥7॥
ನಾನು ಒಂದೇ ಬಾಣದಿಂದ ಒಂದು, ಎರಡು, ನಾಲ್ಕು, ಐದು, ಕೆಲವು ಸಲ ಅರವತ್ತು, ಕೆಲವು ಸಲ ನೂರು ಗಜಗಳನ್ನು ಹೊಡೆದು ರಣಭೂಮಿಯಲ್ಲಿ ಚೆಲ್ಲಾಡುವುದನ್ನು ನೋಡಿ.
ಮಯಾ ಪಶ್ಯತ ಮತ್ಸ್ಯಾನಾಮಿಷುಭಿರ್ನಿಹತಾನ್ ರಥಾನ್ |
ಏಕಂ ದ್ವೌ ಚತುರಃ ಪಂಚ ಕ್ವಚಿತ್ ಷಷ್ಟಿಂ ಕ್ವಚಿಚ್ಛತಮ್ ॥8॥
ನಾನು ಬಾಣಗಳಿಂದ ಹೊಡೆದು ಉರುಳಿಸುವ ಒಂದು, ಎರಡು, ನಾಲ್ಕು, ಐದು, ಕೆಲವೊಮ್ಮೆ ಅರವತ್ತು, ಕೆಲವೊಮ್ಮೆ ನೂರು ಮತ್ಸ್ಯರ ರಥಗಳನ್ನು ನೋಡಿ.
ಮದ್ಬಾಹುಮುಕ್ತೈರಿಷುಭಿಸ್ತೈಲಧೌತೈಶ್ಚ ಪತ್ರಿಭಿಃ |
ಖದ್ಯೋತೈರಿವ ಸಂಪೃಕ್ತಮಂತರಿಕ್ಷಂ ವಿರಾಜತಾಮ್ ॥9॥
ನನ್ನ ಬಾಹುಗಳಿಂದ ಮುಕ್ತವಾದ ತೈಲದಲ್ಲಿ ಸಾಣೆಯನ್ನು ಹಿಡಿದ ಪತ್ರಗಳಿಂದ ಕೂಡಿದ ಬಾಣಗಳಿಂದ ಸಂಪರ್ಕವನ್ನು ಹೊಂದಿದ ಅಂತರಿಕ್ಷವು ಮಿಣುಕು ಹುಳಗಳಿಂದಲೋ ಎಂಬಂತೆ ವಿರಾಜಿಸಲಿ.
ಧ್ವಜಾಗ್ರಾದ್ ವಾನರಸ್ತಸ್ಯ ಭಲ್ಲೇನಾಪಹತೋ ಮಯಾ |
ಅದ್ಯೈವ ಪತತಾಂ ಭೂಮೌ ವಿನದನ್ ಭೈರವಾನ್ ರವಾನ್ ॥10॥
ನನ್ನಿಂದ ಭಲ್ಲದಿಂದ ಹೊಡೆಯಲ್ಪಟ್ಟ ಅವನ ಧ್ವಜದ ಅಗ್ರಭಾಗದಿಂದ ಕಪಿಯು ಭೈರವನಾದಗಳನ್ನು ಮಾಡುತ್ತಾ ಇಂದೇ ಭೂಮಿಯಲ್ಲಿ ಬೀಳಲಿ.
ಶತ್ರೋರ್ಮಯಾಽಭಿಪನ್ನಾನಾಂ ಭೂತಾನಾಂ ಧ್ವಜವಾಸಿನಾಮ್ |
ದಿಶಃ ಪ್ರತಿಷ್ಠಮಾನಾನಾಮಸ್ತು ಶಬ್ದೋ ದಿವಂ ಗತಃ ॥11॥
ನನ್ನ ಆಕ್ರಮಣಕ್ಕೆ ಗುರಿಯಾದ ಶತ್ರುವಿನ ಧ್ವಜದಲ್ಲಿ ವಾಸಿಸುವ ದಿಕ್ಕು ದಿಕ್ಕುಗಳಿಗೆ ಓಡುವ ಭೂತಗಳ ಧ್ವನಿಯು ಆಕಾಶವನ್ನು ಮುಟ್ಟಲಿ.
ಕ್ರುದ್ಧೇನಾಸ್ತ್ರಂ ಮಯಾ ಮುಕ್ತಂ ನಿರ್ದಹೇತ್ ಪೃಥಿವೀಮಿಮಾಮ್ |
ಸ್ಥಿತಂ ಸಂಗ್ರಾಮಶಿರಸಿ ಪಾರ್ಥಮೇಕಾಕಿನಂ ಕಿಮು ॥12॥
ಕ್ರುದ್ಧನಾದ ನಾನು ಪ್ರಯೋಗಿಸಿದ ಅಸ್ತ್ರವು ಈ ಭೂಮಿಯನ್ನೇ ಸುಟ್ಟೀತು. ಇನ್ನು ರಣರಂಗದಲ್ಲಿರುವ ಏಕಾಕಿಯಾದ ಅರ್ಜುನನನ್ನು ಸುಡುವುದು ಯಾವ ದೊಡ್ಡ ವಿಷಯ?
ಸಮಾಹಿತಶ್ಚ ಬೀಭತ್ಸುರ್ವರ್ಷಾಣ್ಯಷ್ಟೌ ಚ ಪಂಚ ಚ |
ಜಾತಸ್ನೇಹಶ್ಚ ಯುದ್ಧಸ್ಯ ಮಯಿ ಸಂದರ್ಶಯಿಷ್ಯತಿ ॥13॥
ಹದಿಮೂರು ವರ್ಷಗಳ ಕಾಲ ಸಮಾಧಾನದಿಂದಿದ್ದ ಅರ್ಜುನನು ಯುದ್ಧದಲ್ಲಿ ಸ್ನೇಹವನ್ನು ಹೊಂದಿದವನಾಗಿ ನನಗೆ ತನ್ನ ಕೌಶಲವನ್ನು ತೋರಿಸುವನು.
ಪಾತ್ರೀಭೂತಸ್ತು ಕೌಂತೇಯೋ ಬ್ರಾಹ್ಮಣೋ ಗುಣವಾನಿವ |
ಶರಮಾಲಾಂ ಪ್ರಗೃಹ್ಣಾತು ಮತ್ಪ್ರವೃಷ್ಟಾಂ ಸ್ವಧಾಮಿವ ॥14॥
ಶ್ರಾದ್ಧಾನ್ನ ಭೋಜನಕ್ಕೆ ಗುಣವಂತನಾದ ಬ್ರಾಹ್ಮಣನು ಪಾತ್ರನಾದಂತೆ ಅರ್ಜುನನು ನನ್ನ ಶರಗಳ ಮಾಲೆಗಳಿಗೆ ಯೋಗ್ಯನಾದ ಅವನು ಶರಮಾಲೆಯನ್ನು ಸ್ವೀಕರಿಸಲಿ.
ಏಷ ಚಾಪಿ ಮಹೇಷ್ವಾಸಸ್ತ್ರಿಷು ಲೋಕೇಷು ವಿಶ್ರುತಃ |
ಅಹಂ ಚಾಪಿ ಕುರುಶ್ರೇಷ್ಠಾದರ್ಜುನಾನ್ನಾವಮಃ ಕ್ವಚಿತ್ ॥15॥
ಈ ಅರ್ಜುನನೂ ಸಹ ಮೂರುಲೋಕಗಳಲ್ಲಿಯೂ ಪ್ರಖ್ಯಾತನಾದ ಮಹಾಧನುರ್ಧಾರಿಯಾದವನು. ನಾನಾದರೂ ಕುರುಶ್ರೇಷ್ಠನಾದ

ಅರ್ಜುನನಿಗಿಂತ ಯಾವ ರೀತಿಯಲ್ಲೂ ಕಡಿಮೆಯಲ್ಲ.
ಮಮ ಹಸ್ತಪ್ರಮುಕ್ತಾನಾಂ ಶರಾಣಾಂ ನತಪರ್ವಣಾಮ್ ॥16॥
ತುಮುಲಃ ಶ್ರೂಯತೇ ಶಬ್ದಃ ಷಟ್ಪದಾಂ ಗಾಯತಾಮಿವ |
ಇತಶ್ಚೇತಶ್ಚ ಮುಕ್ತಾನಾಂ ಶರಾಣಾಂ ನತಪರ್ವಣಾಮ್ ॥17॥
ಅಂತರಾ ಸಂಪತದ್ಭಿಸ್ತು ಗೃಧ್ರಪಕ್ಷೈಃ ಶಿತೈಃ ಶರೈಃ |
ಶಲಭಾನಾಮಿವಾಕಾಶೇ ಚ್ಛಾಯಾ ಸಂಪ್ರತಿ ದೃಶ್ಯತಾಮ್ ॥18॥
ನನ್ನ ಹಸ್ತದಿಂದ ನಿರ್ಮುಕ್ತವಾದ ಬಾಗಿದ ತುದಿಯುಳ್ಳ ಬಾಣಗಳ ತೀವ್ರವಾದ ಶಬ್ದವು ಭೃಂಗಗಳ ಗಾನದಂತೆ ಕೇಳಿಬರುತ್ತದೆ. ನಾನು ಅಲ್ಲಲ್ಲಿ ಪ್ರಯೋಗಿಸುವ ಬಾಗಿದ ತುದಿಯುಳ್ಳ ಬಾಣಗಳ ಮತ್ತು ಮಧ್ಯದಲ್ಲಿ ಸಂಚರಿಸುವ ಗೃಧ್ರಪಕ್ಷಗಳನ್ನು ಹೊಂದಿದ ನಿಶಿತವಾದ ಬಾಣಗಳ ಛಾಯೆಯು ಆಕಾಶದಲ್ಲಿ ಹಾರುವ ಪತಂಗಗಳ ಛಾಯೆಯಂತೆ ಈ ದಿನ ಕಂಡುಬರಲಿ.
ಅದ್ಯ ಮತ್ಕಾರ್ಮುಕೋತ್ಸೃಷ್ಟಾಃ ಶರಾಃ ಪಾರ್ಥಸ್ಯ ಮರ್ಮಗಾಃ |
ಶರೀರಮತಿಸರ್ಪಂತು ವಲ್ಮೀಕಮಿವ ಪನ್ನಗಾಃ ॥19॥
ಈ ದಿನ ನನ್ನ ಬಿಲ್ಲಿನಿಂದ ಹೊರಹೊಮ್ಮಿದ ಬಾಣಗಳು ಅರ್ಜುನನ ಮರ್ಮಗಳನ್ನು ಭೇದಿಸಿ ಸರ್ಪಗಳು ಹುತ್ತವನ್ನು ಹತ್ತುವಂತೆ ಅವನ ಶರೀರವನ್ನು ಹತ್ತಲಿ.
ಬರ್ಹಿಬರ್ಹಿಣರಾಜಾನಾಂ ಬರ್ಹಿಣಾಂ ಬರ್ಹಿಣಾಮಿವ |
ಪತತಾಂ ಪತತಾಂ ಘೋಷಃ ಪತತಾಂ ಪತತಾಮಿವ ॥20॥
ಒಂದರ ಹಿಂದೆ ಒಂದು ಹೋಗುವ ನವಿಲುಗಳಂತೆ, ಒಂದರ ಹಿಂದೆ ಒಂದು ಹೋಗುವ ನವಿಲುಗರಿಯ ಪುಂಖವನ್ನು ಹೊಂದಿದ ನನ್ನ ಬಾಣಗಳ ಶಬ್ದವು, ಆಕಾಶದಲ್ಲಿ ಒಂದರ ಹಿಂದೆ ಒಂದರಂತೆ ಹೋಗುವ ಪಕ್ಷಿಗಳ ಮಾಲೆಯ ಶಬ್ದದಂತೆ ಎಲ್ಲರಿಂದಲೂ ಕೇಳಲ್ಪಡಲಿ.
ಅದ್ಯ ತ್ವಹಮೃಣಾನ್ಮೋಕ್ಷ್ಯೇ ಯನ್ಮಯಾ ತತ್ ಪ್ರತಿಶ್ರುತಮ್ |
ಧಾರ್ತರಾಷ್ಟ್ರಸ್ಯ ತತ್ಕಾಲೇ ನಿಹತ್ಯ ಸಮರೇಽರ್ಜುನಮ್ ॥21॥
ಈ ದಿನ ಯುದ್ಧದಲ್ಲಿ ಅರ್ಜುನನನ್ನು ಕೊಂದು ನಾನು ಹಿಂದೆ ಆ ಕಾಲದಲ್ಲಿ ದುರ್ಯೋಧನನಿಗೆ ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಿ ನನ್ನನ್ನು ಋಣಮುಕ್ತನನ್ನಾಗಿ ಮಾಡಿಕೊಳ್ಳುವೆನು.
ಇಂದ್ರಾಶನಿಸಮಸ್ಪರ್ಶಂ ಮಹೇಂದ್ರಸಮವಿಕ್ರಮಮ್ |
ಅರ್ದಯಿಷ್ಯಾಮ್ಯಹಂ ಪಾರ್ಥಮುಲ್ಕಾಭಿರಿವ ಕುಂಜರಮ್ ॥22॥
ಇಂದ್ರನ ವಜ್ರಾಯುಧಕ್ಕೆ ಸಮನಾದ ಸ್ಪರ್ಶವುಳ್ಳ, ಮಹೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಅರ್ಜುನನನ್ನು ಉಲ್ಕೆಗಳಿಂದ ಆನೆಯನ್ನು ಹಿಂಸಿಸಿದಂತೆ ನಾನು ಹಿಂಸಿಸುವೆನು.
ಶರಜಾಲಮಹಾಜ್ವಾಲಮಸಿಶಕ್ತಿಗದೇಂಧನಮ್ |
ನಿರ್ದಹಂತಮನೀಕಾನಿ ಶಮಯಿಷ್ಯೇಽರ್ಜುನಾನಲಮ್ ॥23॥
ಬಾಣಸಮೂಹಗಳೆಂಬ ಮಹಾಜ್ವಾಲೆಗಳುಳ್ಳ ಖಡ್ಗ, ಶಕ್ತಿ ಮತ್ತು ಗದಾ ಎಂಬ ಇಂಧನಗಳುಳ್ಳ, ಶತ್ರುಸೈನ್ಯವನ್ನು ದಹಿಸುವ ಅರ್ಜುನನೆಂಬ ಅಗ್ನಿಯನ್ನು ನಾನು ಶಾಂತಗೊಳಿಸುವೆನು.
ಪಾಂಡವಾಗ್ನಿಮಹಂ ದೀಪ್ತಂ ಪ್ರದಹಂತಮಿವಾಹಿತಮ್ |
ಅಶ್ವವೇಗಪುರೋವಾತೋ ರಥೌಘಸ್ತನಯಿತ್ನುಮಾನ್ |
ಶರಧಾರೋ ಮಹಾಮೇಘಃ ಶಮಯಿಷ್ಯಾಮಿ ಪಾಂಡವಮ್ ॥24॥
ಶತ್ರುಗಳನ್ನು ಸುಡುವ ಅಹಿತಕರವಾದ ಪಾಂಡವಾಗ್ನಿ ಎಂಬ ಜ್ವಲಿಸುವ ಅಗ್ನಿಯನ್ನು ಮಹಾಮೇಘನಾದ ನಾನು ಅಶ್ವಗಳ ವೇಗ ಎಂಬ ಮಳೆಯ ಮೊದಲಿನ ಗಾಳಿಯನ್ನು ಹೊಂದಿದವನಾಗಿ, ರಥಸಮೂಹಗಳ ಗುಡುಗುಗಳನ್ನು ಹೊಂದಿದವನಾಗಿ, ಬಾಣಗಳೆಂಬ ಮಳೆಯ ಧಾರೆಗಳನ್ನು ಹೊಂದಿದವನಾಗಿ, ಈ ದಿನ ಶಾಂತಗೊಳಿಸುವೆನು.
ರಥಾದತಿರಥಂ ಲೋಕೇ ಸರ್ವಶಸ್ತ್ರಭೃತಾಂ ವರಮ್ |
ವಿವಶಂ ಪಾರ್ಥಮಾದಾಸ್ಯೇ ಗರುತ್ಮಾನಿವ ಪನ್ನಗಮ್ ॥25॥
ಲೋಕದಲ್ಲಿ ಎಲ್ಲ ರಥರಿಗಿಂತಲೂ ಶ್ರೇಷ್ಠರಥನಾದವನೂ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ ಆದ ಅರ್ಜುನನನ್ನು ನಾನು ಈ ದಿನ ಗರುಡನು ಸರ್ಪವನ್ನು ನುಂಗಿದಂತೆ ವಿವಶನಾದ ಅವನನ್ನು ನುಂಗಿಬಿಡುವೆನು.
ಸುತೇಜನೈಃ ರುಗ್ಮಪುಂಖೈಃ ಸುಧೌತೈರ್ನತಪರ್ವಭಿಃ |
ಆಚಿತಂ ಪಶ್ಯ ಕೌಂತೇಯಂ ಕರ್ಣಿಕಾರೈರಿವಾಚಿತಮ್ ॥26॥
ಬಹಳ ತೀಕ್ಷ್ಣವಾದ ರುಗ್ಮಪುಂಖವನ್ನು ಹೊಂದಿದ ಚೆನ್ನಾಗಿ ಸಾಣೆಯನ್ನು ಹಿಡಿದ ಬಾಗಿದ ತುದಿಗಳುಳ್ಳ ನನ್ನ ಬಾಣಗಳಿಂದ ಅರ್ಜುನನು ಕರ್ಣಿಕಾರ ಪುಷ್ಪಗಳಿಂದ ತುಂಬಲ್ಪಡುವಂತೆ ತುಂಬಲ್ಪಡುವುದನ್ನು ಈ ದಿನ ನೋಡುವವನಾಗು.
ಕ್ಷುರಪ್ರೈರ್ನಿಶಿತೈರ್ಭಲ್ಲೈರ್ನಿಪತದ್ಭಿಶ್ಚ ಮಾಮಕೈಃ |
ಸಮ್ಮೂಢಚೇತಾಃ ಕೌಂತೇಯಃ ಕರ್ತವ್ಯಂ ನಾಭಿಪತ್ಸ್ಯತೇ ॥27॥
ನನ್ನ ಹರಿತವಾದ ಕ್ಷುರಪ್ರಗಳಿಂದಲೂ, ಮೇಲೆರಗುವ ಭಲ್ಲಗಳಿಂದಲೂ ದಿಗ್ಭ್ರಾಂತನಾದ ಅರ್ಜುನನು ಈ ದಿನ ಏನು ಮಾಡಬೇಕೆಂದು ತಿಳಿಯುವುದಿಲ್ಲ.
ಅದ್ಯ ದುರ್ಯೋಧನಸ್ಯಾಹಂ ಶೋಕಂ ಹೃದಿ ಚಿರಂ ಸ್ಥಿತಮ್ |
ಸಮೂಲಮಪನೇಷ್ಯಾಮಿ ಹರನ್ ಪಾರ್ಥಶಿರಃ ಶರೈಃ ॥28॥
ಈ ದಿನ ಅರ್ಜುನನ ಶಿರಸ್ಸನ್ನು ಬಾಣಗಳಿಂದ ತೆಗೆದು ದುರ್ಯೋಧನನ ಹೃದಯದಲ್ಲಿ ಬಹಳ ಕಾಲದಿಂದ ಇರುವ ಶೋಕವನ್ನು

ಮೂಲ ಸಹಿತವಾಗಿ ನಾಶಮಾಡುವೆನು.
ಹತಾಶ್ವಂ ವಿರಥಂ ಪಾರ್ಥಂ ಪೌರುಷೇ ಪರ್ಯವಸ್ಥಿತಮ್ |
ನಿಃಶ್ವಸಂತಂ ಯಥಾ ನಾಗಮದ್ಯ ಪಶ್ಯಂತು ಕೌರವಾಃ ||29||
ತನ್ನ ಅಶ್ವಗಳನ್ನೂ ಮತ್ತು ರಥಗಳನ್ನೂ ಕಳೆದುಕೊಂಡು ಆದರೂ ಪೌರುಷವನ್ನು ಆಶ್ರಯಿಸಿ ಸರ್ಪದಂತೆ ಉಸಿರುಬಿಡುವ ಅರ್ಜುನನನ್ನು ಈ ದಿನ ಕೌರವರು ನೋಡಲಿ.
ಜಾಮದಗ್ನ್ಯಾನ್ಮಯಾ ಲಬ್ಧಂ ದಿವ್ಯಾಸ್ತ್ರಮೃಷಿಸತ್ತಮಾತ್ |
ತದುಪಾಶ್ರಿತ್ಯ ವೀರ್ಯಂ ಚ ಯುಧ್ಯೇಯಮಪಿ ವಾಸವಮ್ ||30||
ಋಷಿಶ್ರೇಷ್ಠರಾದ ಪರಶುರಾಮರಿಂದ ಲಬ್ಧವಾದ ದಿವ್ಯಾಸ್ತ್ರವನ್ನು ಅವಲಂಬಿಸಿ ಮತ್ತು ನನ್ನ ಪರಾಕ್ರಮವನ್ನು ಅವಲಂಬಿಸಿ ನಾನು ಇಂದ್ರನ ಜೊತೆಯಲ್ಲಿ ಬೇಕಾದರೂ ಯುದ್ಧವನ್ನು ಮಾಡಿಯೇನು.
ಕಾಮಂ ಗಚ್ಛಂತು ಕುರವಃ ಗಾ ಪ್ರಗೃಹ್ಯ ಪರಂತಪಾಃ |
ರಥೇಷು ವಾಽವತಿಷ್ಠಂತೋ ಯುದ್ಧಂ ಪಶ್ಯತು ಮಾಮಕಮ್ ||31||
ಪರಂತಪರಾದ ಕುರುಗಳು ಗೋವುಗಳನ್ನು ತೆಗೆದುಕೊಂಡು ತಮ್ಮ ಇಚ್ಛೆ ಬಂದಂತೆ ಹೊರಟುಹೋಗಲಿ ಅಥವಾ ರಥಗಳಲ್ಲಿಯೇ ಕುಳಿತು ನಾನು ಮಾಡುವ ಯುದ್ಧವನ್ನು ನೋಡಲಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ||
|| ಗೋಗ್ರಹಣಪರ್ವಣಿ ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೆಂಟನೆಯ ಅಧ್ಯಾಯ
ಅರ್ಜುನನ ದುರ್ಜಯತ್ವವನ್ನು ಹೇಳಿ ಕೃಪಾಚಾರ್ಯರಿಂದ ಕರ್ಣನ ನಿಂದೆ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ನೀತಿಶಾಸ್ತ್ರವಿಶಾರದಃ |
ಆಚಾರ್ಯಃ ಕುರುವೀರಾಣಾಂ ಕೃಪಃ ಶಾರದ್ವತೋಽಬ್ರವೀತ್ ||1||
ವೈಶಂಪಾಯನ ಅವನ (ಕರ್ಣನ) ಆ ಮಾತುಗಳನ್ನು ಕೇಳಿ ಕುರುವೀರರ ಆಚಾರ್ಯರಾದ, ಶರದ್ವಂತನ ಪುತ್ರರಾದ, ನೀತಿಶಾಸ್ತ್ರವಿಶಾರದರಾದ ಕೃಪಾಚಾರ್ಯರು ಮಾತನಾಡಿದರು.
ಸದೈವ ತವ ರಾಧೇಯ ಯುದ್ಧೇ ಕ್ರೂರತರಾ ಮತಿಃ |
ನಾರ್ಥಾನಾಂ ಪ್ರಕೃತಿಂ ವೇತ್ಸಿ ನಾನುಬಂಧಮವೇಕ್ಷಸೇ ||2||
ಎಲೈ ಕರ್ಣನೇ, ನಿನಗೆ ಯಾವಾಗಲೂ ಯುದ್ಧದ ವಿಷಯದಲ್ಲಿ ಬಹಳ ಕ್ರೂರವಾದ ಬುದ್ಧಿಯಿದೆ. ವಸ್ತುಗಳ ಸ್ವಭಾವವನ್ನು ನೀನು ತಿಳಿದಿಲ್ಲ. ಯುದ್ಧಕ್ಕೆ ಅನುಕೂಲವಾದ ಕಾಲವನ್ನೂ ನೀನು ತಿಳಿದಿಲ್ಲ.
ನಯಾ ಹಿ ಬಹವಃ ಸಂತಿ ಶಾಸ್ತ್ರಾಣ್ಯಾಶ್ರಿತ್ಯ ಚಿಂತಿತಾಃ |
ತೇಷಾಂ ಯುದ್ಧಂ ಸುಪಾಪಿಷ್ಠಂ ವೇದಯಂತಿ ಪುರಾವಿದಃ ||3||
ಶಾಸ್ತ್ರವನ್ನು ಆಧರಿಸಿ ಚಿಂತನೆ ಮಾಡಿರುವ ನೀತಿಗಳು ಸಾಮ, ದಾನ ಮೊದಲಾದ ಅನೇಕ ವಿಧವಾಗಿವೆ. ಅವುಗಳಲ್ಲಿ ಯುದ್ಧವು ಅತ್ಯಂತ ಪಾಪಿಷ್ಠವಾದುದೆಂದು ಪ್ರಾಚೀನರು ಹೇಳುತ್ತಾರೆ.
ದೇಶಕಾಲೇನ ಸಂಯುಕ್ತಂ ಯುದ್ಧಂ ವಿಜಯದಂ ಭವೇತ್ |
ಹೀನಕಾಲಂ ತದೇವೇಹ ಅನರ್ಥಾಯೋಪಕಲ್ಪತೇ ||4||
ಯೋಗ್ಯವಾದ ದೇಶಕಾಲಗಳಿಂದ ಕೂಡಿದ ಯುದ್ಧವು ಜಯವನ್ನು ತಂದುಕೊಡುತ್ತದೆ. ಅನುಚಿತಕಾಲದಲ್ಲಿ ಮಾಡಿದ ಅದೇ ಯುದ್ಧವು ಅನರ್ಥಕ್ಕೆ ಕಾರಣವಾಗುತ್ತದೆ.
ದೇಶಕಾಲೇನ ವಿಕ್ರಾಂತಂ ಕಲ್ಯಾಣಾಯ ವಿಧೀಯತೇ |
ಆನುಕೂಲ್ಯೇನ ಕಾರ್ಯಾಣಾಮುತ್ತರಂ ತು ವಿಧೀಯತೇ ||5||
ಕಾರ್ಯಗಳಿಗೆ ಅನುಕೂಲವಾದ ದೇಶಕಾಲಗಳನ್ನು ಅನುಸರಿಸಿ ಮಾಡಿದ ಪರಾಕ್ರಮವು ಕಲ್ಯಾಣವನ್ನು ಉಂಟುಮಾಡುತ್ತದೆ. ಅದಕ್ಕೆ ಯೋಗ್ಯವಾದ ಫಲವು ದೊರಕುತ್ತದೆ.
ಭಾರಂ ಹಿ ರಥಕಾರಸ್ಯ ನ ವ್ಯವಸ್ಯಂತಿ ಪಂಡಿತಾಃ |
ಪರಿಚಿಂತ್ಯ ತು ಪಾರ್ಥೇನ ಸನ್ನಿಪಾತೋ ನ ನಃ ಕ್ಷಮಃ ||6||
ಬಡಗಿಗೆ ಇರುವ ಕಾರ್ಯದ ಭಾರವನ್ನು ಪಂಡಿತನು ತಿಳಿಯುವುದಿಲ್ಲ. ವಿಮರ್ಶೆ ಮಾಡಿ ನೋಡಿದರೆ ಅರ್ಜುನನ ಮೇಲೆ ಎರಗುವುದು ನಮ್ಮಿಂದ ಸಾಧ್ಯವಿಲ್ಲ.
ಏಕೋ ಹಿ ಶತ್ರೂನ್ ಸಮರೇ ಸಮರ್ಥಃ ಪ್ರತಿಬಾಧಿತುಮ್ |
ಏಕಃ ಕುರೂನಭ್ಯಗಮದ್ ಏಕಶ್ಚಾಗ್ನಿಮತರ್ಪಯತ್ ||7||
ಅವನೊಬ್ಬನೇ ಯುದ್ಧದಲ್ಲಿ ಶತ್ರುವನ್ನು ಬಾಧಿಸಲು ಸಮರ್ಥನಾಗಿದ್ದಾನೆ. ದಿಗ್ವಿಜಯ ಕಾಲದಲ್ಲಿ ಉತ್ತರ ಕುರುಗಳನ್ನು ಅವನೊಬ್ಬನೇ ಗೆದ್ದನು ಮತ್ತು ಏಕಾಕಿಯಾಗಿಯೇ ಅಗ್ನಿಯನ್ನು ತೃಪ್ತಿಪಡಿಸಿದನು (ಲಕ್ಷಾಲಂಕಾರ).
ಏಕಶ್ಚ ಪಂಚವರ್ಷಾಣಿ ಬ್ರಹ್ಮಚರ್ಯಮಧಾರಯತ್ |
ಏಕಃ ಸುಭದ್ರಾಮಾರೋಪ್ಯ ದ್ವೈರಥೇ ಕೃಷ್ಣಮಾಹ್ವಯತ್ ||8||

ಒಬ್ಬನೇ ಐದುವರ್ಷಗಳ ಕಾಲ ಬ್ರಹ್ಮಚರ್ಯವ್ರತವನ್ನು ಧರಿಸಿದನು. ಒಬ್ಬನೇ ಸುಭದ್ರೆಯನ್ನು ರಥದಲ್ಲಿ ಕೂಡಿಸಿಕೊಂಡು ದ್ವೈರಥ ಯುದ್ಧದಲ್ಲಿ ಕೃಷ್ಣನನ್ನು ಆಹ್ವಾನ ಮಾಡಿದನು.
ಸೈಂಧವಂ ವನವಾಸೇ ತು ಜಿತ್ವಾ ಕೃಷ್ಣಾಮಥಾನಯತ್ |
ಏಕಶ್ಚ ಪಂಚ ವರ್ಷಾಣಿ ಶಕ್ರಾದಸ್ತ್ರಾಣ್ಯಶಿಕ್ಷಯತ್ ॥9॥
ಏಕಃ ಸಂಯಮಿನೀಂ ಜಿತ್ವಾ ಕುರೂಣಾಮಕರೋದ್ ಯಶಃ ॥10॥
ಅವನು ವನವಾಸ ಕಾಲದಲ್ಲಿ ಸೈಂಧವನನ್ನು ಒಬ್ಬನೇ ಗೆದ್ದು ದ್ರೌಪದಿಯನ್ನು ಹಿಂದಕ್ಕೆ ಕರೆದುಕೊಂಡು ಬಂದನು. ಐದುವರ್ಷಗಳ ಕಾಲ ಇಂದ್ರನಿಂದ ಒಬ್ಬನೇ ಅಸ್ತ್ರಗಳನ್ನು ಕಲಿತನು. ಒಬ್ಬನೇ ಯಮಪಟ್ಟಣವಾದ ಸಂಯಮಿನಿಗೆಹೋಗಿ ಗೆದ್ದು ಕುರುಗಳಿಗೆ ಕೀರ್ತಿಯನ್ನು ಉಂಟುಮಾಡಿದನು.
ಏಕೋ ಗಂಧರ್ವರಾಜಾನಂ ಚಿತ್ರಸೇನಮರಿಂದಮಃ |
ವಿಜಿಗ್ಯೇ ತರಸಾ ಸಂಖ್ಯೇ ಸೇನಾಂ ಚಾಸ್ಯ ಸುದುರ್ಜಯಾಮ್ ॥11॥
ಅರಿಂದಮನಾದ ಅವನು ಒಬ್ಬನೇ ಗಂಧರ್ವರಾಜನಾದ ಚಿತ್ರಸೇನನನ್ನು ಮತ್ತು ದುರ್ಜಯವಾದ ಅವನ ಸೈನ್ಯವನ್ನು ಯುದ್ಧದಲ್ಲಿ ಶೀಘ್ರವಾಗಿ ಗೆದ್ದನು.
ಪಾಂಚಾಲೀ ಶ್ರೀಮತೀ ಪ್ರಾಪ್ತಾ ಕ್ಷತ್ರಂ ಜಿತ್ವಾ ಸ್ವಯಂವರೇ |
ಆದಾಯ ಗತವಾನ್ ಪಾರ್ಥೋ ಭವಾನ್ ಕ್ವ ನು ಗತಸ್ತದಾ ॥12॥
ಸ್ವಯಂವರದಲ್ಲಿ ಕ್ಷತ್ರಿಯರನ್ನು ಗೆದ್ದು ಕಾಂತಿಯುಕ್ತಳಾದ ಪಾಂಚಾಲಿಯನ್ನು ಪಡೆದು, ಅರ್ಜುನನು ಅವಳನ್ನು ಕರೆದುಕೊಂಡು ಹೋಗುವಾಗ ನೀನು ಎಲ್ಲಿಗೆ ಹೋಗಿದ್ದೆ?
ತಥಾ ನಿವಾತಕವಚಾಃ ಕಾಲಕೇಯಾಶ್ಚ ದಾನವಾಃ |
ದೈವತೈರಪ್ಯವಧ್ಯಾಸ್ತೇ ಏಕೇನ ಯುಧಿ ಪಾತಿತಾಃ ॥13॥
ಏಕಃ ಕಿರಾತರೂಪೇಣ ಸ್ಥಿತಂ ರುದ್ರಮಯೋಧಯತ್ ॥14॥
ಅದರಂತೆ ದೇವತೆಗಳಿಗೂ ಅವಧ್ಯರಾದ ನಿವಾತಕವಚರು ಮತ್ತು ಕಾಲಕೇಯರೆಂಬ ದಾನವರನ್ನು ಅವನೊಬ್ಬನೇ ಯುದ್ಧದಲ್ಲಿ ಸೋಲಿಸಿದನು. ಒಬ್ಬನೇ ಕಿರಾತರೂಪದಲ್ಲಿದ್ದ ರುದ್ರದೇವರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಏಕೇನ ಹಿ ತ್ವಯಾ ಕರ್ಣ ಕಿಂ ನಾಮೇಹ ಕೃತಂ ಪುರಾ |
ಏಕೈಕೇನ ಯಥಾ ತೇಷಾಂ ಭೂಮಿಪಾಲಾ ವಶೇ ಕೃತಾಃ ॥15॥
ಎಲೈ ಕರ್ಣನೇ, ಅವರಲ್ಲಿ ಒಬ್ಬೊಬ್ಬರೂ ಏಕಾಕಿಯಾಗಿ ಅನೇಕ ರಾಜರನ್ನು ಗೆದ್ದಂತೆ ನೀನು ಒಬ್ಬನೇ ಹಿಂದೆ ಯಾವ ಕಾರ್ಯವನ್ನು ಮಾಡಿದ್ದೀಯೆ?
ಇಂದ್ರೋಽಪಿ ಹಿ ನ ಪಾರ್ಥೇನ ಸಂಯುಗೇ ಯೋದ್ಧುಮರ್ಹತಿ |
ಯಸ್ತೇನಾಶಂಸತೇ ಯೋದ್ಧುಂ ಕರ್ತವ್ಯಂ ತಸ್ಯ ಭೈಷಜಮ್ ॥16॥
ಇಂದ್ರನೂ ಸಹ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಸಾಧ್ಯವಾಗುವುದಿಲ್ಲ. ಯಾವನು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆನೆಂದು ಆಶಿಸುತ್ತಾನೆಯೋ ಅವನಿಗೆ ಚಿಕಿತ್ಸೆಯನ್ನು ಮಾಡಬೇಕಾಗುತ್ತದೆ.
ಆಶೀವಿಷಸ್ಯ ಕ್ರುದ್ಧಸ್ಯ ಪಾಣಿಮುದ್ಯಮ್ಯ ದಕ್ಷಿಣಮ್ |
ಅವಮೃಜ್ಯ ಪ್ರದೇಶಿನ್ಯಾ ದಂಷ್ಟ್ರಾಮಾದಾತುಮಿಚ್ಛತಿ ॥17॥
ಕ್ರೋಧಗೊಂಡ ಮಹಾವಿಷವುಳ್ಳ ಸರ್ಪದ ತಲೆಯನ್ನು ಬಲಗೈಯಿಂದ ನೇವರಿಸಿ ನಿನ್ನ ತೋರುಬೆರಳಿನಿಂದ ಅದರ ಕೋರೆಯ ಹಲ್ಲನ್ನು ಕೀಳಲು ಬಯಸುತ್ತಿದ್ದೀಯೆ.
ಅಥವಾ ಕುಂಜರಂ ಮತ್ತಮೇಕಮೇಕಚರಂ ವನೇ |
ಅನಂಕುಶಂ ಸಮಾರುಹ್ಯ ನಗರಂ ಯಾತುಮಿಚ್ಛಸಿ ॥18॥
ಅಥವಾ ಕಾಡಿನಲ್ಲಿ ಮದದಿಂದ ಕೂಡಿ ಒಂಟಿಯಾಗಿ ಸಂಚರಿಸುವ, ಅಂಕುಶರಹಿತವಾದ ಆನೆಯನ್ನು ಏರಿ ನಗರಕ್ಕೆ ಬರಲು ಇಚ್ಛಿಸುತ್ತಿದ್ದೀಯೆ.
ಸಮಿದ್ಧಂ ಪಾವಕಂ ಚಾಪಿ ಘೃತಮೇದೋವಸಾಹುತಮ್ |
ಘೃತಾಕ್ತಶ್ಚೀರವಾಸಾಸ್ತ್ವಂ ಮಧ್ಯೇನೋತ್ತರ್ತುಮಿಚ್ಛಸಿ ॥19॥
ಅಥವಾ ಘೃತ, ಮೇಧಸ್ಸು ಮತ್ತು ವಸೆಗಳಿಂದ ಹೋಮವನ್ನು ಮಾಡಿದ ಜ್ವಲಿಸುತ್ತಿರುವ ಅಗ್ನಿಯನ್ನು ನೀನು ಘೃತದಲ್ಲಿ ಅದ್ದಿದ ನಾರುಮಡಿಯನ್ನು ಉಟ್ಟು ಅದರ ಮಧ್ಯದಲ್ಲಿ ದಾಟಲು ಇಚ್ಛಿಸುತ್ತಿದ್ದೀಯೆ.
ಆತ್ಮಾನಂ ಯಃ ಸಮಾಬಧ್ಯ ಕಂಠೇ ಬದ್ಧ್ವಾ ತಥಾ ಶಿಲಾಮ್ |
ಸಮುದ್ರಂ ಪ್ರತರನ್ ದೋರ್ಭ್ಯಾಂ ತತ್ರ ಕಿಂ ಕರ್ಣ ಪೌರುಷಮ್ ॥
ತನ್ನ ಕೈಕಾಲುಗಳನ್ನೂ ಕಟ್ಟಿಕೊಂಡು, ಕಂಠದಲ್ಲಿ ದೊಡ್ಡ ಶಿಲೆಯನ್ನೂ ಕಟ್ಟಿಕೊಂಡು ತನ್ನ ಬಾಹುಗಳಿಂದ ಸಮುದ್ರವನ್ನು ದಾಟುವವನಂತೆ ಇದ್ದೀಯೆ. ಕರ್ಣನೇ, ನಿನ್ನಲ್ಲಿ ಯಾವ ಪೌರುಷವಿದೆ?
ಅಕೃತಾಸ್ತ್ರಃ ಕೃತಾಸ್ತ್ರಂ ವೈ ಬಲವಂತಂ ಸುದುರ್ಬಲಃ |
ತಾದೃಶಂ ಕರ್ಣ ಯಃ ಪಾರ್ಥಂ ಯೋದ್ಧುಮಿಚ್ಛೇತ್ ಸ ದುರ್ಮತಿಃ ॥
ಎಲೈ ಕರ್ಣನೇ, ಯಾವನು ಅಂತಹ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತಾನೆಯೋ ಅವನು ಅಸ್ತ್ರಜ್ಞಾನವಿಲ್ಲದವನು ಅಸ್ತ್ರಜ್ಞಾನಿಯ ಜೊತೆಯಲ್ಲಿ, ಅತ್ಯಂತ ದುರ್ಬಲನಾದವನು ಬಲಿಷ್ಠನ ಜೊತೆಯಲ್ಲಿ ಯುದ್ಧವನ್ನು ಮಾಡಲು ಇಚ್ಛಿಸಿದಂತೆ ದುರ್ಮತಿಯುಳ್ಳವನಾಗಿರುತ್ತಾನೆ.

ಅಸ್ಮಾಭಿರೇವ(ರೇಷ) ನಿಕೃತೋ ವರ್ಷಾಣೀಹ ತ್ರಯೋದಶ |
ಸಿಂಹಃ ಪಾಶಾದ್ ವಿಮುಕ್ತೋ ವಾ ನ ಶೇಷಂ ಕರ್ತುಮರ್ಹತಿ ॥22॥
ನಾವು ಅವನನ್ನು ಕಪಟದಿಂದ ಜಯಿಸಿ ಹದಿಮೂರು ವರ್ಷಗಳ ಅವಮಾನಗೊಳಿಸಿದ್ದೇವೆ. ಬಂಧನದಿಂದ ಬಿಡಿಸಿಕೊಂಡ ಸಿಂಹದಂತೆ ಅವನು ಯಾರನ್ನೂ ಉಳಿಸುವುದಿಲ್ಲ.
ಏಕಾಂತೇ ಪಾರ್ಥಮಾಸೀನಂ ಕೂಪೇಽಗ್ನಿಮಿವ ಸಂವೃತಮ್ |
ಅಜ್ಞಾನಾದಭ್ಯವಸ್ಕಂದ್ಯ ಪ್ರಾಪ್ತಾಃ ಸ್ಮೋ ಭಯಮುತ್ತಮಮ್ ॥23॥
ಕೂಪದಲ್ಲಿರುವ ಅಗ್ನಿಯಂತೆ ಏಕಾಂತದಲ್ಲಿ ಯಾರಿಗೂ ಕಾಣದಂತೆ ಕುಳಿತಿದ್ದ ಅರ್ಜುನನನ್ನು ಅಜ್ಞಾನದಿಂದ ಮೆಟ್ಟಿ ನಾವು ದೊಡ್ಡ ಭಯಕ್ಕೆ ತುತ್ತಾಗಿದ್ದೇವೆ.
ಉತ್ಸೃಷ್ಟಂ ತೂಲರಾಶೌ ತು ಏಕೋಽಗ್ನಿಂ ಶಮಯೇತ್ ಕಥಮ್ |
ಸಹ ಯುದ್ಧ್ಯಾಮಹೇ ಪಾರ್ಥಮಾಗತಂ ಯುದ್ಧದುರ್ಮದಮ್ ॥24॥
ಹತ್ತಿಯ ರಾಶಿಯಲ್ಲಿ ಬಿಡಲ್ಪಟ್ಟ ಅಗ್ನಿಯನ್ನು ಒಬ್ಬನೇ ನಂದಿಸುವುದು ಹೇಗೆ? ಆದ್ದರಿಂದ ನಾವು ಯುದ್ಧದುರ್ಮದನಾದ ಅರ್ಜುನನ ಜೊತೆಯಲ್ಲಿ ಎಲ್ಲರೂ ಸೇರಿಕೊಂಡು ಯುದ್ಧವನ್ನು ಮಾಡುತ್ತೇವೆ.
ಯತ್ತಸೇನಾಃ ಪರಾಕ್ರಾಂತಾ ವ್ಯೂಢಾನೀಕಾಃ ಪ್ರಹಾರಿಣಃ |
ಯುದ್ಧಾಯಾವಸ್ಥಿತಂ ಪಾರ್ಥಮಾಗತಂ ಪಾಕಶಾಸನಿಮ್ ॥25॥
ಯತ್ತಾಃ ಸರ್ವೇ ರಥಶ್ರೇಷ್ಠಂ ಪರಿವಾರ್ಯ ಸಮಂತತಃ |
ಷಡ್ರಥಾಃ ಪರಿಕೀರ್ಯಂತಾಂ ವಜ್ರಪಾಣಿಮಿವಾಸುರಾಃ ॥26॥
ಆದ್ದರಿಂದ ಎಲ್ಲರೂ ಸೈನ್ಯವನ್ನು ವ್ಯೂಹಮಾಡಿ, ಎಚ್ಚರಿಕೆಯಿಂದ ನಿಮ್ಮ ಸೈನ್ಯವನ್ನು ನೋಡಿಕೊಂಡು, ಪರಾಕ್ರಮವನ್ನು ಆಶ್ರಯಿಸಿ ಶತ್ರುಪೀಡೆಯನ್ನು ಮಾಡುವವರಾಗಿ. ಯುದ್ಧಕ್ಕಾಗಿ ಬಂದು ನಿಂತಿರುವ ಇಂದ್ರನ ಮಗನಾದ ರಥಶ್ರೇಷ್ಠನಾದ ಅರ್ಜುನನನ್ನು ಎಲ್ಲ ಕಡೆಯಿಂದಲೂ ಸುತ್ತುವರಿದು ಆರು ಮಹಾರಥರು ಅಸುರರು ವಜ್ರಪಾಣಿಯಾದ ಇಂದ್ರನ ಮೇಲೆ ಬಾಣಗಳನ್ನು ಸುರಿಸಿದಂತೆ ಅವನ ಮೇಲೆ ಬಾಣಗಳನ್ನು ಸುರಿಸಿ.
ದ್ರೋಣೋ ದುರ್ಯೋಧನೋ ಭೀಷ್ಮೋ
ಭವಾನ್ ದ್ರೌಣಿಸ್ತಥಾ ವಯಮ್ |
ಸರ್ವೇ ಯುದ್ಧ್ಯಾಮಹೇ ಪಾರ್ಥಂ
ಕರ್ಣ ಮಾ ಸಾಹಸಂ ಕೃಥಾಃ ॥27॥
ನಹ್ಯಸಂವ್ಯೂಹ್ಯ ಸಮರೇ ಪಾರ್ಥಂ ಜೇಷ್ಯಾಮಹೇ ವಯಮ್ ॥28॥
ದ್ರೋಣ, ಕರ್ಣ, ದುರ್ಯೋಧನ, ಭೀಷ್ಮ, ನೀನು, ಅಶ್ವತ್ಥಾಮ, ನಾನು ಎಲ್ಲರೂ ಒಟ್ಟಿಗೆ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತೇವೆ. ಕರ್ಣನೇ, ಸಾಹಸವನ್ನು ಮಾಡಬೇಡ. ಸೈನ್ಯವನ್ನು ವ್ಯೂಹ ಮಾಡದೆ ನಾವು ಯುದ್ಧದಲ್ಲಿ ಅರ್ಜುನನನ್ನು ಗೆಲ್ಲಲಾರೆವು.
ಯುದ್ಧೇ ವ್ಯವಸ್ಥಿತಂ ಪಾರ್ಥಂ ವಜ್ರಪಾಣಿಮಿವೋದ್ಯತಮ್ |
ಷಡ್ರಥಾಃ ಪ್ರತಿಯುಧ್ಯೇಮ ತಿಷ್ಠಾಮಶ್ಚೇಹ ಸಂಹತಾಃ ॥29॥
ಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನಂತೆ ಸನ್ನದ್ಧನಾಗಿ ನಿಂತಿರುವ ಅರ್ಜುನನ ಜೊತೆಯಲ್ಲಿ ಷಡ್ರಥರಾದ ನಾವು ಒಟ್ಟಿಗೆ ಸೇರಿ ಪ್ರತಿಯುದ್ಧವನ್ನು ಮಾಡೋಣ.
ವ್ಯೂಢಾನೀಕಾನಿ ಸೈನ್ಯಾನಿ ಯತ್ತಾಃ ಪರಮಧನ್ವಿನಃ |
ಯುಧ್ಯಾಮಹೇಽರ್ಜುನಂ ಸಂಖ್ಯೇ ದಾನವಾ ಇವ ವಾಸವಮ್ ॥30॥
ಶ್ರೇಷ್ಠವಾದ ಧನುಸ್ಸನ್ನು ಹೊಂದಿದ ನಾವು ಸೈನ್ಯವನ್ನು ವ್ಯೂಹವನ್ನಾಗಿ ರಚಿಸಿ ಪರಮಜಾಗರೂಕತೆಯಿಂದ ದಾನವರು ಇಂದ್ರನ ಜೊತೆ ಯುದ್ಧವನ್ನು ಮಾಡಿದಂತೆ ರಣರಂಗದಲ್ಲಿ ಅರ್ಜುನನ ಜೊತೆ ಯುದ್ಧವನ್ನು ಮಾಡೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ನಲವತ್ತೊಂಬತ್ತನೆಯ ಅಧ್ಯಾಯ
ಕರ್ಣನಿಂದ ಕೃಪರ ಮತ್ತು ಅಶ್ವತ್ಥಾಮರಿಂದ ಕರ್ಣ-ದುರ್ಯೋಧನರ ನಿಂದನೆ
ವೈಶಂಪಾಯನಃ
ಕೃಪಸ್ಯ ತು ವಚಃ ಶ್ರುತ್ವಾ ಕರ್ಣೋ ರಾಜನ್ ಯುಧಾಂಪತಿಃ |
ಪುನಃ ಪ್ರೋವಾಚ ಸಂರಬ್ಧೋ ಗರ್ಹಯನ್ ಬ್ರಾಹ್ಮಣಂ ಕೃಪಮ್ ॥1॥
ವೈಶಂಪಾಯನ ಎಲೈ ರಾಜನೇ, ಕೃಪಾಚಾರ್ಯರ ವಚನಗಳನ್ನು ಕೇಳಿ ಯುಧಾಂಪತಿಯಾದ ಕರ್ಣನು ಸಿಟ್ಟಿನಿಂದ ಕೂಡಿದವನಾಗಿ ಬ್ರಾಹ್ಮಣರಾದ ಕೃಪಾಚಾರ್ಯರನ್ನು ನಿಂದಿಸುತ್ತಾ ಪುನಃ ಮಾತನಾಡಿದನು.
ಲಕ್ಷಯಾಮ್ಯಹಮಾಚಾರ್ಯಂ ಭಯಾದ್ ಭಕ್ತಿಂ ಗತಂ ರಿಪೌ |
ಭೀತೇನ ಹಿ ನ ಯೋದ್ಧವ್ಯಮಹಂ ಯೋತ್ಸ್ಯೇ ಧನಂಜಯಮ್ ॥2॥
ಆಚಾರ್ಯರು ಭಯದಿಂದ ಶತ್ರುವಿನಲ್ಲಿ ಭಕ್ತಿಯನ್ನು ಹೊಂದುತ್ತಿರುವುದನ್ನು ನಾನು ಗಮನಿಸುತ್ತಿದ್ದೇನೆ. ಹೆದರಿದವನು

ಯುದ್ಧವನ್ನು ಮಾಡಬಾರದು. ಅರ್ಜುನನ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವೆನು.
ನನು ವಾರುಣಮಾಗ್ನೇಯಂ ಯಾಮ್ಯಂ ವಾಯವ್ಯಮೇವ ಚ |
ಅಸ್ತ್ರಂ ಬ್ರಾಹ್ಮಂ ಶಿವಂ ಚೈವ ಸತ್ವಹೀನಸ್ಯ ತೇ ವೃಥಾ ||3||
ವಾರುಣ, ಆಗ್ನೇಯ, ಯಾಮ್ಯ, ವಾಯವ್ಯ, ಬ್ರಾಹ್ಮ, ಶೈವ ಅಸ್ತ್ರಗಳೆಲ್ಲವೂ ಧೈರ್ಯವಿಲ್ಲದ ನಿಮಗೆ ವ್ಯರ್ಥವಷ್ಟೇ!
ಮಿತ್ರಕಾರ್ಯಂ ಕೃತಮಿದಂ ಪಿತಾಪುತ್ರೈರ್ಮಹಾರಥೈಃ |
ಭರ್ತೃಪಿಂಡಶ್ಚ ನಿರ್ವಿಷ್ಟೋ ಯಥೇಷ್ಟಂ ಗಂತುಮರ್ಹಥ ||4||
ಮಹಾರಥರಾದ ತಂದೆ ಮತ್ತು ಮಕ್ಕಳಿಂದ ಮಿತ್ರಕಾರ್ಯವು ಚೆನ್ನಾಗಿ ಮಾಡಲ್ಪಟ್ಟಿತು. ಭರ್ತೃಪಿಂಡದ ಋಣವನ್ನೂ ತೀರಿಸಿದ್ದಾಯಿತು! ನಿಮಗೆ ಇಷ್ಟವಾದಂತೆ ಹೋಗಬಹುದು.
ಭಿಕ್ಷಾಂ ಹರಸ್ವ ತ್ವಂ ನಿತ್ಯಂ ಯಜ್ಞಾನನುಚರಸ್ವ ಹ |
ಆಮಂತ್ರಣಾನಿ ಭುಂಕ್ಷ್ವಾದ್ಯ ಮಾಽಸ್ಮಾನ್ ಯುದ್ಧೇನ ಭೀಷಯ ||5||
ನೀವು ನಿತ್ಯವೂ ಭಿಕ್ಷೆಯನ್ನು ಬೇಡಿ. ಯಜ್ಞಗಳಿಗೆ ಹೋಗಿ. ಆಮಂತ್ರಣಗಳನ್ನು ಸ್ವೀಕರಿಸಿ ಭೋಜನವನ್ನು ಮಾಡಿ. ನಮ್ಮನ್ನು ಯುದ್ಧದ ಮಾತಿನಿಂದ ಹೆದರಿಸಬೇಡಿ.
ಭಾರ್ಗವಾಸ್ತ್ರಂ ಮಯಾ ಯುಕ್ತಂ ನಿರ್ದಹೇತ್ ಪೃಥಿವೀಮಿಮಾಮ್ |
ಕಿಂ ಪುನಃ ಪಾಂಡುಪುತ್ರಾಣಾಮೇಕಮರ್ಜುನಮಾಹವೇ ||6||
ನಾನು ಪ್ರಯೋಗಿಸುವ ಭಾರ್ಗವಾಸ್ತ್ರವು ಈ ಪೃಥ್ವಿಯನ್ನು ಸುಟ್ಟೀತು! ಇನ್ನು ಯುದ್ಧದಲ್ಲಿ ಪಾಂಡುಪುತ್ರರಲ್ಲಿ ಒಬ್ಬನಾದ ಅರ್ಜುನನನ್ನು ಸುಡುವುದು ಯಾವ ದೊಡ್ಡ ವಿಷಯ?
ಆಗಮಿಷ್ಯಂತಿ ಪದವೀಂ ಮತ್ಸ್ಯಾಃ ಪಾಂಡವಸಂಶ್ರಿತಾಃ |
ತಾನಹಂ ನಿಹನಿಷ್ಯಾಮಿ ಭವದ್ಭಿರ್ಗಮ್ಯತಾಂ ಗೃಹಮ್ ||7||
ಪಾಂಡವರಿಂದ ಯುಕ್ತರಾದ ಮತ್ಸ್ಯರು ಗೋವುಗಳ ಮಾರ್ಗವನ್ನು ಅನುಸರಿಸಿ ಬರುವರು. ನಾನು ಅವರನ್ನು ಕೊಲ್ಲುವೆನು. ನೀವು ಮನೆಗೆ ಹೋಗಿ.
ತಸ್ಯ ತದ್ವಚನಂ ಶ್ರುತ್ವಾ ಅಶ್ವತ್ಥಾಮಾ ಪ್ರತಾಪವಾನ್ |
ಉವಾಚ ವದತಾಂ ಶ್ರೇಷ್ಠೋ ದುರ್ಯೋಧನಮವೇಕ್ಷ್ಯ ಚ ||8||
ಅವನ ಆ ಮಾತುಗಳನ್ನು ಕೇಳಿ ಪ್ರತಾಪಶಾಲಿಯಾದ ಮತ್ತು ಮಾತನಾಡುವುದರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ದುರ್ಯೋಧನನನ್ನು ನೋಡುತ್ತಾ ಮಾತನಾಡಿದನು.
ನ ಚ ತಾವಜ್ಜಿತಾ ಗಾವೋ ನ ಚ ಸೀಮಾಂತರಂ ಗತಾಃ |
ನ ಹಸ್ತಿನಪುರಂ ಪ್ರಾಪ್ತಾಸ್ತ್ವಂ ಚ ಕರ್ಣ ವಿಕತ್ಥಸೇ ||9||
ಇನ್ನೂ ಗೋವುಗಳನ್ನು ಗೆಲ್ಲಲಿಲ್ಲ, ಗಡಿಯನ್ನೂ ದಾಟಲಿಲ್ಲ, ಹಸ್ತಿನಪುರವನ್ನು ಪ್ರವೇಶಿಸಲಿಲ್ಲ. ಎಲೈ ಕರ್ಣನೇ, ನೀನು ಮಾತ್ರ ಬಡಬಡಿಸುತ್ತಿದ್ದೀಯೆ.
ಬಹೂನಿ ಧರ್ಮಶಾಸ್ತ್ರಾಣಿ ಪಠಂತಿ ದ್ವಿಜಸತ್ತಮಾಃ |
ತೇಷು ಕಿಂಸ್ವಿದಿದಂ ದೃಷ್ಟಂ ದ್ಯೂತೇ ಜೀಯೇತ ಯನ್ನೃಪಃ ||10||
ಶ್ರೇಷ್ಠರಾದ ಬ್ರಾಹ್ಮಣರು ಅನೇಕ ಧರ್ಮಶಾಸ್ತ್ರಗಳನ್ನು ಪಠಿಸುತ್ತಾರೆ. ಅದರಲ್ಲಿ ರಾಜನು ದ್ಯೂತದಿಂದ ಗೆಲ್ಲಬೇಕೆಂದು ಯಾವ ಧರ್ಮಶಾಸ್ತ್ರದಲ್ಲಿ ಪಠಿತವಾಗಿದೆ?
ಸಂಗ್ರಾಮಾನ್ ವಿಪುಲಾನ್ ಜಿತ್ವಾ ಲಬ್ಧ್ವಾ ಚ ವಿಪುಲಂ ಧನಮ್ |
ವಿಜಿತ್ಯ ಚ ಮಹೀಂ ಕೃತ್ಸ್ನಾಂ ನ ವಿಕತ್ಥೇತ ಪಂಡಿತಃ ||11||
ದೊಡ್ಡ ಯುದ್ಧಗಳನ್ನು ಗೆದ್ದು, ಬಹಳ ಧನವನ್ನು ಸಂಪಾದಿಸಿ ಸಮಗ್ರವಾದ ಭೂಮಿಯನ್ನು ಗೆದ್ದರೂ ಪಂಡಿತನಾದವನು ತನ್ನನ್ನು ಹೊಗಳಿಕೊಳ್ಳಬಾರದು.
ದಹತ್ಯಗ್ನಿರವಾಕ್ಯಸ್ತು ತೂಷ್ಣೀಂ ಭಾತಿ ದಿವಾಕರಃ |
ತೂಷ್ಣೀಂ ಧಾರಯತೇ ಲೋಕಾನ್ ವಸುಧಾ ಚ ಚರಾಚರಾನ್ ||12||
ಮಾತನಾಡದೆ ಅಗ್ನಿಯು ಸುಡುತ್ತಾನೆ. ಮಾತನಾಡದೆಯೇ ಸೂರ್ಯನು ಪ್ರಕಾಶಿಸುತ್ತಾನೆ. ಮಾತನಾಡದೆಯೇ ಭೂಮಿಯು ಸ್ಥಾವರಜಂಗಮಪ್ರಾಣಿಗಳನ್ನು ಧರಿಸುತ್ತಾಳೆ.
ಚಾತುರ್ವರ್ಣ್ಯಸ್ಯ ಕರ್ಮಾಣಿ ವಿಹಿತಾನಿ ಸ್ವಯಂಭುವಾ |
ಧನಂ ಯೈರಧಿಗಂತವ್ಯಂ ಯಚ್ಚ ಕುರ್ವನ್ ನ ದುಷ್ಯತಿ ||13||
ಯಾರು ಧನವನ್ನು ಗಳಿಸಬೇಕು ಮತ್ತು ಯಾವುದನ್ನು ಮಾಡಿದರೆ ದೋಷವಾಗುವುದಿಲ್ಲ ಎಂದು ಚಾತುರ್ವರ್ಣದ ಕರ್ಮಗಳು ಬ್ರಹ್ಮದೇವರಿಂದ ಹೇಳಲ್ಪಟ್ಟಿವೆ.
ಅಧೀತ್ಯ ಬ್ರಾಹ್ಮಣೋ ವೇದಾನ್ ಯಾಜಯೇತ ಯಜೇತ ವಾ |
ಕ್ಷತ್ರಿಯೋ ಧನಮಾಹೃತ್ಯ ಯಜೇತೈವ ನ ಯಾಜಯೇತ್ ||14||
ಬ್ರಾಹ್ಮಣನು ವೇದಾಧ್ಯಯನವನ್ನು ಮಾಡಿ ಯಾಗವನ್ನು ಮಾಡಬೇಕು ಅಥವಾ ಮಾಡಿಸಬೇಕು. ಕ್ಷತ್ರಿಯನು ಧನವನ್ನು ಸಂಪಾದಿಸಿ ಯಾಗವನ್ನು ಮಾಡಬೇಕೇ ಹೊರತು ಮಾಡಿಸಬಾರದು.
ವೈಶ್ಯೋಽಧಿಗಮ್ಯ ದ್ರವ್ಯಾಣಿ ವಾರ್ತಾಕರ್ಮಾಣಿ ಕಾರಯೇತ್ |
ಶೂದ್ರಃ ಶಿಶ್ರೂಷಣಂ ಕುರ್ಯಾತ್ ತ್ರಿಷು ವರ್ಣೇಷು ನಿತ್ಯಶಃ ||15||

ವೈಶ್ಯನು ದ್ರವ್ಯವನ್ನು ಸಂಪಾದಿಸಿ ವಾಣಿಜ್ಯಕರ್ಮಗಳನ್ನು ಮಾಡಬೇಕು. ಶೂದ್ರನು ಯಾವಾಗಲೂ ಮೂರುವರ್ಣದವರ ಸೇವೆಯನ್ನು ಮಾಡಬೇಕು.
ವರ್ತಮಾನಾ ಯಥಾಶಾಸ್ತ್ರಂ ಪ್ರಾಪ್ಯ ಚಾಪಿ ಮಹೀಮಿಮಾಮ್ |
ಪ್ರಕುರ್ವಂತಿ ಮಹಾಭಾಗಾಃ ಯಜ್ಞಾನ್ ಸುವಿಪುಲಾನಪಿ ॥16॥
ಶಾಸ್ತ್ರಕ್ಕೆ ಅನುಸಾರವಾಗಿ ನಡೆದುಕೊಳ್ಳುವವರು ಈ ಭೂಮಿಯನ್ನೇ ಗೆದ್ದರೂ ಮಹಾನುಭಾವರಾದ ಅವರು ದೊಡ್ಡ ಯಜ್ಞಗಳನ್ನು ಆಚರಿಸುತ್ತಾರೆ.
ವೈಶಂಪಾಯನಃ
ದುರ್ಯೋಧನಮಭಿಪ್ರೇಕ್ಷ್ಯ ಕರ್ಣಂ ಚ ಕುರುಸಂಸದಿ |
ಅಶ್ವತ್ಥಾಮಾ ಭೃಶಂ ಕ್ರುದ್ಧೋ ದುರ್ಯೋಧನಮತರ್ಜಯತ್ ॥17॥
ವೈಶಂಪಾಯನ ಕುರುಗಳ ಸಮ್ಮುಖದಲ್ಲಿ ಅಶ್ವತ್ಥಾಮರು ದುರ್ಯೋಧನ ಮತ್ತು ಕರ್ಣರನ್ನು ನೋಡುತ್ತಾ ಬಹಳ ಕ್ರುದ್ಧರಾಗಿ ದುರ್ಯೋಧನನನ್ನು ಹೆದರಿಸಿದರು.
ಪ್ರಾಪ್ಯ ದ್ಯೂತೇನ ಕೋ ರಾಜ್ಯಂ ಕ್ಷತ್ರಿಯೋ ಭೋಕ್ತುಮರ್ಹತಿ |
ಯಥಾವೃತ್ತಂ ಸರೂಪೇಣ ಯದನ್ಯಃ ಪ್ರಾಕೃತೋ ಜನಃ ॥18॥
ಯಾವ ಕ್ಷತ್ರಿಯನು ದ್ಯೂತದಿಂದ ರಾಜ್ಯವನ್ನು ಸಂಪಾದಿಸಿ ಭೋಗಿಸಲು ಅರ್ಹನಾಗುತ್ತಾನೆ? ಸಾಮಾನ್ಯವಾದ ಲೋಭಿಜನರು ತಮ್ಮ ನೀಚಸ್ವಭಾವಕ್ಕೆ ಅನುಗುಣವಾಗಿ ಧನವನ್ನು ಹೇಗೆ ಬಯಸುತ್ತಾರೆಯೋ ಅದರಂತೆ ನೀನೂ ನಡೆದುಕೊಂಡಿದ್ದಾಯಿತು.
ಬುದ್ಧಿಮಾನ್ ನೀತಿಮಾನ್ ರಾಜಾ ಕ್ಷತ್ರಿಯೋ ಯದಿ ವೇತರಃ |
ನ ಚಾನೃತೇ ಯೋಗವಿಧಿಂ ಚರೇದ್ ವೈತಂಡಿಕೋ ಯಥಾ ॥19॥
ಬುದ್ಧಿವಂತನೂ ನೀತಿವಂತನೂ ಆದ ಕ್ಷತ್ರಿಯರಾಜನಾಗಲೀ ಅಥವಾ ಇನ್ನೊಬ್ಬನಾಗಲೀ ವಿತಂಡವಾದಿಯಂತೆ ಮೋಸವನ್ನು, ಇದು ಒಳ್ಳೆಯ ಉಪಾಯವೆಂದು ಅನುಷ್ಠಾನ ಮಾಡಬಾರದು.
ಇಂದ್ರಪ್ರಸ್ಥಂ ತ್ವಯಾ ಕಸ್ಮಿನ್ ಸಂಗ್ರಾಮೇ ನಿರ್ಜಿತಂ ಪುರಾ |
ಯುಧಿಷ್ಠಿರಶ್ಚ ಭೀಮಶ್ಚ ಕಸ್ಮಿನ್ ಯುದ್ಧೇ ತ್ವಯಾ ಜಿತೌ ॥20॥
ನೀನು ಹಿಂದೆ ಇಂದ್ರಪ್ರಸ್ಥವನ್ನು ಯಾವ ಯುದ್ಧದಲ್ಲಿ ಗೆದ್ದೆ? ಯುಧಿಷ್ಠಿರ ಮತ್ತು ಭೀಮಸೇನ ಇವರನ್ನು ಯಾವ ಯುದ್ಧದಲ್ಲಿ ಗೆದ್ದೆ?
ಕತಮೇ ದ್ವೈರಥೇ ರಾಜನ್ ತ್ವಮಜೈಷೀರ್ಧನಂಜಯಮ್ |
ನಕುಲಂ ಸಹದೇವಂ ಚ ಧನಂ ಯೇಷಾಂ ತ್ವಯಾ ಹೃತಮ್ ॥21॥
ಎಲೈ ರಾಜನೇ, ಯಾವ ದ್ವೈರಥದಲ್ಲಿ ನೀನು ಧನಂಜಯನನ್ನು ಗೆದ್ದಿದ್ದೀಯೆ? ಯಾರ ಧನವನ್ನು ನೀನು ಅಪಹರಿಸಿದೆಯೋ ಅಂತಹ ನಕುಲ ಅಥವಾ ಸಹದೇವನನ್ನಾದರೂ ಯಾವ ಯುದ್ಧದಲ್ಲಿ ಗೆದ್ದಿದ್ದೀಯೆ?
ಭೂಯಶ್ಚ ಕತಮೇ ಯುದ್ಧೇ ಯತ್ರ ಕೃಷ್ಣಾ ತ್ವಯಾ ಜಿತಾ |
ಏಕವಸ್ತ್ರಾ ಸಭಾಂ ನೀತಾ ಕ್ಷುದ್ರಕರ್ಮನ್ ರಜಸ್ವಲಾ ॥22॥
ಮತ್ತು ಒಂದೇ ವಸ್ತ್ರವನ್ನು ಉಟ್ಟ ರಜಸ್ವಲೆಯಾದ ದ್ರೌಪದಿಯು ಎಲೈ ಕ್ಷುದ್ರಕರ್ಮನೇ, ಸಭೆಗೆ ಕರೆತರಲ್ಪಟ್ಟಳು. ಆ ದ್ರೌಪದಿಯನ್ನು ನೀನು ಯಾವ ಯುದ್ಧದಲ್ಲಿ ಗೆದ್ದೆ?
ಕುಲಮೇಷಾಂ ಮಹತ್ ಕೃತ್ತಂ ಸಾರಾರ್ಥೀ ಚಂದನಂ ಯಥಾ |
ಕ್ಷುದ್ರಂ ಕರ್ಮ ಸಮಾಸ್ಥಾಯ ತತ್ರ ಕಿಂ ವಿದುರೋಽಬ್ರವೀತ್ ॥23॥
ಶ್ರೇಷ್ಠವಾದ ಗಂಧವನ್ನು ಬಯಸುವವನು ಚಂದನವೃಕ್ಷವನ್ನು ಕಡಿದಂತೆ ಕ್ಷುದ್ರಕರ್ಮವನ್ನು ಮಾಡಿ ಕೌರವರ ದೊಡ್ಡ ಕುಲವನ್ನೇ ನಾಶ ಮಾಡಿದೆ. ಆಗ ವಿದುರನು ಏನು ಹೇಳಿದನು?
ಯಥಾಶಕ್ತಿ ಮನುಷ್ಯಾಣಾಮಮರ್ಷಂ ಲಕ್ಷಯಾಮಹೇ |
ಅನ್ಯೇಷಾಮಪಿ ಸತ್ತ್ವಾನಾಮಪಿ ಕೀಟಪಿಪೀಲಿಕೈಃ ॥24॥
ಮನುಷ್ಯರಿಗೆ ಯಥಾಶಕ್ತಿಯಾಗಿ ರೋಷವಿರುವುದನ್ನು ನಾವು ಗಮನಿಸುತ್ತೇವೆ. ಕೀಟ, ಇರುವೆ ಮೊದಲಾದ ಇತರ ಪ್ರಾಣಿಗಳಿಗೂ ರೋಷವಿರುವುದನ್ನು ಲಕ್ಷಿಸುತ್ತೇವೆ.
ದ್ರೌಪದ್ಯಾಶ್ಚ ಪರಿಕ್ಲೇಶಂ ನ ಕ್ಷಂತುಂ ಪಾಂಡವೋಽರ್ಹತಿ |
ದುಃಖಾಯ ಧಾರ್ತರಾಷ್ಟ್ರಾಣಾಂ ಪ್ರಾದುರ್ಭೂತೋ ಧನಂಜಯಃ ॥
ಆದರೆ ದ್ರೌಪದಿಯ ಪರಿಕ್ಲೇಶವನ್ನು ಪಾಂಡವನು ಕ್ಷಮಿಸುವುದಿಲ್ಲ. ಧೃತರಾಷ್ಟ್ರನ ಪುತ್ರರ ದುಃಖಕ್ಕಾಗಿ ಅರ್ಜುನನು ಪ್ರಾದುರ್ಭವಿಸಿದ್ದಾನೆ.
ತ್ವಂ ಪುನಃ ಪಂಡಿತೋ ಭೂತ್ವಾ ಹ್ಯಾಚಾರ್ಯಂ ಕ್ಷೇಪ್ತುಮಿಚ್ಛಸಿ |
ವೈರಾಂತಕರಣೋ ಜಿಷ್ಣುರ್ನಿಃಶೇಷಂ ಕರ್ತುಮರ್ಹತಿ ॥26॥
ನೀನು ಪುನಃ ಪಂಡಿತನಾಗಿ ಆಚಾರ್ಯರನ್ನು ನಿಂದಿಸಲು ಇಚ್ಛಿಸುತ್ತೀಯೆ. ವೈರದ ಕೊನೆಯನ್ನು ತಲುಪುವ ಅರ್ಜುನನು ಯಾರನ್ನೂ ಉಳಿಸುವುದಿಲ್ಲ.
ನೈವ ದೇವಾ ನ ಗಂಧರ್ವಾ ನಾಸುರಾ ನ ಚ ರಾಕ್ಷಸಾಃ |
ಭಯಾದಿಹ ಚ ಯುಧ್ಯೇರನ್ ಕುಂತೀಪುತ್ರೇಣ ಧೀಮತಾ ॥27॥
ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ, ರಾಕ್ಷಸರಾಗಲೀ ಮೇಧಾವಿಯಾದ ಅರ್ಜುನನ ಜೊತೆಯಲ್ಲಿ ಇಲ್ಲಿ ಭಯದಿಂದ ಯುದ್ಧವನ್ನು ಮಾಡಲಾರರು.

ಯಂ ಯಮೇಕೋಽಭಿಸಂಕ್ರುದ್ಧಃ ಸಂಗ್ರಾಮೇಽಭಿಭವಿಷ್ಯತಿ |
ವೃಕ್ಷಂ ಗರುಡವೇಗೋ ವಾ ವಿನಿಹತ್ಯಾಂತಮೇಷ್ಯತಿ ||28||
ಯಾವ ಯಾವನು ಒಬ್ಬನೇ ಯುದ್ಧದಲ್ಲಿ ಅರ್ಜುನನನ್ನು ಎದುರಿಸುವನೋ ಆಯಾ ವ್ಯಕ್ತಿಯನ್ನು ಗರುಡನ ವೇಗವು ವೃಕ್ಷವನ್ನು ನಾಶಮಾಡಿದಂತೆ ಅರ್ಜುನನು ಕೊಂದು ಅಂತ್ಯವನ್ನು ಮಾಡುತ್ತಾನೆ.
ತ್ವತ್ತೋ ವಿಶಿಷ್ಟಂ ವೀರ್ಯೇಣ ಧನುಷ್ಯಮರರಾಟ್ಸಮಮ್ |
ವಾಸುದೇವಸಮಂ ಯುದ್ಧೇ ತಂ ಪಾರ್ಥಂ ಕೋ ನ ಪೂಜಯೇತ್ ||
ಪರಾಕ್ರಮದಲ್ಲಿ ನಿನಗಿಂತಲೂ ಅಧಿಕನಾದ, ಧನುರ್ವಿದ್ಯೆಯಲ್ಲಿ ದೇವೇಂದ್ರನಿಗೆ ಸಮನಾದ, ಯುದ್ಧದಲ್ಲಿ ಕೃಷ್ಣನಿಗೆ ಸಮನಾದ, ಆ ಅರ್ಜುನನನ್ನು ಯಾವನು ಗೌರವಿಸುವುದಿಲ್ಲ?
ದೈವಂ ದೈವೇನ ಯುಧ್ಯೇತ ಮಾನುಷೇಣ ಚ ಮಾನುಷಮ್ |
ಅಸ್ತ್ರಂ ಚಾಸ್ತ್ರೇಣ ಯೋ ಹನ್ಯಾದ್ ಅರ್ಜುನೇನಾಧಿಕಃ ಪುಮಾನ್ ||30||
ಯಾವನಾದರೂ ಅರ್ಜುನನಿಗಿಂತಲೂ ಶ್ರೇಷ್ಠನಾದ ಪುರುಷನಿದ್ದರೆ ಅವನು ದೈವವನ್ನು ದೈವದಿಂದಲೂ, ಮಾನುಷವನ್ನು ಮಾನುಷದಿಂದಲೂ, ಅಸ್ತ್ರವನ್ನು ಅಸ್ತ್ರದಿಂದಲೂ ಪ್ರತಿಯಾಗಿ ಯುದ್ಧವನ್ನು ಮಾಡಿಯಾನು.
ಪುತ್ರಾದನವಮಃ ಶಿಷ್ಯ ಇತಿ ಧರ್ಮವಿದೋ ವಿದುಃ |
ಏತೇನಾಪಿ ನಿಮಿತ್ತೇನ ಪ್ರಿಯೋ ದ್ರೋಣಸ್ಯ ಪಾಂಡವಃ ||31||
ಪುತ್ರನಿಗಿಂತ ಶಿಷ್ಯನು ಕಡಿಮೆಯವನಲ್ಲ ಎಂದು ಧರ್ಮವನ್ನು ತಿಳಿದವರು ಹೇಳುತ್ತಾರೆ. ಈ ನಿಮಿತ್ತದಿಂದಲೂ ಕೂಡ ದ್ರೋಣರಿಗೆ ಅರ್ಜುನನು ಪ್ರಿಯನಾದವನು.
ಯಥಾ ತ್ವಮಕರೋರ್ದ್ಯೂತಮಿಂದ್ರಪ್ರಸ್ಥಂ ಯಥಾಽಹರಃ |
ಸಭಾಂ ಕೃಷ್ಣಾಂ ಯಥಾಽನೈಷೀಸ್ತಥಾ ಯುಧ್ಯಸ್ವ ಪಾಂಡವಮ್ ||32||
ನೀನು ಹೇಗೆ ದ್ಯೂತವನ್ನು ಆಡಿದೆಯೋ, ಹೇಗೆ ಇಂದ್ರಪ್ರಸ್ಥವನ್ನು ಸಂಪಾದಿಸಿದೆಯೋ, ಹೇಗೆ ಸಭೆಗೆ ದ್ರೌಪದಿಯನ್ನು ಎಳೆತಂದೆಯೋ ಹಾಗೆಯೇ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡು.
ಅಯಂ ತೇ ಮಾತುಲಃ ಪ್ರಾಜ್ಞಃ ಕ್ಷತ್ರಧರ್ಮಸ್ಯ ಕೋವಿದಃ |
ದುರ್ದ್ಯೂತವೇದೀ ಗಾಂಧಾರಿಃ ಶಕುನಿರ್ಯುಧ್ಯತಾಮಿಹ ||33||
ಪ್ರಾಜ್ಞನೂ, ಕ್ಷತ್ರಧರ್ಮದಲ್ಲಿ ಕೋವಿದನೂ, ಕೆಟ್ಟದ್ಯೂತವನ್ನು ಆಡಲು ತಿಳಿದವನೂ, ಗಾಂಧಾರದೇಶದವನೂ ಆದ ಈ ನಿನ್ನ ಸೋದರ ಮಾವ ಶಕುನಿಯು ಇಲ್ಲಿ ಯುದ್ಧವನ್ನು ಮಾಡಲಿ.
ನಾಕ್ಷಾನ್ ಕ್ಷಿಪತಿ ಗಾಂಡೀವೀ ನ ಕೃತಂ ದ್ವಾಪರಂ ನ ಚ |
ಜ್ವಲಿತಾಗ್ನಿಶಿಖಾನ್ ಬಾಣಾನ್ ತೀಕ್ಷ್ಣಾನ್ ಕ್ಷಿಪತಿ ಗಾಂಡಿವಃ ||34||
ಗಾಂಡೀವಧನುರ್ಧಾರಿಯಾದ ಅರ್ಜುನನು ದಾಳಗಳನ್ನಾಗಲೀ, ಕೃತದ್ವಾಪರ ಗರಗಳನ್ನಾಗಲೀ ಎಸೆಯುವುದಿಲ್ಲ. ಗಾಂಡೀವಿಯಾದ ಅವನು ಜ್ವಲಿಸುವ ಅಗ್ನಿಯ ಜ್ವಾಲೆಗಳಂತಿರುವ ತೀಕ್ಷ್ಣವಾದ ಬಾಣಗಳನ್ನು ಎಸೆಯುತ್ತಾನೆ.
ನ ಹಿ ಗಾಂಡೀವನಿರ್ಮುಕ್ತಾ ಗೃಧ್ರಪತ್ರಾಃ ಶಿಲಾಶಿತಾಃ |
ಅಂತರೇಷ್ವವತಿಷ್ಠಂತೇ ಗಿರೀಣಾಮಪಿ ದಾರಣಾಃ ||35||
ಗಾಂಡೀವದಿಂದ ಹೊರಹೊಮ್ಮಿದ, ರುದ್ರಪತ್ರಗಳನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಪರ್ವತಗಳನ್ನೂ ಭೇದಿಸುವ ಬಾಣಗಳು ಮಧ್ಯದಲ್ಲಿಯೇ ನಿಂತುಬಿಡುವುದಿಲ್ಲ
ಅಂತಕಃ ಪವನೋ ಮೃತ್ಯುಃ ತಥಾಽಗ್ನಿರ್ಬಡವಾಮುಖಃ |
ಕ್ಷುರಧಾರಾ ವಿಷಂ ಸರ್ಪೋ ವಜ್ರೀ ಚೈವ ಪರಂತಪಃ ||36||
ಕುರ್ಯುರೇತೇ ಕ್ವಚಿಚ್ಚೇಷಂ ನ ತು ಕ್ರುದ್ಧೋ ಧನಂಜಯಃ ||37||
ಯಮ, ವಾಯು, ಮೃತ್ಯು ಹಾಗೆಯೇ ವಡವಾಗ್ನಿ, ಕತ್ತಿಯ ಅಲುಗು, ವಿಷ, ಸರ್ಪ, ಪರಂತಪನಾದ ಇಂದ್ರ ಇವರು ಸ್ವಲ್ಪ ಶೇಷವನ್ನು ಉಳಿಸಬಹುದು. ಆದರೆ ಕ್ರುದ್ಧನಾದ ಧನಂಜಯನು ಯಾರನ್ನೂ ಉಳಿಸುವುದಿಲ್ಲ.
ಯಥಾ ಸಭಾಯಾಂ ದ್ಯೂತಂ ತ್ವಂ ಮಾತುಲೇನ ಸಹಾಕರೋಃ |
ತಥಾ ಯುಧ್ಯಸ್ವ ಸಂಗ್ರಾಮೇ ಸೌಬಲೇನ ಸುರಕ್ಷಿತಃ ||38||
ಹೇಗೆ ನೀನು ಸಭೆಯಲ್ಲಿ ಸೋದರಮಾವನ ಜೊತೆಯಲ್ಲಿ ದ್ಯೂತವನ್ನು ಆಡಿದೆಯೋ ಹಾಗೆಯೇ ಆ ಶಕುನಿಯಿಂದ ಸುರಕ್ಷಿತನಾಗಿ ಯುದ್ಧವನ್ನು ಮಾಡುವವನಾಗು.
ಯುಧ್ಯತಾಂ ಕಾಮಮಾಚಾರ್ಯೋ
ನಾಹಂ ಯೋತ್ಸ್ಯೇ ಧನಂಜಯಮ್ |
ಮಾತ್ಸ್ಯಸ್ತ್ವಸ್ಮಾಭಿರಾಯೋಧ್ಯೋ
ಯದ್ಯಾಗಚ್ಚೇದ್ ಗವಾಂ ಪದಮ್ ||39||
ಆಚಾರ್ಯರು ಬೇಕಾದರೆ ಯುದ್ಧವನ್ನು ಮಾಡಲಿ. ನಾನು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲ. ಗೋವುಗಳನ್ನು ಹುಡುಕಿಕೊಂಡು ಬಂದರೆ ನಾವು ವಿರಾಟನ ಜೊತೆಯಲ್ಲಿ ಮಾತ್ರ ಯುದ್ಧವನ್ನು ಮಾಡಬೇಕಾದವರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕೋನಪಂಚಾಶೋಽಧ್ಯಾಯಃ ||
|| ಗೋಗ್ರಹಣಪರ್ವಣಿ ದ್ವಾವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ನಲವತ್ತೊಂಬತ್ತನೆಯ

ಅಧ್ಯಾಯ ಮುಗಿಯಿತು.
* * * *
ಐವತ್ತನೆಯ ಅಧ್ಯಾಯ
ಭೀಷ್ಮರ ಸಾಂತ್ವನ. ದುರ್ಯೋಧನ ಮತ್ತು ಕರ್ಣರಿಂದ ಕ್ಷಮಾಯಾಚನೆ.
ವೈಶಂಪಾಯನಃ
ತತಃ ಶಾಂತನವಸ್ತತ್ರ ಧರ್ಮಾರ್ಥಕುಶಲಂ ಹಿತಮ್ ।
ದುರ್ಯೋಧನಮಿದಂ ವಾಕ್ಯಮಬ್ರವೀತ್ ಕುರುಸನ್ನಿಧೌ ॥1॥
ವೈಶಂಪಾಯನ ಆಗ ಶಂತನು ಪುತ್ರರಾದ ಭೀಷ್ಮರು ಅಲ್ಲಿ ಕುರುಸನ್ನಿಧಿಯಲ್ಲಿ ದುರ್ಯೋಧನನನ್ನು ಕುರಿತು ಧರ್ಮಾರ್ಥಕೌಶಲದಿಂದ ಕೂಡಿದ ಹಿತವಾದ ಈ ಮಾತುಗಳನ್ನು ಆಡಿದರು.
ಸಾಧು ಪಶ್ಯತಿ ವೈ ದ್ರೋಣಃ ಕೃಪಃ ಸಾಧ್ವನುಪಶ್ಯತಿ ।
ಆಚಾರ್ಯಪುತ್ರಃ ಸಹಜಂ ನಿಶ್ಚಿತಂ ಸಾಧು ಭಾಷತೇ ॥2॥
ದ್ರೋಣರು ಎಲ್ಲವನ್ನು ಸರಿಯಾಗಿಯೇ ನೋಡುತ್ತಿದ್ದಾರೆ. ಕೃಪಾಚಾರ್ಯರೂ ಸರಿಯಾಗಿಯೇ ನೋಡಿ ಮಾತನಾಡುತ್ತಿದ್ದಾರೆ. ಆಚಾರ್ಯ ಪುತ್ರರಾದ ಅಶ್ವತ್ಥಾಮರೂ ಸ್ವಾಭಾವಿಕವಾಗಿ ನಿಶ್ಚಿತವಾದುದನ್ನೇ ಚೆನ್ನಾಗಿ ಹೇಳುತ್ತಿದ್ದಾರೆ.
ಕರ್ಣಸ್ತು ಕ್ಷತ್ರಧರ್ಮೇಣ ಕೇವಲಂ ಯೋದ್ಧುಮಿಚ್ಛತಿ ।
ಆಚಾರ್ಯೋ ನಾವಮಂತವ್ಯಃ ಪುರುಷೇಣ ವಿಜಾನತಾ ॥3॥
ದೇಶಕಾಲೌ ತು ಸಂಪ್ರೇಕ್ಷ್ಯ ಯೋದ್ಧವ್ಯಮಿತಿ ಮೇ ಮತಿಃ ॥4॥
ಕರ್ಣನು ಕೇವಲ ಕ್ಷತ್ರಧರ್ಮವನ್ನು ಅನುಸರಿಸಿ ಯುದ್ಧವನ್ನು ಮಾಡಲು ಬಯಸುತ್ತಾನೆ. ವಿವೇಕವಿದ್ದ ಪುರುಷನು ಎಂದೂ ಆಚಾರ್ಯರಿಗೆ ಅವಮಾನ ಮಾಡಬಾರದು. ದೇಶಕಾಲಗಳನ್ನು ಗಮನಿಸಿ ಯುದ್ಧವನ್ನು ಮಾಡಬೇಕೆಂದು ನನ್ನ ಅಭಿಪ್ರಾಯ.
ಯಸ್ಯ ಸೂರ್ಯಸಮಾಃ ಪಂಚ ಸಪತ್ನಾಃ ಸ್ಯುಃ ಪ್ರಹಾರಿಣಃ ।
ಕಥಮಭ್ಯುದಯೇ ತೇಷಾಂ ನ ಪ್ರಮುಹ್ಯೇತ ಪಂಡಿತಃ ॥5॥
ಯಾವನಿಗೆ ಸೂರ್ಯನಿಗೆ ಸಮನಾದ, ಪ್ರಹಾರವನ್ನು ಮಾಡುವ, ಐದು ಜನ ಶತ್ರುಗಳು ಇರುತ್ತಾರೆಯೋ ಅಂತಹವನು ಪಂಡಿತನಾದರೂ ಶತ್ರುಗಳ ಅಭ್ಯುದಯವನ್ನು ನೋಡುವಾಗ ಹೇಗೆ ಮೋಹಕ್ಕೆ ಒಳಗಾಗಲಾರನು?
ಸ್ವಾರ್ಥೇ ಹಿ ಸರ್ವೇ ಮುಹ್ಯಂತಿ ಯೇಽಪಿ ಧರ್ಮವಿದೋ ಜನಾಃ ।
ತಸ್ಮಾತ್ ತತ್ತ್ವಂ ನ ಜಾನಾತಿ ಯತ್ತು ಕಾರ್ಯಂ ನರಾಧಿಪಃ ॥6॥
ಧರ್ಮವನ್ನು ತಿಳಿದ ಜನರೆಲ್ಲರೂ ಸಹ ತಮ್ಮ ಸ್ವಾರ್ಥದ ವಿಷಯದಲ್ಲಿ ಮೋಹಕ್ಕೆ ಒಳಗಾಗುತ್ತಾರೆ. ಆದ್ದರಿಂದ ರಾಜನಾದ ದುರ್ಯೋಧನನು ಏನು ಮಾಡಬೇಕೆಂದು ತಿಳಿಯುತ್ತಿಲ್ಲ.
ಧಾರ್ತರಾಷ್ಟ್ರೋಽಪಿ ದುರ್ಬುದ್ಧಿಃ ಪಶ್ಯನ್ನಪಿ ಧನಂಜಯಮ್ ।
ನೈವ ಪಶ್ಯತಿ ನಾಘ್ರಾತಿ ಮಂದಃ ಕ್ರೋಧವಶಂ ಗತಃ ॥7॥
ದುರ್ಬುದ್ಧಿಯುಳ್ಳ ದುರ್ಯೋಧನನೂ ಕೂಡ ಅರ್ಜುನನನ್ನು ನೋಡಿದರೂ ಮಂದನೂ, ಕ್ರೋಧವಶನೂ ಆಗಿ ಅವನ ಕೀರ್ತಿಸೌರಭವನ್ನು ಆಘ್ರಾಣಿಸುತ್ತಿಲ್ಲ.
ಏವಮುಕತ್ವ ತು ರಾಜಾನಂ ಪುನರ್ದ್ರೌಣಿಮಥಾಬ್ರವೀತ್ ।
ಪ್ರಾಂಜಲಿರ್ಭರತಶ್ರೇಷ್ಠಃ ಸಾಮ್ನಾ ಬುದ್ಧಿಮತಾಂ ವರಃ ॥8॥
ರಾಜನನ್ನು ಕುರಿತು ಹೀಗೆ ಮಾತನಾಡಿ ಬುದ್ಧಿವಂತರಲ್ಲಿ ಶ್ರೇಷ್ಠರಾದ ಭರತಶ್ರೇಷ್ಠರಾದ ಭೀಷ್ಮರು ಕೈಗಳನ್ನು ಮುಗಿದು ಪುನಃ ಅಶ್ವತ್ಥಾಮರನ್ನು ಕುರಿತು ಮಾತನಾಡಿದರು.
ಕರ್ಣೋ ಯದ್ಯದವೋಚದ್ದಿ ತೇಜಃಸಂಜನನಾಯ ನಃ ।
ಆಚಾರ್ಯಪುತ್ರಃ ಕ್ಷಮತಾಂ ಮಹತ್ ಕಾರ್ಯಮುಪಸ್ಥಿತಮ್ ॥9॥
ಕರ್ಣನು ಏನು ಹೇಳಿದನೋ ಅದೆಲ್ಲವೂ ನಮ್ಮ ತೇಜಸ್ಸನ್ನು ವರ್ಧಿಸುವುದಕ್ಕಾಗಿ. ಆಚಾರ್ಯಪುತ್ರರು ಕ್ಷಮಿಸಬೇಕು. ದೊಡ್ಡ ಕಾರ್ಯವು ಸನ್ನಿಹಿತವಾಗಿದೆ.
ನಾಯಂ ಕಾಲೋ ವಿರೋಧಸ್ಯ ಕೌಂತೇಯೇ ಸಮುಪಸ್ಥಿತೇ ।
ಕ್ಷಂತವ್ಯಂ ಭವತಾ ಸರ್ವಮಾಚಾರ್ಯೇಣ ಕೃಪೇಣ ಚ ॥10॥
ಅರ್ಜುನನು ಎದುರಿಗಿರುವಾಗ ಇದು ವಿರೋಧದ ಕಾಲವಲ್ಲ. ಆದ್ದರಿಂದ ನೀವೂ, ಆಚಾರ್ಯರಾದ ದ್ರೋಣರೂ ಮತ್ತು ಕೃಪರೂ ಕ್ಷಮಿಸಬೇಕು.
ಬಲಸ್ಯ ವ್ಯಸನಾನ್ಯಾಹುರ್ಯಾನಿ ವೀರಾ ಮನೀಷಿಣಃ ।
ಮುಖ್ಯಂ ಭೇದಂ ತು ತೇಷಾಂ ಚ ಪಾಪಿಷ್ಠಂ ವಿದುಷಾಂ ಮತಮ್ ॥
ವಿವೇಕಿಗಳಾದ ವೀರರು ಸೈನ್ಯದ ವ್ಯಸನಗಳನ್ನು ಏನೆಂದು ಹೇಳುತ್ತಾರೆಯೋ ಅವುಗಳಲ್ಲಿ ಮುಖ್ಯವಾದುದು ಮತ್ತು ಅತಿ ಕೆಟ್ಟದಾದುದು ತಮ್ಮಲ್ಲಿ ಪರಸ್ಪರ ವಿರೋಧವೆಂದು ಜ್ಞಾನಿಗಳ ಅಭಿಪ್ರಾಯ.
ಭವತ್ಸು ಹಿ ಕೃತಾಸ್ತ್ರತ್ವಂ ಯಥಾಽಽದಿತ್ಯೇ ಪ್ರಭಾ ತಥಾ ।
ಯಥಾ ಚಂದ್ರಮಸೋ ಲಕ್ಷ್ಮೀಃ ಸರ್ವಥಾ ನಾಪಕೃಷ್ಯತೇ ॥12॥
ಆದಿತ್ಯನಿಂದ ಪ್ರಭೆಯು ಎಂದೂ ಹೋಗದಿರುವಂತೆ ಚಂದ್ರನಿಂದ ಕಾಂತಿಯು ಎಂದೂ ಹೋಗದಿರುವಂತೆ ನಿಮ್ಮ ಅಸ್ತ್ರವಿದ್ಯೆಯು ನಿಮ್ಮನ್ನು ಎಂದೂ ಬಿಟ್ಟು ಹೋಗುವುದಿಲ್ಲ.

ಏವಂ ಭವತ್ಸು ಬ್ರಹ್ಮಾಸ್ತ್ರಂ ಬ್ರಹ್ಮ ಚೈವ ಪ್ರತಿಷ್ಠಿತಮ್ |
ಏಕತ್ರ ಚತುರೋ ವೇದಾಃ ಕ್ಷಾತ್ರಮೇಕತ್ರ ದೃಶ್ಯತೇ ॥13॥
ನೈತತ್ ಸಮಸ್ತಮುಭಯಂ ಕಸ್ಮಿಂಶ್ಚಿದನುಶುಶ್ರುಮ |
ಅನ್ಯತ್ರ ಭಾರತಾಚಾರ್ಯಾತ್ ಸಪುತ್ರಾದಿತಿ ಮೇ ಮತಿಃ ॥14॥
ಬ್ರಹ್ಮಾಸ್ತ್ರಂ ಚೈವ ವೇದಾಶ್ಚ ನೈತದನ್ಯತ್ರ ದೃಶ್ಯತೇ ॥15॥
ಹೀಗೆ ವೇದವೂ ಮತ್ತು ಬ್ರಹ್ಮಾಸ್ತ್ರವೂ ನಿಮ್ಮಲ್ಲಿ ಪ್ರತಿಷ್ಠಿತವಾಗಿದೆ. ಭಾರತಾಚಾರ್ಯರಾದ ದ್ರೋಣರನ್ನು ಮತ್ತು ಅವರ ಪುತ್ರರನ್ನು ಬಿಟ್ಟು ಒಂದೇ ಕಡೆ ನಾಲ್ಕು ವೇದಗಳು ಮತ್ತು ಕ್ಷಾತ್ರತೇಜಸ್ಸು ಇವೆರಡೂ ಸಮಸ್ತವಾಗಿ ಎಲ್ಲಿಯೂ ಇಲ್ಲವೆಂದು ನಾವು ಕೇಳಿದ್ದೇವೆ. ಬ್ರಹ್ಮಾಸ್ತ್ರ ಮತ್ತು ವೇದಗಳು ಒಂದೇ ಕಡೆ ಬೇರೆ ಎಲ್ಲೂ ಕಂಡುಬರುವುದಿಲ್ಲ ಎಂದು ನನ್ನ ಅಭಿಪ್ರಾಯ.
ವೇದಾಂತಾಶ್ಚ ಪುರಾಣಾನಿ ಇತಿಹಾಸಂ ಪುರಾತನಮ್ |
ಜಾಮದಗ್ನ್ಯಾದ್ ಋತೇ ರಾಮಾತ್ ಕೋ ದ್ರೋಣಾದಧಿಕೋ ಭವೇತ್ ॥
ವೇದಾಂತಗಳು, ಪುರಾಣ ಮತ್ತು ಪ್ರಾಚೀನ ಇತಿಹಾಸಗಳು ಇವುಗಳಲ್ಲಿ ಪರಶುರಾಮರನ್ನು ಬಿಟ್ಟರೆ ದ್ರೋಣರಿಗಿಂತ ಅಧಿಕರಾದವರು ಯಾರಿದ್ದಾರೆ?
ಆಚಾರ್ಯಪುತ್ರಃ ಕ್ಷಮತಾಂ ನಾಯಂ ಕಾಲೋ ವಿಭೇದನೇ |
ಸರ್ವೇ ಸಂಗತ್ಯ ಯುಧ್ಯಾಮಃ ಪಾಕಶಾಸನಿಮಾಗತಮ್ ॥17॥
ಆಚಾರ್ಯ ಪುತ್ರರು ಕ್ಷಮಿಸಬೇಕು. ಇದು ವಿರೋಧದ ಕಾಲವಲ್ಲ. ಯುದ್ಧಕ್ಕೆ ಬಂದ ಅರ್ಜುನನ ಜೊತೆಯಲ್ಲಿ ಎಲ್ಲರೂ ಸೇರಿ ಯುದ್ಧವನ್ನು ಮಾಡೋಣ.
ಬಲಸ್ಯ ವ್ಯಸನಾನೀಹ ಯಾನ್ಯುಕ್ತಾನಿ ಮನೀಷಿಭಿಃ |
ಮುಖ್ಯೋ ಭೇದೋ ಹಿ ತೇಷಾಂ ವೈ ಪಾಪಿಷ್ಠೋ ವಿದುಷಾಂ ಮತಃ ॥
ವಿವೇಕಿಗಳಾದವರು ಸೈನ್ಯದ ವ್ಯಸನಗಳನ್ನೇನು ಹೇಳುತ್ತಾರೆಯೋ ಅವುಗಳಲ್ಲಿ ವಿರೋಧವು ಮುಖ್ಯವಾದದು ಮತ್ತು ಅತ್ಯಂತ ಕೆಟ್ಟದ್ದು ಎಂದು ಜ್ಞಾನಿಗಳ ಅಭಿಪ್ರಾಯ.
ಅಶ್ವತ್ಥಾಮಾ
ನೈವ ನ್ಯಾಯ್ಯಮಿದಂ ವಾಚ್ಯಮಸ್ಮಾಕಂ ಪುರುಷರ್ಷಭ |
ಕಿಂತು ರೋಷಪರೀತೇನ ಗುರುಣಾ ಭಾಷಿತಾ ಗುಣಾಃ ॥19॥
ಅಶ್ವತ್ಥಾಮಾ ಎಲೈ ಪುರುಷರ್ಷಭನೇ, ಜ್ಞಾನಯುಕ್ತವಾದ ಈ ಮಾತುಗಳನ್ನು ನಮಗೆ ಹೇಳಬೇಕಾದ ಅವಶ್ಯಕತೆಯಿಲ್ಲ. ಆದರೆ ರೋಷಕ್ಕೆ ಸಿಲುಕಿದ ಗುರುಗಳು ಶಿಷ್ಯನ ಗುಣಗಳನ್ನು ಹೇಳಿದರು.
ಶತ್ರೋರಪಿ ಗುಣಾ ಗ್ರಾಹ್ಯಾ ದೋಷಾ ವಾಚ್ಯಾ ಗುರೋರಪಿ |
ಸರ್ವಥಾ ಸರ್ವಯತ್ನೇನ ಪುತ್ರೇ ಶಿಷ್ಯೇ ಹಿತಂ ವದೇತ್ ॥20॥
ಶತ್ರುಗಳ ಗುಣಗಳನ್ನೂ ಗ್ರಹಿಸಬೇಕು, ಗುರುಗಳ ದೋಷಗಳನ್ನೂ ಹೇಳಬೇಕು. ಪುತ್ರನಲ್ಲಿಯೂ ಮತ್ತು ಶಿಷ್ಯನಲ್ಲಿಯೂ ಎಲ್ಲರೀತಿಯಿಂದಲೂ ಮತ್ತು ಎಲ್ಲಾ ಪ್ರಯತ್ನಗಳಿಂದಲೂ ಹಿತವನ್ನೇ ನುಡಿಯಬೇಕು.
ಆಚಾರ್ಯ ಏವ ಕ್ಷಮತಾಂ ಶಾಂತಿರತ್ರ ವಿಧೀಯತಾಮ್ |
ಪಶ್ಯತೋ ಹಿ ಗುರೋರ್ಮಾತ್ಸ್ಯಾನ್ ನಿವೃತ್ತಂ ಕೋಪಕಾರಿತಮ್ ॥21॥
ಆಚಾರ್ಯರೇ ಕ್ಷಮಿಸಲಿ. ಇಲ್ಲಿ ಶಾಂತಿಯುಂಟಾಗಲಿ. ಮತ್ಸ್ಯದೇಶದ ಸೈನಿಕರನ್ನು ನೋಡಿದಾಗಲೇ ದ್ರೋಣರಿಗೆ ಕರ್ಣನ ರೋಷಕಾರಕ ವಚನಗಳು ಮರೆತುಹೋಗಿವೆ.
ವೈಶಂಪಾಯನಃ
ತತೋ ದುರ್ಯೋಧನೋ ದ್ರೋಣಂ ಕ್ಷಮಯಾಮಾಸ ಭಾರತ |
ಸಹ ಕರ್ಣೇನ ಭೀಷ್ಮೇಣ ಕೃಪಂ ಚ ಸುಮಹಾಬಲಮ್ ॥22॥
ವೈಶಂಪಾಯನ ಎಲೈ ಭಾರತನೇ, ಆಗ ಕರ್ಣ ಮತ್ತು ಭೀಷ್ಮರಿಂದ ಸಹಿತನಾದ ದುರ್ಯೋಧನನು ದ್ರೋಣರನ್ನೂ ಮತ್ತು ಮಹಾಬಲಿಷ್ಠರಾದ ಕೃಪರನ್ನೂ ಕ್ಷಮೆಯನ್ನು ಯಾಚಿಸಿದನು.
ದ್ರೋಣಃ
ಯದ್ಯೈವ ಪ್ರಥಮಂ ವಾಕ್ಯಂ ಭೀಷ್ಮಃ ಶಾಂತನವೋಽಬ್ರವೀತ್ |
ತದ್ಯೈವಾವಾಂ ಪ್ರಸನ್ನೌ ವೈ ಪರಮತ್ರ ವಿಧೀಯತಾಮ್ ॥23॥
ದ್ರೋಣ ಶಂತನು ಪುತ್ರರಾದ ಭೀಷ್ಮರು ಮೊದಲನೆಯ ವಾಕ್ಯವನ್ನು ಹೇಳಿದಾಗಲೇ ನಮ್ಮಿಬ್ಬರ ಕೋಪವು ಹೊರಟುಹೋಯಿತು. ನಾವು ಪ್ರಸನ್ನರಾಗಿದ್ದೇವೆ. ಮುಂದೆ ಮಾಡಬೇಕಾದ ಕಾರ್ಯವನ್ನು ಮಾಡಿ.
ಯಥಾ ದುರ್ಯೋಧನೋ ರಾಜಾ ನ ಗಚ್ಛೇತ್ ಕಾಂಚಿದಾಪದಮ್ |
ಸಾಹಸಾದ್ ಯದಿ ವಾ ಮೋಹಾತ್ ತಥಾ ನೀತಿರ್ವಿಧೀಯತಾಮ್ ॥
ಸಾಹಸದಿಂದಾಗಲೀ ಅಥವಾ ಮೋಹದಿಂದಾಗಲೀ ರಾಜನಾದ ದುರ್ಯೋಧನನಿಗೆ ಆಪತ್ತು ಒದಗದಂತೆ ನೀತಿಯನ್ನು ರೂಪಿಸಿ.
ವನವಾಸೇ ತು ನಿವೃತ್ತೇ ದೃಶ್ಯತೇ ತು ಧನಂಜಯಃ |
ಧನಂ ಚಾಲಭಮಾನೋಽತ್ರ ನಾದ್ಯ ನಃ ಕ್ಷಂತುಮರ್ಹತಿ ॥25॥
ವನವಾಸ ಮತ್ತು ಅಜ್ಞಾತವಾಸಗಳು ಮುಗಿದಿರುವುದರಿಂದ ಅರ್ಜುನನು ಕಾಣಸಿಗುತ್ತಾನೆ. ದೊರೆಯಬೇಕಾದ ರಾಜ್ಯಧನವನ್ನು ಪಡೆಯದೆ ಅವನು ಈ ದಿನ ನಮ್ಮನ್ನು ಕ್ಷಮಿಸುವುದಿಲ್ಲ.

ಯಥಾ ನಾಯಶಸಾ ಯುಂಜ್ಯಾತ್ ಧಾರ್ತರಾಷ್ಟ್ರಃ ಕಥಂಚನ |
ಯಥಾ ನ ನಃ ಪರಾಜ್ಯೈಷೀದರ್ಜುನಸ್ತದ್ ವಿಧೀಯತಾಮ್ ॥26॥
ಹೇಗೆ ಮಾಡಿದರೆ ದುರ್ಯೋಧನನಿಗೆ ಅಪಕೀರ್ತಿ ಉಂಟಾಗಲಾರದೋ ಮತ್ತು ಅರ್ಜುನನು ನಮ್ಮನ್ನು ಜಯಿಸಲಾರನೋ ಹಾಗೆ ಮಾಡಿ.
ಉಕ್ತಂ ದುರ್ಯೋಧನೇನಾಪಿ ಪುರಸ್ತಾದ್ ವಾಕ್ಯಮೀದೃಶಮ್ |
ತದನುಸ್ಮೃತ್ಯ ಗಾಂಗೇಯ ಯಥಾವದ್ ವಕ್ತುಮರ್ಹತಿ ॥27॥
ದುರ್ಯೋಧನನು ಇದಕ್ಕೆ ಮುಂಚೆಯೂ ಪಾಂಡವರ ಅಜ್ಞಾತವಾಸವು ಮುಗಿದಿಲ್ಲ ಎಂಬ ಮಾತುಗಳನ್ನು ಆಡಿದ್ದಾನೆ. ಎಲೈ ಭೀಷ್ಮರೇ, ಅದನ್ನು ಚಿಂತಿಸಿ ನೀವು ಸರಿಯಾಗಿ ಹೇಳಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚಾಶೋಽಧ್ಯಾಯಃ ॥
ಗೋಗ್ರಹಣಪರ್ವಣಿ ತ್ರಯೋಽವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
* * * *
ಐವತ್ತೊಂದನೆಯ ಅಧ್ಯಾಯ
ಭೀಷ್ಮರಿಂದ ಅಜ್ಞಾತವಾಸದ ಸಮಯವು ಮುಗಿದಿದೆ ಎಂದು ಹೇಳಿ ಯುದ್ಧಕ್ಕಾಗಿ ಅಭಿಯಾನ.
ಭೀಷ್ಮಃ
ಕಲಾಶ್ಚ ತತ್ರ ಯುಜ್ಯಂತೇ ಮುಹೂರ್ತಾಶ್ಚ ದಿನಾನಿ ಚ |
ಅರ್ಧಮಾಸಾಶ್ಚ ಮಾಸಾಶ್ಚ ನಕ್ಷತ್ರಾಣಿ ಗ್ರಹಾಸ್ತಥಾ ॥1॥
ಋತವಶ್ಚಾಪಿ ದೃಶ್ಯಂತೇ ತಥಾ ಸಂವತ್ಸರಾ ಅಪಿ |
ಏವಂ ಕಾಲವಿಭಾಗೇನ ಕಾಲಚಕ್ರಂ ಪ್ರವರ್ತತೇ ॥2॥
ಭೀಷ್ಮ ಕಾಲಚಕ್ರದಲ್ಲಿ ಕಲೆಗಳು, ಮುಹೂರ್ತಗಳು, ದಿನಗಳು, ಅರ್ಧಮಾಸಗಳು, ಮಾಸಗಳು, ನಕ್ಷತ್ರಗಳು, ಗ್ರಹಗಳು, ಋತುಗಳು ಮತ್ತು ಸಂವತ್ಸರಗಳೂ ಕಾಲವಿಭಾಗಗಳಲ್ಲಿ ಸೇರಿಕೊಂಡಿವೆ. ಹೀಗೆ ಕಾಲಚಕ್ರವೂ ತಿರುಗುತ್ತದೆ.
ತೇಷಾಂ ಕಾಲಾತಿರೇಕೇಣ ಜ್ಯೋತಿಷಾಂ ಚ ವ್ಯತಿಕ್ರಮಾತ್ |
ಪಂಚಮೇ ಪಂಚಮೇ ವರ್ಷೇ ದ್ವೌ ಮಾಸಾವಧಿಮಾಸಕೌ ॥3॥
ತೇಷಾಮಪ್ಯಧಿಕಾ ಮಾಸಾಃ ಪಂಚ ದ್ವಾದಶ ಚ ಕ್ಷಪಾಃ |
ತ್ರಯೋದಶಾನಾಂ ವರ್ಷಾಣಾಮಿತಿ ಮೇ ನಿಶ್ಚಿತಾ ಮತಿಃ ॥4॥
ಆ ಸೂರ್ಯಾದಿ ಜ್ಯೋತಿಸ್ಸುಗಳು ಒಂದು ರಾಶಿಯಲ್ಲಿ ಮೂವತ್ತು ದಿವಸ ಇರುವುದು ಇತ್ಯಾದಿ ಕಾಲನಿಯಮವನ್ನು ಮೀರಿ ಮೂವತ್ತೆರಡು ದಿವಸ ಇದ್ದಾಗ ರಾಶಿಯಲ್ಲಿರುವ ಕಾಲಸಮಯವು ಮೀರಿ ವರ್ಷಗಳನ್ನು ಗಣನೆ ಮಾಡುವಾಗ ಐದೈದು ವರ್ಷಗಳಿಗೆ ಎರಡು ಅಧಿಕ ಮಾಸಗಳು ಬರುತ್ತದೆ. ಹದಿಮೂರು ವರ್ಷಗಳಿಗೆ ಐದು ಅಧಿಕ ಮಾಸಗಳು ಮತ್ತು ಹನ್ನೆರಡು ರಾತ್ರಿಗಳು (ಆರು ದಿನಗಳು) ಅಧಿಕವಾಗಿ ಬರುತ್ತವೆ ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ಸೂರ್ಯಾದಿ ಜ್ಯೋತಿಸ್ಸುಗಳು ಒಂದು ರಾಶಿಯಲ್ಲಿ ಮೂವತ್ತು ದಿವಸಗಳು ಇತ್ಯಾದಿ ನಿಯಮಗಳ ಬದಲು ಒಂದು ರಾಶಿಯಲ್ಲಿ ಮೂವತ್ತೆರಡು ದಿವಸಗಳು ಇತ್ಯಾದಿಯಾಗಿ ಇರುತ್ತವೆ. ಹೀಗೆ ಎಣಿಸುವಾಗ ಎರಡೂವರೆ ವರ್ಷಗಳಿಗೆ ಒಂದು ಮಾಸವು ಅಧಿಕವಾಗುತ್ತದೆ. ಹೀಗೆ ಹನ್ನೆರಡು ವರ್ಷಗಳಿಗೆ ಐದು ಮಾಸಗಳು ಅಧಿಕವಾಗುತ್ತವೆ. ಹದಿಮೂರು ವರ್ಷದಲ್ಲಿ ಉಳಿದ ಆರು ತಿಂಗಳಿಗೆ ಹನ್ನೆರಡು ರಾತ್ರಿಗಳು ಎಂದರೆ ಆರು ದಿನಗಳು ಅಧಿಕವಾಗುತ್ತವೆ. ಆದ್ದರಿಂದ ಒಟ್ಟು ಹದಿಮೂರು ವರ್ಷದಲ್ಲಿ ಐದು ತಿಂಗಳು ಮತ್ತು ಆರು ದಿನಗಳು ಅಧಿಕವಾಗಿವೆ. ಮೇಲ್ನೋಟಕ್ಕೆ ಹದಿಮೂರು ವರ್ಷಕ್ಕೆ ಐದು ದಿವಸಗಳು ಮತ್ತು ಆರು ದಿವಸ ನ್ಯೂನವಾಗಿದೆ ಎಂದು ಕಂಡರೂ ದೇವಪಿತೃಕಾರ್ಯಗಳಿಗಾಗಿ ಅಧಿಕಮಾಸ ಸಹಿತವಾದ ವತ್ಸರಗಳನ್ನೇ ಒಂದುವರ್ಷವೆಂದು ಪರಿಗಣಿಸಿದರೂ ಪಾಂಡವರು ತಾವು ಮಾಡಿದ ಪ್ರತಿಜ್ಞೆಯ ರಕ್ಷಣೆಗಾಗಿ ಪೌರ್ಣಮಾಸದಿಂದ ಪೌರ್ಣಮಾಸದವರೆಗೆ ಒಂದು ತಿಂಗಳು ಎಂದು ಎಣಿಸುವುದರಿಂದ ಈ ಗಣನೆಯಲ್ಲಿ ಹದಿಮೂರು ವರ್ಷಗಳು ಪೂರ್ಣವಾಗಿ ಕಳೆದಿವೆ. ವರ್ಷ ಮತ್ತು ಮಾಸಗಳ ಗಣನೆ ಮಾಡುವಾಗ ಪೌರ್ಣಮಾಸದಿಂದ ಪೌರ್ಣಮಾಸದವರೆಗೆ ಒಂದು ಮಾಸವೆಂದು ಗಣನೆ ಮಾಡಬೇಕೆಂದಿರುವುದರಿಂದ ಪಾಂಡವರ ಗಣನೆಯಲ್ಲಿ ಯಾವ ದೋಷವೂ ಇಲ್ಲ (ಲಕ್ಷಾಲಂಕಾರ).
ಪೂರ್ವೇದ್ಯುರೇವ ನಿರ್ವೃತ್ತಸ್ತತೋ ಬೀಭತ್ಸುರಾಗತಃ ॥5॥
ಸರ್ವಂ ಯಥಾವಚ್ಚರಿತಂ ಯದ್ಯದೇಭಿಃ ಪ್ರತಿಶ್ರುತಮ್ |
ಏವಮೇತದ್ ಧ್ರುವಂ ಜ್ಞಾತ್ವಾ ತತೋ ಬೀಭತ್ಸುರಾಗತಃ ॥6॥
ಅಜ್ಞಾತವಾಸದ ಕಾಲವು ನಿನ್ನೆಯೇ ಮುಗಿದು ಹೋಗಿದೆ. ಆದ್ದರಿಂದ ಅರ್ಜುನನು ಬಂದಿದ್ದಾನೆ. ಪಾಂಡವರು ಪ್ರತಿಜ್ಞೆ ಮಾಡಿದಂತೆಯೇ ಎಲ್ಲವನ್ನೂ ಸರಿಯಾಗಿ ಮಾಡಿದ್ದಾರೆ. ಇದನ್ನು ಸರಿಯಾಗಿ ತಿಳಿದೇ ಅರ್ಜುನನು ಬಂದಿದ್ದಾನೆ.
ಸರ್ವೇ ಪಂಚ ಮಹಾತ್ಮಾನಃ ಸರ್ವೇ ಧರ್ಮಾರ್ಥಕೋವಿದಾಃ |
ಯೇಷಾಂ ಯುಧಿಷ್ಠಿರೋ ರಾಜಾ ಕಸ್ಮಾದ್ ಧರ್ಮೇ ಪರಾಯಯುಃ ॥
ಎಲ್ಲರೂ ಮಹಾತ್ಮರು. ಎಲ್ಲರೂ ಧರ್ಮಾರ್ಥಕೋವಿದರು. ಯಾರಿಗೆ ಯುಧಿಷ್ಠಿರನು ರಾಜನೋ ಅವರು ಧರ್ಮವನ್ನು ಏಕೆ ತ್ಯಜಿಸಿಯಾರು?
ಅಲುಬ್ಧಾಶ್ಚೈವ ಕೌಂತೇಯಾಃ ಕೃತವಂತಶ್ಚ ದುಷ್ಕರಮ್ |
ನ ಚಾಪಿ ಕೇವಲಂ ರಾಜ್ಯಮಿಚ್ಛೇಯುಸ್ತೇಽನುಪಾಯತಃ ॥8॥

ಪಾಂಡವರು ಲೋಭಿಗಳಲ್ಲ. ದುಷ್ಕರವಾದ ಕಾರ್ಯಗಳನ್ನು ಮಾಡಿದ್ದಾರೆ. ಧರ್ಮಾನುಸಾರಿಯಾದ ಉಪಾಯದಿಂದಲ್ಲದೆ ಬೇರೆ ರೀತಿಯಾಗಿ ಅವರು ರಾಜ್ಯವನ್ನು ಬಯಸಲಾರರು.
ತದೈವ ತೇ ಹಿ ವಿಕ್ರಾಂತಮೀಶುಃ ಪಾಂಡವನಂದನಾಃ |
ಧರ್ಮಪಾಶನಿಬದ್ಧಾಸ್ತು ನ ಚೇಲುಃ ಕ್ಷತ್ರಿಯವ್ರತಾತ್ ॥9॥
ಪಾಂಡವರು ಆ ದ್ಯೂತದ ಕಾಲದಲ್ಲಿಯೇ ಪರಾಕ್ರಮವನ್ನು ತೋರಿಸಲು ಸಮರ್ಥರಾಗಿದ್ದರು. ಆದರೆ ಧರ್ಮಪಾಶನಿಬದ್ಧರಾದ ಅವರು ಕ್ಷತ್ರಿಯ ವ್ರತದಿಂದ ಅಲುಗಾಡಲಿಲ್ಲ.
ಯಶ್ಚಾನೃತ ಇತಿ ಖ್ಯಾಯೇದ್ ಯಶ್ಚ ಗಚ್ಛೇತ್ ಪರಾಂ ಗತಿಮ್ |
ವೃಣೀಯುರ್ಮರಣಂ ಪಾರ್ಥಾ ನಾನೃತತ್ವಂ ಕಥಂಚನ ॥10॥
ಯಾವುದು ಅನೃತವೆಂದು ತೋರುತ್ತದೆಯೋ ಮತ್ತು ಯಾವುದು ಶ್ರೇಷ್ಠವಾದ ಗತಿಯನ್ನು ಕೊಡುವುದೋ ಅವೆರಡೂ ಲೋಕದಲ್ಲಿವೆ. ಪಾಂಡವರು ಮರಣವನ್ನಾದರೂ ಸ್ವೀಕರಿಸಿಯಾರು. ಅನೃತವನ್ನು ಎಂದೂ ಸ್ವೀಕರಿಸುವವರಲ್ಲ.
ಪ್ರಾಪ್ತೇ ತು ಕಾಲೇ ಸ್ವಾನರ್ಥಾನ್ ನೋತ್ಸೃಜೇಯುರ್ನರರ್ಷಭಾಃ |
ಅಪಿ ವಜ್ರಭೃತಾ ಗುಪ್ತಾನ್ ತಥಾವೀರ್ಯಾ ಹಿ ಪಾಂಡವಾಃ ॥11॥
ಪ್ರತಿಯುದ್ಧ್ಯೇಮ ಸಮರೇ ಸರ್ವಶಸ್ತ್ರಭೃತಾಂ ವರಮ್ ॥12॥
ನರಶ್ರೇಷ್ಠರಾದ ಪಾಂಡವರು ಯೋಗ್ಯವಾದ ಕಾಲದಲ್ಲಿ ತಮಗೆ ಸಲ್ಲಬೇಕಾದ ಅರ್ಥವನ್ನು ಅದು ಇಂದ್ರನಿಂದಲೇ ರಕ್ಷಿತವಾಗಿದ್ದರೂ ಸಹ ಬಿಡಲಾರರು. ಪಾಂಡವರು ಅಂತಹ ಸಾಮರ್ಥ್ಯವುಳ್ಳವರು. ನಾವು ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನಿಗೆ ಪ್ರತಿಯಾಗಿ ಯುದ್ಧವನ್ನು ಮಾಡೋಣ.
ತಸ್ಮಾದ್ ಯದತ್ರ ಕಲ್ಯಾಣಂ ಲೋಕೇ ಸದ್ಭಿರನುಷ್ಠಿತಮ್ |
ತತ್ ಸಂವಿಧೀಯತಾಂ ಕ್ಷಿಪ್ರಂ ಮಾ ನೋ ಹ್ಯರ್ಥೋಽತಿಗಾತ್ ಪರಾನ್ ॥
ಆದ್ದರಿಂದ ಲೋಕದಲ್ಲಿ ಸಜ್ಜನರು ಅನುಷ್ಠಾನ ಮಾಡಿದ ಕಲ್ಯಾಣಮಯವಾದ ಕಾರ್ಯವನ್ನು ಶೀಘ್ರವಾಗಿ ಮಾಡೋಣ. ನಮ್ಮ ಸಂಪತ್ತು ಪರರನ್ನು ಸೇರುವುದು ಬೇಡ.
ನ ಹಿ ಪಶ್ಯಾಮಿ ಸಂಗ್ರಾಮೇ ಕದಾಚಿದಪಿ ಕೌರವ |
ಏಕಾಂತಸಿದ್ಧಿಂ ರಾಜೇಂದ್ರ ಸಂಪ್ರಾಪ್ತಶ್ಚ ಧನಂಜಯಃ ॥14॥
ಎಲೈ ಕೌರವನೇ, ರಾಜೇಂದ್ರನೇ, ಯುದ್ಧದಲ್ಲಿ ನಿಯಮೇನ ಜಯ ಎಂಬುದು ಯಾರಿಗೂ ಇಲ್ಲ. ಅರ್ಜುನನಾದರೂ ಪ್ರಾಪ್ತನಾಗಿದ್ದಾನೆ.
ಸಂಪ್ರವೃತ್ತೇ ಚ ಸಂಗ್ರಾಮೇ ಭಾವಾಭಾವೌ ಜಯಾಜಯೌ |
ಅವಶ್ಯಮೇಕಂ ಸ್ಪೃಶತೋ ದೃಷ್ಟಮೇತದಸಂಶಯಮ್ ॥15॥
ಯುದ್ಧವು ಪ್ರವೃತ್ತವಾದರೆ ಒಬ್ಬನಿಗೆ ಜಯ, ಇನ್ನೊಬ್ಬನಿಗೆ ಅಪಜಯ; ಒಬ್ಬನಿಗೆ ಸಮೃದ್ಧಿ, ಇನ್ನೊಬ್ಬನಿಗೆ ಕ್ಷಯ; ಇವು ಅವಶ್ಯವಾಗಿ ಉಂಟಾಗುತ್ತವೆ. ಇದು ನಿಸ್ಸಂಶಯವಾಗಿ ನೋಡಲ್ಪಟ್ಟಿದೆ.
ತಸ್ಮಾದ್ ಯದ್ ದಾನಚರಿತಂ ಕರ್ಮ ವಾ ಧರ್ಮಸಂಹಿತಮ್ |
ಕ್ರಿಯತಾಮಾಶು ರಾಜೇಂದ್ರ ಸಂಪ್ರಾಪ್ತಶ್ಚ ಧನಂಜಯಃ ॥16॥
ಆದ್ದರಿಂದ ಎಲೈ ರಾಜೇಂದ್ರನೇ, ಧರ್ಮಕ್ಕೆ ಅನುಗುಣವಾದ ಅರ್ಧರಾಜ್ಯ ದಾನವೆಂಬ ಯಾವ ಕರ್ಮವಿದೆಯೋ ಅದನ್ನು ಬೇಗ ಮಾಡುವವನಾಗು. ಅರ್ಜುನನು ಬಂದಿದ್ದಾನೆ.
ಏಕೋಽಪಿ ಸಮರೇ ಪಾರ್ಥಃ ಪೃಥಿವೀಂ ನಿರ್ದಹೇತ್ ಶರೈಃ |
ಭ್ರಾತೃಭಿಃ ಸಹಿತೋ ವೀರೈಃ ಕಿಂ ಪುನಃ ಕೌರವಾನ್ ರಣೇ ॥17॥
ತಸ್ಮಾತ್ ಸಂಧಿಂ ಕುರುಶ್ರೇಷ್ಠ ಕುರುಷ್ವ ಯದಿ ಮನ್ಯಸೇ ॥18॥
ಅರ್ಜುನನೊಬ್ಬನೇ ಯುದ್ಧದಲ್ಲಿ ತನ್ನ ಬಾಣಗಳಿಂದ ಪೃಥ್ವಿಯನ್ನೇ ದಹಿಸಿಯಾನು. ವೀರರಾದ ಸಹೋದರರಿಂದ ಸಹಿತನಾದ ಅವನು ಯುದ್ಧದಲ್ಲಿ ಕೌರವರನ್ನು ಜಯಿಸುವ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಆದ್ದರಿಂದ ಎಲೈ ಕುರುಶ್ರೇಷ್ಠನೇ, ನಿನ್ನ ಅಭಿಪ್ರಾಯವಿದ್ದರೆ ಸಂಧಿಯನ್ನು ಮಾಡಿಕೊ.
ದುರ್ಯೋಧನಃ
ನಾಹಂ ರಾಜ್ಯಂ ಪ್ರದಾಸ್ಯಾಮಿ ಪಾಂಡವಾನಾಂ ಪಿತಾಮಹ |
ಗ್ರಾಮಂ ಸೇನಾಂ ಚ ದಾಸೀಶ್ಚ ದ್ರವ್ಯಂ ಸ್ವಲ್ಪಮಪಿ ಪ್ರಭೋ ॥19॥
ಯುದ್ಧೋಪಚಾರಿಕಂ ಯತ್ತು ತತ್ ಶೀಘ್ರಂ ಸಂವಿಧೀಯತಾಮ್ ॥20॥
ದುರ್ಯೋಧನ ಎಲೈ ಪಿತಾಮಹನೇ, ನಾನು ಪಾಂಡವರಿಗೆ ಸ್ವಲ್ಪ ರಾಜ್ಯವನ್ನಾಗಲೀ, ಗ್ರಾಮವನ್ನಾಗಲೀ, ದಾಸಿಯರನ್ನಾಗಲೀ, ಸೈನ್ಯವನ್ನಾಗಲೀ, ದ್ರವ್ಯವನ್ನಾಗಲೀ ಕೊಡುವುದಿಲ್ಲ. ಪ್ರಭುವೇ, ಯುದ್ಧಕ್ಕೆ ಅನುಗುಣವಾದ ಯಾವ ಕಾರ್ಯವನ್ನು ಮಾಡಬೇಕೋ ಅದನ್ನು ಶೀಘ್ರವಾಗಿ ಮಾಡುವವನಾಗು.
ಭೀಷ್ಮಃ
ತಾತಾತ್ರ ಮಾಮಿಕಾ ಬುದ್ಧಿಃ ಶ್ರೂಯತಾಂ ಯದಿ ರೋಚತೇ |
ಸರ್ವಥಾ ಹಿ ಮಯಾ ಶ್ರೇಯೋ ವಕ್ತವ್ಯಂ ಕುರುನಂದನ ॥21॥
ಕ್ಷಿಪ್ರಂ ಬಲಂ ಚತುರ್ಭಾಗಂ ಗೃಹ್ಯಾಗಚ್ಛ ಪುರಂ ಪ್ರತಿ ॥22॥
ಭೀಷ್ಮ ಪ್ರೀತಿಪಾತ್ರನೇ, ನಿನಗೆ ಇಷ್ಟವಾದರೆ ಈ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಕೇಳು. ಕುರುನಂದನನೇ, ನಾನು ಸರ್ವಥಾ ನಿನಗೆ ಶ್ರೇಯಸ್ಸನ್ನು ಹೇಳಬೇಕು. ಶೀಘ್ರವಾಗಿ ಸೈನ್ಯದ ಚತುರ್ಭಾಗವನ್ನು ತೆಗೆದುಕೊಂಡು ನೀನು ಹಸ್ತಿನಪುರಕ್ಕೆ ಹೋಗುವವನಾಗು.

ವೈಶಂಪಾಯನಃ
ಭೀಷ್ಮಸ್ಯೋಪರತೇ ವಾಕ್ಯೇ ತಥಾ ದುರ್ಯೋಧನಸ್ಯ ಚ |
ಪ್ರಾಪ್ತಮರ್ಥ್ಯಂ ಚ ಯದ್ ವಾಕ್ಯಂ ದ್ರೋಣಶ್ಚಾಹ ದ್ವಿಜೋತ್ತಮಃ||
ವೈಶಂಪಾಯನ ಭೀಷ್ಮರ ಮತ್ತು ದುರ್ಯೋಧನನ ಮಾತುಗಳು ಮುಗಿಯುತ್ತಿರಲು ಯೋಗ್ಯವಾದ ಮತ್ತು ಪ್ರಾಜ್ಞವಾದ ಮಾತುಗಳನ್ನು ದ್ವಿಜಶ್ರೇಷ್ಠರಾದ ದ್ರೋಣರು ಆಡಿದರು.
ಯತ್ತು ಯುದ್ಧಾಯಾಚರಿತಂ ಭವೇದ್ವಾ ಧರ್ಮಸಂಹಿತಮ್ |
ಕಸ್ತ್ವಯಾ ಸದೃಶೋ ಲೋಕೇ ಯದಿ ತತ್ ಕರ್ತುಮರ್ಹತಿ ||24||
ಇಯಂ ಚ ಮಾಮಿಕಾ ಪ್ರಜ್ಞಾ ಶ್ರೂಯತಾಂ ಯದಿ ರೋಚತೇ ||25||
ಯುದ್ಧದ ಪ್ರಯತ್ನ ಮತ್ತು ಧರ್ಮಯುಕ್ತವಾದ ಸಂಧಿ ಇವೆರಡರಲ್ಲಿ ನಿನ್ನಂತಹ ಯಾವನು ಲೋಕದಲ್ಲಿ ಯುದ್ಧವನ್ನು ಮಾಡಲು ಬಯಸುತ್ತಾನೆ? ನಿನಗೆ ಇಷ್ಟವಾದರೆ ಈ ನನ್ನ ಅಭಿಪ್ರಾಯವನ್ನು ಕೇಳು.
ರಾಜಾ ಬಲಚತುರ್ಭಾಗಂ ಕ್ಷಿಪ್ರಮಾದಾಯ ಗಚ್ಛತು |
ತತೋಽಪರಶ್ಚತುರ್ಭಾಗೋ ಗಾಃ ಸಮಾದಾಯ ಗಚ್ಛತು ||26||
ವಯಮರ್ಧೇನ ಸೈನ್ಯಸ್ಯ ಪ್ರತಿಯೋತ್ಸ್ಯಾಮಹೇಽರ್ಜುನಮ್ ||27||
ರಾಜನು ಸೈನ್ಯದ ನಾಲ್ಕನೆಯ ಒಂದು ಭಾಗವನ್ನು ತೆಗೆದುಕೊಂಡು ಕ್ಷಿಪ್ರವಾಗಿ ಹಸ್ತಿನಪುರಕ್ಕೆ ಹೋಗಲಿ. ಸೈನ್ಯದ ನಾಲ್ಕನೆಯ ಇನ್ನೊಂದು ಭಾಗವು ಗೋವುಗಳನ್ನು ತೆಗೆದುಕೊಂಡು ಹೊರಡಲಿ. ಉಳಿದ ಅರ್ಧಸೈನ್ಯದ ಜೊತೆಯಲ್ಲಿ ನಾವು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆವು.
ಅಹಂ ದ್ರೋಣಶ್ಚ ಕರ್ಣಶ್ಚ ಅಶ್ವತ್ಥಾಮಾ ಕೃಪಸ್ತಥಾ |
ಪ್ರತಿಯೋತ್ಸ್ಯಾಮ ಬೀಭತ್ಸುಮಾಗತಂ ಕೃತನಿಶ್ಚಯಮ್ ||28||
ಏವಂ ರಾಜಾ ಸುಗುಪ್ತಃ ಸ್ಯಾನ್ನ ಕ್ಲೈಬ್ಯಂ ಗಂತುಮರ್ಹತಿ ||29||
ದ್ರೋಣನಾದ ನಾನು, ಕರ್ಣ, ಅಶ್ವತ್ಥಾಮ ಮತ್ತು ಕೃಪ ಇವರು ಯುದ್ಧವನ್ನು ಮಾಡಲು ನಿಶ್ಚಯಿಸಿ ಬಂದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆವು. ಹೀಗೆ ಮಾಡಿದರೆ ರಾಜನು ಸುರಕ್ಷಿತನಾಗಿರುತ್ತಾನೆ. ಅವನು ಕ್ಲೈಬ್ಯವನ್ನು ಹೊಂದುವ ಕಾರಣವಿಲ್ಲ.
ಮಾತ್ಸ್ಯಂ ವಾ ಪುನರಾಯಾಂತಮಥವಾಽಪಿ ಶತಕ್ರತುಮ್ |
ಅಹಮಾವಾರಯಿಷ್ಯಾಮಿ ವೇಲೇವ ಮಕರಾಲಯಮ್ ||30||
ಯೋತ್ಸ್ಯಾಮಃ ಸಹ ಸಂಹತ್ಯ ಪಾಕಶಾಸನಿಮಾಗತಮ್ ||31||
ವಿರಾಟನು ಯುದ್ಧವನ್ನು ಮಾಡಲು ಬಂದರೂ ಅಥವಾ ಇಂದ್ರನೇ ಯುದ್ಧವನ್ನು ಮಾಡಲು ಬಂದರೂ ನಾನು ತೀರವು ಸಮುದ್ರವನ್ನು ತಡೆದಂತೆ ನಾನು ಅವರನ್ನು ತಡೆಯುವೆನು. ನಾವೆಲ್ಲರೂ ಸೇರಿ ಯುದ್ಧಕ್ಕೆ ಬಂದ ಅರ್ಜುನನನ್ನು ಎದುರಿಸಿ ಯುದ್ಧವನ್ನು ಮಾಡುವೆವು.
ವೈಶಂಪಾಯನಃ
ತದ್ವಾಕ್ಯಂ ನ ಕೃತಂ ತೇನ ದ್ರೋಣೇನೋಕ್ತಂ ಮಹಾತ್ಮನಾ |
ತಥಾ ಹಿ ಕೃತವಾನ್ ರಾಜಾ ಕೌರವಾಣಾಮನಂತರಮ್ ||32||
ವೈಶಂಪಾಯನ ಮಹಾತ್ಮರಾದ ದ್ರೋಣರು ಸಂಧಿಯನ್ನು ಮಾಡಿಕೊ ಎಂದು ಹೇಳಿದ ಮೊದಲಿನ ವಾಕ್ಯವನ್ನು ದುರ್ಯೋಧನನು ನಡೆಸಲಿಲ್ಲ. ಅನಂತರ ಹೇಳಿದ ಯುದ್ಧವನ್ನು ಮಾಡು ಎಂಬ ವಾಕ್ಯವನ್ನು ಮಾತ್ರ ದುರ್ಯೋಧನನು ನಡೆಸಿದನು (ಲಕ್ಷಾಲಂಕಾರ).
ಭೀಷ್ಮಃ ಪ್ರಸ್ಥಾಪ್ಯ ರಾಜಾನಂ ಗೋಧನಂ ತದನಂತರಮ್ |
ಸೇನಾಮುಖ್ಯಾನ್ ವ್ಯವಸ್ಥಾಪ್ಯ ವ್ಯೂಹಿತುಂ ಸಂಪ್ರಚಕ್ರಮೇ ||33||
ಭೀಷ್ಮರು ರಾಜನನ್ನು ಮತ್ತು ಅನಂತರ ಗೋಧನವನ್ನು ಹಸ್ತಿನಪುರಕ್ಕೆ ಕಳುಹಿಸಿ ಸೇನೆಯಲ್ಲಿ ಪ್ರಧಾನರಾದವರನ್ನು ಮುಂದಿಟ್ಟು ವ್ಯೂಹವನ್ನು ರಚಿಸಲು ಪ್ರಾರಂಭಿಸಿದರು.
ದ್ರೋಣಸ್ಯೋಪರತೇ ವಾಕ್ಯೇ ಭೀಷ್ಮಃ ಪ್ರೋವಾಚ ಬುದ್ಧಿಮಾನ್ ||34||
ಆಚಾರ್ಯೋ ಮಧ್ಯತಸ್ತಿಷ್ಠೇತ್ ಅಶ್ವತ್ಥಾಮಾ ತು ಸವ್ಯತಃ |
ಕೃಪಃ ಶಾರದ್ವತೋ ಧೀಮಾನ್ ಪಾರ್ಶ್ವಂ ರಕ್ಷತು ದಕ್ಷಿಣಮ್ ||35||
ದ್ರೋಣರ ಮಾತು ಮುಗಿಯುತ್ತಿರಲು ಮೇಧಾವಿಗಳಾದ ಭೀಷ್ಮರು ಮಾತನಾಡಿದರು ಆಚಾರ್ಯರಾದ ದ್ರೋಣರು ಮಧ್ಯದಲ್ಲಿ ಇರಲಿ. ಅಶ್ವತ್ಥಾಮರು ಎಡಭಾಗದಲ್ಲಿರಲಿ, ಮೇಧಾವಿಗಳಾದ ಕೃಪಾಚಾರ್ಯರು ಬಲಭಾಗವನ್ನು ರಕ್ಷಿಸಲಿ.
ವಿಕರ್ಣಶ್ಚ ಮಹಾವೀರ್ಯೋ ದುರ್ಮುಖಶ್ಚ ಪರಂತಪಃ |
ಶಕುನಿಃ ಸೌಬಲಶ್ಚೈವ ದುಃಸಹಶ್ಚ ಮಹಾಬಲಃ ||36||
ದ್ರೋಣಶ್ಚ ಪಾರ್ಶ್ವಮಜಿತಾಃ ಪಾಲಯಂತು ಮಹಾಬಲಾಃ ||37||
ಮಹಾಪರಾಕ್ರಮಿಯಾದ ವಿಕರ್ಣನೂ ಪರಂತಪನಾದ ದುರ್ಮುಖನೂ, ಸೌಬಲನಾದ ಶಕುನಿಯೂ, ಮಹಾಬಲನಾದ ದುಃಸಹನೂ ಪರಾಜಿತರಾಗದ ಮಹಾಬಲರಾದ ಅವರು ದ್ರೋಣರ ಪಾರ್ಶ್ವಗಳನ್ನು ರಕ್ಷಿಸಲಿ.
ಅಗ್ರತಃ ಸೂತಪುತ್ರಸ್ತು ಕರ್ಣಸ್ತಿಷ್ಠತು ದಂಸಿತಃ |
ಅಹಂ ಸರ್ವಸ್ಯ ಸೈನ್ಯಸ್ಯ ಪಶ್ಚಾತ್ ಸ್ಥಾಸ್ಯಾಮಿ ಪಾಲಯನ್ ||38||
ಮುಂಭಾಗದಲ್ಲಿ ಕವಚವನ್ನು ಧರಿಸಿದ ಸೂತಪುತ್ರನಾದ ಕರ್ಣನು ಇರಲಿ. ನಾನು ಎಲ್ಲ ಸೈನ್ಯದ ಹಿಂಭಾಗದಲ್ಲಿ ಎಲ್ಲರನ್ನೂ ರಕ್ಷಿಸುತ್ತಾ ನಿಲ್ಲುವೆನು.

ಸರ್ವೇ ಮಹಾರಥಾಃ ಶೂರಾ ಮಹೇಷ್ವಾಸಾ ಮಹಾಬಲಾಃ |
ಯುದ್ಧ್ಯಂತು ಪಾಂಡವಶ್ರೇಷ್ಠಮಾಗತಂ ಯತ್ನತೋ ಯುಧಿ ॥39॥
ಎಲ್ಲಾ ಮಹಾರಥರೂ, ಶೂರರೂ, ಮಹಾಧನುರ್ಧರರೂ ಮತ್ತು ಮಹಾಬಲರೂ ಯುದ್ಧಕ್ಕೆ ಬಂದ ಪಾಂಡವಶ್ರೇಷ್ಠನಾದ ಅರ್ಜುನನನ್ನು ಪ್ರಯತ್ನಪೂರ್ವಕವಾಗಿ ಯುದ್ಧದಲ್ಲಿ ಎದುರಿಸಲಿ - ಎಂದು ಹೇಳಿದರು.
ವೈಶಂಪಾಯನಃ
ಅಭೇದ್ಯಂ ಸರ್ವಸೈನ್ಯಾನಾಂ ವ್ಯೂಹ್ಯ ವ್ಯೂಹಂ ಕುರೂತ್ತಮಃ |
ವಜ್ರಗರ್ಭಂ ವ್ರೀಹಿಮುಖಂ ಅರ್ಧಚಕ್ರಾಂತಮಂಡಲಮ್ ॥40॥
ತಸ್ಯ ವ್ಯೂಹಸ್ಯ ಪಶ್ಚಾರ್ಧೇ ಭೀಷ್ಮಶ್ಚಾಥೋದ್ಯತಾಯುಧಃ |
ಸೌವರ್ಣಂ ತಾಳಮುಚ್ಛ್ರಿತ್ಯ ರಥೇ ತಿಷ್ಠನ್ನಶೋಭತ ॥41॥
ವೈಶಂಪಾಯನ ಕುರುಶ್ರೇಷ್ಠರಾದ ಭೀಷ್ಮರು ಮಧ್ಯದಲ್ಲಿ ವಜ್ರದಂತಿದ್ದ ತುದಿಯಭಾಗದಲ್ಲಿ ವ್ರೀಹಿಯಂತಿದ್ದ ಅರ್ಧಚಕ್ರಾಕಾರದ ಮಂಡಲವನ್ನು ಹೋಲುವ ಸರ್ವಸೈನ್ಯಗಳ ಅಭೇದ್ಯವಾದ ವ್ಯೂಹವನ್ನು ರಚಿಸಿ ಆ ಸೈನ್ಯದ ಹಿಂಭಾಗದಲ್ಲಿ ಆಯುಧವನ್ನು ಎತ್ತಿಹಿಡಿದು ರಥದಲ್ಲಿ ಸುವರ್ಣಮಯವಾದ ತಾಳಗಳನ್ನು ಏರಿಸಿ ನಿಂತು ಶೋಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕಪಂಚಾಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
* * * *
ಐವತ್ತೆರಡನೆಯ ಅಧ್ಯಾಯ
ಯುದ್ಧವನ್ನು ನೋಡಲು ಆಕಾಶದಲ್ಲಿ ಇಂದ್ರಾದಿಗಳ ಆಗಮನ.
ವೈಶಂಪಾಯನಃ
ತತಃ ಸುದರ್ಶನಂ ನಾಮ ಪ್ರಾಸಾದಂ ಹರಿವಾಹನಃ |
ಸರ್ವಾನ್ ದೇವಾನ್ ಸಮಾರೋಪ್ಯ ಪ್ರಯಯೌ ಯತ್ರ ಪಾಂಡವಃ ॥
ವೈಶಂಪಾಯನ ಆಗ ಇಂದ್ರನು ಸುದರ್ಶನವೆಂಬ ಪ್ರಾಸಾದದಲ್ಲಿ ಎಲ್ಲಾ ದೇವತೆಗಳನ್ನೂ ಕೂಡಿಸಿಕೊಂಡು ಅರ್ಜುನನಿದ್ದಲ್ಲಿಗೆ ಹೊರಟನು.
ಸ್ಥೂಣಾ ರಾಜನ್ ಸಹಸ್ರಂ ತು ಯತ್ರ ಮಧ್ಯೇ ಪ್ರತಿಷ್ಠಿತಮ್ |
ತತ್ರ ಸೂರ್ಯಪಥೇಽತಿಷ್ಠದ್ ವಿಮಲಾ ವಾಸವೀ ಸಭಾ ॥2॥
ಎಲೈ ರಾಜನೇ, ಸೂರ್ಯಪಥದ ಮಧ್ಯದಲ್ಲಿ ಸಹಸ್ರ ಸ್ತಂಭಗಳಿರುವ ಸಭೆಯಲ್ಲಿ ಆ ಇಂದ್ರನ ಪರಿಶುದ್ಧವಾದ ಸಭೆಯು ನಿಂತಿತು.
ಆದಿತ್ಯಾ ವಸವೋ ರುದ್ರಾ ಅಶ್ವಿನೌ ಚ ಮರುದ್ಗಣಾಃ |
ತತ್ರ ಶ್ವೇತಾನಿ ಚ್ಛತ್ರಾಣಿ ಕಾಂಚನಸ್ಫಟಿಕಾನಿ ಚ ॥3॥
ತಥಾ ಚಿತ್ರಾಣಿ ಚ್ಛತ್ರಾಣಿ ದಿವ್ಯರೂಪಾಣಿ ಭಾರತ |
ಮಣಿರತ್ನವಿಚಿತ್ರಾಣಿ ನಾನಾರೂಪಾಣಿ ಭಾಗಶಃ ॥4॥
ಆಕಾಶೇ ಸಮದೃಶ್ಯಂತ ಭಾನುಮತಿ ಶುಭಾನಿ ಚ ॥5॥
ಆದಿತ್ಯರೂ, ವಸುಗಳೂ, ರುದ್ರರೂ, ಅಶ್ವಿನಿಗಳೂ, ಮರುದ್ಗಣಗಳೂ (ಆಕಾಶದಲ್ಲಿ ಕಂಡುಬಂದರು). ಸುವರ್ಣ ಮತ್ತು ಸ್ಫಟಿಕಗಳಿಂದ ಅಲಂಕೃತವಾದ ಶ್ವೇತಚ್ಛತ್ರಗಳು, ವಿಚಿತ್ರವಾದ ದಿವ್ಯರೂಪವನ್ನು ಹೊಂದಿದ, ಮಣಿರತ್ನಗಳಿಂದ ವಿಚಿತ್ರವಾಗಿ ಕಾಣುವ, ನಾನಾರೂಪಗಳನ್ನು ಹೊಂದಿದ, ಶುಭವಾದ ಪ್ರಕಾಶಮಾನವಾದ ಛತ್ರಗಳು ಎಲ್ಲವೂ ಆಕಾಶದಲ್ಲಿ ಕಂಡುಬಂದವು.
ಅಗ್ನೇರಿಂದ್ರಸ್ಯ ಸೋಮಸ್ಯ ಯಮಸ್ಯ ವರುಣಸ್ಯ ಚ |
ತಥಾ ಧಾತುರ್ವಿಧಾತುಶ್ಚ ಮಿತ್ರಸ್ಯ ಧನದಸ್ಯ ಚ ॥6॥
ರುದ್ರಸ್ಯ ವಿಷ್ಣೋಃ ಸವಿತುಸ್ತ್ರಿದಶಾನಾಂ ತಥೈವ ಚ ॥7॥
ಕಾಂಚನಾನಿ ಚ ದಾಮಾನಿ ವಿವಿಧಾಶ್ಚೋತ್ತಮಸ್ರಜಃ |
ದಿವ್ಯಪುಷ್ಪಾಭಿಸಂವೀತಾಸ್ತತ್ರ ಚ್ಛತ್ರಾಣಿ ಭೇಜಿರೇ ॥8॥
ಅಗ್ನಿಯ, ಇಂದ್ರನ, ಚಂದ್ರನ, ಯಮನ, ವರುಣನ, ಬ್ರಹ್ಮನ, ವಿಧಾತೃವಿನ, ಮಿತ್ರನ, ಕುಬೇರನ, ರುದ್ರನ, ವಿಷ್ಣುವಿನ, ಸವಿತೃವಿನ ಮತ್ತು ಅನೇಕ ದೇವತೆಗಳ ಸುವರ್ಣಮಯವಾದ ದಾಮಗಳಿಂದ ಕೂಡಿದ ಉತ್ತಮವಾದ ಮಾಲೆಗಳಿಂದ ಕೂಡಿದ ದಿವ್ಯಪುಷ್ಪಗಳಿಂದ ಅಲಂಕೃತವಾದ ಅನೇಕ ವಿಧವಾದ ಛತ್ರಗಳು ಅಲ್ಲಿ ಕಂಡುಬಂದವು.
ತಸ್ಮಿಂಶ್ಚ ರಾಜನ್ ಪ್ರಾಸಾದೇ ದಿವ್ಯರತ್ನವಿಭೂಷಿತೇ |
ದಿವ್ಯಗಂಧಸಮಾವಿಷ್ಟಾಃ ಸ್ರಜೋ ದಿವ್ಯಾಶ್ಚಕಾಶಿರೇ ॥9॥
ಎಲೈ ರಾಜನೇ, ದಿವ್ಯರತ್ನವಿಭೂಷಿತವಾದ ಆ ಪ್ರಾಸಾದದಲ್ಲಿ ದಿವ್ಯಗಂಧಗಳಿಂದ ಕೂಡಿದ ದಿವ್ಯವಾದ ಹೂಮಾಲೆಗಳು ಶೋಭಿಸಿದವು.

ದಿವ್ಯಶ್ಚ ವಾಯುಃ ಪ್ರವವೌ ಗಂಧಮಾದಾಯ ಸರ್ವಶಃ |
ಋತವಃ ಪುಷ್ಪಮಾದಾಯ ಸಮತಿಷ್ಠಂತ ಭಾರತ ॥10॥
ದಿವ್ಯವಾದ ವಾಯುವು ಒಳ್ಳೆಯ ಗಂಧವನ್ನು ತೆಗೆದುಕೊಂಡು ಎಲ್ಲ ಕಡೆಯಲ್ಲಿಯೂ ಬೀಸಿತು. ಎಲೈ ಭಾರತನೇ, ಋತುಗಳು ತಮ್ಮ ಪುಷ್ಪವನ್ನು ತೆಗೆದುಕೊಂಡು ಅಲ್ಲಿಗೆ ಬಂದವು.

ಪ್ರಜಾನಾಂ ಪತಯಃ ಸಪ್ತ ಸಪ್ತ ಚೈವ ಮಹರ್ಷಯಃ |
ತತ್ರ ದೇವರ್ಷಯಶ್ಚೈವ ತೇ ಚ ರೇಜುರ್ದಿವೌಕಸಃ ||11||
ಇಂದ್ರೇಣ ಸಹಿತಾಃ ಸರ್ವೇ ತ್ರಿದಶಾಶ್ಚ ವ್ಯವಸ್ಥಿತಾಃ ||12||
ಸಪ್ತಪ್ರಜಾಪತಿಗಳು ಮತ್ತು ಸಪ್ತಮಹರ್ಷಿಗಳು ಅಲ್ಲಿ ಇದ್ದರು. ಅಲ್ಲಿ ದೇವರ್ಷಿಗಳು ಮತ್ತು ಆ ದೇವತೆಗಳು ಕಂಗೊಳಿಸಿದರು. ಇಂದ್ರನಿಂದ ಸಹಿತರಾದ ಎಲ್ಲಾ ದೇವತೆಗಳೂ ಆ ಪ್ರಾಸಾದದಲ್ಲಿ ಇದ್ದರು.
ನ ಪಂಕೋ ನ ರಜಸ್ತತ್ರ ಪ್ರವಿವೇಶ ಕಥಂಚನ |
ಆದಿತ್ಯಶ್ಚಾಪಿ ರೂಕ್ಷೋಽತ್ರ ನಾತಿವೇಲಮಿವಾತಪತ್ ||13||
ಅಲ್ಲಿ ಕೆಸರಾಗಲೀ ಅಥವಾ ಧೂಳಾಗಲೀ ಪ್ರವೇಶಿಸುವಂತಿರಲಿಲ್ಲ. ಸೂರ್ಯನೂ ಸಹ ಬಹಳ ಪ್ರಖರವಾಗಿ ತಾಪವನ್ನು ಉಂಟುಮಾಡುತ್ತಿರಲಿಲ್ಲ.
ದಿವ್ಯಗಂಧಂ ಸಮಾದಾಯ ವಾಯುಸ್ತತ್ರಾಭಿಗಚ್ಛತಿ |
ಪ್ರಕಾಶಂ ತ್ರಿದಿವಃ ಸರ್ವಾದರ್ಶನೀಯಮದೃಶ್ಯತ ||14||
ವಾಯುವು ದಿವ್ಯಗಂಧವನ್ನು ತೆಗೆದುಕೊಂಡು ಎಲ್ಲ ಕಡೆಗಳಲ್ಲಿಯೂ ಬೀಸುತ್ತಿತ್ತು. ಯಾರಿಗೂ ಕಾಣದ ಸ್ವರ್ಗಲೋಕದ ವೈಭವಗಳೆಲ್ಲವೂ ಅಲ್ಲಿ ಸ್ಪಷ್ಟವಾಗಿ ಕಾಣುತ್ತಿದ್ದವು. (ಲಕ್ಷ್ಮಾಲಂಕಾರ).
ತತ್ರ ದೇವಾಃ ಸಮಾರುಹ್ಯ ತಂ ದಿವ್ಯಂ ಸರ್ವತಃಪ್ರಭಾಮ್ |
ಅಂಬರೇ ವಿಮಲೇಽಗಚ್ಛನ್ ಪ್ರಾಸಾದಂ ಗಾಮಗಾಮಿನೀಮ್ ||15||
ದೇವತೆಗಳು ತಾವು ಹೋದಲೆಲ್ಲಾ ಹೋಗುವ ಆ ಪ್ರಕಾಶಮಾನವಾದ ಶುದ್ಧವಾದ ದಿವ್ಯವಾದ ಪ್ರಾಸಾದವನ್ನು ಏರಿ ಆಕಾಶದಲ್ಲಿ ಸಂಚರಿಸಿದರು (ಲಕ್ಷ್ಮಾಲಂಕಾರ).
ತತ್ರ ರಾಜರ್ಷಯಶ್ಚೈವ ಸಮಾರೂಢಾ ದಿವೌಕಸಃ |
ಶ್ವೇತೋ ರಾಜಾ ವಸುಮನಾಸ್ತಥಾ ಭದ್ರಃ ಪ್ರತರ್ದನಃ ||16||
ನೃಗೋ ಯಯಾತಿರ್ನಹುಷೋ ಮಾಂಧಾತಾ ಭರತಃ ಪುರುಃ |
ಅಷ್ಟಕಶ್ಚ ಶಿಬಿಶ್ಚೋಭೌ ಸ ಚ ರಾಜಾ ಪುರೂರವಾಃ ||17||
ಡಂಬೋದ್ಭವಃ ಕಾರ್ತವೀರ್ಯೋ ಹ್ಯರ್ಜುನಃ ಸಗರಸ್ತಥಾ |
ದಿಲೀಪಃ ಕೇರಳಃ ಪೂರುಃ ಶರ್ಯಾತಿಃ ಸೋಮಕಸ್ತಥಾ ||18||
ಹರಿಶ್ಚಂದ್ರಶ್ಚ ತೇಜಸ್ವೀ ರಘುರ್ದಶರಥಸ್ತಥಾ |
ಭಗೀರಥಶ್ಚ ರಾಜರ್ಷಿಃ ಸರ್ವೇ ಚ ಜನಮೇಜಯ ||19||
ಪಾಂಡುಶ್ಚೈವ ಮಹಾಬಾಹುಶ್ಚಾಮರವ್ಯಜನೈರ್ಯುತಃ |
ಛತ್ರೇಣ ಧ್ರಿಯಮಾಣೇನ ರಾಜಸೂಯಶ್ರಿಯಾ ವೃತಃ ||20||
ಅಲ್ಲಿ ದೇವತೆಗಳು ಮತ್ತು ರಾಜರ್ಷಿಗಳು ಸಮಾರೂಢರಾಗಿದ್ದರು. ಶ್ವೇತರಾಜ, ವಸುಮನ, ಭದ್ರ, ಪ್ರತರ್ದನ, ನೃಗ, ಯಯಾತಿ, ನಹುಷ, ಮಾಂಧಾತಾ, ಭರತ, ಪುರು, ಅಷ್ಟಕ, ಶಿಬಿ, ಪುರೂರವ, ಡಂಬೋದ್ಭವ, ಕಾರ್ತವೀರ್ಯಾರ್ಜುನ, ಸಗರ, ದಿಲೀಪ, ಕೇರಳ, ಪೂರು, ಶರ್ಯಾತಿ, ಸೋಮಕ, ಹರಿಶ್ಚಂದ್ರ, ತೇಜಸ್ವಿಯಾದ ರಘು, ದಶರಥ, ರಾಜರ್ಷಿಯಾದ ಭಗೀರಥ ಎಲ್ಲರೂ ಇದ್ದರು. ಎಲೈ ಜನಮೇಜಯನೇ, ಮಹಾಬಾಹುವಾದ ಪಾಂಡುವು ಅಲ್ಲಿ ಛತ್ರಚಾಮರ ವ್ಯಜನಗಳಿಂದ ಸೇವಿತನಾಗಿ ರಾಜಸೂಯಯಾಗದ ಕಾಂತಿಯಿಂದ ಬೆಳಗುತ್ತಿದ್ದನು.
ಏತೇ ಚಾನ್ಯೇ ಚ ಬಹವಃ ಸತ್ಯಶೀಲಾಃ ಶುಚಿವ್ರತಾಃ |
ಕೀರ್ತಿಮಂತೋ ಮಹಾವೀರ್ಯಾಸ್ತತ್ರೈವಾಸನ್ ದಿವಿ ಸ್ಥಿತಾಃ ||21||
ಇವರೂ ಮತ್ತು ಸತ್ಯಶೀಲರೂ ಶುಚಿವ್ರತರೂ, ಕೀರ್ತಿಶಾಲಿಗಳೂ, ಮಹಾಪರಾಕ್ರಮಿಗಳೂ ಆದ ಇನ್ನೂ ಅನೇಕ ರಾಜರೂ ಅಲ್ಲಿ ಆಕಾಶದಲ್ಲಿ ನಿಂತರು.
ಗಣಾಶ್ಚಾಪ್ಸರಸಾಂ ಸರ್ವೇ ಗಂಧರ್ವಾಶ್ಚಾಪಿ ಸರ್ವಶಃ |
ದೈತ್ಯರಾಕ್ಷಸಯಕ್ಷಾಶ್ಚ ಸುಪರ್ಣಾಃ ಪನ್ನಗಾಸ್ತಥಾ ||22||
ವಾಸವಪ್ರಮುಖಾ ಸರ್ವೇ ದೇವಾಶ್ಚ ಸಗಣೇಶ್ವರಾಃ |
ಆಸಂಸ್ತತ್ರ ಸಮಾರೂಢಾಃ ಸಂಗ್ರಾಮಂ ತಂ ದಿದೃಕ್ಷವಃ ||23||
ಹಾಗೆಯೇ ಎಲ್ಲಾ ಅಪ್ಸರೆಯರ ಗಣಗಳೂ, ಎಲ್ಲ ಗಂಧರ್ವರೂ, ದೈತ್ಯರಾಕ್ಷಸ ಯಕ್ಷರೂ, ಸುಪರ್ಣಗಳೂ, ಅದರಂತೆ ಸರ್ಪಗಳೂ, ಇಂದ್ರ ಮೊದಲಾದ ದೇವತೆಗಳೂ, ಗಣನಾಯಕರೂ ಯುದ್ಧವನ್ನು ನೋಡಲು ಬಯಸಿ ಆ ಪ್ರಾಸಾದವನ್ನು ಏರಿ ಕುಳಿತಿದ್ದರು.
ಇತ್ಯಂಬರೇ ವ್ಯವಸ್ಥಾಯ ಪ್ರಾಸಾದಸ್ಥಾ ದಿವೌಕಸಃ |
ಏಕಸ್ಯ ಚ ಬಹೂನಾಂ ಚ ದ್ರಷ್ಟುಂ ಯುದ್ಧಂ ವ್ಯವಸ್ಥಿತಾಃ ||24||
ಪ್ರಾಸಾದದಲ್ಲಿದ್ದ ದೇವತೆಗಳು ಆಕಾಶದಲ್ಲಿ ಆ ಪ್ರಾಸಾದವನ್ನು ನಿಲ್ಲಿಸಿ ಒಬ್ಬನಿಗೂ ಮತ್ತು ಅನೇಕರಿಗೂ ನಡೆಯುವ ಆ ಯುದ್ಧವನ್ನು ನೋಡಲು ನಿಶ್ಚಯಿಸಿ ನಿಂತರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಿಪಂಚಾಶೋಽಧ್ಯಾಯಃ ||
|| ಗೋಗ್ರಹಣಪರ್ವಣಿ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *

ಐವತ್ತೂರನೆಯ ಅಧ್ಯಾಯ
ಯುದ್ಧಾರಂಭ. ಅರ್ಜುನನಿಂದ ಬಾಣಗಳ ಮೂಲಕ ಭೀಷ್ಮಾದಿಗಳ
ಅಭಿವಂದನೆ ಮತ್ತು ಕುಶಲಪ್ರಶ್ನೆ.
ವೈಶಂಪಾಯನಃ
ತಥಾ ವ್ಯೂಢೇಷ್ವನೀಕೇಷು ಕೌರವೇಯೈರ್ಮಹಾರಥೈಃ |
ಉಪಾಯಾದರ್ಜುನಸ್ತೂರ್ಣಂ ರಥಘೋಷೇಣ ನಾದಯನ್ ॥1॥
ವೈಶಂಪಾಯನ ಮಹಾರಥರಾದ ಕೌರವರು ತಮ್ಮ ಸೈನ್ಯವ್ಯೂಹವನ್ನು ರಚಿಸುತ್ತಿರಲು ತನ್ನ ರಥಘೋಷದಿಂದ ಎಲ್ಲಕಡೆಯಲ್ಲಿಯೂ ಪ್ರತಿಧ್ವನಿಸುತ್ತಾ ಅರ್ಜುನನು ಶೀಘ್ರವಾಗಿ ಬಂದನು.
ದದೃಶುಸ್ತದ್ ಧ್ವಜಾಗ್ರಂ ತೇ ಶುಶ್ರುವುಶ್ಚ ರಥಸ್ವನಮ್ |
ದೋಧೂಯಮಾನಸ್ಯ ಭೃಶಂ ಗಾಂಡೀವಸ್ಯ ಚ ನಿಸ್ವನಮ್ ॥2॥
ಕೌರವರು ಅವನ ಧ್ವಜದ ಅಗ್ರಭಾಗವನ್ನು ನೋಡಿದರು. ರಥದ ಸ್ವನವನ್ನೂ ಕೇಳಿದರು. ಬಹಳವಾಗಿ ಕಂಪನವನ್ನು ಮಾಡುತ್ತಿದ್ದ ಗಾಂಡೀವದ ಘೋಷವನ್ನೂ ಕೇಳಿದರು.
ತ್ರಿಕ್ರೋಶಮಾತ್ರಂ ಗತ್ವಾ ತು ಪಾಂಡವಃ ಶ್ವೇತವಾಹನಃ |
ಸೇನಾಮುಖಮಭಿಪ್ರೇಕ್ಷ್ಯ ಪಾರ್ಥೋ ವೈರಾಟಿಮಬ್ರವೀತ್ ॥3॥
ಶ್ವೇತವಾಹನನಾದ ಅರ್ಜುನನು ಮೂರುಕ್ರೋಶದಷ್ಟು ದೂರವನ್ನು ಪ್ರಯಾಣ ಮಾಡಿ ಸೇನೆಯ ಮುಂಭಾಗವನ್ನು ನಿರೀಕ್ಷಿಸಿ ಉತ್ತರನನ್ನು ಕುರಿತು ಹೇಳಿದನು.
ರಾಜಾನಂ ನಾತ್ರ ಪಶ್ಯಾಮಿ ರಥಾನೀಕೇ ವ್ಯವಸ್ಥಿತಮ್ |
ದಕ್ಷಿಣಂ ಪಕ್ಷಮಾಸ್ಥಾಯ ಕುರವೋ ಯಾಂತ್ಯುದಙ್ಮುಖಾಃ ॥4॥
ಸೇನೆಯ ಮುಂಭಾಗದಲ್ಲಿ ಇರಬೇಕಾದ ರಾಜನಾದ ದುರ್ಯೋಧನನನ್ನು ನಾನು ಇಲ್ಲಿ ಕಾಣುತ್ತಿಲ್ಲ. ಬಲಭಾಗವನ್ನು ಆಶ್ರಯಿಸಿ ಹೊರಟ ಕುರುಗಳು ಉತ್ತರಾಭಿಮುಖವಾಗಿ ಹೋಗುತ್ತಿದ್ದಾರೆ.
ಉತ್ಸೃಜ್ಯೈತದ್ ರಥಾನೀಕಂ ಮಹೇಷ್ವಾಸಾಭಿರಕ್ಷಿತಮ್ |
ಗವಾಗ್ರಮಭಿತೋ ಯಾಹಿ ಯಾವತ್ ಪಶ್ಯಾಮಿ ವೈ ರಿಪುಮ್ ॥5॥
ಗವಾಗ್ರಮಭಿತೋ ಗತ್ವಾ ಗಾಶ್ಚಾಪ್ಯಾಶು ನಿವರ್ತಯ ॥6॥
ಮಹಾಧನುರ್ಧಾರಿಗಳಿಂದ ರಕ್ಷಿತವಾದ ರಥಗಳ ಈ ಸಮೂಹವನ್ನು ಬಿಟ್ಟು ಬಳಸಿಕೊಂಡು ಗೋವುಗಳ ಮುಂಭಾಗಕ್ಕೆ ಹೋಗು. ನಾನು ಅಲ್ಲಿ ನನ್ನ ಶತ್ರುವನ್ನು ನೋಡುತ್ತೇನೆ. ಬಳಸಿಕೊಂಡು ಗೋವುಗಳ ಮುಂದೆ ಹೋಗಿ ಶೀಘ್ರವಾಗಿ ಗೋವುಗಳನ್ನು ಹಿಂದಕ್ಕೆ ತಿರುಗಿಸು.
ಯಾವದೇತೇ ನಿವರ್ತಂತೇ ಕುರವೋ ಜವಮಾಸ್ಥಿತಾಃ |
ತಾವದೇವ ಪಶೂನ್ ಸರ್ವಾನ್ ನಿವರ್ತಿಷ್ಯೇ ತಥಾ ಹಿ ಭೋ ॥7॥
ವೇಗವನ್ನು ಹೊಂದಿ ಹೋಗುತ್ತಿರುವ ಕುರುಗಳು (ಹಸ್ತಿನಪುರಕ್ಕೆ) ಹಿಂದಿರುಗುವುದಕ್ಕಿಂತ ಮೊದಲೇ ನಾನು ಎಲ್ಲಾ ಗೋವುಗಳನ್ನೂ ಹಾಗೆಯೇ ಹಿಂದಕ್ಕೆ ತಿರುಗಿಸುವೆನು.
ಇತ್ಯುಕ್ತ್ವಾ ಸಮರೇ ಪಾರ್ಥೋ ವೈರಾಟಿಮಪರಾಜಿತಃ |
ಸವ್ಯಂ ಪಕ್ಷಮನುಪ್ರಾಪ್ಯ ಜವೇನಾಶ್ವಾನಚೋದಯತ್ ॥8॥
ಯುದ್ಧದಲ್ಲಿ ಅಪರಾಜಿತನಾದ ಅರ್ಜುನನು ಉತ್ತರನನ್ನು ಕುರಿತು ಹೀಗೆ ಹೇಳಿ ಎಡಭಾಗವನ್ನು ಹಿಡಿದು ಶೀಘ್ರವಾಗಿ ಅಶ್ವಗಳನ್ನು ಪ್ರಚೋದಿಸಿದನು.
ತತಸ್ತತ್ ಸರ್ವಮಾಲೋಕ್ಯ ದ್ರೋಣೋ ವಚನಮಬ್ರವೀತ್ |
ಮಹಾರಥಮನುಪ್ರಾಪ್ತಂ ದೃಷ್ಟ್ವಾ ಗಾಂಡೀವಧನ್ವಿನಮ್ ॥9॥
ಆಗ ಅವೆಲ್ಲವನ್ನೂ ನೋಡಿ ಮಹಾರಥನೂ, ಗಾಂಡೀವಧನುರ್ಧಾರಿಯೂ ಆದ ಅರ್ಜುನನು ಬಂದಿರುವುದನ್ನು ನೋಡಿ ದ್ರೋಣರು ಮಾತನಾಡಿದರು.
ಏತದ್ ಧ್ವಜಾಗ್ರಂ ಪಾರ್ಥಸ್ಯ ದೂರತಃ ಪರಿದೃಶ್ಯತೇ |
ಮೇಘಃ ಸವಿದ್ಯುತ್‌ಸ್ತನಿತೋ ರೋರವೀತಿ ಚ ವಾನರಃ ॥10॥
ಅವಸ್ಥಾಯ ರಥಂ ಯಾತಿ ಗಾಂಡೀವಂ ವಿಕ್ಷಿಪನ್ ಧನುಃ ॥11॥
ಅರ್ಜುನನ ಧ್ವಜದ ಈ ಅಗ್ರಭಾಗವು ದೂರದಿಂದಲೇ ಕಾಣುತ್ತಿದೆ. ಮಿಂಚಿನಿಂದ ಕೂಡಿದ ಮೋಡದ ಧ್ವನಿಯಂತೆ ಧ್ವಜದಲ್ಲಿರುವ ವಾನರನು ಗರ್ಜಿಸುತ್ತಿದ್ದಾನೆ. ಅರ್ಜುನನು ರಥವನ್ನು ಏರಿ, ಗಾಂಡೀವಧನುಸ್ಸನ್ನು ಎಳೆದು ಶಬ್ದವನ್ನು ಮಾಡುತ್ತಾ ಹೋಗುತ್ತಿದ್ದಾನೆ.
ಅಶ್ವಾನಾಂ ಸ್ತನತಾಂ ಶಬ್ದೋ ವಹತಾಂ ಪಾಕಶಾಸನಿಮ್ |
ರಥಸ್ಯಾಂಬುಧರಸ್ಯೇವ ಶ್ರೂಯತೇ ಭೃಶದಾರುಣಃ ॥12॥
ರಥದಲ್ಲಿ ಅರ್ಜುನನನ್ನು ಕೂಡಿಸಿಕೊಂಡು ಹೋಗುವ ಅಶ್ವಗಳ ಕೆನೆಯುವ ಶಬ್ದವು ರಥದಲ್ಲಿಯೇ ಮೋಡಗಳು ಭಯಂಕರ ಶಬ್ದವನ್ನು ಮಾಡಿದಂತೆ ಕೇಳಿಬರುತ್ತಿದೆ.
ದಾರಯನ್ನಿವ ತೇಜಸ್ವೀ ವಸುಧಾಂ ವಾಸವಾತ್ಮಜಃ |
ಏಷ ತಿಷ್ಠನ್ ರಥಶ್ರೇಷ್ಠೋ ರಥೇ ರಥವರಪ್ರಣುತ್ ॥13॥
ಏಷ ದೃಷ್ಟ್ವಾ ರಥಾನೀಕಮಸ್ಮಾಕಮರಿಮರ್ದನಃ |

ಹ್ರೀಮಾನ್ ವದಾನ್ಯೋ ಧೃತಿಮಾನ್ ಸತ್ಕರೋತಿ ಚ ಪಾಂಡವಃ ॥14॥
ಶ್ರೇಷ್ಠರಥರನ್ನು ಸಂಹರಿಸುವ ರಥಶ್ರೇಷ್ಠನಾದ ಇಂದ್ರಪುತ್ರನಾದ ತೇಜಸ್ವಿಯಾದ ಅರ್ಜುನನು ರಥದಲ್ಲಿ ನಿಂತು ಭೂಮಿಯನ್ನು ಸೀಳುವವನಂತೆ ಹೋಗುತ್ತಿದ್ದಾನೆ. ನಮ್ಮ ರಥಗಳ ಸಮೂಹವನ್ನು ನೋಡಿ ಶತ್ರುಮರ್ದನನೂ, ನಾಚಿಕೆಸ್ವಭಾವದವನೂ, ಉದಾರಿಯೂ, ಧೈರ್ಯಶಾಲಿಯೂ ಆದ ಪಾಂಡುಪುತ್ರನಾದ ಅರ್ಜುನನು ನಮಗೆ ಸತ್ಕಾರವನ್ನು ಮಾಡುತ್ತಿದ್ದಾನೆ (ಏಕೆಂದರೆ ತನ್ನ ಎಡಭಾಗದಿಂದ ಹೊರಟು ನಮಗೆ ಪ್ರದಕ್ಷಿಣೆಯನ್ನು ಮಾಡುವವನಂತೆ ಹೋಗುತ್ತಿದ್ದಾನೆ).
ತತೋಽಭ್ಯವಾದಯತ್ ಪಾರ್ಥೋ ಭೀಷ್ಮಂ ಶಾಂತನವಂ ಕೃಪಮ್ |
ದ್ವಾಭ್ಯಾಂ ದ್ವಾಭ್ಯಾಂ ತಥಾಽಽಚಾರ್ಯಂ ದ್ರೋಣಂ ಚ ನಿಶಿತೈಃ ಶರೈಃ ॥
ಅನಂತರ ಅರ್ಜುನನು ಎರಡೆರಡು ಬಾಣಗಳನ್ನು ಪ್ರಯೋಗ ಮಾಡಿ ಶಂತನು ಪುತ್ರರಾದ ಭೀಷ್ಮರನ್ನೂ, ಕೃಪರನ್ನೂ ಮತ್ತು ಆಚಾರ್ಯರಾದ ದ್ರೋಣರನ್ನೂ ಆ ನಿಶಿತವಾದ ಬಾಣಗಳಿಂದ ನಮಸ್ಕರಿಸಿದನು.
ಭೀಷ್ಮಃ
ಇಮೌ ಬಾಣಾವನುಪ್ರಾಪ್ತೌ ಪಾದಯೋಃ ಪ್ರತ್ಯುಪಸ್ಥಿತೌ |
ಬಂಧುರಾಗ್ರನಿಪಾತೌ ಮೇ ಚಿತ್ರಪುಂಖಾವಜಿಹ್ಮಗೌ ॥16॥
ಭೀಷ್ಮ ಸ್ನೇಹಬಂಧನವನ್ನು ಸೂಚಿಸುವ, ಚಿತ್ರಪುಂಖಗಳನ್ನು ಹೊಂದಿರುವ, ನೇರವಾಗಿ ಸಂಚರಿಸುವ, ಮುಂಭಾಗದಲ್ಲಿ ಬೀಳುವವನ್ನು ಈ ಎರಡು ಬಾಣಗಳು ನನ್ನ ಪಾದಗಳ ಸಮೀಪ ತಲುಪಿವೆ.
ಇಮೌ ಚಾಪ್ಯಪರೌ ಬಾಣಾವಭಿತಃ ಕರ್ಣಮೂಲಯೋಃ |
ಸಂಸ್ಪೃಶಂತಾವತಿಕ್ರಾಂತೌ ಪೃಷ್ಟ್ವೇವಾನಾಮಯಂ ಭೃಶಮ್ ॥17॥
ಈ ಇನ್ನೆರಡು ಬಾಣಗಳು ನನ್ನ ಕಿವಿಯನ್ನು ಸ್ಪರ್ಶಿಸುವಂತೆ ದಾಟಿಕೊಂಡು ಹೋಗುತ್ತಾ ಚೆನ್ನಾಗಿ ಕುಶಲಪ್ರಶ್ನೆಯನ್ನು ಮಾಡುವಂತೆ ಹೋಗುತ್ತಿವೆ.
ಚಿರದೃಷ್ಟೋಽಯಮಸ್ಮಾಭಿರ್ಧರ್ಮಜ್ಞೋ ಬಾಂಧವಪ್ರಿಯಃ |
ಅತೀವ ಜ್ವಲತೇ ಲಕ್ಷ್ಮ್ಯಾ ಪಾಂಡುಪುತ್ರಃ ಪ್ರತಾಪವಾನ್ ॥18॥
ನಾವು ಅರ್ಜುನನನ್ನು ನೋಡಿ ಬಹಳ ಸಮಯವಾಯಿತು. ಧರ್ಮಜ್ಞನೂ, ಬಂಧುಪ್ರಿಯನೂ, ಪ್ರತಾಪಶಾಲಿಯೂ ಆದ ಈ ಪಾಂಡುಪುತ್ರನು ಕಾಂತಿಯಿಂದ ಬಹಳವಾಗಿ ಬೆಳಗುತ್ತಿದ್ದಾನೆ.
ನಿರುಷ್ಯ ಚ ವನೇ ವಾಸಂ ಕೃತ್ವಾ ಕರ್ಮ ಸುದುಷ್ಕರಮ್ |
ಅಭಿವಾದಯತೇ ಪಾರ್ಥಃ ಪೂಜಯನ್ ಮಾಮರಿಂದಮಃ ॥19॥
ವನವಾಸವನ್ನು ಮುಗಿಸಿ ದುಷ್ಕರವಾದ ಕರ್ಮವನ್ನು ಮಾಡಿ ಅರಿಂದಮನಾದ ಅರ್ಜುನನು ನನ್ನನ್ನು ಪೂಜಿಸುತ್ತಾ ಪಾದಗಳಿಗೆ ನಮಸ್ಕರಿಸುತ್ತಿದ್ದಾನೆ.
ಅಮರ್ಷೇಣ ಹಿ ಸಂಪೂರ್ಣೋ ದುಃಖೇನ ಪ್ರತಿಬೋಧಿತಃ |
ಅದ್ಯೇಮಾಂ ಭಾರತೀಂ ಸೇನಾಮೇಕೋ ನಾಶಯತೇ ಧ್ರುವಮ್ ॥20॥
ದುಃಖದಿಂದ ಉದ್ಬುದ್ಧನಾಗಿ ಕ್ರೋಧದಿಂದ ತುಂಬಿರುವ ಅರ್ಜುನನು ಒಬ್ಬನೇ ಈ ದಿನ ಕೌರವರ ಈ ಸೈನ್ಯವನ್ನು ಖಂಡಿತವಾಗಿ ನಾಶಮಾಡುತ್ತಾನೆ.
ದ್ವ್ಯಧಿಕಂ ದಶಮುಷ್ಯ ವತ್ಸರಾಣಾಂ
ಸ್ವಜನೇನಾವಿದಿತಸ್ತ್ರಯೋದಶಂ ಚ |
ಜ್ವಲತೇ ರಥಮಾಸ್ಥಿತಃ ಕಿರೀಟೀ
ತಮ ಇವ ರಾತ್ರಿಜಮಭ್ಯುದಸ್ಯ ಸೂರ್ಯಃ ॥21॥
ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮಾಡಿ ಒಂದು ವರ್ಷದ ಕಾಲ ಸ್ವಜನರಿಗೆ ತಿಳಿಯದಂತೆ ಅಜ್ಞಾತವಾಸವನ್ನು ಮಾಡಿ, ರಥವನ್ನು ಏರಿದ ಅರ್ಜುನನು ರಾತ್ರಿಯ ಕತ್ತಲನ್ನು ನಿವಾರಿಸಿ ಬೆಳಗುವ ಸೂರ್ಯನಂತೆ ಜ್ವಲಿಸುತ್ತಿದ್ದಾನೆ.
ರಥೀ ಶರೀ ಚಾರುಮಾಲೀ ನಿಷಂಗೀ
ಶಂಖೀ ಪತಾಕೀ ಕವಚೀ ಕಿರೀಟೀ |
ಖಡ್ಗೀ ಚ ಧನ್ವೀ ಚ ವಿರಾಜತೇಽಸೌ
ಶಿಖೀವ ಯಜ್ಞೇಷು ಘೃತೇನ ಸಿಕ್ತಃ ॥22॥
ರಥ, ಬಾಣಗಳು, ಸುಂದರವಾದ ಮಾಲೆ, ಬತ್ತಳಿಕೆ, ಶಂಖ, ಪತಾಕೆಗಳು, ಕವಚ, ಕಿರೀಟ, ಖಡ್ಗ, ಧನುಸ್ಸು ಇವುಗಳನ್ನು ಹೊಂದಿದ ಇವನು ಯಜ್ಞದಲ್ಲಿ ಘೃತದಿಂದ ಸಿಕ್ತವಾದ ಅಗ್ನಿಯಂತೆ ವಿರಾಜಿಸುತ್ತಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * *
ಐವತ್ನಾಲ್ಕನೆಯ ಅಧ್ಯಾಯ
ದುರ್ಯೋಧನನನ್ನು ಹುಡುಕುತ್ತಾ ಅರ್ಜುನನಿಂದ ಗೋವುಗಳ ಪ್ರತಿನಿವರ್ತನ
ವೈಶಂಪಾಯನಃ
ತಮದೂರಮುಪಾಯಾಂತಂ ದೃಷ್ಟ್ವಾ ಪಾಂಡವಮರ್ಜುನಮ್ |

ನಾರಯಃ ಪ್ರೇಕ್ಷಿತುಂ ಶೇಕುಸ್ತಪಂತಂ ಹಿ ಯಥಾ ರವಿಮ್ ॥1॥
ವೈಶಂಪಾಯನ ಸಮೀಪದಲ್ಲಿ ಬಂದ ಪಾಂಡುಪುತ್ರನಾದ ಅರ್ಜುನನನ್ನು ನೋಡಿ ಉರಿಯುವ ಸೂರ್ಯನಂತಿರುವ ಅವನನ್ನು ನೋಡಲು ಸಮರ್ಥರಾಗಲಿಲ್ಲ.
ತಂ ದೃಷ್ಟ್ವಾ ತು ರಥಾನೀಕಂ ಪಾರ್ಥಃ ಸಾರಥಿಮಬ್ರವೀತ್ ॥2॥
ಇಷುಪಾತಮಾತ್ರೇ ಸೇನಾಯಾಃ ಸ್ಥಾಪಯಾಶ್ವಾನರಿಂದಮ |
ಯಾವತ್ ಸಮೀಕ್ಷೇ ಸೈನ್ಯೇಽಸ್ಮಿನ್ ಮಮ ಶತ್ರುಂ ಸುಯೋಧನಮ್ ॥
ಆ ರಥಸಮೂಹವನ್ನು ನೋಡಿ ಅರ್ಜುನನು ಉತ್ತರನನ್ನು ಕುರಿತು ಎಲೈ ಅರಿಂದಮನೇ, ಕೌರವ ಸೇನೆಯಿಂದ ಒಂದು ಬಾಣಬೀಳುವಷ್ಟು ದೂರದಲ್ಲಿ ಮಾತ್ರ ಕುದುರೆಗಳನ್ನು ನಿಲ್ಲಿಸು. ಅಷ್ಟರಲ್ಲಿ ನಾನು ನನ್ನ ಶತ್ರುವಾದ ಸುಯೋಧನನನ್ನು ನೋಡುವೆನು.
ರತ್ನವೈಡೂರ್ಯವಿಕೃತಂ ಮಣಿಪ್ರವರಭೂಷಿತಮ್ |
ಪರಿಜಾನಾಮ್ಯಹಂ ತಸ್ಯ ಧ್ವಜಂ ದೂರಾತ್ ಸಮುಚ್ಛ್ರಿತಮ್ ॥4॥
ರತ್ನವೈಡೂರ್ಯಗಳಿಂದ ಅಲಂಕೃತವಾದ, ಶ್ರೇಷ್ಠವಾದ ಮಣಿಗಳಿಂದ ಭೂಷಿತವಾದ ಎತ್ತರವಾದ ಅವನ ಧ್ವಜವನ್ನು ನಾನು ದೂರದಿಂದಲೇ ಬಲ್ಲೆ.
ಯದ್ಯೇನಮಿಹ ಪಶ್ಯಾಮಿ ದುರ್ಬುದ್ಧಿಮತಿಮಾನಿನಮ್ |
ಯಮಾಯ ಪ್ರೇಷಯಿಷ್ಯಾಮಿ ಸಹಾಯಃ ಸ್ಯಾದ್ ಯದೀಶ್ವರಃ ॥5॥
ದುರ್ಬುದ್ಧಿಯಾದ ಶಸ್ತ್ರಧಾರಿಯಾದ ಅವನನ್ನು ಇಲ್ಲಿ ನೋಡಿದರೆ ದೇವರ ಸಹಾಯವಿದ್ದರೆ ನಾನು ಅವನನ್ನು ಯಮನ ಬಳಿಗೆ ಕಳುಹಿಸುವೆನು.
ಸರ್ವಾನನ್ಯಾನನಾದೃತ್ಯ ದೃಷ್ಟ್ವಾ ತಮತಿಮಾನಿನಮ್ |
ಸಿಂಹಃ ಕ್ಷುದ್ರಮೃಗಸ್ಯೇವ ಪತಿಷ್ಯೇ ತಸ್ಯ ಮೂರ್ಧನಿ ॥6॥
ಉಳಿದ ಎಲ್ಲರನ್ನೂ ಉಪೇಕ್ಷಿಸಿ ಮಹಾದುರಹಂಕಾರಿಯಾದ ಅವನನ್ನು ನೋಡಿ ಸಿಂಹವು ಕ್ಷುದ್ರಮೃಗದ ಮೇಲೆ ಎರಗಿದಂತೆ ಅವನ ತಲೆಯ ಮೇಲೆ ಎರಗುವೆನು.
ಹನಿಷ್ಯೇದ್ಯ ತದ್ವೈವಾಶು ಶರೈರ್ಗಾಂಡೀವನಿಃಸೃತೈಃ |
ತಸ್ಮಿನ್ ಹತೇ ಭವಿಷ್ಯಂತಿ ಸರ್ವ ಏವ ಪರಾಜಿತಾಃ ॥7॥
ಈ ದಿನ ಅವನನ್ನು ನೋಡಿದಾಗಲೇ ಗಾಂಡೀವದಿಂದ ಹೊಮ್ಮಿದ ಬಾಣಗಳಿಂದ ಅವನನ್ನು ಶೀಘ್ರವಾಗಿ ಕೊಲ್ಲುವೆನು. ಅವನು ಮೃತನಾದರೆ ಎಲ್ಲ ಕೌರವರೂ ಪರಾಜಿತರಾಗುವರು.
ಶರೈಃ ಸಮರ್ಪಯಿಷ್ಯಾಮಿ ಧಾರ್ತರಾಷ್ಟ್ರಂ ಸುಯೋಧನಮ್ |
ಅಸಭ್ಯಾನಾಂ ಚ ಭರ್ತಾರಂ ಕುರೂಣಾಂ ಕಿಲ ಕಿಲ್ಬಿಷಮ್ ॥8॥
ಅಸಭ್ಯಜನರ ಪೋಷಕನಾದ, ಕುರುವಂಶದಲ್ಲಿ ಕಿಲ್ಬಿಷನಾದ ಧೃತರಾಷ್ಟ್ರಪುತ್ರನಾದ ಸುಯೋಧನನನ್ನು ಬಾಣಗಳಿಂದ ತುಂಬುವೆನು.

ರಾಜಾನಂ ನೇಹ ಪಶ್ಯಾಮಿ ನಿರಾಮಿಷಮಿದಂ ಬಲಮ್ |
ಅಭಿದ್ರವೇಽಹಂ ರಾಜಾನಂ ವ್ಯಕ್ತಂ ತತ್ರ ಹಿ ನಿರ್ಭಯಮ್ ॥9॥
ರಾಜನನ್ನು ಇಲ್ಲಿ ನಾನು ಕಾಣುತ್ತಿಲ್ಲ. ಈ ಸೈನ್ಯವು ನನಗೆ ಬೇಕಾದ ಆಹಾರವಿಲ್ಲದುದು. ರಾಜನು ಇರುವಲ್ಲಿಗೆ ನಾನು ನಿರ್ಭಯವಾಗಿ ಧಾವಿಸುವೆನು.
ಆಸ್ಥಿತೋ ಮಧ್ಯಮಾಚಾರ್ಯೋ ಹ್ಯಶ್ವತ್ಥಾಮಾ ಹ್ಯನಂತರಮ್ |
ಕೃಪಕರ್ಣೌ ಪುರಸ್ತಾತ್ ತು ಮಹೇಷ್ವಾಸೌ ವ್ಯವಸ್ಥಿತೌ ॥10॥
ದ್ರೋಣಾಚಾರ್ಯರು ಇಲ್ಲೇ ಸೈನ್ಯದ ಮಧ್ಯದಲ್ಲಿದ್ದಾರೆ. ಅವರ ಹಿಂದೆ ಅಶ್ವತ್ಥಾಮರಿದ್ದಾರೆ. ಮಹಾಧನುರ್ಧಾರಿಗಳಾದ ಕೃಪಾಚಾರ್ಯರು ಮತ್ತು ಕರ್ಣನು ಮುಂಭಾಗದಲ್ಲಿದ್ದಾರೆ.
ಭೂರಿಶ್ರವಾಃ ಸೋಮದತ್ತೋ ಬಾಹ್ಲಿಕಶ್ಚ ಜಯದ್ರಥಃ |
ದಕ್ಷಿಣಂ ಪಕ್ಷಮಾಶ್ರಿತ್ಯ ಸ್ಥಿತಾ ಯುದ್ಧಾರ್ಥಿನಃ ಸದಾ ॥11॥
ಭೂರಿಶ್ರವ, ಸೋಮದತ್ತ, ಬಾಹ್ಲಿಕ ಮತ್ತು ಜಯದ್ರಥರು ಸೈನ್ಯದ ಬಲಭಾಗವನ್ನು ಆಶ್ರಯಿಸಿ ಯುದ್ಧವನ್ನು ಮಾಡಲು ಬಯಸುತ್ತಿದ್ದಾರೆ.
ಸಾಲ್ವರಾಜೋ ದ್ಯುಮತ್ಸೇನೋ ವೃಷಸೇನಶ್ಚ ಸೌಬಲಃ |
ದಶಾರ್ಣಶ್ಚೈವ ಕಾಳಿಂಗೋ ವಾಮಂ ಪಕ್ಷಂ ಸಮಾಶ್ರಿತಾಃ ॥12॥
ಸಾಲ್ವರಾಜನಾದ ದ್ಯುಮತ್ಸೇನ, ಸೌಬಲರಾಜನಾದ ವೃಷಸೇನ, ಕಳಿಂಗಾಧಿಪತಿಯಾದ ದಶಾರ್ಣ ಇವರು ಎಡಭಾಗದಲ್ಲಿದ್ದಾರೆ.
ಪೃಷ್ಠತಃ ಕುರುಮುಖ್ಯಸ್ತು ಭೀಷ್ಮಸ್ತಿಷ್ಠತಿ ದಂಸಿತಃ |
ಸೋಽರ್ಧಸೈನ್ಯೇನ ಬಲವಾನ್ ಸರ್ವೇಷಾಂ ನಃ ಪಿತಾಮಹಃ ॥13॥
ಹಿಂಭಾಗದಲ್ಲಿ ನಮ್ಮೆಲ್ಲರ ಪಿತಾಮಹರಾದ ಬಲಿಷ್ಠರಾದ ಭೀಷ್ಮರು ಕವಚವನ್ನು ಧರಿಸಿ ಅರ್ಧಸೈನ್ಯದ ಜೊತೆಯಲ್ಲಿ ಇದ್ದಾರೆ.
ದುರ್ಯೋದನಂ ನ ಪಶ್ಯಾಮಿ ಕ್ವ ನು ರಾಜಾ ಸ ಗಚ್ಛತಿ |
ಉತ್ಸೃಜ್ಯೈತದ್ ರಥಾನೀಕಂ ಯಾಹಿ ಯತ್ರ ಸುಯೋಧನಃ ॥14॥
ಆದರೆ ದುರ್ಯೋಧನನು ಕಾಣುತ್ತಿಲ್ಲ. ಅವನು ಎಲ್ಲಿಗೆ ಹೋಗಿರಬಹುದು?ಈ ರಥವೃಂದವನ್ನು ಬಿಟ್ಟು ದುರ್ಯೋಧನನು ಇರುವ

ಕಡೆಗೆ ಹೋಗುವವನಾಗು.
ತಂ ಹತ್ವಾ ತು ನಿವರ್ತಿಷ್ಯೇ ಗಾಃ ಸ ಆದಾಯ ಗಚ್ಛತಿ |
ಗವಾಗ್ರಮಭಿತೋ ಯಾಹಿ ಯತ್ರ ರಾಜಾ ಭವಿಷ್ಯತಿ ||15||
ಅವನನ್ನು ಕೊಂದು ಹಿಂದಿರುಗುವೆನು. ಅವನು ಗೋವುಗಳನ್ನು ತೆಗೆದುಕೊಂಡು ಹೋಗುತ್ತಿದ್ದಾನೆ. ಸೈನ್ಯವನ್ನು ಬಳಸಿಕೊಂಡು ಗೋವುಗಳ ಮುಂಭಾಗದಲ್ಲಿ ಹೋಗು. ಅಲ್ಲಿ ರಾಜನು ಇರುವನು.
ಇತ್ಯುಕ್ತ್ವಾ ಸಮರೇ ಪಾರ್ಥೋ ವೈರಾಟಿಮಪರಾಜಿತಃ |
ಸಂಸ್ಪೃಶಾನೋ ಧನುರ್ದಿವ್ಯಂ ತ್ವರಮಾಣೋಽಗಮತ್ ತದಾ ||16||
ಅಪರಾಜಿತನಾದ ಅರ್ಜುನನು ಯುದ್ಧದಲ್ಲಿ ಉತ್ತರನನ್ನು ಕುರಿತು ಹೀಗೆ ಹೇಳಿ ತನ್ನ ದಿವ್ಯವಾದ ಧನುಸ್ಸನ್ನು ನೇವರಿಸುತ್ತಾ ಶೀಘ್ರವಾಗಿ ಸಾಗಿದನು.
ತತೋ ಭೀಷ್ಮೋಽಬ್ರವೀದ್ ವಾಕ್ಯಂ ಕುರುಮಧ್ಯೇ ಪರಂತಪಃ ||17||
ಚಿರಂ ದೃಷ್ಟೋಽಯಮಸ್ಮಾಭಿರ್ಧರ್ಮಜ್ಞೋ ಬಾಂಧವಪ್ರಿಯಃ |
ಅತೀವ ಜ್ವಲತೇ ಲಕ್ಷ್ಮ್ಯಾ ಪಾಕಶಾಸನಿರಚ್ಯುತಃ ||18||
ಆಗ ಪರಂತಪರಾದ ಭೀಷ್ಮರು ಕುರುಗಳ ಮಧ್ಯದಲ್ಲಿ ಹೀಗೆ ಮಾತನಾಡಿದರು- ನಾವು ಧರ್ಮಜ್ಞನೂ ಮತ್ತು ಬಂಧುಪ್ರಿಯನೂ ಆದ ಅರ್ಜುನನನ್ನು ಬಹಳ ಸಮಯದ ಮೇಲೆ ನೋಡುತ್ತಿದ್ದೇವೆ. ಪಾಕಶಾಸನಪುತ್ರನಾದ ಅವನು ತನ್ನ ಪರಾಕ್ರಮದಿಂದ ಚ್ಯುತನಾಗದೆ ಕಾಂತಿಯಿಂದ ಜ್ವಲಿಸುತ್ತಿದ್ದಾನೆ.
ಏಷ ದುರ್ಯೋಧನಂ ಪಾರ್ಥೋ ಮಾರ್ಗತಿ ನಿಕೃತೀಃ ಸ್ಮರನ್ |
ಸೇನಾಪತಿಂ ಸಮಾಲೋಕ್ಯ ತ್ವರತೇ ಗ್ರಹಣೇಽಸ್ಯ ಚ ||19||
ಈ ಅರ್ಜುನನು ಹಿಂದೆ ದುರ್ಯೋಧನನು ಮಾಡಿದ ಮೋಸಗಳನ್ನೆಲ್ಲಾ ಸ್ಮರಿಸುತ್ತಾ ದುರ್ಯೋಧನನನ್ನು ಹುಡುಕುತ್ತಿದ್ದಾನೆ. ಸೇನಾಪತಿಯಾದ ಅವನನ್ನು ನೋಡಿ ಅವನನ್ನು ಹಿಡಿಯುವುದಕ್ಕೆ ತ್ವರೆ ಮಾಡುತ್ತಿದ್ದಾನೆ.
ಮೃಗಂ ಸಿಂಹ ಇವಾದಾತುಮೀಕ್ಷತೇ ಪಾಕಶಾಸನಿಃ ||20||
ಉತ್ಸೃಜ್ಯ ರಥವೃಂದಂ ತು ಪ್ರಯಾತಃ ಶ್ವೇತವಾಹನಃ ||21||
ಅರ್ಜುನನು ಸಿಂಹವು ಜಿಂಕೆಯನ್ನು ಹಿಡಿದಂತೆ ಅವನನ್ನು ಹಿಡಿಯಲು ನೋಡುತ್ತಿದ್ದಾನೆ. ನಮ್ಮ ಈ ರಥವೃಂದವನ್ನು ಬಿಟ್ಟು ಅವನು ಹೋಗುತ್ತಿದ್ದಾನೆ.
ನೈಷೋಽಂತರೇಣ ರಾಜಾನಂ ಬೀಭತ್ಸುಃ ಸ್ಥಾತುಮರ್ಹತಿ |
ತಸ್ಯ ಪಾರ್ಷ್ಣಿಂ ಗ್ರಹೀಷ್ಯಾಮೋ ಜವೇನಾಭಿಪ್ರಯಾಸ್ಯತಃ ||22||
ಈ ಅರ್ಜುನನು ದುರ್ಯೋಧನನನ್ನು ಕಾಣದೆ ನಿಲ್ಲಲಾರ. ವೇಗವಾಗಿ ಹೋಗುತ್ತಿರುವ ಅವನ ಪಕ್ಕಗಳನ್ನು ನಾವು ಹಿಡಿಯೋಣ.
ನ ಹ್ಯೇನಮಿಹ ಸಂಕ್ರುದ್ಧಮೇಕೋ ಯುದ್ಧ್ಯೇತ ಸಂಯುಗೇ |
ಅನ್ಯೋ ದೇವಾನ್ ಮಹಾದೇವಾತ್ ಕೃಷ್ಣಾದ್ವಾ ದೇವಕೀಸುತಾತ್ ||
ಆಚಾರ್ಯಾಚ್ಚ ಸಪುತ್ರಾದ್ವಾ ಭಾರದ್ವಾಜಾನ್ಮಹಾರಥಾತ್ ||24||
ಕ್ರೋಧಗೊಂಡ ಅವನನ್ನು ಎದುರಿಸಿ ರುದ್ರದೇವರಿಂದ ಭಿನ್ನನಾದ, ದೇವಕೀ ಪುತ್ರನಾದ ಕೃಷ್ಣನಿಂದ ಭಿನ್ನನಾದ, ಮಹಾರಥರೂ ಪುತ್ರಸಹಿತರೂ ಆದ ದ್ರೋಣಾಚಾರ್ಯರಿಂದ ಭಿನ್ನನಾದ ಯಾವನೇ ಒಬ್ಬನು ಎದುರಿಸಲಾರನು.
ಕಿಂ ನೋ ಗಾವಃ ಕರಿಷ್ಯತಿ ಧನಂ ವಾ ವಿಪುಲಂ ತಥಾ |
ದುರ್ಯೋಧನಃ ಪಾರ್ಥಮಗಾತ್ ಪುರಾ ಪ್ರಾಣಾನ್ ವಿಮುಂಚತಿ ||
ನಮಗೆ ಗೋವುಗಳಿಂದ ಏನಾಗಬೇಕಾಗಿದೆ? ಅಥವಾ ವಿಪುಲವಾದ ಧನದಿಂದಲಾದರೂ ಏನು? ದುರ್ಯೋಧನನು ಅರ್ಜುನನ ಕೈ ಸೇರಿದರೆ ಮೊದಲು ಪ್ರಾಣಗಳನ್ನು ಬಿಡುತ್ತಾನೆ.
ವೈಶಂಪಾಯನಃ
ಇತ್ಯುಕ್ತ್ವಾ ಸಮರೇ ಭೀಷ್ಮಃ ಸೇನಾಯಾಃ ಸಹ ಕೌರವಃ |
ಅನ್ವಧಾವತ್ ತದಾ ಪಾರ್ಥಂ ಧಾರ್ತರಾಷ್ಟ್ರಂ ಹಿ ರಕ್ಷಿತುಮ್ ||26||
ವೈಶಂಪಾಯನ ಕೌರವರಾದ ಭೀಷ್ಮರು ಯುದ್ಧಭೂಮಿಯಲ್ಲಿ ಹೀಗೆ ಹೇಳಿ ದುರ್ಯೋಧನನನ್ನು ರಕ್ಷಿಸಲು ಆಗ ಅರ್ಜುನನ ಹಿಂದೆ ಧಾವಿಸಿದರು.
ತ್ರಿಕ್ರೋಶಮಾತ್ರಂ ಯಾತ್ವಾ ತು ಪಾರ್ಥೋ ವೈರಾಟಿಮಬ್ರವೀತ್ ||
ಇಷುಪಾತಮಾತ್ರೇ ಸೇನಾಯಾಃ ಸ್ಥಾಪಯಾಶ್ವಾನರಿಂದಮ |
ಏತದಗ್ರಂ ಗವಾಂ ದೃಷ್ಟ್ವಂ ಮಂದಂ ವಾಹಯ ಸಾರಥೇ ||28||
ಮೂರು ಕ್ರೋಶಗಳಷ್ಟು ದೂರ ಹೋಗಿ ಅರ್ಜುನನು ಉತ್ತರನನ್ನು ಕುರಿತು ಹೇಳಿದನು- ಅರಿಂದಮನೇ, ಒಂದು ಬಾಣವು ಬೀಳುವಷ್ಟು ದೂರದಲ್ಲಿ ಸೈನ್ಯದ ಮುಂದೆ ಕುದುರೆಗಳನ್ನು ನಿಲ್ಲಿಸು. ಗೋವುಗಳ ಮುಂಭಾಗವನ್ನು ನೋಡುತ್ತಿದ್ದೇನೆ. ಸಾರಥಿಯೇ, ನಿಧಾನವಾಗಿ ರಥವನ್ನು ಹೊಡೆ.
ಯಾಹ್ಯುತ್ತರೇಣ ಸೇನಾಯಾ ಗಾಶ್ಚೈವ ಪ್ರವಿಭಜ್ಯ ಚ |
ಪರಿಕ್ಷಿಪ್ಯ ಗವಾಂ ಯೂಥಮತ್ರ ಯೋತ್ಸ್ಯೇ ಸುಯೋಧನಮ್ ||29||
ಗೋವುಗಳ ಮಧ್ಯೆ ಜಾಗವನ್ನು ಮಾಡಿಕೊಂಡು ಸೈನ್ಯದ ಉತ್ತರಭಾಗದಿಂದ ಹೋಗು. ನಾನು ಗೋವುಗಳನ್ನು ಶತ್ರುಗಳ ಕೈಯಿಂದ ಬಿಡಿಸಿ ಸುಯೋಧನನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.

ಗಚ್ಛಂತಿ ಸತ್ವರಂ ಗಾವಃ ಸಗೋಪಾಃ ಪರಿಮೋಚಯ ॥30॥
ತತ್ರ ಗತ್ವಾ ಪಶೂನ್ ವೀರ ಸಗೋಪಾನ್ ಪರಿಮೋಚಯ |
ಅಂತರೇಣ ಚ ಸೇನಾಯಾಃ ಪ್ರಾಙ್ಮುಖೋ ಗಚ್ಛ ಚೋತ್ತರ ॥31॥
ಗೋವುಗಳು ಮತ್ತು ಗೋಪಾಲಕರು ಶೀಘ್ರವಾಗಿ ಹೋಗುತ್ತಿದ್ದಾರೆ. ಅವರನ್ನು ಬಿಡಿಸು. ಎಲೈ ಉತ್ತರನೇ, ಸೈನ್ಯವನ್ನು ಬಳಸಿ ಪೂರ್ವಾಭಿಮುಖವಾಗಿ ಹೋಗು. ಎಲೈ ವೀರನೇ, ಅಲ್ಲಿ ಹೋಗಿ ಗೋವುಗಳನ್ನೂ ಮತ್ತು ಗೋಪಾಲಕರನ್ನೂ ಹಿಂದಿರುಗಿಸು.
ಇಮೇ ತ್ವತಿರಥಾಃ ಸರ್ವೇ ಮಮ ವೀರ್ಯಪರಾಕ್ರಮಮ್ |
ಪಶ್ಯಂತು ಕುರವೋ ಯುದ್ಧೇ ಮಹೇಂದ್ರಸ್ಯೇವ ದಾನವಾಃ ॥32॥
ಅತಿರಥರಾದ ಈ ಕೌರವರೆಲ್ಲರೂ ದಾನವರು ಮಹೇಂದ್ರನ ಪರಾಕ್ರಮವನ್ನು ನೋಡಿದಂತೆ ಯುದ್ಧದಲ್ಲಿ ನನ್ನ ಸಾಮರ್ಥ್ಯ ಮತ್ತು ಪರಾಕ್ರಮಗಳನ್ನು ನೋಡಲಿ (ಎಂದು ಹೇಳಿದನು).
ವೈಶಂಪಾಯನಃ
ತತಃ ಸ ರಥಿನಾಂ ಶ್ರೇಷ್ಠೋ ನಾಮ ವಿಶ್ರಾವ್ಯ ಚಾತ್ಮನಃ |
ನಿಶಿತಾಗ್ರಾನ್ ಶರಾಂಸ್ತೀಕ್ಷ್ಣಾನ್ ಮುಮೋಚಾಂತಕಸನ್ನಿಭಾನ್ ॥33॥
ವೈಶಂಪಾಯನ ಅನಂತರ ಆ ರಥಿಶ್ರೇಷ್ಠನಾದ ಅರ್ಜುನನು ತನ್ನ ಹೆಸರನ್ನು ಘೋಷಿಸುತ್ತಾ ಹರಿತವಾದ ಅಲಗುಳ್ಳ, ತೀಕ್ಷ್ಣವಾದ ತುದಿಯುಳ್ಳ, ಮೃತ್ಯುವಿನಂತಿರುವ ಬಾಣಗಳನ್ನು ಪ್ರಯೋಗಿಸಿದನು.
ಶಲಭೈರಿವ ಚಾಕಾಶಂ ಧಾರಾಭಿರಿವ ಪರ್ವತಮ್ |
ನಿರಾವಕಾಶಮಭವತ್ ಶರೈಃ ಕ್ಷಿಪ್ರಂ ಕಿರೀಟಿನಾ ॥34॥
ಪತಂಗಗಳಿಂದ ಆಕಾಶವನ್ನು ಮುಚ್ಚಿದಂತೆ, ಮಳೆಯ ಧಾರೆಗಳಿಂದ ಪರ್ವತವನ್ನು ಮುಚ್ಚಿದಂತೆ ಅರ್ಜುನನು ಶೀಘ್ರವಾಗಿ ಬಾಣಗಳಿಂದ ಆ ಸೈನ್ಯವನ್ನು ಮುಚ್ಚಿದನು.
ವಿದೀರ್ಯಮಾಣಾಸ್ತು ಶರೈಸ್ತೇ ಯೋಧಾಃ ಧಾರ್ತರಾಷ್ಟ್ರಕಾಃ |
ಗಾಶ್ಚೈವ ಹಿ ನ ಪಶ್ಯಂತಿ ಪಾರ್ಥಮುಕ್ತೈರಜಿಹ್ಮಗೈಃ ॥35॥
ಅರ್ಜುನನಿಂದ ಪ್ರಯುಕ್ತವಾದ ನೇರವಾಗಿ ಸಾಗುವ ಆ ಬಾಣಗಳಿಂದ ಸೀಳಿಹೋಗುತ್ತಿದ್ದ ದುರ್ಯೋಧನ ಸೈನಿಕರು ಗೋವುಗಳನ್ನೇ ಕಾಣಲಿಲ್ಲ.
ಸಾ ಚಾಪಿ ಬಹುಲಾ ಸೇನಾ ಪಾರ್ಥಬಾಣಾಭಿಪೀಡಿತಾ |
ನಾಪಶ್ಯದ್ ವಿವೃತಾಂ ಭೂಮಿಂ ನಾಂತರಿಕ್ಷಂ ದಿಶೋಽಪಿ ವಾ ॥36॥
ಗಾಶ್ಚೈವ ತೇ ನ ಪಶ್ಯಂತಿ ಪಾರ್ಥಮುಕ್ತೈರಜಿಹ್ಮಗೈಃ ॥37॥
ಪಾರ್ಥಬಾಣಗಳಿಂದ ಪೀಡಿತವಾದ ಆ ದೊಡ್ಡ ಸೈನ್ಯವು ಭೂಮಿಯಲ್ಲಿ ಮುಂದೆ ಹಳ್ಳವಿರುವುದನ್ನಾಗಲೀ, ಅಂತರಿಕ್ಷವನ್ನಾಗಲೀ ಅಥವಾ ದಿಕ್ಕುಗಳನ್ನಾಗಲೀ ಕಾಣಲಿಲ್ಲ. ಪಾರ್ಥನು ಪ್ರಯೋಗಿಸಿದ ನೇರವಾಗಿ ಸಾಗುವ ಬಾಣಗಳ ಪ್ರಹಾರದಿಂದಾಗಿ ಅವರು ಗೋವುಗಳನ್ನೂ ಕಾಣಲಿಲ್ಲ.
ಅರ್ಜುನಸ್ತು ತದಾ ಹೃಷ್ಟೋ ದರ್ಶಯನ್ ವೀರ್ಯಮಾತ್ಮನಃ |
ಪೀಡಯಾಮಾಸ ಸೈನ್ಯಾನಿ ಗಾಂಡೀವಪ್ರಸೃತೈಃ ಶರೈಃ ॥38॥
ಆಗ ಅರ್ಜುನನು ಸಂತೋಷಗೊಂಡು ತನ್ನ ಪರಾಕ್ರಮವನ್ನು ತೋರಿಸುತ್ತಾ ಗಾಂಡೀವ ಮುಕ್ತವಾದ ಬಾಣಗಳಿಂದ ಕೌರವಸೈನ್ಯವನ್ನು ಪೀಡಿಸಿದನು.
ತೇಷಾಂ ನೈವಾಭಿಯಾನೇ ಚ ನಾಭಿಯಾನೇಽಭವನ್ಮತಿಃ |
ಶೀಘ್ರತಾಮೇವ ಪಾರ್ಥಸ್ಯ ಪೂಜಯಂತಿ ಸ್ಮ ವಿಸ್ಮಿತಾಃ ॥39॥
ಅವರಿಗೆ ಅರ್ಜುನನ ಕಡೆಗೆ ಬರುವುದಕ್ಕಾಗಲೀ ಅಥವಾ ಅರ್ಜುನನಿಂದ ತಿರುಗಿ ಬೇರೆ ಕಡೆಗೆ ಹೋಗುವುದಕ್ಕಾಗಲೀ ಬುದ್ಧಿಯುಂಟಾಗಲಿಲ್ಲ. ಅರ್ಜುನನ ವೇಗವನ್ನು ನೋಡಿ ವಿಸ್ಮಿತರಾಗಿ ಅವನನ್ನು ಪೂಜಿಸಿದರು.
ಚಂದ್ರಾವದಾತಂ ಸಾಮುದ್ರಂ ಕುರುಸೈನ್ಯಭಯಂಕರಮ್ |
ತತಃ ಶಂಖಮುಪಾಧ್ಮಾಸೀದ್ ದ್ವಿಷತಾಂ ರೋಮಹರ್ಷಣಮ್ ॥40॥
ಅನಂತರ ಅರ್ಜುನನು ಸಮುದ್ರದಿಂದ ಉತ್ಪನ್ನವಾದ, ಕುರುಸೈನ್ಯಕ್ಕೆ ಭಯಂಕರವಾದ, ಶತ್ರುಗಳಿಗೆ ರೋಮ ಹರ್ಷವನ್ನು ಉಂಟುಮಾಡುವ, ಚಂದ್ರನಂತೆ ಶ್ವೇತವರ್ಣದಿಂದ ಕೂಡಿದ, ತನ್ನ ಶಂಖವನ್ನು ಊದಿದನು.
ವಿಷ್ಫಾರ್ಯ ಚ ಧನುಃಶ್ರೇಷ್ಠಂ ಧ್ವಜೇ ಭೂತಾನ್ಯಚೋದಯತ್ ॥41॥
ಜ್ಯಾಘೋಷಂ ತಳಘೋಷಂ ಚ ಕೃತ್ವಾ ಭೂತಾನ್ಯಮೋಹಯತ್ ॥42॥
ತನ್ನ ಶ್ರೇಷ್ಠವಾದ ಧನುಸ್ಸನ್ನು ಬಗ್ಗಿಸಿ ಧ್ವಜದಲ್ಲಿದ್ದ ಭೂತಗಳನ್ನು ಪ್ರಚೋದಿಸಿದನು. ಜ್ಯಾಘೋಷವನ್ನೂ ತಳಘೋಷವನ್ನೂ ಮಾಡಿ ಎಲ್ಲ ಪ್ರಾಣಿಗಳಿಗೂ ಮೋಹವನ್ನು ಉಂಟುಮಾಡಿದನು.
ತಸ್ಯ ಶಂಖಸ್ಯ ಶಬ್ದೇನ ಧನುಷೋ ನಿಸ್ವನೇನ ಚ |
ಶಬ್ದೇನಾಮಾನುಷಾಣಾಂ ಚ ಭೂತಾನಾಂ ಧ್ವಜವಾಸಿನಾಮ್ ॥43॥
ವಿಯದ್ಗತಾನಾಂ ದೇವಾನಾಂ ರಾಕ್ಷಸಾನಾಂ ರವೇಣ ಚ |
ಊರ್ಧ್ವಂ ಪುಚ್ಛಂ ವಿಧೂನ್ವಾನಾ ರೇಭಮಾಣಾಃ ಸಮಂತತಃ ॥44॥
ಗಾವಃ ಸವತ್ಸಾಃ ಸಂತ್ರಸ್ತಾ ನಿವೃತಾ ದಕ್ಷಿಣಾಂ ದಿಶಮ್ ॥45॥
ಅವನ ಶಂಖಶಬ್ದವನ್ನೂ, ಧನುಸ್ಸಿನ ಶಬ್ದವನ್ನೂ ಮತ್ತು ಧ್ವಜನಿವಾಸಿಗಳಾದ ಭೂತಗಳ ಅಮಾನುಷ ಶಬ್ದಗಳನ್ನೂ ಹಾಗೆಯೇ

ಆಕಾಶದಲ್ಲಿ ನಿಂತ ದೇವತೆಗಳ ಮತ್ತು ರಾಕ್ಷಸರ ಶಬ್ದಗಳನ್ನೂ ಕೇಳಿದ, ಕರುಗಳಿಂದ ಸಹಿತವಾದ ಗೋವುಗಳು ಬಾಲವನ್ನು ಎತ್ತಿ ಕಂಪಿಸುತ್ತಾ ಎಲ್ಲ ಕಡೆಗಳಲ್ಲಿಯೂ ಅರಚಿಕೊಳ್ಳುತ್ತಾ ಹೆದರಿ ದಕ್ಷಿಣದಿಕ್ಕಿನಲ್ಲಿ ಹಿಂದೆ ಸರಿದವು.
ತತಃ ಸಮರೇ ಶೂರೋ ಬೀಭತ್ಸುಃ ಶತ್ರುಪೂಗಹಾ |
ಗೋಪಾಲಾಂಶ್ಚೋದಯಾಮಾಸ ಗಾವಶ್ಚೋದಯತೇತಿ ಚ ॥46॥
ಆಗ ಸಮರಶೂರನೂ, ಶತ್ರುವೃಂದವನ್ನು ಹನನ ಮಾಡುವವನೂ ಆದ ಅರ್ಜುನನು ಗೋಪಾಲರನ್ನು ಕುರಿತು ಗೋವುಗಳನ್ನು ಬೇಗ ಹೊಡೆದುಕೊಂಡು ಹೋಗಿ ಎಂದು ಪ್ರೇರಿಸಿದನು.
ಉತ್ತರಂ ಚಾಹ ಬೀಭತ್ಸುರ್ಹರ್ಷಯನ್ ಪಾಂಡುನಂದನಃ ॥47॥
ಗವಾಮಗ್ರಂ ಸಮೀಕ್ಷಸ್ವ ಗಾಶ್ಚೈವಾಶು ನಿವರ್ತಯ |
ಯಾವದೇತೇ ನಿವರ್ತಂತೇ ಕುರವೋ ಜವಮಾಸ್ಥಿತಾಃ ॥48॥
ಪಾಂಡುನಂದನನಾದ ಅರ್ಜುನನು ಉತ್ತರನನ್ನು ಸಂತೋಷಪಡಿಸುತ್ತಾ ಅವನನ್ನು ಕುರಿತು ಕೌರವರು ಶೀಘ್ರವಾಗಿ ಹಿಂದಿರುಗುವಷ್ಟರಲ್ಲಿ ಗೋವುಗಳ ಮುಂಭಾಗವನ್ನು ನೋಡಿಕೊಂಡು ಅವುಗಳನ್ನು ಶೀಘ್ರವಾಗಿ ಹಿಂದಿರುಗಿಸು ಎಂದು ಹೇಳಿದನು.
ಯಾಹ್ಯುತ್ತರೇಣ ಗಾಶ್ಚೈತಾಃ ಸೈನ್ಯಾನಾಂ ಚ ನೃಪಾತ್ಮಜ |
ಪಶ್ಯಂತು ಕುರವಃ ಸರ್ವೇ ಮಮ ವೀರ್ಯಪರಾಕ್ರಮಮ್ ॥49॥
ಎಲೈ ರಾಜಕುಮಾರನೇ, ಈ ಸೈನ್ಯದ ಮತ್ತು ಗೋವುಗಳ ಉತ್ತರಭಾಗದಲ್ಲಿ ಹೋಗುವವನಾಗು. ಕುರುಗಳೆಲ್ಲರೂ ನನ್ನ ವೀರ್ಯಪರಾಕ್ರಮವನ್ನು ನೋಡಲಿ (ಎಂದು ಹೇಳಿದನು)
ವೈಶಂಪಾಯನಃ
ತೇ ಲಾಭಮಿವ ಮನ್ವಾನಾಃ ಕುರವೋಽರ್ಜುನಮಾಹವೇ |
ದೃಷ್ಟ್ವಾ ಯಾಂತಮದೂರಸ್ಥಂ ಕ್ಷಿಪ್ರಮಭ್ಯಪತನ್ ರಥೈಃ ॥50॥
ವೈಶಂಪಾಯನ ಕೌರವರು ಯುದ್ಧದಲ್ಲಿ ಅರ್ಜುನನು ಸಮೀಪದಲ್ಲಿ ಹೋಗುವುದನ್ನು ನೋಡಿ ಅವನ ದರ್ಶನವನ್ನೇ ದೊಡ್ಡ ಲಾಭವೆಂದು ತಿಳಿದು ರಥಗಳಿಂದ ಶೀಘ್ರವಾಗಿ ಮುಂದೆ ಬಂದರು.
ಹಸ್ತ್ಯಶ್ವಪರಿವಾರೇಣ ಮಹತಾಽಭಿವಿರಾಜತಾ |
ಯೋಧೈಃ ಪ್ರಾಸಾಸಿಹಸ್ತೈಶ್ಚ ಚಾಪಬಾಣೋದ್ಯತಾಯುಧೈಃ ॥51॥
ತಾನ್ಯನೀಕಾನ್ಯಶೋಭಂತ ಕುರೂಣಾಮಾತತಾಯಿನಾಮ್ |
ಸಂಸರ್ಪಂತ ಇವಾಕಾಶೇ ವಿದ್ಯುತ್ವಂತೋ ಬಲಾಹಕಾಃ ॥52॥
ಬಹಳವಾಗಿ ಶೋಭಿಸುವ ಗಜಾಶ್ವಗಳ ದೊಡ್ಡ ಪರಿವಾರದಿಂದ ಕೂಡಿದ ಬಿಲ್ಲು, ಬಾಣ ಮೊದಲಾದ ಆಯುಧಗಳನ್ನು ಕೈಯಲ್ಲಿ ಎತ್ತಿಹಿಡಿದ, ಪ್ರಾಸ,ಅಸಿ ಮೊದಲಾದ ಆಯುಧಗಳನ್ನು ಹಿಡಿದ ಯೋಧರಿಂದ ಕೂಡಿದ ಶಸ್ತ್ರಧಾರಿಗಳಾದ ಕೌರವರ ಸೈನ್ಯವು ಆಕಾಶದಲ್ಲಿ ಚಲಿಸುವ ಮಿಂಚಿನಿಂದ ಸಹಿತವಾದ ಮೋಡಗಳಂತೆ ಶೋಭಿಸಿತು.
ತಾನಿ ದೃಷ್ಟ್ವಾಽಪ್ಯನೀಕಾನಿ ನಿವೃತ್ತಾನಿ ಮಹಾಮನಾಃ |
ಪಾರ್ಥೋಽಪಿ ವಾಯುವದ್ ಘೋರಂ ಸೈನ್ಯಾಗ್ರಂ ವ್ಯಧುನೋಚ್ಚರೈಃ ॥
ಆ ಸೈನ್ಯಗಳು ಹಿಂದಿರುಗುವುದನ್ನು ನೋಡಿದ ಧೈರ್ಯಶಾಲಿಯಾದ ಅರ್ಜುನನೂ ಸಹ ಘೋರವಾದ ಸೈನ್ಯದ ಮುಂಭಾಗವನ್ನು ಬಿರುಗಾಳಿಯಂತೆ ತನ್ನ ಬಾಣಗಳಿಂದ ಚದುರಿಸಿದನು.
ತಾಂ ಶತ್ರುಸೇನಾಂ ತರಸಾ ಪ್ರಣುದ್ಯ
ಗಾಶ್ಚಾಪಿ ಜಿತ್ವಾಽಥ ಧನುರ್ಧರಾಗ್ರ್ಯಃ |
ದುರ್ಯೋಧನಾಯಾಭಿಮುಖಂ ಪ್ರಯಾಂತಂ
ಕುರುಪ್ರವೀರಾಃ ಸಹಸಾಽಭ್ಯಗಚ್ಛನ್ ॥54॥
ಆ ಶತ್ರುಸೈನ್ಯವನ್ನು ತನ್ನ ಬಲದಿಂದ ಹಿಂಸಿಸಿ, ಗೋವುಗಳನ್ನು ಜಯಿಸಿ ಧನುರ್ಧರರಲ್ಲಿ ಶ್ರೇಷ್ಠನಾದ ಅರ್ಜುನನು ದುರ್ಯೋಧನನಿಗೆ ಅಭಿಮುಖವಾಗಿ ಹೋಗುವಷ್ಟರಲ್ಲಿ ಕುರುಪ್ರವೀರರು ತಕ್ಷಣ ಅವನನ್ನು ಸಮೀಪಿಸಿದರು.
ಗೋಷು ಪ್ರಯಾತಾಸು ಜವೇನ ಮತ್ಸ್ಯಾಃ
ಕಿರೀಟಿನಂ ಪ್ರೀತಿಯುತಂ ಚ ದೃಷ್ಟ್ವಾ |
ಪಶೂನ್ ಸಮಾದಾಯ ತತೋ ನಿವೃತ್ತಾ
ಗೋಪಾಲಕಾಃ ಸಂಪ್ರಯಯುಶ್ಚ ರಾಷ್ಟ್ರಮ್ ॥55॥
ಗೋವುಗಳು ಶೀಘ್ರವಾಗಿ ಹಿಂದಿರುಗುತ್ತಿರಲು ಮತ್ಸ್ಯದೇಶದ ಗೋಪಾಲಕರು ಅರ್ಜುನನು ಸಂತೋಷದಲ್ಲಿರುವುದನ್ನು ನೋಡಿ ಪಶುಗಳನ್ನು ತೆಗೆದುಕೊಂಡು ಹಿಂದಿರುಗಿ ತಮ್ಮ ಪಟ್ಟಣಕ್ಕೆ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುಃಪಂಚಾಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತನಾಲ್ಕನೆಯಅಧ್ಯಾಯ ಮುಗಿಯಿತು.
* * * *
ಐವತ್ತೈದನೆಯ ಅಧ್ಯಾಯ
ಅರ್ಜುನನಿಂದ ಉತ್ತರನಿಗೆ ದ್ರೋಣಾದಿಗಳ ರಥಗಳ ಪರಿಚಯ
ವೈಶಂಪಾಯನಃ

ತತಸ್ತ್ರೀಣಿ ಸಹಸ್ರಾಣಿ ರಥಾನಾಂ ಚ ಧನುಷ್ಮತಾಮ್ |
ಘೋರಾಣಿ ಕುರುವೀರಾಣಾಂ ಪರ್ಯಕೀರ್ಯಂತ ಭಾರತ ||1||
ವೈಶಂಪಾಯನ ಎಲೈ ಭಾರತನೇ, ಆಗ ಕೌರವವೀರರ ಮೂರುಸಹಸ್ರ ಸಂಖ್ಯೆಯ ಧನುರ್ಧಾರಿಗಳಾದ ರಥಿಕರ ಘೋರವಾದ ಸೈನ್ಯವು ಅರ್ಜುನನನ್ನು ಸಮೀಪಿಸಿತು.
ಕರ್ಣೋ ರಥಸಹಸ್ರೇಣ ಪ್ರತ್ಯತಿಷ್ಠದ್ ಧನಂಜಯಮ್ |
ಭೀಷ್ಮಃ ಶಾಂತನವೋ ಧೀಮಾನ್ ಸಹಸ್ರೇಣ ಪುರಸ್ಕೃತಃ ||2||
ತಥಾ ರಥಸಹಸ್ರೇಣ ಭ್ರಾತೃಭಿಃ ಪರಿವಾರಿತಃ |
ಪಶ್ಚಾದ್ ದುರ್ಯೋಧನೋಽತಿಷ್ಠದ್ ಹಸ್ತಾವಾಪ್ತಶ್ರಿಯಾ ಜ್ವಲನ್ ||3||
ಕರ್ಣನು ಒಂದು ಸಹಸ್ರ ರಥಗಳ ಜೊತೆಯಲ್ಲಿ ಅರ್ಜುನನನ್ನು ಎದುರಿಸಿದನು. ಶಂತನು ಪುತ್ರರೂ, ಮೇಧಾವಿಯೂ ಆದ ಭೀಷ್ಮರು ಒಂದು ಸಹಸ್ರ ರಥಗಳ ಜೊತೆಯಲ್ಲಿ ಎದುರಾದರು. ಹಾಗೆಯೇ ತಮ್ಮಂದಿರ ಪರಿವಾರದಿಂದ ಕೂಡಿದ ದುರ್ಯೋಧನನು ತನ್ನ ಕೈಗೆ ಪ್ರಾಪ್ತವಾದ ಸಂಪತ್ತಿನಿಂದ ಜ್ವಲಿಸುತ್ತಾ ಒಂದು ಸಹಸ್ರ ರಥಗಳ ಜೊತೆಯಲ್ಲಿ ಹಿಂಭಾಗದಲ್ಲಿದ್ದನು.
ಅತಿಷ್ಠನ್ನವಕಾಶೇ ತು ಪದಾತಾಃ ಸಹ ವಾಜಿಭಿಃ |
ಭೀಮರೂಪಾಶ್ಚ ಮಾತಂಗಾಃ ತೋಮರಾಂಕುಶಚೋದಿತಾಃ ||4||
ಮಧ್ಯದ ಸ್ಥಳಗಳಲ್ಲಿ ಪದಾತಿಗಳೂ, ಅಶ್ವಗಳೂ ಮತ್ತು ತೋಮರ, ಅಂಕುಶಗಳಿಂದ ಪ್ರೇರಿತವಾದ ಭಯಂಕರರೂಪದ ಗಜಗಳೂ ಇದ್ದವು.
ತಾನಿ ದೃಷ್ಟ್ವಾ ಹ್ಯನೀಕಾನಿ ವಿತತಾನಿ ಮಹಾತ್ಮನಾಮ್ |
ವೈರಾಟಿಮುತ್ತರಂ ತಂ ತು ಪ್ರತ್ಯಭಾಷತ ಪಾಂಡವಃ ||5||
ವಿಸ್ತಾರವಾಗಿ ಹರಡಿದ್ದ ಮಹಾತ್ಮರ ಆ ಸೈನ್ಯವನ್ನು ನೋಡಿ ಅರ್ಜುನನು ವಿರಾಟ ಪುತ್ರನಾದ ಉತ್ತರನನ್ನು ಕುರಿತು ಹೀಗೆ ಹೇಳಿದನು.
ಜಾಂಬೂನದಮಯೀ ವೇದಿರ್ಧ್ವಜಾಗ್ರೇ ಯಸ್ಯ ದೃಶ್ಯತೇ |
ಶೋಣಾಶ್ವಾಶ್ವಾ ರಥೇ ಯುಕ್ತಾ ದ್ರೋಣ ಏಷ ಪ್ರಕಾಶತೇ ||6||
ಯಾರ ರಥದ ಧ್ವಜದಲ್ಲಿ ಸುವರ್ಣಮಯವಾದ ವೇದಿಯು ಕಾಣುತ್ತದೆಯೋ, ಕೆಂಪು ಬಣ್ಣದ ಅಶ್ವಗಳಿಂದ ಕೂಡಿದ ಆ ರಥವು ದ್ರೋಣಾಚಾರ್ಯರದು.
ಆಚಾರ್ಯೋ ನಿಪುಣೋ ಧೀಮಾನ್ ಬ್ರಹ್ಮವಿಚ್ಛೂರಸಮ್ಮತಃ |
ಲಾಘವೇ ಚಾಪ್ರತಿದ್ವಂದ್ವೋ ದೂರಪಾತೀ ಮಹಾರಥಃ ||7||
ಆಚಾರ್ಯರು ನಿಪುಣರೂ, ಮೇಧಾವಿಗಳೂ, ವೇದವನ್ನು ತಿಳಿದವರೂ ಮತ್ತು ಶೂರರೂ ಎಂದು ಎಲ್ಲರಿಗೂ ಸಮ್ಮತರಾದವರು. ಅಸದೃಶವಾದ ಶೀಘ್ರಗತಿ ಉಳ್ಳವರು. ದೂರದಲ್ಲಿರುವ ಲಕ್ಷ್ಯವನ್ನು ಭೇದಿಸುವವರು ಮತ್ತು ಮಹಾರಥರು.
ಸುಪ್ರಸನ್ನೋ ಮಹಾವೀರಃ ಕುರುಷ್ವೈನಂ ಪ್ರದಕ್ಷಿಣಮ್ |
ಅತ್ರೈವ ಚಾವಿರೋಧೇನ ಏಷ ಧರ್ಮಃ ಸನಾತನಃ ||8||
ಸುಪ್ರಸನ್ನರೂ ಮಹಾವೀರರೂ ಆದ ಅವರನ್ನು ವಿರೋಧ ಮಾಡದಂತೆ ಪ್ರದಕ್ಷಿಣೆಯನ್ನು ಮಾಡು. ಇದು ಸನಾತನವಾದ ಧರ್ಮ.
ಯದಿ ಮೇ ಪ್ರಹರೇದ್ ದ್ರೋಣಃ ಶರೀರೇ ಪ್ರಹರಿಷ್ಯತಃ |
ತತೋಽಸ್ಮಿನ್ ಪ್ರಹರಿಷ್ಯಾಮಿ ನಾನ್ಯಥಾ ಯುದ್ಧಮಸ್ತಿ ಮೇ ||9||
ಅವರು ನನ್ನ ಮೇಲೆ ಬಾಣಪ್ರಯೋಗವನ್ನು ಮಾಡಿದರೆ ಮಾತ್ರ ನಾನು ಅವರ ಮೇಲೆ ಬಾಣ ಪ್ರಯೋಗವನ್ನು ಮಾಡುವೆನು. ಇಲ್ಲದಿದ್ದರೆ ನನಗೆ ಅವರ ಜೊತೆಯಲ್ಲಿ ಯುದ್ಧವಿಲ್ಲ.
ಭಾರತಾಚಾರ್ಯಮುಖ್ಯೇನ ಬ್ರಾಹ್ಮಣೇನ ಮಹಾತ್ಮನಾ |
ತೇನ ಮೇ ಯುಧ್ಯಮಾನಸ್ಯ ಮಂದಂ ವಾಹಯ ಸಾರಥೇ ||10||
ಎಲೈ ಸಾರಥಿಯೇ, ಭಾರತಾಚಾರ್ಯರಲ್ಲಿ ಪ್ರಧಾನರಾದವರೂ, ಬ್ರಾಹ್ಮಣರೂ ಮತ್ತು ಮಹಾತ್ಮರೂ ಆದ ಅವರ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವಾಗ ರಥವನ್ನು ನಿಧಾನವಾಗಿ ಚಲಿಸು.
ಧ್ವಜಾಗ್ರೇ ಸಿಂಹಲಾಂಗೂಲೋ ದಿಕ್ಷು ಸರ್ವಾಸು ಶೋಭತೇ |
ಭಾರತಾಚಾರ್ಯಪುತ್ರಸ್ತು ಸೋಽಶ್ವತ್ಥಾಮಾ ವಿರಾಜತೇ ||11||
ಯಾರ ರಥದ ಧ್ವಜದಲ್ಲಿ ಸಿಂಹಲಾಂಗೂಲವು ಎಲ್ಲ ದಿಕ್ಕುಗಳಲ್ಲಿಯೂ ಶೋಭಿಸುತ್ತದೆಯೋ ಅವರು ಭಾರತಾಚಾರ್ಯ ಪುತ್ರರಾದ ವಿರಾಜಮಾನರಾದ ಅಶ್ವತ್ಥಾಮಾಚಾರ್ಯರು.
ಧ್ವಜಾಗ್ರೇ ಯಸ್ಯ ದೃಶ್ಯಂತೇ ಬಾಲಸೂರ್ಯಸಮಪ್ರಭಾಃ |
ದುರ್ಜಯಃ ಸರ್ವಸೈನ್ಯಾನಾಂ ದೇವೈರಪಿ ಸವಾಸವೈಃ ||12||
ತೇನ ಮೇ ಯುಧ್ಯಮಾನಸ್ಯ ಮಂದಂ ವಾಹಯ ಸಾರಥೇ ||13||
ಯಾರ ಧ್ವಜಾಗ್ರದಲ್ಲಿ ಸಿಂಹಬಾಲದ ಕಾಂತಿಯು ಸೂರ್ಯನ ಕಾಂತಿಗೆ ಸಮವಾಗಿ ಕಾಣುತ್ತದೆಯೋ ಅಂತಹ ಅವರು (ಅಶ್ವತ್ಥಾಮರು)ಇಂದ್ರನಿಂದ ಸಹಿತರಾದ ದೇವತೆಗಳಿಂದಲೂ ಮತ್ತು ಸರ್ವಸೈನ್ಯಗಳಿಂದಲೂ ಜಯಿಸಲು ಅಸಾಧ್ಯರಾದವರು. ಎಲೈ ಸಾರಥಿಯೇ, ಅವರ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವಾಗ ರಥವನ್ನು ನಿಧಾನವಾಗಿ ಹೊಡೆ.
ಧ್ವಜಾಗ್ರೇ ಗೋವೃಷೋ ಯಸ್ಯ ಕಾಂಚನೋಽಭಿವಿರಾಜತೇ |
ಆಚಾರ್ಯವರಮುಖ್ಯಸ್ತು ಕೃಪ ಏಷ ಮಹಾರಥಃ ||14||
ಯಾರ ರಥದ ಧ್ವಜಾಗ್ರದಲ್ಲಿ ಸುವರ್ಣಮಯವಾದ ಗೋವೃಷಭವು ಕಾಣುತ್ತದೆಯೋ ಅವರು ಆಚಾರ್ಯಶ್ರೇಷ್ಠರಲ್ಲಿ ಪ್ರಧಾನರಾದ

ಮಹಾರಥರಾದ ಕೃಪಾಚಾರ್ಯರು.
ದ್ರೋಣೇನ ಚ ಸಮೋ ವೀರ್ಯೇ ಪಿತುರ್ಮೇ ಪರಮಃ ಸಖಾ |
ತೇನ ಮೇ ಯುಧ್ಯಮಾನಸ್ಯ ಮಂದಂ ವಾಹಯ ಸಾರಥೇ ॥15॥
ಅವರು ಪರಾಕ್ರಮದಲ್ಲಿ ದ್ರೋಣರಿಗೆ ಸಮರಾದವರು. ನನ್ನ ತಂದೆಯ ಪರಮಸ್ನೇಹಿತರು. ಎಲೈ ಸಾರಥಿಯೇ, ಅವರ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವಾಗ ರಥವನ್ನು ನಿಧಾನವಾಗಿ ಹೊಡೆಯುವವನಾಗು.
ಯಸ್ಯ ಕಾಂಚನಕಂಬೂಭಿಃ ಹಸ್ತಿಕಕ್ಷ್ಯಾಪರಿಷ್ಕೃತಃ |
ಧ್ವಜಃ ಪ್ರಕಾಶತೇ ದೂರಾದ್ ರಥೇ ವಿದ್ಯುದ್ಘನೋಪಮಃ ॥16॥
ಏಷ ವೈಕರ್ತನಃ ಕರ್ಣಃ ಪ್ರತಿಮಾನಂ ಧನುಷ್ಮತಾಮ್ |
ಏಷ ವೈ ಸ್ಪರ್ಧತೇ ನಿತ್ಯಂ ಮಯಾ ಸಹ ಸುದುರ್ಜಯಃ ॥17॥
ಜಾಮದಗ್ನ್ಯಸ್ಯ ರಾಮಸ್ಯ ಶಿಷ್ಯೋ ಹ್ಯೇಷ ಮಹಾರಥಃ ॥18॥
ಯಾರ ರಥದ ಧ್ವಜವು ಸುವರ್ಣಮಯವಾದ ಶಂಖಗಳಿಂದಲೂ ಮತ್ತು ಆನೆಯ ಸರಪಳಿಗಳಿಂದಲೂ, ಮಿಂಚಿನ ಗೊಂಚಲುಗಳ ಸಮೂಹದಂತೆ ದೂರದಿಂದಲೇ ಶೋಭಿಸುತ್ತದೆಯೋ ಅವನು ವೈಕರ್ತನನಾದ ಕರ್ಣ. ಅವನು ಎಲ್ಲ ಧನುರ್ಧಾರಿಗಳಿಗೆ ಆದರ್ಶನಾದವನು. ಗೆಲ್ಲಲು ಬಹಳ ಕಷ್ಟಸಾಧ್ಯ. ಅವನು ಯಾವಾಗಲೂ ನನ್ನ ಜೊತೆಯಲ್ಲಿ ಸ್ಪರ್ಧಿಸುತ್ತಾನೆ. ಮಹಾರಥನಾದ ಅವನು ಪರಶುರಾಮರ ಶಿಷ್ಯನಾದವನು.
ಸರ್ವಾಸ್ತ್ರಕುಶಲಃ ಕರ್ಣಃ ಸರ್ವಶಸ್ತ್ರಭೃತಾಂ ವರಃ |
ಯುದ್ಧೇಽಪ್ರತಿಮವೀರ್ಯಶ್ಚ ದೃಢಧನ್ವೀ ಪರಾಕ್ರಮೀ ॥19॥
ಕರ್ಣನು ಸರ್ವಾಸ್ತ್ರಕುಶಲನಾದವನು. ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದವನು. ಯುದ್ಧದಲ್ಲಿ ಅಪ್ರತಿಮಸಾಮರ್ಥ್ಯವುಳ್ಳವನು. ದೃಢವಾದ ಧನುಸ್ಸನ್ನು ಹೊಂದಿದವನು ಮತ್ತು ಪರಾಕ್ರಮಶಾಲಿ.
ಅದ್ಯಾಹಂ ಯುದ್ಧಮೇತೇನ ಕರಿಷ್ಯೇ ಸೂತಬಂಧುನಾ |
ಯುದ್ಧಮೇತತ್ತು ದೃಷ್ಟ್ವಾಸಿ ಬಲಿವಾಸವಯೋರಿವ ॥20॥
ಈ ದಿನ ನಾನು ಈ ಸೂತಪುತ್ರನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಬಲಿ ಮತ್ತು ಇಂದ್ರನಿಗೆ ನಡೆಯುವ ಯುದ್ಧದಂತಿರುವ ಈ ಯುದ್ಧವನ್ನು ನೀನು ನೋಡುವಿ.
ಮಹಾರಥೇನ ಶೂರೇಣ ಸೂತಪುತ್ರೇಣ ಧನ್ವಿನಾ |
ತೇನ ಮೇ ಯುಧ್ಯಮಾನಸ್ಯ ಶೀಘ್ರಂ ವಾಹಯ ಸಾರಥೇ ॥21॥
ಎಲೈ ಸಾರಥಿಯೇ, ಮಹಾರಥನಾದ ಶೂರನಾದ ಧನುರ್ಧಾರಿಯಾದ ಸೂತಪುತ್ರನ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವಾಗ ನನ್ನ ರಥವನ್ನು ಶೀಘ್ರವಾಗಿ ನಡೆಸುವವನಾಗು.
ಯಸ್ಯ ಚೈವ ರಥೋಪಸ್ಥೇ ನಾಗೋ ಮಣಿಮಯೋ ಧ್ವಜೇ |
ಏಷ ದುರ್ಯೋಧನಸ್ತತ್ರ ಕೌರವೋ ಯಶಸಾ ವೃತಃ ॥22॥
ಲಬ್ಧಲಕ್ಷ್ಯೋ ದೃಢಂ ವೇಧೀ ಲಘುಹಸ್ತಃ ಪ್ರತಾಪವಾನ್ |
ತೇನ ಮೇ ಯುಧ್ಯಮಾನಸ್ಯ ಶೀಘ್ರಂ ವಾಹಯ ಸಾರಥೇ ॥23॥
ಯಾರ ರಥದ ಮಧ್ಯದಲ್ಲಿರುವ ಧ್ವಜದಲ್ಲಿ ಮಣಿಮಯವಾದ ಸರ್ಪವು ವಿರಾಜಿಸುತ್ತದೆಯೋ ಅವನು ಕೀರ್ತಿವಂತನಾದ ಕೌರವನಾದ ದುರ್ಯೋಧನ. ಅವನು ಲಕ್ಷ್ಯವನ್ನು ತಪ್ಪದವನು. ದೃಢವಾಗಿ ಮತ್ತು ಶೀಘ್ರವಾಗಿ ಹೊಡೆಯುವವನು ಮತ್ತು ಪ್ರತಾಪಶಾಲಿ. ಎಲೈ ಸಾರಥಿಯೇ, ಅವನ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವಾಗ ರಥವನ್ನು ಶೀಘ್ರವಾಗಿ ನಡೆಸುವವನಾಗು.
ಯಸ್ತು ಶ್ವೇತಾವದಾತೇನ ಪಂಚತಾಳೇನ ಕೇತುನಾ |
ವೈಡೂರ್ಯದಂಡೇನ ತಥಾ ತಾಳವೃಕ್ಷೇಣ ರಾಜತೇ ॥24॥
ಹಸ್ತವಾಂಶ್ಚ ಬೃಹದ್ಧನ್ವಾ ಸೇನಾಂ ತಿಷ್ಠತಿ ಹರ್ಷಯನ್ |
ರಾಮೇಣ ಜಾಮದಗ್ನ್ಯೇನ ದ್ವೈರಥೇ ನ ಜಿತಃ ಪುರಾ ॥25॥
ಶೀಘ್ರಶ್ಚ ಲಘುವೇಧೀ ಚ ಲಘುಹಸ್ತಃ ಪ್ರತಾಪವಾನ್ |
ಏಷ ಶಾಂತನವೋ ಭೀಷ್ಮಃ ಸರ್ವೇಷಾಂ ನಃ ಪಿತಾಮಹಃ ॥26॥
ಯಾರ ರಥವು ಪರಿಶುಭ್ರವಾದ ಶ್ವೇತವರ್ಣದ ಪಂಚತಾಳ ಪ್ರಮಾಣದ ವೈಡೂರ್ಯದಂಡವುಳ್ಳ ತಾಳವೃಕ್ಷದಿಂದ ಕೂಡಿದ ಧ್ವಜದಿಂದ ಶೋಭಿಸುತ್ತದೆಯೋ ಅವರು ಪ್ರಶಸ್ತವಾದ ಹಸ್ತವುಳ್ಳ ದೊಡ್ಡ ಧನುಸ್ಸು ಹೊಂದಿದ ಎಲ್ಲ ಸೈನ್ಯವನ್ನೂ ಹರ್ಷಗೊಳಿಸುವ ಹಿಂದೆ ಪರಶುರಾಮರ ಜೊತೆಯಲ್ಲಿ ದ್ವೈರಥದಲ್ಲಿ ಪರಾಜಯವನ್ನು ಹೊಂದದ ಶೀಘ್ರಕಾರಿಗಳೂ, ಶೀಘ್ರಹಸ್ತರೂ, ಶೀಘ್ರವೇಧಿಯೂ, ಪ್ರತಾಪಶಾಲಿಗಳೂ, ನಮ್ಮೆಲ್ಲರ ಪಿತಾಮಹರೂ ಆದ ಭೀಷ್ಮರು.
ಕಕುದಃ ಸರ್ವಸೈನ್ಯಾನಾಂ ಸರ್ವಶಸ್ತ್ರಭೃತಾಂ ವರಃ |
ರಾಜಶ್ರಿಯಾಽಪವಿದ್ಧಸ್ತು ಸುಯೋಧನವಶಾನುಗಃ ॥27॥
ಪಶ್ಚಾದೇಷ ಪ್ರಯಾತವ್ಯೋ ನ ಮೇ ವಿಘ್ನಕರೋ ಭವೇತ್ ॥28॥
ಅವರು ಎಲ್ಲ ಸೈನ್ಯಗಳಿಗೂ ಶಿಖರಪ್ರಾಯರಾದವರು. ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದವರು. ರಾಜಲಕ್ಷ್ಮಿಯನ್ನು ತಿರಸ್ಕರಿಸಿದ್ದರೂ ಸುಯೋಧನನ ವಶವರ್ತಿಯಾಗಿರುವವರು. ಅವರು ನನಗೆ ವಿಘ್ನವನ್ನು ಮಾಡದಂತೆ ಅವರ ಹಿಂದುಗಡೆಯಿಂದ ನೀನು ಹೋಗಬೇಕು.

ಇತ್ಯೇತಾನ್ ತ್ವರಿತಃ ಪಾರ್ಥಃ ಕಥಯಿತ್ವಾ ತದೋತ್ತರಮ್ |

ರೂಪತಶ್ಚಿಹ್ನತಶ್ಚೈವ  ಯುದ್ಧಾಯ ತ್ವರತೇ ಪುನಃ  ॥29॥
ವಿಮೃಶ್ಯ ಗಾಂಡಿವಂ ತತ್ರ ಯುದ್ಧಾಯೈವ ವ್ಯವಸ್ಥಿತಃ ॥30॥
ವೈಶಂಪಾಯನ ಹೀಗೆ ಅರ್ಜುನನು ಅವರ ಧ್ವಜಗಳ ರೂಪಚಿಹ್ನೆಗಳಿಂದ ಉತ್ತರನಿಗೆ ಅವರನ್ನು ಪರಿಚಯ ಮಾಡಿ ಯುದ್ಧಕ್ಕಾಗಿ ತ್ವರೆ ಮಾಡುವವನಾಗಿ ಗಾಂಡೀವ ಧನುಸ್ಸನ್ನು ಕೈಯಲ್ಲಿ ಸವರುತ್ತಾ ಯುದ್ಧ ಮಾಡುವುದಕ್ಕಾಗಿಯೇ ನಿಂತನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚಪಂಚಾಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಐವತ್ತಾರನೆಯ ಅಧ್ಯಾಯ
ಭೀಷ್ಮಾದಿಗಳ ಜೊತೆಯಲ್ಲಿ ಅರ್ಜುನನ ಯುದ್ಧ ಮತ್ತು ಕರ್ಣನ ಪರಾಭವ
ವೈಶಂಪಾಯನಃ
ಅಶ್ವತ್ಥಾಮಾ ತತಸ್ತತ್ರ ಕರ್ಣಂ ಸಂಪ್ರೇಕ್ಷ್ಯ ವೀರ್ಯವಾನ್ ।
ಉವಾಚ ಸ್ಮಯಮಾನಸ್ತು ಸೂತಪುತ್ರಮರಿಂದಮಮ್ ॥1॥
ವೈಶಂಪಾಯನ ಆಗ ಪರಾಕ್ರಮಶಾಲಿಯಾದ ಅಶ್ವತ್ಥಾಮರು ಕರ್ಣನನ್ನು ನೋಡಿ ನಗುತ್ತಾ ಸೂತಪುತ್ರನೂ, ಅರಿಂದಮನೂ ಆದ ಅವನನ್ನು ಕುರಿತು ಮಾತನಾಡಿದರು.
ಕರ್ಣ ಯತ್ ತತ್ ಸಭಾಮಧ್ಯೇ ಬಹ್ವಬದ್ಧಂ ವಿಕತ್ಥಸೇ ।
ನ ಮೇ ಯುಧಿ ಸಮೋಽಸ್ತೀತಿ ತದಿದಂ ಪ್ರತ್ಯುಪಸ್ಥಿತಮ್ ॥2॥
ಎಲೈ ಕರ್ಣನೇ, ನೀನು ಸಭೆಯ ಮಧ್ಯದಲ್ಲಿ ಯುದ್ಧದಲ್ಲಿ ನನ್ನ ಸಮಾನರಾದವರು ಇಲ್ಲವೆಂದು ಬಹಳ ಅಬದ್ಧವಾಗಿ ಹೊಗಳಿಕೊಳ್ಳುತ್ತಿದ್ದೆಯಷ್ಟೆ? ಅದರ ಪರೀಕ್ಷೆಯ ಕಾಲವು ಬಂದೊದಗಿದೆ.
ಏಷೋಽಂತಕ ಇವ ಕ್ರುದ್ಧಃ ಸರ್ವಭೂತಾವಮರ್ದನಃ ।
ಸಂಗ್ರಾಮಶಿರಸೋ ಮಧ್ಯೇ ಜೃಂಭತೇ ಕೇಸರೀ ಯಥಾ ॥3॥
ಶೂರೋಽಸಿ ಯದಿ ಸಂಗ್ರಾಮೇ ದರ್ಶಯಸ್ವ ಸಭಾಂ ವಿನಾ ॥4॥
ಈ ಅರ್ಜುನನು ಯಮನಂತೆ ಕ್ರುದ್ಧನಾಗಿ ಸರ್ವಪ್ರಾಣಿಗಳನ್ನೂ ಸಂಹಾರ ಮಾಡುತ್ತಾ ರಣರಂಗದ ಮಧ್ಯದಲ್ಲಿ ಸಿಂಹದಂತೆ ಅಭಿವೃದ್ಧಿಯನ್ನು ಹೊಂದುತ್ತಿದ್ದಾನೆ. ನೀನು ಯುದ್ಧದಲ್ಲಿ ಶೂರನಾದರೆ ಸಭೆಯಲ್ಲಿ ಮಾತನಾಡುವುದನ್ನು ಬಿಟ್ಟು ನಿನ್ನ ಶೌರ್ಯವನ್ನು ತೋರಿಸು.
ಯದ್ಯಶಕ್ತೋಽಸಿ ವೀರೇಣ ಪಾರ್ಥೇನಾದ್ಭುತಕರ್ಮಣಾ ।
ಪುನರೇವ ಸಭಾಂ ಗತ್ವಾ  ಧಾರ್ತರಾಷ್ಟ್ರೇಣ ಧೀಮತಾ ॥5॥
ಮಾತುಲಂ ಪರಿಗೃಹ್ಯಾಶು ಮಂತ್ರಯಸ್ವ ಯಥಾಯಥಮ್ ॥6॥
ವೀರನೂ, ಅದ್ಭುತಕರ್ಮವುಳ್ಳವನೂ ಆದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವ ಶಕ್ತಿ ಇಲ್ಲದಿದ್ದರೆ ಪುನಃ ಸಭೆಗೆ ಹೋಗಿ ಮೇಧಾವಿಯಾದ ದುರ್ಯೋಧನನನ್ನೂ ಅವನ ಸೋದರಮಾವನನ್ನೂ ಕೂಡಿಕೊಂಡು ನಿನಗೆ ಇಷ್ಟಬಂದಂತೆ ಮಂತ್ರಾಲೋಚನೆಯನ್ನು ಮಾಡು.
ಏವಮುಕ್ತಸ್ತದಾ ಕರ್ಣಃ ಕ್ರೋಧಾದುದ್ವೃತ್ತಲೋಚನಃ ।
ದ್ರೋಣಪುತ್ರಮಿದಂ ವಾಕ್ಯಮುವಾಚ ಕುರುಸನ್ನಿಧೌ ॥7॥
ಹೀಗೆ ಹೇಳಲ್ಪಟ್ಟ ಕರ್ಣನು ಆಗ ಕೋಪದಿಂದ ಅರಳಿದ ಕಣ್ಣುಳ್ಳವನಾಗಿ ಕೌರವರ ಸನ್ನಿಧಿಯಲ್ಲಿ ದ್ರೋಣಪುತ್ರರಾದ ಅಶ್ವತ್ಥಾಮರನ್ನು ಕುರಿತು ಹೀಗೆ ಮಾತನಾಡಿದನು.
ನಾಹಂ ಬಿಭೇಮಿ ಬೀಭತ್ಸೋರ್ನ ಕೃಷ್ಣಾದ್ ದೇವಕೀಸುತಾತ್ ।
ಪಾಂಡವೇಭ್ಯೋಽಪಿ ಸರ್ವೇಭ್ಯಃ ಕ್ಷತ್ರಧರ್ಮಮನುವ್ರತಃ ॥8॥
ಕ್ಷತ್ರಿಯಧರ್ಮದಲ್ಲಿ ನಿರತನಾದ ನಾನು ಅರ್ಜುನನಿಗೆ ಹೆದರುವುದಿಲ್ಲ. ದೇವಕಿ ಪುತ್ರನಾದ ಕೃಷ್ಣನಿಗೂ ಹೆದರುವುದಿಲ್ಲ. ಎಲ್ಲ ಪಾಂಡವರಿಗೂ ಹೆದರುವುದಿಲ್ಲ.
ಸತ್ವಾಧಿಕಾನಾಂ ಪುಂಸಾಂ ಹಿ ಧನುರ್ವೇದೋಪಜೀವಿನಾಮ್ ।
ಗರ್ಜನಾತ್ ಜಾಯತೇ ದರ್ಪಃ ಸ್ವರಶ್ಚ  ನ ವಿಷೀದತಿ ॥9॥
ಧನುರ್ವಿದ್ಯೆಯಿಂದ ಜೀವಿಸುವ ಬಲಶಾಲಿಗಳಾದ ಪುರುಷರಿಗೆ ಶತ್ರುಗಳ ಗರ್ಜನೆಯಿಂದ ದರ್ಪವೇ ಉಂಟಾಗುತ್ತದೆ. ಸ್ವರವು ಉಡುಗಿಹೋಗುವುದಿಲ್ಲ.
ಪಶ್ಯತ್ವಾಚಾರ್ಯಪುತ್ರೋ ಮಾಮರ್ಜುನೇನಾಪರಂ ಸಹ ।
ಯುಧ್ಯಮಾನಂ ಸುಸಂಯುಕ್ತಂ ಜಯೋ ವೈ ಮಯ್ಯವಸ್ಥಿತಃ ॥10॥
ಆಚಾರ್ಯಪುತ್ರರಾದ ನೀವು ಅರ್ಜುನನಿಗಿಂತ ಭಿನ್ನನಾದ ನಾನು ಅರ್ಜುನನ ಜೊತೆಯಲ್ಲಿ ಚೆನ್ನಾಗಿ ಸಂಯುಕ್ತನಾಗಿ ಯುದ್ಧಮಾಡುವುದನ್ನು ನೋಡಿ. ಜಯವು ನನ್ನಲ್ಲಿಯೇ ಪ್ರತಿಷ್ಠಿತವಾಗಿದೆ (ಎಂದು ಹೇಳಿದನು).
ವೈಶಂಪಾಯನಃ
ತತಃ ಪ್ರಸಹ್ಯ ಬೀಭತ್ಸುಃ ಕೌಂತೇಯಃ ಶ್ವೇತವಾಹನಃ ।
ದಿವ್ಯಮಸ್ತ್ರಂ ವಿಕುರ್ವಾಣಃ ಪ್ರತ್ಯಯಾದ್ ರಥಸತ್ತಮಾನ್ ॥11॥

ವೈಶಂಪಾಯನ ಆಗ ಶ್ವೇತವಾಹನನೂ, ಕುಂತೀಪುತ್ರನೂ ಆದ ಅರ್ಜುನನು ನಕ್ಕು ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ರಥಶ್ರೇಷ್ಠರಾದ ಶತ್ರುಗಳನ್ನು ಕುರಿತು ಸಾಗಿದನು.
ಮಹಾಮನಾ ಮಂದಬುದ್ಧಿಃ ನಿಃಶ್ವಸನ್ ಧೃತರಾಷ್ಟ್ರಜಃ |
ಉವಾಚ ಸ ಮಹಾಬಾಹುಂ ಕರ್ಣಂ ದುರ್ಯೋಧನಸ್ತದಾ ॥12॥
ದುರಹಂಕಾರಿಯೂ ಮತ್ತು ಮಂದಬುದ್ಧಿಯುಳ್ಳವನೂ ಆದ ಧೃತರಾಷ್ಟ್ರ ಪುತ್ರನಾದ ದುರ್ಯೋಧನನು ನಿಟ್ಟುಸಿರನ್ನು ಬಿಡುತ್ತಾ ಆಗ ಮಹಾಬಾಹುವಾದ ಕರ್ಣನನ್ನು ಕುರಿತು ಹೀಗೆ ಹೇಳಿದನು.
ನ ವಿದ್ಮ ಹ್ಯರ್ಜುನಂ ತತ್ರ ವಸಂತಂ ಮಾತ್ಸ್ಯವೇಶ್ಮನಿ |
ತೇನೇದಂ ಕರ್ಣ ಮತ್ಸ್ಯಾನಾಮಗ್ರಹೀಷ್ಮ ಧನಂ ಬಹು ॥13॥
ವಿರಾಟನ ಅರಮನೆಯಲ್ಲಿ ಅರ್ಜುನನು ವಾಸಮಾಡುತ್ತಿರುವ ವಿಷಯವು ನಮಗೆ ತಿಳಿದಿರಲಿಲ್ಲ. ಎಲೈ ಕರ್ಣನೇ, ಆದ್ದರಿಂದ ಮತ್ಸ್ಯರ ಈ ದೊಡ್ಡದಾದ ಗೋಧನವನ್ನು ಹಿಡಿದೆವು.
ಇತಃ ಪರಂ ಚೇದ್ ಗಚ್ಛಾಮೋ ವಿಸೃಜಂತೋ ಧನಂ ಬಹು |
ಅಯಶೋ ನಾತಿವರ್ತೇತ ಲೋಕಯೋರುಭಯರೋರಪಿ ॥14॥
ಈಗ ಇನ್ನು ಮುಂದೆ ನಾವು ಈ ಬಹಳವಾದ ಗೋಧನವನ್ನು ಬಿಟ್ಟು ಇಲ್ಲಿಂದ ಹೊರಟುಹೋದರೆ ಎರಡು ಲೋಕಗಳಲ್ಲಿಯೂ ಅಪಕೀರ್ತಿಯು ನಮ್ಮನ್ನು ಬಿಡುವುದಿಲ್ಲ.
ನ ಚ ಯುದ್ಧಾತ್ ಪರಂ ನಾಸ್ತಿ ಕ್ಷತ್ರಿಯಾಣಾಂ ಸುಖಾವಹಮ್ |
ತಸ್ಮಾತ್ ಪಾರ್ಥೇನ ಸಂಗ್ರಾಮಂ ಕುರ್ಮಹೇ ನ ಪಲಾಯನಮ್ ॥
ಏತಾವದುಕತ್ವ ರಾಜಾ ವೈ ಹ್ಯಭಿಯಾನಮಿಯೇಷ ಸಃ ॥16॥
ಕ್ಷತ್ರಿಯರಿಗೆ ಯುದ್ಧಕ್ಕಿಂತ ಹೆಚ್ಚು ಸುಖವನ್ನು ಕೊಡುವಂತಹದು ಯಾವುದೂ ಇಲ್ಲ. ಆದ್ದರಿಂದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡೋಣ. ಪಲಾಯನವನ್ನು ಮಾಡುವುದು ಬೇಡ. ಹೀಗೆ ಹೇಳಿ ರಾಜನು ಅರ್ಜುನನ ಮೇಲೆ ಎರಗಲು ಬಯಸಿದನು.
ತಾನಿ ಪಂಚಸಹಸ್ರಾಣಿ ವೀರಾಣಾಂ ಹಿ ಧನುಷ್ಮತಾಮ್ |
ಅಭ್ಯದ್ರುವಂಸ್ತದಾ ಪಾರ್ಥಂ ಶಲಭಾ ಇವ ಪಾವಕಮ್ ॥17॥
ಆಗ ಧನುರ್ಧಾರಿಗಳಾದ ಐದುಸಹಸ್ರ ವೀರರಿಂದ ಕೂಡಿದ ಆ ಸೈನ್ಯವು ಅಗ್ನಿಯನ್ನು ಪತಂಗಗಳು ಮುತ್ತುವಂತೆ ಅರ್ಜುನನನ್ನು ಮುತ್ತಿದವು.
ವರ್ಮಿತಾ ವಾಜಿನಸ್ತತ್ರ ಸಂವೃತಾಶ್ಚ ಪದಾತಿಭಿಃ |
ಭೀಮರೂಪಾಶ್ಚ ಮಾತಂಗಾಸ್ತೋಮರಾಂಕುಶಪಾಣಿಭಿಃ ॥18॥
ಅಧಿಷ್ಠಿತಾಃ ಸುಂಸಯತ್ತೈರ್ಹಸ್ತಿಶಿಕ್ಷಾವಿಶಾರದೈಃ |
ಅಭ್ಯದ್ರುವಂತ ಸಂಕ್ರುದ್ಧಾಃ ಚಾಪಹಸ್ತೋದ್ಯತಾಯುಧೈಃ ॥19॥
ಪದಾತಿಗಳಿಂದ ಸುತ್ತಲೂ ಪರಿವೃತರಾದ, ಕವಚವನ್ನು ಧರಿಸಿದ ಅಶ್ವಾರೋಹಿಗಳೂ, ತೋಮರಾಂಕುಶಗಳನ್ನು ಕೈಯಲ್ಲಿ ಹಿಡಿದ ಹಸ್ತಿಶಿಕ್ಷಾ ವಿಶಾರದರಾದ, ಬಹಳ ಎಚ್ಚರಿಕೆಯಿಂದ ಕೂಡಿದ, ಕೈಯಲ್ಲಿ ಬಿಲ್ಲುಗಳನ್ನೂ ಆಯುಧಗಳನ್ನೂ ಹಿಡಿದ, ಮಹಾಮಾತ್ರರಿಂದ ರಕ್ಷಿತರಾದ, ಭಯಂಕರವಾದ ಬಹಳ ಕ್ರುದ್ಧವಾದ ಗಜಗಳೂ ಸಹ ಅರ್ಜುನನನ್ನು ಕುರಿತು ಓಡಿದವು.
ಪಂಚ ಚೈನಂ ರಥೋದಗ್ರಾಃ ಸಹಿತಾಃ ಪರ್ಯವಾರಯನ್ |
ದ್ರೋಣೋ ಭೀಷ್ಮಶ್ಚ ಕರ್ಣಶ್ಚ ಕುರುರಾಜಶ್ಚ ವೀರ್ಯವಾನ್ ॥20॥
ಅಶ್ವತ್ಥಾಮಾ ಮಹಾಬಾಹುರ್ಧನುರ್ವೇದಪರಾಯಣಃ ॥21॥
ದ್ರೋಣ, ಭೀಷ್ಮ, ಕರ್ಣ, ವೀರ್ಯವಂತನಾದ ದುರ್ಯೋಧನ, ಧನುರ್ವೇದ ಪರಾಯಣರಾದ ಮಹಾಮೇಧಾವಿಗಳಾದ ಅಶ್ವತ್ಥಾಮರು ಈ ಐವರು ಶ್ರೇಷ್ಠರಥರು ಅರ್ಜುನನನ್ನು ಸುತ್ತುವರಿದರು.
ಕೃಪಪ್ರಭೃತಯಶ್ಚಾನ್ಯೇ ಶಕುನಿರ್ಧೃತರಾಷ್ಟ್ರಜಾಃ |
ಇಷೂಂಶ್ಚ ಸಮ್ಯಗಸ್ಯಂತೋ ಜೀಮೂತಾ ಇವ ವಾರ್ಷಿಕಾಃ ॥22॥
ತೇ ಲಾಭಮಿವ ಮನ್ವಾನಾಃ ಪ್ರತ್ಯಗೃಹ್ಣನ್ ಧನಂಜಯಮ್ |
ಶರೌಘಾನಭಿವರ್ಷಂತೋ ನಾದಯಂತೋ ದಿಶೋ ದಶ ॥23॥
ಕೃಪ ಮೊದಲಾದವರು ಮತ್ತು ಇನ್ನುಳಿದ ಶಕುನಿ, ಧೃತರಾಷ್ಟ್ರಪುತ್ರರು ಮಳೆಗಾಲದ ಮೋಡಗಳಂತೆ ಬಾಣಗಳನ್ನು ಚೆನ್ನಾಗಿ ಪ್ರಯೋಗಿಸುತ್ತಾ ಅರ್ಜುನನ ದರ್ಶನವೇ ತಮಗೆ ಲಾಭವೆಂದು ತಿಳಿದು ಬಾಣಗಳ ಮಳೆಯನ್ನು ಸುರಿಸುತ್ತಾ ಹತ್ತು ದಿಕ್ಕುಗಳೂ ಪ್ರತಿಧ್ವನಿಸುವಂತೆ ಗರ್ಜಿಸುತ್ತಾ ಅರ್ಜುನನನ್ನು ಎದುರಿಸಿದರು.
ತತಃ ಪ್ರಹಸ್ಯ ಬೀಭತ್ಸುಃ ಕೌಂತೇಯಃ ಶ್ವೇತವಾಹನಃ |
ದಿವ್ಯಮಸ್ತ್ರಂ ವಿಕುರ್ವಾಣಃ ಪ್ರತ್ಯಯಾದ್ ರಥಸತ್ತಮಾನ್ ॥24॥
ಆಗ ಕುಂತೀಪುತ್ರನೂ, ಶ್ವೇತವಾಹನನೂ ಆದ ಅರ್ಜುನನು ನಕ್ಕು ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ಆ ರಥಶ್ರೇಷ್ಠರ ಮೇಲೆ ಎರಗಿದನು.
ಯಥಾ ರಶ್ಮಿಭಿರಾದಿತ್ಯಃ ಪ್ರಚ್ಛಾದಯತಿ ಮೇದಿನೀಮ್ |
ತಥಾ ಗಾಂಡೀವವಿನಿರ್ಮುಕ್ತಾಶ್ಛಾದಯಂತಿ ಶರಾ ದಿಶಃ ॥25॥
ಸೂರ್ಯನು ತನ್ನ ಕಿರಣಗಳಿಂದ ಭೂಮಿಯನ್ನು ಮುಚ್ಚಿದಂತೆ ಗಾಂಡೀವದಿಂದ ಹೊರಹೊಮ್ಮಿದ ಬಾಣಗಳು ಎಲ್ಲ ದಿಕ್ಕುಗಳನ್ನೂ ಮುಚ್ಚಿದವು.

ನ ರಥಾನಾಂ ನ ಚಾಶ್ವಾನಾಂ ನ ಧ್ವಜಾನಾಂ ನ ಹಸ್ತಿನಾಮ್ |
ಅತಿವಿದ್ಧೈಃ ಶಿತೈರ್ಬಾಣೈರಾಸೀದ್ ವಿದ್ಧಮನಂತರಮ್ ||26||
ಬಹಳ ಪ್ರಹಾರಕ್ಕೆ ಒಳಗಾದ ರಥಗಳ ಮೇಲೆ, ಅಶ್ವಗಳ ಮೇಲೆ, ಧ್ವಜಗಳ ಮೇಲೆ, ಗಜಗಳ ಮೇಲೆ ನಿಶಿತವಾದ ಬಾಣಗಳು ಒಂದಾದರ ನಂತರ ಒಂದರಂತೆ ಬೀಳುತ್ತಿರಲಿಲ್ಲ. ಒಂದೇ ಕ್ಷಣದಲ್ಲಿ ಬೀಳುತ್ತಿದ್ದವು (ಲಕ್ಷಾಲಂಕಾರ).
ದೈವಯೋಗಾದ್ಧಿ ಪಾರ್ಥಸ್ಯ ಹಯಾನಾಮುತ್ತರಸ್ಯ ಚ |
ಶಿಕ್ಷಾಬಲೋಪಪನ್ನತ್ವಾದಸ್ತ್ರಾಣಾಂ ವೈ ಪರಾಕ್ರಮಾತ್ ||27||
ಧ್ವಜಗಾಂಡೀವಯೋಶ್ಚಾಪಿ ದೈವೀಮಾಯಾಕೃತೇತಿ ಚ |
ಇತಸ್ತತಶ್ಚ ಸಂಯಾನೇ ದೂರೇ ವಾಽಪ್ಯಥವಾಽಂತಿಕೇ ||28||
ದುರ್ಗೇ ವಿಷಮಜಾತೇ ವಾ ಸ್ಥಲೇ ನಿಮ್ನೇ ತಥಾ ಕ್ಷಿತೌ |
ನ ಚ ರುದ್ಧ್ಯೇತ್ ಗತಿಸ್ತಸ್ಯ ರಥಸ್ಯ ಮನಸೋ ಯಥಾ ||29||
ಭಗವದನುಗ್ರಹದಿಂದಲೂ, ಉತ್ತರನ ಹಯಶಿಕ್ಷಾಬಲದಿಂದಲೂ ಅರ್ಜುನನ ಅಸ್ತ್ರಗಳ ಪರಾಕ್ರಮದಿಂದಲೂ, ಅರ್ಜುನನ ಧ್ವಜ ಮತ್ತು ಬಾಣಗಳು ದೈವೀಶಕ್ತಿಯಿಂದ ಕೂಡಿದುದರಿಂದಲೂ, ರಥವು ಹತ್ತಿರದಲ್ಲೇ ಸಂಚಾರ ಮಾಡಿದರೂ ಅಥವಾ ದೂರದಲ್ಲಿ ಸಂಚಾರ ಮಾಡಿದರೂ, ವಿಷಮಪ್ರದೇಶದಲ್ಲಿ ಅಥವಾ ಹಳ್ಳವಿದ್ದಲ್ಲಿ ಸಂಚಾರ ಮಾಡಿದರೂ ಆ ರಥದ ಗತಿಯು ಮನಸ್ಸಿನ ಗತಿಯಂತೆ ಪ್ರತಿಬದ್ಧವಾಗುತ್ತಿರಲಿಲ್ಲ.
ಸಮರೇಷು ತು ವಿದ್ವಾಂಸಸ್ತಸ್ಯ ತಾಂಸ್ತಾನ್ ಪರಾಕ್ರಮಾನ್ |
ವೀರ್ಯಮದ್ಭುತತಮಂ ದೃಷ್ಟ್ವಾ ತಥಾ ಪಾರ್ಥಸ್ಯ ತದ್ಬಲಮ್ ||30||
ತ್ರೇಸುರೇವ ಪರೇ ಭೀತಾಃ ಪರಾಙ್ಮುಖರಥಾ ಅಪಿ ||31||
ಯುದ್ಧದಲ್ಲಿ ಪರಿಣತರಾದವರು ಅರ್ಜುನನ ಆಯಾ ಪರಾಕ್ರಮವನ್ನೂ, ಅದ್ಭುತ ತಮವಾದ ವೀರ್ಯವನ್ನೂ, ಹಾಗೆಯೇ ಅವನ ಬಲವನ್ನೂ ನೋಡಿ ಭೀತರಾಗಿ ಹೆದರಿಹೋದರು ಮತ್ತು ತಮ್ಮ ರಥಗಳನ್ನು ಹಿಂದಿರುಗಿಸಿದರು.
ಕಾಲಾಗ್ನಿಮಿವ ಬೀಭತ್ಸುಂ ನಿರ್ದಹಂತಮಿವ ಪ್ರಜಾಃ |
ನಾರಯಃ ಪ್ರೇಕ್ಷಿತುಂ ಶೇಕುರ್ಜ್ವಲಂತಮಿವ ಪಾವಕಮ್ ||32||
ಕಾಲಾಗ್ನಿಯಂತೆ ಪ್ರಜೆಗಳನ್ನು ನಿರ್ದಹಿಸುತ್ತಿರುವ ಮತ್ತು ಜ್ವಲಿಸುವ ಅಗ್ನಿಯಂತಿರುವ ಅರ್ಜುನನನ್ನು ನೋಡಲು ಶತ್ರುಗಳಿಗೆ ಸಾಧ್ಯವಾಗಲಿಲ್ಲ.
ತಾನಿ ಭಿನ್ನಾನ್ಯನೀಕಾನಿ ರೇಜುರರ್ಜುನಮಾರ್ಗಣೈಃ |
ತಿಗ್ಮಾಂಶೋಶ್ಚ ವನಾಗ್ರಾಣಿ ವ್ಯಾಪ್ತಾನೀವ ಗಭಸ್ತಿಭಿಃ ||33||
ಸೂರ್ಯನ ಕಿರಣಗಳಿಂದ ಕಾಡಿನ ಮೇಲ್ಭಾಗವು ವ್ಯಾಪ್ತವಾದಂತೆ ಅರ್ಜುನನ ಬಾಣಗಳಿಂದ ಭಿನ್ನವಾದ ಆ ಸೈನ್ಯಗಳು ಶೋಭಿಸಿದವು.
ಅಶೋಕಾನಾಂ ವನಾನೀವ ಸಂಚಿತೈಃ ಕುಸುಮೈಃ ಶುಭೈಃ |
ಪಾರ್ಥಃ ಸಂರಂಜಯಾಮಾಸ ರುಧಿರೇಣಾಕುಲಂ ಬಲಮ್ ||34||
ಶುಭವಾದ ಅಶೋಕ ಪುಷ್ಪಗಳಿಂದ ರಂಜಿತವಾದ ಕಾಡುಗಳಂತೆ ಪಾರ್ಥನು ಶತ್ರುಸೈನ್ಯವನ್ನು ರಕ್ತದಿಂದ ಕೂಡಿದುದಾಗಿ ಕೆಂಪಾಗಿಸಿದನು.
ಸಹಸ್ರಶೋಽರ್ಜುನಶರೈಃ ಛಿನ್ನಾನ್ಯುಚ್ಚಾವಚಾನಿ ಚ |
ಛತ್ರಾಣಿ ಚ ಪತಾಕಾಶ್ಚ ಖೇಽಭ್ಯುವಾಹ ಸದಾಗತಿಃ ||35||
ಅರ್ಜುನನು ತನ್ನ ಬಾಣದಿಂದ ಕತ್ತರಿಸಿದ ಉಚ್ಚವಾದ ಮತ್ತು ನೀಚವಾದ ಅನೇಕ ಛತ್ರಗಳನ್ನೂ ಮತ್ತು ಪತಾಕೆಗಳನ್ನೂ ವಾಯುವು ಅಂತರಿಕ್ಷದಲ್ಲಿ ಹಾರಿಸಿತು.
ಯೇ ಹ್ಯರ್ಜುನಬಲತ್ರಸ್ತಾಃ ಪರಿಪೇತುರ್ದಿಶೋ ದಶ |
ರಥಾಂಗದೇಶಮುತ್ಸೃಜ್ಯ ಪಾರ್ಥಚ್ಛಿನ್ನಯುಗಾ ಹಯಾಃ ||36||
ನಿಕೃತ್ತಪೂರ್ವಚರಣಾಸ್ತೇ ನಿಪೇತುಃ ಶಿತೈಃ ಶರೈಃ |
ಶಿರೋಭಿಃ ಪ್ರಥಮಂ ಜಗ್ಮುರ್ಮೇದಿನೀಂ ಜಘನೈಃ ಪುನಃ ||37||
ಅರ್ಜುನನ ಬಲಕ್ಕೆ ಹೆದರಿ ಅರ್ಜುನನಿಂದ ನೊಗಗಳು ಕತ್ತರಿಸಲ್ಪಟ್ಟು ರಥದ ಚಕ್ರ ಪ್ರದೇಶವನ್ನು ಬಿಟ್ಟು ದಿಕ್ಕುದಿಕ್ಕುಗಳಿಗೆ ಓಡಿದ ಅಶ್ವಗಳು ಅರ್ಜುನನ ನಿಶಿತವಾದ (ಹರಿತವಾದ) ಬಾಣಗಳಿಂದ ಮುಂದಿನ ಕಾಲುಗಳು ಕತ್ತರಿಸಲ್ಪಟ್ಟು ಮೊದಲು ತಲೆಗಳಿಂದಲೂ ಅನಂತರ ಜಘನಗಳಿಂದಲೂ ಭೂಮಿಯ ಮೇಲೆ ಬಿದ್ದವು.
ಮುಖನಖವಿಷಾಣೇಷು ದಂತವೇಷ್ಟೇಷು ಚ ದ್ವಿಪಾನ್ |
ಮರ್ಮಸ್ವನ್ಯೇಷು ಚಾಹತ್ಯ ತಥಾ ಜಘ್ನೇ ಗಜೋತ್ತಮಾನ್ ||38||
ಅರ್ಜುನನು ಶ್ರೇಷ್ಠವಾದ ಗಜಗಳ ಮುಖ, ನಖ ಮತ್ತು ದಂತವೇಷ್ಟನಗಳಲ್ಲಿಯೂ, ಮರ್ಮಸ್ಥಾನಗಳಲ್ಲಿಯೂ ಹೊಡೆದು ಅವುಗಳನ್ನು ಕೊಂದನು.
ಚಕ್ಷುರ್ನಸಿವಿಷಾಣೇಷು ಪಾದೇಷೂರಃಸು ಚ ದ್ವಿಪಾನ್ |
ಮರ್ಮಸ್ವನ್ಯೇಷು ಚಾಹತ್ಯ ಪಾತಯಾಮಾಸ ಭೂತಳೇ ||39||
ಚಕ್ಷುಸ್ಸು, ಸೊಂಡಿಲು, ದಂತಗಳು, ಪಾದಗಳು, ವಕ್ಷಸ್‌ಸ್ಥಲಗಳು ಮತ್ತು ಇತರ ಮರ್ಮಸ್ಥಾನಗಳಲ್ಲಿ ಹೊಡೆದು ಆನೆಗಳನ್ನು ಭೂಮಿಯ ಮೇಲೆ ಕೆಡವಿದನು.
ಕೌರವಾಣಾಂ ಗಜಾನಾಂ ಚ ಶರೀರೈರ್ಗತಚೇತಸಾಮ್ |

ಕ್ಷಣೇನ ಸಂವೃತಾ ಭೂಮಿರ್ಮೇಘೈರಿವ ನಭಃಸ್ಥಲಮ್ ॥40॥
ಯುದ್ಧಭೂಮಿಯು ಮರಣವನ್ನು ಹೊಂದಿದ ಕೌರವರ ಗಜಗಳ ಶರೀರಗಳಿಂದ ಒಂದು ಕ್ಷಣದಲ್ಲಿ ಆಕಾಶವು ಮೋಡಗಳಿಂದ ಆವೃತವಾಗುವಂತೆ ಆವೃತವಾಯಿತು.
ಅಸ್ತ್ರೈರ್ದಿವ್ಯೈರ್ಮಹಾಬಾಹುರರ್ಜುನಃ ಪ್ರದಹನ್ನಿವ |
ಬಡವಾಮುಖಸಂಭೂತಃ ಕಾಲಾಗ್ನಿರಿವ ಸರ್ವತಃ ॥41॥
ವಡವಾಮುಖದಿಂದ ಎದ್ದ ಕಾಲಾಗ್ನಿಯಂತೆ ದಿವ್ಯಾಸ್ತ್ರಗಳಿಂದ ಸಂಪನ್ನನಾದ ಮಹಾಬಾಹುವಾದ ಅರ್ಜುನನು ಎಲ್ಲ ಕಡೆಗಳಲ್ಲಿಯೂ ದಹಿಸುವವನಂತೆ ಇದ್ದನು.
ಯಥಾ ಯುಗಾಂತಸಮಯೇ ಸರ್ವಂ ಸ್ಥಾವರಜಂಗಮಮ್ |
ಕಾಲಪಕ್ವಮಶೇಷೇಣ ಧಕ್ಷ್ಯತ್ಯುಗ್ರಶಿಖಃ ಶಿಖೀ ॥42॥
ತದ್ವತ್ ಪಾರ್ಥೋಽಸ್ತ್ರತೇಜೋಭಿರ್ಧನುಷೋ ನಿಸ್ವನೇನ ಚ |
ದೈವಾದ್ ವೀರ್ಯಾಚ್ಚ ಬೀಭತ್ಸುಸ್ತಸ್ಮಿನ್ ದೌರ್ಯೋರ್ಧನೇ ಬಲೇ ॥43॥
ಹೇಗೆ ಯುಗಾಂತ ಸಮಯದಲ್ಲಿ ಕಾಲದಿಂದ ಪಕ್ವವಾದ ಎಲ್ಲಾ ಸ್ಥಾವರ ಜಂಗಮಗಳನ್ನೂ ಉಗ್ರಜ್ವಾಲೆಗಳಿಂದ ಕೂಡಿದ ಅಗ್ನಿಯು ದಹಿಸುವನೋ ಅದರಂತೆ ಅರ್ಜುನನು ಅಸ್ತ್ರತೇಜಸ್ಸಿನಿಂದಲೂ, ಧನುಸ್ಸಿನ ನಾದಗಳಿಂದಲೂ, ದೈವದತ್ತವಾದ ಸಾಮರ್ಥ್ಯದಿಂದಲೂ ಆ ದುರ್ಯೋರ್ಧನನ ಸೈನ್ಯದಲ್ಲಿ ಎಲ್ಲವನ್ನೂ ಸುಟ್ಟನು.
ರಣಶಕ್ತಿಮಮಿತ್ರಾಣಾಂ ಪ್ರಾಯೇಣೋಪನಿನಾಯ ಸಃ |
ಚೇಷ್ಟಾಂ ಪ್ರಾಯೇಣ ಭೂತಾನಾಂ ರಾತ್ರಿಃ ಪ್ರಾಣಭೃತಾಮಿವ ॥44॥
ಸೋಽತ್ಯಯಾತ್ ಸಹಸಾ ಶತ್ರೂನ್ ಸಮರೇ ವಾಸವೋಪಮಃ ॥45॥
ರಾತ್ರಿಯು ಪ್ರಾಣಿಗಳ ಕ್ರಿಯಾಶಕ್ತಿಯನ್ನು ಪ್ರಾಯಃ ನಾಶಮಾಡುವಂತೆ ಅರ್ಜುನನು ಶತ್ರುಗಳ ಯುದ್ಧಶಕ್ತಿಯನ್ನು ಪ್ರಾಯಶಃ ನಾಶಮಾಡಿದನು. ಯುದ್ಧದಲ್ಲಿ ಇಂದ್ರನಿಗೆ ಸಮಾನನಾದ ಅವನು ತನ್ನ ಬಲದಿಂದ ಶತ್ರುಗಳನ್ನು ಮೀರಿದನು.
ಶೀಘ್ರಂ ದೂರಂ ದೃಢಾಮೋಘಮಸ್ತ್ರಮಸ್ಯಾತಿಮಾನುಷಮ್ |
ದೃಷ್ಟ್ವಾ ತೇ ಕೌರವಾ ಭೀತಾ ಅತಿಮಾನುಷವಿಕ್ರಮಮ್ ॥46॥
ಅವನ ಶೀಘ್ರವಾದ, ದೂರದಲ್ಲಿ ಬೀಳುವ, ದೃಢವಾದ, ಅಮೋಘವಾದ ಮನುಷ್ಯರನ್ನು ಮೀರಿದ ಅಸ್ತ್ರಗಳನ್ನೂ ಮತ್ತು ಮನುಷ್ಯರಿಗೆ ಮೀರಿದ ಅವನ ಪರಾಕ್ರಮವನ್ನೂ ನೋಡಿ ಆ ಕೌರವರು ಭೀತರಾಗಿದ್ದಾರೆ.
ಖಗಯಾನಾಭಿಸಂವೀತೈಃ ಸಂವಿಷ್ಟೈಃ ಖಗಮೈರಿವ |
ಅರ್ಜುನೇನ ಸಮಾವವ್ರೇ ಲೋಹಿತಪ್ರಾವಣೈಃ ಖಗೈಃ ॥47॥
ಪಕ್ಷಿಗಳ ಗರಿಗಳಿಂದ ಕೂಡಿದ, ಪಕ್ಷಿಗಳು ಕಾಡನ್ನು ಪ್ರವೇಶಿಸುವಂತೆ ಇದ್ದ ಶತ್ರು ರಕ್ತಪಿಪಾಸುಗಳಾದ ಅರ್ಜುನನು ಪ್ರಯೋಗಿಸಿದ ಬಾಣಗಳಿಂದ ಶತ್ರುಸೈನ್ಯವೆಲ್ಲವೂ ಆವೃತವಾಯಿತು.
ಅರ್ಜುನಸ್ಯ ವಿನಿರ್ಮುಕ್ತಾಃ ಶರಾ ಗಾಂಡೀವಧನ್ವನಃ |
ತಾರ್ಕ್ಷ್ಯವೇಗಾ ಇವಾಕಾಶೇ ನ ಸಸಜ್ಜುಃ ಪರಾತ್ಮಸು ॥48॥
ಗಾಂಡೀವ ಧನುರ್ಧಾರಿಯಾದ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಆಕಾಶದಲ್ಲಿ ಗರುಡನ ವೇಗದಂತೆ ಶತ್ರುಶರೀರಗಳಲ್ಲಿ ನಾಟುತ್ತಿರಲಿಲ್ಲ (ಶತ್ರು ಶರೀರಗಳನ್ನು ಭೇದಿಸಿಕೊಂಡು ಮುಂದೆ ಸಾಗುತ್ತಿದ್ದವು).
ವರ್ಮಾಣಿ ಸಾರಥೀಂಶ್ಚೈವ ಹೇಮಜಾಲಾನಿ ವಾಜಿನಾಮ್ |
ಕಿರೀಟಂ ಸೂರ್ಯಸಂಕಾಶಂ ವೈಯಾಘ್ರಮಥ ಚರ್ಮ ಚ ॥49॥
ತಥಾ ಸರ್ವಾಣಿ ಗಾತ್ರಾಣಿ ರಥಸ್ಯ ದ್ವಿಷತಾಂ ಶರೈಃ |
ನೀಹಾರೇಣೇವ ಭೂತಾನಿ ಛನ್ನಾನ್ಯಥ ಚಕಾಶಿರೇ ॥50॥
ಕವಚಗಳೂ, ಸಾರಥಿಗಳೂ, ಕುದುರೆಗಳ ಸುವರ್ಣಜಾಲಗಳೂ, ಸೂರ್ಯನ ಪ್ರಕಾಶವನ್ನು ಹೊಂದಿದ ಕಿರೀಟ, ವ್ಯಾಘ್ರಚರ್ಮ ಮತ್ತು ಶತ್ರುಗಳ ಸರ್ವಶರೀರಗಳೂ ಸಹ, ಮಂಜಿನಿಂದ ಎಲ್ಲವೂ ಆವರಿಸಲ್ಪಟ್ಟಂತೆ ಅರ್ಜುನನ ಬಾಣಗಳಿಂದ ಎಲ್ಲವೂ ಆವರಿಸಲ್ಪಟ್ಟು ಪ್ರಕಾಶಿಸಿದವು.
ಸಕೃತೇಽವಕೃತಂ ಶೇಕೂ ರಥಮಭ್ಯಸಿತುಂ ಪರೇ |
ಅನಭ್ಯಸ್ತಃ ಪುನಸ್ತೈರ್ಹಿ ರಥಃ ಸೋಽಭಿಪಪಾತ ತಾನ್ ॥51॥
ಯುದ್ಧಕರ್ಮದಿಂದ ಸಹಿತನಾದ ಅರ್ಜುನನ, ತಮಗಿಂತಲೂ ಕೆಳಭಾಗದಲ್ಲಿದ್ದ ರಥವನ್ನು ನಿರಾಸ ಮಾಡಲು ಅವರಿಗೆ ಸಾಧ್ಯವಾಗಲಿಲ್ಲ. ಯಾರಿಂದಲೂ ಬಾಣಪ್ರಯೋಗದಿಂದ ತಡೆಯಲ್ಪಡದ ಅರ್ಜುನನ ಆ ರಥವು ಶತ್ರುಗಳ ಸೈನ್ಯದ ಮೇಲೆ ಎರಗಿತು.
ತಚ್ಛರಾ ದ್ವಿಃ ಶರೀರೇಷು ಯಥಾ ಚ ನ ಸಸಜ್ಜಿರೇ |
ದ್ವಿಧಾನೀಕೇಷು ಬೀಭತ್ಸೋರ್ನ ಸಸಜ್ಜ ರಥಸ್ತಥಾ ॥52॥
ಅರ್ಜುನನು ಪ್ರಯೋಗಿಸಿದ ಬಾಣಗಳು ಹೇಗೆ ಶತ್ರುಶರೀರದಲ್ಲಿ ಎರಡು ಬಾರಿ ಪ್ರವೇಶಿಸಲಿಲ್ಲವೋ ಅದರಂತೆ ಅರ್ಜುನನ ರಥವೂ ಕೂಡ ಎರಡು ಬಾರಿ ಪ್ರವೇಶಿಸಲಿಲ್ಲ (ಅರ್ಜುನನು ಪ್ರಯೋಗಿಸಿದ ಬಾಣಗಳು ಒಂದೇ ಬಾರಿ ಶತ್ರುಗಳ ಶರೀರವನ್ನು ಭೇದಿಸಿಕೊಂಡು ಮುಂದೆ ಹೋಗುತ್ತಿದ್ದವು. ಪುನಃ ಎರಡನೇ ಬಾರಿ ಹಿಂದಕ್ಕೆ ಬಂದು ಶತ್ರುಗಳ ಶರೀರವನ್ನು ಭೇದಿಸುತ್ತಿರಲಿಲ್ಲ. ಅದರಂತೆ ರಥವೂ ಕೂಡ ಹಿಂದಿರುಗದೆ ಮುಂದೆ ಮುಂದೆಯೇ ಸಾಗಿತು ಎಂದು ಅಭಿಪ್ರಾಯ- ವಾದಿರಾಜರು).
ಸ ತದ್ವತ್ ಕ್ಷೋಭಯಾಮಾಸ ವಿಗಾಹ್ಯಾರಿಬಲಂ ರಥೀ |
ಅನಂತವೇಗೋ ಭುಜಗಃ ಕ್ರೀಡನ್ನಿವ ಮಹಾರ್ಣವೇ ॥53॥

ಅವನು ಅದರಂತೆ ಅನಂತವೇಗವುಳ್ಳ ಸರ್ಪವು ಸಮುದ್ರದಲ್ಲಿ ಆಟವಾಡಿದಂತೆ ಶತ್ರುಗಳ ಸೈನ್ಯವನ್ನು ಪ್ರವೇಶಿಸಿ ತಲ್ಲಣಗೊಳಿಸಿದನು.
ಅಸ್ಯತೋ ನಿತ್ಯಮತ್ಯರ್ಥಂ ಸರ್ವಘೋಷಾತಿಗಸ್ತಥಾ |
ಸನ್ನಾದಃ ಶ್ರೂಯತೇ ಭೂತೈರ್ಧನುಷಶ್ಚ ಕಿರೀಟಿನಃ ||54||
ಸತತವಾಗಿ ಬಾಣಪ್ರಯೋಗವನ್ನು ಮಾಡುವ ಕಿರೀಟಿಯಾದ ಅವನ ಧನುಸ್ಸಿನ ನಾದವು ಉಳಿದ ಎಲ್ಲಾ ಘೋಷಗಳನ್ನು ಮೀರಿ ಧ್ವಜದಲ್ಲಿದ್ದ ಭೂತಗಳ ನಾದಗಳೊಂದಿಗೆ ಸೇರಿ ಕೇಳಿಬರುತ್ತಿದ್ದಿತು.
ಸಂಭಿನ್ನಾಸ್ತತ್ರ ಮಾತಂಗಾ ಬಾಣೈರಲ್ಪಾಂತರಾಂತರೇ |
ಸಂಸ್ಯೂತಾಸ್ತತ್ರ ದೃಶ್ಯಂತೇ ಮೇಘಾ ಇವ ಗಭಸ್ತಿಭಿಃ ||55||
ಸ್ವಲ್ಪ ಸ್ವಲ್ಪ ದೂರದಲ್ಲಿಯೇ ಬಾಣಗಳಿಂದ ಕತ್ತರಿಸಲ್ಪಟ್ಟು ಬಿದ್ದಿದ್ದ ಆನೆಗಳು ಮೇಘಗಳು ಸೂರ್ಯಕಿರಣಗಳಿಂದ ಪೋಣಿಸಲ್ಪಟ್ಟಂತೆ ಕಾಣಿಸಿದವು.
ದಿಶೋಽನುಭ್ರಮತಃ ಸರ್ವಾಃ ಸವ್ಯಂ ದಕ್ಷಿಣಮಸ್ಯತಃ |
ಸತತಂ ದೃಶ್ಯತೇ ಯುದ್ಧೇ ಸಾಯಕಾಸನಮಂಡಲಮ್ ||56||
ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುವ ದಕ್ಷಿಣಹಸ್ತಗಳಿಂದಲೂ ಮತ್ತು ಸವ್ಯ ಹಸ್ತಗಳಿಂದಲೂ ಬಾಣಗಳನ್ನು ಪ್ರಯೋಗಿಸುವ ಅವನ ಧನುಸ್ಸು ಯುದ್ಧದಲ್ಲಿ ಸತತವಾಗಿ ಮಂಡಲಾಕಾರವಾಗಿ ಕಾಣುತ್ತಿದ್ದಿತು.
ಪತಂತ್ಯರೂಪೇಷು ಯಥಾ ಚಕ್ಷೂಂಷಿ ನ ಕದಾಚನ |
ನಾಲಕ್ಷ್ಯೇಷು ಶರಾಃ ಪೇತುಸ್ತಥಾ ಗಾಂಡೀವಧನ್ವನಃ ||57||
ರೂಪರಹಿತ ವಸ್ತುಗಳಲ್ಲಿ ಹೇಗೆ ಕಣ್ಣಿನ ದೃಷ್ಟಿಯು ಎಂದೂ ಬೀಳುವುದಿಲ್ಲವೋ ಅದರಂತೆ ಗಾಂಡೀವಧನ್ವಿಯಾದ ಅರ್ಜುನನ ಬಾಣಗಳು ಲಕ್ಷ್ಯವಲ್ಲದವುಗಳಲ್ಲಿ ಬೀಳುತ್ತಿರಲಿಲ್ಲ.
ಮಾರ್ಗೋ ಗಜಸಹಸ್ರಸ್ಯ ಯುಗಪನ್ಮರ್ದತೋ ವನಮ್ |
ಕೌಂತೇಯರಥಮಾರ್ಗಸ್ತು ರಣೇ ಘೋರತರೋಽಭವತ್ ||58||
ಒಟ್ಟಿಗೆ ಸೇರಿ ವನವನ್ನು ಮರ್ದಿಸುವ ಸಹಸ್ರ ಆನೆಗಳ ಮಾರ್ಗಕ್ಕಿಂತಲೂ ಯುದ್ಧದಲ್ಲಿ ಅರ್ಜುನನ ರಥಮಾರ್ಗವು ಇನ್ನೂ ಘೋರತರವಾಗಿದ್ದಿತು.
ನೂನಂ ಪಾರ್ಥಜಯೈಷಿತ್ವಾತ್ ಶಕ್ರಃ ಸರ್ವಾಮರೇಶ್ವರಃ |
ಹಂತ್ಯಸ್ಮಾನಿತಿ ಮನ್ಯಂತೇ ಪಾರ್ಥೇನೈವಾರ್ದಿತಾಃ ಪರೇ ||59||
ದೇವೇಂದ್ರನು ಅರ್ಜುನನ ಜಯವನ್ನು ಬಯಸುವುದರಿಂದ ಅವನೇ ನಮ್ಮನ್ನು ಕೊಲ್ಲುತ್ತಿದ್ದಾನೆ ಎಂದು ಅರ್ಜುನನಿಂದ ಪೀಡಿತರಾದ ಶತ್ರುಗಳು ಭಾವಿಸಿದರು.
ಘ್ನಂತಮತ್ಯರ್ಥಭೀತಾಸ್ತೇ ಮೇನಿರೇ ಸವ್ಯಸಾಚಿನಮ್ |
ಕಾಲಮರ್ಜುನರೂಪೇಣ ಗ್ರಸಂತಮಿವ ಚ ಪ್ರಜಾಃ ||60||
ಎಲ್ಲರನ್ನೂ ಕೊಲ್ಲುತ್ತಿರುವ ಅರ್ಜುನನನ್ನು ನೋಡಿ ಅವರು ಬಹಳ ಭೀತರಾಗಿ ಅವನನ್ನು ಅರ್ಜುನನ ರೂಪದಿಂದ ಪ್ರಜೆಗಳನ್ನು ಸಂಹಾರ ಮಾಡುವ ಯಮನೆಂದು ಭಾವಿಸಿದರು.
ಕುರುಸೇನಾಶರೀರಾಣಿ ಪಾರ್ಥೇನಾನಾಹತಾನ್ಯಪಿ |
ಪೇತುಃ ಪಾರ್ಥಹತಾನೀವ ಪಾರ್ಥಕರ್ಮಾನುದರ್ಶನಾತ್ ||61||
ಅರ್ಜುನನ ಕರ್ಮವನ್ನು ಕೇವಲ ನೋಡುವುದರಿಂದಲೇ ಕುರುಸೈನ್ಯದ ಶರೀರಗಳು ಅರ್ಜುನನಿಂದ ಹೊಡೆಯಲ್ಪಡದಿದ್ದರೂ ಅರ್ಜುನನಿಂದ ಹೊಡೆಯಲ್ಪಟ್ಟ ಶರೀರಗಳಂತೆ ಭೂಮಿಯ ಮೇಲೆ ಉರುಳಿದವು.
ಓಷಧೀನಾಂ ಶಿರಾಂಸೀವ ಕಾಲಪಂಕ್ತಿಸಮನ್ವಯಾತ್ |
ಅವನೇಮುಃ ಕುರೂಣಾಂ ಹಿ ವೀರ್ಯಾಣ್ಯರ್ಜುನಜಾದ್ ಭಯಾದ್ ||
ಬಹುಕಾಲ ಇರುವುದರಿಂದ ಪರಿಪಕ್ವವಾದ ಓಷಧಿಗಳ ಅಗ್ರಭಾಗಗಳಂತೆ ಅರ್ಜುನನಿಂದ ಉಂಟಾದ ಭಯದಿಂದ ಕೌರವರ ಸಾಮರ್ಥ್ಯವು ಬಾಗಿತು.
ಬಾಹ್ವೋ ರಥಾನ್ ಸ್ಫೋಟಯತೇ ಪ್ರಧ್ಮಾತೇ ಶಂಖಮರ್ಜುನಃ |
ಚಕಾರ ಚಾರ್ಜುನೀಕತ್ವಂ ದ್ವಿಮುಖಾನ್ ರುಷಿತಾನಪಿ ||63||
ತನ್ನ ಎರಡು ಬಾಹುಗಳಿಂದ ರಥಗಳನ್ನು ಸ್ಫೋಟಿಸುತ್ತಾನೆ ಮತ್ತು ಹಾಗೆಯೇ ಅರ್ಜುನನು ಶಂಖವನ್ನು ಊದುತ್ತಾನೆ. ಹೀಗೆ ಅರ್ಜುನನು ಪರಸೈನ್ಯವನ್ನೆಲ್ಲಾ ಅರ್ಜುನಮಯವನ್ನಾಗಿ ಮಾಡಿ ಕ್ರೋಧಗೊಂಡ ಅವರು ಎರಡು ಕಡೆಗಳಲ್ಲಿ (ಹಿಂದೆ ಮತ್ತು ಮುಂದೆ, ಬಲಗಡೆ ಮತ್ತು ಎಡಗಡೆ) ತನ್ನನ್ನು ನಿರೀಕ್ಷಿಸುವಂತೆ ಮಾಡಿದನು.
ಅರ್ಜುನೇನಾಸ್ತ್ರಭಿನ್ನಾನಿ ಬಲಾಗ್ರಾಣಿ ಪುನಃ ಕ್ವಚಿತ್ |
ಚಕ್ರುರ್ಲೋಹಿತಧಾರಾಭಿರ್ಧರಣೀಂ ಲೋಹಿತೋತ್ತರಾಮ್ ||64||
ಅರ್ಜುನನ ಅಸ್ತ್ರದಿಂದ ಕತ್ತರಿಸಲ್ಪಟ್ಟ ಸೈನ್ಯದ ಭಾಗಗಳು ತಮ್ಮಿಂದ ಹರಿಯುವ ರಕ್ತದ ಧಾರೆಗಳಿಂದ ಭೂಮಿಯನ್ನು ಕೆಂಪುವರ್ಣದಿಂದ ಕೂಡಿದುದನ್ನಾಗಿ ಮಾಡಿದವು.
ಲೋಹಿತೈರ್ವಾಪಿ ಸಂಪೃಕ್ತೈಃ ಪಾಂಸುಭಿಃ ಪವನೋದ್ಧೃತೈಃ |
ತೇನೈವ ಚ ಸಮುದ್ಧೂತೈಃ ಸೂಕ್ಷ್ಮೈರ್ಲೋಹಿತಬಿಂದುಭಿಃ ||65||
ಲೋಹಿತಾರ್ದ್ರೈಃ ಪ್ರಹರಣೈರ್ನಿಮಗ್ನಾ ಲೋಹಿತೋಕ್ಷಿತಾಃ |
ಲೋಹಿತೇಷು ನಿಮಗ್ನಾಸ್ತೇ ನಿಹತಾಶ್ಚ ಕಿರೀಟಿನಾ ||66||

ಗಾಳಿಯಿಂದ ಎದ್ದ ರಕ್ತವರ್ಣೋಪೇತವಾದ ಧೂಳುಗಳಿಂದ ಕೂಡಿ, ಮತ್ತು ವಾಯುವಿನಿಂದಲೇ ಮೇಲೆದ್ದ ಸಣ್ಣರಕ್ತಬಿಂದುಗಳಿಂದ ಕೂಡಿ, ಅರ್ಜುನನ ರಕ್ತದಿಂದ ಒದ್ದೆಯಾದ ಆಯುಧಗಳಿಂದ ಪ್ರಹಾರವನ್ನು ಹೊಂದಿ, ರಕ್ತದ ಅಭಿಷೇಕವನ್ನು ಹೊಂದಿದ ಕೌರವರು ರಕ್ತಮಯವಾದ ಭೂಮಿಯಲ್ಲಿ ಮುಳುಗಿದರು.
ಬಭೂವುರ್ಲೋಹಿತಾಸ್ತತ್ರ ಭೃಶಮಾದಿತ್ಯರಶ್ಮಯಃ |
ಸಾರ್ಕಂ ನಭಃ ಕ್ಷಣೇನಾಸೀತ್ ಸಂಧ್ಯಾಭ್ರಮಿವ ಲೋಹಿತಮ್ ॥67॥
ಆದಿತ್ಯನ ಕಿರಣಗಳೂ ಸಹ ಅಲ್ಲಿ ಕೆಂಪಾದವು. ಸೂರ್ಯನಿಂದ ಕೂಡಿದ ಆಕಾಶವು ಒಂದುಕ್ಷಣದಲ್ಲಿ ಸಂಧ್ಯಾಕಾಲದ ಮೋಡದಂತೆ ಕೆಂಪಾಯಿತು.
ಅಪ್ಯಸ್ತಂ ಪ್ರಾಪ್ಯ ಚಾದಿತ್ಯೋ ನಿವರ್ತೇತ ನ ಪಾಂಡವಃ |
ನಿವರ್ತೇತ ನ ಜಿತ್ವಾಽರೀನ್ ಇತ್ಯಜಲ್ಪನ್ ವಿಚಕ್ಷಣಾಃ ॥68॥
ಒಮ್ಮೆ ಮುಳುಗಿದ ಸೂರ್ಯನು ಹಿಂದಕ್ಕೆ ಬರಬಹುದು. ಆದರೆ ಅರ್ಜುನನು ಶತ್ರುಗಳನ್ನು ಗೆಲ್ಲದೇ ಹಿಂದೆ ಬರಲಾರ ಎಂದು ಮೇಧಾವಿಗಳು ಅಲ್ಲಿ ಮಾತನಾಡಿಕೊಂಡರು.
ತಾನ್ ಸರ್ವಾನ್ ಸಮರೇ ಶೂರಾನ್ ಪೌರುಷೇ ಪರ್ಯವಸ್ಥಿತಾನ್ |
ದಿವ್ಯೈರಸ್ತ್ರೈರಮೇಯಾತ್ಮಾ ಸರ್ವಾನಾರ್ಚ್ಛದ್ ಧನುರ್ಧರಾನ್ ॥69॥
ತಿಳಿಯಲು ಅಸಾಧ್ಯವಾದ ಮಹಿಮೆಯುಳ್ಳ ಅರ್ಜುನನು ಪೌರುಷವನ್ನು ಆಶ್ರಯಿಸಿ ಯುದ್ಧದಲ್ಲಿ ನಿಂತ ಎಲ್ಲಾ ಶೂರರಾದ ಧನುರ್ಧಾರಿಗಳನ್ನೂ ತನ್ನ ದಿವ್ಯಾಸ್ತ್ರಗಳಿಂದ ಹಿಂಸಿಸಿದನು.
ಸ ತು ದ್ರೋಣಂ ತ್ರಿಸಪ್ತತ್ಯಾ ನಾರಾಚಾನಾಂ ಸಮರ್ಪಯತ್ |
ಅರ್ಜುನೋ ನಿಶಿತೈರ್ಬಾಣೈರ್ದ್ರೋಣಮರ್ಚನ್ ಮಹಾಬಲಃ ॥70॥
ಮಹಾಬಲನಾದ ಅರ್ಜುನನು ಹರಿತವಾದ ಬಾಣಗಳಿಂದ ದ್ರೋಣರನ್ನು ಪೂಜಿಸುತ್ತಾ ಅವರ ಮೇಲೆ ಎಪ್ಪತ್ತಮೂರು ಬಾಣಗಳನ್ನು ಪ್ರಯೋಗಿಸಿದನು.
ಅಶೀತ್ಯಾ ಶಕುನಿಂ ಚೈವ ದ್ರೌಣಿಮಪ್ಯಾಶು ಸಪ್ತಭಿಃ |
ದುಃಸಹಂ ದಶಭಿರ್ಬಾಣೈರರ್ಜುನಃ ಸಮವಿಧ್ಯತ ॥71॥
ಶಕುನಿಯನ್ನು ಎಂಬತ್ತು ಬಾಣಗಳಿಂದಲೂ, ಅಶ್ವತ್ಥಾಮರನ್ನು ನಿಶಿತವಾದ ಏಳು ಬಾಣಗಳಿಂದಲೂ, ದುಃಸಹನನ್ನು ಹತ್ತುಬಾಣಗಳಿಂದಲೂ ಅರ್ಜುನನು ಹೊಡೆದನು.
ದುಃಶಾಸನಂ ದ್ವಾದಶಭಿಃ ಕೃಪಂ ಶಾರದ್ವತಂ ತ್ರಿಭಿಃ |
ಭೀಷ್ಮಂ ಶಾಂತನವಂ ಷಷ್ಟ್ಯಾ ಪ್ರತ್ಯವಿಧ್ಯತ್ ಸ್ತನಾಂತರೇ ॥72॥
ದುಃಶಾಸನನನ್ನು ಹನ್ನೆರಡು ಬಾಣಗಳಿಂದಲೂ, ಶಾರದ್ವತರಾದ ಕೃಪರನ್ನು ಮೂರು ಬಾಣಗಳಿಂದಲೂ ಮತ್ತು ಶಂತನು ಪುತ್ರರಾದ ಭೀಷ್ಮರನ್ನು ಸ್ತನಗಳ ಮಧ್ಯದಲ್ಲಿ ಅರವತ್ತು ಬಾಣಗಳಿಂದಲೂ ಹೊಡೆದನು.
ಸ ಕರ್ಣಂ ಕರ್ಣಿನಾಽವಿಧ್ಯತ್ ಸ್ಪೀತೇನ ನಿಶಿತೇನ ಚ |
ವಾಸವಿರ್ದ್ವಿಷತಾಂ ಮಧ್ಯೇ ವಿವ್ಯಾಧ ಪರಮೇಷುಣಾ ॥73॥
ಅವನು ಕರ್ಣನನ್ನು ಪರಿಶುದ್ಧವಾದ ಮತ್ತು ಹರಿತವಾದ ಕರ್ಣಿ ಎಂಬ ಬಾಣದಿಂದ ಹೊಡೆದು ಅನಂತರ ಶತ್ರುಗಳ ಮಧ್ಯದಲ್ಲಿ ಅವನನ್ನು ಶ್ರೇಷ್ಠವಾದ ಬಾಣಗಳಿಂದ ಹೊಡೆದನು.
ತತ್ ಪ್ರಭಿನ್ನಂ ಬಲಂ ಸರ್ವಂ ಕೃತ್ವಾ ವಾಸವನಂದನಃ |
ಸ ಕರ್ಣಂ ಕರ್ಣಿನಾಽವಿಧ್ಯತ್ ಸ್ಪೀತೇನ ನಿಶಿತೇನ ಚ ॥74॥
ವಾಸವನಂದನನಾದ ಅರ್ಜುನನು ಶತ್ರುಸೈನ್ಯವನ್ನೆಲ್ಲಾ ಭಗ್ನಗೊಳಿಸಿ ಕರ್ಣನನ್ನು ಪರಿಶುದ್ಧವಾದ ಮತ್ತು ಹರಿತವಾದ ಕರ್ಣಿಯಿಂದ ಹೊಡೆದನು.
ಸ ಕರ್ಣಂ ಸತನುತ್ರಾಣಂ ನಿರ್ಭಿದ್ಯ ನಿಶಿತಃ ಶರಃ |
ಅಗಚ್ಛದ್ ದಾರಯನ್ ಭೂಮಿಂ ಚೋದಿತೋ ದೃಢಧನ್ವಿನಾ ॥75॥
ದೃಢ ಧನುಸ್ಸನ್ನು ಹೊಂದಿದ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಆ ನಿಶಿತವಾದ ಬಾಣವು ಕವಚಸಹಿತನಾಗಿದ್ದ ಕರ್ಣನನ್ನು ಭೇದಿಸಿ ಭೂಮಿಯನ್ನು ಸೀಳುತ್ತಾ ಭೂಮಿಯನ್ನು ಪ್ರವೇಶಿಸಿತು.
ತತೋಽಸ್ಯ ವಾಹಾನ್ ವ್ಯಹನತ್ ಚತುರ್ಭಿಶ್ಚ ಕ್ಷುರೇಣ ತು |
ಸಾರಥೇಶ್ಚ ಶಿರಃ ಕಾಯಾದಪಾಹರದರಿಂದಮಃ ॥76॥
ಅನಂತರ ಅರ್ಜುನನು ಕರ್ಣನ ನಾಲ್ಕು ಅಶ್ವಗಳನ್ನು ನಾಲ್ಕು ಕ್ಷುರ (ಸಣ್ಣ ಬಾಣ) ಗಳಿಂದ ಕೊಂದು ಅರಿಂದಮನಾದ ಅವನು ಸಾರಥಿಯ ಶಿರಸ್ಸನ್ನು ದೇಹದಿಂದ ಬೇರ್ಪಡಿಸಿದನು ಮತ್ತು ಕರ್ಣನ ಕೈಯಲ್ಲಿದ್ದ ಧನುಸ್ಸನ್ನು ಅರ್ಧಚಂದ್ರದಿಂದ ಕತ್ತರಿಸಿದನು.
ತಸ್ಮಿನ್ ವಿದ್ಧೇ ಮಹಾಭಾಗ ಕರ್ಣೇ ಸರ್ವಾಸ್ತ್ರಪಾರಗೇ |
ಹತಾಶ್ವಸೂತೇ ವಿರಥೇ ತತೋಽನೀಕಮಭಜ್ಯತ ॥77॥
ಎಲೈ ಮಹಾಭಾಗನೇ ಸರ್ವಾಸ್ತ್ರಪಾರಂಗತನಾದ ಆ ಕರ್ಣನು ಹಾಗೆ ಪ್ರಹಾರಕ್ಕೆ ಒಳಗಾಗಿ ಅಶ್ವಗಳನ್ನೂ, ಸೂತನನ್ನೂ ಮತ್ತು ರಥವನ್ನೂ ಕಳೆದುಕೊಳ್ಳುತ್ತಿರಲು ಆ ಸೈನ್ಯವು ಭಗ್ನವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಏಕೋನಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.

* * * *
ಮಹಾಭಾರತತಾತ್ಪರ್ಯನಿರ್ಣಯಃ
ಆದಾಯ ಗಾಂಡೀವಮಥ ಧ್ವಜಂ ಚ
ಹನೂಮದಂಕಂ ಸದರೋಽಗ್ರತೋ ಗಾಃ |
ನಿವರ್ತ್ಯ ಯುದ್ಧಾಯ ಯಯೌ ಕುರೂಂಸ್ತಾನ್
ಜಿಗ್ಯೇ ಸರ್ವಾನ್ ದ್ವೈರಥೇನೈವ ಸಕ್ತಾನ್ ॥43॥
ಅರ್ಜುನ ತನ್ನ ದಿವ್ಯರಥವನ್ನೇರಿ ಹನುಮಂತನ ಚಿಹ್ನೆ ಉಳ್ಳ ಧ್ವಜವನ್ನೂ ಗಾಂಡೀವವನ್ನೂ ಸ್ವೀಕರಿಸಿ ಶಂಖವನ್ನು ಹಿಡಿದು ಮೊದಲಿಗೆ ಗೋವುಗಳನ್ನು ಹಿಂದೆ ಕಳಿಸಿ ದ್ವಂದ್ವ ರಥಯುದ್ಧದಲ್ಲಿ ತೊಡಗಿದ ಕೌರವರನ್ನೆಲ್ಲ ಪರಾಭವಗೊಳಿಸಿದನು.
* * * *
ಐವತ್ತೇಳನೆಯ ಅಧ್ಯಾಯ
ಅರ್ಜುನನಿಂದ ಪರಾಜಿತನಾದ ಕರ್ಣನ ಪಲಾಯನ.
ವೈಶಂಪಾಯನಃ
ತತ್ ಪ್ರಭಗ್ನಂ ಬಲಂ ಸರ್ವಂ ವಿಪುಲೌಘಬಲಂ ತಥಾ |
ಭೀಷ್ಮಮಾಸಾದ್ಯ ಸಂತಸ್ಥೌ ವೇಲಾಮಿವ ಮಹೋದಧಿಃ ॥1॥
ವೈಶಂಪಾಯನ ವಿಪುಲವಾದ ಸಾಮೂಹಿಕ ಬಲವಿದ್ದರೂ ಚದುರಿ ಹೋದ ಆ ಎಲ್ಲಾ ಸೈನ್ಯವು ಭೀಷ್ಮರನ್ನು ಸಮೀಪಿಸಿ ತೀರವನ್ನು ಸಮೀಪಿಸಿ ಸಮುದ್ರವು ನಿಂತಂತೆ ನಿಂತುಕೊಂಡಿತು.
ತಾನಿ ಸರ್ವಾಣಿ ಗಾಂಗೇಯಃ ಸಮಾಶ್ವಾಸ್ಯ ಪರಂತಪಃ |
ತತೋ ವ್ಯೂಹ್ಯ ಮಹಾಬಾಹುಃ ಸಮರೇಷ್ವಪರಾಜಿತಃ ॥2॥
ರಥನಾಗಾಶ್ವಕಲಿಲಂ ಯುಯುಧೇ ಯುದ್ಧಕೋವಿದಃ |
ಅಭೇದ್ಯಂ ಪರಸೈನ್ಯಾನಾಂ ಶೂರೈರಭಿಸಮೀಕ್ಷಿತಮ್ ॥3॥
ಪರಂತಪರೂ, ಮಹಾಬಾಹುವೂ, ಯುದ್ಧದಲ್ಲಿ ಅಪರಾಜಿತರೂ ಆದ ಭೀಷ್ಮರು ಅವರನ್ನೆಲ್ಲಾ ಸಮಾಧಾನಪಡಿಸಿ ವ್ಯೂಹವನ್ನು ರಚಿಸಿ ರಥಗಜಾಶ್ವಗಳಿಂದ ತುಂಬಿದ್ದ, ಪರಸೈನ್ಯಗಳಿಂದ ಅಭೇದ್ಯವಾದ, ಶೂರರಿಂದ ಚೆನ್ನಾಗಿ ನೋಡಿಕೊಳ್ಳಲ್ಪಟ್ಟ ತಮ್ಮ ಸೈನ್ಯವನ್ನು (ಯುದ್ಧಕ್ಕೆ ಅಣಿಮಾಡಿ) ಯುದ್ಧ ಕೋವಿದರಾದ ಅವರು ಯುದ್ಧವನ್ನು ಮಾಡಿದರು.
ಆಚಾರ್ಯದುರ್ಯೋಧನಸೂತಪುತ್ರೈಃ
ಕೃಪೇಣ ಭೀಷ್ಮೇಣ ಚ ಪಾಲಿತಾನಿ |
ಅವಧ್ಯಕಲ್ಪಾನಿ ದುರಾಸದಾನಿ
ನರಾಶ್ವಮಾತಂಗರಥಾಕುಲಾನಿ ॥4॥
ತೇಷಾಮನೀಕಾನಿ ಕಿರೀಟಮಾಲೀ
ವ್ಯೂಢಾನಿ ದೃಷ್ಟ್ವಾ ವಿಪುಲಧ್ವಜಾನಿ |
ಗಾಂಡೀವಧನ್ವಾ ದ್ವಿಷತಾಂ ನಿಹಂತಾ
ವೈರಾಟಿಮಾಮಂತ್ರ್ಯ ತದಾಽಭ್ಯುವಾಚ ॥5॥
ದ್ರೋಣ, ಭೀಷ್ಮ, ಕರ್ಣಪುತ್ರರು, ಕೃಪ ಮತ್ತು ದುರ್ಯೋಧನನಿಂದ ರಕ್ಷಿತವಾದ, ಸಮೀಪಿಸಲೂ ಕಷ್ಟಸಾಧ್ಯವಾದ ಅವಧ್ಯ ಪ್ರಾಯವಾದ ಪದಾತಿಗಳೂ, ಅಶ್ವಗಳೂ, ಗಜಗಳೂ ಮತ್ತು ರಥಗಳಿಂದ ತುಂಬಿದ ವ್ಯೂಹವಾಗಿ ರಚಿಸಲ್ಪಟ್ಟ ವಿಪುಲಧ್ವಜಗಳಿಂದ ಕೂಡಿದ ಆ ಸೈನ್ಯವನ್ನು ನೋಡಿ ಕಿರೀಟಮಾಲಿಯೂ, ಗಾಂಡೀವಧನುರ್ಧಾರಿಯೂ, ಶತ್ರುಗಳ ಹಂತಕನೂ ಆದ ಅರ್ಜುನನು ಉತ್ತರನನ್ನು ಆಮಂತ್ರಿಸಿ ಆಗ ಮಾತನಾಡಿದನು.
ಸುಸಂಗೃಹೀತೈರಥ ರಶ್ಮಿಭಿಸ್ತ್ವಂ
ಹಯಾನ್ ನಿಯಮ್ಯ ಪ್ರಸಮೀಕ್ಷ್ಯ ಯತ್ನಾತ್ |
ಸಂಪ್ರೇಷಯಾಶು ಪ್ರತಿವೀರಮೇನಂ
ವೈಕರ್ತನಂ ಯೋಧಯಿತುಂ ವೃಣೋಮಿ ॥6॥
ಅಶ್ವಗಳ ಕಡಿವಾಣಗಳನ್ನು ಚೆನ್ನಾಗಿ ಹಿಡಿದು ಅಶ್ವಗಳನ್ನು ನಿಯಂತ್ರಿಸಿ ಮುಂದಿನ ಮಾರ್ಗವನ್ನು ಪ್ರಯತ್ನಪೂರ್ವಕವಾಗಿ ನೋಡಿ ಪ್ರತಿವೀರನಾದ ಕರ್ಣನ ಬಳಿಗೆ ಶೀಘ್ರವಾಗಿ ರಥವನ್ನು ತೆಗೆದುಕೊಂಡು ಹೋಗು. ಯುದ್ಧವನ್ನು ಮಾಡಲು ಕರ್ಣನನ್ನು ಪ್ರತಿಯೋಧನಾಗಿ ಆರಿಸುತ್ತೇನೆ.
ಯಾಂ ಹಸ್ತಿಕಕ್ಷ್ಯಾಂ ಬಹುಧಾ ವಿಚಿತ್ರಾಂ
ಸ್ತಂಭೇ ರಥೇ ಪಶ್ಯಸಿ ದರ್ಶನೀಯಾಮ್ |
ವಿವರ್ಧಮಾನಜ್ವಲನಪ್ರಕಾಶಂ
ವೈಕರ್ತನಸ್ಯೈತದನೀಕಮಗ್ರ್ಯಮ್ ॥7॥
ಯಾವ ರಥದ ಧ್ವಜದಲ್ಲಿ ವಿಚಿತ್ರವಾದ ಮತ್ತು ಸುಂದರವಾದ ಮತ್ತು ಅನೇಕ ಆಕಾರಗಳನ್ನು ತಳೆದ ಗಜದ ಕಕ್ಷೆಗಳನ್ನು ನೋಡುತ್ತೀಯೋ ಅಂತಹ ಅಭಿವೃದ್ಧಿಗೊಳ್ಳುವ ಅಗ್ನಿಯಂತೆ ಪ್ರಕಾಶಿಸುವ ಈ ಶ್ರೇಷ್ಠವಾದ ಸೈನ್ಯವು ಕರ್ಣನಿಗೆ ಸೇರಿದುದು.
ಏತೇನ ಶೀಘ್ರಂ ಪ್ರತಿಪಾದಯೇಮಾನ್
ಶ್ವೇತಾನ್ ಹಯಾನ್ ಕಾಂಚನಜಾಲಕಕ್ಷ್ಯಾನ್ |

ಸರ್ವಂ ಜವಂ ತತ್ರ ನಿದರ್ಶಯ ತ್ವಮ್
ಆಸಾದಯೈತದ್ ರಥವೀರವೃಂದಮ್ ॥8॥
ಈ ನನ್ನ ಸುವರ್ಣಮಯವಾದ ಕಕ್ಷಗಳಿಂದ ಮತ್ತು ಜಾಲಗಳಿಂದ ಅಲಂಕೃತವಾದ ಶ್ವೇತಾಶ್ವಗಳನ್ನು ಶೀಘ್ರವಾಗಿ ಆ ಕರ್ಣನ ಜೊತೆಯಲ್ಲಿ ಸೇರಿಸು. ನಿನ್ನ ಎಲ್ಲಾ ವೇಗವನ್ನೂ ಅಲ್ಲಿ ತೋರಿಸುವವನಾಗು. ಈ ರಥವೀರರ ಸಮೂಹವನ್ನು ತಲುಪುವವನಾಗು.
ಗಜೋ ಗಜೇನೇವ ಹಿ ಯೋದ್ಧುಕಾಮೋ
ಮಯಾ ಸದಾ ಕಾಂಕ್ಷತಿ ಸೂತಪುತ್ರಃ ।
ತಮೇವ ಮಾಂ ಪ್ರಾಪಯ ರಾಜಪುತ್ರ
ದುರ್ಯೋಧನಾಪಾಶ್ರಯಜಾತದರ್ಪಮ್ ॥9॥
ತಂ ಪಾತಯಿಷ್ಯಾಮಿ ರಥಸ್ಯ ಮಧ್ಯೇ
ಸಹಸ್ರನೇತ್ರೋಽಶನಿನೇವ ವೃತ್ರಮ್ ॥10॥
ಗಜವು ಗಜದ ಜೊತೆ ಯುದ್ಧವನ್ನು ಮಾಡಲು ಬಯಸಿದಂತೆ, ಸೂತಪುತ್ರನು ನನ್ನ ಜೊತೆ ಯುದ್ಧವನ್ನು ಮಾಡಲು ಸದಾ ಬಯಸುತ್ತಾನೆ. ಎಲೈ ರಾಜಪುತ್ರನೇ, ದುರ್ಯೋಧನನನ್ನು ಆಶ್ರಯಿಸಿರುವುದರಿಂದ ದರ್ಪಿಷ್ಠನಾದ ಅವನ ಬಳಿಗೇ ನನ್ನ ರಥವನ್ನು ತೆಗೆದುಕೊಂಡು ಹೋಗು. ಸಹಸ್ರನೇತ್ರನಾದ ಇಂದ್ರನು ವಜ್ರಾಯುಧದಿಂದ ವೃತ್ರನನ್ನು ಕೆಡವಿದಂತೆ ರಥಮಧ್ಯದಲ್ಲಿ ಕರ್ಣನನ್ನು ನಾನು ಕೆಡವುವೆನು.
ವೈಶಂಪಾಯನಃ
ಸ ತೈರ್ಹಯೈರ್ಜಾತಜವೈರ್ಬೃಹದ್ಭಿಃ
ಪುತ್ರೋ ವಿರಾಟಸ್ಯ ಹಿರಣ್ಯಕಕ್ಷ್ಯೈಃ ।
ವಿಧ್ವಂಸಯಂಸ್ತದ್ರಥಿನಾಮನೀಕಂ
ತತೋಽವಹತ್ ಪಾಂಡವಮಾಜಿಮಧ್ಯೇ ॥11॥
ವೈಶಂಪಾಯನ ವಿರಾಟನ ಪುತ್ರನಾದ ಉತ್ತರನು ಹಿರಣ್ಯಕಕ್ಷಗಳಿಂದ ಕೂಡಿದ, ವೇಗವನ್ನು ಸಂಪಾದಿಸಿದ, ದೊಡ್ಡದಾದ ಅಶ್ವಗಳಿಂದ ಕೂಡಿದ ಆ ರಥವನ್ನು ಶತ್ರುಪಕ್ಷದ ರಥಿಕರ ಸೈನ್ಯವನ್ನು ನಾಶಗೊಳಿಸುತ್ತಾ ಮುಂದೆ ನಡೆಸಿ ರಣರಂಗದ ಮಧ್ಯದಲ್ಲಿ ಅರ್ಜುನನನ್ನು ಕರೆದುಕೊಂಡು ಹೋದನು.
ತಮಾಪತಂತಂ ಪರಮೇಣ ತೇಜಸಾ
ಸಮೀಕ್ಷ್ಯ ವೈಕರ್ತನಮಭ್ಯರಕ್ಷನ್ ।
ಅಭ್ಯದ್ರುವಂತೋ ರಥವೀರವೃಂದಾ
ವ್ಯಾಘ್ರೇಣ ಚಾಕ್ರಾಂತಮಿವರ್ಷಭಂ ರಣೇ ॥12॥
ತೀವ್ರವಾದ ತೇಜಸ್ಸಿನಿಂದ ಮುಂದೆ ಬರುತ್ತಿರುವ ಅರ್ಜುನನನ್ನು ನೋಡಿ ವ್ಯಾಘ್ರದಿಂದ ಆಕ್ರಮಿಸಲ್ಪಟ್ಟ ವೃಷಭದಂತೆ (ಇರುವ ಕರ್ಣನನ್ನು ನೋಡಿ) ಆ ರಥವೀರರ ಸಮೂಹಗಳು ಯುದ್ಧದಲ್ಲಿ ಕರ್ಣನ ಬಳಿಗೆ ಓಡಿಬಂದವು.
ಚಿತ್ರಾಂಗದಶ್ಚಿತ್ರರಥಶ್ಚ ವೀರಃ
ಸಂಗ್ರಾಮಜಿದ್ ದುಃಸಹಚಿತ್ರಸೇನೌ ।
ವಿವಿಂಶತಿರ್ದುರ್ಮುಖದುರ್ಜಯೌ ಚ
ವಿಕರ್ಣದುಃಶಾಸನಸೌಬಲಾಶ್ಚ ॥13॥
ಶೋಣೋ ನಿಷಾದಶ್ಚ ಸಮನ್ವಯುಸ್ತೇ
ವೈಕರ್ತನಂ ಪಾರ್ಥಗತಂ ಸಮೀಕ್ಷ್ಯ ॥14॥
ಕರ್ಣನು ಪಾರ್ಥನ ಕೈಗೆ ಸಿಲುಕುತ್ತಿರುವುದನ್ನು ನೋಡಿ ಚಿತ್ರಾಂಗದ, ವೀರನಾದ ಚಿತ್ರರಥ, ಸಂಗ್ರಾಮಜಿದ್, ದುಃಸಹ, ಚಿತ್ರಸೇನ, ವಿವಿಂಶತಿ, ದುರ್ಮುಖ, ದುರ್ಜಯ, ವಿಕರ್ಣ, ದುಃಶಾಸನ, ಶಕುನಿ, ಶೋಣ, ಏಕಲವ್ಯ ಎಲ್ಲರೂ ಕರ್ಣನ ಸಮೀಪಕ್ಕೆ ಬಂದರು.
ಪುತ್ರಾ ಯಯುಸ್ತೇ ಸಹ ಸೋದರಾಶ್ಚ
ವೈಕರ್ತನಂ ಪಾರ್ಥಗತಂ ಸಮೀಕ್ಷ್ಯ ।
ಪ್ರಗೃಹ್ಯ ಚಾಪಾನಿ ಮಹಾಬಲಾ ರಣೇ
ಧನಂಜಯಂ ಪರ್ಯಕಿರನ್ ಶರಾರ್ಚಿಭಿಃ ॥15॥
ಕರ್ಣನು ಪಾರ್ಥನಿಗೆ ಸಮೀಪವಾಗುತ್ತಿರುವುದನ್ನು ನೋಡಿ ಮಹಾಬಲರಾದ ಕರ್ಣನ ಪುತ್ರರೂ ಮತ್ತು ಸಹೋದರರು ಧನುಸ್ಸುಗಳನ್ನು ಹಿಡಿದು ಯುದ್ಧದಲ್ಲಿ ಶರಜ್ವಾಲೆಗಳಿಂದ ಅರ್ಜುನನ ಮೇಲೆ ಮಳೆಗರೆದರು.
ತೇಷಾಂ ಧನುರ್ಜ್ಯಾಕೃತನೈಕತಂತ್ರೀಂ
ಪ್ರಾಸೋಪವೀಣಾಂ ಶರಸಂಘಕೋಣಾಮ್ ।
ಕರಾಗ್ರಯಂತ್ರಾಂ ಸ್ಥಿರಚಾಪದಂಡಾಂ
ವೀಣಾಮುಪಾವಾದಯದಾಶು ಪಾರ್ಥಃ ॥16॥
ಧನುಸ್ಸಿನ ಹೆದೆಗಳೇ ಅನೇಕ ತಂತಿಗಳಾಗಿ ಉಳ್ಳ, ಪ್ರಾಸಗಳೇ ಉಪವೀಣೆಯಾಗಿರುವ, ಶರಸಂಘಗಳೇ ವೀಣಾವಾದಕ ದಂಡಗಳಾಗಿ ಹೊಂದಿರುವ, ಹಸ್ತಾಗ್ರಗಳೇ ಯಂತ್ರಗಳಾಗಿರುವ, ದೃಢವಾದ ಬಿಲ್ಲುಗಳೇ ದಂಡವಾಗಿರುವ, ಶತ್ರುಗಳ ವೀಣೆಯನ್ನು ಅರ್ಜುನನು ಶೀಘ್ರವಾಗಿ ನುಡಿಸಿದನು.
ತಸ್ಮಿಂಸ್ತು ಯುದ್ಧೇ ತುಮುಲೇ ಪ್ರವೃತ್ತೇ

ಪಾರ್ಥಂ ವಿಕರ್ಣೋಽತಿರಥಂ ರಥೇನ |
ವಿಪಾಠವರ್ಷೇಣ ಕುರುಪ್ರವೀರೋ
ಭೀಮೇನ ಭೀಮಾನುಜಮಾಸಸಾದ ॥17॥
ತೀವ್ರವಾದ ಆ ಯುದ್ಧವು ಜರುಗುತ್ತಿರಲು ಕುರುಪ್ರವೀರನಾದ ವಿಕರ್ಣನು ರಥದಲ್ಲಿ ಕುಳಿತು ಭಯಂಕರವಾಗಿ ವಿಪಾಠವರ್ಷಗಳಿಂದ ಭೀಮನ ತಮ್ಮನಾದ ಅರ್ಜುನನನ್ನು ಸಮೀಪಿಸಿದನು.
ತತೋ ವಿಕರ್ಣಸ್ಯ ಧನುರ್ನಿಕೃತ್ಯ
ಜಾಂಬೂನದೇನೋಪಹಿತಂ ದೃಢಜ್ಯಮ್ |
ನ್ಯಪಾತಯತ್ ತದ್ಧ್ವಜಮಸ್ಯ ವಿದ್ಧ್ವಾ
ಭಿನ್ನಧ್ವಜಃ ಸೋಽಪ್ಯಪಯಾಜ್ಜವೇನ ॥18॥
ಆಗ ಅರ್ಜುನನು ಸುವರ್ಣದಿಂದ ಪರಿವೃತವಾದ ದೃಢವಾದ ಹೆದೆಯನ್ನು ಹೊಂದಿದ್ದ ವಿಕರ್ಣನ ಧನುಸ್ಸನ್ನು ಕತ್ತರಿಸಿ ಕೆಡವಿದನು. ಅವನ ರಥದ ಧ್ವಜವನ್ನೂ ಹೊಡೆದು ಉರುಳಿಸಿದನು. ಧ್ವಜವನ್ನು ಕಳೆದುಕೊಂಡ ವಿಕರ್ಣನು ಶೀಘ್ರವಾಗಿ ಯುದ್ಧದಿಂದ ಅಪಯಾನವನ್ನು ಮಾಡಿದನು.
ತಂ ಶಾತ್ರವಾಣಾಂ ವ್ಯರಮಮೃಷ್ಯಮಾಣಃ
ಸಮರ್ದಯತ್ ಶರವರ್ಷೇಣ ಪಾರ್ಥಮ್ |
ಸ ತೇನ ರಾಜ್ಞಾಽತಿರಥೇನ ವಿದ್ಧೋ
ವಿಗಾಹಮಾನೋ ಧ್ವಜಿನೀಂ ಪರೇಷಾಮ್ ॥19॥
(ಅವನು ಪುನಃ ಚೇತರಿಸಿಕೊಂಡು) ಶತ್ರುಗಳ ವ್ಯೆರವನ್ನು ಸಹಿಸದೆ ಅರ್ಜುನನನ್ನು ಬಾಣಗಳ ಮಳೆಯಿಂದ ಹಿಂಸಿಸಿದನು. ಶತ್ರುಸೈನ್ಯವನ್ನು ಪ್ರವೇಶಿಸುತ್ತಿದ್ದ ಅವನು ಅತಿರಥನಾದ ಶೋಭಿಸುತ್ತಿದ್ದ ಅರ್ಜುನನಿಂದ ಹೊಡೆಯಲ್ಪಟ್ಟನು.
ತತಃ ಸ ವಿದ್ಧೋ ಭರತರ್ಷಭೇಣ
ಬಾಣೇನ ಕಾಯಾವರಣಾತಿಗೇನ |
ಗತಾಸುರಾಜೌ ನಿಪಪಾತ ರಾಜನ್
ನಗೋ ನಗಾಗ್ರಾದಿವ ವಾತವೃಕ್ಣಃ ॥20॥
ಎಲೈ ರಾಜನೇ, ಆಗ ಭರತರ್ಷಭನಾದ ಅರ್ಜುನನಿಂದ ಕವಚವನ್ನು ಭೇದಿಸುವ ಬಾಣದಿಂದ ಹೊಡೆಯಲ್ಪಟ್ಟ ಅವನು ಮೂರ್ಛೆಯನ್ನು ಹೊಂದಿ ಪರ್ವತದ ಮೇಲಿನಿಂದ ಬಿರುಗಾಳಿಗೆ ಸಿಕ್ಕಿ ಬೀಳುವ ವೃಕ್ಷದಂತೆ ಬಿದ್ದನು.
ರಥರ್ಷಭಾಸ್ತೇ ತು ರಥರ್ಷಭೇಣ
ವೀರಾ ರಣೇ ವೀರತರೇಣ ಭಗ್ನಾಃ |
ಚಕಂಪಿರೇ ವಾತವಶೇನ ಕಾಲೇ
ಪ್ರಕಂಪಿತಾನೀವ ಮಹಾವನಾನಿ ॥21॥
ಕೌರವರ ರಥಶ್ರೇಷ್ಠರೆಲ್ಲರೂ ಅವರಿಗಿಂತಲೂ ವೀರನಾದ ರಥಶ್ರೇಷ್ಠನಾದ ಅರ್ಜುನನಿಂದ ಯುದ್ಧದಲ್ಲಿ ಭಗ್ನರಾಗಿ ಬಿರುಗಾಳಿಗೆ ಸಿಕ್ಕಿದ ಮಹಾವನಗಳಂತೆ ನಡುಗಿ ಹೋದರು.
ಹತಾಶ್ಚ ಪಾರ್ಥೇನ ನರಪ್ರವೀರಾ
ಭೂಮೌ ಯುವಾನಃ ಸುಷುಪುಃ ಸುವೇಷಾಃ |
ವಸುಪ್ರದಾ ವಾಸವತುಲ್ಯವೀರ್ಯಾಃ
ಪರಾಜಿತಾ ವಾಸವಜೇನ ಸಂಖ್ಯೇ ॥22॥
ಸುವರ್ಣಕಾರ್ಷ್ಣಾಯಸವರ್ಮನದ್ಧಾ
ನಾಗಾ ಯಥಾ ಹೈಮವತಾ ಪ್ರವೃದ್ಧಾಃ ॥23॥
ಅರ್ಜುನನಿಂದ ಬಾಣಗಳಿಂದ ಹೊಡೆಯಲ್ಪಟ್ಟ ಯುವಕರು, ಒಳ್ಳೆಯ ವೇಷವನ್ನು ಧರಿಸಿದವರು, ವಸುಪ್ರದರು, ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವರು ಆದ ನರಶ್ರೇಷ್ಠರು ಯುದ್ಧದಲ್ಲಿ ಪರಾಜಿತರಾಗಿ, ಸುವರ್ಣಮಯವಾದ ಮತ್ತು ಅಯೋಮಯವಾದ ಕವಚಗಳನ್ನು ಧರಿಸಿದ್ದ ಆ ನರಶ್ರೇಷ್ಠರು ಹಿಮಾಲಯದಲ್ಲಿ ಪುಷ್ಟವಾಗಿ ಬೆಳೆದ ಗಜದಂತೆ ಭೂಮಿಯ ಮೇಲೆ ಮಲಗಿದರು.
ತಥಾ ಸಪತ್ನಾನ್ ಸಮರೇ ವಿನಿಘ್ನನ್
ಗಾಂಡೀವಧನ್ವಾ ಪುರುಷಪ್ರವೀರಃ |
ಚಚಾರ ಸಂಖ್ಯೇ ವಿದಿಶೋ ದಿಶಶ್ಚ
ದಹನ್ನಿವಾಗ್ನಿರ್ವನಮಾತಪಾಂತೇ ॥24॥
ಆ ರೀತಿಯಲ್ಲಿ ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸುತ್ತಾ ಪುರುಷಪ್ರವೀರನಾದ ಅರ್ಜುನನು ಬೇಸಿಗೆಯ ಕೊನೆಯಲ್ಲಿ ವನವನ್ನು ಸುಡುವ ಅಗ್ನಿಯಂತೆ ದಿಕ್ಕು ದಿಕ್ಕುಗಳಲ್ಲಿ ರಣಭೂಮಿಯಲ್ಲಿ ಸಂಚರಿಸಿದನು.
ಸುಜೀರ್ಣಪರ್ಣಾನಿ ಯಥಾ ವಸಂತೇ
ವಿಶಾತಯಿತ್ವಾ ಪವನೋಽಂಬುದಾನ್ ಖೇ |
ತಥಾ ಸಪತ್ನಾನ್ ವಿಕಿರನ್ ಕಿರೀಟೀ
ಚಚಾರ ಸಂಖ್ಯೇಽತಿರಥೋ ರಥೇನ ॥25॥

ವಸಂತ ಮಾಸದಲ್ಲಿ ವಾಯುವು ಆಕಾಶದಲ್ಲಿ ಮೋಡಗಳನ್ನು ನಾಶಮಾಡಿದಂತೆ ಅಥವಾ ಒಣಗಿದ ಎಲೆಗಳನ್ನು ನಾಶಮಾಡುವಂತೆ ಶತ್ರುಗಳನ್ನು ನಾಶ ಮಾಡುತ್ತಾ ಅತಿರಥನಾದ ಅರ್ಜುನನು ಬಾಣಗಳ ಮಳೆಯನ್ನು ಸುರಿಸುತ್ತಾ ತನ್ನ ರಥದಲ್ಲಿ ರಣರಂಗದಲ್ಲಿ ಸಂಚರಿಸಿದನು.

ಶೋಣಾಶ್ವವಾಹಸ್ಯ ಹಯಾನ್ ನಿಹತ್ಯ
ವೈಕರ್ತನಭ್ರಾತುರದೀನಸತ್ವಃ |
ಏಕೇನ ಸಂಗ್ರಾಮಜಿತಃ ಶರೇಣ
ಶಿರೋ ಜಹಾರಾಥ ಕಿರೀಟಮಾಲೀ ||26||

ಅದೀನ ಪರಾಕ್ರಮಿಯಾದ, ಕಿರೀಟಮಾಲಿಯಾದ ಅರ್ಜುನನು ಕರ್ಣನ ತಮ್ಮನಾದ ಶೋಣಾಶ್ವವಾಹನ ಅಶ್ವಗಳನ್ನು ಸಂಹರಿಸಿ ಒಂದು ಬಾಣದಿಂದ ಸಂಗ್ರಾಮಜಿತನ ಶಿರಸ್ಸನ್ನು ಅಪಹರಿಸಿದನು.

ತಸ್ಮಿನ್ ಹತೇ ಭ್ರಾತರಿ ಸೂತಪುತ್ರೋ
ವೈಕರ್ತನೋ ವೀರ್ಯಮದಪ್ರತಾಪೀ |
ಪ್ರಗೃಹ್ಯ ದಂತಾವಿವ ನಾಗರಾಜೋ
ಮಹಾಬಲಂ ಸಿಂಹಮಿವಾಜಗಾಮ ||27||

ತನ್ನ ತಮ್ಮನಾದ ಶೋಣಾಶ್ವವಾಹನು ಮರಣವನ್ನು ಹೊಂದುತ್ತಿರಲು ವೀರ್ಯ ಮತ್ತು ಮದದಿಂದ ಪ್ರತಾಪಶಾಲಿಯಾಗಿದ್ದ ಕರ್ಣನು ಗಜರಾಜನು ತಮ್ಮ ದಂತವನ್ನು ಎತ್ತಿಕೊಂಡು ಮಹಾಬಲಿಷ್ಠವಾದ ಸಿಂಹದ ಕಡೆ ಬರುವಂತೆ ಅರ್ಜುನನ ಕಡೆಗೆ ಬಂದನು.

ಸ ಪಾಂಡವಂ ದ್ವಾದಶಭಿಃ ಪೃಷತ್ಕೈಃ
ವೈಕರ್ತನಃ ಶೀಘ್ರಮುಪಾಜಗಾಮ |
ವಿವ್ಯಾಧ ಗಾತ್ರೇಷು ಹಯಾಂಶ್ಚ ಸರ್ವಾನ್
ವಿರಾಟಪುತ್ರಂ ಚ ಶರೈರ್ನಿಜಘ್ನೇ ||28||

ಆ ಕರ್ಣನು ಅರ್ಜುನನ ಮೇಲೆ ಹನ್ನೆರಡು ಬಾಣಗಳನ್ನು ಪ್ರಯೋಗಿಸುತ್ತಾ ಶೀಘ್ರವಾಗಿ ಮುಂದೆ ಬಂದನು. ಅವನು ಅರ್ಜುನನ ಕುದುರೆಗಳ ಸರ್ವ ಶರೀರದಲ್ಲಿಯೂ ಮತ್ತು ವಿರಾಟನ ಪುತ್ರನ ಮೇಲೆಯೂ ಬಾಣಗಳನ್ನು ಪ್ರಯೋಗಿಸಿದನು.

ತಮಾಪತಂತಂ ಸಮರೇ ಕಿರೀಟೀ
ವೈಕರ್ತನಂ ಸರ್ವಸಮೃದ್ಧತೇಜಾಃ |
ಪ್ರಾಚ್ಛಾದಯಾಮಾಸ ಮಹಾಧನುಷ್ಮಾನ್
ಅವೇಧಯಚ್ಚತ್ರುಗಣಾಂಶ್ಚ ವೀರಃ ||29||

ತನ್ನ ಮೇಲೆ ಯುದ್ಧದಲ್ಲಿ ಎರಗಿಬರುತ್ತಿರುವ ಕರ್ಣನನ್ನು ನೋಡಿ ಸಂಪೂರ್ಣನಾದ ತೇಜಸ್ಸನ್ನು ಪಡೆದಿದ್ದ ವೀರನಾದ, ಮಹಾಧನುರ್ಧಾರಿಯಾದ ಅರ್ಜುನನು ಕರ್ಣನನ್ನೂ ಮತ್ತು ಶತ್ರುಸಮೂಹಗಳನ್ನೂ ಬಾಣಗಳ ಮಳೆಯಿಂದ ಮುಚ್ಚಿದನು.

ನಿಹತ್ಯ ಕರ್ಣಸ್ಯ ತಥಾ ಕಿರೀಟೀ
ಪುರಸ್ಸರಾಂಶ್ಚಾಪಿ ಚ ಪೃಷ್ಠಗೋಪಾನ್ |
ಪ್ರತೀಪಮಭ್ಯಾಗಮದಪ್ರಮೇಯೋ
ವಿತತ್ಯ ಪಕ್ಷೌ ಗರುಡೋ ಯಥಾಹಿಮ್ ||30||

ಅರ್ಜುನನು ಕರ್ಣನ ಮುಂದೆ ಇರುವ ಯೋಧರನ್ನೂ ಮತ್ತು ಹಿಂದೆ ಇದ್ದ ರಕ್ಷಕ ಯೋಧರನ್ನೂ ಕೊಂದು ಗರುಡನು ಪಕ್ಷಗಳನ್ನು ಹರಡಿ ಸರ್ಪವನ್ನು ಕೊಲ್ಲುವಂತೆ ಅಪ್ರಮೇಯನಾದ ಅವನು ಕರ್ಣನಿಗೆ ಪ್ರತೀಕಾರವನ್ನು ಮಾಡಿದನು.

ತಾವುತ್ತಮೌ ಸರ್ವಧನುರ್ಧರಾಣಾಂ
ಮಹಾಬಲೌ ಸರ್ವಸಪತ್ನಸಾಹೌ |
ಕರ್ಣಂ ಚ ಪಾರ್ಥಂ ಚ ನಿಶಾಮ್ಯ ಯುದ್ಧಂ
ದಿದೃಕ್ಷಮಾಣಾಃ ಕುರವೋಽಭಿತಸ್ಥುಃ ||31||

ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಮಹಾಬಲರಾದ ಶತ್ರುಗಳ ಸರ್ವವೇಗವನ್ನೂ ಸಹಿಸುವ ಕರ್ಣನನ್ನೂ, ಅರ್ಜುನನನ್ನೂ ಮತ್ತು ಅವರ ಯುದ್ಧವನ್ನೂ ನೋಡಲು ಬಯಸಿ ಕೌರವರು ಸುಮ್ಮನೆ ನಿಂತರು.

ತಂ ಪಾಂಡವಃ ಸ್ಪಷ್ಟಮುದೀರ್ಣಕೋಪಃ
ಕೃತಾಗಸಂ ಕರ್ಣಮುದೀಕ್ಷ್ಯ ಕೋಪಾತ್ |
ಕ್ಷಣೇನ ಸಾಶ್ವಂ ಸರಥಂ ಸಸೂತಮ್
ಅಂತರ್ದಧೇ ಮೇಘ ಇವಾಂಬುವೃಷ್ಟ್ಯಾ ||32||

ಸ್ಪಷ್ಟವಾಗಿ ವ್ಯಕ್ತವಾದ ಕೋಪವುಳ್ಳ ಅರ್ಜುನನು ಅಪರಾಧವನ್ನು ಮಾಡಿದ ಕರ್ಣನನ್ನು ನೋಡಿ ಕೋಪದಿಂದ ಒಂದು ಕ್ಷಣದಲ್ಲಿ ಅವನ ಅಶ್ವಗಳನ್ನೂ, ರಥವನ್ನೂ ಮತ್ತು ಸೂತನನ್ನೂ ಮೋಡವು ಮಳೆಯಿಂದ ಎಲ್ಲವನ್ನೂ ಮುಚ್ಚುವಂತೆ ಎಲ್ಲರನ್ನೂ ಮುಚ್ಚಿದನು.

ತತಃ ಸಯುಗ್ಯಾಃ ಸರಥಾಃ ಸನಾಗಾ
ಯೋಧಾ ವಿನೇದುರ್ಭರತರ್ಷಭಾಣಾಮ್ |
ಅಂತರ್ಹಿತಂ ಭೀಷ್ಮಮುಖಾಃ ಸಮೀಕ್ಷ್ಯ
ಕಿರೀಟಿನಾ ಕರ್ಣರಥಂ ಪೃಷತ್ಕೈಃ ||33||

ಅರ್ಜುನನ ಬಾಣಗಳಿಂದ ಕರ್ಣನ ರಥವು ಅಂತರ್ಧಾನ ಹೊಂದಿದುದನ್ನು (ಮರೆಯಾದುದನ್ನು ) ಭೀಷ್ಮ ಮೊದಲಾದವರೆಲ್ಲರೂ ನೋಡಿ ಅಶ್ವಗಳನ್ನು ಹೂಡಿದ ರಥಗಳಿಂದ ಸಹಿತರಾದ, ಗಜಗಳಿಂದ ಸಹಿತರಾದ, ಕೌರವಯೋಧರೆಲ್ಲರೂ ಮಹಾನಾದವನ್ನು ಮಾಡಿದರು.

ಸ ಚಾಪಿ ತಾನರ್ಜುನಚಾಪಮುಕ್ತಾನ್
ಶರಾನ್ ಶರೌಘೈಃ ಪ್ರತಿಹತ್ಯ ತೂರ್ಣಮ್ |
ಬಭೌ ಮಹಾತ್ಮಾ ಸಧನುಃ ಸಬಾಣಃ
ಸವಿಷ್ಫುಲಿಂಗೋಽಗ್ನಿರಿವಾಥ ಕರ್ಣಃ ॥34॥

ಆ ಮಹಾತ್ಮನಾದ ಕರ್ಣನೂ ಸಹ ಅರ್ಜುನನ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳನ್ನು ಶೀಘ್ರವಾಗಿ ತನ್ನ ಬಾಣಗಳ ಪ್ರವಾಹದಿಂದ ಸಂಹರಿಸಿ ಧನುಸ್ಸು ಮತ್ತು ಬಾಣಗಳನ್ನು ಹಿಡಿದು ಕಿಡಿಗಳಿಂದ ಸಹಿತನಾದ ಅಗ್ನಿಯಂತೆ ಶೋಭಿಸಿದನು.

ತತಸ್ತು ಜಜ್ಞೇ ತಳತಾಳಘೋಷಃ
ಸಶಂಖಭೇರೀಪಣವಾಕುಲಶ್ಚ |
ಪ್ರಕ್ಷ್ವೇಲಿತಾಸ್ಫೋಟಿತಸಿಂಹನಾದೈಃ
ವೈಕರ್ತನಂ ಪೂಜಯತಾಂ ಕುರೂಣಾಮ್ ॥35॥

ಆಗ ಕರ್ಣನನ್ನು ಪೂಜಿಸುವ ಕೌರವರಿಂದ ಚಪ್ಪಾಳೆಗಳೂ, ತಾಳಗಳ ಘೋಷವೂ, ಶಂಖಭೇರೀಪಣವಗಳ ಘೋಷಗಳೂ, ಸಿಂಹನಾದಗಳೂ, ಅಟ್ಟಹಾಸಗಳೂ, ಆಸ್ಫೋಟಗಳೂ ಉಂಟಾದವು.

ಆಧೂತಲಾಂಗೂಲಮಹಾಪತಾಕಂ
ರಥೋತ್ತಮಂ ಶ್ರೇಷ್ಠತಮಂ ಕುರೂಣಾಮ್ |
ಗಾಂಡೀವನಿರ್ಹ್ರಾದಕೃತಪ್ರಣಾದಂ
ಕಿರೀಟಿನಂ ಪ್ರೇಕ್ಷ್ಯ ನನಾದ ಕರ್ಣಃ ॥36॥

ಚಲಿಸುವ ಲಾಂಗೂಲವೆಂಬ ಮಹಾಪತಾಕೆಯುಳ್ಳ, ಗಾಂಡೀವ ಘೋಷದಿಂದ ಮಹಾನಾದಗಳನ್ನು ಮಾಡುತ್ತಿದ್ದ ಕಪಿಯಿಂದ ಕೂಡಿದ ಧ್ವಜವುಳ್ಳ ರಥವನ್ನು ಹೊಂದಿದ್ದ, ಪಾಂಡವರಲ್ಲಿ ಶ್ರೇಷ್ಠತಮನಾದ, ರಥೋತ್ತಮನಾದ ಅರ್ಜುನನನ್ನು ನೋಡಿ ಕರ್ಣನು ನಾದವನ್ನು ಮಾಡಿದನು (ಗರ್ಜಿಸಿದನು).

ಪಾರ್ಥೋಽಪಿ ವೈಕರ್ತನಮರ್ದಯಿತ್ವಾ
ಸಾಶ್ವಂ ಸಸೂತಂ ಸರಥಂ ಸಕೇತುಮ್ |
ನನಾದ ಹರ್ಷಾತ್ ಸಹಸಾ ಕಿರೀಟೀ
ಪಿತಾಮಹಂ ದ್ರೋಣಕೃಪೌ ಚ ದೃಷ್ಟ್ವಾ ॥37॥

ಅರ್ಜುನನೂ ಸಹ ಅಶ್ವ, ರಥ, ಸೂತ, ಧ್ವಜಗಳಿಂದ ಸಹಿತನಾದ ಕರ್ಣನನ್ನು ಮರ್ದಿಸಿ ಭೀಷ್ಮರನ್ನೂ, ದ್ರೋಣಕೃಪರನ್ನೂ ನೋಡಿ ಸಂತೋಷದಿಂದ ಅವನೂ ಸಹ ನಾದವನ್ನು ಮಾಡಿದನು (ಕೇಕೆ ಹಾಕಿದನು).

ಸಿಷೇಚ ಪಾರ್ಥಂ ಬಹುಭಿಃ ಶರೌಘೈಃ
ವೈಕರ್ತನಃ ಸಂಯತಿ ತೀಕ್ಷ್ಣವೇಗೈಃ |
ವೈಕರ್ತನಂ ಚಾಪಿ ಕಿರೀಟಮಾಲೀ
ಪ್ರಚ್ಛಾದಯಾಮಾಸ ಶಿತೈಃ ಶರೌಘೈಃ ॥38॥

ಕರ್ಣನು ಯುದ್ಧದಲ್ಲಿ ತೀಕ್ಷ್ಣವೇಗವುಳ್ಳ ಅನೇಕ ಬಾಣಗಳ ಸಮೂಹದಿಂದ ಅರ್ಜುನನಿಗೆ ಅಭಿಷೇಕ ಮಾಡಿದನು. ಕಿರೀಟಮಾಲಿಯಾದ ಅರ್ಜುನನೂ ಸಹ ಕರ್ಣನನ್ನು ನಿಶಿತವಾದ ಬಾಣಗಳ ಸಮೂಹದಿಂದ ಮುಚ್ಚಿಹಾಕಿದನು.

ತಯೋರಮೋಘಾನ್ ಸಹತೋಃ ಶರೌಘಾನ್
ಅಸ್ತ್ರಜ್ಞಯೋರಾಸ ಮಹಾನ್ ವಿಮರ್ದಃ |
ರಾಹುಪ್ರಮುಕ್ತಾವಿವ ಚಂದ್ರಸೂರ್ಯೌ
ಕ್ಷಣಾಂತರೇಣಾನುದದರ್ಶ ಲೋಕಃ ॥39॥

ಪರಸ್ಪರ ಬಾಣಸಮೂಹಗಳನ್ನು ಸಹಿಸುವ ಅಸ್ತ್ರಜ್ಞರಾದ ಅವರಿಬ್ಬರಿಗೆ ದೊಡ್ಡ ಸಂಘರ್ಷವು ಉಂಟಾಯಿತು. ಎಲ್ಲ ಯೋಧರೂ ಒಂದು ಕ್ಷಣದಲ್ಲಿ ರಾಹುವಿನ ಮುಖದಿಂದ ಮುಕ್ತರಾದ ಚಂದ್ರ-ಸೂರ್ಯರಂತಿರುವ ಅವರನ್ನು ನೋಡಿದರು.

ಹತಾಸ್ತು ಪಾರ್ಥೇನ ನರಪ್ರವೀರಾ
ಭೂಮೌ ಶಯಾನಾಃ ಸುಮುಖಾಃ ಸುಕೇಶಾಃ |
ಸುವರ್ಣಲೋಹಾಯಸವರ್ಮಗಾತ್ರಾ
ವೃಕ್ಷಾ ಯಥಾ ಹೈಮವತಾ ನಿಕೃತ್ತಾಃ ॥40॥

ಅರ್ಜುನನಿಂದ ಹೊಡೆಯಲ್ಪಟ್ಟ ಒಳ್ಳೆಯ ಮುಖ ಮತ್ತು ಕೇಶಗಳುಳ್ಳ ಸುವರ್ಣ ಕವಚಗಳಿಂದಲೂ, ಲೋಹಕವಚಗಳಿಂದಲೂ ಆವೃತವಾದ ಶರೀರವುಳ್ಳ ನರಶ್ರೇಷ್ಠರು ಹಿಮಾಲಯದ ಬಿರುಗಾಳಿಯಿಂದ ಉರುಳಿದ ಮರಗಳಂತೆ ಭೂಮಿಯಲ್ಲಿ ಮಲಗಿದರು.

ತಥಾ ಸ ಶತ್ರೂನ್ ಸಮರೇ ವಿನಿಘ್ನನ್
ಗಾಂಡೀವಧನ್ವಾ ವ್ಯಧಮತ್ ಸಪತ್ನಾನ್ |
ಚಚಾರ ಸಂಖ್ಯೇ ವಿದಿಶೋ ದಿಶಶ್ಚ
ದಹನ್ನಿವಾಗ್ನಿರ್ವನಮಾತಪಾಂತೇ ॥41॥

ಗಾಂಡೀವ ಧನುರ್ಧಾರಿಯಾದ ಅರ್ಜುನನು ಆ ರೀತಿಯಲ್ಲಿ ಯುದ್ಧದಲ್ಲಿ ಶತ್ರುಗಳನ್ನು ವಧೆಮಾಡುತ್ತಾ ಶತ್ರುಸೈನ್ಯವನ್ನು ಚದುರಿಸಿದನು. ಬೇಸಿಗೆಯ ಕೊನೆಯಲ್ಲಿ ಅಗ್ನಿಯು ವನವನ್ನು ಸುಡುವಂತೆ ಅವನು ರಣರಂಗದಲ್ಲಿ ದಿಕ್ಕುವಿದಿಕ್ಕುಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಸಂಚರಿಸಿದನು.
ಪ್ರಕೀರ್ಣಪರ್ಣಾನಿ ಯಥಾ ವಸಂತೇ
ವಿಧೂನಯನ್ ವಾಯುರಿವಾಲ್ಪಸಾರಾನ್ |
ತಥಾ ಸಪತ್ನಾನ್ ವ್ಯಧಮತ್ ಕಿರೀಟೀ
ಚಚಾರ ಸಂಖ್ಯೇಽತಿರಥೋ ರಥೇನ ॥42॥
ವಸಂತ ಮಾಸದಲ್ಲಿ ವಾಯುವು ಅಲ್ಪಬಲವುಳ್ಳ, ನೆಲದ ಮೇಲೆ ಬಿದ್ದ, ಎಲೆಗಳನ್ನು ಹಾರಿಸುವಂತೆ ಅತಿರಥನಾದ ಅರ್ಜುನನು ರಥದಿಂದ ಸಂಚರಿಸುತ್ತಾ ಶತ್ರುಗಳನ್ನು ಚದುರಿಸಿದನು.
ಶತ್ರೂನಿವೇಂದ್ರಃ ಸಮರೇ ಕಿರೀಟೀ
ವಿದ್ರಾವಯಂಸ್ತದ್ ರಥಸಿಂಹವೃಂದಮ್ |
ಪ್ರಾಚ್ಛಾದಯತ್ ಸರ್ವಮಧಿಜ್ಯಧನ್ವಾ
ವರೇಷುಭಿಃ ಶತ್ರುಗಣಾನನೇಕಾನ್ ॥43॥
ಉವಾಚ ಕರ್ಣಂ ಸ ಕಿರೀಟಮಾಲೀ
ಶೂರಃ ಕುರೂಣಾಂ ಪ್ರವರೋಽಭಿಗರ್ಜನ್ ॥44॥
ಇಂದ್ರನು ಯುದ್ಧದಲ್ಲಿ ಶತ್ರುಗಳನ್ನು ಓಡಿಸಿದಂತೆ ಅರ್ಜುನನು ಆ ರಥಸಿಂಹರ ಸಮೂಹಗಳನ್ನು ಓಡಿಸುತ್ತಾ ಹೆದೆ ಏರಿಸಿದ ಧನುಸ್ಸನ್ನು ಹಿಡಿದ ಅವನು ಶ್ರೇಷ್ಠವಾದ ಬಾಣಗಳಿಂದ ಶತ್ರುಸಮೂಹಗಳೆಲ್ಲವನ್ನೂ ಮುಚ್ಚಿಹಾಕಿದನು ಮತ್ತು ಕಿರೀಟಮಾಲಿಯೂ ಶೂರನೂ, ಕೌರವರಲ್ಲಿ ಶ್ರೇಷ್ಠನೂ ಆದ ಅವನು ಗರ್ಜನೆ ಮಾಡುತ್ತಾ ಕರ್ಣನನ್ನು ಕುರಿತು ಮಾತನಾಡಿದನು.
ಕರ್ಣ ಯತ್ ತ್ವಂ ಸಭಾಮಧ್ಯೇ ಬಹ್ವಬದ್ಧಂ ವಿಕತ್ಥಸೇ |
ನ ಮೇ ಯುಧಿ ಸಮೋಽಸ್ತೀತಿ ತದಿದಂ ಪ್ರತ್ಯುಪಸ್ಥಿತಮ್ ॥45॥
ಸಭೆಯ ಮಧ್ಯದಲ್ಲಿ ನೀನು ಯುದ್ಧದಲ್ಲಿ ನನಗೆ ಸಮಾನನಾದವನು ಇಲ್ಲವೆಂದು ಬಹಳ ಅಬದ್ಧವಾಗಿ ಹೊಗಳಿಕೊಳ್ಳುವಿಯಷ್ಟೆ! ಅದರ ಪರೀಕ್ಷೆಯ ಕಾಲವು ಬಂದೊದಗಿದೆ.
ಸಭಾಯಾಂ ಪೌರುಷಂ ಪ್ರೋಚ್ಯ ಧರ್ಮಮುತ್ಸೃಜ್ಯ ಕೇವಲಮ್ |
ಕರ್ತುಮರ್ಹತಿ ಯತ್ ಕರ್ಮ ತನ್ಮನ್ಯೇ ದುಷ್ಕರಂ ತ್ವಯಾ ॥46॥
ಧರ್ಮವನ್ನು ತ್ಯಜಿಸಿ ಸಭೆಯಲ್ಲಿ ಪೌರುಷದ ಮಾತುಗಳನ್ನು ಆಡುವ ನೀನು ಅಂತಹ ಕರ್ಮವನ್ನು ಈಗ ಮಾಡಬೇಕಾಗಿದೆ. ಅದು ನಿನ್ನಿಂದ ಅಸಾಧ್ಯವಾದುದು ಎಂದು ನನ್ನ ಅಭಿಪ್ರಾಯ.
ಯತ್ ತ್ವಯಾ ಕಥಿತಂ ಪೂರ್ವಂ ನಾಸ್ತಿ ಮತ್ಸಮ ಇತ್ಯಪಿ |
ತತ್ ಸತ್ಯಂ ಕುರು ರಾಧೇಯ ಕುರುಮಧ್ಯೇ ಮಯಾ ಸಹ ॥47॥
ಎಲೈ ಕರ್ಣನೇ, ನೀನು ಹಿಂದೆ ನನಗೆ ಸಮನಾದವರು ಇಲ್ಲವೆಂದು ಹೇಳಿದ್ದಿಯಷ್ಟೆ! ಅದನ್ನು ಕುರುಗಳ ಮಧ್ಯದಲ್ಲಿ ನನ್ನ ಜೊತೆಯಲ್ಲಿ ಸತ್ಯವನ್ನಾಗಿ ಮಾಡು.
ಯತ್ ಸಭಾಯಾಂ ಸ್ಮ ಪಾಂಚಾಲೀಂ ಕ್ಲಿಶ್ಯಮಾನಾಂ ತಥಾ ತ್ವಯಾ |
ದೃಷ್ಟವಾನಸ್ಮಿ ತಸ್ಯಾದ್ಯ ಫಲಮಶ್ನುಹಿ ದುರ್ಮತೇ ॥48॥
ಸಭೆಯಲ್ಲಿ ದ್ರೌಪದಿಯು ಕ್ಲೇಶವನ್ನು ಪಡುತ್ತಿರುವಾಗ ನೀನು ಆಡಿದ ಮಾತುಗಳನ್ನು ಕೇಳಿದ್ದೆನಷ್ಟೆ! ಎಲೈ ದುರ್ಮತಿಯೇ, ಅದರ ಫಲವನ್ನು ಈ ದಿನ ಅನುಭವಿಸುವವನಾಗು.
ಧರ್ಮಪಾಶನಿಬದ್ಧೇನ ಯನ್ಮಯಾ ಮರ್ಷಿತಂ ತವ |
ತಸ್ಯ ಪಾಪಸ್ಯ ರಾಧೇಯ ಫಲಂ ಪ್ರಾಪ್ನುಹಿ ದುರ್ಮತೇ ॥49॥
ಎಲೈ ರಾಧಾಪುತ್ರನೇ, ಧರ್ಮಪಾಶನಿಬದ್ಧನಾದ ನಾನು ನಿನ್ನ ದುರ್ನಡತೆಯನ್ನು ಸಹಿಸಿದೆನು. ಎಲೈ ದುರ್ಮತಿಯೇ, ಆ ಪಾಪದ ಫಲವನ್ನು ಈಗ ಅನುಭವಿಸು.
ಏಹಿ ಕರ್ಣ ಮಯಾ ಸಾರ್ಧಮಿಹಾದ್ಯ ಕುರು ವೈಶಸಮ್ |
ಪ್ರೇಕ್ಷಕಾಃ ಕುರವಃ ಸಂತು ಸರ್ವೇ ತೇ ಸಹಸೈನಿಕಾಃ ॥50॥
ಎಲೈ ಕರ್ಣನೇ, ಬಾ. ಈಗ ಇಲ್ಲಿ ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡು. ಕೌರವರು ಮತ್ತು ಎಲ್ಲ ಸೈನಿಕರೂ ಪ್ರೇಕ್ಷಕರಾಗಲಿ.
ಇದಾನೀಮೇವ ತಾವತ್ ತ್ವಮಪಯಾತೋ ರಣಾನ್ಮಮ |
ಕಸ್ಮಾಜ್ಜೀವಸಿ ರಾಧೇಯ ನಿಹತಸ್ತ್ವನುಜಸ್ತವ ॥51॥
ಈಗ ತಾನೇ ನೀನು ನನ್ನನ್ನು ಬಿಟ್ಟು ಯುದ್ಧಭೂಮಿಯಿಂದ ಓಡಿಹೋಗಿದ್ದೆ. ಎಲೈ ಕರ್ಣನೇ, ಏಕೆ ಬದುಕಿದ್ದೀಯೆ? ನಿನ್ನ ತಮ್ಮನನ್ನು (ನಿನ್ನೆದುರಿಗೇ) ಕೊಂದಿದ್ದೇನೆ.
ಯೋ ಭ್ರಾತರಂ ಘಾತಯಿತ್ವಾ ಕಸ್ತ್ಯಕ್ತ್ವಾ ಚ ರಣಾಜಿರಮ್ |
ತ್ವದನ್ಯಃ ಪುರುಷಃ ಸತ್ಸು ಬ್ರೂಯಾದೇವಂ ವ್ಯವಸ್ಥಿತಃ ॥52॥
ನಿನ್ನನ್ನು ಬಿಟ್ಟು ಯಾವನು ತಾನೇ ತಮ್ಮನನ್ನು ಯುದ್ಧದಲ್ಲಿ ಕೆಡವಿಸಿ ರಣರಂಗವನ್ನು ಬಿಟ್ಟು ಓಡಿಹೋಗಿ ಸಜ್ಜನರಲ್ಲಿ ಈ ರೀತಿಯಲ್ಲಿ ಮಾತನಾಡಲು ಸಿದ್ಧನಾಗಿರುತ್ತಾನೆ?
ಕರ್ಣಃ

ಬ್ರುವೀಷಿ ವಾಚಾ ಯತ್ ಪಾರ್ಥ ಕರ್ಮಣಾ ತತ್ ಸಮಾಚರ |
ವಿಶೇಷಿತೋ ಹಿ ತ್ವಂ ವಾಚಾ ನ ಕರ್ಮಾಪ್ರತಿಮಂ ಭುವಿ ॥53॥
ಕರ್ಣ ಎಲೈ ಅರ್ಜುನನೇ, ಮಾತಿನಿಂದ ಏನನ್ನು ಆಡುತ್ತಿದ್ದೀಯೋ ಅದನ್ನು ಕಾರ್ಯದಿಂದ ಮಾಡು. ನೀನು ಮಾತಿನಿಂದ ಮಾತ್ರ ಅತಿಶಯವನ್ನು ಹೊಂದಿದವನಾಗಿದ್ದೀಯೆ. ಭೂಮಿಯಲ್ಲಿ ನಿನ್ನ ಅಸದೃಶವಾದ ಕರ್ಮವು ಯಾವುದೂ ಇಲ್ಲ.
ಯತ್ ತ್ವಯಾ ಮರ್ಷಿತಂ ಪೂರ್ವಂ ತದಶಕ್ತೇನ ಮರ್ಷಿತಮ್ |
ಇತಿ ಗೃಹ್ಣೀಮ ತೇ ಪಾರ್ಥ ತಮದೃಷ್ಟ್ವಾ ಪರಾಕ್ರಮಮ್ ॥54॥
ಎಲೈ ಪಾರ್ಥನೇ, ನಿನ್ನ ಪರಾಕ್ರಮವನ್ನು ನಾವು ನೋಡದಿರುವುದರಿಂದ ನೀನು ಹಿಂದೆ ಏನು ಸಹಿಸಿಕೊಂಡಿದ್ದಿಯೋ ಅದು ಅಶಕ್ತಿಯಿಂದ ಸಹಿಸಿಕೊಂಡದ್ದು ಎಂದು ನಾವು ಭಾವಿಸುತ್ತೇವೆ.
ಧರ್ಮಪಾಶನಿಬದ್ಧೇನ ಯತ್ ತ್ವಯಾ ಮರ್ಷಿತಂ ಪುರಾ |
ತಥೈವ ಬದ್ಧಮಾತ್ಮಾನಮಬದ್ಧ ಇತಿ ಮನ್ಯಸೇ ॥55॥
ಧರ್ಮಪಾಶದ ನಿಬದ್ಧನಾಗಿ ನೀನು ಹೇಗೆ ಹಿಂದೆ ಸಹಿಸಿದೆಯೋ ಅದೇ ಧರ್ಮಪಾಶಬದ್ಧನಾಗಿದ್ದರೂ ಈ ದಿನ ನೀನು ಬದ್ಧನಲ್ಲವೆಂದು ತಿಳಿದಿದ್ದೀಯೆ.
ನ ಹಿ ತಾವದ್ ವನೇ ವಾಸೋ ಯಥೋಕ್ತಂ ಚರಿತಸ್ತ್ವಯಾ |
ಕ್ಲಿಷ್ಟಸ್ತ್ವಮರ್ಥಲೋಭಾದ್ಧಿ ಸಮಯಂ ಭೇತ್ತುಮರ್ಹಸಿ ॥56॥
ಏಕೆಂದರೆ ನೀವು ಪ್ರತಿಜ್ಞೆ ಮಾಡಿದಂತೆ ಕ್ಲೇಶಕರವಾದ ವನವಾಸವು ನಿಮ್ಮಿಂದ ಆಚರಿಸಲ್ಪಟ್ಟಿಲ್ಲ. ರಾಜ್ಯಲೋಭದಿಂದ ನೀನು ಮಾಡಿದ ಪ್ರತಿಜ್ಞೆಯನ್ನು ಮುರಿಯಲು ಬಯಸುತ್ತಿದ್ದೀಯೆ.
ಯದಿ ಚೇಂದ್ರಃ ಸ್ವಯಂ ಪಾರ್ಥ ತವ ಯುದ್ಧ್ಯೇತ ಕಾರಣಾತ್ |
ತಥಾऽಪಿ ನ ವ್ಯಥಾ ಕಾಚಿನ್ಮಮ ಸ್ಯಾದ್ ವಿಕ್ರಮಿಷ್ಯತಃ ॥57॥
ಎಲೈ ಪಾರ್ಥನೇ, ನಿನ್ನ ಸಲುವಾಗಿ ಇಂದ್ರನೇ ಸ್ವಯಂ ಯುದ್ಧವನ್ನು ಮಾಡಿದರೂ ಪರಾಕ್ರಮವನ್ನು ತೋರಿಸುವ ನನಗೆ ಯಾವ ವ್ಯಥೆಯೂ ಇಲ್ಲ.
ಅಯಂ ಕೌಂತೇಯ ಕಾಮಸ್ತೇ ನಚಿರಾತ್ ಸಮುಪಸ್ಥಿತಃ |
ಯೋತ್ಸ್ಯಸೇ ಹಿ ಮಯಾ ಸಾರ್ಧಮನುಪಶ್ಯಸಿ ಮೇ ಬಲಮ್ ॥58॥
ಎಲೈ ಕೌಂತೇಯನೇ, ನೀನು ಬಹಳ ಕಾಲದಿಂದ ಹೊಂದಿದ್ದ ಆಸೆಯು ಇಂದು ನೆರವೇರಿದೆ. ನೀನು ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡುವಿ ಮತ್ತು ನೀನು ನನ್ನ ಸಾಮರ್ಥ್ಯವನ್ನು ನೋಡುವಿ.
ವೈಶಂಪಾಯನಃ
ಇತಿ ಕರ್ಣೇ ಬ್ರುವನ್ನೇವ ಬೀಭತ್ಸುರಪರಾಜಿತಮ್ |
ಅಭ್ಯಯಾದ್ ವಿಸೃಜನ್ ಬಾಣಾನ್ ಕಾಯಾವರಣಭೇದಿನಃ ॥59॥
ಪ್ರತಿಜಗ್ರಾಹ ತಂ ಪಾರ್ಥಃ ಪ್ರೀಯಮಾಣೋ ಮಹಾರಥಃ ॥60॥
ವೈಶಂಪಾಯನ ಹೀಗೆ ಮಾತನಾಡುತ್ತಲೇ ಕರ್ಣನು ಅಪರಾಜಿತನಾದ ಅರ್ಜುನನ ಕಡೆಗೆ ದೇಹಾವರಣವಾದ ಕವಚಗಳನ್ನು ಭೇದಿಸುವ ಬಾಣಗಳನ್ನು ಪ್ರಯೋಗಿಸುತ್ತಾ ಮುನ್ನುಗಿದನು. ಸಂತೋಷದಿಂದ ಕೂಡಿದ ಮಹಾರಥನಾದ ಅರ್ಜುನನು ಅವನ ಆಹ್ವಾನವನ್ನು ಸ್ವೀಕರಿಸಿದನು.
ಶರವರ್ಷೇಣ ಮಹತಾ ಪರ್ಜನ್ಯ ಇವ ವೃಷ್ಟಿಮಾನ್ |
ಅಭೀಯಾಯ ತು ಬೀಭತ್ಸುರ್ಗಾಂಡೀವಂ ವಿಕ್ಷಿಪನ್ ಧನುಃ ॥61॥
ಪರ್ಜನ್ಯನು ಮಳೆಯನ್ನು ಸುರಿಸಿದಂತೆ ಅರ್ಜುನನು ದೊಡ್ಡ ಶರವರ್ಷವನ್ನು ಸುರಿಸುತ್ತಾ, ಗಾಂಡೀವ ಧನುಸ್ಸನ್ನು ಮೀಟುತ್ತಾ ಕರ್ಣನ ಎದುರಾಗಿ ಬಂದನು.
ಜಿಘಾಂಸುಃ ಸಮರೇ ಕರ್ಣಂ ವಿಸಸರ್ಜ ಶರಾನ್ ಬಹೂನ್ |
ತಂ ಕರ್ಣಃ ಪ್ರತಿಜಗ್ರಾಹ ವಾಯುವೇಗಮಿವಾನಲಃ ॥62॥
ಅರ್ಜುನನು ಯುದ್ಧದಲ್ಲಿ ಕರ್ಣನನ್ನು ಕೊಲ್ಲಲು ಬಯಸಿ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಪರ್ವತವು ವಾಯುವೇಗವನ್ನು ತಡೆದಂತೆ ಕರ್ಣನು ಅವುಗಳನ್ನು ತಡೆದನು.
ತಯೋರ್ದೇವಾಸುರಸಮಃ ಸನ್ನಿಪಾತೋऽಭವನ್ಮಹಾನ್ |
ಕಿರತೋ ಶರಜಾಲಾನಿ ನಿರಂತರಮನಂತರಮ್ ॥63॥
ನಿರಂತರವಾಗಿ ಒಬ್ಬರ ನಂತರ ಒಬ್ಬರು ಶರಸಮೂಹಗಳನ್ನು ಪ್ರಯೋಗಿಸುವ, ಅವರಿಬ್ಬರಿಗೂ ದೇವಾಸುರ ಸಂಗ್ರಾಮಕ್ಕೆ ಸಮವಾದ, ಮಹಾಸಂಘರ್ಷವು ಉಂಟಾಯಿತು.
ಉತ್ಪೇತುರ್ಮೇಘಜಾಲಾನಿ ಘೋರರೂಪಾಣಿ ಸರ್ವಶಃ |
ವವರ್ಷ ಚ ರಜೋ ಭೌಮಂ ಕರ್ಣಪಾರ್ಥಸಮಾಗಮೇ ॥64॥
ಯುದ್ಧದಲ್ಲಿ ಕರ್ಣ-ಪಾರ್ಥರ ಸಮಾಗಮದ ಸಮಯದಲ್ಲಿ ಘೋರವಾದ ಆಕಾರವನ್ನು ತಾಳಿದ ಮೋಡಗಳು ಎಲ್ಲ ಕಡೆಗಳಲ್ಲಿಯೂ ಮೇಲೆ ಬಂದವು. ಧೂಳಿನ ಮಳೆಯು ಸುರಿಯಿತು.
ನ ಸ್ಮ ಸೂರ್ಯಃ ಪ್ರತಪತಿ ನ ಚ ವಾತಿ ಸಮೀರಣಃ |
ಶರಪ್ರಚ್ಛಾದಿತಂ ವ್ಯೋಮ ಛಾಯಾಭೂತಮಿವಾಭವತ್ ॥65॥
ಸೂರ್ಯನು ಪ್ರಕಾಶಿಸಲಿಲ್ಲ. ವಾಯುವು ಬೀಸಲಿಲ್ಲ. ಬಾಣಗಳಿಂದ ಆಚ್ಛಾದಿತವಾದ ಆಕಾಶವು ನೆರಳಿನಂತೆ ಆಯಿತು.

ಗಾಂಡೀವಸ್ಯ ಚ ನಿರ್ಘೋಷಃ ಕರ್ಣಸ್ಯ ಧನುಷಸ್ತದಾ |
ದಹ್ಯತಾಮಿವ ವೇಣೂನಾಮಾಸೀತ್ ಪರಮದಾರುಣಃ ||66||
ಗಾಂಡೀವ ಧನುಸ್ಸಿನ ನಿರ್ಘೋಷ ಮತ್ತು ಕರ್ಣನ ಧನುಸ್ಸಿನ ನಿರ್ಘೋಷಗಳು ಉರಿಯುವ ಬಿದಿರುಗಳ ಶಬ್ದದಂತೆ ಪರಮದಾರುಣವಾಗಿದ್ದಿತು.
ಅರ್ಜುನಸ್ತು ಹಯಾನ್ ನಾಗಾನ್ ರಥಾಂಶ್ಚ ವಿನಿಪಾತಯನ್ |
ಕ್ಷೋಭಯಾಮಾಸ ತತ್ ಸೈನ್ಯಂ ಕರ್ಣಂ ವಿವ್ಯಾಧ ಚಾಸಕೃತ್ ||67||
ಅರ್ಜುನನು ಕರ್ಣನ ಅಶ್ವಗಳನ್ನೂ, ಗಜಗಳನ್ನೂ, ರಥಗಳನ್ನೂ ಹೊಡೆದುರುಳಿಸುತ್ತಾ ಕರ್ಣನ ಸೈನ್ಯವನ್ನು ತಡಕಾಡಿದನು. ಕರ್ಣನನ್ನೂ ಸಹ ಅನೇಕ ಬಾರಿ ಬಾಣಗಳಿಂದ ಹೊಡೆದನು.
ತತಃ ಪಾರ್ಥೋ ಮಹಾಬಾಹುಃ ಕರ್ಣಸ್ಯ ಧನುರಚ್ಛಿನತ್ |
ಛಿನ್ನಧನ್ವಾ ತತಃ ಕರ್ಣಃ ಶಕ್ತಿಂ ಚಿಕ್ಷೇಪ ವೀರ್ಯವಾನ್ ||68||
ಅನಂತರ ಮಹಾಬಾಹುವಾದ ಅರ್ಜುನನು ಕರ್ಣನ ಧನುಸ್ಸನ್ನು ಕತ್ತರಿಸಿದನು. ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ವೀರ್ಯವಂತನಾದ ಕರ್ಣನು ಅರ್ಜುನನ ಮೇಲೆ ಶಕ್ತಿಯನ್ನು ಎಸೆದನು.
ತಾಂ ಶಕ್ತಿಂ ಸಮರೇ ಪಾರ್ಥಃ ಚಿಚ್ಛೇದ ನಿಶಿತೈಃ ಶರೈಃ ||69||
ಯುದ್ಧಭೂಮಿಯಲ್ಲಿ ಅರ್ಜುನನು ಆ ಶಕ್ತಿಯನ್ನು ಹರಿತವಾದ ಬಾಣಗಳಿಂದ ಕತ್ತರಿಸಿದನು.
ತತೋಽಭಿಪೇತುರ್ಬಹವೋ ರಾಧೇಯಸ್ಯ ಪದಾನುಗಾಃ |
ತಾಂಶ್ಚ ಗಾಂಡೀವನಿರ್ಮುಕ್ತೈಃ ಪ್ರಾಹಿಣೋದ್ ಯಮಸಾದನಮ್ ||
ಅನಂತರ ಕರ್ಣನ ಅನುಚರರಾದ ಅನೇಕರು ಅರ್ಜುನನ ಮೇಲೆ ಬಿದ್ದರು. ಅರ್ಜುನನು ಅವರನ್ನೂ ಸಹ ಗಾಂಡೀವ ನಿರ್ಮುಕ್ತವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು.
ಅಶೇರತಾವೃತ್ಯ ಮಹೀಂ ಸಮಗ್ರಾಂ
ಪಾರ್ಥೇಷು ಮಾರ್ಗೇಷು ಮಹಾದ್ವಿಪೇಂದ್ರಾಃ |
ಹಿರಣ್ಯಕಕ್ಷಾಃ ಶರಜಾಲಬದ್ಧಾ
ಯಥಾಽಚಲಾಃ ಪಾವಕಜಾಲನದ್ಧಾಃ ||71||
ಅಗ್ನಿಗಳ ಸಮೂಹದಿಂದ ಕಟ್ಟಲ್ಪಟ್ಟ ಪರ್ವತಗಳಂತೆ ಅರ್ಜುನನ ಬಾಣ ಮಾರ್ಗಗಳಲ್ಲಿ ಹಿರಣ್ಯಕಕ್ಷಗಳನ್ನು ಹೊಂದಿದ್ದ ಶರಜಾಲಗಳಿಂದ ಬದ್ಧವಾದ ದೊಡ್ಡ ಆನೆಗಳು ಸಮುಗ್ರವಾದ ಭೂಮಿಯನ್ನು ಆವರಿಸಿ ಮಲಗಿದವು.
ತಂ ಶತ್ರುಸೇನಾಂಗನಿಬರ್ಹಣಾನಿ
ಕರ್ಮಾಣಿ ಕುರ್ವಂತಮಮಾನುಷಾಣಿ |
ವೈಕರ್ತನಃ ಪೂರ್ವಮಮೃಷ್ಯಮಾಣಃ
ಸಮರ್ಪಯಲ್ಲಕ್ಷ್ಯಮಿವಾಶು ದೂರಾತ್ ||72||
ಶತ್ರುಸೇನೆಗಳ ಅಂಗಗಳನ್ನು ನಾಶಮಾಡುವ ಅಮಾನುಷ ಕರ್ಮಗಳನ್ನು ಮಾಡುವ ಅರ್ಜುನನ ಕರ್ಮಗಳನ್ನು ನೋಡಿ ತಾನು ಮೊದಲು ಅನುಭವಿಸಿದ ಸೋಲನ್ನು ಸಹಿಸದೆ ಕರ್ಣನು ದೂರದಿಂದಲೇ ಲಕ್ಷ್ಯನಾದ ಅರ್ಜುನನ ಮೇಲೆ ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸಿದನು.
ತತಶ್ಚತುರ್ಭಿಸ್ತುರಗಾನ್ ವಿಕೃಷ್ಯ
ವಿವ್ಯಾಧ ಕರ್ಣೋಽಥ ಧನಂಜಯಸ್ಯ |
ಷಡ್ಭಿಶ್ಚ  ಸೂತಂ ದಶಭೀ ರಥಂ ಚ
ಷಷ್ಟ್ಯಾ ಚ ಪಾರ್ಥಂ ತ್ರಿಭಿರಸ್ಯ ಕೇತುಮ್ ||73||
ಆಗ ಕರ್ಣನು ಅರ್ಜುನನ ಕುದುರೆಗಳನ್ನು ನಾಲ್ಕು ಬಾಣಗಳಿಂದ ಹಿಂಸಿಸಿ ಆರು ಬಾಣಗಳಿಂದ ಸೂತನನ್ನೂ, ಹತ್ತುಬಾಣಗಳಿಂದ ರಥವನ್ನೂ, ಅರವತ್ತು ಬಾಣಗಳಿಂದ ಅರ್ಜುನನನ್ನೂ ಮತ್ತು ಮೂರು ಬಾಣಗಳಿಂದ ರಥದ ಧ್ವಜವನ್ನೂ ಹೊಡೆದನು.
ಸ ವಿಷ್ಫುಲಿಂಗೋಜ್ಜ್ವಲಭೀಮಘೋಷಃ
ಕೋಪೇಂಧನಃ ಕೇತುಶಿಖಃ ಶರಾರ್ಚಿಃ |
ಕರ್ಣಾಗ್ನಿರಸ್ತ್ರಾನಿಲಭೀಮವೇಗೋ
ಬಭೌ ದಿಧಕ್ಷನ್ನಿವ ಪಾರ್ಥಕಕ್ಷಮ್ ||74||
ಭಯಂಕರವಾದ ಘೋಷವೆಂಬ ಉಜ್ವಲವಾದ ಕಿಡಿಗಳನ್ನು ಹೊಂದಿದ, ಕೋಪವೆಂಬ ಇಂಧನವನ್ನು ಹೊಂದಿದ, ಪತಾಕೆಗಳೆಂಬ ಜ್ವಾಲೆಗಳನ್ನು ಹೊಂದಿದ, ಬಾಣಗಳೆಂಬ ಸಣ್ಣ ಜ್ವಾಲೆಗಳನ್ನು ಹೊಂದಿದ, ಅಸ್ತ್ರಗಳೆಂಬ ಭಯಂಕರ ವೇಗದಿಂದ ಕೂಡಿದ, ಕರ್ಣನೆಂಬ ಅಗ್ನಿಯು ಅರ್ಜುನನೆಂಬ ಹುಲ್ಲುಗಾವಲನ್ನು ಸುಡುವಂತೆ ಶೋಭಿಸುತ್ತಿದ್ದಿತು.
ಸ್ವನೇಮಿಶಂಖಸ್ವನಭೀಮಘೋಷಃ
ಚಲತ್ಪತಾಕೋಜ್ಜ್ವಲಭೀಮವಿದ್ಯುತ್ |
ಪಾರ್ಥಾಂಬುದಃ ಶಾಸ್ತ್ರಶರಾಂಬುಧಾರಃ
ಕರ್ಣಾನಲಂ ಸಂಶಮಯಾಂಚಕಾರ ||75||
ತನ್ನ  ರಥನೇಮಿ, ಶಂಖಸ್ವನ ಮೊದಲಾದ ಭಯಂಕರ ಗುಡುಗನ್ನು ಹೊಂದಿದ, ಚಲಿಸುವ ಪತಾಕೆಗಳೆಂಬ ಉಜ್ವಲವಾದ ಭಯಂಕರವಾದ ಮಿಂಚುಗಳನ್ನು ಹೊಂದಿದ, ಶಸ್ತ್ರ ಮತ್ತು ಶರಗಳೆಂಬ ನೀರಿನ ಧಾರೆಗಳನ್ನು ಹೊಂದಿದ, ಪಾರ್ಥನೆಂಬ ಮೇಘವು

ಕರ್ಣನೆಂಬ ಅಗ್ನಿಯನ್ನು ಶಾಂತಗೊಳಿಸಿತು.
ತೇನಾತಿವಿದ್ಧಃ ಸಮರೇ ಕಿರೀಟೀ
ಪ್ರಬೋಧಿತಃ ಸಿಂಹ ಇವ ಪ್ರಸುಪ್ತಃ |
ಗಾಂಡೀವಧನ್ವಾ ಪ್ರವರಃ ಕುರೂಣಾಂ
ಪ್ರತತ್ವರೇ ಕರ್ಣವಧಾಯ ಜಿಷ್ಣುಃ ||76||
ಯುದ್ಧದಲ್ಲಿ ಕರ್ಣನಿಂದ ಬಹಳವಾಗಿ ವಿದ್ಧನಾದ ಅರ್ಜುನನು ಮಲಗಿದ್ದ ಸಿಂಹವನ್ನು ಎಬ್ಬಿಸಿದಂತೆ ಕುರುಗಳ ಪ್ರವರನಾದ ಅವನು ಗಾಂಡೀವ ಧನುಸ್ಸನ್ನು ಹಿಡಿದು ಕರ್ಣನನ್ನು ವಧಿಸಲು ತ್ವರೆಮಾಡಿದನು.
ಸ ಬ್ರಾಹ್ಮಮಸ್ತ್ರಂ ಯುಧಿ ಸವ್ಯಸಾಚೀ
ಪ್ರಾದುಶ್ಚಕಾರಾದ್ಭುತವೀರ್ಯಕರ್ಮಾ |
ಸಂತಾಪಯನ್ ಕರ್ಣರಥಂ ಶರೌಘೈಃ
ಲೋಕಾನಿಮಾನ್ ಸೂರ್ಯ ಇವಾಂಶುಮಾಲೀ ||77||
ಯುದ್ಧದಲ್ಲಿ ಸವ್ಯಸಾಚಿಯಾದ, ಅದ್ಭುತ ಪರಾಕ್ರಮ ಮತ್ತು ಕರ್ಮಗಳನ್ನುಳ್ಳ ಅರ್ಜುನನು ಅಂಶುಮಾಲಿಯಾದ ಸೂರ್ಯನು ಈ ಲೋಕವನ್ನು ಸಂತಾಪ ಪಡಿಸುವಂತೆ ಕರ್ಣನ ರಥವನ್ನು ಬಾಣಗಳ ಸಮೂಹದಿಂದ ಸಂತಾಪಪಡಿಸುತ್ತಾ ಬ್ರಹ್ಮಾಸ್ತ್ರಗಳನ್ನು ಪ್ರಾದುರ್ಭಾವಗೊಳಿಸಿದನು.
ಸ ಹಸ್ತಿನೇವಾಭಿಹತೋ ಗಜೇಂದ್ರಃ
ಪ್ರಗೃಹ್ಯ ಭಲ್ಲಾನ್ ನಿಶಿತಾನ್ ನಿಷಂಗಾನ್ |
ಆಕರ್ಣಪೂರ್ಣಂ ತು ಧನುರ್ವಿಕೃಷ್ಯ
ವಿವ್ಯಾಧ ಬಾಣೈರಥ ಸೂತಪುತ್ರಮ್ ||78||
ಅವನು ಪ್ರತಿಗಜದಿಂದ ಅಭಿಹತವಾದ ಗಜೇಂದ್ರನಂತೆ ಹರಿತವಾದ ಭಲ್ಲಗಳನ್ನು ಬತ್ತಳಿಕೆಯಿಂದ ತೆಗೆದು ಕಿವಿಗಳವರೆಗೂ ಧನುಸ್ಸನ್ನು ಎಳೆದು ಸೂತಪುತ್ರನಾದ ಕರ್ಣನನ್ನು ಬಾಣಗಳಿಂದ ಹಿಂಸಿಸಿದನು (ಕರ್ಣನ ಮೇಲೆ ಬಾಣ ಪ್ರಯೋಗವನ್ನು ಮಾಡಿದನು).
ಅಥಾಸ್ಯ ಬಾಹೂ ಸಶಿರೋ ಲಲಾಟಂ
ಗ್ರೀವಾಮುರಃಸ್ಕಂಧಭುಜಾಂತರಂ ಚ |
ಕರ್ಣಸ್ಯ ಪಾರ್ಥೋ ಯುಧಿ ನಿರ್ಬಿಭೇದ
ವಜ್ರೈರಿವಾದ್ರಿಂ ಭಗವಾನ್ ಮಹೇಂದ್ರಃ ||79||
ಅನಂತರ ಅರ್ಜುನನು ಪೂಜ್ಯನಾದ ಮಹೇಂದ್ರನು ವಜ್ರಾಯುಧದಿಂದ ಪರ್ವತವನ್ನು ಭೇದಿಸಿದಂತೆ ಕರ್ಣನ ಬಾಹುಗಳನ್ನೂ, ಶಿರಸ್ಸನ್ನೂ, ಲಲಾಟವನ್ನೂ, ವಕ್ಷಸ್ಸ್ಥಲ, ಭುಜ ಮತ್ತು ಭುಜದ ಮಧ್ಯಪ್ರದೇಶಗಳನ್ನೂ ಭೇದಿಸಿದನು.
ಸ ಪಾರ್ಥಮುಕ್ತಾನವಿಷಹ್ಯ ಬಾಣಾನ್
ಗಜೋ ಗಜೇನೇವ ಜಿತಸ್ತರಸ್ವೀ |
ವಿಹಾಯ ಸಂಗ್ರಾಮಶಿರೋಽಪಯಾತೋ
ವೈಕರ್ತನಃ ಪಾರ್ಥಶರಾಭಿತಪ್ತಃ ||80||
ಕರ್ಣನು ಅರ್ಜುನನು ಪ್ರಯೋಗಿಸಿದ ಬಾಣಗಳನ್ನು ತಡೆಯಲಾಗದೆ ಶೀಘ್ರಗಾಮಿಯಾದ ಅವನು ಪ್ರತಿಗಜದಿಂದ ಸೋಲಿಸಲ್ಪಟ್ಟ ಗಜದಂತೆ ಯುದ್ಧ ಭೂಮಿಯನ್ನು ಬಿಟ್ಟು ಅರ್ಜುನನ ಬಾಣಗಳಿಂದ ಪೀಡಿತನಾಗಿ ಪಲಾಯನವನ್ನು ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತಪಂಚಾಶೋಽಧ್ಯಾಯಃ ||
|| ಗೋಗ್ರಹಣಪರ್ವಣಿ ತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ಐವತ್ತೆಂಟನೆಯ ಅಧ್ಯಾಯ
ದ್ರೋಣಾರ್ಜುನರ ಯುದ್ಧ. ಅಶ್ವತ್ಥಾಮರ ಆಗಮನಾನಂತರದಲ್ಲಿ
ದ್ರೋಣರ ಅಪಯಾನ.
ವೈಶಂಪಾಯನಃ
ಜಿತಂ ವೈಕರ್ತನಂ ದೃಷ್ಟ್ವಾ ಪಾರ್ಥೋ ವೈರಾಟಿಮಬ್ರವೀತ್ ||1||
ಸ್ಥಿರೋ ಭವ ತ್ವಂ ಸಂಗ್ರಾಮೇ ಜಯೋಽಸ್ಮಾಕಂ ನೃಪಾತ್ಮಜ |
ಜಯಾಚ್ಛಂಖಮುಪಾಧ್ಮಾಸ್ಯೇ ದ್ವಿಷತಾಂ ಲೋಮಹರ್ಷಣಮ್ ||2||
ಅವಿಕ್ಲಬ(ವ)ಮಸಂಭ್ರಾಂತಮವ್ಯಗ್ರಹೃದಯೇಕ್ಷಣಮ್ |
ಯಾಹಿ ಶೀಘ್ರಂ ಯತೋ ದ್ರೋಣೋ ಮಮಾಚಾರ್ಯೋ ಮಹಾರಥಃ ||
ವೈಶಂಪಾಯನ ಕರ್ಣನು ಜಿತನಾದುದನ್ನು ನೋಡಿ ಅರ್ಜುನನು ಉತ್ತರನನ್ನು ಕುರಿತು ರಾಜಕುಮಾರನೇ, ನೀನು ಧೈರ್ಯದಿಂದಿರು. ಯುದ್ಧದಲ್ಲಿ ನಮಗೇ ಜಯವುಂಟಾಗುವುದು. ಜಯದಿಂದಾಗಿ ರೋಮಹರ್ಷಕರವಾದ ಶಂಖವನ್ನು ಊದುವೆನು. ಗಾಬರಿಗೊಳ್ಳದೆ, ಮನಸ್ಸಿನಲ್ಲಿ ಸಂಭ್ರಾಂತನಾಗದೆ ಮನಸ್ಸು ಮತ್ತು ದೃಷ್ಟಿಯನ್ನು ಸರಿಯಾಗಿ ಇಟ್ಟುಕೊಂಡು ನನ್ನ ಗುರುಗಳಾದ ಮಹಾರಥರಾದ ದ್ರೋಣರು ಎಲ್ಲಿದ್ದಾರೆಯೋ ಅಲ್ಲಿಗೆ ಶೀಘ್ರವಾಗಿ ಹೋಗು ಎಂದು ಹೇಳಿದನು.

ತಥಾ ಸಂಕ್ರೀಡಮಾನಸ್ಯ ಹ್ಯರ್ಜುನಸ್ಯ ರಣಾಜಿರೇ |
ಬಲಂ ಸತ್ವಂ ಚ ತೇಜಶ್ಚ ಲಾಘವಂ ಚಾಭ್ಯವರ್ಧತ ||4||
ತಚ್ಚಾದ್ಭುತಮಭಿಪ್ರೇಕ್ಷ್ಯ ಭಯಮುತ್ತರಮಾವಿಶತ್ ||5||
ಯುದ್ಧರಂಗದಲ್ಲಿ ಹಾಗೆ ಆಟವಾಡುತ್ತಿದ್ದ ಅರ್ಜುನನ ಬಲವೂ, ಧೈರ್ಯವೂ, ತೇಜಸ್ಸೂ ಮತ್ತು ವೇಗವೂ ಹೆಚ್ಚಿದವು. ಆ ಅದ್ಭುತವನ್ನು ನೋಡಿ ಉತ್ತರನಿಗೆ ಭಯವುಂಟಾಯಿತು.
ಉತ್ತರಃ
ಅಸ್ತ್ರಾಣಾಂ ತವ ದಿವ್ಯಾನಾಂ ಶರೌಘಾನ್ ಕ್ಷಿಪತಶ್ಚ ತೇ |
ಮನೋ ಮೇ ಮುಹ್ಯತೇಽತ್ಯರ್ಥಂ ತವ ದೃಷ್ಟ್ವಾ ಪರಾಕ್ರಮಮ್ ||
ಉತ್ತರ ದಿವ್ಯಾಸ್ತ್ರಗಳನ್ನೂ ಮತ್ತು ಬಾಣಗಳನ್ನೂ ನೀನು ಪ್ರಯೋಗಿಸುವಾಗ ನಿನ್ನ ಪರಾಕ್ರಮವನ್ನು ನೋಡಿ ನನ್ನ ಮನಸ್ಸಿಗೆ ಬಹಳವಾಗಿ ಮೋಹವುಂಟಾಗುತ್ತಿದೆ.
ದ್ವೈಧೀಭೂತಂ ಮನೋ ಮಹ್ಯಂ ಭಯಾದ್ ಭರತಸತ್ತಮ |
ಅದೃಷ್ಟಪೂರ್ವಂ ಪಶ್ಯಾಮಿ ತವ ಗಾಂಡೀವನಿಸ್ವನಮ್ ||7||
ಭರತಸತ್ತಮನೇ, ಭಯದಿಂದ ನನ್ನ ಮನಸ್ಸು ಎರಡು ಹೋಳಾಗಿದೆ. ನಾನು ಹಿಂದೆ ಎಂದೂ ಕೇಳದಿದ್ದ ನಿನ್ನ ಗಾಂಡೀವ ಧನುಸ್ಸಿನ ಘೋಷವನ್ನು ಕೇಳುತ್ತಿದ್ದೇನೆ.
ತವ ಬಾಹುಬಲಂ ಚೈವ ಧನುಃ ಪ್ರಾಕರ್ಷತೋ ಬಹು |
ತವ ತೇಜೋ ದುರಾಧರ್ಷಂ ಯಥಾ ವಿಷ್ಣೋಸ್ತ್ರಿವಿಕ್ರಮೇ ||8||
ಧನುಸ್ಸನ್ನು ಬಹಳವಾಗಿ ಎಳೆಯುತ್ತಿರುವ ನಿನ್ನ ಬಾಹುಬಲವನ್ನೂ, ತ್ರಿವಿಕ್ರಮನ ಅವತಾರದಲ್ಲಿ ವಿಷ್ಣುವಿನ ಸೋಲಿಸಲು ಅಸಾಧ್ಯವಾದ ತೇಜಸ್ಸಿನಂತೆ ಇರುವ ನಿನ್ನ ತೇಜಸ್ಸನ್ನೂ ನೋಡುತ್ತಿದ್ದೇನೆ.
ವೈಶಂಪಾಯನಃ
ತಮುತ್ತರಶ್ಚಿತ್ರಮವೇಕ್ಷ್ಯ ಗಾಂಡಿವಂ
ಶರಾಂಶ್ಚ ಮುಕ್ತಾನ್ ಸಹಸಾ ಕಿರೀಟಿನಾ |
ಭೀತೋಽಬ್ರವೀದರ್ಜುನಮಾಜಿಮಧ್ಯೇ
ನಾಹಂ ತವಾಶ್ವಾನ್ ವಿಷಹೇ ನಿಯಂತುಮ್ ||9||
ವೈಶಂಪಾಯನ ಉತ್ತರನು ವಿಚಿತ್ರವಾದ ಗಾಂಡೀವ ಧನುಸ್ಸನ್ನೂ ಅದರಿಂದ ವೇಗವಾಗಿ ಹೊರಹೊಮ್ಮುತ್ತಿದ್ದ ಬಾಣಗಳನ್ನೂ ನೋಡಿ ರಣರಂಗ ಮಧ್ಯದಲ್ಲಿ ಭೀತನಾಗಿ ಅರ್ಜುನನನ್ನು ಕುರಿತು ನಿನ್ನ ಅಶ್ವಗಳನ್ನು ನಿಯಂತ್ರಿಸಲು ನನಗೆ ಸಾಧ್ಯವಾಗುತ್ತಿಲ್ಲ ಎಂದು ಹೇಳಿದನು.
ತಮಬ್ರವೀದೀಷದಿವ ಪ್ರಹಸ್ಯ
ಗಾಂಡೀವಧನ್ವಾ ದ್ವಿಷತಾಂ ನಿಹಂತಾ ||10||
ಮಯಾ ಸಹಾಯೇನ ಕುತೋಽಸ್ತಿ ತೇ ಭಯಂ
ಪ್ರೇಹ್ಯುತ್ತರಾಶ್ವಾನುಪಮಂತ್ರ್ಯ ಸಾರಥೇ ||11||
ಗಾಂಡೀವಧನ್ವನೂ, ಶತ್ರುನಿಷೂದನನೂ ಆದ ಅರ್ಜುನನು ಸ್ವಲ್ಪ ನಕ್ಕು ಅವನನ್ನು ಕುರಿತು ಸಾರಥಿಯೇ, ನಾನು ಸಹಾಯನಾಗಿರುವಾಗ ನಿನಗೆ ಏತಕ್ಕೆ ಭಯ? ಉತ್ತರನೇ, ಅಶ್ವಗಳನ್ನು ಸಮಾಧಾನಪಡಿಸಿ ಮುಂದೆ ಹೋಗು ಎಂದು ಹೇಳಿದನು.
ಆಶ್ವಾಸಿತಸ್ತೇನ ಧನಂಜಯೇನ
ವೈರಾಟಿರಶ್ವಾನ್ ಪ್ರತುತೋದ ಶೀಘ್ರಮ್ |
ಧನಂಜಯಶ್ಚಾಪಿ ವಿಕೃಷ್ಯ ಚಾಪಂ
ವಿಸ್ಫಾರಯಾಮಾಸ ಮಹೇಂದ್ರಕಲ್ಪಃ ||12||
ಅರ್ಜುನನಿಂದ ಸಮಾಧಾನಗೊಳಿಸಲ್ಪಟ್ಟ ಉತ್ತರನು ಅಶ್ವಗಳನ್ನು ಶೀಘ್ರವಾಗಿ ಮುಂದೆ ನಡೆಸಿದನು. ಮಹೇಂದ್ರಕಲ್ಪನಾದ ಧನಂಜಯನೂ ಸಹ ಧನುಸ್ಸಿನ ಹೆದೆಯನ್ನು ಹಿಡಿದು ಧನುಸ್ಸಿನ ಶಬ್ದವನ್ನು ಮಾಡಿದನು.
ಉತ್ತರಂ ಚೈವ ಬೀಭತ್ಸುರಬ್ರವೀತ್ ಪುನರೇವ ಹಿ ||13||
ನ ಭೇತವ್ಯಂ ಮಯಾ ಸಾರ್ಧಂ ತಾತ ಸಂಗ್ರಾಮಮೂರ್ಧನಿ ||14||
ರಾಜಪುತ್ರೋಽಸಿ ಭದ್ರಂ ತೇ ಕುಲೇ ಮಹತಿ ಮಾತ್ಸ್ಯಕೇ |
ಜಾತಸ್ತ್ವಂ ಕ್ಷತ್ರಿಯಕುಲೇ ನ ವಿಷೀದಿತುಮರ್ಹಸಿ ||15||
ಅರ್ಜುನನು ಪುನಃ ಉತ್ತರನನ್ನು ಕುರಿತು ಪ್ರೀತಿಪಾತ್ರನೇ, ಉನ್ನತವಾದ ಯುದ್ಧದಲ್ಲಿ ನಾನು ಇರುವಾಗ ನೀನು ಹೆದರಬಾರದು. ರಾಜಪುತ್ರನಾಗಿದ್ದೀಯೆ. ನಿನಗೆ ಮಂಗಳವಾಗಲಿ. ಶ್ರೇಷ್ಠವಾದ ಮಾತ್ಸ್ಯರ ಕುಲದಲ್ಲಿ ಜನಿಸಿದ್ದೀಯೆ. ಕ್ಷತ್ರಿಯ ಕುಲದಲ್ಲಿ ಜನಿಸಿದ ನೀನು ವಿಷಾದವನ್ನು ಪಡಬಾರದು.
ಧೃತಿಂ ಕೃತ್ವಾ ಸುವಿಪುಲಾಂ ರಾಜಪುತ್ರ ರಥಂ ಮಮ |
ಯುಧ್ಯಮಾನಸ್ಯ ಸಮರೇ ಶತ್ರುಭಿಃ ಸಹ ವಾಹಯ ||16||
ರಾಜಪುತ್ರನೇ, ಬಹಳವಾದ ಧೈರ್ಯವನ್ನು ಅವಲಂಬಿಸಿ ಯುದ್ಧದಲ್ಲಿ ಶತ್ರುಗಳ ಜೊತೆಯಲ್ಲಿ ಯುದ್ಧ ಮಾಡುವ ನನ್ನ ರಥವನ್ನು ಮುಂದೆ ನಡೆಸು ಎಂದು ಹೇಳಿದನು.
ಉಕ್ತ್ವಾ ತಮೇವಂ ಬೀಭತ್ಸುರರ್ಜುನಃ ಪುನರಬ್ರವೀತ್ |

ಪಾಂಡವೋ ರಥಿನಾಂ ಶ್ರೇಷ್ಠೋ ಭಾರದ್ವಾಜಂ ಸಮೀಕ್ಷ್ಯ ತು ॥17॥
ಅವನಿಗೆ ಈ ರೀತಿ ಹೇಳಿ ರಥಿಕರಲ್ಲಿ ಶ್ರೇಷ್ಠನಾದ ಪಾಂಡುಪುತ್ರನಾದ, ಬೀಭತ್ಸುವಾದ ಅರ್ಜುನನು ದ್ರೋಣರನ್ನು ನೋಡಿ ಹೀಗೆ ಹೇಳಿದನು.
ಯತ್ರೈಷಾ ಕಾಂಚನೀ ವೇದಿರ್ದೃಶ್ಯತೇಽಗ್ನಿಶಿಖೋಪಮಾ |
ಉಚ್ಛ್ರಿತಾ ಕಾಂಚನೇ ದಂಡೇ ಪತಾಕಾಭಿರಲಂಕೃತಾ ॥18॥
ತತ್ರ ಮಾಂ ನಯ ಭದ್ರಂ ತೇ ದ್ರೋಣಂ ಯೋತ್ಸ್ಯಾಮಿ ಸತ್ತಮಮ್ |
ಭಾರದ್ವಾಜೇನ ಯೋತ್ಸ್ಯೇಽಹಮಾಚಾರ್ಯೇಣ ಮಹಾತ್ಮನಾ ॥19॥
ಅಗ್ನಿಯ ಜ್ವಾಲೆಯಂತಿರುವ ಸುವರ್ಣಮಯವಾದ ವೇದಿಕೆಯು ಪತಾಕೆಗಳಿಂದ ಅಲಂಕೃತವಾದ ಯಾವ ಸುವರ್ಣಮಯವಾದ ಧ್ವಜದಲ್ಲಿ ಎತ್ತರದಲ್ಲಿ ಕಾಣುತ್ತಿದೆಯೋ ಅಲ್ಲಿಗೆ ನನ್ನ ರಥವನ್ನು ನಡೆಸು. ನಿನಗೆ ಮಂಗಳವಾಗಲಿ. ಸಜ್ಜನರಲ್ಲಿ ಶ್ರೇಷ್ಠರಾದ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಮಹಾತ್ಮರೂ, ಭರದ್ವಾಜ ಕುಲೋತ್ಪನ್ನರೂ ಆದ ಆಚಾರ್ಯರ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವೆನು.
ಅಮೀ ಶೋಣಾಃ ಪ್ರಕಾಶಂತೇ ತುರಗಾಃ ಸಾಧುವಾಹಿನಃ |
ಯುಕ್ತಾ ರಥವರೇ ಯಸ್ಯ ಸರ್ವಶಿಕ್ಷಾವಿಶಾರದಾಃ ॥20॥
ಚೆನ್ನಾಗಿ ರಥವನ್ನು ಎಳೆದುಕೊಂಡು ಹೋಗುವ ಈ ಕೆಂಪು ಕುದುರೆಗಳು ಶ್ರೇಷ್ಠವಾದ ರಥದಲ್ಲಿ ಹೂಡಲ್ಪಟ್ಟು ಶೋಭಿಸುತ್ತಿವೆ. ಇವು ದ್ರೋಣರ ಸರ್ವಶಿಕ್ಷೆಯಲ್ಲೂ ಪಳಗಿದ ಅಶ್ವಗಳು.
ತತೋ ರಥವರೇ ಶೂರಃ ಸರ್ವಶಸ್ತ್ರಭೃತಾಂ ವರಃ |
ಸ್ನಿಗ್ಧವೈಡೂರ್ಯಸಂಕಾಶಸ್ತಾಮ್ರಾಕ್ಷಃ ಪ್ರಿಯದರ್ಶನಃ ॥21॥
ಪೀನದೀರ್ಘಭುಜಃ ಶ್ರೀಮಾನ್ ಬಲವೀರ್ಯಸಮನ್ವಿತಃ |
ಸರ್ವಲೋಕಧನುಃಶ್ರೇಷ್ಠಃ ಸರ್ವಲೋಕೇಷು ಪೂಜಿತಃ ॥22॥
ಅಂಗಿರೋಶನಸೋಸ್ತುಲ್ಯೋ ನಯೇ ಬುದ್ಧಿಮತಾಂ ವರಃ ॥23॥
ಅನಂತರ ಶ್ರೇಷ್ಠವಾದ ರಥದಲ್ಲಿ ಶೂರರೂ, ಎಲ್ಲ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ, ಕಡುವೈಡೂರ್ಯವರ್ಣವನ್ನು ಹೊಂದಿದವರೂ, ಕೆಂಪು ಕಣ್ಣುಳ್ಳವರೂ, ನೋಡಲು ಪ್ರಿಯರಾದವರೂ, ಪುಷ್ಟವಾದ ದೀರ್ಘಭುಜವುಳ್ಳವರೂ, ಕಾಂತಿಯುಕ್ತರಾದವರೂ, ಬಲದಲ್ಲಿ ಸಮನ್ವಿತರಾದವರೂ, ಸರ್ವಲೋಕಧನುರ್ಧಾರಿಗಳಲ್ಲಿ ಶ್ರೇಷ್ಠರೂ, ಸರ್ವಲೋಕಗಳಲ್ಲಿಯೂ ಪೂಜಿತರೂ, ರಾಜನೀತಿಯ ವಿಷಯದಲ್ಲಿ ಶುಕ್ರ ಬೃಹಸ್ಪತಿಗಳ ಸಮರಾದವರೂ, ಮೇಧಾವಿಗಳಲ್ಲಿ ಶ್ರೇಷ್ಠರೂ (ಆದ ದ್ರೋಣರು ಇದ್ದಾರೆ).
ಚತ್ವಾರೋ ನಿಖಿಲಾ ವೇದಾಃ ಸಾಂಗೋಪಾಂಗಾಃ ಸಲಕ್ಷಣಾಃ |
ಧನುರ್ವೇದಶ್ಚ ಕಾತ್ಸ್ನ್ಯೇನ ಬ್ರಾಹ್ಮಂ ಚಾಸ್ತ್ರಂ ಪ್ರತಿಷ್ಠಿತಮ್ ॥24॥
ಲಕ್ಷಣಸಹಿತವಾದ ಸಾಂಗೋಪಾಂಗ ಸಹಿತವಾದ ಸಮಗ್ರವಾದ ನಾಲ್ಕೂ ವೇದಗಳೂ, ಸಂಪೂರ್ಣವಾದ ಧನುರ್ವೇದ ಮತ್ತು ಬ್ರಹ್ಮಾಸ್ತ್ರಗಳು ಅವರಲ್ಲಿ ಪ್ರತಿಷ್ಠಿತವಾಗಿದೆ.
ಪುರಾಣಮಿತಿಹಾಸಶ್ಚ ಹ್ಯರ್ಥವಿದ್ಯಾ ಚ ಮಾನವೀ |
ಭಾರದ್ವಾಜೇ ಸಮಸ್ತಾನಿ ಸರ್ವಾಣ್ಯೇತಾನಿ ಸಾಂಪ್ರತಮ್ ॥25॥
ದ್ರೋಣರಲ್ಲಿ ಪುರಾಣ, ಇತಿಹಾಸ, ಮನುವಿನ ಅರ್ಥಶಾಸ್ತ್ರ, ಈ ಎಲ್ಲವೂ ಸಮಗ್ರವಾಗಿ ಈಗ ಆಶ್ರಯವನ್ನು ಪಡೆದಿವೆ.
ಕ್ಷಮಾ ದಯಾ ಚ ಸತ್ಯಂ ಚ ತೇಜೋ ಮಾರ್ದವಮಾರ್ಜವಮ್ |
ಪ್ರತಿಷ್ಠಿತಾ ಗುಣಾ ಯಸ್ಮಿನ್ ಬಹವೋ ದ್ವಿಜಸತ್ತಮೇ ॥26॥
ಕ್ಷಮೆ, ದಯೆ, ಸತ್ಯ, ತೇಜಸ್ಸು, ಮಾರ್ದವ, ಆರ್ಜವ ಮುಂತಾದ ಅನೇಕ ಶ್ರೇಷ್ಠವಾದ ಗುಣಗಳು ಬ್ರಾಹ್ಮಣ ಶ್ರೇಷ್ಠರಾದ ಅವರಲ್ಲಿ ಪ್ರತಿಷ್ಠಿತವಾಗಿವೆ.
ಯಸ್ಯಾಹಮಿಷ್ಟಃ ಸತತಂ ಮಮ ಚೇಷ್ಟಃ ಸದಾ ಚ ಯಃ |
ಕ್ಷತ್ರಧರ್ಮಂ ಪುರಸ್ಕೃತ್ಯ ತೇನ ಯೋತ್ಸ್ಯಾಮಿ ಸಂಯುಗೇ ॥27॥
ಅವರಿಗೆ ನಾನು ಯಾವಾಗಲೂ ಇಷ್ಟನಾದವನು. ನನಗೂ ಅವರು ಯಾವಾಗಲೂ ಇಷ್ಟರಾದವರು. ಕ್ಷತ್ರಿಯ ಧರ್ಮವನ್ನು ಮುಂದೆ ಮಾಡಿಕೊಂಡು ಅವರ ಜೊತೆಯಲ್ಲಿ ರಣರಂಗದಲ್ಲಿ ಯುದ್ಧವನ್ನು ಮಾಡುವೆನು.
ಆಚಾರ್ಯಂ ಪ್ರಾಪಯೇದಾನೀಂ ಮಮೋತ್ತರ ಮಹಾರಥಮ್ |
ಅಪರಂ ಪಶ್ಯ ಸಂಗ್ರಾಮಮದ್ಭುತಂ ಮಮ ಪಶ್ಯ ಚ ॥28॥
ಉತ್ತರನೇ, ಮಹಾರಥರಾದ ಆಚಾರ್ಯರ ಬಳಿಗೆ ಈಗ ಹೋಗು. ಇನ್ನೊಂದು ಅದ್ಭುತವಾದ ಸಂಗ್ರಾಮವನ್ನೂ ಮತ್ತು ನನ್ನ ಪರಾಕ್ರಮವನ್ನು ನೋಡುವವನಾಗು (ಎಂದು ಹೇಳಿದನು).
ಉತ್ತರಸ್ತ್ವೇವಮುಕ್ತೋಽಶ್ವಾನ್ ಚೋದಯಾಮಾಸ ತಂ ಪ್ರತಿ |
ಆಜಗಾಮಾರ್ಜುನರಥೋ ಭಾರದ್ವಾಜರಥಂ ಪ್ರತಿ ॥29॥
ಹೀಗೆ ಹೇಳಲ್ಪಟ್ಟ ಉತ್ತರನು ಕುದುರೆಗಳನ್ನು ದ್ರೋಣರ ರಥದ ಕಡೆಗೆ ಪ್ರೇರಿಸಿದನು. ಅರ್ಜುನ ರಥವು ದ್ರೋಣರ ರಥದ ಸಮೀಪಕ್ಕೆ ಬಂದಿತು.
ತಮಾಪತಂತಂ ವೇಗೇನ ಪಾಂಡವಂ ಸರಥಂ ರಣೇ |
ದ್ರೋಣೋಽಪ್ಯಭ್ಯದ್ರವತ್ ಪಾರ್ಥಂ ಮತ್ತೋ ಮತ್ತಮಿವ ದ್ವಿಪಮ್ ॥
ಪಾಂಡುಪುತ್ರನಾದ ಅರ್ಜುನನು ಯುದ್ಧದಲ್ಲಿ ತನ್ನ ಕಡೆಗೆ ರಥದಲ್ಲಿ ವೇಗದಿಂದ ಬರುತ್ತಿರುವುದನ್ನು ನೋಡಿ ಒಂದು ಮದಿಸಿದ

ಗಜವು ಇನ್ನೊಂದು ಮದ್ದಾನೆಯ ಕಡೆಗೆ ಬಂದಂತೆ ದ್ರೋಣರೂ ಪಾರ್ಥನ ಕಡೆಗೆ ವೇಗವಾಗಿ ಬಂದರು.
ಸ ತು ರುಗ್ಮರಥಂ ದೃಷ್ಟ್ವಾ ಕೌಂತೇಯಃ ಸಮಭಿದ್ರುತಮ್ |
ಆಚಾರ್ಯಂ ತಂ ಮಹಾಬಾಹುಃ ಪ್ರಾಂಜಲಿರ್ವಾಕ್ಯಮಬ್ರವೀತ್ ॥31॥
ದ್ರೋಣರ ಸುವರ್ಣಮಯವಾದ ರಥವು ತನ್ನ ಕಡೆಗೆ ಶೀಘ್ರವಾಗಿ ಬರುತ್ತಿರುವುದನ್ನು ನೋಡಿದ ಮಹಾಬಾಹುವಾದ ಕುಂತೀಪುತ್ರನಾದ ಅರ್ಜುನನು ಕೈಗಳನ್ನು ಮುಗಿದು ಆಚಾರ್ಯರನ್ನು ಕುರಿತು ಹೀಗೆ ಮಾತನಾಡಿದನು.
ಉಷಿತಾಃ ಸ್ಮೋ ವನೇ ವಾಸಂ ಪ್ರತಿಕರ್ಮ ಚಿಕೀರ್ಷವಃ |
ಕೋಪಂ ನಾರ್ಹತಿ ನಃ ಕರ್ತುಂ ಸದಾ ಸಮರದುರ್ಮದ ॥32॥
ಯುದ್ಧದಲ್ಲಿ ದುರ್ಜಯರಾದ (ದುರ್ಮದರಾದ) ಆಚಾರ್ಯರೇ, ನಾವು ವನವಾಸವನ್ನು ಮಾಡಿ ಅದಕ್ಕೆ ಪ್ರತೀಕಾರವನ್ನು ಮಾಡಲು ಬರುತ್ತಿದ್ದೇವೆ. ನಮ್ಮ ಮೇಲೆ ಕೋಪವನ್ನು ಮಾಡಬಾರದು.
ಅಹಂ ತು ತಾಡಿತಃ ಪೂರ್ವಂ ಪ್ರಹರೇಯಂ ತ್ವಯಾಽನಘ |
ಇತಿ ಮೇ ವರ್ತತೇ ಬುದ್ಧಿಸ್ತದ್ ಭವಾನ್ ಕ್ಷಂತುಮರ್ಹತಿ ॥33॥
ಅನಘರೇ, ನೀವು ಮೊದಲು ನನ್ನ ಮೇಲೆ ಪ್ರಹಾರ ಮಾಡಿದರೆ ನಾನು ಅನಂತರ ಪ್ರಹಾರ ಮಾಡುತ್ತೇನೆ ಎಂದು ನನ್ನ ಅಭಿಪ್ರಾಯವಿದೆ. ಅದನ್ನು ತಾವು ಕ್ಷಮಿಸಬೇಕು ಎಂದು ಹೇಳಿದನು.
ವೈಶಂಪಾಯನಃ
ತತಃ ಪ್ರಾಧ್ಮಾಪಯಚ್ಛಂಖಂ ಭೇರೀಪಣವನಾದಿತಮ್ |
ವ್ಯಕ್ಷೋಭತ ಬಲಂ ಸರ್ವಮುದ್ಧೂತ ಇವ ಸಾಗರಃ ॥34॥
ವೈಶಂಪಾಯನ ಅನಂತರ ಭೇರೀಪಣವನಾದದೊಡನೆ ಅರ್ಜುನನು ತನ್ನ ಶಂಖವನ್ನು ಊದಿದನು. ಸೈನ್ಯವೆಲ್ಲವೂ ಕ್ಷೋಭೆಗೊಂಡ ಸಾಗರದಂತೆ ಆ ಶಬ್ದವನ್ನು ಕೇಳಿ ಕ್ಷೋಭೆಗೊಂಡಿತು.
ತತಸ್ತು ಪ್ರಾಹಿಣೋದ್ ದ್ರೋಣಃ ಶರಾಣಾಮೇಕವಿಂಶತಿಮ್ |
ಅಪ್ರಾಪ್ತಾನೇವ ತಾನ್ ಪಾರ್ಥಃ ಚಿಚ್ಛೇದ ಕೃತಹಸ್ತವಾನ್ ॥35॥
ಅನಂತರ ದ್ರೋಣರು ಇಪ್ಪತ್ತೊಂದು ಬಾಣಗಳನ್ನು ಅರ್ಜುನನ ಕಡೆಗೆ ಕಳುಹಿಸಿದರು. ಒಳ್ಳೆಯ ಹಸ್ತಶಿಕ್ಷೆಯಿದ್ದ ಅರ್ಜುನನು ಆ ಬಾಣಗಳು ತನ್ನನ್ನು ತಲುಪುವುದಕ್ಕಿಂತ ಮುಂಚೆಯೇ ಅವುಗಳನ್ನು ಕತ್ತರಿಸಿದನು.
ತತಃ ಶರಸಹಸ್ರೇಣ ರಥಂ ಪಾರ್ಥಸ್ಯ ವೀರ್ಯವಾನ್ |
ಅವಾಕಿರತ್ ತತೋ ದ್ರೋಣಃ ಶೀಘ್ರಹಸ್ತಂ ಪ್ರದರ್ಶಯನ್ ॥36॥
ಏವಂ ಪ್ರವವೃಧೇ ಯುದ್ಧಂ ಭಾರದ್ವಾಜಕಿರೀಟಿನೋಃ ॥37॥
ಅನಂತರ ಪರಾಕ್ರಮಶಾಲಿಗಳಾದ ದ್ರೋಣರು ಅರ್ಜುನನ ರಥದ ಮೇಲೆ ಸಹಸ್ರ ಬಾಣಗಳ ಮಳೆಯನ್ನು ಕರೆದರು. ಹೀಗೆ ದ್ರೋಣ ಮತ್ತು ಅರ್ಜುನರಿಗೆ ಯುದ್ಧವು ಬೆಳೆಯಿತು.
ಅಶ್ವಾನ್ ಶೋಣಾನ್ ಮಹಾವೇಗಾನ್ ಹಂಸವರ್ಣೈಸ್ತು ವಾಜಿಭಿಃ |
ಮಿಶ್ರಿತಾನ್ ಸಮರೇ ದೃಷ್ಟ್ವಾ ವ್ಯಸ್ಮಯಂತ ಪೃಥಗ್ ಜನಾಃ ॥38॥
ಮಹಾವೇಗವುಳ್ಳ ಕೆಂಪುಬಣ್ಣದ ಕುದುರೆಗಳು ಅರ್ಜುನನ ಬಿಳಿಯ ಬಣ್ಣದ ಕುದುರೆಗಳಿಂದ ರಣರಂಗದಲ್ಲಿ ಮಿಶ್ರಿತವಾದುದನ್ನು ನೋಡಿ ಉಳಿದ ಜನರು ಆಶ್ಚರ್ಯಪಟ್ಟರು.
ರಥಂ ರಥೇನ ಪಾರ್ಥಸ್ಯ ಸಮಾಪತ್ಯ ಪರಂತಪಃ |
ಹರ್ಷಯುಕ್ತಸ್ತದಾಽಽಚಾರ್ಯಃ ಪ್ರತ್ಯಗೃಹ್ಣತ ಪಾಂಡವಮ್ ॥39॥
ಪರಂತಪರಾದ ಆಚಾರ್ಯರು ತಮ್ಮ ರಥದಿಂದ ಅರ್ಜುನನ ರಥಕ್ಕೆ ಡಿಕ್ಕಿಯನ್ನು ಹೊಡೆದು ಅರ್ಜುನನನ್ನು ಯುದ್ಧದಲ್ಲಿ ಸ್ವೀಕರಿಸಿದರು.
ಸಮಾಶ್ಲಿಷ್ಟಾವಿವಾನ್ಯೋನ್ಯಂ ದ್ರೋಣಪಾಂಡವಯೋರ್ಧ್ವಜೌ |
ದೃಷ್ಟ್ವಾ ಪ್ರಾಕಂಪತ ಮುಹುರ್ಭರತಾನಾಂ ಮಹಾಚಮೂಃ ॥40॥
ಪರಸ್ಪರವಾಗಿ ಆಲಿಂಗಿಸಿದಂತಿರುವ ದ್ರೋಣ ಮತ್ತು ಅರ್ಜುನರ ಧ್ವಜಗಳನ್ನು ನೋಡಿ ಭಾರತರ ಮಹಾಸೈನ್ಯವು ಮತ್ತೆ ಮತ್ತೆ ನಡುಗಿತು.
ತತ್ತು ಯುದ್ಧಂ ಪ್ರವವೃತೇ ಆಚಾರ್ಯಸ್ಯಾರ್ಜುನಸ್ಯ ಚ |
ವಿಮುಂಚತೋಃ ಶರಾನುಗ್ರಾನ್ ವಿಶಿಖಾನ್ ದೀಪ್ತತೇಜಸಃ ॥41॥
ಉಗ್ರವಾದ ದೀಪ್ತವಾದ ಸಾಮರ್ಥ್ಯವುಳ್ಳ ಬಾಣಗಳನ್ನು ಪ್ರಯೋಗಿಸುವ ಆಚಾರ್ಯರ ಮತ್ತು ಅರ್ಜುನನ ಯುದ್ಧವು ಹೀಗೆ ನಡೆಯಿತು.
ತೌ ವೀರೌ ವೀರ್ಯಸಂಪನ್ನೌ ದೃಷ್ಟ್ವಾ ಸಂಗ್ರಾಮಮೂರ್ಧನಿ |
ಆಚಾರ್ಯಶಿಷ್ಯೌ ರಥಿನೌ ಕೃತವೀರ್ಯೌ ತರಸ್ವಿನೌ ॥42॥
ಉಭೌ ವಿಶ್ರುತಕರ್ಮಾಣಾವುಭೌ ವೀರೌ ತರಸ್ವಿನೌ |
ಉಭಾವತಿರಥೌ ಲೋಕೇ ಹ್ಯುಭೌ ಪರಪುರಂಜಯೌ ॥43॥
ಕ್ಷಿಪಂತೌ ಶರಜಾಲಾನಿ ಕ್ಷತ್ರಿಯಾನ್ ಮೋಹ ಆವಿಶತ್ ॥44॥
ಉನ್ನತವಾದ ಸಂಗ್ರಾಮದಲ್ಲಿ ರಥಿಕರಾದ, ವೀರ್ಯಸಂಪನ್ನರಾದ, ವೀರರಾದ, ಪರಾಕ್ರಮವನ್ನು ಪ್ರದರ್ಶಿಸಿದ, ಧೈರ್ಯಶಾಲಿಗಳಾದ, ಪ್ರಖ್ಯಾತ ಕರ್ಮಗಳುಳ್ಳ, ಅತಿರಥರಾದ, ವೇಗಶಾಲಿಗಳಾದ ಶತ್ರುಪುರಂಜಯರಾದ ಬಾಣದ ಸಮೂಹಗಳನ್ನು ಪ್ರಯೋಗಿಸುವ

ಆಚಾರ್ಯರನ್ನು ಮತ್ತು ಶಿಷ್ಯನನ್ನು ನೋಡಿ ಕ್ಷತ್ರಿಯರಿಗೆ ಮೋಹ ಉಂಟಾಯಿತು.
ವ್ಯಸ್ಮಯಂತ ಜನಾಃ ಸರ್ವೇ ದ್ರೋಣಾರ್ಜುನಸಮಾಗಮೇ |
ನರಾಣಾಂ ಬ್ರುವತಾಂ ವಾಕ್ಯಂ ಶ್ರೂಯತೇ ಸುಮಹಾಸ್ವನಃ ||45||
ದ್ರೋಣಾರ್ಜುನ ಸಮಾಗಮ ಕಾಲದಲ್ಲಿ ಎಲ್ಲ ಜನರೂ ಆಶ್ಚರ್ಯಪಟ್ಟರು. ಗಟ್ಟಿಯಾಗಿ ಮಾತನಾಡುವ ಜನರ ವಾಕ್ಯಗಳು ಕೇಳಿಬರುತ್ತಿದ್ದವು.
ದ್ರೋಣಂ ಹಿ ಸಮರೇ ಕೋಽನ್ಯೋ ಯೋದ್ಧುಮರ್ಹತ್ಯಥಾರ್ಜುನಾತ್|
ರೌದ್ರಃ ಕ್ಷತ್ರಿಯಧರ್ಮೋಽಯಂ ಗುರುಂ ವೈ ಯದಯೋಧಯತ್ ||
ಇತ್ಯಬ್ರುವನ್ ಜನಾಸ್ತತ್ರ ಸಂಗ್ರಾಮಶಿರಸಿ ಸ್ಥಿತಾಃ |
ತೌ ಸಮೀಕ್ಷ್ಯ ತು ಸಂರಬ್ಧೌ ಸನ್ನಿಕೃಷ್ಟೌ ಮಹಾರಥೌ ||47||
ಕೋಪಗೊಂಡು ಪರಸ್ಪರ ಸಮೀಪಕ್ಕೆ ಬಂದ ಮಹಾರಥರಾದ ಅವರಿಬ್ಬರನ್ನೂ ನೋಡಿ ಯುದ್ಧದಲ್ಲಿ ಅರ್ಜುನನನ್ನು ಬಿಟ್ಟು ಬೇರೆ ಯಾವನು ದ್ರೋಣರ ಜೊತೆಯಲ್ಲಿ ಯುದ್ಧ ಮಾಡಲು ಸಾಧ್ಯ? ಕ್ಷತ್ರಿಯ ಧರ್ಮವು ಕಠೋರವಾದುದು. ಏಕೆಂದರೆ ಶಿಷ್ಯನಾದ ಅರ್ಜುನನು ಗುರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ ಎಂದು ಆ ಉನ್ನತವಾದ ಯುದ್ಧವನ್ನು ನೋಡಿದ ಅಲ್ಲಿದ್ದ ಜನರು ಮಾತನಾಡಿದರು.
ಛಾದಯೇತಾಂ ಶರೌಘೈಸ್ತಾವನ್ಯೋನ್ಯಮಪರಾಜಿತೌ |
ಸಂಯುಗೇ ಸಂಚಕಾಶೇತಾಂ ಕಾಲಸೂರ್ಯಾವಿವೋದಿತೌ ||48||
ಅಪರಾಜಿತರಾದ ಅವರಿಬ್ಬರೂ ಪರಸ್ಪರವಾಗಿ ಬಾಣದ ಮಳೆಗಳಿಂದ ಒಬ್ಬರನ್ನೊಬ್ಬರು ಮುಚ್ಚಿದರು. ಯುದ್ಧದಲ್ಲಿ ಅವರಿಬ್ಬರೂ ಪ್ರಳಯಕಾಲದಲ್ಲಿ ಉದಯಿಸಿದ ಸೂರ್ಯನಂತೆ ಶೋಭಿಸಿದರು.
ವಿಷ್ಫಾರ್ಯ ಚ ಮಹಾಚಾಪಂ ಹೇಮಪೃಷ್ಠಂ ದುರಾನಮಮ್ |
ಸಂರಬ್ಧಸ್ತು ತದಾ ದ್ರೋಣಃ ಪ್ರತ್ಯಯುಧ್ಯತ ಫಲ್ಗುನಮ್ ||49||
ಆಗ ದ್ರೋಣರು ಚಿನ್ನದ ಹಿಡಿಯಿರುವ, ಬಗ್ಗಿಸಲು ಕಷ್ಟಸಾಧ್ಯವಾದ ತಮ್ಮ ದೊಡ್ಡ ಧನುಸ್ಸನ್ನು ಬಗ್ಗಿಸಿ ಕೋಪಗೊಂಡು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಸ ಸಾಯಕಮಯೈರ್ಜಾಲೈರರ್ಜುನಸ್ಯ ರಥಂ ಪ್ರತಿ |
ಭಾನುಮದ್ಭಿಃ ಶಿಲಾಧೌತೈರ್ಬಾಣೈಃ ಪ್ರಾಚ್ಛಾದಯದ್ ದಿಶಃ ||50||
ಅವರು ಅರ್ಜುನನ ರಥದ ಸುತ್ತಲೂ ಕಿರಣಗಳನ್ನು ಹೊರಸೂಸುವ, ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ, ಬಾಣಗಳಿಂದ ಎಲ್ಲ ದಿಕ್ಕುಗಳಲ್ಲಿಯೂ ಒಂದು ಜಾಲ (ಬಲೆ) ವನ್ನು ಮಾಡಿದರು.
ಅರ್ಜುನಸ್ತು ತದಾ ದ್ರೋಣಂ ಮಹಾವೇಗೈರ್ಮಹಾರಥಃ |
ವಿವ್ಯಾಧ ಶತಶೋ ಬಾಣೈರ್ಧಾರಾಭಿರಿವ ಪರ್ವತಮ್ ||51||
ಕಾಳಮೇಘ ಇವೋಷ್ಣಾಂತೇ ಫಲ್ಗುನಃ ಸಮವಾಕಿರತ್ ||52||
ಆಗ ಮಹಾರಥನಾದ ಅರ್ಜುನನು ಮಹಾವೇಗವುಳ್ಳ ನೂರಾರು ಬಾಣಗಳಿಂದ, ಮಳೆಯ ಧಾರೆಗಳಿಂದ ಪರ್ವತವು ಮುಚ್ಚಿದಂತೆ ಯುದ್ಧವನ್ನು ಮಾಡಿ, ಬೇಸಿಗೆಯ ನಂತರ ಬರುವ ಕಪ್ಪು ಮೋಡದಂತೆ ಅವನು ಬಾಣಗಳ ಮಳೆಯನ್ನು ಸುರಿಸಿದನು.
ತಸ್ಯ ಜಾಂಬೂನದಮಯೈಃ ಶಿತೈಶ್ಚಾಪಚ್ಯುತೈಃ ಶರೈಃ |
ಪ್ರಾಚ್ಛಾದಯದ್ ರಥಶ್ರೇಷ್ಠಂ ಭಾರದ್ವಾಜೋಽರ್ಜುನಸ್ಯ ವೈ ||53||
ದ್ರೋಣರು ತಮ್ಮ ಸುವರ್ಣಮಯವಾದ ಮತ್ತು ಧನುಸ್ಸಿನಿಂದ ಮುಕ್ತವಾದ ಹರಿತವಾದ ಬಾಣಗಳಿಂದ ಅರ್ಜುನನ ಶ್ರೇಷ್ಠವಾದ ರಥವನ್ನು ಮುಚ್ಚಿದರು.
ತಥೈವ ದಿವ್ಯಂ ಗಾಂಡೀವಂ ಧನುರಾಯಮ್ಯ ಚಾರ್ಜುನಃ |
ಶತ್ರುಘ್ನಂ ವೇಗವತ್ ಸೃಷ್ಟಂ ಭಾರಸಾಧನಮುತ್ತಮಮ್ ||54||
ಶೋಭತೇ ಸ್ಮ ಮಹಾಬಾಹೋರ್ಗಾಂಡೀವಂ ವಿಕ್ಷಿಪದ್ ಧನುಃ ||55||
ಅದರಂತೆಯೇ ಅರ್ಜುನನೂ ಶತ್ರುಗಳನ್ನು ಕೊಲ್ಲುವ ವೇಗವನ್ನುಳ್ಳ ಭಾರವಾದ ದೃಢವಾದ ತನ್ನ ದಿವ್ಯವಾದ ಗಾಂಡೀವ ಧನುಸ್ಸನ್ನು ಎಳೆದು (ಬಾಣ ಪ್ರಯೋಗವನ್ನು ಮಾಡಿದನು). ಆ ಮಹಾಬಾಹುವಿನ ಗಾಂಡೀವ ಧನುಸ್ಸು ಶೋಭಿಸುತ್ತಿದ್ದಿತು.
ಶರಾಂಶ್ಚ ವಿಸೃಜಂಶ್ಚಿತ್ರಾನ್ ಸುವರ್ಣವಿಕೃತಾನ್ ಬಹೂನ್ |
ಪ್ರಾಚ್ಛಾದಯದಮೇಯಾತ್ಮಾ ಭಾರದ್ವಾಜರಥಂ ಪ್ರತಿ ||56||
ದ್ರೋಣಚಾಪವಿನಿರ್ಮುಕ್ತಾನ್ ಬಾಣೈರ್ಬಾಣಾನವಾರಯತ್ ||57||
ಅಂತಹ ಧನುಸ್ಸಿನಿಂದ ಸುವರ್ಣಮಯವಾದ ವಿಚಿತ್ರವಾದ ಬಾಣಗಳನ್ನು ಪ್ರಯೋಗಿಸುತ್ತಾ ಅಮೇಯ ಸಾಮರ್ಥ್ಯವುಳ್ಳ ಅವನು ದ್ರೋಣರ ರಥವನ್ನು ಹಾಗೆಯೇ ಮುಚ್ಚಿದನು. ಮತ್ತು ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳನ್ನು ತನ್ನ ಬಾಣಗಳಿಂದ ನಿವಾರಿಸಿದನು.
ಸರಥೋಽಪ್ಯಚರತ್ ಪಾರ್ಥಃ ಪ್ರೇಕ್ಷಣೀಯೋ ಮಹಾರಥಃ |
ಯುಗಪದ್ ದಿಕ್ಷು ಸರ್ವಾಸು ಸರ್ವತೋಽಸ್ತ್ರಾಣ್ಯವಾಸೃಜತ್ ||58||
ರಥದಲ್ಲಿ ಕುಳಿತಿದ್ದರೂ ಮಹಾರಥನಾದ ಪಾರ್ಥನು ಒಂದೇ ಸಮಯದಲ್ಲಿ ಎಲ್ಲ ದಿಕ್ಕುಗಳಲ್ಲೂ, ಎಲ್ಲ ಕಡೆಗಳಿಗೂ ಶಸ್ತ್ರವನ್ನು ಪ್ರಯೋಗಿಸುತ್ತಾ ಸುಂದರನಾಗಿ ಕಂಡನು.
ಆದದಾನಂ ಶರಾನ್ ಘೋರಾನ್ ಸಂದಧಾನಂ ಚ ಪಾಂಡವಮ್ |

ವಿಸೃಜಂತಂ ಚ ಕೌಂತೇಯಂ ನ ಸ್ಮ ಪಶ್ಯಂತಿ ಲಾಘವಾತ್ ॥59॥
ಅರ್ಜುನನನು ಬತ್ತಳಿಕೆಯಿಂದ ಬಾಣವನ್ನು ತೆಗೆದುಕೊಳ್ಳುವುದನ್ನೂ, ಬಿಲ್ಲಿನಲ್ಲಿ ಬಾಣವನ್ನು ಹೂಡುವುದನ್ನೂ ಮತ್ತು ಹೆದೆಯನ್ನು ಎಳೆದುಬಿಡುವುದನ್ನೂ ಆ ಕ್ಷಿಪ್ರತೆಯಿಂದ (ವೇಗ) ಜನರು ಕಾಣುತ್ತಿರಲಿಲ್ಲ.
ಏಕಚ್ಛಾಯಮಿವಾಕಾಶಂ ಬಾಣೈಶ್ಚಕ್ರೇ ಸಮಂತತಃ|
ನಾದೃಶ್ಯತ ತದಾ ದ್ರೋಣೋ ನೀಹಾರೇಣೇವ ಸರ್ವತಃ ॥60॥
ತನ್ನ ಬಾಣಗಳಿಂದ ಆಕಾಶದಲ್ಲೆಲ್ಲಾ ಅರ್ಜುನನು ಒಂದೇ ಛಾಯೆಯನ್ನು ಮೂಡಿಸಿದನು. ಆಗ ದ್ರೋಣರು ಮಂಜಿನಿಂದ ಮುಚ್ಚಿಕೊಂಡವರಂತೆ ಯಾರಿಗೂ ಕಾಣಲಿಲ್ಲ.
ಮರೀಚಿವಿಕಚಸ್ಯೇವ ರಾಜನ್ ಭಾನುಮತೋ ವಪುಃ|
ಆಸೀತ್ ಪಾರ್ಥಸ್ಯ ಸುಮಹದ್ ವಪುಃ ಶರಶತಾರ್ಪಿತಮ್ ॥61॥
ಎಲೈ ರಾಜನೇ, ದ್ರೋಣರ ಬಾಣಗಳು ಅರ್ಜುನನ ಶರೀರದಲ್ಲಿ ನೆಟ್ಟು ಅರ್ಜುನನ ದೊಡ್ಡ ಶರೀರವು ಆ ಹೊಳೆಯುವ ಬಾಣಗಳಿಂದ ಕೂಡಿ ಕಿರಣಗಳು ಹೊರಹೊಮ್ಮುವ ಸೂರ್ಯನಂತೆ ಕಾಣುತ್ತಿದ್ದಿತು.
ಕ್ಷಿಪತಃ ಶರಜಾಲಾನಿ ಕೌಂತೇಯಸ್ಯ ಮಹಾತ್ಮನಃ|
ತಾನ್ ವಿಧೂಯ ಶರಾನ್ ಘೋರಾನ್ ದ್ರೋಣೋಽಪಿ ಸಮಿತಿಂಜಯಃ ॥
ಬಭಾಸೇ ತಿಮಿರಂ ವ್ಯೋಮ್ನಿ ವಿಧೂಯ ಸವಿತಾ ಯಥಾ ॥63॥
ಮಹಾತ್ಮನಾದ ಕೌಂತೇಯನು ಬಾಣದ ಬಲೆಯನ್ನು ಸೃಷ್ಟಿಸುವಾಗ ಸಮಿತಿಂಜಯರಾದ ದ್ರೋಣರೂ ಸಹ ಆ ಘೋರವಾದ ಬಾಣಗಳನ್ನು ನಿವಾರಿಸಿ ಕತ್ತಲೆಯನ್ನು ನಿವಾರಿಸಿದ ಸೂರ್ಯನು ಆಕಾಶದಲ್ಲಿ ಶೋಭಿಸುವಂತೆ ಶೋಭಿಸಿದರು.
ಅಗ್ನಿಚಕ್ರೋಪಮಂ ಘೋರಂ ಮಂಡಲೀಕೃತಮಾಹವೇ|
ವಿಕೃಷ್ಯ ಸುಮಹಚ್ಚಾಪಂ ಮೇಘಸ್ತನಿತನಿಸ್ವನಮ್ ॥64॥
ಅಸಕ್ತಂ ಮುಂಚತೋ ಬಾಣಾನ್ ದದೃಶುಃ ಕುರವೋ ಯುಧಿ ॥65॥
ಅಗ್ನಿಚಕ್ರದಂತಿರುವ, ಘೋರವಾದ, ಮಂಡಲಾಕಾರವಾದ, ಮೇಘ ಗರ್ಜನೆಯಂತೆ ನಾದವನ್ನು ಮಾಡುತ್ತಿದ್ದಂತಹ, ದೊಡ್ಡ ಚಾಪವನ್ನು ಎಳೆದು ಒಂದು ಬಾಣಕ್ಕೆ ಒಂದು ಬಾಣವು ತಾಕದಂತೆ ಅರ್ಜುನನು ಯುದ್ಧದಲ್ಲಿ ಬಾಣಗಳನ್ನು ಪ್ರಯೋಗಿಸುವುದನ್ನು ಕುರುಗಳು ನೋಡಿದರು.
ದಿಕ್ಷು ಸರ್ವಾಸು ವಿಪುಲಃ ಶುಶ್ರುವೇಽಥ ಜನೈಸ್ತಥಾ ॥66॥
ದ್ರೋಣಸ್ಯಾಪಿ ಧನುರ್ಘೋಷೋ ವಿದ್ಯುತ್ಸ್ತನಿತನಿಸ್ವನಃ|
ಅಭವದ್ ವಿಸ್ಮಯಕರಃ ಸೈನ್ಯಾನಾಂ ಭರತರ್ಷಭ ॥67॥
ಸಿಡಿಲು-ಮಿಂಚುಗಳಂತಿದ್ದ ದ್ರೋಣರ ವಿಪುಲವಾದ ಧನುರ್ಘೋಷವೂ ಆಗ ಎಲ್ಲ ದಿಕ್ಕುಗಳಲ್ಲಿಯೂ ಜನರಿಂದ ಕೇಳಲ್ಪಟ್ಟಿತು. ಎಲೈ ಭರತರ್ಷಭನೇ, ಅದು ಸೈನ್ಯಗಳಿಗೆ ವಿಸ್ಮಯವನ್ನು ಉಂಟು ಮಾಡಿತು.
ತಸ್ಯ ಜಾಂಬೂನದಮಯೈರ್ದೀಪ್ತೈರಗ್ನಿಸಮೈಃ ಶರೈಃ|
ಪ್ರಾಚ್ಛಾದಯದಮೇಯಾತ್ಮಾ ದಿಶಃ ಸೂರ್ಯಸ್ಯ ಚ ಪ್ರಭಾಮ್ ॥68॥
ಅನಂತರ ಸುವರ್ಣಮಯವಾದ, ಜ್ವಲಿಸುವ ಅಗ್ನಿಗೆ ಸಮಾನವಾದ ಶರಗಳಿಂದ ಅಪ್ರಮೇಯಾತ್ಮರಾದ ದ್ರೋಣರು ಎಲ್ಲ ದಿಕ್ಕುಗಳನ್ನೂ ಮತ್ತು ಸೂರ್ಯನ ಬೆಳಕನ್ನೂ ಮುಚ್ಚಿದರು.
ತತಃ ಕನಕಪುಂಖಾನಾಂ ಶರಾಣಾಂ ನತಪರ್ವಣಾಮ್|
ವಿಯದ್ಗತಾನಾಂ ಚರತಾಂ ದೃಶ್ಯಂತೇ ಬಹವೋ ಪ್ರಜಾಃ ॥69॥
ಆಗ ಸುವರ್ಣಪುಂಖ (ಬಾಣಗಳ ಹಿಂಭಾಗ) ವುಳ್ಳ, ಮುಂಭಾಗವು ಬಾಗಿದ ಆಕಾಶದಲ್ಲಿ ಸಂಚರಿಸುವ, ಬಾಣಗಳ ಅನೇಕ ಸಮೂಹಗಳು ಕಂಡುಬಂದವು.
ಶರಾಸನಾತ್ ತು ದ್ರೋಣಸ್ಯ ಪ್ರಭವಂತಿ ಸ್ಮ ಸಾಯಕಾಃ|
ಏಕೋ ದೀರ್ಘ ಇವಾಪಾಂಗಾತ್ ಪ್ರದೃಶ್ಯಂತೇ ಮಹಾಶರಾಃ ॥70॥
ಆಕಾಶೇ ಸಮದೃಶ್ಯಂತ ಹಂಸಾನಾಮಿವ ಪಂಕ್ತಯಃ ॥71॥
ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿ ದ್ರೋಣರ ಕಟಾಕ್ಷದಿಂದ ಪ್ರಾರಂಭಿಸಿ ಒಂದರ ಹಿಂದೆ ಒಂದು ಹೋಗುವ ಮಹಾಬಾಣಗಳು ಆಕಾಶದಲ್ಲಿ ಹೋಗುವ ಹಂಸಗಳ ಪಂಕ್ತಿಯಂತೆ ಕಂಡುಬಂದವು.
ಏವಂ ಸುವರ್ಣವಿಕೃತಾನ್ ವಿಮುಂಚಂತೌ ಬಹೂನ್ ಶರಾನ್|
ಆಕಾಶಂ ಸಂವೃತಂ ವೀರಾವುಲ್ಕಾಭಿರಿವ ಚಕ್ರತುಃ ॥72॥
ಹೀಗೆ ಇಬ್ಬರೂ ಸುವರ್ಣಮಯವಾದ ಅನೇಕ ಬಾಣಗಳನ್ನು ಪ್ರಯೋಗಿಸುತ್ತಾ ವೀರರಾದ ಅವರಿಬ್ಬರೂ ಆಕಾಶವನ್ನು ಉಲ್ಕೆಗಳಿಂದಲೋ ಎಂಬಂತೆ ತುಂಬಿದರು.
ತಯೋಃ ಶರಾಶ್ಚ ವಿಬಭುಃ ಕಂಕಬರ್ಹಿಣವಾಸಸಃ|
ಪಂಕ್ತ್ಯಃ ಶರದಿ ಮತ್ತಾನಾಂ ಸಾರಸಾನಾಮಿವಾಂಬರೇ ॥73॥
ಅವರಿಬ್ಬರ ಬಾಣಗಳು ಕಂಕ ಪಕ್ಷಿಯ ಗರಿಗಳಿಂದ ಭೂಷಿತವಾಗಿ ಶರತ್ಕಾಲದಲ್ಲಿ ಆಕಾಶದಲ್ಲಿ ಸಂಚರಿಸುವ ಮದಿಸಿದ ಸಾರಸಗಳ ಪಕ್ಷಿ ಸಾಲಿನಂತೆ ಶೋಭಿಸಿದವು.
ತತ್ತು ಯುದ್ಧಂ ಮಹದ್ಘೋರಂ ತಯೋಃ ಸಂರಬ್ಧಯೋರಭೂತ್|
ಅತ್ಯದ್ಭುತಮಚಿಂತ್ಯಂ ಚ ವೃತ್ರವಾಸವಯೋರ್ಯಥಾ ॥74॥

ಕೋಪಗೊಂಡ ಅವರಿಬ್ಬರಿಗೆ ನಡೆದ ಆ ಯುದ್ಧವು ವೃತ್ರವಾಸವರ ಯುದ್ಧದಂತೆ ಮಹಾಘೋರವೂ, ಅತ್ಯದ್ಭುತವೂ ಮತ್ತು ಅಚಿಂತ್ಯವೂ ಆಗಿದ್ದಿತು.
ಮಹಾಗಜಾವಿವಾಸಾದ್ಯ ವಿಷಾಣಾಗ್ರೈಃ ಪರಸ್ಪರಮ್ |
ಶರೈಃ ಪೂರ್ಣಾಯತೋತ್ಸೃಷ್ಟೈರನ್ಯೋನ್ಯಮಭಿಜಗ್ಮತುಃ ॥75॥
ಬಾಣಗಳನ್ನು ಪೂರ್ಣವಾಗಿ ಹಿಂದಕ್ಕೆ ಎಳೆದು ಪ್ರಯೋಗಿಸಿ ಪರಸ್ಪರವಾಗಿ ಅವರು ತಮ್ಮ ದಂತಗಳಿಂದ ಹೊಡೆದಾಡುವ ಮಹಾಗಜಗಳಂತೆ ಹೊಡೆದಾಡಿದರು.
ಅಥ ತ್ವಾಚಾರ್ಯಮುಖ್ಯೇನ ಶರಾನ್ ಸೃಷ್ಟಾನ್ ಶಿಲಾಶಿತಾನ್ |
ಅವಾರಯಚ್ಛಿತೈರ್ಬಾಣೈರರ್ಜುನೋ ಜಯತಾಂ ವರಃ ॥76॥
ಅನಂತರ ಜಯಶಾಲಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಶ್ರೇಷ್ಠರಾದ ಆಚಾರ್ಯರು ಪ್ರಯೋಗಿಸಿದ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳನ್ನು ತನ್ನ ಹರಿತವಾದ ಬಾಣಗಳಿಂದ ನಿವಾರಿಸಿದನು.
ದರ್ಶಯನ್ನೈಂದ್ರಿರಾತ್ಮಾನಮುಗ್ರಮುಗ್ರಪರಾಕ್ರಮಃ |
ಇಷುಭಿಸ್ತೂರ್ಣಮಾಕಾಶಂ ಬಹುಭಿಶ್ಚ ಸಮಾವೃಣೋತ್ ॥77॥
ಇಂದ್ರಪುತ್ರನಾದ ಅರ್ಜುನನು ತನ್ನನ್ನು ಉಗ್ರನು ಮತ್ತು ಉಗ್ರಪರಾಕ್ರಮ ಉಳ್ಳವನು ಎಂದು ತೋರಿಸುತ್ತಾ ಶೀಘ್ರವಾಗಿ ಅನೇಕ ಬಾಣಗಳಿಂದ ಆಕಾಶವನ್ನು ಮುಚ್ಚಿದನು.
ಜಿಘಾಂಸಂತಂ ನರವ್ಯಾಘ್ರಮರ್ಜುನಂ ಭೀಮತೇಜಸಮ್ |
ವಿವ್ಯಾಧ ನಿಶಿತೈರ್ದ್ರೋಣಃ ಶರೈಃ ಸನ್ನತಪರ್ವಭಿಃ ॥78॥
ತನ್ನನ್ನು ಪ್ರಹಾರ ಮಾಡಲು ಬರುತ್ತಿದ್ದ ಭಯಂಕರ ತೇಜಸ್ಸುಳ್ಳ ನರವ್ಯಾಘ್ರನಾದ ಅರ್ಜುನನನ್ನು ಬಾಗಿದ ತುದಿಗಳುಳ್ಳ ಹರಿತವಾದ ಬಾಣಗಳಿಂದ ದ್ರೋಣರು ಚದುರಿಸಿ ಯುದ್ಧವನ್ನು ಮಾಡಿದರು.
ಹೃಷ್ಟಃ ಸಮಭವದ್ ದ್ರೋಣೋ ರಣೇ ಶೌಂಡಃ ಪ್ರತಾಪವಾನ್ |
ಅರ್ಜುನೇನ ಸಮಂ ಕ್ರೀಡನ್ ಶರೈಃ ಸನ್ನತಪರ್ವಭಿಃ ॥79॥
ಪ್ರತಾಪಶಾಲಿಗಳೂ, ಮಹಾನಿಪುಣರೂ ಆದ ದ್ರೋಣರು ಯುದ್ಧದಲ್ಲಿ ಬಾಗಿದ ತುದಿಯುಳ್ಳ ಬಾಣಗಳಿಂದ ಅರ್ಜುನನ ಜೊತೆಯಲ್ಲಿ ಕ್ರೀಡೆಯನ್ನು ಮಾಡುತ್ತಾ ಸಂತೋಷಗೊಂಡರು.
ತೌ ವ್ಯದಾರಯತಾಂ ಶೂರೌ ಸಂರಬ್ಧೌ ರಣಮೂರ್ದ್ಧನಿ |
ಉದೀರಯಂತೌ ದಿವ್ಯಾನಿ ಬ್ರಹ್ಮಾದ್ಯಸ್ತ್ರಾಣಿ ಸರ್ವಶಃ ॥80॥
ಆ ಇಬ್ಬರು ಶೂರರೂ ಕೋಪಗೊಂಡವರಾಗಿ ಉನ್ನತ ರಣದಲ್ಲಿ ದಿವ್ಯವಾದ ಬ್ರಹ್ಮಾಸ್ತ್ರ ಮೊದಲಾದವುಗಳನ್ನು ಪ್ರಯೋಗಿಸುತ್ತಾ ಎಲ್ಲವನ್ನೂ ಭೇದಿಸಿದರು.
ಪಾರ್ಥಃ ಸ ಸಮರೇ ಶೂರೋ ದರ್ಶಯನ್ ವೀರ್ಯಮಾತ್ಮನಃ |
ಸುಮಹಾಸ್ತ್ರೈರ್ಮಹಾತ್ಮಾನಂ ದ್ರೋಣಂ ಪ್ರಾಚ್ಛಾದಯಚ್ಛರೈಃ ॥81॥
ಅಸ್ತ್ರೈರಸ್ತ್ರಾಣಿ ಸಂವಾರ್ಯ ಪಾರ್ಥೋ ದ್ರೋಣಮವಾರಯತ್ ॥82॥
ಅರ್ಜುನನು ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿಸುವವನಾಗಿ ಮಹಾತ್ಮರಾದ ದ್ರೋಣರನ್ನು ತನ್ನ ಮಹಾಸ್ತ್ರಗಳಿಂದಲೂ ಮತ್ತು ಬಾಣಗಳಿಂದಲೂ ಮುಚ್ಚಿದನು. ಅರ್ಜುನನು ತನ್ನ ಅಸ್ತ್ರಗಳಿಂದ ದ್ರೋಣರ ಅಸ್ತ್ರಗಳನ್ನು ನಿವಾರಿಸಿ ದ್ರೋಣರನ್ನು ಮುಚ್ಚಿದನು.
ತಯೋರಾಸೀತ್ ಸಂಪ್ರಹಾರಃ ಕ್ರುದ್ಧಯೋರ್ನರಸಿಂಹಯೋಃ |
ಅಮೃಷ್ಯಮಾಣಯೋಃ ಸಂಖೇ ಬಲಿವಾಸವಯೋರಿವ ॥83॥
ದರ್ಶಯೇತಾಂ ಮಹಾಸ್ತ್ರಾಣಿ ಭಾರದ್ವಾಜಾರ್ಜುನಾವುಭೌ ॥84॥
ಕ್ರುದ್ಧರಾದ ಯುದ್ಧದಲ್ಲಿ ಪರಸ್ಪರವಾಗಿ ಸಹಿಸದಿರುವ ಆ ಇಬ್ಬರು ನರಶ್ರೇಷ್ಠರಿಗೆ ಉಂಟಾದ ಆ ಸಂಪ್ರಹಾರವು ಬಲಿ ಮತ್ತು ಇಂದ್ರರಿಗೆ ಉಂಟಾದ ಸಂಪ್ರಹಾರದಂತೆ ಇದ್ದಿತು. ದ್ರೋಣ ಮತ್ತು ಅರ್ಜುನರಿಬ್ಬರೂ ತಮ್ಮ ಮಹಾಸ್ತ್ರಗಳನ್ನು ಪ್ರದರ್ಶಿಸಿದರು.
ಐಂದ್ರಂ ವಾಯವ್ಯಮಾಗ್ನೇಯಮಸ್ತ್ರಮಸ್ತ್ರೇಣ ಪಾಂಡವಃ |
ಮುಕ್ತಂ ಮುಕ್ತಂ ದ್ರೋಣಚಾಪಾದ್ ಗ್ರಸತೇ ಸ್ಮ ಪುನಃ ಪುನಃ ॥85॥
ದ್ರೋಣ ಚಾಪದಿಂದ ಹೊರಹೊಮ್ಮಿದ ಐಂದ್ರಾಸ್ತ್ರ, ವಾಯವ್ಯಾಸ್ತ್ರ, ಆಗ್ನೇಯಾಸ್ತ್ರ ಮೊದಲಾದವುಗಳನ್ನು ಅವರು ಅಸ್ತ್ರಪ್ರಯೋಗವನ್ನು ಮಾಡಿದಂತೆ ಮಾಡಿದಂತೆ ಪುನಃ ಪುನಃ ಅರ್ಜುನನು ಎಲ್ಲವನ್ನೂ ನುಂಗಿದನು (ನಾಶ ಮಾಡಿದನು).
ಏವಂ ಶೂರೌ ಮಹೇಷ್ವಾಸೌ ವಿಸೃಜಂತೌ ಶರಾನ್ ಶಿತಾನ್ |
ಏಕಚ್ಛಾಯಮಕುರ್ವಾತಾಂ ಗಗನಂ ಶರವೃಷ್ಟಿಭಿಃ ॥86॥
ಹೀಗೆ ಮಹಾಧನುರ್ಧಾರಿಗಳೂ, ಶೂರರೂ ಆದ ಅವರು ಹರಿತವಾದ ಬಾಣಗಳಿಂದ ಉಂಟಾದ ಬಾಣಗಳ ಮಳೆಯಿಂದ ಆಕಾಶದಲ್ಲಿ ಒಂದೇ ಛಾಯೆಯನ್ನು ಮೂಡಿಸಿದರು.
ತತೋಽರ್ಜುನೇ ನ ಮುಕ್ತಾನಾಂ ಪತತಾಂ ಚ ಶರೀರಿಷು |
ಪರ್ವತೇಷ್ವಿವ ವಜ್ರಾಣಾಂ ಶರಾಣಾಂ ಶ್ರೂಯತೇ ಸ್ವನಃ ॥87॥
ಆಗ ಅರ್ಜುನನಿಂದ ಮುಕ್ತವಾದ, ಸೈನಿಕರ ಶರೀರದಲ್ಲಿ ಬೀಳುವ ಬಾಣಗಳ ಶಬ್ದವು ಪರ್ವತದ ಮೇಲೆ ಪ್ರಯೋಗಿಸಲ್ಪಟ್ಟ ವಜ್ರಾಯುಧದ ಶಬ್ದದಂತೆ ಕೇಳಿಬರುತ್ತಿದ್ದಿತು.
ತತೋ ನಾಗಾ ರಥಾಶ್ವಾಶ್ಚ ಸಾದಿನಶ್ಚ ವಿಶಾಂಪತೇ |

ಶೋಣಿತಾಕ್ತಾಶ್ಚ ದೃಶ್ಯಂತೇ ಪುಷ್ಪಿತಾ ಇವ ಕಿಂಶುಕಾಃ ॥88॥
ಆಗ ಗಜಗಳೂ, ರಥಗಳೂ, ಅಶ್ವಗಳೂ, ಅಶ್ವಸವಾರರೂ, ಎಲ್ಲರೂ ರಕ್ತದಲ್ಲಿ ಅದ್ದಲ್ಪಟ್ಟು ಹೂ ಅರಳಿದ ಮುತ್ತುಗದ ಮರದಂತೆ ಕಂಡುಬಂದರು.
ಬಾಹುಭಿಶ್ಚ ಸಕೇಯೂರೈರ್ನಿಕೃತ್ತೈಶ್ಚ ಮಹಾರಥೈಃ |
ಸುವರ್ಣಚಿತ್ರೈಃ ಕವಚೈರ್ಧ್ವಜೈಶ್ಚ ವಿನಿಪಾತಿತೈಃ ॥89॥
ಯೋಧೈಶ್ಚ ನಿಹತೈಸ್ತತ್ರ ಪಾರ್ಥಬಾಣಾಭಿಪೀಡಿತೈಃ |
ಬಲಮಾಸೀತ್ ಸಮುದ್ಭ್ರಾಂತಂ ದ್ರೋಣಾರ್ಜುನಸಮಾಗಮೇ ॥90॥
ದ್ರೋಣಾರ್ಜುನ ಸಮಾಗಮ ಉಂಟಾದಾಗ ಕತ್ತರಿಸಲ್ಪಟ್ಟ ಕೇಯೂರಸಹಿತವಾದ ಬಾಹುಗಳು, ಉರಿದು ಬಿದ್ದ ಮಹಾರಥಗಳು, ಸುವರ್ಣಾಲಂಕೃತವಾದ ಕವಚಗಳು, ಕೆಳಗೆ ಬಿದ್ದ ಧ್ವಜಗಳು, ಅರ್ಜುನನ ಬಾಣದಿಂದ ಪೀಡಿತರಾಗಿ ಮೃತರಾದ ಯೋಧರು ಇವುಗಳನ್ನು ರಣರಂಗದಲ್ಲಿ ನೋಡಿದ ಸೈನ್ಯವು ಉದ್ಭ್ರಾಂತವಾಯಿತು.
ವಿಧೂನ್ವಾನೌ ತು ತೌ ವೀರೌ ಧನುಷೀ ಭಾರಸಾಧನೇ |
ಪ್ರಾಚ್ಛಾದಯೇತಾಮನ್ಯೋನ್ಯಂ ದಿಧಕ್ಷಂತೌ ಮಹೇಷುಭಿಃ ॥91॥
ವೀರರಾದ ಅವರಿಬ್ಬರೂ ತಮ್ಮಿಬ್ಬರ ಭಾರಸಾಧನವಾದ ಧನುಸ್ಸುಗಳನ್ನು ತೂಗಾಡಿಸುತ್ತಾ ದೊಡ್ಡ ಬಾಣಗಳಿಂದ ಪರಸ್ಪರವಾಗಿ ಸುಡಲು ಇಚ್ಛಿಸುತ್ತಾ ಪರಸ್ಪರವಾಗಿ ಮುಚ್ಚಿದರು.
ಅಥಾಂತರಿಕ್ಷೇ ನಾದೋಽಭೂದ್ ದ್ರೋಣಂ ತತ್ರ ಪ್ರಶಂಸತಾಮ್ ॥
ದುಷ್ಕರಂ ಕೃತವಾನ್ ದ್ರೋಣೋ ಯದರ್ಜುನಮಯೋಧಯತ್ |
ಪ್ರಮಾಥಿನಂ ಮಹಾವೀರ್ಯಂ ದೃಢಮುಷ್ಟಿಂ ದುರಾಸದಮ್ ॥93॥
ಜೇತಾರಂ ಸರ್ವಸೈನ್ಯಾನಾಂ ಸರ್ವೇಷಾಂ ಚ ಮಹಾರಥಮ್ ॥94॥
ಅನಂತರ ಆಕಾಶದಲ್ಲಿ ದ್ರೋಣರನ್ನು ಹೀಗೆ ಪ್ರಶಂಸಿಸುವರ ಮಹಾನಾದವು ಉಂಟಾಯಿತು. ಶತ್ರುಗಳನ್ನು ಕಲಕುವವನೂ, ಮಹಾವೀರ್ಯನೂ, ದೃಢಮುಷ್ಟಿಯೂ, ಸಮೀಪಕ್ಕೆ ಹೋಗಲು ಅಸಾಧ್ಯನಾದವನೂ, ಎಲ್ಲ ಸೈನ್ಯವನ್ನೂ ಜಯಿಸುವವನೂ ಮತ್ತು ಎಲ್ಲಾ ರಥಿಕರಲ್ಲೂ ಮಹಾರಥನಾದವನೂ ಆದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿ ದ್ರೋಣರು ದುಷ್ಕರವಾದ ಮಹಾಕಾರ್ಯವನ್ನು ಮಾಡಿದರು (ಎಂದು ಕೇಳಿಬಂದಿತು).
ಅವಿಭ್ರಮಂ ಚ ಶಿಕ್ಷಾಂ ಚ ಲಾಘವಂ ದೂರಪಾತನಮ್ |
ಪಾರ್ಥಸ್ಯ ಸಮರೇ ದೃಷ್ಟ್ವಾ ದ್ರೋಣಸ್ಯಾಸೀತ್ ಸುವಿಸ್ಮಯಃ ॥95॥
ಯುದ್ಧದಲ್ಲಿ ಅರ್ಜುನನ ಸಮಾಧಾನವನ್ನೂ, ಅಭ್ಯಾಸವನ್ನೂ, ವೇಗವನ್ನೂ, ದೂರಪಾತವನ್ನೂ ನೋಡಿ ದ್ರೋಣರಿಗೆ ಬಹಳ ಆಶ್ಚರ್ಯವಾಯಿತು.
ತತ್ ಪ್ರವೃತ್ತಂ ಚಿರಂ ಘೋರಂ ತಯೋರ್ಯುದ್ಧಂ ಮಹಾತ್ಮನೋಃ |
ಅವರ್ತತ ಮಹಾರೌದ್ರಂ ಲೋಕಸಂಕ್ಷೋಭಕಾರಕಮ್ ॥96॥
ಆ ಇಬ್ಬರು ಮಹಾತ್ಮರಿಗೆ ಬಹಳ ಕಾಲದವರೆಗೆ ಘೋರವೂ, ಮಹಾಭಯಂಕರವೂ, ಲೋಕಸಂಕ್ಷೋಭಕಾರಕವೂ ಆದ ಯುದ್ಧವು ನಡೆಯಿತು.
ಅಥ ಗಾಂಡೀವಮುದ್ಯಮ್ಯ ದಿವ್ಯಂ ಧನುರಮರ್ಷಣಃ |
ವಿಚಕರ್ಷ ರಣೇ ಪಾರ್ಥೋ ಬಾಹುಭ್ಯಾಂ ಭರತರ್ಷಭಃ ॥97॥
ಅನಂತರ ಭರತರ್ಷಭನಾದ ಅರ್ಜುನನು ಸಿಟ್ಟುಗೊಂಡು ಯುದ್ಧದಲ್ಲಿ ತನ್ನ ಬಾಹುಗಳಿಂದ ದಿವ್ಯವಾದ ಗಾಂಡೀವ ಧನುಸ್ಸನ್ನು ಎತ್ತಿ ಹೆದೆಯನ್ನು ಎಳೆದನು.
ತಸ್ಯ ಬಾಣಮಯಂ ವರ್ಷಂ ಶಲಭಾನಾಮಿವಾಭವತ್ |
ನ ಚ ಬಾಣಾಂತರೇ ತಸ್ಯ ವಾಯುಃ ಶಕ್ನೋತಿ ಸರ್ಪಿತುಮ್ ॥98॥
ಪತಂಗಗಳ ಪಂಕ್ತಿಯಂತೆ ಇರುವ ಬಾಣಗಳ ಮಳೆಯನ್ನು ಸೃಷ್ಟಿಸಿದನು. ಆ ಬಾಣಗಳ ಮಧ್ಯದಲ್ಲಿ ವಾಯುವೂ ನುಸುಳಲು ಸಾಧ್ಯವಿರಲಿಲ್ಲ.
ಅಭೀಕ್ಷ್ಣಂ ಸಂದಧಾನಸ್ಯ ಬಾಣಾನುತ್ಸೃಜತಸ್ತದಾ |
ದದೃಶೇ ನಾಂತರಂ ಕಿಂಚಿತ್ ಪಾರ್ಥಸ್ಯ ಪತತೋಽಪಿ ಚ ॥99॥
ಸತತವಾಗಿ ಬಾಣಗಳನ್ನು ಹೂಡುವ, ಅವುಗಳನ್ನು ಎಳೆದು ಪ್ರಯೋಗಿಸುವ, ಮತ್ತು ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸುವ, ಅರ್ಜುನನಲ್ಲಿ ಮಧ್ಯೆ ಯಾವ ಅಂತರವೂ ಕಾಣಲಿಲ್ಲ.
ಯುದ್ಧೇ ತು ಕೃತಶೀಘ್ರಾಸ್ತ್ರೇ ವರ್ತಮಾನೇಽತಿದಾರುಣೇ |
ಶೀಘ್ರಾಚ್ಛೀಘ್ರತರಂ ಪಾರ್ಥಃ ಶರಾನನ್ಯಾನುದೈರಯತ್ ॥100॥
ತತಃ ಶತಸಹಸ್ರಾಣಿ ಶರಾಣಾಂ ನತಪರ್ವಣಾಮ್ |
ಯುಗಪತ್ ಪ್ರಾಪತಂಸ್ತತ್ರ ದ್ರೋಣಸ್ಯ ರಥಮಂತಿಕಾತ್ ॥101॥
ಶೀಘ್ರಾಸ್ತ್ರವನ್ನು ಹೊಂದಿದ ಅರ್ಜುನನು ಅತಿದಾರುಣವಾಗಿ ಯುದ್ಧವನ್ನು ಮಾಡುತ್ತಿರುವಾಗ ಶೀಘ್ರಗಳಿಗಿಂತ ಶೀಘ್ರಗಳಾದ ಬಾಣಗಳನ್ನು ಸೃಷ್ಟಿಸಿದನು. ಅನಂತರ ಬಾಗಿದ ತುದಿಯುಳ್ಳ ಒಂದು ಲಕ್ಷ ಬಾಣಗಳನ್ನು ಅರ್ಜುನನು ದ್ರೋಣರ ರಥದ ಸಮೀಪದಲ್ಲಿ ಬೀಳುವಂತೆ ಸೃಷ್ಟಿಸಿದನು.
ವಿಕೀರ್ಯಮಾಣೇ ದ್ರೋಣೇ ತು ಶರೈರ್ಗಾಂಡೀವಧನ್ವನಾ |

ಹಾಹಾಕಾರೋ ಮಹಾನಾಸೀತ್ ಸೈನ್ಯಾನಾಂ ಭರತರ್ಷಭ ॥102॥
ಎಲೈ ಭರತರ್ಷಭನೇ, ದ್ರೋಣರಿಗೆ ಹೀಗೆ ಗಾಂಡೀವ ಮುಕ್ತವಾದ ಶರಗಳಿಂದ ಸೈನ್ಯಗಳಲ್ಲಿ ದೊಡ್ಡ ಹಾಹಾಕಾರ ಉಂಟಾಯಿತು.
ಪಾಂಡವಸ್ಯ ಚ ಶೀಘ್ರಾಸ್ತ್ರಂ ಮಘವಾನ್ ಸಮಪೂಜಯತ್ |
ಗಂಧರ್ವಾಪ್ಸರಸಶ್ಚೈವ ಯೇ ಚ ತತ್ರ ಸಮಾಗತಾಃ ॥103॥
ಪಾಂಡವನಾದ ಅರ್ಜುನನ ಅಸ್ತ್ರಗಳ ಶೀಘ್ರತೆಯನ್ನು ನೋಡಿ ಇಂದ್ರನೂ, ಅಲ್ಲಿಗೆ ಬಂದಿದ್ದ ಗಂಧರ್ವಾಪ್ಸರಸರೂ ಪೂಜಿಸಿದರು.
ದ್ರೋಣಂ ಯುದ್ಧಾರ್ಣವೇ ಮಗ್ನಂ ದೃಷ್ಟ್ವಾ ಪುತ್ರಃ ಪ್ರತಾಪವಾನ್ |
ತತೋ ವೃಂದೇನ ಮಹತಾ ರಥಿನಾಂ ರಥಯೂಥಪಃ ॥104॥
ಆಚಾರ್ಯಪುತ್ರಸ್ತು ಶರೈಃ ಪಾಂಡವಂ ಪ್ರತ್ಯವಾರಯತ್ ॥105॥
ದ್ರೋಣರು ಹೀಗೆ ಯುದ್ಧಸಾಗರದಲ್ಲಿ ಮುಳುಗಿದುದನ್ನು ನೋಡಿ ಪ್ರತಾಪಶಾಲಿಯೂ, ಮಹಾರಥರ ಯೂಥಗಳಿಗೆ (ಸಮೂಹ) ಒಡೆಯನೂ ಆದ ಆಚಾರ್ಯಪುತ್ರನಾದ ಅಶ್ವತ್ಥಾಮನು ರಥದ ಸಮೂಹದಿಂದ ಅರ್ಜುನನ ಸಮೀಪಕ್ಕೆ ಬಂದು ಅವನನ್ನು ತಡೆದನು.
ಅಶ್ವತ್ಥಾಮಾ ತು ತತ್ಕರ್ಮ ಹೃದಯೇನ ಮಹಾತ್ಮನಃ |
ಪೂಜಯಾಮಾಸ ಪಾರ್ಥಸ್ಯ ಕೋಪಂ ಚಾಸ್ಯ ತದಾಽಕರೋತ್ ॥106॥
ಅಶ್ವತ್ಥಾಮನು ಮಹಾತ್ಮನಾದ ಅರ್ಜುನನ ಆ ಸಾಹಸಕರ್ಮವನ್ನು ಮನಸ್ಸಿನಲ್ಲಿಯೇ ಪೂಜಿಸಿ ಆಗ ಅವನ ಮೇಲೆ ಕೋಪವನ್ನು ಮಾಡಿದನು.
ಸ ಮನ್ಯುವಶಮಾಪನ್ನಃ ಪಾರ್ಥಮಭ್ಯದ್ರವದ್ ರಣೇ |
ಕಿರನ್ ಶತಸಹಸ್ರಾಣಿ ಪರ್ಜನ್ಯ ಇವ ವೃಷ್ಟಿಮಾನ್ ॥107॥
ಅವನು ಕೋಪಕ್ಕೆ ವಶನಾಗಿ ಮಳೆಯನ್ನು ಸುರಿಸುವ ಪರ್ಜನ್ಯನಂತೆ ಸಹಸ್ರಾರು ಶರಗಳನ್ನು ಸೃಷ್ಟಿಸುತ್ತಾ ಯುದ್ಧದಲ್ಲಿ ಅರ್ಜುನನ ಕಡೆಗೆ ಧಾವಿಸಿದನು.
ಆವೃತ್ಯ ಸ ಮಹಾಬಾಹುರ್ಯತೋ ದ್ರೌಣಿಸ್ತತೋ ಹಯಾನ್ |
ಅಂತರಂ ಪ್ರದದೌ ಪಾರ್ಥೋ ದ್ರೋಣಸ್ಯ ವ್ಯಪಸರ್ಪಿತುಮ್ ॥108॥
ಮಹಾಬಾಹುವಾದ ಅರ್ಜುನನು ತನ್ನ ರಥವನ್ನು ಅಶ್ವತ್ಥಾಮರಿದ್ದ ಕಡೆಗೆ ತಿರುಗಿಸಿ ದ್ರೋಣರಿಗೆ ಹಿಂದೆ ಸರಿಯಲು ಅವಕಾಶವನ್ನು ಮಾಡಿಕೊಟ್ಟನು.
ಸ ತು ಲಬ್ಧ್ವಾಂತರಸ್ತೂರ್ಣಮಪಯಾಜ್ಜವನೈರ್ಹಯೈಃ |
ಛಿನ್ನವರ್ಮಧ್ವಜರಥೋ ನಿಕೃತ್ತಃ ಪರಮೇಷುಭಿಃ ॥109॥
ಅವಕಾಶವನ್ನು ಪಡೆದ ದ್ರೋಣರು ತಮ್ಮ ಕವಚ ಧ್ವಜರಥಗಳೆಲ್ಲವೂ ಛಿನ್ನವಾಗಿ ಅರ್ಜುನನ ಶ್ರೇಷ್ಠವಾದ ಬಾಣಗಳಿಂದ ದೇಹದಲ್ಲಿ ಗಾಯವಾಗಿರಲು ಶೀಘ್ರವಾಗಿ ಹೋಗುವ ಅಶ್ವಗಳಿಂದ ರಣಭೂಮಿಯಿಂದ ಹೊರಟುಹೋದರು.
ಪರಾಜಿತೇ ರಣೇ ದ್ರೋಣೇ ದ್ರೋಣಪುತ್ರಃ ಸಮಾಗತಃ |
ಸದಂಡ ಇವ ರಕ್ತಾಕ್ಷಃ ಕೃತಾಂತಃ ಸಮರೇ ಸ್ಥಿತಃ ॥110॥
ದ್ರೋಣರು ಯುದ್ಧದಲ್ಲಿ ಪರಾಜಿತರಾಗುತ್ತಿರಲು ದ್ರೋಣಪುತ್ರರಾದ ಅಶ್ವತ್ಥಾಮರು ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ದಂಡವನ್ನು ಹಿಡಿದ ಯಮನಂತೆ ಯುದ್ಧದಲ್ಲಿ ಉಪಸ್ಥಿತರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
ಗೋಗ್ರಹಣಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಐವತ್ತೊಂಬತ್ತನೆಯ ಅಧ್ಯಾಯ
ಅಶ್ವತ್ಥಾಮನ ಪರಾಜಯ
ವೈಶಂಪಾಯನಃ
ತಂ ಪಾರ್ಥಃ ಪ್ರತಿಜಗ್ರಾಹ ವಾಯುವೇಗಮಿವೋದ್ಧತಃ |
ಶರಜಾಲೇನ ಮಹತಾ ವರ್ಷಮಾಣ ಇವಾಂಬುದಃ ॥1॥
ವೈಶಂಪಾಯನ ವಾಯುವೇಗದಂತೆ ಬಂದ ಅಶ್ವತ್ಥಾಮರನ್ನು ಉದ್ಧತವಾದ ಮೋಡವು ಮಳೆಯನ್ನು ಸುರಿಸುವಂತೆ ದೊಡ್ಡ ಬಾಣಗಳ ಜಾಲದ ಮಳೆಯನ್ನು ಸುರಿಸುತ್ತಾ ಅರ್ಜುನನು ಎದುರಿಸಿದನು.
ತಯೋರ್ದೇವಾಸುರಸಮಃ ಸನ್ನಿಪಾತೋ ಮಹಾನಭೂತ್ |
ಕಿರತೋಃ ಶರಜಾಲಾನಿ ವೃತ್ರವಾಸವಯೋರಿವ ॥2॥
ಶರಜಾಲಗಳನ್ನು ಎಸೆಯುತ್ತಾ ವೃತ್ರ ಮತ್ತು ಇಂದ್ರನಂತೆ ಯುದ್ಧವನ್ನು ಮಾಡುತ್ತಿದ್ದ ಅವರ ದೊಡ್ಡ ಹೋರಾಟವು ದೇವಾಸುರರ ಹೋರಾಟಕ್ಕೆ ಸಮನಾಗಿದ್ದಿತು.
ನ ಸ್ಮ ಸೂರ್ಯಸ್ತದಾ ಭಾತಿ ನ ಚ ವಾತಿ ಸಮೀರಣಃ |
ಶರಜಾಲೇ ಕೃತೇ ವ್ಯೋಮ್ನಿ ಛಾಯಾಭೂತಮಿವಾಭವತ್ ॥3॥
ಆಗ ಸೂರ್ಯನೂ ಪ್ರಕಾಶಿಸಲಿಲ್ಲ. ವಾಯುವೂ ಬೀಸಲಿಲ್ಲ. ಶರಜಾಲವು ಆಕಾಶದಲ್ಲಿ ಹರಡಿದಾಗ ಎಲ್ಲ ಕಡೆಯಲ್ಲಿಯೂ ನೆರಳು ಉಂಟಾದಂತೆ ಆಯಿತು.

ಮಹಾಂಶ್ಚಟಾಚಟಾಶಬ್ದೋ ಯೋಧಯೋರ್ಯುಧ್ಯಮಾನಯೋಃ |
ದಹ್ಯತಾಮಿವ ವೇಣೂನಾಮಾಸೀತ್ ಪರಮದಾರುಣಃ ॥4॥
ಯುದ್ದ ಮಾಡುವ ಅವರಿಂದ ಉಂಟಾದ ಚಟಚಟಾಶಬ್ದವು ಉರಿಯುವ ಬಿದಿರುಗಳ ಶಬ್ದದಂತೆ ಪರಮ ದಾರುಣವಾಗಿದ್ದಿತು.
ಹಯಾಂಸ್ತಸ್ಯಾರ್ಜುನಃ ಸಂಖ್ಯೇ ಕೃತವಾನಲ್ಪಚೇತಸಃ |
ತೇ ರಾಜನ್ನ ಪ್ರಜಾನಂತಿ ದಿಶಂ ಕಾಂಚನ ಮೋಹಿತಾಃ ॥5॥
ಅಶ್ವತ್ಥಾಮರ ಅಶ್ವಗಳನ್ನು ಅರ್ಜುನನು ಯುದ್ಧದಲ್ಲಿ ಮೂಢಚೇತನಗಳನ್ನಾಗಿ ಮಾಡಿದನು. ಮೋಹಿತವಾದ ಆ ಅಶ್ವಗಳು ಎಲ್ಲೈ ರಾಜನೇ ಯಾವ ದಿಕ್ಕೂ ತಿಳಿಯಲಿಲ್ಲ.
ತತೋ ದ್ರೌಣಿರ್ಮಹಾವೀರ್ಯಃ ಪಾರ್ಥಸ್ಯ ವಿಚರಿಷ್ಯತಃ |
ವಿವರಂ ಸೂಕ್ಷ್ಮಮಾಲೋಕ್ಯ ಜ್ಯಾಂ ನುನೋದ ಕ್ಷುರೇಣ ಚ ॥6॥
ಆಗ ಮಹಾಪರಾಕ್ರಮಶಾಲಿಗಳಾದ ಅಶ್ವತ್ಥಾಮರು ಯುದ್ಧದಲ್ಲಿ ಸಂಚರಿಸುವ ಅರ್ಜುನನ ಒಂದು ಸೂಕ್ಷ್ಮ ಅವಕಾಶವನ್ನು ನೋಡಿ ಅವನ ಧನುಸ್ಸಿನ ಹೆದೆಯನ್ನು ಕ್ಷುರದಿಂದ ಕತ್ತರಿಸಿದರು.
ತದಸ್ಯಾಪೂಜಯನ್ ದೇವಾಃ ಕರ್ಮ ದೃಷ್ಟ್ವಾಽತಿಮಾನುಷಮ್ |
ನ ಶಕ್ತೋಽನ್ಯಃ ಪುಮಾನ್ ಸ್ಥಾತುಮ್ ಋತೇ ದ್ರೌಣೇರ್ಧನಂಜಯಮ್॥
ಅವರ ಈ ಅತಿಮಾನುಷ ಕರ್ಮವನ್ನು ನೋಡಿ ದೇವತೆಗಳು ಅಶ್ವತ್ಥಾಮರನ್ನು ಬಿಟ್ಟು ಅರ್ಜುನನ ಎದುರಿಗೆ ಇನ್ನೊಬ್ಬ ಪುರುಷನು ನಿಲ್ಲಲಾರ ಎಂದು ಹೇಳಿ ಅವರ ಆ ಕರ್ಮವನ್ನು ಪೂಜಿಸಿದರು.
ತತೋ ದ್ರೌಣಿರ್ಧನೂಂಷ್ಯಷ್ಟೌ ವ್ಯತಿಕ್ರಮ್ಯ ನರರ್ಷಭಃ |
ಪುನರಭ್ಯಹನತ್ ಪಾರ್ಥಂ ಹೃದಯೇ ಕಂಕಪತ್ರಿಭಿಃ ॥8॥
ಅನಂತರ ನರರ್ಷಭರಾದ ಅಶ್ವತ್ಥಾಮರು ಎಂಟು ಧನುರ್ಧಾರಿಗಳನ್ನು ದಾಟಿ ಪುನಃ ಪಾರ್ಥನ ಹೃದಯಕ್ಕೆ ಕಂಕಪತ್ರಗಳನ್ನುಳ್ಳ ಬಾಣಗಳಿಂದ ಹೊಡೆದರು.
ತತಃ ಪಾರ್ಥೋ ಮಹಾಬಾಹುಃ ಪ್ರಹಸನ್ ಸ್ವನವತ್ ತದಾ |
ಯೋಜಯಾಮಾಸ ಚ ತದಾ ಮೌರ್ವ್ಯಾ ಗಾಂಡೀವಮೋಜಸಾ ॥9॥
ಆಗ ಮಹಾಬಾಹುವಾದ ಅರ್ಜುನನು ಗಟ್ಟಿಯಾಗಿ ನಗುತ್ತಾ ಗಾಂಡೀವ ಧನುಸ್ಸಿಗೆ ಹೆದೆಯನ್ನು ಪುನಃ ಜೋಡಿಸಿದನು (ಗಾಂಡೀವ ಧನುಸ್ಸಿನ ಹೆದೆಯನ್ನು ಕತ್ತರಿಸಿದರೆ ಅದುತಾನೇ ಬೆಳೆದು ಮೊದಲಿನಂತೆ ಆಗುತ್ತದೆ. ಅದನ್ನು ತೆಗೆದು ಬೇರೆ ಹೆದೆಯನ್ನು ಕಟ್ಟುವ ಪ್ರಸಂಗವಿಲ್ಲ-ವಾದಿರಾಜರು).
ತಂ ದೃಷ್ಟ್ವಾ ಕ್ರುದ್ಧಮಾಯಾಂತಂ ಪ್ರಭಿನ್ನಮಿವ ಕುಂಜರಮ್ |
ಕ್ರುದ್ಧಃ ಸಮಾಹ್ವಯಾಮಾಸ ದ್ರೌಣಿರ್ಯುದ್ಧಾಯ ಭಾರತ ॥10॥
ಎಲ್ಲೈ ಭಾರತನೇ, ಮದಿಸಿದ ಆನೆಯಂತೆ ನುಗ್ಗಿಬರುತ್ತಿದ್ದ ಅರ್ಜುನನನ್ನು ನೋಡಿ ಕೋಪಗೊಂಡ ಅಶ್ವತ್ಥಾಮರು ಅವನನ್ನು ಯುದ್ಧಕ್ಕೆ ಆಹ್ವಾನ ಮಾಡಿದರು.
ತತೋಽರ್ಧಚಂದ್ರಮಾಹೃತ್ಯ ತೇನ ಪಾರ್ಥಃ ಸಮಾಹತಃ |
ವಾರಣೇನೇವ ಮತ್ತೇನ ಮತ್ತೋ ವಾರಣಯೂಥಪಃ ॥11॥
ಅನಂತರ ಅಶ್ವತ್ಥಾಮರು ಅರ್ಧಚಂದ್ರವನ್ನು ತೆಗೆದುಕೊಂಡು ಒಂದು ಮದಗಜವು ಇನ್ನೊಂದು ಸಲಗನಾದ ಮದಗಜವನ್ನು ಎದುರಿಸಿದಂತೆ ಅರ್ಜುನನಿಗೆ ಪ್ರಹಾರ ಮಾಡಿದರು.
ತತಃ ಪ್ರವವೃತೇ ಯುದ್ಧಂ ಪೃಥಿವ್ಯಾಮೇಕವೀರಯೋಃ |
ರಣಮಧ್ಯೇ ತಯೋರಾಸೀತ್ ಸುಮಹದ್ರೋಮಹರ್ಷಣಮ್ ॥12॥
ಅನಂತರ ಭೂಮಿಯಲ್ಲಿ ಏಕವೀರರಾದ ಅವರಿಬ್ಬರಿಗೆ ರಣರಂಗದಲ್ಲಿ ರೋಮಾಂಚನಕಾರಿಯಾದ ದೊಡ್ಡ ಯುದ್ಧವು ನಡೆಯಿತು.
ತೌ ವೀರೌ ಕುರವಃ ಸರ್ವೇ ದದೃಶುರ್ವಿಸ್ಮಯಾನ್ವಿತಾಃ |
ಯುಧ್ಯಮಾನೌ ಮಹಾತ್ಮಾನೌ ದ್ವಿರದಾವಿವ ಸಂಗತೌ ॥13॥
ಎರಡು ಮಹಾಗಜಗಳಂತೆ ಯುದ್ಧ ಮಾಡುತ್ತಿರುವ ಆ ಮಹಾನುಭಾವರಿಬ್ಬರನ್ನೂ ವಿಸ್ಮಯಾವಿಷ್ಟರಾಗಿ ಎಲ್ಲ ಕುರುಗಳೂ ನೋಡಿದರು.
ತೌ ಸಮಾಜಘ್ನತುರ್ವೀರೌ ಪರಸ್ಪರಮಮರ್ಷಣೌ |
ಶರೈರಾಶೀವಿಷಾಕಾರೈರ್ಜ್ವಲದ್ಭಿರಿವ ಪಾವಕೈಃ ॥14॥
ಆ ಇಬ್ಬರು ವೀರರು ಸರ್ಪಗಳ ಆಕಾರವನ್ನು ಹೊಂದಿದ, ಜ್ವಲಿಸುವ ಅಗ್ನಿಯಂತಿರುವ ಬಾಣಗಳಿಂದ ಪರಸ್ಪರ ಕ್ರೋಧವನ್ನು ಉಳ್ಳವರಾಗಿ ಒಬ್ಬರನ್ನೊಬ್ಬರು ಹೊಡೆದರು.
ಅಕ್ಷಯ್ಯಾವಿಷುಧೀ ದಿವ್ಯೌ ಪಾಂಡವಸ್ಯ ಮಹಾತ್ಮನಃ |
ತೇನ ಪಾರ್ಥೋ ರಣೇ ಶೂರಸ್ತಸ್ಥೌ ಗಿರಿರಿವಾಚಲಃ ॥15॥
ಮಹಾತ್ಮನಾದ ಅರ್ಜುನನಿಗೆ ದಿವ್ಯವಾದ ಅಕ್ಷಯಬತ್ತಳಿಕೆ ಇದ್ದಿತು. ಆ ನಿಮಿತ್ತದಿಂದಾಗಿ ಶೂರನಾದ ಅರ್ಜುನನು ಪರ್ವತದಂತೆ ಅಚಲನಾಗಿ ನಿಂತನು.
ಅಶ್ವತ್ಥಾಮ್ನಃ ಪುನರ್ಬಾಣಾಃ ಕ್ಷಿಪ್ರಮಭ್ಯಸ್ಯತೋ ರಣೇ |
ಜಗ್ಮುಃ ಪರಿಕ್ಷಯಂ ಶೀಘ್ರಮಭೂತ್ ತೇನಾಧಿಕೋಽರ್ಜುನಃ ॥16॥
ಆದರೆ ಶೀಘ್ರವಾಗಿ ಪ್ರಯೋಗಿಸುತ್ತಿದ್ದ ಅಶ್ವತ್ಥಾಮರ ಬಾಣಗಳು ಬೇಗ ಬರಿದಾದವು. ಅದರಿಂದ ಅರ್ಜುನನು ಅಧಿಕನಾದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * *
ಅರವತ್ತನೆಯ ಅಧ್ಯಾಯ
ಅರ್ಜುನನಿಂದ ಒಟ್ಟಿಗೆ ದ್ರೋಣಾದಿಗಳ ಜೊತೆಯಲ್ಲಿ ಯುದ್ಧ
ವೈಶಂಪಾಯನಃ
ಏತಸ್ಮಿನ್ನಂತರೇ ತತ್ರ ಮಹಾವೀರ್ಯಪರಾಕ್ರಮಃ |
ಆಜಗಾಮ ಮಹಾವೀರ್ಯಃ ಕೃಪಃ ಶಸ್ತ್ರಭೃತಾಂ ವರಃ ॥1॥
ಅರ್ಜುನಂ ಪ್ರತಿಯೋದ್ಧುಂ ವೈ ಯುದ್ಧಕಾಮೀ ಮಹಾರಥಃ ॥2॥
ವೈಶಂಪಾಯನ ಈ ಮಧ್ಯದಲ್ಲಿ ಮಹಾವೀರ್ಯಪರಾಕ್ರಮರೂ, ಮಹಾವೀರ್ಯರೂ, ಮಹಾರಥರೂ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ ಆದ ಕೃಪಾಚಾರ್ಯರು ಯುದ್ಧಕಾಮನೆಯುಳ್ಳವರಾಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಅಲ್ಲಿಗೆ ಬಂದರು.
ಅಥ ದ್ರೌಣೇ ರಥಂ ತ್ಯಕ್ತ್ವಾ ಕೃಪಸ್ಯ ರಥಮುತ್ತಮಮ್ |
ಆಜಗಾಮಾರ್ಜುನಸ್ತೂರ್ಣಂ ಸೂರ್ಯವೈಶ್ವಾನರಪ್ರಭಮ್ ॥3॥
ಆಗ ಅರ್ಜುನನು ಅಶ್ವತ್ಥಾಮರ ರಥವನ್ನು ಬಿಟ್ಟು ಶೀಘ್ರವಾಗಿ ಸೂರ್ಯಾಗ್ನಿಗಳ ಕಾಂತಿಯನ್ನು ಹೊಂದಿದ್ದ ಕೃಪರ ಉತ್ತಮವಾದ ರಥದ ಕಡೆಗೆ ಬಂದನು.
ತೌ ವೀರೌ ಸೂರ್ಯಸಂಕಾಶೌ ಯೋತ್ಸ್ಯಮಾನೌ ಮಹಾರಥೌ |
ವಾರ್ಷಿಕಾವಿವ ಜೀಮೂತೌ ವ್ಯರೋಚೇತಾಂ ವ್ಯವಸ್ಥಿತೌ ॥4॥
ಸೂರ್ಯನ ಕಾಂತಿಯುಳ್ಳ ಮಹಾರಥರಾದ ಆ ವೀರರಿಬ್ಬರೂ ಯುದ್ಧವನ್ನು ಮಾಡುತ್ತಾ ನಿಂತವರಾಗಿ ಮಳೆಗಾಲದ ಮೋಡಗಳಂತೆ ಶೋಭಿಸಿದರು.
ಪ್ರಗೃಹ್ಯ ಗಾಂಡಿವಂ ಲೋಕೇ ವಿಶ್ರುತಂ ಪುನರರ್ಜುನಃ |
ಅಭ್ಯಯಾದ್ ಭರತಶ್ರೇಷ್ಠೋ ವಿನಿಘ್ನನ್ ಶರಮಾಲಯಾ ॥5॥
ಕೃಪಶ್ಚ ಧನುರಾದಾಯ ತಥೈವಾರ್ಜುನಮಭ್ಯಯಾತ್ ॥6॥
ಭರತಶ್ರೇಷ್ಠನಾದ ಅರ್ಜುನನು ಲೋಕವಿಶ್ರುತವಾದ ಗಾಂಡೀವ ಧನುಸ್ಸನ್ನು ಎತ್ತಿಕೊಂಡು ಶರಸಮೂಹಗಳಿಂದ ಶತ್ರುಗಳನ್ನು ಸಂಹರಿಸುತ್ತಾ ಮುಂದೆ ಬಂದನು. ಕೃಪರೂ ಸಹ ಧನುಸ್ಸನ್ನು ತೆಗೆದುಕೊಂಡು ಹಾಗೆಯೇ ಅರ್ಜುನನ ಕಡೆಗೆ ಧಾವಿಸಿದರು.
ಪ್ರಗೃಹ್ಯ ಬಲವಚ್ಚಾಪಂ ನಾರಾಚಾನ್ ರಕ್ತಭೋಜನಾನ್ |
ಕೃಪಶ್ಚಿಕ್ಷೇಪ ಪಾರ್ಥಾಯ ಶತಶೋಽಥ ಸಹಸ್ರಶಃ ॥7॥
ಕೃಪರು ದೃಢವಾದ ಧನುಸ್ಸನ್ನು ತೆಗೆದುಕೊಂಡು ರಕ್ತಭೋಜನವನ್ನು ಮಾಡುವ ನೂರಾರು ಸಾವಿರಾರು ಬಾಣಗಳನ್ನು ಅರ್ಜುನನ ಮೇಲೆ ಎಸೆದರು.
ಜೀಮೂತ ಇವ ಘರ್ಮಾಂತೇ ಶರವರ್ಷಮಮುಂಚತ |
ನಂದಯನ್ ಸುಹೃದಃ ಸರ್ವಾನ್ ಪ್ರತ್ಯಯುಧ್ಯತ ಫಲ್ಗುನಮ್ ॥8॥
ಬೇಸಿಗೆ ಕಾಲದ ನಂತರ ಬರುವ ಮೋಡದಂತೆ ಬಾಣಗಳ ಮಳೆಯನ್ನು ಸುರಿಸಿದರು. ತಮ್ಮ ಸುಹೃದರನ್ನೆಲ್ಲಾ ಸಂತೋಷಪಡಿಸುತ್ತಾ ಅರ್ಜುನನಿಗೆ ಎದುರಾಗಿ ಯುದ್ಧವನ್ನು ಮಾಡಿದರು.
ವಿಕೃಷ್ಯ ಸಶರಂ ಚಾಪಂ ಪಾಂಡವೋಽಮಿತವಿಕ್ರಮಃ |
ಚಚಾರ ಸಮರೇ ಪಾರ್ಥಃ ಚಿತ್ರಾನ್ ಮಾರ್ಗಾನ್ ವಿದರ್ಶಯನ್ ॥
ಅಮಿತವಿಕ್ರಮನಾದ ಪಾಂಡುಪುತ್ರನಾದ ಅರ್ಜುನನೂ ಬಾಣಸಹಿತವಾದ ಬಿಲ್ಲನ್ನು ಎಳೆದು ಯುದ್ಧದಲ್ಲಿ ವಿಚಿತ್ರವಾದ ಮಾರ್ಗಗಳನ್ನು ತೋರಿಸುತ್ತಾ ಸಂಚರಿಸಿದನು.
ಸರ್ವಾಶ್ಚೈವ ದಿಶೋ ಬಾಣೈಃ ಪ್ರದಿಶಶ್ಚ ಮಹಾರಥಃ |
ಏಕಚ್ಛಾಯಾಮಿವಾಕಾಶಂ ಸರ್ವತಃ ಕೃತವಾನ್ ಪ್ರಭುಃ ॥10॥
ಪ್ರಭುವೂ, ಮಹಾರಥನೂ ಆದ ಅವನು ಬಾಣಗಳಿಂದ ಎಲ್ಲಾ ದಿಕ್ಕುವಿದಿಕ್ಕುಗಳನ್ನು ಆಚ್ಛಾದಿಸಿ ಆಕಾಶವನ್ನೇ ಒಂದು ದೊಡ್ಡ ನೆರಳಿನಂತೆ ಮಾಡಿದನು.
ಪ್ರಾಚ್ಛಾದಯದಮೇಯಾತ್ಮಾ ಪಾರ್ಥಃ ಶರಶತೈಃ ಕೃಪಮ್ |
ಉದ್ಗತಃ ಸಮಯೇ ಮೇಘೋ ಧಾರಾಭಿರಿವ ಪರ್ವತಮ್ ॥11॥
ಮಳೆಗಾಲದಲ್ಲಿ ಎದ್ದ ಮೋಡವು ತನ್ನ ಧಾರೆಗಳಿಂದ ಪರ್ವತವನ್ನು ಮುಚ್ಚಿದಂತೆ ಅಮೇಯಾತ್ಮನಾದ ಪಾರ್ಥನು ನೂರಾರು ಬಾಣಗಳಿಂದ ಕೃಪಾಚಾರ್ಯರನ್ನು ಮುಚ್ಚಿದನು.
ಸ ಶರೈರರ್ಪಿತಃ ಕ್ರುದ್ಧಃ ಶಿತೈರಗ್ನಿಶಿಖೋಪಮೈಃ |
ಕೃಪೋ ಬಭೂವ ಸಮರೇ ವಿಧೂಮೋಽಗ್ನಿರಿವ ಜ್ವಲನ್ ॥12॥
ಅಗ್ನಿಯ ಶಿಖೆಗಳಂತಿದ್ದ ಹರಿತವಾದ ಬಾಣಗಳಿಂದ ತಾಡಿತರಾದ ಕೃಪರು ಯುದ್ಧದಲ್ಲಿ ಧೂಮವಿಲ್ಲದ ಅಗ್ನಿಯಂತೆ ಜ್ವಲಿಸಿದರು.
ತತಃ ಶರಸಹಸ್ರೇಣ ಪಾರ್ಥಮಪ್ರತಿಮೌಜಸಮ್ |

ಅರ್ಪಯಿತ್ವಾ ಮಹಾನಾದಮಕರೋತ್ ಸಮರೇ ಕೃಪಃ ॥13॥
ಆಗ ಕೃಪಾಚಾರ್ಯರು ಯುದ್ಧದಲ್ಲಿ ಅಪ್ರತಿಮ ಪರಾಕ್ರಮಿಯಾದ ಅರ್ಜುನನ ಮೇಲೆ ಸಹಸ್ರ ಬಾಣಗಳನ್ನು ಪ್ರಯೋಗ ಮಾಡಿ ದೊಡ್ಡ ನಾದವನ್ನು ಮಾಡಿದರು.
ತತಃ ಕನಕಪುಂಖೇನ ಶರೇಣ ನತಪರ್ವಣಾ |
ಬಿಭೇದ ಸಮರೇ ಪಾರ್ಥಃ ಕೃಪಸ್ಯ ಧ್ವಜಮುತ್ತಮಮ್ ॥14॥
ಅನಂತರ ಸುವರ್ಣಪುಂಖಗಳಿರುವ, ಬಾಗಿದ ತುದಿಯುಳ್ಳ ಬಾಣದಿಂದ ಅರ್ಜುನನು ಕೃಪರ ಶ್ರೇಷ್ಠವಾದ ಧ್ವಜವನ್ನು ಕತ್ತರಿಸಿದನು.
ತತಃ ಪಶ್ಚಾನ್ಮಹಾತೇಜಾ ನಾರಾಚಾನ್ ಸೂರ್ಯಸನ್ನಿಭಾನ್ |
ಜಗ್ರಾಹ ಸಮರೇ ಪಾರ್ಥೋ ಭೂಯೋ ಬಹುಶಿಲೀಮುಖಾನ್ ॥15॥
ಅನಂತರ ಮಹಾತೇಜಸ್ವಿಯಾದ ಪಾರ್ಥನು ಸೂರ್ಯನಂತೆ ಪ್ರಕಾಶಿಸುವ ಚೆನ್ನಾಗಿ ಸಾಣೆ ಹಿಡಿದ ಬಾಣಗಳನ್ನು ಪುನಃ ಕೈಗೆ ತೆಗೆದುಕೊಂಡನು.
ತೈಸ್ತದಾನೀಂ ಮಹಾಬಾಹುಃ ಕೃಪಸ್ಯ ರಥರಕ್ಷಿಣಃ |
ಜಘಾನ ಕ್ಷತ್ರಿಯಶ್ರೇಷ್ಠಾನ್ ಯುಧ್ಯಮಾನಾನ್ ಮಹಾರಥಾನ್ ॥16॥
ಮಹಾಬಾಹುವಾದ ಅವನು ಕೃಪರ ರಕ್ಷಣೆಯಲ್ಲಿದ್ದ ಮಹಾರಥರಾದ ಯುದ್ಧವನ್ನು ಮಾಡುತ್ತಿದ್ದ ಶ್ರೇಷ್ಠ ಕ್ಷತ್ರಿಯರನ್ನು ಸಂಹರಿಸಿದನು.
ಚಂದ್ರಕೇತುಃ ಸುಕೇತುಶ್ಚ ಚಿತ್ರಾಶ್ವೋ ಮಣಿಮಾಂಸ್ತಥಾ |
ಮುಂಜಮೌಲಿಶ್ಚ ವಿಕ್ರಾಂತೋ ಹೇಮವರ್ಮಾ ಮಹಾರಥಃ ॥17॥
ಸುರಥೋಽತಿರಥಶ್ಚೈವ ಸುಷೇಣೋಽರಿಷ್ಟ ಏವ ಚ |
ನೃಕೇತುಶ್ಚ ಸಹಾನೀಕಾಸ್ತೇ ನಿಪೇತುರ್ಗತಾಸವಃ ॥18॥
ಚಂದ್ರಕೇತು, ಸುಕೇತು, ಚಿತ್ರಾಶ್ವ, ಮಣಿಮಾನ್, ಮುಂಜಮೌಲಿ, ವಿಕ್ರಾಂತ, ಮಹಾರಥನಾದ ಹೇಮವರ್ಮ, ಸುರಥ, ಅತಿರಥ, ಸುಷೇಣ, ಅರಿಷ್ಟ, ನೃಕೇತು ಅವರೆಲ್ಲರೂ ತಮ್ಮ ಸೈನ್ಯದ ಜೊತೆಯಲ್ಲಿ ಮೃತರಾಗಿ ಉರುಳಿದರು.
ತಾನ್ ನಿಹತ್ಯ ತತಃ ಪಾರ್ಥೋ ನಿಮೇಷಾದಿವ ಭಾರತ |
ಪುನರನ್ಯಾನ್ ಸಮಾದತ್ತ ತ್ರಯೋದಶ ಶಿಲೀಮುಖಾನ್ ॥19॥
ಎಲೈ ಭಾರತನೇ, ಅರ್ಜುನನು ಒಂದೇ ನಿಮಿಷದಲ್ಲೋ ಎಂಬಂತೆ ಅವರನ್ನು ಸಂಹರಿಸಿ ಪುನಃ ನಿಶಿತವಾದ ಹದಿಮೂರು ಬಾಣಗಳನ್ನು ತೆಗೆದುಕೊಂಡನು.
ಅಥಾಸ್ಯ ಯುಗಮೇಕೇನ ಚತುರ್ಭಿಶ್ಚತುರೋ ಹಯಾನ್ |
ಷಷ್ಠೇನ ತು ಶಿರಃ ಸಂಖ್ಯೇ ಶರೇಣ ಕೃಪಸಾರಥೇಃ ॥20॥
ತ್ರಿಭಿಸ್ತ್ರಿವೇಣುಂ ಬಲವಾನ್ ದ್ವಾಭ್ಯಾಮಕ್ಷಂ ಮಹಾಬಲಃ |
ದ್ವಾದಶೇನ ತು ಭಲ್ಲೇನ ಕೃಪಸ್ಯ ಸಶರಂ ಧನುಃ ॥21॥
ಛಿತ್ತ್ವಾ ವಜ್ರನಿಕಾಶೇನ ಫಲ್ಗುನಃ ಪ್ರಹಸನ್ನಿವ |
ತ್ರಯೋದಶೇನೇಂದ್ರಸಮಃ ಪ್ರತ್ಯವಿಧ್ಯತ್ ಸ್ತನಾಂತರೇ ॥22॥
ಅನಂತರ ಕೃಪಾಚಾರ್ಯರ ರಥದ ನೊಗವನ್ನು ಒಂದು ಬಾಣದಿಂದಲೂ, ನಾಲ್ಕು ಕುದುರೆಗಳನ್ನು ನಾಲ್ಕು ಬಾಣಗಳಿಂದಲೂ ಮತ್ತು ಆರನೆಯ ಬಾಣದಿಂದ ಕೃಪರ ಸಾರಥಿಯ ಶಿರಸ್ಸನ್ನು ಯುದ್ಧದಲ್ಲಿ ಕತ್ತರಿಸಿದನು. ಬಲಿಷ್ಠನಾದ ಅರ್ಜುನನು ಮೂರು ಬಾಣಗಳಿಂದ ರಥದ ತ್ರಿವೇಣುವನ್ನೂ, ಎರಡು ಬಾಣಗಳಿಂದ ರಥದ ಅಕ್ಷವನ್ನೂ, ಹನ್ನೆರಡನೆಯ ಬಾಣದಿಂದ ಭಲ್ಲರೂಪವಾದ ಕೃಪರ ಧನುರ್ಬಾಣಗಳನ್ನೂ ಕತ್ತರಿಸಿ ವಜ್ರಾಯುಧದಂತಿದ್ದ ಹದಿಮೂರನೆಯ ಬಾಣದಿಂದ ಇಂದ್ರನಿಗೆ ಸಮನಾದ ಅವನು ಕೃಪರಿಗೆ ಸ್ತನಗಳ ಮಧ್ಯದಲ್ಲಿ ಹೊಡೆದನು.
ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ॥23॥
ಅಥ ಶಕ್ತಿಂ ಪರಾಮೃಶ್ಯ ಸೂರ್ಯವೈಶ್ವಾನರಪ್ರಭಾಮ್ |
ಚಿಕ್ಷೇಪ ಸಹಸಾ ಕ್ರುದ್ಧಃ ಪಾರ್ಥಾಯಾದ್ಭುತಕರ್ಮಣೇ ॥24॥
ತಮ್ಮ ಧನುಸ್ಸು ಕತ್ತರಿಸಲ್ಪಟ್ಟು ರಥಗಳನ್ನೂ, ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಕಳೆದುಕೊಂಡ ಕೃಪರು ಅದ್ಭುತ ಕರ್ಮವನ್ನು ಮಾಡುವ ಪಾರ್ಥನ ಮೇಲೆ ಕ್ರುದ್ಧರಾಗಿ ಸೂರ್ಯಾಗ್ನಿಗಳಂತೆ ಪ್ರಕಾಶಿಸುತ್ತಿದ್ದ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡು ಅದನ್ನು ಅರ್ಜುನನ ಮೇಲೆ ಎಸೆದರು.
ತಾಮರ್ಜುನಸ್ತಥಾರೂಪಾಂ ಶಕ್ತಿಂ ಹೇಮಪರಿಷ್ಕೃತಾಮ್ |
ಆಪತಂತೀಂ ಮಹೋಲ್ಕಾಭಾಂ ಚಿಚ್ಛೇದ ದಶಭಿಃ ಶರೈಃ ॥25॥
ಸಾಽಪತದ್ ದಶಧಾ ಭೂಮೌ ಪಾರ್ಥೇನ ನಿಹತಾ ಶರೈಃ ॥26॥
ಅಂತಹ ಸುವರ್ಣಾಲಂಕೃತವಾದ, ದೊಡ್ಡ ಉಲ್ಕೆಯ ಕಾಂತಿಯನ್ನು ಹೊಂದಿದ್ದ ತನ್ನೆಡೆಗೆ ಬರುತ್ತಿದ್ದ ಆ ಶಕ್ತಿಯನ್ನು ಅರ್ಜುನನು ಹತ್ತುಬಾಣಗಳಿಂದ ಕತ್ತರಿಸಿದನು. ಪಾರ್ಥನಿಂದ ಬಾಣಗಳಿಂದ ಹೊಡೆಯಲ್ಪಟ್ಟ ಆ ಶಕ್ತಿಯು ಹತ್ತು ಭಾಗಗಳಾಗಿ ಭೂಮಿಯ ಮೇಲೆ ಬಿದ್ದಿತು.
ಶಕ್ತ್ಯಾಂ ತು ವಿನಿಕೃತ್ತಾಯಾಂ ವಿರಥಃ ಶರಪೀಡಿತಃ |
ಗದಾಪಾಣಿರವಪ್ಲುತ್ಯ ರಥಾತ್ ತೂರ್ಣಮಮಿತ್ರಹಾ ॥27॥
ಗದಾಂ ಚಿಕ್ಷೇಪ ಸಹಸಾ ಪಾಂಡವಾಯಾಮಿತೌಜಸೇ ॥28॥

ಶಕ್ತಿಯು ನಾಶವನ್ನು ಹೊಂದುತ್ತಿರಲು ರಥವನ್ನು ಕಳೆದುಕೊಂಡು ಶರಪೀಡಿತರಾದ ಶತ್ರುಸಂಹಾರಕರಾದ ಕೃಪರು ಬೇಗ ರಥದಿಂದ ಕೆಳಗೆ ನೆಗೆದು ಕೈಯಲ್ಲಿ ಗದೆಯನ್ನು ಹಿಡಿದು ಅಮಿತಪರಾಕ್ರಮಿಯಾದ ಅರ್ಜುನನ ಮೇಲೆ ಗದೆಯನ್ನು ಎಸೆದರು.
ಸಾ ತು ಮುಕ್ತಾ ಗದಾ ಗುರ್ವೀ ಕೃಪೇಣ ಸುಪರಿಷ್ಕೃತಾ |
ಅರ್ಜುನಸ್ಯ ಶರೈರ್ನುನ್ನಾ ಪ್ರತಿಮಾರ್ಗಂ ಜಗಾಮ ಸಾ ॥29॥
ಕೃಪರಿಂದ ಎಸೆಯಲ್ಪಟ್ಟ ಚೆನ್ನಾಗಿ ಅಲಂಕೃತವಾದ ಭಾರವಾದ ಆ ಗದೆಯು ಅರ್ಜುನನ ಬಾಣಗಳ ಹೊಡೆತಕ್ಕೆ ಸಿಕ್ಕಿ ಬಂದ ಮಾರ್ಗದಲ್ಲಿಯೇ ಹಿಂದೆ ಹೋಯಿತು.
ಅಥ ಖಡ್ಗಂ ಸಮುದ್ವೃತ್ಯ ಶತಚಂದ್ರಂ ಚ ಭಾನುಮತ್ |
ಇಯೇಷ ಪಾಂಡವಂ ಹಂತುಂ ಕೃಪೋ ಲಘುಪರಾಕ್ರಮಃ ॥30॥
ಅನಂತರ ಪ್ರಕಾಶಮಾನವಾದ ಶತಚಂದ್ರಗಳಿದ್ದ ಖಡ್ಗವನ್ನು ತೆಗೆದುಕೊಂಡು ಲಘುಪರಾಕ್ರಮವುಳ್ಳ ಕೃಪಾಚಾರ್ಯರು ಅರ್ಜುನನನ್ನು ಕೊಲ್ಲಲು ಬಯಸಿದರು.
ಸ ಶರದ್ವತ್ಸುತಸ್ತೂರ್ಣಂ ಮಹಾಚಾರ್ಯಸುಶಿಕ್ಷಿತಃ |
ಚಚಾರ ಖೇಚರ ಇವ ಕ್ರಮಾಚ್ಚರ್ಮಾಸಿಧೃಗ್ ಭುವಿ ॥31॥
ಸುಶಿಕ್ಷಿತರಾದ ಮಹಾಚಾರ್ಯರಾದ ಶರದ್ವಂತಋಷಿಗಳ ಪುತ್ರರಾದ ಕೃಪಾಚಾರ್ಯರು ಆಕಾಶದಲ್ಲಿ ಖೇಚರರು ಸಂಚರಿಸಿದಂತೆ ಭೂಮಿಯಲ್ಲಿ ಚರ್ಮಾಸಿಗಳನ್ನು ಹಿಡಿದು ಶೀಘ್ರವಾಗಿ ಸಂಚರಿಸಿದರು.
ತತಃ ಕ್ಷುರಾಗ್ರ್ಯೈಃ ಕೌಂತೇಯೋ ದಶಭಿಃ ಖಡ್ಗಚರ್ಮಣೀ |
ನಿಮೇಷಾದಿವ ಚಿಚ್ಛೇದ ತದದ್ಭುತಮಿವಾಭವತ್ ॥32॥
ಆಗ ಅರ್ಜುನನು ತನ್ನ ಶ್ರೇಷ್ಠವಾದ ಹತ್ತು ಶರಗಳಿಂದ ಅವರ ಖಡ್ಗಚರ್ಮಗಳನ್ನು ಒಂದೇ ನಿಮಿಷದಲ್ಲಿಯೋ ಎಂಬಂತೆ ಕತ್ತರಿಸಿದನು. ಅದು ಅದ್ಭುತವಾಗಿದ್ದಿತು.
ವಿಷಣ್ಣವದನಸ್ತತ್ರ ಯುದ್ಧಾದಪಗತೋದ್ಯಮಃ |
ಅಶ್ವತ್ಥಾಮ್ನಸ್ತು ಸ ರಥಂ ಕೃಪಃ ಸಮಭಿಪುಪ್ಲುವೇ ॥33॥
ಸ್ವಸ್ರೀಯಸ್ಯ ಮಹಾತೇಜಾ ಜಗ್ರಾಹ ಚ ಧನುಃ ಪುನಃ ॥34॥
ಯುದ್ಧದಲ್ಲಿ ತಮ್ಮ ಪ್ರಯತ್ನಗಳು ಭಗ್ನವಾಗುತ್ತಿರಲು ಮಹಾತೇಜಸ್ವಿಗಳಾದ ಕೃಪರು ವಿಷಣ್ಣವದನರಾಗಿ ತಮ್ಮ ತಂಗಿಯ ಪುತ್ರನಾದ ಅಶ್ವತ್ಥಾಮರ ರಥಕ್ಕೆ ಹಾರಿ ಪುನಃ ಕೈಯಲ್ಲಿ ಧನುಸ್ಸನ್ನು ಹಿಡಿದರು.
ಏತಸ್ಮಿನ್ನಂತರೇ ಕ್ರುದ್ಧೋ ಭೀಷ್ಮೋ ದ್ರೋಣಮಥಾಬ್ರವೀತ್ |
ದೃಷ್ಟ್ವಾ ಕೃಪಂ ಫಲ್ಗುನೇನ ಪೀಡಿತಂ ಚೋರ್ಜಿತಂ ಚ ತಮ್ ॥35॥
ಈ ಸಂದರ್ಭದಲ್ಲಿ ಕ್ರುದ್ಧರಾದ ಭೀಷ್ಮರು ಕೃಪರು ಅರ್ಜುನನಿಂದ ಪೀಡಿತರಾದುದನ್ನೂ, ಅರ್ಜುನನು ಬಲದಲ್ಲಿ ಅಭಿವೃದ್ಧಿಯನ್ನು ಹೊಂದುತ್ತಿರುವುದನ್ನೂ ನೋಡಿ ದ್ರೋಣಾಚಾರ್ಯರನ್ನು ಕುರಿತು ಹೀಗೆ ಹೇಳಿದರು.
ಏಕೈಕಮಸ್ಮಾನ್ ಸಂಗ್ರಾಮೇ ಪರಾಜಯತಿ ಫಲ್ಗುನಃ ॥36॥
ಅಹಂ ದ್ರೋಣಶ್ಚ ಕರ್ಣಶ್ಚ ದ್ರೌಣಿರ್ಗೌತಮ ಏವ ಚ |
ಅನ್ಯೇ ಚ ಬಹವಃ ಶೂರಾಃ ವಯಂ ಜೇಷ್ಯಾಮ ವಾಸವಿಮ್ ॥37॥
ಅರ್ಜುನನು ನಮ್ಮಲ್ಲಿ ಒಬ್ಬೊಬ್ಬರನ್ನೂ ಯುದ್ಧದಲ್ಲಿ ಸೋಲಿಸುತ್ತಿದ್ದಾನೆ. ನಾನು, ದ್ರೋಣರು, ಕರ್ಣ, ಅಶ್ವತ್ಥಾಮ, ಕೃಪರು ಇನ್ನೂ ಅನೇಕ ಶೂರರು ಎಲ್ಲರೂ ಸೇರಿ ಅರ್ಜುನನನ್ನು ಜಯಿಸೋಣ.
ವೈಶಂಪಾಯನಃ
ಸಮಾಗಮ್ಯ ತು ತೇ ಸರ್ವೇ ಭೀಷ್ಮದ್ರೋಣಮುಖಾ ರಥಾಃ |
ಅರ್ಜುನಂ ಸಹಿತಾ ಯತ್ತಾಃ ಪ್ರತ್ಯಯುಧ್ಯಂತ ಭಾರತ ॥38॥
ವೈಶಂಪಾಯನ ಎಲೈ ಭಾರತನೇ, ಭೀಷ್ಮ ದ್ರೋಣ ಮೊದಲಾದ ಎಲ್ಲಾ ರಥಿಕರೂ ಒಟ್ಟಿಗೆ ಬಂದು ಎಚ್ಚರಿಕೆಯಿಂದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಸ ಸಾಯಕಮಯೈರ್ಜಾಲೈಃ ಸರ್ವತಸ್ತಾನ್ ಮಹಾರಥಾನ್ |
ಪ್ರಾಚ್ಛಾದಯಚ್ಛರೌ್ಯರಿಸ್ತಾನ್ ನೀಹಾರ ಇವ ಪರ್ವತಾನ್ ॥39॥
ಅರ್ಜುನನು ಮಂಜು ಪರ್ವತವನ್ನು ಮುಚ್ಚುವಂತೆ ತನ್ನ ಶರಮಯವಾದ ಜಾಲದಿಂದ ಆ ಎಲ್ಲಾ ಮಹಾರಥರನ್ನೂ ಬಾಣಗಳ ಸಮೂಹದಿಂದ ಎಲ್ಲ ಕಡೆಗಳಲ್ಲಿಯೂ ಮುಚ್ಚಿದನು.
ನದದ್ಭಿಶ್ಚ ಮಹಾನಾಗೈರ್ಹೇಷಮಾಣೈಶ್ಚ ವಾಜಿಭಿಃ |
ಭೇರೀಶಂಖನಿನಾದೈಶ್ಚ ಸ ಶಬ್ದಸ್ತುಮುಲೋಽಭವತ್ ॥40॥
ಗರ್ಜಿಸುವ ಗಜಗಳು, ಹೇಷಣವನ್ನು ಮಾಡುವ ಅಶ್ವಗಳು ಮತ್ತು ಭೇರೀ ಶಂಖಗಳ ನಿನಾದ ಇವುಗಳಿಂದ ತೀವ್ರವಾದ ಶಬ್ದವು ಉಂಟಾಯಿತು.
ನರಾಶ್ವಕಾಯಾನ್ ನಿರ್ಭಿದ್ಯ ಲೌಹಾನಿ ಕವಚಾನಿ ಚ |
ಛಿದ್ಯಮಾನಾಸ್ತತಸ್ತೇನ ನ್ಯಪತನ್ ಶತಶಃ ಕ್ಷಿತೌ ॥41॥
ಅರ್ಜುನನು ಪ್ರಯೋಗಿಸಿದ ನರಾಶ್ವಶರೀರವನ್ನು ಭೇದಿಸುವ, ಲೋಹಮಯವಾದ ಕವಚಗಳನ್ನು ಭೇದಿಸುವ ಬಾಣಗಳಿಂದ ನೂರಾರು ಸಂಖ್ಯೆಯಲ್ಲಿ ಭೂಮಿಯ ಮೇಲೆ ಯೋಧರು ಉರುಳಿದರು.
ತ್ವರಮಾಣಃ ಶರಾನಸ್ಯನ್ ಪಾಂಡವಃ ಸ್ಮ ಪ್ರಕಾಶತೇ |

ಮಧ್ಯಂದಿನಗತೋಽರ಼್ಚಿಷ್ಮಾನ್ ಶರದೀವ ದಿವಾಕರಃ ॥42॥
ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸುವ ಅರ್ಜುನನು ಶರತ್ಕಾಲದಲ್ಲಿ ಮಧ್ಯಾಹ್ನದಲ್ಲಿ ಕಿರಣಗಳಿಂದ ಕೂಡಿದ ಸೂರ್ಯನಂತೆ ಶೋಭಿಸಿದನು.
ಅವಿಷಹ್ಯ ಶರಾನ್ ಸರ್ವೇ ಪಾರ್ಥಚಾಪಚ್ಯುತಾನ್ ರಣೇ |
ಉದಕ್ಪ್ರಯಾಂತಿ ವಿತ್ರಸ್ತಾ ರಥೇಭ್ಯೋ ರಥಿನಸ್ತಥಾ ॥43॥
ಸಾದಿನಶ್ಚಾಶ್ವಪೃಷ್ಠೇಭ್ಯೋ ಭೂಮೌ ಚಾಪಿ ಪದಾತಯಃ ॥44॥
ಪಾರ್ಥನು ಯುದ್ಧದಲ್ಲಿ ಪ್ರಯೋಗಿಸಿದ ಬಾಣಗಳನ್ನು ಸಹಿಸಿಕೊಳ್ಳಲಾರದೆ ರಥಿಕರು ಹೆದರಿ ತಮ್ಮ ರಥಗಳಿಂದ ಉತ್ತರದಿಕ್ಕಿಗೆ ಹೊರಟರು. ಅಶ್ವಾರೋಹಿಗಳು ಅಶ್ವಗಳ ಮೇಲೆಯೂ ಪದಾತಿಗಳು ಭೂಮಿಯ ಮೇಲೆಯೂ ವಿತ್ರಸ್ತರಾಗಿ (ಹೆದರಿ) ಉತ್ತರದಿಕ್ಕಿಗೆ ಹೊರಟರು.
ಶರೈಸ್ತು ತಾಡ್ಯಮಾನಾನಾಂ ಕವಚಾನಾಂ ಮಹಾತ್ಮನಾಮ್ |
ತಾಮ್ರರಾಜತಲೋಹಾನಾಂ ಸಮಪದ್ಯಂತ ರಾಶಯಃ ॥45॥
ಶರಗಳಿಂದ ತಾಡಿತರಾದ ಮಹಾತ್ಮರಾದ ಯೋಧರ ತಾಮ್ರ, ರಜತ ಮತ್ತು ಕಬ್ಬಿಣದ ಕವಚಗಳು ರಾಶಿಯಾಗಿ ಭೂಮಿಯ ಮೇಲೆ ಬಿದ್ದವು.
ಛನ್ನಮಾಯೋಧನಂ ಜಜ್ಞೇ ಶರೀರೈರ್ಗತಚೇತಸಾಮ್ |
ಶ್ರಾಂತ್ಯಾ ಗಳಿತಶಸತ್ರಣಾಂ ಪತತಾಮಶ್ವಸಾದಿನಾಮ್ ॥46॥
ಆ ಯುದ್ಧಭೂಮಿಯು ಮೃತರ ಶರೀರಗಳಿಂದಲೂ, ಬಳಲಿ ಕೆಳಗೆ ಹಾಕಿದ ಶಸ್ತ್ರಗಳಿಂದಲೂ, ಕೆಳಗೆ ಉರುಳುವ ಅಶ್ವಾರೋಹಿಗಳಿಂದಲೂ ಮುಚ್ಚಿಹೋಯಿತು.
ಶೂನ್ಯಾನ್ ಕುರ್ವನ್ ರಥೋಪಸ್ಥಾನ್ ಮಾನವೈರಾಸ್ತೃಣೋನ್ಮಹೀಮ್ ॥
ಅರ್ಜುನನು ರಥದ ಅಚ್ಚುಪೀಠವನ್ನು ಶೂನ್ಯವನ್ನಾಗಿ ಮಾಡುತ್ತಾ ಭೂಮಿಯನ್ನು ಮನುಷ್ಯರ ಶರೀರಗಳಿಂದ ಮುಚ್ಚಿದನು.
ಪ್ರನೃತ್ಯನ್ನಿವ ಸಂಗ್ರಾಮೇ ಚಾಪಹಸ್ತೋ ಧನಂಜಯಃ |
ಶಿರಾಂಸ್ಯಪಾತಯತ್ ಸಂಖ್ಯೇ ಕ್ಷತ್ರಿಯಾಣಾಂ ನರರ್ಷಭ ॥48॥
ಕೈಯಲ್ಲಿ ಧನುಸ್ಸನ್ನು ಹಿಡಿದು ಯುದ್ಧದಲ್ಲಿ ನೃತ್ಯವನ್ನು ಮಾಡುವವನಂತೆ ನರರ್ಷಭನಾದ ಅವನು ಕ್ಷತ್ರಿಯರ ಶಿರಗಳನ್ನು ನೆಲಕ್ಕೆ ಉರುಳಿಸಿದನು.
ಶ್ರುತ್ವಾ ಗಾಂಡೀವನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ತ್ರಸ್ತಾನಿ ಸರ್ವಸೈನ್ಯಾನಿ ವ್ಯಚಲೀಯಂತ ಭಾಗಶಃ ॥49॥
ಸಿಡಿಲಿನ ಧ್ವನಿಯಂತಿರುವ ಗಾಂಡೀವದ ಘೋಷಗಳನ್ನು ಕೇಳಿ ಹೆದರಿದ ಎಲ್ಲ ಸೈನ್ಯಗಳೂ ಭಾಗಭಾಗವಾಗಿ ಕಣ್ಮರೆಯಾದವು.
ಕುಂಡಲೋಷ್ಣೀಷಧಾರೀಣಿ ಜಾತರೂಪಸ್ರಜಾನಿ ಚ |
ಪತಿತಾನಿ ಸ್ಮ ದೃಶ್ಯಂತೇ ಶಿರಾಂಸಿ ರಣಮೂರ್ಧನಿ ॥50॥
ಕರ್ಣಕುಂಡಲ ಮತ್ತು ಪೇಟಗಳನ್ನು ಧರಿಸಿದ, ಸುವರ್ಣಮಯವಾದ ಮಾಲೆಯನ್ನು ಧರಿಸಿದ ಶಿರಸ್ಸುಗಳು ಉನ್ನತವಾದ ರಣದಲ್ಲಿ ಭೂಮಿಯ ಮೇಲೆ ಬಿದ್ದಿರುವುದು ಕಂಡುಬರುತ್ತಿದ್ದಿತು.
ವಿಶಿಖೋನ್ಮಥಿತೈರ್ಗಾತ್ರೈರ್ಬಾಹುಭಿಶ್ಚ ಸಕಾರ್ಮುಕೈಃ |
ಸಹಯೈರ್ವಾರಣೈಶ್ಚಿನ್ನೈಃ ಪ್ರಚ್ಛನ್ನಾ ಭಾತಿ ಮೇದಿನೀ ॥51॥
ಬಾಣಗಳಿಂದ ಕತ್ತರಿಸಲ್ಪಟ್ಟ ದೇಹಗಳ, ಧನುಸ್ಸನ್ನು ಹಿಡಿದ ಬಾಹುಗಳು, ಕತ್ತರಿಸಲ್ಪಟ್ಟ ಆನೆ ಮತ್ತು ಕುದುರೆಗಳು, ಇವುಗಳಿಂದ ಆವರಿಸಲ್ಪಟ್ಟ ಭೂಮಿಯು ಕಂಗೊಳಿಸಿತು.
ಶಿರಸಾಂ ಪಾತ್ಯಮಾನಾನಾಂ ಸಮರೇ ನಿಶಿತೈಃ ಶರೈಃ |
ಅಶ್ಮವೃಷ್ಟಿರಿವಾಕಾಶಾದ್ ಅಭವದ್ ಭರತರ್ಷಭ ॥52॥
ಎಲೈ ಭರತರ್ಷಭನೇ, ಯುದ್ಧದಲ್ಲಿ ನಿಶಿತವಾದ ಶರಗಳಿಂದ ಬೀಳಿಸಲ್ಪಟ್ಟ ಶಿರಸ್ಸುಗಳು ಆಕಾಶದಿಂದ ಬೀಳುವ ಕಲ್ಲಿನ ಮಳೆಯಂತೆ ತೋರುತ್ತಿದ್ದಿತು.
ದರ್ಶಯಿತ್ವಾ ತಥಾಽಽತ್ಮಾನಂ ರೌದ್ರಮುಗ್ರಪರಾಕ್ರಮಃ |
ಜಘಾನ ಸಮರೇ ಯೋಧಾನ್ ಶತಶೋಽಥ ಸಹಸ್ರಶಃ ॥53॥
ಉಗ್ರಪರಾಕ್ರಮನಾದ ಅರ್ಜುನನು ಹಾಗೆ ತನ್ನ ಪರಾಕ್ರಮವನ್ನು ತೋರಿಸಿಕೊಳ್ಳುತ್ತಾ ಯುದ್ಧದಲ್ಲಿ ಯೋಧರನ್ನು ಶತಸಂಖ್ಯೆಯಲ್ಲಿ ಮತ್ತು ಸಹಸ್ರಸಂಖ್ಯೆಯಲ್ಲಿ ಸಂಹರಿಸಿದನು.
ತಥಾಽವರುದ್ಧಶ್ಚಾರಣ್ಯೇ ದಶ ವರ್ಷಾಣಿ ತ್ರೀಣಿ ಚ |
ಕ್ರೋಧಾಗ್ನಿಮುತ್ಸಸರ್ಜಾಜೌ ಧಾರ್ತರಾಷ್ಟ್ರೇಷು ಪಾಂಡವಃ ॥54॥
ಹದಿಮೂರು ವರ್ಷಗಳ ಕಾಲ ಕಾಡಿನಲ್ಲಿ ತಡೆಹಿಡಿಯಲ್ಪಟ್ಟಿದ್ದ ಅರ್ಜುನನು ಯುದ್ಧದಲ್ಲಿ ಧೃತರಾಷ್ಟ್ರ ಪುತ್ರರ ಮೇಲೆ ತನ್ನ ಕ್ರೋಧಾಗ್ನಿಯನ್ನು ಆ ರೀತಿಯಲ್ಲಿ ಚೆಲ್ಲಿದನು.
ತಸ್ಯ ತದ್ ದಹತಃ ಸೈನ್ಯಂ ದೃಷ್ಟ್ವಾ ಚಾಸ್ಯ ಪರಾಕ್ರಮಮ್ |
ಸರ್ವೇ ಶಾಂತಿಪರಾ ಯೋಧಾ ಧಾರ್ತರಾಷ್ಟ್ರಸ್ಯ ಭಾರತ ॥55॥
ಎಲೈ ಭಾರತನೇ, ಅವನು ಸೈನ್ಯವನ್ನು ಹಾಗೆ ಜಯಿಸುತ್ತಿರಲು ಅವನ ಪರಾಕ್ರಮವನ್ನು ನೋಡಿ ಕೌರವರ ಯೋಧರೆಲ್ಲರೂ ಶಾಂತಿಪರರಾದರು.

ಯಥಾ ನಲವನಂ ನಾಗಃ ಪ್ರಭಿನ್ನಃ ಷಷ್ಟಿಹಾಯನಃ |
ಏವಂ ಸರ್ವಾನಪಾಮೃದ್ನಾದರ್ಜುನಃ ಶಸ್ತ್ರತೇಜಸಾ ॥56॥
ಅರವತ್ತು ವರ್ಷದ ಮದಿಸಿದ ಆನೆಯು ನಳವನವನ್ನು ಪ್ರವೇಶಿಸಿ ಕಲಕುವಂತೆ ಅರ್ಜುನನು ತನ್ನ ಶಸ್ತ್ರ ತೇಜಸ್ಸಿನಿಂದ ಎಲ್ಲರನ್ನೂ ನಾಶಪಡಿಸಿದನು.
ವಿದ್ರಾವ್ಯ ಪತಿತಂ ಸೈನ್ಯಂ ತ್ರಾಸಯಿತ್ವಾ ಮಹಾರಥಾನ್ |
ಅರ್ಜುನೋ ಜಯತಾಂ ಶ್ರೇಷ್ಠಃ ಪರ್ಯಾವರ್ತತ ಭಾರತ ॥57॥
ತನ್ನ ಮೇಲೆ ಎರಗಿದ ಸೈನ್ಯವನ್ನು ಓಡಿಸಿ ,ಮಹಾರಥರನ್ನು ಹೆದರಿಸಿ, ಎಲೈ ಭಾರತನೇ, ಜಯಶಾಲಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಹಿಂದಿರುಗಿದನು.
ತಸ್ಯ ಮಾರ್ಗಾನ್ ವಿಚರತೋ ನಿಘ್ನತಶ್ಚ ರಣಾಜಿರೇ |
ಪ್ರಾವರ್ತತ ನದೀ ಘೋರಾ ಶೋಣಿತಾಂತ್ರತರಂಗಿಣೀ ॥58॥
ಅಸ್ಥಿಶೈವಾಲಸಂಬಾಧಾ ಸಂಗ್ರಾಮೇ ಪಾರ್ಥನಿರ್ಮಿತಾ |
ಶರಚಾಪಪ್ಲವಾ ಘೋರಾ ಮಾಂಸಶೋಣಿತಕರ್ದಮಾ ॥59॥
ಯುದ್ಧಭೂಮಿಯಲ್ಲಿ ಮಾರ್ಗಗಳಲ್ಲಿ ಸಂಚರಿಸುತ್ತಾ ಶತ್ರುಗಳನ್ನು ಸಂಹರಿಸುವ ಅವನಿಂದ ರಕ್ತ ಮತ್ತು ಕರುಳುಗಳ ತರಂಗವುಳ್ಳ ಘೋರವಾದ ನದಿಯು ಹರಿಯಿತು.ಯುದ್ಧದಲ್ಲಿ ಅರ್ಜುನ ನಿರ್ಮಿತವಾದ ಆ ನದಿಯು ಅಸ್ಥಿಯ ಪಾಚಿಗಳಿಂದ ನಿಬಿಡವಾಗಿದ್ದಿತು. ಅದು ಶರಚಾಪರೂಪವಾದ ಪ್ಲವಗಳಿಂದಲೂ ಮತ್ತು ಮಾಂಸ ರಕ್ತ ರೂಪವಾದ ಕೆಸರಿನಿಂದಲೂ ಕೂಡಿ ಘೋರವಾಗಿದ್ದಿತು.
ಕರವಾಲವಿಪಾಠೀನಾ ಚಾಮರೋಷ್ಣೀಷಫೇನಿಲಾ ॥60॥
ಅಶ್ವಗ್ರೀವಾಮಹಾವರ್ತಾ ಕಬಂಧಜಲಮಾನುಷಾ |
ಕಾಕಕಂಕರುತಾ ತೀವ್ರಾ ಸಾರಸಕ್ರೌಂಚನಾದಿನಾ ॥61॥
ಶಕ್ತಿಗಳೆಂಬ ವಿಪಾಠಗಳಿಂದಲೂ, ಚಾಮರ ಮತ್ತು ಪೇಟಗಳೆಂಬ ನೊರೆಗಳಿಂದಲೂ, ಕುದುರೆಗಳ ಕತ್ತುಗಳೆಂಬ ದೊಡ್ಡ ಸುಳಿಗಳಿಂದಲೂ, ಕಬಂಧವೆಂಬ ಜಲಪುರುಷರಿಂದಲೂ ತುಂಬಿದುದಾಗಿ ಕಾಕಕಂಕಪಕ್ಷಿಗಳ ಕಿರುಚಾಟದಿಂದ ಮತ್ತು ಸಾರಸ, ಕ್ರೌಂಚ ಪಕ್ಷಿಗಳ ನಾದದಿಂದ ಘೋರವಾಗಿದ್ದಿತು.
ಸಿಂಹನಾದಮಹಾನಾದಾ ಶಂಖಕಂಬುಕಸಂಕುಲಾ |
ವೀರೋತ್ತಮಾಂಗಪದ್ಮಾಢ್ಯಾ ಶರಚಾಪಮಹಾನಲಾ ॥62॥
ಪದಾತಿಮತ್ಸ್ಯಕಲುಷಾ ಗಜಶೀರ್ಷಕಕಚ್ಛಪಾ |
ಗೋಮಾಯುವೃಕಸಂಘುಷ್ಟಾ ಮಾಂಸಮಜ್ಜಾಸ್ಥಿವಾಲುಕಾ ॥63॥
ಸಿಂಹನಾದರೂಪವಾದ ಮಹಾನಾದದಿಂದಲೂ ಕೂಡಿ ಶಂಖ, ಕಂಬುಗಳಿಂದ ನಿಬಿಡವಾಗಿ, ವೀರರ ಶಿರಸ್ಸೆಂಬ ಪದ್ಮಗಳಿಂದ ಕೂಡಿ, ಬಿಲ್ಲುಬಾಣಗಳೆಂಬ ಮಹಾಗ್ನಿಯಿಂದ ಕೂಡಿ, ಪದಾತಿಯೆಂಬ ಮೀನುಗಳಿಂದ ಕಲುಷಿತವಾಗಿ, ಗಜಶೀರ್ಷಗಳೆಂಬ ಕೂರ್ಮಗಳಿಂದ ಸಹಿತವಾಗಿ, ಮಾಂಸ, ಮಜ್ಜ ಮತ್ತು ಅಸ್ಥಿಗಳೆಂಬ ಮರಳುಗಳಿಂದ ಕೂಡಿದ್ದಾಗಿ, ತೋಳ ಮತ್ತು ನರಿಗಳ ಘೋಷದಿಂದ ಕೂಡಿ, ಬಹಳ ಘೋರವಾಗಿದ್ದಿತು.
ಪ್ರಾವರ್ತಯನ್ ನದೀಂ ಘೋರಾಂ ಪಿಶಾಚಗಣಸೇವಿತಾಮ್ ॥64॥
ಅಪಾರಾಮನವಾರಾಂ ಚ ರಕ್ತೋದಾಂ ಸರ್ವತೋ ವೃತಾಮ್ |
ಅಭೀಕ್ಷ್ಣಮಕರೋತ್ ಪಾರ್ಥೋ ನದೀಮುತ್ತಮಶೋಣಿತಾಮ್ ॥65॥
ಅರ್ಜುನನು ಪಿಶಾಚಗಣಸೇವಿತವಾದ ತೀರಗಳಿಲ್ಲದ ರಕ್ತೋದಕವುಳ್ಳ ಎಲ್ಲ ಕಡೆಗಳಲ್ಲಿಯೂ ಹರಿಯುವ ಶ್ರೇಷ್ಠವಾದ ರಕ್ತಗಳ ಘೋರವಾದ ನದಿಯನ್ನು ಸತತವಾಗಿ ಹರಿಸಿದನು.
ಅಸ್ಯಾದದನಾಸ್ಯ ಶರಾನ್ ಸಂಧಾಯ ಚ ವಿಮುಂಚತಃ |
ವಿಕರ್ಷತಶ್ಚ ಗಾಂಡೀವಂ ನ ಕಿಂಚಿದ್ ದದೃಶೇಽಂತರಮ್ ॥66॥
ಅವನು ಬತ್ತಳಿಕೆಯಿಂದ ಬಾಣವನ್ನು ತೆಗೆದುಕೊಳ್ಳುವುದಕ್ಕೂ, ಅದನ್ನು ಬಿಲ್ಲಿನಲ್ಲಿ ಜೋಡಿಸಿ ಗಾಂಡೀವ ಧನುಸ್ಸಿನ ಹೆದೆಯನ್ನು ಹಿಂದಕ್ಕೆ ಎಳೆಯುವುದಕ್ಕೂ ಮತ್ತು ಬಾಣವನ್ನು ಪ್ರಯೋಗಿಸುವುದಕ್ಕೂ ಮಧ್ಯೆ ಅವಕಾಶವೇ ಕಾಣುತ್ತಿರಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * *
ಅರವತ್ತೊಂದನೆಯ ಅಧ್ಯಾಯ
ಭೀಷ್ಮಾರ್ಜುನರು ಯುದ್ಧಕ್ಕೆ ಸಿದ್ಧರಾಗುತ್ತಿರಲು ದೇವತೆಗಳಿಂದ ಅವರ ಪ್ರಶಂಸೆ
ವೈಶಂಪಾಯನಃ
ಏವಂ ವಿದ್ರಾವ್ಯ ತತ್ಸೈನ್ಯಂ ಪಾರ್ಥೋ ಭೀಷ್ಮಮುಪಾದ್ರವತ್ |
ತ್ರಸ್ತೇಷು ಸರ್ವಸೈನ್ಯೇಷು ಕೌರವ್ಯಸ್ಯ ಮಹಾತ್ಮನಃ ॥1॥
ನರಸಿಂಹಮುಪಾಯಾಂತಂ ಜಿಗೀಷಂತಂ ಪರಾನ್ ರಣೇ |
ವೃಷಸೇನೋಽಭ್ಯಯಾತ್ ತೂರ್ಣಂ ಯೋದ್ಧುಕಾಮೋ ಧನಂಜಯಮ್ ॥
ಮಹಾಪ್ರಯತ್ನಶಾಲಿಯಾದ ದುರ್ಯೋಧನನ ಎಲ್ಲ ಸೈನ್ಯವೂ ಹೆದರಿ ಹೋದ ಮೇಲೆ ಅರ್ಜುನನು ಆ ಸೈನ್ಯವನ್ನು ಚದುರಿಸಿ

ಭೀಷ್ಮರ ಕಡೆಗೆ ಸಾಗಿದನು. ನರಸಿಂಹರಾದ, ಶತ್ರುಗಳನ್ನು ಜಯಿಸುವ ಭೀಷ್ಮರ ಕಡೆಗೆ ಅರ್ಜುನನು ಬರುವುದನ್ನು ನೋಡಿ ವೃಷಸೇನನು ಅವನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಶೀಘ್ರವಾಗಿ ಅವನ ಕಡೆಗೆ ಬಂದನು.
ತಸ್ಯ ಪಾರ್ಥಸ್ತದಾ ಕ್ಷಿಪ್ರಂ ಕ್ಷುರಧಾರೇಣ ಕಾರ್ಮುಕಮ್ |
ನ್ಯಕೃಂತದ್ ಗೃಧ್ರಪತ್ರೇಣ ಜಾಂಬೂನದಪರಿಷ್ಕೃತಮ್ ॥3॥
ಆಗ ಅರ್ಜುನನು ಗೃಧ್ರಪತ್ರವುಳ್ಳ, ನಿಶಿತವಾದ ಅಲಗುಳ್ಳ ಒಂದು ಬಾಣದಿಂದ ಸುವರ್ಣಾಲಂಕೃತವಾದ ಅವನ ಧನುಸ್ಸನ್ನು ಕತ್ತರಿಸಿದನು.
ಅಥೈನಂ ಪಂಚಭಿರ್ಭೂಯಃ ಪ್ರತ್ಯವಿಧ್ಯತ್ ಸ್ತನಾಂತರೇ |
ಸ ಪಾರ್ಥಬಾಣಾಭಿಹತೋ ರಥಾತ್ ಪ್ರಸ್ಕಂದ್ಯ ಚಾದ್ರವತ್ ॥4॥
ಅನಂತರ ಪುನಃ ಐದು ಬಾಣಗಳನ್ನು ಪ್ರಯೋಗಿಸಿ ಅವನ ಎದೆಯ ಮಧ್ಯದಲ್ಲಿ ಹೊಡೆದನು. ಅರ್ಜುನನ ಬಾಣಗಳಿಂದ ತಾಡಿತನಾದ ಅವನು ರಥದಿಂದ ಧುಮುಕಿ ಓಡಿ ಹೋದನು.
ದುಃಶಾಸನೋ ವಿಕರ್ಣಶ್ಚ ಶಕುನಿಶ್ಚ ವಿವಿಂಶತಿಃ |
ಆಯಾಂತಂ ಭೀಮಧನ್ವಾನಂ ಪರ್ಯಕೀರ್ಯಂತ ಪಾಂಡವಮ್ ॥5॥
ದುಃಶಾಸನ, ವಿಕರ್ಣ, ಶಕುನಿ ಮತ್ತು ವಿವಿಂಶತಿ ಇವರು ಘೋರವಾದ ಧನುಸ್ಸನ್ನು ಹೊಂದಿ ಮುಂದೆ ಬರುತ್ತಿದ್ದ ಅರ್ಜುನನನ್ನು ಸುತ್ತುವರಿದು ಬಾಣಗಳನ್ನು ಪ್ರಯೋಗಿಸಿದರು.
ತೇಷಾಂ ಪಾರ್ಥೋ ರಣೇ ಕ್ರುದ್ಧಃ ಶರೈಃ ಸನ್ನತಪರ್ವಭಿಃ |
ಯುಗಂ ಧ್ವಜಮಥೇಷಾಂ ಚ ಚಿಚ್ಛೇದ ತರಸಾ ರಣೇ ॥6॥
ಕೋಪಗೊಂಡ ಅರ್ಜುನನು ಯುದ್ಧದಲ್ಲಿ ಬಾಗಿದ ತುದಿಗಳುಳ್ಳ ಬಾಣಗಳಿಂದ ಅವರ ರಥದ ನೊಗ, ಧ್ವಜ ಮತ್ತು ಮೂಕಿಗಳನ್ನು ಶೀಘ್ರವಾಗಿ ಕತ್ತರಿಸಿದನು.
ತೇ ನಿಕೃತ್ತಧ್ವಜಾಃ ಸರ್ವೇ ಛಿನ್ನಕಾರ್ಮುಕವೇಷ್ಟನಾಃ |
ರಣಮಧ್ಯಾದಪಯಯುಃ ಪಾರ್ಥಬಾಣಾಭಿಪೀಡಿತಾಃ ॥7॥
ತಮ್ಮ ಧ್ವಜಗಳು ಕತ್ತರಿಸಲ್ಪಟ್ಟು ಬಿಲ್ಲು ಮೊದಲಾದವುಗಳೂ ಕತ್ತರಿಸಲ್ಪಟ್ಟ ಅವರೆಲ್ಲರೂ ಅರ್ಜುನನ ಬಾಣಗಳಿಂದ ಪೀಡಿತರಾಗಿ ಯುದ್ಧದಿಂದ ಹಿಂದೆ ಸರಿದರು.
ತತಃ ಪ್ರಹಸ್ಯ ಬೀಭತ್ಸುರ್ವೈರಾಟಿಮಿದಮಬ್ರವೀತ್ ॥8॥
ಏತಂ ಮೇ ಪ್ರಾಪಯೇದಾನೀಂ ತಾಳಂ ಸೌವರ್ಣಮುಚ್ಛ್ರಿತಮ್ |
ಮೇಘಮಧ್ಯೇ ಯಥಾ ವಿದ್ಯುಚ್ಚರತೀವ ಪುನಃ ಪುನಃ ॥9॥
ಅಸೌ ಶಾಂತನವೋ ಭೀಷ್ಮಸ್ತತ್ರ ಯಾಹಿ ಪರಂತಪ ॥10॥
ಆಗ ಅರ್ಜುನನು ನಕ್ಕು ಉತ್ತರನನ್ನು ಕುರಿತು, ಮೋಡಗಳ ಮಧ್ಯೆ ಮಿಂಚಿನಂತೆ ಸಂಚರಿಸುವ, ಎತ್ತರವಾದ ಸುವರ್ಣಮಯವಾದ ತಾಳಧ್ವಜವನ್ನುಳ್ಳ ರಥದ ಕಡೆಗೆ ನನ್ನನ್ನು ಕರೆದುಕೊಂಡು ಹೋಗು. ಅವರು ಶಂತನು ಪುತ್ರರಾದ ಭೀಷ್ಮ. ಅಲ್ಲಿಗೆ ರಥವನ್ನು ನಡೆಸು ಎಂದು ಹೇಳಿದನು.
ಅಸಾತ್ರಣಿ ತಸ್ಯ ದಿವ್ಯಾನಿ ದರ್ಶಯಿಷ್ಯಾಮಿ ಸಂಯುಗೇ |
ಘೋರರೂಪಾಣಿ ಚಿತ್ರಾಣಿ ಲಘೂನಿ ಚ ಗುರೂಣಿ ಚ ॥11॥
ಯುದ್ಧದಲ್ಲಿ ನನ್ನ ದಿವ್ಯವಾದ, ಭಯಂಕರವಾದ, ವಿಚಿತ್ರವಾದ ಮತ್ತು ದೊಡ್ಡ ಮತ್ತು ಸಣ್ಣ ಅಸ್ತ್ರಗಳನ್ನು ತೋರಿಸುವೆನು (ಎಂದು ಹೇಳಿದನು).
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ವೈರಾಟಿಃ ಪಾರ್ಥಸಾರಥಿಃ |
ವಾಹಯಚ್ಚೋದಿತಸ್ತೇನ ರಥಂ ಭೀಷ್ಮರಥಂ ಪ್ರತಿ ॥12॥
ವೈಶಂಪಾಯನ ಅವನ ಮಾತನ್ನು ಕೇಳಿ ಪಾರ್ಥನ ಸಾರಥಿಯಾದ ಉತ್ತರನು ಅರ್ಜುನನಿಂದ ಪ್ರೇರಿಸಲ್ಪಟ್ಟು ಭೀಷ್ಮರ ರಥದ ಕಡೆಗೆ ತನ್ನ ರಥವನ್ನು ನಡೆಸಿದನು.
ತಂ ತಥಾ ಚೋದಿತಂ ದೃಷ್ಟ್ವಾ ಫಲ್ಗುನಸ್ಯ ರಥೋತ್ತಮಮ್ |
ವಾಯುನೇವ ಮಹಾಮೇಘಂ ಸಹಸಾಽಭಿಸಮೀರಿತಮ್ ॥13॥
ತಂ ಪ್ರತ್ಯಗಾಚ್ಚ ಗಾಂಗೇಯೋ ರಥೇನಾದಿತ್ಯವರ್ಚಸಾ ॥14॥
ಅರ್ಜುನನ ಶ್ರೇಷ್ಠವಾದ ರಥವು ವಾಯುವಿನಿಂದ ಪ್ರೇರಿತವಾದ ಮಹಾಮೇಘದಂತೆ ಮುಂದೆ ಬರುತ್ತಿರುವುದನ್ನು ನೋಡಿದ ಗಂಗಾಪುತ್ರನಾದ ಭೀಷ್ಮರು ಸೂರ್ಯನ ಕಾಂತಿಯನ್ನು ಹೊಂದಿದ್ದ ರಥದಿಂದ ಅವನಿಗೆ ಎದುರಾಗಿ ಬಂದರು.
ಆಯಾಂತಮರ್ಜುನಂ ದೃಷ್ಟ್ವಾ ಭೀಷ್ಮಃ ಪರಪುರಂಜಯಃ |
ಪ್ರತ್ಯುಜ್ಜಗಾಮ ಯುದ್ಧಾರ್ಥೀ ಮಹರ್ಷಭ ಇವರ್ಷಭಮ್ ॥15॥
ಪರಪುರಂಜಯರಾದ ಭೀಷ್ಮರು ಎದುರಿಗೆ ಬರುತ್ತಿದ್ದ ಅರ್ಜುನನನ್ನು ನೋಡಿ ಯುದ್ಧಾರ್ಥಿಯಾಗಿ ಒಂದು ಗೂಳಿಯು ಇನ್ನೊಂದು ಗೂಳಿಯ ಎದುರಿಗೆ ಬಂದಂತೆ ಅವನಿಗೆ ಎದುರಾಗಿ ಬಂದರು.
ತಥಾಭಿಗುಪ್ತಯೇ ಸ್ವೇಷಾಂ ದುರಾಧರ್ಷಃ ಪಿತಾಮಹಃ |
ಹನ್ಯಮಾನೇಷು ಯೋಧೇಷು ಧನಂಜಯಮುಪಾದ್ರವತ್ ॥16॥
ಪಿತಾಮಹರೂ, ಸೋಲಿಸಲು ಅಸಾಧ್ಯರೂ ಆದ ಭೀಷ್ಮರು ತಮ್ಮ ಯೋಧರು ಹತರಾಗುತ್ತಿರಲು ಅವರನ್ನು ರಕ್ಷಿಸಲು ಅರ್ಜುನನ

ಕಡೆಗೆ ಬಂದರು.
ಪ್ರಗೃಹ್ಯ ಕಾರ್ಮುಕಶ್ರೇಷ್ಠಂ ಜಾತರೂಪಪರಿಷ್ಕೃತಮ್ |
ಶರಾನಾದಾಯ ತೀಕ್ಷ್ಣಾಗ್ರಾನ್ ಮರ್ಮದೇಹಪ್ರಮಾಥಿನಃ ||17||
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ಶುಶುಭೇ ಸ ನರವ್ಯಾಘ್ರೋ ಗಿರಿಃ ಸೂರ್ಯೋತ್ತರೋ ಯಥಾ ||18||
ಸುವರ್ಣಾಲಂಕೃತವಾದ ಶ್ರೇಷ್ಠವಾದ ಬಿಲ್ಲನ್ನು ಕೈಯಲ್ಲಿ ಹಿಡಿದು ಹರಿತವಾದ ತುದಿಯುಳ್ಳ ಶತ್ರುಮರ್ಮಗಳನ್ನು ಭೇದಿಸುವ ಬಾಣಗಳನ್ನು ತೆಗೆದುಕೊಂಡು ತಲೆಯ ಮೇಲೆ ಶ್ವೇತಚ್ಛತ್ರವನ್ನು ಹೊಂದಿದವರಾಗಿ ಆ ನರವ್ಯಾಘ್ರರು ಮೇಲೆ ಸೂರ್ಯನಿರುವ ಒಂದು ಪರ್ವತದಂತೆ ಶೋಭಿಸಿದರು.
ಪ್ರಾಧ್ಮಾಯ ಶಂಖಂ ಗಾಂಗೇಯೋ ಧಾರ್ತರಾಷ್ಟ್ರಂ ಪ್ರಹರ್ಷಯನ್ |
ಪ್ರದಕ್ಷಿಣಮುಪಾವೃತ್ಯ ಬೀಭತ್ಸುಂ ಸಮವಾರಯತ್ ||19||
ಭೀಷ್ಮರು ಶಂಖವನ್ನು ಊದಿ ದುರ್ಯೋಧನನಿಗೆ ಸಂತೋಷವನ್ನುಂಟು ಮಾಡುತ್ತಾ ಪ್ರದಕ್ಷಿಣೆಯಾಗಿ ಬಂದು ಅರ್ಜುನನನ್ನು ತಡೆದರು.
ಸಮವೇಕ್ಷ್ಯ ತಮಾಯಾಂತಂ ಕೌಂತೇಯಃ ಪರವೀರಹಾ |
ದೇವದತ್ತಂ ಮಹಾಶಂಖಂ ಪ್ರದಧ್ಮೌ ಯುಧಿ ವೀರ್ಯವಾನ್ ||20||
ಪರವೀರಘಾತಿಯಾದ, ವೀರ್ಯಶಾಲಿಯಾದ ಅರ್ಜುನನು ಅವರು ಬರುತ್ತಿರುವುದನ್ನು ನೋಡಿ ಯುದ್ಧದಲ್ಲಿ ತನ್ನ ದೇವದತ್ತ ಮಹಾಶಂಖವನ್ನು ಊದಿದನು.
ತೌ ಶಂಖನಾದಾವತ್ಯರ್ಥಂ ಭೀಷ್ಮಪಾಂಡವಯೋಸ್ತದಾ |
ನಾದಯಾಮಾಸತುಸ್ತತ್ರ ಖಂ ಚ ಭೂಮಿಂ ಚ ಸರ್ವಶಃ ||21||
ಭೀಷ್ಮ ಮತ್ತು ಅರ್ಜುನರ ಆ ತೀವ್ರವಾದ ಶಂಖನಾದವು ಭೂಮಿಯನ್ನು, ಅಂತರಿಕ್ಷವನ್ನು ಆವರಿಸಿ ಅಲ್ಲಿ ಪ್ರತಿಧ್ವನಿಸಿತು.
ಸ ಹಿ ದೃಷ್ಟ್ವಾ ತಥಾಽಽಯಾಂತಂ ಕೌಂತೇಯಂ ಪರವೀರಹಾ ||22||
ಪ್ರತ್ಯಗೃಹ್ಣಾದಮೇಯಾತ್ಮಾ ಪ್ರಿಯಾತಿಥಿಮಿವಾಗತಮ್ |
ಪರವೀರಘಾತಿಯಾದ ಭೀಷ್ಮರು ಹಾಗೆ ಬರುತ್ತಿರುವ ಅರ್ಜುನನನ್ನು ನೋಡಿ ಪ್ರಿಯನಾದ ಅತಿಥಿಯನ್ನು ಸ್ವೀಕರಿಸುವಂತೆ ಅಮೇಯಾತ್ಮರಾದ ಅವರು ಅವನನ್ನು ಸ್ವೀಕರಿಸಿದರು.
ಅಂತರಿಕ್ಷೇ ಪ್ರಜಲ್ಪಂತಿ ಸರ್ವೇ ದೇವಾಃ ಸವಾಸವಾಃ ||23||
ಯದರ್ಜುನಃ ಕುರೂನ್ ಸರ್ವಾನ್ ಪ್ರಾಕೃಂತಚ್ಛಸ್ತ್ರತೇಜಸಾ |
ಅರ್ಜುನನು ಎಲ್ಲಾ ಕುರುಶ್ರೇಷ್ಠರನ್ನು ತನ್ನ ಶಸ್ತ್ರತೇಜಸ್ಸಿನಿಂದ ಕತ್ತರಿಸಿದಾಗ ಅಂತರಿಕ್ಷದಲ್ಲಿ ಇಂದ್ರಾದಿ ಸಕಲ ದೇವತೆಗಳೂ ಮಾತನಾಡಿಕೊಂಡರು.
ಕುರುಶ್ರೇಷ್ಠಾವಿಮೌ ವೀರೌ ರಣೇ ಭೀಷ್ಮಧನಂಜಯೌ ||24||
ಸರ್ವಾಸ್ತ್ರಕುಶಲೌ ಲೋಕೇ ಏತಾವತಿರಥಾವುಭೌ |
ಉಭೌ ದೇವಮನುಷ್ಯೇಷು ವಿಶ್ರುತೌ ಸ್ವಪರಾಕ್ರಮೈಃ ||25||
ಉಭೌ ಪರಮಸಂರಬ್ಧಾವುಭೌ ದೀಪ್ತಧನುರ್ಧರೌ ||26||
ಭೀಷ್ಮಧನಂಜಯರಿಬ್ಬರೂ ಯುದ್ಧದಲ್ಲಿ ವೀರರು ಮತ್ತು ಕುರುಶ್ರೇಷ್ಠರು. ಇವರಿಬ್ಬರೂ ಸರ್ವಾಸ್ತ್ರಕುಶಲರು. ಇಬ್ಬರೂ ಅತಿರಥರು, ತಮ್ಮ ಪರಾಕ್ರಮಗಳಿಂದ ದೇವತೆಗಳಲ್ಲಿಯೂ ಮತ್ತು ಮನುಷ್ಯರಲ್ಲಿಯೂ ಪ್ರಖ್ಯಾತರಾದವರು. ಇಬ್ಬರೂ ಬಹಳ ಕೋಪಗೊಂಡಿರುವವರು ಮತ್ತು ತೇಜಸ್ಸಿನಿಂದ ಬೆಳಗುವ ಧನುಸ್ಸನ್ನು ಧರಿಸಿದವರು.
ಸಮಾಗತೌ ನರವ್ಯಾಘ್ರೌ ವ್ಯಾಘ್ರಾವಿವ ತರಸ್ವಿನೌ |
ಉಭೌ ಸದೃಶಕರ್ಮಾಣೌ ಸೂರ್ಯಸ್ಯಾಗ್ನೇಶ್ಚ ಭಾರತೌ ||27||
ವಾಸುದೇವಸ್ಯ ಸದೃಶೌ ಕಾರ್ತವೀರ್ಯಸಮಾವುಭೌ |
ಉಭೌ ವಿಶ್ರುತಕರ್ಮಾಣಾವುಭೌ ಶೂರೌ ಮಹಾಬಲೌ ||28||
ಸರ್ವಾಸ್ತ್ರವಿದುಷಾಂ ಶ್ರೇಷ್ಠೌ ಸರ್ವಶಸ್ತ್ರಭೃತಾಂ ವರೌ ||29||
ವೇಗಶಾಲಿಗಳಾದ ವ್ಯಾಘ್ರಗಳಂತೆ ಇಬ್ಬರೂ ಒಟ್ಟಾಗಿದ್ದಾರೆ. ಇಬ್ಬರೂ ಭರತವಂಶದವರು ಮತ್ತು ಸೂರ್ಯನಿಗೆ ಮತ್ತು ಅಗ್ನಿಗೆ ಸಮಾನವಾದ ಕಾರ್ಯವನ್ನು ಮಾಡುವವರು. ಇಬ್ಬರೂ ಕೃಷ್ಣನಿಗೆ ಸದೃಶರಾದವರು. ಕಾರ್ತವೀರ್ಯಾರ್ಜುನನಿಗೆ ಸಮಾನರಾದವರು. ಇಬ್ಬರೂ ತಮ್ಮ ಕರ್ಮಗಳಿಂದ ಪ್ರಖ್ಯಾತರಾದವರು. ಇಬ್ಬರೂ ಶೂರರು ಮತ್ತು ಮಹಾಬಲವುಳ್ಳವರು. ಎಲ್ಲಾ ಅಸ್ತ್ರಜ್ಞರಲ್ಲಿ ಶ್ರೇಷ್ಠರು ಮತ್ತು ಎಲ್ಲಾ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದವರು.
ಅಗ್ನೇರಿಂದ್ರಸ್ಯ ಸೋಮಸ್ಯ ಯಮಸ್ಯ ಧನದಸ್ಯ ಚ |
ಅನಯೋಃ ಸದೃಶಂ ವೀರ್ಯಂ ಮಿತ್ರಸ್ಯ ವರುಣಸ್ಯ ಚ ||30||
ಇವರ ಪರಾಕ್ರಮವು ಅಗ್ನಿಯ, ಇಂದ್ರನ, ಚಂದ್ರನ, ಯಮನ, ಕುಬೇರನ, ಮಿತ್ರನ, ವರುಣನ ಪರಾಕ್ರಮಕ್ಕೆ ಸದೃಶವಾಗಿರುವಂತಹದು.
ಕೋ ವಾ ಕುಂತೀಸುತಂ ಯುದ್ಧೇ ದ್ವೈರಥೇನೋಪಯಾಸ್ಯತಿ |
ಋತೇ ಶಾಂತನವಾದನ್ಯಃ ಕ್ಷತ್ರಿಯೋ ಭುವಿ ವಿದ್ಯತೇ ||31||
ಶಂತನು ಪುತ್ರರಾದ ಭೀಷ್ಮರನ್ನು ಬಿಟ್ಟು ದ್ವೈರಥ ಯುದ್ಧದಲ್ಲಿ ಅರ್ಜುನನನ್ನು ಎದುರಿಸುವ ಕ್ಷತ್ರಿಯನು ಭೂಮಿಯಲ್ಲಿ ಯಾವನಿದ್ದಾನೆ?

ವೈಶಂಪಾಯನಃ
ಇತಿ ಸಂಪೂಜಯಾಮಾಸುರ್ಭೀಷ್ಮಂ ದೃಷ್ಟ್ವಾಽರ್ಜುನಂ ಗತಮ್ |
ರಣೇ ಸಂಪ್ರಹರಿಷ್ಯಂತಂ ದೃಷ್ಟ್ವಾ ದೇವಾಃ ಸವಾಸವಾಃ ॥32॥
ವೈಶಂಪಾಯನ ಹೀಗೆ ಅರ್ಜುನನಿಗೆ ಅಭಿಮುಖವಾಗಿ ಹೋಗಿ ಯುದ್ಧದಲ್ಲಿ ಬಾಣಪ್ರಯೋಗವನ್ನು ಮಾಡುವ ಭೀಷ್ಮರನ್ನು ನೋಡಿ ಇಂದ್ರಾದಿ ದೇವತೆಗಳು ಅವರನ್ನು ಪ್ರಶಂಸಿಸಿದರು.
ಅಥ ಬಹುವಿಧಶಂಖತೂರ್ಯಘೋಷೈಃ
ವಿವಿಧರವೈಃ ಸಹ ಸಿಂಹನಾದಮಿಶ್ರೈಃ |
ಕುರುವೃಷಭಮಮಪೂಜಯತ್ ಕುರೂಣಾಂ
ಬಲಮಮರಾಧಿಪಸೈನ್ಯಸಪ್ರಭಂ ತತ್ ॥33॥
ಅನಂತರ ಬಹುವಿಧವಾದ ಶಂಖತೂರ್ಯಘೋಷಗಳಿಂದಲೂ, ಸಿಂಹನಾದ ಮಿಶ್ರಿತವಾದ ವಿವಿಧ ಶಬ್ದಗಳಿಂದಲೂ, ದೇವಸೈನ್ಯಕ್ಕೆ ಸದೃಶವಾದ ಆ ಕುರುಸೈನ್ಯವು ಕುರುಶ್ರೇಷ್ಠರಾದ ಭೀಷ್ಮರನ್ನು ಪೂಜಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * *
ಅರವತ್ತೆರಡನೆಯ ಅಧ್ಯಾಯ
ಭೀಷ್ಮಾರ್ಜುನರ ಯುದ್ಧ. ಭೀಷ್ಮರ ಪರಾಭವ.
ವೈಶಂಪಾಯನಃ
ತತೋ ಭೀಷ್ಮಃ ಶಾಂತನವೋ ವೀರ್ಯವಾನ್ ಸಾಯಕಾನ್ ಬಹೂನ್|
ಸಮರ್ಪಯನ್ ಮಹಾವೇಗಾನ್ ಶ್ವಸತಃ ಪನ್ನಗಾನಿವ ॥1॥
ವೈಶಂಪಾಯನ ಅನಂತರ ಶಂತನು ಪುತ್ರರೂ ವೀರ್ಯಶಾಲಿಗಳೂ ಆದ ಭೀಷ್ಮರು ಭುಸುಗುಟ್ಟುವ ಸರ್ಪದಂತಿದ್ದ ಅನೇಕ ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದರು.
ತೇ ಧ್ವಜಂ ಪಾಂಡುಪುತ್ರಸ್ಯ ಸಮಾಸಾದ್ಯ ಪತತ್ರಿಣಃ |
ಜ್ವಲಂತಂ ಕಪಿಮಾಜಘ್ನುರ್ಧ್ವಜಾಗ್ರನಿಲಯಂ ಚ ತಮ್ ॥2॥
ಆ ಬಾಣಗಳು ಅರ್ಜುನನ ರಥದ ಸಮೀಪಕ್ಕೆ ಬಂದು ಪ್ರಕಾಶಮಾನವಾದ ಆ ರಥದ ಧ್ವಜವನ್ನೂ ಮತ್ತು ಧ್ವಜನಿವಾಸಿಯಾದ ಕಪಿಯನ್ನೂ ಹೊಡೆದವು.
ಸಾರಥಿಂ ಚ ಹಯಾಂಶ್ಚಾಪಿ ವಿವ್ಯಾಧ ನಿಶಿತೈಃ ಶರೈಃ |
ಉರಸ್ಯತಾಡಯತ್ ಪಾರ್ಥಂ ತ್ರಿಭಿರೇವಾಯಸೈಃ ಶರೈಃ ॥3॥
ಭೀಷ್ಮರು ಅರ್ಜುನನ ಸಾರಥಿಯನ್ನು ಮತ್ತು ಅಶ್ವಗಳನ್ನು ನಿಶಿತವಾದ ಬಾಣಗಳಿಂದ ಹೊಡೆದು ಮೂರುಲೋಹಮಯವಾದ ಬಾಣಗಳಿಂದ ಅರ್ಜುನನ ವಕ್ಷಸ್ಸ್ಥಲಕ್ಕೆ ಹೊಡೆದರು.
ತದಾಽರ್ಜುನಃ ಶರೈಸ್ತೀಕ್ಷ್ಣೈಃ ವಿದ್ಧ್ವಾ ಕುರುಪಿತಾಮಹಮ್ |
ಧ್ವಜಂ ಚ ಸಾರಥಿಂ ಚಾಪಿ ವಿವ್ಯಾಧ ದಶಭಿಃ ಶರೈಃ ॥4॥
ಆಗ ಅರ್ಜುನನು ಕುರುಪಿತಾಮಹರನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದು ಅವರ ಧ್ವಜ ಮತ್ತು ಸಾರಥಿಗಳಿಗೆ ಹತ್ತುಬಾಣಗಳನ್ನು ಪ್ರಯೋಗಿಸಿದನು.
ತದ್ಯುದ್ಧಮಭವದ್ ಘೋರಂ ಲೋಮಹರ್ಷಣಮದ್ಭುತಮ್ |
ಭೀಷ್ಮಸ್ಯ ಸಹ ಪಾರ್ಥೇನ ಬಲಿವಾಸವಯೋರಿವ ॥5॥
ಭೀಷ್ಮರಿಗೂ ಮತ್ತು ಅರ್ಜುನನಿಗೂ ನಡೆದ ಆ ಯುದ್ಧವು ಬಲಿ ಮತ್ತು ಇಂದ್ರನಿಗೆ ನಡೆದ ಯುದ್ಧದಂತೆ ಘೋರವೂ, ಅದ್ಭುತವೂ ಮತ್ತು ರೋಮಾಂಚಕವೂ ಆಗಿದ್ದಿತು.
ಸಂತತಂ ಶರಮಾಲಾಭಿರಾಕಾಶಂ ಸಮಪದ್ಯತ |
ಅಂಬುದೈರಿವ ಧಾರಾಭಿಸ್ತಯೋಃ ಕಾರ್ಮುಕನಿಃಸೃತೈಃ ॥6॥
ಅವರಿಬ್ಬರ ಬಿಲ್ಲುಗಳಿಂದ ಹೊರಹೊಮ್ಮಿದ ಬಾಣಗಳ ಮಾಲೆಗಳಿಂದ ಆಕಾಶವು ತುಂಬಿಹೋಯಿತು.
ಭಲ್ಲೈರ್ಭಲ್ಲಾಃ ಸಮಾಹತ್ಯ ಭೀಷ್ಮಪಾಂಡವಯೋ ರಣೇ |
ಅಂತರಿಕ್ಷೇ ವ್ಯರಾಜಂತ ಖದ್ಯೋತಾಃ ಪ್ರಾವೃಷೀವ ಹಿ ॥7॥
ಯುದ್ಧದಲ್ಲಿ ಭೀಷ್ಮಾರ್ಜುನರ ಭಲ್ಲಗಳು ಒಂದಕ್ಕೆ ಒಂದು ಹೊಡೆದು ಅಂತರಿಕ್ಷದಲ್ಲಿ ಮಳೆಗಾಲದಲ್ಲಿ ಕಾಣುವ ಮಿಣುಕುಹುಳದಂತೆ ರಾರಾಜಿಸಿದವು.
ಅಗ್ನಿಚಕ್ರೋಪಮಂ ಘೋರಂ ಮಂಡಲೀಕೃತಮಾಹವೇ |
ಗಾಂಡೀವಮಭವಜ್ಜಿಷ್ಣೋಃ ಸವ್ಯಂ ದಕ್ಷಿಣಮಸ್ಯತಃ ॥8॥
ಬಲಭಾಗದಿಂದ ಮತ್ತು ಎಡಭಾಗದಿಂದ ಬಾಣಪ್ರಯೋಗ ಮಾಡುವ ಅರ್ಜುನನ ಗಾಂಡೀವವು ಯುದ್ಧದಲ್ಲಿ ಅಗ್ನಿಚಕ್ರದಂತೆ ಘೋರವೂ ಮತ್ತು ಮಂಡಲಾಕಾರವನ್ನು ಹೊಂದಿದುದೂ ಆಗಿದ್ದಿತು.

ಪರ್ವತಂ ವಾರಿಧಾರಾಭಿಃ ಛಾದಯನ್ನಿವ ತೋಯದಃ |
ಅರ್ಜುನಃ ಛಾದಯದ್ ಭೀಷ್ಮಂ ಶರವರ್ಷೈರನೇಕಶಃ ॥9॥
ಮೇಘವು ಪರ್ವತವನ್ನು ಮಳೆಯ ನೀರಿನ ಧಾರೆಗಳಿಂದ ಮುಚ್ಚುವಂತೆ ಅರ್ಜುನನು ಭೀಷ್ಮರನ್ನು ಅನೇಕ ಶರವರ್ಷಗಳಿಂದ ಮುಚ್ಚಿದನು.
ತಾಂ ಸಮುದ್ರಮಿವೋದ್ಧೂತಾಂ ಶರವೃಷ್ಟಿಂ ಸಮುದ್ಯತಾಮ್ |
ವ್ಯಧಮತ್ ಶನಕೈರ್ಭೀಷ್ಮೋ ಹ್ಯರ್ಜುನಂ ಸನ್ನ್ಯವಾರಯತ್ ॥10॥
ಸಮುದ್ರದಂತೆ ಉಕ್ಕಿಬರುತ್ತಿದ್ದ ಆ ಶರವೃಷ್ಟಿಯನ್ನು ಭೀಷ್ಮರು ನಿಧಾನವಾಗಿ ನಿವಾರಿಸಿ ಅರ್ಜುನನನ್ನು ತಡೆದರು.
ತತಸ್ತಾನಿ ವಿಸೃಷ್ಟಾನಿ ಶರಜಾಲಾನಿ ಸಂಘಶಃ |
ಆಹತಾನಿ ವ್ಯಕೀರ್ಯಂತ ಅರ್ಜುನಸ್ಯ ರಥಂ ಪ್ರತಿ ॥11॥
ಆಗ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಆ ಶರಜಾಲಗಳು ಭೀಷ್ಮರಿಂದ ಹೊಡೆಯಲ್ಪಟ್ಟು ಅರ್ಜುನನ ರಥದ ಕಡೆಗೆ ಸಾಗಿ ನಾಶವನ್ನು ಹೊಂದಿದವು.
ತತಃ ಕನಕಪುಂಖಾಗ್ರೈಃ ಶರೈಃ ಸನ್ನತಪರ್ವಭಿಃ |
ಪತದ್ಭಿಃ ಖಗವಾಜೈಶ್ಚ ದ್ಯೌರಾಸೀತ್ ಸಂವೃತಾ ಶರೈಃ ॥12॥
ಅನಂತರ ಕನಕಪುಂಖಗಳನ್ನು ಹೊಂದಿದ ಬಾಗಿದ ತುದಿಯುಳ್ಳ ಪಕ್ಷಿಗಳ ಗರಿಗಳಿಂದ ಕೂಡಿದ ಬಾಣಗಳಿಂದ ಅಂತರಿಕ್ಷವು ಮುಚ್ಚಿಹೋಯಿತು.
ತತಃ ಪ್ರಾಸೃಜದುಗ್ರಾಣಿ ಶರಜಾಲಾನಿ ಪಾಂಡವಃ |
ತಾವಂತಿ ಶರಜಾಲಾನಿ ಭೀಷ್ಮಃ ಪಾರ್ಥಾಯ ಪ್ರಾಹಿಣೋತ್ ॥13॥
ಅನಂತರ ಅರ್ಜುನನು ಉಗ್ರವಾದ ಶರಜಾಲಗಳನ್ನು ಸೃಷ್ಟಿಸಿದನು. ಭೀಷ್ಮರೂ ಸಹ ಅಷ್ಟೇ ಶರಜಾಲಗಳನ್ನು ಸೃಷ್ಟಿಸಿ ಅರ್ಜುನನ ಕಡೆಗೆ ಕಳುಹಿಸಿದರು.
ಸಾಶ್ವಂ ಸಸೂತಂ ಸರಥಂ ಸ ಪಾರ್ಥಂ
ಸಮಾಹಿನೋದ್ ಭಾರತ ವತ್ಸದಂತೈಃ |
ಪ್ರಚ್ಛಾದಯಾಮಾಸ ದಿಶಶ್ಚ ಸರ್ವಾ
ನಭಶ್ಚ ಬಾಣೈಸ್ತಪನೀಯಪುಂಖೈಃ ॥14॥
ಎಲೈ ಭಾರತನೇ, ಭೀಷ್ಮರು ವತ್ಸದಂತಗಳಿಂದ (ಬಾಣವಿಶೇಷಗಳಿಂದ) ಅಶ್ವ, ಸೂತ, ರಥಸಹಿತನಾದ ಅರ್ಜುನನನ್ನು ಮುಚ್ಚಿ ತಮ್ಮ ಪ್ರಕಾಶಿಸುವ ಪುಂಖವುಳ್ಳ ಬಾಣಗಳಿಂದ ಎಲ್ಲಾ ದಿಕ್ಕುಗಳನ್ನೂ ಮತ್ತು ಆಕಾಶವನ್ನೂ ಮುಚ್ಚಿದರು.
ತತೋ ದೇವರ್ಷಿಗಂಧರ್ವಾಃ ಸಾಧುಸಾಧ್ವಿತ್ಯಪೂಜಯನ್ |
ದುಷ್ಕರಂ ಕುರುತೇ ಭೀಷ್ಮೋ ಯದರ್ಜುನಮಯೋಧಯತ್ ॥15॥
ಆಗ ದೇವರ್ಷಿಗಂಧರ್ವರು ಭೀಷ್ಮರು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿ ದುಷ್ಕರವಾದ ಕಾರ್ಯವನ್ನು ಮಾಡುತ್ತಿದ್ದಾರೆ ಎಂದು ಸಾಧು ಸಾಧು ಎಂದು ಅವರನ್ನು ಪೂಜಿಸಿದರು.
ಬಲವಾನರ್ಜುನೋ ದಕ್ಷಃ ಕ್ಷಿಪ್ರಕಾರೀ ಚ ಪಾಂಡವಃ ॥16॥
ಕೋಽನ್ಯಃ ಸಮರ್ಥಃ ಪಾರ್ಥಸ್ಯ ವೇಗಂ ಧಾರಯಿತುಂ ರಣೇ ॥17॥
ಋತೇ ಶಾಂತನವಾದ್ ಭೀಷ್ಮಾತ್ ಕೃಷ್ಣಾದ್ವಾ ದೇವಕೀಸುತಾತ್ |
ಆಚಾರ್ಯವರಮುಖ್ಯಾದ್ವಾ ಭಾರದ್ವಾಜಾನ್ಮಹಾಬಲಾತ್ ॥18॥
ಪಾಂಡುಪುತ್ರನಾದ ಅರ್ಜುನನು ಬಲಿಷ್ಠನಾದವನೂ, ದಕ್ಷನಾದವನೂ ಮತ್ತು ಕ್ಷಿಪ್ರಕಾರಿಯಾದವನು. ಶಂತನು ಪುತ್ರರಾದ ಭೀಷ್ಮರನ್ನು ಬಿಟ್ಟು, ದೇವಕಿಪುತ್ರನಾದ ಕೃಷ್ಣನನ್ನು ಬಿಟ್ಟು, ಮಹಾಬಲಿಷ್ಠರಾದ ಆಚಾರ್ಯಶ್ರೇಷ್ಠರಾದ ದ್ರೋಣರನ್ನು ಬಿಟ್ಟು ಯುದ್ಧದಲ್ಲಿ ಅರ್ಜುನನ ಬಾಣಗಳ ವೇಗವನ್ನು ತಡೆಯಲು ಬೇರೆ ಯಾರು ಸಮರ್ಥರಾಗುತ್ತಾರೆ? (ಎಂದು ಪೂಜಿಸಿದರು).
ಅಸ್ತ್ರೈರಸ್ತ್ರಾಣಿ ಸಂವಿಧ್ಯ ಕ್ರೀಡಂತೌ ಪುರುಷೋತ್ತಮೌ |
ಚಕ್ಷೂಂಷಿ ಸರ್ವಭೂತಾನಾಂ ಮೋಹಯಂತೌ ಮಹಾಬಲೌ ॥19॥
ಮಹಾಬಲರೂ, ಪುರುಷೋತ್ತಮರೂ ಆದ ಅವರಿಬ್ಬರೂ ಅಸ್ತ್ರಗಳಿಂದ ಅಸ್ತ್ರಗಳನ್ನು ಹೊಡೆದು ಕ್ರೀಡಿಸುತ್ತಾ ಎಲ್ಲಾ ಪ್ರಾಣಿಗಳ ಕಣ್ಣುಗಳಿಗೆ ಮೋಹವನ್ನು ಉಂಟು ಮಾಡಿದರು.
ಪ್ರಾಜಾಪತ್ಯಂ ತಥೈವೈಂದ್ರಮಾಗ್ನೇಯಂ ಚ ಸುದಾರುಣಮ್ |
ಕೌಬೇರಂ ವಾರುಣಂ ಚೈವ ಯಾಮ್ಯಂ ವಾಯವ್ಯಮೇವ ಚ ॥20॥
ಪ್ರಯುಂಜಾನೌ ಮಹಾತ್ಮಾನೌ ಸಮರೇ ತೌ ವಿರೇಜತುಃ ॥21॥
ಪ್ರಾಜಾಪತ್ಯ, ಐಂದ್ರ, ಘೋರವಾದ ಆಗ್ನೇಯ, ಕೌಬೇರ, ವಾರುಣ, ಯಾಮ್ಯ, ವಾಯವ್ಯ ಮೊದಲಾದ ಅಸ್ತ್ರಗಳನ್ನು ಪ್ರಯೋಗಿಸುತ್ತಾ ಆ ಮಹಾತ್ಮರಿಬ್ಬರೂ ಯುದ್ಧದಲ್ಲಿ ಬಹಳವಾಗಿ ಶೋಭಿಸಿದರು.
ವಿಸ್ಮಿತಾನ್ಯಥ ಭೂತಾನಿ ತೌ ದೃಷ್ಟ್ವಾ ಸಂಯುಗೇ ತಥಾ |
ಸಾಧು ಪಾರ್ಥ ಮಹಾಬಾಹೋ ಸಾಧು ಭೀಷ್ಮೇತಿ ಚಾಬ್ರುವನ್ ॥22॥
ನೈತದನ್ಯೋ ಮನುಷ್ಯೇಷು ಪ್ರದರ್ಶಯಿತುಮಾಹವೇ |
ಮಹಾಸ್ತ್ರಾಣಾಂ ಸಂಪ್ರಯೋಗಂ ಸಮರೇ ಭೀಷ್ಮಪಾರ್ಥಯೋಃ ॥23॥
ಅವರಿಬ್ಬರೂ ಯುದ್ಧದಲ್ಲಿ ತೊಡಗಿದುದನ್ನು ನೋಡಿ ಎಲ್ಲಾ ಸೈನ್ಯಕರು ಮತ್ತು ಪ್ರಾಣಿಗಳು ವಿಸ್ಮಯಗೊಂಡರು. ಮಹಾಬಾಹುವಾದ

ಪಾರ್ಥನೇ ಸಾಧು, ಮಹಾಬಾಹುವಾದ ಭೀಷ್ಮರೇ ಸಾಧು. ಯುದ್ಧದಲ್ಲಿ ಭೀಷ್ಮಾರ್ಜುನರ ಮಹಾಸ್ತ್ರಗಳ ಸಂಪ್ರಯೋಗವನ್ನು ತೋರಿಸುವವನು ಮನುಷ್ಯರಲ್ಲಿ ಬೇರೆ ಯಾವನೂ ಇಲ್ಲ ಎಂದು ಮಾತನಾಡಿದರು.
ಏವಂ ಸರ್ವಾಸ್ತ್ರವಿದುಷೋರಸ್ತ್ರಯುದ್ಧಮವರ್ತತ ॥24॥
ಅಥ ಜಿಷ್ಣುರುದಾಹೃತ್ಯ ಶಿತಧಾರೇಣ ಕಾರ್ಮುಕಮ್ |
ನ್ಯಕೃಂತದ್ ಗೃಧ್ರಪತ್ರೇಣ ಜಾತರೂಪಪರಿಷ್ಕೃತಮ್ ॥25॥
ಹೀಗೆ ಸರ್ವಾಸ್ತ್ರದೀಪ್ತರಾದ ಅವರಿಬ್ಬರಿಗೆ ಅಸ್ತ್ರಯುದ್ಧವು ನಡೆಯಿತು. ಆಗ ಅರ್ಜುನನು ತನ್ನ ಬತ್ತಳಿಕೆಯಿಂದ ಹರಿತವಾದ ಅಲಗುಳ್ಳ ಒಂದು ಗೃಧ್ರಪತ್ರದಿಂದ ಕೂಡಿದ ಬಾಣವನ್ನು ಮೇಲಕ್ಕೆತ್ತಿ ಸುವರ್ಣಾಲಂಕೃತವಾದ ಭೀಷ್ಮರ ಧನುಸ್ಸನ್ನು ಕತ್ತರಿಸಿದನು.
ನಿಮೇಷಾಂತರಮಾತ್ರೇಣ ಭೀಷ್ಮೋಽನ್ಯದ್ ಕಾರ್ಮುಕಂ ರಣೇ |
ಸಮಾದಾಯ ನರವ್ಯಾಘ್ರಃ ಸಜ್ಯಂ ಚಕ್ರೇ ಮಹಾಬಲಃ ॥26॥
ಶರಾಂಶ್ಚ ಸುಬಹೂನ್ ಕ್ರುದ್ಧೋ ಮುಮೋಚಾಶು ಧನಂಜಯೇ ॥27॥
ಒಂದು ನಿಮಿಷದಲ್ಲಿ ಭೀಷ್ಮರು ಯುದ್ಧದಲ್ಲಿ ಬೇರೆ ಬಿಲ್ಲನ್ನು ತೆಗೆದುಕೊಂಡು ಮಹಾಬಲರೂ, ನರವ್ಯಾಘ್ರರೂ ಆದ ಅವರು ಹೆದೆಯನ್ನು ಬಿಗಿದರು ಮತ್ತು ಧನಂಜಯನ ಮೇಲೆ ಕ್ರುದ್ಧರಾಗಿ ಅನೇಕ ಬಾಣಗಳನ್ನು ಶೀಘ್ರವಾಗಿ ಪ್ರಯೋಗಿಸಿದರು.
ಅರ್ಜುನೋಽಪಿ ಶರಾನ್ ತೀಕ್ಷ್ಣಾನ್ ಭೀಷ್ಮಾಯ ನಿಶಿತಾನ್ ಬಹೂನ್|
ಚಿಕ್ಷೇಪ ಸುಮಹಾತೇಜಾಸ್ತಥಾ ಭೀಷ್ಮಶ್ಚ ಪಾಂಡವೇ ॥28॥
ಅರ್ಜುನನೂ ಸಹ ಭೀಷ್ಮರ ಮೇಲೆ ತೀಕ್ಷ್ಣವಾದ, ಹರಿತವಾದ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಮಹಾತೇಜಸ್ವಿಗಳಾದ ಭೀಷ್ಮರೂ ಸಹ ಅರ್ಜುನನ ಮೇಲೆ ಹಾಗೆಯೇ ಬಾಣಗಳನ್ನು ಪ್ರಯೋಗಿಸಿದರು.
ತಯೋರ್ದಿವ್ಯಾಸ್ತ್ರವಿದುಷೋರಸ್ಯತೋರನಿಶಂ ಶರಾನ್ |
ನ ವಿಶೇಷಸ್ತದಾ ರಾಜನ್ ಲಕ್ಷ್ಯತೇ ಸುಮಹಾತ್ಮನೋಃ ॥29॥
ಎಲೈ ರಾಜನೇ, ಮಹಾತ್ಮರಾದ, ದಿವ್ಯಾಸ್ತ್ರಗಳನ್ನು ತಿಳಿದ ಅವರಿಬ್ಬರೂ ಹೀಗೆ ಸತತವಾಗಿ ಬಾಣಪ್ರಯೋಗವನ್ನು ಮಾಡುತ್ತಿರುವಾಗ ಅವರಿಬ್ಬರಲ್ಲಿ ಒಬ್ಬರು ಹೆಚ್ಚು, ಒಬ್ಬರು ಕಡಿಮೆ ಎಂದು ಹೇಳಲು ಸಾಧ್ಯವಾಗಲಿಲ್ಲ.
ಅಥಾವೃಣೋದ್ ದಶ ದಿಶಃ ಶರೈರತಿರಥಸ್ತಥಾ |
ಕಿರೀಟಮಾಲೀ ಕೌಂತೇಯಃ ಶೂರಂ(ರಃ) ಶಾಂತನವಂ ತದಾ ॥30॥
ಅನಂತರ ಶೂರನಾದ ಕೌಂತೇಯನಾದ ಕಿರೀಟಮಾಲಿಯಾದ, ಅತಿರಥನಾದ ಅರ್ಜುನನು ಹತ್ತು ದಿಕ್ಕುಗಳನ್ನು ಬಾಣಗಳಿಂದ ಮುಚ್ಚಿ ಭೀಷ್ಮರನ್ನೂ ಸಹ ಬಾಣಗಳಿಂದ ಆಚ್ಛಾದಿಸಿದನು.
ಅತೀವ ಪಾಂಡವೋ ಭೀಷ್ಮಂ ಭೀಷ್ಮಶ್ಚಾತೀವ ಪಾಂಡವಮ್ |
ಬಭೂವ ತತ್ರ ಸಂಖೇ(ೀ)ಽಸ್ಮಿನ್ ಲೋಕೇ ರಾಜಂಸ್ತದದ್ಭುತಮ್ ॥
ರಾಜನೇ, ಅರ್ಜುನನು ಭೀಷ್ಮರಿಗಿಂತ ಶ್ರೇಷ್ಠನಾಗಿರುವಂತೆಯೂ, ಭೀಷ್ಮರು ಅರ್ಜುನನಿಗಿಂತಲೂ ಶ್ರೇಷ್ಠರಾಗಿರುವಂತೆಯೂ ಆ ಯುದ್ಧದಲ್ಲಿ ತೋರುತ್ತಿದ್ದಿತು.
ಪಾಂಡವೇನ ಹತಾಃ ಶೂರಾ ಭೀಷ್ಮಸ್ಯ ರಥರಕ್ಷಿಣಃ |
ಶೇರತೇ ಸಮರೇ ರಾಜನ್ ಕೌಂತೇಯಸ್ಯಾಹತಾಃ ಶರೈಃ ॥32॥
ಎಲೈ ರಾಜನೇ, ಆ ಯುದ್ಧದಲ್ಲಿ ಅದು ಅದ್ಭುತವಾಗಿದ್ದಿತು. ಪಾಂಡುಪುತ್ರನಾದ ಕೌಂತೇಯನಾದ ಅರ್ಜುನನಿಂದ ಬಾಣಗಳಿಂದ ಹೊಡೆಯಲ್ಪಟ್ಟ ಭೀಷ್ಮರಥದ ರಕ್ಷಕರು ಯುದ್ಧದಲ್ಲಿ ಭೂಮಿಯ ಮೇಲೆ ಮಲಗಿದರು.
ತತೋ ಗಾಂಡೀವನಿರ್ಮುಕ್ತಾ ಇಷವಃ ಪನ್ನಗಾ ಇವ |
ಅಗಚ್ಛನ್ ಪುಂಖಸಂಸಕ್ತಾಃ ಶ್ವೇತವಾಹನಪತ್ರಿಣಃ ॥33॥
ಅನಂತರ ಪುಂಖವನ್ನು ಹೊಂದಿದ ಅರ್ಜುನನ ಬಾಣಗಳು ಸರ್ಪಗಳಂತೆ ಗಾಂಡೀವದಿಂದ ಹೊರಹೊಮ್ಮಿದವು.
ನಿಷ್ಪತಂತೋ ರಥಾತ್ ತಸ್ಯ ಧೌತಾ ಹೈರಣ್ಯವಾಸಸಃ |
ಆಕಾಶೇ ಪ್ರತ್ಯದೃಶ್ಯಂತ ಹಂಸಾನಾಮಿವ ಪಂಕ್ತಯಃ ॥34॥
ಅವನ ರಥದಿಂದ ಹೊರಹೊಮ್ಮಿದ, ಸಾಣೆಯನ್ನು ಹಿಡಿದ ಶುಭ್ರವಾದ, ಸುವರ್ಣಮಯವಾದ ಅಲಂಕಾರವನ್ನು ಹೊಂದಿದ್ದ ಆ ಬಾಣಗಳು ಆಕಾಶದಲ್ಲಿ ಹಂಸಗಳ ಪಂಕ್ತಿಯಂತೆ ಕಂಡುಬಂದವು.
ತಸ್ಯ ತದ್ ದಿವ್ಯಮಸ್ತ್ರಂ ಹಿ ಪ್ರಗಾಢಂ ಚಿತ್ರಮಸ್ಯತಃ |
ಪ್ರೇಕ್ಷಂತೇ ಸ್ಮಾಂತರಿಕ್ಷಸ್ಥಾಃ ಸರ್ವೇ ದೇವಾಃ ಸವಾಸವಾಃ ॥35॥
ಅರ್ಜುನನು ದಿವ್ಯವಾದ, ವಿಚಿತ್ರವಾದ ತನ್ನ ಅಸ್ತ್ರಗಳನ್ನು ಗಾಢವಾಗಿ ಪ್ರಯೋಗಿಸುತ್ತಿರಲು ಅಂತರಿಕ್ಷದಲ್ಲಿ ನಿಂತು ಇಂದ್ರನೇ ಮೊದಲಾದ ಎಲ್ಲ ದೇವತೆಗಳು ಅದನ್ನು ನೋಡಿದರು.
ತಂ ದೃಷ್ಟ್ವಾ ಪರಮಪ್ರೀತೋ ಗಂಧರ್ವಶ್ಚಿತ್ರಮದ್ಭುತಮ್ |
ಶಶಂಸ ದೇವರಾಜಾಯ ಚಿತ್ರಸೇನಃ ಪ್ರತಾಪವಾನ್ ॥36॥
ಆ ಅದ್ಭುತವನ್ನೂ, ವಿಚಿತ್ರವನ್ನೂ ನೋಡಿದ ಗಂಧರ್ವರಾಜನಾದ ಪ್ರತಾಪಶಾಲಿಯಾದ ಚಿತ್ರಸೇನನು ದೇವರಾಜನಾದ ಇಂದ್ರನಿಗೆ ಪ್ರಶಂಸಾ ಪೂರ್ವಕವಾಗಿ ಹೀಗೆ ಹೇಳಿದನು.
ಪಶ್ಯೇಮಾನ್ ಅರಿನಿರ್ದಾರಾನ್ ಸಂಸಕ್ತಾನೀವ ಗಚ್ಛತಃ |
ಚಿತ್ರರೂಪಮಿದಂ ಜಿಷ್ಣೋರ್ದಿವ್ಯಮಸ್ತ್ರಮುದೀರ್ಯತಃ ॥37॥
ಒಂದಕ್ಕೊಂದು ಸೇರಿಕೊಂಡಂತೆ ಹೋಗುತ್ತಾ ಶತ್ರುಗಳನ್ನು ಭೇದಿಸುವ ಈ ಬಾಣಗಳನ್ನು ನೋಡು. ದಿವ್ಯಾಸ್ತ್ರವನ್ನು ಪ್ರಯೋಗಿಸುವ

ಅರ್ಜುನನ ಈ ಚಿತ್ರರೂಪವನ್ನು ನೋಡು.
ನೇದಂ ಮನುಷ್ಯಾಃ ಶ್ರದ್ಧಧ್ಯುರ್ನ ಹೀದಂ ತೇಷು ವಿದ್ಯತೇ |
ಪೌರಾಣಾನಾಂ ಮಹಾಸ್ತ್ರಾಣಾಂ ವಿಚಿತ್ರೋಽಯಂ ಸಮಾಗಮಃ ॥38॥
ಇದನ್ನು ಮನುಷ್ಯರು ನಂಬಲಾರರು. ಏಕೆಂದರೆ ಈ ವಿದ್ಯೆಯು ಅವರಲ್ಲಿ ಇಲ್ಲ. ಪ್ರಾಚೀನವಾದ ಮಹಾಸ್ತ್ರಗಳ ವಿಚಿತ್ರವಾದ ಸಮಾಗಮವು ಇದಾಗಿದೆ.
ಮಧ್ಯಂದಿನಗತಂ ಸೂರ್ಯಂ ಪ್ರತಪಂತಮಿವಾಂಬರೇ |
ನ ಶಕ್ನುವಂತಿ ಸೈನ್ಯಾನಿ ಪಾಂಡವಂ ಪ್ರತಿವೀಕ್ಷಿತುಮ್ ॥39॥
ಮಧ್ಯಂದಿನ ಕಾಲದಲ್ಲಿ ಆಕಾಶದಲ್ಲಿ ಜ್ವಲಿಸುವ ಸೂರ್ಯನನ್ನು ನೋಡಲು ಹೇಗೆ ಸಾಧ್ಯವಿಲ್ಲವೋ ಹಾಗೆ ಪಾಂಡವನನ್ನು ನೋಡಲು ಸೈನ್ಯಗಳಿಗೆ ಸಾಧ್ಯವಿಲ್ಲ.
ಉಭೌ ವಿಶ್ರುತಕರ್ಮಾಣಾವುಭೌ ವೀರೌ ಮಹೀಕ್ಷಿತಾಮ್ |
ಉಭೌ ಸದೃಶಕರ್ಮಾಣಾವುಭೌ ಯುಧಿ ದುರಾಸದೌ ॥40॥
ಇಬ್ಬರೂ ಪ್ರಖ್ಯಾತವಾದ ಕರ್ಮವುಳ್ಳವರು. ಇಬ್ಬರೂ ಭೂಮಿಯಲ್ಲಿ ವಾಸಿಸುವವರಲ್ಲಿ ವೀರರು. ಇಬ್ಬರೂ ಸದೃಶವಾದ ಕರ್ಮವನ್ನು ಮಾಡುವವರು ಮತ್ತು ಇಬ್ಬರೂ ಸಮೀಪ ಹೋಗಲು ಸಾಧ್ಯವಿಲ್ಲದವರು (ಎಂದು ಹೇಳಿದನು).
ವೈಶಂಪಾಯನಃ
ಇತ್ಯುಕ್ತೋ ದೇವರಾಜಸ್ತು ಪಾರ್ಥಭೀಷ್ಮಸಮಾಗಮಮ್ |
ಪೂಜಯಾಮಾಸ ದಿವ್ಯೇನ ಪುಷ್ಪವರ್ಷೇಣ ಭಾರತ ॥41॥
ವೈಶಂಪಾಯನ ಭಾರತನೇ, ಹೀಗೆ ಹೇಳಲ್ಪಟ್ಟ ದೇವರಾಜನಾದ ಇಂದ್ರನು ಪಾರ್ಥ ಮತ್ತು ಭೀಷ್ಮರ ಸಮಾಗಮವನ್ನು ದಿವ್ಯವಾದ ಪುಷ್ಪವರ್ಷದಿಂದ ಪೂಜಿಸಿದನು.
ತತೋ ಭೀಷ್ಮಃ ಶಾಂತನವೋ ವಾಮಪಾರ್ಶ್ವೇ ಸಮರ್ಪಯತ್ |
ಅಸ್ಯತಃ ಪ್ರತಿಸಂಧಾಯ ವಿವೃತಂ ಸವ್ಯಸಾಚಿನಃ ॥42॥
ಅನಂತರ ಭೀಷ್ಮರು ಯುದ್ಧಮಾಡುತ್ತಿದ್ದ ಅರ್ಜುನನ ಒಂದು ಅವಕಾಶವನ್ನು ಗಮನಿಸಿ ಅವನ ವಾಮಪಾರ್ಶ್ವಕ್ಕೆ ಬಾಣದಿಂದ ಹೊಡೆದರು.
ತತಃ ಪ್ರಸಹ್ಯ ಬೀಭತ್ಸುಃ ಪೃಥುಧಾರೇಣ ಕಾರ್ಮುಕಮ್ |
ನ್ಯಕೃಂತದ್ ಗೃಧ್ರಪತ್ರೇಣ ಭೀಷ್ಮಸ್ಯಾಮಿತತೇಜಸಃ ॥43॥
ಆಗ ಅರ್ಜುನನು ಅದನ್ನು ತಡೆದುಕೊಂಡು ತನ್ನ ಬಿಲ್ಲನ್ನು ಹಿಡಿದು ಅಗಲವಾದ ಅಲುಗುಳ್ಳ ಗೃಧ್ರಪತ್ರದಿಂದ ಅಮಿತಪರಾಕ್ರಮಿಯಾದ ಭೀಷ್ಮರ ಧನುಸ್ಸನ್ನು ಕತ್ತರಿಸಿದನು.
ಅಥೈನಂ ದಶಭಿಃ ಪಶ್ಚಾತ್ ಪ್ರತ್ಯವಿಧ್ಯತ್ ಸ್ತನಾಂತರೇ |
ಯತಮಾನಂ ಪರಾಕ್ರಾಂತಂ ಕುಂತೀಪುತ್ರೋ ಧನಂಜಯಃ ॥44॥
ಅನಂತರ ಪುನಃ ಪ್ರಯತ್ನವನ್ನು ಪಟ್ಟು ಪರಾಕ್ರಮವನ್ನು ತೋರಿಸಲು ಹವಣಿಸುತ್ತಿದ್ದ ಭೀಷ್ಮರಿಗೆ ಕುಂತೀಪುತ್ರನಾದ ಧನಂಜಯನು ಸ್ತನಗಳ ಮಧ್ಯದಲ್ಲಿ ಹತ್ತುಬಾಣಗಳಿಂದ ಹೊಡೆದನು.
ಆಪೀಡಿತೋ ಮಹಾಬಾಹುರ್ಗೃಹೀತ್ವಾ ರಥಕೂಬರಮ್ |
ಗಾಂಗೇಯೋ ಯುಧಿ ದುರ್ಧರ್ಷಸ್ತಸ್ಥೌ ದೀರ್ಘಮಿವಾತುರಃ ॥45॥
ಪಾರ್ಥನ ಬಾಣಗಳಿಂದ ಚೆನ್ನಾಗಿ ಪೀಡಿತರಾದ ಮಹಾಬಾಹುಗಳೂ, ದುರ್ಧರ್ಷರೂ ಆದ ಭೀಷ್ಮರು ಬಹಳ ನೋವಿನಿಂದ ಹೆಚ್ಚು ಕಾಲದವರೆಗೆ ರಥದ ಕೂಬರವನ್ನು ಹಿಡಿದು ನಿಂತರು.
ತಂ ವಿಸಂಜ್ಞಮಪೋವಾಹ ಸಂಯಂತಾ ರಥವಾಜಿನಾಮ್ |
ಉಪದೇಶಮನುಸ್ಮೃತ್ಯ ರಕ್ಷಮಾಣೋ ಮಹಾರಥಮ್ ॥46॥
ಅವರು ಹೀಗೆ ಮೂರ್ಛೆ ಹೊಂದುತ್ತಿರಲು ಅವರ ರಥದ ಕುದುರೆಗಳ ಸಾರಥಿಯು ತನ್ನ ಉಪದೇಶವನ್ನು ಸ್ಮರಿಸಿ ಅದಕ್ಕೆ ಅನುಗುಣವಾಗಿ ಮಹಾರಥರಾದ ಅವರನ್ನು ರಕ್ಷಿಸುತ್ತಾ ಯುದ್ಧಭೂಮಿಯಿಂದ ಹೊರಗೆ ಕರೆದುಕೊಂಡು ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಿಷಷ್ಠಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಅರವತ್ತಮೂರನೆಯ ಅಧ್ಯಾಯ
ಅರ್ಜುನನು ಯುದ್ಧಭೂಮಿಯಿಂದ ಅಪಯಾನ ಮಾಡುತ್ತಿದ್ದಾನೆಂದು
ಕರ್ಣನ ಶಂಕೆ. ದ್ರೋಣರಿಂದ ಅದರ ಪರಿಹಾರ.
ವೈಶಂಪಾಯನಃ
ತಾಂಸ್ತಾನ್ ವಿಜಿತ್ಯ ಸಂಗ್ರಾಮೇ ಕುರೂಣಾಂ ಮಿಷತಾಂ ವನೇ |
ತತೋ ಯುದ್ಧಮನಾಃ ಪಾರ್ಥಃ ಪ್ರಾಯಾತ್ ಪಂಚ ರಥಾನ್ ಪ್ರತಿ ॥
ವೈಶಂಪಾಯನ ಅರ್ಜುನನು ಕುರುಗಳು ನೋಡುತ್ತಿರುವಂತೆಯೇ ಅನೇಕ ಯೋಧರನ್ನು ಗೆದ್ದು ಪುನಃ ಯುದ್ಧವನ್ನು ಮಾಡಲು ಬಯಸಿ ಅರ್ಜುನನು ಆ ಪಂಚರಥರ ಎದುರಾಗಿ ಹೋದನು.

ಆದದಾನಶ್ಚ  ನಾರಾಚಾನ್ ವಿಮೃಶನ್ ಇಷುಧೀ ಅಪಿ |
ಸಂಸ್ಪೃಶಾನಶ್ಚ  ಗಾಂಡೀವಂ ಭೂಯಃ ಕರ್ಣಂ ಸಮಭ್ಯಯಾತ್ ||2||
ಬಾಣಗಳನ್ನು ತೆಗೆದುಕೊಳ್ಳುತ್ತಾ, ಬತ್ತಳಿಕೆಗಳನ್ನು ಕೈಯಿಂದ ನೇವರಿಸುತ್ತಾ, ಗಾಂಡೀವವನ್ನು ಸ್ಪರ್ಶಿಸುತ್ತಾ ಪುನಃ ಕರ್ಣನನ್ನು ಸಮೀಪಿಸಿದನು.
ಅಶ್ವತ್ಥಾಮಾ
ಕರ್ಣ ಯತ್ ತತ್ ಸಭಾಮಧ್ಯೇ ಬಹ್ವಬದ್ಧಂ ಪ್ರಭಾಷಸೇ |
ನ ಮೇ ಯುಧಿ ಸಮೋಽಸ್ತೀತಿ ತದಿದಂ ಸಮುಪಸ್ಥಿತಮ್ ||3||
ಅಶ್ವತ್ಥಾಮಾ ಕರ್ಣನೇ, ಯುದ್ಧದಲ್ಲಿ ನನ್ನ ಸಮಾನವಿಲ್ಲವೆಂದು ಸಭೆಯಲ್ಲಿ ಬಹಳ ಅಬದ್ಧವಾಗಿ ಮಾತನಾಡುತ್ತೀಯೆ. ಅದರ ಪರೀಕ್ಷೆಯು ಇದೋ ಪ್ರಾಪ್ತವಾಗಿದೆ.
ಏಷೋಽಂತಕಸಮಃ ಕ್ರುದ್ಧಃ ಸರ್ವಭೂತಾವಮರ್ದನಃ |
ಅದೂರಾತ್ ಪ್ರತ್ಯುಪಸ್ಥಾಯ ಜೃಂಭತೇ ಕೇಸರೀ ಯಥಾ ||4||
ಈ ಅರ್ಜುನನು ಮೃತ್ಯುವಿಗೆ ಸಮನಾಗಿ ಎಲ್ಲರನ್ನೂ ಮರ್ದಿಸುತ್ತಾ ಸಮೀಪದಲ್ಲಿಯೇ ಎದುರಾಗಿ ಬಂದು ಸಿಂಹದಂತೆ ಜೃಂಭಿಸುತ್ತಿದ್ದಾನೆ.
ಕರ್ಣಃ
ನಾಹಂ ಬಿಭೇಮಿ ಬೀಭತ್ಸೋಃ ಕೃಷ್ಣಾದ್ವಾ  ದೇವಕೀಸುತಾತ್ |
ಪಾಂಡವೇಭ್ಯೋಽಪಿ ಸರ್ವೇಭ್ಯಃ ಕ್ಷತ್ರಧರ್ಮಮನುವ್ರತಃ ||5||
ಕರ್ಣ ಕ್ಷತ್ರಿಯ ಧರ್ಮವನ್ನು ಅನುಸರಿಸುವ ನಾನು ಅರ್ಜುನನಿಗಾಗಲಿ, ದೇವಕೀಪುತ್ರನಾದ ಕೃಷ್ಣನಿಗಾಗಲೀ ಅಥವಾ ಒಟ್ಟಾರೆ ಎಲ್ಲಾ ಪಾಂಡವರಿಗಾಗಲೀ ಹೆದರುವುದಿಲ್ಲ.
ಸತ್ತ್ವಾಧಿಕಾನಾಂ ಪುಂಸಾಂ ತು ಧನುರ್ವೇದೋಪಜೀವಿನಾಮ್ |
ಗರ್ಜನಾತ್ ಜಾಯತೇ ದರ್ಪಃ ಸ್ವರಶ್ಚ   ನ ವಿಷೀದತಿ ||6||
ಧನುರ್ವಿದ್ಯೆಯನ್ನು ಉಪಜೀವಿಸಿದ, ಧೈರ್ಯವು ಹೆಚ್ಚಾದ ಪುರುಷರಿಗೆ ಶತ್ರುಗಳ ಗರ್ಜನೆಯನ್ನು ಕೇಳಿ ದರ್ಪವುಂಟಾಗುತ್ತದೆ. ಸ್ವರವು ಉಡುಗಿಹೋಗುವುದಿಲ್ಲ.
ಪಶ್ಯತ್ವಾಚಾರ್ಯಪುತ್ರೋ ಮಾಮರ್ಜುನೇನ ರಣೇ ಸಹ |
ಯುಧ್ಯಮಾನಂ ಸುಸಂಯತ್ತಂ ದೈವಂ ತು ದುರತಿಕ್ರಮಮ್ ||7||
ಆಚಾರ್ಯಪುತ್ರನು ಅರ್ಜುನನ ಜೊತೆಯಲ್ಲಿ ಬಹಳ ಎಚ್ಚರಿಕೆಯಿಂದ ಯುದ್ಧ ಮಾಡುವ ನನ್ನನ್ನು ನೋಡುವವನಾಗಲಿ. ಆದರೆ ದೈವವನ್ನು ಯಾರೂ ಮೀರಲಾರರು.
ವೈಶಂಪಾಯನಃ
ತಂ ಸಮಂತಾದ್ ರಥಾಃ ಪಂಚ ಪರಿವಾರ್ಯ ಧನಂಜಯಮ್ |
ತ ಇಷೂನ್ ಸಮ್ಯಗಸ್ಯಂತೋ ಮುಮುಕ್ಷಂತೋಽಪಿ ಜೀವಿತಮ್ ||8||
ವೈಶಂಪಾಯನ ಅರ್ಜುನನ ಸುತ್ತಲೂ ಪಂಚರಥಿಕರು ಸುತ್ತುವರಿದು ತಮ್ಮ ಜೀವನದ ಮೇಲೆ ಆಸೆಯನ್ನು ತೊರೆದು ಬಾಣಗಳನ್ನು ಪ್ರಯೋಗಿಸಿದರು.
ತೇ ಲಾಭಮಿವ ಮನ್ವಾನಾಃ ಕ್ಷಿಪ್ರಮಾರ್ಛನ್ ಧನಂಜಯಮ್ |
ಶರೌಘಾನ್ ಸಮ್ಯಗಸ್ಯಂತೋ ಜೀಮೂತಾ ಇವ ವಾರ್ಷಿಕಾಃ ||9||
ಅರ್ಜುನನ ದರ್ಶನವು ತಮಗೆ ಲಾಭವೆಂದು ತಿಳಿದ ಅವರು ಮಳೆಗಾಲದ ಮೋಡಗಳಂತೆ ಬಾಣಗಳ ಸಮೂಹವನ್ನು ಅರ್ಜುನನ ಮೇಲೆ ಶೀಘ್ರವಾಗಿ ಚೆನ್ನಾಗಿ ಪ್ರಯೋಗಿಸಿದರು.
ಬಹುಭಿರ್ನಿಶಿತೈರ್ಬಾಣೈಃ ವಿವಿಧೈರ್ಲೋಮವಾಪಿಭಿಃ |
ದುರ್ದ್ರುವಾಃ ಪ್ರತ್ಯವಸ್ಥಾಯ ಪ್ರತ್ಯವಿಧ್ಯನ್ ಧನಂಜಯಮ್ ||10||
ರಣರಂಗದಿಂದ ಓಡಿಹೋಗದ ಅವರು ಲೋಮವನ್ನೂ ಕತ್ತರಿಸುವ ವಿಚಿತ್ರವಾದ ಮತ್ತು ಹರಿತವಾದ ಬಾಣಗಳಿಂದ ಅರ್ಜುನನ ಎದುರಾಗಿ ಬಂದು ಅವನನ್ನು ಹೊಡೆದರು.
ತತಃ ಪ್ರಹಸ್ಯ ಬೀಭತ್ಸುಃ ಸರ್ವಶಸ್ತ್ರಭೃತಾಂ ವರಃ |
ದಿವ್ಯಮಸ್ತ್ರಂ ವಿಕುರ್ವಾಣಃ ಪ್ರತ್ಯಯಾದ್ ರಥಸತ್ತಮಾನ್ ||11||
ಆಗ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನು ನಕ್ಕು ದಿವ್ಯಾಸ್ತ್ರವನ್ನು ಪ್ರಯೋಗಿಸುವವನಾಗಿ ಆ ರಥಶ್ರೇಷ್ಠರ ಹತ್ತಿರ ಬಂದನು.

ಯಥಾ ರಶ್ಮಿಭಿರಾದಿತ್ಯಃ ಪ್ರಚ್ಛಾದಯತಿ ಮೇದಿನೀಮ್ |
ಏವಂ ಗಾಂಡೀವನಿರ್ಮುಕ್ತೈಃ  ಶರೈಃ ಪ್ರಾಚ್ಛಾದಯದ್ ದಿಶಃ ||12||
ಸೂರ್ಯನು ತನ್ನ ಕಿರಣಗಳಿಂದ ಭೂಮಿಯನ್ನು ಮುಚ್ಚುವಂತೆ ಅರ್ಜುನನು ಗಾಂಡೀವದಿಂದ ಹೊರಹೊಮ್ಮಿದ ಬಾಣಗಳಿಂದ ದಿಕ್ಕುಗಳನ್ನು ಮುಚ್ಚಿದನು.
ನ ರಥಾನಾಂ ನ ಚಾಶ್ವಾನಾಂ ನ ಧ್ವಜಾನಾಂ ನ ದಂತಿನಾಮ್ |
ಅವಿದ್ಧಂ ನಿಶಿತೈರ್ಬಾಣೈರಾಸೀದ್ ದ್ವ್ಯಂಗುಲಮಂತರಮ್ ||13||
ರಥಗಳಲ್ಲಿ, ಅಶ್ವಗಳಲ್ಲಿ, ಧ್ವಜಗಳಲ್ಲಿ, ಗಜಗಳಲ್ಲಿ ಅರ್ಜುನನ ನಿಶಿತವಾದ ಬಾಣಗಳಿಂದ ಹೊಡೆಯಲ್ಪಡದ ಅಂತರವು ಎರಡು

ಅಂಗುಲವೂ ಇರಲಿಲ್ಲ.
ಸರ್ವೇ ಶಾಂತಿಪರಾ ಯೋಧಾಃ ಸ್ವಚಿತ್ತಂ ನಾಭಿಜಜ್ಞಿರೇ |
ಹಸ್ತ್ಯಶ್ವಾಶ್ಚಾಪಿ ವಿತ್ರಸ್ತಾ ವ್ಯವಧೀಯಂತ ಸರ್ವಶಃ ||14||
ಎಲ್ಲ ಯೋಧರೂ ಶಾಂತಿಪರರಾಗಿ ತಮ್ಮ ಚಿತ್ತವನ್ನೇ ತಾವು ತಿಳಿಯದಾದರು. ಗಜಗಳೂ ಮತ್ತು ಅಶ್ವಗಳೂ ಸಹ ಹೆದರಿ ಎಲ್ಲ ಕಡೆಗಳಲ್ಲಿಯೂ ಅಡಗಿಕೊಂಡವು.
ಯಥಾ ನಳವನಂ ನಾಗಃ ಪ್ರಭಿನ್ನಃ ಷಷ್ಟಿಹಾಯನಃ |
ಏವಂ ಸರ್ವಾನ್ ಅಪಾಮೃದ್ನಾದರ್ಜುನಃ ಶಸ್ತ್ರತೇಜಸಾ ||15||
ಅರವತ್ತು ವರ್ಷದ ಗಜವು ಮದಿಸಿ ನಳವನವನ್ನು ಪ್ರಕ್ಷುಬ್ಧಗೊಳಿಸಿದಂತೆ ಅರ್ಜುನನು ತನ್ನ ಶಸ್ತ್ರತೇಜಸ್ಸಿನಿಂದ ಎಲ್ಲರನ್ನೂ ಕ್ಷೋಭೆಗೊಳಿಸಿದನು.
ಗಾಂಡೀವಸ್ಯ ಚ ಘೋಷೇಣ ಪೃಥಿವೀ ಸಮಕಂಪತ |
ಮನಾಂಸಿ ಧಾರ್ತರಾಷ್ಟ್ರಾಣಾಮಪ್ಯಕೃಂತದ್ ಧನಂಜಯಃ ||16||
ಗಾಂಡೀವ ಧನುಸ್ಸಿನ ಘೋಷದಿಂದ ಭೂಮಿಯು ನಡುಗಿತು. ಧನಂಜಯನು ಧೃತರಾಷ್ಟ್ರಪುತ್ರರ ಮನಸ್ಸನ್ನೂ ಸಹ ಆ ಘೋಷದಿಂದ ಕತ್ತರಿಸಿದನು.
ತತೋ ವಿಗಾಹ್ಯ ಸೈನ್ಯಾನಾಂ ಮಧ್ಯಂ ಶಸ್ತ್ರಭೃತಾಂ ವರಃ |
ಸಾರಥಿಂ ಸಮರೇ ಶೂರಮಭ್ಯಭಾಷತ ವೀರ್ಯವಾನ್ ||17||
ಸನ್ನಿಯಮ್ಯ ಹಯಾನೇತಾನ್ ಮಂದಂ ವಾಹಯ ಸಾರಥೇ |
ಆಚಾರ್ಯಪುತ್ರಂ ಸಮರೇ ಯೋಧಯಿಷ್ಯಾಮಿ ಮಾನಿನಮ್ ||18||
ಪುರಾ ಹ್ಯೇಷ ನ ಮೇ ಶಬ್ದಃ ಸಾಧೀಭವತಿ ಪೃಷ್ಠತಃ ||19||
ಅನಂತರ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಪರಾಕ್ರಮಶಾಲಿಯಾದ ಅರ್ಜುನನು ಶತ್ರುಸೈನ್ಯದ ಮಧ್ಯವನ್ನು ಪ್ರವೇಶಿಸಿ ಯುದ್ಧದಲ್ಲಿ ಶೂರನಾದ ತನ್ನ ಸಾರಥಿಯನ್ನು ಕುರಿತು ಎಲೈ ಸಾರಥಿಯೇ, ಈ ಅಶ್ವಗಳನ್ನು ಚೆನ್ನಾಗಿ ನಿಯಂತ್ರಿಸಿ ನಿಧಾನವಾಗಿ ನಡೆಸು. ಅಹಂಕಾರವುಳ್ಳ ಅಶ್ವತ್ಥಾಮರನ್ನು ನಾನು ಯುದ್ಧದಲ್ಲಿ ಪ್ರತಿಯಾಗಿ ಯುದ್ಧವನ್ನು ಮಾಡುವೆನು. ಯುದ್ಧಕ್ಕೆ ಮೊದಲು ಭಟರು ಆಡುವ, ನಾನು ಇಂತಹ ಕಾರ್ಯವನ್ನು ಮಾಡುತ್ತೇನೆ ಮುಂತಾದ ಶಬ್ದಗಳು ನನಗೆ ರುಚಿಸುವುದಿಲ್ಲ (ನಾನು ಕಾರ್ಯವನ್ನು ಮಾಡಿ ತೋರಿಸುತ್ತೇನೆ ಎಂದು ಅಭಿಪ್ರಾಯ) ಎಂದು ಹೇಳಿದನು.
ವೈಶಂಪಾಯನಃ
ಏವಮುಕ್ತೋಽರ್ಜುನೇನಾಸಾವಶ್ವತ್ಥಾಮರಥಂ ಪ್ರತಿ |
ವಿರಾಟಪುತ್ರೋ ಜವನಾನ್ ಭೃಶಮಶ್ವಾನಚೋದಯತ್ ||20||
ವೈಶಂಪಾಯನ ಅರ್ಜುನನಿಂದ ಹೀಗೆ ಹೇಳಲ್ಪಟ್ಟ ವಿರಾಟಪುತ್ರನು ಅಶ್ವತ್ಥಾಮರ ರಥದ ಕಡೆಗೆ ತನ್ನ ಶೀಘ್ರವಾಗಿ ಹೋಗುವ ಅಶ್ವಗಳನ್ನು ಚೆನ್ನಾಗಿ ಪ್ರಚೋದಿಸಿದನು.
ಕರ್ಣಃ
ಏಷೋಽಪಯಾತಿ ಬೀಭತ್ಸುರ್ವ್ಯಥಿತೋ ಗಾಢವೇದನಃ |
ತಂ ತು ತತ್ರೈವ ಯೋತ್ಸ್ಯಾಮಿ ನಾಯಂ ಮುಚ್ಯೇತ ಜೀವಿತಾತ್ ||21||
ಕರ್ಣ ಈ ಅರ್ಜುನನು ಗಾಢವಾದ ವೇದನೆಯನ್ನು ಹೊಂದಿ ವ್ಯಥೆಯಿಂದ ರಣರಂಗವನ್ನು ಬಿಟ್ಟು ಹೋಗುತ್ತಿದ್ದಾನೆ. ಅವನ ಜೊತೆಯಲ್ಲಿ ಅಲ್ಲಿಯೇ ಯುದ್ಧವನ್ನು ಮಾಡುವೆನು. ಅವನು ಜೀವ ಸಹಿತನಾಗಿ ಇಲ್ಲಿಂದ ಹೋಗುವುದು ಬೇಡ.
ದ್ರೋಣಃ
ನೈಷೋಽಭಯಂ ನ ನಿರ್ಯಾತೋ ಮಹಾತ್ಮಾ ಪಾಕಶಾಸನಿಃ |
ನೈವಂ ಭೀತೋ ನಿವರ್ತೇತ ನ ಪುನರ್ಗಾಢವೇದನಃ ||22||
ದ್ರೋಣ ಮಹಾತ್ಮನಾದ ಇಂದ್ರಪುತ್ರನಾದ ಅರ್ಜುನನು ನಿನಗೆ ಅಭಯವುಂಟಾಗುವಂತೆ ಏನೂ ಹೋಗುತ್ತಿಲ್ಲ. ಭೀತನಾದವನು ಹೀಗೆ ಹೋಗುವುದಿಲ್ಲ ಮತ್ತು ಗಾಢವಾದ ನೋವನ್ನು ಹೊಂದಿದವನೂ ಸಹ ಹೋಗುವುದಿಲ್ಲ.
ಯದ್ಯೇನಮಭಿಸಂಕ್ರುದ್ಧಂ ಪುನರೇವಾಭಿಯಾಸ್ಯತಿ |
ಬಹೂನ್ಯಸ್ತ್ರಾಣಿ ಜಾನೀತೇ ನ ಪುನರ್ಮೋಕ್ಷ್ಯತೇ ಭವಾನ್ ||23||
ಕೋಪಗೊಂಡ ಅವನ ಜೊತೆಯಲ್ಲಿ ನೀನು ಪುನಃ ಯುದ್ಧವನ್ನು ಮಾಡುವಿ. ನೀನು ಅನೇಕ ಅಸ್ತ್ರಗಳನ್ನು ತಿಳಿದಿದ್ದೀಯೆ. ಆದರೆ ಅವನಿಂದ ಬಿಡುಗಡೆಯನ್ನು ಹೊಂದುವುದಿಲ್ಲ.
ದಿಷ್ಟ್ಯಾ ದುರ್ಯೋಧನೋ ಮುಕ್ತೋ ಗಾವಃ ಸರ್ವಾಃ ಪಲಾಯಿತಾಃ |
ಮುಕ್ತಂ ಮುಕ್ತ್ವೈವ ಸಂಗ್ರಾಮೇ ಕಿಂ ರಣೇನ ಕರಿಷ್ಯತಿ ||24||
ದೇವರ ದಯೆಯಿಂದ ದುರ್ಯೋಧನನು ಬಿಡಿಸಲ್ಪಟ್ಟಿದ್ದಾನೆ. ಯುದ್ಧದಲ್ಲಿ ಬಿಡುಗಡೆ ಹೊಂದಿದ ದುರ್ಯೋಧನನನ್ನು ಬಿಟ್ಟು ಎಲ್ಲಾ ಗೋವುಗಳೂ ಓಡಿಹೋಗಿವೆ. ಯುದ್ಧದಿಂದ ನೀನು ಏನು ಮಾಡುವಿ?
ಕ್ರೋಶಮಾತ್ರಮತಿಕ್ರಮ್ಯ ಬಲಮನ್ವಾನಯಾಮಹೇ |
ಅನ್ವಾಗತಬಲಾಃ ಪಾರ್ಥಂ ಪುನರೇವಾಭಿಯಾಸ್ಯಥ ||25||
ಒಂದು ಕ್ರೋಶ ಮಾತ್ರ ದೂರಕ್ಕೆ ಹೋಗಿ ನಮ್ಮ ಸೈನ್ಯವನ್ನು ಪುನಃ ಹಿಂದಿರುಗಿಸೋಣ. ಹಿಂದಿರುಗಿದ ಸೈನ್ಯದ ಜೊತೆಯಲ್ಲಿ ಅರ್ಜುನನನ್ನು ನೀವೆಲ್ಲರೂ ಎದುರಿಸುವವರಾಗಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತಮೂರನೆಯ
ಅಧ್ಯಾಯ ಮುಗಿಯಿತು.
* * * *
ಅರವತ್ತನಾಲ್ಕನೆಯ ಅಧ್ಯಾಯ
ಭೀಷ್ಮ ದುಃಶಾಸನರ ಜೊತೆಯಲ್ಲಿ ಅರ್ಜುನನ ಯುದ್ಧ
ವೈಶಂಪಾಯನಃ
ಕರ್ಣಂ ಪರಾಜಿತಂ ದೃಷ್ಟ್ವಾ ಪಾರ್ಥೋ ವೈರಾಟಿಮಬ್ರವೀತ್ ॥1॥
ಏತಂ ಮಾಂ ಪ್ರಾಪಯೇದಾನೀಂ ರಥವೃಂದಂ ಪ್ರಹಾರಿಣಾಮ್ ॥2॥
ಯತ್ರ ಶಾಂತನವೋ ಭೀಷ್ಮಃ ಸರ್ವೇಷಾಂ ನಃ ಪಿತಾಮಹಃ |
ಸುಯುದ್ಧಂ ಕಾಂಕ್ಷಮಾಣೋ ವೈ ರಥೇ ತಿಷ್ಠತಿ ದಂಸಿತಃ ॥3॥
ವೈಶಂಪಾಯನ ಕರ್ಣನು ಪರಾಜಿತನಾದುದನ್ನು ನೋಡಿ ಅರ್ಜುನನು ಉತ್ತರನನ್ನು ಕುರಿತು ಈ ನನ್ನನ್ನು, ಎಲ್ಲಿ ನಮ್ಮೆಲ್ಲರಿಗೂ ಪಿತಾಮಹರಾದ ಶಂತನು ಪುತ್ರರಾದ ಭೀಷ್ಮರು ಒಳ್ಳೆಯ ಯುದ್ಧವನ್ನು ಅಪೇಕ್ಷಿಸುತ್ತಾ ರಥದಲ್ಲಿ ಸಜ್ಜಿತರಾಗಿ ಕುಳಿತಿದ್ದಾರೆಯೋ ಅಂತಹ ಅವನ ಸುತ್ತಲೂ ಇರುವ ಪ್ರಹಾರಿಗಳಾದ ರಥದ ಸಮೂಹಕ್ಕೆ ಕರೆದುಕೊಂಡು ಹೋಗು.
ತಾಲೋ ವೈ ಕಾಂಚನೋ ಯತ್ರ ವಜ್ರವೈಡೂರ್ಯಭೂಷಿತಃ |
ಅತೀವ ಸಮರೇ ಭಾತಿ ಮಾತರಿಶ್ವಪ್ರಕಂಪಿತಃ ॥4॥
ವಜ್ರವೈಡೂರ್ಯಭೂಷಿತವಾದ ಸುವರ್ಣಮಯವಾದ ವಾಯುವಿನಿಂದ ಕಂಪಿತವಾದ ಭೀಷ್ಮರ ತಾಳಧ್ವಜವು ಯುದ್ಧದಲ್ಲಿ ಬಹಳವಾಗಿ ಕಂಗೊಳಿಸುತ್ತಿದೆ.
ದಾರುಣಂ ಪ್ರಹರಿಷ್ಯಾಮಿ ರಥವೃಂದಾನಿ ಧನ್ವಿನಾಮ್ |
ಆದಾಸ್ಯಾಮ್ಯಹಮೇತೇಷಾಂ ಧನುಜ್ಯಾವೇಷ್ಟನಾನಿ ಚ ॥5॥
ಅಸ್ಯಂತಂ ದಿವ್ಯಮಸತ್ರಣಿ ಚಿತ್ರಮುತ್ತರ ಪಶ್ಯಸಿ ॥6॥
ಧನುರ್ಧಾರಿಗಳ ರಥವೃಂದದ ಮೇಲೆ ದಾರುಣವಾಗಿ ಪ್ರಹಾರವನ್ನು ಮಾಡುವೆನು. ಅವರ ಧನುಸ್ಸುಗಳನ್ನೂ ಮತ್ತು ಜ್ಯಾ ಬಂಧಗಳನ್ನೂ ತೆಗೆದುಕೊಳ್ಳುವೆನು (ಕತ್ತರಿಸುವೆನು). ಉತ್ತರನೇ, ವಿಚಿತ್ರವಾದ ದಿವ್ಯಾಸ್ತ್ರಗಳನ್ನು ನೋಡುವಿ.
ಶತಹ್ರದಾಂ ಜೃಂಭಮಾಣಾಂ ಮೇಘಸ್ಥಾಂ ಪ್ರಾವೃಷೀವ ಚ |
ಸುವರ್ಣಪೃಷ್ಠಂ ಗಾಂಡೀವಂ ಪಶ್ಯಂತು ಕುರವೋ ಯುಧಿ ॥7॥
ಮಳೆಗಾಲದಲ್ಲಿ ಮೇಘಗಳಲ್ಲಿ ಅಭಿವೃದ್ಧಿಹೊಂದುತ್ತಿರುವ, ಮಿಂಚಿನಂತೆ ಸುವರ್ಣದ ಹಿಡಿಯಿರುವ ನನ್ನ ಗಾಂಡೀವ ಧನುಸ್ಸನ್ನು ಯುದ್ಧದಲ್ಲಿ ಕುರುಗಳು ನೋಡಲಿ.
ದಕ್ಷಿಣೇನಾಥ ವಾಮೇನ ಕತರೇಣ ಸ್ವಿದಸ್ಯತಿ |
ಇತಿ ಮಾಂ ಶತ್ರವಃ ಸರ್ವೇ ನ ವಿಜ್ಞಾಸ್ಯಂತಿ ಸಾರಥೇ ॥8॥
ಎಲೈ ಸಾರಥಿಯೇ, ಇವನು ದಕ್ಷಿಣಹಸ್ತದಿಂದ ಪ್ರಯೋಗಿಸುತ್ತಿದ್ದಾನೆಯೋ ಅಥವಾ ವಾಮಹಸ್ತದಿಂದ ಪ್ರಯೋಗಿಸುತ್ತಿದ್ದಾನೆಯೋ ಎಂದು ನನ್ನ ಶತ್ರುಗಳು ಯಾರೂ ನನ್ನನ್ನು ತಿಳಿಯಲಾರರು.
ಅಸ್ತೋತ್ರೋದಕಾಂ ಶರಾವರ್ತಾಂ ನಾಗನಕ್ರಾಂ ರಥಹ್ರದಾಮ್ |
ನದೀಂ ಪ್ರಸ್ಕಂದಯಿಷ್ಯಾಮಿ ಪರಲೋಕಾಪಹಾರಿಣೀಮ್ ॥9॥
ಅಸ್ತ್ರಗಳ ಉದಕವುಳ್ಳ, ಬಾಣಗಳ ಸುಳಿಗಳುಳ್ಳ, ಗಜಗಳ ಮೊಸಳೆಗಳುಳ್ಳ, ರಥಗಳ ಮಡುಗಳುಳ್ಳ, ಪರಲೋಕವನ್ನು ಅಪಹರಿಸುವ ನದಿಯನ್ನು ನಾನು ಹರಿಸುತ್ತೇನೆ.
ಪಾಣಿಪಾದಶಿರಃಪೃಷ್ಠಬಾಹುಸ್ಕಂಧಚರಾಚರಮ್ |
ವನಂ ಕುರೂಣಾಂ ಭೇತ್ಸ್ಯಾಮಿ ಭಲ್ಲೈಃ ಸನ್ನತಪರ್ವಭಿಃ ॥10॥
ಬಾಗಿದ ತುದಿಗಳುಳ್ಳ ಭಲ್ಲಗಳಿಂದ ನಾನು ಪಾಣಿ, ಪಾದ, ಶಿರಸ್ಸು, ಪೃಷ್ಠ, ಬಾಹುಗಳು, ಭುಜ ರೂಪವಾದ ಚರಾಚರಗಳಿರುವ ಕುರುಗಳ ವನವನ್ನು ಭೇದಿಸುವೆನು.
ತೂಣೀಶಯಾಃ ಸುಪುಂಖಾಗ್ರಾ ನಿಶಿತಾ ದುಂದುಭಿಸ್ವನಾಃ |
ಮಯಾ ಪ್ರಯುಕ್ತಾಃ ಸಂಗ್ರಾಮೇ ಕುರೂನ್ ಧಕ್ಷ್ಯಂತಿ ಸಾಯಕಾಃ ॥
ನಾನು ಪ್ರಯೋಗಿಸುವ ಬತ್ತಳಿಕೆಯಲ್ಲಿ ಮಲಗಿರುವ ಒಳ್ಳೆಯ ಪುಂಖಗಳನ್ನು ತುದಿಯಲ್ಲಿ ಹೊಂದಿರುವ, ದುಂದುಭಿಯ ಸ್ವನಗಳಿಂದ ಹೋಗುವ ಹರಿತವಾದ ಬಾಣಗಳು ಯುದ್ಧದಲ್ಲಿ ಕುರುಗಳನ್ನು ದಹಿಸುವವು.
ಧ್ವಜವೃಕ್ಷಂ ಶರತೃಣಂ ನಾಗಾಶ್ವಶ್ವಾಪದಾಕುಲಮ್ |
ರಥಸಿಂಹಗಣೈರ್ಯುಕ್ತಂ ಧನುರ್ವಲ್ಲೀಸಮಾಕುಲಮ್ ॥12॥
ವನಮಾದೀಪಯಿಷ್ಯಾಮಿ ಕುರೂಣಾಮಸ್ತ್ರತೇಜಸಾ ॥13॥
ಧ್ವಜವೃಕ್ಷಗಳು, ಶರತೃಣಗಳು, ಗಜಾಶ್ವ ಹಿಂಸಪ್ರಾಣಿಗಳಿಂದ ನಿಬಿಡವಾದ ರಥಸಿಂಹಗಣಗಳಿಂದ ಕೂಡಿದ, ಬಿಲ್ಲಿನ ಬಳ್ಳಿಗಳಿಂದ ಕೂಡಿದ ಕುರುಗಳ ವನವನ್ನು ನಾನು ಅಸ್ತ್ರತೇಜಸ್ಸಿನಿಂದ ಉರಿಯುವಂತೆ ಮಾಡುತ್ತೇನೆ.
ಜಯತೋ ಭಾರತೀಂ ಸೇನಾಮೇಕಸ್ಯ ಮಮ ಸಂಯುಗೇ |

ಶತಂ ಮಾರ್ಗಾ ಭವಿಷ್ಯಂತಿ ಪಾವಕಸ್ಯೇವ ಕಾನನೇ ॥14॥
ಕಾಡಿನಲ್ಲಿ ಉರಿಯುವ ಅಗ್ನಿಗೆ ನೂರುಮಾರ್ಗಗಳಿದ್ದಂತೆ ಕೌರವರ ಸೇನೆಯನ್ನು ಜಯಿಸುವ ಒಬ್ಬನೇ ಆದ ನನಗೆ ಯುದ್ಧದಲ್ಲಿ ನೂರು ಮಾರ್ಗಗಳು ಇರುವವು.
ಮಯಾ ಚಕ್ರಮಿವಾವಿದ್ಧಂ ಸೈನ್ಯಂ ದ್ರಕ್ಷ್ಯಸಿ ಕೇವಲಮ್ ॥15॥
ತಾನಹಂ ರಥನೀಡೇಭ್ಯಃ ಪರಲೋಕಾಯ ಶಾತ್ರವಾನ್ |
ಏಕಃ ಪ್ರದ್ರಾವಯಿಷ್ಯಾಮಿ ಚಕ್ರಪಾಣಿರಿವಾಸುರಾನ್ ॥16॥
ನನ್ನಿಂದ ಮುರಿದ ಚಕ್ರದಂತಿರುವ ಕೌರವಸೈನ್ಯವನ್ನು ನೀನು ನೋಡುವಿ. ಚಕ್ರಪಾಣಿಯಾದ ಹರಿಯು ಅಸುರರನ್ನು ಪರಲೋಕಕ್ಕೆ ಕಳುಹಿಸಿದಂತೆ ನಾನೊಬ್ಬನೇ ರಥದ ಅಚ್ಚುಗಳಲ್ಲಿರುವ ಆ ಶತ್ರುಗಳನ್ನು ಪರಲೋಕಕ್ಕೆ ಓಡಿಸುವೆನು.
ಅಸಂಭ್ರಾಂತೋ ರಥೇ ತಿಷ್ಠನ್ ಸಮೇಷು ವಿಷಮೇಷು ಚ |
ಮಾರ್ಗಮಾವೃತ್ಯ ತಿಷ್ಠಂತಮಪಿ ಭೇತ್ಸ್ಯಾಮಿ ಪರ್ವತಮ್ ॥17॥
ಯಾವ ಗಾಬರಿಯೂ ಇಲ್ಲದೆ ಸಮವಾದ ಮತ್ತು ವಿಷಮವಾದ ಮಾರ್ಗಗಳಲ್ಲಿ ರಥದಲ್ಲಿ ಇರುವವನಾಗಿ ಮಾರ್ಗಕ್ಕೆ ಅಡ್ಡಲಾಗಿ ಬಂದ ಪರ್ವತವನ್ನೂ ಸಹ ಭೇದಿಸುವೆನು.
ಅಹಮಿಂದ್ರಸ್ಯ ಸಂಗ್ರಾಮೇ ದ್ವಿಷತೋ ಬಲದರ್ಪಿತಮ್ |
ಮಾತಲಿಂ ಸಾರಥಿಂ ಕೃತ್ವಾ ನಿವಾತಕವಚಾನ್ ರಣೇ ॥18॥
ಹತವಾನ್ ಸರ್ವತಃ ಸರ್ವಾನ್ ಧಾವತೋ ಯುಧ್ಯತಸ್ತದಾ ॥19॥
ನಾನು ಇಂದ್ರನ ಯುದ್ಧದಲ್ಲಿ ಮಾತಲಿಯನ್ನು ಸಾರಥಿಯನ್ನಾಗಿ ಮಾಡಿಕೊಂಡು ಬಲದರ್ಪಿತರಾದ ಶತ್ರುಗಳಾದ ಎಲ್ಲ ಕಡೆಗಳಲ್ಲಿಯೂ ಓಡಾಡುವ ಮತ್ತು ಯುದ್ಧವನ್ನು ಮಾಡುವ ಎಲ್ಲಾ ನಿವಾತಕವಚರನ್ನೂ ಸಂಪೂರ್ಣವಾಗಿ ನಾಶಮಾಡಿದೆನು.
ನಿವಾತಕವಚಾನ್ ಹತ್ವಾ ಗಾಂಡೀವಾಸ್ತ್ರೈಃ ಸಹಸ್ರಶಃ |
ಪರಂ ಪಾರೇ ಸಮುದ್ರಸ್ಯ ಹಿರಣ್ಯಪುರಮಾರುಜಮ್ ॥20॥
ಗಾಂಡೀವಾಸ್ತ್ರಗಳಿಂದ ಸಹಸ್ರಸಂಖ್ಯೆಯಲ್ಲಿ ನಿವಾತಕವಚರನ್ನು ಸಂಹರಿಸಿ ಸಮುದ್ರದ ಆಚೆಯ ದಡದಲ್ಲಿರುವ ಹಿರಣ್ಯಪುರವನ್ನು ಘಾಸಿಗೊಳಿಸಿದೆನು.
ಹತ್ವಾ ಷಷ್ಟಿಸಹಸ್ರಾಣಿ ರಥಾನಾಮುಗ್ರಧನ್ವಿನಾಮ್ |
ಪೌಲೋಮಾನ್ ಕಾಲಕೇಯಾಂಶ್ಚ ಸಂಗ್ರಾಮೇ ಭೃಶದಾರುಣಾನ್ ॥
ಅಸುರಾನಹನಂ ರೌದ್ರಾನ್ ರೌದ್ರೇಣಾಸ್ತ್ರೇಣ ಸಾರಥೇ ॥22॥
ಉಗ್ರಧನುಸ್ಸುಳ್ಳ ರಥಿಕರಾದ, ಅತ್ಯಂತ ಘೋರರಾದ ಅರವತ್ತು ಸಾವಿರ ಪೌಲೋಮರನ್ನೂ ಮತ್ತು ಕಾಲಕೇಯರನ್ನೂ ಯುದ್ಧದಲ್ಲಿ ಸಂಹರಿಸಿ ಎಲೈ ಸಾರಥಿಯೇ, ನಾನು ಪಾಶುಪತಾಸ್ತ್ರದಿಂದ ಭಯಂಕರರಾದ ಇನ್ನೂ ಅನೇಕ ಅಸುರರನ್ನು ಕೊಂದೆನು.
ಅಹಮಿಂದ್ರಾದ್ ದೃಢಾಂ ಮುಷ್ಟಿಂ ಬ್ರಹ್ಮಣಃ ಕ್ಷಿಪ್ರಹಸ್ತತಾಮ್ |
ಪ್ರಗಾಢನಿಪುಣಂ ಚಿತ್ರಮತಿವಿದ್ಧಂ ಪ್ರಜಾಪತೇಃ ॥23॥
ನಾನು ಇಂದ್ರನಿಂದ ದೃಢಮುಷ್ಟಿಯನ್ನೂ, ಬ್ರಹ್ಮದೇವರಿಂದ ಹಸ್ತಕ್ಷಿಪ್ರತೆಯನ್ನೂ, ರುದ್ರದೇವರಿಂದ ಗಾಢವಾದ ಮತ್ತು ನಿಪುಣವಾದ ಮತ್ತು ವಿಚಿತ್ರವಾದ ವೇಗಗಳನ್ನೂ ಪಡೆದಿದ್ದೇನೆ (ಸ್ವೀಕರಿಸಿ ಕಲಿತಿದ್ದೇನೆ).
ರೌದ್ರಂ ರುದ್ರಾದಹಂ ವೇದ್ಮಿ ವಾರುಣಂ ವರುಣಾದಪಿ |
ಸೌರ್ಯಂ ಸೂರ್ಯಾದಹಂ ವೇದ್ಮಿ ಯಾಮ್ಯಂ ದಂಡಧರಾದಪಿ ॥24॥
ಅಸ್ತ್ರಮಾಗ್ನೇಯಮಗ್ನೇಶ್ಚ ವಾಯವ್ಯಂ ಮಾತರಿಶ್ವನಃ ॥25॥
ವಜ್ರಾದೀನಿ ತಥಾಸ್ತ್ರಾಣಿ ಶಕ್ರಾದಹಮವಾಪ್ತವಾನ್ ॥26॥
ಅನ್ಯೈರ್ದೇವೈರಹಂ ಪ್ರಾಪ್ತಃ ಕೋ ಮಾಂ ವಿಷಹತೇ ಪುಮಾನ್ ॥27॥
ನಾನು ರುದ್ರದೇವರಿಂದ ಪಾಶುಪತಾಸ್ತ್ರವನ್ನೂ, ವರುಣನಿಂದ ವಾರುಣಾಸ್ತ್ರವನ್ನೂ, ಸೂರ್ಯನಿಂದ ಸೌರ್ಯಾಸ್ತ್ರವನ್ನೂ, ದಂಡಧರನಾದ ಯಮನಿಂದ ಯಾಮ್ಯಾಸ್ತ್ರವನ್ನೂ, ಅಗ್ನಿಯಿಂದ ಆಗ್ನೇಯಾಸ್ತ್ರವನ್ನೂ, ವಾಯುವಿನಿಂದ ವಾಯವ್ಯಾಸ್ತ್ರವನ್ನೂ, ಇಂದ್ರನಿಂದ ವಜ್ರ ಮೊದಲಾದ ಆಯುಧಗಳನ್ನೂ ಪಡೆದಿದ್ದೇನೆ. ಬೇರೆ ದೇವತೆಗಳಿಂದಲೂ ಅಸ್ತ್ರಗಳನ್ನು ಪಡೆದಿದ್ದೇನೆ. ನನ್ನನ್ನು ಯಾವ ಪುರುಷನು ಯುದ್ಧದಲ್ಲಿ ತಡೆಯಲು ಸಾಧ್ಯ?
ಅದ್ಯ ಗಾಂಡೀವನಿರ್ಮುಕ್ತೈಃ ಶರೌಘೈ ರೋಮಹರ್ಷಣೈಃ |
ಕುರೂಣಾಂ ಪಾತಯಿಷ್ಯಾಮಿ ರಥವೃಂದಾನಿ ಧನ್ವಿನಾಮ್ ॥28॥
ಈ ದಿನ ಗಾಂಡೀವದಿಂದ ಮುಕ್ತವಾದ, ರೋಮಾಂಚಕಾರಿಯಾದ ಬಾಣಗಳ ಸಮೂಹದಿಂದ ಧನುರ್ಧಾರಿಗಳಾದ ಕುರುಗಳ ರಥಸಮೂಹಗಳನ್ನು ಉರುಳಿಸುತ್ತೇನೆ.
ವೈಶಂಪಾಯನಃ
ಏವಮಾಶ್ವಾಸಿತಸ್ತೇನ ವೈರಾಟಿಃ ಸವ್ಯಸಾಚಿನಾ |
ವ್ಯಗಾಹತ ರಥಾನೀಕಂ ಭೀಷ್ಮಂ ಭೀಷ್ಮಸ್ಯ ವಾಜಿಭಿಃ ॥29॥
ಅರ್ಜುನನಿಂದ ಹೀಗೆ ಸಮಾಧಾನಪಡಿಸಲ್ಪಟ್ಟ ಉತ್ತರನು ಭೀಷ್ಮರ ಭಯಂಕರವಾದ ರಥಸಮೂಹವನ್ನು ತನ್ನ ಕುದುರೆಗಳಿಂದ (ಹೂಡಿದ ತನ್ನ ರಥದಲ್ಲಿ) ಪ್ರವೇಶಿಸಿದನು.
ರಥಸಿಂಹಮನಾಧೃಷ್ಯಂ ಜಿಗೀಷಂತಂ ಪರಾನ್ ರಣೇ |
ಅಭ್ಯಧಾವತ್ ತದ್ವೈವೋಗ್ರೋ ಜ್ಯಾಂ ವಿಕರ್ಷನ್ ಧನಂಜಯಃ ॥30॥

ಧನಂಜಯನು ರಥಶ್ರೇಷ್ಠನಾದ ತನ್ನನ್ನು ಗೆಲ್ಲಲು ಬಯಸುವ, ಸೋಲಿಸಲು ಅಸಾಧ್ಯರಾದ ಭೀಷ್ಮರ ಕಡೆಗೆ ಉಗ್ರನಾದ ಅವನು ತನ್ನ ಧನುಸ್ಸಿನ ಹೆದೆಯನ್ನು ಎಳೆಯುತ್ತಾ ಯುದ್ಧದಲ್ಲಿ ಶತ್ರುಗಳಿಗೆ ಅಭಿಮುಖವಾಗಿ ಧಾವಿಸಿದನು.
ದುಃಶಾಸನೋಽಭ್ಯಯಾತ್ ತೂರ್ಣಮರ್ಜುನಂ ಭರತರ್ಷಭ ॥31॥
ಅನ್ಯೇಽಪಿ ಚಿತ್ರಾಭರಣಾ ಯುವಾನೋ ಮೃಷ್ಟಕುಂಡಲಾಃ।
ಅಗಚ್ಛನ್ ಭೀಮಧನ್ವಾನೋ ಮೌರ್ವೀಂ ಪರ್ಯಸ್ಯ ಬಾಹುಭಿಃ ॥32॥
ಎಲೈ ಭರತರ್ಷಭನೇ, ದುಃಶಾಸನನು ಶೀಘ್ರವಾಗಿ ಅರ್ಜುನನನ್ನು ಎದುರಿಸಿದನು. ವಿಚಿತ್ರಾಭರಣವನ್ನು ಧರಿಸಿದ, ಹೊಳೆಯುವ ಕುಂಡಲಗಳನ್ನು ಧರಿಸಿದ, ಭಯಂಕರವಾದ ಧನುಸ್ಸುಳ್ಳ ಇನ್ನೂ ಅನೇಕ ಯುವಕರು ಹೆದೆಯನ್ನು ಬಾಹುಗಳಿಂದ ಸವರುತ್ತಾ ಅರ್ಜುನನನ್ನು ಎದುರಿಸಿದರು.
ದುಃಶಾಸನೋ ವಿಕರ್ಣಶ್ಚ ವೃಷಸೇನೋ ವಿವಿಂಶತಿಃ।
ಅಭೀತಾ ಭೀಮಧನ್ವಾನಂ ಪಾಂಡವಂ ಪರ್ಯವಾರಯನ್ ॥33॥
ದುಃಶಾಸನ, ವಿಕರ್ಣ, ವೃಷಸೇನ, ವಿವಿಂಶತಿ ಇವರು ಹೆದರದೆ ಭಯಂಕರ ಧನುಸ್ಸುಳ್ಳ ಅರ್ಜುನನನ್ನು ಸುತ್ತುವರಿದರು.
ತಸ್ಯ ದುಃಶಾಸನಃ ಷಷ್ಟಿಂ ವಾಮೇ ಪಾರ್ಶ್ವೇ ಸಮರ್ಪಯತ್।
ಅಸ್ಯತಃ ಪ್ರತಿಸಂಧಾಯ ಕುಂತೀಪುತ್ರಸ್ಯ ಧೀಮತಃ ॥34॥
ತನ್ನ ಧನುಸ್ಸಿಗೆ ಬಾಣವನ್ನು ಹೂಡಿ ಪ್ರಯೋಗಿಸಲಿರುವ ಮೇಧಾವಿಯಾದ ಅರ್ಜುನನ ಎಡಪಾರ್ಶ್ವಕ್ಕೆ ದುಃಶಾಸನನು ಅರವತ್ತು ಬಾಣಗಳನ್ನು ಪ್ರಯೋಗಿಸಿದನು.
ಪುನಶ್ಚೈವ ಸ ಭಲ್ಲೇನ ವಿದ್ಧ್ವಾ ವೈರಾಟಿಮುತ್ತರಮ್।
ದ್ವಿತೀಯೇನಾರ್ಜುನಂ ವೀರಂ ಪ್ರತ್ಯವಿಧ್ಯತ್ ಸ್ತನಾಂತರೇ ॥35॥
ಅವನು ಪುನಃ ಭಲ್ಲದಿಂದ ವಿರಾಟಪುತ್ರನಾದ ಉತ್ತರನನ್ನು ಹೊಡೆದು ಇನ್ನೊಂದು ಬಾಣದಿಂದ ವೀರನಾದ ಅರ್ಜುನನಿಗೆ ಸ್ತನಗಳ ಮಧ್ಯದಲ್ಲಿ ಹೊಡೆದನು.
ತಸ್ಯ ಜಿಷ್ಣುರುದಾವೃತ್ಯ ಕ್ಷುರಧಾರೇಣ ಕಾರ್ಮುಕಮ್।
ಪ್ರಾಕೃಂತದ್ ಗೃಧ್ರಪತ್ರೇಣ ಜಾತರೂಪಪರಿಷ್ಕೃತಮ್ ॥36॥
ಅರ್ಜುನನು ಅವನ ಕಡೆಗೆ ತಿರುಗಿ ಗೃಧ್ರಪತ್ರದಿಂದ ಕೂಡಿದ ತನ್ನ ಕ್ಷುರ ಎಂಬ ಚಿಕ್ಕಬಾಣದ ಧಾರೆಯಿಂದ ಸುವರ್ಣದಿಂದ ಅಲಂಕೃತವಾದ ಅವನ ಧನುಸ್ಸನ್ನು ಕತ್ತರಿಸಿದನು.
ಅಥೈನಂ ಪಂಚಭಿರ್ಬಾಣೈಃ ಪ್ರತ್ಯವಿಧ್ಯತ್ ಸ್ತನಾಂತರೇ।
ಸೋಽಪಯಾತೋ ರಥೋಪಸ್ಥಾತ್ ಪಾರ್ಥಬಾಣಾಭಿಪೀಡಿತಃ ॥37॥
ಸರ್ವಾ ದಿಶಶ್ಚಾಭ್ಯಪತದ್ ಬೀಭತ್ಸುರಪರಾಜಿತಃ ॥38॥
ಪುನಃ ಅರ್ಜುನನು ದುಃಶಾಸನನಿಗೆ ಐದುಬಾಣಗಳಿಂದ ಸ್ತನಗಳ ಮಧ್ಯದಲ್ಲಿ ಹೊಡೆದನು. ಪಾರ್ಥನ ಬಾಣಗಳಿಂದ ಬಹಳ ಪೀಡಿತನಾದ ದುಃಶಾಸನನು ರಥದ ಅಚ್ಚುಪೀಠದಿಂದ ಧುಮುಕಿ ಹೊರಟುಹೋದನು. ಅರ್ಜುನನು ಅಪರಾಜಿತನಾಗಿ ಎಲ್ಲ ದಿಕ್ಕುಗಳಲ್ಲಿಯೂ ಮುಂದೆ ಸಾಗಿದನು.
ತಂ ವಿಕರ್ಣಃ ಶರೈಸ್ತೀಕ್ಷ್ಣೈಃ ಗೃಧ್ರಪತ್ರೈಃ ಶಿಲೀಮುಖೈಃ।
ವಿವ್ಯಾಧ ಪರವೀರಘ್ನಮರ್ಜುನಂ ಧೃತರಾಷ್ಟ್ರಜಃ ॥39॥
ಧೃತರಾಷ್ಟ್ರಪುತ್ರನಾದ ವಿಕರ್ಣನು ಪರವೀರರನ್ನು ಸಂಹರಿಸುವ ಅರ್ಜುನನ ಮೇಲೆ ಗೃಧ್ರಪತ್ರಗಳಿಂದ ಅಲಂಕರಿಸಿದ ಶಿಲೀಮುಖಗಳನ್ನುಳ್ಳ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಯುದ್ಧ ಮಾಡಿದನು.
ತತಸ್ತಮಪಿ ಕೌಂತೇಯಃ ಶರೇಣ ನತಪರ್ವಣಾ।
ಲಲಾಟೇಽಭ್ಯಹನದ್ ಗಾಢಂ ಸ ವಿದ್ಧಃ ಪ್ರಾದ್ರವದ್ ಭಯಾತ್ ॥40॥
ಆಗ ಅರ್ಜುನನು ಅವನನ್ನೂ ಸಹ ಬಾಗಿದ ತುದಿಯುಳ್ಳ ಶರದಿಂದ ಹಣೆಯಲ್ಲಿ ಗಾಢವಾಗಿ ಹೊಡೆದನು. ಆ ಪ್ರಹಾರವನ್ನು ಹೊಂದಿದ ವಿಕರ್ಣನು ಭಯದಿಂದ ಓಡಿಹೋದನು.
ತತಃ ಪಾರ್ಥಮಭಿದ್ರುತ್ಯ ದುಃಸಹಃ ಸವಿವಿಂಶತಿಃ।
ಅವಾಕಿರಂಚ್ಛರೈಸ್ತೀಕ್ಷ್ಣೈಃ ಪರೀಪ್ಸನ್ ಭಾರತಂ ರಣೇ ॥41॥
ಅನಂತರ ದುಃಸಹ ಮತ್ತು ವಿವಿಂಶತಿಗಳು ಅರ್ಜುನನ ಕಡೆಗೆ ಓಡಿ ಬಂದು ತಮ್ಮ ಕೌರವ ಸೈನ್ಯವನ್ನು ರಕ್ಷಿಸಲು ಬಯಸಿ ಅರ್ಜುನನ ಮೇಲೆ ತೀಕ್ಷ್ಣವಾದ ಬಾಣಗಳ ಮಳೆಯನ್ನು ಕರೆದರು.
ತಾವುಭೌ ಗೃಧ್ರಪತ್ರಾಭ್ಯಾಂ ನಿಶಿತಾಭ್ಯಾಂ ಧನಂಜಯಃ।
ವಿವ್ಯಾಧ ಯುಗಪದ್ ವ್ಯಗ್ರಃ ತಯೋರ್ವಾಹಾನಸೂದಯತ್ ॥42॥
ಅರ್ಜುನನು ಅವರಿಬ್ಬರ ಜೊತೆಯಲ್ಲಿಯೂ ಒಂದೇ ಕಾಲದಲ್ಲಿ ವ್ಯಗ್ರನಾಗಿ ಹರಿತವಾದ ಬಾಣಗಳಿಂದ ಯುದ್ಧವನ್ನು ಮಾಡಿ ಅವರ ರಥದ ಅಶ್ವಗಳನ್ನು ಕೊಂದನು.
ತೌ ಹತಾಶ್ವೌ ಪ್ರವಿದ್ಧಾಂಗೌ ಧೃತರಾಷ್ಟ್ರಾತ್ಮಜಾವುಭೌ।
ಅಭಿಪತ್ಯ ರಥೈರನ್ಯೈರಪನೀತೌ ಪದಾನುಗೈಃ ॥43॥
ಅಶ್ವಗಳನ್ನು ಕಳೆದುಕೊಂಡು ದೇಹದಲ್ಲಿ ಬಹಳವಾಗಿ ಗಾಯಗೊಂಡ ಧೃತರಾಷ್ಟ್ರನ ಆ ಮಕ್ಕಳಿಬ್ಬರೂ ಬೇರೆ ಬೇರೆ ರಥವನ್ನು ಹತ್ತಿ ಅವರನ್ನು ಅನುಸರಿಸುವ ಪದಾತಿಗಳಿಂದ ಬೇರೆ ಸ್ಥಳಕ್ಕೆ ಕರೆದೊಯ್ಯಲ್ಪಟ್ಟರು.
ವ್ಯದ್ರಾವಯದಶೇಷಾಂಶ್ಚ ಧೃತರಾಷ್ಟ್ರಾತ್ಮಜಾಂಸ್ತದಾ।

ವಿದ್ರಾವ್ಯ ಚ ರಣೇ ಪಾರ್ಥೋ ರಣಭೂಮಿಂ ವ್ಯರಾಜಯತ್ ॥44॥
ಅರ್ಜುನನು ಧೃತರಾಷ್ಟ್ರನ ಎಲ್ಲ ಮಕ್ಕಳನ್ನೂ ಯುದ್ಧದಲ್ಲಿ ಓಡಿಸಿ ರಣಭೂಮಿಯಲ್ಲಿ ವಿರಾಜಿಸಿದನು.
ಕಿರೀಟಮಾಲೀ ಕೌಂತೇಯೋ ಲಬ್ಧಲಕ್ಷ್ಯಃ ಪ್ರತಾಪವಾನ್ |
ಸರ್ವಾ ದಿಶಾಶ್ಚಾಭ್ಯಪತತ್ ಬೀಭತ್ಸುರಪರಾಜಿತಃ ॥45॥
ಪಾತಯನ್ನುತ್ತಮಾಂಗಾನಿ ಬಾಹೂಂಶ್ಚ ಪರಿಘೋಪಮಾನ್ ॥46॥
ಅಶೇರತ ಮಹಾವೀರಾಃ ಶತಶೋ ರುಗ್ಮಮಾಲಿನಃ ॥47॥
ಕಿರೀಟಮಾಲಿಯಾದ, ಲಬ್ಧಲಕ್ಷ್ಯನಾದ, ಪ್ರತಾಪಶಾಲಿಯಾದ, ಬೀಭತ್ಸುವಾದ ಅರ್ಜುನನು ಯಾರಿಂದಲೂ ಪರಾಜಯವನ್ನು ಹೊಂದದೆ ಎಲ್ಲ ದಿಕ್ಕುಗಳಲ್ಲಿಯೂ ಹಾಯ್ದು ಕೌರವ ಸೈನಿಕರ ಒನಕೆಯಂತಿದ್ದ ಬಾಹುಗಳನ್ನೂ ಮತ್ತು ಶಿರಸ್ಸುಗಳನ್ನು ಕತ್ತರಿಸಿ ಉರುಳಿಸಿದನು. ಸುವರ್ಣಮಾಲೆಯನ್ನು ಧರಿಸಿದ್ದ ಮಹಾವೀರರು ನೂರಾರು ಸಂಖ್ಯೆಯಲ್ಲಿ ನೆಲದ ಮೇಲೆ ಮಲಗಿದರು.
ಕಮಲದಿನಕರೇಂದುಸನ್ನಿಭೈಃ
ಸಿತದಶನೈಃ ಸುಮುಖಾಕ್ಷಿನಾಸಿಕೈಃ |
ರುಚಿರಮುಕುಟಕುಂಡಲೈರ್ಮಹೀ
ಪುರುಷಶಿರೋಭಿರುಪಾಸ್ತೃತಾ ಬಭೌ ॥48॥
ಯುದ್ಧಭೂಮಿಯು ಕಮಲಸೂರ್ಯಚಂದ್ರ ಸದೃಶವಾದ, ಬಿಳಿಯ ದಂತಗಳಿಂದ ಕೂಡಿದ, ಒಳ್ಳೆಯ ಮುಖಾಕ್ಷಿನಾಸಿಕವನ್ನು ಹೊಂದಿದ, ಮನೋಹರವಾದ ಕಿರೀಟಕುಂಡಲಗಳನ್ನು ಧರಿಸಿದ, ಸೈನಿಕರ ಶಿರಸ್ಸುಗಳಿಂದ ಹರಡಿಹೋಯಿತು.
ಸುನಸಂ ಚಾರುದೀಪ್ತಾಕ್ಷಂ ಕ್ಲೃಪ್ತಶ್ಮಶ್ರು ಸ್ವಲಂಕೃತಮ್ |
ಅದೃಶ್ಯತ ಶಿರಶ್ಛಿನ್ನಮನೇಕಂ ಹೇಮಕುಂಡಲಮ್ ॥49॥
ಒಳ್ಳೆಯ ನಾಸಿಕವುಳ್ಳ, ಸುಂದರವಾದ ಮತ್ತು ಹೊಳೆಯುವ ಕಣ್ಣುಗಳುಳ್ಳ, ಮೀಸೆಗಳನ್ನು ತಿದ್ದಿದ, ಅಲಂಕೃತವಾದ ಹೇಮಕುಂಡಲಗಳನ್ನು ಧರಿಸಿದ, ಅನೇಕ ಶಿರಸ್ಸುಗಳು ಕಂಡುಬಂದವು.
ಏವಂ ತತ್ ಪ್ರಹತಂ ಸೈನ್ಯಂ ಸಮಂತಾತ್ ಪ್ರದ್ರುತಂ ಭಯಾತ್ ॥50॥
ಹೀಗೆ ಪಾರ್ಥನಿಂದ ಹೊಡೆಯಲ್ಪಟ್ಟ ಆ ಸೈನ್ಯವು ಎಲ್ಲ ಕಡೆಗಳಲ್ಲಿಯೂ ಭಯದಿಂದ ಓಡಿಹೋಯಿತು.
ಕ್ಷಿಪತೋ ಲಘು ಚಿತ್ರಂ ಚ ಸವ್ಯಂ ದಕ್ಷಿಣಮಸ್ಯತಃ |
ಪಾರ್ಥಸ್ಯ ವಿಶಿಖಾ ಜಗ್ಮುಃ ಶತಶೋಽಥ ಸಹಸ್ರಶಃ ॥51॥
ಕ್ಷಿಪ್ರವಾಗಿ ಮತ್ತು ವೇಗದಿಂದ ಬಲಗೈಯಿಂದ ಮತ್ತು ಎಡಗೈಯಿಂದ ಪ್ರಯೋಗಿಸಲ್ಪಟ್ಟ ಅರ್ಜುನನ ಬಾಣಗಳು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಹೊರಹೊಮ್ಮಿದವು.
ಪ್ರಮಥ್ನನುತ್ತಮಾಂಗಾನಿ ಸೋತ್ಸೇಧಾನಿ ಧನುಷ್ಮತಾಮ್ |
ಪ್ರಾಹಿಣೋತ್ ತ್ರಿಶತಂ ಯೋಧಾನ್ ಕುರೂಣಾಮಾತತಾಯಿನಾಮ್ ॥
ಧನುರ್ಧಾರಿಗಳಾದ ಶತ್ರುಗಳ ಶಿರಸ್ಸುಗಳನ್ನು ಮೇಲೆ ಚಿಮ್ಮುವಂತೆ ಮರ್ದಿಸಿ ಕತ್ತರಿಸಿ ಶಸ್ತ್ರಧಾರಿಗಳಾದ ಕುರುಗಳ ಮುನ್ನೂರು ಯೋಧರನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ಪಾತಯನ್ ರಥನೀಡೇಭ್ಯಃ ಕ್ಷತ್ರಿಯಾನ್ ಕ್ಷತ್ರಿಯರ್ಷಭಃ |
ಪ್ರಗಾಢಧನ್ವಾ ಕೌಂತೇಯೋ ಲಬ್ಧಲಕ್ಷ್ಯಃ ಪ್ರತಾಪವಾನ್ ॥53॥
ಕ್ಷತ್ರಿಯರ್ಷಭನಾದ, ಪ್ರತಾಪಶಾಲಿಯಾದ, ಲಕ್ಷ್ಯವನ್ನು ಎಂದೂ ತಪ್ಪದಿರುವ, ಗಾಢವಾಗಿ ಪ್ರಹಾರ ಮಾಡುವ ಧನುಸ್ಸುಳ್ಳ, ಕುಂತೀಪುತ್ರನಾದ ಅರ್ಜುನನು ರಥದ ಅಚ್ಚುಪೀಠಗಳಿಂದ ಯೋಧರನ್ನು ಉರುಳಿಸಿ (ಯಮಪಟ್ಟಣಕ್ಕೆ ಕಳುಹಿಸಿದನು).
ಅಥ ದುರ್ಯೋಧನಃ ಕರ್ಣಃ ಶಕುನಿಃ ಸೌಬಲಸ್ತದಾ |
ದ್ರೋಣಶ್ಚ ದ್ರೋಣಪುತ್ರಶ್ಚ ಕೃಪಶ್ಚಾತಿರಥೋ ರಣೇ ॥54॥
ಸಹಿತಾ ವಿಜಯಂ ತತ್ರ ಯೋಧಯಂತೋ ಮಹಾರಥಾಃ |
ವಿಷ್ಫಾರಯಂತಶ್ಚಾಪಾನಿ ಬಲವಂತಿ ಮಹಾಬಲಾಃ ॥55॥
ಆಗ ದುರ್ಯೋಧನ, ಕರ್ಣ, ಸೌಬಲನಾದ ಶಕುನಿ, ದ್ರೋಣ, ದ್ರೋಣಪುತ್ರರಾದ ಅಶ್ವತ್ಥಾಮರು, ಅತಿರಥರಾದ ಕೃಪರು ಈ ಮಹಾರಥರೆಲ್ಲರೂ ಅರ್ಜುನನ ಜೊತೆಯಲ್ಲಿ ಒಟ್ಟಿಗೆ ಯುದ್ಧವನ್ನು ಮಾಡುವವರಾಗಿ ಮಹಾಬಲರಾದ ಅವರು ತಮ್ಮ ಬಲಿಷ್ಠವಾದ ಬಿಲ್ಲುಗಳನ್ನು ಎಳೆಯುತ್ತಾ (ಮುಂದೆ ಬಂದರು).
ತತಃ ಸ್ವರ್ಣಪತಾಕೇನ ರಥೇನಾದಿತ್ಯವರ್ಚಸಾ |
ಪುನರಾವೃತ್ಯ ಮಾರ್ಗಸ್ಥಂ ದದೃಶುರ್ವಾನರಧ್ವಜಮ್ ॥56॥
ಆಗ ಸ್ವರ್ಣಪತಾಕೆಗಳುಳ್ಳ, ಆದಿತ್ಯಕಾಂತಿಯುಳ್ಳ ತಮ್ಮ ರಥಗಳಿಂದ ಹಿಂದಿರುಗಿ ತಮ್ಮ ಮಾರ್ಗದಲ್ಲಿ ಎದುರಾಗಿದ್ದ ವಾನರ ಧ್ವಜನಾದ ಅರ್ಜುನನನ್ನು ನೋಡಿದರು.
ತೇ ಮಹಾಸ್ತ್ರೈರ್ಮಹೋತ್ಸಾಹಾಃ ಪರಿವಾರ್ಯ ಧನಂಜಯಮ್ |
ಅಭ್ಯವರ್ಷನ್ ಸುಸಂಕ್ರುದ್ಧಾ ಮೇಘಾ ಇವ ಮಹಾಚಲಮ್ ॥57॥
ಮಹೋತ್ಸಾಹವುಳ್ಳ ಅವರೆಲ್ಲರೂ ಮಹಾಕ್ರೋಧದಿಂದ ಯುಕ್ತರಾಗಿ ಅರ್ಜುನನನ್ನು ಸುತ್ತುವರಿದು ಮೇಘಗಳು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ತಮ್ಮ ಮಹಾಸ್ತ್ರಗಳಿಂದ ಅವನ ಮೇಲೆ ಬಾಣಗಳ ಮಳೆಯನ್ನು ಕರೆದರು.
ಶರೌಘಾನ್ ಸಮ್ಯಗಸ್ಯಂತೋ ಜೀಮೂತಾ ಇವ ವಾರ್ಷಿಕಾಃ |
ಯುದ್ಧೇ ತಸ್ಥುರ್ಮಹಾವೀರ್ಯಾಃ ಪ್ರತಪಂತಃ ಕಿರೀಟಿನಮ್ ॥58॥

ಮಹಾವೀರ್ಯರಾದ ಅವರು ವರ್ಷಾಕಾಲದ ಮೋಡದಂತೆ ಶರಸಮೂಹಗಳನ್ನು ಚೆನ್ನಾಗಿ ಪ್ರಯೋಗಿಸುತ್ತಾ ಯುದ್ಧದಲ್ಲಿ ಅರ್ಜುನನಿಗೆ ತಾಪವನ್ನು ಕೊಡುತ್ತಾ ನಿಂತರು.
ಇಷುಭಿರ್ಬಹುಭಿಸ್ತೂರ್ಣಂ ನಿಶಿತೈರ್ಲೋಮವಾಪಿಭಿಃ |
ಅದೂರಾತ್ ಪ್ರತ್ಯವಸ್ಥಾಯ ಪಾಂಡವಂ ಸಮಯೋಧಯನ್ ॥59॥
ಅವರು ಅರ್ಜುನನಿಗೆ ಸಮೀಪದಲ್ಲಿಯೇ ನಿಂತು ಕೂದಲುಗಳನ್ನು ಸೀಳುವ ನಿಶಿತವಾದ ತಮ್ಮ ಅನೇಕ ಬಾಣಗಳಿಂದ ಶೀಘ್ರವಾಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತಃ ಪ್ರಹಸ್ಯ ಬೀಭತ್ಸುಸ್ತದೈಂದ್ರಂ ಪಂಚವಾರ್ಷಿಕಮ್ |
ಅಸ್ತ್ರಮಾದಿತ್ಯಸಂಕಾಶಂ ಗಾಂಡೀವೇ ಸಮಯೋಜಯತ್ ॥60॥
ಆಗ ಅರ್ಜುನನು ನಕ್ಕು ಐದುದಿಕ್ಕುಗಳಲ್ಲಿಯೂ ಮಳೆಯಂತೆ ಬಾಣಗಳನ್ನು ಸುರಿಸುವ ಆದಿತ್ಯನಂತೆ ಹೊಳೆಯುವ ದಿವ್ಯವಾದ ಐಂದ್ರಾಸ್ತ್ರವನ್ನು ಗಾಂಡೀವ ಧನುಸ್ಸಿನಲ್ಲಿ ಯೋಜಿಸಿದನು.
ನಾಕ್ಷಾಣಾಂ ನ ಚ ಚಕ್ರಾಣಾಂ ನ ರಥಾನಾಂ ನ ವಾಜಿನಾಮ್ |
ಅಂಗುಲಾದ್ ದ್ವ್ಯಂಗುಲಾದ್ವಾಪಿ ವಿವೃತಂ ಪ್ರತ್ಯದೃಶ್ಯತ ॥61॥
ಆಗ ಅಕ್ಷಗಳಲ್ಲಾಗಲೀ, ಚಕ್ರಗಳಲ್ಲಾಗಲೀ, ರಥಗಳಲ್ಲಾಗಲೀ, ಅಶ್ವಗಳಲ್ಲಾಗಲೀ, ಒಂದು ಅಂಗುಲ ಎರಡು ಅಂಗುಲ ಮಧ್ಯದಲ್ಲಿಯೂ ಅರ್ಜುನನ ಬಾಣವು ಬೀಳದಿರುವ ಸ್ಥಳವಿರಲಿಲ್ಲ.
ಮೋಹಯಿತ್ವಾ ಚ ತಾನ್ ಸರ್ವಾನ್ ಸ ತತ್ರ ಹ್ಯಸ್ತ್ರತೇಜಸಾ |
ಅರ್ದಯಾಮಾಸ ತೈರ್ಬಾಣೈರರ್ಜುನಃ ಸಮಿತಿಂಜಯಃ ॥62॥
ಸಮಿತಿಂಜಯನಾದ ಅರ್ಜುನನು ಅವರೆಲ್ಲರನ್ನೂ ತನ್ನ ಅಸ್ತ್ರತೇಜಸ್ಸಿನಿಂದ ಮೋಹಿಸಿ ತನ್ನ ಬಾಣಗಳಿಂದ ಅವರನ್ನು ಮರ್ದಿಸಿದನು.
ದುರ್ಯೋಧನಂ ತ್ರಿಸಪ್ತತ್ಯಾ ಶಕುನಿಂ ಪಂಚಭಿಃ ಶರೈಃ |
ದ್ರೋಣಮೇಕೇನ ಬಾಣೇನ ಕೃಪಂ ದ್ವಾಭ್ಯಾಂ ಮಹಾರಥಮ್ ॥63॥
ಅಶೀತ್ಯಾ ಸೂತಪುತ್ರಂ ತು ಷಷ್ಟ್ಯಾ ದ್ರೌಣಿಂ ತಥೈವ ಚ |
ದುಃಶಾಸನಮುಖಾನ್ ಸರ್ವಾನ್ ಸ ತತ್ರ ಹ್ಯಸ್ತ್ರತೇಜಸಾ |
ಅರ್ದಯಾಮಾಸ ತೈರ್ಬಾಣೈಃ ಪಾಂಡವೋಽಸ್ತ್ರಭೃತಾಂ ವರಃ ॥64॥
ದುರ್ಯೋಧನನನ್ನು ಇನ್ನೂರ ಹತ್ತುಬಾಣಗಳಿಂದಲೂ, ಶಕುನಿಯನ್ನು ಐದುಬಾಣಗಳಿಂದಲೂ, ದ್ರೋಣರನ್ನು ಒಂದು ಬಾಣದಿಂದಲೂ, ಮಹಾರಥರಾದ ಕೃಪರನ್ನು ಎರಡು ಬಾಣಗಳಿಂದಲೂ, ಕರ್ಣನನ್ನು ಎಂಬತ್ತು ಬಾಣಗಳಿಂದಲೂ ಮತ್ತು ಅಶ್ವತ್ಥಾಮರನ್ನು ಅರವತ್ತು ಬಾಣಗಳಿಂದಲೂ ಅರ್ದಿಸಿ ದುಃಶಾಸನನೇ ಮೊದಲಾದ ಎಲ್ಲರನ್ನೂ ತನ್ನ ಅಸ್ತ್ರತೇಜಸ್ಸಿನಿಂದ ಅಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅವನು ಬಾಣಗಳಿಂದ ಅರ್ದಿಸಿದನು.
ಯಥಾ ರಶ್ಮಿಭಿರಾದಿತ್ಯೋ ವೃಣುತೇ ಸರ್ವತೋ ದಿಶಮ್ |
ಏವಂ ಕಿರೀಟಿನಾ ಮುಕ್ತಂ ಸರ್ವಂ ಪ್ರಾಚ್ಛಾದಯಜ್ಜಗತ್ ॥65॥
ಆದಿತ್ಯನು ತನ್ನ ಕಿರಣಗಳಿಂದ ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿದಂತೆ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಸರ್ವಜಗತ್ತನ್ನೂ ವ್ಯಾಪಿಸಿದವು.
ಯಥಾ ಬಲಾಹಕೇ ವಿದ್ಯುತ್ ಪಾವಕೋ ವಾ ಶಿಲೋಚ್ಚಯೇ |
ತಥಾ ಗಾಂಡೀವಮಭವತ್ ಶತಾಯುತಮಿವಾದ್ಭುತಮ್ ॥66॥
ಮೋಡಗಳ ಸಮೂಹದಲ್ಲಿ ಮಿಂಚಿನಂತೆ, ಶಿಲೋಚ್ಚಯದಲ್ಲಿ ಅಗ್ನಿಯಂತೆ ಒಂದೇ ಗಾಂಡೀವಧನುಸ್ಸು ನೂರರಂತೆ, ಹತ್ತುಸಾವಿರದಂತೆ ಅದ್ಭುತವಾಗಿ ತೋರಿತು.
ಯಥಾ ವರ್ಷತಿ ಪರ್ಜನ್ಯೋ ವಿದ್ಯುತ್ ಪತತಿ ಪರ್ವತೇ |
ವಿಸ್ಫೂರ್ಜಿತೈಃ ದಿಶಃ ಸರ್ವಾ ಜ್ವಲದ್ಗಾಂಡೀವಮಾವೃಣೋತ್ ॥67॥
ಪರ್ಜನ್ಯನು ಮಳೆಯನ್ನು ಸುರಿಸಿದಂತೆ, ಪರ್ವತದಲ್ಲಿ ಸಿಡಿಲು ಬಿದ್ದಂತೆ ದೀಪ್ತವಾದ ಗಾಂಡೀವಧನುಸ್ಸು ತನ್ನ ಶಬ್ದದಿಂದ ಎಲ್ಲ ದಿಕ್ಕುಗಳನ್ನು ಆವರಿಸಿತು.
ತ್ರಸ್ತಾಶ್ಚ ರಥಿನಃ ಸರ್ವೇ ಚೈಂದ್ರಮಸ್ತ್ರಂ ವಿಕುರ್ವತಿ |
ಸರ್ವೇ ಶಾಂತಿಪರಾ ಯೋಧಾಃ ಸ್ವಚಿತ್ತಂ ನಾಭಿಜಜ್ಞಿರೇ ॥68॥
ಸಹಿತಾ ದ್ರೋಣಭೀಷ್ಮಾಭ್ಯಾಂ ಪ್ರವಿಮೋಹಿತಚೇತನಾಃ ॥69॥
ಅರ್ಜುನನು ಐಂದ್ರಾಸ್ತ್ರವನ್ನು ಪ್ರಯೋಗಿಸುತ್ತಿರಲು ಎಲ್ಲ ಯೋಧರು ಶಾಂತಿಪರರಾಗಿ ತಮ್ಮ ಮನಸ್ಸನ್ನೇ ತಿಳಿಯಲಿಲ್ಲ. ಭೀಷ್ಮದ್ರೋಣರಿಂದಲೂ ಸಹಿತರಾದ ಅವರು ಮೋಹಕ್ಕೆ ಒಳಗಾದರು.
ತಾನಿ ಸರ್ವಾಣಿ ಸೈನ್ಯಾನಿ ಭಗ್ನಾನಿ ಭರತರ್ಷಭ |
ಪ್ರಾದ್ರವಂತ ದಿಶಃ ಸರ್ವಾ ಭಯಾದ್ವೈ ಸವ್ಯಸಾಚಿನಃ ॥70॥
ಎಲೈ ಭರತರ್ಷಭನೇ, ಹೀಗೆ ಭಗ್ನಗೊಂಡ ಆ ಸೈನ್ಯವೆಲ್ಲವೂ ಅರ್ಜುನನ ಭಯದಿಂದ ಎಲ್ಲ ದಿಕ್ಕುಗಳಿಗೂ ಓಡಿಹೋಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.

* * * *
ಮಹಾಭಾರತತಾತ್ಪರ್ಯನಿರ್ಣಯಃ
ಏಕೀಭೂತಾನ್ ಪುನರೇವಾನುಯಾತಾನ್
ಸಮ್ಮೋಹನಾಸ್ತ್ರೇಣ ವಿಮೋಹಯಿತ್ವಾ |
ಜಗ್ರಾಹ ತೇಷಾಮುತ್ತರೀಯಾಣಿ ಋತೇ ತು
ಭೀಷ್ಮಸ್ಯ ವೇದಾಸ್ತ್ರಘಾತಂ ಸ ಏವ ॥44॥
ಕೌರವರೆಲ್ಲರೂ ಒಂದಾಗಿ ಪುನಃ ಬಂದಾಗ ಅರ್ಜುನ, ಭೀಷ್ಮನನ್ನು ಹೊರತು ಎಲ್ಲರನ್ನೂ ಸಂಮೋಹನಾಸ್ತ್ರದಿಂದ ಮೂರ್ಛೆಗೊಳಿಸಿ ಅವರ ಉತ್ತರೀಯಗಳನ್ನು ತೆಗೆಸಿದ. ಭೀಷ್ಮ ಆ ಸಂಮೋಹನಾಸ್ತ್ರಕ್ಕೆ ವಿಜ್ಞಾನಾಸ್ತ್ರದಿಂದ ಪ್ರತೀಕಾರ ಮಾಡುವುದನ್ನು ಬಲ್ಲವನಾಗಿದ್ದನು.
* * * *
ಅರವತ್ತೈದನೆಯ ಅಧ್ಯಾಯ
ಉತ್ತರನನ್ನು ಸಮಾಧಾನಪಡಿಸಿ ಅರ್ಜುನನಿಂದ ದುರ್ಯೋಧನನ
ಕಡೆಗೆ ಗಮನ. ದುರ್ಯೋಧನನ ಪಲಾಯನ.
ಅರ್ಜುನಃ
ದಕ್ಷಿಣಾಮೇವ ತು ದಿಶಂ ಹಯಾನುತ್ತರ ವಾಹಯ |
ಪುರಾರ್ಥೀ ಚ ಭವತ್ಯೇಷಾಮಯಂ ಶಬ್ದೋಽತ್ರ ತಿಷ್ಠತಾಮ್ ॥1॥
ಅರ್ಜುನ ಎಲೈ ಉತ್ತರನೇ, ಸೈನ್ಯದ ಬಲಭಾಗದಿಂದ ಹಿಂದಕ್ಕೆ ಹೋಗು. ಕೌರವರ ಸೈನ್ಯದಲ್ಲಿ ನಾವು ನಗರಕ್ಕೆ ಹಿಂದಿರುಗೋಣ ಎಂಬ ಮಾತು ಕೇಳಿಬರುತ್ತಿದೆ. ಅದನ್ನು ತಡೆಯಲು ಸೇನೆಯ ಬಲಭಾಗದಿಂದ ಸೇನೆಯ ಹಿಂದಕ್ಕೆ ರಥವನ್ನು ನಡೆಸು.
ಅಶ್ವತ್ಥಾಮ್ನಃ ಪ್ರತಿ ರಥಂ ಪ್ರಾಚೀಮುದ್ಯಾಹಿ ಸಾರಥೇ |
ಅಚಿರಾದ್ ದ್ರಷ್ಟುಮಿಚ್ಛಾಮಿ ಗುರುಪುತ್ರಂ ಯಶಸ್ವಿನಮ್ ॥2॥
ಎಲೈ ಸಾರಥಿಯೇ, ಅಶ್ವತ್ಥಾಮನ ರಥದ ಎದುರಿಗೆ ಹೋಗಲು ಅಲ್ಲಿಂದ ಪೂರ್ವದಿಕ್ಕಿಗೆ ರಥವನ್ನು ನಡೆಸು. ಕೀರ್ತಿವಂತನಾದ ಗುರುಪುತ್ರನಾದ ಅಶ್ವತ್ಥಾಮನನ್ನು ಶೀಘ್ರವಾಗಿ ನೋಡಲು ಬಯಸುತ್ತೇನೆ.
ವೈಶಂಪಾಯನಃ
ಮೋಹಯಿತ್ವಾ ತು ತಾನ್ ಸರ್ವಾನ್ ಧನುರ್ಘೋಷೇಣ ಪಾಂಡವಃ |
ಪ್ರಸವ್ಯಂ ಚೈವಮಾವೃತ್ಯ ಕ್ರೋಶಾರ್ಧಂ ಪ್ರಾದ್ರವತ್ ತತಃ ॥3॥
ವೈಶಂಪಾಯನ ಅರ್ಜುನನು ಆಗ ಅವರೆಲ್ಲರನ್ನೂ ತನ್ನ ಗಾಂಡೀವದ ಘೋಷದಿಂದ ಮೋಹಿಸಿ ಎಡಭಾಗಕ್ಕೆ ತಿರುಗಿ ವೇಗವಾಗಿ ಅರ್ಧಕ್ರೋಶದ ದೂರ ಹೋದನು.
ಯಥಾ ಸುಸಂವೃತೋ ಬಾಣಃ ಸುಪರ್ಣಶ್ಚಾಪಿ ಶೀಘ್ರಗಃ |
ತಥಾ ಪಾರ್ಥರಥಃ ಶೀಘ್ರಮಾಕಾಶೇ ಪರ್ಯವರ್ತತ ॥4॥
ಚೆನ್ನಾಗಿ ಸಂವೃತವಾದ ಬಾಣದಂತೆ, ಶೀಘ್ರಗಾಮಿಯಾದ ಗರುಡನಂತೆ ಪಾರ್ಥರಥವು ಆಕಾಶದಲ್ಲಿ ಶೀಘ್ರವಾಗಿ ತಿರುಗಿ ಹೊರಟಿತು.
ಮುಹೂರ್ತೋಪರತೇ ಶಬ್ದೇ ಪ್ರತಿಯಾತೇ ಧನಂಜಯೇ |
ಹಸ್ತ್ಯಶ್ವರಥಪಾದಾತಂ ಪುರಸ್ಕೃತ್ಯ ಮಹಾರಥಾಃ ॥5॥
ದ್ರೋಣಭೀಷ್ಮಮುಖಾಃ ಸರ್ವೇ ಸೈನ್ಯಾನಾಂ ಜಘನೇ ಯಯುಃ |
ಯತ್ತಾಃ ಪಾರ್ಥಮಪಶ್ಯಂತಃ ಸಹಿತಾಃ ಶರವಿಕ್ಷತಾಃ ॥6॥
ಅರ್ಜುನನು ಹಾಗೆ ಹೊರಟು ಹೋಗಿ ಒಂದು ಮುಹೂರ್ತದ ಕಾಲ ಅವನ ಶಬ್ದವು ಕೇಳದಿರಲು ದ್ರೋಣ, ಭೀಷ್ಮ ಎಲ್ಲ ಮಹಾರಥರೂ ಹಸ್ತಿ, ಅಶ್ವ, ರಥ, ಪದಾತಿಗಳನ್ನು ಮುಂದೆ ಮಾಡಿಕೊಂಡು ಅರ್ಜುನನನ್ನು ಕಾಣದೆ ಬಾಣಗಳಿಂದ ಗಾಯಗೊಂಡ ದೇಹವುಳ್ಳವರಾಗಿ ಎಚ್ಚರಿಕೆಯಿಂದ ಸೈನ್ಯದ ಹಿಂದೆ ಹೋದರು.
ಸೈನಿಕಾಃ
ದಿಷ್ಟ್ಯಾ ದುರ್ಯೋಧನೋ ಮುಕ್ತಃ ಸೈನ್ಯಂ ಭೂಯಿಷ್ಠಮಾಗತಮ್ |
ಕ್ರೋಶಮಾತ್ರಮತಿಕ್ರಮ್ಯ ಬಲಮನ್ವಾನಯಾಮಹೇ ॥7॥
ಯಾಮ ಯತ್ರ ವನಂ ಗುಲ್ಮಂ ನದೀಮನ್ವಶಕೀಂ ಪ್ರತಿ ॥8॥
ಸೈನಿಕರು ದೇವರ ದಯೆದಿಂದ ದುರ್ಯೋಧನನು ಮುಕ್ತನಾಗಿದ್ದಾನೆ. ಉಳಿದ ಸೈನ್ಯದ ಹೆಚ್ಚು ಭಾಗವು ಒಂದುಗೂಡಿದೆ. ಒಂದು ಕ್ರೋಶದೂರ ಹೋಗಿ ಸೈನ್ಯವನ್ನೆಲ್ಲಾ ಒಂದುಗೂಡಿಸಿ ಅಲ್ಲಿಂದ ಆಶ್ಮಕೀನದಿಯ ತೀರದಲ್ಲಿ ಕಾಡಿಗೋ ಅಥವಾ ಪೊದೆಗಳಿಗೋ ಹೋಗೋಣ.
ವೈಶಂಪಾಯನಃ
ಅಥ ದುರ್ಯೋಧನೋ ದೃಷ್ಟ್ವಾ ಭಗ್ನಂ ಸ್ವಂ ಬಲಮಾಹವೇ |
ಅಮೃಷ್ಯಮಾಣಃ ಕೋಪೇನ ಪರಿಮಾರ್ಗನ್ ಧನಂಜಯಮ್ ॥9॥
ನ್ಯವರ್ತತ ಕುರುಶ್ರೇಷ್ಠಃ ಸ್ವೇನಾನೀಕೇನ ಸಂವೃತಃ |
ವಾರ್ಯಮಾಣೋ ದುರಾಧರ್ಷೈರ್ಭೀಷ್ಮದ್ರೋಣಕೃಪಾದಿಭಿಃ ॥10॥
ವೈಶಂಪಾಯನ ಆಗ ತನ್ನ ಸೈನ್ಯವು ಯುದ್ಧದಲ್ಲಿ ಭಗ್ನವಾದುದನ್ನು ನೋಡಿ ಕುರುಶ್ರೇಷ್ಠನಾದ ದುರ್ಯೋಧನನು ಕೋಪದಿಂದ

ಅರ್ಜುನನನ್ನು ಹುಡುಕುತ್ತಾ ದುರಾಧರ್ಷರಾದ ಭೀಷ್ಮದ್ರೋಣಕೃಪಾದಿಗಳಿಂದ ನಿವಾರಿಸಲ್ಪಟ್ಟರೂ ಸಹ ತನ್ನ ಸೈನ್ಯದಿಂದ ಸಹಿತಸಾಗಿ (ಅರ್ಜುನನ ಕಡೆಗೆ) ಹಿಂದಿರುಗಿದನು.

ತತೋಽರ್ಜುನಶ್ಚಿತ್ರಮುದಾರವೇಗಂ
ಸಮೀಕ್ಷ್ಯ ಗಾಂಡೀವಮುವಾಚ ವಾಕ್ಯಮ್ ||11||
ಇದಂ ತ್ವಿದಾನೀಮನಯತ್ ಕುರೂಣಾಂ
ಶಿವಂ ಧನುಃ ಶಸ್ತ್ರನಿಬರ್ಹಣಂ ಚ |
ಅತ್ಯಾಶುಗಂ ವೇಗವದಾಶುಕರ್ತೃ
ತ್ವವಾರಣೀಯಂ ಮಹತೇ ರಣಾಯ ||12||

ಆಗ ಅರ್ಜುನನು ವಿಚಿತ್ರವಾದ ಮತ್ತು ಉದಾರವಾದ ವೇಗವುಳ್ಳ ತನ್ನ ಗಾಂಡೀವ ಧನುಸ್ಸನ್ನು ನೋಡಿ ಹೀಗೆ ಮಾತನಾಡಿದನು: ಈ ಮಂಗಳಕರವಾದ, ಶತ್ರುವಿನಾಶಕವಾದ ಧನುಸ್ಸು ಕೌರವರ ಮಂಗಳವನ್ನೆಲ್ಲಾ ಅಪಹರಿಸಿದೆ. ಇದು ಶೀಘ್ರವಾಗಿ ಸಂಚರಿಸುವಂತಹದು, ವೇಗವುಳ್ಳದ್ದು, ತನ್ನ ಕೆಲಸವನ್ನು ಬೇಗ ಮಾಡುವಂತಹದು, ಇನ್ನೊಬ್ಬರಿಂದ ನಿವಾರಿಸಲು ಸಾಧ್ಯವಾಗದುದು ಮತ್ತು ದೊಡ್ಡ ಯುದ್ಧವನ್ನು ಮಾಡಲು ಸಮರ್ಥವಾದುದು.

ಪ್ರದಾರಣಂ ಶತ್ರುವರೂಥಿನೀನಾಮ್
ಅನೀಕಜಿತ್ ಸಂಯತಿ ವಜ್ರಕಲ್ಪಮ್ ||13||
ಪ್ರಯಾಹಿ ಯತ್ರೈಷ ಸುಯೋಧನೋ ಹಿ
ತಂ ಪಾತಯಿಷ್ಯಾಮಿ ಶರೈಃ ಸುತೀಕ್ಷ್ಣೈಃ ||14||

ಶತ್ರುಸೈನ್ಯಗಳನ್ನು ಸೀಳಿಹಾಕುವಂತಹದು, ಸೈನ್ಯಗಳನ್ನು ಜಯಿಸುವಂತಹದು ಮತ್ತು ಯುದ್ಧದಲ್ಲಿ ವಜ್ರಾಯುಧದಂತೆ ಇರುವಂತಹದು. ಎಲೈ ಉತ್ತರನೇ, ಸುಯೋಧನನು ಎಲ್ಲಿದ್ದಾನೆಯೋ ಅಲ್ಲಿಗೆ ರಥವನ್ನು ನಡೆಸು. ತೀಕ್ಷ್ಣವಾದ ಶರಗಳಿಂದ ಅವನನ್ನು ಹೊಡೆದು ಉರುಳಿಸುವೆನು.

ಆಚಾರ್ಯಪುತ್ರಂ ಚ ಪಿತಾಮಹಂ ಚ
ಸುಯೋಧನಂ ಸೂತಸುತಂ ಚ ಸಂಖೇ |
ದ್ರೋಣಂ ಕೃಪಂ ಚೈವ ನಿವಾರ್ಯ ಯುದ್ಧೇ
ಶಿರೋ ಹರಿಷ್ಯಾಮಿ ಸುಯೋಧನಸ್ಯ ||15||

ಯುದ್ಧದಲ್ಲಿ ಆಚಾರ್ಯಪುತ್ರರಾದ ಅಶ್ವತ್ಥಾಮರನ್ನೂ, ಪಿತಾಮಹರಾದ ಭೀಷ್ಮರನ್ನೂ, ಸುಯೋಧನನನ್ನೂ, ಕರ್ಣನನ್ನೂ, ದ್ರೋಣ ಮತ್ತು ಕೃಪರನ್ನೂ ನಿವಾರಿಸಿ ಸುಯೋಧನನ ಶಿರಸ್ಸನ್ನು ಕತ್ತರಿಸುವೆನು.

ವೈಶಂಪಾಯನಃ
ತದುತ್ತರಶ್ಚಿತ್ರಮುದಾರವೇಗಂ
ಧನುಶ್ಚ ದೃಷ್ಟ್ವಾ ನಿಶಿತಾನ್ ಶರಾಂಶ್ಚ |
ಭೀತೋಽಬ್ರವೀದರ್ಜುನಮುಗ್ರವೇಗಂ
ನಾಹಂ ತವಾಶ್ವಾನ್ ವಿಷಹೇ ನಿಯಂತುಮ್ ||16||

ವೈಶಂಪಾಯನ ಉತ್ತರನು, ವಿಚಿತ್ರವಾದ ಮತ್ತು ಉದಾರವಾದ ವೇಗವುಳ್ಳ ಗಾಂಡೀವ ಧನುಸ್ಸನ್ನು ಮತ್ತು ಹರಿತವಾದ ಬಾಣಗಳನ್ನು ನೋಡಿ ಭೀತನಾಗಿ ಭಯಂಕರವಾದ ವೇಗವುಳ್ಳ ಅರ್ಜುನನನ್ನು ಕುರಿತು, ನಾನು ನಿನ್ನ ಅಶ್ವಗಳನ್ನು ನಿಯಂತ್ರಿಸಲಾರೆ ಎಂದು ಹೇಳಿದನು.

ತಮಬ್ರವೀತ್ ಮಾತ್ಸ್ಯಸುತಂ ಪ್ರಹಸ್ಯ
ಗಾಂಡೀವಧನ್ವಾ ದ್ವಿಷತಾಂ ನಿಹಂತಾ ||17||
ಮಯಾ ಸಹಾಯೇನ ಕುತೋ ಭಯಂ ತೇ
ಪ್ರೇಹ್ಯುತ್ತರಾಶ್ವಾನುಪಮಂತ್ರಯಸ್ವ ||18||

ಗಾಂಡೀವ ಧನುರ್ಧಾರಿಯಾದ, ಶತ್ರುಹಂತಕನಾದ ಅರ್ಜುನನು ನಕ್ಕು ಮಾತ್ಸ್ಯಪುತ್ರನಾದ ಉತ್ತರನನ್ನು ಕುರಿತು, ನಾನು ಸಹಾಯವಾಗಿರುವಾಗ ನಿನಗೆ ಏಕೆ ಭಯ? ಉತ್ತರನೇ, ಅಶ್ವಗಳನ್ನು ಸಮಾಧಾನಪಡಿಸಿ ಮುಂದಕ್ಕೆ ನಡೆ ಎಂದು ಹೇಳಿದನು.

ವೈಶಂಪಾಯನಃ
ಆಶ್ವಾಸಿತಸ್ತೇನ ಧನಂಜಯೇನ
ವೈರಾಟಿರಶ್ವಾನ್ ಪ್ರಚುಚೋದ ಶೀಘ್ರಮ್ |
ವಿಷ್ಫಾರಯನ್ ತದ್ವನುರುಗ್ರಘೋಷಂ
ಯುಯುತ್ಸಮಾನಃ ಪುನರೇವ ಜಿಷ್ಣುಃ ||19||

ವೈಶಂಪಾಯನ ಅರ್ಜುನನಿಂದ ಆಶ್ವಸ್ತನಾದ ಉತ್ತರನು ಶೀಘ್ರವಾಗಿ ಅಶ್ವಗಳನ್ನು ಪ್ರಚೋದಿಸಿದನು. ಅರ್ಜುನನು ಉಗ್ರಘೋಷವುಳ್ಳ ತನ್ನ ಧನುಸ್ಸನ್ನು ಎಳೆಯುತ್ತಾ ಪುನಃ ಯುದ್ಧವನ್ನು ಮಾಡುವ ಇಚ್ಛೆಯುಳ್ಳವನಾದನು.

ಗಾಂಡೀವಶಬ್ದೇನ ತು ತತ್ರ ಯೋಧಾ
ಭೂಮೌ ನಿಪೇತುರ್ಬಹವೋಽತಿವೇಲಮ್ |
ಶಂಖಸ್ಯ ಶಬ್ದೇನ ತು ವಾನರಸ್ಯ
ಶಬ್ದೇನ ತೇ ಯೋಧವರಾಃ ಸಮಂತಾತ್ ||20||

ಗಾಂಡೀವ ಶಬ್ದದಿಂದ ಶಂಖಶಬ್ದದಿಂದ, ಹಾಗೂ ಧ್ವಜದಲ್ಲಿದ್ದ ವಾನರನ ಶಬ್ದದಿಂದ ಕೌರವ ಸೈನ್ಯದ ಶ್ರೇಷ್ಠರಾದ ಅನೇಕ ಯೋಧರು ಎಲ್ಲ ಕಡೆಗಳಲ್ಲಿಯೂ ಭೂಮಿಯ ಮೇಲೆ ಬಹಳವಾಗಿ ಕುಸಿದು ಬಿದ್ದರು.

ಅರ್ಜುನಃ

ಏಷೋಽತಿಮಾನೀ ಧೃತರಾಷ್ಟ್ರಪುತ್ರಃ
ಸೇನಾಮುಖೇ ಸರ್ವಸಮೃದ್ಧತೇಜಾಃ |
ಪರಾಜಯಂ ನಿತ್ಯಮಮೃಷ್ಯಮಾಣೋ
ನಿವರ್ತತೇ ಯುದ್ಧಮನಾಃ ಪುರಸ್ತಾತ್ ||21||
ತಮೇವ ಯಾಹಿ ಪ್ರಸಮೀಕ್ಷ್ಯ ಯತ್ತಃ
ಸುಯೋಧನಂ ತತ್ರ ಸಹಾನುಜಂ ಚ ||22||

ಅರ್ಜುನ ಈ ಧೃತರಾಷ್ಟ್ರಪುತ್ರನು ಬಹಳ ಅಹಂಕಾರವುಳ್ಳವನು. ಸೇನಾಮುಖದಲ್ಲಿ ಪೂರ್ಣವಾದ ಸಮೃದ್ಧವಾದ ತೇಜಸ್ಸುಳ್ಳವನು. ಪರಾಜಯವನ್ನು ಯಾವಾಗಲೂ ಸಹಿಸದೇ ಯುದ್ಧವನ್ನು ಮಾಡುವ ಮನಸ್ಸಿನಿಂದ ಮುಂದೆ ಬರುತ್ತಿದ್ದಾನೆ. ಎಚ್ಚರಿಕೆಯಿಂದ ಅವನನ್ನು ನೋಡಿಕೊಂಡು ಸುಯೋಧನ ಮತ್ತು ಅವನ ತಮ್ಮನಾದ ದುಃಶಾಸನನು ಇರುವಲ್ಲಿಗೆ ರಥವನ್ನು ನಡೆಸು.

ವೈಶಂಪಾಯನಃ

ತಮಾಪತಂತಂ ಪ್ರಸಮೀಕ್ಷ್ಯ ಸರ್ವೇ
ಕುರುಪ್ರವೀರಾಃ ಸಹಸಾಽಭ್ಯಗಚ್ಛನ್ |
ಪ್ರಹಸ್ಯ ವೀರಃ ಸ ತು ತಾನತೀತ್ಯ
ದುರ್ಯೋಧನೇ ದ್ವೌ ನಿಚಖಾನ ಬಾಣೌ ||23||

ವೈಶಂಪಾಯನ ಹಾಗೆ ತಮ್ಮ ಮೇಲೆ ಎರಗುತ್ತಿದ್ದ ಅರ್ಜುನನನ್ನು ನೋಡಿ ಎಲ್ಲಾ ಕುರುವೀರಶ್ರೇಷ್ಠರು ತಕ್ಷಣ ಅವನಿಗೆ ಎದುರಾದರು. ವೀರನಾದ ಅರ್ಜುನನು ಅವರನ್ನೆಲ್ಲಾ ಮೀರಿ ಎರಡು ಬಾಣಗಳನ್ನು ದುರ್ಯೋಧನನ ದೇಹದಲ್ಲಿ ನಾಟಿಸಿದನು.

ತೇನಾರ್ದಿತೋ ನಾಗ ಇವ ಪ್ರಭಿನ್ನಃ
ಪಾರ್ಥೇನ ವಿದ್ಧೋ ಧೃತರಾಷ್ಟ್ರಸೂನುಃ |
ಯುಯುತ್ಸಮಾನೋ ದ್ವಿರಥೇನ ಸಂಖ್ಯೇ
ಸ್ವಯಂ ನಿಗೃಹ್ಯಾರ್ಜುನಮಾಸಸಾದ ||24||

ಅರ್ಜುನನಿಂದ ಹೊಡೆಯಲ್ಪಟ್ಟು ಆ ಬಾಣಗಳಿಂದ ಪೀಡಿತನಾದ ಧೃತರಾಷ್ಟ್ರ ಪುತ್ರನು ಮದಿಸಿದ ಗಜದಂತೆ ಯುದ್ಧದಲ್ಲಿ ಅರ್ಜುನನ ಜೊತೆಯಲ್ಲಿ ದ್ವಿರಥನಾಗಿ ಯುದ್ಧವನ್ನು ಮಾಡಲು ಬಯಸಿ ಆ ಬಾಣಗಳನ್ನು ತಾನೇ ಕಿತ್ತು ಅರ್ಜುನನ ಕಡೆಗೆ ಬಂದನು.

ತಂ ಭೀಮಧನ್ವಾನಮುದಗ್ರವೇಗಂ
ಧನಂಜಯಂ ಶತ್ರುಗಣೈರಜಯ್ಯಮ್ |
ಆಕರ್ಣಪೂರ್ಣಾಯತಚೋದಿತೇನ
ಭಲ್ಲೇನ ವಿವ್ಯಾಧ ಲಲಾಟಮಧ್ಯೇ ||25||

ಭಯಂಕರವಾದ ಧನುಸ್ಸುಳ್ಳವನೂ, ಶ್ರೇಷ್ಠವಾದ ವೇಗವುಳ್ಳವನೂ, ಶತ್ರುಸಮೂಹದಿಂದ ಜಯಿಸಲು ಸಾಧ್ಯವಿಲ್ಲದವನೂ ಆದ ಅರ್ಜುನನನ್ನು ತನ್ನ ಕಿವಿಯವರೆಗೂ ಎಳೆದ ಹೆದೆಗೆ ಜೋಡಿಸಿದ ವಿಸ್ತಾರವಾದ ಭಲ್ಲದಿಂದ (ದುರ್ಯೋಧನನು) ಹಣೆಯ ಮಧ್ಯದಲ್ಲಿ ಹೊಡೆದನು.

ಸ ತೇನ ಬಾಣೇನ ಸಮರ್ಪಿತೇನ
ಜಾಂಬೂನದಾಭೇನ ಸುಸಂಶಿತೇನ |
ರರಾಜ ಪಾರ್ಥೋ ರುಧಿರಂ ಕ್ಷರನ್ ವೈ
ಯಥೈಕರಶ್ಮಿರ್ಭಗವಾನ್ ದಿವಾಽರ್ಕಃ ||26||

ಸುವರ್ಣಮಯವಾದ ಅತ್ಯಂತ ತೀಕ್ಷ್ಣವಾದ ಆ ಬಾಣದಿಂದ ಹೊಡೆಯಲ್ಪಟ್ಟ ಅರ್ಜುನನು ರಕ್ತವನ್ನು ಸುರಿಸುತ್ತಾ ಮಧ್ಯಾಹ್ನದ ಸಮಯದಲ್ಲಿ ಒಂದೇ ಕಿರಣವುಳ್ಳ ಪೂಜ್ಯನಾದ ಸೂರ್ಯನಂತೆ ಶೋಭಿಸಿದನು.

ಅಥಾಸ್ಯ ಬಾಣೇನ ವಿದಾರಿತಸ್ಯ
ಪ್ರಾದುರ್ಬಭೂವಾಸೃಗಜಸ್ರಮುಷ್ಣಮ್ |
ಸಾ ತಸ್ಯ ಜಾಂಬೂನದಪುಷ್ಪಚಿತ್ರಾ
ಮಾಲೇವ ಧಾರಾಽಭಿವಿರಾಜತೇ ಸ್ಮ ||27||

ಆ ಸುಯೋಧನನ ಬಾಣದಿಂದ ತಿವಿದ ಹಣೆಯಿಂದ ಉಷ್ಣವಾದ ರಕ್ತವು ಬಹಳ ಸಮಯದವರೆಗೆ ಹರಿಯಿತು. ಆ ರಕ್ತಧಾರೆಯು ಅವನ ಕೊರಳಿನಲ್ಲಿ ಸುವರ್ಣಮಯವಾದ ಮಾಲೆಯಂತೆ ಶೋಭಿಸಿತು.

ಸ ತೇನ ಬಾಣಾಭಿಹತಸ್ತರಸ್ವೀ
ದುರ್ಯೋಧನೇನೋದ್ಧತಮನ್ಯುವೇಗಃ |
ಶರಾನುಪಾದಾಯ ವಿಷಾಗ್ನಿಕಲ್ಪಾನ್
ವಿವ್ಯಾಧ ರಾಜಾನಮದೀನಸತ್ವಃ ||28||

ದುರ್ಯೋಧನನ ಆ ಬಾಣದಿಂದ ಹೊಡೆಯಲ್ಪಟ್ಟ ವೇಗಶಾಲಿಯಾದ, ಬಹಳ ಕೋಪದ ವೇಗವನ್ನು ಧರಿಸಿದ, ಎಂದೂ ಕುಗ್ಗದ ಮನಸ್ಸುಳ್ಳ ಅರ್ಜುನನು ವಿಷಾಗ್ನಿ ಸದೃಶವಾದ ಬಾಣಗಳನ್ನು ತೆಗೆದುಕೊಂಡು ಅದರಿಂದ ದುರ್ಯೋಧನನನ್ನು ಹೊಡೆದನು.

ದುರ್ಯೋಧನಶ್ಚಾಪಿ ತಮುಗ್ರತೇಜಾಃ
ಪಾರ್ಥಶ್ಚ ದುರ್ಯೋಧನಮೇಕವೀರಃ|
ಅನ್ಯೋನ್ಯಮಾಜೌ ಪುರುಷಪ್ರವೀರೌ
ಸಮಂ ಸಮಾಜಘ್ನತುರಾಜಮೀಢೌ ॥29॥
ಆಗ ಆಜಮೀಢಕುಲಕ್ಕೆ ಸೇರಿದ ಉಗ್ರತೇಜಸ್ವಿಗಳೂ, ಶ್ರೇಷ್ಠ ವೀರರೂ, ಪುರುಷಶ್ರೇಷ್ಠರೂ ಆದ ಅರ್ಜುನ ಮತ್ತು ದುರ್ಯೋಧನರಿಬ್ಬರೂ ಪರಸ್ಪರವಾಗಿ ಬಾಣಪ್ರಯೋಗಗಳನ್ನು ಮಾಡಿದರು.
ತತಃ ಪ್ರಭಿನ್ನೇನ ಮಹಾಗಜೇನ
ಮಹೀಧರಾಭೇನ ಪುನರ್ವಿಕರ್ಣಃ|
ರಥೈಶ್ಚತುರ್ಭಿರ್ಗಜಪಾದರಕ್ಷೈಃ
ಕುಂತೀಸುತಂ ಪಾಂಡವಮಭ್ಯಧಾವತ್ ॥30॥
ಆಗ ವಿಕರ್ಣನು ಪುನಃ ಪರ್ವತದಂತಿದ್ದ ಒಂದು ಮದಿಸಿದ ಗಜವನ್ನು ಏರಿ ಆ ಗಜದ ನಾಲ್ಕುಪಾದಗಳನ್ನು ರಕ್ಷಿಸುವ ನಾಲ್ಕು ರಥರಿಂದ ಕೂಡಿಕೊಂಡು ಕುಂತೀಸುತನಾದ ಅರ್ಜುನನ ಕಡೆಗೆ ಧಾವಿಸಿದನು.
ತಮಾಪತಂತಂ ತ್ವರಿತಂ ಗಜೇಂದ್ರಂ
ಧನಂಜಯಃ ಕುಂಭಲಲಾಟಮಧ್ಯೇ|
ಆಕರ್ಣಪೂರ್ಣೇನ ದೃಢಾಯಸೇನ
ಬಾಣೇನ ವಿವ್ಯಾಧ ಭೃಶಂ ತು ವೀರಃ ॥31॥
ವೀರನಾದ ಅರ್ಜುನನು ತನ್ನ ಕಡೆಗೆ ಶೀಘ್ರವಾಗಿ ಬರುತ್ತಿದ್ದ ಆ ಗಜೇಂದ್ರನಿಗೆ ಕಿವಿಯವರೆಗೂ ಎಳೆದ ದೃಢವಾದ ಕಬ್ಬಿಣದ ಬಾಣದಿಂದ ಚೆನ್ನಾಗಿ ಹೊಡೆದನು.
ಪಾರ್ಥೇನ ಸೃಷ್ಟಃ ಸ ತು ಗೃಧ್ರಪತ್ರೋ
ಹ್ಯಾಪುಂಖದೇಶಾತ್ ಪ್ರವಿವೇಶ ನಾಗಮ್|
ವಿದಾರ್ಯ ಶೈಲಪ್ರವರಪ್ರಕಾಶಂ
ಯಥಾಽಶನಿಃ ಪರ್ವತಮಿಂದ್ರಸೃಷ್ಟಃ ॥32॥
ಅರ್ಜುನನು ಪ್ರಯೋಗಿಸಿದ ಗೃಧ್ರಪತ್ರಸಹಿತವಾದ ಆ ಬಾಣವು ಬುಡದವರೆಗೂ ಆನೆಯ ಶರೀರವನ್ನು ಪ್ರವೇಶಿಸಿತು. ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧವು ದೊಡ್ಡ ಪರ್ವತವನ್ನು ಸೀಳಿದಂತೆ ಆ ಆನೆಯನ್ನು ಸೀಳಿಹಾಕಿತು.
ಶರಪ್ರತಪ್ತಃ ಸ ತು ನಾಗರಾಜಃ
ಪ್ರವೇಪಿತಾಂಗೋ ವ್ಯಥಿತಾಂತರಾತ್ಮಾ |
ಸಂಸೀದಮಾನೋ ನ್ಯಪತತ್ ತದೋರ್ವ್ಯಾಂ
ವಜ್ರಾಹತಂ ಶೃಂಗಮಿವಾಚಲಸ್ಯ ॥33॥
ಬಾಣದಿಂದ ಪೀಡಿತನಾದ ಆ ಗಜರಾಜನು ದೇಹದಲ್ಲೆಲ್ಲಾ ನಡುಕವನ್ನು ಹೊಂದಿ ಬಹಳ ವ್ಯಥೆಯಿಂದ ಕೂಡಿದ ಮನಸ್ಸುಳ್ಳದ್ದಾಗಿ ನಾಶವನ್ನು ಹೊಂದುತ್ತಾ ವಜ್ರಾಯುಧದ ಹೊಡೆತಕ್ಕೆ ಸಿಕ್ಕಿದ ಪರ್ವತದ ಶಿಖರದಂತೆ ಭೂಮಿಯ ಮೇಲೆ ಬಿದ್ದಿತು.
ನಿಪಾತಿತೇ ದಂತಿವರೇ ಪೃಥಿವ್ಯಾಂ
ತ್ರಾಸಾದ್ ವಿಕರ್ಣಃ ಸಹಸಾಽವತೀರ್ಯ|
ತೂರ್ಣಂ ಪದಾನ್ಯಷ್ಟಶತಾನಿ ಗತ್ವಾ
ವಿವಿಂಶತೇಃ ಸ್ಯಂದನಮಾರುರೋಹ ॥34॥
ಆ ಶ್ರೇಷ್ಠವಾದ ಗಜವು ಭೂಮಿಯ ಮೇಲೆ ಬೀಳುತ್ತಿರಲು ಹೆದರಿದ ವಿಕರ್ಣನು ತಕ್ಷಣ ಭೂಮಿಯ ಮೇಲೆ ಇಳಿದು ಶೀಘ್ರವಾಗಿ ಎಂಟುನೂರು ಹೆಜ್ಜೆಗಳನ್ನು ಇಟ್ಟು ವಿವಿಂಶತಿಯ ರಥವನ್ನು ಏರಿದನು.
ನಿಹತ್ಯ ನಾಗಂ ತು ಶರೇಣ ತೇನ
ವಜ್ರೋಪಮೇನಾದ್ರಿವರಪ್ರಕಾಶಮ್|
ತಥಾವಿಧೇನೈವ ಶರೇಣ ಪಾರ್ಥೋ
ದುರ್ಯೋಧನಂ ವಕ್ಷಸಿ ನಿರ್ಬಿಭೇದ ॥35॥
ಅರ್ಜುನನು ವಜ್ರಸದೃಶವಾದ ಬಾಣದಿಂದ ಪರ್ವತಶ್ರೇಷ್ಠದಂತಿದ್ದ ಆ ಗಜವನ್ನು ಕೊಂದು ಅಂತಹದೇ ಇನ್ನೊಂದು ಬಾಣದಿಂದ ದುರ್ಯೋಧನನಿಗೆ ಎದೆಯಲ್ಲಿ ಪ್ರಹಾರವನ್ನು ಮಾಡಿ ಭೇದಿಸಿದನು.
ಹತೇ ಗಜೇ ರಾಜನಿ ಚೈವ ಭಿನ್ನೇ
ಭಗ್ನೇ ವಿಕರ್ಣೇ ಚ ಸಪಾದರಕ್ಷೇ|
ಗಾಂಡೀವಮುಕ್ತೈರ್ವಿಶಿಖೈಃ ಪ್ರಣುನ್ನಾಃ
ತೇ ಯೋಧಮುಖ್ಯಾಃ ಸಹಸಾ ಪ್ರಜಗ್ಮುಃ ॥36॥
ಗಜವು ಹತವಾಗಿ, ರಾಜನು ಎದೆಯಲ್ಲಿ ದೊಡ್ಡ ವ್ರಣವನ್ನು ಹೊಂದಿ, ತನ್ನ ಗಜಪಾದ ರಕ್ಷಕರಿಂದ ಕೂಡಿದ ವಿಕರ್ಣನು ಭಗ್ನವಾಗುತ್ತಿರಲು, ಗಾಂಡೀವ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳಿಂದ ಪೀಡಿತರಾದ ಆ ಕೌರವ ಸೈನ್ಯಮುಖ್ಯರಾದವರು ತಕ್ಷಣ ಹೊರಟರು.
ದೃಷ್ಟ್ವೈವ ಬಾಣೇನ ಹತಂ ಚ ನಾಗಂ

ಯೋಧಾಂಶ್ಚ ಸರ್ವಾನ್ ದ್ರುವತೋ ನಿರೀಕ್ಷ್ಯ |
ರಥಂ ಸಮಾವೃತ್ಯ ಕುರುಪ್ರವೀರೋ
ರಣಾತ್ ಪ್ರದುದ್ರಾವ ಯತೋ ನ ಪಾರ್ಥಃ ॥37॥
ಬಾಣದಿಂದ ಗಜವು ಹತವಾದುದನ್ನೂ ಮತ್ತು ಯೋಧರೆಲ್ಲರೂ ಹಿಂದಿರುಗಿ ಓಡುತ್ತಿರುವುದನ್ನೂ ನೋಡಿದ ಕುರುಪ್ರವೀರನಾದ ದುರ್ಯೋಧನನು ತನ್ನ ರಥವನ್ನು ತಿರುಗಿಸಿ ಅರ್ಜುನನಿಲ್ಲದ ಕಡೆಗೆ ಓಡಿಸಿದನು.
ತಂ ಭೀಮರೂಪಂ ತ್ವರಿತಂ ವ್ರಜಂತಂ
ದುರ್ಯೋಧನಂ ಶತ್ರುಗಣಾವಮರ್ದೀ |
ಅನ್ವಾಗಮದ್ ಯೋದ್ಧುಮನಾಃ ಕಿರೀಟೀ
ಬಾಣಾಭಿವಿದ್ಧಂ ರುಧಿರಂ ವಮಂತಮ್ ॥38॥
ಭಯಂಕರರೂಪವನ್ನು ಹೊಂದಿದ್ದ, ಶೀಘ್ರವಾಗಿ ಹೋಗುತ್ತಿದ್ದ, ಬಾಣದಿಂದ ಪೀಡಿತನಾಗಿ ರಕ್ತವನ್ನು ಕಾರುತ್ತಿದ್ದ, ದುರ್ಯೋಧನನನ್ನು ಶತ್ರುಗಣ ಮರ್ದಕನಾದ ಅರ್ಜುನನು ಯುದ್ದ ಮಾಡುವ ಮನಸ್ಸುಳ್ಳವನಾಗಿ ಹಿಂಬಾಲಿಸಿದನು.
ತಸ್ಮಿನ್ ಮಹೇಷ್ವಾಸವರೇಽತಿವಿದ್ಧೇ
ಧನಂಜಯೇನಾಪ್ರತಿಮೇನ ಯುದ್ಧೇ |
ಸರ್ವಾಣಿ ಸೈನ್ಯಾನಿ ಭಯಾರ್ದಿತಾನಿ
ತ್ರಾಸಂ ಯಯುಃ ಪಾರ್ಥಮುದೀಕ್ಷ್ಯ ತಾನಿ ॥39॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ದುರ್ಯೋಧನನು ಅಸದೃಶನಾದ ಧನಂಜಯನಿಂದ ಯುದ್ಧದಲ್ಲಿ ತೀವ್ರವಾಗಿ ಗಾಯಗೊಳ್ಳುತ್ತಿರಲು ಆ ಎಲ್ಲ ಸೈನ್ಯಗಳೂ ಅರ್ಜುನನನ್ನು ನೋಡಿ ಭಯದಿಂದ ನಡುಗಿದವು.
ತತಸ್ತು ತೇ ಶಾಂತಿಪರಾಶ್ಚ ಯೋಧಾ
ದೃಷ್ಟ್ವಾಽರ್ಜುನಂ ನಾಗಮಿವ ಪ್ರಭಿನ್ನಮ್ |
ಉಚ್ಚೈರ್ನದಂತಂ ಬಲವಂತಮಾಜೌ
ಮಧ್ಯೇ ಸ್ಥಿತಂ ಸಿಂಹಮಿವರ್ಷಭಾಣಾಮ್ ॥40॥
ಅನಂತರ ಮದಿಸಿದ ಗಜದಂತಿರುವ, ಗಟ್ಟಿಯಾಗಿ ಗರ್ಜಿಸುವ, ಯುದ್ಧದಲ್ಲಿ ಬಲಿಷ್ಠನಾದ, ವೃಷಭದ ಮಧ್ಯೆ ಸಿಂಹದಂತಿರುವ ಆ ಅರ್ಜುನನನ್ನು ನೋಡಿ ಕೌರವರೆಲ್ಲರೂ ಶಾಂತಿಯನ್ನು ಬಯಸುವವರಾದರು.
ಗಾಂಡೀವಶಬ್ದೇನ ತು ಪಾಂಡವಸ್ಯ
ಯೋಧಾ ನಿಪೇತುಃ ಸಹಸಾ ರಥೇಭ್ಯಃ |
ಭಯಾರ್ದಿತಾಃ ಪಾರ್ಥಶರಾಭಿತಪ್ತಾಃ
ಸಿಂಹಾಭಿಪನ್ನಾ ಇವ ವಾರಣೇಂದ್ರಾಃ ॥41॥
ಸಿಂಹದ ಕೈಗೆ ಸಿಲುಕಿದ ಗಜೇಂದ್ರಗಳಂತೆ ಭಯಾರ್ದಿತರಾಗಿ ಅರ್ಜುನನ ಗಾಂಡೀವ ಶಬ್ದದಿಂದಲೇ ಯೋಧರು ರಥದಿಂದ ಇದ್ದಕ್ಕಿದ್ದಂತೆಯೇ ಬಿದ್ದರು.
ಸಂರಕ್ತನೇತ್ರಃ ಸ್ವಯಮಿಂದ್ರಕಲ್ಪೋ
ವೈಕರ್ತನಂ ದ್ವಾದಶಭಿಃ ಪೃಷತ್ಕೈಃ |
ವಿವ್ಯಾಧ ತೇಷಾಂ ದ್ರವತಾಂ ಸಮೀಕ್ಷ್ಯ
ದುಃಶಾಸನಂ ಚೈಕರಥೇನ ಪಾರ್ಥಃ ॥42॥
ಕೆಂಪಾದ ಕಣ್ಣುಳ್ಳವನೂ, ಸ್ವತಃ ಇಂದ್ರನಿಗೆ ಸಮಾನನಾದವನೂ ಆದ ಅರ್ಜುನನು ಒಂದು ರಥದಲ್ಲಿ ಕುಳಿತು ಯುದ್ಧವನ್ನು ಮಾಡಿ ಕರ್ಣನನ್ನು ಹನ್ನೆರಡು ಬಾಣಗಳಿಂದ ಹೊಡೆದನು. ಹಾಗೆಯೇ ಓಡಿಹೋಗುತ್ತಿರುವ ಸೈನ್ಯಗಳನ್ನು ನೋಡಿ ದುಃಶಾಸನನಿಗೂ ಹೊಡೆದನು.
ಕರ್ಣೋಽಬ್ರವೀತ್ ಪಾರ್ಥಶರಾಭಿತಪ್ತೋ
ದುರ್ಯೋಧನಂ ದುಷ್ಪ್ರಸಹಂ ಚ ದೃಷ್ಟ್ವಾ ॥43॥
ದೃಷ್ಟೋಽರ್ಜುನೋಽಯಂ ಪ್ರತಿಯಾಮ ಶೀಘ್ರಂ
ಗತ್ವಾ ಪುನರ್ಮಂತ್ರಯತಾಂ ಹಿತಾಯ |
ಮನ್ಯೇ ಮಯಾ ತಾತ ಕುತೋ ಹಿ ಕಾರ್ಯಂ
ಯದರ್ಜುನೋಽಸ್ಮಾಭಿರಿಹಾದ್ಯ ದೃಷ್ಟಃ ॥44॥
ಭೂಯೋ ವನಂ ಗಚ್ಛತು ಸವ್ಯಸಾಚೀ
ಪಶ್ಯಾಮಿ ಪೂರ್ಣಂ ಸಮಯಂ ನ ತೇಷಾಮ್ ॥45॥
ಪಾರ್ಥಶರಗಳಿಂದ ಪೀಡಿತನಾದ ಕರ್ಣನು ಯುದ್ಧದಲ್ಲಿ ದುಷ್ಪ್ರಸಹನಾದ ದುರ್ಯೋಧನನನ್ನು ನೋಡಿ, ನಾವು ಅರ್ಜುನನನ್ನು ನೋಡಿದ್ದಾಯಿತು. ಶೀಘ್ರವಾಗಿ ಹಿಂದಿರುಗಿ ನಮ್ಮ ಹಿತಕ್ಕೋಸ್ಕರ ಪುನಃ ಮಂತ್ರಾಲೋಚನೆಯನ್ನು ಮಾಡೋಣ. ನಾವು ಈ ದಿನ ಅರ್ಜುನನನ್ನು ನೋಡಿರುವುದರಿಂದ ನಾವು ಪುನಃ ಏಕೆ ಯುದ್ಧವನ್ನು ಮಾಡಬೇಕೆಂದು ಭಾವಿಸುತ್ತೇನೆ. ಅರ್ಜುನನು ಪುನಃ ವನವಾಸಕ್ಕೆ ಹೋಗಲಿ. ಅವರು ಪ್ರತಿಜ್ಞೆ ಮಾಡಿದ ಸಮಯವು ಪೂರ್ಣವಾಗಿಲ್ಲವೆಂದು ನನಗೆ ತೋರುತ್ತದೆ ಎಂದು ಹೇಳಿದನು.
ವೈಶಂಪಾಯನಃ
ಶರಾರ್ದಿತಾಸ್ತೇ ಯುಧಿ ಪಾಂಡವೇನ

ಪ್ರಸಸ್ರುರನ್ಯೋನ್ಯಮಥಾಹ್ವಯಂತಃ |
ಕರ್ಣೋಽಬ್ರವೀದಾಪತತ್ಯೇಷ ಜಿಷ್ಣುಃ
ದುರ್ಯೋಧನಂ ಸಂಪರಿವಾರ್ಯ ಯಾಮಃ ॥46॥
ವೈಶಂಪಾಯನ ಯುದ್ಧದಲ್ಲಿ ಅರ್ಜುನನ ಬಾಣಗಳಿಂದ ಪೀಡಿತರಾದ ಅವರು ಒಬ್ಬರನ್ನೊಬ್ಬರು ಆಹ್ವಾನ ಮಾಡುತ್ತಾ ಚಲಿಸಿದರು. ಈ ಅರ್ಜುನನು ಪುನಃ ನಮ್ಮ ಮೇಲೆ ಬೀಳುತ್ತಾನೆ. ಆದ್ದರಿಂದ ದುರ್ಯೋಧನನನ್ನು ಸುತ್ತುವರಿದು ರಕ್ಷಿಸಿ ನಾವು ಹೋಗೋಣ ಎಂದು ಕರ್ಣನು ಹೇಳಿದನು.
ಸರ್ವಾಸ್ತ್ರವಿದ್ ವಾರಣಯೂಥಪಾಭಃ
ಕಾಲೇ ಪ್ರಕರ್ತಾ ಯುಧಿ ಶಾತ್ರವಾಣಾಮ್ |
ಅಯಂ ಚ ಪಾರ್ಥಃ ಪುನರಾಗತೋ ನೋ
ಕುಲಂ ಚ ರಕ್ಷ್ಯಂ ಭರತರ್ಷಭಾಣಾಮ್ ॥47॥
ಸರ್ವಾಸ್ತ್ರವೇತ್ತನೂ, ಗಜರಾಜಸದೃಶನಾದವನೂ, ಯುದ್ಧಕಾಲದಲ್ಲಿ ಶತ್ರುಗಳನ್ನು ಕತ್ತರಿಸುವವನೂ ಆದ ಈ ಅರ್ಜುನನು ಪುನಃ ಬರುತ್ತಿದ್ದಾನೆ. ಭರತಶ್ರೇಷ್ಠರ ಕುಲವು ರಕ್ಷಿಸಲ್ಪಡಬೇಕು (ಎಂದು ಕರ್ಣನು ಹೇಳಿದನು).
ವೈಶಂಪಾಯನಃ
ಸಮೀಕ್ಷ್ಯ ಪಾರ್ಥಂ ಸಹಸಾಽಪತಂತಂ
ದುರ್ಯೋಧನಃ ಕಾಲಮಿವಾತ್ತಶಸ್ತ್ರಮ್ |
ತಥಾರ್ತರೂಪಃ ಶರಣಂ ಪ್ರಪೇದೇ
ದ್ರೋಣಂ ಚ ಕರ್ಣಂ ಚ ಕೃಪಂ ಚ ಭೀಷ್ಮಮ್ ॥48॥
ವೈಶಂಪಾಯನ ಅರ್ಜುನನು ಕತ್ತಿಯನ್ನು ಹಿಡಿದ ಯಮನಂತೆ ಪುನಃ ತನ್ನ ಮೇಲೆ ವೇಗದಿಂದ ಎರಗುತ್ತಿದ್ದುದನ್ನು ನೋಡಿ ಆರ್ತರೂಪನಾಗಿ ದುರ್ಯೋಧನನು ದ್ರೋಣರನ್ನೂ, ಕರ್ಣನನ್ನೂ, ಕೃಪರನ್ನೂ ಮತ್ತು ಭೀಷ್ಮರನ್ನೂ ಶರಣು ಹೊಂದಿದನು.
ತಂ ಭೀತರೂಪಂ ಶರಣಂ ವ್ರಜಂತಂ
ದುರ್ಯೋಧನಂ ಶತ್ರುಸಹೋ ನಿಷಂಗೀ |
ಇತ್ಯಬ್ರವೀತ್ ಪ್ರೀತಮನಾಃ ಕಿರೀಟೀ
ಬಾಣೇನ ವಿದ್ಧಂ ರುಧಿರಂ ವಮಂತಮ್ ॥49॥
ಭೀತನಾಗಿ ಶರಣಾಗತನಾಗುತ್ತಿದ್ದಂತಹ, ಬಾಣದಿಂದ ಹೊಡೆಯಲ್ಪಟ್ಟು ರಕ್ತವನ್ನು ಕಾರುತ್ತಿದ್ದಂತಹ, ದುರ್ಯೋಧನನನ್ನು ಕುರಿತು ಶತ್ರುಸಹನೂ, ಖಡ್ಗಕಿರೀಟಧಾರಿಯೂ ಆದ ಅರ್ಜುನನು ಸಂತೋಷಗೊಂಡ ಮನಸ್ಸಿನಿಂದ ಹೀಗೆ ಹೇಳಿದನು.
ವಿಹಾಯ ಕೀರ್ತಿಂ ಚ ಯಶಶ್ಚ ಲೋಕೇ
ಯುದ್ಧಾತ್ ಪರಾವೃತ್ಯ ಪಲಾಯಸೇ ಕಿಮ್ |
ನ ನಂದಯಿಷ್ಯಂತಿ ತವಾಹತಾನಿ
ತೂರ್ಯಾಣಿ ಯುದ್ಧಾದವರೋಪಿತಸ್ಯ ॥50॥
ಲೋಕದಲ್ಲಿ ಕೀರ್ತಿಯನ್ನೂ ಮತ್ತು ಯಶಸ್ಸನ್ನು ತ್ಯಜಿಸಿ ಯುದ್ಧದಿಂದ ಹಿಂದಿರುಗಿ ಏಕೆ ಓಡುತ್ತಿದ್ದೀಯೆ? ಯುದ್ಧದಿಂದ ಓಡಿಹೋಗುವ ನಿನಗೆ ಚೆನ್ನಾಗಿ ಬಾರಿಸಿದ ವಾದ್ಯಗಳು ಸಂತೋಷವನ್ನು ಕೊಡುವುದಿಲ್ಲ.
ನ ಭೋಕ್ಷ್ಯಸೇ ಸೋಽದ್ಯ ಮಹೀಂ ಸಮಗ್ರಾಂ
ಯಾನಾನಿ ವಸ್ತ್ರಾಣ್ಯಥ ಭೋಜನಾನಿ |
ಕಲ್ಯಾಣಗಂಧೀನಿ ಚ ಚಂದನಾನಿ
ಯುದ್ಧಾತ್ ಪರಾವೃತ್ಯ ತು ಭೋಕ್ಷ್ಯಸೇ ಕಿಮ್ ॥51॥
ಸುವರ್ಣಮಾಲ್ಯಾನಿ ಚ ಕುಂಡಲಾನಿ
ಹಾರಾಂಶ್ಚ ವೈಡೂರ್ಯಕೃತೋಪಧಾನಮ್ ॥52॥
ಚ್ಯುತಸ್ಯ ಯುದ್ಧಾನ್ನ ತು ಶಂಖಶಬ್ದಾಃ
ತಥಾ ಭವಿಷ್ಯಂತಿ ತವಾದ್ಯ ಪಾಪ ॥53॥
ಅಂತಹ ನೀನು ಈ ದಿನ ಸಮಗ್ರವಾದ ಭೂಮಿಯನ್ನು ಭೋಗಿಸುವುದಿಲ್ಲ. ವಾಹನಗಳನ್ನು, ವಸ್ತ್ರಗಳನ್ನು, ಭೋಜನಗಳನ್ನು, ದಿವ್ಯಗಂಧವುಳ್ಳ ಚಂದನಗಳನ್ನು ಯುದ್ಧದಿಂದ ವಿಮುಖನಾಗಿ ಓಡಿಹೋಗಿ ನೀನು ಭೋಗಿಸುತ್ತೀಯಾ? ಯುದ್ಧದಿಂದ ಹಿಮ್ಮೆಟ್ಟಿದ ನಿನಗೆ ಎಲೈ ಪಾಪಿಯೇ, ಸುವರ್ಣಮಾಲೆಗಳಾಗಲೀ, ಕುಂಡಲಗಳಾಗಲೀ, ವೈಡೂರ್ಯಖಚಿತ ಹಾರಗಳಾಗಲೀ, ಶಂಖಶಬ್ದಗಳಾಗಲೀ ಹಿಂದಿನಂತೆ ಈ ದಿನ ಇರುವುದಿಲ್ಲ.
ನ ಭೋಗಹೇತೋರ್ವರಚಂದನಂ ಚ
ಸ್ತ್ರಿಯಶ್ಚ ಮುಖ್ಯಾ ಮಧುರಪ್ರಲಾಪಾಃ |
ಯುದ್ಧಾತ್ ಪ್ರಯಾತಸ್ಯ ನರೇಂದ್ರಸೂನೋಃ
ಪರೇ ಚ ಲೋಕೇ ಫಲದಾ ನ ಚೇಹ ॥54॥
ಯುದ್ಧದಿಂದ ಹಿಮ್ಮೆಟ್ಟಿದ ರಾಜಕುಮಾರನಿಗೆ ಶ್ರೇಷ್ಠವಾದ ಚಂದನವಾಗಲೀ, ಮಧುರಭಾಷಿಣಿಯರಾದ ಶ್ರೇಷ್ಠ ಸ್ತ್ರೀಯರಾಗಲೀ ಈ ಲೋಕದಲ್ಲಿ ಭೋಗವನ್ನು ಕೊಡುವುದಿಲ್ಲ, ಪರಲೋಕದಲ್ಲಿಯೂ ಫಲವನ್ನು ಕೊಡುವುದಿಲ್ಲ.
ಯುಧಿಷ್ಠಿರಸ್ಯಾಸ್ಮಿ ನಿದೇಶಕಾರೀ

ಪಾರ್ಥಸ್ತೃತೀಯೋ ಯುಧಿ ಚ ಸ್ಥಿರೋಽಸ್ಮಿ |
ತದರ್ಥಮಾಹೃತ್ಯ ಮುಖಂ ಪ್ರಯಚ್ಛ
ನರೇಂದ್ರವೃತ್ತಂ ಸ್ಮರ ಧಾರ್ತರಾಷ್ಟ್ರ ||55||
ನಾನು ಯುಧಿಷ್ಠಿರನ ಕಿಂಕರನಾಗಿದ್ದೇನೆ. ಕುಂತಿಯ ಮೂರನೆಯ ಪುತ್ರ. ಯುದ್ಧದಲ್ಲಿ ಸ್ಥಿರವಾಗಿ ನಿಂತಿದ್ದೇನೆ. ಎಲೈ ದುರ್ಯೋಧನನೇ, ರಾಜರ ನಡವಳಿಕೆಯನ್ನು ಗಮನಿಸಿ ಧರ್ಮರಾಜನಿಗೆ ಕೊಡಬೇಕಾದ ಸೈನ್ಯವನ್ನು ಕೊಟ್ಟು ನೀನು ನಿನ್ನ ಮುಖವನ್ನೆತ್ತಿ ನಮ್ಮ ಕಡೆಗೆ ನೋಡು.
ಮೋಘಂ ತವೈತದ್ ಭುವಿ ನಾಮಧೇಯಂ
ದುರ್ಯೋಧನೇತೀಹ ಕೃತಂ ಪುರಸ್ತಾತ್ |
ದುರ್ಯೋಧನಸ್ತ್ವಂ ಪ್ರಥಿತೋಽಸಿ ನಾಮ್ನಾ
ಸುಯೋಧನಃ ಸನ್ ನಿಕೃತಿಪ್ರಧಾನಃ ||56||
ಭೂಮಿಯಲ್ಲಿ ನಿನಗೆ ಮೊದಲು ಮಾಡಿದ ದುರ್ಯೋಧನ ಎಂಬ ನಾಮಕರಣವು ವ್ಯರ್ಥವಾದುದು. (ದುರ್ಯೋಧನ ಎಂದರೆ ಅವನ ಜೊತೆಯಲ್ಲಿ ಯುದ್ಧಮಾಡುವುದು ಕಷ್ಟಸಾಧ್ಯ ಎಂದು ಅರ್ಥ). ಲೋಕದಲ್ಲಿ ದುರ್ಯೋಧನ ಎಂದು ಪ್ರಖ್ಯಾತನಾದ ನೀನು ಮೋಸವೇ ಪ್ರಧಾನವಾಗುಳ್ಳ ಸುಯೋಧನ ಮಾತ್ರ.
ನಹೀಹ ದುರ್ಯೋಧನತಾ ತವಾಸ್ತಿ
ಪಲಾಯಮಾನಸ್ಯ ರಣಂ ವಿಹಾಯ ||57||
ನ ತೇ ಪುರಸ್ತಾದಥ ಪೃಷ್ಠತೋಽಪಿ
ಪಶ್ಯಾಮಿ ದುರ್ಯೋಧನ ರಕ್ಷಿತಾರಮ್ |
ಪರೀಪ್ಸ ಯುದ್ಧೇನ ಕುರುಪ್ರವೀರ
ಪ್ರಾಣಾನ್ ಮಯಾ ಬಾಣಬಲಾಭಿತಪ್ತಾನ್ ||58||
ಯುದ್ಧವನ್ನು ಬಿಟ್ಟು ಪಲಾಯನ ಮಾಡುವ ನಿನ್ನಲ್ಲಿ ಇಲ್ಲಿ ಯಾವ ದುರ್ಯೋಧನತ್ವವೂ ಕಾಣುತ್ತಿಲ್ಲ. ನಿನ್ನ ಹಿಂದುಗಡೆಯಾಗಲೀ ಅಥವಾ ಮುಂದಿನಿಂದಾಗಲೀ ಎಲೈ ದುರ್ಯೋಧನನೇ, ನಾನು ಯಾವ ರಕ್ಷಕರನ್ನೂ ನಿನಗೆ ಕಾಣುವುದಿಲ್ಲ. ಎಲೈ ಕುರುಪ್ರವೀರನೇ, ನನ್ನ ಬಾಣದ ಬಲದಿಂದ ತಾಪಕ್ಕೀಡಾದ ನಿನ್ನ ಪ್ರಾಣಗಳನ್ನು ಯುದ್ಧವನ್ನು ಮಾಡಿ ರಕ್ಷಿಸಿಕೊಳ್ಳುವವನಾಗು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ||
|| ಗೋಗ್ರಹಣಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * *
ಅರವತ್ತಾರನೆಯ ಅಧ್ಯಾಯ
ಶತ್ರುಗಳನ್ನು ಗೆದ್ದು, ಅವರ ವಸ್ತ್ರಗಳನ್ನು ಅಪಹರಿಸಿ ಅರ್ಜುನನ ಪ್ರತಿನಿವೃತ್ತಿ
ವೈಶಂಪಾಯನಃ
ಆಹೂಯಮಾನಸ್ತು ಸ ತೇನ ಸಂಖ್ಯೇ
ಮಹಾತ್ಮನಾ ವೈ ಧೃತರಾಷ್ಟ್ರಪುತ್ರಃ |
ನಿವರ್ತಿತಸ್ತಸ್ಯ ಗಿರಾಂಕುಶೇನ
ಗಜೋ ಯಥಾ ಮತ್ತ ಇವಾಂಕುಶೇನ ||1||
ವೈಶಂಪಾಯನ ಮಹಾತ್ಮನಾದ ಅರ್ಜುನನಿಂದ ಯುದ್ಧದಲ್ಲಿ ಆಹ್ವಾನ ಮಾಡಲ್ಪಟ್ಟ ಧೃತರಾಷ್ಟ್ರ ಪುತ್ರನು ಮತ್ತಗಜವು ಅಂಕುಶದಿಂದ ಹಿಂದೆ ತಿರುಗುವಂತೆ ಅರ್ಜುನನ ಮಾತಿನಿಂದ ಹಿಂದೆ ತಿರುಗಿದನು.
ಸೋಽಮೃಷ್ಯಮಾಣೋ ವಚಸಾಽಭಿಮೃಷ್ಟೋ
ಮಹಾರಥೇನಾತಿರಥಸ್ತರಸ್ವೀ |
ತತಃ ಸ ಪರ್ಯಾವವೃತೇ ರಥೇನ
ಭೋಗೀ ಯಥಾ ಪಾದತಳಾಭಿಮೃಷ್ಟಃ ||2||
ಅತಿರಥನೂ, ವೇಗಶಾಲಿಯೂ ಆದ ದುರ್ಯೋಧನನು ಮಹಾರಥನಾದ ಅರ್ಜುನನಿಂದ ಮಾತುಗಳಿಂದ ನಿಂದಿಸಲ್ಪಟ್ಟು ಅದನ್ನು ಸಹಿಸದೇ ಕಾಲಿನಿಂದ ತುಳಿದ ಸರ್ಪವು ಹಿಂದೆ ತಿರುಗುವಂತೆ ರಥದಿಂದ ಹಿಂದಕ್ಕೆ ತಿರುಗಿದನು.
ತತೋ ದುರ್ಯೋಧನಃ ಕ್ರುದ್ಧೋ ವಿಕ್ಷಿಪನ್ ಧನುರುತ್ತಮಮ್ |
ಧೃತಿಂ ಕೃತ್ವಾ ಸುವಿಪುಲಾಂ ಪ್ರತ್ಯುವಾಚ ಧನಂಜಯಮ್ ||3||
ಆಗ ದುರ್ಯೋಧನನು ಬಹಳ ಕೋಪಗೊಂಡು ತನ್ನ ಧನುಸ್ಸನ್ನು ಎಳೆಯುತ್ತಾ ಮಹಾಧೈರ್ಯವನ್ನು ಮಾಡಿ ಧನಂಜಯನನ್ನು ಕುರಿತು ಹೀಗೆ ಮಾತನಾಡಿದನು.
ನಾಹಮಿಂದ್ರಾದಭಿಕ್ರುದ್ಧಾದ್ ಬಿಭೇಮಿ ಭರತರ್ಷಭ |
ಭುಕ್ತ್ವಾ ಸುವಿಪುಲಂ ರಾಜ್ಯಂ ವಿತ್ತಾನಿ ಚ ಸುಖಾನಿ ಚ ||4||
ಕಿಮರ್ಥಂ ಯುದ್ಧಸಮಯೇ ಪಲಾಯಿಷ್ಯೇ ನರೋತ್ತಮ ||5||
ಭರತರ್ಷಭನೇ, ನಾನು ಬಹಳ ಕೋಪಗೊಂಡ ಇಂದ್ರನಿಗೂ ಹೆದರುವುದಿಲ್ಲ. ನರೋತ್ತಮನೇ, ಸುವಿಶಾಲವಾದ ರಾಜ್ಯವನ್ನು ಭೋಗಿಸಿ ಸಂಪತ್ತನ್ನು ಮತ್ತು ಸುಖವನ್ನು ಭೋಗಿಸಿ ಯುದ್ಧಸಮಯದಲ್ಲಿ ಏಕೆ ಓಡಿಹೋಗಲಿ?

ವೈಶಂಪಾಯನಃ
ಏವಮುಕತಸ್ತ್ವ  ಮಹಾಬಾಹುಃ ಪ್ರತ್ಯಯುಧ್ಯತ ಫಲ್ಗುನಮ್ |
ಸನ್ನಿವೃತ್ಯ ತು ಶೀಘ್ರಾಶ್ವಃ ತೋತ್ರಾರ್ದಿತ ಇವ ದ್ವಿಪಃ ||6||
ವೈಶಂಪಾಯನ ವೇಗವಾದ ಅಶ್ವಗಳುಳ್ಳ, ಮಹಾಬಾಹುವಾದ ಅವನು ಅಂಕುಶದಿಂದ ಹೊಡೆಯಲ್ಪಟ್ಟ ಗಜದಂತೆ ಹಿಂದಿರುಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಆಕ್ರಾಂತಭೋಗಸ್ತೇಜಸ್ವೀ ಧನುರ್ವಕ್ರ ಇವೋರಗಃ |
ರಥಂ ರಥೇನ ಸಂಗಮ್ಯ ಯೋಧಯಾಮಾಸ ಪಾಂಡವಮ್ ||7||
ಕಾಲಿನಿಂದ ಮೆಟ್ಟಿದ ಮಹಾಸಾಮರ್ಥ್ಯವುಳ್ಳ, ಧನುಸ್ಸಿನಂತೆ ವಕ್ರವಾದ ಉರಗದಂತೆ ಅವನು (ಹಿಂದಕ್ಕೆ ತಿರುಗಿ) ತನ್ನ ರಥದಿಂದ ಅರ್ಜುನನ ರಥವನ್ನು ಸಂಘಟ್ಟಿಸಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತಂ ಪ್ರೇಕ್ಷ್ಯ ಕರ್ಣಃ ಪರಿವರ್ತಮಾನೋ
ವಿವೃತ್ಯ ಸಂಸ್ತಭ್ಯ ಚ ಸರ್ವಗಾತ್ರಮ್ |
ದುರ್ಯೋಧನಂ ದಕ್ಷಿಣತೋ ರರಕ್ಷ
ಪಾರ್ಥಾನ್ನೃವೀರೋ ಯುಧಿ ಹೇಮಮಾಲೀ ||8||
ಅದನ್ನು ನೋಡಿದ ಹಿಂದಿರುಗುತ್ತಿದ್ದ ಕರ್ಣನು ತನ್ನ ಸರ್ವದೇಹವನ್ನೂ ಗಟ್ಟಿ ಮಾಡಿಕೊಂಡು ಪುನಃ ಹಿಂದಿರುಗಿ ನರಶ್ರೇಷ್ಠನೂ, ಹೇಮಮಾಲಿಯೂ ಆದ ಅವನು ಬಲಭಾಗದಿಂದ ದುರ್ಯೋಧನನನ್ನು ಅರ್ಜುನನಿಂದ ರಕ್ಷಿಸಿದನು.
ಭೀಷ್ಮಸ್ತದಾ ಶಾಂತನವೋ ನಿವೃತ್ಯ
ಹಿರಣ್ಯಕಕ್ಷ್ಯಾಂಸ್ತ್ವರಯಂಸ್ತುರಂಗಾನ್ |
ದುರ್ಯೋಧನಂ ಪಶ್ಚಿಮತೋ ರರಕ್ಷ
ಪಾರ್ಥಾನ್ಮಹಾಬಾಹುರಧಿಜ್ಯಧನ್ವಾ ||9||
ಶಂತನು ಪುತ್ರರಾದ ಭೀಷ್ಮರು ಆಗ ಹಿಂದಿರುಗಿ ಸುವರ್ಣಮಯವಾದ ಕಕ್ಷಗಳಿದ್ದ ತಮ್ಮ ಅಶ್ವಗಳನ್ನು ಚೋದಿಸುತ್ತಾ ಮಹಾಬಾಹುವೂ, ಹೆದೆಯನ್ನೇರಿಸಿ ಧನುಸ್ಸನ್ನು ಹಿಡಿದವನೂ ಆದ ಅವರು ಎಡಬದಿಯಿಂದ ದುರ್ಯೋಧನನನ್ನು ಅರ್ಜುನನಿಂದ ರಕ್ಷಿಸಿದರು.
ದ್ರೋಣಃ ಕೃಪಶ್ಚೈವ ತಥಾ ಚ ದ್ರೌಣಿಃ
ದುಃಶಾಸನಶ್ಚೈವ ನಿವೃತ್ಯ ಶೀಘ್ರಮ್ |
ಸರ್ವೇ ಪುರಸ್ತಾತ್ ಪ್ರಣಿಧಾಯ ಬಾಣಾನ್
ದುರ್ಯೋಧನಾರ್ಥಂ ತ್ವರಿತಾಽಭ್ಯುಪೇಯುಃ ||10||
ದ್ರೋಣ, ಕೃಪ, ಅಶ್ವತ್ಥಾಮ, ದುಃಶಾಸನ ಇವರೆಲ್ಲರೂ ಶೀಘ್ರವಾಗಿ ಹಿಂದಿರುಗಿ ಎಲ್ಲರೂ ಮುಂದೆ ಬಾಣಗಳನ್ನು ಇಟ್ಟುಕೊಂಡು ದುರ್ಯೋಧನನನ್ನು ರಕ್ಷಿಸುವ ಸಲುವಾಗಿ ಶೀಘ್ರವಾಗಿ ಸಮೀಪಕ್ಕೆ ಬಂದರು.
ಸರ್ವಾಣ್ಯನೀಕಾನಿ ನಿವರ್ತಿತಾನಿ
ಸಂಪ್ರೇಕ್ಷ್ಯ ಪೂರ್ಣೌಘನಿಭಾನಿ ಪಾರ್ಥಃ |
ಹಂಸೋ ಯಥಾ ಮೇಘಮಿವಾಪತಂತಂ
ಧನಂಜಯಃ ಪ್ರತ್ಯಪತತ್ ತರಸ್ವೀ ||11||
ಪೂರ್ಣಪ್ರವಾಹದಂತಿರುವ ಎಲ್ಲಾ ಸೈನ್ಯವೂ ಹಿಂದಿರುಗಿದ್ದನ್ನು ನೋಡಿ ವೇಗಶಾಲಿಯೂ, ಕುಂತೀಪುತ್ರನೂ ಆದ ಧನಂಜಯನು ಹಂಸವು ಮೇಘದ ಕಡೆಗೆ ಹಾರುವಂತೆ ಅವರ ಮೇಲೆ ಎರಗಿದನು.
ತೇ ಸರ್ವತಃ ಸಂಪರಿವಾರ್ಯ ಪಾರ್ಥಮ್
ಅಸಾತ್ರಣಿ ದಿವ್ಯಾನಿ ಸಮಾದದಾನಾಃ |
ವವರ್ಷುರಭ್ಯೇತ್ಯ ಶರೈಃ ಸಮಂತಾತ್
ಮೇಘಾ ಯಥಾ ಭೂಧರಮಂಬುವೇಗೈಃ ||12||
ಅವರು ಎಲ್ಲ ಕಡೆಗಳಿಂದಲೂ ಅರ್ಜುನನನ್ನು ಸುತ್ತುವರಿದು ದಿವ್ಯಾಸ್ತ್ರಗಳನ್ನು ಕೈಗೆ ತೆಗೆದುಕೊಂಡು ಮೇಘವು ಪರ್ವತದ ಮೇಲೆ ಮಳೆಯನ್ನು ಸುರಿಸುವಂತೆ ಎಲ್ಲ ಕಡೆಗಳಿಂದಲೂ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತತೋಽಸ್ತ್ರಮಸ್ತ್ರೇಣ ನಿವಾರ್ಯ ತೇಷಾಂ
ಗಾಂಡೀವಧನ್ವಾ ಕುರುಪುಂಗವಾನಾಮ್ |
ಸಮ್ಮೋಹನಂ ಶತ್ರುಸಹೋಽನ್ಯದಸ್ತ್ರಂ
ಪ್ರಾದುಶ್ಚಕಾರೈಂದ್ರಮವಾರಣೀಯಮ್ ||13||
ಗಾಂಡೀವ ಧನುರ್ಧಾರಿಯಾದ ಅರ್ಜುನನು ಕುರುಶ್ರೇಷ್ಠರ ಅಸ್ತ್ರಗಳನ್ನು ತನ್ನ ಅಸ್ತ್ರದಿಂದ ನಿವಾರಿಸಿ ಇಂದ್ರನಿಂದ ಪಡೆದಿದ್ದ, ನಿವಾರಿಸಲು ಅಸಾಧ್ಯವಾದ, ಶತ್ರುಗಳನ್ನು ಸಹಿಸುವ (ಶತ್ರುಗಳನ್ನು ದಮನಮಾಡುವ) ಸಮ್ಮೋಹನಾಸ್ತ್ರವೆಂಬ ಇನ್ನೊಂದು ಅಸ್ತ್ರವನ್ನು ಹೊರತಂದನು (ಪ್ರಾದುರ್ಭವಿಸಿದನು).
ತತೋ ದಿಶಶ್ಚಾನುದಿಶೋ ನಿವಾರ್ಯ
ಶರೈಃ ಸುಘೋರೈರ್ನಿಶಿತೈಃ ಸುಪುಂಖೈಃ |
ಗಾಂಡೀವಘೋಷೇಣ ಮನಾಂಸಿ ತೇಷಾಂ

मಹಾಬಲಃ ಪ್ರವ್ಯಥಯಾಂಚಕಾರ ॥14॥
ಅನಂತರ ಹರಿತವಾದ, ಉಗ್ರವಾದ, ಪುಂಖಸಹಿತವಾದ ಬಾಣಗಳಿಂದ ದಿಕ್ಕುವಿದಿಕ್ಕುಗಳಲ್ಲಿದ್ದ ಕುರುಯೋಧರನ್ನು ನಿವಾರಿಸಿ ಮಹಾಬಲನಾದ ಅವನು ಗಾಂಡೀವ ಧನುಸ್ಸಿನ ಘೋಷದಿಂದ ಅವರ ಮನಸ್ಸಿಗೆ ವ್ಯಥೆಯನ್ನು ಉಂಟುಮಾಡಿದನು.
ತತಃ ಪುನರ್ಭೀಮರವಂ ಪ್ರಗೃಹ್ಯ
ದೋರ್ಭ್ಯಾಂ ಮುದಾ ಶಂಖಮುದಾರಘೋಷಮ್ |
ವ್ಯನಾದಯನ್ ಸ ಪ್ರದಿಶೋ ದಿಶಃ ಖಂ
ಭುವಂ ಚ ಪಾರ್ಥೋ ದ್ವಿಷತಾಂ ನಿಹಂತಾ ॥15॥
ಅನಂತರ ಅವನು ಪುನಃ ಭಯಂಕರ ಘೋಷವನ್ನು ಮಾಡುವ ಉದಾರ ಘೋಷವನ್ನುಳ್ಳ ಶಂಖವನ್ನು ಸಂತೋಷದಿಂದ ತನ್ನ ಎರಡು ಕೈಗಳಿಂದಲೂ ಹಿಡಿದು ಶತ್ರುಹಂತಕನಾದ ಅವನು ಭೂಮಿಯನ್ನು, ಅಂತರಿಕ್ಷವನ್ನು, ದಿಕ್ಕುವಿದಿಕ್ಕುಗಳನ್ನು ಶಂಖನಾದದಿಂದ ತುಂಬಿದನು.
ತೇ ಶಂಖಶಬ್ದೇನ ಕುರುಪ್ರವೀರಾಃ
ಸಮ್ಮೋಹಿತಾಃ ಪಾರ್ಥಸಮೀರಿತೇನ |
ಉತ್ಸೃಜ್ಯ ಚಾಪಾನಿ ದುರಾನಮಾನಿ
ಸರ್ವೇ ತದಾ ಮೋಹಪರಾ ಬಭೂವುಃ ॥16॥
ಕುರುಪ್ರವೀರರು ಅರ್ಜುನನು ಊದಿದ ಆ ಶಂಖದ ಶಬ್ದದಿಂದ ಸಮ್ಮೋಹಿತರಾಗಿ ಬಗ್ಗಿಸಲು ಕಷ್ಟಸಾಧ್ಯವಾದ ತಮ್ಮ ಬಿಲ್ಲುಗಳನ್ನು ಕೆಳಗೆ ಹಾಕಿ ಎಲ್ಲರೂ ಮೋಹ ಪರವಶರಾದರು.
ತಥಾ ವಿಸಂಜ್ಞೇಷು ಪರೇಷು ಪಾರ್ಥಃ
ಸಂಸ್ಮೃತ್ಯ ಸಂದೇಶಮಥೋತ್ತರಾಯಾಃ |
ನಿರ್ಯಾಹಿ ವಾಹಾನಿತಿ ಮಾತ್ಸ್ಯಪುತ್ರಮ್
ಉವಾಚ ಯಾವತ್ ಕುರವೋ ವಿಸಂಜ್ಞಾಃ ॥17॥
ಶತ್ರುಗಳು ಮೂರ್ಛೆಹೋಗುತ್ತಿರಲು ಅರ್ಜುನನು ಉತ್ತರೆಯ ಸಂದೇಶವನ್ನು ಸ್ಮರಿಸಿ ಉತ್ತರನನ್ನು ಕುರಿತು ಕುರುಗಳು ಮೂರ್ಛೆ ಹೊಂದಿರುವಷ್ಟರಲ್ಲಿ ರಥವನ್ನು ಮುಂದೆ ತೆಗೆದುಕೊಂಡು ಹೋಗು ಎಂದು ಹೇಳಿದನು.
ಆಚಾರ್ಯಶಾರದ್ವತಯೋಃ ಸುಶುಕ್ಲೇ
ಕರ್ಣಸ್ಯ ಪೀತಂ ಸುಚಿರಂ ಸುವಸ್ತ್ರಮ್ |
ದ್ರೌಣೇಶ್ಚ ರಾಜ್ಞಶ್ಚ ತಥೈವ ನೀಲೇ
ವಸ್ತ್ರೇ ಸಮಾದತ್ಸ್ವ ನರಪ್ರವೀರ ॥18॥
ಎಲೈ ನರಪ್ರವೀರನೇ, ದ್ರೋಣರ ಮತ್ತು ಕೃಪಾಚಾರ್ಯರ ಶುಕ್ಲವಸ್ತ್ರವನ್ನೂ, ಕರ್ಣನ ಮನೋಹರವಾದ ಪೀತವಸ್ತ್ರವನ್ನೂ, ಅಶ್ವತ್ಥಾಮ ಮತ್ತು ದುರ್ಯೋಧನರ ನೀಲವಸ್ತ್ರವನ್ನು ತೆಗೆದುಕೋ.
ಭೀಷ್ಮಸ್ಯ ಸಂಜ್ಞಾಂ ತು ತಥೈವ ಮನ್ಯೇ
ಜಾನಾತಿ ಮೇಽಸ್ತ್ರಪ್ರತಿಘಾತಮೇಷಃ |
ಏತಸ್ಯ ವಾಹಾನ್ ಕುರು ಸವ್ಯತಸ್ತ್ವಮ್
ಏವಂ ಪ್ರಯಾತವ್ಯಮಮೂಢಸಂಜ್ಞೈಃ ॥19॥
ಭೀಷ್ಮರೊಬ್ಬರು ಎಚ್ಚರವಾಗಿರುತ್ತಾರೆಂದು ನಾನು ತಿಳಿಯುತ್ತೇನೆ. ಅವರೊಬ್ಬರೇ ನನ್ನ ಅಸ್ತ್ರಕ್ಕೆ ಪ್ರತಿಘಾತವನ್ನು ತಿಳಿದವರು. ಅವರ ವಾಹನಗಳನ್ನು ಎಡಕ್ಕೆ ಮಾಡಿಕೊಂಡು ಸಂಜ್ಞೆಯನ್ನು ಕಳೆದುಕೊಳ್ಳದ ನಮ್ಮ ಕುದುರೆಗಳಿಂದ ಮುಂದಕ್ಕೆ ಹೋಗು (ಎಂದು ಹೇಳಿದನು).
ರಶ್ಮೀನ್ ಸಮುತ್ಸೃಜ್ಯ ತತೋ ಮಹಾತ್ಮಾ
ರಥಾದವಪ್ಲುತ್ಯ ವಿರಾಟಪುತ್ರಃ |
ವಸಾಂತ್ಯುಪಾದಾಯ ಮಹಾರಥಾನಾಂ
ತೂರ್ಣಂ ಪುನಃ ಸ್ವಂ ರಥಮಾರುರೋಹ ॥20॥
ಆಗ ಮಹಾತ್ಮನಾದ ವಿರಾಟಪುತ್ರನು ಕುದುರೆಯ ಕಡಿವಾಣವನ್ನು ಬಿಟ್ಟು ರಥದಿಂದ ಧುಮುಕಿ ಆ ಮಹಾರಥರ ವಸ್ತ್ರಗಳನ್ನು ತೆಗೆದುಕೊಂಡು ಶೀಘ್ರವಾಗಿ ಪುನಃ ತನ್ನ ರಥವನ್ನು ಏರಿದನು.
ಮಹಾಂತಿ ಚೀನಾಂಶುದುಕೂಲಕಾನಿ
ಪಟ್ಟಾಂಶುಕಾನಿ ವಿವಿಧಾನಿ ಮನೋಜ್ಞಕಾನಿ |
ಹಾರಾಂಶ್ಚ ರಾಜ್ಞಾಂ ಮಣಿಭೂಷಣಾನಿ
ಸುವರ್ಣನಿಷ್ಕಾಭರಣಾನಿ ಮಾರಿಷ ॥21॥
ಮಾಣಿಕ್ಯಬಾಹ್ವಂಗದಕಂಕಣಾನಿ
ಅನ್ಯಾನಿ ರಾಜ್ಞಾಂ ಮಣಿಭೂಷಣಾನಿ |
ವಸಾಂತ್ಯುಪಾದಾಯ ಮಹಾರಥಾನಾಂ
ತೂರ್ಣಂ ಪುನಃ ಸ್ವಂ ರಥಮಾರುರೋಹ ॥22॥
ಎಲೈ ಜನಮೇಜಯನೇ, ಬೆಲೆಬಾಳುವ ಚೀನಾಂಬರಗಳನ್ನೂ, ಮನೋಹರವಾದ ವಿಧವಿಧವಾದ ಪಟ್ಟೆ ವಸ್ತ್ರಗಳನ್ನೂ, ರಾಜರ

ಹಾರಗಳನ್ನೂ, ಮಣಿಭೂಷಣಗಳನ್ನೂ, ಸುವರ್ಣನಿಷ್ಕಾಭರಣಗಳನ್ನೂ, ಮಾಣಿಕ್ಯಖಚಿತವಾದ ಅಂಗದ ಮತ್ತು ಕಂಕಣಗಳನ್ನೂ, ರಾಜರ ಬೇರೆ ಆಭರಣಗಳನ್ನೂ, ಮಹಾರಥರಾದ ಅವರ ವಸ್ತ್ರಗಳನ್ನೂ ತೆಗೆದುಕೊಂಡು ಶೀಘ್ರವಾಗಿ ಪುನಃ ತನ್ನ ರಥವನ್ನು ಏರಿದನು.

ರಾಜ್ಞಶ್ಚ ಸರ್ವಾನ್ ಮೃತಸನ್ನಿಕಾಶಾನ್
ಸಮ್ಮೋಹನಾಸ್ತ್ರೇಣ ವಿಸಂಜ್ಞಕಲ್ಪಾನ್ |
ನಾಸಾಗ್ರವಿನ್ಯಸ್ತಕರಾಂಗುಲೀಕಃ
ಪಾರ್ಥೋ ಜಹಾಸ ಸ್ಮಯಮಾನಚೇತಾಃ ॥23॥
ರಾಜರೆಲ್ಲರೂ ತನ್ನ ಸಮ್ಮೋಹನಾಸ್ತ್ರದಿಂದ ಸಂಜ್ಞೆಯನ್ನು ಕಳೆದುಕೊಂಡು ಮೃತರಂತೆ ಇರುವುದನ್ನು ನೋಡಿ ಅರ್ಜುನನು ಮನಸ್ಸಿನಲ್ಲಿಯೇ ನಗುತ್ತಾ ತನ್ನ ಮೂಗಿನ ಮೇಲೆ ಬೆರಳನ್ನಿಟ್ಟು ನಕ್ಕನು.
ತತೋಽನ್ವಶಾತ್ ತಾಂಶ್ಚತುರಃ ಸದಶ್ವಾನ್
ಪುತ್ರೋ ವಿರಾಟಸ್ಯ ಹಿರಣ್ಯಕಕ್ಷಾನ್ |
ತೇ ತದ್ ವ್ಯತೀಯುರ್ದ್ವಿಷತಾಮನೀಕಂ
ಶ್ವೇತಾ ವಹಂತೋಽರ್ಜುನಮಾಜಿಮಧ್ಯಾತ್ ॥24॥
ಅನಂತರ ವಿರಾಟಪುತ್ರನು ಹಿರಣ್ಯಕಕ್ಷಗಳನ್ನು ಹೊಂದಿದ್ದ ಆ ನಾಲ್ಕು ಕುದುರೆಗಳನ್ನು ಪ್ರಚೋದಿಸಿದನು. ಆ ಶ್ವೇತಾಶ್ವಗಳು ಅರ್ಜುನನನ್ನು ರಣರಂಗದಿಂದ ಹೊರಗೆ ಕರೆದುಕೊಂಡು ಹೋಗುತ್ತಾ ಶತ್ರುಗಳ ಸೈನ್ಯವನ್ನು ದಾಟಿ ಮುಂದೆ ನಡೆದವು.
ತತಃ ಪ್ರಯಾಂತಂ ಪುರುಷಪ್ರವೀರಂ
ಭೀಷ್ಮಃ ಶರೈರಭ್ಯಹನತ್ ತರಸ್ವೀ |
ಸ ಚಾಪಿ ಭೀಷ್ಮಸ್ಯ ಹಯಾನ್ ನಿಹತ್ಯ
ವಿವ್ಯಾಧ ಪಾರ್ಥೋ ದಶಭಿಃ ಪೃಷತ್ಕೈಃ ॥25॥
ಪುರುಷಪ್ರವೀರನಾದ ಅರ್ಜುನನು ಹಾಗೆ ಹೋಗುತ್ತಿರಲು ವೇಗಶಾಲಿಯಾದ ಭೀಷ್ಮರು ಬಾಣಗಳಿಂದ ಅವನನ್ನು ಹೊಡೆದರು. ಅರ್ಜುನನಾದರೂ ಭೀಷ್ಮರ ಅಶ್ವಗಳನ್ನು ಸಂಹರಿಸಿ ಹತ್ತು ಬಾಣಗಳಿಂದ ಅವರನ್ನು ಹೊಡೆದನು.
ತತೋಽರ್ಜುನೋ ಭೀಷ್ಮಮಪಾಸ್ಯ ಯುದ್ಧೇ
ವಿದ್ಧ್ವಾಽಸ್ಯ ಯಂತಾರಮಧಿಜ್ಯಧನ್ವಾ |
ತಸ್ಥೌ ವಿಮುಕ್ತೋ ರಥವೃಂದಮಧ್ಯಾದ್
ರಾಹುಂ ವಿದಾರ್ಯೇವ ಸಹಸ್ರರಶ್ಮಿಃ ॥26॥
ಅನಂತರ ಹೆದೆಯೇರಿಸಿದ ಧನುಸ್ಸುಳ್ಳ ಅರ್ಜುನನು ಯುದ್ಧದಲ್ಲಿ ಭೀಷ್ಮರನ್ನು ಬಿಟ್ಟು, ಯುದ್ಧದಲ್ಲಿ ಅವರ ಸಾರಥಿಗೆ ಹೊಡೆದು, ರಾಹುವನ್ನು ಭೇದಿಸಿ ಮುಕ್ತನಾದ ಸಹಸ್ರರಶ್ಮಿಯಾದ ಸೂರ್ಯನಂತೆ, ರಥವೃಂದದ ಮಧ್ಯದಲ್ಲಿ ರಣದಿಂದ ವಿಮುಕ್ತನಾಗಿ ನಿಂತನು.
ಲಬ್ಧ್ವಾ ತು ಸಂಜ್ಞಾಂ ಪುರುಷಪ್ರವೀರಃ
ಪಾರ್ಥಂ ಸಮೀಕ್ಷ್ಯಾಥ ಮಹೇಂದ್ರಕಲ್ಪಮ್ |
ರಣಾದ್ ವಿಮುಕ್ತಂ ಸ್ಥಿತಮೇಕಮಾಜೌ
ಸ ಧಾರ್ತರಾಷ್ಟ್ರಸ್ತ್ವರಿತೋ ಬಭಾಷೇ ॥27॥
ಅಯಂ ಕಥಂಸ್ವಿದ್ ಭವತೋ ವಿಮುಕ್ತಃ
ತಂ ವೈ ಪ್ರಬಧ್ನೀತ ಯಥಾ ನ ಮುಚ್ಯೇತ್ ॥28॥
ಪುರುಷಪ್ರವೀರನಾದ ದುರ್ಯೋಧನನು ಪುನಃ ಸಂಜ್ಞೆಯನ್ನು ಪಡೆದು ಮಹೇಂದ್ರಸದೃಶನಾದ ಅರ್ಜುನನು ರಣದಿಂದ ವೃತ್ತನಾಗಿರುವುದನ್ನು ನೋಡಿ ಅರ್ಜುನನು ಯುದ್ಧದಲ್ಲಿ ಒಬ್ಬನೇ ಇರುವುದನ್ನು ನೋಡಿ ಶೀಘ್ರವಾಗಿ ಇವನು ಹೇಗೋ ನಮ್ಮಿಂದ ಬಿಡಿಸಿಕೊಂಡಿದ್ದಾನೆ. ಅವನು ನಿರ್ಮುಕ್ತನಾಗದಂತೆ ಅವನನ್ನು ಬಂಧಿಸಿ ಎಂದು ಹೇಳಿದನು.
ವೈಶಂಪಾಯನಃ
ತಮಬ್ರವೀತ್ ಶಾಂತನವಃ ಪ್ರವೀಕ್ಷ್ಯ
ಕ್ವ ತೇ ಗತಾ ಬುದ್ಧಿರಭೂತ್ ಕ್ವ ವೀರ್ಯಮ್ |
ಶಾಂತಿಂ ಸಮಾಸಾದ್ಯ ಯಥಾ ಸ್ಥಿತಸ್ತ್ವಮ್
ಉತ್ಸೃಜ್ಯ ಬಾಣಾಂಶ್ಚ ಧನುಶ್ಚ ಚಿತ್ರಮ್ ॥29॥
ವೈಶಂಪಾಯನ ಭೀಷ್ಮರು ಅವನನ್ನು ನೋಡಿ ಅವನನ್ನು ಕುರಿತು ನಿನ್ನ ಬುದ್ಧಿಯೂ ನಿನ್ನ ಪರಾಕ್ರಮವೂ ಎಲ್ಲಿಗೆ ಹೋಗಿದ್ದಿತು? ಬಾಣಗಳನ್ನು ಮತ್ತು ನಿನ್ನ ವಿಚಿತ್ರವಾದ ಧನುಸ್ಸನ್ನು ಬಿಟ್ಟು ಭ್ರಾಂತಿಯನ್ನು ಹೊಂದಿ ನೀನು ಕುಳಿತಿದ್ದೆಯಷ್ಟೆ ಎಂದು ಕೇಳಿದರು.
ನ ತ್ವೇವ ಬೀಭತ್ಸುರಲಂ ನೃಶಂಸಂ
ಕರ್ತುಂ ನ ಪಾಪೇಷು ಮನೋ ನಿವಿಷ್ಟಮ್ |
ಜಹ್ಯಾನ್ನ ಧರ್ಮಂ ತ್ರಿದಿವಸ್ಯ ಹೇತೋಃ
ಸರ್ವೇ ತು ತಸ್ಮಾನ್ನ ಹತಾ ರಣೇಽಸ್ಮಿನ್ ॥30॥
ಅರ್ಜುನನು ಪಾಪಿಷ್ಠರ ವಿಷಯದಲ್ಲಿಯೂ ಕೂಡ ಕ್ರೂರಕರ್ಮವನ್ನು ಮಾಡಲು ಮನಸ್ಸಿನಲ್ಲಿ ಬಯಸುವುದಿಲ್ಲ. ಸ್ವರ್ಗದ ಪ್ರಾಪ್ತಿಯ ಸಲುವಾಗಿಯೂ ಸಹ ಅವನು ಅಧರ್ಮವನ್ನು ಬಿಡುವವನಲ್ಲ. ಆದ್ದರಿಂದ ಈ ಯುದ್ಧದಲ್ಲಿ ನಾವೆಲ್ಲರೂ ಹತರಾಗಿಲ್ಲ.
ಕ್ಷಿಪ್ರಂ ಕುರೂನ್ ಯಾಹಿ ಕುರುಪ್ರವೀರ

ವಿಜಿತ್ಯ ಗಾಶ್ಚ ಪ್ರತಿಯಾತು ಪಾರ್ಥಃ ॥31॥
ಎಲೈ ಕುರುಪ್ರವೀರನೇ, ಬೇಗ ಕುರುದೇಶಕ್ಕೆ ಹಿಂದಿರುಗು. ಅರ್ಜುನನು ಗೋವುಗಳನ್ನು ಜಯಿಸಿ ವಿರಾಟನಗರಕ್ಕೆ ಹೋಗಲಿ.
ಸಮ್ಮೋಹನಾಸ್ತ್ರಪ್ರತಿಮೋಹಿತಾಃ ಸ್ಥ
ಯೂಯಂ ನ ಜಾನೀತ ಧನಾಪಹಾರಮ್ ।
ಪಶ್ಯಾಮಿ ವಸ್ತ್ರಾಭರಣಾನಿ ರಾಜನ್
ವಿರಾಟಪುತ್ರೇಣ ಸಮಾಹೃತಾನಿ ॥32॥
ನೀವೆಲ್ಲರೂ ಸಮ್ಮೋಹನಾಸ್ತ್ರದಿಂದ ಮೋಹಿತರಾಗಿ ಅವನು ಗೋಸಂಪತ್ತನ್ನು ತೆಗೆದುಕೊಳ್ಳುವುದನ್ನು ತಿಳಿಯಲಿಲ್ಲ. ರಾಜನೇ, ವಿರಾಟಪುತ್ರನಾದ ಉತ್ತರನು ವಸ್ತ್ರಾಭರಣಗಳನ್ನು ತೆಗೆದುಕೊಳ್ಳುತ್ತಿದ್ದನ್ನು ನಾನು ನೋಡಿದೆನು.
ನೃಪೇಷು ಸರ್ವೇಷು ಚ ಮೋಹಿತೇಷು
ಹಂತುಂ ಯದೀಚ್ಛೇತ್ ಸ ಹನಿಷ್ಯತೀತಿ ।
ತದಾ ತು ಧರ್ಮಾತ್ಮತಯಾ ನೃವೀರೋ
ನ ಚಾಹನದ್ ವೋ ಬಲಭಿತ್ತನೂಜಃ ॥33॥
ಎಲ್ಲ ರಾಜರೂ ಮೂರ್ಛಿತರಾದಾಗ ಅವನು ಕೊಲ್ಲಲು ಇಷ್ಟಪಟ್ಟಿದ್ದರೆ ಹೀಗೆಯೇ ಕೊಲ್ಲಬಹುದಾಗಿದ್ದಿತು. ಆದರೆ ಇಂದ್ರನ ಪುತ್ರನಾದ ನರಶ್ರೇಷ್ಠನಾದ ಅವನು ಧರ್ಮಾತ್ಮನಾದುದರಿಂದ ನಿಮ್ಮನ್ನು ಕೊಲ್ಲಲಿಲ್ಲ.
ಭಾಗ್ಯೇನ ಯುಷ್ಮಾನವಧೀನ್ನ ಪಾರ್ಥಃ
ಸಂಧಿಂ ಕುರೂಣಾಮನುಮನ್ಯಮಾನಃ ।
ತದ್ ಯಾತ ಯೂಯಂ ಸಹ ಸೈನಿಕೈಸ್ತೈಃ
ಹತಾವಶಿಷ್ಟೈರ್ಗಜಸಾಹ್ವಯಂ ಪುರಮ್ ॥34॥
ನಿಮ್ಮ ಅದೃಷ್ಟದಿಂದ ಕುರುಗಳ ಜೊತೆಯಲ್ಲಿ ಸಂಧಿಯನ್ನು ಬಯಸುವವನಾಗಿ ಅರ್ಜುನನು ನಿಮ್ಮನ್ನು ಕೊಲ್ಲಲಿಲ್ಲ. ಅದ್ದರಿಂದ ನೀವು ಅಳಿದುಳಿದ ಸೈನಿಕರ ಜೊತೆಯಲ್ಲಿ ಹಸ್ತಿನಪುರಕ್ಕೆ ಹಿಂದಿರುಗಿ (ಎಂದು ಹೇಳಿದರು).
ದುರ್ಯೋಧನಸ್ತಸ್ಯ ತು ತನ್ನಿಶಮ್ಯ
ಪಿತಾಮಹಸ್ಯಾತ್ಮಹಿತಂ ವಚೋಽಥ ।
ಅಪ್ರಾಪ್ತಕಾಮೋ ಯುಧಿ ಸೋಽತ್ಯಮರ್ಷೀ
ರಾಜಾ ವಿನಿಃಶ್ವಸ್ಯ ಬಭೂವ ತೂಷ್ಣೀಮ್ ॥35॥
ಬಹಳ ಕೋಪಸ್ವಭಾವದವನಾದ ದುರ್ಯೋಧನನು ಪಿತಾಮಹರ ಆತ್ಮಹಿತವಾದ ಆ ಮಾತುಗಳನ್ನು ಕೇಳಿ ಯುದ್ಧದಲ್ಲಿ ತನ್ನ ಮನೋರಥವು ಪೂರ್ಣವಾಗದೆ ನಿಟ್ಟುಸಿರನ್ನು ಬಿಟ್ಟು ಸುಮ್ಮನಾದನು.
ತಾನ್ ಪ್ರಸ್ಥಿತಾನ್ ಪ್ರೀತಮನಾಃ ಸ ಪಾರ್ಥೋ
ಧನಂಜಯಃ ಸರ್ವಕುರುಪ್ರವೀರಾನ್ ।
ಆಮಂತ್ರ್ಯ ವೀರೋಽನುಯಯೌ ಮುಹೂರ್ತಂ
ಗಾಂಡೀವಘೋಷೇಣ ವಿನಾದ್ಯ ಲೋಕಮ್ ॥36॥
ಅರ್ಜುನನು ಒಂದು ಮುಹೂರ್ತದ ಕಾಲ ಗಾಂಡೀವ ಘೋಷದಿಂದ ಲೋಕಗಳನ್ನು ಪ್ರತಿಧ್ವನಿಸುವಂತೆ ಮಾಡಿ ಸಂತೋಷಗೊಂಡ ಮನಸ್ಸುಳ್ಳವನಾಗಿ ಹಿಂದೆ ಹೋಗುತ್ತಿದ್ದ ಎಲ್ಲಾ ಕುರುವೀರರನ್ನು ಆಮಂತ್ರಿಸಿ ವೀರನಾದ ಅವನು ಹೊರಟನು.
ತೇಷಾಮನೀಕಾನಿ ನಿರೀಕ್ಷ್ಯ ಪಾರ್ಥೋ
ವಿಶೀರ್ಣತೂರ್ಯಧ್ವಜಕಾರ್ಮುಕಾನಿ ।
ಗಾಂಡೀವಧನ್ವಾ ಪ್ರವರಃ ಕುರೂಣಾಂ
ಶಂಖಂ ಪ್ರದಧ್ಮೌ ಬಲವಾನ್ ಬಲೇನ ॥37॥
ಗಾಂಡೀವ ಧನ್ವಿಯಾದ ಕುರುಕುಲದ ಪ್ರವರನಾದ ಅರ್ಜುನನು ಅವರ ಸೈನ್ಯಗಳ ತೂರ್ಯಧ್ವಜಕಾರ್ಮುಕಗಳು ಕತ್ತರಿಸಲ್ಪಟ್ಟಿರುವುದನ್ನು ನೋಡಿ ಬಲಿಷ್ಠನಾದ ಅವನು ತನ್ನ ಬಲದಿಂದ ಶಂಖವನ್ನು ಊದಿದನು.
ತೇ ಶಂಖಶಬ್ದಂ ತುಮುಲಂ ನಿಶಮ್ಯ
ಧ್ವಜಸ್ಯ ಶ್ರುತ್ವಾ ನದತೋಽಂತರಿಕ್ಷೇ ।
ಗಾಂಡೀವಶಬ್ದೇನ ಮುಹುರ್ಮುಹುಸ್ತೇ
ಭೀತಾ ಯಯುಃ ಸರ್ವಧನಂ ವಿಹಾಯ ॥38॥
ಅವರು ತೀವ್ರವಾದ ಶಂಖಶಬ್ದವನ್ನೂ ಮತ್ತು ಅಂತರಿಕ್ಷದಲ್ಲಿ ಪ್ರತಿಧ್ವನಿಸುವ ಧ್ವಜವಾಸಿಯಾದ ಕಪಿಯ ಗರ್ಜನೆಯನ್ನೂ ಕೇಳುತ್ತಾ ಗಾಂಡೀವ ಧನುಸ್ಸಿನ ಶಬ್ದದಿಂದ ಮತ್ತೆ ಮತ್ತೆ ಭೀತರಾಗಿ ತಮ್ಮ ಎಲ್ಲಾ ಧನವನ್ನೂ ಮತ್ತು ವಿರಾಟನ ಗೋಧನವನ್ನೂ ಬಿಟ್ಟು ಹಿಂದಕ್ಕೆ ಹೋದರು.
ತತೋಽರ್ಜುನೋ ದೂರತರಂ ಪ್ರಭಜ್ಯ
ಧನಂ ಚ ಸರ್ವಂ ನಿಖಿಲಂ ನಿವರ್ತ್ಯ ।
ಆಪೃಚ್ಛ್ಯ ತಾನ್ ದೂರತರಂ ಪ್ರಯಾತ್ವಾ
ಧನಂಜಯಸ್ತತ್ರ ಕುರೂನ್ ಮಹಾತ್ಮಾ ॥39॥
ಕುರೂಂಶ್ಚ ಸರ್ವಾನಭಿವಾದ್ಯ ಬಾಣೈಃ

ನ್ಯವರ್ತತೋದಗ್ರಮನಾಃ ಶರ್ರೈಃ ಸಃ ॥40॥
ಅನಂತರ ಅರ್ಜುನನು ದೂರಪ್ರಯಾಣವನ್ನು ಮಾಡಿ ವಿರಾಟನ ಗೋಧನವನ್ನೆಲ್ಲಾ ಹಿಂದಿರುಗಿಸಿ ಅವರ ಅನುಮತಿಯನ್ನು ಪಡೆದು ಅಲ್ಪದೂರ ಹೋಗಿ ಮಹಾತ್ಮನಾದ ಅವನು ಎಲ್ಲ ಕುರುಶ್ರೇಷ್ಠರನ್ನು ತನ್ನ ಬಾಣಗಳಿಂದ ನಮಸ್ಕರಿಸಿ ಉನ್ನತವಾದ ಮನಸ್ಸನ್ನು ಹೊಂದಿದವನಾಗಿ ಹಿಂದಿರುಗಿದನು.
ಪಿತಾಮಹಂ ಶಾಂತನವಂ ಮಹಾತ್ಮಾ
ದ್ವಾಭ್ಯಾಂ ಶರಾಭ್ಯಾಮಭಿವಾದ್ಯ ವೀರಃ।
ದ್ರೋಣಂ ಕೃಪಂ ಚೈವ ಕುರೂಂಶ್ಚ ಮಾನ್ಯಾನ್
ಶರೈರ್ವಿಚಿತ್ರೈರಭಿವಾದ್ಯ ಸಂಖೇ ॥41॥
ದುರ್ಯೋಧನಸ್ಯೋತ್ತಮರತ್ನಚಿತ್ರಂ
ಚಿಚ್ಛೇದ ಪಾರ್ಥೋ ಮಕುಟಂ ಶರೌೈರಂಃ ॥42॥
ವೀರನಾದ ಅವನು ಮಹಾತ್ಮರಾದ ಶಂತನುಪುತ್ರರಾದ ಪಿತಾಮಹರಾದ ಭೀಷ್ಮರನ್ನು ಎರಡು ಬಾಣಗಳಿಂದ ನಮಸ್ಕರಿಸಿ, ದ್ರೋಣ, ಕೃಪ ಮತ್ತು ಮಾನ್ಯರಾದ ಕುರುಗಳನ್ನು ಯುದ್ಧದಲ್ಲಿ ವಿಚಿತ್ರವಾದ ಬಾಣಗಳಿಂದ ನಮಸ್ಕರಿಸಿ; ದುರ್ಯೋಧನನ ತಲೆಯ ಮೇಲಿದ್ದ ಕಿರೀಟವನ್ನು ತನ್ನ ಬಾಣಗಳಿಂದ ಕೆಳಗೆ ಉರುಳಿಸಿದನು.
ಧನಂಜಯಂ ನಾಗಮಿವ ಪ್ರಭಿನ್ನಂ
ವಿಸೃಜ್ಯ ಶತ್ರೂನ್ ಪರಿವರ್ತಮಾನಮ್।
ಗಾಸ್ತಾ ವಿಜಿತ್ಯಾಭಿಮುಖಂ ಪ್ರಯಾಂತಂ
ನಾಶಕ್ನುವಂಸ್ತೇ ಕುರವೋಽಭಿಸರ್ತುಮ್ ॥43॥
ಗೋಧನವನ್ನು ಜಯಿಸಿ ಶತ್ರುಗಳನ್ನು ಬಿಟ್ಟು ಮದಭಿನ್ನವಾದ ಗಜದಂತೆ ಹಿಂದಿರುಗಿ ಹೋಗುತ್ತಿದ್ದ ಧನಂಜಯನನ್ನು ಸಮೀಪಿಸಲು ಕುರುಗಳಿಗೆ ಸಾಧ್ಯವಾಗಲಿಲ್ಲ.
ಧನಂಜಯಂ ಸಿಂಹಮಿವಾತ್ತಶಸ್ತ್ರಂ
ಗಾ ವೈ ವಿಜಿತ್ಯಾಭಿಮುಖಂ ಪ್ರಯಾಂತಮ್।
ಉದೀಕ್ಷಿತುಂ ಪಾರ್ಥಿವಾಸ್ತೇ ನ ಶೇಕುಃ
ಯಥೈವ ಮಧ್ಯಾಹ್ನಗತಂ ತು ಸೂರ್ಯಮ್ ॥44॥
ಗೋವುಗಳನ್ನು ಗೆದ್ದು ನಗರಕ್ಕೆ ಅಭಿಮುಖವಾಗಿ ಕೈಯಲ್ಲಿ ಶಸ್ತ್ರವನ್ನು ಹಿಡಿದು ಸಿಂಹದಂತೆ ಹಿಂದಿರುಗುತ್ತಿದ್ದ ಧನಂಜಯನನ್ನು ಆ ರಾಜರು ಮಧ್ಯಾಹ್ನಗತನಾದ ಸೂರ್ಯನಂತೆ ನೋಡಲೂ ಸಮರ್ಥರಾಗಲಿಲ್ಲ.
ರತ್ನಾನಿ ವಾಸಾಂಸಿ ಚ ತಾನಿ ಗೃಹ್ಯ
ರಣೋತ್ಕಟೋ ನಾಗ ಇವ ಪ್ರಭಿನ್ನಃ।
ಜಿತ್ವಾ ಚ ವೈರಾಟಿಮುವಾಚ ಪಾರ್ಥಃ
ಪ್ರಹೃಷ್ಟರೂಪೋ ರಥಿನಾಂ ವರಿಷ್ಠಃ ॥45॥
ರಥಿಕರಲ್ಲಿ ಶ್ರೇಷ್ಠನಾದ, ರಣೋತ್ಕಟನಾದ ಅರ್ಜುನನು ಮದಿಸಿದ ಗಜದಂತೆ ರತ್ನಗಳನ್ನೂ, ಆ ವಸ್ತ್ರಗಳನ್ನೂ ತೆಗೆದುಕೊಂಡು ಸಂತೋಷಗೊಂಡವನಾಗಿ ಉತ್ತರನನ್ನು ಕುರಿತು ಹೇಳಿದನು.
ಆವರ್ತಯಾಶ್ವಾನ್ ಪಶವೋ ಜಿತಾಸ್ತೇ
ಯಾತಾಃ ಪರೇ ಪ್ರೈಹಿ ಪುರಂ ಪ್ರವೇಷ್ಟುಮ್।
ಉದ್ಘುಷ್ಯತಾಂ ತೇ ವಿಜಯೋಽದ್ಯ ಶೀಘ್ರಂ
ಗಾತ್ರಂ ತು ತೇ ಸೇವತು ಗಂಧಮಾಲ್ಯಮ್ ॥46॥
ನಿನ್ನ ಗೋವುಗಳು ವಿಚಿತ್ರವಾಗಿವೆ. ಅಶ್ವಗಳನ್ನು ಹಿಂದಿರುಗಿಸು. ಶತ್ರುಗಳು ಹಿಂದೆ ಹೋಗಿದ್ದಾರೆ. ನಿನ್ನ ಪುರಪ್ರವೇಶವನ್ನು ಮಾಡಲು ಹೊರಡು. ನಿನ್ನ ವಿಜಯವು ಶೀಘ್ರವಾಗಿ ಘೋಷಿಸಲ್ಪಡಲಿ. ನಿನ್ನ ದೇಹವು ಗಂಧಮಾಲ್ಯಗಳಿಂದ ಸೇವಿತವಾಗಲಿ.
ಮಾತಾ ತು ತೇ ನಂದತು ಬಾಂಧವಾಶ್ಚ
ತ್ವಾಮದ್ಯ ದೃಷ್ಟ್ವಾ ಸಮುದೀರ್ಣಹರ್ಷಮ್ ॥47॥
ಬಹಳ ಹರ್ಷದಿಂದ ಕೂಡಿರುವ ನಿನ್ನನ್ನು ನೋಡಿ ನಿನ್ನ ತಾಯಿಯೂ ಮತ್ತು ಬಾಂಧವರೂ ಸಂತೋಷಪಡಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಟ್‌ಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * *
ಅರವತ್ತೇಳನೆಯ ಅಧ್ಯಾಯ
ಅರ್ಜುನನಿಂದ ಪುನಃ ಷಂಡವೇಷ ಸ್ವೀಕಾರ. ನಗರದಲ್ಲಿ ಉತ್ತರನ
ಜಯವನ್ನು ಘೋಷಿಸುವಂತೆ ಒತ್ತಾಯ.
ವೈಶಂಪಾಯನಃ
ತತೋ ವಿಜಿತ್ಯ ಸಂಗ್ರಾಮೇ ಕುರೂನ್ ಗೋವೃಷಭೇಕ್ಷಣಃ।
ಸಮಾನಯಾಮಾಸ ತದಾ ವಿರಾಟಸ್ಯ ಧನಂ ಮಹತ್ ॥1॥

ವೈಶಂಪಾಯನ ಅನಂತರ ಗೋವೃಷಭೇಕ್ಷಣನಾದ ಅರ್ಜುನನು ಯುದ್ಧದಲ್ಲಿ ಕುರುಗಳನ್ನು ಗೆದ್ದು ವಿರಾಟನ ದೊಡ್ಡ ಗೋಧನವನ್ನು ಹಿಂದಿರುಗಿಸಿದನು.
ಗತೇಷು ಚ ಪ್ರಭಗ್ನೇಷು ಧಾರ್ತರಾಷ್ಟ್ರೇಷು ಸರ್ವಶಃ |
ವನಾನ್ನಿಷ್ಕ್ರಮ್ಯ ಗಹನಾದ್ ಬಹವಃ ಕುರುಸೈನಿಕಾಃ ॥2॥
ಭಯಾತ್ ಸಂತ್ರಸ್ತಮನಸಃ ಸಮಾಜಗ್ಮುಸ್ತತಸ್ತತಃ ॥3॥
ಧೃತರಾಷ್ಟ್ರ ಪುತ್ರರೆಲ್ಲರೂ ಯುದ್ಧದಲ್ಲಿ ಪ್ರಭಗ್ನರಾಗಿ ಹೊರಟು ಹೋಗುತ್ತಿರಲು ಅನೇಕ ಕುರುಸೈನಿಕರು ಭಯದಿಂದ ನಡುಗುವ ಮನಸ್ಸುಳ್ಳವರಾಗಿ ದಟ್ಟವಾದ ಕಾಡಿನಿಂದ ಅಲ್ಲಲ್ಲಿ ಹೊರಗೆ ಬಂದು ಒಟ್ಟು ಸೇರಿದರು.
ಮುಕ್ತಕೇಶಾಃ ಪ್ರದೃಶ್ಯಂತ ಸ್ಥಿತಾಃ ಪ್ರಾಂಜಲಯಸ್ತದಾ |
ಕ್ಷುತ್ಪಿಪಾಸಾಪರಿಶ್ರಾಂತಾ ವಿದೇಶಸ್ಥಾ ವಿಚೇತಸಃ ॥4॥
ಊಚುಃ ಪ್ರಾಂಜಲಯಃ ಸರ್ವೇ ಬ್ರೂಹಿ ಕಿಂ ಕರವಾಮಹೇ ॥5॥
ಪ್ರಾಣಾನಂತರ್ಮನೋಯಾತಾನ್ ಪ್ರಯಾಚಿಷ್ಯಾಮಹೇ ವಯಮ್ |
ವಯಂ ಚಾರ್ಜುನ ತೇ ದಾಸಾ ಹ್ಯನುರಕ್ಯಾ ಹ್ಯನಾಥಕಾಃ ॥6॥
ಅವರು ತಲೆಯನ್ನು ಕೆದರಿಕೊಂಡು ಹಸಿವು ಬಾಯಾರಿಕೆಗಳಿಂದ ಬಳಲಿದವರಾಗಿ ವಿಚೇತಸರಾಗಿ ಎಲ್ಲರೂ ಕೈಗಳನ್ನು ಮುಗಿದು ಅರ್ಜುನನನ್ನು ಕುರಿತು ನಾವು ಏನು ಮಾಡೋಣ ಎಂದು ಹೇಳು. ಮನಸ್ಸಿನ ಒಳಗೇ ಪ್ರವೇಶಿಸಿದ ನಮ್ಮ ಪ್ರಾಣಗಳನ್ನು ನಾವು ಪುನಃ ಬೇಡುತ್ತಿದ್ದೇವೆ. ಅರ್ಜುನನೇ, ನಾವು ನಿಮ್ಮ ದಾಸರು ಮತ್ತು ಅನಾಥರು. ನೀನು ನಮ್ಮನ್ನು ರಕ್ಷಿಸಬೇಕು ಎಂದು ಹೇಳಿದರು.
ಅರ್ಜುನಃ
ಅನಾಥಾನ್ ದುಃಖಿತಾನ್ ದೀನಾನ್ ಕೃಶಾನ್ ವೃದ್ಧಾನ್ ಪರಾಜಿತಾನ್|
ನ್ಯಸ್ತಶಸ್ತ್ರಾನ್ ನಿರಾಶಾಂಶ್ಚ ನಾಹಂ ಹನ್ಮಿ ಕೃತಾಂಜಲೀನ್ ॥7॥
ಅರ್ಜುನ ಅನಾಥರನ್ನೂ, ದುಃಖಿತರನ್ನೂ, ದೀನರನ್ನೂ, ಕೃಶರನ್ನೂ, ವೃದ್ಧರನ್ನೂ, ಪರಾಜಿತರನ್ನೂ, ಶಸ್ತ್ರಸಂನ್ಯಾಸ ಮಾಡಿದವರನ್ನೂ, ನಿರಾಶರನ್ನೂ ಮತ್ತು ಕೈಮುಗಿದವರನ್ನೂ ನಾನು ಕೊಲ್ಲುವುದಿಲ್ಲ.
ಭವಂತೋ ಯಾಂತು ವಿಸ್ರಬ್ಧಾ ನಿರ್ಭಯಾ ಹ್ಯಕುತೋಭಯಾಃ |
ಮಮ ಪಾದರಜೋರಕ್ಷ್ಯಾ ಜೀವಂತು ಸುಚಿರಂ ಭುವಿ ॥8॥
ನೀವು ಯಾವ ಭಯವೂ ಇಲ್ಲದೆ ವಿಶ್ವಾಸದಿಂದ ಹಿಂದಿರುಗಿ. ನನ್ನ ಪಾದಧೂಳಿಯಿಂದ ರಕ್ಷಿಸಲ್ಪಟ್ಟವರಾಗಿ ಭೂಮಿಯಲ್ಲಿ ಬಹುಕಾಲ ಬದುಕಿ.
ವೈಶಂಪಾಯನಃ
ತಸ್ಯ ತಾಮಭಯಾಂ ವಾಚಂ ಶ್ರುತ್ವಾ ಯೋಧಾಃ ಸಮಾಗತಾಃ |
ಆಯುಃಕೀರ್ತಿಯಶೋಭಿಸ್ತೇ ತಮಾಶೀರ್ಭಿರಪೂಜಯತ್ ॥9॥
ವೈಶಂಪಾಯನ ಅಲ್ಲಿ ಸಮಾಗತರಾಗಿದ್ದ ಯೋಧರು ಅವನ ಅಭಯ ವಾಣಿಯನ್ನು ಕೇಳಿ ಅರ್ಜುನನಿಗೆ ಆಯುಸ್ಸು, ಕೀರ್ತಿ ಮತ್ತು ಯಶಸ್ಸುಗಳನ್ನು ಆಶಂಸಿಸಿ ಅವನನ್ನು ಸನ್ಮಾನಿಸಿದರು.
ಸ ಕರ್ಮ ಕೃತ್ವಾ ಪರಮಾರ್ಯಕರ್ಮಾ
ನಿಹತ್ಯ ಶತ್ರೂನ್ ದ್ವಿಷತಾಂ ನಿಹಂತಾ |
ಯಾತೋ ಮಹಾಮೇಘ ಇವಾತಪಾಂತೇ
ವಿದ್ರಾವ್ಯ ಪಾರ್ಥಃ ಕುರುಸೈನ್ಯಮೇಕಃ ॥10॥
ಪರಮ ಉದಾರಕಾರ್ಯವನ್ನು ಮಾಡುವ ಶತ್ರುಸಂಹಾರಕನಾದ ಅರ್ಜುನನು ಒಬ್ಬನೇ ಶತ್ರುಗಳನ್ನು ಕೊಂದು ಇನ್ನು ಉಳಿದ ಸೈನ್ಯವನ್ನು ಚದುರಿಸಿ ಬೇಸಿಗೆಯ ಕೊನೆಯಲ್ಲಿ ಬರುವ ಮಹಾಮೇಘದಂತೆ ಹಿಂದಿರುಗಿದನು.
ತಂ ಮಾತ್ಸ್ಯಪುತ್ರಂ ದ್ವಿಷತಾಂ ನಿಹಂತಾ
ವಚೋಽಬ್ರವೀತ್ ಸಂಪರಿಗೃಹ್ಯ ರಾಜನ್ ॥11॥
ಪಿತುಃಸಕಾಶೇ ತವ ತಾತ ಸರ್ವೇ
ವಸಂತಿ ಪಾರ್ಥಾ ವಿದಿತಂ ತ್ವಯೇತಿ |
ತಾನ್ ಮಾ ಸ್ಮ ಶಂಸೀರ್ನಗರಂ ಪ್ರವಿಶ್ಯ
ಭೀತಃ ಪ್ರಣಶ್ಯೇತ್ ಸ ಚ ಮತ್ಸ್ಯರಾಜಃ ॥12॥
ಎಲೈ ರಾಜನೇ, ಶತ್ರುಸಂಹಾರಕನಾದ ಅವನು ವಿರಾಟನ ಮಗನಾದ ಉತ್ತರನನ್ನು ಕುರಿತು ಪ್ರೀತಿಪಾತ್ರನೇ, ನಿನ್ನ ತಂದೆಯ ಸಮೀಪದಲ್ಲಿ ಎಲ್ಲ ಪಾಂಡವರೂ ವಾಸ ಮಾಡುತ್ತಿದ್ದಾರೆ ಎಂಬುದು ಈಗ ನಿನಗೆ ಹೀಗೆ ತಿಳಿದಿದೆ. ನೀನು ನಗರವನ್ನು ಪ್ರವೇಶಿಸಿ ಅದನ್ನು ನಿನ್ನ ತಂದೆಗೆ ಹೇಳಬೇಡ. ಅದನ್ನು ಕೇಳಿದರೆ ಮತ್ಸ್ಯರಾಜನು ಭಯದಿಂದ ನಾಶವನ್ನು ಹೊಂದಿಯಾನು!
ಮಯಾ ಜಿತಾ ಸಾ ಧ್ವಜಿನೀ ಕುರೂಣಾಂ
ಮಯಾ ಹಿ ಗಾವೋ ವಿಜಿತಾ ದ್ವಿಷದ್ಭ್ಯಃ |
ಏವಂ ತು ಕಾಮಂ ನಗರಂ ಪ್ರವಿಶ್ಯ
ತ್ವಮಾತ್ಮನಾ ಕರ್ಮ ಕೃತಂ ಬ್ರವೀಹಿ ॥13॥
ನಾನೇ ಕುರುಗಳ ಸೈನ್ಯವನ್ನು ಗೆದ್ದೆನು. ನಾನೇ ಶತ್ರುಗಳಿಂದ ಗೋವುಗಳನ್ನು ಬಿಡಿಸಿದೆನು. ಹೀಗೆ ನಗರವನ್ನು ಪ್ರವೇಶಿಸಿ ನೀನು ನಿನ್ನಿಂದಲೇ ಎಲ್ಲ ಕಾರ್ಯವೂ ನಡೆಯಿತೆಂದು ಹೇಳುವವನಾಗು.

ಉತ್ತರಃ
ಯತ್ ತೇ ಕೃತಂ ಕರ್ಮ ನವಾರಣೀಯಂ
ತತ್ಕರ್ಮ ಕರ್ತುಂ ನ ಮಮಾಸ್ತಿ ಶಕ್ತಿಃ |
ನ ತ್ವಾಂ ಪ್ರವಕ್ಷ್ಯಾಮಿ ಪಿತುಃಸಕಾಶೇ
ಯಾವನ್ನ ಮಾಂ ವಕ್ಷ್ಯಸಿ ಸವ್ಯಸಾಚಿನ್ ||14||
ಉತ್ತರ ಇನ್ನೊಬ್ಬರು ನಿವಾರಿಸಲು ಸಾಧ್ಯವಾಗದ ನೀನು ಮಾಡುವ ಕರ್ಮವನ್ನು ಮಾಡಲು ನನಗೆ ಶಕ್ತಿಯಿಲ್ಲ. ಸವ್ಯಸಾಚಿಯೇ, ನೀನು ಹೇಳುವವರೆಗೆ (ಅನುಮತಿ ಕೊಡುವವರೆಗೆ) ತಂದೆಯ ಹತ್ತಿರ ನಿನ್ನನ್ನು ಹೇಳುವುದಿಲ್ಲ (ನೀನು ಜಯಿಸಿದೆ ಎಂದು ಹೇಳುವುದಿಲ್ಲ).
ವೈಶಂಪಾಯನಃ
ಸ ಶತ್ರುಸೇನಾಂ ತರಸಾ ವಿಜಿತ್ಯ
ಆಚ್ಛಿದ್ಯ ಸರ್ವಂ ಚ ಧನಂ ಕುರೂಣಾಮ್ |
ಶ್ಮಶಾನಮಾಗಮ್ಯ ಪುನಃ ಶಮೀಂ ತಾಮ್
ಅಭ್ಯೇತ್ಯ ತಸ್ಥೌ ಶರವಿಕ್ಷತಾಂಗಃ ||15||
ವೈಶಂಪಾಯನ ಅರ್ಜುನನು ಶತ್ರುಸೈನ್ಯವನ್ನು ತನ್ನ ವೇಗದಿಂದ ಸೋಲಿಸಿ ಕುರುಗಳ ಕೈ ಸೇರಿದ ಗೋಧನವನ್ನು ಅವರಿಂದ ಬಿಡಿಸಿ ಪುನಃ ಸ್ಮಶಾನದ ಸಮೀಪಕ್ಕೆ ಬಂದು ಆ ಶಮೀವೃಕ್ಷವನ್ನು ಸಮೀಪಿಸಿ ದೇಹವೆಲ್ಲಾ ಗಾಯದಿಂದ ಕೂಡಿದ ಅವನು ನಿಂತನು.
ತತಃ ಸ ವಹ್ನಿಪ್ರತಿಮೋ ಮಹಾಕಪಿಃ
ಸಹೈವ ಭೂತೈರ್ದಿವಮುತ್ಪಪಾತ |
ತಥೈವ ಮಾಯಾ ವಿಹಿತಾ ಬಭೂವ
ಧ್ವಜಂ ಚ ಸಿಂಹಂ ಯುಯುಜೇ ರಥೇ ಪುನಃ ||16||
ಆಗ ಅಗ್ನಿಯಂತೆ ಜ್ವಲಿಸುತ್ತಿದ್ದ ಮಹಾಕಪಿಯು ಧ್ವಜದಲ್ಲಿದ್ದ ಇತರ ಭೂತಗಳೊಂದಿಗೆ ಆಕಾಶಕ್ಕೆ ಹಾರಿಹೋಯಿತು. ಧ್ವಜವು ಅಂತಹ ಶಕ್ತಿಯುಳ್ಳದ್ದಾಗಿಯೇ ರೂಪುಗೊಂಡಿದ್ದಿತು. ಅರ್ಜುನನು ಪುನಃ ತಾನು ಮೊದಲು ನಗರದಿಂದ ತೆಗೆದುಕೊಂಡು ಬಂದಿದ್ದ ಧ್ವಜವನ್ನೂ ಮತ್ತು ಸಿಂಹ ಚಿಹ್ನೆಯನ್ನೂ ರಥದಲ್ಲಿ ಜೋಡಿಸಿದನು.
ನಿಧಾಯ ತಚ್ಚಾಯುಧಮಾಜಿಮರ್ದನಃ
ಕುರೂತ್ತಮಾನಾಮಿಷುಧೀನ್ ಧ್ವಜಾಂಸ್ತದಾ |
ಪ್ರಾಯಾತ್ ಸ ಮಾತ್ಸ್ಯೋ ನಗರಂ ಪ್ರವೇಷ್ಟುಂ
ಕಿರೀಟಿನಾ ಸಾರಥಿನಾ ಮಹಾತ್ಮಾ ||17||
ಯುದ್ಧದಲ್ಲಿ ಶತ್ರುಮರ್ದನನಾದ ಉತ್ತರನು ಕುರುಶ್ರೇಷ್ಠರ ಬತ್ತಳಿಕೆ, ಧ್ವಜ ಮುಂತಾದವುಗಳನ್ನು ಮೊದಲಿನಂತೆಯೇ ಶಮೀವೃಕ್ಷದಲ್ಲಿಯೇ ಇಟ್ಟು ಸಾರಥಿಯಾದ ಅರ್ಜುನನ ಜೊತೆಯಲ್ಲಿ ಮಹಾತ್ಮನಾದ ಅವನು ನಗರವನ್ನು ಪ್ರವೇಶಿಸಲು ಹೊರಟನು.
ಪಾರ್ಥಶ್ಚ ಕೃತ್ವಾ ಪರಮಾರ್ಯಕರ್ಮ
ನಿಹತ್ಯ ಶತ್ರೂನ್ ದ್ವಿಷತಾಂ ನಿಹಂತಾ |
ವಿಧಾಯ ಭೂಯಶ್ಚ ತಥೈವ ವೇಷಂ
ಜಗ್ರಾಹ ರಶ್ಮೀನ್ ಪುನರುತ್ತರಸ್ಯ ||18||
ಬೃಹನ್ನಳಾವೇಷಮಥೋ ವಿಧಾಯ
ಪ್ರಾಯಾತ್ ಸ ಮಾತ್ಸ್ಯಂ ನಗರಂ ಪ್ರವೇಷ್ಟುಮ್ ||19||
ಶತ್ರುಸಂಹಾರಕನಾದ ಅರ್ಜುನನಾದರೂ ಶ್ರೇಷ್ಠವಾದ ಉದಾತ್ತಕರ್ಮವನ್ನು ಮಾಡಿ, ಶತ್ರುಗಳನ್ನು ಸಂಹರಿಸಿ ಮೊದಲಿನಂತೆಯೇ ನಪುಂಸಕವೇಷವನ್ನು ಧರಿಸಿ ಉತ್ತರನ ಕುದುರೆಗಳ ಕಡಿವಾಣಗಳನ್ನು ಹಿಡಿದನು. ಅವನು ಬೃಹನ್ನಳೆಯ ವೇಷವನ್ನು ಧರಿಸಿ ವಿರಾಟನ ರಾಜಧಾನಿಯನ್ನು ಪ್ರವೇಶಿಸಲು ಹೊರಟನು.
ಯಥಾಮಾರ್ಗಂ ಚ ದುಃಖಾರ್ತಾ ಜಗ್ಮುಸ್ತೇ ಹೃತವಾಸಸಃ ||20||
ಯತೋ ನಿವೃತ್ತಾಃ ಕುರವಃ ಪ್ರಭಗ್ನಾ ಶಮಮಾಸ್ಥಿತಾಃ ||21||
ತಮ್ಮ ವಸ್ತ್ರಗಳನ್ನು ಕಳೆದುಕೊಂಡು ದುಃಖಾರ್ತರಾಗಿದ್ದ ಕುರುಗಳು ಯುದ್ಧದಲ್ಲಿ ಪ್ರಭಗ್ನರಾಗಿ ಶಾಂತಿಯನ್ನು ವಹಿಸಿ ಬಂದದಾರಿಯಲ್ಲಿಯೇ ಹಿಂದಿರುಗಿದರು.
ಅರ್ಜುನಃ
ರಾಜಪುತ್ರ ಪ್ರಪದ್ಯಸ್ವ ಸಮಾನೀತಾನಿ ಸರ್ವಶಃ |
ಗೋಕುಲಾನಿ ಮಹಾಬಾಹೋ ವೀರ ಗೋಪಾಲಕೈಃ ಸಹ ||22||
ಅರ್ಜುನ ರಾಜಪುತ್ರನೇ, ಮಹಾಬಾಹುವೇ, ವೀರನೇ, ಹಿಂದಿರುಗಿಸಿದ ಈ ಗೋಧನವನ್ನು ಗೋಪಾಲಕರ ಜೊತೆಯಲ್ಲಿ ನೀನು ಸ್ವೀಕರಿಸು.
ತತೋಽಪರಾಹ್ಣೇ ಯಾಸ್ಯಾಮೋ ವಿರಾಟನಗರಂ ಪ್ರತಿ |
ಆಶ್ವಾಸ್ಯ ಪಾಯಯಿತ್ವಾ ಚ ಪರಿಪ್ಲಾವ್ಯ ಚ ವಾಜಿನಃ ||23||
ಅನಂತರ ಕುದುರೆಗಳಿಗೆ ವಿಶ್ರಾಂತಿಯನ್ನು ಕೊಟ್ಟು ಅವುಗಳಿಗೆ ಸ್ನಾನವನ್ನು ಮಾಡಿಸಿ ಅಪರಾಹ್ಣದಲ್ಲಿ ವಿರಾಟನಗರವನ್ನು ಪ್ರವೇಶಿಸೋಣ.
ಗಚ್ಛಂತು ತ್ವರಿತಂ ದೂತಾ ಗೋಪಾಲಾಃ ಪ್ರೇಷಿತಾಸ್ತ್ವಯಾ |

ನಗರೇ ಪ್ರಿಯಮಾಖ್ಯಾತುಂ ಘೋಷಯಂತು ಚ ತೇ ಜಯಮ್ ॥24॥
ದೂತರಾದ ಗೋಪಾಲಕರು ನಿನ್ನಿಂದ ಕಳುಹಿಸಲ್ಪಟ್ಟು ಶೀಘ್ರವಾಗಿ ರಾಜನಿಗೆ ಪ್ರಿಯವಾರ್ತೆಯನ್ನು ಹೇಳಲು ನಗರಕ್ಕೆ ಹೋಗಿ ನಿನ್ನ ಜಯವನ್ನು ಘೋಷಿಸಲಿ (ಎಂದು ಹೇಳಿದನು).
ವೈಶಂಪಾಯನಃ
ಉತ್ತರಸ್ತ್ವರಮಾಣೋಽಥ ದೂತಾನಾಜ್ಞಾಪಯತ್ ತದಾ |
ವಚನಾದರ್ಜುನಸ್ಯೈವ ವ್ಯಾಚಕ್ಷಧ್ವಂ ಜಯಂ ಮಮ ॥25॥
ವೈಶಂಪಾಯನ ಉತ್ತರನು ಶೀಘ್ರವಾಗಿ ಆಗ ದೂತರಿಗೆ ಅರ್ಜುನನ ಮಾತಿನಂತೆಯೇ ನಗರದಲ್ಲಿ ನನ್ನ ಜಯವನ್ನು ಘೋಷಿಸಿ ಎಂದು ಆಜ್ಞೆ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ವಿಧಾಯ ಭೀಷ್ಮಂ ವಿರಥಂ ಜಗಾಮ
ತದಾ ಶ್ರುತ್ವಾ ಮತ್ಸ್ಯಪತಿರ್ಜಿತಾನ್ ಕುರೂನ್ |
ಮುಮೋದ ಪುತ್ರೇಣ ಜಿತಾ ಇತಿ ಸ್ಮ
ತದಾಽಽಹ ಷಂಡೇನ ಜಿತಾನ್ ಯುಧಿಷ್ಠಿರಃ ॥45॥
ಅರ್ಜುನ ಭೀಷ್ಮನನ್ನು ವಿರಥನನ್ನಾಗಿ ಮಾಡಿ ಹಿಂತಿರುಗಿದ, ವಿರಾಟರಾಜ ಕೌರವರು ಪರಾಜಿತರಾದುದನ್ನು ಕೇಳಿ ತನ್ನ ಮಗನಿಂದಲೇ ಅವರು ಪರಾಜಿತರಾದರೆಂದುಕೊಂಡು ಹಿಗ್ಗಿದ. ಆಗ ಯುಧಿಷ್ಠಿರನೆಂದ, `ಕೌರವರು ಬೃಹನ್ನಳೆಯಿಂದ ಪರಾಜಿತರಾದರು`.
ತದಾ ಕ್ರುದ್ಧಃ ಪ್ರಾಹರತ್ ತಂ ವಿರಾಟಃ
ಸೋಽಕ್ಷೇಣ ತದ್ ಭೀಮಧನಂಜಯಾಭ್ಯಾಮ್ |
ಶ್ರುತಂ ತದಾ ಕುಪಿತೌ ತೌ ನಿಶಾಮ್ಯ
ನ್ಯವಾರಯತ್ ತಾವಪಿ ಧರ್ಮಸೂನುಃ ॥46॥
ಆಗ ವಿರಾಟರಾಜ ಕೋಪಗೊಂಡು ಲೆತ್ತದಿಂದ ಧರ್ಮರಾಜನನ್ನು ಹೊಡೆದ. ಇದನ್ನು ಭೀಮಾರ್ಜುನರು ಕೇಳಿದರು. ಕುಪಿತರಾದರು. ಧರ್ಮರಾಜ ನೋಡಿ ಅವರನ್ನು ತಡೆದ.
ನಿಜಸ್ವರೂಪೇಣ ಸಮಾಸ್ಥಿತಾನ್ ನೋ
ಯದಿ ಸ್ಮ ನಾಸೌ ಪ್ರಣಿಪಾತಪೂರ್ವಕಮ್ |
ಕ್ಷಮಾಪಯೇದ್ ವಧ್ಯ ಇತ್ಯಾತ್ಮರೂಪಂ
ಸಮಾಸ್ಥಿತಾಸ್ತಸ್ಥುರಥಾಪರೇ ದಿನೇ ॥47॥
ನಿಜರೂಪದಿಂದ ನಾವು ಕುಳಿತಾಗ ವಿರಾಟ ನಮಗೆ ತಲೆಬಾಗಿ ಕ್ಷಮೆ ಕೇಳದಿದ್ದರೆ ಆಗ ವಧಾರ್ಹನೆನಿಸುತ್ತಾನೆ ಎಂದ ಧರ್ಮರಾಜ. ಮರುದಿನ ಪಾಂಡವರು ನಿಜರೂಪ ತಳೆದುನಿಂತರು.
* * * *
ಅರವತ್ತೆಂಟನೆಯ ಅಧ್ಯಾಯ
ಉತ್ತರನ ವಿಜಯ ವಿಷಯದಲ್ಲಿ ಕಂಕ-ವಿರಾಟರ ವಿವಾದ. ವಿರಾಟನಿಂದ ತಾಡಿತನಾದ ಕಂಕನ ಮುಖದಿಂದ ರಕ್ತಸ್ರಾವ. ಸೈರಂಧ್ರಿಯಿಂದ ತನ್ನ ಉತ್ತರೀಯದಲ್ಲಿ ರಕ್ತಗ್ರಹಣ.
ವೈಶಂಪಾಯನಃ
ಅವಜಿತ್ಯ ಧನಂ ಚೈವ ವಿರಾಟೋ ವಾಹಿನೀಪತಿಃ |
ಪ್ರಾವಿಶನ್ನಗರಂ ಹೃಷ್ಟಶ್ಚತುರ್ಭಿಃ ಸಹ ಪಾಂಡವೈಃ ॥1॥
ವೈಶಂಪಾಯನ ಸೇನಾನಾಯಕನಾದ ವಿರಾಟನು (ದಕ್ಷಿಣದಿಕ್ಕಿನಲ್ಲಿ) ತನ್ನ ಗೋಧನವನ್ನು ಜಯಿಸಿ (ಇನ್ನೊಂದು ದಿಕ್ಕಿನಿಂದ ಬಂದ) ನಾಲ್ಕು ಜನ ಪಾಂಡವರ ಜೊತೆಯಲ್ಲಿ ಸಂತೋಷದಿಂದ ನಗರವನ್ನು ಪ್ರವೇಶಿಸಿದನು.
ಜಿತ್ವಾ ತ್ರಿಗರ್ತಾನ್ ಸಂಗ್ರಾಮೇ ಗಾಶ್ಚೈವಾನಾಯ್ಯ ಕೇವಲಾಃ |
ಅಶೋಭತ ಮಹಾರಾಜಃ ಸಹ ಪಾರ್ಥೈಃ ಶ್ರಿಯಾ ವೃತಃ ॥2॥
ಮಹಾರಾಜನಾದ ಅವನು ಯುದ್ಧದಲ್ಲಿ ತ್ರಿಗರ್ತರನ್ನು ಗೆದ್ದು ತನ್ನ ಗೋವುಗಳನ್ನು ತೆಗೆದುಕೊಂಡು ಬಂದು ತನ್ನ ಸಂಪತ್ತಿನಿಂದ ಒಡಗೂಡಿ ಪಾಂಡವರ ಜೊತೆಯಲ್ಲಿ ಶೋಭಿಸಿದನು.
ತಮಾಸನಗತಂ ವೀರಂ ಸುಹೃದಾಂ ನಂದವರ್ಧನಮ್ |
ಉಪತಸ್ಥುಃ ಪ್ರಕೃತಯಃ ಸಮಸ್ತಾ ಬ್ರಾಹ್ಮಣೈಃ ಸಹ ॥3॥
ತನ್ನ ಆಸನದಲ್ಲಿ ಕುಳಿತಿದ್ದ ಸುಹೃದರ ಸಂತೋಷವರ್ಧನನಾದ ಆ ವೀರನನ್ನು ಎಲ್ಲಾ ಪ್ರಜೆಗಳು ಬ್ರಾಹ್ಮಣರ ಜೊತೆಯಲ್ಲಿ ಸ್ತೋತ್ರ ಮಾಡಿದರು.
ಸಭಾಜಿತಃ ಸ ತಾಭಿಸ್ತು ಪ್ರತಿನಂದ್ಯ ಸ ಮತ್ಸ್ಯರಾಟ್ |

ವಿಸರ್ಜಯಾಮಾಸ ತದಾ ದ್ವಿಜಾಂಶ್ಚ ಪ್ರಕೃತೀಸ್ತದಾ ॥4॥
ಅವರಿಂದ ಪೂಜಿತನಾದ ಮತ್ಸ್ಯರಾಜನು ಆಗ ಆ ಬ್ರಾಹ್ಮಣರನ್ನೂ ಮತ್ತು ಪ್ರಜೆಗಳನ್ನೂ ಅಭಿನಂದಿಸಿ ಅವರನ್ನು ಕಳುಹಿಸಿಕೊಟ್ಟನು.

ತತಃ ಸ ರಾಜಾ ಮತ್ಸ್ಯಾನಾಂ ವಿರಾಟೋ ವಾಹಿನೀಪತಿಃ ।
ಉತ್ತರಂ ಪರಿಪಪ್ರಚ್ಛ ಕ್ವ ಯಾತ ಇತಿ ಚಾಬ್ರವೀತ್ ॥5॥
ಅನಂತರ ಮತ್ಸ್ಯರ ನಾಯಕರಾದ ವಿರಾಟರಾಜನು ಉತ್ತರನ ವಿಷಯದಲ್ಲಿ ಅವನು ಎಲ್ಲಿ ಹೋಗಿದ್ದಾನೆ ಎಂದು ಪ್ರಶ್ನೆಯನ್ನು ಮಾಡಿದನು.
ಆಚಖ್ಯುಸ್ತತ್ರ ಸಂಹೃಷ್ಟಾಃ ಸ್ತ್ರಿಯಃ ಕನ್ಯಾಶ್ಚ ವೇಶ್ಮನಿ ।
ಅಂತಃಪುರಚರಾಶ್ಚೈವ ಕುರುಭಿರ್ಗೋಧನಂ ಹೃತಮ್ ॥6॥
ತಾನ್ ಜೇತುಮತಿಸಂರಬ್ಧ ಏಕ ಏವಾತಿಸಾಹಸಾತ್ ।
ಬೃಹನ್ನಳಾಸಹಾಯಶ್ಚ ನಿರ್ಯಾತಃ ಪೃಥಿವೀಂಜಯಃ ॥7॥
ಉಪಾಯಾತಾನತಿರಥಾನ್ ದ್ರೋಣಂ ಶಾಂತನವಂ ಕೃಪಮ್ ।
ಕರ್ಣಂ ದುರ್ಯೋಧನಂ ಚೈವ ದ್ರೋಣಪುತ್ರಂ ಚ ಷಡ್ರಥಾನ್ ॥8॥
ಆಗ ಹಿರಿಯರೂ, ಕನ್ಯೆಯರೂ ಮತ್ತು ಅಂತಃಪುರದಲ್ಲಿ ಇದ್ದ ಸೇವಕರೂ ಸಹ ಕುರುಗಳಿಂದ ಗೋಧನವು ಅಪಹೃತವಾಯಿತು. ಅವರನ್ನು ಗೆಲ್ಲಲು ಒಬ್ಬನೇ ಬಹಳ ಕೋಪಗೊಂಡು, ಬಹಳ ಸಾಹಸದಿಂದ ಬೃಹನ್ನಳೆಯನ್ನು ಸಹಾಯವಾಗಿ ತೆಗೆದುಕೊಂಡು ಭೂಮಿಂಜಯನು ಹೊರಟನು. ಯುದ್ಧಮಾಡಲು ಬಂದ ಅತಿರಥರಾದ ದ್ರೋಣ, ಭೀಷ್ಮ, ಕೃಪ, ಕರ್ಣ, ದುರ್ಯೋಧನ ಮತ್ತು ಅಶ್ವತ್ಥಾಮ ಈ ಷಡ್ರಥರ ಜೊತೆಯಲ್ಲಿ (ಯುದ್ಧಮಾಡಲು ಹೋಗಿದ್ದಾನೆ) ಎಂದು ಹೇಳಿದರು.
ತತೋ ವಿರಾಟಃ ಪರಮಾಭಿತಪ್ತಃ
ಪುತ್ರಂ ನಿಶಮ್ಯೈಕರಥೇನ ಯಾತಮ್ ।
ಬೃಹನ್ನಳಾಸಾರಥಿಮಾಜಿಮರ್ದನಂ
ಪ್ರೋವಾಚ ಸರ್ವಾನಥ ಮಂತ್ರಿಮುಖ್ಯಾನ್ ॥9॥
ಆಗ ವಿರಾಟನು ಅರಿಮರ್ದನನಾದ ತನ್ನ ಪುತ್ರನು ಬೃಹನ್ನಳೆಯನ್ನು ಸಾರಥಿಯನ್ನಾಗಿ ಮಾಡಿಕೊಂಡು ಏಕರಥದಿಂದ ಹೋಗಿದ್ದಾನೆಂದು ಕೇಳಿ ಬಹಳ ದುಃಖದಿಂದ ಕೂಡಿದವನಾಗಿ ಎಲ್ಲಾ ಮಂತ್ರಿಶ್ರೇಷ್ಠರನ್ನು ಕುರಿತು ಹೀಗೆ ಹೇಳಿದನು.
ಗವಾಂ ಶತಸಹಸ್ರಾಣಿ ಅಭಿಭೂಯ ಮಮಾತ್ಮಜಮ್ ।
ಕುರವಃ ಕಾಲಯಂತಿ ಸ್ಮ ಸರ್ವೇ ಯುದ್ಧವಿಶಾರದಾಃ ॥10॥
ಯುದ್ಧವಿಶಾರದರಾದ ಎಲ್ಲಾ ಕೌರವರೂ ನನ್ನ ಪುತ್ರನನ್ನು ಪರಾಭವಗೊಳಿಸಿ ನನ್ನ ಲಕ್ಷಾಂತರ ಗೋವುಗಳನ್ನು ಧೂಳೀಪಟ ಮಾಡುತ್ತಿದ್ದಾರೆ.
ತಸ್ಮಾದ್ ಗಚ್ಛಂತು ಮೇ ಯೋಧಾ ಬಲೇನ ಮಹತಾ ವೃತಾಃ ।
ಉತ್ತರಸ್ಯ ಪರೀಪ್ಸಾರ್ಥಂ ಯೇ ತ್ರಿಗರ್ತೈರವಿಕ್ಷತಾಃ ॥11॥
ಆದ್ದರಿಂದ ತ್ರಿಗರ್ತರ ಜೊತೆಯ ಯುದ್ಧದಲ್ಲಿ ಗಾಯಗೊಳ್ಳದ ನನ್ನ ಯೋಧರೆಲ್ಲರೂ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಉತ್ತರನನ್ನು ರಕ್ಷಿಸಲು ಹೋಗಲಿ.
ವೈಶಂಪಾಯನಃ
ಹಯಾಂಶ್ಚ ನಾಗಾಂಶ್ಚ ರಥಾಂಶ್ಚ ಶೀಘ್ರಂ
ವಾದಿತ್ರಸಂಘಾಂಶ್ಚ ತತಃ ಪ್ರಭೂತಾನ್ ।
ಪ್ರಸ್ಥಾಪಯಾಮಾಸ ಸುತಸ್ಯ ಹೇತೋಃ
ವಿಚಿತ್ರವಸಶತ್ರಭರಣೋಪಪನ್ನಮ್ ॥12॥
ವೈಶಂಪಾಯನ ಆಗ ವಿರಾಟನು ಅಶ್ವಗಳನ್ನೂ, ಗಜಗಳನ್ನೂ, ರಥಗಳನ್ನೂ ಬಹಳವಾದ ವಾದ್ಯಸಮೂಹಗಳನ್ನೂ ವಿಚಿತ್ರವಸಶತ್ರಭರಣಗಳಿಂದ ಅಲಂಕೃತವಾದುದನ್ನಾಗಿ ಮಾಡಿ ಪುತ್ರನ ರಕ್ಷಣೆಯ ಸಲುವಾಗಿ ಶೀಘ್ರವಾಗಿ ಕಳುಹಿಸಿಕೊಟ್ಟನು.
ಏವಂ ಸ ರಾಜಾ ಮತ್ಸ್ಯಾನಾಂ ಮಹಾನಕ್ಷೋಹಿಣೀಪತಿಃ ।
ವ್ಯಾದಿದೇಶಾಥ ಸ ಕ್ಷಿಪ್ರಂ ವಾಹಿನೀಂ ಚತುರಂಗಿಣೀಮ್ ॥13॥
ಹೀಗೆ ಮತ್ಸ್ಯರ ದೊಡ್ಡ ಅಕ್ಷೋಹಿಣೀ ಸೇನೆಯ ಅಧಿಪತಿಯಾದ ವಿರಾಟರಾಜನು ಶೀಘ್ರವಾಗಿ ಚತುರಂಗಸಹಿತವಾದ ಸೈನ್ಯಕ್ಕೆ ಆಜ್ಞೆಯನ್ನು ಮಾಡಿದನು.
ಕುಮಾರಮಾಶು ಜಾನೀತ ಯದಿ ಜೀವತಿ ವಾ ನ ವಾ ।
ಯಸ್ಯ ಯಂತಾ ಗತಃ ಷಂಡೋ ಮನ್ಯೇಽಹಂ ನ ಚ ಜೀವತಿ ॥14॥
ನನ್ನ ಕುಮಾರನು ಬದುಕಿದ್ದಾನೆಯೋ, ಇಲ್ಲವೋ ಎಂದು ತಿಳಿಯಿರಿ. ಯಾವನಿಗೆ ಷಂಡನು ಸಾರಥಿಯೋ ಅವನು ಬದುಕಿರುವುದಿಲ್ಲವೆಂದು ನನಗೆ ತೋರುತ್ತದೆ.
ವೈಶಂಪಾಯನಃ
ತಮಬ್ರವೀದ್ ಧರ್ಮಸುತೋ ವಿರಾಟಮ್
ಆರ್ತಂ ವಿದಿತ್ವಾ ಕುರುಭಿಃ ಪ್ರತಪ್ತಮ್ ॥15॥
ಬೃಹನ್ನಳಾ ಸಾರಥಿಶ್ಚೇನ್ನರೇಂದ್ರ

ಪರೇ ನ ನೇಷ್ಯಂತಿ ತವಾದ್ಯ ಗಾಶ್ಚ ॥16॥
ವೈಶಂಪಾಯನ ವಿರಾಟನು ಕುರುಗಳ ಕೈಗೆ ತನ್ನ ಮಗನು ಸಿಕ್ಕಿದ್ದಾನೆ ಎಂದು ಯೋಚಿಸಿ ಆರ್ತನಾಗಿರುವುದನ್ನು ತಿಳಿದು ಯುಧಿಷ್ಠಿರನು ನರೇಂದ್ರನೇ, ಬೃಹನ್ನಳೆಯು ಸಾರಥಿಯಾಗಿದ್ದರೆ ಶತ್ರುಗಳು ಈ ದಿನ ನಿನ್ನ ಗೋವುಗಳನ್ನು ತೆಗೆದುಕೊಂಡು ಹೋಗುವುದಿಲ್ಲ ಎಂದು ಹೇಳಿದನು.
ಸರ್ವಾನ್ ಮಹೀಪಾನ್ ಸಹಿತಾನ್ ಕುರೂಂಶ್ಚ
ತಥೈವ ದೇವಾಸುರನಾಗಯಕ್ಷಾನ್ |
ಅಲಂ ವಿಜೇತುಂ ಸಮರೇ ಸುತಸ್ತೇ
ಸ್ವನುಷ್ಠಿತಃ ಸಾರಥಿನಾ ಹಿ ತೇನ ॥17॥
ಬೃಹನ್ನಳೆಯು ಸರಿಯಾಗಿ ಸಾರಥ್ಯವನ್ನು ಮಾಡುವಾಗ ನಿನ್ನ ಪುತ್ರನು ಎಲ್ಲ ರಾಜರನ್ನೂ ಒಟ್ಟಾದ ಕುರುಗಳನ್ನೂ ಅದರಂತೆ ದೇವಾಸುರನಾಗಯಕ್ಷರನ್ನೂ ಯುದ್ಧದಲ್ಲಿ ಗೆಲ್ಲಲು ಸಮರ್ಥನಾಗುತ್ತಾನೆ.
ಸರ್ವಥಾ ಕುರವಶ್ಚಾಪಿ ಯೇ ಚಾನ್ಯೇ ವಸುಧಾಧಿಪಾಃ |
ತ್ರಿಗರ್ತಾನ್ ನಿರ್ಜಿತಾನ್ ಶ್ರುತ್ವಾ ನ ಸ್ಥಾಸ್ಯಂತಿ ಕಥಂಚನ ॥18॥
ಕುರುಗಳು ಮತ್ತು ಉಳಿದ ರಾಜರು ತ್ರಿಗರ್ತರು ಪೂರ್ಣವಾಗಿ ಯುದ್ಧದಲ್ಲಿ ನಿರ್ಜಿತರಾದರೆಂದು ಕೇಳಿ ರಣರಂಗದಲ್ಲಿ ನಿಲ್ಲುವುದಿಲ್ಲ (ಎಂದು ಹೇಳಿದನು).
ವೈಶಂಪಾಯನಃ
ಅಥೋತ್ತರೇಣ ಪ್ರಹಿತಾ ದೂತಾಸ್ತೇ ಶೀಘ್ರಗಾಮಿನಃ |
ವಿರಾಟನಗರಂ ಪ್ರಾಪ್ಯ ಜಯಂ ಪ್ರಾವೇದಯಂಸ್ತದಾ ॥19॥
ವೈಶಂಪಾಯನ ಆಗ ಉತ್ತರನಿಂದ ಕಳುಹಿಸಲ್ಪಟ್ಟ ಶೀಘ್ರಗಾಮಿಗಳಾದ ಆ ದೂತರು ವಿರಾಟನಗರವನ್ನು ಪ್ರವೇಶಿಸಿ ಉತ್ತರನ ಜಯವನ್ನು ಘೋಷಿಸಿದರು.
ರಾಜಾನಂ ತತ ಆಚಖ್ಯುರ್ಮಂತ್ರಿಭಿರ್ಜಯಮುತ್ತಮಮ್ |
ಪರಾಜಯಂ ಕುರೂಣಾಂ ಚಾಪ್ಯುಪಾಯಾಂತಂ ತಥೋತ್ತರಮ್ ॥20॥
ಅನಂತರ ಮಂತ್ರಿಗಳಿಂದ ಸಹಿತನಾದ ರಾಜನ ಬಳಿಗೆ ಬಂದು ಕುರುಗಳ ಪರಾಜಯವನ್ನೂ, ಉತ್ತರನ ಶ್ರೇಷ್ಠವಾದ ಜಯವನ್ನೂ ಮತ್ತು ಉತ್ತರನು ಸಮೀಪದಲ್ಲಿಯೇ ಬರುತ್ತಿದ್ದಾನೆ ಎಂಬ ವಿಷಯವನ್ನೂ ತಿಳಿಸಿದರು.
ಸರ್ವಾ ವಿನಿರ್ಜಿತಾ ಗಾವಃ ಕುರವಶ್ಚ ಪರಾಜಿತಾಃ |
ಉತ್ತರಃ ಸಹ ಸೂತೇನ ಕುಶಲೀ ಚ ಪರಂತಪಃ ॥21॥
ರಾಜನೇ, ಎಲ್ಲ ಗೋವುಗಳೂ ಜಯಿಸಲ್ಪಟ್ಟಿವೆ. ಕುರುಗಳು ಪರಾಜಿತರಾಗಿದ್ದಾರೆ. ಪರಂತಪನಾದ ಉತ್ತರನು ಸೂತನ ಜೊತೆಯಲ್ಲಿ ಕ್ಷೇಮದಿಂದಿದ್ದಾನೆ (ಎಂದು ಹೇಳಿದರು).
ಕಂಕಃ
ದಿಷ್ಟ್ಯಾ ತೇ ನಿರ್ಜಿತಾ ಗಾವಃ ಕುರವಶ್ಚ ಪರಾಜಿತಾಃ |
ದಿಷ್ಟ್ಯಾ ತೇ ವಿಜಯೀ ಪುತ್ರಃ ಶ್ರೂಯತೇ ಪಾರ್ಥಿವರ್ಷಭ ॥22॥
ನಾತ್ಯದ್ಭುತಮಿದಂ ಮನ್ಯೇ ಯತ್ ತೇ ಪುತ್ರೋಽಜಯತ್ ಕುರೂನ್ |
ಧ್ರುವ ಏವ ಜಯಸ್ತಸ್ಯ ಯಸ್ಯ ಯಂತಾ ಬೃಹನ್ನಳಾ ॥23॥
ದೇವೇಂದ್ರಸಾರಥಿಶ್ಚೈವ ಮಾತಲಿರ್ಲಘುವಿಕ್ರಮಃ |
ಕೃಷ್ಣಸ್ಯ ಸಾರಥಿಶ್ಚೈವ ನ ಬೃಹನ್ನಳಯಾ ಸಮೌ ॥24॥
ಕಂಕ ದೇವರ ದಯದಿಂದ ಕುರುಗಳು ಪರಾಜಿತರಾಗಿದ್ದಾರೆ ಮತ್ತು ಗೋವುಗಳು ನಿರ್ಜಿತವಾಗಿವೆ. ಪಾರ್ಥಿವರ್ಷಭನೇ, ದೇವರ ದಯದಿಂದ ನಿನ್ನ ಪುತ್ರನು ಜಯಶಾಲಿಯಾಗಿದ್ದಾನೆ ಎಂದು ಕೇಳುತ್ತಿದೆ. ನಿನ್ನ ಪುತ್ರನು ಕುರುಗಳನ್ನು ಜಯಿಸಿದ್ದಾನೆ ಎಂಬ ವಿಷಯವು ಆಶ್ಚರ್ಯಕರವಲ್ಲ ಎಂದು ತಿಳಿಯುತ್ತೇನೆ. ಯಾವನಿಗೆ ಬೃಹನ್ನಳೆಯು ಸಾರಥಿಯಾಗಿರುತ್ತಾನೆಯೋ ಅವನಿಗೆ ಜಯವು ನಿಶ್ಚಿತವಾದುದು. ದೇವೇಂದ್ರನ ಸಾರಥಿಯಾದ ಮಾತಲಿಯಾಗಲೀ, ಶೀಘ್ರಪರಾಕ್ರಮವನ್ನು ಹೊಂದಿದ ಕೃಷ್ಣನ ಸಾರಥಿಯಾದ ದಾರುಕನಾಗಲೀ ಬೃಹನ್ನಳೆಗೆ ಸಮನಾದವರಲ್ಲ.
ವೈಶಂಪಾಯನಃ
ತತೋ ವಿರಾಟೋ ನೃಪತಿಃ ಸಂಪ್ರಹೃಷ್ಟತನೂರುಹಃ |
ಶ್ರುತ್ವಾ ತು ವಿಜಯಂ ತಸ್ಯ ಕುಮಾರಸ್ಯಾಮಿತೌಜಸಃ ॥25॥
ಸಂತೋಷಯಿತ್ವಾ ದೂತಾಂಸ್ತಾನ್ ಧನರತ್ನೈಶ್ಚ ಸರ್ವಶಃ ॥26॥
ಗತೇ ತ್ವನುಬಲೇ ತಸ್ಮಿನ್ ದೂತವಾಕ್ಯಂ ನಿಶಮ್ಯ ತು |
ಉತ್ತರಸ್ಯ ಜಯಂ ಪ್ರೀತೋ ವಿರಾಟಃ ಪ್ರತ್ಯಭಾಷತ ॥27॥
ವೈಶಂಪಾಯನ ಆಗ ವಿರಾಟರಾಜನು ಅಮಿತಪರಾಕ್ರಮಿಯಾದ ತನ್ನ ಕುಮಾರನ ವಿಜಯವಾರ್ತೆಯನ್ನು ಕೇಳಿ ರೋಮಾಂಚಗೊಂಡವನಾಗಿ ಆ ಎಲ್ಲ ದೂತರನ್ನು ಧನರತ್ನಗಳಿಂದ ಸಂತೋಷಪಡಿಸಿ ಅವರೆಲ್ಲರೂ ಹೋದ ಮೇಲೆ ದೂತವಾಕ್ಯವನ್ನು ಕೇಳಿದ ಅವನು ಸಂತೋಷದಿಂದ ಉತ್ತರನ ಜಯದ ವಿಷಯದಲ್ಲಿ (ಜಯವನ್ನು ಆಚರಿಸಲು) ಹೀಗೆ ಮಾತನಾಡಿದನು.
ರಾಜಮಾರ್ಗಾಃ ಕ್ರಿಯಂತಾಂ ಮೇ ಪತಾಕಾಭಿರಲಂಕೃತಾಃ |

ಪುಷ್ಪೋಪಹಾರೈರರ್ಚ್ಯಂತಾಂ ದೇವತಾಶ್ಚಾಪಿ ಸರ್ವಶಃ ॥28॥
ರಾಜಮಾರ್ಗಗಳು ಪತಾಕೆಗಳಿಂದ ಅಲಂಕರಿಸಲ್ಪಡಲಿ. ಎಲ್ಲ ದೇವಾಲಯಗಳಲ್ಲಿ ದೇವತೆಗಳು ಪುಷ್ಪೋಪಹಾರಗಳಿಂದ ಅರ್ಚಿಸಲ್ಪಡಲಿ.
ಕುಮಾರಾ ಯೋಧಮುಖ್ಯಾಶ್ಚ ಗಣಿಕಾಶ್ಚ ಸ್ವಲಂಕೃತಾಃ |
ವಾದಿತ್ರಾಣಿ ಚ ಸರ್ವಾಣಿ ಪ್ರತ್ಯುದ್ಯಾಂತು ಸುತಂ ಮಮ ॥29॥
ಕುಮಾರರೂ, ಯೋಧಶ್ರೇಷ್ಠರೂ, ಅಲಂಕೃತರಾದ ವೇಶ್ಯೆಯರೂ ಮತ್ತು ಎಲ್ಲ ವಾದ್ಯಗಳೂ ನನ್ನ ಪುತ್ರನನ್ನು ಎದುರುಗೊಳ್ಳಲು ಹೊರಡಲಿ.
ಭವಂತು ತೇ ಲಬ್ಧಜಯೇ ಸುತೇ ಮೇ
ಪೌರಾಶ್ಚ ನಾರ್ಯಶ್ಚ ಪುರೇ ಚ ಮರ್ತ್ಯಾಃ |
ತೇ ಶುಕ್ಲವಸತ್ರಃ ಪ್ರಭವಂತು ಮಾರ್ಗೇ
ಸುಗಂಧಮಾಲ್ಯಾಭರಣಾಶ್ಚ ನಾರ್ಯಃ ॥30॥
ನನ್ನ ಪುತ್ರನು ಜಯವನ್ನು ಪಡೆದಿರುವಾಗ ನನ್ನ ರಾಜಧಾನಿಯಲ್ಲಿ ಸ್ತ್ರೀ ಪುರುಷರೆಲ್ಲರೂ ಶುಕ್ಲವಸ್ತ್ರವನ್ನು ಧರಿಸಿ ನಾರಿಯರು ವಿಶೇಷವಾಗಿ ಸುವರ್ಣ ಮಾಲ್ಯಾಭರಣಗಳಿಂದ ಅಲಂಕೃತರಾಗಿ ಮಾರ್ಗದಲ್ಲಿ ನಿಲ್ಲಲಿ.
ಭಜಂತು ಸರ್ವಾ ಗಣಿಕಾಃ ಸುತಂ ಮೇ
ನಾರ್ಯಶ್ಚ ಕನ್ಯಾಃ ಸಹಕನ್ಯಕಾಶ್ಚ |
ಸ್ವಲಂಕೃತಾಸ್ತಾ ಸುಭಗಾ ಸುವೇಷಾಃ
ಪುತ್ರಸ್ಯ ಪಂಥಾನಮನುವ್ರಜಂತು ॥31॥
ಎಲ್ಲಾ ವೇಶ್ಯೆಯರು, ಸ್ತ್ರೀಯರು, ದಾಸಿಯರಾದ ಕನ್ಯೆಯರು, ಅವರ ಸ್ನೇಹಿತೆಯರು, ಸುಂದರಿಯರಾದ ಇವರೆಲ್ಲರೂ ಅಲಂಕಾರವನ್ನು ಮಾಡಿಕೊಂಡು ನನ್ನ ಪುತ್ರನ ಮಾರ್ಗವನ್ನು ಅನುಸರಿಸಿ ಹೋಗಲಿ.
ಸಘಂಟಂ ಸಾಂಕುಶಂ ಶೀಘ್ರಂ ಮತ್ತಮಾರುಹ್ಯ ವಾರಣಮ್ |
ಶೃಂಗಾಟಕೇಷು ಸರ್ವೇಷು ಸಮಾಖ್ಯಾತು ಜಯಂ ಮಮ ॥32॥
ಘಂಟೆ ಮತ್ತು ಅಂಕುಶಗಳಿಂದ ಅಲಂಕೃತವಾದ ಮದಗಜವನ್ನೇರಿ ಎಲ್ಲಾ ಚತುಷ್ಪಥಗಳಲ್ಲಿ ನನ್ನ ಪುತ್ರನ ಜಯವನ್ನು ಶೀಘ್ರವಾಗಿ ಘೋಷಿಸಲಿ.
ಉತ್ತರಾ ಚ ಕುಮಾರೀಭಿರ್ಬಹ್ವಾಭರಣಭೂಷಿತಾ |
ಸಖೀಂ ವಿಜಿತಸಂಗ್ರಾಮಾಂ ಪ್ರತ್ಯುದ್ಯಾತು ಬೃಹನ್ನಳಾಮ್ ॥33॥
ಉತ್ತರೆಯು ಅನೇಕ ಆಭರಣಗಳಿಂದ ಭೂಷಿತಳಾಗಿ ತನ್ನ ಸ್ನೇಹಿತೆಯರಾದ ಕುಮಾರಿಯರಿಂದ ಸಹಿತಳಾಗಿ ತನ್ನ ಸಖಿಯಾದ ಸಂಗ್ರಾಮದಲ್ಲಿ ಗೆದ್ದು ಹಿಂದಿರುಗುವ ಬೃಹನ್ನಳೆಯನ್ನು ಎದುರುಗೊಳ್ಳಲಿ (ಎಂದು ಹೇಳಿದನು).
ವೈಶಂಪಾಯನಃ
ಶ್ರುತ್ವಾ ತು ವಚನಂ ರಾಜ್ಞಃ ಪೌರಾಃ ಸ್ವಸ್ತಿಕಪಾಣಯಃ |
ಸರ್ವೇ ಸುಪ್ರೀತಮನಸಃ ಪ್ರತಿಜಗ್ಮುರ್ಯಥೋಚಿತಮ್ ॥34॥
ವೈಶಂಪಾಯನ ರಾಜನ ಮಾತುಗಳನ್ನು ಕೇಳಿ ಪೌರರೆಲ್ಲರೂ ಸಂತೋಷಗೊಂಡು ಕೈಯಲ್ಲಿ ಮಂಗಳದ್ರವ್ಯಗಳನ್ನು ಹಿಡಿದು ಯಥಾಯೋಗ್ಯವಾಗಿ ಹೊರಟರು.
ಸೂತಾಶ್ಚ ಸರ್ವೇ ಸಹಮಾಗಧಾಶ್ಚ
ದೃಷ್ಟ್ವಾ ವಿರಾಟಸ್ಯ ಪುರಂ ಜನೌಘಾಃ |
ಭೇರೀಶ್ಚ ತೂರ್ಯಾಣಿ ಚ ವಾರಿಜಾಂಶ್ಚ
ವೇಷೈಃ ಪರಾರ್ಧ್ಯೈಃ ಪ್ರಮದಾಜನಾಶ್ಚ ॥35॥
ವಂದಿಪ್ರವಾದಾಃ ಪಣವಾದಿಕಾಶ್ಚ
ತಥೈವ ವಾದ್ಯಾನಿ ಚ ವಂಶಶಬ್ದಾಃ |
ಸಕಂಸತಾಲಂ ಮಧುರಂ ಚ ಗೀತಮ್
ಆದಾಯ ನಾರ್ಯೋ ನಗರಾನ್ನಿರೀಯುಃ ॥36॥
ವಿರಾಟನ ಪಟ್ಟಣವು ಅಲಂಕೃತವಾಗುತ್ತಿರುವುದನ್ನು ನೋಡಿ ಜನರ ಸಮೂಹವೂ, ಸೂತರೂ ಮತ್ತು ಎಲ್ಲಾ ಮಾಗಧರೂ ಭೇರಿ, ಶಂಖ ಮೊದಲಾದ ವಾದ್ಯಗಳನ್ನೂ, ಬಹಳ ಶ್ರೇಷ್ಠವಾದ ವೇಷವನ್ನು ಧರಿಸಿದ ಸ್ತ್ರೀಯರನ್ನೂ, ಹೊಗಳುವ ವಂದಿ ಮಾಗಧರನ್ನೂ, ಪಣವಾದಿ ವಾದ್ಯಗಳನ್ನೂ, ಮಧುರ ಗೀತೆಗಳನ್ನೂ, ಕಂಚಿನ ತಾಳಗಳನ್ನೂ ಇನ್ನೂ ಅನೇಕ ವಿಧವಾದ ವಂಶವಾದ್ಯಗಳನ್ನೂ ಜೊತೆ ಮಾಡಿಕೊಂಡು ನಾರಿಯರು ನಗರದಿಂದ ಹೊರಗೆ ಹೊರಟರು.
ಪ್ರತ್ಯುದ್ಯಯುಃ ಪುತ್ರಮನಂತವೀರ್ಯಂ
ತೇ ಬ್ರಾಹ್ಮಣಾಃ ಶಾಂತಿಪರಾಃ ಪ್ರಧಾನಾಃ |
ಸ್ವಾಧ್ಯಾಯವೇದಾಧ್ಯಯನಕ್ರಮಜ್ಞಾಃ
ಸ್ವಸ್ತಿಕ್ರಿಯಾಗೀತಜಯಪ್ರಧಾನಾಃ ॥38॥
ಶಾಂತಿಪರರಾದ ಸ್ವಾಧ್ಯಾಯ ವೇದಾಧ್ಯಯನ ಕ್ರಮಗಳಲ್ಲಿ ನಿಷ್ಣಾತರಾದ ಸ್ವಸ್ತಿಕ್ರಿಯೆಗಳಲ್ಲಿಯೂ ಜಯವನ್ನು ಗಾನ ಮಾಡುವುದರಲ್ಲಿಯೂ ಪ್ರಧಾನರಾದ ಬ್ರಾಹ್ಮಣರು ಅನಂತ ಪರಾಕ್ರಮಿಯಾದ ಉತ್ತರನನ್ನು ಎದುರುಗೊಳ್ಳಲು ಹೊರಟರು.

ಪ್ರಸ್ಥಾಪ್ಯ ಸೇನಾಂ ಕನ್ಯಾಶ್ಚ ಗಣಿಕಾಶ್ಚ ಸ್ವಲಂಕೃತಾಃ |
ಮತ್ಸ್ಯರಾಜೋ ಮಹಾಪ್ರಾಜ್ಞಃ ಪ್ರಹೃಷ್ಟ ಇದಮಬ್ರವೀತ್ ॥38॥
ಅಕ್ಷಾನಾಹರ ಸೈರಂಧ್ರಿ ಕಂಕ ದ್ಯೂತಂ ಪ್ರವರ್ತತಾಮ್ ॥39॥
ಮಹಾಪ್ರಾಜ್ಞನಾದ ಮತ್ಸ್ಯರಾಜನು ಸೈನ್ಯವನ್ನು ಚೆನ್ನಾಗಿ ಅಲಂಕೃತರಾದ ಕನ್ಯೆಯರನ್ನೂ, ಗಣಕೆಯರನ್ನೂ ಕಳುಹಿಸಿಕೊಟ್ಟು ಸೈರಂಧ್ರಿಯೇ, ಪಗಡೆಗಳನ್ನು ತೆಗೆದುಕೊಂಡು ಬಾ. ಕಂಕನೇ ದ್ಯೂತವನ್ನು ಆಡೋಣ ಎಂದು ಹೇಳಿದನು.
ವೈಶಂಪಾಯನಃ
ತಂ ತಥಾವಾದಿನಂ ದೃಷ್ಟ್ವಾ ಪಾಂಡವಃ ಪ್ರತ್ಯಭಾಷತ ॥40॥
ನ ದೇವಿತವ್ಯಂ ಹೃಷ್ಟೇನ ಕಿತವೇನೇತಿ ನಃ ಶ್ರುತಮ್ |
ನ ತ್ವಾಮದ್ಯ ಮುದಾ ಯುಕ್ತಮಹಂ ದೇವಿತುಮುತ್ಸಹೇ ॥41॥
ಪ್ರಿಯಂ ತು ತೇ ಚಿಕೀರ್ಷಾಮಿ ವರ್ತತಾಂ ಯದಿ ರೋಚತೇ ॥42॥
ದ್ಯೂತಂ ಕರ್ತುಂ ನ ವಾಂಛಾಮಿ ನರೇಂದ್ರ ಜನಸಂಸದಿ ॥43॥
ವೈಶಂಪಾಯನ ಹಾಗೆ ಹೇಳುತ್ತಿರುವ ವಿರಾಟನನ್ನು ಕುರಿತು ಯುಧಿಷ್ಠಿರನು ದ್ಯೂತವನ್ನು ಆಡುವವನು ಬಹಳ ಸಂತೋಷದಲ್ಲಿರುವಾಗ ದ್ಯೂತವನ್ನು ಆಡಬಾರದು ಎಂದು ನಾನು ಕೇಳಿದ್ದೇನೆ. ಇಷ್ಟು ಸಂತೋಷದಲ್ಲಿರುವ ನಿನ್ನ ಜೊತೆಯಲ್ಲಿ ನಾನು ಈ ದಿನ ದ್ಯೂತವನ್ನು ಆಡಲು ಬಯಸುವುದಿಲ್ಲ. ನಿನಗೆ ಇಷ್ಟವಾದರೆ ನಿನಗೆ ಬೇರೆ ಪ್ರಿಯವನ್ನು ಮಾಡಲು ಇಚ್ಛಿಸುತ್ತೇನೆ. ನರೇಂದ್ರನೇ, ಜನರಿರುವ ಈ ಸಭೆಯಲ್ಲಿ ನಿನ್ನ ಜೊತೆಯಲ್ಲಿ ದ್ಯೂತವನ್ನು ಆಡಲು ನಾನು ಇಚ್ಛಿಸುವುದಿಲ್ಲ ಎಂದು ಹೇಳಿದನು.
ವಿರಾಟಃ
ಸ್ತ್ರಿಯೋ ಗಾವೋ ಹಿರಣ್ಯಂ ಚ ಯಚ್ಚಾನ್ಯದ್ ವಸ್ತು ಕಿಂಚನ |
ನ ಮೇ ಕಿಂಚಿತ್ ತ್ವಯಾ ರಕ್ಷ್ಯಮಂತರೇಣಾಪಿ ದೇವಿತಮ್ ॥44॥
ವಿರಾಟ ನೀನು ದ್ಯೂತವನ್ನು ಆಡುವುದನ್ನು ಬಿಟ್ಟು ಸ್ತ್ರೀಯರನ್ನಾಗಲೀ, ಗೋವುಗಳನ್ನಾಗಲೀ, ಸುವರ್ಣವನ್ನಾಗಲೀ ಅಥವಾ ಬೇರೆ ನನ್ನ ಯಾವ ವಸ್ತುವನ್ನಾಗಲೀ ರಕ್ಷಣೆ ಮಾಡಿ ನನಗೆ ಪ್ರಿಯವನ್ನುಂಟು ಮಾಡಬೇಕಾದ ಅಗತ್ಯವಿಲ್ಲ.
ಕಂಕಃ
ಕಿಂ ತೇ ದ್ಯೂತೇನ ರಾಜೇಂದ್ರ ಬಹುದೋಷೇಣ ಮಾನದ |
ದೇವನೇ ಬಹವೋ ದೋಷಾಸ್ತಸ್ಮಾತ್ ತತ್ ಪರಿವರ್ಜಯೇತ್ ॥45॥
ಕಂಕ ರಾಜೇಂದ್ರನೇ, ಮಾನದನೇ, ಬಹುದೋಷವಿರುವ ದ್ಯೂತದಿಂದ ನಿನಗೆ ಏನಾಗಬೇಕು? ದ್ಯೂತದಲ್ಲಿ ಬಹಳ ದೋಷಗಳಿವೆ. ಆದ್ದರಿಂದ ಅದನ್ನು ಪರಿತ್ಯಜಿಸಬೇಕು.
ಶ್ರುತಸ್ತೇ ಯದಿ ವಾ ದೃಷ್ಟಃ ಪಾಂಡವೋ ವೈ ಯುಧಿಷ್ಠಿರಃ |
ಸ ರಾಜ್ಯಂ ಧನಮಕ್ಷಯ್ಯಂ ಪಣಮೇಕಮಮನ್ಯತ ॥46॥
ನೀನು ಪಾಂಡುಪುತ್ರನಾದ ಯುಧಿಷ್ಠಿರನನ್ನು ನೋಡಿದ್ದರೆ ಅಥವಾ ಕೇಳಿದ್ದರೆ ಅವನು ಅಕ್ಷಯವಾದ ತನ್ನ ಸಂಪತ್ತನ್ನು ಮತ್ತು ರಾಜ್ಯವನ್ನು ಏಕಪಣವಾಗಿ ಇಟ್ಟನು.
ಕೃಷ್ಣಾಂ ಚ ಭಾರ್ಯಾಂ ದಯಿತಾಂ ಭ್ರಾತೄಂಶ್ಚ ತ್ರಿದಶೋಪಮಾನ್ |
ನಿಃಸಂಶಯಂ ಸ ಕಿತವಃ ಪಶ್ಚಾತ್ ತಪತಿ ಪಾಂಡವಃ ॥47॥
ಭಾರ್ಯೆಯಾದ ಪ್ರಿಯೆಯಾದ ದ್ರೌಪದಿಯನ್ನು, ದೇವತೆಗಳಂತಿದ್ದ ತಮ್ಮಂದಿರನ್ನು ಪಣಕ್ಕೆ ಒಡ್ಡಿ ನಿಸ್ಸಂಶಯವಾಗಿ ದ್ಯೂತದಲ್ಲಿ ಕಳೆದುಕೊಂಡ ಪಾಂಡುಪುತ್ರನಾದ ಯುಧಿಷ್ಠಿರನು ಪಶ್ಚಾತ್ತಾಪ ಪಡುತ್ತಾನೆ.
ವಿವಿಧಾನಾಂ ಚ ರತ್ನಾನಾಂ ಧನಾನಾಂ ಚ ಪರಾಜಯೇ |
ಅಥ ಕ್ಷಿತಿವಿನಾಶಶ್ಚ ವಾಕ್ಪಾರುಷ್ಯಮನಂತರಮ್ ॥48॥
ಅವಿಶ್ವಾಸಂ ಬುಧೈರ್ನಿತ್ಯಮೇಕಾಹ್ನಾ ದ್ರವ್ಯನಾಶನಮ್ |
ದ್ಯೂತೇ ಹಾರಿತವಾನ್ ಸರ್ವಂ ತಸ್ಮಾದ್ ದ್ಯೂತಂ ನ ರೋಚಯೇ ॥
ಅಥವಾ ಮನ್ಯಸೇ ರಾಜನ್ ದೀವ್ಯಾವ ಯದಿ ರೋಚತೇ ॥50॥
ಪರಾಜಯವನ್ನು ಹೊಂದಿದರೆ ವಿವಿಧ ರತ್ನಗಳನ್ನೂ, ಸಂಪತ್ತನ್ನೂ ಮತ್ತು ಭೂಮಿಯನ್ನೂ ಕಳೆದುಕೊಂಡು ಅನಂತರ ಕ್ರೂರವಾದ ಮಾತುಗಳನ್ನೂ ಕೇಳಬೇಕಾಗುತ್ತದೆ. ಬುಧರ ಅವಿಶ್ವಾಸವನ್ನೂ ಒಂದೇ ದಿನದಲ್ಲಿ ಸಕಲ ದ್ರವ್ಯನಾಶವನ್ನೂ ಹೊಂದಬೇಕಾಗುತ್ತದೆ. ಹೀಗೆ ಯುಧಿಷ್ಠಿರನು ಎಲ್ಲವನ್ನೂ ಕಳೆದುಕೊಂಡನು. ಆದ್ದರಿಂದ ದ್ಯೂತವನ್ನು ಇಷ್ಟಪಡುವುದಿಲ್ಲ. ಅಥವಾ ರಾಜನೇ, ನಿನಗೆ ಇಷ್ಟವಾಗುವುದಾದರೆ ದ್ಯೂತವನ್ನು ಆಡೋಣ.
ವೈಶಂಪಾಯನಃ
ಏವಮಾಭಾಷ್ಯ ವಾದ್ಯೈಸ್ತು ಕ್ರೀಡತಸ್ತೌ ನರೋತ್ತಮೌ |
ಪ್ರವರ್ತಮಾನೇ ದ್ಯೂತೇ ತು ಮಾತ್ಸ್ಯಃ ಪಾಂಡವಮಬ್ರವೀತ್ ॥51॥
ಪಶ್ಯ ಪುತ್ರೇಣ ಮೇ ಯುದ್ಧೇ ತಾದೃಶಾಃ ಕುರವೋ ಜಿತಾಃ |
ಕುರವೋಽತಿರಥಾಃ ಸರ್ವೇ ದೇವೈರಪಿ ಸುದುರ್ಜಯಾಃ ॥52॥
ವೈಶಂಪಾಯನ ಹೀಗೆ ಅನೇಕ ವಿಧವಾದ ಮಾತುಗಳನ್ನು ಆಡಿ ಆ ನರಶ್ರೇಷ್ಠರು ಪುನಃ ದ್ಯೂತವನ್ನು ಆಡಿದರು. ದ್ಯೂತವನ್ನು ಆಡುತ್ತಾ ವಿರಾಟರಾಜನು ಯುಧಿಷ್ಠಿರನನ್ನು ಕುರಿತು ನೋಡು, ಯುದ್ಧದಲ್ಲಿ ನನ್ನ ಪುತ್ರನಿಂದ ಅಂತಹ ಕೌರವರೆಲ್ಲರೂ ಜಿತರಾದರು. ಕುರುಗಳೆಲ್ಲರೂ ಅತಿರಥರು ಮತ್ತು ದೇವತೆಗಳಿಂದಲೂ ಜಯಿಸಲು ಸಾಧ್ಯವಿಲ್ಲದವರು ಎಂದು ಹೇಳಿದನು.

ತತೋಽಬ್ರವೀದ್ ಧರ್ಮರಾಜೋ ದ್ಯೂತೇ ಮಾತ್ಸ್ಯಂ ಯುಧಿಷ್ಠಿರಃ ॥
ದಿಷ್ಟ್ಯಾ ತೇ ವಿಜಿತಾ ಗಾವಃ ಕುರವಶ್ಚ ಪರಾಜಿತಾಃ।
ಅತ್ಯದ್ಭುತಮಹಂ ಮನ್ಯೇ ಉತ್ತರಶ್ಚೇತ್ ಕುರೂನ್ ಜಯೇತ್ ॥54॥
ಯಂತಾ ಬೃಹನ್ನಳಾ ಯಸ್ಯ ಸಾ ಕಥಂಚಿದ್ ವಿಜೇಷ್ಯತೇ ॥55॥
ಧರ್ಮರಾಜನಾದ ಯುಧಿಷ್ಠಿರನು ಆಗ ದ್ಯೂತದಲ್ಲಿ ವಿರಾಟನನ್ನು ಕುರಿತು, ದೇವರದಯದಿಂದ ಕುರುಗಳು ನಿರ್ಜಿತರಾಗಿದ್ದಾರೆ ಮತ್ತು ನಿನ್ನ ಗೋವುಗಳು ಹಿಂದಿರುಗಿಸಲ್ಪಟ್ಟಿವೆ. ಉತ್ತರನೇ ಕುರುಗಳನ್ನು ಜಯಿಸಿದ್ದರೆ ಅದು ಅತ್ಯದ್ಭುತವಾಗಿರುತ್ತಿದ್ದಿತು ಎಂದು ಭಾವಿಸುತ್ತೇನೆ. ಆ ಬೃಹನ್ನಳೆಯನ್ನು ಸಾರಥಿಯನ್ನಾಗಿ ಹೊಂದಿದವನು ಹೇಗಾದರೂ ಜಯಿಸಿಯೇ ತೀರುತ್ತಾನೆ ಎಂದು ಹೇಳಿದನು.
ವೈಶಂಪಾಯನಃ
ತತೋ ವಿರಾಟಃ ಕ್ಷುಭಿತೋ ಮನ್ಯುನಾಽತಿಪರಿಪ್ಲುತಃ।
ಉವಾಚ ವಚನಂ ಕ್ರುದ್ಧಃ ಪರಿವ್ರಾಜಮನಂತರಮ್ ॥56॥
ತಾದೃಶೇನ ತು ಯುದ್ಧೇನ ಮಹೇಷ್ವಾಸೇನ ಧೀಮತಾ।
ಕುರವೋ ನಿರ್ಜಿತಾ ಯುದ್ಧೇ ತತ್ರ ಕಿಂ ಬ್ರಾಹ್ಮಣಾದ್ಭುತಮ್ ॥57॥
ಆಗ ವಿರಾಟನು ಕ್ಷೋಭೆಗೊಂಡು ಕ್ರೋಧದಿಂದ ತುಂಬಿದವನಾಗಿ ಸಂನ್ಯಾಸಿಯನ್ನು ಕುರಿತು ಮೇಧಾವಿಯಾದ, ಮಹಾಧನುರ್ಧಾರಿಯಾದ ನನ್ನ ಪುತ್ರನು ಅಂತಹ ಯುದ್ಧದಲ್ಲಿ ಕುರುಗಳನ್ನು ಜಯಿಸಿದನು. ಬ್ರಾಹ್ಮಣನೇ, ಇದರಲ್ಲಿ ಅದ್ಭುತವೇನು ಎಂದು ಕೇಳಿದನು.
ಯುಧಿಷ್ಠಿರಃ
ಯಂತಾ ತಥಾವಿಧೋ ಯಸ್ಯ ರಥೇ ತಿಷ್ಠತಿ ವೀರ್ಯವಾನ್।
ಯದಿ ತತ್ ದುಷ್ಕರಂ ಕುರ್ಯಾತ್ ತತ್ರ ಕಿಂ ನಾದ್ಭುತಂ ಭವೇತ್ ॥
ಯುಧಿಷ್ಠಿರ ಯಾವನ ರಥದಲ್ಲಿ ಅಂತಹ ಪರಾಕ್ರಮಶಾಲಿಯಾದ ಸಾರಥಿಯು ಇದ್ದಾನೆಯೋ ಅವನು ಅಂತಹ ದುಷ್ಕರವಾದ ಕಾರ್ಯವನ್ನು ಮಾಡಿದರೆ ಅದು ಅದ್ಭುತವಾಗದೇ ಇರಲಾರದು.
ವಿರಾಟಃ
ಪುಮಾಂಸೋ ಬಹವೋ ದೃಷ್ಟಾಃ ಸೂತಾಶ್ಚ ಬಹವೋ ಮಯಾ।
ವಿಕ್ರಮ್ಯ ಯಂತಾ ಯೋದ್ಧಾ ಚ ನ ಮೇ ದೃಷ್ಟಃ ಕಥಂಚನ ॥59॥
ವಿರಾಟ ನಾನು ಅನೇಕ ಪುರುಷರನ್ನೂ, ಅನೇಕ ಸೂತರನ್ನೂ ನೋಡಿದ್ದೇನೆ. ಸಾರಥಿಯಾಗಿ ಪರಾಕ್ರಮದಿಂದ ಯುದ್ಧವನ್ನು ಮಾಡುವವನನ್ನು ನಾನು ಎಂದೂ ನೋಡಲಿಲ್ಲ.
ವಿಪ್ರಿಯಂ ನಾಚರೇದ್ ರಾಜ್ಞಾಮನುರೂಪಂ ಪ್ರಿಯಂ ವದೇತ್।
ಆಚರನ್ ವಿಪ್ರಿಯಂ ರಾಜ್ಞಾಂ ನ ಜಾತು ಸುಖಮೇಧತೇ ॥60॥
ರಾಜರಿಗೆ ಅಪ್ರಿಯವನ್ನು ಮಾಡಬಾರದು. ಅನುಗುಣವಾಗಿ ಪ್ರಿಯವನ್ನು ಹೇಳಬೇಕು. ರಾಜರಿಗೆ ಅಪ್ರಿಯವನ್ನು ಮಾಡುವವನು ಎಂದೂ ಸುಖವನ್ನು ಹೊಂದುವುದಿಲ್ಲ.
ವಯಸ್ಯತ್ವಾತ್ ತು ತೇ ಸರ್ವಮಪರಾಧಮಿಮಂ ಕ್ಷಮೇ।
ನೇದೃಶೀಂ ಪ್ರವದೇರ್ವಾಚಂ ಯದಿ ಜೀವಿತುಮಿಚ್ಛಸಿ ॥61॥
ನೀನು ನನ್ನ ಸ್ನೇಹಿತನಾದುದರಿಂದ ಈ ಅಪರಾಧವನ್ನು ಕ್ಷಮಿಸುತ್ತೇನೆ. ನೀನು ಬದುಕಲು ಇಚ್ಛಿಸುವುದಾದರೆ ಇನ್ನೊಮ್ಮೆ ಇಂತಹ ಮಾತನ್ನು ಆಡಬೇಡ.
ವೈಶಂಪಾಯನಃ
ತತೋಽಬ್ರವೀತ್ ಪುನಃ ಕಂಕಃ ಪ್ರಹಸ್ಯ ಕುರುನಂದನ ॥62॥
ಬೃಹನ್ನಳಾಯಾ ರಾಜೇಂದ್ರ ಘುಷ್ಯತಾಂ ನಗರೇ ಜಯಃ।
ಉತ್ತರೇಣ ಹಿ ಸಾರಥ್ಯಂ ಕೃತಂ ನೂನಂ ಭವಿಷ್ಯತಿ ॥63॥
ವೈಶಂಪಾಯನ ಎಲೈ ಕುರುನಂದನನೇ, ಆಗ ಕಂಕನು ಪುನಃ ನಕ್ಕು ರಾಜನೇ, ನಗರದಲ್ಲಿ ಬೃಹನ್ನಳೆಯ ಜಯವು ಘೋಷಿಸಲ್ಪಡಲಿ. ಖಂಡಿತವಾಗಿ ಉತ್ತರನೇ ಸಾರಥ್ಯವನ್ನು ಮಾಡಿದ್ದಾನೆ ಎಂದು ನಾನು ತಿಳಿಯುತ್ತೇನೆ.
ನಿಮಿತ್ತಂ ಕಿಂಚಿದುತ್ಪನ್ನಂ ತರ್ಕಶ್ಚಾಪಿ ದೃಢೋ ಮಮ।
ಇತೋ ಜಾನಾಮಿ ರಾಜೇಂದ್ರ ನಾನ್ಯಥಾ ತದ್ ಭವಿಷ್ಯತಿ ॥64॥
ಅದಕ್ಕೆ ಒಂದು ಸೂಚನೆಯೂ ದೊರಕಿದೆ. ನನ್ನ ಊಹೆಯೂ ದೃಢವಾಗಿದೆ. ರಾಜೇಂದ್ರನೇ, ನಾನು ಇಲ್ಲಿ ಕುಳಿತುಕೊಂಡೇ ಅದು ಬೇರೆ ರೀತಿ ಆಗಿರಲು ಸಾಧ್ಯವಿಲ್ಲ ಎಂದು ತಿಳಿದಿದ್ದೇನೆ.
ಕುರವೋಽಪಿ ಮಹಾವೀರ್ಯಾ ದೇವೈರಪಿ ಸುದುರ್ಜಯಾಃ।
ಸಸೋಮವರುಣಾದಿತ್ಯೈಃ ಸಕುಬೇರಹುತಾಶನೈಃ ॥65॥
ಕುರುಗಳು, ಮಹಾಪರಾಕ್ರಮಶಾಲಿಗಳು, ಕುಬೇರ ಮತ್ತು ಅಗ್ನಿಗಳಿಂದ ಸಹಿತರಾದ ಸೂರ್ಯಚಂದ್ರ ವರುಣ ಮೊದಲಾದ ದೇವತೆಗಳಿಂದಲೂ ಅವರು ದುರ್ಜಯರಾದವರು.
ಯತ್ರ ಶಾಂತನವೋ ಭೀಷ್ಮೋ ದ್ರೋಣಕರ್ಣೌ ಸುದುರ್ಜಯೌ।
ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತೋ ಜಯದ್ರಥಃ ॥66॥
ಭೂರಿಶ್ರವಾಃ ಶಲೋ ಭೂರಿರ್ಜಲಸಂಧಶ್ಚ ವೀರ್ಯವಾನ್।

ದುರ್ಯೋಧನೋ ದುಷ್ಪ್ರಸಹೋ ದುಃಶಾಸನವಿವಿಂಶತೀ ॥67॥
ವೃಷಸೇನೋಽಶ್ವಸೇನಶ್ಚ ವಾತವೇಗಸುವರ್ಚಸೌ।
ಬಾಹ್ಲೀಕಃ ಶೂರಸೇನಶ್ಚ ಯುಯುತ್ಸುಶ್ಚ ಪರಂತಪಃ ॥68॥
ಸೌಬಲಃ ಶಕುನಿಶ್ಚೈವ ದ್ಯುಮತ್ಸೇನಶ್ಚ ಸಾಲ್ವರಾಟ್।
ಅನ್ಯೇ ಚ ಬಹವಃ ಶೂರಾ ನಾನಾಜನಪದೇಶ್ವರಾಃ ॥69॥
ಕೃಪೇಣಾಚಾರ್ಯಮುಖ್ಯೇನ ಸಹಿತಾಃ ಕುರವೋ ನೃಪಾಃ।
ಸಜ್ಜಕಾರ್ಮುಕನಿಸ್ತ್ರಿಂಶಾ ರಥಿನೋ ರಥಯೂಥಪಾಃ ॥70॥
ಅನ್ಯೇ ಚೈವ ಮಹಾವೀರ್ಯಾ ರಾಜಪುತ್ರಾ ಮಹಾರಥಾಃ ॥71॥
ಮರುದ್ಗಣೈಃ ಪರಿವೃತಃ ಸಾಕ್ಷಾದಪಿ ಪುರಂದರಃ।
ತದ್ಬಲಂ ನ ಜಯೇತ್ ಕ್ರುದ್ಧೋ ಭೀಷ್ಮದ್ರೋಣಾದಿಭಿರ್ವೃತಮ್ ॥72॥
ಎಲ್ಲಿ ಶಂತನು ಪುತ್ರನಾದ ಭೀಷ್ಮನೂ, ಅತ್ಯಂತ ದುರ್ಜಯರಾದ ದ್ರೋಣ-ಕರ್ಣರು, ಅಶ್ವತ್ಥಾಮಾ, ವಿಕರ್ಣ, ಸೋಮದತ್ತ, ಜಯದ್ರಥ, ಭೂರಿಶ್ರವಾ, ಶಲ, ಭೂರಿ, ಪರಾಕ್ರಮಶಾಲಿಯಾದ ಜಲಸಂಧ, ದುರ್ಯೋಧನ, ದುಃಷ್ಪ್ರಸಹ, ದುಃಶಾಸನ, ವಿವಿಂಶತಿ, ವೃಷಸೇನ, ಅಶ್ವಸೇನ, ವಾತವೀರ, ಸುವರ್ಚ, ಬಾಹ್ಲೀಕಾ, ಶೂರಸೇನ, ಪರಂತಪನಾದ ಯುಯುತ್ಸು, ಸುಬಲಪುತ್ರನಾದ ಶಕುನಿ, ಶಾಲ್ವಪತಿಯಾದ ದ್ಯುಮತ್ಸೇನ ಮತ್ತು ಇನ್ನೂ ಅನೇಕ ಜನಪದದ ಶೂರರಾದ ರಾಜರು, ಆಚಾರ್ಯಶ್ರೇಷ್ಠರಾದ ಕೃಪರಿಂದ ಸಹಿತರಾದ ಕುರುಗಳು ಮತ್ತು ಅನೇಕ ರಾಜರು ಮತ್ತು ಧನುಸ್ಸು ಮತ್ತು ಖಡ್ಗಗಳನ್ನು ಸಿದ್ಧವನ್ನಾಗಿ ಮಾಡಿಕೊಂಡ ರಥಿಕರೂ, ರಥವೃಂದನಾಯಕರೂ, ಮಹಾರಥರೂ, ಮಹಾಪರಾಕ್ರಮಿಗಳೂ ಆದ ರಾಜಪುತ್ರರು ಎಲ್ಲಿದ್ದಾರೆಯೋ ಅಂತಹ ಭೀಷ್ಮದ್ರೋಣಾದಿಗಳಿಂದ ಸಹಿತವಾದ ಸೈನ್ಯವನ್ನು ಮರುದ್ಗಣಗಳಿಂದ ಸಹಿತನಾದ ಕ್ರುದ್ಧನಾದ ಸಾಕ್ಷಾತ್ ಪುರಂದರನೂ ಸಹ ಗೆಲ್ಲಲಾರನು.
ಕಸ್ತದ್ ಬೃಹನ್ನಳಾದನ್ಯೋ ಮನುಷ್ಯಃ ಪ್ರತಿಯೋತ್ಸ್ಯತಿ ॥73॥
ಯಸ್ಯ ಬಾಹುಬಲೇ ತುಲ್ಯೋ ನ ಭೂತೋ ನ ಭವಿಷ್ಯತಿ।
ಅತೀವಸಮರಂ ದೃಷ್ಟ್ವಾ ಹರ್ಷೋ ಯಸ್ಯ ಹಿ ಜಾಯತೇ ॥74॥
ಬೃಹನ್ನಳೆಯನ್ನು ಬಿಟ್ಟು ಬೇರೆ ಯಾವ ಮನುಷ್ಯನು ಆ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡುವನು? ಅವನ ಬಾಹುಬಲಕ್ಕೆ ಸಮನಾದವನು ಹಿಂದೆ ಇರಲಿಲ್ಲ ಮತ್ತು ಮುಂದೆ ಬರುವುದಿಲ್ಲ. ಘೋರವಾದ ಸಮರವನ್ನು ನೋಡಿದರೆ ಅವನಿಗೆ ಹರ್ಷವು ಹೆಚ್ಚಾಗುತ್ತದೆ (ಎಂದು ಹೇಳಿದನು).
ವೈಶಂಪಾಯನಃ
ತೇನ ಸಂಕ್ಷುಭಿತೋ ರಾಜಾ ದೀರ್ಯಮಾಣೇನ ಚೇತಸಾ।
ಅಬ್ರವೀದ್ ವಚನಂ ತಾತ ಅಜಾನನ್ ವೈ ಯುಧಿಷ್ಠಿರಮ್ ॥75॥
ವೈಶಂಪಾಯನ ಅದರಿಂದ ಕ್ಷೋಭೆಗೊಂಡು ಬಿರಿದುಹೋಗುತ್ತಿದ್ದ ಹೃದಯವುಳ್ಳ ವಿರಾಟರಾಜನು ತಾನು ಯುಧಿಷ್ಠಿರನ ಜೊತೆಯಲ್ಲಿ ಮಾತನಾಡುತ್ತಿದ್ದೇನೆಂದು ತಿಳಿಯದೆ ಕಂಕನನ್ನು ಕುರಿತು ಹೀಗೆ ಮಾತನಾಡಿದನು.
ಕಂಕ ಮಾ ತ್ವಂ ಬ್ರವೀರ್ವಾಕ್ಯಂ ಪ್ರತಿಕೂಲಂ ದ್ವಿಜೋತ್ತಮ।
ಬಹುಶಃ ಪ್ರತಿಷಿದ್ಧಃ ಸನ್ ನ ಚೇದ್ ವಾಚಂ ನಿಯಚ್ಛಸಿ ॥76॥
ನಿಯಂತಾ ಚೇನ್ನ ವಿದ್ಯೇತ ನ ಕಶ್ಚಿದ್ ಧರ್ಮಮಾಚರೇತ್ ॥77॥
ಕಂಕನೇ, ದ್ವಿಜೋತ್ತಮನೇ, ನನಗೆ ಪ್ರತಿಕೂಲವಾಗಿ ಮಾತನಾಡಬೇಡ. ಎಷ್ಟು ನಿಷೇಧವನ್ನು ಮಾಡಿದರೂ ನೀನು ನಿನ್ನ ಮಾತನ್ನು ನಿಯಂತ್ರಿಸುತ್ತಿಲ್ಲ. ನಿಯಂತ್ರಣ ಮಾಡುವವನು ಇಲ್ಲದಿದ್ದರೆ ಯಾರೂ ಧರ್ಮವನ್ನು ಆಚರಿಸಲಾರರು (ಎಂದು ಹೇಳಿದನು).
ವೈಶಂಪಾಯನಃ
ತತಃ ಪ್ರಕ್ಷುಭಿತೋ ರಾಜಾ ಸೋಽಕ್ಷೇಣಾಭ್ಯಹನದ್ ಭೃಶಮ್ ॥78॥
ತತಃ ಸ ಕರಿಭೋಗಾಭಂ ಬಾಹುಮುದ್ಯಮ್ಯ ದಕ್ಷಿಣಮ್।
ವಿರಾಟಃ ಪ್ರಾಹರತ್ ಕ್ರುದ್ಧಃ ಕರ್ಣಮಾಶ್ರಿತ್ಯ ದಕ್ಷಿಣಮ್ ॥79॥
ಮುಖೇ ಯುಧಿಷ್ಠಿರಂ ಕೋಪಾನ್ನೈವಮಿತ್ಯವಭರ್ತ್ಸಯನ್ ॥80॥
ಬಲವತ್ ಪ್ರತಿವಿದ್ಧಸ್ಯ ತತಃ ಶೋಣಿತಮಾಗಮತ್ ॥81॥
ವೈಶಂಪಾಯನ ಆಗ ಕ್ಷೋಭೆಗೊಂಡ ರಾಜನು ದಾಳದಿಂದ ಯುಧಿಷ್ಠಿರನಿಗೆ ತೀವ್ರವಾಗಿ ಹೊಡೆದನು. ಆಗ ಆನೆಯ ಸೊಂಡಲಿನಂತಿದ್ದ ತನ್ನ ಬಲಬಾಹುವನ್ನು ಎತ್ತಿ ವಿರಾಟನು ಕೋಪದಿಂದ ಯುಧಿಷ್ಠಿರನಿಗೆ ಬಲಗಿವಿಯ ಸಮೀಪದಲ್ಲಿ ದಾಳದಿಂದ ಜೋರಾಗಿ ಹೊಡೆದನು ಮತ್ತು ಕೋಪದಿಂದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಬೇಡ ಎಂದು ಗದರಿಸಿದನು. ಬಲವಾಗಿ ಹೊಡೆಯಲ್ಪಟ್ಟ ಯುಧಿಷ್ಠಿರನ ಮುಖದಿಂದ ರಕ್ತವು ಹೊರಬಂದಿತು.
ಅಕ್ಷೇಣಾಭಿಹತೋ ರಾಜಾ ವಿರಾಟೇನ ಮಹೀಪತಿಃ।
ತೂಷ್ಣೀಮಾಸೀನ್ಮಹಾಬಾಹುಃ ಕೃಷ್ಣಾಂ ಸಂಪ್ರೇಕ್ಷ್ಯ ದುಃಖಿತಃ ॥82॥
ವಿರಾಟನಿಂದ ದಾಳದಿಂದ ಹೊಡೆಯಲ್ಪಟ್ಟ ರಾಜನಾದ, ಮಹಾಬಾಹುವಾದ ಯುಧಿಷ್ಠಿರನು ದ್ರೌಪದಿಯನ್ನು ನೋಡಿ ದುಃಖಿತನಾಗಿ ಸುಮ್ಮನಾದನು.
ತಸ್ಯ ರಕ್ತೋತ್ಪಲನಿಭಂ ಶಿರಸಃ ಶೋಣಿತಂ ತದಾ।
ಪ್ರಾವರ್ತತ ಮಹಾಬಾಹೋರಭಿಘಾತಾನ್ಮಹಾತ್ಮನಃ ॥83॥
ಮಹಾತ್ಮನಾದ ಮಹಾಬಾಹುವಾದ ಅವನ ಮುಖದಿಂದ ಆ ಹೊಡೆತದಿಂದಾಗಿ ರಕ್ತೋತ್ಪಲಕ್ಕೆ ಸದೃಶವಾದ ರಕ್ತವು ಶಿರಸ್ಸಿನಿಂದ

ಹೊರಬಂದಿತು.
ತದಪ್ರಾಪ್ತಂ ಮಹೀಂ ಪಾರ್ಥಃ ಪಾಣಿಭ್ಯಾಂ ಸಮಧಾರಯತ್ |
ಅವೈಕ್ಷತ ಚ ಧರ್ಮಾತ್ಮಾ ದ್ರೌಪದೀಂ ಪಾರ್ಶ್ವತಃ ಸ್ಥಿತಾಮ್ ॥84॥
ಯುಧಿಷ್ಠಿರನ ರಕ್ತವು ನೆಲಕ್ಕೆ ಬೀಳುವುದಕ್ಕಿಂತ ಮೊದಲೇ ಅದನ್ನು ತನ್ನ ಕೈಗಳಲ್ಲಿ ಹಿಡಿದ, ಧರ್ಮಾತ್ಮನಾದ ಅವನು ಪಕ್ಕದಲ್ಲಿ ನಿಂತಿದ್ದ ದ್ರೌಪದಿಯನ್ನು ನೋಡಿದನು.
ಸಾ ವೇದನಾಮಭಿಜ್ಞಾಯ ಭರ್ತುಶ್ಚಿತ್ತವಶಾನುಗಾ |
ಸಾ ವಿಷಣ್ಣಾ ಚ ಭೀತಾ ಚ ಕ್ರುದ್ಧಾ ಚ ದ್ರುಪದಾತ್ಮಜಾ ॥85॥
ಪತಿಯ ವೇದನೆಯನ್ನು ತಿಳಿದ ಪತಿಯ ಚಿತ್ತವಶಳೂ, ಅವನ ಅಭಿಪ್ರಾಯವನ್ನು ತಿಳಿದವಳೂ ಆದ ದ್ರೌಪದಿಯು ವಿಷಣ್ಣಳೂ, ಭೀತಳೂ ಮತ್ತು ಕೋಪಗೊಂಡವಳೂ ಆದಳು.
ಬಾಷ್ಪಂ ನಿಯಮ್ಯ ದುಃಖಂ ಚ ಭರ್ತುರ್ನಿಶ್ರೇಯಕಾರಿಣೀ |
ಉತ್ತರೀಯೇಣ ಸೂಕ್ಷ್ಮೇಣ ತೂರ್ಣಂ ಜಗ್ರಾಹ ಶೋಣಿತಮ್ ॥86॥
ಅವಳು ತನ್ನ ದುಃಖವನ್ನು ಮತ್ತು ಕಣ್ಣೀರನ್ನು ನಿಯಂತ್ರಿಸಿಕೊಂಡು ಪತಿಯ ಶ್ರೇಯಸ್ಸನ್ನು ಬಯಸುವವಳಾಗಿ ತನ್ನ ತೆಳುವಾದ ಉತ್ತರೀಯದಿಂದ ಶೀಘ್ರವಾಗಿ ಆ ರಕ್ತವನ್ನು ಹಿಡಿದಳು.
ನಿಗೃಹ್ಯ ರಕ್ತಂ ವಸ್ತ್ರೇಣ ಸೈರಂಧ್ರೀ ದುಃಖಮೋಹಿತಾ |
ಸೌವರ್ಣಂ ಗೃಹ್ಯ ಭೃಂಗಾರಂ ಶೋಣಿತಂ ತದಪಾಸೃಜತ್ ॥87॥
ದುಃಖಮೋಹಿತಳಾದ ಸೈರಂಧ್ರಿಯು ತನ್ನ ವಸ್ತ್ರದಿಂದ ರಕ್ತವನ್ನು ಹಿಡಿದು ಅದನ್ನು ಒಂದು ಸುವರ್ಣಮಯವಾದ ಭೃಂಗಾರದಲ್ಲಿ (ತಂಬಿಗೆಯಲ್ಲಿ) ಹಾಕಿದಳು.
ವಿರಾಟಃ
ಸೈರಂಧ್ರಿ ಕಿಮಿದಂ ರಕ್ತಮುತ್ತರೀಯೇಣ ಗೃಹ್ಯತೇ |
ಕೋಽತ್ರ ಹೇತುರ್ವಿಶಾಲಾಕ್ಷಿ ತನ್ಮಮಾಚಕ್ಷ್ವ ತತ್ತ್ವತಃ ॥88॥
ವಿರಾಟ ಸೈರಂಧ್ರಿಯೇ, ಏಕೆ ರಕ್ತವನ್ನು ಉತ್ತರೀಯದಲ್ಲಿ ಹಿಡಿಯುತ್ತಿದ್ದೀಯೆ? ವಿಶಾಲಾಕ್ಷಿಯೇ, ಇದಕ್ಕೆ ಏನು ಕಾರಣ ಎಂದು ನನಗೆ ನಿಜವಾಗಿ ಹೇಳು.
ಸೈರಂಧ್ರೀ
ರಕ್ತಬಿಂದೂನಿ ಕಂಕಸ್ಯ ಯಾವಂತಿ ಧರಣೀಂ ಯಯುಃ |
ತಾವದ್ ವರ್ಷಾಣಿ ರಾಷ್ಟ್ರೇ ತೇಽನಾವೃಷ್ಟಿರ್ಭವಿಷ್ಯತಿ ॥89॥
ಏತನ್ನಿಮಿತ್ತಂ ಮತ್ಸ್ಯೇಂದ್ರ ಕಂಕಸ್ಯ ರುಧಿರಂ ಮಯಾ |
ಗೃಹೀತಮುತ್ತರೀಯೇಣ ವಿನಾಶೋ ಮಾ ಭವೇತ್ ತವ ॥90॥
ಸೈರಂಧ್ರೀ ಕಂಕನ ಎಷ್ಟು ರಕ್ತಬಿಂದುಗಳು ಭೂಮಿಯ ಮೇಲೆ ಬೀಳುತ್ತವೆಯೋ ಅಷ್ಟುವರ್ಷಗಳ ಕಾಲ ನಿನ್ನ ರಾಷ್ಟ್ರದಲ್ಲಿ ಅನಾವೃಷ್ಟಿ ಉಂಟಾಗುವುದು. ಮತ್ಸ್ಯೇಂದ್ರನೇ, ಈ ಕಾರಣದಿಂದ ನಿನಗೆ ವಿನಾಶವುಂಟಾಗದಿರಲಿ ಎಂದು ಉದ್ದೇಶಿಸಿ ನಾನು ಕಂಕನ ರಕ್ತವನ್ನು ಉತ್ತರೀಯದಿಂದ ಹಿಡಿದೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ತದಾ ವಿರಾಟಾಸನಮಾಸ್ಥಿತಂ ನೃಪಂ
ಯುಧಿಷ್ಠಿರಂ ವೀಕ್ಷ್ಯ ವಿರಾಟ ಆಹ |
ಕಿಮೇತದಿತ್ಯೂಚಿವಾನುತ್ತರೋಽಸ್ಮೈ
ತಾನ್ ಪಾಂಡವಾನ್ ಗೋಗ್ರಹಣೇ ಚ ವೃತ್ತಮ್ ॥48॥
ಆಗ ವಿರಾಟನ ಸಿಂಹಾಸನದಲ್ಲಿ ರಾಜಾ ಯುಧಿಷ್ಠಿರ ಕುಳಿತಿದ್ದುದನ್ನು ವಿರಾಟ ಕಂಡು `ಇದೇನು?' ಎಂದ. ಉತ್ತರ ಅವನಿಗೆ `ಅವರು ಪಾಂಡವರು' ಎಂದ. ಗೋಗ್ರಹಣದಲ್ಲಿ ನಡೆದ ವೃತ್ತಾಂತವನ್ನೂ ಹೇಳಿದ.
ಅರವತ್ತೊಂಬತ್ತನೆಯ ಅಧ್ಯಾಯ
ಯುದ್ಧದಿಂದ ಉತ್ತರನ ಪ್ರತಿನಿವೃತ್ತಿ
ಜನಮೇಜಯಃ
ಯುದ್ಧಂ ತ್ವಮಾನುಷಂ ದ್ರಷ್ಟುಮಾಗತಾಃ ತ್ರಿದಶಾಃ ಪುರಾ |
ಕಿಮಕುರ್ವಂತ ತೇ ಪಶ್ಚಾತ್ ಕಥಯಸ್ವ ಮಮಾನಘ ॥1॥
ಜನಮೇಜಯ ಎಲೈ ಅನಘನೇ, ಅಮಾನುಷವಾದ ಯುದ್ಧವನ್ನು ನೋಡಲು ಮೊದಲು ಬಂದಿದ್ದ ದೇವತೆಗಳು ಅನಂತರ ಏನನ್ನು ಮಾಡಿದರೆಂದು ನನಗೆ ಹೇಳು.
ವೈಶಂಪಾಯನಃ
ವಾಸವಪ್ರಮುಖಾಃ ಸರ್ವೇ ದೇವಾ ಸರ್ಷಿಪುರೋಗಮಾಃ |

ಯಕ್ಷಗಂಧರ್ವಸಂಘಾಶ್ಚ ಗಣಾಶ್ಚಾಪ್ಸರಸಾಂ ತಥಾ ॥2॥
ಯುದ್ಧಂ ತ್ವಮಾನುಷಂ ದೃಷ್ಟ್ವಾ ಕುರೂಣಾಂ ಫಲ್ಗುನಸ್ಯ ಚ |
ಏಕಸ್ಯ ಚ ಬಹೂನಾಂ ಚ ರೌದ್ರಮತ್ಯುಗ್ರದರ್ಶನಮ್ ॥3॥
ಅಸ್ತ್ರಾಣಾಮಥ ದಿವ್ಯಾನಾಂ ಪ್ರಯೋಗಾನಥ ಸಂಗ್ರಹಾನ್ |
ಲಘು ಸುಷ್ಠು ಚ ಚಿತ್ರಂ ಚ ಕೃತೀನಾಂ ಚ ಪ್ರಯತ್ನತಃ ॥4॥
ಭೀಷ್ಮಂ ಶಾರದ್ವತಂ ದ್ರೋಣಂ ಕರ್ಣಂ ಗಾಂಡೀವಧನ್ವನಾ |
ಜಿತಾನನ್ಯಾನ್ ಭೂಮಿಪಾಲಾನ್ ದೃಷ್ಟ್ವಾ ಜಗ್ಮುರ್ದಿವೌಕಸಃ ॥5॥
ವೈಶಂಪಾಯನ ಋಷಿಗಳನ್ನು ಮುಂದೆ ಮಾಡಿಕೊಂಡ ಇಂದ್ರನೇ ಮೊದಲಾದ ಎಲ್ಲ ದೇವತೆಗಳು, ಯಕ್ಷಗಂಧರ್ವಸಮೂಹಗಳು ಮತ್ತು ಅಪ್ಸರೆಯರ ಗಣಗಳು ಕುರುಗಳಿಗೂ ಮತ್ತು ಅರ್ಜುನನಿಗೂ ಒಬ್ಬನಿಗೂ ಮತ್ತು ಅನೇಕ ಜನರಿಗೂ ನಡೆದ ರೌದ್ರವಾದ, ನೋಡಲು ಭಯಂಕರವಾಗಿದ್ದ ಅಮಾನುಷ ಯುದ್ಧವನ್ನು, ನಿಷ್ಣಾತರಾದವರ ಪ್ರಯತ್ನದಿಂದ ಪ್ರಯೋಗಿಸಲ್ಪಟ್ಟ ಕ್ಷಿಪ್ರವಾದ, ಚಿತ್ರವಾದ, ಚೆನ್ನಾಗಿ ಪ್ರಯೋಗಿಸಲ್ಪಟ್ಟ ದಿವ್ಯಾಸ್ತ್ರಗಳ ಪ್ರಯೋಗವನ್ನು, ನೋಡಿ ಭೀಷ್ಮ, ದ್ರೋಣ, ಕೃಪ, ಕರ್ಣ ಮತ್ತು ಉಳಿದ ಭೂಪಾಲರು ಗಾಂಡೀವ ಧನ್ವನಾದ ಅರ್ಜುನನಿಂದ ಪರಾಜಿತರಾದುದನ್ನು ನೋಡಿ ದೇವತೆಗಳು ಹೊರಟುಹೋದರು.
ಸರ್ವೇಷಾಂ ಪರಿತುಷ್ಟಾಶ್ಚ ಪ್ರಶಸ್ಯ ಚ ಮುಹುರ್ಮುಹುಃ |
ಅಸಂಗಗತಿನಾ ತೇನ ವಿಮಾನೇನಾಶುಗಾಮಿನಾ ॥6॥
ಪ್ರತಿಜಗ್ಮುರಸಂಗೇನ ತ್ರಿದಿವಂ ಚ ದಿವೌಕಸಃ ॥7॥
ಅರ್ಜುನನು ಮಾಡಿದ ಎಲ್ಲ ಯುದ್ಧಕಾರ್ಯಗಳನ್ನು ನೋಡಿ ಸಂತುಷ್ಟರಾಗಿ ಪುನಃ ಪುನಃ ಅವನನ್ನು ಹೊಗಳಿ, ಎಲ್ಲಿಯೂ ಸಿಕ್ಕಿಹಾಕಿಕೊಳ್ಳದೆ ಶೀಘ್ರವಾಗಿ ಚಲಿಸುವ ಆ ವಿಮಾನದಿಂದ ದೇವತೆಗಳು ಸ್ವರ್ಗಕ್ಕೆ ಹೊರಟುಹೋದರು.
ಕುರವೋಽರ್ಜುನಬಾಣೈಶ್ಚ ತಾಡಿತಾಃ ಶರವಿಕ್ಷತಾಃ |
ಕುರೂನಭಿಮುಖಾ ಯಾತಾಃ ಸಮಗ್ರಬಲವಾಹನಾಃ ॥8॥
ಅರ್ಜುನನ ಬಾಣಗಳಿಂದ ತಾಡಿತರಾಗಿ ಗಾಯಗೊಂಡ ಕುರುಗಳು ತಮ್ಮ ಉಳಿದ ಪೂರ್ಣವಾದ ಬಲ, ವಾಹನಗಳ ಸಮೇತವಾಗಿ ಕುರುದೇಶಕ್ಕೆ ಅಭಿಮುಖವಾಗಿ ಹೊರಟರು.
ವಿರಾಟನಗರಾಚ್ಚೈವ ಗಜಾಶ್ವರಥಸಂಕುಲಾಃ |
ಯೋಧೈಃ ಕ್ಷತ್ರಿಯದಾಯಾದ್ಯೈರ್ಬಲವದ್ಭಿರಧಿಷ್ಠಿತಾಃ ॥9॥
ವಿರಾಟಪ್ರಹಿತಾ ಸೇನಾ ನಗರಾಚ್ಛೀಘ್ರಯಾಯಿನೀ |
ಉತ್ತರಂ ಸಹ ಸೂತೇನ ಪ್ರತ್ಯಯಾತ್ ತಮರಿಂದಮಮ್ ॥10॥
ವಿರಾಟನಗರದಿಂದ ಹೊರಟು ಬಲಿಷ್ಠರಾದ ಕ್ಷತ್ರಿಯರಿಂದ ಅಧಿಷ್ಠಿತವಾದ ಗಜಾಶ್ವರಥ ಯೋಧರಿಂದ ನಿಬಿಡವಾದ ವಿರಾಟನು ಕಳುಹಿಸಿದ ಸೈನ್ಯವು ಶೀಘ್ರವಾಗಿ ಚಲಿಸುತ್ತಾ ಬೃಹನ್ನಳೆಯಿಂದ ಕೂಡಿದ ಅರಿಂದಮನಾದ ಉತ್ತರನ ಸಮೀಪಕ್ಕೆ ಹೊರಟಿತು.
ತಸ್ಮಿಂಸ್ತೂರ್ಯಶತಾಕೀರ್ಣೇ ಹಸ್ತ್ಯಶ್ವರಥಸಂಕುಲೇ |
ಪ್ರಹರ್ಷಃ ಸ್ತ್ರೀಕುಮಾರಾಣಾಂ ತುಮುಲಃ ಸಮಪದ್ಯತ ॥11॥
ನೂರಾರು ವಾದ್ಯಘೋಷಗಳು ಮೊಳಗುತ್ತಾ ಹಸ್ತ್ಯಶ್ವರಥಗಳು ನಿಬಿಡವಾಗಿರುವಾಗ ವಿರಾಟನಗರದ ಸ್ತ್ರೀ-ಕುಮಾರರಿಗೆ ಬಹಳ ಹರ್ಷವುಂಟಾಯಿತು.
ಅರ್ಜುನಸ್ತು ತತೋ ದೃಷ್ಟ್ವಾ ಸೈನ್ಯರೇಣುಂ ಸಮುತ್ಥಿತಮ್ |
ಸೈನ್ಯಧ್ವಜಂ ನಿಶಾಮ್ಯಾಥ ವೈರಾಟಿಂ ಸಮಭಾಷತ ॥12॥
ನಗರೇ ತುಮುಲಃ ಶಬ್ದೋ ರೇಣುಶ್ಚಾಕ್ರಮತೇ ನಭಃ |
ಕಿಂ ನು ಖಲ್ವಪಯಾತಾಸ್ತೇ ಕುರವೋ ನಗರಂ ಗತಾಃ ॥13॥
ತೇ ಚೈವ ನ ಜಿತಾಸ್ಮಾಭಿರ್ಮಹೇಷ್ವಾಸಾಃ ಸುಚೇತಸಃ |
ಆಮುಂಚ ಕವಚಂ ವೀರ ಚೋದಯಸ್ವ ಚ ವಾಜಿನಃ ॥14॥
ಅರ್ಜುನನು ಆ ಸೈನ್ಯದಿಂದ ಮೇಲೆದ್ದ ಧೂಳನ್ನು ನೋಡಿ ಸೈನ್ಯದ ಧ್ವಜವನ್ನೂ ನೋಡಿ ಉತ್ತರನನ್ನು ಕುರಿತು, ನಗರದಲ್ಲಿ ಬಹಳ ಶಬ್ದವಾಗುತ್ತಿದೆ. ಸೈನ್ಯದ ಧೂಳು ಆಕಾಶವನ್ನು ತಲುಪುತ್ತಿದೆ. ಕುರುಗಳು ಯುದ್ಧಭೂಮಿಯಿಂದ ಹೊರಟು ವಿರಾಟ ನಗರವನ್ನು ಪ್ರವೇಶಿಸಿದರೋ ಹೇಗೆ? ಕುರುಸೈನ್ಯಕ್ಕೆ ಸೇರಿದ ಒಳ್ಳೆಯ ಮನಸ್ಸುಳ್ಳ ಮಹಾಧನುರ್ಧರರು ನಮ್ಮಿಂದ ಸೋಲಿಸಲ್ಪಡಲಿಲ್ಲವೇ? ಎಲೈ ವೀರನೇ, ಕವಚವನ್ನು ಧರಿಸಿ ಅಶ್ವಗಳನ್ನು ಪ್ರಚೋದಿಸು.
ಜವೇನಾಭಿಪ್ರಪದ್ಯಸ್ವ ವಿರಾಟನಗರಂ ಪ್ರತಿ ॥15॥
ನ ತಾವತ್ ತಳನಿರ್ಘೋಷಂ ಗಾಂಡೀವಸ್ಯ ಚ ನಿಸ್ವನಮ್ |
ಧ್ವಜಂ ವಾ ದರ್ಶಯಿಷ್ಯಾಮಿ ಕದಾಚಿತ್ ಸ್ವಜನೋ ಭವೇತ್ ॥16॥
ಶೀಘ್ರವಾಗಿ ವಿರಾಟನಗರವನ್ನು ತಲುಪುವವನಾಗು. ನಾನು ತಳನಿ ಘೋಷವನ್ನಾಗಲೀ, ಗಾಂಡೀವದ ಧ್ವನಿಯನ್ನಾಗಲೀ ಅಥವಾ ಧ್ವಜವನ್ನಾಗಲಿ ತೋರಿಸುವುದಿಲ್ಲ. ಇವರು ಒಂದು ಪಕ್ಷ ನಮ್ಮವರೇ ಆಗಿರಬಹುದು (ಎಂದು ಹೇಳಿದನು).
ಉತ್ತರಃ
ಸೇನಾಗ್ರಮೇತನ್ಮತ್ಸ್ಯಾನಾಂ ಗಣಿಕಾಶ್ಚ ಸ್ವಲಂಕೃತಾಃ |
ಕನ್ಯಾ ರಥೇಷು ದೃಶ್ಯಂತೇ ಪುರೇ ವಿವಿಧವಾಸಸಃ ॥17॥
ಉತ್ತರ ಇದು ಮತ್ಸ್ಯರಾಜನ ಸೇನಾಮುಖ. ವೇಶ್ಯೆಯರು ಅಲಂಕೃತರಾಗಿದ್ದಾರೆ. ವಿವಿಧ ವಸ್ತ್ರಗಳನ್ನು ಧರಿಸಿರುವ ಕನ್ಯೆಯರು

ಪಟ್ಟಣದಲ್ಲಿ ರಥದಲ್ಲಿ ಕಾಣುತ್ತಿದ್ದಾರೆ.
ಉತ್ತರಾಮತ್ರ ಪಶ್ಯಾಮಿ ಸಖೀಭಿಃ ಪರಿವಾರಿತಾಮ್ |
ಅನೀಕಾನಿ ಪ್ರಕಾಶಂತೇ ಹಸ್ತಿನೋಽಶ್ವಾಶ್ಚ ವರ್ಜಿತಾಃ ॥18॥
ಇಲ್ಲಿ ತನ್ನ ಸಖಿಯರಿಂದ ಕೂಡಿದ ಉತ್ತರೆಯನ್ನು ನೋಡುತ್ತಿದ್ದೇನೆ. ಸೈನ್ಯಗಳು ತೋರುತ್ತಿವೆ. ಆದರೆ ಅಶ್ವಗಳು ಮತ್ತು ಗಜಗಳು ಯುದ್ಧ ಸಲಕರಣೆಗಳಿಂದ ವರ್ಜಿತವಾಗಿವೆ.
ಪಾದಾತಾ ರಥಿನಶ್ಚೈವ ಬಹವೋ ನ ಚ ಶಸ್ತ್ರಿಣಃ |
ವಿರಾಟವಚನಾತ್ ಸರ್ವೇ ಸಂಹೃಷ್ಟಾಃ ಪ್ರತಿಭಾಂತಿ ಮೇ ॥19॥
ನ ಚ ಮೇಽಸ್ಯ ಪ್ರತೀಘಾತಶ್ಚಿತ್ತಸ್ಯ ಸ್ವಜನೇ ಯಥಾ ॥20॥
ಪದಾತಿಗಳು ಮತ್ತು ರಥಿಕರು ಅನೇಕ ಸಂಖ್ಯೆಯಲ್ಲಿದ್ದಾರೆ. ಆದರೆ ಯಾರೂ ಶಸ್ತ್ರವನ್ನು ಹಿಡಿದಿಲ್ಲ. ವಿರಾಟವಚನದಿಂದ ಎಲ್ಲರೂ ಸಂತೋಷಗೊಂಡಿದ್ದಾರೆ ಎಂದು ನನಗೆ ತೋರುತ್ತಿದೆ. ಈ ಸೈನ್ಯಕ್ಕೆ ಸ್ವಜನರಿಗೆ ಹೇಗೆ ಪ್ರತಿಘಾತವನ್ನು ಮಾಡುವುದಿಲ್ಲವೋ ಅದರಂತೆ ಪ್ರತಿಘಾತ ಮಾಡುವ ಪ್ರಸಂಗವಿಲ್ಲ ಎಂದು ನನಗೆ ತೋರುತ್ತಿದೆ.
ವೈಶಂಪಾಯನಃ
ತತಃ ಶೀಘ್ರಂ ಸಮಾಗಮ್ಯ ಉತ್ತರಃ ಸ್ವಜನಂ ಬಹು |
ಪರಸ್ಪರಮಮಿತ್ರಘ್ನಃ ಸಸ್ವಜೇ ತಂ ಸಮಾಗತಮ್ ॥21॥
ಪ್ರೀತಿಮಾನ್ ಪುರುಷವ್ಯಾಘ್ರೋ ಹರ್ಷಯುಕ್ತಃ ಪುನಃ ಪುನಃ ॥22॥
ವೈಶಂಪಾಯನ ಅನಂತರ ಪುರುಷವ್ಯಾಘ್ರನೂ, ಸಂತೋಷದಿಂದ ಕೂಡಿದವನೂ ಆದ ಉತ್ತರನು ಹರ್ಷಯುಕ್ತನಾಗಿ, ಬರುತ್ತಿದ್ದ ಜನರನ್ನು ಶತ್ರುಸಂಹಾರಕನಾದ ಅವನು ಪುನಃ ಪುನಃ ಆಲಿಂಗನ ಮಾಡಿದನು.
ಜನಾಃ
ದಿಷ್ಟ್ಯಾ ಜಯಸಿ ಭದ್ರಂ ತೇ ದಿಷ್ಟ್ಯಾ ಸೂತೋ ಬೃಹನ್ನಳಾ |
ದಿಷ್ಟ್ಯಾ ಸಂಗ್ರಾಮಮಾಗಮ್ಯ ಭಯಂ ತವ ನ ಕಿಂಚನ ॥23॥
ಜನರು ದೇವರದಯದಿಂದ ಗೆದ್ದಿದ್ದೀಯೆ. ನಿನಗೆ ಮಂಗಳವಾಗಲಿ. ದೇವರ ದಯದಿಂದ ನಿನಗೆ ಬೃಹನ್ನಳೆಯು ಸೂತಳಾಗಿದ್ದಾಳೆ. ದೇವರದಯದಿಂದಲೇ ಯುದ್ಧ ಭೂಮಿಗೆ ಹೊರಟ ನಿನಗೆ ಯಾವ ಭಯವೂ ಇಲ್ಲ.
ಉತ್ತರಃ
ಅಜೈಷೀದೇಷ ತಾನ್ ಜಿಷ್ಣುಃ ಕುರೂನೇಕರಥೋ ರಣೇ |
ಏತಸ್ಯ ಬಾಹುವೀರ್ಯಂ ತದ್ ತೇನ ಗಾವೋ ಜಿತಾ ಮಯಾ ॥24॥
ಕುರವೋ ನಿರ್ಜಿತಾ ಯಸ್ಮಾತ್ ಸಂಗ್ರಾಮೇಽಮಿತತೇಜಸಃ |
ಅಕಾರ್ಷೀದೇಷ ತತ್ಕರ್ಮ ದೇವಪುತ್ರೋಪಮೋ ಯುವಾ ॥25॥
ಏಷ ತತ್ ಪುರುಷವ್ಯಾಘ್ರೋ ವಿಕ್ಷೋಭ್ಯ ಕುರುಮಂಡಲಮ್ |
ಗಾವಃ ಪ್ರಸಹ್ಯ ಜಿತವಾನ್ ರಣೇ ಮಾಂ ಚಾಪ್ಯಪಾಲಯತ್ ॥26॥
ಉತ್ತರ ಈ ಅರ್ಜುನನು ಎಲ್ಲಾ ಕುರುಗಳನ್ನೂ ಯುದ್ಧದಲ್ಲಿ ಒಂದು ರಥದಲ್ಲಿ ಕುಳಿತು ಜಯಿಸಿದನು. ನನ್ನ ಗೋವುಗಳು ರಕ್ಷಿತವಾದುದು ಇವನ ಬಾಹುವೀರ್ಯದ ಮಹಿಮೆಯಿಂದ. ಇವನಿಂದಲೇ ಅಮಿತಪರಾಕ್ರಮಿಗಳಾದ ಕುರುಗಳು ಯುದ್ಧದಲ್ಲಿ ನಿರ್ಜಿತರಾದರು. ದೇವಕುಮಾರನಂತಿರುವ ಈ ಯುವಕನು ಆ ಮಹಾಕರ್ಮವನ್ನು ಮಾಡಿದನು. ಈ ಪುರುಷವ್ಯಾಘ್ರನು ಕುರುಸೈನ್ಯವನ್ನು ಅಲ್ಲೋಲಕಲ್ಲೋಲಗೊಳಿಸಿ ತನ್ನ ಬಲದಿಂದ ಗೋವುಗಳನ್ನು ಜಯಿಸಿದನು ಮತ್ತು ನನ್ನನ್ನೂ ರಕ್ಷಿಸಿದನು.
ವೈಶಂಪಾಯನಃ
ಉತ್ತರಸ್ಯ ವಚಃಶ್ರುತ್ವಾ ಶಂಸಮಾನಸ್ಯ ಚಾರ್ಜುನಮ್ |
ಚೋದಿತಾ ರಾಜಪುತ್ರೇಣ ಜಯಮಂಗಲವಾದಿನಃ ॥27॥
ತತೋ ಗಂಧೈಶ್ಚ ಮಾಲ್ಯೈಶ್ಚ ಧೂಪೈಶ್ಚ ವಸುಸಂಭೃತೈಃ |
ಕನ್ಯಾಃ ಪಾರ್ಥಮಮಿತ್ರಘ್ನಂ ಕಿರಂತ್ಯಃ ಸಮಪೂಜಯನ್ ॥28॥
ವೈಶಂಪಾಯನ ಅರ್ಜುನನ ಪ್ರಶಂಸಾರೂಪವಾದ ಉತ್ತರನ ಮಾತುಗಳನ್ನು ಕೇಳಿ ಉತ್ತರನಿಂದ ಪ್ರೇರಿತರಾದ ಜಯಮಂಗಳಗಳನ್ನು ಹೇಳುತ್ತಿದ್ದ ಆ ಜನರು ಮತ್ತು ಕನ್ಯೆಯರೂ ಸಹ ಶತ್ರುಸಂಹಾರಕನಾದ ಅರ್ಜುನನನ್ನು ಗಂಧಮಾಲ್ಯಗಳಿಂದಲೂ, ಧನಸಹಿತವಾದ ಧೂಪಗಳಿಂದಲೂ ಅವನ ತಲೆಯ ಮೇಲೆ ಎರೆದು ಅವನನ್ನು ಪೂಜಿಸಿದರು.
ಆಪೂರ್ಯಮಾಣೋ ಮಾಲ್ಯೈಶ್ಚ ಗಂಧೈಶ್ಚ ವಿವಿಧೈಃ ಶುಭೈಃ |
ಸಂಪೂಜ್ಯಮಾನೋ ಲೋಕೇನ ನಗರದ್ವಾರಮಾವಿಶತ್ ॥29॥
ವಿವಿಧವಾದ ಶುಭಮಾಲೆಗಳಿಂದಲೂ, ಗಂಧದಿಂದಲೂ ಜನರಿಂದ ಪೂಜಿಸಲ್ಪಟ್ಟು ತುಂಬಿಹೋಗಿದ್ದ ಅರ್ಜುನನು ನಗರದ್ವಾರವನ್ನು ಪ್ರವೇಶಿಸಿದನು.
ಭೇರ್ಯಶ್ಚ ತೂರ್ಯಾಣಿ ಚ ವೇಣವಶ್ಚ
ವಿಚಿತ್ರವೇಷಾಃ ಪ್ರಮದಾಜನಾಶ್ಚ |
ಪುರಾದ್ ವಿರಾಟಸ್ಯ ಮಹಾಬಲಸ್ಯ
ನಿಷ್ಕ್ರಮ್ಯ ಭೂಮಿಂಜಯಮಭ್ಯನಂದನ್ ॥30॥
ಭೇರಿಗಳು, ಸಂಗೀತವಾದ್ಯಗಳು, ಕೊಳಲುಗಳು, ವಿಚಿತ್ರವೇಷವನ್ನು ಧರಿಸಿದ್ದ ಪ್ರಮದಾಜನರು ಎಲ್ಲರೂ ಮಹಾಬಲಿಷ್ಠನಾದ

ವಿರಾಟನ ನಗರದಿಂದ ಹೊರಬಂದು ಭೂಮಿಂಜಯನನ್ನು ಅಭಿನಂದಿಸಿದರು.
ಪ್ರಶಸ್ಯಮಾನಸ್ತು ಜಯೇನ ತತ್ರ
ಪುತ್ರೋ ವಿರಾಟಸ್ಯ ನ ಹೃಷ್ಯತಿ ಸ್ಮ |
ಸಂಭಾಷ್ಯಮಾಣಸ್ತು ಜಯೇನ ತೇನ
ಸೋಽಂತರ್ಮನಾಃ ಪಾಂಡವಮೀಕ್ಷ್ಯಮಾಣಃ ॥31॥
ಜಯವನ್ನು ನಿಮಿತ್ತ ಮಾಡಿಕೊಂಡು ಜನರು ಹೊಗಳುತ್ತಿದ್ದರೂ ವಿರಾಟ ಪುತ್ರನಾದ ಉತ್ತರನು ಸಂತೋಷಪಡಲಿಲ್ಲ. ಜಯದ ವಿಷಯದಲ್ಲಿ ಅವನನ್ನು ಕುರಿತು ಮಾತನಾಡಿದಾಗ ಅವನು ಅಂತರ್ಮುಖಿಯಾಗಿ ಪಾಂಡವನನ್ನು ನೋಡಿದನು.
ಪುತ್ರ್ಯಾ ವಿರಾಟಸ್ಯ ತತೋ ವರಾಣಿ
ವಸಾಂಸಿ ಪ್ರಾದಾತ್ ಪಾಂಡುಸುತಃ ಸಖೀಭ್ಯಃ |
ಸಭಾಜಯಂಶ್ಚಾಪಿ ಸಮಾಗತಾಸ್ತಾ
ದೃಷ್ಟ್ವಾ ಜಯಂ ತಚ್ಚ ಬಲಂ ಕುಮಾರ್ಯಃ ॥32॥
ಅನಂತರ ಪಾಂಡುಸುತನಾದ ಅರ್ಜುನನು ವಿರಾಟನ ಮಗಳಾದ ಉತ್ತರೆಗೂ ಮತ್ತು ಅವಳ ಸಖಿಯರಿಗೂ ಶ್ರೇಷ್ಠವಾದ ವಸ್ತ್ರಗಳನ್ನು ಕೊಟ್ಟನು. ಅರ್ಜುನನು ಮತ್ತು ಆ ಸೈನ್ಯವು ಹಿಂದೆ ಬಂದಿದ್ದನ್ನು ನೋಡಿ ಅಲ್ಲಿಗೆ ಬಂದ ಆ ಕುಮಾರಿಯರು ಅವರನ್ನು ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಏಕೋನಸಪ್ತತಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * *
ಎಪ್ಪತ್ತನೆಯ ಅಧ್ಯಾಯ
ಉತ್ತರನಿಂದ ದೇವಪುತ್ರನ ಜಯದ ಕಥನ. ರಾಜನ ಸಂತೋಷ ಮತ್ತು ಅರ್ಜುನನಿಂದ ಉತ್ತರೆಗೆ ವಸಾಂಸಿದಾನ.
ಜನಮೇಜಯಃ
ಸಭಾಜ್ಯಮಾನಃ ಪೌರೈಶ್ಚ ಸ್ತ್ರೀಭಿರ್ಜಾನಪದೈರಪಿ |
ಆಸಾದ್ಯಾಂತಃಪುರದ್ವಾರಂ ಪಿತ್ರೇ ಸಂಪ್ರತ್ಯಹಾರಯತ್ ॥1॥
ಜನಮೇಜಯ ಪೌರರಿಂದಲೂ ಮತ್ತು ಜಾನಪದರಿಂದಲೂ ಮತ್ತು ಸ್ತ್ರೀಯರಿಂದಲೂ ಪೂಜಿಸಲ್ಪಡುತ್ತಿದ್ದ ಉತ್ತರನು ಅಂತಃಪುರದ ದ್ವಾರವನ್ನು ತಲುಪಿ ದ್ವಾರಪಾಲಕನ ಮೂಲಕ ತಾನು ಬಂದಿದ್ದೇನೆಂಬ ವಾರ್ತೆಯನ್ನು ಕಳುಹಿಸಿದನು.
ತತೋ ದ್ವಾಃಸ್ಥಃ ಸಮಾಗಮ್ಯ ಪ್ರಣಿಪತ್ಯ ಕೃತಾಂಜಲಿಃ |
ವರ್ಧಯಿತ್ವಾ ಜಯಾಶೀರ್ಭಿರಿದಂ ವಚನಮಬ್ರವೀತ್ ॥2॥
ಆಗ ದ್ವಾರಪಾಲಕನು ಒಳಗೆ ಬಂದು ರಾಜನಿಗೆ ಕೈಗಳನ್ನು ಮುಗಿದು ಅವನಿಗೆ ಜಯಾಶೀರ್ವಾದಗಳನ್ನು ಹೇಳಿ ಹೀಗೆ ಹೇಳಿದನು.
ರಾಜನ್ ಪೃಥುಯಶಾಃ ಪುತ್ರೋ ಜಿತ್ವಾ ಶತ್ರೂನ್ ಸಮಾಗತಃ |
ಉತ್ತರಃ ಸಹ ಸೂತೇನ ದ್ವಾರಿ ತಿಷ್ಠತಿ ವಾರಿತಃ ॥3॥
ಕುಮಾರೈರ್ಯೋಧಮುಖ್ಯೈಶ್ಚ ಗಣಿಕಾಭಿಶ್ಚ ಸಂವೃತಃ |
ಪೌರಜಾನಪದೈರ್ಯುಕ್ತಃ ಪೂಜ್ಯಮಾನೋ ಜಯಾಶಿಷಾ ॥4॥
ರಾಜನೇ, ಮಹಾಕೀರ್ತಿವಂತನಾದ ನಿನ್ನ ಮಗನಾದ ಉತ್ತರನು ಶತ್ರುಗಳನ್ನು ಗೆದ್ದು ಬಂದು ದ್ವಾರದಲ್ಲಿ ತಡೆಯಲ್ಪಟ್ಟು ನಿಂತಿದ್ದಾನೆ. ಕುಮಾರರಿಂದಲೂ ಶ್ರೇಷ್ಠ ಯೋಧರಿಂದಲೂ, ವೇಶ್ಯೆಯರಿಂದಲೂ ಸಂವೃತನಾಗಿ ಪೌರಜಾನಪದರಿಂದ ಜಯಾಶೀರ್ವಾದಗಳಿಂದ ಪೂಜಿತನಾಗಿ ನಿಂತಿದ್ದಾನೆ (ಎಂದು ಹೇಳಿದನು).
ವೈಶಂಪಾಯನಃ
ತತೋ ಹೃಷ್ಟೋ ಮಹೀಪಾಲಃ ಕ್ಷತ್ತಾರಮಿದಮಬ್ರವೀತ್ ॥5॥
ಪ್ರವೇಶಯೋಭೌ ತೂರ್ಣಂ ತೌ ದರ್ಶನೇಪ್ಸುರಹಂ ತಯೋಃ ॥6॥
ವೈಶಂಪಾಯನ ಆಗ ಸಂತೋಷಗೊಂಡ ರಾಜನು ಸೂತನನ್ನು ಕುರಿತು ಅವರಿಬ್ಬರನ್ನು ಬೇಗ ಪ್ರವೇಶಿಸು. ನಾನು ಅವರಿಬ್ಬರನ್ನೂ ನೋಡಲು ಕಾತರನಾಗಿದ್ದೇನೆ ಎಂದು ಹೇಳಿದನು.
ಕ್ಷತ್ತಾರಂ ಕುರುರಾಜಸ್ತು ಶನೈಃ ಕರ್ಣ ಉವಾಚ ಹ ॥7॥
ಉತ್ತರಃ ಪ್ರವಿಶತ್ವೇಕೋ ನ ಪ್ರವೇಶ್ಯಾ ಬೃಹನ್ನಳಾ ॥8॥
ಕುರುರಾಜನಾದ ಯುಧಿಷ್ಠಿರನು ಸೂತನಿಗೆ ಮೆಲ್ಲಗೆ ಕಿವಿಯಲ್ಲಿ ಉತ್ತರನು ಮಾತ್ರ ಪ್ರವೇಶಿಸಲಿ, ಬೃಹನ್ನಳೆಯು ಪ್ರವೇಶಿಸುವುದು ಬೇಡ ಎಂದು ಹೇಳಿದನು.
ಏತಸ್ಯ ಹಿ ಮಹಾಬಾಹೋರ್ವ್ರತಂ ನಿತ್ಯಂ ಮಹಾತ್ಮನಃ ॥9॥
ಯೋ ಮಮಾಂಗೇ ವ್ರಣಂ ಕುರ್ಯಾತ್
ಶೋಣಿತಂ ವಾ ಪ್ರದರ್ಶಯೇತ್ |
ಅನ್ಯತ್ರ ಸಂಗ್ರಾಮಗತಾನ್ನ ಸ ಜೀವೇತ್ ಕಥಂಚನ ॥10॥
ಯುದ್ಧವನ್ನು ಬಿಟ್ಟು ಬೇರೆ ಕಾಲದಲ್ಲಿ ಯಾರು ನನ್ನ ದೇಹಕ್ಕೆ ವ್ರಣವನ್ನು ಮಾಡುತ್ತಾರೆಯೋ ಅಥವಾ ನನ್ನ ದೇಹದಿಂದ ರಕ್ತವನ್ನು

ಸುರಿಸುತ್ತಾರೆಯೋ ಅವರು ಹೇಗೂ ಬದುಕುವುದಿಲ್ಲ ಎಂಬುದು ಈ ಮಹಾತ್ಮನೂ, ಮಹಾಬಾಹುವೂ ಆದ ಬೃಹನ್ನಳೆಯ ನಿತ್ಯವಾದ ವ್ರತ.
ವ್ಯಕ್ತಂ ಭೃಶಂ ಸುಸಂಕ್ರುದ್ಧೋ ಮಾಂ ದೃಷ್ಟ್ವೈವ ಸಶೋಣಿತಮ್ |
ವಿರಾಟಂ ಹಿ ಸಹಾಮಾತ್ಯಂ ಹನ್ಯಾತ್ ಸಬಲವಾಹನಮ್ ॥11॥
ಅವನು ರಕ್ತಸಹಿತವಾದ ನನ್ನನ್ನು ನೋಡಿ ಬಹಳ ಕೋಪಗೊಂಡು ವಿರಾಟನನ್ನೂ, ಅವನ ಮಂತ್ರಿಗಳನ್ನೂ ಮತ್ತು ಅವನ ಬಲ, ವಾಹನಗಳನ್ನೂ ಕೊಂದಾನು.
ಇಂದ್ರಂ ವಾಽಪಿ ಕುಬೇರಂ ವಾ ಯಮಂ ವಾ ವರುಣಂ ತಥಾ |
ಮಮ ಶೋಣಿತಕರ್ತಾರಂ ಮೃದ್ನೀಯಾತ್ ಕಿಂ ಪುನರ್ನರಮ್ ॥12॥
ಕ್ಷಣಮಾತ್ರಂ ಸ ತತ್ರೈವ ದ್ವಾರಿ ತಿಷ್ಠತು ವೀರ್ಯವಾನ್ ॥13॥
ಇಂದ್ರನೇ ಆಗಲಿ, ಕುಬೇರ, ಯಮ ಅಥವಾ ವರುಣನೇ ಆಗಲಿ, ನನ್ನ ದೇಹದಿಂದ ರಕ್ತವನ್ನು ಸುರಿಸಿದರೆ ಅವರನ್ನು ಅವನು ಮರ್ದಿಸುವನು. ಇನ್ನು ಮನುಷ್ಯರ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಆದ್ದರಿಂದ ಸ್ವಲ್ಪ ಸಮಯದವರೆಗೆ ಪರಾಕ್ರಮಶಾಲಿಯಾದ ಅವನು ಬಾಗಿಲಿನಲ್ಲಿಯೇ ನಿಂತಿರಲಿ.
ವೈಶಂಪಾಯನಃ
ಇತಿ ಪ್ರೋವಾಚ ಧರ್ಮಾತ್ಮಾ ಯುಧಿಷ್ಠಿರ ಉದಾರಧೀಃ ॥14॥
ಇತ್ಯುಕ್ತತ್ವ ಕ್ಷಮಯಾ ಯುಕ್ತೋ ಧರ್ಮರಾಜೋ ಯುಧಿಷ್ಠಿರಃ |
ಸಭಾಯಾಂ ಸಹ ಮಾತ್ಸ್ಯೇನ ತೂಷ್ಣೀಮುಪವಿವೇಶ ಹ ॥15॥
ವೈಶಂಪಾಯನ ಧರ್ಮಾತ್ಮನೂ, ಉದಾರ ಬುದ್ಧಿಯುಳ್ಳವನೂ ಆದ ಯುಧಿಷ್ಠಿರನು ಹೀಗೆ ಹೇಳಿ ಕ್ಷಮೆಯಿಂದ ಯುಕ್ತನಾದ ಅವನು ವಿರಾಟರಾಜನ ಜೊತೆಯಲ್ಲಿ ಸಭೆಯಲ್ಲಿ ಸುಮ್ಮನೆ ಕುಳಿತನು.
ತತೋ ರಾಜಸುತೋ ಜ್ಯೇಷ್ಠಃ ಪ್ರಾವಿಶತ್ ಪೃಥಿವೀಂಜಯಃ ॥16॥
ಸೋಽಭಿವಾದ್ಯ ಪಿತುಃ ಪಾದೌ ಧರ್ಮರಾಜಸ್ಯ ಪಶ್ಯತಃ |
ತತೋ ರುಧಿರಸಿಕ್ತಾಂಗಂ ಧರ್ಮರಾಜಮಪಶ್ಯತ ॥17॥
ಭೂಮಾವೇಕಾಂತ ಆಸೀನಂ ಸೈರಂಧ್ರ್ಯಾ ಸಮುಪಸ್ಥಿತಮ್ ॥18॥
ಅನಂತರ ಹಿರಿಯ ರಾಜಪುತ್ರನಾದ ಭೂಮಿಂಜಯನು ಪ್ರವೇಶಿಸಿದನು. ಅವನು ಧರ್ಮರಾಜನು ನೋಡುತ್ತಿರುವಂತೆ ತನ್ನ ತಂದೆಯ ಪಾದಗಳಿಗೆ ನಮಸ್ಕರಿಸಿ ಅನಂತರ ರಕ್ತದಿಂದ ತೊಯ್ದ ದೇಹವುಳ್ಳ ಒಂದು ಕಡೆ ಭೂಮಿಯಲ್ಲಿ ಕುಳಿತಿರುವ ಸೈರಂಧ್ರಿಯಿಂದ ಸಹಿತನಾದ ಧರ್ಮರಾಜನನ್ನು ನೋಡಿದನು.
ತತಃ ಪಪ್ರಚ್ಛ ರಾಜಾನಂ ತ್ವರಮಾಣ ಇವೋತ್ತರಃ ॥19॥
ಕೇನಾಯಂ ತಾಡಿತೋ ವಿಪ್ರಃ ಕೇನ ಪಾಪಮಿದಂ ಕೃತಮ್ ॥20॥
ಶ್ರೋತ್ರಿಯೋ ಬ್ರಾಹ್ಮಣಶ್ರೇಷ್ಠ ಇಂದ್ರಾಭಿನವಲಕ್ಷಣಃ |
ಪೂಜನೀಯೋಽಭಿವಾದ್ಯಶ್ಚ ನ ಪ್ರವಧ್ಯೋಽಯಮೀದೃಶಃ ॥21॥
ಆಗ ಉತ್ತರನು ಶೀಘ್ರವಾಗಿ ರಾಜನನ್ನು ಕುರಿತು ಈ ವಿಪ್ರನನ್ನು ಹೊಡೆದವರು ಯಾರು? ಈ ಪಾಪಕಾರ್ಯವನ್ನು ಮಾಡಿದವನು ಯಾವನು? ಶ್ರೋತ್ರಿಯನೂ, ಬ್ರಾಹ್ಮಣಶ್ರೇಷ್ಠನೂ, ಇಂದ್ರನಂತೆ ಒಳ್ಳೆಯ ಲಕ್ಷಣದಿಂದ ಕೂಡಿದವನೂ ಆದ ಇಂತಹವನು ಪೂಜೆಗೆ ಅರ್ಹನಾದವನು. ನಮಸ್ಕಾರಕ್ಕೆ ಅರ್ಹನಾದವನು. ಎಂದೂ ಪ್ರಹಾರಕ್ಕೆ ಅರ್ಹನಾದವನಲ್ಲ ಎಂದು ಹೇಳಿದನು.
ವಿರಾಟಃ
ಮಯಾಽಯಂ ತಾಡಿತೋ ಜಿಹ್ಮೋ ನ ಚಾಪ್ಯೇತಾವದರ್ಹತಿ |
ಮಯಾ ಪ್ರಶಸ್ಯಮಾನೇಽಪಿ ತ್ವಯಿ ಷಂಡಂ ಪ್ರಶಂಸತಿ ॥22॥
ತಾಡಿತೋಽಯಂ ಮಯಾ ಪುತ್ರ ದುರಾತ್ಮಾ ಶತ್ರುಕರ್ಶನ |
ಬೃಹನ್ನಳಾಪ್ರಶಂಸಾಭಿರಸೂಯಾ ಮೇ ಮಹತ್ತಮಾ ॥23॥
ವಿರಾಟ ನಾನು ನಿನ್ನನ್ನು ಪ್ರಶಂಸೆ ಮಾಡುತ್ತಿದ್ದರೆ ಇವನು ಷಂಡನನ್ನು ಪ್ರಶಂಸೆ ಮಾಡುತ್ತಾನೆ. ಆದ್ದರಿಂದ ಈ ವಂಚಕನಿಗೆ ನಾನು ಪ್ರಹಾರವನ್ನು ಮಾಡಿದೆ. ನಾವು ಮಾಡುವ ಪೂಜೆಗೆ ಇವನು ಯೋಗ್ಯನಲ್ಲ. ಎಲೈ ಶತ್ರುಕರ್ಶನನೇ, ಪುತ್ರನೇ, ಈ ದುರಾತ್ಮನನ್ನು ನಾನು ಹೊಡೆದೆ. ಬೃಹನ್ನಳೆಯನ್ನು ಪ್ರಶಂಸೆ ಮಾಡುವುದರಿಂದ ನನಗೆ ದೊಡ್ಡ ಅಸೂಯೆ ಉಂಟಾಯಿತು.
ಉತ್ತರಃ
ಅಕಾರ್ಯಂ ತೇ ಕೃತಂ ರಾಜನ್ ಕ್ಷಿಪ್ರಮೇವ ಪ್ರಸಾದ್ಯತಾಮ್ |
ಮಾ ತ್ವಂ ಬ್ರಹ್ಮದ್ವಿಷಂ ಘೋರಂ ಸಮೂಲಮುಪನಿರ್ದಹೇತ್ ॥24॥
ಉತ್ತರ ರಾಜನೇ, ನೀನು ಅಕಾರ್ಯವನ್ನು ಮಾಡಿದ್ದೀಯೆ. ಇವನನ್ನು ಬೇಗ ಪ್ರಸನ್ನೀಕರಿಸಿಕೊ. ಘೋರವಾದ ಮಈ ದೋಷವು ಬ್ರಹ್ಮದ್ವೇಷವನ್ನು ಮಾಡಿದ ನಿನ್ನನ್ನು ಮೂಲಸಹಿತವಾಗಿ ದಹಿಸದಿರಲಿ.
ವೈಶಂಪಾಯನಃ
ಪುತ್ರಸ್ಯ ವಚನಂ ಶ್ರುತ್ವಾ ವಿರಾಟೋ ರಾಷ್ಟ್ರವರ್ಧನಃ |
ಕ್ಷಮಯಾಮಾಸ ಕೌಂತೇಯ ಭಸ್ಮಂ ಬ್ರಾಹ್ಮಣವರ್ಚಸಾ ॥25॥
ವೈಶಂಪಾಯನ ಪುತ್ರನ ಮಾತನ್ನು ಕೇಳಿ ರಾಷ್ಟ್ರದ ಅಭಿವೃದ್ಧಿ ಮಾಡುವ ವಿರಾಟನು ಬ್ರಾಹ್ಮಣ ವೇಷದಿಂದ ಛನ್ನನಾಗಿದ್ದ ಧರ್ಮರಾಜನ ಕ್ಷಮೆಯನ್ನು ಯಾಚಿಸಿದನು.

ಕ್ಷಮಯಂತಂ ತು ರಾಜಾನಂ ಪಾಂಡವಃ ಪ್ರತ್ಯಭಾಷತ ॥26॥
ಚಿರಂ ಕ್ಷಾಂತಂ ಮಯಾ ರಾಜನ್ ಮನ್ಯುರ್ಮಮ ನ ವಿದ್ಯತೇ ॥27॥
ಯದಿ ಸ್ಮ ತತ್ ಪತೇದ್ ಭೂಮೌ ರುಧಿರಂ ಮಮ ಪಾರ್ಥಿವ |
ಸರಾಷ್ಟ್ರಸ್ತ್ವಮಿಹೋಚ್ಛೇದಮಾಪದ್ಯೇಥಾ ನರರ್ಷಭ ॥28॥
ಕ್ಷಮೆಯನ್ನು ಯಾಚಿಸುವ ರಾಜನನ್ನು ಕುರಿತು ಧರ್ಮರಾಜನು ರಾಜನೇ, ನಾನು ನಿನ್ನ ಅಪರಾಧವನ್ನು ಬಹಳ ಹಿಂದೆಯೇ ಕ್ಷಮಿಸಿಬಿಟ್ಟಿದ್ದೇನೆ. ನನಗೆ ನಿನ್ನ ಮೇಲೆ ಕೋಪವಿಲ್ಲ. ಎಲೈ ನರರ್ಷಭನೇ, ಒಂದು ಪಕ್ಷ ಆ ರಕ್ತವು ಭೂಮಿಯ ಮೇಲೆ ಬಿದ್ದಿದ್ದರೆ ನಿನ್ನ ರಾಷ್ಟ್ರಸಹಿತನಾಗಿ ನೀನು ವಿನಾಶವನ್ನು ಹೊಂದುತ್ತಿದ್ದೆ ಎಂದು ಹೇಳಿದನು.
ನ ದೂಷಯಾಮಿ ರಾಜೇಂದ್ರ ಯಸ್ತು ಹನ್ಯಾದದೂಷಕಮ್ |
ಫಲಂ ತಸ್ಯ ಮಹಾರಾಜ ಕ್ಷಿಪ್ರಂ ದಾರುಣಮಾಪ್ನುಯಾತ್ ॥29॥
ರಾಜೇಂದ್ರನೇ, ದೋಷವಿಲ್ಲದಿರುವವನನ್ನು ನಾನು ದೂಷಿಸುವುದಿಲ್ಲ. ಮಹಾರಾಜನೇ, ದೂಷಿಸುವವನು ಶೀಘ್ರವಾಗಿ ಘೋರವಾದ ಫಲವನ್ನು ಹೊಂದುವನು (ಎಂದು ಹೇಳಿದನು).
ವೈಶಂಪಾಯನಃ
ಶೋಣಿತೇ ತು ವ್ಯತಿಕ್ರಾಂತೇ ಪ್ರವಿವೇಶ ಬೃಹನ್ನಳಾ |
ಅಭಿವಾದ್ಯ ಮಹಾರಾಜಂ ಕಂಕಂ ಚಾಪ್ಯುಪತಿಷ್ಠತ ॥30॥
ವೈಶಂಪಾಯನ ರಕ್ತವು ಹರಿಯುವುದು ನಿಂತಮೇಲೆ ಬೃಹನ್ನಳೆಯು ಪ್ರವೇಶಿಸಿ ಮಹಾರಾಜನಿಗೆ ನಮಸ್ಕಾರವನ್ನು ಮಾಡಿ ಕಂಕನನ್ನು ನೋಡಿದಳು.
ಕ್ಷಮಯಿತ್ವಾ ತು ಕೌರವ್ಯಂ ರಣಾದುತ್ತರಮಾಗತಮ್ |
ಪರಿಷ್ವಜ್ಯ ದೃಢಂ ರಾಜಾ ಪ್ರವೇಶ್ಯ ಭವನೋತ್ತಮಮ್ ॥31॥
ಪ್ರಶಶಂಸ ತತೋ ಮಾತ್ಸ್ಯಃ ಶೃಣ್ವತಃ ಸವ್ಯಸಾಚಿನಃ ॥32॥
ಯುಧಿಷ್ಠಿರನ ಕ್ಷಮೆಯನ್ನು ಕೇಳಿ, ವಿರಾಟರಾಜನು ರಣದಿಂದ ಹಿಂದಿರುಗಿದ ಉತ್ತರನನ್ನು ದೃಢವಾಗಿ ಆಲಿಂಗಿಸಿ ಅಂತಃಪುರದೊಳಗೆ ಕರೆದುಕೊಂಡು ಹೋಗಿ ಅರ್ಜುನನು ಕೇಳುತ್ತಿರುವಂತೆಯೇ ಅವನನ್ನು ಪ್ರಶಂಸಿಸಿದನು.
ವಿರಾಟಃ
ತ್ವಯಾ ದಾಯಾದವಾನಸ್ಮಿ ಕೈಕೇಯ್ಯಾನಂದವರ್ಧನ |
ತ್ವಯಾ ಮೇ ಸದೃಶಃ ಪುತ್ರೋ ನ ಭೂತೋ ನ ಭವಿಷ್ಯತಿ ॥33॥
ವಿರಾಟ ಕೈಕೇಯಿಯ ಆನಂದವರ್ಧನನಾದ ಪುತ್ರನೇ, ನಿನ್ನಿಂದ ನಾನು ಕೃತ್ಯವಂತನಾಗಿದ್ದಾನೆ. ನನಗೆ ನಿನ್ನಂತಹ ಪುತ್ರನು ಹಿಂದೆ ಇರಲಿಲ್ಲ ಮತ್ತು ಮುಂದೆ ಹುಟ್ಟುವುದಿಲ್ಲ.
ಪದಂ ಪದಸಹಸ್ರೇಣ ಯಶ್ಚರನ್ನಾಪರಾಧ್ನು(ಧ್ನು)ಯಾತ್ ॥34॥
ಶತ್ರುಗಳ ಒಂದು ಸಹಸ್ರ ಹೆಜ್ಜೆಗೆ ನೀನು ಒಂದು ಹೆಜ್ಜೆಯನ್ನಿಟ್ಟು ಅಂತಹ ಧೈರ್ಯಶಾಲಿಯಾಗಿ, ವೇಗಶಾಲಿಯಾಗಿ ಶತ್ರುಗಳನ್ನು ಗೆದ್ದಿದ್ದೀಯೆ.
ಶೂರಶ್ಚ ಲಘುಹಸ್ತಶ್ಚ ಕರ್ಣೋ ಲಘುಪರಾಕ್ರಮಃ |
ತೇನ ಕರ್ಣೇನ ತೇ ತಾತ ಕಥಮಾಸೀತ್ ಸಮಾಗಮಃ ॥35॥
ಪ್ರೀತಿಪಾತ್ರನೇ, ಕರ್ಣನು ವೇಗ ಮತ್ತು ಪರಾಕ್ರಮವುಳ್ಳವನು. ವೇಗಶಾಲಿಯಾದ ಹಸ್ತವುಳ್ಳವನು ಮತ್ತು ಶೂರ. ಆ ಕರ್ಣನ ಜೊತೆಯಲ್ಲಿ ನಿನ್ನ ಸಮಾಗಮವು ಹೇಗೆ ಆಯಿತು?
ಪರ್ವತಂ ಯೋ ವಿಭಿಂದ್ಯಾತ್ ತು ರಾಜಪುತ್ರೋ ವರೇಷುಭಿಃ |
ದುರ್ಯೋಧನೇನ ತೇ ತಾತ ಕಥಮಾಸೀತ್ ಸಮಾಗಮಃ ॥36॥
ಯಾವ ರಾಜಪುತ್ರನು ಶ್ರೇಷ್ಠವಾದ ಬಾಣಗಳಿಂದ ಪರ್ವತವನ್ನೂ ಭೇದಿಸಬಲ್ಲನೋ, ಪ್ರೀತಿಪಾತ್ರನೇ, ಅಂತಹ ದುರ್ಯೋಧನನ ಜೊತೆಯಲ್ಲಿ ನಿನ್ನ ಯುದ್ಧವು ಹೇಗೆ ನಡೆಯಿತು?
ಆಚಾರ್ಯೋ ವೃಷ್ಣಿವೀರಾಣಾಂ ಪಾಂಚಾಲಾನಾಂ ಚ ಯಃ ಪ್ರಭುಃ |
ಸರ್ವಕ್ಷತ್ರಸ್ಯ ಚಾಚಾರ್ಯಃ ಸರ್ವಶಸ್ತ್ರಭೃತಾಂ ವರಃ ॥37॥
ತೇನ ದ್ರೋಣೇನ ತೇ ತಾತ ಕಥಮಾಸೀತ್ ಸಮಾಗಮಃ ॥38॥
ಪಾಂಚಾಲರಿಗೂ ಮತ್ತು ವೃಷ್ಣಿವೀರರಿಗೂ ಆಚಾರ್ಯರೂ, ಸರ್ವಕ್ಷತ್ರಿಯರಿಗೂ ಆಚಾರ್ಯರೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ ಪ್ರಭುಗಳೂ ಆದ ದ್ರೋಣರ ಜೊತೆಯಲ್ಲಿ ಎಲೈ ಪ್ರೀತಿಪಾತ್ರನೇ, ನಿನ್ನ ಯುದ್ಧವು ಹೇಗಾಯಿತು?
ರಣೇ ಯಂ ಪ್ರೇಕ್ಷ್ಯ ಸೀದಂತಿ ಹತವೀರ್ಯಪರಾಕ್ರಮಾಃ |
ಕೃಪೇಣ ತೇನ ತೇ ತಾತ ಕಥಮಾಸೀತ್ ಸಮಾಗಮಃ ॥39॥
ಎಲೈ ಪ್ರೀತಿಪಾತ್ರನೇ, ಯುದ್ಧದಲ್ಲಿ ಯಾವ ಕೃಪರನ್ನು ನೋಡಿದ ಮಾತ್ರದಿಂದ ತಮ್ಮ ವೀರ್ಯಪರಾಕ್ರಮಗಳು ನಷ್ಟವಾಗಿ ಯೋಧರು ನಾಶವನ್ನು ಹೊಂದುವರೋ ಅಂತಹ ಕೃಪಾಚಾರ್ಯರ ಜೊತೆಯಲ್ಲಿ ನಿನ್ನ ಸಮಾಗಮವು ಹೇಗೆ ಆಯಿತು?
ಯಸ್ಯ ತದ್ ವಿಶ್ರುತಂ ಲೋಕೇ ಬ್ರಹ್ಮಚರ್ಯಂ ಸುದುಷ್ಕರಮ್ |
ಪಿತುಃ ಕೃತೇ ಕೃತಂ ಘೋರೇ ಮಹದ್‌ವ್ರತಮನುತ್ತಮಮ್ ॥40॥
ಯೇನ ಯುದ್ಧಂ ಕೃತಂ ಪೂರ್ವಂ ಜಾಮದಗ್ನ್ಯೇನ ವೈ ಸಹ |
ಭೀಷ್ಮೇಣ ಪುರುಷವ್ಯಾಘ್ರ ನ ಚ ಯುದ್ಧೇ ಪರಾಜಿತಃ ॥41॥

ಯಾವನ ದುಷ್ಕರವಾದ ಬ್ರಹ್ಮಚರ್ಯವು ಲೋಕದಲ್ಲಿ ವಿಶ್ರುತವಾಗಿದೆಯೋ, ಯಾವನು ತಂದೆಯ ಸಲುವಾಗಿ ಘೋರವಾದ ಮಹಾವ್ರತವನ್ನು ಅನುಷ್ಠಾನ ಮಾಡಿದನೋ, ಯಾವನು ಹಿಂದೆ ಪರಶುರಾಮರ ಜೊತೆಯಲ್ಲಿ ಯುದ್ಧವನ್ನು ಮಾಡಿದನೋ ಎಲೈ ಪುರುಷವ್ಯಾಘ್ರನೇ, ಅಂತಹ ಭೀಷ್ಮರು ನಿನ್ನಿಂದ ಹೇಗೆ ಪರಾಜಿತರಾದರು?

ಪರಾಕ್ರಮೀ ಚ ದುರ್ಧರ್ಷೋ ವಿದ್ವಾನ್ ಶೂರೋ ಜಿತೇಂದ್ರಿಯಃ |
ಕ್ಷಿಪ್ರಕಾರೀ ದೃಢಾವೇಧೀ ವಿಶ್ರುತಃ ಸರ್ವಕರ್ಮಸು ||42||
ತೇನ ತೇ ಸಹ ಭೀಷ್ಮೇಣ ಕುರುವೃದ್ಧೇನ ಸಂಯುಗೇ |
ಯುದ್ಧಮಾಸೀತ್ ಕಥಂ ತೇನ ಸರ್ವಮೇತದ್ ಬ್ರವೀಹಿ ಮೇ ||43||

ಪರಾಕ್ರಮಶಾಲಿಯೂ, ಸೋಲಿಸಲು ಅಸಾಧ್ಯನಾದವನೂ, ವಿದ್ವಾಂಸನೂ, ಶೂರನೂ, ಜಿತೇಂದ್ರಿಯನೂ, ಕ್ಷಿಪ್ರವಾಗಿ ಕಾರ್ಯವನ್ನು ಮಾಡುವವನೂ, ದೃಢವಾಗಿ ಶತ್ರುಗಳಿಗೆ ವೇಧವನ್ನು ಉಂಟು ಮಾಡುವವನೂ, ಎಲ್ಲ ಕರ್ಮಗಳಲ್ಲಿಯೂ ಪ್ರಖ್ಯಾತನಾದವನೂ ಆದ ಕುರುವೃದ್ಧರಾದ ಭೀಷ್ಮರ ಜೊತೆಯಲ್ಲಿ ನಿನ್ನ ಯುದ್ಧವು ಹೇಗೆ ನಡೆಯಿತು? ಇದೆಲ್ಲವನ್ನೂ ನನಗೆ ಹೇಳು.

ಆಚಾರ್ಯಪುತ್ರೋ ಯಃ ಶೂರಃ ಸರ್ವಶಸ್ತ್ರಭೃತಾಂ ವರಃ |
ತೇನ ವೀರೇಣ ತೇ ತಾತ ಕಥಮಾಸೀತ್ ಸಮಾಗಮಃ ||44||

ಆಚಾರ್ಯ ಪುತ್ರನೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ, ವೀರನೂ ಆದ ಅಶ್ವತ್ಥಾಮನ ಜೊತೆಯಲ್ಲಿ ಪ್ರೀತಿಪಾತ್ರನೇ, ನಿನ್ನ ಯುದ್ಧವು ಹೇಗೆ ನಡೆಯಿತು?

ಸರ್ವೇ ಚೈವ ಮಹಾವೀರ್ಯಾ ಧಾರ್ತರಾಷ್ಟ್ರಾ ಮಹಾಬಲಾಃ |
ತೈಶ್ಚ ವೀರೈಶ್ಚ ತೇ ತಾತ ಕಥಮಾಸೀತ್ ಸಮಾಗಮಃ ||45||

ಎಲೈ ಪ್ರೀತಿಪಾತ್ರನೇ, ಧೃತರಾಷ್ಟ್ರನ ಪುತ್ರರೆಲ್ಲರೂ ಮಹಾಬಲವುಳ್ಳವರು ಮತ್ತು ಮಹಾವೀರ್ಯವುಳ್ಳವರು. ಆ ವೀರರ ಜೊತೆಯಲ್ಲಿ ನಿನ್ನ ಸಮಾಗಮವು ಹೇಗೆ ನಡೆಯಿತು?

ಉತ್ತರಃ

ನ ಮಯಾ ನಿರ್ಜಿತಾ ಗಾವೋ ನ ಮಯಾ ಕುರವೋ ಜಿತಾಃ |
ಕೃತಂ ಚ ಕರ್ಮ ತತ್ ಸರ್ವಂ ದೇವಪುತ್ರೇಣ ಕೇನಚಿತ್ ||46||

ಉತ್ತರ ನಾನು ಗೋವುಗಳನ್ನು ಹಿಂದಿರುಗಿಸಲಿಲ್ಲ. ಕುರುಗಳನ್ನೂ ಗೆಲ್ಲಲಿಲ್ಲ. ಯಾವನೋ ಒಬ್ಬ ದೇವಪುತ್ರನು ಆ ಎಲ್ಲ ಕೆಲಸವನ್ನೂ ಮಾಡಿದನು.

ಸ ಹಿ ಭೀತ್ವಾ ದ್ರವಂತಂ ಮಾಂ ಭೀಷ್ಮದ್ರೋಣಮುಖಾನ್ ಕುರೂನ್ |
ದೃಷ್ಟ್ವಾ ವಿಷಣ್ಣಂ ಸಂಗ್ರಾಮೇ ದೇವಪುತ್ರೋ ನ್ಯವಾರಯತ್ ||47||

ಆ ದೇವಪುತ್ರನಾದರೂ ಭೀಷ್ಮದ್ರೋಣಾದಿ ಕುರುಗಳನ್ನು ನೋಡಿ ಯುದ್ಧದಲ್ಲಿ ವಿಷಾದದಿಂದ ಕೂಡಿ ಹೆದರಿ ಓಡುತ್ತಿದ್ದ ನನ್ನನ್ನು ನೋಡಿ ನಿವಾರಿಸಿದನು.

ಸ ಹ್ಯತಿಷ್ಠದ್ ರಥೋಪಸ್ಥೇ ವಜ್ರಹಸ್ತನಿಭೋ ಯುವಾ |
ತೇನ ತಾ ನಿರ್ಜಿತಾ ಗಾವಃ ಕುರವಸ್ತೇನ ನಿರ್ಜಿತಾಃ ||48||
ತಸ್ಯ ತತ್ ಕರ್ಮ ವೀರಸ್ಯ ನ ಮಯಾ ತಾತ ತತ್ ಕೃತಮ್ ||49||

ಆ ಯುವಕನು ವಜ್ರಹಸ್ತನಾದ ಇಂದ್ರನಂತೆ ರಥದ ಅಚ್ಚುಪೀಠದಲ್ಲಿ ನಿಂತು ಗೋವುಗಳನ್ನೂ ಮತ್ತು ಆ ಕುರುಗಳನ್ನೂ ಜಯಿಸಿದನು. ಆ ಕರ್ಮವು ಆ ವೀರನು ಮಾಡಿದುದು. ತಂದೆಯೇ, ನಾನು ಮಾಡಿದುದಲ್ಲ.

ಸ ಹಿ ಶಾರದ್ವತಂ ದ್ರೋಣಂ ದ್ರೋಣಪುತ್ರಂ ಚ ವೀರ್ಯವಾನ್ |
ಸೂತಪುತ್ರಂ ಚ ಭೀಷ್ಮಂ ಚ ಚಕಾರ ವಿಮುಖಾನ್ ಶರೈಃ ||50||

ವೀರ್ಯಶಾಲಿಯಾದ ಅವನು ಕೃಪರನ್ನೂ, ದ್ರೋಣರನ್ನೂ, ದ್ರೋಣಪುತ್ರರಾದ ಅಶ್ವತ್ಥಾಮರನ್ನೂ, ಸೂತಪುತ್ರನಾದ ಕರ್ಣನನ್ನೂ ಮತ್ತು ಭೀಷ್ಮರನ್ನೂ ತನ್ನ ಬಾಣಪ್ರಯೋಗದಿಂದ ವಿಮುಖರನ್ನಾಗಿ ಮಾಡಿದನು.

ದುರ್ಯೋಧನಂ ಚ ಸಮರೇ ಪ್ರಭಿನ್ನಮಿವ ಕುಂಜರಮ್ |
ಪ್ರಭಗ್ನಮಬ್ರವೀತ್ ಭೀತಂ ರಾಜಪುತ್ರಂ ಮಹಾಬಲಮ್ ||51||

ಯುದ್ಧದಲ್ಲಿ ಮದಿಸಿದ ಆನೆಯಂತಿದ್ದ ದುರ್ಯೋಧನನನ್ನು ಪ್ರಭಗ್ನಗೊಳಿಸಿ ಭೀತನಾದ ಮಹಾಬಲನಾದ ಆ ರಾಜಪುತ್ರನನ್ನು ಕುರಿತು ಹೀಗೆ ಹೇಳಿದನು.

ದೇವಪುತ್ರಃ

ನ ಹಸ್ತಿನಪುರೇ ತ್ರಾಣಂ ತವ ಪಶ್ಯಾಮಿ ಕಿಂಚನ |
ವ್ಯಾಯಾಮೇನ ಪರೀಪ್ಸಸ್ವ ಜೀವಿತಂ ಕೌರವಾತ್ಮಜ ||52||

ದೇವಪುತ್ರ ನಿನಗೆ ಹಸ್ತಿನಪುರದಲ್ಲಿ ಯಾವ ರಕ್ಷಣೆಯೂ ನನಗೆ ತೋರುತ್ತಿಲ್ಲ. ಕೌರವಾತ್ಮಜನೇ, ನೀನು ಹಿಂದಿರುಗಿ ಹೋಗಿ ನಿನ್ನ ಜೀವನವನ್ನು ರಕ್ಷಿಸಿಕೋ (ಲಕ್ಷ್ಯಾಲಂಕಾರ).

ನ ಹಸ್ತಿನಪುರೇ ಶಕ್ಯಾ ಭೋಕ್ತುಂ ಭೋಗಾಃ ಪಲಾಯತಾ |
ನ ಮೋಕ್ಷ್ಯಸೇ ಪಲಾಯಂಸ್ತ್ವಂ ರಾಜನ್ ಯುದ್ಧಮನಾ ಭವ ||53||
ಪೃಥಿವೀಂ ಭೋಕ್ಷ್ಯಸೇ ಜಿತ್ವಾ ಹತೋ ವಾ ಸ್ವರ್ಗಮಾಪ್ಸ್ಯಸಿ ||54||

ಯುದ್ಧದಲ್ಲಿ ಓಡುವ ನಿನ್ನಿಂದ ಹಸ್ತಿನಪುರದಲ್ಲಿ ಯಾವ ಭೋಗಗಳನ್ನೂ ಭೋಗಿಸಲು ಸಾಧ್ಯವಿಲ್ಲ. ರಾಜನೇ, ನೀನು ಓಡಿದರೂ ನಾನು ನಿನ್ನನ್ನು ಬಿಡುವುದಿಲ್ಲ. ಆದ್ದರಿಂದ ಯುದ್ಧಮಾಡುವುದರಲ್ಲಿ ಮನಸ್ಸನ್ನು ಹೊಂದು. ಗೆದ್ದು ಭೂಮಿಯನ್ನು

ಭೋಗಿಸುತ್ತೀಯೆ ಅಥವಾ ಹತನಾಗಿ ಸ್ವರ್ಗವನ್ನು ಹೊಂದುವಿ.
ಉತ್ತರಃ
ಸ ನಿವೃತ್ತೋ ನರವ್ಯಾಘ್ರೋ ಮುಂಚನ್ ವಜ್ರನಿಭಾನ್ ಶರಾನ್ |
ಸಚಿವೈಃ ಸಂವೃತೋ ರಾಜಾ ಭೀಷ್ಮದ್ರೋಣಕೃಪಾದಿಭಿಃ ॥55॥
ಉತ್ತರ ಹೀಗೆ ಹೇಳಲ್ಪಟ್ಟ ನರವ್ಯಾಘ್ರನಾದ ದುರ್ಯೋಧನರಾಜನು ಭೀಷ್ಮದ್ರೋಣಕೃಪಾದಿಗಳಿಂದಲೂ, ಸಚಿವರಿಂದಲೂ ಸುತ್ತುವರಿಯಲ್ಪಟ್ಟವನಾಗಿ ವಜ್ರದಂತಿದ್ದ ಬಾಣಗಳನ್ನು ಪ್ರಯೋಗಿಸುತ್ತಾ ಯುದ್ಧಕ್ಕೆ ಬಂದನು.
ತಂ ದೃಷ್ಟ್ವಾ ರೋಮಹರ್ಷೋಽಭೂದ್ ದೂರಾತ್ ಸ್ತಂಭಶ್ಚ ಮೇಽಭವತ್|
ಯದಭ್ರಘನಸಂಕಾಶಮನೀಕಂ ವ್ಯಧಮಚ್ಛರೈಃ ॥56॥
ಅವನು (ದೇವಪುತ್ರನು) ದೂರದಿಂದಲೇ ತನ್ನ ಬಾಣಗಳಿಂದ ಮೇಘಸಮೂಹದಂತಿದ್ದ ಆ ದುರ್ಯೋಧನನ ಸೈನ್ಯವನ್ನು ಬಾಣಗಳಿಂದ ಚದುರಿಸುವುದನ್ನು ನೋಡಿ ನನಗೆ ರೋಮಹರ್ಷವೂ ಮತ್ತು ಮನೋವಾಕ್‌ಗಳ ಸ್ತಂಭನವೂ ಉಂಟಾಯಿತು.
ತತ್ ಪ್ರಣುದ್ಯ ರಥಾನೀಕಂ ಸಿಂಹರ್ಷಭಸಮೋ ಯುವಾ |
ತಾನ್ ಕುರೂನ್ ದ್ರಾವಯದ್ ರಾಜನ್ ರಣೇ ನಾಗ ಇವ ಶ್ವಸನ್ ॥
ತರುಣ ಸಿಂಹಸದೃಶನಾದ ಆ ಯುವಕನು ಕೌರವರಥ ಸಮೂಹವನ್ನು ಮರ್ದಿಸಿ ಎಲೈ ರಾಜನೇ, ಭುಸುಗುಟ್ಟುವ ಸರ್ಪದಂತೆ ಯುದ್ಧದಲ್ಲಿ ಕೌರವರನ್ನು ಓಡಿಸಿದನು.
ಏಕೇನ ತೇನ ಶೂರೇಣ ಷಡ್ರಥಾಃ ಪರಿನಿರ್ಜಿತಾಃ |
ಶಾರ್ದೂಲೇನೇವ ಮತ್ತೇನ ಮೃಗಾಸ್ತೃಣಚರಾ ಯಥಾ ॥58॥
ಮದಿಸಿದ ಹುಲಿಯು ಹುಲ್ಲನ್ನು ತಿನ್ನುವ ಜಿಂಕೆಗಳನ್ನು ಓಡಿಸಿದಂತೆ ಆ ಶೂರನು ಒಬ್ಬನೇ ಆರು ಮಹಾರಥರನ್ನು ಪರಾಭವಗೊಳಿಸಿದನು.
ಹಯಾನಾಂ ಚ ಗಜಾನಾಂ ಚ ಶೂರಾಣಾಂ ಚ ಧನುಷ್ಮತಾಮ್ |
ನಿಹತಾನಿ ಸಹಸ್ರಾಣಿ ಭಗ್ನಾ ಚ ಕುರುವಾಹಿನೀ ॥59॥
ಸಹಸ್ರಸಂಖ್ಯೆಯ ಅಶ್ವಗಳು, ಗಜಗಳು, ಧನುಷ್ಪಾಣಿಗಳಾದ ಶೂರರು ಕೊಲ್ಲಲ್ಪಟ್ಟರು. ಕುರುಸೈನ್ಯವು ಭಗ್ನವಾಯಿತು.
ಸೂತಪುತ್ರಂ ಶರೈರ್ವಿದ್ಧ್ವಾ ಹಯಾನ್ ಹತ್ವಾ ಮಹಾರಥಃ |
ದೇವಪುತ್ರಸಮಃ ಸಂಖೇ ರಕ್ತಂ ವಸ್ತ್ರಂ ಸಮಾದದೇ ॥60॥
ದೇವಪುತ್ರಸಮನೂ, ಮಹಾರಥನೂ ಆದ ಅವನು ಸೂತಪುತ್ರನಾದ ಕರ್ಣನನ್ನು ಬಾಣಗಳಿಂದ ಹೊಡೆದು, ಅವನ ಅಶ್ವಗಳನ್ನು ಕೊಂದು, ಅವನ ರಕ್ತವಸ್ತ್ರವನ್ನು ತೆಗೆದುಕೊಂಡನು.
ಚತುರ್ಭಿಃ ಪುನರಾನರ್ಚ್ಛದ್ ಭೀಷ್ಮಂ ಶಾಂತನವಂ ರಣೇ |
ಸ ತಂ ವಿದ್ಧ್ವಾ ಹಯಾಂಸ್ತಸ್ಯ ನಾಸ್ಯ ವಸ್ತ್ರಂ ಸಮಾದದೇ ॥61॥
ಪುನಃ ಅವನು ಶಂತನುಪುತ್ರರಾದ ಭೀಷ್ಮರನ್ನು ನಾಲ್ಕುಬಾಣಗಳಿಂದ ಹಿಂಸಿಸಿದನು. ಅವನು ಅವರ ಅಶ್ವಗಳಿಗೂ ಹೊಡೆದನು. ಆದರೆ ಅವರ ವಸ್ತ್ರಗಳನ್ನು ತೆಗೆದುಕೊಳ್ಳಲಿಲ್ಲ.
ದುರ್ಯೋಧನಂ ಚ ಬಲವಾನ್ ಬಾಣೈರ್ವಿವ್ಯಾಧ ಸಪ್ತಭಿಃ |
ತಂ ಸ ವಿದ್ಧ್ವಾ ಹಯಾಂಶ್ಚಾಸ್ಯ ಶುಕ್ಲವಸ್ತ್ರಮಥಾದದೇ ॥62॥
ಬಲಿಷ್ಠನಾದ ಅವನು ದುರ್ಯೋಧನನನ್ನು ಏಳುಬಾಣಗಳಿಂದ ಹೊಡೆದು ಹಿಂಸಿಸಿದನು. ಅವನ ಅಶ್ವಗಳನ್ನು ಕೊಂದು ಅವನನ್ನು ಹಿಂಸೆಗೊಳಿಸಿ ಅವನ ಶುಕ್ಲವಸ್ತ್ರವನ್ನು ತೆಗೆದುಕೊಂಡನು.
ದ್ರೋಣಂ ಕೃಪಂ ಚ ಬಲವಾನ್ ಸೋಮದತ್ತಂ ಜಯದ್ರಥಮ್ |
ಭೂರಿಶ್ರವಸಮಿಂದ್ರಾಭಂ ಶಕುನಿಂ ಚ ಮಹಾರಥಮ್ ॥63॥
ತ್ರಿಭಿಸ್ತ್ರಿಭಿಃ ಶರೈರ್ವಿದ್ಧ್ವಾ ದುಃಶಾಸನಮುಖಾನಪಿ |
ವಿವಿಧಾನಿ ಚ ವಸಾತತ್ರಣಿ ಮಹಾರ್ಹಾಣ್ಯಾಜಹಾರ ಸಃ ॥64॥
ದ್ರೋಣ, ಕೃಪ, ಬಲಿಷ್ಠನಾದ ಸೋಮದತ್ತ, ಜಯದ್ರಥ, ಇಂದ್ರನಿಗೆ ಸದೃಶನಾದ ಭೂರಿಶ್ರವ, ಮಹಾರಥನಾದ ಶಕುನಿ ಮತ್ತು ದುಃಶಾಸನನೇ ಮೊದಲಾದವರು ಇವರೆಲ್ಲರನ್ನು ಮೂರು ಮೂರು ಬಾಣಗಳಿಂದ ಹೊಡೆದು ಅವರ ಬೆಲೆಬಾಳುವ ವಿವಿಧ ವಸ್ತ್ರಗಳನ್ನು ತೆಗೆದುಕೊಂಡನು.
ದ್ವಾಭ್ಯಾಂ ಶರಾಭ್ಯಾಂ ವಿದ್ಧ್ವಾ ತು ತಥಾಽಽಚಾರ್ಯಸುತಂ ರಣೇ |
ಚಾಪಂ ಛಿತತ್ವ ವಿಕರ್ಣಸ್ಯ ನೀಲೇ ಚಾದತ್ತ ವಾಸಸೀ ॥65॥
ಆಚಾರ್ಯಪುತ್ರರಾದ ಅಶ್ವತ್ಥಾಮರನ್ನು ಯುದ್ಧದಲ್ಲಿ ಎರಡು ಬಾಣಗಳಿಂದ ಹೊಡೆದು ಅವರ ಧನುಸ್ಸನ್ನು ಕತ್ತರಿಸಿ ವಿಕರ್ಣನ ಧನುಸ್ಸನ್ನು ಕತ್ತರಿಸಿ ಅವನ ನೀಲವಸ್ತ್ರಗಳನ್ನು ತೆಗೆದುಕೊಂಡನು.
ವಿರಾಟಃ
ಕ್ವ ಸ ವೀರೋ ಮಹಾಬಾಹುರ್ದೇವಪುತ್ರೋ ಮಹಾಯಶಾಃ |
ಯೋ ಮಮಾಮೋಚಯತ್ ಪುತ್ರಂ ಕುರುಭಿರ್ಗ್ರಸ್ತಮಾಹವೇ ॥66॥
ವಿರಾಟ ಯಾವನು ಕುರುಗಳಿಂದ ಗ್ರಸ್ತನಾದ ನನ್ನ ಪುತ್ರನನ್ನು ಯುದ್ಧದಲ್ಲಿ ರಕ್ಷಿಸಿದನೋ ಅಂತಹ ಮಹಾಬಾಹುವೂ, ಮಹಾಕೀರ್ತಿವಂತನೂ ವೀರನೂ ಆದ ದೇವಪುತ್ರನು ಈಗ ಎಲ್ಲಿದ್ದಾನೆ?
ಇಚ್ಛಾಮಿ ತಮಮಿತ್ರಘ್ನಂ ದ್ರಷ್ಟುಮರ್ಚಿತುಮೇವ ಚ |

ಯೇನ ಹಿ ತ್ವಂ ಚ ಗಾವಶ್ಚ ಮೋಚಿತಾ ದೇವಸೂನುನಾ ॥67॥
ಯಾವ ದೇವಪುತ್ರನಾದ ಅವನಿಂದ ನನ್ನ ಪುತ್ರನಾದ ನೀನು ಮತ್ತು ಗೋವುಗಳು ರಕ್ಷಿಸಲ್ಪಟ್ಟವೋ ಅಂತಹ ಶತ್ರುಸಂಹಾರಕನಾದ ಅವನನ್ನು ನೋಡಿ ಪೂಜಿಸಲು ನಾನು ಬಯಸುತ್ತೇನೆ.
ತಸ್ಮೈ ದಾಸ್ಯಾಮಿ ತಾಂ ಪುತ್ರೀಂ ಶುಭ್ರುವಸತ್ರಂ ಸುಹಾಟಕಾಮ್ |
ಸ್ಫುರಿತಂ ಕಟಿಸೂತ್ರಂ ಚ ಸ್ತ್ರೀಸಹಸ್ರಶತಾನಿ ಚ ॥68॥
ಅವನಿಗೆ ಸುವರ್ಣಾಲಂಕೃತಳಾದ ಶುಭವಸ್ತ್ರಧಾರಿಣಿಯಾದ ನನ್ನ ಆ ಪುತ್ರಿಯನ್ನು ಕೊಡುವೆನು. ಹೊಳೆಯುವ ಕಟಿಸೂತ್ರವನ್ನೂ ಮತ್ತು ಒಂದುಲಕ್ಷ ಸ್ತ್ರೀಯರನ್ನು ಕೊಡುವೆನು.
ಉತ್ತರಃ
ಅಂತರ್ಧಾಯ ಗತಸ್ತಾತ ದೇವಪುತ್ರಃ ಪ್ರತಾಪವಾನ್ |
ಅದ್ಯ ಶ್ವೋ ವಾ ಪರಶ್ವೋ ವಾ ಮನ್ಯೇ ಪ್ರಾದುರ್ಭವಿಷ್ಯತಿ ॥69॥
ಉತ್ತರ ತಂದೆಯೇ, ಆ ಪ್ರತಾಪಶಾಲಿಯಾದ ದೇವಪುತ್ರನು ಅಂತರ್ಧಾನವನ್ನು ಹೊಂದಿ ಹೊರಟು ಹೋದನು. ಈ ದಿನವೋ ನಾಳೆಯೋ ಅಥವಾ ಅದರ ಮರುದಿನವೋ ಪ್ರಾದುರ್ಭವಿಸುತ್ತಾನೆ ಎಂದು ಭಾವಿಸುತ್ತೇನೆ.
ವೈಶಂಪಾಯನಃ
ಏವಮಾಖ್ಯಾಯಮಾನಸ್ತು ಛನ್ನಂ ವಸ್ತ್ರೇಣ ಪಾಂಡವಮ್ |
ವಸಂತಂ ತತ್ರ ನಾಜ್ಞಾಸೀದ್ ವಿರಾಟಃ ಪಾರ್ಥಮರ್ಜುನಮ್ ॥70॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ವಿರಾಟನು ವಸ್ತ್ರದಿಂದ ಮುಚ್ಚಿಕೊಂಡು ಅಲ್ಲಿ ವಾಸಿಸುತ್ತಿದ್ದ ಪಾಂಡುಪುತ್ರನಾದ ಅರ್ಜುನನನ್ನು ಗುರುತಿಸಲಿಲ್ಲ.
ತತಃ ಪಾರ್ಥೋಽಭ್ಯನುಜ್ಞಾತೋ ವಿರಾಟೇನ ಮಹಾತ್ಮನಾ |
ಸಹ ಪುತ್ರೇಣ ಮಾತ್ಸ್ಯಸ್ಯ ಮಂತ್ರಯಿತ್ವಾ ಧನಂಜಯಃ ॥71॥
ಇತ್ಯೇವಂ ಬ್ರೂಹಿ ರಾಜಾನಂ ವಿರಾಟಂ ಚ ಯುಧಿಷ್ಠಿರಮ್ ॥72॥
ಇತ್ಯುಕತ್ವ ಸಹಸಾ ಪಾರ್ಥಃ ಪ್ರವಿಶ್ಯಾಂತಃಪುರಂ ಶುಭಮ್ |
ದದೌ ರತ್ನಾನಿ ವಸತ್ರಣಿ ವಿರಾಟದುಹಿತುಃ ಸ್ವಯಮ್ ॥73॥
ಅನಂತರ ಅರ್ಜುನನು ಮಹಾತ್ಮನಾದ ವಿರಾಟನಿಂದ ಅನುಮತಿಯನ್ನು ಪಡೆದು ಅವನ ಪುತ್ರನ ಜೊತೆಯಲ್ಲಿ ಏಕಾಂತದಲ್ಲಿ ಮಾತನಾಡಿ ವಿರಾಟನಿಗೂ ಮತ್ತು ಯುಧಿಷ್ಠಿರನಿಗೂ ಈ ರೀತಿಯಲ್ಲಿ ಹೇಳು ಎಂದು ಹೇಳಿ ತಕ್ಷಣ ಅಂತಃಪುರವನ್ನು ಪ್ರವೇಶಿಸಿ ವಿರಾಟನ ಪುತ್ರಿಯಾದ ಉತ್ತರೆಗೆ ತಾನೇ ವಸ್ತ್ರಗಳನ್ನೂ ಮತ್ತು ರತ್ನಗಳನ್ನೂ ಕೊಟ್ಟನು.
ಉತ್ತರಾ ತು ಮಹಾರ್ಹಾಣಿ ವಸತ್ರಣ್ಯಾಭರಣಾನಿ ಚ |
ಪ್ರಗೃಹ್ಯ ತಾನಿ ಸರ್ವಾಣಿ ಪ್ರೀತಾ ಸಾನುಚರಾಽಭವತ್ ॥74॥
ತನ್ನ ಅನುಚರರಿಂದ ಸಹಿತಳಾದ ಉತ್ತರೆಯು ಬಹಳ ಬೆಲೆಬಾಳುವ ಆ ವಸ್ತ್ರಗಳನ್ನು ಮತ್ತು ಆಭರಣಗಳನ್ನು ತೆಗೆದುಕೊಂಡು ಸಂತುಷ್ಟಳಾದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತತಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * *
ಎಪ್ಪತ್ತೊಂದನೆಯ ಅಧ್ಯಾಯ
ಯುಧಿಷ್ಠಿರನ ಮುಖದಲ್ಲಿ ರಕ್ತವನ್ನು ನೋಡಿ ಭೀಮಾರ್ಜುನರ ರೋಷವಚನಗಳು ಮತ್ತು ಯುಧಿಷ್ಠಿರನಿಂದ ಅವರ ಸಾಂತ್ವನ.
ವೈಶಂಪಾಯನಃ
ಪ್ರದಾಯ ವಸತ್ರಣಿ ಕಿರೀಟಮಾಲೀ
ವಿರಾಟಗೇಹೇ ಮುದಿತಃ ಸಖಿಭ್ಯಃ |
ಕೃತ್ವಾ ಮಹತ್ ಕರ್ಮ ತದಾಽಽಜಿಮಧ್ಯೇ
ದಿದೃಕ್ಷಯಾ ಸೋಽಭಿಜಗಾಮ ಪಾರ್ಥಮ್ ॥1॥
ವೈಶಂಪಾಯನ ಕಿರೀಟಮಾಲಿಯಾದ ಅರ್ಜುನನು ಯುದ್ಧದಲ್ಲಿ ಮಹತ್ಕಾರ್ಯವನ್ನು ಮಾಡಿ ವಿರಾಟನ ಅಂತಃಪುರದಲ್ಲಿ ಸಂತೋಷಗೊಂಡವನಾಗಿ ಸಖಿಯರಿಗೆ ವಸ್ತ್ರಗಳನ್ನು ಕೊಟ್ಟು ಯುಧಿಷ್ಠಿರನನ್ನು ನೋಡಲು ಬಯಸಿ ಅವನ ಕಡೆಗೆ ಬಂದನು.
ಸಂಪ್ರೇಕ್ಷಮಾಣಸ್ತ್ವಥ ಧರ್ಮರಾಜಂ
ಪಪ್ರಚ್ಛ ಪಾರ್ಥೋಽಥ ಸ ಭೀಮಸೇನಮ್ ॥2॥
ಕಿಂ ಧರ್ಮರಾಜೋ ಹಿ ಯಥಾ ಪುರಾ ಮಾಂ
ಮುಖಂ ಪ್ರತಿಚ್ಛಾದ್ಯ ನ ಚಾಹ ಕಿಂಚಿತ್ ॥3॥
ಅನಂತರ ಧರ್ಮರಾಜನನ್ನು ನೋಡುತ್ತಾ ಅವನು ಭೀಮಸೇನನನ್ನು ಕುರಿತು ಇದೇನು, ಧರ್ಮರಾಜನು ಹಿಂದೆ ನೋಡಿದಂತೆ ನನ್ನನ್ನು ನೋಡದೆ ಮುಖವನ್ನು ಮುಚ್ಚಿಕೊಂಡು ಏನನ್ನೂ ಮಾತನಾಡುತ್ತಿಲ್ಲ ಎಂದು ಕೇಳಿದನು.
ತಮೇವಮುಕತ್ವ ಪ್ರತಿಶಂಕಮಾನಂ

ದೃಷ್ಟ್ವಾಽರ್ಜುನಂ ಭೀಮಸೇನಂ ಚ ರಾಜಾ |
ತತ್ರಾಬ್ರುವೀತ್ ತಾವಭಿವೀಕ್ಷ್ಯ ರಾಜಾ
ಯುಧಿಷ್ಠಿರಸ್ತತ್ ಪರಿಮೃಜ್ಯ ರಕ್ತಮ್ ॥4॥
ಹೀಗೆ ಹೇಳಿ ತನ್ನ ವಿಷಯದಲ್ಲಿ ಶಂಕೆಪಡುತ್ತಿದ್ದ ಅರ್ಜುನನನ್ನೂ ಮತ್ತು ಭೀಮಸೇನನನ್ನೂ ನೋಡಿ ಧರ್ಮರಾಜನು ರಕ್ತವನ್ನು ಒರೆಸಿಕೊಂಡು ಅವರಿಬ್ಬರನ್ನೂ ಕುರಿತು ಮಾತನಾಡಿದನು.
ದುರಾತ್ಮನಾ ತ್ವಯ್ಯಭಿಪೂಜ್ಯಮಾನೇ
ವಿರಾಟರಾಜೇನ ಹತೋಽಸ್ಮಿ ಪಾರ್ಥ |
ತಸ್ಮಾತ್ ಪ್ರಹಾರಾದ್ ರುಧಿರಸ್ಯ ಬಿಂದೂನ್
ಪ್ರಾಸ್ಯನ್ನ ಚೇಮೇ ಪೃಥಿವೀಂ ಸ್ಪೃಶೇಯುಃ ॥5॥
ಅರ್ಜುನನೇ, ನಾನು ನಿನ್ನನ್ನು ಪ್ರಶಂಸಿಸುತ್ತಿರುವಾಗ ದುರಾತ್ಮನಾದ ವಿರಾಟರಾಜನು ನನ್ನನ್ನು ಹೊಡೆದನು. ಅವನ ಏಟಿನಿಂದ ಉಂಟಾದ ರಕ್ತಬಿಂದುಗಳನ್ನು ಭೂಮಿಯನ್ನು ಮುಟ್ಟದಿರಲಿ ಎಂದು ಪಾತ್ರೆಯಲ್ಲಿ ಹಿಡಿದಿದ್ದೇನೆ.
ಇತಿ ಪ್ರತಿಚ್ಛಾದ್ಯ ಮುಖಂ ತತೋಽಹಂ
ಮನ್ಯುಂ ನಿಯಚ್ಛನ್ನುಪವಿಷ್ಟ ಆಸಮ್ ॥6॥
ಆ ಕಾರಣದಿಂದ ನಾನು ಕೋಪವನ್ನು ತಡೆದು ಮುಖವನ್ನು ಮುಚ್ಚಿಕೊಂಡು ಕುಳಿತಿದ್ದೇನೆ.
ಕ್ರುದ್ಧೇ ತು ವೀರೇ ತ್ವಯಿ ಚಾಪ್ರತೀತೇ
ರಾಜೋ ವಿರಾಟೋ ನ ಲಭೇತ ಶರ್ಮ |
ಅಜಾನತಾ ತೇನ ಚ ಶೌರ್ಯಮಗ್ರ್ಯಂ
ಛನ್ನಸ್ಯ ತೇ ಪಾರ್ಥ ಬಲಂ ಚ ವೀರ್ಯಮ್ ॥7॥
ಇದಂ ವಿರಾಟೇನ ಮಯಿ ಪ್ರಯುಕ್ತಂ
ತ್ವಾಂ ವೀಕ್ಷಮಾಣೋ ನ ಗತೋಽಸ್ಮಿ ಹರ್ಷಮ್ ॥8॥
ವೀರನಾದ ನೀನು ಅಸಂತೋಷಗೊಂಡು ಕ್ರುದ್ಧನಾದರೆ ವಿರಾಟರಾಜನಿಗೆ ಶಾಂತಿಯು ದೊರೆಯುವುದಿಲ್ಲ. ಎಲೈ ಪಾರ್ಥನೇ, ಮರುವೇಷದಿಂದ ಛನ್ನನಾದ ನಿನ್ನ ಶ್ರೇಷ್ಠವಾದ ಶೌರ್ಯವನ್ನು, ಬಲವನ್ನು ಮತ್ತು ವೀರ್ಯವನ್ನು ತಿಳಿಯದ ವಿರಾಟನಿಂದ ಈ ಕೆಲಸವು ನನಗೆ ಮಾಡಲ್ಪಟ್ಟಿತು. ಆದ್ದರಿಂದ ನಿನ್ನನ್ನು ನೋಡುತ್ತಾ ನಾನು ಹರ್ಷಪಡುತ್ತಿಲ್ಲ.
ವೈಶಂಪಾಯನಃ
ತೇನಾಪ್ರಮೇಯೇನ ಮಹಾಬಲೇನ
ತಸ್ಮಿಂಸ್ತಥೋಕ್ತೇ ಶಮಮಾಸ್ಥಿತೇನ |
ತಂ ಭೀಮಸೇನೋ ಬಲವಾನಮರ್ಷೀ
ಧನಂಜಯಂ ಕ್ರುದ್ಧ ಉವಾಚ ವಾಕ್ಯಮ್ ॥9॥
ವೈಶಂಪಾಯನ ಅಪ್ರಮೇಯನೂ, ಮಹಾಬಲನೂ ಆದ ಯುಧಿಷ್ಠಿರನು ಶಾಂತಿಯನ್ನು ಆಶ್ರಯಿಸಿ ಹೀಗೆ ಮಾತನಾಡುತ್ತಿರಲು ಬಲಿಷ್ಠನೂ, ಕೋಪವುಳ್ಳವನೂ ಆದ ಭೀಮಸೇನನು ಕೋಪಗೊಂಡು ಅರ್ಜುನನನ್ನು ಕುರಿತು ಹೀಗೆ ಮಾತನಾಡಿದನು.
ನ ಪಾರ್ಥ ನಿತ್ಯಂ ಕ್ಷಮಕಾಲಮಾಹ
ಬೃಹಸ್ಪತಿರ್ಜ್ಞಾನವತಾಂ ವರಿಷ್ಠಃ |
ಕ್ಷಮೀ ಹಿ ಸರ್ವೈಃ ಪರಿಭೂಯತೇ ಹಿ
ಯಥಾ ಭುಜಂಗೋ ವಿಷವೀರ್ಯಹೀನಃ ॥10॥
ಅರ್ಜುನನೇ, ಜ್ಞಾನಿಗಳಲ್ಲಿ ಶ್ರೇಷ್ಠರಾದ ಬೃಹಸ್ಪತಿಗಳು ಎಲ್ಲಾ ಕಾಲವೂ ಕ್ಷಮೆಯ ಕಾಲವಲ್ಲ ಎಂದು ಹೇಳಿದ್ದಾರೆ. ಕ್ಷಮೆಯುಳ್ಳ ಮನುಷ್ಯನು ವಿಷವೀರ್ಯರಹಿತವಾದ ಸರ್ಪದಂತೆ ಎಲ್ಲರಿಂದಲೂ ಪರಿಭವವನ್ನು ಹೊಂದುತ್ತಾನೆ.
ವಿರಾಟಮದ್ಯೈವ ನಿಹತ್ಯ ಶೀಘ್ರಂ
ಸಪುತ್ರಪೌತ್ರಂ ಸಕುಲಂ ಸಸೈನ್ಯಮ್ |
ಯೋಕ್ಷ್ಯಾಮಹೇ ಧರ್ಮಸುತಂ ತು ರಾಜ್ಯೇ
ಅದ್ಯೈವ ಶೀಘ್ರಂ ತ್ವರತೈಷ ಮಾತ್ಸ್ಯಃ ॥11॥
ಈ ದಿನವೇ ವಿರಾಟನನ್ನು ಕೊಂದು ಶೀಘ್ರವಾಗಿ ಅವನ ಪುತ್ರಪೌತ್ರರನ್ನೂ, ಕುಲವನ್ನೂ ಮತ್ತು ಸೈನ್ಯವನ್ನೂ ಸಂಹರಿಸಿ ಯುಧಿಷ್ಠಿರನನ್ನು ರಾಜ್ಯದಲ್ಲಿ ನಿಯೋಜಿಸೋಣ. ಶೀಘ್ರವಾಗಿ ಧರ್ಮರಾಜನು ಮತ್ಸ್ಯದೇಶದ ರಾಜನಾಗಿ ಈ ದಿನವೇ ಮಾಡಲ್ಪಡಲಿ.
ಅನೇನ ಪಾಂಚಾಲಸುತಾಽಥ ಕೃಷ್ಣಾ
ಉಪೇಕ್ಷಿತಾ ಕೀಚಕೇನಾನುಯಾತಾ |
ತಸ್ಮಾದಯಂ ನಾರ್ಹತಿ ರಾಜಶಬ್ದಂ
ರಾಜಾ ಭವ ತ್ವಂ ನೃಪ ಪಾರ್ಥವೀರ್ಯಾತ್ ॥12॥
ಇವನು ಕೀಚಕನು ಹಿಂಬಾಲಿಸಿದ ಪಾಂಚಾಲಕುಮಾರಿಯಾದ ಕೃಷ್ಣೆಯನ್ನು ಉಪೇಕ್ಷಿಸಿದನು. ಆದ್ದರಿಂದ ಇವನು ರಾಜಶಬ್ದಕ್ಕೆ ಅಯೋಗ್ಯನಾದವನು. ರಾಜನೇ (ಯುಧಿಷ್ಠಿರನೇ) ಅರ್ಜುನನ ಪರಾಕ್ರಮದಿಂದ ನೀನೇ ರಾಜನಾಗು.
ರಾಜಾ ಕುರೂಣಾಂ ಚ ಯುಧಿಷ್ಠಿರೋಽಯಂ
ಮಾತ್ಸ್ಯೇಷು ರಾಜಾ ಭವತು ಪ್ರತೀತಃ |

ತಂ ಮತ್ಸ್ಯದೇಹಂ ಶತಧಾ ಭಿನದ್ಮಿ
ಕುಂಭಂ ಘನೇನೇವ ಯಥಾಽಂಬುಪೂರ್ಣಮ್ ॥13॥
ಕುರುಗಳಿಗೆ ರಾಜನಾದ ಯುಧಿಷ್ಠಿರನು ಮತ್ಸ್ಯದೇಶಕ್ಕೂ ಸಹ ಪ್ರಸಿದ್ಧನಾದ ರಾಜನಾಗಲಿ. ನೀರಿನಿಂದ ತುಂಬಿದ ಮಡಿಕೆಯನ್ನು ದಂಡದಿಂದ ಒಡೆದಂತೆ ಮತ್ಸ್ಯರಾಜನ ದೇಹವನ್ನು ನಾನು ನೂರುಭಾಗವಾಗಿ ಒಡೆಯುತ್ತೇನೆ.
ಅರ್ಜುನಃ
ಭವತಃ ಕ್ಷಮಯಾ ಚೈವ ಸರ್ವೇ ದೋಷಾಶ್ಚ ನೋಽಭವನ್ ॥14॥
ತಸ್ಮಾದೇನಂ ಚ ಹತ್ವಾ ವೈ ಸಬಲಂ ಸಹಬಾಂಧವಮ್ ।
ಪಶ್ಚಾಚ್ಚೈವ ಕುರೂನ್ ಸರ್ವಾನ್ ಹನಿಷ್ಯಾಮೋ ನ ಸಂಶಯಃ ॥15॥
ಅರ್ಜುನ ನಿನ್ನ ಕ್ಷಮೆಯಿಂದಲೇ ನಮಗೆ ಎಲ್ಲಾ ದೋಷಗಳೂ ಉಂಟಾದವು. ಆದ್ದರಿಂದ ಸೈನ್ಯ ಮತ್ತು ಬಂಧುಸಹಿತನಾದ ವಿರಾಟನನ್ನು ಕೊಂದು ಅನಂತರ ಎಲ್ಲಾ ಕುರುಗಳನ್ನೂ ಕೊಲ್ಲುವೆನು. ಇದರಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ಭೀಮಸೇನಶ್ಚ ಯೇ ಚಾನ್ಯೇ ತಥೈವೇತಿ ತಮಬ್ರುವನ್ ॥16॥
ವೈಶಂಪಾಯನ ಭೀಮಸೇನ ಮತ್ತು ಉಳಿದವರು ಹಾಗೆಯೇ ಸರಿ ಎಂದು ಹೇಳಿದರು.
ತಮಬ್ರವೀದ್ ಧರ್ಮಸುತೋ ಮಹಾತ್ಮಾ
ಕ್ಷಮೀ ವದಾನ್ಯಃ ಕುಪಿತಂ ಚ ಭೀಮಮ್ ।
ನ ಪ್ರತ್ಯುಪಸ್ಥಾಸ್ಯತಿ ಚೇತ್ ಸದಾರಃ
ಪ್ರಸಾದನೇ ಸಮ್ಯಗಥಾಸ್ತು ವಧ್ಯಃ ॥17॥
ಮಹಾತ್ಮನೂ, ಕ್ಷಮಾಶೀಲನೂ, ಉದಾರನೂ ಆದ ಧರ್ಮರಾಜನು ಕೋಪಗೊಂಡ ಭೀಮಸೇನನನ್ನು ಕುರಿತು, ವಿರಾಟರಾಜನು ಪತ್ನೀಸಮೇತನಾಗಿ ನಮ್ಮನ್ನು ಸರಿಯಾಗಿ ಸಮಾಧಾನ ಮಾಡಲು ಬರದಿದ್ದರೆ ನೀನು ಹೇಳಿದಂತೆಯೇ ಆಗಲಿ ಎಂದು ಹೇಳಿದನು.
ನ ಹಂತವ್ಯೋ ದುರಾತ್ಮಾಽಯಂ ವಿರಾಟಶ್ಚಾಪಿ ತೇಽರ್ಜುನ ।
ಶ್ವಃ ಪ್ರಭಾತೇ ಪ್ರವೇಕ್ಷ್ಯಾಮಃ ಸಭಾಂ ಸಿಂಹಾಸನೇಷ್ವಿಹ ॥18॥
ರಾಜವೇಷೇಣ ಸಂಯುಕ್ತಾನ್ ಯದಿ ತತ್ರ ನ ಮಂಸ್ಯತೇ ।
ಪಶ್ಚಾದ್ ವಧ್ಯಾಮಹೇ ಸರ್ವಾನ್ ವಿರಾಟೇನ ಸಬಾಂಧವಾನ್ ॥19॥
ಅರ್ಜುನನೇ, ವಿರಾಟನು ದುರಾತ್ಮನಾದರೂ ಅವನನ್ನು ಕೊಲ್ಲಬಾರದು. ನಾಳೆಯ ಪ್ರಾತಃಕಾಲದಲ್ಲಿ ಸಭೆಯನ್ನು ಪ್ರವೇಶಿಸಿ ಸಿಂಹಾಸನವನ್ನು ಏರೋಣ. ರಾಜವೇಷದಿಂದ ಕೂಡಿದ ನಮ್ಮನ್ನು ಅಲ್ಲಿ ಅವನು ಗೌರವಿಸದಿದ್ದರೆ ಅನಂತರ ನಾವೆಲ್ಲಾ ಬಂಧುಸಹಿತನಾದ ವಿರಾಟನನ್ನು ಸಂಹರಿಸೋಣ (ಎಂದು ಹೇಳಿದನು).
ವೈಶಂಪಾಯನಃ
ಇತಿಕರ್ತವ್ಯತಾಂ ಸರ್ವೇ ಮಂತ್ರಯಿತ್ವಾಽಥ ಪಾಂಡವಾಃ ।
ನ್ಯವಸಂಶ್ಚೈವ ತಾಂ ರಾತ್ರಿಂ ಪಾಂಡವಾ ಧರ್ಮವತ್ಸಲಾಃ ॥20॥
ವೈಶಂಪಾಯನ ಪಾಂಡವರು ಹೀಗೆ ಮರುದಿನ ಮಾಡಬೇಕಾದ ಕಾರ್ಯದ ರೀತಿಯನ್ನು ಮಂತ್ರಾಲೋಚನೆಯಿಂದ ನಿರ್ಧರಿಸಿ ಧರ್ಮವತ್ಸಲರಾದ ಅವರು ಆ ರಾತ್ರಿಯನ್ನು ಕಳೆದರು.
ಪುತ್ರೇಣ ಸಹ ಮಾತ್ಸ್ಯಸ್ತು ಸಂಪ್ರಹೃಷ್ಟೋ ನರಾಧಿಪಃ ।
ತಾಂ ರಾತ್ರಿಮವಸದ್ ಧೀಮಾನ್ ಸಮಾಶ್ವಸ್ತೇನ ಚೇತಸಾ ॥21॥
ಸಂತೋಷಗೊಂಡ ಮೇಧಾವಿಯಾದ ವಿರಾಟರಾಜನೂ ಸಹ ಸಮಾಧಾನ ಹೊಂದಿದ ಮನಸ್ಸಿನಿಂದ ಕೂಡಿದವನಾಗಿ ಮಗನ ಜೊತೆಯಲ್ಲಿ ಆ ರಾತ್ರಿಯನ್ನು ಕಳೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಸಪ್ತತಿತಮೋಽಧ್ಯಾಯಃ ॥
॥ ಗೋಗ್ರಹಣಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಗೋಗ್ರಹಣಪರ್ವ ॥
* * * *
ವೈವಾಹಿಕಪರ್ವ
ಎಪ್ಪತ್ತೆರಡನೆಯ ಅಧ್ಯಾಯ
ಮರುದಿವಸದಲ್ಲಿ ಪಾಂಡವರಿಂದ ಸಿಂಹಾಸನದಲ್ಲಿ ಉಪವೇಶನ.
ವಿರಾಟನ ಆಕ್ಷೇಪ ಮತ್ತು ಅರ್ಜುನನ ಉತ್ತರ.
ವೈಶಂಪಾಯನಃ
ತತೋ ದ್ವಿತೀಯೇ ದಿವಸೇ ಭ್ರಾತರಃ ಪಂಚ ಪಾಂಡವಾಃ ।
ಸ್ನಾತಾಃ ಶುಕ್ಲಾಂಬರಧರಾಃ ಸರ್ವೇ ಸುಚರಿತವ್ರತಾಃ ॥1॥
ಯುಧಿಷ್ಠಿರಂ ಪುರಸ್ಕೃತ್ಯ ಸರ್ವಾಭರಣಭೂಷಿತಾಃ ।
ಅಭಿಪನ್ನಾ ಯಥಾ ನಾಗಾ ಭ್ರಾಜಮಾನಾ ಮಹಾರಥಾಃ ॥2॥
ವಿರಾಟಸ್ಯ ಸಭಾಂ ಪ್ರಾಪ್ಯ ಭೂಮಿಪಾಲಾಸನೇಷ್ವಥ ।

ನಿಷೇದುಃ ಪಾವಕಪ್ರಖ್ಯಾಃ ಸರ್ವೇ ಧಿಷ್ಣ್ಯೇಷ್ವಿವಾಗ್ನಯಃ ॥3॥
ವೈಶಂಪಾಯನ ಮರುದಿವಸ ಸಹೋದರರಾದ ಪಂಚಪಾಂಡವರು ಸ್ನಾನವನ್ನು ಮಾಡಿ ಶುಕ್ಲವಸ್ತ್ರಗಳನ್ನು ಧರಿಸಿ ಎಲ್ಲರೂ ಒಳ್ಳೆಯ ವ್ರತವನ್ನು ಮಾಡಿದವರೂ ಮತ್ತು ಸರ್ವಾಭರಣಭೂಷಿತರೂ ಆದ ಆ ಮಹಾರಥರು ಗಜಗಳಂತೆ ಶೋಭಿಸುತ್ತಾ ಧರ್ಮರಾಜನನ್ನು ಮುಂದೆ ಮಾಡಿಕೊಂಡು ವಿರಾಟನ ಸಭೆಯನ್ನು ಪ್ರವೇಶಿಸಿ ಅಗ್ನಿಯ ತೇಜಸ್ಸುಳ್ಳ ಅವರು ಅಗ್ನಿಗಳು ತಮ್ಮ ಆಶ್ರಯದಲ್ಲಿ ಇರುವಂತೆ ರಾಜರ ಆಸನಗಳಲ್ಲಿ ಕುಳಿತುಕೊಂಡರು.
ತೇಷು ತತ್ರೋಪವಿಷ್ಟೇಷು ವಿರಾಟಃ ಪೃಥಿವೀಪತಿಃ |
ಆಜಗಾಮ ಸಭಾಂ ರಾಜಾ ಉತ್ತರೇಣ ಸಹ ಪ್ರಭೋ ॥4॥
ಪ್ರಭುವೇ, ಅವರು ಅಲ್ಲಿ ಕುಳಿತುಕೊಳ್ಳುತ್ತಿರಲು ವಿರಾಟರಾಜನು ಪುತ್ರನಾದ ಉತ್ತರನ ಜೊತೆಯಲ್ಲಿ ಸಭೆಗೆ ಬಂದನು.
ಸ ತಾನ್ ದೃಷ್ಟ್ವಾ ಮಹಾಸತ್ವಾನ್ ಜ್ವಲತಃ ಪಾವಕಾನಿವ |
ರಾಜವೇಷಾನುಪಾದಾಯ ಪಾರ್ಥಿವೋ ವಿಸ್ಮಿತೋಽಭವತ್ ॥5॥
ಅವನು ಮಹಾಸತ್ವವುಳ್ಳವರೂ ಮತ್ತು ಅಗ್ನಿಯಂತೆ ಜ್ವಲಿಸುವವರೂ ಆದ ಅವರು ರಾಜವೇಷವನ್ನು ಧರಿಸಿರುವುದನ್ನು ನೋಡಿ ಆಶ್ಚರ್ಯಗೊಂಡನು.
ಕಿಮಿದಂ ಕೋ ವಿಧಿಸ್ತ್ವೇಷ ಭಯಾರ್ತ ಇವ ಪಾರ್ಥಿವಃ |
ಪುರುಷಪ್ರವರಾನ್ ದೃಷ್ಟ್ವಾ ವಿಷಾದಮಗಮನ್ನೃಪಃ ॥6॥
ಇದೇನು? ಇದು ಯಾವ ಪದ್ಧತಿ? ಎಂದು ಆ ಪುರುಷಶ್ರೇಷ್ಠರನ್ನು ನೋಡಿ ಭಯಪೀಡಿತನಾದ ರಾಜನು ವಿಷಾದವನ್ನು ಹೊಂದಿದನು.
ಅಥ ಮಾತ್ಸ್ಯೋಽಬ್ರವೀದ್ ಕಂಕಂ ದೇವರಾಜಮಿವ ಸ್ಥಿತಮ್ |
ಮರುದ್ಗಣೈಃ ಸಹಾಸೀನಂ ತ್ರಿದಶಾನಾಮಿವೇಶ್ವರಮ್ ॥7॥
ಸ ಕಿಲಾಕ್ಷನಿವಾಪಸ್ತ್ವಂ ಸಭಾಸ್ತಾರೋ ಮಯಾ ಕೃತಃ |
ಅಥ ರಾಜಾಸನೇ ಕಸ್ಮಾದ್ ಉಪವಿಷ್ಟೋಽಸ್ಯಲಂಕೃತಃ ॥8॥
ಅನಂತರ ಮರುದ್ಗಣಗಳ ಜೊತೆಯಲ್ಲಿ ಕುಳಿತ ದೇವತೆಗಳ ಪ್ರಭುವಾದ ಇಂದ್ರನಂತಿದ್ದ ಕಂಕನನ್ನು ನೋಡಿ ಮತ್ಸ್ಯರಾಜನಾದ ವಿರಾಟನು ನಿನ್ನನ್ನು ದ್ಯೂತವನ್ನಾಡುವ ಸಭಾಸ್ತಾರನನ್ನಾಗಿ ನಾನು ಮಾಡಿದ್ದೆನಷ್ಟೆ? ಈ ದಿನ ಏಕೆ ಅಲಂಕೃತನಾಗಿ ರಾಜಾಸನದಲ್ಲಿ ಕುಳಿತಿದ್ದೀಯೆ ಎಂದು ಕೇಳಿದನು.
ವೈಶಂಪಾಯನಃ
ಪರಿಹಾಸೇಚ್ಛಯಾ ರಾಜ್ಞೋ ವಿರಾಟಸ್ಯ ನಿಶಮ್ಯ ತತ್ |
ಸ್ಮಯಮಾನೋಽಬ್ರವೀದ್ ವಾಕ್ಯಮರ್ಜುನಃ ಪರವೀರಹಾ ॥9॥
ಇಂದ್ರಸ್ಯಾರ್ಧಾಸನಂ ರಾಜನ್ನಯಮಾರೋಢುಮರ್ಹತಿ |
ಬ್ರಹ್ಮಣ್ಯಃ ಶ್ರುತವಾಂಸ್ತ್ಯಾಗೀ ಸರ್ವಲೋಕಾಭಿಪೂಜಿತಃ ॥10॥
ವೈಶಂಪಾಯನ ವಿರಾಟನ ಆ ಮಾತನ್ನು ಕೇಳಿ ಪರವೀರಘಾತಕನಾದ ಅರ್ಜುನನು ವಿನೋದದ ಉದ್ದೇಶದಿಂದ ನಗುತ್ತಾ ಮಾತನಾಡಿದನು. ಬ್ರಹ್ಮಣ್ಯನೂ ವಿದ್ಯಾವಂತನೂ, ಉದಾರಿಯೂ, ಸರ್ವಲೋಕಪೂಜಿತನೂ ಆದ ಇವನು ಎಲೈ ರಾಜನೇ, ಇಂದ್ರನ ಅರ್ಧಾಸನವನ್ನೂ ಏರಲು ಅರ್ಹನಾದವನು.
ಅಯಂ ಕುರೂಣಾಮೃಷಭಃ ಕುಂತೀಪುತ್ರೋ ಯುಧಿಷ್ಠಿರಃ |
ಯಸ್ಯ ಕೀರ್ತಿಃ ಸ್ಥಿತಾ ಲೋಕೇ ಸೂರ್ಯಸ್ಯೇವೋದ್ಯತಃ ಪ್ರಭಾ ॥11॥
ಸಂಸರಂತಿ ದಿಶಃ ಸರ್ವಾ ಯಶಸೋಽಸ್ಯ ಗಭಸ್ತಯಃ |
ಉದಿತಸ್ಯೇವ ಸೂರ್ಯಸ್ಯ ತೇಜಸೋಽನು ಗಭಸ್ತಯಃ ॥12॥
ಯಾವನ ಕೀರ್ತಿಯು ಉದಯಿಸುವ ಸೂರ್ಯನ ಪ್ರಭೆಯಂತೆ ಲೋಕದಲ್ಲಿ ಎಲ್ಲೆಲ್ಲಿಯೂ ಹರಡಿದೆಯೋ ಅಂತಹ ಇವನು ಕುರುಶ್ರೇಷ್ಠನಾದ ಕುಂತೀಪುತ್ರನಾದ ಯುಧಿಷ್ಠಿರ. ಉದಿಸಿದ ಸೂರ್ಯನ ತೇಜಸ್ಸು ಮತ್ತು ರಶ್ಮಿಗಳಂತೆ ಇವನ ಯಶಸ್ಸಿನ ಕಿರಣಗಳು ಎಲ್ಲ ದಿಕ್ಕುಗಳಲ್ಲಿಯೂ ಹರಡಿವೆ.
ಏನಂ ತ್ರಿಂಶತ್ಸಹಸ್ರಾಣಿ ಕುಂಜರಾಣಾಂ ತರಸ್ವಿನಾಮ್ |
ಅನ್ವಯುಃ ಪೃಷ್ಠತೋ ರಾಜನ್ ಯಾವದಧ್ಯಾವಸತ್ ಕುರೂನ್ ॥13॥
ಎಲೈ ರಾಜನೇ, ಇವನು ಕುರುರಾಜ್ಯದಲ್ಲಿ ಪ್ರತಿಷ್ಠಿತನಾಗಿದ್ದಾಗ ವೇಗಶಾಲಿಗಳಾದ ಮೂವತ್ತುಸಾವಿರ ಗಜಗಳು ಅವನ ಹಿಂದೆ ಹೋಗುತ್ತಿದ್ದವು.
ತ್ರಿಂಶಚ್ಚೈವ ಸಹಸ್ರಾಣಿ ರಥಾನಾಂ ರಥಿನಾಂ ವರಮ್ |
ಸದಶ್ವೈರುಪಪನ್ನಾನಿ ಪೃಷ್ಠತೋಽನುಯಯುಃ ಪುರಾ ॥14॥
ಒಳ್ಳೆಯ ಅಶ್ವಗಳನ್ನು ಹೂಡಿದ ಮೂವತ್ತು ಸಾವಿರ ರಥಗಳು ಮತ್ತು ಶ್ರೇಷ್ಠ ರಥಿಕರು ಅವನ ಹಿಂದೆ ಹೋಗುತ್ತಿದ್ದರು.
ವಾಜಿನಾಂ ಚ ಶತಂ ರಾಜನ್ ಸಹಸ್ರಾಣ್ಯಯುತಂ ತಥಾ ॥15॥
ಇಮಮಷ್ಟಶತಂ ಶೂರಾಃ ಸುಮೃಷ್ಟಮಣಿಕುಂಡಲಾಃ |
ತುಷ್ಟುವುರ್ಮಾಗಧೈಃ ಸಾರ್ಧಂ ಸೂತಾಃ ಶಕ್ರಮಿವರ್ಷಯಃ ॥16॥
ರಾಜನೇ, ಹಾಗೆಯೇ ಇವನ ಹಿಂದೆ ಹತ್ತುಸಹಸ್ರ ಅಶ್ವಗಳು ಹೋಗುತ್ತಿದ್ದವು. ಹೊಳೆಯುವ ಮಣಿಕುಂಡಲಗಳನ್ನುಳ್ಳ ಶೂರರಾದ ಎಂಟುನೂರು ಜನ ಸೂತಮಾಗಧರು, ಋಷಿಗಳು ಇಂದ್ರನನ್ನು ಹೊಗಳಿದಂತೆ, ಇವನನ್ನು ಸ್ತೋತ್ರ ಮಾಡುತ್ತಿದ್ದರು.
ಇಮಂ ನಿತ್ಯಮುಪಾತಿಷ್ಠನ್ ಕುರವಃ ಕಿಂಕರಾ ಯಥಾ |

ಸರ್ವೇ ಚೈವ ನೃಪಾ ರಾಜನ್ ಧನೇಶ್ವರಮಿವಾಮರಾಃ ||17||
ರಾಜನೇ, ಕುರುಗಳು ದಾಸರಂತೆ ಯಾವಾಗಲೂ ಇವನ ಸೇವೆಯಲ್ಲಿರುತ್ತಿದ್ದರು. ಉಳಿದ ರಾಜರೂ ಸಹ ದೇವತೆಗಳು ಕುಬೇರನನ್ನು ಓಲೈಸಿದಂತೆ ಇವನನ್ನು ಓಲೈಸುತ್ತಿದ್ದರು.
ಏಷ ಸರ್ವಾನ್ ಮಹೀಪಾಲಾನ್ ಕರಮಾಹಾರಯತ್ ತದಾ |
ವೈಶ್ಯಾನಿವ ಮಹಾರಾಜ ವಿವಶಾನ್ ಸ್ವವಶಾನಪಿ ||18||
ಎಲೈ ಮಹಾರಾಜನೇ, ಇವನು ಎಲ್ಲಾ ರಾಜರನ್ನೂ ತನ್ನ ವಶರನ್ನಾಗಿ ಮಾಡಿಕೊಂಡು ಅವರು ವಿವಶರಾಗಿ ವೈಶ್ಯರಂತೆ ಕಪ್ಪಗಳನ್ನು ಕೊಡುವಂತೆ ಮಾಡಿದನು.
ಅಷ್ಟಾಶೀತಿಸಹಸ್ರಾಣಿ ಸ್ನಾತಕಾನಾಂ ಮಹಾತ್ಮನಾಮ್ |
ಉಪಜೀವಂತಿ ರಾಜಾನಮೇನಂ ಸುಚರಿತವ್ರತಮ್ ||19||
ಈ ಸುಚರಿತ ವ್ರತವುಳ್ಳ ರಾಜನಿಂದ ಮಹಾತ್ಮರಾದ ಎಂಬತ್ತೆಂಟುಸಾವಿರ ಸ್ನಾತಕರು ಉಪಜೀವಿಸುತ್ತಿದ್ದರು.
ಏಷ ವಿಗ್ರಹವಾನ್ ಧರ್ಮ ಏಷ ವೀರ್ಯವತಾಂ ವರಃ |
ಏಷ ಬುದ್ಧ್ಯಾಽಧಿಕೋ ಲೋಕೇ ಸಾಧೂನಾಂ ಚ ಪರಾಯಣಮ್ ||
ಇವನು ಶರೀರವನ್ನು ಧರಿಸಿದ ಧರ್ಮ. ಇವನು ಪರಾಕ್ರಮಶಾಲಿಗಳಲ್ಲಿ ಶ್ರೇಷ್ಠನಾದವನು. ಇವನು ಲೋಕದಲ್ಲಿ ಬುದ್ಧಿಯಿಂದ ಎಲ್ಲರಿಗಿಂತಲೂ ಅಧಿಕನಾದವನು. ಸಜ್ಜನರಿಗೆ ಆಶ್ರಯನಾದವನು.
ಏಷೋಽಸ್ತ್ರಂ ವೇತ್ತಿ ತ್ರೈಲೋಕ್ಯೇ ಸಚರಾಚರೇ |
ನ ಚೈವಾನ್ಯಃ ಪುಮಾನ್ ವೇತ್ತಿ ನ ವೇತ್ಸ್ಯತಿ ಕದಾಚನ ||21||
ನ ದೇವಾ ನಾಸುರಾ ಕೇಚಿನ್ನ ಮನುಷ್ಯಾ ನ ರಾಕ್ಷಸಾಃ |
ಗಂಧರ್ವಯಕ್ಷಪ್ರವರಾ ಸಕಿನ್ನರಮಹೋರಗಾಃ ||22||
ಇವನು ಚರಾಚರಸಹಿತವಾದ ಮೂರುಲೋಕಗಳಲ್ಲಿ ಅನೇಕ ಅಸ್ತ್ರಗಳನ್ನು ತಿಳಿದಿದ್ದಾನೆ. ಇವನನ್ನು ಬಿಟ್ಟು ಬೇರೆ ಪುರುಷರು ಅವರು ದೇವತೆಗಳಾಗಲೀ, ಅಸುರರಾಗಲೀ, ಮನುಷ್ಯರಾಗಲೀ, ರಾಕ್ಷಸರಾಗಲೀ, ಗಂಧರ್ವಯಕ್ಷಪ್ರವರರಾಗಲೀ, ಕಿನ್ನರಮಹೋರಗರಾಗಲೀ ಇವನು ತಿಳಿದಿರುವುದನ್ನು ತಿಳಿದಿಲ್ಲ ಮತ್ತು ಮುಂದೆ ಎಂದೂ ತಿಳಿಯುವುದಿಲ್ಲ.
ದೀರ್ಘದರ್ಶೀ ಮಹಾತೇಜಾಃ ಪೌರಜಾನಪದಪ್ರಿಯಃ |
ಪಾಂಡವಾನಾಮತಿರಥೋ ಯಜ್ವಾ ಧರ್ಮಪರೋ ವಶೀ ||23||
ಇವನು ದೀರ್ಘದರ್ಶೀ, ಮಹಾತೇಜಸ್ವಿ, ಪೌರಜಾನಪದಪ್ರಿಯನಾದವನು, ಪಾಂಡವರಲ್ಲಿ ಅತಿರಥನಾದವನು; ಯಾಗಶೀಲನಾದವನು; ಧರ್ಮಪರನಾದವನು ಮತ್ತು ವಶೀಕೃತಮನಸ್ಸುಳ್ಳವನು.
ಮಹರ್ಷಿಕಲ್ಪೋ ರಾಜರ್ಷಿಸ್ತ್ರಿಷು ಲೋಕೇಷು ವಿಶ್ರುತಃ |
ಬಲವಾನ್ ಧೃತಿಮಾನ್ ಪ್ರಾಜ್ಞಸ್ಸತ್ಯವಾದೀ ಜಿತೇಂದ್ರಿಯಃ ||24||
ಇವನು ಮೂರುಲೋಕಗಳಲ್ಲಿಯೂ ಪ್ರಖ್ಯಾತನಾದ ಮಹರ್ಷಿಸದೃಶನಾದ ರಾಜರ್ಷಿ. ಇವನು ಬಲಿಷ್ಠನಾದವನು; ಧೈರ್ಯಶಾಲಿ; ಪ್ರಾಜ್ಞ; ಸತ್ಯವಚನ ಮತ್ತು ಜಿತೇಂದ್ರಿಯನಾದವನು.
ಧನೈಶ್ಚ ಸಂಚಿತೈಶ್ಚೈವ ಶಕ್ರವೈಶ್ರವಣೋಪಮಃ |
ಯಥಾ ಮನುರ್ಮಹಾತೇಜಾ ಲೋಕಾನಾಂ ಪರಿರಕ್ಷಿತಾ ||25||
ಏವಮೇಷ ಮಹಾತೇಜಾಃ ಪ್ರಜಾನುಗ್ರಹಕಾರಕಃ ||26||
ಇವನು ತಾನು ಸಂಪಾದಿಸಿದ ಧನದಿಂದ ಇಂದ್ರನಂತೆ, ಕುಬೇರನಂತೆ ಇದ್ದವನು. ಮಹಾತೇಜಸ್ವಿಯಾದ ಮನುವು ಲೋಕಗಳನ್ನು ರಕ್ಷಿಸುವಂತೆ ಇವನೂ ಲೋಕಗಳನ್ನು ರಕ್ಷಿಸುವವನು. ಇವನು ಪ್ರಜೆಗಳನ್ನು ಅನುಗ್ರಹವನ್ನು ಮಾಡಿ ರಕ್ಷಿಸುವವನು.
ಏಷ ವೃದ್ಧಾನ್ ಅನಾಥಾಂಶ್ಚ ವ್ಯಂಗಾನ್ ಪಂಗೂಶ್ಚ ವಾಮನಾನ್ |
ಪುತ್ರವತ್ ಪಾಲಯಾಮಾಸ ಪ್ರಜಾ ಧರ್ಮೇಣ ಮಾನಯನ್ ||27||
ಇವನು ವೃದ್ಧರನ್ನೂ, ಅನಾಥರನ್ನೂ, ಅಂಗಹೀನರನ್ನೂ, ಕುಂಟರನ್ನೂ, ಕುಳ್ಳರನ್ನೂ ಮತ್ತು ಎಲ್ಲಾ ಪ್ರಜೆಗಳನ್ನೂ ಧರ್ಮವನ್ನು ಬೋಧಿಸುತ್ತಾ ಪುತ್ರರಂತೆ ಪಾಲಿಸಿದನು.
ಏಷ ಧರ್ಮೇ ದಮೇ ಚೈವ ದಾನೇ ಸತ್ಯೇ ರತಃ ಸದಾ |
ಮಹಾಪ್ರಸಾದೋ ಬ್ರಹ್ಮಣ್ಯಃ ಸತ್ಯವಾದೀ ಚ ಪಾರ್ಥಿವಃ ||28||
ಇವನು ಯಾವಾಗಲೂ ಧರ್ಮದಲ್ಲಿಯೂ, ದಮದಲ್ಲಿಯೂ, ದಾನದಲ್ಲಿಯೂ ಮತ್ತು ಸತ್ಯದಲ್ಲಿಯೂ ರತನಾದವನು. ಈ ರಾಜನು ಮಹಾನುಗ್ರಹವನ್ನು ಮಾಡುವವನು. ಬ್ರಾಹ್ಮಣರಿಗೆ ವತ್ಸಲನಾದವನು ಮತ್ತು ಸತ್ಯವಾದಿಯಾದವನು.
ಯತ್ಪ್ರಭಾವೇಣ ವೈ ಪಶ್ಯ ತಪ್ಯತೇ ವೈ ಸುಯೋಧನಃ |
ಸಗಣಃ ಸಹ ಕರ್ಣೇನ ಸೌಬಲೇನ ಚ ವೀರ್ಯವಾನ್ ||29||
ಅವನ ಪ್ರಭಾವದಿಂದ ತನ್ನ ಪರಿವಾರದಿಂದ ಮತ್ತು ಕರ್ಣನಿಂದ ಮತ್ತು ಶಕುನಿಯಿಂದ ಸಹಿತನಾದ ವೀರ್ಯವಂತನಾದ ಸುಯೋಧನನು ತಾಪವನ್ನು ಪಡುತ್ತಾನೆ ಎಂಬುದನ್ನು ನೋಡು.
ನ ಶಕ್ಯಂತೇ ಗುಣಾಸ್ತಸ್ಯ ಪ್ರಸಂಖ್ಯಾತುಂ ನರೋತ್ತಮ |
ಏಷ ಧರ್ಮಪರೋ ನಿತ್ಯಮನೃಶಂಸೀ ಚ ಪಾಂಡವಃ ||30||
ಎಲೈ ನರೋತ್ತಮನೇ, ಅವನ ಗುಣಗಳನ್ನು ಎಣಿಸಲು ಸಾಧ್ಯವಿಲ್ಲ. ಇವನು ಯಾವಾಗಲೂ ಧರ್ಮಪರನಾದವನೂ ಮತ್ತು ಮೃದುವಾದವನೂ ಆದ ಪಾಂಡುಪುತ್ರನು.

ಏವಂಯುಕ್ತೋ ಮಹಾರಾಜ ಪಾಂಡವಃ ಪುರುಷರ್ಷಭಃ |
ಕಥಂ ನಾರ್ಹತಿ ರಾಜಾರ್ಹಮಾಸನಂ ಪೃಥಿವೀಪತಿಃ ||32||
ಮಹಾರಾಜನೇ, ಇಂತಹ ಗುಣಗಳಿಂದ ಕೂಡಿದ ಪಾಂಡವನಾದ ಪುರುಷರ್ಷಭನಾದ ಈ ಯುಧಿಷ್ಠಿರನು ರಾಜಾರ್ಹವಾದ ರಾಜಾಸನವನ್ನು ಏರಲು ಏಕೆ ಅರ್ಹನಾಗುವುದಿಲ್ಲ? (ಎಂದು ಕೇಳಿದನು)
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ದ್ವಿಸಪ್ತತಿತಮೋಽಧ್ಯಾಯಃ||
|| ವೈವಾಹಿಕಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * *
ಎಪ್ಪತ್ತಮೂರನೆಯ ಅಧ್ಯಾಯ
ಪಾಂಡವರನ್ನು ಗುರುತಿಸಿದ ವಿರಾಟನ ಹರ್ಷವಚನಗಳು
ವಿರಾಟಃ
ಯದ್ಯೇಷ ರಾಜಾ ಕೌರವ್ಯಃ ಕುಂತೀಪುತ್ರೋ ಯುಧಿಷ್ಠಿರಃ |
ಕತರೋ ಹ್ಯರ್ಜುನೋ ಭ್ರಾತಾ ಭೀಮಶ್ಚ ಕತಮೋ ಬಲೀ ||1||
ನಕುಲಃ ಸಹದೇವೋ ವಾ ದ್ರೌಪದೀ ವಾ ಯಶಸ್ವಿನೀ |
ಯದಾ ದ್ಯೂತೇ ಜಿತಾ ಲೋಕೇ ನ ಪ್ರಾಜ್ಞಾಯಂತ ತೇ ಕ್ವಚಿತ್ ||2||
ವಿರಾಟ ಇವನು ಕುರುಕುಲದಲ್ಲಿ ಜನಿಸಿದ ಕುಂತೀಪುತ್ರನಾದ ಯುಧಿಷ್ಠಿರನಾದರೆ ಅವನ ತಮ್ಮನಾದ ಅರ್ಜುನನು ಯಾರು? ಮತ್ತು ಬಲಿಷ್ಠನಾದ ಭೀಮಸೇನನು ಯಾರು? ನಕುಲ ಸಹದೇವರು ಯಾರು? ಯಶಸ್ವಿನಿಯಾದ ದ್ರೌಪದಿಯು ಯಾರು? ದ್ಯೂತದಲ್ಲಿ ಅವರು ಪರಾಜಿತರಾದ ಮೇಲೆ ಎಲ್ಲಿಯೂ ಅವರ ಸುದ್ದಿಯೇ ಕೇಳಿಬರಲಿಲ್ಲ.
ಅರ್ಜುನಃ
ಯ ಏಷ ವಲಲೋಽಭೂತ್ ತೇ ಸೂಪಕಾರಶ್ಚ ವೈ (ತೇ) ನೃಪ |
ಏಷ ಭೀಮೋ ಮಹಾಭಾಗ ಭೀಮವೀರ್ಯಪರಾಕ್ರಮಃ ||3||
ಅರ್ಜುನ ಎಲೈ ಮಹಾಭಾಗನೇ, ರಾಜನೇ, ನಿನ್ನ ಅಡುಗೆಮನೆಯಲ್ಲಿ ಭಯಂಕರವಾದ ವೀರ್ಯ, ಪರಾಕ್ರಮವುಳ್ಳ ನಿನ್ನ ಸೂಪಕಾರನಾದ ವಲಲನಿರುವನಷ್ಟೆ! ಇವನೇ ಭೀಮ.
ಏಷ ಕ್ರೋಧವಶಾನ್ ಹತ್ವಾ ಪರ್ವತೇ ಗಂಧಮಾದನೇ |
ಸೌಗಂಧಿಕಾನಿ ಪುಷ್ಪಾಣಿ ಕೃಷ್ಣಾರ್ಥೇ ಸಮುಪಾನಯತ್ ||4||
ಇವನು ಗಂಧಮಾದನಪರ್ವತದಲ್ಲಿ ಕ್ರೋಧವಶರಾದ ದೈತ್ಯರನ್ನು ಸಂಹರಿಸಿ ದ್ರೌಪದಿಗೆ ಸೌಗಂಧಿಕ ಪುಷ್ಪವನ್ನು ತಂದನು.
ಗಂಧರ್ವವ್ಯಪದೇಶೇನ ಕೀಚಕಾನಾಂ ದುರಾತ್ಮನಾಮ್ |
ಶತಂ ಷಡಧಿಕಂ ಹತ್ವಾ ದ್ರೌಪದೀಂ ಪ್ರತ್ಯನಂದಯತ್ ||5||
ವ್ಯಾಘ್ರಾನ್ ಋಕ್ಷಾನ್ ಗಜಾಂಶ್ಚೈವ ಹತವಾನ್ ವೈ ಪುರೇ ತವ ||6||
ಗಂಧರ್ವನೆಂಬ ನೆಪ (ನಾಮ)ದಿಂದ ದುರಾತ್ಮರಾದ ನೂರೊಂದು ಜನ ಕೀಚಕರನ್ನು ಕೊಂದು ದ್ರೌಪದಿಯನ್ನು ಸಂತೋಷಪಡಿಸಿದನು. ನಿನ್ನ ಪಟ್ಟಣದಲ್ಲಿ ವ್ಯಾಘ್ರಗಳನ್ನು, ಕರಡಿಗಳನ್ನು ಮತ್ತು ಗಜಗಳನ್ನು ಯುದ್ಧದಲ್ಲಿ ಕೊಂದನು.
ಹಿಡಿಂಬಂ ಚ ಬಕಂ ಚೈವ ಕಿಮ್ಮೀರಂ ಚ ಜಟಾಸುರಮ್ |
ಹತ್ವಾ ನಿಷ್ಕಂಟಕಂ ಚಕ್ರೇ ಅರಣ್ಯಂ ಸರ್ವತಃ ಸುಖಮ್ ||7||
ಹಿಡಿಂಬ, ಬಕ, ಕಿಮ್ಮೀರ ಮತ್ತು ಜಟಾಸುರ ಇವರನ್ನು ಕೊಂದು ಅರಣ್ಯವು ಎಲ್ಲಾ ಕಡೆಯಲ್ಲಿಯೂ ಸುಖವಾಗಿಯೂ ನಿರುಪದ್ರವವಾಗಿಯೂ ಇರುವಂತೆ ಮಾಡಿದನು.
ಯಶ್ಚಾಸೀದಶ್ವಬಂಧಸ್ತೇ ನಕುಲೋಽಯಂ ಪರಂತಪಃ |
ಗೋಸಂಖ್ಯಃ ಸಹದೇವಶ್ಚ ಮಾದ್ರೀಪುತ್ರೌ ಮಹಾಬಲೌ ||8||
ನಿನ್ನ ಅಶ್ವಬಂಧನಾಗಿದ್ದವನೇ ಪರಂತಪನಾದ ನಕುಲ. ಗೋಸಂಖ್ಯನಾದವನು ಸಹದೇವ. ಇವರು ಮಹಾಬಲರಾದ ಮಾದ್ರೀಪುತ್ರರು.
ಶೃಂಗಾರವೇಷಾಭರಣೌ ರೂಪವಂತೌ ಮನಸ್ವಿನೌ |
ನಾನಾರಥಸಹಸ್ರಾಣಾಂ ಸಮರ್ಥೌ ಭರತರ್ಷಭೌ ||9||
ಇವರು ಶೃಂಗಾರವೇಷಾಭರಣಗಳನ್ನುಳ್ಳವರೂ, ರೂಪಸಂಪನ್ನರೂ, ಧೈರ್ಯಶಾಲಿಗಳೂ ಮತ್ತು ಅನೇಕ ಸಹಸ್ರರಥಗಳನ್ನು ಎದುರಿಸಲು ಸಮರ್ಥರೂ ಆದ ಭರತರ್ಷಭರು.
ಏಷಾ ಪದ್ಮಪಲಾಶಾಕ್ಷೀ ಸುಮಧ್ಯಾ ಚಾರುಹಾಸಿನೀ |
ಸೈರಂಧ್ರೀ ದ್ರೌಪದೀ ರಾಜನ್ ಯತ್ಕೃತೇ ಕೀಚಕಾ ಹತಾಃ ||10||
ಪದ್ಮಪತ್ರಾಕ್ಷಿಯೂ, ಶೋಭನವಾದ ಮಧ್ಯವುಳ್ಳವಳೂ, ಸುಂದರವಾದ ನಗುವುಳ್ಳವಳೂ ಆದ ಈ ಸೈರಂಧ್ರಿಯೇ ದ್ರೌಪದಿ. ರಾಜನೇ, ಅವಳ ಸಲುವಾಗಿ ಕೀಚಕರು ಹತರಾದರು.
ದ್ರುಪದಸ್ಯ ಪ್ರಿಯಾ ಪುತ್ರೀ ಧೃಷ್ಟದ್ಯುಮ್ನಸ್ಯ ಚಾನುಜಾ |
ಅಗ್ನಿಕುಂಡಾತ್ ಸಮುದ್ಭೂತಾ ದ್ರೌಪದೀ ತ್ವವಗಮ್ಯತಾಮ್ ||11||
ಇವಳನ್ನು ದ್ರುಪದನ ಪ್ರಿಯಳಾದ ಪುತ್ರಿ, ಧೃಷ್ಟದ್ಯುಮ್ನನ ತಂಗಿ, ಅಗ್ನಿಕುಂಡದಿಂದ (ವೇದಿಯಿಂದ) ಎದ್ದುಬಂದ ದ್ರೌಪದಿ ಎಂದು ತಿಳಿ.

ಭೀಮಃ
ಅಸ್ತ್ರಜ್ಞೋ ದುರ್ಲಭಃ ಕಶ್ಚಿತ್ ಕೇವಲಂ ಪೃಥಿವೀಮನು |
ಧನುರ್ಭೃತಾಂ ತಥಾ ಶ್ರೇಷ್ಠಃ ಕೌಂತೇಯೋಽಯಂ ಧನಂಜಯಃ ||12||
ಭೀಮ ಪೃಥಿವಿಯೆಲ್ಲವನ್ನೂ ಹುಡುಕಿದರೂ ಯಾವನಿಗೆ ಸಮನಾದ ಅಸ್ತ್ರಜ್ಞನು ಸಿಗುವುದಿಲ್ಲವೋ ಅಂತಹ ಇವನು ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಕುಂತೀಪುತ್ರನಾದ ಧನಂಜಯ.
ಏತೇನ ಖಾಂಡವಂ ದಗ್ಧಮ್ ಅಕಾಮಸ್ಯ ಶತಕ್ರತೋಃ |
ದಗ್ಧಂ ನಾಗವನಂ ಚೈವ ಸಹ ನಾಗೈರ್ನರಾಧಿಪ ||13||
ಇವನು ಇಂದ್ರನ ಇಚ್ಛೆಗೆ ವಿರುದ್ಧವಾಗಿ ಖಾಂಡವವನವನ್ನು ದಹಿಸಿದನು. ನರಾಧಿಪನೇ, ನಾಗಗಳಿಂದ ಸಹಿತವಾದ ನಾಗವನ್ನೂ ಸಹ ಇವನು ದಹಿಸಿದನು.
ವರ್ಷಂ ಚ ಶರವರ್ಷೇಣ ವಾರಿತಂ ದುರ್ಜಯೇನ ವೈ |
ಕರಮಾಹಾರಿತಾಃ ಸರ್ವೇ ಪಾರ್ಥಿವಾಃ ಪೃಥಿವೀಪತೇ ||14||
ತನ್ನ ಬಾಣಗಳ ಮಳೆಯಿಂದ ಮಳೆಯನ್ನು ತಡೆದನು. ಎಲೈ ರಾಜನೇ, ಇವನು ಎಲ್ಲ ರಾಜರೂ ಕಪ್ಪವನ್ನು ಕೊಡುವಂತೆ ಮಾಡಿದನು.

ಸ್ತ್ರೀವೇಷಂ ಕೃತವಾನೇಷ ತವ ರಾಜನ್ ನಿವೇಶನೇ |
ಬೃಹನ್ನಳೇತಿ ಯಾಮಾಹುರರ್ಜುನಂ ಜಯತಾಂ ವರಮ್ ||15||
ರಾಜನೇ, ನಿನ್ನ ಮನೆಯಲ್ಲಿ ಸ್ತ್ರೀವೇಷವನ್ನು ಧರಿಸಿ ಬೃಹನ್ನಳೆ ಎಂದು ಕರೆಯಲ್ಪಡುತ್ತಿದ್ದವನೇ ಜಯಶೀಲರಲ್ಲಿ ಶ್ರೇಷ್ಠನಾದ ಅರ್ಜುನನು.
ಉಷಿತಾಃ ಸ್ಮ ಸುಖಂ ಸರ್ವೇ ತವ ರಾಜನ್ ನಿವೇಶನೇ |
ಅಜ್ಞಾತವಾಸೇ ನಿಭೃತಾ ಗರ್ಭವಾಸ ಇವ ಪ್ರಜಾಃ ||16||
ಎಲೈ ರಾಜನೇ, ಪ್ರಜೆಗಳು ಗರ್ಭವಾಸವನ್ನು ಮಾಡಿದಂತೆ ಅಜ್ಞಾತವಾಸದ ಸಮಯದಲ್ಲಿ ಯಾರಿಗೂ ತಿಳಿಯದಂತೆ ನಿನ್ನ ಮನೆಯಲ್ಲಿ ನಾವೆಲ್ಲರೂ ಸುಖವಾಗಿ ವಾಸಮಾಡಿದೆವು.
ವೈಶಂಪಾಯನಃ
ಯದಾಽರ್ಜುನೇನ ತೇ ವೀರಾಃ ಕಥಿತಾಃ ಪಂಚ ಪಾಂಡವಾಃ |
ತದಾಽರ್ಜುನಸ್ಯ ವೈರಾಟಿಃ ಕಥಯಾಮಾಸ ವಿಕ್ರಮಮ್ ||17||
ವೈಶಂಪಾಯನ ಅರ್ಜುನನು ಆ ವೀರರಾದ ಪಂಚಪಾಂಡವರನ್ನು ಪರಿಚಯಿಸಿಕೊಟ್ಟಮೇಲೆ ವಿರಾಟನ ಮಗನಾದ ಉತ್ತರನು ಅರ್ಜುನನ ಪರಾಕ್ರಮವನ್ನು ವರ್ಣಿಸಿದನು.
ಅಯಂ ಸ ದ್ವಿಷತಾಂ ಮಧ್ಯೇ ಮೃಗಾಣಾಮಿವ ಕೇಸರೀ |
ಅಚರದ್ ರಥವೃಂದೇಷು ನಿಘ್ನಂಸ್ತೇಷಾಂ ಪರಾವರಾನ್ ||18||
ಇವನು ಜಿಂಕೆಗಳ ಮಧ್ಯದಲ್ಲಿರುವ ಸಿಂಹದಂತೆ ಶತ್ರುಗಳ ರಥಸಮೂಹದ ಮಧ್ಯದಲ್ಲಿ ಸಂಚರಿಸುತ್ತಾ ಅವರಲ್ಲಿ ಶ್ರೇಷ್ಠರಾದವರನ್ನೂ ಮತ್ತು ಕನಿಷ್ಠರಾದವರನ್ನೂ ಸಂಹರಿಸಿದನು.
ಅನೇನ ವಿದ್ಧಾ ಮಾತಂಗಾ ಮಹಾಮೇಘೋಪಮಾಸ್ತದಾ |
ಹಿರಣ್ಯಕಕ್ಷ್ಯಾಃ ಸಂಗ್ರಾಮೇ ದಂತಾಭ್ಯಾಮಗಮನ್ಮಹೀಮ್ ||19||
ಇವನಿಂದ ಹೊಡೆಯಲ್ಪಟ್ಟ ಮಹಾಮೇಘದಂತಿದ್ದ ಹಿರಣ್ಯಕಕ್ಷವನ್ನು ಧರಿಸಿದ್ದ ಗಜಗಳು ಯುದ್ಧದಲ್ಲಿ ದಂತಗಳ ಮೇಲೆ ಭೂಮಿಗೆ ಕುಸಿದವು.
ಅನೇನ ವಿಜಿತಾ ಗಾವೋ ನಿರ್ಜಿತಾಃ ಕೌರವಾ ಯುಧಿ |
ಅಸ್ಯ ಶಂಖಪ್ರಣಾದೇನ ಕರ್ಣೌ ಮೇ ಬಧಿರೀಕೃತೌ ||20||
ಜಾಯತೇ ರೋಮಹರ್ಷೋ ಮೇ ಸಂಸ್ಮೃತ್ಯಾಸ್ಯ ಧನುರ್ಧ್ವನಿಮ್ ||
ಇವನು ಗೋವುಗಳನ್ನು ಜಯಿಸಿದನು. ಯುದ್ಧದಲ್ಲಿ ಕೌರವರನ್ನು ಸೋಲಿಸಿದನು. ಇವನ ಶಂಖದ ನಾದದಿಂದ ನನ್ನ ಕಿವಿಗಳು ಕಿವುಡಾಗಿವೆ. ಅವನ ಧನುಸ್ಸಿನ ನಾದವನ್ನು ಸ್ಮರಣೆ ಮಾಡಿ ನನಗೆ ಇನ್ನೂ ರೋಮಹರ್ಷವು ಉಂಟಾಗುತ್ತದೆ.
ಅನೇನ ರಾಜನ್ ವೀರೇಣ ಭೀಷ್ಮದ್ರೋಣಮುಖಾ ರಥಾಃ |
ದುರ್ಯೋಧನೇನ ಸಹಿತಾ ನಿರ್ಜಿತಾ ಭೀಮಕರ್ಮಣಾ ||22||
ರಾಜನೇ, ಭಯಂಕರಕರ್ಮವನ್ನು ಎಸಗುವ ಈ ವೀರನಿಂದ ದುರ್ಯೋಧನ ಸಹಿತರಾದ ಭೀಷ್ಮ-ದ್ರೋಣ ಮಹಾರಥರು ನಿರ್ಜಿತರಾದರು.
ಅಯಂ ಭೀತಂ ದ್ರುವಂತಂ ಮಾಂ ದೇವಪುತ್ರೋ ನ್ಯವಾರಯತ್ |
ಅಸ್ಯ ಬಾಹುಬಲೇನಾಸ್ಮಿ ಜೀವನ್ ಪ್ರತ್ಯಾಗತಃ ಪುರಮ್ ||23||
ಹೆದರಿ ಓಡಿಹೋಗುತ್ತಿದ್ದ ನನ್ನನ್ನು ಈ ದೇವಪುತ್ರನು ತಡೆದನು. ಇವನ ಬಾಹುಬಲದಿಂದ ನಾನು ಬದುಕಿ ಹಿಂದಿರುಗಿ ಪಟ್ಟಣಕ್ಕೆ ಬಂದಿದ್ದೇನೆ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಮತ್ಸ್ಯರಾಜಃ ಪ್ರತಾಪವಾನ್ |
ಧನಂಜಯಂ ಪರಿಷ್ವಜ್ಯ ಪಾಂಡವಾನಪಿ ಸರ್ವಶಃ ||24||

ನಮಸ್ಕೃತ್ಯ ತು ರಾಜಾನಂ ರಾಜಾ ರಾಜ್ಯೇಽಭಿಷೇಚಿತಃ |
ನಾತೃಪ್ಯದ್ ದರ್ಶನೇ ತೇಷಾಂ ವಿರಾಟೋ ವಾಹಿನೀಪತಿಃ ॥25॥
ಸಂಪ್ರೀಯಮಾಣೋ ರಾಜಾನಂ ಯುಧಿಷ್ಠಿರಮಥಾಬ್ರವೀತ್ ॥26॥
ವೈಶಂಪಾಯನ ಅವನ ಆ ಮಾತುಗಳನ್ನು ಕೇಳಿದ ಪ್ರತಾಪಶಾಲಿಯಾದ ಮತ್ಸ್ಯರಾಜನು ಅರ್ಜುನನನ್ನು ಆಲಿಂಗಿಸಿ, ಎಲ್ಲ ಪಾಂಡವರನ್ನೂ ಆಲಿಂಗಿಸಿ, ಧರ್ಮರಾಜನಿಗೆ ನಮಸ್ಕಾರವನ್ನು ಮಾಡಿ, ಅವನಿಗೆ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು. ಸೇನಾನಾಯಕನಾದ ವಿರಾಟನು ಅವರನ್ನು ಎಷ್ಟು ನೋಡಿದರೂ ತೃಪ್ತಿಯನ್ನೇ ಹೊಂದಲಿಲ್ಲ. ಅಂತಹ ಸಂತೋಷದಿಂದ ಕೂಡಿದ ಅವನು ರಾಜನಾದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿದನು.
ದಿಷ್ಟ್ಯಾ ಭವಂತಃ ಸಂಪ್ರಾಪ್ತಾಃ ಸರ್ವೇ ಕುಶಲಿನೋ ವನಾತ್ |
ದಿಷ್ಟ್ಯಾ ಚ ಚರಿತಂ ಕೃಚ್ಛ್ರಮಜ್ಞಾತಂ ತೈರ್ದುರಾತ್ಮಭಿಃ ॥27॥
ದೇವರ ದಯದಿಂದ ನೀವೆಲ್ಲರೂ ಕ್ಷೇಮದಿಂದ ವನದಿಂದ ಹಿಂದಿರುಗಿದ್ದೀರಿ. ದೇವರದಯದಿಂದಲೇ ಆ ದುರಾತ್ಮರಿಗೆ ತಿಳಿಯದಂತೆ ಕಷ್ಟಕರವಾದ ಅಜ್ಞಾತವಾಸವನ್ನು ಮಾಡಿದ್ದೀರಿ.
ಇದಂ ರಾಜ್ಯಂ ಚ ನಃ ಸರ್ವಂ ಯಚ್ಚಾಪಿ ವಸು ಕಿಂಚನ |
ಅವಿಭಕ್ತಮೇತದ್ ಭವತಾಂ ನೋತ್ಕಂಠಾಂ ಕರ್ತುಮರ್ಹತ ॥28॥
ನಮಗಿರುವ ಈ ರಾಜ್ಯವು ಮತ್ತು ಏನು ಸಂಪತ್ತಿದೆಯೋ ಅವೆಲ್ಲವೂ ಅವಿಭಕ್ತವಾಗಿ ನಿಮ್ಮದೇ ಆಗಿವೆ. ಚಿಂತೆಯನ್ನು ಪಡಬೇಡಿ (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
ವೈವಾಹಿಕಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ತತೋ ವಿರಾಟಃ ಭಯಕಂಪಿತಾಂಗಃ
ಪ್ರಣಮ್ಯ ಪಾರ್ಥಾನ್ ಶರಣಂ ಜಗಾಮ |
ದದೌ ಚ ಕನ್ಯಾಮುತ್ತರಾಂ ಫಲ್ಗುನಾಯ
ಪುತ್ರಾರ್ಥಮೇವ ಪ್ರತಿಜಗ್ರಾಹ ಸೋಽಪಿ ॥49॥
ಆಗ ವಿರಾಟ ಭಯದಿಂದ ನಡುಗುತ್ತಾ ತಲೆಬಾಗಿ ಪಾಂಡವರನ್ನು ಶರಣು ಹೊಂದಿದ. ಅರ್ಜುನನಿಗೆ ಮಗಳನ್ನು ವಾಗ್ದಾನ ಮಾಡಿದ. ಅವನು ಅವಳನ್ನು ಮಗನಿಗಾಗಿ ಸ್ವೀಕರಿಸಿದ.
* * * *
ಎಪ್ಪತ್ತನಾಲ್ಕನೆಯ ಅಧ್ಯಾಯ
ಉತ್ತರನಿಂದ ಉತ್ತರೆಯನ್ನು ಅರ್ಜುನನಿಗೆ ಕೊಡುವಂತೆ ಒತ್ತಾಯ
ಮತ್ತು ಯುಧಿಷ್ಠಿರನ ಅಭಯದಾನ.
ವೈಶಂಪಾಯನಃ
ವಿರಾಟಸ್ಯ ವಚಃ ಶ್ರುತ್ವಾ ಪಾರ್ಥಸ್ಯ ಚ ಮಹಾತ್ಮನಃ |
ಉತ್ತರಃ ಪ್ರತ್ಯುವಾಚೇದಮಭಿಪನ್ನೇ ಯುಧಿಷ್ಠಿರೇ ॥1॥
ವೈಶಂಪಾಯನ ಯುಧಿಷ್ಠಿರನು ಗುರುತಿಸಲ್ಪಡುತ್ತಿರಲು ಉತ್ತರನು ವಿರಾಟನ ಮಾತುಗಳನ್ನೂ ಮತ್ತು ಮಹಾತ್ಮನಾದ ಅರ್ಜುನನ ಮಾತುಗಳನ್ನೂ ಕೇಳಿ ಹೀಗೆ ಮಾತನಾಡಿದನು.
ಪ್ರಸಾದನಂ ಪ್ರಾಪ್ತಕಾಲಂ ಪಾಂಡವಸ್ಯಾಭಿರೋಚಯೇ |
ತೇಜಸ್ವೀ ಬಲವಾನ್ ಶೂರೋ ರಾಜರಾಜೇಶ್ವರಃ ಪ್ರಭುಃ ॥2॥
ತೇಜಸ್ವಿಯೂ, ಬಲಿಷ್ಠನೂ, ಶೂರನೂ, ರಾಜರಾಜೇಶ್ವರನೂ, ಪ್ರಭುವೂ ಆದ ಯುಧಿಷ್ಠಿರನನ್ನು ಪ್ರಸನ್ನೀಕರಿಸಿಕೊಳ್ಳುವುದು ಯೋಗ್ಯವಾದುದೆಂದು ನನಗೆ ತೋರುತ್ತದೆ.
ಉತ್ತರಾಂ ಚ ವರಾರೋಹಾಂ ಪಾರ್ಥಸ್ಯಾಮಿತ್ರಕರ್ಶನ |
ಪ್ರಣಿಪತ್ಯ ಪ್ರಯಚ್ಛಾಮಸ್ತಸ್ಯ ಶಿಷ್ಯಾ ಭವೇಮಹೇ ॥3॥
ಶತ್ರುಕರ್ಶನನಾದ ರಾಜನೇ, ಸುಂದರಿಯಾದ ಉತ್ತರೆಯನ್ನು ನಮಸ್ಕಾರ ಪೂರ್ವಕವಾಗಿ ಅರ್ಜುನನಿಗೆ ಕೊಟ್ಟು ನಾವು ಅವನ ಶಿಷ್ಯರಾಗೋಣ.
ವಯಂ ಚ ಸರ್ವೇ ಸಾಮಾತ್ಯಾಃ ಕುಂತೀಪುತ್ರಂ ಯುಧಿಷ್ಠಿರಮ್ |
ಪ್ರಸಾದ್ಯ ಹ್ಯುಪತಿಷ್ಠಾಮೋ ರಾಜನ್ ಕಿಂ ಕರವಾಮಹೇ ॥4॥
ಅಮಾತ್ಯಸಹಿತರಾದ ನಾವೆಲ್ಲರೂ ಕುಂತೀಪುತ್ರನಾದ ಯುಧಿಷ್ಠಿರನನ್ನು ಪ್ರಸನ್ನೀಕರಿಸಿಕೊಂಡು ಅವನ ಸ್ತೋತ್ರವನ್ನು ಮಾಡೋಣ. ರಾಜನೇ, ನೀನು ಏನು ಮಾಡಬೇಕೆಂದು ಯೋಚಿಸುತ್ತೀಯೆ?
ರಾಜಂಸ್ತ್ವಮಸಿ ಸಂಗ್ರಾಮೇ ಗೃಹೀತಸ್ತೇನ ಮೋಕ್ಷಿತಃ |
ಏತೇಷಾಂ ಬಾಹುವೀರ್ಯೇಣ ಗಾವಶ್ಚ ವಿಜಿತಾಸ್ತ್ವಯಾ ॥5॥
ರಾಜನೇ, ನೀನು ಸಹ ಯುದ್ಧದಲ್ಲಿ ಗೃಹೀತನಾಗಿದ್ದವನು ಅವನಿಂದ ಬಿಡುಗಡೆಗೊಳಿಸಲ್ಪಟ್ಟಿದ್ದೀಯೆ. ಇವರ

ಬಾಹುವೀರ್ಯದಿಂದಲೇ ನಿನ್ನ ಗೋವುಗಳು ಪುನಃ ಜಯಿಸಲ್ಪಟ್ಟವು.
ಕುರವೋ ನಿರ್ಜಿತಾ ಯಸ್ಮಾತ್ ಸಂಗ್ರಾಮೇಽಮಿತತೇಜಸಃ |
ಏಷ ತತ್ ಸರ್ವಮಕರೋತ್ ಕುಂತೀಪುತ್ರೋ ಯುಧಿಷ್ಠಿರಃ ॥6॥
ಅಮಿತಪರಾಕ್ರಮಿಗಳಾದ ಕುರುಗಳು ಯುದ್ಧದಲ್ಲಿ ಅವನಿಂದಲೇ ಪರಾಭವವನ್ನು ಹೊಂದಿದರು. ಅವೆಲ್ಲವನ್ನೂ ಕುಂತೀಪುತ್ರನಾದ ಯುಧಿಷ್ಠಿರನೇ ಮಾಡಿದನು.
ಆರ್ಯಾಃ ಪೂಜ್ಯಾಶ್ಚ ಮಾನ್ಯಾಶ್ಚ ಪ್ರತ್ಯುತ್ಥೇಯಾಶ್ಚ ಪಾಂಡವಾಃ |
ಅರ್ಚ್ಯಾಶ್ಚೈವಾಭಿವಾದ್ಯಾಶ್ಚ ಪ್ರಾಪ್ತಕಾಲಂ ಚ ಮೇ ಮತಮ್ ॥7॥
ಪಾಂಡವರು ಒಳ್ಳೆಯ ನಡತೆಯುಳ್ಳವರು, ಪೂಜ್ಯರು, ಮಾನ್ಯರು, ಎದುರಿಗೆ ನಿಂತು ಸ್ವೀಕಾರ ಮಾಡಬೇಕಾದವರು, ಅರ್ಚಿಸಲ್ಪಡಬೇಕಾದವರು, ನಮಸ್ಕಾರ ಮಾಡಲ್ಪಡಬೇಕಾದವರು. ಆದ್ದರಿಂದ ನಾನು ಹೇಳಿದುದು ಯೋಗ್ಯವೆಂದು ನನ್ನ ಅಭಿಪ್ರಾಯ.
ಪೂಜ್ಯಂತಾಂ ಪೂಜನೀಯಾಶ್ಚ ಮಹಾಭಾಗಾಶ್ಚ ಪಾಂಡವಾಃ |
ನ ಹ್ಯೇತೇ ಕುಪಿತಾಃ ಶೇಷಂ ಕುರ್ಯುರಾಶೀವಿಷೋಪಮಾಃ ॥8॥
ಪೂಜನೀಯರೂ, ಮಹಾನುಭಾವರೂ ಆದ ಪಾಂಡವರು ಪೂಜಿಸಲ್ಪಡಲಿ. ಸರ್ಪಕ್ಕೆ ಸದೃಶರಾದ ಇವರು ಕೋಪಗೊಂಡರೆ ಏನನ್ನೂ ಉಳಿಸುವುದಿಲ್ಲ.
ತಸ್ಮಾತ್ ಶೀಘ್ರಂ ಪ್ರಪದ್ಯಾಮಃ ಕುಂತೀಪುತ್ರಂ ಯುಧಿಷ್ಠಿರಮ್ |
ಪ್ರಸಾದಯಾಮ ಭದ್ರಂ ತೇ ಸಹ ಪಾರ್ಥೈರ್ಮಹಾತ್ಮಭಿಃ ॥9॥
ಆದ್ದರಿಂದ ಶೀಘ್ರವಾಗಿ ಕುಂತೀಪುತ್ರನಾದ ಯುಧಿಷ್ಠಿರನಿಗೆ ಶರಣಾಗತರಾಗೋಣ. ಮಹಾತ್ಮರಾದ ಉಳಿದ ಪಾಂಡವರಿಂದ ಸಹಿತನಾದ ಅವನನ್ನು ಪ್ರಸನ್ನನಾಗಿ ಮಾಡಿಕೊಳ್ಳೋಣ. ನಿನಗೆ ಮಂಗಳವಾಗಲಿ.
ಜಾನಾಮ್ಯಹಮಿದಂ ಸರ್ವಮೇಷಾಂ ತು ಬಲಪೌರುಷಮ್ |
ಕುಲೇ ಚ ಜನ್ಮ ಮಹತಿ ಫಲ್ಗುನಸ್ಯ ಚ ವಿಕ್ರಮಮ್ ॥10॥
ಇವರ ಈ ಎಲ್ಲಾ ಬಲಪೌರುಷಗಳನ್ನೂ, ಮಹಾಕುಲದಲ್ಲಿ ಅವರ ಜನ್ಮವನ್ನೂ ಮತ್ತು ಅರ್ಜುನನ ಪರಾಕ್ರಮವನ್ನೂ ನಾನು ತಿಳಿದಿದ್ದೇನೆ.
ವೈಶಂಪಾಯನಃ
ಉತ್ತರಾತ್ ಪಾಂಡವಾನ್ ಶ್ರುತ್ವಾ ವಿರಾಟೋ ದುಃಖಮೋಹಿತಃ |
ಉತ್ತರಂ ಚಾಪಿ ಸಂಪ್ರೇಕ್ಷ್ಯ ಪ್ರಾಪ್ತಕಾಲಮಚಿಂತಯತ್ ॥11॥
ವೈಶಂಪಾಯನ ಉತ್ತರನಿಂದ ಪಾಂಡವರನ್ನು ತಿಳಿದ ವಿರಾಟನು ದುಃಖಮೋಹಿತನಾಗಿ ಉತ್ತರನನ್ನು ನೋಡಿ ಆ ಕಾಲದಲ್ಲಿ ಮಾಡಲು ಯೋಗ್ಯವಾದ ವಿಷಯವನ್ನು ಚಿಂತಿಸಿದನು.
ತತೋ ವಿರಾಟಃ ಸಾಮಾತ್ಯಃ ಸಕಳತ್ರಃ ಸಬಾಂಧವಃ |
ಉತ್ತರಾಮಗ್ರತಃ ಕೃತ್ವಾ ಶಿರಃಸ್ನಾತಾಂ ಕೃತಾಂಜಲಿಃ ॥12॥
ಭೂಮೌ ನಿಪತಿತಸ್ತೂರ್ಣಂ ಪಾಂಡವಸ್ಯ ಸಮೀಪತಃ ॥13॥
ಅನಂತರ ವಿರಾಟನು ತನ್ನ ಅಮಾತ್ಯರು, ಪತ್ನಿಯರು ಮತ್ತು ಬಾಂಧವರೊಡನೆ ತಲೆಯ ಮೇಲೆ ಸ್ನಾನ ಮಾಡಿ ಶುದ್ಧಳಾದ ಉತ್ತರೆಯನ್ನು ಮುಂದೆ ಮಾಡಿಕೊಂಡು ಕೈಗಳನ್ನು ಜೋಡಿಸಿ ಯುಧಿಷ್ಠಿರನ ಸಮೀಪಕ್ಕೆ ಬಂದು ಭೂಮಿಯ ಮೇಲೆ ಶೀಘ್ರವಾಗಿ ನಮಸ್ಕಾರವನ್ನು ಮಾಡಿದನು.
ವಿರಾಟಃ
ಪ್ರಸೀದತು ಮಹಾರಾಜೋ ಧರ್ಮಪುತ್ರೋ ಯುಧಿಷ್ಠಿರಃ |
ಪ್ರಚ್ಛನ್ನರೂಪವೇಷತ್ವಾನ್ನಾಗ್ನಿರ್ದೃಷ್ಟಸ್ತೃಣೈರ್ವೃತಃ ॥14॥
ಶಿರಸಾಽಭಿಪ್ರಪನ್ನೋಽಸ್ಮಿ ಸಪುತ್ರಪರಿಚಾರಕಃ ॥15॥
ವಿರಾಟ ಧರ್ಮಪುತ್ರನಾದ ಮಹಾರಾಜನಾದ ಯುಧಿಷ್ಠಿರನು ಪ್ರಸನ್ನನಾಗಬೇಕು. ತೃಣಗಳಿಂದ ಮುಚ್ಚಿದ ಅಗ್ನಿಯಂತೆ ಮಾರುವೇಷದಿಂದ ಇದ್ದ ನಿಮ್ಮನ್ನು ನಾನು ಗುರುತಿಸಲಾಗಲಿಲ್ಲ. ನಾನು ನನ್ನ ಪುತ್ರಪರಿವಾರದ ಜೊತೆಗೆ ನಿಮಗೆ ಶಿರಸಾ ಶರಣಾಗತರಾಗಿದ್ದೇನೆ.
ಯದಸ್ಮಾಭಿರಜಾನದ್ಭಿರಧಿಕ್ಷಿಪ್ತೋ ಮಹೀಪತಿಃ |
ಅವಮತ್ಯ ಕೃತಂ ಸರ್ವಮಯುಕ್ತಂ ಪ್ರಾಕೃತೋ ಯಥಾ ॥16॥
ಕ್ಷಂತುಮರ್ಹಸಿ ತತ್ಸರ್ವಂ ಧರ್ಮಜ್ಞೋ ಬಂಧುವತ್ಸಲಃ ॥17॥
ಮಹೀಪತಿಯಾದ ನಿನ್ನನ್ನು ಸಾಮಾನ್ಯಮನುಷ್ಯನೆಂದು ತಿಳಿದು ನಾನು ಆಡಿದ ಎಲ್ಲಾ ನಿಂದನೆಯ ಮಾತುಗಳನ್ನು ಮತ್ತು ಅಯೋಗ್ಯವಾದ ಎಲ್ಲಾ ಅವಮಾನಗಳನ್ನು ಧರ್ಮಜ್ಞನೂ ಮತ್ತು ಬಂಧುವತ್ಸಲನೂ ಆದ ನೀನು ಕ್ಷಮಿಸಬೇಕು.
ಯದಿದಂ ಮಾಮಕಂ ರಾಷ್ಟ್ರಂ ಪುರಂ ರಾಜ್ಯಂ ಚ ಪಾರ್ಥಿವ |
ಸದಂಡಕೋಶಂ ವಿಸೃಜೇ ತವ ಭೃತ್ಯೋಽಸ್ಮಿ ಪಾಂಡವ ॥18॥
ವಯಂ ಚ ಸರ್ವೇ ಸಾಮಾತ್ಯಾ ಭವಂತಂ ಶರಣಂ ಗತಾಃ ॥19॥
ಪಾರ್ಥಿವನೇ, ಪಾಂಡವನೇ, ನನ್ನ ರಾಜ್ಯ, ರಾಷ್ಟ್ರ, ರಾಜಧಾನಿ ಮತ್ತು ದಂಡಕೋಶಗಳು ಏನಿವೆಯೋ ಅವೆಲ್ಲವನ್ನೂ ನಿನಗಾಗಿ ಕೊಡುತ್ತಿದ್ದೇನೆ. ನಾನು ನಿನ್ನ ಭೃತ್ಯನಾಗಿದ್ದೇನೆ. ನಾನು ಮತ್ತು ನನ್ನ ಅಮಾತ್ಯರೆಲ್ಲರೂ ನಿನಗೆ ಶರಣಾಗತರಾಗಿದ್ದೇವೆ.

ವೈಶಂಪಾಯನಃ
ತಂ ಧರ್ಮರಾಜಃ ಪತಿತಂ ಮಹೀತಳೇ
ಸಬಂಧುವರ್ಗಂ ಪ್ರಸಮೇತ್ಯ ಪಾರ್ಥಿವಮ್ |
ಉವಾಚ ವಾಕ್ಯಂ ಪರಲೋಕದರ್ಶನಃ
ಪುನಷ್ಚಮನ್ಯುರ್ಗತಶೋಕಮತ್ಸರಃ ॥20॥
ವೈಶಂಪಾಯನ ಧರ್ಮರಾಜನು ತನ್ನ ಬಂಧುವರ್ಗದವರೊಡನೆ ಭೂಮಿಯಲ್ಲಿ ಬಿದ್ದಿದ್ದ ಅವನ ಬಳಿಗೆ ಶೀಘ್ರವಾಗಿ ಬಂದು ಪರಲೋಕದೃಷ್ಟಿಯುಳ್ಳ ಅವನು ಕೋಪವನ್ನೂ, ಶೋಕ-ಮತ್ಸರವನ್ನೂ ಕಳೆದುಕೊಂಡವನಾಗಿ ಅವನನ್ನು ಕುರಿತು ಮಾತನಾಡಿದನು.
ನ ತೇ ಭಯಂ ಪಾರ್ಥಿವ ವಿದ್ಯತೇ ಮಯಿ
ಪ್ರತೀತರೂಪೋಽಸ್ಮ್ಯನುಚಿಂತ್ಯ ಪಾರ್ಥಿವ |
ಏತತ್ ತ್ವಯಾ ಸಮ್ಯಗಿಹೋಪಪಾದಿತಂ
ದ್ವಿಜೈರಮಾತ್ಯೈಃ ಸದೃಶೈಶ್ಚ ಪಂಡಿತೈಃ ॥21॥
ಎಲೈ ರಾಜನೇ, ನಿನಗೆ ನನ್ನಿಂದ ಯಾವ ಭಯವೂ ಇಲ್ಲ. ರಾಜನೇ, ಎಲ್ಲವನ್ನೂ ಯೋಚಿಸಿ ನಾನು ಪ್ರಸನ್ನನಾಗಿದ್ದೇನೆ. ನೀನು ಬ್ರಾಹ್ಮಣರಿಂದ, ಸದೃಶರಾದ ಅಮಾತ್ಯರಿಂದ ಮತ್ತು ಪಂಡಿತರಿಂದ ಕೂಡಿಕೊಂಡು ನಮಗೆ ಎಲ್ಲವನ್ನೂ ಸರಿಯಾಗಿಯೇ ಮಾಡಿದ್ದೀಯೆ.
ಇಮಾಂ ಚ ಕನ್ಯಾಂ ಸಮಲಂಕೃತಾಂ ಭೃಶಂ
ಸಮೀಕ್ಷ್ಯ ತುಷ್ಟೋಽಸ್ಮಿ ನರೇಂದ್ರಸತ್ತಮ ॥22॥
ನರೇಂದ್ರಶ್ರೇಷ್ಠನೇ, ಈ ಅಲಂಕೃತಳಾದ ಕನ್ಯೆಯನ್ನು ನೋಡಿ ನಾನು ಬಹಳ ಸಂತೋಷಗೊಂಡಿದ್ದೇನೆ.
ಕ್ಷಾಂತಮೇತನ್ಮಹಾಬಾಹೋ ಯನ್ಮಾಂ ವದಸಿ ಪಾರ್ಥಿವ |
ನ ಚೈವ ಕಿಂಚಿತ್ ಪಶ್ಯಾಮಿ ವಿಕೃತಂ ತೇ ನರಾಧಿಪ ॥23॥
ಎಲೈ ರಾಜನೇ, ಮಹಾಬಾಹುವೇ, ನೀನು ಹೇಳುವಂತೆ ನಾನು ನಿನ್ನನ್ನು ಕ್ಷಮಿಸಿದ್ದೇನೆ. ನರಾಧಿಪನೇ, ನಾನು ಎಷ್ಟು ಯೋಚಿಸಿದರೂ ನೀನು ಮಾಡಿದ ಯಾವ ಅಪಕಾರವೂ ಗೋಚರಿಸುವುದಿಲ್ಲ.
ವೈಶಂಪಾಯನಃ
ತತೋ ವಿರಾಟಃ ಪರಮಾಭಿತುಷ್ಟಃ
ಸಮೀಕ್ಷ್ಯ ರಾಜಾ ಸಮಯಂ ಚಕಾರ |
ರಾಜ್ಯಂ ಚ ಸರ್ವಂ ವಿಸಸರ್ಜ ತಸ್ಮೈ
ಸದಂಡಕೋಶಂ ಸಪುರಂ ಮಹಾತ್ಮಾ ॥24॥
ವೈಶಂಪಾಯನ ಆಗ ವಿರಾಟರಾಜನು ಧರ್ಮರಾಜನನ್ನು ನೋಡಿ ಬಹಳ ಸಂತುಷ್ಟನಾಗಿ ಅವನ ಜೊತೆಯಲ್ಲಿ ಒಪ್ಪಂದವನ್ನು ಮಾಡಿಕೊಂಡನು. ಮಹಾತ್ಮನಾದ ಅವನು ತನ್ನ ರಾಜ್ಯವನ್ನೂ, ದಂಡಕೋಶಗಳನ್ನೂ, ರಾಜಧಾನಿಯನ್ನೂ ಮತ್ತು ಎಲ್ಲವನ್ನೂ ಯುಧಿಷ್ಠಿರನಿಗೆ ಒಪ್ಪಿಸಿದನು.
ಪಾಂಡವಾಂಶ್ಚ ತತಃ ಸರ್ವಾನ್ ಮತ್ಸ್ಯರಾಜಃ ಪ್ರತಾಪವಾನ್ |
ಧನಂಜಯಂ ಪುರಸ್ಕೃತ್ಯ ದಿಷ್ಟ್ಯಾ ದಿಷ್ಟ್ಯೇತಿ ಚಾಬ್ರವೀತ್ ॥25॥
ಪ್ರತಾಪಶಾಲಿಯಾದ ಮತ್ಸ್ಯರಾಜನು ಅರ್ಜುನನನ್ನು ಮುಂದೆ ಮಾಡಿಕೊಂಡು ಎಲ್ಲಾ ಪಾಂಡವರನ್ನು ಕುರಿತು, ದೇವರ ದಯದಿಂದ ಎಲ್ಲವೂ ಆಯಿತು ಎಂದು ಹೇಳಿದನು.
ಸಮುಪಾಘ್ರಾಯ ಮೂರ್ಧಾನಂ ಸಂಶ್ಲಿಷ್ಯ ಚ ಪುನಃ ಪುನಃ |
ಯುಧಿಷ್ಠಿರಂ ಚ ಭೀಮಂ ಚ ಮಾದ್ರೀಪುತ್ರೌ ಧನಂಜಯಮ್ ॥26॥
ನಾತೃಪ್ಯದ್ ದರ್ಶನೇ ತೇಷಾಂ ವಿರಾಟೋ ವಾಹಿನೀಪತಿಃ |
ಧರ್ಮರಾಜನನ್ನು ಆಲಿಂಗಿಸಿ ಪುನಃ ಪುನಃ ಶಿರಸ್ಸಿನಲ್ಲಿ ಆಘ್ರಾಣಿಸಿ ಅದರಂತೆಯೇ ಭೀಮಸೇನನನ್ನೂ, ಅರ್ಜುನನನ್ನೂ ಮತ್ತು ನಕುಲಸಹದೇವರನ್ನೂ ಆಲಿಂಗಿಸಿ ಅವರನ್ನು ಎಷ್ಟು ನೋಡಿದರೂ ಸೇನಾಪತಿಯಾದ ವಿರಾಟನಿಗೆ ತೃಪ್ತಿಯೇ ಉಂಟಾಗಲಿಲ್ಲ.
ಸಂಪ್ರೀಯಮಾಣೋ ರಾಜಾನಂ ಯುಧಿಷ್ಠಿರಮಥಾಬ್ರವೀತ್ ॥27॥
ದಿಷ್ಟ್ಯಾ ಭವಂತಃ ಸಂಪ್ರಾಪ್ತಾಃ ಸರ್ವೇ ಕುಶಲಿನೋ ವನಾತ್ |
ದಿಷ್ಟ್ಯಾ ಸಂಪಾರಿತಂ ಕೃಚ್ಛ್ರಮಜ್ಞಾತಂ ವೈ ಮಹಾತ್ಮಭಿಃ ॥28॥
ಇದಂ ರಾಜ್ಯಂ ಚ ವಃ ಪಾರ್ಥಾ ಯಚ್ಚಾನ್ಯದ್ ವಸು ಕಿಂಚನ ॥29॥
ಬಹಳ ಸಂತೋಷದಿಂದ ಕೂಡಿ ಅವನು ರಾಜನಾದ ಯುಧಿಷ್ಠಿರನನ್ನು ಕುರಿತು ದೇವರ ದಯದಿಂದ ನೀವೆಲ್ಲರೂ ಕ್ಷೇಮದಿಂದ ವನವಾಸದಿಂದ ಹಿಂದಿರುಗಿದ್ದೀರಿ. ದೇವರ ದಯದಿಂದಲೇ ಮಹಾತ್ಮರಾದ ನಿಮ್ಮಿಂದ ಕಷ್ಟಕರವಾದ ಅಜ್ಞಾತವಾಸವು ಪೂರ್ಣಗೊಳಿಸಲ್ಪಟ್ಟಿತು. ಪಾಂಡವರೇ, ಈ ನನ್ನ ರಾಜ್ಯ ಮತ್ತು ನನ್ನಲ್ಲಿರುವ ಯಾವುದೇ ಸಂಪತ್ತು ಎಲ್ಲವೂ ನಿಮ್ಮದೇ (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
॥ ವೈವಾಹಿಕಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.

* * * *
ಎಪ್ಪತ್ತೈದನೆಯ ಅಧ್ಯಾಯ
ಅರ್ಜುನನಿಂದ ಸೊಸೆಯಾಗಿ ಉತ್ತರೆಯ ಸ್ವೀಕಾರ.
ವಿರಾಟನ ಹರ್ಷ ಮತ್ತು ದುರ್ಯೋಧನನ ದುರ್ಬುದ್ಧಿ.
ವಿರಾಟಃ
ಯಚ್ಚ ವಕ್ಷ್ಯಾಮಿ ತೇ ಸರ್ವಂ ಮಾ ಶಂಕೇಥಾ ಯುಧಿಷ್ಠಿರ ॥1॥
ಇದಂ ಸನಗರಂ ರಾಷ್ಟ್ರಂ ಸಧನಂ ಸವಧೂಜನಮ್ |
ಯುಷ್ಮಭ್ಯಂ ಸಂಪ್ರದಾಸ್ಯಾಮಿ ಭೋಕ್ಷ್ಯಾಮ್ಯುಚ್ಛಿಷ್ಟಮೇವ ಚ ॥2॥
ವಿರಾಟ ಯುಧಿಷ್ಠಿರನೇ, ನಾನು ಹೇಳುವ ವಿಷಯದಲ್ಲಿ ಸ್ವಲ್ಪವೂ ಶಂಕೆಯನ್ನು ಪಡಬೇಡ. ಈ ನನ್ನ ನಗರ, ಧನಸಹಿತವಾದ ನನ್ನ ರಾಷ್ಟ್ರ, ನನ್ನ ವಧೂಜನರು ಎಲ್ಲರನ್ನೂ ನಿನಗೆ ಕೊಡುವೆನು. ನಿನ್ನ ಉಚ್ಛಿಷ್ಟವನ್ನು ಸ್ವೀಕರಿಸಿ ನಾನು ಜೀವಿಸುವೆನು.
ಅಹಂ ವೃದ್ಧಶ್ಚಿರಂ ರಾಜನ್ ಭುಕ್ತಭೋಗಶ್ಚಿರಂ ಸುಖಮ್ |
ರಾಜ್ಯಂ ದತ್ತ್ವಾ ತು ಯುಷ್ಮಭ್ಯಂ ಪ್ರವ್ರಜಿಷ್ಯಾಮಿ ಕಾನನಮ್ ॥3॥
ರಾಜನೇ, ನಾನು ವೃದ್ಧನಾಗಿದ್ದೇನೆ. ಬಹುಕಾಲ ಸುಖವನ್ನು ಅನುಭವಿಸಿದ್ದಾಗಿದೆ. ನಿಮಗೆ ರಾಷ್ಟ್ರವನ್ನು ಕೊಟ್ಟು ನಾನು ಕಾಡಿಗೆ ಹೋಗುತ್ತೇನೆ.
ಉತ್ತರಾಂ ಪ್ರತಿಗೃಹ್ಣಾತು ಸವ್ಯಸಾಚೀ ಧನಂಜಯಃ |
ಅಯಂ ಹೌಪಯಿಕೋ ಭರ್ತಾ ತಸ್ಯಾಃ ಪುರುಷಸತ್ತಮಃ ॥4॥
ಸವ್ಯಸಾಚಿಯಾದ ಧನಂಜಯನು ಉತ್ತರೆಯನ್ನು ಸ್ವೀಕರಿಸಲಿ. ಪುರುಷಶ್ರೇಷ್ಠನಾದ ಅವನು ಅವಳಿಗೆ ಯೋಗ್ಯನಾದ ಪತಿ.
ವೈಶಂಪಾಯನಃ
ಏವಮುಕ್ತೋ ಧರ್ಮರಾಜಃ ಪಾರ್ಥಮೈಕ್ಷದ್ ಧನಂಜಯಮ್ |
ಈಕ್ಷಿತಂ ಚಾರ್ಜುನೋ ಜ್ಞಾತ್ವಾ ಮಾತ್ಸ್ಯಂ ವಚನಮಬ್ರವೀತ್ ॥5॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಧರ್ಮರಾಜನು ಧನಂಜಯನನ್ನು ನೋಡಿದನು. ಅಣ್ಣನ ದರ್ಶನದ ಅಭಿಪ್ರಾಯವನ್ನು ತಿಳಿದ ಅರ್ಜುನನು ವಿರಾಟ ರಾಜನನ್ನು ಕುರಿತು ಈ ರೀತಿ ಹೇಳಿದನು.
ವಯಂ ವನಾಂತರಂ ಪ್ರಾಪ್ತಾ ನ ತೇ ರಾಜ್ಯಂ ಗೃಹಾಮಹೇ |
ಕಿಂತು ದುರ್ಯೋಧನಾದೀನಾಂ ರಾಜ್ಞಾಂ ರಾಜನ್ ಸ್ಪೃಹಾಮಹೇ ॥6॥
ನಾವು ಕಾಡಿನಿಂದ ಇನ್ನೊಂದು ಕಾಡಿಗೆ ಬಂದಿದ್ದೇವೆ. ನಿನ್ನ ರಾಜ್ಯವನ್ನು ನಾವು ಸ್ವೀಕರಿಸುವುದಿಲ್ಲ. ಆದರೆ ರಾಜನೇ, ದುರ್ಯೋಧನಾದಿ ರಾಜರು ಹೊಂದಿರುವ (ನಮ್ಮ ರಾಜ್ಯವನ್ನೇ) ನಾವು ಬಯಸುತ್ತೇವೆ.
ಪ್ರತಿಗೃಹ್ಣಾಮ್ಯಹಂ ರಾಜನ್ ಸ್ನುಷಾಂ ದುಹಿತರಂ ತವ |
ಯುಕ್ತೋ ಹ್ಯಾವಾಂ ಚ ಸಂಬಂಧೋ ಮಾತ್ಸ್ಯಭಾರತವಂಶಯೋಃ ॥7॥
ರಾಜನೇ, ನಿನ್ನ ಮಗಳನ್ನು ನಾನು ಸೊಸೆಯಾಗಿ ಸ್ವೀಕರಿಸುತ್ತೇನೆ. ಮಾತ್ಸ್ಯವಂಶ ಮತ್ತು ಭರತವಂಶಗಳಿಗೆ ಸಂಬಂಧವು ಯೋಗ್ಯವಾದುದು.
ವಿರಾಟಃ
ಕಿಮರ್ಥಂ ಪಾಂಡವಶ್ರೇಷ್ಠ ಭಾರ್ಯಾಂ ದುಹಿತರಂ ಮಮ |
ಪ್ರತಿಗೃಹೀತುಂ ನೇಮಾಂ ತ್ವಂ ಮಯಾ ದತ್ತಾಮಿಹೇಚ್ಛಸಿ ॥8॥
ವಿರಾಟ ಪಾಂಡವಶ್ರೇಷ್ಠನೇ, ನಾನಾಗಿಯೇ ಕೊಟ್ಟರೂ ಸಹ ಈ ನನ್ನ ಮಗಳನ್ನು ಸ್ವೀಕರಿಸಲು ನೀನು ಏಕೆ ಬಯಸುವುದಿಲ್ಲ?
ಅರ್ಜುನಃ
ಅಂತಃಪುರೇಽಹಮುಷಿತಃ ಸದಾ ಪಶ್ಯನ್ ಸುತಾಂ ತವ |
ರಹಸ್ಯಂ ಚ ಪ್ರಕಾಶಂ ಚ ವಿಶ್ವಸ್ತಾ ಪಿತೃವನ್ಮಯಿ ॥9॥
ಅರ್ಜುನ ನಾನು ಅಂತಃಪುರದಲ್ಲಿ ನಿನ್ನ ಮಗಳನ್ನು ನೋಡಿಕೊಂಡು ಯಾವಾಗಲೂ ವಾಸಮಾಡಿದೆನು. ರಹಸ್ಯದಲ್ಲಿಯೂ ಮತ್ತು ಪ್ರಕಾಶವಾಗಿಯೂ ಅವಳು ನನ್ನಲ್ಲಿ ತಂದೆಯಂತೆ ವಿಶ್ವಾಸವನ್ನು ಹೊಂದಿದ್ದಾಳೆ.
ಪ್ರಿಯೋ ಬಹುಮತಶ್ಚಾಸಂ ನರ್ತನೇ ಗೀತವಾದಿತೇ |
ಆಚಾರ್ಯವಚ್ಚ ಮಾಂ ನಿತ್ಯಂ ಮನ್ಯತೇ ದುಹಿತಾ ತವ ॥10॥
ನಾನು ನರ್ತನದಲ್ಲಿಯೂ, ಗೀತವಾದ್ಯದಲ್ಲಿಯೂ ಅವಳಿಗೆ ಪ್ರಿಯನೂ ಮತ್ತು ಅವಳಿಂದ ಪೂಜ್ಯನೂ ಆಗಿದ್ದೆನು. ನಿನ್ನ ಮಗಳು ಯಾವಾಗಲೂ ನನ್ನನ್ನು ಗುರುವೆಂದು ಭಾವಿಸುತ್ತಾಳೆ.
ವಯಃಸ್ಥಯಾ ತಥಾ ರಾಜನ್ ಸಹ ಸಂವತ್ಸರೋಷಿತಃ ॥11॥
ಅತಿಶಂಕಾ ತತೋಽಸ್ಥಾನೇ ತವ ಲೋಕಸ್ಯ ಚ ಪ್ರಭೋ |
ತಸ್ಮಾದಾಮಂತ್ರಯೇ ತ್ವಾಂ ಹಿ ಪುತ್ರಾರ್ಥಂ ವೈ ವಿಶಾಂಪತೇ ॥12॥
ಶುದ್ಧಂ ಜಿತೇಂದ್ರಿಯಮ್ಮನ್ಯೇ ತಸ್ಯಾಃ ಶುದ್ಧಿಃ ಕೃತಾ ಮಯಾ ॥13॥
ಸ್ನುಷಾಯಾಂ ದುಹಿತುರ್ವಾಽಪಿ ಪುತ್ರೋ ವಾಽಽತ್ಮನಿ ವಾ ಪುನಃ |
ಅತಿಶಂಕಾಂ ನ ಪಶ್ಯಾಮಿ ತೇನ ಶುದ್ಧಿರ್ಭವಿಷ್ಯತಿ ॥14॥
ರಾಜನೇ, ನಾನು ಯೌವನಸ್ಥಳಾದ ನಿನ್ನ ಮಗಳ ಜೊತೆಯಲ್ಲಿ ಒಂದು ವರ್ಷ ವಾಸವನ್ನು ಮಾಡಿದೆ. ಪ್ರಭುವೇ, ಜನರಿಗೆ

ಅಯೋಗ್ಯವಾದ ಶಂಕೆ ಉಂಟಾಗಬಹುದು. ಆದ್ದರಿಂದ ರಾಜನೇ, ನಾನು ನನ್ನ ಮಗನಿಗಾಗಿ ಅವಳನ್ನು ಕೊಡಬೇಕೆಂದು ನಿನ್ನನ್ನು ಆಮಂತ್ರಿಸುತ್ತೇನೆ. ನಾನು ಶುದ್ಧನು ಮತ್ತು ಜಿತೇಂದ್ರಿಯನೆಂದು ನನ್ನನ್ನು ತಿಳಿದಿದ್ದೇನೆ. ಅವಳ ಶುದ್ಧಿಯು ನನ್ನಿಂದ ತಿಳಿಯಲ್ಪಟ್ಟಿದೆ. ಸೊಸೆಯ ವಿಷಯದಲ್ಲಿ ಮಗಳ ವಿಷಯದಲ್ಲಿ, ಪುತ್ರನ ವಿಷಯದಲ್ಲಿ ಅಥವಾ ನನ್ನ ವಿಷಯದಲ್ಲಿ ಎಷ್ಟು ಯೋಚನೆ ಮಾದಿದರೂ ಯಾವ ಪ್ರತಿಶಂಕೆಯೂ ಕಾಣುವುದಿಲ್ಲ. ಆದ್ದರಿಂದ ಅವಳಿಗೆ ಶುದ್ಧಿ ಉಂಟಾಗುವುದು.
ಅಭಿಷಂಗಾದಹಂ ಭೀತೋ ಮಿಥ್ಯಾಚಾರಾತ್ ಪರಂತಪ |
ಸ್ನುಷಾರ್ಥಮುತ್ತರಾಂ ರಾಜನ್ ಪ್ರತಿಗೃಹ್ಣಾಮಿ ತೇ ಸುತಾಮ್ ॥15॥
ಪರಂತಪನೇ, ಲೋಕಾಪವಾದಕ್ಕೂ ಮತ್ತು ಕಪಟದ ನಡವಳಿಕೆಗೂ ನಾನು ಹೆದರುತ್ತೇನೆ. ರಾಜನೇ, ಸೊಸೆಯಾಗಿ ಉತ್ತರೆಯನ್ನು ನಾನು ಸ್ವೀಕರಿಸುತ್ತೇನೆ.
ಸ್ವಸ್ರೀಯೋ ವಾಸುದೇವಸ್ಯ ಸಾಕ್ಷಾದ್ ದೇವಶಿಶುರ್ಯಥಾ |
ದಯಿತಶ್ಚಕ್ರಹಸ್ತಸ್ಯ ಬಲವಾನಸ್ತ್ರಕೋವಿದಃ ॥16॥
ನನ್ನ ಮಗನು ವಾಸುದೇವನ ಸೋದರಳಿಯನಾಗಿದ್ದಾನೆ. ಸಾಕ್ಷಾತ್ ದೇವಶಿಶುವಿನಂತೆ ಇದ್ದಾನೆ. ಬಲಿಷ್ಠನೂ, ಅಸ್ತ್ರಕೋವಿದನೂ ಆದ ಅವನು ಚಕ್ರಧಾರಿಯಾದ ಕೃಷ್ಣನಿಗೆ ಪ್ರಿಯನಾಗಿದ್ದಾನೆ.
ಅಭಿಮನ್ಯುರ್ಮಹಾಬಾಹುಃ ಪುತ್ರೋ ಮಮ ವಿಶಾಂಪತೇ |
ಜಾಮಾತಾ ತವ ಯುಕ್ತೋ ವೈ ಭರ್ತಾಽಥ ದುಹಿತುಸ್ತವ ॥17॥
ಎಲೈ ರಾಜನೇ, ನನ್ನ ಪುತ್ರನಾದ ಮಹಾಬಾಹುವಾದ ಅಭಿಮನ್ಯುವು ನಿನಗೆ ಯೋಗ್ಯನಾದ ಅಳಿಯನಾಗುತ್ತಾನೆ. ನಿನ್ನ ಮಗಳಿಗೆ ಯೋಗ್ಯನಾದ ಪತಿಯಾಗುತ್ತಾನೆ.
ವಿರಾಟಃ
ಉಪಪನ್ನಂ ಕುರುಶ್ರೇಷ್ಠ ಕುಂತೀಪುತ್ರೇ ಧನಂಜಯೇ |
ಯ ಏವಂ ಧರ್ಮನಿತ್ಯಶ್ಚ ಜ್ಞಾತಜ್ಞೇಯಶ್ಚ ಪಾಂಡವಃ ॥18॥
ವಿರಾಟ ಕುರುಶ್ರೇಷ್ಠನೇ, ಧರ್ಮನಿತ್ಯನೂ ಸರ್ವಜ್ಞನೂ ಆದ ಪಾಂಡುಪುತ್ರನಾದ ನೀನು ಹೀಗೆ ಮಾತನಾಡುವುದು ಕುಂತೀಪುತ್ರನಾದ ಧನಂಜಯನಾದ ನಿನಗೆ ಯೋಗ್ಯವಾಗಿದೆ.
ಯತ್ ಸತ್ಯಂ ಮನ್ಯಸೇ ಪಾರ್ಥ ಕ್ರಿಯತಾಂ ತದನಂತರಮ್ |
ಸರ್ವೇ ಕಾಮಾಃ ಸಮೃದ್ಧಾ ಮೇ ಸಂಬಂಧೀ ಯಸ್ಯ ಮೇಽರ್ಜುನಃ ॥
ಪಾರ್ಥನೇ, ಯಾವುದು ಹಿತ ಮತ್ತು ಧರ್ಮವೆಂದು ತಿಳಿಯುತ್ತೀಯೋ ಅದನ್ನು ಮಾಡುವವನಾಗು. ಅರ್ಜುನನು ನಮಗೆ ಸಂಬಂಧಿಯಾದ ಮೇಲೆ ನನ್ನ ಎಲ್ಲಾ ಆಸೆಗಳೂ ಪೂರ್ಣವಾದಂತೆಯೇ ಸರಿ.
ವೈಶಂಪಾಯನಃ
ಏವಂ ಬ್ರುವತಿ ರಾಜೇಂದ್ರೇ ಕುಂತೀಪುತ್ರೋ ಯುಧಿಷ್ಠಿರಃ |
ಅನ್ವಮೋದತ ಸಂಬಂಧಂ ಸಮಯೇ ಕೃಷ್ಣ ಮಾತ್ಸ್ಯಯೋಃ ॥20॥
ವೈಶಂಪಾಯನ ರಾಜೇಂದ್ರನಾದ ವಿರಾಟನು ಹೀಗೆ ಮಾತನಾಡುತ್ತಿರಲು ಕುಂತೀಪುತ್ರನಾದ ಯುಧಿಷ್ಠಿರನು ಆ ಸಮಯದಲ್ಲಿ ಅರ್ಜುನ ಮತ್ತು ವಿರಾಟನ ಸಂಬಂಧಕ್ಕೆ ತನ್ನ ಅನುಮೋದನೆಯನ್ನು ನೀಡಿದನು.
ದೂತಾನ್ ಮಿತ್ರೇಷು ಸರ್ವೇಷು ವಾಸುದೇವೇ ಚ ಭಾರತ |
ಪ್ರೇಷಯಾಮಾಸ ಕೌಂತೇಯೋ ವಿರಾಟಶ್ಚ ಮಹೀಪತಿಃ ॥21॥
ಭಾರತನೇ, ಕೌಂತೇಯನಾದ ಅವನು ತನ್ನ ಎಲ್ಲಾ ಮಿತ್ರರಿಗೂ ಮತ್ತು ಕೃಷ್ಣನಿಗೂ ದೂತರನ್ನು ಕಳುಹಿಸಿದನು. ವಿರಾಟರಾಜನೂ ಸಹ ದೂತರನ್ನು ಕಳುಹಿಸಿದನು.
ಪ್ರತಿಗೃಹ್ಯ ಸ್ನುಷಾರ್ಥಂ ವೈ ದರ್ಶಯನ್ ವೃತ್ತಮಾತ್ಮನಃ |
ಶೀಲಶೌಚಸಮಾಚಾರಂ ಲೋಕಸ್ಯಾವೇದ್ಯ ಫಲ್ಗುನಃ ॥22॥
ಲೋಕೇ ವಿಖ್ಯಾಪ್ಯ ಮಾಹಾತ್ಮ್ಯಂ ಯಶಸಶ್ಚ ಪರಂತಪ |
ಕೃತಾರ್ಥಃ ಶುಚಿರವ್ಯಗ್ರಃ ತುಷ್ಟಿಮಾನಭವತ್ ತದಾ ॥23॥
ಎಲೈ ಪರಂತಪನೇ, ಅರ್ಜುನನು ಸೊಸೆಯಾಗಿ ಉತ್ತರೆಯನ್ನು ಸ್ವೀಕರಿಸಿದನು. ತನ್ನ ನಡತೆಯನ್ನೂ, ಶೀಲ-ಶೌಚಗಳನ್ನೂ ಜಗತ್ತಿಗೆ ತೋರಿಸಿ, ತನ್ನ ಮಹಿಮೆಯನ್ನು ಮತ್ತು ಕೀರ್ತಿಯನ್ನು ಲೋಕದಲ್ಲಿ ಹರಡಿ ಕೃತಾರ್ಥನಾಗಿ ವ್ಯಗ್ರತೆ ಇಲ್ಲದೆ ಶುಚಿಯಾದ ಅವನು ತೃಪ್ತಿಯನ್ನು ಹೊಂದಿದನು.
ಯುಧಿಷ್ಠಿರಃ
ರಾಜನ್ ಪ್ರೀತೋಽಸ್ಮಿ ಭದ್ರಂ ತೇ ಸಖಾ ಮೇಽಸಿ ಪರಂತಪ |
ಸುಖಮಧ್ಯುಷಿತಾಃ ಸರ್ವೇ ಅಜ್ಞಾತಾಸ್ತ್ವಯಿ ಪಾರ್ಥಿವ ॥24॥
ಯುಧಿಷ್ಠಿರ ರಾಜನೇ, ನಾನು ಸಂತೋಷಗೊಂಡಿದ್ದೇನೆ. ನಿನಗೆ ಮಂಗಳವಾಗಲಿ. ಪರಂತಪನೇ, ನೀನು ನನ್ನ ಮಿತ್ರನಾಗಿದ್ದೀಯೆ. ರಾಜನೇ, ಯಾರಿಂದಲೂ ಜ್ಞಾತರಾಗದೆ ನಾವು ನಿನ್ನಲ್ಲಿ ಸುಖವಾಗಿ ವಾಸಮಾಡಿದೆವು.
ವೈಶಂಪಾಯನಃ
ವಿರಾಟನಗರೇ ರಾಜಾ ಧರ್ಮಾತ್ಮಾ ಸಂಶಿತವ್ರತಃ |
ಪೂಜಿತಶ್ಚಾಭಿಷಿಕ್ತಶ್ಚ ರತ್ನೈಶ್ಚ ಶತಶಶ್ಚಿತಃ ॥25॥
ವೈಶಂಪಾಯನ ಆಗ ಧರ್ಮಾತ್ಮನೂ, ಶ್ರೇಷ್ಠವ್ರತಧಾರಿಯೂ ಆದ ಯುಧಿಷ್ಠಿರನು ವಿರಾಟನಗರದಲ್ಲಿ ಅಭಿಷಿಕ್ತನಾಗಿ ನೂರಾರು

ರತ್ನಗಳಿಂದ ತುಂಬಲ್ಪಟ್ಟವನಾಗಿ ಪೂಜಿಸಲ್ಪಟ್ಟನು.
ತಥಾ ಬ್ರುವಂತಂ ಪ್ರಸಮೀಕ್ಷ್ಯ ರಾಜಾ
ಪರಂ ಪ್ರಹೃಷ್ಟಃ ಸ್ವಜನೇನ ತೇನ |
ಸ್ನೇಹಾತ್ ಪರಿಷ್ವಜ್ಯ ನೃಪೋ ಭುಜಾಭ್ಯಾಂ
ದದೌ ತಮರ್ಥಂ ಕುರುಪಾಂಡವಾನಾಮ್ ॥26॥
ಹಾಗೆ ಹೇಳಿದ ಧರ್ಮರಾಜನನ್ನು ನೋಡಿ ಸ್ವಜನ ಸಹಿತನಾದ ವಿರಾಟನು ಸಂತೋಷಗೊಂಡು ಸ್ನೇಹದಿಂದ ತನ್ನ ಭುಜಗಳಿಂದ ಅವನನ್ನು ಆಲಿಂಗಿಸಿ ಕುರುವಂಶದಲ್ಲಿ ಹುಟ್ಟಿದ ಪಾಂಡವರಿಗೆ ಅವರು ಕೇಳಿದ ವಸ್ತುಗಳನ್ನೆಲ್ಲಾ ಕೊಟ್ಟನು.
ಯುದ್ಧಾತ್ ಪ್ರಯಾತಾಃ ಕುರವೋ ಹಿ ಮಾರ್ಗೇ
ಸಮೇತ್ಯ ಸರ್ವೇ ಹಿತಮೇವ ತತ್ರ |
ಆಚಾರ್ಯಪುತ್ರಃ ಶಕುನಿಶ್ಚ ರಾಜಾ
ದುರ್ಯೋಧನಃ ಸೂತಪುತ್ರಶ್ಚ ಕರ್ಣಃ ॥27॥
ಸಮೇತ್ಯ ರಾಜನ್ ಸಹಿತಾಃ ಸಮರ್ಥಂ
ಸಮಾದಿಶನ್ ದೂತಮಥೋ ಸಮಗ್ರಾಃ ॥28॥
ಇತ್ತ ಕಡೆ ಯುದ್ಧದಿಂದ ಹಿಮ್ಮೆಟ್ಟಿದ ಕೌರವರು ಮಾರ್ಗದಲ್ಲಿ ಎಲ್ಲರೂ ಒಂದುಗೂಡಿ ಎಲ್ಲರೂ ದುರ್ಯೋಧನನ ಹಿತವನ್ನು ಬಯಸಿ ಆಚಾರ್ಯಪುತ್ರರಾದ ಅಶ್ವತ್ಥಾಮರು, ಶಕುನಿ, ದುರ್ಯೋಧನ, ಸೂತಪುತ್ರನಾದ ಕರ್ಣ ಎಲ್ಲರೂ ಸೇರಿ ಒಬ್ಬ ಸಮರ್ಥನಾದ ದೂತನನ್ನು ಪಾಂಡವರ ಬಳಿಗೆ ಕಳುಹಿಸಿದರು.
ಯುಧಿಷ್ಠಿರಶ್ಚಾಪಿ ಸುಸಂಪ್ರಹೃಷ್ಟೋ
ದುರ್ಯೋಧನಾದ್ ದೂತಮಪಶ್ಯದಾಗತಮ್ |
ಸ ಚಾಬ್ರವೀದ್ ಧರ್ಮರಾಜಂ ಸಮೇತ್ಯ
ಯುಧಿಷ್ಠಿರಂ ಪಾಂಡವಮುಗ್ರವೀರ್ಯಮ್ ॥29॥
ಯುಧಿಷ್ಠಿರನಾದರೂ ದುರ್ಯೋಧನನ ಕಡೆಯಿಂದ ಬಂದ ದೂತನನ್ನು ನೋಡಿ ಬಹಳ ಸಂತೋಷಗೊಂಡನು. ಆ ದೂತನಾದರೂ ಉಗ್ರಪರಾಕ್ರಮವುಳ್ಳ ಪಾಂಡುಪುತ್ರನಾದ ಧರ್ಮರಾಜನಾದ ಯುಧಿಷ್ಠಿರನನ್ನು ಸಂಧಿಸಿ ಹೀಗೆ ಮಾತನಾಡಿದನು.
ಧನಂಜಯೇನಾಸಿ ಪುನರ್ವನಾಯ
ಪ್ರವ್ರಾಜಿತಃ ಸಮಯೇ ತಿಷ್ಠ ಪಾರ್ಥ |
ತ್ರಯೋದಶೇ ಹ್ಯೇಷ ಕಿರೀಟಮಾಲೀ
ಸಂವತ್ಸರೇ ಪಾಂಡವೇಯೋಽದ್ಯ ದೃಷ್ಟಃ ॥30॥
ಪಾರ್ಥನೇ, ಅರ್ಜುನನ ನಿಮಿತ್ತದಿಂದಾಗಿ ಪುನಃ ವನವಾಸಕ್ಕೆ ಹೋಗುವವನಾಗಿದ್ದೀಯೆ. ನಿನ್ನ ಪ್ರತಿಜ್ಞೆಯನ್ನು ನೀನು ರಕ್ಷಿಸಿಕೊ. ಹದಿಮೂರನೆಯ ವರ್ಷದಲ್ಲಿ ಕಿರೀಟಿಯಾದ ಅರ್ಜುನನು ನಮ್ಮಿಂದ ನೋಡಲ್ಪಟ್ಟಿದ್ದಾನೆ (ಎಂದು ಹೇಳಿದನು).
ವೈಶಂಪಾಯನಃ
ತತೋಽಬ್ರವೀದ್ ಧರ್ಮಸುತೋ ಪ್ರಹಸ್ಯ
ಕ್ಷಿಪ್ರಂ ಗತ್ವಾ ಬ್ರೂಹಿ ಸುಯೋಧನಂ ತಮ್ |
ಪಿತಾಮಹಃ ಶಾಂತನವೋ ಬ್ರವೀತು
ಯದ್ಯತ್ರ ಪೂರ್ಣೋ ನ ತ್ರಯೋದಶೋ ನಃ ॥31॥
ವೈಶಂಪಾಯನ ಆಗ ಧರ್ಮಸುತನು ನಕ್ಕು ಅವನನ್ನು ಕುರಿತು, ಬೇಗ ಹೋಗಿ ಶಂತನುಪುತ್ರರಾದ ಭೀಷ್ಮರು ನಮ್ಮ ಹದಿಮೂರನೆಯ ವರ್ಷವು ಪೂರ್ಣವಾಗಿದೆಯೋ ಇಲ್ಲವೋ ಎಂದು ಹೇಳಿ ಎಂದು ಕೇಳುವಂತೆ ಸುಯೋಧನನಿಗೆ ಬೇಗ ಹೋಗಿ ಹೇಳು ಎಂದು ಹೇಳಿದನು.
ಸಂವತ್ಸರಾಂತೇ ತು ಧನಂಜಯೇನ
ವಿಷ್ಫಾರಿತಂ ಗಾಂಡಿವಮಾಜಿಮಧ್ಯೇ |
ಪೂರ್ಣೋ ನ ಪೂರ್ಣೋ ನ ಇತಿ ಬ್ರವೀತು
ಯದಸ್ಯ ಸತ್ಯಂ ಮಮ ತತ್ ಪ್ರಮಾಣಮ್ ॥32॥
ಹದಿಮೂರನೆಯ ಸಂವತ್ಸರವು ಮುಗಿದ ಮೇಲೆ ಅರ್ಜುನನು ರಣರಂಗದಲ್ಲಿ ಗಾಂಡೀವಧನುಸ್ಸನ್ನು ಉಪಯೋಗಿಸಿದನು. ಭೀಷ್ಮರು ನಮ್ಮ ಪ್ರತಿಜ್ಞೆಯು ಪೂರ್ಣವಾಗಿದೆಯೋ ಇಲ್ಲವೋ ಎಂದು ಹೇಳಲಿ. ಅವರು ಏನು ಹೇಳುತ್ತಾರೆಯೋ ಅದು ನನಗೆ ಪ್ರಮಾಣ.
ತೇನೈವಮುಕ್ತಃ ಸ ನಿವೃತ್ಯ ದೂತೋ
ದುರ್ಯೋಧನಂ ಪ್ರಾಪ್ಯ ಶಶಂಸ ಸರ್ವಮ್ |
ಸಮೇತ್ಯ ದೂತೇನ ಸ ರಾಜಪುತ್ರೋ
ದುರ್ಯೋಧನೋ ಮಂತ್ರಯಾಮಾಸ ತತ್ರ ॥33॥
ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ದೂತನು ಹಿಂದಿರುಗಿ ಹೋಗಿ, ದುರ್ಯೋಧನನಿಗೆ ಎಲ್ಲವನ್ನೂ ಹೇಳಿದನು. ದೂತನ ಜೊತೆಯಲ್ಲಿ ಒಂದುಗೂಡಿ ರಾಜಪುತ್ರನಾದ ದುರ್ಯೋಧನನು ಅಲ್ಲಿ ಪುನಃ ಮಂತ್ರಾಲೋಚನೆಯನ್ನು ಮಾಡಿದನು.
ಭೀಷ್ಮೇಣ ಕರ್ಣೇನ ಕೃಪೇಣ ಚೈವ
ದ್ರೋಣೇನ ಭೂರಿಶ್ರವಸಾ ಚ ಸಾರ್ಧಮ್ ॥34॥

ಸಮ್ಮಂತ್ರ್ಯ ರಾತ್ರೌ ಬಹುಭಿಃ ಸುಹೃದ್ಭಿಃ
ಭೀಷ್ಮೋಽಬ್ರವೀದ್ ಧಾರ್ತರಾಷ್ಟ್ರಂ ಮಹಾತ್ಮಾ ॥35॥
ತೀರ್ಣಪ್ರತಿಜ್ಞೇನ ಧನಂಜಯೇನ
ವಿಷ್ಫಾರಿತಂ ಗಾಂಡಿವಮಾಜಿಮಧ್ಯೇ ॥36॥
ಭೀಷ್ಮರು, ಕರ್ಣ, ಕೃಪ, ದ್ರೋಣ, ಭೂರಿಶ್ರವ ಮೊದಲಾದ ಅನೇಕ ಸುಹೃದಯರ ಜೊತೆಯಲ್ಲಿ ರಾತ್ರಿಯಲ್ಲಿ ಮಂತ್ರಾಲೋಚನೆಯನ್ನು ನಡೆಸಿ ಮಹಾತ್ಮರಾದ ಅವರು ದುರ್ಯೋಧನನನ್ನು ಕುರಿತು, ಪ್ರತಿಜ್ಞೆಯನ್ನು ಪೂರೈಸಿದ ಅರ್ಜುನನು ರಣರಂಗದಲ್ಲಿ ಗಾಂಡೀವವನ್ನು ಸಕ್ರಿಯಗೊಳಿಸಿದ್ದಾನೆ ಎಂದು ಹೇಳಿದರು.
ವೈಶಂಪಾಯನಃ
ತೇ ಧಾರ್ತರಾಷ್ಟ್ರಾಃ ಸಮಯಂ ನಿಶಮ್ಯ
ತೀರ್ಣಪ್ರತಿಜ್ಞಸ್ಯ ಧನಂಜಯಸ್ಯ |
ವಿಚಿಂತ್ಯ ಸರ್ವೇ ಸಹಿತಾಃ ಸುಹೃದ್ಭಿಃ
ಸಪಾರ್ಥಿವಾಃ ಸ್ವಾನಿ ಗೃಹಾಣಿ ಜಗ್ಮುಃ ॥37॥
ವೈಶಂಪಾಯನ ಆ ಧೃತರಾಷ್ಟ್ರಪುತ್ರರು ಧನಂಜಯನು ಪ್ರತಿಜ್ಞೆಯನ್ನು ಪೂರೈಸಿದ್ದಾನೆ ಎಂಬ ಭೀಷ್ಮರ ಮಾತನ್ನು ಕೇಳಿ, ಎಲ್ಲರೂ ಚಿಂತಿಸಿ ತಮ್ಮ ಸುಹೃದಯರು ಮತ್ತು ರಾಜರೊಡನೆ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
॥ ವೈವಾಹಿಕಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * *
ಮಹಾಭಾರತತಾತ್ಪರ್ಯನಿರ್ಣಯಃ
ಏವಂ ವಿರಾಟಂ ಮೋಚಯಿತ್ವೈವ ಗಾಶ್ಚ
ತಮಸ್ಯಂಧೇ ಕೀಚಕಾನ್ ಪಾತಯಿತ್ವಾ |
ಪ್ರಾಪ್ತೋ ಧರ್ಮಃ ಸುಮಹಾನ್ ವಾಯುಜೇನ
ತಸ್ಯಾನು ಪಾರ್ಥೇನ ಚ ಗೋವಿಮೋಕ್ಷಣಾತ್ ॥50॥
ಹೀಗೆ ವಿರಾಟನನ್ನೂ ಗೋವುಗಳನ್ನೂ ಬಿಡಿಸಿ, ಕೀಚಕರನ್ನು ಅಂಧಂತಮಸ್ಸಿನಲ್ಲಿ ಬೀಳಿಸಿ, ಭೀಮ ಬಹಳ ಮಹತ್ತಾದ ಪುಣ್ಯ ಸಂಪಾದಿಸಿದ. ಗೋವುಗಳನ್ನು ಬಿಡಿಸಿದ್ದರಿಂದ ಅನಂತರದ ಪುಣ್ಯಶಾಲಿ ಅರ್ಜುನ.
ಆಯಾತಯನ್ ಕೇಶವಾಯಾಥ ದೂತಾನ್
ಸಹಾಭಿಮನ್ಯುಃ ಸೋಽಪಿ ರಾಮೇಣ ಸಾರ್ದ್ಧಮ್ |
ಆಗಾದನಂತಾನಂದಚಿದ್ ವಾಸುದೇವೋ
ವಾಹಯಾಮಾಸುರಥಾಭಿಮನ್ಯುಮ್ ॥51॥
ಬಳಿಕ ಪಾಂಡವರು ಶ್ರೀಕೃಷ್ಣನಿಗೆ ದೂತರನ್ನು ಕಳಿಸಿದರು. ಅನಂತರ ಸುಖಜ್ಞಾನ ಸ್ವರೂಪನಾದ ವಾಸುದೇವ ಅಭಿಮನ್ಯು, ಬಲರಾಮರೊಂದಿಗೆ ಬಂದನು. ಬಳಿಕ ಅಭಿಮನ್ಯುವಿಗೆ ವಿವಾಹ ನಡೆಸಿದರು.
* * * *
ಎಪ್ಪತ್ತಾರನೆಯ ಅಧ್ಯಾಯ
ಕೃಷ್ಣನ ಸನ್ನಿಧಿಯಲ್ಲಿ ಅಭಿಮನ್ಯು-ಉತ್ತರೆಯರ ವಿವಾಹ
ವೈಶಂಪಾಯನಃ
ತತಸ್ತ್ರಯೋದಶೇ ವರ್ಷೇ ನಿವೃತ್ತೇ ಪಂಚ ಪಾಂಡವಾಃ |
ಉಪಪ್ಲಾವ್ಯೇ ವಿರಾಟಸ್ಯ ವಾಸಂ ಚಕ್ರುಃ ಪುರೋತ್ತಮೇ ॥1॥
ವೈಶಂಪಾಯನ ಅನಂತರ ಹದಿಮೂರನೆಯ ವರ್ಷವು ಕಳೆಯುತ್ತಿರಲು ಪಂಚಪಾಂಡವರು ವಿರಾಟನ ರಾಜಧಾನಿಯಾದ ಶ್ರೇಷ್ಠಪಟ್ಟಣವಾದ ಉಪಪ್ಲಾವ್ಯದಲ್ಲಿ ವಾಸವನ್ನು ಮಾಡಿದರು.
ತತೋ ಮಿತ್ರೇಷು ಸರ್ವೇಷು ವಾಸುದೇವೇ ಚ ಭಾರತ |
ಪ್ರೇಷಯಾಮಾಸ ಕೌಂತೇಯೋ ವಿರಾಟಶ್ಚ ಮಹೀಪತಿಃ ॥2॥
ಎಲೈ ಭಾರತನೇ, ಆಗ ಯುಧಿಷ್ಠಿರನು ಮತ್ತು ವಿರಾಟರಾಜನು ಎಲ್ಲಾ ಮಿತ್ರರಿಗೂ ಮತ್ತು ಕೃಷ್ಣನಿಗೂ ದೂತರನ್ನು ಕಳುಹಿಸಿದರು.
ತೇಷು ತತ್ರೋಪವಿಷ್ಟೇಷು ಪ್ರೇಷಿತೇಷು ತತಸ್ತತಃ |
ತತ್ರಾಗಮನ್ಮಹಾಬಾಹುರ್ವನಮಾಲೀ ಹಲಾಯುಧಃ ॥3॥
ದೂತರು ಬೇರೆ ಬೇರೆ ದೇಶಗಳಿಗೆ ಹೋಗಿ ಪಾಂಡವರು ಅಲ್ಲಿಯೇ ಇರುವಾಗ ಮಹಾಬಾಹುವೂ, ವನಮಾಲಿಯೂ ಆದ ಬಲರಾಮನು ಅಲ್ಲಿಗೆ ಬಂದನು.
ತಸ್ಮಿನ್ ಕಾಲೇ ನಿಶಮ್ಯಾಥ ದೂತವಾಕ್ಯಂ ಜನಾರ್ದನಃ |
ದಯಿತಂ ಸ್ವಸ್ರಿಯಂ ಪುತ್ರಂ ಸುಭದ್ರಾಯಾಃ ಸುಮಾನಿತಮ್ ॥4॥
ಅಭಿಮನ್ಯುಂ ಸಮಾದಾಯ ರಾಮೇಣ ಸಹಿತಸ್ತದಾ |
ಸರ್ವಯಾದವಮುಖ್ಯೈಶ್ಚ ಸಂವೃತಃ ಪರವೀರಹಾ ॥5॥

ಶಂಖದುಂದುಭಿನಿರ್ಘೋಷೈರ್ವಿರಾಟನಗರಂ ಯಯೌ ॥6॥
ಆ ಸಮಯದಲ್ಲಿ ದೂತವಾಕ್ಯವನ್ನು ಕೇಳಿದ ಜನಾರ್ದನನು ಸುಭದ್ರೆಯ ಪುತ್ರನಾದ ತನ್ನ ಸೋದರಳಿಯನಾದ ಅತ್ಯಂತಮಾನಿತನಾದ ಪ್ರೀತಿಪಾತ್ರನಾದ ಅಭಿಮನ್ಯುವನ್ನು ಕರೆದುಕೊಂಡು ಬಲರಾಮಸಹಿತನಾಗಿ ಸರ್ವಯಾದವಶ್ರೇಷ್ಠರಿಂದಲೂ ಪರಿವೃತನಾದ ಪರವೀರಘಾತುಕನಾದ ಅವನು ಶಂಖದುಂದುಭಿಘೋಷದೊಂದಿಗೆ ವಿರಾಟನಗರಕ್ಕೆ ಬಂದನು.
ಕೃತವರ್ಮಾ ಚ ಹಾರ್ದಿಕ್ಯೋ ಯುಯುಧಾನಶ್ಚ ಸಾತ್ಯಕಿಃ |
ಅನಾಧೃಷ್ಟಿಸ್ತಥಾಽಕ್ರೂರಃ ಸಾಂಬೋ ನಿಶಠ ಏವ ಚ ॥7॥
ಪ್ರದ್ಯುಮ್ನಶ್ಚ ಮಹಾಬಾಹುರುಲ್ಮುಕಶ್ಚ ಮಹಾಬಲಃ |
ಅಭಿಮನ್ಯುಮುಪಾದಾಯ ಸಹ ಮಾತ್ರಾ ಪರಂತಪಾಃ ॥8॥
ಕೃಷ್ಣೇನ ಸಹಿತಾಃ ಸರ್ವೇ ಪಾಂಡವಾನ್ ದ್ರಷ್ಟುಮಾಗತಾಃ ॥9॥
ಹೃದಿಕನ ಮಗನಾದ ಕೃತವರ್ಮ, ಸತ್ಯಕನ ಮಗನಾದ ಯುಯುಧಾನ, ಅನಾಧೃಷ್ಟಿ, ಅಕ್ರೂರ, ಸಾಂಬ, ನಿಶಠ, ಮಹಾಬಾಹುವಾದ ಪ್ರದ್ಯುಮ್ನ, ಮಹಾಬಲನಾದ ಉಲ್ಮುಕ ಪರಂತಪರಾದ ಇವರೆಲ್ಲರೂ ತಾಯಿಯಾದ ಸುಭದ್ರೆಯ ಜೊತೆಯಲ್ಲಿ ಅಭಿಮನ್ಯುವನ್ನು ಕರೆದುಕೊಂಡು ಕೃಷ್ಣನ ಜೊತೆಯಲ್ಲಿ ಪಾಂಡವರನ್ನು ನೋಡಲು ಎಲ್ಲರೂ ಬಂದರು.
ಶತನಾಗಸಹಸ್ರಾಣಿ ರಥಾನಾಂ ಚ ಶತಾಯುತಮ್ |
ಹಯಾನಾಮರ್ಬುದಂ ಪೂರ್ಣಂ ನಿಖರ್ವಂ ಚ ಪದಾತಯಃ ॥
ವೃಷ್ಣ್ಯಂಧಕಾಶ್ಚ ಶತಶೋ ಭೋಜಾಶ್ಚ ಪರಮೌಜಸಃ |
ಅನ್ವಯುರ್ವೃಷ್ಣಿಶಾರ್ದೂಲಂ ವಾಸುದೇವಂ ಮಹಾದ್ಯುತಿಮ್ ॥11॥
ವೃಷ್ಣಿ ಶಾರ್ದೂಲನಾದ ಮಹಾದ್ಯುತಿಯನ್ನು ಹೊಂದಿದ ಕೃಷ್ಣನು ಹೊರಟಾಗ ಅವನನ್ನು ಒಂದುಲಕ್ಷ ಗಜಗಳು, ಹತ್ತುಲಕ್ಷ ರಥಗಳು, ಅರ್ಬುದ ಅಶ್ವಗಳು ಮತ್ತು ನಿಖರ್ವಸಂಖ್ಯೆಯ ಪದಾತಿಗಳು, ಪರಾಕ್ರಮಿಗಳಾದ ನೂರಾರು ಸಂಖ್ಯೆಯಲ್ಲಿದ್ದ ವೃಷ್ಣಿಗಳು, ಅಂಧಕರು ಮತ್ತು ಭೋಜರು ಎಲ್ಲರೂ ಅವನನ್ನು ಹಿಂಬಾಲಿಸಿದರು.
ಇಂದ್ರಸೇನಾದಯಶ್ಚೈವ ರಥೈಸ್ತೈಃ ಸುಸಮಾಹಿತೈಃ |
ಉಪೇಯುಃ ಸಾದಿನಃ ಸರ್ವೇ ಪರಿಸಂವತ್ಸರೋಷಿತಾಃ ॥12॥
ಇಂದ್ರಸೇನ ಮೊದಲಾದ ಪಾಂಡವರ ಸಾರಥಿಗಳು ಒಂದು ಸಂವತ್ಸರ ದೂರದಲ್ಲಿ ವಾಸ ಮಾಡುವವರಾಗಿ ಸನ್ನದ್ಧವಾದ ರಥಗಳನ್ನು ತೆಗೆದುಕೊಂಡು ಬಂದರು. ಹಾಗೆಯೇ ಅಶ್ವಾರೋಹಿಗಳೂ ಬಂದರು.
ವಾಸುದೇವಂ ತದಾಽಽಯಾಂತಂ ಶ್ರುತ್ವಾ ಪಾಂಡುಸುತಾಸ್ತದಾ |
ಮಾತ್ಸ್ಯೇನ ಸಹಿತಾಃ ಸರ್ವೇ ಪ್ರತ್ಯುದ್ಯಾತಾ ಜನಾರ್ದನಮ್ ॥13॥
ಕೃಷ್ಣನು ಬರುತ್ತಿರುವುದನ್ನು ಕೇಳಿದ ಪಾಂಡುಪುತ್ರರು ಆಗ ವಿರಾಟರಾಜನ ಜೊತೆಯಲ್ಲಿ ಎಲ್ಲರೂ ಅವನನ್ನು ಎದುರುಗೊಳ್ಳಲು ಮುಂದೆ ಹೋದರು.
ಶಂಖದುಂದುಭಿನಿರ್ಘೋಷೈರ್ಮಂಗಲ್ಯೈಶ್ಚ ಜನಾರ್ದನಮ್ |
ವವಂದುರ್ಮುದಿತಾಃ ಸರ್ವೇ ಪಾದಯೋಸ್ತಸ್ಯ ಪಾಂಡವಾಃ ॥14॥
ಮಾತ್ಸ್ಯೇನ ಸಹಿತಾಃ ಸರ್ವೇ ಆನಂದಾಶ್ರುಪರಿಪ್ಲುತಾಃ ॥15॥
ಶಂಖದುಂದುಭಿನಿರ್ಘೋಷದೊಂದಿಗೆ ಮತ್ತು ಮಂಗಳದೊಂದಿಗೆ ಪಾಂಡವರೆಲ್ಲರೂ ಸಂತೋಷಗೊಂಡು ಕೃಷ್ಣನ ಪಾದಗಳಿಗೆ ವಿರಾಟರಾಜನ ಸಹಿತರಾಗಿ ಎಲ್ಲರೂ ಆನಂದಾಶ್ರುಗಳಿಂದ ಪೂರ್ಣರಾಗಿ ನಮಸ್ಕರಿಸಿದರು.
ಪಾಂಡವಾಃ
ತವ ಕೃಷ್ಣ ಪ್ರಸಾದಾದ್ ವೈ ವರ್ಷಾಣ್ಯೇತಾನಿ ಸರ್ವಶಃ |
ತ್ರಯೋದಶೋಽಪಿ ದಾಶಾರ್ಹ ಯಥಾ ಸ ಸಮಯಃ ಕೃತಃ ॥16॥
ಉಷಿತಾಃ ಸ್ಮೋ ಜಗನ್ನಾಥ ತ್ವಂ ನಾಥೋ ನೋ ಜನಾರ್ದನ ॥17॥
ರಕ್ಷಸ್ವ ದೇವದೇವೇಶ ತ್ವಾಮದ್ಯ ಶರಣಂ ಗತಾಃ ॥18॥
ಪಾಂಡವರು ಕೃಷ್ಣನೇ, ದಾಶಾರ್ಹನೇ, ನಿನ್ನ ಅನುಗ್ರಹದಿಂದ ಈ ಎಲ್ಲಾ ಹನ್ನೆರಡು ವರ್ಷಗಳು ಮತ್ತು ಪ್ರತಿಜ್ಞೆಯನ್ನು ಮಾಡಿದಂತೆ ಹದಿಮೂರನೆಯ ವರ್ಷವೂ ಕಳೆಯಿತು. ಜಗನ್ನಾಥನೇ, ನಾವು ಹೀಗೆ ವಾಸವನ್ನು ಮಾಡಿದ್ದೇವೆ. ಜನಾರ್ದನನೇ, ನೀನೇ ನಮ್ಮ ಒಡೆಯ. ದೇವದೇವೇಶನೇ, ಈ ದಿನ ನಿನಗೆ ಶರಣಾಗತರಾಗಿದ್ದೇವೆ. ನಮ್ಮನ್ನು ರಕ್ಷಿಸು.
ವೈಶಂಪಾಯನಃ
ತಾನ್ ವಂದಮಾನಾನ್ ಸಹಸಾ ಪರಿಷ್ವಜ್ಯ ಜನಾರ್ದನಃ |
ವಿರಾಟಸ್ಯ ಸಹಾಯಾಂಸ್ತಾನ್ ಸರ್ವಯಾದವಸಂವೃತಃ ॥19॥
ಯಥಾರ್ಹಂ ಪೂಜಯಾಮಾಸ ಮುದಾ ಪರಮಯಾ ಯುತಃ ॥20॥
ವೈಶಂಪಾಯನ ಕೃಷ್ಣನು ಸರ್ವಯಾದವಸಂವೃತನಾಗಿ ವಿರಾಟನಿಗೆ ಸಹಾಯರಾಗಿದ್ದ ಹಾಗೆ ವಂದನೆ ಮಾಡುತ್ತಿದ್ದ ಪಾಂಡವರನ್ನು ಆಲಿಂಗಿಸಿ ಬಹಳ ಸಂತೋಷದಿಂದ ಕೂಡಿದವನಾಗಿ ಯಥಾಯೋಗ್ಯವಾಗಿ ಅವರನ್ನು ಸತ್ಕರಿಸಿದನು.
ವೃಷ್ಣಿವೀರಾಶ್ಚ ತಾನ್ ಸರ್ವಾನ್ ಯಥಾರ್ಹಂ ಪ್ರತಿಪೇದಿರೇ |
ಕೃಷ್ಣಾ ಚ ದೇವಕೀಪುತ್ರಂ ವವಂದೇ ಪಾದಯೋಸ್ತಥಾ ॥21॥
ವೃಷ್ಣಿವೀರರೂ ಸಹ ಯಥಾಯೋಗ್ಯವಾಗಿ ಪಾಂಡವರೆಲ್ಲರ ಸಮಾಗಮವನ್ನು ಹೊಂದಿದರು. ದ್ರೌಪದಿಯೂ ಸಹ ದೇವಕೀಪುತ್ರನ ಪಾದಗಳಿಗೆ ನಮಸ್ಕರಿಸಿದಳು.

ತಾಮುದ್ಯಮ್ಯ ಸುಸಂಹೃಷ್ಟೋ ನಯನೇ ಪರಿಮಾರ್ಜ್ಯ ಚ |
ಉವಾಚ ವಾಕ್ಯಂ ದೇವೇಶಃ ಸರ್ವಯಾದವಸನ್ನಿಧೌ ॥22॥
ಬಹಳ ಸಂತೋಷಗೊಂಡ ಕೃಷ್ಣನು ಅವಳನ್ನು ಎತ್ತಿ ಅವಳ ಕಣ್ಣುಗಳನ್ನು ಒರೆಸಿ ದೇವೇಶನಾದ ಅವನು ಸರ್ವಯಾದವ ಸನ್ನಿಧಿಯಲ್ಲಿ ಹೀಗೆ ಮಾತನಾಡಿದನು.
ಶ್ರೀಭಗವಾನ್
ಮಾ ಶೋಕಂ ಕುರು ಕಲ್ಯಾಣಿ ಧಾರ್ತರಾಷ್ಟ್ರಾನ್ ಸಮಾಹಿತಾನ್ |
ಅಚಿರಾದ್ ಘಾತಯಿತ್ವಾಹಂ ಪಾರ್ಥೇನ ಸಹಿತಃ ಕ್ಷಿತಿಮ್ ॥23॥
ಯುಧಿಷ್ಠಿರಾಯ ದಾಸ್ಯಾಮಿ ಯಾತು ತೇ ಮಾನಸೋ ಜ್ವರಃ ॥24॥
ಶ್ರೀಭಗವಾನ್ ಕಲ್ಯಾಣಿಯೇ, ಶೋಕಪಡಬೇಡ. ಒಂದುಗೂಡಿದ ಧೃತರಾಷ್ಟ್ರಪುತ್ರರನ್ನು ಅರ್ಜುನನಿಂದ ಸಹಿತನಾಗಿ ನಾನು ಶೀಘ್ರವಾಗಿ ಸಂಹರಿಸಿ ಭೂಮಿಯನ್ನು ಯುಧಿಷ್ಠಿರನಿಗೆ ಕೊಡುವೆನು. ನಿನಗೆ ಮನೋಜ್ವರ ಉಂಟಾಗುವುದು ಬೇಡ.
ಅಭಿಮನ್ಯುನಾ ಚ ಪಾರ್ಥೇನ ರೌಗ್ಮಿಣೇಯೇನ ತೇ ಶಪೇ |
ಸತ್ಯಮೇತದ್ ವಚೋ ಮಹ್ಯಮವೇಹಿ ತ್ವಮನಿಂದಿತೇ ॥25॥
ನಾನು ಅಭಿಮನ್ಯು, ಅರ್ಜುನ ಮತ್ತು ರುಗ್ಮಿಣಿಯ ಮಗನಾದ ಪ್ರದ್ಯುಮ್ನನ ಮೇಲೆ ಆಣೆಯನ್ನು ಮಾಡಿ ಹೇಳುತ್ತಿದ್ದೇನೆ. ಅನಿಂದಿತೆಯೇ, ನನ್ನ ಈ ಮಾತು ಸತ್ಯವೆಂದು ತಿಳಿ.
ವೈಶಂಪಾಯನಃ
ಇತ್ಯುಕತ್ವ ತಾಂ ವಿಸೃಜ್ಯಾಥ ಪ್ರೀಯಮಾಣೋ ಯುಧಿಷ್ಠಿರಮ್ |
ಅನ್ವಾಸ್ತ ವೃಷ್ಣಿಶಾರ್ದೂಲಃ ಸಹ ವೃಷ್ಣ್ಯಂಧಕೈಸ್ತದಾ ॥26॥
ವೈಶಂಪಾಯನ ಹೀಗೆ ಹೇಳಿ ಅವಳನ್ನು ಬೀಳ್ಕೊಟ್ಟು ವೃಷ್ಣಿಶಾರ್ದೂಲನಾದ ಅವನು ವೃಷ್ಣ್ಯಂಧಕರಿಂದ ಸಹಿತನಾಗಿ ಯುಧಿಷ್ಠಿರನ ಸಮೀಪದಲ್ಲಿ ಕುಳಿತನು.
ಕಾಶಿರಾಜಶ್ಚ ಶೈಬ್ಯಶ್ಚ ಭಜಮಾನೌ ಯುಧಿಷ್ಠಿರಮ್ |
ಅಕ್ಷೋಹಿಣೀಭ್ಯಾಂ ಸಹಿತಾವಾಗತೌ ಪೃಥಿವೀಪತೇ ॥27॥
ಎಲೈ ಜನಮೇಜಯನೇ, ಯುಧಿಷ್ಠಿರನ ಭಕ್ತರಾದ ಕಾಶಿರಾಜ ಮತ್ತು ಶೈಬ್ಯ ಇಬ್ಬರೂ ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಅಲ್ಲಿಗೆ ಬಂದರು.
ಅಕ್ಷೋಹಿಣೀಭಿಃ ಪಾಂಚಾಲಸ್ತಿಸೃಭಿಶ್ಚ ಮಹಾಬಲಃ |
ದ್ರೌಪದ್ಯಾಶ್ಚ ಸುತಾ ವೀರಾಃ ಶಿಖಂಡೀ ಚಾಪರಾಜಿತಃ ॥28॥
ಧೃಷ್ಟದ್ಯುಮ್ನಶ್ಚ ದುರ್ಧರ್ಷಃ ಸರ್ವಶಸ್ತ್ರಭೃತಾಂ ವರಃ |
ಉಪಪ್ಲಾವ್ಯಂ ಯಯುಃ ಶೀಘ್ರಂ ಪಾಂಡವಾರ್ಥೇ ಮಹಾಬಲಾಃ ॥29॥
ಮಹಾಬಲನಾದ ಪಾಂಚಾಲರಾಜನಾದ ದ್ರುಪದನು ಮೂರು ಅಕ್ಷೋಹಿಣೀ ಸೈನ್ಯವನ್ನು ತೆಗೆದುಕೊಂಡು ಬಂದನು. ವೀರರಾದ ದ್ರೌಪದಿಯ ಮಕ್ಕಳು ಅಪರಾಜಿತನಾದ ಶಿಖಂಡಿ, ದುರ್ಧರ್ಷನೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ ಆದ ಧೃಷ್ಟದ್ಯುಮ್ನ, ಮಹಾಬಲರಾದ ಇವರೆಲ್ಲರೂ ಪಾಂಡವರ ಸಲುವಾಗಿ ಶೀಘ್ರವಾಗಿ ಉಪಪ್ಲಾವ್ಯನಗರಕ್ಕೆ ಬಂದರು.
ತತಃ ಶತಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಸಮೀಪಮಭಿವರ್ತಂತೇ ಯೋಧಾ ಯೌಧಿಷ್ಠಿರಂ ಬಲಮ್ ॥30॥
ಅನಂತರ ನೂರು, ಸಾವಿರ, ಹತ್ತುಸಾವಿರ ಅರ್ಬುದ ಸಂಖ್ಯೆಯಲ್ಲಿ ಯೋಧರು ಬಂದು ಯುಧಿಷ್ಠಿರನ ಸೈನ್ಯವನ್ನು ಸೇರಿದರು.
ಸಮುದ್ರಮಿವ ಘರ್ಮಾಂತೇ ಸ್ರೋತಃಶ್ರೇಷ್ಠಾಃ ಪೃಥಕ್ ಪೃಥಕ್ |
ಆಪೂರಯನ್ ಮಹೀಪಾಲಾಃ ಸರ್ವೇ ಪಾಂಡುಸುತಂ ತದಾ ॥31॥
ವೇದಾವಭೃಥಸಂಪನ್ನಾಃ ಶೂರಾಃ ಸರ್ವೇ ತನುತ್ಯಜಃ ॥32॥
ಬೇಸಿಗೆಯು ಕಳೆದ ಮೇಲೆ ಶ್ರೇಷ್ಠವಾದ ನದಿಗಳು ಬೇರೆ ಬೇರೆಯಾಗಿ ಬಂದು ಸಮುದ್ರವನ್ನು ಸೇರಿ ಸಮುದ್ರವನ್ನು ತುಂಬಿದಂತೆ, ವೇದಾಧ್ಯಯನಸಂಪನ್ನರಾಗಿ ಅವಭೃಥಸ್ನಾನವನ್ನು ಮಾಡಿದ, ಪಾಂಡವರ ಸಲುವಾಗಿ ಪ್ರಾಣವನ್ನು ಕೊಡಲು ಸಿದ್ಧರಾದ, ಶೂರರಾದ ರಾಜರೆಲ್ಲರೂ ಬಂದು ಯುಧಿಷ್ಠಿರನನ್ನು ಸೇರಿದರು.
ತಾನಾಗತಾನಭಿಪ್ರೇಕ್ಷ್ಯ ಪಾರ್ಥೋ ಜ್ಞಾನಭೃತಾಂ ವರಃ |
ಪೂಜಯಾಮಾಸ ವಿಧಿವದ್ ಯಥಾರ್ಹಂ ರಾಜಸತ್ತಮಾನ್ ॥33॥
ಜ್ಞಾನಿಗಳಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಆಗತರಾದ ಆ ರಾಜಶ್ರೇಷ್ಠರನ್ನೆಲ್ಲಾ ನೋಡಿ ಯಥಾಯೋಗ್ಯವಾಗಿ ವಿಧಿಗೆ ಅನುಗುಣವಾಗಿ ಅವರನ್ನು ಪೂಜಿಸಿದನು.
ಪಾರಿಬರ್ಹಂ ದದೌ ಕೃಷ್ಣಃ ಪಾಂಡವಾನಾಂ ಮಹಾತ್ಮನಾಮ್ |
ಸ್ತ್ರಿಯೋ ರತ್ನಾನಿ ವಾಸಾಂಸಿ ಪೃಥಕ್‌ಪೃಥಗನೇಕಶಃ ॥34॥
ಕೃಷ್ಣನು ಮಹಾತ್ಮರಾದ ಪಾಂಡವರೆಲ್ಲರಿಗೂ ಸ್ತ್ರೀಯರು, ರತ್ನಗಳು, ವಸ್ತ್ರಗಳು ಮುಂತಾದ ಅನೇಕ ಉಡುಗೊರೆಗಳನ್ನು ಬೇರೆಬೇರೆಯಾಗಿ ಕೊಟ್ಟನು.
ರಾಜಾನೋ ರಾಜಪುತ್ರಾಶ್ಚ ನಿವೃತ್ತೇ ಸಮಯೇ ತಥಾ |
ಯಥಾರ್ಹಂ ಪಾಂಡವಶ್ರೇಷ್ಠೇ ಹ್ಯವರ್ತಂತಾಭಿಪೂಜಿತಾಃ ॥35॥
ಆಸನ್ ಪ್ರಹೃಷ್ಟಮನಸಃ ಪಾರಿಬರ್ಹಂ ದದುಸ್ತದಾ ॥36॥

ಪಾಂಡವರ ಪ್ರತಿಜ್ಞೆಯ ಕಾಲವು ಮುಗಿಯುತ್ತಿರಲು ರಾಜರು ಮತ್ತು ರಾಜಪುತ್ರರು ಯಥಾಯೋಗ್ಯವಾಗಿ ಧರ್ಮರಾಜನಲ್ಲಿ ನಡೆದುಕೊಂಡು ಅವನಿಂದ ಪೂಜಿತರಾಗಿ ಎಲ್ಲರೂ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಉಡುಗೊರೆಯನ್ನು ಕೊಟ್ಟರು.

ತೇಷು ತತ್ರೋಪವಿಷ್ಟೇಷು ರಾಜಭಿರ್ವೃಷ್ಣಿಭಿಃ ಸಹ |
ವಿವಾಹೋ ವಿಧಿವದ್ ರಾಜನ್ ವವೃಧೇ ಕುರುಮಾತ್ಸ್ಯಯೋಃ ॥37॥

ಎಲೈ ರಾಜನೇ, ಆ ರಾಜರೂ ಮತ್ತು ವೃಷ್ಣಿಗಳೂ ಎಲ್ಲರೂ ಅಲ್ಲಿ ಸೇರಿಕುಳಿತಿರಲು ಕೌರವ ಕುಲಕ್ಕೂ ಮತ್ತು ಮಾತ್ಸ್ಯಕುಲಕ್ಕೂ ನಡೆದ ವಿವಾಹವು ಚೆನ್ನಾಗಿ ಬೆಳೆಯಿತು.

ತತಃ ಶಂಖಾ ಮೃದಂಗಾಶ್ಚ ಗೋಮುಖಾ ಡಿಂಡಿಮಾಸ್ತದಾ |
ಪಾರ್ಥೈಃ ಸಂಯುಜ್ಯಮಾನಸ್ಯ ನೇದುರ್ಮಾತ್ಸ್ಯಸ್ಯ ವೇಶ್ಮನಿ ॥38॥
ಉಚ್ಚಾವಚಾಂಸ್ತದಾ ಜಘ್ನುರ್ವಾದ್ಯಸಂಘಾನ್ ಸಹಸ್ರಶಃ |
ಭಕ್ಷ್ಯಭೋಜ್ಯಾನ್ನಪಾನಾನಿ ಪ್ರಭೂತಾನ್ಯಭ್ಯಹಾರಯತ್ ॥39॥
ಗಾಯನಾಖ್ಯಾನಶೀಲಾಶ್ಚ ನಟಾ ವೈತಾಲಿಕಾಸ್ತಥಾ |
ಸ್ತುವಂತಸ್ತಾನುಪಾತಿಷ್ಠನ್ ಸೂತಾಶ್ಚ ಸಹ ಮಾಗಧೈಃ ॥40॥

ಮತ್ಸ್ಯರಾಜನಾದ ವಿರಾಟನು ಪಾಂಡವರ ಜೊತೆಯಲ್ಲಿ ಸಂಬಂಧವನ್ನು ಹೊಂದುತ್ತಿರಲು ಅವನ ಮನೆಯಲ್ಲಿ ಶಂಖಗಳು, ಮೃದಂಗಗಳು, ಗೋಮುಖಗಳು ಮತ್ತು ಡಿಂಡಿಮಗಳು ನಾದವನ್ನು ಮಾಡಿದವು. ಇನ್ನೂ ಅನೇಕ ವಿಧವಾದ ಉಚ್ಚ ಮತ್ತು ನೀಚವಾದ ವಾದ್ಯಗಳನ್ನು ಸಹಸ್ರಸಂಖ್ಯೆಯಲ್ಲಿ ಮೊಳಗಿಸಿದರು. ಸಮೃದ್ಧವಾದ ಭಕ್ಷ್ಯಭೋಜ್ಯಗಳು ಮತ್ತು ಅನ್ನಪಾನಗಳು ಇವುಗಳನ್ನು ವಿರಾಟನು ಎಲ್ಲರಿಗೂ ನೀಡಿದನು. ಗಾಯನರು, ವ್ಯಾಖ್ಯಾನಶೀಲರು, ನಟರು, ತಾಳಗಳನ್ನು ಹಿಡಿದವರು ಮತ್ತು ಸೂತಮಾಗಧರು ಇವರೆಲ್ಲರೂ ಅವರನ್ನು ಹೊಗಳಿ ಪೂಜಿಸಿದರು.

ಸ್ತ್ರಿಯೋ ವೃದ್ಧಾಃ ಕುಟುಂಬಿನ್ಯ ಉತ್ಸವಜ್ಞಾಶ್ಚ ಮಂಗಲೇ |
ದ್ರೌಪದ್ಯಂತಃಪುರೇ ಚೈವ ವಿರಾಟಸ್ಯ ಗೃಹೇ ಸ್ತ್ರಿಯಃ ॥41॥
ಸುದೇಷ್ಣಾಂ ತು ಪುರಸ್ಕೃತ್ಯ ಮತ್ಸ್ಯಾನಾಂ ಕೇವಲಾಃ ಸ್ತ್ರಿಯಃ |
ಆಜಗ್ಮುಶ್ಚಾರುಪೀನಾಂಗ್ಯಃ ಸುಮೃಷ್ಟಮಣಿಕುಂಡಲಾಃ ॥42॥

ಸ್ತ್ರೀಯರು ಮಂಗಳೋತ್ಸವದ ವಿಧಿಯನ್ನು ತಿಳಿದ ವೃದ್ಧರಾದ ಸುಮಂಗಲಿಯರು ದ್ರೌಪದಿಯ ಅಂತಃಪುರದಲ್ಲಿಯೂ ಮತ್ತು ವಿರಾಟನ ಗೃಹದಲ್ಲಿಯೂ ಇದ್ದ ಸ್ತ್ರೀಯರು ಮತ್ತು ಮತ್ಸ್ಯರಾಜನ ಎಲ್ಲಾ ಸ್ತ್ರೀಯರು ಸುಂದರವಾದ ಉನ್ನತವಾದ ಅವಯವಗಳನ್ನು ಉಳ್ಳವರಾಗಿ ಒಳ್ಳೆಯ ಮಣಿಕುಂಡಲಗಳನ್ನು ಧರಿಸಿ ಸುದೇಷ್ಣೆಯನ್ನು ಮುಂದೆ ಮಾಡಿಕೊಂಡು ಬಂದರು.

ಕರ್ಣೋಪಪನ್ನಾಸ್ತಾ ನಾರ್ಯೋ ರೂಪವತ್ಯಃ ಸ್ವಲಂಕೃತಾಃ |
ಸರ್ವಾಶ್ಚಾಭ್ಯಭವತ್ ಕೃಷ್ಣಾ ರೂಪೇಣ ವಪುಷಾ ಶ್ರಿಯಾ ॥43॥

ಕರ್ಣಾಭರಣಗಳಿಂದ ಕೂಡಿದ ಚೆನ್ನಾಗಿ ಅಲಂಕೃತರಾದ ರೂಪವತಿಯರಾದ ಆ ಸ್ತ್ರೀಯರೆಲ್ಲರನ್ನೂ ದ್ರೌಪದಿಯು ತನ್ನ ರೂಪದಿಂದಲೂ, ದೇಹದಿಂದಲೂ ಮತ್ತು ಕಾಂತಿಯಿಂದಲೂ ಮೀರಿದಳು.

ಪರಿವಾರ್ಯೋತ್ತರಾಂ ಶ್ಲಾಘ್ಯಾಂ ರಾಜಪುತ್ರೀಮಲಂಕೃತಾಮ್ |
ಸುತಾಮಿವ ಮಹೇಂದ್ರಸ್ಯ ಪುರಸ್ಕೃತ್ಯೋಪತಸ್ಥಿರೇ ॥44॥

ಅವರೆಲ್ಲರೂ ಮಹೇಂದ್ರಕುಮಾರಿಯಂತಿದ್ದ, ಶ್ಲಾಘನೀಯಳಾದ ರಾಜಕುಮಾರಿಯಾದ ಉತ್ತರೆಯನ್ನು ಸುತ್ತುವರಿದು ಅವಳನ್ನು ಮುಂದೆ ಮಾಡಿಕೊಂಡು ಎಲ್ಲಾ ಕಾರ್ಯಗಳನ್ನೂ ಮಾಡಿದರು.

ಭೃಂಗಾರಂ ತು ಸಮಾದಾಯ ಸೌವರ್ಣಂ ಜಲಪೂರಿತಮ್ |
ಪಾರ್ಥಸ್ಯ ಹಸ್ತೇ ಸಹಸಾ ಸುತಾಮಿಂದೀವರೇಕ್ಷಣಾಮ್ ॥45॥
ಸ್ನುಷಾರ್ಥಂ ಪ್ರಾಕ್ಷಿಪದ್ ವಾರಿ ವಿರಾಟೋ ವಾಹಿನೀಪತಿಃ ॥46॥

ವಿರಾಟರಾಜನು ಜಲಪೂರಿತವಾದ ಬಂಗಾರದ ಪಾತ್ರೆಯನ್ನು ತಂದು ಪಾರ್ಥನ ಕೈಯಲ್ಲಿ ಇಂದೀವರಾಕ್ಷಿಯಾದ ತನ್ನ ಮಗಳ ಕೈಯನ್ನಿಟ್ಟು ಅರ್ಜುನನ ಸೊಸೆಯಾಗಿ ಧಾರಾಪೂರ್ವಕವಾಗಿ ಅರ್ಜುನನ ಕೈಯಲ್ಲಿ ಕೊಟ್ಟನು.

ತಾಂ ಪ್ರತ್ಯಗೃಹ್ಣಾತ್ ಕೌಂತೇಯಃ ಸುತಸ್ಯಾರ್ಥೇ ಮಹಾಮನಾಃ |
ಸೌಭದ್ರಸ್ಯಾನವದ್ಯಾಂಗೀಂ ವಿರಾಟತನಯಾಂ ತದಾ ॥47॥

ಕುಂತೀಪುತ್ರನೂ, ಮಹಾಮನನೂ ಆದ ಅರ್ಜುನನು ತನ್ನ ಮಗನಾದ ಸುಭದ್ರಾಪುತ್ರನಾದ ಅಭಿಮನ್ಯುವಿನ ಸಲುವಾಗಿ ವಿರಾಟಪುತ್ರಿಯಾದ ಅವಳನ್ನು ಸ್ವೀಕರಿಸಿದನು.

ತತ್ರಾತಿಷ್ಠನ್ಮಹಾರಾಜೋ ರೂಪಮಿಂದ್ರಸ್ಯ ಧಾರಯನ್ |
ಸ್ನುಷಾಂ ತಾಂ ಪರಿಗೃಹ್ಣಾನಃ ಕುಂತೀಪುತ್ರೋ ಯುಧಿಷ್ಠಿರಃ ॥48॥

ಅಲ್ಲಿ ಮಹಾರಾಜನಾದ ಕುಂತೀಪುತ್ರನಾದ ಯುಧಿಷ್ಠಿರನು ಇಂದ್ರನಂತೆ ರೂಪವನ್ನು ಧರಿಸಿ ಆ ಸೊಸೆಯನ್ನು ಸ್ವೀಕರಿಸುತ್ತಾ ವಿರಾಜಿಸಿದನು.

ದ್ರುಪದಶ್ಚ ವಿರಾಟಶ್ಚ ಶಿಖಂಡೀ ಚ ಮಹಾಯಶಾಃ |
ಕಾಶಿರಾಜಶ್ಚ ಶೈಬ್ಯಶ್ಚ ಧೃಷ್ಟದ್ಯುಮ್ನಶ್ಚ ಸಾತ್ಯಕಿಃ ॥49॥
ಸಪ್ತೈತೇऽಕ್ಷೋಹಿಣೀಪಾಲಾ ಯಜ್ವಾನೋ ಭೂರಿದಕ್ಷಿಣಾಃ |
ಪಾಂಡವಂ ಪರಿವಾರ್ಯಾಥ ನಿವಾಸಂ ಚಕ್ರಿರೇ ತದಾ ॥50॥

ದ್ರುಪದ, ವಿರಾಟ, ಮಹಾಕೀರ್ತಿವಂತನಾದ ಶಿಖಂಡೀ, ಕಾಶಿರಾಜ, ಶೈಬ್ಯ, ಧೃಷ್ಟದ್ಯುಮ್ನ ಮತ್ತು ಸಾತ್ಯಕಿ. ಪಾಂಡವರ

ಅಕ್ಷೋಹಿಣೀಪಾಲರಾದ ಯಾಗಶೀಲರೂ, ಭೂರಿದಕ್ಷಿಣೆಯನ್ನು ಕೊಡುವವರೂ ಆದ ಈ ಏಳು ಜನರು ಪಾಂಡವನನ್ನು ಸುತ್ತುವರಿದು ಅಲ್ಲಿ ನಿವಾಸವನ್ನು ಮಾಡಿದರು.
ತತ್ರಸ್ಥಾಯಾಂ ತು ಸೇನಾಯಾಂ ವಿರಾಟೋ ಜಗತೀಪತಿಃ।
ಪ್ರೀತೋ ದುಹಿತರಂ ಗೃಹ್ಯ ಪ್ರದದಾವಭಿಮನ್ಯವೇ ॥51॥
ಎಲ್ಲಾ ಸೈನ್ಯವು ಅಲ್ಲೇ ಇರುತ್ತಿರಲು ವಿರಾಟರಾಜನು ಸಂತೋಷದಿಂದ ಮಗಳನ್ನು ಕರೆದುಕೊಂಡು ಅಭಿಮನ್ಯುವಿಗೆ ಧಾರೆ ಎರೆದುಕೊಟ್ಟನು.
ಮುದಾ ಗೃಹ್ಯೋತ್ತರಾಂ ಪಾರ್ಥ ಆನಾಯ್ಯ ಚ ಜನಾರ್ದನಮ್।
ವಿವಾಹಂ ಕಾರಯಾಮಾಸ ಸೌಭದ್ರಸ್ಯ ಮಹಾತ್ಮನಃ ॥52॥
ಅರ್ಜುನನು ಸಂತೋಷದಿಂದ ಕೂಡಿದವನಾಗಿ ಕೃಷ್ಣನನ್ನು ಕರೆಸಿ ಮಹಾತ್ಮನಾದ ಸುಭದ್ರಾಪುತ್ರನಾದ ಅಭಿಮನ್ಯುವಿನ ವಿವಾಹವನ್ನು (ಕೃಷ್ಣನ ಸನ್ನಿಧಿಯಲ್ಲಿ) ಮಾಡಿಸಿದನು.
ತತೋ ವಿವಾಹೋ ವವೃತೇ ಸ್ಥಿತಃ ಸರ್ವಗುಣಾನ್ವಿತಃ।
ಸೌಭದ್ರಸ್ಯಾದ್ಭುತಶ್ಚೈವ ಪಿತುಸ್ತವ ಪಿತುಸ್ತದಾ ॥53॥
ಅನಂತರ ನಿನ್ನ ತಂದೆಯ ತಂದೆಯಾದ ಸುಭದ್ರಾಪುತ್ರನಾದ ಅಭಿಮನ್ಯುವಿನ ವಿವಾಹವು ಸರ್ವಗುಣಗಳಿಂದ ಕೂಡಿದುದಾಗಿ ಅದ್ಭುತವಾಗಿ ಜರುಗಿತು.
ಧೌಮ್ಯಃ ಶಿಷ್ಯೈಃ ಪರಿವೃತೋ ಜುಹಾವಾಗ್ನೌ ವಿಧಾನತಃ।
ಅಗ್ನಿಂ ಪ್ರದಕ್ಷಿಣೀಕುರ್ವನ್ ಸೌಭದ್ರಃ ಪಾಣಿಮಗ್ರಹೀತ್ ॥54॥
ಧೌಮ್ಯರು ತಮ್ಮ ಶಿಷ್ಯರಿಂದ ಸಹಿತರಾಗಿ ವಿಧಿಪೂರ್ವಕವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದರು. ಅಗ್ನಿಯ ಪ್ರದಕ್ಷಿಣೆಯನ್ನು ಮಾಡುತ್ತಾ ಅಭಿಮನ್ಯುವು ಉತ್ತರೆಯ ಪಾಣಿಗ್ರಹಣವನ್ನು ಮಾಡಿದನು.
ತತಃ ಸಭಾರ್ಯಃ ಸಂಹೃಷ್ಟೋ ಮತ್ಸ್ಯರಾಜೋ ಧನಂ ಮಹತ್।
ತಸ್ಮೈ ಶತಸಹಸ್ರಾಣಿ ಹಯಾನಾಂ ವಾತರಂಹಸಾಮ್ ॥55॥
ದ್ವೇ ಗಜಾನಾಂ ಶತೇ ಮುಖ್ಯೇ ವಿರಾಟಃ ಪ್ರದದೌ ಪಿತಾ।
ಪ್ರಾದಾನ್ಮತ್ಸ್ಯಪತಿರ್ಹೃಷ್ಟಃ ಕನ್ಯಾಧನಮನುತ್ತಮಮ್ ॥56॥
ಆಗ ಪತ್ನೀಸಹಿತನಾದ ಮತ್ಸ್ಯರಾಜನು ಬಹಳ ಧನವನ್ನೂ, ವಾಯುವೇಗವುಳ್ಳ ನೂರುಸಹಸ್ರ ಅಶ್ವಗಳನ್ನೂ, ಇನ್ನೂರು ಶ್ರೇಷ್ಠವಾದ ಗಜಗಳನ್ನೂ ಸಂತೋಷಗೊಂಡ ಅವನು ಶ್ರೇಷ್ಠವಾದ ಕನ್ಯಾಧನವಾಗಿ ನೀಡಿದನು.
ಪಾರಿಬರ್ಹಂ ಚ ಪಾರ್ಥಸ್ಯ ಪ್ರದದೌ ಮತ್ಸ್ಯಪುಂಗವಃ।
ಕೃಷ್ಣೇನ ಸಹ ಕೌಂತೇಯಃ ಪ್ರತ್ಯಗೃಹ್ಣಾತ್ ಪರಂತಪಃ ॥57॥
ಮತ್ಸ್ಯಪುಂಗವನಾದ ಅವನು ಅರ್ಜುನನಿಗೂ ಉಡುಗೊರೆಯನ್ನು ನೀಡಿದನು. ಕೃಷ್ಣನಿಂದ ಸಹಿತನಾದ ಕೌಂತೇಯನಾದ ಪರಂತಪನಾದ ಅರ್ಜುನನು ಆ ಉಡುಗೊರೆಯನ್ನು ಸ್ವೀಕರಿಸಿದನು.
ಕೃತೇ ವಿವಾಹೇ ತು ತದಾ ಧರ್ಮಪುತ್ರೋ ಯುಧಿಷ್ಠಿರಃ।
ಬ್ರಾಹ್ಮಣೇಭ್ಯೋ ದದೌ ವಿತ್ತಂ ಯದುಪಾಹರದಚ್ಯುತಃ ॥58॥
ವಿವಾಹವು ಪೂರ್ಣವಾಗುತ್ತಿರಲು ಧರ್ಮಪುತ್ರನಾದ ಯುಧಿಷ್ಠಿರನು ಕೃಷ್ಣನು ತಂದುಕೊಟ್ಟ ಧನವನ್ನೆಲ್ಲಾ ಬ್ರಾಹ್ಮಣರಿಗೆ (ದಕ್ಷಿಣೆಯಾಗಿ) ನೀಡಿದನು.
ಗೋಸಹಸ್ರಾಣಿ ರತ್ನಾನಿ ವಸತ್ರಣಿ ವಿವಿಧಾನಿ ಚ।
ಭೂಷಣಾನಿ ಚ ಸರ್ವಾಣಿ ಯಾನಾನಿ ಶಯನಾನಿ ಚ ॥59॥
ಪಟ್ಟವಾಸಾಂಸಿ ಚಿತ್ರಾಣಿ ದಾಸೀದಾಸಾನ್ ಬಹೂನ್ ದದೌ।
ನಾಗರಾನ್ ಪ್ರೀತಿಭಿರ್ದಿವ್ಯೈಸ್ತರ್ಪಯಾಮಾಸ ಭೂಪತಿಃ ॥60॥
ಸಹಸ್ರಗೋವುಗಳನ್ನೂ, ವಿವಿಧವಾದ ರತ್ನಗಳನ್ನೂ ಮತ್ತು ವಸ್ತ್ರಗಳನ್ನೂ, ಅಲಂಕಾರಗಳನ್ನೂ, ಎಲ್ಲಾ ವಾಹನಗಳನ್ನೂ ಮತ್ತು ಶಯನಗಳನ್ನೂ, ವಿಚಿತ್ರವಾದ ಪಟ್ಟೆ ವಸ್ತ್ರಗಳನ್ನೂ, ಅನೇಕ ದಾಸ-ದಾಸಿಯರನ್ನೂ ಯುಧಿಷ್ಠಿರನು ನೀಡಿದನು. ಭೂಪತಿಯಾದ ಅವನು ನಗರವಾಸಿಜನರಿಗೆ ಅವರ ಪ್ರೀತಿಯ ದ್ರವ್ಯಗಳನ್ನು ಕೊಟ್ಟು ತೃಪ್ತಿಪಡಿಸಿದನು.
ತನ್ಮಹೋತ್ಸವಸಂಕಾಶಂ ಹೃಷ್ಟಪುಷ್ಟಜನಾಕುಲಮ್।
ನಗರಂ ಮತ್ಸ್ಯರಾಜಸ್ಯ ಶುಶುಭೇ ಭರತರ್ಷಭ ॥61॥
ಎಲೈ ಭರತರ್ಷಭನೇ, ಹೃಷ್ಟ-ಪುಷ್ಟಜನರಿಂದ ತುಂಬಿಹೋಗಿದ್ದ ಮತ್ಸ್ಯರಾಜನ ಆ ಉಪಪ್ಲಾವ್ಯನಗರವು ಮಹೋತ್ಸವ ಸದೃಶವಾದ ಆ ವಿವಾಹದಲ್ಲಿ ಬಹಳವಾಗಿ ಶೋಭಿಸಿತು.
ಪುರೋಹಿತೈರಮಾತ್ಯೈಶ್ಚ ಪೌರೈರ್ಜಾನಪದೈಃ ಸಹ।
ವಿರಾಟೋ ನೃಪತಿಃ ಶ್ರೀಮಾನ್ ಸೌಭದ್ರಾಯಾಭಿಮನ್ಯವೇ ॥62॥
ತಾಂ ಸುತಾಮುತ್ತರಾಂ ದತಕತ್ವ ಮುಮುದೇ ಪರಮಾಂ ತದಾ ॥63॥
ಸಂಪದ್ಯುಕ್ತನಾದ ವಿರಾಟರಾಜನು ಪುರೋಹಿತರು, ಅಮಾತ್ಯರು, ಪೌರಜಾನಪದರು ಇವರ ಸಹಿತನಾಗಿ ತನ್ನ ಮಗಳಾದ ಉತ್ತರೆಯನ್ನು ಸುಭದ್ರೆಯ ಪುತ್ರನಾದ ಅಭಿಮನ್ಯುವಿಗೆ ಕೊಟ್ಟು ಪರಮಸಂತೋಷವನ್ನು ಹೊಂದಿದನು.
ಜನಮೇಜಯಃ
ವೃತ್ತೇ ವಿವಾಹೇ ಹೃಷ್ಟಾತ್ಮಾ ಯದುವಾಚ ಯುಧಿಷ್ಠಿರಃ।

ತತ್ಸರ್ವಂ ಕಥಯಸ್ವೇಹ ಕೃತವಂತೋ ಯದುತ್ತರಮ್ ॥64॥
ಜನಮೇಜಯ ವಿವಾಹವು ಕಳೆದ ಮೇಲೆ ಸಂತೋಷಗೊಂಡ ಯುಧಿಷ್ಠಿರನು ಏನು ಮಾತನಾಡಿದನು ಎಂಬುದೆಲ್ಲವನ್ನೂ ನನಗೆ ಹೇಳುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ವಿರಾಟಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ॥
॥ ವೈವಾಹಿಕಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವಿರಾಟಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ವೈವಾಹಿಕಪರ್ವ॥
॥ ಸಮಾಪ್ತಂ ವಿರಾಟಪರ್ವ ॥
* * * * *

# ಮಹಾಭಾರತ
# ಉದ್ಯೋಗಪರ್ವ
## 1. ಸೇನೋದ್ಯೋಗಪರ್ವ
### ಒಂದನೆಯ ಅಧ್ಯಾಯ

ವಿರಾಟನ ಸಭೆಗೆ ಕೃಷ್ಣ-ಬಲರಾಮಾದಿಗಳ ಪ್ರವೇಶ. ಕೌರವರ ಬಳಿಗೆ ಒಬ್ಬ ಸಮರ್ಥನಾದ ದೂತನನ್ನು ಕಳುಹಿಸುವಂತೆ ಕೃಷ್ಣನ ಸೂಚನೆ.

ವೈಶಂಪಾಯನಃ
ಕೃತ್ವಾ ವಿವಾಹಂ ತು ಕುರುಪ್ರವೀರಾಃ
ತದಾಽಭಿಮನ್ಯೋರ್ಮುದಿತಾಃ ಸಪಕ್ಷಾಃ |
ವಿಶ್ರಮ್ಯ ಚತ್ವಾರ್ಯುಷಸಃ ಪ್ರತೀತಾಃ
ಸಭಾಂ ವಿರಾಟಸ್ಯ ತತೋಽಭಿಜಗ್ಮುಃ ॥1॥
ಸಭಾ ತು ಸಾ ಮಾತ್ಸ್ಯಪತೇಃ ಸಮೃದ್ಧಾ
ಮಣಿಪ್ರವೇಕೋತ್ತಮರತ್ನಚಿತ್ರಾ |
ನ್ಯಸ್ತಾಸನಾ ಮಾಲ್ಯವತೀ ಸುಗಂಧಾ
ತಾಮಭ್ಯಯುಸ್ತೇ ನರರಾಜವರ್ಯಾಃ ॥2॥
ವೈಶಂಪಾಯನ ಕುರುಪ್ರವೀರರು ಆಗ ಅಭಿಮನ್ಯುವಿನ ವಿವಾಹವನ್ನು ಮಾಡಿ ತಮ್ಮ ಪಕ್ಷದ ಜನರೊಡನೆ ನಾಲ್ಕುದಿನಗಳ ಕಾಲ ವಿಶ್ರಾಂತಿಯನ್ನು ಪಡೆದು ಸಂತೋಷದಿಂದ ವಿರಾಟನ ಸಭೆಗೆ ಹೊರಟರು. ಮತ್ಸ್ಯರಾಜನಾದ ವಿರಾಟನ ಆ ಸಭೆಯು ಶ್ರೇಷ್ಠವಾದ ಮಣಿಗಳಿಂದಲೂ, ಉತ್ತಮವಾದ ರತ್ನಗಳಿಂದಲೂ ಕೂಡಿ ಸುಗಂಧಗಳಿಂದ ಮತ್ತು ಮಾಲೆಗಳಿಂದ ಕೂಡಿದ್ದಿತು. ಅಲ್ಲಿ ಆಸನಗಳನ್ನು ಹಾಕಿದ್ದರು. ನರರಾಜರಲ್ಲಿ ಶ್ರೇಷ್ಠರಾದ ಅವರು ಆ ಸಭೆಯನ್ನು ಪ್ರವೇಶಿಸಿದರು.
ಅಥಾಸನಾನ್ಯಾವಿಶತಾಂ ಪುರಸ್ತಾದ್
ಉಭೌ ವಿರಾಟದ್ರುಪದೌ ನರೇಂದ್ರೌ |
ವೃದ್ಧಶ್ಚ ಮಾನ್ಯಃ ಪೃಥಿವೀಪತೀನಾಂ
ಪಿತಾಮಹೋ ರಾಮಜನಾರ್ದನೌ ಚ ॥3॥
ಅನಂತರ ನರೇಂದ್ರರಾದ ವಿರಾಟ-ದ್ರುಪದರಿಬ್ಬರು ಮುಂದಿನ ಆಸನಗಳಲ್ಲಿ ಕುಳಿತರು. ವೃದ್ಧರೂ, ಮಾನ್ಯರೂ, ರಾಜರ ಪಿತಾಮಹರೂ ಆದ ಭೀಷ್ಮರು, ಕೃಷ್ಣ-ಬಲರಾಮರು ಆಸನಗಳಲ್ಲಿ ಕುಳಿತರು.
ಪಾಂಚಾಲರಾಜಸ್ಯ ಸಮೀಪತಸ್ತು
ಶಿನಿಪ್ರವೀರಃ ಸಹರೌಹಿಣೇಯಃ |
ಮತ್ಸ್ಯಸ್ಯ ರಾಜ್ಞಸ್ತು ಸುಸನ್ನಿಕೃಷ್ಟೌ
ಜನಾರ್ದನಶ್ಚೈವ ಯುಧಿಷ್ಠಿರಶ್ಚ ॥4॥
ಪಾಂಚಾಲರಾಜನಾದ ದ್ರುಪದನ ಸಮೀಪದಲ್ಲಿ ಬಲರಾಮ ಸಹಿತನಾದ ಶಿನಿಪ್ರವೀರನಾದ ಸಾತ್ಯಕಿಯು ಕುಳಿತನು. ಮತ್ಸ್ಯರಾಜನಾದ ವಿರಾಟನ ಸಮೀಪದಲ್ಲಿ ಕೃಷ್ಣ ಮತ್ತು ಯುಧಿಷ್ಠಿರರು ಕುಳಿತರು.
ಸುತಾಶ್ಚ ಸರ್ವೇ ದ್ರುಪದಸ್ಯ ರಾಜ್ಞೋ
ಭೀಮಾರ್ಜುನೌ ಮಾದ್ರವತೀಸುತೌ ಚ |
ಪ್ರದ್ಯುಮ್ನಸಾಂಬೌ ಚ ಯುಧಿಪ್ರವೀರೌ
ವಿರಾಟಪುತ್ರಶ್ಚ ಸಹಾಭಿಮನ್ಯುಃ ॥5॥
ಸರ್ವೇ ಚ ಶೂರಾಃ ಪಿತೃಭಿಃ ಸಮಾನಾಃ
ವೀರ್ಯೇಣ ರೂಪೇಣ ತಥಾ ಬಲೇನ |
ಉಪಾವಿಶನ್ ದ್ರೌಪದೇಯಾಃ ಕುಮಾರಾಃ
ಸುರತ್ನಚಿತ್ರೇಷು ವರಾಸನೇಷು ॥6॥
ದ್ರುಪದರಾಜನ ಎಲ್ಲಾ ಮಕ್ಕಳೂ, ಭೀಮಾರ್ಜುನರೂ, ಮಾದ್ರಿಯ ಪುತ್ರರಾದ ನಕುಲ-ಸಹದೇವರೂ, ಯುದ್ಧದಲ್ಲಿ ಬಹಳ ವೀರರಾದ ಪ್ರದ್ಯುಮ್ನ-ಸಾಂಬರೂ, ವಿರಾಟಪುತ್ರನಾದ ಉತ್ತರ, ಅಭಿಮನ್ಯು ಮತ್ತು ಪಿತೃಗಳಿಗೆ ಸಮಾನವಾದ ರೂಪ ಮತ್ತು ಪರಾಕ್ರಮವುಳ್ಳ

ದ್ರೌಪದಿಯ ಕುಮಾರರೂ ಎಲ್ಲಾ ಶೂರರೂ ಒಳ್ಳೆಯ ರತ್ನಚಿತ್ರವಾದ ಶ್ರೇಷ್ಠವಾದ ಆಸನಗಳಲ್ಲಿ ಕುಳಿತರು.
ತತ್ರೋಪವಿಷ್ಟೇಷು ವರಾಸನೇಷು
ವಿಭ್ರಾಜಮಾನಾಂಬರಭೂಷಣೇಷು |
ರರಾಜ ಸಾ ರಾಜವತೀ ಸಮೃದ್ಧಾ
ಗ್ರಹೈರಿವ ದ್ಯೌರ್ವಿಮಲೈರುಪೇತಾ ||7||
ಶೋಭಿಸುವ ವಸ್ತ್ರಭೂಷಣಗಳುಳ್ಳ ರಾಜರು ಅಲ್ಲಿ ಆ ವರಾಸನಗಳಲ್ಲಿ ಕುಳಿತುಕೊಳ್ಳುತ್ತಿರಲು ಆ ಸಭೆಯು ರಾಜರಿಂದ ಕೂಡಿ ಸ್ವಚ್ಛವಾದ ಗ್ರಹಗಳಿಂದ ಕೂಡಿದ ಆಕಾಶದಂತೆ ಕಂಗೊಳಿಸಿತು.
ತತಃ ಕಥಾಸ್ತೇ ಸಮವಾಯಯುಕ್ತಾಃ
ಕೃತ್ವಾ ವಿಚಿತ್ರಾಃ ಪುರುಷಪ್ರವೀರಾಃ |
ತಸ್ಥುರ್ಮುಹೂರ್ತಂ ಪರಿಚಿಂತಯಂತಃ
ಕೃಷ್ಣಂ ನೃಪಾಸ್ತೇ ಸಮುದೀಕ್ಷಮಾಣಾಃ ||8||
ಅನಂತರ ಆ ಪುರುಷಪ್ರವೀರರು ಒಟ್ಟಿಗೆ ಸೇರಿ ವಿಚಿತ್ರವಾದ ಕಥೆಗಳನ್ನು ಮಾತನಾಡುತ್ತಾ ಒಂದು ಮುಹೂರ್ತದವರೆಗೆ ಕೃಷ್ಣನನ್ನು ಚಿಂತಿಸುತ್ತಾ ಅವನ ನಿರೀಕ್ಷೆಯಲ್ಲಿ ಕುಳಿತರು.
ಕಥಾಂತಮಾಸಾದ್ಯ ಜನಾರ್ದನೇನ
ಸಂಘಟ್ಟಿತಾಃ ಪಾಂಡವಕಾರ್ಯಹೇತೋಃ |
ತೇ ರಾಜಸಿಂಹಾಃ ಸಹಿತಾ ಹ್ಯಶೃಣ್ವನ್
ವಾಕ್ಯಂ ಮಹಾರ್ಥಂ ಚ ಮಹೋದಯಂ ಚ ||9||
ತಮ್ಮ ಕಥೆಯನ್ನು ಮುಗಿಸಿ ಪಾಂಡವರ ಕಾರ್ಯದ ಸಲುವಾಗಿ ಕೃಷ್ಣನ ಜೊತೆಯಲ್ಲಿ ಒಂದುಗೂಡಿದ ಆ ರಾಜಸಿಂಹರು ಮಹಾರ್ಥವುಳ್ಳ, ಮಹಾ ಅಭ್ಯುದಯಕ್ಕೆ ಕಾರಣವಾದ ಕೃಷ್ಣನ ವಾಕ್ಯವನ್ನು ಎಲ್ಲರೂ ಒಟ್ಟಿಗೆ ಆಲಿಸಿದರು.
ಕೃಷ್ಣಃ
ಸರ್ವೈರ್ಭವದ್ಭಿರ್ವಿದಿತಂ ಯಥಾಽಯಂ
ಯುಧಿಷ್ಠಿರಃ ಸೌಬಲೇನಾಕ್ಷವತ್ಯಾಮ್ |
ಜಿತೋ ನಿಕೃತ್ಯಾಽಪಹೃತಂ ಚ ರಾಜ್ಯಂ
ಪುನಃ ಪ್ರವಾಸೇ ಸಮಯಃ ಕೃತಶ್ಚ ||10||
ಕೃಷ್ಣ ಯುಧಿಷ್ಠಿರನು ಶಕುನಿಯಿಂದ ಹೇಗೆ ಅಕ್ಷಕ್ರೀಡೆಯಲ್ಲಿ ಜಿತನಾದನು, ಅವನ ರಾಜ್ಯವು ಹೇಗೆ ಮೋಸದಿಂದ ಅಪಹರಿಸಲ್ಪಟ್ಟಿತು ಮತ್ತು ವನವಾಸದ ವಿಷಯದಲ್ಲಿ ಯಾವ ಪ್ರತಿಜ್ಞೆ ಮಾಡಲ್ಪಟ್ಟಿತು ಎಂಬ ವಿಷಯವು ನಿಮಗೆಲ್ಲರಿಗೂ ತಿಳಿದಿದೆ.
ಶಕ್ತೈರ್ವಿಜೇತುಂ ತರಸಾ ಮಹೀಂ ಚ
ಸತ್ಯಪ್ರತಿಜ್ಞೈಃ ಸತ್ಯರತೈರ್ಯಥಾವತ್ |
ಪಾಂಡೋಃ ಸುತೈಸ್ತದ್ ವ್ರತಮುಗ್ರರೂಪಂ
ವರ್ಷಾಣಿ ಷಟ್ ಸಪ್ತ ಚ ಚೀರ್ಣಮಗ್ರ್ಯೈಃ ||11||
ತಮ್ಮ ಬಲದಿಂದ ಭೂಮಿಯನ್ನು ಗೆಲ್ಲಲು ಸಮರ್ಥರಾದರೂ ಸಹ ಸತ್ಯಪ್ರತಿಜ್ಞರೂ, ಸತ್ಯರತರೂ ಆದ ಶ್ರೇಷ್ಠರಾದ ಪಾಂಡುಪುತ್ರರು ಹದಿಮೂರು ವರ್ಷಗಳ ಕಾಲ ಉಗ್ರವಾದ ಆ ವ್ರತವನ್ನು ಮಾಡಿದರು.
ತ್ರಯೋದಶಂ ದುಶ್ಚರಮೇವ ವರ್ಷಮ್
ಅಜ್ಞಾಯಮಾನೈರ್ಭವತಾಂ ಸಮೀಪೇ |
ಕ್ಲೇಶಾನಸಹ್ಯಾಂಶ್ಚ ತಿತಿಕ್ಷಮಾಣೈಃ
ಯಥೋಷಿತಂ ತದ್ ವಿದಿತಂ ಚ ಸರ್ವಮ್ ||12||
ಹದಿಮೂರನೆಯ ವರ್ಷದಲ್ಲಿ ನಿಮ್ಮ ಸಮೀಪದಲ್ಲಿಯೇ ಯಾರಿಂದಲೂ ತಿಳಿಯಲ್ಪಡದೇ ಅಸಹ್ಯವಾದ ಕ್ಲೇಶಗಳನ್ನು ಅನುಭವಿಸುತ್ತಾ, ದುಶ್ಚರವಾದ ಅಜ್ಞಾತವಾಸವನ್ನು ಹೇಗೆ ಮಾಡಿದರೆಂಬುದೂ ನಿಮಗೆಲ್ಲಾ ತಿಳಿದಿದೆ.
ಏವಂ ಗತೇ ಧರ್ಮಸುತಸ್ಯ ರಾಜ್ಞೋ
ಸುಯೋಧನಸ್ಯಾಪಿ ಹಿತಂ ಚ ಯತ್ ಸ್ಯಾತ್ |
ತಚ್ಚಿಂತಯಧ್ವಂ ಕುರುಪಾಂಡವಾನಾಂ
ಧರ್ಮ್ಯಂ ಚ ಯುಕ್ತಂ ಚ ಯಶಸ್ಕರಂ ಚ ||13||
ಪರಿಸ್ಥಿತಿಯು ಹೀಗಿರುವಾಗ ಧರ್ಮರಾಜನಿಗೂ ಮತ್ತು ಸುಯೋಧನನಿಗೂ ಮತ್ತು ಎಲ್ಲಾ ಕುರು-ಪಾಂಡವರಿಗೂ ಯಾವುದು ಹಿತವೋ, ಧರ್ಮಕ್ಕೆ ಅನುಗುಣವೋ, ಯೋಗ್ಯವೋ ಮತ್ತು ಕೀರ್ತಿಯನ್ನು ತರುವುದೋ ಅದನ್ನು ಕುರಿತು ಚಿಂತಿಸಿ.
ಅಧರ್ಮಯುಕ್ತಂ ನ ಚ ಕಾಮಯೇತ
ರಾಜ್ಯಂ ಸುರಾಣಾಮಪಿ ಧರ್ಮರಾಜಃ |
ಧರ್ಮಾರ್ಥಯುಕ್ತಂ ಚ ಮಹೀಪತಿತ್ವಂ
ಗ್ರಾಮೇಽಪಿ ಕಸ್ಮಿಂಶ್ಚಿದಯಂ ಬುಭೂಷೇತ್ ||14||
ಧರ್ಮರಾಜನು ಅಧರ್ಮದಿಂದ ಕೂಡಿದ ದೇವರಾಜ್ಯವನ್ನೂ ಬಯಸಲಾರನು. ಧರ್ಮಾರ್ಥ ಸಹಿತವಾದ ರಾಜತ್ವವು ದೊರೆಯುವುದಾದರೆ ಯಾವುದೋ ಒಂದು ಗ್ರಾಮದಲ್ಲಿಯೂ ಕೂಡ ಅವನು ಶೋಭಿಸಿಯಾನು!

ಪಿತ್ರ್ಯಂ ಹಿ ರಾಜ್ಯಂ ವಿದಿತಂ ನೃಪಾಣಾಂ
ಯಥಾಽಪಕೃಷ್ಟಂ ಧೃತರಾಷ್ಟ್ರಪುತ್ರೈಃ |
ಮಿಥ್ಯೋಪಚಾರೇಣ ತಥಾಪ್ಯನೇನ
ಕೃಚ್ಛ್ರಂ ಮಹತ್ ಪ್ರಾಪ್ತಮಸಹ್ಯರೂಪಮ್ ॥15॥
ಅವನ ಪಿತೃರಾಜ್ಯವು ಧೃತರಾಷ್ಟ್ರಪುತ್ರರಿಂದ ಮೋಸದ ನಡವಳಿಕೆಯಿಂದ ಹೇಗೆ ಅಪಹೃತವಾಯಿತೆಂಬುದು ಎಲ್ಲ ರಾಜರಿಗೂ ತಿಳಿದಿದೆ. ಆದರೂ ಅವನು ಸಹಿಸಲು ಅಸಾಧ್ಯವಾದ ದೊಡ್ಡ ಕಷ್ಟವನ್ನು ಹೊಂದಿದನು.
ನ ಚಾಪಿ ಪಾರ್ಥೋ ವಿಜಿತೋ
ರಣೇ ತೈಃ ಸ್ವತೇಜಸಾ ವೈ ಧೃತರಾಷ್ಟ್ರಪುತ್ರೈಃ |
ತಥಾಽಪಿ ರಾಜಾ ಸಹಿತಃ ಸುಹೃದ್ಭಿಃ
ಅಭೀಪ್ಸತೇಽನಾಮಯಮೇವ ತೇಷಾಮ್ ॥16॥
ರಾಜನಾದ ಯುಧಿಷ್ಠಿರನನ್ನು ಧೃತರಾಷ್ಟ್ರಪುತ್ರರು ಯುದ್ಧದಲ್ಲಿ ತಮ್ಮ ಪರಾಕ್ರಮದಿಂದೇನೂ ಜಯಿಸಲಿಲ್ಲ. ಆದರೂ ಸುಹೃದರಿಂದ (ಮಿತ್ರರಿಂದ) ಕೂಡಿದ ಯುಧಿಷ್ಠಿರ ರಾಜನು ಅವರಿಗೆ ಕ್ಷೇಮವನ್ನೇ ಬಯಸುತ್ತಾನೆ.
ಯತ್ತು ಸ್ವಯಂ ಪಾಂಡುಸುತೈರ್ವಿಜಿತ್ಯ
ಸಮಾಹೃತಂ ಭೂಮಿಷು ತಾನ್ ಪ್ರಮಥ್ಯ |
ತತ್ ಪ್ರಾರ್ಥಯಂತೇ ಪುರುಷಪ್ರವೀರಾಃ
ಕುಂತೀಸುತಾ ಮಾದ್ರವತೀಸುತೌ ಚ ॥17॥
ಪಾಂಡುಪುತ್ರರು ತಾವು ಭೂಪತಿಗಳಾದ ರಾಜರನ್ನು ಮರ್ದಿಸಿ ಅವರಿಂದ ಯಾವ ಭೂಮಿಯನ್ನು ತಾವೇ ಪಡೆದರೋ ಪುರುಷಪ್ರವೀರರಾದ ಕುಂತಿಯ ಮತ್ತು ಮಾದ್ರಿಯ ಪುತ್ರರು ಅದನ್ನು ಪ್ರಾರ್ಥಿಸುತ್ತಾರೆ.
ಬಲಾಭಿಗುಪ್ತೈರವಿಷಹ್ಯಪೀಡೈಃ
ಸಂಪ್ರಸ್ಥಿತಾ ಹಂತುಮಮಿತ್ರಸ್ಯರಿಂಂಃ |
ರಾಜ್ಯಂ ಜಿಹೀರ್ಷದ್ಭಿರಸದ್ಭಿರುಗ್ರೈಃ
ಸರ್ವಂ ಚ ತದ್ವೋ ವಿದಿತಂ ಯಥಾವತ್ ॥18॥
ಬಲದಿಂದ ರಕ್ಷಿತರಾದ, ಸಹಿಸಲು ಅಸಾಧ್ಯವಾದ ಪೀಡೆಯನ್ನು ಕೊಡುವ ಶತ್ರು ಸಮೂಹಗಳು ಕಾಡಿನಲ್ಲಿ ಅವರನ್ನು ಕೊಲ್ಲಲು ಹೊರಟವು. ರಾಜ್ಯವನ್ನು ಅಪಹರಿಸುವ ಇಚ್ಛೆಯುಳ್ಳ ಉಗ್ರರೂ, ಅಸಜ್ಜನರೂ ಆದ ಅವರಿಂದ ಮಾಡಲ್ಪಟ್ಟದ್ದೆಲ್ಲವೂ ನಿಮಗೆ ಸ್ಪಷ್ಟವಾಗಿ ತಿಳಿದಿದೆ.
ತೇಷಾಂ ಚ ಲೋಭಂ ಪ್ರಸಮೀಕ್ಷ್ಯ ವೃದ್ಧಂ
ಧರ್ಮಾತ್ಮತಾಂ ಚಾಪಿ ಯುಧಿಷ್ಠಿರಸ್ಯ |
ಸಂಬಂಧಿತಾಂ ಚಾಪಿ ಸಮೀಕ್ಷ್ಯ ತೇಷಾಂ
ಮತಿಂ ಕುರುಧ್ವಂ ಸಹಿತಾಃ ಪೃಥಕ್ ಚ ॥19॥
ಅವರ ಲೋಭವು ಅಭಿವೃದ್ಧಿಯಾದುದನ್ನೂ ಮತ್ತು ಯುಧಿಷ್ಠಿರನ ಧರ್ಮಸ್ವಭಾವವನ್ನೂ ಮತ್ತು ನಮ್ಮ ಮತ್ತು ಅವರ ಪರಸ್ಪರ ಸಂಬಂಧವನ್ನೂ ಗಮನಿಸಿ ಎಲ್ಲರೂ ಒಟ್ಟಾಗಿ ಮತ್ತು ಬೇರೆ ಬೇರೆಯಾಗಿ ಒಂದು ನಿರ್ಧಾರವನ್ನು ಮಾಡಿ.
ಇಮೇ ಚ ಸತ್ಯೇ ನಿರತಾಃ ಸದೈವ
ತಂ ಪಾಲಯಿತ್ವಾ ಸಮಯಂ ಯಥಾವತ್ |
ಅತೋಽನ್ಯಥಾ ತೈರುಪಚರ್ಯಮಾಣಾ
ಹನ್ಯುಃ ಸಮೇತಾನ್ ಧೃತರಾಷ್ಟ್ರಪುತ್ರಾನ್ ॥20॥
ತಾವು ಮಾಡಿದ ಪ್ರತಿಜ್ಞೆಯನ್ನು ಸರಿಯಾಗಿ ಪಾಲಿಸಿ ಈ ಪಾಂಡವರು ಯಾವಾಗಲೂ ಸತ್ಯದಲ್ಲಿ ನಿರತರಾಗಿದ್ದಾರೆ. ದುರ್ಯೋಧನಾದಿಗಳು ಅವರ ವಿಷಯದಲ್ಲಿ ಬೇರೆ ರೀತಿಯಲ್ಲಿ ನಡೆದುಕೊಂಡರೆ ಪಾಂಡವರು ಧೃತರಾಷ್ಟ್ರ ಪುತ್ರರೆಲ್ಲರನ್ನೂ ಒಟ್ಟಿಗೇ ಕೊಂದಾರು.
ತೈರ್ವಿಪ್ರಕಾರಂ ಚ ನಿಶಮ್ಯ ರಾಜ್ಯೇ
ಸುಹೃಜ್ಜನಾಸ್ತಾನ್ ಪರಿವಾರಯೇಯುಃ |
ಯುದ್ಧೇನ ಬಾಧೇಯುರಿಮಾಂಸ್ತಥೈವಂ
ತೈರ್ವಧ್ಯಮಾನಾ ಯುಧಿ ತಾಂಶ್ಚ ಹನ್ಯುಃ ॥21॥
ಅವರು ಮಾಡಿದ ಅಪಕಾರಗಳನ್ನು ನೋಡಿ ರಾಜ್ಯದಲ್ಲಿರುವ ಸುಹೃಜ್ಜನರು ಅವರನ್ನು ಪಾಂಡವರ ವಿರೋಧವನ್ನು ಮಾಡುವುದು ಬೇಡ ಎಂದು ನಿವಾರಣೆ ಮಾಡಿಯಾರು. ಇವರನ್ನು ಅವರು ಯುದ್ಧದಿಂದ ಪೀಡಿಸಬಹುದು ಮತ್ತು ಅವರಿಂದ ಪೀಡೆಗೆ ಒಳಗಾದ ಪಾಂಡವರು ಯುದ್ಧದಲ್ಲಿ ಅವರನ್ನು ಕೊಂದಾರು.
ತಥಾಽಪಿ ನೇಮೇಽಲ್ಪಬಲಾಃ ಸಮರ್ಥಾಃ
ತೇಷಾಂ ಜಯಾಯೇತಿ ಮತಿರ್ಭವೇದ್ ವಃ |
ಸಮೇತ್ಯ ಸರ್ವೇ ಸಹಿತಾಃ ಸುಹೃದ್ಭಿಃ
ತೇಷಾಂ ವಿನಾಶಾಯ ಯತೇಯುರೇವ ॥22॥
ಆದರೂ ಅಲ್ಪಬಲವುಳ್ಳ ಪಾಂಡವರು ಆ ಕೌರವರನ್ನು ಜಯಿಸಲು ಸಮರ್ಥರಲ್ಲ ಎಂದು ನಿಮಗೆ ತೋರಬಹುದು. ಆದರೆ ಎಲ್ಲಾ

ಸುಹೃಜ್ಜನರಿಂದ ಸಹಿತರಾದ ಪಾಂಡವರು ಕೌರವರ ವಿನಾಶಕ್ಕೆ ಪ್ರಯತ್ನವನ್ನು ಪಟ್ಟೇ ಪಡುತ್ತಾರೆ.
ದುರ್ಯೋಧನಸ್ಯಾಪಿ ಮತಂ ಯಥಾವ-
ನ್ನ ಜ್ಞಾಯತೇ ಕಿಂ ನು ಕರಿಷ್ಯತೀತಿ |
ಅಜ್ಞಾಯಮಾನೇ ಚ ಮತೇ ಪರಸ್ಯ
ಕಿಂ ಸ್ಯಾತ್ ಸಮಾರಭ್ಯತಮಂ ಮತಂ ವಃ ॥23॥
ದುರ್ಯೋಧನನಾದರೂ ಏನು ಮಾಡುವನು ಎಂದು ಅವನ ಅಭಿಪ್ರಾಯವು ಸ್ಪಷ್ಟವಾಗಿ ತಿಳಿದಿಲ್ಲ. ಶತ್ರುವಾಗಿರುವ ಅವನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಯದಿರುವಾಗ ನಾವು ಏನು ಮಾಡುವುದು ಯೋಗ್ಯವೆಂದು ನಿಮಗೆ ತೋರುತ್ತದೆ?
ತಸ್ಮಾದಿತೋ ಗಚ್ಛತು ಧರ್ಮಶೀಲಃ
ಶುಚಿಃ ಕುಲೀನಃ ಪುರುಷೋಽಪ್ರಮತ್ತಃ |
ದೂತಃ ಸಮರ್ಥಃ ಪ್ರಶಮಾಯ ತೇಷಾಂ
ರಾಜ್ಯಾರ್ಧದಾನಾಯ ಯುಧಿಷ್ಠಿರಸ್ಯ ॥24॥
ಆದ್ದರಿಂದ ಇಲ್ಲಿಂದ ಧರ್ಮಶೀಲನೂ, ಶುಚಿಯೂ, ಸತ್ಕುಲಪ್ರಸೂತನೂ, ಪ್ರಮಾದ ರಹಿತನೂ, ಸಮರ್ಥನೂ ಆದ ಒಬ್ಬ ದೂತನು ಅವರನ್ನು ಸಮಾಧಾನ ಮಾಡಿ ಯುಧಿಷ್ಠಿರನಿಗೆ ಅರ್ಧರಾಜ್ಯವನ್ನು ಕೊಡುವಂತೆ ಹೇಳಲು ಇಲ್ಲಿಂದ ಅಲ್ಲಿಗೆ ಹೋಗಲಿ.
ವೈಶಂಪಾಯನಃ
ನಿಶಮ್ಯ ವಾಕ್ಯಂ ತು ಜನಾರ್ದನಸ್ಯ
ಧರ್ಮಾರ್ಥಯುಕ್ತಂ ಮಧುರಂ ಸಮಂ ಚ |
ಸಮಾದದೇ ವಾಕ್ಯಮಥಾಗ್ರಜೋಽಸ್ಯ
ಸಂಪೂಜ್ಯ ವಾಕ್ಯಂ ತದತೀವ ರಾಮಃ ॥25॥
ವೈಶಂಪಾಯನ ಕೃಷ್ಣನ ಧರ್ಮಾರ್ಥಯುಕ್ತವಾದ ಮಧುರವಾದ ಮತ್ತು ನಿಷ್ಪಕ್ಷಪಾತವಾದ ಮಾತುಗಳನ್ನು ಕೇಳಿ, ಅವನ ಅಣ್ಣನಾದ ಬಲರಾಮನು ಆ ಮಾತುಗಳನ್ನು ಬಹಳವಾಗಿ ಗೌರವಿಸಿ ತಾನು ಮಾತನಾಡಲು ಆರಂಭಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಉದ್ಯೋಗಪರ್ವಣಿ ಪ್ರಥಮೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ
ದುರ್ಯೋಧನೋ ಯಯೌ ರಾಮಂ ಸ ಭಯಾತ್ ಕೇಶವಸ್ಯ ತಮ್ |
ನ ಸಾಹಾಯ್ಯಂ ಕರೋಮೀತಿ ಪ್ರಾಹ ತತ್ಸ್ನೇಹವಾನಪಿ ॥23॥
ಬಳಿಕ ಅರ್ಜುನ ಸಮೇತನಾಗಿ ಕೃಷ್ಣ ಪಾಂಡವರ ಬಳಿಗೆ ನಡೆದ. ದುರ್ಯೋಧನ ಬಲರಾಮನ ಬಳಿಗೆ ಹೋದ. ಬಲರಾಮ ದುರ್ಯೋಧನನಲ್ಲಿ ಸ್ನೇಹ ಉಳ್ಳವನೇ ಆದರೂ ಕೃಷ್ಣನ ಭಯದಿಂದ `ನಾನು ಸಹಾಯ ಮಾಡುವುದಿಲ್ಲ' ಎಂದ.
ಉಪಪ್ಲಾವ್ಯೇ ಸಭಾಯಾಂ ಹಿ ತ್ವತ್ಪಕ್ಷೀಯಂ ವಚೋ ಬ್ರುವನ್ |
ನಿರಾಕೃತಃ ಸಾತ್ಯಕಿನಾ ಸಮಕ್ಷಂ ಕೇಶವಸ್ಯ ಚ ॥24॥
ಉಪಪ್ಲಾವ್ಯದಲ್ಲಿ ನಡೆದ ಮಂತ್ರಾಲೋಚನ ಸಭೆಯಲ್ಲಿ ಬಲರಾಮ ದುರ್ಯೋಧನನ ಪರವಾಗಿ ವಾದಿಸಿದಾಗ ಅವನ ವಾದವನ್ನು ಕೃಷ್ಣನ ಸಮ್ಮುಖದಲ್ಲಿಯೇ ಸಾತ್ಯಕಿ ನಿರಾಕರಿಸಿದ.
* * * * *
ಎರಡನೆಯ ಅಧ್ಯಾಯ
ಕೃಷ್ಣನ ಅಭಿಪ್ರಾಯವನ್ನು ಅನುಮೋದಿಸಿ ಬಲರಾಮನಿಂದ ತನ್ನ
ದುರ್ಯೋಧನಪಕ್ಷಪಾತದ ಆವಿಷ್ಕಾರ.
ಬಲರಾಮಃ
ಶ್ರುತಂ ಭವದ್ಭಿರ್ಗದಪೂರ್ವಜಸ್ಯ
ವಾಕ್ಯಂ ಯಥಾ ಧರ್ಮವದರ್ಥವಚ್ಚ |
ಅಜಾತಶತ್ರೋಶ್ಚ ಹಿತಂ ಚ ಯುಕ್ತಂ
ದುರ್ಯೋಧನಸ್ಯಾಪಿ ತಥೈವ ರಾಜ್ಞಃ ॥1॥
ಬಲರಾಮ ಗದಾಗ್ರಜನಾದ ಕೃಷ್ಣನು ಯುಧಿಷ್ಠಿರನಿಗೂ ಮತ್ತು ರಾಜನಾದ ದುರ್ಯೋಧನನಿಗೂ ಹಿತವೂ ಮತ್ತು ಉಚಿತವೂ ಆದ ಧರ್ಮಾರ್ಥಯುಕ್ತವಾದ ಯಾವ ಮಾತುಗಳನ್ನು ಆಡಿದನೋ ಅದನ್ನು ನೀವು ಕೇಳಿದ್ದೀರಿ.
ಅರ್ಧಂ ಹಿ ರಾಜ್ಯಸ್ಯ ವಿಸೃಜ್ಯ ವೀರಾಃ
ಕುಂತೀಸುತಾಸ್ತಸ್ಯ ಕೃತೇ ಯತಂತೇ |
ಪ್ರದಾಯ ಚಾರ್ಧಂ ಧೃತರಾಷ್ಟ್ರಪುತ್ರಃ
ಸುಖೀ ಸಹಾಸ್ಮಾಭಿರತೀವ ಮೋದೇತ್ ॥2॥
ಕುಂತೀ ಪುತ್ರರಾದ ವೀರರು ಅರ್ಧರಾಜ್ಯವನ್ನು ದುರ್ಯೋಧನನಿಗೆ ಬಿಟ್ಟುಕೊಟ್ಟು ಉಳಿದ ಅರ್ಧರಾಜ್ಯವನ್ನು ಪಡೆಯಲು

ಪ್ರಯತ್ನಪಡುತ್ತಾರೆ. ಧೃತರಾಷ್ಟ್ರ ಪುತ್ರನಾದ ದುರ್ಯೋಧನನೂ ಸಹ ಅವರಿಗೆ ಅರ್ಧರಾಜ್ಯವನ್ನು ಕೊಟ್ಟು ನಮ್ಮ ಜೊತೆಯಲ್ಲಿ ಸುಖ-ಸಂತೋಷದಿಂದ ಇರಬಹುದು.

ಲಬ್ಧ್ವಾ ಹಿ ರಾಜ್ಯಂ ಪುರುಷಪ್ರವೀರಾಃ
ಸಮ್ಯಕ್ ಪ್ರವೃತ್ತೇಷು ಪರೇಷು ಚೈವ |
ಧ್ರುವಂ ಪ್ರಶಾಂತಾಃ ಸುಖಮಾವಸೇಯುಃ
ತೇಷಾಂ ಪ್ರಶಾಂತಿಶ್ಚ ಹಿತಂ ಪ್ರಜಾನಾಮ್ ॥3॥

ದುರ್ಯೋಧನಾದಿಗಳು ಸರಿಯಾಗಿ ನಡೆದುಕೊಂಡರೆ ಪುರುಷಶ್ರೇಷ್ಠರಾದ ಪಾಂಡವರು ತಮ್ಮ ರಾಜ್ಯವನ್ನು ಪಡೆದು ಖಂಡಿತವಾಗಿ ಶಾಂತಿ-ಸುಖಗಳಿಂದ ವಾಸಮಾಡಿಯಾರು. ಅವರ ಶಾಂತಿಯು ಪ್ರಜೆಗಳಿಗೆ ಹಿತವಾದುದು.

ದುರ್ಯೋಧನಸ್ಯಾಪಿ ಮತಂ ಚ ವೇತ್ತುಂ
ವಕ್ತುಂ ಚ ವಾಕ್ಯಾನಿ ಯುಧಿಷ್ಠಿರಸ್ಯ |
ಪ್ರಿಯಂ ಮಮ ಸ್ಯಾದ್ಯದಿ ತತ್ರ ಕಶ್ಚಿತ್
ವ್ರಜೇಚ್ಛಮಾರ್ಥಂ ಕುರುಪಾಂಡವಾನಾಮ್ ॥4॥

ದುರ್ಯೋಧನನ ಅಭಿಪ್ರಾಯವನ್ನು ತಿಳಿಯಲು ಮತ್ತು ಅವನಿಗೆ ಯುಧಿಷ್ಠಿರನ ಅಭಿಪ್ರಾಯವನ್ನು ಹೇಳಲು (ಹೇಳಿ) ಕುರು-ಪಾಂಡವರಿಗೆ ಸಂಧಿಯನ್ನು ಉಂಟು ಮಾಡಲು ಅಲ್ಲಿಗೆ ಯಾರಾದರೂ ಹೋಗುವುದಾದರೆ ಅದು ನನಗೆ ಬಹಳ ಪ್ರಿಯವಾಗುತ್ತದೆ.

ಸಭೀಷ್ಮಮಾಮಂತ್ರ್ಯ ಕುರುಪ್ರವೀರಂ
ವೈಚಿತ್ರ್ಯವೀರ್ಯಂ ಚ ಮಹಾನುಭಾವಮ್ |
ದ್ರೋಣಂ ಸಪುತ್ರಂ ವಿದುರಂ ಕೃಪಂ ಚ
ಗಾಂಧಾರರಾಜಂ ಚ ಸಸೂತಪುತ್ರಮ್ ॥5॥

ಸರ್ವೇ ಚ ಯೇಽನ್ಯೇ ಧೃತರಾಷ್ಟ್ರಪುತ್ರಾ
ಬಲಪ್ರಧಾನಾ ನಿಗಮಪ್ರಧಾನಾಃ |
ಸ್ಥಿತಾಶ್ಚ ಧರ್ಮೇಷು ಯಥಾ ಸ್ವಕೇಷು
ಲೋಕಪ್ರವೀರಾಃ ಶ್ರುತಶೀಲವೃದ್ಧಾಃ ॥6॥

ಅಲ್ಲಿಗೆ ದೂತನಾಗಿ ಹೋಗುವ ಪುರುಷನು ಕುರುಶ್ರೇಷ್ಠನಾದ ಭೀಷ್ಮನ, ಮಹಾನುಭಾವನಾದ ಧೃತರಾಷ್ಟ್ರನ, ಅಶ್ವತ್ಥಾಮ ಸಹಿತನಾದ ದ್ರೋಣನ, ವಿದುರನ, ಕೃಪನ ಮತ್ತು ಕರ್ಣಸಹಿತನಾದ ಶಕುನಿಯ ಅನುಮತಿಯನ್ನು ಪಡೆದು ಮತ್ತು ಅಲ್ಲಿ ಸನ್ನಿಹಿತರಾದ ಬಲಪ್ರಧಾನರೂ, ಜ್ಞಾನಪ್ರಧಾನರೂ ಆದ ಧೃತರಾಷ್ಟ್ರ ಪುತ್ರರ ಮತ್ತು ತಮ್ಮ ತಮ್ಮ ಧರ್ಮಗಳಲ್ಲಿ ನಿರತರಾದ ಆಚಾರ, ವಿದ್ಯೆಗಳಿಂದ ಕೂಡಿ ವೃದ್ಧರಾದ ಲೋಕವೀರರಾದ ಉಳಿದವರ ಅನುಮತಿಯನ್ನೂ ಪಡೆಯಬೇಕು.

ಏತೇಷು ಸರ್ವೇಷು ಸಮಾಗತೇಷು
ಪೌರೇಷು ವೃದ್ಧೇಷು ಚ ಸಂಗತೇಷು |
ಬ್ರವೀತು ವಾಕ್ಯಂ ಪ್ರಣಿಪಾತಯುಕ್ತಂ
ಕುಂತೀಸುತಸ್ಯಾರ್ಥಕರಂ ಯಥಾ ಸ್ಯಾತ್ ॥7॥

ಇವರೆಲ್ಲರೂ ಮತ್ತು ವೃದ್ಧರಾದ ಪೌರಜನರೂ ಸಭೆಯಲ್ಲಿ ಸಮಾಗಮವನ್ನು ಹೊಂದಿರುವಾಗ ದೂತನು ನಮಸ್ಕಾರ ಪೂರ್ವಕವಾಗಿ ಕುಂತೀಸುತನು ಆಡಿದ ಇಬ್ಬರಿಗೂ ಕ್ಷೇಮವನ್ನುಂಟುಮಾಡುವ ಮಾತುಗಳನ್ನು ಆಡಲಿ.

ಸರ್ವಾಸ್ವವಸ್ಥಾಸು ಚ ತೇನ ಕೋಪಾದ್
ಗ್ರಸ್ತಾ ಹಿ ಪಾರ್ಥಾ ಬಲಮಾಶ್ರಿತೇನ |
ಪ್ರಿಯಾಭ್ಯುಪೇತಸ್ಯ ಯುಧಿಷ್ಠಿರಸ್ಯ
ದ್ಯೂತೇ ಪ್ರಮತ್ತಸ್ಯ ಹೃತಂ ಚ ರಾಜ್ಯಮ್ ॥8॥

ಬಲಿಷ್ಠನಾದ ಅವನಿಂದ ವಂಚಿತರಾದ ಪಾಂಡವರು ಸದಾಕಾಲದಲ್ಲಿಯೂ ಅವನ ಮೇಲೆ ಕೋಪದಿಂದ ಕೂಡಿದವರಾಗಿದ್ದಾರೆ. ತನ್ನ ಪ್ರಿಯವಾದ ಬಂಧುಗಳು ಮತ್ತು ಸಂಪತ್ತಿನಿಂದ ಕೂಡಿದ ಯುಧಿಷ್ಠಿರನು ಪ್ರಮಾದದಿಂದ ದ್ಯೂತದಲ್ಲಿ ತನ್ನ ರಾಜ್ಯವನ್ನು ಕಳೆದುಕೊಂಡನು.

ನಿವಾರ್ಯಮಾಣಶ್ಚ ಕುರುಪ್ರವೀರೈಃ
ಸರ್ವೈಃ ಸುಹೃದ್ಭಿರ್ಹ್ಯಯಮಪ್ಯತಜ್ಜ್ಞಃ |
ಗಾಂಧಾರರಾಜಸ್ಯ ಸುತಂ ಮತಾಕ್ಷಂ
ಸಮಾಹ್ವಯದ್ ದೇವಿತುಮಾಜಮೀಢಃ ॥9॥

ವಿಶ್ವಾಸಪಾತ್ರರಾದ ಕುರುಶ್ರೇಷ್ಠರೆಲ್ಲರೂ ನಿಷೇಧ ಮಾಡುತ್ತಿದ್ದರೂ ಅಕ್ಷಹೃದಯವನ್ನು ತಿಳಿಯದ ಆಜಮೀಡನಾದ ಯುಧಿಷ್ಠಿರನು ಗಾಂಧಾರರಾಜನ ಮಗನಾದ ಅಕ್ಷಕ್ರೀಡಾ ಪರಿಣತನಾದ ಶಕುನಿಯನ್ನು ಆಹ್ವಾನ ಮಾಡಿದನು.

ದುರೋದರಾಸ್ತತ್ರ ಸಹಸ್ರಶೋಽನ್ಯೇ
ಯುಧಿಷ್ಠಿರೋ ಯಾನ್ ವಿಷಹೇತ ಜೇತುಮ್ |
ಉತ್ಸೃಜ್ಯ ತಾನ್ ಸೌಬಲಮೇವ ಚಾಯಂ
ಸಮಾಹ್ವಯತ್ ತೇನ ಜಿತೋಽಕ್ಷವತ್ಯಾಮ್ ॥10॥

ಅಲ್ಲಿ ಅಕ್ಷಕ್ರೀಡೆಯನ್ನು ಆಡುವ ಇನ್ನೂ ಸಹಸ್ರಾರು ಮಂದಿ ಇದ್ದರು. ಅವರನ್ನು ಯುಧಿಷ್ಠಿರನು ಗೆಲ್ಲಬಹುದಾಗಿದ್ದಿತು. ಆದರೂ ಅವನು ಅವರೆಲ್ಲರನ್ನೂ ಬಿಟ್ಟು ಶಕುನಿಯನ್ನೇ ಆಹ್ವಾನಿಸಿ ದ್ಯೂತದಲ್ಲಿ ಸೋತನು.
ಸ ದೀವ್ಯಮಾನಃ ಪ್ರತಿದೀವ್ಯತೈನಮ್
 ಅಕ್ಷೇಷು ನಿತ್ಯಂ ತು ಪರಾಙ್ಮುಖೇಷು |
ಸಂರಜ್ಯಮಾನೋ ವಿಜಿತಃ ಪ್ರಸಹ್ಯ
 ತತ್ರಾಪರಾಧಃ ಶಕುನೇರ್ನ ಕಶ್ಚಿತ್ ॥11॥
ಹೀಗೆ ದ್ಯೂತವನ್ನು ಆಡಲು ಹೊರಟ ಧರ್ಮರಾಜನು ದಾಳಗಳು ತನಗೆ ಯಾವಾಗಲೂ ವಿಮುಖವಾಗಿ ಬೀಳುತ್ತಿದ್ದರೂ ಶಕುನಿಯ ಎದುರಿನಲ್ಲಿ ದ್ಯೂತವನ್ನಾಡಿ ಮತ್ತೆ ಮತ್ತೆ ಆಸಕ್ತಿಯನ್ನು ಹೊಂದಿದವನಾಗಿ ಬಲಾತ್ಕಾರದಿಂದ ಸೋತು ಎಲ್ಲವನ್ನೂ ಕಳೆದುಕೊಂಡನು. ಅದರಲ್ಲಿ ಶಕುನಿಯ ಅಪರಾಧವು ಯಾವುದೂ ಇಲ್ಲ.
ತಸ್ಮಾತ್ ಪ್ರಣಮ್ಯೈವ ವಚೋ ಬ್ರುವೀತು
 ವೈಚಿತ್ರ್ಯವೀರ್ಯಂ ಬಹುಸಾಮಯುಕ್ತಮ್ |
ತಥಾ ಹಿ ಶಕ್ಯೋ ಧೃತರಾಷ್ಟ್ರಪುತ್ರಃ
 ಸ್ವಾರ್ಥೇ ನಿಯೋಕ್ತುಂ ಪುರುಷೇಣ ತೇನ ॥12॥
ಆದ್ದರಿಂದ ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರನಿಗೆ ನಮಸ್ಕಾರವನ್ನು ಮಾಡಿಯೇ ಬಹಳ ಸಮಾಧಾನದಿಂದ ಕೂಡಿದ ಮಾತುಗಳನ್ನು ಆಡಬೇಕು. ಹಾಗೆ ಮಾಡಿದರೆ ಮಾತ್ರ ಆ ದೂತನು ಧೃತರಾಷ್ಟ್ರಪುತ್ರನು ಸರಿಯಾದ ಮಾರ್ಗದಲ್ಲಿ ಹೋಗುವಂತೆ ಮಾಡಲು ಶಕ್ತನಾದಾನು.
ವೈಶಂಪಾಯನಃ
ಏವಂ ಬ್ರುವತ್ಯೇವ ಯದುಪ್ರವೀರೇ
 ಶಿನಿಪ್ರವೀರಃ ಸಹಸೋತ್ಪಪಾತ |
ತಸ್ಯಾಪಿ ವಾಕ್ಯಂ ಪರಿನಿಂದ್ಯ ತತ್ರ
 ಸಮಾದದೇ ವಾಕ್ಯಮಿದಂ ಸಮನ್ಯುಃ ॥13॥
ವೈಶಂಪಾಯನ ಯದುಪ್ರವೀರನಾದ ಬಲರಾಮನು ಹೀಗೆ ಮಾತನಾಡುತ್ತಿರಲು ಶಿನಿಪ್ರವೀರನಾದ ಸಾತ್ಯಕಿಯು ತಕ್ಷಣ ಎದ್ದನು. ಅಲ್ಲಿ ಕೋಪದಿಂದ ಕೂಡಿದ ಅವನು ಬಲರಾಮನ ಮಾತುಗಳನ್ನು ನಿಂದಿಸಿ ಈ ಮಾತುಗಳನ್ನು ಆಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿತೀಯೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಸಾತ್ಯಕಿಯಿಂದ ಬಲರಾಮನ ಮಾತುಗಳನ್ನು ನಿಂದಿಸಿ
ದುರ್ಯೋಧನ ನಿಗ್ರಹದ ನಿರ್ಧಾರಣ.
ಸಾತ್ಯಕಿಃ
ಯಾದೃಶಃ ಪುರುಷಸ್ಯಾತ್ಮಾ ತಾದೃಶಂ ಸಂಪ್ರಭಾಷತೇ |
ಯಥಾರೂಪೋಽಂತರಾತ್ಮಾ ತೇ ತಥಾರೂಪಂ ಪ್ರಭಾಷಸೇ ॥1॥
ಸಾತ್ಯಕಿ ಮನುಷ್ಯನ ಸ್ವಭಾವವು ಹೇಗಿರುತ್ತದೆಯೋ ಹಾಗೆ ಮಾತನಾಡುತ್ತಾನೆ. ನಿನ್ನ ಅಂತಃಕರಣವು ಹೇಗಿದೆಯೋ ಹಾಗೆಯೇ ನೀನು ಮಾತನಾಡುತ್ತಿದ್ದೀಯೆ.
ಸಂತಿ ವೈ ಪುರುಷಾಃ ಶೂರಾಃ ಸಂತಿ ಕಾಪುರುಷಾಸ್ತಥಾ |
ಉಭಾವೇತೌ ದೃಢೌ ಪಕ್ಷೌ ದೃಶ್ಯೇತೇ ಪುರುಷಾನ್ ಪ್ರತಿ ॥2॥
ಪ್ರಪಂಚದಲ್ಲಿ ಶೂರಪುರುಷರೂ ಇದ್ದಾರೆ. ದುಷ್ಟಪುರುಷರೂ ಇದ್ದಾರೆ. ಪುರುಷರಲ್ಲಿ ಈ ಎರಡು ವಿಭಾಗಗಳು ಸ್ಪಷ್ಟವಾಗಿ ಕಾಣುತ್ತವೆ.
ಏಕಸ್ಮಿನ್ನೇವ ಜಾಯೇತೇ ಕುಲೇ ಕ್ಲೀಬಮಹಾರಥೌ |
ಫಲಾಫಲವತೀ ಶಾಖೇ ಯಥೈಕಸ್ಮಿನ್ ವನಸ್ಪತೌ ॥3॥
ಒಂದೇ ಕುಲದಲ್ಲಿ ಶೂರರೂ ಮತ್ತು ಹೇಡಿಗಳೂ ಹುಟ್ಟುತ್ತಾರೆ. ಒಂದೇ ವೃಕ್ಷದ ಎರಡು ಕೊಂಬೆಗಳಲ್ಲಿ ಒಂದರಲ್ಲಿ ಫಲವುಂಟಾಗುತ್ತದೆ. ಇನ್ನೊಂದರಲ್ಲಿ ಉಂಟಾಗುವುದಿಲ್ಲ.
ನಾಭ್ಯಸೂಯಾಮಿ ತೇ ವಾಕ್ಯಂ ತೇಷು ವೈ ದಾರುಣಧ್ವಜ |
ಯೇ ಚ ಶೃಣ್ವಂತಿ ತೇ ವಾಕ್ಯಂ ತಾನಸೂಯಾಮಿ ಮಾಧವ ॥4॥
ಕ್ರೂರವಾದ ತಾಳವೃಕ್ಷವನ್ನು ಧ್ವಜವಾಗಿ ಹೊಂದಿರುವ ಮಧುಕುಲೋತ್ಪನ್ನನಾದ ಎಲೈ ಬಲರಾಮನೇ, ನಾನು ನಿನ್ನ ಮೇಲೆ ಕೋಪಗೊಳ್ಳುವುದಿಲ್ಲ. ಆದರೆ ನಿನ್ನ ಮಾತುಗಳನ್ನು ಕೇಳುತ್ತಿರುವವರ ಮೇಲೆ ಕೋಪಗೊಳ್ಳುತ್ತೇನೆ.
ಕಥಂ ಹಿ ಧರ್ಮರಾಜಸ್ಯ ದೋಷಮಲ್ಪಮಪಿ ಬ್ರುವನ್ |
ಲಭೇತ ಪರಿಷನ್ಮಧ್ಯೇ ವ್ಯಾಹರ್ತುಮಕುತೋಭಯಃ ॥5॥
ಧರ್ಮರಾಜನ ವಿಷಯದಲ್ಲಿ ಸ್ವಲ್ಪದೋಷವನ್ನು ಹೇಳುವ ಮನುಷ್ಯನಾದರೂ ಸಭೆಯಲ್ಲಿ ನಿಶ್ಶಂಕೆಯಿಂದ ಮಾತನಾಡಲು ಹೇಗೆ ಅವಕಾಶವನ್ನು ಪಡೆದಾನು?

ಸಮಾಹೂಯ ಮಹಾತ್ಮಾನಂ ಜಿತವಾನಕ್ಷಕೋವಿದಃ|
ಅನಕ್ಷಜ್ಞಂ ಯಥಾಶ್ರದ್ಧಂ ತೇಷು ಧರ್ಮಜಯಃ ಕುತಃ ||6||
ಅಕ್ಷಕ್ರೀಡೆಯನ್ನು ತಿಳಿಯದ ಮಹಾತ್ಮನಾದ ಯುಧಿಷ್ಠಿರನನ್ನು ಅಕ್ಷಕೋವಿದನಾದ ಶಕುನಿಯು ಆಹ್ವಾನಿಸಿ ತನ್ನ ಶ್ರದ್ಧೆಗೆ ಅನುಗುಣವಾಗಿ ಜಯಿಸಿದನು. ಅವರಲ್ಲಿ ಧರ್ಮದಿಂದ ಜಯವು ಇರಲು ಹೇಗೆ ಸಾಧ್ಯ?
ಯದಿ ಕುಂತೀಸುತಂ ಗೇಹೇ ಕ್ರೀಡಂತಂ ಭ್ರಾತೃಭಿಃ ಸಹ|
ಅಭಿಗಮ್ಯ ಜಯೇಯುಸ್ತೇ ತತ್ ತೇಷಾಂ ಧರ್ಮತೋ ಭವೇತ್ ||7||
ಒಂದುಪಕ್ಷ ಯುಧಿಷ್ಠಿರನು ತನ್ನ ಮನೆಯಲ್ಲಿ ತಮ್ಮಂದಿರ ಜೊತೆಯಲ್ಲಿ ಆಟವಾಡುತ್ತಿದ್ದಾಗ ಬಂದು ಅವನನ್ನು ಗೆದ್ದಿದ್ದರೆ ಆಗ ಕೌರವರಿಗೆ ಅದು ಧರ್ಮಜಯವಾಗುತ್ತಿದ್ದಿತು.
ಸಮಾಹೂಯ ತು ಕೌಂತೇಯಂ ಕ್ಷತ್ರಧರ್ಮರತಂ ಸದಾ|
ನಿಕೃತ್ಯಾ ಜಿತವಂತಸ್ತೇ ಕಿನ್ನು ತೇಷಾಂ ಕೃತಂ ಶುಭಮ್ ||8||
ಸದಾ ಕ್ಷತ್ರಿಯಧರ್ಮದಲ್ಲಿ ನಿಷ್ಠನಾದ ಕುಂತಿಯ ಪುತ್ರನಾದ ಯುಧಿಷ್ಠಿರನನ್ನು ಕರೆದು ಮೋಸದಿಂದ ಅವರು ಗೆದ್ದರು. ಅವರು ಯಾವ ಶುಭವನ್ನು ಮಾಡಿದ್ದಾರೆ?
ಕಥಂ ಪ್ರಣಿಪತೇಚ್ಚಾಯಮಿಹ ಕೃತ್ವಾ ಪಣಂ ಪರಮ್|
ವನವಾಸಾದ್ ವಿಮುಕ್ತಃ ಸನ್ ಪ್ರಾಪ್ತಃ ಪೈತಾಮಹಂ ಪದಮ್ ||9||
ಅಂತಹ ದೊಡ್ಡ ಪ್ರತಿಜ್ಞೆಯನ್ನು ಮಾಡಿ ವನವಾಸವನ್ನು ಮುಗಿಸಿ ಪಿತಾಮಹರ ರಾಜ್ಯವನ್ನು ಪಡೆಯಲು ಅಧಿಕಾರವನ್ನು ಹೊಂದಿದ ಈ ಯುಧಿಷ್ಠಿರನು ಅವರಿಗೆ ಹೇಗೆ ತಲೆಬಾಗಿಯಾನು?
ಯದ್ಯಯಂ ಪರವಿತ್ತಾನಿ ಕಾಮಯೇತ ಯುಧಿಷ್ಠಿರಃ|
ಏವಮಪ್ಯಯಮತ್ಯಂತಂ ಪರಾನ್ ಪ್ರಣಿಪತೇನ್ನ ಹಿ ||10||
ಒಂದುಪಕ್ಷ ಈ ಯುಧಿಷ್ಠಿರನು ಪರಧನವನ್ನು ಬಯಸಿದರೂ ಅವನು ಎಂದೂ ಶತ್ರುಗಳಿಗೆ ನಮಸ್ಕಾರವನ್ನು ಮಾಡಲಾರ.
ಕಥಂ ನು ಧರ್ಮಯುಕ್ತಾಸ್ತೇ ನ ಚ ರಾಷ್ಟ್ರಂ ಜಿಹೀರ್ಷವಃ|
ನಿವೃತ್ತವನವಾಸಾಂಸ್ತಾನ್ ಯ ಆಹುರ್ವಿಜಿತಾ ಇತಿ ||11||
ಪಾಂಡವರು ವನವಾಸವನ್ನು ಮುಗಿಸಿದರೂ ಇನ್ನೂ ಮುಗಿಸಿಲ್ಲ ಎಂದು ಹೇಳುವ ಅವರು ಹೇಗೆ ಧರ್ಮಯುಕ್ತರಾಗುತ್ತಾರೆ? ಹೇಗೆ ರಾಷ್ಟ್ರವನ್ನು ಅಪಹರಿಸುವವರಾಗುವುದಿಲ್ಲ?
ಅನುನೀತಾ ಹಿ ಭೀಷ್ಮೇಣ ದ್ರೋಣೇನ ವಿದುರೇಣ ಚ|
ನ ವ್ಯವಸ್ಯಂತಿ ಪಾಂಡೂನಾಂ ಪ್ರದಾತುಂ ಪೈತೃಕಂ ವಸು ||12||
ಭೀಷ್ಮರೂ, ದ್ರೋಣರೂ ಮತ್ತು ವಿದುರರೂ ಒಳ್ಳೆಯ ಮಾತುಗಳನ್ನು ಆಡಿದರೂ ಪಾಂಡುಪುತ್ರರಿಗೆ ಅವರ ಪಿತ್ರಾರ್ಜಿತವಾದ ಸಂಪತ್ತನ್ನು ಕೊಡಲು ಅವರು ಬಯಸುತ್ತಿಲ್ಲ.
ಅಹಂ ತು ತಾನ್ ಶಿತೈರ್ಬಾಣೈರನುನೀಯ ರಣೇ ಬಲಾತ್|
ಪಾದಯೋಃ ಪಾತಯಿಷ್ಯಾಮಿ ಕೌಂತೇಯಸ್ಯ ಮಹಾತ್ಮನಃ ||13||
ನಾನಾದರೂ ನಿಶಿತವಾದ ಬಾಣಗಳಿಂದ, ನನ್ನ ಬಲದಿಂದ ಯುದ್ಧದಲ್ಲಿ ಅವರನ್ನು ಬಗ್ಗಿಸಿ ಮಹಾತ್ಮನಾದ ಯುಧಿಷ್ಠಿರನ ಪಾದಗಳ ಮೇಲೆ ಬೀಳುವಂತೆ ಮಾಡುವೆನು.
ಅಥ ತೇ ನ ವ್ಯವಸ್ಯಂತಿ ಪ್ರಣಿಪಾತಾಯ ಧೀಮತಃ|
ಗಮಿಷ್ಯಂತಿ ಸಹಾಮಾತ್ಯಾ ಯಮಸ್ಯ ಸದನಂ ಪ್ರತಿ ||14||
ಒಂದುಪಕ್ಷ ಅವರು ಮೇಧಾವಿಯಾದ ಅವನ ಪಾದಗಳಿಗೆ ನಮಸ್ಕರಿಸಲು ಬಯಸದಿದ್ದರೆ ತಮ್ಮ ಮಂತ್ರಿಗಳ ಜೊತೆಯಲ್ಲಿ ಅವರು ಯಮಪಟ್ಟಣಕ್ಕೆ ಹೋಗುವರು.
ನ ಹಿ ತೇ ಯುಯುಧಾನಸ್ಯ ಸಂರಬ್ಧಸ್ಯ ಯುಯುತ್ಸತಃ|
ವೇಗಂ ಸಮರ್ಥಾಃ ಸಂಸೋಢುಂ ವಜ್ರಸ್ಯೇವ ಮಹೀಧರಾಃ ||15||
ಪರ್ವತಗಳು ವಜ್ರಾಯುಧದ ವೇಗವನ್ನು ತಡೆಯಲು ಹೇಗೆ ಸಾಧ್ಯವಿಲ್ಲವೋ ಅದರಂತೆ ಕೋಪದಿಂದ ಯುದ್ಧವನ್ನು ಮಾಡುವ ಯುಯುಧಾನನಾದ ನನ್ನ ವೇಗವನ್ನು ತಡೆಯಲು ಅವರಿಗೆ ಸಾಧ್ಯವಿಲ್ಲ.
ಕೋ ಹಿ ಗಾಂಡೀವಧನ್ವಾನಂ ಕೋ ಹಿ ಚಕ್ರಾಯುಧಂ ಯುಧಿ|
ಮಾಂ ಚಾಪಿ ವಿಷಹೇತ್ ಕೋ ನು ಕಶ್ಚ ಭೀಮಂ ದುರಾಸದಮ್ ||
ಗಾಂಡೀವಧನ್ವನಾದ ಅರ್ಜುನನನ್ನಾಗಲೀ, ಚಕ್ರಾಯುಧನಾದ ಕೃಷ್ಣನನ್ನಾಗಲೀ ಯುದ್ಧದಲ್ಲಿ ಯಾರು ತಡೆದಾರು? ನನ್ನನ್ನಾಗಲೀ ಅಥವಾ ಸಮೀಪಕ್ಕೆ ಹೋಗಲೂ ಸಾಧ್ಯವಿಲ್ಲದ ಭೀಮನನ್ನಾಗಲೀ ಯಾರು ತಡೆದಾರು?
ಯಮೌ ಚ ದೃಢಧನ್ವಾನೌ ಯಮಕಲ್ಪೌ ಮಹಾದ್ಯುತೀ|
ಕೋ ಜಿಜೀವಿಷುರಾಸೀದೇದ್ ಧೃಷ್ಟದ್ಯುಮ್ನಂ ಚ ಪಾರ್ಷತಮ್ ||17||
ಮಹಾಕಾಂತಿಯುಕ್ತರಾದ ಯಮನಂತಿರುವ ದೃಢಧನುಸ್ಸನ್ನು ಹೊಂದಿದ ನಕುಲ ಸಹದೇವರನ್ನಾಗಲೀ ಅಥವಾ ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನಾಗಲೀ ಬದುಕಲು ಇಚ್ಛಿಸುವ ಯಾವನು ತಾನೇ ಯುದ್ಧದಲ್ಲಿ ಸಮೀಪಿಸಿಯಾನು?
ಪಂಚೇಮಾನ್ ಪಾಂಡವೇಯಾಂಶ್ಚ ದ್ರೌಪದ್ಯಾಃ ಕೀರ್ತಿವರ್ಧನಾನ್|
ಸಮಪ್ರಾಣಾನ್ ಪಾಂಡವೈರ್ಯೇ ಸಮಧೈರ್ಯಾನ್ ಮದೋತ್ಕಟಾನ್||
ಸೌಭದ್ರಂ ಚ ಮಹೇಷ್ವಾಸಮಮರೈರಪಿ ದುಃಸಹಮ್|

ಗದಪ್ರದ್ಯುಮ್ನಸಾಂಬಾಂಶ್ಚ ಕಾಲವಜ್ರಾನಲೋಪಮಾನ್ ॥19॥
ದ್ರೌಪದಿಯ ಕೀರ್ತಿವರ್ಧನರಾದ ಮದೋತ್ಕಟರಾದ ತಂದೆಗಳಾದ ಪಾಂಡವರಿಗೆ ಸಮಾನವಾದ ಪ್ರಾಣಬಲವನ್ನು ಮತ್ತು ಧೈರ್ಯವನ್ನು ಹೊಂದಿದ ಮದೋತ್ಕಟರಾದ ಈ ಐವರು ಉಪಪಾಂಡವರನ್ನಾಗಲೀ, ದೇವತೆಗಳೂ ತಡೆಯಲು ಸಾಧ್ಯವಿಲ್ಲದ ಮಹಾಧನುಷ್ಕನಾದ ಸುಭದ್ರೆಯ ಪುತ್ರನಾದ ಅಭಿಮನ್ಯುವನ್ನಾಗಲೀ ಮೃತ್ಯುವಿನಂತೆ, ವಜ್ರಾಯುಧದಂತೆ ಅಗ್ನಿಯಂತೆ ಇರುವ ಗದ, ಪ್ರದ್ಯುಮ್ನ, ಸಾಂಬನನ್ನಾಗಲೀ ಯುದ್ಧದಲ್ಲಿ ಯಾರು ಎದುರಿಸಿಯಾರು?
ತೇ ವಯಂ ಧೃತರಾಷ್ಟ್ರಸ್ಯ ಪುತ್ರಾನ್ ಶಕುನಿನಾ ಸಹ |
ಕರ್ಣೇನ ಚ ನಿಹತ್ಯಾಜಾವಭಿಷೇಕ್ಷ್ಯಾಮ ಪಾಂಡವಮ್ ॥20॥
ಅಂತಹ ನಾವು ಧೃತರಾಷ್ಟ್ರ ಪುತ್ರರನ್ನು, ಕರ್ಣ ಮತ್ತು ಶಕುನಿಗಳ ಜೊತೆಯಲ್ಲಿ ಯುದ್ಧದಲ್ಲಿ ಸಂಹಾರ ಮಾಡಿ ಪಾಂಡುಪುತ್ರನಾದ ಧರ್ಮರಾಜನಿಗೆ ಪಟ್ಟಾಭಿಷೇಕವನ್ನು ಮಾಡೋಣ.
ನಾಧರ್ಮೋ ವಿದ್ಯತೇ ಕಶ್ಚಿತ್ ಶತ್ರೂನ್ ಹತ್ವಾಽಽತತಾಯಿನಃ |
ಅಧರ್ಮಮಯಶಸ್ಯಂ ಚ ಶಾತ್ರವಾಣಾಂ ಪ್ರಯಾಚನಮ್ ॥21॥
ಮೋಸಗಾರರಾದ ಶತ್ರುಗಳನ್ನು ಕೊಂದರೆ ಯಾವ ಅಧರ್ಮವೂ ಉಂಟಾಗುವುದಿಲ್ಲ. ಆದರೆ ಶತ್ರುಗಳನ್ನು ಬೇಡುವುದು ಮಾತ್ರ ಅಧರ್ಮ ಮತ್ತು ಅಕೀರ್ತಿಕರವಾದುದು.
ಹೃದ್ಗತಸ್ತ್ವಸ್ಯ ಯಃ ಕಾಮಸ್ತಂ ಕುರುಧ್ವಮತಂದ್ರಿತಾಃ |
ಧಾರ್ತರಾಷ್ಟ್ರೋ ಹ್ಯಯುದ್ಧೇನ ನ ರಾಜ್ಯಂ ದಾತುಮಿಚ್ಛತಿ ॥22॥
ಎಲೈ ರಾಜರೇ, ಈ ಯುಧಿಷ್ಠಿರನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಶೀಘ್ರವಾಗಿ ನೆರವೇರಿಸಿ. ದುರ್ಯೋಧನನು ಯುದ್ಧವಿಲ್ಲದೇ ರಾಜ್ಯವನ್ನು ಕೊಡಲು ಎಂದೂ ಬಯಸುವುದಿಲ್ಲ.
ಅದ್ಯ ಪಾಂಡುಸುತೋ ರಾಜ್ಯಂ ಲಭತಾಂ ವಾ ಯುಧಿಷ್ಠಿರಃ |
ನಿಹತಾ ವಾ ರಣೇ ಮತ್ವಾ ಸ್ವಪ್ಸ್ಯಾಮೋ ವಸುಧಾತಳೇ ॥23॥
ಈ ದಿನ ಪಾಂಡುಪುತ್ರನಾದ ಯುಧಿಷ್ಠಿರನು ರಾಜ್ಯವನ್ನು ಪಡೆಯಲಿ ಅಥವಾ ನಾವು ಶತ್ರುಗಳನ್ನು ಮರ್ದಿಸಿ ಯುದ್ಧದಲ್ಲಿ ಮೃತರಾಗಿ ಭೂತಳದಲ್ಲಿ ಮಲಗೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತೃತೀಯೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ದ್ರುಪದನಿಂದ ಧೃತರಾಷ್ಟ್ರನ ಬಳಿಗೆ ತನ್ನ ಪುರೋಹಿತನನ್ನು ಕಳುಹಿಸಲು ನಿರ್ಧಾರ
ದ್ರುಪದಃ
ಏವಮೇತನ್ಮಹಾಬಾಹೋ ಭವಿಷ್ಯತಿ ನ ಸಂಶಯಃ |
ನ ಹಿ ದುರ್ಯೋಧನೋ ರಾಜ್ಯಂ ಮಧುರೇಣ ಪ್ರದಾಸ್ಯತಿ ॥1॥
ದ್ರುಪದ ಮಹಾಬಾಹುವೇ, ಇದು ಹೀಗೆಯೇ ಆಗುವುದು. ಇದರಲ್ಲಿ ಸಂಶಯವಿಲ್ಲ. ದುರ್ಯೋಧನನು ಮೃದುವಾದ ಮಾತುಗಳಿಂದ ರಾಜ್ಯವನ್ನು ಕೊಡುವುದಿಲ್ಲ.
ಅನುವರ್ತ್ಸ್ಯಂತಿ ತಂ ಚಾಪಿ ಧೃತರಾಷ್ಟ್ರಃ ಸುತಪ್ರಿಯಃ |
ಭೀಷ್ಮದ್ರೋಣೌ ಚ ಕಾರ್ಪಣ್ಯಾನ್ಮೌರ್ಖ್ಯಾದ್ ರಾಧೇಯಸೌಬಲೌ ॥2॥
ಸುತಪ್ರಿಯನಾದ ಧೃತರಾಷ್ಟ್ರನೂ, ದಾಕ್ಷಿಣ್ಯಕ್ಕೆ ಒಳಗಾದ ಭೀಷ್ಮ-ದ್ರೋಣರೂ ಮತ್ತು ಮೂರ್ಖರಾದ ಕರ್ಣ-ಶಕುನಿಗಳೂ ಸಹ ಅವನನ್ನು ಅನುಸರಿಸುವರು.
ಸಂಕರ್ಷಣಸ್ಯ ವಾಕ್ಯಂ ತು ಮಮ ಜ್ಞಾನೇ ನ ಯುಜ್ಯತೇ |
ಏತದ್ಧಿ ಪುರುಷೇಣಾಗ್ರೇ ಕಾರ್ಯಂ ಸುನಯಮಿಚ್ಛತಾ ॥3॥
ಬಲರಾಮನ ಮಾತುಗಳು ನನ್ನ ಬುದ್ಧಿಗೆ ಸರಿ ಎಂದು ತೋರುವುದಿಲ್ಲ. ಒಳ್ಳೆಯ ನ್ಯಾಯವನ್ನು, ಒಳ್ಳೆಯ ನೀತಿಯನ್ನು ಅನುಸರಿಸುವವನು ಮೊದಲು ಈ ಕಾರ್ಯವನ್ನು (ಮುಂದೆ ಹೇಳುವ ಕಾರ್ಯವನ್ನು) ಮಾಡಬೇಕು.
ನ ತು ವಾಚ್ಯೋ ಮೃದುವಚೋ ಧಾರ್ತರಾಷ್ಟ್ರಃ ಕಥಂಚನ |
ನ ಹಿ ಮಾರ್ದವಸಾಧ್ಯೋಽಸೌ ಪಾಪಬುದ್ಧಿರ್ಮತೋ ಮಮ ॥4॥
ದುರ್ಯೋಧನನನ್ನು ಕುರಿತು ಮೃದುವಾಗಿ ಮಾತನಾಡಬಾರದು. ಪಾಪಬುದ್ಧಿಯುಳ್ಳ ಅವನು ಎಂದೂ ಮೃದುವಾದ ಮಾತುಗಳಿಗೆ ಬಗ್ಗುವುದಿಲ್ಲ ಎಂದು ನನ್ನ ಅಭಿಪ್ರಾಯ.
ಗರ್ದಭೇ ಮಾರ್ದವಂ ಕುರ್ಯಾದ್ ಗೋಷು ತೈಕ್ಷ್ಣ್ಯಂ ಸಮಾಚರೇತ್|
ಮೃದು ದುರ್ಯೋಧನೇ ವಾಕ್ಯಂ ಯೋ ಬ್ರೂಯಾತ್ ಪಾಪಚೇತಸಿ ॥
ಯಾವನು ಪಾಪಬುದ್ಧಿಯುಳ್ಳ ದುರ್ಯೋಧನನ ಜೊತೆಯಲ್ಲಿ ಮೃದುವಾಗಿ ಮಾತನಾಡುವನೋ ಅವನು ಕತ್ತೆಯನ್ನು ಮೃದುವಾಗಿ ನಡೆಸಿಕೊಂಡು ಗೋವನ್ನು ಉಗ್ರವಾಗಿ ನಡೆಸಿಕೊಳ್ಳುವನು.
ಮೃದುಂ ವೈ ಮನ್ಯತೇ ಪಾಪೋ ಭಾಷಮಾಣಮಶಕ್ತಿಕಮ್ |
ಜಿತಮರ್ಥಂ ವಿಜಾನೀಯಾದ್ ದುರ್ಬುದ್ಧಿರ್ಮಾರ್ದವೇ ಸತಿ ॥6॥

ಮೃದುವಾಗಿ ಮಾತನಾಡುವವನನ್ನು ಪಾಪಬುದ್ಧಿಯುಳ್ಳ ಅವನು ಅಶಕ್ತನೆಂದು ತಿಳಿಯುತ್ತಾನೆ. ದುರ್ಬುದ್ಧಿಯುಳ್ಳ ಅವನು ಮೃದುವಾಗಿ ಮಾತನಾಡಿದರೆ ತಾನು ಪಡೆದ ಅರ್ಥವು ತನ್ನ ಬಳಿಯಲ್ಲಿ ಸ್ಥಿರವಾಗಿ ಜಿತವಾಗಿದೆ ಎಂದು ಭಾವಿಸುತ್ತಾನೆ.
ಏತಚ್ಚೈವಂ ಕರಿಷ್ಯಾಮೋ ಯತ್ನಶ್ಚ ಕ್ರಿಯತಾಮಿಹ |
ಪ್ರಸ್ಥಾಪಯಾಮ ಮಿತ್ರೇಭ್ಯೋ ಬಲಾನ್ಯುದ್ಯೋಜಯಂತು ನಃ ॥7॥
ಆದ್ದರಿಂದ ಹೀಗೆ ಮಾಡೋಣ. ಈ ವಿಷಯದಲ್ಲಿ ಎಲ್ಲರೂ ಪ್ರಯತ್ನವನ್ನು ಮಾಡಿ. ನಮ್ಮ ಮಿತ್ರರಿಗೆ ದೂತರನ್ನು ಕಳುಹಿಸೋಣ ಮತ್ತು ನಮ್ಮ ಸೈನ್ಯಗಳನ್ನು ಸಜ್ಜುಗೊಳಿಸುವಂತೆ ಮಾಡೋಣ.
ಶಲ್ಯಸ್ಯ ಧೃಷ್ಟಕೇತೋಶ್ಚ ದ್ಯುಮತ್ಸೇನಸ್ಯ ಚಾಭಿಭೋ |
ಕೈಕಯಾನಾಂ ಚ ಸರ್ವೇಷಾಂ ದೂತಾ ಗಚ್ಛಂತು ಶೀಘ್ರಗಾಃ ॥8॥
ಶಲ್ಯ, ಧೃಷ್ಟಕೇತು, ದ್ಯುಮತ್ಸೇನ ಎಲ್ಲಾ ಕೈಕಯ ರಾಜರು ಇವರ ಬಳಿಗೆ ಎಲೈ ಜಯಶೀಲನಾದವನೇ, ಶೀಘ್ರಗಾಮಿಗಳಾದ ದೂತರನ್ನು ಕಳುಹಿಸೋಣ.
ಸೋಽಪಿ ದುರ್ಯೋಧನೋ ನೂನಂ ಪ್ರೇಷಯಿಷ್ಯಂತಿ ಸರ್ವಶಃ |
ಪೂರ್ವಾಭಿಪನ್ನಾಃ ಸಂತಶ್ಚ ಭಜಂತೇ ಪೂರ್ವಚೋದಕಮ್ ॥9॥
ಆ ದುರ್ಯೋಧನನೂ ಕೂಡ ಎಲ್ಲ ಕಡೆಗಳಲ್ಲಿಯೂ ದೂತರನ್ನು ಕಳುಹಿಸುವನು. ನಾವು ನಮ್ಮ ದೂತರ ಮೂಲಕ ಮೊದಲೇ ಆ ರಾಜರನ್ನು ಸಮೀಪಿಸಿದರೆ ಸಜ್ಜನರಾದ ಮೊದಲು ಬಂದು ಅವರು ನಮಗೇ ಸಹಾಯವನ್ನು ಮಾಡುತ್ತಾರೆ.
ತತ್ ತ್ವರಧ್ವಂ ನರೇಂದ್ರಾಣಾಂ ಪೂರ್ವಮೇವ ಪ್ರಚೋದನೇ |
ಮಹದ್ಧಿ ಕಾರ್ಯಂ ವೋಢವ್ಯಮಿತಿ ಮೇ ವರ್ತತೇ ಮತಿಃ ॥10॥
ಆದ್ದರಿಂದ ರಾಜರ ಬಳಿಗೆ ದೂತರನ್ನು ಕಳುಹಿಸುವ ವಿಷಯದಲ್ಲಿ ಎಲ್ಲರೂ ತ್ವರೆ ಮಾಡಿ. ದೊಡ್ಡ ಕಾರ್ಯಭಾರವನ್ನು ಹೊರಬೇಕಾಗಿದೆ ಎಂದು ನನಗೆ ತೋರುತ್ತಿದೆ.
ಶಲ್ಯಸ್ಯ ಪ್ರೇಷ್ಯತಾಂ ಶೀಘ್ರಂ ಯೇ ಚ ತಸ್ಯಾನುಗಾ ನೃಪಾಃ |
ಭಗದತ್ತಾಯ ರಾಜ್ಞೇ ಚ ಪೂರ್ವಸಾಗರವಾಸಿನೇ ॥11॥
ಶೀಘ್ರವಾಗಿ ಶಲ್ಯನಿಗೂ ಅವನ ವಶವರ್ತಿಗಳಾದ ರಾಜರಿಗೂ ಮತ್ತು ಪೂರ್ವಸಾಗರನಿವಾಸಿಯಾದ ಭಗದತ್ತರಾಜನ ಬಳಿಗೂ ಸಹ ದೂತರನ್ನು ಕಳುಹಿಸಿ.
ಅಮಿತೌಜಸೇ ತಥೋಗ್ರಾಯ ಹಾರ್ದಿಕ್ಯಾಯಾಹುಕಾಯ ಚ |
ದೀರ್ಘಪ್ರಜ್ಞಾಯ ಶೂರಾಯ ರೋಚಮಾನಾಯ ವಾ ವಿಭೋ ॥12॥
ಅಮಿತೌಜಸ್, ಉಗ್ರಸೇನ, ಕೃತವರ್ಮ, ಆಹುಕ, ದೀರ್ಘಪ್ರಜ್ಞ, ರೋಚಮಾನ ಇವರ ಬಳಿಗೂ ಎಲೈ ವಿಭುವೇ, ದೂತರನ್ನು ಕಳುಹಿಸು.
ಆನೀಯತಾಂ ಬೃಹಂತಶ್ಚ ಸೇನಾಬಿಂದುಶ್ಚ ವೀರ್ಯವಾನ್ |
ಸೇನಜಿತ್ ಪ್ರತಿವಿಂಧ್ಯಶ್ಚ ಚಿತ್ರವರ್ಮಾ ಮಹಾರಥಃ ॥13॥
ಬೃಹಂತ, ಪರಾಕ್ರಮಶಾಲಿಯಾದ ಸೇನಾಬಿಂದು, ಸೇನಜಿತ್, ಪ್ರತಿವಿಂಧ್ಯ, ಮಹಾರಥನಾದ ಚಿತ್ರವರ್ಮ ಇವರನ್ನೂ ನಮ್ಮ ಕಡೆಗೆ ಕರೆದುಕೊಂಡು ಬನ್ನಿ.
ಬಾಹ್ಲೀಕೋ ಮುಂಜಕೇಶಶ್ಚ ಚೈದ್ಯಾಧಿಪತಿರೇವ ಚ |
ಸುಪಾರ್ಶ್ವಶ್ಚ ಸುಬಾಹುಶ್ಚ ಪೌರವಶ್ಚ ಮಹಾರಥಃ ॥14॥
ಬಾಹ್ಲೀಕ, ಮುಂಜಕೇಶ, ಚೈದ್ಯಾಧಿಪತಿ (ಶಿಶುಪಾಲನ ಮಗ), ಸುಪಾರ್ಶ್ವ, ಸುಬಾಹು, ಮಹಾರಥನಾದ ಪೌರವ;
ಶಕಾನಾಂ ಪಲ್ಲವಾನಾಂ ಚ ದರದಾನಾಂ ಚ ಯೇ ನೃಪಾಃ |
ಸುರಾರಿಶ್ಚ ನದೀಜಶ್ಚ ಕರ್ಣವೇಷ್ಟಶ್ಚ ಪಾರ್ಥಿವಃ ॥15॥
ಶಕರ, ಪಲ್ಲವರ ಮತ್ತು ದರದರ ರಾಜರು, ಸುರಾರಿ, ನದೀಜ ಮತ್ತು ಕರ್ಣವೇಷ್ಟ;
ಸಮರ್ಥಶ್ಚ ಸುವೀರಶ್ಚ ಮಾರ್ಜರಃ ಕಪಿಶಸ್ತಥಾ |
ಮಹಾವೀರ್ಯಃ ಸುಕದ್ರುಶ್ಚ ನಿಶ್ಚಕ್ರಶ್ಚ ತಥಾ ಕ್ರಥಃ ॥16॥
ಸಮರ್ಥ, ಸುವೀರ, ಮಾರ್ಜರ ಮತ್ತು ಕಪಿಶ, ಮಹಾಪರಾಕ್ರಮಿಯಾದ ಸುಕದ್ರು, ನಿಶ್ಚಕ್ರ ಮತ್ತು ಕ್ರಥ;
ನೀಲಶ್ಚ ವೀರಧರ್ಮಾ ಚ ಭೂಮಿಪಾಲಶ್ಚ ವೀರ್ಯವಾನ್ |
ದುರ್ಜಯೋ ದಂತವಕ್ರಶ್ಚ ರುಗ್ಮೀ ಚ ಜನಮೇಜಯಃ ॥17॥
ನೀಲ, ವೀರಧರ್ಮ ಮತ್ತು ಪರಾಕ್ರಮಶಾಲಿಯಾದ ಭೂಮಿಪಾಲ, ದುರ್ಜಯ, ದಂತವಕ್ರ, ರುಗ್ಮೀ ಮತ್ತು ಜನಮೇಜಯ;
ಆಷಾಢೋ ವಾಯುವೇಗಶ್ಚ ಪೂರ್ವಪಾಲೀ ಚ ಪಾರ್ಥಿವಃ |
ಭೂರಿತೇಜಾ ದೇವಕಶ್ಚ ಏಕಲವ್ಯಃ ಸಹಾತ್ಮಜೈಃ ॥18॥
ಆಷಾಢ, ವಾಯುವೇಗ, ಪೂರ್ವಪಾಲಿ, ಭೂರಿತೇಜ, ದೇವಕ ಮತ್ತು ತನ್ನ ಪುತ್ರರಿಂದ ಕೂಡಿದ ಏಕಲವ್ಯ.
ಕಾರೂಶಕಾಶ್ಚ ರಾಜಾನಃ ಕ್ಷೇಮಧೂರ್ತಿಶ್ಚ ವೀರ್ಯವಾನ್ |
ಕಾಂಭೋಜಾ ಋಷಿಕಾ ಯೇ ಚ ಪಶ್ಚಿಮಾನೂಪಕಾಶ್ಚ ಯೇ ॥19॥
ಕಾರೂಶದೇಶದ ರಾಜರು, ಪರಾಕ್ರಮಶಾಲಿಯಾದ ಕ್ಷೇಮಧೂರ್ತಿ, ಕಾಂಭೋಜ ದೇಶದ ರಾಜರು, ಋಷೀಕ ದೇಶದ ರಾಜರು ಮತ್ತು ಪಶ್ಚಿಮ ಸಮುದ್ರ ತೀರದ ರಾಜರು.
ಜಯತ್ಸೇನಶ್ಚ ಕಾಶ್ಯಶ್ಚ ತಥಾ ಪಾಂಚನದಾ ನೃಪಾಃ |
ಕ್ರಾಥಪುತ್ರಶ್ಚ ದುರ್ಧರ್ಷಃ ಪಾರ್ವತೀಯಾಶ್ಚ ಯೇ ನೃಪಾಃ ॥20॥

ಜಯತ್ಸೇನ, ಕಾಶಿರಾಜ ಮತ್ತು ಪಂಚನದಗಳ ರಾಜರು, ಕ್ರಥಪುತ್ರನಾದ ದುರ್ಧರ್ಷ ಮತ್ತು ಪರ್ವತದೇಶದ ರಾಜರು.
ಜಾನಕಿಶ್ಚ ಸುಶರ್ಮಾ ಚ ಮಣಿಮಾನ್ ಪೂತಿಮತ್ಸ್ಯಕಃ |
ಪಾಂಸುರಾಷ್ಟ್ರಾಧಿಪಶ್ಚೈವ ಧೃಷ್ಟಕೇತುಶ್ಚ ವೀರ್ಯವಾನ್ ॥21॥
ಜಾನಕಿ, ಸುಶರ್ಮ, ಮಣಿಮಾನ್, ಪೂತಿಮತ್ಸ್ಯಕ, ಪಾಂಸುರಾಷ್ಟ್ರಾಧಿಪತಿ, ಪರಾಕ್ರಮಶಾಲಿಯಾದ ಧೃಷ್ಟಕೇತು (ಧ್ರುತಕೇತು);
ಔಡ್ರಕಃ ಕುಂಡಧಾರಶ್ಚ ಬೃಹತ್ಸೇನಶ್ಚ ವೀರ್ಯವಾನ್ |
ಅಪರಾಜಿತೋ ನಿಷಾದಶ್ಚ ಶ್ರೇಣಿಮಾನ್ ವಸುಮಾನಪಿ ॥22॥
ಔಡ್ರಕ, ಕುಂಡಧಾರ, ಪರಾಕ್ರಮಶಾಲಿಯಾದ ಬೃಹತ್ಸೇನ, ಅಪರಾಜಿತ, ನಿಷಾದ, ಶ್ರೇಣಿಮಾನ್ ಮತ್ತು ವಸುಮಾನ್;
ಬೃಹದ್ಬಲೋ ಬೃಹತ್ತೇಜಾ ಬಾಹುಃ ಪರಪುರಂಜಯಃ |
ಸಮುದ್ರಸೇನೋ ರಾಜಾ ಚ ಸಹ ಪುತ್ರೇಣ ವೀರ್ಯವಾನ್ ॥23॥
ಬೃಹದ್ಬಲ, ಬೃಹತ್ತೇಜ ಮತ್ತು ಶತ್ರುಜಯಶಾಲಿಯಾದ ಬಾಹು ಮತ್ತು ಪರಾಕ್ರಮಶಾಲಿಯಾದ ತನ್ನ ಪುತ್ರರಿಂದ ಕೂಡಿದ ಸಮುದ್ರಸೇನ.
ಉದ್ಭವಃ ಕ್ಷೇಮಕಶ್ಚೈವ ವಾಟಧಾನಶ್ಚ ವೀರ್ಯವಾನ್ |
ಶ್ರುತಾಯುಶ್ಚ ದೃಢಾಯುಶ್ಚ ಸಾಲ್ವಪುತ್ರಶ್ಚ ವೀರ್ಯವಾನ್ ॥24॥
ಉದ್ಭವ, ಕ್ಷೇಮಕ, ಪರಾಕ್ರಮಶಾಲಿಯಾದ ವಾಟಧಾನ, ಶ್ರುತಾಯು, ದೃಢಾಯು ಮತ್ತು ಪರಾಕ್ರಮಶಾಲಿಯಾದ ಸಾಲ್ವಪುತ್ರರು.
ಕುಮಾರಶ್ಚ ಕಳಿಂಗಾನಾಮೀಶ್ವರೋ ಯುದ್ಧದುರ್ಮದಃ |
ಸಮರ್ಥಶ್ಚ ಪರಾನ್ ಜೇತುಂ ಕಾಂಕ್ಷೋ ವೀರ್ಯಬಲೋತ್ಕಟಃ ॥25॥
ಕಳಿಂಗದೇಶದ ರಾಜನಾದ ಯುದ್ಧದುರ್ಮದನಾದ ಕುಮಾರ, ಶತ್ರುಗಳನ್ನು ಜಯಿಸಲು ಸಮರ್ಥನಾದ ವೀರ್ಯ, ಬಲಗಳಿಂದ ಉತ್ಕಟನಾದ ಕಾಂಕ್ಷರಾಜ;
ಮಹಾವೀರ್ಯಃ ಸುಕದ್ರುಶ್ಚ ನೀಚಕಸ್ತುಮುಲಸ್ತಥಾ |
ನೀಲಶ್ಚ ವೀರಧನ್ವಾ ಚ ಭೂಮಿಪಾಲಶ್ಚ ವೀರ್ಯವಾನ್ ॥26॥
ಮಹಾವೀರ್ಯ, ಸುಕದ್ರು, ನೀಚಕ ಮತ್ತು ತುಮುಲ, ನೀಲ, ವೀರಧನ್ವ ಮತ್ತು ಪರಾಕ್ರಮಶಾಲಿಯಾದ ಭೂಮಿಪಾಲ.
ಏತೇಷಾಂ ಪ್ರೇಷ್ಯತಾಂ ಶೀಘ್ರಮೇತದ್ಧಿ ಮಮ ರೋಚತೇ |
ಅಯಂ ಚ ಬ್ರಾಹ್ಮಣೋ ವಿದ್ವಾನ್ ಮಮ ರಾಜನ್ ಪುರೋಹಿತಃ ॥
ಪ್ರೇಷ್ಯತಾಂ ಧೃತರಾಷ್ಟ್ರಾಯ ವಾಕ್ಯಮಸ್ಮೈ ಪ್ರಯುಜ್ಯತಾಮ್ |
ಯಥಾ ದುರ್ಯೋಧನೋ ವಾಚ್ಯೋ ಯಥಾ ಶಾಂತನವೋ ನೃಪಃ ॥
ಧೃತರಾಷ್ಟ್ರೋ ಯಥಾ ವಾಚ್ಯೋ ದ್ರೋಣಶ್ಚ ರಥಿನಾಂ ವರಃ ॥29॥
ಈ ಎಲ್ಲ ರಾಜರು ಬಳಿಗೂ ಶೀಘ್ರವಾಗಿ ದೂತರನ್ನು ಕಳುಹಿಸಬೇಕೆಂದು ನನಗೆ ತೋರುತ್ತದೆ. ಎಲೈ ರಾಜನೇ, ವಿದ್ವಾಂಸನೂ ಮತ್ತು ಬ್ರಾಹ್ಮಣನೂ ಆದ ಈ ನನ್ನ ಪುರೋಹಿತನು ಧೃತರಾಷ್ಟ್ರನ ಬಳಿಗೆ ಕಳುಹಿಸಲ್ಪಡಲಿ. ಧೃತರಾಷ್ಟ್ರನಿಗೆ ಹೇಳಬೇಕಾದ ಮಾತುಗಳನ್ನು ಅವನಿಗೆ ತಿಳಿಸೋಣ. ಹಾಗೆಯೇ ದುರ್ಯೋಧನನ ಜೊತೆಯಲ್ಲಿ ಹೇಗೆ ಮಾತನಾಡಬೇಕು, ಭೀಷ್ಮರ ಜೊತೆಯಲ್ಲಿ, ಧೃತರಾಷ್ಟ್ರನ ಜೊತೆಯಲ್ಲಿ, ರಥಿಶ್ರೇಷ್ಠರಾದ ದ್ರೋಣರ ಜೊತೆಯಲ್ಲಿ ಹೇಗೆ ಮಾತನಾಡಬೇಕು ಎಂಬುದನ್ನೂ ಅವನಿಗೆ ತಿಳಿಸೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ಥೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

ಐದನೆಯ ಅಧ್ಯಾಯ
ದ್ರುಪದನ ವಾಕ್ಯವನ್ನು ಅನುಮೋದಿಸಿ ಕೃಷ್ಣನ ದ್ವಾರಕಾಗಮನ
ಮತ್ತು ಎರಡೂ ಪಕ್ಷಗಳ ರಾಜರ ಆಗಮನ.

ವೈಶಂಪಾಯನಃ
ದ್ರುಪದೇನೈವಮುಕ್ತೇ ತು ವಾಕ್ಯೇ ವಾಕ್ಯವಿದಾಂ ವರಃ |
ವಸುದೇವಸುತಸ್ತತ್ರ ವೃಷ್ಣಿಸಿಂಹೋಽಬ್ರವೀದಿದಮ್ ॥1॥
ವೈಶಂಪಾಯನ ದ್ರುಪದನು ಹೀಗೆ ಮಾತನಾಡಿದ ಮೇಲೆ ಮಾತನಾಡುವವರಲ್ಲಿ ಶ್ರೇಷ್ಠನಾದ ವೃಷ್ಣಿಸಿಂಹನಾದ ವಸುದೇವ ಸುತನಾದ ಕೃಷ್ಣನು ಹೀಗೆ ಮಾತನಾಡಿದನು.
ವಾಸುದೇವಃ
ಉಪಪನ್ನಮಿದಂ ವಾಕ್ಯಂ ಸೋಮಕಾನಾಂ ಧುರಂಧರೇ |
ಅರ್ಥಸಿದ್ಧಿಕರಂ ರಾಜ್ಞಃ ಪಾಂಡವಸ್ಯಾಮಿತೌಜಸಃ ॥2॥
ವಾಸುದೇವ ಅಮಿತಪರಾಕ್ರಮಿಯಾದ ಯುಧಿಷ್ಠಿರನ ಅರ್ಥಸಿದ್ಧಿಕರವಾದ ಸೋಮಕರ ಅಗ್ರಗಣ್ಯನಾದ ದ್ರುಪದನು ಹೇಳಿದ ಮಾತುಗಳು ಯುಕ್ತವಾಗಿವೆ.
ಏತಚ್ಚ ಪೂರ್ವಂ ಕಾರ್ಯಂ ನಃ ಸುನೀತಿಮಭಿಕಾಂಕ್ಷತಾಮ್ |
ಅನ್ಯಥಾ ಹ್ಯಾಚರನ್ ಕರ್ಮ ಪುರುಷಃ ಸ್ಯಾತ್ ಸುಬಾಲಿಶಃ ॥3॥
ಒಳ್ಳೆಯ ರಾಜನೀತಿಯನ್ನು ಅಪೇಕ್ಷಿಸುವ ನಾವು ಮೊದಲು ಈ ಕಾರ್ಯವನ್ನು ಮಾಡಬೇಕು. ಇಂತಹ ಸಂದರ್ಭದಲ್ಲಿ ಬೇರೆ

ರೀತಿಯಲ್ಲಿ ನಡೆದುಕೊಳ್ಳುವ ಪುರುಷನು ಬಾಲಿಶನೆನಿಸುವನು.
ಕಿಂತು ಸಂಬಂಧಕಂ ತುಲ್ಯಮಸ್ಮಾಕಂ ಕುರುಪಾಂಡುಷು |
ಯಥೇಷ್ಟಂ ವರ್ತಮಾನೇಷು ಪಾಂಡವೇಷು ಚ ತೇಷು ಚ ||4||
ಆದರೆ ತಮ್ಮ ತಮ್ಮ ಇಚ್ಛೆಯಂತೆ ನಡೆದುಕೊಂಡು ಹೋಗುತ್ತಿರುವ ಪಾಂಡವರಲ್ಲಿ ಮತ್ತು ಕೌರವರಲ್ಲಿ ನಮ್ಮ ಸಂಬಂಧವು ಸಮಾನವಾಗಿದೆ.
ತೇ ವಿವಾಹಾರ್ಥಮಾನೀತಾ ವಯಂ ಸರ್ವೇ ಯಥಾ ಭವಾನ್ |
ಕೃತೇ ವಿವಾಹೇ ಮುದಿತಾ ಗಮಿಷ್ಯಾಮೋ ಗೃಹಾನ್ ಪ್ರತಿ ||5||
ದ್ರುಪದನೇ, ನಿನ್ನಂತೆ ನಾವೂ ಸಹ ಅಭಿಮನ್ಯುವಿನ ವಿವಾಹಕ್ಕೋಸ್ಕರವಾಗಿ ಆಮಂತ್ರಿತರಾಗಿ ಬಂದವರು. ವಿವಾಹವು ಮುಗಿಯುತ್ತಿರಲು ಎಲ್ಲರೂ ಸಂತೋಷದಿಂದ ನಮ್ಮ ನಮ್ಮ ಮನೆಗಳಿಗೆ ಹಿಂದಿರುಗೋಣ.
ಭವಾನ್ ವೃದ್ಧತರೋ ರಾಜ್ಞಾಂ ವಯಸಾ ಚ ಶ್ರುತೇನ ಚ |
ಶಿಷ್ಯವತ್ ತೇ ವಯಂ ಸರ್ವೇ ಭವಾಮೇಹ ನ ಸಂಶಯಃ ||6||
ನೀನು ವಯಸ್ಸಿನಿಂದಲೂ ಮತ್ತು ಜ್ಞಾನದಿಂದಲೂ ರಾಜರಲ್ಲಿ ವೃದ್ಧನಾದವನು. ನಾವೆಲ್ಲರೂ ನಿನ್ನ ಶಿಷ್ಯರಂತೆ ಇರುವೆವು. ಈ ವಿಷಯದಲ್ಲಿ ಸಂಶಯವಿಲ್ಲ.
ಭವಂತಂ ಧೃತರಾಷ್ಟ್ರಶ್ಚ ಸತತಂ ಬಹುಮನ್ಯತೇ |
ಆಚಾರ್ಯಯೋಃ ಸಖಾ ಚಾಸಿ ದ್ರೋಣಸ್ಯ ಚ ಕೃಪಸ್ಯ ಚ ||7||
ನೀನು ಆಚಾರ್ಯರಾದ ದ್ರೋಣರ ಮತ್ತು ಕೃಪರ ಸ್ನೇಹಿತನಾಗಿದ್ದೀಯೆ ಎಂಬ ಕಾರಣದಿಂದ ಧೃತರಾಷ್ಟ್ರನು ಯಾವಾಗಲೂ ನಿನ್ನನ್ನು ಗೌರವಿಸುತ್ತಾನೆ.
ಸ ಭವಾನ್ ಪ್ರೇಷಯತ್ವದ್ಯ ಪಾಂಡವಾರ್ಥಕರಂ ವಚಃ |
ಸರ್ವೇಷಾಂ ನಿಶ್ಚಿತಂ ತನ್ನಃ ಪ್ರೇಷಯಿಷ್ಯತಿ ಯದ್ ಭವಾನ್ ||8||
ಅಂತಹ ನೀನು ಪಾಂಡವರಿಗೆ ಅರ್ಥಸಿದ್ಧಿಕರವಾದ ಸಂದೇಶವನ್ನು ಈ ದಿನ ಎಲ್ಲ ಕಡೆ ಕಳುಹಿಸು. ನೀನು ಯಾವ ಸಂದೇಶವನ್ನು ಕಳುಹಿಸುವೆಯೋ ಅದು ನಮ್ಮೆಲ್ಲರಿಗೂ ಸಮ್ಮತವಾಗಿರುತ್ತದೆ.
ಯದಿ ತಾವಚ್ಛಮಂ ಕುರ್ಯಾನ್ನ್ಯಾಯೇನ ಕುರುಪುಂಗವಃ |
ನ ಭವೇತ್ ಕುರುಪಾಂಡೂನಾಂ ಸೌಭ್ರಾತ್ರೇಣ ಮಹಾನ್ ಕ್ಷಯಃ ||9||
ಕುರುಶ್ರೇಷ್ಠನಾದ ದುರ್ಯೋಧನನು ಒಳ್ಳೆಯ ನೀತಿಯನ್ನು ಅನುಸರಿಸಿ ಸಂಧಿಯನ್ನು ಮಾಡಿಕೊಳ್ಳುವುದಾದರೆ ಆಗ ಸೌಭ್ರಾತ್ರದ ಕಾರಣದಿಂದಾಗಿ ಕುರುಪಾಂಡವರ ದೊಡ್ಡ ವಿನಾಶವು ಉಂಟಾಗುವುದಿಲ್ಲ.
ಅಥ ದರ್ಪಾನ್ವಿತೋ ಮೋಹಾನ್ನ ಕುರ್ಯಾದ್ ಧೃತರಾಷ್ಟ್ರಜಃ |
ಅನ್ಯೇಷಾಂ ಪ್ರೇಷಯಿತ್ವಾ ಚ ಪಶ್ಚಾದಸ್ಮಾನ್ ಸಮಾಹ್ವಯೇತ್ ||10||
ಇನ್ನು ದುರ್ಯೋಧನನು ದರ್ಪದಿಂದ ಕೂಡಿದವನಾಗಿ ರಾಜ್ಯಮೋಹದಿಂದ ನಮ್ಮ ಮಾತನ್ನು ನಡೆಸಿಕೊಡದಿದ್ದರೆ ನೀನು ಮೊದಲು ಬೇರೆ ರಾಜರ ಬಳಿಗೆ ದೂತರನ್ನು ಕಳುಹಿಸಿ ಅನಂತರ ನಮ್ಮ ಬಳಿಗೆ ಕಳುಹಿಸು (ದುರ್ಯೋಧನನು ಬೇರೆ ರಾಜರ ಬಳಿಗೆ ತನ್ನ ದೂತರನ್ನು ಕಳುಹಿಸಿ ಅನಂತರ ನಮ್ಮನ್ನು ಯುದ್ಧಕ್ಕೆ ಆಹ್ವಾನ ಮಾಡಿಯಾನು).
ತತೋ ದುರ್ಯೋಧನೋ ಮಂದಃ ಸಹಾಮಾತ್ಯಃ ಸಬಾಂಧವಃ |
ನಿಷ್ಠಾಮಾಪತ್ಸ್ಯತೇ ಮೂಢಃ ಕ್ರುದ್ಧೇ ಗಾಂಡೀವಧನ್ವನಿ ||11||
ಹಾಗಾದರೆ ಗಾಂಡೀವಧನ್ವನಾದ ಅರ್ಜುನನು ವೃದ್ಧನಾಗುತ್ತಿರಲು ಮೂಢನೂ ಮತ್ತು ಮಂದನೂ ಆದ ದುರ್ಯೋಧನನು ತನ್ನ ಬಾಂಧವರ ಮತ್ತು ಅಮಾತ್ಯರ ಜೊತೆಯಲ್ಲಿ ವಿನಾಶವನ್ನು ಹೊಂದುವನು.
ವೈಶಂಪಾಯನಃ
ತತಃ ಸತ್ಕೃತ್ಯ ವಾರ್ಷ್ಣೇಯಂ ವಿರಾಟಃ ಪೃಥಿವೀಪತಿಃ |
ಗೃಹಾನ್ ಪ್ರಸ್ಥಾಪಯಾಮಾಸ ಸಗಣಂ ಸಹಬಾಂಧವಮ್ ||12||
ವೈಶಂಪಾಯನ ಅನಂತರ ಪೃಥಿವೀಪತಿಯಾದ ವಿರಾಟನು ಕೃಷ್ಣನಿಗೆ ವಿವಾಹಕ್ಕೆ ಬಂದುದಕ್ಕಾಗಿ ಸತ್ಕಾರ ಮಾಡಿ ಅವನ ಪರಿವಾರ ಮತ್ತು ಬಂಧುಗಳ ಜೊತೆಯಲ್ಲಿ ಅವನನ್ನು ಹಿಂದಕ್ಕೆ ಕಳುಹಿಸಿದನು.
ದ್ವಾರಕಾಂ ತು ಗತೇ ಕೃಷ್ಣೇ ಯುಧಿಷ್ಠಿರಪುರೋಗಮಾಃ |
ಚಕ್ರುಃ ಸಾಂಗ್ರಾಮಿಕಂ ಕರ್ಮ ವಿರಾಟಶ್ಚ ಮಹೀಪತಿಃ ||13||
ಕೃಷ್ಣನು ದ್ವಾರಕೆಗೆ ಹೊರಟುಹೋಗುತ್ತಿರಲು ಯುಧಿಷ್ಠಿರ ಮೊದಲಾದವರು ಮತ್ತು ವಿರಾಟರಾಜನೂ ಸಹ ಯುದ್ಧಕ್ಕೆ ಉಪಯುಕ್ತವಾದ ಕಾರ್ಯಗಳನ್ನು ಆರಂಭಿಸಿದರು.
ತತಃ ಸಂಪ್ರೇಷಯಾಮಾಸ ವಿರಾಟಃ ಸಹ ಬಾಂಧವೈಃ |
ಸರ್ವೇಷಾಂ ಭೂಮಿಪಾಲಾನಾಂ ದ್ರುಪದಶ್ಚ ಮಹೀಪತಿಃ ||14||
ಅನಂತರ ವಿರಾಟರಾಜನು ಮತ್ತು ದ್ರುಪದರಾಜನು ತಮ್ಮ ಬಂಧುಗಳ ಜೊತೆಯಲ್ಲಿ ಎಲ್ಲ ರಾಜರಿಗೂ ತಮ್ಮ ದೂತರನ್ನು ಕಳುಹಿಸಿದರು.
ವಚನಾತ್ ಕುರುಸಿಂಹಸ್ಯ ಮತ್ಸ್ಯಪಾಂಚಾಲಯೋಸ್ತಥಾ |
ಸಮಾಜಗ್ಮುರ್ಮಹೀಪಾಲಾಃ ಸಂಪ್ರಹೃಷ್ಟಾ ಮಹಾಬಲಾಃ ||15||
ಕುರುಸಿಂಹನಾದ ಯುಧಿಷ್ಠಿರನ ಮಾತಿನಂತೆ ಹಾಗೆಯೇ ಮತ್ಸ್ಯ-ಪಾಂಚಾಲ ದೇಶದ ಅಧಿಪತಿಯಾದ ವಿರಾಟ ಮತ್ತು ದ್ರುಪದರ

ಮಾತಿನಂತೆ ರಾಜರು ಸಂತೋಷಗೊಂಡು ಮಹಾಸೈನ್ಯಗಳ ಸಮೇತರಾಗಿ ಆಗಮಿಸಿದರು.
ತಚ್ಛ್ರುತ್ವಾ ಪಾಂಡುಪುತ್ರಾಣಾಂ ಸಮಾಗಚ್ಛನ್ಮಹಾಬಲಮ್ |
ಧೃತರಾಷ್ಟ್ರಸುತಶ್ಚಾಪಿ ಸಮಾನಿನ್ಯೇ ಮಹೀಪತೀನ್ ॥16॥
ಪಾಂಡುಪುತ್ರರ ಬಳಿಗೆ ದೊಡ್ಡ ಸೈನ್ಯಗಳು ಬರುತ್ತಿವೆ ಎಂಬುದನ್ನು ತಿಳಿದ ದುರ್ಯೋಧನನೂ ರಾಜರನ್ನು ತನ್ನ ಬಳಿಗೆ ಕರೆತಂದನು.
ಸಮಾಕುಲಾ ಮಹೀ ರಾಜನ್ ಕುರುಪಾಂಡವಕಾರಣಾತ್ |
ತದಾ ಸಮಭವತ್ ಕೃತ್ಸ್ನಾ ಸಂಪ್ರಯಾಣೇ ಮಹೀಕ್ಷಿತಾಮ್ ॥17॥
ಸಂಕುಲಾ ಚ ತದಾ ಭೂಮಿಃ ಚತುರಂಗಬಲಾನ್ವಿತಾ ॥18॥
ಎಲೈ ಜನಮೇಜಯ ರಾಜನೇ, ಕುರುಪಾಂಡವರ ನಿಮಿತ್ತದಿಂದಾಗಿ ಎಲ್ಲ ರಾಜರೂ ತಮ್ಮ ಸೈನ್ಯದ ಜೊತೆಯಲ್ಲಿ ಹೊರಡುತ್ತಿರಲು ಭೂಮಿಯು ಆ ಸೈನ್ಯಗಳಿಂದ ತುಂಬಿತು. ಆಗ ಭೂಮಿಯು ಚತುರಂಗಯುಕ್ತವಾದ ಸೈನ್ಯದಿಂದ ನಿಬಿಡವಾಯಿತು.
ಬಲಾನಿ ತೇಷಾಂ ಭೀಮಾನಿ ಆಗಚ್ಛಂತಿ ತತಸ್ತತಃ |
ಚಾಲಯಂತೀವ ಗಾಂ ದೇವೀಂ ಸಪರ್ವತವನಾಮಿಮಾಮ್ ॥19॥
ಆ ರಾಜರ ಸೈನ್ಯಗಳು ಬೇರೆ ಬೇರೆ ದೇಶಗಳಿಂದ ಬರುತ್ತಿರಲು ಪರ್ವತ, ವನ ಸಹಿತವಾದ ಈ ಭೂಮಿಯು ನಡುಗುವಂತೆ ತೋರಿತು.
ತತಃ ಪ್ರಜ್ಞಾವಯೋವೃದ್ಧಂ ಪಾಂಚಾಲ್ಯಃ ಸ್ವಪುರೋಹಿತಮ್ |
ಕುರುಭ್ಯಃ ಪ್ರೇಷಯಾಮಾಸ ಯುಧಿಷ್ಠಿರಮತೇ ಸ್ಥಿತಃ ॥20॥
ಅನಂತರ ಪಾಂಚಾಲಾಧಿಪತಿಯಾದ ದ್ರುಪದನು ಯುಧಿಷ್ಠಿರನ ಅಭಿಪ್ರಾಯವನ್ನು ತಿಳಿದವನಾಗಿ ಜ್ಞಾನವೃದ್ಧನೂ ಮತ್ತು ವಯೋವೃದ್ಧನೂ ಆದ ತನ್ನ ಪುರೋಹಿತನನ್ನು ಕುರುಗಳ ಬಳಿಗೆ ಸಂಧಾನಕ್ಕಾಗಿ ಕಳುಹಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಮೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - ಅಧ್ಯಾಯ 24
ತತಃ ಸಮ್ಮಂತ್ರ್ಯಾನುಮತೇ ಕೃಷ್ಣಸ್ಯ ಸ್ವಪುರೋಹಿತಮ್ |
ದ್ರುಪದಃ ಪ್ರೇಷಯಾಮಾಸ ಧೃತರಾಷ್ಟ್ರಾಯ ಶಾಂತಯೇ ॥1॥
ಬಳಿಕ ದ್ರುಪದರಾಜ ಚೆನ್ನಾಗಿ ಮಂತ್ರಾಲೋಚನೆ ಮಾಡಿ ಕೃಷ್ಣನ ಅನುಮತಿಯಿಂದ ತನ್ನ ಪುರೋಹಿತನನ್ನು ಧೃತರಾಷ್ಟ್ರನ ಬಳಿಗೆ ಸಂಧಿಗಾಗಿ ಕಳಿಸಿದ.
ಸ ಗತ್ವಾ ಧೃತರಾಷ್ಟ್ರಂ ತಂ ಭೀಷ್ಮದ್ರೋಣಾದಿಭಿರ್ಯುತಮ್ |
ಉವಾಚ ನ ವಿರೋಧಸ್ತ ಉತ್ಪಾದ್ಯೋ ಧರ್ಮಸೂನುನಾ ॥2॥
ದ್ರುಪದನ ಪುರೋಹಿತ ಹಸ್ತಿನಾವತಿಗೆ ಹೋಗಿ ಭೀಷ್ಮ-ದ್ರೋಣಾದಿ ಸಮೇತ ಕುಳಿತಿದ್ದ ಧೃತರಾಷ್ಟ್ರನಿಗೆ ಹೇಳಿದ,
`ಧರ್ಮರಾಜನೊಂದಿಗೆ ವಿರೋಧ ಮಾಡಬೇಡ.
ಯಸ್ಯ ಭೀಮಾರ್ಜುನೋ ಯೋಧೌ ನೇತಾ ಯಸ್ಯ ಜನಾರ್ದನಃ |
ಶ್ರುತಾಸ್ತೇ ಭೀಮನಿಹತಾ ಜರಾಸಂಧಾದಯೋಽಖಿಲಾಃ ॥3॥
ಧರ್ಮರಾಜನಿಗೆ ಭೀಮಾರ್ಜುನರು ಯೋಧರು. ಶ್ರೀಕೃಷ್ಣ ಮಾರ್ಗದರ್ಶಕ. ಜರಾಸಂಧಾದಿ ರಾಜರು ಎಲ್ಲರೂ ಭೀಮನಿಂದ ಹತರಾಗಿರುವುದನ್ನು ನೀನೇ ಕೇಳಿರುವಿ.
ಯಥಾ ಚ ರುದ್ರವಚನಾದವಧ್ಯಾ ರಾಕ್ಷಸಾಧಿಪಾಃ ॥4॥
ತೀರ್ಥವಿಘ್ನಕರಾಃ ಸರ್ವತೀರ್ಥಾನ್ಯಾಚ್ಛಾದ್ಯ ಸಂಸ್ಥಿತಾಃ
ತಿಸ್ರಃ ಕೋಟ್ಯೋ ಮಹಾವೀರ್ಯಾ ಭೀಮಸೇನ ನಿಸೂದಿತಾಃ ॥5॥
ಭ್ರಾತೄಣಾಂ ಬ್ರಾಹ್ಮಣಾನಾಂ ಚ ಲೋಕಾನಾಂ ಚ ಹಿತೈಷಿಣಾ |
ತತೋ ಹಿ ಸರ್ವತೀರ್ಥಾನಿ ಗಮ್ಯಾನ್ಯಾಸನ್ ನೃಣಾಂ ಕ್ಷಿತೌ ॥6॥
ರುದ್ರವರದಿಂದ ಅವಧ್ಯರೆನಿಸಿದ, ಮಹಾಬಲಿಷ್ಠರಾದ ಮೂರುಕೋಟಿ ಮಹಾರಾಕ್ಷಸರು ಎಲ್ಲ ತೀರ್ಥಕ್ಷೇತ್ರಗಳಲ್ಲಿ ವಿಘ್ನ ಉಂಟುಮಾಡುತ್ತ ಸುತ್ತಮುತ್ತ ಆವರಿಸಿದ್ದರು. ಸೋದರರರಿಗೂ ಬ್ರಾಹ್ಮಣರಿಗೂ ಲೋಕದ ಜನರಿಗೂ ಹಿತವನ್ನು ಬಯಸಿ ಭೀಮನೇ ಅವರೆಲ್ಲರನ್ನೂ ಸಂಹರಿಸಿದ. ಅದರಿಂದ ಈಗ ಭೂಮಿಯಲ್ಲಿ ಎಲ್ಲ ತೀರ್ಥಕ್ಷೇತ್ರಗಳೂ ಮನುಷ್ಯರಿಗೆ ಹೋಗಿಬರಲು ಶಕ್ಯವಾಗಿವೆ.
ಯಥಾ ಜಟಾಸುರಃ ಪಾಪಃ ಶರ್ವಾಣೀವರಸಂಶ್ರಯಾತ್|
ಅವಧ್ಯೋ ವಿಪ್ರರೂಪೇಣ ವಂಚಯನ್ನೇವ ಪಾಂಡವಾನ್ ॥7॥
ಪಾಪಿಯಾದ ಜಟಾಸುರ ಪಾರ್ವತಿಯ ವರಬಲದಿಂದ ಅವಧ್ಯನಾಗಿದ್ದು ಬ್ರಾಹ್ಮಣರೂಪದಿಂದ ಪಾಂಡವರನ್ನು ವಂಚಿಸುತ್ತಲೆ ಇದ್ದ.
ಜ್ಞಾತ್ವಾऽಪಿ ಭೀಮಸೇನೇನ ವಿಪ್ರರೂಪಸ್ಯ ನೋ ವಧಃ |
ಯೋಗ್ಯ ಇತ್ಯಹತೋ ಭೀಮೇ ಮೃಗಯಾರ್ಥಂ ಗತೇ ಕ್ವಚಿತ್ ॥8॥
ಯಮೌ ಯುಧಿಷ್ಠಿರಂ ಕೃಷ್ಣಾಂ ಚಾऽದಾಯೈವ ಪರಾದ್ರವತ್ |
ದೃಷ್ಟೋ ಭೀಮಸೇನೇನ ತಾಂಸ್ತ್ಯಕ್ತ್ವ ಸಂಸಕ್ತಸ್ತೇನ ಸಂಗರೇ ॥9॥
ಭೀಮ ಇದನ್ನು ತಿಳಿದೂ ಕೂಡ `ಬ್ರಾಹ್ಮಣ ವೇಷ ಧರಿಸಿದ್ದಾನೆ, ಕೊಲ್ಲುವುದು ಸರಿಯಲ್ಲ' ಎಂದು ಕೊಲ್ಲದೆ ಬಿಟ್ಟಿದ್ದ. ಒಂದು ದಿನ ಭೀಮ ಬೇಟೆಗೆ ಹೋಗಿದ್ದಾಗ ಜಟಾಸುರ ನಕುಲ, ಸಹದೇವರನ್ನೂ ಧರ್ಮರಾಜನನ್ನೂ ದ್ರೌಪದಿಯನ್ನೂ ಎತ್ತಿಕೊಂಡು ಓಡಿದ.

ಭೀಮ ತನ್ನನ್ನು ಕಂಡಾಗ ಅವರನ್ನು ಬಿಟ್ಟು ಭೀಮನೊಡನೆ ಯುದ್ಧಕ್ಕೆ ನಿಂತ.
ನಿಪಾತ್ಯ ಭೂವೌ ಪಾದೇನ ಸಂಚೂರ್ಣಿತಶಿರಸ್ತಮಃ |
ಜಗಾಮ ಕಿಮು ತೇ ಪುತ್ರಾಃ ಶಕ್ಯಾ ಹಂತುಮಿತಿ ಸ್ಮ ಹ |
ನಿವಾತಕವಚಾಶ್ಚೈವ ಹತಾಃ ಪಾರ್ಥೇನ ತೇ ಶ್ರುತಾಃ ॥10॥
ಭೀಮ ಜಟಾಸುರನನ್ನು ನೆಲದಲ್ಲಿ ಕೆಡವಿ ತಲೆಯನ್ನು ಕಾಲಿಂದ ಪುಡಿಗೈದ. ಆತ ಅಂಧತಮಸ್ಸಿಗೆ ನಡೆದ. ಇಂಥ ಭೀಮನಿಗೆ ನಿನ್ನ ಮಕ್ಕಳನ್ನು ಕೊಲ್ಲುವುದು ಶಕ್ಯವೆಂದು ಬೇರೇನು ಹೇಳಬೇಕು? ನಿವಾತಕವಚರೂ ಅರ್ಜುನನಿಂದ ಹತರಾದುದನ್ನು ನೀನು ಕೇಳಿರುವಿ.
ಜಾನಾಸಿ ಚ ಹರೇರ್ವೀರ್ಯಂ ಯಸ್ಯೇದಮಖಿಲಂ ವಶೇ |
ಸಬ್ರಹ್ಮರುದ್ರಶಕ್ರಾದ್ಯಂ ಚೇತನಾಚೇತನಾತ್ಮಕಮ್ ॥11॥
ಶ್ರೀಕೃಷ್ಣನ ಶಕ್ತಿಯನ್ನೂ ನೀನು ಬಲ್ಲೆ. ಬ್ರಹ್ಮರುದ್ರ ಇಂದ್ರಾದಿ ಚೇತನಾ ಚೇತನಾತ್ಮಕ ಸಮಸ್ತ ಪ್ರಪಂಚ ಅವನ ವಶದಲ್ಲಿದೆ.
ತಸ್ಮಾದೇತೈಃ ಪಾಲಿತಸ್ಯ ಧರ್ಮಜಸ್ಯ ಸ್ವಕಂ ವಸು |
ದೀಯತಾಮಿತಿ ತೇನೋಕ್ತೋ ಧೃತರಾಷ್ಟ್ರೋ ನ ಚಾಕರೋತ್ ॥12॥
ಅದರಿಂದ ಭೀಮ, ಅರ್ಜುನ, ಕೃಷ್ಣರಿಂದ ರಕ್ಷಿತನಾಗಿರುವ ಧರ್ಮರಾಜನಿಗೆ ಅವನ ಸಂಪತ್ತನ್ನು ಕೊಟ್ಟುಬಿಡು. ಹೀಗೆ ದ್ರುಪದನ ಪುರೋಹಿತ ಹೇಳಿದರೂ ಧೃತರಾಷ್ಟ್ರ ಅದರಂತೆ ಮಾಡಲಿಲ್ಲ.
* * * * *
ಆರನೆಯ ಅಧ್ಯಾಯ
ದ್ರುಪದನಿಂದ ಅನುಶಿಷ್ಟನಾಗಿ ದ್ರುಪದ ಪುರೋಹಿತನ ಹಸ್ತಿನಪುರ ಗಮನ.
ದ್ರುಪದಃ
ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ |
ಬುದ್ಧಿಮತ್ಸು ನರಾಃ ಶ್ರೇಷ್ಠಾಃ ನರಾಣಾಂ ತು ದ್ವಿಜಾತಯಃ ॥1॥
ದ್ರುಪದ ಸೃಷ್ಟರಾದ ಜೀವರಲ್ಲಿ ಪ್ರಾಣಿಗಳು ಶ್ರೇಷ್ಠರು. ಪ್ರಾಣಿಗಳಲ್ಲಿ ಬುದ್ಧಿಯುಳ್ಳ ಪ್ರಾಣಿಗಳು ಶ್ರೇಷ್ಠವಾದವು. ಬುದ್ಧಿಯುಳ್ಳ ಪ್ರಾಣಿಗಳಲ್ಲಿ ಮನುಷ್ಯರು ಶ್ರೇಷ್ಠರಾದವರು. ಮನುಷ್ಯರಲ್ಲಿ ದ್ವಿಜಾತಿಗಳು ಶ್ರೇಷ್ಠರಾದವರು.
ದ್ವಿಜೇಷು ವೈದ್ಯಾಃ ಶ್ರೇಯಾಂಸೋ ವೈದ್ಯೇಷು ಕೃತಬುದ್ಧಯಃ |
ಕೃತಬುದ್ಧಿಸ್ತು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ ॥2॥
ದ್ವಿಜಾತಿಗಳಲ್ಲಿ ವೇದವಿದ್ಯೆಯನ್ನು ಬಲ್ಲವರು ಶ್ರೇಷ್ಠರು. ವೇದವಿದ್ಯಾವಂತರಲ್ಲಿ ಸುಶಿಕ್ಷಿತ ಬುದ್ಧಿಯುಳ್ಳವರು ಶ್ರೇಷ್ಠರು. ಸುಶಿಕ್ಷಿತ ಬುದ್ಧಿಯುಳ್ಳವರಲ್ಲಿ ಅದನ್ನು ಕಾರ್ಯಗತ ಮಾಡುವವರು ಶ್ರೇಷ್ಠರು. ಕಾರ್ಯಗತ ಮಾಡುವವರಲ್ಲಿ ಭಗವಂತನ ಜ್ಞಾನವನ್ನು ಪಡೆದವರು ಶ್ರೇಷ್ಠರು.
ಸ ಭವಾನ್ ಕೃತಬುದ್ಧೀನಾಂ ಪ್ರಧಾನ ಇತಿ ಮೇ ಮತಿಃ ॥3॥
ಕುಲೇನ ಚ ವಿಶಿಷ್ಟೋಽಸಿ ವಯಸಾ ಚ ಶ್ರುತೇನ ಚ |
ಪ್ರಜ್ಞಯಾ ಸದೃಶಶ್ಚಾಸಿ ಶುಕ್ರೇಣಾಂಗಿರಸೇನ ಚ ॥4॥
ನೀವಾದರೋ ಕೃತಬುದ್ಧಿಗಳಲ್ಲಿ ಪ್ರಧಾನರಾದವರು ಎಂದು ನನ್ನ ಅಭಿಪ್ರಾಯ. ನೀವು ಕುಲದಿಂದಲೂ, ವಯಸ್ಸಿನಿಂದಲೂ ಮತ್ತು ವಿದ್ಯೆಯಿಂದಲೂ ಬಹಳ ಶ್ರೇಷ್ಠರಾಗಿದ್ದೀರಿ. ನಿಮ್ಮ ಪ್ರಜ್ಞೆಯಲ್ಲಿ ನೀವು ಶುಕ್ರಾಚಾರ್ಯರಿಗೂ ಮತ್ತು ಬೃಹಸ್ಪತ್ಯಾಚಾರ್ಯರಿಗೂ ಸದೃಶರಾಗಿದ್ದೀರಿ.
ವಿದಿತಂ ಚಾಪಿ ತೇ ಸರ್ವಂ ಯಥಾವೃತ್ತಃ ಸ ಕೌರವಃ |
ಪಾಂಡವಶ್ಚ ಯಥಾವೃತ್ತಃ ಕುಂತೀಪುತ್ರೋ ಯುಧಿಷ್ಠಿರಃ ॥5॥
ನಿಮಗೆ ಕೌರವನ ಸ್ವಭಾವವು ಎಂತಹುದು ಎಂದೂ, ಕುಂತೀಪುತ್ರನಾದ ಪಾಂಡವನಾದ ಯುಧಿಷ್ಠಿರನ ಸ್ವಭಾವವು ಎಂತಹದು ಎಂದೂ ತಿಳಿದಿದೆ.
ಧೃತರಾಷ್ಟ್ರಸ್ಯ ವಿದಿತೇ ವಂಚಿತಾಃ ಪಾಂಡವಾಃ ಪರೈಃ |
ವಿದುರೇಣಾನುನೀತೋಽಪಿ ಪುತ್ರಮೇವಾನುವರ್ತತೇ ॥6॥
ಧೃತರಾಷ್ಟ್ರನಿಗೆ ಗೊತ್ತಿರುವಂತೆಯೇ ಪಾಂಡವರು ದುರ್ಯೋಧನಾದಿಗಳಿಂದ ವಂಚಿಸಲ್ಪಟ್ಟರು. ವಿದುರನು ಬುದ್ಧಿಯ ಮಾತುಗಳನ್ನು ಹೇಳಿದರೂ ಧೃತರಾಷ್ಟ್ರನು ಪುತ್ರನನ್ನೇ ಅನುಸರಿಸುತ್ತಾನೆ.
ಶಕುನಿರ್ಬುದ್ಧಿಪೂರ್ವಂ ಹಿ ಕುಂತೀಪುತ್ರಂ ಸಮಾಹ್ವಯತ್ |
ಅನಕ್ಷಜ್ಞಂ ಮತಾಕ್ಷಃ ಸನ್ ಕ್ಷತ್ರವೃತ್ತೇ ಸ್ಥಿತಂ ಶುಚಿಮ್ ॥7॥
ಅಕ್ಷವಿದ್ಯೆಯನ್ನು ತಿಳಿದವನೂ, ಕ್ಷತ್ರಿಯಧರ್ಮದಲ್ಲಿ ನಿರತನಾದವನೂ ಮತ್ತು ಶುಚಿಯೂ ಆದ ಕುಂತೀಪುತ್ರನಾದ ಯುಧಿಷ್ಠಿರನನ್ನು ಅಕ್ಷವಿದ್ಯೆಯನ್ನು ಬಲ್ಲ ಶಕುನಿಯು ಬುದ್ಧಿಪೂರ್ವಕವಾಗಿ ದ್ಯೂತಕ್ಕೆ ಆಹ್ವಾನ ಮಾಡಿದನು.
ತೇ ತಥಾ ವಂಚಯಿತ್ವಾ ತು ಧರ್ಮರಾಜಂ ಯುಧಿಷ್ಠಿರಮ್ |
ನ ಕಸ್ಯಾಂಚಿದವಸ್ಥಾಯಾಂ ರಾಜ್ಯಂ ದಾಸ್ಯಂತಿ ವೈ ಸ್ವಯಮ್ ॥8॥
ಅವರು ಯುಧಿಷ್ಠಿರನಿಗೆ ಆ ರೀತಿಯಲ್ಲಿ ವಂಚನೆ ಮಾಡಿ ಯಾವ ಕಾರಣದಿಂದಲೂ ಸ್ವತಃ ತಾವೇ ರಾಜ್ಯವನ್ನು ಕೊಡುವುದಿಲ್ಲ.
ಭವಾಂಸ್ತು ಧರ್ಮಸಂಯುಕ್ತಂ ಧೃತರಾಷ್ಟ್ರಂ ಬ್ರುವನ್ ವಚಃ |
ಮನಾಂಸಿ ತಸ್ಯ ಯೋಧಾನಾಂ ಧ್ರುವಮಾರ್ಜವಯಿಷ್ಯತಿ ॥9॥
ನೀವಾದರೂ ಧೃತರಾಷ್ಟ್ರನಿಗೆ ಧರ್ಮಯುಕ್ತವಾದ ಮಾತುಗಳನ್ನು ಆಡುತ್ತಾ ದುರ್ಯೋಧನನ ಯೋಧರ ಮನಸ್ಸನ್ನು ವಕ್ರತೆ

ಇಲ್ಲದಂತೆ ಮಾಡಬೇಕು.
ವಿದುರಶ್ಚಾಪಿ ತದ್ವಾಕ್ಯಂ ಸಾಧಯಿಷ್ಯತಿ ತಾವಕಮ್ |
ಭೀಷ್ಮದ್ರೋಣಕೃಪಾದೀನಾಂ ಭೇದಂ ಸಂಜನಯಿಷ್ಯತಿ ॥10॥
ವಿದುರನೂ ಸಹ ನಿಮ್ಮ ವಾಕ್ಯವನ್ನು ಸಮರ್ಥನೆ ಮಾಡುತ್ತಾನೆ. ಮತ್ತು ಭೀಷ್ಮ- ದ್ರೋಣ-ಕೃಪಾದಿಗಳಿಗೆ ಅಭಿಪ್ರಾಯ ಭೇದವುಂಟಾಗುವಂತೆ ಮಾಡುತ್ತಾನೆ.
ಅಮಾತ್ಯೇಷು ಚ ಭಿನ್ನೇಷು ಯೋಧೇಷು ವಿಮುಖೇಷು ಚ |
ಪುನರೈಕಾಗ್ರ್ಯಕರಣಂ ತೇಷಾಂ ಕರ್ಮ ಭವಿಷ್ಯತಿ ॥11॥
ತಮ್ಮ ಮಂತ್ರಿಗಳಲ್ಲಿ ಭೇದವುಂಟಾಗಿ, ತಮ್ಮ ಯೋಧರು ಯುದ್ಧದಿಂದ ವಿಮುಖರಾಗಿರಲು ಅವರನ್ನೆಲ್ಲಾ ಒಂದುಗೂಡಿಸಿ ಸಮಾಧಾನ ಪಡಿಸುವುದು ಕೌರವರ ಕಾರ್ಯವಾಗುವುದು.
ಏತಸ್ಮಿನ್ನಂತರೇ ಪಾರ್ಥಾಃ ಸುಖಮೇಕಾಗ್ರಬುದ್ಧಯಃ |
ಸೇನಾಕರ್ಮ ಕರಿಷ್ಯಂತಿ ದ್ರವ್ಯಾಣಾಂ ಚೈವ ಸಂಚಯಮ್ ॥12॥
ಈ ಮಧ್ಯದಲ್ಲಿ ಏಕಾಗ್ರಬುದ್ಧಿಯುಳ್ಳ ಪಾಂಡವರು ಸೈನ್ಯದ ಜಮಾವಣೆ ರೂಪವಾದ ಕಾರ್ಯವನ್ನು ಮತ್ತು ದ್ರವ್ಯಸಂಪಾದನೆಯ ಕಾರ್ಯವನ್ನು ಮಾಡುವರು.
ಭಿದ್ಯಮಾನೇಷು ಚ ಸ್ವೇಷು ಲಂಬಮಾನೇ ತಥಾ ತ್ವಯಿ |
ನ ತಥಾ ತೇ ಕರಿಷ್ಯಂತಿ ಸೇನಾಕರ್ಮ ನ ಸಂಶಯಃ ॥13॥
ತಮ್ಮವರಲ್ಲಿ ಭೇದವುಂಟಾಗಿ ನೀನು ಅಲ್ಲಿಯೇ ವಾಸ ಮಾಡುತ್ತಿರಲು ಅವರು ಸೇನಾಕರ್ಮವನ್ನು ಮಾಡುವುದಿಲ್ಲ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಏತತ್ ಪ್ರಯೋಜನಂ ಚಾತ್ರ ಪ್ರಾಪ್ಯಾನ್ಯೇನೋಪಲಭ್ಯತೇ |
ಸಂಗತ್ಯ ಧೃತರಾಷ್ಟ್ರಶ್ಚ ಕುರ್ಯಾದ್ ಧರ್ಮ್ಯಂ ವಚಸ್ತವ ॥14॥
ಸಂಧಿಕಾರ್ಯಕ್ಕೆ ದೂತನಾಗಿ ಹೋಗಿರುವುದರಿಂದ ಸೇನಾಕರ್ಮವನ್ನು ಅವರು ಮಾಡುವುದಿಲ್ಲ ಎಂಬುದೇ ನಮಗೆ ಪ್ರಯೋಜನವಾಗುತ್ತದೆ. ನಿನ್ನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಧೃತರಾಷ್ಟ್ರನೂ ಸಹ ನಿನ್ನ ಧರ್ಮಯುಕ್ತವಾದ ಮಾತುಗಳನ್ನು ನಡೆಸಿಕೊಡಬಹುದು.
ಸ ಭವಾನ್ ಧರ್ಮಯುಕ್ತಶ್ಚ ಸ್ಥವಿರಶ್ಚ ವಿಶೇಷವಿತ್ |
ಕೃಪಾಲೇಷು ಪರಿಕ್ಲೇಶಾನ್ ಪಾಂಡವೀಯಾನ್ ಪ್ರಕೀರ್ತಯನ್ ॥15॥
ವೃದ್ಧೇಷು ಕುಲಧರ್ಮಂ ಚ ಬ್ರುವನ್ ಪೂರ್ವೈರನುಷ್ಠಿತಮ್ |
ವಿಭೇತ್ಸ್ಯತಿ ಮನಾಂಸ್ಯೇಷಾಮಿತಿ ಮೇ ನಾತ್ರ ಸಂಶಯಃ ॥16॥
ಅಂತಹ ನೀನು ಧರ್ಮಯುಕ್ತನೂ, ವೃದ್ಧನೂ ಮತ್ತು ವಿದ್ವಾಂಸನೂ ಆಗಿದ್ದೀಯೆ. ಅಲ್ಲಿರುವ ಕೃಪಾಲುಗಳಲ್ಲಿ ಪಾಂಡವರ ವನವಾಸಾದಿಗಳ ಪರಿಕ್ಲೇಶವನ್ನು ಹೇಳುತ್ತಾ, ಹಿರಿಯರನ್ನು ಕುರಿತು ಹಿಂದಿನವರು ಮಾಡಿದ ಕುಲಧರ್ಮವನ್ನು ತಿಳಿಸುತ್ತಾ, ನೀವು ಅವರ ಮನಸ್ಸಿನಲ್ಲಿ ಪರಸ್ಪರ ವಿರೋಧವನ್ನು ಉಂಟುಮಾಡುವಿರಿ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ನ ಚ ತೇಭ್ಯೋ ಭಯಂ ತೇಽಸ್ತಿ ಬ್ರಾಹ್ಮಣೋ ಹ್ಯಸಿ ವೇದವಿತ್ |
ದೂತಕರ್ಮಣಿ ಯುಕ್ತಶ್ಚ ಸ್ಥವಿರಶ್ಚ ವಿಶೇಷತಃ ॥17॥
ನಿಮಗೆ ಅವರಿಂದ ಯಾವ ಭಯವೂ ಇಲ್ಲ. ಏಕೆಂದರೆ ನೀವು ಬ್ರಾಹ್ಮಣರಾಗಿದ್ದೀರಿ. ರಾಯಭಾರಿಯಾಗಿ ಹೋಗುತ್ತಿದ್ದೀರಿ ಮತ್ತು ವೃದ್ಧರಾಗಿದ್ದೀರಿ.
ಸ ಭವಾನ್ ಪುಷ್ಯಯೋಗೇನ ಮುಹೂರ್ತೇನ ಜಯೇನ ಚ |
ಕೌರವೇಯಾನ್ ಪ್ರಯಾತ್ವಾಶು ಕೌಂತೇಯಸ್ಯಾರ್ಥಸಿದ್ಧಯೇ ॥18॥
ಮತ್ತು ನೀವು ಸದ್ಯದಲ್ಲಿಯೇ ಚಂದ್ರನಿಗೆ ಪುಷ್ಯನಕ್ಷತ್ರದಲ್ಲಿರುವಾಗ ಜಯಪ್ರದವಾದ ಮುಹೂರ್ತದಲ್ಲಿ ಕುಂತೀಪುತ್ರನಾದ ಧರ್ಮರಾಜನ ಅರ್ಥಸಿದ್ಧಿಗಾಗಿ ಕೌರವರ ಸಮೀಪಕ್ಕೆ ಹೋಗಬೇಕು.
ವೈಶಂಪಾಯನಃ
ತಥಾಽನುಶಿಷ್ಟಃ ಪ್ರಯಯೌ ದ್ರುಪದೇನ ಮಹಾತ್ಮನಾ |
ಪುರೋಧಾ ವೃತ್ತಸಂಪನ್ನೋ ನಗರಂ ನಾಗಸಾಹ್ವಯಮ್ ॥19॥
ವೈಶಂಪಾಯನ ಮಹಾತ್ಮನಾದ ದ್ರುಪದನಿಂದ ಹಾಗೆ ಅನುಶಿಷ್ಟಗೊಂಡ ಒಳ್ಳೆಯ ನಡತೆಯುಳ್ಳ ಪುರೋಹಿತರು ಹಸ್ತಿನಾವತಿನಗರವನ್ನು ಕುರಿತು ಪ್ರಯಾಣವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಷ್ಠೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - ಅಧ್ಯಾಯ 24
ತತಃ ಸಹೈವ ಯದುಭಿಃ ಕೃಷ್ಣಂ ದ್ವಾರಾವತೀಂ ಗತಮ್ |
ಯುದ್ಧಸಾಹಾಯ್ಯಮಿಚ್ಛಂತೌ ಧಾರ್ತರಾಷ್ಟ್ರಧನಂಜಯೌ ॥13॥
ಯುಗಪದ್ ಯಯತುಸ್ತತ್ರ ವೇಗೇನಾಜಯದರ್ಜುನಮ್ |

ದುರ್ಯೋಧನಃ ಶಿರಸ್ಥಾನ ಆಸೀನೋಽಭೂದ್ವರೇಸ್ತದಾ |
ದರ್ಪಾನ್ನಾಹಂ ರಾಜರಾಜ ಉಪಾಸ್ಯೇ ಪಾದಯೋರಿತಿ ॥14॥
ಅದರಿಂದ ದುರ್ಯೋಧನ ಮತ್ತು ಅರ್ಜುನರಿಬ್ಬರೂ ಯುದ್ಧಕ್ಕೆ ಸಹಾಯವನ್ನು ಬಯಸಿ ಅಕಸ್ಮಾತ್ ಏಕಕಾಲದಲ್ಲಿ ಕೃಷ್ಣನ ಬಳಿ ಹೊರಟರು. ಕೃಷ್ಣ ಆಗ ಯಾದವರೊಂದಿಗೆ ದ್ವಾರಕೆಯಲ್ಲಿ ಇದ್ದ. ದುರ್ಯೋಧನ ವೇಗದಲ್ಲಿ ಅರ್ಜುನನನ್ನು ಮೀರಿಸಿದ. ನಾನು ರಾಜರಿಗೆ ರಾಜ. ಕೃಷ್ಣನ ಕಾಲುಗಳ ಬಳಿ ಕುಳಿತುಕೊಳ್ಳಲಾರೆ ಎಂದು ಅಹಂಕಾರದಿಂದ ತಲೆಯ ಬಳಿಯೆ ಕುಳಿತುಕೊಂಡ.
ತಯೋರಾಗಮನಂ ಪೂರ್ವಂ ಜ್ಞಾತ್ವೈವ ಹಿ ಹರಿಃ ಪ್ರಭುಃ |
ಅಸುಪ್ತಃ ಸುಪ್ತವಚ್ಛಿಶ್ಯೇ ತತ್ರಾತಿಷ್ಠದ್ ಧನಂಜಯಃ ॥15॥
ಪ್ರಣಮ್ಯ ಪಾದಯೋಃ ಪ್ರಹ್ವೋ ಭಕ್ತ್ಯುದ್ರೇಕಾತ್ ಕೃತಾಂಜಲಿಃ ॥16॥
ಅರ್ಜುನ ದುರ್ಯೋಧನರಿಬ್ಬರ ಆಗಮನವನ್ನು ಮೊದಲಿಗೆ ತಿಳಿದೇ ಇದ್ದ ಪ್ರಭು ಶ್ರೀಕೃಷ್ಣ ನಿದ್ರೆ ಇಲ್ಲದವನಾದರೂ ನಿದ್ರಿಸುವನಂತೆ ಮಲಗಿದ್ದ. ಅರ್ಜುನ ಭಕ್ತ್ಯುದ್ರೇಕದಿಂದ ಕೃಷ್ಣನ ಪಾದಗಳಿಗೆ ನಮಿಸಿ ಬಾಗಿ ಕೈಮುಗಿದು ನಿಂತುಕೊಂಡ.
ತಮ್ಯೈಕ್ಷತ್ ಪ್ರಥಮಂ ದೇವೋ ಜಾನನ್ನಪಿ ಸುಯೋಧನಮ್ |
ಸ್ವಾಗತಂ ಫಲ್ಗುನೇತ್ಯುಕ್ತೇ ಪೂರ್ವಮಾಗಾಮಹಂ ತ್ವಿತಿ ॥17॥
ಆಹ ದುರ್ಯೋಧನಸ್ತಂ ಚ ಸ್ವಾಗತೇನಾಭ್ಯಪೂಜಯತ್ ॥18॥
ದುರ್ಯೋಧನ ಮೊದಲಿಗೆ ಬಂದಿದ್ದನ್ನು ತಿಳಿದೂ ಕೂಡ ಶ್ರೀಕೃಷ್ಣ ಮೊದಲಿಗೆ ಅರ್ಜುನನನ್ನು ಕಂಡು `ಅರ್ಜುನ! ನಿನಗೆ ಸ್ವಾಗತ' ಎಂದ. ದುರ್ಯೋಧನನೆಂದ, `ನಾನೇ ಮೊದಲಿಗೆ ಬಂದಿರುವೆ' ಶ್ರೀಕೃಷ್ಣ ಅವನಿಗೂ ಸ್ವಾಗತ ಹೇಳಿ ಸತ್ಕರಿಸಿದ.
ತಯೋರಾಗಮನೇ ಹೇತುಂ ಶ್ರುತ್ವಾ ಪ್ರಾಹ ಜನಾರ್ದನಃ |
ಏಕಃ ಪೂರ್ವಾಗತೋಽತ್ರಾನ್ಯಃ ಪೂರ್ವದೃಷ್ಟೋ ಮಯಾ ಯತಃ ॥|19॥
ಸಮಂ ಕರಿಷ್ಯೇ ಯುವಯೋರೇಕತ್ರಾಹಂ ನಿರಾಯುಧಃ |
ಅನ್ಯತ್ರ ದಶಲಕ್ಷಂ ಮೇ ಪುತ್ರಾಃ ಶೂರಾಃ ಪದಾತಯಃ ॥20॥
ಶ್ರೀಕೃಷ್ಣ ಅರ್ಜುನ ದುರ್ಯೋಧನರಿಬ್ಬರ ಆಗಮನದ ಉದ್ದೇಶವನ್ನೂ ಕೇಳಿ `ಒಬ್ಬ ಮೊದಲಿಗೆ ಬಂದಿದ್ದಾನೆ. ಒಬ್ಬ ಮೊದಲಿಗೆ ಕಣ್ಣಿಗೆ ಬಿದ್ದಿದ್ದಾನೆ. ಅದರಿಂದ ನಿಮಗಿಬ್ಬರಿಗೂ ಸಮಾನವಾಗಿಯೆ ಸಹಾಯ ಮಾಡುವೆನು. ಒಂದು ಕಡೆ ನಿರಾಯುಧನಾದ ನಾನಿರುವೆ. ಇನ್ನೊಂದು ಕಡೆ ಹತ್ತು ಲಕ್ಷ ಮಂದಿ ಶೂರರಾದ ನನ್ನ ಮಕ್ಕಳ ಸೈನ್ಯ' ಎಂದ.
ಇತ್ಯುಕ್ತೇ ಫಲ್ಗುನಃ ಕೃಷ್ಣಂ ವವ್ರೇ ತದ್ಭಕ್ತಿಮಾನ್ ಯತಃ |
ಅನ್ಯಸ್ತತ್ರಾಭಕ್ತಿಮತ್ತ್ವಾದ್ ವವ್ರೇ ಗೋಪಾನ್ ಪ್ರಯುಧ್ಯತಃ ॥21॥
ಶ್ರೀಕೃಷ್ಣ ಹೀಗೆ ಹೇಳಿದಾಗ ಅರ್ಜುನ ಶ್ರೀಕೃಷ್ಣನನ್ನು ಸ್ವೀಕರಿಸಿದ. ಏಕೆಂದರೆ ಅವನು ಕೃಷ್ಣನಲ್ಲಿ ಭಕ್ತಿ ಉಳ್ಳವ. ದುರ್ಯೋಧನ ಅವನಲ್ಲಿ ಭಕ್ತಿರಹಿತನಾದ್ದರಿಂದ ಯೋಧರಾದ ಗೋಪಾಲಕರನ್ನೇ ಆರಿಸಿಕೊಂಡ.
ಪಾರ್ಥಾನಾಮೇವ ಸಾಹಾಯ್ಯಂ ಕರಿಷ್ಯನ್ನಪಿ ಕೇಶವಃ |
ತಸ್ಯಾಭಕ್ತಿಂ ದರ್ಶಯಿತುಂ ಚಕ್ರೇ ಸಮವದೀಶ್ವರಃ ॥22॥
ತತಃ ಪಾರ್ಥೇನ ಸಹಿತಃ ಪಾಂಡವಾನ್ ಕೇಶವೋ ಯಯೌ ॥23॥
ಶ್ರೀಕೃಷ್ಣ ಪಾಂಡವರಿಗೆ ಮಾತ್ರವೆ ಸಹಾಯ ಮಾಡುವವನಾಗಿದ್ದರೂ ದುರ್ಯೋಧನನ ಅಭಕ್ತಿಯನ್ನು ಲೋಕಕ್ಕೆ ತೋರಿಸುವುದಕ್ಕಾಗಿ ಸಮಾನತೆಯ ನಟನೆಯನ್ನು ಮಾಡಿದ. ಬಳಿಕ ಅರ್ಜುನಸಮೇತನಾಗಿ ಕೃಷ್ಣ ಪಾಂಡವರ ಬಳಿಗೆ ನಡೆದ.
* * * * *
ಏಳನೆಯ ಅಧ್ಯಾಯ
ದ್ವಾರಕೆಗೆ ಹೋಗಿ ಅರ್ಜುನ ಮತ್ತು ದುರ್ಯೋಧನರಿಂದ
ಕೃಷ್ಣನ ಸಹಾಯಯಾಚನೆ.
ವೈಶಂಪಾಯನಃ
ಪುರೋಹಿತಂ ತೇ ಪ್ರಸ್ಥಾಪ್ಯ ನಗರಂ ನಾಗಸಾಹ್ವಯಮ್ |
ದೂತಾನ್ ಪ್ರಸ್ಥಾಪಯಾಮಾಸುಃ ಪಾರ್ಥಿವೇಭ್ಯಸ್ತತಸ್ತತಃ ॥1॥
ವೈಶಂಪಾಯನ ವಿರಾಟ-ದ್ರುಪದಾದಿಗಳು ಹಸ್ತಿನಪುರಕ್ಕೆ ಪುರೋಹಿತನನ್ನು ಕಳುಹಿಸಿ ಬೇರೆ ರಾಜರ ಬಳಿಗೆ ತಮ್ಮ ದೂತರನ್ನು ಕಳುಹಿಸಿದರು.
ಪ್ರಸ್ಥಾಪ್ಯ ದೂತಾನನ್ಯತ್ರ ದ್ವಾರಕಾಂ ಪುರುಷರ್ಷಭಃ |
ಸ್ವಯಂ ಜಗಾಮ ಕೌರವ್ಯಃ ಕುಂತೀಪುತ್ರೋ ಧನಂಜಯಃ ॥2॥
ಕುರುಕುಲಪ್ರಸೂತನೂ, ಪುರುಷಶ್ರೇಷ್ಠನೂ, ಕುಂತೀಪುತ್ರನೂ ಆದ ಧನಂಜಯನು ಬೇರೆಯ ಕಡೆಗೆ ದೂತರನ್ನು ಕಳುಹಿಸಿ ದ್ವಾರಕಾಪಟ್ಟಣಕ್ಕೆ ತಾನೇ ಹೋದನು.
ಗತೇ ದ್ವಾರಾವತೀಂ ಕೃಷ್ಣೇ ಬಲದೇವೇ ಚ ಮಾಧವೇ |
ಸಹ ವೃಷ್ಣ್ಯಂಧಕೈಃ ಸರ್ವೈರ್ಭೋಜೈಶ್ಚ ಶತಶಸ್ತದಾ ॥3॥
ಸರ್ವಮಾಗಮಯಾಮಾಸ ಪಾಂಡವಾನಾಂ ವಿಚೇಷ್ಟಿತಮ್ |
ಧೃತರಾಷ್ಟ್ರಾತ್ಮಜೋ ರಾಜಾ ಗೂಢೈಃ ಪ್ರಣಿಹಿತೈಶ್ಚರೈಃ ॥4॥
ಮಧುಕುಲೋತ್ಪನ್ನರಾದ ಕೃಷ್ಣ-ಬಲರಾಮರು ನೂರಾರು ಸಂಖ್ಯೆಯಲ್ಲಿ ಬಂದಿದ್ದ ವೃಷ್ಣಿಗಳು, ಅಂಧಕರು ಮತ್ತು ಸರ್ವಭೋಜರ ಜೊತೆಯಲ್ಲಿ ದ್ವಾರಕಾ ಪಟ್ಟಣಕ್ಕೆ ಹೋಗುತ್ತಿರಲು ಧೃತರಾಷ್ಟ್ರಪುತ್ರನಾದ ದುರ್ಯೋಧನನು ತಾನು ನೇಮಿಸಿದ್ದ ಗೂಢಚಾರರ

ಮುಖಾಂತರ ಪಾಂಡವರ ಎಲ್ಲಾ ಕ್ರಿಯೆಗಳನ್ನೂ ತಿಳಿದನು.
ಸ ಶ್ರುತ್ವಾ ಮಾಧವಂ ಯಾಂತಂ ಸದಶ್ವೈರನಿಲೋಪಮೈಃ |
ಬಲೇನ ನಾತಿಮಹತಾ ದ್ವಾರಕಾಮಭ್ಯಯಾತ್ ಪುರೀಮ್ ॥5॥
ಕೃಷ್ಣನು ವಾಯುವೇಗವುಳ್ಳ ಶ್ರೇಷ್ಠವಾದ ಕುದುರೆಗಳಿಂದ ದ್ವಾರಕಾ ಪಟ್ಟಣಕ್ಕೆ ಹಿಂದಿರುಗುತ್ತಿದ್ದಾನೆಂದು ಕೇಳಿದ ಅವನು ಅಲ್ಪಸೈನ್ಯವನ್ನು ತೆಗೆದುಕೊಂಡು ದ್ವಾರಕಾ ಪಟ್ಟಣಕ್ಕೆ ಬಂದನು.
ತಮೇವ ದಿವಸಂ ಚಾಪಿ ಕೌಂತೇಯಃ ಪಾಂಡುನಂದನಃ |
ಆನರ್ತನಗರೀಂ ರಮ್ಯಾಂ ಜಗಾಮಾಶು ಧನಂಜಯಃ ॥6॥
ಪಾಂಡುನಂದನನೂ, ಕುಂತೀಪುತ್ರನೂ ಆದ ಧನಂಜಯನೂ ಸಹ ಅದೇ ದಿವಸವೇ ಸುಂದರವಾದ ದ್ವಾರಕಾ ಪಟ್ಟಣಕ್ಕೆ ಶೀಘ್ರವಾಗಿ ಬಂದನು.
ತೌ ಯಾತ್ವಾ ಪುರುಷವ್ಯಾಘ್ರೌ ವಾರ್ಷ್ಣೇಯಮಭಿಜಗ್ಮತುಃ |
ಸುಪ್ತಂ ಮಹತಿ ಪರ್ಯಂಕೇ ಪರಾರ್ಘ್ಯಾಸ್ತರಣಾಸ್ತೃತೇ ॥7॥
ಪುರುಷವ್ಯಾಘ್ರರಾದ ಅವರಿಬ್ಬರೂ ಬೆಲೆಬಾಳುವ ಹಾಸುಗಳುಳ್ಳ ಸುಪ್ಪತ್ತಿಗೆಯಲ್ಲಿ ಮಲಗಿದ್ದ ವೃಷ್ಣಿಕುಲಸಂಭೂತನಾದ ಕೃಷ್ಣನನ್ನು ಸಮೀಪಿಸಿದರು.
ದುರ್ಯೋಧನಸ್ತು ಪ್ರಥಮಂ ವಾಸುದೇವಮುಪಾಶ್ರಯತ್ |
ಉಚ್ಚೀರ್ಷತಶ್ಚ ಕೃಷ್ಣಸ್ಯ ನಿಷಸಾದ ವರಾಸನೇ ॥8॥
ದುರ್ಯೋಧನನು ಮೊದಲು ಕೃಷ್ಣನ ಸಮೀಪಕ್ಕೆ ಬಂದನು. ಅವನು ಕೃಷ್ಣನ ತಲೆಯ ಬಳಿ ಇದ್ದ ಎತ್ತರವಾದ ಆಸನದಲ್ಲಿ ಕುಳಿತನು.
ತತಃ ಕಿರೀಟೀ ತಸ್ಯಾನು ಪ್ರವಿವೇಶ ಮಹಾಮನಾಃ |
ಪಶ್ಚಾರ್ಧೇನ ಸ ಕೃಷ್ಣಸ್ಯ ಪ್ರಹ್ವೋಽತಿಷ್ಠತ್ ಕೃತಾಂಜಲಿಃ ॥9॥
ಮಹಾಮನಸ್ಸುಳ್ಳ ಅರ್ಜುನನು ಅನಂತರ ಪ್ರವೇಶಿಸಿದನು. ಅವನು ಕೃಷ್ಣನ ಪಾದದ ಬಳಿ ಕೈಗಳನ್ನು ಮುಗಿದು ವಿನಯದಿಂದ ನಿಂತನು.
ಪ್ರತಿಬುದ್ಧಃ ಸ ವಾರ್ಷ್ಣೇಯೋ ದದರ್ಶಾಗ್ರೇ ಕಿರೀಟಿನಮ್ |
ಪಶ್ಚಾದ್ ದುರ್ಯೋಧನಂ ಶೌರಿರಪಶ್ಯದಮಿತದ್ಯುತಿಃ ॥10॥
ಎಚ್ಚರಗೊಂಡ ಕೃಷ್ಣನು ಎದುರಿಗೆ ನಿಂತಿದ್ದ ಅರ್ಜುನನನ್ನು ಮೊದಲು ನೋಡಿದನು. ಅನಂತರ ಅಪಾರದ್ಯುತಿಯುಳ್ಳ ಶೌರಿಯಾದ ಅವನು ದುರ್ಯೋಧನನನ್ನು ನೋಡಿದನು.
ಸ ತಯೋಃ ಸ್ವಾಗತಂ ಪೃಷ್ಟ್ವಾ ಯಥಾರ್ಹಂ ಪ್ರತಿಪೂಜ್ಯ ತೌ |
ಪಪ್ರಚ್ಛ ತೌ ಮಹಾಬಾಹೂ ಕಿಂ ಕಾರ್ಯಂ ಯುವಯೋರಿತಿ ॥11॥
ತತೋ ದುರ್ಯೋಧನಃ ಕೃಷ್ಣಮಿದಂ ವಚನಮಬ್ರವೀತ್ ॥12॥
ಅವನು ಅವರಿಬ್ಬರಿಗೂ ಯಥೋಚಿತವಾಗಿ ಸತ್ಕಾರವನ್ನು ಮಾಡಿ ಆ ಮಹಾಬಾಹುಗಳನ್ನು ಕುಳಿತು ನಿಮಗೆ ನನ್ನಿಂದ ಏನಾಗಬೇಕಾಗಿದೆ ಎಂದು ಕೇಳಿದನು. ಆಗ ದುರ್ಯೋಧನನು ಕೃಷ್ಣನನ್ನು ಕುರಿತು ಈ ಮಾತನ್ನು ಆಡಿದನು.
ವಿಗ್ರಹೇಽಸ್ಮಿನ್ ಭವಾನ್ ಸಾಹ್ಯಂ ಮಮ ದಾತುಮಿಹಾರ್ಹಸಿ |
ಸಮಂ ಹಿ ಭವತಃ ಸಖ್ಯಂ ಮಯಿ ಚೈವಾರ್ಜುನೇಽಪಿ ಚ ॥13॥
ತಥಾ ಸಂಬಂಧಕಂ ತುಲ್ಯಮಸ್ಮಾಕಂ ತ್ವಯಿ ಮಾಧವ ॥14॥
ಅಹಂ ಚಾಭಿಗತಃ ಪೂರ್ವಂ ತ್ವಾಮದ್ಯ ಮಧುಸೂದನ |
ಪೂರ್ವಂ ಚಾಭಿಗತಾಃ ಸಂತೋ ಭಜಂತೇ ಪೂರ್ವಸಾರಿಣಃ ॥15॥
ಈಗ ಮುಂದೆ ಜರುಗಲಿರುವ ಈ ಯುದ್ಧದಲ್ಲಿ ನೀನು ನನಗೆ ಸಹಾಯವನ್ನು ಮಾಡಬೇಕು. ಏಕೆಂದರೆ ನಿನಗೆ ನನ್ನಲ್ಲಿಯೂ ಮತ್ತು ಅರ್ಜುನನಲ್ಲಿಯೂ ಸಮಾನವಾದ ಸ್ನೇಹವಿದೆ ಮತ್ತು ಮಾಧವನೇ, ನಿನಗೂ ಮತ್ತು ನಮ್ಮಿಬ್ಬರಿಗೂ ಇರುವ ಕುಲದ ಸಂಬಂಧವೂ ಸಹ ಸಮಾನವಾಗಿದೆ. ಮಧುಸೂದನನೇ, ಈ ದಿನ ನಾನು ಮೊದಲು ಬಂದೆನು. ಸಜ್ಜನರು ಮೊದಲು ಬಂದವರಿಗೆ ಮೊದಲು ಸತ್ಕರಿಸುತ್ತಾರೆ.
ತ್ವಂ ಚಾಪಿ ಪುರುಷವ್ಯಾಘ್ರ ಸತ್ತಮೋಽಸಿ ಸತಾಮಪಿ |
ಸತತಂ ಸಮ್ಮತೋ ಲೋಕೇ ಸದ್ವೃತ್ತಮನುಪಾಲಯ ॥16॥
ಪುರುಷವ್ಯಾಘ್ರನೇ, ನೀನೂ ಸಹ ಸಜ್ಜನರಲ್ಲಿ ಬಹಳ ಶ್ರೇಷ್ಠನಾದವನು ಎಂದು ಯಾವಾಗಲೂ ಲೋಕದಲ್ಲಿ ಸಮ್ಮತನಾಗಿದ್ದೀಯೆ. ಆದ್ದರಿಂದ ಸಜ್ಜನರ ನಡತೆಯನ್ನು ಅನುಸರಿಸು.
ವೈಶಂಪಾಯನಃ
ಧಾರ್ತರಾಷ್ಟ್ರಸ್ಯ ತದ್‌ವಾಕ್ಯಂ ಶ್ರುತ್ವಾಽಮರವರೋತ್ತಮಃ |
ಪುರುಷೋತ್ತಮಸೈತ್ವದಂ ವಾಕ್ಯಂ ದುರ್ಯೋಧನಮಭಾಷತ ॥17॥
ವೈಶಂಪಾಯನ ದೇವದೇವೋತ್ತಮನೂ, ಪುರುಷೋತ್ತಮನೂ ಆದ ಕೃಷ್ಣನು ದುರ್ಯೋಧನನ ಈ ಮಾತನ್ನು ಕೇಳಿ ಅವನನ್ನು ಕುರಿತು ಈ ಮಾತನ್ನಾಡಿದನು.
ಭವಾನಭಿಗತಃ ಪೂರ್ವಮತ್ರ ಮೇ ನಾಸ್ತಿ ಸಂಶಯಃ |
ಮಯಾ ತು ದೃಷ್ಟಃ ಪ್ರಥಮಂ ಕುಂತೀಪುತ್ರೋ ಧನಂಜಯಃ ॥18॥
ನೀನು ಮೊದಲು ಬಂದಿದ್ದೀಯೆ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ. ಆದರೆ ನಾನು ಮೊದಲು ಕುಂತೀಪುತ್ರನಾದ

ಧನಂಜಯನನ್ನು ನೋಡಿದೆನು.
ತವ ಪೂರ್ವಾಭಿಗಮನಾತ್ ಪೂರ್ವಂ ಚಾಪ್ಯಸ್ಯ ದರ್ಶನಾತ್ |
ಸಾಹಾಯ್ಯಮುಭಯೋರೇವ ಕರಿಷ್ಯಾಮಿ ಸುಯೋಧನ ॥19॥
ಸುಯೋಧನನೇ, ನೀನು ಮೊದಲು ಬಂದಿದ್ದರಿಂದ ಮತ್ತು ನಾನು ಅರ್ಜುನನನ್ನು ಮೊದಲು ನೋಡಿದುದರಿಂದ ಇಬ್ಬರಿಗೂ ಸಹಾಯವನ್ನು ಮಾಡುವೆನು.
ಪ್ರವಾರಣಂ ಚ ಬಾಲಾನಾಂ ಪೂರ್ವಂ ಕಾರ್ಯಮಿತಿ ಶ್ರುತಿಃ |
ತಸ್ಮಾತ್ ಪ್ರವಾರಣಂ ಪೂರ್ವಮರ್ಹಃ ಪಾರ್ಥೋ ಧನಂಜಯಃ ॥20॥
ಮೊದಲು ಚಿಕ್ಕವರ ಅಭೀಷ್ಟವನ್ನು ನೆರವೇರಿಸಬೇಕೆಂದು ಶ್ರುತಿ ಇದೆ. ಆದ್ದರಿಂದ ಪಾರ್ಥನಾದ ಧನಂಜಯನಿಗೆ ವರವನ್ನು ಕೇಳಲು ಮೊದಲನೆಯ ಅವಕಾಶವನ್ನು ಕೊಡಬೇಕಾಗುತ್ತದೆ.
ಮತ್ಸಂಹನನತುಲ್ಯಾನಾಂ ಗೋಪಾನಾಮರ್ಬುದಂ ಮಹತ್ |
ನಾರಾಯಣಾ ಇತಿ ಖ್ಯಾತಾಃ ಸರ್ವೇ ಸಂಗ್ರಾಮಯೋಧಿನಃ ॥21॥
ನನ್ನಂತೆ ತೇಜಸ್ಸನ್ನು ಹೊಂದಿದ್ದ ಹತ್ತುಲಕ್ಷ ಯುದ್ಧಶೂರರಾದ ಗೋಪರ ನಾರಾಯಣ ಎಂಬ ಹೆಸರಿನ ಸೈನ್ಯವು ಒಂದು ಕಡೆ.
ತೇ ವಾ ಯುಧಿ ದುರಾಧರ್ಷಾ ಭವಂತ್ವೇಕಸ್ಯ ಸೈನಿಕಾಃ |
ಅಯುಧ್ಯಮಾನಃ ಸಂಗ್ರಾಮೇ ನ್ಯಸ್ತಶಸ್ತ್ರೋಽಹಮೇಕತಃ ॥22॥
ದುರಾಧರ್ಷರಾದ ಅವರಾದರೂ ಯುದ್ಧದಲ್ಲಿ ಒಬ್ಬನ ಸೈನಿಕರಾಗಿರುತ್ತಾರೆ. ಇನ್ನೊಂದು ಕಡೆ ಯುದ್ಧದಲ್ಲಿ ಶಸ್ತ್ರವನ್ನು ಹಿಡಿಯದೇ ಯುದ್ಧವನ್ನು ಮಾಡದಿರುವ ನಾನು.
ಆಭ್ಯಾಮನ್ಯತರಂ ಪಾರ್ಥ ಯತ್ ತೇ ಹೃದ್ಯತರಂ ಮತಮ್ |
ತಂ ವೃಣೀತಾದ್ ಭವಾನಗ್ರೇ ಪ್ರವಾರ್ಯಸ್ತ್ವಂ ಹಿ ಧರ್ಮತಃ ॥23॥
ಅರ್ಜುನನೇ, ಇವೆರಡರಲ್ಲಿ ಯಾವುದರಿಂದ ನಿನ್ನ ಕಾರ್ಯವು ನೆರವೇರುತ್ತದೆ ಎಂದು ತಿಳಿಯುತ್ತೀಯೋ ಅದನ್ನು ವರಿಸು. ಧರ್ಮದ ದೃಷ್ಟಿಯಿಂದ ಮೊದಲು ಒಲೈಸಲ್ಪಡಬೇಕಾದವನು ನೀನಷ್ಟೆ?
ಏತದ್ ವಿದಿತ್ವಾ ಕೌಂತೇಯ ವಿಚಾರ್ಯ ಚ ಪುನಃ ಪುನಃ |
ತಾನ್ ವಾ ವರಯ ಸಾಹಾಯ್ಯೇ ಮಾಂ ಸಾಚಿವ್ಯೇಽಥವಾ ಪುನಃ ॥
ಕೌಂತೇಯನೇ, ಇದನ್ನು ತಿಳಿದು ಮತ್ತೆ ಮತ್ತೆ ವಿಚಾರ ಮಾಡಿ ನಿನ್ನ ಸಹಾಯಕ್ಕಾಗಿ ಆ ಗೋಪರನ್ನಾದರೂ ವರಿಸು ಅಥವಾ ಮಂತ್ರಿಯಾಗಿ ನನ್ನೊಬ್ಬನನ್ನೇ ವರಿಸು.
ವೈಶಂಪಾಯನಃ
ಏವಮುಕ್ತಸ್ತು ಕೃಷ್ಣೇನ ಕುಂತೀಪುತ್ರೋ ಧನಂಜಯಃ |
ಅಯುಧ್ಯಮಾನಂ ಸಂಗ್ರಾಮೇ ವರಯಾಮಾಸ ಕೇಶವಮ್ ॥25॥
ನಾರಾಯಣಮಮಿತ್ರಘ್ನಂ ಕಾಮಾಜ್ಜಾತಮಜಂ ನೃಷು |
ದುರ್ಯೋಧನಸ್ತು ತತ್ ಸೈನ್ಯಂ ಸರ್ವಮಾವರಯತ್ ತದಾ ॥26॥
ವೈಶಂಪಾಯನ ಹೀಗೆ ಕೃಷ್ಣನಿಂದ ಹೇಳಲ್ಪಟ್ಟ ಕುಂತೀಪುತ್ರನಾದ ಧನಂಜಯನು ಯುದ್ಧದಲ್ಲಿ ಯುದ್ಧ ಮಾಡದಿರುವ, ಶತ್ರುಸಂಹಾರಕನೂ, ಜನ್ಮರಹಿತನೂ, ತನ್ನ ಇಚ್ಛೆಯಿಂದ ಮನುಷ್ಯರಲ್ಲಿ ಅವತಾರ ಮಾಡಿದವನೂ, ನಾರಾಯಣನೂ ಆದ ಕೇಶವನನ್ನು ವರಿಸಿದನು. ದುರ್ಯೋಧನನಾದರೂ ಆ ಎಲ್ಲಾ ಸೈನ್ಯವನ್ನು ವರಿಸಿದನು.
ಸಹಸ್ರಾಣಾಂ ಸಹಸ್ರಂ ತು ಯೋಧಾನಾಂ ಪ್ರಾಪ್ಯ ಭಾರತ |
ಕೃಷ್ಣಂ ಚಾಪಹೃತಂ ಜ್ಞಾತ್ವಾ ಸಂಪ್ರಾಪ ಪರಮಾಂ ಮುದಮ್ ॥27॥
ಎಲೈ ಭಾರತನೇ, ಅವನು ಒಂದುಲಕ್ಷ ಸೈನಿಕರನ್ನು ಪಡೆದು ಕೃಷ್ಣನಿಗೆ ವಂಚನೆಯನ್ನು ಮಾಡಿದ್ದೇನೆಂದು ತಿಳಿದು ಬಹಳ ಸಂತೋಷಪಟ್ಟನು.
ದುರ್ಯೋಧನಸ್ತು ತತ್ ಸೈನ್ಯಂ ಸರ್ವಮಾದಾಯ ಪಾರ್ಥಿವಃ |
ತತೋಽಭ್ಯಯಾದ್ ಭೀಮಬಲೋ ರೌಹಿಣೇಯಂ ಮಹಾಬಲಮ್ ॥
ರಾಜನಾದ ದುರ್ಯೋಧನನಾದರೂ ಆ ಎಲ್ಲ ಸೈನ್ಯವನ್ನು ತೆಗೆದುಕೊಂಡು ಭೀಮಬಲನಾದ ಅವನು ಮಹಾಬಲನಾದ ಬಲರಾಮನ ಬಳಿಗೆ ಬಂದನು.
ಸರ್ವಂ ಚಾಗಮನೇ ಹೇತುಂ ಸ ತಸ್ಮೈ ಸನ್ನ್ಯವೇದಯತ್ |
ಪ್ರತ್ಯುವಾಚ ತತಃ ಶೌರಿರ್ಧಾರ್ತರಾಷ್ಟ್ರಮಿದಂ ವಚಃ ॥29॥
ಅವನು ಅಲ್ಲಿಗೆ ಬರಲು ಕಾರಣವನ್ನು ಬಲರಾಮನಿಗೆ ಚೆನ್ನಾಗಿ ವಿವರಿಸಿದನು. ಆಗ ಬಲರಾಮನು ದುರ್ಯೋಧನನನ್ನು ಕುರಿತು ಈ ಮಾತನ್ನಾಡಿದನು.
ಬಲದೇವಃ
ವಿದಿತಂ ತೇ ನರವ್ಯಾಘ್ರ ಸರ್ವಂ ಭವಿತುಮರ್ಹತಿ |
ಯನ್ಮಯೋಕ್ತಂ ವಿರಾಟಸ್ಯ ಪುರಾ ವೈವಾಹಿಕೇ ತದಾ ॥30॥
ಬಲದೇವ ನರವ್ಯಾಘ್ರನೇ, ವಿರಾಟನ ಅರಮನೆಯಲ್ಲಿ ವಿವಾಹದ ಸಂದರ್ಭದಲ್ಲಿ ನಾನು ಏನು ಮಾತನಾಡಿದೆನೋ ನಿನಗೆ ತಿಳಿದ ಅದೆಲ್ಲವೂ ಹಾಗೆಯೇ ನಡೆಯುತ್ತದೆ.
ನಿಗೃಹ್ಯೋಕ್ತೋ ಹೃಷೀಕೇಶಃ ತ್ವದರ್ಥಂ ಕುರುನಂದನ |

ತ್ವಯಾ ಸಂಬಂಧಕಂ ತುಲ್ಯಮಿತಿ ರಾಜನ್ ಪುನಃ ಪುನಃ ॥31॥
ನ ಚ ತದ್ವಾಕ್ಯಮುಕ್ತಂ ವೈ ಕೇಶವಃ ಪ್ರತ್ಯಪದ್ಯತ ॥32॥
ಕುರುನಂದನನೇ, ರಾಜನೇ, ನಿನಗೂ ಮತ್ತು ಅರ್ಜುನನಿಗೂ ನಮ್ಮ ಸಂಬಂಧವು ಸಮಾನವಾಗಿದೆ ಎಂದು ನಾನು ಕೃಷ್ಣನಿಗೆ ಒತ್ತಾಯ ಮಾಡಿ ಪುನಃ ಪುನಃ ಹೇಳಿದ್ದೇನೆ. ಆದರೆ ಅವನಿಗೆ ಆ ಮಾತಿನ ಅಭಿಪ್ರಾಯವು ತಿಳಿಯಲಿಲ್ಲ.
ನ ಚಾಹಮುತ್ಸಹೇ ಕೃಷ್ಣಂ ವಿನಾ ಸ್ಥಾತುಮಪಿ ಕ್ಷಣಮ್ |
ನಾಹಂ ಸಹಾಯಃ ಪಾರ್ಥಸ್ಯ ನಾಪಿ ದುರ್ಯೋಧನಸ್ಯ ವೈ ॥33॥
ಇತಿ ಮೇ ನಿಶ್ಚಿತಾ ಬುದ್ಧಿರ್ವಾಸುದೇವಮವೇಕ್ಷ್ಯ ಹ ॥34॥
ನಾನು ಕೃಷ್ಣನಿಲ್ಲದೇ ಒಂದು ಕ್ಷಣವೂ ಬದುಕಲು ಬಯಸುವುದಿಲ್ಲ. ಆದ್ದರಿಂದ ನಾನು ಅರ್ಜುನನಿಗಾಗಲೀ ಅಥವಾ ದುರ್ಯೋಧನನಿಗಾಗಲೀ ಸಹಾಯ ಮಾಡುವುದಿಲ್ಲ ಎಂಬ ಈ ಬುದ್ಧಿಯು ಕೃಷ್ಣನನ್ನು ಗಮನಿಸಿ ನನಗೆ ಸ್ಥಿರವಾಗಿದೆ.
ಜಾತೋಽಸಿ ಭಾರತೇ ವಂಶೇ ಸರ್ವಪಾರ್ಥಿವಪೂಜಿತೇ |
ಗಚ್ಛ ಯುಧ್ಯಸ್ವ ಧರ್ಮೇಣ ಕ್ಷಾತ್ರೇಣ ಪುರುಷರ್ಷಭ ॥35॥
ಪುರುಷರ್ಷಭನೇ, ಎಲ್ಲ ರಾಜರಿಂದ ಪೂಜಿತವಾದ ಭರತವಂಶದಲ್ಲಿ ಹುಟ್ಟಿದ್ದೀಯೆ. ಹೋಗಿ ಧರ್ಮದಿಂದ ಯುದ್ಧವನ್ನು ಮಾಡು.
ವೈಶಂಪಾಯನಃ
ಇತ್ಯೇವಮುಕ್ತಸ್ತು ತದಾ ಪರಿಷ್ವಜ್ಯ ಹಲಾಯುಧಮ್ |
ಕೃಷ್ಣಂ ಚಾಪಹೃತಂ ಜ್ಞಾತ್ವಾ ಯುದ್ಧಾನ್ಮೇನೇ ಜಿತಂ ಜಯಮ್ ॥36॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ದುರ್ಯೋಧನನು ಬಲರಾಮನನ್ನು ಆಲಿಂಗಿಸಿ ಕೃಷ್ಣನು ಅಪಹೃತನಾದನೆಂದು ತಿಳಿದು ಯುದ್ಧದಲ್ಲಿ ತನಗೇ ಜಯವು ಪ್ರಾಪ್ತವಾಗಿದೆ ಎಂದು ತಿಳಿದನು.
ಸೋಽಭ್ಯಯಾತ್ ಕೃತವರ್ಮಾಣಂ ಧೃತರಾಷ್ಟ್ರಸುತೋ ನೃಪಃ |
ಕೃತವರ್ಮಾ ದದೌ ತಸ್ಯ ಸೇನಾಮಕ್ಷೋಹಿಣೀಂ ತದಾ ॥37॥
ಧೃತರಾಷ್ಟ್ರ ಪುತ್ರನಾದ ದುರ್ಯೋಧನನು ಆಗ ಕೃತವರ್ಮನ ಬಳಿಗೆ ಹೋದನು. ಕೃತವರ್ಮನು ಅವನಿಗೆ ತನ್ನ ಅಕ್ಷೋಹಿಣೀ ಸೈನ್ಯವನ್ನು ಕೊಟ್ಟನು.
ಸ ತೇನ ಸರ್ವಸೈನ್ಯೇನ ಭೀಮೇನ ಕುರುನಂದನಃ |
ವೃತಃ ಪ್ರತಿಯಯೌ ಹೃಷ್ಟಃ ಸುಹೃದಃ ಸಂಪ್ರಹರ್ಷಯನ್ ॥38॥
ಕುರುನಂದನನಾದ ದುರ್ಯೋಧನನು ಭಯಂಕರವಾದ ಆ ಎಲ್ಲಾ ಸೈನ್ಯವನ್ನೂ ತೆಗೆದುಕೊಂಡು ಆ ಸೈನ್ಯದಿಂದ ಪರಿವೃತನಾಗಿ ಸಂತೋಷಗೊಂಡು ಅವನ ಸುಹೃದರಿಗೆ ಸಂತೋಷವನ್ನುಂಟು ಮಾಡುತ್ತಾ ಹಿಂದಿರುಗಿದನು.
ತತಃ ಪೀತಾಂಬರಧರೋ ಜಗತ್ಸ್ರಷ್ಟಾ ಜನಾರ್ದನಃ |
ಗತೇ ದುರ್ಯೋಧನೇ ಕೃಷ್ಣಃ ಕಿರೀಟಿನಮಥಾಬ್ರವೀತ್ ॥39॥
ಅಯುಧ್ಯಮಾನಃ ಕಾಂ ಬುದ್ಧಿಮಾಸ್ಥಾಯಾಹಂ ವೃತಸ್ತ್ವಯಾ ॥40॥
ದುರ್ಯೋಧನನು ಹೊರಟು ಹೋದಮೇಲೆ ಪೀತಾಂಬರಧಾರಿಯೂ, ಜಗತ್ತಿನ ಸೃಷ್ಟಿಕರ್ತನೂ, ಜನಾರ್ದನನೂ ಆದ ಕೃಷ್ಣನು ಅರ್ಜುನನನ್ನು ಕುರಿತು ಯುದ್ಧ ಮಾಡದಿರುವ ನನ್ನನ್ನು ಯಾವ ಬುದ್ಧಿಯನ್ನು ಆಧರಿಸಿ ನೀನು ವರಿಸಿದೆ ಎಂದು ಕೇಳಿದನು.
ಅರ್ಜುನಃ
ಭವಾನ್ ಸಮರ್ಥಸ್ತಾನ್ ಸರ್ವಾನ್ ನಿಹಂತುಂ ನಾತ್ರ ಸಂಶಯಃ |
ನಿಹಂತುಮಹಮಪ್ಯೇಕಃ ಸಮರ್ಥಃ ಪುರುಷರ್ಷಭ ॥41॥
ಅರ್ಜುನ ನೀನು ಅವರೆಲ್ಲರನ್ನೂ ಸಂಹರಿಸಲು ಸಮರ್ಥನಾಗಿದ್ದೀಯೆ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ. ಪುರುಷರ್ಷಭನೇ, ನಾನೂ ಸಹ ಒಬ್ಬನೇ ಅವರನ್ನು ಸಂಹರಿಸಲು ಸಮರ್ಥನಾಗಿದ್ದೇನೆ.
ಭವಾಂಶ್ಚ ಕೀರ್ತಿಮಾನ್ ಲೋಕೇ ತದ್ಯಶಸ್ತ್ವಂ ಗಮಿಷ್ಯತಿ |
ಯಶಸಾಂ ಚಾಹಮಪ್ಯರ್ಥೀ ತಸ್ಮಾದಸಿ ಮಯಾ ವೃತಃ ॥42॥
ನಿನಗಾದರೂ ಲೋಕದಲ್ಲಿ ಯಾವಾಗಲೂ ಕೀರ್ತಿಯಿದೆ. ಆ ಯಶಸ್ಸು ಯಾವಾಗಲೂ ನಿನ್ನನ್ನೇ ಸೇರುವುದು. ನಾನೂ ಸಹ ಯಶಸ್ಸನ್ನು ಬಯಸುತ್ತೇನೆ. ಆದ್ದರಿಂದ ನಿನ್ನನ್ನು ವರಿಸಿದೆ.
ಸಾರಥ್ಯಂ ತು ತ್ವಯಾ ಕಾರ್ಯಮಿತಿ ಮೇ ಮಾನಸಂ ಸದಾ |
ಚಿರರಾತ್ರೇಪ್ಸಿತಂ ಕಾಮಂ ತದ್ ಭವಾನ್ ಕರ್ತುಮರ್ಹತಿ ॥43॥
ನೀನು ನನ್ನ ಸಾರಥಿಯಾಗಬೇಕು ಎಂದು ನನ್ನ ಮನಸ್ಸಿನಲ್ಲಿ ನಾನು ಬಹುಕಾಲದಿಂದ ಬಯಸಿದ್ದೇನೆ. ನೀನು ಆ ಇಚ್ಛೆಯನ್ನು ನಡೆಸಿಕೊಡಬೇಕು.
ವಾಸುದೇವಃ
ಉಪಪನ್ನಮಿದಂ ಪಾರ್ಥ ಯತ್ ಸ್ಪರ್ಧೇಥಾ ಮಯಾ ಸಹ |
ಸಾರಥ್ಯಂ ತೇ ಕರಿಷ್ಯಾಮಿ ಕಾಮಃ ಸಂಪದ್ಯತಾಂ ತವ ॥44॥
ವಾಸುದೇವ ಅರ್ಜುನನೇ, ನನ್ನ ಜೊತೆಯಲ್ಲಿ ನೀನು ಸ್ಪರ್ಧಿಸುವುದು ನಿನಗೆ ಉಚಿತವೇ ಆಗಿದೆ. ನಿನ್ನ ಸಾರಥ್ಯವನ್ನು ಮಾಡುವೆನು. ನಿನ್ನ ಆಸೆಯು ಪೂರ್ಣವಾಗಲಿ.
ವೈಶಂಪಾಯನಃ
ಏವಂ ಪ್ರಮುದಿತಃ ಪಾರ್ಥಃ ಕೃಷ್ಣೇನ ಸಹಿತಸ್ತದಾ |

ವೃತೋ ದಶಾರ್ಹಪ್ರವರ್ಯೈಃ ಪುನರಾಯಾದ್ ಯುಧಿಷ್ಠಿರಮ್ ॥45॥
ವೈಶಂಪಾಯನ ಹೀಗೆ ಸಂತೋಷಗೊಂಡ ಅರ್ಜುನನು ಕೃಷ್ಣನಿಂದ ಕೂಡಿ ಕೆಲವು ದಾಶಾರ್ಹಶ್ರೇಷ್ಠರಿಂದಲೂ ಕೂಡಿಕೊಂಡು ಪುನಃ ಯುಧಿಷ್ಠಿರನ ಬಳಿಗೆ ಹಿಂದಿರುಗಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಮೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - ಅಧ್ಯಾಯ 24
ಶಲ್ಯಂ ಚ ಪಾಂಡವಾನೇವ ಯಾಂತಂ ಜ್ಞಾತ್ವಾ ಸುಯೋಧನಃ |
ಸುಸಭಾಃ ಕಾರಯಾಮಾಸ ಸರ್ವಭೋಗಸಮನ್ವಿತಾಃ ॥33॥
ತಾ ಯುಧಿಷ್ಠಿರಕ್ಲೃಪ್ತಾಃ ಸ ಮತ್ವಾ ಶಲ್ಯೋಽಬ್ರವೀದಿದಮ್ |
ಯ ಏತಾಃ ಕಾರಯಾಮಾಸ ತದಭೀಷ್ಟಂ ಕರೋಮ್ಯಹಮ್ ॥34॥
ಶಲ್ಯ ಪಾಂಡವರ ಕಡೆಗೆ ಹೊರಟುದನ್ನು ತಿಳಿದು ದುರ್ಯೋಧನ ಅವನಿಗೆ ದಾರಿಯಲ್ಲಿ ಸಕಲ ಭೋಗವಸ್ತುಗಳಿಂದ ಕೂಡಿದ ಒಳ್ಳೆಯ ಸಭಾಗೃಹಗಳನ್ನು ಏರ್ಪಡಿಸಿದ. ಅವುಗಳನ್ನು ಧರ್ಮರಾಜನೇ ಏರ್ಪಡಿಸಿದ್ದನೆಂದು ಭಾವಿಸಿ ಶಲ್ಯ, `ಇವುಗಳನ್ನು ಏರ್ಪಡಿಸಿದವನಿಗೆ ನಾನು ಅವನ ಅಭೀಷ್ಟವನ್ನು ಪೂರೈಸುವೆನು' ಎಂದು ನುಡಿದನು.
ಲೀನಃ ಶ್ರುತ್ವಾ ಧಾರ್ತರಾಷ್ಟ್ರಃ ಸತ್ಯಂ ಕುರ್ವಿತ್ಯಭಾಷತ |
ದೇಹಿ ಮೇ ಯುದ್ಧಸಾಹಾಯ್ಯಮಿತಿ ಸೋಽಪಿ ಯಶೋಽರ್ಥಯನ್ |
ರಕ್ಷಾರ್ಥಮಾತ್ಮವಾಕ್ಯಸ್ಯ ತಥೇತ್ಯೇವಾಭ್ಯಭಾಷತ ॥35॥
ದುರ್ಯೋಧನ ಅಡಗಿ ಕುಳಿತು ಅದನ್ನು ಕೇಳಿ `ನಿನ್ನ ಮಾತನ್ನು ಸತ್ಯವನ್ನಾಗಿ ಮಾಡು' ಎಂದ. 'ನನಗೆ ಯುದ್ಧದಲ್ಲಿ ಸಹಾಯ ನೀಡು' ಎಂದ. ಶಲ್ಯ ಕೀರ್ತಿಯನ್ನು ಬಯಸಿ ತನ್ನ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ `ಹಾಗೇ ಆಗಲಿ' ಎಂದ.
ಸ ಪಾಂಡವಾಂಸ್ತತೋ ಗತ್ವಾ ತೈರನುಜ್ಞಾತ ಏವ ಚ |
ತೇಜೋವಧಾರ್ಥಂ ಕರ್ಣಸ್ಯ ಧನಂಜಯಕೃತೇಽರ್ಥಿತಃ ॥36॥
ತಥೇತ್ಯುಕತ್ವ ಯಯೌ ಧರ್ಮನಂದನಂ ಕೌರವಾನ್ ಪ್ರತಿ ॥37॥
ಬಳಿಕ ಶಲ್ಯ ಪಾಂಡವರ ಬಳಿಗೆ ಹೋಗಿ ತಾನು ಕೌರವರಿಗೆ ಸಹಾಯ ನೀಡಲು ಅವರಿಂದ ಅನುಮತಿ ಪಡೆದ. ಮತ್ತು ಅರ್ಜುನನ ಸಲುವಾಗಿ ಕರ್ಣನ ತೇಜೋವಧೆ ಮಾಡುವುದಕ್ಕೆ ಧರ್ಮರಾಜನಿಂದ ಪ್ರಾರ್ಥಿತನಾಗಿ `ಹಾಗೇ ಆಗಲಿ' ಎಂದು ಹೇಳಿ ಕೌರವರ ಬಳಿಗೆ ಹೋದ.
* * * * *
ಎಂಟನೆಯ ಅಧ್ಯಾಯ
ಶಲ್ಯನನ್ನು ವಂಚಿಸಿ ದುರ್ಯೋಧನನಿಂದ ಅವನ ಸಹಾಯ ಪ್ರಾಪ್ತಿ. ಶಲ್ಯ-ಯುಧಿಷ್ಠಿರ ಸಮಾಗಮ.
ವೈಶಂಪಾಯನಃ
ಶಲ್ಯಃ ಶ್ರುತ್ವಾ ತು ದೂತಾನಾಂ ಸೈನ್ಯೇನ ಮಹತಾ ಧೃತಃ |
ಅಭ್ಯಯಾತ್ ಪಾಂಡವಾನ್ ರಾಜನ್ ಸಹ ಪುತ್ರೈರ್ಮಹಾರಥೈಃ ॥1॥
ವೈಶಂಪಾಯನ ಎಲೈ ರಾಜನೇ, ಶಲ್ಯನು ದೂತರ ಮುಖಾಂತರ ಎಲ್ಲ ವಿಷಯಗಳನ್ನು ತಿಳಿದು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಮಹಾರಥರಾದ ಪುತ್ರರ ಜೊತೆಯಲ್ಲಿ ಪಾಂಡವರ ಕಡೆಗೆ ಹೊರಟನು.
ತಸ್ಯ ಸೇನಾನಿವೇಶೋಽಭೂದ್ ಅಧ್ಯರ್ಧಮಿವ ಯೋಜನಮ್ |
ತಥಾ ಹಿ ವಿಪುಲಾಂ ಸೇನಾಂ ಬಿಭರ್ತಿ ಸ ನರರ್ಷಭಃ ॥2॥
ಅವನ ಸೈನ್ಯವು ಬೀಡುಬಿಡಲು ಒಂದೂವರೆ ಯೋಜನವು ಬೇಕಾಗುತ್ತಿದ್ದಿತು. ಆ ನರಶ್ರೇಷ್ಠನು ಅಂತಹ ವಿಪುಲವಾದ ಸೈನ್ಯವನ್ನು ಪೋಷಿಸುತ್ತಿದ್ದನು.
ವಿಚಿತ್ರಕವಚಾಃ ಶೂರಾ ವಿಚಿತ್ರಧ್ವಜಕಾರ್ಮುಕಾಃ |
ವಿಚಿತ್ರಾಭರಣಾಃ ಸರ್ವೇ ವಿಚಿತ್ರರಥವಾಹನಾಃ ॥3॥
ಸ್ವದೇಶವೇಶಾಭರಣಾ ವೀರಾಃ ಶತಸಹಸ್ರಶಃ ॥4॥
ತಸ್ಯ ಸೇನಾಪ್ರಣೇತಾರೋ ಬಭೂವುಃ ಕ್ಷತ್ರಿಯರ್ಷಭಾಃ ॥5॥
ಅವನ ಸೈನಿಕರು ವಿಚಿತ್ರಕವಚವನ್ನು ಧರಿಸಿದವರೂ, ವಿಚಿತ್ರವಾದ ಧ್ವಜ, ಧನುಸ್ಸುಗಳನ್ನು ಉಳ್ಳವರೂ, ವಿಚಿತ್ರಾಭರಣವನ್ನು ಧರಿಸಿದವರೂ, ವಿಚಿತ್ರವಾದ ರಥ ಮತ್ತು ವಾಹನಗಳನ್ನು ಉಳ್ಳವರೂ, ತಮ್ಮ ತಮ್ಮ ದೇಶದ ವಸತ್ರಭರಣವನ್ನು ಧರಿಸಿದವರೂ ಆಗಿ ನೂರಾರು ಸಾವಿರಾರು ಸಂಖ್ಯೆಯಲ್ಲಿ ಇದ್ದರು. ಅವರಿಗೆ ಕ್ಷತ್ರಿಯ ಶ್ರೇಷ್ಠರಾದ ಸೇನಾನಾಯಕರೂ ಇದ್ದರು.
ವ್ಯಥಯನ್ನಿವ ಭೂತಾನಿ ಕಂಪಯನ್ನಿವ ಮೇದಿನೀಮ್ |
ಶನೈರ್ವಿಶ್ರಾಮಯನ್ ಸೇನಾಂ ಸ ಯಯೌ ಯತ್ರ ಪಾಂಡವಾಃ ॥6॥
ಶಲ್ಯನು ಎಲ್ಲ ಪ್ರಾಣಿಗಳಿಗೂ ವ್ಯಥೆಯನ್ನುಂಟು ಮಾಡುವವನಂತೆ, ಭೂಮಿಯನ್ನು ನಡುಗಿಸುವವನಂತೆ ನಿಧಾನವಾಗಿ ಅಲ್ಲಲ್ಲಿ ಬೀಡುಬಿಡುತ್ತಾ ಸೇನೆಯನ್ನು ತೆಗೆದುಕೊಂಡು ಪಾಂಡವರ ಕಡೆಗೆ ಹೊರಟನು.
ತತೋ ದುರ್ಯೋಧನಃ ಶ್ರುತ್ವಾ ಮಹಾಸೇನಂ ಮಹಾರಥಮ್ |

ಉಪಾಯಾಂತಮಭಿದ್ರುತ್ಯ ಸ್ವಯಮಾನರ್ಚ ಭಾರತ ॥7॥
ಎಲೈ ಭಾರತನೇ, ಮಹಾರಥನಾದ ಅವನು ಮಹಾಸೈನ್ಯವನ್ನು ತೆಗೆದುಕೊಂಡು ಬರುತ್ತಿರುವುದನ್ನು ಕೇಳಿದ ದುರ್ಯೋಧನನು ತಾನೇ ಓಡಿಹೋಗಿ ಅವನನ್ನು ಸತ್ಕರಿಸಿದನು.
ಶಲ್ಯಸ್ಯ ಮಂತ್ರಿಭಿಃ ಸರ್ವೈರ್ದುರ್ಯೋಧನವಶಾನುಗೈಃ |
ಅಜ್ಞಾತಂ ಚೈವ ಶಲ್ಯಸ್ಯ ಕೌರವ್ಯಃ ಕೃತವಾನ್ ಪ್ರಿಯಮ್ ॥8॥
ಶಲ್ಯನ ಮಂತ್ರಿಗಳನ್ನು ದುರ್ಯೋಧನನು ವಶಮಾಡಿಕೊಂಡು ಶಲ್ಯನಿಗೆ ತಿಳಿಯದಂತೆ ಅವನು ಅವನಿಗೆ ಪ್ರಿಯವನ್ನು ಉಂಟುಮಾಡಿದನು.
ಕಾರಯಾಮಾಸ ಪೂಜಾರ್ಥಂ ತಸ್ಯ ದುರ್ಯೋಧನಃ ಸಭಾಃ |
ರಮಣೀಯೇಷು ದೇಶೇಷು ರತ್ನಚಿತ್ರಾಃ ಸ್ವಲಂಕೃತಾಃ ॥9॥
ಅವನನ್ನು ಸತ್ಕರಿಸುವ ಸಲುವಾಗಿ ದುರ್ಯೋಧನನು ಅವನ ಸೈನ್ಯವು ಬರುವ ಮಾರ್ಗದಲ್ಲಿ ರಮಣೀಯವಾದ ಪ್ರದೇಶಗಳಲ್ಲಿ ಅಲ್ಲಲ್ಲಿ ರತ್ನದಿಂದ ಅಲಂಕರಿಸಿದ ವಿಚಿತ್ರವಾದ ಅನೇಕ ಸಭಾಗ್ರಹಗಳನ್ನು ನಿರ್ಮಾಣ ಮಾಡಿಸಿದನು.
ಶಿಲ್ಪಿಭಿರ್ವಿವಿಧೈಶ್ಚೈವ ಕ್ರೀಡಾಸ್ತತ್ರ ಪ್ರಯೋಜಿತಾಃ |
ತತ್ರ ಮಾಲ್ಯಾನಿ ಮಾಂಸಾನಿ ಭಕ್ಷ್ಯಂ ಪೇಯಂ ಚ ಸಂಸ್ಕೃತಮ್ ॥10॥
ಕೂಪಾಶ್ಚ ವಿವಿಧಾಕಾರಾ ಮನೋಹರ್ಷವಿವರ್ಧನಾಃ |
ವಾಪ್ಯಶ್ಚ ವಿವಿಧಾಕಾರಾ ಔದನಾನಿ ಗೃಹಾಣಿ ಚ ॥11॥
ಅನೇಕ ವಿಧವಾದ ಶಿಲ್ಪಿಗಳಿಂದ ಅಲ್ಲಲ್ಲಿ ಕ್ರೀಡಾಸ್ಥಾನಗಳು ಮಾಡಲ್ಪಟ್ಟವು. ಅಲ್ಲಿ ಪುಷ್ಪಮಾಲೆಗಳು, ಮಾಂಸಗಳು, ಚೆನ್ನಾಗಿ ತಯಾರಿಸಿದ ಭಕ್ಷ್ಯಭೋಜ್ಯಗಳು, ಅನೇಕ ಆಕಾರದ ಬಾವಿಗಳು, ಮನಸ್ಸಿಗೆ ಸಂತೋಷವನ್ನುಂಟು ಮಾಡುವ ಅನೇಕ ವಿಧವಾದ ಸರೋವರಗಳು, ಆಹಾರದಿಂದ ಕೂಡಿದ ಗೃಹಗಳೂ ಇದ್ದವು.
ಸ ತಾಃ ಸಭಾಃ ಸಮಾಸಾದ್ಯ ಪೂಜ್ಯಮಾನೋ ಯಥಾಽಮರಃ |
ದುರ್ಯೋಧನಸ್ಯ ಸಚಿವೈರ್ದೇಶೇ ದೇಶೇ ಯಥಾವಿಧಿ ॥12॥
ಆಜಗಾಮ ಸಭಾಮನ್ಯಾಂ ದೇವಾವಸಥವರ್ಚಸಮ್ ॥13॥
ಶಲ್ಯನು ದೇವತೆಯಂತೆ ಆಯಾ ಸಭೆಗಳಲ್ಲಿ ದುರ್ಯೋಧನನ ಮಂತ್ರಿಗಳಿಂದ ದೇಶದೇಶಗಳಲ್ಲಿ ವಿಧಿಪೂರ್ವಕವಾಗಿ ಸ್ವೀಕರಿಸಲ್ಪಟ್ಟು ದೇವತೆಗಳ ಬಿಡಾರದಂತಿರುವ ತೇಜೋಯುಕ್ತವಾದ ಒಂದು ಸಭೆಗೆ ಬಂದನು.
ಸ ತತ್ರ ವಿಭವೈರ್ಯುಕ್ತಃ ಕಲ್ಯಾಣೈರತಿಮಾನುಷೈಃ |
ಮೇನೇಽಭ್ಯಧಿಕಮಾತ್ಮಾನಮವಮೇನೇ ಪುರಂದರಮ್ ॥14॥
ಅಲ್ಲಿ ಅವನು ಮನುಷ್ಯರನ್ನು ಮೀರಿದ ಮಂಗಳಕರವಾದ ವಸ್ತುಗಳನ್ನು ನೋಡಿ ತನ್ನನ್ನು ಶ್ರೇಷ್ಠನೆಂದು ತಿಳಿದು ಇಂದ್ರನು ತನಗಿಂತ ಕಡಿಮೆ ಭೋಗದವನು ಎಂದು ತಿಳಿದನು.
ಪಪ್ರಚ್ಛ ಸ ತತಃ ಪ್ರೇಷ್ಯಾನ್ ಪ್ರಹೃಷ್ಟಃ ಕ್ಷತ್ರಿಯರ್ಷಭಃ ॥15॥
ಯುಧಿಷ್ಠಿರಸ್ಯ ಪುರುಷಾಃ ಕೇಽತ್ರ ಚಕ್ರುಃ ಸಭಾ ಇಮಾಃ |
ಆನೀಯಂತಾಂ ಸಭಾಕಾರಾಃ ಪ್ರದೇಯಾರ್ಹಾ ಹಿ ಮೇ ಮತಾಃ ॥16॥
ಪ್ರದೇಯಮೇಭ್ಯೋ ದಾಸ್ಯಾಮಿ ಕುಂತೀಪುತ್ರಪ್ರಿಯೇಪ್ಸಯಾ ॥17॥
ಕ್ಷತ್ರಿಯರ್ಷಭನಾದ ಅವನು ಸಂತೋಷಗೊಂಡು ಅಲ್ಲಿದ್ದ ಸೇವಕರನ್ನು ಕುರಿತು ಯುಧಿಷ್ಠಿರನ ಯಾವ ಪುರುಷರು ಈ ಸಭೆಗಳನ್ನು ನಿರ್ಮಿಸಿದ್ದಾರೆ? ಸಭೆಯನ್ನು ನಿರ್ಮಿಸಿದವರನ್ನು ಕರೆದುಕೊಂಡು ಬನ್ನಿ. ಅವರಿಗೆ ಉಡುಗೊರೆಗಳನ್ನು ಕೊಡಬೇಕು ಎಂದು ನನ್ನ ಅಭಿಪ್ರಾಯ. ಧರ್ಮರಾಜನಿಗೆ ಪ್ರಿಯವನ್ನು ಮಾಡುವ ದೃಷ್ಟಿಯಿಂದ ಅವರಿಗೆ ನಾನು ಉಡುಗೊರೆಗಳನ್ನು ಕೊಡುವೆನು ಎಂದು ಹೇಳಿದನು.
ವೈಶಂಪಾಯನಃ
ತತಃ ಪ್ರಹೃಷ್ಟಂ ರಾಜಾನಂ ಜ್ಞಾತ್ವಾ ತೇ ಸಚಿವಾಸ್ತದಾ |
ದುರ್ಯೋಧನಾಯ ತತ್ ಸರ್ವಂ ಕಥಯಂತಿ ಸ್ಮ ವಿಸ್ಮಿತಾಃ ॥18॥
ವೈಶಂಪಾಯನ ಆಗ ದುರ್ಯೋಧನನ ಸಚಿವರು ಶಲ್ಯನು ಸಂತೋಷಗೊಂಡಿರುವುದನ್ನು ತಿಳಿದು ಆಶ್ಚರ್ಯಗೊಂಡು ದುರ್ಯೋಧನನಿಗೆ ಆ ವಿಷಯವೆಲ್ಲವನ್ನೂ ಹೇಳಿದರು.
ಸಂಪ್ರಹೃಷ್ಟೋ ಯದಾ ಶಲ್ಯೋ ದಿದಿತ್ಸುರಪಿ ಜೀವಿತಮ್ |
ಗೂಢೋ ದುರ್ಯೋಧನಸ್ತತ್ರ ದರ್ಶಯಾಮಾಸ ಮಾತುಲಮ್ ॥19॥
ಯಾವಾಗ ಸಂತೋಷಗೊಂಡ ಶಲ್ಯನು ತನ್ನ ಪ್ರಾಣವನ್ನು ಬೇಕಾದರೂ ಕೊಡಲು ಬಯಸಿದನೋ ಆಗ ಅಲ್ಲಿಯವರೆಗೆ ಅಡಗಿಕೊಂಡಿದ್ದ ದುರ್ಯೋಧನನು ಸೋದರ ಮಾವನಾದ ಅವನ ಕಣ್ಣೆದುರಿಗೆ ಬಂದನು.
ದೃಷ್ಟ್ವಾ ದುರ್ಯೋಧನಂ ರಾಜಾ ವಿಸ್ಮಿತಃ ಸ ನರೋತ್ತಮಮ್ |
ಮಂತ್ರಿಣಶ್ಚಾಪಿ ಶಂಸಂತಿ ಮದ್ರರಾಜಂ ಸುವಿಸ್ಮಿತಮ್ ॥20॥
ದುರ್ಯೋಧನೇನ ತೇ ರಾಜನ್ ಶುಶ್ರೂಷಿತಮಿದಂ ಪ್ರಭೋ |
ಪ್ರಿಯಂ ಪ್ರಿಯಸ್ಯಾಸ್ಯ ತತಃ ಕರ್ತುಮರ್ಹತಿ ಭೂಮಿಪ ॥21॥
ನರಶ್ರೇಷ್ಠನಾದ ದುರ್ಯೋಧನನನ್ನು ನೋಡಿದ ಶಲ್ಯರಾಜನು ಆಶ್ಚರ್ಯಗೊಂಡನು. ಆಶ್ಚರ್ಯಗೊಂಡ ಶಲ್ಯರಾಜನನ್ನು ಕುರಿತು ದುರ್ಯೋಧನನ ಮಂತ್ರಿಗಳು ರಾಜನೇ, ಪ್ರಭುವೇ, ದುರ್ಯೋಧನನು ನಿನಗೆ ಈ ಕೈಂಕರ್ಯವನ್ನು ಮಾಡಿದ್ದಾನೆ. ಅವನು ಮಾಡಿದ

ಈ ಪ್ರಿಯಕ್ಕೆ ಅನುಗುಣವಾಗಿ ನೀನೂ ಸಹ ಅವನಿಗೆ ಸಹಾಯವನ್ನು ಮಾಡಬೇಕು ಎಂದು ಹೇಳಿದರು.
ತಂ ದೃಷ್ಟ್ವಾ ಮದ್ರರಾಜಸ್ತು ಜ್ಞಾತ್ವಾ ಯತ್ನಂ ಚ ತಸ್ಯ ತಮ್ |
ಪರಿಷ್ವಜ್ಯಾಬ್ರವೀತ್ ಪ್ರೀತ ಇಷ್ಟೋಽರ್ಥೋ ವ್ರಿಯತಾಮಿತಿ ||22||
ಮದ್ರರಾಜನಾದ ಶಲ್ಯನು ಆ ಸಭೆಗಳನ್ನು ನೋಡಿ ಅದರ ಹಿಂದಿರುವ ಆ ಪ್ರಯತ್ನವನ್ನು ತಿಳಿದು ಸಂತೋಷಗೊಂಡು ದುರ್ಯೋಧನನನ್ನು ಆಲಿಂಗಿಸಿ ನಿನಗೆ ಇಷ್ಟವಾದ ವರವನ್ನು ಕೇಳು ಎಂದು ಹೇಳಿದನು.
ದುರ್ಯೋಧನಃ
ಸತ್ಯವಾಗ್ ಭವ ಕಲ್ಯಾಣ ವರೋ ವೈ ಮಮ ದೀಯತಾಮ್ |
ಸರ್ವಸೇನಾಪ್ರಣೇತಾ ಮೇ ಭವಾನ್ ಭವಿತುಮರ್ಹತಿ ||23||
ದುರ್ಯೋಧನ ಕಲ್ಯಾಣಮೂರ್ತಿಯೇ, ನೀನು ಸತ್ಯವಚನನಾಗು. ನನಗೆ ವರವನ್ನು ಕೊಡು. ನೀನು ನನ್ನ ಎಲ್ಲಾ ಸೈನ್ಯಕ್ಕೆ ನಾಯಕನಾಗಬೇಕೆಂಬುದೇ ನಾನು ಕೇಳುವ ವರ.
ಯಥೈವ ಪಾಂಡವಾಸ್ತುಭ್ಯಂ ತಥೈವ ಭವತೇ ಹ್ಯಹಮ್ |
ಅನುಮಾನ್ಯಂ ಚ ಪಾಲ್ಯಂ ಚ ಭಕ್ತಂ ಚ ಭಜ ಮಾಂ ವಿಭೋ ||24||
ನಿನಗೆ ಪಾಂಡವರು ಹೇಗೋ ನಾನೂ ಸಹ ಹಾಗೆಯೇ ಸರಿ. ಪ್ರಭುವೇ, ನಿನ್ನಿಂದ ಅನುಮೋದಿಸಲ್ಪಡಬೇಕಾದ, ರಕ್ಷಿಸಲ್ಪಡಬೇಕಾದ ಮತ್ತು ನಿನ್ನ ಭಕ್ತನಾದ ನನ್ನನ್ನು ಭಜಿಸು (ನನಗೆ ಸಹಾಯವನ್ನು ಮಾಡು).
ವೈಶಂಪಾಯನಃ
ಕೃತಮಿತ್ಯಬ್ರವೀತ್ ಶಲ್ಯಃ ಕಿಮನ್ಯದ್ ವ್ರಿಯತಾಮಿತಿ |
ಕೃತಮಿತ್ಯೇವ ಗಾಂಧಾರಿಃ ಪ್ರತ್ಯುವಾಚ ಪುನಃ ಪುನಃ ||25||
ವೈಶಂಪಾಯನ ಆಗಲೇ ಮಾಡಿದ್ದಾಯಿತು. ಬೇರೆ ಬೇಕಾದ ವರವನ್ನು ಕೇಳು ಎಂದು ಶಲ್ಯನು ಹೇಳಿದನು. ದುರ್ಯೋಧನನಾದರೂ ಈ ವರವು ಸಾಕು ಎಂದು ಮತ್ತೆ ಮತ್ತೆ ಹೇಳಿದನು.
ಶಲ್ಯಃ
ಗಚ್ಛ ದುರ್ಯೋಧನ ಪುರಂ ಸ್ವಕಮೇವ ನರರ್ಷಭ |
ಅಹಂ ಗಮಿಷ್ಯೇ ದ್ರಷ್ಟುಂ ವೈ ಯುಧಿಷ್ಠಿರಮರಿಂದಮಮ್ ||26||
ಶಲ್ಯ ದುರ್ಯೋಧನನೇ, ನರರ್ಷಭನೇ, ನೀನು ನಿನ್ನ ಪಟ್ಟಣಕ್ಕೆ ಹೋಗು. ನಾನು ಅರಿಂದಮನಾದ ಯುಧಿಷ್ಠಿರನನ್ನು ನೋಡಲು ಹೋಗುವೆನು.
ದೃಷ್ಟ್ವಾ ಯುಧಿಷ್ಠಿರಂ ರಾಜನ್ ಪುನರೇಷ್ಯೇ ನರಾಧಿಪ |
ಅವಶ್ಯಂ ಚಾಪಿ ದ್ರಷ್ಟವ್ಯಃ ಪಾಂಡವಃ ಪುರುಷರ್ಷಭ ||27||
ನರಾಧಿಪನೇ, ರಾಜನೇ, ನಾನು ಯುಧಿಷ್ಠಿರನನ್ನು ನೋಡಿ ಪುನಃ ಬರುವೆನು. ಪುರುಷರ್ಷಭನೇ, ಪಾಂಡುಪುತ್ರನಾದ ಯುಧಿಷ್ಠಿರನನ್ನು ನಾನು ಅವಶ್ಯವಾಗಿ ನೋಡಬೇಕು.
ದುರ್ಯೋಧನಃ
ಕ್ಷಿಪ್ರಮಾಗಮ್ಯತಾಂ ರಾಜನ್ ಪಾಂಡವಂ ವೀಕ್ಷ್ಯ ಪಾರ್ಥಿವ |
ತ್ವದಧೀನಾಃ ಸ್ಮ ರಾಜೇಂದ್ರ ವರದಾನಂ ಸ್ಮರಸ್ವ ನಃ ||28||
ದುರ್ಯೋಧನ ರಾಜನೇ, ಯುಧಿಷ್ಠಿರನನ್ನು ನೋಡಿ ಬೇಗ ಹಿಂದಿರುಗು. ರಾಜೇಂದ್ರನೇ, ನಾವು ನಿನ್ನ ಅಧೀನರಾಗಿದ್ದೇವೆ. ನನಗೆ ಕೊಟ್ಟ ವರವನ್ನು ಮರೆಯಬೇಡ (ಸ್ಮರಿಸಿಕೊ).
ಶಲ್ಯಃ
ಕ್ಷಿಪ್ರಮೇಷ್ಯಾಮಿ ಭದ್ರಂ ತೇ ಗಚ್ಛ ತ್ವಂ ಸ್ವಪುರಂ ನೃಪ |
ದೃಷ್ಟ್ವಾ ತು ಪಾಂಡವಾನ್ ರಾಜನ್ ನ ಮಿಥ್ಯಾ ಕರ್ತುಮುತ್ಸಹೇ ||
ಶಲ್ಯ ರಾಜನೇ, ನಿನಗೆ ಕಲ್ಯಾಣವಾಗಲಿ. ಪಾಂಡವರನ್ನು ನೋಡಿ ಬೇಗ ಹಿಂದಿರುಗುವೆನು. ನೀನು ನಿನ್ನ ಪಟ್ಟಣಕ್ಕೆ ಹೋಗು. ನಾನು ಕೊಟ್ಟ ಮಾತನ್ನು ಸುಳ್ಳು ಮಾಡಲು ಬಯಸುವುದಿಲ್ಲ.
ವೈಶಂಪಾಯನಃ
ಪರಿಷ್ವಜ್ಯ ತಥಾಽನ್ಯೋನ್ಯಂ ಶಲ್ಯದುರ್ಯೋಧನಾವುಭೌ |
ಸ ತದಾ ಶಲ್ಯಮಾಮಂತ್ರ್ಯ ಪುನರಾಯಾತ್ ಸ್ವಕಂ ಪುರಮ್ ||30||
ಶಲ್ಯೋ ಜಗಾಮ ಕೌಂತೇಯಾನಾಖ್ಯಾತುಂ ಕರ್ಮ ತಸ್ಯ ತತ್ ||31||
ವೈಶಂಪಾಯನ ಆಗ ಶಲ್ಯ-ದುರ್ಯೋಧನರಿಬ್ಬರೂ ಪರಸ್ಪರವಾಗಿ ಆಲಿಂಗಿಸಿದರು. ದುರ್ಯೋಧನನು ಶಲ್ಯನ ಅನುಮತಿಯನ್ನು ಪಡೆದು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಶಲ್ಯನಾದರೂ ನಡೆದ ಎಲ್ಲಾ ವಿಷಯವನ್ನು ತಿಳಿಸಲು ಪಾಂಡವರ ಕಡೆಗೆ ಹೊರಟನು.
ಉಪಪ್ಲಾವ್ಯಂ ಸ ಗತ್ವಾ ತು ಸ್ಕಂಧಾವಾರಂ ಪ್ರವಿಶ್ಯ ಚ |
ಪಾಂಡವಾನಥ ತಾನ್ ಸರ್ವಾನ್ ಶಲ್ಯಸ್ತತ್ರ ದದರ್ಶ ಹ ||32||
ಶಲ್ಯನು ಉಪಪ್ಲಾವ್ಯ ನಗರವನ್ನು ತಲುಪಿ, ಅಲ್ಲಿ ಸೇನಾನಿವೇಶದ ಸ್ಥಳವನ್ನು ಪ್ರವೇಶಿಸಿ, ಅಲ್ಲಿ ಆ ಪಾಂಡವರನ್ನು ನೋಡಿದನು.
ಚಿರಾತ್ತು ದೃಷ್ಟ್ವಾ ರಾಜಾನಂ ಮಾತುಲಂ ಸಮಿತಿಂಜಯಮ್ |
ಆಸನೇಭ್ಯಃ ಸಮುತ್ಪೇತುಃ ಸರ್ವೇ ಸಹಯುಧಿಷ್ಠಿರಾಃ ||33||
ತಥಾ ಭೀಮಾರ್ಜುನೌ ಹೃಷ್ಟೌ ಸ್ವಸ್ರೀಯೌ ಚ ಯಮಾವುಭೌ |

ದ್ರೌಪದೀ ಚ ಸುಭದ್ರಾ ಚ ಅಭಿಮನ್ಯುಶ್ಚ ಭಾರತ ॥34॥
ಸಮೇತ್ಯ ಚ ಮಹಾಬಾಹುಂ ಶಲ್ಯಂ ಪಾಂಡುಸುತಸ್ತದಾ |
ಯುದ್ಧದಲ್ಲಿ ಯಾವಾಗಲೂ ಜಯಶೀಲನಾದ, ತಮ್ಮ ಸೋದರಮಾವನಾದ ಶಲ್ಯರಾಜನು ಬಹಳ ಸಮಯದ ನಂತರ ಬಂದುದನ್ನು ನೋಡಿ ಯುಧಿಷ್ಠಿರನ ಜೊತೆಯಲ್ಲಿ ಎಲ್ಲರೂ ತಮ್ಮ ಆಸನಗಳಿಂದ ಎದ್ದರು. ಅದರಂತೆ ಸಂತೋಷಗೊಂಡ ಭೀಮಾರ್ಜುನರೂ ಮತ್ತು ತಂಗಿಯ ಮಕ್ಕಳಾದ ನಕುಲ-ಸಹದೇವರೂ ಎದ್ದು ನಿಂತರು. ಭಾರತನೇ, ಹಾಗೆಯೇ ದ್ರೌಪದಿಯೂ, ಸುಭದ್ರೆಯೂ ಮತ್ತು ಅಭಿಮನ್ಯುವೂ ಎದ್ದರು.
ಕೃತಾಂಜಲಿರದೀನಾತ್ಮಾ ಧರ್ಮಾತ್ಮಾ ಶಲ್ಯಮಬ್ರವೀತ್ ॥35॥
ಸ್ವಾಗತಂ ತೇಽಸ್ತು ವೈ ರಾಜನ್ನೇತದಾಸನಮಾಸ್ಯತಾಮ್ ॥36॥
ಅದೀನವಾದ ಮನಸ್ಸುಳ್ಳವನೂ, ಧರ್ಮಿಷ್ಠನೂ ಆದ ಪಾಂಡುಸುತನಾದ ಯುಧಿಷ್ಠಿರನು ಮಹಾಬಾಹುವಾದ ಶಲ್ಯನ ಸಮೀಪಕ್ಕೆ ಬಂದು ಕೈಗಳನ್ನು ಮುಗಿದು ರಾಜನೇ, ನಿನಗೆ ಸ್ವಾಗತ. ಈ ಆಸನದಲ್ಲಿ ಕುಳಿತುಕೊ ಎಂದು ಹೇಳಿದನು.
ವೈಶಂಪಾಯನಃ
ತತೋ ನ್ಯಷೀದಚ್ಛಲ್ಯಶ್ಚ ಕಾಂಚನೇ ಪರಮಾಸನೇ |
ತತ್ರ ಪಾದ್ಯಮಥಾರ್ಘ್ಯಂ ಚ ನ್ಯವೇದಯತ ಪಾಂಡವಃ ॥37॥
ವೈಶಂಪಾಯನ ಅನಂತರ ಶಲ್ಯನು ಶ್ರೇಷ್ಠವಾದ ಸುವರ್ಣಮಯವಾದ ಆಸನದಲ್ಲಿ ಕುಳಿತುಕೊಂಡನು. ಯುಧಿಷ್ಠಿರನು ಅವನಿಗೆ ಪಾದ್ಯವನ್ನು ಮತ್ತು ಅರ್ಘ್ಯವನ್ನು ನೀಡಿದನು.
ನಿವೇದ್ಯ ಚಾರ್ಘ್ಯಂ ವಿಧಿವನ್ಮದ್ರರಾಜಾಯ ಭಾರತ |
ಕುಶಲಂ ಪಾಂಡವೋಽಪೃಚ್ಛತ್ ಶಲ್ಯಂ ಸರ್ವಸುಖಾವಹಮ್ ॥38॥
ಎಲೈ ಭಾರತನೇ, ಧರ್ಮರಾಜನು ವಿಧಿಪೂರ್ವಕವಾಗಿ ಶಲ್ಯನಿಗೆ ಅರ್ಘ್ಯವನ್ನು ನಿವೇದಿಸಿ ಎಲ್ಲರಿಗೂ ಸುಖವನ್ನು ಕೊಡುವ ಕುಶಲಪ್ರಶ್ನೆಯನ್ನು ಮಾಡಿದನು.
ಸ ತೈಃ ಪರಿವೃತಃ ಸರ್ವೈಃ ಪಾಂಡವೈರ್ಧರ್ಮಚಾರಿಭಿಃ |
ಆಸನೇ ಚೋಪವಿಷ್ಟಃ ಸ ಶಲ್ಯಃ ಪಾರ್ಥಮಥಾಬ್ರವೀತ್ ॥39॥
ಪ್ರೀತ್ಯಾ ಪರಮಯಾ ಯುಕ್ತಃ ಸಮಾಶ್ಲಿಷ್ಯ ಯುಧಿಷ್ಠಿರಮ್ ॥40॥
ಧರ್ಮಾಚರಣಶೀಲರಾದ ಎಲ್ಲಾ ಪಾಂಡವರಿಂದ ಸುತ್ತುವರಿಯಲ್ಪಟ್ಟು ಶ್ರೇಷ್ಠವಾದ ಆಸನದಲ್ಲಿ ಕುಳಿತಿದ್ದ ಶಲ್ಯನು ಕುಂತೀಪುತ್ರನಾದ ಯುಧಿಷ್ಠಿರನನ್ನು ಆಲಿಂಗಿಸಿ ಬಹಳ ಸಂತೋಷದಿಂದ ಕೂಡಿದವನಾಗಿ ಮಾತನಾಡಿದನು.
ಕುಶಲಂ ರಾಜಶಾರ್ದೂಲ ಕಚ್ಚಿತ್ ತೇ ಕುರುನಂದನ |
ಅರಣ್ಯವಾಸಾದ್ ದಿಷ್ಟ್ಯಾಽಸಿ ವಿಮುಕ್ತೋ ಜಯತಾಂ ವರ ॥41॥
ಕುರುನಂದನನೇ, ರಾಜಶಾರ್ದೂಲನೆ, ನಿನಗೆ ಕುಶಲವಷ್ಟೆ? ಜಯಶಾಲಿಗಳಲ್ಲಿ ಶ್ರೇಷ್ಠನೇ, ದೇವರ ದಯದಿಂದ ಅರಣ್ಯವಾಸದಿಂದ ಬಿಡುಗಡೆಯನ್ನು ಹೊಂದಿದ್ದೀಯೆ.
ಸುದುಷ್ಕರಂ ಕೃತಂ ರಾಜನ್ ನಿರ್ಜನೇ ವಸತಾ ವನೇ |
ಭ್ರಾತೃಭಿಃ ಸಹ ರಾಜೇಂದ್ರ ಕೃಷ್ಣಯಾ ಚಾನಯಾಽನಘ ॥42॥
ಎಲೈ ರಾಜೇಂದ್ರನೇ, ಅನಘನೇ, ಅರಣ್ಯದಲ್ಲಿ ತಮ್ಮಂದಿರ ಮತ್ತು ಈ ದ್ರೌಪದಿಯ ಜೊತೆಯಲ್ಲಿ ವಾಸ ಮಾಡಿ ಬಹಳ ದುಷ್ಕರವಾದ ಕಾರ್ಯವನ್ನು ಮಾಡಿದ್ದೀಯೆ.
ಅಜ್ಞಾತವಾಸಂ ಘೋರಂ ಚ ವಸತಾ ದುಷ್ಕೃತಂ ಕೃತಮ್ ॥43॥
ದುಃಖಮೇವ ಕೃತಂ ಸೌಖ್ಯಂ ರಾಜ್ಯಭ್ರಷ್ಟಸ್ಯ ಭಾರತ ॥44॥
ಘೋರವಾದ ಅಜ್ಞಾತವಾಸವನ್ನು ಮಾಡುತ್ತಾ ದುಷ್ಕರವಾದ ಕಾರ್ಯವನ್ನು ಮಾಡಿದ್ದೀಯೆ. ಭಾರತನೇ, ಅಜ್ಞಾತವಾಸವು ದುಃಖಪ್ರದವೇ ಆದರೂ ಅದು ನಿನಗೆ ಪ್ರಾರಬ್ಧಕರ್ಮಕ್ಷಯರೂಪವಾದುದರಿಂದ ಸುಖವೇ ಆಯಿತು.
ದುಃಖಸ್ಯೈತಸ್ಯ ಮಹತೋ ಧಾರ್ತರಾಷ್ಟ್ರಕೃತಸ್ಯ ವೈ |
ಅವಾಪ್ಸ್ಯಸಿ ಫಲಂ ರಾಜನ್ ಹತ್ವಾ ಶತ್ರೂನ್ ಪರಂತಪ ॥45॥
ರಾಜನೇ, ಪರಂತಪನೇ, ಧೃತರಾಷ್ಟ್ರನ ಪುತ್ರನ ನಿಮಿತ್ತದಿಂದ ಅನುಭವಿಸಿದ ಈ ದೊಡ್ಡ ದುಃಖದ ಫಲವನ್ನು ನೀನು ಶತ್ರುಗಳನ್ನು ಸಂಹರಿಸಿ ಹೊಂದುವಿ.
ವಿದಿತಂ ತೇ ಮಹಾರಾಜ ಲೋಕತಂತ್ರಂ ನರಾಧಿಪ |
ತಸ್ಮಾಲ್ಲೋಕಕೃತಂ ಕಿಂಚಿತ್ ತವ ತಾತ ನ ವಿದ್ಯತೇ ॥46॥
ರಾಜರ್ಷೀಣಾಂ ಪುರಾಣಾನಾಂ ಮಾರ್ಗಮನ್ವಿಚ್ಛ ಭಾರತ ॥47॥
ಮಹಾರಾಜನೇ, ನರಾಧಿಪನೇ, ನಿನಗೆ ಲೋಕದ ನಡತೆಯು ತಿಳಿದಿದೆ. ಆದ್ದರಿಂದ ಲೋಕದ ಮಾತುಗಳಿಂದ ನಿನಗೆ ಆಗಬೇಕಾದುದು ಯಾವುದೂ ಇಲ್ಲ. ಎಲೈ ಭಾರತನೇ, ಪ್ರಾಚೀನರಾದ ರಾಜರ್ಷಿಗಳ ಮಾರ್ಗವನ್ನು ಅನುಸರಿಸು.
ದಾನೇ ಸತ್ಯೇ ತಪಸಿ ಚ ತವ ಬುದ್ಧಿರ್ಯುಧಿಷ್ಠಿರ |
ಕ್ಷಮಾ ದಮಶ್ಚ ಸತ್ಯಂ ಚ ಅಹಿಂಸಾ ಚ ನೃಪೋತ್ತಮ ॥48॥
ಎಲೈ ಯುಧಿಷ್ಠಿರನೇ, ನೃಪೋತ್ತಮನೇ, ನಿನ್ನ ಬುದ್ಧಿಯು ಯಾವಾಗಲೂ ದಾನದಲ್ಲಿಯೂ, ಸತ್ಯದಲ್ಲಿಯೂ, ತಪಸ್ಸಿನಲ್ಲಿಯೂ, ಕ್ಷಮೆಯಲ್ಲಿಯೂ, ದಮದಲ್ಲಿಯೂ ಮತ್ತು ಅಹಿಂಸೆಯಲ್ಲಿಯೂ ಇದೆ.
ಉತ್ಸಾಹಃ ಸಂಯಮೋ ದಾಕ್ಷ್ಯಮಪ್ರಮಾದೋ ದ್ಯುತಿಃ ಸ್ಮೃತಿಃ |

ಮೃದುರ್ವದಾನ್ಯೋ ಬ್ರಹ್ಮಣ್ಯೋ ದಾತಾ ಧರ್ಮಪರಾಯಣಃ ॥49॥
ಧರ್ಮಾಸ್ತೇ ವಿದಿತಾ ರಾಜನ್ ಬಹವೋ ಲೋಕಸಾಕ್ಷಿಕಾಃ ॥50॥
ಸರ್ವಂ ಜಗದಿದಂ ತಾತ ವ್ಯಥಿತಂ ತೇ ಪರಂತಪ ॥51॥
ಉತ್ಸಾಹ, ಸಂಯಮ, ದಕ್ಷತೆ, ಪ್ರಮಾದವಿಲ್ಲದಿರುವಿಕೆ, ಕಾಂತಿ, ಸ್ಮೃತಿ, ಮಾರ್ದವ, ಔದಾರ್ಯ, ಬ್ರಾಹ್ಮಣಪ್ರಿಯತೆ, ದಾನ, ಧರ್ಮಪರಾಯಣತೆ, ಈ ನಿನ್ನ ಅನೇಕ ಧರ್ಮಗಳು ಲೋಕಸಾಕ್ಷಿಕವಾಗಿ ಎಲ್ಲರಿಗೂ ತಿಳಿದಿವೆ. ಎಲೈ ಪರಂತಪನೇ, ಈ ಎಲ್ಲ ಪ್ರಪಂಚವೂ ಸಹ ನಿನ್ನ ರಾಜ್ಯಭ್ರಂಶದ ನಿಮಿತ್ತದಿಂದ ದುಃಖಗೊಂಡಿದೆ.
ಮುದಿತಶ್ಚ ಪುನರ್ಲೋಕಃ ತ್ವಯಿ ರಾಜನ್ ಪ್ರತಿಷ್ಠಿತೇ |
ದಿಷ್ಟ್ಯಾ ಕೃಚ್ಛ್ರಮಿದಂ ರಾಜನ್ ಪಾರಿತಂ ಭರತರ್ಷಭ ॥52॥
ರಾಜನ್, ನೀನು ಪುನಃ ನಿನ್ನ ರಾಜ್ಯದಲ್ಲಿ ಪ್ರತಿಷ್ಠಿತನಾದರೆ ಲೋಕವೆಲ್ಲವೂ ಪುನಃ ಸಂತೋಷಗೊಳ್ಳುತ್ತದೆ. ಭರತರ್ಷಭನೇ, ದೇವರ ದಯದಿಂದ ನೀನು ಈ ಕಷ್ಟಕಾಲವನ್ನು ಕಳೆದಿದ್ದೀಯೆ (ದಾಟಿದ್ದೀಯೆ).
ದಿಷ್ಟ್ಯಾ ಪಶ್ಯಾಮಿ ರಾಜೇಂದ್ರ ಧರ್ಮಾತ್ಮಾನಂ ಸಹಾನುಗಮ್ |
ನಿಸ್ತೀರ್ಣದುಷ್ಕೃತಂ ರಾಜನ್ ತ್ವಾಂ ಧರ್ಮನಿಶ್ಚಯಂ ಪ್ರಭೋ ॥53॥
ರಾಜೇಂದ್ರನೆ, ಪ್ರಭುವೇ, ದೇವರ ದಯದಿಂದ ಎಲ್ಲ ಕಷ್ಟಗಳನ್ನು ಕಳೆದು ಧರ್ಮನಿಶ್ಚಯವುಳ್ಳವನೂ, ಧರ್ಮದಲ್ಲೇ ಮನಸ್ಸುಳ್ಳವನೂ ಆದ ನಿನ್ನನ್ನು ತಮ್ಮಂದಿರ ಜೊತೆಯಲ್ಲಿ ನೋಡುತ್ತಿದ್ದೇನೆ.
ವೈಶಂಪಾಯನಃ
ತತೋಽಸ್ಯಾಕಥಯದ್ ರಾಜನ್ ದುರ್ಯೋಧನಸಮಾಗಮಮ್ |
ತಚ್ಚ ಸುಶ್ರಾವಿತಂ ಸರ್ವಂ ವರದಾನಂ ಚ ಭಾರತ ॥54॥
ವೈಶಂಪಾಯನ ಜನಮೇಜಯರಾಜನೇ, ಭಾರತನೇ, ಅನಂತರ ಶಲ್ಯನು ದುರ್ಯೋಧನ ಸಮಾಗಮವನ್ನೂ, ಅವನಿಗೆ ಮಾಡಿದ ವರದಾನವನ್ನೂ, ಎಲ್ಲವನ್ನೂ ಹೇಳಿದನು.
ಯುಧಿಷ್ಠಿರಃ
ಸುಕೃತಂ ತೇ ಕೃತಂ ರಾಜನ್ ಪ್ರಹೃಷ್ಟೇನಾಂತರಾತ್ಮನಾ |
ದುರ್ಯೋಧನಸ್ಯ ಯದ್ ವೀರ ತ್ವಯಾ ವಾಚಾ ಪ್ರತಿಶ್ರುತಮ್ ॥55॥
ಯುಧಿಷ್ಠಿರ ರಾಜನೇ, ಸಂತೋಷಗೊಂಡ ಮನಸ್ಸಿನಿಂದ ನೀನು ಏನು ಮಾಡಿದೆಯೋ ಅದು ಒಳ್ಳೆಯದೇ ಆಯಿತು. ವೀರನೇ, ದುರ್ಯೋಧನನಿಗೆ ಸಹಾಯದ ವಿಷಯದಲ್ಲಿ ನೀನು ಮಾಡಿದ ವಾಗ್ದಾನವು ಸರಿಯಾಗಿಯೇ ಇದೆ.
ಏಕಂ ತ್ವಿಚ್ಛಾಮಿ ಭದ್ರಂ ತೇ ಕ್ರಿಯಮಾಣಂ ಮಹೀಪತೇ |
ರಾಜನ್ನಕರ್ತವ್ಯಮಪಿ ಕರ್ತುಮರ್ಹಸಿ ಸತ್ತಮ ॥56॥
ಮಮ ತ್ವವೇಕ್ಷಯಾ ವೀರ ಶೃಣು ವಿಜ್ಞಾಪಯಾಮಿ ತೇ |
ಮಹೀಪತಿಯೇ, ಸಜ್ಜನರಲ್ಲಿ ಶ್ರೇಷ್ಠನೇ, ನಿನಗೆ ಮಂಗಳವಾಗಲಿ. ಒಂದು ವಿಷಯವನ್ನು ಮಾತ್ರ ನೀನು ಮಾಡಬೇಕೆಂದು ನಾನು ಬಯಸುತ್ತೇನೆ. ರಾಜನೇ, ಅದು ಅಕರ್ತವ್ಯವಾದರೂ ನನ್ನ ಮೇಲಿನ ದೃಷ್ಟಿಯಿಂದ ನೀನು ಅದನ್ನು ಮಾಡಬೇಕು. ನಾನು ಅದನ್ನು ನಿವೇದಿಸುತ್ತೇನೆ. ಅದನ್ನು ಕೇಳು.
ಸ್ಪರ್ಧತೇ ಹಿ ಸದಾ ಕರ್ಣಃ ಪಾರ್ಥೇನ ರಣಮೂರ್ಧನಿ ॥57॥
ಕರ್ಣಾರ್ಜುನಾಭ್ಯಾಂ ಸಂಪ್ರಾಪ್ತೇ ದ್ವೈರಥೇ ರಾಜಸತ್ತಮ |
ವಾಸುದೇವೇನ ಸಾರಥ್ಯಂ ಕಾರ್ಯಂ ಪಾರ್ಥಸ್ಯ ಮಾತುಲ |
ಭವಾನಿಹ ಮಹಾರಾಜ ವಾಸುದೇವಸಮೋ ಯುಧಿ ॥58॥
ಕರ್ಣಸ್ಯ ಭವತಾ ಕಾರ್ಯಂ ಸಾರಥ್ಯಂ ನಾತ್ರ ಸಂಶಯಃ |
ಕರ್ಣನು ಯುದ್ಧದಲ್ಲಿ ಯಾವಾಗಲೂ ಅರ್ಜುನನ ಜೊತೆಯಲ್ಲಿ ಸ್ಪರ್ಧಿಸುತ್ತಾನೆ. ರಾಜಶ್ರೇಷ್ಠನೇ, ಕರ್ಣಾರ್ಜುನರಿಗೆ ದ್ವಂದ್ವಯುದ್ಧವು ಪ್ರಾಪ್ತವಾದಾಗ ಕೃಷ್ಣನು ಅರ್ಜುನನ ಸಾರಥ್ಯವನ್ನು ಮಾಡುತ್ತಾನೆ. ಸೋದರಮಾವನೇ, ಮಹಾರಾಜನೇ, ನೀನು ಕರ್ಣನ ಸಾರಥ್ಯವನ್ನು ಮಾಡಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.
ತತ್ರ ಪಾಲ್ಯೋಽರ್ಜುನೋ ರಾಜನ್ ಯದಿ ಮೇ ಪ್ರಿಯಮಿಚ್ಛಸಿ ॥59॥
ತೇಜೋವಧಶ್ಚ ತೇ ಕಾರ್ಯಃ ಸೌತೇರಸ್ಮಜ್ಜಯಾವಹಃ |
ಅಕರ್ತವ್ಯಮಪಿ ಹ್ಯೇತತ್ ಕರ್ತುಮರ್ಹಸಿ ಮಾತುಲ ॥60॥
ರಾಜನೇ, ನನಗೆ ಪ್ರಿಯವನ್ನುಂಟು ಮಾಡಲು ನೀನು ಬಯಸುವುದಾದರೆ ಆಗ ಅರ್ಜುನನನ್ನು ರಕ್ಷಿಸಬೇಕು. ನಮಗೆ ಜಯವುಂಟಾಗುವಂತೆ ಕರ್ಣನ ತೇಜೋವಧೆಯನ್ನು ನೀನು ಮಾಡಬೇಕು. ಸೋದರಮಾವನೇ, ಅಕರ್ತವ್ಯವಾದರೂ ಇದನ್ನು ನೀನು ಮಾಡಿಕೊಡಬೇಕು.
ಶಲ್ಯಃ
ಶೃಣು ಪಾಂಡವ ಭದ್ರಂ ತೇ ವಧೋಪಾಯಂ ದುರಾತ್ಮನಃ |
ಕರ್ಣಸ್ಯ ಸೂತಪುತ್ರಸ್ಯ ನಿತ್ಯಂ ಯುದ್ಧಾಭಿನಂದಿನಃ ॥61॥
ಶಲ್ಯ ಎಲೈ ಪಾಂಡವನೇ, ನಿನಗೆ ಮಂಗಳವಾಗಲಿ. ದುರಾತ್ಮನೂ, ಯಾವಾಗಲೂ ಯುದ್ಧವನ್ನು ಬಯಸುವವನೂ ಆದ ಸೂತಪುತ್ರನಾದ ಕರ್ಣನ ವಧೆಯ ಉಪಾಯವನ್ನು ಹೇಳುತ್ತೇನೆ, ಕೇಳು.
ತೇಜೋವಧನಿಮಿತ್ತಂ ಹಿ ಸೂತಪುತ್ರಸ್ಯ ಸಂಯುಗೇ |

ಅಹ(ಹಂ) ತಸ್ಯ ಭವಿಷ್ಯಾಮಿ ಸಂಗ್ರಾಮೇ ಸಾರಥಿರ್ಧ್ರುವಮ್ ॥62॥
ವಾಸುದೇವೇನ ಹಿ ಸಮಂ ನಿತ್ಯಂ ಮಾಂ ಸ ಹಿ ಮನ್ಯತೇ ॥63॥
ಸೂತಪುತ್ರನಾದ ಅವನ ತೇಜೋವಧೆಯನ್ನು ಮಾಡಲು ಯುದ್ಧದಲ್ಲಿ ಖಂಡಿತವಾಗಿ ನಾನು ಅವನಿಗೆ ಸಾರಥಿಯಾಗುವೆನು. ಅವನು ಯಾವಾಗಲೂ ನನ್ನನ್ನು ಕೃಷ್ಣನಿಗೆ ಸಮಾನನಾದವನು ಎಂದು ಭಾವಿಸುತ್ತಾನಷ್ಟೆ?
ತಸ್ಯಾಹಂ ಕುರುಶಾರ್ದೂಲ ಪ್ರತೀಪಮಹಿತಂ ವಚಃ |
ಧ್ರುವಂ ಸಂಕಥಯಿಷ್ಯಾಮಿ ಯೋದ್ಧುಕಾಮಸ್ಯ ಸಂಯುಗೇ ॥64॥
ಕುರುಶಾರ್ದೂಲನೇ, ಯುದ್ಧವನ್ನು ಮಾಡಲು ಬಯಸುವ ಅವನಿಗೆ ಯುದ್ಧದ ಕಾಲದಲ್ಲಿ ಅವನಿಗೆ ವಿರುದ್ಧವಾದ ಮತ್ತು ಅಪ್ರಿಯವಾದ ಮಾತುಗಳನ್ನು ನಿಶ್ಚಯವಾಗಿ ಮಾತನಾಡುವೆನು.
ಅಹಂ ತಥಾ ಕರಿಷ್ಯಾಮಿ ಸಾರಥೀ ರಣಮೂರ್ಧನಿ |
ಯಥಾ ಸ ಹತದರ್ಪಶ್ಚ ಗತತೇಜಾಶ್ಚ ಪಾಂಡವ ॥65॥
ಭವಿಷ್ಯತಿ ಸುಖಂ ಹಂತುಂ ಸತ್ಯಮೇತದ್ ಬ್ರವೀಮಿ ತೇ |
ಏವಮೇತತ್ ಕರಿಷ್ಯಾಮಿ ಯಥಾ ತಾತ ತ್ವಮಾತ್ಥ ಮಾಮ್ ॥66॥
ಯಚ್ಚಾನ್ಯದಪಿ ಶಕ್ಷ್ಯಾಮಿ ತತ್ ಕರಿಷ್ಯಾಮಿ ತೇ ಹಿತಮ್ ॥67॥
ಪಾಂಡವನೇ, ಅವನು ಯುದ್ಧದಲ್ಲಿ ತನ್ನ ದರ್ಪವನ್ನು ಕಳೆದುಕೊಂಡು ಸುಖವಾಗಿ ಕೊಲ್ಲಲ್ಪಡಲು ಸಾಧ್ಯವಾಗುವಂತೆ ನಾನು ಅವನ ತೇಜೋವಧೆಯನ್ನು ಮಾಡುವೆನು. ಈ ವಿಷಯವನ್ನು ನಾನು ಸತ್ಯವೆಂದು ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ. ಪ್ರೀತಿಪಾತ್ರನೇ, ನೀನು ಹೇಳಿದಂತೆಯೇ ಈ ಕಾರ್ಯವನ್ನು ಮಾಡುವೆನು. ನಿನ್ನ ಹಿತಕ್ಕೋಸ್ಕರ ಬೇರೆ ಏನನ್ನಾದರೂ ಮಾಡಲು ಸಾಧ್ಯವಿದ್ದರೆ ಅದನ್ನೂ ಮಾಡುವೆನು.
ಯಚ್ಚ ದುಃಖಂ ತ್ವಯಾ ಪ್ರಾಪ್ತಂ ದ್ಯೂತೇ ವೈ ಕೃಷ್ಣಯಾ ಸಹ |
ಪರುಷಾಣಿ ಚ ವಾಕ್ಯಾನಿ ಸೂತಪುತ್ರಕೃತಾನಿ ವೈ ॥68॥
ಜಟಾಸುರಾತ್ ಪರಿಕ್ಲೇಶಃ ಕೀಚಕಾಚ್ಚ ಮಹಾದ್ಯುತೇ |
ದ್ರೌಪದ್ಯಾಽಧಿಗತಂ ಸರ್ವಂ ದಮಯಂತ್ಯಾ ಯಥಾಽಶುಭಮ್ ॥69॥
ಸರ್ವಂ ದುಃಖಮಿದಂ ವೀರ ಸುಖೋದರ್ಕಂ ಭವಿಷ್ಯತಿ |
ನಾತ್ರ ಮನ್ಯುಸ್ತ್ವಯಾ ಕಾರ್ಯೋ ವಿಧಿರ್ಹಿ ಬಲವತ್ತರಃ ॥70॥
ನೀನು ದ್ಯೂತದಲ್ಲಿ ಪರಾಜಿತನಾಗಿ ಯಾವ ದುಃಖವನ್ನು ಹೊಂದಿದೆಯೋ ಮತ್ತು ಸೂತಪುತ್ರನಾದ ಕರ್ಣನು ಆ ಸಂದರ್ಭದಲ್ಲಿ ಯಾವ ಕ್ರೂರವಾದ ಮಾತುಗಳನ್ನು ಆಡಿದನೋ, ಎಲೈ ಮಹಾದ್ಯುತಿಯೇ, ದಮಯಂತಿಯಂತೆ ದ್ರೌಪದಿಯು ಜಟಾಸುರನಿಂದ ಬಾಧೆ, ಕೀಚಕನಿಂದ ಬಾಧೆ ಮೊದಲಾದ ಯಾವ ಅಶುಭಗಳನ್ನು ಅನುಭವಿಸಿದಳೋ, ಎಲೈ ವೀರನೇ, ಈ ಎಲ್ಲ ದುಃಖವೂ ಸುಖಕ್ಕೆ ನಾಂದಿಯಾಗುವುದು (ಸುಖೋದಯಕ್ಕೆ ಕಾರಣವಾಗುವುದು). ಈ ವಿಷಯದಲ್ಲಿ ಸಿಟ್ಟು ಮಾಡಬೇಡ. ವಿಧಿಯು ಪ್ರಬಲವಾದುದಷ್ಟೆ!
ದುಃಖಾನಿ ಹಿ ಮಹಾತ್ಮಾನಃ ಪ್ರಾಪ್ನುವಂತಿ ಯುಧಿಷ್ಠಿರ |
ದೇವೈರಪಿ ಹಿ ದುಃಖಾನಿ ಪ್ರಾಪ್ತಾನಿ ಜಗತೀಪತೇ ॥71॥
ಯುಧಿಷ್ಠಿರನೇ, ಮಹಾತ್ಮರೂ ದುಃಖಗಳನ್ನು ಹೊಂದುತ್ತಾರೆ ಎಂದು ಪ್ರಸಿದ್ಧವಾಗಿದೆ. ಜಗತೀಪತಿಯೇ, ದೇವತೆಗಳೂ ಸಹ ದುಃಖಗಳನ್ನು ಅನುಭವಿಸಿದರು.
ಇಂದ್ರೇಣ ಶ್ರೂಯತೇ ರಾಜನ್ ಸಭಾರ್ಯೇಣ ಮಹಾತ್ಮನಾ |
ಅನುಭೂತಂ ಮಹದ್ ದುಃಖಂ ದೇವರಾಜೇನ ಭಾರತ ॥72॥
ಎಲೈ ಭಾರತನೇ, ಎಲೈ ರಾಜನೇ, ಮಹಾತ್ಮನಾದ ದೇವರಾಜನಾದ ಇಂದ್ರನು ಭಾರ್ಯಾಸಹಿತನಾಗಿ ದೊಡ್ಡ ದುಃಖವನ್ನು ಅನುಭವಿಸಿದನು ಎಂದು ಕೇಳಿಬರುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಮೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಶಲ್ಯನಿಂದ ಯುಧಿಷ್ಠಿರನನ್ನು ಕುರಿತು, ಶಕ್ರನು ವಿಶ್ವರೂಪನ ವಧೆಯನ್ನು ಮಾಡಿ, ಸಂಕಟಪ್ರಾಪ್ತಿಯ ಮತ್ತು ವೃತ್ರೋತ್ಪತ್ತಿಯ ಕಥನ.
ಯುಧಿಷ್ಠಿರಃ
ಕಥಮಿಂದ್ರೇಣ ರಾಜೇಂದ್ರ ಸಭಾರ್ಯೇಣ ಮಹಾತ್ಮನಾ |
ದುಃಖಂ ಪ್ರಾಪ್ತಂ ಪುರಾ ಘೋರಮೇತದಿಚ್ಛಾಮಿ ವೇದಿತುಮ್ ॥1॥
ಯುಧಿಷ್ಠಿರ ರಾಜೇಂದ್ರನೇ, ಭಾರ್ಯಾಸಹಿತನಾದ ಮಹಾತ್ಮನಾದ ಇಂದ್ರನು ಹಿಂದೆ ಇಂತಹ ಘೋರವಾದ ದುಃಖವನ್ನು ಹೇಗೆ ಹೊಂದಿದನು ಎಂದು ತಿಳಿಯಲು ಬಯಸುತ್ತೇನೆ.
ಶಲ್ಯಃ
ಶೃಣು ರಾಜನ್ ಪುರಾವೃತ್ತಮಿತಿಹಾಸಂ ಪುರಾತನಮ್ |
ಸಭಾರ್ಯೇಣ ಯಥಾ ಪ್ರಾಪ್ತಂ ದುಃಖಮಿಂದ್ರೇಣ ಭಾರತ ॥2॥
ಶಲ್ಯ ರಾಜನೇ, ಭಾರತನೇ, ಭಾರ್ಯಾಸಹಿತನಾದ ಇಂದ್ರನು ಹೇಗೆ ದುಃಖವನ್ನು ಪಡೆದನು ಎಂಬ ವಿಷಯದಲ್ಲಿ ಪುರಾತನವಾದ

ಒಂದು ಇತಿಹಾಸವನ್ನು ಹೇಳುತ್ತೇನೆ, ಕೇಳು.
ತ್ವಷ್ಟಾ ಪ್ರಜಾಪತಿರ್ಹ್ಯಾಸೀದ್ ದೇವಶ್ರೇಷ್ಠೋ ಮಹಾಯಶಾಃ।
ಸ ಪುತ್ರಂ ವೈ ತ್ರಿಶಿರಸಮಿಂದ್ರದ್ರೋಹಾತ್ ಕಿಲಾಸೃಜತ್ ॥3॥
ಮಹಾಕೀರ್ತಿವಂತನೂ ಮತ್ತು ದೇವಶ್ರೇಷ್ಠನೂ ಆದ ತ್ವಷ್ಟ್ರ ಎಂಬ ಪ್ರಜಾಪತಿ ಇದ್ದನು. ಅವನು ಇಂದ್ರನ ದ್ರೋಹದಿಂದಾಗಿ ತ್ರಿಶಿರಸ್ ಎಂಬ ಪುತ್ರನನ್ನು ಪಡೆದನು (ತ್ರಿಶಿರಸ್‌ಗೆ ವಿಶ್ವರೂಪ ಎಂದೂ ಹೆಸರು).
ಐಂದ್ರಂ ಸಂಪ್ರಾರ್ಥಯತ್ ಸ್ಥಾನಂ ವಿಶ್ವರೂಪೋ ಮಹಾದ್ಯುತಿಃ ॥4॥
ತ್ರೈಸ್ತ್ರಿಭಿರ್ವದನೈರ್ಘೋರೈಃ ಸೂರ್ಯೇಂದುಜ್ವಲನೋಪಮೈಃ।
ವೇದಾನೇಕೇನ ಸೋಽಧೀತೇ ಸುರಾಮೇಕೇನ ಚಾಪಿಬತ್ ॥5॥
ಏಕೇನ ಚ ದಿಶಃ ಸರ್ವಾಃ ಪಿಬನ್ನಿವ ನಿರೀಕ್ಷತೇ ॥6॥
ಮಹಾತೇಜಸ್ವಿಯಾದ ವಿಶ್ವರೂಪನು ಇಂದ್ರನ ಸ್ಥಾನವನ್ನು ಬಯಸುವವನಾಗಿ ಚಂದ್ರ-ಸೂರ್ಯಾಗ್ನಿಗಳಿಗೆ ಸಮಾನವಾದ ತನ್ನ ಮೂರು ಶಿರಸ್ಸುಗಳಿಂದ ಘೋರವಾದ ತಪಸ್ಸನ್ನು ಮಾಡಿ ಒಂದು ಮುಖದಿಂದ ವೇದಾಧ್ಯಯನವನ್ನು ಮಾಡುತ್ತಿದ್ದನು. ಇನ್ನೊಂದು ಮುಖದಿಂದ ಸುರಾಪಾನವನ್ನು ಮಾಡುತ್ತಿದ್ದನು. ಮತ್ತೊಂದು ಮುಖದ ಕಣ್ಣುಗಳಿಂದ ಎಲ್ಲಾ ದಿಕ್ಕುಗಳನ್ನೂ ಪಾನ ಮಾಡುವಂತೆ ನೋಡುತ್ತಿದ್ದನು.
ಸ ತಪಸ್ವೀ ಮೃದುರ್ದಾಂತೋ ಧರ್ಮೇ ತಪಸಿ ಚೋದ್ಯತಃ।
ತಪ್ಯತೇ ಸ್ಮ ತಪಸ್ತೀವ್ರಂ ಸುದುಶ್ಚರಮರಿಂದಮ ॥7॥
ಎಲೈ ಅರಿಂದಮನೇ, ಅವನು ಮೃದುವೂ, ಇಂದ್ರಿಯ ನಿಗ್ರಹವುಳ್ಳವನೂ, ಧರ್ಮ ಮತ್ತು ತಪಸ್ಸುಗಳಲ್ಲಿ ನಿರತನಾದವನೂ ಮತ್ತು ತಪಸ್ವಿಯೂ ಆಗಿ ಸುದುಶ್ಚರವಾದ ತೀವ್ರವಾದ ತಪಸ್ಸನ್ನು ಆಚರಿಸಿದನು.
ತಸ್ಯ ದೃಷ್ಟ್ವಾ ತಪೋವೀರ್ಯಂ ಸತ್ಯಂ ಚಾಮಿತತೇಜಸಃ।
ವಿಷಾದಮಗಮದ್ ಶಕ್ರ ಇಂದ್ರೋಽಯಂ ಮಾ ಭವೇದಿತಿ ॥8॥
ಇಂದ್ರನು ಅಮಿತತೇಜಸ್ವಿಯಾದ ಅವನ ತಪಸ್ಸನ್ನೂ, ವೀರ್ಯವನ್ನೂ ಮತ್ತು ಸತ್ಯವನ್ನೂ ನೋಡಿ ಇವನು ಇಂದ್ರನಾಗಬಾರದು ಎಂದು ವಿಷಾದವನ್ನು ಹೊಂದಿದನು.
ಕಥಂ ಸಜ್ಜೇತ ಭೋಗೇಷು ನ ಚ ತಪ್ಯೇನ್ಮಹತ್ ತಪಃ।
ವಿವರ್ಧಮಾನಸ್ತ್ರಿಶಿರಾಃ ಸರ್ವಂ ಹಿ ಭುವನಂ ಗ್ರಸೇತ್ ॥9॥
ಇತಿ ಸಂಚಿಂತ್ಯ ಬಹುಧಾ ಬುದ್ಧಿಮಾನ್ ಭರತರ್ಷಭ।
ಆಜ್ಞಾಪಯತ್ ಸೋಽಪ್ಸರಸಃ ತ್ವಷ್ಟೃಪುತ್ರಪ್ರಲೋಭನೇ ॥10॥
ಇವನು ಹೇಗೆ ಭೋಗಗಳಲ್ಲಿ ಆಸಕ್ತನಾದಾನು? ಘೋರವಾದ ತಪಸ್ಸನ್ನು ಹೇಗೆ ನಿಲ್ಲಿಸಿಯಾನು? ಹೀಗೆ ಬೆಳೆಯುತ್ತಿರುವ ವಿಶ್ವರೂಪನು ಲೋಕಗಳನ್ನೇ ನುಂಗಬಹುದು ಎಂದು ಅನೇಕ ವಿಧವಾಗಿ ಚಿಂತಿಸಿ ಎಲೈ ಭರತರ್ಷಭನೇ, ಮೇಧಾವಿಯಾದ ಅವನು ತ್ವಷ್ಟೃಪುತ್ರನಾದ ವಿಶ್ವರೂಪನನ್ನು ಪ್ರಲೋಭಿಸಲು ಅಪ್ಸರೆಯರಿಗೆ ಪ್ರಚೋದಿಸಿದನು.
ಯಥಾ ಸ ಸಜ್ಜೇತ್ ತ್ರಿಶಿರಾಃ ಕಾಮಭೋಗೇಷು ವೈ ಭೃಶಮ್।
ಕ್ಷಿಪ್ರಂ ಕುರುತ ಗಚ್ಛಧ್ವಂ ಪ್ರಲೋಭಯತ ಮಾ ಚಿರಮ್ ॥11॥
ಅಪ್ಸರೆಯರೇ ನೀವು ಶೀಘ್ರವಾಗಿ ಹೋಗಿ ಆ ತ್ರಿಶಿರನನ್ನು ಪ್ರಲೋಭಗೊಳಿಸಿ ಅವನು ಕಾಮ-ಭೋಗಗಳಲ್ಲಿ ಬಹಳವಾಗಿ ಆಸಕ್ತನಾಗುವಂತೆ ಮಾಡಿ.
ಶೃಂಗಾರವೇಷಾಃ ಸುಶ್ರೋಣ್ಯೋ ಹಾರೈರ್ಯುಕ್ತಾಮನೋಹರೈಃ।
ಹಾವಭಾವಸಮಾಯುಕ್ತಾಃ ಸರ್ವಾಃ ಸೌಂದರ್ಯಶೋಭಿತಾಃ ॥12॥
ಪ್ರಜಾಪತಿರ್ದೇವದೇವಶ್ಚಂದ್ರೋ ವೈಶ್ರವಣೋ ಯಮಃ।
ವರುಣಃ ಪಾಶಹಸ್ತೋ ವಾ ಧರ್ಮ ಏವ ಭವೇತ್ ಸ್ವಯಮ್ ॥13॥
ಪ್ರಲೋಭಯತ ಭದ್ರಂ ವಃ ಶಮಯಧ್ವಂ ಭಯಂ ಮಮ।
ಶೃಂಗಾರವೇಷವನ್ನು ಹೊಂದಿದವರಾಗಿ, ಮನೋಹರವಾದ ಮುತ್ತಿನ ಹಾರಗಳನ್ನು ಧರಿಸಿ, ಒಳ್ಳೆಯ ಮೈಕಟ್ಟನ್ನು ಉಳ್ಳವರಾಗಿ, ಸೌಂದರ್ಯಶೋಭಿತರಾಗಿ, ಹಾವಭಾವ ಯುಕ್ತರಾಗಿ ನೀವೆಲ್ಲರೂ ಹೋಗಿ. ದೇವದೇವನಾದ ಪ್ರಜಾಪತಿಯಾಗಲೀ ಅಥವಾ ಚಂದ್ರನಾಗಲೀ ಅಥವಾ ಕುಬೇರನಾಗಲೀ, ಯಮನಾಗಲೀ, ಪಾಶಹಸ್ತನಾದ ವರುಣನಾಗಲೀ ಅಥವಾ ಸ್ವಯಂ ಧರ್ಮನೇ ಆಗಲಿ, ಅವರನ್ನು ನೀವು ಪ್ರಲೋಭಗೊಳಿಸಿ ನನಗೆ ಉಂಟಾಗಿರುವ ಭಯವನ್ನು ಪರಿಹಾರ ಮಾಡಿ.
ಅಸ್ವಸ್ಥಂ ಹ್ಯಾತ್ಮನಾಽಽತ್ಮಾನಂ ಲಕ್ಷಯಾಮಿ ವರಾಂಗನಾಃ ॥14॥
ಭಯಂ ತನ್ಮೇ ಮಹಾಘೋರಂ ಕ್ಷಿಪ್ರಂ ನಾಶಯತಾಬಲಾಃ ॥15॥
ವರಾಂಗನೆಯರೇ, ನಾನು ಬಹಳ ಅಸ್ವಸ್ಥಗೊಂಡಿದ್ದೇನೆಂದು ಭಾವಿಸುತ್ತೇನೆ. ಅಬಲೆಯರೇ, ಈ ನನ್ನ ಮಹಾಘೋರವಾದ ಭಯವನ್ನು ಶೀಘ್ರವಾಗಿ ನಾಶಮಾಡಿ (ಎಂದು ಹೇಳಿದನು).
ಅಪ್ಸರಸಃ
ತಥಾ ಯತ್ನಂ ಕರಿಷ್ಯಾಮಃ ಶಕ್ರ ತಸ್ಯ ಪ್ರಲೋಭನೇ।
ಯಥಾ ನಾವಾಪ್ಸ್ಯಸಿ ಭಯಂ ತಸ್ಮಾದ್ ಬಲನಿಷೂದನ ॥16॥
ನಿರ್ದಹನ್ನಿವ ಚಕ್ಷುರ್ಭ್ಯಾಂ ಯೋಽಸಾವಾಸ್ತೇ ತಪೋನಿಧಿಃ।
ತಂ ಪ್ರಲೋಭಯಿತುಂ ದೇವ ಗಚ್ಛಾಮಃ ಸಹಿತಾ ವಯಮ್ ॥17॥

ಯತಿಷ್ಯಾಮೋ ವಶೇ ಕರ್ತುಂ ವ್ಯಪನೇತುಂ ಚ ತೇ ಭಯಮ್ ॥18॥
ಅಪ್ಸರೆಯರು ದೇವೇಂದ್ರನೇ, ವಿಶ್ವರೂಪನಿಂದ ನಿನಗೆ ಭಯವುಂಟಾಗದಂತೆ ಅವನನ್ನು ಪ್ರಲೋಭಗೊಳಿಸಲು ನಾವು ಪ್ರಯತ್ನಪಡುವೆವು. ಎಲೈ ಬಲನಿಷೂದನನೇ, ಯಾವ ತಪೋನಿಧಿಯಾದ ವಿಶ್ವರೂಪನು ತನ್ನ ಕಣ್ಣುಗಳಿಂದ ಜಗತ್ತನ್ನೇ ಸುಡುವಂತೆ ತೋರುತ್ತಿದ್ದಾನೆಯೋ ಎಲೈ ದೇವನೇ, ಅವನನ್ನು ಪ್ರಲೋಭಗೊಳಿಸಲು ನಾವೆಲ್ಲರೂ ಒಟ್ಟಿಗೆ ಹೋಗುತ್ತೇವೆ. ಅವನನ್ನು ವಶಪಡಿಸಿಕೊಂಡು ನಿನ್ನ ಭಯವನ್ನು ಪರಿಹರಿಸಲು ನಾವು ಪ್ರಯತ್ನಿಸುವೆವು.
ಶಲ್ಯಃ
ಇಂದ್ರೇಣ ತಾಸ್ತ್ವನುಜ್ಞಾತಾ ಜಗ್ಮುಸ್ತ್ರಿಶಿರಸೋಽಂತಿಕಮ್ ॥19॥
ತತ್ರ ತಾ ವಿವಿಧೈರ್ಭಾವೈರ್ಲೋಭಯಂತ್ಯೋ ವರಾಂಗನಾಃ |
ನೃತ್ತಂ ಸಂದರ್ಶಯಾಮಾಸುಃ ತಥೈವಾಂಗೇಷು ಸೌಷ್ಠವಮ್ ॥20॥
ಶಲ್ಯ ಇಂದ್ರನ ಅನುಮತಿಯನ್ನು ಪಡೆದು ಅವರು ವಿಶ್ವರೂಪನ ಬಳಿಗೆ ಹೋದರು. ಅಲ್ಲಿ ಆ ವರಾಂಗನೆಯರು ತಮ್ಮ ವಿವಿಧ ಭಾವಗಳಿಂದ ಅವನನ್ನು ಪ್ರಲೋಭಗೊಳಿಸುತ್ತಾ ನೃತ್ಯವನ್ನು ಮತ್ತು ತಮ್ಮ ದೇಹದ ಸೌಷ್ಠವವನ್ನು ತೋರಿಸಿದರು.
ನಾಭ್ಯಗಚ್ಛತ್ ಪ್ರಹರ್ಷಂ ತಾಃ ಸ ಪಶ್ಯನ್ ಸುಮಹಾತಪಾಃ |
ಇಂದ್ರಿಯಾಣಿ ವಶೇ ಕೃತ್ವಾ ಪೂರ್ಣಸಾಗರಸನ್ನಿಭಃ ॥21॥
ಆ ಮಹಾತಪಸ್ವಿಯಾದ ವಿಶ್ವರೂಪನು ಅವರನ್ನು ನೋಡಿ ಯಾವ ಸಂತೋಷವನ್ನೂ ಹೊಂದಲಿಲ್ಲ. ಇಂದ್ರಿಯಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಪೂರ್ಣವಾದ ಸಾಗರದಂತೆ ಅಕ್ಷೋಭ್ಯನಾಗಿದ್ದನು.
ತಾಸ್ತು ಯತ್ನಂ ಪರಂ ಕೃತ್ವಾ ಪುನಃ ಶಕ್ರಮುಪಾಗಮನ್ |
ಕೃತಾಂಜಲಿಪುಟಾಃ ಸರ್ವಾ ದೇವರಾಜಮಥಾಬ್ರುವನ್ ॥22॥
ನ ಸ ಶಕ್ಯಃ ಸುದುರ್ಧರ್ಷೋ ಧೈರ್ಯಾಚ್ಚಾಲಯಿತುಂ ಪ್ರಭೋ |
ಯತ್ತೇ ಕಾರ್ಯಂ ಮಹಾಭಾಗ ಕ್ರಿಯತಾಂ ತದನಂತರಮ್ ॥23॥
ಅವರು ತಮ್ಮ ಶ್ರೇಷ್ಠವಾದ ಪ್ರಯತ್ನವನ್ನು ಮಾಡಿ ಇಂದ್ರನ ಬಳಿಗೆ ಪುನಃ ಬಂದರು. ಅವರೆಲ್ಲರೂ ದೇವರಾಜನಿಗೆ ಕೈಗಳನ್ನು ಮುಗಿದು ಎಲೈ ಮಹಾನುಭಾವನೇ, ಪ್ರಭುವೇ, ಎಂದೂ ಸೋಲದ ಆ ಮಹಾತಪಸ್ವಿಯನ್ನು ಅವನ ಧೈರ್ಯದಿಂದ ಅಲುಗಾಡಿಸಲು ಸಾಧ್ಯವಿಲ್ಲ. ಮುಂದೇನು ಮಾಡಬೇಕೋ ಅದನ್ನು ನೀನು ಮಾಡು ಎಂದು ಹೇಳಿದರು.
ಸಂಪೂಜ್ಯಾಪ್ಸರಸಃ ಶಕ್ರೋ ವಿಸೃಜ್ಯ ಚ ಮಹಾಮತಿಃ |
ಚಿಂತಯಾಮಾಸ ತಸ್ಯೈವ ವಧೋಪಾಯಂ ಮಹಾತ್ಮನಃ ॥24॥
ಮಹಾಮತಿಯಾದ ಇಂದ್ರನು ಅಪ್ಸರೆಯರನ್ನು ಸತ್ಕರಿಸಿ ಬೀಳ್ಕೊಟ್ಟು ಆ ಮಹಾತ್ಮನ ವಧೋಪಾಯವನ್ನೇ ಕುರಿತು ಚಿಂತಿಸಿದನು.
ಸ ತೂಷ್ಣೀಂ ಚಿಂತಯನ್ ವೀರೋ ದೇವರಾಜಃ ಪ್ರತಾಪವಾನ್ |
ವಿನಿಶ್ಚಿತ್ಯ ಮತಿರ್ಧೀಮಾನ್ ವಧೇ ತ್ರಿಶಿರಸೋಽಭವತ್ ॥25॥
ವೀರನೂ, ಪ್ರತಾಪಶಾಲಿಯೂ, ಮೇಧಾವಿಯೂ ಆದ ಆ ದೇವರಾಜನು ಮೌನವಾಗಿ ಚಿಂತಿಸುತ್ತಾ ವಿಶ್ವರೂಪನ ವಧೆಯ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬಂದನು.
ವಜ್ರಮಸ್ಯ ಕ್ಷಿಪಾಮ್ಯದ್ಯ ಸ ಕ್ಷಿಪ್ರಂ ನ ಭವಿಷ್ಯತಿ |
ಶತ್ರುಃ ಪ್ರವೃದ್ಧೋ ನೋಪೇಕ್ಷ್ಯೋ ದುರ್ಬಲೋಽಪಿ ಬಲೀಯಸಾ ॥
ಅವನ ಮೇಲೆ ವಜ್ರವನ್ನು ಪ್ರಯೋಗಿಸುತ್ತೇನೆ. ಅವನು ಬೇಗ ನಾಶವನ್ನು ಹೊಂದುವನು. ಶತ್ರುವು ದುರ್ಬಲನಾದರೂ ಅವನು ಬೆಳೆಯುತ್ತಿರುವಾಗ ಬಲಿಷ್ಠನಾದವನು, ಉದಾಸೀನ ಮಾಡಬಾರದು.
ಶಾಸ್ತ್ರಬುದ್ಧ್ಯಾ ವಿನಿಶ್ಚಿತ್ಯ ಕೃತ್ವಾ ಬುದ್ಧಿಂ ವಧೇ ದೃಢಾಮ್ |
ಅಥ ವೈಶ್ವಾನರನಿಭಂ ಘೋರರೂಪಂ ಭಯಾವಹಮ್ ॥27॥
ಮುಮೋಚ ವಜ್ರಂ ಸಂಕ್ರುದ್ಧಃ ಶಕ್ರಸ್ತ್ರಿಶಿರಸಂ ಪ್ರತಿ ॥28॥
ಶಾಸ್ತ್ರಬುದ್ಧಿಯಿಂದ ಅವನ ವಧೆಯ ವಿಷಯದಲ್ಲಿ ಹೀಗೆ ದೃಢವಾಗಿ ನಿಶ್ಚಯಿಸಿ ಅನಂತರ ಅಗ್ನಿಯಂತೆ ಘೋರರೂಪವುಳ್ಳದ್ದೂ, ಭಯಂಕರವೂ ಆದ ವಜ್ರಾಯುಧವನ್ನು ತ್ರಿಶಿರನ ಮೇಲೆ ಅವನು ಬಹಳ ಕೋಪಗೊಂಡು ಪ್ರಯೋಗಿಸಿದನು.
ಸ ಪಪಾತ ಹತಸ್ತೇನ ವಜ್ರೇಣ ದೃಢಮಾಹತಃ |
ಪರ್ವತಸ್ಯೇವ ಶಿಖರಂ ಪ್ರಣುನ್ನಂ ಮೇದಿನೀತಳೇ ॥29॥
ವಜ್ರಾಯುಧದಿಂದ ದೃಢವಾಗಿ ಹೊಡೆಯಲ್ಪಟ್ಟ ವಿಶ್ವರೂಪನು ಭೂಮಿಯ ಮೇಲೆ ಕತ್ತರಿಸಿ ಬಿದ್ದ ಪರ್ವತ ಶಿಖರದಂತೆ ಬಿದ್ದನು.
ತಂ ತು ವಜ್ರಾಹತಂ ದೃಷ್ಟ್ವಾ ಶಯಾನಮಚಲೋಪಮಮ್ |
ನ ಶರ್ಮ ಲೇಭೇ ದೇವೇಂದ್ರೋ ದೀಪಿತಸ್ತಸ್ಯ ತೇಜಸಾ ॥30॥
ಹತೋಽಪಿ ದೀಪ್ತತೇಜಾಃ ಸ ಜೀವನ್ನಿವ ಹಿ ದೃಶ್ಯತೇ ॥31॥
ಭೂಮಿಯ ಮೇಲೆ ಪರ್ವತದಂತೆ ವಜ್ರದಿಂದ ಹತನಾಗಿ ಬಿದ್ದ ಅವನನ್ನು ನೋಡಿದ ದೇವೇಂದ್ರನಿಗೆ ಅವನ ಉರಿಯುವ ತೇಜಸ್ಸಿನ ಕಾರಣದಿಂದಾಗಿ ಸಮಾಧಾನವೇ ಉಂಟಾಗಲಿಲ್ಲ. ದೀಪ್ತವಾದ ಕಾಂತಿಯುಳ್ಳ ವಿಶ್ವರೂಪನು ಹತನಾಗಿದ್ದರೂ ಬದುಕಿರುವಂತೆಯೇ ತೋರುತ್ತಿದ್ದನು.
ಶಿರಾಂಸಿ ತಸ್ಯಾಜಾಯಂತ ತ್ರೀಣ್ಯೇವ ಶಕುನಾಸ್ತ್ರಯಃ |
ತಿತ್ತಿರಿಃ ಕಲವಿಂಕಶ್ಚ ತಥೈವ ಚ ಕಪಿಂಜಲಃ ॥32॥
ಅವನ ಮೂರು ತಲೆಗಳು ತಿತ್ತಿರಿ, ಕಲವಿಂಕ ಮತ್ತು ಕಪಿಂಜಲ ಎಂಬ ಪಕ್ಷಿಗಳಾದವು.

ವಿಶ್ವರೂಪಶಿರಾಂಸ್ಯೇವ ಜಾಯಂತೇ ತಾನಿ ಭಾರತ |
ಘಾತಿತಸ್ಯ ಶಿರಾಂಸ್ಯಾಜೌ ಜೀವಂತೀವಾದ್ಭುತಾನಿ ಚ ॥33॥
ತತೋಽತಿಭೀತಗಾತ್ರಸ್ತು ಶಕ್ರ ಆಸ್ತೇ ವಿಚಾರಯನ್ ॥34॥
ವಿಶ್ವರೂಪನ ಶಿರಸ್ಸುಗಳು ಪಕ್ಷಿರೂಪವನ್ನು ಧರಿಸಿ ಬರುತ್ತಿದ್ದರೂ ಆ ಶಿರಸ್ಸು ಮತ್ತೆ ಮತ್ತೆ ಬೆಳೆಯುತ್ತಿದ್ದವು. ಎಲೈ ಭಾರತನೇ, ವಿಶ್ವರೂಪನು ಹತನಾದರೂ ಅವನ ಶಿರಸ್ಸುಗಳು ಬದುಕಿರುವಂತೆ ಇರುವುದು ಅದ್ಭುತವಾಗಿ ಕಂಡುಬಂದಿತು. ಆಗ ಇಂದ್ರನು ಬಹಳ ಹೆದರಿದವನಾಗಿ ವಿಚಾರ ಮಾಡುತ್ತಾ ಕುಳಿತನು.
ಅಥಾಜಗಾಮ ಪರಶುಂ ಸ್ಕಂಧೇನಾದಾಯ ವರ್ಧಕೀ |
ತದರಣ್ಯಂ ಮಹಾರಾಜ ಯತ್ರಾಸ್ತೇಽಸೌ ನಿಪಾತಿತಃ ॥35॥
ಎಲೈ ಮಹಾರಾಜನೇ, ಆ ವೇಳೆಗೆ ದೇವತೆಗಳ ಬಡಗಿಯಾದ ವಿಶ್ವಕರ್ಮನು ತನ್ನ ಹೆಗಲಿನ ಮೇಲೆ ಕೊಡಲಿಯನ್ನು ಇಟ್ಟುಕೊಂಡು ವಿಶ್ವರೂಪನು ಬಿದ್ದಿದ್ದ ಅರಣ್ಯಸ್ಥಳಕ್ಕೆ ಬಂದನು.
ಸ ಭೀತಸ್ತತ್ರ ತಕ್ಷಾಣಂ ಘಟಮಾನಂ ಶಚೀಪತಿಃ |
ಅಪಶ್ಯದಬ್ರವೀಚ್ಚೈನಂ ಸತ್ವರಂ ಪಾಕಶಾಸನಃ ॥36॥
ಹೆದರಿದ್ದ ಪಾಕಶಾಸನನಾದ ಶಚೀಪತಿಯಾದ ಇಂದ್ರನು ಅಲ್ಲಿಗೆ ಬಂದ ವಿಶ್ವಕರ್ಮನನ್ನು ನೋಡಿ ಶೀಘ್ರವಾಗಿ ಅವನನ್ನು ಕುರಿತು ಹೀಗೆ ಹೇಳಿದನು.
ಪರಶ್ವಧೇನ ತೀಕ್ಷ್ಣೇನ ಶಿರಾಂಸ್ಯಸ್ಯ ನಿಕೃಂತ ವೈ |
ಕ್ಷಿಪ್ರಂ ಛಿಂದಿ ಶಿರಾಂಸ್ಯಸ್ಯ ಕುರುಷ್ವ ವಚನಂ ಮಮ ॥37॥
ನಿನ್ನ ಹರಿತವಾದ ಕುಠಾರದಿಂದ ಇವನ ತಲೆಗಳನ್ನು ಕತ್ತರಿಸು. ಶೀಘ್ರವಾಗಿ ಇವನ ತಲೆಗಳನ್ನು ಬೇರ್ಪಡಿಸು. ನನ್ನ ಮಾತನ್ನು ಕೇಳು.
ತಕ್ಷಾ
ಮಹಾಸ್ಕಂಧೋ ಭೃಶಂ ಹ್ಯೇಷ ಪರಶುರ್ನ ಭವಿಷ್ಯತಿ |
ಕರ್ತುಂ ಚಾಹಂ ನ ಶಕ್ಷ್ಯಾಮಿ ಕರ್ಮ ಸದ್ಭಿರ್ವಿಗರ್ಹಿತಮ್ ॥38॥
ತಕ್ಷ ಇದು ದೊಡ್ಡ ಕೊಂಬೆಗಳಿರುವ ಮರದಂತಿದೆ. ಇದನ್ನು (ಈ ತಲೆಗಳನ್ನು) ಕಡಿದರೆ ನನ್ನ ಕೊಡಲಿಯೇ ಹಾಳಾಗಿ ಹೋಗುತ್ತದೆ. ಆದ್ದರಿಂದ ಸಜ್ಜನರಿಂದ ನಿಂದಿತವಾದ ಇಂತಹ ಕರ್ಮವನ್ನು ನಾನು ಮಾಡುವುದಿಲ್ಲ.
ಇಂದ್ರಃ
ಮಾಭೈಸ್ತ್ವಂ ಶೀಘ್ರಮೇತದ್ವೈ ಕುರುಷ್ವ ವಚನಂ ಮಮ |
ಮತ್ಪ್ರಸಾದಾದ್ಧಿ ತೇ ಶಸ್ತ್ರಂ ವಜ್ರಕಲ್ಪಂ ಭವಿಷ್ಯತಿ ॥39॥
ಇಂದ್ರ ಹೆದರಬೇಡ ಈ ನನ್ನ ಮಾತನ್ನು ಶೀಘ್ರವಾಗಿ ಮಾಡು. ನನ್ನ ಅನುಗ್ರಹದಿಂದ ನಿನ್ನ ಶಸ್ತ್ರವು ವಜ್ರಕ್ಕೆ ಸಮಾನವಾಗುವುದು.
ತಕ್ಷಾ
ಕಂ ಭವಂತಮಹಂ ವಿದ್ಯಾಂ ಘೋರಕರ್ಮಾಣಮದ್ಯ ವೈ |
ಏತದಿಚ್ಛಾಮ್ಯಹಂ ಜ್ಞಾತುಂ ತತ್ತ್ವೇನ ಕಥಯಸ್ವ ಮೇ ॥40॥
ತಕ್ಷ ಇಂತಹ ಘೋರಕರ್ಮದಲ್ಲಿ, ಈ ದಿನ ನನ್ನನ್ನು ಪ್ರಚೋದಿಸುತ್ತಿರುವ ನೀನು ಯಾರು ಎಂದು ನಾನು ತಿಳಿಯಬೇಕು. ಇದನ್ನು ತಿಳಿಯಲು ಬಯಸುತ್ತೇನೆ. ಸತ್ಯವಾಗಿ ನನಗೆ ಇದನ್ನು ಹೇಳು.
ಇಂದ್ರಃ
ಅಹಮಿಂದ್ರೋ ದೇವರಾಜಃ ತಕ್ಷನ್ ವಿದಿತಮಸ್ತು ತೇ |
ಕುರುಷ್ವೈತದ್ ಯಥೋಕ್ತಂ ಮೇ ತಕ್ಷನ್ ಮಾ ತ್ವಂ ವಿಚಾರಯ ॥41॥
ಮಯಾ ಹಿ ನಿಹತಃ ಶೇತೇ ತ್ರಿಶಿರಾಸ್ತ್ವಂ ಚ ವಿದ್ಧಿ ವೈ ॥42॥
ಇಂದ್ರ ಎಲೈ ವಿಶ್ವಕರ್ಮನೇ, ನಾನು ದೇವರಾಜನಾದ ಇಂದ್ರನೆಂದು ನೀನು ತಿಳಿ. ನಾನು ಹೇಳಿದಂತೆ ಮಾಡು. ಅದರಲ್ಲಿ ವಿಚಾರ ಮಾಡಬೇಡ. ತ್ರಿಶಿರನು ನನ್ನಿಂದ ಹತನಾಗಿ ಭೂಮಿಯಲ್ಲಿ ಬಿದ್ದಿದ್ದಾನೆ ಎಂದು ತಿಳಿ.
ಶಲ್ಯಃ
ಸ ಪ್ರಹ್ವಃ ಪ್ರಾಂಜಲಿರ್ಭೂತ್ವಾ ಇದಂ ವಚನಮಬ್ರವೀತ್ ॥43॥
ಕ್ರೂರೇಣ ನಾಪತ್ರಪಸೇ ಕಥಂ ಶಕ್ರೇಹ ಕರ್ಮಣಾ |
ಋಷಿಪುತ್ರಮಿಮಂ ಹತ್ವಾ ಬ್ರಹ್ಮಹತ್ಯಾಭಯಂ ನ ಕಿಮ್ ॥44॥
ಶಲ್ಯ ವಿಶ್ವಕರ್ಮನು ಕೈಗಳನ್ನು ಮುಗಿದು ವಿನಯದಿಂದ ಅವನನ್ನು ಕುರಿತು ಇಂದ್ರನೇ, ಇಂತಹ ಕ್ರೂರಕರ್ಮವನ್ನು ಮಾಡುವುದಕ್ಕೆ ನಿನಗೆ ಏಕೆ ನಾಚಿಕೆಯಾಗುವುದಿಲ್ಲ? ಋಷಿಪುತ್ರನಾದ ಇವನನ್ನು ಕೊಂದರೆ ನಿನಗೆ ಬ್ರಹ್ಮಹತ್ಯೆಯ ಭಯವಿಲ್ಲವೇ ಎಂದು ಕೇಳಿದನು.
ಇಂದ್ರಃ
ಪಶ್ಚಾದ್ಧರ್ಮಂ ಚರಿಷ್ಯಾಮಿ ಪಾವನಾರ್ಥಂ ಸುದುಶ್ಚರಮ್ |
ಶತ್ರುರೇಷ ಮಹಾವೀರ್ಯೋ ವಜ್ರೇಣ ನಿಹತೋ ಮಯಾ ॥45॥
ಇಂದ್ರ ನನ್ನನ್ನು ಶುದ್ಧಿಮಾಡಿಕೊಳ್ಳಲು ಅನಂತರ ದುಶ್ಚರವಾದ ಧರ್ಮವನ್ನು ಆಚರಿಸುವೆನು. ಈ ಮಹಾಪರಾಕ್ರಮಿಯಾದ ವಿಶ್ವರೂಪನು ನನ್ನಿಂದ ವಜ್ರದಿಂದ ಹತನಾಗಿದ್ದಾನೆ.
ಅದ್ಯಾಪಿ ಚಾಹಮುದ್ವಿಗ್ನಃ ತಕ್ಷನ್ನಸ್ಮಾದ್ ಬಿಭೇಮಿ ವೈ |
ಕ್ಷಿಪ್ರಂ ಛಿಂಧಿ ಶಿರಾಂಸಿ ತ್ವಂ ಕರಿಷ್ಯೇಽನುಗ್ರಹಂ ತವ ॥46॥

ಎಲೈ ಬಡಗಿಯೇ, ನಾನು ಈಗಲೂ ಇವನಿಗೆ ಹೆದರುತ್ತಿದ್ದೇನೆ. ಬೇಗ ಅವನ ತಲೆಗಳನ್ನು ಕತ್ತರಿಸು. ನಾನು ನಿನಗೆ ಅನುಗ್ರಹವನ್ನು ಮಾಡುವೆನು.
ಶಿರಃ ಪಶೋಸ್ತೇ ದಾಸ್ಯಂತಿ ಭಾಗಂ ಯಜ್ಞೇಷು ಮಾನವಾಃ |
ಏಷ ತೇಽನುಗ್ರಹಸ್ತಕ್ಷನ್ ಕ್ಷಿಪ್ರಂ ಕುರು ಮಮ ಪ್ರಿಯಮ್ ॥47॥
ಮನುಷ್ಯರು ಯಜ್ಞವನ್ನು ಮಾಡುವಾಗ ಪಶುವಿನ ತಲೆಯ ಭಾಗವನ್ನು ನಿನಗೆ ಕೊಡುವರು. ಎಲೈ ತಕ್ಷನೇ, ಇದು ನಾನು ನಿನಗೆ ಮಾಡುವ ಅನುಗ್ರಹ. ಬೇಗ ನನ್ನ ಪ್ರಿಯವನ್ನು ಆಚರಿಸು.
ಶಲ್ಯಃ
ಏತತ್ ಶ್ರುತ್ವಾ ತಕ್ಷಾ ಸ ಮಹೇಂದ್ರವಚನಂ ತದಾ |
ಶಿರಾಂಸ್ಯಥ ತ್ರಿಶಿರಸಃ ಕುಠಾರೇಣಾಚ್ಛಿನತ್ ತದಾ ॥48॥
ಶಲ್ಯ ವಿಶ್ವಕರ್ಮನು ದೇವೇಂದ್ರನ ಈ ಮಾತುಗಳನ್ನು ಕೇಳಿ ತನ್ನ ಕುಠಾರದಿಂದ ಆಗ ವಿಶ್ವರೂಪನ ತಲೆಗಳನ್ನು ಕತ್ತರಿಸಿದನು.
ನಿಕೃತ್ತೇಷು ತತಸ್ತೇಷು ನಿಷ್ಕ್ರಾಮನ್ನಂಡಜಾಸ್ತ್ವಥ |
ಕಪಿಂಜಲಾಸ್ತಿತ್ತಿರಾಶ್ಚ ಕಲವಿಂಕಾಶ್ಚ ಸರ್ವಶಃ ॥49॥
ವಿಶ್ವರೂಪನ ತಲೆಗಳನ್ನು ಕಡಿಯುತ್ತಿರಲು ಅವುಗಳಿಂದ ಅನೇಕ ಕಪಿಂಜಲಗಳು, ತಿತ್ತಿರಗಳು ಮತ್ತು ಕಲವಿಂಕಗಳು ಬಂದವು.
ಯೇನ ವೇದಾನಧೀತೇ ಸ್ಮ ಪಿಬತೇ ಸೋಮಮೇವ ಚ |
ತಸ್ಮಾದ್ ವಕ್ತ್ರಾದ್ ವಿನಿಷ್ಪೇತುಃ ಕ್ಷಿಪ್ರಂ ತಸ್ಯ ಕಪಿಂಜಲಾಃ ॥50॥
ಯಾವ ಮುಖದಿಂದ ವೇದಗಳನ್ನು ಅಧ್ಯಯನ ಮಾಡಿ ಸೋಮಪಾನವನ್ನು ಮಾಡುತ್ತಿದ್ದನೋ ಆ ಮುಖದಿಂದ ಶೀಘ್ರವಾಗಿ ಅನೇಕ ಕಪಿಂಜಲಗಳು ಹೊರಗೆ ಬಂದವು.
ಯೇನ ಸರ್ವಾ ದಿಶೋ ರಾಜನ್ ಪಿಬನ್ನಿವ ನಿರೀಕ್ಷತೇ |
ತಸ್ಮಾದ್ ವಕ್ತ್ರಾದ್ ವಿನಿಷ್ಪೇತುಸ್ತಿತ್ತಿರಾಸ್ತಸ್ಯ ಪಾಂಡವ ॥51॥
ಎಲೈ ಪಾಂಡವನೇ, ಯಾವ ಮುಖದಿಂದ ಎಲ್ಲ ದಿಕ್ಕುಗಳನ್ನು ಸುಡುವಂತೆ ನೋಡುತ್ತಿದ್ದನೋ ಅವನ ಆ ಮುಖದಿಂದ ತಿತ್ತಿರ ಪಕ್ಷಿಗಳು ಹೊರಬಂದವು.
ಯತ್ ಸುರಾಪಂ ತು ತಸ್ಯಾಸೀದ್ ವಕ್ತ್ರಂ ತ್ರಿಶಿರಸಸ್ತದಾ |
ಕಲವಿಂಕಾಃ ಸಮುತ್ಪೇತುಃ ಶ್ಯೇನಾಶ್ಚ ಭರತರ್ಷಭ ॥52॥
ಎಲೈ ಭರತರ್ಷಭನೇ, ವಿಶ್ವರೂಪನ ಯಾವ ಮುಖವು ಸುರಾಪಾನವನ್ನು ಮಾಡುತ್ತಿದ್ದಿತೋ ಆ ಮುಖದಿಂದ ಕಲವಿಂಕಗಳೂ ಮತ್ತು ಗಿಡುಗಗಳು (ಹದ್ದುಗಳು) ಹೊರಬಂದವು.
ತತಸ್ತೇಷು ನಿಕೃತ್ತೇಷು ವಿಜ್ವರೋ ಮಘವಾನಥ |
ತಕ್ಷ್ಣೇ ತಥಾ ವರಂ ದತ್ತ್ವಾ ಪ್ರಹೃಷ್ಟಸ್ತ್ರಿದಶೇಶ್ವರಃ ॥53॥
ಜಗಾಮ ತ್ರಿದಿವಂ ದೇವಃ ತಕ್ಷಾಽಪಿ ಸ್ವಗೃಹಾನ್ ಯಯೌ ॥54॥
ಆಗ ಮೂರುತಲೆಗಳು ಕಡಿಯಲ್ಪಡುತ್ತಿರಲು ತ್ರಿದಿಶಾಧಿಪತಿಯಾದ ಇಂದ್ರನು ಸಮಾಧಾನಚಿತ್ತನಾಗಿ ವಿಶ್ವಕರ್ಮನಿಗೆ ಅಂತಹ ವರಗಳನ್ನು ನೀಡಿದನು. ದೇವೇಂದ್ರನು ಸ್ವರ್ಗಕ್ಕೆ ಹೋದನು. ವಿಶ್ವಕರ್ಮನು ತನ್ನ ಮನೆಗೆ ಹಿಂದಿರುಗಿದನು.
ತಕ್ಷಾಽಪಿ ಸ್ವಗೃಹಂ ಗತ್ವಾ ನೈವ ಶಂಸತಿ ಕಸ್ಯಚಿತ್ |
ಅಥೈನಂ ನಾಭಿಜಾನಂತಿ ವರ್ಷಮೇಕಂ ತಥಾಗತಮ್ ॥55॥
ತಕ್ಷನೂ ತನ್ನ ಮನೆಗೆ ಹಿಂದಿರುಗಿ ಈ ವಿಷಯವನ್ನು ಯಾರಿಗೂ ಹೇಳಲಿಲ್ಲ ಮತ್ತು ಆ ರೀತಿಯಲ್ಲಿದ್ದ ವಿಶ್ವಕರ್ಮನನ್ನು ಒಂದುವರ್ಷದವರೆಗೆ ಯಾರೂ ಗಮನಿಸಲೂ ಇಲ್ಲ.
ಅಥ ಸಂವತ್ಸರೇ ಪೂರ್ಣೇ ಭೂತಾಃ ಪಶುಪತೇಃ ಪ್ರಭೋ |
ಸಮಾಕ್ರೋಶಂತ ಮಘವಾನ್ ನಃ ಪ್ರಭುರ್ಬ್ರಹ್ಮಹಾ ಇತಿ ॥56॥
ಅನಂತರ ಒಂದು ವರ್ಷವು ಪೂರ್ಣವಾಗುತ್ತಿರಲು ರುದ್ರದೇವರ ಬಳಿಗೆ ಭೂತಗಳು ಹೋಗಿ ಪ್ರಭುವೇ, ನಮ್ಮ ಪ್ರಭುವಾದ ಇಂದ್ರನು ಬ್ರಹ್ಮಹತ್ಯಾದೋಷವನ್ನು ಹೊಂದಿದ್ದಾನೆ ಎಂದು ಕಿರುಚಿದವು.
ತತ ಇಂದ್ರೋ ವ್ರತಂ ಘೋರಮಾಚರತ್ ಪಾಕಶಾಸನಃ |
ತಪಸಾ ಚ ಸುಸಂಯುಕ್ತಃ ಸಹ ದೇವೈರ್ಮರುದ್ಗಣೈಃ ॥57॥
ಆಗ ಮರುದ್ಗಣಸಹಿತನಾದ ಪಾಕಶಾಸನನಾದ ಇಂದ್ರನು ಘೋರವಾದ ತಪಸ್ಸನ್ನು ಆಚರಿಸಿದನು.
ಸಮುದ್ರೇಷು ಪೃಥಿವ್ಯಾಂ ಚ ವನಸ್ಪತಿಷು ಸ್ತ್ರೀಷು ಚ |
ವಿಭಜ್ಯ ಬ್ರಹ್ಮಹತ್ಯಾಂ ಚ ತಾನ್ ವರೈರಪ್ಯಯೋಜಯತ್ ॥58॥
ಅವನು ತನ್ನ ಬ್ರಹ್ಮಹತ್ಯಾದೋಷವನ್ನು ಸಮುದ್ರಕ್ಕೂ, ಭೂಮಿಗೂ, ವನಸ್ಪತಿಗಳಿಗೂ ಮತ್ತು ಸ್ತ್ರೀಯರಿಗೂ ಹಂಚಿಕೊಟ್ಟು ಅವರಿಗೆ ವರಗಳನ್ನೂ ನೀಡಿದನು.
ವರದಸ್ತು ವರಂ ದತ್ತ್ವಾ ಪೃಥಿವ್ಯೈ ಸಾಗರಾಯ ಚ |
ವನಸ್ಪತಿಭ್ಯಃ ಸ್ತ್ರೀಭಿಶ್ಚ ಬ್ರಹ್ಮಹತ್ಯಾಂ ನುನೋದ ತಾಮ್ ॥59॥
ವರಪ್ರದನಾದ ಅವನು ಭೂಮಿಗೂ, ಸಮುದ್ರಕ್ಕೂ, ವನಸ್ಪತಿಗಳಿಗೂ ಮತ್ತು ಸ್ತ್ರೀಯರಿಗೂ ವರವನ್ನು ನೀಡಿ ತನ್ನ ಬ್ರಹ್ಮಹತ್ಯಾದೋಷವನ್ನು ಕಳೆದುಕೊಂಡನು.
ತತಸ್ತು ಶುದ್ಧೋ ಭಗವಾನ್ ದೇವೈರ್ಲೋಕೈಶ್ಚ ಪೂಜಿತಃ |

ಇಂದ್ರಸ್ಥಾನಮುಪಾತಿಷ್ಠತ್ ಪೂಜ್ಯಮಾನೋ ಮಹರ್ಷಿಭಿಃ ॥60॥
ಮೇನೇ ಕೃತಾರ್ಥಮಾತ್ಮಾನಂ ಹತ್ವಾ ಶತ್ರೂನ್ ಸುರಾರಿಹಾ ॥61॥
ಅನಂತರ ಶುದ್ಧನಾದ ಪೂಜ್ಯನಾದ ಇಂದ್ರನು ದೇವತೆಗಳಿಂದಲೂ, ಮನುಷ್ಯರಿಂದಲೂ ಮತ್ತು ಮಹರ್ಷಿಗಳಿಂದಲೂ ಪೂಜಿತನಾಗಿ ತನ್ನ ಹಿಂದಿನ ಸ್ಥಾನವನ್ನು ಅಲಂಕರಿಸಿ, ಶತ್ರುಸಂಹಾರವನ್ನು ಮಾಡಿದ ಅವನು ತನ್ನನ್ನು ಕೃತಾರ್ಥನೆಂದು ಭಾವಿಸಿದನು.
ತ್ವಷ್ಟಾ ಪ್ರಜಾಪತಿಃ ಶ್ರುತ್ವಾ ಶಕ್ರೇಣಾಥ ಸುತಂ ಹತಮ್ |
ಕ್ರೋಧಸಂರಕ್ತನಯನ ಇದಂ ವಚನಮಬ್ರವೀತ್ ॥62॥
ಪ್ರಜಾಪತಿಯಾದ ತ್ವಷ್ಟೃವಾದರೂ ತನ್ನ ಪುತ್ರನು ಇಂದ್ರನಿಂದ ಹತನಾದುದನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಈ ಮಾತನ್ನಾಡಿದನು.
ತಪ್ಯಮಾನಂ ತಪೋ ನಿತ್ಯಂ ಕ್ಷಾಂತಂ ದಾಂತಂ ಜಿತೇಂದ್ರಿಯಮ್ |
ವಿನಾಽಪರಾಧೇನ ಯತಃ ಪುತ್ರಂ ಹಿಂಸಿತವಾನ್ ಮಮ ॥63॥
ತಸ್ಮಾದಿಂದ್ರವಿನಾಶಾಯ ವೃತ್ರಮುತ್ಪಾದಯಾಮ್ಯಹಮ್ ॥64॥
ಲೋಕಾಃ ಪಶ್ಯಂತು ಮೇ ವೀರ್ಯಂ ತಪಸಶ್ಚ ಬಲಂ ಮಹತ್ |
ಸ ಚ ಪಶ್ಯತು ದೇವೇಂದ್ರೋ ದುರಾತ್ಮಾ ಪಾಪಚೇತನಃ ॥65॥
ಕ್ಷಮಾಶೀಲನೂ, ಜಿತೇಂದ್ರಿಯನೂ, ವಿನೀತನೂ ಆದ ನನ್ನ ಪುತ್ರನನ್ನು ಯಾವ ಅಪರಾಧವೂ ಇಲ್ಲದೇ ಇಂದ್ರನು ವಧೆ ಮಾಡಿದ್ದಾನೆ. ಆದ್ದರಿಂದ ಇಂದ್ರನ ವಿನಾಶಕ್ಕಾಗಿ ನಾನು ವೃತ್ರನೆಂಬ ಮಗನನ್ನು ಪಡೆಯುತ್ತೇನೆ. ಲೋಕವು ನನ್ನ ಪರಾಕ್ರಮವನ್ನು ಮತ್ತು ತಪಸ್ಸಿನ ದೊಡ್ಡ ಬಲವನ್ನು ನೋಡಲಿ. ದುರಾತ್ಮನೂ, ಪಾಪಚೇತನನೂ ಆದ ದೇವೇಂದ್ರನೂ ಸಹ ಅದನ್ನು ನೋಡಲಿ.
ಉಪಸ್ಪೃಶ್ಯ ತತಃ ಕ್ರುದ್ಧಃ ತಪಸ್ವೀ ಸುಮಹಾಯಶಾಃ |
ಅಗ್ನೌ ಹುತ್ವಾ ಸಮುತ್ಪಾದ್ಯ ಘೋರಂ ವೃತ್ರಮುವಾಚ ಹ ॥66॥
ಇಂದ್ರಶತ್ರೋ ವಿವರ್ಧಸ್ವ ಪ್ರಭಾವಾತ್ ತಪಸೋ ಮಮ ॥67॥
ಆಗ ತಪಸ್ವಿಯೂ, ಮಹಾಕೀರ್ತಿಶಾಲಿಯೂ ಆದ ಅವನು ಶುದ್ಧನಾಗಿ ಸ್ನಾನವನ್ನು ಮಾಡಿ ಅಗ್ನಿಯಲ್ಲಿ ಕ್ರೋಧದಿಂದ ಹೋಮವನ್ನು ಮಾಡಿ ಘೋರನಾದ ವೃತ್ರನನ್ನು ಪಡೆದು ಇಂದ್ರಶತ್ರುವೇ, ನನ್ನ ತಪಸ್ಸಿನ ಪ್ರಭಾವದಿಂದ ಅಭಿವೃದ್ಧಿಯನ್ನು ಹೊಂದು ಎಂದು ಹೇಳಿದನು.
ಸೋಽವರ್ಧತ ದಿವಂ ಸ್ತಬ್ಧ್ವಾ ಸೂರ್ಯವೈಶ್ವಾನರೋಪಮಃ |
ಕಿಂ ಕರೋಮೀತಿ ಚೋವಾಚ ಕಾಲಸೂರ್ಯ ಇವೋದಿತಃ ॥68॥
ಶಕ್ರಂ ಜಹೀತಿ ಚಾಪ್ಯುಕ್ತೋ ಜಗಾಮ ತ್ರಿದಿವಂ ತತಃ ॥69॥
ವೃತ್ರನು ಸೂರ್ಯಾಗ್ನಿಗಳಂತೆ ಕಾಂತಿಯುಕ್ತನಾಗಿ ಆಕಾಶವನ್ನು ಆವರಿಸಿ ಬೆಳೆದು ಪ್ರಳಯಕಾಲದಲ್ಲಿ ಉದಿಸಿದ ಸೂರ್ಯನಂತೆ (ಉಗ್ರನಾಗಿ) ಏನು ಮಾಡಲಿ ಎಂದು ಕೇಳಿದನು. ಇಂದ್ರನನ್ನು ಕೊಲ್ಲುವವನಾಗು ಎಂದು ಹೇಳಲ್ಪಟ್ಟ ಅವನು ಸ್ವರ್ಗಕ್ಕೆ ಹೋದನು.
ಗ್ರಸ್ತಾ ಲೋಕಾಶ್ಚ ವೃತ್ರೇಣ ಸರ್ವೇ ಭರತಸತ್ತಮ |
ತ್ವಷ್ಟುಸ್ತೇಜೋವಿವೃದ್ಧೇನ ವೃತ್ರೇಣ ಸುಮಹಾತ್ಮನಾ ॥70॥
ಸರ್ವಗಂಧೇಂದ್ರಿಯರಸಾ ಹೃತಾ ಭಾರತ ತೇನ ವೈ ॥71॥
ಎಲೈ ಭರತಶ್ರೇಷ್ಠನೇ, ಮೂರುಲೋಕಗಳೆಲ್ಲವೂ ವೃತ್ರನಿಂದ ಆವೃತವಾದವು. ಎಲೈ ಭಾರತನೇ, ತ್ವಷ್ಟೃವಿನ ತಪೋಬಲದಿಂದ ಅಭಿವೃದ್ಧನಾದ ವೃತ್ರನು ಎಲ್ಲ ಗಂಧಗಳನ್ನೂ, ರಸಗಳನ್ನೂ ಮತ್ತು ಇಂದ್ರಿಯಗಳನ್ನೂ ಅಪಹರಿಸಿದನು.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಹೃತಮೇತನ್ಮಹಾರಾಜ ವೃತ್ರೇಣ ಸುಮಹಾತ್ಮನಾ ॥72॥
ಮಹಾರಾಜನೇ, ಮಹಾತ್ಮನಾದ ವೃತ್ರನು ಪೃಥಿವೀ, ವಾಯು, ಆಕಾಶ, ಜಲ ಮತ್ತು ಐದನೆಯ ಅಗ್ನಿ ಇವೆಲ್ಲವನ್ನೂ ಅಪಹರಿಸಿದನು.
ತತೋ ಯುದ್ಧಂ ಸಮಭವದ್ ವೃತ್ರವಾಸವಯೋರ್ಮಹತ್ |
ಸಂಕ್ರುದ್ಧಯೋರ್ಮಹಾಘೋರಂ ಪ್ರಸಕ್ತಂ ಕುರುಸತ್ತಮ ॥73॥
ಎಲೈ ಕುರುಶ್ರೇಷ್ಠನೇ, ಅನಂತರ ಕೋಪಗೊಂಡ ವೃತ್ರ ಮತ್ತು ಇಂದ್ರರಿಗೆ ಮಹಾಘೋರವಾದ ಯುದ್ಧವು ಜರುಗಿತು.
ತತೋ ಜಗ್ರಾಹ ದೇವೇಂದ್ರಂ ವೃತ್ರೋ ವೀರಃ ಶತಕ್ರತುಮ್ |
ಅಪಾವೃತ್ಯಾಕ್ಷಿಪದ್ ವಕ್ತ್ರೇ ಶಕ್ರಂ ಕೋಪಸಮನ್ವಿತಃ ॥74॥
ಆಗ ವೀರನಾದ ವೃತ್ರನು ಶತಕ್ರತುವಾದ ಇಂದ್ರನನ್ನು ಹಿಡಿದು ತಿರುಗಿಸಿ ಕೋಪದಿಂದ ಕೂಡಿದವನಾಗಿ ತನ್ನ ಬಾಯಲ್ಲಿ ಎಸೆದುಕೊಂಡನು.
ಗ್ರಸ್ತೇ ವೃತ್ರೇಣ ಶಕ್ರೇ ತು ಸಂಭ್ರಾಂತಾಸ್ತ್ರಿದಿವೇಶ್ವರಾಃ |
ಅಸೃಜಂಸ್ತೇ ಮಹಾಸತ್ವಾ ಜೃಂಭಿಕಾಂ ವೃತ್ರನಾಶಿನೀಮ್ ॥75॥
ಇಂದ್ರನು ವೃತ್ರನಿಂದ ನುಂಗಲ್ಪಡುತ್ತಿರಲು ಸ್ವರ್ಗಪತಿಗಳಾದ ದೇವತೆಗಳು ಸಂಭ್ರಾಂತರಾದರು. ಮಹಾಸತ್ವೋಪೇತರಾದ ಅವರು ವೃತ್ರನನ್ನು ನಾಶಮಾಡುವ ಆಕಳಿಕೆಯನ್ನು ಸೃಷ್ಟಿ ಮಾಡಿದರು.
ವಿಜೃಂಭಮಾಣಸ್ಯ ತತೋ ವೃತ್ರಸ್ಯಾಸ್ಯಾದಪಾವೃತಾತ್ |
ಸ್ವಾನ್ಯಂಗಾನ್ಯಭಿಸಂಕ್ಷಿಪ್ಯ ನಿಷ್ಕ್ರಾಂತೋ ಬಲಸೂದನಃ ॥76॥
ವೃತ್ರನು ಆಕಳಿಸಲು ತನ್ನ ಬಾಯಿಯನ್ನು ತೆರೆದಾಗ ಬಲಸೂದನನಾದ ಇಂದ್ರನು ತನ್ನ ಅವಯವಗಳನ್ನು ಸಂಕೋಚಮಾಡಿ ಚಿಕ್ಕರೂಪವನ್ನು ಧರಿಸಿ ಅವನ ಬಾಯಿಯಿಂದ ಹೊರಗೆ ಬಂದನು.

ತತಃ ಪ್ರಭೃತಿ ಲೋಕಸ್ಯ ಜೃಂಭಿಕಾ ಪ್ರಾಣಿಸಂಶ್ರಿತಾ |
ಜಹೃಷುಶ್ಚ ಸುರಾಃ ಸರ್ವೇ ಶಕ್ರಂ ದೃಷ್ಟ್ವಾ ವಿನಿಃಸೃತಮ್ ॥77॥
ಅಲ್ಲಿಂದೀಚೆಗೆ ಲೋಕದಲ್ಲಿ ಆಕಳಿಕೆಯು ಎಲ್ಲ ಪ್ರಾಣಿಗಳಲ್ಲಿ ಆಶ್ರಯವನ್ನು ಪಡೆದಿದೆ. ಇಂದ್ರನು ಹೊರಗೆ ಬಂದುದನ್ನು ನೋಡಿ ಎಲ್ಲಾ ದೇವತೆಗಳೂ ಸಂತೋಷಗೊಂಡರು.
ತತಃ ಪ್ರವವೃಧೇ ಯುದ್ಧಂ ವೃತ್ರವಾಸವಯೋಃ ಪುನಃ |
ಸಂರಬ್ಧಯೋಸ್ತದಾ ಘೋರಂ ಸುಚಿರಂ ಭರತರ್ಷಭ ॥78॥
ಎಲೈ ಭರತರ್ಷಭನೇ, ಅನಂತರ ಕೋಪಗೊಂಡ ವೃತ್ರ-ವಾಸವರಿಗೆ ಪುನಃ ಘೋರವಾದ ಯುದ್ಧವು ಬಹುಕಾಲದವರೆಗೆ ನಡೆಯಿತು.
ತದಾ ವ್ಯವರ್ಧತ ರಣೇ ವೃತ್ರೋ ಬಲಸಮನ್ವಿತಃ |
ತ್ವಷ್ಟುಸ್ತೇಜೋಬಲಾವಿದ್ಧಃ ತದಾ ಶಕ್ರೋ ನ್ಯವರ್ತತ ॥79॥
ಯಾವಾಗ ತ್ವಷ್ಟ್ರುವಿನ ತೇಜೋಬಲದಿಂದ ಕೂಡಿದ ವೃತ್ರನು ಯುದ್ಧದಲ್ಲಿ ಅಭಿವೃದ್ಧಿಯನ್ನು ಪಡೆದನೋ ಆಗ ಇಂದ್ರನು ಯುದ್ಧದಿಂದ ಹಿಂದಿರುಗಿದನು.
ನಿವೃತ್ತೇ ಚ ತದಾ ದೇವಾ ವಿಷಾದಮಗಮನ್ ಪುನಃ |
ಸಮೇತ್ಯ ಸಹ ಶಕ್ರೇಣ ತ್ವಷ್ಟುಸ್ತೇಜೋವಿಮೋಹಿತಾಃ ॥80॥
ಅಮಂತ್ರಯಂತ ತೇ ಸರ್ವೇ ಮುನಿಭಿಃ ಸಹ ಭಾರತ |
ಇಂದ್ರನು ಯುದ್ಧದಿಂದ ಹಿಂದಿರುಗುತ್ತಿರಲು ದೇವತೆಗಳು ವಿಷಾದವನ್ನು ಹೊಂದಿ ಪುನಃ ಇಂದ್ರನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ತ್ವಷ್ಟ್ರುವಿನ ಪರಾಕ್ರಮದಿಂದ ಮೋಹಿತರಾಗಿ ಎಲೈ ಭಾರತನೇ, ಋಷಿಗಳ ಜೊತೆಯಲ್ಲಿಯೂ ಸೇರಿ ಮಂತ್ರಾಲೋಚನೆಯನ್ನು ಮಾಡಿದರು.
ಕಿಂ ಕಾರ್ಯಮಿತಿ ವೈ ರಾಜನ್ ವಿಚಿಂತ್ಯ ಭಯಮೋಹಿತಾಃ ॥81॥
ಜಗ್ಮುಃ ಸರ್ವೇ ಮಹಾತ್ಮಾನಂ ಮನೋಭಿರ್ವಿಷ್ಣುಮವ್ಯಯಮ್ |
ಉಪವಿಷ್ಟಾ ಮಂದರಾಗ್ರೇ ಸರ್ವೇ ವೃತ್ರವಧೇಪ್ಸವಃ ॥82॥
ಎಲೈ ರಾಜನೇ, ಭಯಮೋಹಿತರಾದ ಅವರು ಏನು ಮಾಡಬೇಕೆಂದು ಚಿಂತಿಸಿ ತಮ್ಮ ಮನಸ್ಸಿನಲ್ಲಿಯೇ ಶಾಶ್ವತನಾದ, ಮಹಾತ್ಮನಾದ ವಿಷ್ಣುವನ್ನು (ಭಯಪರಿಹಾರಕನೆಂದು) ನಿಶ್ಚಯಿಸಿ ಮಂದರಪರ್ವತದ ಶಿಖರದಲ್ಲಿ ವೃತ್ರನ ವಧೆಯನ್ನು ಬಯಸಿ ಎಲ್ಲರೂ ಕುಳಿತರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ನವಮೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ವಿಷ್ಣುವಿನ ಅನುಗ್ರಹದಿಂದ ಇಂದ್ರನಿಂದ ವೃತ್ರವಧೆ.
ಇಂದ್ರನ ಕಣ್ಮರೆ ಮತ್ತು ಜಗತ್ತಿನ ಕ್ಷೋಭೆ.
ಶಲ್ಯಃ
ಆಖ್ಯಾನಮುತ್ತಮಮಿದಮಿತಿಹಾಸಂ ಪುರಾತನಮ್ |
ಶೃಣು ಮೇ ಭ್ರಾತೃಭಿಃ ಸಾರ್ಧಂ ಸರ್ವಶತ್ರುಜಯಾವಹಮ್ ॥1॥
ಶಲ್ಯ ಸರ್ವಶತ್ರುಗಳ ಮೇಲೆ ಜಯವನ್ನು ತಂದುಕೊಡುವ ಈ ಪುರಾತನ ಇತಿಹಾಸರೂಪವಾದ ಕಥೆಯನ್ನು ತಮ್ಮಂದಿರ ಜೊತೆಯಲ್ಲಿ ಕುಳಿತು ಕೇಳು.
ವೃತ್ರಭೂತೇಷು ಲೋಕೇಷು ಭಯಮಿಂದ್ರಮುಪಾಗಮತ್ ॥2॥
ಅಥೇಂದ್ರೋ ಹಿ ಮಹಾತೇಜಾಃ ಸಮೇತ್ಯ ಸಹ ದೈವತೈಃ |
ಆಮಂತ್ರಯತ ತೇಜಸ್ವೀ ವೃತ್ರಸ್ಯ ವಧಕಾರಣಾತ್ ॥3॥
ಎಲ್ಲ ಲೋಕಗಳೂ ವೃತ್ರನಿಂದ ಆವರಿಸಲ್ಪಡುತ್ತಿರಲು ಇಂದ್ರನು ಭಯವನ್ನು ಹೊಂದಿದನು. ಅನಂತರ ಮಹಾತೇಜಸ್ವಿಯಾದ ಅವನು ವೃತ್ರನ ವಧೆಯನ್ನು ಉದ್ದೇಶಿಸಿ ದೇವತೆಗಳೆಲ್ಲರನ್ನೂ ಕರೆದು ಮಂತ್ರಾಲೋಚನೆಯನ್ನು ಮಾಡಿದನು.
ಇಂದ್ರಃ
ಸರ್ವಂ ವ್ಯಾಪ್ತಮಿದಂ ದೇವಾ ವೃತ್ರೇಣ ಜಗದವ್ಯಯಮ್ |
ನ ಹ್ಯಸ್ಯ ಸದೃಶಂ ಕಿಂಚಿತ್ ಪ್ರತಿಘಾತಸ್ಯ ಯದ್ ಭವೇತ್ ॥4॥
ಇಂದ್ರ ದೇವತೆಗಳೇ, ಈ ಶಾಶ್ವತವಾದ ಜಗತ್ತೆಲ್ಲವೂ ವೃತ್ರನಿಂದ ವ್ಯಾಪ್ತವಾಗಿದೆ. ಅವನನ್ನು ಪ್ರತಿರೋಧ ಮಾಡಲು ಅವನಿಗೆ ಸದೃಶವಾದ ಯಾರೂ ಕಾಣುತ್ತಿಲ್ಲ.
ಸಮರ್ಥೋ ಹ್ಯಭವಂ ಪೂರ್ವಮಸಮರ್ಥೋಽಸ್ಮಿ ಸಾಂಪ್ರತಮ್ |
ಕಥಂ ಕುರ್ಯಾಮ ಭದ್ರಂ ವೋ ದುರ್ಧರ್ಷಃ ಸ ಹಿ ಮೇ ಮತಃ ॥5॥
ನಾನು ಹಿಂದೆ ಸಮರ್ಥನಾಗಿದ್ದೆ. ಆದರೆ ಈಗ ಅಸಮರ್ಥನಾಗಿದ್ದೇನೆ. ನಿಮಗೆ ಮಂಗಳವಾಗಲಿ. ಈಗ ಏನು ಮಾಡೋಣ?ಅವನನ್ನು ಸೋಲಿಸುವುದು ಅಸಾಧ್ಯ ಎಂದು ನನ್ನ ಅಭಿಪ್ರಾಯ.
ತೇಜಸ್ವೀ ಚ ಮಹಾತ್ಮಾ ಚ ಯುದ್ಧೇ ಚಾಮಿತವಿಕ್ರಮಃ |
ಗ್ರಸೇತ್ ತ್ರಿಭುವನಂ ಸರ್ವಂ ಸದೇವಾಸುರಮಾನುಷಮ್ ॥6॥

ತೇಜಸ್ವಿಯೂ, ಮಹಾತ್ಮನೂ ಮತ್ತು ಯುದ್ಧದಲ್ಲಿ ಅಮಿತಪರಾಕ್ರಮಿಯೂ ಆದ ಅವನು ದೇವಾಸುರಮನುಷ್ಯರಿಂದ ಸಹಿತವಾದ ಮೂರುಲೋಕವೆಲ್ಲವನ್ನೂ ನುಂಗಿಯಾನು.
ತಸ್ಮಾದ್ ವಿನಿಶ್ಚಯಮಿಮಂ ಶೃಣುಧ್ವಂ ತ್ರಿದಿವೌಕಸಃ ॥7॥
ವಿಷ್ಣೋಃ ಕ್ಷಯಮುಪಾಗಮ್ಯ ಸಮೇತ್ಯ ಚ ಮಹಾತ್ಮನಾ |
ತೇನ ಸಮ್ಮಂತ್ರ್ಯ ವೇತ್ಸ್ಯಾಮೋ ವಧೋಪಾಯಂ ದುರಾತ್ಮನಃ ॥8॥
ಆದ್ದರಿಂದ ಸ್ವರ್ಗನಿವಾಸಿಗಳೇ, ನನ್ನ ಈ ನಿರ್ಧಾರವನ್ನು ಕೇಳಿ. ನಾವು ವಿಷ್ಣುವಿನ ನಿವಾಸಸ್ಥಾನಕ್ಕೆ ಹೋಗಿ, ಮಹಾತ್ಮನಾದ ಅವನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಸಮಾಲೋಚನೆಯನ್ನು ಮಾಡಿ, ದುರಾತ್ಮನಾದ ವೃತ್ರನ ವಧೋಪಾಯವನ್ನು ತಿಳಿಯೋಣ.
ಶಲ್ಯಃ
ಏವಮುಕ್ತಾ ಮಘವತಾ ದೇವಾಃ ಸರ್ಷಿಗಣಾಸ್ತದಾ |
ಶರಣ್ಯಂ ಶರಣಂ ದೇವಂ ಜಗ್ಮುರ್ವಿಷ್ಣುಂ ಮಹಾಬಲಮ್ ॥9॥
ಊಚುಶ್ಚ ಸರ್ವೇ ದೇವೇಶಂ ವಿಷ್ಣುಂ ವೃತ್ರಭಯಾರ್ದಿತಾಃ ॥10॥
ಶಲ್ಯ ಇಂದ್ರನಿಂದ ಹೀಗೆ ಹೇಳಲ್ಪಟ್ಟ ಋಷಿಗಣಗಳಿಂದ ಸಹಿತರಾದ ದೇವತೆಗಳು ಆ ಮಹಾಬಲನೂ, ಶರಣು ಹೊಂದುವುದಕ್ಕೆ ಯೋಗ್ಯನೂ, ಕ್ರೀಡಾದಿಗುಣವಿಶಿಷ್ಟನೂ ಆದ ವಿಷ್ಣುವನ್ನು ಶರಣು ಹೊಂದಿದರು. ಮತ್ತು ವೃತ್ರನ ಭಯದಿಂದ ಪೀಡಿತರಾಗಿ ಅವರೆಲ್ಲರೂ ದೇವೇಶನಾದ ವಿಷ್ಣುವನ್ನು ಕುರಿತು ಹೀಗೆ ಹೇಳಿದರು.
ತ್ರಯೋ ಲೋಕಾಸ್ತ್ವಯಾ ಕ್ರಾಂತಾಃ ತ್ರಿಭಿರ್ವಿಕ್ರಮಣೈಃ ಪುರಾ |
ಅಮೃತಂ ಚ ಹೃತಂ ವಿಷ್ಣೋ ದೈತ್ಯಾಶ್ಚ ನಿಹತಾ ರಣೇ ॥11॥
ಎಲೈ ವಿಷ್ಣುವೇ, ನೀನು ಹಿಂದೆ ಮೂರು ಹೆಜ್ಜೆಗಳಿಂದ ಮೂರುಲೋಕಗಳನ್ನು ಆಕ್ರಮಿಸಿದೆ. ದೇವತೆಗಳಿಗೆ ಅಮೃತವನ್ನು ಸಂಪಾದಿಸಿಕೊಟ್ಟೆ. ಮತ್ತು ಯುದ್ಧದಲ್ಲಿ ದೈತ್ಯರನ್ನು ಸಂಹರಿಸಿದೆ.
ಬಲಿಂ ಬದ್ಧ್ವಾ ಮಹಾದೈತ್ಯಂ ಶಕ್ರೋ ದೇವಾಧಿಪಃ ಕೃತಃ |
ತ್ವಂ ಪ್ರಭುಃ ಸರ್ವಲೋಕಾನಾಂ ತ್ವಯಾ ಸರ್ವಮಿದಂ ತತಮ್ ॥12॥
ಮಹಾದೈತ್ಯನಾದ ಬಲಿಯನ್ನು ಬಂಧಿಸಿ, ಇಂದ್ರನಿಗೆ ಸ್ವರ್ಗಾಧಿಪತ್ಯವನ್ನು ತಂದುಕೊಟ್ಟೆ. ನೀನು ಎಲ್ಲ ಲೋಕಗಳಿಗೂ ಪ್ರಭುವಾದವನು ಮತ್ತು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವವನು.
ತ್ವಂ ಹಿ ದೇವೋ ಮಹಾದೇವಃ ಸರ್ವಲೋಕನಮಸ್ಕೃತಃ |
ಗತಿರ್ಭವಸಿ ದೇವಾನಾಂ ಸೇಂದ್ರಾಣಾಮಮರೋತ್ತಮ ॥13॥
ಜಗದ್ ವ್ಯಾಪ್ತಮಿದಂ ಸರ್ವಂ ವೃತ್ರೇಣಾರಿನಿಷೂದನ ॥14॥
ನೀನೇ ದೇವ, ನೀನೇ ಮಹಾದೇವ, ನೀನೇ ಸರ್ವಲೋಕನಮಸ್ಕೃತನಾದವನು. ದೇವೋತ್ತಮನೇ, ಇಂದ್ರನಿಂದ ಸಹಿತರಾದ ಎಲ್ಲ ದೇವತೆಗಳಿಗೆ ನೀನೇ ಗತಿಯಾದವನು. ಶತ್ರುಸಂಹಾರಕನೇ, ಈ ಜಗತ್ತೆಲ್ಲವೂ ವೃತ್ರನಿಂದ ಆವರಿಸಲ್ಪಟ್ಟಿದೆ.
ವಿಷ್ಣುಃ
ಅಶಕ್ಯಕರಣೀಯಂ ಮೇ ಭವತಾಂ ಹಿತಮುತ್ತಮಮ್ |
ತಸ್ಮಾದುಪಾಯಂ ವಕ್ಷ್ಯಾಮಿ ಯಥಾಽಸೌ ನ ಭವಿಷ್ಯತಿ ॥15॥
ಗಚ್ಛಧ್ವಂ ಸರ್ಷಿಗಂಧರ್ವಾ ಯತ್ರಾಸೌ ವಿಶ್ವರೂಪಧೃಕ್ ॥16॥
ವಿಷ್ಣು ಮಾಡಲು ಅಸಾಧ್ಯವಾದರೂ ಸಹ ನಿಮಗೆ ಶ್ರೇಷ್ಠವಾದ ಹಿತವನ್ನು ನಾನು ಮಾಡಲೇಬೇಕು. ಆದ್ದರಿಂದ ಈ ವೃತ್ರನು ನಾಶವನ್ನು ಹೊಂದುವಂತೆ ನಾನು ನಿಮಗೆ ಉಪಾಯವನ್ನು ಹೇಳುವೆನು. ಋಷಿ-ಗಂಧರ್ವರಿಂದ ಸಹಿತರಾಗಿ ನೀವು ವಿಶ್ವವ್ಯಾಪ್ತವಾದ ರೂಪವನ್ನು ಹೊಂದಿರುವ ವೃತ್ರನ ಬಳಿಗೆ ಹೋಗಿ.
ಸಾಮ ತಸ್ಯ ಪ್ರಯುಂಜಧ್ವಂ ತತ ಏನಂ ವಿಜೇಷ್ಯಥ |
ಭವಿಷ್ಯತಿ ಜಯೋ ದೇವಾಃ ಶಕ್ರಸ್ಯ ಮಮ ತೇಜಸಾ ॥17॥
ಅವನ ಜೊತೆಯಲ್ಲಿ ಸಾಮೋಪಾಯದಿಂದಲೇ ಮಾತನಾಡಿ. ಅದರಿಂದ ನೀವು ಅವನನ್ನು ಗೆಲ್ಲುವಿರಿ. ದೇವತೆಗಳೇ, ನಿಮಗೆ ಇಂದ್ರನ ಮತ್ತು ನನ್ನ ತೇಜಸ್ಸಿನಿಂದ ಜಯವುಂಟಾಗುವುದು.
ಅದೃಶ್ಯಶ್ಚ ಪ್ರವೇಕ್ಷ್ಯಾಮಿ ವಜ್ರಮೇವಾಯುಧೋತ್ತಮಮ್ |
ಗಚ್ಛಧ್ವಮೃಷಿಭಿಃ ಸಾರ್ಧಂ ಗಂಧರ್ವೈಶ್ಚ ಸುರೋತ್ತಮಾಃ ॥18॥
ವೃತ್ರಸ್ಯ ಸಹ ಶಕ್ರೇಣ ಸಂಧಿಂ ಕುರುತ ಮಾ ಚಿರಮ್ ॥19॥
ನಾನು ಅದೃಶ್ಯನಾಗಿ ಆಯುಧಶ್ರೇಷ್ಠವಾದ ವಜ್ರದಲ್ಲಿ ಪ್ರವೇಶವನ್ನು ಮಾಡುವೆನು. ಸುರೋತ್ತಮರೇ, ನೀವು ಋಷಿಗಳ ಮತ್ತು ಗಂಧರ್ವರ ಜೊತೆಯಲ್ಲಿ ಹೊರಡಿ. ವೃತ್ರನ ಜೊತೆಯಲ್ಲಿ ಇಂದ್ರನಿಗೆ ರಾಜಿಯನ್ನು ಮಾಡಿ, ತಡಮಾಡಬೇಡಿ.
ಶಲ್ಯಃ
ಏವಮುಕ್ತೇ ತು ದೇವೇನ ಋಷಯಸ್ತ್ರಿದಶಾಸ್ತದಾ |
ಯಯುಃ ಸಮೇತ್ಯ ವಿಭುನಾ ಶಕ್ರಂ ಕೃತ್ವಾ ಪುರಃಸರಮ್ ॥20॥
ಶಲ್ಯ ವಿಷ್ಣುವಿನಿಂದ ಹೀಗೆ ಹೇಳಲ್ಪಟ್ಟ ಋಷಿಗಳು ಮತ್ತು ದೇವತೆಗಳು ಇಂದ್ರನಿಂದ ಸಹಿತರಾಗಿ ಇಂದ್ರನನ್ನು ಮುಂದೆ ಮಾಡಿಕೊಂಡು ಹೊರಟರು.
ಸಮೀಪಮೇತ್ಯ ಚ ತದಾ ಸರ್ವ ಏವ ದಿವೌಕಸಃ ॥21॥

ತಂ ತೇಜಸಾ ಪ್ರಜ್ವಲಿತಂ ಪ್ರತಪಂತಂ ದಿಶೋ ದಶ |
ಗ್ರಸಂತಮಿವ ಲೋಕಾಂಸ್ತ್ರೀನ್ ಸೂರ್ಯಾಚಂದ್ರಮಸೌ ತಥಾ ॥22॥
ದದೃಶುಸ್ತೇ ತಪೋವೃದ್ಧಂ ಶಕ್ರೇಣ ಸಹ ದೇವತಾಃ |
ಋಷಯಶ್ಚ ತತೋಽಭ್ಯೇತ್ಯ ವೃತ್ರಮೂಚುಃ ಪ್ರಿಯಂ ವಚಃ ॥23॥
ಆ ಎಲ್ಲ ದೇವತೆಗಳು ವೃತ್ರನ ಸಮೀಪಕ್ಕೆ ಹೋಗಿ ತೇಜಸ್ಸಿನಿಂದ ಬೆಳಗುತ್ತಿದ್ದಂತಹ, ಹತ್ತು ದಿಕ್ಕುಗಳನ್ನು ತಾಪಪಡಿಸುತ್ತಿದ್ದಂತಹ, ಮೂರು ಲೋಕಗಳನ್ನು ನುಂಗುವಂತೆ ಇದ್ದಂತಹ, ಸೂರ್ಯ-ಚಂದ್ರರಂತೆ ಇದ್ದಂತಹ ತಪೋವೃದ್ಧನಾದ ವೃತ್ರನನ್ನು ನೋಡಿದರು ಮತ್ತು ಇಂದ್ರನಿಂದ ಸಹಿತರಾದ ದೇವತೆಗಳು ಮತ್ತು ಋಷಿಗಳು ಅವನ ಸಮೀಪಕ್ಕೆ ಹೋಗಿ ಅವನಿಗೆ ಪ್ರಿಯವಾದ ಮಾತನ್ನಾಡಿದರು.
ಋಷಯಃ
ವ್ಯಾಪ್ತಂ ಜಗದಿದಂ ಸರ್ವಂ ತೇಜಸಾ ತವ ದುರ್ಜಯ |
ನ ಚ ಶಕ್ನೋಷಿ ನಿರ್ಜೇತುಂ ವಾಸವಂ ಭೂರಿವಿಕ್ರಮಮ್ ॥24॥
ಋಷಿಯಃ ಎಲೈ ದುರ್ಜಯನೇ, ನಿನ್ನ ತೇಜಸ್ಸಿನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಆದರೂ ಮಹಾಪರಾಕ್ರಮಶಾಲಿಯಾದ ಇಂದ್ರನನ್ನು ಗೆಲ್ಲಲು ನಿನಗೆ ಸಾಧ್ಯವಾಗುತ್ತಿಲ್ಲ.
ಯುಧ್ಯತೋಶ್ಚಾಪಿ ವಾಂ ಕಾಲೋಽಪ್ಯತೀತಃ ಸುಮಹಾನಿಹ |
ಪೀಡ್ಯಂತೇ ಚ ಪ್ರಜಾಃ ಸರ್ವಾಃ ಸದೇವಾಸುರಮಾನುಷಾಃ ॥25॥
ನೀವಿಬ್ಬರೂ ಯುದ್ಧವನ್ನು ಮಾಡುತ್ತಾ ಬಹಳ ಕಾಲವು ಕಳೆದುಹೋಗಿದೆ. ಈ ಯುದ್ಧದಿಂದ ಎಲ್ಲಾ ದೇವತೆಗಳು, ಅಸುರರು ಮತ್ತು ಮನುಷ್ಯರು ಮತ್ತು ಉಳಿದ ಪ್ರಜೆಗಳು ಪೀಡೆಗೆ ಒಳಗಾಗಿದ್ದಾರೆ.
ಸಖ್ಯಂ ಭವತು ತೇ ಪುತ್ರ ಶಕ್ರೇಣ ಸಹ ನಿತ್ಯದಾ |
ಅವಾಪ್ಸ್ಯತಿ ಸುಖಂ ತ್ವಂ ಚ ಶಕ್ರಲೋಕಾಂಶ್ಚ ಶಾಶ್ವತಾನ್ ॥26॥
ಪುತ್ರನೇ, ನಿನಗೆ ಇಂದ್ರನ ಜೊತೆಯಲ್ಲಿ ಯಾವಾಗಲೂ ಸ್ನೇಹವಿರಲಿ. ನೀನು ಸುಖವನ್ನು ಪಡೆಯುವಿ ಮತ್ತು ಶಾಶ್ವತವಾದ ಇಂದ್ರಲೋಕಗಳನ್ನೂ ಹೊಂದುವಿ.
ಶಲ್ಯಃ
ಋಷಿವಾಕ್ಯಂ ನಿಶಮ್ಯಾಥ ವೃತ್ರಃ ಸ ತು ಮಹಾಬಲಃ |
ಉವಾಚ ತಾನ್ ಋಷೀನ್ ಸರ್ವಾನ್ ಪ್ರಣಮ್ಯ ಶಿರಸಾಽಸುರಃ ॥27॥
ಶಲ್ಯ ಮಹಾಬಲನಾದ ವೃತ್ರನು ಋಷಿಗಳ ಮಾತನ್ನು ಕೇಳಿ ಅನಂತರ ಅಸುರನಾದ ಅವನು ಆ ಎಲ್ಲಾ ಋಷಿಗಳಿಗೂ ಶಿರಸಾ ನಮಸ್ಕರಿಸಿ ಮಾತನಾಡಿದನು.
ಸರ್ವೇ ಯೂಯಂ ಮಹಾಭಾಗಾ ಗಂಧರ್ವಾಶ್ಚೈವ ಸರ್ವಶಃ |
ಯದ್ ಬ್ರೂಥ ತಚ್ಛ್ರುತಂ ಸರ್ವಂ ಮಮಾಪಿ ಶೃಣುತಾನಘಾಃ ॥28॥
ಇಲ್ಲಿಗೆ ಬಂದಿರುವ ಋಷಿಗಳಾದ ನೀವು ಮತ್ತು ಗಂಧರ್ವರೆಲ್ಲರೂ ಮಹಾನುಭಾವರು. ನಿಮ್ಮ ಮಾತನ್ನು ನಾನು ಕೇಳಿದ್ದೇನೆ. ಎಲೈ ಅನಘರೇ, ನನ್ನ ಮಾತನ್ನೂ ಕೇಳಿ.
ಸಂಧಿಃ ಕಥಂ ವೈ ಭವಿತಾ ಮಮ ಶಕ್ರಸ್ಯ ಚೋಭಯೋಃ |
ತೇಜಸೋ ಹಿ ದ್ವಯೋರ್ದೇವಾಃ ಸಖ್ಯಂ ವೈ ಭವಿತಾ ಕಥಮ್ ॥29॥
ನನಗೂ ಮತ್ತು ಇಂದ್ರನಿಗೂ ಹೇಗೆ ಸಂಧಿ ಉಂಟಾಗುವುದು? ದೇವತೆಗಳೇ, ಎರಡು ತೇಜಸ್ಸುಗಳಿಗೆ ಪರಸ್ಪರ ಸಖ್ಯವುಂಟಾಗುವುದು ಹೇಗೆ?
ಋಷಯಃ
ಸಕೃತ್ ಸತಾಂ ಸಂಗತಮೀಪ್ಸಿತವ್ಯಂ
ತತಃ ಪರಂ ಭವಿತಾ ಭವ್ಯಮೇವ |
ನಾತಿಕ್ರಮೇತ್ ಸತ್ಪುರುಷೇಣ ಸಂಗತಂ
ತಸ್ಮಾತ್ ಸತಾಂ ಸಂಗತಮೀಪ್ಸಿತವ್ಯಮ್ ॥30॥
ಋಷಿಗಳು ಒಂದು ಸಲ ಸಜ್ಜನರ ಸಂಗವನ್ನು ಬಯಸಬೇಕು. ಅನಂತರ ಎಲ್ಲವೂ ಕ್ಷೇಮವಾಗುತ್ತದೆ. ಸಜ್ಜನರ ಜೊತೆಯಲ್ಲಿ ಸಂಗವನ್ನು ಹೊಂದುವ ಅವಕಾಶವನ್ನು ಕಳೆದುಕೊಳ್ಳಬಾರದು. ಆದ್ದರಿಂದ ಸಜ್ಜನರ ಸಂಗವನ್ನು ಅಪೇಕ್ಷಿಸಬೇಕು.
ದೃಢಂ ಸತಾಂ ಸಂಗತಂ ಚಾಪಿ ನಿತ್ಯಂ
ಬ್ರೂಯಾಚ್ಚಾರ್ಥಂ ಹ್ಯರ್ಥಕೃಚ್ಛ್ರೇಷು ಧೀರಃ |
ಮಹಾರ್ಥವತ್ ಸತ್ಪುರುಷೇಣ ಸಂಗತಂ
ತಸ್ಮಾತ್ ಸತೋ ನ ಜಿಘಾಂಸೇತ ಧೀರಃ ॥31॥
ಧೀರನಾದವನು ಅರ್ಥಸಂಕಟವು ಪ್ರಾಪ್ತವಾದಾಗ ಸಜ್ಜನರ ಸಂಗವನ್ನೂ ಮತ್ತು ಅರ್ಥಪ್ರಾಪ್ತಿಯ ಉಪಾಯವನ್ನೂ ಹೇಳಬೇಕು. ಸತ್ಪುರುಷರ ಜೊತೆಯಲ್ಲಿ ಸಮಾಗಮವು ಮಹಾಪ್ರಯೋಜನವುಳ್ಳದ್ದು. ಆದ್ದರಿಂದ ಧೀರನಾದವನು ಸಜ್ಜನರನ್ನು ಸಂಹರಿಸಲು ಬಯಸಬಾರದು.
ಇಂದ್ರಃ ಸತಾಂ ಸಮ್ಮತಶ್ಚ ನಿವಾಸಶ್ಚ ಮಹಾತ್ಮನಾಮ್ |
ಸತ್ಯವಾದೀ ಹ್ಯದೀನಶ್ಚ ಧರ್ಮವಿತ್ ಸೂಕ್ಷ್ಮನಿಶ್ಚಯಃ ॥32॥
ಇಂದ್ರನು ಸಜ್ಜನರಿಗೆ ಸಮ್ಮತನಾದವನು ಮತ್ತು ಮಹಾತ್ಮರಿಗೆ ಆಶ್ರಯನಾದವನು. ಅವನು ಸತ್ಯವಾದಿ, ಅದೀನನಾದವನು,

ಧರ್ಮವನ್ನು ತಿಳಿದವನು ಮತ್ತು ಸೂಕ್ಷ್ಮಜ್ಞಾನಿ.
ತೇನ ತೇ ಸಹ ಶಕ್ರೇಣ ಸಂಧಿರ್ಭವತು ನಿತ್ಯದಾ |
ಏವಂ ವಿಶ್ವಾಸಮಾಗಚ್ಛ ಮಾ ತೇ ಭೂದ್ ಬುದ್ಧಿರನ್ಯಥಾ ॥33॥
ಅಂತಹ ಇಂದ್ರನ ಜೊತೆಯಲ್ಲಿ ನಿನಗೆ ಯಾವಾಗಲೂ ಸಂಧಿಯುಂಟಾಗಲಿ. ನಮ್ಮ ಮಾತನ್ನು ನಂಬು. ಬೇರೆ ರೀತಿಯಲ್ಲಿ ಯೋಚಿಸಬೇಡ.
ಶಲ್ಯಃ
ಮಹರ್ಷಿವಚನಂ ಶ್ರುತ್ವಾ ತಾನುವಾಚ ಮಹಾದ್ಯುತಿಃ |
ಅವಶ್ಯಂ ಭಗವಂತೋ ಮೇ ಮಾನನೀಯಾಸ್ತಪಸ್ವಿನಃ ॥34॥
ಶಲ್ಯ ಮಹರ್ಷಿಗಳ ಮಾತನ್ನು ಕೇಳಿ ಮಹಾದ್ಯುತಿಯಾದ ವೃತ್ರನು ಪೂಜ್ಯರೂ ಮತ್ತು ತಪಸ್ವಿಗಳೂ ಆದ ನೀವು ಅವಶ್ಯವಾಗಿ ನನ್ನಿಂದ ಸತ್ಕರಿಸಲ್ಪಡಬೇಕು.
ಬ್ರವೀಮಿ ಯದಹಂ ದೇವಾಃ ತತ್ಸರ್ವಂ ಕ್ರಿಯತೇ ಯದಿ |
ತತಃ ಸರ್ವಂ ಕರಿಷ್ಯಾಮಿ ಯದೂಚುರ್ಮಾಂ ದ್ವಿಜರ್ಷಭಾಃ ॥35॥
ಎಲೈ ದೇವತೆಗಳೇ, ನಾನು ಹೇಳಿದ ಎಲ್ಲವನ್ನೂ ನೀವು ಮಾಡುವುದಾದರೆ ಋಷಿಗಳು ಹೇಳಿದಂತೆ ನಾನು ಎಲ್ಲವನ್ನೂ ಮಾಡುವೆನು ಎಂದು ಹೇಳಿದನು.
ನ ಶುಷ್ಕೇಣ ನಚಾರ್ದ್ರೇಣ ನಾಶ್ಮನಾ ನ ಚ ದಾರುಣಾ |
ನ ಶಸ್ತ್ರೇಣ ನ ಚಾಸ್ತ್ರೇಣ ನ ದಿವಾ ನಾಪಿ ವಾ ನಿಶಿ ॥36॥
ವಧ್ಯೋ ಭವೇಯಂ ವಿಪ್ರೇಂದ್ರಾಃ ಶಕ್ರಸ್ಯ ಸಹ ದೈವತೈಃ |
ಏವಂ ಮೇ ರೋಚತೇ ಸಂಧಿಃ ಶಕ್ರಸ್ಯ ಸಹ ನಿತ್ಯದಾ ॥37॥
ಶುಷ್ಕವಾದ (ಒಣಗಿದ) ವಸ್ತುವಿನಿಂದಾಗಲೀ, ಆರ್ದ್ರವಾದ (ಒದ್ದೆಯಾದ) ವಸ್ತುವಿನಿಂದಾಗಲೀ, ಕಲ್ಲಿನಿಂದಾಗಲೀ, ಮರದಿಂದಾಗಲೀ, ಶಸ್ತ್ರದಿಂದಾಗಲೀ, ಅಸ್ತ್ರದಿಂದಾಗಲೀ, ಹಗಲಾಗಲೀ, ರಾತ್ರಿಯಾಗಲೀ, ದೇವತೆಗಳಿಂದ ಕೂಡಿದ ಇಂದ್ರನಿಂದ ನಾನು ಹತನಾಗಬಾರದು. ಹಾಗಿದ್ದರೆ ಮಾತ್ರ ಇಂದ್ರನ ಜೊತೆಯಲ್ಲಿ ನಿತ್ಯವಾದ ಸಂಧಿಯು ನನಗೆ ಇಷ್ಟವಾಗುತ್ತದೆ.
ಶಲ್ಯಃ
ಬಾಢಮಿತ್ಯೇವ ಋಷಯಃ ತಮೂಚುರ್ಭರತರ್ಷಭ |
ಏವಂ ವೃತ್ತೇ ತು ಸಂಧಾನೇ ವೃತ್ರಃ ಪ್ರಮುದಿತೋಽಭವತ್ ॥38॥
ಶಲ್ಯ ಎಲೈ ಭರತರ್ಷಭನೇ, ಋಷಿಗಳು ಹಾಗೆಯೇ ಆಗಲಿ ಎಂದು ಅವನಿಗೆ ಹೇಳಿದರು. ಹೀಗೆ ರಾಜಿಯು ಏರ್ಪಡುತ್ತಿರಲು ವೃತ್ರನು ಸಂತೋಷಗೊಂಡನು.
ತತಃ ಸಂಧಿಂ ಮಿಥಃ ಕೃತ್ವಾ ಋಷಯೋ ದೀಪ್ತತೇಜಸಃ |
ಶಕ್ರಸ್ಯ ಸಹ ವೃತ್ರೇಣ ಪುನರ್ಜಗ್ಮುರ್ಯಥಾಗತಮ್ ॥39॥
ದೀಪ್ತತೇಜಸ್ಸುಳ್ಳ ಋಷಿಗಳು ಇಂದ್ರ ಮತ್ತು ವೃತ್ರರಿಗೆ ಹೀಗೆ ಸಂಧಿಯನ್ನು ಉಂಟುಮಾಡಿ ಅನಂತರ ತಾವು ಬಂದಂತೆ ಹೊರಟುಹೋದರು.
ಅಥ ದೀರ್ಘಸ್ಯ ಕಾಲಸ್ಯ ಶಕ್ರಃ ಸಂಚಿಂತ್ಯ ಭಾರತ |
ಯತ್ತಃ ಸದಾಽಭವಚ್ಚಾಪಿ ಕ್ರುದ್ಧೋಽಮರ್ಷಸಮನ್ವಿತಃ ॥40॥
ವೃತ್ರಸ್ಯ ವಧಸಂಯುಕ್ತಾನುಪಾಯಾನನ್ವಚಿಂತಯತ್ ॥41॥
ಎಲೈ ಭಾರತನೇ, ಅನಂತರ ಬಹುಕಾಲವು ಕಳೆದಮೇಲೆ ಇಂದ್ರನು ಕೋಪಾಟೋಪಗಳಿಂದ ಕೂಡಿದವನಾಗಿ ಯಾವಾಗಲೂ ವೃತ್ರನ ವಧೆಯ ವಿಷಯದಲ್ಲಿ ಜಾಗರೂಕನಾಗಿ ವೃತ್ರನ ವಧೆಗೆ ಸಂಬಂಧಿಸಿದ ಉಪಾಯಗಳನ್ನು ಚಿಂತಿಸಿದನು.
ಅಭಿಸಂಧಿರ್ಮಹೇಂದ್ರಸ್ಯ ಸಂಧಿಕರ್ಮಣಿ ಯಃ ಕೃತಃ |
ಋಷಿಭಿಸ್ತ್ವೇರಿತಂ ಯಚ್ಚ ಮಹೇಂದ್ರಸ್ತದನುಸ್ಮರನ್ ॥42॥
ಛಿದ್ರಾನ್ವೇಷೀ ಸಮುದ್ವಿಗ್ನಃ ಸದಾ ವಸತಿ ದೇವರಾಟ್ ॥43॥
ಸಂಧಿಯನ್ನು ಮಾಡಿದಾಗ ಮಹೇಂದ್ರನಿಗೆ ಏನು ಅಭಿಪ್ರಾಯವಿದ್ದಿತೋ ಮತ್ತು ಋಷಿಗಳು ಏನನ್ನು ಹೇಳಿದ್ದರೂ ಅವೆಲ್ಲವನ್ನೂ ಚಿಂತಿಸುತ್ತಾ ದೇವತೆಗಳ ರಾಜನಾದ ಮಹೇಂದ್ರನು ವೃತ್ರನನ್ನು ಕೊಲ್ಲಲು ಒಂದು ಅವಕಾಶವನ್ನು ಹುಡುಕುತ್ತಾ ಯಾವಾಗಲೂ ಬಹಳ ಉದ್ವಿಗ್ನನಾದನು.
ಸ ಕದಾಚಿತ್ ಸಮುದ್ರಾಂತೇ ತಮಪಶ್ಯನ್ ಮಹಾಸುರಮ್ |
ಸಂಧ್ಯಾಕಾಲ ಉಪಾವೃತ್ತೇ ಮುಹೂರ್ತೇ ರಮ್ಯದಾರುಣೇ ॥44॥
ಅನಂತರ ಒಮ್ಮೆ ಸಮುದ್ರತೀರದಲ್ಲಿ ಸಂಧ್ಯಾಕಾಲವು ಪ್ರಾಪ್ತವಾದಾಗ ಆ ರಮ್ಯದಾರುಣ ಮುಹೂರ್ತದಲ್ಲಿ ಆ ಮಹಾಸುರನನ್ನು ನೋಡಿದನು.
ತತಃ ಸಂಚಿಂತ್ಯ ಮಘವಾನ್ ವರದಾನಂ ಮಹಾತ್ಮನಃ ॥45॥
ಸಂಧ್ಯೇಯಂ ವರ್ತತೇ ರೌದ್ರಾ ನ ರಾತ್ರಿರ್ನ ಚ ವಾಸರಃ |
ವೃತ್ರಶ್ಚಾವಶ್ಯವಧ್ಯೋಽಯಂ ಮಮ ಸರ್ವಹರೋ ರಿಪುಃ ॥46॥
ಆಗ ಇಂದ್ರನು ಮಹಾತ್ಮನಾದ ವಿಷ್ಣುವು ಕೊಟ್ಟ ವರದಾನವನ್ನು ಸ್ಮರಿಸಿ ಈಗ ಭಯಂಕರವಾದ ಸಂಧ್ಯಾಕಾಲವಾಗಿದೆ. ಇದು ರಾತ್ರಿಯೂ ಅಲ್ಲ, ಹಗಲೂ ಅಲ್ಲ. ನನ್ನ ಸರ್ವಸ್ವವನ್ನೂ ಅಪಹಾರ ಮಾಡಿದ ಶತ್ರುವಾದ ಈ ವೃತ್ರನನ್ನು ಅವಶ್ಯವಾಗಿ

ಸಂಹರಿಸಬೇಕು.
ಯದಿ ವೃತ್ರಂ ನ ಹನ್ಮ್ಯದ್ಯ ವಂಚಯಿತ್ವಾ ಮಹಾಸುರಮ್ |
ಮಹಾಬಲಂ ಮಹಾಕಾಯಂ ನ ಮೇ ಶ್ರೇಯೋ ಭವಿಷ್ಯತಿ ॥47॥
ಈ ದಿನ ಮಹಾಬಲನೂ, ಮಹಾಕಾಯನೂ, ಮಹಾಸುರನೂ ಆದ ವೃತ್ರನನ್ನು ನಾನು ವಂಚಿಸಿ ಕೊಲ್ಲದಿದ್ದರೆ ನನಗೆ ಶ್ರೇಯಸ್ಸು ಉಂಟಾಗುವುದಿಲ್ಲ.
ಏವಂ ಸಂಚಿಂತಯನ್ನೇವ ಶಕ್ರೋ ವಿಷ್ಣುಮನುಸ್ಮರನ್ |
ಅಥ ಫೇನಂ ತದಾಽಪಶ್ಯತ್ ಸಮುದ್ರೇ ಪರ್ವತೋಪಮಮ್ ॥48॥
ಹೀಗೆ ವಿಷ್ಣುವನ್ನು ಸ್ಮರಣೆ ಮಾಡಿ ಚಿಂತಿಸುತ್ತಿರುವಾಗಲೇ ಇಂದ್ರನು ಸಮುದ್ರದಲ್ಲಿ ತೇಲಿಬರುತ್ತಿದ್ದ, ಪರ್ವತದಷ್ಟು ದೊಡ್ಡದಾದ ಒಂದು ನೊರೆಯ ಗಟ್ಟಿಯನ್ನು ನೋಡಿದನು.
ನಾಯಂ ಶುಷ್ಕೋ ನ ಚಾರ್ದ್ರೋಽಯಂ ನ ಚ ಶಸ್ತ್ರಮಿದಂ ತಥಾ |
ಏನಂ ಕ್ಷಿಪಾಮಿ ವೃತ್ರಸ್ಯ ಕ್ಷಣಾದೇವ ನಶಿಷ್ಯತಿ ॥49॥
ಇದು ಶುಷ್ಕವೂ ಅಲ್ಲ, ಆರ್ದ್ರವೂ ಅಲ್ಲ, ಹಾಗೆ ಶಸ್ತ್ರವೂ ಅಲ್ಲ. ಇದನ್ನು ವೃತ್ರನ ಮೇಲೆ ಪ್ರಯೋಗಿಸುತ್ತೇನೆ. ಒಂದು ಕ್ಷಣದಲ್ಲಿ ಅವನು ನಾಶವನ್ನು ಹೊಂದುವನು (ಎಂದು ಆಲೋಚಿಸಿದನು).
ಜಗ್ರಾಹ ಸ ಚ ತಂ ಫೇನಮಿಂದ್ರೋ ವೃತ್ರನಿಬರ್ಹಣಮ್ |
ನಿಗೃಹ್ಯ ಶಕ್ರೋ ಬಾಹುಭ್ಯಾಂ ಪ್ರಾಹಿಣೋದ್ ವೃತ್ರಮಸ್ತಕೇ ॥50॥
ವೃತ್ರನಾಶಕವಾದ ಆ ನೊರೆಯನ್ನು ಇಂದ್ರನು ಕೈಗೆ ತೆಗೆದುಕೊಂಡು ಎರಡು ಬಾಹುಗಳಿಂದ ಗಟ್ಟಿಯಾಗಿ ಹಿಡಿದು ವೃತ್ರನ ತಲೆಯ ಮೇಲೆ ಎಸೆದನು.
ಸವಜ್ರಮಥ ಫೇನಂ ತಂ ಕ್ಷಿಪ್ರಂ ವೃತ್ರೇ ನಿಸೃಷ್ಟವಾನ್ |
ಪ್ರವಿಶ್ಯ ಫೇನಂ ತಂ ವಿಷ್ಣುರಥ ವೃತ್ರಂ ವ್ಯನಾಶಯತ್ ॥51॥
ವಜ್ರದಿಂದ ಅಭಿಮಂತ್ರಿತವಾದ ಆ ನೊರೆಯನ್ನು ಇಂದ್ರನು ವೃತ್ರನ ಮೇಲೆ ಶೀಘ್ರವಾಗಿ ಎಸೆದನು. ವಿಷ್ಣುವು ಆ ನೊರೆಯನ್ನು ಪ್ರವೇಶಿಸಿ ವೃತ್ರನನ್ನು ನಾಶಮಾಡಿದನು.
ನಿಹತೇ ತು ತತೋ ವೃತ್ರೇ ದಿಶೋ ವಿತಿಮಿರಾ ಭವನ್ |
ಪ್ರವವೌ ಚ ಶಿವೋ ವಾಯುಃ ಪ್ರಜಾಶ್ಚ ಜಹೃಷುಸ್ತದಾ ॥52॥
ವೃತ್ರನು ಹತನಾಗುತ್ತಿರಲು ಎಲ್ಲ ದಿಕ್ಕುಗಳೂ ಕತ್ತಲೆಯನ್ನು ಕಳೆದುಕೊಂಡು ಬೆಳಗಿದವು. ವಾಯುವು ಸುಖಕರವಾಗಿ ಬೀಸಿತು. ಆಗ ಪ್ರಜೆಗಳೆಲ್ಲರೂ ಸಂತೋಷಗೊಂಡರು.
ತತೋ ದೇವಾಃ ಸಗಂಧರ್ವಾ ಯಕ್ಷರಕ್ಷೋಮಹೋರಗಾಃ |
ಋಷಯಶ್ಚ ಮಹೇಂದ್ರಂ ತಮಸ್ತುವನ್ ವಿವಿಧೈಃ ಸ್ತವೈಃ ॥53॥
ಆಗ ಗಂಧರ್ವರಿಂದ ಕೂಡಿದ ದೇವತೆಗಳೂ, ಯಕ್ಷ-ರಕ್ಷ-ಸರ್ಪಗಳೂ ಮತ್ತು ಋಷಿಗಳೂ ಮಹೇಂದ್ರನನ್ನು ಅನೇಕವಿಧವಾದ ಸ್ತೋತ್ರಗಳಿಂದ ಸ್ತೋತ್ರ ಮಾಡಿದರು.
ಹತ್ವಾ ಶತ್ರುಂ ಪ್ರಹೃಷ್ಟಾತ್ಮಾ ವಾಸವಃ ಸಹ ದೈವತೈಃ |
ವಿಷ್ಣುಂ ತ್ರಿಭುವನಶ್ರೇಷ್ಠಂ ಪೂಜಯಾಮಾಸ ಧರ್ಮವಿತ್ ॥54॥
ಧರ್ಮಜ್ಞನಾದ ಇಂದ್ರನೂ ಸಹ ಶತ್ರುವನ್ನು ಕೊಂದು ಸಂತೋಷಗೊಂಡವನಾಗಿ ದೇವತೆಗಳ ಜೊತೆಯಲ್ಲಿ ತ್ರಿಭುವನ ಶ್ರೇಷ್ಠನಾದ ವಿಷ್ಣುವನ್ನು ಪೂಜಿಸಿದನು.
ತತೋ ಹತೇ ಮಹಾವೀರ್ಯೇ ವೃತ್ರೇ ದೇವಭಯಂಕರೇ |
ಅನೃತೇನಾಭಿಭೂತೋಽಭೂತ್ ಶಕ್ರಃ ಪರಮದುರ್ಮನಾಃ ॥55॥
ದೇವಭಯಂಕರನೂ ಮತ್ತು ಮಹಾಪರಾಕ್ರಮಿಯೂ ಆದ ವೃತ್ರನು ಕೊಲ್ಲಲ್ಪಡುತ್ತಿರಲು ಇಂದ್ರನು ಅನೃತದಿಂದ ಆವರಿಸಲ್ಪಟ್ಟು ಬಹಳ ದುಃಖಿತನಾದನು.
ತ್ರೈಶೀರ್ಷಯಾಽಭಿಭೂತಶ್ಚ ಸ ಪೂರ್ವಂ ಬ್ರಹ್ಮಹತ್ಯಯಾ |
ಸೋಽಂತಮಾಶ್ರಿತ್ಯ ಲೋಕಾನಾಂ ನಷ್ಟಸಂಜ್ಞೋ ವಿಚೇತನಃ ॥56॥
ನ ಪ್ರಾಜ್ಞಾಯತ ದೇವೇಂದ್ರಸ್ತ್ವಭಿಭೂತಃ ಸಃ ಕಲ್ಮಷೈಃ |
ಪ್ರತಿಚ್ಛನ್ನೋಽವಸಚ್ಚಾಪ್ಸು ಚೇಷ್ಟಮಾನ ಇವೋರಗಃ ॥57॥
ಮೊದಲೇ ವಿಶ್ವರೂಪನ ಬ್ರಹ್ಮಹತ್ಯೆಯಿಂದ ಆವೃತನಾಗಿದ್ದ ಅವನು ಲೋಕದ ತುದಿಗೆ ಹೋಗಿ ಯಾವ ಜನರಿಗೂ ತಿಳಿಯದಂತೆ ವಿಚೇತನನಾದನು. ಈ ದೋಷದಿಂದ ಕೂಡಿದ ದೇವೇಂದ್ರನು ಯಾರಿಂದಲೂ ತಿಳಿಯಲ್ಪಡಲಿಲ್ಲ. ಅವನು ವೇಷವನ್ನು ಮರೆಸಿಕೊಂಡು ಹೊರಳುವ ಸರ್ಪದಂತೆ ಜಲದಲ್ಲಿ ವಾಸಮಾಡಿದನು.
ತತಃ ಪ್ರನಷ್ಟೇ ದೇವೇಂದ್ರೇ ಬ್ರಹ್ಮಹತ್ಯಾಭಯಾರ್ದಿತೇ |
ಭೂಮಿಃ ಪ್ರಧ್ವಸ್ತಸಂಕಾಶಾ ನಿರ್ವೃಕ್ಷಾ ಶುಷ್ಕಕಾನನಾ ॥58॥
ವಿಚ್ಛಿನ್ನಸ್ರೋತಸೋ ನದ್ಯಃ ಸರಾಂಸ್ಯನುದಕಾನಿ ಚ |
ಸಂಕ್ಷೋಭಶ್ಚಾಪಿ ಸತ್ವಾನಾಮನಾವೃಷ್ಟಿಕೃತೋಽಭವತ್ ॥59॥
ಬ್ರಹ್ಮಹತ್ಯಾಭಯದಿಂದ ಪೀಡಿತನಾದ ದೇವೇಂದ್ರನು ಅದೃಶ್ಯನಾಗುತ್ತಿರಲು , ವೃಕ್ಷಗಳನ್ನು ಕಳೆದುಕೊಂಡು ಕಾಡುಗಳು ಒಣಗಿ ಹೋಗುತ್ತಿರಲು ಭೂಮಿಯು ನಷ್ಟವಾದಂತೆ ತೋರಿತು. ನದಿಗಳ ಪ್ರವಾಹವು ವಿಚ್ಛೇದವನ್ನು ಹೊಂದಿತು. ಸರೋವರಗಳು

ಜಲರಹಿತವಾದವು. ಅನಾವೃಷ್ಟಿಯಿಂದ ಎಲ್ಲ ಪ್ರಾಣಿಗಳಿಗೂ ಕ್ಷೋಭೆಯುಂಟಾಯಿತು.
ದೇವಾಶ್ಚಾಪಿ ಭೃಶಂ ತ್ರಸ್ತಾಃ ತಥಾ ಸರ್ವೇ ಮಹರ್ಷಯಃ |
ಅರಾಜಕಂ ಜಗತ್ ಸರ್ವಮಭಿಭೂತಮುಪದ್ರವೈಃ ॥60॥
ಜಗತ್ತು ಅರಾಜಕವಾಗಿ ಎಲ್ಲ ಕಡೆಗಳಲ್ಲಿಯೂ ಉಪದ್ರವಕ್ಕೆ ಒಳಗಾದುದನ್ನು ನೋಡಿ ದೇವತೆಗಳೂ ಮತ್ತು ಎಲ್ಲಾ ಮಹರ್ಷಿಗಳೂ ಬಹಳ ಹೆದರಿದರು.
ತತೋ ಭೀತಾಽಭವನ್ ದೇವಾಃ ಕೋ ನೋ ರಾಜಾ ಭವೇದಿತಿ |
ದಿವಿ ದೇವರ್ಷಯಶ್ಚಾಪಿ ದೇವರಾಜವಿನಾಕೃತಾಃ ॥61॥
ನ ಸ್ಮ ಕಶ್ಚನ ದೇವಾನಾಂ ರಾಜ್ಯೇ ವೈ ಕುರುತೇ ಮತಿಮ್ ॥62॥
ಆಗ ದೇವರಾಜನಾದ ಇಂದ್ರನಿಲ್ಲದೆ ಸ್ವರ್ಗಲೋಕದಲ್ಲಿ ದೇವತೆಗಳು ಮತ್ತು ದೇವರ್ಷಿಗಳು ಈಗ ನಮಗೆ ಯಾರು ರಾಜನಾಗುತ್ತಾನೆ ಎಂದು ಯೋಚಿಸಿ ಭೀತರಾದರು. ದೇವತೆಗಳ ರಾಜ್ಯದಲ್ಲಿ ಯಾರೂ ಅಧಿಪತಿಯಾಗಲು ಬಯಸಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದಶಮೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಇಂದ್ರರಾಜ್ಯದಲ್ಲಿ ನಹುಷನಿಗೆ ಅಭಿಷೇಕ. ಅವನ ದುರ್ಬುದ್ಧಿ ಮತ್ತು ಬೃಹಸ್ಪತಿಯಿಂದ ಶಚಿಗೆ ಅಭಯದಾನ.
ಶಲ್ಯಃ
ಋಷಯೋಽಥಾಬ್ರುವನ್ ಸರ್ವೇ ದೇವಾಶ್ಚ ತ್ರಿದಿವೇಶ್ವರಾಃ |
ಅಯಂ ವೈ ನಹುಷಃ ಶ್ರೀಮಾನ್ ದೇವರಾಜ್ಯೇಽಭಿಷಿಚ್ಯತಾಮ್ ॥1॥
ತೇಜಸ್ವೀ ಚ ಯಶಸ್ವೀ ಚ ಧಾರ್ಮಿಕಶ್ಚೈವ ನಿತ್ಯದಾ |
ಶಲ್ಯ ಅನಂತರ ಎಲ್ಲ ಋಷಿಗಳೂ ಮತ್ತು ಸರ್ವಾಧಿಪತಿಗಳಾದ ದೇವತೆಗಳೂ ಈ ಕಾಂತಿಯುಕ್ತನಾದ ನಹುಷನು ದೇವರಾಜ್ಯದಲ್ಲಿ ಅಭಿಷೇಕ ಮಾಡಲ್ಪಡಲಿ. ಅವನು ತೇಜಸ್ವಿಯೂ, ಯಶಸ್ವಿಯೂ ಮತ್ತು ಯಾವಾಗಲೂ ಧಾರ್ಮಿಕನೂ ಆಗಿದ್ದಾನೆ ಎಂದು ಹೇಳಿದರು.

ತೇ ಗತ್ವಾ ತ್ವಬ್ರುವನ್ ಸರ್ವೇ ರಾಜಾ ನೋ ಭವ ಪಾರ್ಥಿವ ॥2॥
ಸ ತಾನುವಾಚ ನಹುಷೋ ದೇವಾನ್ ಋಷಿಗಣಾಂಸ್ತಥಾ |
ಪಿತೃಭಿಃ ಸಹಿತೋ ರಾಜನ್ ಪರೀಪ್ಸನ್ ಹಿತಮಾತ್ಮನಃ ॥3॥
ಅವರು ಅವನನ್ನು ಸಮೀಪಿಸಿ ಎಲೈ ರಾಜನೇ, ನಮಗೆ ರಾಜನಾಗು ಎಂದು ಹೇಳಿದರು. ಎಲೈ ಜನಮೇಜಯ ರಾಜನೇ, ಆ ನಹುಷನು ತನ್ನ ಹಿತವನ್ನು ಬಯಸುತ್ತಾ ಪಿತೃಗಳಿಂದ ಸಹಿತರಾದ ದೇವತೆಗಳನ್ನು ಮತ್ತು ಋಷಿಗಳನ್ನು ಕುರಿತು ಹೀಗೆ ಮಾತನಾಡಿದನು.
ದುರ್ಬಲೋಽಹಂ ನ ಮೇ ಶಕ್ತಿರ್ಭವತಾಂ ಪರಿಪಾಲನೇ |
ಬಲವಾನ್ ಜ್ಞಾಯತಾಂ ರಾಜಾ ಬಲಂ ಶಕ್ರೇ ಹಿ ನಿತ್ಯದಾ ॥4॥
ನಾನು ದುರ್ಬಲನಾದವನು. ನಿಮ್ಮನ್ನು ಪಾಲಿಸಲು ನನಗೆ ಶಕ್ತಿಯಿಲ್ಲ. ಯಾವನಾದರೂ ಬಲಿಷ್ಠನಾದ ರಾಜನನ್ನು ನೋಡಿ. ಬಲಿಷ್ಠನಲ್ಲಿ ಯಾವಾಗಲೂ ನಿಮ್ಮನ್ನು ರಕ್ಷಿಸುವ ಸಾಮರ್ಥ್ಯವಿರುತ್ತದೆ.
ತಮಬ್ರುವನ್ ಪುನಃ ಸರ್ವೇ ದೇವಾ ಋಷಿಪುರೋಗಮಾಃ ॥5॥
ಅಸ್ಮಾಕಂ ತಪಸಾ ಯುಕ್ತಃ ಪಾಹಿ ರಾಜ್ಯಂ ತ್ರಿವಿಷ್ಟಪೇ ॥6॥
ಪರಸ್ಪರಭಯಂ ಘೋರಮಸ್ಮಾಕಂ ಹಿ ನ ಸಂಶಯಃ |
ಅಭಿಷಿಂಚಸ್ವ ರಾಜೇಂದ್ರ ಭವ ರಾಜಾ ತ್ರಿವಿಷ್ಟಪೇ ॥7॥
ಆಗ ದೇವತೆಗಳು ಮತ್ತು ಋಷಿಗಳು ಪುನಃ ಅವನನ್ನು ಕುರಿತು ನಮ್ಮ ತಪಸ್ಸಿನಿಂದ ಕೂಡಿದವನಾಗಿ ಸ್ವರ್ಗದಲ್ಲಿ ರಾಜ್ಯವನ್ನು ಆಳುವವನಾಗು. ನಮಗೆ ಪರಸ್ಪರವಾಗಿ ಘೋರವಾದ ಭಯವುಂಟಾಗಿದೆ. ರಾಜೇಂದ್ರನೇ, ಸ್ವರ್ಗದ ರಾಜನಾಗಿ ಅಭಿಷೇಕವನ್ನು ಹೊಂದು ಎಂದು ಹೇಳಿದರು.
ದೇವದಾನವಯಕ್ಷಾಣಾಮ್ ಋಷೀಣಾಂ ರಕ್ಷಸಾಂ ತಥಾ |
ಪಿತೃಗಂಧರ್ವಭೂತಾನಾಂ ಚಕ್ಷುರ್ವಿಷಯವರ್ತಿನಾಮ್ ॥8॥
ತೇಜ ಆದಾಸ್ಯಸೇ ಪಶ್ಯನ್ ಬಲವಾಂಶ್ಚ ಭವಿಷ್ಯಸಿ |
ಧರ್ಮಂ ಪುರಸ್ಕೃತ್ಯ ಸದಾ ಸರ್ವಲೋಕಾಧಿಪೋ ಭವ ॥9॥
ಬ್ರಹ್ಮರ್ಷೀಂಶ್ಚಾಪಿ ದೇವಾಂಶ್ಚ ಗೋಪಾಯಸ್ವ ತ್ರಿವಿಷ್ಟಪೇ ॥10॥
ನೀನು ನಿನ್ನ ದೃಷ್ಟಿಗೆ ವಿಷಯರಾದ ದೇವ-ದಾನವ-ಯಕ್ಷರ ಋಷಿಗಳ ಮತ್ತು ರಾಕ್ಷಸರ ಮತ್ತು ಪಿತೃ-ಗಂಧರ್ವಭೂತಗಳ ತೇಜಸ್ಸನ್ನು ಪಡೆದುಕೊಂಡು ಬಲಿಷ್ಠನಾಗುವಿ. ಯಾವಾಗಲೂ ಧರ್ಮವನ್ನು ಮುಂದೆ ಮಾಡಿಕೊಂಡು ಎಲ್ಲ ಲೋಕಗಳಿಗೂ ಒಡೆಯನಾಗು. ಸ್ವರ್ಗದಲ್ಲಿದ್ದು ಬ್ರಹ್ಮರ್ಷಿಗಳನ್ನು ಮತ್ತು ದೇವತೆಗಳನ್ನು ರಕ್ಷಿಸುವವನಾಗು (ಎಂದು ಹೇಳಿದರು).
ಶಲ್ಯಃ
ಅಭ್ಯಷಿಚ್ಯತ ರಾಜೇಂದ್ರ ತತೋ ರಾಜಾ ತ್ರಿವಿಷ್ಟಪೇ |
ಧರ್ಮಂ ಪುರಸ್ಕೃತ್ಯ ತದಾ ಸರ್ವಲೋಕಾಧಿಪೋಽಭವತ್ ॥11॥

ಶಲ್ಯ ಎಲೈ ರಾಜೇಂದ್ರನೇ, ಅನಂತರ ನಹುಷನು ಸ್ವರ್ಗಲೋಕದಲ್ಲಿ ಅಭಿಷಿಕ್ತನಾದನು. ಧರ್ಮವನ್ನು ಮುಂದೆ ಮಾಡಿಕೊಂಡು ಆಗ ಅವನು ಎಲ್ಲ ಲೋಕಗಳಿಗೂ ಒಡೆಯನಾದನು.
ಸುದುರ್ಲಭತರಂ ಲಬ್ಧ್ವಾ ಪ್ರಾಪ್ಯ ರಾಜ್ಯಂ ತ್ರಿವಿಷ್ಟಪೇ |
ಧರ್ಮಾತ್ಮಾ ಸತತಂ ಭೂತ್ವಾ ಕಾಮಾತ್ಮಾ ಸಮಪದ್ಯತ ॥12॥
ಅತ್ಯಂತ ದುರ್ಲಭವಾದ ಸ್ವರ್ಗರಾಜ್ಯವನ್ನು ಪಡೆದ ಅವನು ಮೊದಲು ಧರ್ಮಾತ್ಮನಾಗಿದ್ದವನು ಅನಂತರ ಕಾಮಾತ್ಮನಾದನು.
ದೇವೋದ್ಯಾನೇಷು ಸರ್ವೇಷು ನಂದನೋಪವನೇಷು ಚ |
ಕೈಲಾಸೇ ಹಿಮವತ್ಪೃಷ್ಠೇ ಮಂದರೇ ಶ್ವೇತಪರ್ವತೇ ॥13॥
ಸಹ್ಯೇ ಮಹೇಂದ್ರೇ ಮಲಯೇ ಸಮುದ್ರೇಷು ಸರಿತ್ಸು ಚ |
ಅಪ್ಸರೋಭಿಃ ಪರಿವೃತೋ ದೇವಕನ್ಯಾಸಮಾವೃತಃ ॥14॥
ಎಲ್ಲ ದೇವೋದ್ಯಾನಗಳಲ್ಲಿ, ನಂದನದ ಉಪವನಗಳಲ್ಲಿ, ಕೈಲಾಸ ಪರ್ವತ, ಹಿಮಾಲಯ ತಪ್ಪಲು, ಮಂದರಪರ್ವತ, ಶ್ವೇತಪರ್ವತ, ಸಹ್ಯಾದ್ರಿ, ಮಹೇಂದ್ರ, ಮಲಯಪರ್ವತಗಳಲ್ಲಿಯೂ, ಸಮುದ್ರಗಳಲ್ಲಿಯೂ ಮತ್ತು ಸರೋವರಗಳಲ್ಲಿಯೂ ಸಹ ದೇವಕನ್ಯೆಯರಿಂದಲೂ, ಅಪ್ಸರೆಯರಿಂದಲೂ ಪರಿವೃತನಾಗಿ (ವಿಹರಿಸಿದನು).
ನಹುಷೋ ದೇವರಾಜೋಽಥ ಕ್ರೀಡನ್ ಬಹುವಿಧಂ ತದಾ |
ಶೃಣ್ವನ್ ದಿವ್ಯಾ ಬಹುವಿಧಾಃ ಕಥಾಃ ಶ್ರುತಿಮನೋಹರಾಃ ॥15॥
ವಾದಿತ್ರಾಣಿ ಚ ಸರ್ವಾಣಿ ಗೀತಂ ಚ ಮಧುರಸ್ವರಮ್ ॥16॥
ಆಗ ದೇವರಾಜನಾದ ನಹುಷನು ಬಹುವಿಧವಾಗಿ ವಿಹರಿಸುತ್ತಾ ಕಿವಿಗಳಿಗೆ ಮನೋಹರವಾದ ಅನೇಕವಿಧವಾದ ದಿವ್ಯವಾದ ಕಥೆಗಳನ್ನೂ, ಎಲ್ಲ ವಾದ್ಯಗಳನ್ನೂ, ಮಧುರಸ್ವರದ ಗೀತೆಗಳನ್ನೂ ಕೇಳುವವನಾಗಿ (ವಿಹರಿಸಿದನು).
ವಿಶ್ವಾವಸುರ್ನಾರದಶ್ಚ ಗಂಧರ್ವಾಪ್ಸರಸಾಂ ಗಣಾಃ |
ಋತವಃ ಷಟ್ ಚ ದೇವೇಂದ್ರಂ ಮೂರ್ತಿಮಂತ ಉಪಾಸತೇ ॥17॥
ಮಾರುತಃ ಸುರಭಿರ್ವಾತಿ ಮನೋಜ್ಞಃ ಸುಖಶೀತಲಃ ॥18॥
ವಿಶ್ವಾವಸು, ನಾರದರು, ಗಂಧರ್ವರು, ಅಪ್ಸರೆಯರ ಸಮೂಹ ಮತ್ತು ಆರು ಋತುಗಳು ದೇಹವನ್ನು ಧರಿಸಿ ದೇವೇಂದ್ರನಾದ ಅವನನ್ನು ಉಪಾಸನೆ ಮಾಡಿದವು. ವಾಯುವು ಸುಗಂಧದಿಂದ ಕೂಡಿ ಮನೋಹರವಾಗಿ ಸುಖಶೀತಲವಾಗಿ ಬೀಸುತ್ತಿತ್ತು.
ಏವಂ ಹಿ ಕ್ರೀಡತಸ್ತಸ್ಯ ನಹುಷಸ್ಯ ದುರಾತ್ಮನಃ |
ಸಂಪ್ರಾಪ್ತಾ ದರ್ಶನಂ ದೇವೀ ಶಕ್ರಸ್ಯ ಮಹಿಷೀ ಪ್ರಿಯಾ ॥19॥
ಸ ತಾಂ ಸಂದೃಶ್ಯ ದುಷ್ಟಾತ್ಮಾ ಪ್ರಾಹ ಸರ್ವಾನ್ ಸಭಾಸದಃ ॥20॥
ಹೀಗೆ ಅವನು ದುರಾತ್ಮನಾಗಿ ಕ್ರೀಡಿಸುತ್ತಿರಲು ಒಮ್ಮೆ ಇಂದ್ರನ ರಾಣಿಯೂ, ಪ್ರಿಯೆಯೂ ಆದ ಶಚಿದೇವಿಯು ಅವನ ದೃಷ್ಟಿಗೆ ಗೋಚರಿಸಿದಳು. ದುಷ್ಟಾತ್ಮನಾದ ಅವನು ಅವಳನ್ನು ಚೆನ್ನಾಗಿ ನೋಡಿ ಎಲ್ಲಾ ಸಭಾಸದರನ್ನೂ ಕುರಿತು ಹೀಗೆ ಹೇಳಿದನು.
ಇಂದ್ರಸ್ಯ ಮಹಿಷೀ ದೇವೀ ಕಸ್ಮಾನ್ಮಾಂ ನೋಪತಿಷ್ಠತಿ |
ಅಹಮಿಂದ್ರೋಽಸ್ಮಿ ದೇವಾನಾಂ ಲೋಕಾನಾಂ ಚ ತಥೇಶ್ವರಃ ॥21॥
ಆಗಚ್ಛತು ಶಚೀ ಮಹ್ಯಂ ಕ್ಷಿಪ್ರಮದ್ಯ ನಿವೇಶನಮ್ ॥22॥
ಇಂದ್ರನ ರಾಣಿಯಾದ ಶಚೀದೇವಿಯು ಏಕೆ ನನ್ನ ಬಳಿಗೆ ಬರುವುದಿಲ್ಲ? ನಾನು ದೇವತೆಗಳಿಗೆ ಇಂದ್ರನೂ, ಮೂರುಲೋಕಗಳಿಗೆ ಒಡೆಯನೂ ಆಗಿದ್ದೇನಷ್ಟೇ! ಆದ್ದರಿಂದ ಶಚಿಯು ಶೀಘ್ರವಾಗಿ ನನ್ನ ನಿವಾಸಕ್ಕೆ ಬರಲಿ.
ತಚ್ಛ್ರುತ್ವಾ ದುರ್ಮನಾ ದೇವೀ ಬೃಹಸ್ಪತಿಮುವಾಚ ಹ ॥23॥
ರಕ್ಷ ಮಾಂ ನಹುಷಾದ್ ಬ್ರಹ್ಮನ್ ತ್ವಾಮಸ್ಮಿ ಶರಣಂ ಗತಾ |
ಅದನ್ನು ಕೇಳಿ ವಿಷಾದಗೊಂಡ ಶಚಿಯು ಬೃಹಸ್ಪತಿಗಳನ್ನು ಕುರಿತು ಬ್ರಾಹ್ಮಣರೇ, ನಾನು ನಿಮಗೆ ಶರಣಾಗತಳಾಗಿದ್ದೇನೆ. ನನ್ನನ್ನು ನಹುಷನಿಂದ ರಕ್ಷಿಸಿ ಎಂದು ಹೇಳಿದಳು.
ಸರ್ವಲಕ್ಷಣಸಂಪನ್ನಾಂ ಬ್ರಹ್ಮನ್ ತ್ವಂ ಮಾಂ ಪ್ರಭಾಷಸೇ ॥24॥
ದೇವರಾಜಸ್ಯ ದಯಿತಾಮತ್ಯಂತಸುಖಭಾಗಿನೀಮ್ |
ಅವೈಧವ್ಯೇನ ಯುಕ್ತಾಂ ಚಾಪ್ಯೇಕಪತ್ನೀಂ ಪತಿವ್ರತಾಮ್ ॥25॥
ಉಕ್ತವಾನಸಿ ಮಾಂ ಪೂರ್ವಂ ಋತಾಂ ತಾಂ ಕುರು ವೈ ಗಿರಮ್ ॥26॥
ಬ್ರಾಹ್ಮಣರೇ, ನೀವು ಯಾವಾಗಲೂ ನನ್ನನ್ನು ಎಲ್ಲ ಶುಭಲಕ್ಷಣಗಳಿಂದ ಕೂಡಿದವಳು, ದೇವೇಂದ್ರನಿಗೆ ಪ್ರಿಯಳಾದವಳು, ಬಹಳ ಸುಖಕ್ಕೆ ಅರ್ಹಳಾದವಳು, ಸೌಮಾಂಗಲ್ಯಯುಕ್ತಳಾದವಳು, ಒಬ್ಬನೇ ಪತಿಯನ್ನು ಹೊಂದಿ ಪತಿವ್ರತೆಯಾದವಳು ಎಂದು ಹಿಂದೆ ಹೇಳಿದ್ದೀರಿ. ನಿಮ್ಮ ಆ ಮಾತನ್ನು ಸತ್ಯವನ್ನಾಗಿ ಮಾಡಿ.
ನೋಕ್ತಪೂರ್ವಂ ಚ ಭಗವನ್ ಮೃಷಾ ತೇ ಕಿಂಚಿದೀಶ್ವರ |
ತಸ್ಮಾದೇತತ್ ಭವೇತ್ ಸತ್ಯಂ ತ್ವಯೋಕ್ತಂ ದ್ವಿಜಸತ್ತಮ ॥27॥
ದ್ವಿಜಶ್ರೇಷ್ಠರೇ, ಸಮರ್ಥರಾದವರೇ, ಪೂಜ್ಯರೇ, ನೀವು ಹಿಂದೆ ಆಡಿದ ಮಾತು ಎಂದೂ ಸುಳ್ಳಾಗಿಲ್ಲ. ಆದ್ದರಿಂದ ನೀವು ಆಡಿದ ಈ ಮಾತೂ ಸಹ ಸತ್ಯವಾಗಲಿ.
ಬೃಹಸ್ಪತಿರಥೋವಾಚ ಇಂದ್ರಾಣೀಂ ಭಯಮೋಹಿತಾಮ್ ॥28॥
ಯದುಕ್ತಾಽಸಿ ಮಯಾ ದೇವಿ ತತ್ ಸತ್ಯಂ ಭವಿತಾ ಧ್ರುವಮ್ |
ದ್ರಕ್ಷ್ಯಸೇ ದೇವರಾಜಾನಮಿಂದ್ರಂ ಶೀಘ್ರಮಿಹಾಗತಮ್ ॥29॥

ನ ಭೇತವ್ಯಂ ಚ ನಹುಷಾತ್ ಸತ್ಯಮೇತದ್ ಬ್ರವೀಮಿ ತೇ|
ಸಮಾಗಮಿಷ್ಯೇ ಶಕ್ರೇಣ ನ ಚಿರಾದ್ ಭವತೀಮಹಮ್ ॥30॥
ಆಗ ಭಯಗ್ರಸ್ತಳಾದ ಇಂದ್ರನ ಪತ್ನಿಯನ್ನು ಕುರಿತು ಬೃಹಸ್ಪತಿಗಳು ದೇವಿಯೇ, ನಾನು ಏನು ಹೇಳಿದ್ದೇನೋ ಅದೆಲ್ಲವೂ ಖಂಡಿತವಾಗಿ ಸತ್ಯವೇ ಆಗುವುದು. ನೀನು ಶೀಘ್ರವಾಗಿ ಇಲ್ಲಿಗೆ ಬಂದ ದೇವರಾಜನಾದ ಇಂದ್ರನನ್ನು ನೋಡುವೆ. ನಹುಷನಿಗೆ ಹೆದರಬೇಕಾದ್ದಿಲ್ಲ. ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ. ನಾನು ನಿನ್ನನ್ನು ಶೀಘ್ರವಾಗಿ ಇಂದ್ರನ ಜೊತೆಯಲ್ಲಿ ಒಂದುಗೂಡಿಸುವೆನು ಎಂದು ಹೇಳಿದರು.
ಶಲ್ಯಃ
ಅಥ ಶುಶ್ರಾವ ನಹುಷಃ ಶಕ್ರಾಣೀಂ ಶರಣಾಗತಾಮ್|
ಬೃಹಸ್ಪತಿಂ ಚಾಂಗಿರಸಂ ಚುಕ್ರೋಧ ನಹುಷಸ್ತದಾ ॥31॥
ಶಲ್ಯ ಆಗ ನಹುಷನು ಇಂದ್ರನ ಪತ್ನಿಯು ಅಂಗಿರಸರ ಪುತ್ರರಾದ ಬೃಹಸ್ಪತಿಗಳಿಗೆ ಶರಣಾಗಿತಳಾಗಿದ್ದಾಳೆಂದು ಕೇಳಿ ಕೋಪಗೊಂಡನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಾದಶೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ಬೃಹಸ್ಪತಿಗಳ ಸೂಚನೆಯಂತೆ ಕಾಲಾವಕಾಶವನ್ನು ಕೇಳಲು ಶಚಿಯಿಂದ
ನಹುಷನ ಸಮೀಪಕ್ಕೆ ಗಮನ.
ಶಲ್ಯಃ
ಕ್ರುದ್ಧಂ ತು ನಹುಷಂ ದೃಷ್ಟ್ವಾ ದೇವಾ ಋಷಿಪುರೋಗಮಾಃ|
ಅಬ್ರುವನ್ ದೇವರಾಜಾನಂ ನಹುಷಂ ಘೋರದರ್ಶನಮ್ ॥1॥
ಶಲ್ಯ ನಹುಷನು ಕ್ರೋಧವಶನಾಗಿರುವುದನ್ನು ನೋಡಿ ಋಷಿಗಳನ್ನು ಮುಂದೆ ಮಾಡಿಕೊಂಡ ದೇವತೆಗಳು ಘೋರದರ್ಶನನಾದ ದೇವರಾಜನಾದ ನಹುಷನನ್ನು ಕುರಿತು ಹೀಗೆ ಹೇಳಿದರು.
ದೇವರಾಜ ಜಹಿ ಕ್ರೋಧಂ ತ್ವಯಿ ಕ್ರುದ್ಧೇ ಜಗದ್ ವಿಭೋ|
ತ್ರಸ್ತಂ ಸಾಸುರಗಂಧರ್ವಂ ಸಕಿನ್ನರಮಹೋರಗಮ್ ॥2॥
ದೇವರಾಜನೇ, ಈ ಕ್ರೋಧವನ್ನು ಸಂಹರಿಸು. ವಿಭುವೇ, ನೀನು ಕೋಪಗೊಂಡರೆ ಅಸುರಗಂಧರ್ವರಿಂದ ಸಹಿತವಾದ, ಕಿನ್ನರ-ಮಹೋರಗರಿಂದ ಸಹಿತವಾದ ಜಗತ್ತು ಹೆದರುತ್ತದೆ.
ಜಹಿ ಕ್ರೋಧಮಿಮಂ ಸಾಧೋ ನ ಕುಪ್ಯಂತಿ ಭವದ್ವಿಧಾಃ|
ಪರಸ್ಯ ಪತ್ನೀ ಸಾ ದೇವೀ ಪ್ರಸೀದಸ್ವ ಸುರೇಶ್ವರ ॥3॥
ಸಾಧುವೇ, ಈ ಕೋಪವನ್ನು ಸಂಹಾರ ಮಾಡು. ನಿನ್ನಂತಹವರು ಕೋಪಗೊಳ್ಳುವುದಿಲ್ಲ. ಶಚೀದೇವಿಯು ಪರಪತ್ನಿ. ಸುರೇಶ್ವರನೇ, ಪ್ರಸನ್ನನಾಗು.
ನಿವರ್ತಯ ಮನಃ ಪಾಪಾತ್ ಪರದಾರಾಭಿಮರ್ಶನಾತ್|
ದೇವರಾಜೋಽಸಿ ಭದ್ರಂ ತೇ ಪ್ರಜಾ ಧರ್ಮೇಣ ಪಾಲಯ ॥4॥
ಪರಪತ್ನಿಯನ್ನು ಸ್ಪರ್ಶಮಾಡುವುದರಿಂದ ಉಂಟಾಗುವ ಪಾಪದಿಂದ ಮನಸ್ಸನ್ನು ಹಿಂದಕ್ಕೆ ತಿರುಗಿಸು. ನೀನು ದೇವರಾಜನಾಗಿದ್ದೀಯೆ. ನಿನಗೆ ಮಂಗಳವಾಗಲಿ. ಪ್ರಜೆಗಳನ್ನು ಧರ್ಮದಿಂದ ಪಾಲಿಸು.
ಏವಮುಕ್ತೋ ನ ಜಗ್ರಾಹ ತದ್ವಚಃ ಕಾಲಚೋದಿತಃ|
ಅಥ ದೇವಾನುವಾಚೇದಮಿಂದ್ರಂ ಪ್ರತಿ ಸುರಾಧಿಪಃ ॥5॥
ಹೀಗೆ ಹೇಳಲ್ಪಟ್ಟಾಗ ಕಾಲಚೋದಿತನಾದ ಅವನು ಆ ಮಾತುಗಳನ್ನು ಸ್ವೀಕರಿಸಲಿಲ್ಲ. ಆಗ ಸುರಾಧಿಪನಾದ ಅವನು ಇಂದ್ರನ ವಿಷಯದಲ್ಲಿ ದೇವತೆಗಳನ್ನು ಕುರಿತು ಹೀಗೆ ಮಾತನಾಡಿದನು.
ಅಹಲ್ಯಾ ಧರ್ಷಿತಾ ಪೂರ್ವಮ್ ಋಷಿಪತ್ನೀ ಯಶಸ್ವಿನೀ|
ಪತ್ಯೌ ಜೀವತಿ ಸೇಂದ್ರೇಣ ಸ ಚ ಕಿಂ ನ ನಿವಾರಿತಃ ॥6॥
ಹಿಂದೆ ಪತಿಯು ಜೀವಿಸಿರುವಾಗ ಯಶಸ್ವಿನಿಯೂ, ಋಷಿಪತ್ನಿಯೂ ಆದ ಅಹಲ್ಯೆಯು ಇಂದ್ರನಿಂದ ಧರ್ಷಣೆಗೆ ಒಳಗಾದಳು. ಆಗ ನೀವು ಇಂದ್ರನನ್ನು ಏಕೆ ತಡೆಯಲಿಲ್ಲ?
ಬಹೂನಿ ಚ ನೃಶಂಸಾನಿ ಕೃತಾನೀಂದ್ರೇಣ ವೈ ಪುರಾ|
ವೈಧರ್ಮ್ಯಾಣ್ಯುಪಧಾ ಚೈವ ಸ ವಃ ಕಸ್ಮಾನ್ನ ವಾರಿತಃ ॥7॥
ಇಂದ್ರನು ಹಿಂದೆ ಅನೇಕ ಕ್ರೂರವಾದ, ಧರ್ಮವಿರುದ್ಧವಾದ ಕಾರ್ಯಗಳನ್ನು ಅಪಮಾರ್ಗದಿಂದ ಮಾಡಿದ್ದಾನೆ. ನೀವು ಅವನನ್ನು ಏಕೆ ತಡೆಯಲಿಲ್ಲ?
ಉಪತಿಷ್ಠತು ದೇವೀ ಮಾಮೇತದಸ್ಯಾ ಹಿತಂ ಪರಮ್|
ಯುಷ್ಮಾಕಂ ಚ ಸದಾ ದೇವಾಃ ಶಿವಮೇವಂ ಭವಿಷ್ಯತಿ ॥8॥
ದೇವಿಯಾದ ಶಚಿಯು ನನ್ನ ಬಳಿಗೆ ಬರಲಿ. ಇದರಿಂದ ಅವಳಿಗೆ ಶ್ರೇಷ್ಠವಾದ ಹಿತವಾಗುತ್ತದೆ. ದೇವತೆಗಳೇ, ನಿಮಗೂ ಸಹ ಇದರಿಂದ ಮಂಗಳವುಂಟಾಗುವುದು.

ದೇವಾಃ
ಇಂದ್ರಾಣೀಮಾನಯಿಷ್ಯಾಮೋ ಸುರಾಧಿಪ ಯದೀಚ್ಛಸಿ |
ಜಹಿ ಕ್ರೋಧಮಿಮಂ ವೀರ ಪ್ರೀತೋ ಭವ ಸುರೇಶ್ವರ ||9||
ಇತ್ಯುಕತ್ವ ತಂ ತದಾ ದೇವಾ ಋಷಿಭಿಃ ಸಹ ಭಾರತ |
ಜಗ್ಮುರ್ಬೃಹಸ್ಪತಿಂ ವಕ್ತುಮಿಂದ್ರಾಣೀಂ ಚಾಶುಭಂ ವಚಃ ||10||
ದೇವತೆಗಳು ಸುರಾಧಿಪನೇ, ನೀನು ಬಯಸಿದರೆ ಇಂದ್ರಾಣಿಯನ್ನು ಕರೆದುಕೊಂಡು ಬರುತ್ತೇವೆ. ವೀರನೇ, ಈ ಕ್ರೋಧವನ್ನು ಸಂಹರಿಸು. ಸುರೇಶ್ವರನೇ, ಪ್ರಸನ್ನನಾಗು. ಎಲೈ ಭಾರತನೇ, ಹೀಗೆ ಹೇಳಿ ದೇವತೆಗಳು ಋಷಿಗಳ ಜೊತೆಯಲ್ಲಿ ಬೃಹಸ್ಪತಿಗೂ ಮತ್ತು ಇಂದ್ರಾಣಿಗೂ ಅಶುಭವಾದ ಮಾತುಗಳನ್ನು ಆಡಲು ಬೃಹಸ್ಪತಿಗಳ ಬಳಿಗೆ ಹೋದರು.
ದೇವಾಃ
ಜಾನೀಮಃ ಶರಣಂ ಪ್ರಾಪ್ತಾಮಿಂದ್ರಾಣೀಂ ತವ ವೇಶ್ಮನಿ |
ದತ್ತಾಭಯಾಂ ಚ ವಿಪ್ರೇಂದ್ರ ತ್ವಯಾ ದೇವರ್ಷಿಸತ್ತಮ ||11||
ದೇವತೆಗಳು ವಿಪ್ರೇಂದ್ರರೇ, ದೇವರ್ಷಿಶ್ರೇಷ್ಠರೇ, ನಿಮ್ಮ ಮನೆಯಲ್ಲಿ ಶಚೀದೇವಿಯು ಆಶ್ರಯವನ್ನು ಪಡೆದಿದ್ದಾಳೆ ಮತ್ತು ನೀವು ಅವಳಿಗೆ ಅಭಯವನ್ನು ಕೊಟ್ಟಿದ್ದೀರಿ ಎಂದು ನಾವು ತಿಳಿದಿದ್ದೇವೆ.
ತೇ ತ್ವಾಂ ದೇವಾಃ ಸಗಂಧರ್ವಾ ಋಷಯಶ್ಚ ಮಹಾದ್ಯುತೇ |
ಪ್ರಸಾದಯಂತಿ ಚೇಂದ್ರಾಣೀ ನಹುಷಾಯ ಪ್ರದೀಯತಾಮ್ ||12||
ಅಂತಹ ಗಂಧರ್ವರಿಂದ ಕೂಡಿದ ದೇವತೆಗಳು ಮತ್ತು ಋಷಿಗಳಾದ ನಾವು ನಿಮ್ಮನ್ನು ಪ್ರಸನ್ನಗೊಳಿಸುತ್ತಿದ್ದೇವೆ. ಮಹಾತೇಜಸ್ವಿಗಳೇ, ಶಚಿಯನ್ನು ನಹುಷನಿಗಾಗಿ ಬಿಟ್ಟು ಕೊಡಿ.
ಇಂದ್ರಾದ್ ವಿಶಿಷ್ಟೋ ನಹುಷೋ ದೇವರಾಜೋ ಮಹಾದ್ಯುತಿಃ |
ವೃಣೋತ್ವಿಯಂ ವರಾರೋಹಾ ಭರ್ತೃತ್ವೇ ವರವರ್ಣಿನೀ ||13||
ದೇವರಾಜನೂ, ಮಹಾದ್ಯುತಿಯೂ ಆದ ನಹುಷನು ಇಂದ್ರನಿಗಿಂತಲೂ ಶ್ರೇಷ್ಠನಾಗಿದ್ದಾನೆ. ಈ ಒಳ್ಳೆಯ ನಿತಂಬಿನಿಯೂ ಮತ್ತು ಸುಂದರಿಯೂ ಆದ ಶಚಿಯು ಅವನನ್ನು ಪತಿಯಾಗಿ ಸ್ವೀಕರಿಸಲಿ.
ಏವಮುಕ್ತಾ ತು ಸಾ ದೇವೀ ಬಾಷ್ಪಮುತ್ಸೃಜ್ಯ ಸಸ್ವನಮ್ |
ಉವಾಚ ರುದತೀ ದೀನಾ ಬೃಹಸ್ಪತಿಮಿದಂ ವಚಃ ||14||
ಹೀಗೆ ಹೇಳಲ್ಪಟ್ಟ ಶಚೀದೇವಿಯು ಕಣ್ಣೀರನ್ನು ಸುರಿಸುತ್ತಾ ಗಟ್ಟಿಯಾಗಿ ಶಬ್ದಮಾಡಿ ಅಳುತ್ತಾ ದೀನಳಾಗಿ ಬೃಹಸ್ಪತಿಗಳನ್ನು ಕುರಿತು ಈ ಮಾತನ್ನಾಡಿದಳು.
ನಾಹಮಿಚ್ಛಾಮಿ ನಹುಷಂ ಪತಿಮನ್ವಾಸ್ಯ ತಂ ಪ್ರಭುಮ್ |
ಶರಣಾಗತಾಽಸ್ಮಿ ತೇ ಬ್ರಹ್ಮನ್ ತ್ರಾಯಸ್ವ ಮಹತೋ ಭಯಾತ್ ||15||
ಪ್ರಭುವಾದ ದೇವೇಂದ್ರನನ್ನು ಶುಶ್ರೂಷೆ ಮಾಡಿ ನಾನು ನಹುಷನನ್ನು ಪತಿಯಾಗಿ ಬಯಸುವುದಿಲ್ಲ. ಬ್ರಾಹ್ಮಣರೇ, ನಿಮಗೆ ಶರಣಾಗತಳಾಗಿದ್ದೇನೆ. ಈ ದೊಡ್ಡ ಭಯದಿಂದ ನನ್ನನ್ನು ರಕ್ಷಿಸಿ.
ಬೃಹಸ್ಪತಿಃ
ಶರಣಾಗತಾಂ ನ ತ್ಯಜೇಯಮಿಂದ್ರಾಣಿ ಮಮ ನಿಶ್ಚಯಃ |
ಧರ್ಮಜ್ಞಾಂ ಸತ್ಯಶೀಲಾಂ ಚ ನ ತ್ಯಜೇಯಮನಿಂದಿತೇ ||16||
ಬೃಹಸ್ಪತಿ ಇಂದ್ರಾಣಿಯೇ, ಶರಣಾಗತಳಾದವಳನ್ನು ನಾನು ಬಿಡುವುದಿಲ್ಲ. ಇದು ನನ್ನ ನಿರ್ಧಾರ. ಅನಿಂದಿತೆಯೇ, ಧರ್ಮಜ್ಞಳೂ, ಸತ್ಯಶೀಲಳೂ ಆದ ನಿನ್ನನ್ನು ನಾನು ಬಿಡುವುದಿಲ್ಲ.
ನಾಕಾರ್ಯಂ ಕರ್ತುಮಿಚ್ಛಾಮಿ ಬ್ರಾಹ್ಮಣಃ ಸನ್ ವಿಶೇಷತಃ |
ಶ್ರುತಧರ್ಮಾ ಸತ್ಯಶೀಲೋ ಜಾನನ್ ಧರ್ಮಾನುಶಾಸನಮ್ ||17||
ವಿಶೇಷವಾಗಿ ಬ್ರಾಹ್ಮಣನಾಗಿ ಧರ್ಮಗಳ ಜ್ಞಾನವನ್ನು ಹೊಂದಿದವನಾಗಿ, ಧರ್ಮಾನುಶಾಸನವನ್ನು ತಿಳಿದು ಸತ್ಯಶೀಲನಾದ ನಾನು ಅಕಾರ್ಯವನ್ನು ಮಾಡಲು ಬಯಸುವುದಿಲ್ಲ.
ನಾಹಮೇತತ್ ಕರಿಷ್ಯಾಮಿ ಗಚ್ಛಧ್ವಂ ವೈ ಸುರೋತ್ತಮಾಃ |
ಅಸ್ಮಿಂಶ್ಚಾರ್ಥೇ ಪುರಾ ಗೀತಂ ಬ್ರಹ್ಮಣಾ ಶ್ರೂಯತಾಮಿದಮ್ ||18||
ದೇವಶ್ರೇಷ್ಠರೇ, ನಾನು ನೀವು ಹೇಳಿದಂತೆ ಮಾಡುವುದಿಲ್ಲ. ನೀವು ಹೊರಟು ಹೋಗಿ. ಈ ವಿಷಯದಲ್ಲಿ ಬ್ರಹ್ಮದೇವರು ಹಿಂದೆ ಹಾಡಿದ ಈ ಗೀತೆಯನ್ನು ಕೇಳಿ.
ನ ತಸ್ಯ ಬೀಜಂ ರೋಹತಿ ರೋಹಕಾಲೇ
ನ ಚಾಸ್ಯ ವರ್ಷಂ ವರ್ಷತಿ ವರ್ಷಕಾಲೇ |
ಭೀತಂ ಪ್ರಪನ್ನಂ ಪ್ರದದಾತಿ ಶತ್ರವೇ
ನ ಸೋಽಂತರಂ ಲಭತೇ ತ್ರಾಣಮಿಚ್ಛನ್ ||19||
ಭೀತರಾಗಿ ಶರಣಾಗತರಾದವರನ್ನು ಯಾವನು ಶತ್ರುಗಳಿಗೆ ಒಪ್ಪಿಸುತ್ತಾನೆಯೋ ಅವನು ಭೂಮಿಯಲ್ಲಿ ಹಾಕಿದ ಬೀಜವು ಮೊಳಕೆಯು ಬರುವ ಕಾಲದಲ್ಲಿ ಮೊಳಕೆ ಒಡೆಯುವುದಿಲ್ಲ. ಮಳೆಗಾಲದಲ್ಲಿ ಅವನಿಗೆ ಮಳೆಯು ಬೀಳುವುದಿಲ್ಲ. ಅವನು ರಕ್ಷಣೆಯನ್ನು ಬಯಸಿದಾಗ ಯಾರೂ ಅವನಿಗೆ ರಕ್ಷಣೆಯನ್ನು ಕೊಡುವ ಅವಕಾಶವು ಉಂಟಾಗುವುದಿಲ್ಲ.
ಮೋಘಮನ್ನಂ ವಿಂದತಿ ಚಾಪ್ರಚೇತಾಃ

ಸ್ವರ್ಗಾಲ್ಲೋಕಾದ್ ಭ್ರಶ್ಯತಿ ಭ್ರಷ್ಟಚೇಷ್ಟಃ |
ಭೀತಂ ಪ್ರಪನ್ನಂ ಪ್ರದದಾತಿ ಯೋ ವೈ
ನ ತಸ್ಯ ಹವ್ಯಂ ಪ್ರತಿಗೃಹ್ಣಂತಿ ದೇವಾಃ ॥21॥
ಭೀತರಾಗಿ ಶರಣಾಗತರಾದವರನ್ನು ಯಾವನು ಒಪ್ಪಿಸುತ್ತಾನೋ ಅವನು ಒಳ್ಳೆಯ ಮನಸ್ಸು ಇಲ್ಲದವನಾಗಿ ಕದನ್ನವನ್ನು ಸೇವಿಸುತ್ತಾನೆ. ಶುಭಾನ್ನವು ದೊರೆಯುವುದಿಲ್ಲ. ತನ್ನ ಎಲ್ಲಾ ಚೇಷ್ಟೆಗಳನ್ನೂ ಕಳೆದುಕೊಂಡು ಸ್ವರ್ಗಲೋಕದಿಂದ ಕೆಳಗೆ ಬೀಳುತ್ತಾನೆ. ಅವನು ಕೊಡುವ ಹವಿಸ್ಸನ್ನು ದೇವತೆಗಳು ಸ್ವೀಕರಿಸುವುದಿಲ್ಲ.
ಪ್ರಮೀಯತೇ ಚಾಸ್ಯ ಪ್ರಜಾ ಹ್ಯಕಾಲೇ
ಸದಾ ವಿವಾದಂ ಪಿತರೋಽಸ್ಯ ಕುರ್ವತೇ |
ಭೀತಂ ಪ್ರಪನ್ನಂ ಪ್ರದದಾತಿ ಶತ್ರವೇ
ಸೇಂದ್ರಾ ದೇವಾಃ ಪ್ರಹರಂತ್ಯಸ್ಯ ವಜ್ರಮ್ ॥21॥
ಭೀತರಾಗಿ ಶರಣಾಗತರಾದವರನ್ನು ಯಾವನು ಶತ್ರುವಿಗೆ ಕೊಡುತ್ತಾನೆಯೋ ಅವನ ಮಕ್ಕಳು ಅಕಾಲದಲ್ಲಿ ಮೃತರಾಗುತ್ತಾರೆ. ಅವನ ಪಿತೃಗಳು ಯಾವಾಗಲೂ ಜಗಳವಾಡುತ್ತಾರೆ. ಇಂದ್ರಾದಿದೇವತೆಗಳು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತಾರೆ.
ಏತದೇವಂ ವಿಜಾನನ್ ವೈ ನ ದಾಸ್ಯಾಮಿ ಶಚೀಮಿಮಾಮ್ |
ಇಂದ್ರಾಣೀಂ ವಿಶ್ರುತಾಂ ಲೋಕೇ ಶಕ್ರಸ್ಯ ಮಹಿಷೀಂ ಪ್ರಿಯಾಮ್ ॥
ಈ ವಿಷಯವನ್ನು ಹೀಗೆ ತಿಳಿದ ನಾನು ಇಂದ್ರನ ಅರ್ಧಾಂಗಿಯೂ, ಲೋಕದಲ್ಲಿ ಪ್ರಖ್ಯಾತಳಾದವಳೂ, ಇಂದ್ರನ ಪ್ರಿಯಮಹಿಷಿಯೂ ಆದ ಈ ಶಚಿಯನ್ನು ಕೊಡುವುದಿಲ್ಲ.
ಅಸ್ಯಾ ಹಿತಂ ಭವೇದ್ಯಚ್ಚ ಮಮ ಚಾಪಿ ಹಿತಂ ಭವೇತ್ |
ಕ್ರಿಯತಾಂ ತತ್ ಸುರಶ್ರೇಷ್ಠಾ ನ ಹಿ ದಾಸ್ಯಾಮ್ಯಹಂ ಶಚೀಮ್ ॥23॥
ಎಲೈ ಸುರಶ್ರೇಷ್ಠರೇ, ಇವಳಿಗೆ ಯಾವುದು ಹಿತವಾಗುವುದೋ ಮತ್ತು ನನಗೂ ಯಾವುದರಿಂದ ಹಿತವುಂಟಾಗುವುದೋ ಅದನ್ನು ಮಾಡಿ. ನಾನು ಶಚಿಯನ್ನು ಕೊಡುವುದಿಲ್ಲ.
ಶಲ್ಯಃ
ಅಥ ದೇವಾಃ ಸಗಂಧರ್ವಾ ಗುರುಮಾಹುರಿದಂ ವಚಃ ॥24॥
ಕಥಂ ಸುನೀತಂ ತು ಭವೇನ್ಮಂತ್ರಯಸ್ವ ಬೃಹಸ್ಪತೇ ॥25॥
ಶಲ್ಯ ಆಗ ದೇವತೆಗಳು ಗಂಧರ್ವರಿಂದ ಕೂಡಿ ಬೃಹಸ್ಪತಿಗಳನ್ನು ಕುರಿತು ಬೃಹಸ್ಪತಿಗಳೇ, ಏನು ಮಾಡಿದರೆ ಒಳ್ಳೆಯ ನೀತಿಯನ್ನು ಮಾಡಿದಂತಾಗುತ್ತದೆ ಎಂದು ಹೇಳಿ ಎಂದು ಮಾತನಾಡಿದರು.
ಬೃಹಸ್ಪತಿಃ
ನಹುಷಂ ಯಾಚತಾಂ ದೇವೀ ಕಿಂಚಿತ್ ಕಾಲಾಂತರಂ ಶುಭಾ |
ಹಿತಮೇತದ್ಧಿ ವೈ ಮನ್ಯೇ ತಥಾಽಸ್ಮಾಕಂ ಭವಿಷ್ಯತಿ ॥26॥
ಬೃಹಸ್ಪತಿ ಶುಭಳಾದ ಶಚೀದೇವಿಯು ನಹುಷನ ಬಳಿ ಸ್ವಲ್ಪ ಕಾಲಾವಕಾಶವನ್ನು ಕೇಳಲಿ. ಇದು ಅವಳಿಗೂ ಹಿತವಾದುದು ಮತ್ತು ನಮಗೂ ಹಿತವಾದುದು ಎಂದು ತೋರುತ್ತದೆ.
ಬಹುವಿಘ್ನಕರಃ ಕಾಲಃ ಕಾಲಃ ಸನ್ ಘಾತಯಿಷ್ಯತಿ |
ಗರ್ವಿತೋ ಬಲವಾಂಶ್ಚಾಪಿ ನಹುಷೋ ವರಸಂಶ್ರಯಾತ್ ॥27॥
ಅನೇಕ ವಿಘ್ನಗಳನ್ನು ತಂದೊಡ್ಡುವ ಕಾಲವು ಮೃತ್ಯುವಾಗಿ ಅವನಿಗೆ ಹೊಡೆಯುತ್ತದೆ. ನಹುಷನು ವರಬಲದಿಂದ ಬಲಿಷ್ಠನೂ ಮತ್ತು ಗರ್ವಿತನೂ ಆಗಿದ್ದಾನೆ.
ಶಲ್ಯಃ
ತತಸ್ತೇನ ತಥೋಕ್ತೇ ತು ಪ್ರೀತಾ ದೇವಾಸ್ತಮಬ್ರುವನ್ ॥28॥
ಬ್ರಹ್ಮನ್ ಸಾಧ್ವಿದಮುಕ್ತಂ ತೇ ಹಿತಂ ಸರ್ವದಿವೌಕಸಾಮ್ |
ಏವಮೇತದ್ ದ್ವಿಜಶ್ರೇಷ್ಠ ದೇವೀ ಚೇಯಂ ಪ್ರಸಾದ್ಯತಾಮ್ ॥29॥
ಶಲ್ಯ ಬೃಹಸ್ಪತಿಗಳು ಹಾಗೆ ಹೇಳುತ್ತಿರಲು ದೇವತೆಗಳು ಸಂತೋಷಗೊಂಡು ಅವರನ್ನು ಕುರಿತು ಬ್ರಾಹ್ಮಣರೇ, ನೀವು ಹೇಳಿದ ಈ ವಿಷಯವು ಸಮಂಜಸವಾಗಿದೆ. ಇದು ಎಲ್ಲಾ ದೇವತೆಗಳಿಗೂ ಹಿತವಾದುದು. ಬ್ರಾಹ್ಮಣಶ್ರೇಷ್ಠರೇ, ಇದು ಹೀಗೆಯೇ ಸರಿ. ಈ ಶಚೀದೇವಿಯು ಪ್ರಸನ್ನಳಾಗುವಂತೆ ಮಾಡಿ.
ಶಲ್ಯಃ
ತತಃ ಸಮಸ್ತಾ ಇಂದ್ರಾಣೀಂ ದೇವಾಃ ಸಾಗ್ನಿಪುರೋಗಮಾಃ |
ಊಚುರ್ವಚನಮವ್ಯಗ್ರಾ ಲೋಕಾನಾಂ ಹಿತಕಾಮ್ಯಯಾ ॥30॥
ಶಲ್ಯ ಅನಂತರ ಅಗ್ನಿಯೇ ಮೊದಲಾದ ಎಲ್ಲ ದೇವತೆಗಳೂ ಇಂದ್ರಾಣಿಯನ್ನು ಕುರಿತು ಲೋಕದ ಹಿತವನ್ನು ಬಯಸಿ ಅವ್ಯಗ್ರವಾಗಿ ಹೀಗೆ ಮಾತನಾಡಿದರು.
ತ್ವಯಾ ಜಗದಿದಂ ಸರ್ವಂ ಧೃತಂ ಸ್ಥಾವರಜಂಗಮಮ್ |
ಏಕಪತ್ನ್ಯಸಿ ಸಾಧ್ವೀ ಚ ಗಚ್ಛ ತ್ವಂ ನಹುಷಂ ಪ್ರತಿ ॥31॥
ಶಚೀದೇವಿಯೇ, ನೀನು ಸ್ಥಾವರ-ಜಂಗಮವಾದ ಈ ಎಲ್ಲ ಜಗತ್ತನ್ನು ಧರಿಸಿದ್ದೀಯೆ. ನೀನು ಸಾಧ್ವಿಯೂ ಮತ್ತು ಏಕಪತ್ನಿಯೂ ಆಗಿದ್ದೀಯೆ. ನಹುಷನ ಬಳಿಗೆ ಹೋಗು.

ಕ್ಷಿಪ್ರಂ ತ್ವಾಮಭಿಕಾಮಶ್ಚ  ವಿನಶಿಷ್ಯತಿ ಪಾಪಕೃತ್ |
ನಹುಷೋ ದೇವಿ ಶಕ್ರಶ್ಚ  ಸುರೈಶ್ವರ್ಯಮವಾಪ್ಸ್ಯತಿ ||32||
ದೇವಿಯೇ, ನಿನ್ನನ್ನು ಬಯಸುವ ಪಾಪಕಾರಿಯಾದ ನಹುಷನು ಶೀಘ್ರವಾಗಿ ವಿನಾಶವನ್ನು ಹೊಂದುವನು. ಮತ್ತು ಇಂದ್ರನೂ ಸಹ ಸುರೈಶ್ವರ್ಯವನ್ನು ಹೊಂದುವನು.
ಶಲ್ಯಃ
ಏವಂ ವಿನಿಶ್ಚಯಂ ಕೃತ್ವಾ ಇಂದ್ರಾಣೀ ಕಾರ್ಯಸಿದ್ಧಯೇ |
ಅಭ್ಯಗಚ್ಛತ ಸವ್ರೀಡಾ ನಹುಷಂ ಘೋರದರ್ಶನಮ್ ||33||
ಶಲ್ಯ ಇಂದ್ರಾಣಿಯು ತನ್ನ ಮತ್ತು ದೇವತೆಗಳ ಕಾರ್ಯಸಿದ್ಧಿಗಾಗಿ ಹೀಗೆ ನಿಶ್ಚಯವನ್ನು ಮಾಡಿ, ನಾಚಿಕೆಯಿಂದ ಕೂಡಿದವಳಾಗಿ, ಘೋರದರ್ಶನನಾದ ನಹುಷನ ಬಳಿಗೆ ಹೋದಳು.
ದೃಷ್ಟ್ವಾ ತಾಂ ನಹುಷಶ್ಚಾಪಿ ವಯೋರೂಪಸಮನ್ವಿತಾಮ್ |
ಸಮಹೃಷ್ಯತ ದುಷ್ಟಾತ್ಮಾ ಕಾಮೋಪಹತಚೇತನಃ ||34||
ವಯಸ್ಸು ಮತ್ತು ರೂಪಗಳಿಂದ ಕೂಡಿದ ಅವಳನ್ನು ನೋಡಿ ದುಷ್ಟಾತ್ಮನೂ, ಕಾಮಪೀಡಿತವಾದ ಮನಸ್ಸುಳ್ಳವನೂ ಆದ ನಹುಷನಾದರೂ ಸಂತೋಷಪಟ್ಟನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಾದಶೋಽಧ್ಯಾಯಃ ||
|| ಸೇನೋದ್ಯೋಗಪರ್ವಣಿ ದ್ವಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ನಹುಷನ ಜೊತೆಯಲ್ಲಿ ಶಚಿಯ ಒಪ್ಪಂದ. ಇಂದ್ರನ ಅಶ್ವಮೇಧಯಾಗ.
ಪುನಃ ಅದರ್ಶನ ಮತ್ತು ಶಚಿಯಿಂದ ದುರ್ಗಾಪೂಜೆ.
ಶಲ್ಯಃ
ಅಥ ತಾಮಬ್ರವೀದ್ ದೃಷ್ಟ್ವಾ ನಹುಷೋ ದೇವರಾಟ್ ತದಾ ||1||
ತ್ರಯಾಣಾಮಪಿ ಲೋಕಾನಾಮಹಮಿಂದ್ರಃ ಶುಚಿಸ್ಮಿತೇ |
ಭಜಸ್ವ ಮಾಂ ವರಾರೋಹೇ ಪತಿತ್ವೇ ವರವರ್ಣಿನಿ ||2||
ಶಲ್ಯ ಅನಂತರ ಅವಳನ್ನು ನೋಡಿ ದೇವರಾಜನಾದ ನಹುಷನು ಶುಚಿಸ್ಮಿತೆಯೇ, ಮೂರುಲೋಕಗಳಿಗೂ ನಾನು ಅಧಿಪತಿಯಾಗಿದ್ದೇನೆ. ನಿತಂಬಿನಿಯೇ, ಸುಂದರಿಯೇ, ನನ್ನನ್ನು ಪತಿಯಾಗಿ ವರಿಸು ಎಂದು ಹೇಳಿದನು.
ಏವಮುಕ್ತಾ ತು ಸಾ ದೇವೀ ನಹುಷೇಣ ಪತಿವ್ರತಾ |
ಪ್ರಾವೇಪತ ಭಯೋದ್ವಿಗ್ನಾ ಪ್ರವಾತೇ ಕದಳೀ ಯಥಾ ||3||
ನಹುಷನಿಂದ ಹೀಗೆ ಹೇಳಲ್ಪಟ್ಟ ಪತಿವ್ರತೆಯಾದ ಆ ಶಚೀದೇವಿಯು ಬಿರುಗಾಳಿಗೆ ಸಿಕ್ಕಿದ ಬಾಳೆಯಂತೆ ಭಯದಿಂದ ನಡುಗಿದಳು.
ಪ್ರಣಮ್ಯ ಸಾ ಹಿ ಬ್ರಹ್ಮಾಣಂ ಶಿರಸಾ ತು ಕೃತಾಂಜಲಿಃ |
ದೇವರಾಜಮಥೋವಾಚ ನಹುಷಂ ಘೋರದರ್ಶನಮ್ ||4||
ಕಾಲಮಿಚ್ಛಾಮ್ಯಹಂ ಲಬ್ಧುಂ ತ್ವತ್ತಃ ಕಶ್ಚಿತ್ ಸುರೇಶ್ವರ |
ನ ಹಿ ವಿಜ್ಞಾಯತೇ ಶಕ್ರಃ ಕುತಃ ಪ್ರಾಪ್ತಃ ಕ್ವ ವಾಽಽಗತಃ ||5||
ತತ್ತ್ವಮೇತತ್ತು ವಿಜ್ಞಾಯ ಯದಿ ನ ಜ್ಞಾಯತೇ ವಿಭೋ |
ತತೋಽಹಂ ತ್ವಾಮುಪಸ್ಥಾಸ್ಯೇ ಸತ್ಯಮೇತದ್ ಬ್ರವೀಮಿ ತೇ ||6||
ಅವಳು ಮನಸ್ಸಿನಲ್ಲಿಯೇ ಬ್ರಹ್ಮದೇವರಿಗೆ ನಮಸ್ಕರಿಸಿ ತಲೆಯ ಮೇಲೆ ಕೈಗಳನ್ನು ಮುಗಿದು ಘೋರದರ್ಶನನಾದ ದೇವರಾಜನಾದ ನಹುಷನನ್ನು ಕುರಿತು ಸುರೇಶ್ವರನೇ, ನಿನ್ನಿಂದ ಸ್ವಲ್ಪ ಕಾಲಾವಕಾಶವನ್ನು ಪಡೆಯಲು ಬಯಸುತ್ತೇನೆ. ಇಂದ್ರನು ಯಾವ ಕಾರಣದಿಂದ ಎಲ್ಲಿಗೆ ಹೋಗಿದ್ದಾನೆ, ನೀನಾದರೂ ಯಾವ ಕಾರಣದಿಂದ ಇಲ್ಲಿಗೆ ಬಂದಿದ್ದೀಯೆ ಎಂದು ನನಗೆ ತಿಳಿಯುವುದಿಲ್ಲ. ವಿಭುವೇ, ಈ ವಿಷಯವನ್ನು ಸರಿಯಾಗಿ ತಿಳಿದು ಇಂದ್ರನು ಎಲ್ಲಿಯೂ ಕಾಣದಿದ್ದರೆ ಅನಂತರ ನಿನ್ನ ಬಳಿಗೆ ಬರುವೆನು. ಈ ಮಾತನ್ನು ಸತ್ಯವಾಗಿ ಹೇಳುತ್ತಿದ್ದೇನೆ ಎಂದು ಹೇಳಿದಳು.
ನಹುಷಃ
ಏವಮುಕ್ತಃ ಸ ಇಂದ್ರಾಣ್ಯಾ ನಹುಷಃ ಪ್ರೀತಿಮಾನಭೂತ್ ||7||
ಏವಂ ಭವತು ಸುಶ್ರೋಣಿ ಯಥಾ ಮಾಮಿಹ ಭಾಷಸೇ |
ಜ್ಞಾತ್ವಾ  ಚಾಗಮನಂ ಕಾರ್ಯಂ ಸತ್ಯಮೇತದನುಸ್ಮರ ||8||
ನಹುಷ ಇಂದ್ರಾಣಿಯಿಂದ ಹೀಗೆ ಹೇಳಲ್ಪಟ್ಟ ನಹುಷನು ಸಂತೋಷಗೊಂಡನು. ಸುಂದರಿಯೇ, ನೀನು ನನಗೆ ಹೇಳಿದಂತೆಯೇ ಆಗಲಿ. ಇಂದ್ರನ ವಿಷಯವನ್ನು ತಿಳಿದು ನೀನು ಬರಬೇಕು. ಈ ಸತ್ಯವಚನವನ್ನು ಮರೆಯಬೇಡ ಎಂದು ಹೇಳಿದನು.
ಶಲ್ಯಃ
ನಹುಷೇಣ ವಿಸೃಷ್ಟಾ  ಸಾ ನಿಶ್ಚಕ್ರಾಮ ತತಃ ಶುಭಾ |
ಬೃಹಸ್ಪತಿನಿಕೇತಂ ಚ ಸಾ ಜಗಾಮ ಯಶಸ್ವಿನೀ ||9||
ಶಲ್ಯ ನಹುಷನಿಂದ ಬೀಳ್ಕೊಡಲ್ಪಟ್ಟ ಯಶಸ್ವಿನಿಯೂ ಮತ್ತು ಪವಿತ್ರಳೂ ಆದ ಶಚಿಯು ಅಲ್ಲಿಂದ ಹೊರಟು ಬೃಹಸ್ಪತಿಗಳ ನಿವಾಸಕ್ಕೆ

ಬಂದಳು.
ತಸ್ಯಾಃ ಸಂಶ್ರುತ್ಯ ಚ ವಚೋ ದೇವಾಃ ಸಾಗ್ನಿಪುರೋಗಮಾಃ |
ಮಂತ್ರಯಾಮಾಸುರೇಕಾಗ್ರಾಃ ಶಕ್ರಾರ್ಥಂ ರಾಜಸತ್ತಮ ॥10॥
ಎಲೈ ರಾಜಶ್ರೇಷ್ಠನೇ, ಅಗ್ನಿ ಮೊದಲಾದ ದೇವತೆಗಳು ಅವಳ ಮಾತನ್ನು ಚೆನ್ನಾಗಿ ಆಲಿಸಿ, ಒಂದೇ ಬುದ್ಧಿಯುಳ್ಳವರಾಗಿ ಇಂದ್ರನನ್ನು ಕಾಣುವ ವಿಷಯದಲ್ಲಿ ಮಂತ್ರಾಲೋಚನೆಯನ್ನು ಮಾಡಿದರು.
ದೇವದೇವೇನ ಸಂಗಮ್ಯ ವಿಷ್ಣುನಾ ಪ್ರಭವಿಷ್ಣುನಾ |
ಊಚುಶ್ಚೈನಂ ಸಮುದ್ವಿಗ್ನಾ ವಾಕ್ಯಂ ವಾಕ್ಯವಿಶಾರದಾಃ ॥11॥
ದೇವದೇವನೂ, ಸರ್ವಸಮರ್ಥನೂ ಆದ ವಿಷ್ಣುವನ್ನು ಸಮೀಪಿಸಿ ವಾಕ್ಯವಿಶಾರದರಾದ ಅವರು ಭಯದಿಂದ ಉದ್ವಿಗ್ನರಾಗಿ ಹೀಗೆ ಮಾತನಾಡಿದರು.
ಬ್ರಹ್ಮಹತ್ಯಾಭಿಭೂತೋ ವೈ ಶಕ್ರಃ ಸುರಗಣೇಶ್ವರಃ |
ಗತಿಶ್ಚ ನಸ್ತ್ವಂ ದೇವೇಶ ಪೂರ್ವಜೋ ಜಗತಃ ಪ್ರಭುಃ ॥12॥
ರಕ್ಷಾರ್ಥಂ ಸರ್ವಭೂತಾನಾಂ ವಿಷ್ಣುತ್ವಮುಪಜಗ್ಮಿವಾನ್ ॥13॥
ದೇವೇಶನೇ, ಸುರಗಣೇಶ್ವರನಾದ ಇಂದ್ರನು ಬ್ರಹ್ಮಹತ್ಯಾದೋಷದಿಂದ ಪರಾಭವಗೊಂಡಿದ್ದಾನೆ. ಅನಾದಿಯಾದ ಮತ್ತು ಜಗತ್ತಿಗೆ ಪ್ರಭುವಾದ ನೀನೇ ನಮಗೆ ಗತಿ. ನೀನು ಎಲ್ಲ ಜೀವರನ್ನೂ ರಕ್ಷಣೆ ಮಾಡುವುದಕ್ಕೋಸ್ಕರ ವಿಷ್ಣುರೂಪವನ್ನು ಧರಿಸಿರುವವನು.
ತದ್ವೀರ್ಯಾನ್ನಿಹತೇ ವೃತ್ರೇ ವಾಸವೋ ಬ್ರಹ್ಮಹತ್ಯಯಾ |
ವೃತಃ ಸುರಗಣಶ್ರೇಷ್ಠೋ ಮೋಚಧ್ವಂ ಪಾಕಶಾಸನಮ್ ॥14॥
ನಿನ್ನ ತೇಜಸ್ಸಿನಿಂದ ವೃತ್ರನು ಹತನಾಗುತ್ತಿರಲು ಸುರಗಣಶ್ರೇಷ್ಠನಾದ ಇಂದ್ರನು ಬ್ರಹ್ಮಹತ್ಯಾದೋಷದಿಂದ ಆವರಿಸಲ್ಪಟ್ಟನು. ಪಾಕಶಾಸನನಾದ ಇಂದ್ರನನ್ನು ಆ ದೋಷದಿಂದ ಬಿಡುಗಡೆಯನ್ನು ಮಾಡು.
ಶಲ್ಯಃ
ತೇಷಾಂ ತದ್ವಚನಂ ಶ್ರುತ್ವಾ ದೇವಾನಾಂ ವಿಷ್ಣುರಬ್ರವೀತ್ |
ಮಾಮೇವ ಯಜತಾಂ ಶಕ್ರಃ ಪಾವಯಿಷ್ಯಾಮಿ ವಜ್ರಿಣಮ್ ॥15॥
ಪುಣ್ಯೇನ ಹಯಮೇಧೇನ ಮಾಮಿಷ್ಟ್ವಾ ಪಾಕಶಾಸನಃ |
ಪುನರೇಷ್ಯತಿ ದೇವಾನಾಮಿಂದ್ರತ್ವಮಕುತೋಭಯಃ ॥16॥
ಸ್ವಕರ್ಮಭಿಶ್ಚ ನಹುಷೋ ನಾಶಂ ಯಾಸ್ಯತಿ ದುರ್ಮತಿಃ |
ಕಂಚಿತ್ ಕಾಲಮಿಮಂ ದೇವಾ ಮರ್ಷಯಧ್ವಮತಂದ್ರಿತಾಃ ॥17॥
ಶಲ್ಯ ದೇವತೆಗಳ ಆ ಮಾತನ್ನು ಕೇಳಿ ವಿಷ್ಣುವು ಅವರನ್ನು ಕುರಿತು ಇಂದ್ರನು ನನ್ನನ್ನೇ ಕುರಿತು ಯಾಗವನ್ನು ಮಾಡಲಿ. ನಾನು ಅವನನ್ನು ಪವಿತ್ರೀಕರಿಸುತ್ತೇನೆ. ಪಾಕಶಾಸನನಾದ ಇಂದ್ರನು ಪವಿತ್ರವಾದ ಹಯಮೇಧ ಯಾಗದಿಂದ ನನ್ನನ್ನು ಅರ್ಚಿಸಿ ಎಲ್ಲ ಭಯಗಳನ್ನೂ ಕಳೆದುಕೊಂಡು ಪುನಃ ದೇವತೆಗಳಿಗೆ ಒಡೆಯನಾಗುವನು. ದುರ್ಮತಿಯಾದ ನಹುಷನಾದರೂ ತನ್ನ ಕರ್ಮಗಳಿಂದಲೇ ನಾಶವನ್ನು ಹೊಂದುವನು. ದೇವತೆಗಳೇ, ಸ್ವಲ್ಪ ಸಮಯದವರೆಗೆ ಎಚ್ಚರಿಕೆಯಿಂದ ಅವನನ್ನು ಸಹಿಸಿಕೊಳ್ಳಿ ಎಂದು ಹೇಳಿದನು.
ಶಲ್ಯಃ
ಶ್ರುತ್ವಾ ವಿಷ್ಣೋಃ ಶುಭಾಂ ವಾಣೀಂ ತಾಂ ಸತ್ಯಾಮಮೃತೋಪಮಾಮ್|
ತತಃ ಸರ್ವೇ ಸುರಗಣಾಃ ಸೋಪಾಧ್ಯಾಯಮಹರ್ಷಿಭಿಃ ॥18॥
ಯತ್ರ ಶಕ್ರೋ ಭಯೋದ್ವಿಗ್ನಸ್ತಂ ದೇಶಮುಪಚಕ್ರಮುಃ ॥19॥
ಶಲ್ಯ ವಿಷ್ಣುವು ಆಡಿದ ಅಮೃತದಂತಿದ್ದ ಸತ್ಯವಾದ ಶುಭವಚನಗಳನ್ನು ಕೇಳಿ ತಮ್ಮ ಉಪಾಧ್ಯಾಯರಿಂದ ಮತ್ತು ಮಹರ್ಷಿಗಳಿಂದ ಕೂಡಿದ ಎಲ್ಲಾ ದೇವತಾ ಗಣಗಳು ಇಂದ್ರನು ಭಯೋದ್ವಿಗ್ನನಾಗಿ ವಾಸಿಸುತ್ತಿದ್ದ ಪ್ರದೇಶಕ್ಕೆ ಬಂದರು.
ತತ್ರಾಶ್ವಮೇಧಃ ಸುಮಹಾನ್ ಮಹೇಂದ್ರಸ್ಯ ಮಹಾತ್ಮನಃ |
ವವೃತೇ ಪಾವನಾರ್ಥಂ ವೈ ಬ್ರಹ್ಮಹತ್ಯಾಪಹೋ ನೃಪ ॥20॥
ಎಲೈ ರಾಜನೇ, ಅಲ್ಲಿ ಮಹಾತ್ಮನಾದ ಮಹೇಂದ್ರನ ಶುದ್ಧಿಗಾಗಿ ಬ್ರಹ್ಮಹತ್ಯಾ ದೋಷವನ್ನು ನಾಶಮಾಡುವ ಬಹಳ ದೊಡ್ಡ ಅಶ್ವಮೇಧ ಯಾಗವು ಜರುಗಿತು.
ವಿಭಜ್ಯ ಬ್ರಹ್ಮಹತ್ಯಾಂ ತು ವೃಕ್ಷೇಷು ಚ ನದೀಷು ಚ |
ಪರ್ವತೇಷು ಪೃಥಿವ್ಯಾಂ ಚ ಸ್ತ್ರೀಷು ಚೈವ ಯುಧಿಷ್ಠಿರ ॥21॥
ಸಂವಿಭಜ್ಯ ಚ ಭೂತೇಷು ವಿಸೃಜ್ಯ ಚ ನರೇಶ್ವರ |
ವಿಜ್ವರೋ ಧೂತಪಾಪ್ಮಾ ಚ ವಾಸವೋಽಭವದಾತ್ಮವಾನ್ ॥22॥
ಎಲೈ ಯುಧಿಷ್ಠಿರನೇ, ನರೇಶ್ವರನೇ, ಇಂದ್ರನು ಬ್ರಹ್ಮಹತ್ಯಾ ದೋಷವನ್ನು ವೃಕ್ಷಗಳಿಗೂ, ನದಿಗಳಿಗೂ, ಪರ್ವತಗಳಿಗೂ, ಭೂಮಿಗೂ ಮತ್ತು ಇತರ ಪ್ರಾಣಿಗಳಿಗೂ ಹಂಚಿ, ದೋಷದಿಂದ ನಿರ್ಮುಕ್ತನಾಗಿ ಪಾಪವನ್ನು ಕಳೆದುಕೊಂಡು ಮನಸ್ಸಿನ ಕ್ಲೇಶವನ್ನೂ ಕಳೆದುಕೊಂಡು ಸ್ವಸ್ಥಚಿತ್ತನಾದನು.
ಅಕಂಪ್ಯಂ ನಹುಷಂ ಸ್ಥಾನಾದ್ ದೃಷ್ಟ್ವಾ ಬಲನಿಷೂದನಃ |
ತೇಜೋಘ್ನಂ ಸರ್ವಭೂತಾನಾಂ ವರದಾನಾಚ್ಚ ದುಃಸಹಮ್ ॥23॥
ತತಃ ಶಚೀಪತಿರ್ದೇವಃ ಪುನರೇವ ವ್ಯನಶ್ಯತ |
ಅದೃಶ್ಯಃ ಸರ್ವಭೂತಾನಾಂ ಕಾಲಾಕಾಂಕ್ಷೀ ಚಚಾರ ಹ ॥24॥

ಬಲನಿಷೂದನನಾದ ಇಂದ್ರನು ಎಲ್ಲ ಭೂತಗಳ ತೇಜಸ್ಸನ್ನು ಅಪಹರಿಸುವ ಮತ್ತು ವರದಾನದಿಂದ ಸಹಿಸಲು ಅಸಾಧ್ಯನಾದ ನಹುಷನನ್ನು ತನ್ನ ಸ್ಥಾನದಿಂದ ಅಲುಗಾಡಿಸಲು ಸಾಧ್ಯವಿಲ್ಲವೆಂದು ತಿಳಿದು ಶಚೀಪತಿಯಾದ ಅವನು ಪುನಃ ಯಾರ ಕಣ್ಣಿಗೂ ಕಾಣದಂತೆ ಅದೃಶ್ಯನಾಗಿ ನಾಶವನ್ನು ಹೊಂದಿ, ಕಾಲವನ್ನು ನಿರೀಕ್ಷಿಸುತ್ತಾ ಸಂಚರಿಸಿದನು.
ಪ್ರನಷ್ಟೇ ತು ತತಃ ಶಕ್ರೇ ಶಚೀ ಶೋಕಸಮನ್ವಿತಾ |
ಹಾ ಶಕ್ರೇತಿ ತದಾ ದೇವೀ ವಿಲಲಾಪ ಸುದುಃಖಿತಾ ॥25॥
ಶಕ್ರನು ಹೀಗೆ ನಾಶವನ್ನು ಹೊಂದುತ್ತಿರಲು ಶೋಕಸಮನ್ವಿತಳಾದ ಶಚೀದೇವಿಯು ಅಯ್ಯೋ ಇಂದ್ರನೇ ಎಂದು ಬಹಳ ದುಃಖದಿಂದ ವಿಲಾಪವನ್ನು ಮಾಡಿದಳು.
ಇಂದ್ರಾಣೀ
ಯದಿ ದತ್ತಂ ಯದಿ ಹುತಂ ಗುರವಸ್ತೋಷಿತಾ ಯದಿ |
ಏಕಭರ್ತೃಕತಾ ಮೇಽಸ್ತು ಸತ್ಯಂ ಯದ್ಯಸ್ತಿ ವಾ ಮಯಿ ॥26॥
ಇಂದ್ರಾಣಿ ನಾನು ದಾನವನ್ನು ಮಾಡಿದ್ದರೆ, ಹೋಮವನ್ನು ಮಾಡಿದ್ದರೆ, ಗುರುಗಳನ್ನು ಸಂತೋಷಪಡಿಸಿದ್ದರೆ ಮತ್ತು ನನ್ನಲ್ಲಿ ಸತ್ಯವಿದ್ದರೆ ನಾನು ಒಬ್ಬನೇ ಪತಿಯುಳ್ಳವಳಾಗಿ ಆಗಬೇಕು.
ಪುಣ್ಯಾಂ ಚೇಮಾಮಹಂ ದಿವ್ಯಾಂ ಪ್ರವೃತ್ತಾಮುತ್ತರಾಯಣೇ |
ದೇವೀಂ ರಾತ್ರಿಂ ನಮಸ್ಯಾಮಿ ಸಿದ್ಧ್ಯತಾಂ ಮೇ ಮನೋರಥಃ ॥27॥
ಈ ಉತ್ತರಾಯಣ ಕಾಲದಲ್ಲಿ ಪ್ರವೃತ್ತಳಾದ ದಿವ್ಯಳಾದ ಪುಣ್ಯಪ್ರದಳಾದ ರಾತ್ರಿದೇವತೆಯಾದ ದುರ್ಗಾದೇವಿಯನ್ನು ನಮಸ್ಕರಿಸುವೆನು. ನನ್ನ ಮನೋರಥವು ಸಿದ್ಧಿಸಲಿ.
ಶಲ್ಯಃ
ಪ್ರಯತಾ ಚ ನಿಶಾಂ ದೇವೀಮುಪಾತಿಷ್ಠತ ತತ್ರ ಸಾ |
ಪತಿವ್ರತಾತ್ವಾತ್ ಸತ್ಯೇನ ಸೋಪಶ್ರುತಿಮಥಾಕರೋತ್ ॥28॥
ಶಲ್ಯ ಅವಳು ರಾತ್ರಿಯ ಕಾಲದಲ್ಲಿ ನಿಯಮದಿಂದ ಕೂಡಿ ದುರ್ಗಾದೇವಿಯನ್ನು ಪೂಜಿಸಿದಳು. ಅವಳು ಪತಿವ್ರತೆಯಾದ್ದರಿಂದ ಅವಳ ಸತ್ಯದ ನಿಮಿತ್ತದಿಂದಾಗಿ ಅವಳು ದುರ್ಗಾದೇವಿಯಿಂದ ಒಂದು ಪ್ರತಿಧ್ವನಿಯನ್ನು ಕೇಳಿದಳು.
ಯತ್ರಾಸ್ತೇ ದೇವರಾಜೋಽಸೌ ತಂ ದೇಶಂ ದರ್ಶಯಸ್ವ ಮೇ |
ಇತ್ಯಾಹೋಪಶ್ರುತಿಂ ದೇವೀಂ ಸತ್ಯಂ ಸತ್ಯೇನ ದೃಶ್ಯತಾಮ್ ॥29॥
ಪ್ರತಿಧ್ವನಿಯನ್ನು ಕೊಟ್ಟ ದುರ್ಗಾದೇವಿಯನ್ನು ಕುರಿತು ಅವಳು ದೇವರಾಜನಾದ ಇಂದ್ರನು ಎಲ್ಲಿದ್ದಾನೆಯೋ ಆ ದೇಶವನ್ನು ಸತ್ಯವಾಗಿ ನನಗೆ ತೋರಿಸು. ನಿನ್ನ ಸತ್ಯದಿಂದ ಅವನು ನನಗೆ ಕಾಣಸಿಗಲಿ (ಎಂದು ಹೇಳಿದಳು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಯೋದಶೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹದಿಮೂರನೆಯ
ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ದುರ್ಗಾದೇವಿಯ ಜೊತೆಯಲ್ಲಿ ಹೋಗಿ ಶಚಿಯಿಂದ ಕಮಲದ
ನಾಳದಲ್ಲಿದ್ದ ಇಂದ್ರನ ದರ್ಶನ ಮತ್ತು ಸ್ತೋತ್ರ.
ಶಲ್ಯಃ
ಅಥೈನಾಂ ರೂಪಿಣೀ ಸಾಧ್ವೀಮುಪಾತಿಷ್ಠದುಪಶ್ರುತಿಃ |
ತಾಂ ವಯೋರೂಪಸಂಪನ್ನಾಂ ದೃಷ್ಟ್ವಾ ದೇವೀಮುಪಸ್ಥಿತಾಮ್ ॥1॥
ಇಂದ್ರಾಣೀ ಸಂಪ್ರಹೃಷ್ಟಾತ್ಮಾ ಸಂಪೂಜ್ಯೈನಾಮಥಾಬ್ರವೀತ್ ॥2॥
ಇಚ್ಛಾಮಿ ತ್ವಾಮಹಂ ಜ್ಞಾತುಂ ಕಾ ತ್ವಂ ಬ್ರೂಹಿ ವರಾನನೇ ॥3॥
ಶಲ್ಯ ಅನಂತರ ದುರ್ಗಾದೇವಿಯು ಬೇರೆ ರೂಪವನ್ನು ಧರಿಸಿ ಆ ಪತಿವ್ರತೆಯ ಬಳಿಗೆ ಬಂದಳು. ವಯೋರೂಪಸಂಪನ್ನಳಾಗಿ ತನ್ನ ಬಳಿಗೆ ಬಂದ ಆ ದೇವಿಯನ್ನು ನೋಡಿ ಶಚಿಯು ಸಂತೋಷಗೊಂಡು ಅವಳನ್ನು ಪೂಜಿಸಿ ಸುಂದರವಾದ ಮುಖವುಳ್ಳವಳೇ ನೀನು ಯಾರು ಎಂದು ತಿಳಿಯಲು ಬಯಸುತ್ತೇನೆ, ಹೇಳು ಎಂದು ಕೇಳಿದಳು.
ಉಪಶ್ರುತಿಃ
ಉಪಶ್ರುತಿರಹಂ ದೇವೀ ತವಾಂತಿಕಮುಪಾಗತಾ |
ದರ್ಶನಂ ಚೈವ ಸಂಪ್ರಾಪ್ತಾ ತವ ಸತ್ಯೇನ ಭಾಮಿನಿ ॥4॥
ಉಪಶ್ರುತಿ ದೇವಿಯೇ, ನಾನು ದುರ್ಗೆ. ನಿನ್ನ ಬಳಿಗೆ ಬಂದಿದ್ದೇನೆ. ಭಾಮಿನಿಯೇ, ನಿನ್ನ ಸತ್ಯವನ್ನು ಮೆಚ್ಚಿ ನಾನು ನಿನಗೆ ದರ್ಶನವನ್ನು ನೀಡಿದ್ದೇನೆ.
ಪತಿವ್ರತಾ ಚ ಯುಕ್ತಾ ಚ ಯಮೇನ ನಿಯಮೇನ ಚ |
ದರ್ಶಯಿಷ್ಯಾಮಿ ತೇ ಶಕ್ರಂ ದೇವಂ ವೃತ್ರನಿಷೂದನಮ್ ॥5॥
ಕ್ಷಿಪ್ರಮನ್ವೇಹಿ ಭದ್ರಂ ತೇ ದ್ರಕ್ಷ್ಯಸೇ ಸುರಸತ್ತಮಮ್ ॥6॥
ನೀನು ಪತಿವ್ರತೆಯಾದವಳು ಮತ್ತು ಯಮ-ನಿಯಮಗಳಿಂದ ಕೂಡಿದವಳು. ನಿನಗೆ ವೃತ್ರಶತ್ರುವಾದ ಇಂದ್ರದೇವನನ್ನು

ತೋರಿಸುವೆನು. ಶೀಘ್ರವಾಗಿ ನನ್ನ ಜೊತೆಯಲ್ಲಿ ಬಾ. ನಿನಗೆ ಮಂಗಳವಾಗಲಿ. ಸುರಶ್ರೇಷ್ಠನಾದ ಇಂದ್ರನನ್ನು ನೀನು ನೋಡುವಿ.
ಶಲ್ಯಃ
ತತಸ್ತಾಂ ಪ್ರಸ್ಥಿತಾಂ ದೇವೀಮಿಂದ್ರಾಣೀ ಸಾ ಸಮನ್ವಗಾತ್ ॥7॥
ದೇವಾರಣ್ಯಾನ್ಯತಿಕ್ರಮ್ಯ ಪರ್ವತಾಂಶ್ಚ ಬಹೂಂಸ್ತತಃ।
ಹಿಮವಂತಮತಿಕ್ರಮ್ಯ ಉತ್ತರಂ ಪಾರ್ಶ್ವಮಾಗಮತ್ ॥8॥
ಶಲ್ಯ ಅನಂತರ ಅಲ್ಲಿಂದ ಹೊರಟ ಆ ದುರ್ಗಾದೇವಿಯನ್ನು ಶಚಿಯು ಹಿಂಬಾಲಿಸಿದಳು. ಅವಳು ದೇವಾರಣ್ಯವನ್ನೂ, ಅನೇಕ ಪರ್ವತಗಳನ್ನೂ ಮತ್ತು ಹಿಮಾಲಯವನ್ನೂ ದಾಟಿ ಹಿಮಾಲಯದ ಉತ್ತರ ಭಾಗಕ್ಕೆ ಬಂದಳು.
ಸಮುದ್ರಂ ಚ ಸಮಾಸಾದ್ಯ ಬಹುಯೋಜನವಿಸ್ತೃತಮ್।
ಆಸಸಾದ ಮಹಾದ್ವೀಪಂ ನಾನಾದ್ರುಮಲತಾಯುತಮ್ ॥9॥
ಅಲ್ಲಿಂದ ಬಹುಯೋಜನ ವಿಸ್ತಾರವಾದ ಸಮುದ್ರವನ್ನು ತಲುಪಿ ನಾನಾ ದ್ರುಮಲತೆಗಳಿಂದ ಕೂಡಿದ ಒಂದು ಮಹಾದ್ವೀಪಕ್ಕೆ ಬಂದಳು.
ತತ್ರಾಪಶ್ಯತ್ ಸರೋ ದಿವ್ಯಂ ನಾನಾಶಕುನಿಭಿರ್ವೃತಮ್।
ಶತಯೋಜನವಿಸ್ತೀರ್ಣಂ ತಾವದೇವಾಯತಂ ಶುಭಮ್ ॥10॥
ಅಲ್ಲಿ ಅವಳು ಅನೇಕ ಜಲಪಕ್ಷಿಗಳಿಂದ ಕೂಡಿದ ಶತಯೋಜನವಿಸ್ತಾರವಾದ ಅಷ್ಟೇ ಉದ್ದವಾದ ಶುಭವಾದ ದಿವ್ಯಸರೋವರ ಒಂದನ್ನು ನೋಡಿದಳು.
ತತ್ರ ದಿವ್ಯಾನಿ ಪದ್ಮಾನಿ ಪಂಚವರ್ಣಾನಿ ಭಾರತ।
ಷಟ್ಪದೈರುಪಗೀತಾನಿ ಪ್ರಫುಲ್ಲಾನಿ ಸಹಸ್ರಶಃ ॥11॥
ಎಲೈ ಭಾರತನೇ, ಅಲ್ಲಿ ದುಂಬಿಗಳಿಂದ ಗಾನಪೂರ್ವಕವಾಗಿ ಸುತ್ತುವರಿಯಲ್ಪಟ್ಟ ಚೆನ್ನಾಗಿ ಅರಳಿದ ಪಂಚವರ್ಣೋಪೇತವಾದ ದಿವ್ಯವಾದ ಸಹಸ್ರಾರು ಪದ್ಮಗಳಿದ್ದವು.
ಪದ್ಮಸ್ಯ ಭಿತ್ವಾ ನಾಳಂ ಚ ವಿವೇಶ ಸಹಿತಾ ತಯಾ।
ಬಿಸತಂತುಪ್ರವಿಷ್ಟಂ ಚ ತತ್ರಾಪಶ್ಯತ್ ಶತಕ್ರತುಮ್ ॥12॥
ಅವಳು ದುರ್ಗಾದೇವಿಯಿಂದ ಸಹಿತಳಾಗಿ ಪದ್ಮದ ನಾಳವನ್ನು ಭೇದಿಸಿ ಬಿಸತಂತುವನ್ನು ಪ್ರವೇಶಿಸಿ ಅಲ್ಲಿದ್ದ ಇಂದ್ರನನ್ನು ನೋಡಿದಳು.
ತಂ ದೃಷ್ಟ್ವಾ ಚ ಸುಸೂಕ್ಷ್ಮೇಣ ರೂಪೇಣಾವಸ್ಥಿತಂ ಪ್ರಭುಮ್।
ಸೂಕ್ಷ್ಮರೂಪಧರಾ ದೇವೀ ಬಭೂವೋಪಶ್ರುತಿಶ್ಚ ಸಾ ॥13॥
ಅಲ್ಲಿ ಅತ್ಯಂತ ಸೂಕ್ಷ್ಮರೂಪದಿಂದ ಇದ್ದ ತನ್ನ ಪ್ರಭುವನ್ನು ನೋಡಿ ಅವಳು ಮತ್ತು ದುರ್ಗಾದೇವಿಯು ಸೂಕ್ಷ್ಮರೂಪವನ್ನು ಧರಿಸಿದರು.
ಇಂದ್ರಂ ತುಷ್ಟಾವ ಚೇಂದ್ರಾಣೀ ವಿಶ್ರುತೈಃ ಪೂರ್ವಕರ್ಮಭಿಃ।
ಸ್ತೂಯಮಾನಸ್ತತೋ ದೇವಃ ಶಚೀಮಾಹ ಪುರಂದರಃ ॥14॥
ಕಿಮರ್ಥಮಸಿ ಸಂಪ್ರಾಪ್ತಾ ವಿಜ್ಞಾತಶ್ಚ ಕಥಂ ತ್ವಹಮ್ ॥15॥
ಶಚೀದೇವಿಯು ಇಂದ್ರನ ಪ್ರಖ್ಯಾತವಾದ ಪೂರ್ವಕರ್ಮಗಳನ್ನು ಹೇಳಿ ಅವನನ್ನು ಸ್ತೋತ್ರ ಮಾಡಿದಳು. ಆಗ ದೇವನಾದ ಪುರಂದರನು ಶಚಿಯನ್ನು ಕುರಿತು ಇಲ್ಲಿಗೆ ಹೇಗೆ ಬಂದೆ, ನನ್ನನ್ನು ಹೇಗೆ ತಿಳಿದೆ ಎಂದು ಕೇಳಿದನು.
ಶಲ್ಯಃ
ತತಃ ಸಾ ಕಥಯಾಮಾಸ ನಹುಷಸ್ಯ ವಿಚೇಷ್ಟಿತಮ್ ॥16॥
ಇಂದ್ರತ್ವಂ ತ್ರಿಷು ಲೋಕೇಷು ಪ್ರಾಪ್ಯ ವೀರ್ಯಸಮನ್ವಿತಃ।
ದರ್ಪಾವಿಷ್ಟಶ್ಚ ದುಷ್ಟಾತ್ಮಾ ಮಾಮುವಾಚ ಶತಕ್ರತೋ ॥17॥
ಉಪತಿಷ್ಠೇತಿ ಸ ಕ್ರೂರಃ ಕಾಲಂ ಚ ಕೃತವಾನ್ ಮಮ।
ಯದಿ ನ ತ್ರಾಸ್ಯಸಿ ವಿಭೋ ಕರಿಷ್ಯತಿ ಸ ಮಾಂ ವಶೇ ॥18॥
ಶಲ್ಯ ಆಗ ಅವಳು ನಹುಷನ ಚೇಷ್ಟೆಗಳನ್ನು ಹೇಳಿದಳು. ಶತಕ್ರುತುವೇ, ಮೂರುಲೋಕದ ಆಧಿಪತ್ಯವನ್ನು ಪಡೆದು ವೀರ್ಯಸಮನ್ವಿತನಾದ ದುಷ್ಟಾತ್ಮನಾದ ನಹುಷನು ದರ್ಪದಿಂದ ಕೂಡಿದವನಾಗಿ ನನ್ನನ್ನು ಸೇವಿಸು ಎಂದು ನನಗೆ ಹೇಳಿದನು. ಕ್ರೂರನಾದ ಅವನು ನನಗೆ ಸ್ವಲ್ಪ ಕಾಲಾವಕಾಶವನ್ನು ಕೊಟ್ಟಿದ್ದಾನೆ. ವಿಭುವೇ, ನೀನು ನನ್ನನ್ನು ರಕ್ಷಿಸದಿದ್ದರೆ ಅವನು ನನ್ನನ್ನು ತನ್ನ ವಶವನ್ನಾಗಿ ಮಾಡಿಕೊಳ್ಳುವನು.
ಏತೇನ ಚಾಹಂ ಸಂಪ್ರಾಪ್ತಾ ನೂನಂ ಶಕ್ರ ತವಾಂತಿಕಮ್।
ಜಹಿ ರೌದ್ರಂ ಮಹಾಬಾಹೋ ನಹುಷಂ ಪಾಪನಿಶ್ಚಯಮ್ ॥19॥
ಇಂದ್ರನೇ, ಈ ಕಾರಣದಿಂದ ನಾನು ನಿನ್ನ ಬಳಿಗೆ ಬಂದಿದ್ದೇನೆ. ಮಹಾಬಾಹುವೇ, ಪಾಪನಿಶ್ಚಯವುಳ್ಳ ಭಯಂಕರನಾದ ಈ ನಹುಷನನ್ನು ಪರಾಭವಗೊಳಿಸು.
ಪ್ರಕಾಶಯಾತ್ಮನಾಽಽತ್ಮಾನಂ ದೈತ್ಯದಾನವಸೂದನ।
ತೇಜಃ ಸಮಾಪ್ನುಹಿ ವಿಭೋ ದೇವರಾಜ್ಯಂ ಪ್ರಶಾಧಿ ಚ ॥20॥
ಯಥೈವ ಚ ಮಹಾರಾಜ ತ್ವಯಾ ವೃತ್ರೋ ನಿಷೂದಿತಃ ॥21॥
ದೈತ್ಯ-ದಾನವ ಸಂಹಾರಕನೇ, ನಿನ್ನನ್ನು ನೀನು ಪ್ರಕಾಶಗೊಳಿಸು. ವಿಭುವೇ, ತೇಜಸ್ಸನ್ನು ಹೊಂದುವವನಾಗು. ಮಹಾರಾಜನೇ, ಹಿಂದೆ

ವೃತ್ರನನ್ನು ಸಂಹಾರ ಮಾಡಿದಂತೆ ನಹುಷನನ್ನು ಪರಾಭವಗೊಳಿಸಿ ದೇವರಾಜ್ಯವನ್ನು ಆಳುವವನಾಗು (ಎಂದು ಹೇಳಿದಳು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ದಶೋऽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಚತುರ್ದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ನಹುಷನಿಂದ ತನ್ನ ಪಲ್ಲಕ್ಕಿಯನ್ನು ಹೊರಲು ಸಪ್ತರ್ಷಿಗಳ ನಿಯೋಜನೆ. ಇಂದ್ರನನ್ನು ಹುಡುಕಿ ಕಾಣದೆ ಅಗ್ನಿಯ ಪ್ರತಿನಿವೃತ್ತಿ
ಶಲ್ಯಃ
ಏವಮುಕ್ತಃ ಸ ಭಗವಾನ್ ಶಚ್ಯಾ ತಾಂ ಪುನರಬ್ರವೀತ್ ॥1॥
ವಿಕ್ರಮಸ್ಯ ನ ಕಾಲೋಽಯಂ ನಹುಷೋ ಬಲವತ್ತರಃ ।
ವಿವರ್ಧಿತಶ್ಚ ಋಷಿಭಿರ್ಹವ್ಯೈಃ ಕವ್ಯೈಶ್ಚ ಭಾಮಿನಿ ॥2॥
ನೀತಿಮತ್ರ ವಿಧಾಸ್ಯಾಮಿ ದೇವಿ ತಾಂ ಕರ್ತುಮರ್ಹಸಿ ।
ಗುಹ್ಯಮೇತತ್ ತ್ವಯಾ ಕಾರ್ಯಂ ನಾಖ್ಯಾತವ್ಯಂ ಶುಚಿಸ್ಮಿತೇ ॥3॥
ಶಲ್ಯ ಶಚಿಯಿಂದ ಹೀಗೆ ಹೇಳಲ್ಪಟ್ಟ ಪೂಜ್ಯನಾದ ಇಂದ್ರನು ಪುನಃ ಅವಳನ್ನು ಕುರಿತು ಭಾಮಿನಿಯೇ, ಇದು ಪರಾಕ್ರಮದ ಕಾಲವಲ್ಲ. ನಹುಷನು ಬಲಿಷ್ಠನಾಗಿದ್ದಾನೆ. ಋಷಿಗಳ ಹವ್ಯಕವ್ಯಗಳಿಂದ ಇನ್ನೂ ಅಭಿವೃದ್ಧಿಯನ್ನು ಹೊಂದಿದ್ದಾನೆ. ದೇವಿಯೇ, ನಾನು ಈ ವಿಷಯದಲ್ಲಿ ಒಂದು ನೀತಿಯನ್ನು ಹೇಳುವೆನು. ಅದನ್ನು ನೀನು ಮಾಡಬೇಕು. ಶುಚಿಸ್ಮಿತೆಯೇ, ಇದನ್ನು ರಹಸ್ಯವಾಗಿ ಇಡಬೇಕು. ಯಾರಿಗೂ ಹೇಳಬಾರದು ಎಂದು ಹೇಳಿದನು.
ಗತ್ವಾ ನಹುಷಮೇಕಾಂತೇ ಬ್ರವೀಹಿ ಚ ಸುಮಧ್ಯಮೇ ॥4॥
ಋಷಿಯಾನೇನ ದಿವ್ಯೇನ ಮಾಮುಪೈಹಿ ಜಗತ್ಪತೇ ।
ಏವಂ ತವ ವಶೇ ಪ್ರೀತಾ ಭವಿಷ್ಯಾಮೀತಿ ತಂ ವದ ॥5॥
ಸುಮಧ್ಯಮೆಯೇ, ನೀನು ಏಕಾಂತದಲ್ಲಿ ನಹುಷನ ಬಳಿಗೆ ಹೋಗಿ ಅವನನ್ನು ಕುರಿತು ಜಗತ್ಪತಿಯೇ, ದಿವ್ಯವಾದ ಋಷಿಯಾನದಲ್ಲಿ ಕುಳಿತು ನನ್ನ ಬಳಿಗೆ ಬಾ. ಹೀಗೆ ಮಾಡಿದರೆ ಸಂತೋಷದಿಂದ ನಿನಗೆ ವಶಳಾಗುವೆನು ಎಂದು ಅವನಿಗೆ ಹೇಳು (ಎಂದು ಹೇಳಿದನು).
ಇತ್ಯುಕ್ತಾ ದೇವರಾಜೇನ ಪತ್ನ್ಯಾ ಸಾ ಕಮಲೇಕ್ಷಣಾ ।
ಏವಮಸ್ತ್ವಿತ್ಯಥೋಕ್ತ್ವಾ ತು ಜಗಾಮ ನಹುಷಂ ಪ್ರತಿ ॥6॥
ನಹುಷಸ್ತಾಂ ತತೋ ದೃಷ್ಟ್ವಾ ಸಸ್ಮಿತೋ ವಾಕ್ಯಮಬ್ರವೀತ್ ॥7॥
ಪತಿಯಾದ ದೇವರಾಜನಿಂದ ಹೀಗೆ ಹೇಳಲ್ಪಟ್ಟ ಆ ಕಮಲನಯನೆಯು ಹಾಗೆಯೇ ಆಗಲಿ ಎಂದು ಹೇಳಿ ನಹುಷನ ಸಮೀಪಕ್ಕೆ ಬಂದಳು. ನಹುಷನು ಅವಳನ್ನು ನೋಡಿ ಮುಗುಳ್ನಗೆಯೊಡನೆ ಹೀಗೆ ಮಾತನಾಡಿದನು.
ಸ್ವಾಗತಂ ತೇ ವರಾರೋಹೇ ಕಿಂ ಕರೋಮಿ ಶುಚಿಸ್ಮಿತೇ ॥8॥
ಭಕ್ತಂ ಮಾಂ ಭಜ ಕಲ್ಯಾಣಿ ಕಿಮಿಚ್ಛಸಿ ಮನಸ್ವಿನಿ ।
ತವ ಕಲ್ಯಾಣಿ ಯತ್ ಕಾರ್ಯಂ ತತ್ ಕರಿಷ್ಯೇ ಸುಮಧ್ಯಮೇ ॥9॥
ನ ಚ ವ್ರೀಡಾ ತ್ವಯಾ ಕಾರ್ಯಾ ಸುಶ್ರೋಣಿ ಮಯಿ ವಿಶ್ವಸೇಃ ।
ಸತ್ಯೇನ ವೈ ಶಪೇ ದೇವಿ ಕರಿಷ್ಯೇ ವಚನಂ ತವ ॥10॥
ವರಾರೋಹೆಯೇ, ಶುಚಿಸ್ಮಿತೆಯೇ, ನಿನಗೆ ಸ್ವಾಗತವನ್ನು ಕೋರುತ್ತೇನೆ. ಕಲ್ಯಾಣಿಯೇ, ನಿನ್ನ ಭಕ್ತನಾದ ನನ್ನನ್ನು ಸೇವಿಸು. ಮನಸ್ವಿನಿಯೇ, ನೀನು ಏನು ಬಯಸುತ್ತೀಯೆ? ಕಲ್ಯಾಣಿಯೇ, ಸುಮಧ್ಯಮೆಯೇ, ನೀನು ಏನು ಮಾಡಬೇಕೆಂದು ಹೇಳಿದರೂ ಅದನ್ನು ಮಾಡುವೆನು. ಸುಶ್ರೋಣಿಯೇ, ನೀನು ನಾಚಿಕೆಯನ್ನು ಪಡಬಾರದು. ನನ್ನನ್ನು ನಂಬು. ದೇವಿಯೇ, ಸತ್ಯಪ್ರತಿಜ್ಞೆಯನ್ನು ಮಾಡಿ ಹೇಳುತ್ತಿದ್ದೇನೆ, ನಿನ್ನ ಮಾತನ್ನು ನಡೆಸಿಕೊಡುವೆನು.
ಇಂದ್ರಾಣೀ
ಯೋ ಮೇ ಕೃತಸ್ತ್ವಯಾ ಕಾಲಸ್ತಮಾಕಾಂಕ್ಷೇ ಜಗತ್ಪತೇ ।
ತತಸ್ತ್ವಮೇವ ಭರ್ತಾ ಮೇ ಭವಿಷ್ಯಸಿ ಸುರಾಧಿಪ ॥11॥
ಇಂದ್ರಾಣಿ ಜಗತ್ಪತಿಯೇ, ನೀನು ಹೇಳಿದ ಕಾಲವನ್ನು ನಾನು ನಿರೀಕ್ಷಿಸುತ್ತಿದ್ದೇನೆ. ಸುರಾಧಿಪನೇ, ಅನಂತರ ನೀನೇ ನನಗೆ ಪತಿಯಾಗುವಿ.
ಕಾರ್ಯಂ ಚ ಹೃದಿ ಮೇ ಯತ್ತದ್ ದೇವರಾಜಾವಧಾರಯ ।
ವಕ್ಷ್ಯಾಮಿ ಯದಿ ಮೇ ರಾಜನ್ ಪ್ರಿಯಮೇತತ್ ಕರಿಷ್ಯಸಿ ॥12॥
ವಾಕ್ಯಂ ಪ್ರಣಯಸಂಯುಕ್ತಂ ತತಸ್ತ್ವಂ ಕರ್ತುಮರ್ಹಸಿ ॥13॥
ದೇವರಾಜನೇ, ನನ್ನ ಮನಸ್ಸಿನಲ್ಲಿರುವ ಒಂದು ಕಾರ್ಯವನ್ನು ತಿಳಿದುಕೊ. ನೀನು ನನಗೆ ಪ್ರಿಯವನ್ನು ಮಾಡುವೆನೆಂದು ಹೇಳಿದರೆ ಆ ಮಾತನ್ನು ಹೇಳುವೆನು. ಪ್ರೀತಿಯಿಂದ ಹೇಳಿದ ಆ ಮಾತನ್ನು ನೀನು ನಡೆಸಿಕೊಡಬೇಕು.
ಇಂದ್ರಸ್ಯ ವಾಜಿನೋ ವಾಹಾ ಹಸ್ತಿನೋऽಥ ರಥಾಸ್ತಥಾ ।
ಇಚ್ಛಾಮ್ಯಹಮಥಾಪೂರ್ವಂ ವಾಹನಂ ತೇ ಸುರಾಧಿಪ ॥14॥
ಇಂದ್ರನ ವಾಹನಗಳೆಂದರೆ ಆನೆಗಳು, ಕುದುರೆಗಳು ಮತ್ತು ರಥಗಳು. ಸುರಾಧಿಪನೇ, ನಿನಗೆ ಮಾತ್ರ ಅಪೂರ್ವವಾದ ವಾಹನವಿರಬೇಕೆಂದು ನಾನು ಬಯಸುತ್ತೇನೆ.

ಯನ್ನ ವಿಷ್ಣೋರ್ನ ರುದ್ರಸ್ಯ ನಾಸುರಾಣಾಂ ನ ರಕ್ಷಸಾಮ್ |
ವಹಂತು ತ್ವಾಂ ಮಹಾಭಾಗಾ ಋಷಯಃ ಸಂಗತಾ ವಿಭೋ ||15||
ಸರ್ವೇ ಶಿಬಿಕಯಾ ರಾಜನ್ ಏತದ್ಧಿ ಮಮ ರೋಚತೇ ||16||
ಯಾವ ವಾಹನವು ವಿಷ್ಣುವಿಗಾಗಲೀ, ರುದ್ರನಿಗಾಗಲೀ, ಅಸುರರಿಗಾಗಲೀ, ರಾಕ್ಷಸರಿಗಾಗಲೀ ಇರುವುದಿಲ್ಲವೋ ಅಂತಹ ಎಲ್ಲಾ ಮಹಾನುಭಾವರಾದ ಎಲ್ಲಾ ಋಷಿಗಳಿಂದ ಹೊರಲ್ಪಟ್ಟ ವಾಹನವು ನಿನಗೆ ಇರಬೇಕು. ಎಲೈ ವಿಭುವೇ, ರಾಜನೇ, ಎಲ್ಲಾ ಋಷಿಗಳೂ ಒಟ್ಟಿಗೆ ನಿನ್ನ ಪಲ್ಲಕ್ಕಿಯನ್ನು ಹೊರಲಿ. ಇದು ನನಗೆ ಇಷ್ಟವಾಗುತ್ತದೆ.
ನಾಸುರೇಷು ನ ದೇವೇಷು ತುಲ್ಯೋ ಭವಿತುಮರ್ಹಸಿ |
ಸರ್ವೇಷಾಂ ತೇಜ ಆಧತ್ಸ್ವ ಸ್ವೇನ ವೀರ್ಯೇಣ ದರ್ಶನಾತ್ ||17||
ನ ತೇ ಪ್ರಮುಖತಃ ಸ್ಥಾತುಂ ಕಶ್ಚಿಚ್ಛಕ್ನೋತಿ ವೀರ್ಯವಾನ್ ||18||
ಆಗ ನೀನು ಯಾವ ಅಸುರರಿಗಾಗಲೀ ಅಥವಾ ದೇವತೆಗಳಿಗಾಗಲೀ ಸಮಾನನಾಗುವುದಿಲ್ಲ. ನೀನು ಯಾರನ್ನು ನೋಡುವಿಯೋ ಅವರ ಪರಾಕ್ರಮವನ್ನು ನಿನ್ನ ಸಾಮರ್ಥ್ಯದಿಂದ ನೀನೇ ಹೊಂದುವವನಾಗು. ಯಾವ ಪರಾಕ್ರಮಶಾಲಿಯೂ ನಿನ್ನ ಎದುರಿಗೆ ನಿಲ್ಲಲು ಸಾಧ್ಯವಾಗುವುದಿಲ್ಲ.
ಏವಮುಕ್ತಶ್ಚ ನಹುಷಃ ಪ್ರಾಹೃಷ್ಯತ ತದಾ ಕಿಲ |
ಉವಾಚ ವಚನಂ ಚಾಪಿ ಸುರೇಂದ್ರಸ್ತಾಮನಿಂದಿತಾಮ್ ||19||
ಹೀಗೆ ಹೇಳಲ್ಪಟ್ಟ ನಹುಷನು ಆಗ ಬಹಳ ಸಂತೋಷಗೊಂಡನಷ್ಟೆ. ದೇವತೆಗಳ ಒಡೆಯನಾದ ಅವನು ಅನಿಂದಿತೆಯಾದ ಅವಳನ್ನು ಕುರಿತು ಮಾತನಾಡಿದನು.
ನಹುಷಃ
ಅಪೂರ್ವಂ ವಾಹನಮಿದಂ ತ್ವಯೋಕ್ತಂ ವರವರ್ಣಿನಿ |
ದೃಢಂ ಮೇ ರುಚಿರಂ ದೇವಿ ತ್ವದ್ವಶೋಽಸ್ಮಿ ವರಾನನೇ ||20||
ನ ಹ್ಯಲ್ಪವೀರ್ಯೋ ಭವತಿ ಯೋ ವಾಹಾನ್ ಕುರುತೇ ಮುನೀನ್ ||
ನಹುಷ ವರವರ್ಣಿನಿಯೇ, ನೀನು ಹೇಳಿದ ಈ ವಾಹನವು ಅಪೂರ್ವವಾದುದು. ದೃಢವೂ ಮತ್ತು ಮನೋಹರವೂ ಆಗಿರುತ್ತದೆ. ದೇವಿಯೇ, ವರಾನನೆಯೇ, ನಾನು ನಿನ್ನ ವಶವಾಗಿದ್ದೇನೆ. ಯಾವನು ಋಷಿಗಳನ್ನು ವಾಹನವಾಗಿ ಹೊಂದುತ್ತಾನೋ ಅವನು ಅಲ್ಪಸಾಮರ್ಥ್ಯನಾಗಿ ಇರುವುದಿಲ್ಲ.
ಅಹಂ ತಪಸ್ವೀ ಬಲವಾನ್ ಭೂತಭವ್ಯಭವತ್ಪ್ರಭುಃ |
ಮಯಿ ಕ್ರುದ್ಧೇ ಜಗನ್ನ ಸ್ಯಾನ್ಮಯಿ ಸರ್ವಂ ಪ್ರತಿಷ್ಠಿತಮ್ ||22||
ನಾನು ತಪಸ್ವಿ, ಬಲಿಷ್ಠನಾದವನು ಮತ್ತು ವರ್ತಮಾನ, ಭೂತ ಮತ್ತು ಭವಿಷ್ಯತ್ ಕಾಲದಲ್ಲಿ ಪ್ರಭುವಾದವನು. ನಾನು ಕೋಪಗೊಂಡರೆ ಜಗತ್ತೇ ಉಳಿಯಲಾರದು. ಎಲ್ಲವೂ ನನ್ನನ್ನು ಆಶ್ರಯಿಸಿದೆ.
ದೇವದಾನವಗಂಧರ್ವಾಃ ಕಿನ್ನರೋರಗರಾಕ್ಷಸಾಃ |
ನ ಮೇ ಕ್ರುದ್ಧಸ್ಯ ಪರ್ಯಾಪ್ತಾಃ ಸರ್ವಲೋಕಾಃ ಶುಚಿಸ್ಮಿತೇ ||23||
ಚಕ್ಷುಷಾ ಯಂ ಪ್ರಪಶ್ಯಾಮಿ ತಸ್ಯ ತೇಜೋ ಹರಾಮ್ಯಹಮ್ ||24||
ಶುಚಿಸ್ಮಿತೆಯೇ, ದೇವ-ದಾನವ-ಗಂಧರ್ವರಾಗಲೀ, ಕಿನ್ನರ-ಉರಗ- ರಾಕ್ಷಸರಾಗಲೀ, ಸರ್ವಲೋಕಗಳೇ ಆಗಲಿ ಕೋಪಗೊಂಡ ನನಗೆ ಸರಿಸಾಟಿಯಲ್ಲ. ನನ್ನ ದೃಷ್ಟಿಯಿಂದ ಯಾರನ್ನು ನೋಡುತ್ತೇನೆಯೋ ಅವರ ತೇಜಸ್ಸನ್ನು ಅಪಹರಿಸುತ್ತೇನೆ.
ಅಹಮಿಂದ್ರೋಽಸ್ಮಿ ದೇವಾನಾಂ ಲೋಕಾನಾಂ ಚ ಮಹೇಶ್ವರಃ |
ಮಯಿ ಹವ್ಯಂ ಚ ಕವ್ಯಂ ಚ ಲೋಕಾಶ್ಚೈವ ಸನಾತನಾಃ ||25||
ತಸ್ಮಾತ್ ತೇ ವಚನಂ ದೇವಿ ಕರಿಷ್ಯಾಮಿ ನ ಸಂಶಯಃ ||26||
ನಾನು ದೇವತೆಗಳಿಗೆ ಒಡೆಯನಾಗಿದ್ದೇನೆ. ಲೋಕಗಳಿಗೆ ಮಹೇಶ್ವರನಾಗಿದ್ದೇನೆ. ಹವ್ಯ-ಕವ್ಯಗಳು ಮತ್ತು ಸನಾತನವಾದ ಎಲ್ಲ ಲೋಕಗಳು ನನ್ನನ್ನೇ ಆಶ್ರಯಿಸಿವೆ. ಆದ್ದರಿಂದ ದೇವಿಯೇ, ನಿನ್ನ ವಚನವನ್ನು ನಡೆಸುವೆನು. ಇದರಲ್ಲಿ ಸಂಶಯವಿಲ್ಲ.
ಸಪ್ತರ್ಷಯೋ ಮಾಂ ವಕ್ಷ್ಯಂತಿ ಸರ್ವೇ ಬ್ರಹ್ಮರ್ಷಯಸ್ತಥಾ |
ಪಶ್ಯ ಮಾಹಾತ್ಮ್ಯಮಸ್ಮಾಕಮ್ ಋದ್ಧಿಂ ಚ ವರವರ್ಣಿನಿ ||27||
ಸಪ್ತರ್ಷಿಗಳು ಮತ್ತು ಎಲ್ಲಾ ಬ್ರಹ್ಮರ್ಷಿಗಳು ನನ್ನ ಪಲ್ಲಕ್ಕಿಯನ್ನು ಹೊರುವರು. ವರವರ್ಣಿನಿಯೇ, ನನ್ನ ಮಹಿಮೆಯನ್ನು ಮತ್ತು ವೈಭವವನ್ನು ನೋಡುವವಳಾಗು.
ಹತೌಜಸೋ ಮಯಾ ಸರ್ವೇ ದೇವಗಂಧರ್ವದಾನವಾಃ |
ಯದ್ಯಸ್ಯ ತೇಜಃ ಪಶ್ಯಾಮಿ ತಸ್ಯ ತೇಜೋ ಹರಾಮ್ಯಹಮ್ ||28||
ದೇವ-ದಾನವ-ಗಂಧರ್ವಗಳೆಲ್ಲರೂ ನನ್ನ ಎದುರಿಗೆ ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡಿದ್ದಾರೆ. ನಾನು ಎಲ್ಲಾದರೂ ಸಾಮರ್ಥ್ಯವನ್ನು ನೋಡಿದರೆ ಅದನ್ನು ದೃಷ್ಟಿಯಿಂದ ಅಪಹರಿಸುತ್ತೇನೆ.
ಶಲ್ಯಃ
ಏವಮುಕತ್ವ ತು ತಾಂ ದೇವೀಂ ವಿಸೃಜ್ಯ ಚ ವರಾನನಾಮ್ |
ಅಥ ಸಂಚಿಂತ್ಯ ನಹುಷೋ ಬಲವೀರ್ಯೇಣ ಭಾರತ ||29||
ವಿಸೃಜ್ಯ ಸುಪ್ರತೀಕಂ ಚ ನಾಗಮೈರಾವತಂ ತಥಾ |
ಹಂಸಯುಕ್ತಂ ವಿಮಾನಂ ಚ ಹರಿಯುಕ್ತಂ ತಥಾ ರಥಮ್ ||30||

ಶಲ್ಯ ಎಲೈ ಭಾರತನೇ, ಶಚಿಯನ್ನು ಕುರಿತು ಹೀಗೆ ಹೇಳಿ, ಸುಂದರಿಯಾದ ಅವಳನ್ನು ಬೀಳ್ಕೊಟ್ಟು ಸುಪ್ರತೀಕ ಗಜವನ್ನು ಮತ್ತು ಐರಾವತ ಗಜವನ್ನು ಬಿಟ್ಟು, ಹಾಗೆಯೇ ಹಂಸಯುಕ್ತವಾದ ವಿಮಾನವನ್ನು ಮತ್ತು ಅಶ್ವಗಳಿಂದ ಕೂಡಿದ ರಥವನ್ನು ಬಿಟ್ಟು (ಬಿಟ್ಟನು).
ಸ ತು ದರ್ಪೇಣ ಮಹತಾ ಪರಿಭೂಯ ಮಹಾಮುನೀನ್ |
ವಿಮಾನೇ ಯೋಜಯಿತ್ವಾ ಸ ಋಷೀನ್ ನಿಯಮಮಾಸ್ಥಿತಾನ್ ॥31॥
ಅಬ್ರಹ್ಮಣ್ಯೋ ಬಲೋಪೇತೋ ಮತ್ತೋ ವರಮದೇನ ಚ |
ಕಾಮವೃತ್ತಃ ಸ ದುಷ್ಟಾತ್ಮಾ ವಾಹಯಾಮಾಸ ತಾನ್ ಋಷೀನ್ ॥32॥
ನಹುಷೇಣ ವಿಸೃಷ್ಟಾ ಸಾ ಬೃಹಸ್ಪತಿಮಥಾಬ್ರವೀತ್ ॥33॥
ಅವನು ಮಹಾದರ್ಪದಿಂದ ಮಹರ್ಷಿಗಳಿಗೆ ಅವಮಾನವನ್ನು ಮಾಡಿ ವ್ರತ-ನಿಯಮಶೀಲರಾದ ಆ ಋಷಿಗಳನ್ನು ತನ್ನ ಪಲ್ಲಕ್ಕಿಯನ್ನು ಹೊರಲು ಯೋಜಿಸಿ ಬ್ರಾಹ್ಮಣರಿಗೆ ಅಹಿತನೂ, ಬಲೋಪೇತನೂ, ವರಮದದಿಂದ ಮತ್ತನೂ, ತನ್ನ ಇಚ್ಛೆ ಬಂದಂತೆ ನಡೆದುಕೊಳ್ಳುವವನೂ ಆದ ಆ ದುಷ್ಟಾತ್ಮನು ಆ ಋಷಿಗಳಿಂದ ತನ್ನ ಪಲ್ಲಕ್ಕಿಯನ್ನು ಹೊರಿಸಿದನು.
ಸಮಯೋಽಲ್ಪಾವಶೇಷೋ ಮೇ ನಹುಷೇಣ ಹಿ ಯಃ ಕೃತಃ |
ಶಕ್ರಂ ಮೃಗಯ ಶೀಘ್ರಂ ತಂ ಭಕ್ತಾಯಾಃ ಕುರು ಮೇ ದಯಾಮ್ ॥
ನಹುಷನಿಂದ ಬೀಳ್ಕೊಡಲ್ಪಟ್ಟ ಶಚೀದೇವಿಯು ಬೃಹಸ್ಪತಿಗಳನ್ನು ಸಮೀಪಿಸಿ ನಹುಷನು ಹೇಳಿದ ಕಾಲವು ಅಲ್ಪ ಮಾತ್ರ ಉಳಿದಿದೆ. ಬೇಗ ಇಂದ್ರನನ್ನು ಹುಡುಕು. ಭಕ್ತಳಾದ ನನ್ನ ಮೇಲೆ ದಯೆಯನ್ನು ಮಾಡು ಎಂದು ಹೇಳಿದಳು.
ಶಲ್ಯಃ
ಬಾಢಮಿತ್ಯೇವ ಭಗವಾನ್ ಬೃಹಸ್ಪತಿರುವಾಚ ತಾಮ್ ॥35॥
ನ ಭೇತವ್ಯಂ ತ್ವಯಾ ದೇವಿ ನಹುಷಾದ್ ದುಷ್ಟಚೇತಸಃ |
ನ ಹ್ಯೇಷ ಸ್ಥಾಸ್ಯತಿ ಚಿರಂ ಗತ ಏಷ ನರಾಧಮಃ ॥36॥
ಶಲ್ಯ ಪೂಜ್ಯರಾದ ಬೃಹಸ್ಪತಿಗಳು `ಹಾಗೆಯೇ ಆಗಲಿ ದೇವಿಯೇ, ದುಷ್ಟ ಮನಸ್ಸುಳ್ಳ ನಹುಷನಿಗೆ ನೀನು ಹೆದರಬೇಡ. ಅವನು ಇನ್ನು ಬಹುಕಾಲ ಇರುವುದಿಲ್ಲ. ಈ ನರಾಧಮನು ಹೊರಟು ಹೋಗಿದ್ದಾನೆ ಎಂದು ತಿಳಿ' ಎಂದು ಅವಳಿಗೆ ಹೇಳಿದರು.
ಅಧರ್ಮಜ್ಞೋ ಮಹರ್ಷೀಣಾಂ ವಾಹನಾಚ್ಚ ಹತಃ ಶುಭೇ |
ಇಷ್ಟಿಂ ಚಾಹಂ ಕರಿಷ್ಯಾಮಿ ವಿನಾಶಾಯಾಸ್ಯ ದುರ್ಮತೇಃ ॥37॥
ಶಕ್ರಂ ಚಾಧಿಗಮಿಷ್ಯಾಮಿ ಮಾ ಭೈಸ್ತ್ವಂ ಭದ್ರಮಸ್ತು ತೇ ॥38॥
ಶುಭಳಾದವಳೇ, ಧರ್ಮವನ್ನು ತಿಳಿಯದ ಅವನು ಮಹರ್ಷಿಗಳನ್ನು ವಾಹನದಲ್ಲಿ ನಿಯೋಜಿಸುವುದರಿಂದ ಹತನಾಗಿದ್ದಾನೆ. ದುರ್ಮತಿಯಾದ ಅವನ ವಿನಾಶಕ್ಕಾಗಿ ನಾನು ಒಂದು ಹೋಮವನ್ನು ಮಾಡುವೆನು. ಇಂದ್ರನನ್ನೂ ಹುಡುಕುವೆನು. ನೀನು ಹೆದರಬೇಡ. ನಿನಗೆ ಮಂಗಳವಾಗಲಿ (ಎಂದು ಹೇಳಿದರು).
ಶಲ್ಯಃ
ತತಃ ಪ್ರಜ್ವಾಲ್ಯ ವಿಧಿವತ್ ಜುಹಾವ ಸಘೃತಂ ಹವಿಃ |
ಬೃಹಸ್ಪತಿರ್ಮಹಾತೇಜಾ ದೇವರಾಜೋಪಲಬ್ಧಯೇ ॥39॥
ಶಲ್ಯ ಅನಂತರ ಮಹಾತೇಜಸ್ವಿಗಳಾದ ಬೃಹಸ್ಪತಿಗಳು ದೇವರಾಜನಾದ ಇಂದ್ರನನ್ನು ಕಾಣುವುದಕ್ಕಾಗಿ ಅಗ್ನಿಯನ್ನು ಪ್ರಜ್ವಲಗೊಳಿಸಿ ಘೃತ ಸಹಿತವಾದ ಹವಿಸ್ಸನ್ನು ವಿಧಿಬದ್ಧವಾಗಿ ಹೋಮವನ್ನು ಮಾಡಿದರು.
ತಸ್ಮಾತ್ ಸ ಭಗವಾನ್ ದೇವಃ ಸ್ವಯಮೇವ ಹುತಾಶನಃ |
ಸ್ತ್ರೀವೇಷಮದ್ಭುತಂ ಕೃತ್ವಾ ಸಹಸಾಽಂತರಧೀಯತ ॥40॥
ಆ ಹೋಮಕುಂಡದಿಂದ ಪೂಜ್ಯನಾದ ಅಗ್ನಿದೇವನು ಸ್ವಯಂ ಒಂದು ಅದ್ಭುತವಾದ ಸ್ತ್ರೀವೇಷವನ್ನು ಧರಿಸಿ ದರ್ಶನವನ್ನು ಕೊಟ್ಟು ತಕ್ಷಣ ಅಂತರ್ಧಾನವನ್ನು ಹೊಂದಿದನು.
ಸ ದಿಶಃ ಪ್ರದಿಶಶ್ಚೈವ ಪರ್ವತಾಂಶ್ಚ ವನಾನಿ ಚ |
ಪೃಥಿವೀಂ ಚಾಂತರಿಕ್ಷಂ ಚ ವಿಚಿತ್ಯಾಥ ಮನೋಗತಿಃ ॥41॥
ನಿಮೇಷಾಂತರಮಾತ್ರೇಣ ಬೃಹಸ್ಪತಿಮುಪಾಗಮತ್ ॥42॥
ಮನೋಗತಿಯುಳ್ಳ ಅವನು ದಿಕ್ಕುವಿದಿಕ್ಕುಗಳನ್ನೂ, ಪರ್ವತ ಮತ್ತು ಅರಣ್ಯಗಳನ್ನೂ, ಪೃಥಿವಿ ಮತ್ತು ಅಂತರಿಕ್ಷಗಳನ್ನೂ ಹುಡುಕಿ ಒಂದು ಕ್ಷಣದಲ್ಲಿ ಬೃಹಸ್ಪತಿಗಳ ಎದುರಿಗೆ ಬಂದು ನಿಂತನು.
ಅಗ್ನಿಃ
ಬೃಹಸ್ಪತೇ ನ ಪಶ್ಯಾಮಿ ದೇವರಾಜಮಹಂ ಕ್ವಚಿತ್ |
ಆಪಃ ಶೇಷಾಃ ಸದಾ ಚಾಪಃ ಪ್ರವೇಷ್ಟುಂ ನೋತ್ಸಹಾಮ್ಯಹಮ್ ॥43॥
ನ ಮೇ ತತ್ರ ಗತಿರ್ಬ್ರಹ್ಮನ್ ಕಿಮನ್ಯತ್ ಕರವಾಣಿ ತೇ ॥44॥
ಅಗ್ನಿ ಬೃಹಸ್ಪತಿಗಳೇ, ದೇವರಾಜನಾದ ಇಂದ್ರನು ಎಲ್ಲಿಯೂ ಕಾಣಲಿಲ್ಲ. ಜಲವನ್ನು ಬಿಟ್ಟು ಎಲ್ಲ ಕಡೆಯಲ್ಲಿಯೂ ಹುಡುಕಿದ್ದೇನೆ. ನಾನು ಜಲವನ್ನು ಮಾತ್ರ ಪ್ರವೇಶಿಸಲಾರೆ. ಬ್ರಾಹ್ಮಣರೇ, ನೀರಿನಲ್ಲಿ ನನಗೆ ಪ್ರವೇಶವಿಲ್ಲ. ನಾನು ನಿಮ್ಮ ಸಲುವಾಗಿ ಬೇರೆ ಏನು ಮಾಡಲಿ?
ಶಲ್ಯಃ
ತಮಬ್ರವೀದ್ ದೇವಗುರುರಪೋ ವಿಶ ಮಹಾದ್ಯುತೇ ॥45॥

ಶಲ್ಯ ದೇವಗುರುಗಳಾದ ಬೃಹಸ್ಪತಿಗಳು ಅವನನ್ನು ಕುರಿತು ಮಹಾದ್ಯುತಿಯೇ, ಜಲವನ್ನು ಪ್ರವೇಶಿಸು ಎಂದು ಹೇಳಿದರು.
ಅಗ್ನಿಃ
ನಾಪಃ ಪ್ರವೇಷ್ಟುಂ ಶಕ್ಷ್ಯಾಮಿ ಕ್ಷಯೋ ಮೇಽತ್ರ ಭವಿಷ್ಯತಿ |
ಶರಣಂ ತ್ವಾಂ ಪ್ರಪನ್ನೋಽಸ್ಮಿ ಸ್ವಸ್ತಿ ತೇಽಸ್ತು ಮಹಾದ್ಯುತೇ ||46||
ಅದ್ಭ್ಯೋಽಗ್ನಿರ್ಬ್ರಹ್ಮಣಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ||47||
ಅಗ್ನಿ ಮಹಾದ್ಯುತಿಯುಳ್ಳವರೇ, ನಾನು ಜಲವನ್ನು ಪ್ರವೇಶಿಸಲಾರೆ. ಅಲ್ಲಿ ನನ್ನ ವಿನಾಶ ಉಂಟಾಗುವುದು. ನಾನು ನಿಮಗೆ ಶರಣಾಗತನಾಗಿದ್ದೇನೆ. ನಿಮಗೆ ಮಂಗಳವಾಗಲಿ. ಜಲದಿಂದ ಅಗ್ನಿಯು, ಬ್ರಾಹ್ಮಣರಿಂದ ಕ್ಷತ್ರಿಯರು, ಶಿಲೆಯಿಂದ ಲೋಹವು ಉತ್ಪತ್ತಿಯನ್ನು ಹೊಂದುತ್ತವೆ. ಉಳಿದ ಎಲ್ಲ ಕಡೆಯಲ್ಲಿಯೂ ತೋರಿ ಬರುವ ಅವುಗಳ ಸಾಮರ್ಥ್ಯವು ತಮ್ಮ ಉತ್ಪತ್ತಿ ಸ್ಥಾನವನ್ನು ಹೊಂದಿ ನಾಶವನ್ನು ಹೊಂದುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚದಶೋಽಧ್ಯಾಯಃ ||
|| ಸೇನೋದ್ಯೋಗಪರ್ವಣಿ ಪಂಚದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾರನೆಯ ಅಧ್ಯಾಯ
ಅಗ್ನಿಯಿಂದ ಬೃಹಸ್ಪತಿಗೆ ಶಕ್ರನ ದರ್ಶನ. ಬೃಹಸ್ಪತಿಯಿಂದ ಇಂದ್ರಸ್ತುತಿ.
ಅಲ್ಲಿ ಇಂದ್ರನಿಂದ ದೇವತೆಗಳಿಗೆ ಅವರವರ ಆಧಿಪತ್ಯದಲ್ಲಿ ಅಭಿಷೇಕ.
ಬೃಹಸ್ಪತಿಃ
ತ್ವಮಗ್ನೇ ಸರ್ವದೇವಾನಾಂ ಮುಖಂ ತ್ವಮಸಿ ಹವ್ಯವಾಟ್ |
ತ್ವಮಂತಃ ಸರ್ವಭೂತಾನಾಂ ಗೂಢಶ್ಚರಸಿ ಸಾಕ್ಷಿವತ್ ||1||
ಬೃಹಸ್ಪತಿ ಅಗ್ನಿಯೇ, ನೀನು ಎಲ್ಲ ದೇವತೆಗಳಿಗೆ ಮುಖವಾಗಿದ್ದೀಯೆ. ನೀನು ಹವಿಸ್ಸನ್ನು ತೆಗೆದುಕೊಂಡು ಹೋಗುವವನಾಗಿದ್ದೀಯೆ. ನೀನು ಎಲ್ಲರ ಹೃದಯದಲ್ಲಿ ಸಾಕ್ಷಿಯಾದ ನಾರಾಯಣನಂತೆ ಗೂಢನಾಗಿ ಸಂಚರಿಸುತ್ತೀಯೆ.
ತ್ವಾಮಾಹುರೇಕಂ ಕವಯಃ ತ್ವಾಮಾಹುಸ್ತ್ರಿವಿಧಂ ಪುನಃ |
ತ್ವಯಾ ತ್ಯಕ್ತಂ ಜಗಚ್ಚೇದಂ ಸದ್ಯೋ ನಶ್ಯೇದ್ ಹುತಾಶನ ||2||
ಜ್ಞಾನಿಗಳು ನಿನ್ನನ್ನು ಒಬ್ಬನೆಂದು ಹೇಳುತ್ತಾರೆ. ಇನ್ನು ಕೆಲವರು ಮೂರು ವಿಧದವನೆಂದು ಹೇಳುತ್ತಾರೆ. ಹುತಾಶನನೇ, ನೀನು ತ್ಯಜಿಸಿದರೆ ಈ ಜಗತ್ತು ತಕ್ಷಣದಲ್ಲಿಯೇ ನಾಶವನ್ನು ಹೊಂದುವುದು.
ಕೃತ್ವಾ ತುಭ್ಯಂ ನಮೋ ವಿಪ್ರಾಃ ಸ್ವಕರ್ಮವಿಜಿತಾಂ ಗತಿಮ್ |
ಗಚ್ಛಂತಿ ಸಹ ಪತ್ನೀಭಿಃ ಸುತೈರಪಿ ಚ ಶಾಶ್ವತೀಮ್ ||3||
ಬ್ರಾಹ್ಮಣರು ತಮ್ಮ ಪತ್ನೀ-ಪುತ್ರರ ಜೊತೆಯಲ್ಲಿ ನಿನಗೆ ನಮಸ್ಕಾರವನ್ನು ಮಾಡಿ ತಮ್ಮ ಕರ್ಮದಿಂದ ಸಂಪಾದಿಸಿದ ಶಾಶ್ವತವಾದ ಗತಿಯನ್ನು ಹೊಂದುತ್ತಾರೆ.
ತ್ವಮೇವಾಗ್ನೇ ಹವ್ಯವಾಹಃ ತ್ವಮೇವ ಪರಮಂ ಹವಿಃ |
ಯಜಂತಿ ಸತ್ರೈಸ್ತ್ವಾಮೇವ ಯಜ್ಞೈಶ್ಚ ಪರಮಾಧ್ವರೇ ||4||
ಅಗ್ನಿಯೇ, ನೀನೇ ಹವಿಸ್ಸನ್ನು ಕೊಂಡೊಯ್ಯುವವನು. ಶ್ರೇಷ್ಠವಾದ ಹವಿಸ್ಸೂ ನೀನೇ. ದೊಡ್ಡ ಯಜ್ಞಗಳಲ್ಲಿ ಮತ್ತು ಸತ್ರಗಳಲ್ಲಿ ನಿನ್ನನ್ನೇ ಪೂಜಿಸುತ್ತಾರೆ.
ಸೃಷ್ಟ್ವಾ ಲೋಕಾಂಸ್ತ್ರೀನಿಮಾನ್ ಹವ್ಯವಾಹ
ಕಾಲೇ ಪ್ರಾಪ್ತೇ ಪಚಸಿ ಪುನಃ ಸಮಿದ್ಧಃ |
ತ್ವಂ ಸರ್ವಸ್ಯ ಭುವನಸ್ಯ ಪ್ರಸೂತಿಃ
ತ್ವಮೇವಾಗ್ನೇ ಭವಸಿ ಪುನಃ ಪ್ರತಿಷ್ಠಾ ||5||
ಎಲೈ ಹವ್ಯವಾಹನನೇ, ನೀನು ಈ ಮೂರುಲೋಕಗಳನ್ನೂ ಸೃಷ್ಟಿ ಮಾಡಿ, ಸಂಹಾರ ಕಾಲವು ಪ್ರಾಪ್ತವಾದಾಗ ಪ್ರಜ್ವಲಿಸಿ ಎಲ್ಲಾ ಲೋಕಗಳನ್ನೂ ದಹಿಸುತ್ತೀಯೆ. ಅಗ್ನಿಯೇ, ನೀನು ಎಲ್ಲಾ ಲೋಕಗಳಿಗೂ ಉತ್ಪತ್ತಿ ಸ್ಥಾನನಾದವನು ಮತ್ತು ಪುನಃ ಆಶ್ರಯನಾದವನು.
ತ್ವಾಮಗ್ನೇ ಜಲದಾನಾಹುರ್ವಿದ್ಯುತಶ್ಚ ಮನೀಷಿಣಃ |
ದಹಂತಿ ಸರ್ವಭೂತಾನಿ ತ್ವತ್ತೋ ನಿಷ್ಕ್ರಮ್ಯ ರಶ್ಮಯಃ ||6||
ಅಗ್ನಿಯೇ, ನಿನ್ನನ್ನು ಮೇಘಗಳೆಂದು ಹೇಳುತ್ತಾರೆ. ಜ್ಞಾನಿಗಳಾದವರು ನೀನೇ ಮಿಂಚು ಎಂದು ಹೇಳುತ್ತಾರೆ. ನಿನ್ನಿಂದ ಹೊರಟ ಕಿರಣಗಳು ಎಲ್ಲ ಜೀವರನ್ನೂ ದಹಿಸುತ್ತವೆ.
ತ್ವಯ್ಯಾಪೋ ನಿಹಿತಾಃ ಸರ್ವಾಃ ತ್ವಯಿ ಸರ್ವಮಿದಂ ಜಗತ್ |
ನ ತೇಽಸ್ತ್ಯವಿದಿತಂ ಕಿಂಚಿತ್ ತ್ರಿಷು ಲೋಕೇಷು ಪಾವಕ ||7||
ಎಲ್ಲ ಜಲವೂ ನಿನ್ನಲ್ಲಿಯೇ ಇಡಲ್ಪಟ್ಟಿದೆ. ಈ ಎಲ್ಲ ಜಗತ್ತೂ ನಿನ್ನನ್ನೇ ಆಶ್ರಯಿಸಿದೆ. ಎಲೈ ಪಾವಕನೇ, ಮೂರುಲೋಕಗಳಲ್ಲಿ ನೀನು ತಿಳಿಯದ ವಸ್ತುವು ಯಾವುದೂ ಇಲ್ಲ.
ಸ್ವಾಂ ಯೋನಿಂ ಭಜತೇ ಸರ್ವೋ ವಿಶಸ್ವಾಪೋಽವಿಶಂಕಿತಃ |
ಅಹಂ ತ್ವಾಂ ವರ್ಧಯಿಷ್ಯಾಮಿ ಬ್ರಾಹ್ಮೈರ್ಮಂತ್ರೈಃ ಸನಾತನೈಃ ||8||

ಎಲ್ಲರೂ ತಮ್ಮ ಉತ್ಪತ್ತಿ ಸ್ಥಾನವನ್ನೇ ಆಶ್ರಯಿಸುತ್ತಾರೆ. ಆದ್ದರಿಂದ ಯಾವ ಶಂಕೆಯೂ ಇಲ್ಲದೆ ನನ್ನ ಮಾತನ್ನು ನಂಬಿ ಜಲವನ್ನು ಪ್ರವೇಶಿಸು. ನಾನು ಸನಾತನವಾದ ವೇದ ಮಂತ್ರಗಳಿಂದ ನಿನಗೆ ಬಲವು ಅಭಿವೃದ್ಧಿಯಾಗುವಂತೆ ಮಾಡುವೆನು.
ಶಲ್ಯಃ
ಏವಂ ಸ್ತುತೋ ಹವ್ಯವಾಟ್ ಸ ಭಗವಾನ್ ಕವಿರುತ್ತಮಃ |
ಬೃಹಸ್ಪತಿಮಥೋವಾಚ ಪ್ರೀತಿಮಾನ್ ವಾಕ್ಯಮುತ್ತಮಮ್ ॥9॥
ದರ್ಶಯಿಷ್ಯಾಮಿ ತೇ ಶಕ್ರಂ ಸತ್ಯಮೇತದ್ ಬ್ರವೀಮಿ ತೇ ॥10॥
ಶಲ್ಯ ಹೀಗೆ ಸ್ತೋತ್ರ ಮಾಡಲ್ಪಟ್ಟ ಹವ್ಯವಾಹಕನೂ, ಶ್ರೇಷ್ಠನೂ, ಕವಿಯೂ, ಪೂಜ್ಯನೂ ಆದ ಅಗ್ನಿಯು ಸಂತೋಷಯುಕ್ತನಾಗಿ ಬೃಹಸ್ಪತಿಗಳನ್ನು ಕುರಿತು, ನಿಮಗೆ ಇಂದ್ರನನ್ನು ತೋರಿಸುವೆನು. ಈ ಮಾತನ್ನು ಸತ್ಯವಾಗಿ ಹೇಳುತ್ತಿದ್ದೇನೆ ಎಂದು ಉತ್ತಮವಾಗಿ ಮಾತನಾಡಿದನು.
ಶಲ್ಯಃ
ಪ್ರವಿಶ್ಯಾಪಸ್ತತೋ ವಹ್ನಿಃ ಸಸಮುದ್ರಾಃ ಸಪಲ್ವಲಾಃ |
ಆಜಗಾಮ ಸರಸ್ತಚ್ಚ ಗೂಢೋ ಯತ್ರ ಶತಕ್ರತುಃ ॥11॥
ಶಲ್ಯ ಅಗ್ನಿಯು ಅನಂತರ ಸಮುದ್ರಗಳಲ್ಲಿ, ಪಲ್ವಲಗಳಲ್ಲಿ ಎಲ್ಲ ಕಡೆಯಲ್ಲಿಯೂ ಇರುವ ನೀರಿನಲ್ಲಿ ಪ್ರವೇಶಿಸಿ ಇಂದ್ರನು ಅವಿತುಕೊಂಡಿದ್ದ ಸರೋವರಕ್ಕೂ ಬಂದನು.
ಅಥ ತತ್ರಾಪಿ ಪದ್ಮಾನಿ ವಿಚಿನ್ವನ್ ಭರತರ್ಷಭ |
ಅನ್ವಪಶ್ಯತ್ ಸ ದೇವೇಂದ್ರಂ ಬಿಸಮಧ್ಯಗತಂ ತದಾ ॥12॥
ಎಲೈ ಭರತರ್ಷಭನೇ, ಅಲ್ಲಿಯೂ ಪದ್ಮಗಳಲ್ಲಿ ಹುಡುಕುತ್ತಾ ಪದ್ಮನಾಳದ ಮಧ್ಯದಲ್ಲಿರುವ ಎಳೆಯಲ್ಲಿ ಇದ್ದ ದೇವೇಂದ್ರನನ್ನು ನೋಡಿದನು.
ಆಗತ್ಯ ಚ ತತಸ್ತೂರ್ಣಂ ತಮಾಚಷ್ಟ ಬೃಹಸ್ಪತೇಃ |
ಅಣುಮಾತ್ರೇಣ ವಪುಷಾ ಪದ್ಮತಂತ್ವಾಶ್ರಿತಂ ಪ್ರಭುಮ್ ॥13॥
ಅನಂತರ ಶೀಘ್ರವಾಗಿ ಹಿಂದಿರುಗಿ ಬಂದು ಬೃಹಸ್ಪತಿಗಳಿಗೆ ಅಣುಮಾತ್ರವಾದ ಶರೀರವನ್ನು ಧರಿಸಿ ಪದ್ಮದ ತಂತುವಿನಲ್ಲಿ ಆಶ್ರಿತನಾದ ಪ್ರಭುವಾದ ದೇವೇಂದ್ರನನ್ನು ತಿಳಿಸಿದನು.
ಗತ್ವಾ ದೇವರ್ಷಿಗಂಧರ್ವೈಃ ಸಹಿತೋಽಥ ಬೃಹಸ್ಪತಿಃ |
ಪುರಾಣೈಃ ಕರ್ಮಭಿರ್ದೇವಂ ತುಷ್ಟಾವ ಬಲಸೂದನಮ್ ॥14॥
ಬೃಹಸ್ಪತಿಗಳು ದೇವತೆಗಳಿಂದ, ಋಷಿಗಳಿಂದ ಮತ್ತು ಗಂಧರ್ವರಿಂದ ಸಹಿತರಾಗಿ ಅಲ್ಲಿಗೆ ಹೋಗಿ ಅವನು ಹಿಂದೆ ಮಾಡಿದ ಶ್ರೇಷ್ಠವಾದ ಕರ್ಮಗಳಿಂದ ಬಲಸೂದನನಾದ ಅವನನ್ನು ಸ್ತೋತ್ರ ಮಾಡಿದರು.
ಮಹಾಸುರೋ ಹತಃ ಶಕ್ರ ನಮುಚಿರ್ದಾರುಣಸ್ತ್ವಯಾ |
ಶಂಬರಶ್ಚ ಬಲಶ್ಚೈವ ತಥೋಭೌ ಘೋರದರ್ಶನೌ ॥15॥
ಎಲೈ ಶಕ್ರನೇ, ದಾರುಣನೂ ಮತ್ತು ಮಹಾಸುರನೂ ಆಗಿದ್ದ ನಮುಚಿಯು ನಿನ್ನಿಂದ ಹತನಾದನು. ಘೋರದರ್ಶನರಾದ ಶಂಬರ ಮತ್ತು ಬಲ ಇಬ್ಬರೂ ನಿನ್ನಿಂದ ಹತರಾದರು.
ಶತಕ್ರತೋ ವಿವರ್ಧಸ್ವ ಸರ್ವಾನ್ ಶತ್ರೂನ್ ನಿಷೂದಯ |
ಉತ್ತಿಷ್ಠ ಶಕ್ರ ಸಂಪಶ್ಯ ದೇವರ್ಷೀಂಶ್ಚ ಸಮಾಗತಾನ್ ॥16॥
ಮಹೇಂದ್ರ ದಾನವಾನ್ ಹತ್ವಾ ಲೋಕಾಸ್ತ್ರಾತಾಸ್ತ್ವಯಾ ವಿಭೋ ॥17॥
ಶತಕ್ರತುವೇ, ಬಲದಿಂದ ಬೆಳೆಯುವವನಾಗು. ಎಲ್ಲ ಶತ್ರುಗಳನ್ನೂ ಸಂಹರಿಸು. ಮಹೇಂದ್ರನೇ, ಎದ್ದು ನೋಡು. ದೇವರ್ಷಿಗಳು ಬಂದಿದ್ದಾರೆ. ಮಹೇಂದ್ರನೇ, ವಿಭುವೇ, ನೀನು ಹಿಂದೆ ದಾನವರನ್ನು ಸಂಹಾರ ಮಾಡಿ ಲೋಕಗಳನ್ನು ರಕ್ಷಿಸಿದೆ.
ಅಪಾಂ ಫೇನಂ ಸಮಾಸಾದ್ಯ ವಿಷ್ಣುತೇಜೋಪಬೃಂಹಿತಮ್ |
ತ್ವಯಾ ವೃತ್ರೋ ಹತಃ ಪೂರ್ವಂ ದೇವರಾಜ ಜಗತ್ಪತೇ ॥18॥
ಎಲೈ ದೇವರಾಜನೇ, ಎಲೈ ಜಗತ್ಪತಿಯೇ, ನೀನು ವಿಷ್ಣು ತೇಜಸ್ಸಿನಿಂದ ಕೂಡಿದ ಸಮುದ್ರದ ನೊರೆಯನ್ನು ತೆಗೆದುಕೊಂಡು ಹಿಂದೆ ವೃತ್ರಾಸುರನನ್ನು ಸಂಹಾರ ಮಾಡಿದೆ.
ತ್ವಂ ಸರ್ವಭೂತೇಷು ಶರಣ್ಯ ಈಡ್ಯಃ
ತ್ವಯಾ ಸಮಂ ವಿದ್ಯತೇ ನೇಹ ಭೂತಮ್ |
ತ್ವಯಾ ಧಾರ್ಯಂತೇ ಸರ್ವಭೂತಾನಿ ಶಕ್ರ
ತ್ವಂ ದೇವಾನಾಂ ಮಹಿಮಾನಂ ಚಕರ್ಥ ॥19॥
ಪಾಹಿ ಸರ್ವಾನಿಮಾನ್ ಲೋಕಾನ್ ಮಹೇಂದ್ರ ಬಲಮಾಪ್ನುಹಿ ॥20॥
ಎಲ್ಲಾ ಭೂತಗಳಲ್ಲಿಯೂ ನೀನು ಶರಣು ಹೊಂದಲು ಯೋಗ್ಯನಾದವನು. ಸ್ತೋತ್ರ ಮಾಡಲ್ಪಡಲು ಯೋಗ್ಯನಾದವನು. ನಿನ್ನ ಸಮಾನರಾದ ಚೇತನರು ಯಾರೂ ಇಲ್ಲ. ಎಲೈ ಶಕ್ರನೇ, ನೀನು ಎಲ್ಲ ಜೀವರನ್ನು ಧರಿಸಿದ್ದೀಯೆ ಮತ್ತು ದೇವತೆಗಳ ಮಹಿಮೆಗಳೂ ಸಹ ನಿನ್ನ ಅನುಗ್ರಹದಿಂದಲೇ ಪ್ರಾಪ್ತವಾಗಿವೆ. ಮಹೇಂದ್ರನೇ, ಈ ಎಲ್ಲ ಲೋಕಗಳನ್ನೂ ರಕ್ಷಿಸು. ಬಲವನ್ನು ಹೊಂದುವವನಾಗು.
ಶಲ್ಯಃ
ಏವಂ ಸಂಸ್ತೂಯಮಾನಶ್ಚ ಸೋಽವರ್ಧತ ಶನೈಃ ಶನೈಃ |
ಸ್ವಂ ಚೈವ ವಪುರಾಸ್ಥಾಯ ಬಭೂವ ಸ ಬಲಾನ್ವಿತಃ ॥21॥

ಶಲ್ಯ ಹೀಗೆ ಸ್ತೋತ್ರ ಮಾಡಲ್ಪಟ್ಟಂತೆ ಅವನು ಮೆಲ್ಲಮೆಲ್ಲನೆ ಬೆಳೆದನು. ಕೊನೆಗೆ ತನ್ನ ನಿಜವಾದ ರೂಪವನ್ನು ತೆಗೆದುಕೊಂಡು ಬಲಾನ್ವಿತನಾದನು.
ಅಬ್ರುವೀಚ್ಚ ಗುರುಂ ದೇವೋ ಬೃಹಸ್ಪತಿಮವಸ್ಥಿತಮ್ ॥22॥
ಕಿಂ ಕಾರ್ಯಮವಶಿಷ್ಟಂ ವೋ ಹತಸಾತ್ವಷ್ಟ್ರೋ ಮಹಾಸುರಃ।
ವೃತ್ರಶ್ಚ ಸುಮಹಾಕಾಯೋ ಗ್ರಸ್ತುಂ ಲೋಕಾನಿಯೇಷ ಯಃ ॥23॥
ದೇವನಾದ ಅವನು ಎದುರಿಗಿದ್ದ ಗುರುಗಳಾದ ಬೃಹಸ್ಪತಿಗಳನ್ನು ಕುರಿತು, ನಿಮಗೆ ನಾನು ಮಾಡಬೇಕಾದ ಯಾವ ಕಾರ್ಯವು ಉಳಿದಿದೆ? ತ್ವಷ್ಟ್ರುಪುತ್ರನಾದ ಬಹಳ ದೊಡ್ಡ ಶರೀರವನ್ನು ಹೊಂದಿದ್ದ ಮಹಾಸುರನಾದ ವೃತ್ರನು ಲೋಕಗಳನ್ನೇ ನುಂಗಲು ಬಯಸಿದ್ದನು. ಅವನು ಈಗ ಹತನಾಗಿದ್ದಾನೆ ಎಂದು ಹೇಳಿದನು.
ಬೃಹಸ್ಪತಿಃ
ಮಾನುಷೋ ನಹುಷೋ ರಾಜಾ ದೇವರ್ಷಿಗಣತೇಜಸಾ।
ದೇವರಾಜ್ಯಮನುಪ್ರಾಪ್ತಃ ಸರ್ವಾನ್ ನೋ ಬಾಧತೇ ಭೃಶಮ್ ॥24॥
ಬೃಹಸ್ಪತಿ ಮನುಷ್ಯನಾದ ನಹುಷರಾಜನು ದೇವರ್ಷಿಗಣಗಳ ತೇಜಸ್ಸಿನಿಂದ ದೇವರಾಜ್ಯದ ಆಧಿಪತ್ಯವನ್ನು ಹೊಂದಿದವನಾಗಿ ನಮ್ಮೆಲ್ಲರನ್ನೂ ಬಹಳವಾಗಿ ಬಾಧಿಸುತ್ತಿದ್ದಾನೆ.
ಇಂದ್ರಃ
ಕಥಂ ನು ನಹುಷೋ ರಾಜ್ಯಂ ದೇವಾನಾಂ ಪ್ರಾಪ ದುರ್ಲಭಮ್।
ತಪಸಾ ಕೇನ ವಾ ಯುಕ್ತಃ ಕಿಂವೀರ್ಯೋ ವಾ ಬೃಹಸ್ಪತೇ ॥25॥
ತತ್ಸರ್ವಂ ಕಥಯಧ್ವಂ ಮೇ ಯಥೇಂದ್ರತ್ವಮುಪೇಯಿವಾನ್ ॥26॥
ಇಂದ್ರ ನಹುಷನು ದುರ್ಲಭವಾದ ದೇವರಾಜ್ಯವನ್ನು ಹೇಗೆ ಪಡೆದನು? ಅವನ ತಪಸ್ಸು ಎಂತಹುದು? ಎಲೈ ಬೃಹಸ್ಪತಿಗಳೇ, ಅವನ ಸಾಮರ್ಥ್ಯವಾದರೂ ಏನು? ಅವನು ಹೇಗೆ ಇಂದ್ರನಾದನು ಎಂಬ ಎಲ್ಲ ವಿಷಯವನ್ನೂ ನನಗೆ ಹೇಳಿ.
ಬೃಹಸ್ಪತಿಃ
ತ್ವಯಿ ಪ್ರನಷ್ಟೇ ದೇವೇಶೇ ವಿಶ್ವಂ ಪ್ರವ್ಯಥಿತಂ ಜಗತ್।
ಪರಸ್ಪರಭಯೋದ್ವಿಗ್ನಂ ಬಭೂವಾರ್ತಮರಾಜಕಮ್ ॥27॥
ಬೃಹಸ್ಪತಿ ದೇವೇಶನಾದ ನೀನು ಅದೃಶ್ಯನಾಗಿ ನಾಶವನ್ನು ಹೊಂದುತ್ತಿರಲು ಸಮಸ್ತ ಜಗತ್ತೇ ದುಃಖದಿಂದ ಕೂಡಿತು. ರಾಜರಿಲ್ಲದೆ ಪರಸ್ಪರ ಭಯದಿಂದ ವಿಹ್ವಲರಾಗಿ ಎಲ್ಲರೂ ಆರ್ತರಾದರು.
ತತೋ ದೇವೈಃ ಸಗಂಧರ್ವೈಃ ಸರ್ಷಿಸೃ಼ಂಃ ಸಪಾವಕೈಃ।
ಮಾನುಷೋ ನಹುಷೋ ರಾಜಾ ದೇವರಾಜ್ಯೇಽಭಿಷೇಚಿತಃ ॥28॥
ಆಗ ದೇವತೆಗಳೂ, ಗಂಧರ್ವರೂ, ಋಷಿಗಣಗಳೂ ಮತ್ತು ಅಗ್ನಿಗಳು ಎಲ್ಲರೂ ಸೇರಿ ಮನುಷ್ಯನಾದ ನಹುಷನನ್ನು (ನಹುಷನಿಗೆ) ದೇವರಾಜ್ಯದಲ್ಲಿ ಅಭಿಷೇಕ ಮಾಡಿದರು.
ತತೋ ಭೀತಾಃ ಶಕ್ರಮಕಾಮಯಂತ
ತ್ವಯಾ ತ್ಯಕ್ತಂ ಮಹದೈಂದ್ರಂ ಪದಂ ತತ್ ॥29॥
ಅನಂತರ ಅವನಿಗೆ ಹೆದರಿ ಎಲ್ಲರೂ ಶಚೀಪತಿಯಾದ ನಿನ್ನನ್ನು ಬಯಸಿದರು. ನೀನಾದರೂ ಆ ಶ್ರೇಷ್ಠವಾದ ಇಂದ್ರ ಪದವಿಯನ್ನು ಮೊದಲೇ ತೊರೆದಿದ್ದೀಯೆ.
ತದಾ ದೇವಾಃ ಪಿತರೋಽಥರ್ಷಯಶ್ಚ
ಗಂಧರ್ವಮುಖ್ಯಾಶ್ಚ ಸಮೇತ್ಯ ಸರ್ವೇ।
ಗತ್ವಾಽಬ್ರುವನ್ ನಹುಷಂ ಶಕ್ರ ತತ್ರ
ತ್ವಂ ನೋ ರಾಜಾ ಭುವನಸ್ಯ ಗೋಪ್ತಾ ॥30॥
ಆಗ ದೇವತೆಗಳು, ಪಿತೃಗಳು, ಋಷಿಗಳು ಗಂಧರ್ವರಲ್ಲಿ ಪ್ರಧಾನರಾದವರು ಎಲ್ಲರೂ ಸೇರಿ ನಹುಷನ ಬಳಿಗೆ ಹೋಗಿ ನೀನು ನಮಗೆ ರಾಜನಾಗಿ ಲೋಕವನ್ನು ರಕ್ಷಿಸಬೇಕು ಎಂದು ಕೇಳಿದರು.
ತಾನಬ್ರವೀನ್ನಹುಷೋ ನಾಸ್ಮಿ ಶಕ್ತ
ಆಪ್ಯಾಯಧ್ವಂ ತಪಸಾ ತೇಜಸಾ ಮಾಮ್ ॥31॥
ಅವರನ್ನು ಕುರಿತು ನಹುಷನು ನನಗೆ ನಿಮ್ಮ ರಾಜ್ಯವನ್ನು ನಡೆಸುವಷ್ಟು ಶಕ್ತಿ ಇಲ್ಲ. ನಿಮ್ಮ ತಪಸ್ಸಿನಿಂದಲೂ ಮತ್ತು ತೇಜಸ್ಸಿನಿಂದಲೂ ನನ್ನ ಬಲವನ್ನು ಅಭಿವೃದ್ಧಿಗೊಳಿಸಿ ಎಂದು ಹೇಳಿದನು.
ಏವಂಚೋಕ್ತೈರ್ವರ್ಧಿತಶ್ಚಾಪಿ ದೇವೈ
ರಾಜಾಽಭವನ್ನಹುಷೋ ಘೋರವೀರ್ಯಃ।
ತ್ರೈಲೋಕ್ಯೇ ಚ ಪ್ರಾಪ್ಯ ರಾಜ್ಯಂ ಮಹರ್ಷೀನ್
ಕೃತ್ವಾ ವಾಹಾನ್ ಯಾತಿ ಲೋಕಾನ್ ದುರಾತ್ಮಾ ॥32॥
ಹೀಗೆ ಹೇಳಲ್ಪಟ್ಟ ದೇವತೆಗಳು ಅವನನ್ನು ಅಭಿವೃದ್ಧಿಗೊಳಿಸಿದರು. ಆಗ ನಹುಷನು ಭಯಂಕರವಾದ ಪರಾಕ್ರಮವುಳ್ಳ ರಾಜನಾದನು. ದುರಾತ್ಮನಾದ ಅವನು ಮೂರುಲೋಕಗಳ ಆಧಿಪತ್ಯವನ್ನು ಪಡೆದು, ಮಹರ್ಷಿಗಳನ್ನು ತನ್ನ ವಾಹನವನ್ನು ಹೊರುವವರನ್ನಾಗಿ ಮಾಡಿಕೊಂಡು ಈಗ ಲೋಕಗಳಿಗೆ ಹೋಗುತ್ತಿದ್ದಾನೆ.
ತೇಜೋಹರಂ ದೃಷ್ಟಿವಿಷಂ ಸುಘೋರಂ

ಮಾ ತ್ವಂ ಪಶ್ಯೇರ್ನಹುಷಂ ವೈ ಕದಾಚಿತ್ |
ದೇವಾಶ್ಚ ಸರ್ವೇ ನಹುಷಂ ಭೃಶಾರ್ತಾ
ನ ಪಶ್ಯಂತೇ ಗೂಢರೂಪಾಶ್ಚರಂತಃ ॥33॥
ಎದುರಿಗೆ ಬಂದವರ ತೇಜಸ್ಸನ್ನು ಅಪಹರಿಸುವವನೂ, ತನ್ನ ಕಣ್ಣಿನ ದೃಷ್ಟಿಯಲ್ಲಿಯೇ ವಿಷವನ್ನುಳ್ಳವನೂ, ಅತ್ಯಂತ ಘೋರನೂ ಆದ ಆ ನಹುಷನನ್ನು ನೀನು ಎಂದೂ ನೋಡಬೇಡ. ದೇವತೆಗಳೆಲ್ಲರೂ ಬಹಳ ದುಃಖಿತರಾಗಿ ಗೂಢರೂಪವನ್ನು ಧರಿಸಿ ಸಂಚರಿಸುತ್ತಾ ನಹುಷನನ್ನು ನೋಡುವುದಿಲ್ಲ.
ಏವಂ ವದತ್ಯಂಗಿರಸಾಂ ವರಿಷ್ಠೇ
ಬೃಹಸ್ಪತೌ ಲೋಕಪಾಲಃ ಕುಬೇರಃ |
ವೈವಸ್ವತಶ್ಚೈವ ಯಮಃ ಪುರಾಣೋ
ದೇವಾಶ್ಚ ಸೋಮೋ ವರುಣಶ್ಚಾಜಗಾಮ ॥34॥
ಅಂಗಿರಸ ಕುಲೋತ್ಪನ್ನರಾದ ಶ್ರೇಷ್ಠರಾದ ಬೃಹಸ್ಪತಿಗಳು ಹೀಗೆ ಹೇಳುತ್ತಿರಲು ಲೋಕಪಾಲಕನಾದ ಕುಬೇರನು, ವಿವಸ್ವಾನ್ ಸೂರ್ಯನ ಮಗನಾದ ಯಮನೂ, ಪ್ರಾಚೀನದೇವತೆಯರಾದ ಸೋಮ-ವರುಣರೂ ಅಲ್ಲಿಗೆ ಬಂದರು.
ತೇ ವೈ ಸಮಾಗಮ್ಯ ಮಹೇಂದ್ರಮೂಚುಃ
ದಿಷ್ಟ್ಯಾ ತ್ವಾಷ್ಟ್ರೋ ನಿಹತಶ್ಚೈವ ವೃತ್ರಃ |
ದಿಷ್ಟ್ಯಾ ತ್ವಾಂ ಕುಶಲಿನಮಕ್ಷತಂ ಚ
ಪಶ್ಯಾಮೋ ವೈ ನಿಹತಾರಿಂ ಚ ಶಕ್ರ ॥35॥
ಅವರು ಮಹೇಂದ್ರನನ್ನು ಸಮೀಪಿಸಿ ಶಕ್ರನೇ, ದೇವರ ದಯದಿಂದ ತ್ವಷ್ಟ್ರುವಿನ ಪುತ್ರನಾದ ವೃತ್ರನು ಹತನಾದನು. ದೇವರ ದಯದಿಂದಲೇ ಶತ್ರುವನ್ನು ಸಂಹರಿಸಿ ವ್ರಣವಿಲ್ಲದೆ ಕ್ಷೇಮದಿಂದಿರುವ ನಿನ್ನನ್ನು ನೋಡುತ್ತಿದ್ದೇವೆ ಎಂದು ಹೇಳಿದರು.
ಸ ತಾನ್ ಯಥಾವಚ್ಚ ಹಿ ಲೋಕಪಾಲಾನ್
ಸಮೇತ್ಯ ವೈ ಪ್ರೀತಮನಾ ಮಹೇಂದ್ರಃ |
ಉವಾಚ ಚೈತಾನ್ ಪ್ರತಿಭಾಷ್ಯ ಶಕ್ರಃ
ಸಂಚೋದಯಿಷ್ಯನ್ ನಹುಷಸ್ಯಾಂತರೇಣ ॥36॥
ಆ ಇಂದ್ರನು ಲೋಕಪಾಲಕರ ಜೊತೆಯಲ್ಲಿ ಯಥಾಯೋಗ್ಯವಾಗಿ ಮಿಳಿತನಾಗಿ ಮನಸ್ಸಿನಲ್ಲಿ ಸಂತೋಷಗೊಂಡು ನಹುಷನ ವಿಷಯದಲ್ಲಿ ಅವರನ್ನು ಪ್ರೇರೇಪಿಸುವವನಾಗಿ ಅವರನ್ನು ಉದ್ದೇಶಿಸಿ ಮಾತನಾಡಿದನು.
ರಾಜಾ ದೇವಾನಾಂ ನಹುಷೋ ಘೋರರೂಪಃ
ತತ್ರ ಸಾಹ್ಯಂ ದೀಯತಾಂ ಮೇ ಭವದ್ಭಿಃ ॥37॥
ದೇವತೆಗಳ ರಾಜನಾದ ನಹುಷನು ಘೋರರೂಪವನ್ನು ಉಳ್ಳವನಾಗಿದ್ದಾನೆ. ಅವನನ್ನು ಸೋಲಿಸುವ ವಿಷಯದಲ್ಲಿ ನೀವು ನನಗೆ ಸಹಾಯವನ್ನು ಮಾಡಬೇಕು.
ಶಲ್ಯಃ
ತೇ ಚಾಬ್ರುವನ್ ನಹುಷೋ ಘೋರರೂಪೋ
ದೃಷ್ಟೀವಿಷಸ್ತಸ್ಯ ಬಿಭೀಮ ಶಕ್ರ |
ತ್ವಂ ಚೇದ್ ರಾಜಾ ನಹುಷಂ ಪರಾಜಯೇಃ
ತತೋ ವಯಂ ಭಾಗಮರ್ಹಾಮ ಶಕ್ರ ॥38॥
ಶಲ್ಯ ಅವರು ಎಲೈ ಶಕ್ರನೇ, ನಹುಷನು ಘೋರರೂಪವುಳ್ಳವನೂ, ದೃಷ್ಟಿಯಲ್ಲೇ ವಿಷವುಳ್ಳವನೂ ಆಗಿದ್ದಾನೆ. ನಾವು ಅವನಿಗೆ ಹೆದರುತ್ತೇವೆ. ರಾಜನಾದ ನೀನು ನಹುಷನನ್ನು ಸೋಲಿಸುವುದಾದರೆ ಆಗ ನಾವೆಲ್ಲರೂ ನಮ್ಮ ಯಜ್ಞಭಾಗಗಳನ್ನು ಪಡೆಯುತ್ತೇವೆ ಎಂದು ಹೇಳಿದರು.
ಇಂದ್ರೋಽಬ್ರುವೀತ್ ಭವತು ಭವಾನಪಾಂಪತಿಃ
ಯಮಃ ಕುಬೇರಶ್ಚ ಮಯಾಽಭಿಷೇಕಮ್ |
ಸಂಪ್ರಾಪ್ನುವಂತ್ವದ್ಯ ಸಹೈವ ತೇ ರಿಪುಂ
ಜಯಾಮ ತಂ ನಹುಷಂ ಘೋರದೃಷ್ಟಿಮ್ ॥39॥
ಇಂದ್ರನು ಅವರನ್ನು ಕುರಿತು ಹೀಗೆ ಮಾತನಾಡಿದನು. ವರುಣನಾದ ನೀನು ಜಲಕ್ಕೆ ಒಡೆಯನಾಗು. ಯಮ ಮತ್ತು ಕುಬೇರರು ತಮ್ಮ ತಮ್ಮ ವಿಷಯಗಳಲ್ಲಿ ನನ್ನಿಂದ ಅಭಿಷೇಕವನ್ನು ಹೊಂದಲಿ. ಈ ದಿನ ನಾವೆಲ್ಲರೂ ಒಟ್ಟಿಗೆ ಸೇರಿ ಘೋರದೃಷ್ಟಿಯುಳ್ಳ ಶತ್ರುವಾದ ನಹುಷನನ್ನು ಜಯಿಸೋಣ.
ತತ್ರ ಶಕ್ರಂ ಜ್ವಲನೋಽಪ್ಯಾಹ ಭಾಗಂ
ಪ್ರಯಚ್ಛ ಮಹ್ಯಂ ತವ ಸಾಹ್ಯಂ ಕರಿಷ್ಯೇ ॥40॥
ಆಗ ಅಗ್ನಿಯು ಇಂದ್ರನನ್ನು ಕುರಿತು ನನಗೂ ಭಾಗವನ್ನು ಕೊಡು. ಆಗ ನಿನಗೆ ಸಹಾಯವನ್ನು ಮಾಡುವೆನು ಎಂದು ಹೇಳಿದನು.
ತಮಾಹ ಶಕ್ರೋ ಭವಿತಾಽಗ್ನೇ ತವಾಪಿ
ಚೇಂದ್ರಾಗ್ನ್ಯೋರ್ವೈ ಭಾಗ ಏಕೋ ಮಹಾಕ್ರತೌ ॥41॥
ಶಕ್ರನು ಅವನನ್ನು ಕುರಿತು ಅಗ್ನಿಯೇ, ನಿನಗೂ ಸಹ ಮಹಾಕ್ರತುವಿನಲ್ಲಿ ಇಂದ್ರಾಗ್ನಿ ರೂಪ ದೇವತಾ ದ್ವಂದ್ವದಲ್ಲಿ ಒಂದು ಭಾಗವು ದೊರೆಯುತ್ತದೆ ಎಂದು ಹೇಳಿದನು.

ಏವಂ ಸಂಚಿಂತ್ಯ ಭಗವಾನ್ ಮಹೇಂದ್ರಃ ಪಾಕಶಾಸನಃ |
ಕುಬೇರಂ ಸರ್ವಯಕ್ಷಾಣಾಂ ಧನಾನಾಂ ಚ ಪ್ರಭುಂ ತದಾ ॥42॥
ವೈವಸ್ವತಂ ಪಿತೄಣಾಂ ಚ ವರುಣಂ ಚಾಪ್ಯಪಾಂ ತಥಾ |
ಅಧಿಪತ್ಯಂ ದದೌ ಶಕ್ರಃ ಸತ್ಕೃತ್ಯ ವರದಸ್ತಥಾ ॥43॥
ಹೀಗೆ ಚಿಂತಿಸಿ ಪೂಜ್ಯನೂ, ಪಾಕಶಾಸನನೂ ಆದ ಮಹೇಂದ್ರನು ಕುಬೇರನನ್ನು ಎಲ್ಲ ಯಕ್ಷರಿಗೂ ಮತ್ತು ಧನಕ್ಕೂ ಪತಿಯನ್ನಾಗಿ ಮಾಡಿದನು. ವೈವಸ್ವತನನ್ನು (ಯಮನನ್ನು) ಪಿತೃಗಳಿಗೆ ಅಧಿಪತಿಯನ್ನಾಗಿಯೂ, ವರುಣನನ್ನು ಜಲಕ್ಕೆ ಅಧಿಪತಿಯನ್ನಾಗಿ ಮಾಡಿ, ವರದನಾದ ಇಂದ್ರನು ಅವರನ್ನು ಸತ್ಕರಿಸಿ ಆಧಿಪತ್ಯವನ್ನು ನೀಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷೋಡಶೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *

ಹದಿನೇಳನೆಯ ಅಧ್ಯಾಯ

ಅಗಸ್ತ್ಯಶಾಪದಿಂದ ಸ್ವರ್ಗದಿಂದ ನಹುಷನ ಪತನ

ಶಲ್ಯಃ
ಅಥ ಸಂಚಿಂತಯಾನಸ್ಯ ದೇವರಾಜಸ್ಯ ಧೀಮತಃ |
ನಹುಷಸ್ಯ ವಧೋಪಾಯಂ ಲೋಕಪಾಲೈಃ ಸದೈವತೈಃ ॥1॥
ತಪಸ್ವೀ ತತ್ರ ಭಗವಾನ್ ಅಗಸ್ತ್ಯಃ ಪ್ರತ್ಯದೃಶ್ಯತ ॥2॥
ಶಲ್ಯ ಅನಂತರ ಮೇಧಾವಿಯಾದ ದೇವರಾಜನಾದ ಇಂದ್ರನು ಲೋಕಪಾಲಕರ ಮತ್ತು ದೇವತೆಗಳ ಜೊತೆಯಲ್ಲಿ ನಹುಷನ ವಧೋಪಾಯವನ್ನು ಕುರಿತು ಚಿಂತಿಸುತ್ತಿರುವಂತೆಯೇ ತಪಸ್ವಿಗಳಾದ ಪೂಜ್ಯರಾದ ಅಗಸ್ತ್ಯರು ಅಲ್ಲಿ ಕಾಣಿಸಿಕೊಂಡರು.
ಸೋಽಬ್ರವೀದರ್ಚ್ಯ ದೇವೇಂದ್ರಂ ದಿಷ್ಟ್ಯಾ ವೈ ವರ್ಧತೇ ಭವಾನ್ |
ವಿಶ್ವರೂಪವಿನಾಶೇನ ವೃತ್ರಾಸುರವಧೇನ ಚ ॥3॥
ಅವರು ದೇವೇಂದ್ರನನ್ನು ಅರ್ಚಿಸಿ, ಅವನನ್ನು ಕುರಿತು ವಿಶ್ವರೂಪವಿನಾಶದಿಂದ ಮತ್ತು ವೃತ್ರಾಸುರ ವಧೆಯಿಂದ (ವಧೆಗಳನ್ನು ಮಾಡಿ), ದೇವರ ದಯದಿಂದ ನೀನು ಅಭಿವೃದ್ಧಿಯನ್ನು ಹೊಂದಿದ್ದೀಯೆ.
ದಿಷ್ಟ್ಯಾ ಧರ್ಮಃ ಸ್ಥಿತೋ ಲೋಕೇ ದಿಷ್ಟ್ಯಾ ಲೋಕಾಃ ಪ್ರತಿಷ್ಠಿತಾಃ |
ದಿಷ್ಟ್ಯಾ ಪಶ್ಯಾಮಿ ದೇವೇಂದ್ರಂ ದಿಷ್ಟ್ಯಾ ಲೋಕಾನ್ ಪುನರ್ನವಾನ್ ॥
ದೇವರ ದಯದಿಂದ ಲೋಕದಲ್ಲಿ ಧರ್ಮವು ಪುನಃ ಸ್ಥಿತವಾಗಿದೆ. ಲೋಕಗಳು ಪ್ರತಿಷ್ಠೆಯನ್ನು ಹೊಂದಿವೆ. ದೇವರದಯದಿಂದಲೇ ದೇವೇಂದ್ರನಾದ ನಿನ್ನನ್ನು ಮತ್ತು ಪುನಃ ಹೊಸದಾಗಿ ಕಾಣುವ ಲೋಕಗಳನ್ನು ನೋಡುತ್ತಿದ್ದೇನೆ.
ದಿಷ್ಟ್ಯಾಽದ್ಯ ನಹುಷೋ ಭ್ರಷ್ಟೋ ದೇವರಾಜ್ಯಾತ್ ಪುರಂದರ |
ದಿಷ್ಟ್ಯಾ ಭವಂತಂ ಪಶ್ಯಾಮೋ ಹತಾರಿಂ ಬಲಸೂದನ ॥5॥
ಪುರಂದರನೇ, ದೇವರ ದಯದಿಂದ ಈ ದಿನ ನಹುಷನು ದೇವರಾಜ್ಯದಿಂದ ಭ್ರಷ್ಟನಾಗಿದ್ದಾನೆ. ಬಲಸೂದನನೇ, ದೇವರ ದಯದಿಂದಲೇ ಈ ದಿನ ಶತ್ರುವಿನಾಶವನ್ನು ಹೊಂದಿರುವ ನಿನ್ನನ್ನು ನೋಡುತ್ತಿದ್ದೇವೆ.
ಇಂದ್ರಃ
ಸ್ವಾಗತಂ ತೇ ಮಹರ್ಷೇಽಸ್ತು ಪ್ರೀತೋಽಹಂ ದರ್ಶನಾತ್ ತವ |
ಪಾದ್ಯಮಾಚಮನೀಯಂ ಚ ಗಾಮರ್ಘ್ಯಂ ಚ ಪ್ರತೀಚ್ಛ ಮೇ ॥6॥
ಇಂದ್ರ ಮಹರ್ಷಿಗಳೇ, ನಿಮಗೆ ಸ್ವಾಗತ. ನಿಮ್ಮ ದರ್ಶನದಿಂದ ನಾನು ಸಂತೋಷಗೊಂಡಿದ್ದೇನೆ. ಪಾದ್ಯ, ಆಚಮನೀಯ, ಅರ್ಘ್ಯ ಮತ್ತು ಗೋವನ್ನು ನನ್ನಿಂದ ಸ್ವೀಕರಿಸಿ.
ಶಲ್ಯಃ
ಪೂಜಿತಂ ಚೋಪವಿಷ್ಟಂ ತಮಾಸನೇ ಮುನಿಸತ್ತಮಮ್ |
ಪರ್ಯಪೃಚ್ಛತ ದೇವೇಶಃ ಪ್ರಹೃಷ್ಟೋ ಬ್ರಾಹ್ಮಣರ್ಷಭಮ್ ॥7॥
ಏತದಿಚ್ಛಾಮಿ ಭಗವನ್ ಕಥ್ಯಮಾನಂ ದ್ವಿಜೋತ್ತಮ |
ಪರಿಭ್ರಷ್ಟಃ ಕಥಂ ಸ್ವರ್ಗಾನ್ನಹುಷಃ ಪಾಪನಿಶ್ಚಯಃ ॥8॥
ಶಲ್ಯ ಪೂಜಿತರಾಗಿ ಆಸನದಲ್ಲಿ ಕುಳಿತ ಮುನಿಶ್ರೇಷ್ಠರೂ, ಬ್ರಾಹ್ಮಣಶ್ರೇಷ್ಠರೂ ಆದ ಅಗಸ್ತ್ಯರನ್ನು ಕುರಿತು ಸಂತೋಷಗೊಂಡ ದೇವೇಂದ್ರನು ಪೂಜ್ಯರೇ, ದ್ವಿಜಶ್ರೇಷ್ಠರೇ, ಪಾಪನಿಶ್ಚಯವುಳ್ಳ ನಹುಷನು ಸ್ವರ್ಗದಿಂದ ಹೇಗೆ ಭ್ರಷ್ಟನಾದನು ಎಂದು ನಿಮ್ಮಿಂದ ತಿಳಿಯಲು ನಾನು ಬಯಸುತ್ತೇನೆ ಎಂದು ಕೇಳಿದನು.
ಅಗಸ್ತ್ಯಃ
ಶೃಣು ಶಕ್ರ ಪ್ರಿಯಂ ವಾಕ್ಯಂ ಯಥಾ ರಾಜಾ ದುರಾತ್ಮವಾನ್ |
ಸ್ವರ್ಗಾದ್ ಭ್ರಷ್ಟೋ ದುರಾಚಾರೋ ನಹುಷೋ ಬಲವತ್ತರಃ ॥9॥
ಅಗಸ್ತ್ಯ ಶಕ್ರನೇ, ದುರಾತ್ಮನಾದ ಬಲಿಷ್ಠನಾದ ದುರಾಚಾರಿಯಾದ ನಹುಷನು ಹೇಗೆ ಸ್ವರ್ಗದಿಂದ ಭ್ರಷ್ಟನಾದನೆಂದು ನಾನು ಹೇಳುವ ಪ್ರಿಯವಾಕ್ಯವನ್ನು ಕೇಳು.

ಶ್ರಮಾರ್ತಾಶ್ಚ ವಹಂತಸ್ತಂ ನಹುಷಂ ಪಾಪಕಾರಿಣಮ್ |
ದೇವರ್ಷಯೋ ಮಹಾಭಾಗಾಸ್ತಥಾ ಬ್ರಹ್ಮರ್ಷಯೋಽಮಲಾಃ ॥10॥
ಪಪ್ರಚ್ಛುರ್ನಹುಷಂ ದೇವ ಸಂಶಯಂ ಜಯತಾಂ ವರಮ್ ॥11॥
ಶಮದಿಂದ ಬಳಲಿ, ಪಾಪಕಾರಿಯಾದ ನಹುಷನನ್ನು ಹೊರುತ್ತಾ, ಮಹಾನುಭಾವರೂ, ಪರಿಶುದ್ಧರೂ ಆದ ದೇವರ್ಷಿಗಳು ಮತ್ತು ಬ್ರಹ್ಮರ್ಷಿಗಳು ಜಯಿಸುವವರಲ್ಲಿ ಶ್ರೇಷ್ಠನಾದ ನಹುಷನನ್ನು ಕುರಿತು ಒಂದು ಪ್ರಶ್ನೆಯನ್ನು ಕೇಳಿದರು.
ಯ ಇಮೇ ಬ್ರಹ್ಮಣಾ ಪ್ರೋಕ್ತಾ ಮಂತ್ರಾ ವೈ ಪ್ರೋಕ್ಷಣೇ ಗವಾಮ್ |
ಏತೇ ಪ್ರಮಾಣಂ ಭವತ ಉತಾಹೋ ನೇತಿ ವಾಸವ ॥12॥
ನಹುಷೋ ನೇತಿ ತಾನಾಹ ತಮಸಾ ಮೂಢಚೇತನಃ ॥13॥
ಎಲೈ ಇಂದ್ರನೇ, ಬ್ರಹ್ಮದೇವರು ಪರಿಶುದ್ಧವಾದ ಜ್ಞಾನವನ್ನು ಪಡೆಯಲು ಹೇಳಿದ ಈ ವೇದಮಂತ್ರಗಳು ನಿನಗೆ ಪ್ರಮಾಣವೇ ಅಥವಾ ಅಲ್ಲವೇ? (ಎಂಬುದು ಆ ಪ್ರಶ್ನೆಯಾಗಿದ್ದಿತು). ಮೂಢಚೇತನನಾದ ನಹುಷನು ಅಜ್ಞಾನಕ್ಕೆ ಒಳಗಾಗಿ ಅವರನ್ನು ಕುರಿತು ಪ್ರಮಾಣವಲ್ಲ ಎಂದು ಹೇಳಿದನು.
ಋಷಯಃ
ಅಧರ್ಮೇ ಸಂಪ್ರವೃತ್ತಸ್ತ್ವಂ ಧರ್ಮಂ ನ ಪ್ರತಿಪದ್ಯಸೇ |
ಪ್ರಮಾಣಮೇತದಸ್ಮಾಕಂ ಸರ್ವಂ ಪ್ರೋಕ್ತಂ ಮಹರ್ಷಿಭಿಃ ॥14॥
ಋಷಿಗಳು ಅಧರ್ಮದಲ್ಲಿ ಪ್ರವೃತ್ತನಾದ ನೀನು ಧರ್ಮವನ್ನು ತಿಳಿಯುತ್ತಿಲ್ಲ. ಪುರಾತನ ಮಹರ್ಷಿಗಳು ಹೇಳಿದ ಈ ಮಂತ್ರಗಳೆಲ್ಲವೂ ನಮಗೆ ಪ್ರಮಾಣ.
ಅಗಸ್ತ್ಯಃ
ತತೋ ವಿವದಮಾನಃ ಸ ಮುನಿಭಿಃ ಸಹ ವಾಸವ |
ಅಥ ಮಾಮಸ್ಪೃಶನ್ ಮೂರ್ಧ್ನಿ ಪಾದೇನಾಧರ್ಮಪೀಡಿತಃ ॥15॥
ಅಗಸ್ತ್ಯ ಎಲೈ ಇಂದ್ರನೇ, ಆಗ ಅವನು ಆ ಋಷಿಗಳ ಜೊತೆಯಲ್ಲಿ ವಿವಾದವನ್ನು ಮಾಡುತ್ತಾ ಅಧರ್ಮಪೀಡಿತನಾಗಿ ನನ್ನ ಶಿರಸ್ಸನ್ನು ತನ್ನ ಪಾದದಿಂದ ಒದ್ದನು.
ತೇನಾಭೂದ್ ಹತತೇಜಾಶ್ಚ ನಿಃಶ್ರೀಕಶ್ಚ ಶಚೀಪತೇ |
ತತಸ್ತಮಹಮಾವಿಗ್ನಮವೋಚಂ ಭಯಪೀಡಿತಮ್ ॥16॥
ಶಚೀಪತಿಯೇ, ಅದರಿಂದ ಅವನು ತನ್ನ ತೇಜಸ್ಸನ್ನೂ ಮತ್ತು ಸಂಪತ್ತನ್ನೂ ಕಳೆದುಕೊಂಡನು. ಆಗ ಗಾಬರಿಗೊಳಗಾಗಿ ಭಯಪೀಡಿತನಾದ ಅವನಿಗೆ ನಾನು ಈ ರೀತಿ ಹೇಳಿದೆನು.
ಯಸ್ಮಾತ್ ಪೂರ್ವೈಃ ಕೃತಂ ಮಾರ್ಗಂ ಬ್ರಹ್ಮರ್ಷಿಭಿರನುಷ್ಠಿತಮ್ |
ಅದುಷ್ಟಂ ದೂಷಯಸಿ ವೈ ಯನ್ಮೇ ಮೂರ್ಧ್ನ ರ್್ಯಸ್ಪೃಶಃ ಪದಾ ॥17॥
ಯಚ್ಚಾಪಿ ತ್ವಮೃಷೀನ್ ಮೂಢ ಬ್ರಹ್ಮಕಲ್ಪಾನ್ ದುರಾಸದಾನ್ |
ವಾಹಾನ್ ಕೃತ್ವಾ ವಾಹಯಸಿ ತೇನ ಸ್ವರ್ಗಾದ್ ಹತಪ್ರಭಃ ॥18॥
ಧ್ವಂಸ ಪಾಪ ಪರಿಭ್ರಷ್ಟಃ ಕ್ಷೀಣಪುಣ್ಯೋ ಮಹೀತಳೇ ॥19॥
ಯಾವ ಕಾರಣದಿಂದ ಪ್ರಾಚೀನ ಬ್ರಹ್ಮರ್ಷಿಗಳಿಂದ ದೃಷ್ಟವಾದ ಪರಿಶುದ್ಧವಾದ ಮಾರ್ಗವನ್ನು ದೂಷಿಸುತ್ತಿದ್ದೀಯೋ, ಯಾವ ಕಾರಣದಿಂದ ನನ್ನ ಶಿರಸ್ಸನ್ನು ಪಾದದಿಂದ ಒದ್ದಿದ್ದೀಯೋ ಮತ್ತು ಯಾವ ಕಾರಣದಿಂದ ಎಲೈ ಮೂಢನೇ, ಬ್ರಹ್ಮಸಮಾನರಾದ ಸ್ಪರ್ಶಮಾಡಲೂ ಸಾಧ್ಯವಿಲ್ಲದ ಋಷಿಗಳನ್ನು ನೀನು ವಾಹನವನ್ನಾಗಿ ಮಾಡಿಕೊಂಡು ನಿನ್ನನ್ನು ಹೊರಿಸುತ್ತಿದ್ದೀಯೋ ಆ ಕಾರಣದಿಂದ ಎಲೈ ಪಾಪನೇ, ನಿನ್ನ ಕಾಂತಿಯನ್ನು ಕಳೆದುಕೊಂಡು, ಪುಣ್ಯವನ್ನೂ ಕಳೆದುಕೊಂಡು ಸ್ವರ್ಗಲೋಕದಿಂದ ಭೂತಳದಲ್ಲಿ ಬೀಳು.
ದಶವರ್ಷಸಹಸ್ರಾಣಿ ಸರ್ಪರೂಪಧರೋ ಮಹಾನ್ |
ವಿಚರಿಷ್ಯಸಿ ಪೂರ್ಣೇಷು ಪುನಃ ಸ್ವರ್ಗಮವಾಪ್ಸ್ಯಸಿ ॥20॥
ಹತ್ತುಸಹಸ್ರವರ್ಷಗಳ ಕಾಲ ದೊಡ್ಡ ಸರ್ಪರೂಪವನ್ನು ಧರಿಸಿ ಸಂಚರಿಸುವಿ. ಸರ್ಪಶರೀರದಲ್ಲಿ ಹತ್ತುಸಾವಿರ ವರ್ಷಗಳನ್ನು ಕಳೆದಮೇಲೆ ಪುನಃ ಸ್ವರ್ಗವನ್ನು ಹೊಂದುವಿ.
ದೃಷ್ಟ್ವಾ ಯುಧಿಷ್ಠಿರಂ ನಾಮ ತವ ವಂಶಸಮುದ್ಭವಮ್ |
ನಿಹತೋ ಬ್ರಹ್ಮಶಾಪೇನ ಪ್ರಪದ್ಯಸ್ವ ತ್ರಿವಿಷ್ಟಪಮ್ ॥21॥
ಬ್ರಾಹ್ಮಣ ಶಾಪಕ್ಕೆ ನಿನ್ನ ವಂಶದಲ್ಲಿ ಹುಟ್ಟಿದ ಯುಧಿಷ್ಠಿರನೆಂಬ ರಾಜನನ್ನು ನೋಡಿ ಒಳಗಾದ ನೀನು ಪುನಃ ಸ್ವರ್ಗವನ್ನು ಹೊಂದುವವನಾಗು.
ಏವಂ ಭ್ರಷ್ಟೋ ದುರಾತ್ಮಾ ಸ ದೇವರಾಜ್ಯಾದರಿಂದಮ |
ದಿಷ್ಟ್ಯಾ ವರ್ಧಾಮಹೇ ಶಕ್ರ ಹತೋ ಬ್ರಹ್ಮರ್ಷಿಕಂಟಕಃ ॥22॥
ಅರಿಂದಮನೇ, ದುರಾತ್ಮನಾದ ಆ ನಹುಷನು ದೇವರಾಜ್ಯದಿಂದ ಹೀಗೆ ಭ್ರಷ್ಟನಾದನು. ಶಕ್ರನೇ, ಬ್ರಹ್ಮರ್ಷಿಗಳಿಗೆ ಕಂಟಕನಾದ ಅವನು ಶಾಪದಿಂದ ಹತನಾಗಿದ್ದಾನೆ. ನಾವೆಲ್ಲರೂ ದೇವರ ದಯದಿಂದ ಅಭಿವೃದ್ಧಿಯನ್ನು ಹೊಂದುತ್ತಿದ್ದೇವೆ.
ತ್ರಿವಿಷ್ಟಪಂ ಪ್ರಪದ್ಯಸ್ವ ಪಾಹಿ ಲೋಕಾನ್ ಶಚೀಪತೇ |
ಜಿತೇಂದ್ರಿಯೋ ಜಿತಾಮಿತ್ರಃ ಸ್ತೂಯಮಾನೋ ಮಹರ್ಷಿಭಿಃ ॥23॥
ಶಚೀಪತಿಯೇ, ಸ್ವರ್ಗವನ್ನು ಸೇರಿ ಇಂದ್ರಿಯವಿಜಯವನ್ನು ಹೊಂದಿ, ಶತ್ರುವನ್ನು ಗೆಲ್ಲುವವನಾಗಿ, ಮಹರ್ಷಿಗಳಿಂದ ಸ್ತೋತ್ರ

ಮಾಡಲ್ಪಟ್ಟು ಲೋಕಗಳನ್ನು ರಕ್ಷಿಸುವವನಾಗು (ಎಂದು ಹೇಳಿದೆನು).
ಶಲ್ಯಃ
ತತೋ ದೇವಾ ಭೃಶಂ ತುಷ್ಟಾ ಮಹರ್ಷಿಗಣಸಂವೃತಾಃ |
ಪಿತರಶ್ಚೈವ ಯಕ್ಷಾಶ್ಚ ಭುಜಗಾ ರಾಕ್ಷಸಾಸ್ತಥಾ ॥24॥
ಗಂಧರ್ವಾ ದೇವಕನ್ಯಾಶ್ಚ ಸರ್ವೇ ಚಾಪ್ಸರಸಾಂ ಗಣಾಃ |
ಸರಾಂಸಿ ಸರಿತಃ ಶೈಲಾಃ ಸಾಗರಾಶ್ಚ ವಿಶಾಂಪತೇ ॥25॥
ಉಪಗಮ್ಯಾಬ್ರುವನ್ ಸರ್ವೇ ದಿಷ್ಟ್ಯಾ ವರ್ಧಸಿ ಶತ್ರುಹನ್ |
ಹತಶ್ಚ ನಹುಷಃ ಪಾಪೋ ದಿಷ್ಟ್ಯಾಽಗಸ್ತ್ಯೇನ ಧೀಮತಾ ॥26॥
ದಿಷ್ಟ್ಯಾ ಪಾಪಸಮಾಚಾರಃ ಕೃತಃ ಸರ್ಪೋ ಮಹೀತಳೇ ॥27॥
ಶಲ್ಯ ಎಲೈ ರಾಜನೇ, ಅನಂತರ ಬಹಳ ಸಂತುಷ್ಟರಾದ ಮಹರ್ಷಿಗಣ ಸಹಿತರಾದ ದೇವತೆಗಳು, ಪಿತೃಗಳು, ಯಕ್ಷರು, ಸರ್ಪಗಳು, ರಾಕ್ಷಸರು, ಗಂಧರ್ವರು, ದೇವಕನ್ಯೆಯರು, ಅಪ್ಸರೆಯರ ಎಲ್ಲಾ ಗಣಗಳು, ಸರೋವರಗಳು, ನದಿಗಳು, ಪರ್ವತಗಳು ಇಂದ್ರನ ಸಮೀಪಕ್ಕೆ ಬಂದು ಶತ್ರುನಾಶಕನೇ, ದೇವರ ದಯದಿಂದ ನೀನು ಅಭಿವೃದ್ಧಿಯನ್ನು ಹೊಂದಿದ್ದೀಯೆ. ದೇವರ ದಯದಿಂದ ಮೇಧಾವಿಗಳಾದ ಅಗಸ್ತ್ಯರಿಂದ ಪಾಪಿಯಾದ ನಹುಷನು ಹತನಾಗಿದ್ದಾನೆ. ದೇವರ ದಯದಿಂದಲೇ ಪಾಪದ ಆಚಾರವುಳ್ಳ ಅವನು ಭೂಮಿಯಲ್ಲಿ ಸರ್ಪವಾಗಿ ಮಾಡಲ್ಪಟ್ಟಿದ್ದಾನೆ ಎಂದು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತದಶೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಇಂದ್ರನ ಸ್ವರ್ಗಪ್ರಾಪ್ತಿ ಮತ್ತು ಶಲ್ಯನಿಂದ ದುರ್ಯೋಧನಪಕ್ಷಗಮನ.
ಶಲ್ಯಃ
ತತಃ ಶಕ್ರಃ ಸ್ತೂಯಮಾನೋ ಗಂಧರ್ವಾಪ್ಸರಸಾಂ ಗಣೈಃ |
ಐರಾವತಂ ಸಮಾರುಹ್ಯ ದ್ವಿಪೇಂದ್ರಂ ಲಕ್ಷಣೈರ್ಯುತಮ್ ॥1॥
ಪಾವಕಃ ಸುಮಹಾತೇಜಾ ಮಹರ್ಷಿಶ್ಚ ಬೃಹಸ್ಪತಿಃ |
ಯಮಶ್ಚ ವರುಣಶ್ಚೈವ ಕುಬೇರಶ್ಚ ಧನೇಶ್ವರಃ ॥2॥
ಸರ್ವೈರ್ದೇವೈಃ ಪರಿವೃತಃ ಶಕ್ರೋ ವೃತ್ರನಿಷೂದನಃ |
ಗಂಧರ್ವೈರಪ್ಸರೋಭಿಶ್ಚ ಪ್ರಯಾತಸ್ತ್ರಿದಿವಂ ಪ್ರಭುಃ ॥3॥
ಶಲ್ಯ ಅನಂತರ ಇಂದ್ರನು ಗಂಧರ್ವರ ಮತ್ತು ಅಪ್ಸರೆಯರ ಗಣದಿಂದ ಸ್ತೋತ್ರ ಮಾಡಲ್ಪಟ್ಟು ಸಲ್ಲಕ್ಷಣಗಳಿಂದ ಕೂಡಿದ ಗಜಶ್ರೇಷ್ಠವಾದ ಐರಾವತವನ್ನೇರಿ ಹಾಗೆಯೇ ಮಹಾತೇಜಸ್ವಿಯಾದ ಅಗ್ನಿ, ಮಹರ್ಷಿಗಳಾದ ಬೃಹಸ್ಪತಿಗಳು, ಯಮ, ವರುಣ ಮತ್ತು ಧನಪತಿಯಾದ ಕುಬೇರ ಇವರಿಂದ ಸಹಿತನಾಗಿ ಸರ್ವದೇವತೆಗಳಿಂದಲೂ ಪರಿವೃತನಾಗಿ, ಗಂಧರ್ವರಿಂದಲೂ ಮತ್ತು ಅಪ್ಸರೆಯರಿಂದಲೂ ಪರಿವೃತನಾಗಿ ಪ್ರಭುವಾದ ವೃತ್ರಸಂಹಾರಕನಾದ ಇಂದ್ರನು ಸ್ವರ್ಗವನ್ನು ಸೇರಿದನು.
ಸ ಸಮೇತ್ಯ ಮಹೇಂದ್ರಾಣ್ಯಾ ದೇವರಾಜಃ ಶತಕ್ರತುಃ |
ಮುದಾ ಪರಮಯಾ ಯುಕ್ತಃ ಪಾಲಯಾಮಾಸ ದೇವರಾಟ್ ॥4॥
ಶತಕ್ರತುವೂ ದೇವರಾಜನೂ ಆದ ಅವನು ಶಚೀದೇವಿಯ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಬಹಳ ಸಂತೋಷದಿಂದ ಕೂಡಿದವನಾಗಿ ಮೂರು ಲೋಕಗಳನ್ನೂ ಆಳಿದನು.
ತತಃ ಸ ಭಗವಾಂಸ್ತತ್ರ ಅಂಗಿರಾಃ ಸಮದೃಶ್ಯತ |
ಅಥರ್ವವೇದಮಂತ್ರೈಶ್ಚ ದೇವೇಂದ್ರಂ ಸಮಪೂಜಯತ್ ॥5॥
ಆಗ ಪೂಜ್ಯರಾದ ಅಂಗೀರಸ ಋಷಿಗಳು ಅಲ್ಲಿ ಕಾಣಿಸಿಕೊಂಡರು. ಅವರು ದೇವೇಂದ್ರನನ್ನು ಅಥರ್ವವೇದ ಮಂತ್ರಗಳಿಂದ ಪೂಜಿಸಿದರು.
ತತಸ್ತು ಭಗವಾನಿಂದ್ರಃ ಪ್ರಹೃಷ್ಟಃ ಸಮಪದ್ಯತ |
ವರಂ ಚ ಪ್ರದದೌ ತಸ್ಮಾ ಅಥರ್ವಾಂಗಿರಸೇ ತದಾ ॥6॥
ಆಗ ಪೂಜ್ಯನಾದ ಇಂದ್ರನು ಸಂತೋಷಗೊಂಡು ಆ ಅಥರ್ವಾಂಗಿರ ಋಷಿಗಳಿಗೆ ವರವನ್ನು ಕೊಟ್ಟನು.
ಇಂದ್ರಃ
ಅಥರ್ವಾಂಗಿರಸೋ ನಾಮ ವೇದೇಽಸ್ಮಿನ್ ವೈ ಭವಿಷ್ಯತಿ |
ಉದಾಹರಣಮೇತದ್ಧಿ ಯಜ್ಞಭಾಗಂ ಚ ಲಪ್ಸ್ಯಸೇ ॥7॥
ಇಂದ್ರ ನೀವು ಹೇಳಿದ ಮಂತ್ರಗಳು ಅಥರ್ವಾಂಗಿರೋ ನಾಮದಿಂದ ವೇದದಲ್ಲಿ ಪ್ರಸಿದ್ಧವಾಗುತ್ತದೆ. ನೀವು ಯಜ್ಞಭಾಗವನ್ನೂ ಹೊಂದುವಿರಿ.
ಶಲ್ಯಃ
ಏವಂ ಸಂಪೂಜ್ಯ ಭಗವಾನ್ ಅಥರ್ವಾಂಗಿರಸಂ ತಥಾ |
ವ್ಯಸರ್ಜಯನ್ ಮಹಾರಾಜ ದೇವರಾಜಃ ಶತಕ್ರತುಃ ॥8॥

ಶಲ್ಯ ಎಲ್ಲೈ ಮಹಾರಾಜನೇ, ದೇವರಾಜನಾದ ಪೂಜ್ಯನಾದ ಶತಕ್ರತುವು ಅಥರ್ವಾಂಗಿರಸ ಋಷಿಗಳನ್ನು ಹೀಗೆ ಪೂಜಿಸಿ ಬೀಳ್ಕೊಟ್ಟನು.
ಸಂಪೂಜ್ಯ ಸರ್ವಾನ್ ತ್ರಿದಶಾನ್ ಋಷೀಂಶ್ಚಾಪಿ ತಪೋಧನಾನ್ |
ಇಂದ್ರಃ ಪ್ರಮುದಿತೋ ರಾಜನ್ ಧರ್ಮೇಣಾಪಾಲಯತ್ ಪ್ರಜಾಃ ॥9॥
ರಾಜನೇ, ಇಂದ್ರನು ಎಲ್ಲ ದೇವತೆಗಳನ್ನೂ ಮತ್ತು ತಪೋಧನರಾದ ಎಲ್ಲ ಋಷಿಗಳನ್ನೂ ಪೂಜಿಸಿ ಸಂತೋಷಗೊಂಡವನಾಗಿ ಧರ್ಮದಿಂದ ಪ್ರಜೆಗಳನ್ನು ಪಾಲಿಸಿದನು.
ಏವಂ ದುಃಖಮನುಪ್ರಾಪ್ತಮಿಂದ್ರೇಣ ಸಹ ಭಾರ್ಯಯಾ |
ಅಜ್ಞಾತವಾಸಶ್ಚ ಕೃತಃ ಶತ್ರೂಣಾಂ ವಧಕಾಂಕ್ಷಯಾ ॥10॥
ಹೀಗೆ ಪತ್ನೀಸಹಿತನಾದ ಇಂದ್ರನು ದುಃಖವನ್ನು ಹೊಂದಿದನು ಮತ್ತು ಶತ್ರುಗಳ ವಧೆಯನ್ನು ಬಯಸಿ ಅಜ್ಞಾತವಾಸವನ್ನೂ ಮಾಡಿದನು.
ನಾತ್ರ ಮನ್ಯುಸ್ತ್ವಯಾ ಕಾರ್ಯೋ ಯತ್ ಕ್ಲಿಷ್ಟೋಽಸಿ ಮಹಾವನೇ |
ದ್ರೌಪದ್ಯಾ ಸಹ ರಾಜೇಂದ್ರ ಭ್ರಾತೃಭಿಶ್ಚ ಮಹಾತ್ಮಭಿಃ ॥11॥
ರಾಜೇಂದ್ರನೇ, ದೊಡ್ಡ ಕಾಡಿನಲ್ಲಿ ದ್ರೌಪದಿ ಮತ್ತು ಮಹಾತ್ಮರಾದ ತಮ್ಮಂದಿರ ಜೊತೆಯಲ್ಲಿ ಏನು ಕ್ಲೇಶವನ್ನು ಅನುಭವಿಸಿದೆಯೋ ಅದಕ್ಕಾಗಿ ನೀನು ಕೋಪವನ್ನು ಮಾಡಬಾರದು.
ಏವಂ ತ್ವಮಪಿ ರಾಜೇಂದ್ರ ರಾಜ್ಯಂ ಪ್ರಾಪ್ಸ್ಯಸಿ ಭಾರತ |
ವೃತ್ರಂ ಹತ್ವಾ ಯಥಾ ಪ್ರಾಪ್ತಃ ಶಕ್ರಃ ಕೌರವನಂದನ ॥12॥
ಎಲ್ಲೈ ರಾಜೇಂದ್ರನೇ, ಭಾರತನೇ, ಕೌರವನಂದನನೇ, ವೃತ್ರನನ್ನು ಕೊಂದು ಇಂದ್ರನು ರಾಜ್ಯವನ್ನು ಪಡೆದಂತೆ ನೀನೂ ಸಹ ರಾಜ್ಯವನ್ನು ಪಡೆಯುವಿ.
ದುರಾಚಾರಶ್ಚ ನಹುಷೋ ಬ್ರಹ್ಮದ್ವಿಟ್ ಪಾಪಚೇತನಃ |
ಅಗಸ್ತ್ಯಶಾಪಾಭಿಹತೋ ವಿನಷ್ಟಃ ಶಾಶ್ವತೀಃ ಸಮಾಃ ॥13॥
ದುರಾಚಾರನೂ, ಪಾಪಬುದ್ಧಿಯುಳ್ಳವನೂ, ಬ್ರಹ್ಮದ್ವೇಷಿಯೂ ಆದ ನಹುಷನು ಅಗಸ್ತ್ಯರ ಶಾಪದಿಂದ ತಾಡಿತನಾಗಿ ಬಹುಕಾಲದವರೆಗೆ ವಿನಷ್ಟನಾದನು.
ಏವಂ ತವ ದುರಾತ್ಮಾನಃ ಶತ್ರವಃ ಶತ್ರುಸೂದನ |
ಕ್ಷಿಪ್ರಂ ನಾಶಂ ಗಮಿಷ್ಯಂತಿ ಕರ್ಣದುರ್ಯೋಧನಾದಯಃ ॥14॥
ಎಲ್ಲೈ ಶತ್ರುಸೂದನನೇ, ಹಾಗೆಯೇ ದುರಾತ್ಮರಾದ ನಿನ್ನ ಶತ್ರುಗಳಾದ ಕರ್ಣ- ದುರ್ಯೋಧನಾದಿಗಳು ಶೀಘ್ರವಾಗಿ ನಾಶವನ್ನು ಹೊಂದುವರು.
ತತಃ ಸಾಗರಪರ್ಯಂತಾಂ ಭೋಕ್ಷ್ಯಸೇ ಪೃಥಿವೀಮಿಮಾಮ್ |
ಭ್ರಾತೃಭಿಃ ಸಹಿತೋ ವೀರ ದ್ರೌಪದ್ಯಾ ಚ ಸಹಾನಯಾ ॥15॥
ಎಲ್ಲೈ ವೀರನೇ, ಅನಂತರ ತಮ್ಮಂದಿರಿಂದ ಒಡಗೂಡಿ ಮತ್ತು ಈ ದ್ರೌಪದಿಯಿಂದಲೂ ಸಹಿತನಾಗಿ ಸಾಗರಪರ್ಯಂತವಾದ ಈ ಭೂಮಿಯನ್ನು ನೀನು ಭೋಗಿಸುವಿ.
ಉಪಾಖ್ಯಾನಮಿದಂ ಶಕ್ರವಿಜಯಂ ವೇದಸಮ್ಮಿತಮ್ |
ರಾಜ್ಞಾ ವ್ಯೂಢೇಷ್ವನೀಕೇಷು ಶ್ರೋತವ್ಯಂ ಜಯಮಿಚ್ಛತಾ ॥16॥
ಈ ಉಪಾಖ್ಯಾನಕ್ಕೆ ಶಕ್ರವಿಜಯ ಎಂದು ಹೆಸರು. ಇದು ವೇದಕ್ಕೆ ಸಮಾನವಾದುದು. ಜಯಾಕಾಂಕ್ಷಿಯಾದ ರಾಜನು ಸೈನ್ಯವನ್ನು ವ್ಯೂಹ ಮಾಡುವಾಗ ಈ ಆಖ್ಯಾನವನ್ನು ಕೇಳಬೇಕು.
ತಸ್ಮಾತ್ ಸಂಶ್ರಾವಯಾಮಿ ತ್ವಾಂ ವಿಜಯಂ ಜಯತಾಂ ವರ |
ಸಂಸ್ತೂಯಮಾನಾ ವರ್ಧಂತೇ ಮಹಾತ್ಮಾನೋ ಯುಧಿಷ್ಠಿರ ॥17॥
ಜಯಿಸುವವರಲ್ಲಿ ಶ್ರೇಷ್ಠನೇ, ಆದ್ದರಿಂದ ನಿನಗೆ ನಾನು ಈ ಶಕ್ರವಿಜಯವನ್ನು ಕೇಳಿಸುತ್ತಿದ್ದೇನೆ. ಯುಧಿಷ್ಠಿರನೇ, ಮಹಾತ್ಮರು ಸ್ತೋತ್ರ ಮಾಡಿದಷ್ಟು ಅಭಿವೃದ್ಧಿಯನ್ನು ಹೊಂದುತ್ತಾರೆ.
ಕ್ಷತ್ರಿಯಾಣಾಮಭಾವೋಽಯಂ ಯುಧಿಷ್ಠಿರ ಮಹಾತ್ಮನಾಮ್ |
ದುರ್ಯೋಧನಾಪರಾಧೇನ ಭೀಮಾರ್ಜುನಬಲೇನ ಚ ॥18॥
ಎಲ್ಲೈ ಯುಧಿಷ್ಠಿರನೇ, ದುರ್ಯೋಧನನ ಅಪರಾಧದಿಂದ ಮತ್ತು ಭೀಮಾರ್ಜುನರ ಬಲದಿಂದ ಮಹಾತ್ಮರಾದ ಕ್ಷತ್ರಿಯರ ಈ ವಿನಾಶವು ಸನ್ನಿಹಿತವಾಗಿದೆ.
ಆಖ್ಯಾನಮಿಂದ್ರವಿಜಯಂ ಯ ಇದಂ ನಿಯತಃ ಪಠೇತ್ |
ಧೂತಪಾಪ್ಮಾ ಜಿತಸ್ವರ್ಗಃ ಪರತ್ರೇಹ ಚ ಮೋದತೇ ॥19॥
ಇಂದ್ರವಿಜಯವೆಂಬ ಈ ಆಖ್ಯಾನವನ್ನು ಯಾವನು ನಿಯಮದಿಂದ ಕೂಡಿ ಪಠಿಸುತ್ತಾನೆಯೋ ಅವನು ಪಾಪವನ್ನು ಕಳೆದುಕೊಂಡು ಸ್ವರ್ಗವನ್ನು ಸಂಪಾದಿಸಿ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖಪಡುತ್ತಾನೆ.
ನ ಚಾರಿಜಂ ಭಯಂ ತಸ್ಯ ನಾಪುತ್ರೋ ವಾ ಭವೇನ್ನರಃ |
ನಾಪದಂ ಪ್ರಾಪ್ನುಯಾದ್ ಕಾಂಚಿದ್ ದೀರ್ಘಮಾಯುಶ್ಚ ವಿಂದತಿ ॥20॥
ಸರ್ವತ್ರ ಜಯಮಾಪ್ನೋತಿ ನ ಕದಾಚಿತ್ ಪರಾಜಯಮ್ ॥21॥
ಅವನಿಗೆ ಶತ್ರುಗಳ ಭಯವಿರುವುದಿಲ್ಲ. ಅವನು ಪುತ್ರವಂತನಾಗುತ್ತಾನೆ. ಅವನಿಗೆ ಆಪತ್ತುಗಳು ಉಂಟಾಗುವುದಿಲ್ಲ. ದೀರ್ಘಾಯುಷ್ಯವು ಉಂಟಾಗುತ್ತದೆ. ಎಲ್ಲ ಕಡೆಗಳಲ್ಲಿಯೂ ಜಯವೇ ಉಂಟಾಗುತ್ತದೆ. ಎಂದೂ ಅಪಜಯವಾಗುವುದಿಲ್ಲ.

ವೈಶಂಪಾಯನಃ
ಏವಮಾಶ್ವಾಸಿತೋ ರಾಜಾ ಶಲ್ಯೇನ ಭರತರ್ಷಭ |
ಪೂಜಯಾಮಾಸ ವಿಧಿವತ್ ಶಲ್ಯಂ ಧರ್ಮಭೃತಾಂ ವರಃ ॥22॥
ವೈಶಂಪಾಯನ ಎಲೈ ಭರತರ್ಷಭನೇ, ಹೀಗೆ ರಾಜನಾದ ಯುಧಿಷ್ಠಿರನು ಶಲ್ಯನಿಂದ ಸಮಾಧಾನಪಡಿಸಲ್ಪಟ್ಟು ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ವಿಧಿಗೆ ಅನುಗುಣವಾಗಿ ಶಲ್ಯನನ್ನು ಪೂಜಿಸಿದನು.
ಶ್ರುತ್ವಾ ತು ಶಲ್ಯವಚನಂ ಕುಂತೀಪುತ್ರೋ ಯುಧಿಷ್ಠಿರಃ |
ಪ್ರತ್ಯುವಾಚ ಮಹಾಬಾಹುರ್ಮದ್ರರಾಜಮಿದಂ ವಚಃ ॥23॥
ಭವಾನ್ ಕರ್ಣಸ್ಯ ಸಾರಥ್ಯಂ ಕರಿಷ್ಯತಿ ನ ಸಂಶಯಃ |
ತತ್ರ ತೇಜೋವಧಃ ಕಾರ್ಯಃ ಕರ್ಣಸ್ಯಾರ್ಜುನಸಂಸ್ತವೇ ॥24॥
ಕುಂತೀಪುತ್ರನೂ, ಮಹಾಬಾಹುವೂ ಆದ ಯುಧಿಷ್ಠಿರನು ಶಲ್ಯನ ಮಾತುಗಳನ್ನು ಕೇಳಿ ಮದ್ರರಾಜನಾದ ಅವನನ್ನು ಕುರಿತು, ನೀನು ಕರ್ಣನ ಸಾರಥ್ಯಮಾಡುವುದರಲ್ಲಿ ಸಂಶಯವಿಲ್ಲ. ಆಗ ಅರ್ಜುನನನ್ನು ಹೊಗಳಿ ನೀನು ಕರ್ಣನ ತೇಜೋವಧೆಯನ್ನು ಮಾಡಬೇಕು ಎಂಬ ಈ ಮಾತನ್ನು ಆಡಿದನು.
ಶಲ್ಯಃ
ಏವಮೇತತ್ ಕರಿಷ್ಯಾಮಿ ಯಥಾ ಮಾಂ ಸಂಪ್ರಭಾಷಸೇ |
ಯಚ್ಚಾನ್ಯದಪಿ ಶಕ್ಷ್ಯಾಮಿ ತತ್ ಕರಿಷ್ಯಾಮ್ಯಹಂ ತವ ॥25॥
ಶಲ್ಯ ನೀನು ಹೇಗೆ ಹೇಳುತ್ತಿದ್ದೀಯೋ ಹಾಗೆಯೇ ಮಾಡುವೆನು. ನಿನ್ನ ಹಿತಕ್ಕಾಗಿ ಬೇರೆ ಏನಾದರೂ ಮಾಡಲು ಸಾಧ್ಯವಾದರೆ ನಾನು ಅದನ್ನೂ ಮಾಡುವೆನು.
ವೈಶಂಪಾಯನಃ
ತತಸ್ತತ್ವಮಂತ್ರ್ಯ ಕೌಂತೇಯಾನ್ ಶಲ್ಯೋ ಮದ್ರಾಧಿಪಸ್ತದಾ |
ಜಗಾಮ ಸಬಲಃ ಶ್ರೀಮಾನ್ ದುರ್ಯೋಧನಮರಿಂದಮಃ ॥26॥
ವೈಶಂಪಾಯನ ಅನಂತರ ಮದ್ರರಾಜನಾದ, ಸಂಪದ್ಯುಕ್ತನಾದ, ಅರಿಂದಮನಾದ ಶಲ್ಯನು ಕುಂತೀಪುತ್ರರ ಅನುಮತಿಯನ್ನು ಪಡೆದು ತನ್ನ ಸೈನ್ಯದ ಜೊತೆಯಲ್ಲಿ ದುರ್ಯೋಧನನ ಬಳಿಗೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಾದಶೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹದಿನೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ
ಪಾಂಡವರ ಮತ್ತು ಕೌರವರ ಸೇನಾಸಮವಾಯ.
ವೈಶಂಪಾಯನಃ
ಯುಯುಧಾನಸ್ತತೋ ವೀರಃ ಸಾತ್ವತಾನಾಂ ಮಹಾರಥಃ |
ಮಹತಾ ಚತುರಂಗೇಣ ಬಲೇನಾಗಾದ್ ಯುಧಿಷ್ಠಿರಮ್ ॥1॥
ವೈಶಂಪಾಯನ ಮಹಾರಥನಾದ ಸಾತ್ವತವೀರನಾದ ಯುಯುಧಾನನು ಆಗ ಚತುರಂಗ ಸೈನ್ಯಸಹಿತನಾಗಿ ಯುಧಿಷ್ಠಿರನ ಬಳಿಗೆ ಬಂದನು (ಯುಯುಧಾನ ಎಂದರೆ ಸಾತ್ಯಕಿಯು ಮೊದಲೇ ಬಂದಿದ್ದಾನೆ. ಸೇನಾಸಮವಾಯವನ್ನುಅವನು ಹೇಳುವುದಕ್ಕೋಸ್ಕರ ಪುನಃ ನಿರೂಪಿಸುತ್ತಿದ್ದಾರೆ).
ತಸ್ಯ ಯೋಧಾ ಮಹಾವೀರ್ಯಾ ನಾನಾದೇಶಸಮಾಗತಾಃ |
ನಾನಾಪ್ರಹರಣಾ ವೀರಾಃ ಶೋಭಯಾಂಚಕ್ರಿರೇ ಬಲಮ್ ॥2॥
ಅವನ ಸೈನಿಕರು ನಾನಾದೇಶದಿಂದ ಬಂದವರೂ ಮಹಾಪರಾಕ್ರಮವುಳ್ಳವರೂ, ಅನೇಕ ಆಯುಧಗಳನ್ನು ಹೊಂದಿದವರೂ ಮತ್ತು ವೀರರೂ ಆಗಿ ಆ ಸೈನ್ಯವು ಶೋಭಿಸುವಂತೆ ಮಾಡಿದರು.
ಪರಶ್ವಧೈರ್ಭಿಂಡಿಪಾಲೈಃ ಶೂಲತೋಮರಮುದ್ಗರೈಃ |
ಪರಿಘೈರ್ಯಷ್ಟಿಭಿಃ ಪ್ರಾಸೈಃ ಕರವಾಲೈಶ್ಚ ನಿರ್ಮಲೈಃ ॥3॥
ಖಡ್ಗಕಾರ್ಮುಕನಿರ್ಯೂಹೈಃ ಶರೈಶ್ಚ ವಿವಿಧೈರಪಿ |
ತೈಲಧೌತೈಃ ಪ್ರಕಾಶದ್ಭಿಸ್ತದಶೋಭತ ವೈ ಬಲಮ್ ॥4॥
ಪರಶ್ವಥ, ಭಿಂಡಿಪಾಲ, ಶೂಲ, ತೋಮರ, ಮುದ್ಗರ, ಪರಿಘ, ಯಷ್ಟಿ, ಪ್ರಾಸ, ನಿರ್ಮಲವಾದ ಕರವಾಲಗಳು, ಖಡ್ಗ ಮತ್ತು ಧನುಸ್ಸುಗಳ ಸಮೂಹ, ಅನೇಕ ವಿಧವಾದ ತೈಲದಲ್ಲಿ ಸಾಣೆಯನ್ನು ಹಿಡಿದ ಹೊಳೆಯುವ ಬಾಣಗಳು ಇವುಗಳಿಂದ ಆ ಸೈನ್ಯವು ಶೋಭಿಸಿತು.
ತಸ್ಯ ಮೇಘಪ್ರಕಾಶಸ್ಯ ಶಸ್ತ್ರೈಸ್ತೈಃ ಶೋಭಿತಸ್ಯ ಚ |
ಬಭೂವ ರೂಪಂ ಸೈನ್ಯಸ್ಯ ಮೇಘಸ್ಯೇವ ಸವಿದ್ಯುತಃ ॥5॥
ಮೇಘದ ಕಾಂತಿಯನ್ನು ಹೊಂದಿದ್ದ ಮತ್ತು ಶಸ್ತ್ರಗಳಿಂದ ಕೂಡಿದ ಆ ಸೈನ್ಯವು ಮಿಂಚುಗಳಿಂದ ಕೂಡಿದ ಮೇಘಸಮೂಹದ ಕಾಂತಿಯನ್ನು ಹೊಂದಿದ್ದಿತು.
ಅಕ್ಷೋಹಿಣೀ ಹಿ ಸಾ ಸೇನಾ ತದಾ ಯೌಧಿಷ್ಠಿರಂ ಬಲಮ್ |

ಪ್ರವಿಶ್ಯಾಂತರ್ದಧೇ ರಾಜನ್ ಸಾಗರಂ ಕುನದೀ ಯಥಾ ॥6॥
ಒಂದು ಅಕ್ಷೋಹಿಣಿ ಪರಿಮಾಣದ ಆ ಸೈನ್ಯವು ಯುಧಿಷ್ಠಿರನ ಸೈನ್ಯವನ್ನು ಪ್ರವೇಶಿಸಿ ಸಣ್ಣ ನದಿಯು ಸಾಗರವನ್ನು ಸೇರಿ ಅದೃಶ್ಯವಾಗುವಂತೆ ಅಂತರ್ಧಾನವನ್ನು ಹೊಂದಿತು.
ತಥೈವಾಕ್ಷೋಹಿಣೀಂ ಗೃಹ್ಯ ಚೇದೀನಾಮೃಷಭೋ ಬಲೀ |
ಧೃಷ್ಟಕೇತುರುಪಾಗಚ್ಛತ್ ಪಾಂಡವಾನಮಿತೌಜಸಃ ॥7॥
ಚೇದಿಗಳ ರಾಜನಾದ ಬಲಿಷ್ಠನಾದ ಧೃಷ್ಟಕೇತುವು ಸಹ (ಶಿಶುಪಾಲನ ಪುತ್ರ) ಒಂದು ಅಕ್ಷೋಹಿಣಿ ಸೈನ್ಯದೊಂದಿಗೆ ಅಮಿತಪರಾಕ್ರಮಿಗಳಾದ ಪಾಂಡವರ ಸಮೀಪಕ್ಕೆ ಬಂದನು.
ಮಾಗಧಶ್ಚ ಜಯತ್ಸೇನೋ ಜಾರಾಸಂಧಿರ್ಮಹಾಬಲಃ |
ಅಕ್ಷೋಹಿಣ್ಯೈವ ಸೈನ್ಯಸ್ಯ ಧರ್ಮರಾಜಮುಪಾಗಮತ್ ॥8॥
ಜರಾಸಂಧನ ಪುತ್ರನಾದ ಮಗಧದೇಶಾದಿಪತಿಯಾದ ಮಹಾಬಲನಾದ ಜಯತ್ಸೇನನು ಒಂದು ಅಕ್ಷೋಹಿಣಿ ಸೈನ್ಯದೊಂದಿಗೆ ಧರ್ಮರಾಜನನ್ನು ಬಂದು ಸೇರಿದನು.
ತಥೈವ ಪಾಂಡ್ಯೋ ರಾಜೇಂದ್ರ ಸಾಗರಾನೂಪವಾಸಿಭಿಃ |
ವೃತೋ ಬಹುವಿಧೈರ್ಯೋಧೈರ್ಯುಧಿಷ್ಠಿರಮುಪಾಗಮತ್ ॥9॥
ಎಲೈ ರಾಜೇಂದ್ರನೇ, ಅದರಂತೆ ಪಾಂಡ್ಯರಾಜನು ಬಹುವಿಧವಾದ ಯೋಧರನ್ನು ಹೊಂದಿದ್ದ ಸಾಗರ ತೀರವಾಸಿಗಳಾದ ಸೈನಿಕರಿಂದ ಕೂಡಿದ್ದ ಸೈನ್ಯದೊಂದಿಗೆ ಯುಧಿಷ್ಠಿರನನ್ನು ಬಂದು ಸೇರಿದನು.
ತಥಾ ಮಾಹಿಷ್ಮತೀವಾಸೋ ನೀಲೋ ನೀಲಾಯುಧೈಃ ಸಹ |
ಮಹೀಪಾಲೋ ಮಹಾವೀರ್ಯೋ ದಕ್ಷಿಣಾಪಥವಾಸಿಭಿಃ ॥10॥
ತಸ್ಯ ಸೈನ್ಯಮತೀವಾಸೀತ್ ತಸ್ಮಿನ್ ಬಲಸಮಾಗಮೇ |
ಪ್ರೇಕ್ಷಣೀಯತರಂ ರಾಜನ್ ಸುವೇಷಂ ಬಲವತ್ ತದಾ ॥11॥
ಹಾಗೆಯೇ ಮಾಹಿಷ್ಮತಿ ವಾಸನಾದ ಮಹಾಪರಾಕ್ರಮಿಯಾದ ನೀಲರಾಜನು, ದಕ್ಷಿಣಾಪಥವಾಸಿಗಳಾದ ಮತ್ತು ನೀಲಾಯುಧವನ್ನು ಧರಿಸಿದ ಯೋಧರೊಂದಿಗೆ ಬಂದು ಸೇರಿದನು. ಎಲೈ ರಾಜನೇ, ಅವನ ಸೈನ್ಯವು ಆ ಸೈನ್ಯಸಮುದಾಯದಲ್ಲಿ ಒಳ್ಳೆಯ ವೇಷವನ್ನು ಧರಿಸಿ ಬಲಿಷ್ಠವಾಗಿ ನೋಡಲು ಬಹಳ ಸುಂದರವಾಗಿದ್ದಿತು.
ಕೇಕಯಾಶ್ಚ ನರವ್ಯಾಘ್ರಾಃ ಸೋದರಾಃ ಪಂಚ ಪಾರ್ಥಿವಾಃ |
ಸಂಹರ್ಷಯಂತಃ ಕೌಂತೇಯಾನ್ ಅಕ್ಷೋಹಿಣ್ಯಾ ಸಮಾಗತಾಃ ॥12॥
ಕೇಕಯದೇಶದ ಸಹೋದರರಾದ, ನರವ್ಯಾಘ್ರರಾದ ಐದು ರಾಜರು ಕುಂತೀಪುತ್ರರನ್ನು ಸಂತೋಷಗೊಳಿಸುತ್ತಾ ಒಂದು ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಬಂದರು.
ದ್ರುಪದಸ್ಯಾಪ್ಯಭೂತ್ ಸೇನಾ ನಾನಾದೇಶಸಮಾಗತೈಃ |
ಶೋಭಿತಾ ಪುರುಷೈಃ ಶೂರೈಃ ಪುತ್ರೈಶ್ಚ ಸುಮಹಾರಥೈಃ ॥13॥
ದ್ರುಪದನ ಸೈನ್ಯವೂ ಸಹ ನಾನಾ ದೇಶಗಳಿಂದ ಬಂದ ಶೂರರಿಂದಲೂ ಮತ್ತು ಮಹಾರಥರಾದ ಪುತ್ರರಿಂದಲೂ ಶೋಭಿಸುತ್ತಿದ್ದಿತು.
ತಥೈವ ರಾಜಾ ಮತ್ಸ್ಯಾನಾಂ ವಿರಾಟೋ ವಾಹಿನೀಪತಿಃ |
ಪಾರ್ವತೀಯೈರ್ಮಹೀಪಾಲೈಃ ಸಹಿತಃ ಪಾಂಡವಾನಯಾತ್ ॥14॥
ಹಾಗೆಯೇ ವಾಹಿನೀಪತಿಯಾದ ಮತ್ಸ್ಯರಾಜನಾದ ವಿರಾಟನು ಪರ್ವತ ಪ್ರದೇಶದ ರಾಜರೊಂದಿಗೆ ಪಾಂಡವರನ್ನು ಬಂದು ಸೇರಿದನು.
ಇತಶ್ಚೇತಶ್ಚ ಪಾಂಡೂನಾಂ ಸಮಾಜಗ್ಮುರ್ಮಹಾತ್ಮನಾಮ್ |
ಅಕ್ಷೋಹಿಣ್ಯಸ್ತು ಸಪ್ತೈತಾ ವಿವಿಧಧ್ವಜಸಂಕುಲಾಃ ॥15॥
ಯುಯುತ್ಸಮಾನಾಃ ಕುರುಭಿಃ ಪಾಂಡವಾನ್ ಸಮಹರ್ಷಯನ್ ॥16॥
ಇನ್ನು ಅಲ್ಲಿಂದ ಇಲ್ಲಿಂದ ಇನ್ನೂ ಅನೇಕ ವೀರರು ಮಹಾತ್ಮರಾದ ಪಾಂಡವರ ಸೈನ್ಯವನ್ನು ಬಂದು ಸೇರಿದರು. ಈ ಏಳು ಅಕ್ಷೋಹಿಣಿ ಸೈನ್ಯವು ಅನೇಕ ವಿಧವಾದ ಧ್ವಜಗಳಿಂದ ನಿಬಿಡವಾಗಿ ಕುರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಲು ಆಶಿಸುತ್ತಾ ಪಾಂಡವರಿಗೆ ಸಂತೋಷವನ್ನು ಕೊಟ್ಟಿತು (ಸಾತ್ಯಕಿ, ಧೃಷ್ಟಕೇತು, ಜಯತ್ಸೇನ, ಪಾಂಡ್ಯರಾಜ, ನೀಲ, ಕೇಕೇಯರು ಇವರೆಲ್ಲರದ್ದು ಒಂದೊಂದು ಅಕ್ಷೋಹಿಣಿ. ದ್ರುಪದ, ವಿರಾಟ ಮತ್ತು ಅಲ್ಲಿಂದಿಲ್ಲಿಂದ ಬಂದವರು ಸೇರಿ ಒಂದು ಅಕ್ಷೋಹಿಣಿ. ಹೀಗೆ ಪಾಂಡವರ ಸೈನ್ಯವು ಒಟ್ಟು ಏಳು ಅಕ್ಷೋಹಿಣಿಯಾಗಿದೆ).
ತಥೈವ ಧಾರ್ತರಾಷ್ಟ್ರಸ್ಯ ಹರ್ಷಂ ಸಮಭಿವರ್ಧಯನ್ |
ಭಗದತ್ತೋ ಮಹೀಪಾಲಃ ಸೇನಾಮಕ್ಷೋಹಿಣೀಂ ದದೌ ॥17॥
ಹಾಗೆಯೇ ದುರ್ಯೋಧನನಿಗೆ ಸಂತೋಷವನ್ನುಂಟು ಮಾಡುತ್ತಾ ಭಗದತ್ತ ರಾಜನು ಒಂದು ಅಕ್ಷೋಹಿಣಿ ಸೈನ್ಯವನ್ನು ಕೊಟ್ಟನು.
ತಸ್ಯ ಚೀನೈಃ ಕಿರಾತೈಶ್ಚ ಕಾಂಚನೈರಿವ ಸಂವೃತಮ್ |
ಬಭೌ ಬಲಮಹಾಧೃಷ್ಯಂ ಕರ್ಣಿಕಾರವನಂ ಯಥಾ ॥18॥
ಚೀನರಿಂದಲೂ, ಕಿರಾತರಿಂದಲೂ, ಚಿನ್ನದಿಂದ ಅಲಂಕೃತವಾದಂತೆ ಇದ್ದ, ಅವನನ್ನು ಸೋಲಿಸಲು ಅಸಾಧ್ಯವಾದ ಸೈನ್ಯವು ಕರ್ಣಿಕಾರಪುಷ್ಪದ ವನದಂತೆ ಶೋಭಿಸುತ್ತಿದ್ದಿತು.
ತಸ್ಯ ಭೂರಿಶ್ರವಾಃ ಶೂರಃ ಶಲ್ಯಶ್ಚ ಕುರುನಂದನ |
ದುರ್ಯೋಧನಮುಪಾಯಾತಾವಕ್ಷೋಹಿಣ್ಯಾ ಪೃಥಕ್ ಪೃಥಕ್ ॥19॥
ಹಾಗೆಯೇ, ಕುರುನಂದನನೇ, ಭೂರಿಶ್ರವ ಮತ್ತು ಶೂರನಾದ ಶಲ್ಯ ಇವರು ಒಂದೊಂದು ಅಕ್ಷೋಹಿಣಿ ಸೈನ್ಯದೊಂದಿಗೆ

ದುರ್ಯೋಧನನ ಬಳಿಗೆ ಬಂದರು.
ಕೃತವರ್ಮಾ ಚ ಹಾರ್ದಿಕ್ಯೋ ಭೋಜಾಂಧಕುಕುರೈಃ ಸಹ |
ಅಕ್ಷೋಹಿಣ್ಯೈವ ಸೇನಾಯಾ ದುರ್ಯೋಧನಮುಪಾಗಮತ್ ॥20॥
ತಸ್ಯ ತೈಃ ಪುರುಷವ್ಯೈರ್ವನಮಾಲಾಧರೈರ್ಬಲಮ್ |
ಅಶೋಭತ ತಥಾ ಮತ್ತೈರ್ವನಂ ಪ್ರಕ್ರೀಡಿತೈರ್ಗಜೈಃ ॥21॥
ಹಾರ್ದಿಕ್ಯನಾದ ಕೃತವರ್ಮನು ಭೋಜ, ಅಂಧಕ ಮತ್ತು ಕುಕುರರ ಜೊತೆಯಲ್ಲಿ ಒಂದು ಅಕ್ಷೋಹಿಣಿಯೊಂದಿಗೆ ದುರ್ಯೋಧನನ ಬಳಿಗೆ ಬಂದನು. ಪುರುಷವ್ಯಾಘ್ರರಾದ ಆ ಸೈನಿಕರೆಲ್ಲರೂ ವನಮಾಲೆಯನ್ನು ಧರಿಸಿದ್ದ ಆ ಸೈನ್ಯವು ಕಾಡಿನಲ್ಲಿ ಮದಿಸಿದ ಗಜಗಳ ವಿಲಾಸದಂತೆ ತೋರುತ್ತಿದ್ದಿತು.
ಜಯದ್ರಥಮುಖಾಶ್ಚಾನ್ಯೇ ಸಿಂಧುಸೌವೀರವಾಸಿನಃ |
ಆಜಗ್ಮುಃ ಪೃಥಿವೀಪಾಲಾಃ ಕಂಪಯಂತ ಇವಾಚಲಾನ್ ॥22॥
ತೇಷಾಮಕ್ಷೋಹಿಣೀ ಸೇನಾ ಬಹುಲಾ ವಿಬಭೌ ತದಾ |
ವಿಧೂಯಮಾನೋ ವಾತೇನ ಬಹುರೂಪ ಇವಾಂಬುದಃ ॥23॥
ಸಿಂಧುಸೌವೀರವಾಸಿಗಳಾದ ಜಯದ್ರಥನೇ ಮೊದಲಾದ ರಾಜರು ಪರ್ವತಗಳನ್ನೇ ನಡುಗಿಸುವಂತೆ ದುರ್ಯೋಧನನ ಬಳಿಗೆ ಬಂದರು. ಅವರ ಒಂದು ಅಕ್ಷೋಹಿಣಿ ಗಾತ್ರದ ದೊಡ್ಡ ಸೈನ್ಯವು ಗಾಳಿಯಿಂದ ಚದುರಿಸಲ್ಪಟ್ಟ ಬಹುರೂಪಗಳುಳ್ಳ ಮೋಡಗಳಂತೆ ಶೋಭಿಸುತ್ತಿದ್ದಿತು.
ಸುದಕ್ಷಿಣಶ್ಚ ಕಾಂಭೋಜೋ ಯವನೈಶ್ಚ ಶಕೈಸ್ತಥಾ |
ಉಪಾಜಗಾಮ ಕೌರವ್ಯಮಕ್ಷೋಹಿಣ್ಯಾ ವಿಶಾಂಪತೇ ॥24॥
ತಸ್ಯ ಸೇನಾಸಮವಾಯಃ ಶಲಭಾನಾಮಿವಾಬಭೌ |
ಸ ಚ ಸಂಪ್ರಾಪ್ಯ ಕೌರವ್ಯಂ ತತ್ರೈವಾಂತರ್ದಧೇ ತದಾ ॥25॥
ಕಾಂಭೋಜರಾಜನಾದ ಸುದಕ್ಷಿಣನು ಯವನ ಮತ್ತು ಶಕರ ಜೊತೆಯಲ್ಲಿ ಒಂದು ಅಕ್ಷೋಹಿಣಿ ಸೈನ್ಯದೊಂದಿಗೆ ದುರ್ಯೋಧನನ ಬಳಿಗೆ ಬಂದನು. ಎಲೈ ರಾಜನೇ, ಅವನ ಆ ಸೈನ್ಯಸಮೂಹವು ಪತಂಗಗಳಂತೆ ತೋರುತ್ತಿದ್ದಿತು. ಅವನು ಕೌರವ ಸೈನ್ಯವನ್ನು ಪ್ರವೇಶಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಆವಂತ್ಯೌ ಚ ಮಹೀಪಾಲೌ ಮಹಾಬಲಸುಸಂವೃತೌ |
ಪೃಥಗಕ್ಷೋಹಿಣೀಭ್ಯಾಂ ತಾವಭಿಯಾತೌ ಸುಯೋಧನಮ್ ॥26॥
ಆವಂತಿದೇಶದ ಇಬ್ಬರು ರಾಜರು ಮಹಾಬಲದಿಂದ ಕೂಡಿದವರಾಗಿ ಇಬ್ಬರೂ ಒಂದೊಂದು ಅಕ್ಷೋಹಿಣಿ ಸೈನ್ಯದಿಂದ ಕೂಡಿ ಸುಯೋಧನನ ಬಳಿಗೆ ಬಂದರು.
ಇತಸ್ತತಸ್ತು ಸರ್ವೇಷಾಂ ಭೂಮಿಪಾನಾಂ ಮಹಾತ್ಮನಾಮ್ |
ತಿಸ್ರೋಽನ್ಯಾಃ ಸಮವರ್ತಂತ ವಾಹಿನ್ಯೋ ಭರತರ್ಷಭ ॥27॥
ಭರತರ್ಷಭನೇ, ಅಲ್ಲಿಂದಿಲ್ಲಿಂದ ಬಂದು ಸೇರಿದ ಮಹಾತ್ಮರಾದ ರಾಜರ ಸೈನ್ಯಗಳು ಬೇರೆ ಮೂರು ಅಕ್ಷೋಹಿಣಿ ಇದ್ದವು.
ಏವಮೇಕಾದಶಾ ವೃತ್ತಾಃ ಸೇನಾ ದುರ್ಯೋಧನಸ್ಯ ತಾಃ |
ಯುಯುತ್ಸಮಾನಾಃ ಕೌಂತೇಯಾನ್ ನಾನಾಧ್ವಜಸಮಾಕುಲಾಃ ॥28॥
ಹೀಗೆ ಕೌಂತೇಯರ ಜೊತೆಯಲ್ಲಿ ಯುದ್ಧಮಾಡಲು ಬಯಸುವ ನಾನಾ ಧ್ವಜ ನಿಬಿಡವಾದ ದುರ್ಯೋಧನನ ಆ ಸೈನ್ಯಗಳು ಹನ್ನೊಂದು ಅಕ್ಷೋಹಿಣಿ ಇದ್ದವು (ಭಗದತ್ತ-1, ಭೂರಿಶ್ರವ-1, ಶಲ್ಯ-1, ಕೃತವರ್ಮ-1, ಜಯದ್ರಥ-1, ಸುದಕ್ಷಿಣ-1, ಆವಂತಿ ರಾಜರು-2, ಇತರೆ-3. ಹೀಗೆ ಒಟ್ಟು ಹನ್ನೊಂದು ಅಕ್ಷೋಹಿಣಿಯಾದವು).
ನ ಹಸ್ತಿನಪುರೇ ರಾಜನ್ ಅವಕಾಶೋಽಭವತ್ ತದಾ |
ರಾಜ್ಞಾಂ ಸ್ವಬಲಮುಖ್ಯಾನಾಂ ಪ್ರಾಧಾನ್ಯೇನಾಪಿ ಭಾರತ ॥29॥
ಎಲೈ ರಾಜನೇ, ಎಲೈ ಭಾರತನೇ, ತಮ್ಮ ತಮ್ಮ ಪ್ರಧಾನ ಸೈನ್ಯದಿಂದ ಬಂದು ಸೇರಿದಾಗ ಹಸ್ತಿನಪುರದಲ್ಲಿ ಆಗ ಯಾವ ಅವಕಾಶವೂ ಉಳಿದಿರಲಿಲ್ಲ.
ತತಃ ಪಂಚನದಂ ಚೈವ ಕೃತ್ಸ್ನಂ ಚ ಕುರುಜಾಂಗಲಮ್ |
ತಥಾ ರೋಹಿತಕಾರಣ್ಯಂ ಮರುಭೂಮಿಶ್ಚ ಕೇವಲಾ ॥30॥
ಅಹಿಚ್ಛತ್ರಂ ಕಾಲಕೂಟಂ ಗಂಗಾತೀರಂ ಚ ಭಾರತ |
ವರಣಾವಾಟಧಾನಂ ಚ ಯಾಮುನಶ್ಚೈವ ಪರ್ವತಃ ॥31॥
ಏಷ ದೇಶಃ ಸುವಿಸ್ತೀರ್ಣಃ ಪ್ರಭೂತಧನಧಾನ್ಯವಾನ್ |
ಬಭೂವ ಕೌರವೇಯಾಣಾಂ ಬಲೇನ ಸುಸಮಾಕುಲಮ್ ॥32॥
ಎಲೈ ಭಾರತನೇ, ಆಗ ಸಮಗ್ರವಾದ ಪಂಚನದ ದೇಶ, ಕುರುಜಾಂಗಲ, ರೋಹಿತಕಾರಣ್ಯ, ಮರುಭೂಮಿ, ಅಹಿಚ್ಛತ್ರ, ಕಾಲಕೂಟ ಪರ್ವತ, ಗಂಗಾತೀರ, ವಾರಣ, ವಾಟಧಾನ, ಯಾಮುನಪರ್ವತ ಈ ಸುವಿಸ್ತೀರ್ಣವಾದ ಧನಧಾನ್ಯಸಹಿತವಾದ ದೇಶವು ಕೌರವ ಸೈನ್ಯದಿಂದ ತುಂಬಿಹೋಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಸೇನೋದ್ಯೋಗಪರ್ವಣಿ ಏಕೋನವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಹತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಸೇನೋದ್ಯೋಗಪರ್ವ ॥
* * * * *
2. ಸಂಜಯಯಾನಪರ್ವ
ಇಪ್ಪತ್ತನೆಯ ಅಧ್ಯಾಯ
ಹಸ್ತಿನಪುರಕ್ಕೆ ಹೋಗಿ ದ್ರುಪದನ ಪುರೋಹಿತನಿಂದ ದ್ರುಪದಸಂದೇಶಕಥನ
ವೈಶಂಪಾಯನಃ
ಯಃ ಸ ಪಾಂಚಾಲರಾಜೇನ ಪ್ರೇಷಿತಃ ಕೌರವಾನ್ ಪ್ರತಿ ॥1॥
ಸ ಚ ಕೌರವ್ಯಮಾಸಾದ್ಯ ದ್ರುಪದಸ್ಯ ಪುರೋಹಿತಃ |
ಸತ್ಕೃತೋ ಧೃತರಾಷ್ಟ್ರೇಣ ಭೀಷ್ಮೇಣ ವಿದುರೇಣ ಚ ॥2॥
ಸರ್ವಂ ಕೌಶಲ್ಯಮುಕ್ತ್ವಾಽಽದೌ ಪೃಷ್ಟ್ವಾ ಚೈವಮನಾಮಯಮ್ |
ಸರ್ವಸೈನ್ಯಪ್ರಣೇತೄಣಾಂ ಮಧ್ಯೇ ವಾಕ್ಯಮುವಾಚ ಹ ॥3॥
ವೈಶಂಪಾಯನ ಯಾವ ದ್ರುಪದನ ಪುರೋಹಿತನು ಪಾಂಚಾಲರಾಜನಾದ ದ್ರುಪದನಿಂದ ಕೌರವರ ಬಳಿಗೆ ಕಳುಹಿಸಲ್ಪಟ್ಟನೋ ಅವನು ಧೃತರಾಷ್ಟ್ರನನ್ನು ತಲುಪಿ, ಧೃತರಾಷ್ಟ್ರನಿಂದಲೂ, ಭೀಷ್ಮರಿಂದಲೂ ಮತ್ತು ವಿದುರನಿಂದಲೂ ಪೂಜಿತನಾಗಿ ಮೊದಲು ಎಲ್ಲಾ ಕ್ಷೇಮವನ್ನು ಹೇಳಿ, ಅವರ ಕ್ಷೇಮವನ್ನು ವಿಚಾರಿಸಿ, ಎಲ್ಲಾ ಸೇನಾನಾಯಕರ ಮಧ್ಯದಲ್ಲಿ ಈ ಮಾತುಗಳನ್ನು ಆಡಿದನು.
ಸರ್ವೈರ್ಭವದ್ಭಿರ್ವಿದಿತೋ ರಾಜಧರ್ಮಃ ಸನಾತನಃ |
ವಾಕ್ಯೋಪಾದಾನಹೇತೋಸ್ತು ವಕ್ಷ್ಯಾಮಿ ವಿದಿತೇ ಸತಿ ॥4॥
ನಿಮಗೆಲ್ಲರಿಗೂ ಸನಾತನವಾದ ರಾಜಧರ್ಮವು ತಿಳಿದಿದೆ. ನಿಮಗೆ ತಿಳಿದಿದ್ದರೂ ಸಹ ನಾನು ಮಾತನಾಡಬೇಕಾದ ಕಾರಣದಿಂದ ಹೇಳುವೆನು.
ಧೃತರಾಷ್ಟ್ರಶ್ಚ ಪಾಂಡುಶ್ಚ ಸುತಾವೇಕಸ್ಯ ವಿಶ್ರುತೌ |
ತಯೋಃ ಸಮಾನಂ ದ್ರವಿಣಂ ಪೈತೃಕಂ ನಾತ್ರ ಸಂಶಯಃ ॥5॥
ಪ್ರಖ್ಯಾತರಾದ ಧೃತರಾಷ್ಟ್ರ ಮತ್ತು ಪಾಂಡು ಇವರಿಬ್ಬರು ಒಬ್ಬನೇ ತಂದೆಯ ಮಕ್ಕಳು. ತಂದೆಯ ಸಂಪತ್ತಿನಲ್ಲಿ ಅವರಿಗೆ ಸಮಾನವಾದ ಭಾಗವಿದೆ ಎಂಬುದರಲ್ಲಿ ಸಂಶಯವಿಲ್ಲ.
ಧೃತರಾಷ್ಟ್ರಸ್ಯ ಯೇ ಪುತ್ರಾಸ್ತೈಃ ಪ್ರಾಪ್ತಂ ಪೈತೃಕಂ ಧನಮ್ |
ಪಾಂಡುಪುತ್ರಾಃ ಕಥಂ ನಾಮ ನ ಪ್ರಾಪ್ತಾಃ ಪೈತೃಕಂ ವಸು ॥6॥
ಧೃತರಾಷ್ಟ್ರನ ಪುತ್ರರಿಂದ ಅವರ ಪಿತೃಧನವು ಪ್ರಾಪ್ತವಾಯಿತು. ಪಾಂಡು ಪುತ್ರರಿಗೆ ಮಾತ್ರ ಪಿತೃಧನವು ಏಕೆ ಪ್ರಾಪ್ತವಾಗಲಿಲ್ಲ?
ಏವಂ ಗತೇ ಪಾಂಡವೇಯೈರ್ವಿದಿತಂ ವಃ ಪುರಾ ಯಥಾ |
ನ ಪ್ರಾಪ್ತಂ ಪೈತೃಕಂ ದ್ರವ್ಯಂ ಧಾರ್ತರಾಷ್ಟ್ರೇಣ ಸಂವೃತಮ್ ॥7॥
ಪರಿಸ್ಥಿತಿಯು ಹೀಗಿರುವಾಗ ಧೃತರಾಷ್ಟ್ರ ಪುತ್ರನಾದ ದುರ್ಯೋಧನನಿಂದ ಹಿಡಿದುಕೊಳ್ಳಲ್ಪಟ್ಟ ಪಾಂಡವರ ಪಿತೃಧನವು ಪಾಂಡವರಿಗೆ ಹೇಗೆ ಸೇರಲಿಲ್ಲ ಎಂಬ ವಿಷಯವು ನಿಮಗೆ ತಿಳಿದಿದೆ.
ಪ್ರಾಣಾಂತಿಕೈರಪ್ಯುಪಾಯೈಃ ಪ್ರಯತದ್ಭಿರನೇಕಶಃ |
ಶೇಷವಂತೋ ನ ಶಕಿತಾ ಗಮಿತುಂ ಯಮಸಾದನಮ್ ॥8॥
ಪ್ರಾಣಾಂತಿಕವಾದ ಅನೇಕ ರೀತಿಯ ಉಪಾಯಗಳನ್ನು ಮಾಡಿ ಪ್ರಯತ್ನ ಪಟ್ಟರೂ ಪಾಂಡವರಿಗೆ ಆಯುಸ್ಸು ಇನ್ನೂ ಉಳಿದಿದ್ದರಿಂದ ಅವರನ್ನು ಯಮಪಟ್ಟಣಕ್ಕೆ ಕಳುಹಿಸಲು ದುರ್ಯೋಧನಾದಿಗಳಿಗೆ ಸಾಧ್ಯವಾಗಲಿಲ್ಲ.
ಪುನಶ್ಚ ವರ್ಧಿತಂ ರಾಜ್ಯಂ ಸ್ವಬಲೇನ ಮಹಾತ್ಮಭಿಃ |
ಛದ್ಮನಾಽಪಹೃತಂ ಕ್ಷುದ್ರೈರ್ಧಾರ್ತರಾಷ್ಟ್ರೈಃ ಸಸೌಬಲೈಃ ॥9॥
ಮಹಾತ್ಮರಾದ ಪಾಂಡವರು ಆ ರಾಜ್ಯವನ್ನು ತಮ್ಮ ಬಲದಿಂದ ಪುನಃ ಅಭಿವೃದ್ಧಿ ಪಡಿಸಿದರು. ಕ್ಷುದ್ರರಾದ ಧೃತರಾಷ್ಟ್ರಪುತ್ರರು ಶಕುನಿಯ ಜೊತೆಯಲ್ಲಿ ಸೇರಿ ಮೋಸದಿಂದ ಅದನ್ನು ಅಪಹರಿಸಿದರು.
ತದಪ್ಯನುಮತಂ ಕರ್ಮ ಯಥಾಯುಕ್ತಮನೇನ ವೈ |
ವಿವಾಸಿತಾ ಮಹಾರಣ್ಯೇ ವರ್ಷಾಣೀಹ ತ್ರಯೋದಶ ॥10॥
ದುರ್ಯೋಧನನು ಪ್ರಯೋಗಿಸಿ ಮಾಡಿದ ಈ ಕರ್ಮವನ್ನೂ ಪಾಂಡವರು ಅನುಮೋದಿಸಿದರು. ಮತ್ತು ಹದಿಮೂರು ವರ್ಷಗಳ ಕಾಲ ದೊಡ್ಡ ಕಾಡಿನಲ್ಲಿ ಕಾಲವನ್ನು ಕಳೆದರು.
ಸಭಾಯಾಂ ಕ್ಲೇಶಿತೈರ್ವೀರೈಃ ಸಹಭಾರ್ಯೈಸ್ತಥಾ ಭೃಶಮ್ |
ಅರಣ್ಯೇ ವಿವಿಧಾಃ ಕ್ಲೇಶಾಃ ಸಂಪ್ರಾಪ್ತಾಸ್ತೈಃ ಸುದಾರುಣಾಃ ॥11॥
ಸಭೆಯಲ್ಲಿ ಪತ್ನಿಯ ಜೊತೆಯಲ್ಲಿ ಅಂತಹ ಬಹಳ ಕ್ಲೇಶಕ್ಕೆ ಒಳಗಾದ ವೀರರಾದ ಅವರು ಕಾಡಿನಲ್ಲಿ ಭಯಂಕರವಾದ ಅನೇಕ ವಿಧವಾದ ಕ್ಲೇಶಗಳನ್ನು ಅನುಭವಿಸಿದರು.
ತಥಾ ವಿರಾಟನಗರೇ ಯೋನ್ಯಂತರಗತೈರಿವ |
ಪ್ರಾಪ್ತಃ ಪರಮಸಂಕ್ಲೇಶೋ ಯಥಾ ಪಾಪೈರ್ಮಹಾತ್ಮಭಿಃ ॥12॥
ಅದರಂತೆ ವಿರಾಟನಗರದಲ್ಲಿ ಪಾಪಿಗಳು ಅನುಭವಿಸುವ ಅನೇಕ ಕ್ಲೇಶಗಳನ್ನು ಗರ್ಭವಾಸದಲ್ಲಿರುವವರಂತೆ ಮಹಾತ್ಮರಾದ ಅವರು

ಅನುಭವಿಸಿದರು.
ತೇ ಸರ್ವೇ ಪೃಷ್ಠತಃ ಕೃತ್ವಾ ತತ್ಸರ್ವಂ ಪೂರ್ವಕಿಲ್ಬಿಷಮ್ |
ಸಾಮ್ನೈವ ಕುರುಭಿಃ ಸಾರ್ಧಮಿಚ್ಛಂತಿ ಕುರುಪುಂಗವಾಃ ॥13॥
ಎಲೈ ಕುರುಪುಂಗವರೇ, ಅವರು ಹಿಂದೆ ಮಾಡಿದ ಎಲ್ಲಾ ಅಪರಾಧಗಳನ್ನೂ ಹಿಂದಕ್ಕೆ ಇಟ್ಟು ಕುರುಗಳ ಜೊತೆಯಲ್ಲಿ ಸಾಮೋಪಾಯವನ್ನೇ ಬಯಸುತ್ತಾರೆ.
ತೇಷಾಂ ಚ ವೃತ್ತಮಾಜ್ಞಾಯ ವೃತ್ತಂ ದುರ್ಯೋಧನಸ್ಯ ಚ |
ಅನುನೇತುಮಿಹಾರ್ಹಂತಿ ಧೃತರಾಷ್ಟ್ರಂ ಸುಹೃಜ್ಜನಾಃ ॥14॥
ಪಾಂಡವರ ನಡತೆಯನ್ನು ತಿಳಿದು ಹಾಗೆಯೇ ದುರ್ಯೋಧನನ ನಡತೆಯನ್ನೂ ತಿಳಿದು ಸುಹೃಜ್ಜನರು ಧೃತರಾಷ್ಟ್ರನಿಗೆ ಬುದ್ಧಿಯನ್ನು ಹೇಳಬೇಕು.
ನ ಹಿ ತೇ ವಿಗ್ರಹಂ ವೀರಾಃ ಕುರ್ವಂತಿ ಕುರುಭಿಃ ಸಹ |
ಅವಿನಾಶೇನ ಲೋಕಸ್ಯ ಕಾಂಕ್ಷಂತೇ ಪಾಂಡವಾಃ ಸ್ವಕಮ್ ॥15॥
ವೀರರಾದ ಪಾಂಡವರು ಕುರುಗಳ ಜೊತೆಯಲ್ಲಿ ಯುದ್ಧವನ್ನು ಬಯಸುವುದಿಲ್ಲ. ಲೋಕಕ್ಕೆ ವಿನಾಶವಾಗದಂತೆ ತಮ್ಮ ಪಿತೃಧನವನ್ನು ಮಾತ್ರ ಅಪೇಕ್ಷಿಸುತ್ತಾರೆ.
ಯಶ್ಚಾಪಿ ಧಾರ್ತರಾಷ್ಟ್ರಸ್ಯ ಹೇತುಃ ಸ್ಯಾದ್ ವಿಗ್ರಹಂ ಪ್ರತಿ |
ಸ ಚ ಹೇತುರ್ನ ಮಂತವ್ಯೋ ಬಲೀಯಾಂಸಸ್ತಥಾ ಹಿ ತೇ ॥16॥
ದುರ್ಯೋಧನನು ಯುದ್ಧವನ್ನು ಮಾಡಲು ಯಾವುದಾದರೂ ಕಾರಣವಿದೆ ಎಂದು ತಿಳಿದರೆ ಅದನ್ನು ಕಾರಣವೆಂದು ತಿಳಿಯಬಾರದು. ಆ ಪಾಂಡವರು ಬಹಳ ಬಲಿಷ್ಠರಾದವರು.
ಅಕ್ಷೋಹಿಣ್ಯಶ್ಚ ಸಪ್ತೈವ ಧರ್ಮರಾಜಸ್ಯ ಸಂಗತಾಃ |
ಯುಯುತ್ಸಮಾನಾಃ ಕುರುಭಿಃ ಪ್ರತೀಕ್ಷಂತೇಽಸ್ಯ ಶಾಸನಮ್ ॥17॥
ಧರ್ಮರಾಜನ ಬಳಿಯಲ್ಲಿ ಏಳು ಅಕ್ಷೋಹಿಣಿ ಸೈನ್ಯವು ಒಟ್ಟಾಗಿದೆ. ಅವರು ಕುರುಗಳ ಜೊತೆಯಲ್ಲಿ ಯುದ್ಧಮಾಡಲು ಬಯಸಿ ಧರ್ಮರಾಜನ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದಾರೆ.
ಅಪರೇ ಪುರುಷವ್ಯಾಘ್ರಾಃ ಸಹಸ್ರಾಕ್ಷೋಹಿಣೀಸಮಾಃ |
ಸಾತ್ಯಕಿರ್ಭೀಮಸೇನಶ್ಚ ಯಮೌ ಚ ಸುಮಹಾಬಲೌ ॥18॥
ಇನ್ನು ಉಳಿದ ಪುರುಷವ್ಯಾಘ್ರರಾದ ಸಾತ್ಯಕಿ, ಭೀಮಸೇನ, ಮಹಾಬಲಿಷ್ಠರಾದ ನಕುಲ-ಸಹದೇವರು ಒಬ್ಬೊಬ್ಬರೂ ಸಾವಿರ ಅಕ್ಷೋಹಿಣಿಗೆ ಸಮನಾದವರು.
ಏಕಾದಶೈತಾಃ ಪೃತನಾ ಏಕತಸ್ತೇ ಸಮಾಗತಾಃ |
ಏಕತಶ್ಚ ಮಹಾಬಾಹುರ್ಬಹುರೂಪೋ ಧನಂಜಯಃ ॥19॥
ನಿನಗೆ ಹನ್ನೊಂದು ಅಕ್ಷೋಹಿಣಿ ಸೈನ್ಯವು ಒಟ್ಟುಗೂಡಿದೆ. ಅದು ಒಂದು ಕಡೆ. ಇನ್ನೊಂದು ಕಡೆ ಮಹಾಬಾಹುವೂ ಮತ್ತು ಬಹುರೂಪಧರನೂ ಆದ ಅರ್ಜುನನೊಬ್ಬನೇ ಸಾಕು.
ಯಥಾ ಕಿರೀಟೀ ಸರ್ವಾಭ್ಯಃ ಸೇನಾಭ್ಯೋಽಪ್ಯತಿರಿಚ್ಯತೇ |
ಏವಮೇವ ಮಹಾಬಾಹುರ್ವಾಸುದೇವೋ ಮಹಾದ್ಯುತಿಃ ॥20॥
ಹೇಗೆ ಅರ್ಜುನನು ಎಲ್ಲಾ ಸೇನೆಗಳಿಗಿಂತಲೂ ಮಿಗಿಲಾಗಿದ್ದಾನೆಯೋ ಅದರಂತೆ ಮಹಾಬಾಹುವೂ ಮಹಾದ್ಯುತಿಯೂ ಆದ ಕೃಷ್ಣನು ಎಲ್ಲರಿಗಿಂತಲೂ ಮಿಗಿಲಾಗಿದ್ದಾನೆ.
ಬಹುಲತ್ವಂ ಚ ಸೇನಾಯಾಂ ವಿಕ್ರಮಂ ಚ ಕಿರೀಟಿನಃ |
ಬುದ್ಧಿಮತ್ತ್ವಂ ಚ ಕೃಷ್ಣಸ್ಯ ಬುದ್ಧ್ವಾ ಯುಧ್ಯೇತ ಕೋ ನರಃ ॥21॥
ಸೈನ್ಯದ ಅಗಾಧತೆಯನ್ನೂ, ಅರ್ಜುನನ ಪರಾಕ್ರಮವನ್ನೂ ಮತ್ತು ಕೃಷ್ಣನ ಬುದ್ಧಿಶಕ್ತಿಯನ್ನೂ ತಿಳಿದ ಯಾವ ಮನುಷ್ಯನು ಅವರ ವಿರುದ್ಧ ಯುದ್ಧಮಾಡಿಯಾನು?
ತೇ ಭವಂತೋ ಯಥಾ ಧರ್ಮಂ ಯಥಾಽನಾಮಯಮೇವ ಚ |
ಪ್ರಯಚ್ಛಂತು ಪ್ರದಾತವ್ಯಂ ಮಾ ವಃ ಕಾಲೋಽತ್ಯಗಾದಯಮ್ ॥22॥
ಅಂತಹ ನೀವು ಧರ್ಮಕ್ಕೆ ಅನುಗುಣವಾಗಿ ಕ್ಷೇಮದಿಂದ ಪಾಂಡವರಿಗೆ ಏನು ಸಲ್ಲಬೇಕೋ ಅದನ್ನು ಕೊಡಿ. ಕಾಲವು ಮೀರಿ ಹೋಗದಿರಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ಪುರೋಹಿತರ ಮಾತಿಗೆ ಭೀಷ್ಮರ ಅನುಮೋದನೆ, ಕರ್ಣನ ಆಕ್ಷೇಪ
ಮತ್ತು ಧೃತರಾಷ್ಟ್ರನ ಉತ್ತರ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಪ್ರಜ್ಞಾವೃದ್ಧೋ ಮಹಾದ್ಯುತಿಃ |

ಸಂಪೂಜ್ಯೈನಂ ಯಥಾಕಾಲಂ ಭೀಷ್ಮೋ ವಚನಮಬ್ರವೀತ್ ॥1॥
ವೈಶಂಪಾಯನ ಪುರೋಹಿತನ ಆ ಮಾತುಗಳನ್ನು ಕೇಳಿ ಮಹಾದ್ಯುತಿಯೂ, ಜ್ಞಾನವೃದ್ಧನೂ ಆದ ಭೀಷ್ಮನು ಅವನನ್ನು ಪೂಜಿಸಿ, ಆ ಕಾಲಕ್ಕೆ ಉಚಿತವಾದ ಮಾತುಗಳನ್ನು ಆಡಿದನು.
ದಿಷ್ಟ್ಯಾ ಕುಶಲಿನಃ ಸರ್ವೇ ಸಹ ದಾಮೋದರೇಣ ತೇ।
ದಿಷ್ಟ್ಯಾ ಸಹಾಯವಂತಶ್ಚ ದಿಷ್ಟ್ಯಾ ಧರ್ಮೇ ಚ ತೇ ರತಾಃ ॥2॥
ದೇವರ ದಯದಿಂದ ಕೃಷ್ಣನ ಜೊತೆಯಲ್ಲಿ ಪಾಂಡವರೆಲ್ಲರೂ ಕುಶಲದಿಂದಿದ್ದಾರೆ. ದೇವರ ದಯದಿಂದ ಅವರು ಸಹಾಯವನ್ನು ಹೊಂದಿದವರು ಮತ್ತು ಧರ್ಮದಲ್ಲಿ ನಿರತರೂ ಆಗಿದ್ದಾರೆ.
ದಿಷ್ಟ್ಯಾ ಚ ಸಂಧಿಕಾಮಾಸ್ತೇ ಭ್ರಾತರಃ ಕುರುನಂದನಾಃ।
ದಿಷ್ಟ್ಯಾ ನ ಯುದ್ಧಮನಸಃ ಪಾಂಡವಾಃ ಸಹ ಬಾಂಧವೈಃ ॥3॥
ಕುರುನಂದನರಾದ ಆ ಸಹೋದರರು ದೇವರ ದಯದಿಂದ ಸಂಧಿಯನ್ನು ಬಯಸುವವರಾಗಿದ್ದಾರೆ. ದೇವರ ದಯದಿಂದಲೇ ಪಾಂಡವರು ಬಂಧುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವ ಮನಸ್ಸನ್ನು ಹೊಂದಿಲ್ಲ.
ಭವತಾ ಸತ್ಯಮುಕ್ತಂ ತು ಸರ್ವಮೇತನ್ನ ಸಂಶಯಃ।
ಅತಿತೀಕ್ಷ್ಣಂ ತು ತೇ ವಾಕ್ಯಂ ಬ್ರಾಹ್ಮಣ್ಯಾದಿತಿ ಮೇ ಮತಿಃ ॥4॥
ನೀವು ಹೇಳಿದ ಎಲ್ಲ ಮಾತುಗಳೂ ಸತ್ಯವಾಗಿವೆ. ಇದರಲ್ಲಿ ಸಂಶಯವಿಲ್ಲ. ಆದರೆ ನೀವು ಬ್ರಾಹ್ಮಣರಾದ ಕಾರಣದಿಂದ ನಿಮ್ಮ ಮಾತುಗಳು ಬಹಳ ತೀಕ್ಷ್ಣ ಎಂದು ನನ್ನ ಅಭಿಪ್ರಾಯ.
ಅಸಂಶಯಂ ಕ್ಲೇಶಿತಾಸ್ತೇ ವನೇ ಚೈವಂ ಚ ಪಾಂಡವಾಃ।
ಪ್ರಾಪ್ತಾಶ್ಚ ಧರ್ಮತಃ ಸರ್ವಂ ಪಿತುರ್ಧನಮಸಂಶಯಮ್ ॥5॥
ಪಾಂಡವರು ವನವಾಸದಲ್ಲಿ ನಿಸ್ಸಂಶಯವಾಗಿ ಹೀಗೆ ಕ್ಲೇಶಕ್ಕೆ ಒಳಗಾಗಿದ್ದಾರೆ. ಮತ್ತು ನಿಸ್ಸಂಶಯವಾಗಿ ಧರ್ಮದಿಂದಲೇ ತಮ್ಮ ಪಿತೃಧನವನ್ನು ಪಡೆದವರಾಗಿದ್ದಾರೆ.
ಕಿರೀಟೀ ಬಲವಾನ್ ಶೂರಃ ಕೃತಾಸ್ತ್ರಶ್ಚ ಮಹಾದ್ಯುತಿಃ।
ಕೋ ಹಿ ಪಾಂಡುಸುತಂ ಯುದ್ಧೇ ವಿಷಹೇತ ಧನಂಜಯಮ್ ॥6॥
ಅಪಿ ವಜ್ರಧರಃ ಸಾಕ್ಷಾತ್ ಕಿಮುತಾನ್ಯೇ ಧನುರ್ಭೃತಃ।
ತ್ರಯಾಣಾಮಪಿ ಲೋಕಾನಾಂ ಸಮರ್ಥ ಇತಿ ಮೇ ಮತಿಃ ॥7॥
ಅರ್ಜುನನು ಬಲಿಷ್ಠನೂ, ಶೂರನೂ, ಅಸ್ತ್ರಪರಿಣತನೂ ಮತ್ತು ಮಹಾತೇಜಸ್ಸುಳ್ಳವನೂ ಆಗಿದ್ದಾನೆ. ಸಾಕ್ಷಾತ್ ವಜ್ರಧರನಾದ ಇಂದ್ರನೇ ಸಹ ಪಾಂಡುಸುತನಾದ ಅರ್ಜುನನನ್ನು ಹೇಗೆ ಯುದ್ಧದಲ್ಲಿ ಎದುರಿಸಿಯಾನು? ಇನ್ನು ಉಳಿದ ಧನುರ್ಧಾರಿಗಳ ಪಾಡೇನು? ಅವನು ಒಬ್ಬನೇ ಮೂರುಲೋಕಗಳನ್ನು ಜಯಿಸಲು ಸಮರ್ಥನಾಗಿದ್ದಾನೆ ಎಂದು ನನ್ನ ಅಭಿಪ್ರಾಯ.
ವೈಶಂಪಾಯನಃ
ಭೀಷ್ಮೇ ಬ್ರುವತಿ ತದ್ ವಾಕ್ಯಂ ಧೃಷ್ಟಮಾಕ್ಷಿಪ್ಯ ಮನ್ಯುನಾ।
ದುರ್ಯೋಧನಂ ಸಮಾಲೋಕ್ಯ ಕರ್ಣೋ ವಚನಮಬ್ರವೀತ್ ॥8॥
ವೈಶಂಪಾಯನ ಭೀಷ್ಮನು ಈ ಮಾತನ್ನು ಆಡುತ್ತಿರಲು ಕರ್ಣನು ಸಿಟ್ಟಿನಿಂದ ಅದನ್ನು ಆಕ್ಷೇಪಿಸಿ ದುರ್ಯೋಧನನನ್ನು ನೋಡುತ್ತಾ ಉದ್ಧಟತನದಿಂದ ಮಾತನಾಡಿದನು.
ನ ತನ್ನ ವಿದಿತಂ ಬ್ರಹ್ಮನ್ ಲೋಕೇ ಭೂತೇನ ಕೇನಚಿತ್।
ಪುನರುಕ್ತೇನ ಕಿಂ ತೇನ ಭಾಷಿತೇನ ಪುನಃ ಪುನಃ ॥9॥
ಬ್ರಾಹ್ಮಣನೇ, ನೀನು ಹೇಳಿದ ವಿಷಯವು ಲೋಕದಲ್ಲಿ ಯಾರಿಗೂ ತಿಳಿದಿಲ್ಲವೆಂದಿಲ್ಲ. ಅದನ್ನು ಮತ್ತೆ ಮತ್ತೆ ಹೇಳುವುದರಿಂದ ಏನು ಪ್ರಯೋಜನ?
ದುರ್ಯೋಧನಾರ್ಥೇ ಶಕುನಿಃ ದ್ಯೂತೇ ನಿರ್ಜಿತವಾನ್ ಪುರಾ।
ಸಮಯೇನ ಗತೋಽರಣ್ಯಂ ಪಾಂಡುಪುತ್ರೋ ಯುಧಿಷ್ಠಿರಃ ॥10॥
ಹಿಂದೆ ದ್ಯೂತದಲ್ಲಿ ದುರ್ಯೋಧನನ ಪರವಾಗಿ ಶಕುನಿಯು ಗೆದ್ದನು. ಪಾಂಡುಪುತ್ರನಾದ ಯುಧಿಷ್ಠಿರನು ಮಾಡಿಕೊಂಡ ನಿಯಮದಂತೆ ಅರಣ್ಯಕ್ಕೆ ಹೋದನು.
ಸ ತಂ ಸಮಯಮುತ್ಸೃಜ್ಯ ರಾಜ್ಯಮಿಚ್ಛತಿ ಪೈತೃಕಮ್।
ಬಲಮಾಶ್ರಿತ್ಯ ಮತ್ಸ್ಯಾನಾಂ ಪಾಂಚಾಲಾನಾಂ ಯುಧಿಷ್ಠಿರಃ ॥11॥
ಈಗ ಧರ್ಮರಾಜನು ಆ ನಿಯಮವನ್ನು ಬಿಟ್ಟು ಮತ್ಸ್ಯರ ಮತ್ತು ಪಾಂಚಾಲರ ಬಲವನ್ನು ಅವಲಂಬಿಸಿ ತಂದೆಯ ರಾಜ್ಯವನ್ನು ಪಡೆಯಲು ಬಯಸುತ್ತಾನೆ.
ದುರ್ಯೋಧನೋ ಭಯಾದ್ ವಿದ್ವನ್ ನ ದದ್ಯಾತ್ ಪಾದಮಂತತಃ।
ಧರ್ಮತಸ್ತು ಮಹೀಂ ಕೃತ್ಸ್ನಾಂ ಪ್ರದದ್ಯಾಚ್ಛತ್ರವೇಽಪಿ ಚ ॥12॥
ಎಲೈ ವಿದ್ವಾಂಸನೇ, ದುರ್ಯೋಧನನು ಭಯದಿಂದ ಒಂದು ಹೆಜ್ಜೆ ಭೂಮಿಯನ್ನೂ ಕೊಡಲಾರ. ಧರ್ಮದಿಂದಾದರೆ ಮಾತ್ರ ಶತ್ರುವಿಗೂ ಸಹ ಸಮಗ್ರವಾದ ಭೂಮಿಯನ್ನೇ ಕೊಟ್ಟಾನು.
ಯದಿ ಕಾಂಕ್ಷಂತಿ ತೇ ರಾಜ್ಯಂ ಪಿತೃಪೈತಾಮಹಂ ಪುನಃ।
ಯಥಾಪ್ರತಿಜ್ಞಂ ತಂ ಕಾಲಂ ಚರಂತು ವನಮಾಶ್ರಿತಾಃ ॥13॥
ಪಾಂಡವರು ತಮ್ಮ ಪಿತೃ-ಪೈತಾಮಹ ರಾಜ್ಯವನ್ನು ಅಪೇಕ್ಷಿಸುವುದಾದರೆ ಮೊದಲು ಪ್ರತಿಜ್ಞೆ ಮಾಡಿದಂತೆ ಪುನಃ ಅಷ್ಟು ಕಾಲವನ್ನು

ಕಾಡಿನಲ್ಲಿ ಕಳೆಯಲಿ.
ತತೋ ದುರ್ಯೋಧನಸ್ಯಾಂಕೇ ವರ್ತಂತಾಮಕುತೋಭಯಾಃ |
ಅಧಾರ್ಮಿಕೀಂ ತ್ವಿಮಾಂ ಬುದ್ಧಿಂ ಮೌರ್ಖ್ಯಾತ್ ಕುರ್ವಂತಿ ಕೇವಲಾತ್॥
ಅನಂತರ ದುರ್ಯೋಧನನ ತೊಡೆಯಲ್ಲಿ ನಿರ್ಭಯವಾಗಿ ಮಲಗಬಹುದು. ಆದರೆ ಅವರು ಕೇವಲ ಮೂರ್ಖತನದಿಂದ ಈ ಅಧಾರ್ಮಿಕವಾದ ಬುದ್ಧಿಯನ್ನು ಮಾಡುತ್ತಿದ್ದಾರೆ.
ಅಥ ತೇ ಧರ್ಮಮುತ್ಸೃಜ್ಯ ಯುದ್ಧಮಿಚ್ಛಂತಿ ಪಾಂಡವಾಃ |
ಆಸಾದ್ಯೇಮಾನ್ ಕುರುಶ್ರೇಷ್ಠಾನ್ ಸ್ಮರಿಷ್ಯಂತಿ ವಚೋ ಮಮ ॥15॥
ಇನ್ನು ಧರ್ಮವನ್ನು ಬಿಟ್ಟು ಪಾಂಡವರು ಯುದ್ಧವನ್ನು ಬಯಸುವುದಾದರೆ ಈ ಕುರುಶ್ರೇಷ್ಠರನ್ನು ಎದುರಿಸಿ ನನ್ನ ಮಾತನ್ನು ಸ್ಮರಿಸುವರು.
ಭೀಷ್ಮಃ
ಕಿಂ ನು ರಾಧೇಯ ವಾಚಾ ತೇ ಕರ್ಮ ತತ್ ಸ್ಮರ್ತುಮರ್ಹಸಿ |
ಏಕ ಏವ ಯದಾ ಪಾರ್ಥಃ ಷಡ್ರಥಾನ್ ಜಿತವಾನ್ ಯುಧಿ ॥16॥
ಭೀಷ್ಮ ರಾಧೇಯನೇ, ನಿನ್ನ ಮಾತಿನಿಂದ ಏನು ಪ್ರಯೋಜನ? ಅರ್ಜುನನೊಬ್ಬನೇ ಯುದ್ಧದಲ್ಲಿ ಆರು ಮಹಾರಥರನ್ನು ಗೆದ್ದಾಗ ಏನು ಕರ್ಮವನ್ನು ಮಾಡಿದನೋ ಅದನ್ನು ನೀನು ಸ್ಮರಿಸು.
ವಿರಾಟನಗರೇ ಧೀರಃ ಕಿಂ ತ್ವಂ ತತ್ರೈವ ನಾಗತಃ |
ಬಹುಶೋ ಜೀಯಮಾನಸ್ಯ ಕರ್ಮ ದೃಷ್ಟಂ ತದೈವ ತೇ ॥17॥
ಧೀರನಾದ ಅರ್ಜುನನು ವಿರಾಟನಗರದಲ್ಲಿ ಆ ಕಾರ್ಯವನ್ನು ಎಸಗಿದಾಗ ನೀನು ಅಲ್ಲಿಗೆ ಬಂದಿರಲಿಲ್ಲವೇ? ಅನೇಕ ಬಾರಿ ಸೋಲನ್ನು ಅನುಭವಿಸಿದ ನಿನ್ನ ಕಾರ್ಯವು ಅಲ್ಲಿಯೇ ದೃಷ್ಟವಾಯಿತು.
ನ ಚೇದಿದಂ ಕರಿಷ್ಯಾಮೋ ಯದಯಂ ಬ್ರಾಹ್ಮಣೋಽಬ್ರವೀತ್ |
ಧ್ರುವಂ ಯುಧಿ ಹತಾಸ್ತೇನ ಭಕ್ಷಯಿಷ್ಯಾಮ ಪಾಂಸುಕಾನ್ ॥18॥
ದುರ್ಯೋಧನಃ ಸಹಾಮಾತ್ಯೋ ವಿನಂಕ್ಷ್ಯತಿ ನ ಸಂಶಯಃ ॥19॥
ಈ ಬ್ರಾಹ್ಮಣನು ಹೇಳುವ ಕಾರ್ಯವನ್ನು ನಾವು ಮಾಡದಿದ್ದರೆ ಖಂಡಿತವಾಗಿ ನಾವು ಯುದ್ಧದಲ್ಲಿ ಪರಾಭವವನ್ನು ಹೊಂದಿ ಮಣ್ಣನ್ನು ತಿನ್ನುವೆವು. ದುರ್ಯೋಧನನು ತನ್ನ ಅಮಾತ್ಯರ ಜೊತೆಯಲ್ಲಿ ವಿನಾಶವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ಧೃತರಾಷ್ಟ್ರಸ್ತತೋ ಭೀಷ್ಮಮನುಮಾನ್ಯ ಪ್ರಸಾದ್ಯ ಚ |
ಅವಭರ್ತ್ಸ್ಯ ಚ ರಾಧೇಯಮಿದಂ ವಚನಮಬ್ರವೀತ್ ॥20॥
ಅನಂತರ ಧೃತರಾಷ್ಟ್ರನು ಭೀಷ್ಮನಿಗೆ ಸಮ್ಮತಿಯನ್ನು ಸೂಚಿಸಿ, ಅವನನ್ನು ಸಮಾಧಾನಗೊಳಿಸಿ ಕರ್ಣನನ್ನು ಗದರಿಸಿ ಮಾತನಾಡಿದನು.
ಅಸ್ಮದ್ಧಿತಮಿದಂ ವಾಕ್ಯಮುಕ್ತವಾನ್ ಜಾಹ್ನವೀಸುತಃ |
ಪಾಂಡವಾನಾಂ ಹಿತಂ ಚೈವ ಸರ್ವಸ್ಯ ಜಗತಸ್ತಥಾ ॥21॥
ಗಂಗಾಸುತನಾದ ಭೀಷ್ಮನು ಪಾಂಡವರಿಗೂ, ನಮಗೂ ಮತ್ತು ಸರ್ವಜಗತ್ತಿಗೂ ಹಿತವಾದ ಮಾತುಗಳನ್ನು ಆಡಿದ್ದಾನೆ.
ಚಿಂತಯಿತ್ವಾ ತು ಪಾರ್ಥೇಭ್ಯಃ ಪ್ರೇಷಯಿಷ್ಯಾಮಿ ಸಂಜಯಮ್ |
ಭಗವಾನ್ ಪ್ರತಿಯಾತ್ವದ್ಯ ಪಾಂಡವಾನೇವ ಮಾ ಚಿರಮ್ ॥22॥
ಪೂಜ್ಯರೇ, ನಾನು ವಿಚಾರ ಮಾಡಿ ಪಾಂಡವರ ಬಳಿಗೆ ಸಂಜಯನನ್ನು ದೂತನಾಗಿ ಕಳುಹಿಸುವೆನು. ತಾವು ಈಗ ಶೀಘ್ರವಾಗಿ ಪಾಂಡವರ ಬಳಿಗೇ ಹಿಂದಿರುಗಿ.
ವೈಶಂಪಾಯನಃ
ಸ ತಂ ಸತ್ಕೃತ್ಯ ಕೌರವ್ಯಃ ಪ್ರೇಷಯಾಮಾಸ ಪಾಂಡವಾನ್ |
ಸಭಾಮಧ್ಯೇ ಸಮಾಹೂಯ ಸಂಜಯಂ ವಾಕ್ಯಮಬ್ರವೀತ್ ॥23॥
ವೈಶಂಪಾಯನ ಧೃತರಾಷ್ಟ್ರನು ಆ ಬ್ರಾಹ್ಮಣರನ್ನು ಸತ್ಕರಿಸಿ ಪಾಂಡವರ ಬಳಿಗೆ ಕಳುಹಿಸಿದನು. ಅನಂತರ ಸಭಾಮಧ್ಯದಲ್ಲಿ ಸಂಜಯನನ್ನು ಕರೆದು ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಧೃತರಾಷ್ಟ್ರನಿಂದ ಪಾಂಡವರ ಬಳಿಗೆ ದೂತನಾಗಿ ಸಂಜಯನ ಪ್ರೇಷಣ.
ಧೃತರಾಷ್ಟ್ರಃ
ಪ್ರಾಪ್ತಾನಾಹುಃ ಸಂಜಯ ಪಾಂಡುಪುತ್ರಾನ್
ಉಪಪ್ಲಾವ್ಯೇ ತಾನ್ ವಿಜಾನೀಹಿ ಗತ್ವಾ |
ಅಜಾತಶತ್ರುಂ ಚ ಸಭಾಜಯೇಥಾ

ದಿಷ್ಟ್ಯಾ ಭವಾನ್ ಗ್ರಾಮಮುಪಾಗತಸ್ತಮ್ ॥1॥
ಧೃತರಾಷ್ಟ್ರ ಎಲ್ಲೈ ಸಂಜಯನೇ, ಪಾಂಡುಪುತ್ರರು ಉಪಪ್ಲಾವ್ಯಕ್ಕೆ ಬಂದಿದ್ದಾರೆ ಎಂದು ಹೇಳುತ್ತಾರೆ. ಹೋಗಿ ಅವರನ್ನು ನೋಡು. ಅಜಾತಶತ್ರುವನ್ನು ಸನ್ಮಾನಿಸು. ದೇವರ ದಯದಿಂದ ನೀನು ನಿನ್ನ ಗ್ರಾಮದಿಂದ ನಮ್ಮ ಗ್ರಾಮಕ್ಕೆ ಬಂದಿದ್ದೀಯೆ.
ಸರ್ವಾನ್ ವದೇಃ ಸಂಜಯ ಸ್ವಸ್ತಿಮಂತಃ
ಕೃಚ್ಛ್ರಂ ವಾಸಮತದರ್ಹಂ ನಿರೂಪ್ಯ |
ತೇಷಾಂ ಶಾಂತಿರ್ವಿದ್ಯತೇಽಸ್ಮಾಸು ಶೀಘ್ರಂ
ಮಿಥ್ಯೋಪೇತಾನಾಮಪಕಾರಿಣಾಂ ಚ ॥2॥
ಸಂಜಯನೇ, ವನವಾಸಕ್ಕೆ ಅರ್ಹರಲ್ಲದ ನೀವು ಕಷ್ಟಕರವಾದ ವನವಾಸವನ್ನು ಮುಗಿಸಿದಿರಿ ಎಂದು ಹೇಳಿ ನಾವೆಲ್ಲರೂ ಕುಶಲಿಗಳಾಗಿದ್ದೇವೆ ಎಂದು ಹೇಳು. ನಾವು ಅವರಿಗೆ ಮೋಸದಿಂದ ನಡೆದುಕೊಂಡು ಅಪಕಾರವನ್ನು ಮಾಡಿದ್ದರೂ ಅವರು ನಮ್ಮಲ್ಲಿ ಶಾಂತಿಯನ್ನೇ ಹೊಂದಿದ್ದಾರೆ.
ನಾಹಂ ಕ್ವಚಿತ್ ಸಂಜಯ ಪಾಂಡವಾನಾಂ
ಮಿಥ್ಯಾವೃತ್ತಿಂ ಕಾಂಚನ ಜಾತ್ವಪಶ್ಯಮ್ |
ಸರ್ವಾಂ ಶ್ರಿಯಂ ಹ್ಯಾತ್ಮವೀರ್ಯೇಣ ಲಬ್ಧ್ವಾಂ
ಪರ್ಯಾಕಾರ್ಷುಃ ಪಾಂಡವಾ ಮಹ್ಯಮೇವ ॥3॥
ಸಂಜಯನೇ, ನಾನು ಪಾಂಡವರಲ್ಲಿ ಎಂದೂ ಒಂದಾದರೂ ಮೋಸದ ನಡವಳಿಕೆಯನ್ನು ನೋಡಲಿಲ್ಲ. ಅವರು ತಮ್ಮ ಪರಾಕ್ರಮದಿಂದ ಗಳಿಸಿದ ಎಲ್ಲ ಸಂಪತ್ತನ್ನೂ ನನಗೇ ಒಪ್ಪಿಸಿದರು.
ದೋಷಂ ಹ್ಯೇಷಾಂ ನಾಧಿಗಚ್ಛೇತ್ ಪರೀಪ್ಸನ್
ನಿತ್ಯಂ ಯೋ ನ ಗರ್ಭೇಽಪಿ ಪಾರ್ಥಾನ್ |
ಧರ್ಮಾರ್ಥಾಭ್ಯಾಂ ಕರ್ಮ ಕುರ್ವಂತಿ ನಿತ್ಯಂ
ಸುಖಪ್ರಿಯಾ ನಾನುರುಧ್ಯಂತಿ ಕಾಮಾನ್ ॥4॥
ಎಷ್ಟು ಪರೀಕ್ಷಿಸಿದರೂ ಪಾಂಡವರಲ್ಲಿ ಗರ್ಭದಿಂದಲಾದರೂ ಒಂದು ದೋಷವು ಕಾಣುವುದಿಲ್ಲ. ಅವರು ಯಾವಾಗಲೂ ಧರ್ಮಾರ್ಥಗಳನ್ನು ಅನುಸರಿಸಿ ಕಾರ್ಯವನ್ನು ಮಾಡುತ್ತಾರೆ. ಸುಖಪ್ರಿಯರಾಗಿ ಕಾಮವನ್ನು ಅನುಸರಿಸುವುದಿಲ್ಲ.
ಧರ್ಮಂ ಶೀತಂ ಕ್ಷುತ್ಪಿಪಾಸೇ ತಥೈವ
ನಿದ್ರಾಂ ತಂದ್ರೀಂ ಕ್ರೋಧದರ್ಪೌ ಪ್ರಮಾದಮ್ |
ಧೃತ್ಯಾ ಚೈವ ಪ್ರಜ್ಞಯಾ ಚಾಭಿಭೂಯ
ಧರ್ಮಾರ್ಥಯೋಗಾನ್ ಪ್ರತಿಪದ್ಯಂತಿ ಪಾರ್ಥಾಃ ॥5॥
ಚಳಿ, ಬಿಸಿಲು, ಹಸಿವು, ನೀರಡಿಕೆಗಳು ಹಾಗೆಯೇ ನಿದ್ರೆ-ಆಲಸ್ಯ, ಕ್ರೋಧ-ದರ್ಪ, ಪ್ರಮಾದ ಇವೆಲ್ಲವನ್ನೂ ತಮ್ಮ ಪ್ರಜ್ಞೆ ಮತ್ತು ಧೈರ್ಯಗಳಿಂದ ಮೆಟ್ಟಿ ಪಾಂಡವರು ಧರ್ಮಾರ್ಥಗಳನ್ನು ಸಾಧಿಸುವ ಉಪಾಯವನ್ನೇ ಹಿಡಿಯುತ್ತಾರೆ.
ತ್ಯಜಂತಿ ಮಿತ್ರೇಷು ಧನಾನಿ ಕಾಲೇ
ನ ಸಂತ್ರಾಸಾಜ್ಜೀರ್ಯತೇ ಮೈತ್ರಮೇಷಾಮ್ |
ಯಥಾರ್ಹಮಾನಾರ್ಥಕರಾ ಹಿ ಪಾರ್ಥಾಃ
ತೇಷಾಂ ದ್ವೇಷ್ಟಾ ನಾಸ್ತ್ಯಜಮೀಢಪಕ್ಷೇ ॥6॥
ಅನ್ಯತ್ರ ಪಾಪಾದ್ ವಿಷಮಾನ್ ಮಂದಬುದ್ಧೇಃ
ದುರ್ಯೋಧನಾತ್ ಕ್ಷುದ್ರತರಾಚ್ಚ ಕರ್ಣಾತ್ ॥7॥
ಯೋಗ್ಯವಾದ ಕಾಲದಲ್ಲಿ ಮಿತ್ರರಿಗೆ ಧನವನ್ನೂ ಕೊಡುತ್ತಾರೆ. ಅವರ ಸ್ನೇಹವು ಕಷ್ಟದಿಂದಾಗಿ ಸವೆದು ಹೋಗುವುದಿಲ್ಲ. ಪಾಂಡವರು ಅವರವರಿಗೆ ಯೋಗ್ಯವಾದ ಸತ್ಕಾರವನ್ನು ಮಾಡುವವರು. ಪಾಪಿಯೂ, ವಿಷಮನೂ, ಮಂದಬುದ್ಧಿಯೂ ಆದ ದುರ್ಯೋಧನನನ್ನೂ ಮತ್ತು ಅತ್ಯಂತ ಕ್ಷುದ್ರನಾದ ಕರ್ಣನನ್ನೂ ಬಿಟ್ಟು ಧರ್ಮರಾಜನ ಪಕ್ಷದಲ್ಲಿ ಅವರನ್ನು ದ್ವೇಷ ಮಾಡುವವನು ಯಾರೂ ಇಲ್ಲ.
ಪುತ್ರೋ ಮಹ್ಯಂ ಮೃತ್ಯುವಶಂ ಜಗಾಮ
ದುರ್ಯೋಧನಃ ಸಂಜಯ ರಾಗಬುದ್ಧಿಃ ॥8॥
ಸಂಜಯನೇ, ಆಸೆಯಲ್ಲೇ ಬುದ್ಧಿಯನ್ನು ಹೊಂದಿರುವ ನನ್ನ ಮಗನಾದ ದುರ್ಯೋಧನನು ಮೃತ್ಯುವಶನಾಗಿದ್ದಾನೆ.
ಭಾಗಂ ಕರ್ತುಂ ಘಟತೇಽಮಂದಬುದ್ಧಿಃ
ಮಹಾತ್ಮನಾಂ ಸಂಜಯ ದೀಪ್ತತೇಜಸಾಮ್ |
ತೇಷಾಂ ಹಿ ಮೇಽಹೀನಸುಖಃ ಪ್ರಿಯಾಣಾಂ
ಮಹಾತ್ಮನಾಂ ವರ್ಧಯತೇ ಹಿ ತೇಜಃ ॥9॥
ಒಳ್ಳೆಯ ಪ್ರಜ್ಞೆ ಇದ್ದವನೂ ಮತ್ತು ಸುಖದಿಂದ ಚ್ಯುತನಾಗದವನೂ ಮಾತ್ರ ಎಲ್ಲೈ ಸಂಜಯನೇ, ನನಗೆ ಪ್ರಿಯರಾದ ಬೆಳಗುವ ಸಾಮರ್ಥ್ಯವುಳ್ಳ ಮಹಾತ್ಮರಾದ ಅವರಿಗೆ ಭಾಗವನ್ನು ಕೊಡಲು ಒಪ್ಪುತ್ತಾನೆ. ಅಂತಹವನು ಮಹಾತ್ಮರಾದ ಅವರ ಸಾಮರ್ಥ್ಯವನ್ನು ಇನ್ನೂ ಹೆಚ್ಚು ಮಾಡುತ್ತಾನೆ.
ಉತ್ಥಾನವೀರ್ಯಃ ಸುಖಮೇಧಮಾನೋ
ದುರ್ಯೋಧನಃ ಸುಕೃತಂ ಮನ್ಯತೇ ತತ್ |

ತೇಷಾಮಭಾಗಂ ಮನ್ಯತೇ ಯಚ್ಚ ಬಾಲಃ
ಶಕ್ಯಂ ಹರ್ತುಂ ಜೀವಿತಂ ಪಾಂಡವಾನಾಮ್ ॥10॥
ಆರಂಭಶೂರನೂ, ಸುಖವಾಗಿ ಬೆಳೆದವನೂ ಆದ ದುರ್ಯೋಧನನು ಅವರನ್ನು ಕಾಡಿಗೆ ಕಳುಹಿಸಿದುದು ಒಳ್ಳೆಯ ಕಾರ್ಯವೆಂದು ಭಾವಿಸುತ್ತಾನೆ. ಬಾಲನಾದ ಅವನು ಅವರಿಗೆ ರಾಜ್ಯದಲ್ಲಿ ಭಾಗವಿಲ್ಲವೆಂದೂ ಮತ್ತು ಪಾಂಡವರ ಪ್ರಾಣವನ್ನು ಅಪಹರಿಸುವುದು ಸಾಧ್ಯವೆಂದೂ ಭಾವಿಸುತ್ತಾನೆ.
ಯಸ್ಯಾರ್ಜುನಃ ಪದವೀಂ ಕೇಶವಸ್ಯ
ವೃಕೋದರಃ ಸಾತ್ಯಕೋಽಜಾತಶತ್ರುಃ |
ಮಾದ್ರೀಪುತ್ರೌ ಸೃಂಜಯಾಶ್ಚಾಪಿ ಯಾಂತಿ
ಪುರಾ ಯುದ್ಧಾತ್ ಸಾಧು ತಸ್ಯ ಪ್ರದಾನಮ್ ॥11॥
ಯಾವ ಧರ್ಮರಾಜನ ಮಾರ್ಗವನ್ನು ಅರ್ಜುನನೂ, ಕೃಷ್ಣನೂ, ವೃಕೋದರನೂ, ಸಾತ್ಯಕಿಯೂ, ಮಾದ್ರಿಪುತ್ರರಾದ ನಕುಲಸಹದೇವರೂ ಮತ್ತು ಸುಹೃಜ್ಜನರೂ ಅನುಸರಿಸುತ್ತಾರೆಯೋ ಅಂತಹ ಅಜಾತಶತ್ರುವಾದ ಯುಧಿಷ್ಠಿರನಿಗೆ ಯುದ್ಧಕ್ಕಿಂತಲೂ ಮೊದಲೇ ಅವನ ಭಾಗವನ್ನು ಕೊಡುವುದು ಒಳ್ಳೆಯದು.
ಸ ಹ್ಯೇವೈಕಃ ಪೃಥಿವೀಂ ಸವ್ಯಸಾಚೀ
ಗಾಂಡೀವಧನ್ವಾ ಪ್ರಣುದೇದ್ ರಥಸ್ಥಃ |
ತಥಾ ವಿಷ್ಣುಃ ಕೇಶವೋಽಪ್ಯಪ್ರಧೃಷ್ಯೋ
ಲೋಕತ್ರಯಸ್ಯಾಧಿಪತಿರ್ಮಹಾತ್ಮಾ ॥12॥
ಗಾಂಡೀವಧನ್ವನಾದ ಸವ್ಯಸಾಚಿಯಾದ ಅರ್ಜುನನೇ ರಥದಲ್ಲಿ ಕುಳಿತು ಸಮಸ್ತವಾದ ಪೃಥಿವಿಯನ್ನು ಎದುರಿಸಿಯಾನು. ಹಾಗೆಯೇ ಮೂರುಲೋಕಗಳಿಗೆ ಅಧಿಪತಿಯಾದ ಮಹಾತ್ಮನಾದ ವಿಷ್ಣುವಾದ ಕೃಷ್ಣನೂ ಸಹ ಸೋಲಿಸಲು ಅಸಾಧ್ಯನಾದವನು.
ತಿಷ್ಠೇತ ಕಸ್ತಸ್ಯ ಮರ್ತ್ಯಃ ಪುರಸ್ತಾದ್
ಯಃ ಸರ್ವಲೋಕೇಷು ವರೇಣ್ಯ ಏಕಃ |
ಪರ್ಜನ್ಯಘೋಷಾನ್ ಪ್ರವಪನ್ ಶರೌಘಾನ್
ಪತಂಗಸಂಘಾನಿವ ಶೀಘ್ರವೇಗಾನ್ ॥13॥
ಯಾವನು ಎಲ್ಲ ಲೋಕಗಳಲ್ಲಿಯೂ ಶ್ರೇಷ್ಠನೂ ಮತ್ತು ಪೂಜ್ಯನೂ ಆಗಿದ್ದಾನೆಯೋ ಅಂತಹ ಅರ್ಜುನನ ಎದುರಿಗೆ ಯಾವ ಮನುಷ್ಯನು ತಾನೇ ನಿಲ್ಲಬಹುದು? ಯಾವನು ಶತ್ರುಸೈನಿಕರ ಮೇಲೆ ಮೇಘಗರ್ಜನೆಯಂತೆ ಸದ್ದುಮಾಡುವ ಶೀಘ್ರವೇಗವನ್ನು ಹೊಂದಿರುವ ಪತಂಗಗಳ ಸಮೂಹಗಳಂತಿರುವ ಬಾಣಗಳ ಮಳೆಯನ್ನು ಸುರಿಸುವನೋ ಅಂತಹ ಅರ್ಜುನನ ಮುಂದೆ ಯಾರು ನಿಲ್ಲಬಹುದು?
ದಿಶಂ ಹ್ಯುದೀಚೀಮಪಿ ಚೋತ್ತರಾನ್ ಕುರೂನ್
ಗಾಂಡೀವಧನ್ವೈಕರಥೋ ಜಿಗಾಯ |
ಧನಂ ಚೈಷಾಮಾಹರತ್ ಸವ್ಯಸಾಚೀ |
ಸೇನಾನುಗಾನ್ ಬಲಿದಾಂಶ್ಚೈವ ಚಕ್ರೇ ॥14॥
ಗಾಂಡೀವಧನ್ವನಾದ ಅರ್ಜುನನು ಏಕರಥದಲ್ಲಿ ಕುಳಿತು ಉತ್ತರದಿಕ್ಕನ್ನೂ ಮತ್ತು ಉತ್ತರಕುರುಗಳನ್ನೂ ಗೆದ್ದನು. ಸವ್ಯಸಾಚಿಯೂ ಅವರ ಧನವನ್ನು ಗೆದ್ದು ಅವರು ತನ್ನ ಸೈನ್ಯವನ್ನು ಸೇರುವಂತೆ ಮತ್ತು ಕಪ್ಪವನ್ನು ಕೊಡುವಂತೆ ಮಾಡಿದನು.
ಯಶ್ಚೈವ ದೇವಾನ್ ಖಾಂಡವೇ ಸವ್ಯಸಾಚೀ
ಗಾಂಡೀವಧನ್ವಾ ಪ್ರಜಿಗಾಯ ಸೇಂದ್ರಾನ್ |
ಉಪಾಹರತ್ ಫಲ್ಗುನೋ ಜಾತವೇದಸೇ
ಯಶೋ ಮಾನಂ ವರ್ಧಯನ್ ಪಾಂಡವಾನಾಮ್ ॥15॥
ಆ ಸವ್ಯಸಾಚಿಯಾದ ಗಾಂಡೀವಧನ್ವನು, ಖಾಂಡವದಹನದಲ್ಲಿ ಇಂದ್ರನೇ ಮೊದಲಾದ ದೇವತೆಗಳನ್ನು ಗೆದ್ದನು. ಅರ್ಜುನನು ಅಗ್ನಿದೇವನಿಗೆ ಖಾಂಡವವನವನ್ನು ಉಪಹಾರವನ್ನಾಗಿ ಕೊಟ್ಟು ಪಾಂಡವರ ಕೀರ್ತಿಯನ್ನೂ ಮತ್ತು ಮರ್ಯಾದೆಯನ್ನೂ ಹೆಚ್ಚಿಸಿದನು.
ಗದಾಭೃತಾಂ ನಾಸ್ತಿ ಸಮೋಽದ್ಯ ಭೀಮಾದ್
ಹಸ್ತ್ಯಾರೋಹೇ ನಾಸ್ತಿ ಸಮಶ್ಚ ತಸ್ಯ |
ರಥೇಽರ್ಜುನಾದಾಹುರದೀನಮೇನಂ
ಬಾಹ್ವೋರ್ಬಲೇನಾಯುತನಾಗವೀರ್ಯಮ್ ॥16॥
ಗದಾಧಾರಿಗಳಲ್ಲಿ ಈ ದಿನ ಭೀಮನಿಗೆ ಸಮನಾದವರು ಯಾರೂ ಇಲ್ಲ. ಗಜಾರೋಹಿಗಳಲ್ಲೂ ಸಹಿತ ಅವನಿಗೆ ಸಮಾನರಾದವರು ಯಾರೂ ಇಲ್ಲ. ರಥದ ವಿಷಯದಲ್ಲಿಯೂ ಕೂಡ ಅವನು ಅರ್ಜುನನಿಗೆ ಕಡಿಮೆಯಾದವನಲ್ಲ ಎಂದು ಹೇಳುತ್ತಾರೆ. ಬಾಹುಬಲದ ವಿಷಯದಲ್ಲಿ ಅವನು ಹತ್ತುಸಾವಿರ ಆನೆಗಳ ಬಲವುಳ್ಳವನು.
ಸ ಶಿಕ್ಷಿತಃ ಕೃತವೈರಸ್ತರಸ್ವೀ
ದಹೇತ್ ಕ್ರುದ್ಧಸ್ತರಸಾ ಧಾರ್ತರಾಷ್ಟ್ರಾನ್ |
ಸದಾಽತ್ಯಮರ್ಷೀ ಬಲವಾನ್ ನ ಶಕ್ಯೋ
ಯುದ್ಧೇ ಜೇತುಂ ವಾಸವೇನಾಪಿ ಸಾಕ್ಷಾತ್ ॥17॥

ಅವನು ಚೆನ್ನಾದ ಯುದ್ಧಶಿಕ್ಷಣವನ್ನು ಹೊಂದಿದವನು. ದುರ್ಯೋಧನಾದಿಗಳಲ್ಲಿ ದ್ವೇಷವುಳ್ಳವನು ಮತ್ತು ಬಹಳ ವೇಗವುಳ್ಳವನು. ಸಿಟ್ಟಿನಿಂದ ಕೂಡಿದ ಅವನು ಶೀಘ್ರವಾಗಿ ನನ್ನ ಎಲ್ಲ ಮಕ್ಕಳನ್ನೂ ಸುಟ್ಟಾನು. ಅವನು ಯಾವಾಗಲೂ ಬಹಳ ಕೋಪವುಳ್ಳವನು ಮತ್ತು ಬಲಿಷ್ಠನಾದವನು. ಸಾಕ್ಷಾತ್ ದೇವೇಂದ್ರನೇ ಬಂದರೂ ಯುದ್ಧದಲ್ಲಿ ಅವನನ್ನು ಜಯಿಸಲು ಸಾಧ್ಯವಿಲ್ಲ.

ಸುತೇಜಸೌ ಬಲಿನೌ ಶೀಘ್ರಹಸ್ತೌ
ಸುಶಿಕ್ಷಿತೌ ಭ್ರಾತರೌ ಫಲ್ಗುನೇನ |
ಶ್ಯೇನೌ ಯಥಾ ಪಕ್ಷಿಪೂಗಾನ್ ರುಜಂತೌ
ನ ಶೇಷಯೇತಾಂ ಪ್ರವಿಭಜ್ಯ ಶತ್ರೂನ್ ॥18॥

ಸಹೋದರರಾದ ನಕುಲ-ಸಹದೇವರು ಒಳ್ಳೆಯ ಪರಾಕ್ರಮವುಳ್ಳವರೂ, ಬಲಿಷ್ಠರೂ, ಕ್ಷಿಪ್ರಹಸ್ತರೂ ಮತ್ತು ಅರ್ಜುನನಿಂದ ಒಳ್ಳೆಯ ಶಿಕ್ಷಣವನ್ನು ಪಡೆದವರು. ಹದ್ದು ಉಳಿದ ಪಕ್ಷಿಸಮೂಹವನ್ನು ಹಿಂಸಿಸಿದಂತೆ ಅವರು ಶತ್ರುಗಳನ್ನು ಹರಿದು ಯಾರನ್ನೂ ಉಳಿಸುವುದಿಲ್ಲ.

ಏತದ್ ಬಲಂ ಪೂರ್ಣಮಸ್ಮಾಕಮೇವಂ
ಯತ್ ಸರ್ವಂ ತಾನ್ ಪ್ರಾಪ್ಯ ನಾಸ್ತೀತಿ ಮನ್ಯೇ ॥19॥

ಈ ನಮ್ಮ ಸಂಪೂರ್ಣವಾದ ಸೈನ್ಯವು ಪಾಂಡವರನ್ನು ಎದುರಿಸಿ ಸಂಪೂರ್ಣವಾಗಿ ನಾಶವನ್ನು ಹೊಂದುವುದು ಎಂದು ಭಾವಿಸುತ್ತೇನೆ.

ತೇಷಾಂ ಮಧ್ಯೇ ವರ್ತಮಾನಸ್ತರಸ್ವೀ
ಧೃಷ್ಟದ್ಯುಮ್ನಃ ಪಾಂಡವಾನಾಮಿಹೈಕಃ |
ಸಹಾಮಾತ್ಯಃ ಸೋಮಕಾನಾಂ ಪ್ರಬರ್ಹಃ
ಸಂತ್ಯಕ್ತಾತ್ಮಾ ಪಾಂಡವಾರ್ಥೇ ಶ್ರುತೋ ಮೇ ॥20॥

ಆ ಪಾಂಡವರ ಸೈನ್ಯದ ಮಧ್ಯದಲ್ಲಿ ಇರುವ ಶೀಘ್ರಕಾರಿಯಾದ ಧೃಷ್ಟದ್ಯುಮ್ನನು ಒಬ್ಬ ಮುಖ್ಯನಾದವನು. ತನ್ನ ಅಮಾತ್ಯರಿಂದ ಕೂಡಿದ ಸೋಮಕಶ್ರೇಷ್ಠನಾದ ಅವನು ಪಾಂಡವರ ಸಲುವಾಗಿ ಪ್ರಾಣವನ್ನು ತೊರೆಯಲೂ ಸಿದ್ಧ ಎಂದು ನಾನು ಕೇಳಿದ್ದೇನೆ.

ಅಜಾತಶತ್ರುಂ ಪ್ರಸಹೇತ ಕೋಽನ್ಯೋ
ಯೇಷಾಂ ಸ ಸ್ಯಾದಗ್ರಣೀರ್ವೃಷ್ಣಿಸಿಂಹಃ ॥21॥

ಯಾವ ಧರ್ಮರಾಜನಿಗೆ ವೃಷ್ಣಿವೀರನಾದ ಕೃಷ್ಣನು ನಾಯಕನಾಗಿದ್ದಾನೆಯೋ ಅಂತಹ ಧರ್ಮರಾಜನನ್ನು ಯಾರು ತಾನೇ ಎದುರಿಸಬಹುದು?

ಸಹೋಷಿತಶ್ಚರಿತಾರ್ಥೋ ವಯಃಸ್ಥೋ
ಮಾತ್ಸ್ಯೇಯಾನಾಮಧಿಪೋ ವೈ ವಿರಾಟಃ |
ಸ ವೈ ಸಪುತ್ರಃ ಪಾಂಡವಾರ್ಥೇ ಚ ಶಶ್ವದ್
ಯುಧಿಷ್ಠಿರೇ ಭಕ್ತ ಇತಿ ಶ್ರುತಂ ಮೇ ॥22॥

ಮತ್ಸ್ಯಾಧಿಪತಿಯಾದ ವಿರಾಟನು ಪಾಂಡವರ ಜೊತೆಯಲ್ಲಿ ವಾಸ ಮಾಡಿದವನು. ಒಳ್ಳೆಯ ಕಾರ್ಯವನ್ನು ಮಾಡಿದವನು ಮತ್ತು ಒಳ್ಳೆಯ ವಯಸ್ಸನ್ನು ಹೊಂದಿದವನು. ಅವನು ಯಾವಾಗಲೂ ಪಾಂಡವರ ಹಿತದ ಸಲುವಾಗಿ ತನ್ನ ಪುತ್ರರ ಜೊತೆಯಲ್ಲಿ ಯುಧಿಷ್ಠಿರನ ಜೊತೆಯಲ್ಲಿ ಅನುರಾಗವನ್ನು ಹೊಂದಿದ್ದಾನೆ ಎಂದು ನಾನು ಕೇಳಿದ್ದೇನೆ.

ಅಥಾವರುದ್ಧಾ ರಥಿನಃ ಪಂಚ ಸಂತಿ
ಮಹೇಷ್ವಾಸಾ ಭ್ರಾತರಃ ಕೇಕಯೇಷು |
ತಾನ್ ಕೇಕಯೇಭ್ಯೋ ರಾಜ್ಯಮಾಕಾಂಕ್ಷಮಾಣಾನ್
ಯುದ್ಧಾರ್ಥಿನಶ್ಚಾನುವಸಂತಿ ಪಾರ್ಥಾನ್ ॥23॥

ಇನ್ನು ರಾಜ್ಯವನ್ನು ಕಳೆದುಕೊಂಡಿರುವ ಮಹಾಧನುರ್ಧಾರಿಗಳಾದ ಮಹಾರಥಿಕರಾದ ಕೇಕಯ ಸಹೋದರರು ಐದುಮಂದಿ ಇದ್ದಾರೆ. ಅವರು ತಮ್ಮ ರಾಜ್ಯವನ್ನು ಪುನಃ ಪಡೆಯಲು ಬಯಸುತ್ತಾ ಯುದ್ಧಾರ್ಥಿಗಳಾಗಿ ಪಾಂಡವರ ಬಳಿಯಲ್ಲಿ ವಾಸ ಮಾಡುವರು.

ಸರ್ವೇ ಚ ವೀರಾಃ ಪೃಥಿವೀಪತೀಂದ್ರಾ
ಸಮಾನೀತಾಃ ಪಾಂಡವಾರ್ಥೇ ನಿವಿಷ್ಟಾಃ |
ಶೂರಾನಹಂ ಭಕ್ತಿಮತಃ ಶೃಣೋಮಿ
ಪ್ರೀತ್ಯಾ ಯುಕ್ತಾನ್ ಸಂಶ್ರಿತಾನ್ ಧರ್ಮರಾಜಮ್ ॥24॥

ಎಲ್ಲಾ ವೀರರಾದ ಭೂಪಾಲರೂ ಪಾಂಡವರ ಸಲುವಾಗಿ ಬಂದು ಸೇರಿದ್ದಾರೆ. ಅವರೆಲ್ಲರೂ ಶೂರರು, ಪಾಂಡವರಲ್ಲಿ ಅನುರಾಗವುಳ್ಳವರು ಮತ್ತು ಪ್ರೀತಿಯಿಂದಲೇ ಧರ್ಮರಾಜನನ್ನು ಆಶ್ರಯಿಸಿದವರು ಎಂದು ಕೇಳಿದ್ದೇನೆ.

ಗಿರ್ಯಾಶ್ರಯಾ ದುರ್ಗನಿವಾಸಿನಶ್ಚ
ಯೋಧಾಃ ಪೃಥಿವ್ಯಾಂ ಕುಲಜಾಶ್ಚ ವೃದ್ಧಾಃ |
ಮ್ಲೇಚ್ಛಾಶ್ಚ ನಾನಾಯುಧವೀರ್ಯವಂತಃ
ಸಮಾಗತಾಃ ಪಾಂಡವಾರ್ಥೇ ನಿವಿಷ್ಟಾಃ ॥25॥

ಪರ್ವತನಿವಾಸಿಗಳಾದ ಯೋಧರು, ಭೂಮಿಯಲ್ಲಿ ಸತ್ಕುಲಪ್ರಸೂತರಾದ ವೃದ್ಧರು, ಅನೇಕ ಆಯುಧಗಳನ್ನು ಧರಿಸಿ, ಪರಾಕ್ರಮಶಾಲಿಗಳಾದ ಮ್ಲೇಚ್ಛರು ಪಾಂಡವರ ಸಲುವಾಗಿ ಬಂದು ಸೇರಿದ್ದಾರೆ ಎಂದು ನಾನು ಕೇಳಿದ್ದೇನೆ.

ಪಾಂಡ್ಯಶ್ಚ ರಾಜಾಽಮಿತವೀರ್ಯವಿಕ್ರಮೋ
ಯುಧಿ ಪ್ರವೀರೈರ್ಬಹುಭಿಃ ಸಮೇತಃ |
ಸಮಾಗತಃ ಪಾಂಡವಾರ್ಥೇ ಮಹಾತ್ಮಾ
ಲೋಕಪ್ರವೀರೋಽಪ್ರತಿವೀರ್ಯತೇಜಾಃ ||26||
ಅಮಿತವೀರ್ಯನೂ ಮತ್ತು ಯುದ್ಧದಲ್ಲಿ ಅಮಿತಪರಾಕ್ರಮಿಯೂ ಆದ ಪಾಂಡ್ಯರಾಜನು ಅನೇಕ ವೀರರ ಜೊತೆಯಲ್ಲಿ ಪಾಂಡವರ ಸಲುವಾಗಿ ಬಂದು ಸೇರಿದ್ದಾನೆ. ಅವನು ಮಹಾತ್ಮನೂ, ಲೋಕಪ್ರಸಿದ್ಧನಾದ ವೀರನೂ ಮತ್ತು ಅಸದೃಶವಾದ ಸಾಮರ್ಥ್ಯ ಮತ್ತು ತೇಜಸ್ಸನ್ನು ಹೊಂದಿದವನೂ ಆಗಿದ್ದಾನೆ.
ಅಸ್ತ್ರಂ ದ್ರೋಣಾದರ್ಜುನಾದ್ ವಾಸುದೇವಾತ್
ಕೃಪಾದ್ ಭೀಷ್ಮಾದ್ ಯೇನ ವೃತಂ ಶೃಣೋಮಿ |
ಯತಶ್ಚ ಕೃಷ್ಣಪ್ರತಿಮಪ್ರಭಾವಃ
ಸ ಸಾತ್ಯಕಿಃ ಪಾಂಡವಾರ್ಥೇ ನಿವಿಷ್ಟಃ ||27||
ಯಾವ ಸಾತ್ಯಕಿಯು ದ್ರೋಣರಿಂದಲೂ, ಅರ್ಜುನನಿಂದಲೂ, ಕೃಷ್ಣನಿಂದಲೂ, ಕೃಪರಿಂದಲೂ ಮತ್ತು ಭೀಷ್ಮರಿಂದಲೂ ಅಸ್ತ್ರವಿದ್ಯೆಯನ್ನು ಸಂಪಾದಿಸಿದ್ದಾನೆಂದು ಕೇಳಿದ್ದೇನೆಯೋ ಮತ್ತು ಯಾವ ಅವನು ಕೃಷ್ಣನಿಗೆ ಹೋಲುವ ಸಾಮರ್ಥ್ಯವನ್ನು ಹೊಂದಿದ್ದಾನೆಯೋ ಅಂತಹ ಸಾತ್ಯಕಿಯು ಪಾಂಡವರ ಸಲುವಾಗಿ ಬಂದು ಅವರಲ್ಲಿ ಸೇರಿದ್ದಾನೆ.
ಉಪಾಶ್ರಿತಾಶ್ಚೇದಿಕರೂಶಕಾಶ್ಚ
ಸರ್ವೋದ್ಯೋಗೈರ್ಭೂಮಿಪಾಲಾಃ ಸಮೇತಾಃ ||28||
ಚೇದಿ, ಕರೂಶರಾಜ್ಯಗಳ ರಾಜರೂ ಸಹ ಒಟ್ಟಿಗೆ ಸೇರಿ ತಮ್ಮ ಎಲ್ಲಾ ಪ್ರಯತ್ನಗಳಿಂದ ಪಾಂಡವರನ್ನು ಆಶ್ರಯಿಸಿದ್ದಾರೆ.
ತೇಷಾಂ ಮಧ್ಯೇ ಸೂರ್ಯಮಿವಾತಪಂತಂ
ಶ್ರಿಯಾ ವೃತಂ ಚೇದಿಪತಿಂ ಜ್ವಲಂತಮ್ |
ಅಸ್ತಂಭನೀಯಂ ಯುಧಿ ಮನ್ಯಮಾನಂ
ಜ್ಯಾಂ ಕರ್ಷತಾಂ ಶ್ರೇಷ್ಠತಮಂ ಪೃಥಿವ್ಯಾಮ್ ||29||
ಸರ್ವೋತ್ಸಾಹಂ ಕ್ಷತ್ರಿಯಾಣಾಂ ನಿಹತ್ಯ
ಪ್ರಸಹ್ಯ ಕೃಷ್ಣಸ್ತರಸಾ ಸಮ್ಮಮರ್ದ |
ಯಶೋ ಮಾನಂ ವರ್ಧಯನ್ ಪಾಂಡವಾನಾಂ
ಪುರಾಽಭಿನತ್ ಶಿಶುಪಾಲಂ ಸಮೀಕ್ಷ್ಯ ||30||
ಅವರ ಮಧ್ಯದಲ್ಲಿ ಸೂರ್ಯನಂತೆ ಬೆಳಗುವ, ಸಂಪದ್ಯುಕ್ತನಾದ, ಯುದ್ಧದಲ್ಲಿ ತಾನು ಅಚಾಲ್ಯನೆಂದೂ ಮತ್ತು ಧನುರ್ಧಾರಿಗಳಲ್ಲಿ ತಾನು ಶ್ರೇಷ್ಠನೆಂದೂ ತಿಳಿದಿರುವ ಕ್ಷತ್ರಿಯರೆಲ್ಲರಿಗೂ ಉತ್ಸಾಹದಾಯಕನಾದ ಚೇದಿರಾಜನಾದ ಶಿಶುಪಾಲನನ್ನು ಕೃಷ್ಣನು ತನ್ನ ಸಾಮರ್ಥ್ಯದಿಂದ ಮರ್ದಿಸಿದನು. ಅವನು ಪಾಂಡವರ ಕೀರ್ತಿಯನ್ನೂ ಮತ್ತು ಮಾನವನ್ನೂ ಹೆಚ್ಚಿಸುತ್ತಾ ಮೊದಲೇ ಶಿಶುಪಾಲನನ್ನು ಸಂಹರಿಸಿದನು.
ಯಸ್ಯ ಸರ್ವೇ ವರ್ಧಯಂತಿ ಸ್ಮ ಮಾನಂ
ಕರೂಶರಾಜಪ್ರಮುಖಾ ನರೇಂದ್ರಾಃ ||31||
ತಮಸಹ್ಯಂ ಕೇಶವಂ ತತ್ರ ಮತ್ವಾ
ಸುಗ್ರೀವಯುಕ್ತೇನ ರಥೇನ ಕೃಷ್ಣಮ್ |
ಸಂಪ್ರಾದ್ರವನ್ ಚೇದಿಪತಿಂ ವಿಹಾಯ
ಸಿಂಹಾರ್ದಿತಾ ಕ್ಷುದ್ರಮೃಗಾ ಇವಾನ್ಯೇ ||32||
ಯಾವ ಶಿಶುಪಾಲನ ಮಾನವನ್ನು ಕರೂಶರಾಜರೇ ಮೊದಲಾದ ರಾಜರು ಹೆಚ್ಚಿಸುತ್ತಿದ್ದರೋ ಅಂತಹ ರಾಜರು ಸುಗ್ರೀವಾದಿ ಅಶ್ವಯುಕ್ತವಾದ ರಥದಲ್ಲಿರುವ ಕೃಷ್ಣನು ಸೋಲಿಸಲು ಅಸಾಧ್ಯನೆಂದು ತಿಳಿದು, ಚೇದಿಪತಿಯನ್ನು ಬಿಟ್ಟು ಸಿಂಹಕ್ಕೆ ಹೆದರಿದ ಕ್ಷುದ್ರಮೃಗಗಳಂತೆ ಓಡಿಹೋದರು.
ಯಸ್ತಂ ಪ್ರತೀಪಸ್ತರಸಾ ಪ್ರತ್ಯುದೀಯಾದ್
ಆಶಂಸಮಾನೋ ದ್ವೈರಥೇ ವಾಸುದೇವಮ್ |
ಸೋಽಶೇತ ಕೃಷ್ಣೇನ ಹತಃ ಪರಾಸುಃ
ವಾತೇನೇವೋನ್ಮಥಿತಃ ಕರ್ಣಿಕಾರಃ ||33||
ಯಾವನು ದ್ವೈರಥದಲ್ಲಿ ಕೃಷ್ಣನನ್ನು ತನ್ನ ಬಲದಿಂದ ಗೆಲ್ಲುವೆನು ಎಂದು ಕೃಷ್ಣನಿಗೆ ವಿರೋಧಿಯಾಗಿ ಅವನನ್ನು ಎದುರಿಸಿದನೋ ಅವನು ಕೃಷ್ಣನಿಂದ ಹತನಾಗಿ, ಪ್ರಾಣಗಳನ್ನು ಕಳೆದುಕೊಂಡು, ಬಿರುಗಾಳಿಯು ಕಿತ್ತೊಗೆದ ಕರ್ಣಿಕಾರ ವೃಕ್ಷದಂತೆ ಭೂಮಿಯ ಮೇಲೆ ಶಯನ ಮಾಡಿದನು.
ಪರಾಕ್ರಮಂ ತೇ ಯದವೇದಯಂತ
ತೇಷಾಮರ್ಥೇ ಸಂಜಯ ಕೇಶವಸ್ಯ |
ಅನುಸ್ಮರಂತಸ್ತಸ್ಯ ಕರ್ಮಾಣಿ ವಿಷ್ಣೋಃ
ಗಾವಲ್ಗಣೇ ನಾಧಿಗಚ್ಛಾಮಿ ಶಾಂತಿಮ್ ||34||
ಎಲೈ ಸಂಜಯನೇ, ಪಾಂಡವರ ಸಲುವಾಗಿ ಕೇಶವನ ಯಾವ ಪರಾಕ್ರಮವನ್ನು ಆ ಪುರುಷರು ನನಗೆ ತಿಳಿಸಿದ್ದಾರೆಯೋ

ಗಾವಲ್ಗಣಿಯೇ, ವಿಷ್ಣುವಿನ ಆ ಕರ್ಮಗಳನ್ನು ಸ್ಮರಿಸಿ ನನಗೆ ಶಾಂತಿಯೇ ದೊರಕುತ್ತಿಲ್ಲ.
ನ ಜಾತು ತಾನ್ ಶತ್ರುರನ್ಯಃ ಸಹೇತ
ಯೇಷಾಂ ಸ ಸ್ಯಾದಗ್ರಣೀರ್ವೃಷ್ಣಿಸಿಂಹಃ।
ಪ್ರವೇಪತೇ ಮೇ ಹೃದಯಂ ಭಯೇನ
ಶ್ರುತ್ವಾ ಕೃಷ್ಣಾವೇಕರಥೇ ಸಮೇತೌ ॥35॥
ಯಾರಿಗೆ ವೃಷ್ಣಿಸಿಂಹನಾದ ಕೃಷ್ಣನು ನಾಯಕನಾಗಿದ್ದಾನೆಯೋ ಅಂತಹ ಪಾಂಡವರನ್ನು ಇನ್ನೊಬ್ಬ ಶತ್ರುವು ಎದುರಿಸಲಾರ. ಕೃಷ್ಣಾರ್ಜುನರು ಒಂದೇ ರಥದಲ್ಲಿ ಇರುತ್ತಾರೆ ಎಂಬ ವಾರ್ತೆಯನ್ನು ಕೇಳಿದ ನನ್ನ ಹೃದಯವು ಭಯದಿಂದ ನಡುಗುತ್ತಿದೆ.
ನ ಚೇದ್ ಗಚ್ಛೇತ್ ಸಂಗರಂ ಮಂದಬುದ್ಧಿಃ
ತಾಭ್ಯಾಂ ಲಭೇಚ್ಛರ್ಮ ತದಾ ಸುತೋ ಮೇ।
ನೋ ಚೇತ್ ಕುರೂನ್ ಸಂಜಯ ನಿರ್ದಹೇತಾಮ್
ಇಂದ್ರಾವಿಷ್ಣೂ ದೈತ್ಯಸೇನಾಂ ಯಥೈವ ॥36॥
ಮಂದಬುದ್ಧಿಯಾದ ನನ್ನ ಪುತ್ರನು ಯುದ್ಧಕ್ಕೆ ಹೋಗದಿದ್ದರೆ ಕೃಷ್ಣಾರ್ಜುನರಿಂದ ಸುಖವನ್ನು ಪಡೆದಾನು. ಸಂಜಯನೇ, ಇಲ್ಲದಿದ್ದರೆ ಇಂದ್ರ-ವಿಷ್ಣುಗಳು ದೈತ್ಯಸೇನೆಯನ್ನು ಸದೆಬಡಿದಂತೆ ಅವರು ಕುರುಗಳನ್ನು ಸುಟ್ಟುಹಾಕಿಯಾರು.
ಮತೋ ಹಿ ಮೇ ಶಕ್ರಸಮೋ ಧನಂಜಯಃ
ಸನಾತನೋ ವೃಷ್ಣಿವೀರಶ್ಚ ಕೃಷ್ಣಃ।
ಸ ಧರ್ಮರಾಜೋ ಹ್ರೀನಿಷೇಧಸ್ತರಸ್ವೀ
ಕುಂತೀಪುತ್ರಃ ಪಾಂಡವೋಽಜಾತಶತ್ರುಃ ॥37॥
ಧನಂಜಯನು ಇಂದ್ರನಿಗೆ ಸಮನೆಂದು ನನ್ನ ಅಭಿಪ್ರಾಯ. ವೃಷ್ಣಿವೀರನಾದ ಕೃಷ್ಣನಾದರೂ ಸನಾತನನಾದ ವಿಷ್ಣುವು. ಕುಂತೀಪುತ್ರನಾದ ಅಜಾತಶತ್ರುವಾದ ಧರ್ಮರಾಜನೂ ಸಹ ಶೀಘ್ರಕಾರಿಯಾದವನು ಮತ್ತು ಅಧರ್ಮವನ್ನು ಮಾಡಲು ನಾಚಿಕೊಳ್ಳುವವನು.
ದುರ್ಯೋಧನೇನ ನಿಕೃತೋ ಮನಸ್ವೀ
ನೋ ಚೇತ್ ಕ್ರುದ್ಧಃ ಪ್ರದಹೇದ್ ಧಾರ್ತರಾಷ್ಟ್ರಾನ್ ॥38॥
ಪ್ರಶಸ್ತವಾದ ಮನಸ್ಸುಳ್ಳ ಅವನು ದುರ್ಯೋಧನನಿಂದ ಮೋಸ ಮಾಡಲ್ಪಟ್ಟಿದ್ದಾನೆ. ಅವನು ಕೋಪದಿಂದ ನನ್ನ ಪುತ್ರರನ್ನು ಸುಟ್ಟುಹಾಕಬಹುದು.
ನಾಹಂ ತಥಾ ಹ್ಯರ್ಜುನಾದ್ ವಾಸುದೇವಾದ್
ಭೀಮಾದ್ ವಾಽಪಿ ಯಮಯೋರ್ವಾ ಬಿಭೇಮಿ।
ಯಥಾ ರಾಜ್ಞಃ ಕ್ರೋಧದೀಪ್ತಸ್ಯ ಸೂತ
ವಹ್ನೇರಹಂ ಭೀತತರಃ ಸದೈವ ॥39॥
ಎಲೈ ಸಂಜಯನೇ, ನಾನು ವಹ್ನಿಯಂತಿರುವ ಕ್ರೋಧದೀಪ್ತನಾದ ಅಜಾತಶತ್ರುವಿನಿಂದ ಹೇಗೆ ಹೆದರಿದ್ದೇನೆಯೋ ಹಾಗೆ ಅರ್ಜುನನಿಂದಾಗಲೀ, ಕೃಷ್ಣನಿಂದಾಗಲೀ, ಭೀಮನಿಂದಾಗಲೀ ಅಥವ ನಕುಲಸಹದೇವರಿಂದಾಗಲೀ ಹೆದರುವುದಿಲ್ಲ.
ಮಹಾತಪಾ ಬ್ರಹ್ಮಚರ್ಯೇಣ ಯುಕ್ತಃ
ಸಂಕಲ್ಪೋಽಯಂ ಮಾನಸಸ್ತಸ್ಯ ಸಿದ್ಧ್ಯೇತ್।
ತಸ್ಯ ಕ್ರೋಧಂ ಸಂಜಯಾಹಂ ಸಮೀಕ್ಷ್ಯ
ಸ್ಥಾನೇ ಜಾತಂ ಭೃಶಮಸ್ಮ್ಯದ್ಯ ಭೀತಃ ॥40॥
ಅವನು (ಧರ್ಮರಾಜನು) ಮಹಾತಪಸ್ವಿ ಮತ್ತು ಬ್ರಹ್ಮಚರ್ಯದಿಂದ ಕೂಡಿದವನು. ಅವನ ಮನಸ್ಸಿನ ಈ ಸಂಕಲ್ಪವು ಸಿದ್ಧಿಸುತ್ತದೆ. ಎಲೈ ಸಂಜಯನೇ, ಯೋಗ್ಯವಾದ ರೀತಿಯಲ್ಲೇ ಉಂಟಾಗಿರುವ ಅವನ ಕ್ರೋಧವನ್ನು ನೋಡಿ ಈ ದಿನ ನಾನು ಬಹಳವಾಗಿ ಹೆದರಿದ್ದೇನೆ.
ಸಂಗಚ್ಛ ಶೀಘ್ರಂ ಪ್ರಹಿತೋ ರಥೇನ
ಪಾಂಚಾಲರಾಜಸ್ಯ ಚಮೂನಿವೇಶಮ್।
ಅಜಾತಶತ್ರುಂ ಕುಶಲಂ ಸ್ಮ ಪೃಚ್ಛೇಃ
ಪುನಃ ಪುನಃ ಪ್ರೀತಿಯುಕ್ತಂ ವದೇಸ್ತ್ವಮ್ ॥41॥
ನನ್ನಿಂದ ಕಳುಹಿಸಲ್ಪಟ್ಟವನಾಗಿ ನೀನು ಶೀಘ್ರವಾಗಿ ರಥದಿಂದ ಹೋಗಿ, ಪಾಂಚಾಲರಾಜನ ಸೇನಾಸಮೂಹವನ್ನು ಸೇರಿ, ಅಜಾತಶತ್ರುವನ್ನು ಕುರಿತು ಕುಶಲ, ಪ್ರಶ್ನೆಯನ್ನು ಮಾಡು. ಅವನ ಜೊತೆಯಲ್ಲಿ ಪುನಃ ಪುನಃ ಪ್ರೀತಿಯಿಂದ ಮಾತನಾಡು.
ಜನಾರ್ದನಂ ಚಾಪಿ ಸಮೇತ್ಯ ಸೂತ
ಮಹಾಮತಿಂ ವೀರ್ಯವತಾಂ ವರಿಷ್ಠಮ್।
ಅನಾಮಯಂ ಮದ್ವಚನೇನ ಪೃಚ್ಛೇಃ
ತ್ವಂ ಧಾರ್ತರಾಷ್ಟ್ರೈಃ ಪಾಂಡವೈಃ ಶಾಂತಿಲಿಪ್ಸುಃ ॥42॥
ಎಲೈ ಸೂತನೇ, ಧೃತರಾಷ್ಟ್ರಪುತ್ರರಲ್ಲಿ ಮತ್ತು ಪಾಂಡವರಲ್ಲಿ ಸಂಧಿಯನ್ನು ಬಯಸುವ ನೀನು ಮಹಾಮತಿಯೂ ವೀರ್ಯವಂತರಲ್ಲಿ ಶ್ರೇಷ್ಠನೂ ಆದ ಕೃಷ್ಣನನ್ನು ಸಂಧಿಸಿ, ನನ್ನ ಮಾತಿನಂತೆ ಕುಶಲಪ್ರಶ್ನೆಯನ್ನು ಮಾಡು.
ನ ತಸ್ಯ ಕಿಂಚಿದ್ ವಚನಂ ನ ಕುರ್ಯಾತ್

ಕುಂತೀಪುತ್ರೋ ವಾಸುದೇವಸ್ಯ ಸೂತ |
ಪ್ರಿಯಶ್ಚೈಷಾಮಾತ್ಮಸಮಶ್ಚ ಕೃಷ್ಣೋ
ವಿದ್ವಾಂಶ್ಚೈಷಾಂ ಕರ್ಮಣಿ ನಿತ್ಯಯುಕ್ತಃ ||43||
ಸೂತನೇ, ಕುಂತೀಪುತ್ರನಾದ ಯುಧಿಷ್ಠಿರನು ಕೃಷ್ಣನ ಯಾವ ಮಾತನ್ನೂ ನಡೆಸಿಕೊಡುವುದಿಲ್ಲ ಎಂಬುದು ಇಲ್ಲ. ಕೃಷ್ಣನು ಅವರಿಗೆ ಪ್ರಿಯನಾದವನು, ಪ್ರಾಣಸಮಾನನಾದವನು, ಜ್ಞಾನಿಯಾದವನು ಮತ್ತು ಅವರ ಹಿತಕಾರ್ಯದಲ್ಲಿ ಯಾವಾಗಲೂ ನಿರತನಾದವನು.
ಸಮಾನೀತಾನ್ ಪಾಂಡವಾನ್ ಸೃಂಜಯಾಂಶ್ಚ
ಜನಾರ್ದನಂ ಯುಯುಧಾನಂ ವಿರಾಟಮ್ |
ಅನಾಮಯಂ ಮದ್ವಚನೇನ ಪೃಚ್ಚೇಃ
ಸರ್ವಾಂಸ್ತಥಾ ದ್ರೌಪದೇಯಾಂಶ್ಚ ಪಂಚ ||44||
ಸಂಜಯನೇ, ನೀನು ಸೇನಾನಿವೇಶದಲ್ಲಿ ಪ್ರಾಪ್ತರಾದ ಪಾಂಡವರನ್ನೂ, ಸೃಂಜಯರನ್ನೂ, ಜನಾರ್ದನನನ್ನೂ, ಸಾತ್ಯಕಿಯನ್ನೂ, ವಿರಾಟನನ್ನೂ ನನ್ನ ಮಾತಿನಂತೆ ಕ್ಷೇಮ-ಕುಶಲಗಳನ್ನು ಕೇಳು. ಹಾಗೆಯೇ ದ್ರೌಪದಿಯ ಪುತ್ರರಾದ ಐದುಮಂದಿ ಉಪಪಾಂಡವರಿಗೂ ಕುಶಲಪ್ರಶ್ನೆಯನ್ನು ಮಾಡು.
ಯದ್ಯತ್ ತತ್ರ ಪ್ರಾಪ್ತಕಾಲಂ ಪರೇಭ್ಯಃ
ತ್ವಂ ಮನ್ಯೇಥಾ ಭಾರತಾನಾಂ ಹಿತಂ ಚ |
ತತ್ತದ್ ಭಾಷೇಥಾಃ ಸಂಜಯ ರಾಜಮಧ್ಯೇ
ನ ಮೂರ್ಚ್ಛಯೇದ್ ಯನ್ನ ಭವೇಚ್ಚ ಯುದ್ಧಮ್ ||45||
ಸಂಜಯನೇ, ಹಾಗೆಯೇ ರಾಜರ ಮಧ್ಯದಲ್ಲಿ ಏನೇನು ಮಾತನಾಡಿದರೆ ಎಲ್ಲ ಭರತವಂಶಕ್ಕೆ ಹಿತವಾಗುವುದೆಂದು ನೀನು ಭಾವಿಸುವೆಯೋ, ಏನನ್ನು ಮಾತನಾಡಿದರೆ ಯಾರಿಗೂ ವ್ಯಥೆಯಾಗುವುದಿಲ್ಲವೋ ಮತ್ತು ಯುದ್ಧವು ಜರುಗುವುದಿಲ್ಲವೋ ಅಂತಹ ಎಲ್ಲ ವಿಷಯಗಳನ್ನೂ ಮಾತನಾಡುವವನಾಗು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಾವಿಂಶೋಽಧ್ಯಾಯಃ ||
|| ಸಂಜಯಯಾನಪರ್ವಣಿ ತೃತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಮೂರನೆಯ ಅಧ್ಯಾಯ
ಉಪಪ್ಲಾವ್ಯಕ್ಕೆ ಹೋಗಿ ಸಂಜಯನಿಂದ ಪಾಂಡವರ ಕುಶಲಪ್ರಶ್ನೆ
ಮತ್ತು ಯುಧಿಷ್ಠಿರನಿಂದ ಧೃತರಾಷ್ಟ್ರಾದಿಗಳ ಕುಶಲಪ್ರಶ್ನೆ.
ವೈಶಂಪಾಯನಃ
ರಾಜ್ಞಸ್ತು ವಚನಂ ಶ್ರುತ್ವಾ ಧೃತರಾಷ್ಟ್ರಸ್ಯ ಸಂಜಯಃ |
ಉಪಪ್ಲಾವ್ಯಂ ಯಯೌ ದ್ರಷ್ಟುಂ ಪಾಂಡವಾನಮಿತೌಜಸಃ ||1||
ಸ ತು ರಾಜಾನಮಾಸಾದ್ಯ ಕುಂತೀಪುತ್ರಂ ಯುಧಿಷ್ಠಿರಮ್ |
ಅಭಿವಾದ್ಯ ತತಃ ಪೂರ್ವಂ ಸೂತಪುತ್ರೋಽಭ್ಯಭಾಷತ ||2||
ವೈಶಂಪಾಯನ ರಾಜನಾದ ಧೃತರಾಷ್ಟ್ರನ ಮಾತುಗಳನ್ನು ಕೇಳಿ ಸಂಜಯನು ಅಮಿತಪರಾಕ್ರಮಿಗಳಾದ ಪಾಂಡವರನ್ನು ನೋಡಲು ಉಪಪ್ಲಾವ್ಯಕ್ಕೆ ಹೋದನು. ಸೂತಪುತ್ರನಾದ ಅವನು ಮೊದಲು ಕುಂತೀಪುತ್ರನಾದ ಯುಧಿಷ್ಠಿರ ರಾಜನನ್ನು ಸಮೀಪಿಸಿ ನಮಸ್ಕರಿಸಿ ಅನಂತರ ಮಾತನಾಡಿದನು.
ಗಾವಲ್ಗಣಿಃ ಸಂಜಯಃ ಸೂತಸೂನುಃ
ಅಜಾತಶತ್ರುಂ ತಮವೋಚತ್ ಪ್ರತೀತಃ ||3||
ಗವಲ್ಗಣನ ಪುತ್ರನಾದ ಸೂತಸೂನುವಾದ ಸಂಜಯನು ಸಂತೋಷದಿಂದ ಆ ಯುಧಿಷ್ಠಿರನನ್ನು ಕುರಿತು ಮಾತನಾಡಿದನು.
ದಿಷ್ಟ್ಯಾ ರಾಜನ್ ತ್ವಾಮರೋಗಂ ಪ್ರಪಶ್ಯೇ
ಸಹಾಯವಂತಂ ಚ ಮಹೇಂದ್ರಕಲ್ಪಮ್ ||4||
ರಾಜನೇ, ದೇವರ ದಯದಿಂದ ಮಹೇಂದ್ರನಂತಿರುವ, ಸಹಾಯದಿಂದ ಕೂಡಿದ ನೀನು ಆರೋಗ್ಯದಿಂದಿರುವುದನ್ನು ನೋಡುತ್ತಿದ್ದೇನೆ.
ಅನಾಮಯಂ ಪೃಚ್ಛತಿ ತ್ವಾಽಂಬಿಕೇಯೋ
ವೃದ್ಧೋ ರಾಜಾ ಧೃತರಾಷ್ಟ್ರೋ ಮನೀಷೀ |
ಕಚ್ಚಿದ್ ಭೀಮಃ ಕುಶಲೀ ಪಾಂಡವಾಗ್ರ್ಯೋ
ಧನಂಜಯಸ್ತೌ ಚ ಮಾದ್ರೀತನೂಜೌ ||5||
ಮೇಧಾವಿಯೂ, ಅಂಬಿಕಾ ಪುತ್ರನೂ, ವೃದ್ಧನೂ ಆದ ಧೃತರಾಷ್ಟ್ರ ರಾಜನು ನಿನ್ನ ಕ್ಷೇಮವನ್ನು ವಿಚಾರಿಸುತ್ತಾನೆ. ಪಾಂಡವ ಶ್ರೇಷ್ಠನಾದ ಭೀಮನೂ ಅರ್ಜುನನೂ ಮತ್ತು ಆ ಮಾದ್ರೀ ಪುತ್ರರೂ ಕ್ಷೇಮವಷ್ಟೆ?
ಕಚ್ಚಿತ್ ಕೃಷ್ಣಾ ದ್ರೌಪದೀ ರಾಜಪುತ್ರೀ
ಸತ್ಯವ್ರತಾ ವೀರಪತ್ನೀ ಸಪುತ್ರಾ |
ಮನಸ್ವಿನೀ ಯತ್ರ ಚ ವಾಂಛಸಿ ತ್ವಮ್
ಇಷ್ಟಾನ್ ಕಾಮಾನ್ ಭಾರತ ಸ್ವಸ್ತಿಕಾಮಃ ||6||

ಸತ್ಯವ್ರತಳೂ, ವೀರಪತಿಗಳನ್ನು ಹೊಂದಿದವಳೂ ಪುತ್ರರನ್ನು ಪಡೆದವಳೂ ಆದ ದ್ರುಪದರಾಜಕುಮಾರಿಯಾದ ಕೃಷ್ಣೆಯು ಕ್ಷೇಮವಷ್ಟೆ? ಎಲೈ ಭಾರತನೇ, ಶುಭಕಾಮನೆಯುಳ್ಳ ನೀನು ಧೈರ್ಯಶಾಲಿಯಾದ ಅವಳಿಂದ ಎಲ್ಲಾ ಕಾಮಗಳನ್ನು ಹೊಂದಲು ಅಪೇಕ್ಷಿಸುವಿಯಷ್ಟೆ?

ಯುಧಿಷ್ಠಿರಃ

ಗಾವಲ್ಗಣೇ ಸಂಜಯ ಸ್ವಾಗತಂ ತೇ
ಪ್ರೀತಾತ್ಮಾಽಹಂ ತ್ವಾಽಭಿನಂದಾಮಿ ಸೂತ |
ಅನಾಮಯಂ ಪ್ರತಿಜಾನೇ ತವಾಹಂ
ಸಹಾನುಜೈಃ ಕುಶಲೀ ಚಾಸ್ಮಿ ವಿದ್ವನ್ ॥7॥

ಯುಧಿಷ್ಠಿರ ಗವಲ್ಗಣಪುತ್ರನಾದ ಸಂಜಯನೇ ನಿನಗೆ ಸ್ವಾಗತ. ದೂತನೇ, ಸಂತೋಷಗೊಂಡ ಮನಸ್ಸಿನಿಂದ ನಾನು ನಿನ್ನನ್ನು ಅಭಿನಂದಿಸುತ್ತೇನೆ. ವಿದ್ವಾಂಸನೇ, ಮೊದಲು ತಮ್ಮಂದಿರ ಜೊತೆಯಲ್ಲಿ ಕ್ಷೇಮದಿಂದಿದ್ದೇನೆಂದು ನಿನಗೆ ಪ್ರತಿಜ್ಞೆ ಮಾಡಿ ಹೇಳುತ್ತೇನೆ.

ಚಿರಾದಿದಂ ಕುಶಲಂ ಭಾರತಸ್ಯ
ಶ್ರುತ್ವಾ ರಾಜ್ಞಃ ಕುರುವೃದ್ಧಸ್ಯ ಸೂತ |
ಮನ್ಯೇ ಸಾಕ್ಷಾದ್ ದೃಷ್ಟಮಹಂ ನರೇಂದ್ರಂ
ದೃಷ್ಟ್ವೈವ ತ್ವಾಂ ಸಂಜಯ ಪ್ರೀತಿಯೋಗಾತ್ ॥8॥

ಸೂತನೇ, ಬಹಳ ಕಾಲದ ನಂತರ ಭಾರತನಾದ ಕುರುವೃದ್ಧನಾದ ಧೃತರಾಷ್ಟ್ರನ ಕುಶಲವನ್ನು ಕೇಳಿ ಮತ್ತು ಎಲೈ ಸಂಜಯನೇ, ಪ್ರೀತಿಯುಕ್ತನಾದ ನಿನ್ನನ್ನು ನೋಡಿ ನಾನು ಧೃತರಾಷ್ಟ್ರರಾಜನನ್ನೇ ಸಾಕ್ಷಾತ್ತಾಗಿ ನೋಡಿದೆನೆಂದು ಭಾವಿಸುತ್ತೇನೆ.

ಪಿತಾಮಹೋ ನಃ ಸ್ಥವಿರೋ ಮನಸ್ವೀ
ಮಹಾಪ್ರಾಜ್ಞಃ ಸರ್ವಧರ್ಮೋಪಪನ್ನಃ |
ಸ ಕೌರವ್ಯಃ ಕುಶಲೀ ತಾತ ಭೀಷ್ಮೋ
ಯಥಾಪೂರ್ವಂ ವೃತ್ತಿರಪ್ಯಸ್ತಿ ಕಚ್ಚಿತ್ ॥9॥

ಎಲೈ ಪ್ರೀತಿಪಾತ್ರನೇ, ನಮ್ಮ ಪಿತಾಮಹನೂ, ವೃದ್ಧನೂ, ಧೈರ್ಯಶಾಲಿಯೂ, ಮಹಾಪ್ರಾಜ್ಞನೂ, ಸರ್ವಧರ್ಮೋಪಪನ್ನನೂ, ಕೌರವಕುಲಪ್ರಸೂತನೂ ಆದ ಭೀಷ್ಮನು ಕ್ಷೇಮದಿಂದಿದ್ದು ಮೊದಲಿನಂತೆ ನಡೆವಳಿಕೆಯನ್ನು ಹೊಂದಿದ್ದಾನಷ್ಟೆ?

ಕಚ್ಚಿದ್ ರಾಜಾ ಧೃತರಾಷ್ಟ್ರಃ ಸಪುತ್ರೋ
ವೈಚಿತ್ರ್ಯವೀರ್ಯಃ ಕುಶಲೀ ಮಹಾತ್ಮಾ |
ಮಹಾರಾಜೋ ಬಾಹ್ಲಿಕಃ ಪ್ರಾತಿಪೇಯಃ
ಕಚ್ಚಿದ್ ವಿದ್ವಾನ್ ಕುಶಲೀ ಸೂತಪುತ್ರ ॥10॥

ವಿಚಿತ್ರವೀರ್ಯನ ಪುತ್ರನಾದ ಮಹಾತ್ಮನಾದ ಧೃತರಾಷ್ಟ್ರರಾಜನು ತನ್ನ ಪುತ್ರರಿಂದೊಡಗೂಡಿ ಕ್ಷೇಮದಿಂದಿರುವನಷ್ಟೆ? ಸೂತಪುತ್ರನೇ, ಪ್ರತೀಪನ ಪುತ್ರನಾದ ವಿದ್ವಾಂಸನಾದ ಬಾಹ್ಲಿಕ ಮಹಾರಾಜನು ಕ್ಷೇಮದಿಂದಿರುವನಷ್ಟೆ?

ಸ ಸೋಮದತ್ತಃ ಕುಶಲೀ ತಾತ ಕಚ್ಚಿದ್
ಭೂರಿಶ್ರವಾಃ ಸತ್ಯಸಂಧಃ ಶಲಶ್ಚ |
ದ್ರೋಣಃ ಸಪುತ್ರಶ್ಚ ಕೃಪಶ್ಚ ವಿಪ್ರೋ
ಮಹೇಷ್ವಾಸಾಃ ಕಚ್ಚಿದೇತೇಽಪ್ಯರೋಗಾಃ ॥11॥

ಪ್ರೀತಿಪಾತ್ರನೇ, ಸೋಮದತ್ತನು ಕ್ಷೇಮದಿಂದಿರುವನಷ್ಟೆ? ಸತ್ಯಸಂಧನಾದ ಭೂರಿಶ್ರವ, ಶಲ, ಪುತ್ರನಿಂದೊಡಗೂಡಿದ ದ್ರೋಣರು, ಬ್ರಾಹ್ಮಣರಾದ ಕೃಪರು ಈ ಎಲ್ಲಾ ಮಹಾಧನುರ್ಧಾರಿಗಳೂ ಕ್ಷೇಮದಿಂದಿರುವರಷ್ಟೆ?

ಸರ್ವೇ ಕುರುಭ್ಯಃ ಸ್ಪೃಹಯಂತಿ ಸಂಜಯ
ಧನುರ್ಧರಾ ಯೇ ಪೃಥಿವ್ಯಾಂ ಪ್ರಧಾನಾಃ |
ಮಹಾಪ್ರಾಜ್ಞಾಃ ಸರ್ವಶಾಸ್ತ್ರೇಽವದಾತಾ
ಧನುರ್ಭೃತಾಂ ಮುಖ್ಯತಮಾಃ ಪೃಥಿವ್ಯಾಮ್ ॥12॥
ಕಚ್ಚಿನ್ಮಾನಂ ತಾತ ಲಭಂತ ಏತೇ
ಧನುರ್ಭೃತಃ ಕಚ್ಚಿದೇತೇಽಪ್ಯರೋಗಾಃ |
ಯೇಷಾಂ ರಾಷ್ಟ್ರೇ ನಿವಸತಿ ದರ್ಶನೀಯೋ
ಮಹೇಷ್ವಾಸಃ ಶೀಲವಾನ್ ದ್ರೋಣಪುತ್ರಃ ॥13॥

ಎಲೈ ಸಂಜಯನೇ, ಭೂಮಿಯಲ್ಲಿರುವ ಮಹಾಪ್ರಾಜ್ಞರಾದ, ಸರ್ವಶಾಸ್ತ್ರಗಳಲ್ಲೂ ನಿಷ್ಣಾತರಾದ, ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಎಲ್ಲ ಧನುರ್ಧಾರಿಗಳೂ ಕುರುಗಳ ಜೊತೆಯಲ್ಲಿ ಸೇರಬೇಕೆಂದು ಬಯಸುತ್ತಾರೆ. ಎಲೈ ಪ್ರೀತಿಪಾತ್ರನೇ, ಈ ಧನುರ್ಧಾರಿಗಳೆಲ್ಲರೂ ಧೃತರಾಷ್ಟ್ರನಿಂದ ಮಾನವನ್ನು ಪಡೆದು ಕ್ಷೇಮದಿಂದಿರುವರಷ್ಟೆ? ಯಾವ ರಾಷ್ಟ್ರದಲ್ಲಿ ಸುಂದರನೂ, ಶೀಲವಂತನೂ, ಮಹಾಧನುರ್ಧಾರಿಯೂ ಆದ ದ್ರೋಣಪುತ್ರನಾದ ಅಶ್ವತ್ಥಾಮನಿರುವನೋ ಅಂತಹ ಧೃತರಾಷ್ಟ್ರನಿಂದ ಮಾನವನ್ನು ಪಡೆಯುವರಷ್ಟೆ?

ವೈಶ್ಯಾಪುತ್ರಃ ಕುಶಲೀ ತಾತ ಕಚ್ಚಿತ್
ಮಹಾಪ್ರಾಜ್ಞೋ ರಾಜಪುತ್ರೋ ಯುಯುತ್ಸುಃ |
ಕರ್ಣೋ ಮಾನೀ ಕುಶಲೀ ತಾತ ಕಚ್ಚಿತ್

ಸುಯೋಧನೋ ಯಸ್ಯ ಮಂದೋ ವಿಧೇಯಃ ॥14॥
ಪ್ರೀತಿಪಾತ್ರನೇ, ರಾಜನ ವೈಶ್ಯಾಪುತ್ರನಾದ ಮಹಾಪ್ರಾಜ್ಞನಾದ ಯುಯುತ್ಸುವೂ ಸಹ ಕ್ಷೇಮದಿಂದಿರುವನಷ್ಟೇ? ಯಾವನಿಗೆ ಮಂದನಾದ ಸುಯೋಧನನು ವಿಧೇಯನಾಗಿದ್ದಾನೆಯೋ ಅಂತಹ ಅಹಂಕಾರಿಯಾದ ಕರ್ಣನೂ ಕ್ಷೇಮದಿಂದಿರುವನಷ್ಟೇ?
ಸ್ತ್ರಿಯೋ ವೃದ್ಧಾ ಭಾರತಾನಾಂ ಜನನ್ಯೋ
ಮಾಹಾನಸ್ಯೋ ದಾಸಭಾರ್ಯಾಶ್ಚ ಸೂತ |
ವಧ್ವಃ ಪುತ್ರಾ ಭಾಗಿನೇಯಾ ಭಗಿನ್ಯೋ
ದೌಹಿತ್ರಾ ವಾ ಕಚ್ಚಿದಪ್ಯವ್ಯಲೀಕಾಃ ॥15॥
ಎಲೈ ಸೂತನೇ, ಭರತವಂಶದವರ ತಾಯಿಯರಾದ ವೃದ್ಧಸ್ತ್ರೀಯರು, ಅಡಿಗೆ ಮನೆಯಲ್ಲಿರುವ ದಾಸಭಾರ್ಯೆಯರು, ಸೊಸೆಯರು, ಮಕ್ಕಳು, ತಂಗಿಯರು, ತಂಗಿಯರ ಮಕ್ಕಳು, ದೌಹಿತ್ರರು ಇವರೆಲ್ಲರೂ ಕ್ಷೇಮದಿಂದಿರುವರಷ್ಟೇ?
ಕಚ್ಚಿದ್ ರಾಜಾ ಬ್ರಾಹ್ಮಣಾನಾಂ ಯಥಾವತ್
ಪ್ರವರ್ತತೇ ಪೂರ್ವವತ್ ತಾತ ವೃತ್ತಿಮ್ |
ಕಚ್ಚಿದ್ ದಾಯಾನ್ ಮಾಮಕಾನ್ ಧಾರ್ತರಾಷ್ಟ್ರೋ
ದ್ವಿಜಾತೀನಾಂ ಸಂಜಯ ನೋಪಹಂತಿ ॥16॥
ಪ್ರೀತಿಪಾತ್ರನೇ, ಬ್ರಾಹ್ಮಣರ ವಿಷಯದಲ್ಲಿ ರಾಜನು ಮೊದಲಿನಂತೆ ಸರಿಯಾದ ನಡತೆಯನ್ನು ಹೊಂದಿರುವನಷ್ಟೇ? ಎಲೈ ಸಂಜಯನೇ, ಬ್ರಾಹ್ಮಣರಿಗೆ ನಾನು ಕೊಟ್ಟಿರುವ ಭಾಗ (ವೃತ್ತಿ)ಗಳನ್ನು ಧೃತರಾಷ್ಟ್ರಪುತ್ರನು ನಾಶಗೊಳಿಸಿಲ್ಲವಷ್ಟೇ?
ಕಚ್ಚಿದ್ ರಾಜಾ ಧೃತರಾಷ್ಟ್ರಃ ಸಪುತ್ರಃ
ಸಮೀಕ್ಷತೇ ಬ್ರಾಹ್ಮಣಾತಿಕ್ರಮಾನ್ ವೈ |
ಕಚ್ಚಿನ್ನ ಹೇತೋರಿವ ಸವ್ಯಲೀಕಮ್
ಉಪೇಕ್ಷತೇ ತೇಷು ಸದೈವ ವೃತ್ತಿಮ್ ॥17॥
ಪುತ್ರರಿಂದೊಡಗೂಡಿದ ಧೃತರಾಷ್ಟ್ರ ರಾಜನು ಯಾರಾದರೂ ಬ್ರಾಹ್ಮಣರ ಉಲ್ಲಂಘನೆಯನ್ನು ಮಾಡಿದರೆ ಅದನ್ನು ಗಮನಿಸುತ್ತಿದ್ದಾನಷ್ಟೇ? ಯಾವುದಾದರೂ ನೆಪವನ್ನು ತೆಗೆದು, ಮೋಸವನ್ನು ಮಾಡಿ ಅವರ ಜೀವನೋಪಾಯದ ವಿಷಯದಲ್ಲಿ ಉದಾಸೀನನಾಗಿಲ್ಲವಷ್ಟೇ?
ಏತಜ್ಜ್ಯೋತೀರುತ್ತಮಂ ಜೀವಲೋಕೇ
ಶುಕ್ಲಂ ಪ್ರಧಾನಂ ವಿಹಿತಂ ವಿಧಾತ್ರಾ |
ತೇ ಚೇದ್ ದೋಷಂ ನ ನಿಯಚ್ಛಂತಿ ಮಂದಾಃ
ಕೃತ್ಸ್ನೋ ನಾಶೋ ಭವಿತಾ ಕೌರವಾಣಾಮ್ ॥18॥
ಯಥಾಯೋಗ್ಯವಾಗಿ ಪ್ರಜಾಪಾಲನವನ್ನು ಮಾಡುವುದು ಬ್ರಹ್ಮದೇವರು ಜೀವಲೋಕದಲ್ಲಿ ಕ್ಷತ್ರಿಯರಿಗೆ ವಿಧಿಸಿರುವ ಶುದ್ಧವಾದ ಧರ್ಮ. ಮಂದರಾದ ಧೃತರಾಷ್ಟ್ರಪುತ್ರರು ತಮ್ಮ ದೋಷವನ್ನು ನಿವಾರಿಸಿಕೊಳ್ಳದಿದ್ದರೆ ಕೌರವರಿಗೆ ಸಂಪೂರ್ಣನಾಶವು ಉಂಟಾಗುವುದು.
ಕಚ್ಚಿದ್ ರಾಜಾ ಧೃತರಾಷ್ಟ್ರಸ್ಯ ಪುತ್ರೋ
ಬುಭೂಷತೇ ವೃತ್ತಿಮಮಾತ್ಯವರ್ಗೇ |
ಕಚ್ಚಿನ್ನ ಭೇದೇನ ಜಿಜೀವಿಷಂತಿ
ಸುಹೃದ್ರೂಪಾ ದುರ್ಹೃದಶ್ಚೈಕಮತ್ಯಾತ್ ॥19॥
ಧೃತರಾಷ್ಟ್ರಪುತ್ರನಾದ ರಾಜನಾದ ದುರ್ಯೋಧನನು ಅಮಾತ್ಯವರ್ಗದಲ್ಲಿ ಸರಿಯಾದ ವೃತ್ತಿಯನ್ನು ಹೊಂದಿರುವನಷ್ಟೇ? ಅಮಾತ್ಯರೆಲ್ಲರೂ ದುರ್ಹೃದಯದಿಂದ ಒಟ್ಟಾಗಿ ಮೇಲೆ ಸುಹೃದ್ರೂಪವನ್ನು ತೋರಿಸುತ್ತಾ ಭೇದೋಪಾಯದಿಂದ ಜೀವಿಸಲು ಬಯಸುವುದಿಲ್ಲವಷ್ಟೇ?
ಕಚ್ಚಿತ್ತು ಪಾಪಂ ಕಥಯಂತಿ ತಾತ
ನ ಪಾಂಡವಾನಾಂ ಕುರವಃ ಸರ್ವ ಏವ |
ದ್ರೋಣಃ ಸಪುತ್ರಃ ಸಕೃಪಶ್ಚ ವೀರೋ
ನಾಸ್ಮಾಸು ಪಾಪಾನಿ ವದಂತಿ ಕಚ್ಚಿತ್ ॥20॥
ಪ್ರೀತಿಪಾತ್ರನೇ, ಕುರುಗಳೆಲ್ಲರೂ ಪಾಂಡವರ ವಿಷಯದಲ್ಲಿ ಯಾವ ಕೆಟ್ಟ ಮಾತನ್ನೂ ಆಡುವುದಿಲ್ಲವಷ್ಟೇ? ಪುತ್ರರಿಂದೊಡಗೂಡಿದ ದ್ರೋಣರಾಗಲೀ ಅಥವಾ ವೀರರಾದ ಕೃಪರಾಗಲೀ ನಮ್ಮ ವಿಷಯದಲ್ಲಿ ಕೆಟ್ಟದಾಗಿ ಮಾತನಾಡುವುದಿಲ್ಲವಷ್ಟೇ?
ಕಚ್ಚಿದ್ ಗ್ರಾಹ್ಯಂ ಧೃತರಾಷ್ಟ್ರಂ ಸಪುತ್ರಂ
ಸಮೇತ್ಯಾಹುಃ ಕುರವಃ ಸರ್ವ ಏವ |
ಕಚ್ಚಿದ್ ದೃಷ್ಟ್ವಾ ದಸ್ಯುಸಂಘಾನ್ ಸಮೇತಾನ್
ಸ್ಮರಂತಿ ಪಾರ್ಥಸ್ಯ ಯುಧಾಂ ಪ್ರಣೇತುಃ ॥21॥
ಉಪದೇಶಿಸಲ್ಪಡಬೇಕಾದ ಪುತ್ರಸಹಿತನಾದ ಧೃತರಾಷ್ಟ್ರನನ್ನು ಸಮೀಪಿಸಿ ಎಲ್ಲ ಕುರುಗಳು ಹಿತವನ್ನು ಹೇಳುವರಷ್ಟೇ? ಒಟ್ಟಿಗೆ ಪ್ರಾಪ್ತರಾದ ದಸ್ಯುಗಣಗಳನ್ನು ನೋಡಿ ಸೇನಾನಾಯಕನಾದ ಅರ್ಜುನನನ್ನು ಸ್ಮರಿಸುವರಷ್ಟೇ?
ಮೌರ್ವೀಂ ಭುಜಾಗ್ರೇ ಪ್ರಹಿತಾಂ ಸ್ಮ ತಾತ
ದೋಧೂಯಮಾನೇನ ಧನುರ್ಗುಣೇನ |

ಗಾಂಡೀವಮುಕ್ತಾನ್ ಸ್ತನಯಿತ್ನುಘೋಷಾನ್
ಅಜಿಹ್ಮಗಾನ್ ಕಚ್ಚಿದನುಸ್ಮರಂತಿ ||22||
ಪ್ರೀತಿಪಾತ್ರನೇ, ಹೆಗಲಿನಲ್ಲಿ ಧನುಸ್ಸಿನ ಹೆದೆಯನ್ನು ಹಾಕಿಕೊಂಡು, ಬಹಳವಾಗಿ ಕಂಪಿಸುವ ಆ ಹೆದೆಯಿಂದ ಹೊರಹೊಮ್ಮುವ ಗಾಂಡೀವ ಧನುಸ್ಸಿನಿಂದ ಹೊರಡುವ ಸಿಡಿಲಿನ ಘೋಷವನ್ನು ಹೊಂದಿರುವ ನೇರವಾಗಿ ತಲುಪುವ ಅರ್ಜುನನ ಬಾಣಗಳನ್ನು ಸ್ಮರಿಸುವರಷ್ಟೆ?
ನತಂ ದೃಷ್ಟ್ವಾ ಕಚ್ಚಿದಸ್ತಿ ಪ್ರತೀಪಂ
ಗತೋ ಗೃಹಂ ಜಾತು ಜಗಾಮ ರಂಗಾತ್ ||23||
ಅರ್ಜುನನಿಗೆ ಎದುರಾಗಿ ನಿಂತು ವೈರಿಯಾದ ಅರ್ಜುನನು ಬಾಗಿನಿಂತಿರುವುದನ್ನು ನೋಡಿ ಯುದ್ಧರಂಗದಿಂದ ಮನೆಗೆ ಹಿಂದಿರುಗಿದವನು ಯಾವನೂ ಇಲ್ಲ.
ನ ಚಾಪಶ್ಯಂ ಕಂಚಿದಹಂ ಪೃಥಿವ್ಯಾಂ
ಯೋಧಂ ಸಮಂ ವಾಽಪ್ಯಧಿಕಂ ಚಾರ್ಜುನೇನ |
ಯಸ್ಯೈಕಷಷ್ಟಿರ್ನಿಹಿತಾಸ್ತೀಕ್ಷ್ಣಧಾರಾಃ
ಸುವಾಸಸಃ ಸಮ್ಮತಾ ಹಸ್ತವಾಪಾಃ ||24||
ಯಾವ ಅರ್ಜುನನ ಬಳಿ ತೀಕ್ಷ್ಣವಾದ ಅಲುಗುಳ್ಳ, ಒಳ್ಳೆಯ ಪುಂಖವನ್ನು ಹೊಂದಿರುವ, ಶತ್ರುದೇಹಗಳಲ್ಲಿ ಬೀಜಾವಾಪವನ್ನು ಮಾಡುವಂತಿರುವ ಅರವತ್ತೊಂದು ಬಾಣಗಳು ಬತ್ತಳಿಕೆಯಲ್ಲಿ ನಿಹಿತವಾಗಿವೆಯೋ ಅಂತಹ ಅರ್ಜುನನಿಗೆ ಸಮನಾದ ಅಥವಾ ಅಧಿಕನಾದ ಯಾವ ಯೋಧನನ್ನೂ ನಾನು ಭೂಮಿಯಲ್ಲಿ ನೋಡಲಿಲ್ಲ.
ಗದಾಪಾಣಿರ್ಭೀಮಸೇನಸ್ತರಸ್ವೀ
ಪ್ರಾದ್ರಾವಯಚ್ಛತ್ರುಸಂಘಾನ್ ಸಮೀಕೇ |
ನಾಗಃ ಪ್ರಭಿನ್ನ ಇವ ನಡ್ವಲೇಷು
ಚಂಕ್ರಮ್ಯತೇ ಕಚ್ಚಿದೇನಂ ಸ್ಮರಂತಿ ||25||
ಗದಾಪಾಣಿಯಾದ ಭೀಮಸೇನನು ವೇಗಶಾಲಿಯಾದವನು. ಯುದ್ಧದಲ್ಲಿ ಅವನು ಶತ್ರುಸಮೂಹವನ್ನು ಓಡಿಸುತ್ತಾ ಮೃದುಪ್ರದೇಶದಲ್ಲಿ ಮದಗಜವು ಚಲಿಸುವಂತೆ ಸಂಚರಿಸುತ್ತಾನೆ. ಅವನನ್ನು ಸ್ಮರಿಸುತ್ತಾರಷ್ಟೆ?
ಮಾದ್ರೀಸುತಃ ಸಹದೇವಃ ಕಳಿಂಗಾನ್
ಸಮಾಗತಾನಜಯದ್ ವಾರ್ಧಿಕೂಲೇ |
ವಾಮೇನಾಸ್ಯನ್ ದಕ್ಷಿಣೇನೇವ ಯೋ ವೈ
ಮಹಾಬಲಂ ಕಚ್ಚಿದೇನಂ ಸ್ಮರಂತಿ ||26||
ಮಾದ್ರೀಪುತ್ರನಾದ ಸಹದೇವನು ಸಮುದ್ರತೀರದಲ್ಲಿ ಸಂಗತರಾದ ಕಳಿಂಗ ಸೈನಿಕರೆಲ್ಲರನ್ನೂ ಸೋಲಿಸಿದನು. ಅವನು ಎಡಗೈಯಿಂದಲೂ ಬಲಗೈಯಂತೆಯೇ ಬಾಣಗಳನ್ನು ಬಿಡುವ ಮಹಾಬಲನಾದವನು. ಅವನನ್ನು ಸ್ಮರಿಸುತ್ತಾರಷ್ಟೆ?
ಪುರಾ ಜೇತುಂ ನಕುಲಃ ಪ್ರೇಷಿತೋಽಯಂ
ಗಾವಲ್ಗಣೇ ಸಂಜಯ ಪಶ್ಯತಸ್ತೇ |
ದಿಶಂ ಪ್ರತೀಚೀಂ ವಶಮಾನಯನ್ಮೇ
ಮಾದ್ರೀಪುತ್ರಃ ಕಚ್ಚಿದೇನಂ ಸ್ಮರಂತಿ ||27||
ಎಲೈ ಸಂಜಯನೇ, ನಾನು ಹಿಂದೆ ನಿನ್ನ ಕಣ್ಣೆದುರಿಗೇ ನಕುಲನನ್ನು ಪಶ್ಚಿಮ ದಿಗ್ವಿಜಯಕ್ಕಾಗಿ ಕಳುಹಿಸಿದೆ. ಗಾವಲ್ಗಣಿಯೇ, ಮಾದ್ರೀಪುತ್ರನಾದ ಅವನು ಪಶ್ಚಿಮ ದಿಕ್ಕನ್ನು ನನ್ನ ವಶವನ್ನಾಗಿ ಮಾಡಿದನು. ಅವನನ್ನು ಸ್ಮರಿಸುತ್ತಾರಷ್ಟೆ?
ಪರಾಭವೋ ದ್ವೈತವನೇ ಯ ಆಸೀದ್
ದುರ್ಮಂತ್ರಿತೇ ಘೋಷಯಾತ್ರಾಗತಾನಾಮ್ |
ಯತ್ರ ಮಂದಾನ್ ಶತ್ರುವಶಂ ಪ್ರಪನ್ನಾನ್
ಅಮೋಚಯದ್ ಭೀಮಸೇನೋಽರ್ಜುನಶ್ಚ ||28||
ಅಹಂ ಪಶ್ಚಾದರ್ಜುನಮಭ್ಯರಕ್ಷಂ
ಮಾದ್ರೀಪುತ್ರೌ ಭೀಮಸೇನಶ್ಚ ಚಕ್ರೇ |
ಗಾಂಡೀವಭೃಚ್ಛತ್ರುಸಂಘಾನುದಸ್ಯ
ಸ್ವಸ್ತ್ಯಾಗಮತ್ ಕಚ್ಚಿದೇನಂ ಸ್ಮರಂತಿ ||29||
ದ್ವೈತವನದಲ್ಲಿ ಕೆಟ್ಟ ಮಂತ್ರಾಲೋಚನೆಯನ್ನು ಮಾಡಿ ಘೋಷಯಾತ್ರೆಗಾಗಿ ದುರ್ಯೋಧನಾದಿಗಳು ಬಂದಾಗ ಶತ್ರುಗಳಿಗೆ ವಶರಾದ ಆ ಮಂದರಾದ ದುರ್ಯೋಧನಾದಿಗಳನ್ನು ಭೀಮಸೇನ ಮತ್ತು ಅರ್ಜುನರು ವಿಮೋಚನೆ ಮಾಡಿದರು. ನಾನು ಹಿಂದಿನಿಂದ ಅರ್ಜುನನನ್ನು ರಕ್ಷಿಸಿದೆ. ನಕುಲ-ಸಹದೇವರು ಮತ್ತು ಭೀಮಸೇನನು ಎರಡು ಪಾರ್ಶ್ವಗಳಿಂದ ಅವನನ್ನು ರಕ್ಷಿಸಿದರು. ಗಾಂಡೀವಧಾರಿಯಾದ ಅರ್ಜುನನು ಶತ್ರುಸಂಘವನ್ನು ಚದುರಿಸಿ ಕ್ಷೇಮದಿಂದ ಹಿಂದಿರುಗಿದನು. ಅವನನ್ನು ಸ್ಮರಿಸುತ್ತಾರಷ್ಟೆ?
ನ ಕರ್ಮಣಾ ಸಾಧುನೈಕೇನ ನೂನಂ
ಕಾರ್ಯಂ ಶಕ್ಯಂ ವೈ ಭವತೀಹ ಸಂಜಯ |
ಸರ್ವಾತ್ಮನಾ ಪರಿಜೇತುಂ ವಯಂ ಚೇತ್
ನ ಶಕ್ನುಮೋ ಧೃತರಾಷ್ಟ್ರಸ್ಯ ಪುತ್ರಮ್ ||30||

ಎಲೈ ಸಂಜಯನೇ, ನಾವು ಧೃತರಾಷ್ಟ್ರಪುತ್ರನನ್ನು ಸರ್ವಾತ್ಮನಾ ಗೆಲ್ಲಲು ಸಾಧ್ಯವಾಗದಿದ್ದರೆ ರಾಜನ ಷಟ್ಕರ್ಮದಲ್ಲಿ ಒಂದಾದ ಸಂಧಿಯಿಂದ ನಮ್ಮ ಕಾರ್ಯವನ್ನು ಸಾಧಿಸಲು ಇಲ್ಲಿ ಸಾಧ್ಯವಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಯೋವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತಮೂರನೆಯ
ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನಾಲ್ಕನೆಯ ಅಧ್ಯಾಯ
ಸಂಜಯನಿಂದ ಯುಧಿಷ್ಠಿರನ ಪ್ರಶ್ನೆಗಳಿಗೆ ಉತ್ತರದಾನ ಮತ್ತು
ಭೀಷ್ಮ-ಧೃತರಾಷ್ಟ್ರಾದಿಗಳ ಅಭಿಪ್ರಾಯಕಥನ.
ಸಂಜಯಃ
ಯದಾತ್ಥ ಮೇ ಪಾಂಡವ ತತ್ ತಥೈವ
ಕುರೂನ್ ಕುರುಶ್ರೇಷ್ಠ ಜನಂ ಚ ಪೃಚ್ಛಸಿ |
ಅನಾಮಯಾಸ್ತಾತ ಮನಸ್ವಿನಸ್ತೇ
ಕುರುಶ್ರೇಷ್ಠಾನ್ ಪೃಚ್ಛಸಿ ಯಾಂಸ್ತ್ವಮೇವ ॥1॥
ಸಂಜಯ ಪಾಂಡವನೇ, ನೀನು ಏನು ಹೇಳಿದೆಯೋ ಅವೆಲ್ಲವೂ ಹಾಗೆಯೇ ಸರಿ. ಕುರುಶ್ರೇಷ್ಠನೇ, ಕುರುಗಳ ಯೋಗಕ್ಷೇಮದ ವಿಷಯದಲ್ಲಿ ಪ್ರಶ್ನೆಯನ್ನು ಮಾಡುತ್ತಿದ್ದೀಯೆ. ಪ್ರೀತಿಪಾತ್ರನೇ, ಯಾವ ಕುರುಶ್ರೇಷ್ಠರನ್ನು ಕೇಳುತ್ತಿದ್ದೀಯೋ ಅವರೆಲ್ಲರೂ ಕ್ಷೇಮದಿಂದ ಮತ್ತು ಉತ್ಸಾಹವುಳ್ಳ ಮನಸ್ಸಿನಿಂದ ಕೂಡಿದವರಾಗಿದ್ದಾರೆ.
ಸಂತ್ಯೇವ ವೃದ್ಧಾಃ ಸಾಧವೋ ಧಾರ್ತರಾಷ್ಟ್ರೇ
ಸಂತ್ಯೇವ ಪಾಪಾಃ ಪಾಂಡವ ತಸ್ಯ ವಿದ್ಧಿ |
ದದ್ಯಾತ್ ರಿಪುಭ್ಯೋಽಪಿ ಹಿ ಧಾರ್ತರಾಷ್ಟ್ರಃ
ಕುತೋ ದಾಯಾಂಲ್ಲೋಪಯೇದ್ ಬ್ರಾಹ್ಮಣಾನಾಮ್ ॥2॥
ಎಲೈ ಪಾಂಡವನೇ, ದುರ್ಯೋಧನನ ಸಮೀಪದಲ್ಲಿ ಸಾಧುಗಳಾದ ವೃದ್ಧರೂ ಇದ್ದಾರೆ ಮತ್ತು ಪಾಪಿಷ್ಠರೂ ಇದ್ದಾರೆ ಎಂದು ತಿಳಿ. ದುರ್ಯೋಧನನು ಶತ್ರುಗಳಿಗೂ ತನ್ನ ಆಸ್ತಿಯನ್ನು ಕೊಟ್ಟಾನು. ಇನ್ನು ಬ್ರಾಹ್ಮಣರಿಗೆ ಕೊಡಬೇಕಾದ ಭಾಗವನ್ನು ಏಕೆ ಲೋಪ ಮಾಡುತ್ತಾನೆ?
ಯತ್ ತದ್ಯುಷ್ಮಾಸು ವರ್ತತೇಽಸಾವಧರ್ಮಮ್
ಅದ್ರುಗ್ಧೇಷು ದ್ರುಗ್ಧವತ್ ತನ್ನ ಸಾಧು |
ಮಿತ್ರಧ್ರುಕ್ ಸ್ಯಾದ್ ಧೃತರಾಷ್ಟ್ರಸ್ಯ ಪುತ್ರೋ
ಯುಷ್ಮಾನ್ ದ್ವಿಷನ್ ಸಾಧುವೃತ್ತಾನಸಾಧುಃ ॥3॥
ನಿಮ್ಮ ವಿಷಯದಲ್ಲಿ ಅವನು ಅಧರ್ಮದಿಂದ ನಡೆದುಕೊಳ್ಳುತ್ತಿದ್ದಾನೆ. ನಿಮ್ಮ ದ್ವೇಷರೂಪವಾದ ವಿಷವನ್ನು ಅವನು ಕ್ಷೀರವೆಂದು ತಿಳಿಯುವುದು ಸರಿಯಲ್ಲ. ಸಾಧು ನಡತೆಯುಳ್ಳ ನಿಮ್ಮನ್ನು ದ್ವೇಷಿಸಿದರೆ ಅಸಾಧುವಾದ ಧೃತರಾಷ್ಟ್ರಪುತ್ರನು ಮಿತ್ರದ್ರೋಹವನ್ನು ಮಾಡಿದಂತಾಗುತ್ತದೆ.
ಸ ಚಾಪಿ ಜಾನಾತಿ ಭೃಶಂ ಚ ತಪ್ಯತೇ
ಶೋಚತ್ಯಂತಃ ಸ್ಥವಿರೋಽಜಾತಶತ್ರೋ |
ಮಿತ್ರದ್ರೋಹಂ ಬ್ರಾಹ್ಮಣಾನಾಂ ಸಮೇತ್ಯ
ಶೃಣೋತಿ ಹಿ ಪಾಪಕೇಭ್ಯೋ ಗರೀಯಃ ॥4॥
ಅಜಾತಶತ್ರುವೇ, ವೃದ್ಧನಾದ ಧೃತರಾಷ್ಟ್ರನೂ ಎಲ್ಲವನ್ನು ತಿಳಿದಿದ್ದಾನೆ. ಪಶ್ಚಾತ್ತಾಪವನ್ನು ಪಡುತ್ತಿದ್ದಾನೆ. ಮನಸ್ಸಿನಲ್ಲಿಯೇ ದುಃಖವನ್ನು ಪಡುತ್ತಿದ್ದಾನೆ. ಬ್ರಾಹ್ಮಣರ ಸಮೂಹವನ್ನು ಸೇರಿ ಮಿತ್ರದ್ರೋಹವು ಎಲ್ಲ ಪಾಪಗಳಿಗಿಂತಲೂ ದೊಡ್ಡದಾದ ಪಾಪವೆಂದು ಕೇಳಿ ತಿಳಿದಿದ್ದಾನೆ.
ಸ್ಮರಂತಿ ತುಭ್ಯಂ ನರದೇವ ಸಂಯುಗೇ
ಯುದ್ಧೇ ಚ ಜಿಷ್ಣೋಶ್ಚ ಯುಧಾಂ ಪ್ರಣೇತುಃ |
ಸಮುದ್ಧುಷ್ಟೇ ದುಂದುಭಿಶಂಖಶಬ್ದೇ
ಗದಾಪಾಣಿಂ ಭೀಮಸೇನಂ ಸ್ಮರಂತಿ ॥5॥
ನರದೇವನೇ, ಯುದ್ಧದ ಪ್ರಸ್ತಾಪ ಬಂದಾಗ ನಿನ್ನನ್ನು ಸ್ಮರಿಸುತ್ತಾರೆ. ಸೇನಾನಾಯಕನಾದ ಅರ್ಜುನನನ್ನೂ ಸ್ಮರಿಸುತ್ತಾರೆ. ದುಂದುಭಿ-ಶಂಖಗಳ ಶಬ್ದಗಳು ಜೋರಾಗಿ ಕೇಳಿಬರುವಾಗ ಗದಾಪಾಣಿಯಾದ ಭೀಮಸೇನನನ್ನು ಸ್ಮರಿಸುತ್ತಾರೆ.
ಮಾದ್ರೀಸುತೌ ಚಾಪಿ ರಣಾಜಿಮಧ್ಯೇ
ಸರ್ವಾ ದಿಶಃ ಸಂಪತಂತೌ ಸ್ಮರಂತಿ |
ಸೇನಾಂ ವರ್ಷಂತೌ ಶರವರ್ಷೈರಜಸ್ರಂ
ಮಹಾರಥೌ ಸಮರೇ ದುಷ್ಪ್ರಕಂಪ್ಯೌ ॥6॥

ಮತ್ತು ಮಹಾರಥರೂ, ಯುದ್ಧದಲ್ಲಿ ಅಲುಗಾಡಿಸಲು ಸಾಧ್ಯವಿಲ್ಲದವರೂ, ತಮ್ಮ ಶರವರ್ಷದಿಂದ ಸತತವಾಗಿ ಶತ್ರುಗಳ ಸೇನೆಯ ಮೇಲೆ ಬಾಣಗಳ ಮಳೆಯನ್ನು ಕರೆಯುವವರೂ, ದಿಕ್ಕುದಿಕ್ಕುಗಳಲ್ಲಿ ಸಂಚರಿಸುವವರೂ ಆದ ಮಾದ್ರೀಪುತ್ರರಿಬ್ಬರನ್ನೂ ಶತ್ರುಗಳ ಯುದ್ಧದ ಮಧ್ಯದಲ್ಲಿ ಸ್ಮರಿಸುತ್ತಾರೆ.

ನನ್ವೇವ ಮನ್ಯೇ ಪುರುಷಸ್ಯ ರಾಜನ್
 ಸ್ವಭಾವತೋ ಜಾಯತೇ ಯದ್ ಭವಿಷ್ಯತ್ |
ತ್ವಂ ಚೇತ್ ತಥಾ ಸರ್ವಧರ್ಮೋಪಪನ್ನಃ
 ಪ್ರಾಪ್ತಃ ಕ್ಲೇಶಂ ಪಾಂಡವ ಕೃಚ್ಚ್ರರೂಪಮ್ ॥7॥

ಎಲೈ ರಾಜನೇ, ಪಾಂಡವನೇ, ನಿನ್ನಂತಹ ಸರ್ವಧರ್ಮೋಪಪನ್ನನಾದವನು ಇಷ್ಟು ಕಷ್ಟರೂಪವಾದ ಕ್ಲೇಶಗಳನ್ನು ಹೊಂದಿದೆ ಎಂದಾದಮೇಲೆ ಮನುಷ್ಯನಿಗೆ ವರ್ತಮಾನ ಕಾಲದಲ್ಲಿ ಮತ್ತು ಭವಿಷ್ಯತ್ಕಾಲದಲ್ಲಿ ಉಂಟಾಗುವುದೆಲ್ಲವೂ ಸ್ವಭಾವದಿಂದಲೇ ಉಂಟಾಗುತ್ತದೆ ಎಂದು ನಾನು ಭಾವಿಸುವುದಿಲ್ಲ.

ತ್ವಮೇವೈತತ್ ಸರ್ವಮತಶ್ಚ ಭೂಯಃ |
ಸಮೀಕ್ಷ್ಯ ಕುರ್ಯಾಃ ಪ್ರಜ್ಞಯಾಽಜಾತಶತ್ರೋ ॥8॥

ಅಜಾತಶತ್ರುವೇ, ನೀನೇ ಇವೆಲ್ಲವನ್ನು ಮತ್ತು ಇದಕ್ಕಿಂತ ಹೆಚ್ಚಿನದನ್ನು ನಿನ್ನ ಪ್ರಜ್ಞೆಯಿಂದ ವಿಚಾರ ಮಾಡಿ ಹಿತವನ್ನು ಮಾಡುವವನಾಗು.

ನ ಕಾಮಾರ್ಥಂ ಸಂತ್ಯಜೇಯುರ್ಹಿ ಧರ್ಮಂ
 ಪಾಂಡೋಃ ಸುತಾಃ ಸರ್ವ ಏವೇಂದ್ರಕಲ್ಪಾಃ |
ತ್ವಮೇವೈತತ್ ಪ್ರಜ್ಞಯಾಽಜಾತಶತ್ರೋ
 ಸಮೀಕುರ್ಯಾ ಯೇನ ಶರ್ಮಾಪ್ನುಯುಸ್ತೇ ॥9॥

ಎಲ್ಲರೂ ಇಂದ್ರಕಲ್ಪರಾದ ಪಾಂಡುಪುತ್ರರು ಕಾಮದ ಸಲುವಾಗಿ ಎಂದೂ ಧರ್ಮವನ್ನು ಬಿಡಲಾರರು. ಅಜಾತಶತ್ರುವೇ, ನಿನ್ನ ಪ್ರಜ್ಞೆಯಿಂದ ವಿಚಾರಮಾಡಿ ಹೇಗೆ ಅವರು ಸುಖವನ್ನು ಹೊಂದುವರೋ ಹಾಗೆಯೇ ಎಲ್ಲವನ್ನೂ ಸರಿಮಾಡು.

ಧಾರ್ತರಾಷ್ಟ್ರಾಃ ಪಾಂಡವಾಃ ಸೃಂಜಯಾಶ್ಚ
 ಯೇ ಚಾಪ್ಯನ್ಯೇ ಸನ್ನಿವಿಷ್ಟಾ ನರೇಂದ್ರಾಃ |
ಯನ್ಮಾಂ ಬ್ರವೀದ್ ಧೃತರಾಷ್ಟ್ರೋ ನಿಶಾಯಾಮ್
 ಅಜಾತಶತ್ರೋ ವಚನಂ ಪಿತಾ ತೇ ॥10॥
ಸಹಾಮಾತ್ಯಃ ಸಹಪುತ್ರಶ್ಚ ರಾಜನ್
 ಸಮೇತ್ಯ ತಾಂ ವಾಚಮಿಮಾಂ ನಿಬೋಧ ॥11॥

ಅಜಾತಶತ್ರುವೇ, ಧೃತರಾಷ್ಟ್ರಪುತ್ರರೂ, ಪಾಂಡವರೂ, ಸೃಂಜಯರೂ, ಉಳಿದ ರಾಜರೂ ಎಲ್ಲರೂ ಒಂದುಗೂಡಿದ್ದಾರೆ. ನಿನ್ನೆ ರಾತ್ರಿಯ ವೇಳೆಯಲ್ಲಿ ಅಮಾತ್ಯ ಮತ್ತು ಪುತ್ರರಿಂದೊಡಗೂಡಿದ ನಿನ್ನ ತಂದೆಯಾದ ಧೃತರಾಷ್ಟ್ರನು ನನಗೆ ಏನು ಹೇಳಿದನೋ ಅಂತಹ ಈ ಮಾತನ್ನು ನೀನು ಕೇಳುವವನಾಗು.

ಯುಧಿಷ್ಠಿರಃ

ಸಮಾಗತಾಃ ಪಾಂಡವಾಃ ಸೃಂಜಯಾಶ್ಚ
 ಜನಾರ್ದನೋ ಯುಯುಧಾನೋ ವಿರಾಟಃ |
ಯತ್ ತೇ ವಾಕ್ಯಂ ಧೃತರಾಷ್ಟ್ರಾನುಶಿಷ್ಟಂ
 ಗಾವಲ್ಗಣೇ ಬ್ರೂಹಿ ತತ್ ಸೂತಪುತ್ರ ॥12॥

ಯುಧಿಷ್ಠಿರ ಎಲೈ ಸೂತಪುತ್ರನೇ, ಗಾವಲ್ಗಣಿಯೇ, ಪಾಂಡವರು, ಸೃಂಜಯರು, ಕೃಷ್ಣನು, ಸಾತ್ಯಕಿಯು, ವಿರಾಟನು ಎಲ್ಲರೂ ಬಂದು ಸೇರಿದ್ದಾರೆ. ಧೃತರಾಷ್ಟ್ರನು ನಿನಗೆ ಆದೇಶಿಸಿದ ಮಾತುಗಳನ್ನು ಹೇಳುವವನಾಗು.

ಸಂಜಯಃ

ಅಜಾತಶತ್ರುಂ ಚ ವೃಕೋದರಂ ಚ
 ಧನಂಜಯಂ ಮಾದ್ರವತೀಸುತೌ ಚ |
ಆಮಂತ್ರಯೇ ವಾಸುದೇವಂ ಚ ಶೌರಿಂ
 ಯುಯುಧಾನಂ ಚೇಕಿತಾನಂ ವಿರಾಟಮ್ ॥13॥
ಪಾಂಚಾಲಾನಾಮಧಿಪಂ ಚೈವ ವೃದ್ಧಂ
 ಧೃಷ್ಟದ್ಯುಮ್ನಂ ಪಾರ್ಷತಂ ಯಾಜ್ಞಸೇನೀಮ್ |
ಸರ್ವೇ ವಾಚಂ ಶೃಣುತೇಮಾಂ ಮದೀಯಾಂ
 ವಕ್ಷ್ಯಾಮಿ ಯಾಂ ಭೂತಿಮಿಚ್ಛನ್ ಕುರೂಣಾಮ್ ॥14॥

ಸಂಜಯ ಅಜಾತಶತ್ರುವನ್ನೂ, ವೃಕೋದರನನ್ನೂ, ಅರ್ಜುನನನ್ನೂ, ಮಾದ್ರೀಪುತ್ರರಾದ ನಕುಲ-ಸಹದೇವರನ್ನೂ, ಶೂರಕುಲದಲ್ಲಿ ಜನಿಸಿದ ವಾಸುದೇವನನ್ನೂ, ಸಾತ್ಯಕಿಯನ್ನೂ, ಚೇಕಿತಾನನನ್ನೂ, ವಿರಾಟನನ್ನೂ, ಪಾಂಚಾಲಾಧಿಪತಿಯಾದ ವೃದ್ಧನಾದ ದ್ರುಪದನನ್ನೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನೂ ಮತ್ತು ಯಜ್ಞಸೇನನ ಮಗಳಾದ ದ್ರೌಪದಿಯನ್ನು ಆಮಂತ್ರಿಸುತ್ತೇನೆ. ಕುರುಗಳಿಗೆ ಸಮೃದ್ಧಿಯನ್ನು ಇಚ್ಛಿಸುವವನಾಗಿ ನಾನು ಹೇಳುವ ಈ ಮಾತುಗಳನ್ನು ಎಲ್ಲರೂ ಕೇಳಿ.

ಶಮಂ ರಾಜಾ ಧೃತರಾಷ್ಟ್ರೋಽಭಿನಂದನ್

ಅಯೋಜಯತ್ ತ್ವರಮಾಣೋ ರಥಂ ಮೇ |
ಸಭ್ರಾತೃಪುತ್ರಸ್ವಜನಸ್ಯ ರಾಜ್ಞಃ
ತದ್ ರೋಚತಾಂ ಪಾಂಡವಾನಾಂ ಶಮೋಽಸ್ತು ||15||
ರಾಜನಾದ ಧೃತರಾಷ್ಟ್ರನು ಸಂಧಿಯನ್ನು ಅಭಿನಂದಿಸುತ್ತಾ, ಶೀಘ್ರವಾಗಿ ನನಗೆ ರಥವನ್ನು ಹೂಡಿಸಿದನು. ಭ್ರಾತೃಪುತ್ರಸ್ವಜನ ಸಹಿತನಾದ ಧೃತರಾಷ್ಟ್ರನ ಅಭಿಪ್ರಾಯವು ಪಾಂಡವರಿಗೆ ಇಷ್ಟವಾಗಲಿ. ಸಂಧಿಯುಂಟಾಗಲಿ.
ಸರ್ವೈರ್ಧರ್ಮೈಃ ಸಮುಪೇತಾಸ್ತು ಪಾರ್ಥಾಃ
ಸಂಸ್ಥಾನೇನ ಮಾರ್ದವೇನಾರ್ಜವೇನ |
ಕುಲೇ ಜಾತಾ ಹ್ಯನೃಶಂಸಾ ವದಾನ್ಯಾ
ಹ್ರೀನಿಷೇಧಾಃ ಕರ್ಮಣಾಂ ನಿಶ್ಚಯಜ್ಞಾಃ ||16||
ಪಾಂಡವರು ಎಲ್ಲ ಧರ್ಮಗಳಿಂದಲೂ ಕೂಡಿದವರು. ಮೃದುಸ್ವಭಾವ ಮತ್ತು ನೇರವಾದ ನಡವಳಿಕೆಗಳಿಂದ ಮತ್ತು ಸಂಸ್ಥಾನದಿಂದ ಕೂಡಿದವರು, ಸತ್ಕುಲಪ್ರಸೂತರು, ಮೃದುಸ್ವಭಾವದವರು, ಉದಾರಿಗಳು, ದಾಕ್ಷಿಣ್ಯಸ್ವಭಾವವುಳ್ಳವರು, ಯಾವ ಕರ್ಮವನ್ನು ಮಾಡಬೇಕು, ಯಾವುದನ್ನು ಮಾಡಬಾರದು ಎಂಬ ವಿಷಯದಲ್ಲಿ ನಿಶ್ಚಯವುಳ್ಳವರು.
ನ ಯುಜ್ಯತೇ ಕರ್ಮ ಯುಷ್ಮಾಸು ಹೀನಂ
ಸತ್ತ್ವಂ ಹಿ ವಸ್ತಾದೃಶಂ ಭೀಮಸೇನಾಃ |
ಉದ್ಭಾಸತೇ ಹ್ಯಂಜನಬಿಂದುವತ್ ತತ್
ಶುಭ್ರೇ ವಸ್ತ್ರೇ ಯದ್ಭವೇತ್ ಕಿಲ್ಬಿಷಂ ವಃ ||17||
ಭಯಂಕರ ಸೈನ್ಯವುಳ್ಳ ಪಾಂಡವರೇ ನಿಮ್ಮಲ್ಲಿ ಯಾವ ಹೀನಕರ್ಮವೂ ಉಪಪನ್ನವಾಗುವುದಿಲ್ಲ. ನಿಮ್ಮ ಸ್ವಭಾವವೇ ಆ ರೀತಿಯಿದೆ. ನಿಮ್ಮಲ್ಲಿ ಏನಾದರೂ ಒಂದು ದೋಷವು ಇದ್ದರೆ ಅದು ಶುಭ್ರವಾದ ಬಿಳಿಯ ವಸ್ತ್ರದಲ್ಲಿ ಕಾಡಿಗೆಯ ಬಿಂದುವಿನಂತೆ ಎದ್ದು ತೋರುತ್ತದೆ.
ಸರ್ವಕ್ಷಯೋ ದೃಶ್ಯತೇ ಯತ್ರ ಕೃತ್ಸ್ನಃ
ಪಾಪೋದಯೋ ಭಾವಸಂಸ್ಥಃ ಕುರೂಣಾಮ್ |
ಕಸ್ತತ್ರ ಕುರ್ಯಾಜ್ಜಾತು ಕರ್ಮ ಪ್ರಜಾನನ್
ಪರಾಜಯೋ ಯತ್ರ ಸಮೋ ಜಯಶ್ಚ ||18||
ಯಾವ ಪಾಪವನ್ನು ಆಚರಿಸಿದರೆ ಸಮಗ್ರವಾದ ವಿನಾಶವುಂಟಾಗುತ್ತದೆಯೋ ಅಂತಹ ಪಾಪೋದಯವು ಕುರುಗಳ ಮನಸ್ಸಿನಲ್ಲಿದೆ. ಒಮ್ಮೆ ಸೋಲು, ಒಮ್ಮೆ ಗೆಲುವುಂಟಾಗುವ ಮತ್ತು ಎಲ್ಲಿ ಸೋಲು ಮತ್ತು ಗೆಲುವು ಸಮವಾಗಿರುತ್ತವೆಯೋ ಅಂತಹ ಕೆಟ್ಟದ್ಯೂತವನ್ನು ಯಾವನು ಆಡಿಯಾನು?
ತೇ ವೈ ಧನ್ಯಾ ಯೈಃ ಕೃತಂ ಜ್ಞಾತಿಕಾರ್ಯಂ
ತೇ ವೈ ಪುತ್ರಾ ಸುಹೃದೋ ಬಾಂಧವಾಶ್ಚ |
ಉಪಕ್ರುಷ್ಟಂ ಜೀವಿತಂ ಸಂತ್ಯಜೇಯುಃ
ಯತಃ ಕುರೂಣಾಂ ನಿಯತಃ ಸ್ಯಾದಭಾವಃ ||19||
ಆ ಪಾಂಡವರು ಬಂಧುಕಾರ್ಯವನ್ನು ಮಾಡಿ ನಿಜವಾಗಿಯೂ ಧನ್ಯರಾಗಿದ್ದಾರೆ. ಅವರೇ ನನ್ನ ಸುಹೃದಯವುಳ್ಳ ಬಂಧುಗಳಾದ ಪುತ್ರರು. ನಿಂದನೆಗೆ ಒಳಗಾದರೆ ಅವರು ಜೀವನವನ್ನೂ ತೊರೆದಾರು. ಅವರಿಂದ ಕುರುಗಳಿಗೆ ವಿನಾಶವು ನಿಶ್ಚಯವಾಗಿ ಪ್ರಾಪ್ತವಾಗಿದೆ.
ನ ಚೇತ್ ಕುರೂನನುಶಿಕ್ಷಾಮಿ ಸಾರ್ಥಂ
ನಿರ್ಣೀಯ ಸರ್ವಾನ್ ದ್ವಿಷತೋ ನಿಗೃಹ್ಯ |
ಸಮಂ ವಸ್ತಜ್ಜೀವಿತಂ ಮೃತ್ಯುನಾ ಸ್ಯಾದ್
ಯಜ್ಜೀವಧ್ವಂ ಜ್ಞಾತಿವಧೇನ ಸಾಧು ||20||
ಕುರುಗಳ ಮನೋಗತವಾದ ಅಭಿಪ್ರಾಯವನ್ನು ನಿಶ್ಚಯಿಸಿ, ಸಂಧಿಕಾರ್ಯವನ್ನು ದ್ವೇಷಿಸುವವರನ್ನು ನಿಗ್ರಹಿಸಿ, ನಾನು ಒಳ್ಳೆಯ ಸ್ವಭಾವವನ್ನು ಉಪದೇಶ ಮಾಡದಿದ್ದರೆ ನಿಮ್ಮ ಮುಂದಿನ ಜೀವನವು ಮರಣಕ್ಕೆ ಸಮಾನವಾಗುತ್ತದೆ. ಏಕೆಂದರೆ ಜ್ಞಾತಿವಧೆಯನ್ನು ಮಾಡಿ ನೀವು ಬದುಕುವಿರಿ.
ಕೋ ಹ್ಯೇವ ಯುಷ್ಮಾನ್ ಸಹ ಕೇಶವೇನ
ಸಚೇಕಿತಾನಾನ್ ಪಾರ್ಷತಬಾಹುಗುಪ್ತಾನ್ |
ಸಸಾತ್ಯಕೀನ್ ವಿಷಹತೇ ಹ ಜೇತುಂ
ಲಬ್ಧ್ವಾಪಿ ದೇವಾನ್ ಸಚಿವಾನ್ ಸಹೇಂದ್ರಾನ್ ||21||
ಕೇಶವನಿಂದಲೂ, ಚೇಕಿತಾನನಿಂದಲೂ ಸಹಿತರಾದ ದ್ರುಪದನ ಬಾಹುಗಳಿಂದ ಗುಪ್ತರಾದ, ಸಾತ್ಯಕಿಯಿಂದ ಸಹಿತರಾದ ನಿಮ್ಮನ್ನು ಇಂದ್ರಾದಿದೇವತೆಗಳನ್ನೇ ಸಚಿವರಾಗಿ ಹೊಂದಿದರೂ ಕೂಡ ಯಾವನು ಗೆಲ್ಲಲು ಹವಣಿಸುತ್ತಾನೆ?
ಕೋ ವಾ ಕುರೂನ್ ದ್ರೋಣಭೀಷ್ಮಾಭಿಗುಪ್ತಾನ್
ಅಶ್ವತ್ಥಾಮ್ನಾ ಶಲ್ಯಕೃಪಾದಿಭಿಶ್ಚ |
ರಣೇ ವಿಜೇತುಂ ವಿಷಹೇತ ರಾಜನ್
ರಾಧೇಯಗುಪ್ತಾನ್ ಸಹ ಭೂಮಿಪಾಲೈಃ ||22||
ಹಾಗೆಯೇ ದ್ರೋಣ-ಭೀಷ್ಮರಿಂದ ರಕ್ಷಿತವಾದ, ಅಶ್ವತ್ಥಾಮ, ಶಲ್ಯ, ಕೃಪರಿಂದ ರಕ್ಷಿತವಾದ, ಕರ್ಣ ಮತ್ತು ಉಳಿದ ರಾಜರಿಂದ

ರಕ್ಷಿತವಾದ ಕುರುಗಳನ್ನಾದರೂ ಎಲೈ ರಾಜನೇ, ಯಾವನು ಜಯಿಸಲು ಬಯಸುತ್ತಾನೆ?
ಮಹದ್ಬಲಂ ಧಾರ್ತರಾಷ್ಟ್ರಸ್ಯ ರಾಜ್ಞಃ
ಕೋ ವೈ ಶಕ್ತೋ ಹಂತುಮಕ್ಷೀಯಮಾಣಃ |
ಸೋಽಹಂ ಜಯೇ ಚೈವ ಪರಾಜಯೇ ಚ
ನಿಃಶ್ರೇಯಸಂ ನಾಧಿಗಚ್ಛಾಮಿ ಕಿಂಚಿತ್ ॥23॥
ದುರ್ಯೋಧನನ ಸೈನ್ಯವು ಅಪಾರವಾಗಿದೆ. ತಾನು ನಾಶವನ್ನು ಹೊಂದದೆ ಆ ಸೈನ್ಯವನ್ನು ಸಂಹಾರ ಮಾಡಲು ಯಾವನು ಸಮರ್ಥನಾಗುತ್ತಾನೆ? ಆದ್ದರಿಂದ ನಾನು ಈ ಪರಿಸ್ಥಿತಿಯಲ್ಲಿ ಜಯ ಮತ್ತು ಪರಾಜಯಗಳಲ್ಲಿ ಯಾವುದು ಶ್ರೇಷ್ಠ ಎಂದು ತೀರ್ಮಾನಿಸಲಾರೆ.
ಕಥಂ ಹಿ ನೀಚಾ ಇವ ದೌಷ್ಕುಲೇಯಾ
ನಿರ್ಧರ್ಮಾರ್ಥಂ ಕರ್ಮ ಕುರ್ಯುಶ್ಚ ಪಾರ್ಥಾಃ |
ಸೋಽಹಂ ಪ್ರಸಾದ್ಯ ಪ್ರಣತೋ ವಾಸುದೇವಂ
ಪಾಂಚಾಲಾನಾಮಧಿಪಂ ಚೈವ ವೃದ್ಧಮ್ ॥24॥
ಕೃತಾಂಜಲಿಃ ಶರಣಂ ವಃ ಪ್ರಪದ್ಯೇ
ಕಥಂ ಸ್ವಸ್ತಿ ಸ್ಯಾತ್ ಕುರುಸೃಂಜಯಾನಾಮ್ |
ನ ಹ್ಯೇವಂ ಮೇ ವಚನಂ ವಾಸುದೇವೋ
ಧನಂಜಯೋ ವಾ ಜಾತು ಕಿಂಚಿನ್ನ ಕುರ್ಯಾತ್ ॥25॥
ಪಾಂಡವರು ದುಷ್ಕುಲಪ್ರಸೂತರಾದ ನೀಚರಂತೆ ಧರ್ಮಾರ್ಥಗಳಿಗೆ ವಿರುದ್ಧವಾದ ಕರ್ಮವನ್ನು ಹೇಗೆ ಮಾಡಿಯಾರು? ಆದ್ದರಿಂದ ನಾನು ವಾಸುದೇವನಿಗೆ ನಮಸ್ಕಾರ ಮಾಡಿ ಪಾಂಚಾಲಾಧಿಪತಿಯಾದ ದ್ರುಪದನಿಗೂ ನಮಸ್ಕಾರ ಮಾಡಿ ಕೈಗಳನ್ನು ಮುಗಿದು ನಿಮಗೆ ಶರಣಾಗತನಾಗುತ್ತೇನೆ. ಕುರು-ಸೃಂಜಯರಿಗೆ ಏನು ಮಾಡಿದರೆ ಕ್ಷೇಮ ಉಂಟಾಗುತ್ತದೆ? ವಾಸುದೇವನಾಗಲೀ ಅಥವಾ ಧನಂಜಯನಾಗಲೀ ನನ್ನ ಮಾತನ್ನು ಎಂದೂ ನಡೆಸಿಕೊಡದೆ ಇರುವುದಿಲ್ಲ.
ಪ್ರಾಣಾನ್ ದದ್ಯಾದ್ ಯಾಚ್ಯಮಾನಃ ಕುತೋಽನ್ಯದ್
ಏತದ್ ವಿದ್ವಾನ್ ಸಾಧನಾರ್ಥಂ ಬ್ರವೀಮಿ |
ಏತದ್ ರಾಜ್ಞೋ ಭೀಷ್ಮಪುರೋಗಮಸ್ಯ
ಮತಂ ಯದ್ವಃ ಶಾಂತಿರಿಹೋತ್ತಮಾ ಸ್ಯಾತ್ ॥26॥
ಬೇಡಲ್ಪಟ್ಟರೆ ಅಜಾತಶತ್ರುವು ತನ್ನ ಪ್ರಾಣವನ್ನೂ ಕೊಟ್ಟಾನು. ಇನ್ನು ಬೇರೆಯ ವಿಷಯದಲ್ಲಿ ಹೇಳುವುದೇನಿದೆ? ಇದನ್ನು ತಿಳಿದ ನಾನು ನನ್ನ ಕಾರ್ಯಸಾಧನೆಗಾಗಿ ಹೇಳುತ್ತಿದ್ದೇನೆ. ಇದು ಧೃತರಾಷ್ಟ್ರ-ಭೀಷ್ಮ ಮೊದಲಾದವರ ಅಭಿಪ್ರಾಯ. ನಿಮಗೆ ಕೌರವರ ಜೊತೆಯಲ್ಲಿ ಸಂಧಿಯು ಅತ್ಯಂತ ಶ್ರೇಷ್ಠವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಯುಧಿಷ್ಠಿರನಿಂದ ತಮ್ಮ ಪ್ರಾಬಲ್ಯಕಥನಪೂರ್ವಕವಾಗಿ ಇಂದ್ರಪ್ರಸ್ಥದಲ್ಲಿ ರಾಜ್ಯದಾನವನ್ನು ಮಾಡಿದರೆ ಶಾಂತಿಯ ಕಥನ.
ಯುಧಿಷ್ಠಿರಃ
ಕಾಂ ನು ವಾಚಂ ಸಂಜಯ ಮೇ ಶೃಣೋಷಿ
ಯುದ್ಧೈಷಿಣೋ ಯೇನ ಯುದ್ಧಾದ್ ಬಿಭೇಷಿ |
ಅಯುದ್ಧಂ ವೈ ತಾತ ಯುದ್ಧಾದ್ ಗರೀಯಃ
ಕಸ್ತಲ್ಲಬ್ಧ್ವಾ ಜಾತು ಯುಧ್ಯೇತ ಸೂತ ॥1॥
ಯುಧಿಷ್ಠಿರ ಸೂತನಾದ ಸಂಜಯನೇ, ಯುದ್ಧವನ್ನು ಬಯಸಿ ನಾನು ಆಡಿದ ಯಾವ ಮಾತನ್ನು ಕೇಳಿ ನೀನು ಯುದ್ಧಕ್ಕೆ ಹೆದರುತ್ತಿದ್ದೀಯೆ? ಪ್ರೀತಿಪಾತ್ರನೇ, ಯುದ್ಧವನ್ನು ಮಾಡದಿರುವುದು ಯುದ್ಧ ಮಾಡುವುದಕ್ಕಿಂತ ಶ್ರೇಷ್ಠವಾದುದು. ಅಂತಹ ಯುದ್ಧಾಭಾವವನ್ನು ಸಂಪಾದಿಸಿದ ಯಾವನು ಯುದ್ಧವನ್ನು ಮಾಡಿಯಾನು?
ಅಕುರ್ವತಶ್ಚೇತ್ ಪುರುಷಸ್ಯ ಸಂಜಯ
ಸಿದ್ಧ್ಯೇತ್ ಸಂಕಲ್ಪೋ ಮನಸಾ ಯಂ ಯಮಿಚ್ಛೇತ್ |
ನ ಕರ್ಮ ಕುರ್ಯಾದ್ ವಿದಿತಂ ಮಮೈತದ್
ಅನ್ಯತ್ರ ಯುದ್ಧಾದ್ ಬಹು ಯಲ್ಲಘೀಯಃ ॥2॥
ಎಲೈ ಸಂಜಯನೇ, ಕರ್ಮವನ್ನು ಮಾಡದೆ, ಯುದ್ಧವನ್ನು ಮಾಡದೆ ಪುರುಷನು ಮನಸ್ಸಿನಲ್ಲಿ ಬಯಸುವುದೆಲ್ಲಾ ಸಿದ್ಧವಾಗುವುದಾದರೆ ಯಾವನೂ ಕರ್ಮವನ್ನು (ಯುದ್ಧವನ್ನು) ಮಾಡಲಾರ. ಈ ವಿಷಯವನ್ನು ನಾನು ತಿಳಿದಿದ್ದೇನೆ. ಯುದ್ಧವನ್ನು ಬಿಟ್ಟು ಬೇರೆ ಅಲ್ಪವಾದ ಲಾಭವೂ ಶ್ಲಾಘನೀಯವಾಗುತ್ತದೆ (ದೊಡ್ಡದಾಗುತ್ತದೆ).

ಕುತೋ ಯುದ್ಧಂ ಜಾತು ನರೋಽವಗಚ್ಛೇತ್
ಕೋ ದೇವಶಪ್ತೋ ಹಿ ವೃಣೀತ ಯುದ್ಧಮ್ |
ಸುಖೈಷಿಣಃ ಕರ್ಮ ಕುರ್ವಂತಿ ಪಾರ್ಥಾ
ಧರ್ಮಾದಹೀನಂ ಯಚ್ಚ ಲೋಕಸ್ಯ ಪಥ್ಯಮ್ ||3||
ಧರ್ಮೋದಯಂ ಸುಖಮಾಶಂಸಮಾನಾಃ
ಕೃಚ್ಛ್ರೋಪಾಯಂ ತತ್ತ್ವತಃ ಕರ್ಮ ದುಃಖಮ್ ||4||
ಯಾವ ಮನುಷ್ಯನಾದರೂ ಯುದ್ಧವನ್ನು ಮಾಡಬೇಕೆಂದು ಏಕೆ ತಿಳಿಯಬೇಕು? ದೇವಶಾಪಕ್ಕೆ ಒಳಗಾದ ಯಾವನು ಯುದ್ಧವನ್ನು ಬಯಸಿಯಾನು? ಸುಖವನ್ನು ಬಯಸುವ ಪಾಂಡವರು ಧರ್ಮಕ್ಕೆ ಚ್ಯುತಿ ತರದ, ಲೋಕಕ್ಕೆ ಹಿತವಾದ ಕರ್ಮವನ್ನೇ ಮಾಡುತ್ತಾರೆ. ಸುಖವನ್ನು ಬಯಸುವ ಅವರು ಯಾವ ಕರ್ಮದಿಂದ ಧರ್ಮವು ಉಂಟಾಗುತ್ತದೆಯೋ ಅದನ್ನೇ ಮಾಡುತ್ತಾರೆ. ಪರಧನದ ಅಪಹಾರ ಮೊದಲಾದ ಕರ್ಮಗಳು ಯುದ್ಧಾದಿ ಸಂಕಟದ ಉತ್ಪತ್ತಿಗೂ ಮತ್ತು ದುಃಖಕ್ಕೂ ನಿಜವಾಗಿ ಕಾರಣವಾಗುತ್ತದೆ.
ಕರ್ಮಾಭಿಜ್ಞೋ ವಿಜಿಘಾಂಸುಶ್ಚ ದುಃಖಂ
ಕ ಇಂದ್ರಿಯಾಣಾಂ ಪ್ರೀತಿವಶಾನುಗಾನಾಮ್ ||5||
ಕರ್ಮಾಭಿವೃದ್ಧ್ಯಾ ಸ್ವಶರೀರಂ ದುನೋತಿ
ಯಯಾ ಪ್ರಯುಕ್ತೋಽತ್ರ ಕರೋತಿ ದುಃಖಮ್ |
ಕರ್ಮಕುಶಲನಾಗಿ ದುಃಖವನ್ನು ಪರಿಹಾರ ಮಾಡಿಕೊಳ್ಳಲು ಇಚ್ಛಿಸುವವನು ಸುಖವನ್ನು ಬಯಸುವ ತನ್ನ ಇಂದ್ರಿಯಗಳಿಗೋಸ್ಕರ ದುಃಖಕರವಾದ ಕರ್ಮವನ್ನು ಅಭಿವೃದ್ಧಿಗೊಳಿಸಿ ಯಾವನು ತನ್ನ ಶರೀರವನ್ನು ದುಃಖಕ್ಕೆ ಈಡುಮಾಡುತ್ತಾನೆ? ಅಂತಹ ಕರ್ಮಾಭಿವೃದ್ಧಿಯು ಪುನಃ ಇಲ್ಲಿ ದುಃಖವನ್ನೇ ಉಂಟುಮಾಡುತ್ತದೆ.
ಯಥೇಧ್ಯಮಾನಸ್ಯ ಸಮಿದ್ಧತೇಜಸೋ
ಭೂಯೋ ಬಲಂ ವರ್ಧತಿ ಪಾವಕಸ್ಯ ||6||
ಕಾಮಾರ್ಥಲೋಭೇನ ತಥೈವ ಭೂಯೋ
ನ ತೃಪ್ಯತೇ ಸರ್ಪಿಷೇವಾಗ್ನಿರಿದ್ಧಃ |
ಸಂಪಶ್ಯೇಮಂ ಭೋಗಮಯಂ ಮಹಾಂತಂ
ಸಹಾಸ್ಮಾಭಿರ್ಧೃತರಾಷ್ಟ್ರಸ್ಯ ರಾಜ್ಞಃ ||7||
ಹೇಗೆ ಜಾಜ್ವಲ್ಯವಾಗಿ ಉರಿಯುತ್ತಿರುವ ಅಗ್ನಿಗೆ ಕಟ್ಟಿಗೆಯನ್ನು ಹಾಕಿದರೆ ಅದರ ಬಲವು ಪುನಃ ಅಭಿವೃದ್ಧಿಯನ್ನು ಹೊಂದುತ್ತದೆಯೋ ಅದರಂತೆ ಕಾಮ ಮತ್ತು ಅರ್ಥಗಳ ಲೋಭದಿಂದ ಕರ್ಮವನ್ನು ಆಚರಿಸುವವನಿಗೆ ಉರಿಯುತ್ತಿರುವ ಅಗ್ನಿಯು ಘೃತದಿಂದ ಹೇಗೆ ತೃಪ್ತಿಯನ್ನು ಹೊಂದುವುದಿಲ್ಲವೋ ಹಾಗೆಯೇ ತೃಪ್ತಿಯೇ ಉಂಟಾಗುವುದಿಲ್ಲ. ರಾಜನಾದ ಧೃತರಾಷ್ಟ್ರನ ಭೋಗಕ್ಕೆ ಸಮಾನವಾದ ಭೋಗವುಳ್ಳ ಈ ಮಹಾತ್ಮನಾದ ಕೃಷ್ಣನನ್ನು ನೋಡು (ಅವನು ಅಂತಹ ಭೋಗ ಮತ್ತು ತೃಪ್ತಿಯಿಂದ ಕೂಡಿದವನಾಗಿದ್ದಾನೆ).
ನಾಶ್ರೇಯಸಾಮೀಶ್ವರೋ ವಿಗ್ರಹಾಣಾಂ
ನಾಶ್ರೇಯಸಾಂ ವೈ ಗತಿಶಬ್ದಂ ಶೃಣೋತಿ |
ನಾಶ್ರೇಯಸಾಂ ವೈ ಸೇವತೇ ಮಾಲ್ಯಗಂಧಾನ್
ನ ಚಾಪ್ಯಶ್ರೇಯಸೋಽನುಲೇಪನಾನಿ ||8||
ದರಿದ್ರನಾದವನು ದೇಹಕ್ಕೆ ಪ್ರಭುವಾಗಿರುವುದಿಲ್ಲ (ಕೃಷ್ಣ ಸೇನೆಯಲ್ಲಿರುವವರೆಲ್ಲರೂ ಭಾಗ್ಯವಂತರು ಎಂದು ಅಭಿಪ್ರಾಯ). ಅಂತಹವರು ದರಿದ್ರರ ಗೀತಶಬ್ದವನ್ನು ಕೇಳುವುದಿಲ್ಲ. ಗಂಧರ್ವರ ಗೀತಶಬ್ದವನ್ನೇ ಕೇಳುತ್ತಾರೆ. ದರಿದ್ರರ ಗಂಧಮಾಲ್ಯಗಳನ್ನಾಗಲೀ, ಅನುಲೇಪವನ್ನಾಗಲೀ ಸೇವಿಸುವುದಿಲ್ಲ (ಭಾಗ್ಯವಂತರ ಭೋಗದ್ರವ್ಯಗಳನ್ನೇ ಸೇವಿಸುತ್ತಾರೆ).
ನಾಶ್ರೇಯಸೋ ವೈ ಪ್ರಾವರಾನ್ ಸಂವಿವತ್ತೇ
ಕಥಂ ನ್ವಸ್ಮಾನ್ ಸಂಪ್ರಣುದೇತ್ ಕುರುಭ್ಯಃ |
ಅತ್ರೈವ ಸರ್ವಾನವಧೂಯೈಷ ಕಾಮಃ
ಕುರೂನ್ ಶರೀರೇ ಹೃದಯಂ ದುನೋತಿ ||9||
ಅವರು ದರಿದ್ರರ ವಸ್ತ್ರಗಳನ್ನು ಹೊದೆಯುವುದಿಲ್ಲ. ಕೃಷ್ಣನಿಗೆ ನಮ್ಮ ಜಯದ ನಿಶ್ಚಯವಿಲ್ಲದಿದ್ದರೆ (ಇಂತಹ ತೊಂದರೆ ಉಂಟಾಗುವುದಾದರೆ) ನಮ್ಮನ್ನು ಕುರುಗಳ ಎದುರಾಗಿ ಹೇಗೆ ಪ್ರಚೋದಿಸುತ್ತಾನೆ? ಕೃಷ್ಣನ ಭಕ್ತರು ಇಲ್ಲಿಯೇ ಅನುಭವಿಸಿದ ಭೋಗಗಳು ಎಲ್ಲ ಕುರುಗಳನ್ನೂ ತಿರಸ್ಕರಿಸಿ, ಅವರ ಹೃದಯವನ್ನು ದುಃಖಕ್ಕೆ ಈಡು ಮಾಡುತ್ತವೆ.
ಸ್ವಯಂ ರಾಜಾ ವಿಷಮಸ್ಥಃ ಪರೇಷು
ಸಾಮರ್ಥ್ಯಮನ್ವಿಚ್ಛತಿ ತನ್ನ ಸಾಧು |
ಯಥಾಽಽತ್ಮನಃ ಪಶ್ಯತಿ ವೃತ್ತಮೇಷಾಂ
ತಥಾ ಪರೇಷಾಮಪಿ ಸೋಽಭ್ಯುಪೈತು ||10||
ಸಂಕಟಕ್ಕೆ ಸಿಲುಕಿರುವ ರಾಜನು ಇನ್ನೊಬ್ಬರ ಸಾಮರ್ಥ್ಯವನ್ನು ಬಯಸುತ್ತಿದ್ದಾನೆ. ಅದು ಸರಿಯಲ್ಲ. ತನ್ನ ನಡತೆ (ಸಂಕಟಗಳು) ಹೇಗಿದೆಯೋ ಹಾಗೆಯೇ ಇನ್ನೊಬ್ಬರಿಗೂ ಇರುತ್ತವೆ ಎಂದು ಅವನು ತಿಳಿಯಬೇಕು.
ಆಸನ್ನಮಗ್ನಿಂ ತು ನಿದಾಘಕಾಲೇ
ಗಭೀರಕಕ್ಷೇ ಗಹನೇ ವಿಸೃಜ್ಯ |
ಯಥಾ ಪ್ರವೃದ್ಧೇ ವಾಯುವಶೇನ ಶೋಚೇತ್

ಕಕ್ಷಂ ಮುಮುಕ್ಷುಃ ಶಿಶಿರವ್ಯಪಾಯೇ ॥11॥
ಶಿಶಿರಋತುವಿನ ಕೊನೆಯಲ್ಲಿ ಬೇಸಿಗೆ ಕಾಲದಲ್ಲಿ ದಟ್ಟವಾದ ತೃಣಗಳಿರುವ ಕಾಡಿನಲ್ಲಿ ಸಮೀಪದಲ್ಲಿದ್ದ ಅಗ್ನಿಯನ್ನು ವಿಸರ್ಜನೆ ಮಾಡಿ ವಾಯುವಶದಿಂದ ಅದು ಪ್ರವೃದ್ಧವಾಗುತ್ತಿರಲು ಹೇಗೆ ಶೋಕಪಡುತ್ತಾನೆಯೋ, ಹೇಗೆ ಆ ತೃಣಕಾನನವನ್ನು ತ್ಯಜಿಸಲು ಅಪೇಕ್ಷಿಸುತ್ತಾನೆಯೋ ಅದರಂತೆ ಧೃತರಾಷ್ಟ್ರನು ಇದ್ದಾನೆ.
ಪ್ರಾಪ್ಯೈಶ್ವರ್ಯೋರ್ ಧೃತರಾಷ್ಟ್ರೋಽದ್ಯ ರಾಜಾ
ಸಮ್ಮುಹ್ಯತೇ ಸಂಜಯ ಕಸ್ಯ ಹೇತೋಃ |
ಪ್ರಗೃಹ್ಯ ದುರ್ಬುದ್ಧಿಮನಾರ್ಜವೇ ರತಂ
ಪುತ್ರಂ ಮಂದಂ ಮೂಢಮಮಂತ್ರಿಣಂ ತು ॥12॥
ಎಲೈ ಸಂಜಯನೇ, ಈ ದಿನ ಧೃತರಾಷ್ಟ್ರನು ಸಂಪತ್ತನ್ನು ಪಡೆದು ದುರ್ಬುದ್ಧಿಯೂ, ಆರ್ಜವರಹಿತನೂ, ಮಂದನೂ, ಮೂಢನೂ, ಮಂತ್ರಶಕ್ತಿಹೀನನೂ ಆದ ಮಗನನ್ನು ಅವಲಂಬಿಸಿ ಏತಕ್ಕಾಗಿ ಮೋಹಕ್ಕೆ ಒಳಗಾಗಿದ್ದಾನೆ?
ಅನಾಪ್ತವಚ್ಚಾಪ್ತತಮಸ್ಯ ವಾಚಂ
ಸುಯೋಧನೋ ವಿದುರಸ್ಯಾವಮತ್ಯ |
ಸುತಸ್ಯ ರಾಜಾ ಧೃತರಾಷ್ಟ್ರಃ ಪ್ರಿಯೈಷೀ
ಸಂಬುದ್ಧ್ಯಮಾನೋ ವಿಶತೇಽಧರ್ಮಮೇವ ॥13॥
ಯಾವ ಸುಯೋಧನನು ಆಪ್ತತಮನಾದ ವಿದುರನ ಮಾತನ್ನು ಅನಾಪ್ತನ ಮಾತಿನಂತೆ ತಿರಸ್ಕರಿಸಿದ್ದಾನೆಯೋ ಅಂತಹ ಪುತ್ರನಿಗೆ ಪ್ರಿಯವನ್ನು ಉಂಟುಮಾಡಲು ಬಯಸಿ ಧೃತರಾಷ್ಟ್ರನು ತಿಳಿದಿದ್ದರೂ ಸಹ ಅಧರ್ಮವನ್ನೇ ಪ್ರವೇಶಿಸುತ್ತಿದ್ದಾನೆ.
ಮೇಧಾವಿನಂ ಹ್ಯರ್ಥಕಾಮಂ ಕುರೂಣಾಂ
ಬಹುಶ್ರುತಂ ವಾಗ್ಮಿನಂ ಶೀಲವಂತಮ್ |
ಸುತಸ್ಯಾರ್ಥೇ ಧೃತರಾಷ್ಟ್ರಃ ಕುರೂಣಾಮ್
ಅವಾಸೃಜತ್ ವಿದುರಂ ಪುತ್ರಕಾಮಾತ್ ॥14॥
ಮೇಧಾವಿಯೂ, ಕುರುಗಳ ಶ್ರೇಯಸ್ಕಾಮನೂ, ಬಹುಶ್ರುತನೂ, ವಾಗ್ಮಿಯೂ, ಶೀಲಸಂಪನ್ನನೂ ಆದ ವಿದುರನನ್ನು ಮಗನ ಹಿತಕ್ಕೋಸ್ಕರ, ಮಗನ ಮೇಲಿನ ಪ್ರೀತಿಯಿಂದ ಧೃತರಾಷ್ಟ್ರನು ಕುರುದೇಶದಿಂದ ಹೊರಗೆ ಕಳುಹಿಸಿದನು.
ಮಾನಘ್ನಸ್ಯಾಪ್ಯರ್ಥಕಾಮಸ್ಯ ಚೇರ್ಷ್ಯೋಃ
ಸಂರಂಭಿಣಃ ಸರ್ವಧರ್ಮಾತಿಗಸ್ಯ |
ದುರ್ಭಾಷಿಣೋ ಮನ್ಯುವಶಾನುಗಸ್ಯ
ಕಾಮಾತ್ಮನೋ ದೌಹೃರ್ದೈರ್ಭಾವಿತಸ್ಯ ॥15॥
ಅನೇಯಸ್ಯಾಶ್ರೇಯಸೋ ದೀರ್ಘಮನ್ಯೋಃ
ಮಿತ್ರದ್ರುಹಃ ಸಂಜಯ ಪಾಪಬುದ್ಧೇಃ |
ಸುತಸ್ಯ ರಾಜಾ ಧೃತರಾಷ್ಟ್ರಃ ಪ್ರಿಯೈಷೀ
ಪ್ರದರ್ಶಮಾನಃ ಪ್ರಜಹಾದ್ ಧರ್ಮಕಾವೌ ॥16॥
ಮಾನವನ್ನು ಕಳೆಯುವವನೂ, ಸಂಪತ್ತಿನಲ್ಲೇ ಆಸಕ್ತಿಯುಳ್ಳವನೂ, ಅಸೂಯಾಪರನೂ, ಕ್ರೋಧಶೀಲನೂ, ಎಲ್ಲ ಧರ್ಮಗಳನ್ನೂ ಮೀರಿದವನೂ, ಕೆಟ್ಟ ಮಾತುಗಳನ್ನು ಆಡುವವನೂ, ಯಾವಾಗಲೂ ಸಿಟ್ಟಿಗೆ ವಶನಾಗುವವನೂ, ಆಸೆಬುರುಕನೂ, ದುರ್ಮಿತ್ರರಿಂದ ಪೂಜಿತನೂ, ತಿದ್ದಲು ಸಾಧ್ಯವಿಲ್ಲದವನೂ, ಶ್ರೇಯಸ್ಸಿಗೆ ವಿರುದ್ಧನಾದವನೂ, ದೀರ್ಘಮನ್ಯುವೂ, ಮಿತ್ರದ್ರೋಹಿಯೂ ಆದ ಪುತ್ರನ ಪ್ರಿಯವನ್ನು ಬಯಸುವವನಾಗಿ ಎಲೈ ಸಂಜಯನೇ, ಧೃತರಾಷ್ಟ್ರನು ಎಲ್ಲವನ್ನೂ ನೋಡುತ್ತಿದ್ದರೂ ಧರ್ಮ-ಕಾಮಗಳನ್ನು ತ್ಯಜಿಸಿದನು.
ತದೈವ ಮೇ ಸಂಜಯ ದೀವ್ಯತೇಽಭೂ-
ನ್ಮತಿಃ ಕುರೂಣಾಮಾಗತಃ ಸ್ಯಾದಭಾವಃ |
ಕಾವ್ಯಾಂ ವಾಚಂ ವಿದುರೇ ಭಾಷಮಾಣೇ
ನ ಚಾವಿಂದದ್ ಧೃತರಾಷ್ಟ್ರಾತ್ ಪ್ರಶಂಸಾಮ್ ॥17॥
ಎಲೈ ಸಂಜಯನೇ, ದ್ಯೂತದ ಸಂದರ್ಭದಲ್ಲಿ ವಿದುರನು ಮಧುರವಾದ ಮಾತುಗಳನ್ನು ಆಡುತ್ತಿದ್ದರೂ ಧೃತರಾಷ್ಟ್ರನಿಂದ ಪ್ರಶಂಸೆಯ ಮಾತನ್ನು ಪಡೆಯದಿದ್ದಾಗಲೇ ಕುರುಗಳಿಗೆ ವಿನಾಶದ ಕಾಲವು ಪ್ರಾಪ್ತವಾಗಿದೆ ಎಂದು ನನಗೆ ಬುದ್ಧಿಯುಂಟಾಯಿತು.
ಕ್ಷತ್ತುರ್ಯದಾ ನಾನ್ವವರ್ತಂತ ಬುದ್ಧಿಂ
ಕೃಚ್ಛ್ರಂ ಕುರೂನ್ ಸೂತ ತದಾಽಭ್ಯಾಜಗಾಮ |
ಯಾವತ್ ಪ್ರಜ್ಞಾಮನ್ವವರ್ತಂತ ತಸ್ಯ
ತಾವತ್ ತೇಷಾಂ ರಾಷ್ಟ್ರವೃದ್ಧಿರ್ಬಭೂವ ॥18॥
ಎಲೈ ಸೂತನೇ, ಯಾವಾಗ ಕುರುಗಳು ವಿದುರನ ಮಾತನ್ನು ಕೇಳಲಿಲ್ಲವೋ ಆಗಲೇ ಅವರಿಗೆ ಸಂಕಟವು ಪ್ರಾಪ್ತವಾಯಿತು. ಎಲ್ಲಿಯವರೆಗೆ ಅವನ ಪ್ರಜ್ಞೆಯನ್ನು ಅನುಸರಿಸಿ ಅವನ ಮಾತನ್ನು ಕೇಳಿದರೋ ಅಲ್ಲಿಯವರೆಗೆ ಅವರಿಗೆ ರಾಷ್ಟ್ರದ ಅಭಿವೃದ್ಧಿ ಇದ್ದಿತು.
ತದರ್ಥಲುಬ್ಧಸ್ಯ ನಿಬೋಧ ಮೇಽದ್ಯ
ಯೇ ಮಂತ್ರಿಣೋ ಧಾರ್ತರಾಷ್ಟ್ರಸ್ಯ ಸೂತ |

ದುಃಶಾಸನಃ ಶಕುನಿಃ ಸೂತಪುತ್ರೋ
ಗಾವಲ್ಗಣೇ ಪಶ್ಯ ಸಮ್ಮೋಹಮಸ್ಯ ॥19॥
ಸೋಽಹಂ ನ ಪಶ್ಯಾಮಿ ಪರೀಕ್ಷಮಾಣಃ
ಕಥಂ ಸ್ವಸ್ತಿ ಸ್ಯಾತ್ ಕುರುಸೃಂಜಯಾನಾಮ್ ॥20॥

ಸೂತನೇ, ಅರ್ಥಕಾಮುಕನಾದ ದುರ್ಯೋಧನನ ಮಂತ್ರಿಗಳು ದುಶ್ಶಾಸನ, ಶಕುನಿ, ಸೂತಪುತ್ರನಾದ ಕರ್ಣ ಮೊದಲಾದವರು ಯಾರಿದ್ದಾರೆಯೋ ಅವರ ಸಮ್ಮೋಹವನ್ನು ನೋಡು. ಗಾವಲ್ಗಣಿಯೇ, ಇದನ್ನು ನನ್ನಿಂದ ತಿಳಿ. ಅಂತಹ ನಾನು ಎಷ್ಟು ವಿಚಾರ ಮಾಡಿದರೂ ಕುರು-ಸೃಂಜಯರಿಗೆ ಹೇಗೆ ಕ್ಷೇಮವಾಗುವುದೆಂದು ತೋರುವುದಿಲ್ಲ.

ಪ್ರಾಪ್ತೈಶ್ವರ್ಯೋ ಧೃತರಾಷ್ಟ್ರಃ ಪರೇಭ್ಯಃ
ಪ್ರವ್ರಾಜಿತೇ ವಿದುರೇ ದೀರ್ಘದೃಷ್ಟೌ ।
ಆಶಂಸತೇ ಧೃತರಾಷ್ಟ್ರಃ ಸಪುತ್ರೋ
ಮಹಾರಾಜ್ಯಮಸಪತ್ನಂ ಪೃಥಿವ್ಯಾಮ್ ॥21॥
ತಸ್ಮಿನ್ ಶಮಃ ಕೇವಲಂ ನೋಪಲಭ್ಯಃ
ಅತ್ಯಾಸನ್ನಂ ಮದ್ಗತಂ ಮನ್ಯತೇಽರ್ಥಮ್ ॥22॥

ಪಾಂಡವರಿಂದ ಎಲ್ಲ ಸಂಪತ್ತನ್ನೂ ಪಡೆದ ಧೃತರಾಷ್ಟ್ರನು, ದೀರ್ಘ ದೃಷ್ಟಿಯುಳ್ಳ ವಿದುರನು ನಗರವನ್ನು ಬಿಟ್ಟು ಹೋದಮೇಲೆ ತನ್ನ ಪುತ್ರರಿಂದೊಡಗೂಡಿ ಈ ಪೃಥಿವಿಯ ಮಹಾರಾಜ್ಯವು ಶತ್ರುರಹಿತವಾಗಿ ತನ್ನದೆಂದು ಆಶಿಸುತ್ತಾನೆ. ಅವನಲ್ಲಿ ಸಂಧಿಯ ಯಾವ ಲಕ್ಷಣಗಳೂ ಕಾಣುವುದಿಲ್ಲ. ರಾಜ್ಯರೂಪವಾದ ಸಂಪತ್ತು ನನ್ನ ಕೈಯಿಂದ ಜಾರಿ ಅವನಿಗೆ ಅತ್ಯಂತ ಸಮೀಪದಲ್ಲಿದೆ ಎಂದು ತಿಳಿದಿದ್ದಾನೆ.

ಯತ್ತತ್ ಕರ್ಣೋ ಮನ್ಯತೇ ವಾರಣೀಯಂ
ಯುದ್ಧೇ ಗೃಹೀತಾಯುಧಮರ್ಜುನಂ ವೈ।
ಆಸಂಶ್ಚ ಯುದ್ಧಾನಿ ಪುರಾ ಮಹಾಂತಿ
ಕಥಂ ತದಾ ನಾಭವದ್ ದ್ವೀಪ ಏಷಾಮ್ ॥23॥

ಇನ್ನು ಯುದ್ಧದಲ್ಲಿ ಆಯುಧವನ್ನು ಹಿಡಿದ ಅರ್ಜುನನನ್ನು ನಿವಾರಣೆ ಮಾಡುವೆನೆಂದು ಕರ್ಣನು ಏನು ತಿಳಿದಿದ್ದಾನೆಯೋ (ಆ ವಿಷಯದಲ್ಲಿ ಹೇಳುವುದಾದರೆ) ಹಿಂದೆ ಅನೇಕ ಯುದ್ಧಗಳು ನಡೆದವು. ಆಗ ಕರ್ಣನು ದುರ್ಯೋಧನಾದಿಗಳಿಗೆ ಏಕೆ ರಕ್ಷಕನಾಗಲಿಲ್ಲ?

ಕರ್ಣಶ್ಚ ಜಾನಾತಿ ಸುಯೋಧನಶ್ಚ
ದ್ರೋಣಶ್ಚ ಜಾನಾತಿ ಪಿತಾಮಹಶ್ಚ।
ಅನ್ಯೇ ಚ ವೈ ಕುರವಸ್ತತ್ರ ಸಂತಿ
ಯಥಾಽರ್ಜುನಾನ್ನಾಸ್ತ್ಯಪರೋ ಧನುರ್ಧರಃ ॥24॥

ಕರ್ಣನೂ, ಸುಯೋಧನನೂ, ದ್ರೋಣರೂ, ಪಿತಾಮಹರಾದ ಭೀಷ್ಮರೂ ಮತ್ತು ಉಳಿದ ಎಲ್ಲಾ ಕುರುಗಳೂ ಸಹ ಅರ್ಜುನನಿಗಿಂತ ಮಿಗಿಲಾದ ಧನುರ್ಧಾರಿಯು ಇಲ್ಲವೆಂದು ತಿಳಿದಿದ್ದಾರೆ.

ಜಾನಂತ್ಯೇತತ್ ಕುರವಃ ಸರ್ವ ಏವ
ಯೇ ಚಾಪ್ಯೇತೇ ಭೂಮಿಪಾಲಾಃ ಸಮೇತಾಃ।
ದುರ್ಯೋಧನೇ ರಾಜ್ಯಮಿಹಾಭವದ್ ಯಥಾ।
ಅರಿಂದಮೇ ಫಲ್ಗುನೇಽವಿದ್ಯಮಾನೇ ॥25॥
ತತೋಽರ್ಥಬಂಧಂ ಮನ್ಯತೇ ಧಾರ್ತರಾಷ್ಟ್ರಃ
ಶಕ್ಯಂ ಹರ್ತುಂ ಪಾಂಡವಾನಾಂ ಮಮೇತಿ ॥26॥

ಎಲ್ಲ ಕುರುಗಳಿಗೂ ಮತ್ತು ಇಲ್ಲಿ ನೆರೆದಿರುವ ಎಲ್ಲ ರಾಜರಿಗೂ ಅರಿಂದಮನಾದ ಅರ್ಜುನನು ಇಲ್ಲದಿರುವಾಗ ದುರ್ಯೋಧನನಿಗೆ ಹೇಗೆ ರಾಜ್ಯವು ದೊರಕಿತು ಎಂದು ತಿಳಿದಿದ್ದಾರೆ. ದುರ್ಯೋಧನನು ಪಾಂಡವರ ರಾಜ್ಯವನ್ನು ಅಪಹರಿಸುವುದು ತನಗೆ ಸಾಧ್ಯವೆಂದು ತಿಳಿದಿದ್ದಾನೆ.

ಕಿರೀಟಿನಂ ತಾಲಮಾತ್ರಾಯುಧೇನ
ತದ್ವೇದಿನಾ ಸಂಯುಗಂ ತತ್ರ ಗತ್ವಾ।
ಗಾಂಡೀವವಿಷ್ಫಾರಿತಶಬ್ದಮಾಜೌ
ಅಶೃಣ್ವಾನಾ ಧಾರ್ತರಾಷ್ಟ್ರಾ ಧ್ರಿಯಂತೇ ॥27॥

ಒಂದು ತಾಲಪ್ರಮಾಣದ ಧನುಸ್ಸನ್ನು ಅರ್ಜುನನು ಹಿಡಿದು ಯುದ್ಧಭೂಮಿಗೆ ಹೋಗಿ ಅವನನ್ನು ಎಲ್ಲಿಯವರೆಗೆ ನೋಡುವುದಿಲ್ಲವೋ, ಎಲ್ಲಿಯವರೆಗೆ ಯುದ್ಧದಲ್ಲಿ ಗಾಂಡೀವಧನುಸ್ಸಿನ ಠೇಂಕಾರವನ್ನು ಕೇಳುವುದಿಲ್ಲವೋ ಅಲ್ಲಿಯವರೆಗೆ ಧೃತರಾಷ್ಟ್ರ ಪುತ್ರರು ಬದುಕಿರುತ್ತಾರೆ.

ಕ್ರುದ್ಧಸ್ಯ ಚೇದ್ ಭೀಮಸೇನಸ್ಯ ವೇಗಾತ್
ಸುಯೋಧನೋ ಮನ್ಯತೇ ಸಿದ್ಧಮರ್ಥಮ್ ॥28॥
ಇಂದ್ರೋಽಪ್ಯೇತನ್ನೋತ್ಸಹೇತಾಪಹರ್ತುಮ್
ಐಶ್ವರ್ಯಂ ನೋ ಜೀವತಿ ಭೀಮಸೇನೇ।
ಧನಂಜಯೇ ನಕುಲೇ ಚೈವ ಸೂತ

ತಥಾವಿಧೇ ಸಹದೇವೇ ಸಹಿಷ್ಣೌ ॥29॥
ಕ್ರುದ್ಧನಾದ ಭೀಮಸೇನನ ವೇಗವನ್ನು ಮೀರಿ ಸುಯೋಧನನು ತನಗೆ ರಾಜ್ಯವು ದೊರಕಿದೆ ಎಂದು ತಿಳಿದಿದ್ದಾನೆ. ಭೀಮಸೇನನು ಬದುಕಿರುವಾಗ ಇಂದ್ರನೂ ಕೂಡ ನಮ್ಮ ಐಶ್ವರ್ಯವನ್ನು ಅಪಹರಿಸಲು ಬಯಸಲಾರ. ಹಾಗೆಯೇ ಧನಂಜಯ, ನಕುಲ ಮತ್ತು ಸಹನಶೀಲನಾದ ಸಹದೇವ ಇವರು ಬದುಕಿರುವವರೆಗೆ ಇಂದ್ರನೂ ನಮ್ಮ ಸಂಪತ್ತನ್ನು ಅಪಹರಿಸಲಾರ.
ನ ಚೇದೇತಾಂ ಪ್ರತಿಪದ್ಯೇತ ಬುದ್ಧಿಂ
ವೃದ್ಧೋ ರಾಜಾ ಸಹ ಪುತ್ರೇಣ ಸೂತ |
ಏವಂ ರಣೇ ಪಾಂಡವಕೋಪದಗ್ಧಾ
ನ ನಶ್ಯೇಯುಃ ಸಂಜಯ ಧಾರ್ತರಾಷ್ಟ್ರಾಃ ॥30॥
ಎಲೈ ಸೂತನೇ, ವೃದ್ಧನಾದ ಧೃತರಾಷ್ಟ್ರನು ತನ್ನ ಮಕ್ಕಳ ಜೊತೆಯಲ್ಲಿ ಈ ದುರ್ಬುದ್ಧಿಯನ್ನು ಹೊಂದದಿದ್ದರೆ, ಎಲೈ ಸಂಜಯನೇ, ಯುದ್ಧದಲ್ಲಿ ಧೃತರಾಷ್ಟ್ರ ಪುತ್ರರು ಪಾಂಡವ ಕೋಪದಗ್ಧರಾಗಿ ನಾಶವನ್ನು ಹೊಂದಲಾರರು.
ಜಾನಾಸಿ ತ್ವಂ ಕ್ಲೇಶಮಸ್ಮಾಸು ವೃತ್ತಂ
ತ್ವಾಂ ಪೂಜಯನ್ ಸಂಜಯಾಹಂ ಕ್ಷಮೇಯಮ್ ॥31॥
ಎಲೈ ಸಂಜಯನೇ, ನಮಗೆ ಹಿಂದೆ ಒದಗಿದ ಕ್ಲೇಶಗಳನ್ನು ನೀನು ತಿಳಿದಿದ್ದೀಯೆ. ನಿನ್ನ ಮೇಲಿನ ಗೌರವದಿಂದ ನಾನು ಕ್ಷಮಿಸುವೆನು.
ಯಚ್ಚಾಸ್ಮಾಕಂ ಕೌರವೈರ್ಭೂತಪೂರ್ವಂ
ಯಾ ನೋ ವೃತ್ತಿರ್ಧಾರ್ತರಾಷ್ಟ್ರೇ ತದಾಽಽಸೀತ್ |
ಅದ್ಯಾಪಿ ತತ್ ತತ್ರ ತಥೈವ ವರ್ತತಾಂ
ಶಾಂತಿಂ ಗಮಿಷ್ಯಾಮಿ ಮಯಾ ತ್ವಮಾತ್ಥ ॥32॥
ಇಂದ್ರಪ್ರಸ್ಥೇ ವಾ ಭವತು ಮಮೈವ ರಾಜ್ಯಂ
ಸುಯೋಧನೋ ಯಚ್ಛತು ಭಾರತಾಗ್ರ್ಯಃ ॥33॥
ನಾವು ಹಿಂದೆ ಕೌರವರಲ್ಲಿ ಯಾವ ನಡತೆಯನ್ನು ಹೊಂದಿದ್ದೆವೋ, ದುರ್ಯೋಧನನಲ್ಲಿ ಯಾವ ನಡತೆಯನ್ನು ಹೊಂದಿದ್ದೆವೋ ಅದೇ ನಡತೆಯು ಈ ದಿನವೂ ಕೂಡ ಮುಂದುವರೆಯಲಿ. ನೀನು ಹೇಳಿದಂತೆ ನಾನು ಶಾಂತಿಯನ್ನು ಹೊಂದುವೆನು. ನನಗೆ ಇಂದ್ರಪ್ರಸ್ಥವು ರಾಜ್ಯವಾಗಿರಲಿ. ಭಾರತಶ್ರೇಷ್ಠನಾದ ಸುಯೋಧನನು ನಮಗೆ ಇಂದ್ರಪ್ರಸ್ಥವನ್ನು ಕೊಡಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ರಾಜ್ಯವನ್ನು ಕೊಡದಿದ್ದರೂ ಶಾಂತಿಯನ್ನು ವಹಿಸುವಂತೆ
ಸಂಜಯನಿಂದ ಯುಧಿಷ್ಠಿರನಿಗೆ ಪ್ರೇರಣೆ.
ಸಂಜಯಃ
ಧರ್ಮೇ ನಿತ್ಯಾ ಪಾಂಡವ ತೇ ವಿಚೇಷ್ಟಾ
ಲೋಕೇ ಶ್ರುತಾ ದೃಶ್ಯತೇ ಚಾಪಿ ಪಾರ್ಥ |
ಮಹಾಸ್ರಾವಂ ಜೀವಿತಂ ಚಾಪ್ಯನಿತ್ಯಂ
ಸಂಪಶ್ಯನ್ ತ್ವಂ ಪಾಂಡವ ಮಾ ವ್ಯನೀನಶಃ ॥1॥
ಸಂಜಯ ಎಲೈ ಪಾಂಡವನೇ, ನಿನ್ನ ಎಲ್ಲಾ ಕ್ರಿಯೆಗಳೂ ನಿತ್ಯವೂ ಧರ್ಮದಲ್ಲಿಯೇ ಇವೆ. ಲೋಕದಲ್ಲಿ ಹೀಗೆ ಶ್ರುತವಾಗಿದೆ ಮತ್ತು ಪಾರ್ಥನೇ, ಪ್ರತ್ಯಕ್ಷವಾಗಿಯೂ ಕಾಣುತ್ತಿದೆ. ನವದ್ವಾರಗಳಿಂದ ಸೋರಿಹೋಗುವ ಈ ದೇಹದ ಜೀವಿತವು ಅನಿತ್ಯವಾದುದು. ಪಾಂಡವನೇ, ಇದನ್ನು ಗಮನಿಸುವವನಾಗಿ ನೀನು ನಾಶವನ್ನು ಹೊಂದಬೇಡ.
ನ ಚೇದ್ ಭಾಗಂ ಕುರವೋಽನ್ಯತ್ರ ಯುದ್ಧಾತ್
ಪ್ರಯಚ್ಛಂತಿ ತುಭ್ಯಮಜಾತಶತ್ರೋ |
ಭೈಕ್ಷಾಚರ್ಯಾಮಂಧಕವೃಷ್ಣಿರಾಜ್ಯೇ
ಶ್ರೇಯೋ ಮನ್ಯೇ ನ ತು ಯುದ್ಧೇನ ರಾಜ್ಯಮ್ ॥2॥
ಎಲೈ ಅಜಾತಶತ್ರುವೇ, ಯುದ್ಧವನ್ನು ಬಿಟ್ಟು ಬೇರೆ ಮಾರ್ಗದಿಂದ ಕುರುಗಳು ನಿನಗೆ ರಾಜ್ಯದ ಭಾಗವನ್ನು ಕೊಡದಿದ್ದರೂ ವೃಷ್ಣ್ಯಂಧಕರಾಜ್ಯದಲ್ಲಿ ಭೈಕ್ಷಚರ್ಯವನ್ನು ಮಾಡಿ ಜೀವಿಸುವುದು ನಿನಗೆ ಶ್ರೇಯಸ್ಸೆಂದು ಭಾವಿಸುತ್ತೇನೆ. ಯುದ್ಧವನ್ನು ಮಾಡಿ ರಾಜ್ಯವನ್ನು ಸಂಪಾದಿಸುವುದು ನಿನಗೆ ಶ್ರೇಯಸ್ಕರವಲ್ಲ.
ಮಹಾಸ್ರಾವಂ ಜೀವಿತಂ ಯನ್ಮನುಷ್ಯೇ
ಅಲ್ಪಕಾಲಂ ನಿತ್ಯದುಃಖಂ ಚಲಂ ಚ |
ಭೂಯಶ್ಚ ತದ್ಯಶಸೋ ನಾನುರೂಪಂ
ತಸ್ಮಾತ್ ಪಾಪಂ ಪಾಂಡವ ಮಾ ವಿನಂಕ್ಷೀಃ ॥3॥
ಮನುಷ್ಯನ ಜೀವನವು ಸೋರಿಹೋಗುವಂತಹದು, ಅಲ್ಪಕಾಲವಿರುವಂತಹದು, ಚಂಚಲವಾದುದು ಮತ್ತು ನಿತ್ಯದುಃಖಕರವಾದುದು. ಅಲ್ಲದೇ ಯುದ್ಧವು ನಿನ್ನ ಯಶಸ್ಸಿಗೆ ಅನುಗುಣವಾದುದಲ್ಲ. ಆದ್ದರಿಂದ ಎಲೈ ಪಾಂಡವನೇ, ಯುದ್ಧವನ್ನು ಮಾಡಿ ನಿನ್ನ

ಕೀರ್ತಿಯನ್ನು ಹಾಳು ಮಾಡಿಕೊಳ್ಳಬೇಡ.
ಕಾಮಾ ಮನುಷ್ಯಂ ಪ್ರದಹಂತ ಏತೇ
ಧರ್ಮಸ್ಯ ಯೇ ವಿಘ್ನಮೂಲಾ ನರೇಂದ್ರ |
ಪೂರ್ವಂ ನರಸ್ತಾನ್ ಮತಿಮಾನ್ ವಿನಿಘ್ನನ್
ಲೋಕೇ ಪ್ರಶಂಸಾಂ ಲಭತೇಽನವದ್ಯಾಮ್ ॥4॥
ಎಲೈ ನರೇಂದ್ರನೇ, ಮನುಷ್ಯನನ್ನು ದಹಿಸುವ ಕಾಮಗಳು ಧರ್ಮದ ವಿಘ್ನಕ್ಕೆ ಮೂಲವಾದವುಗಳು. ವಿವೇಕಿಯಾದ ಮನುಷ್ಯನು ಮೊದಲು ಕಾಮಗಳನ್ನು ನಾಶ ಮಾಡಬೇಕು. ಅನಂತರ ಅವನು ಲೋಕದಲ್ಲಿ ನಿರ್ದುಷ್ಟವಾದ ಪ್ರಶಂಸೆಯನ್ನು ಪಡೆಯುತ್ತಾನೆ.
ನಿಬಂಧನೀ ಹ್ಯರ್ಥತೃಷ್ಣಾ ಹಿ ಪಾರ್ಥ
ತಾಮಿಚ್ಛತಾಂ ಬಾಧ್ಯತೇ ಧರ್ಮ ಏವ |
ಧರ್ಮಂ ತು ಯಃ ಪ್ರವೃಣುತೇ ಸ ಬುದ್ಧಃ
ಕಾಮೇ ಗೃಧ್ನುರ್ಹೀಯತೇಽರ್ಥಾನುರೋಧಾತ್ ॥5॥
ಎಲೈ ಪಾರ್ಥನೇ, ಅರ್ಥತೃಷ್ಣೆಯು ಮನುಷ್ಯನನ್ನು ಕಟ್ಟಿಹಾಕುವಂತಹದು. ಅರ್ಥವನ್ನು ಬಯಸುವ ಪುರುಷನಿಗೆ ಧರ್ಮವೇ ಬಾಧಿತವಾಗುತ್ತದೆ. ಯಾವನು ಧರ್ಮವನ್ನು ಆರಿಸುತ್ತಾನೋ ಅವನು ವಿವೇಕಿಯಾದವನು. ಕಾಮವನ್ನು ಬಯಸುವವನು ಆ ಕಾಮ್ಯವಸ್ತುವಿನ ಸ್ವಭಾವಕ್ಕೆ ಅನುಗುಣವಾಗಿ ಹಾನಿಯನ್ನು ಹೊಂದುವನು.
ಧರ್ಮಂ ಕೃತ್ವಾ ಕರ್ಮಣಾ ತಾತ ಮುಖ್ಯಂ
ಮಹಾಪ್ರತಾಪಃ ಸವಿತೇವ ಭಾತಿ |
ಹಾನೇನ ಧರ್ಮಸ್ಯ ಮಹೀಮಪೀಮಾಂ
ಲಬ್ಧ್ವಾ ನರಃ ಸೀದತಿ ಪಾಪಬುದ್ಧಿಃ ॥6॥
ಎಲೈ ಪ್ರೀತಿಪಾತ್ರನೇ, ಮುಖ್ಯವಾದ ಕರ್ಮವನ್ನು ಮಾಡಿ ಧರ್ಮವನ್ನು ಗಳಿಸಿದವನು ಮಹಾಪ್ರತಾಪವುಳ್ಳವನಾಗಿ ಸೂರ್ಯನಂತೆ ಬೆಳಗುತ್ತಾನೆ. ಧರ್ಮವನ್ನು ತ್ಯಾಗಮಾಡಿ ಈ ಸಮಗ್ರವಾದ ಭೂಮಿಯನ್ನು ಪಡೆದರೂ ಪಾಪಬುದ್ಧಿಯುಳ್ಳ ಆ ಮನುಷ್ಯನು ನಾಶವನ್ನು ಹೊಂದುತ್ತಾನೆ.
ವೇದೋಽಧೀತಶ್ಚರಿತಂ ಬ್ರಹ್ಮಚರ್ಯಂ
ಯಜ್ಞೈರಿಷ್ಟಂ ಬ್ರಾಹ್ಮಣೇಭ್ಯಶ್ಚ ದತ್ತಮ್ |
ಪರಂ ಸ್ಥಾನಂ ಮನ್ಯಮಾನೇನ ಭೂಯ
ಆತ್ಮಾ ದತ್ತೋಃ ವರ್ಷಪೂಗಂ ಸುಖೇಭ್ಯಃ ॥7॥
ಯಾವನು ಪರಲೋಕಸ್ಥಾನವು ಶ್ರೇಷ್ಠವೆಂದು ತಿಳಿದು ವೇದವನ್ನು ಅಧ್ಯಯನ ಮಾಡುತ್ತಾನೆಯೋ, ಬ್ರಹ್ಮಚರ್ಯವನ್ನು ಆಚರಿಸುತ್ತಾನೆಯೋ, ಯಜ್ಞಗಳಿಂದ ದೇವರನ್ನು ಪೂಜಿಸುತ್ತಾನೆಯೋ, ಬ್ರಾಹ್ಮಣರಿಗೆ ದಾನವನ್ನು ಕೊಡುತ್ತಾನೆಯೋ ಅವನು ತನ್ನನ್ನೇ ಅನೇಕ ವರ್ಷಗಳವರೆಗೆ ಸುಖಗಳಿಗೆ ಕೊಟ್ಟಿಕೊಂಡಿದ್ದಾನೆ.
ಸುಖಪ್ರಿಯೇ ಸೇವಮಾನೇಽತಿವೇಲಂ
ಯೋಗನ್ಯಾಸೇ ಯೋ ನ ಕರೋತಿ ಕರ್ಮ |
ವಿತ್ತಕ್ಷಯೇ ಹೀನಸುಖೋಽತಿವೇಲಂ
ದುಃಖಂ ಶೇತೇ ಕಾಮವೇಗಪ್ರಣುನ್ನಃ ॥8॥
ಯಾವನು ಸುಖವನ್ನು ಕೊಡುವ ಪ್ರಿಯವಾದ ವಸ್ತುವನ್ನು ಸೇವಿಸುತ್ತಾ ಯೋಗ ಮತ್ತು ಸಂನ್ಯಾಸಗಳಿಗೆ ಅನುಕೂಲವಾದ ಕರ್ಮವನ್ನು ಮಾಡುವುದಿಲ್ಲವೋ ಅವನ ಧನವು ಕ್ಷಯವು ಹೊಂದಿದ ಮೇಲೆ ಸುಖದಿಂದ ಚ್ಯುತನಾಗಿ ಕಾಮವೇಗದಿಂದ ತಾಡಿತನಾಗಿ ಬಹಳವಾಗಿ ದುಃಖವನ್ನು ಪಡುತ್ತಾನೆ.
ಏವಂ ಪುನರ್ಬ್ರಹ್ಮಚರ್ಯಾಪ್ರಸಕ್ತೋ
ಹಿತ್ವಾ ಧರ್ಮಂ ಯಃ ಪ್ರಕರೋತ್ಯಧರ್ಮಮ್ |
ಅಶ್ರದ್ದಧತ್ ಪರಲೋಕಾಯ ಮೂಢೋ
ಹಿತ್ವಾ ದೇಹಂ ತಪ್ಯತಿ ಪ್ರೇತ್ಯ ಮಂದಃ ॥9॥
ಹಾಗೆಯೇ ಬ್ರಹ್ಮಚರ್ಯದಲ್ಲಿ ಪ್ರಸಕ್ತನಾಗದವನು, ತನ್ನ ಧರ್ಮವನ್ನು ಬಿಟ್ಟು ಅಧರ್ಮವನ್ನು ಮಾಡುವವನು, ಪರಲೋಕವನ್ನು ನಂಬದವನು ಆದ ಮೂಢನೂ ಮಂದನೂ ಆದ ಮನುಷ್ಯನು ದೇಹವನ್ನು ತ್ಯಜಿಸಿ, ಮರಣವನ್ನು ಹೊಂದಿ ಅನಂತರ ದುಃಖವನ್ನು ಪಡುತ್ತಾನೆ.
ನ ಕರ್ಮಣಾಂ ವಿಪ್ರಣಾಶೋಽಸ್ತ್ಯಮುತ್ರ
ಪುಣ್ಯಾನಾಂ ವಾಽಪ್ಯಥವಾ ಪಾಪಕಾನಾಮ್ |
ಪೂರ್ವಂ ಕರ್ತುರ್ಗಚ್ಛತಿ ಪುಣ್ಯಪಾಪಂ
ಪಶ್ಚಾತ್ತ್ವೇನಮನುಯಾತ್ಯೇವ ಕರ್ತಾ ॥10॥
ಪುಣ್ಯಕರ್ಮವಾಗಲೀ ಅಥವಾ ಪಾಪಕರ್ಮವಾಗಲೀ ಮಾಡಿದ ಕರ್ಮಗಳಿಗೆ ಪರಲೋಕದಲ್ಲಿ ವಿನಾಶವಿರುವುದಿಲ್ಲ. ಮೊದಲು ಪುಣ್ಯಪಾಪಗಳು ಹೋಗುತ್ತವೆ- ನಂತರ ಅವುಗಳ ಹಿಂದೆ ಅದನ್ನು ಮಾಡಿದವನು ಹೋಗುತ್ತಾನೆ.
ನ್ಯಾಯೋಪೇತಂ ಬ್ರಾಹ್ಮಣೇಭ್ಯೋ ಯದನ್ನಂ
ಶ್ರದ್ಧಾಪೂತಂ ಗಂಧರಸೋಪಪನ್ನಮ್ |

ಅನ್ವಾಹಾರ್ಯೇಷೂತ್ತಮದಕ್ಷಿಣೇಷು
ತಥಾರೂಪಂ ಕರ್ಮ ವಿಖ್ಯಾಯತೇ ತೇ ॥11॥
ನ್ಯಾಯದಿಂದ ಸಂಪಾದಿಸಿ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಕೊಟ್ಟ ಗಂಧರಸೋಪಪನ್ನವಾದ ಅನ್ನ, ಉತ್ತಮ ದಕ್ಷಿಣವುಳ್ಳ ಯಾಗಗಳಲ್ಲಿ ಅಗ್ನಿಗಳಲ್ಲಿ ಮಾಡಿದ ಹೋಮ, ಇಂತಹ ಕರ್ಮವು ನಿನ್ನ ವಿಷಯದಲ್ಲಿ ಪ್ರಖ್ಯಾತವಾಗಿದೆ.
ಇಹ ಕ್ಷೇತ್ರೇ ಕ್ರಿಯತೇ ಪಾರ್ಥ ಕಾರ್ಯಂ
ನ ವೈ ಕಿಂಚಿತ್ ಕ್ರಿಯತೇ ಪ್ರೇತ್ಯ ಕಾರ್ಯಮ್ ।
ಕೃತಂ ತ್ವಯಾ ಪಾರಲೋಕ್ಯಂ ಚ ಕರ್ಮ
ಪುಣ್ಯಂ ಮಹತ್ ಸದ್ಭಿರನುಪ್ರಶಸ್ತಮ್ ॥12॥
ಎಲೈ ಪಾರ್ಥನೇ, ಈ ಲೋಕದಲ್ಲಿ ಈ ಶರೀರದಲ್ಲಿ ಪರಲೋಕ ಸಾಧನೆಯು ಮಾಡಲ್ಪಡುತ್ತದೆ. ಮರಣದ ಅನಂತರ ಪರಲೋಕದಲ್ಲಿ ಯಾವ ಸಾಧನೆಯೂ ಇರುವುದಿಲ್ಲ. ನೀನು ಪರಲೋಕ ಸುಖಕ್ಕೆ ಸಾಧನವಾದ, ಸಜ್ಜನರಿಂದ ಪ್ರಶಂಸಿಸಲ್ಪಟ್ಟ ದೊಡ್ಡ ಪುಣ್ಯಕರ್ಮಗಳನ್ನು ಮಾಡಿದ್ದೀಯೆ.
ಜಹಾತಿ ಮೃತ್ಯುಂ ಚ ಜರಾಂ ಭಯಂ ಚ
ನ ಕ್ಷುತ್ಪಿಪಾಸೇ ಮನಸೋಽಪ್ರಿಯಾಣಿ ।
ನ ಕರ್ತವ್ಯಂ ವಿದ್ಯತೇ ತತ್ರ ಕಿಂಚಿದ್
ಅನ್ಯತ್ರ ವೈ ಚೇಂದ್ರಿಯಪ್ರೀಣನಾದ್ಧಿ ॥13॥
ಪರಲೋಕದಲ್ಲಿ ಜರಾಮೃತ್ಯುಭಯಗಳಿರುವುದಿಲ್ಲ. ಹಸಿವು- ನೀರಡಿಕೆಗಳಿರುವುದಿಲ್ಲ. ಅಲ್ಲಿ ಮನಸ್ಸಿಗೆ ಅಪ್ರಿಯವಾದುದು ಯಾವುದೂ ಇರುವುದಿಲ್ಲ. ಅಲ್ಲಿ ಸಂಪಾದಿಸಬೇಕಾದ ಯಾವ ಕಾರ್ಯವೂ ಇರುವುದಿಲ್ಲ. ಇಂದ್ರಿಯಸಂತೋಷ ಪಡೆಯುವುದನ್ನು ಬಿಟ್ಟು ಅಲ್ಲಿ ಸಾಧಿಸಬೇಕಾದ ಯಾವ ಕಾರ್ಯವೂ ಇರುವುದಿಲ್ಲ.
ಏವಂರೂಪಂ ಕರ್ಮಫಲಂ ನರೇಂದ್ರ
ಮಾತ್ರಾವಹಂ ಹೃದಯಸ್ಯ ಪ್ರಿಯೇಣ ।
ಸ ಕ್ರೋಧಜಂ ಪಾಂಡವ ಹರ್ಷಜಂ ಚ
ಲೋಕಾವುಭೌ ಮಾ ಪ್ರಹಾಸೀಶ್ಚಿರಾಯ ॥14॥
ಎಲೈ ನರೇಂದ್ರನೇ, ಕರ್ಮಫಲವು ಈ ರೀತಿಯಾಗಿ ಮನಸ್ಸಿಗೆ ಪ್ರಿಯವಾದ ಸುಖಸಾಮಗ್ರಿಗಳನ್ನು ತಂದುಕೊಡುವಂತಹದಾಗಿದೆ. ಕ್ರೋಧದಿಂದ ಉಂಟಾದ ಕರ್ಮದ ಫಲವು ಬೇರೆಯ ಲೋಕ. ಎಲೈ ಪಾಂಡವನೇ, ಸಂತೋಷದಿಂದ ಉಂಟಾದ ಕರ್ಮದ ಫಲವು ಬೇರೆಯಾಗಿದೆ. ಧರ್ಮದ ಫಲವಾದ ಸುಖರೂಪವಾದ ಲೋಕಗಳು ನಿನಗೆ ಬಹುಕಾಲ ನಾಶ ಹೊಂದದಿರಲಿ.
ಅಂತಂ ಗತ್ವಾ ಕರ್ಮಣಾಂ ಯಾ ಪ್ರಶಂಸಾ
ಸತ್ಯಂ ಧಮಶ್ಚಾರ್ಜವಮಾನೃಶಂಸ್ಯಮ್ ।
ಅಶ್ವಮೇಧೋ ರಾಜಸೂಯಸ್ತಥೇಷ್ಟಃ
ಪಾಪಸ್ಯಾಂತಂ ಕರ್ಮಣೋ ಮಾ ಪುನರ್ಗಾಃ ॥15॥
ಕರ್ಮವನ್ನು ಪೂರೈಸಿದ ಮೇಲೆ ಉಂಟಾಗುವ ಪ್ರಶಂಸೆ, ಸತ್ಯ, ದಮ, ಆರ್ಜವ, ಮಾರ್ದವ, ಆಚರಿಸಿದ ಅಶ್ವಮೇಧ-ರಾಜಸೂಯ ಯಾಗಗಳು ಇವೆಲ್ಲವೂ ಸುಖಲೋಕ ಸಾಧನಗಳು. ಪುನಃ ನೀನು ಪಾಪರೂಪವಾದ ಕರ್ಮಗಳ ಫಲವನ್ನು ಹೊಂದುವುದು ಬೇಡ.
ನ ಚೈವೇದಂ ದ್ವೇಷರೂಪೇಣ ಪಾರ್ಥಾಃ
ಕರಿಷ್ಯಧ್ವಂ ಕರ್ಮ ಪಾಪಂ ಚಿರಾಯ ।
ನಿವಸ್ಯಧ್ವಂ ವರ್ಷಪೂಗಾನ್ ವನೇಷು
ಸುಖಂ ವಾಸಂ ಪಾಂಡವಾ ಧರ್ಮಹೇತೋಃ ॥16॥
ಎಲೈ ಪಾಂಡವರೇ, ನೀವು ದ್ವೇಷದಿಂದ ಪಾಪರೂಪವಾದ ಈ ಯುದ್ಧಕರ್ಮವನ್ನು ಮಾಡದೆ ಅನೇಕ ವರ್ಷಗಳ ಕಾಲ ಕಾಡಿನಲ್ಲಿ ವಾಸ ಮಾಡಿದರೂ ಅದು ಧರ್ಮಕ್ಕೆ ಕಾರಣವಾಗುವುದರಿಂದ ಸುಖವೇ ಆಗುತ್ತದೆ.
ಪ್ರವ್ರಜ್ಯಯಾ ಯಾತಯಿತ್ವಾ ಪುರಸ್ತಾದ್
ಆತ್ಮಾಧೀನಂ ಯದ್ ಬಲಂ ತೇ ತದಾಽಽಸೀತ್ ।
ನಿತ್ಯಂ ಪಾಂಚಾಲಾಃ ಸಚಿವಾಸ್ತವೇಮೇ
ಜನಾರ್ದನೋ ಯುಯುಧಾನೋ ವಿರಾಟಃ ॥17॥
ಮಾತ್ಸ್ಯೋ ರಾಜಾ ರುಗ್ಮರಥಃ ಸಪುತ್ರಃ
ಪ್ರಹಾರಿಭಿಃ ಸಹ ಮಿತ್ರೈಃ ಸಶಸ್ತ್ರೈಃ ।
ರಾಜಾನಶ್ಚ ಯೇ ವಿಜಿತಾಃ ಪುರಸ್ತಾತ್
ತ್ವಾಮೇವ ತೇ ಸಂಶ್ರಯೇಯುಃ ಪುರಸ್ತಾತ್ ॥18॥
ಹಾಗೆ ಕಾಡಿಗೆ ಹೋಗದೆ ನಿನಗೆ ಅಧೀನವಾದ ಬಲವನ್ನು ಯುದ್ಧಭೂಮಿಗೆ ನಡೆಸಿದರೆ ಪಾಂಚಾಲರು ಮತ್ತು ನಿನಗೆ ಸಚಿವರಾದ ಕೃಷ್ಣ, ಸಾತ್ಯಕಿ ಮತ್ತು ವಿರಾಟನು, ಮತ್ಸ್ಯರಾಜನಾದ ವಿರಾಟನು, ಪುತ್ರಸಹಿತನಾದ ರುಗ್ಮರಥನು ಮತ್ತು ಶಸ್ತ್ರಸಹಿತರಾದ ಮಿತ್ರರಾದ ಸೈನಿಕರಿಂದ ಕೂಡಿದ, ಮೊದಲು ನಿನ್ನಿಂದ ವಿಜಿತರಾದ, ರಾಜರೆಲ್ಲರೂ ನಿನ್ನನ್ನೇ ಆಶ್ರಯಿಸುತ್ತಾರೆ.
ಮಹಾಸಹಾಯಃ ಪ್ರತಪನ್ ಬಲಸ್ಥಃ
ಪುರಸ್ಕೃತೋ ವಾಸುದೇವಾರ್ಜುನಾಭ್ಯಾಮ್ ।

ಪರಾನ್ ಹನಿಷ್ಯನ್ ದ್ವಿಷತೋ ರಂಗಮಧ್ಯೇ
ವ್ಯನೇಷ್ಯಥಾ ಧಾರ್ತರಾಷ್ಟ್ರಸ್ಯ ದರ್ಪಮ್ ॥19॥
ಮಹಾಸಹಾಯವುಳ್ಳವನಾಗಿ ಬಲವನ್ನು ಆಶ್ರಯಿಸಿದವನಾಗಿ, ಪ್ರತಾಪದಿಂದ ಜ್ವಲಿಸುತ್ತಾ, ಕೃಷ್ಣಾರ್ಜುನರಿಂದ ಸಹಿತನಾಗಿ ಶತ್ರುಗಳನ್ನು ಸಂಹಾರ ಮಾಡುತ್ತಾ ರಣರಂಗ ಮಧ್ಯದಲ್ಲಿ ದುರ್ಯೋಧನನ ದರ್ಪವನ್ನು ನಾಶ ಮಾಡುವವನಾಗುವಿ.
ಬಲಂ ಕಸ್ಮಾದ್ ವರ್ಧಯಿತ್ವಾ ಪರಸ್ಯ
ನಿಜಾನ್ ಕಸ್ಮಾತ್ ಕರ್ಶಯಿತ್ವಾ ಸಹಾಯಾನ್ ।
ನಿರುಷ್ಯ ಕಸ್ಮಾದ್ ವರ್ಷಪೂಗಾನ್ ವನೇಷು
ಯುಯುತ್ಸಸೇ ಪಾಂಡವ ಹೀನಕಾಲೇ ॥20॥
ಎಲೈ ಪಾಂಡವನೇ, ಕಾಡಿನಲ್ಲಿ ಬಹಳ ಕಾಲ ವಾಸವನ್ನು ಮಾಡಿ, ನಿನಗೆ ಸಹಾಯ ಮಾಡುವವರನ್ನು ಕ್ಲೇಶಕ್ಕೆ ಗುರಿಮಾಡಿ, ಶತ್ರುಗಳ ಬಲವು ಅಭಿವೃದ್ಧಿಯಾಗುವಂತೆ ಮಾಡಿ ಈಗ ದುರ್ಬಲನಾಗಿರುವ ಕಾಲದಲ್ಲಿ ಏಕೆ ಯುದ್ಧವನ್ನು ಮಾಡಲು ಬಯಸುತ್ತೀಯೆ?
ಅಪ್ರಜ್ಞೋ ವಾ ಪಾಂಡವ ಯುಧ್ಯಮಾನೋ-
ಽಧರ್ಮಜ್ಞೋ ವಾ ಭೂತಿಮಥಾಭ್ಯುಪೈತಿ ।
ಪ್ರಜ್ಞಾವಾನ್ ವಾ ಯುಧ್ಯಮಾನೋಽಪಿ ಧರ್ಮಾತ್
ಸಂರಂಭಾದ್ವಾ ಸೋಽಪಿ ಭೂತೇರಪೈತಿ ॥21॥
ಪಾಂಡವನೇ, ಅವಿವೇಕಿಯು ಧರ್ಮಿಷ್ಠನಲ್ಲದವನೂ ಯುದ್ಧವನ್ನು ಮಾಡಿ ಸಂಪತ್ತನ್ನು ಪಡೆಯುತ್ತಾನೆ. ವಿವೇಕಿಯಾದವನು ಧರ್ಮದಿಂದಲಾಗಲೀ, ಕೋಪದಿಂದಲಾಗಲೀ ಯುದ್ಧವನ್ನು ಮಾಡಿ ಸಂಪತ್ತನ್ನು ಕಳೆದುಕೊಳ್ಳುತ್ತಾನೆ (ಆದ್ದರಿಂದ ಯುದ್ಧದ ಫಲವು ನಿಶ್ಚಿತವಲ್ಲ).
ನಾಧರ್ಮೇ ತೇ ಧೀಯತೇ ಪಾರ್ಥ ಬುದ್ಧಿಃ
ನ ಸಂರಂಭಾತ್ ಕರ್ಮ ಚಕರ್ಥ ಪಾಪಮ್ ।
ಕಿಮಾತ್ಥ ತತ್ ಕಾರಣಂ ಯಸ್ಯ ಹೇತೋಃ
ಪ್ರಜ್ಞಾವಿರುದ್ಧಂ ಕರ್ಮ ಚಿಕೀರ್ಷಸೀದಮ್ ॥22॥
ಎಲೈ ಪಾರ್ಥನೇ, ನಿನ್ನ ಬುದ್ಧಿಯು ಅಧರ್ಮದಲ್ಲಿ ನೆಲೆಸುವುದಿಲ್ಲ. ನೀನು ಎಂದೂ ಕೋಪದಿಂದ ಪಾಪಕರ್ಮವನ್ನು ಮಾಡಿಲ್ಲ. ನಿನ್ನ ಪ್ರಜ್ಞೆಗೆ ವಿರುದ್ಧವಾದ ಯುದ್ಧರೂಪವಾದ ಈ ಪಾಪಕರ್ಮವನ್ನು ಮಾಡಲು ಬಯಸುವುದಕ್ಕೆ ಏನು ಕಾರಣವಿದೆ ಎಂದು ಹೇಳುತ್ತೀಯೆ?
ಅವ್ಯಾಧಿಜಂ ಕಟುಕಂ ಶೀರ್ಷರೋಗಂ
ಯಶೋಮುಷಂ ಪಾಪಫಲೋದಯಂ ಚ ।
ಸತಾಂ ಪೇಯಂ ಯನ್ನ ಪಿಬಂತ್ಯಸಂತೋ
ಮನ್ಯುಂ ಮಹಾರಾಜ ಪಿಬ ಪ್ರಶಾಮ್ಯ ॥23॥
ಪಾಪಾನುಬಂಧಂ ಕೋ ನು ತಂ ಕಾಮಯೇತ
ಕ್ಷಮೈವ ತೇ ಜ್ಯಾಯಸೀ ನೋತ ಭೋಗಃ ॥24॥
ವ್ಯಾಧಿಯಿಂದ ಉಂಟಾಗದ ಕಹಿಯಾದ ಶಿರೋವೇದನೆಯಾಗಿರುವ ಕೀರ್ತಿನಾಶಕವಾದ ಪಾಪರೂಪವಾದ ಫಲವನ್ನು ಉಂಟುಮಾಡುವ ಅಸಜ್ಜನರು ಪಾನ ಮಾಡಲು ಸಾಧ್ಯವಿಲ್ಲದ, ಸಜ್ಜನರು ಮಾತ್ರ ಪಾನ ಮಾಡಬಹುದಾದ ಕೋಪವನ್ನು ಪಾನ ಮಾಡು. ಶಾಂತಿಯನ್ನು ಹೊಂದು. ಪಾಪವನ್ನು ಸಂಪಾದಿಸಿಕೊಡುವ ಕರ್ಮವನ್ನು ಯಾವನು ಬಯಸುತ್ತಾನೆ? ಕ್ಷಮೆಯೇ ಶ್ರೇಷ್ಠವಾದುದು. ಭೋಗವು ಶ್ರೇಷ್ಠವಲ್ಲ.
ಯತ್ರ ಭೀಷ್ಮಃ ಶಾಂತನವೋ ಹತಃ ಸ್ಯಾದ್
ಯತ್ರ ದ್ರೋಣಃ ಸಹಪುತ್ರೋ ಹತಃ ಸ್ಯಾತ್ ।
ಕೃಪಃ ಶಲ್ಯಃ ಸೌಮದತ್ತಿರ್ವಿಕರ್ಣೋ
ವಿವಿಂಶತಿಃ ಕರ್ಣದುರ್ಯೋಧನೌ ಚ ॥25॥
ಏತಾನ್ ಹತ್ವಾ ಕೀದೃಶಂ ತತ್ ಸುಖಂ ಸ್ಯಾದ್
ಯದ್ ವಿಂದೇಥಾಸ್ತದನು ಬ್ರೂಹಿ ಪಾರ್ಥ ॥26॥
ಎಲೈ ಪಾರ್ಥನೇ, ಎಲ್ಲಿ ಶಾಂತನವನಾದ ಭೀಷ್ಮನು ಹತನಾಗುತ್ತಾನೆಯೋ, ಎಲ್ಲಿ ಪುತ್ರಸಹಿತನಾದ ದ್ರೋಣರು ಹತರಾಗುತ್ತಾರೆಯೋ, ಎಲ್ಲಿ ಕೃಪ-ಶಲ್ಯ-ಸೌಮದತ್ತಿ- ವಿಕರ್ಣ- ವಿವಿಂಶತಿ-ಕರ್ಣ-ದುರ್ಯೋಧನರು ಹತರಾಗುತ್ತಾರೆಯೋ ಅಂತಹ ಯುದ್ಧವನ್ನು ಮಾಡಿ, ಅವರನ್ನು ಕೊಂದು, ನೀನು ಎಂತಹ ಸುಖವನ್ನು ಪಡೆಯುತ್ತೀಯೆ ಎಂದು ಹೇಳು.
ಲಬ್ಧ್ವಾಽಪೀಮಾಂ ಪೃಥಿವೀಂ ಸಾಗರಾಂತಾಂ
ಜರಾಮೃತ್ಯೂ ನೈವ ಹಿ ತ್ವಂ ಪ್ರಜಹ್ಯಾಃ ।
ಪ್ರಿಯಾಪ್ರಿಯೇ ಸುಖದುಃಖೇ ಚ ರಾಜನ್
ಏವಂ ವಿದ್ವಾನ್ ನೈವ ಯುದ್ಧಂ ಕುರು ತ್ವಮ್ ॥27॥
ಎಲೈ ರಾಜನೇ, ನೀನು ಈ ಸಮಗ್ರವಾದ ಸಾಗರಾಂತವಾದ ಭೂಮಿಯನ್ನು ಪಡೆದರೂ ಜರಾ-ಮೃತ್ಯುಗಳನ್ನು ನಿವಾರಿಸಲಾರೆ. ಪ್ರಿಯಾಪ್ರಿಯಗಳು, ಸುಖ-ದುಃಖಗಳು ಇದ್ದೇ ಇರುತ್ತವೆ. ಇದನ್ನು ತಿಳಿದು ಯುದ್ಧದಿಂದ ನಿವೃತ್ತನಾಗು.
ಅಮಾತ್ಯಾನಾಂ ವಾ ಯದಿ ಕಾಮಸ್ಯ ಹೇತೋಃ

ಏವಂ ಯುಕ್ತಂ ಕರ್ಮ ಚಿಕೀರ್ಷಸಿ ತ್ವಮ್ ।
ಅಪಾಕ್ರಮಃ ಸ್ವಪದಾ ಯಸ್ತ್ವಮೇಭ್ಯಃ
ಮಾ ಗಾಸ್ತ್ವಂ ವೈ ದೇವಯಾನಾತ್ ಪಥಶ್ಚ ॥28॥
ಅಮಾತ್ಯರ ಒತ್ತಾಯದ ಕಾರಣದಿಂದ ನೀನು ಇಂತಹ ಕರ್ಮವನ್ನು ಮಾಡಲು ಬಯಸಿದರೆ ಈಗಲಾದರೂ ನಿನ್ನ ಹೆಜ್ಜೆಯಿಂದ ನೀನು ಹಿಂದಕ್ಕೆ ಸರಿ. ದೇವಯಾನದ ಪಥದಿಂದ ನೀನು ದೂರ ಸರಿಯಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಡ್ವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಹಠವಾದೇಽವದದ್ ಭೀಮೋ ಯಂ ಧರ್ಮಂ ದ್ರೌಪದೀ ತಥಾ ।
ತಮೇವೋಕ್ತತ್ವ ಧರ್ಮಜಸ್ತು ಚಕಾರ ಚ ನಿರುತ್ತರಮ್ ॥39॥
ಆಗ ಹಿಂದೆ ಹಠವಾದದಲ್ಲಿ ಭೀಮ-ದ್ರೌಪದಿಯರು ಯಾವ ಧರ್ಮವನ್ನು ಹೇಳಿದ್ದರೋ ಅದನ್ನೇ ಧರ್ಮರಾಜ ಹೇಳಿ ಸಂಜಯನನ್ನು ನಿರುತ್ತರಗೊಳಿಸಿದ.
* * * * *
ಇಪ್ಪತ್ತೇಳನೆಯ ಅಧ್ಯಾಯ
ಕೃಷ್ಣನ ಶಾಸನವನ್ನು ಮೀರುವುದಿಲ್ಲವೆಂಬ ಯುಧಿಷ್ಠಿರನ ಪ್ರತಿವಚನ.
ಯುಧಿಷ್ಠಿರಃ
ಅಸಂಶಯಂ ಸಂಜಯ ಸತ್ಯಮೇತದ್
ಧರ್ಮೋ ವರಃ ಕರ್ಮಣೋ ಯತ್ ತ್ವಮಾತ್ಥ ।
ಜ್ಞಾತ್ವಾ ತು ಮಾಂ ಸಂಜಯ ಗರ್ಹಯೇಸ್ತ್ವಂ
ಯದಿ ಧರ್ಮಂ ಯದ್ಯಧರ್ಮಂ ಚರಾಮಿ ॥1॥
ಯುಧಿಷ್ಠಿರ ಸಂಜಯನೇ, ಯುದ್ಧಕರ್ಮಕ್ಕಿಂತಲೂ ಧರ್ಮಾಚರಣೆಯೇ ಶ್ರೇಷ್ಠವಾದುದೆಂದು ನನಗೇನು ಹೇಳಿದೆಯೋ ಅದು ನಿಸ್ಸಂಶಯವಾಗಿ ಸತ್ಯವೇ ಸರಿ. ಆದರೆ ಸಂಜಯನೇ, ನನ್ನನ್ನು ಸರಿಯಾಗಿ ತಿಳಿದು ಎಂದರೆ ಧರ್ಮವನ್ನು ಅಧರ್ಮವನ್ನಾಗಿ ಆಚರಿಸುತ್ತಿದ್ದೇನೆಯೋ, ಅಥವಾ ಅಧರ್ಮವನ್ನು ಧರ್ಮವನ್ನಾಗಿ ಆಚರಿಸುತ್ತಿದ್ದೇನೆಯೋ ಎಂದು ತಿಳಿದು ನೀನು ನನ್ನನ್ನು ನಿಂದಿಸಬಹುದು.
ಯತ್ರಾಧರ್ಮೋ ಧರ್ಮರೂಪಾಣಿ ಬಿಭ್ರತ್
ಧರ್ಮಃ ಕೃತ್ಸ್ನೋ ದೃಶ್ಯತೇಽಧರ್ಮರೂಪಃ ।
ತಥಾಽಧರ್ಮೋ ಧಾರಯನ್ ಧರ್ಮರೂಪಂ
ವಿದ್ವಾಂಸಸ್ತಂ ಸಂಪ್ರಪಶ್ಯಂತಿ ಬುದ್ಧ್ಯಾ ॥2॥
ಎಲ್ಲಿ ಭಸ್ಮಧಾರಣಾದಿರೂಪವಾದ ಅಧರ್ಮವು ಧರ್ಮರೂಪವನ್ನು ಹೊಂದಿ ಸಮಗ್ರವಾದ ಊರ್ಧ್ವಪುಂಡ್ರಾದಿ ಧಾರಣರೂಪವಾದ ಧರ್ಮವು ಅಧರ್ಮರೂಪವನ್ನು ಹೊಂದುತ್ತದೆಯೋ; ಯಾವ ವಿವೇಕಿಗಳ ಉದ್ದೇಶದಲ್ಲಿ ಊರ್ಧ್ವಪುಂಡ್ರಾದಿ ಧರ್ಮವು ಧರ್ಮವಾಗಿ ಮತ್ತು ಅಧರ್ಮವು ಅಧರ್ಮವಾಗಿ ತೋರುತ್ತದೆಯೋ ಅಲ್ಲಿ ಜ್ಞಾನಿಗಳು ಇದು ಧರ್ಮ, ಇದು ಅಧರ್ಮ ಎಂದು ನಿಶ್ಚಯಿಸುತ್ತಾರೆ (ವಾದಿರಾಜರು).
ಏವಂ ತಥೈವಾಪದಿ ಲಿಂಗಮೇತದ್
ಧರ್ಮಾಧರ್ಮೌ ವೃತ್ತಿನಿತ್ಯೌ ಭಜೇತಾಮ್ ।
ಆದ್ಯಂ ಲಿಂಗಂ ಯಸ್ಯ ತಸ್ಯ ಪ್ರಮಾಣಮ್
ಆಪದ್ಧರ್ಮಂ ಸಂಜಯ ತಂ ನಿಬೋಧ ॥3॥
ಹೀಗೆ ಧರ್ಮಾಧರ್ಮಗಳು ನಿತ್ಯವಾಗಿ ಸ್ಥಿತವಾಗಿರುವಾಗ ಧರ್ಮಾಧರ್ಮಗಳು ಮಹಾ ಆಪತ್ತಿನ ಕಾಲದಲ್ಲಿ ಸಜ್ಜನರಿಗೆ ಪಾಷಂಡಿಗಳ ಚಿಹ್ನೆಗಳನ್ನು ಧರಿಸುತ್ತವೆ. ಮ್ಲೇಚ್ಛದೇಶದಲ್ಲಿ ಅವರ ಭಯದಿಂದ ಸಾಧುಗಳೂ ಸ್ವಶಿರೋಮುಂಡನ, ಶ್ಮಶ್ರುಧಾರಣ, ಶೂನ್ಯಲಲಾಟತ್ವಾದಿ ಅಧರ್ಮಲಿಂಗಗಳನ್ನೇ ಧರ್ಮರೂಪವಾಗಿ ಧರಿಸುತ್ತಾರೆ. ಅಂತಹ ಸಂದರ್ಭದಲ್ಲಿ ಆದ್ಯಲಿಂಗಂ ಎಂದರೆ ಪಾಷಂಡಿಗಳ ಲಿಂಗವು ಪ್ರಮಾಣದಂತೆ ಅಂಗೀಕಾರಾರ್ಹವಾಗುತ್ತದೆ. ಸಜ್ಜನರು ಮಾಡುವ ಆ ಅಧರ್ಮವನ್ನು ಆಪದ್ಧರ್ಮವೆಂದು ತಿಳಿಯುತ್ತಾರೆ. ಅದು ಅಧರ್ಮವಾದರೂ ಆಪತ್ಕಾಲದಲ್ಲಿ ಮಾಡಿದುದರಿಂದ ನರಕಾದಿ ಹೇತುವಾಗುವುದಿಲ್ಲವಾದ್ದರಿಂದ ಧರ್ಮದಂತೆಯೇ ಅದು ಧರ್ಮವೆನಿಸುತ್ತದೆ. ಹಾಗೆಯೇ ನಾವು ಆಪತ್ಕಾಲದಲ್ಲಿರುವುದರಿಂದ ಸುಹೃಜ್ಜನರ ವಧೆಯೂ ಸಹ ನಮಗೆ ಧರ್ಮವೇ ಆಗುತ್ತದೆ ಎಂದು ನೀನು ತಿಳಿ (ವಾದಿರಾಜರು).
ಲುಪ್ತಾಯಾಂ ತು ಪ್ರಕೃತೌ ಯೋ ನ ಕರ್ಮ
ನಿಷ್ಪಾದಯೇತ್ ತತ್ ಪರೀಪ್ಸೇದಹೀನಃ ।
ಪ್ರಕೃತಿಸ್ಥಶ್ಚಾಪದಿ ವರ್ತಮಾನ
ಉಭೌ ಗರ್ಹ್ಯೌ ಭವತಃ ಸಂಜಯೈತೌ ॥4॥
ದುರ್ಜನ ಸಂಸರ್ಗವಶದಿಂದ ತನ್ನ ಸ್ವಭಾವವು ಮುಚ್ಚಿಕೊಂಡಿರುವಾಗ ಯಾವನು ಆಪದ್ಧರ್ಮವನ್ನು ಆಚರಿಸುವುದಿಲ್ಲವೋ

ಆಪತ್ಕಾಲವಿಲ್ಲದಿರುವಾಗ ತನ್ನ ಸ್ವಭಾವದಲ್ಲಿ ತಾನು ಇರಲು ಯಾವ ಪ್ರತಿಬಂಧಕವೂ ಇಲ್ಲದಿದ್ದಾಗ ಯಾವನು ಆಪದ್ಧರ್ಮವನ್ನು ಆಚರಿಸುವನೋ ಎಲೈ ಸಂಜಯನೇ, ಅವರಿಬ್ಬರೂ ನಿಂದನೀಯರಾಗುತ್ತಾರೆ. ಉತ್ತಮ ಪುರುಷನಾದವನು ಅವರೆಡನ್ನೂ ಪರೀಕ್ಷಿಸಬೇಕು. ಆಪತ್ಕಾಲದಲ್ಲಿಯೂ ನಾನು ಯುದ್ಧವನ್ನು ಮಾಡದಿದ್ದರೆ ಲೋಕವು ನನ್ನ ಅಪಹಾಸ್ಯಮಾಡುತ್ತದೆ ಎಂದು ಅಭಿಪ್ರಾಯ.

ಅತೋಽವಿಲೋಪಮಿಚ್ಛತಾಂ ಬ್ರಾಹ್ಮಣಾನಾಂ
ಪ್ರಾಯಶ್ಚಿತ್ತಂ ವಿಹಿತಂ ಯದ್ ವಿಧಾತ್ರಾ |
ಆಪದ್ಯೇತಾನ್ ಕರ್ಮಸು ವರ್ತಮಾನಾನ್
ವಿಕರ್ಮಸ್ಥಾನ್ ಸಂಜಯ ಗರ್ಹಯೇಥಾಃ ||5||

ಆದ್ದರಿಂದ ಪ್ರಮಾದದಿಂದ ಕರ್ಮಲೋಪವು ಉಂಟಾದಾಗ ಕರ್ಮದ ಲೋಪವಾಗದಿರಲಿ ಎಂಬ ಇಚ್ಛೆಯಿಂದ ಬ್ರಹ್ಮದೇವರು ಬ್ರಾಹ್ಮಣರಿಗೆ ಪ್ರಾಯಶ್ಚಿತ್ತವನ್ನು ವಿಧಿಸಿದ್ದಾರೆ. ಎಲೈ ಸಂಜಯನೇ, ಆಪತ್ಕಾಲದಲ್ಲಿಯೂ ತಮ್ಮ ಸ್ವಾಭಾವಿಕ ಕರ್ಮವನ್ನೇ ಆಚರಿಸುವವರನ್ನೂ ಮತ್ತು ಆಪತ್ಕಾಲವಿಲ್ಲದಿದ್ದಾಗಲೂ ವಿಕರ್ಮವನ್ನು ಆಚರಿಸುವವರನ್ನೂ ನೀನು ನಿಂದಿಸಬಹುದು.

ಆಹೋಸ್ವಿತ್ ತ್ವಂ ಮನ್ಯಸೇ ಸರ್ವಮೇವ
ರಾಜ್ಞಾಂ ಯುದ್ಧೇ ವರ್ತತೇ ಧರ್ಮತಂತ್ರಮ್ |
ಅಯುದ್ಧೇ ವಾ ವರ್ತತೇ ಧರ್ಮತಂತ್ರಮ್
ತಥೈವ ತೇ ವಾಚಮಿಮಾಂ ಶೃಣೋಮಿ ||6||

ಅಥವಾ ನೀನು ರಾಜರ ಎಲ್ಲ ಯುದ್ಧವೂ ಧರ್ಮಕ್ಕೆ ಅನುಸಾರಿಯಾದುದು. ಅಥವಾ ಯುದ್ಧ ಮಾಡದಿರುವುದೆಲ್ಲವೂ ಧರ್ಮಕ್ಕೆ ಅಧೀನವಾದುದು ಎಂದು ನೀನು ತಿಳಿಯುವುದಾದರೆ (ನಾನು ಈ ಮಾತನ್ನು ಹೇಳುತ್ತಿದ್ದೇನೆ. ಏಕೆಂದರೆ ನಿನ್ನ ಈ ಮಾತುಗಳು ಹಾಗೆಯೇ ಕೇಳಿ ಬರುತ್ತಿವೆ).

ಮನೀಷಿಣಾಂ ಸತ್ತ್ವವಿಚ್ಛೇದನಾಯ
ವಿಧೀಯತೇ ಸತ್ಸು  ವೃತ್ತಿಃ ಸದೈವ |
ಅಬ್ರಹ್ಮಣ್ಯಾಃ ಸಂತಿ ತು ಯೇ ನ ವೈದ್ಯಾಃ
ಸರ್ವೋಚ್ಛೇದಂ ಸಾಧು ಮನ್ಯೇತ ತೇಭ್ಯಃ ||7||

ವಿವೇಕಿಗಳಾದವರಿಗೆ ಅವರ ಬುದ್ಧಿಯು ದುರ್ಬುದ್ಧಿಯಿಂದ ವಿಚ್ಛೇದನವನ್ನು ಪಡೆಯದಿರಲು ಯಾವಾಗಲೂ ಸಜ್ಜನರ ವೃತ್ತಿಯು ಶಾಸ್ತ್ರದಲ್ಲಿ ಹೇಳಲ್ಪಡುತ್ತದೆ. ಯಾರು ಬ್ರಾಹ್ಮಣ ದ್ವೇಷಿಗಳೋ, ಯಾರು ವೇದವಿರೋಧಿಗಳೋ ಅವರ ಸರ್ವನಾಶವನ್ನು ಸತ್ಕರ್ಮವೆಂದೇ ತಿಳಿಯಬೇಕು.

ತದರ್ಥಿನಃ ಪಿತರೋ ಯೇ ಚ ಪೂರ್ವೇ
ಪಿತಾಮಹಾ ಯೇ ಚ ತೇಭ್ಯಃ ಪರೇಽನ್ಯೇ |
ಪ್ರಜ್ಞೈಷಿಣೋ ಯೇ ಚ ಹಿ ಕರ್ಮ ಕುರ್ಯುಃ
ನಾನ್ಯತ್ ತತೋ ನಾಸ್ತಿನಾಸ್ತೀಽತಿ ಮನ್ಯೇ ||8||

ಅಂತಹ ಬ್ರಾಹ್ಮಣದ್ವೇಷಿಗಳ ನಾಶವನ್ನು ಹಿಂದಿನ ಪಿತೃಪಿತಾಮಹರು ಮತ್ತು ಅವರಿಗಿಂತ ಬೇರೆಯವರೂ ಸಹ ಬಯಸಿದರು. ಜ್ಞಾನವನ್ನು ಅರಸುವ ಅವರು ಮಾಡಿದ ಆಚಾರಕ್ಕಿಂತ ಭಿನ್ನವಾದ ಧರ್ಮಾಚರಣೆಯು ಇಲ್ಲ, ಇಲ್ಲ, ಇಲ್ಲ ಎಂದು ನಾನು ತಿಳಿದಿದ್ದೇನೆ.

ಯತ್ ಕಿಂಚೇದಂ ವಿತ್ತಮಸ್ಯಾಂ ಪೃಥಿವ್ಯಾಂ
ಯದ್ ದೇವಾನಾಂ ತ್ರಿದಶಾನಾಂ ಪರತ್ರ |
ಪ್ರಾಜಾಪತ್ಯಂ ತ್ರಿದಿವಂ ಬ್ರಹ್ಮಲೋಕಂ
ನಾಧರ್ಮತಃ ಸಂಜಯ ಕಾಮಯೇ ತತ್ ||9||

ಎಲೈ ಸಂಜಯನೇ, ಈ ಭೂಮಿಯಲ್ಲಿ ಯಾವ ಸಂಪತ್ತು ಇದೆಯೋ, ಪರಲೋಕದಲ್ಲಿ ದೇವತೆಗಳಿಗೆ ಯಾವ ಸಂಪತ್ತು ಇದೆಯೋ, ಬ್ರಹ್ಮದೇವರಿಗೆ ಸಂಬಂಧಪಟ್ಟ ಬ್ರಹ್ಮಲೋಕರೂಪವಾದ ಸ್ವರ್ಗವು ಯಾವುದು ಇದೆಯೋ ಅವು ಯಾವುದನ್ನೂ ನಾನು ಅಧರ್ಮದಿಂದ ಪಡೆಯಲು ಬಯಸುವುದಿಲ್ಲ.

ಧರ್ಮೇಶ್ವರಃ ಕುಶಲೋ ನೀತಿಮಾಂಶ್ಚ
ಉಪಾಸಿತಾ ಬ್ರಾಹ್ಮಣಾನಾಂ ಮನೀಷೀ |
ನಾನಾವಿಧಾಂಶ್ಚೈವ ಮಹಾಬಲಾಂಶ್ಚ
ರಾಜ್ಞೋ ವಿಜಾನನ್ನನುಶಾಸ್ತಿ ಕೃಷ್ಣಃ ||10||

ಧರ್ಮಪ್ರಭುವೂ, ಕುಶಲನೂ, ನೀತಿವಂತನೂ, ಬ್ರಾಹ್ಮಣರ ಉಪಾಸನೆಯನ್ನು ಮಾಡುವವನೂ, ವಿವೇಕಿಯೂ, ಆದ ಕೃಷ್ಣನು ಮಹಾಬಲಿಷ್ಠರಾದ ಅನೇಕ ರಾಜರನ್ನು ತಿಳಿದು ನನಗೆ ಅನುಶಾಸನವನ್ನು ಮಾಡುತ್ತಾನೆ.

ಯದಿ ಹ್ಯಹಂ ವಿಸೃಜಾಮ್ಯಸ್ಯ ಗರ್ಹ್ಯೋ
ಯುಧ್ಯಮಾನೋ ಯದಿ ಜಹ್ಯಾಂ ಸ್ವಧರ್ಮಮ್ |
ಮಹಾಯಶಾಃ ಕೇಶವಸ್ತದ್ ಬ್ರವೀತು
ವಾಸುದೇವಸ್ತೂಭಯೋರರ್ಥಕಾಮಃ ||11||

ನಾನು ಅವನ ಅನುಶಾಸನವನ್ನು ಮೀರುವುದಾದರೆ ನಿಂದನೀಯನಾಗುತ್ತೇನೆ. ಯುದ್ಧವನ್ನು ಮಾಡಿ ನಾನು ನನ್ನ ಧರ್ಮವನ್ನು

ಮಾಡುವುದಾದರೆ ಅದನ್ನು ಮಹಾಕೀರ್ತಿಶಾಲಿಯಾದ ಕೃಷ್ಣನು ಹೇಳಲಿ. ಕೃಷ್ಣನು ಎರಡು ವಂಶಗಳಿಗೂ ಹಿತವನ್ನು ಬಯಸುವವನು.
ಶೈನೇಯೋಽಯಂ ಚೇದಯಶ್ಚಾಂಧಕಾಶ್ಚ
ವಾರ್ಷ್ಣೇಯಭೋಜಾಃ ಕುಕುರಾಃ ಸೃಂಜಯಾಶ್ಚ |
ಉಪಾಸೀನಾ ವಾಸುದೇವಸ್ಯ ಬುದ್ಧಿಂ
ನಿಗೃಹ್ಯ ಶತ್ರೂನ್ ಸುಹೃದೋ ನಂದಯಂತಿ ॥12॥
ಈ ಸಾತ್ಯಕಿ, ಚೇದಿಗಳು, ಅಂಧಕರು, ವಾರ್ಷ್ಣೇಯರು, ಭೋಜರು, ಕುಕುರರು ಮತ್ತು ಸೃಂಜಯರು ಕೃಷ್ಣನ ಬುದ್ಧಿಯನ್ನು ಆಶ್ರಯಿಸಿ, ಶತ್ರುಗಳನ್ನು ನಿಗ್ರಹಿಸಿ ಸುಹೃದರನ್ನು ಸಂತೋಷಪಡಿಸುತ್ತಾರೆ.
ವೃಷ್ಣ್ಯಂಧಕಾ ಹ್ಯುಗ್ರಸೇನಾದಯೋ ವೈ
ಕೃಷ್ಣಪ್ರಣೀತಾಃ ಸರ್ವ ಏವೇಂದ್ರಕಲ್ಪಾಃ |
ಮನಸ್ವಿನಃ ಸತ್ಯಪರಾಯಣಾಶ್ಚ
ಮಹಾಬಲಾ ಯಾದವಾ ಭೋಗವಂತಃ ॥13॥
ಕೃಷ್ಣನಿಂದ ಮುಂದೆ ನಡೆಸಲ್ಪಟ್ಟ ವೃಷ್ಣಿಗಳು, ಅಂಧಕರು, ಉಗ್ರಸೇನ ಮೊದಲಾದವರೆಲ್ಲರೂ ಇಂದ್ರನಂತೆ ಇದ್ದಾರೆ. ಧೈರ್ಯಶಾಲಿಗಳೂ, ಸತ್ಯಪರಾಯಣರೂ, ಮಹಾಬಲರೂ ಆದ ಯಾದವರು ಒಳ್ಳೆಯ ಭೋಗವನ್ನು ಹೊಂದಿದ್ದಾರೆ.
ಕಾಶ್ಯೋ ಬಭ್ರುಃ ಶ್ರಿಯಮುತ್ತಮಾಂ ಗತೋ
ಲಬ್ಧ್ವಾ ಕೃಷ್ಣಂ ಭ್ರಾತರಮೀಶಿತಾರಮ್ ॥
ಯಸ್ಮೈ ಕಾಮಾನ್ ವರ್ಷತಿ ವಾಸುದೇವೋ
ಗ್ರೀಷ್ಮಾತ್ಯಯೇ ಮೇಘ ಇವ ಪ್ರಜಾಭ್ಯಃ ॥14॥
ಕಾಶಿರಾಜನಾದ ಪೌಂಡ್ರಕವಾಸುದೇವನ ತಮ್ಮನಾದ ಬಭ್ರುವು ಸರ್ವೇಶ್ವರನಾದ ಕೃಷ್ಣನನ್ನು ಭ್ರಾತೃವಾಗಿ ಪಡೆದು ಒಳ್ಳೆಯ ಸಂಪತ್ತನ್ನು ಹೊಂದಿದ್ದಾನೆ. ಗ್ರೀಷ್ಮಕಾಲವು ಮುಗಿದ ಮೇಲೆ ಮೇಘವು ಪ್ರಜೆಗಳಿಗೆ ಮಳೆಯನ್ನು ಸುರಿಸಿದಂತೆ ವಾಸುದೇವನು ಅವನಿಗೆ ಸುಖದ ಮಳೆಯನ್ನು ಸುರಿಸುತ್ತಾನೆ.
ಈದೃಶೋಽಯಂ ಕೇಶವಸ್ತಾತ ಭೂಯೋ
ವಿದ್ಮೋ ಹ್ಯೇನಂ ಕರ್ಮಣೋ ನಿಶ್ಚಯಜ್ಞಮ್ |
ಪ್ರಿಯಶ್ಚ ನಃ ಸಾಧುತಮಶ್ಚ ಕೃಷ್ಣೋ
ನಾತಿಕ್ರಮೇ ವಚನಂ ಕೇಶವಸ್ಯ ॥15॥
ಪ್ರೀತಿಪಾತ್ರನೇ, ಕೃಷ್ಣನು ಇಂತಹವನು ಮತ್ತು ಅವನು ಕರ್ಮಗಳ ನಿಶ್ಚಯ ಜ್ಞಾನವುಳ್ಳವನು ಎಂದು ತಿಳಿದಿದ್ದೇವೆ. ನಮಗೆ ಅವನು ಪ್ರಿಯನಾದವನು ಮತ್ತು ಬಹಳ ಸತ್ಪುರುಷನಾದವನು. ಅವನ ಮಾತನ್ನು ನಾನು ಮೀರುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - ಅಧ್ಯಾಯ 24
ಕೃಷ್ಣೋಽಪಿ ತಸ್ಯ ಧರ್ಮಸ್ಯ ಪ್ರಾಮಾಣ್ಯಂ ಪ್ರತ್ಯಪಾದಯತ್ |
ತತೋ ನಿರುತ್ತರಃ ಕೃಷ್ಣಂ ಪಾಂಡವಾಂಶ್ಚ ಪ್ರಣಮ್ಯ ಸಃ ॥40॥
ಶ್ರೀಕೃಷ್ಣನೂ ಆ ಧರ್ಮದ ಪ್ರಾಮಾಣಿಕತೆಯನ್ನು ಸಮರ್ಥಿಸಿದ. ಸಂಜಯ ನಿರುತ್ತರನಾಗಿ ಕೃಷ್ಣನನ್ನೂ ಪಾಂಡವರನ್ನೂ ನಮಿಸಿ ಧೃತರಾಷ್ಟ್ರನ ಬಳಿಗೆ ಹೋದನು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ದುರ್ಯೋಧನನು ಇಷ್ಟು ಅಪರಾಧವನ್ನು ಮಾಡಿದ್ದರೂ
ಸಂಧಿಯು ಶ್ರೇಷ್ಠವೆಂದು ಕೃಷ್ಣನ ವಚನ.
ಶ್ರೀವಾಸುದೇವಃ
ಅವಿನಾಶಂ ಸಂಜಯ ಪಾಂಡವಾನಾಮ್
ಇಚ್ಛಾಮ್ಯಹಂ ಭೂತಿಮೇಷಾಂ ಪ್ರಿಯಂ ಚ |
ತಥಾ ರಾಜ್ಞೋ ಧೃತರಾಷ್ಟ್ರಸ್ಯ ಸೂತ
ಸದಾಽಽಶಂಸೇ ಬಹುಪುತ್ರಸ್ಯ ವೃದ್ಧಿಮ್ ॥1॥
ಶ್ರೀವಾಸುದೇವ ಎಲೈ ಸಂಜಯನೇ, ನಾನು ಪಾಂಡವರ ಅವಿನಾಶವನ್ನೂ, ಸಮೃದ್ಧಿಯನ್ನೂ ಮತ್ತು ಪ್ರಿಯವನ್ನೂ ಬಯಸುತ್ತೇನೆ. ಹಾಗೆಯೇ ಸೂತನೇ, ಬಹುಪುತ್ರರಿಂದ ಕೂಡಿದ ಧೃತರಾಷ್ಟ್ರನಿಗೂ ಸಹ ವೃದ್ಧಿಯನ್ನು ಬಯಸುತ್ತೇನೆ.
ಕರೋಮಿ ಹೇ ಸಂಜಯ ನಿತ್ಯಮೇವಂ
ತಥಾ ಬ್ರೂಯಾಸ್ತಾನಭಿಶಾಮ್ಯತೇತಿ |
ರಾಜ್ಞಶ್ಚ ಹಿ ಪ್ರಿಯಮೇತತ್ ಶೃಣೋಮಿ

ಮನ್ಯೇ ವೈ ತತ್ ಪಾಂಡವಾನಾಂ ಸಮರ್ಥಮ್ |2॥
ಸಂಜಯನೇ, ನಾನು ನಿತ್ಯವೂ ಹೀಗೆ ಮಾಡುತ್ತೇನೆ. ನೀನು ಹೋಗಿ ಅವರಿಗೆ (ಕೌರವರಿಗೆ) ಶಾಂತಿಯಿಂದ ಸಂಧಿಯನ್ನು ಮಾಡಿಕೊಳ್ಳಿ ಎಂದು ಹೇಳು. ಇದು ಧೃತರಾಷ್ಟ್ರನಿಗೂ ಪ್ರಿಯವಾದುದೆಂದು ನಾನು ಕೇಳಿದ್ದೇನೆ. ಸಂಧಿಯು ಪಾಂಡವರಿಗೂ ಒಳ್ಳೆಯ ಪುರುಷಾರ್ಥವಾಗುತ್ತದೆ.
ಸುದುಷ್ಕರಸ್ತ್ವತ್ರ ಶಮೋ ಹಿ ನೂನಂ
ಪ್ರದರ್ಶಿತಃ ಸಂಜಯ ಪಾಂಡವೇನ |
ಅಸ್ಮಿನ್ ವೃತ್ತೇ ಧೃತರಾಷ್ಟ್ರೇ ಸಪುತ್ರೇ
ಕಸ್ಮಾದೇಷಾಂ ಕಲಹೋಽನ್ಯತ್ರ ಮೂರ್ಚ್ಛೇತ್ ॥3॥
ಈ ಸಂದರ್ಭದಲ್ಲಿ ಅತ್ಯಂತ ಕಷ್ಟಕರವಾದ ಶಾಂತಿಯು ಪಾಂಡುಪುತ್ರನಾದ ಧರ್ಮರಾಜನಿಂದ ಖಂಡಿತವಾಗಿ ತೋರಿಸಲ್ಪಟ್ಟಿದೆ. ಪುತ್ರಸಹಿತನಾದ ಧೃತರಾಷ್ಟ್ರನು ಈ ನಡತೆಯನ್ನು ಹೊಂದಿರುವಾಗ ಪಾಂಡವರಲ್ಲದೇ ಬೇರೆಯವರಾಗಿದ್ದರೆ ಏಕೆ ಕಲಹವು ಉಂಟಾಗುತ್ತಿರಲಿಲ್ಲ?
ತತ್ ತ್ವಂ ಧರ್ಮಂ ವ್ಯಾಹರನ್ ಸಂಜಯೇಹ
ಮತ್ತಶ್ಚ ಜಾನಾಸಿ ಯುಧಿಷ್ಠಿರಾಚ್ಚ ॥4॥
ಅಥೋ ಕಸ್ಮಾತ್ ಸಂಜಯ ಪಾಂಡವಸ್ಯ
ಉತ್ಸಾಹಿನಃ ಪೂರಯತಃ ಸ್ವಕರ್ಮ |
ಯಥಾಖ್ಯಾತಮಾವಸತಃ ಕುಟುಂಬೇ
ಪುರಾ ಕಸ್ಮಾತ್ ಸಾಧು ವಿಲೋಮಮಾತ್ಥ ॥5॥
ಸಂಜಯನೇ, ಹೀಗೆ ಧರ್ಮವನ್ನು ಕುರಿತು ಮಾತನಾಡುತ್ತಿರುವ ನೀನು ನನ್ನಿಂದಲೂ ಮತ್ತು ಯುಧಿಷ್ಠಿರನಿಂದಲೂ ಧರ್ಮವನ್ನು ತಿಳಿದಿದ್ದೀಯೆ. ಎಲೈ ಸಂಜಯನೇ, ಹೀಗಿರುವಾಗ ಉತ್ಸಾಹಶೀಲರಾದ ತನ್ನ ಕರ್ಮವನ್ನು ಆಚರಿಸುತ್ತಿರುವ ವಿಹಿತವಾದ ರೀತಿಯಲ್ಲಿ ಕುಟುಂಬದಲ್ಲಿ ವಾಸವನ್ನು ಮಾಡುವ ಪಾಂಡವನಾದ ಯುಧಿಷ್ಠಿರನ ವಿಷಯದಲ್ಲಿ ಮೊದಲು ಏಕೆ ವಿಪರೀತವಾಗಿ ಅಧರ್ಮವುಂಟಾಗುವುದೆಂದು ಮಾತನಾಡಿದೆ?
ಅಸ್ಮಿನ್ ವಿಧೌ ವರ್ತಮಾನೇ ಯಥಾವದ್
ಉಚ್ಚಾವಚಾ ಮತಯೋ ಬ್ರಾಹ್ಮಣಾನಾಮ್ ॥6॥
ಕರ್ಮಣ್ಯೆಕೇ ಸಿದ್ಧಿಮಾಹುಃ ಪರತ್ರ
ಹಿತ್ವಾ ಕರ್ಮ ವಿದ್ಯಯಾ ಸಿದ್ಧಿಮೇಕೇ |
ನಾಭುಂಜಾನೋ ಭಕ್ಷ್ಯಭೋಜ್ಯಸ್ಯ ತೃಪ್ಯೇದ್
ಸೋಽಯಂ ವಿಧಿರ್ವಿಹಿತಃ ಕರ್ಮಣ್ಯೆವ ॥7॥
ವೇದವಿಧಾನವು ಯಥಾರ್ಥವಾಗಿರುವಾಗ ಬ್ರಾಹ್ಮಣರ ಬುದ್ಧಿಗಳು ಉಚ್ಚನೀಚ ಭಾವಗಳನ್ನು ಹೊಂದಿರುತ್ತವೆ. ಕೆಲವರು ಕರ್ಮದಿಂದ ಪರಲೋಕದಲ್ಲಿ ಸಿದ್ಧಿಯನ್ನು ಹೇಳುತ್ತಾರೆ. ಕರ್ಮವನ್ನು ಬಿಟ್ಟು ವಿದ್ಯೆಯಿಂದಲೇ ಸಿದ್ಧಿ ಎಂದು ಕೆಲವರು ಹೇಳುತ್ತಾರೆ. ಭಕ್ಷ್ಯ-ಭೋಜ್ಯಗಳ ಜ್ಞಾನವಿದ್ದರೂ ಭೋಜನಕರ್ಮವನ್ನು ಮಾಡದಿದ್ದರೆ ತೃಪ್ತಿ ಉಂಟಾಗುವುದಿಲ್ಲ. ಅದರಂತೆ ಈ ವಿಧಿಯೂ ಸಹ ಕರ್ಮದ ಜೊತೆಯಲ್ಲಿಯೇ ಪೂರ್ಣಗೊಳ್ಳುತ್ತದೆ (ಜ್ಞಾನ-ಕರ್ಮಗಳೆರಡೂ ಅವಶ್ಯಕವೆಂದು ಅಭಿಪ್ರಾಯ).
ಯಾ ವೈ ವಿದ್ಯಾಃ ಸಾಧಯಂತೀಹ ಕರ್ಮ
ತಾಸಾಂ ಫಲಂ ವಿದ್ಯತೇ ನೇತರಾಸಾಮ್ |
ತತ್ರೇಹ ವೈ ದೃಷ್ಟಫಲಂ ತು ಕರ್ಮ
ಪೀತ್ವೋದಕಂ ಶಾಮ್ಯತಿ ತೃಷ್ಣಯಾಽಽರ್ತಃ ॥8॥
ಇಲ್ಲಿ ಯಾವ ವಿದ್ಯೆಗಳು ಕರ್ಮಾನುಷ್ಠಾನದಲ್ಲಿ ಪರ್ಯವಸಾನವನ್ನು ಹೊಂದುತ್ತವೆಯೋ ಆ ವಿದ್ಯೆಗಳೇ ಸಫಲವಾದವು. ಇಲ್ಲಿ ಕರ್ಮವು ದೃಷ್ಟಫಲವೆಂಬುದು ಸಿದ್ಧವಾಗಿದೆ. ಬಾಯಾರಿಕೆಯಿಂದ ಬಳಲಿದವನು ನೀರನ್ನು ಕುಡಿದೇ ತೃಪ್ತಿಯನ್ನು ಹೊಂದುತ್ತಾನೆ.
ಸೋಽಯಂ ವಿಧಿರ್ವಿಹಿತಃ ಕರ್ಮಣ್ಯೆವ
ತದ್ವತ್ ಕೃತಂ ಸಂಜಯ ತಚ್ಚ ಕರ್ಮ |
ತತ್ರ ಯೋಽನ್ಯತ್ ಕರ್ಮಣಃ ಸಾಧು ಮನ್ಯೇತ್
ಮೋಘಂ ತಸ್ಯಾಲಪಿತಂ ದುರ್ಬಲಸ್ಯ ॥9॥
ಆದ್ದರಿಂದ ಎಲೈ ಸಂಜಯನೇ, ಈ ಕ್ಷತ್ರಿಯ ಧರ್ಮವೂ ಸಹ ಕರ್ಮದ ಜೊತೆಯಲ್ಲಿಯೇ ವಿಹಿತವಾಗಿದೆ. ಅದಕ್ಕೆ ಅನುಗುಣವಾಗಿ ಯುಧಿಷ್ಠಿರನು ಕರ್ಮವನ್ನು ಆಚರಿಸಿದ್ದಾನೆ. ಕರ್ಮವನ್ನು ಬಿಟ್ಟು ಫಲಸಿದ್ಧಿಯನ್ನು ಪಡೆಯಲು ಬೇರೆ ಮಾರ್ಗವಿದೆ ಎಂದು ತಿಳಿಯುವ ದುರ್ಬಲನ ಮಾತುಗಳು ವ್ಯರ್ಥವಾದವುಗಳು.
ಕರ್ಮಣಾಽಮೀ ಭಾಂತಿ ದೇವಾಃ ಪರತ್ರ
ಕರ್ಮಣ್ಯೆವೇಹ ಪ್ಲವತೇ ಮಾತರಿಶ್ವಾ |
ಅಹೋರಾತ್ರೇ ವಿದಧತ್ ಕರ್ಮಣ್ಯೆವ
ಅತಂದ್ರಿತಃ ಶಶ್ವದುದೇತಿ ಸೂರ್ಯಃ ॥10॥
ಈ ದೇವತೆಗಳು ಪರಲೋಕದಲ್ಲಿ ಕರ್ಮದಿಂದಲೇ ಬೆಳಗುತ್ತಾರೆ. ವಾಯುವು ಕರ್ಮದಿಂದಲೇ ಇಲ್ಲಿ ಬೀಸುತ್ತಾನೆ. ಸೂರ್ಯನು ಆಲಸ್ಯವಿಲ್ಲದೆ ತನ್ನ ಕರ್ಮದಿಂದಲೇ ಹಗಲು-ರಾತ್ರಿಗಳನ್ನು ಉಂಟುಮಾಡುತ್ತಾ ನಿತ್ಯದಲ್ಲಿಯೂ ಉದಯಿಸುತ್ತಾನೆ.

ಮಾಸಾರ್ಧಮಾಸಾನಥ ನಕ್ಷತ್ರಯೋಗಾನ್
ಅತಂದ್ರಿತಶ್ಚಂದ್ರಮಾಶ್ಚಾಭ್ಯುಪೈತಿ |
ಅತಂದ್ರಿತೋ ದಹತೇ ಜಾತವೇದಾಃ
ಸಮಿದ್ಧ್ಯಮಾನಃ ಕರ್ಮ ಕುರ್ವನ್ ಪ್ರಜಾಭ್ಯಃ ॥11॥
ಚಂದ್ರನು ಆಲಸ್ಯವಿಲ್ಲದೆ ಮಾಸ, ಅರ್ಧಮಾಸ ಮತ್ತು ನಕ್ಷತ್ರಯೋಗಗಳನ್ನು ಹೊಂದುತ್ತಾನೆ. ಅಗ್ನಿಯು ಜ್ವಲಿಸಲ್ಪಟ್ಟವನಾಗಿ, ಆಲಸ್ಯವಿಲ್ಲದೆ ಪ್ರಜೆಗಳ ಅನುಕೂಲಕ್ಕಾಗಿ ಕರ್ಮವನ್ನು ಮಾಡುತ್ತಾ ದಹಿಸುತ್ತಾನೆ.
ಅತಂದ್ರಿತಾ ಭಾರಮಿಮಂ ಮಹಾಂತಂ
ಬಿಭರ್ತಿ ದೇವೀ ಪೃಥಿವೀ ಬಲೇನ |
ಅತಂದ್ರಿತಾಃ ಶೀಘ್ರಮಪೋ ವಹಂತಿ
ಸಂತರ್ಪಯಂತ್ಯಃ ಸರ್ವಭೂತಾನಿ ನದ್ಯಃ ॥12॥
ಈ ಭೂದೇವಿಯು ಆಲಸ್ಯವಿಲ್ಲದೆ ತನ್ನ ಬಲದಿಂದ ಈ ದೊಡ್ಡ ಭಾರವನ್ನು ಹೊರುತ್ತಾಳೆ. ನದಿಗಳು ಆಲಸ್ಯವಿಲ್ಲದೆ ಎಲ್ಲ ಪ್ರಾಣಿಗಳಿಗೂ ತೃಪ್ತಿಯನ್ನು ಉಂಟು ಮಾಡುತ್ತಾ ಶೀಘ್ರವಾಗಿ ಹರಿಯುತ್ತವೆ.
ಅತಂದ್ರಿತೋ ವರ್ಷತಿ ಭೂರಿತೇಜಾಃ
ಸನ್ನಾದಯನ್ನಂತರಿಕ್ಷಂ ದಿಶಶ್ಚ ॥13॥
ಮಹಾಸಾಮರ್ಥ್ಯವುಳ್ಳ ಪರ್ಜನ್ಯನು ಆಲಸ್ಯವಿಲ್ಲದೆ ಸಿಡಿಲು-ಗುಡುಗುಗಳಿಂದ ಪ್ರತಿಧ್ವನಿಸುತ್ತಾ ಅಂತರಿಕ್ಷಗಳಲ್ಲಿ ಮತ್ತು ದಿಕ್ಕುಗಳಲ್ಲಿ ಮಳೆಯನ್ನು ಸುರಿಸುತ್ತಾನೆ.
ಅತಂದ್ರಿತೋ ಬ್ರಹ್ಮಚರ್ಯಂ ಚಚಾರ
ಶ್ರೇಷ್ಠತ್ವಮಿಚ್ಛನ್ ಬಲಭಿದ್ ದೇವತಾನಾಮ್ |
ಹಿತ್ವಾ ಸುಖಂ ಮನಸಶ್ಚ ಪ್ರಿಯಾಣಿ
ತೇನ ಶಕ್ರಃ ಕರ್ಮಣಾ ಶ್ರೈಷ್ಠ್ಯಮಾಪ ॥14॥
ಬಲಸೂದನನಾದ ಇಂದ್ರನು ದೇವತೆಗಳಲ್ಲಿ ಶ್ರೇಷ್ಠತ್ವವನ್ನು ಬಯಸಿ ಸುಖವನ್ನೂ, ಮನಸ್ಸಿಗೆ ಪ್ರಿಯವಾದ ವಸ್ತುಗಳನ್ನೂ ತ್ಯಜಿಸಿ ಆಲಸ್ಯವಿಲ್ಲದೆ ಬ್ರಹ್ಮಚರ್ಯವನ್ನು ಆಚರಿಸಿದನು. ಆ ಕರ್ಮದಿಂದ ಅವನು ದೇವತೆಗಳಲ್ಲಿ ಶ್ರೇಷ್ಠನಾದನು.
ಸತ್ಯಂ ಧರ್ಮಂ ಪಾಲಯನ್ನಪ್ರಮತ್ತೋ
ದಮಂ ತಿತಿಕ್ಷಾಂ ಸಮತಾಂ ಪ್ರಿಯಂ ಚ |
ಏತಾನಿ ಸರ್ವಾಣ್ಯುಪಸೇವಮಾನಃ
ಸ ದೇವರಾಜ್ಯಂ ಮಘವಾನ್ ಪ್ರಾಪ ಮುಖ್ಯಮ್ ॥15॥
ಸತ್ಯ-ಧರ್ಮಗಳನ್ನು ಆಲಸ್ಯವಿಲ್ಲದೆ ಪಾಲಿಸುತ್ತಾ ಇಂದ್ರಿಯನಿಗ್ರಹ, ದ್ವಂದ್ವ ಸಹಿಷ್ಣುತೆ, ಮನಸ್ಸಿನ ಸಮತ್ವ ಮತ್ತು ಪ್ರಿಯವಾದ ವಸ್ತುಗಳು ಈ ಎಲ್ಲವನ್ನೂ ಸೇವಿಸುತ್ತಾ ಇಂದ್ರನು ದೇವರಾಜ್ಯವನ್ನು ಹೊಂದಿ ದೇವತೆಗಳಲ್ಲಿ ಪ್ರಧಾನನಾದನು.
ಬೃಹಸ್ಪತಿರ್ಬ್ರಹ್ಮಚರ್ಯಂ ಚಚಾರ
ಸಮಾಹಿತಃ ಸಂಶಿತಾತ್ಮಾ ಯಥಾವತ್ |
ಹಿತ್ವಾ  ಸುಖಂ ಪ್ರತಿರುದ್ಧ್ಯೇಂದ್ರಿಯಾಣಿ
ತೇನ ದೇವಾನಾಮಗಮದ್ ಗೌರವಂ ಸಃ ॥16॥
ಬೃಹಸ್ಪತಿಯು ಸಮಾಧಾನದಿಂದ ಕೂಡಿದವನಾಗಿ, ಮನೋನಿಗ್ರಹವುಳ್ಳವನಾಗಿ ಸುಖವನ್ನು ತ್ಯಜಿಸಿ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ಸರಿಯಾದ ರೀತಿಯಲ್ಲಿ ಬ್ರಹ್ಮಚರ್ಯವನ್ನು ಆಚರಿಸುತ್ತಾನೆ. ಆ ಕರ್ಮದಿಂದ ಅವನು ದೇವತೆಗಳಿಗೆ ಗುರು ಎಂಬ ಸ್ಥಾನವನ್ನು ಹೊಂದಿದನು.
ತಥಾ ನಕ್ಷತ್ರಾಣಿ ಕರ್ಮಣಾಽಮುತ್ರ ಭಾಂತಿ
ರುದ್ರಾದಿತ್ಯಾ ವಸವೋಽಥಾಶ್ವಿನೌ ಚ ॥17॥
ಹಾಗೆಯೇ ಕರ್ಮದಿಂದ ನಕ್ಷತ್ರಗಳು ಆಕಾಶದಲ್ಲಿ ಬೆಳಗುತ್ತವೆ. ರುದ್ರಾದಿತ್ಯರು, ವಸುಗಳು ಮತ್ತು ಅಶ್ವಿನಿಗಳೂ ಸಹ ಕರ್ಮದಿಂದ ಆ ಸ್ಥಾನವನ್ನು ಪಡೆದಿದ್ದಾರೆ.
ಯಮೋ ರಾಜಾ ವೈಶ್ರವಣಃ ಕುಬೇರೋ
ಗಂಧರ್ವಯಕ್ಷಾಪ್ಸರಸಶ್ಚ  ಸೂತ |
ಬ್ರಹ್ಮಚರ್ಯಂ ವೇದವಿದ್ಯಾವ್ರತಂ ಚ
ನಿಷೇವಮಾಣಾ ಮುನಯೋಽಮುತ್ರ ಭಾಂತಿ ॥18॥
ರಾಜನಾದ ಯಮ, ಧನಪತಿಯಾದ ಕುಬೇರ, ಗಂಧರ್ವರು, ಯಕ್ಷರು ಮತ್ತು ಅಪ್ಸರೆಯರು ಮತ್ತು ಋಷಿಗಳು ಬ್ರಹ್ಮಚರ್ಯವನ್ನೂ, ವೇದವಿದ್ಯಾವ್ರತವನ್ನೂ ಸೇವಿಸುವವರಾಗಿ ಸ್ವರ್ಗಲೋಕದಲ್ಲಿ ಬೆಳಗುತ್ತಾರೆ.
ಜಾನಂತೀಮಂ ಸರ್ವಲೋಕಸ್ಯ ಧರ್ಮಂ
ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ವಿಶಾಂ ಚ |
ಸ ಕಸ್ಮಾತ್ ತ್ವಂ ಜ್ಞಾನಿನಾಂ ಜ್ಞಾನವಾಂಶ್ಚ
ವ್ಯಾಯಚ್ಛಸೇ ಸಂಜಯ ಕೌರವಾರ್ಥೇ ॥19॥
ಸರ್ವಲೋಕಗಳ ಈ ಧರ್ಮವನ್ನು ಎಂದರೆ ಬ್ರಾಹ್ಮಣರ, ಕ್ಷತ್ರಿಯರ ಮತ್ತು ವೈಶ್ಯರ ಈ ಧರ್ಮವನ್ನು ಎಲ್ಲರೂ ತಿಳಿದಿದ್ದಾರೆ.

ಹಾಗಿರುವಾಗ ಜ್ಞಾನಿಗಳಲ್ಲಿ ಜ್ಞಾನವಂತನಾದ ನೀನು ಎಲೈ ಸಂಜಯನೇ, ಏಕೆ ಕೌರವರ ಪರವಾಗಿ ಮಾತನಾಡುತ್ತಿದ್ದೀಯೆ?
ಸಾಮ್ನಾ ಯೇಷು ನಿತ್ಯಸಂಯೋಗಮಸ್ಯ
ತಥಾಽಶ್ವಮೇಧೇ ರಾಜಸೂಯೇ ಚ ವಿದ್ಧಿ |
ಸಂಯುಜ್ಯತೇ ಧನುಷಾ ಕರ್ಮಣಾ ಚ
ಹಸ್ತ್ಯಶ್ವಪೃಷ್ಠೇ ರಥಶಸ್ತ್ರೈಶ್ಚ ಭೂಯಃ ॥20॥
ಧರ್ಮರಾಜನಿಗೆ ನಿತ್ಯವೂ ವೇದಾಧ್ಯಯನ ಸಂಬಂಧವಿದೆ. ಹಾಗೆಯೇ ಅಶ್ವಮೇಧ ಮತ್ತು ರಾಜಸೂಯಗಳ ಸಂಬಂಧವೂ ಇದೆ ಎಂದು ತಿಳಿ. ಅವರು ಧನುಸ್ಸಿನಿಂದಲೂ, ಹಸ್ತಿಪೃಷ್ಠ ಮತ್ತು ಅಶ್ವಪೃಷ್ಠಗಳಿಂದಲೂ, ರಥಶಸ್ತ್ರಗಳಿಂದಲೂ ಪುನಃ ಸಂಬಂಧವನ್ನು ಹೊಂದಿದ್ದಾರೆ.
ತೇ ಚೇದಿಮಂ ಕೌರವಾಣಾಮುಪಾಯಮ್
ಅಪೀಚ್ಛೇಯುರವಧೇನೈವ ಪಾರ್ಥಾಃ |
ಧರ್ಮತ್ರಾಣಂ ಪುಣ್ಯಮೇಷಾಂ ಕೃತಂ ಸ್ಯಾದ್
ಆರ್ಯೇ ವೃತ್ತೇ ಭೈಮಸೇನಾನ್ ನಿಗೃಹ್ಯ ॥21॥
ಅಂತಹ ಪಾಂಡವರು ಯಾರನ್ನೂ ಕೊಲ್ಲದೇ ಕೌರವರ ಈ ಸಾಮೋಪಾಯವನ್ನು ಇಚ್ಛಿಸುವುದಾದರೆ ಭಯಂಕರ ಸೈನ್ಯವುಳ್ಳ ರಾಜರನ್ನು ನಾಶಮಾಡದೆ, ಅವರಿಗೆ ಅನುಗ್ರಹವನ್ನು ಮಾಡಿ ಆರ್ಯನಾದ ಧರ್ಮರಾಜನು ನಡೆದುಕೊಂಡರೆ ಧರ್ಮವು ರಕ್ಷಿತವಾಗುತ್ತದೆ ಮತ್ತು ಪಾಂಡವರೆಲ್ಲರಿಗೂ ಪುಣ್ಯವುಂಟಾಗುತ್ತದೆ.
ತೇ ಚೇತ್ ಪಿತ್ರ್ಯೇ ಕರ್ಮಣಿ ವರ್ತಮಾನಾ
ಆಪದ್ಯೇರನ್ ದಿಷ್ಟವಶೇನ ಮೃತ್ಯುಮ್ |
ಯಥಾಶಕ್ತ್ಯಾ ಪೂರಯಂತಃ ಸ್ವಕರ್ಮ
ತದಪ್ಯೇಷಾಂ ನಿಧನಂ ಸ್ಯಾತ್ ಪ್ರಶಸ್ತಮ್ ॥22॥
ಹಾಗಲ್ಲದೆ ಪಾಂಡವರು ಪಿತೃಪಿತಾಮಹರು ಮಾಡಿದ ಕರ್ಮದಲ್ಲಿ ಇರುವವರಾಗಿ ತಮ್ಮ ಶಕ್ತಿ ಇದ್ದಷ್ಟು ಯುದ್ಧರೂಪವಾದ ಸ್ವಕರ್ಮವನ್ನು ಮಾಡಿ ವಿಧಿವಶದಿಂದ ಮೃತ್ಯುವಿಗೆ ತುತ್ತಾದರೆ ಆ ಮರಣವೂ ಸಹ ಅವರಿಗೆ ಪ್ರಶಸ್ತವೇ ಆಗುತ್ತದೆ.
ಚಾತುರ್ವರ್ಣ್ಯಸ್ಯ ಪ್ರಥಮಂ ಸಂವಿಭಾಗಮ್
ಅವೇಕ್ಷ್ಯ ತ್ವಂ ಸಂಜಯ ಸ್ವಂ ಚ ಕರ್ಮ |
ನಿಶ್ಚಿತ್ಯ ತ್ವಂ ಪಾಂಡವಾನಾಂ ಸ್ವಕರ್ಮ
ಪ್ರಶಂಸ ವಾ ನಿಂದ ವಾ ಯಾ ಮತಿಸ್ತೇ ॥23॥
ಎಲೈ ಸಂಜಯನೇ, ಚಾತುರ್ವರ್ಣ್ಯದ ಮೊದಲನೆಯ ವಿಭಾಗವನ್ನು ಗಮನಿಸಿ ಮತ್ತು ನಿನ್ನ ಕರ್ಮವನ್ನು ಗಮನಿಸಿ ಪಾಂಡವರ ಸ್ವಕರ್ಮ ಯಾವುದೆಂದು ನಿಶ್ಚಯಿಸಿ ಅನಂತರ ನಿನ್ನ ಬುದ್ಧಿ ಇದ್ದಂತೆ ಪಾಂಡವರನ್ನು ಹೊಗಳು ಅಥವಾ ನಿಂದನೆ ಮಾಡು.
ಅಧೀಯೀತ ಬ್ರಾಹ್ಮಣೋಽಥೋ ಯಜೇತ
ದದ್ಯಾದೀಯಾತ್ ತೀರ್ಥಮುಖ್ಯಾನಿ ಚೈವ |
ಅಧ್ಯಾಪಯೇದ್ ಯಾಜಯೇಚ್ಚಾಪಿ ಯಾಜ್ಯಾನ್
ಪ್ರತಿಗ್ರಹಂ ವಾ ವಿಹಿತಾತ್ ಪ್ರತೀಚ್ಛೇತ್ ॥24॥
ಬ್ರಾಹ್ಮಣನು ಅಧ್ಯಯನವನ್ನು ಮಾಡಬೇಕು, ಅನಂತರ ಯಾಗವನ್ನು ಮಾಡಬೇಕು, ದಾನವನ್ನು ಮಾಡಬೇಕು, ತೀರ್ಥಯಾತ್ರೆಯನ್ನು ಮಾಡಬೇಕು, ಅಧ್ಯಯನವನ್ನು ಮಾಡಿಸಬೇಕು, ಯೋಗ್ಯರಾದವರಿಂದ ಯಾಗವನ್ನು ಮಾಡಿಸಬೇಕು ಮತ್ತು ಶುದ್ಧವಾದ ಪ್ರತಿಗ್ರಹವನ್ನು ಮಾಡಬೇಕು (ದಾನವನ್ನು ಸ್ವೀಕರಿಸಬೇಕು).
ಅಧೀಯೀತ ಕ್ಷತ್ರಿಯೋಽಥೋ ಯಜೇತ
ದದ್ಯಾತ್ ಧನಂ ನ ತು ಯಾಚೇತ ಕಿಂಚಿತ್ |
ನ ಯಾಜಯೇನ್ನಾಪಿ ಚಾಧ್ಯಾಪಯೀತ
ಏಷ ಸ್ಮೃತಃ ಕ್ಷತ್ರಧರ್ಮಃ ಪುರಾಣಃ ॥25॥
ಕ್ಷತ್ರಿಯನಾದವನು ಅಧ್ಯಯನವನ್ನು ಮಾಡಬೇಕು, ಅನಂತರ ಯಾಗವನ್ನು ಮಾಡಬೇಕು, ವಿತ್ತದಾನವನ್ನು ಮಾಡಬೇಕು, ಏನೂ ಬೇಡಬಾರದು, ಯಾಗವನ್ನು ಮಾಡಿಸಬಾರದು, ಅಧ್ಯಾಪನವನ್ನು ಮಾಡಬಾರದು. ಇದು ಪ್ರಾಚೀನವಾದ ಕ್ಷತ್ರಿಯ ಧರ್ಮವೆಂದು ಸ್ಮೃತವಾಗಿದೆ.
ತಥಾ ರಾಜನ್ಯೋ ರಕ್ಷಣಂ ವೈ ಪ್ರಜಾನಾಂ
ಕೃತ್ವಾ ಧರ್ಮೇಣಾಪ್ರಮತ್ತೋಽಥ ದತ್ವಾ |
ಯಜ್ಞೈರಿಷ್ಟ್ವಾ ಸರ್ವದೇವಾನ್ ಸ್ವಧರ್ಮಾತ್
ದಾನಂ ದತ್ವಾ ಪುಣ್ಯಕೃದಾವಸೇದ್ ಗೃಹಾನ್ ॥26॥
ಸ ಧರ್ಮಾತ್ಮಾ ಧರ್ಮಮಧೀತ್ಯ ಪುಣ್ಯಂ
ಯದೃಚ್ಛಯಾ ವ್ರಜತಿ ಬ್ರಹ್ಮಲೋಕಮ್ ॥27॥
ಹಾಗೆಯೇ ರಾಜನಾದವನು ಧರ್ಮದಿಂದ ಪ್ರಜೆಗಳ ರಕ್ಷಣೆಯನ್ನು ಮಾಡಿ, ಎಚ್ಚರಿಕೆಯಿಂದ ದಾನವನ್ನು ಮಾಡಿ, ತನ್ನ ಧರ್ಮಕ್ಕೆ ಅನುಗುಣವಾಗಿ ಎಲ್ಲ ದೇವತೆಗಳನ್ನು ಯಜ್ಞದಿಂದ ಪೂಜಿಸಿ ದಾನವನ್ನು ಮಾಡಿ ಪುಣ್ಯವನ್ನು ಸಂಪಾದಿಸುತ್ತಾ ಮನೆಯಲ್ಲಿ ವಾಸಿಸಬೇಕು. ಅಂತಹ ಧರ್ಮಿಷ್ಠನಾದವನು ಅಧ್ಯಯನವನ್ನು ಮಾಡಿ ಪುಣ್ಯವನ್ನು ಸಂಪಾದಿಸಿ ಭಗವದಿಚ್ಛೆಯಿಂದ ಬ್ರಹ್ಮಲೋಕಕ್ಕೆ

ಹೋಗುತ್ತಾನೆ.
ವೈಶ್ಯೋಽಧೀತ್ಯ ಕೃಷಿಗೋರಕ್ಷಪಣ್ಯೈಃ
ವಿತ್ತಂ ಚಿತ್ವಾ ಪಾಲಯನ್ನಪ್ರಮತ್ತಃ |
ಪ್ರಿಯಂ ಕುರ್ವನ್ ಬ್ರಾಹ್ಮಣಕ್ಷತ್ರಿಯಾಣಾಂ
ಧರ್ಮಶೀಲಃ ಪುಣ್ಯಕೃದಾವಸೇದ್ ಗೃಹಾನ್ ॥28॥
ವೈಶ್ಯನಾದವನು ಅಧ್ಯಯನವನ್ನು ಮಾಡಿ ಕೃಷಿಗೋರಕ್ಷವಾಣಿಜ್ಯಗಳಿಂದ ಧನವನ್ನು ಗಳಿಸಿ ಅದನ್ನು ಎಚ್ಚರಿಕೆಯಿಂದ ನೋಡಿಕೊಂಡು ಬ್ರಾಹ್ಮಣಕ್ಷತ್ರಿಯರಿಗೆ ಸೇವೆಯನ್ನು ಮಾಡುತ್ತಾ ಧರ್ಮಶೀಲನಾಗಿ ಪುಣ್ಯವನ್ನು ಸಂಪಾದಿಸುತ್ತಾ ಗೃಹದಲ್ಲಿ ಇರಬೇಕು.
ಪರಿಚರ್ಯಾ ವಂದನಂ ಬ್ರಾಹ್ಮಣಾನಾಂ
ನಾಧೀಯೀತ ಪ್ರತಿಷಿದ್ಧೋಽಸ್ಯ ಯಜ್ಞಃ |
ನಿತ್ಯೋತ್ಥಿತೋ ಭೂತಯೇಽತಂದ್ರಿತಃ ಸ್ಯಾದ್
ಏಷ ಶ್ರುತಃ ಶೂದ್ರಧರ್ಮಃ ಪುರಾಣಃ ॥29॥
ಪರಿಚರ್ಯೆ, ಬ್ರಾಹ್ಮಣರಿಗೆ ನಮಸ್ಕಾರ, ಅಧ್ಯಯನ ಮತ್ತು ಯಾಗಗಳ ಪ್ರತಿಷೇಧ, ಸಮೃದ್ಧಿಯನ್ನು ಹೊಂದುವುದರಲ್ಲಿ ಆಲಸ್ಯವಿಲ್ಲದೆ ನಿತ್ಯವೂ ಪ್ರಯತ್ನಶೀಲನಾಗಿರುವುದು ಇದು ಪ್ರಾಚೀನವಾದ ಶೂದ್ರಧರ್ಮವೆಂದು ಶ್ರುತವಾಗಿದೆ.
ಏತಾನ್ ರಾಜಾ ಪಾಲಯನ್ನಪ್ರಮತ್ತೋ
ನಿಯೋಜಯನ್ ಸರ್ವವರ್ಣಾನ್ ಸ್ವಧರ್ಮೇ |
ಅಕಾಮಾತ್ಮಾ ಸಮವೃತ್ತಿಃ ಪ್ರಜಾಸು
ನಾಧಾರ್ಮಿಕಾನನುರುಧ್ಯೇತ ಕಾಮಾತ್ ॥30॥
ರಾಜನಾದವನು ಸರ್ವವರ್ಣದವರನ್ನು ಅವರವರ ಧರ್ಮದಲ್ಲಿ ನಿಯೋಜಿಸುತ್ತಾ ಆಲಸ್ಯವಿಲ್ಲದೆ ಅವರನ್ನು ರಕ್ಷಿಸುತ್ತಾ, ಭೋಗಾಸಕ್ತನಾಗದೆ ಪ್ರಜೆಗಳಲ್ಲಿ ಸಮವಾಗಿ ನಡೆದುಕೊಂಡು ತನ್ನ ಸುಖಕ್ಕಾಗಿ ಅಧಾರ್ಮಿಕರನ್ನು ಅನುಸರಿಸದೆ ಇರಬೇಕು.
ಶ್ರೇಯಾಂಸ್ತಸ್ಮಾದ್ ಯದಿ ವಿದ್ಯೇತ ಕಶ್ಚಿದ್
ಅಭಿಜ್ಞಾತಃ ಸರ್ವಧರ್ಮೋಪಪನ್ನಃ |
ಸತಾಂ ದುಷ್ಟಾನನುಶಿಷ್ಯನ್ ಪ್ರಜಾನಾಮ್
ನ ವೈ ಗೃಧ್ಯೇದಿತಿ ತಸ್ಮಿನ್ನಸಾಧು ॥31॥
ಅದಕ್ಕಿಂತಲೂ ಮಿಗಿಲಾದ ಸರ್ವಧರ್ಮ ಉಪಪನ್ನವಾದ ಒಂದು ಧರ್ಮವು ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ ಎಂದರೆ ಅದು ಸಜ್ಜನರಾದ ಪ್ರಜೆಗಳ ಸಲುವಾಗಿ ದುಷ್ಟರನ್ನು ಶಿಕ್ಷಿಸುವುದು. ಅಂತಹ ರಾಜನ ವಿಷಯದಲ್ಲಿ ಯಾವ ಅಮಂಗಳವನ್ನೂ ಆಶಿಸಬಾರದು.
ಯದಾ ಗೃಧ್ಯೇತ್ ಪರಭೂತೌ ನೃಶಂಸೋ
ವಿಧಿಪ್ರಕೋಪಾದ್ ವಿಧಿಮಾದಧಾನಃ |
ತತೋ ರಾಜ್ಞಾಂ ಭವಿತಾ ಯುದ್ಧಮೇತತ್
ತತ್ರ ಜಾತಂ ವರ್ಮ ಶಸ್ತ್ರಂ ಧನುಶ್ಚ ॥32॥
ಇನ್ನೊಬ್ಬನ ಸಂಪತ್ತನ್ನು ಬಯಸಿದರೆ ಪರಸೈನ್ಯವನ್ನು ವ್ಯೂಹಮಾಡಿದ ಕೋಪದಿಂದ ತನ್ನ ಭಟರನ್ನು ವ್ಯೂಹ ಮಾಡಿದರೆ ಆಗ ರಾಜರಿಗೆ ಯುದ್ಧ ಉಂಟಾಗುವುದು. ಆಗ ಕವಚ, ಧನುಸ್ಸು ಮತ್ತು ಶಸ್ತ್ರಗಳು ಉಂಟಾಗುತ್ತವೆ.
ಇಂದ್ರೇಣೈತದ್ ದಸ್ಯುವಧಾಯ ಕರ್ಮ
ಉತ್ಪಾದಿತಂ ವರ್ಮ ಶಸ್ತ್ರಂ ಧನುಶ್ಚ |
ತತ್ರ ಪುಣ್ಯಂ ದಸ್ಯುವಧೇನ ಲಭ್ಯತೇ
ಸೋಽಯಂ ದೋಷಃ ಕುರುಭಿಸ್ತೀವ್ರರೂಪಃ ॥33॥
ಅಧರ್ಮಜ್ಞೈರ್ಧರ್ಮಮಬುಧ್ಯಮಾನೈಃ
ಪ್ರಾದುರ್ಭೂತಃ ಸಂಜಯ ಸಾಧು ತನ್ನ ॥34॥
ಇಂದ್ರನು ದಸ್ಯುವಧೆಗೋಸ್ಕರ ಈ ಯುದ್ಧವೆಂಬ ಕರ್ಮವನ್ನು ಮತ್ತು ಕವಚ, ಧನುಸ್ಸು ಮತ್ತು ಶಸ್ತ್ರಗಳನ್ನು ಸೃಷ್ಟಿಸಿದನು. ದಸ್ಯುವಧೆಯಿಂದ ಪುಣ್ಯವು ಲಭ್ಯವಾಗುತ್ತದೆ. ಅಂತಹ ತೀವ್ರವಾದ ದಸ್ಯುದೋಷವು ಅಧರ್ಮಜ್ಞರಾದ ಮತ್ತು ಧರ್ಮವನ್ನು ತಿಳಿಯದ ಕೌರವರಿಂದ ಉದ್ಭವಿಸಿದೆ. ಸಂಜಯನೇ, ಅದು ಸರಿಯಲ್ಲ.
ತತ್ರ ರಾಜಾ ಧೃತರಾಷ್ಟ್ರಃ ಸಪುತ್ರೋ
ಧರ್ಮ್ಯಂ ಹರೇತ್ ಪಾಂಡವಾನಾಮಕಸ್ಮಾತ್ |
ನಾವೇಕ್ಷಂತೇ ರಾಜಧರ್ಮಂ ಪುರಾಣಂ
ತದನ್ವಯಾಃ ಕುರವಃ ಸರ್ವ ಏವ ॥35॥
ಇಲ್ಲಿ ಪುತ್ರರಿಂದ ಸಹಿತನಾದ ಧೃತರಾಷ್ಟ್ರನು ನಿಷ್ಕಾರಣನಾಗಿ ಪಾಂಡವರ ಧರ್ಮಯುತವಾದ ಸಂಪತ್ತನ್ನು ಅಪಹರಿಸಿದ್ದಾನೆ. ಅವನ ಅವಂಶಕ್ಕೆ ಸೇರಿದ ಎಲ್ಲ ಕುರುಗಳೂ ಸಹ ಪ್ರಾಚೀನವಾದ ರಾಜಧರ್ಮವನ್ನು ಗಮನಿಸುತ್ತಿಲ್ಲ.
ಸ್ತೇನೋ ಹರೇದ್ ಯತ್ರ ಧನಂ ಪ್ರಣಷ್ಟಃ
ಪ್ರಸಹ್ಯ ವಾ ಯತ್ರ ಹರೇತ ದೃಷ್ಟಃ |
ಉಭೌ ಗರ್ಹ್ಯೌ ಭವತಃ ಸಂಜಯೈತೌ

ಕಿಂ ಪೃಚ್ಛಸೇ ಧೃತರಾಷ್ಟ್ರಸ್ಯ ಪುತ್ರೇ ॥36॥
ಯಾವ ಕಳ್ಳನು ಅವಿತುಕೊಂಡು ಧನವನ್ನು ಅಪಹರಿಸುವನೋ, ಯಾವ ದರೋಡೆಕಾರನು ಕಣ್ಣಿಗೆ ಕಾಣುವಂತೆಯೇ ಬಲಾತ್ಕಾರದಿಂದ ಅಪಹರಿಸುವನೋ ಅವರಿಬ್ಬರೂ ನಿಂದನೀಯರಾಗುತ್ತಾರೆ. ಸಂಜಯನೇ, ಧೃತರಾಷ್ಟ್ರನ ಪುತ್ರನ ವಿಷಯದಲ್ಲಿ ನೀನು ಏನು ಕೇಳುತ್ತಿದ್ದೀಯೆ?
ಸೋಽಯಂ ಲೋಭಾನ್ಮನ್ಯತೇ ಧರ್ಮಮೇನಂ
ಯಮಿಚ್ಛತಿ ಕ್ರೋಧವಶಾನುಗಾಮೀ |
ಭಾಗಃ ಪುನಃ ಪಾಂಡವಾನಾಂ ನಿವಿಷ್ಟಃ
ತಂ ನಃ ಕಸ್ಮಾದಾದದೀರನ್ ಪರೇ ವೈ ॥37॥
ಅಂತಹ ಧೃತರಾಷ್ಟ್ರ ಪುತ್ರನು ಲೋಭದಿಂದ ಮತ್ತು ಕ್ರೋಧವಶನಾಗಿ ಪಾಂಡವರ ಭಾಗವನ್ನು ಇಚ್ಛಿಸುತ್ತಾ ಅದನ್ನು ಧರ್ಮವೆಂದು ತಿಳಿದಿದ್ದಾನೆ. ಧೃತರಾಷ್ಟ್ರನ ರಾಜ್ಯದಲ್ಲಿ ಪಾಂಡವರ ಭಾಗವು ಸೇರಿದೆ. ಅದನ್ನು ಅವರು ಏಕೆ ತಮ್ಮ ವಶಕ್ಕೆ ತೆಗೆದುಕೊಳ್ಳುವುದಿಲ್ಲ?
ಅಸ್ಮತ್ಪದೇ ಯುಧ್ಯತಾಂ ನೋ ವಧೋಽಪಿ
ಶ್ಲಾಘ್ಯಃ ಪಿತ್ರ್ಯಃ ಪರರಾಜ್ಯಾದ್ ವಿಶಿಷ್ಟಃ |
ಏತಾನ್ ಧರ್ಮಾನ್ ಕೌರವಾಣಾಂ ಪುರಾಣಾನ್
ಆಚಕ್ಷೀಥಾಃ ಸಂಜಯ ರಾಜಮಧ್ಯೇ ॥38॥
ಇದಕ್ಕೋಸ್ಕರವಾಗಿ ಯುದ್ಧವನ್ನು ಮಾಡುವ ನಮಗೆ ಮರಣವುಂಟಾದರೂ ಅದು ಶ್ಲಾಘ್ಯವಾದುದು. ಪಿತೃವಿನಿಂದ ಬಂದ ರಾಜ್ಯವು ಇನ್ನೊಬ್ಬನಿಂದ ಬೇಡಿ ತೆಗೆದುಕೊಂಡ ರಾಜ್ಯಕ್ಕಿಂತಲೂ ಶ್ರೇಷ್ಠವಾದುದು. ಎಲೈ ಸಂಜಯನೇ, ಈ ಪ್ರಾಚೀನವಾದ ಧರ್ಮಗಳನ್ನು ರಾಜಸಭೆಯ ಮಧ್ಯದಲ್ಲಿ ಕೌರವರನ್ನು ಕುರಿತು ಹೇಳುವವನಾಗು.
ಏತೇ ಮಂದಾ ಮೃತ್ಯುಪಾಶಾಭಿಪನ್ನಾಃ
ಸಮಾನೀತಾ ಧಾರ್ತರಾಷ್ಟ್ರೇಣ ಮೂಢಾಃ |
ಇದಂ ಪುನಃ ಕರ್ಮ ಪಾಪೀಯ ಏವ
ಸಭಾಮಧ್ಯೇ ಪಶ್ಯ ವೃತ್ತಂ ಕುರೂಣಾಮ್ ॥39॥
ಮಂದರೂ, ಮೂಢರೂ ಮತ್ತು ಮೃತ್ಯುಪಾಶಕ್ಕೆ ಸಿಲುಕಿದವರೂ ಆದ ಈ ಎಲ್ಲ ರಾಜರು ದುರ್ಯೋಧನನಿಂದ ಕರೆತರಲ್ಪಟ್ಟಿದ್ದಾರೆ. ಕೌರವರ ಸಭೆಯ ಮಧ್ಯದಲ್ಲಿ ಇದೇನು ನಡೆಯಿತೋ ಅದು ಎಲ್ಲದಕ್ಕಿಂತಲೂ ಪಾಪಿಷ್ಠವಾದುದು ಎಂಬುದನ್ನು ನೋಡು.
ಪ್ರಿಯಾಂ ಭಾರ್ಯಾಂ ದ್ರೌಪದೀಂ ಪಾಂಡವಾನಾಂ
ಯಶಸ್ವಿನೀಂ ಶೀಲವೃತ್ತೋಪಪನ್ನಾಮ್ |
ಯದುಪೈಕ್ಷಂತ ಕುರವೋ ಭೀಷ್ಮಮುಖ್ಯಾಃ
ಕಾಮಾನುಗೇನೋಪರುದ್ಧಾಂ ವ್ರಜಂತೀಮ್ ॥40॥
ಪಾಂಡವರ ಪ್ರಿಯಭಾರ್ಯೆಯಾದ, ಕೀರ್ತಿವಂತಳಾದ, ಶೀಲವೃತ್ತಸಂಪನ್ನಳಾದ ದ್ರೌಪದಿಯು ಕಾಮವಶನಾದ ದುಶ್ಶಾಸನನಿಂದ ತಡೆಯಲ್ಪಟ್ಟು ನಡೆದುಬರುವಾಗ ಭೀಷ್ಮರೇ ಮೊದಲಾದ ಕೌರವರು ಉದಾಸೀನವನ್ನು ಮಾಡಿದರು (ಇದು ಎಲ್ಲಕ್ಕಿಂತಲೂ ಪಾಪಿಷ್ಠವಾದ ಕಾರ್ಯ).
ತಾಂ ಚೇತ್ ತದಾ ತೇ ಸಕುಮಾರವೃದ್ಧಾ
ಅಪಾಲಯಿಷ್ಯನ್ ಕುರವಃ ಸಮೇತಾಃ |
ಮಮ ಪ್ರಿಯಂ ಧೃತರಾಷ್ಟ್ರೋಽಕರಿಷ್ಯನ್
ಪುತ್ರಾಣಾಂ ಚ ಕೃತಮಸ್ಮಾದ್ ಭವಿಷ್ಯತ್ ॥41॥
ಆಗ ಅವಳನ್ನು ಬಾಲವೃದ್ಧಸಹಿತರಾದ ಕುರುಗಳೆಲ್ಲರೂ ಸೇರಿ ರಕ್ಷಣೆ ಮಾಡಿದ್ದರೆ ಧೃತರಾಷ್ಟ್ರನು ನನಗೆ ಪ್ರಿಯವಾದ ಕಾರ್ಯವನ್ನು ಮಾಡಿರುತ್ತಿದ್ದನು. ಅವನ ಮಕ್ಕಳಿಗೂ ಸಹ ಅದರಿಂದ ಸುಖವುಂಟಾಗುತ್ತಿದ್ದಿತು.
ದುಃಶಾಸನಃ ಪ್ರಾತಿಲೋಮ್ಯಾನ್ನಿನಾಯ
ಸಭಾಮಧ್ಯೇ ಶ್ವಶುರಾಣಾಂ ಚ ಕೃಷ್ಣಾಮ್ |
ಸಾ ತತ್ರ ದೀನಾ ಕರುಣಾನ್ಯವೋಚತ್
ನಾನ್ಯಂ ಕ್ಷತ್ತುರ್ನಾಥಮವಾಪ ಕಂಚಿತ್ ॥42॥
ದುಶ್ಶಾಸನನು ಪ್ರಾತಿಕಾಮಿಯ ಮೂಲಕ ಮಾವಂದಿರ ಎದುರಿಗೆ ಕೃಷ್ಣೆಯನ್ನು ಸಭಾಮಧ್ಯದಲ್ಲಿ ಎಳೆದು ತಂದನು. ದೀನಳಾದ ಅವಳು ಅಲ್ಲಿ ಕರುಣಾಜನಕವಾದ ಮಾತುಗಳನ್ನಾಡಿದಳು. ಆದರೆ ವಿದುರ ಒಬ್ಬನನ್ನು ಬಿಟ್ಟು ಬೇರೆ ಯಾವ ನಾಥನನ್ನೂ ಪಡೆಯಲಿಲ್ಲ.
ಕಾರ್ಪಣ್ಯಾದೇವ ಸಹಿತಾಸ್ತತ್ರ ರಾಜಃ
ನಾಶಕ್ನುವನ್ ಪ್ರತಿವಕ್ತುಂ ಸಭಾಯಾಮ್ |
ಏಕಃ ಕ್ಷತ್ತಾ ಧರ್ಮ್ಯಮರ್ಥಂ ಬ್ರುವಾಣೋ
ಧರ್ಮಂ ಬುದ್ಧ್ವಾ ಪ್ರತ್ಯುವಾಚಾಲ್ಪಬುದ್ಧಿಮ್ ॥43॥
ಅಲ್ಲಿ ನೆರೆದ ರಾಜರು ಸಭೆಯಲ್ಲಿ ಕಾರ್ಪಣ್ಯದಿಂದಲೇ ದ್ರೌಪದಿಗೆ ಪ್ರತಿವಚನವನ್ನು ಕೊಡಲು ಸಾಧ್ಯವಾಗಲಿಲ್ಲ. ವಿದುರನೊಬ್ಬನೇ ಧರ್ಮವನ್ನು ತಿಳಿದವನಾಗಿ ಅಲ್ಪಬುದ್ಧಿಯಾದ ದುರ್ಯೋಧನನನ್ನು ಕುರಿತು ಧರ್ಮವನ್ನೂ ಮತ್ತು ಅರ್ಥವನ್ನೂ ಮಾತನಾಡಿದನು.

ಅನುಕತ್ವ ತಂ ಧರ್ಮಮೇತಂ ಸಭಾಯಾಮ್
ಅಥೇಚ್ಛಸೇ ಪಾಂಡವಸ್ಯೋಪದೇಷ್ಟುಮ್ ॥44॥
ನೀನು ಆಗ ಸಭೆಯಲ್ಲಿ ಧರ್ಮದ ಮಾತುಗಳನ್ನಾಡದೆ ಈಗ ಪಾಂಡವರಿಗೆ ಧರ್ಮವನ್ನು ಉಪದೇಶಿಸಲು ಬಯಸುತ್ತಿದ್ದೀಯೆ.
ಕೃಷ್ಣಾ ತ್ವೇತತ್ ಕರ್ಮ ಚಕಾರ ಶುದ್ಧಂ
ಸುದುಷ್ಕರಂ ತತ್ರ ಸಭಾಂ ಸಮೇತ್ಯ |
ಯೇನ ಕೃಚ್ಛ್ರಾತ್ ಪಾಂಡವಾನುಜ್ಜಹಾರ
ತಥಾಽಽತ್ಮಾನಂ ನೌರಿವ ಸಾಗರೌಘಾತ್ ॥45॥
ದ್ರೌಪದಿಯು ಆ ಸಭೆಗೆ ಬಂದು ಸುದುಷ್ಕರವಾದ ಶುದ್ಧವಾದ ಕರ್ಮವನ್ನು ಮಾಡಿದಳು. ಅದರಿಂದ ಅವಳು ಪಾಂಡವರನ್ನೂ ಮತ್ತು ತನ್ನನ್ನೂ ಸಹ ಸಾಗರ ಪ್ರವಾಹದಿಂದ ನೌಕೆಯನ್ನು ಎತ್ತುವಂತೆ ಉದ್ಧರಿಸಿದಳು.
ಯದಬ್ರುವೀತ್ ಸೂತಪುತ್ರಃ ಸಭಾಯಾಂ
ಪ್ರಾಪ್ತಾಂ ಕೃಷ್ಣಾಂ ಪರಿಷದೋ ವೈ ಸಕಾಶೇ ॥46॥
ನ ತೇ ಗತಿರ್ವಿದ್ಯತೇ ಯಾಜ್ಞಸೇನಿ
ಪ್ರಪದ್ಯೇಥಾ ಧಾರ್ತರಾಷ್ಟ್ರಸ್ಯ ವೇಶ್ಮ |
ಪರಾಜಿತಾಸ್ತೇ ಪತಯೋ ನ ಸಂತಿ
ಪತಿಂ ಚಾನ್ಯಂ ಭಾಮಿನಿ ತ್ವಂ ವೃಣೀಷ್ವ ॥47॥
ಯೋ ಬೀಭತ್ಸೋರ್ಹೃದಯೇ ಪ್ರೋತ ಆಸೀದ್
ಅಸ್ಥಿ ಚ್ಛಿಂದನ್ ಮರ್ಮಘಾತೀ ಸುಘೋರಃ |
ಕರ್ಣಾಚ್ಛರೋ ವಾಙ್ಮಯಸ್ತಿಗ್ಮತೇಜಾಃ
ಪ್ರತಿಷ್ಠಿತೋ ಹೃದಯೇ ಫಲ್ಗುನಸ್ಯ ॥48॥
ಸಭೆಯಲ್ಲಿ ದ್ರೌಪದಿಯು ಬಂದಾಗ ಪರಿಷತ್ತಿನ ಎದುರಿನಲ್ಲಿ ಕರ್ಣನು ಯಾಜ್ಞಸೇನಿಯೇ ನಿನಗೆ ಬೇರೆ ಗತಿಯಿಲ್ಲ. ದುರ್ಯೋಧನನ ಮನೆಯನ್ನು ಪ್ರವೇಶಿಸು. ಪರಾಜಿತರಾದ ನಿನ್ನ ಪತಿಗಳು ನಾಶ ಹೊಂದಿದ್ದಾರೆ. ಭಾಮಿನಿಯೇ, ಇನ್ನೊಬ್ಬ ಪತಿಯನ್ನು ವರಿಸುವವಳಾಗು ಎಂದು ಏನು ಹೇಳಿದನೋ ಆ ವಾಙ್ಮಯವಾದ ಕರ್ಣನ ಬಾಣಗಳು ಬಹಳ ಕ್ರೂರಗಳಾಗಿ ಅರ್ಜುನನ ಅಸ್ಥಿಯನ್ನು ಭೇದಿಸಿ, ಘೋರವಾದ ಮರ್ಮಘಾತಿಯಾಗಿ ಅರ್ಜುನನ ಹೃದಯದಲ್ಲಿ ನಾಟಿಹೋಗಿವೆ.
ಕೃಷ್ಣಾಂ ಜಿತಾಂ ವೈ ಪರಿಭರ್ತ್ಸಮಾನೋ
ದುಃಶಾಸನಃ ಕಟುಕಾನಭ್ಯಭಾಷತ್ |
ಏತೇ ಸರ್ವೇ ಷಂಡತಿಲಾ ವಿನಷ್ಟಾಃ
ಕ್ಷಯಂ ಗತಾ ನರಕಂ ದೀರ್ಘಕಾಲಮ್ ॥49॥
ದ್ರೌಪದಿಯು ದ್ಯೂತದಲ್ಲಿ ಜಿತಳಾದಾಗ ದುಶ್ಶಾಸನನು ಅವಳನ್ನು ಅವಹೇಳನ ಮಾಡುತ್ತಾ ನಿನ್ನ ಪತಿಗಳೆಲ್ಲರೂ ಹುಳಿತುಹೋದ ಎಳ್ಳುಕಾಳುಗಳಂತೆ ಬಹುಕಾಲದವರೆಗೆ ನರಕವನ್ನು ಹೊಂದಿ ವಿನಾಶವನ್ನು ಹೊಂದಿದ್ದಾರೆ ಎಂಬ ಕಟುವಾದ ಮಾತುಗಳನ್ನು ಆಡಿದನು.
ಗಾಂಧಾರರಾಜಃ ಶಕುನಿರ್ನಿಕೃತ್ಯಾ
ಯದಬ್ರುವೀದ್ ದ್ಯೂತಕಾಲೇ ಸ ಪಾರ್ಥಮ್ |
ಪರಾಜಿತೋ ನಕುಲಃ ಕಿಂ ತವಾಸ್ತಿ
ಕೃಷ್ಣಯಾ ತ್ವಂ ದೀವ್ಯ ವೈ ಯಾಜ್ಞಸೇನ್ಯಾ ॥50॥
ಗಾಂಧಾರರಾಜನಾದ ಶಕುನಿಯು ದ್ಯೂತಕಾಲದಲ್ಲಿ ಯುಧಿಷ್ಠಿರನನ್ನು ಕುರಿತು ವಂಚನೆಯಿಂದ ನಕುಲನು ಪರಾಜಿತನಾಗಿದ್ದಾನೆ, ನಿನಗೆ ಇನ್ನೇನು ಉಳಿದಿದೆ, ಯಜ್ಞಸೇನನ ಮಗಳಾದ ಕೃಷ್ಣೆಯನ್ನು ಪಣಕ್ಕಿಟ್ಟು ದ್ಯೂತವಾಡು ಎಂದು ಹೇಳಿದನು.
ಜಾನಾಸಿ ತ್ವಂ ಸಂಜಯ ಸರ್ವಮೇತತ್
ದ್ಯೂತೇ ವಾಕ್ಯಂ ಗರ್ಹ್ಯಮೇವಂ ಯಥೋಕ್ತಮ್ ॥51॥
ಸಂಜಯನೇ, ನೀನು ದ್ಯೂತಕಾಲದಲ್ಲಿ ಆಡಿದ ಎಲ್ಲ ನಿಂದನೀಯವಾದ ಮಾತುಗಳನ್ನೂ ತಿಳಿದಿದ್ದೀಯೆ.
ಸ್ವಯಂ ತ್ವಹಂ ಪ್ರಾರ್ಥಯೇ ತತ್ರ ಗಂತುಂ
ಸಮಾಧಾತುಂ ಕಾರ್ಯಮೇತದ್ ವಿಪನ್ನಮ್ |
ಜಾನಾಸಿ ತ್ವಂ ಧಾರ್ತರಾಷ್ಟ್ರಸ್ಯ ಮೋಹಂ
ದುರಾತ್ಮನಃ ಪಾಪವಶಾನುಗಸ್ಯ ॥52॥
ಆದರೂ ನಾನೇ ಹಸ್ತಿನಪುರಕ್ಕೆ ಹೋಗಿ ಈ ಕೆಟ್ಟುಹೋದ ಕಾರ್ಯವನ್ನು ಸರಿಮಾಡಲು ಬಯಸುತ್ತೇನೆ. ಆದರೆ ದುರಾತ್ಮನಾದ ದುರ್ಯೋಧನ ಮೋಹವನ್ನೂ ಪಾಪವಶನಾದ ದುರ್ಯೋಧನನನ್ನು ಅನುಸರಿಸುವ ಧೃತರಾಷ್ಟ್ರನನ್ನೂ ನೀನು ತಿಳಿದಿದ್ದೀಯೆ.
ಅಹಾಪಯಿತ್ವಾ ಯದಿ ಪಾಂಡವಾರ್ಥಂ
ಶಮಂ ಕುರೂಣಾಮಪಿ ಚೇಚ್ಚರೇಯಮ್ |
ಪುಣ್ಯಂ ಚ ಮೇ ಸ್ಯಾಚ್ಚರಿತಂ ಮಹೋದಯಂ
ಮುಚ್ಯೇರಂಶ್ಚ ಕುರವೋ ಮೃತ್ಯುಪಾಶಾತ್ ॥53॥
ಪಾಂಡವರ ಹಿತವನ್ನು ಹಾಳುಮಾಡದೆ, ಕುರುಗಳಿಗೆ ನಾನು ಸಂಧಿಯನ್ನು ಉಪದೇಶಿಸಲು ಸಾಧ್ಯವಾದರೆ ನನಗೆ ಬಹಳ ಪುಣ್ಯವು

ಉಂಟಾಗುತ್ತದೆ. ದೊಡ್ಡ ಭಾಗ್ಯೋದಯವು ಉಂಟಾಗುವಂತೆ ಮಾಡಿದಂತಾಗುತ್ತದೆ. ಕುರುಗಳು ಮೃತ್ಯುಪಾಶದಿಂದ ವಿಮುಕ್ತರಾದಾರು.

ಅಪಿ ಮೇ ವಾಚಂ ಭಾಷಮಾಣಸ್ಯ ಕಾವ್ಯಾಂ
ಧರ್ಮಾರಾಮಾಮರ್ಥವತೀಮಹಿಂಸ್ರಾಮ್ |
ಅವೇಕ್ಷೇರನ್ ಧಾರ್ತರಾಷ್ಟ್ರಾಃ ಸಮರ್ಥಾ
ಮಾಂ ಚ ಪ್ರಾಪ್ತಂ ಕೌರವಾಃ ಪೂಜಯೇಯುಃ ॥54॥
ಧರ್ಮಯುಕ್ತವಾಗಿ ಅವರ ಅರ್ಥಸಾಧಕವಾಗಿ ಅಹಿಂಸಕವಾದ ಮಧುರವಾಗಿ ಮಾತನಾಡುವ ನನ್ನನ್ನೂ ಧಾರ್ತರಾಷ್ಟ್ರರು ಸಮರ್ಥರಾಗಿ ಕೇಳಿ ಅಲ್ಲಿಗೆ ಪ್ರಾಪ್ತನಾದ ನನ್ನನ್ನೂ ಕೌರವರು ಪೂಜಿಸಿದರೆ (ಅವರಿಗೆ ಶುಭವೇ ಆಗುತ್ತದೆ).
ಅತೋಽನ್ಯಥಾ ರಥಿನಾ ಫಲ್ಗುನೇನ
ಭೀಮೇನ ಚೈವಾಹವದಂಸಿತೇನ |
ಪರಾಜಿತಾನ್ ಧಾರ್ತರಾಷ್ಟ್ರಾನ್ ಸ್ಮ ವಿದ್ಧಿ
ಪ್ರದಹ್ಯಮಾನಾನ್ ಕರ್ಮಣಾ ಸ್ವೇನ ಪಾಪಾನ್ ॥55॥
ಹಾಗೆ ಮಾಡದಿದ್ದರೆ ಧೃತರಾಷ್ಟ್ರ ಪುತ್ರರು ರಥಿಕನಾದ ಅರ್ಜುನನಿಂದಲೂ, ಯುದ್ಧಸಜ್ಜಿತನಾದ ಭೀಮನಿಂದಲೂ ಪರಾಜಿತರಾಗಿ ತಮ್ಮ ಪಾಪಕರ್ಮದಿಂದಲೇ ದಹಿಸಲ್ಪಡುತ್ತಾರೆ ಎಂಬುದನ್ನು ತಿಳಿ.
ಪುರಾ ಜಿತಾನ್ ಪಾಂಡವೇಯಾಂಸ್ತು ವಾಚೋ
ರೌದ್ರಾ ರೂಕ್ಷಾ ಭಾಷತೇ ಧಾರ್ತರಾಷ್ಟ್ರಃ |
ಗದಾಹಸ್ತೋ ಭೀಮಸೇನೋಽಪ್ರಮತ್ತೋ
ದುರ್ಯೋಧನಂ ಸ್ಮಾರಯಿತಾ ಹಿ ಕಾಲೇ ॥56॥
ಹಿಂದೆ ಪಾಂಡವರು ದ್ಯೂತದಲ್ಲಿ ಜಿತರಾದಾಗ ದುರ್ಯೋಧನನು ಅವರಿಗೆ ಉಗ್ರವಾದ ಮತ್ತು ಒರಟಾದ ಮಾತುಗಳನ್ನು ಆಡಿದನು. ಗದಾಹಸ್ತನಾದ ಭೀಮಸೇನನು ಆಲಸ್ಯವಿಲ್ಲದೆ ಯೋಗ್ಯವಾದ ಕಾಲದಲ್ಲಿ ದುರ್ಯೋಧನನಿಗೆ ಆ ಮಾತುಗಳನ್ನು ಸ್ಮರಣೆಗೆ ತಂದುಕೊಡುವವನಾಗುವನು.
ಸುಯೋಧನೋ ಮನ್ಯುಮಯೋ ಮಹಾದ್ರುಮಃ
ಸ್ಕಂಧಃ ಕರ್ಣಃ ಶಕುನಿಸ್ತಸ್ಯ ಶಾಖಾಃ |
ದುಃಶಾಸನಃ ಪುಷ್ಪಫಲೇ ಸಮೃದ್ಧೇ
ಮೂಲಂ ರಾಜಾ ಧೃತರಾಷ್ಟ್ರೋಽಮನೀಷೀ ॥57॥
ಸುಯೋಧನನು ಕ್ರೋಧಾತ್ಮಕನಾದ ದೊಡ್ಡ ವೃಕ್ಷ. ಕರ್ಣನು ಮೊದಲು ಒಡೆಯುವ ದೊಡ್ಡಕೊಂಬೆ. ಶಕುನಿಯು ಆ ದೊಡ್ಡಕೊಂಬೆಯಿಂದ ಒಡೆಯುವ ಶಾಖೆಗಳು. ದುಶ್ಶಾಸನನು ಸಮೃದ್ಧವಾದ ಪುಷ್ಪ-ಫಲಗಳು. ಆ ವೃಕ್ಷದ ಬುಡವು ಅವಿವೇಕಿಯಾದ ಧೃತರಾಷ್ಟ್ರರಾಜ.
ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ
ಸ್ಕಂಧೋಽರ್ಜುನೋ ಭೀಮಸೇನೋಽಸ್ಯ ಶಾಖಾಃ |
ಮಾದ್ರೀಸುತೌ ಪುಷ್ಪಫಲೇ ಸಮೃದ್ಧೇ
ಮೂಲಂ ತ್ವಹಂ ಬ್ರಹ್ಮ ಚ ಬ್ರಾಹ್ಮಣಾಶ್ಚ ॥58॥
ಯುಧಿಷ್ಠಿರನು ಧರ್ಮಾತ್ಮಕವಾದ ಒಂದು ದೊಡ್ಡವೃಕ್ಷ. ಅರ್ಜುನನು ಮೊದಲನೆಯ ದೊಡ್ಡಕೊಂಬೆ. ಭೀಮಸೇನನು ಅದರಿಂದ ಹೊರಡುವ ಶಾಖೆಗಳು. ಮಾದ್ರಿಯ ಮಕ್ಕಳು ಸಮೃದ್ಧವಾದ ಫಲ-ಪುಷ್ಪಗಳು. ವೇದ, ಬ್ರಾಹ್ಮಣರು ಮತ್ತು ನಾನು ಆ ವೃಕ್ಷದ ಬುಡ.
ವನಂ ರಾಜಾ ಧೃತರಾಷ್ಟ್ರಃ ಸಪುತ್ರಃ
ಸಿಂಹಾ ವನೇ ಸಂಜಯ ಪಾಂಡವೇಯಾಃ |
ಸಿಂಹಾಭಿಗುಪ್ತಂ ನ ವನಂ ವಿನಶ್ಯೇತ್
ಸಿಂಹೋ ನ ನಶ್ಯೇತ ವನಾಭಿಗುಪ್ತಃ ॥59॥
ಪುತ್ರರಿಂದ ಕೂಡಿದ ಧೃತರಾಷ್ಟ್ರರಾಜನು ಒಂದು ವನ. ಸಂಜಯನೇ, ಪಾಂಡುಪುತ್ರರು ವನದಲ್ಲಿರುವ ಸಿಂಹಗಳು. ಸಿಂಹಗಳಿಂದ ರಕ್ಷಿತವಾದರೆ ವನವು ನಾಶವನ್ನು ಹೊಂದಲಾರದು. ವನದಿಂದ ರಕ್ಷಿತವಾದರೆ ಸಿಂಹಗಳೂ ನಾಶವನ್ನು ಹೊಂದಲಾರವು.
ನಿರ್ವನೋ ವಧ್ಯತೇ ಸಿಂಹೋ ನಿಃಸಿಂಹಂ ವಧ್ಯತೇ ವನಮ್ |
ತಸ್ಮಾತ್ ಸಿಂಹೋ ವನಂ ರಕ್ಷೇದ್ ವನಂ ಸಿಂಹಂ ಚ ಪಾಲಯೇತ್ ॥
ವನವು ಇಲ್ಲದಿದ್ದರೆ ಸಿಂಹವು ಕೊಲ್ಲಲ್ಪಡುತ್ತದೆ. ಸಿಂಹಗಳಿಲ್ಲದಿದ್ದರೆ ವನವೂ ನಾಶವನ್ನು ಹೊಂದುತ್ತದೆ. ಆದ್ದರಿಂದ ಸಿಂಹವು ವನವನ್ನು ರಕ್ಷಿಸಬೇಕು, ವನವೂ ಸಿಂಹವನ್ನು ರಕ್ಷಿಸಬೇಕು.
ವನಂ ರಾಜಾ ಧೃತರಾಷ್ಟ್ರೋ ವನೇ ಸಿಂಹಾಶ್ಚ ಪಾಂಡವಾಃ |
ಮಾ ವನಂ ಛಿಂಧಿ ಸಸಿಂಹಂ ಮಾ ಸಿಂಹಾ ನೀನಶುರ್ವನಾತ್ ॥61॥
ಧೃತರಾಷ್ಟ್ರರಾಜನು ವನ. ಪಾಂಡವರು ವನದಲ್ಲಿರುವ ಸಿಂಹಗಳು. ಸಿಂಹದಿಂದ ಸಹಿತವಾದ ವನವನ್ನು ಛೇದಿಸಬೇಡ. ಸಿಂಹಗಳು ವನದಿಂದ ನಾಶವನ್ನು ಹೊಂದುವುದೂ ಬೇಡ.
ಲತಾ ಮತಾ ಧಾರ್ತರಾಷ್ಟ್ರಾಃ ಸಾಲಾಃ ಸಂಜಯ ಪಾಂಡವಾಃ |
ನ ಲತಾ ವರ್ಧತೇ ಜಾತು ಮಹಾದ್ರುಮಮನಾಶ್ರಿತಾ ॥62॥

ಧೃತರಾಷ್ಟ್ರಪುತ್ರರು ಲತೆ ಇದ್ದಂತೆ. ಸಂಜಯನೇ, ಪಾಂಡವರು ಸಾಲವೃಕ್ಷಗಳಿದ್ದಂತೆ. ಮಹಾವೃಕ್ಷವನ್ನು ಆಶ್ರಯಿಸದಿದ್ದರೆ ಲತೆಯು ಎಂದೂ ಅಭಿವೃದ್ಧಿಯನ್ನು ಹೊಂದುವುದಿಲ್ಲ.
ಸ್ಥಿತಾಃ ಶುಶ್ರೂಷಿತುಂ ಪಾರ್ಥಾಃ ಸ್ಥಿತಾ ಯೋದ್ಧುಮರಿಂದಮಾಃ |
ಯತ್ಕೃತ್ಯಂ ಧೃತರಾಷ್ಟ್ರಸ್ಯ ತತ್ ಕರೋತು ನರಾಧಿಪಃ ||63||
ಪಾಂಡವರು ಧೃತರಾಷ್ಟ್ರನ ಸೇವೆಯನ್ನು ಮಾಡಲು ಸಿದ್ಧರಾಗಿದ್ದಾರೆ. ಅರಿಂದಮರಾದ ಅವರು ಯುದ್ಧವನ್ನು ಮಾಡಲೂ ಸಿದ್ಧರಾಗಿದ್ದಾರೆ. ಧೃತರಾಷ್ಟ್ರನಿಗೆ ಯಾವ ಕಾರ್ಯವು ಆಗಬೇಕಾಗಿದೆಯೋ ಅದನ್ನು ರಾಜನಾದ ಅವನು ಮಾಡಲಿ.
ಸ್ಥಿತಾಃ ಶಮೇ ಮಹಾತ್ಮಾನಃ ಪಾಂಡವಾ ಧರ್ಮಚಾರಿಣಃ |
ಯೋಧಾಃ ಸಮರ್ಥಾಸ್ತದ್ವಿದ್ವನ್ ಆಚಕ್ಷೀಥಾ ಯಥಾತಥಮ್ ||64||
ಮಹಾತ್ಮರೂ, ಧರ್ಮಚಾರಿಗಳೂ ಆದ ಪಾಂಡವರು ಶಾಂತಿಸಂಧಾನದಲ್ಲಿ ಸ್ಥಿತರಾಗಿದ್ದಾರೆ. ಅವರು ಸಮರ್ಥರಾದ ಯೋಧರೂ ಆಗಿದ್ದಾರೆ. ಆದ್ದರಿಂದ ಎಲೈ ವಿದ್ವಾಂಸನೇ, ಸತ್ಯವಾದ ವಿಷಯವನ್ನು ನೀನು ಧೃತರಾಷ್ಟ್ರನಿಗೆ ತಿಳಿಸು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಾವಿಂಶೋಽಧ್ಯಾಯಃ ||
|| ಸಂಜಯಯಾನಪರ್ವಣಿ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಧೃತರಾಷ್ಟ್ರಂ ಯಯೌ ತಂ ಚ ವಿನಿಂದ್ಯ ಪ್ರಯಯೌ ಗೃಹಮ್ |
ನಿಂದಿತಃ ಸಂಜಯೇನಾಸಾವಾಹೂಯ ವಿದುರಂ ನಿಶಿ ||41||
ಸಂಜಯನು ಧೃತರಾಷ್ಟ್ರನ ಬಳಿಗೆ ಹೋಗಿ ನಿಂದಿಸಿ ತನ್ನ ಮನೆಗೆ ಹೊರಟು ಹೋದ. ಸಂಜಯನಿಂದ ನಿಂದಿಸಲ್ಪಟ್ಟ ಧೃತರಾಷ್ಟ್ರ ರಾತ್ರಿಯಲ್ಲಿ ವಿದುರನನ್ನು ಕರೆಸಿಕೊಂಡ.
* * * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ಉಪಪ್ಲಾವ್ಯದಿಂದ ಹೊರಟ ಸಂಜಯನಿಗೆ ಯುಧಿಷ್ಠಿರನ ಸಂದೇಶ
ಸಂಜಯಃ
ಆಮಂತ್ರಯೇ ತ್ವಾಂ ನರದೇವದೇವ
ಗಚ್ಛಾಮ್ಯಹಂ ಪಾಂಡವ ಸ್ವಸ್ತಿ ತೇಽಸ್ತು |
ಕಚ್ಚಿನ್ನ ವಾಚಾ ವೃಜಿನಂ ಹಿ ಕಿಂಚಿತ್
ಉಚ್ಚಾರಿತಂ ಮೇ ಮನಸೋಽಭಿಷಂಗಾತ್ ||1||
ಸಂಜಯ ಪಾಂಡವನೇ, ನರದೇವನಾದ ಯುಧಿಷ್ಠಿರನೇ, ನಾನು ನಿನ್ನ ಅನುಮತಿಯನ್ನು ತೆಗೆದುಕೊಂಡು ಹೋಗಿಬರುತ್ತೇನೆ. ನಿನಗೆ ಮಂಗಳವಾಗಲಿ. ನಾನು ನನ್ನ ಮನಸ್ಸಿನ ವ್ಯಗ್ರತೆಯಿಂದ ನನ್ನ ಮಾತಿನಿಂದ ನಿನಗೆ ಏನಾದರೂ ಅಪಚಾರವನ್ನು ಮಾಡಿಲ್ಲವಷ್ಟೆ?
ಜನಾರ್ದನಂ ಭೀಮಸೇನಾರ್ಜುನೌ ಚ
ಮಾದ್ರೀಸುತೌ ಸಾತ್ಯಕಿಂ ಚೇಕಿತಾನಮ್ |
ಆಮಂತ್ರ್ಯ ಗಚ್ಛಾಮಿ ಶಿವಂ ಸುಖಂ ವಃ
ಸೌಮ್ಯೇನ ಮಾಂ ಪಶ್ಯತ ಚಕ್ಷುಷಾ ನೃಪಾಃ ||2||
ಜನಾರ್ದನನನ್ನು, ಭೀಮಸೇನಾರ್ಜುನರನ್ನು, ಮಾದ್ರೀಪುತ್ರನನ್ನೂ, ಸಾತ್ಯಕೀ, ಚೇಕಿತಾನನನ್ನೂ ಆಮಂತ್ರಿಸಿ (ಅವರ ಅನುಮತಿಯನ್ನು ಪಡೆದು) ಹೋಗಿ ಬರುತ್ತೇನೆ. ನಿಮಗೆ ಮಂಗಳವು ಮತ್ತು ಸುಖವು ಉಂಟಾಗಲಿ. ಎಲೈ ರಾಜರೇ, ಸೌಮ್ಯದೃಷ್ಟಿಯಿಂದ ನನ್ನನ್ನು ನೋಡಿ.
ಯುಧಿಷ್ಠಿರಃ
ಅನುಜ್ಞಾತಃ ಸಂಜಯ ಸ್ವಸ್ತಿ ಗಚ್ಛ
ನ ನೋ ಕಾರ್ಷೀರಪ್ರಿಯಂ ಜಾತು ಕಿಂಚಿತ್ |
ವಿದ್ಮಶ್ಚ ತ್ವಾಂ ತೇ ಚ ವಯಂ ಚ ಸರ್ವೇ
ಶುದ್ಧಾತ್ಮಾನಂ ಮಧ್ಯಗತಂ ಸಭಾಸ್ಥಮ್ ||3||
ಯುಧಿಷ್ಠಿರ ಸಂಜಯನೇ, ನಿನಗೆ ಅನುಮತಿಯನ್ನು ನೀಡಿದ್ದೇನೆ. ಸುಖವಾಗಿ ಹೋಗಿ ಬಾ. ನೀನು ನಮಗೆ ಯಾವ ಅಪ್ರಿಯವನ್ನೂ ಮಾಡಿಲ್ಲ. ನಾವೆಲ್ಲರೂ ನಿನ್ನನ್ನು ಶುದ್ಧಮನಸ್ಸುಳ್ಳವನೆಂದೂ ಮಧ್ಯಸ್ಥನಾಗಿ ಸಭೆಯಲ್ಲಿರುವವನೆಂದೂ ಚೆನ್ನಾಗಿ ತಿಳಿದಿದ್ದೇವೆ.
ಆಪ್ತೋ ದೂತಃ ಸಂಜಯ ಸುಪ್ರಿಯೋಽಸಿ
ಕಲ್ಯಾಣವಾನ್ ಶೀಲವಾಂಸ್ತೃಪ್ತಿಮಾಂಶ್ಚ |
ನ ಮುಹ್ಯೇಸ್ತ್ವಂ ಸಂಜಯ ಜಾತು ಮತ್ಯಾ
ನ ಚ ಕ್ರುದ್ಧ್ಯೇರುಚ್ಯಮಾನೋ ದುರುಕ್ತೈಃ ||4||
ಸಂಜಯನೇ, ಆಪ್ತದೂತನಾದ ನೀನು ನಮಗೆ ಬಹಳ ಪ್ರಿಯನಾದವನು. ನೀನು ಕಲ್ಯಾಣಶೀಲ ಮತ್ತು ತೃಪ್ತಿಯುಳ್ಳವನು. ಸಂಜಯನೇ, ನಿನ್ನ ಬುದ್ಧಿಗೆ ಎಂದೂ ಮೋಹವು ಉಂಟಾಗುವುದಿಲ್ಲ. ಕೆಟ್ಟ ಮಾತುಗಳನ್ನಾಡಿದರೂ ನೀನು ಕೋಪಗೊಳ್ಳುವುದಿಲ್ಲ.
ನ ಮರ್ಮಗಾಂ ಜಾತು ವಕ್ತಾಽಸಿ ರೂಕ್ಷಾಂ

ನೋತ ಸ್ತುತಿಂ ಕಟುಕಾಂ ನೋತ ಶುಷ್ಕಾಮ್ |
ಧರ್ಮಾರಾಮಾಮರ್ಥವತೀಮಹಿಂಸ್ರಾಮ್
ಏತಾಂ ವಾಚಂ ತವ ಜಾನೀಮ ಸೂತ ||5||
ಮರ್ಮವನ್ನು ಚುಚ್ಚುವ ಒರಟು ಮಾತುಗಳನ್ನು ನೀನು ಎಂದೂ ಆಡುವುದಿಲ್ಲ. ಅಥವಾ ಕೆಟ್ಟದಾದ ಅಥವಾ ಶುಷ್ಕವಾದ ಸ್ತುತಿಯನ್ನೂ ಮಾಡುವುದಿಲ್ಲ. ಎಲೈ ಸೂತನೇ, ನಿನ್ನ ಮಾತು ಧರ್ಮದಲ್ಲಿಯೇ ಸಂತೋಷಪಡುವುದೆಂದೂ, ಅರ್ಥಸಿದ್ಧಿಗೆ ಕಾರಣವೆಂದೂ, ಅಹಿಂಸಾರೂಪವೆಂದೂ ನಾವು ತಿಳಿದಿದ್ದೇವೆ.
ತ್ವಮೇವ ನಃ ಪ್ರಿಯತಮೋಽಸಿ ದೂತ
ಇಹಾಗಚ್ಛೇದ್ ವಿದುರೋ ವಾ ದ್ವಿತೀಯಃ |
ಅಭೀಕ್ಷ್ಣದೃಷ್ಟೋಽಸಿ ಪುರಾ ಹಿ ನಸ್ತ್ವಂ
ಧನಂಜಯಸ್ಯಾತ್ಮಸಮಃ ಸಖಾಽಸಿ ||6||
ನೀನೇ ನಮಗೆ ಪರಮಪ್ರಿಯನಾದ ದೂತನಾಗಿದ್ದೀಯೆ. ಇಲ್ಲದಿದ್ದರೆ ವಿದುರನು ಎರಡನೆಯವನಾಗಿ ಇಲ್ಲಿಗೆ ಬರಬೇಕಾಗಿದ್ದಿತು. ನಾವು ನಿನ್ನನ್ನು ಬಹಳ ಸಮಯದಿಂದ ನೋಡುತ್ತಿದ್ದೇವೆ. ನೀನು ಅರ್ಜುನನಿಗೆ ಆತ್ಮಸಮನಾದ ಸ್ನೇಹಿತನಾಗಿದ್ದೀಯೆ.
ಇತೋ ಗತ್ವಾ ಸಂಜಯ ಕ್ಷಿಪ್ರಮೇವ
ಉಪಾತಿಷ್ಠೇಥಾ ಬ್ರಾಹ್ಮಣಾನ್ ಯೇ ತದರ್ಹಾಃ |
ವಿಶುದ್ಧಕೃತ್ಯಾಂಶ್ಚರಣೋಪಪನ್ನಾನ್
ಕುಲೇ ಜಾತಾನ್ ಸರ್ವಧರ್ಮೋಪಪನ್ನಾನ್ ||7||
ಸ್ವಾಧ್ಯಾಯಿನೋ ಬ್ರಾಹ್ಮಣಾ ಭಿಕ್ಷವಶ್ಚ
ತಪಸ್ವಿನೋ ಯೇ ಚ ನಿತ್ಯಾ ವನೇಷು |
ಅಭಿವಾದ್ಯ ತಾನ್ ಮದ್ವಚನೇನ ವೃದ್ಧಾನ್
ತಥೈವ ತಾನ್ ಕುಶಲಂ ತಾತ ಪೃಚ್ಛೇಃ ||8||
ಸಂಜಯನೇ, ನೀನು ಇಲ್ಲಿಂದ ಕ್ಷಿಪ್ರವಾಗಿ ಹೋಗಿ ವಿಶುದ್ಧವಾದ ಕಾರ್ಯವನ್ನು ಮಾಡುವವರೂ, ಒಳ್ಳೆಯ ಆಚರಣೆಯಿಂದ ಕೂಡಿದವರೂ, ಸತ್ಕುಲಪ್ರಸೂತರೂ, ಸರ್ವಧರ್ಮೋಪಪನ್ನರೂ ಆದ ಸ್ತೋತ್ರಕ್ಕೆ ಅರ್ಹರಾದ ಬ್ರಾಹ್ಮಣರನ್ನು ಸ್ತೋತ್ರ ಮಾಡುವವನಾಗು. ಸ್ವಾಧ್ಯಾಯಶೀಲರಾದ ಬ್ರಾಹ್ಮಣರು, ಭಿಕ್ಷುಗಳು, ಯಾವಾಗಲೂ ವನದಲ್ಲಿ ವಾಸಮಾಡುವ ತಪಸ್ವಿಗಳು ಅಂತಹ ವೃದ್ಧರನ್ನು ನನ್ನ ಮಾತಿನಂತೆ ನಮಸ್ಕರಿಸಿ ಅವರ ಕ್ಷೇಮವನ್ನು ವಿಚಾರಿಸು.
ಪುರೋಹಿತಂ ಧೃತರಾಷ್ಟ್ರಸ್ಯ ರಾಜ್ಞಃ
ತಥಾಽಽಚಾರ್ಯಾನ್ ಋತ್ವಿಜೋ ಯೇ ಚ ತಸ್ಯ |
ತಾಂಶ್ಚೈವ ತ್ವಂ ಸಹಿತಾನ್ ವೈ ಯಥಾವತ್
ಸಂಗಚ್ಛೇಥಾಃ ಕುಶಲೇನೈವ ಸೂತ ||9||
ಎಲೈ ಸೂತನೇ, ಧೃತರಾಷ್ಟ್ರರಾಜನ ಪುರೋಹಿತ, ಅವನ ಆಚಾರ್ಯರು ಮತ್ತು ಋತ್ವಿಕ್ಕುಗಳು ಯಾರಿದ್ದಾರೆಯೋ ಅವರೆಲ್ಲರನ್ನೂ ನೀನು ಒಟ್ಟಿಗೆ ನೋಡಿ ಯಥಾ ಯೋಗ್ಯವಾಗಿ ಕುಶಲಪ್ರಶ್ನೆಯ ಜೊತೆಯಲ್ಲಿ ಸಮಾಗಮವನ್ನು ಹೊಂದುವವನಾಗು.
ಸುಶ್ರೋತ್ರಿಯಾ ಯೇ ಚ ವಸಂತಿ ವೃದ್ಧಾ
ಮನಸ್ವಿನಃ ಶೀಲಬಲೋಪಪನ್ನಾಃ |
ಆಶಂಸಂತೋಽಸ್ಮಾಕಮನುಸ್ಮರಂತೋ
ಯಥಾಶಕ್ತಿ ಧರ್ಮಮಾತ್ರಂ ಚರಂತಃ ||10||
ತತೋಽವ್ಯಗ್ರಸ್ತನ್ಮನಾಃ ಪ್ರಾಂಜಲಿಶ್ಚ
ಕುರ್ಯಾ ನಮೋ ಮದ್ವಚನೇನ ತೇಭ್ಯಃ ||11||
ಯಾವ ಒಳ್ಳೆಯ ಶ್ರೋತ್ರಿಯರೂ, ಜಿತಮನಸ್ಕರೂ, ಶೀಲ-ಬಲಗಳಿಂದ ಕೂಡಿದವರೂ, ನಮ್ಮನ್ನು ಸ್ಮರಣೆ ಮಾಡಿ ಯಾವಾಗಲೂ ನಮಗೆ ಶುಭವನ್ನು ಆಶಿಸುವವರೂ, ಕೇವಲ ಧರ್ಮವನ್ನೇ ಯಥಾಶಕ್ತಿ ಆಚರಿಸುವವರೂ ಇದ್ದಾರೆಯೋ ಅಂತಹ ವೃದ್ಧರನ್ನು ಅವ್ಯಗ್ರನಾಗಿ ಅವರಲ್ಲಿಯೇ ಮನಸ್ಸಿಟ್ಟು ಕೈಗಳನ್ನು ಮುಗಿದು ನನ್ನ ಮಾತಿನಂತೆ ಅವರಿಗೆ ನಮಸ್ಕಾರವನ್ನು ಮಾಡು.
ಯೇ ಜೀವಂತಿ ವ್ಯವಹಾರೇಣ ರಾಷ್ಟ್ರೇ
ಪಶೂಂಶ್ಚ ಯೇ ಪಾಲಯಂತೋ ವಸಂತಿ |
ಕೃಷೀವಲಾ ಪ್ರಭೃತಯೋ ಯೇ ಚ ಲೋಕಾಃ
ತೇಷಾಂ ಸರ್ವೇಷಾಂ ಕುಶಲಂ ಸ್ಮ ಪೃಚ್ಛೇಃ ||12||
ಕುರುರಾಜ್ಯದಲ್ಲಿ ಯಾರು ವಿತ್ತವ್ಯವಹಾರದಿಂದ ಜೀವನವನ್ನು ಮಾಡುತ್ತಾರೆಯೋ, ಪಶುಪಾಲನೆಯನ್ನು ಮಾಡಿಕೊಂಡು ವಾಸಮಾಡುತ್ತಾರೆಯೋ ಮತ್ತು ಕೃಷೀವಲರು ಮೊದಲಾದ ಜನರು ಯಾರು ಇದ್ದಾರೆಯೋ ಅವರೆಲ್ಲರ ಕ್ಷೇಮವನ್ನು ಕೇಳುವವನಾಗು.

ಆಚಾರ್ಯ ಇಷ್ಟೋ ನಯಗೋ ವಿಧೇಯೋ
ವೇದಾನಭೀಪ್ಸುರ್ಬ್ರಹ್ಮಚರ್ಯಂ ಚಚಾರ |
ಯೋಽಸ್ತ್ರಂ ಚತುಷ್ಪಾತ್ ಸಕಲಂ ಚಕ್ರೇ
ದ್ರೋಣಃ ಪ್ರಸನ್ನೋಽಭಿವಾದ್ಯಃ ತ್ವಯಾಽಸೌ ||13||

ನಮಗೆ ಪ್ರಿಯರಾದ, ನೀತಿಯನ್ನು ತಿಳಿದ, ವಿಧೇಯರಾದ, ವೇದಾಧ್ಯಯನ ಶೀಲರಾದ, ಬ್ರಹ್ಮಚರ್ಯ ವ್ರತಸ್ಥರಾದ ದ್ರೋಣರು, ನಾಲ್ಕುಪಾದಗಳಿಂದ ಕೂಡಿದ ಧರ್ಮವನ್ನು ಆಚರಿಸುವವರು ಮತ್ತು ಸಕಲ ಅಸ್ತ್ರಗಳನ್ನು ಬಲ್ಲವರು, ನೀನು ಸಂತೋಷದಿಂದ ಅವರಿಗೆ ನಮಸ್ಕಾರವನ್ನು ಮಾಡು.

ಅಧೀತ್ಯ ವೇದಾಂಶ್ಚರಣೋಪಪನ್ನೋ
ಯೋಽಸ್ತ್ರಂ ಚತುಷ್ಪಾತ್ ಪುನರೇವ ಚಕ್ರೇ |
ಗಂಧರ್ವಪುತ್ರಪ್ರತಿಮಂ ತರಸ್ವಿನಂ
ತಮಶ್ವತ್ಥಾಮಾನಂ ಕುಶಲಂ ಸ್ಮ ಪೃಚ್ಛೇಃ ॥14॥

ಯಾವ ಅಶ್ವತ್ಥಾಮರು ವೇದಗಳನ್ನು ಅಧ್ಯಯನ ಮಾಡಿ ಸದಾಚಾರ ಸಂಪನ್ನರಾಗಿ ನಾಲ್ಕುಪಾದಗಳಿಂದ ಕೂಡಿದ ಅಸ್ತ್ರವಿದ್ಯೆಯನ್ನು ಚೆನ್ನಾಗಿ ಕಲಿತರೋ ಅಂತಹ ಗಂಧರ್ವಪುತ್ರಸದೃಶರಾದ, ಧೈರ್ಯಶಾಲಿಗಳಾದ ಅಶ್ವತ್ಥಾಮರನ್ನು ಕುಶಲವನ್ನು ಕೇಳುವವನಾಗು.

ಶಾರದ್ವತಸ್ಯಾವಸಥಂ ಸ್ಮ ಗತ್ವಾ
ಮಹಾರಥಸ್ಯಾಸ್ತ್ರವಿದಾಂ ವರಸ್ಯ |
ತ್ವಂ ಮಾಮಭೀಕ್ಷ್ಣಂ ಪರಿಕೀರ್ತಯನ್ ವೈ
ಕೃಪಸ್ಯ ಪಾದೌ ಸಂಜಯ ಪಾಣಿನಾ ಸ್ಪೃಶೇಃ ॥15॥

ಕೃಪಾಚಾರ್ಯರ ಬಿಡಾರಕ್ಕೆ ಹೋಗಿ ಮಹಾರಥರೂ, ಅಸ್ತ್ರಜ್ಞರಲ್ಲಿ ಶ್ರೇಷ್ಠರೂ ಆದ ಅವರ ಪಾದಗಳನ್ನು ಮತ್ತೆ ಮತ್ತೆ ನನ್ನ ಹೆಸರನ್ನು ಹೇಳುತ್ತಾ ಹಿಡಿಯುವವನಾಗು.

ಯಸ್ಮಿನ್ ಶೌರ್ಯಮಾನೃಶಂಸ್ಯಂ ತಪಶ್ಚ
ಪ್ರಜ್ಞಾ ಶೀಲಂ ಶ್ರುತರೂಪೇ ಧೃತಿಶ್ಚ |
ಪಾದೌ ಗೃಹೀತ್ವಾ ಕುರುಸತ್ತಮಸ್ಯ
ಭೀಷ್ಮಸ್ಯ ಮಾಂ ತತ್ರ ನಿವೇದಯೇಥಾಃ ॥16॥

ಯಾರಲ್ಲಿ ಶೌರ್ಯವು, ದಯೆಯು, ತಪಸ್ಸು, ಪ್ರಜ್ಞೆಯು, ಶೀಲವು, ವಿದ್ಯೆ ರೂಪಗಳು, ಧೈರ್ಯವು ಇವೆಯೋ ಅಂತಹ ಕುರುಶ್ರೇಷ್ಠರಾದ ಭೀಷ್ಮರ ಪಾದಗಳನ್ನು ಹಿಡಿದು ನನ್ನನ್ನು ಅಲ್ಲಿ ನಿವೇದಿಸು.

ಪ್ರಜ್ಞಾಚಕ್ಷುರ್ಯಃ ಪ್ರಣೇತಾ ಕುರೂಣಾಂ
ಬಹುಶ್ರುತೋ ವೃದ್ಧಸೇವೀ ಮನೀಷೀ |
ತಸ್ಮೈ ರಾಜ್ಞೇ ಸ್ಥವಿರಾಯಾಭಿವಾದ್ಯ
ಆಚಕ್ಷೀಥಾಃ ಸಂಜಯ ಮಾಮರೋಗಮ್ ॥17॥

ಯಾರು ಪ್ರಜ್ಞಾಚಕ್ಷುವೋ, ಕುರುಗಳಿಗೆ ಅಧಿನಾಯಕನೋ, ಬಹುಶ್ರುತನೋ, ವೃದ್ಧಸೇವಿಯೋ, ಮೇಧಾವಿಯೋ ಅಂತಹ ವೃದ್ಧನಾದ ಧೃತರಾಷ್ಟ್ರರಾಜನಿಗೆ ನಮಸ್ಕಾರವನ್ನು ಮಾಡಿ ಎಲೈ ಸಂಜಯನೇ, ನಾನು ಆರೋಗ್ಯದಿಂದಿದ್ದೇನೆ ಎಂದು ಹೇಳು.

ಜ್ಯೇಷ್ಠಃ ಪುತ್ರೋ ಧೃತರಾಷ್ಟ್ರಸ್ಯ ಮಂದೋ
ಮೂರ್ಖಃ ಶಠಃ ಸಂಜಯ ಪಾಪಶೀಲಃ |
ಯಸ್ಯಾಪರಾಧಃ ಪೃಥಿವೀಂ ಯಾತಿ ಸರ್ವಾಂ
ಸುಯೋಧನಂ ಕುಶಲಂ ತಾತ ಪೃಚ್ಛೇಃ ॥18॥

ಧೃತರಾಷ್ಟ್ರನ ಜ್ಯೇಷ್ಠಪುತ್ರನಾದ ಮಂದನೂ, ಮೂರ್ಖನೂ, ದ್ವೇಷಿಯೂ, ಪಾಪಶೀಲನೂ ಮತ್ತು ಯಾವನ ಅಪರಾಧವು ಭೂಮಿಯನ್ನೆಲ್ಲಾ ವ್ಯಾಪಿಸಿದೆಯೋ ಎಲೈ ಸಂಜಯನೇ, ಅಂತಹ ಸುಯೋಧನನ ಕುಶಲಪ್ರಶ್ನೆಯನ್ನು ಮಾಡು.

ಭ್ರಾತಾ ಕನೀಯಾನಪಿ ತಸ್ಯ ಮಂದಃ
ತಥಾಶೀಲಃ ಸಂಜಯ ಸೋಽಪಿ ಶಶ್ವತ್ |
ಮಹೇಷ್ವಾಸಃ ಶೂರತಮಃ ಕುರೂಣಾಂ
ದುಃಶಾಸನಃ ಕುಶಲಂ ತಾತ ಪೃಚ್ಛೇಃ ॥19॥

ಪ್ರೀತಿಪಾತ್ರನಾದ ಸಂಜಯನೇ, ಅವನ ತಮ್ಮನಾದ ಮಂದನಾದ, ಯಾವಾಗಲೂ ಅಣ್ಣನ ಸ್ವಭಾವವನ್ನೇ ಹೊಂದಿರುವ, ಮಹಾಧನುರ್ಧಾರಿಯಾದ, ಕುರುಗಳಲ್ಲಿ ಅತ್ಯಂತ ಶೂರನಾದ ದುಶ್ಶಾಸನನ ಕುಶಲಪ್ರಶ್ನೆಯನ್ನು ಮಾಡು.

ತಥೈವ ಯೇ ತಸ್ಯ ವಶಾನುಗಾಶ್ಚ
ಯೇ ಚಾಪ್ಯನ್ಯೇ ಪಾರ್ಥಿವಾಶ್ಚ ಪ್ರಧಾನಾಃ |
ತೇಭ್ಯೋ ಯಥಾರ್ಹಂ ಕುಶಲಂ ಚ ಸರ್ವಂ
ತ್ವಯಾ ವಾಚ್ಯಂ ಮದ್ವಚನಾಚ್ಚ ಸೂತ ॥20॥

ಎಲೈ ಸೂತನೇ, ಹಾಗೆಯೇ, ಅವನಿಗೆ ವಶವರ್ತಿಗಳಾದ ಬೇರೆ ಯಾವ ಪ್ರಧಾನರಾದ ರಾಜರಿದ್ದಾರೆಯೋ ಅವರಿಗೆ ಯಥಾಯೋಗ್ಯವಾಗಿ ನನ್ನ ಮಾತಿನಂತೆ ನಮ್ಮ ಕುಶಲವನ್ನು ಹೇಳುವವನಾಗು.

ವೃಂದಾರಕಂ ಕವಿಮರ್ಥೇಷ್ವಮೂಢಂ
ಮಹಾಪ್ರಾಜ್ಞಂ ಸರ್ವಧರ್ಮೋಪಪನ್ನಮ್ |
ನ ತಸ್ಯ ಯುದ್ಧಂ ರೋಚತೇ ವೈ ಕದಾಚಿತ್
ವೈಶ್ಯಾಪುತ್ರಂ ಕುಶಲಂ ತಾತ ಪೃಚ್ಛೇಃ ॥21॥

ಕ್ಷತ್ರಿಯ ವೃಂದವನ್ನು ಸಂತೋಷಪಡಿಸುವ ಕವಿಯಾದ, ಅರ್ಥಗಳ ವಿಷಯದಲ್ಲಿ ಮೋಹವನ್ನು ಹೊಂದದಿರುವ,

ಮಹಾಪ್ರಾಜ್ಞನೂ, ಸರ್ವಧರ್ಮೋಪಪನ್ನನೂ ಆದ ಯಾವ ಅವನಿಗೆ ಯುದ್ಧವು ಎಂದೂ ರುಚಿಸುವುದಿಲ್ಲವೋ ಅಂತಹ ವೈಶ್ಯಾಪುತ್ರನಾದ ಯುಯುತ್ಸುವನ್ನು ಕುಶಲಪ್ರಶ್ನೆಯನ್ನು ಮಾಡು.

ನಿಕೃಂತನೇ ದೇವನೇ ಯೋಽದ್ವಿತೀಯಃ

ಛನ್ನೋಪಾಯಃ ಸಾಧುದೇವೀ ಮತಾಕ್ಷಃ |

ಯೋ ದುರ್ಜಯೋ ದೇವಿತವ್ಯೇ ನ ಸಂಖ್ಯೇ

ಸ ಚಿತ್ರಸೇನಃ ಕುಶಲಂ ತಾತ ವಾಚ್ಯಃ ॥22॥

ಶತ್ರುಸಂಹಾರದಲ್ಲಿಯೂ, ಅಕ್ಷಕ್ರೀಡೆಯಲ್ಲಿಯೂ ಯಾವನು ಅದ್ವಿತೀಯನೋ, ಯಾವನ ಸಾಮಾದಿ ಉಪಾಯಗಳು ಯಾರಿಗೂ ತಿಳಿಯಿಯುವುದಿಲ್ಲವೋ, ಯಾವನು ಅಕ್ಷವಿದ್ಯೆಯನ್ನು ತಿಳಿದು ಪ್ರಾಮಾಣಿಕವಾಗಿ ಆಡುತ್ತಾನೆಯೋ, ಯಾವನು ಅಕ್ಷಕ್ರೀಡೆಯಲ್ಲಿ ಮಾತ್ರ ದುರ್ಜಯನೋ ಯುದ್ಧದಲ್ಲಲ್ಲವೋ ಅಂತಹ ಚಿತ್ರಸೇನನಿಗೆ ನಮ್ಮ ಕುಶಲವನ್ನು ಹೇಳುವವನಾಗು.

ಯಸ್ಯ ಕಾಮೋ ವರ್ತತೇ ನಿತ್ಯಮೇವ

ನಾನ್ಯಃ ಶಮಾದ್ ಭಾರತಾನಾಮಿತಿ ಸ್ಮ |

ಸ ಬಾಹ್ಲಿಕಾನಾಮೃಷಭೋ ಮನೀಷೀ

ಪುನರ್ಯಥಾ ಮಾಽಭಿವದೇತ್ ಪ್ರಸನ್ನಃ ॥23॥

ತ್ವಯಾ ಸ ವಾಚ್ಯಃ ಸಂಜಯ ಸಾಧುಶೀಲಃ ॥24॥

ಯಾವನಿಗೆ, ಭಾರತರಿಗೆ ಸಂಧಿಯನ್ನು ಬಿಟ್ಟು ಬೇರೆ ಮಾರ್ಗವೇ ಇಲ್ಲ ಎಂದು ನಿತ್ಯವೂ ಆಸೆ ಇದೆಯೋ ಅಂತಹ ಮನೀಷಿಯೂ, ಬಾಹ್ಲಿಕದೇಶದ ಶ್ರೇಷ್ಠರಾಜನೂ ಸಾಧುಶೀಲನೂ ಆದ ಬಾಹ್ಲಿಕನು ಪುನಃ ಸಂತೋಷದಿಂದ ನನ್ನ ಜೊತೆಯಲ್ಲಿ ಮಾತನಾಡುವಂತೆ ನೀನು ಅವನಿಗೆ ಕುಶಲವನ್ನು ಹೇಳಬೇಕು.

ಗುಣೈರನೇಕೈಃ ಪ್ರವರೈಶ್ಚ ಯುಕ್ತೋ

ವಿಜ್ಞಾನವಾನ್ ನೈವ ಚ ನಿಷ್ಠುರೋ ಯಃ |

ಸ್ನೇಹಾದಮರ್ಷಂ ಸಹತೇ ಸದೈವ

ಸ ಸೋಮದತ್ತಃ ಪೂಜನೀಯೋ ಮತೋ ಮೇ ॥25॥

ಅನೇಕ ಶ್ರೇಷ್ಠಗುಣಗಳಿಂದ ಕೂಡಿದವನೂ, ಒಳ್ಳೆಯ ಜ್ಞಾನವುಳ್ಳವನೂ, ನಿಷ್ಠುರವಾಗಿ ಮಾತನಾಡದವನೂ, ಸ್ನೇಹದಿಂದ ಕೋಪವನ್ನು ತಡೆದುಕೊಳ್ಳುವವನೂ ಆದ ಆ ಸೋಮದತ್ತನು ಪೂಜೆಗೆ ಯೋಗ್ಯನೆಂದು ನನ್ನ ಅಭಿಪ್ರಾಯ.

ಅರ್ಹತ್ತಮಃ ಕುರುಷು ಸ ಸೌಮದತ್ತಿಃ

ಸ ನೋ ಭ್ರಾತಾ ಸಂಜಯ ಮತ್ಸಖಾ ಚ |

ಮಹೇಷ್ವಾಸೋ ರಥಿನಾಮುತ್ತಮೋಽರ್ಹಃ

ಸಹಾಮಾತ್ಯಃ ಕುಶಲಂ ತಾತ ವಾಚ್ಯಃ ॥26॥

ಎಲೈ ಸಂಜಯನೇ, ಪ್ರೀತಿಪಾತ್ರನೇ, ಸೋಮದತ್ತನ ಮಗನು (ಭೂರಿಶ್ರವನು) ಕುರುಗಳಲ್ಲಿ ಬಹಳ ಪೂಜ್ಯನಾದವನು. ಅವನು ನಮ್ಮ ಸಹೋದರ ಮತ್ತು ಸ್ನೇಹಿತನಾದವನು. ಮಹಾಧನುರ್ಧಾರಿ, ರಥಿಗಳಲ್ಲಿ ಶ್ರೇಷ್ಠ ಮತ್ತು ಯೋಗ್ಯನಾದವನು. ಪ್ರೀತಿಪಾತ್ರನೇ, ಅಮಾತ್ಯರಿಂದೊಡಗೂಡಿದ ಅವನಿಗೆ ನಮ್ಮ ಕುಶಲವನ್ನು ಹೇಳಬೇಕು.

ಭೂರಿಶ್ರವಾಸ್ತಾತ ನಿಪಾತಯೋಧೀ

ಮಹೇಷ್ವಾಸೋ ರಥಿನಾಮುತ್ತಮೋಽಗ್ರ್ಯಃ |

ಗತ್ವಾ ಸ್ಮ ತಂ ಮದ್ವಚನೇನ ಬ್ರೂಯಾಃ

ಶಲ್ಯಂ ತಥಾ ಮದ್ವಚನಾತ್ ಪ್ರತೀತಃ ॥27॥

ಪ್ರೀತಿಪಾತ್ರನೇ, ಭೂರಿಶ್ರವನು ಶತ್ರುಗಳ ಮೇಲೆ ಎರಗಿ ಯುದ್ಧವನ್ನು ಮಾಡುವವನು. ಮಹಾಧನುರ್ಧಾರಿ. ರಥಿಗಳಲ್ಲಿ ಉತ್ತಮನಾದವನು ಮತ್ತು ಶ್ರೇಷ್ಠನಾದವನು. ನೀನು ಹೋಗಿ ಅವನ ಬಳಿ ಅದರಂತೆ, ಶಲ್ಯನ ಬಳಿಯೂ ಸಹ ಸಂತೋಷದಿಂದ ನನ್ನ ಮಾತಿನಂತೆ ಕ್ಷೇಮವನ್ನು ಹೇಳುವವನಾಗು.

ಮಹೇಷ್ವಾಸೋ ರಥಿನಾಮುತ್ತಮೋಽಗ್ರ್ಯಃ

ಸಮಃಶಲೋ ರಕ್ಷಿತಾ ಪೃಷ್ಠಮಸ್ಯ |

ಹ್ರೀನಿಷೇಧೋ ದೇವಿತಾ ಯೋ ಮತಾಕ್ಷಃ

ಸತ್ಯವ್ರತಃ ಪುರುಮಿತ್ರೋ ಜಯಶ್ಚ ॥28॥

ಯೇ ಪ್ರಸ್ಥಾನಂ ತತ್ರ ಮೇ ನಾಭ್ಯನಂದನ್

ತೇಷಾಂ ಸರ್ವೇಷಾಂ ಕುಶಲಂ ತಾತ ಪೃಚ್ಛೇಃ ॥29॥

ಮಹಾಧನುರ್ಧಾರಿಯೂ, ರಥಿಕರಲ್ಲಿ ಉತ್ತಮನೂ, ಶ್ರೇಷ್ಠನೂ, ಯಾವಾಗಲೂ ಸಮನಾಗಿರುವವನೂ ಆದ ಶಲನು ಅವನನ್ನು ಹಿಂದುಗಡೆಯಿಂದ ರಕ್ಷಿಸುವವನು. ಅವನು ದಾಕ್ಷಿಣ್ಯಸ್ವಭಾವದವನೂ, ಅಕ್ಷವಿದ್ಯೆಯನ್ನು ಬಲ್ಲವನೂ ಮತ್ತು ಆಡುವವನೂ ಆಗಿದ್ದಾನೆ. ಅದರಂತೆ ಸತ್ಯವ್ರತ, ಪುರುಮಿತ್ರ ಮತ್ತು ಜಯ ಇವರೂ ಸಹ ನಾನು ಹಸ್ತಿನಪುರದಿಂದ ಹೊರಡುವುದನ್ನು ಅಭಿನಂದಿಸಲಿಲ್ಲ. ಪ್ರೀತಿಪಾತ್ರನೇ, ಅವರೆಲ್ಲರ ಕುಶಲಪ್ರಶ್ನೆಯನ್ನು ಮಾಡು.

ಯೇ ಚೈವಾನ್ಯೇ ಕುರುಮುಖ್ಯಾ ಯುವಾನಃ

ಪುತ್ರಾಃ ಪೌತ್ರಾ ಭ್ರಾತರಶ್ಚೈವ ಯೇ ನಃ |

ಯಂ ಯಮೇಷಾಂ ಮನ್ಯಸೇ ಯೇನ ಯೋಗ್ಯಂ

ತತ್ತತ್ ಪ್ರೋಚ್ಯಾನಾಮಯಂ ಸೂತ ವಾಚ್ಯಾಃ ॥30॥
ಇನ್ನು ಉಳಿದ ಯುವಕರಾದ ಯಾವ ಕುರುಮುಖ್ಯರಿದ್ದಾರೆಯೋ ಮತ್ತು ನಮ್ಮ ಪುತ್ರರೂ, ಪೌತ್ರರೂ ಮತ್ತು ಸಹೋದರರೂ ಯಾರಿದ್ದಾರೆಯೋ ಮತ್ತು ನೀನು ಯಾರು ಯಾರನ್ನು ಯೋಗ್ಯರೆಂದು ಭಾವಿಸುತ್ತೀಯೋ ಎಲೈ ಸೂತನೇ, ಅವರೆಲ್ಲರಿಗೂ ಆಯಾ ವಿಷಯಗಳನ್ನು ಹೇಳಿ ನಮ್ಮ ಕ್ಷೇಮವನ್ನು ಹೇಳುವವನಾಗು.
ಯೇ ರಾಜಾನಃ ಪಾಂಡವಾಯೋಧನಾಯ
ಸಮಾನೀತಾ ಧಾರ್ತರಾಷ್ಟ್ರೇಣ ಕೇಚಿತ್ |
ವಸಾತಯಃ ಸಾಲ್ವಕಾಃ ಕೇಕಯಾಶ್ಚ
ತಥಾಽಂಬಷ್ಠಾ ಯೇ ತ್ರಿಗರ್ತಾಶ್ಚ ಮುಖ್ಯಾಃ ॥31॥
ಪ್ರಾಚ್ಯೋದೀಚ್ಯಾ ದಾಕ್ಷಿಣಾತ್ಯಾಶ್ಚ ಶೂರಾಃ
ತಥಾ ಪ್ರತೀಚ್ಯಾಃ ಪಾರ್ವತೀಯಾಶ್ಚ ಸರ್ವೇ |
ಯೇ ಚಾನೃಶಂಸಾಃ ಶೀಲವೃತ್ತೋಪಪನ್ನಾಃ
ತೇಷಾಂ ಸರ್ವೇಷಾಂ ಕುಶಲಂ ತಾತ ಪೃಚ್ಛೇಃ ॥32॥
ಯಾವ ರಾಜರನ್ನು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಲು ದುರ್ಯೋಧನನು ಕರೆದುಕೊಂಡು ಬಂದಿದ್ದಾನೆಯೋ ಅಂತಹ ವಸಾತಿಗಳು, ಸಾಲ್ವಕರು, ಕೇಕಯರು, ಅಂಬಷ್ಠರು, ಮುಖ್ಯರಾದ ತ್ರಿಗರ್ತರು, ಪೂರ್ವ-ಉತ್ತರ ಮತ್ತು ದಕ್ಷಿಣ ದಿಕ್ಕುಗಳಿಂದ ಬಂದ ಶೂರರು, ಹಾಗೆಯೇ ಪಶ್ಚಿಮ ದಿಕ್ಕಿನ ಪರ್ವತ ಪ್ರದೇಶದಿಂದ ಬಂದ ಎಲ್ಲರೂ ಯಾರು ಮೃದುಸ್ವಭಾವದವರೂ, ಒಳ್ಳೆಯ ಶೀಲ ಮತ್ತು ನಡತೆಯುಳ್ಳವರೂ ಆಗಿದ್ದಾರೆಯೋ ಅವರೆಲ್ಲರ ಕುಶಲವನ್ನು ಪ್ರಶ್ನೆ ಮಾಡುವವನಾಗು.
ಹಸ್ತ್ಯಾರೋಹಾ ರಥಿನಃ ಸಾದಿನಶ್ಚ
ಪದಾತಯಶ್ಚಾಂತರ್ಭೂತಾ ಮಹಾಂತಃ |
ಆಖ್ಯಾಯ ಮಾಂ ಕುಶಲಿನಂ ಸ್ಮ ನಿತ್ಯಮ್
ಅನಾಮಯಂ ಪರಿಪೃಚ್ಛೇಃ ಸಮಗ್ರಾನ್ ॥33॥
ರಥಿಕರೂ, ಗಜಾರೋಹಿಗಳೂ, ಅಶ್ವಾರೋಹಿಗಳೂ ಮತ್ತು ಸೇನೆಯಲ್ಲಿ ಅಂತರ್ಭೂತರಾದ ಪದಾತಿಗಳು ಮಹಾನುಭಾವರು ಯಾರಿದ್ದಾರೆಯೋ ಅವರೆಲ್ಲರಿಗೂ ನಾನು ಯಾವಾಗಲೂ ಕ್ಷೇಮದಿಂದಿದ್ದೇನೆಂದು ಹೇಳಿ ಅವರ ಆರೋಗ್ಯವನ್ನು ವಿಚಾರಿಸುವವನಾಗು.
ತಥಾ ರಾಜ್ಞೋ ಹ್ಯರ್ಥಯುಕ್ತಾನಮಾತ್ಯಾನ್
ದೌವಾರಿಕಾನ್ ಯೇ ಚ ಸೇನಾಂ ನಯಂತಿ |
ಆಯವ್ಯಯೌ ಯೇ ಗಣಯಂತಿ ನಿತ್ಯಮ್
ಅರ್ಥಾಂಶ್ಚ ಯೇ ಮಹತಶ್ಚಿಂತಯಂತಿ ॥34॥
ಆಖ್ಯಾಯ ಮಾಂ ಕುಶಲಿನಂ ಸ್ಮ ನಿತ್ಯಮ್
ಅನಾಮಯಂ ಪರಿಪೃಚ್ಛೇಃ ಸಮಗ್ರಾನ್ ॥35॥
ಹಾಗೆಯೇ ರಾಜನ ಹಿತವನ್ನೇ ಚಿಂತಿಸುವ ಅಮಾತ್ಯರು, ದ್ವಾರಪಾಲಕರು, ಸೇನಾನಾಯಕರು, ನಿತ್ಯವೂ ಧನವನ್ನೇ ಚಿಂತಿಸುವ ಮಹಾತ್ಮರಾದ ಆಯವ್ಯಯವನ್ನು ಎಣಿಸುವ ಗಣಕರು ಇವರಿಗೆ ನನ್ನ ಕ್ಷೇಮವನ್ನು ಹೇಳಿ ಅವರೆಲ್ಲರ ಕುಶಲವನ್ನು ವಿಚಾರಿಸು.
ಗಾಂಧಾರರಾಜಃ ಶಕುನಿಃ ಪಾರ್ವತೀಯೋ
ನಿಕರ್ತನೇ ಯೋಽದ್ವಿತೀಯೋಽಕ್ಷದೇವೀ |
ಮಾನಂ ಕುರ್ವನ್ ಧಾರ್ತರಾಷ್ಟ್ರಸ್ಯ ಸೂತ
ಮಿಥ್ಯಾಬುದ್ಧೇಃ ಕುಶಲಂ ತಾತ ಪೃಚ್ಛೇಃ ॥36॥
ಗಾಂಧಾರರಾಜನಾದ ಶಕುನಿಯು ಪರ್ವತಪ್ರದೇಶದಿಂದ ಬಂದವನು. ಶತ್ರುಸಂಹಾರದಲ್ಲಿ ಮತ್ತು ಅಕ್ಷಕ್ರೀಡೆಯಲ್ಲಿ ಅವನು ಅದ್ವಿತೀಯನಾದವನು. ಮೋಸದ ಬುದ್ಧಿಯುಳ್ಳ ದುರ್ಯೋಧನನಿಗೆ ಅವನು ಯಾವಾಗಲೂ ಸನ್ಮಾನವನ್ನು ಮಾಡುವವನು. ಪ್ರೀತಿಪಾತ್ರನೇ, ಅಂತಹ ಶಕುನಿಯ ಕುಶಲಪ್ರಶ್ನೆಯನ್ನು ಮಾಡು.
ಯಃ ಪಾಂಡವಾನೇಕರಥೇನ ವೀರಃ
ಸಮುತ್ಸಹತ್ಯಪ್ರಧೃಷ್ಯಾನ್ ವಿಜೇತುಮ್ |
ಯೋ ಮುಹ್ಯತಾಂ ಮೋಹಯಿತಾಽದ್ವಿತೀಯೋ
ವೈಕರ್ತನಃ ಕುಶಲಂ ತಸ್ಯ ಪೃಚ್ಛೇಃ ॥37॥
ಯಾವ ವೀರನು ಸೋಲಿಸಲು ಸಾಧ್ಯವಿಲ್ಲದ ಪಾಂಡವರನ್ನು ಏಕರಥದಿಂದ ಸೋಲಿಸಲು ಯಾವಾಗಲೂ ಹವಣಿಸುತ್ತಾನೆಯೋ, ಯಾವನು ಮೋಹಕ್ಕೆ ಒಳಗಾಗುವವರನ್ನು ಮೋಹಪಡಿಸುತ್ತಾನೆಯೋ ಅಂತಹ ಅದ್ವಿತೀಯನಾದ ಕರ್ಣನ ಕುಶಲಪ್ರಶೆನಯನ್ನು ಮಾಡು.
ಸ ಏವ ಭಕ್ತಃ ಸ ಗುರುಃ ಸ ಭೃತ್ಯಃ
ಸ ವೈ ಪಿತಾ ಸ ಚ ಮಾತಾ ಸುಹೃಚ್ಚ |
ಅಗಾಧಬುದ್ಧಿರ್ವಿದುರೋ ದೀರ್ಘದರ್ಶೀ
ಸ ನೋ ಮಂತ್ರೀ ಕುಶಲಂ ತಂ ಸ್ಮ ಪೃಚ್ಛೇಃ ॥38॥
ಅವನೇ ನಮ್ಮ ಭಕ್ತ. ಅವನೇ ನಮಗೆ ಗುರು. ಅವನೇ ಸೇವಕ. ಅವನೇ ತಂದೆ. ಅವನೇ ತಾಯಿ ಮತ್ತು ಬಂಧು. ಅವನೇ ನಮ್ಮ ಮಂತ್ರಿ.

ಅಂತಹ ಅಗಾಧ ಬುದ್ದಿಯೂ ದೀರ್ಘದರ್ಶಿಯೂ ಆದ ವಿದುರನ ಕುಶಲಪ್ರಶ್ನೆಯನ್ನು ಮಾಡು.
ವೃದ್ಧಾಃ ಸ್ತ್ರಿಯೋ ಯಾಶ್ಚ ಗುಣೋಪಪನ್ನಾ
ಜ್ಞಾಯಂತೇ ನಃ ಸಂಜಯ ಮಾತರಸ್ತಾಃ |
ತಾಭಿಃ ಸರ್ವಾಭಿಃ ಸಹಿತಾಭಿಃ ಸಮೇತ್ಯ
ಸ್ತ್ರೀಭಿರ್ವೃದ್ಧಾಭಿರಭಿವಾದ್ಯಾನುಪೃಚ್ಛೇಃ ||39||
ಎಲೈ ಸಂಜಯನೇ, ಗುಣೋಪಪನ್ನರಾದ ವೃದ್ಧರಾದ ಯಾವ ಸ್ತ್ರೀಯರಿದ್ದಾರೆಯೋ ಅವರೆಲ್ಲರೂ ನನ್ನ ಮಾತೆಯರು. ಅವರೆಲ್ಲರೂ ಒಟ್ಟಿಗಿರುವಾಗ ಅವರಿಗೆ ನಮಸ್ಕರಿಸಿ ಅವರ ಕುಶಲಪ್ರಶ್ನೆಯನ್ನು ಮಾಡು.
ಕಚ್ಚಿತ್ ಪುತ್ರಾ ಜೀವಪುತ್ರಾಃ ಸುಸಮ್ಯಗ್
ವರ್ತಂತೇ ವೈ ವೃತ್ತಿಮನೃಶಂಸಸ್ವರೂಪಾಮ್ |
ಇತಿ ಸ್ಮೋಕ್ತತ್ವ ಸಂಜಯ ಬ್ರೂಹಿ ಪಶ್ಚಾದ್
ಅಜಾತಶತ್ರುಃ ಕುಶಲೀ ಸಪುತ್ರಃ ||40||
ನಿಮ್ಮ ಮಕ್ಕಳು ಮತ್ತು ನೀವು ಜೀವಿಕಾದಾನವನ್ನು ಮಾಡಿ ತೆಗೆದುಕೊಂಡ ಮಕ್ಕಳು ಎಲ್ಲರೂ ನಿಮ್ಮಲ್ಲಿ ಮೃದುವಾದ ವೃತ್ತಿಯನ್ನು ಹೊಂದಿದ್ದಾರಷ್ಟೆ? ಎಂದು ಹೇಳಿ ಎಲೈ ಸಂಜಯನೇ, ಅನಂತರ ಪುತ್ರಸಹಿತನಾದ ಅಜಾತಶತ್ರುವು ಕ್ಷೇಮದಿಂದಿದ್ದಾನೆಂದು ಹೇಳು.
ಯಾ ನೋ ಭಾರ್ಯಾಃ ಸಂಜಯ ವೇತ್ಥ ತತ್ರ
ತಾಸಾಂ ಸರ್ವಾಸಾಂ ಕುಶಲಂ ತಾತ ಪೃಚ್ಛೇಃ |
ಸುಸಂಗುಪ್ತಾಃ ಸುರತಯೋಽನವದ್ಯಾಃ
ಕಚ್ಚಿದ್ ಗೃಹಾನಾವಸಥಾಪ್ರಮತ್ತಾಃ ||41||
ಸಂಜಯನೇ, ನಾವು ಪೋಷಿಸಲು ಯೋಗ್ಯರಾದ ಯಾವ ಸ್ತ್ರೀಯರಿದ್ದಾರೆಯೋ ಅವರೆಲ್ಲರ ಕುಶಲಪ್ರಶ್ನೆಯನ್ನು ಮಾಡು. ಒಳ್ಳೆಯ ರಕ್ಷಣೆಯನ್ನು ಹೊಂದಿದವರಾಗಿ, ಒಳ್ಳೆಯ ಸುಖವನ್ನು ಅನುಭವಿಸುವವರಾಗಿ, ನಿರ್ದುಷ್ಟರಾಗಿ ಎಚ್ಚರಿಕೆಯಿಂದ ಗೃಹಗಳಲ್ಲಿ ವಾಸ ಮಾಡುತ್ತಿದೀರಷ್ಟೆ? ಎಂದು ಕೇಳು.
ಕಚ್ಚಿದ್ ವೃತ್ತಿಂ ಶ್ವಶುರೇಷು ಭದ್ರಾಃ
ಕಲ್ಯಾಣೀಂ ವರ್ತಧ್ವಮನೃಶಂಸರೂಪಾಃ |
ಯಥಾ ಚ ವಃ ಸ್ಯುಃ ಪತಯೋಽನುಕೂಲಾಃ
ತಥಾ ವೃತ್ತಿಮಾತ್ಮನಃ ಸ್ಥಾಪಯಧ್ವಮ್ ||42||
ಎಲೌ ಮಂಗಳಸ್ವರೂಪರೇ, ನಿಮ್ಮ ಅತ್ತೆ-ಮಾವಂದಿರ ವಿಷಯದಲ್ಲಿ ಮಾರ್ದವದಿಂದ ಕೂಡಿದ, ಮಂಗಳಕರವಾದ ನಡತೆಯಿಂದ ನಡೆದುಕೊಳ್ಳುತ್ತಿದ್ದೀರಷ್ಟೆ? ಹೇಗೆ ನಿಮ್ಮ ಪತಿಗಳು ನಿಮಗೆ ಅನುಕೂಲವಾಗಿರುತ್ತಾರೆಯೋ ಹಾಗೆ ನಿಮ್ಮ ನಡತೆಯನ್ನು ನೀವು ತಿದ್ದಿಕೊಳ್ಳಿ (ಎಂದು ಹೇಳು).
ಯಾ ನಃ ಸ್ನುಷಾಃ ಸಂಜಯ ವೇತ್ಥ ತತ್ರ
ಪ್ರಾಪ್ತಾಃ ಕುಲೇಭ್ಯಶ್ಚ ಗುಣೋಪಪನ್ನಾಃ |
ಪ್ರಜಾವತ್ಯೋ ಬ್ರೂಹಿ ಸಮೇತ್ಯ ತಾಶ್ಚ
ಯುಧಿಷ್ಠಿರೋ ವೋಽಭ್ಯವದತ್ ಪ್ರಸನ್ನಃ ||43||
ಸಂಜಯನೇ, ನೀನು ಅಲ್ಲಿ ಒಳ್ಳೆಯ ಕುಲದಿಂದ ತಂದ ಗುಣವಂತರಾದ ಮಕ್ಕಳನ್ನು ಹೊಂದಿದ ಯಾವ ನಮ್ಮ ಸೊಸೆಯರನ್ನು ತಿಳಿದಿದ್ದೀಯೋ ಅವರ ಜೊತೆಯಲ್ಲಿ ಸಂಗತನಾಗಿ ಯುಧಿಷ್ಠಿರನು ಪ್ರಸನ್ನನಾಗಿ ನಿಮಗೆ ಕುಶಲವನ್ನು ತಿಳಿಸುತ್ತಿದ್ದಾನೆ ಎಂದು ಹೇಳು.
ಕನ್ಯಾಃ ಸ್ವಜೇಥಾಃ ಸದನೇಷು ಸಂಜಯ
ಅನಾಮಯಂ ಮದ್ವಚನೇನ ಪೃಚ್ಛೇಃ |
ಕಲ್ಯಾಣಾಃ ವಃ ಸಂತು ಪತಯೋಽನುಕೂಲಾಃ
ಯೂಯಂ ಪತೀನಾಂ ಭವತಾನುಕೂಲಾಃ ||44||
ಸಂಜಯನೇ, ಮನೆಗಳಲ್ಲಿರುವ ಚಿಕ್ಕ ಹೆಣ್ಣುಮಕ್ಕಳನ್ನು ಆಲಿಂಗಿಸಿ ನನ್ನ ಮಾತಿನಂತೆ ಅವರ ಕ್ಷೇಮವನ್ನು ಕೇಳು. ನಿಮಗೆ ಕಲ್ಯಾಣವಾಗಲಿ. ಅನುಕೂಲರಾದ ಪತಿಗಳು ದೊರೆಯಲಿ. ನೀವೂ ಸಹ ಪತಿಗಳಿಗೆ ಅನುಕೂಲವಾಗಿರಿ (ಎಂದು ಹೇಳು).
ಸ್ವಲಂಕೃತಾಃ ವಸ್ತ್ರವತ್ಯಃ ಸುಗಂಧಾ
ಅಬೀಭತ್ಸಾಃ ಸುಖಿತಾ ಭೋಗವತ್ಯಃ |
ಲಘು ಯಾಸಾಂ ದರ್ಶನಂ ವಾಕ್ ಚ ಲಘ್ವೀ
ವೇಶ್ಯಾಸ್ತ್ರಿಯಃ ಕುಶಲಂ ತಾತ ಪೃಚ್ಛೇಃ ||45||
ಒಳ್ಳೆಯ ಅಲಂಕಾರವನ್ನು ಮಾಡಿಕೊಂಡು, ವಸ್ತ್ರಗಳನ್ನು ಧರಿಸಿ, ಒಳ್ಳೆಯ ಗಂಧವನ್ನು ಧರಿಸಿ, ಬೀಭತ್ಸರೂಪವನ್ನು ಹೊಂದದಿರುವ ಸುಖಿಗಳೂ, ಭೋಗವತಿಯರೂ ಆದ ಯಾರ ದರ್ಶನ ಮತ್ತು ಮಾತುಗಳು ಬಹಳ ಚಿಕ್ಕದಾಗಿರುತ್ತವೆಯೋ ಅಂತಹ ವೇಶ್ಯಾಸ್ತ್ರೀಯರನ್ನು ಕುಶಲಪ್ರಶ್ನೆಯನ್ನು ಮಾಡುವವನಾಗು.
ದಾಸೀಪುತ್ರಾ ಯೇ ಚ ದಾಸಾಃ ಕುರೂಣಾಂ
ತದಾಶ್ರಯಾ ಬಹವಃ ಕುಬ್ಜಖಂಜಾಃ |
ಆಖ್ಯಾಯ ಮಾಂ ಕುಶಲಿನಂ ಸ್ಮ ತೇಭ್ಯೋಽ-
ಪ್ಯನಾಮಯಂ ಪರಿಪೃಚ್ಛೇರ್ಜಘನ್ಯಮ್ ||46||

ಇನ್ನು ಕುರುಗಳ ಯಾವ ದಾಸರು ಮತ್ತು ದಾಸೀಪುತ್ರರು ಇದ್ದಾರೆಯೋ ಮತ್ತು ಕುರುಗಳನ್ನು ಆಶ್ರಯಿಸಿರುವ ಅನೇಕ ಕುಬ್ಜರು ಮತ್ತು ಏಕಪಾದವುಳ್ಳ ಕುಂಟರು ಇದ್ದಾರೆಯೋ ಅವರಿಗೆ ನಾನು ಕುಶಲದಿಂದಿದ್ದೇನೆ ಎಂದು ಹೇಳಿ ಅನಂತರ ಅವರ ಯೋಗಕ್ಷೇಮವನ್ನು ವಿಚಾರಿಸುವವನಾಗು.
ಕಚ್ಚಿದ್ ವೃತ್ತಿರ್ವರ್ತತೇ ವೈ ಪುರಾಣೀ
ಕಚ್ಚಿದ್ ಭೋಗಾನ್ ಧಾರ್ತರಾಷ್ಟ್ರೋ ದದಾತಿ |
ಅಂಗಹೀನಾನ್ ಕೃಪಣಾನ್ ವಾಮನಾನ್ ವಾ
ಯಾನಾನೃಶಂಸ್ಯಾದ್ ಧೃತರಾಷ್ಟ್ರೋ ಬಿಭರ್ತಿ ॥47॥
ನಿಮಗೆ ಹಿಂದಿನಂತೆ ಜೀವನವು ನಡೆಯುತ್ತಿದೆಯಷ್ಟೇ? ಯಾವ ಅಂಗಹೀನರನ್ನು, ಕೃಪಣರನ್ನು, ವಾಮನರನ್ನು, ದಯೆಯಿಂದ ಧೃತರಾಷ್ಟ್ರನು ಪೋಷಿಸುತ್ತಿದ್ದನೋ ಅವರಿಗೆ (ಅಂತಹ ನಿಮಗೆ) ದುರ್ಯೋಧನನು ಆಹಾರದ ಭೋಗವಸ್ತುಗಳನ್ನು ಕೊಡುತ್ತಿದ್ದಾನಷ್ಟೇ? (ಎಂದು ಕೇಳು).
ಅಂಧಾಶ್ಚ ಸರ್ವೇ ಬಧಿರಾಸ್ತಥೈವ
ಧ್ವಸ್ತಾಜೀವಾ ಬಹವೋ ಯೇಽತ್ರ ಸಂತಿ |
ಆಖ್ಯಾಯ ಮಾಂ ಕುಶಲಿನಂ ಸ್ಮ ತೇಭ್ಯೋಽ-
ಪ್ಯನಾಮಯಂ ಪರಿಪೃಚ್ಛೇರ್ಜಘನ್ಯಮ್ ॥48॥
ಕುರುಡರು, ಕಿವುಡರು ಮತ್ತು ಜೀವನೋಪಾಯವಿಲ್ಲದ ಬಹಳ ಜನರು ಯಾರು ಅಲ್ಲಿ ಇದ್ದಾರೆಯೋ ಅವರಿಗೆ ನಾನು ಕುಶಲದಿಂದಿದ್ದೇನೆಂದು ಹೇಳಿ ಅನಂತರ ಅವರ ಕ್ಷೇಮವನ್ನು ವಿಚಾರಿಸು.
ಮಾ ಭೈಷ್ಟ ದುಃಖೇನ ಕುಜೀವಿತೇನ
ನೂನಂ ಕೃತಂ ಪರಲೋಕೇಷು ಪಾಪಮ್ |
ನಿಗೃಹ್ಯ ಶತ್ರೂನ್ ಸುಹೃದೋಽನುಗೃಹ್ಯ
ವಾಸೋಭಿರನ್ನೇನ ಚ ವೋ ಭರಿಷ್ಯೇ ॥49॥
ದುಃಖದಿಂದ ಮತ್ತು ಕೆಟ್ಟ ಜೀವನದಿಂದ ಹೆದರಬೇಡಿ. ನೀವು ಹಿಂದಿನ ಜನ್ಮದಲ್ಲಿ ಖಂಡಿತವಾಗಿ ಪಾಪವನ್ನು ಮಾಡಿದ್ದೀರಿ. ಶತ್ರುಗಳನ್ನು ನಿಗ್ರಹಿಸಿ, ಸುಹೃದರನ್ನು ಅನುಗ್ರಹಿಸಿ, ಅನ್ನ-ವಸ್ತ್ರಗಳನ್ನು ನೀಡಿ ನಿಮ್ಮನ್ನು ಪೋಷಿಸುವೆನು (ಎಂದು ಹೇಳು).
ನ ಚಾಪ್ಯೇತಚ್ಛಕ್ಯಮೇಕೇನ ವಕ್ತುಂ
ನಾನಾದೇಶ್ಯಾ ಬಹವೋ ಜಾತಿಸಂಘಾಃ |
ವಿಪ್ರೋಷಿತೋ ಬಾಲವದ್ ದ್ರಷ್ಟುಮಿಚ್ಛನ್
ನಮಸ್ಯೇಽಹಂ ಸಂಜಯ ಭೈಮಸೇನಾನ್ ॥50॥
ತೇ ಮೇ ಯಥಾ ವಾಚಮಿಮಾಂ ಯಥೋಕ್ತಾಂ
ತ್ವಯೋಚ್ಯಮಾನಾಂ ಶೃಣುಯುಸ್ತಥಾ ಕುರು ॥51॥
ನಾನಾ ದೇಶಗಳಿಂದ ಬಂದ ಅನೇಕ ಜಾತಿಯ ಸೈನಿಕರು ಮತ್ತು ರಾಜಸಂಘಗಳಲ್ಲಿ ಒಬ್ಬೊಬ್ಬರನ್ನೂ ಹೇಳಲು ಸಾಧ್ಯವಿಲ್ಲ. ನಿಮ್ಮಿಂದ ದೂರ ಹೋದವನಾಗಿ, ಬಾಲರಂತೆ ನಿಮ್ಮನ್ನು ನೋಡಲು ಬಯಸಿ, ಭಯಂಕರ ಸೈನ್ಯವುಳ್ಳ ನಿಮ್ಮನ್ನು ಇಲ್ಲಿಂದಲೇ ನಮಸ್ಕರಿಸುತ್ತೇನೆ ಎಂದು ಹೇಳಿ ಎಲೈ ಸಂಜಯನೇ, ನಾನು ನೀನು ಹೇಳುವ ನನ್ನ ಈ ಮಾತನ್ನು ಅವರು ಕೇಳುವಂತೆ ಮಾಡು.
ಸಂತ್ಯೇವ ಮೇ ಬ್ರಾಹ್ಮಣೇಭ್ಯಃ ಕೃತಾನಿ
ಭೋಗಾನ್ಯಥೋ ವಿಜಯಂ ವರ್ತಯಂತಿ |
ಪಶ್ಯಾಮ್ಯಹಂ ಯುಕ್ತರೂಪಾಂಸ್ತಥೈವ
ತಾಮೇವ ಸಿದ್ಧಿಂ ಶ್ರಾವಯೇಥಾ ನೃಪಂ ತಮ್ ॥52॥
ನಾನು ಬ್ರಾಹ್ಮಣರಿಗೆ ಹಿಂದೆ ಕೊಟ್ಟ ಭೋಗಗಳು ಇದ್ದೇ ಇವೆ. ಅವರು ನನ್ನ ವಿಜಯವನ್ನು ಆಶಿಸುತ್ತಾರೆ. ಅವರು ಯೋಗ್ಯವಾದ ರೂಪವನ್ನು ಹೊಂದಿ ಇರುವುದನ್ನು ನಾನು ನೋಡುತ್ತಿದ್ದೇನೆ. ಇಂತಹ ಸುದ್ದಿಯನ್ನು ಧೃತರಾಷ್ಟ್ರರಾಜನಿಗೆ ಹೇಳುವವನಾಗು.
ಯೇ ಚಾನ್ಯಥಾ ದುರ್ಬಲಾಃ ಸರ್ವಕಾಲಮ್
ಆತ್ಮನ್ಯೇವ ಪ್ರಯತಂತೇಽಥ ಮೂಢಾಃ |
ತಾಂಶ್ಚಾಪಿ ತ್ವಂ ಕೃಪಣಾನ್ ಸರ್ವಥೈವ
ಅಸ್ಮದ್ವಾಕ್ಯಾತ್ ಕುಶಲಂ ತಾತ ಪೃಚ್ಛೇಃ ॥53॥
ಎಲೈ ಪ್ರೀತಿಪಾತ್ರನೇ, ಇನ್ನು ಯಾರು ಯಾವಾಗಲೂ ವಿರುದ್ಧವಾಗಿಯೇ ಪ್ರಯತ್ನವನ್ನು ಮಾಡುತ್ತಾರೆಯೋ, ಯಾವಾಗಲೂ ಮೂಢರಾಗಿ ತಮ್ಮಲ್ಲಿಯೇ ಪ್ರಯತ್ನ ಮಾಡುತ್ತಾರೆಯೋ ಅಂತಹ ಕೃಪಣರನ್ನು ಸಂಧಿಸಿ ಕುಶಲವನ್ನು ಕೇಳುವವನಾಗು.
ತೇ ಚಾಪ್ಯನ್ಯೇ ಸಂಶ್ರಿತಾ ಧಾರ್ತರಾಷ್ಟ್ರಾನ್
ನಾನಾದಿಗ್ಭ್ಯೋಽಭ್ಯಾಗತಾಃ ಸೂತಪುತ್ರ |
ದೃಷ್ಟ್ವಾ ತಾಂಶ್ಚೈವಾರ್ಹತಶ್ಚಾಪಿ ಸರ್ವಾನ್
ಸಂಪೃಚ್ಛೇಥಾಃ ಕುಶಲಂ ಚಾವ್ಯಯಂ ಚ ॥54॥
ಎಲೈ ಸೂತಪುತ್ರನೇ, ಇನ್ನು ನಾನಾ ದೇಶಗಳಿಂದ ದುರ್ಯೋಧನಾದಿಗಳ ಬಳಿಗೆ ಬಂದ ಜನರು ಏನಿದ್ದಾರೆಯೋ ಅವರನ್ನೆಲ್ಲಾ ನೋಡಿ ಅವರಲ್ಲಿ ಯೋಗ್ಯರಾದವರಿಗೆಲ್ಲಾ ಕುಶಲವನ್ನೂ ಮತ್ತು ಕ್ಷೇಮವನ್ನೂ ಕೇಳುವವನಾಗು.
ಏವಂ ಸರ್ವಾನಾಗತಾಭ್ಯಾಗತಾಂಶ್ಚ

ರಾಜ್ಞೋ ದೂತಾನ್ ಸರ್ವದಿಗ್ಭ್ಯೋಽಭ್ಯುಪೇತಾನ್ |
ಪೃಷ್ಟ್ವಾ ಸರ್ವಾನ್ ಕುಶಲಂ ತಾಂಶ್ಚ ಸೂತ
ಪಶ್ಚಾದಹಂ ಕುಶಲೀ ತಾತ ವಾಚ್ಯಃ ॥55॥
ಸೂತನೇ, ಹೀಗೆ ಎಲ್ಲಾ ದಿಕ್ಕುಗಳಿಂದ ಆಹ್ವಾನಿಸಿ ಬಂದ ಅಥವಾ ತಾವಾಗಿಯೇ ಬಂದ ಎಲ್ಲ ದೂತರನ್ನೂ ನೋಡಿ ಅವರ ಕುಶಲಪ್ರಶ್ನೆಯನ್ನು ಮಾಡಿ ಅನಂತರ ನಾನು ಕ್ಷೇಮದಿಂದಿದ್ದೇನೆಂದು ಅವರಿಗೆ ಹೇಳಬೇಕು.
ನ ಹೀದೃಶಾಃ ಸಂತಿ ಪರೇ ಪೃಥಿವ್ಯಾಂ
ಯೇ ಯೋಧಕಾ ಧಾರ್ತರಾಷ್ಟ್ರೇಣ ಲಬ್ಧಾಃ |
ಧರ್ಮಸ್ತು ನಿತ್ಯೋ ಮಮ ಧರ್ಮ ಏವ
ಮಹಾಬಲಃ ಶತ್ರುನಿಬರ್ಹಣಾಯ ॥56॥
ಇದಂ ಪುನರ್ವಚನಂ ಧಾರ್ತರಾಷ್ಟ್ರಂ
ಸುಯೋಧನಂ ಸಂಜಯ ಶ್ರಾವಯೇಥಾಃ ॥57॥
ದುರ್ಯೋಧನನು ಎಂತಹ ಯೋಧರನ್ನು ಸಂಪಾದಿಸಿದ್ದಾನೆಯೋ ಅಂತಹ ಇನ್ನೊಬ್ಬ ಯೋಧರು ಭೂಮಿಯಲ್ಲೇ ದೊರೆಯಲಾರರು. ಧರ್ಮವು ನಿತ್ಯವಾದುದು. ನನಗಾದರೂ ಶತ್ರುಸಂಹಾರ ವಿಷಯದಲ್ಲಿ ಧರ್ಮವೇ ಮಹಾಬಲವಾಗಿದೆ. ಸಂಜಯನೇ, ಧೃತರಾಷ್ಟ್ರಪುತ್ರನಾದ ದುರ್ಯೋಧನನನ್ನು ಕುರಿತು ಈ ಮುಂದಿನ ಮಾತನ್ನು ಹೇಳು.
ಯಸ್ತೇ ಶರೀರೇ ಹೃದಯಂ ಧುನೋತಿ
ಕಾಮಃ ಕುರೂನಸಪತ್ನೋಽನುಶಿಷ್ಯಾಮ್ |
ನ ವಿದ್ಯತೇ ಯುಕ್ತಿರೇತಸ್ಯ ಕಾಚಿ-
ನ್ನೈವಂ ವಿಧಾಸ್ಯಾಮ ಯಥಾ ಪ್ರಿಯಂ ತೇ ॥58॥
ದದಸ್ವ ವಾ ಶಕ್ರಪುರೀಂ ಮಮೈವ
ಯುಧ್ಯಸ್ವ ವಾ ಭಾರತಮುಖ್ಯ ವೀರ ॥59॥
ನಿನ್ನ ಶರೀರದಲ್ಲಿ ಕುರುಗಳನ್ನು ಶತ್ರುರಹಿತನಾಗಿ ನಾನೇ ಅನುಶಾಸನ ಮಾಡುತ್ತೇನೆ ಎಂಬ ಆಸೆಯು ಯಾವ ನಿನ್ನನ್ನು ಅಲುಗಾಡಿಸುತ್ತಿದೆಯೋ ಅದಕ್ಕೆ ಯಾವ ಅವಕಾಶವೂ ಇಲ್ಲ. ನಿನಗೆ ಪ್ರಿಯವಾಗುವಂತೆ ನಾವು ಮಾಡುವುದಿಲ್ಲ. ಭಾರತಮುಖ್ಯವೀರನೇ, ನನಗೆ ಇಂದ್ರಪ್ರಸ್ಥವನ್ನು ಕೊಡು ಅಥವಾ ಯುದ್ಧವನ್ನು ಮಾಡು (ಎಂದು ಹೇಳು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
॥ ಸಂಜಯಯಾನಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಸಂಜಯನಿಗೆ ಯುಧಿಷ್ಠಿರನ ಸಂದೇಶ.
ಐದುಗ್ರಾಮಗಳನ್ನಾದರೂ ಕೊಡುವಂತೆ ಒತ್ತಾಯ.
ಯುಧಿಷ್ಠಿರಃ
ಉತ ಸಂತಮಸಂತಂ ವಾ ಜಡಂ ವೀರಂ ಚ ಸಂಜಯ |
ಉತಾಬಲಂ ಬಲೀಯಾಂಸಂ ಧಾತಾ ಪ್ರಕುರುತೇ ವಶೇ ॥1॥
ಯುಧಿಷ್ಠಿರ ಸಂಜಯನೇ, ಸಜ್ಜನನನ್ನಾಗಲೀ ಅಥವಾ ದುರ್ಜನನನ್ನಾಗಲೀ, ಮೂರ್ಖನನ್ನಾಗಲೀ ಅಥವಾ ವೀರನನ್ನಾಗಲೀ, ದುರ್ಬಲನನ್ನಾಗಲೀ ಅಥವಾ ಪ್ರಬಲನನ್ನಾಗಲೀ ವಿಧಿಯು ತನ್ನ ವಶಪಡಿಸಿಕೊಳ್ಳುತ್ತಾನೆ.
ಉತ ಬಾಲಾಯ ಪಾಂಡಿತ್ಯಂ ಪಂಡಿತಾಯೋತ ಬಾಲತಾಮ್ |
ದದಾತಿ ಸರ್ವಮೀಶಾನಃ ಪುರಸ್ತಾಚ್ಛುಕ್ರಮುಚ್ಚರನ್ ॥2॥
ಅಸಮರ್ಥನಾದ ಸರ್ವವನು ಮೊದಲೇ ಶುಭ್ರವಾದುದನ್ನು ಕೊಡುತ್ತಾ ಬಾಲಕನಿಗೆ ಪಾಂಡಿತ್ಯವನ್ನು, ಪಂಡಿತನಿಗೆ ಬಾಲತ್ವವನ್ನು ಕೊಡುತ್ತಾನೆ.
ಅಲಂ ವಿಜ್ಞಾಪನಾಯಾದ್ಯ ಆಚಕ್ಷೀಥಾ ಯಥಾತಥಮ್ |
ಅಥೋಪಮಂತ್ರಯೇಥಾಸ್ತ್ವಮ್ ಅನ್ಯೋನ್ಯೇನಾತಿಹೃಷ್ಟವತ್ ॥3॥
ಸಂಧಿಯನ್ನು ಸಾಧಿಸುವುದಕ್ಕೆ ಏನೇನನ್ನು ಹೇಳಬಹುದೋ ಅವೆಲ್ಲವನ್ನೂ ಸರಿಯಾಗಿ ಹೇಳುವವನಾಗು. ಅನಂತರ ಪರಸ್ಪರವಾಗಿ ಭೇಟಿಯಾಗಿ ಅತಿಸಂತೋಷಗೊಂಡವನಂತೆ ಹೀಗೆ ಮಾತನಾಡು.
ಗಾವಲ್ಗಣೇ ಕುರೂನ್ ಗತ್ವಾ ಧೃತರಾಷ್ಟ್ರಂ ಮಹಾಬಲಮ್ |
ಅಭಿವಾದ್ಯೋಪಸಂಗೃಹ್ಯ ತತಃ ಪೃಚ್ಛೇರನಾಮಯಮ್ ॥4॥
ಗಾವಲ್ಗಣಿಯೇ, ಕುರುದೇಶಕ್ಕೆ ಹೋಗಿ ಮಹಾಬಲನಾದ ಧೃತರಾಷ್ಟ್ರನಿಗೆ ನಮಸ್ಕರಿಸಿ ಅವನ ಪಾದವನ್ನು ಹಿಡಿದು ಅನಂತರ ಕ್ಷೇಮವನ್ನು ಕೇಳು.
ಬ್ರೂಯಾಶ್ಚೈನಂ ಸಮಾಸೀನಂ ಕುರುಭಿಃ ಪರಿವಾರಿತಮ್ |

ತವೈವ ರಾಜನ್ ವೀರ್ಯೇಣ ಸುಖಂ ಜೀವಂತಿ ಪಾಂಡವಾಃ ॥5॥
ಕುರುಗಳಿಂದ ಸುತ್ತುವರಿಯಲ್ಪಟ್ಟು ಕುಳಿತಿರುವ ಅವನನ್ನು ಕುರಿತು ರಾಜನೇ, ನಿನ್ನ ಸಾಮರ್ಥ್ಯದಿಂದಲೇ ಪಾಂಡವರು ಸುಖವಾಗಿ ಜೀವಿಸಿದ್ದಾರೆ ಎಂದು ಅವನಿಗೆ ಹೇಳು.
ತವ ಪ್ರಸಾದಾದ್ ಬಾಲಾಸ್ತೇ ಪ್ರಾಪ್ತಾ ರಾಜ್ಯಮರಿಂದಮ |
ರಾಜ್ಯೇ ತಾನ್ ಸ್ಥಾಪಯಿತ್ವಾಽಗ್ರೇ ನೋಪೇಕ್ಷೇಥಾ ವಿನಶ್ಯತಃ ॥6॥
ಅರಿಂದಮನೇ, ನಿನ್ನ ಅನುಗ್ರಹದಿಂದಲೇ ಬಾಲಕರಾದ ಅವರು ಹಿಂದೆ ರಾಜ್ಯವನ್ನು ಪಡೆದರು. ಮೊದಲು ಅವರನ್ನು ರಾಜ್ಯದಲ್ಲಿ ಕೂಡಿಸಿ, ಈಗ ಕಷ್ಟದಲ್ಲಿರುವ ಅವರನ್ನು ಉದಾಸೀನ ಮಾಡಬೇಡ.
ಸರ್ವಂ ರಾಜ್ಯಂ ತದೇಕಸ್ಯ ನಾಲಂ ಭರ್ತುಂ ಹಿ ಕಸ್ಯಚಿತ್ |
ತಸ್ಮಾತ್ ಸಂಗತ್ಯ ಜೀವಾಮೋ ದ್ವಿಷತಾಂ ಮಾ ವಶಂ ಗಮಃ ॥7॥
ಎಲ್ಲ ರಾಜ್ಯವನ್ನೂ ಯಾವನೇ ಒಬ್ಬನಿಗೂ ಆಳಲು ಸಾಧ್ಯವಿಲ್ಲ. ಆದ್ದರಿಂದ ನಾವು ಒಟ್ಟಿಗೇ ಸೇರಿ ಬದುಕೋಣ. ನೀನು ಶತ್ರುಗಳಿಗೆ ವಶನಾಗಬೇಡ (ಎಂದು ಹೇಳು).
ತಥಾ ಭೀಷ್ಮಂ ಶಾಂತನವಂ ಭಾರತಾನಾಮಮದ್ಯಪಮ್ |
ಶಿರಸಾ ಚಾಭಿವಂದೇಥಾ ಮಮ ನಾಮ ಪ್ರಕೀರ್ತಯನ್ ॥8॥
ಹಾಗೆಯೇ, ಶಂತನುವಿನ ಪುತ್ರನಾದ ಭಾರತರಲ್ಲಿ ಮದ್ಯಪಾನ ಮಾಡದಿರುವ ಭೀಷ್ಮರನ್ನು ನನ್ನ ಹೆಸರನ್ನು ಹೇಳುತ್ತಾ ಶಿರಸಾ ನಮಸ್ಕಾರವನ್ನು ಮಾಡು (ರಾಜರು ಪ್ರಾಯಃ ಮದ್ಯಪಾನವನ್ನು ಮಾಡುವವರಾದರೂ ಭೀಷ್ಮರು ವ್ರತಶೀಲರಾದುದರಿಂದ ಮದ್ಯವನ್ನು ಪಾನ ಮಾಡುತ್ತಿರಲಿಲ್ಲ ವಾದಿರಾಜರು).
ಅಭಿವಾದ್ಯ ಚ ವಕ್ತವ್ಯಃ ತತೋಽಸ್ಮಾಕಂ ಪಿತಾಮಹಃ ॥9॥
ಭವತಾ ಶಂತನೋರ್ವಂಶೋ ನಿಮಗ್ನಃ ಪುನರುದ್ಧೃತಃ |
ಸ ತ್ವಂ ಕುರು ತಥಾ ತಾತ ಸ್ವಮತೇನ ಪಿತಾಮಹ ॥10॥
ಯಥಾ ಜೀವಂತಿ ತೇ ಪೌತ್ರಾಃ ಪ್ರೀತಿಯುಕ್ತಾಃ ಪರಸ್ಪರಮ್ ॥11॥
ನಮ್ಮ ಪಿತಾಮಹರಾದ ಅವರಿಗೆ ನಮಸ್ಕಾರವನ್ನು ಮಾಡಿ ಮುಳುಗಿ ಹೋಗಿದ್ದ ಶಂತನುವಿನ ವಂಶವು ನಿಮ್ಮಿಂದ ಪುನಃ ಉದ್ಧಾರ ಮಾಡಲ್ಪಟ್ಟಿತು. ಪ್ರೀತಿಪಾತ್ರರಾದ ಪಿತಾಮಹರೇ, ನಿಮ್ಮ ಬುದ್ಧಿಗೆ ತೋರಿದಂತೆ ನಿಮ್ಮ ಮೊಮ್ಮಕ್ಕಳು ಪರಸ್ಪರವಾಗಿ ಪ್ರೀತಿಯಿಂದ ಇರುವಂತೆ ನೀವು ಏನಾದರೂ ಮಾಡಿ ಎಂದು ಹೇಳು.
ತಥೈವ ವಿದುರಂ ಬ್ರೂಯಾಃ ಕುರೂಣಾಂ ಮಂತ್ರಧಾರಿಣಮ್ |
ಅಯುದ್ಧಂ ಸೌಮ್ಯ ಭಾಷೇಥಾಃ ಶಮಕಾಮೋ ಯುಧಿಷ್ಠಿರಃ ॥12॥
ಹಾಗೆಯೇ, ಕುರುಗಳಿಗೆ ಮಂತ್ರಧಾರಿಯಾದ ವಿದುರನನ್ನು ಕುರಿತು ಯುಧಿಷ್ಠಿರನು ಶಾಂತಿಯನ್ನು ಬಯಸುತ್ತಾನೆ ಎಂದು, ಪ್ರೀತಿಪಾತ್ರನೇ, ಯುದ್ಧವು ಬೇಡವೆಂದು ಮಾತನಾಡು.
ಅಥ ದುರ್ಯೋಧನಂ ಬ್ರೂಯಾ ರಾಜಪುತ್ರಮಮರ್ಷಣಮ್ |
ಮಧ್ಯೇ ಕುರೂಣಾಮಾಸೀನಮ್ ಅನುನೀಯ ಪುನಃ ಪುನಃ ॥13॥
ಅನಂತರ ಕುರುಗಳ ಮಧ್ಯ ಕುಳಿತಿರುವ ಕ್ರೋಧಶೀಲನಾದ, ರಾಜಪುತ್ರನಾದ ದುರ್ಯೋಧನನನ್ನು ಮತ್ತೆ ಮತ್ತೆ ಅನುನಯವನ್ನು ಮಾಡಿ ಹೀಗೆ ಹೇಳು.
ಅಪಾಪಾಂ ಯದುಪೈಕ್ಷಂತ ಕೃಷ್ಣಾಮೇತಾಂ ಸಭಾಗತಾಮ್ |
ತದ್ ದುಃಖಂ ಚ ತಿತಿಕ್ಷಾಮ ಮಾ ವಧೀಸ್ತ್ವಂ ಕುರೂನಿತಿ ॥14॥
ಸಭೆಗೆ ಎಳೆತಂದ ನಿರಪರಾಧಿನಿಯಾದ ದ್ರೌಪದಿಗೆ ನೀವು ಏನು ಅವಮಾನವನ್ನು ಮಾಡಿದಿರೋ ಆ ದುಃಖವನ್ನೂ ಸಹಿಸಿಕೊಳ್ಳುತ್ತೇವೆ. ನೀನು ಕುರುಗಳನ್ನು ಕೊಲ್ಲಬೇಡ ಎಂದು ಹೇಳು.
ಏವಂ ಪೂರ್ವಾಪರಾನ್ ಕ್ಲೇಶಾನ್ ಅತಿತಿಕ್ಷಂತ ಪಾಂಡವಾಃ |
ಯಥಾಽಬಲೀಯಸಃ ಸಂತೋ ಯತ್ ತತ್ ಸರ್ವಂ ಕುರವೋ ವಿದುಃ ॥
ಹೀಗೆ ಹಿಂದಿನ ಮತ್ತು ಮುಂದಿನ ಅನೇಕ ಕ್ಲೇಶಗಳನ್ನು ಸಜ್ಜನರಾದ ಪಾಂಡವರು ದುರ್ಬಲರಂತೆ ಸಹಿಸಿದರು. ಅದನ್ನು ಎಲ್ಲಾ ಕುರುಗಳೂ ತಿಳಿದಿದ್ದಾರೆ.
ಯನ್ನಃ ಪ್ರಾವ್ರಾಜಯಃ ಸೌಮ್ಯಾನ್ ಅಜಿನೈಃ ಪ್ರತಿವಾಸಿತಾನ್ |
ತದ್ ದುಃಖಮತಿತಿಕ್ಷಾಮ ಮಾ ವಧೀಷ್ಮ ಕುರೂನಿತಿ ॥16॥
ಸೌಮ್ಯಸ್ವಭಾವದ ನಮ್ಮನ್ನು ಕೃಷ್ಣಾಜಿನವನ್ನು ಧರಿಸಿದವರನ್ನಾಗಿ ಮಾಡಿ ನಗರದಿಂದ ಏನು ಹೊರಗೆ ಕಳುಹಿಸಿದೆಯೋ ಆ ದುಃಖವನ್ನೂ ಸಹಿಸುತ್ತೇವೆ. ನೀನು ಕುರುಗಳನ್ನು ಕೊಲ್ಲಬೇಡ ಎಂದು ಹೇಳು.
ಯತ್ ಕುಂತೀಂ ಸಮತಿಕ್ರಮ್ಯ ಕೃಷ್ಣಾಂ ಕೇಶೇಷ್ವಧರ್ಷಯತ್ |
ದುಃಶಾಸನಸ್ತೇಽನುಮತೇ ತಚ್ಚಾಸ್ಮಾಭಿರುಪೇಕ್ಷಿತಮ್ ॥17॥
ಕುಂತಿಯನ್ನೂ ಮೀರಿ ದುಶ್ಶಾಸನನು ನಿನ್ನ ಅನುಮತಿಯಂತೆ ದ್ರೌಪದಿಯನ್ನು ತಲೆಕೂದಲುಗಳಲ್ಲಿ ಹಿಡಿದು ಏನು ಎಳೆದನೋ ಅದನ್ನೂ ನಾವು ಉಪೇಕ್ಷೆ ಮಾಡಿದ್ದೇವೆ.
ಯಥೋಚಿತಂ ಸ್ವಕಂ ಭಾಗಂ ಲಭೇಮಹಿ ಪರಂತಪ |
ನಿವರ್ತಯ ಪರದ್ರವ್ಯೇ ಬುದ್ಧಿಂ ಗೃದ್ಧಾಂ ನರರ್ಷಭ ॥18॥
ಪರಂತಪನೇ, ನಮಗೆ ಯೋಗ್ಯವಾದ ಭಾಗವನ್ನು ನಾವು ಹೊಂದುವೆವು. ನರರ್ಷಭನೇ, ಪರದ್ರವ್ಯದಲ್ಲಿ ಆಸೆಪಡುವ ನಿನ್ನ

ಬುದ್ಧಿಯನ್ನು ಹಿಂದಕ್ಕೆ ತಿರುಗಿಸು.
ಶಾಂತಿರೇವ ಭವೇದ್ ರಾಜನ್ ಪ್ರೀತಿರೇವ ಪರಸ್ಪರಮ್ |
ರಾಜ್ಯೈಕದೇಶಮಪಿ ನಃ ಪ್ರಯಚ್ಛ ಶಮಮಿಚ್ಛತಾಮ್ ॥19॥
ರಾಜನೇ, ನಮಗೆ ಪರಸ್ಪರವಾಗಿ ಶಾಂತಿಯೇ ಉಂಟಾಗಲಿ. ಪ್ರೀತಿಯೇ ಉಂಟಾಗಲಿ. ಸಂಧಿಯನ್ನು (ಶಾಂತಿಯನ್ನು) ಬಯಸುವ ನಮಗೆ ರಾಜ್ಯದ ಒಂದು ಭಾಗವನ್ನಾದರೂ ಕೊಡು.
ಕುಶಸ್ಥಲಂ ವೃಕಸ್ಥಲಮ್ ಅವಂತೀಂ ವಾರಣಾವತಮ್ |
ಅವಸಾನಂ ಭವೇದತ್ರ ಕಿಂಚಿದೇಕಂ ಚ ಪಂಚಮಮ್ ॥20॥
ಭ್ರಾತೄಣಾಂ ದೇಹಿ ಪಂಚಾನಾಂ ಪಂಚ ಗ್ರಾಮಾನ್ ಸುಯೋಧನ |
ಶಾಂತಿರ್ನೋऽಸ್ತು ಮಹಾಪ್ರಾಜ್ಞ ಭ್ರಾತೃಭಿಃ ಸಹ ಭಾರತ ॥21॥
ಕುಶಸ್ಥಲ, ವೃಕಸ್ಥಲ, ಅವಂತೀ, ವಾರಣಾವತ ಮತ್ತು ಐದರ ಸಂಖ್ಯೆಯನ್ನು ಪೂರೈಸಲು ಇನ್ನಾವುದಾದರೂ ಒಂದು ಗ್ರಾಮ. ಹೀಗೆ ಐದು ಜನ ಅಣ್ಣ-ತಮ್ಮಂದಿರಿಗೆ ಐದುಗ್ರಾಮಗಳನ್ನು ಕೊಡು. ಸುಯೋಧನನೇ, ಮಹಾಪ್ರಾಜ್ಞನೇ, ಭಾರತನೇ, ನಮಗೆ ಅಣ್ಣ-ತಮ್ಮಂದಿರ ಜೊತೆಯಲ್ಲಿ ಶಾಂತಿಯೇ ಉಂಟಾಗಲಿ.
ಭ್ರಾತಾ ಭ್ರಾತರಮನ್ವೇತು ಪಿತಾ ಪುತ್ರೇಣ ಯುಜ್ಯತಾಮ್ |
ಸ್ಮಯಮಾನಾಃ ಸಮಾಯಾಂತು ಪಾಂಚಾಲಾಃ ಕುರುಭಿಃ ಸಹ ॥22॥
ಸಹೋದರನು ಸಹೋದರನ ಜೊತೆಯಲ್ಲಿ ಸೇರಲಿ. ತಂದೆಯು ಮಗನ ಜೊತೆಯಲ್ಲಿ ಸೇರಲಿ. ಪಾಂಚಾಲರು ಕುರುಗಳ ಜೊತೆಯಲ್ಲಿ ನಗುನಗುತ್ತಾ ಬಂದು ಸೇರಲಿ.
ಹರ್ಷಿತಾನ್ ಕುರುಪಾಂಚಾಲಾನ್ ಪಶ್ಯೇಯಮಿತಿ ಕಾಮಯೇ |
ಸರ್ವೇ ಸುಮನಸಸ್ತಾತ ಶಾಮ್ಯಾಮ ಭರತರ್ಷಭಾಃ ॥23॥
ಸಂತೋಷಗೊಂಡ ಕುರು-ಪಾಂಚಾಲರನ್ನು ನೋಡುವೆನೆಂದು ಬಯಸುತ್ತೇನೆ. ಪ್ರೀತಿಪಾತ್ರನೇ, ಎಲ್ಲ ಭರತಶ್ರೇಷ್ಠರೂ ಒಳ್ಳೆಯ ಮನಸ್ಸನ್ನು ಹೊಂದಿದವರು. ಆದ್ದರಿಂದ ನಾವು ಶಾಂತಿಯನ್ನು ಹೊಂದೋಣ (ಎಂದು ಹೇಳು).
ಅಲಮೇವ ಶಮಂ ಯಾಮಿ ತಥಾ ಯುದ್ಧಾಯ ಸಂಜಯ |
ಧರ್ಮಾರ್ಥಯೋರಲಂ ಚಾಹಂ ಮೃದವೇ ದಾರುಣಾಯ ಚ ॥24॥
ಸಂಜಯನೇ, ನಾನು ಶಾಂತಿಗೂ ಸಿದ್ಧನಾಗಿದ್ದೇನೆ. ಯುದ್ಧಕ್ಕೂ ಸಿದ್ಧನಾಗಿದ್ದೇನೆ. ಧರ್ಮಾನುಸಾರಿಯಾದ ನಾನು ಮೃದುವಾದ ಕರ್ಮಕ್ಕೂ ಸಿದ್ಧನಾಗಿದ್ದೇನೆ. ಬಲವುಳ್ಳ ನಾನು ದಾರುಣವಾದ ಯುದ್ಧಕ್ಕೂ ಸಿದ್ಧನಾಗಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿಂಶೋऽಧ್ಯಾಯಃ ॥
॥ ಸಂಜಯಯಾನಪರ್ವಣಿ ಏಕಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಸಂಜಯನಿಗೆ ಅರ್ಜುನನ ಸಂದೇಶ ಮತ್ತು ಸಂಜಯನ ಪ್ರತಿನಿವೃತ್ತಿ.
ವೈಶಂಪಾಯನಃ
ಧರ್ಮರಾಜಸ್ಯ ತು ವಚಃ ಶ್ರುತ್ವಾ ಪಾರ್ಥೋ ಧನಂಜಯಃ |
ಉವಾಚ ಸಂಜಯಂ ತತ್ರ ವಾಸುದೇವಸ್ಯ ಶೃಣ್ವತಃ ॥1॥
ವೈಶಂಪಾಯನ ಧರ್ಮರಾಜನ ಮಾತುಗಳನ್ನು ಕೇಳಿ ಕುಂತೀಪುತ್ರನಾದ ಧನಂಜಯನು ಕೃಷ್ಣನು ಕೇಳುತ್ತಿರುವಂತೆ ಅಲ್ಲಿ ಸಂಜಯನನ್ನು ಕುರಿತು ಮಾತನಾಡಿದನು.
ಪಿತಾಮಹಂ ಶಾಂತನವಂ ಧೃತರಾಷ್ಟ್ರಂ ಚ ಸಂಜಯ |
ದ್ರೋಣಂ ಸಪುತ್ರಂ ಶಲ್ಯಂ ಚ ಮಹಾರಾಜಂ ಚ ಬಾಹ್ಲಿಕಮ್ ॥2॥
ವಿಕರ್ಣಂ ಸೋಮದತ್ತಂ ಚ ಶಕುನಿಂ ಚಾಪಿ ಸೌಬಲಮ್ |
ವಿವಿಂಶತಿಂ ಚಿತ್ರಸೇನಂ ಜಯತ್ಸೇನಂ ಚ ಸಂಜಯ ॥3॥
ಭಗದತ್ತಂ ತಥಾ ಚೈವ ಶೂರಂ ರಣಕೃತಾಂ ವರಮ್ ॥4॥
ಯೇ ಚಾಪ್ಯನ್ಯೇ ಕುರವಸ್ತತ್ರ ಸಂತಿ
ರಾಜಾನಶ್ಚೇದ್ ಭೂಮಿಪಾಲಾಃ ಸಮೇತಾಃ |
ಯುಯುತ್ಸವಃ ಪಾರ್ಥಿವಾಃ ಸೈಂಧವಾಶ್ಚ
ಸಮಾನೀತಾ ಧಾರ್ತರಾಷ್ಟ್ರೇಣ ಸೂತ ॥5॥
ಯಥಾನ್ಯಾಯಂ ಕುಶಲಂ ವಂದನಂ ಚ
ಸಮಾಗಮೇ ಮದ್ವಚನೇನ ವಾಚ್ಯಾಃ ॥6॥
ಸಂಜಯನೇ, ಪಿತಾಮಹರಾದ ಭೀಷ್ಮರು, ಧೃತರಾಷ್ಟ್ರ, ಪುತ್ರನಿಂದೊಡಗೂಡಿದ ದ್ರೋಣರು, ಶಲ್ಯ, ಬಾಹ್ಲಿಕಮಹಾರಾಜ, ವಿಕರ್ಣ, ಸೋಮದತ್ತ, ಸೌಬಲನಾದ ಶಕುನಿ, ವಿವಿಂಶತಿ, ಚಿತ್ರಸೇನ, ಶೂರನಾದ, ಯುದ್ಧಮಾಡುವವರಲ್ಲಿ ಶ್ರೇಷ್ಠನಾದ ಭಗದತ್ತ, ಮತ್ತು ಸೂತನೇ, ಅಲ್ಲಿ ಬೇರೆ ಯಾರು ಕುರುಗಳು ಇದ್ದಾರೆಯೋ, ಭೂಮಿಗೆ ಒಡೆಯರಾದ ಯಾವ ರಾಜರು ಯುದ್ಧವನ್ನು ಮಾಡಲು ಉತ್ಸುಕರಾಗಿ ಸಿಂಧು ಮೊದಲಾದ ದೇಶಗಳಿಂದ ದುರ್ಯೋಧನನಿಂದ ಕರೆತರಲ್ಪಟ್ಟು ಸೇರಿದ್ದಾರೆಯೋ, ಅವರೆಲ್ಲರಿಗೂ ನನ್ನ

ಮಾತಿನಂತೆ ಯಥೋಚಿತವಾಗಿ ವಂದನೆಯನ್ನು ಮಾಡಿ ನಮ್ಮ ಕುಶಲವನ್ನು ಹೇಳಬೇಕು.
ತತೋ ಬ್ರೂಯಾಃ ಸಂಜಯ ರಾಜಮಧ್ಯೇ
ದುರ್ಯೋಧನಂ ಪಾಪಕೃತಾಂ ಪ್ರಧಾನಮ್ ॥7॥
ಸಂಜಯನೇ, ಅನಂತರ ರಾಜರ ಮಧ್ಯದಲ್ಲಿ ಪಾಪವನ್ನು ಮಾಡುವವರಲ್ಲಿ ಪ್ರಧಾನನಾದ ದುರ್ಯೋಧನನನ್ನು ಕುರಿತು ಹೇಳಬೇಕು.
ವೈಶಂಪಾಯನಃ
ಏವಂ ಪ್ರತಿಷ್ಠಾಪ್ಯ ಧನಂಜಯಸ್ತಂ
ತತೋಽರ್ಥವದ್ ಧರ್ಮವಚ್ಚೈವ ಪಾರ್ಥಃ |
ಉವಾಚ ವಾಕ್ಯಂ ಸ್ವಜನಪ್ರಹರ್ಷಂ
ವಿತ್ರಾಸನಂ ಧೃತರಾಷ್ಟ್ರಾತ್ಮಜಾನಾಮ್ ॥8॥
ವೈಶಂಪಾಯನ ಹೀಗೆ ಅರ್ಜುನನು ಸಂಜಯನನ್ನು ಕಳುಹಿಸಿಕೊಟ್ಟು ಅನಂತರ ಧರ್ಮದಿಂದಲೂ ಮತ್ತು ಅರ್ಥದಿಂದಲೂ ಕೂಡಿದ, ಸ್ವಜನರಿಗೆ ಹರ್ಷವನ್ನುಂಟು ಮಾಡುವ ಮತ್ತು ಧೃತರಾಷ್ಟ್ರ ಪುತ್ರರಿಗೆ ಭಯವನ್ನುಂಟು ಮಾಡುವ ಮಾತುಗಳನ್ನು ಆಡಿದನು.
ಅರ್ಜುನೇನ ಸಮಾದಿಷ್ಟಃ ತಥೇತ್ಯುಕತ್ವ ತು ಸಂಜಯಃ |
ಪಾರ್ಥಾನಾಮಂತ್ರಯಾಮಾಸ ಕೇಶವಂ ಚ ಯಶಸ್ವಿನಮ್ ॥9॥
ಅರ್ಜುನನಿಂದ ಆದಿಷ್ಟನಾದ ಸಂಜಯನು ಹಾಗೆಯೇ ಆಗಲಿ ಎಂದು ಹೇಳಿ ಪಾಂಡವರ ಮತ್ತು ಕೀರ್ತಿವಂತನಾದ ಕೃಷ್ಣನ ಅನುಮತಿಯನ್ನು ಕೇಳಿದನು.
ಅನುಜ್ಞಾತಃ ಪಾಂಡವೇನ ಪ್ರಯಯೌ ಸಂಜಯಸ್ತದಾ |
ಶಾಸನಂ ಧೃತರಾಷ್ಟ್ರಸ್ಯ ಸರ್ವಂ ಕೃತ್ವಾ ಮಹಾತ್ಮನಃ ॥10॥
ಪಾಂಡವರಿಂದ ಅನುಮತಿಯನ್ನು ಪಡೆದ ಸಂಜಯನು ಮಹಾತ್ಮನಾದ ಧೃತರಾಷ್ಟ್ರನು ಹೇಳಿದ ಎಲ್ಲಾ ಕಾರ್ಯಗಳನ್ನೂ ಮಾಡಿ ಅಲ್ಲಿಂದ ಹೊರಟನು.
ತತಸ್ತು ಸಂಜಯಃ ಕ್ಷಿಪ್ರಮೇಕಾಹೇನ ಪರಂತಪಃ |
ಯಾತಿ ಸ್ಮ ಹಸ್ತಿನಪುರಂ ನಿಶಾಕಾಲೇ ಪರಂತಪ ॥11॥
ಎಲೈ ಪರಂತಪನಾದ ಜನಮೇಜಯನೇ, ಅನಂತರ ಪರಂತಪನಾದ ಸಂಜಯನು ಶೀಘ್ರವಾಗಿ ಒಂದೇ ದಿನದಲ್ಲಿ ಪ್ರಯಾಣ ಮಾಡಿ ರಾತ್ರಿಯ ವೇಳೆಗೆ ಹಸ್ತಿನಪುರವನ್ನು ತಲುಪಿದನು.
ಸಂಪ್ರಾಪ್ಯ ಹಸ್ತಿನಪುರಂ ಶೀಘ್ರಮಶ್ವೈರ್ಮಹಾಜವೈಃ |
ಅಂತಃಪುರಮುಪಸ್ಥಾಯ ದ್ವಾಃಸ್ಥಂ ವಚನಮಬ್ರವೀತ್ ॥12॥
ಆಚಕ್ಷ್ವ ಧೃತರಾಷ್ಟ್ರಾಯ ದ್ವಾಃಸ್ಥ ಮಾಂ ಸಮುಪಾಗತಮ್ |
ಸಕಾಶಾತ್ ಪಾಂಡುಪುತ್ರಾಣಾಂ ಸಂಜಯಂ ಮಾ ಚಿರಂ ಕೃಥಾಃ ॥13॥
ಜಾಗರ್ತಿ ಚೇದಭಿವದೇಸ್ತ್ವಂ ಹಿ ದ್ವಾಃಸ್ಥ
ಪ್ರವಿಶೇಯಂ ವಿದಿತೋ ಭೂಮಿಪಸ್ಯ ॥14॥
ಶೀಘ್ರವಾದ ಮಹಾವೇಗವುಳ್ಳ ಅಶ್ವಗಳಿಂದ ಹಸ್ತಿನಪುರವನ್ನು ತಲುಪಿ ಅಂತಃಪುರವನ್ನು ಸಮೀಪಿಸಿ, ದ್ವಾರಪಾಲಕನನ್ನು ಕುರಿತು ಅವನು ದ್ವಾರಪಾಲಕನೇ, ಸಂಜಯನಾದ ನಾನು ಪಾಂಡವರ ಕಡೆಯಿಂದ ಹಿಂದಿರುಗಿ ಬಂದಿದ್ದೇನೆ ಎಂದು ಧೃತರಾಷ್ಟ್ರನಿಗೆ ಹೇಳು, ತಡಮಾಡಬೇಡ. ದ್ವಾರಪಾಲಕನೇ, ಅವನು ಎಚ್ಚರವಾಗಿದ್ದರೆ ಅವನಿಗೆ ನಮಸ್ಕಾರವನ್ನು ತಿಳಿಸು. ರಾಜನ ಅಪ್ಪಣೆಯನ್ನು ಪಡೆದು ನಾನು ಪ್ರವೇಶಿಸುವೆನು ಎಂದು ಹೇಳಿದನು.
ದ್ವಾಃಸ್ಥಃ
ಸಂಜಯೋಽಯಂ ಭೂಮಿಪತೇ ನಮಸ್ತೇ
ದಿದೃಕ್ಷಯಾ ದ್ವಾರಮುಪಾಗತಸ್ತೇ |
ಪ್ರಾಪ್ತೋ ದೂತಃ ಪಾಂಡವಾನಾಂ ಸಕಾಶಾತ್
ಪ್ರಶಾಧಿ ರಾಜನ್ ಕಿಮಯಂ ಕರೋತು ॥15॥
ದ್ವಾರಪಾಲಕ ರಾಜನೇ, ನಿನಗೆ ನಮಸ್ಕಾರ. ಈ ಸಂಜಯನು ನಿನ್ನ ದರ್ಶನಾಕಾಂಕ್ಷಿಯಾಗಿ ದ್ವಾರದಲ್ಲಿ ನಿಂತಿದ್ದಾನೆ. ಪಾಂಡವರ ಸಮೀಪದಿಂದ ದೂತನಾಗಿ ಬಂದಿದ್ದಾನೆ. ರಾಜನೇ, ಅವನು ಏನು ಮಾಡಬೇಕೆಂದು ಆಜ್ಞೆಯನ್ನು ಮಾಡು.
ಧೃತರಾಷ್ಟ್ರಃ
ಆಚಕ್ಷ್ವ ಮಾಂ ಸುಖಿನಂ ಕಾಲ್ಯಮಸ್ಮೈ
ಪ್ರವೇಶ್ಯತಾಂ ಸ್ವಾಗತಂ ಸಂಜಯಾಯ |
ನ ಚಾಹಮೇತಸ್ಯ ಭವಾಮ್ಯಕಾಲ್ಯಃ
ಸ ಮೇ ಕಸ್ಮಾದ್ ದ್ವಾರಿ ತಿಷ್ಠೇಚ್ಚ ಸೂತಃ ॥16॥
ಧೃತರಾಷ್ಟ್ರ ನಾನು ಸುಖವಾಗಿದ್ದೇನೆ ಮತ್ತು ಅವನ ಪ್ರವೇಶಕ್ಕೆ ಯೋಗ್ಯನಾಗಿದ್ದೇನೆ ಎಂದು ಸಂಜಯನಿಗೆ ಹೇಳಿ ಸ್ವಾಗತವನ್ನು ಕೋರಿ ಸಂಜಯನನ್ನು ಒಳಗೆ ಬಿಡು. ಅವನಿಗೆ ದರ್ಶನಕ್ಕೆ ಅಯೋಗ್ಯವಾದ ಕಾಲವು ಯಾವುದೂ ಇಲ್ಲ. ಸೂತನಾದ ಅವನು ಏಕೆ ಬಾಗಿಲಿನಲ್ಲಿ ನಿಂತಿದ್ದಾನೆ?
ವೈಶಂಪಾಯನಃ
ತತಃ ಪ್ರವಿಶ್ಯಾನುಮತೇ ನೃಪಸ್ಯ

ಮಹಾವೇಶ್ಮ ಪ್ರಾಜ್ಞಶೂರಾರ್ಯಗುಪ್ತಮ್ |
ಸಿಂಹಾಸನಸ್ಥಂ ಪಾರ್ಥಿವಮಾಸಸಾದ
ವೈಚಿತ್ರ್ಯವೀರ್ಯಂ ಪ್ರಾಂಜಲಿಃ ಸೂತಪುತ್ರಃ ॥17॥
ಅನಂತರ ರಾಜನ ಅನುಮತಿಯನ್ನು ಪಡೆದು ಸೂತಪುತ್ರನಾದ ಸಂಜಯನು ಪ್ರಾಜ್ಞರಿಂದಲೂ, ಶೂರರಾದ ಸಜ್ಜನರಿಂದಲೂ ರಕ್ಷಿತವಾದ ಅವನ ಅರಮನೆಯನ್ನು ಪ್ರವೇಶಿಸಿ, ಕೈಗಳನ್ನು ಮುಗಿದುಕೊಂಡು ವಿಚಿತ್ರವೀರ್ಯನ ಮಗನಾದ ಸಿಂಹಾಸನದಲ್ಲಿ ಕುಳಿತಿದ್ದ ಧೃತರಾಷ್ಟ್ರನ ಬಳಿಗೆ ಹೋದನು.
ಸಂಜಯಃ
ಸಂಜಯೋಽಹಂ ಭೂಮಿಪತೇ ನಮಸ್ತೇ
ಪ್ರಾಪ್ತೋಽಸ್ಮಿ ಗತ್ವಾ ನರದೇವ ಪಾಂಡವಾನ್ |
ಅಭಿವಾದ್ಯ ತ್ವಾಂ ಪಾಂಡುಪುತ್ರೋ ಮನಸ್ವೀ
ಯುಧಿಷ್ಠಿರಃ ಕುಶಲಂ ಚಾನ್ವಪೃಚ್ಛತ್ ॥18॥
ಸಂಜಯ ರಾಜನೇ, ಸಂಜಯನಾದ ನಾನು ನಿನಗೆ ನಮಸ್ಕಾರವನ್ನು ಮಾಡುತ್ತಿದ್ದೇನೆ. ನರದೇವನೇ, ಪಾಂಡವರ ಸಮೀಪಕ್ಕೆ ಹೋಗಿ ಹಿಂದಿರುಗಿದ್ದೇನೆ. ಪಾಂಡುಪುತ್ರನೂ ಧೈರ್ಯಶಾಲಿಯೂ ಆದ ಯುಧಿಷ್ಠಿರನು ನಿನಗೆ ನಮಸ್ಕಾರವನ್ನು ಮಾಡಿ ಕುಶಲಪ್ರಶ್ನೆಯನ್ನು ಮಾಡುತ್ತಾನೆ.
ಸ ತೇ ಪುತ್ರಾನ್ ಪೃಚ್ಛತಿ ಪ್ರೀಯಮಾಣಃ
ಕಚ್ಚಿತ್ ಪುತ್ರೈಃ ಪ್ರೀಯಸೇ ನಪ್ತೃಭಿಶ್ಚ |
ತಥಾ ಸುಹೃದ್ಭಿಃ ಸಚಿವೈಶ್ಚ ರಾಜನ್
ಯೇ ಚಾಪಿ ತ್ವಾಮುಪಜೀವಂತಿ ತೈಶ್ಚ ॥19॥
ಅವನು ಸಂತೋಷದಿಂದ ನಿನ್ನ ಪುತ್ರರ ಕುಶಲವನ್ನು ಕೇಳುತ್ತಾನೆ. ಎಲೈ ರಾಜನೇ, ಮಕ್ಕಳು-ಮೊಮ್ಮಕ್ಕಳಿಂದೊಡಗೂಡಿ ಹಾಗೆಯೇ ಸುಹೃದ್ಬಾಂಧವರು ಮತ್ತು ಸಚಿವರಿಂದೊಡಗೂಡಿ ಮತ್ತು ಯಾರು ನಿನ್ನನ್ನು ಆಶ್ರಯಿಸಿದ್ದಾರೆಯೋ ಅವರಿಂದೊಡಗೂಡಿ ಸಂತೋಷದಿಂದ ಇದ್ದೀಯಾ ಎಂದು ನಿನ್ನನ್ನು ಕೇಳುತ್ತಾನೆ.
ಧೃತರಾಷ್ಟ್ರಃ
ಅಭ್ಯೇತ್ಯ ತ್ವಾಂ ತಾತ ವದಾಮಿ ಸಂಜಯ
ಅಜಾತಶತ್ರುಂ ಚ ಸುಖೇನ ಪಾರ್ಥಮ್ |
ಕಚ್ಚಿತ್ ಸ ರಾಜಾ ಕುಶಲೀ ಸಪುತ್ರಃ
ಸಹಾಮಾತ್ಯಃ ಸಾನುಜಃ ಕೌರವಾಣಾಮ್ ॥20॥
ಧೃತರಾಷ್ಟ್ರ ಪ್ರೀತಿಪಾತ್ರನೇ, ಅಜಾತಶತ್ರುವಿನ ಬಳಿಗೆ ಹೋಗಿ ಸುಖದಿಂದ ಹಿಂದಿರುಗಿದ ನಿನ್ನನ್ನು ಕೇಳುತ್ತಿದ್ದೇನೆ. ಕೌರವರ ರಾಜನಾದ ಯುಧಿಷ್ಠಿರನು ಪುತ್ರ, ಅಮಾತ್ಯ, ಸಹೋದರರ ಸಹಿತವಾಗಿ ಕ್ಷೇಮದಿಂದಿದ್ದಾನೆಯೇ?
ಸಂಜಯಃ
ಸಹಾಮಾತ್ಯಃ ಕುಶಲೀ ಪಾಂಡುಪುತ್ರೋ
ಭೂಯಶ್ಚಾತೋ ಯಚ್ಚ ತೇಽಗ್ರೇ ಮನೋಽಭೂತ್ |
ನಿರ್ಣಿಕ್ತಧರ್ಮಾರ್ಥಕರೋ ಮನಸ್ವೀ
ಬಹುಶ್ರುತೋ ದೃಷ್ಟಿಮಾನ್ ಶೀಲವಾಂಶ್ಚ ॥21॥
ಸಂಜಯ ಅಮಾತ್ಯರ ಜೊತೆಯಲ್ಲಿ ಪಾಂಡುಪುತ್ರನಾದ ಯುಧಿಷ್ಠಿರನು ಕುಶಲದಿಂದಿದ್ದಾನೆ. ನಿನಗೆ ಯಾವ ಅವನ ರಾಜ್ಯದಲ್ಲಿ ಮೊದಲು ಮನಸ್ಸಿದ್ದಿತೋ ಅದನ್ನೇ ಅವನು ಇನ್ನೂ ಬಯಸುತ್ತಿದ್ದಾನೆ. ಅವನು ಪರಿಶುದ್ಧವಾದ ಧರ್ಮಾರ್ಥವನ್ನು ಆಚರಿಸುವವನೂ, ಧೈರ್ಯಶಾಲಿಯೂ, ಬಹುಶ್ರುತನೂ, ದೂರದೃಷ್ಟಿಯುಳ್ಳವನೂ ಮತ್ತು ಶೀಲವಂತನೂ ಆಗಿದ್ದಾನೆ.
ಪರೋ ಧರ್ಮಃ ಪಾಂಡವಸ್ಯಾನೃಶಂಸ್ಯಂ
ಧರ್ಮಃ ಪರೋ ವಿತ್ತಚಯಾತ್ಮನೋಽಸ್ಯ |
ಸುಖಪ್ರಿಯೇ ಧರ್ಮಹೀನೇ ನ ಪಾರ್ಥೋಽ-
ನುರುಧ್ಯತೇ ಭಾರತ ತಸ್ಯ ಬುದ್ಧಿಃ ॥22॥
ಪಾಂಡವನಾದ ಯುಧಿಷ್ಠಿರನ ಶ್ರೇಷ್ಠವಾದ ಧರ್ಮವು ಮಾರ್ದವ. ವಿತ್ತಸಮೂಹ ರೂಪವಾದ ಈ ರಾಜ್ಯದಲ್ಲಿ ಅವನಿಗೆ ಧರ್ಮವೇ ಶ್ರೇಷ್ಠವಾದುದು. ಎಲೈ ಭಾರತನೇ, ಧರ್ಮರಹಿತವಾದ ಸುಖ ಮತ್ತು ಪ್ರಿಯಗಳಲ್ಲಿ ಅವನ ಬುದ್ಧಿಯು ಎಂದೂ ಹೋಗುವುದಿಲ್ಲ.
ನನ್ವೇವ ಮನ್ಯೇ ಪುರುಷಸ್ಯ ಕರ್ಮ
ಸಂಪದ್ಯತೇ ಸುಪ್ರಯುಕ್ತಂ ಯಥಾವತ್ |
ಅಕುರ್ವತಃ ಸ್ಯಾದ್ ಯದಿ ಚಾಪಿ ಸರ್ವಂ
ತಸ್ಮಾದಾಹುಃ ಪೌರುಷಂ ಕರ್ಮಣೋ ಹಿ ॥23॥
ಯಾವ ಪುರುಷನು ಯಾವ ಕರ್ಮವನ್ನು ಸರಿಯಾಗಿ ಮಾಡುತ್ತಾನೆಯೋ ಆ ಪುರುಷನಿಗೆ ಅದೇ ಕರ್ಮವೇ ಸಿದ್ಧಿಯನ್ನು ತಂದುಕೊಡುತ್ತದೆ ಎಂದು ನಾನು ಭಾವಿಸಿದ್ದೇನಷ್ಟೆ? ಕರ್ಮವನ್ನು ಮಾಡದಿದ್ದರೂ ಎಲ್ಲವೂ ಸಿದ್ಧಿಸುವುದಾದರೆ (ಪುರುಷ ಪ್ರಯತ್ನಕ್ಕೆ ಬೆಲೆ ಏನು?) ಆದ್ದರಿಂದ ಪುರುಷಪ್ರಯತ್ನವನ್ನು ಕರ್ಮದ ಸಾಮರ್ಥ್ಯವೆಂದು ಹೇಳುತ್ತಾರೆ.
ಮಾತುಃ ಪಿತುಃ ಕರ್ಮಣಾಽಭಿಪ್ರಸೂತಃ

ಸಂವರ್ಧತೇ ಕರ್ಮಣಾ ಭೋಜನೇನ |
ಪ್ರಿಯಾಪ್ರಿಯೇ ಸುಖದುಃಖೇ ಚ ರಾಜನ್
ನಿಂದಾಪ್ರಶಂಸೇ ಚ ಭಜೇತ ಯೇನ ॥24॥
ಮಾತಾ-ಪಿತೃಗಳು ಮತ್ತು ತನ್ನ ಕರ್ಮದ ನಿಮಿತ್ತದಿಂದಾಗಿ ಜನ್ಮವನ್ನು ಪಡೆದ ಪುರುಷನು ತನ್ನ ಕರ್ಮದಿಂದ ಸಂಪಾದಿಸಿದ ಭೋಜನದಿಂದ ಬೆಳೆಯುತ್ತಾನೆ. ರಾಜನೇ, ಅವನು ಪ್ರಿಯಾಪ್ರಿಯಗಳನ್ನೂ, ಸುಖ-ದುಃಖಗಳನ್ನೂ, ನಿಂದಾ-ಪ್ರಶಂಸೆಗಳನ್ನೂ ಪಡೆಯುತ್ತಾನೆ.
ಪರಪ್ರಯುಕ್ತಃ ಪುರುಷೋ ವಿಚೇಷ್ಟತೇ
ಸೂತ್ರಪ್ರೋತಾ ದಾರುಮಯೀವ ಯೋಷಾ |
ಇಮಂ ಚ ದೃಷ್ಟ್ವಾ ತವ ಕರ್ಮದೋಷಂ
ಮನ್ಯೇ ವರಂ ಕರ್ಮ ದೈವಂ ಮನುಷ್ಯಾತ್ ॥25॥
ಇಮಂ ಚ ದೃಷ್ಟ್ವಾ ತವ ಕರ್ಮದೋಷಂ
ಪಾಪೋದರ್ಕಂ ಘೋರಮವರ್ಣರೂಪಮ್ |
ಪರಮಾತ್ಮನಿಂದ ಪ್ರೇರಿತನಾಗಿ ಪುರುಷನು ಸೂತ್ರವನ್ನು ಪೋಣಿಸಿದ ಮರದ ಹೆಣ್ಣುಗೊಂಬೆಯಂತೆ ಕರ್ಮಗಳನ್ನು ಮಾಡುತ್ತಾನೆ. ಪಾಪದ ಉದಯಕ್ಕೆ ಕಾರಣವೂ, ಘೋರವೂ, ವರ್ಣಿಸಲು ಅಸಾಧ್ಯವೂ ಆದ ಈ ನಿನ್ನ ಕರ್ಮದೋಷವನ್ನು ನೋಡಿ ನಾನು ಮನುಷ್ಯಪ್ರಯತ್ನಕ್ಕಿಂತಲೂ ದೈವಚಿತ್ತ ಮತ್ತು ಕರ್ಮಗಳೇ ಶ್ರೇಷ್ಠವೆಂದು ಭಾವಿಸುತ್ತೇನೆ (ಶುಷ್ಕಕರ್ಮವೇ ಫಲವನ್ನು ಕೊಡಲು ಸಮರ್ಥವಲ್ಲ. ಹರಿಯ ಅನುಗ್ರಹವು ಮುಖ್ಯವಾದುದು ಎಂದು ಅಭಿಪ್ರಾಯ ವಾದಿರಾಜರು).
ಯಾವತ್ ಪರಂ ಕಾಮಯತೇಽತಿಕಾಲ್ಯಂ
ತಾವನ್ನರೋಽಯಂ ಲಭತೇ ಪ್ರಶಂಸಾಮ್ ॥26॥
ಎಲ್ಲಿಯವರೆಗೆ ಪರಮಾತ್ಮನು ಆ ಪುರುಷನ ವಿಷಯದಲ್ಲಿ ಶುಭವನ್ನು ಕಾಮಿಸುತ್ತಾನೆಯೋ ಅಲ್ಲಿಯವರೆಗೆ ಆ ಪುರುಷನು ಪ್ರಶಂಸೆಯನ್ನು ಪಡೆಯುತ್ತಾನೆ.
ಅಜಾತಶತ್ರುಸ್ತು ವಿಹಾಯ ಪಾಪಂ
ಜೀರ್ಣಾಂ ತ್ವಚಂ ಸರ್ಪ ಇವಾವಮುಚ್ಯ |
ವಿರೋಚತೇ ಹ್ಯಾರ್ಯವೃತ್ತೇನ ವೀರೋ
ಯುಧಿಷ್ಠಿರಸ್ತ್ವಯಿ ಪಾಪಂ ವಿಸೃಜ್ಯ ॥27॥
ಅಜಾತಶತ್ರುವಾದ ಯುಧಿಷ್ಠಿರನು ಸರ್ಪವು ಹಳೆಯ ಪೊರೆಯನ್ನು ಬಿಟ್ಟಂತೆ ಪಾಪವನ್ನು ತ್ಯಜಿಸಿ ವೀರನಾಗಿ ಪೂಜ್ಯರ ನಡತೆಯಿಂದ ಕೂಡಿದವನಾಗಿ ನಿನ್ನಲ್ಲಿ ಪಾಪವನ್ನೂ ತ್ಯಜಿಸಿ (ಕೆಟ್ಟದ್ದನ್ನು ಯೋಚನೆ ಮಾಡದೆ) ಕಂಗೊಳಿಸುತ್ತಿದ್ದಾನೆ.
ಅಂಗಾತ್ಮನಃ ಕರ್ಮ ನಿಬೋಧ ರಾಜನ್
ಧರ್ಮಾರ್ಥಯುಕ್ತಾದಾರ್ಯವೃತ್ತಾದಪೇತಮ್ |
ಉಪಕ್ರೋಶಂ ಚೇಹ ಗತೋಽಸಿ ರಾಜನ್
ಭೂಯಶ್ಚ ಪಾಪಂ ವಿಸೃಜನ್ನಮುತ್ರ ॥28॥
ಪ್ರಿಯನಾದ ರಾಜನೇ, ನಿನ್ನ ಕರ್ಮವು ಧರ್ಮಾರ್ಥಯುಕ್ತವಾದ ಆರ್ಯರ ನಡತೆಯಿಂದ ದೂರವಾದುದು ಎಂದು ತಿಳಿ. ನೀನು ಪರಲೋಕದಲ್ಲಿ ಪಾಪವನ್ನು ಸೃಷ್ಟಿ ಮಾಡುತ್ತಾ ಇಲ್ಲಿಯೂ ದುಃಖವನ್ನು ಅನುಭವಿಸುತ್ತಿದ್ದೀಯೆ.
ಸ ತ್ವಮರ್ಥಂ ಸಂಶಯಿತಂ ವಿನಾ ತೈಃ
ಆಶಂಸಸೇ ಪುತ್ರವಶಾನುಗಃ ಸನ್ |
ಅಧರ್ಮಶಬ್ದಶ್ಚ ಮಹಾನ್ ಪೃಥಿವ್ಯಾಂ
ನೇದಂ ಕರ್ಮ ತ್ವತ್ಸಮಂ ಭಾರತಾಗ್ರ್ಯ ॥29॥
ಭಾರತಶ್ರೇಷ್ಠನೇ, ನೀನು ಪಾಂಡವರನ್ನು ತೊರೆದು ಪುತ್ರವಶನಾಗಿ ಸಂಶಯಗ್ರಸ್ತನಾಗಿ ಪಾಂಡವರ ಭಾಗವನ್ನು ಅಪೇಕ್ಷಿಸುತ್ತಿದ್ದೀಯೆ. ಇದರಿಂದ ನಿನಗೆ ಭೂಮಿಯಲ್ಲಿ ದೊಡ್ಡ ಅಧರ್ಮಶಬ್ದವುಂಟಾಗಿದೆ. ಈ ಕಾರ್ಯವು ನಿನಗೆ ಯೋಗ್ಯವಾದುದಲ್ಲ.
ಹೀನಪ್ರಜ್ಞೋ ದೌಷ್ಕುಲೇಯೋ ನೃಶಂಸೋ
ಧರ್ಮದ್ವೇಷೀ ಕ್ಷತ್ರವಿದ್ಯಾಸ್ವಧೀರಃ |
ಏವಂಧರ್ಮಾ ನಾಪದಃ ಸಂತಿತೀರ್ಷೇತ್
ಹೀನೋ ವೀರ್ಯಾದ್ ಯಶ್ಚ ಭವೇದಶಿಷ್ಟಃ ॥30॥
ಪ್ರಜ್ಞಾಹೀನನಾದವನು, ದುಷ್ಕುಲಪ್ರಸೂತನಾದವನು, ಕ್ರೂರನಾದವನು, ಧರ್ಮದ್ವೇಷಿಯಾದವನು, ಕ್ಷತ್ರಿಯವಿದ್ಯೆಗಳನ್ನು ತಿಳಿಯದವನು, ಪರಾಕ್ರಮಹೀನನಾದವನು ಮತ್ತು ಅಶಿಷ್ಟನಾದವನು ಇಂತಹ ದೋಷಗಳನ್ನು ಹೊಂದಿದವನು ಆಪತ್ತನ್ನು ದಾಟಲು ಆಸೆ ಪಡಬಾರದು.
ಕುಲೇ ಜಾತೋ ಬಲವಾನ್ ಯೋ ಯಶಸ್ವೀ
ಬಹುಶ್ರುತಃ ಸುಖಜೀವೀ ಜಿತಾತ್ಮಾ |
ಧರ್ಮಾಧರ್ಮೌ ಗ್ರಥಿತೌ ಯೋ ಬಿಭರ್ತಿ
ಸ ಹ್ಯಸ್ಯ ದಿಷ್ಟಸ್ಯ ವಶಾದುಪೈತಿ ॥31॥
ಯಾವನು ಸತ್ಕುಲಪ್ರಸೂತನೋ, ಬಲಿಷ್ಠನೋ, ಕೀರ್ತಿವಂತನೋ, ಬಹುಶ್ರುತನೋ, ಸುಖಜೀವಿಯೋ, ಮನೋಜಯವುಳ್ಳವನೋ,

ಧರ್ಮಾಧರ್ಮಗಳು ಒಟ್ಟಿಗೇ ಸೇರಿದಾಗ ಅವುಗಳನ್ನು ಪ್ರತ್ಯೇಕಿಸಿ ಯಾವನು ಧರ್ಮವನ್ನೇ ಪೋಷಿಸುತ್ತಾನೆಯೋ ಅಂತಹವನು ದೈವಸಹಾಯದಿಂದ ಸಂಪತ್ತನ್ನು ಹೊಂದುವನು.

ಕಥಂ ಹಿ ಮಂತ್ರಾಗ್ರ್ಯಧರೋ ಮನೀಷೀ
ಧರ್ಮಾರ್ಥಯೋರಾಪದಿ ಸಂಪ್ರಣೇತಾ |
ಏವಂ ಯುಕ್ತಃ ಸರ್ವಮಂತ್ರೈರ್ವಿಹೀನಮ್
ಅನಾಶಾಸ್ಯಂ ಕರ್ಮ ಕುರ್ಯಾದಮೂಢಃ ||32||

ಶ್ರೇಷ್ಠವಾದ ಮಂತ್ರಾಲೋಚನೆಯುಳ್ಳವನೂ, ವಿವೇಕಿಯೂ, ಆಪತ್ತು ಒದಗಿದಾಗ ಧರ್ಮಾರ್ಥಗಳನ್ನು ಸರಿಯಾಗಿ ನಡೆಸುವವನೂ, ಮೂಢನಲ್ಲದವನೂ ಆದ ಯಾವನು ಎಲ್ಲಾ ಮಂತ್ರಾಲೋಚನೆಗೆ ವಿರುದ್ಧವಾದ, ಯಾರಿಂದಲೂ ಹೊಗಳಲ್ಪಡದ ಕರ್ಮವನ್ನು ಮಾಡಿಯಾನು?

ತವ ಹ್ಯಮೀ ಮಂತ್ರವಿದಃ ಸಮೇತ್ಯ
ಸಮಾಸತೇ ಕರ್ಮಸು ನಿತ್ಯಯುಕ್ತಾಃ |
ತೇಷಾಮಯಂ ಬಲವಾನ್ ನಿಶ್ಚಯಶ್ಚ
ಕುರುಕ್ಷಯೋ ನಿಯಮೇನ ವ್ಯಪಾಯೀ ||33||

ಈ ಮಂತ್ರವೇತ್ತರು ನಿತ್ಯವೂ ನಿನ್ನ ಹಿತವಾದ ಕರ್ಮಗಳಲ್ಲಿ ರತರಾಗಿ ನಿನ್ನ ಸುತ್ತಲೂ ಇದ್ದಾರೆ. ಅವರಿಗೆ ದೊಡ್ಡ ಅಪಾಯವನ್ನು ತಂದೊಡ್ಡುವ ಕುರುಕುಲಕ್ಷಯವು ಉಂಟಾಗುತ್ತದೆ ಎಂಬ ನಿಶ್ಚಯವು ಪ್ರಬಲವಾಗಿದೆ.

ಅಕಾಲಿಕಂ ಕುರವೋ ನಾಭವಿಷ್ಯನ್
ಪಾಪೇನ ಚೇತ್ ಪಾಪಮಜಾತಶತ್ರುಃ |
ಇಚ್ಛೇತ್ ಜಾತು ತ್ವಯಿ ಪಾಪಂ ವಿಸೃಜ್ಯ
ನಿಂದಾಂ ಚೇಯಂ ತವ ತದೇವಾಭವಿಷ್ಯತ್ ||34||

ಅಜಾತಶತ್ರುವು ನಿನಗೆ ಹಿಂಸೆ ಮಾಡುವುದನ್ನು ಬಿಟ್ಟು ಪಾಪವುಳ್ಳ ದುರ್ಯೋಧನನು ದ್ಯೂತವನ್ನು ಪ್ರವರ್ತಿಸಿದಾಗ ದುರ್ಯೋಧನನ ವಿಷಯದಲ್ಲಿಯೇ ವಧೆಯ ರೂಪವಾದ ಪಾಪಕರ್ಮವನ್ನು ಮಾಡಿದ್ದರೆ ಕುರುಗಳು ಮೃತ್ಯುಕಾಲವಲ್ಲದ ನಿನ್ನ ಕಾಲದಲ್ಲಿಯೇ ವಿನಾಶವನ್ನು ಹೊಂದಿರುತ್ತಿದ್ದರು. ಆಗ ಧೃತರಾಷ್ಟ್ರನು ದ್ಯೂತವನ್ನು ನಿವಾರಣೆ ಮಾಡಲಿಲ್ಲ ಎಂಬ ಅಪಕೀರ್ತಿಯೂ ನಿನಗೆ ಬರುತ್ತಿರಲಿಲ್ಲ.

ಕಿಮನ್ಯತ್ರ ವಿಷಯಾದೀಶ್ವರಾಣಾಂ
ಯತ್ರ ಪಾರ್ಥಃ ಪರಲೋಕಂ ಸ್ಮ ದ್ರಷ್ಟುಮ್ |
ಅತ್ಯಕ್ರಾಮತ್ ಸ ತಥಾ ಸರ್ವಮರ್ತ್ಯಾನ್
ಸ ಕೇಶವೋ ಯಸ್ಯ ಮನುಷ್ಯಕಾರಃ ||35||

ಸಮರ್ಥನಾದ ಅರ್ಜುನಾದಿಗಳನ್ನು ಬಿಟ್ಟು ಬೇರೆ ಎಲ್ಲಿ ಪರಾಕ್ರಮವಿದೆ? ಯಾವಾಗ ಅರ್ಜುನನು ಸ್ವರ್ಗಲೋಕವನ್ನು ನೋಡಲು ಹೊರಟನೋ ಆಗಲೇ ಅವನು ಎಲ್ಲ ಮನುಷ್ಯರನ್ನೂ ಮೀರಿದನು. ಜೊತೆಗೆ ಎಲ್ಲ ಮನುಷ್ಯರಿಗಿಂತ ಮಿಗಿಲಾದ ಕೇಶವನು ಅವನಿಗೆ ಸಹಾಯನಾಗಿದ್ದಾನೆ.

ಏತಾನ್ ಗುಣಾನ್ ಕರ್ಮಕೃತಾನವೇಕ್ಷ್ಯ
ಭಾವಾಭಾವೌ ವರ್ತಮಾನಾವನಿತ್ಯೌ |
ಬಲಿರ್ಹಿ ರಾಜಾ ಪಾರಮವಿಂದಮಾನೋ
ನಾನ್ಯತ್ ಕಾಲಾತ್ ಕಾರಣಂ ತತ್ರ ಮೇನೇ ||36||

ಕರ್ಮಗಳಿಂದ ಉಂಟಾಗುವ ಸಂಪತ್ತು ಮತ್ತು ವಿಪತ್ತು ರೂಪವಾದ ಫಲಗಳು ಅನಿತ್ಯವಾಗಿರುತ್ತವೆ ಎಂದು ತಿಳಿದ ಬಲಿಯು ಒಂದು ನಿರ್ಣಯಕ್ಕೆ ಬರಲಾರದೆ ಕಾಲವನ್ನು ಬಿಟ್ಟು ಬೇರೆ ಕಾರಣವಿಲ್ಲ ಎಂದು ತಿಳಿದನು.

ಚಕ್ಷುಃಶ್ರೋತ್ರೇ ನಾಸಿಕಾ ತ್ವಕ್ ಚ ಜಿಹ್ವಾ
ಜ್ಞಾನಸ್ಯೈತಾನ್ಯಾಯತನಾನಿ ಜಂತೋಃ |
ನಾನ್ಯಪ್ರೀತಸ್ತತ್ರ ತೃಷ್ಣಾಕ್ಷಯೇ ತು
ತಾನ್ಯವ್ಯಥೋ ದುಃಖಹೀನಃ ಪ್ರಣುದ್ಯಾತ್ ||37||

ಚಕ್ಷುಃ-ಶ್ರೋತ್ರಗಳು, ನಾಸಿಕಾ, ತ್ವಕ್ ಮತ್ತು ಜಿಹ್ವಾ ಇವು ಜಂತುವಿಗೆ ಜ್ಞಾನದ ಸಾಧನಗಳು. ಹರಿಯನ್ನು ಬಿಟ್ಟು ಬೇರೆ ಕಡೆಯಲ್ಲಿ ಸಂತೋಷಗೊಳ್ಳದೆ ಇಂದ್ರಿಯ ವಿಷಯಗಳಾದ ಶಬ್ದಾದಿಗಳಲ್ಲಿ ಆಸೆಯನ್ನು ತೊರೆದವನು ವ್ಯಥೆ ಇಲ್ಲದೆ ದುಃಖಹೀನನಾಗಿ ಜ್ಞಾನಸಾಧನಗಳನ್ನು ಪ್ರೇರಿಸುತ್ತಾನೆ.

ನ ತ್ವೇವ ಮನ್ಯೇ ಪುರುಷಸ್ಯ ಕರ್ಮ
ಸಂವರ್ತತೇ ಸಂಪ್ರಯುಕ್ತಂ ಯಥಾವತ್ |
ಮಾತುಃ ಪಿತುಃ ಕರ್ಮಣಾಽಭಿಪ್ರಸೂತಃ
ಸಂವರ್ಧತೇ ಕರ್ಮಣಾ ಭೋಜನೇನ ||38||

ಪುರುಷನು ಹಿಂದೆ ಸರಿಯಾಗಿ ಮಾಡಿದ ಕರ್ಮವೇ ಎಲ್ಲ ಫಲವನ್ನೂ ಕೊಡುತ್ತದೆ ಎಂದು ನನಗೆ ಎನಿಸುವುದಿಲ್ಲ. ತಂದೆ-ತಾಯಿ ಮತ್ತು ತನ್ನ ಕರ್ಮದಿಂದ ಜನ್ಮವನ್ನು ಪಡೆದವನು ತನ್ನ ಕರ್ಮದಿಂದ ಸಂಪಾದಿಸಿದ ಭೋಜನದಿಂದ ಬೆಳೆಯುತ್ತಾನೆ (ಮಾತಾ-ಪಿತೃಗಳು ಮತ್ತು ಆಹಾರ - ಇವು ಕೂಡ ಪುರುಷನ ಕರ್ಮಸಿದ್ಧಿಯನ್ನು ಕುರಿತು ಕಾರಣವಾಗುತ್ತವೆ).

ಪ್ರಿಯಾಪ್ರಿಯೇ ಸುಖದುಃಖೇ ಚ ರಾಜನ್
ನಿಂದಾಪ್ರಶಂಸೇ ಚ ಭಜಂತ ಏನಮ್ |
ಪರಸ್ತ್ವೇನಂ ಗರ್ಹಯತೇऽಪರಾಧೇ
ಪ್ರಶಂಸತೇ ಸಾಧುವೃತ್ತಂ ತಮೇವ ॥39॥
ಹಾಗೆ ಜನಿಸಿದ ಮನುಷ್ಯನಿಗೆ ಪ್ರಿಯಾಪ್ರಿಯಗಳೂ, ಸುಖದುಃಖಗಳೂ, ನಿಂದಾ-ಪ್ರಶಂಸೆಗಳೂ ಉಂಟಾಗುತ್ತವೆ. ಅವನು ಅಪರಾಧವನ್ನು ಮಾಡಿದರೆ ಇನ್ನೊಬ್ಬನು ಅವನನ್ನು ನಿಂದಿಸುತ್ತಾನೆ. ಒಳ್ಳೆಯ ನಡತೆಯನ್ನು ಹೊಂದಿದ್ದರೆ ಅವನನ್ನೇ ಹೊಗಳುತ್ತಾನೆ.
ಸ ತ್ವಾಂ ಗರ್ಹೇ ಭಾರತಾನಾಂ ವಿರೋಧಾದ್
ಅಂತೋ ನೂನಂ ಭವಿತಾऽಯಂ ಪ್ರಜಾನಾಮ್ |
ನೋ ಚೇದಿದಂ ತವ ಕರ್ಮಾಪರಾಧಾತ್
ಕುರೂನ್ ದಹೇತ್ ಕೃಷ್ಣವರ್ತ್ಮೇವ ಕಕ್ಷಮ್ ॥40॥
ಅಂತಹ ನಾನು ಭರತವಂಶದವರಿಗೆ ವಿರೋಧ ಉಂಟಾಗುವುದರಿಂದ ನಿನ್ನನ್ನು ನಿಂದಿಸುತ್ತೇನೆ. ನಿಶ್ಚಿತವಾಗಿ ಇದರಿಂದ ಸಂತತಿಯ ಕ್ಷಯವು ಉಂಟಾಗುತ್ತದೆ. ಒಂದು ಪಕ್ಷ ಸಂತತಿ ಕ್ಷಯವಾಗದಿದ್ದರೆ ನಿನ್ನ ಕರ್ಮಾಪರಾಧದಿಂದ ಮುಂದೆ ಒದಗಲಿರುವ ಯುದ್ಧವು ಹುಲ್ಲುಗಾವಲನ್ನು ಅಗ್ನಿಯು ಸುಡುವಂತೆ ಕುರುಗಳನ್ನು ಸುಟ್ಟು ಹಾಕುತ್ತದೆ.
ತ್ವಮೇವೈಕೋ ಜಾತು ಪುತ್ರಸ್ಯ ರಾಜನ್
ವಶಂ ಗತ್ವಾ ಸರ್ವಲೋಕೇ ನರೇಂದ್ರ |
ಯದಾತ್ಮಾನಂ ಶ್ಲಾಘಸೇ ದ್ಯೂತಕಾಲೇ
ನಾಗಾಃ ಶಮಂ ಪಶ್ಯ ವಿಪಾಕಮಸ್ಯ ॥41॥
ಎಲೈ ನರೇಂದ್ರನೇ, ದ್ಯೂತಕಾಲದಲ್ಲಿ ಸರ್ವಲೋಕಗಳ ಮಧ್ಯೆ ನೀನೊಬ್ಬನೇ ಪುತ್ರನಿಗೆ ವಶನಾಗಿ ನಿನ್ನನ್ನೇ ನೀನು ಹೊಗಳಿಕೊಳ್ಳುತ್ತಾ ಶಾಂತಿಯನ್ನು ಹೊಂದಲಿಲ್ಲ. ಅದರ ವಿಪಾಕವನ್ನು ನೋಡು.
ಅನಾಪ್ತಾನಾಂ ಸಂಗ್ರಹಾತ್ ತ್ವಂ ನರೇಂದ್ರ
ತಥಾऽऽಪ್ತಾನಾಂ ನಿಗ್ರಹಾಚ್ಚೈವ ರಾಜನ್ |
ಭೂಮಿಂ ಸ್ಫೀತಾಂ ದುರ್ಬಲತ್ವಾದನಂತಾಮ್
ಅಶಕ್ತಸ್ತ್ವಂ ರಕ್ಷಿತುಂ ಕೌರವೇಯ ॥42॥
ಎಲೈ ನರೇಂದ್ರನೇ, ಎಲೈ ಕುರುವಂಶಜಾತನೇ, ನೀನು ಆಪ್ತರಲ್ಲದವರನ್ನು ಸಮೀಪದಲ್ಲಿಟ್ಟುಕೊಂಡು ಆಪ್ತರನ್ನು ನಿಗ್ರಹಿಸಿರುವುದರಿಂದ ದುರ್ಬಲನಾಗಿ ಅಪಾರವಾದ ಮತ್ತು ಶುದ್ಧವಾದ ಭೂಮಿಯನ್ನು ರಕ್ಷಣೆ ಮಾಡಲು ಸಮರ್ಥನಾಗಿಲ್ಲ.
ಅನುಜ್ಞಾತೋ ರಥವೇಗಾವಧೂತಃ
ಶ್ರಾಂತೋऽಭಿಪದ್ಯೇ ಶಯನಂ ನೃಸಿಂಹ |
ಪ್ರಾತಃ ಶ್ರೋತಾರಃ ಕುರವಃ ಸಭಾಯಾಮ್
ಅಜಾತಶತ್ರೋರ್ವಚನಂ ಸಮೇತಾಃ ॥43॥
ನರಸಿಂಹನೇ, ರಥದ ವೇಗದಿಂದ ಬಹಳವಾಗಿ ಅಲ್ಲಾಡಿ ನಾನು ದಣಿದಿದ್ದೇನೆ. ನಿನ್ನ ಅನುಮತಿಯನ್ನು ಪಡೆದು ನಾನು ಹೋಗಿ ಮಲಗುತ್ತೇನೆ. ಅಜಾತಶತ್ರುವಿನ ಸಂದೇಶವನ್ನು ನಾಳೆಯ ಪ್ರಾತಃಕಾಲದಲ್ಲಿ ಸಭೆಯಲ್ಲಿ ಎಲ್ಲಾ ಕುರುಗಳೂ ಕೇಳುವರು.
ಧೃತರಾಷ್ಟ್ರಃ
ಅನುಜ್ಞಾತೋಸ್ಯಾವಸಥಂ ಪರೈಹಿ
ಪ್ರಪದ್ಯಸ್ವ ಶಯನಂ ಸೂತಪುತ್ರ |
ಪ್ರಾತಃ ಶ್ರೋತಾರಃ ಕುರವಃ ಸಭಾಯಾಮ್
ಅಜಾತಶತ್ರೋರ್ವಚನಂ ಸಮೇತಾಃ ॥44॥
ಧೃತರಾಷ್ಟ್ರ ಸೂತಪುತ್ರನೇ, ಅನುಮತಿಯನ್ನು ನೀಡಿದ್ದೇನೆ. ನಿನ್ನ ಮನೆಗೆ ಹೋಗಿ ನಿದ್ರಿಸು. ಅಜಾತಶತ್ರುವಿನ ಸಂದೇಶವಚನವನ್ನು ನಾಳೆಯ ಸಭೆಯಲ್ಲಿ ಎಲ್ಲಾ ಕುರುಗಳೂ ಒಟ್ಟಾಗಿ ಸೇರಿ ಕೇಳುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕತ್ರಿಂಶೋऽಧ್ಯಾಯಃ ॥
॥ ಸಂಜಯಯಾನಪರ್ವಣಿ ದ್ವಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಪಪ್ರಚ್ಛ ಸೋऽವದದ್ ಧರ್ಮ ಪಾರ್ಥಾನಾಂ ರಾಜ್ಯದಾಪನಮ್ |
ಐಹಿಕಸ್ಯ ಸುಖಸ್ಯಾಪಿ ಕಾರಣಂ ತದನಿಂದಿತಮ್ ॥42॥
ಧರ್ಮದ ಬಗ್ಗೆ ಧೃತರಾಷ್ಟ್ರನು ವಿದುರನಲ್ಲಿ ಕೇಳಲಾಗಿ, ಆಗ ವಿದುರ `ಪಾಂಡವರಿಗೆ ರಾಜ್ಯ ಕೊಡಿಸುವುದೇ ನಿನಗೆ ಧರ್ಮ ಎಂದ. ಪಾಂಡವರಿಗೆ ರಾಜ್ಯ ಕೊಟ್ಟರೆ ಅದು ಐಹಿಕ ಸುಖಕ್ಕೂ ಕಾರಣವಾಗುವುದು'.
ಅನ್ಯಥಾ ಸರ್ವಪುತ್ರಾಣಾಂ ನಾಶಂ ಧರ್ಮಾತಿಲಂಘನಮ್ |
ತತ್ರ ಭಾವಮಕೃತ್ವಾ ಸ ಜ್ಞಾನಾದಿಚ್ಛನ್ನಘಕ್ಷಯಮ್ ॥43॥

`ಕೊಡದಿದ್ದರೆ ಧರ್ಮೋಲ್ಲಂಘನೆಯೇ ಆಗುವುದು. ನಿನ್ನೆಲ್ಲ ಮಕ್ಕಳ ನಾಶವೂ ಆಗುವುದು' ಎಂದ. ಧೃತರಾಷ್ಟ್ರ ವಿದುರನ ಸಲಹೆಯನ್ನೊಪ್ಪದೆ ಪಾಂಡವದ್ವೇಷದ ಪಾಪವನ್ನು ತತ್ವಜ್ಞಾನದಿಂದ ಕ್ಷಯ ಮಾಡಿಕೊಳ್ಳಲು ಬಯಸಿದ.
॥ ಸಮಾಪ್ತಂ ಸಂಜಯಯಾನಪರ್ವ ॥
* * * * *
3. ಪ್ರಜಾಗರಪರ್ವ
ಮೂವತ್ತೆರಡನೆಯ ಅಧ್ಯಾಯ
ವಿದುರನೀತಿ
ವೈಶಂಪಾಯನಃ
ದ್ವಾಃಸ್ಥಂ ತ್ವಾಹ ಮಹಾಪ್ರಾಜ್ಞೋ ಧೃತರಾಷ್ಟ್ರೋ ಮಹೀಪತಿಃ |
ವಿದುರಂ ದ್ರಷ್ಟುಮಿಚ್ಛಾಮಿ ತಮಿಹಾನಯ ಮಾಚಿರಮ್ ॥1॥
ವೈಶಂಪಾಯನ ಮಹಾಪ್ರಾಜ್ಞನಾದ ಧೃತರಾಷ್ಟ್ರರಾಜನು ದ್ವಾರಪಾಲಕನನ್ನು ಕುರಿತು, ವಿದುರನನ್ನು ನೋಡಲು ಬಯಸುತ್ತೇನೆ. ಅವನನ್ನು ಬೇಗ ಇಲ್ಲಿಗೆ ಕರೆದುಕೊಂಡು ಬಾ ಎಂದು ಹೇಳಿದನು.
ಪ್ರಹಿತೋ ಧೃತರಾಷ್ಟ್ರೇಣ ದೂತಃ ಕ್ಷತ್ತಾರಮಬ್ರವೀತ್ ॥2॥
ಈಶ್ವರಸ್ತ್ವಾಂ ಮಹಾರಾಜೋ ಮಹಾಪ್ರಾಜ್ಞೋ ದಿದೃಕ್ಷತಿ ॥3॥
ಧೃತರಾಷ್ಟ್ರನಿಂದ ಕಳುಹಿಸಲ್ಪಟ್ಟ ದೂತನು ವಿದುರನ ಬಳಿಗೆ ಬಂದು ಪ್ರಭುವೂ, ಮಹಾಪ್ರಾಜ್ಞನೂ ಆದ ಮಹಾರಾಜನು ನಿನ್ನನ್ನು ನೋಡಲು ಬಯಸುತ್ತಾನೆ ಎಂದು ಹೇಳಿದನು.
ಏವಮುಕ್ತಸ್ತು ವಿದುರಃ ಪ್ರಾಪ್ಯ ರಾಜನಿವೇಶನಮ್ |
ಅಬ್ರವೀದ್ ಧೃತರಾಷ್ಟ್ರಾಯ ದ್ವಾಃಸ್ಥಂ ಮಾಂ ಪ್ರತಿಬೋಧಯ ॥4॥
ಹೀಗೆ ಹೇಳಲ್ಪಟ್ಟ ವಿದುರನು ರಾಜನಿವಾಸಕ್ಕೆ ಹೋಗಿ ದ್ವಾರಪಾಲಕನನ್ನು ಕುರಿತು ಧೃತರಾಷ್ಟ್ರನಿಗೆ ನಾನು ಬಂದಿದ್ದೇನೆಂದು ಹೇಳು ಎಂದು ತಿಳಿಸಿದನು.
ದ್ವಾಃಸ್ಥಃ
ವಿದುರೋಽಯಮನುಪ್ರಾಪ್ತೋ ರಾಜೇಂದ್ರ ತವ ಶಾಸನಾತ್ |
ದ್ರಷ್ಟುಮಿಚ್ಛತಿ ತೇ ಪಾದೌ ಕಿಂ ಕರೋತಿ ಪ್ರಶಾಧಿ ಮಾಮ್ ॥5॥
ದ್ವಾರಪಾಲಕ ರಾಜೇಂದ್ರನೇ, ನಿನ್ನ ಅಪ್ಪಣೆಯಂತೆ ಈ ವಿದುರನು ಬಂದಿದ್ದಾನೆ. ನಿನ್ನ ಪಾದಗಳನ್ನು ನೋಡಲು ಬಯಸುತ್ತಾನೆ. ಅವನು ಏನು ಮಾಡಬೇಕೆಂದು ನನಗೆ ಆಜ್ಞಾಪಿಸು.
ಧೃತರಾಷ್ಟ್ರಃ
ಪ್ರವೇಶಯ ಮಹಾಪ್ರಾಜ್ಞಂ ವಿದುರಂ ದೀರ್ಘದರ್ಶನಮ್ |
ಅಹಂ ಹಿ ವಿದುರಸ್ಯಾಸ್ಯ ನಾಕಾಲ್ಯೋ ಜಾತು ದರ್ಶನೇ ॥6॥
ಧೃತರಾಷ್ಟ್ರ ಮಹಾಪ್ರಾಜ್ಞನಾದ ದೀರ್ಘದರ್ಶಿಯಾದ ವಿದುರನನ್ನು ಒಳಗೆ ಬಿಡು. ವಿದುರನ ದರ್ಶನಕ್ಕೆ ನಾನು ಯಾವ ಕಾಲದಲ್ಲಿಯೂ ಅಲಭ್ಯನಲ್ಲ.
ದ್ವಾಃಸ್ಥಃ
ಪ್ರವಿಶಾಂತಃಪುರಂ ಕ್ಷತ್ತುರ್ಮಹಾರಾಜಸ್ಯ ಧೀಮತಃ |
ನ ಹಿ ತೇ ದರ್ಶನೇಽಕಾಲ್ಯೋ ಜಾತು ರಾಜಾಽಬ್ರವೀದ್ಧಿ ಮಾಮ್ ॥
ದಾಸ ವಿದುರನೇ, ಮೇಧಾವಿಯಾದ ಮಹಾರಾಜನ ಅಂತಃಪುರವನ್ನು ಪ್ರವೇಶಿಸು. ರಾಜನು ನಿನ್ನ ದರ್ಶನಕ್ಕೆ ತಾನು ಯಾವ ಕಾಲದಲ್ಲಿಯೂ ಅಲಭ್ಯನಲ್ಲವೆಂದು ನನಗೆ ಹೇಳಿದನು.
ವೈಶಂಪಾಯನಃ
ತತಃ ಪ್ರವಿಶ್ಯ ವಿದುರೋ ಧೃತರಾಷ್ಟ್ರನಿವೇಶನಮ್ |
ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಚಿಂತಯಾನಂ ನರಾಧಿಪಮ್ ॥8॥
ವಿದುರೋಽಹಂ ಮಹಾಪ್ರಾಜ್ಞ ಸಂಪ್ರಾಪ್ತಸ್ತವ ಶಾಸನಾತ್ |
ಯದಿ ಕಿಂಚನ ಕರ್ತವ್ಯಮಯಮಸ್ಮಿ ಪ್ರಶಾಧಿ ಮಾಮ್ ॥9॥
ವೈಶಂಪಾಯನ ಅನಂತರ ವಿದುರನು ಧೃತರಾಷ್ಟ್ರನ ನಿವಾಸವನ್ನು ಪ್ರವೇಶಿಸಿ ಕೈಗಳನ್ನು ಮುಗಿದು ಚಿಂತಾಪರನಾಗಿದ್ದ ರಾಜನನ್ನು ಕುರಿತು ಮಹಾಪ್ರಾಜ್ಞನೇ, ನಿನ್ನ ಅಪ್ಪಣೆಯಂತೆ ನಾನು ಬಂದಿದ್ದೇನೆ. ನನ್ನಿಂದ ಏನಾದರೂ ಆಗಬೇಕಾಗಿದ್ದರೆ ನಾನು ಸಿದ್ಧನಾಗಿದ್ದೇನೆ. ನನಗೆ ಅಪ್ಪಣೆಯನ್ನು ಕೊಡು ಎಂದು ಹೇಳಿದನು.
ಧೃತರಾಷ್ಟ್ರಃ
ಸಂಜಯೋ ವಿದುರ ಪ್ರಾಪ್ತೋ ಗರ್ಹಯಿತ್ವಾ ತು ಮಾಂ ಗತಃ |
ಅಜಾತಶತ್ರೋಃ ಶ್ವೋ ವಾಕ್ಯಂ ಸಭಾಮಧ್ಯೇ ಸ ವಕ್ಷ್ಯತಿ ॥10॥
ಧೃತರಾಷ್ಟ್ರ ವಿದುರನೇ, ಸಂಜಯನು ಹಿಂದಿರುಗಿ ಬಂದು ನನ್ನನ್ನು ನಿಂದಿಸಿ ಹೊರಟು ಹೋದನು. ಅಜಾತಶತ್ರುವಾದ ಯುಧಿಷ್ಠಿರನ ಮಾತುಗಳನ್ನು ನಾಳೆಯ ದಿನ ಸಭೆಯಲ್ಲಿ ಹೇಳುವನು.
ತಸ್ಯಾದ್ಯ ಕುರುವೀರಸ್ಯ ನ ವಿಜ್ಞಾತಂ ವಚೋ ಮಯಾ |
ತನ್ಮೇ ದಹತಿ ಗಾತ್ರಾಣಿ ತದಕಾರ್ಷೀತ್ ಪ್ರಜಾಗರಮ್ ॥11॥

ನನಗೆ ಕುರುವೀರನಾದ ಅವನ ಮಾತುಗಳು ಈ ದಿನ ತಿಳಿಯಲಿಲ್ಲ. ಅದು ನನ್ನ ದೇಹವನ್ನು ಸುಡುತ್ತಾ ನನಗೆ ಜಾಗರಣೆಯನ್ನು ಉಂಟುಮಾಡಿದೆ.
ಜಾಗ್ರತೋ ದಹ್ಯಮಾನಸ್ಯ ಶ್ರೇಯೋ ಯದನುಪಶ್ಯಸಿ |
ತದ್ ಬ್ರೂಹಿ ತ್ವಂ ಹಿ ನಸ್ತಾತ ಧರ್ಮಾರ್ಥಕುಶಲೋ ಹ್ಯಸಿ ॥12॥
ಪ್ರೀತಿಪಾತ್ರನೇ, ಹೀಗೆ ದುಃಖತಪ್ತನಾಗಿ ಎಚ್ಚರಿಕೆಯಿಂದ ಇರುವ ನನಗೆ ಯಾವುದು ಶ್ರೇಯಸ್ಸೆಂದು ತಿಳಿಯುತ್ತೀಯೋ ಅದನ್ನು ಹೇಳು. ಪ್ರೀತಿಪಾತ್ರನೇ, ನಮಗೆ ನೀನೇ ಧರ್ಮಾರ್ಥಕುಶಲನಾದವನು.
ಯತಃ ಪ್ರಾಪ್ತಃ ಸಂಜಯಃ ಪಾಂಡವೇಭ್ಯೋ
ನ ಮೇ ಯಥಾವನ್ಮನಸಃ ಪ್ರಶಾಂತಿಃ |
ಸರ್ವೇಂದ್ರಿಯಾಣ್ಯಪ್ರಕೃತಿಂ ಗತಾನಿ
ಕಿಂ ವಕ್ಷ್ಯತೀತ್ಯೇವ ಹಿ ಮೇಽದ್ಯ ಚಿಂತಾ ॥13॥
ಸಂಜಯನು ಪಾಂಡವರ ಕಡೆಯಿಂದ ಹಿಂದಿರುಗಿ ಬಂದಾಗಿನಿಂದ ನನ್ನ ಮನಸ್ಸಿಗೆ ಸರಿಯಾದ ಸಮಾಧಾನವೇ ಇಲ್ಲ. ನನ್ನ ಎಲ್ಲಾ ಇಂದ್ರಿಯಗಳೂ ವ್ಯಗ್ರವಾಗಿವೆ. ನಾಳೆ ಅವನು ಏನು ಹೇಳುವನು ಎಂದೇ ನನ್ನ ಈ ದಿನದ ಚಿಂತೆ.
ತನ್ಮೇ ಬ್ರೂಹಿ ವಿದುರ ತ್ವಂ ಯಥಾವತ್
ಮನೀಷಿತಂ ಸರ್ವಮಜಾತಶತ್ರೋಃ |
ಯಥಾ ಚ ನಸ್ತಾತ ಹಿತಂ ಭವೇಚ್ಚ
ಪ್ರಜಾಶ್ಚ ಸರ್ವಾಃ ಸುಖಿತಾ ಭವೇಯುಃ ॥14॥
ಎಲೈ ವಿದುರನೇ, ಅಜಾತಶತ್ರುವಿನ ಅಭಿಪ್ರಾಯವನ್ನೆಲ್ಲಾ ನೀನು ನನಗೆ ಸರಿಯಾಗಿ ಹೇಳು. ಪ್ರೀತಿಪಾತ್ರನೇ, ನಮಗೆ ಹಿತವಾಗುವಂತೆ ಎಲ್ಲ ಪ್ರಜೆಗಳಿಗೂ ಸುಖವಾಗುವಂತೆ ಅವನ ಅಭಿಪ್ರಾಯವು ಏನಿದೆ?
ವಿದುರಃ
ಅಭಿಯುಕ್ತಂ ಬಲವತಾ ದುರ್ಬಲಂ ಹೀನಸಾಧನಮ್ |
ಹೃತಸ್ವಂ ಕಾಮಿನಂ ಚೋರಮಾವಿಶಂತಿ ಪ್ರಜಾಗರಾಃ ॥15॥
ಕಚ್ಚಿದೇತೈರ್ಮಹಾದೋಷೈರ್ನ ಸ್ಪೃಷ್ಟೋಽಸಿ ನರಾಧಿಪ |
ಕಚ್ಚಿಚ್ಚ ಪರವಿತ್ತೇಷು ಗೃಧ್ನನ್ ನ ಪರಿತಪ್ಯಸೇ ॥16॥
ವಿದುರ ಬಲಿಷ್ಠರಾಜನ ಆಕ್ರಮಣಕ್ಕೆ ಒಳಗಾದ ದುರ್ಬಲನಾದ ರಾಜನಿಗೆ, ತನ್ನ ಸಂಪತ್ತೆಲ್ಲವನ್ನೂ ಕಳೆದುಕೊಂಡವನಿಗೆ, ಕಾಮಿಯಾದವನಿಗೆ ಮತ್ತು ಚೋರನಿಗೆ ಜಾಗರಣೆಯು ಉಂಟಾಗುತ್ತದೆ. ಎಲೈ ನರಾಧಿಪನೇ, ನೀನು ಈ ಯಾವ ದೋಷದಿಂದಲೂ ಕೂಡಿಲ್ಲವಷ್ಟೆ? ಇನ್ನೊಬ್ಬರ ಸಂಪತ್ತಿನಲ್ಲಿ ಆಸೆಯನ್ನು ಮಾಡಿ ಪರಿತಾಪವನ್ನು ಪಡುತ್ತಿಲ್ಲವಷ್ಟೆ?
ಧೃತರಾಷ್ಟ್ರಃ
ಶ್ರೋತುಮಿಚ್ಛಾಮಿ ತೇ ಧರ್ಮ್ಯಂ ಪರಂ ನೈಶ್ರೇಯಸಂ ವಚಃ |
ಅಸ್ಮಿನ್ ರಾಜರ್ಷಿವಂಶೇ ಹಿ ತ್ವಮೇಕಃ ಪ್ರಾಜ್ಞಸತ್ತಮಃ ॥17॥
ಧೃತರಾಷ್ಟ್ರ ನಿನ್ನಿಂದ ಮೋಕ್ಷಸಾಧಕವಾದ ಧರ್ಮದ ಮಾತುಗಳನ್ನು ಕೇಳಲು ಬಯಸುತ್ತೇನೆ. ಈ ರಾಜರ್ಷಿವಂಶದಲ್ಲಿ ನೀನೊಬ್ಬನೇ ಅತ್ಯಂತ ಪ್ರಾಜ್ಞನಾದವನು.
ವಿದುರಃ
ರಾಜಲಕ್ಷಣಸಂಪನ್ನಃ ತ್ರೈಲೋಕಸ್ಯಾಪಿ ಯಃ ಪ್ರಿಯಃ |
ಪ್ರೇಷ್ಯಂತೇ ಪ್ರೇಷಿತಶ್ಚೈವ ಧೃತರಾಷ್ಟ್ರ ಯುಧಿಷ್ಠಿರಮ್ ॥18॥
ವಿಪರೀತಃ ಸಪುತ್ರಸ್ತ್ವಂ ಭಾಗಧೇಯೇನ ಲಂಭಿತಃ ॥19॥
ವಿದುರ ಎಲೈ ಧೃತರಾಷ್ಟ್ರನೇ, ರಾಜಲಕ್ಷಣಗಳಿಂದ ಕೂಡಿ ಮೂರುಲೋಕಗಳಿಗೂ ಪ್ರಿಯನಾದ ಯುಧಿಷ್ಠಿರನ ಬಳಿಗೆ ದೂತರು ಹಿಂದೆ ಕಳುಹಿಸಲ್ಪಟ್ಟಿದ್ದಾರೆ. ಮುಂದೆಯೂ ಕಳುಹಿಸಲ್ಪಡುತ್ತಾರೆ (ದೂತರು ಮಾತ್ರ ಹೋಗುತ್ತಾರೆಯೇ ಹೊರತು ರಾಜ್ಯದಾನವನ್ನು ಮಾಡುವ ವಿಷಯದಲ್ಲಿ ನಿನ್ನ ಅಭಿಪ್ರಾಯವಿಲ್ಲ ಎಂದು ಧ್ವನಿ). ನಿನ್ನ ಪುತ್ರರ ಸ್ವಭಾವಕ್ಕೆ ವಿಪರೀತವಾದ ಸ್ವಭಾವವುಳ್ಳ ಯುಧಿಷ್ಠಿರನು ನಿನ್ನ ಅದೃಷ್ಟದಿಂದ ನಿನಗೆ ಪುತ್ರನಾಗಿ ದೊರೆತಿದ್ದಾನೆ.
ಅರ್ಚಿಷಾ ಪ್ರಜ್ಞಯಾ ಚೈವ ಧರ್ಮಾತ್ಮಾ ಧರ್ಮಕೋವಿದಃ ॥20॥
ಆನೃಶಂಸ್ಯಾದನುಕ್ರೋಶಾದ್ ಧರ್ಮಾತ್ ಸತ್ಯಾತ್ ಪರಾಕ್ರಮಾತ್ |
ಗುರುತ್ವಂ ತ್ವಯಿ ಸಂಪ್ರೇಕ್ಷ್ಯ ಬಹೂನ್ ಕ್ಲೇಶಾಂಸ್ತಿತಿಕ್ಷತೇ ॥21॥
ತನ್ನ ಕಾಂತಿಯಿಂದಲೂ, ಪ್ರಜ್ಞೆಯಿಂದಲೂ ಅವನು ಧರ್ಮಾತ್ಮನೂ ಮತ್ತು ಧರ್ಮಕೋವಿದನೂ ಆಗಿದ್ದಾನೆ. ಮಾರ್ದವ, ದಯೆ, ಧರ್ಮ, ಸತ್ಯ, ಪರಾಕ್ರಮ - ಈ ಗುಣಗಳು ಅವನಲ್ಲಿರುವುದರಿಂದ ನಿನ್ನ ಗುರುತ್ವವನ್ನು ಗಮನಿಸಿ ಅನೇಕ ಕ್ಲೇಶಗಳನ್ನು ಅನುಭವಿಸುತ್ತಿದ್ದಾನೆ.
ದುರ್ಯೋಧನೇ ಸೌಬಲೇ ಚ ಕರ್ಣೇ ದುಃಶಾಸನೇ ತಥಾ |
ಏತೇಷ್ವೈಶ್ವರ್ಯಮಾಧಾಯ ಕಥಂ ತ್ವಂ ಭೂತಿಮಿಚ್ಛಸಿ ॥22॥
ದುರ್ಯೋಧನ, ಶಕುನಿ, ಕರ್ಣ, ದುಶ್ಶಾಸನ ಇವರಲ್ಲಿ ನಿನ್ನ ಐಶ್ವರ್ಯವನ್ನು ಒಪ್ಪಿಸಿ ನೀನು ಹೇಗೆ ಸಮೃದ್ಧಿಯನ್ನು ಬಯಸುವಿ?
ಆತ್ಮಜ್ಞಾನಂ ಸಮಾರಂಭಃ ತಿತಿಕ್ಷಾ ಧರ್ಮನಿತ್ಯತಾ |
ವಾಕ್ಸಂಯಮಶ್ಚ ದಾನಂ ಚ ನೈತೇಷ್ವೇತಾನಿ ಕೃತ್ಸ್ನಶಃ ॥23॥

ಆತ್ಮಜ್ಞಾನ, ಒಳ್ಳೆಯ ಉಪಕ್ರಮ, ದ್ವಂದ್ವಸಹಿಷ್ಣುತೆ, ನಿತ್ಯವೂ ಧರ್ಮಾಚರಣೆ, ಮಾತಿನಲ್ಲಿ ನಿಯಂತ್ರಣ, ದಾನ ಈ ಗುಣಗಳು ಇವರಿಂದ ಸಂಪೂರ್ಣವಾಗಿ ಹೊರಟುಹೋಗಿವೆ.

ಏಕಸ್ಮಾದ್ ವೃಕ್ಷಾದ್ ಯಜ್ಞಪಾತ್ರಾಣಿ ರಾಜನ್
ಸ್ರುಕ್ ಚ ದ್ರೋಣೀ ಪೀಡಿನೀ ಲೋಡಿನೀ ಚ |
ಏತದ್ ರಾಜನ್ ಬ್ರುವತೋ ಮೇ ನಿಬೋಧ
ಏಕಸ್ಮಾದ್ ವೈ ಜಾಯತೇಽಸಚ್ಚ ಸಚ್ಚ ||24||

ರಾಜನೇ, ಒಂದೇ ಅಶ್ವತ್ಥವೃಕ್ಷದಿಂದ ಯಜ್ಞಪಾತ್ರೆಗಳಾದ ಸ್ರುಕ್, ದ್ರೋಣಿ ಮೊದಲಾದವು, ಹಿಂಡುವ ಮತ್ತು ವಿಷವನ್ನು ಕಲುಕುವ ಪೀಡಿನೀ, ಲೋಡಿನೀ ಪಾತ್ರೆಗಳು ಉಂಟಾಗುತ್ತವೆ. ರಾಜನೇ, ನನ್ನ ಮಾತಿನಿಂದ ಇದನ್ನು ತಿಳಿ. ಒಬ್ಬನಿಂದಲೇ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಉಂಟಾಗುತ್ತದೆ( ಒಂದೇ ಕುಲದಲ್ಲಿಯೇ ಸುಪುತ್ರರೂ, ದುಷ್ಪುತ್ರರೂ ಜನಿಸುತ್ತಾರೆ).

ನಿಷೇವತೇ ಪ್ರಶಸ್ತಾನಿ ನಿಂದಿತಾನಿ ನ ಸೇವತೇ |
ಅನಾಸ್ತಿಕಃ ಶುದ್ಧಭಾವಃ ಶ್ರದ್ಧಧಾನಃ ಸ ಪಂಡಿತಃ ||25||

ಯಾವನು ಪ್ರಶಸ್ತವಾದ ವಸ್ತುಗಳನ್ನು ಸೇವಿಸುತ್ತಾನೆಯೋ, ನಿಂದಿತವಾದ ವಸ್ತುಗಳನ್ನು ತ್ಯಜಿಸುತ್ತಾನೆಯೋ, ಅನಾಸ್ತಿಕನಾಗಿ ಶುದ್ಧವಾದ ಅಭಿಪ್ರಾಯವನ್ನು ಹೊಂದಿ ಶ್ರದ್ಧಾಳುವಾದ ಅವನು ಪಂಡಿತನೆನಿಸುತ್ತಾನೆ.

ಕ್ರೋಧೋ ಹರ್ಷಶ್ಚ ದರ್ಪಶ್ಚ ಹ್ರೀಃ ಸ್ತಂಭೋ ಮಾನ್ಯಮಾನಿತಾ |
ಯಮರ್ಥಾಃ ನಾಪಕರ್ಷಂತಿ ಸ ವೈ ಪಂಡಿತ ಉಚ್ಯತೇ ||26||

ಕ್ರೋಧ, ಧನಾದಿ ಮದ, ದರ್ಪ, ಪೂಜ್ಯರನ್ನು ಪೂಜಿಸುವುದರಲ್ಲಿ ನಾಚಿಕೆ, ತನ್ನನ್ನೇ ಎಲ್ಲರಿಗಿಂತಲೂ ಶ್ರೇಷ್ಠನೆಂದು ತಿಳಿದುಕೊಳ್ಳುವುದು ಈ ಪದಾರ್ಥಗಳು ಯಾವನನ್ನು ಕೆಳಗೆ ಎಳೆಯುವುದಿಲ್ಲವೋ ಅವನು ಪಂಡಿತನೆನಿಸುತ್ತಾನೆ.

ಯಸ್ಯ ಕೃತ್ಯಂ ನ ಜಾನಂತಿ ಮಂತ್ರಂ ವಾ ಮಂತ್ರಿತಂ ಪರೇ |
ಕೃತಮೇವಾಸ್ಯ ಜಾನಂತಿ ಸ ವೈ ಪಂಡಿತ ಉಚ್ಯತೇ ||27||

ಯಾವನ ಮುಂದೆ ಮಾಡಲಿರುವ ಕಾರ್ಯವನ್ನಾಗಲೀ, ಮಂತ್ರಾಲೋಚನೆಯನ್ನಾಗಲೀ ಇನ್ನೊಬ್ಬರು ತಿಳಿಯುವುದಿಲ್ಲವೋ, ಅವನು ಮಾಡಿದುದನ್ನು ಮಾತ್ರ ತಿಳಿಯುತ್ತಾರೆಯೋ ಅವನು ಪಂಡಿತನೆನಿಸುತ್ತಾನೆ.

ಯಸ್ಯ ಕೃತ್ಯಂ ನ ವಿಘ್ನಂತಿ ಶೀತಮುಷ್ಣಂ ಭಯಂ ರತಿಃ |
ಸಮೃದ್ಧಿರಸಮೃದ್ಧಿರ್ವಾ ಸ ವೈ ಪಂಡಿತ ಉಚ್ಯತೇ ||28||

ಯಾವನ ಉದ್ದಿಷ್ಟವಾದ ಕಾರ್ಯಕ್ಕೆ ಶೀತವಾಗಲೀ, ಉಷ್ಣವಾಗಲೀ, ಭಯವಾಗಲೀ, ಆಸೆಯಾಗಲೀ, ಸಮೃದ್ಧಿಯಾಗಲೀ ಅಥವಾ ಬಡತನವಾಗಲೀ ಅಡ್ಡಿಯನ್ನು ಮಾಡುವುದಿಲ್ಲವೋ ಅವನು ಪಂಡಿತನೆನಿಸುತ್ತಾನೆ.

ಯಸ್ಯ ಸಂಸಾರಿಣೀ ಪ್ರಜ್ಞಾ ಧರ್ಮಾರ್ಥಾವನುವರ್ತತೇ |
ಕಾಮಾದರ್ಥಂ ವೃಣೀತೇ ಯಃ ಸ ವೈ ಪಂಡಿತ ಉಚ್ಯತೇ ||29||

ಯಾವನ ವಿಸ್ತಾರವಾದ ಪ್ರಜ್ಞೆಯು ಧರ್ಮಾರ್ಥಗಳಿಗೆ ಅನುಗುಣವಾಗಿರುತ್ತದೆಯೋ ಮತ್ತು ಯಾವನು ಕಾಮಕ್ಕಿಂತಲೂ ಅರ್ಥವನ್ನೇ ಆರಿಸಿಕೊಳ್ಳುತ್ತಾನೆಯೋ ಅವನು ಪಂಡಿತನೆನಿಸುತ್ತಾನೆ.

ಯಥಾಶಕ್ತಿ ಚಿಕೀರ್ಷಂತಿ ಯಥಾಶಕ್ತಿ ಚ ಕುರ್ವತೇ |
ನ ಕಿಂಚಿದವಮನ್ಯಂತೇ ಪಂಡಿತಾ ಭರತರ್ಷಭ ||30||

ಎಲೈ ಭರತರ್ಷಭನೇ, ಪಂಡಿತರಾದವರು ತಮ್ಮ ಶಕ್ತಿಗೆ ಅನುಗುಣವಾಗಿ ಕಾರ್ಯವನ್ನು ಮಾಡಲು ಬಯಸುತ್ತಾರೆ ಮತ್ತು ಶಕ್ತಿಗನುಗುಣವಾಗಿ ಮಾಡುತ್ತಾರೆ. ಅವರು ಯಾರನ್ನೂ ಅವಮಾನಗೊಳಿಸುವುದಿಲ್ಲ.

ಕ್ಷಿಪ್ರಂ ವಿಜಾನಾತಿ ಚಿರಂ ಶೃಣೋತಿ
ವಿಜ್ಞಾಯ ಚಾರ್ಥಂ ಭಜತೇ ನ ಕಾಮಾನ್ |
ನಾಸಂಪೃಷ್ಟೋ ವ್ಯುಪಯುಂಕ್ತೇ ಪರಾರ್ಥೇ
ತತ್ ಪ್ರಜ್ಞಾನಂ ಪ್ರಥಮಂ ಪಂಡಿತಸ್ಯ ||31||

ಅವರು ಬೇಗ ವಿಷಯವನ್ನು ತೆಗೆದುಕೊಳ್ಳುತ್ತಾರೆ. ಬಹಳ ಕಾಲ ಕೇಳುತ್ತಾರೆ. ತಿಳಿದ ಮೇಲೆ ಅರ್ಥವನ್ನು ಸೇವಿಸುತ್ತಾರೆ, ಕಾಮಗಳನ್ನಲ್ಲ. ಇನ್ನೊಬ್ಬರ ಅನುಮತಿ ಇಲ್ಲದೆ ಅವರ ವಸ್ತುಗಳನ್ನು ಉಪಯೋಗಿಸುವುದಿಲ್ಲ. ಇದು ಪಂಡಿತರ ಮೊದಲನೆಯ ಲಕ್ಷಣ.

ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಮ್ |
ಆಪತ್ಸು ಚ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ||32||

ತಮಗೆ ದೊರಕಲಾರದುದನ್ನು ಬಯಸುವುದಿಲ್ಲ. ನಷ್ಟವಾದ ವಸ್ತುವನ್ನು ಕುರಿತು ಶೋಕಪಡಲು ಬಯಸುವುದಿಲ್ಲ. ಆಪತ್ತುಗಳಲ್ಲಿ ಮೋಹಕ್ಕೆ ಒಳಗಾಗುವುದಿಲ್ಲ. ಅಂತಹ ಮನುಷ್ಯರು ಪಂಡಿತಬುದ್ಧಿಯುಳ್ಳವರು.

ನಿಶ್ಚಿತ್ಯ ಯಃ ಕುರುತೇ ನಾಂತರ್ವಸತಿ ಕರ್ಮಣಃ |
ಅವಂಧ್ಯಕಾಲೇ ವಶ್ಯಾತ್ಮಾ ಸ ವೈ ಪಂಡಿತ ಉಚ್ಯತೇ ||33||

ಸರಿಯಾಗಿ ನಿಶ್ಚಯವನ್ನು ಮಾಡಿ ಕಾರ್ಯವನ್ನು ಆರಂಭಿಸುತ್ತಾರೆ. ಆರಂಭಿಸಿದ ಕರ್ಮವನ್ನು ಮಧ್ಯದಲ್ಲಿಯೇ ನಿಲ್ಲಿಸುವುದಿಲ್ಲ. ಕಾಲವನ್ನು ವ್ಯರ್ಥವಾಗಿ ಕಳೆಯುವುದಿಲ್ಲ. ಮನಸ್ಸನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತಾರೆ. ಅವರು ಪಂಡಿತರೆನಿಸುತ್ತಾರೆ.

ಆರ್ಯಕರ್ಮಣಿ ರಜ್ಯಂತೇ ಭೂತಿಕರ್ಮಾಣಿ ಕುರ್ವತೇ |
ಹಿತಂ ಚ ನಾಭ್ಯಸೂಯಂತಿ ಪಂಡಿತಾ ಭರತರ್ಷಭ ||34||

ಎಲೈ ಭರತರ್ಷಭನೇ, ಪಂಡಿತರು ಶ್ರೇಷ್ಠವಾದ ಕರ್ಮಗಳಲ್ಲಿ ಆಸಕ್ತರಾಗುತ್ತಾರೆ. ಸಮೃದ್ಧಿಯನ್ನು ಉಂಟುಮಾಡುವ ಕರ್ಮಗಳನ್ನು ಮಾಡುತ್ತಾರೆ. ಹಿತರಾದವರನ್ನು ನೋಡಿ ಎಂದೂ ಅಸೂಯೆ ಪಡುವುದಿಲ್ಲ.
ನ ಹೃಷ್ಯತ್ಯಾತ್ಮಸಮ್ಮಾನೇ ನಾವಮಾನೇನ ತಪ್ಯತೇ |
ಗಾಂಗೋ ಹ್ರದ ಇವಾಕ್ಷೋಭ್ಯೋ ಯಃ ಸ ಪಂಡಿತ ಉಚ್ಯತೇ ॥35॥
ಯಾವನು ತನಗೆ ಸನ್ಮಾನವನ್ನು ಮಾಡಿದರೆ ಸಂತೋಷಪಡುವುದಿಲ್ಲವೋ, ಅವಮಾನವನ್ನು ಮಾಡಿದರೆ ದುಃಖಪಡುವುದಿಲ್ಲವೋ, ಗಂಗಾನದಿಯ ಮಡುವಿನಂತೆ ಅಚಾಲ್ಯನಾಗಿರುತ್ತಾನೆಯೋ ಅವನು ಪಂಡಿತನೆನಿಸುತ್ತಾನೆ.
ತತ್ವಜ್ಞಃ ಸರ್ವಭೂತಾನಾಂ ಯೋಗಜ್ಞಃ ಸರ್ವಕರ್ಮಣಾಮ್ |
ಉಪಾಯಜ್ಞೋ ಮನುಷ್ಯಾಣಾಂ ನರಃ ಪಂಡಿತ ಉಚ್ಯತೇ ॥36॥
ಎಲ್ಲ ಪ್ರಾಣಿಗಳ ತತ್ವವನ್ನು ತಿಳಿದವನೂ, ಎಲ್ಲ ಕರ್ಮವನ್ನು ಮಾಡುವ ರೀತಿಯನ್ನು ತಿಳಿದವನೂ, ಮನುಷ್ಯರ ಉಪಾಯಗಳನ್ನು ತಿಳಿದವನೂ ಪಂಡಿತನೆನಿಸುತ್ತಾನೆ.
ಪ್ರವೃತ್ತವಾಕ್ ಚಿತ್ರಕಥ ಊಹವಾನ್ ಪ್ರತಿಭಾನವಾನ್ |
ಶುದ್ಧಗ್ರಂಥಸ್ಯ ವಕ್ತಾ ಚ ಯಃ ಸ ಪಂಡಿತ ಉಚ್ಯತೇ ॥37॥
ಉತ್ತಮರ ಚರಿತ್ರೆಯಲ್ಲಿರುವ ಮಾತನ್ನು ಹೇಳುವವನು, ವಿಚಿತ್ರವಾದ ಕಥೆಯನ್ನು ಹೇಳುವವನು, ಕಲ್ಪನಾಶಕ್ತಿಯನ್ನುಳ್ಳವನು, ಪ್ರತಿಭಾಶಕ್ತಿಯುಳ್ಳವನು, ಶುದ್ಧವಾದ ಗ್ರಂಥವನ್ನು ಹೇಳುವವನು ಪಂಡಿತನೆನಿಸುತ್ತಾನೆ.
ಶ್ರುತಂ ಪ್ರಜ್ಞಾನುಗಂ ಯಸ್ಯ ಪ್ರಜ್ಞಾ ಚೈವ ಶ್ರುತಾನುಗಾ |
ಅಸಂಭಿನ್ನಾರ್ಯಮರ್ಯಾದಃ ಪಂಡಿತಾಖ್ಯಾಂ ಲಭೇತ್ ತು ಸಃ ॥38॥
ಯಾವನ ವಿದ್ಯೆಯು ಅವನ ಬುದ್ಧಿಗೆ ಅನುಸಾರವಾಗಿರುತ್ತದೆಯೋ, ಯಾವನ ಬುದ್ಧಿಯು ಅವನ ವಿದ್ಯೆಗೆ ಅನುಸಾರವಾಗಿರುತ್ತದೆಯೋ, ಯಾವನು ಉತ್ತಮರು ಹಾಕಿದ ಎಲ್ಲೆಯನ್ನು ಮೀರುವುದಿಲ್ಲವೋ ಅವನು ಪಂಡಿತನೆಂಬ ಹೆಸರನ್ನು ಪಡೆಯುತ್ತಾನೆ.
ಅರ್ಥಂ ಮಹಾಂತಮಾಸಾದ್ಯ ವಿದ್ಯಾಮೈಶ್ವರ್ಯಮೇವ ಚ |
ವಿಚರತ್ಯಸಮುನ್ನದ್ಧೋ ಯಃ ಸ ಪಂಡಿತ ಉಚ್ಯತೇ ॥39॥
ಬಹಳ ಧನವನ್ನೂ, ವಿದ್ಯೆಯನ್ನೂ ಮತ್ತು ಐಶ್ವರ್ಯವನ್ನೂ ಹೊಂದಿ ಯಾವನು ಅಹಂಕಾರವಿಲ್ಲದೆ ಸಂಚರಿಸುತ್ತಾನೆಯೋ ಅವನು ಪಂಡಿತನೆನಿಸುತ್ತಾನೆ.
ಅಶ್ರುತಶ್ಚ ಸಮುನ್ನದ್ಧೋ ದರಿದ್ರಶ್ಚ ಮಹಾಮನಾಃ |
ಅರ್ಥಾಂಶ್ಚಾಕರ್ಮಣಾ ಪ್ರೇಪ್ಸುಃ ಮೂಢ ಇತ್ಯುಚ್ಯತೇ ಬುಧೈಃ ॥40॥
ವಿದ್ಯೆ ಇಲ್ಲದಿದ್ದರೂ ಅಹಂಕಾರಿಯಾದವನು, ದರಿದ್ರನಾದರೂ ಗರ್ವವನ್ನು ಹೊಂದಿದವನು, ಕರ್ಮವನ್ನು ಮಾಡದೆ ಫಲವನ್ನು ಅಪೇಕ್ಷಿಸುವವನು ಬುಧರಿಂದ ಮೂಢನೆಂದು ಕರೆಯಲ್ಪಡುತ್ತಾನೆ.
ಸ್ವಮರ್ಥಂ ಯಃ ಪರಿತ್ಯಜ್ಯ ಪರಾರ್ಥಮನುತಿಷ್ಠತಿ |
ಮಿಥ್ಯಾ ಚರತಿ ಮಿತ್ರಾರ್ಥೇ ಯಶ್ಚ ಮೂಢಃ ಸ ಉಚ್ಯತೇ ॥41॥
ತನ್ನ ಸ್ನಾನ-ಜಪಾದಿಕಾರ್ಯವನ್ನು ಬಿಟ್ಟು ಯಾವನು ಬೇರೆಯವರಿಗಾಗಿ ಜಪಾದಿಗಳನ್ನು ಮಾಡುತ್ತಾನೆಯೋ ಮತ್ತು ಸ್ನೇಹಿತರ ವಿಷಯದಲ್ಲಿ ಮೋಸದಿಂದ ನಡೆದುಕೊಳ್ಳುತ್ತಾನೆಯೋ ಅವನು ಮೂಢನೆನಿಸುತ್ತಾನೆ.
ಅಕಾಮಾನ್ ಕಾಮಯತಿ ಯಃ ಕಾಮಯಾನಾನ್ ಪರಿತ್ಯಜೇತ್ |
ಬಲವಂತಂ ಚ ಯೋ ದ್ವೇಷ್ಟಿ ತಮಾಹುರ್ಮೂಢಚೇತಸಮ್ ॥42॥
ಕಾಮಿಸಬಾರದವರನ್ನು ಕಾಮಿಸುತ್ತಾನೆ, ಕಾಮಿಸಬೇಕಾದ ಸ್ವಪತ್ನಿ ಮೊದಲಾದವರನ್ನು ಪರಿತ್ಯಜಿಸುತ್ತಾನೆ, ತನಗಿಂತ ಬಲಿಷ್ಠರಾದವರನ್ನು ದ್ವೇಷಿಸುತ್ತಾನೆ ಅಂತಹವನು ಮೂಢಚೇತಸನೆನಿಸುತ್ತಾನೆ.
ಅಮಿತ್ರಂ ಕುರುತೇ ಮಿತ್ರಂ ಮಿತ್ರಂ ದ್ವೇಷ್ಟಿ ಹಿನಸ್ತಿ ಚ |
ಕರ್ಮ ಚಾರಭತೇ ದುಷ್ಟಂ ತಮಾಹುರ್ಮೂಢಚೇತಸಮ್ ॥43॥
ಶತ್ರುವನ್ನು ಮಿತ್ರರನ್ನಾಗಿ ಮಾಡಿಕೊಳ್ಳುತ್ತಾನೆ, ಮಿತ್ರರನ್ನು ದ್ವೇಷ ಮಾಡುತ್ತಾನೆ ಮತ್ತು ಹಿಂಸಿಸುತ್ತಾನೆ, ದುಷ್ಟಕಾರ್ಯವನ್ನು ಪ್ರಾರಂಭಿಸುತ್ತಾನೆ, ಅವನನ್ನು ಮೂಢನೆನ್ನುತ್ತಾರೆ.
ಸಂಸಾರಯತಿ ಕೃತ್ಯಾನಿ ಸರ್ವತ್ರ ವಿಚಿಕಿತ್ಸತೇ |
ಚಿರಂ ಕರೋತಿ ಕ್ಷಿಪ್ರಾರ್ಥೇ ಸ ಮೂಢೋ ಭರತರ್ಷಭ ॥44॥
ಪುಣ್ಯಕರ್ಮಗಳನ್ನು ಇನ್ನೊಬ್ಬರಿಗೆ ಉಪದೇಶ ಮಾಡುತ್ತಾನೆ (ತಾನು ಮಾತ್ರ ಮಾಡುವುದಿಲ್ಲ), ಎಲ್ಲ ಕಡೆಯಲ್ಲಿಯೂ ಸಂಶಯವನ್ನು ಹೊಂದುತ್ತಾನೆ, ಬೇಗ ಮಾಡಬೇಕಾದ ಕಾರ್ಯವನ್ನು ವಿಳಂಬವಾಗಿ ಮಾಡುತ್ತಾನೆ, ಭರತರ್ಷಭನೇ, ಅವನು ಮೂಢ.
ಶ್ರಾದ್ಧಂ ಪಿತೃಭ್ಯೋ ನಾದತ್ತೇ ದೈವತಾನಿ ನ ಚಾರ್ಚತಿ |
ಸುಹೃನ್ಮಿತ್ರಂ ನ ಭಜತೇ ತಮಾಹುರ್ಮೂಢಲಕ್ಷಣಮ್ ॥45॥
ಪಿತೃಗಳಿಗೆ ಶ್ರಾದ್ಧವನ್ನು ಕೊಡುವುದಿಲ್ಲ, ದೇವತೆಗಳನ್ನು ಅಥವಾ ಸಹೃದರನ್ನೂ, ಮಿತ್ರರನ್ನೂ ಸೇವಿಸುವುದಿಲ್ಲ ಅಂತಹವನು ಮೂಢಲಕ್ಷಣವುಳ್ಳವನು.
ಅನಾಹೂತಃ ಸಂಪ್ರವಿಶೇದ್ ಅಪೃಷ್ಟೋ ಪರಿಭಾಷತೇ |
ಅವಿಶ್ವಸ್ತೇ ವಿಶ್ವಸಿತಿ ಮೂಢಚೇತಾ ನರಾಧಮಃ ॥46॥
ಮೂಢನಾದ ನರಾಧಮನು ಆಹ್ವಾನವಿಲ್ಲದೆ ಪ್ರವೇಶಿಸುತ್ತಾನೆ, ಕೇಳದಿದ್ದರೂ ಮಾತನಾಡುತ್ತಾನೆ, ವಿಶ್ವಾಸಕ್ಕೆ ಯೋಗ್ಯರಲ್ಲದವರಲ್ಲಿ

ವಿಶ್ವಾಸವನ್ನು ಮಾಡುತ್ತಾನೆ.
ಪರಂ ಕ್ಷಿಪತಿ ದೋಷೇಣ ವರ್ತಮಾನಃ ಸ್ವಯಂ ತಥಾ |
ಯಶ್ಚ ಗೃಧ್ಯತ್ಯನೀಶಃ ಸನ್ ಸ ಚ ಮೂಢತಮೋ ನರಃ ॥47॥
ತಾನು ಸ್ವತಃ ದುಷ್ಟನಾಗಿ ಅದೇ ದೋಷದಿಂದ ಕೂಡಿದ ಇನ್ನೊಬ್ಬರನ್ನು ನಿಂದಿಸುತ್ತಾನೆ. ತನಗೆ ಯಾವ ಸಾಮರ್ಥ್ಯವಿಲ್ಲದಿದ್ದರೂ ಎಲ್ಲವನ್ನೂ ಬಯಸುತ್ತಾನೊ ಅವನು ಅತ್ಯಂತ ಮೂಢನಾದ ಮನುಷ್ಯ.
ಆತ್ಮನೋ ಬಲಮಜ್ಞಾಯ ಧರ್ಮಾರ್ಥಪರಿವರ್ಜಿತಃ |
ಅಸಾಧ್ಯಂ ಕರ್ಮ ಯಃ ಕುರ್ಯಾತ್ ಮೂಢಬುದ್ಧಿರಿಹೋಚ್ಯತೇ ॥48॥
ಯಾವನು ತನ್ನ ಸಾಮರ್ಥ್ಯವನ್ನು ತಿಳಿಯದೆ ಧರ್ಮಾರ್ಥಗಳನ್ನು ಪರಿತ್ಯಜಿಸಿ ಅಸಾಧ್ಯವಾದ ಕರ್ಮವನ್ನು ಮಾಡಲು ಹೊರಡುತ್ತಾನೆಯೋ ಅವನನ್ನು ಮೂಢ ಬುದ್ಧಿ ಎಂದು ಇಲ್ಲಿ ಕರೆಯುತ್ತಾರೆ.
ಅಶಿಷ್ಯಂ ಶಾಸ್ತಿ ಯೋ ರಾಜನ್ ಯಶ್ಚ ಶಿಷ್ಯಂ ನ ಶಾಸ್ತಿ ಚ |
ಕದರ್ಯಂ ಭಜತೇ ಯಸ್ತು ತಮಾಹುರ್ಮೂಢಚೇತಸಮ್ ॥49॥
ರಾಜನ್, ಶಿಷ್ಯನಲ್ಲದವನಿಗೆ ಯಾವನು ಶಾಸನವನ್ನು ಮಾಡುತ್ತಾನೆಯೋ, ಯಾವನು ಶಿಷ್ಯನಿಗೆ ಶಾಸನವನ್ನು ಮಾಡುವುದಿಲ್ಲವೋ ಮತ್ತು ನೀಚವ್ಯಕ್ತಿಯನ್ನು ಸೇವಿಸುತ್ತಾನೆಯೋ ಅವನನ್ನು ಮೂಢನೆಂದು ಕರೆಯುತ್ತಾರೆ.
ಏಕಃ ಸಂಪನ್ನಮಶ್ನಾತಿ ವಸ್ತೇ ವಾಸಶ್ಚ ಶೋಭನಮ್ |
ಯೋಽಸಂವಿಭಜ್ಯ ಭೃತ್ಯೇಭ್ಯಃ ಕೋ ನೃಶಂಸತರಸ್ತತಃ ॥50॥
ಯಾವನು ಭಕ್ತರಿಗೆ (ಆಶ್ರಿತರಿಗೆ) ಹಂಚದೆ ಒಬ್ಬನೇ ಒಳ್ಳೆಯ ಊಟವನ್ನು ಮಾಡುತ್ತಾನೆಯೋ, ಒಳ್ಳೆಯ ವಸ್ತ್ರಗಳನ್ನು ಧರಿಸುತ್ತಾನೆಯೋ ಅವನಿಗಿಂತ ಕ್ರೂರರಾದವರು ಯಾರಿದ್ದಾರೆ?
ಏಕಃ ಪಾಪಾನಿ ಕುರುತೇ ಫಲಂ ಭುಂಕ್ತೇ ಮಹಾಜನಃ |
ಭೋಕ್ತಾರೋ ವಿಪ್ರಮುಚ್ಯಂತೇ ಕರ್ತಾ ದೋಷೇಣ ಲಿಪ್ಯತೇ ॥51॥
ಒಬ್ಬನು ಪಾಪವನ್ನು ಮಾಡುತ್ತಾನೆ, ಅವನ ಸಂಸರ್ಗವಶದಿಂದ ಮಹಾಜನರು ಅಹಿತಕರ್ಮದ ಫಲವನ್ನು ಅನುಭವಿಸುತ್ತಾರೆ. ಫಲವನ್ನು ಅನುಭವಿಸಿದ ಮಹಾಜನರು ಪರಲೋಕದ ಅನೃತದಿಂದ ಬಿಡುಗಡೆಯನ್ನು ಹೊಂದುತ್ತಾರೆ. ಪಾಪಕರ್ಮವನ್ನು ಮಾಡಿದವನು ಮಾತ್ರ ಪರಲೋಕದ ದುಃಖಫಲವನ್ನು ಅನುಭವಿಸುತ್ತಾನೆ.
ಏಕಂ ಹನ್ಯಾನ್ನ ವಾ ಹನ್ಯಾದ್ ಇಷುರ್ಮುಕ್ತೋ ಧನುಷ್ಮತಾ |
ಬುದ್ಧಿರ್ಬುದ್ಧಿಮತೋತ್ಸೃಷ್ಟಾ ಹನ್ಯಾದ್ ರಾಷ್ಟ್ರಂ ಸರಾಜಕಮ್ ॥52॥
ಧನುರ್ಧಾರಿಯು ಪ್ರಯೋಗಿಸಿದ ಬಾಣವು ಒಬ್ಬನನ್ನು ಕೊಲ್ಲಬಹುದು ಅಥವಾ ಕೊಲ್ಲದೆ ಇರಬಹುದು. ಆದರೆ ಬುದ್ಧಿವಂತನಾದವನು ಪ್ರಯೋಗಿಸಿದ ಒಂದು ಬುದ್ಧಿಯು (ದುರ್ಬುದ್ಧಿಯು) ರಾಜಸಹಿತವಾದ ರಾಷ್ಟ್ರವನ್ನೇ ಕೊಂದೀತು!
ಏಕಯಾ ದ್ವೇ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು |
ಪಂಚ ಜಿತ್ವಾ ವಿಜಿತ್ವಾ ಷಟ್ ಸಪ್ತ ಹಿತ್ವಾ ಸುಖೀ ಭವ ॥53॥
ಒಂದು ವೇದದಿಂದ ಪ್ರವೃತ್ತಿ-ನಿವೃತ್ತಿ ಮಾರ್ಗಗಳೆರಡನ್ನೂ ನಿಶ್ಚಯಿಸಿ ಯಜ್ಞ, ದಾನ, ಅಧ್ಯಯನ ಮತ್ತು ತಪಸ್ಸು ಎಂಬ ನಾಲ್ಕರಿಂದ ಧರ್ಮಾರ್ಥಕಾಮರೂಪವಾದ ಮೂರು ಪುರುಷಗಳನ್ನು ನಿನ್ನ ವಶದಲ್ಲಿಟ್ಟುಕೊ (ಧರ್ಮಾರ್ಥಕಾಮಗಳಿಗೇ ವಶನಾಗಬೇಡ. ಐದುಜ್ಞಾನೇಂದ್ರಿಯಗಳನ್ನೂ, ಐದು ಕರ್ಮೇಂದ್ರಿಯಗಳನ್ನೂ ಜಯಿಸಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಚೆನ್ನಾಗಿ ಜಯಿಸಿ ತ್ವಕ್, ಚರ್ಮ, ರಕ್ತ, ಮಾಂಸ, ಮೇಧಸ್ಸು, ಮಜ್ಜಾ, ಅಸ್ಥಿರೂಪವಾದ ಸಪ್ತಧಾತುಗಳನ್ನು ಪರಿತ್ಯಜಿಸಿ ಸ್ವರೂಪಸುಖವನ್ನು ಅನುಭವಿಸುವವನಾಗು).
ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ವಧ್ಯತೇ |
ಸರಾಷ್ಟ್ರಂ ಸಪ್ರಜಂ ಹಂತಿ ರಾಜಾನಂ ಮಂತ್ರವಿಸ್ರವಃ ॥54॥
ವಿಷರಸವು ಒಬ್ಬನನ್ನು ಕೊಲ್ಲುತ್ತದೆ. ಶಸ್ತ್ರದಿಂದ ಒಬ್ಬನು ಹತನಾಗುತ್ತಾನೆ. ದುರ್ಮಂತ್ರವು (ಮಂತ್ರವಿಸ್ರವವು) ರಾಜ ಮತ್ತು ಪ್ರಜೆಗಳಿಂದ ಕೂಡಿದ ರಾಷ್ಟ್ರವನ್ನೇ ಕೊಲ್ಲುತ್ತದೆ.
ಏಕಃ ಸ್ವಾದು ನ ಭುಂಜೀತ ಏಕಶ್ಚಾರ್ಥಾನ್ ನ ಚಿಂತಯೇತ್ |
ಏಕೋ ನ ಗಚ್ಛೇದಧ್ವಾನಂ ನೈಕಃ ಸುಪ್ತೇಷು ಜಾಗೃಯಾತ್ ॥55॥
ಒಬ್ಬನೇ ಒಳ್ಳೆಯ ಊಟವನ್ನು ಮಾಡಬಾರದು. ಒಬ್ಬನೇ ಚಿಂತನೆಯನ್ನು ಮಾಡಬಾರದು. ಒಬ್ಬನೇ ಪ್ರಯಾಣಕ್ಕೆ ಹೊರಡಬಾರದು. ಎಲ್ಲರೂ ಮಲಗಿರುವಾಗ ಒಬ್ಬನೇ ಎದ್ದಿರಬಾರದು.
ಏಕಮೇವಾದ್ವಿತೀಯಂ ತದ್ ಯದ್ ರಾಜನ್ ನಾವಬುಧ್ಯಸೇ |
ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ ॥56॥
ರಾಜನೇ, ಪರಮಾತ್ಮನೆಂಬ ವಸ್ತುವು ಮುಖ್ಯವಾದುದು, ಸ್ವಗತಭೇದ ವರ್ಜಿತವಾದುದು ಮತ್ತು ಅಸದೃಶವಾದುದು. ನೀನು ಅದನ್ನು ತಿಳಿಯುವುದಿಲ್ಲ. ಸಮುದ್ರಕ್ಕೆ ಹಡಗಿದ್ದಂತೆ ಸದ್ಗುಣಪೂರ್ಣವಾದ ಆ ವಸ್ತುವು ಸ್ವರ್ಗಕ್ಕೆ (ಮೋಕ್ಷಕ್ಕೆ) ಸೋಪಾನವಾದುದು.
ಏಕಃ ಕ್ಷಮಾವತಾಂ ದೋಷೋ ದ್ವಿತೀಯೋ ನೋಪಪದ್ಯತೇ |
ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ॥57॥
ಕ್ಷಮೆಯುಳ್ಳವನನ್ನು ಜನರು ಅಶಕ್ತನೆಂದು ತಿಳಿಯುತ್ತಾರೆ. ಕ್ಷಮೆಯುಳ್ಳವರಿಗೆ ಇದೊಂದೇ ದೋಷ. ಎರಡನೆಯ ಯಾವ ದೋಷವೂ ಇಲ್ಲ.
ಸೋಽಸ್ಯ ದೋಷೋ ನ ಮಂತವ್ಯಃ ಕ್ಷಮಾ ಹಿ ಪರಮಂ ಸುಖಮ್ |

ಕ್ಷಮಾ ಬಲಮಶಕ್ತಾನಾಂ ಶಕ್ತಾನಾಂ ಭೂಷಣಂ ಕ್ಷಮಾ ॥58॥
ಅದನ್ನೂ ಸಹ ಅವನ ದೋಷವೆಂದು ತಿಳಿಯಬಾರದು. ಏಕೆಂದರೆ ಕ್ಷಮೆಯೇ ಪರಮ ಸುಖಸಾಧನವಾದುದು. ಅಶಕ್ತರಾದವರಿಗೆ ಕ್ಷಮೆಯೇ ಬಲ. ಶಕ್ತರಾದವರಿಗೆ ಕ್ಷಮೆಯು ಭೂಷಣ.
ಕ್ಷಮಾ ವಶೀಕೃತಿರ್ಲೋಕೇ ಕ್ಷಮಯಾ ಕಿಂ ನ ಸಾಧ್ಯತೇ |
ಶಾಂತಿಖಡ್ಗಃ ಕರೇ ಯಸ್ಯ ಕಿಂ ಕರಿಷ್ಯತಿ ದುರ್ಜನಃ ॥59॥
ಕ್ಷಮೆಯು ಲೋಕದಲ್ಲಿ ಇನ್ನೊಬ್ಬರನ್ನು ವಶೀಕರಿಸುವ ಸಾಧನ. ಕ್ಷಮೆಯಿಂದ ಏನು ಸಾಧ್ಯವಾಗುವುದಿಲ್ಲ? ಯಾವನು ತನ್ನ ಕೈಯಲ್ಲಿ ಶಾಂತಿಯ ಖಡ್ಗವನ್ನು ಹಿಡಿದಿದ್ದಾನೆಯೋ ಅವನಿಗೆ ದುರ್ಜನನು ಏನು ಮಾಡುವನು?
ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತಿ |
ಅಕ್ಷಮಾವಾನ್ ಪರಂ ದೋಷೈರಾತ್ಮಾನಂ ಚೈವ ಯೋಜಯೇತ್ ॥60॥
ತೃಣವಲ್ಲದ ಶಿಲೆಯಲ್ಲಿ ಬಿದ್ದ ವಹ್ನಿಯು ತಾನೇ ನಂದಿಹೋಗುತ್ತದೆ. ಕ್ಷಮೆ ಇಲ್ಲದವನು ಇನ್ನೊಬ್ಬನಿಗೂ ಮತ್ತು ತನಗೂ ದೋಷದ ಸಂಬಂಧವನ್ನು ಮಾಡಿಕೊಳ್ಳುತ್ತಾನೆ.
ಏಕೋ ಧರ್ಮಃ ಪರಂ ಶ್ರೇಯಃ ಕ್ಷಮೈಕಾ ಶಾಂತಿರುತ್ತಮಾ |
ವಿದ್ಯೈಕಾ ಪರಮಾ ತುಷ್ಟಿರಹಿಂಸೈಕಾ ಸುಖಾವಹಾ ॥61॥
ಮೋಕ್ಷಸಾಧನವಾದುದೇ ಶ್ರೇಷ್ಠಧರ್ಮ. ಸಹನೆಯೇ ಶ್ರೇಷ್ಠವಾದ ಶಾಂತಿ, ವಿದ್ಯೆಯೇ ಶ್ರೇಷ್ಠವಾದ ತೃಪ್ತಿ. ಅಹಿಂಸೆಯೇ ಶ್ರೇಷ್ಠ ಸುಖಪ್ರದವಾದುದು.
ದ್ವಾವಿಮೌ ಗ್ರಸತೇ ಭೂಮಿಃ ಸರ್ಪೋ ಬಿಲೇಶಯಾನಿವ |
ರಾಜಾನಂ ಚಾಪ್ಯಯೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥62॥
ಯುದ್ಧ ಮಾಡದಿರುವ ರಾಜ, ಪ್ರವಾಸ ಹೋಗದಿರುವ ಬ್ರಾಹ್ಮಣ ಇವರಿಬ್ಬರನ್ನೂ ಸರ್ಪವು ಇಲಿಗಳನ್ನು ನುಂಗಿದಂತೆ ಭೂಮಿಯು ನುಂಗುತ್ತದೆ.
ಪೃಥಿವ್ಯಾಂ ಸಾಗರಾಂತಾಯಾಂ ದ್ವಾವಿಮೌ ಪುರುಷಾಧಮೌ |
ಗೃಹಸ್ಥೋ ವೈ ನಿರಾರಂಭಃ ಸಾರಂಭಶ್ಚೈವ ಭಿಕ್ಷುಕಃ ॥63॥
ಗೃಹಸ್ಥನಾಗಿ ಯಾವ ಕಾರ್ಯವನ್ನೂ ಮಾಡದಿರುವವನು ಮತ್ತು ಸಂನ್ಯಾಸಿಯಾಗಿ ದೊಡ್ಡ ಕಾರ್ಯಗಳನ್ನು ಮಾಡಲು ಹೊರಡುವವನು ಇವರಿಬ್ಬರೂ ಸಾಗರಾಂತವಾದ ಭೂಮಿಯಲ್ಲಿ ಪುರುಷಾಧಮರು.
ದ್ವೇ ಕರ್ಮಣೀ ನರಃ ಕುರ್ವನ್ ಅಸ್ಮಿನ್ ಲೋಕೇ ಮಹೀಯತೇ |
ಅಬ್ರುವನ್ ಪರುಷಂ ಕಿಂಚಿದ್ ಅಸತೋಽನರ್ಚಯಂಸ್ತಥಾ ॥64॥
ಒರಟಾಗಿ ಮಾತನಾಡದಿರುವುದು, ದುಷ್ಟರನ್ನು ಪೂಜಿಸದಿರುವುದು ಈ ಎರಡು ಕಾರ್ಯವನ್ನು ಮಾಡುವ ಮನುಷ್ಯನು ಈ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ದ್ವಾವಿಮೌ ಪುರುಷವ್ಯಾಘ್ರ ಪರಪ್ರತ್ಯಯಕಾರಿಣೌ |
ಸ್ತ್ರಿಯಃ ಕಾಮಿತಕಾಮಿನ್ಯೋ ಮೂರ್ಖಾಃ ಪೂಜಿತಪೂಜಕಾಃ ॥65॥
ಪುರುಷವ್ಯಾಘ್ರನೇ, ಇವರಿಬ್ಬರೂ ಇನ್ನೊಬ್ಬರು ಮಾಡಿದಂತೆ ಮಾಡುವವರು. ಸ್ತ್ರೀಯರು ಇನ್ನೊಬ್ಬರು ಮೆಚ್ಚಿದ್ದನ್ನೇ ಮೆಚ್ಚುತ್ತಾರೆ. ಮೂರ್ಖರು ಇನ್ನೊಬ್ಬರು ಪೂಜಿಸಿದವರನ್ನೇ ಪೂಜಿಸುತ್ತಾರೆ.
ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಣೌ |
ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥66॥
ಯಾವನು ನಿರ್ಧನನಾಗಿ ವಸ್ತುವನ್ನು ಬಯಸುತ್ತಾನೆಯೋ ಮತ್ತು ಯಾವನು ದರಿದ್ರನಾಗಿ ಕೋಪಗೊಳ್ಳುತ್ತಾನೆಯೋ ಈ ಕಾಮ ಮತ್ತು ಕೋಪಗಳೆರಡೂ ಶರೀರವನ್ನೇ ಒಣಗಿಸುವ ನಿಶಿತವಾದ ಕಂಟಕಗಳು.
ದ್ವಾವಿಮೌ ಪುರುಷೌ ರಾಜನ್ ಸ್ವರ್ಗಸ್ಯೋಪರಿ ತಿಷ್ಠತಃ |
ಪ್ರಭುಶ್ಚ ಕ್ಷಮಯಾ ಯುಕ್ತೋ ದರಿದ್ರಶ್ಚ ಪ್ರದಾನವಾನ್ ॥67॥
ಎಲೈ ರಾಜನೇ, ಕ್ಷಮೆಯಿಂದ ಕೂಡಿದ ಪ್ರಭುವು ಮತ್ತು ಪ್ರತಾಪಶಾಲಿಯಾದ (ದಾನಶೀಲನಾದ) ದರಿದ್ರ ಇವರಿಬ್ಬರೂ ಸ್ವರ್ಗದ ಮೇಲೆ ಇರುತ್ತಾರೆ.
ನ್ಯಾಯಾಗತಸ್ಯ ದ್ರವ್ಯಸ್ಯ ಬೋದ್ಧವ್ಯೌ ದ್ವಾವತಿಕ್ರಮೌ |
ಅಪಾತ್ರೇ ಪ್ರತಿಪತ್ತಿಶ್ಚ ಪಾತ್ರೇ ಚಾಪ್ರತಿಪಾದನಮ್ ॥68॥
ನ್ಯಾಯದಿಂದ ಸಂಪಾದಿಸಿದ ದ್ರವ್ಯಕ್ಕೆ ಅಪಾತ್ರರಲ್ಲಿ ದಾನ ಮತ್ತು ಪಾತ್ರರಲ್ಲಿ ಅದಾನ ಇವೆರಡನ್ನು ಅಕ್ರಮಗಳೆಂದು ತಿಳಿಯಬೇಕು.
ದ್ವಾವಂಭಸಿ ಪ್ರವೇಷ್ಟವ್ಯೌ ಗಲೇ ಬಧ್ವಾ ದೃಢಾಂ ಶಿಲಾಮ್ |
ಧನವಂತಮದಾತಾರಂ ದರಿದ್ರಂ ಚಾತಪಸ್ವಿನಮ್ ॥69॥
ಧನವಂತನಾಗಿ ದಾನವನ್ನು ಮಾಡದಿರುವವನು, ದರಿದ್ರನಾಗಿ ತಪಸ್ಸನ್ನು ಮಾಡದಿರುವವನು- ಇವರಿಬ್ಬರ ಕತ್ತಿನಲ್ಲಿ ದೊಡ್ಡ ಕಲ್ಲನ್ನು ಕಟ್ಟಿ ಇವರಿಬ್ಬರನ್ನೂ ನೀರಿನಲ್ಲಿ ಮುಳುಗಿಸಬೇಕು.
ದ್ವಾವಿಮೌ ಪುರುಷವ್ಯಾಘ್ರ ಸೂರ್ಯಮಂಡಲಭೇದಿನೌ |
ಪರಿವ್ರಾಡ್ ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥70॥
ಎಲೈ ಪುರುಷವ್ಯಾಘ್ರನೇ, ಯೋಗಯುಕ್ತನಾದ ಸಂನ್ಯಾಸಿ ಮತ್ತು ಯುದ್ಧದಲ್ಲಿ ಶತ್ರುವಿಗೆ ಅಭಿಮುಖನಾಗಿ ಹತನಾದವನು ಇವರಿಬ್ಬರೂ ಸೂರ್ಯಮಂಡಲವನ್ನು ಭೇದಿಸುತ್ತಾರೆ.

ತ್ರಯೋ ನ್ಯಾಯಾ ಮನುಷ್ಯಾಣಾಂ ಶ್ರೂಯಂತೇ ಭರತರ್ಷಭ |
ಕನೀಯಾನ್ ಮಧ್ಯಮಃ ಶ್ರೇಷ್ಠಃ ಇತಿ ವೇದವಿದೋ ವಿದುಃ ॥71॥
ಭರತರ್ಷಭನೇ, ಮನುಷ್ಯರಿಗೆ ಉತ್ತಮ, ಮಧ್ಯಮ ಮತ್ತು ಅಧಮ ಎಂಬ ಮೂರು ನ್ಯಾಯಗಳಿವೆ ಎಂದು ವೇದಜ್ಞರು ತಿಳಿಯುತ್ತಾರೆ.
ತ್ರಿವಿಧಾಃ ಪುರುಷಾ ರಾಜನ್ನುತ್ತಮಾಧಮಮಧ್ಯಮಾಃ |
ನಿಯೋಜಯೇದ್ ಯಥಾವದ್ ತಾನ್ ತ್ರಿವಿಧೇಷ್ವೇವ ಕರ್ಮಸು ॥72॥
ಎಲೈ ರಾಜನೇ, ಮನುಷ್ಯರೂ ಸಹ ಉತ್ತಮ, ಮಧ್ಯಮ, ಅಧಮ ಭೇದದಿಂದ ಮೂರುವಿಧರಾದವರು. ಅವರನ್ನು ಅನುಗುಣವಾಗಿ ಮೂರುವಿಧವಾದ ಕರ್ಮಗಳಲ್ಲಿ ನಿಯೋಜಿಸಬೇಕು.
ತ್ರಯ ಏವಾಧನಾ ರಾಜನ್ ಭಾರ್ಯಾ ದಾಸಸ್ತಥಾ ಸುತಃ |
ಯತ್ ತೇ ಸಮಧಿಗಚ್ಛಂತಿ ಯಸ್ಯೈತೇ ತಸ್ಯ ತದ್ಧನಮ್ ॥73॥
ರಾಜನೇ, ಪತ್ನಿ, ದಾಸ ಮತ್ತು ಪುತ್ರ ಈ ಮೂರು ಜನರು ನಿರ್ಧನರಾದವರು. ಅವರು ಏನನ್ನು ಸಂಪಾದಿಸುತ್ತಾರೋ ಆ ಧನವು ಅವರ ಒಡೆಯನಿಗೆ ಸೇರಿದುದು.
ಹರಣಂ ಚ ಪರಸ್ವಾನಾಂ ಪರದಾರಾಭಿಮರ್ಶನಮ್ |
ಸುಹೃದಶ್ಚ ಪರಿತ್ಯಾಗಃ ತ್ರಯೋ ದೋಷಾ ಭಯಪ್ರದಾಃ ॥74॥
ಇನ್ನೊಬ್ಬರ ಸ್ವತ್ತಿನ ಅಪಹರಣ, ಇನ್ನೊಬ್ಬರ ಹೆಂಡತಿಯ ಸ್ಪರ್ಶ ಮತ್ತು ಸುಹೃದರ ಪರಿತ್ಯಾಗ ಈ ಮೂರುದೋಷಗಳು ಭಯವನ್ನು ಉಂಟುಮಾಡುತ್ತವೆ.
ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ |
ಕಾಮಃ ಕ್ರೋಧಸ್ತಥಾ ಲೋಭಃ ತಸ್ಮಾದೇತತ್ ತ್ರಯಂ ತ್ಯಜೇತ್ ॥75॥
ಕಾಮ, ಕ್ರೋಧ ಮತ್ತು ಲೋಭ ಈ ಮೂರು ಆತ್ಮನಾಶವನ್ನು ಮಾಡುವ ನರಕದ ದ್ವಾರಗಳು. ಆದ್ದರಿಂದ ಈ ಮೂರನ್ನೂ ತ್ಯಜಿಸಬೇಕು.
ಭಕ್ತಂ ಚ ಭಜಮಾನಂ ಚ ತವಾಸ್ಮೀತಿ ಚ ವಾದಿನಮ್ |
ತ್ರೀನೇತಾನ್ ಶರಣಂ ಪ್ರಾಪ್ತಾನ್ ವಿಷಮೇಽಪಿ ನ ಸಂತ್ಯಜೇತ್ ॥76॥
ಭಕ್ತನಾದವನು, ಸೇವಕನಾದವನು ಮತ್ತು ನಾನು ನಿನ್ನವನೇ ಎಂದು ಹೇಳುವವನು ಶರಣಾಗತರಾದ ಈ ಮೂರುಜನರನ್ನು ಎಂತಹ ಕಷ್ಟಪರಿಸ್ಥಿತಿಯಲ್ಲಿಯೂ ತ್ಯಜಿಸಬಾರದು.
ವರಪ್ರದಾನಂ ರಾಷ್ಟ್ರಂ ಚ ಪುತ್ರಜನ್ಮ ಚ ಭಾರತ |
ಶತ್ರೋಶ್ಚ ಮೋಕ್ಷಣಂ ಕೃಚ್ಛ್ರಾತ್ ತ್ರೀಣಿ ಚೈಕಂ ಚ ತತ್ ಸಮಮ್ ॥
ಎಲೈ ಭಾರತನೇ, ವರದಾನವನ್ನು ಪಡೆಯುವುದು, ರಾಷ್ಟ್ರವನ್ನು ಪಡೆಯುವುದು, ಪುತ್ರನನ್ನು ಪಡೆಯುವುದು ಈ ಮೂರನ್ನು ಒಟ್ಟು ಮಾಡಿದುದಕ್ಕೆ ಶತ್ರುವಿನಿಂದ ಉಂಟಾದ ಕಷ್ಟದಿಂದ ಬಿಡುಗಡೆ ಮಾಡುವುದು ಸಮವಾದುದು.
ಚತ್ವಾರಿ ರಾಜ್ಞಾ ತು ಮಹಾಬಲೇನ
ವರ್ಜ್ಯಾನ್ಯಾಹುಃ ಪಂಡಿತಸ್ತಾನಿ ವಿದ್ಯಾತ್ |
ಅಲ್ಪಪ್ರಜ್ಞೈಃ ಸಹ ಮಂತ್ರಂ ನ ಕುರ್ಯಾತ್
ನ ದೀರ್ಘಸೂತ್ರೈರಲಸೈಶ್ಚಾರಣೈಶ್ಚ ॥78॥
ಮಹಾಬಲನಾದ ರಾಜನು ನಾಲ್ಕು ವಸ್ತುಗಳನ್ನು ಬಿಡಬೇಕು ಎಂದು ಹೇಳುತ್ತಾರೆ. ಅದನ್ನು ಪಂಡಿತನು ತಿಳಿಯಬೇಕು. ಅಲ್ಪಪ್ರಜ್ಞರ ಜೊತೆಯಲ್ಲಿ, ನಿಧಾನವಾಗಿ ಕೆಲಸ ಮಾಡುವವರ ಜೊತೆಯಲ್ಲಿ, ಸೋಮಾರಿಗಳ ಜೊತೆಯಲ್ಲಿ ಮತ್ತು ಅಲೆಮಾರಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಬಾರದು (ಅಂತಹ ನಾಲ್ಕುಜನರನ್ನು ಪರಿತ್ಯಜಿಸಬೇಕು).
ಚತ್ವಾರಿ ತೇ ತಾತ ಗೃಹೇ ವಸಂತು
ಶ್ರಿಯಾಽಭಿಜುಷ್ಟಸ್ಯ ಗೃಹಸ್ಥಧರ್ಮೇ |
ವೃದ್ಧೋ ಜ್ಞಾತಿರವಸನ್ನಃ ಕುಲೀನಃ
ಸಖಾ ದರಿದ್ರೋ ಭಗಿನೀ ಚಾನಪತ್ಯಾ ॥79॥
ಎಲೈ ಪ್ರೀತಿಪಾತ್ರನೇ, ಗೃಹಸ್ಥಧರ್ಮದಲ್ಲಿ ನಿರತನಾದ, ಸಂಪದ್ಯುಕ್ತನಾದ ನಿನ್ನ ಮನೆಯಲ್ಲಿ ವೃದ್ಧನಾದ ಜ್ಞಾತಿ, ಕಷ್ಟಕ್ಕೆ ಸಿಲುಕಿದ ಕುಲೀನನು, ದರಿದ್ರನಾದ ಸ್ನೇಹಿತನು ಮತ್ತು ಮಕ್ಕಳಿಲ್ಲದ ಸಹೋದರಿ ಈ ನಾಲ್ಕು ಜನರೂ ವಾಸ ಮಾಡಲಿ.
ಚತ್ವಾರ್ಯಾಹ ಮಹಾರಾಜ ಸಾದ್ಯಸ್ಕಾನಿ ಬೃಹಸ್ಪತಿಃ |
ಪೃಚ್ಛತೇ ತ್ರಿದಶೇಂದ್ರಾಯ ತಾನೀಮಾನಿ ನಿಬೋಧ ಮೇ ॥80॥
ಮಹಾರಾಜನೇ, ಇಂದ್ರನ ಪ್ರಶ್ನೆಗೆ ಉತ್ತರವಾಗಿ ಬೃಹಸ್ಪತಿಗಳು ಈ ನಾಲ್ಕು ವಸ್ತುಗಳು ತಕ್ಷಣದಲ್ಲಿಯೇ ಫಲವನ್ನು ಕೊಡುವವು ಎಂದು ಹೇಳಿದರು. ಅವುಗಳನ್ನು ನನ್ನಿಂದ ತಿಳಿದುಕೊ.
ದೇವತಾನಾಂ ಚ ಸಂಕಲ್ಪಮನುಭಾವಂ ಚ ಧೀಮತಾಮ್ |
ವಿನಯಂ ಕೃತವಿದ್ಯಾನಾಂ ವಿನಾಶಂ ಪಾಪಕರ್ಮಿಣಾಮ್ ॥81॥
ದೇವತೆಗಳ ಸಂಕಲ್ಪ, ಮೇಧಾವಿಗಳ ಸಾಮರ್ಥ್ಯ, ವಿದ್ಯಾವಂತರ ವಿನಯ ಮತ್ತು ಪಾಪಕರ್ಮವನ್ನು ಮಾಡುವವರ ವಿನಾಶ (ಇವೇ ಆ ನಾಲ್ಕು ವಸ್ತುಗಳು).
ಪಂಚಾಗ್ನಯೋ ಮನುಷ್ಯಾಣಾಂ ಪರಿಚರ್ಯಾಃ ಪ್ರಯತ್ನತಃ |
ಪಿತಾ ಮಾತಾಽಗ್ನಿರಾತ್ಮಾ ಚ ಗುರುಶ್ಚ ಭರತರ್ಷಭ ॥82॥

ಎಲೈ ಭರತರ್ಷಭನೇ, ತಂದೆ, ತಾಯಿ, ಅಗ್ನಿ, ತಾನು ಮತ್ತು ಗುರು ಈ ಪಂಚಾಗ್ನಿಗಳನ್ನು ಪ್ರಯತ್ನಪೂರ್ವಕವಾಗಿ ಮನುಷ್ಯರು ಪರಿಚರಿಸಬೇಕು.
ಪಂಚೈವ ಪೂಜಯನ್ ಲೋಕೇ ಕೀರ್ತಿಂ ಪ್ರಾಪ್ನೋತಿ ಕೇವಲಮ್ |
ದೇವಾನ್ ಪಿತೄನ್ ಮನುಷ್ಯಾಂಶ್ಚ ಭಿಕ್ಷೂನತಿಥಿಪಂಚಮಾನ್ ॥83॥
ದೇವತೆಗಳು, ಪಿತೃಗಳು, ಮನುಷ್ಯರು, ಸಂನ್ಯಾಸಿಗಳು ಮತ್ತು ಅತಿಥಿಗಳು ಈ ಐದುಜನರನ್ನು ಪೂಜಿಸುವ ಮನುಷ್ಯನು ಲೋಕದಲ್ಲಿ ಶುದ್ಧವಾದ ಕೀರ್ತಿಯನ್ನು ಪಡೆಯುತ್ತಾನೆ.
ಪಂಚ ತ್ವಾಽನುಗಮಿಷ್ಯಂತಿ ಯತ್ರ ಯತ್ರ ಗಮಿಷ್ಯಸಿ |
ಮಿತ್ರಾಣ್ಯಮಿತ್ರಾ ಮಧ್ಯಸ್ಥಾ ಉಪಜೀವ್ಯೋಪಜೀವಿನಃ ॥84॥
ಮಿತ್ರರು, ಶತ್ರುಗಳು, ತಟಸ್ಥರು, ನಿನ್ನನ್ನು ಅವಲಂಬಿಸಿರುವವರು ಮತ್ತು ನೀನು ಯಾರನ್ನು ಅವಲಂಬಿಸಿದ್ದೀಯೋ ಅವರು, ಈ ಐದುಜನರು ನೀನು ಹೋದೆಡೆಯಲ್ಲೆಲ್ಲಾ ನಿನ್ನ ಹಿಂದೆ ಬರುತ್ತಾರೆ.
ಪಂಚೇಂದ್ರಿಯಸ್ಯ ಮರ್ತ್ಯಸ್ಯ ಛಿದ್ರಂ ಚೇದೇಕಮಿಂದ್ರಿಯಮ್ |
ತತೋಽಸ್ಯ ಸ್ರವತೇ ಪ್ರಜ್ಞಾ ಹ್ಯದ್ರೇಃ ಪಾದಾದಿವೋದಕಮ್ ॥85॥
ಪಂಚೇಂದ್ರಿಯವುಳ್ಳ ಮನುಷ್ಯರಿಗೆ ಒಂದು ಇಂದ್ರಿಯವು ಛಿದ್ರವಾದರೆ ಬೆಟ್ಟದ ಪಾದದಿಂದ ನೀರು ಹರಿದುಹೋದಂತೆ ಅವನ ಪ್ರಜ್ಞೆಯು ಆ ಇಂದ್ರಿಯದಿಂದ ಹರಿದುಹೋಗುತ್ತದೆ.
ಷಡ್ ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ |
ನಿದ್ರಾ ತಂದ್ರೀ ಭಯಂ ಕ್ರೋಧ ಆಲಸ್ಯಂ ದೀರ್ಘಸೂತ್ರತಾ ॥86॥
ನಿದ್ರೆ, ತೂಕಡಿಕೆ, ಭಯ, ಕ್ರೋಧ, ಆಲಸ್ಯ, ವಿಲಂಬಕಾರಿತ್ವ ಈ ಆರು ದೋಷಗಳನ್ನು ಏಳಿಗೆಯನ್ನು ಬಯಸುವ ಪುರುಷನು ಇಲ್ಲಿ ಬಿಡಬೇಕು.
ಷಡಿಮಾನ್ ಪುರುಷೋ ಜಹ್ಯಾದ್ ಭಿನ್ನಾಂ ನಾವಮಿವಾರ್ಣವೇ |
ಅಪ್ರವಕ್ತಾರಮಾಚಾರ್ಯಮನಧೀಯಾನಮೃತ್ವಿಜಮ್ ॥87॥
ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಮ್ |
ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಮ್ ॥88॥
ಪಾಠವನ್ನು ಹೇಳದಿರುವ ಆಚಾರ್ಯ, ಅಧ್ಯಯನ ಮಾಡದಿರುವ ಋತ್ವಿಕ್, ರಕ್ಷಣೆ ಮಾಡದಿರುವ ರಾಜ, ಅಪ್ರಿಯವಾಗಿ ಮಾತನಾಡುವ ಹೆಂಡತಿ, ಗ್ರಾಮದಲ್ಲಿ ಇರಲು ಬಯಸುವ ಗೋಪಾಲ ಮತ್ತು ಕಾಡಿನಲ್ಲೇ ಇರಲು ಬಯಸುವ ಕ್ಷೌರಿಕ ಈ ಆರುಜನರನ್ನು ಸಮುದ್ರದಲ್ಲಿ ಒಡೆದು ಹೋದ ನಾವೆಯನ್ನು ಬಿಡುವಂತೆ ಪುರುಷನು ಬಿಡಬೇಕು.
ಷಡೇವ ತು ಗುಣಾಃ ಪುಂಸಾಂ ನ ಹಾತವ್ಯಾಃ ಕದಾಚನ |
ಸತ್ಯಂ ದಾನಮನಾಲಸ್ಯಮನಸೂಯಾ ಕ್ಷಮಾ ಧೃತಿಃ ॥89॥
ಸತ್ಯ, ದಾನ, ಅನಾಲಸ್ಯ, ಅನಸೂಯ, ಕ್ಷಮಾ, ಧೈರ್ಯ ಈ ಆರು ಗುಣಗಳನ್ನು ಪುರುಷನು ಯಾವಾಗಲೂ ಬಿಡಬಾರದು.
ಷಣ್ಣಾಮಾತ್ಮನಿ ನಿತ್ಯಾನಾಮೈಶ್ವರ್ಯಂ ಯೋಽಧಿಗಚ್ಛತಿ |
ನ ಸ ಪಾಪೈಃ ಕುತೋಽನರ್ಥೈರ್ಯುಜ್ಯತೇ ವಿಜಿತೇಂದ್ರಿಯಃ ॥90॥
ತನ್ನಲ್ಲಿ ನಿತ್ಯವಾಗಿ ವಾಸಿಸುವ ಆರು ವಸ್ತುಗಳ ಮೇಲೆ ಯಾರು ಪ್ರಭುತ್ವವನ್ನು ಸಾಧಿಸುತ್ತಾನೆಯೋ ಅಂತಹ ಜಿತೇಂದ್ರಿಯನಿಗೆ ಪಾಪದ ಲೇಪವೂ ಆಗುವುದಿಲ್ಲ, ಅನರ್ಥದ ಸಂಬಂಧವೂ ಆಗುವುದಿಲ್ಲ.
ಷಡಿಮೇ ಷಟ್ಸು ಜೀವಂತಿ ಸಪ್ತಮೋ ನೋಪಲಭ್ಯತೇ |
ಚೋರಾಃ ಪ್ರಮತ್ತೇ ಜೀವಂತಿ ವ್ಯಾಧಿತೇಷು ಚಿಕಿತ್ಸಕಾಃ ॥91॥
ಈ ಆರು ಮಂದಿಗಳು ಆರು ಜನರಲ್ಲಿ ಜೀವಿಸುತ್ತಾರೆ. ಏಳನೆಯ ವ್ಯಕ್ತಿ ಇಲ್ಲ. ಪ್ರಮತ್ತನಲ್ಲಿ ಅಂದರೆ ಎಚ್ಚರಿಕೆ ಇಲ್ಲದವರ ನಿಮಿತ್ತದಿಂದ ಚೋರರು ಜೀವಿಸುತ್ತಾರೆ. ರೋಗಗ್ರಸ್ತರ ನಿಮಿತ್ತದಿಂದ ವೈದ್ಯರು ಜೀವಿಸುತ್ತಾರೆ.
ಪ್ರಮದಾಃ ಕಾಮಯಾನೇಷು ಯಜಮಾನೇಷು ಯಾಜಕಾಃ |
ರಾಜಾ ವಿವಿದಮಾನೇಷು ನಿತ್ಯಂ ಮೂರ್ಖೇಷು ಪಂಡಿತಾಃ ॥92॥
ಕಾಮವುಳ್ಳವರ ನಿಮಿತ್ತದಿಂದ ವನಿತೆಯರು ಜೀವಿಸುತ್ತಾರೆ. ಯಾಗ ಮಾಡಿಸುವವರ ನಿಮಿತ್ತದಿಂದ ಪುರೋಹಿತರು ಜೀವಿಸುತ್ತಾರೆ. ವಿವಾದವನ್ನು ಮಾಡುವ ಪುರುಷರ ನಿಮಿತ್ತದಿಂದ ರಾಜನು ಜೀವಿಸುತ್ತಾನೆ. ನಿತ್ಯವೂ ಮೂರ್ಖರು ಇರುವ ನಿಮಿತ್ತದಿಂದ ಪಂಡಿತರು ಜೀವಿಸುತ್ತಾರೆ.
ಷಡಿಮಾನಿ ವಿನಶ್ಯಂತಿ ಮುಹೂರ್ತಮನವೇಕ್ಷಣಾತ್ |
ಗಾವಃ ಸೇವಾ ಕೃಷಿರ್ಭಾರ್ಯಾ ವಿದ್ಯಾ ವೃಷಲಸಂಗತಿಃ ॥93॥
ಗೋವುಗಳು, ಸೇವೆ, ಕೃಷಿ, ಭಾರ್ಯೆ, ವಿದ್ಯಾ ಮತ್ತು ಶೂದ್ರಸಂಗತಿ ಈ ಆರು ವಸ್ತುಗಳು ಒಂದುಮುಹೂರ್ತ ನೋಡಿಕೊಳ್ಳದಿದ್ದರೆ ನಾಶವನ್ನು ಹೊಂದುತ್ತವೆ.
ಷಡೇತೇ ಹ್ಯವಮನ್ಯಂತೇ ನಿತ್ಯಂ ಪೂರ್ವೋಪಕಾರಿಣಮ್ |
ಆಚಾರ್ಯಂ ಶಿಕ್ಷಿತಾಃ ಶಿಷ್ಯಾಃ ಕೃತದಾರಾಶ್ಚ ಮಾತರಮ್ ॥94॥
ನಾರೀಂ ವಿಗತಕಾಮಾಸ್ತು ಕೃತಾರ್ಥಾಶ್ಚ ಪ್ರಯೋಜಕಮ್ |
ನಾವಂ ನಿಸ್ತೀರ್ಣಕಾಂತಾರಾ ಆತುರಾಶ್ಚ ಚಿಕಿತ್ಸಕಮ್ ॥95॥
ವಿದ್ಯೆಯನ್ನು ಕಲಿತ ಶಿಷ್ಯರು ಆಚಾರ್ಯನನ್ನು, ವಿವಾಹವನ್ನು ಮಾಡಿಕೊಂಡ ಮನುಷ್ಯನು ತಾಯಿಯನ್ನು, ಕಾಮರಹಿತನಾದವನು

ವನಿತೆಯನ್ನು, ಕೆಲಸವು ಮುಗಿದ ಮೇಲೆ ಕೆಲಸ ಮಾಡಿಕೊಟ್ಟವನನ್ನು, ನೀರನ್ನು ದಾಟಿದ ಮೇಲೆ ನಾವೆಯನ್ನು, ರೋಗಿಯು ಚಿಕಿತ್ಸಕನನ್ನು ಹೀಗೆ ಈ ಆರು ಜನರು ಮೊದಲು ಉಪಕಾರ ಮಾಡಿದವನನ್ನು ಯಾವಾಗಲೂ ತೊರೆದು ಅಪಮಾನ ಮಾಡುತ್ತಾರೆ.
ಆರೋಗ್ಯಮಾನೃಣ್ಯಮವಿಪ್ರವಾಸಃ
ಸದ್ಭಿರ್ಮನುಷ್ಯೈಃ ಸಹ ಸಂಪ್ರಯೋಗಃ |
ಸ್ವಪ್ರತ್ಯಯಾ ವೃತ್ತಿರಭೀತವಾಸಃ
ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥96॥
ರಾಜನೇ, ಆರೋಗ್ಯ, ಸಾಲವಿಲ್ಲದಿರುವಿಕೆ, ಮನೆಯನ್ನು ತೊರೆದು ದೂರ ಹೋಗದಿರುವುದು, ಸಜ್ಜನರ ಸಮಾಗಮ, ತನ್ನ ನಿರ್ಧಾರದಂತೆ ನಡೆದುಕೊಳ್ಳುವುದು, ಭಯವಿಲ್ಲದೆ ವಾಸಮಾಡುವುದು - ಈ ಆರು ಜೀವಲೋಕಕ್ಕೆ ಸುಖಪ್ರದವಾದುದು.
ಈರ್ಷ್ಯುರ್ಘೃಣೀ ನಸಂತುಷ್ಟಃ ಕ್ರೋಧನೋ ನಿತ್ಯಶಂಕಿತಃ |
ಪರಭಾಗ್ಯೋಪಜೀವೀ ಚ ಷಡೇತೇ ನಿತ್ಯದುಃಖಿತಾಃ ॥97॥
ಅಸೂಯೆಯುಳ್ಳವನು, ಕರುಣೆಯುಳ್ಳವನು, ಅತೃಪ್ತನಾದವನು, ಕ್ರೋಧಶೀಲನಾದವನು, ಎಲ್ಲ ಕಡೆಯಲ್ಲಿಯೂ ಸಂಶಯ ಪಡುವವನು, ಇನ್ನೊಬ್ಬರ ಸಂಪತ್ತಿನಿಂದ ಬದುಕುವವನು - ಈ ಆರು ಜನರು ನಿತ್ಯದುಃಖಿಗಳು.
ಸಪ್ತ ದೋಷಾಃ ಸದಾ ರಾಜ್ಞಾ ಹಾತವ್ಯಾ ವಿಜಿಗೀಷುಣಾ |
ಪ್ರಾಯಶೋ ಯೈರ್ವಿನಶ್ಯಂತಿ ಕೃತ್ತಮೂಲಾ ಅಪೀಶ್ವರಾಃ ॥98॥
ಜಯವನ್ನು ಬಯಸುವ ರಾಜನು ಏಳು ದೋಷಗಳನ್ನು ಸದಾ ಬಿಡಬೇಕು. ಆ ದೋಷಗಳಿದ್ದರೆ ಪ್ರಾಯಶಃ ಪ್ರಭುಗಳೂ ಸಹ ತಮ್ಮ ಮೂಲವನ್ನು ಕಡಿದುಕೊಂಡು ನಾಶವನ್ನು ಹೊಂದುತ್ತಾರೆ.
ಸ್ತ್ರಿಯೋಽಕ್ಷಾ ಮೃಗಯಾ ಪಾನಂ ವಾಕ್ಪಾರುಷ್ಯಂ ಚ ಪಂಚಮಮ್ |
ಮಹಚ್ಚ ದಂಡಪಾರುಷ್ಯಮ್ ಅರ್ಥದೂಷಣಮೇವ ಚ ॥99॥
ಸ್ತ್ರೀಯರು, ದ್ಯೂತ, ಬೇಟೆ, ಪಾನ, ಒರಟುಮಾತು, ಉಗ್ರವಾದ ದಂಡ ಮತ್ತು ದಾನ ತೆಗೆದುಕೊಂಡ ಪದಾರ್ಥದ ನಿಂದನೆ - ಇವು ಆ ಏಳು ಪದಾರ್ಥಗಳು.
ಅಷ್ಟೌ ಪೂರ್ವನಿಮಿತ್ತಾನಿ ನರಸ್ಯ ವಿನಶಿಷ್ಯತಃ |
ಬ್ರಾಹ್ಮಣಾನ್ ಪ್ರಥಮಂ ದ್ವೇಷ್ಟಿ ಬ್ರಾಹ್ಮಣೈಶ್ಚ ವಿರುದ್ಧ್ಯತೇ ॥100॥
ವಿನಾಶವನ್ನು ಹೊಂದಲಿರುವ ನರನಿಗೆ ಮೊದಲು ಎಂಟು ಸೂಚನೆಗಳು ಕಾಣಿಸಿಕೊಳ್ಳುತ್ತವೆ. ಮೊದಲು ಬ್ರಾಹ್ಮಣರನ್ನು ದ್ವೇಷ ಮಾಡುತ್ತಾನೆ. ಬ್ರಾಹ್ಮಣರ ಜೊತೆಯಲ್ಲಿ ಜಗಳವಾಡುತ್ತಾನೆ.
ಬ್ರಾಹ್ಮಣಸ್ವಾನಿ ಚಾದತ್ತೇ ಬ್ರಾಹ್ಮಣಾಂಶ್ಚ ಜಿಘಾಂಸತಿ |
ರಮತೇ ನಿಂದಯಾ ಚೈಷಾಂ ಪ್ರಶಂಸಾಂ ನಾಭಿನಂದತಿ ॥101॥
ಬ್ರಾಹ್ಮಣರ ಸ್ವತ್ತನ್ನು ಅಪಹರಿಸುತ್ತಾನೆ. ಬ್ರಾಹ್ಮಣರನ್ನು ಕೊಲ್ಲಲು ಬಯಸುತ್ತಾನೆ. ಬ್ರಾಹ್ಮಣರ ನಿಂದನೆಯಿಂದ ಸಂತೋಷಪಡುತ್ತಾನೆ. ಬ್ರಾಹ್ಮಣರ ಪ್ರಶಂಸೆಯನ್ನು ಸಹಿಸುವುದಿಲ್ಲ.
ನೈನಾನ್ ಸ್ಮರತಿ ಕೃತ್ಯೇಷು ಯಾಚಿತಶ್ಚಾಭ್ಯಸೂಯತಿ |
ಏತಾನ್ ದೋಷಾನ್ ನರಃ ಪ್ರಾಜ್ಞೋ ಬುದ್ಧ್ಯಾ ಬುಧ್ವಾ ವಿಸರ್ಜಯೇತ್ ॥
ತನಗೆ ಕಾರ್ಯವಾಗಬೇಕಾದಾಗ ಬ್ರಾಹ್ಮಣರನ್ನು ಸ್ಮರಿಸುವುದಿಲ್ಲ. ಬ್ರಾಹ್ಮಣರು ಯಾಚನೆ ಮಾಡಿದರೆ ಅಸೂಯೆ ಪಡುತ್ತಾನೆ. ಪ್ರಾಜ್ಞನಾದವನು ಈ ದೋಷಗಳನ್ನು ತನ್ನ ಬುದ್ಧಿಯಿಂದ ತಿಳಿದು ಪರಿತ್ಯಾಗ ಮಾಡಬೇಕು.
ಅಷ್ಟಾವಿಮಾನಿ ಹರ್ಷಸ್ಯ ನವನೀತಾನಿ ಭಾರತ |
ವರ್ತಮಾನಾನಿ ದೃಶ್ಯಂತೇ ತಾನ್ಯೇವ ಸುಸುಖಾನ್ಯಪಿ ॥103॥
ಎಲೈ ಭಾರತನೇ, ಈ ಎಂಟು ರಮಣೀಯವಾದ ಪದಾರ್ಥಗಳು ಸುಖಕ್ಕೆ ಕಾರಣವಾದವು. ಅವು ಸ್ವತಃ ಸುಖರೂಪವಾಗಿವೆ ಎಂದು ಕಂಡುಬರುತ್ತವೆ.
ಸಮಾಗಮಶ್ಚ ಸಖಿಭಿರ್ಮಹಾಂಶ್ಚೈವ ಧನಾಗಮಃ |
ತನಯಸ್ಯ ಪರಿಷ್ವಂಗಃ ಸನ್ನಿಪಾತಶ್ಚ ಮೈಥುನೇ ॥104॥
ಸಮಯೇ ಚ ಪ್ರಿಯಾಲಾಪಃ ಸ್ವಯೂಥ್ಯೇಷು ಸಮುನ್ನತಿಃ |
ಅಭಿಪ್ರೇತಸ್ಯ ಲಾಭಶ್ಚ ಪೂಜಾ ಚ ಜನಸಂಸದಿ ॥105॥
ಸ್ನೇಹಿತರ ಜೊತೆಯಲ್ಲಿ ಸಮಾಗಮ, ಬಹಳವಾದ ಧನದ ಪ್ರಾಪ್ತಿ, ಪುತ್ರನ ಆಲಿಂಗನ, ಮೈಥುನದಲ್ಲಿ ಬೀಳುವುದು, ಸಮಯದಲ್ಲಿ ಪ್ರಿಯರ ಮಾತುಗಳು, ತಮ್ಮ ಗುಂಪಿಗೆ ಸೇರಿದ ಅಭ್ಯುದಯ, ಬಯಸಿದುದರ ಲಾಭ ಮತ್ತು ಜನರಲ್ಲಿ ಸನ್ಮಾನ (ಇವು ಆ ಎಂಟು ಪದಾರ್ಥಗಳು).
ಅಷ್ಟೌ ಗುಣಾಃ ಪುರುಷಂ ದೀಪಯಂತಿ
ಪ್ರಜ್ಞಾ ಚ ಕೌಲ್ಯಂ ಚ ದಮಃ ಶ್ರುತಂ ಚ |
ಪರಾಕ್ರಮಶ್ಚಾಬಹುಭಾಷಿತಾ ಚ
ದಾನಂ ಯಥಾಶಕ್ತಿ ಕೃತಜ್ಞತಾ ಚ ॥106॥
ಪ್ರಜ್ಞೆ, ಕುಲ, ದಮ, ವಿದ್ಯೆ, ಪರಾಕ್ರಮ, ಅಲ್ಪಭಾಷಿತಾ, ಯಥಾಶಕ್ತಿ ದಾನ ಮತ್ತು ಕೃತಜ್ಞತೆ - ಈ ಎಂಟುಗುಣಗಳು ಪುರುಷನು ಶೋಭಿಸುವಂತೆ ಮಾಡುತ್ತವೆ.
ನವದ್ವಾರಮಿದಂ ವೇಶ್ಮ ತ್ರಿಸ್ಥೂಣಂ ಪಂಚಸಾಕ್ಷಿಕಮ್ |

ಕ್ಷೇತ್ರಜ್ಞಾಧಿಷ್ಠಿತಂ ವಿದ್ವಾನ್ ಯೋ ವೇದ ಸ ಪರಃ ಕವಿಃ ॥107॥
ಈ ಮನೆಯಲ್ಲಿ ನವದ್ವಾರಗಳಿವೆ. ಮೂರುಕಂಬಗಳು, ಐದುಸಾಕ್ಷಿಗಳು ಇದ್ದು ಕ್ಷೇತ್ರಜ್ಞನಿಂದ ವಾಸಿಸಲ್ಪಟ್ಟಿದೆ. ಇದನ್ನು ತಿಳಿದವನು ಶ್ರೇಷ್ಠನಾದ ಜ್ಞಾನಿ (ಈ ದೇಹದಲ್ಲಿ ನವದ್ವಾರಗಳು- ಸತ್ವ, ರಜಸ್, ತಮೋ ಗುಣಗಳೆಂಬ ಮೂರು ಕಂಬಗಳು, ಪಂಚ ಜ್ಞಾನೇಂದ್ರರೂಪವಾದ ಸಾಕ್ಷಿಗಳು ಮತ್ತು ಕ್ಷೇತ್ರಜ್ಞನಾದ ಪರಮಾತ್ಮನು ಇದ್ದಾರೆ).
ದಶ ಧರ್ಮಾನ್ ನ ಜಾನಂತಿ ಧೃತರಾಷ್ಟ್ರ ನಿಬೋಧ ತಾನ್ ॥108॥
ಮತ್ತಃ ಪ್ರಮತ್ತ ಉನ್ಮತ್ತಃ ಶ್ರಾಂತಃ ಕ್ರುದ್ಧೋ ಬುಭುಕ್ಷಿತಃ |
ತ್ವರಮಾಣಶ್ಚ ಲುಬ್ಧಶ್ಚ ಭೀತಃ ಕಾಮೀ ಚ ತೇ ದಶ ॥109॥
ತಸ್ಮಾದೇತೇಷು ಭಾವೇಷು ನ ಪ್ರಸಜ್ಜೇತ ಪಂಡಿತಃ ॥110॥
ಧೃತರಾಷ್ಟ್ರನೇ, ಹತ್ತು ಜನರು ಧರ್ಮವನ್ನು ತಿಳಿಯುವುದಿಲ್ಲ. ಅವರು ಯಾರೆಂದು ತಿಳಿದುಕೊ. ಪಾನಾದಿ ಮತ್ತನಾದವನು, ಮೈಮೇಲೆ ಎಚ್ಚರಿಕೆ ಇಲ್ಲದವನು, ಹುಚ್ಚು ಹಿಡಿದವನು, ದಣಿದವನು, ಕೋಪಗೊಂಡವನು, ಹಸಿದವನು, ತ್ವರೆಯಲ್ಲಿ ಇರುವವನು, ಲೋಭಿ, ಭೀತ ಮತ್ತು ಕಾಮಿಯಾದವನು ಇವರೇ ಆ ಹತ್ತು ಮಂದಿ. ಆದ್ದರಿಂದ ಪಂಡಿತನಾದವನು ಇಂತಹ ವಸ್ತುಗಳಲ್ಲಿ ಸಿಲುಕಿಕೊಳ್ಳಬಾರದು.
ಅತ್ರೈವೋದಾಹರಂತೀಮಮ್ ಇತಿಹಾಸಂ ಪುರಾತನಮ್ |
ಪುತ್ರಾರ್ಥಮಸುರೇಂದ್ರೇಣ ಗೀತಂ ಚೈವ ಸುಧನ್ವನಾ ॥111॥
ಈ ವಿಷಯದಲ್ಲಿಯೇ ಅಸುರೇಂದ್ರನಾದ ಸುಧನ್ವನು ತನ್ನ ಮಗನಿಗಾಗಿ ಹಾಡಿದ ಪುರಾತನವಾದ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.
ಯಃ ಕಾಮಮನ್ಯೂ ಪ್ರಜಹಾತಿ ರಾಜಾ
ಪಾತ್ರೇ ಪ್ರತಿಷ್ಠಾಪಯತೇ ಧನಂ ಚ |
ವಿಶೇಷವಿಚ್ಛ್ರುತವಾನ್ ಕ್ಷಿಪ್ರಕಾರೀ
ತಂ ಸರ್ವಲೋಕಃ ಕುರುತೇ ಪ್ರಮಾಣಮ್ ॥112॥
ಯಾವ ರಾಜನು ಕಾಮ-ಕ್ರೋಧವನ್ನು ಪರಿತ್ಯಜಿಸುತ್ತಾನೋ, ಪಾತ್ರರಲ್ಲಿ ದಾನವನ್ನು ಮಾಡುತ್ತಾನೆಯೋ, ಉತ್ತಮ-ಅಧಮ-ಮಧ್ಯಮರ ಭೇದವನ್ನು ತಿಳಿಯುತ್ತಾನೆಯೋ, ವಿದ್ಯಾವಂತನೋ, ಶೀಘ್ರಕಾರಿಯೋ ಅವನನ್ನು ಸರ್ವಲೋಕವೂ ಪ್ರಮಾಣವೆಂದು ಸ್ವೀಕರಿಸುತ್ತದೆ.
ಜಾನಾತಿ ವಿಶ್ವಾಸಯಿತುಂ ಮನುಷ್ಯಾನ್
ವಿಜ್ಞಾತದೋಷೇಷು ದಧಾತಿ ದಂಡಮ್ |
ಜಾನಾತಿ ಪಥ್ಯಂ ಚ ತಥಾ ಕ್ಷಮಾಂ ಚ
ತಂ ತಾದೃಶಂ ಶ್ರೀರ್ಜುಷತೇ ಸಮಗ್ರಾ ॥113॥
ಮನುಷ್ಯರಲ್ಲಿ ವಿಶ್ವಾಸ ಮೂಡಿಸುವುದು ಹೇಗೆ ಎಂದು ತಿಳಿದಿರುತ್ತಾನೆ. ದೋಷವನ್ನು ತಿಳಿದು ಅದಕ್ಕೆ ಸರಿಯಾದ ದಂಡವನ್ನು ವಿಧಿಸುತ್ತಾನೆ. ಹಿತವನ್ನು ತಿಳಿದಿರುತ್ತಾನೆ ಮತ್ತು ಕ್ಷಮೆಯನ್ನು ಹೊಂದಿರುತ್ತಾನೆ. ಅಂತಹವನನ್ನು ಸಮಗ್ರವಾದ ಸಂಪತ್ತು ಬಂದು ಸೇರುತ್ತದೆ.
ಸುದುರ್ಬಲಂ ನಾವಜಾನಾತಿ ಕಿಂಚಿದ್
ಯುಕ್ತ್ಯಾ ರಿಪುಂ ಸೇವತೇ ಬುದ್ಧಿಪೂರ್ವಮ್ |
ನ ವಿಕ್ರಮಂ ರೋಚಯತೇ ಬಲಸ್ಥೈಃ
ಕಾಲೇ ಚ ಯೋ ವಿಕ್ರಮತೇ ಸ ಧೀರಃ ॥114॥
ಯಾವನು ಅತ್ಯಂತ ದುರ್ಬಲರನ್ನೂ ಸ್ವಲ್ಪವೂ ಅವಮಾನ ಮಾಡುವುದಿಲ್ಲವೋ, ಎಚ್ಚರಿಕೆಯಿಂದ ಬುದ್ಧಿಪೂರ್ವಕವಾಗಿ ಶತ್ರುವನ್ನು ಸೇವಿಸುತ್ತಾನೆಯೋ, ಬಲಿಷ್ಠರ ಜೊತೆಯಲ್ಲಿ ವಿರೋಧವನ್ನು ಇಷ್ಟಪಡದೆ ಯೋಗ್ಯಕಾಲದಲ್ಲಿ ಪರಾಕ್ರಮವನ್ನು ತೋರಿಸುತ್ತಾನೆಯೋ ಅವನು ಧೀರನಾದವನು.
ಪ್ರಾಪ್ಯಾಪದಂ ನ ವ್ಯಥತೇ ಕದಾಚಿದ್
ಉದ್ಯೋಗಮನ್ವಿಚ್ಛತಿ ಚಾಪ್ರಮತ್ತಃ |
ದುಃಖಂ ಚ ಕಾಲೇ ಸಹತೇ ಮತಾತ್ಮಾ
ಧುರಂಧರಸ್ತಸ್ಯ ಜಿತಾಃ ಸಪತ್ನಾಃ ॥115॥
ಆಪತ್ತು ಒದಗಿದಾಗ ಎಂದೂ ವ್ಯಥೆ ಪಡುವುದಿಲ್ಲ. ಎಚ್ಚರಿಕೆಯಿಂದ ತನ್ನ ಕಾರ್ಯಗಳನ್ನು ಮಾಡುತ್ತಾನೆ. ತನ್ನ ಮನಸ್ಸನ್ನು ಜಯಿಸಿ, ಆಯಾ ಕಾಲದಲ್ಲಿ ಬಂದ ದುಃಖವನ್ನು ಸಹಿಸುತ್ತಾನೆ. ಸಜ್ಜನರ ಜವಾಬ್ದಾರಿಯನ್ನು ಹೊರುತ್ತಾನೆ. ಅಂತಹವನು ಶತ್ರುಗಳನ್ನು ಜಯಿಸುತ್ತಾನೆ.
ಅನರ್ಥಕಂ ವಿಪ್ರವಾಸಂ ಗೃಹೇಭ್ಯಃ
ಪಾಪೈಃ ಸಂಧಿಂ ಪರದಾರಾಭಿಮರ್ಶಮ್ |
ಡಂಭಂ ಸ್ತೈನ್ಯಂ ಪೈಶುನಂ ಮದ್ಯಪಾನಂ
ನ ಸೇವತೇ ಯಃ ಸ ಸುಖೀ ಸದೈವ ॥116॥
ಯಾವನು ಮನೆಯನ್ನು ಬಿಟ್ಟು ವ್ಯರ್ಥವಾದ ಪ್ರಯಾಣವನ್ನೂ, ದುಷ್ಟರ ಜೊತೆಯಲ್ಲಿ ಸಂಧಿಯನ್ನೂ, ಪರಭಾರ್ಯೆಯರ ಸಂಬಂಧವನ್ನೂ, ಡಂಭವನ್ನೂ, ಕಳ್ಳತನವನ್ನೂ, ಚಾಡಿ ಹೇಳುವುದನ್ನೂ, ಮದ್ಯಪಾನವನ್ನೂ ಮಾಡುವುದಿಲ್ಲವೋ ಅವನು

ಯಾವಾಗಲೂ ಸುಖಿಯಾಗಿರುತ್ತಾನೆ.
ನ ಸಂರಂಭೇಣಾರಭತೇ ತ್ರಿವರ್ಗಮ್
ಆಕಾರಿತಃ ಶಂಸತಿ ತಥ್ಯಮೇವ |
ನ ಮಿತ್ರಾರ್ಥೇ ರೋಚಯತೇ ವಿವಾದಂ
ನಾಪೂಜಿತಃ ಕುಪ್ಯತಿ ಚಾಪ್ಯಮೂಢಃ ॥117॥
ಅಮೂಢನಾದವನು (ವಿವೇಕಿಯಾದವನು) ಸಿಟ್ಟಿನಿಂದ ಧರ್ಮಾರ್ಥ ಕಾಮಗಳನ್ನು ಆರಂಭಿಸುವುದಿಲ್ಲ. ಕರೆದಾಗ ನಿಜವನ್ನೇ ಹೇಳುತ್ತಾನೆ. ಮಿತ್ರರ ಜೊತೆಯಲ್ಲಿ ವಿವಾದವನ್ನು ಬಯಸುವುದಿಲ್ಲ ಮತ್ತು ತನ್ನನ್ನು ಪೂಜಿಸದಿದ್ದರೆ ಕೋಪಗೊಳ್ಳುವುದಿಲ್ಲ.
ನ ಚಾಭ್ಯಸೂಯತ್ಯನುಕಂಪತೇ ಚ
ನ ದುರ್ಬಲಃ ಪ್ರತಿಭಾವ್ಯಂ ಕರೋತಿ |
ನಾಪ್ಯಾಹ ಕಿಂಚಿತ್ ಕ್ಷಮತೇ ವಿವಾದಂ
ಸರ್ವತ್ರ ತಾದೃಗ್ ಲಭತೇ ಪ್ರಶಂಸಾಮ್ ॥118॥
ಯಾರಲ್ಲಿಯೂ ಅಸೂಯೆ ಪಡುವುದಿಲ್ಲ, ಅನುಕಂಪವನ್ನು ತೋರಿಸುತ್ತಾನೆ, ದುರ್ಬಲನಾಗಿ ಎದುರು ಮಾತನಾಡುವುದಿಲ್ಲ, ಮೌನವಾಗಿರುತ್ತಾನೆ, ವಿವಾದವನ್ನು ಸಹಿಸುತ್ತಾನೆ, ಅಂತಹವನು ಎಲ್ಲ ಕಡೆಯಲ್ಲಿಯೂ ಪ್ರಶಂಸೆಯನ್ನು ಪಡೆಯುತ್ತಾನೆ.
ಯೋ ನೋದ್ಧತಂ ಕುರುತೇ ಜಾತು ವೇಷಂ
ನ ಪೌರುಷೇಣಾಪಿ ವಿಕತ್ಥತೇಽನ್ಯಾನ್ |
ನ ಮೂರ್ಛಿತಃ ಕಟುಕಾನ್ಯಾಹ ಕಿಂಚಿತ್
ಪ್ರಿಯಂ ಸದಾ ತಂ ಕುರುತೇ ಜನೋ ಹಿ ॥119॥
ಯಾವನು ಉದ್ಧತವಾದ ವೇಷವನ್ನು ಧರಿಸುವುದಿಲ್ಲವೋ, ಯಾವನು ತನಗೆ ಪೌರುಷವಿದ್ದರೂ ಇನ್ನೊಬ್ಬರ ಎದುರಿಗೆ ಅದನ್ನು ಹೇಳಿಕೊಳ್ಳುವುದಿಲ್ಲವೋ, ಯಾವನು ಯಾವನಿಂದ ಕಷ್ಟಕ್ಕೆ ಗುರಿಯಾಗುತ್ತಾನೆಯೋ ಅವನಿಗೆ ಉಗ್ರವಾದ ಮಾತನ್ನು ಆಡುವುದಿಲ್ಲವೋ ಅಂತಹವನನ್ನು ಜನರು ಯಾವಾಗಲೂ ತಮ್ಮ ಪ್ರಿಯನನ್ನಾಗಿ ಮಾಡಿಕೊಳ್ಳುತ್ತಾರೆ.
ನ ವೈರಮುದ್ದೀಪಯತಿ ಪ್ರಶಾಂತಂ
ನ ದರ್ಪಮಾರೋಹತಿ ಶಾಂತಿಮೇತಿ |
ನ ದುರ್ಗತೋಽಸ್ಮೀತಿ ಕರೋತ್ಯಕಾರ್ಯಂ
ತಮಾರ್ಯಶೀಲಂ ಪರಮಾಹುರಾರ್ಯಾಃ ॥120॥
ಯಾವನು ಶಾಂತವಾದ ವೈರವನ್ನು ಪುನಃ ಹಚ್ಚುವುದಿಲ್ಲವೋ, ಯಾವನು ದರ್ಪವನ್ನು ಹೊಂದದೆ ಶಾಂತಿಯನ್ನು ಹೊಂದುವನೋ, ಕಷ್ಟಕ್ಕೆ ಸಿಲುಕಿದ್ದೇನೆಂದು ಯಾವನು ಅಕಾರ್ಯವನ್ನು ಮಾಡುವುದಿಲ್ಲವೋ ಅಂತಹವನನ್ನು ದೊಡ್ಡವರು ಆರ್ಯಶೀಲನೆಂದು ಕರೆಯುತ್ತಾರೆ.
ನ ಸ್ವೇ ಸುಖೇ ವೈ ಕುರುತೇ ಪ್ರಹರ್ಷಂ
ನಾನ್ಯಸ್ಯ ದುಃಖೇ ಭವತಿ ಪ್ರಹೃಷ್ಟಃ |
ದತ್ತ್ವಾ ನ ಪಶ್ಚಾತ್ ಕುರುತೇಽನುತಾಪಂ
ನ ಕತ್ಥತೇ ಸತ್ಪುರುಷಾರ್ಯಶೀಲಃ ॥121॥
ಸಜ್ಜನನಾದವನು ತನಗೆ ಸುಖ ಒದಗಿದಾಗ ಸಂತೋಷ ಪಡುವುದಿಲ್ಲ, ಇನ್ನೊಬ್ಬರಿಗೆ ದುಃಖ ಬಂದಾಗಲೂ ಸಂತೋಷ ಪಡುವುದಿಲ್ಲ, ದಾನವನ್ನು ಕೊಟ್ಟು ಪಶ್ಚಾತ್ತಾಪವನ್ನು ಪಡುವುದಿಲ್ಲ, ತನ್ನನ್ನು ತಾನು ಹೊಗಳಿಕೊಳ್ಳುವುದಿಲ್ಲ, ಅಂತಹವನನ್ನು ಸತ್ಪುರುಷ ಮತ್ತು ಆರ್ಯಪುರುಷ ಎಂದು ಕರೆಯುತ್ತಾರೆ.
ದೇಶಾಚಾರಾನ್ ಸಮಯಾನ್ ಜಾತಿಧರ್ಮಾನ್
ಬುಭೂಷತೇ ಯಃ ಸ ಪರಾವರಜ್ಞಃ |
ಸ ಯತ್ರ ತತ್ರಾಭಿಗತಃ ಸದೈವ
ಮಹಾಜನಸ್ಯಾಧಿಪತ್ಯಂ ಕರೋತಿ ॥122॥
ಯಾವನು ಉತ್ತಮರನ್ನು ಮತ್ತು ಅಧಮರನ್ನು ತಿಳಿದು ದೇಶಾಚಾರಗಳನ್ನೂ, ನಿಯಮಗಳನ್ನೂ, ಜಾತಿಧರ್ಮಗಳನ್ನೂ ತಿಳಿದು ಆಚರಿಸುತ್ತಾನೆಯೋ ಅವನು ಹೋದಲ್ಲೆಲ್ಲಾ ಮಹಾಜನರ ಆಧಿಪತ್ಯವನ್ನು ಹೊಂದುತ್ತಾನೆ.
ಡಂಭಂ ಮೋಹಂ ಮತ್ಸರಂ ಪಾಪಕೃತ್ಯಂ
ರಾಜದ್ವಿಷ್ಟಂ ಪೈಶುನಂ ಪೂಗವೈರಮ್ |
ಮತ್ತೋನ್ಮತ್ತೈರ್ದುರ್ಜನೈಶ್ಚಾಪಿ ವಾದಂ
ಯಃ ಪ್ರಜ್ಞಾವಾನ್ ವರ್ಜಯೇತ್ ಸ ಪ್ರಧಾನಃ ॥123॥
ಯಾವ ಪ್ರಜ್ಞೆಯುಳ್ಳವನು ಡಂಭವನ್ನೂ, ಮೋಹವನ್ನೂ, ಮತ್ಸರವನ್ನೂ, ಪಾಪಕಾರ್ಯವನ್ನೂ, ರಾಜನಿಗೆ ಅಪ್ರಿಯವಾದುದನ್ನೂ, ಚಾಡಿಯನ್ನೂ, ಸಮೂಹ ವೈರವನ್ನೂ, ಹುಚ್ಚರ ಮತ್ತು ದುರ್ಜನರ ಜೊತೆಯಲ್ಲಿ ವಿವಾದವನ್ನೂ ತ್ಯಜಿಸುತ್ತಾನೆಯೋ ಅಂತಹ ಪ್ರಜ್ಞಾವಂತನು ಪ್ರಧಾನನಾಗುತ್ತಾನೆ.
ದಮಂ ಶೌಚಂ ದೈವಿಕಂ ಮಂಗಲಾನಿ
ಪ್ರಾಯಶ್ಚಿತ್ತಾನ್ ವಿವಿಧಾನ್ ಲೋಕವಾದಾನ್ |
ಏತಾನಿ ಯಃ ಕುರುತೇ ನೈತ್ಯಕಾನಿ

तಸ್ಯೋತ್ಥಾನಂ ದೇವತಾ ಧಾರಯಂತಿ ॥124॥

ದಮ, ಶೌಚ, ದೈವಿಕಮಂಗಳಗಳು, ಪ್ರಾಯಶ್ಚಿತ್ತಗಳು, ವಿವಿಧ ಲೋಕಾಚಾರಗಳು ಇವುಗಳನ್ನು ಯಾವನು ನಿತ್ಯವೂ ಅನುಷ್ಠಾನ ಮಾಡುತ್ತಾನೆಯೋ ಅವನ ಏಳಿಗೆಯನ್ನು ದೇವತೆಗಳು ಉಂಟುಮಾಡುತ್ತಾರೆ.

ಸಮೈರ್ವಿವಾಹಂ ಕುರುತೇ ನ ಹೀನೈಃ
ಸಮೈಃ ಸಖ್ಯಂ ವ್ಯವಹಾರಂ ಕಥಾಶ್ಚ |
ಗುಣೈರ್ವಿಶಿಷ್ಟಾಂಶ್ಚ ಪುರೋ ದಧಾತಿ
ವಿಪಶ್ಚಿತಸ್ತಸ್ಯ ನಯಾಃ ಸುನೀತಾಃ ॥125॥

ಸಮಾನರಾದವರ ಜೊತೆಯಲ್ಲಿ ವಿವಾಹವನ್ನು ಬೆಳೆಸುತ್ತಾನೆ, ಹೀನರ ಜೊತೆಯಲ್ಲಲ್ಲ. ಸಮಾನರಾದವರ ಜೊತೆಯಲ್ಲಿ ಸಖ್ಯವನ್ನೂ, ವ್ಯವಹಾರವನ್ನೂ ಮತ್ತು ಸಂವಾದವನ್ನೂ ಮಾಡುತ್ತಾನೆ. ತನಗಿಂತ ಉತ್ತಮ ಗುಣವುಳ್ಳವರನ್ನು ಮುಂದೆ ಇಟ್ಟುಕೊಳ್ಳುತ್ತಾನೆ. ಅಂತಹ ಜ್ಞಾನಿಯ ಎಲ್ಲ ನಡೆಗಳೂ ಒಳ್ಳೆಯ ನಡವಳಿಕೆ ಎಂದು ಹೇಳಲ್ಪಡುತ್ತವೆ.

ಮಿತಂ ಭುಂಕ್ತೇ ಸಂವಿಭಜ್ಯಾಶ್ರಿತೇಭ್ಯೋ
ಮಿತಂ ಸ್ವಪಿತ್ಯಮಿತಂ ಕರ್ಮ ಕೃತ್ವಾ |
ದದಾತ್ಯಮಿತ್ರೇಷ್ವಪಿ ಯಾಚಿತಃ ಸನ್
ತಮಾತ್ಮವಂತಂ ಪ್ರಜಹತ್ಯನರ್ಥಾಃ ॥126॥

ಆಶ್ರಿತರಿಗೆ ಅನ್ನವನ್ನು ಹಂಚಿ ಮಿತವಾಗಿ ಊಟ ಮಾಡುತ್ತಾನೆ, ಅಮಿತವಾದ ಕಾರ್ಯವನ್ನು ಮಾಡಿ ಮಿತವಾಗಿ ನಿದ್ರಿಸುತ್ತಾನೆ, ಶತ್ರುಗಳು ಯಾಚಿಸಿದರೂ ದಾನವನ್ನು ಮಾಡುತ್ತಾನೆ, ಅಂತಹ ಜಿತಮನಸ್ಕನಾದ ಮನುಷ್ಯನನ್ನು ಅನರ್ಥಗಳು ಬಿಟ್ಟು ಹೋಗುತ್ತವೆ.

ಚಿಕೀರ್ಷಿತಂ ವಿಪ್ರಕೃತಂ ಚ ಯಸ್ಯ
ನಾನ್ಯೇ ಜನಾಃ ಕರ್ಮ ಜಾನಂತಿ ಕಿಂಚಿತ್ |
ಮಂತ್ರೇ ಗುಪ್ತೇ ಸಮ್ಯಗನುಷ್ಠಿತೇ ಚ
ಸ್ವಲ್ಪೋ ನಾಸ್ಯ ಚ್ಯವತೇ ಕಶ್ಚಿದರ್ಥಃ ॥127॥

ಯಾವನ ಮಾಡಲು ಇಚ್ಛಿಸಿದ ಕಾರ್ಯವನ್ನು ಮತ್ತು ಮಾಡಿ ಕೆಟ್ಟುಹೋದ ಕಾರ್ಯವನ್ನು ಬೇರೆ ಜನರು ತಿಳಿಯುವುದಿಲ್ಲವೋ, ಯಾವನ ಮಂತ್ರವು (ಮಂತ್ರಾಲೋಚನೆಯು) ರಹಸ್ಯವಾಗಿ ಸರಿಯಾಗಿ ಅನುಷ್ಠಾನ ಮಾಡಲ್ಪಡುತ್ತದೆಯೋ ಅವನಿಂದ ಸ್ವಲ್ಪ ಸಂಪತ್ತೂ ಸಹ ಬಿಟ್ಟು ಹೋಗುವುದಿಲ್ಲ.

ಸ ಸರ್ವಭೂತಪ್ರಶಮೇ ನಿವಿಷ್ಟಃ
ಸತ್ಯೋ ಮೃದುರ್ಮಾನಕೃಚ್ಛುದ್ಧಭಾವಃ |
ಅತೀವ ಸ ಜ್ಞಾಯತೇ ಜ್ಞಾತಿಮಧ್ಯೇ
ಮಹಾಮಣಿರ್ಜಾತ್ಯ ಇವ ಪ್ರಧಾನಃ ॥128॥

ಯಾವನು ಎಲ್ಲರನ್ನೂ ಸಮಾಧಾನ ಮಾಡುವುದರಲ್ಲಿ ನಿರತನಾಗಿರುತ್ತಾನೆಯೋ, ಸತ್ಯವಚನನೂ, ಮೃದುವೂ, ಇನ್ನೊಬ್ಬರಿಗೆ ಮಾನವನ್ನು ಕೊಡುವವನೂ ಮತ್ತು ಶುದ್ಧ ಸ್ವಭಾವದವನೂ ಆಗಿರುತ್ತಾನೆಯೋ ಅವನು ಮಾಲೆಯಲ್ಲಿ ಇರುವ ಒಳ್ಳೆಯ ಜಾತಿಯ ಮಹಾಮಣಿಯಂತೆ ಜ್ಞಾತಿಗಳ ಮಧ್ಯದಲ್ಲಿ ಪ್ರಧಾನನಾಗಿ ಶೋಭಿಸುತ್ತಾನೆ.

ಯಶ್ಚಾತ್ಮನಾಽಪತ್ರಪತೇ ಭೃಶಂ ನರಃ
ಸ ಸರ್ವಲೋಕಸ್ಯ ಗುರುರ್ಭವತ್ಯುತ |
ಅನಂತತೇಜಾಃ ಸುಮನಾಃ ಸಮಾಹಿತಃ
ಸ ತೇಜಸಾ ಸೂರ್ಯ ಇವಾವಭಾಸತೇ ॥129॥

ಯಾವನು ತಾನೇ ಬಹಳವಾಗಿ ನಾಚಿಕೊಳ್ಳುತ್ತಾನೆಯೋ ಅವನು ಎಲ್ಲ ಲೋಕಕ್ಕೂ ಗುರುವಾಗುತ್ತಾನೆ. ಅನಂತ ತೇಜಸ್ಸುಳ್ಳವನಾಗಿ, ಒಳ್ಳೆಯ ಮನಸ್ಸುಳ್ಳವನಾಗಿ, ಸಮಾಧಾನದಿಂದ ಕೂಡಿದವನಾಗಿ ಅವನು ತನ್ನ ತೇಜಸ್ಸಿನಿಂದ ಸೂರ್ಯನಂತೆ ಬೆಳಗುತ್ತಾನೆ.

ವನೇ ಜಾತಾಃ ಶಾಪದಗ್ಧಸ್ಯ ರಾಜ್ಞಃ
ಪಾಂಡೋಃ ಪುತ್ರಾಃ ಪಂಚ ಪಂಚೇಂದ್ರಕಲ್ಪಾಃ |
ತ್ವಯೈವ ಬಾಲಾ ವರ್ಧಿತಾಃ ಶಿಕ್ಷಿತಾಶ್ಚ
ತವಾದೇಶಂ ಪಾಲಯಂತ್ಯಾಂಬಿಕೇಯ ॥130॥

ಕಿಂದಮರ ಶಾಪದಿಂದ ದಗ್ಧರಾದ ಪಾಂಡು ಮಹಾರಾಜನಿಗೆ ಐದು ಮಕ್ಕಳು ಜನಿಸಿದರು. ಐದುಮಕ್ಕಳೂ ಐವರು ಇಂದ್ರರಿಗೆ ಸಮಾನರಾದವರು. ಅಂಬಿಕೇಯನೇ, ನೀನೇ ಅವರನ್ನು ಬೆಳೆಸಿ ಶಿಕ್ಷಣವನ್ನು ನೀಡಿದ್ದೀಯೆ. ಅವರು ನಿನ್ನ ಆಜ್ಞೆಯನ್ನು ಪಾಲಿಸುತ್ತಾರೆ.

ಪ್ರದಾಯೈಷಾಮುಚಿತಂ ತಾತ ರಾಜ್ಯಂ
ಸುಖೀ ಪುತ್ರೈಃ ಸಹಿತೋ ಮೋದಮಾನಃ |
ನ ದೇವಾನಾಂ ನಾಪಿ ಮಾನುಷಾಣಾಂ
ಭವಿಷ್ಯಸಿ ತ್ವಂ ಗರ್ಹಣೀಯೋ ನರೇಂದ್ರ ॥131॥

ಪ್ರೀತಿಪಾತ್ರನೇ, ಅವರಿಗೆ ಯೋಗ್ಯವಾದ ರಾಜ್ಯವನ್ನು ಕೊಟ್ಟು ಪುತ್ರರ ಜೊತೆಯಲ್ಲಿ ಸುಖ-ಸಂತೋಷದಿಂದ ಇರುವವನಾಗು. ನರೇಂದ್ರನೇ, ಹಾಗೆ ಮಾಡಿದರೆ ನೀನು ದೇವತೆಗಳಿಂದಾಗಲೀ ಅಥವಾ ಮನುಷ್ಯರಿಂದಾಗಲೀ ನಿಂದನೀಯನಾಗುವುದಿಲ್ಲ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥

॥ ಪ್ರಜಾಗರಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ವಿದುರನೀತಿ. ಯುಧಿಷ್ಠಿರನಿಗೆ ರಾಜ್ಯವನ್ನು ಕೊಡುವಂತೆ ನಿರ್ಬಂಧ.
ಧೃತರಾಷ್ಟ್ರಃ
ಜಾಗ್ರತೋ ದಹ್ಯಮಾನಸ್ಯ ಯತ್ ಕೃತ್ಯಮನುಪಶ್ಯಸಿ |
ತದ್ ಬ್ರೂಹಿ ಸರ್ವಂ ನಸ್ತಾತ ಧರ್ಮಾರ್ಥಕುಶಲೋ ಹ್ಯಸಿ ॥1॥
ಧೃತರಾಷ್ಟ್ರ ಪ್ರೀತಿಪಾತ್ರನೇ, ಚಿಂತೆಯಿಂದ ಬೆಂದುಹೋಗುತ್ತಾ ಜಾಗರಣೆಯಲ್ಲಿರುವ ನನಗೆ ನೀನು ಯಾವ ಕಾರ್ಯವು ಯುಕ್ತವೆಂದು ಭಾವಿಸುತ್ತೀಯೋ ಅದೆಲ್ಲವನ್ನೂ ಹೇಳು. ನೀನು ಧರ್ಮಾರ್ಥ ಕುಶಲನಾಗಿದ್ದೀಯೆ.
ತ್ವಂ ಮಾಂ ಯಥಾವದ್ ವಿದುರ ಪ್ರಶಾಧಿ
ಪ್ರಜ್ಞಾಪೂರ್ವಂ ಸರ್ವಮಜಾತಶತ್ರೋಃ |
ಯನ್ಮನ್ಯಸೇ ಪಥ್ಯಮದೀನಸತ್ವ
ಶ್ರೇಯಃ ಪಥ್ಯಂ ಬ್ರೂಹಿ ತದ್ವೈ ಕುರೂಣಾಮ್ ॥2॥
ಎಲೈ ವಿದುರನೇ, ನೀನು ಪ್ರಜ್ಞಾಪೂರ್ವಕವಾಗಿ ನನಗೆ ಸರಿಯಾಗಿ ಶಾಸನವನ್ನು ಮಾಡು. ಅದೀನವಾದ ಮನಸ್ಸುಳ್ಳವನೇ, ಅಜಾತಶತ್ರುವಿಗೆ ಯಾವುದು ಹಿತವೆಂದು ಭಾವಿಸುತ್ತೀಯೋ ಹಾಗೆಯೇ ಕುರುಗಳಿಗೂ ಯಾವುದು ಹಿತವೆಂದು ಮತ್ತು ಶ್ರೇಯಸ್ಸೆಂದು ಭಾವಿಸುತ್ತೀಯೋ ಅದನ್ನೇ ಹೇಳುವವನಾಗು.
ಪಾಪಾಶಂಕೀ ಪಾಪಮೇವಾನುಪಶ್ಯನ್
ಪೃಚ್ಛಾಮಿ ತ್ವಾಂ ವ್ಯಾಕುಲೇನಾತ್ಮನಾಽಹಮ್ |
ಕವೇ ತನ್ಮೇ ಬ್ರೂಹಿ ತತ್ವಂ ಯಥಾವತ್
ಮನೀಷಿತಂ ಸರ್ವಮಜಾತಶತ್ರೋಃ ॥3॥
ಪಾಪಾಕಾಂಕ್ಷಿಯಾಗಿ ಮುಂದೆ ಪಾಪವನ್ನೇ ನೋಡುವವನಾಗಿ ವ್ಯಾಕುಲವಾದ ಮನಸ್ಸಿನಿಂದ ನಾನು ನಿನ್ನನ್ನು ಕೇಳುತ್ತಿದ್ದೇನೆ. ಜ್ಞಾನಿಯಾದವನೇ, ನನಗೆ ತತ್ವವನ್ನು ಯಥಾರ್ಥವಾಗಿ ಹೇಳು. ಅಜಾತಶತ್ರುವಿನ ಎಲ್ಲಾ ಅಭಿಪ್ರಾಯವನ್ನೂ ತಿಳಿಸು.
ವಿದುರಃ
ಶುಭಂ ವಾ ಯದಿ ವಾ ಪಾಪಂ ಪ್ರಿಯಂ ವಾ ಯದಿ ವಾಽಪ್ರಿಯಮ್ |
ಅಪೃಷ್ಟಃ ಕಸ್ಯಚಿದ್ ಬ್ರೂಯಾದ್ ಯಃ ಸ ಗಚ್ಛೇತ್ ಪರಾಭವಮ್ ॥4॥
ವಿದುರ ಶುಭವಾಗಲೀ ಅಥವಾ ಅಶುಭವಾಗಲೀ, ಪ್ರಿಯವಾಗಲೀ ಅಥವಾ ಅಪ್ರಿಯವಾಗಲೀ, ಪ್ರಶ್ನೆ ಮಾಡದೇ ಉತ್ತರವನ್ನು ಹೇಳುವವನು ಪರಾಭವವನ್ನು ಹೊಂದುತ್ತಾನೆ.
ತಸ್ಮಾದ್ ವಕ್ಷ್ಯಾಮಿ ತೇ ರಾಜನ್ ಶಮಮಿಚ್ಛನ್ ಕುರೂನ್ ಪ್ರತಿ |
ವಚಃ ಶ್ರೇಯಸ್ಕರಂ ಧರ್ಮ್ಯಂ ಬ್ರುವತಸ್ತನ್ನಿಬೋಧ ಮೇ ॥5॥
ನೀನು ಪ್ರಶ್ನೆ ಮಾಡಿರುವುದರಿಂದ ಎಲೈ ರಾಜನೇ, ಕುರುಗಳಿಗೆ ಶಾಂತಿಯನ್ನು ಬಯಸಿ ಮಾತನಾಡುವೆನು. ಶ್ರೇಯಸ್ಕರವೂ, ಧರ್ಮಕ್ಕೆ ಅನುಗುಣವೂ ಆದ ನನ್ನ ಮಾತುಗಳನ್ನು ಕೇಳು.
ಮಿಥ್ಯೋಪೇತಾನಿ ಕರ್ಮಾಣಿ ಸಿದ್ಧ್ಯೇಯುರ್ಯದಿ ಭಾರತ |
ಅನುತಾಪಪ್ರಯುಕ್ತಾನಿ ಮಾ ಸ್ಮ ತೇಷು ಮನಃ ಕೃಥಾಃ ॥6॥
ಎಲೈ ಭಾರತನೇ, ಮೋಸದಿಂದ ಮಾಡಿದ ಕರ್ಮಗಳು ಅನಂತರ ಪಶ್ಚಾತ್ತಾಪದಿಂದ ಕೂಡಿದರೂ ಸಿದ್ಧಿಯನ್ನು ಕೊಡುವುದಾದರೆ (ಸಫಲವಾಗುವುದಾದರೆ) ಅಂತಹ ಕರ್ಮಗಳಲ್ಲಿ ಮನಸ್ಸನ್ನು ಮಾಡಬೇಡ.
ತಥೈವ ಯೋಗವಿಹಿತಂ ನ ಸಿದ್ಧ್ಯೇತ್ ಕರ್ಮ ಯನ್ನೃಪ |
ಉಪಾಯಯುಕ್ತಂ ಮೇಧಾವೀ ನ ಚ ತತ್ರ ಪತೇತ್ ತಮಃ ॥7॥
ರಾಜನೇ, ಮೇಧಾವಿಯಾದವನು ಈ ಜನ್ಮದಲ್ಲಿ ಮತ್ತು ಕಾಲಾಂತರದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಒಳ್ಳೆಯ ಫಲವನ್ನು ಕೊಡುವ, ಶಾಸ್ತ್ರವಿಹಿತವಾದ ಕರ್ಮವನ್ನು ಮಾಡಿ, ಅದು ಈ ಜನ್ಮದಲ್ಲಿ ಸಿದ್ಧಿಸದಿದ್ದರೆ ಅದರಲ್ಲಿ ಮನೋವಿಷಾದವನ್ನು ಹೊಂದಬಾರದು.
ಅನುಬಂಧಾನಪೇಕ್ಷೇತ ಸಾನುಬಂಧೇಷು ಕರ್ಮಸು |
ಸಂಪ್ರಧಾರ್ಯ ಚ ಕುರ್ವೀತ ನ ವೇಗೇನ ಸಮಾಚರೇತ್ ॥8॥
ಇನ್ನೊಬ್ಬರ ಸಹಾಯದಿಂದ ಮಾಡುವ ಕರ್ಮಗಳಲ್ಲಿ ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸಬೇಕು. ಚೆನ್ನಾಗಿ ವಿಚಾರ ಮಾಡಿ ಕರ್ಮವನ್ನು ಮಾಡಬೇಕು, ತ್ವರೆಯಿಂದ ಮಾಡಬಾರದು.
ಅನುಬಂಧಂ ಚ ಸಂಪ್ರೇಕ್ಷ್ಯ ವಿಪಾಕಂ ಚೈವ ಕರ್ಮಣಾಮ್ |
ಉತ್ಥಾನಮಾತ್ಮನಶ್ಚಾದೌ ಧೀರಃ ಕುರ್ವೀತ ವಾ ನ ವಾ ॥9॥
ಕರ್ಮಕ್ಕೆ ಬೇಕಾದ ಸಹಾಯವನ್ನು ಗಮನಿಸಿ ಕರ್ಮದ ಪರಿಣಾಮವನ್ನೂ ಗಮನಿಸಿ ಅದಕ್ಕಿಂತ ಮೊದಲು ತನ್ನ ಉತ್ಸಾಹ ಮತ್ತು ಅಭಿವೃದ್ಧಿಯನ್ನು ಗಮನಿಸಿ ಧೀರನಾದವನು ಕರ್ಮವನ್ನು ಮಾಡಬಹುದು ಅಥವಾ ಬಿಡಬಹುದು.

ಯಃ ಪ್ರಮಾಣಂ ನ ಜಾನಾತಿ ಸ್ಥಾನೇ ವೃದ್ಧೌ ತಥಾ ಕ್ಷಯೇ |
ಕೋಶೇ ಜನಪದೇ ದಂಡೇ ನ ಸ ರಾಜ್ಯೇಽವತಿಷ್ಠತೇ ||10||
ಯಾವ ರಾಜನು ಸ್ಥಾನ, ವೃದ್ಧಿ, ಕ್ಷಯ, ಕೋಶ, ಜನಪದ ಮತ್ತು ದಂಡ - ಈ ಆರು ವಿಷಯಗಳಲ್ಲಿ ಪ್ರಮಾಣವನ್ನು ತಿಳಿದಿಲ್ಲವೋ ಅವನು ರಾಜ್ಯದಲ್ಲಿ ಉಳಿಯುವುದಿಲ್ಲ.
ಯಸ್ತ್ವೇತಾನಿ ಯಥೋಕ್ತಾನಿ ಪ್ರಮಾಣಾನ್ಯನುಪಶ್ಯತಿ |
ಯುಕ್ತೋ ಧರ್ಮಾರ್ಥಯೋರ್ಜ್ಞಾನೇ ಸ ರಾಜ್ಯಮಧಿತಿಷ್ಠತಿ ||11||
ಯಾವನು ಈ ಆರು ವಿಷಯಗಳಲ್ಲಿ ಶಾಸ್ತ್ರೋಕ್ತವಾದ ಪ್ರಮಾಣಗಳನ್ನು ಗಮನಿಸಿ ಧರ್ಮಾರ್ಥಗಳ ಜ್ಞಾನದಲ್ಲಿ ನಿರತನಾಗಿರುತ್ತಾನೆಯೋ ಅವನು ರಾಜ್ಯದಲ್ಲಿ ಪ್ರತಿಷ್ಠಿತನಾಗುತ್ತಾನೆ.
ನ ರಾಜ್ಯಂ ಪ್ರಾಪ್ತಮಿತ್ಯೇವಂ ವರ್ತಿತವ್ಯಮಸಾಂಪ್ರತಮ್ |
ಶ್ರಿಯಂ ಹ್ಯವಿನಯೋ ಹಂತಿ ಜರಾ ರೂಪಮಿವೋತ್ತಮಮ್ ||12||
ರಾಜ್ಯವು ದೊರಕಿದೆ ಎಂಬ ಒಂದು ಕಾರಣದಿಂದ ಅಯುಕ್ತವಾದುದನ್ನು ಆಚರಿಸಬಾರದು. ಮುಪ್ಪು ಸೌಂದರ್ಯವನ್ನು ನಾಶಮಾಡಿದಂತೆ ಅವಿನಯವು ಸಂಪತ್ತನ್ನು ನಾಶಪಡಿಸುತ್ತದೆ.
ಭಕ್ಷ್ಯೋತ್ತಮಪ್ರತಿಚ್ಛನ್ನಂ ಮತ್ಸ್ಯೋ ಬಡಿಶಮಾಯಸಮ್ |
ಅನ್ನಾಭಿಲಾಷೀ ಗ್ರಸತೇ ನಾನುಬಂಧಮವೇಕ್ಷತೇ ||13||
ಆಹಾರವನ್ನು ಬಯಸುವ ಮತ್ಸ್ಯವು ಒಳ್ಳೆಯ ಭಕ್ಷ್ಯದಿಂದ ಮರೆಮಾಡಲ್ಪಟ್ಟ ಕಬ್ಬಿಣದ ಗಾಳವನ್ನು ನುಂಗುತ್ತದೆ. ಅದರ ಪರಿಣಾಮವನ್ನು ಗಮನಿಸುವುದಿಲ್ಲ.
ಯಚ್ಛಕ್ಯಂ ಗ್ರಸಿತುಂ ಗ್ರಸ್ಯಂ ಗ್ರಸ್ತಂ ಪರಿಣಮಚ್ಚ ಯತ್ |
ಹಿತಂ ಚ ಪರಿಮಾಣೇ ಯತ್ ತದಾದ್ಯಂ ಭೂತಿಮಿಚ್ಛತಾ ||14||
ಯಾವುದನ್ನು ಹಸ್ತದಿಂದ ಹಿಡಿಯಲು ಮತ್ತೆ ಬಾಯಿಂದ ನುಂಗಲು ಸಾಧ್ಯವೋ, ಯಾವುದನ್ನು ನುಂಗಿದರೆ ಜೀರ್ಣವಾಗುತ್ತದೆಯೋ, ಜೀರ್ಣವಾದ ಮೇಲೆಯೂ ಯಾವುದು ಹಿತವಾಗುತ್ತದೆಯೋ ಸಂಪತ್ತನ್ನು ಅಪೇಕ್ಷಿಸುವವನು ಅಂತಹ ಭೋಜ್ಯವನ್ನೇ ಅಪೇಕ್ಷಿಸಬೇಕು.

ವನಸ್ಪತೇರಪಕ್ವಾನಿ ಫಲಾನಿ ವಿಚಿನೋತಿ ಯಃ |
ನ ಪ್ರಾಪ್ನೋತಿ ರಸಂ ತೇಭ್ಯೋ ಬೀಜಂ ಚಾಸ್ಯ ವಿನಶ್ಯತಿ ||15||
ಯಾವನು ಒಂದು ವೃಕ್ಷದ ಪಕ್ವವಾಗದ ಫಲಗಳನ್ನು ತಿನ್ನುತ್ತಾನೆಯೋ ಅವನಿಗೆ ಆ ಫಲದ ರಸವಾಗಲೀ ಮತ್ತು ಆ ಫಲದಿಂದ ಬೀಜಗಳಾಗಲೀ ದೊರೆಯುವುದಿಲ್ಲ. ಅವು ನಾಶವನ್ನು ಹೊಂದುತ್ತವೆ.
ಯಸ್ತು ಪಕ್ವಮುಪಾದತ್ತೇ ಕಾಲೇ ಪರಿಣತಂ ಫಲಮ್ |
ಫಲಾದ್ ರಸಂ ಸ ಲಭತೇ ಬೀಜಾಚ್ಚೈವ ಫಲಂ ಪುನಃ ||16||
ಯಾವನು ಯೋಗ್ಯವಾದ ಕಾಲದಲ್ಲಿ ಪಕ್ವವಾದ ಫಲವನ್ನು ಸ್ವೀಕರಿಸುತ್ತಾನೆಯೋ ಅವನು ಫಲದಿಂದ ರಸವನ್ನೂ ಮತ್ತು ಪುನಃ ಬೀಜದಿಂದ ಫಲವನ್ನೂ ಪಡೆಯುತ್ತಾನೆ.
ಯಥಾ ಮಧು ಸಮಾದತ್ತೇ ರಕ್ಷನ್ ಪುಷ್ಪಾಣಿ ಷಟ್ಪದಃ |
ತದ್ವದರ್ಥಾನ್ ಮನುಷ್ಯೇಭ್ಯ ಆದದ್ಯಾದವಿಹಿಂಸಯಾ ||17||
ಹೇಗೆ ದುಂಬಿಯು ಪುಷ್ಪಗಳನ್ನು ರಕ್ಷಿಸಿ ಮಧುವನ್ನು ಮಾತ್ರ ತೆಗೆದುಕೊಳ್ಳುತ್ತದೋ ಅದರಂತೆ ಮನುಷ್ಯರನ್ನು ಹಿಂಸಿಸದೆ ರಾಜನು ಅವರಿಂದ ಧನವನ್ನು ಸಂಗ್ರಹಿಸಬೇಕು.
ಪುಷ್ಪಂ ಪುಷ್ಪಂ ವಿಚಿನ್ವೀಯಾತ್ ಮೂಲಚ್ಛೇದಂ ನ ಕಾರಯೇತ್ |
ಮಾಲಾಕಾರ ಇವಾರಾಮೇ ನ ಯಥಾಽಂಗಾರಕಾರಕಃ ||18||
ಹೂಮಾಲೆಯನ್ನು ಕಟ್ಟುವವನು ತೋಟದಲ್ಲಿ ಒಂದೊಂದು ಹೂವನ್ನು ಆರಿಸಿದಂತೆ ಆರಿಸಿಕೊಳ್ಳಬೇಕು. ಇದ್ದಿಲನ್ನು ಮಾಡುವವನಂತೆ ಮೂಲಚ್ಛೇದವನ್ನೇ ಮಾಡಬಾರದು.
ಕಿಂ ನು ಮೇ ಸ್ಯಾದಿದಂ ಕೃತ್ವಾ ಕಿಂ ನು ಮೇ ಸ್ಯಾದಕುರ್ವತಃ |
ಇತಿ ಕರ್ಮಾಣಿ ಸಂಚಿಂತ್ಯ ಕುರ್ಯಾದ್ವಾ ಪುರುಷೋ ನ ವಾ ||19||
ನಾನು ಈ ಕಾರ್ಯವನ್ನು ಮಾಡಿದರೆ ಏನಾಗಬಹುದು ಅಥವಾ ಮಾಡದಿದ್ದರೆ ಏನಾಗಬಹುದು ಎಂದು ಕಾರ್ಯದ ವಿಷಯದಲ್ಲಿ ಚಿಂತಿಸಿ ಪುರುಷನು ಅನಂತರ ಮಾಡಬಹುದು ಅಥವಾ ಬಿಡಬಹುದು.
ಅನಾರಭ್ಯಾ ಭವಂತ್ಯರ್ಥಾಃ ಕೇಚಿನ್ನಿತ್ಯಂ ತಥಾಽಽಗತಾಃ |
ಕೃತಃ ಪುರುಷಕಾರೋ ಹಿ ಭವೇದ್ಯೇಷು ನಿರರ್ಥಕಃ ||20||
ಕೆಲವು ಅರ್ಥಗಳು ನಿತ್ಯದಲ್ಲಿ ತಾವಾಗಿಯೇ ಬಂದು ಒದಗುತ್ತವೆ. ಅದಕ್ಕಾಗಿ ಮಾಡುವ ಪುರುಷ ಪ್ರಯತ್ನವು ವ್ಯರ್ಥವಾಗುತ್ತವೆ.
ಅನರ್ಥೇ ಚೈವ ನಿರತಮರ್ಥೇ ಚೈವ ಪರಾಙ್ಮುಖಮ್ |
ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ ||21||
ನ ತಂ ಭರ್ತಾರಮಿಚ್ಛಂತಿ ಷಂಡಂ ಪತಿಮಿವ ಸ್ತ್ರಿಯಃ ||22||
ಯಾವನು ಅನರ್ಥದಲ್ಲಿಯೇ ನಿರತನಾಗಿರುತ್ತಾನೆಯೋ ಮತ್ತು ಅರ್ಥದಿಂದ ವಿಮುಖನಾಗಿರುತ್ತಾನೆಯೋ ಅವನ ಅನುಗ್ರಹವು ನಿಷ್ಫಲ ಮತ್ತು ಅವನ ಕ್ರೋಧವು ನಿರರ್ಥಕವಾದುದು. ಸ್ತ್ರೀಯರು ನಪುಂಸಕನಾದ ಪತಿಯನ್ನು ಬಯಸದಂತೆ ಪ್ರಜೆಗಳು ಅಂತಹ ಪ್ರಭುವನ್ನು ಬಯಸುವುದಿಲ್ಲ.

ಕಾಂಶ್ಚಿದರ್ಥಾನ್ ನರಃ ಪ್ರಾಜ್ಞೋ ಲಘುಮೂಲಾನ್ ಮಹಾಫಲಾನ್ |
ಕ್ಷಿಪ್ರಮಾರಭತೇ ಕರ್ತುಂ ನ ವಿಘ್ನಯತಿ ತಾದೃಶಾನ್ ॥23॥
ಪ್ರಾಜ್ಞನಾದವನು ಅಲ್ಪಪ್ರಯತ್ನದಿಂದ ಆರಂಭಿಸಲು ಸಾಧ್ಯವಾದ ಮಹಾಫಲವನ್ನು ಕೊಡುವ ಕೆಲವು ಕಾರ್ಯಗಳನ್ನು ಶೀಘ್ರವಾಗಿ ಆರಂಭಿಸುತ್ತಾನೆ. ಅಂತಹ ಕಾರ್ಯಗಳಿಗೆ ವಿಘ್ನವನ್ನು ತಂದುಕೊಳ್ಳುವುದಿಲ್ಲ.
ಋಜು ಪಶ್ಯತಿ ಯಃ ಸರ್ವಂ ಚಕ್ಷುಷಾ ನು ಪಿಬನ್ನಿವ |
ಆಸೀನಮಪಿ ತೂಷ್ಣೀಕಮನುರಜ್ಯಂತಿ ತಂ ಪ್ರಜಾಃ ॥24॥
ಯಾವ ರಾಜನು ಕಣ್ಣಿನಿಂದ ಪಾನ ಮಾಡುವವನಂತೆ ಎಲ್ಲವನ್ನೂ ನೇರವಾಗಿ ನೋಡುತ್ತಾನೆಯೋ ಅವನು ಸುಮ್ಮನೇ ಕುಳಿತಿದ್ದರೂ ಸಹ ಅಂತಹ ರಾಜನಲ್ಲಿ ಪ್ರಜೆಗಳು ಅನುರಕ್ತರಾಗುತ್ತಾರೆ.
ಸುಪುಷ್ಪಿತಃ ಸ್ಯಾದಫಲಃ ಫಲಿತಃ ಸ್ಯಾದ್ ದುರಾರುಹಃ |
ಅಪಕ್ವಃ ಪಕ್ವಸಂಕಾಶೋ ನ ಚ ಶೀರ್ಯೇತ ಕರ್ಹಿಚಿತ್ ॥25॥
ಒಳ್ಳೆಯ ಪುಷ್ಪಗಳಿದ್ದರೂ ಫಲವಿಲ್ಲದೆ ಇರಬೇಕು. ಫಲವಿದ್ದರೂ ವೃಕ್ಷವು ಹತ್ತಲು ಸಾಧ್ಯವಾಗದಂತೆ ಇರಬೇಕು. ಅಪಕ್ವವಾದ ಫಲವು ಪಕ್ವದಂತೆ ತೋರುತ್ತಿರಬೇಕು. ಅಂತಹ ವೃಕ್ಷವು ಎಂದೂ ನಾಶವನ್ನು ಹೊಂದುವುದಿಲ್ಲ.
ಚಕ್ಷುಷಾ ಮನಸಾ ವಾಚಾ ಕರ್ಮಣಾ ಚ ಚತುರ್ವಿಧಮ್ |
ಪ್ರಸಾದಯತಿ ಯೋ ಲೋಕಂ ತಂ ಲೋಕೋಽನುಪ್ರಸೀದತಿ ॥26॥
ಚಕ್ಷುಸ್ಸಿನಿಂದ, ಮನಸ್ಸಿನಿಂದ, ಮಾತಿನಿಂದ ಮತ್ತು ಕರ್ಮದಿಂದ ನಾಲ್ಕುವಿಧವಾಗಿ ಯಾವನು ಪ್ರಜೆಗಳನ್ನು ಸಂತೋಷಪಡಿಸುತ್ತಾನೋ ಅಂತಹ ರಾಜನಲ್ಲಿ ಲೋಕವು ಅನುರಕ್ತವಾಗುತ್ತದೆ.
ಯಸ್ಮಾತ್ ತ್ರಸ್ಯಂತಿ ಭೂತಾನಿ ಮೃಗವ್ಯಾಧಾನ್ಮೃಗಾ ಇವ |
ಸಾಗರಾಂತಾಮಪಿ ಮಹೀಂ ಲಬ್ಧ್ವಾ ಸ ಪರಿಹೀಯತೇ ॥27॥
ಬೇಟೆಯಾಡುವವನಿಗೆ ಮೃಗಗಳು ಹೆದರಿದಂತೆ ಯಾವನಿಗೆ ಎಲ್ಲರೂ ಹೆದರುತ್ತಾರೆಯೋ ಅಂತಹವನು ಸಾಗರಾಂತ ಭೂಮಿಯನ್ನು ಪಡೆದರೂ ಅದು ನಾಶವನ್ನು ಹೊಂದುತ್ತದೆ.
ಪಿತೃಪೈತಾಮಹಂ ರಾಜ್ಯಂ ಪ್ರಾಪ್ಯಾಪಿ ಸ್ವೇನ ಕರ್ಮಣಾ |
ವಾಯುರಭ್ರಮಿವಾಸಾದ್ಯ ಭ್ರಂಶಯತ್ಯನಯಾಸ್ಥಿತಃ ॥28॥
ತನ್ನ ಕರ್ಮದಿಂದ ಪಿತೃ-ಪಿತಾಮಹರ ರಾಜ್ಯವನ್ನು ಪಡೆದರೂ ಮೋಡಗಳ ಸಮೂಹಕ್ಕೆ ವಾಯು ಬಂದು ಸೇರಿದಂತೆ ಅವನು ಆಶ್ರಯಿಸಿದ ಅನೀತಿಯು ರಾಜ್ಯವನ್ನು ನಾಶಪಡಿಸುತ್ತದೆ.
ಧರ್ಮಮಾಚರತೋ ರಾಜ್ಞಃ ಸದ್ಭಿಶ್ಚರಿತಮಾದಿತಃ |
ವಸುಧಾ ವಸುಸಂಪೂರ್ಣಾ ವರ್ಧತೇ ಭೂತಿವರ್ಧನೀ ॥29॥
ಮೊದಲಿನಿಂದಲೂ ಸಜ್ಜನರು ಆಚರಿಸಿದ ಧರ್ಮವನ್ನು ಆಚರಿಸುವ ರಾಜನಿಗೆ ಭೂಮಿಯು ಧನಸಂಪೂರ್ಣವಾಗಿ ಅವನ ಸಂಪತ್ತನ್ನು ಹೆಚ್ಚಿಸುತ್ತದೆ.
ಅಥ ಸಂತ್ಯಜತೋ ಧರ್ಮಮಧರ್ಮಮನುತಿಷ್ಠತಃ |
ಪ್ರತಿಸಂವೇಷ್ಟತೇ ಭೂಮಿರಗ್ನೌ ಚರ್ಮಾಹಿತಂ ಯಥಾ ॥30॥
ಹಾಗಲ್ಲದೆ ಧರ್ಮವನ್ನು ಬಿಟ್ಟು ಅಧರ್ಮವನ್ನು ಅನುಷ್ಠಾನ ಮಾಡುವ ರಾಜನಿಗೆ ಅಗ್ನಿಯಲ್ಲಿ ಹಾಕಿದ ಚರ್ಮವು ಮುದುಡಿಕೊಳ್ಳುವಂತೆ ಭೂಮಿಯು ಮುದುಡಿಕೊಳ್ಳುತ್ತದೆ.
ಯ ಏವ ಯತ್ನಃ ಕ್ರಿಯತೇ ಪರರಾಷ್ಟ್ರವಿಮರ್ದನೇ |
ಸ ಏವ ಯತ್ನಃ ಕರ್ತವ್ಯಃ ಸ್ವರಾಷ್ಟ್ರಪರಿಪಾಲನೇ ॥31॥
ಪರರಾಷ್ಟ್ರವನ್ನು ವಿಮರ್ದನ ಮಾಡಲು ಯಾವ ಪ್ರಯತ್ನವು ಮಾಡಲ್ಪಡುತ್ತದೆಯೋ ಅದೇ ಯತ್ನವನ್ನು ತನ್ನ ರಾಷ್ಟ್ರಪರಿಪಾಲನೆಗೆ ಮಾಡಬೇಕು.
ಧರ್ಮೇಣ ರಾಜ್ಯಂ ವಿಂದೇತ ಧರ್ಮೇಣ ಪರಿಪಾಲಯೇತ್ |
ಧರ್ಮಮೂಲಾಂ ಶ್ರಿಯಂ ಪ್ರಾಪ್ಯ ನ ಜಹಾತಿ ನ ಹೀಯತೇ ॥32॥
ಧರ್ಮದಿಂದ ರಾಜ್ಯವನ್ನು ಪಡೆಯಬೇಕು. ಧರ್ಮದಿಂದ ಪಾಲಿಸಬೇಕು. ಧರ್ಮ ಮೂಲವಾದ ಸಂಪತ್ತನ್ನು ಹೊಂದಿದವನು ಸಂಪತ್ತನ್ನು ಕಳೆದುಕೊಳ್ಳುವುದಿಲ್ಲ. ಸಂಪತ್ತೂ ಅವನನ್ನು ಬಿಡುವುದಿಲ್ಲ.
ಅಪ್ಯುನ್ಮತ್ತಾತ್ ಪ್ರಲಪತೋ ಬಾಲಾದಪಿ ಸುಭಾಷಿತಮ್ |
ಸರ್ವತಃ ಸಾರಮಾದದ್ಯಾತ್ ಅಶ್ಮಭ್ಯ ಇವ ಕಾಂಚನಮ್ ॥33॥
ಒಳ್ಳೆಯ ಮಾತುಗಳನ್ನು ಮಕ್ಕಳಿಂದಲೂ ಅಥವಾ ಹುಚ್ಚರ ಪ್ರಲಾಪದಿಂದಲೂ ಕಲ್ಲಿನಿಂದ ಚಿನ್ನವನ್ನು ತೆಗೆದುಕೊಂಡಂತೆ ಎಲ್ಲ ಕಡೆಗಳಿಂದಲೂ ಶ್ರೇಷ್ಠವಾದುದನ್ನು ತೆಗೆದುಕೊಳ್ಳಬೇಕು.
ಸುವ್ಯಾಹೃತಾನಿ ಮಹತಾಂ ಸುಕೃತಾನಿ ತತಸ್ತತಃ |
ಸಂಚಿನ್ವನ್ ಧೀರ ಆಸೀತ ಶಿಲಾಹಾರೀ ಶಿಲಾಂ ಯಥಾ ॥34॥
ದೊಡ್ಡವರ ಒಳ್ಳೆಯ ಮಾತುಗಳನ್ನು, ಅವರ ಒಳ್ಳೆಯ ಕೃತಿಗಳನ್ನು ಧೀರನಾದವನು ಪಾರಿವಾಳವು ಕಲ್ಲಿನ ಕಣವನ್ನು ಆರಿಸಿಕೊಳ್ಳುವಂತೆ ಆರಿಸಿಕೊಂಡಿರಬೇಕು.
ಗಂಧೇನ ಗಾವಃ ಪಶ್ಯಂತಿ ಶಾಸ್ತ್ರೈಃ ಪಶ್ಯಂತಿ ಬ್ರಾಹ್ಮಣಾಃ |
ಚಾರೈಃ ಪಶ್ಯಂತಿ ರಾಜಾನಃ ಚಕ್ಷುರ್ಭ್ಯಾಮಿತರೇ ಜನಾಃ ॥35॥

ಗೋವುಗಳು ಗಂಧದಿಂದ ನೋಡುತ್ತವೆ, ಬ್ರಾಹ್ಮಣರು ಶಾಸ್ತ್ರದಿಂದ ನೋಡುತ್ತಾರೆ, ರಾಜರು ಚಾರರಿಂದ ನೋಡುತ್ತಾರೆ, ಇತರ ಜನರು ಕಣ್ಣುಗಳಿಂದ ನೋಡುತ್ತಾರೆ.
ಭೂಯಾಂಸಂ ಲಭತೇ ಕ್ಲೇಶಂ ಯಾ ಗೌರ್ಭವತಿ ದುರ್ದುಘಾ |
ಅಥ ಯಾ ಸುದುಘಾ ಭವತಿ ನೈವ ತಾಂ ವಿತುದಂತ್ಯಪಿ ॥36॥
ಯಾವ ಹಸುವು ಹಾಲನ್ನು ಕರೆಯುವುದಕ್ಕೆ ಕಷ್ಟವನ್ನು ಕೊಡುತ್ತದೆಯೋ ಅದು ಬಹಳ ಕ್ಲೇಶಗಳಿಗೆ ಒಳಗಾಗುತ್ತದೆ. ಯಾವುದು ಸುಲಭವಾಗಿ ಹಾಲನ್ನು ಕೊಡುತ್ತದೆಯೋ ಅದನ್ನು ಯಾರೂ ಹಿಂಸಿಸುವುದಿಲ್ಲ.
ಯದತಪ್ತಂ ಪ್ರಣಮತೇ ನ ತತ್ ಸಂತಾಪಯತ್ಯುತ |
ಯಚ್ಚ ಸ್ವಯಂ ನಮೇದ್ ದಾರು ನ ತತ್ ಸಂತಾಪಯೇದ್ ಬುಧಃ ॥
ಏತಯೋಪಮಾ ಧೀರಃ ಸನ್ನಮೇತ ಬಲೀಯಸೇ ॥38॥
ಯಾವುದು ಕಾಯಿಸದಿದ್ದರೆ ಬಗ್ಗುವುದಿಲ್ಲವೋ ಅಂತಹ ಕಬ್ಬಿಣದ ವಸ್ತುಗಳನ್ನು ಕಾಯಿಸುತ್ತಾರೆ. ಯಾವ ಮರವು ತಾನಾಗಿಯೇ ಬಗ್ಗುತ್ತದೆಯೋ ಅದನ್ನು ವಿವೇಕಿಯಾದವನು ಕಾಯಿಸುವುದಿಲ್ಲ. ಈ ದೃಷ್ಟಾಂತದಿಂದ ಧೀರನಾದವನು ಪ್ರಬಲನಾದವನಿಗೆ ಬಾಗಬೇಕು.
ಪರ್ಜನ್ಯನಾಥಾಃ ಪಶವೋ ರಾಜಾನೋ ಮಂತ್ರಿಬಾಂಧವಾಃ |
ಪತಯೋ ದೇವತಾಃ ಸ್ತ್ರೀಣಾಂ ಬ್ರಾಹ್ಮಣಾ ವೇದಬಾಂಧವಾಃ ॥39॥
ಪಶುಗಳಿಗೆ ಪರ್ಜನ್ಯನು ಒಡೆಯನು. ರಾಜರಿಗೆ ಮಂತ್ರಿಗಳು ಬಾಂಧವರು. ಸ್ತ್ರೀಯರಿಗೆ ಪತಿಗಳೇ ದೇವತೆಗಳು. ಬ್ರಾಹ್ಮಣರಿಗೆ ವೇದಗಳೇ ಬಾಂಧವರು.
ಸತ್ಯೇನ ರಕ್ಷ್ಯತೇ ಧರ್ಮೋ ವಿದ್ಯಾ ಯೋಗೇನ ರಕ್ಷ್ಯತೇ |
ಮೃಜಯಾ ರಕ್ಷ್ಯತೇ ರೂಪಂ ಕುಲಂ ವೃತ್ತೇನ ರಕ್ಷ್ಯತೇ ॥40॥
ಧರ್ಮವು ಸತ್ಯದಿಂದ ರಕ್ಷಿಸಲ್ಪಡುತ್ತದೆ. ವಿದ್ಯೆಯು ಯೋಗದಿಂದ ರಕ್ಷಿಸಲ್ಪಡುತ್ತದೆ. ಶುದ್ಧಿಯಿಂದ ರೂಪವು ರಕ್ಷಿಸಲ್ಪಡುತ್ತದೆ. ನಡತೆಯಿಂದ ಕುಲವು ರಕ್ಷಿಸಲ್ಪಡುತ್ತದೆ.
ಮಾನೇನ ರಕ್ಷ್ಯತೇ ಧಾನ್ಯಮಶ್ವಾನ್ ರಕ್ಷೇದನುಕ್ರಮಾತ್ |
ಅಭೀಕ್ಷ್ಣದರ್ಶನಾದ್ ಗಾವಃ ಸ್ತ್ರಿಯೋ ರಕ್ಷ್ಯೇತ್ ಕುಶೀಲತಃ ॥41॥
ಧಾನ್ಯವು ಪರಿಮಾಣದಿಂದ ರಕ್ಷಿಸಲ್ಪಡುತ್ತದೆ. ಅಶ್ವಗಳು ಅವುಗಳನ್ನೇ ನಡೆದಾಡಿಸಿ ಓಡಾಡಿಸುವುದರಿಂದ ರಕ್ಷಿತವಾಗುತ್ತವೆ. ಸತತವಾಗಿ ನೋಡಿಕೊಳ್ಳುವುದರಿಂದ ಗೋವುಗಳು ರಕ್ಷಿತವಾಗುತ್ತವೆ. ಸ್ತ್ರೀಯರನ್ನು ಕೆಟ್ಟ ಮನುಷ್ಯರಿಂದ ರಕ್ಷಿಸಬೇಕು.
ನ ಕುಲಂ ವೃತ್ತಹೀನಸ್ಯ ಪ್ರಮಾಣಮಿತಿ ಮೇ ಮತಿಃ |
ಅಂತ್ಯೇಷ್ವಪಿ ಹಿ ಜಾತಾನಾಂ ವೃತ್ತಮೇವ ವಿಶಿಷ್ಯತೇ ॥42॥
ನಡತೆಯಿಂದ ಹೀನನಾದವನಿಗೆ ಕುಲವು ಯಾವ ಮರ್ಯಾದೆಯನ್ನೂ ತಂದುಕೊಡುವುದಿಲ್ಲವೆಂದು ನನ್ನ ಅಭಿಪ್ರಾಯ. ಅಂತ್ಯಜರಾಗಿ ಜನಿಸಿದವರೂ ಸಹ ತಮ್ಮ ನಡತೆಯಿಂದ ಶ್ರೇಷ್ಠರೆನಿಸುತ್ತಾರೆ.
ಯ ಈರ್ಷ್ಯುಃ ಪರವಿತ್ತೇಷು ರೂಪೇ ವೀರ್ಯೇ ಕುಲೇಽನ್ವಯೇ |
ಸುಖಸೌಭಾಗ್ಯಸತ್ಕಾರೇ ತಸ್ಯ ಚಾಧಿರನಂತಕಃ ॥43॥
ಯಾವನು ಇನ್ನೊಬ್ಬರ ಸಂಪತ್ತಿನಲ್ಲಿ, ರೂಪದಲ್ಲಿ, ಪರಾಕ್ರಮದಲ್ಲಿ, ಕುಲದಲ್ಲಿ, ಸಂತತಿಯಲ್ಲಿ, ಸುಖ-ಸೌಭಾಗ್ಯ-ಸತ್ಕಾರಗಳಲ್ಲಿ ಅಸೂಯೆ ಪಡುತ್ತಾನೆಯೋ ಅವನ ಮನೋರೋಗವು ಅನಂತವಾದುದು (ಕೊನೆಯಿಲ್ಲದುದು).
ಅಕಾರ್ಯಕರಣಾದ್ ಭೀತಃ ಕಾರ್ಯಾಣಾಂ ಚ ವಿವರ್ಜನಾತ್ |
ಅಕಾಲೇ ಮಂತ್ರಭೇದಾಚ್ಚ ಯೋ ನ ಮಾದ್ಯೇತ್ ಸ ನೋದ್ವಿಜೇತ್ ॥
ಯಾವನು ಅಕಾರ್ಯವನ್ನು ಮಾಡುವುದರಿಂದಲೂ, ಮಾಡಬೇಕಾದುದನ್ನು ಮಾಡದಿರುವುದರಿಂದಲೂ, ಯೋಗ್ಯಕಾಲಕ್ಕಿಂತ ಮುಂಚೆ ಮಂತ್ರವು ಬಹಿರಂಗವಾಗುವುದರಿಂದಲೂ ಹೆದರಿ ಮತ್ತನಾಗುವುದಿಲ್ಲವೋ ಅವನು ಉದ್ವೇಗವನ್ನು ಹೊಂದುವುದಿಲ್ಲ.
ವಿದ್ಯಾಮದೋ ಧನಮದಃ ತೃತೀಯೋಽಭಿಜನೋ ಮದಃ |
ಮದಾ ಏತೇಽವಲಿಪ್ತಾನಾಂ ನ ಚೈವ ಸ್ಯುಃ ಸತಾಂ ಮದಾಃ ॥45॥
ವಿದ್ಯಾಮದ, ಧನಮದ ಮತ್ತು ಮೂರನೆಯದಾದ ಕುಲಮದ - ಈ ಮೂರು ಮದಗಳು ದುರಹಂಕಾರಿಗಳಿಗೆ ಇರುತ್ತವೆ. ಸಜ್ಜನರಿಗೆ ಇರುವುದಿಲ್ಲ.
ಅಸಂತೋಽಭ್ಯರ್ಚಿತಾಃ ಸದ್ಭಿಃ ಕ್ವಚಿತ್ ಕಾರ್ಯೇ ಕದಾಚನ |
ಮನ್ಯಂತೇ ಸಂತಮಾತ್ಮಾನಮಸಂತಮಪಿ ವಿಶ್ರುತಮ್ ॥46॥
ಅಸಜ್ಜನರನ್ನು ಸಜ್ಜನರು ಯಾವುದು ಕಾರ್ಯನಿಮಿತ್ತವಾಗಿ ಒಮ್ಮೊಮ್ಮೆ ಅರ್ಚಿಸಿದರೆ ಅವರು ಅಸಜ್ಜನರೆಂದು ಲೋಕವಿಶ್ರುತರಾಗಿದ್ದರೂ ತಮ್ಮನ್ನು ಸಜ್ಜನರೆಂದು ಭಾವಿಸುತ್ತಾರೆ.
ಗತಿರಾತ್ಮವತಾಂ ಸಂತಃ ಸಂತ ಏವ ಸತಾಂ ಗತಿಃ |
ಅಸತಾಂ ಚ ಗತಿಃ ಸಂತೋ ನ ತ್ವಸಂತಃ ಸತಾಂ ಗತಿಃ ॥47॥
ಆತ್ಮವಂತರಿಗೆ ಸಜ್ಜನರು ಗತಿ. ಸಜ್ಜನರಿಗೂ ಸಜ್ಜನರೇ ಗತಿ. ಅಸಜ್ಜನರಿಗೂ ಸಜ್ಜನರೇ ಗತಿ. ಅಸಜ್ಜನರು ಸಜ್ಜನರಿಗೆ ಎಂದೂ ಗತಿಯಾಗುವುದಿಲ್ಲ.
ಸಭಾ ಜಿತಾ ವಸ್ತ್ರವತಾ ಸಮಾಖ್ಯಾ ಗೋಮತಾ ಜಿತಾ |
ಅಧ್ವಾ ಜಿತಾ ಯಾನವತಾ ಸರ್ವಂ ಶೀಲವತಾ ಜಿತಮ್ ॥48॥

ಸಭೆಯು ಒಳ್ಳೆಯ ವಸ್ತ್ರವನ್ನು ಧರಿಸಿರುವವನಿಂದ ಜಿತವಾಗುತ್ತದೆ. ವಿದ್ವತ್ಸಭೆಯು ವಾಗ್ಮಿಯಿಂದ ಜಿತವಾಗುತ್ತದೆ, ಮಾರ್ಗವು ವಾಹನವುಳ್ಳ ಪುರುಷನಿಂದ ಜಿತವಾಗುತ್ತದೆ. ಶೀಲವುಳ್ಳ ಪುರುಷನಿಂದ ಎಲ್ಲವೂ ಜಿತವಾಗುತ್ತದೆ.

ಶೀಲಂ ಪ್ರಧಾನಂ ಪುರುಷೇ ತದ್ಯಸ್ಯೇಹ ಪ್ರಣಶ್ಯತಿ |
ನ ತಸ್ಯ ಜೀವಿತೇನಾರ್ಥೋ ನ ಧನೇನ ನ ಬಂಧುಭಿಃ ॥49॥

ಪುರುಷನಲ್ಲಿ ಶೀಲವು ಪ್ರಧಾನ. ಅದು ಯಾವನಿಗೆ ನಾಶವನ್ನು ಹೊಂದುತ್ತದೋ ಅವನ ಜೀವನಕ್ಕೆ ಧನದಿಂದಲಾಗಲೀ, ಬಂಧುಗಳಿಂದಾಗಲೀ ಯಾವ ಪ್ರಯೋಜನವೂ ಇಲ್ಲ.

ಆಢ್ಯಾನಾಂ ಮಾಂಸಪರಮಂ ಮಧ್ಯಾನಾಂ ಗೋರಸೋತ್ತರಮ್ |
ಲವಣೋತ್ತರಂ ದರಿದ್ರಾಣಾಂ ಭೋಜನಂ ಭರತರ್ಷಭ ॥50॥

ಶ್ರೀಮಂತರಿಗೆ ಮಾಂಸಭೋಜನವು ಶ್ರೇಷ್ಠವಾದುದು. ಮಧ್ಯಮರಿಗೆ ಕ್ಷೀರ, ದಧಿ ಮೊದಲಾದ ಭೋಜನವು ಶ್ರೇಷ್ಠವಾದುದು. ಭರತರ್ಷಭನೇ, ದರಿದ್ರರಿಗೆ ಲವಣಯುಕ್ತವಾದ ಭೋಜನವೇ ಶ್ರೇಷ್ಠವಾದುದು. (ಸ್ಥೂಲಕಾಯರಾದ, ಮದಾಂಧರಾದ ನಿನ್ನ ಮಕ್ಕಳಿಗೆ ಮಾಂಸಭೋಜನವಿದೆ. ರಾಜ್ಯವನ್ನು ಕಳೆದುಕೊಂಡ ಕಾರಣದಿಂದ ದರಿದ್ರರಾದ ಪಾಂಡವರಿಗೆ ಲವಣಸಮುದ್ರದವರೆಗೆ ಇರುವ ಭೂಮಿಯೇ ಭೋಜನವಾಗುತ್ತದೆ ಎಂದು ಧ್ವನಿ).

ಸಂಪನ್ನತರಮೇವಾನ್ನಂ ದರಿದ್ರಾ ಭುಂಜತೇ ಜನಾಃ (ಸದಾ) |
ಕ್ಷುತ್ ಸ್ವಾದುತಾಂ ಜನಯತಿ ಸಾ ಚಾಢ್ಯೇಷು ಸುದುರ್ಲಭಾ ॥51॥

ದರಿದ್ರರಾದ ಜನರು ಯಾವಾಗಲೂ ಒಳ್ಳೆಯ ಊಟವನ್ನೇ ಮಾಡುತ್ತಾರೆ. ಹಸಿವು ರುಚಿಯನ್ನು ಉಂಟುಮಾಡುತ್ತದೆ. ಧನಾಢ್ಯರಿಗೆ ಅದು ಬಹಳ ದುರ್ಲಭವಾದುದು.

ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನ ವಿದ್ಯತೇ |
ದರಿದ್ರಾಣಾಂ ತು ರಾಜೇಂದ್ರ ಕಾಷ್ಠಂ ಅಪ್ಯಶ್ಮಾಪಿ ಜೀರ್ಯತೇ ॥52॥

ರಾಜೇಂದ್ರನೇ, ಶ್ರೀಮಂತರಿಗೆ ಬಹುಶಃ ತಿನ್ನುವ ಶಕ್ತಿಯು ಇರುವುದಿಲ್ಲ. ದರಿದ್ರರಿಗೆ ಮಾತ್ರ ಕಲ್ಲು, ಕಟ್ಟಿಗೆಯೂ ಅರಗಿಹೋಗುತ್ತದೆ.

ಅವೃತ್ತಿರ್ಭಯಮಂತ್ಯಾನಾಂ ಮಧ್ಯಾನಾಂ ಮರಣಾದ್ ಭಯಮ್ |
ಉತ್ತಮಾನಾಂ ತು ಮರ್ತ್ಯಾನಾಮವಮಾನಾತ್ ಮಹದ್ ಭಯಮ್॥

ಅಧಮರಿಗೆ ಜೀವನೋಪಾಯವನ್ನು ಕಳೆದುಕೊಳ್ಳುತ್ತೇವೆಂಬ ಭಯ. ಮಧ್ಯಮರಿಗೆ ಮರಣದ ಭಯ. ಉತ್ತಮ ಮನುಷ್ಯರಿಗೆ ಅವಮಾನದಿಂದ ದೊಡ್ಡ ಭಯ.

ಐಶ್ವರ್ಯಮತ್ತಃ ಪಾಪಿಷ್ಠೋ ಮಧುಪಾನಮದಾದಪಿ |
ಐಶ್ವರ್ಯಮದಮತ್ತೋ ಹಿ ನಾವತಿಷ್ಠತಿ ಕುತ್ರಚಿತ್ ॥54॥

ಐಶ್ವರ್ಯದಿಂದ ಉಂಟಾದ ಮದವು ಮದ್ಯಪಾನದಿಂದ ಉಂಟಾದ ಮದಕ್ಕಿಂತಲೂ ಪಾಪಿಷ್ಠವಾದುದು. ಐಶ್ವರ್ಯಮದಮತ್ತನಾದವನು ಎಲ್ಲಿಯೂ ನಿಲ್ಲುವುದಿಲ್ಲ.

ಇಂದ್ರಿಯೈರಿಂದ್ರಿಯಾರ್ಥೇಷು ವರ್ತಮಾನೈರನಿಗ್ರಹೈಃ |
ತೈರಯಂ ತಾಪ್ಯತೇ ಲೋಕೋ ನಕ್ಷತ್ರಾಣಿ ಗ್ರಹೈರಿವ ॥55॥

ಇಂದ್ರಿಯಗಳು ನಿಗ್ರಹಿತವಾಗದೆ ತಮ್ಮ ವಿಷಯಗಳಲ್ಲಿಯೇ ಇದ್ದರೆ ಗ್ರಹಗಳಿಂದ ನಕ್ಷತ್ರಗಳು ಪೀಡಿತವಾದಂತೆ ಈ ಜನರು ಇಂದ್ರಿಯಗಳಿಂದ ಪೀಡಿತರಾಗುತ್ತಾರೆ.

ಯೋ ಜಿತಃ ಪಂಚವರ್ಗೇಣ ಸಮಾಜೇನಾನುಕರ್ಷಿಣಾ |
ಆಪದಸ್ತಸ್ಯ ವರ್ಧಂತೇ ಶುಕ್ಲಪಕ್ಷ ಇವೋಡುರಾಟ್ ॥56॥

ಯಾವನು ತನ್ನನ್ನು ಎಳೆಯುವ ಪಂಚೇಂದ್ರಿಯಗಳ ಸಮೂಹದಿಂದ ಜಿತನಾಗುತ್ತಾನೋ ಅವನಿಗೆ ಆಪತ್ತುಗಳು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯನ್ನು ಹೊಂದುತ್ತವೆ.

ಅವಿಜಿತ್ಯ ಯ ಆತ್ಮಾನಮಮಾತ್ಯಾನ್ ವಿಜಿಗೀಷತೇ |
ಅಜಿತಾತ್ಮಾ ಜಿತಾಮಾತ್ಯಃ ಸೋಽವಶಃ ಪರಿಹೀಯತೇ ॥57॥

ಯಾವನು ತನ್ನನ್ನು ಜಯಿಸಿಕೊಳ್ಳದೆ ಅಮಾತ್ಯರನ್ನು ಜಯಿಸಲು ಬಯಸುತ್ತಾನೋ ಅಂತಹ ಅಜಿತಾತ್ಮನು ಅಮಾತ್ಯರನ್ನು ಜಯಿಸಿ ಅವಶನಾಗಿ ನಾಶವನ್ನು ಹೊಂದುತ್ತಾನೆ.

ಆತ್ಮಾನಮೇವ ಪ್ರಥಮಂ ದ್ವೇಷ್ಯರೂಪೇಣ ಯೋಜಯೇತ್ |
ತತೋಽಮಾತ್ಯಾನಮಿತ್ರಾಂಶ್ಚ ನಿಯತಂ ಕುರುತೇ ವಶೇ ॥58॥

ಯಾವುದಾದರು ಕೆಟ್ಟದು ಇದ್ದರೆ ಅದನ್ನು ಮೊದಲು ತಾನೇ ಸ್ವೀಕರಿಸಬೇಕು. ಅದರಿಂದ ಅಮಾತ್ಯರನ್ನು ಮತ್ತು ಶತ್ರುಗಳನ್ನು ನಿಶ್ಚಿತವಾಗಿ ವಶಮಾಡಿಕೊಳ್ಳುತ್ತಾನೆ.

ವಶ್ಯೇಂದ್ರಿಯಂ ಜಿತಾತ್ಮಾನಂ ಧೃತದಂಡಂ ವಿಕಾರಿಷು |
ಪರೀಕ್ಷ್ಯಕಾರಿಣಂ ದಾಂತಮತ್ಯಂತಂ ಶ್ರೀರ್ನಿಷೇವತೇ ॥59॥

ಇಂದ್ರಿಯಜಯವುಳ್ಳವನನ್ನೂ, ಮನೋಜಯವುಳ್ಳವನನ್ನೂ, ಅಪರಾಧವನ್ನು ಮಾಡುವುದರಲ್ಲಿ ದಂಡವನ್ನು ವಿಧಿಸುವವನನ್ನೂ, ಯೋಚನೆ ಮಾಡಿ ಕಾರ್ಯವನ್ನು ಮಾಡುವವನನ್ನೂ ಮತ್ತು ಇಂದ್ರಿಯನಿಗ್ರಹವುಳ್ಳವನನ್ನೂ ಸಂಪತ್ತು ಬಹಳವಾಗಿ ಸೇವಿಸುತ್ತದೆ.

ರಥಃ ಶರೀರಂ ಪುರುಷಸ್ಯ ರಾಜನ್
ಆತ್ಮಾ ನಿಯಂತೇಂದ್ರಿಯಾಣ್ಯಸ್ಯ ಚಾಶ್ವಾಃ |
ತೈರಪ್ರಮತ್ತಃ ಕುಶಲಃ ಸದಶ್ವೈಃ

ದಾಂತೈಃ ಸುಖಂ ಯಾತಿ ಸದ್ಯೈವ ಧೀರಃ ॥60॥
ಎಲೈ ರಾಜನೇ, ಮನುಷ್ಯನ ಶರೀರವೇ ರಥ. ಜೀವನೇ ರಥಿಕ. ಇಂದ್ರಿಯಗಳು ಅಶ್ವಗಳು. ಜಾಗರೂಕತೆಯಿಂದ ಇರುವ ಕುಶಲನೂ, ಧೀರನೂ ಆದ ಪುರುಷನು ಚೆನ್ನಾಗಿ ಪಳಗಿದ ಒಳ್ಳೆಯ ಅಶ್ವಗಳಿಂದ ಯಾವಾಗಲೂ ಸುಖವಾಗಿಯೇ ಸಂಚಾರ ಮಾಡುತ್ತಾನೆ.
ಏತಾನ್ಯನಿಗೃಹೀತಾನಿ ವ್ಯಾಪಾದಯಿತುಮಪ್ಯಲಮ್ |
ಅವಿಧೇಯಾಃ ಇವಾದಾಂತಾಃ ಸರಥಂ ಸಾರಥಿಂ ಹಯಾಃ ॥61॥
ಈ ಇಂದ್ರಿಯಗಳನ್ನು ನಿಗ್ರಹಿಸದಿದ್ದರೆ ಅವುಗಳು ಅವಿಧೇಯವಾಗಿ ಪಳಗಿಸದೆ ಇದ್ದ ಕುದುರೆಗಳಂತೆ ರಥವನ್ನೂ ಮತ್ತು ಸಾರಥಿಯನ್ನೂ ಕೊಲ್ಲಲೂ ಸಮರ್ಥವಾಗುತ್ತವೆ.
ಅನರ್ಥಮರ್ಥತಃ ಪಶ್ಯನ್ನರ್ಥಂ ಚೈವಾಪ್ಯನರ್ಥತಃ |
ಇಂದ್ರಿಯೈರಜಿತೈರ್ಬಾಲಃ ಸುದುಃಖಂ ಮನ್ಯತೇ ಸುಖಮ್ ॥62॥
ಇಂದ್ರಿಯಗಳನ್ನು ಜಯಿಸದಿದ್ದ ಬಾಲಕನು ಅನರ್ಥವನ್ನು ಅರ್ಥವೆಂದೂ, ಅರ್ಥವನ್ನು ಅನರ್ಥವೆಂದೂ ತಿಳಿದು, ದುಃಖಸಾಧನವನ್ನು ಸುಖಸಾಧನವೆಂದು ತಿಳಿಯುತ್ತಾನೆ.
ಧರ್ಮಾರ್ಥೌ ಯಃ ಪರಿತ್ಯಜ್ಯ ಸ್ಯಾದಿಂದ್ರಿಯವಶಾನುಗಃ |
ಶ್ರೀಪ್ರಾಣಧನಧಾನ್ಯೇಭ್ಯಃ ಕ್ಷಿಪ್ರಂ ಸ ಪರಿಹೀಯತೇ ॥63॥
ಯಾವನು ಧರ್ಮಾರ್ಥಗಳನ್ನು ತ್ಯಜಿಸಿ ಇಂದ್ರಿಯಗಳಿಗೆ ವಶನಾಗಿ ಅವುಗಳನ್ನು ಅನುಸರಿಸುತ್ತಾನೆಯೋ ಅವನು ಸಂಪತ್ತು, ಪ್ರಾಣ, ಧನ-ಧಾನ್ಯಗಳಿಂದ ಶೀಘ್ರವಾಗಿ ಹೀನನಾಗುತ್ತಾನೆ.
ಅರ್ಥಾನಾಮೀಶ್ವರೋ ಯಃ ಸ್ಯಾದಿಂದ್ರಿಯಾಣಾಮನೀಶ್ವರಃ |
ಇಂದ್ರಿಯಾಣಾಮನೈಶ್ವರ್ಯಾದೈಶ್ವರ್ಯಾದ್ ಭ್ರಶ್ಯತೇ ಹಿ ಸಃ ॥64॥
ಯಾವನು ಇಂದ್ರಿಯಗಳಿಗೆ ಪ್ರಭುವಾಗದೆ ತನ್ನ ಸಂಪತ್ತಿಗೆ ಮಾತ್ರ ಪ್ರಭುವಾಗುತ್ತಾನೆಯೋ ಅಂತಹವನು ಇಂದ್ರಿಯಗಳ ಮೇಲಿನ ಪ್ರಭುತ್ವವಿಲ್ಲದ ಕಾರಣದಿಂದಾಗಿ ಐಶ್ವರ್ಯವನ್ನು ಕಳೆದುಕೊಳ್ಳುತ್ತಾನೆ.
ಆತ್ಮನಾಽಽತ್ಮಾನಮನ್ವಿಚ್ಛೇನ್ಮನೋಬುದ್ಧೀಂದ್ರಿಯೈರ್ಯತೈಃ |
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ಗತಿರಾತ್ಮನಃ ॥65॥
ಪರಮಾತ್ಮನನ್ನು ಜಿತವಾದ ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳಿಂದ ತಾನೇ ಹುಡುಕಬೇಕು. ಮನುಷ್ಯನಿಗೆ ಮನಸ್ಸೇ ಬಂಧು ಮತ್ತು ಮನಸ್ಸೇ ಗತಿ.
ಬಂಧುರಾತ್ಮಾಽಽತ್ಮನಸ್ತಸ್ಯ ಯೇನೈವಾತ್ಮಾಽಽತ್ಮನಾ ಜಿತಃ |
ಸ ಏವ ನಿಯತೋ ಬಂಧುಃ ಸ ಏವಾನಿಯತೋ ರಿಪುಃ ॥66॥
ಯಾವ ಪುರುಷನು ಪ್ರಯತ್ನದಿಂದ ತನ್ನ ಮನಸ್ಸನ್ನು ಗೆಲ್ಲುತ್ತಾನೆಯೋ ಅವನಿಗೆ ನಿಗ್ರಹಿಸಿದರೆ ಮನಸ್ಸೇ ಬಂಧು, ನಿಗ್ರಹಿಸದಿದ್ದರೆ ಮನಸ್ಸೇ ಶತ್ರು.
ಕ್ಷುದ್ರಾಕ್ಷೇಣೇವ ಜಾಲೇನ ಝಷಾವಪಿಹಿತಾವುಭೌ |
ಕಾಮಶ್ಚ ರಾಜನ್ ಕ್ರೋಧಶ್ಚ ತೌ ಪ್ರಜ್ಞಾನಂ ವಿಲುಂಪತಃ ॥67॥
ಎಲೈ ರಾಜನೇ, ಸಣ್ಣ ರಂಧ್ರಗಳಿರುವ ಬಲೆಯಿಂದ ಎರಡು ಮೀನುಗಳು ಮುಚ್ಚಲ್ಪಟ್ಟಿವೆ. ಆ ಕಾಮ ಮತ್ತು ಕ್ರೋಧಗಳು ಪುರುಷನ ಜ್ಞಾನವನ್ನು ನಾಶಪಡಿಸುತ್ತವೆ (ಸಣ್ಣ ರಂಧ್ರವಿರುವ ಬಲೆ ಎಂದರೆ ಕ್ಷುದ್ರವಾದ ಮನಸ್ಸು. ಕಾಮ-ಕ್ರೋಧಗಳು ಅದನ್ನು ಭೇದಿಸಿಕೊಂಡು ಹೋಗಿ ಮನುಷ್ಯನ ಜ್ಞಾನವನ್ನು ಹಾಳುಮಾಡುತ್ತವೆ ಎಂದು ಅಭಿಪ್ರಾಯ).
ಸಮವೇಕ್ಷ್ಯೇಹ ಧರ್ಮಾರ್ಥೌ ಸಂಭಾರಾನ್ ಯೋಽಧಿಗಚ್ಛತಿ |
ಸ ವೈ ಸಂಭೃತಸಂಭಾರಃ ಸತತಂ ಸುಖಮೇಧತೇ ॥68॥
ಧರ್ಮಾರ್ಥಗಳನ್ನು ಚೆನ್ನಾಗಿ ಗಮನಿಸಿ ಯಾವನು ಪದಾರ್ಥಗಳನ್ನು ಸಂಪಾದಿಸುತ್ತಾನೆಯೋ ಅಂತಹವನು ಅಂತಹ ಪದಾರ್ಥಗಳಿಂದ ಸತತವಾಗಿ ಸುಖವನ್ನು ಪಡುತ್ತಾನೆ.
ಯಃ ಪಂಚಾಭ್ಯಂತರಾನ್ ಶತ್ರೂನವಿಜಿತ್ಯ ಮತಿಕ್ಷಯಾತ್ |
ಜಿಗೀಷತೇ ರಿಪೂನನ್ಯಾನಾಪದೋಽಭಿಭವಂತಿ ತಮ್ ॥69॥
ಯಾವನು ಬುದ್ಧಿಶೂನ್ಯನಾಗಿ ತನ್ನ ಒಳಗಿರುವ ಐದು ಶತ್ರುಗಳನ್ನು ಜಯಿಸದೆ ಹೊರಗಿನ ಶತ್ರುಗಳನ್ನು ಜಯಿಸಲು ಉದ್ಯುಕ್ತನಾಗುತ್ತಾನೆಯೋ ಅವನನ್ನು ಆಪತ್ತುಗಳು ಪರಾಭವಗೊಳಿಸುತ್ತವೆ.
ದೃಶ್ಯಂತೇ ಹಿ ದುರಾತ್ಮಾನೋ ವಧ್ಯಮಾನಾಃ ಸ್ವಕರ್ಮಭಿಃ |
ಇಂದ್ರಿಯಾಣಾಮನೀಶತ್ವಾದ್ ರಾಜಾನೋ ರಾಜ್ಯವಿಚ್ಯುತಾಃ ॥70॥
ದುಷ್ಟರು ತಮ್ಮ ದುಷ್ಕರ್ಮಗಳಿಂದ ವಧೆಯನ್ನು ಹೊಂದುವುದು ಕಂಡು ಬರುತ್ತದೆ. ಇಂದ್ರಿಯ ಜಯವಿಲ್ಲದ ಕಾರಣ ರಾಜರು ರಾಜ್ಯವನ್ನು ಕಳೆದುಕೊಳ್ಳುತ್ತಾರೆ.
ಅಸಂತ್ಯಾಗಾತ್ ಪಾಪಕೃತಾಮಪಾಪಾನ್
ತುಲ್ಯೋ ದಂಡಃ ಸ್ಪೃಶತೇ ಮಿಶ್ರಭಾವಾತ್ |
ಶುಷ್ಕೇಣಾರ್ದ್ರಂ ದಹ್ಯತೇ ಮಿಶ್ರಭಾವಾತ್
ತಸ್ಮಾತ್ ಪಾಪೈಃ ಸಹ ಸಂಧಿಂ ನ ಕುರ್ಯಾತ್ ॥71॥
ಪಾಪಕರ್ಮವನ್ನು ಮಾಡುವವರನ್ನು ಪರಿತ್ಯಾಗ ಮಾಡದೆ ಅವರ ಜೊತೆಯಲ್ಲಿ ಸೇರಿಕೊಂಡರೆ ಅವರಿಗೆ ಸಲ್ಲುವ ದಂಡವು ಪಾಪವನ್ನು ಮಾಡದಿರುವವರಿಗೂ ಉಂಟಾಗುತ್ತದೆ. ಒಣಕಟ್ಟಿಗೆಯ ಜೊತೆಯಲ್ಲಿ ಸೇರಿದರೆ ಮಿಶ್ರಣದಿಂದಾಗಿ ಹಸಿಯಾದ

ಕಟ್ಟಿಗೆಯೂ ಉರಿಯುತ್ತದೆ. ಆದ್ದರಿಂದ ಪಾಪಿಗಳ ಜೊತೆಯಲ್ಲಿ ಸೇರಬಾರದು (ಸಂಧಿಯನ್ನು ಮಾಡಿಕೊಳ್ಳಬಾರದು).
ನಿಜಾನುತ್ಪತತಃ ಶತ್ರೂನ್ ಪಂಚ ಪಂಚಪ್ರಯೋಜನಾತ್ |
ಯೋ ಮೋಹಾನ್ನ ನಿಗೃಹ್ಣಾತಿ ತಮಾಪದ್ ಗ್ರಸತೇ ನರಮ್ ॥72॥
ರೂಪ-ರಸಾದಿ ಪಂಚವಿಷಯಾನುಭವರೂಪವಾದ ಪ್ರಯೋಜನವುಳ್ಳ ತನ್ನೊಳಗೇ ಇರುವ ತನ್ನವರೇ ಆದ ಕ್ಷಣಕ್ಷಣಕ್ಕೂ ಮೇಲಕ್ಕೆ ಹಾರುವ ಐದು ಇಂದ್ರಿಯಗಳನ್ನು ಮೋಹದಿಂದ ಯಾವನು ನಿಗ್ರಹಿಸುವುದಿಲ್ಲವೋ ಅಂತಹ ಮನುಷ್ಯನನ್ನು ಆಪತ್ತು ನುಂಗುತ್ತದೆ.
ಅನಸೂಯಾಽಽರ್ಜವಂ ಶೌಚಂ ಸಂತೋಷಃ ಪ್ರಿಯವಾದಿತಾ |
ದಮಃ ಸತ್ಯಮನಾಯಾಸೋ ನ ಭವಂತಿ ದುರಾತ್ಮನಾಮ್ ॥73॥
ದುರಾತ್ಮರಿಗೆ ಅಸೂಯಾರಾಹಿತ್ಯ, ಆರ್ಜವ, ಶೌಚ, ಸಂತೋಷ, ಪ್ರಿಯ ವಚನಗಳು, ದಮ, ಸತ್ಯ ಮತ್ತು ಅನಾಯಾಸ ಇವುಗಳು ಇರುವುದಿಲ್ಲ.
ಆತ್ಮಜ್ಞಾನಮನಾಯಾಸಃ ತಿತಿಕ್ಷಾ ಧರ್ಮನಿತ್ಯತಾ |
ವಾಕ್ ಚೈವ ಗುಪ್ತಾ ದಾನಂ ಚ ನೈತಾನ್ಯನ್ಯೇಷು ಭಾರತ ॥74॥
ಎಲೈ ಭಾರತನೇ, ಆತ್ಮಜ್ಞಾನ, ಅನಾಯಾಸ, ದ್ವಂದ್ವ ಸಹಿಷ್ಣುತೆ, ನಿತ್ಯಧರ್ಮಾಚರಣೆ, ಸಂರಕ್ಷಿತವಾದ ವಚನ, ದಾನ ಇವುಗಳು ಸಜ್ಜನರನ್ನು ಬಿಟ್ಟು ಬೇರೆಯವರಲ್ಲಿ ಇರುವುದಿಲ್ಲ.
ಆಕ್ರೋಶಪರಿವಾದಾಭ್ಯಾಂ ವಿಹಿಂಸಂತ್ಯಬುಧಾ ಬುಧಾನ್ |
ವಕ್ತಾ ಪಾಪಮುಪಾದತ್ತೇ ಕ್ಷಮಮಾಣೋ ವಿಮುಚ್ಯತೇ ॥75॥
ಅವಿವೇಕಿಗಳಾದವರು ಬುಧರನ್ನು, ಆಕ್ರೋಶ ಮತ್ತು ಪರಿವಾದಗಳಿಂದ (ಕಿರುಚಾಟ ಮತ್ತು ನಿಂದನೆಗಳಿಂದ) ಹಿಂಸಿಸುತ್ತಾರೆ. ಹೀಗೆ ಮಾತನಾಡುವ ದುರ್ಜನನು ಪಾಪವನ್ನು ಹೊಂದುತ್ತಾನೆ. ಸುಮ್ಮನಿದ್ದು ಅವನನ್ನು ಕ್ಷಮಿಸುವವನು ನಿರ್ಮುಕ್ತನಾಗುತ್ತಾನೆ.
ಹಿಂಸಾ ಬಲಮಸಾಧೂನಾಂ ರಾಜ್ಞಾಂ ದಂಡವಿಧಿರ್ಬಲಮ್ |
ಶುಶ್ರೂಷಾ ತು ಬಲಂ ಸ್ತ್ರೀಣಾಂ ಕ್ಷಮಾ ಗುಣವತಾಂ ಬಲಮ್ ॥76॥
ಅಸಜ್ಜನರಿಗೆ ಹಿಂಸೆಯೇ ಬಲ. ರಾಜರಿಗೆ ಶಿಕ್ಷೆಯನ್ನು ವಿಧಿಸುವುದೇ ಬಲ. ಸ್ತ್ರೀಯರಿಗೆ ಪತ್ಯಾದಿ ಶುಶ್ರೂಷೆಯೇ ಬಲ. ಗುಣವಂತರಿಗೆ ಕ್ಷಮೆಯೇ ಬಲ.
ವಾಕ್ಸಂಯಮೋ ಹಿ ನೃಪತೇಃ ಸುದುಷ್ಕರತಮೋ ಮತಃ |
ಅರ್ಥವಚ್ಚ ವಿಚಿತ್ರಂ ಚ ನ ಶಕ್ಯಂ ಬಹು ಭಾಷಿತುಮ್ ॥77॥
ರಾಜನಾದವನಿಗೆ ಮಾತಿನ ನಿಯಂತ್ರಣವು ಬಹಳ ಕಷ್ಟಸಾಧ್ಯವಾದುದೆಂದು ಹೇಳಲ್ಪಡುತ್ತದೆ. ಪ್ರಯೋಜನವುಳ್ಳ ಮತ್ತು ವಿಚಿತ್ರವಾದ ಬಹಳ ಮಾತುಗಳನ್ನು ಆಡುವುದು ಸಾಧ್ಯವಿಲ್ಲ.
ಅಭ್ಯಾವಹತಿ ಕಲ್ಯಾಣಂ ವಿವಿಧಾ ವಾಕ್ ಸುಭಾಷಿತಾ |
ಸೈವ ದುರ್ಭಾಷಿತಾ ರಾಜನ್ ಅನರ್ಥಾಯೋಪಪದ್ಯತೇ ॥78॥
ಎಲೈ ರಾಜನೇ, ಚೆನ್ನಾಗಿ ಆಡಿದ ವಿವಿಧವಾದ ಮಾತುಗಳು ಕಲ್ಯಾಣವನ್ನು ತಂದುಕೊಡುತ್ತವೆ. ಅದೇ ಮಾತುಗಳನ್ನೇ ಕೆಟ್ಟದಾಗಿ ಆಡಿದರೆ ಅನರ್ಥ ಉಂಟಾಗುತ್ತದೆ.
ರೋಹತೇ ಸಾಯಕೈರ್ವಿದ್ಧಂ ವನಂ ಪರಶುನಾ ಹತಮ್ |
ವಾಚಾ ದುರುಕ್ತಂ ಬೀಭತ್ಸಂ ನ ಸಂರೋಹತಿ ವಾಕ್‌ಕ್ಷತಮ್ ॥79॥
ಬಾಣಗಳಿಂದ ವಿದ್ಧವಾದ (ಹೊಡೆತ ತಿಂದ) ಮತ್ತು ಕೊಡಲಿಯಿಂದ ಕಡಿಯಲ್ಪಟ್ಟ ವನವು ಪುನಃ ಬೆಳೆಯುತ್ತದೆ. ಆದರೆ ಕೆಟ್ಟ ಮಾತನ್ನು ಆಡಿ ಉಂಟಾದ ಭಯಂಕರವಾದ ಗಾಯವು ಮಾತ್ರ ಪುನಃ ಬೆಳೆಯಲು ಅವಕಾಶವನ್ನು ಕೊಡುವುದಿಲ್ಲ.
ಕರ್ಣಿನಾಲೀಕನಾರಾಚಾನ್ ನಿರ್ಹರಂತಿ ಶರೀರತಃ |
ವಾಕ್ಶಲ್ಯಸ್ತು ನ ನಿರ್ಹರ್ತುಂ ಶಕ್ಯೋ ಹೃದಿಶಯೋ ಹಿ ಸಃ ॥80॥
ಕರ್ಣಿ, ನಾಲೀಕ, ನಾರಾಚ ಮೊದಲಾದ ಬಾಣ ವಿಶೇಷಗಳನ್ನು ದೇಹದಿಂದ ಎಳೆದು ತೆಗೆಯುತ್ತಾರೆ. ಆದರೆ ವಾಗ್ಬಾಣವನ್ನು ಮಾತ್ರ ತೆಗೆಯಲು ಸಾಧ್ಯವಿಲ್ಲ. ಅದು ಹೃದಯದಲ್ಲಿಯೇ ಮಲಗಿರುತ್ತದೆ.
ವಾಕ್ಸಾಯಕಾ ವದನಾನ್ನಿಷ್ಪತಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ |
ಪರಸ್ಯ ವಾ ಮರ್ಮಸು ಯೇ ಪತಂತಿ
ತಾನ್ ಪಂಡಿತೋ ನಾವಸೃಜೇತ್ ಪರೇಷು ॥81॥
ವಾಗ್ಬಾಣಗಳು ದುಷ್ಟರ ಮುಖದಿಂದ ಹೊರಹೊಮ್ಮುತ್ತವೆ. ಅವುಗಳಿಂದ ಹೊಡೆಯಲ್ಪಟ್ಟವನು ಹಗಲೂ ರಾತ್ರಿಯೂ ಶೋಕ ಪಡುತ್ತಾನೆ. ಇನ್ನೊಬ್ಬರ ಮರ್ಮಸ್ಥಾನಗಳಲ್ಲಿ ಬೀಳುವಂತಹ ಅಂತಹ ವಾಗ್ಬಾಣಗಳನ್ನು ಪಂಡಿತನಾದವನು ಇನ್ನೊಬ್ಬರಲ್ಲಿ ಪ್ರಯೋಗಿಸಬಾರದು.
ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ ಪರಾಭವಮ್ |
ಬುದ್ಧಿಂ ತಸ್ಯಾಪಕರ್ಷಂತಿ ಸೋಽವಾಚೀನಾನಿ ಪಶ್ಯತಿ ॥82॥
ದೇವತೆಗಳು ಯಾವ ಪುರುಷನಿಗೆ ಪರಾಭವವನ್ನು ಕೊಡಲು ಬಯಸುತ್ತಾರೆಯೋ ಅವನ ಬುದ್ಧಿಯನ್ನು ಮೊದಲು ಅಪಹರಿಸುತ್ತಾರೆ. ಅವನು ನೀಚವಾದ ವಸ್ತುಗಳನ್ನು ನೋಡುವವನಾಗುತ್ತಾನೆ.
ಬುದ್ಧೌ ಕಲುಷಭೂತಾಯಾಂ ವಿನಾಶೇ ಪ್ರತ್ಯುಪಸ್ಥಿತೇ |
ಅನಯೋ ನಯಸಂಕಾಶೋ ಬುದ್ಧಿಮಾಕ್ರಮ್ಯ ತಿಷ್ಠತಿ ॥83॥

ವಿನಾಶವು ಸಮೀಪವಾಗಿ ಬುದ್ದಿಯು ಕಲುಷಿತವಾದಾಗ ಅನೀತಿಯು ನೀತಿಯ ರೂಪವನ್ನು ಧರಿಸಿ ಬುದ್ದಿಯನ್ನು ಆಕ್ರಮಿಸಿಕೊಂಡು ನಿಲ್ಲುತ್ತವೆ.
ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ |
ಯಂ ಹಿ ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ॥84॥
ದೇವತೆಗಳು ಪಶುಪಾಲಕರಂತೆ ಕೈಯಲ್ಲಿ ಕೋಲನ್ನು ಹಿಡಿದು ರಕ್ಷಿಸುವುದಿಲ್ಲ. ಯಾವನನ್ನು ರಕ್ಷಿಸಲು ಬಯಸುತ್ತಾರೆಯೋ ಅವನಿಗೆ ಸದ್ಬುದ್ಧಿಯನ್ನು ನೀಡುತ್ತಾರೆ.
ಸೇಯಂ ಬುದ್ಧಿಃ ಪರೀತಾ ತೇ ಪುತ್ರಾಣಾಂ ಭರತರ್ಷಭ |
ಪಾಂಡವಾನಾಂ ವಿರೋಧೇನ ನ ಚೈತಾನವಬುದ್ಧ್ಯಸೇ ॥85॥
ಎಲೈ ಭರತರ್ಷಭನೇ, ಅಂತಹ ನಿನ್ನ ಮಕ್ಕಳ ಬುದ್ದಿಯು ಪಾಂಡವರಿಗೆ ವಿರೋಧ ಮಾಡುವ ಕಾರಣದಿಂದ ಕಲುಷಿತವಾಗಿದೆ. ನೀನು ಅವರನ್ನು ತಿಳಿಯುತ್ತಿಲ್ಲ.
ರಾಜಾ ಲಕ್ಷಣಸಂಪನ್ನಃ ತ್ರೈಲೋಕಸ್ಯಾಪಿ ಯೋ ಭವೇತ್ |
ಶಿಷ್ಯತೇ ಶಾಸಿತಾ ಸೋಽಸ್ತು ಧೃತರಾಷ್ಟ್ರ ಯುಧಿಷ್ಠಿರಃ ॥86॥
ರಾಜಲಕ್ಷಣಸಂಪನ್ನನಾದ ಯಾವ ಯುಧಿಷ್ಠಿರನು ಮೂರುಲೋಕಕ್ಕೂ ರಾಜನಾಗಲು ಅರ್ಹನಾಗಿದ್ದಾನೆಯೋ, ಎಲೈ ಧೃತರಾಷ್ಟ್ರನೇ, ಅಂತಹ ನಿನ್ನ ಶಿಷ್ಯನಾದ ಯುಧಿಷ್ಠಿರನು ರಾಜನಾಗಲಿ.
ಅತೀವ ಸರ್ವಾನ್ ಪುತ್ರಾಂಸ್ತೇ ಭಾಗಧೇಯಪುರಸ್ಕೃತಃ |
ತೇಜಸಾ ಪ್ರಜ್ಞಯಾ ಚೈವ ಯುಕ್ತೋ ಧರ್ಮಾರ್ಥತತ್ವವಿತ್ ॥87॥
ತೇಜಸ್ಸಿನಿಂದಲೂ, ಪ್ರಜ್ಞೆಯಿಂದಲೂ ಕೂಡಿದ ಧರ್ಮಾರ್ಥತತ್ವವನ್ನು ತಿಳಿದು ರಾಜ್ಯಾಂಶಕ್ಕೆ ಭಾಗಿಯಾಗಿರುವ ಅವನು ನಿನ್ನ ಎಲ್ಲಾ ಪುತ್ರರಿಗಿಂತಲೂ ಶ್ರೇಷ್ಠನಾದವನು.
ಅನುಕ್ರೋಶಾದಾನೃಶಂಸ್ಯಾದ್ ಯೋಽಸೌ ಧರ್ಮಭೃತಾಂ ವರಃ |
ಗೌರವಾತ್ ತವ ರಾಜೇಂದ್ರ ಬಹೂನ್ ಕ್ಲೇಶಾಂಸ್ತಿತಿಕ್ಷತಿ ॥88॥
ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ದಯೆಯಿಂದಲೂ, ಮಾರ್ದವದಿಂದಲೂ ಮತ್ತು ನಿನ್ನ ಮೇಲಿನ ಗೌರವದಿಂದಲೂ ಎಲೈ ರಾಜೇಂದ್ರನೇ, ಅನೇಕ ಕ್ಲೇಶಗಳನ್ನು ಸಹಿಸುತ್ತಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ನಾಲ್ಕನೆಯ ಅಧ್ಯಾಯ
ವಿದುರನಿಂದ ಧೃತರಾಷ್ಟ್ರನಿಗೆ ಸುಧನ್ವ ವಿರೋಚನಸಂವಾದಕಥನ.
ಧೃತರಾಷ್ಟ್ರಃ
ಬ್ರೂಹಿ ಭೂಯೋ ಮಹಾಬುದ್ಧೇ ಧರ್ಮಾರ್ಥಸಹಿತಂ ವಚಃ |
ಶೃಣ್ವತೋ ನಾಸ್ತಿ ಮೇ ತೃಪ್ತಿರ್ವಿಚಿತ್ರಾಣೀಹ ಭಾಷಸೇ ॥1॥
ಧೃತರಾಷ್ಟ್ರ ಮಹಾಬುದ್ಧಿಯುಳ್ಳವನೇ, ಧರ್ಮಾರ್ಥಸಹಿತವಾದ ಮಾತನ್ನು ಪುನಃ ಹೇಳು. ನಿನ್ನ ಮಾತನ್ನು ಕೇಳಿ ನನಗೆ ತೃಪ್ತಿಯೇ ಇಲ್ಲ. ನೀನು ವಿಚಿತ್ರವಾಗಿ ಮಾತನಾಡುತ್ತೀಯೆ.
ವಿದುರಃ
ಸರ್ವತೀರ್ಥೇಷು ವಾ ಸ್ನಾನಂ ಸರ್ವಭೂತೇಷು ಚಾರ್ಜವಮ್ |
ಉಭೇ ತ್ವೇತೇ ಸಮೇ ಸ್ಯಾತಾಮಾರ್ಜವಂ ವಾ ವಿಶಿಷ್ಯತೇ ॥2॥
ವಿದುರ ಎಲ್ಲ ತೀರ್ಥಗಳಲ್ಲಿ ಸ್ನಾನ ಮತ್ತು ಎಲ್ಲರ ವಿಷಯದಲ್ಲಿ ಆರ್ಜವ, ಇವೆರಡೂ ಸಮವಾಗುತ್ತವೆ ಅಥವಾ ಆರ್ಜವವೇ ಶ್ರೇಷ್ಠವಾಗುತ್ತದೆ.
ಆರ್ಜವಂ ಪ್ರತಿಪದ್ಯಸ್ವ ಪುತ್ರೇಷು ಸ್ವೇಷು ತೇಷು ಚ |
ಇಹ ಕೀರ್ತಿಂ ಪರಾಂ ಪ್ರಾಪ್ಯ ಪ್ರೇತ್ಯ ಸ್ವರ್ಗಮವಾಪ್ಸ್ಯಸಿ ॥3॥
ನೀನು ನಿನ್ನ ಮಕ್ಕಳಲ್ಲಿಯೂ ಮತ್ತು ಪಾಂಡವರಲ್ಲಿಯೂ ಆರ್ಜವವನ್ನು ಹೊಂದುವವನಾಗು. ಇಲ್ಲಿ ಉತ್ತಮ ಕೀರ್ತಿಯನ್ನು ಪಡೆದು ಮರಣಾಂತರದಲ್ಲಿ ಸ್ವರ್ಗವನ್ನು ಹೊಂದು.
ಯಾವತ್ ಕೀರ್ತಿರ್ಮನುಷ್ಯಸ್ಯ ಪುಣ್ಯಾ ಲೋಕೇ ಪ್ರಗೀಯತೇ |
ತಾವತ್ ಸ ಪುರುಷವ್ಯಾಘ್ರ ಸ್ವರ್ಗಲೋಕೇ ಮಹೀಯತೇ ॥4॥
ಪುರುಷವ್ಯಾಘ್ರನೇ, ಎಲ್ಲಿಯವರೆಗೆ ಈ ಲೋಕದಲ್ಲಿ ಅವನ ಒಳ್ಳೆಯ ಕೀರ್ತಿ ಇರುತ್ತದೆಯೋ ಅಲ್ಲಿಯವರೆಗೆ ಮನುಷ್ಯನು ಸ್ವರ್ಗದಲ್ಲಿ ಸುಖವಾಗಿರುತ್ತಾನೆ.
ಅತ್ರಾಪ್ಯುದಾಹರಂತೀಮಮ್ ಇತಿಹಾಸಂ ಪುರಾತನಮ್ |
ವಿರೋಚನಸ್ಯ ಸಂವಾದಂ ಕೇಶಿನ್ಯರ್ಥೇ ಸುಧನ್ವನಾ ॥5॥

ಈ ವಿಷಯದಲ್ಲಿ ಕೇಶಿನಿಯ ಸಲುವಾಗಿ ವಿರೋಚನ ಮತ್ತು ಸುಧನ್ವರಿಗೆ ನಡೆದ ಸಂವಾದದ ಒಂದು ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಸ್ವಯಂವರೇ ಸ್ಥಿತಾ ಕನ್ಯಾ ಕೇಶಿನೀ ನಾಮ ನಾಮತಃ |
ರೂಪೇಣಾಪ್ರತಿಮಾ ರಾಜನ್ ವಿಶಿಷ್ಟಪತಿಕಾಮ್ಯಯಾ ||6||
ಎಲ್ಲೈ ರಾಜನೇ, ಅಸದೃಶವಾದ ರೂಪವುಳ್ಳ ಕೇಶಿನೀ ಎಂಬ ಕನ್ಯೆಯು ಶ್ರೇಷ್ಠನಾದ ಪತಿಯನ್ನು ಪಡೆಯುವ ಸಲುವಾಗಿ ಸ್ವಯಂವರದಲ್ಲಿ ಉಪಸ್ಥಿತಳಾಗಿದ್ದಳು.
ವಿರೋಚನೋಽಥ ದೈತೇಯಃ ತದಾ ತತ್ರಾಜಗಾಮ ಹ |
ಪ್ರಾಪ್ತುಮಿಚ್ಛನ್ ತತಸ್ತತ್ರ ದೈತ್ಯೇಂದ್ರಂ ಪ್ರಾಹ ಕೇಶಿನೀ ||7||
ದಿತಿಯ ವಂಶದಲ್ಲಿ ಜನಿಸಿದ ವಿರೋಚನನು ಅವಳನ್ನು ಪಡೆಯಲು ಇಚ್ಛಿಸಿ ಅಲ್ಲಿಗೆ ಬಂದನು. ಆಗ ಆ ದೈತ್ಯೇಂದ್ರನನ್ನು ಕುರಿತು ಕೇಶಿನಿಯು ಹೇಳಿದಳು;
ಕಿಂ ಬ್ರಾಹ್ಮಣಾಃ ಸ್ವಿಚ್ಛ್ರೇಯಾಂಸೋ ದಿತಿಜಾಃ ಸ್ವಿದ್ ವಿರೋಚನ |
ಅಥ ಕೇನ ಸ್ಮ ಪರ್ಯಂಕಂ ಸುಧನ್ವಾ ನಾಧಿರೋಹತಿ ||8||
ವಿರೋಚನನೇ, ಬ್ರಾಹ್ಮಣರು ಶ್ರೇಷ್ಠರೋ ಅಥವಾ ದೈತ್ಯರು ಶ್ರೇಷ್ಠರೋ? ಯಾವ ಕಾರಣದಿಂದ ಸುಧನ್ವನು ಪರ್ಯಂಕದ ಮೇಲೆ ಕುಳಿತುಕೊಳ್ಳುವುದಿಲ್ಲ?
ವಿರೋಚನಃ
ಪ್ರಾಜಾಪತ್ಯಾ ವಯಂ ಶ್ರೇಷ್ಠಾಃ ಸರ್ವೇ ಕೇಶಿನಿ ಸತ್ತಮಾಃ |
ಅಸ್ಮಾಕಂ ಖಲ್ವಿಮೇ ಲೋಕಾಃ ಕೇ ದೇವಾಃ ಕೇ ದ್ವಿಜಾತಯಃ ||9||
ವಿರೋಚನ ಕೇಶಿನಿಯೇ, ನಾವು ಕಶ್ಯಪ ಪ್ರಜಾಪತಿಗಳ ಮಕ್ಕಳು. ಆದ್ದರಿಂದ ಶ್ರೇಷ್ಠರು ಮತ್ತು ಬಹಳ ಸಜ್ಜನರು. ಈ ಲೋಕಗಳೆಲ್ಲಾ ನಮ್ಮ ಸಲುವಾಗಿಯೇ ಇವೆ.  ನಮ್ಮ ಮುಂದೆ ದೇವತೆಗಳು ಯಾರು? ಬ್ರಾಹ್ಮಣರು ಯಾರು?
ಕೇಶಿನೀ
ಇಹೈವಾವಾಂ ಪ್ರತೀಕ್ಷಾವ ಉಪಸ್ಥಾನೇ ವಿರೋಚನ |
ಸುಧನ್ವಾ ಪ್ರಾತರಾಗಂತಾ ಪಶ್ಯೇಯಂ ವಾಂ ಸಮಾಗತೌ ||10||
ಕೇಶಿನೀ ವಿರೋಚನನೇ, ಈ ಪೂಜಾಸ್ಥಾನದಲ್ಲಿಯೇ ನಾವಿಬ್ಬರೂ ನಿರೀಕ್ಷಿಸೋಣ. ನಾಳೆಯ ಪ್ರಾತಃಕಾಲದಲ್ಲಿ ಸುಧನ್ವನು ಬರುವನು. ಆಗ ನಿಮ್ಮಿಬ್ಬರನ್ನೂ ನಾನು ನೋಡುವೆನು.
ವಿರೋಚನಃ
ತಥಾ ಭದ್ರೇ ಕರಿಷ್ಯಾಮಿ ಯಥಾ ತ್ವಂ ಭೀರು ಭಾಷಸೇ |
ಸುಧನ್ವಾನಂ ಚ ಮಾಂ ಚೈವ ಪ್ರಾತರ್ದ್ರಷ್ಟಾಸಿ ಸಂಗತೌ ||11||
ವಿರೋಚನ ಎಲೌ ಭೀರುವೇ, ಮಂಗಳಸ್ವರೂಪಳೇ, ನೀನು ಹೇಳಿದಂತೆಯೇ ಮಾಡುವೆನು. ಸುಧನ್ವನನ್ನೂ ಮತ್ತು ನನ್ನನ್ನೂ ನೀನು ಒಟ್ಟಿಗೆ ನಾಳೆಯ ಪ್ರಾತಃಕಾಲದಲ್ಲಿ ನೋಡಬಹುದು.
ವಿದುರಃ
ಅತೀತಾಯಾಂ ಚ ಶರ್ವರ್ಯಾಮುದಿತೇ ಸೂರ್ಯಮಂಡಲೇ |
ಅಥಾಜಗಾಮ ತಂ ದೇಶಂ ಸುಧನ್ವಾ ರಾಜಸತ್ತಮ ||12||
ವಿರೋಚನೋ ತತ್ರ ವಿಭೋ ಕೇಶಿನ್ಯಾ ಸಹಿತಃ ಸ್ಥಿತಃ |
ಸುಧನ್ವಾ ತಂ ಸಮಾಗಚ್ಛತ್ ಪ್ರಾಹ್ಲಾದಿಂ ಕೇಶಿನೀ ತಥಾ ||13||
ವಿದುರ ಎಲ್ಲೈ ರಾಜಸತ್ತಮನೇ, ರಾತ್ರಿಯು ಕಳೆದು ಸೂರ್ಯನು ಉದಯಿಸುತ್ತಿರಲು ಎಲ್ಲಿ ವಿರೋಚನನು ಕೇಶಿನಿಯ ಜೊತೆಯಲ್ಲಿದ್ದನೋ ಆ ದೇಶಕ್ಕೆ ಸುಧನ್ವನು ಬಂದನು. ಕೇಶಿನಿಯು ಹೇಗೆ ವಿರೋಚನನ ಜೊತೆಯಲ್ಲಿ ಬಂದು ಸೇರಿದಳೋ ಅದರಂತೆ ಸುಧನ್ವನೂ ಬಂದು ಪ್ರಹ್ಲಾದನ ಮಗನಾದ ವಿರೋಚನನ ಜೊತೆಯಲ್ಲಿ ಸೇರಿದನು.
ಸಮಾಗತಂ ದ್ವಿಜಂ ದೃಷ್ಟ್ವಾ ಕೇಶಿನೀ ಭರತರ್ಷಭ |
ಪ್ರತ್ಯುತ್ಥಾಯಾಸನಂ ತಸ್ಮೈ ಪಾದ್ಯಮರ್ಘ್ಯಂ ದದೌ ಪುನಃ ||14||
ಎಲ್ಲೈ ಭರತರ್ಷಭನೇ, ಬ್ರಾಹ್ಮಣನು ಬಂದದ್ದನ್ನು ನೋಡಿ ಕೇಶಿನಿಯು ಎದ್ದು ಅವನಿಗೆ ಆಸನವನ್ನೂ, ಅರ್ಘ್ಯಪಾದ್ಯಗಳನ್ನೂ ಕೊಟ್ಟಳು ಮತ್ತು ವಿರೋಚನನನ್ನು ಕುರಿತು ಹೀಗೆ ಶ್ರೇಷ್ಠವಾದ ಮಾತನ್ನು ಆಡಿದಳು.
ವಿದುರ
ಇತಿ ಹೋವಾಚ ವಚನಂ ವಿರೋಚನಮನುತ್ತಮಮ್ ||15||
ವಿದುರ ಆಗ ಸುಧನ್ವನು ವಿರೋಚನನನ್ನು ಕುರಿತು ಈ ಶ್ರೇಷ್ಠವಾದ ಮಾತನ್ನು ಆಡಿದನು.
ಸುಧನ್ವಾ
ಆಃಸ್ವ ತಲ್ಪೇ ಹಿ ಸೌವರ್ಣೇ ಪ್ರಾಹ್ಲಾದೇ ಬ್ರಾಹ್ಮಣಸ್ತ್ವಹಮ್ |
ಅನ್ವಾಲಭೇ ಹಿರಣ್ಮಯಂ ಪ್ರಾಹ್ಲಾದೇದಂ ವರಾಸನಮ್ ||16||
ಏಕತ್ವಮುಪಸಂಪನ್ನೋ ನ ತ್ವಾಸೇಯಂ ತ್ವಯಾ ಸಹ ||17||
ಸುಧನ್ವಾ ಪ್ರಹ್ಲಾದಪುತ್ರನೇ, ಈ ಸುವರ್ಣಮಯವಾದ ಹಾಸಿಗೆಯಲ್ಲಿ ಕುಳಿತುಕೊ. ನಾನು ಬ್ರಾಹ್ಮಣ. ನಾನು ಈ ಇನ್ನೊಂದು ಶ್ರೇಷ್ಠವಾದ ಸುವರ್ಣಮಯವಾದ ಆಸನದಲ್ಲಿ ಕುಳಿತುಕೊಳ್ಳುತ್ತೇನೆ. ನಿನ್ನ ಜೊತೆಯಲ್ಲಿ ಒಟ್ಟಿಗೆ ಕೂಡುವುದಿಲ್ಲ.

ವಿರೋಚನಃ
ತವಾರ್ಹತೇ ತು ಫಲಕಂ ಕೂರ್ಚಂ ವಾऽಪ್ಯಥವಾ ಬೃಸೀ |
ಹರಂತು ಫಲಕಂ ಕೂರ್ಚಂ ತಥಾ ಬೃಸ್ಯಸ್ತೃಣಾನಿ ಚ ॥18॥
ಸುಧನ್ವನ್ ನ ತ್ವಮರ್ಹೋऽಸಿ ಮಯಾ ಸಹ ಸಮಾಸನಮ್ ॥19॥
ವಿರೋಚನ ಅರ್ಹನಾದ ನಿನಗೆ ಮಣೆ, ಕೂರ್ಚ ಅಥವಾ ದರ್ಭಾಸನವೇ ಯೋಗ್ಯವಾದುದು. ಸೇವಕರು ನಿನಗಾಗಿ ಮಣೆಯನ್ನಾಗಲೀ, ಕೂರ್ಚವನ್ನಾಗಲೀ, ದರ್ಭಾಸನವನ್ನಾಗಲೀ, ಚಾಪೆಯನ್ನಾಗಲೀ ತರಲಿ. ಸುಧನ್ವನೇ, ನೀನು ನನ್ನ ಜೊತೆಯಲ್ಲಿ ಒಂದೇ ಆಸನದಲ್ಲಿ ಕುಳಿತುಕೊಳ್ಳಲು ಅರ್ಹನಲ್ಲ.
ಸುಧನ್ವಾ
ಪಿತಾಪುತ್ರೌ ಸಹಾಸೀತಾಂ ದ್ವೌ ವಿಪ್ರೌ ಕ್ಷತ್ರಿಯಾವಪಿ |
ವೃಶ್ಯೌ ದ್ವೌ ಚೈವ ಶೂದ್ರೌ ಚ ನ ತ್ವನ್ಯಾವಿತರೇತರಮ್ ॥20॥
ಸುಧನ್ವಾ ತಂದೆ-ಮಕ್ಕಳು ಒಂದೇ ಆಸನದಲ್ಲಿ ಕುಳಿತುಕೊಳ್ಳಬಹುದು. ಇಬ್ಬರು ಬ್ರಾಹ್ಮಣರು, ಇಬ್ಬರು ಕ್ಷತ್ರಿಯರು, ಇಬ್ಬರು ವೈಶ್ಯರು, ಇಬ್ಬರು ಶೂದ್ರರು ಒಂದೇ ಆಸನದಲ್ಲಿ ಕುಳಿತುಕೊಳ್ಳಬಹುದು. ಆದರೆ ಪರಸ್ಪರವಾಗಿ ಬೇರೆ ಜಾತಿಗೆ ಸೇರಿದವರು ಒಂದೇ ಆಸನದಲ್ಲಿ ಕುಳಿತುಕೊಳ್ಳುವಂತಿಲ್ಲ.
ಪಿತಾ ಹಿ ತೇ ಸಮಾಸೀನಮುಪೋಪಾಸೀತ ಮಾಮಧಃ |
ಬಾಲಃ ಸುಖೋಷಿತೋ ಗೇಹೇ ನ ತ್ವಂ ಕಿಂಚನ ಬುಧ್ಯಸೇ ॥21॥
ನಾನು ಆಸನದಲ್ಲಿ ಕುಳಿತಿದ್ದಾಗ ನಿನ್ನ ತಂದೆಯು ಕೆಳಗೆ ಕುಳಿತಿರುತ್ತಿದ್ದನು. ನೀನಿನ್ನೂ ಬಾಲಕ. ಮನೆಯಲ್ಲಿ ಸುಖವಾಗಿ ಬೆಳೆದಿದ್ದೀಯೆ. ನಿನಗೆ ಒಂದೂ ತಿಳಿಯುವುದಿಲ್ಲ.
ವಿರೋಚನಃ
ಹಿರಣ್ಯಂ ಚ ಗವಾಶ್ವಂ ಚ ಯದ್ವಿತ್ತಮಸುರೇಷು ನಃ |
ಸುಧನ್ವನ್ ವಿಪಣೇ ತೇನ ಪ್ರಶ್ನಂ ಪೃಚ್ಛಾವ ಯೇ ವಿದುಃ ॥22॥
ವಿರೋಚನ ಅಸುರರಾದ ನಮ್ಮಲ್ಲಿ ಏನು ಹಿರಣ್ಯ, ಗೋವುಗಳು, ಅಶ್ವಗಳು ಮೊದಲಾದ ಸಂಪತ್ತಿದೆಯೋ ಅದೆಲ್ಲವನ್ನೂ ಪಣವಾಗಿಟ್ಟು ಎಲೈ ಸುಧನ್ವನೇ, ತಿಳಿದವರ ಬಳಿಯಲ್ಲಿ ಪ್ರಶ್ನೆಯನ್ನು ಮಾಡೋಣ.
ಸುಧನ್ವಾ
ಹಿರಣ್ಯಂ ಚ ಗವಾಶ್ವಂ ಚ ತವೈವಾಸ್ತು ವಿರೋಚನ |
ಪ್ರಾಣಯೋಸ್ತು ಪಣಂ ಕೃತ್ವಾ ಪ್ರಶ್ನಂ ಪೃಚ್ಛಾವ ಯೇ ವಿದುಃ ॥23॥
ಸುಧನ್ವಾ ಎಲೈ ವಿರೋಚನನೇ, ಸುವರ್ಣ ಮತ್ತು ಗವಾಶ್ವಗಳು ನಿನಗೇ ಇರಲಿ. ನಮ್ಮ ಪ್ರಾಣಗಳನ್ನು ಪಣಕ್ಕಿಟ್ಟು ತಿಳಿದವರನ್ನು ಪ್ರಶ್ನೆ ಮಾಡೋಣ.
ವಿರೋಚನಃ
ಆವಾಂ ಕುತ್ರ ಗಮಿಷ್ಯಾವಃ ಪ್ರಾಣಯೋರ್ವಿಪಣೇ ಕೃತೇ |
ನ ತು ದೇವೇಷ್ವಹಂ ಸ್ಥಾತಾ ನ ಮನುಷ್ಯೇಷು ಕರ್ಹಿಚಿತ್ ॥24॥
ವಿರೋಚನ ಪ್ರಾಣಗಳನ್ನು ಪಣಕ್ಕಿಟ್ಟ ಮೇಲೆ ನಾವು ಯಾರಲ್ಲಿಗೆ ಹೋಗೋಣ? ನಾನು ದೇವತೆಗಳ ಬಳಿಗೆ ಹೋಗುವುದಿಲ್ಲ, ಮನುಷ್ಯರ ಬಳಿಗೂ ಹೋಗುವವನಲ್ಲ.
ಸುಧನ್ವಾ
ಪಿತರಂ ತೇ ಗಮಿಷ್ಯಾವಃ ಪ್ರಾಣಯೋರ್ವಿಪಣೇ ಕೃತೇ |
ಪುತ್ರಸ್ಯಾಪಿ ಸ ಹೇತೋರ್ಹಿ ಪ್ರಹ್ಲಾದೋ ನಾನೃತಂ ವದೇತ್ ॥25॥
ಸುಧನ್ವಾ ಪ್ರಾಣಗಳನ್ನು ಪಣಕ್ಕಿಟ್ಟು ನಿನ್ನ ತಂದೆಯ ಬಳಿಗೆ ಹೋಗೋಣ. ಮಗನ ಸಲುವಾಗಿಯೂ ಸಹ ಪ್ರಹ್ಲಾದನು ಸುಳ್ಳನ್ನು ಹೇಳುವುದಿಲ್ಲ.
ವಿದುರಃ
ಏವಂ ಕೃತಪಣೌ ಕ್ರುದ್ಧೌ ತದಾ ತತ್ರೈವ ಜಗ್ಮತುಃ |
ವಿರೋಚನಸುಧನ್ವಾನೌ ಪ್ರಹ್ಲಾದೋ ಯತ್ರ ತಿಷ್ಠತಿ ॥26॥
ವಿದುರ ಹೀಗೆ ವಿರೋಚನ, ಸುಧನ್ವಾ ಇಬ್ಬರೂ ಪಣವನ್ನು ಇಟ್ಟು ಸಿಟ್ಟಿನಿಂದ ಕೂಡಿದವರಾಗಿ ಪ್ರಹ್ಲಾದನು ಎಲ್ಲಿ ಇದ್ದನೋ ಅಲ್ಲಿಗೆ ಹೋದರು.
ಪ್ರಹ್ಲಾದಃ
ಇಮೌ ತೌ ಸಂಪ್ರದೃಶ್ಯೇತೇ ಯಾಭ್ಯಾಂ ನ ಚರಿತಂ ಸಹ |
ಆಶೀವಿಷಾವಿವ ಕ್ರುದ್ಧಾವೇಕಮಾರ್ಗಾವಿಹಾಗತೌ ॥27॥
ಪ್ರಹ್ಲಾದ ಎಂದೂ ಒಟ್ಟಿಗೆ ಸಂಚರಿಸದ ಇವರಿಬ್ಬರೂ ಸಿಟ್ಟುಗೊಂಡ ಸರ್ಪಗಳಂತೆ ಒಂದೇ ಮಾರ್ಗದಲ್ಲಿ ಜೊತೆಯಲ್ಲಿ ಇಲ್ಲಿಗೆ ನಡೆದು ಬರುತ್ತಿದ್ದಾರೆ.
ಕಿಂ ವಾ ಸಹೈವ ಚರಥೋ ನ ಪುರಾ ಚರಥಃ ಸಹ |
ವಿರೋಚನೈತತ್ ಪೃಚ್ಛಾಮಿ ಕಿಂ ತೇ ಸಖ್ಯಂ ಸುಧನ್ವನಾ ॥28॥
ಎಲೈ ವಿರೋಚನನೇ, ಹೀಗೆ ಎಂದೂ ಒಟ್ಟಿಗೆ ನಡೆಯದಿದ್ದವರು ಈ ದಿನ ಒಟ್ಟಿಗೆ ಏಕೆ ನಡೆದು ಬರುತ್ತಿದ್ದೀರಿ? ವಿರೋಚನನೇ,

ನಿನ್ನನ್ನು ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಸುಧನ್ವನ ಜೊತೆಯಲ್ಲಿ ನಿನ್ನ ಸಖ್ಯಕ್ಕೆ ಕಾರಣವೇನು?
ವಿರೋಚನಃ
ನ ಮೇ ಸುಧನ್ವನಾ ಸಖ್ಯಂ ಪ್ರಾಣಯೋರ್ವಿಪಣಾವಹೇ |
ತತ್ ತ್ವಾಂ ಪೃಚ್ಛಾವಹೇ ತಾತ ಮಾ ಪ್ರಶ್ನಮನೃತಂ ವದೇಃ ॥29॥
ವಿರೋಚನ ನನಗೆ ಸುಧನ್ವನ ಜೊತೆಯಲ್ಲಿ ಸಖ್ಯವಿಲ್ಲ. ನಮ್ಮ ಪ್ರಾಣಗಳನ್ನು ಪಣಕ್ಕೆ ಇಟ್ಟಿದ್ದೇವೆ. ತಂದೆಯೇ, ಆದ್ದರಿಂದ ನಾವಿಬ್ಬರೂ ನಿನ್ನನ್ನು ಕೇಳುತ್ತಿದ್ದೇವೆ. ನಮ್ಮ ಪ್ರಶ್ನೆಗೆ ಸುಳ್ಳು ಉತ್ತರವನ್ನು ಹೇಳಬೇಡ.
ಪ್ರಹ್ಲಾದಃ
ಉದಕಂ ಮಧುಪರ್ಕಂ ಚಾಪ್ಯಾನಯಂತು ಸುಧನ್ವನೇ |
ಬ್ರಹ್ಮನ್ನಭ್ಯರ್ಚನೀಯೋಽಸಿ ಶ್ವೇತಾ ಗೌಃ ಪೀವರೀಕೃತಾ ॥30॥
ಪ್ರಹ್ಲಾದ ಸುಧನ್ವನಿಗೋಸ್ಕರ ಉದಕವನ್ನೂ ಮತ್ತು ಮಧುಪರ್ಕವನ್ನೂ ತೆಗೆದುಕೊಂಡು ಬನ್ನಿ. ಬ್ರಾಹ್ಮಣನೇ, ನೀನು ಪೂಜನೀಯನಾಗಿದ್ದೀಯೆ. ಚೆನ್ನಾಗಿ ಸಾಕಿದ ಒಂದು ಬಿಳಿಯ ಬಣ್ಣದ ಗೋವು ನಿನ್ನ ದಾನಕ್ಕಾಗಿ ಸಿದ್ಧವಾಗಿದೆ.
ಸುಧನ್ವಾ
ಉದಕಂ ಮಧುಪರ್ಕಂ ಚ ಪ್ರಶ್ನವಾಚಾಽರ್ಪಿತಂ ಮಮ ॥31॥
ಪ್ರಹ್ಲಾದ ತ್ವಂ ತು ಮೇ ತಥ್ಯಂ ಪ್ರಶ್ನಂ ಪ್ರಬ್ರೂಹಿ ಪೃಚ್ಛತಃ |
ಕಿಂ ಬ್ರಾಹ್ಮಣಾಃ ಸ್ವಿಚ್ಛ್ರೇಯಾಂಸ ಉತಾಹೋಸ್ವಿದ್ ವಿರೋಚನಃ ॥32॥
ಸುಧನ್ವಾ ನಿನ್ನ ಮಾತಿನಿಂದಲೇ ನೀನು ನನಗೆ ಉದಕವನ್ನೂ ಮತ್ತು ಮಧುಪರ್ಕವನ್ನೂ ನೀಡಿದಂತಾಗಿದೆ. ರಾಜನೇ, ಪ್ರಶ್ನೆಯನ್ನು ಮಾಡುವ ನನಗೆ ನೀನು ಸರಿಯಾದ ಉತ್ತರವನ್ನು ಹೇಳು. ಬ್ರಾಹ್ಮಣರು ಶ್ರೇಷ್ಠರೋ ಅಥವಾ ವಿರೋಚನನು ಶ್ರೇಷ್ಠನೋ?
ಪ್ರಹ್ಲಾದಃ
ನ ಕಲ್ಮಾಷೋ ನ ಕಪಿಲೋ ನ ಕೃಷ್ಣೋ ನ ಚ ಲೋಹಿತಃ |
ಅಣೀಯಾನ್ ಕ್ಷುರಧಾರಾಯಾಃ ಕೋ ಧರ್ಮಂ ವಕ್ತುಮರ್ಹಸಿ ॥33॥
ಪ್ರಹ್ಲಾದ ಕಲ್ಮಾಷ ಗೋವಾಗಲೀ, ಕಪಿಲ ಗೋವಾಗಲೀ, ಕೃಷ್ಣ ಗೋವಾಗಲೀ ಅಥವಾ ಕೆಂಪು ಬಣ್ಣದ ಗೋವಾಗಲೀ ಯಾವುದೂ ಕತ್ತಿಯ ಅಲುಗಿನ ಮುಂದೆ ಸಣ್ಣದಲ್ಲ (ನ್ಯಾಯದ ಕತ್ತಿಗೆ ಎಲ್ಲರೂ ಸಮಾನರು). ಧರ್ಮವನ್ನು ಯಾವನು ಹೇಳಲು ಸಾಧ್ಯ?
ಪುತ್ರ ಏಕೋ ಮಮ ಬ್ರಹ್ಮನ್ ತ್ವಂ ಚ ಸಾಕ್ಷ್ಯೇ ವ್ಯವಸ್ಥಿತಃ |
ತಯೋರ್ವಿವದತೋಃ ಪ್ರಶ್ನಂ ಕಥಮಸ್ಮದ್ವಿಧೋ ವದೇತ್ ॥34॥
ಎಲೈ ಬ್ರಾಹ್ಮಣನೇ, ನಿಮ್ಮಿಬ್ಬರಲ್ಲಿ ಒಬ್ಬನು ನನ್ನ ಪುತ್ರ. ನೀನು ಸಾಕ್ಷಿಯನ್ನು ಹುಡುಕಿಕೊಂಡು ಬಂದಿದ್ದೀಯೆ. ನೀವಿಬ್ಬರೂ ಹೀಗೆ ವಿವಾದ ಮಾಡುವಾಗ ನನ್ನಂತಹವನು ಹೇಗೆ ಪ್ರಶ್ನೆಗೆ ಉತ್ತರವನ್ನು ಹೇಳಲು ಸಾಧ್ಯ?
ಸುಧನ್ವಾ
ಯದ್ಯತತ್ವಂ ತು ವಕ್ತಾಸಿ ಯದಿ ವಾಽಪಿ ನ ವಕ್ಷ್ಯಸಿ |
ಪ್ರಹ್ಲಾದ ಪ್ರಶ್ನಮತುಲಂ ಮೂರ್ಧಾ ತೇ ವಿಫಲಿಷ್ಯತಿ ॥35॥
ಸುಧನ್ವಾ ಪ್ರಹ್ಲಾದನೇ, ನಮ್ಮ ಅಸದೃಶವಾದ ಪ್ರಶ್ನೆಗೆ ನೀನು ಉತ್ತರವನ್ನು ಹೇಳದಿದ್ದರೆ ಅಥವಾ ತಪ್ಪು ಉತ್ತರವನ್ನು ಹೇಳುವವನಾದರೆ ನಿನ್ನ ತಲೆಯು ಬಿರಿದು ಹೋಗುತ್ತದೆ.
ವಿದುರಃ
ಆದಿತ್ಯೇನ ಸಹಾಯಾಂತಂ ಪ್ರಹ್ಲಾದೋ ಹಂಸಮಬ್ರುವೀತ್ |
ಧೃತರಾಷ್ಟ್ರಂ ಮಹಾಪ್ರಾಜ್ಞಂ ಸರ್ವಜ್ಞಂ ಸರ್ವದರ್ಶಿನಮ್ ॥36॥
ವಿದುರ ಆಗ ಪ್ರಹ್ಲಾದನು ಸೂರ್ಯನ ಜೊತೆಯಲ್ಲಿ ಬರುತ್ತಿದ್ದಂತಹ ಧೃತರಾಷ್ಟ್ರನೆಂಬ ಮಹಾಪ್ರಾಜ್ಞನೂ, ಸರ್ವಜ್ಞನೂ, ಎಲ್ಲವನ್ನೂ ಪ್ರತ್ಯಕ್ಷದಿಂದ ನೋಡುವವನೂ ಆದ ಹಂಸನನ್ನು ಕುರಿತು ಹೇಳಿದನು (ಹಂಸ ಎಂದರೆ ಸಂನ್ಯಾಸಿಗಳ ಒಂದು ಪ್ರಭೇದ).
ಪ್ರಹ್ಲಾದಃ
ಪುತ್ರೋ ವಾಽನ್ಯೋ ಭವೇದ್ ಬ್ರಹ್ಮನ್ ಸಾಕ್ಷ್ಯೇ ಚಾಪಿ ಭವೇತ್ ಸ್ಥಿತಃ|
ತಯೋರ್ವಿವದತೋರ್ಹಂಸ ಕಥಂ ಧರ್ಮಃ ಪ್ರವರ್ತತೇ ॥37॥
ಪ್ರಹ್ಲಾದ ಎಲೈ ಬ್ರಾಹ್ಮಣನೇ, ಮಗನೇ ಆಗಲಿ ಅಥವಾ ಇನ್ನೊಬ್ಬನಾಗಲೀ ವಿವಾದವನ್ನು ಮಾಡಿಕೊಂಡು ಸಾಕ್ಷಿಯನ್ನು ಕೇಳಲು ಬಂದಾಗ ಎಲೈ ಹಂಸನೇ, ಧರ್ಮವು ಹೇಗೆ ಪ್ರವೃತ್ತವಾಗುತ್ತದೆ?
ಹಂಸಃ
ಗಾಂ ವೈ ದದ್ಯಾತ್ ತ್ವೌರಸಾಯ ಯದ್ವಾಽನ್ಯತ್ ಸ್ಯಾತ್ ಪ್ರಿಯಂ ಧನಮ್ |
ದ್ವಯೋರ್ವಿವದತೋಸ್ತಥ್ಯಂ ವಾಚ್ಯಂ ಚ ಮತಿಮಂಸ್ತ್ವಯಾ ॥38॥
ಹಂಸ ಎಲೈ ಮತಿವಂತನೇ, ಔರಸ ಪುತ್ರನಿಗೆ ಗೋವನ್ನು ಕೊಡಬಹುದು ಅಥವಾ ಬೇರೆ ಏನಾದರೂ ಪ್ರಿಯವಿದ್ದರೆ ಅದನ್ನೂ ಧನವನ್ನೂ ಕೊಡಬಹುದು. ಆದರೆ ಇಬ್ಬರು ವಿವಾದವನ್ನು ಮಾಡುವಾಗ ನೀನು ಸತ್ಯವನ್ನೇ ನುಡಿಯಬೇಕು.
ಪ್ರಹ್ಲಾದಃ
ಅಥ ಯೋ ನೈವ ಪ್ರಬ್ರೂಯಾತ್ ಸತ್ಯಂ ವಾ ಯದಿ ವಾಽನೃತಮ್ |
ಹಂಸ ತತ್ವೇನ ಪೃಚ್ಛಾಮಿ ದುರ್ವಿವಕ್ತಾಸ್ಮಿ ಕಿಂ ವದೇ ॥39॥
ಪ್ರಹ್ಲಾದ ಎಲೈ ಹಂಸನೇ, ಯಾವನು ಸತ್ಯವನ್ನು ನುಡಿಯುವುದಿಲ್ಲವೋ ಅಥವಾ ಸುಳ್ಳನ್ನು ನುಡಿಯುತ್ತಾನೋ ಅವರಲ್ಲಿ ಉತ್ತಮರು,

ಅಧಮರನ್ನು ನಾನು ತಿಳಿದುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನಿನ್ನನ್ನು ಕೇಳುತ್ತಿದ್ದೇನೆ.
ಹಂಸಃ
ಪೃಷ್ಟೋ ಧರ್ಮಂ ನ ವಿಬ್ರೂಯಾತ್ ಗೋಕರ್ಣಶಿಥಿಲಂ ಚರನ್ |
ಧರ್ಮಾದ್ ಭ್ರಶ್ಯತಿ ರಾಜಂಸ್ತು ನಾಸ್ಯ ಲೋಕೋಽಸ್ತಿ ನ ಪ್ರಜಾಃ ॥40॥
ಹಂಸ ಧರ್ಮದ ಪ್ರಶ್ನೆಯನ್ನು ಕೇಳಿದಾಗ ಕೇಳಿಸಿದರೂ ಕೇಳಿಸದೆ ಇದ್ದಂತೆ ಸುಮ್ಮನಿರುವವನು ತನ್ನ ಧರ್ಮವನ್ನು ಕಳೆದುಕೊಳ್ಳುತ್ತಾನೆ. ಎಲೈ ರಾಜನೇ, ಅವನಿಗೆ ಪರಲೋಕವೂ ಇಲ್ಲ, ಸಂತತಿಯೂ ಇಲ್ಲ.
ಧರ್ಮ ಏತಾನ್ ಸಂರುಜತಿ ಯಥಾ ನದ್ಯನುಕೂಲಜಾನ್ ॥41॥
ನದಿಯ ಪ್ರವಾಹವು ತೀರದಲ್ಲಿದ್ದ ವೃಕ್ಷಗಳನ್ನು ಕೊಚ್ಚಿಕೊಂಡು ಹೋಗುವಂತೆ ಧರ್ಮವೇ ಅವನನ್ನು ಕೊಚ್ಚಿಕೊಂಡು ಹೋಗುತ್ತದೆ.
ಯೇ ಧರ್ಮಮನುಪಶ್ಯಂತಃ ತೂಷ್ಣೀಂ ಧ್ಯಾಯಂತ ಆಸತೇ |
ಶ್ರೇಷ್ಠೋಽರ್ಧಂ ತು ಹರೇತ್ ತತ್ರ ಭವೇತ್ ಪಾದಶ್ಚ ಕರ್ತರಿ ॥42॥
ಪಾದಸ್ತೇಷು ಸಭಾಸತ್ಸು ಯತ್ರ ನಿಂದ್ಯೋ ನ ನಿಂದ್ಯತೇ ॥43॥
ಪ್ರಶ್ನೆಯನ್ನು ಕೇಳಿದಾಗ ಯಾರು ಧರ್ಮವು ಗೊತ್ತಿದ್ದರೂ ಸುಮ್ಮನೆ ಧ್ಯಾನ ಮಾಡುವವರಂತೆ ಕುಳಿತಿರುತ್ತಾರೋ ಅವರ ಪುಣ್ಯದ ಅರ್ಧಭಾಗವನ್ನು ಪ್ರಶ್ನೆಯನ್ನು ಮಾಡಿದ ಶ್ರೇಷ್ಠನಾದವನು ತೆಗೆದುಕೊಳ್ಳುತ್ತಾನೆ. ಇನ್ನು ಕಾಲುಭಾಗವು ಅವರಲ್ಲಿ ಅಪಕಾರ ಮಾಡಿದವನಿಗೆ ಸೇರುತ್ತದೆ. ನಿಂದನೀಯನಾದವನನ್ನು ನಿಂದಿಸದಿದ್ದರೆ ಸಭಾಸದರಿಗೆ ಉಳಿದ ಕಾಲುಭಾಗವು ಸೇರುತ್ತದೆ.
ಅನೇನಾ ಭವತಿ ಶ್ರೇಷ್ಠೋ ಮುಚ್ಯಂತೇ ಚ ಸಭಾಸದಃ |
ಕರ್ತಾರಮೇನೋ ಗಚ್ಛೇಚ್ಚ ನಿಂದ್ಯೋ ಯತ್ರ ಹಿ ನಿಂದ್ಯತೇ ॥44॥
ನಿಂದನೀಯನಾದವನು ಯಾವ ಸಭೆಯಲ್ಲಿ ನಿಂದಿಸಲ್ಪಡುತ್ತಾನೆಯೋ ಅಲ್ಲಿ ವಿವಾದವನ್ನು ತಂದವರಲ್ಲಿ ಶ್ರೇಷ್ಠನಾದವನು ನಿರ್ದೋಷಿಯಾಗುತ್ತಾನೆ. ಸಭಾಸದರಿಗೆ ಯಾವ ದೋಷವೂ ಉಂಟಾಗುವುದಿಲ್ಲ ಮತ್ತು ನಿಂದನೀಯವಾದ ಕರ್ಮವನ್ನು ಮಾಡಿದವರಿಗೆ ಪಾಪವು ಉಂಟಾಗುತ್ತದೆ.
ಪ್ರಹ್ಲಾದಃ
ಮೋಹಾದ್ವಾ ಚೈವ ಕಾಮಾದ್ವಾ ಮಿಥ್ಯಾವಾದಂ ಯದಿ ಬ್ರುವನ್ |
ಧೃತರಾಷ್ಟ್ರ ತತ್ ತ್ವಂ ಪೃಚ್ಛಾಮಿ ದುರ್ವಿವಕ್ತಾ ತು ಕಿಂ ವಸೇತ್ ॥45॥
ಪ್ರಹ್ಲಾದ ಎಲೈ ಧೃತರಾಷ್ಟ್ರ, ಹಂಸನೇ, ಮೋಹದಿಂದಲಾಗಲೀ, ಕಾಮದಿಂದಾಗಲೀ ಯಾವನು ಸುಳ್ಳು ಮಾತನ್ನು ಆಡುವವನಾಗಿ ವಿವಾದವನ್ನು ಕೆಟ್ಟದಾಗಿ ಪರಿಹರಿಸಲು ನೋಡುತ್ತಾನೆಯೋ ಅವನು ಎಲ್ಲಿಗೆ ಹೋಗುತ್ತಾನೆ ಎಂದು ನಿನ್ನನ್ನು ಕೇಳುತ್ತೇನೆ.
ಹಂಸಃ
ಯಾಂ ರಾತ್ರಿಮಧಿವಿನ್ನಾ ಸ್ತ್ರೀ ಯಾಂ ಚೈವಾಕ್ಷಪರಾಜಿತಃ |
ಯಾಂ ಚ ಭಾರಾಭಿತಪ್ತಾಂಗೋ ದುರ್ವಿವಕ್ತಾ ತು ತಾಂ ವಸೇತ್ ॥46॥
ಹಂಸ ಪತಿಯನ್ನು ಕಳೆದುಕೊಂಡ ಸ್ತ್ರೀಯು ಆ ದಿನ ರಾತ್ರಿಯಲ್ಲಿ ಹೇಗೆ ವಾಸ ಮಾಡುತ್ತಾಳೆಯೋ ದ್ಯೂತದಲ್ಲಿ ಪರಾಜಿತನಾದವನು ಆ ರಾತ್ರಿಯಲ್ಲಿ ಹೇಗೆ ವಾಸ ಮಾಡುತ್ತಾನೆಯೋ, ದೊಡ್ಡ ಭಾರದಿಂದ ತಪ್ತವಾದ ಶರೀರವುಳ್ಳವನು ರಾತ್ರಿಯಲ್ಲಿ ಹೇಗೆ ವಾಸ ಮಾಡುತ್ತಾನೆಯೋ ಸಭೆಯಲ್ಲಿ ಅನ್ಯಾಯವನ್ನು ನುಡಿಯುವವನು ಹಾಗೆ ವಾಸ ಮಾಡುತ್ತಾನೆ (ಅಂತಹ ದುಃಖವನ್ನು ಹೊಂದುತ್ತಾನೆ).
ನಗರೇ ಪ್ರತಿರುದ್ಧಃ ಸನ್ ಬಹಿರ್ದ್ವಾರೋ ಬುಭುಕ್ಷಿತಃ |
ಅಮಿತ್ರಾನ್ ಭೂಯಸಃ ಪಶ್ಯನ್ ದುರ್ವಿವಕ್ತಾ ತು ತಾಂ ವಸೇತ್ ॥
ನಗರದ ಹೊರಗೆ ಕೋಟೆಯ ಬಾಗಿಲಿನಿಂದ ಆಚೆಗೆ ಉಳಿದು ನಗರಕ್ಕೆ ಪ್ರವೇಶಿಸದಂತೆ ತಡೆಯಲ್ಪಟ್ಟ ಹಸಿದ ರಾಜನು ತನ್ನ ಸುತ್ತಲೂ ಅನೇಕ ಶತ್ರುಗಳನ್ನು ನೋಡುವಾಗ ಹೇಗಿರುತ್ತಾನೆಯೋ ಅದರಂತೆ ಕೆಟ್ಟದಾಗಿ ನಿರ್ಣಯವನ್ನು ಕೊಡುವವನು ದುಃಖವನ್ನು ಅನುಭವಿಸುತ್ತಾನೆ.
ಯಾಂ ಚ ರಾತ್ರಿಮಭಿದ್ರುಗ್ಧೋ ಯಾಂ ಚ ಪುತ್ರೇ ಪ್ರಿಯೇ ಮೃತೇ |
ಸರ್ವಸ್ವೇನ ಚ ಯೋ ಹೀನೋ ದುರ್ವಿವಕ್ತಾ ತು ತಾಂ ವಸೇತ್ ॥48॥
ಮೋಸವನ್ನು ಮಾಡಲ್ಪಟ್ಟವನು ಆ ರಾತ್ರಿಯನ್ನು ಕಳೆದಂತೆ, ಪ್ರಿಯನಾದ ಪುತ್ರನು ಮೃತನಾದ ದಿವಸದಲ್ಲಿ ರಾತ್ರಿಯನ್ನು ಕಳೆದಂತೆ, ಸರ್ವಸ್ವವನ್ನು ಕಳೆದುಕೊಂಡವನು ದುಃಖವನ್ನು ಅನುಭವಿಸುವಂತೆ, ಅನ್ಯಾಯದ ನಿರ್ಣಯವನ್ನು ಕೊಡುವವನು ವಾಸ ಮಾಡುತ್ತಾನೆ.
ಪಂಚ ಪಶ್ವನೃತಂ ಹಂತಿ ದಶ ಹಂತಿ ಗವಾನೃತೇ |
ಶತಮಶ್ವಾನೃತೇ ಹಂತಿ ಸಹಸ್ರಂ ಪುರುಷಾನೃತೇ ॥49॥
ಪಶುವಿನ ಸಲುವಾಗಿ ಅನೃತವನ್ನು ಹೇಳಿದರೆ ಐದು ಜನರನ್ನು ಕೊಲ್ಲುತ್ತದೆ. ಗೋವಿನ ಸಲುವಾಗಿ ಅನೃತವನ್ನು ಹೇಳಿದರೆ ಹತ್ತು ಜನರನ್ನು ಕೊಲ್ಲುತ್ತದೆ. ಅಶ್ವದ ಸಲುವಾಗಿ ಅನೃತವನ್ನು ಹೇಳಿದರೆ ನೂರುಜನರನ್ನು ಕೊಲ್ಲುತ್ತದೆ. ಮನುಷ್ಯನ ಸಲುವಾಗಿ ಅನೃತವನ್ನು ಹೇಳಿದರೆ ಸಹಸ್ರ ಜನರನ್ನು ಕೊಲ್ಲುತ್ತದೆ.
ಹಂತಿ ಜಾತಾನಜಾತಾಂಶ್ಚ ಹಿರಣ್ಯಾರ್ಥೇಽನೃತಂ ವದನ್ |
ಸರ್ವಂ ಭೂಮ್ಯನೃತೇ ಹಂತಿ ಮಾ ಸ್ಮ ಭೂಮ್ಯನೃತಂ ವದೇಃ ॥50॥
ಸುವರ್ಣದ ಸಲುವಾಗಿ ಅನೃತವನ್ನು ಹೇಳಿದರೆ ಅದು ಹುಟ್ಟಿದ ಮತ್ತು ಮುಂದೆ ಹುಟ್ಟುವ ಮಕ್ಕಳನ್ನೆಲ್ಲಾ ಕೊಲ್ಲುತ್ತದೆ. ಭೂಮಿಯ ಸಲುವಾಗಿ ಅನೃತವನ್ನು ಹೇಳಿದರೆ ಎಲ್ಲವನ್ನೂ ನಾಶಮಾಡುತ್ತದೆ. ಆದ್ದರಿಂದ ಭೂಮಿಯ ಸಲುವಾಗಿ ಅನೃತವನ್ನು ಹೇಳಬೇಡ.

ಪ್ರಹ್ಲಾದಃ
ಮತ್ತಃ ಶ್ರೇಯಾನಂಗಿರಾ ವೈ ಸುಧನ್ವಾ ತ್ವದ್ ವಿರೋಚನ |
ಮಾತಾಽಸ್ಯ ಶ್ರೇಯಸೀ ಮಾತುಸ್ತಸ್ಮಾತ್ ತ್ವಂ ತೇನ ವೈ ಜಿತಃ ॥51॥
ಪ್ರಹ್ಲಾದ ಅಂಗಿರಸರು ನನಗಿಂತ ಶ್ರೇಷ್ಠರಾದವರು. ಸುಧನ್ವನ ತಾಯಿಯು ನಿನ್ನ ತಾಯಿಗಿಂತಲೂ ಶ್ರೇಷ್ಠಳಾದವಳು. ಆದ್ದರಿಂದ ಸುಧನ್ವನು ಎಲ್ಲೈ ವಿರೋಚನನೇ, ನಿನಗಿಂತಲೂ ಶ್ರೇಷ್ಠನಾದವನು. ನೀನು ಈ ಪಣದಲ್ಲಿ ಸುಧನ್ವನಿಗೆ ಸೋತಿದ್ದೀಯೆ.
ವಿರೋಚನ ಸುಧನ್ವಾಽಯಂ ಪ್ರಾಣಾನಾಮೀಶ್ವರಸ್ತವ |
ಸುಧನ್ವನ್ ಪುತ್ರಮಿಚ್ಛಾಮಿ ತ್ವಯಾ ದತ್ತಂ ವಿರೋಚನಮ್ ॥52॥
ಎಲ್ಲೈ ವಿರೋಚನನೇ, ಈಗ ಈ ಸುಧನ್ವನು ನಿನ್ನ ಪ್ರಾಣಗಳಿಗೆ ಒಡೆಯನಾಗಿದ್ದಾನೆ. ಎಲ್ಲೈ ಸುಧನ್ವನೇ, ನೀನು ನನಗೆ ಮಗನಾದ ವಿರೋಚನನನ್ನು ದಾನ ಮಾಡು ಎಂದು ಕೇಳುತ್ತಿದ್ದೇನೆ.
ಸುಧನ್ವಾ
ಯದ್ಧರ್ಮಮವೃಣೀಥಾಸ್ತ್ವಂ ನ ಕಾಮಾದನೃತಂ ವದೀಃ |
ಪುನರ್ದದಾಮಿ ತೇ ಪುತ್ರಂ ತಸ್ಮಾತ್ ಪ್ರಹ್ಲಾದ ದುರ್ಲಭಮ್ ॥53॥
ಸುಧನ್ವಾ ಯಾವ ಕಾರಣದಿಂದ ನೀನು ಧರ್ಮವನ್ನೇ ಆಶ್ರಯಿಸಿದೆಯೋ, ಕಾಮದಿಂದ ಸುಳ್ಳನ್ನು ಹೇಳಲಿಲ್ಲವೋ, ಆದ್ದರಿಂದ ಎಲ್ಲೈ ಪ್ರಹ್ಲಾದನೇ, ದುರ್ಲಭನಾದ ಪುತ್ರನನ್ನು ನಿನಗೆ ಪುನಃ ಕೊಡುತ್ತೇನೆ.
ಏಷ ಪ್ರಹ್ಲಾದ ಪುತ್ರಸ್ತೇ ಮಯಾ ದತ್ತೋ ವಿರೋಚನಃ |
ಪಾದಪ್ರಕ್ಷಾಲನಂ ಕುರ್ಯಾತ್ ಕುಮಾರ್ಯಾಃ ಸನ್ನಿಧೌ ಮಮ ॥54॥
ಪ್ರಹ್ಲಾದನೇ, ಇದೋ ನಿನ್ನ ಪುತ್ರನಾದ ವಿರೋಚನನನ್ನು ನಿನಗೆ ಕೊಡುತ್ತಿದ್ದೇನೆ. ಅವನು ಈ ಕೇಶಿನಿಯ ಸನ್ನಿಧಿಯಲ್ಲಿ ನನ್ನ ಪಾದಪ್ರಕ್ಷಾಲನೆಯನ್ನು ಮಾಡಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ವಿದುರನೀತಿ ಮತ್ತು ಧೃತರಾಷ್ಟ್ರನಿಗೆ ಪಾಂಡವರಲ್ಲಿ ಪುತ್ರದೃಷ್ಟಿವಿಧಾನ.
ವಿದುರಃ
ತಸ್ಮಾದ್ ರಾಜೇಂದ್ರ ಭೂಮ್ಯರ್ಥೇ ನಾನೃತಂ ವಕ್ತುಮರ್ಹಸಿ |
ಮಾ ಗಮಃ ಸಸುತಾಮಾತ್ಯೋ ನಾಶಂ ಪುತ್ರಾರ್ಥಮಬ್ರುವನ್ ॥1॥
ವಿದುರ ಎಲ್ಲೈ ರಾಜೇಂದ್ರನೇ, ಆದ್ದರಿಂದ ಭೂಮಿಯ ವಿಷಯದಲ್ಲಿ ಎಂದೂ ಸುಳ್ಳನ್ನು ಹೇಳಬೇಡ. ಮಕ್ಕಳ ಹಿತಕ್ಕಾಗಿ ಏನೂ ಮಾತನಾಡದೆ ಪುತ್ರಾಮಾತ್ಯರ ಜೊತೆಯಲ್ಲಿ ನಾಶವನ್ನು ಹೊಂದಬೇಡ.
ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ |
ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ॥2॥
ದೇವತೆಗಳು ಗೋಪಾಲಕರಂತೆ ಕೋಲನ್ನು ಹಿಡಿದು ರಕ್ಷಿಸುವುದಿಲ್ಲ. ಯಾರನ್ನು ರಕ್ಷಿಸಲು ಬಯಸುತ್ತಾರೆಯೋ ಅವರಿಗೆ ಒಳ್ಳೆಯ ಬುದ್ಧಿಯನ್ನು ಕೊಡುತ್ತಾರೆ.
ಯಥಾ ಯಥಾ ಹಿ ಪುರುಷಃ ಕಲ್ಯಾಣೇ ಕುರುತೇ ಮನಃ |
ತಥಾ ತಥಾಽಸ್ಯ ಸರ್ವಾರ್ಥಾಃ ಸಿದ್ಧ್ಯಂತೇ ನಾತ್ರ ಸಂಶಯಃ ॥3॥
ಹೇಗೆ ಹೇಗೆ ಪುರುಷನು ಒಳ್ಳೆಯದನ್ನೇ ಮಾಡಲು ಮನಸ್ಸು ಮಾಡುತ್ತಾನೆಯೋ ಹಾಗೆ ಹಾಗೆ ಅವನಿಗೆ ಎಲ್ಲಾ ಅರ್ಥಗಳೂ ಸಿದ್ಧಿಸುತ್ತವೆ. ಇದರಲ್ಲಿ ಸಂಶಯವಿಲ್ಲ.
ನೈನಂ ಛಿಂದಂತಿ ವೃಜಿನಾತ್ ತಾರಯಂತಿ
ಮಾಯಾವಿನಂ ಮಾಯಯಾ ವರ್ತಮಾನಮ್ |
ನೀಡಂ ಶಕುಂತಾ ಇವ ಜಾತಪಕ್ಷಾಃ
ಛಂದಾಂಸ್ಯೇನಂ ಪ್ರಜಹತ್ಯಂತಕಾಲೇ ॥4॥
ಇನ್ನೊಬ್ಬರಿಗೆ ಮೋಸವನ್ನು ಮಾಡಿ ಕಪಟದಿಂದ ಜೀವಿಸುವವನನ್ನು ವೇದಗಳು ಪಾಪದಿಂದ ಪಾರು ಮಾಡುವುದಿಲ್ಲ. ರೆಕ್ಕೆಯು ಮೂಡಿದ ಪಕ್ಷಿಗಳು ಗೂಡನ್ನು ಬಿಟ್ಟು ಹೋಗುವಂತೆ ಅಂತಕಾಲದಲ್ಲಿ ವೇದಗಳು ಅವನನ್ನು ತೊರೆಯುತ್ತವೆ.
ಮದ್ಯಪಾನಂ ಕಲಹಂ ಪೂಗವೈರಂ
ಭಾರ್ಯಾಪತ್ಯೋರಂತರಂ ಜ್ಞಾತಿಭೇದಮ್ |
ರಾಜದ್ವೇಷಂ ಸ್ತ್ರೀಪುಂಸಯೋರ್ವಿವಾದಂ
ವರ್ಜ್ಯಾನ್ಯಾಹುರ್ಯಶ್ಚ ಪಂಥಾ ಪ್ರದುಷ್ಟಃ ॥5॥
ಮದ್ಯಪಾನ, ಕಲಹ, ಸಮೂಹದ್ವೇಷ, ಗಂಡ-ಹೆಂಡಿರನ್ನು ಒಡೆಯುವುದು, ದಾಯಾದಿಗಳನ್ನು ಒಡೆಯುವುದು, ರಾಜದ್ವೇಷ,

ಸ್ತ್ರೀ-ಪುರುಷರ ಜಗಳಗಳು ಮತ್ತು ದುಷ್ಟವಾದ ಮಾರ್ಗ ಇವೆಲ್ಲವೂ ವರ್ಜ್ಯವಾದವು.
ಸಾಮುದ್ರಿಕಂ ವಣಿಜಂ ಚೋರಪೂರ್ವಂ
ಶಲಾಕಸೂತ್ರಂ ಚ ಚಿಕಿತ್ಸಕಂ ಚ |
ಅರಿಂ ಚ ಮಿತ್ರಂ ಚ ಕುಶೀಲವಂ ಚ
ನೈತಾನ್ ಸಾಕ್ಷ್ಯೇ ತ್ವಧಿಕುರ್ವೀತ ಸಪ್ತ ॥6॥
ಸಮುದ್ರದಲ್ಲಿ ವ್ಯಾಪಾರ ಮಾಡುವ ವರ್ತಕನನ್ನು, ಹಿಂದೆ ಕಳ್ಳನಾಗಿದ್ದವನನ್ನು, ಶಲಾಕಿಗೆ ಬಟ್ಟೆಯನ್ನು ಸುತ್ತಿ ಬೀದಿಯಲ್ಲಿ ಮಾರುವವನನ್ನು, ವೈದ್ಯನನ್ನು, ಶತ್ರುವನ್ನು, ಮಿತ್ರನನ್ನು ಮತ್ತು ನಟನನ್ನೂ ಈ ಏಳು ಜನರನ್ನು ಎಂದೂ ಸಾಕ್ಷ್ಯಸ್ಥಾನದಲ್ಲಿ (ನಿರ್ಣಾಯಕ ಸ್ಥಾನದಲ್ಲಿ) ಕೂಡಿಸಬಾರದು.
ಮಾನಾಗ್ನಿಹೋತ್ರಮುತ ಮಾನಮೌನಂ
ಮಾನೇನಾಧೀತಮುತ ಮಾನಯಜ್ಞಃ |
ಏತಾನಿ ಚತ್ವಾರ್ಯಭಯಂಕರಾಣಿ
ಭಯಂ ಪ್ರಯಚ್ಛಂತ್ಯಯಥಾಕೃತಾನಿ ॥7॥
ಅಗ್ನಿಹೋತ್ರ, ಮೌನ, ಅಧ್ಯಯನ ಮತ್ತು ಯಜ್ಞ - ಈ ನಾಲ್ಕು ಅಭಯಪ್ರದವಾದವು. ಆದರೆ ಅದನ್ನೇ ಬೇರೆ ರೀತಿಯಲ್ಲಿ ಮಾಡಿದರೆ ಎಂದರೆ ಅಹಂಕಾರದಿಂದ ಮಾಡಿದ ಅಗ್ನಿಹೋತ್ರ, ಮೌನ, ಅಧ್ಯಯನ ಮತ್ತು ಯಜ್ಞಗಳು ಭಯವನ್ನುಂಟು ಮಾಡುತ್ತವೆ.
ಅಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ |
ಚರ್ಮಕಾರಶ್ಚ ಸೂಚೀ ಚ ಮಿತ್ರಧ್ರುಕ್ ಪಾರದಾರಿಕಃ ॥8॥
ಭ್ರೂಣಹಾ ಗುರುತಲ್ಪೀ ಚ ಯಶ್ಚ ಸ್ಯಾತ್ ಪಾನಪೋ ದ್ವಿಜಃ |
ಅತಿತೀಕ್ಷ್ಣಶ್ಚ ಕಾರುಶ್ಚ ನಾಸ್ತಿಕೋ ವೇದನಿಂದಕಃ ॥9॥
ಸುರಾಪ್ರಹಾಪಣೋ ವ್ರಾತ್ಯಃ ಕೀನಾಶಶ್ಚಾತ್ಮಹಾಽಪಿ ಚ |
ರಕ್ಷ್ಯೈತ್ಯುಕ್ತಶ್ಚ ಯೋ ಹಿಂಸ್ಯಾತ್ ಸರ್ವೇ ಬ್ರಹ್ಮಹಭಿಃ ಸಮಾಃ ॥10॥
ಮನೆಗೆ ಬೆಂಕಿಯನ್ನು ಕೊಟ್ಟು ಸುಡುವವನೂ, ವಿಷವನ್ನು ಕೊಡುವವನೂ, ವ್ಯಭಿಚಾರವನ್ನು ಪ್ರೋತ್ಸಾಹಿಸಿ ಜೀವಿಸುವವನೂ, ಸೋಮವಿಕ್ರಯವನ್ನು ಮಾಡುವವನೂ, ಚರ್ಮಕಾರನೂ, ಚಾಡಿಯನ್ನು ಹೇಳುವವನೂ, ಮಿತ್ರದ್ರೋಹವನ್ನು ಮಾಡುವವನೂ, ಪರಪತ್ನೀ ಗಮನವನ್ನು ಮಾಡುವವನೂ, ಭ್ರೂಣಹತ್ಯೆಯನ್ನು ಮಾಡುವವನೂ, ಗುರುತಲ್ಪಗಾಮಿಯಾದವನೂ, ಬ್ರಾಹ್ಮಣನಾಗಿ ಮದ್ಯಪಾನವನ್ನು ಮಾಡುವವನೂ, ಬಹಳ ಉಗ್ರನಾದವನೂ, ಕಾರುವೂ, ನಾಸ್ತಿಕನೂ, ವೇದನಿಂದಕನೂ, ಮದ್ಯವನ್ನು ಮಾಡುವುದಕ್ಕಾಗಿ ಹೂವನ್ನು ಕಿತ್ತು ಎಸೆಯುವವನೂ, ವ್ರತಹೀನನೂ, ದೈನ್ಯದಿಂದ ಜೀವಿಸುವವನೂ, ಆತ್ಮಹತ್ಯೆಯನ್ನು ಮಾಡಿಕೊಳ್ಳುವವನೂ, ಶರಣಾಗತರನ್ನು ಹಿಂಸಿಸುವವನೂ ಇವರೆಲ್ಲರೂ ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಸಮಾನರಾದವರು.
ತೃಣೋಲ್ಕಯಾ ಜ್ಞಾಯತೇ ಜಾತರೂಪಂ
ವೃತ್ತೇನ ಭದ್ರೋ ವ್ಯವಹಾರೇಣ ಸಾಧುಃ |
ಶೂರೋ ಭಯೇಷ್ವರ್ಥಕೃಚ್ಛ್ರೇಷು ಧೀರಃ
ಕೃಚ್ಛ್ರಾಸ್ವಾಪತ್ಸು ಸುಹೃದಶ್ಚಾರಯಶ್ಚ ॥11॥
ತೃಣದ ಮೇಲೆ ಬಿದ್ದ ಕಾಂತಿಯಿಂದ ಸುವರ್ಣವು ತಿಳಿಯುತ್ತದೆ. ನಡತೆಯಿಂದ ಮಂಗಳ ಸ್ವಭಾವವು ತಿಳಿಯಲ್ಪಡುತ್ತದೆ. ವ್ಯವಹಾರದಿಂದ ಸಜ್ಜನನು ತಿಳಿಯಲ್ಪಡುತ್ತಾನೆ. ಭಯ ಉಂಟಾದಾಗ ಶೂರನು ತಿಳಿಯಲ್ಪಡುತ್ತಾನೆ. ಕಷ್ಟಗಳು ಒದಗಿದಾಗ ಧೀರನು ತಿಳಿಯಲ್ಪಡುತ್ತಾನೆ. ಆಪತ್ತುಗಳು ಒದಗಿದಾಗ ಶತ್ರುಗಳು ಮತ್ತು ಮಿತ್ರರು ತಿಳಿಯಲ್ಪಡುತ್ತಾರೆ.
ಜರಾ ರೂಪಂ ಹರತಿ ಹಿ ಧೈರ್ಯಮಾಶಾ
ಮೃತ್ಯುಃ ಪ್ರಾಣಾನ್ ಧರ್ಮಚರ್ಯಾಮಸೂಯಾ |
ಕ್ರೋಧಃ ಶ್ರಿಯಂ ಶೀಲಮನಾರ್ಯಸೇವಾ
ಹ್ರಿಯಂ ಕಾಮಃ ಸರ್ವಮೇವಾಭಿಮಾನಃ ॥12॥
ಮುಪ್ಪು ರೂಪವನ್ನು ನಾಶಪಡಿಸುತ್ತದೆ. ಆಸೆಯು ಧೈರ್ಯವನ್ನು ನಾಶಪಡಿಸುತ್ತದೆ. ಮೃತ್ಯುವು ಪ್ರಾಣವನ್ನು, ಅಸೂಯೆಯು ಧರ್ಮವನ್ನು ನಾಶಪಡಿಸುತ್ತದೆ. ಕ್ರೋಧವು ಸಂಪತ್ತನ್ನೂ, ಅನಾರ್ಯಸೇವೆಯು ಶೀಲವನ್ನೂ, ಕಾಮವು ನಾಚಿಕೆಯನ್ನೂ, ಅಭಿಮಾನವು ಎಲ್ಲವನ್ನೂ ನಾಶಪಡಿಸುತ್ತದೆ.
ನ ಕ್ರೋಧಿನೋಽರ್ಥೋ ನ ನೃಶಂಸಸ್ಯ ಮಿತ್ರಂ
ಕ್ರೂರಸ್ಯ ನ ಸ್ತ್ರೀ ಸುಖಿನೋ ನ ವಿದ್ಯಾ |
ನ ಕಾಮಿನೋ ಹ್ರೀರಲಸಸ್ಯ ನ ಶ್ರೀಃ
ಸರ್ವಂ ತು ನ ಸ್ಯಾದನವಸ್ಥಿತಸ್ಯ ॥13॥
ಕೋಪದ ಸ್ವಭಾವವುಳ್ಳವನು ಯಾವ ಅರ್ಥವನ್ನೂ ಸಂಪಾದಿಸುವುದಿಲ್ಲ. ಕ್ರೂರಿಗೆ ಮಿತ್ರರಿರುವುದಿಲ್ಲ. ಕ್ರೂರನಾದವನಿಗೆ ಪತ್ನಿಯು ಇರುವುದಿಲ್ಲ. ಸುಖವನ್ನು ಬಯಸುವವನಿಗೆ ವಿದ್ಯೆಯು ಇರುವುದಿಲ್ಲ. ಕಾಮಿಗೆ ನಾಚಿಕೆಯೂ, ಸೋಮಾರಿಗೆ ಸಂಪತ್ತೂ ಇರುವುದಿಲ್ಲ. ಚಂಚಲನಾದವನಿಗೆ ಏನೂ ಇರುವುದಿಲ್ಲ.
ಶ್ರೀರ್ಮಂಗಲಾತ್ ಪ್ರಭವತಿ ಪ್ರಾಗಲ್ಭ್ಯಾತ್ ಸಂಪ್ರವರ್ಧತೇ |
ದಾಕ್ಷ್ಯಾತ್ತು ಕುರುತೇ ಮೂಲಂ ಸಂಯಮಾತ್ ಪ್ರತಿತಿಷ್ಠತಿ ॥14॥
ಮಂಗಳಕಾರ್ಯಗಳನ್ನು ಮಾಡುವುದರಿಂದ ಸಂಪತ್ತು ಉಂಟಾಗುತ್ತದೆ. ಔದಾರ್ಯದಿಂದ ಅದು ಹೆಚ್ಚುತ್ತದೆ. ದಕ್ಷತೆಯಿಂದ ಅದು

ಬೇರನ್ನು ಪಡೆಯುತ್ತದೆ. ಸಂಯಮಗಳಿಂದ ಭದ್ರವಾಗಿ ನಿಲ್ಲುತ್ತದೆ.
ಅಷ್ಟೌ ಗುಣಾಃ ಪುರುಷಂ ದೀಪಯಂತಿ
ಪ್ರಜ್ಞಾ ಚ ಕೌಲ್ಯಂ ಚ ದಮಃ ಶ್ರುತಂ ಚ |
ಪರಾಕ್ರಮಶ್ಚಾಬಹುಭಾಷಿತಾ ಚ
ದಾನಂ ಯಥಾಶಕ್ತಿ ಕೃತಜ್ಞತಾ ಚ ॥15॥
ಪ್ರಜ್ಞಾ, ಕುಲ, ದಮ, ವಿದ್ಯೆ, ಪರಾಕ್ರಮ, ಅಲ್ಪಭಾಷಿತಾ, ಯಥಾಶಕ್ತಿ ದಾನ ಮತ್ತು ಕೃತಜ್ಞತೆ - ಈ ಎಂಟುಗುಣಗಳು ಮನುಷ್ಯನನ್ನು ಬೆಳಗುತ್ತವೆ.
ಏತಾನ್ ಗುಣಾಂಸ್ತಾತ ಮಹಾನುಭಾವಾನ್
ಏಕೋ ಗುಣಃ ಸಂಶ್ರಯತೇ ಪ್ರಸಹ್ಯ |
ರಾಜಾ ಯದಾ ಸಂಶ್ರಯತೇ ಮನುಷ್ಯಾನ್
ಸರ್ವಾನ್ ಗುಣಾನೇಷ ಗುಣೋಽತಿಭಾತಿ ॥16॥
ಪ್ರೀತಿಪಾತ್ರನೇ, ಈ ಮಹಾಸಾಮರ್ಥ್ಯವುಳ್ಳ ಎಂಟುಗುಣಗಳನ್ನು ಒಂದೇ ಗುಣವು ತನ್ನ ಬಲದಿಂದ ಆಶ್ರಯಿಸಿಕೊಂಡಿರುತ್ತದೆ. ರಾಜನು ಯೋಗ್ಯರಾದ ಮನುಷ್ಯರನ್ನು ಸತ್ಕರಿಸಿದರೆ ಆ ಗುಣವು ಉಳಿದ ಎಲ್ಲಾ ಗುಣಗಳಿಗಿಂತಲೂ ಹೆಚ್ಚಾಗಿ ಮೆರೆಯುತ್ತದೆ.
ಅಷ್ಟೌ ನೃಪೇಮಾನಿ ಮನುಷ್ಯಲೋಕೇ
ಸ್ವರ್ಗಸ್ಯ ಲೋಕಸ್ಯ ನಿದರ್ಶನಾನಿ |
ಯಜ್ಞೋ ದಾನಮಧ್ಯಯನಂ ತಪಶ್ಚ
ಚತ್ವಾರ್ಯೇತಾನ್ಯನ್ವವೇತಾನಿ ಸದ್ಭಿಃ ॥17॥
ದಮಃ ಸತ್ಯಮಾರ್ಜವಮಾನೃಶಂಸ್ಯಂ
ಚತ್ವಾರ್ಯೇತಾನ್ಯನ್ವವಯಂತಿ ಸಂತಃ ॥18॥
ಎಲೈ ರಾಜೇಂದ್ರನೇ, ಮನುಷ್ಯಲೋಕದಲ್ಲಿ ಎಂಟು ವಸ್ತುಗಳು ಸ್ವರ್ಗಲೋಕಕ್ಕೆ ಕಾರಣವಾದವುಗಳು. ಯಜ್ಞ, ದಾನ, ಅಧ್ಯಯನ ಮತ್ತು ತಪಸ್ಸು ಇವು ಸ್ವರ್ಗಕ್ಕೆ ಸಾಧನವಾಗಿ ಸ್ವರ್ಗಕ್ಕೆ ಹೋಗುವುದಕ್ಕಿಂತಲೂ ಮುಂಚೆಯಿಂದಲೂ ಇರಬೇಕೆಂದು ಸಜ್ಜನರು ತಿಳಿಯುತ್ತಾರೆ. ದಮ, ಸತ್ಯ, ಆರ್ಜವ ಮತ್ತು ಮಾರ್ದವ- ಈ ನಾಲ್ಕು ಗುಣಗಳು ಸ್ವರ್ಗಕ್ಕಿಂತ ಮುಂಚೆಯೂ ಮತ್ತು ಸ್ವರ್ಗದಲ್ಲಿಯೂ ಇರಬೇಕಾದುದೆಂದು ಸಜ್ಜನರು ತಿಳಿಯುತ್ತಾರೆ.
ಇಜ್ಯಾಧ್ಯಯನದಾನಾನಿ ತಪಃ ಸತ್ಯಂ ಘೃಣಾ ಕ್ಷಮಾ |
ಅಲೋಭ ಇತಿ ಮಾರ್ಗೋಽಯಂ ಧರ್ಮಸ್ಯಾಷ್ಟವಿಧಃ ಸ್ಮೃತಃ ॥19॥
ಯಾಗ, ಅಧ್ಯಯನ, ದಾನ, ತಪಸ್ಸು, ಸತ್ಯ, ಕರುಣೆ, ಕ್ಷಮೆ, ಅಲೋಭ ಇವು ಧರ್ಮದ ಎಂಟು ವಿಧವಾದ ಮಾರ್ಗಗಳು.
ನ ಸಾ ಸಭಾ ಯತ್ರ ನ ಸಂತಿ ವೃದ್ಧಾ
ನ ತೇ ವೃದ್ಧಾ ಯೇ ನ ವದಂತಿ ಧರ್ಮಮ್ |
ನಾಸೌ ಧರ್ಮೋ ಯತ್ರ ನ ಸತ್ಯಮಸ್ತಿ
ನ ತತ್ಸತ್ಯಂ ಯಚ್ಛಲೇನಾನುವಿದ್ಧಮ್ ॥20॥
ಎಲ್ಲಿ ವೃದ್ಧರು ಇರುವುದಿಲ್ಲವೋ ಅದು ಸಭೆಯಲ್ಲ. ಯಾರು ಧರ್ಮವನ್ನು ಹೇಳುವುದಿಲ್ಲವೋ ಅವರು ವೃದ್ಧರಲ್ಲ. ಎಲ್ಲಿ ಸತ್ಯವಿಲ್ಲವೋ ಅದು ಧರ್ಮವಲ್ಲ. ಯಾವುದು ಕಪಟದಿಂದ ಸೇರಿರುತ್ತದೆಯೋ ಅದು ಸತ್ಯವಲ್ಲ.
ಸತ್ಯಂ ರೂಪಂ ಶ್ರುತಂ ವಿದ್ಯಾ ಕೌಲ್ಯಂ ಶೀಲಂ ಬಲಂ ಧನಮ್ |
ಶೌರ್ಯಂ ಚ ಚಿತ್ರಭಾಷ್ಯಂ ಚ ದಶೇಮೇ ಸ್ವರ್ಗಯೋನಯಃ ॥21॥
ಸತ್ಯ, ರೂಪ, ಶ್ರವಣ, ವಿದ್ಯೆ, ಕುಲ, ಶೀಲ, ಬಲ, ಧನ, ಶೌರ್ಯ ಮತ್ತು ಒಳ್ಳೆಯ ಮಾತು- ಈ ಹತ್ತು ಸ್ವರ್ಗಕ್ಕೆ ಕಾರಣವಾದವುಗಳು.
ಪಾಪಂ ಕುರ್ವನ್ ಪಾಪಕೀರ್ತಿಃ ಪಾಪಮೇವಾಶ್ನುತೇ ಫಲಮ್ |
ಪುಣ್ಯಂ ಕುರ್ವನ್ ಪುಣ್ಯಕೀರ್ತಿಃ ಪುಣ್ಯಮತ್ಯಂತಮಶ್ನುತೇ ॥22॥
ತಸ್ಮಾತ್ ಪಾಪಂ ನ ಕುರ್ವೀತ ಪುರುಷಃ ಸಂಶಿತವ್ರತಃ ॥23॥
ಪಾಪವನ್ನು ಮಾಡುವವನು ಅಪಕೀರ್ತಿಯನ್ನು ಪಡೆದು ಪಾಪದ ಫಲವನ್ನೇ ಹೊಂದುತ್ತಾನೆ. ಪುಣ್ಯವನ್ನು ಮಾಡುವವನು ಪವಿತ್ರವಾದ ಕೀರ್ತಿಯನ್ನು ಹೊಂದಿ ಪುಣ್ಯರೂಪವಾದ ಫಲವನ್ನೇ ಪಡೆಯುತ್ತಾನೆ. ಆದ್ದರಿಂದ ಒಳ್ಳೆಯ ವ್ರತಶೀಲನಾದ ಪುರುಷನು ಪಾಪವನ್ನು ಮಾಡಬಾರದು.
ಪಾಪಂ ಪ್ರಜ್ಞಾಂ ನಾಶಯತಿ ಕ್ರಿಯಮಾಣಂ ಪುನಃ ಪುನಃ |
ನಷ್ಟಪ್ರಜ್ಞಃ ಪಾಪಮೇವ ನಿತ್ಯಮಾರಭತೇ ನರಃ ॥24॥
ಪುನಃ ಪುನಃ ಪಾಪವನ್ನು ಮಾಡಿದರೆ ಅದು ಪ್ರಜ್ಞೆಯನ್ನು ನಾಶಮಾಡುತ್ತದೆ. ಪ್ರಜ್ಞೆಯು ನಾಶವಾದ ಮೇಲೆ ಮನುಷ್ಯನು ಯಾವಾಗಲೂ ಪಾಪವನ್ನೇ ಮಾಡಲು ಆರಂಭಿಸುತ್ತಾನೆ.
ಪುಣ್ಯಂ ಪ್ರಜ್ಞಾಂ ವರ್ಧಯತಿ ಕ್ರಿಯಮಾಣಂ ಪುನಃ ಪುನಃ |
ವೃದ್ಧಪ್ರಜ್ಞಃ ಪುಣ್ಯಮೇವ ನಿತ್ಯಮಾರಭತೇ ನರಃ ॥25॥
ಪುನಃ ಪುನಃ ಮಾಡಲ್ಪಡುವ ಪುಣ್ಯವು ಪ್ರಜ್ಞೆಯನ್ನು ಹೆಚ್ಚಿಸುತ್ತದೆ. ಅಂತಹ ಪ್ರಜ್ಞೆಯುಳ್ಳ ಮನುಷ್ಯನು ನಿತ್ಯವೂ ಪುಣ್ಯವನ್ನೇ ಮಾಡಲು ಪ್ರಾರಂಭಿಸುತ್ತಾನೆ.
ಪುಣ್ಯಂ ಕುರ್ವನ್ ಪುಣ್ಯಕೀರ್ತಿಃ ಪುಣ್ಯಂ ಸ್ಥಾನಂ ಸ್ಮ ಗಚ್ಛತಿ |

ತಸ್ಮಾತ್ ಪುಣ್ಯಂ ನಿಷೇವೇತ ಪುರುಷಃ ಸುಸಮಾಹಿತಃ ॥26॥
ಪುಣ್ಯವನ್ನು ಮಾಡುವವನು ಪವಿತ್ರವಾದ ಕೀರ್ತಿಯನ್ನು ಪಡೆದು ಪುಣ್ಯಸ್ಥಾನಕ್ಕೆ ಹೋಗುತ್ತಾನೆ. ಆದ್ದರಿಂದ ಸಮಾಧಾನವುಳ್ಳ ಪುರುಷನು ಪುಣ್ಯವನ್ನೇ ಮಾಡಬೇಕು.
ಅಸೂಯಕೋ ಅಕೃತಪ್ರಜ್ಞಃ ನಿಷ್ಠುರೋ ವೈರಕೃಚ್ಛಠಃ |
ಸ ಕೃಚ್ಛ್ರಂ ಮಹದಾಪ್ನೋತಿ ನಚಿರಾತ್ ಪಾಪಮಾಚರನ್ ॥27॥
ಅಸೂಯೆಯನ್ನು ಪಡುವವನು ಮತ್ತು ಅವಿವೇಕಿಯಾದವನು ನಿಷ್ಠುರಿಯು, ವೈರವನ್ನು ಮಾಡುವವನು ಮತ್ತು ಶಠನು ಶೀಘ್ರವಾಗಿ ಪಾಪವನ್ನು ಆಚರಿಸಿ ದೊಡ್ಡ ಕಷ್ಟಕ್ಕೆ ಸಿಲುಕುತ್ತಾನೆ.
ಅನಸೂಯುಃ ಕೃತಪ್ರಜ್ಞಃ ಶೋಭನಾನ್ಯಾಚರನ್ ಸದಾ |
ಶುಭಂ ಮಹದವಾಪ್ನೋತಿ ಸರ್ವತ್ರ ಚ ವಿರೋಚತೇ ॥28॥
ಅಸೂಯೆ ಇಲ್ಲದವನು, ವಿವೇಕಿಯಾದವನು ಯಾವಾಗಲೂ ಒಳ್ಳೆಯ ಕಾರ್ಯವನ್ನೇ ಮಾಡುತ್ತಾ ದೊಡ್ಡ ಶುಭವನ್ನು ಹೊಂದುತ್ತಾನೆ. ಎಲ್ಲ ಕಡೆಗಳಲ್ಲಿಯೂ ಶೋಭಿಸುತ್ತಾನೆ.
ಪ್ರಜ್ಞಾಮೇವಾಭಿಗಮಯತಿ ಯಃ ಪ್ರಾಜ್ಞೇಭ್ಯಃ ಸ ಪಂಡಿತಃ |
ಪ್ರಾಜ್ಞೋ ಹ್ಯವಾಪ್ಯ ಧರ್ಮಾರ್ಥೌ ಶಕ್ನೋತಿ ಸುಖಮೇಧಿತುಮ್ ॥29॥
ಯಾವನು ಪ್ರಾಜ್ಞರಿಂದ ಪ್ರಜ್ಞೆಯನ್ನೇ ಸಂಪಾದಿಸುತ್ತಾನೆಯೋ ಅವನು ಪಂಡಿತನಾದವನು. ಪ್ರಾಜ್ಞನಾದವನು ಧರ್ಮಾರ್ಥಗಳನ್ನು ಹೊಂದಿ ಸುಖವನ್ನು ಅನುಭವಿಸಲು ಸಮರ್ಥನಾಗುತ್ತಾನೆ.
ದಿವಸೇನೈವ ತತ್ಕುರ್ಯಾದ್ ಯೇನ ರಾತ್ರೌ ಸುಖಂ ವಸೇತ್ |
ಅಷ್ಟಮಾಸೇನ ತತ್ ಕುರ್ಯಾದ್ ಯೇನ ವರ್ಷಂ ಸುಖಂ ವಸೇತ್ ॥
ರಾತ್ರಿಯಲ್ಲಿ ಸುಖವಾಗಿರಬೇಕಾದರೆ ಹಗಲಿನಲ್ಲಿಯೇ ಎಲ್ಲ ಕೆಲಸವನ್ನೂ ಮುಗಿಸಬೇಕು. ಒಂದು ವರ್ಷದ ಕಾಲ ಸುಖವಾಗಿರಬೇಕಾದರೆ ವರ್ಷದ ಕೆಲಸವನ್ನು ಎಂಟು ತಿಂಗಳಿನಲ್ಲಿಯೇ ಮುಗಿಸಬೇಕು.
ಪೂರ್ವೇ ವಯಸಿ ತತ್ ಕುರ್ಯಾದ್ ಯೇನ ವೃದ್ಧಃ ಸುಖಂ ವಸೇತ್ |
ಯಾವಜ್ಜೀವಂ ತು ತತ್ ಕುರ್ಯಾದ್ ಯೇನ ಪ್ರೇತ್ಯ ಸುಖಂ ವಸೇತ್
ವೃದ್ಧನಾಗಿ ಸುಖವಾಗಿರಬೇಕಾದರೆ ಪೂರ್ವವಯಸ್ಸಿನಲ್ಲಿ ಎಲ್ಲವನ್ನೂ ಮಾಡಬೇಕು. ಮರಣಾನಂತರದಲ್ಲಿ ಸುಖವಾಗಿರಬೇಕಾದರೆ ಜೀವನದುದ್ದಕ್ಕೂ ಅಂತಹ ಕಾರ್ಯವನ್ನು ಮಾಡಬೇಕು.
ಜೀರ್ಣಮನ್ನಂ ಪ್ರಶಂಸಂತಿ ಭಾರ್ಯಾಂ ಚ ಗತಯೌವನಾಮ್ |
ಶೂರಂ ವಿಜಿತಸಂಗ್ರಾಮಂ ಗತಪಾರಂ ತಪಸ್ವಿನಮ್ ॥32॥
ಅರಗಿದ ಅನ್ನವನ್ನು ಪ್ರಶಂಸಿಸುತ್ತಾರೆ. ಯೌವನವನ್ನು ಕಳೆದ ಭಾರ್ಯೆಯನ್ನು ಪ್ರಶಂಸಿಸುತ್ತಾರೆ. ಯುದ್ಧದಲ್ಲಿ ಗೆದ್ದ ಶೂರನನ್ನು ಮತ್ತು ಸಂಕಲ್ಪವನ್ನು ಪೂರೈಸಿದ ತಪಸ್ವಿಯನ್ನು ಪ್ರಶಂಸಿಸುತ್ತಾರೆ.
ಧನೇನಾಧರ್ಮಲಬ್ಧೇನ ಯಚ್ಛಿದ್ರಮಪಿಧೀಯತೇ |
ಅಸಂವೃತಂ ತದ್ ಭವತಿ ತತೋಽನ್ಯದವದೀರ್ಯತೇ ॥33॥
ಅಧರ್ಮದಿಂದ ಪ್ರಾಪ್ತವಾದ ಧನದಿಂದ ನಡತೆಯ ಛಿದ್ರವನ್ನು ಮುಚ್ಚಲು ಪ್ರಯತ್ನಿಸಿದರೆ ಅದು ಮುಚ್ಚಿಕೊಳ್ಳುವುದಿಲ್ಲ. ಇನ್ನೊಂದು ಕಡೆ ಬಿರಿಯುತ್ತದೆ.
ಗುರುರಾತ್ಮವತಾಂ ಶಾಸ್ತಾ ಶಾಸ್ತಾ ರಾಜಾ ದುರಾತ್ಮನಾಮ್ |
ಅಂತಃಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ ॥34॥
ಮುನಿಗಳಿಗೆ ಗುರುವು ಶಾಸನವನ್ನು ಮಾಡುತ್ತಾನೆ. ದುಷ್ಟರಿಗೆ ರಾಜನು ಶಾಸನವನ್ನು ಮಾಡುತ್ತಾನೆ. ಇನ್ನೊಬ್ಬರಿಗೆ ಕಾಣದಂತೆ ಮಾಡಿದ ಪಾಪಗಳಿಗೆಲ್ಲಾ ಯಮನು ಶಾಸನವನ್ನು ಮಾಡುತ್ತಾನೆ.
ಋಷೀಣಾಂ ಚ ನದೀನಾಂ ಚ ಕುಲಾನಾಂ ಚ ಮಹಾತ್ಮನಾಮ್ |
ಪ್ರಭವೋ ನಾಧಿಗಂತವ್ಯಃ ಸ್ತ್ರೀಣಾಂ ದುಶ್ಚರಿತಸ್ಯ ಚ ॥35॥
ಋಷಿಗಳ, ನದಿಗಳ, ಕುಲಗಳ ಮತ್ತು ಮಹಾತ್ಮರ ಮೂಲವನ್ನು ಹುಡುಕಬಾರದು. ಸ್ತ್ರೀಯರ ದುಶ್ಚರಿತ್ರದ ಮೂಲವನ್ನೂ ಹುಡುಕಬಾರದು.
ದ್ವಿಜಾತಿಪೂಜಾಭಿರತೋ ದಾತಾ ಜ್ಞಾತಿಷು ಚಾರ್ಜವೀ |
ಕ್ಷತ್ರಿಯಃ ಶೀಲಭಾಗ್ ರಾಜನ್ ಚಿರಂ ಪಾಲಯತೇ ಮಹೀಮ್ ॥36॥
ಬ್ರಾಹ್ಮಣರ ಪೂಜೆಯಲ್ಲಿ ನಿರತನಾಗಿ ದಾನವನ್ನು ಮಾಡುವ ಜ್ಞಾತಿಗಳಲ್ಲಿ ನೇರವಾಗಿ ನಡೆದುಕೊಳ್ಳುವ ಶೀಲವಂತನಾದ ಕ್ಷತ್ರಿಯನು ಎಲೈ ರಾಜನೇ, ಬಹುಕಾಲ ಭೂಮಿಯನ್ನು ಆಳುತ್ತಾನೆ.
ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ |
ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್ ॥37॥
ಶೂರನಾದವನು, ವಿದ್ಯೆಯನ್ನು ಸಂಪಾದಿಸಿದವನು, ಇನ್ನೊಬ್ಬನ ಸೇವೆಯನ್ನು ಮಾಡಲು ತಿಳಿದಿರುವವನು - ಈ ಮೂರು ಜನರು ಭೂಮಿಯಿಂದ ಸುವರ್ಣ ಪುಷ್ಪವನ್ನು ಆರಿಸಿಕೊಳ್ಳುತ್ತಾರೆ.
ಬುದ್ಧಿಶ್ರೇಷ್ಠಾನಿ ಕರ್ಮಾಣಿ ಬಾಹುಮಧ್ಯಾನಿ ಭಾರತ |
ತಾನಿ ಜಙ್ಘಾಜಘನ್ಯಾನಿ ಭಾರಪ್ರತ್ಯವರಾಣಿ ಚ ॥38॥
ಬುದ್ಧಿಯಿಂದ ಮಾಡುವ ರಾಜ್ಯಪರಿಪಾಲನೆ ಮುಂತಾದ ವೀರಕ್ಷತ್ರಿಯ ಕರ್ಮಗಳು ಶ್ರೇಷ್ಠವಾದವುಗಳು. ಬಾಹುವಿನಿಂದ ಮಾಡುವ

ಕೃಷಿ-ವಾಣಿಜ್ಯಾದಿ ವೈಶ್ಯಕರ್ಮಗಳು ಮಧ್ಯಮವಾದವು. ಭಾರವನ್ನು ಹೊರುವುದು ಮುಂತಾದ ಕಾರ್ಯಗಳು ನೀಚಕಾರ್ಯಗಳು. ಮನುಷ್ಯನು ನೀಚಕಾರ್ಯಗಳನ್ನೇ ತ್ಯಜಿಸಬೇಕು (ಉತ್ತಮ, ಮಧ್ಯಮ ಕಾರ್ಯಗಳನ್ನು ತ್ಯಜಿಸಬಾರದು).
ದುರ್ಯೋಧನೇಽಥ ಶಕುನೌ ಮೂಢೇ ದುಃಶಾಸನೇ ತಥಾ |
ಕರ್ಣೇ ಚೈಶ್ವರ್ಯಮಾಧಾಯ ಕಥಂ ತ್ವಂ ಭೂತಿಮಿಚ್ಛಸಿ ॥39॥
ನೀನು ದುರ್ಯೋಧನ, ಶಕುನಿ, ಮೂಢನಾದ ದುಃಶಾಸನ ಮತ್ತು ಕರ್ಣರಲ್ಲಿ ಐಶ್ವರ್ಯವನ್ನು ತುಂಬಿ ಹೇಗೆ ಕ್ಷೇಮವನ್ನು ಬಯಸುತ್ತೀಯೆ?
ಸರ್ವೈರ್ಗುಣೈರುಪೇತಾಸ್ತು ಪಾಂಡವಾ ಭರತರ್ಷಭ |
ಪಿತೃವತ್ ತ್ವಯಿ ವರ್ತಂತೇ ತೇಷು ವರ್ತಸ್ವ ಪುತ್ರವತ್ ॥40॥
ಎಲೈ ಭರತರ್ಷಭನೇ, ಪಾಂಡವರು ಎಲ್ಲ ಗುಣಗಳಿಂದಲೂ ಕೂಡಿದವರು. ನಿನ್ನನ್ನು ತಂದೆಯಂತೆ ಅವರು ನೋಡುತ್ತಾರೆ. ನೀನು ಅವರೊಂದಿಗೆ ನಿನ್ನ ಮಕ್ಕಳಂತೆ ವರ್ತಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
ಪ್ರಜಾಗರಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತಾರನೆಯ ಅಧ್ಯಾಯ
ವಿದುರನಿಂದ ಧೃತರಾಷ್ಟ್ರನಿಗೆ ಆತ್ರೇಯೋಕ್ತನೀತಿಕಥನ.
ವಿದುರಃ
ಅತ್ರೈವೋದಾಹರಂತೀಮಮ್ ಇತಿಹಾಸಂ ಪುರಾತನಮ್ |
ಆತ್ರೇಯಸ್ಯ ಚ ಸಂವಾದಂ ಸಾಧ್ಯಾನಾಂ ಚೇತಿ ನಃ ಶ್ರುತಮ್ ॥1॥
ವಿದುರ ಇದೇ ವಿಷಯದಲ್ಲಿ ಆತ್ರೇಯರಿಗೂ ಮತ್ತು ಸಾಧ್ಯರಿಗೂ ನಡೆದ ಪುರಾತನವಾದ ಇತಿಹಾಸವನ್ನು ಹಿರಿಯರು ಹೇಳುತ್ತಾರೆ ಎಂದು ನಾವು ಕೇಳಿದ್ದೇವೆ.
ಚರಂತಂ ಹಂಸರೂಪೇಣ ಮಹರ್ಷಿಂ ಸಂಶಿತವ್ರತಮ್ |
ಸಾಧ್ಯಾ ದೇವಾ ಮಹಾಪ್ರಾಜ್ಞಂ ಪರ್ಯಪೃಚ್ಛಂತ ವೈ ಪುರಾ ॥2॥
ಒಳ್ಳೆಯ ವ್ರತಧಾರಿಗಳಾದ ಹಂಸರೂಪದಿಂದ ಚಲಿಸುತ್ತಿದ್ದ ಮಹಾಪ್ರಾಜ್ಞರಾದ ಮಹರ್ಷಿಗಳಾದ ಆತ್ರೇಯರನ್ನು ಕುರಿತು ಹಿಂದೆ ಸಾಧ್ಯ ದೇವತೆಗಳು ಪ್ರಶ್ನೆಯನ್ನು ಮಾಡಿದರು.
ಸಾಧ್ಯಾಃ
ಸಾಧ್ಯಾ ದೇವಾ ವಯಮೇತೇ ಮಹರ್ಷೇ
ದೃಷ್ಟ್ವಾ ಭವಂತಂ ನ ಶಕ್ನುಮೋಽನುಮಾತುಮ್ |
ಶ್ರುತೇನ ಧೀರೋ ಬುದ್ಧಿಮಾಂಸ್ತ್ವಂ ಮತೋ ನಃ
ಕಾವ್ಯಾಂ ವಾಚಂ ವಕ್ತುಮರ್ಹಸ್ಯುದಾರಮ್ ॥3॥
ಸಾಧ್ಯರು ಮಹರ್ಷಿಗಳೇ, ಈ ನಾವು ಸಾಧ್ಯಗಣಕ್ಕೆ ಸೇರಿದ ದೇವತೆಗಳು. ನಿಮ್ಮನ್ನು ನೋಡಿ ನೀವು ಯಾರೆಂದು ತಿಳಿಯಲು ಸಾಧ್ಯವಾಗುತ್ತಿಲ್ಲ. ನಿಮ್ಮ ವಿದ್ಯೆಯಿಂದ ನೀವು ಧೀರರು ಮತ್ತು ಮೇಧಾವಿಗಳು ಎಂದು ನಾವು ತಿಳಿದಿದ್ದೇವೆ. ನೀವು ಉದಾರವಾದ ಮತ್ತು ಜ್ಞಾನಪೂರ್ವಕವಾದ ಮಾತುಗಳನ್ನು ಆಡಬೇಕು.
ಹಂಸಃ
ಏತತ್ ಕಾರ್ಯಮಮರಾಃ ಸಂಶ್ರುತಂ ಮೇ
ಧೃತಿಃ ಶಮಃ ಸತ್ಯಧರ್ಮಾನುವೃತ್ತಿಃ |
ಗ್ರಂಥಿಂ ವಿಭಿದ್ಯ ಹೃದಯಸ್ಯ ಸರ್ವಂ
ಪ್ರಿಯಾಪ್ರಿಯೇ ಚಾನುಶಮಂ ನಯೀತ ॥4॥
ಹಂಸ ದೇವತೆಗಳೇ, ಧೈರ್ಯ, ಶಮ, ಸತ್ಯ, ಧರ್ಮಗಳ ಪಾಲನೆ ಇದನ್ನು ಮಾಡಬೇಕೆಂದು ನಾನು ಬಹಳವಾಗಿ ಕೇಳಿದ್ದೇನೆ. ಇವು ಹೃದಯಗ್ರಂಥಿಯಾದ ಅಜ್ಞಾನವನ್ನು ಭೇದಿಸಿ ಮನುಷ್ಯನನ್ನು ಮೋಕ್ಷದ ಕಡೆಗೆ ಕರೆದೊಯ್ಯುತ್ತವೆ.
ಆಕ್ರುಶ್ಯಮಾನೋ ನಾಕ್ರೋಶೇನ್ಮನ್ಯುರೇವ ತಿತಿಕ್ಷತಃ |
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿಂದತಿ ॥5॥
ಕಿರುಚಿ ನಿಂದಿಸುವವರನ್ನು ಕುರಿತು ಪ್ರತಿಯಾಗಿ ಕಿರುಚಬಾರದು. ಅದನ್ನು ಸಹಿಸುವವನ ಕೋಪವೇ ನಿಂದಿಸುವವನನ್ನು ಜಯಿಸುತ್ತದೆ ಮತ್ತು ಅವನ ಪುಣ್ಯವನ್ನು ಅಪಹರಿಸುತ್ತದೆ.
ನಾಕ್ರೋಶೀ ಸ್ಯಾನ್ನಾವಮಾನೀ ಪರಸ್ಯ
ಮಿತ್ರದ್ರೋಹೀ ನೋತ ನೀಚೋಪಸೇವೀ |
ನ ಚಾಭಿಮಾನೀ ನ ಚ ನೀಚವೃತ್ತೋ
ನೀಚಾಂ ವಾಚಂ ರುಶತೀಂ ವರ್ಜಯೇತ ॥6॥

ಇನ್ನೊಬ್ಬರ ಬಗ್ಗೆ ಆಕ್ರೋಶವನ್ನು ಮಾಡಬಾರದು. ಅವಮಾನವನ್ನಾಗಲೀ, ಮಿತ್ರದ್ರೋಹವನ್ನಾಗಲೀ, ನೀಚಸೇವೆಯನ್ನಾಗಲೀ ಮಾಡಬಾರದು. ಅಹಂಕಾರವನ್ನು ಮಾಡಬಾರದು. ನೀಚವಾದ ನಡತೆಯನ್ನು ಹೊಂದಬಾರದು. ನೀಚವಾದ ಅಮಂಗಳವಾದ ಮಾತುಗಳನ್ನು ಆಡಬಾರದು.

ಮರ್ಮಾಣ್ಯಸ್ಥೀನಿ ಹೃದಯಂ ತಥಾಽಸೂನ್
ರೂಕ್ಷಾ ವಾಚೋ ನಿರ್ದಹಂತೀಹ ಪುಂಸಾಮ್ |
ತಸ್ಮಾದ್ ವಾಚಂ ರುಶತೀಂ ರೂಕ್ಷರೂಪಾಂ
ಧರ್ಮಾರಾಮೋ ನಿತ್ಯಶೋ ವರ್ಜಯೀತ ||7||

ಕ್ರೂರವಾದ ಮಾತುಗಳು ಮನುಷ್ಯರ ಮರ್ಮಗಳನ್ನೂ, ಅಸ್ಥಿಗಳನ್ನೂ, ಹೃದಯವನ್ನೂ ಮತ್ತು ಪ್ರಾಣಗಳನ್ನೂ ದಹಿಸುತ್ತವೆ. ಆದ್ದರಿಂದ ಧರ್ಮಾಸಕ್ತನಾದವನು ಅಮಂಗಳವಾದ ಮತ್ತು ಕ್ರೂರವಾದ ಮಾತುಗಳನ್ನು ಯಾವಾಗಲೂ ವರ್ಜಿಸಬೇಕು.

ಅರುಂತುದಂ ಪರುಷಂ ರೂಕ್ಷವಾಚಂ
ವಾಕ್ಕಂಟಕೈರ್ವಿತುದಂತಂ ಮನುಷ್ಯಾನ್ |
ವಿದ್ಯಾದಲಕ್ಷ್ಮೀಕತಮಂ ಜನಾನಾಂ
ಮುಖೇ ನಿಬದ್ಧಾಂ ನಿರ್ಋತಿಂ ವೈ ವಹಂತಮ್ ||8||

ಇನ್ನೊಬ್ಬರ ಮರ್ಮವನ್ನು ಭೇದಿಸುವಂತಹ ಒರಟಾದ ಮತ್ತು ಕ್ರೂರವಾದ ಮಾತುಗಳನ್ನು ಆಡುವಂತಹ ತನ್ನ ಮಾತು ಎಂಬ ಬಿಲ್ಲುಗಳಿಂದ ಇನ್ನೊಬ್ಬರನ್ನು ಚುಚ್ಚುವಂತಹ ಮನುಷ್ಯನನ್ನು ಪುರುಷರಲ್ಲಿ ಅಮಂಗಳಸ್ವರೂಪನೆಂದೂ, ಮುಖದಲ್ಲಿಯೇ ರಾಕ್ಷಸನನ್ನು ಹೊಂದಿರುವವನೆಂದೂ ತಿಳಿಯಬೇಕು.

ಪರಶ್ಚೇದೇನಮಭಿವಿಧ್ಯೇತ ಬಾಣೈಃ
ಭೃಶಂ ಸುತೀಕ್ಷ್ಣೈರನಲಾರ್ಕದೀಪ್ತೈಃ |
ವಿರಿಂಚಮಾನೋಽಪ್ಯತಿರಿಚ್ಯಮಾನೋ
ವಿದ್ಯಾತ್ ಕವಿಃ ಸುಕೃತಂ ಮೇ ದಧಾತಿ ||9||

ಇನ್ನೊಬ್ಬನು ಬಹಳ ತೀಕ್ಷ್ಣವಾದ ಅಗ್ನಿ-ಸೂರ್ಯರಂತೆ ದೀಪ್ತವಾದ ವಾಗ್ಬಾಣಗಳಿಂದ ಹಿಂಸಿಸಿದರೂ ಬ್ರಹ್ಮಾದಿಗಳೂ ಕೂಡ ತಾವು ಅತಿಶಯವನ್ನು ಹೊಂದುವುದಾದರೆ, ಪ್ರತಿಯಾಗಿ ವಾಗ್ಬಾಣಗಳಿಂದ ಅವನನ್ನು ಹಿಂಸಿಸದಿದ್ದರೆ ಅವನನ್ನು ಜ್ಞಾನಿ ಎಂದು ತಿಳಿಯಬೇಕು. ಅವನು ನನಗೆ ತನ್ನ ಪುಣ್ಯವನ್ನು ಕೊಡುತ್ತಿದ್ದಾನೆ ಎಂದು ತಿಳಿಯಬೇಕು.

ಯದಿ ಸಂತಂ ಸೇವತೇ ಯದ್ಯಸಂತಂ
ತಪಸ್ವಿನಂ ಯದಿ ವಾ ಸ್ತೇನಮೇವ |
ವಾಸೋ ಯಥಾ ರಾಗವಶಂ ಪ್ರಯಾತಿ
ತಥಾ ಸ ತೇಷಾಂ ವಶಮಭ್ಯುಪೈತಿ ||10||

ಸಜ್ಜನರನ್ನು ಅಥವಾ ದುರ್ಜನರನ್ನು ಸೇವಿಸಿದರೆ, ತಪಸ್ವಿಯನ್ನು ಅಥವಾ ಕಳ್ಳನನ್ನು ಸೇವಿಸಿದರೆ, ಬಣ್ಣಗಳ ಜೊತೆಯಲ್ಲಿಟ್ಟ ವಸ್ತ್ರವು ಹೇಗೆ ಬಣ್ಣಗಳ ವಶವಾಗುತ್ತದೆಯೋ ಹಾಗೆಯೇ ಅವರಿಗೆ ವಶನಾಗುತ್ತಾನೆ.

ಅತಿವಾದಂ ನ ಪ್ರವದೇನ್ನ ವಾದಯೇದ್
ಯೋ ನಾ ಹತಃ ಪ್ರತಿಹನ್ಯಾನ್ನ ಘಾತಯೇತ್ |
ಹಂತುಶ್ಚ ಯೋ ನೇಚ್ಛತಿ ಪಾಪಕಂ ವೈ
ತಸ್ಮೈ ದೇವಾಃ ಸ್ಪೃಹಯಂತ್ಯಾಗತಾಯ ||11||

ನಿಂದನೀಯ ಮಾತುಗಳನ್ನು ಆಡಬಾರದು. ಇನ್ನೊಬ್ಬರಿಂದ ಆಡಿಸಬಾರದು. ತಾಡಿತನಾದ ಪುರುಷನು ಪ್ರತಿಯಾಗಿ ತಾಡನೆಯನ್ನು ಮಾಡಬಾರದು. ಅವನನ್ನು ಕೊಲ್ಲಲೂ ಬಾರದು. ತನ್ನನ್ನು ಹಿಂಸಿಸುವವನಿಗೂ ಯಾವನು ಅಮಂಗಳವನ್ನು ಬಯಸುವುದಿಲ್ಲವೋ ಅಂತಹವನು ಸ್ವರ್ಗಕ್ಕೆ ಬರಲಿ ಎಂದು ದೇವತೆಗಳು ಆಶಿಸುತ್ತಾರೆ (ಸ್ವರ್ಗಕ್ಕೆ ಬಂದ ಮೇಲೆ ಅವನಲ್ಲಿ ಪ್ರೀತಿಯನ್ನು ಮಾಡುತ್ತಾರೆ).

ಅವ್ಯಾಹೃತಂ ವ್ಯಾಹೃತಾಚ್ಛ್ರೇಯ ಆಹುಃ
ಸತ್ಯಂ ವದೇತ್ ವ್ಯಾಹೃತಂ ತದ್ ದ್ವಿತೀಯಮ್ |
ಪ್ರಿಯಂ ವದೇದ್ ವ್ಯಾಹೃತಂ ತತ್ ತೃತೀಯಂ
ಧರ್ಮ್ಯಂ ವದೇತ್ ವ್ಯಾಹೃತಂ ತಚ್ಚತುರ್ಥಮ್ ||12||

ಮೌನವು ಮಾತನಾಡುವುದಕ್ಕಿಂತ ಶ್ರೇಷ್ಠವಾದುದು. ಮಾತನಾಡಿದರೆ ಸತ್ಯವನ್ನು ಮಾತನಾಡುವುದು ಶ್ರೇಷ್ಠವಾದುದು. ಪ್ರಿಯವನ್ನು ಮಾತನಾಡುವುದು ಅದಕ್ಕಿಂತಲೂ ಶ್ರೇಷ್ಠವಾದುದು. ಧರ್ಮಕ್ಕೆ ಅನುಗುಣವಾದ ಮಾತುಗಳನ್ನಾಡುವುದು ಅದಕ್ಕಿಂತಲೂ ಶ್ರೇಷ್ಠವಾದುದು.

ಯಾದೃಶೈಃ ಸನ್ನಿವಿಶತೇ ಯಾದೃಶಾಂಶ್ಚೋಪಜೀವತೇ |
ಯಾದೃಗಿಚ್ಛೇಚ್ಚ ಭವಿತುಂ ತಾದೃಗ್ ಭವತಿ ಪೂರುಷಃ ||13||

ಎಂತಹ ಜನರ ಜೊತೆಯಲ್ಲಿ ವಾಸ ಮಾಡುತ್ತಾನೆಯೋ, ಎಂತಹ ಜನರನ್ನು ಸೇವಿಸುತ್ತಾನೆಯೋ, ಹೇಗೆ ಆಗಬೇಕೆಂದು ಬಯಸುತ್ತಾನೆಯೋ ಮನುಷ್ಯನು ಅದರಂತೆ ಆಗುತ್ತಾನೆ.

ಯತೋ ಯತೋ ನಿವರ್ತೇತ ತತಸ್ತತೋ ವಿಮುಚ್ಯತೇ |
ನಿವರ್ತನಾತ್ ತು ಸರ್ವತೋ ಚ ನಾಸ್ತಿ ದುಃಖಮಣ್ವಪಿ ||14||

ಮನುಷ್ಯನು ಯಾವ ಯಾವುದರಿಂದ ಹಿಂದೆ ಸರಿಯುತ್ತಾನೆಯೋ, ಅದರಿಂದಾಗುವ ದುಃಖದಿಂದ ನಿರ್ಮುಕ್ತನಾಗುತ್ತಾನೆ.

ಎಲ್ಲದರಿಂದಲೂ ಹಿಂದೆ ಸರಿದರೆ ಅಣುವಿನಷ್ಟೂ ದುಃಖವಿರುವುದಿಲ್ಲ.
ನ ಜೀಯತೇ ನಾನುಜಿಗೀಷತೇಽನ್ಯಾನ್
ನ ವೈರಕೃಚ್ಚಾಪ್ರತಿಘಾತಕಶ್ಚ |
ನಿಂದಾಪ್ರಶಂಸಾಸು ಸಮಸ್ವಭಾವೋ
ನ ಶೋಚತೇ ಹೃಷ್ಯತಿ ನೈವ ಚಾಯಮ್ ॥15॥
ಅವನು ಇನ್ನೊಬ್ಬರನ್ನು ಜಯಿಸುವುದಿಲ್ಲ, ಜಯಿಸಲು ಬಯಸುವುದಿಲ್ಲ, ಇನ್ನೊಬ್ಬರಿಗೆ ಸೋಲುವುದೂ ಇಲ್ಲ, ಇನ್ನೊಬ್ಬರ ವೈರವನ್ನು ಮಾಡುವುದಿಲ್ಲ, ಇನ್ನೊಬ್ಬರಿಗೆ ಹೊಡೆಯುವುದಿಲ್ಲ, ತನ್ನನ್ನು ನಿಂದಿಸಿದರೂ ಅಥವಾ ಪ್ರಶಂಸೆ ಮಾಡಿದರೂ ಸಮನಾಗಿರುತ್ತಾನೆ. ಅಂತಹವನು ಶೋಕ ಮತ್ತು ಹರ್ಷಗಳನ್ನು ಪಡುವುದಿಲ್ಲ.
ಭಾವಮಿಚ್ಛತಿ ಸರ್ವಸ್ಯ ನಾಭಾವೇ ಕುರುತೇ ಮನಃ |
ಸತ್ಯವಾದೀ ಮೃದುರ್ದಾಂತೋ ಯಃ ಸ ಉತ್ತಮಪೂರುಷಃ ॥16॥
ಯಾವನು ಎಲ್ಲರಿಗೂ ಮಂಗಳವನ್ನೇ ಬಯಸುತ್ತಾನೆಯೋ, ಅಮಂಗಳದಲ್ಲಿ ಎಂದೂ ಮನಸ್ಸನ್ನು ಹಾಕುವುದಿಲ್ಲವೋ, ಸತ್ಯವನ್ನು ನುಡಿಯುವವನೂ, ಮೃದುವೂ, ದಾಂತನೂ ಆಗಿರುತ್ತಾನೆಯೋ ಅವನು ಉತ್ತಮ ಪುರುಷ.
ನಾನರ್ಥಕಂ ಸಾಂತ್ವಯತಿ ಪ್ರತಿಜ್ಞಾಯ ದದಾತಿ ಚ |
ರಂಧ್ರಂ ಪರಸ್ಯ ಜಾನಾತಿ ಯಃ ಸ ಮಧ್ಯಮಪೂರುಷಃ ॥17॥
ಯಾವನು ವ್ಯರ್ಥವಾಗಿ (ತನಗೆ ಪ್ರಯೋಜನವಿಲ್ಲದೆ) ಇನ್ನೊಬ್ಬರಿಗೆ ಸಮಾಧಾನವನ್ನು ಮಾಡುವುದಿಲ್ಲವೋ, ವಾಗ್ದಾನವನ್ನು ಮಾಡಿ ದಾನವನ್ನು ಮಾಡುತ್ತಾನೆಯೋ, ಇನ್ನೊಬ್ಬರ ದೋಷಗಳನ್ನು ತಿಳಿಯುತ್ತಾನೆಯೋ ಅವನು ಮಧ್ಯಮಪುರುಷ.
ದುಃಶಾಸನಸ್ತೂಪಹತೋಽಭಿಶಸ್ತೋ
ನಾವರ್ತತೇ ಮನ್ಯುವಶಾತ್ ಕೃತಘ್ನಃ |
ನ ಕಸ್ಯಚಿನ್ಮಿತ್ರಮಥೋ ದುರಾತ್ಮಾ
ಕಲಾಶ್ಚೈತಾ ಅಧಮಸ್ಯೇಹ ಪುಂಸಃ ॥18॥
ಯಾವ ಮನುಷ್ಯನನ್ನು ಶಾಸನ ಮಾಡುವುದು ಅಸಾಧ್ಯವೋ, ಯಾವನು ನಿಂದಿಸಿದರೆ ಅಥವಾ ಹಿಂಸಿಸಿದರೆ ಕೋಪದಿಂದ ಹಿಂತಿರುಗಿ ಬೀಳುತ್ತಾನೆಯೋ, ಕೃತಘ್ನನೋ, ಯಾವನಿಗೆ ಯಾರೂ ಮಿತ್ರರಾಗಿರುವುದಿಲ್ಲವೋ ಅವನು ದುರಾತ್ಮನು. ಇವು ಅಧಮಪುರುಷನ ಲಕ್ಷಣಗಳು.
ನ ಶ್ರದ್ದಧಾತಿ ಕಲ್ಯಾಣಂ ಪರೇಭ್ಯೋಽಪ್ಯಾತ್ಮಶಂಕಿತಃ |
ನಿರಾಕರೋತಿ ಮಿತ್ರಾಣಿ ಯೋ ವೈ ಸೋಽಧಮಪೂರುಷಃ ॥19॥
ಒಳ್ಳೆಯ ವಿಷಯಗಳಲ್ಲಿ ಶ್ರದ್ಧೆ ಇರುವುದಿಲ್ಲ, ಇನ್ನೊಬ್ಬರಿಂದ ತನಗೆ ಕೇಡಾಗುತ್ತದೆ ಎಂದು ಯಾವಾಗಲೂ ಶಂಕಿಸುತ್ತಾನೆ, ಮಿತ್ರರನ್ನು ನಿರಾಕರಿಸುತ್ತಾನೆ. ಅಂತಹವನು ಅಧಮಪುರುಷ.
ಉತ್ತಮಾನೇವ ಸೇವೇತ ಪ್ರಾಪ್ತಕಾಲೇ ತು ಮಧ್ಯಮಾನ್ |
ಅಧಮಾಂಸ್ತು ನ ಸೇವೇತ ಯ ಇಚ್ಛೇತ್ ಭೂತಿಮಾತ್ಮನಃ ॥20॥
ಉತ್ತಮರನ್ನೇ ಸೇವಿಸಬೇಕು. ಕಾರ್ಯವಾಗಬೇಕಾದಾಗ ಮಧ್ಯಮರನ್ನು ಸೇವಿಸಬೇಕು. ಯಾವನು ತನ್ನ ಏಳಿಗೆಯನ್ನು ಬಯಸುತ್ತಾನೆಯೋ ಅವನು ಅಧಮರನ್ನು ಮಾತ್ರ ಎಂದೂ ಸೇವಿಸಬಾರದು.
ಪ್ರಾಪ್ನೋತಿ ವೈ ವಿತ್ತಮಯಂ ಬಲೇನ
ನಿತ್ಯೋತ್ಥಾನಾತ್ ಪ್ರಜ್ಞಯಾ ಪೌರುಷೇಣ |
ಸದ್ಯೈವ ಸಮ್ಯಗ್ ಲಭತೇ ಪ್ರಶಂಸಾಂ
ನ ವೃತ್ತಿಮಾಪ್ನೋತಿ ಮಹಾಕುಲಾನಾಮ್ ॥21॥
ಸತ್ಪುರುಷನಾದವನು ತನ್ನ ಬಲದಿಂದಲೂ, ನಿತ್ಯೋತ್ಸಾಹದಿಂದಲೂ, ಪ್ರಜ್ಞೆಯಿಂದಲೂ ಮತ್ತು ಪರಾಕ್ರಮದಿಂದಲೂ ಧನವನ್ನು ಗಳಿಸುತ್ತಾನೆ. ಅವನು ಯಾವಾಗಲೂ ಪ್ರಶಂಸೆಯನ್ನು ಪಡೆಯುತ್ತಾನೆ. ಕುಲರಹಿತರಾದವರ ನಡತೆಯನ್ನು ಅವನು ಎಂದೂ ಅನುಸರಿಸುವುದಿಲ್ಲ.
ಧೃತರಾಷ್ಟ್ರಃ
ಮಹಾಕುಲಾನಾಂ ಸ್ಪೃಹಯಂತಿ ದೇವಾ
ಧರ್ಮಾರ್ಥನಿತ್ಯಾಶ್ಚ ಬಹುಶ್ರುತಾಶ್ಚ |
ಪೃಚ್ಛಾಮಿ ತ್ವಾಂ ವಿದುರ ಪ್ರಶ್ನಮೇತಂ
ಭವಂತಿ ವೈ ಕಾನಿ ಮಹಾಕುಲಾನಿ ॥22॥
ನಿತ್ಯವೂ ಧರ್ಮಾರ್ಥರತರಾದ ಮತ್ತು ಬಹುಶ್ರುತರಾದ ದೇವತೆಗಳು ಮಹಾಕುಲದಲ್ಲಿ ಹುಟ್ಟಿದ ಪುರುಷರಲ್ಲಿ ಪ್ರೀತಿಯುಳ್ಳವರಾಗುತ್ತಾರೆ. ವಿದುರನೇ, ಮಹಾಕುಲಗಳು ಯಾವುವು ಎಂಬ ಈ ಪ್ರಶ್ನೆಯನ್ನು ನಾನು ನಿನ್ನನ್ನು ಕೇಳುತ್ತಿದ್ದೇನೆ.
ವಿದುರಃ
ತಪೋ ದಮೋ ಬ್ರಹ್ಮವಿತ್ತ್ವಂ ತಿತಿಕ್ಷಾ
ಪುಣ್ಯಾ ವಿವಾಹಾಃ ಸಾಂತ್ವನಂ ಚಾನ್ನದಾನಮ್ |
ಅಷ್ಟಾವೇತೇ ನಿತ್ಯಮೇವಂ ಭವಂತಿ
ಸತಾಂ ಗುಣಾಸ್ತಾನಿ ಮಹಾಕುಲಾನಿ ॥23॥

ವಿದುರ ತಪಸ್ಸು, ದಮ, ಬ್ರಹ್ಮಜ್ಞಾನ, ದ್ವಂದ್ವಸಹಿಷ್ಣುತೆ, ಪವಿತ್ರಕಾರ್ಯಗಳು, ವಿವಾಹ, ಇನ್ನೊಬ್ಬರನ್ನು ಸಂತೈಸುವುದು, ಅನ್ನದಾನ - ಈ ಎಂಟುಗುಣಗಳು ಯಾವ ಸಜ್ಜನರಲ್ಲಿ ಯಾವಾಗಲೂ ಇರುತ್ತವೆಯೋ ಅಂತಹವರ ಕುಲಗಳು ಮಹಾಕುಲಗಳು.

ಯೇಷಾಂ ನ ವೃತ್ತಂ ವ್ಯಥತೇ ನ ಯೋನಿಃ
ಚಿತ್ತಪ್ರಸಾದೇನ ಚರಂತಿ ಧರ್ಮಮ್ |
ಯೇ ಕೀರ್ತಿಮಿಚ್ಛಂತಿ ಕುಲೇ ವಿಶಿಷ್ಟಾಂ
ತ್ಯಕ್ತಾನೃತಾಸ್ತಾನಿ ಮಹಾಕುಲಾನಿ ॥24॥

ಯಾರಿಗೆ ತಮ್ಮ ನಡತೆಯಾಗಲೀ ಅಥವಾ ಯೋನಿಯಾಗಲೀ ಯಾವಾಗಲೂ ದುಃಖವನ್ನು ತಂದುಕೊಡುವುದಿಲ್ಲವೋ, ಮನಸ್ಸಿನ ಹರ್ಷದಿಂದಲೇ ಯಾರು ಧರ್ಮಗಳನ್ನು ಆಚರಿಸುತ್ತಾರೆಯೋ, ಯಾರು ತಮ್ಮ ಕುಲಕ್ಕೆ ವಿಶಿಷ್ಠವಾದ ಕೀರ್ತಿಯನ್ನು ಬಯಸುತ್ತಾರೆಯೋ, ಅನೃತವಚನವನ್ನು ವರ್ಜಿಸಿರುತ್ತಾರೆಯೋ ಅಂತಹವರ ಕುಲಗಳು ಮಹಾಕುಲಗಳು.

ಅನಿಜ್ಯಯಾಽವಿವಾಹೈಶ್ಚ ವೇದಸ್ಯೋತ್ಸಾದನೇನ ಚ |
ಕುಲಾನ್ಯಕುಲತಾಂ ಯಾಂತಿ ಧರ್ಮಸ್ಯಾತಿಕ್ರಮೇಣ ಚ ॥25॥

ಅರ್ಚನೆಯ ಅಭಾವ, ವಿವಾಹವಿಲ್ಲದಿರುವಿಕೆ, ವೇದದ ವಿನಾಶ, ಧರ್ಮದ ಅತಿಕ್ರಮಣ - ಇವುಗಳಿಂದ ಕುಲಗಳು ಅಕುಲಗಳಾಗುತ್ತವೆ.

ದೇವದ್ರವ್ಯವಿನಾಶೇನ ಬ್ರಹ್ಮಸ್ವಹರಣೇನ ಚ |
ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ॥26॥

ದೇವದ್ರವ್ಯದ ವಿನಾಶವನ್ನು ಮಾಡುವುದರಿಂದ, ಬ್ರಹ್ಮಸ್ವವನ್ನು ಅಪಹಾರ ಮಾಡುವುದರಿಂದ ಮತ್ತು ಬ್ರಾಹ್ಮಣರ ಅತಿಕ್ರಮಣವನ್ನು ಮಾಡುವುದರಿಂದ ಕುಲಗಳು ಅಕುಲಗಳಾಗುತ್ತವೆ, ನಾಶವನ್ನು ಹೊಂದುತ್ತವೆ.

ಬ್ರಾಹ್ಮಣಾನಾಂ ಪರಿಭವಾತ್ ಪರಿವಾದಾಚ್ಚ ಭಾರತ |
ಕುಲಾನ್ಯಕುಲತಾಂ ಯಾಂತಿ ನ್ಯಾಸಾಪಹರಣೇನ ಚ ॥27॥

ಎಲೈ ಭಾರತನೇ, ಬ್ರಾಹ್ಮಣರನ್ನು ಅವಮಾನ ಮಾಡುವುದರಿಂದ, ಅವರ ನಿಂದನೆ ಮಾಡುವುದರಿಂದ ಮತ್ತು ನ್ಯಾಸವಾಗಿಟ್ಟ ವಸ್ತುಗಳನ್ನು ಅಪಹಾರ ಮಾಡುವುದರಿಂದ ಕುಲಗಳು ನಾಶವನ್ನು ಹೊಂದುತ್ತವೆ.

ಕುಲಾನಿ ಸಮವೇತಾನಿ ಗೋಭಿಃ ಪುರುಷತೋಽರ್ಥತಃ |
ಕುಲಸಂಖ್ಯಾಂ ನ ಗಚ್ಛಂತಿ ಯಾನಿ ಹೀನಾನಿ ವೃತ್ತತಃ ॥28॥

ಒಳ್ಳೆಯ ಮಾತುಗಳಿಂದ, ಸತ್ಪುರುಷರಿಂದ ಮತ್ತು ಪರೋಪಕಾರಗಳಿಂದ ಕೂಡಿದ ಕುಲಗಳು ಕುಲಗಳೆನಿಸುತ್ತವೆ. ನಡತೆಯಿಂದ ಹೀನವಾದ ಕುಲಗಳು ಕುಲಗಳ ಮಧ್ಯದಲ್ಲಿ ಗಣನೆಗೆ ಬರುವುದಿಲ್ಲ.

ವೃತ್ತತಃ ತ್ವವಿಹೀನಾನಿ ಕುಲಾನ್ಯಲ್ಪಧನಾನ್ಯಪಿ |
ಕುಲಸಂಖ್ಯಾಂ ತು ಗಚ್ಛಂತಿ ಕರ್ಷಂತಿ ಚ ಮಹಾಜನಮ್ ॥29॥

ನಡತೆಯಿಂದ ಹೀನವಾಗದಿದ್ದ ಕುಲಗಳು ಅಲ್ಪಧನವನ್ನು ಹೊಂದಿದ್ದರೂ ಸಹ ಕುಲಗಳಲ್ಲಿ ಗಣನೆಯನ್ನು ಹೊಂದುತ್ತವೆ ಮತ್ತು ಮಹಾಜನರನ್ನು ತಮ್ಮ ಕಡೆಗೆ ಆಕರ್ಷಿಸುತ್ತವೆ.

ವೃತ್ತಂ ಯತ್ನೇನ ಸಂರಕ್ಷೇದ್ ವಿತ್ತಮೇತಿ ಚ ಯಾತಿ ಚ |
ಅಕ್ಷೀಣೋ ವಿತ್ತತಃ ಕ್ಷೀಣೋ ವೃತ್ತತಸ್ತು ಹತೋ ಹತಃ ॥30॥

ನಡತೆಯನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸಬೇಕು. ಧನವು ಬರುತ್ತದೆ ಮತ್ತು ಹೋಗುತ್ತದೆ. ಧನದಿಂದ ಕ್ಷೀಣನಾಗದೆ ನಡತೆಯಿಂದ ಕ್ಷೀಣನಾದರೆ ಅವನು ಸತ್ತಂತೆಯೇ.

ಗೋಭಿಃ ಪಶುಭಿರಶ್ವೈಶ್ಚ ಕೃಷ್ಯಾ ಚ ಸುಸಮೃದ್ಧಯಾ |
ಕುಲಾನಿ ನ ಪ್ರರೋಹಂತಿ ಯಾನಿ ಹೀನಾನಿ ವೃತ್ತತಃ ॥31॥

ನಡತೆಯಿಂದ ಹೀನವಾದ ಕುಲಗಳು ಗೋವುಗಳಿಂದಾಗಲೀ, ಅಶ್ವ ಮೊದಲಾದ ಪಶುಗಳಿಂದಾಗಲೀ, ಕೃಷಿಯಿಂದಾಗಲಿ ಅಥವಾ ಸಮೃದ್ಧಿಯಿಂದಲೇ ಆಗಲಿ ಏಳಿಗೆಯನ್ನು ಹೊಂದುವುದಿಲ್ಲ.

ಮಾ ನಃ ಕುಲೇ ವೈರಕೃತ್ ಕಶ್ಚಿದಸ್ತು
ರಾಜಾಮಾತ್ಯೋ ಮಾ ಪರಸ್ವಾಪಹಾರೀ |
ಮಿತ್ರದ್ರೋಹೀ ನೈಕೃತಿಕೋಽನೃತೀ ವಾ
ಪೂರ್ವಾಶೀ ವಾ ಪಿತೃದೇವಾತಿಥಿಭ್ಯಃ ॥32॥

ನಮ್ಮ ಕುಲದಲ್ಲಿ ವೈರ ಮಾಡುವವನು ಯಾವನೂ ಬೇಡ. ಪರರಾಷ್ಟ್ರದ ರಾಜ್ಯದಿಂದ ವಧ್ಯನಾಗುವವನು, ಪರಸ್ವತ್ತನ್ನು ಅಪಹಾರ ಮಾಡುವವನು, ಮಿತ್ರದ್ರೋಹಿಯಾದವನು, ಮೋಸಗಾರನು, ಸುಳ್ಳನ್ನು ಹೇಳುವವನು, ಪಿತೃ-ದೇವತಾ ಅತಿಥಿಗಳಿಗಿಂತ ಮೊದಲು ಭೋಜನ ಮಾಡುವವನು ಯಾವನೂ ಬೇಡ.

ಯಶ್ಚ ನೋ ಬ್ರಾಹ್ಮಣಾನ್ ಹನ್ಯಾದ್ ಯಶ್ಚ ನೋ ಬ್ರಾಹ್ಮಣಾನ್ ದ್ವಿಷೇತ್ |
ನ ನಃ ಸ ಸಮಿತಿಂ ಗಚ್ಛೇದ್ ಯಶ್ಚ ನೋ ನಿರ್ವಪೇತ್ ಕೃಷಿಮ್ ॥33॥

ಯಾವನು ಬ್ರಾಹ್ಮಣರನ್ನು ಹಿಂಸಿಸುವುದಿಲ್ಲವೋ, ಯಾವನು ಬ್ರಾಹ್ಮಣರನ್ನು ದ್ವೇಷಿಸುವುದಿಲ್ಲವೋ, ಯಾವನು ಕೃಷಿಯನ್ನು ಮಾಡುವುದಿಲ್ಲವೋ ಅಂತಹ ಬ್ರಾಹ್ಮಣನು ನಮ್ಮ ಸಭೆಗೆ ಬರಲಿ.

ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ |
ಸತಾಮೇತಾನಿ ಗೇಹೇಷು ನೋಚ್ಛಿದ್ಯಂತೇ ಕದಾಚನ ॥34॥

ತೃಣಮಯವಾದ ಚಾಪೆ, ಕುಳಿತುಕೊಳ್ಳುವುದಕ್ಕೆ ಭೂಮಿ, ಕುಡಿಯಲು ನೀರು ಮತ್ತು ನಾಲ್ಕನೆಯದಾದ ಮಧುರವಾದ ಮಾತುಗಳು -

ಇವುಗಳು ಸಜ್ಜನರ ಮನೆಯಲ್ಲಿ ಎಂದೂ ವಿನಾಶವನ್ನು ಹೊಂದುವುದಿಲ್ಲ.
ಶ್ರದ್ಧಯಾ ಪರಯಾ ರಾಜನ್ನುಪನೀತಾನಿ ಸತ್ಕೃತಿಮ್ |
ಪ್ರವೃತ್ತಾನಿ ಮಹಾಪ್ರಾಜ್ಞ ಧರ್ಮಿಣಾಂ ಪುಣ್ಯಕರ್ಮಿಣಾಮ್ ॥35॥
ಎಲೈ ಮಹಾಪ್ರಾಜ್ಞನೇ, ಪುಣ್ಯಕರ್ಮವನ್ನು ಮಾಡುವವರ ಶ್ರೇಷ್ಠವಾದ ವರ್ತನೆಗಳು ಅವರ ಶ್ರೇಷ್ಠವಾದ ಶ್ರದ್ಧೆಯಿಂದ ಅತಿಥಿ-ಅಭ್ಯಾಗತರ ಪೂಜೆಗೆ ಯೋಗ್ಯವಾಗಿ ಉಪಪನ್ನವಾಗುತ್ತವೆ.
ಸೂಕ್ಷ್ಮೋಽಪಿ ಭಾರಂ ನೃಪತೇ ಸ್ಯಂದನೋ ವೈ
ಶಕ್ತೋ ವೋಢುಂ ನ ತಥಾಽನ್ಯೇ ಮಹೀಜಾಃ |
ಏವಂ ಯುಕ್ತಾ ಭಾರಸಹಾ ಭವಂತಿ
ಮಹಾಕುಲೀನಾ ನ ತಥಾಽನ್ಯೇ ಮನುಷ್ಯಾಃ ॥36॥
ಎಲೈ ರಾಜನೇ, ರಥವು ಚಿಕ್ಕದಾಗಿದ್ದರೂ ದೊಡ್ಡಭಾರವನ್ನು ಹೊರಲು ಸಮರ್ಥವಾಗಿರುತ್ತದೆ. ಉಳಿದ ಮರಗಳು ಸಮರ್ಥವಾಗುವುದಿಲ್ಲ. ಹೀಗೆ ಜೊತೆಯಲ್ಲಿ ಕೂಡಿದ್ದರೆ ಮಹಾಕುಲೀನರಾದವರು ಎಂತಹ ಭಾರವನ್ನಾದರೂ ಸಹಿಸುತ್ತಾರೆ. ಬೇರೆ ಮನುಷ್ಯರು ಸಹಿಸುವುದಿಲ್ಲ.
ನ ತನ್ಮಿತ್ರಂ ಯಸ್ಯ ಕೋಪಾದ್ ಬಿಭೇತಿ
ಯದ್ವೈ ಮಿತ್ರಂ ಕೋಪನೇ ನೋಪಶಕ್ಯಮ್ |
ಯಸ್ಮಿನ್ ಮಿತ್ರೇ ಪಿತರೀವಾಶ್ವಸೀತ
ತದ್ವೈ ಮಿತ್ರಂ ಸಂಗತಾನೀತರಾಣಿ ॥37॥
ಯಾವನ ಕೋಪಕ್ಕೆ ಹೆದರುತ್ತಾನೆಯೋ ಅವನು ಮಿತ್ರನಲ್ಲ. ಯಾವನನ್ನು ಕೋಪಗೊಳಿಸಲು ಸಾಧ್ಯವಿಲ್ಲವೋ ಅವನೇ ಮಿತ್ರ. ಯಾವನಲ್ಲಿ ತಂದೆಯಂತೆ ವಿಶ್ವಾಸವನ್ನು ಮಾಡಬಹುದೋ ಅವನು ಮಿತ್ರ. ಉಳಿದವರು ಜೊತೆಯಲ್ಲಿರುವವರು ಮಾತ್ರ.
ಯದಿ ಚೇದತ್ರ ಸಂಬಂಧೋ ಮಿತ್ರಭಾವೇನ ವರ್ತತೇ |
ಸ ಏವ ಬಂಧುಸ್ತನ್ಮಿತ್ರಂ ಸಾ ಗತಿಸ್ತತ್ ಪರಾಯಣಮ್ ॥38॥
ಯಾವನ ಜೊತೆಯಲ್ಲಿ ಇಲ್ಲಿ ಮಿತ್ರಭಾವದಿಂದ ಸಂಬಂಧವಿರುತ್ತದೆಯೋ ಅವನೇ ಬಂಧು, ಅವನೇ ಮಿತ್ರ, ಅವನೇ ಗತಿ, ಅವನೇ ಪರಮಾಶ್ರಯ.
ಚಲಚಿತ್ತಸ್ಯ ವೈ ಪುಂಸೋ ವೃದ್ಧಾನನುಪಸೇವತಃ |
ಪಾರಿಪ್ಲವಮತೇರ್ನಿತ್ಯಮಧ್ರುವೋ ಮಿತ್ರಸಂಗ್ರಹಃ ॥39॥
ಚಂಚಲವಾದ ಚಿತ್ತವುಳ್ಳ, ಹಿರಿಯರ ಸೇವೆಯನ್ನು ಮಾಡದಿರುವ, ಚಪಲಚಿತ್ತನಾದ ಮನುಷ್ಯನು ಮಿತ್ರರನ್ನು ಶಾಶ್ವತವಾಗಿ ಸಂಗ್ರಹಿಸಲು ಎಂದೂ ಸಾಧ್ಯವಿಲ್ಲ.
ಚಲಚಿತ್ತಮನಾತ್ಮಾನಮಿಂದ್ರಿಯಾಣಾಂ ವಶಾನುಗಮ್ |
ಅರ್ಥಾಃ ಸಮತಿವರ್ತಂತೇ ಹಂಸಾಃ ಶುಷ್ಕಂ ಸರೋ ಯಥಾ ॥40॥
ಚಂಚಲಚಿತ್ತನೂ, ಮನಸ್ಸು ಮತ್ತು ಇಂದ್ರಿಯಗಳಿಗೆ ವಶನಾದವನೂ ಆದ ಮನುಷ್ಯನನ್ನು ಅರ್ಥಗಳು, ಹಂಸಗಳು ಒಣಗಿದ ಸರೋವರವನ್ನು ದಾಟುವಂತೆ ದಾಟಿ ಹೋಗುತ್ತವೆ.
ಅಕಸ್ಮಾದೇವ ಕುಪ್ಯಂತಿ ಪ್ರಸೀದಂತ್ಯನಿಮಿತ್ತತಃ |
ಶೀಲಮೇತದಸಾಧೂನಾಮಭ್ರಂ ಪಾರಿಪ್ಲವಂ ಯಥಾ ॥41॥
ಕಾರಣವಿಲ್ಲದೆಯೇ ಕೋಪಗೊಳ್ಳುತ್ತಾರೆ, ಕಾರಣವಿಲ್ಲದೆಯೇ ಪ್ರಸನ್ನರಾಗುತ್ತಾರೆ. ಇದು ಚಂಚಲವಾದ ಮೋಡಗಳಂತಿರುವ ಅಸಜ್ಜನರ ನಡತೆ.
ಸತ್ಕೃತಾಶ್ಚ ಕೃತಾರ್ಥಾಶ್ಚ ಮಿತ್ರಾಣಾಂ ನ ಭವಂತಿ ಯೇ |
ತಾನ್ ಮೃತಾನಪಿ ಕ್ರವ್ಯಾದಾಃ ಕೃತಘ್ನಾನ್ ನೋಪಭುಂಜತೇ ॥42॥
ಯಾರು ಪೂಜಿಸಲ್ಪಟ್ಟರೂ, ತೃಪ್ತಿಪಡಿಸಲ್ಪಟ್ಟರೂ, ಮಿತ್ರರ ಸಹಾಯಕ್ಕೆ ಬರುವುದಿಲ್ಲವೋ ಅಂತಹ ಕೃತಘ್ನರು ಮೃತರಾದರೆ ಹದ್ದುಗಳೂ ಅವರನ್ನು ಮುಟ್ಟುವುದಿಲ್ಲ.
ಅರ್ಥಯೇದೇವ ಮಿತ್ರಾಣಿ ಸತಿ ವಾಽಸತಿ ವಾ ಧನೇ |
ನಾನರ್ಥಯನ್ ವಿಜಾನಾತಿ ಮಿತ್ರಾಣಾಂ ಸಾರಫಲ್ಗುತಾಮ್ ॥43॥
ಧನವಿರಲಿ ಅಥವಾ ಇಲ್ಲದಿರಲಿ ಮಿತ್ರರನ್ನು ಯಾಚಿಸಬೇಕು. ಯಾಚಿಸದಿದ್ದರೆ ಮಿತ್ರರಲ್ಲಿ ಯಾರು ಶ್ರೇಷ್ಠ ಮತ್ತು ಯಾರು ಕನಿಷ್ಠ ಎಂದು ತಿಳಿಯುವುದಿಲ್ಲ.
ಸಂತಾಪಾದ್ ಭ್ರಶ್ಯತೇ ರೂಪಂ ಸಂತಾಪಾದ್ ಭ್ರಶ್ಯತೇ ಬಲಮ್ |
ಸಂತಾಪಾದ್ ಭ್ರಶ್ಯತೇ ಜ್ಞಾನಂ ಸಂತಾಪಾದ್ ವ್ಯಾಧಿಮೃಚ್ಛತಿ ॥44॥
ಸಂತಾಪದಿಂದ ರೂಪವು ನಾಶವಾಗುತ್ತದೆ. ಸಂತಾಪದಿಂದ ಬಲವು ನಾಶವಾಗುತ್ತದೆ. ಸಂತಾಪದಿಂದ ಜ್ಞಾನವು ನಾಶವಾಗುತ್ತದೆ. ಸಂತಾಪದಿಂದ ವ್ಯಾಧಿಯು ಉಂಟಾಗುತ್ತದೆ.
ಅನವಾಪ್ಯಂ ಚ ಶೋಕೇನ ಶರೀರಂ ಚೋಪತಪ್ಯತೇ |
ಅಮಿತ್ರಾಶ್ಚ ಪ್ರಹೃಷ್ಯಂತಿ ಮಾ ಸ್ಮ ಶೋಕೇ ಮನಃ ಕೃಥಾಃ ॥45॥
ಶೋಕದಿಂದ ಯಾವ ಪ್ರಯೋಜನವನ್ನೂ ಹೊಂದಲು ಸಾಧ್ಯವಿಲ್ಲ. ಶರೀರವು ತಾಪಕ್ಕೆ ಈಡಾಗುತ್ತದೆ. ಶತ್ರುಗಳು ಸಂತೋಷಪಡುತ್ತಾರೆ. ಶೋಕದಲ್ಲಿ ಮನಸ್ಸನ್ನು ಮಾಡಬೇಡ.

ಪುನರ್ನರೋ ಮ್ರಿಯತೇ ಜಾಯತೇ ಚ
ಪುನರ್ನರೋ ಹೀಯತೇ ವರ್ಧತೇ ಚ |
ಪುನರ್ನರೋ ಯಾಚತಿ ಯಾಚ್ಯತೇ ಚ
ಪುನರ್ನರಃ ಶೋಚತಿ ಶೋಚ್ಯತೇ ಚ ॥46॥
ಮನುಷ್ಯನು ಪುನಃ ಸಾಯುತ್ತಾನೆ ಮತ್ತು ಹುಟ್ಟುತ್ತಾನೆ. ಪುನಃ ಸಂಪತ್ತನ್ನು ಕಳೆದುಕೊಳ್ಳುತ್ತಾನೆ ಮತ್ತು ಸಂಪತ್ತಿನ ಅಭಿವೃದ್ಧಿಯನ್ನು ಹೊಂದುತ್ತಾನೆ. ಪುನಃ ಇನ್ನೊಬ್ಬರನ್ನು ಬೇಡುತ್ತಾನೆ ಮತ್ತು ಇನ್ನೊಬ್ಬರಿಂದ ಬೇಡಲ್ಪಡುತ್ತಾನೆ. ಪುನಃ ಶೋಕಪಡುತ್ತಾನೆ ಮತ್ತು ಇನ್ನೊಬ್ಬರಿಂದ ಶೋಕಿಸಲ್ಪಡುತ್ತಾನೆ.
ಸುಖಂ ಚ ದುಃಖಂ ಚ ಭವಾಭವೌ ಚ
ಲಾಭಾಲಾಭೌ ಮರಣಂ ಜೀವಿತಂ ಚ |
ಪರ್ಯಾಯಶಃ ಸರ್ವಮೇತೇ ಸ್ಪೃಶಂತಿ
ತಸ್ಮಾದ್ ವೀರೋ ನ ಚ ಹೃಷ್ಯೇನ್ನ ಶೋಚೇತ್ ॥47॥
ಸುಖ-ದುಃಖಗಳು, ಸಮೃದ್ಧಿ-ಅಸಮೃದ್ಧಿಗಳು, ಲಾಭಾಲಾಭಗಳು, ಜೀವನ- ಮರಣಗಳು ಪರ್ಯಾಯವಾಗಿ ಎಲ್ಲರಿಗೂ ಉಂಟಾಗುತ್ತವೆ. ಆದ್ದರಿಂದ ವೀರನಾದವನು ಇವುಗಳಿಗೆ ಹರ್ಷವನ್ನೂ ಪಡಬಾರದು, ಶೋಕವನ್ನೂ ಪಡಬಾರದು.
ಚಲಾನಿ ಹೀಮಾನಿ ಷಡಿಂದ್ರಿಯಾಣಿ
ತೇಷಾಂ ಯದ್ಯದ್ ವರ್ಧತೇ ಯತ್ರ ಯತ್ರ |
ತತಸ್ತತಃ ಸ್ರವತೇ ಬುದ್ಧಿರಸ್ಯ
ಚ್ಛಿದ್ರೋದಕುಂಭಾದಿವ ನಿತ್ಯಮಂಭಃ ॥48॥
ಈ ಆರು ಇಂದ್ರಿಯಗಳು ಚಂಚಲವಾದವು. ಅವುಗಳಲ್ಲಿ ಯಾವುದು ಯಾವ ಯಾವ ವಿಷಯಗಳಲ್ಲಿ ಬೆಳೆಯುತ್ತದೆಯೋ ಆಯಾ ವಿಷಯದ ಮೂಲಕವಾಗಿ ಮನುಷ್ಯನ ಬುದ್ಧಿಯು ಒಡಕು ಮಡಕೆಯಿಂದ ನೀರು ಹರಿದುಹೋಗುವಂತೆ ನಿತ್ಯವೂ ಹರಿದುಹೋಗುತ್ತವೆ.
ಧೃತರಾಷ್ಟ್ರಃ
ತನುರುಚ್ಛಶಿಖೀ ರಾಜಾ ಮಿಥ್ಯೋಪಚರಿತೋ ಮಯಾ |
ಮಂದಾನಾಂ ಮಮ ಪುತ್ರಾಣಾಂ ಯುದ್ಧೇನಾಂತಂ ಕರಿಷ್ಯತಿ ॥49॥
ಧೃತರಾಷ್ಟ್ರ ಅಲ್ಪನೂ, ಆತ್ಮಾಭಿಮಾನಿಯೂ ಆದ ದುರ್ಯೋಧನನನ್ನು ನಾನು ವ್ಯರ್ಥವಾಗಿ ರಾಜನೆಂದು ಉಪಚಾರ ಮಾಡಿದೆ. ಆ ಮಂದನು ಯುದ್ಧದಿಂದ ನನ್ನ ಎಲ್ಲಾ ಪುತ್ರರಿಗೂ ವಿನಾಶವನ್ನು ತಂದೊಡ್ಡುವನು.
ನಿತ್ಯೋದ್ವಿಗ್ನಮಿದಂ ಸರ್ವಂ ನಿತ್ಯೋದ್ವಿಗ್ನಮಿದಂ ಮನಃ |
ಯತ್ತತ್ ಪದಮನುದ್ವಿಗ್ನಂ ತನ್ಮೇ ವದ ಮಹಾಮತೇ ॥50॥
ಇದೆಲ್ಲವೂ ಯಾವಾಗಲೂ ಉದ್ವೇಗದಿಂದ ಕೂಡಿದೆ. ನನ್ನ ಈ ಮನಸ್ಸೂ ಉದ್ವೇಗದಿಂದ ಕೂಡಿದೆ. ಮಹಾಮತಿಯೇ, ಉದ್ವೇಗವಿಲ್ಲದಿರುವ ಒಂದು ವಸ್ತು ಸ್ವರೂಪವನ್ನು ನನಗೆ ಹೇಳು.
ವಿದುರಃ
ನಾನ್ಯತ್ರ ವಿದ್ಯಾತಪಸೋರ್ನಾನ್ಯತ್ರೇಂದ್ರಿಯನಿಗ್ರಹಾತ್ |
ನಾನ್ಯತ್ರ ಲೋಭಸಂತ್ಯಾಗಾತ್ ಶಾಂತಿಂ ಪಶ್ಯಾಮಿ ತೇಽನಘ ॥51॥
ವಿದುರ ಎಲೈ ಅನಘನೇ, ವಿದ್ಯಾ-ತಪಸ್ಸುಗಳನ್ನು ಬಿಟ್ಟು, ಇಂದ್ರಿಯನಿಗ್ರಹಗಳನ್ನು ಬಿಟ್ಟು, ಲೋಭತ್ಯಾಗವನ್ನು ಮಾಡುವುದನ್ನು ಬಿಟ್ಟು ಬೇರೆ ಎಲ್ಲಿಯೂ ನಾನು ನಿನಗೆ ಶಾಂತಿಯನ್ನು ಕಾಣುವುದಿಲ್ಲ.
ಬುದ್ಧ್ಯಾ ಭಯಂ ಪ್ರಣುದತಿ ತಪಸಾ ವಿಂದತೇ ಮಹತ್ |
ಗುರುಶುಶ್ರೂಷಯಾ ಜ್ಞಾನಂ ಶಾಂತಿಂ ಯೋಗೇನ ವಿಂದತಿ ॥52॥
ಬುದ್ಧಿಯಿಂದ ಭಯವನ್ನು ದೂರಮಾಡಬೇಕು. ತಪಸ್ಸಿನಿಂದ ಮಹತ್ವವನ್ನು ಪಡೆಯಬೇಕು. ಗುರುಶುಶ್ರೂಷೆಯಿಂದ ಜ್ಞಾನವನ್ನೂ, ಯೋಗದಿಂದ ಶಾಂತಿಯನ್ನೂ ಪಡೆಯಬೇಕು.
ಅನಾಶ್ರಿತಾ ದಾನಪುಣ್ಯಂ ವೇದಪುಣ್ಯಮನಾಶ್ರಿತಾಃ |
ರಾಗದ್ವೇಷವಿನಿರ್ಮುಕ್ತಾ ವಿಚರಂತೀಹ ಮೋಕ್ಷಿಣಃ ॥53॥
ದಾನಪುಣ್ಯವನ್ನು ಬಯಸದೆ, ವೇದಾಧ್ಯಯನಾದಿ ಜನ್ಯಪುಣ್ಯವನ್ನೂ ಬಯಸದೆ, ರಾಗ-ದ್ವೇಷದಿಂದ ಮುಕ್ತರಾದವರು ಮುಮುಕ್ಷುಗಳಾಗಿ ಇಲ್ಲಿ ಸಂಚರಿಸುತ್ತಾರೆ.
ಸ್ವಧೀತಸ್ಯ ಸುಯುದ್ಧಸ್ಯ ಸುಕೃತಸ್ಯ ಚ ಕರ್ಮಣಃ |
ತಪಸಶ್ಚ ಸುತಪ್ತಸ್ಯ ತಸ್ಯಾಂತೇ ಸುಖಮೇಧತೇ ॥54॥
ಒಳ್ಳೆಯ ಅಧ್ಯಯನ, ಒಳ್ಳೆಯ ಯುದ್ಧ, ಚೆನ್ನಾಗಿ ಮಾಡಿದ ಕರ್ಮ, ಚೆನ್ನಾಗಿ ಮಾಡಿದ ತಪಸ್ಸು ಇವುಗಳ ಕೊನೆಯಲ್ಲಿ ಸುಖವನ್ನು ಅನುಭವಿಸುತ್ತಾರೆ.
ಸ್ವಾಸ್ತೀರ್ಣಾನಿ ಶಯನಾನಿ ಪ್ರಪನ್ನಾ
ನ ವೈ ಭಿನ್ನಾ ಜಾತು ನಿದ್ರಾಂ ಲಭಂತೇ |
ನ ಸ್ತ್ರೀಷು ರಾಜನ್ ರತಿಮಾಪ್ನುವಂತಿ
ನ ಮಾಗಧೈಃ ಸ್ತೂಯಮಾನಾ ನ ಸೂತೈಃ ॥55॥

ಯಾರಿಗೆ ಬುದ್ಧಿಭೇದವು ಉಂಟಾಗಿದೆಯೋ ಅವರು ಚೆನ್ನಾಗಿ ಹಾಸಿದ ಸುಪ್ಪತ್ತಿಗೆಯಲ್ಲಿ ಮಲಗಿದರೂ ನಿದ್ರೆಯನ್ನು ಹೊಂದುವುದಿಲ್ಲ. ಎಲ್ಲೈ ರಾಜನೇ, ಸ್ತ್ರೀಯರಲ್ಲಿ ರತಿಯನ್ನು ಪಡೆಯುವುದಿಲ್ಲ. ಸೂತ ಮಾಗಧರಿಂದ ಸ್ತೋತ್ರ ಮಾಡಲ್ಪಟ್ಟರೂ ಸಂತೋಷ ಪಡುವುದಿಲ್ಲ.

ನ ವೈ ಭಿನ್ನಾ ಜಾತು ಚರಂತಿ ಧರ್ಮಂ
ನ ವೈ ಸುಖಂ ಪ್ರಾಪ್ನುವಂತೀಹ ಭಿನ್ನಾಃ |
ನ ವೈ ಭಿನ್ನಾ ಗೌರವಂ ಪ್ರಾಪ್ನುವಂತಿ
ನ ವೈ ಭಿನ್ನಾಃ ಪ್ರಶಮಂ ರೋಚಯಂತಿ ||56||
ಬುದ್ಧಿಭೇದವನ್ನು ಹೊಂದಿದವರು ಧರ್ಮವನ್ನು ಆಚರಿಸುವುದಿಲ್ಲ. ಸುಖವನ್ನು ಹೊಂದುವುದಿಲ್ಲ. ಗೌರವವನ್ನೂ ಪಡೆಯುವುದಿಲ್ಲ. ಅಂತಹವರಿಗೆ ಸಂಧಿಯೂ ರುಚಿಸುವುದಿಲ್ಲ (ಶಾಂತಿಯೂ ರುಚಿಸುವುದಿಲ್ಲ).
ನ ವೈ ತೇಷಾಂ ಸ್ವದತೇ ಪಥ್ಯಮುಕ್ತಂ
ಯೋಗಕ್ಷೇಮಂ ಕಲ್ಪತೇ ನೈವ ತೇಷಾಮ್ |
ಭಿನ್ನಾನಾಂ ವೈ ಮನುಜೇಂದ್ರ ಪರಾಯಣಂ
ನ ವಿದ್ಯತೇ ಕಿಂಚಿದನ್ಯದ್ ವಿನಾಶಾತ್ ||57||
ಅವರಿಗೆ ಪಥ್ಯವಾದ ಮಾತುಗಳು ರುಚಿಸುವುದಿಲ್ಲ. ಅವರಿಗೆ ಯೋಗಕ್ಷೇಮಗಳೂ ಉಂಟಾಗುವುದಿಲ್ಲ. ಎಲ್ಲೈ ಮನುಷ್ಯೇಂದ್ರನೇ, ಬುದ್ಧಿಭೇದವನ್ನು ಹೊಂದಿದ ಮನುಷ್ಯರಿಗೆ ವಿನಾಶವನ್ನು ಬಿಟ್ಟು ಬೇರೆ ಗತಿಯೇ ಇಲ್ಲ.
ಸಂಭಾವ್ಯಂ ಗೋಷು ಸಂಪನ್ನಂ ಸಂಭಾವ್ಯಂ ಬ್ರಾಹ್ಮಣೇ ತಪಃ |
ಸಂಭಾವ್ಯಂ ಚಾಪಲಂ ಸ್ತ್ರೀಷು ಸಂಭಾವ್ಯಂ ಜ್ಞಾತಿತೋಽಭಯಮ್ ||
ಗೋವುಗಳಲ್ಲಿ ಕ್ಷೀರವು ಪ್ರಶಂಸನೀಯವಾದುದು. ಬ್ರಾಹ್ಮಣನಲ್ಲಿ ತಪಸ್ಸು ಪ್ರಶಂಸನೀಯವಾದುದು. ಸ್ತ್ರೀಯರಲ್ಲಿ ಚಂಚಲತೆಯು ಪ್ರಶಂಸನೀಯವಾದುದು. ಜ್ಞಾತಿಗಳಿಂದ ಅಭಯವು ಪ್ರಶಂಸನೀಯವಾದುದು.
ತಂತವೋಽಪ್ಯಾಯತಾ ನಿತ್ಯಂ ತನವೋ ಬಹುಲಾಃ ಸಮಾಃ |
ಬಹೂನ್ ಬಹುತ್ವಾದಾಯಾಸಾನ್ ಸಹಂತೀತ್ಯುಪಮಾ ಸತಾಮ್ ||59||
ತೆಳುವಾದ, ದೀರ್ಘವಾದ, ಸಮವಾದ ತಂತು (ದಾರ)ಗಳಿಗೂ ಸಹ ಬಹುತ್ವವಿರುವ ಕಾರಣದಿಂದ ಬಹಳ ಆಯಾಸವನ್ನು (ಭಾರವನ್ನು) ಸಹಿಸುತ್ತವೆ ಎಂಬುದು ಸಜ್ಜನರಿಗೆ ದೃಷ್ಟಾಂತ.
ಧೂಮಾಯಂತೇ ವ್ಯಪೇತಾನಿ ಜ್ವಲಂತಿ ಸಹಿತಾನಿ ಚ |
ಧೃತರಾಷ್ಟ್ರೋಲ್ಮುಕಾನೀವ ಜ್ಞಾತಯೋ ಭರತರ್ಷಭ ||60||
ಎಲ್ಲೈ ಭರತರ್ಷಭನೇ, ಎಲ್ಲೈ ಧೃತರಾಷ್ಟ್ರನೇ, ಜ್ಞಾತಿಗಳು ಬೇರೆ ಬೇರೆಯಾದರೆ ಕೊಳ್ಳಿಗಳಂತೆ ಹೊಗೆಯನ್ನು ಕಾರುತ್ತಾರೆ. ಒಟ್ಟುಗೂಡಿದರೆ ಕೊಳ್ಳಿಗಳಂತೆ ಉರಿಯುತ್ತಾರೆ.
ಬ್ರಾಹ್ಮಣೇಷು ಚ ಯೇ ಶೂರಾಃ ಸ್ತ್ರೀಷು ಜ್ಞಾತಿಷು ಗೋಷು ಚ |
ವೃಂತಾದಿವ ಫಲಂ ಪಕ್ವಂ ಧೃತರಾಷ್ಟ್ರ ಪತಂತಿ ತೇ ||61||
ಯಾರು ಬ್ರಾಹ್ಮಣರ ವಿಷಯದಲ್ಲಿ, ಸ್ತ್ರೀಯರ ವಿಷಯದಲ್ಲಿ, ಜ್ಞಾತಿಗಳ ವಿಷಯದಲ್ಲಿ ಮತ್ತು ಗೋವುಗಳ ಮೇಲೆ ತಮ್ಮ ಶೌರ್ಯವನ್ನು ತೋರಿಸುತ್ತಾರೆಯೋ ಅವರು ಎಲ್ಲೈ ಧೃತರಾಷ್ಟ್ರನೇ, ಮಾಗಿದ ಫಲವು ತೊಟ್ಟಿನಿಂದ ಕಳಚಿ ಬೀಳುವಂತೆ ಬೀಳುತ್ತಾರೆ.
ಮಹಾನಪ್ಯೇಕಜೋ ವೃಕ್ಷೋ ಬಲವಾನ್ ಸುಪ್ರತಿಷ್ಠಿತಃ |
ಪ್ರಸಹ್ಯ ಏವ ವಾತೇನ ಸಸ್ಕಂಧೋ ಮರ್ದಿತುಂ ಕ್ಷಣಾತ್ ||62||
ಒಂದೇ ವೃಕ್ಷವು ದೊಡ್ಡದಾಗಿದ್ದರೂ, ಬಲಿಷ್ಠವಾಗಿದ್ದರೂ, ಒಳ್ಳೆಯ ಬೇರುಗಳನ್ನು ಹೊಂದಿದ್ದರೂ ಅದು ವಾಯುವಿನಿಂದ ಒಂದು ಕ್ಷಣದಲ್ಲಿ ಕೊಂಬೆಗಳ ಜೊತೆಯಲ್ಲಿ ಬಲಾತ್ಕರಿಸಲ್ಪಟ್ಟು ಬೀಳಿಸಲು ಸಾಧ್ಯವಾಗುತ್ತದೆ.
ಅಥ ಯೇ ಸಹಿತಾ ವೃಕ್ಷಾಃ ಸಂಘಶಃ ಸುಪ್ರತಿಷ್ಠಿತಾಃ |
ತೇ ಹಿ ಶೀಘ್ರತಮಾನ್ ವಾತಾನ್ ಸಹಂತೇಽನ್ಯೋನ್ಯಸಂಶ್ರಯಾತ್ ||
ಮತ್ತು ಯಾವ ವೃಕ್ಷಗಳು ಗುಂಪಾಗಿ ಚೆನ್ನಾಗಿ ಬೇರುಬಿಟ್ಟಿರುತ್ತವೆಯೋ ಅವು ಪರಸ್ಪರವಾಗಿ ಅವಲಂಬಿಸಿರುವುದರಿಂದ ಎಷ್ಟೇ ದೊಡ್ಡ ಬಿರುಗಾಳಿಯನ್ನೂ ಸಹಿಸುತ್ತವೆ.
ಏವಂ ಮನುಷ್ಯಮಪ್ಯೇಕಂ ಗುಣೈರಪಿ ಸಮನ್ವಿತಮ್ |
ಶಕ್ಯಂ ದ್ವಿಷಂತೋ ಮನ್ಯಂತೇ ವಾಯುರ್ದ್ರುಮಮಿವೈಕಜಮ್ ||64||
ಹೀಗೆ ಮನುಷ್ಯನೂ ಒಬ್ಬನೇ ಇದ್ದರೆ ಅವನು ಗುಣಗಳಿಂದ ಕೂಡಿದ್ದರೂ ಅವನ ಶತ್ರುಗಳು ಒಂದು ವೃಕ್ಷವು ವಾಯುವಿನಿಂದ ಬೀಳಿಸಲ್ಪಟ್ಟಂತೆ ಅವನನ್ನು ಬೀಳಿಸಲು ಸಾಧ್ಯ ಎಂದು ತಿಳಿಯುತ್ತಾರೆ.
ಅನ್ಯೋನ್ಯಸಮುಪಸ್ತಂಭಾದ್ ಅನ್ಯೋನ್ಯಾಪಾಶ್ರಯಣೇನ ಚ |
ಜ್ಞಾತಯಃ ಸಂಪ್ರವರ್ಧಂತೇ ಸರಸೀವೋತ್ಪಲಾನ್ಯುತ ||65||
ಮತ್ತು ಪರಸ್ಪರವಾಗಿ ಬಲವನ್ನು ಕೊಡುವುದರಿಂದ ಮತ್ತು ಪರಸ್ಪರವಾಗಿ ಆಶ್ರಯಿಸುವುದರಿಂದ ಜ್ಞಾತಿಗಳು ಸರೋವರದ ಉತ್ಪಲಗಳಂತೆ ಅಭಿವೃದ್ಧಿಯನ್ನು ಹೊಂದುತ್ತಾರೆ.
ಅವಧ್ಯಾ ಬ್ರಾಹ್ಮಣಾ ಗಾವೋ ಜ್ಞಾತಯಃ ಶಿಶವಃ ಸ್ತ್ರಿಯಃ |
ಯೇಷಾಂ ಚಾನ್ನಾನಿ ಭುಂಜೀತ ಯೇ ಚ ಸ್ಯುಃ ಶರಣಾಗತಾಃ ||66||
ಬ್ರಾಹ್ಮಣರು, ಗೋವುಗಳು, ಜ್ಞಾತಿಗಳು, ಶಿಶುಗಳು, ಸ್ತ್ರೀಯರು ಮತ್ತು ಯಾರ ಅನ್ನವನ್ನು ಊಟ ಮಾಡುತ್ತಾರೆಯೋ ಅವರು ಮತ್ತು

ಶರಣಾಗತರು - ಇಷ್ಟು ಜನರು ಅವಧ್ಯರಾಗುತ್ತಾರೆ.
ನ ಮನುಷ್ಯೇ ಗುಣಃ ಕಶ್ಚಿದನ್ಯೋ ಧನವತಾಮಪಿ |
ಅನಾತುರತ್ವಾದ್ ಭದ್ರಂ ತೇ ಮೃತಕಲ್ಪಾ ಹಿ ರೋಗಿಣಃ ॥67॥
ನಿನಗೆ ಮಂಗಳವಾಗಲಿ. ಧನವುಳ್ಳ ಮನುಷ್ಯರಿಗೂ ಸಹ ಆರೋಗ್ಯವನ್ನು ಬಿಟ್ಟು ಬೇರೆ ಯಾವುದೂ ಗುಣವಿಲ್ಲ. ರೋಗಗ್ರಸ್ತರೂ ಸತ್ತವರಂತೆ ಇರುತ್ತಾರಷ್ಟೆ?
ಅವ್ಯಾಧಿಜಂ ಕಟುಕಂ ಶೀರ್ಷರೋಗಿ
ಪಾಪಾನುಬಂಧಂ ಪರುಷಂ ತೀಕ್ಷ್ಣಮುಗ್ರಮ್ |
ಸತಾಂ ಪೇಯಂ ಯನ್ನ ಪಿಬಂತ್ಯಸಂತೋ
ಮನ್ಯುಂ ಮಹಾರಾಜ ಪಿಬ ಪ್ರಶಾಮ್ಯ ॥68॥
ಎಲ್ಲೈ ಮಹಾರಾಜನೇ, ವ್ಯಾಧಿಯಿಂದ ಹುಟ್ಟದ, ಕಹಿಯಾದ, ತಲೆಯ ಶೂಲೆಯನ್ನುಂಟು ಮಾಡುವ, ಪಾಪಾನುಬಂಧಿಯಾದ, ಒರಟಾದ, ಹರಿತವಾದ, ಭಯಂಕರವಾದ, ಸಜ್ಜನರು ಮಾತ್ರ ಕುಡಿಯಲು (ಅರಗಿಸಿಕೊಳ್ಳಲು ಸಾಧ್ಯವಾದ) ಅಸಜ್ಜನರು ಕುಡಿಯಲು ಸಾಧ್ಯವಿಲ್ಲದಿರುವ ಕೋಪವನ್ನು ಪಾನ ಮಾಡು. ಶಾಂತಿಯನ್ನು ಹೊಂದುವವನಾಗು.
ರೋಗಾರ್ದಿತಾ ನ ಫಲಾನ್ಯಾದ್ರಿಯಂತೇ
ನ ವೈ ಲಭಂತೇ ವಿಷಯೇಷು ತತ್ತ್ವಮ್ |
ದುಃಖೋಪೇತಾ ರೋಗಿಣೋ ನಿತ್ಯಮೇವ
ನ ಬುದ್ಧ್ಯಂತೇ ಧನಯೋಗಾನ್ನ ಸೌಖ್ಯಮ್ ॥69॥
ರೋಗಗ್ರಸ್ತರಾದವರು ಹಣ್ಣುಗಳನ್ನು ಬಯಸುವುದಿಲ್ಲ. ವಿಷಯಗಳ ಸಾರಭಾಗವನ್ನು ಪಡೆಯುವುದಿಲ್ಲ. ರೋಗಿಗಳು ಯಾವಾಗಲೂ ದುಃಖದಿಂದ ಕೂಡಿರುತ್ತಾರೆ. ಅವರು ಧನಪ್ರಾಪ್ತಿಯಿಂದಲೂ ಸುಖವನ್ನು ಹೊಂದುವುದಿಲ್ಲ.
ಪುರಾಽಪ್ಯುಕ್ತಂ ನಾಕರೋಸ್ತ್ವಂ ವಚೋ ಮೇ
ದ್ಯೂತೇ ಜಿತಾಂ ದ್ರೌಪದೀಂ ಪ್ರೇಕ್ಷ್ಯ ರಾಜನ್ |
ದುರ್ಯೋಧನಂ ವಾರಯೇತ್ಯಕ್ಷವತ್ಯಾಂ
ಕಿತವತ್ವಂ ವೈ ಪಂಡಿತಾ ವರ್ಜಯಂತಿ ॥70॥
ಎಲ್ಲೈ ರಾಜನೇ, ದ್ಯೂತದಲ್ಲಿ ಜಿತಳಾದ ದ್ರೌಪದಿಯನ್ನು ನೋಡಿ ನಾನು ಹಿಂದೆಯೇ ನಿನಗೆ ಅಕ್ಷಕ್ರೀಡೆಯಲ್ಲಿ ದುರ್ಯೋಧನನನ್ನು ತಡೆ ಎಂದು ಹೇಳಿದೆನು. ನೀನು ನನ್ನ ಮಾತನ್ನು ನಡೆಸಿಕೊಡಲಿಲ್ಲ. ದ್ಯೂತವನ್ನು ಪಂಡಿತರು ಪರಿತ್ಯಜಿಸುತ್ತಾರೆ.
ನ ತದ್ ಬಲಂ ಯನ್ಮೃದುನಾ ವಿರುಧ್ಯತೇ
ಸೂಕ್ಷ್ಮೋ ಧರ್ಮಸ್ತರಸಾ ಸೇವಿತವ್ಯಃ |
ಪ್ರಧ್ವಂಸಿನೀ ಕ್ರೂರಸಮಾಹಿತಾ ಶ್ರೀಃ
ಮೃದುಪ್ರೌಢಾ ಗಚ್ಛತಿ ಪುತ್ರಪೌತ್ರಾನ್ ॥71॥
ಮೃದುವಾದ ಮನುಷ್ಯನ ಮೇಲೆ ವಿರೋಧ ಮಾಡಿ ಪ್ರಯೋಗಿಸಿದ ಬಲವು ಬಲವೇ ಅಲ್ಲ. ಸೂಕ್ಷ್ಮವಾದ ಧರ್ಮವನ್ನು ಶೀಘ್ರವಾಗಿ ತಿಳಿಯಬೇಕು. ತಿಳಿದು ಸೇವಿಸಬೇಕು. ಕ್ರೂರನಲ್ಲಿರುವ ಸಂಪತ್ತು ಅವನ ನಾಶವನ್ನು ಉಂಟುಮಾಡುತ್ತದೆ. ಮೃದುವಾದ ಮನುಷ್ಯರು ಗಳಿಸಿದ ಸಂಪತ್ತು ಮಕ್ಕಳು ಮತ್ತು ಮೊಮ್ಮಕ್ಕಳವರೆಗೂ ಹೋಗುತ್ತದೆ.
ಧಾರ್ತರಾಷ್ಟ್ರಾಃ ಪಾಂಡವಾನ್ ಪಾಲಯಂತು
ಪಾಂಡೋಃ ಪುತ್ರಾಸ್ತವ ಪುತ್ರಾಂಶ್ಚ ಪಾಂತು |
ಏಕಾರಿಮಿತ್ರಾಃ ಕುರವೋ ಹ್ಯೇಕಕಾರ್ಯಾ
ಜೀವಂತು ರಾಜನ್ ಸುಖಿನಃ ಸಮೃದ್ಧಾಃ ॥72॥
ಧೃತರಾಷ್ಟ್ರಪುತ್ರರು ಪಾಂಡವರನ್ನು ರಕ್ಷಿಸಲಿ. ಪಾಂಡುಪುತ್ರರು ನಿನ್ನ ಪುತ್ರರನ್ನು ರಕ್ಷಿಸಲಿ. ಎಲ್ಲೈ ರಾಜನೇ, ಕುರುಗಳು ಸಮಾನವಾದ ಶತ್ರು-ಮಿತ್ರರನ್ನು ಹೊಂದಿದವರಾಗಿ, ಸಮಾನವಾದ ಕಾರ್ಯಗಳನ್ನು ಹೊಂದಿದವರಾಗಿ ಸುಖ-ಸಮೃದ್ಧಿಗಳಿಂದ ಜೀವಿಸಲಿ.
ಮೇಢೀಭೂತಃ ಕೌರವಾಣಾಂ ತ್ವಮದ್ಯ
ತ್ವಯ್ಯಾಯತ್ತಂ ಕುರುಕುಲಮಾಜಮೀಢ |
ಪಾರ್ಥಾನ್ ಬಾಲಾನ್ ವನವಾಸಪ್ರತಪ್ತಾನ್
ಗೋಪಾಯಸ್ವ ಸ್ವಂ ಯಶಸ್ತಾತ ರಕ್ಷನ್ ॥73॥
ಎಲ್ಲೈ ಆಜಮೀಢನೇ, ನೀನು ಕೌರವರಿಗೆ ಈ ದಿನ ಮೇಢಿಯಂತೆ ಇದ್ದೀಯೆ. ಕುರುಕುಲವು ನಿನ್ನನ್ನು ಅವಲಂಬಿಸಿದೆ. ನೀನು ನಿನ್ನ ಕೀರ್ತಿಯನ್ನು ರಕ್ಷಿಸಿಕೊಂಡು ವನವಾಸದ ಕ್ಲೇಶವನ್ನು ಅನುಭವಿಸಿರುವ ಬಾಲಕರಾದ ಪಾಂಡವರನ್ನು ರಕ್ಷಿಸುವವನಾಗು.
ಸಂಧತ್ಸ್ವ ತ್ವಂ ಕೌರವ ಪಾಂಡುಪುತ್ರೈಃ
ಮಾ ತೇಽಂತರಂ ರಿಪವಃ ಪ್ರಾರ್ಥಯಂತು |
ಸತ್ಯೇ ಸ್ಥಿತಾಸ್ತೇ ನರದೇವ ಸರ್ವೇ
ದುರ್ಯೋಧನಂ ಸ್ಥಾಪಯ ತ್ವಂ ಸುಮಾರ್ಗೇ ॥74॥
ಎಲ್ಲೈ ಕೌರವನೇ, ನೀನು ಪಾಂಡುಪುತ್ರರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ. ಶತ್ರುಗಳು ನಿಮ್ಮಿಬ್ಬರ ನಡುವೆ ಛಿದ್ರವನ್ನು ಆಶಿಸುವುದು ಬೇಡ. ಎಲ್ಲೈ ನರದೇವನೇ, ಪಾಂಡವರೆಲ್ಲರೂ ಸತ್ಯದಲ್ಲಿ ಸ್ಥಿತರಾಗಿದ್ದಾರೆ. ನೀನು ದುರ್ಯೋಧನನನ್ನು ಸನ್ಮಾರ್ಗದಲ್ಲಿ ಇಡುವವನಾಗು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೇಳನೆಯ ಅಧ್ಯಾಯ
ವಿದುರ ನೀತಿ. ಪಾಂಡವರಿಗೆ ರಾಜ್ಯ ಕೊಡುವಂತೆ ನಿರ್ಬಂಧ.
ವಿದುರಃ
ಸಪ್ತದಶೇಮಾನ್ ರಾಜೇಂದ್ರ ಮನುಃ ಸ್ವಾಯಂಭುವೋಽಬ್ರವೀತ್ ।
ವೈಚಿತ್ರವೀರ್ಯ ಪುರುಷಾನ್ ಆಕಾಶಂ ಮುಷ್ಟಿಭಿರ್ಘ್ನತಃ ॥1॥
ತಾನೇವೇಂದ್ರಸ್ಯ ಹಿ ಧನುರನಾಮ್ಯಂ ನಮತೋಽಬ್ರವೀತ್ ।
ಅಥೋ ಮರೀಚಿನಃ ಪಾದಾನಗ್ರಾಹ್ಯಾನ್ ಗೃಹ್ಣತಸ್ತಥಾ ॥2॥
ವಿದುರ ಎಲೈ ರಾಜೇಂದ್ರನೇ, ವಿಚಿತ್ರವೀರ್ಯಪುತ್ರನೇ, ಈ ಹದಿನೇಳು ಪುರುಷರನ್ನು ಆಕಾಶವನ್ನು ಮುಷ್ಟಿಯಿಂದ ಗುದ್ದುವವರು ಎಂದು ಸ್ವಾಯಂಭುವ ಮನುವು ಹೇಳಿದ್ದಾನೆ. ಅವರನ್ನೇ ಬಗ್ಗಿಸಲಾರದ ಇಂದ್ರನ ಧನುಸ್ಸನ್ನು (ಕಾಮನ ಬಿಲ್ಲನ್ನು) ಬಗ್ಗಿಸುವವರೆಂದೂ ಮತ್ತು ಕೈಯಲ್ಲಿ ಹಿಡಿಯಲಾಗದ ಸೂರ್ಯಕಿರಣಗಳನ್ನು ಕೈಯಲ್ಲಿ ಹಿಡಿಯುವವರೆಂದೂ ಹೇಳಿದ್ದಾನೆ.
ಯಚ್ಚಾಶಿಷ್ಯಂ ಶಾಸ್ತಿ ವೈ ಯಶ್ಚ ತುಷ್ಯೇದ್
ಯಶ್ಚಾತಿವೇಲಂ ಭಜತೇ ದ್ವಿಷಂತಮ್ ।
ಸ್ತ್ರಿಯಶ್ಚ ನೋ ರಕ್ಷತಿ ಭದ್ರಮಸ್ತು ತೇ
ಯಶ್ಚಾಯಾಚ್ಯಂ ಯಾಚತೇ ಕಥ್ಯತೇ ವಾ ॥3॥
ಯಾವನು ಶಿಷ್ಯನಲ್ಲದವನಿಗೆ ಶಾಸನ ಮಾಡುತ್ತಾನೆಯೋ, ಯಾವನು ತೃಪ್ತಿಯನ್ನು ಪಡುತ್ತಾನೆಯೋ, ಯಾವನು ಶತ್ರುವನ್ನು ಬಹಳವಾಗಿ ಭಜಿಸುತ್ತಾನೆಯೋ, ಯಾವನು ಸ್ತ್ರೀಯರನ್ನು ರಕ್ಷಿಸುವುದಿಲ್ಲವೋ, ಯಾವನು ಬೇಡಬಾರದವನನ್ನು ಬೇಡುತ್ತಾನೆಯೋ ಅಥವಾ ಹೊಗಳುತ್ತಾನೆಯೋ;
ಯಶ್ಚಾಭಿಜಾತಃ ಪ್ರಕರೋತ್ಯಕಾರ್ಯಂ
ಯಶ್ಚಾಬಲೋ ಬಲಿನಾಂ ನಿತ್ಯವೈರೀ ।
ಅಶ್ರದ್ದಧಾನಾಯ ಚ ಯೋ ಬ್ರವೀತಿ
ಯಶ್ಚಾಕಾಮಂ ಕಾಮಯತೇ ನರೇಂದ್ರ ॥4॥
ಯಾವನು ಒಳ್ಳೆಯ ಕುಲದಲ್ಲಿ ಹುಟ್ಟಿ ಅಕಾರ್ಯವನ್ನು ಮಾಡುತ್ತಾನೆಯೋ, ಯಾವನು ದುರ್ಬಲನಾಗಿ ಬಲಿಷ್ಠರ ಜೊತೆಯಲ್ಲಿ ನಿತ್ಯವೂ ವೈರವನ್ನು ಮಾಡುತ್ತಾನೆಯೋ, ಯಾವನು ಶ್ರದ್ಧೆ ಇಲ್ಲದವರಿಗೆ ಉಪದೇಶ ಮಾಡುತ್ತಾನೆಯೋ, ಯಾವನು ಕಾಮವಿಲ್ಲದವನನ್ನು ಕಾಮಿಸುತ್ತಾನೆಯೋ;
ವಧ್ವಾ ವಾಸಂ ಶ್ವಶುರೋ ಯಶ್ಚ ಮನ್ಯತೇ
ವಧ್ವಾ ವಾಸಂ ಸಹತೇ ಮಾನಕಾಮಃ ।
ಪರಕ್ಷೇತ್ರೇ ನಿರ್ವಪತಿ ಯಶ್ಚ ಬೀಜಂ
ಸ್ತ್ರಿಯಶ್ಚ ಯಃ ಪರಿವದತೇಽತಿವೇಲಮ್ ॥5॥
ಎಲೈ ನರೇಂದ್ರನೇ, ಯಾವ ಮಾವನು ಸೊಸೆಯ ಜೊತೆಯಲ್ಲಿ ವಾಸ ಮಾಡುವುದನ್ನು ಅಂಗೀಕರಿಸುತ್ತಾನೆಯೋ, ಯಾವ ಮಾನವುಳ್ಳವನು ಸೊಸೆಯ ಜೊತೆಯಲ್ಲಿ ವಾಸವನ್ನು ಸಹಿಸುತ್ತಾನೆಯೋ, ಯಾವನು ಪರಕ್ಷೇತ್ರದಲ್ಲಿ ಬೀಜಾವಾಪ ಮಾಡುತ್ತಾನೆಯೋ, ಯಾವನು ಸ್ತ್ರೀಯರನ್ನು ಬಹಳವಾಗಿ ನಿಂದಿಸುತ್ತಾನೆಯೋ;
ಯಶ್ಚಾಪಿ ಲಬ್ಧ್ವಾ ನ ಸ್ಮರಾಮೀತಿ ವಾದೀ
ದತ್ವಾ ಚ ಯಃ ಕತ್ಥತಿ ಯಾಚ್ಯಮಾನಮ್ ।
ಯಶ್ಚಾಸತಃ ಸತ್ವಮುಪಾನಯೀತ
ಏತಾನ್ ನಯಂತಿ ನಿರಯಂ ಪಾಶಹಸ್ತಾಃ ॥6॥
ಯಾವನು ಒಬ್ಬನಿಂದ ವಸ್ತುವನ್ನು ತೆಗೆದುಕೊಂಡು ನನಗೆ ಅದರ ಸ್ಮರಣೆ ಇಲ್ಲ ಎಂದು ಹೇಳುತ್ತಾನೆಯೋ, ಬೇಡುವವನಿಗೆ ನೀಡಿ ಯಾವನು ತನ್ನನ್ನೇ ಹೊಗಳಿ ಕೊಳ್ಳುತ್ತಾನೆಯೋ, ಯಾವನು ಅಸಜ್ಜನರಿಂದ ವಸ್ತುಗಳನ್ನು ಸ್ವೀಕರಿಸುತ್ತಾನೆಯೋ ಈ ಹದಿನೇಳು ಜನರನ್ನು ಪಾಶಹಸ್ತರಾದ ಯಮಭಟರು ನರಕಕ್ಕೆ ಒಯ್ಯುತ್ತಾರೆ.
ಯಸ್ಮಿನ್ ಯಥಾ ವರ್ತತೇ ಯೋ ಮನುಷ್ಯಃ
ತಸ್ಮಿಂಸ್ತಥಾ ವರ್ತಿತವ್ಯಂ ಸ ಧರ್ಮಃ ।
ಮಾಯಾಚಾರೋ ಮಾಯಯಾ ಬಾಧಿತವ್ಯಃ
ಸಾಧ್ವಾಚಾರಃ ಸಾಧುನಾ ಪ್ರತ್ಯುಪೇಯಃ ॥7॥
ಯಾವ ಮನುಷ್ಯನು ಯಾರಲ್ಲಿ ಯಾವ ರೀತಿಯಲ್ಲಿ ನಡೆದುಕೊಳ್ಳುತ್ತಾನೆಯೋ, ಆ ಮನುಷ್ಯನ ವಿಷಯದಲ್ಲಿಯೂ ಹಾಗೆಯೇ ನಡೆದುಕೊಳ್ಳುವುದು ಧರ್ಮ. ಕಪಟದಿಂದ ನಡೆದುಕೊಳ್ಳುವವರನ್ನು ಕಪಟದಿಂದಲೇ ಬಾಧಿಸಬೇಕು. ಒಳ್ಳೆಯ ನಡತೆಯುಳ್ಳವರನ್ನು ಒಳ್ಳೆಯ ನಡತೆಯಿಂದಲೇ ಸ್ವೀಕರಿಸಬೇಕು.

ಜರಾ ರೂಪಂ ಹರತಿ ಹಿ ಧೈರ್ಯಮಾಶಾ
ಮೃತ್ಯುಃ ಪ್ರಾಣಾನ್ ಧರ್ಮಚರ್ಯಾಮಸೂಯಾ |
ಕಾಮೋ ಹ್ರಿಯಂ ವೃತ್ತಮನಾರ್ಯಸೇವಾ
ಕ್ರೋಧಃ ಶ್ರಿಯಂ ಸರ್ವಮೇವಾಭಿಮಾನಃ ॥8॥
ಮುಪ್ಪು ರೂಪವನ್ನು ನಾಶಪಡಿಸುತ್ತದೆ. ಆಸೆಯು ಧೈರ್ಯವನ್ನು ನಾಶಪಡಿಸುತ್ತದೆ. ಮೃತ್ಯುವು ಪ್ರಾಣಗಳನ್ನು ನಾಶಪಡಿಸುತ್ತದೆ. ಅಸೂಯೆಯು ಧರ್ಮಾಚರಣೆಯನ್ನು ನಾಶಪಡಿಸುತ್ತದೆ. ಕಾಮವು ನಾಚಿಕೆಯನ್ನು ನಾಶಪಡಿಸುತ್ತದೆ. ಅನಾರ್ಯಸೇವೆಯು ನಡತೆಯನ್ನು ನಾಶಪಡಿಸುತ್ತದೆ. ಕ್ರೋಧವು ಸಂಪತ್ತನ್ನು ನಾಶಪಡಿಸುತ್ತದೆ. ಅಹಂಕಾರವು ಎಲ್ಲವನ್ನೂ ನಾಶಪಡಿಸುತ್ತದೆ.
ಧೃತರಾಷ್ಟ್ರಃ
ಶತಾಯುರುಕ್ತಃ ಪುರುಷಃ ಸರ್ವವೇದೇಷು ವೈ ಯದಾ |
ಪ್ರಾಪ್ನೋತ್ಯಥ ಚ ತತ್ ಸರ್ವಮಾಯುಃ ಕೇನೇಹ ಹೇತುನಾ ॥9॥
ಧೃತರಾಷ್ಟ್ರ ಎಲ್ಲ ವೇದಗಳಲ್ಲಿ ಪುರುಷನಿಗೆ ನೂರುವರ್ಷ ಆಯುಸ್ಸು ಎಂದು ಹೇಳಲ್ಪಟ್ಟಿದೆ. ಪುರುಷನು ಆ ಪೂರ್ಣವಾದ ಆಯುಸ್ಸನ್ನು ಯಾವ ಕಾರಣದಿಂದ ಪಡೆಯುತ್ತಾನೆ?
ವಿದುರಃ
ಅಭಿಮಾನೋಽತಿವಾದಶ್ಚ ತಥಾಽತ್ಯಾಗೋ ನರಾಧಿಪ |
ಕ್ರೋಧಶ್ಚಾತ್ಮವಿಧಿತ್ಸಾ ಚ ಮಿತ್ರದ್ರೋಹಶ್ಚ ತಾನಿ ಷಟ್ ॥10॥
ಏತ ಏವಾಯಸಸ್ತೀಕ್ಷ್ಣಾಃ ಕೃಂತಂತ್ಯಾಯೂಂಷಿ ದೇಹಿನಾಮ್ |
ಏತಾನಿ ಮಾನವಾನ್ ಘ್ನಂತಿ ನ ಮೃತ್ಯುರ್ಭದ್ರಮಸ್ತು ತೇ ॥11॥
ವಿದುರ ಎಲೈ ನರಾಧಿಪನೇ, ಅಹಂಕಾರ, ಪರನಿಂದೆ, ಅತ್ಯಾಗ, ಕ್ರೋಧ, ಸ್ವಾರ್ಥಪರತೆ, ಮಿತ್ರದ್ರೋಹ ಈ ಆರು ಪದಾರ್ಥಗಳೇ ಹರಿತವಾದ ಕತ್ತಿಗಳು. ಅವು ಪುರುಷನ ಆಯಸ್ಸನ್ನು ಕತ್ತರಿಸುತ್ತವೆ. ಮನುಷ್ಯರನ್ನು ಇವೇ ಕೊಲ್ಲುತ್ತವೆ. ಮೃತ್ಯುವು ಕೊಲ್ಲುವುದಲ್ಲ. ನಿನಗೆ ಮಂಗಳವಾಗಲಿ.
ವಿಶ್ವಸ್ತಸ್ಯೈತಿ ಯೋ ದಾರಾನ್ ಯಶ್ಚಾಪಿ ಗುರುತಲ್ಪಗಃ |
ವೃಷಲೀಪತಿರ್ದ್ವಿಜೋ ಯಶ್ಚ ಪಾನಪಶ್ಚೈವ ಭಾರತ ॥12॥
ಆದೇಶಕೃದ್ ವೃತ್ತಿಹಂತಾ ದ್ವಿಜಾನಾಂ ಪ್ರೇಷಕಶ್ಚ ಯಃ |
ಶರಣಾಗತಹಾ ಚೈವ ಸರ್ವೇ ಬ್ರಹ್ಮಹಣೈಃ ಸಮಾಃ ॥13॥
ಏತೈಃ ಸಮೇತ್ಯ ಕರ್ತವ್ಯಂ ಪ್ರಾಯಶ್ಚಿತ್ತಮಿತಿ ಸ್ಮೃತಮ್ ॥14॥
ಯಾವನು ವಿಶ್ವಾಸಪಾತ್ರನ ಪತ್ನಿಯ ಮೇಲೆ ಅತ್ಯಾಚಾರ ಮಾಡುತ್ತಾನೆಯೋ, ಯಾವನು ಗುರುಪತ್ನಿಯ ಸಹವಾಸವನ್ನು ಮಾಡುತ್ತಾನೆಯೋ, ಎಲೈ ಭಾರತನೇ, ಯಾವ ದ್ವಿಜನು ಶೂದ್ರಳನ್ನು ಮದುವೆ ಮಾಡಿಕೊಳ್ಳುತ್ತಾನೆಯೋ ಮತ್ತು ಮದ್ಯಪಾನವನ್ನು ಮಾಡುತ್ತಾನೆಯೋ, ಯಾವನು ಬ್ರಾಹ್ಮಣರಿಗೆ ಆಜ್ಞೆ ಮಾಡುತ್ತಾನೆಯೋ, ಬ್ರಾಹ್ಮಣರನ್ನು ಯಾವನು ಸೇವಕನನ್ನಾಗಿ ಮಾಡಿಕೊಳ್ಳುತ್ತಾನೆಯೋ, ಯಾವನು ಶರಣಾಗತರಾದವರನ್ನು ಕೊಲ್ಲುತ್ತಾನೆಯೋ ಇವರೆಲ್ಲರೂ ಬ್ರಹ್ಮಹತ್ಯೆಯನ್ನು ಮಾಡಿದವರಿಗೆ ಸಮಾನರಾದವರು. ಇವರ ಸಹವಾಸವನ್ನು ಮಾಡಿದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ಗೃಹೀ ವದಾನ್ಯೋಽನಪವಿದ್ಧಾಗ್ನಿಹೋತ್ರಃ
ಶೇಷಾನ್ನಭೋಕ್ತಾ ಹ್ಯವಿಹಿಂಸಕಶ್ಚ |
ನಾನರ್ಥಕೃತ್ಯಾಕುಲಿತಃ ಕೃತಜ್ಞಃ
ಸತ್ಯೋ ಮೃದುಃ ಸ್ವರ್ಗಮುಪೈತಿ ವಿದ್ವಾನ್ ॥15॥
ಉದಾರಿಯೂ, ಅಗ್ನಿಹೋತ್ರವನ್ನು ಬಿಡದವನೂ, ಯಜ್ಞ ಮತ್ತು ಅತಿಥಿಗಳ ಶೇಷವನ್ನು ಭುಂಜಿಸುವವನೂ, ಇನ್ನೊಬ್ಬರನ್ನು ಹಿಂಸೆ ಮಾಡದವನೂ, ಅನರ್ಥವಾದ ಕಾರ್ಯಗಳನ್ನು ಮಾಡದವನೂ, ಕೃತಜ್ಞನಾದವನೂ, ಸತ್ಯವಚನನೂ, ಮೃದುವೂ, ವಿದ್ವಾಂಸನೂ ಆದ ಗೃಹಸ್ಥನು ಸ್ವರ್ಗವನ್ನು ಪಡೆಯುತ್ತಾನೆ.
ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ |
ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥16॥
ರಾಜನೇ, ಸತತವಾಗಿ ಪ್ರಿಯವನ್ನು ಮಾತನಾಡುವ ಪುರುಷರು ಸುಲಭವಾಗಿ ದೊರೆಯುತ್ತಾರೆ. ಅಪ್ರಿಯವಾದರೂ ಹಿತವನ್ನು ಹೇಳುವವನು ಮತ್ತು ಕೇಳುವವನು ಇಬ್ಬರೂ ದುರ್ಲಭರು.
ಯೋ ಹಿ ಧರ್ಮಂ ಸಮಾಶ್ರಿತ್ಯ ಹಿತ್ವಾ ಭರ್ತುಃ ಪ್ರಿಯಾಪ್ರಿಯೇ |
ಅಪ್ರಿಯಾಣ್ಯಾಹ ಪಥ್ಯಾನಿ ತೇನ ರಾಜಾ ಸಹಾಯವಾನ್ ॥17॥
ಯಾವನು ಧರ್ಮವನ್ನು ಅವಲಂಬಿಸಿ ಸ್ವಾಮಿಯ ಪ್ರಿಯಾಪ್ರಿಯಗಳನ್ನು ಲೆಕ್ಕಿಸದೆ ಅವನಿಗೆ ಹಿತವಾದುದನ್ನೇ ನುಡಿಯುತ್ತಾನೆಯೋ ರಾಜನು ಅಂತಹವನಿಂದ ಸಹಾಯವುಳ್ಳವನಾಗುತ್ತಾನೆ.
ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ |
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥18॥
ಒಂದು ಕುಲದ ಸಲುವಾಗಿ ಒಬ್ಬ ಪುರುಷನನ್ನು ಬಿಡಬೇಕಾದೀತು. ಒಂದು ಗ್ರಾಮದ ಸಲುವಾಗಿ ಒಂದು ಕುಲವನ್ನು ಬಿಡಬೇಕಾದೀತು. ಜನಪದದ (ರಾಜ್ಯದ) ಸಲುವಾಗಿ ಒಂದು ಗ್ರಾಮವನ್ನು ಬಿಡಬೇಕಾದೀತು. ತನ್ನ ಸಲುವಾಗಿ ಇಡೀ ಭೂಮಿಯನ್ನೇ ಬಿಡಬೇಕಾದೀತು.
ಆಪದರ್ಥಂ ಧನಂ ರಕ್ಷೇದ್ ದಾರಾನ್ ರಕ್ಷೇದ್ ಧನೈರಪಿ |

ಆತ್ಮಾನಂ ಸರ್ವತೋ ರಕ್ಷೇದ್ ದಾರೈರಪಿ ಧನೈರಪಿ ॥19॥
ಆಪತ್ತಿಗೋಸ್ಕರವಾಗಿ (ಆಪತ್ತನ್ನು ಪರಿಹಾರ ಮಾಡಿಕೊಳ್ಳಲು) ಧನವನ್ನು ರಕ್ಷಿಸಬೇಕು. ಧನದಿಂದ ಪತ್ನಿಯರನ್ನು ರಕ್ಷಿಸಬೇಕು. ಪತ್ನಿಯರಿಂದಲೂ ಮತ್ತು ಧನದಿಂದಲೂ ತನ್ನನ್ನು ಎಲ್ಲ ರೀತಿಯಲ್ಲಿಯೂ ರಕ್ಷಿಸಿಕೊಳ್ಳಬೇಕು.
ದ್ಯೂತಮೇತತ್ ಪುರಾ ಕಲ್ಪೇ ದೃಷ್ಟಂ ವೈರಕರಂ ನೃಣಾಮ್ |
ತಸ್ಮಾದ್ ದ್ಯೂತಂ ನ ಸೇವೇತ ಹಾಸ್ಯಾರ್ಥಮಪಿ ಬುದ್ಧಿಮಾನ್ ॥20॥
ಹಿಂದಿನ ಕಲ್ಪದಲ್ಲಿ ಈ ದ್ಯೂತವು ಮನುಷ್ಯರಿಗೆ ವೈರವನ್ನು ಉಂಟುಮಾಡುವಂತಹದು ಎಂದು ದೃಷ್ಟವಾಗಿದೆ. ಆದ್ದರಿಂದ ವಿವೇಕಿಯಾದವನು ಹಾಸ್ಯದ ಸಲುವಾಗಿಯೂ ದ್ಯೂತವನ್ನು ಸೇವಿಸಬಾರದು.
ಉಕ್ತಂ ಮಯಾ ದ್ಯೂತಕಾಲೇಽಪಿ ರಾಜನ್
ನೇದಂ ಯುಕ್ತಂ ವಚನಂ ಪ್ರಾತಿಪೇಯಮ್ |
ಯಥೌಷಧಂ ಪಥ್ಯಮಿವಾತುರಸ್ಯ
ನ ರೋಚತೇ ತವ ವೈಚಿತ್ರವೀರ್ಯ ॥21॥
ರಾಜನೇ, ದ್ಯೂತಕಾಲದಲ್ಲಿಯೂ ನಾನು ನಿನಗೆ ಈ ಮಾತನ್ನು ಹೇಳಿದೆ. ಆದರೆ ವಿಚಿತ್ರವೀರ್ಯಪುತ್ರನೇ, ರೋಗಿಗೆ ಔಷಧವು ಹಿಡಿಸದಿರುವಂತೆ ನನ್ನ ಯೋಗ್ಯವಾದ ಈ ಮಾತುಗಳು ನಿನಗೆ ಹಿಡಿಸುವುದಿಲ್ಲ.
ಕಾಕೈರಿಮಾಂಶ್ಚಿತ್ರಬರ್ಹಾನ್ ಮಯೂರಾನ್
ಪರಾಜಯೇಥಾಃ ಪಾಂಡವಾನ್ ಧಾರ್ತರಾಷ್ಟ್ರೈಃ |
ಹಿತ್ವಾ ಸಿಂಹಾನ್ ಕ್ರೋಷ್ಟುಕಾನ್ ಗೂಹಮಾನಃ
ಪ್ರಾಪ್ತೇ ಕಾಲೇ ಶೋಚಿತಾ ತ್ವಂ ನರೇಂದ್ರ ॥22॥
ನರೇಂದ್ರನೇ, ಕಾಗೆಗಳಂತಿರುವ ನಿನ್ನ ಪುತ್ರರಿಂದ ಸುಂದರವಾದ ಪುಕ್ಕಗಳಿರುವ ನವಿಲುಗಳಾದ ಈ ಪಾಂಡವರನ್ನು ನೀನು ಪರಾಜಯಿಸುತ್ತಿದ್ದೀಯೆ. ಸಿಂಹಗಳನ್ನು ತ್ಯಜಿಸಿ ನರಿಗಳನ್ನು ರಕ್ಷಿಸುವ ನೀನು ಕಾಲವು ಬಂದಾಗ ಶೋಕಪಡುವವನಾಗುವಿ.
ಯಸ್ತಾತ ನೋ ಕುದ್ಧ್ಯತಿ ಸರ್ವಕಾಲಂ
ಭೃತ್ಯಸ್ಯ ಭಕ್ತಸ್ಯ ಹಿತೇ ರತಸ್ಯ |
ಯಸ್ಮಿನ್ ಭೃತ್ಯಾ ಭರ್ತರಿ ವಿಶ್ವಸಂತಿ
ನ ಚೈನಮಾಪತ್ಸು ಪರಿತ್ಯಜಂತಿ ॥23॥
ಪ್ರೀತಿಪಾತ್ರನೇ, ಯಾವನು ಭೃತ್ಯರಲ್ಲಿ, ಭಕ್ತರಲ್ಲಿ ಮತ್ತು ತನ್ನ ಹಿತದಲ್ಲಿ ರತರಾದವರ ವಿಷಯದಲ್ಲಿ ಯಾವಾಗಲೂ ಕೋಪಗೊಳ್ಳುವುದಿಲ್ಲವೋ, ಯಾವ ಪ್ರಭುವಿನಲ್ಲಿ ಭೃತ್ಯರು ವಿಶ್ವಾಸ ಮಾಡುತ್ತಾರೆಯೋ ಅಂತಹ ಭೃತ್ಯರು ಆ ಪ್ರಭುವನ್ನು ಆಪತುತಗಳು ಒದಗಿದಾಗ ಪರಿತ್ಯಜಿಸುವುದಿಲ್ಲ.
ನ ಭೃತ್ಯಾನಾಂ ವೃತ್ತಿಸಂರೋಧನೇನ
ರಾಜ್ಯಂ ಧನಂ ಸಂಜಿಘೃಕ್ಷೇದಪೂರ್ವಮ್ |
ತ್ಯಜಂತಿ ಹ್ಯೇನಂ ವಂಚಿತಾ ವೈ ವಿರುದ್ಧಾಃ
ಸ್ನಿಗ್ಧಾ ಹ್ಯಮಾತ್ಯಾಃ ಪರಿಹೀನಭೋಗಾಃ ॥24॥
ಭೃತ್ಯರ ವೇತನವನ್ನು ನಿಲ್ಲಿಸಿ ರಾಜ್ಯವನ್ನಾಗಲೀ, ಹೊಸದಾದ ಧನವನ್ನಾಗಲೀ ಸಂಗ್ರಹ ಮಾಡಬಾರದು. ಸ್ನಿಗ್ಧರಾದ ಅಮಾತ್ಯರು ತಮ್ಮ ಭೋಗವನ್ನು ಕಳೆದುಕೊಂಡು ವಂಚಿತರಾದರೆ ಆ ರಾಜನಿಗೆ ವಿರುದ್ಧವಾಗಿ ನಿಲ್ಲುತ್ತಾರೆ.
ಕೃತ್ಯಾನಿ ಪೂರ್ವಂ ಪರಿಸಂಖ್ಯಾಯ ಸರ್ವಾ-
ಣ್ಯಾಯವ್ಯಯೌ ಚಾನುರೂಪಾಂ ಚ ವೃತ್ತಿಮ್ |
ಸಂಗೃಹ್ಣೀಯಾದನುರೂಪಾನ್ ಸಹಾಯಾನ್
ಸಹಾಯಸಾಧ್ಯಾನಿ ಹಿ ದುಷ್ಕರಾಣಿ ॥25॥
ಮಾಡಬೇಕಾದ ಕಾರ್ಯಗಳನ್ನು ಮೊದಲು ಗಣನೆ ಮಾಡಿ, ಅದಕ್ಕೆ ಬೇಕಾದ ಆಯವ್ಯಯಗಳನ್ನು ಗಮನಿಸಿ, ಮಾಡಬೇಕಾದ ರೀತಿಯನ್ನೂ ಗಮನಿಸಿ, ಅದನ್ನು ಮಾಡುವ ತನಗೆ ಸಹಾಯಕರಾದ ಅನುರೂಪರಾದ ಪುರುಷರನ್ನೂ ಸಂಗ್ರಹಿಸಿ ಕಾರ್ಯವನ್ನು ಮಾಡಬೇಕು. ಕಷ್ಟವಾದ ಕೆಲಸಗಳನ್ನು ಸಹಾಯದಿಂದಲೇ ಮಾಡಬೇಕು.
ಅಭಿಪ್ರಾಯಂ ಯೋ ವಿದಿತ್ವಾ ತು ಭರ್ತುಃ
ಸರ್ವಾಣಿ ಕಾರ್ಯಾಣಿ ಕರೋತ್ಯವಕ್ರಃ |
ವಕ್ತಾ ಹಿತಾನಾಮನುರಕ್ತ ಆರ್ಯಃ
ಶಕ್ತಿಜ್ಞ ಆತ್ಮೇವ ಹಿ ಸೋಽನುಕಂಪ್ಯಃ ॥26॥
ಸ್ವಾಮಿಯ ಅಭಿಪ್ರಾಯವನ್ನು ತಿಳಿದು ಎಲ್ಲ ಕಾರ್ಯಗಳನ್ನೂ ಯಾವನು ನೇರವಾಗಿ ಮಾಡುತ್ತಾನೆಯೋ, ಯಾವನು ಹಿತವನ್ನು ನುಡಿಯುತ್ತಾನೆಯೋ, ಯಾವನು ಪ್ರಭುವಿನ ಶಕ್ತಿಯನ್ನು ತಿಳಿದು ಅವನಲ್ಲಿ ಅನುರಕ್ತನಾಗುತ್ತಾನೆಯೋ ಅಂತಹ ಆರ್ಯನು ತನ್ನಂತೆಯೇ ಅನುಕಂಪೆಗೆ ಅರ್ಹನಾದವನು.
ವಾಕ್ಯಂ ತು ಯೋ ನಾದ್ರಿಯತೇಽನುಶಿಷ್ಟಃ
ಪ್ರತ್ಯಾಹ ಯಶ್ಚಾಪಿ ನಿಯುಜ್ಯಮಾನಃ |
ಪ್ರಾಜ್ಞಾಭಿಮಾನೀ ಪ್ರತಿಕೂಲವಾದೀ
ತ್ಯಾಜ್ಯಃ ಸ ತಾದೃಕ್ ತ್ವರಯೈವ ಭೃತ್ಯಃ ॥27॥

ಆಜ್ಞೆಯನ್ನು ಮಾಡಿದರೂ ಯಾವನು ಅದನ್ನು ಆದರಿಸುವುದಿಲ್ಲವೋ, ಕಾರ್ಯದಲ್ಲಿ ನಿಯೋಗವನ್ನು ಮಾಡಿದಾಗ ಯಾವನು ಎದುರು ಮಾತನಾಡುತ್ತಾನೆಯೋ, ಯಾವನು ತನ್ನನ್ನು ಪ್ರಾಜ್ಞನೆಂದು ತಿಳಿದಿದ್ದಾನೆಯೋ ಮತ್ತು ಪ್ರತಿಕೂಲವಾಗಿ ಮಾತನಾಡುತ್ತಾನೆಯೋ ಅಂತಹ ಭೃತ್ಯನನ್ನು ಬೇಗ ಪರಿತ್ಯಜಿಸಬೇಕು.

ಅಸ್ತಬ್ಧಮಕ್ಲೀಬಮದೀರ್ಘಸೂತ್ರಂ
ಸಾನುಕ್ರೋಶಂ ಶ್ಲಕ್ಷ್ಣಮಹಾರ್ಯಮನ್ಯೈಃ |
ಅರೋಗಜಾತೀಯಮುದಾರವಾಕ್ಯಂ
ದೂತಂ ವದಂತ್ಯಷ್ಟಗುಣೋಪಪನ್ನಮ್ ॥28॥

ಸ್ತಬ್ಧನಲ್ಲದವನು, ಹೇಡಿಯಲ್ಲದವನು, ವಿಲಂಬಕಾರಿಯಲ್ಲದವನು, ದಯೆಯಿಂದ ಕೂಡಿದವನು, ಸೂಕ್ಷ್ಮಕಾರಿಯಾದವನು, ಇನ್ನೊಬ್ಬರಿಂದ ಹಾರಿಸಲ್ಪಡದವನು, ಆರೋಗ್ಯವಾಗಿರುವವನು ಮತ್ತು ಉದಾರವಾಕ್ಯವನ್ನು ಮಾತನಾಡುವವನೂ - ಈ ಎಂಟು ಗುಣವುಳ್ಳವನಿಗೆ ದೂತನೆಂದು ಹೇಳುತ್ತಾರೆ.

ನ ವಿಶ್ವಾಸಾಜ್ಜಾತು ಪರಸ್ಯ ಗೇಹಂ
ಗಚ್ಛೇನ್ನರಶ್ಚೇತಯಾನೋ ವಿಕಾಲೇ |
ನ ಚತ್ವರೇ ನಿಶಿ ತಿಷ್ಠೇನ್ನಿಗೂಢೋ
ನ ರಾಜಕಾಮ್ಯಾಂ ಯೋಷಿತಂ ಪ್ರಾರ್ಥಯೀತ ॥29॥

ಇನ್ನೊಬ್ಬನ ಮೇಲಿನ ವಿಶ್ವಾಸದಿಂದ ಬುದ್ಧಿ ಇದ್ದ ಮನುಷ್ಯನು ಅಕಾಲದಲ್ಲಿ ಅವನ ಮನೆಗೆ ಹೋಗಬಾರದು. ಅಂಗಳದಲ್ಲಿ ರಾತ್ರಿಯ ವೇಳೆಯಲ್ಲಿ ಮರೆಯಲ್ಲಿ ನಿಲ್ಲಬಾರದು. ರಾಜನಿಗೆ ಇಷ್ಟವಾಗುವ ಸ್ತ್ರೀಯನ್ನು ಬಯಸಬಾರದು.

ನ ನಿಹ್ನವಂ ಮಂತ್ರಗತಸ್ಯ ಗಚ್ಛೇತ್
ಸಂಸೃಷ್ಟಮಂತ್ರಸ್ಯ ಕುಸಂಗತಸ್ಯ |
ನ ಚ ಬ್ರೂಯಾನ್ನಾಶ್ವಸಿಮಿ ತ್ವಯೀತಿ
ಸಕಾರಣಂ ವ್ಯಪದೇಶಂ ಚ ಕುರ್ಯಾತ್ ॥30॥

ರಾಜನು ಮಂತ್ರಾಲೋಚನೆಗೆ ಬಂದ ಕೆಟ್ಟಪುರುಷನನ್ನು ಪರಿಹರಿಸಬಾರದು. ನಿನ್ನಲ್ಲಿ ವಿಶ್ವಾಸವಿಲ್ಲ ಎಂದು ಹೇಳಬಾರದು. ಕಾರ್ಯವನ್ನು ಮಾಡುವುದು ಇಷ್ಟವಾಗದಿದ್ದರೆ ಅಥವಾ ಕಷ್ಟವಾದರೆ ಮಧ್ಯದಲ್ಲಿ ನದಿ ಇದೆ, ಈಗ ಮಳೆಗಾಲ, ರಾಜಕಾರ್ಯವನ್ನು ಹೇಗೆ ಮಾಡುವುದು ಮೊದಲಾಗಿ ಕಾರಣಸಹಿತವಾಗಿ ಕಾರ್ಯವನ್ನು ಮುಂದೂಡಬೇಕು. ಮೌನವಹಿಸಿ ಇರಬಾರದು (ವಾದಿರಾಜರು).

ಘೃಣೀ ರಾಜಾ ಪುಂಶ್ಚಲೀ ರಾಜಭೃತ್ಯಃ
ಪುತ್ರೋ ಭ್ರಾತಾ ವಿಧವಾ ಬಾಲಪುತ್ರಾ |
ಸೇನಾಜೀವೀ ಚೋದ್ಧೃತಭೂತಿರೇವ
ವ್ಯವಹಾರೇ ವೈ ವರ್ಜನೀಯಾ ಸ್ಯುರೇತೇ ॥31॥

ದಯಾಳು, ರಾಜ, ವೇಶ್ಯೆ, ರಾಜಭೃತ್ಯ, ಪುತ್ರ, ಭ್ರಾತೃ, ಚಿಕ್ಕಮಕ್ಕಳುಳ್ಳ ವಿಧವೆ, ಸೈನ್ಯದಲ್ಲಿ ಜೀವಿಸುವವನು, ತನ್ನ ಸಂಪತ್ತನ್ನು ಕಳೆದುಕೊಂಡವನು ಇಷ್ಟು ಜನರನ್ನು ವ್ಯವಹಾರ ಮಾಡುವಾಗ ಪರಿತ್ಯಜಿಸಬೇಕು.

ಗುಣಾ ದಶ ಸ್ನಾನಶೀಲಂ ಭಜಂತೇ
ಬಲಂ ರೂಪಂ ಸ್ವರವರ್ಣಪ್ರಶುದ್ಧಿಃ |
ಸ್ಪರ್ಶಶ್ಚ ಗಂಧಶ್ಚ ವಿಶುದ್ಧತಾ ಚ
ಶ್ರೀಃ ಸೌಕುಮಾರ್ಯಂ ಪ್ರವರಾಶ್ಚ ನಾರ್ಯಃ ॥32॥

ಬಲ, ರೂಪ, ಸ್ವರವರ್ಣಗಳ ಶುದ್ಧಿ, ಸ್ಪರ್ಶ, ಗಂಧ, ದೇಹದ ಶುದ್ಧಿ, ಕಾಂತಿ, ಕೋಮಲತೆ ಮತ್ತು ಸುಂದರಸ್ತ್ರೀಯರು ಈ ಹತ್ತುಗುಣಗಳು ಸ್ನಾನಶೀಲನನ್ನು ಬಂದು ಸೇರುತ್ತವೆ.

ಗುಣಾಶ್ಚ ಷಣ್ಮಿತಭುಕ್ತಂ ಭಜಂತೇ
ಆರೋಗ್ಯಮಾಯುಶ್ಚ ಬಲಂ ಸುಖಂ ಚ |
ಅನಾವಿಲಂ ಚಾಸ್ಯ ಭವತ್ಯಪತ್ಯಂ
ನ ಚೈನಾಮಾದ್ಯೂನ ಇತಿ ಕ್ಷಿಪಂತಿ ॥33॥

ಆರೋಗ್ಯ, ಆಯುಷ್ಯ, ಬಲ, ಸುಖ, ಆರೋಗ್ಯವುಳ್ಳ ಮಕ್ಕಳು ಮತ್ತು ಹೊಟ್ಟೆಬಾಕನೆಂಬ ನಿಂದೆಗೆ ಗುರಿಯಾಗದಿರುವುದು ಈ ಆರು ಗುಣಗಳು ಮಿತಭೋಜನವನ್ನು ಮಾಡುವವನನ್ನು ಬಂದು ಸೇರುತ್ತವೆ.

ಅಕರ್ಮಶೀಲಂ ಚ ಮಹಾಶನಂ ಚ
ಲೋಕದ್ವಿಷ್ಟಂ ಬಹುಮಾಯಂ ನೃಶಂಸಮ್ |
ಅದೇಶಕಾಲಜ್ಞಮನಿಷ್ಟವೇಷಮ್
ಏತಾನ್ ಗೃಹೇ ನ ಪ್ರತಿವಾಸಯೇತ ॥34॥

ಕಾರ್ಯವನ್ನು ಮಾಡದಿರುವವನು, ಬಹಳ ಭೋಜನವನ್ನು ಮಾಡುವವನು, ಎಲ್ಲ ಜನರ ದ್ವೇಷಕ್ಕೆ ಗುರಿಯಾದವನು, ಕಪಟಿಯಾದವನು, ಕ್ರೂರಿಯಾದವನು, ದೇಶ-ಕಾಲಜ್ಞಾನವಿಲ್ಲದವನು, ಕೆಟ್ಟ ಅಲಂಕಾರವನ್ನು ಮಾಡಿಕೊಳ್ಳುವವನು ಇಷ್ಟು ಜನರನ್ನು ಮನೆಯಲ್ಲಿ ವಾಸಿಸಲು ಇಟ್ಟುಕೊಳ್ಳಬಾರದು.

ಕದರ್ಯಮಾಕ್ರೋಶಕಮಶ್ರುತಂ ಚ
ವನೌಕಸಂ ಧೂರ್ತಮಮಾನ್ಯಮಾನಿನಮ್ |

ನಿಷ್ಠೂರಿಣಂ ಕೃತವೈರಂ ಕೃತಘ್ನಮ್
ಏತಾನ್ ಭೃಶಾರ್ತೋಽಪಿ ನ ಜಾತು ಯಾಚೇತ್ ॥35॥
ಕೆಟ್ಟ ಸ್ವಾಮಿ, ಕಿರುಚಿ ನಿಂದಿಸುವವನು, ಶಾಸ್ತ್ರಶ್ರವಣವಿಲ್ಲದವನು, ಕಿರಾತ, ಧೂರ್ತನಾದವನು, ಮಾನಕ್ಕೆ ಅಯೋಗ್ಯರಾದವರನ್ನು ಸನ್ಮಾನಿಸುವವನು, ನಿಷ್ಠೂರವಾಗಿ ಮಾತನಾಡುವವನು, ವೈರವನ್ನು ಮಾಡಿದವನು, ಕೃತಘ್ನನಾದವನು ಇವರನ್ನು ಎಷ್ಟೇ ಸಂಕಟ ಒದಗಿದರೂ ಯಾಚಿಸಬಾರದು.
ಸಂಶ್ಲಿಷ್ಟಕರ್ಮಾಣಮತಿಪ್ರಮಾದಂ
ನಿತ್ಯಾನೃತಂ ಚಾದೃಢಭಕ್ತಿಕಂ ಚ |
ವಿಸ್ಪಷ್ಟರಾಗಂ ಪಟುಮಾನಿನಂ ಚಾ-
ಪ್ಯೇತಾನ್ ನ ಸೇವೇತ ನರಾಧಮಾನ್ ಷಟ್ ॥36॥
ಜನರ ಗುಂಪು ಇದ್ದಾಗ ಮಾತ್ರ ಸತ್ಕರ್ಮವನ್ನು ಮಾಡುವವನು (ಡಾಂಭಿಕನಾದವನು), ಯಾವಾಗಲೂ ಮರೆಯುವವನು, ನಿತ್ಯವೂ ಸುಳ್ಳನ್ನು ಹೇಳುವವನು, ತನ್ನಲ್ಲಿ ದೃಢವಾದ ಪ್ರೀತಿಯಿಲ್ಲದವನು, ತನ್ನ ಆಸೆಯನ್ನು ಸ್ಪಷ್ಟವಾಗಿ ಹೇಳಿಕೊಳ್ಳುವವನು, ತಾನು ಸಮರ್ಥನೆಂದು ತಿಳಿದಿರುವವನು - ಈ ಆರು ನರಾಧಮರನ್ನು ಎಂದೂ ಸೇವಿಸಬಾರದು.
ಸಹಾಯಬಂಧನಾ ಹ್ಯರ್ಥಾಃ ಸಹಾಯಾಶ್ಚಾರ್ಥಬಂಧನಾಃ |
ಅನ್ಯೋನ್ಯಬಂಧನಾವೇತೌ ವಿನಾಽನ್ಯೋನ್ಯಂ ನ ಸಿದ್ಧ್ಯತಃ ॥37॥
ಅರ್ಥಗಳು ಸಹಾಯದಿಂದ ಸಿದ್ಧಿಸುತ್ತವೆ. ಸಹಾಯಗಳು ಅರ್ಥದಿಂದ ಒದಗುತ್ತವೆ. ಹೀಗೆ ಅರ್ಥ ಮತ್ತು ಸಹಾಯಗಳು ಪರಸ್ಪರ ಬಂಧನವುಳ್ಳವುಗಳು. ಒಂದಿಲ್ಲದೆ ಇನ್ನೊಂದು ಸಿದ್ಧಿಸುವುದಿಲ್ಲ.
ಉತ್ಪಾದ್ಯ ಪುತ್ರಾನನೃಣಾಂಶ್ಚ ಕೃತ್ವಾ
ವೃತ್ತಿಂ ಚ ತೇಭ್ಯೋಽನುವಿಧಾಯ ಕಾಂಚಿತ್ |
ಸ್ಥಾನೇ ಕುಮಾರೀಃ ಪ್ರತಿಪಾದ್ಯ ಸರ್ವಾ
ಅರಣ್ಯಸಂಸ್ಥೋಽಥ ಮುನಿರ್ಬುಭೂಷೇತ್ ॥38॥
ಮಕ್ಕಳನ್ನು ಪಡೆದು, ಅವರಿಗೆ ಸಾಲವನ್ನು ಹೊರಿಸದೆ, ಅವರಿಗೆ ಜೀವನೋಪಾಯವನ್ನು ಕಲ್ಪಿಸಿ, ಎಲ್ಲಾ ಹೆಣ್ಣುಮಕ್ಕಳನ್ನು ಯೋಗ್ಯರಿಗೆ ದಾನ ಮಾಡಿ, ಅರಣ್ಯಕ್ಕೆ ಹೋಗುವ ಮುನಿಯು ಸಿದ್ಧಿಯನ್ನು ಪಡೆಯುತ್ತಾನೆ.
ಹಿತಂ ಯತ್ ಸರ್ವಭೂತಾನಾಮಾತ್ಮನಶ್ಚ ಸುಖಾವಹಮ್ |
ತತ್ ಕುರ್ಯಾದೀಶ್ವರೋ ಹ್ಯೇತನ್ಮೂಲಂ ಧರ್ಮಾರ್ಥಸಿದ್ಧಯೇ ॥39॥
ಎಲ್ಲ ಪ್ರಾಣಿಗಳಿಗೂ ಯಾವುದು ಹಿತವೋ ಮತ್ತು ತನಗೆ ಯಾವುದು ಸುಖವನ್ನು ತಂದುಕೊಡುತ್ತದೆಯೋ ಪ್ರಭುವಾದವನು ಅಂತಹ ಕಾರ್ಯವನ್ನು ಮಾಡಬೇಕು. ಇದು ಧರ್ಮಾರ್ಥ ಸಿದ್ಧಿಗಳಿಗೆ ಮೂಲವಾದುದು.
ವೃದ್ಧಿಃ ಪ್ರಭಾವಸ್ತೇಜಶ್ಚ ಸತ್ತ್ವಮುತ್ಥಾನಮೇವ ಚ |
ವ್ಯವಸಾಯಶ್ಚ ಯಸ್ಯ ಸ್ಯಾದ್ ತಸ್ಯ ವೃತ್ತಿಭಯಂ ಕುತಃ ॥40॥
ಯಾವನಿಗೆ ವೃದ್ಧಿ, ಪ್ರಭಾವ, ತೇಜಸ್ಸು, ಸತ್ತ್ವ, ಉತ್ಥಾನ ಮತ್ತು ನಿಷ್ಠೆಗಳು ಇರುತ್ತವೆಯೋ ಅವನಿಗೆ (ಜೀವನ) ವೃತ್ತಿಯ ಭಯವೇಕೆ?
ಪಶ್ಯ ದೋಷಾನ್ ಪಾಂಡವೈರ್ವಿಗ್ರಹೇ ತ್ವಂ
ಯತ್ರ ವ್ಯಥೇಯುರಪಿ ದೇವಾಃ ಸಶಕ್ರಾಃ |
ಪುತ್ರೈರ್ವೈರಂ ನಿತ್ಯಮುದ್ವಿಗ್ನವಾಸೋ
ಯಶಃಪ್ರಣಾಶೋ ದ್ವಿಷತಾಂ ಚ ಹರ್ಷಃ ॥41॥
ಇಂದ್ರನಿಂದ ಸಹಿತರಾದ ದೇವತೆಗಳೂ ಸಹ ಯಾವ ವಿರೋಧಕ್ಕೆ ಹೆದರುತ್ತಾರೆಯೋ ಅಂತಹ ಪಾಂಡವರ ಜೊತೆಯಲ್ಲಿ ವಿರೋಧವನ್ನು ಮಾಡಿದರೆ ಉಂಟಾಗುವ ದೋಷಗಳನ್ನು ಗಮನಿಸು. ಮಕ್ಕಳ ಜೊತೆಯಲ್ಲಿ ವೈರವು ನಿತ್ಯವಾಗಿ ಭಯದಿಂದ ವಾಸ ಮಾಡುವುದನ್ನು, ಕೀರ್ತಿಯ ನಾಶವನ್ನು, ಶತ್ರುಗಳ ಹರ್ಷವನ್ನು ಉಂಟುಮಾಡುತ್ತದೆ.
ಭೀಷ್ಮಸ್ಯ ಕೋಪಸ್ತವ ಚೈವೇಂದ್ರಕಲ್ಪ
ದ್ರೋಣಸ್ಯ ರಾಜ್ಞಶ್ಚ ಯುಧಿಷ್ಠಿರಸ್ಯ |
ಉತ್ಸಾದಯೇಲ್ಲೋಕಮಿಮಂ ಪ್ರವೃದ್ಧಃ
ಶ್ವೇತೋ ಗ್ರಹಸ್ತಿರ್ಯಕ್ಪತನ್ ವೈ ಯಥೈವ ॥42॥
ಎಲೈ ಇಂದ್ರನಿಗೆ ಸಮಾನನಾದವನೇ, ಭೀಷ್ಮರ, ದ್ರೋಣರ, ರಾಜನಾದ ಯುಧಿಷ್ಠಿರನ ಕೋಪವು ಮತ್ತು ನಿನ್ನ ಕೋಪವು ದೊಡ್ಡದಾಗಿ ಬೆಳೆದು ಧೂಮಕೇತುವು ಎರಗಿದಂತೆ ಈ ಲೋಕವನ್ನೇ ನಾಶ ಮಾಡೀತು.
ತವ ಪುತ್ರಶತಂ ಚೈವ ಕರ್ಣಃ ಪಂಚ ಚ ಪಾಂಡವಾಃ |
ಪೃಥಿವೀಮನುಶಾಸೇಯುರಖಿಲಾಂ ಸಾಗರಾಂಬರಾಮ್ ॥43॥
ನಿನ್ನ ನೂರುಮಕ್ಕಳು, ಕರ್ಣ ಮತ್ತು ಪಂಚಪಾಂಡವರು, ಸಮುದ್ರ ವಸನಳಾದ ಸಮಗ್ರವಾದ ಭೂಮಿಯನ್ನು ಆಳಿಯಾರು.
ಧಾರ್ತರಾಷ್ಟ್ರಾ ವನಂ ರಾಜನ್ ವ್ಯಾಘ್ರಾಃ ಪಾಂಡುಸುತಾ ಮತಾಃ |
ಮಾ ವನಂ ಛಿಂಧಿ ಸವ್ಯಾಘ್ರಂ ಮಾ ವ್ಯಾಘ್ರಾ ನೀನಶನ್ ವನಾತ್ ॥
ರಾಜನೇ, ಧೃತರಾಷ್ಟ್ರ ಪುತ್ರರು ವನ. ಪಾಂಡುಪುತ್ರರು ವ್ಯಾಘ್ರದಂತಿದ್ದಾರೆ. ವ್ಯಾಘ್ರಸಹಿತವಾದ ವನವನ್ನು ಕಡಿಯಬೇಡ. ವನದಿಂದ ವ್ಯಾಘ್ರಗಳು ನಾಶವಾಗದಿರಲಿ.
ನ ಸ್ಯಾದ್ ವನಮೃತೇ ವ್ಯಾಘ್ರೋ ವ್ಯಾಘ್ರೋ ನ ಸ್ಯಾದೃತೇ ವನಮ್ |

ವನಂ ಹಿ ರಕ್ಷ್ಯತೇ ವ್ಯೈರ್ಿವ್ಯಾರ್ಘ್ರಾನ್ ರಕ್ಷತಿ ಕಾನನಮ್ ॥45॥
ವನವಿಲ್ಲದೆ ವ್ಯಾಘ್ರವಿರುವುದಿಲ್ಲ. ವ್ಯಾಘ್ರವಿಲ್ಲದೆ ವನವೂ ಉಳಿಯುವುದಿಲ್ಲ. ವ್ಯಾಘ್ರಗಳು ವನವನ್ನು ರಕ್ಷಿಸುತ್ತವೆ, ವನವು ವ್ಯಾಘ್ರಗಳನ್ನು ರಕ್ಷಿಸುತ್ತದೆ.
ನ ತಥೇಚ್ಛಂತಿ ಕಲ್ಯಾಣಾನ್ ಪರೇಷಾಂ ವೇದಿತುಂ ಗುಣಾನ್ |
ಯದೇಷಾಂ ಜ್ಞಾತುಮಿಚ್ಛಂತಿ ನೈರ್ಗುಣ್ಯಂ ಪಾಪಚೇತಸಃ ॥46॥
ಪಾಪಬುದ್ಧಿಯುಳ್ಳವರು ಇನ್ನೊಬ್ಬರ ದೋಷವನ್ನು ತಿಳಿದುಕೊಳ್ಳಲು ಹೇಗೆ ಬಯಸುತ್ತಾರೆಯೋ ಹಾಗೆ ಅವರ ಕಲ್ಯಾಣಗುಣಗಳನ್ನು ತಿಳಿಯಲು ಬಯಸುವುದಿಲ್ಲ.
ಅರ್ಥಸಿದ್ಧಿಂ ಪರಾಮಿಚ್ಛನ್ ಧರ್ಮಮೇವಾದಿತಶ್ಚರೇತ್ |
ನ ಹಿ ಧರ್ಮಾದಪೈತ್ಯರ್ಥಃ ಸ್ವರ್ಗಲೋಕಾದಿವಾಮೃತಮ್ ॥47॥
ಶ್ರೇಷ್ಠವಾದ ಅರ್ಥಸಿದ್ಧಿಯನ್ನು ಬಯಸುವವನು ಮೊದಲು ಧರ್ಮವನ್ನು ಆಚರಿಸಬೇಕು. ಅಮೃತವು ಸ್ವರ್ಗಲೋಕವನ್ನು ಬಿಟ್ಟುಹೋಗದಂತೆ ಅರ್ಥವು ಧರ್ಮವನ್ನು ಬಿಟ್ಟು ಇರುವುದಿಲ್ಲ.
ಯಸ್ಯಾತ್ಮಾ ವಿರತಃ ಪಾಪಾತ್ ಕಲ್ಯಾಣೇ ಚ ನಿವೇಶಿತಃ |
ತೇನ ಸರ್ವಮಿದಂ ಬುದ್ಧಂ ಪ್ರಕೃತಿರ್ವಿಕೃತಿಶ್ಚ ಯಾ ॥48॥
ಯಾವನ ಮನಸ್ಸು ಪಾಪದಿಂದ ಹಿಂದಕ್ಕೆ ಬಂದು ಕಲ್ಯಾಣದಲ್ಲಿಯೇ ನೆಲೆಗೊಂಡಿರುತ್ತದೆಯೋ ಅವನು ಪ್ರಕೃತಿ-ವಿಕೃತಿಮಯವಾದ ಈ ಜಗತ್ತೆಲ್ಲವನ್ನೂ ತಿಳಿದವನಾಗಿರುತ್ತಾನೆ.
ಯೋ ಧರ್ಮಮರ್ಥಂ ಕಾಮಂ ಚ ಯಥಾಕಾಲಂ ನಿಷೇವತೇ |
ಧರ್ಮಾರ್ಥಕಾಮಸಂಯೋಗಂ ಸೋಽಮುತ್ರೇಹ ಚ ವಿಂದತಿ ॥49॥
ಯಾವನು ಧರ್ಮ, ಅರ್ಥ ಮತ್ತು ಕಾಮಗಳನ್ನು ಯೋಗ್ಯಕಾಲದಲ್ಲಿ ಸೇವಿಸುತ್ತಾನೆಯೋ ಧರ್ಮಾರ್ಥಕಾಮಗಳ ಸಂಯೋಗವನ್ನು ಯೋಗ್ಯಕಾಲದಲ್ಲಿ ಸೇವಿಸುತ್ತಾನೆಯೋ ಅವನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾನೆ.
ಸನ್ನಿಯಚ್ಛತಿ ಯೋ ವೇಗಮುತ್ಥಿತಂ ಕ್ರೋಧಹರ್ಷಯೋಃ |
ಸ ಶ್ರಿಯೋ ಭಾಜನಂ ರಾಜನ್ ಯಶ್ಚಾಪತ್ಸು ನ ಮುಹ್ಯತಿ ॥50॥
ಎಲೈ ರಾಜನೇ, ಯಾವನು ಉತ್ಪನ್ನವಾದ ಕ್ರೋಧ-ಹರ್ಷಗಳ ವೇಗವನ್ನು ನಿಯಂತ್ರಿಸುತ್ತಾನೆಯೋ ಮತ್ತು ಯಾವನು ಆಪತ್ತುಗಳಲ್ಲಿ ಮೋಹಕ್ಕೆ ಒಳಗಾಗುವುದಿಲ್ಲವೋ ಅವನು ಸಂಪತ್ತಿಗೆ ಭಾಜನನಾಗುತ್ತಾನೆ.
ಬಲಂ ಪಂಚವಿಧಂ ನಿತ್ಯಂ ಪುರುಷಾಣಾಂ ನಿಬೋಧ ಮೇ |
ಯತ್ತು ಬಾಹುಬಲಂ ನಾಮ ಪ್ರಥಮಂ ಬಲಮುಚ್ಯತೇ ॥51॥
ಅಮಾತ್ಯಲಾಭೋ ಭದ್ರಂ ತೇ ದ್ವಿತೀಯಂ ಬಲಮುಚ್ಯತೇ |
ತೃತೀಯಂ ಧನಲಾಭಂ ತು ಬಲಮಾಹುರ್ಮನೀಷಿಣಃ ॥52॥
ಯತ್ತ್ವಸ್ಯ ಸಹಜಂ ರಾಜನ್ ಪಿತೃಪೈತಾಮಹಂ ಬಲಮ್ |
ಅಭಿಜಾತಬಲಂ ನಾಮ ತಚ್ಚತುರ್ಥಂ ಬಲಂ ಸ್ಮೃತಮ್ ॥53॥
ಯೇನ ತ್ವೇತಾನಿ ಸರ್ವಾಣಿ ಸಂಗೃಹೀತಾನಿ ಭಾರತ |
ಯದ್ ಬಲಾನಾಂ ಬಲಂ ಶ್ರೇಷ್ಠಂ ತತ್ ಪ್ರಜ್ಞಾಬಲಮುಚ್ಯತೇ ॥54॥
ಪುರುಷರಿಗೆ ಯಾವಾಗಲೂ ಐದುವಿಧವಾದ ಬಲವಿದೆ. ಅದನ್ನು ನನ್ನಿಂದ ಕೇಳು. ಬಾಹುಬಲವೆಂದು ಕರೆಯಲ್ಪಡುವುದು ಮೊದಲನೆಯ ಬಲ. ಅಮಾತ್ಯಲಾಭವು ಎರಡನೆಯ ಬಲವೆನಿಸುತ್ತದೆ. ಧನಲಾಭವು ಮೂರನೆಯ ಬಲವೆಂದು ವಿವೇಕಿಗಳು ಹೇಳುತ್ತಾರೆ. ಎಲೈ ರಾಜನೆ, ಪಿತೃ-ಪಿತಾಮಹರಿಂದ ಬಂದ ಯಾವ ತನ್ನ ಸ್ವಂತ ಬಲವಿದೆಯೋ ಅದು ನಾಲ್ಕನೆಯ ಬಲವೆಂದು ಹೇಳಲ್ಪಡುತ್ತದೆ. ಎಲೈ ಭಾರತನೇ, ಯಾವುದು ಈ ಎಲ್ಲಾ ಬಲಗಳನ್ನೂ ಸಂಗ್ರಹಿಸುತ್ತದೆಯೋ, ಬಲಗಳಲ್ಲಿ ಶ್ರೇಷ್ಠ ಬಲವಾದ ಅದು ಪ್ರಜ್ಞಾಬಲವೆನಿಸುತ್ತದೆ.
ಮಹತೇ ಯೋಽಪಕಾರಾಯ ನರಸ್ಯ ಪ್ರಭವೇನ್ನರಃ |
ತೇನ ವೈರಂ ಸಮಾಸಜ್ಯ ದೂರಸ್ಥೋಽಸ್ಮೀತಿ ನಾಶ್ವಸೇತ್ ॥55॥
ಯಾವ ಮನುಷ್ಯನು ತನಗೆ ದೊಡ್ಡ ಅಪಕಾರವನ್ನು ಮಾಡಲು ಶಕ್ತನಾಗಿದ್ದಾನೆಯೋ ಅವನ ವೈರವನ್ನು ಸಂಪಾದಿಸಿ ನಾನು ಅವನಿಂದ ದೂರದಲ್ಲಿದ್ದೇನೆ ಎಂದು ಸಮಾಧಾನವನ್ನು ಹೊಂದಬಾರದು.
ಸ್ತ್ರೀಷು ರಾಜಸು ಸರ್ಪೇಷು ಸ್ವಾಧ್ಯಾಯೇ ಶತ್ರುಸೇವಿಷು |
ಭೋಗೇಷ್ವಾಯುಷಿ ವಿಶ್ವಾಸಂ ಕಃ ಪ್ರಾಜ್ಞಃ ಕರ್ತುಮರ್ಹತಿ ॥56॥
ಸ್ತ್ರೀಯರು, ರಾಜರು, ಸರ್ಪಗಳು, ಅಧ್ಯಯನ, ಶತ್ರುಗಳನ್ನು ಸೇವಿಸುವವರು, ಭೋಗಗಳು, ಆಯುಸ್ಸು, ಪ್ರಾಜ್ಞನಾದವನು ಈ ವಸ್ತುಗಳಲ್ಲಿ ವಿಶ್ವಾಸವನ್ನು ಮಾಡಬಾರದು (ಸ್ಥಿರವೆಂದು ನಂಬಬಾರದು).
ಪ್ರಜ್ಞಾಶರೇಣಾಭಿಹತಸ್ಯ ಜಂತೋಃ
ಚಿಕಿತ್ಸಕಾಃ ಸಂತಿ ನ ಚೌಷಧಾನಿ |
ನ ಹೋಮಮಂತ್ರಾ ನ ಚ ಮಂಗಲಾನಿ
ನಾಥರ್ವಣಾ ನಾಪ್ಯಗದಾಃ ಸುಸಿದ್ಧಾಃ ॥57॥
ಪ್ರಜ್ಞಾಬಾಣದಿಂದ ತಾಡಿತನಾದ ಮನುಷ್ಯನಿಗೆ (ಪ್ರಜ್ಞಾಶೂನ್ಯನಾದವನಿಗೆ) ಚಿಕಿತ್ಸಕರು ಇದ್ದಾರೆ, ಔಷಧಿಗಳಿಲ್ಲ. ಹೋಮಮಂತ್ರಗಳಾಗಲೀ, ಮಂಗಳಗಳಾಗಲೀ, ಅಥರ್ವಮಂತ್ರಗಳಾಗಲೀ ಅಥವಾ ಪ್ರಸಿದ್ಧವಾದ ಔಷಧಿಗಳಾಗಲೀ ಇಲ್ಲ.

ಸರ್ಪಶ್ಚಾಗ್ನಿಶ್ಚ ಸಿಂಹಶ್ಚ ಕುಲಪುತ್ರಶ್ಚ ಭಾರತ |
ನಾವಜ್ಞೇಯಾ ಮನುಷ್ಯೇಣ ಸರ್ವೇ ಹ್ಯೇತೇಽತಿತೇಜಸಃ ॥58॥
ಭಾರತನೇ, ಸರ್ಪ, ಅಗ್ನಿ, ಸಿಂಹ ಮತ್ತು ಕುಲಪುತ್ರ ಇವರಿಗೆ ಮನುಷ್ಯನು ಅವಮಾನವನ್ನು ಮಾಡಬಾರದು. ಇವರೆಲ್ಲರೂ ಬಹಳ ತೇಜಸ್ಸನ್ನು ಹೊಂದಿದವರು.
ಅಗ್ನಿಸ್ತೇಜೋ ಮಹಲ್ಲೋಕೇ ಗೂಢಸ್ತಿಷ್ಠತಿ ದಾರುಷು |
ನ ಚೋಪಯುಂಕ್ತೇ ತದ್ ದಾರು ಯಾವನ್ನೋದ್ದೀಪ್ಯತೇ ಪರೈಃ ॥59॥
ಸ ಏವ ಖಲು ದಾರುಭ್ಯೋ ಯದಾ ನಿರ್ಮಥ್ಯ ದೀಪ್ಯತೇ |
ತದ್ ದಾರು ಚ ವನಂ ಚಾನ್ಯನ್ನಿರ್ದಹತ್ಯಾಶು ತೇಜಸಾ ॥60॥
ಲೋಕದಲ್ಲಿ ದೊಡ್ಡ ತೇಜಸ್ಸಾದ ಅಗ್ನಿಯು ಕಟ್ಟಿಗೆಯಲ್ಲಿ ಗೂಢವಾಗಿರುತ್ತದೆ. ಇನ್ನೊಬ್ಬರು ಅದನ್ನು ಹತ್ತಿಸುವವರೆಗೆ ಅದು ಮರವನ್ನು ಭಕ್ಷಿಸುವುದಿಲ್ಲ. ಅದೇ ಕಟ್ಟಿಗೆಗಳಿಂದ ಮಥನ ಮಾಡಿ ಅಗ್ನಿಯನ್ನು ಹತ್ತಿಸಿದರೆ ಆ ಕಟ್ಟಿಗೆಯನ್ನು ಮತ್ತು ಆ ವನವನ್ನೂ ತನ್ನ ತೇಜಸ್ಸಿನಿಂದ ಶೀಘ್ರವಾಗಿ ಸುಡುತ್ತದೆ.
ಏವಮೇವ ಕುಲೇ ಜಾತಾಃ ಪಾವಕೋಪಮತೇಜಸಃ |
ಕ್ಷಮಾವಂತೋ ನಿರಾಕಾರಾಃ ಕಾಷ್ಠೇಽಗ್ನಿರಿವ ಶೇರತೇ ॥61॥
ಹೀಗೆಯೇ ಕುಲದಲ್ಲಿ ಹುಟ್ಟಿದವರೂ, ಅಗ್ನಿಯಂತೆ ತೇಜಸ್ಸುಳ್ಳವರೂ, ಕ್ಷಮಾವಂತರೂ ಆದ ಪಾಂಡವರು ತಮ್ಮ ಆಕಾರವನ್ನು ತೋರ್ಗೊಡದೆ ಕಾಷ್ಠದಲ್ಲಿ ಅಗ್ನಿಯಂತೆ ಇದ್ದಾರೆ.
ಲತಾಧರ್ಮಾ ತ್ವಂ ಸಪುತ್ರಃ ಸಾಲಾಃ ಪಾಂಡುಸುತಾ ಮತಾಃ |
ನ ಲತಾ ವರ್ಧತೇ ಜಾತು ಮಹಾದ್ರುಮಮನಾಶ್ರಿತಾ ॥62॥
ಪುತ್ರರಿಂದ ಒಡಗೂಡಿದ ನೀನು ಲತೆಯ ಧರ್ಮವನ್ನು ಹೊಂದಿದವನು. ಪಾಂಡುಸುತರು ಸಾಲವೃಕ್ಷಗಳೆಂದು ತಿಳಿಯಲ್ಪಡುತ್ತಾರೆ. ಮಹಾವೃಕ್ಷವನ್ನು ಆಶ್ರಯಿಸದ ಲತೆಯು ಎಂದೂ ಅಭಿವೃದ್ಧಿಯನ್ನು ಹೊಂದುವುದಿಲ್ಲ.
ವನಂ ರಾಜಂಸ್ತವ ಪುತ್ರೋಽಂಬಿಕೇಯ
ಸಿಂಹಾನ್ ವನೇ ಪಾಂಡವಾಂಸ್ತಾತ ವಿದ್ಧಿ |
ಸಿಂಹೈರ್ವಿಹೀನಂ ಹಿ ವನಂ ವಿನಶ್ಯೇತ್
ಸಿಂಹಾ ವಿನಶ್ಯೇಯುರ್ಋತೇ ವನೇನ ॥63॥
ಅಂಬಿಕೇಯನೇ, ರಾಜನೇ, ನಿನ್ನ ಮಗನು ವನ. ಪಾಂಡವರನ್ನು ವನದಲ್ಲಿರುವ ಸಿಂಹಗಳೆಂದು ತಿಳಿ. ಸಿಂಹಗಳಿಲ್ಲದಿದ್ದರೆ ವನವು ನಾಶವನ್ನು ಹೊಂದುತ್ತದೆ. ವನವಿಲ್ಲದಿದ್ದರೆ ಸಿಂಹಗಳೂ ನಾಶವನ್ನು ಹೊಂದುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೆಂಟನೆಯ ಅಧ್ಯಾಯ
ವಿದುರನೀತಿ.
ವಿದುರಃ
ಊರ್ಧ್ವಂ ಪ್ರಾಣಾ ಹ್ಯುತ್ಕ್ರಮಂತಿ ಯೂನಃ ಸ್ಥವಿರ ಆಗತೇ |
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥1॥
ವಿದುರ ಹಿರಿಯರು ಬಂದಾಗ ಯುವಕರ ಪ್ರಾಣಗಳು ತಮ್ಮ ಸ್ಥಾನದಿಂದ ಏಳುತ್ತವೆ. ಎದ್ದು ಹಿರಿಯರಿಗೆ ನಮಸ್ಕಾರವನ್ನು ಮಾಡುವುದರಿಂದ ಆ ಪ್ರಾಣಗಳು ಮೊದಲಿನ ಸ್ಥಾನವನ್ನು ಹೊಂದುತ್ತವೆ.
ಪೀಠಂ ದತ್ವಾ ಸಾಧವೇಽಭ್ಯಾಗತಾಯ
ಆನೀಯಾಪಃ ಪರಿನಿರ್ಣಿಜ್ಯ ಪಾದೌ |
ಸುಖಂ ಪೃಷ್ಟ್ವಾ ಪ್ರತಿವೇದ್ಯಾತ್ಮಸಂಸ್ಥಾಂ
ತತೋ ದದ್ಯಾದನ್ನಮವೇಕ್ಷ್ಯ ಧೀರಃ ॥2॥
ಧೀರನಾದವನು ಮನೆಗೆ ಬಂದ ಸಜ್ಜನರಿಗೆ ಕುಳಿತುಕೊಳ್ಳಲು ಆಸನವನ್ನು ಕೊಟ್ಟು, ನೀರನ್ನು ತಂದು, ಪಾದಗಳನ್ನು ತೊಳೆದು, ಅವರ ಕ್ಷೇಮವನ್ನು ಕೇಳಿ, ತನ್ನ ಕ್ಷೇಮವನ್ನು ತಿಳಿಸಿ ಅವನನ್ನು ನೋಡಿ ಅನಂತರ ಅನ್ನದಾನವನ್ನು ಮಾಡಬೇಕು.
ಯಸ್ಯೋದಕಂ ಮಧುಪರ್ಕಂ ಚ ಗಾಂ ಚ
ನ ಮಂತ್ರವಿತ್ ಪ್ರತಿಗೃಹ್ಣಾತಿ ಗೇಹೇ |
ಲೋಭಾದ್ ಭಯಾದರ್ಥಕಾರ್ಪಣ್ಯತೋ ವಾ
ತಸ್ಯಾನರ್ಥಂ ಜೀವಿತಮಾಹುರಾರ್ಯಾಃ ॥3॥
ಸಜ್ಜನನು ಮನೆಗೆ ಬಂದಾಗ ಯಾವನ ಮನೆಯಲ್ಲಿ ಮನೆಯ ಯಜಮಾನನ ಲೋಭದಿಂದಾಗಲೀ, ಭಯದಿಂದಾಗಲೀ, ಅರ್ಥಕಾರ್ಪಣ್ಯದಿಂದಾಗಲೀ ಮಂತ್ರಜ್ಞನಾದ ಸಜ್ಜನನು ಜಲವನ್ನು, ಮಧುಪರ್ಕವನ್ನು, ಗೋವನ್ನು ಸ್ವೀಕರಿಸುವುದಿಲ್ಲವೋ ಅಂತಹ ಮನೆಯ ಯಜಮಾನನ ಜೀವನವು ವ್ಯರ್ಥ ಎಂದು ದೊಡ್ಡವರು ಹೇಳುತ್ತಾರೆ.

ಚಿಕಿತ್ಸಕಃ ಶಲ್ಯಕರ್ತಾऽವಕೀರ್ಣೀ
ಸ್ತೇನಃ ಪಾಪೋ ಮದ್ಯಪೋ ಭ್ರೂಣಹಾ ಚ |
ಸೇನಾಜೀವೀ ಶ್ರುತಿವಿಕ್ರಾಯಕಶ್ಚ
ಭೃಶಂ ಪ್ರಿಯೋऽಪ್ಯತಿಥಿರ್ನೋದಕಾರ್ಹಃ ॥4॥
ವೈದ್ಯ, ಆಯುಧವನ್ನು ಮಾಡುವವನು, ವ್ರತಭ್ರಷ್ಟನಾದವನು, ಕಳ್ಳ, ಪಾಪಿ, ಮದ್ಯಪಾನವನ್ನು ಮಾಡುವವನು, ಭ್ರೂಣಹಂತಕ, ಸೈನ್ಯದಲ್ಲಿ ಜೀವನವನ್ನು ಮಾಡುವವನು, ವೇದವನ್ನು ಮಾರುವವನು, ಅತ್ಯಂತ ಪ್ರಿಯನಾದವನು ಇವರು ಅತಿಥಿಗಳಾದರೂ ಉದಕಕ್ಕೆ ಅರ್ಹರಲ್ಲ.
ಅವಿಕ್ರೇಯಂ ಲವಣಂ ಪಕ್ವಮನ್ನಂ
ದಧಿ ಕ್ಷೀರಂ ಮಧು ತೈಲಂ ಘೃತಂ ಚ |
ತಿಲಾ ಮಾಂಸಂ ಮೂಲಫಲಾನಿ ಶಾಕಂ
ರಕ್ತಂ ವಾಸಃ ಸರ್ವಗಂಧಾ ಗುಡಂ ಚ ॥5॥
ಉಪ್ಪು, ಬೇಯಿಸಿದ ಅನ್ನ, ದಧಿ, ಕ್ಷೀರ, ಮಧು, ತೈಲ, ಘೃತ, ಎಳ್ಳು, ಮಾಂಸ, ಮೂಲಫಲಗಳು, ತರಕಾರಿ, ಕೆಂಪು ವಸ್ತ್ರ, ಎಲ್ಲಾ ವಿಧವಾದ ಸುಗಂಧ ದ್ರವ್ಯಗಳು ಮತ್ತು ಬೆಲ್ಲ ಇವುಗಳನ್ನು ಮಾರಬಾರದು.
ಅರೋಷಣೋ ಯಃ ಸಮಲೋಷ್ಟಕಾಂಚನಃ
ಪ್ರಹೀಣಶೋಕೋ ಗತಸಂಧಿವಿಗ್ರಹಃ |
ನಿಂದಾಪ್ರಶಂಸೋಪರತಃ ಪ್ರಿಯಾಪ್ರಿಯೇ
ಚರನ್ನುದಾಸೀನವದೇವ ಭಿಕ್ಷುಕಃ ॥6॥
ಯಾವನು ರೋಷವನ್ನು ತೋರೆದಿರುತ್ತಾನೆಯೋ, ಮಣ್ಣು ಮತ್ತು ಸುವರ್ಣಗಳನ್ನು ಸಮವಾಗಿ ನೋಡುತ್ತಾನೆಯೋ, ಶೋಕವನ್ನೂ ತೊರೆದಿರುತ್ತಾನೆಯೋ, ಯಾರ ಜೊತೆಯಲ್ಲಿಯೂ ಸಂಧಿಯನ್ನಾಗಲೀ ವಿರೋಧವನ್ನಾಗಲೀ ಮಾಡುವುದಿಲ್ಲವೋ, ನಿಂದಾ-ಪ್ರಶಂಸೆಗಳನ್ನು, ಪ್ರಿಯಾಪ್ರಿಯಗಳನ್ನು ಬಿಟ್ಟು ಉದಾಸೀನನಂತೆಯೇ ಸಂಚರಿಸುತ್ತಾನೆಯೋ ಅವನು ಸಂನ್ಯಾಸಿ.
ನೀವಾರಮೂಲೇಂಗುದಶಾಕವೃತ್ತಿಃ
ಸುಸಂಯತಾತ್ಮಾऽಗ್ನಿಕಾರ್ಯೇಷ್ವಚೋದ್ಯಃ |
ವನೇ ವಸನ್ನತಿಥಿಷ್ವಪ್ರಮತ್ತೋ
ದುರಂಧರಃ ಪುಣ್ಯಕೃದೇಷ ತಾಪಸಃ ॥7॥
ನೀವಾರ, ಗೆಡ್ಡೆಗಳು, ಇಂಗುದ ಮತ್ತು ತರಕಾರಿಗಳಿಂದ ಜೀವನ ನಡೆಸುತ್ತಾ, ಇಂದ್ರಿಯನಿಗ್ರಹವುಳ್ಳವನಾಗಿ ಇನ್ನೊಬ್ಬರಿಗೆ ಸಂಶಯ ಬರದಂತೆ ಅಗ್ನಿಕಾರ್ಯವನ್ನು ಮಾಡುವವನಾಗಿ, ಅತಿಥಿಗಳನ್ನು ಎಚ್ಚರಿಕೆಯಿಂದ ಪೂಜಿಸಿ, ತನ್ನ ಕಾರ್ಯದ ಭಾರವನ್ನು ಹೊತ್ತು ಕಾಡಿನಲ್ಲಿ ವಾಸ ಮಾಡಿ ಪುಣ್ಯವನ್ನು ಸಂಪಾದಿಸುವವನು ವಾನಪ್ರಸ್ಥ.
ಅಪಕೃತ್ಯ ಬುದ್ಧಿಮತೋ ದೂರಸ್ಥೋऽಸ್ಮೀತಿ ನಾಶ್ವಸೇತ್ |
ದೀರ್ಘೌ ಬುದ್ಧಿಮತೋ ಬಾಹೂ ಯಾಭ್ಯಾಂ ಹಿಂಸತಿ ಹಿಂಸಿತಃ ॥8॥
ಬುದ್ಧಿವಂತರಿಗೆ ಅಪಕಾರವನ್ನು ಮಾಡಿ ದೂರದಲ್ಲಿದ್ದೇನೆ ಎಂದು ವಿಶ್ವಾಸದಿಂದಿರಬಾರದು. ಬುದ್ಧಿವಂತರ ಬಾಹುಗಳು ದೀರ್ಘವಾಗಿರುತ್ತವೆ. ತಮಗೆ ಹಿಂಸೆ ಕೊಟ್ಟವನನ್ನು ಅವು ಹಿಂಸಿಸುತ್ತವೆ.
ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ |
ವಿಶ್ವಾಸಾದ್ ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ ॥9॥
ವಿಶ್ವಾಸಹೀನರನ್ನು ನಂಬಬಾರದು. ನಂಬಿದವನನ್ನು ಅತಿಯಾಗಿ ನಂಬಬಾರದು. ನಂಬಿದವನಿಂದ ಉಂಟಾಗುವ ಭಯವು ಮೂಲಸಹಿತವಾಗಿ ನಾಶವನ್ನು ಮಾಡುತ್ತದೆ.
ಅನಿಷ್ಠುರೋ ಗುಪ್ತದಾರಃ ಸಂವಿಭಾಗೀ ಪ್ರಿಯಂವದಃ |
ಶ್ಲಕ್ಷ್ಣೋ ಮಧುರವಾಕ್ ಸ್ತ್ರೀಣಾಂ ನ ಚಾಸಾಂ ವಶಗೋ ಭವೇತ್ ॥
ನಿಷ್ಠುರವಾಗಿ ಮಾತನಾಡದೆ ತನ್ನ ಪತ್ನಿಯನ್ನು ರಕ್ಷಿಸಿಕೊಂಡು, ತನ್ನ ದ್ರವ್ಯವನ್ನು ಇನ್ನೊಬ್ಬರಿಗೆ ಹಂಚಿ, ಪ್ರಿಯವಾಗಿ ಮಾತನಾಡುವವನಾಗಿ ನಿಪುಣನೂ ಮತ್ತು ಸ್ತ್ರೀಯರಿಗೆ ಮಧುರವಾಗಿ ಮಾತನಾಡುವವನೂ ಆಗಿರಬೇಕು. ಸ್ತ್ರೀಯರ ವಶನಾಗಬಾರದು.

ಪೂಜನೀಯಾ ಮಹಾಭಾಗಾಃ ಪುಣ್ಯಾಶ್ಚ ಗೃಹದೀಪ್ತಯಃ |
ಸ್ತ್ರಿಯಃ ಶ್ರಿಯೋ ಗೃಹಸ್ಯೋಕ್ತಾಃ ತಸ್ಮಾದ್ ರಕ್ಷ್ಯಾ ವಿಶೇಷತಃ ॥11॥
ಮಹಾನುಭಾವರೂ, ಪವಿತ್ರರೂ, ಮನೆಯ ಬೆಳಕೂ ಆದ ಸ್ತ್ರೀಯರು ಪೂಜನೀಯರು. ಅವರನ್ನು ಮನೆಯ ಲಕ್ಷ್ಮೀ ಎಂದು ಹೇಳುತ್ತಾರೆ. ಆದ್ದರಿಂದ ಅವರನ್ನು ವಿಶೇಷವಾಗಿ ರಕ್ಷಿಸಬೇಕು.
ಭೋಜನೇ ಮಾತರಂ ಕುರ್ಯಾತ್ ಪಿತರಂ ಚಾತ್ಮರಕ್ಷಣೇ |
ಗೋಷು ಚಾತ್ಮಸಮಂ ದದ್ಯಾತ್ ಸ್ವಯಮೇವ ಕೃಷಿಂ ವ್ರಜೇತ್ ॥12॥
ಭೃತ್ಯೈರ್ವಾಣಿಜ್ಯಚಾರಂ ಚ ಪುತ್ರೈಃ ಸೇವೇತ ಚ ದ್ವಿಜಾನ್ ॥13॥
ಭೋಜನದಲ್ಲಿ ಬಡಿಸಲು ತಾಯಿಯನ್ನು ಅಪೇಕ್ಷಿಸಬೇಕು. ತನ್ನ ರಕ್ಷಣೆಯನ್ನು ಮಾಡಲು ತಂದೆಯನ್ನು ಬಯಸಬೇಕು. ಗೋವುಗಳ ರಕ್ಷಣೆಯನ್ನು ಮಾಡಲು ತನಗೆ ಸಮಾನನಾದವನನ್ನು ನಿಯೋಜಿಸಬೇಕು. ಕೃಷಿಯನ್ನು ನೋಡಲು ತಾನೇ ಹೋಗಬೇಕು. ವ್ಯಾಪಾರವನ್ನು ನೋಡಿಕೊಳ್ಳಲು ಭೃತ್ಯರನ್ನು ನಿಯೋಜಿಸಬೇಕು ಮತ್ತು ಬ್ರಾಹ್ಮಣರ ಸೇವೆಯನ್ನು ಮಾಡಲು ಪುತ್ರರನ್ನು

ನಿಯೋಜಿಸಬೇಕು.
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ||14||
ಜಲದಿಂದ ಅಗ್ನಿಯೂ, ಬ್ರಾಹ್ಮಣರಿಂದ ಕ್ಷತ್ರಿಯರೂ, ಕಲ್ಲಿನಿಂದ ಕಬ್ಬಿಣವೂ ಉಂಟಾಗುತ್ತದೆ. ಬೇರೆ ಎಲ್ಲ ಕಡೆಯಲ್ಲಿಯೂ ತೋರಿ ಬರುವ ಅವುಗಳ ಸಾಮರ್ಥ್ಯವು ತಮ್ಮ ಮೂಲಕಾರಣವನ್ನು ಸೇರಿ ನಾಶವನ್ನು ಹೊಂದುತ್ತದೆ.
ನಿತ್ಯಂ ಸಂತಃ ಕುಲೇ ಜಾತಾಃ ಪಾವಕೋಪಮತೇಜಸಃ |
ಕ್ಷಮಾವಂತೋ ನಿರಾಕಾರಾಃ ಕಾಷ್ಠೇಽಗ್ನಿರಿವ ಶೇರತೇ ||15||
ಕುಲದಲ್ಲಿ ಹುಟ್ಟಿದ ಸಜ್ಜನರು ಅಗ್ನಿಗೆ ಸಮಾನವಾದ ತೇಜಸ್ಸುಳ್ಳವರಾಗಿ, ಕ್ಷಮಾಗುಣವನ್ನು ಹೊಂದಿದವರಾಗಿ, ಯಾರಿಗೂ ತಮ್ಮನ್ನು ತೋರಗೊಡದೆ ಕಟ್ಟಿಗೆಯಲ್ಲಿರುವ ಅಗ್ನಿಯಂತೆ ಯಾವಾಗಲೂ ಸುಪ್ತರಾಗಿರುತ್ತಾರೆ.
ಯಸ್ಯ ಮಂತ್ರಂ ನ ಜಾನಂತಿ ಬಾಹ್ಯಾಶ್ಚಾಭ್ಯಾಂತರಾಶ್ಚ ಯೇ |
ಸ ರಾಜಾ ಸರ್ವತಶ್ಚಕ್ಷುಃ ಚಿರಮೈಶ್ವರ್ಯಮಶ್ನುತೇ ||16||
ಯಾವ ರಾಜನ ಮಂತ್ರವನ್ನು (ರಹಸ್ಯ) ಹೊರಗಿನವರಾಗಲೀ ಅಥವಾ ಒಳಗಿನವರಾಗಲೀ ತಿಳಿಯಲಾಗುವುದಿಲ್ಲವೋ ಅಂತಹ ಎಲ್ಲ ಕಡೆಯಲ್ಲಿಯೂ ಕಣ್ಣಿರುವ ರಾಜನು ಬಹುಕಾಲ ಐಶ್ವರ್ಯವನ್ನು ಹೊಂದುತ್ತಾನೆ.
ಕರಿಷ್ಯನ್ ನ ಪ್ರಭಾಷೇತ ಕೃತಾನ್ಯೇವ ತು ದರ್ಶಯೇತ್ |
ಧರ್ಮಕಾಮಾರ್ಥಕಾರ್ಯಾಣಿ ತಥಾ ಮಂತ್ರೋ ನ ಭಿದ್ಯತೇ ||17||
ಮುಂದೆ ಮಾಡಲಿರುವ ಧರ್ಮಕಾಮಾರ್ಥಕಾರ್ಯಗಳನ್ನು ಯಾರಿಗೂ ತಿಳಿಸಬಾರದು. ಮಾಡಿ ಮುಗಿಸಿದ ಕಾರ್ಯವನ್ನು ಮಾತ್ರ ತೋರಿಸಬೇಕು. ಹಾಗೆ ಮಾಡಿದರೆ ಮಂತ್ರವು ಭಿನ್ನವಾಗುವುದಿಲ್ಲ (ಮಂತ್ರಾಲೋಚನೆಯು ಸೋರಿ ಹೋಗುವುದಿಲ್ಲ).
ಗಿರಿಪೃಷ್ಠಮುಪಾರುಹ್ಯ ಪ್ರಾಸಾದಂ ವಾ ರಹೋಗತಃ |
ಅರಣ್ಯೇ ನಿಃಶಲಾಕೇ ವಾ ತತ್ರ ಮಂತ್ರೋ ವಿಧೀಯತೇ ||18||
ಪರ್ವತಶಿಖರವನ್ನೇರಿ ಅಥವಾ ಉಪ್ಪರಿಗೆಯಲ್ಲಿ ಅಥವಾ ಏಕಾಂತ ಸ್ಥಳದಲ್ಲಿ ಅಥವಾ ಮುಳ್ಳುಕಡ್ಡಿಗಳು ಇಲ್ಲದಿರುವ ಅರಣ್ಯ ಪ್ರದೇಶದಲ್ಲಿ ಮಂತ್ರಾಲೋಚನೆಯನ್ನು ಮಾಡಬೇಕೆಂದು ವಿಧಿಸಲ್ಪಡುತ್ತದೆ.
ನಾಸುಹೃತ್ ಪರಮಂ ಮಂತ್ರಂ ಭಾರತಾರ್ಹತಿ ವೇದಿತುಮ್ |
ಅಪಂಡಿತೋ ವಾಽಪಿ ಸುಹೃತ್ ಪಂಡಿತೋ ವಾಽಪ್ಯನಾತ್ಮವಾನ್ ||19||
ಎಲೈ ಭಾರತನೇ, ವಿಶ್ವಾಸವಿಲ್ಲದವನು ರಾಜನ ಮಂತ್ರವನ್ನು ತಿಳಿಯಲು ಅರ್ಹನಲ್ಲ. ಅಪಂಡಿತನಾದ ವಿಶ್ವಾಸಿಯಾಗಲೀ ಅಥವಾ ಮನೋಜಯವಿಲ್ಲದ ಪಂಡಿತನಾಗಲೀ ರಾಜನ ಮಂತ್ರವನ್ನು ತಿಳಿಯಲು ಅರ್ಹನಲ್ಲ.
ನಾಪರೀಕ್ಷ್ಯ ಮಹೀಪಾಲಃ ಕುರ್ಯಾತ್ ಸಚಿವಮಾತ್ಮನಃ ||20||
ಅಮಾತ್ಯೇಽಪ್ಯರ್ಥಲಿಪ್ಸಾ ಚ ಮಂತ್ರರಕ್ಷಣಮೇವ ಚ |
ರಾಜನು ಪರೀಕ್ಷೆ ಮಾಡದೆ ಯಾರನ್ನೂ ತನ್ನ ಸಚಿವರನ್ನಾಗಿ ಮಾಡಿಕೊಳ್ಳಬಾರದು. ಸಚಿವನಾಗಿ ಮಾಡಿಕೊಳ್ಳುವವನಲ್ಲಿ ಇರುವ ಧನದ ಆಸೆಯನ್ನು ಮತ್ತು ಮಂತ್ರ ರಕ್ಷಣ ಸಾಮರ್ಥ್ಯವನ್ನು ಗಮನಿಸಬೇಕು.
ಕೃತಾನಿ ಸರ್ವಕಾರ್ಯಾಣಿ ಯಸ್ಯ ಪಾರಿಷದಾ ವಿದುಃ ||21||
ಗೂಢಮಂತ್ರಸ್ಯ ನೃಪತೇಃ ತಸ್ಯ ಸಿದ್ಧಿರಸಂಶಯಮ್ ||22||
ಯಾವ ರಾಜನು ಮಾಡಿದ ಕಾರ್ಯಗಳನ್ನು ಮಾತ್ರ ಸಭಾಸದರು ತಿಳಿಯುತ್ತಾರೆಯೋ ಮತ್ತು ಯಾವ ಅವನ ಮಂತ್ರಗಳು ಗೂಢವಾಗಿರುತ್ತವೆಯೋ ಅಂತಹ ರಾಜನು ನಿಸ್ಸಂಶಯವಾಗಿ ಸಿದ್ಧಿಯನ್ನು ಪಡೆಯುತ್ತಾನೆ.
ಅಪ್ರಶಸ್ತಾನಿ ಕಾರ್ಯಾಣಿ ಯೋ ಮೋಹಾದನುತಿಷ್ಠತಿ |
ಸ ತೇಷಾಂ ವಿಪರಿಭ್ರಂಶಾದ್ ಭ್ರಶ್ಯತೇ ಜೀವಿತಾದಪಿ ||23||
ಯಾವನು ಮೋಹದಿಂದ ಅಪ್ರಶಸ್ತವಾದ ಕಾರ್ಯವನ್ನು ಮಾಡುತ್ತಾನೆಯೋ ಅವನು ಅವುಗಳ ವಿಪರಿಣಾಮದಿಂದ ಜೀವಿತವನ್ನೇ ಕಳೆದುಕೊಳ್ಳುತ್ತಾನೆ.
ಕರ್ಮಣಾಂ ತು ಪ್ರಶಸ್ತಾನಾಮನುಷ್ಠಾನಂ ಸುಖಾವಹಮ್ |
ತೇಷಾಮೇವಾನನುಷ್ಠಾನಂ ಪಶ್ಚಾತ್ತಾಪಕರಂ ಮಹತ್ ||24||
ಪ್ರಶಸ್ತವಾದ ಕರ್ಮಗಳ ಅನುಷ್ಠಾನವು ಸುಖವನ್ನು ತಂದುಕೊಡುತ್ತದೆ. ಅವುಗಳ ಅನುಷ್ಠಾನವನ್ನು ಮಾಡದಿದ್ದರೆ ದೊಡ್ಡ ಪಶ್ಚಾತ್ತಾಪವನ್ನು ಉಂಟುಮಾಡುತ್ತವೆ.
ಅನಧೀತ್ಯ ತಥಾ ವೇದಾನ್ ನ ವಿಪ್ರಃ ಶ್ರಾದ್ಧಮರ್ಹತಿ |
ಏವಮಶ್ರುತಷಾಡ್ಗುಣ್ಯೋ ನ ಮಂತ್ರಂ ಶ್ರೋತುಮರ್ಹತಿ ||25||
ವೇದವನ್ನು ಅಧ್ಯಯನ ಮಾಡದ ಬ್ರಾಹ್ಮಣನು ಶ್ರಾದ್ಧಕ್ಕೆ ಅರ್ಹನಲ್ಲ. ಅದರಂತೆ ಸ್ಥಾನ, ವೃದ್ಧಿ, ಕ್ಷಯ, ದ್ವೈಧ, ಯಾನ, ಸಂಧಿ ಮೊದಲಾದ ರಾಜನೀತಿಯ ಆರು ಅಂಗಗಳನ್ನು ತಿಳಿಯದವನು ರಾಜನ ಮಂತ್ರಾಲೋಚನೆಗೆ ಅರ್ಹನಲ್ಲ.
ಸ್ಥಾನವೃದ್ಧಿಕ್ಷಯಜ್ಞಶ್ಚ ಷಾಡ್ಗುಣ್ಯವಿದಿತಾತ್ಮನಃ |
ಅನವಜ್ಞಾತಶೀಲಸ್ಯ ಸ್ವಾಧೀನಾ ಪೃಥಿವೀ ನೃಪ ||26||
ಎಲೈ ರಾಜನೇ, ಯಾವ ರಾಜನಿಗೆ ಸ್ಥಾನ-ವೃದ್ಧಿ-ಕ್ಷಯ ಮೊದಲಾದ ರಾಜನೀತಿಗಳು ತಿಳಿದಿವೆಯೋ ಮತ್ತು ತನ್ನ ಸ್ಥಾನ-ವೃದ್ಧ್ಯಾದಿಗಳು ತಿಳಿದಿವೆಯೋ ಮತ್ತು ಯಾವನ ಶೀಲವು ತಿರಸ್ಕಾರಕ್ಕೆ ಒಳಗಾಗುವುದಿಲ್ಲವೋ ಅಂತಹ ರಾಜನು ಪೃಥಿವಿಯನ್ನು ವಶಪಡಿಸಿಕೊಳ್ಳುತ್ತಾನೆ.

ಅಮೋಘಕ್ರೋಧಹರ್ಷಸ್ಯ ಸ್ವಯಂ ಕೃತ್ಯಾನ್ಯವೇಕ್ಷತಃ |
ಆತ್ಮಪ್ರತ್ಯಯಕೋಶಸ್ಯ ವಸುದೈವ ವಸುಂಧರಾ ॥27॥
ಯಾವನ ಕ್ರೋಧ ಮತ್ತು ಹರ್ಷಗಳು ವ್ಯರ್ಥವಲ್ಲವೋ, ಯಾವನು ತನ್ನ ಕಾರ್ಯಗಳನ್ನು ತಾನೇ ನೋಡಿಕೊಳ್ಳುತ್ತಾನೆಯೋ, ಯಾವನಿಗೆ ತನ್ನಲ್ಲಿಯೇ ನಂಬಿಕೆಯ ದೊಡ್ಡ ಕೋಶವಿದೆಯೋ ಅಂತಹವನಿಗೆ ಭೂಮಿಯು ಸಂಪತ್ತನ್ನು ಕೊಡುತ್ತದೆ.
ನಾಮಮಾತ್ರೇಣ ತುಷ್ಯೇತ ಚ್ಛತ್ರೇಣ ಚ ಮಹೀಪತಿಃ |
ಭೃತ್ಯೇಭ್ಯೋ ವಿಸೃಜೇದರ್ಥಾನ್ ನೈಕಃ ಸರ್ವಹರೋ ಭವೇತ್ ॥28॥
ರಾಜನು ರಾಜ ಎಂಬ ಹೆಸರಿನಿಂದಲೇ ಮತ್ತು ಶ್ವೇತಚ್ಛತ್ರದಿಂದಲೇ ತೃಪ್ತನಾಗಿರಬೇಕು. ತನ್ನನ್ನು ಆಶ್ರಯಿಸಿದವರಿಗೆ ಎಲ್ಲಾ ವಸ್ತುಗಳನ್ನೂ ಕೊಡಬೇಕು. ತಾನೊಬ್ಬನೇ ಎಲ್ಲವನ್ನೂ ಸ್ವೀಕರಿಸಬಾರದು.
ಬ್ರಾಹ್ಮಣೋ ಬ್ರಾಹ್ಮಣಂ ವೇದ ಭರ್ತಾ ವೇದ ಸ್ತ್ರಿಯಂ ತಥಾ |
ಅಮಾತ್ಯಂ ನೃಪತಿರ್ವೇದ ರಾಜಾ ರಾಜಾನಮೇವ ಚ ॥29॥
ಬ್ರಾಹ್ಮಣನು ಬ್ರಾಹ್ಮಣನನ್ನು ತಿಳಿದಿರುತ್ತಾನೆ. ಪತಿಯು ಪತ್ನಿಯನ್ನು ತಿಳಿದಿರುತ್ತಾನೆ. ರಾಜನು ಅಮಾತ್ಯನನ್ನು ತಿಳಿದಿರುತ್ತಾನೆ. ಒಬ್ಬ ರಾಜನು ಇನ್ನೊಬ್ಬ ರಾಜನನ್ನು ತಿಳಿದಿರುತ್ತಾನೆ.
ನ ಶತ್ರುರ್ವಶಮಾಪನ್ನೋ ಮೋಕ್ತವ್ಯೋ ವಧ್ಯತಾಂ ಗತಃ |
ಅಹತಾದ್ಧಿ ಭಯಂ ತಸ್ಮಾದ್ ಜಾಯತೇ ನಚಿರಾದಿವ ॥30॥
ವಧೆಗೆ ಯೋಗ್ಯವಾದ ಶತ್ರುವು ಕರವಶನಾದಾಗ ಅವನನ್ನು ಬಿಡಬಾರದು. ಅವನನ್ನು ಬಿಡುಗಡೆಗೊಳಿಸಿದರೆ ಹತನಾಗದಿದ್ದ ಅವನಿಂದ ಶೀಘ್ರದಲ್ಲಿಯೇ ಭಯ ಉಂಟಾಗುತ್ತದೆ.
ದೈವತೇಷು ಚ ಯತ್ನೇನ ರಾಜಸು ಬ್ರಾಹ್ಮಣೇಷು ಚ |
ನಿಯಂತವ್ಯಃ ಸದಾ ಕ್ರೋಧೋ ವೃದ್ಧಬಾಲಾತುರೇಷು ಚ ॥31॥
ದೇವತೆಗಳ ವಿಷಯದಲ್ಲಿ ರಾಜರು, ಬ್ರಾಹ್ಮಣರು, ವೃದ್ಧರು, ಬಾಲರು ಮತ್ತು ರೋಗಿಗಳ ವಿಷಯದಲ್ಲಿ ಪ್ರಯತ್ನಪಟ್ಟು ಕ್ರೋಧವನ್ನು ಯಾವಾಗಲೂ ನಿಯಂತ್ರಿಸಬೇಕು.
ನಿರರ್ಥಂ ಕಲಹಂ ಪ್ರಾಜ್ಞೋ ವರ್ಜಯೇನ್ಮೂಢಸೇವಿತಮ್ |
ಕೀರ್ತಿಂ ಚ ಲಭತೇ ಲೋಕೇ ನ ಚಾನರ್ಥೇನ ಯುಜ್ಯತೇ ॥32॥
ವಿವೇಕಿಯಾದವನು ಮೂಢರಂತೆ ವ್ಯರ್ಥವಾದ ಕಲಹವನ್ನು ಮಾಡಬಾರದು. ಆಗ ಲೋಕದಲ್ಲಿ ಕೀರ್ತಿಯನ್ನು ಪಡೆಯುತ್ತಾನೆ ಮತ್ತು ಅನರ್ಥಗಳಿಗೆ ಸಿಲುಕುವುದಿಲ್ಲ.
ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ |
ನ ತಂ ಭರ್ತಾರಮಿಚ್ಛಂತಿ ಷಂಡಂ ಪತಿಮಿವ ಸ್ತ್ರಿಯಃ ॥33॥
ಯಾವನ ಪ್ರಸನ್ನತೆಯು ನಿಷ್ಫಲವೋ, ಯಾವನ ಕ್ರೋಧವು ವ್ಯರ್ಥವೋ ಅಂತಹವನನ್ನು ಸ್ತ್ರೀಯರು ಷಂಡನನ್ನು ಪತಿಯಾಗಿ ಬಯಸದಂತೆ ಭೃತ್ಯರು ಅಥವಾ ಪ್ರಜೆಗಳು ಸ್ವಾಮಿಯಾಗಿ ಬಯಸುವುದಿಲ್ಲ.
ನ ಬುದ್ಧಿರ್ಧನಲಾಭಾಯ ನ ಜಾಡ್ಯಮಸಮೃದ್ಧಯೇ |
ಲೋಕಪರ್ಯಾಯವೃತ್ತಾಂತಂ ಪ್ರಾಜ್ಞೋ ಜಾನಾತಿ ನೇತರಃ ॥34॥
ಬುದ್ಧಿಯು ಧನಲಾಭಕ್ಕಾಗಿ ಅಲ್ಲ. ಸುಮ್ಮನಿರುವುದು ಅಸಂಪತ್ತಿಗಾಗಿ ಅಲ್ಲ. ಲೋಕದಲ್ಲಿ ನಡೆಯುವ ವೃತ್ತಾಂತವನ್ನು ಪ್ರಾಜ್ಞನು ತಿಳಿಯುತ್ತಾನೆ, ಇನ್ನೊಬ್ಬನು ತಿಳಿಯುವುದಿಲ್ಲ.
ವಿದ್ಯಾಶೀಲವಯೋವೃದ್ಧಾನ್ ಬುದ್ಧಿವೃದ್ಧಾಂಶ್ಚ ಭಾರತ |
ಧನಾಭಿಜಾತವೃದ್ಧಾಂಶ್ಚ ನಿತ್ಯಂ ಮೂಢೋಽವಮನ್ಯತೇ ॥35॥
ಎಲೈ ಭಾರತನೇ, ವಿದ್ಯಾಶೀಲವಯೋವೃದ್ಧರನ್ನೂ, ಬುದ್ಧಿವೃದ್ಧರನ್ನೂ, ಧನ ಮತ್ತು ಕುಲವೃದ್ಧರನ್ನೂ ಮೂಢನು ಯಾವಾಗಲೂ ಅವಮಾನ ಮಾಡುತ್ತಾನೆ.
ಅನಾರ್ಯವೃತ್ತಮಪ್ರಾಜ್ಞಮಸೂಯಕಮಧಾರ್ಮಿಕಮ್ |
ಅನರ್ಥಾಃ ಕ್ಷಿಪ್ರಮಾಯಾಂತಿ ವಾಗ್ದುಷ್ಟಂ ಕ್ರೋಧನಂ ತಥಾ ॥36॥
ಒಳ್ಳೆಯ ನಡತೆಯನ್ನು ಹೊಂದದವನೂ, ಪ್ರಾಜ್ಞನಲ್ಲದವನೂ, ಅಸೂಯಾ ಪರನೂ, ಅಧಾರ್ಮಿಕನೂ, ದುಷ್ಟಮಾತುಳ್ಳವನೂ ಮತ್ತು ಸಿಟ್ಟಾಗುವವನೂ ಆದವನಿಗೆ ಅನರ್ಥಗಳು ಬೇಗ ಉಂಟಾಗುತ್ತವೆ.
ಅವಿಸಂವಾದನಂ ದಾನಂ ಸಮಯಸ್ಯಾನತಿಕ್ರಮಃ |
ಆವರ್ತಯಂತಿ ಭೂತಾನಿ ಸಮ್ಯಕ್ ಪ್ರಣಿಹಿತಾ ಚ ವಾಕ್ ॥37॥
ಜಗಳವಾಡದಿರುವುದು, ದಾನ, ಕಾಲವನ್ನು ಮೀರದಿರುವುದು, ಒಳ್ಳೆಯ ಮಾತು ಇವುಗಳು ವಿಮುಖರಾದವರನ್ನೂ ತಮ್ಮ ಕಡೆಗೆ ತಿರುಗಿಸುತ್ತವೆ.
ಅವಿಸಂವಾದಕೋ ದಕ್ಷಃ ಕೃತಜ್ಞೋ ಮತಿಮಾನ್ ಋಜುಃ |
ಅತಿಸಂಕ್ಷೀಣಕೋಶೋಽಪಿ ಲಭತೇ ಪರಿಚಾರಿಣಮ್ ॥38॥
ಯಾವನು ಜಗಳವಾಡುವುದಿಲ್ಲವೋ, ದಕ್ಷನೋ, ಕೃತಜ್ಞನೋ, ಮೇಧಾವಿಯೂ ಮತ್ತು ಸರಳನೋ ಅವನು ಅಲ್ಪಧನವುಳ್ಳವನಾದರೂ ಪರಿಚಾರಕರನ್ನು ಪಡೆಯುತ್ತಾನೆ.
ಧೃತಿಃ ಶಮೋ ದಮಃ ಶೌಚಂ ಕಾರುಣ್ಯಂ ವಾಗನಿಷ್ಠುರಾ |
ಮಿತ್ರಾಣಾಂ ಚಾನಭಿದ್ರೋಹಃ ಸಪ್ತೈತಾಃ ಸಮಿಧಃ ಶ್ರಿಯಃ ॥39॥

ಧೈರ್ಯ, ಶಮ, ದಮ, ಶೌಚ, ಕಾರುಣ್ಯ, ಮೃದುವಚನ, ಮಿತ್ರದ್ರೋಹ ಮಾಡದಿರುವುದು ಈ ಏಳು ಸಂಪತ್ತನ್ನು ಸಾಧಿಸುವ ಸಮಿತ್ತುಗಳು.
ಅಸಂವಿಭಾಗೀ ದುಷ್ಟಾತ್ಮಾ ಕೃತಘ್ನೋ ನಿರಪತ್ರಪಃ |
ತಾದೃಙ್ ನರಾಧಮೋ ಲೋಕೇ ವರ್ಜನೀಯೋ ನರಾಧಿಪ ॥40॥
ಎಲೈ ನರಾಧಿಪನೇ, ತನ್ನ ವಸ್ತುವನ್ನು ಇನ್ನೊಬ್ಬರಿಗೆ ಹಂಚದಿರುವವನು, ದುಷ್ಟನು, ಕೃತಘ್ನನು, ನಾಚಿಕೆಯಿಲ್ಲದವನು ಅಂತಹ ನರಾಧಮನನ್ನು ಲೋಕದಲ್ಲಿ ದೂರದಲ್ಲಿಡಬೇಕು.
ನ ಸ ರಾತ್ರೌ ಸುಖಂ ಶೇತೇ ಸಸರ್ಪ ಇವ ವೇಶ್ಮನಿ |
ಯಃ ಕೋಪಯತಿ ನಿರ್ದೋಷಂ ಸದೋಷೋಽಭ್ಯಂತರಂ ಜನಮ್ ॥
ಯಾವನು ತನ್ನಲ್ಲೇ ದೋಷವನ್ನಿಟ್ಟುಕೊಂಡು ನಿರ್ದೋಷರಾದ ಸಮೀಪದ ಜನರನ್ನು ಕೋಪಗೊಳಿಸುತ್ತಾನೆಯೋ ಅವನು ಸರ್ಪವು ಪ್ರವೇಶಿಸಿರುವ ಗೃಹದಲ್ಲಿ ಮಲಗಿರುವವನಂತೆ ರಾತ್ರಿಯಲ್ಲಿ ಸುಖವಾಗಿ ಮಲಗುವುದಿಲ್ಲ.
ಯೇಷು ದುಷ್ಟೇಷು ದೋಷಃ ಸ್ಯಾದ್ ಯೋಗಕ್ಷೇಮಸ್ಯ ಭಾರತ |
ಸದಾ ಪ್ರಸಾದನಂ ತೇಷಾಂ ದೇವತಾನಾಮಿವಾಚರೇತ್ ॥42॥
ಯಾವ ದುಷ್ಟರನ್ನು ನೋಡಿದರೆ ತನ್ನ ಯೋಗಕ್ಷೇಮಕ್ಕೆ ಭಂಗ ಬರುತ್ತದೆಯೋ ಅಂತಹವರನ್ನು ದೇವತೆಗಳನ್ನು ಪೂಜಿಸಿದಂತೆ ಯಾವಾಗಲೂ ಪ್ರಸನ್ನೀಕರಿಸಬೇಕು.
ಯೇಽರ್ಥಾಃ ಸ್ತ್ರೀಷು ಸಮಾಸಕ್ತಾಃ ಪ್ರಮತ್ತಪತಿತೇಷು ಚ |
ಯೇ ಚಾನಾರ್ಯಸಮಾಸಕ್ತಾಃ ಸರ್ವೇ ತೇ ಸಂಶಯಂ ಗತಾಃ ॥43॥
ಸ್ತ್ರೀಯರ ಕೈಯಲ್ಲಿ ಸೇರಿದ ವಸ್ತುಗಳು, ಹುಚ್ಚರ ಕೈಯಲ್ಲಿ, ಪತಿತರ ಕೈಯಲ್ಲಿ ಮತ್ತು ನೀಚರ ಕೈಯಲ್ಲಿ ಸೇರಿದ ವಸ್ತುಗಳು ಸಂಶಯಕ್ಕೆ ಈಡಾಗುತ್ತವೆ.
ಯತ್ರ ಸ್ತ್ರೀ ಯತ್ರ ಕಿತವೋ ಯತ್ರ ಬಾಲೋಽನುಶಾಸ್ತಿ ಚ |
ಮಜ್ಜಂತಿ ತೇಽವಶಾ ರಾಜನ್ನುದಧಾವಪ್ಲವಾ ಇವ ॥44॥
ಎಲ್ಲಿ ಸ್ತ್ರೀಯಾಗಲೀ, ಸುಳ್ಳನ್ನು ಹೇಳುವ ಮನುಷ್ಯನಾಗಲೀ ಅಥವಾ ಮೂರ್ಖನಾಗಲೀ ಶಾಸನವನ್ನು ಮಾಡುತ್ತಾರೆಯೋ ಅಲ್ಲಿ ಪ್ರಜೆಗಳು ನಾವೆ ಇಲ್ಲದ ಸಮುದ್ರದಲ್ಲಿ ಮುಳುಗುವಂತೆ ಅವಶರಾಗಿ ಮುಳುಗುತ್ತಾರೆ.
ಪ್ರಯೋಜನೇಷು ಯೇ ಸಕ್ತಾ ನ ವಿಶೇಷೇಷು ಭಾರತ |
ತಾನಹಂ ಪಂಡಿತಾನ್ ಮನ್ಯೇ ವಿಶೇಷಾ ವಿಘ್ನಕಾರಕಾಃ ॥45॥
ಯಾರು ತಮ್ಮ ಕಾರ್ಯಕ್ಕೆ ಸಹಾಯ ಮಾಡುವವರಲ್ಲಿ ಆಸಕ್ತರಾಗಿ ಇತರ ಜನರಲ್ಲಿ ಉದಾಸೀನರಾಗಿರುತ್ತಾರೆಯೋ ಅವರನ್ನು ನಾನು ಪಂಡಿತರೆಂದು ತಿಳಿಯುತ್ತೇನೆ. ಇತರ ಜನರು ಕಾರ್ಯಕ್ಕೆ ವಿಘ್ನವನ್ನು ಮಾಡುವವರು.
ಯಂ ಪ್ರಶಂಸಂತಿ ಕಿತವಾ ಯಂ ಪ್ರಶಂಸಂತಿ ಚೋರಕಾಃ |
ಯಂ ಪ್ರಶಂಸಂತಿ ಬಂಧಕ್ಯೋ ನ ಸ ಜೀವತಿ ಮಾನವಃ ॥46॥
ಯಾವನನ್ನು ಮೋಸಗಾರರು ಪ್ರಶಂಸಿಸುತ್ತಾರೆಯೋ, ಚೋರರು ಪ್ರಶಂಸಿಸುತ್ತಾರೆಯೋ, ವೇಶ್ಯೆಯರು ಪ್ರಶಂಸಿಸುತ್ತಾರೆಯೋ ಅಂತಹ ಮನುಷ್ಯನು ಬಹುಕಾಲ ಜೀವಿಸಿರುವುದಿಲ್ಲ.
ಹಿತ್ವಾ ತಾನ್ ಪರಮೇಷ್ವಾಸಾನ್ ಪಾಂಡವಾನಮಿತೌಜಸಃ |
ಆಹಿತಂ ಭಾರತೈಶ್ವರ್ಯಂ ತ್ವಯಾ ದುರ್ಯೋಧನೇ ಮಹತ್ ॥47॥
ಎಲೈ ಭಾರತನೇ, ನೀನು ಅಮಿತಪರಾಕ್ರಮಿಗಳಾದ, ಮಹಾಧನುರ್ಧಾರಿಗಳಾದ ಆ ಪಾಂಡವರನ್ನು ಬಿಟ್ಟು ನಿನ್ನ ಎಲ್ಲಾ ಐಶ್ವರ್ಯವನ್ನೂ ದುರ್ಯೋಧನನಿಗೆ ಹೊರಿಸಿದ್ದೀಯೆ.
ತಂ ದ್ರಕ್ಷಸಿ ಪರಿಭ್ರಷ್ಟಂ ತಸ್ಮಾತ್ ತ್ವಂ ನಚಿರಾದಿವ |
ಐಶ್ವರ್ಯಮದಸಮ್ಮೂಢಂ ಬಲಿಂ ಲೋಕತ್ರಯಾದಿವ ॥48॥
ಬಲಿಯು ಲೋಕತ್ರಯದಿಂದ ಚ್ಯುತನಾದಂತೆ ಶೀಘ್ರವಾಗಿ ಐಶ್ವರ್ಯಮದ ಮತ್ತನಾದ ಅವನು ಐಶ್ವರ್ಯದಿಂದ ಪರಿಭ್ರಷ್ಟನಾಗುವುದನ್ನು ನೀನು ನೋಡುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂಬತ್ತನೆಯ ಅಧ್ಯಾಯ
ವಿದುರನೀತಿ. ಜ್ಞಾತಿಸಂಗ್ರಹದಲ್ಲಿ ಇರುವ ಗುಣನಿರೂಪಣ.
ಧೃತರಾಷ್ಟ್ರಃ
ಅನೀಶ್ವರೋಽಯಂ ಪುರುಷೋ ಭವಾಭವೇ
ಸೂತ್ರಪ್ರೋತಾ ದಾರುಮಯೀವ ಯೋಷಾ |
ಧಾತ್ರಾ ತು ದಿಷ್ಟಸ್ಯ ವಶೇ ಕೃತೋಽಹಂ

तस्माद् वद त्वं श्रवणे धृतोऽहम् ॥1॥

ಧೃತರಾಷ್ಟ್ರ, ಮನುಷ್ಯನು ಸೂತ್ರವು ಪೋಣಿಸಿದ ಮರದ ಹೆಣ್ಣು ಗೊಂಬೆಯಂತೆ ತನ್ನ ಶುಭಾಶುಭಗಳನ್ನು ಸಂಪಾದಿಸಿಕೊಳ್ಳಲು ಅಸಮರ್ಥನಾದವನು. ಬ್ರಹ್ಮನು ನನ್ನನ್ನು ಅದೃಷ್ಟದ ವಶವನ್ನಾಗಿ ಮಾಡಿದ್ದಾನೆ. ನಾನು ಶ್ರವಣದಲ್ಲಿ ಆಸಕ್ತನಾಗಿದ್ದೇನೆ. ಆದ್ದರಿಂದ ನೀನು ಮಾತನಾಡು.

ವಿದುರಃ

ಅಪ್ರಾಪ್ತಕಾಲಂ ವಚನಂ ಬೃಹಸ್ಪತಿರಪಿ ಬ್ರುವನ್ |
ಲಭತೇ ಬುದ್ಧ್ಯವಜ್ಞಾನಮವಮಾನಂ ಚ ಭಾರತ ॥2॥

ವಿದುರ ಎಲೈ ಭಾರತನೇ, ಅಯೋಗ್ಯವಾದ ಸಮಯದಲ್ಲಿ ಬೃಹಸ್ಪತಿಯೇ ಮಾತನಾಡಿದರೂ ಬುದ್ಧಿಯ ಮಾಲಿನ್ಯವನ್ನು ಮತ್ತು ಅವಮಾನವನ್ನು ಪಡೆಯುತ್ತಾನೆ.

ಪ್ರಿಯೋ ಭವತಿ ದಾನೇನ ಪ್ರಿಯವಾದೇನ ಚಾಪರಃ |
ಮಂತ್ರಮೂಲಬಲೇನಾನ್ಯೋ ಯಃ ಪ್ರಿಯಃ ಪ್ರಿಯ ಏವ ಸಃ ॥3॥

ಕೆಲವರು ದಾನದಿಂದ ಪ್ರಿಯರಾಗುತ್ತಾರೆ, ಇನ್ನು ಕೆಲವರು ಒಳ್ಳೆಯ ಮಾತಿನಿಂದ ಪ್ರಿಯರಾಗುತ್ತಾರೆ, ಇನ್ನು ಕೆಲವರು ಮಂತ್ರಮೂಲಾದಿ ಬಲದಿಂದ ಪ್ರಿಯರಾಗುತ್ತಾರೆ, ಪರಮಾತ್ಮನೊಬ್ಬನೇ ಯಾವಾಗಲೂ ಪ್ರಿಯನಾದವನು.

ದ್ವೇಷ್ಯೋ ನ ಸಾಧುರ್ಭವತಿ ನ ಮೇಧಾವೀ ನ ಪಂಡಿತಃ |
ಪ್ರಿಯೇ ಶುಭಾನಿ ಕರ್ಮಾಣಿ ದ್ವೇಷ್ಯೇ ಪಾಪಾನಿ ಚೈವ ಹ ॥4॥

ಸಾಧುವು ದ್ವೇಷಕ್ಕೆ ವಿಷಯನಾಗುವುದಿಲ್ಲ. ಮೇಧಾವಿಯು ಮತ್ತು ಪಂಡಿತನು ದ್ವೇಷಕ್ಕೆ ವಿಷಯರಾಗುವುದಿಲ್ಲ. ಶುಭಕರ್ಮಗಳು ಪ್ರಿಯರನ್ನು ಜ್ಞಾಪಿಸುತ್ತವೆ. ಪಾಪಕರ್ಮಗಳು ದ್ವೇಷಿಯನ್ನು ಜ್ಞಾಪಿಸುತ್ತವೆ.

ಉಕ್ತಂ ಮಯಾ ಜಾತಮಾತ್ರೇಽಪಿ ರಾಜನ್
ದುರ್ಯೋಧನಂ ತ್ಯಜ ಪುತ್ರಂ ತ್ವಮೇಕಮ್ |
ತಸ್ಯ ತ್ಯಾಗಾತ್ ಪುತ್ರಶತಸ್ಯ ವೃದ್ಧಿಃ
ಅಸ್ಯಾತ್ಯಾಗಾತ್ ಪುತ್ರಶತಸ್ಯ ನಾಶಃ ॥5॥

ರಾಜನೇ, ಹುಟ್ಟಿದಾಗಲೇ ನಾನು ದುರ್ಯೋಧನನೆಂಬ ಒಬ್ಬ ಪುತ್ರನನ್ನು ಬಿಡು. ಅವನನ್ನು ತ್ಯಾಗ ಮಾಡುವುದರಿಂದ ನೂರುಮಕ್ಕಳ ವೃದ್ಧಿಯುಂಟಾಗುತ್ತದೆ. ತ್ಯಾಗ ಮಾಡದಿದ್ದರೆ ನೂರುಮಕ್ಕಳ ನಾಶವಾಗುತ್ತದೆ ಎಂದು ಹೇಳಿದೆ.

ನ ವೃದ್ಧಿರ್ಬಹುಮಂತವ್ಯಾ ಯಾ ವೃದ್ಧಿಃ ಕ್ಷಯಮಾವಹೇತ್ |
ಕ್ಷಯೋಽಪಿ ಬಹುಮಂತವ್ಯೋ ಯಃ ಕ್ಷಯೋ ವೃದ್ಧಿಮಾವಹೇತ್ ॥6॥

ಯಾವ ವೃದ್ಧಿಯು ನಾಶವನ್ನು ಉಂಟುಮಾಡುತ್ತದೆಯೋ ಆ ವೃದ್ಧಿಯು ಶ್ಲಾಘನೀಯವಲ್ಲ. ಯಾವ ಕ್ಷಯವು ವೃದ್ಧಿಯನ್ನು ಉಂಟುಮಾಡುತ್ತದೆಯೋ ಅಂತಹ ಕ್ಷಯವೂ ಶ್ಲಾಘನೀಯವಾದುದು.

ನ ಸ ಕ್ಷಯೋ ಮಹಾರಾಜ ಯಃ ಕ್ಷಯೋ ವೃದ್ಧಿಮಾವಹೇತ್ |
ಕ್ಷಯಃ ಸ ತ್ವಿಹ ಮಂತವ್ಯೋ ಯಂ ಲಬ್ಧ್ವಾ ಬಹು ನಾಶಯೇತ್ ॥7॥

ಎಲೈ ಮಹಾರಾಜನೇ, ಯಾವ ಕ್ಷಯವು ವೃದ್ಧಿಯನ್ನು ಉಂಟು ಮಾಡಿಕೊಡುತ್ತದೆಯೋ ಅದು ಕ್ಷಯವೇ ಅಲ್ಲ. ಆದರೆ ಯಾವ ಲಾಭವು ಬಹಳ ನಾಶವನ್ನು ಉಂಟುಮಾಡುತ್ತದೆಯೋ ಅದನ್ನು ಕ್ಷಯವೆಂದು ತಿಳಿಯಬೇಕು.

ಸಮೃದ್ಧಾ ಗುಣತಃ ಕೇಚಿದ್ ಭವಂತಿ ಧನತೋಽಪರೇ |
ಧನವೃದ್ಧಾನ್ ಗುಣೈರ್ಹೀನಾನ್ ಧೃತರಾಷ್ಟ್ರ ವಿವರ್ಜಯ ॥8॥

ಕೆಲವರು ಗುಣಗಳಿಂದ ಸಮೃದ್ಧರಾಗಿರುತ್ತಾರೆ. ಇನ್ನು ಕೆಲವರು ಧನದಿಂದ ಸಮೃದ್ಧರಾಗಿರುತ್ತಾರೆ. ಧೃತರಾಷ್ಟ್ರನೇ, ಧನದಿಂದ ಅಭಿವೃದ್ಧರಾಗಿ ಗುಣಗಳಿಂದ ಹೀನರಾದವರನ್ನು ಪರಿತ್ಯಜಿಸು.

ಧೃತರಾಷ್ಟ್ರಃ

ಸರ್ವಂ ತ್ವಮಾಯತೀತ್ಯುಕ್ತಂ ವದಸಿ ಪ್ರಾಜ್ಞಸಮ್ಮತಮ್ |
ನ ಚೋತ್ಸಹೇ ಸುತಂ ತ್ಯಕ್ತುಂ ಯತೋ ಧರ್ಮಸ್ತತೋ ಜಯಃ ॥9॥

ಧೃತರಾಷ್ಟ್ರ, ನೀನು ಪ್ರಾಜ್ಞಸಮ್ಮತವಾಗಿ ಮುಂದೆ ಆಗುವ ವಿಷಯಗಳನ್ನೆಲ್ಲಾ ಹೇಳುತ್ತಿದ್ದೀಯೆ. ನಾನು ಮಗನನ್ನು ಬಿಡಲಾರೆ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವುಂಟಾಗುತ್ತದೆ.

ವಿದುರಃ

ಅತೀವಗುಣಸಂಪನ್ನೋ ನ ಜಾತು ವಿನಯಾನ್ವಿತಃ |
ಸುಸೂಕ್ಷ್ಮಮಪಿ ಭೂತಾನಾಮುಪಮರ್ದಮಪೇಕ್ಷತೇ ॥10॥

ವಿದುರ ಬಹಳ ಗುಣಸಂಪನ್ನನಾದರೂ ಎಂದೂ ವಿನಯವನ್ನು ಹೊಂದದಿದ್ದರೆ ಅವನು ಪ್ರಾಣಿಗಳಿಗೆ ಸ್ವಲ್ಪವಾದರೂ ಸಂಘರ್ಷವನ್ನು ಬಯಸುತ್ತಾನೆ.

ಪರಾಪವಾದನಿರತಾ ಪರದುಃಖೋದಯೇಷು ಚ |
ಪರಸ್ಪರವಿರೋಧೇ ಚ ಯತಂತೇ ಸತತೋತ್ಥಿತಾಃ ॥11॥

ದುಷ್ಟರು ಪರಾಪವಾದದಲ್ಲಿ ನಿರತರಾಗಿ, ಪರರಿಗೆ ದುಃಖವುಂಟು ಮಾಡುವುದರಲ್ಲಿಯೂ ನಿರತರಾಗಿ, ಪರಸ್ಪರ ವಿರೋಧದಲ್ಲಿಯೂ ನಿರತರಾಗಿ ಆ ವಿಷಯದಲ್ಲಿ ಸತತವಾದ ಪ್ರಯತ್ನವನ್ನು ಮಾಡುತ್ತಾರೆ.

ಸದೋಷಂ ದರ್ಶನಂ ಯೇಷಾಂ ಸಂವಾಸೇ ಸುಮಹದ್ಭಯಮ್ |

ಅರ್ಥಾದಾನೇ ಮಹಾನ್ ದೋಷಃ ಪ್ರದಾನೇ ಚ ಮಹದ್ಭಯಮ್ ॥
ಯಾವ ಅಂತಹವರ ದರ್ಶನವೇ ದೋಷವನ್ನು ಉಂಟುಮಾಡುತ್ತದೆ. ಅವರ ಜೊತೆಯಲ್ಲಿ ವಾಸ ಮಾಡುವುದು ದೊಡ್ಡ ಭಯಕ್ಕೆ ಕಾರಣ. ಅವರಿಗೆ ದ್ರವ್ಯವನ್ನು ಕೊಡದಿದ್ದರೆ ದೊಡ್ಡ ದೋಷ. ಕೊಟ್ಟರೆ ದೊಡ್ಡ ಭಯವು ಉಂಟಾಗುತ್ತದೆ.
ಯೇ ವೈ ಭೇದನಶೀಲಾಸ್ತು ಸಕಾಮಾ ನಿಸ್ತ್ರಪಾಃ ಶಠಾಃ |
ಯೇ ಪಾಪಾ ಇತಿ ವಿಖ್ಯಾತಾಃ ಸಂವಾಸೇ ಪರಿಗರ್ಹಿತಾಃ ॥13॥
ಯಾರು ಸ್ನೇಹಿತರನ್ನು ಒಡೆಯುವ ಸ್ವಭಾವವುಳ್ಳವರೋ, ಕಾಮಿಗಳೋ, ನಾಚಿಕೆ ಇಲ್ಲದವರೋ, ಶಠರೋ ಮತ್ತು ಯಾರು ಪಾಪಿಷ್ಠರೆಂದು ಪ್ರಸಿದ್ಧರಾಗಿದ್ದಾರೆಯೋ ಅಂತಹವರು ಜೊತೆಯಲ್ಲಿ ವಾಸಮಾಡುವುದಕ್ಕೆ ನಿಂದಿತರಾದವರು.
ಯುಕ್ತಾಶ್ಚಾನ್ಯೈರ್ಮಹಾದೋಷೈರ್ಯೇ ನರಾಸ್ತಾನ್ ವಿವರ್ಜಯೇತ್ |
ನೀತೇ ಯಾ ಫಲನಿರ್ವೃತ್ತಿಃ ಸೌಹೃದೇ ಚೈವ ಯತ್ ಸುಖಮ್ ॥14॥
ನಿವರ್ತಮಾನೇ ಸೌಭಾಗ್ಯೇ ಪ್ರೀತಿರ್ನೀಚೇ ವಿನಶ್ಯತಿ ॥15॥
ಬೇರೆ ದೋಷಗಳಿಂದ ಯುಕ್ತರಾದ ಮನುಷ್ಯರನ್ನೂ ಪರಿತ್ಯಜಿಸಬೇಕು. ತನ್ನಿಂದ ಸೌಭಾಗ್ಯವು ದೂರ ಹೋದರೆ ವಿನೀತನಲ್ಲಿರುವ ಫಲನಿಷ್ಪತ್ತಿಯೂ, ಸೌಹಾರ್ದದಲ್ಲಿರುವ ಸುಖವೂ, ನೀಚನಲ್ಲಿರುವ ಪ್ರೀತಿಯೂ ಎಲ್ಲವೂ ನಷ್ಟವಾಗುತ್ತದೆ?
ಯತತೇ ಚಾಪವಾದಾಯ ಯತ್ನಮಾರಭತೇ ಕ್ಷಯೇ ॥16॥
ಸ್ವಲ್ಪೇಽಪ್ಯಪಕೃತೇ ಮೋಹಾನ್ನ ಶಾಂತಿಮುಪಗಚ್ಛತಿ ॥17॥
ತಾದೃಶೈಃ ಸಂಗತಂ ನೀಚೈರ್ನೃಶಂಸೈರಕೃತಾತ್ಮಭಿಃ |
ನಿಶಮ್ಯ ನಿಪುಣಂ ಬುದ್ಧ್ಯಾ ವಿದ್ವಾನ್ ದೂರಾದ್ ವಿವರ್ಜಯೇತ್ ॥
ಯಾವನು ಅಪವಾದವನ್ನು ಹೊರಿಸಲು ಪ್ರಯತ್ನಪಡುತ್ತಾನೆಯೋ, ವಿನಾಶವನ್ನು ಮಾಡಲು ಪ್ರಯತ್ನ ಪಡುತ್ತಾನೆಯೋ, ಸ್ವಲ್ಪ ಅಪರಾಧವನ್ನು ಮಾಡಿದರೂ ಮೋಹದಿಂದ ಸಮಾಧಾನವನ್ನು ಹೊಂದುವುದಿಲ್ಲವೋ ಅಂತಹ ನೀಚರ, ಕ್ರೂರಿಗಳ ಮತ್ತು ಮನೋಜಯವಿಲ್ಲದವರ ಜೊತೆಯಲ್ಲಿ ಸಂಗವನ್ನು ಮಾಡಬಾರದು. ವಿದ್ವಾಂಸನಾದವನು ಬುದ್ಧಿಯಿಂದ ಚೆನ್ನಾಗಿ ವಿಚಾರ ಮಾಡಿ ಅವರನ್ನು ದೂರದಲ್ಲಿ ಪರಿತ್ಯಾಗ ಮಾಡಬೇಕು.
ಯೋ ಜ್ಞಾತಿಮನುಗೃಹ್ಣಾತಿ ದರಿದ್ರಂ ದೀನಮಾತುರಮ್ |
ಸ ಪುತ್ರಪಶುವೃದ್ಧಿಂ ಚ ಶ್ರೇಯಶ್ಚಾನಂತಮಶ್ನುತೇ ॥19॥
ಯಾವನು ದರಿದ್ರನಾದ, ದೀನನಾದ ಮತ್ತು ರೋಗಿಯಾದ ದಾಯಾದಿಗೆ ಉಪಕಾರ ಮಾಡುತ್ತಾನೆಯೋ ಅವನು ಪಶು-ಪುತ್ರವೃದ್ಧಿಯನ್ನೂ, ಅನಂತವಾದ ಶ್ರೇಯಸ್ಸನ್ನೂ ಹೊಂದುತ್ತಾನೆ.
ಜ್ಞಾತಯೋ ವರ್ಧನೀಯಾಸ್ತೈರ್ಯ ಇಚ್ಛಂತ್ಯಾತ್ಮನಃ ಸುಖಮ್ |
ಕುಲವೃದ್ಧಿಂ ಚ ರಾಜೇಂದ್ರ ತಸ್ಮಾತ್ ಸಾಧು ಸಮಾಚರ ॥20॥
ಶ್ರೇಯಸಾ ಯೋಕ್ಷ್ಯಸೇ ರಾಜನ್ ಕುರ್ವಾಣೋ ಜ್ಞಾತಿಸತ್ಕ್ರಿಯಾಮ್ ॥
ಯಾವ ಜ್ಞಾತಿಗಳಿಂದ ನಾವು ಸುಖವನ್ನು ಬಯಸುತ್ತೇವೆಯೋ ಅಂತಹ ಜ್ಞಾತಿಗಳು ಪೋಷಿಸಲ್ಪಡಬೇಕು. ರಾಜೇಂದ್ರನೇ, ಆದ್ದರಿಂದ ಕುಲವೃದ್ಧಿಯನ್ನು ಚೆನ್ನಾಗಿ ಮಾಡು. ರಾಜನೇ, ಜ್ಞಾತಿಗಳಿಗೆ ಸತ್ಕಾರವನ್ನು ಮಾಡಿದರೆ ಶ್ರೇಯಸ್ಸನ್ನು ಹೊಂದುವಿ.
ವಿಗುಣಾ ಹ್ಯಪಿ ಸಂರಕ್ಷ್ಯಾ ಜ್ಞಾತಯೋ ಭರತರ್ಷಭ |
ಕಿಂ ಪುನರ್ಗುಣವಂತಸ್ತೇ ತ್ವತ್ಪ್ರಸಾದಾಭಿಕಾಂಕ್ಷಿಣಃ ॥22॥
ಭರತರ್ಷಭನೇ, ಗುಣವಿಲ್ಲದ ಜ್ಞಾತಿಗಳನ್ನೂ ಸಂರಕ್ಷಣೆ ಮಾಡಬೇಕು. ಹೀಗಿರುವಾಗ ಗುಣವಂತರೂ ಮತ್ತು ನಿನ್ನ ಅನುಗ್ರಹವನ್ನು ಅಪೇಕ್ಷಿಸುವವರೂ ಆದ ಪಾಂಡವರ ವಿಷಯದಲ್ಲಿ ಹೇಳುವುದೇನಿದೆ?
ಪ್ರಸಾದಂ ಕುರು ವೀರಾಣಾಂ ಪಾಂಡವಾನಾಂ ವಿಶಾಂಪತೇ |
ದೀಯತಾಂ ಗ್ರಾಮಕಾಃ ಕೇಚಿತ್ ತೇಷಾಂ ವೃತ್ತ್ಯರ್ಥಮೀಶ್ವರ ॥23॥
ರಾಜನೇ, ವೀರರಾದ ಪಾಂಡವರಿಗೆ ಅನುಗ್ರಹವನ್ನು ಮಾಡು. ಈಶ್ವರನೇ, ಅವರ ಜೀವನಕ್ಕಾಗಿ ಅವರಿಗೆ ಕೆಲವು ಗ್ರಾಮಗಳನ್ನು ಕೊಡು.
ಏವಂ ಲೋಕೇ ಯಶಃ ಪ್ರಾಪ್ತಂ ಭವಿಷ್ಯತಿ ನರಾಧಿಪ |
ವೃದ್ಧೇನ ಹಿ ತ್ವಯಾ ಕಾರ್ಯಂ ಪುತ್ರಾಣಾಂ ತಾತ ರಕ್ಷಣಮ್ ॥24॥
ಮಯಾ ಚಾಪಿ ಹಿತಂ ವಾಚ್ಯಂ ವಿದ್ಧಿ ಮಾಂ ತ್ವದ್ಧಿತೈಷಿಣಮ್ ॥25॥
ನರಾಧಿಪನೇ, ಹಾಗೆ ಮಾಡಿದರೆ ಲೋಕದಲ್ಲಿ ನಿನಗೆ ಕೀರ್ತಿ ಉಂಟಾಗುತ್ತದೆ. ಪ್ರೀತಿಪಾತ್ರನೇ, ನೀನು ಮಕ್ಕಳಿಗೆ ರಕ್ಷಣೆಯನ್ನು ಮಾಡಬೇಕಾದವನು. ನಾನೂ ಸಹ ಹಿತವನ್ನು ಹೇಳಬೇಕು. ನನ್ನನ್ನು ನಿನ್ನ ಹಿತೈಷಿ ಎಂದು ತಿಳಿ.
ಜ್ಞಾತಿಭಿರ್ವಿಗ್ರಹಸ್ತಾತ ನ ಕರ್ತವ್ಯೋ ಭವಾರ್ಥಿನಾ |
ಸುಖಾನಿ ಸಹಭೋಜ್ಯಾನಿ ಜ್ಞಾತಿಭಿರ್ಭರತರ್ಷಭ ॥26॥
ಪ್ರೀತಿಪಾತ್ರನೇ, ಏಳಿಗೆಯನ್ನು ಅಪೇಕಿಸುವವನು ಜ್ಞಾತಿಗಳ ಜೊತೆಯಲ್ಲಿ ವಿರೋಧವನ್ನು ಮಾಡಿಕೊಳ್ಳಬಾರದು. ಭರತರ್ಷಭನೇ, ಸುಖಗಳು ಜ್ಞಾತಿಗಳ ಜೊತೆಯಲ್ಲಿ ಭೋಗಿಸಬೇಕಾದವುಗಳು.
ಸಭೋಜನಂ ಸಂಕಥನಂ ಸಂಪ್ರೀತಿಶ್ಚ ಪರಸ್ಪರಮ್ |
ಜ್ಞಾತಿಭಿಃ ಸಹ ಕಾರ್ಯಾಣಿ ನ ವಿರೋಧಃ ಕದಾಚನ ॥27॥
ಜ್ಞಾತಿಗಳ ಜೊತೆಯಲ್ಲಿ ಭೋಜನವನ್ನು ಮಾಡಬೇಕು, ಒಳ್ಳೆಯ ಮಾತುಗಳನ್ನು ಆಡಬೇಕು, ಪರಸ್ಪರ ಪ್ರೀತಿಯನ್ನು ಮಾಡಬೇಕು, ಆದರೆ ಎಂದೂ ವಿರೋಧವನ್ನು ಮಾಡಬಾರದು.
ಜ್ಞಾತಯಸ್ತಾರಯಂತೀಹ ಜ್ಞಾತಯೋ ಮಜ್ಜಯಂತಿ ಚ |

ಸುವೃತ್ತಾಸ್ತಾರಯಂತೀಹ ದುರ್ವೃತ್ತಾ ಮಜ್ಜಯಂತಿ ಚ ॥28॥
ಇಲ್ಲಿ ಜ್ಞಾತಿಗಳು ಆಪತ್ತಿನಿಂದ ದಾಟಿಸುತ್ತಾರೆ ಮತ್ತು ಮುಳುಗಿಸುತ್ತಾರೆ ಕೂಡ. ಒಳ್ಳೆಯ ನಡತೆಯುಳ್ಳವರು ದಾಟಿಸುತ್ತಾರೆ ಮತ್ತು ಕೆಟ್ಟ ನಡತೆಯುಳ್ಳವರು ಮುಳುಗಿಸುತ್ತಾರೆ.
ಸುವೃತ್ತೋ ಭವ ರಾಜೇಂದ್ರ ಪಾಂಡವಾನ್ ಪ್ರತಿ ಮಾನದ |
ಅಧರ್ಷಣೀಯಃ ಶತ್ರೂಣಾಂ ತೈರ್ವೃತಸ್ತ್ವಂ ಭವಿಷ್ಯಸಿ ॥29॥
ರಾಜೇಂದ್ರನೇ, ಮಾನದನೇ, ಪಾಂಡವರ ವಿಷಯದಲ್ಲಿ ಒಳ್ಳೆಯ ನಡತೆಯನ್ನು ಹೊಂದು. ಅವರಿಂದ ಯುಕ್ತನಾದ ನೀನು ಶತ್ರುಗಳಿಂದ ಅವಮಾನ ಮಾಡಲು ಸಾಧ್ಯವಿಲ್ಲದವನಾಗಿ ಆಗುವಿ.
ಶ್ರೀಮಂತಂ ಜ್ಞಾತಿರಾಸಾದ್ಯ ಯೋ ಜ್ಞಾತಿಮವಸೀದತಿ |
ದಿಗ್ಧಹಸ್ತಾತ್ ಮೃಗ ಇವ ಸ ಏನಸ್ತಸ್ಯ ವಿಂದತಿ ॥30॥
ಜ್ಞಾತಿಯಾದವನು ಶ್ರೀಮಂತನಾದ ಜ್ಞಾತಿಯನ್ನು ಸಮೀಪಿಸಿ ಅವನನ್ನು ವಿಷದ ಲೇಪವುಳ್ಳ ಹಸ್ತದಿಂದ ಮೃಗವು ನಾಶವಾಗುವಂತೆ ನಾಶ ಮಾಡಿದರೆ, ನಾಶ ಹೊಂದಿದವನ ಪಾಪವೆಲ್ಲವೂ ನಾಶ ಮಾಡಿದವನಿಗೆ ಸೇರುತ್ತದೆ.
ಪಶ್ಚಾದಪಿ ನರಶ್ರೇಷ್ಠ ತವ ತಾಪೋ ಭವಿಷ್ಯತಿ |
ತಾನ್ ವಾ ಹತಾನ್ ಸುತಾನ್ ವಾಽಪಿ ಶ್ರುತ್ವಾ ತದನುಚಿಂತಯ ॥
ರಾಜೇಂದ್ರನೇ, ಪಾಂಡವರು ಹತರಾದುದನ್ನು ಅಥವಾ ನಿನ್ನ ಮಕ್ಕಳು ಹತರಾದುದನ್ನು ಕೇಳಿ ಅನಂತರವೂ ಕೂಡ ನಿನಗೆ ಪಶ್ಚಾತ್ತಾಪ ಉಂಟಾಗುವುದು. ನರಶ್ರೇಷ್ಠನೇ, ಈ ವಿಷಯವನ್ನು ಚೆನ್ನಾಗಿ ಯೋಚಿಸು.
ಯೇನ ಖಟ್ವಾಂ ಸಮಾರೂಢಃ ಪರಿತಪ್ಯೇತ ಕರ್ಮಣಾ |
ಆದಾವೇವ ನ ತತ್ ಕುರ್ಯಾದಧ್ರುವೇ ಜೀವಿತೇ ಸತಿ ॥32॥
ರಾತ್ರಿ ಮಲಗುವಾಗ ಮಂಚವನ್ನು ಏರುವವನು ತನ್ನ ಕರ್ಮದಿಂದ ಪರಿತಾಪವನ್ನು ಹೊಂದಬಾರದವನಾಗಿದ್ದರೆ ಜೀವನವು ಅಶಾಶ್ವತವಾಗಿರುವಾಗ ಅದಕ್ಕೆ ಬೇಕಾದ ಕರ್ಮವನ್ನು ಮೊದಲೇ ಮಾಡಬೇಕು.
ನ ಕಶ್ಚಿನ್ನಾಪನಯತೇ ಪುಮಾನನ್ಯತ್ರ ಭಾರ್ಗವಾತ್ |
ಶೇಷಸಂಪ್ರತಿಪತ್ತಿಸ್ತು ಬುದ್ಧಿಮತ್ಸ್ವವತಿಷ್ಠತಿ ॥33॥
ಕುಂಬಾರನನ್ನು ಬಿಟ್ಟು ಬೇರೆ ಯಾರೂ ಒಮ್ಮೆ ಕೊಟ್ಟ ವಸ್ತುವನ್ನು ಪುನಃ ಹಿಂದಕ್ಕೆ ತೆಗೆದುಕೊಳ್ಳುವುದಿಲ್ಲ (ಕುಂಬಾರನು ಮಾತ್ರ ಒಮ್ಮೆ ಮಾರಿದ ಪದಾರ್ಥಗಳನ್ನು ತೆಗೆದುಕೊಂಡು ಅದನ್ನೇ ಸ್ವಲ್ಪ ಹೊಸದನ್ನಾಗಿ ಮಾಡಿ ಪುನಃ ಮಾರುತ್ತಾನೆ). ವಿವೇಕಿಗಳಾದವರು ದತ್ತಾಪಹಾರವನ್ನು ಮಾಡುವುದಿಲ್ಲ (ವಾದಿರಾಜರು).
ದುರ್ಯೋಧನೇನ ಯದ್ಯೇತತ್ ತತ್ ಪಾಪಂ ತೇ ಪುರಾಕೃತಮ್ |
ತ್ವಯಾ ತತ್ಕುಲವೃದ್ಧೇನ ಪ್ರತ್ಯಾನೇಯಂ ಜನೇಶ್ವರ ॥34॥
ಎಲೈ ಜನೇಶ್ವರನೇ, ದುರ್ಯೋಧನನ ಮೂಲಕ ನೀನು ಹಿಂದೆ ಯಾವ ಪಾಪವನ್ನು ಮಾಡಿದೆಯೋ ಈಗ ಕುಲವೃದ್ಧನಾದ ನೀನು ಅದನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು.
ತಾನ್ ಸ್ವೇ ಪದೇ ಪ್ರತಿಷ್ಠಾಪ್ಯ ಲೋಕೇ ವಿಗತಕಲ್ಮಷಃ |
ಭವಿಷ್ಯಸಿ ನರಶ್ರೇಷ್ಠ ಪೂಜನೀಯೋ ಮನೀಷಿಣಾಮ್ ॥35॥
ನರಶ್ರೇಷ್ಠನೇ, ಅವರನ್ನು ಅವರ ಸ್ಥಾನದಲ್ಲಿ ಪ್ರತಿಷ್ಠಾಪನೆ ಮಾಡಿದರೆ ಲೋಕದಲ್ಲಿ ಅಪವಾದದಿಂದ ದೂರನಾಗುವಿ, ಜ್ಞಾನಿಗಳಿಂದ ಪೂಜನೀಯನೂ ಆಗುವಿ.
ಸುವ್ಯಾಹೃತಾನಿ ಧೀರಾಣಾಂ ಫಲತಃ ಪರಿಚಿಂತ್ಯ ಚ |
ಅಧ್ಯವಸ್ಯತಿ ಕಾರ್ಯೇಷು ಚಿರಂ ಯಶಸಿ ತಿಷ್ಠತಿ ॥36॥
ಯಾವನು ಧೀರರ ಒಳ್ಳೆಯ ಮಾತುಗಳನ್ನೂ, ಅದರಿಂದ ಉಂಟಾಗುವ ಫಲಗಳನ್ನೂ ಚೆನ್ನಾಗಿ ಚಿಂತಿಸಿ ಕಾರ್ಯವನ್ನು ಮಾಡಲು ನಿಶ್ಚಯಿಸುತ್ತಾನೆಯೋ ಅವನು ಬಹುಕಾಲ ಕೀರ್ತಿಯನ್ನು ಹೊಂದುತ್ತಾನೆ.
ಅಸಮ್ಯಗುಪಯುಕ್ತಂ ಹಿ ಜ್ಞಾನಂ ಸುಕುಶಲೈರಪಿ |
ಉಪಲಭ್ಯಂ ಚಾವಿದಿತಂ ವಿದಿತಂ ಚಾನನುಷ್ಠಿತಮ್ ॥37॥
ಪಾಪೋದಯಫಲಂ ವಿದ್ವಾನ್ ಯೋ ನಾರಭತಿ ವರ್ಧತೇ ॥38॥
ಒಳ್ಳೆಯ ಕುಶಲರೂ ಕೂಡ ತಮ್ಮ ಜ್ಞಾನವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳುವುದಿಲ್ಲ. ದೊರೆತಿರುವ ಜ್ಞಾನವು ಅರ್ಥವಾಗುವುದಿಲ್ಲ, ಅರ್ಥವಾದುದು ಅನುಷ್ಠಾನಕ್ಕೆ ಬರುವುದಿಲ್ಲ, ಇಂತಹ ಆರಂಭವು ಪಾಪವನ್ನೇ ಉಂಟುಮಾಡುತ್ತದೆ ಎಂದು ತಿಳಿದು ಯಾವನು ಆರಂಭವನ್ನೇ ಮಾಡುವುದಿಲ್ಲವೋ ಅವನು ಅಭಿವೃದ್ಧಿಯನ್ನು ಹೊಂದುತ್ತಾನೆ.
ಯಸ್ತು ಪೂರ್ವಕೃತಂ ಪಾಪಮವಿಮೃಶ್ಯಾನುವರ್ತತೇ |
ಅಗಾಧಪಂಕೇ ದುರ್ಮೇಧಾ ವಿಷಮೇ ವಿನಿಪಾತ್ಯತೇ ॥39॥
ಯಾವನು ತಾನು ಮೊದಲು ಮಾಡಿದ ಪಾಪವನ್ನು ವಿಮರ್ಶೆ ಮಾಡದೆ ಅದನ್ನೇ ಮುಂದುವರೆಸುತ್ತಾನೆಯೋ, ಅಂತಹ ದುರ್ಮೇಧನಾದ ಅವನು ದುಃಖಕರವಾದ ಅಗಾಧವಾದ ಕೆಸರಿನಲ್ಲಿ ಬೀಳುತ್ತಾನೆ (ಬೀಳಿಸಲ್ಪಡುತ್ತಾನೆ).
ಮಂತ್ರಭೇದಸ್ಯ ಷಟ್ ಪ್ರಾಜ್ಞೋ ದ್ವಾರಾಣೀಮಾನಿ ಲಕ್ಷಯೇತ್ |
ಅರ್ಥಸಂತತಿಕಾಮಶ್ಚ ರಕ್ಷೇದೇತಾನಿ ನಿತ್ಯಶಃ ॥40॥
ಪ್ರಾಜ್ಞನಾದವನು ಮಂತ್ರಭೇದಕ್ಕೆ (ಮಂತ್ರವು ಸೋರಿ ಹೋಗುವುದಕ್ಕೆ) ಆರು ದ್ವಾರಗಳನ್ನು ಗಮನಿಸಬೇಕು. ಅರ್ಥದ ಅಭಿವೃದ್ಧಿಯನ್ನು ಬಯಸುವವನು ಇವುಗಳನ್ನು ಯಾವಾಗಲೂ ರಕ್ಷಿಸಬೇಕು.

ಮದ್ಯಂ ಸ್ವಪ್ನಮವಿಜ್ಞಾನಮಾಕಾರಂ ಚಾತ್ಮಸಂಭವಮ್ |
ದುಷ್ಟಾಮಾತ್ಯೇಷು ವಿಸ್ರಂಭಂ ದೂತಾಚ್ಚಾಕುಶಲಾದಪಿ ॥41॥
ದ್ವಾರಾಣ್ಯೇತಾನಿ ಯೋ ಜ್ಞಾತ್ವಾ ಸಂವೃಣೋತಿ ಸದಾ ನೃಪಃ |
ತ್ರಿವರ್ಗಾಚರಣೇ ಯುಕ್ತಃ ಸ ಶತ್ರೂನಧಿತಿಷ್ಠತಿ ॥42॥
ಮದ್ಯ, ನಿದ್ರೆ, ಅಜ್ಞಾನ, ತನ್ನ ಆಕಾರ, ದುಷ್ಟ ಅಮಾತ್ಯರಲ್ಲಿ ವಿಶ್ವಾಸ ಮತ್ತು ಅಕುಶಲರಾದ ದೂತರು - ಯಾವ ರಾಜನು ಈ ಆರು ದ್ವಾರಗಳನ್ನು ತಿಳಿದು ಯಾವಾಗಲೂ ಮುಚ್ಚುತ್ತಾನೆಯೋ ಮತ್ತು ಧರ್ಮಾರ್ಥಕಾಮಗಳ ಆಚರಣೆಯಲ್ಲಿ ನಿರತನಾಗುತ್ತಾನೆಯೋ ಅವನು ಶತ್ರುಗಳನ್ನು ಮೆಟ್ಟಿ ನಿಲ್ಲುತ್ತಾನೆ.
ನ ವೈ ಶ್ರುತಮವಿಜ್ಞಾಯ ವೃದ್ಧಾನನುಪಸೇವ್ಯ ವಾ |
ಧರ್ಮಾರ್ಥೌ ವೇದಿತುಂ ಶಕ್ಯೌ ಬೃಹಸ್ಪತಿಸಮೈರಪಿ ॥43॥
ವಿದ್ಯೆಯನ್ನು ಅಭ್ಯಾಸ ಮಾಡದೆ, ದೊಡ್ಡವರ ಸೇವೆಯನ್ನು ಮಾಡದೆ ಬೃಹಸ್ಪತಿಗೆ ಸಮಾನರಾದವರೂ ಸಹ ಧರ್ಮಾರ್ಥಗಳನ್ನು ತಿಳಿಯಲು ಸಾಧ್ಯವಿಲ್ಲ.
ನಷ್ಟಂ ಸಮುದ್ರೇ ಪತಿತಂ ನಷ್ಟಂ ವಾಕ್ಯಮಶೃಣ್ವತಿ |
ಅನಾತ್ಮನಿ ಶ್ರುತಂ ನಷ್ಟಂ ನಷ್ಟಂ ಹುತಮನಗ್ನಿಕಮ್ ॥44॥
ಸಮುದ್ರದಲ್ಲಿ ಬಿದ್ದ ವಸ್ತುವು ನಷ್ಟವಾಗುತ್ತದೆ. ಕೇಳದಿದ್ದವನಿಗೆ ಹೇಳಿದ ಮಾತು ನಷ್ಟವಾಗುತ್ತದೆ. ಮನೋಜಯವಿಲ್ಲದವನ ವಿದ್ಯೆಯು ನಷ್ಟವಾಗುತ್ತದೆ. ಅಗ್ನಿ ಇಲ್ಲದೆ ಮಾಡಿದ ಹೋಮವು ನಷ್ಟವಾಗುತ್ತದೆ.
ಸತ್ಯಂ ಪರೀಕ್ಷ್ಯ ಮೇಧಾವೀ ಬುದ್ಧ್ಯಾ ಸಂಪಾದ್ಯ ಚಾಸಕೃತ್ |
ಶ್ರುತ್ವಾ ದೃಷ್ಟ್ವಾಽಥ ವಿಜ್ಞಾಯ ಪ್ರಾಜ್ಞೈರ್ಮೈತ್ರೀಂ ಸಮಾಚರೇತ್ ॥
ಮೇಧಾವಿಯಾದವನು ತನ್ನ ಬುದ್ಧಿಯಿಂದ ಅನೇಕ ಸಲ ಒಳ್ಳೆಯ ನಡತೆಯನ್ನು ಪರೀಕ್ಷೆ ಮಾಡಿ, ಇನ್ನೊಬ್ಬರಿಂದ ಕೇಳಿ, ತಾನು ನೋಡಿ, ಅನಂತರ ತಿಳಿದುಕೊಂಡು ಪ್ರಾಜ್ಞರ ಜೊತೆಯಲ್ಲಿ ಸ್ನೇಹವನ್ನು ಮಾಡಬೇಕು.
ಅವೃತ್ತಂ ವಿನಯೋ ಹಂತಿ ಹಂತ್ಯನರ್ಥಂ ಪರಾಕ್ರಮಃ |
ಹಂತಿ ನಿತ್ಯಂ ಕ್ಷಮಾ ಕ್ರೋಧಮಾಚಾರೋ ಹಂತ್ಯಲಕ್ಷಣಮ್ ॥46॥
ವಿನಯವು ದುರ್ನಡತೆಯನ್ನು ನಾಶಮಾಡುತ್ತದೆ. ಪರಾಕ್ರಮವು ಅನರ್ಥವನ್ನು ನಾಶಮಾಡುತ್ತದೆ. ಕ್ಷಮೆಯು ನಿತ್ಯವೂ ಕ್ರೋಧವನ್ನು ನಾಶ ಮಾಡುತ್ತದೆ. ಒಳ್ಳೆಯ ಆಚಾರವು ಅವಲಕ್ಷಣಗಳನ್ನು ನಾಶ ಮಾಡುತ್ತದೆ.
ಪರಿಚ್ಛದೇನ ಕ್ಷೇತ್ರೇಣ ವೇಶ್ಮನಾ ಬ್ರಹ್ಮಚರ್ಯಯಾ |
ಪರೀಕ್ಷೇತ ಕುಲಂ ರಾಜನ್ ಭೋಜನಾಚ್ಛಾದನೇನ ಚ ॥47॥
ರಾಜನೇ, ಒಂದು ಕುಲವನ್ನು ಅದರ ವಾತಾವರಣದಿಂದ, ಅದರ ಕ್ಷೇತ್ರದಿಂದ (ಆಸ್ತಿಯಿಂದ), ಗೃಹದಿಂದ, ವೇದಾಭ್ಯಾಸದಿಂದ, ಭೋಜನ ಮತ್ತು ವಸ್ತುಗಳಿಂದ ಪರೀಕ್ಷಿಸಬೇಕು.
ಯಯೋಶ್ಚಿತ್ತೇನ ವಾ ಚಿತ್ತಂ ನಿಭೃತಂ ನಿಭೃತೇನ ವಾ |
ಸಮೇತಿ ಪ್ರಜ್ಞಯಾ ಪ್ರಜ್ಞಾ ತಯೋರ್ಮೈತ್ರೀ ನ ಜೀರ್ಯತೇ ॥48॥
ಯಾವ ಇಬ್ಬರಿಗೆ ಚಿತ್ತದೊಡನೆ ಚಿತ್ತವು ಬೆರೆಯುತ್ತದೆಯೋ, ಅವಧಾನವು ಅವಧಾನದೊಡನೆ ಬೆರೆಯುತ್ತದೆಯೋ, ಪ್ರಜ್ಞೆಯು ಪ್ರಜ್ಞೆಯೊಡನೆ ಬೆರೆಯುತ್ತದೆಯೋ ಅವರಿಬ್ಬರ ಸ್ನೇಹವು ನಶಿಸಿಹೋಗುವುದಿಲ್ಲ.
ದುರ್ಬುದ್ಧಿಮಕೃತಪ್ರಜ್ಞಂ ಛನ್ನಂ ಕೂಪಂ ತೃಣೈರಿವ |
ವಿವರ್ಜಯೀತ ಮೇಧಾವೀ ತಸ್ಮಿನ್ ಮೈತ್ರೀ ಪ್ರಣಶ್ಯತಿ ॥49॥
ಮೇಧಾವಿಯಾದವನು ದುರ್ಬುದ್ಧಿಯುಳ್ಳ, ಪ್ರಜ್ಞಾಶೂನ್ಯನಾದ ಮನುಷ್ಯನನ್ನು ತೃಣದಿಂದ ಮುಚ್ಚಲ್ಪಟ್ಟ ಕೂಪದಂತೆ ಪರಿತ್ಯಜಿಸಬೇಕು. ಅವನಲ್ಲಿ ಮಾಡಿದ ಸ್ನೇಹವು ನಾಶವನ್ನು ಹೊಂದುತ್ತದೆ.
ಅವಲಿಪ್ತೇಷು ಮೂರ್ಖೇಷು ರೌದ್ರಸಾಹಸಿಕೇಷು ಚ |
ತಥೈವಾಪೇತಧರ್ಮೇಷು ನ ಮೈತ್ರೀಮಾಚರೇದ್ ಬುಧಃ ॥50॥
ಅಹಂಕಾರವುಳ್ಳವರಲ್ಲಿ, ಮೂರ್ಖರಲ್ಲಿ, ಭಯಂಕರ ಸಾಹಸಗಳನ್ನು ಮಾಡುವವರಲ್ಲಿ, ಧರ್ಮಭ್ರಷ್ಟರಾದವರಲ್ಲಿ ವಿವೇಕಿಯಾದವನು ಸ್ನೇಹವನ್ನು ಮಾಡಬಾರದು.
ಕೃತಜ್ಞಂ ಧಾರ್ಮಿಕಂ ಸತ್ಯಮಕ್ಷುದ್ರಂ ದೃಢಭಕ್ತಿಕಮ್ |
ಜಿತೇಂದ್ರಿಯಂ ಸ್ಥಿತಂ ಸ್ಥಿತ್ಯಾಂ ಮಿತ್ರಮಿತ್ಯಭಿವಾಂಛತಿ ॥51॥
ಕೃತಜ್ಞನಾದವನು, ಧಾರ್ಮಿಕನಾದವನು, ಸದ್ಗುಣಗಳುಳ್ಳವನು, ಕ್ಷುದ್ರನಲ್ಲದವನು, ದೃಢವಾದ ಭಕ್ತಿಯನ್ನು ಹೊಂದಿದವನು, ಜಿತೇಂದ್ರಿಯನು, ತನ್ನ ಧೋರಣೆಯಲ್ಲಿಯೇ ನಿಲ್ಲುವವನು, ಇಂತಹವನನ್ನು ಮಿತ್ರನನ್ನಾಗಿ ಬಯಸಬೇಕು.
ಇಂದ್ರಿಯಾಣಾಮನುತ್ಸರ್ಗೋಽಮೃತ್ಯುನಾ ಚ ವಿಶಿಷ್ಯತೇ |
ಅತ್ಯರ್ಥಂ ಪುನರುತ್ಸರ್ಗಃ ಶಾತಯೇದ್ ದೈವತಾನ್ಯಪಿ ॥52॥
ಇಂದ್ರಿಯಗಳನ್ನು ನಿಗ್ರಹಿಸಿ ಅವುಗಳನ್ನು ವಿಷಯದ ಕಡೆಗೆ ಬಿಡದಿರುವುದು ಮೋಕ್ಷಕ್ಕಿಂತಲೂ ಶ್ರೇಷ್ಠವಾದುದು. ವಿಷಯದ ಕಡೆಗೆ ಬಹಳವಾಗಿ ಬಿಟ್ಟರೆ ಅವು ದೇವತೆಗಳನ್ನೂ ಧ್ವಂಸ ಮಾಡುತ್ತವೆ.
ಮಾರ್ದವಂ ಸರ್ವಭೂತಾನಾಮನಸೂಯಾ ಕ್ಷಮಾ ಧೃತಿಃ |
ಆಯುಷ್ಯಾಣಿ ಬುಧಾಃ ಪ್ರಾಹುರ್ಮಿತ್ರಾಣಾಂ ಚಾವಿಮಾನನಾ ॥53॥
ಮಾರ್ದವ, ಯಾರಲ್ಲೂ ಅಸೂಯೆಯನ್ನು ಮಾಡದಿರುವುದು, ಕ್ಷಮೆ, ಧೈರ್ಯ, ಮಿತ್ರರನ್ನು ಅವಮಾನ ಮಾಡದಿರುವುದು ಇವು

ಆಯುಷ್ಯಪ್ರದವೆಂದು ಜ್ಞಾನಿಗಳು ಹೇಳುತ್ತಾರೆ.
ಅಪ(ವಿ)ನೀತಂ ಸುನೀತೇನ ಯೋಽರ್ಥಂ ಪ್ರತ್ಯಾನಿನೀಷತಿ |
ಮತಿಮಾಸ್ಥಾಯ ಸುದೃಢಾಂ ತದೇಕಂ ಪುರುಷವ್ರತಮ್ ॥54॥
ಹಿಂದೆ ಇನ್ನೊಬ್ಬರಿಂದ ಅಪಹೃತವಾದುದನ್ನು ಒಳ್ಳೆಯ ನೀತಿಯನ್ನು ಅನುಸರಿಸಿ, ದೃಢವಾದ ಒಳ್ಳೆಯ ಬುದ್ಧಿಯನ್ನು ಹೊಂದಿ ಯಾವನು ಹಿಂದಕ್ಕೆ ತರುತ್ತಾನೆಯೋ ಅದಕ್ಕೆ ಮುಖ್ಯವಾದ ಪುರುಷವ್ರತವೆಂದು ಹೇಳುತ್ತಾರೆ.
ಆಯತ್ಯಾಂ ಪ್ರತಿಕಾರಜ್ಞಃ ತಥಾತ್ವೇ ದೃಢನಿಶ್ಚಯಃ |
ಅತೀತೇ ಕಾರ್ಯಶೇಷಜ್ಞೋ ನರೋಽರ್ಥೈರ್ನ ಪ್ರಹೀಯತೇ ॥55॥
ಭವಿಷ್ಯಕಾಲದಲ್ಲಿ ಉಂಟಾಗುವ ಅನರ್ಥಗಳಿಗೆ ಪ್ರತೀಕಾರವನ್ನು ಮಾಡಲು ತಿಳಿದವನು, ವರ್ತಮಾನಕಾಲದಲ್ಲಿ ಮಾಡಬೇಕಾದ ಕಾರ್ಯವನ್ನು ದೃಢವಾಗಿ ತಿಳಿದವನು ಮತ್ತು ಭೂತಕಾಲದ ಕಾರ್ಯದ ಶೇಷವನ್ನು ತಿಳಿದವನು ಎಂದೂ ಅರ್ಥವನ್ನು ಕಳೆದುಕೊಳ್ಳುವುದಿಲ್ಲ.
ಕರ್ಮಣಾ ಮನಸಾ ವಾಚಾ ಯದಭೀಕ್ಷ್ಣಂ ನಿಷೇವತೇ |
ತದೇವಾಪಹರತ್ಯೇನಂ ತಸ್ಮಾತ್ ಕಲ್ಯಾಣಮಾಚರೇತ್ ॥56॥
ಕರ್ಮದಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ಸತತವಾಗಿ ಯಾವ ವಸ್ತುವನ್ನು ಸೇವಿಸುತ್ತಾನೆಯೋ ಆ ವಸ್ತುವೇ ಅವನನ್ನು ಅಪಹರಿಸುತ್ತದೆ. ಆದ್ದರಿಂದ (ಮೂರರಿಂದಲೂ) ಒಳ್ಳೆಯದನ್ನೇ ಮಾಡಬೇಕು.
ಮಂಗಲಾಲಾಪನಂ ಯೋಗಃ ಶ್ರುತಮುತ್ಥಾನಮಾರ್ಜವಮ್ |
ಭೂತಿಮೇತಾನಿ ಕುರ್ವಂತಿ ಸತಾಂ ಚಾಭೀಕ್ಷ್ಣದರ್ಶನಮ್ ॥57॥
ಮಂಗಳವಾದ ಮಾತುಗಳು, ಯೋಗ, ಶಾಸ್ತ್ರಶ್ರವಣ, ಉತ್ಸಾಹ, ಆರ್ಜವ (ಸರಳತೆ) ಮತ್ತು ಸತತವಾಗಿ ಸಜ್ಜನರ ದರ್ಶನ - ಇವು ಸಂಪತ್ತನ್ನೇ ತಂದುಕೊಡುತ್ತವೆ.
ಅನಿರ್ವೇದಃ ಶ್ರಿಯೋ ಮೂಲಂ ಲಾಭಸ್ಯ ಚ ಶುಭಸ್ಯ ಚ |
ಮಹಾನ್ ಭವತ್ಯನಿರ್ವಿಣ್ಣಃ ಸುಖಂ ಚಾನಂತಮಶ್ನುತೇ ॥58॥
ತೃಪ್ತಿಯು ಸಂಪತ್ತಿಗೂ ಲಾಭಕ್ಕೂ ಮತ್ತು ಶುಭಕ್ಕೂ ಮೂಲವಾದುದು. ತೃಪ್ತನಾದವನು ದೊಡ್ಡವನಾಗುತ್ತಾನೆ, ಅನಂತವಾದ ಸುಖವನ್ನು ಹೊಂದುತ್ತಾನೆ.
ನಾತಃ ಶ್ರೀಮತ್ತರಂ ಕಿಂಚಿದನ್ಯತ್ ಪಥ್ಯತಮಂ ಮತಮ್ |
ಪ್ರಭವಿಷ್ಣೋರ್ಯಥಾ ತಾತ ಕ್ಷಮಾ ಸರ್ವತ್ರ ಸರ್ವದಾ ॥59॥
ಸಾಮರ್ಥ್ಯವನ್ನು ಹೊಂದಿರುವವನಿಗೆ ಯಾವಾಗಲೂ ಕ್ಷಮೆಯನ್ನು ಹೊಂದಿರುವುದಕ್ಕಿಂತ ಹೆಚ್ಚು ಸಂಪತ್ಕರವಾದುದಾಗಲೀ ಅಥವಾ ಹೆಚ್ಚು ಹಿತವಾದುದಾಗಲೀ ಬೇರೆ ಯಾವುದೂ ಇಲ್ಲ.
ಕ್ಷಮೇದಶಕ್ತಃ ಸರ್ವಸ್ಯ ಶಕ್ತಿಮಾನ್ ಧರ್ಮಕಾರಣಾತ್ |
ಅರ್ಥಾನರ್ಥೌ ಸಮೌ ಯಸ್ಯ ತಸ್ಯ ನಿತ್ಯಂ ಕ್ಷಮಾ ಹಿತಾ ॥60॥
ಅಶಕ್ತನಾದವನು ಎಲ್ಲವನ್ನೂ ಕ್ಷಮಿಸಬೇಕು. ಶಕ್ತಿಯುಳ್ಳವನು ಧರ್ಮಕ್ಕಾಗಿ ಎಲ್ಲವನ್ನೂ ಕ್ಷಮಿಸಬೇಕು. ಯಾವನಿಗೆ ಅರ್ಥ ಮತ್ತು ಅನರ್ಥಗಳೆರಡೂ ಸಮವಾಗಿರುತ್ತವೆಯೋ ಅವನಿಗೆ ಕ್ಷಮೆಯು ಯಾವಾಗಲೂ ಹಿತವಾದುದು.
ಯತ್ಸುಖಂ ಸೇವಮಾನೋಽಪಿ ಧರ್ಮಾರ್ಥಾಭ್ಯಾಂ ನ ಹೀಯತೇ |
ಕಾಮಂ ತದುಪಸೇವೇತ ನ ಮೂಢವ್ರತಮಾಚರೇತ್ ॥61॥
ಯಾವ ಸುಖವನ್ನು ಸೇವಿಸುವಾಗ ಧರ್ಮಾರ್ಥಗಳಿಗೆ ಚ್ಯುತಿಯಾಗುವುದಿಲ್ಲವೋ ಅಂತಹ ಕಾಮವನ್ನು ಸೇವಿಸಬೇಕು. ಮೂಢವ್ರತವನ್ನು ಆಚರಿಸಬಾರದು.
ದುಃಖಾರ್ತೇಷು ಪ್ರಮತ್ತೇಷು ನಾಸ್ತಿಕೇಷ್ವಲಸೇಷು ಚ |
ನ ಶ್ರೀರ್ವರ್ತತ್ಯದಾಂತೇಷು ಯೇ ಚೋತ್ಸಾಹವಿವರ್ಜಿತಾಃ ॥62॥
ದುಃಖಾರ್ತರಲ್ಲಿ, ಪ್ರಮತ್ತರಲ್ಲಿ, ನಾಸ್ತಿಕರಲ್ಲಿ, ಸೋಮಾರಿಗಳಲ್ಲಿ, ಇಂದ್ರಿಯ ನಿಗ್ರಹವಿಲ್ಲದವರಲ್ಲಿ ಮತ್ತು ಉತ್ಸಾಹವರ್ಜಿತರಲ್ಲಿ ಸಂಪತ್ತು ಉಳಿಯುವುದಿಲ್ಲ.
ಆರ್ಜವೇನ ನರಂ ಯುಕ್ತಂ ಮಾರ್ದವಾತ್ ಸವ್ಯಪತ್ರಪಮ್ |
ಅಶಕ್ತಂ ಮನ್ಯಮಾನಾಸ್ತು ಧರ್ಷಯಂತಿ ಕುಬುದ್ಧಯಃ ॥63॥
ಆರ್ಜವ, ಮಾರ್ದವ ಮತ್ತು ನಾಚಿಕೆಯಿಂದ ಕೂಡಿದ ಮನುಷ್ಯನನ್ನು ದುರ್ಬುದ್ಧಿಯುಳ್ಳವರು ಅಶಕ್ತನೆಂದು ತಿಳಿದು ಅವಮಾನಗೊಳಿಸುತ್ತಾರೆ.
ಅತ್ಯಾರ್ಯಮತಿದಾತಾರಮತಿಶೂರಮತಿವ್ರತಮ್ |
ಪ್ರಜ್ಞಾಭಿಮಾನಿನಂ ಚೈವ ಶ್ರೀರ್ಭಯಾನ್ನೋಪಸರ್ಪತಿ ॥64॥
ಆರ್ಯರನ್ನು ಮೀರಿ ಇರುವವನು, ದಾತೃಗಳನ್ನು ಮೀರಿ ಇರುವವನು, ಶೂರರನ್ನು ಮೀರಿ ಇರುವವನು, ವ್ರತಗಳನ್ನು ಮೀರಿ ಇರುವವನು, ತನ್ನ ಪ್ರಜ್ಞೆಯಲ್ಲಿಯೇ ಅಭಿಮಾನವುಳ್ಳ ಮನುಷ್ಯನ ಬಳಿಗೆ ಸಂಪತ್ತು ಭಯದಿಂದ ಹೋಗುವುದಿಲ್ಲ.
ನ ಚಾತಿಗುಣವತ್ಸ್ವೇಷಾ ನಾತ್ಯಂತಂ ನಿರ್ಗುಣೇಷು ಚ |
ಉನ್ಮತ್ತಾ ಗೌರಿವಾಂಧಾ ಶ್ರೀಃ ಕ್ವಚಿದೇವಾವತಿಷ್ಠತೇ ॥65॥
ಲಕ್ಷ್ಮಿಯು (ಸಂಪತ್ತು) ಬಹಳ ಗುಣವುಳ್ಳವರ ಬಳಿಗೆ ಹೋಗುವುದಿಲ್ಲ, ನಿರ್ಗುಣರ ಬಳಿಗೂ ಹೋಗುವುದಿಲ್ಲ. ಹುಚ್ಚು ಹಿಡಿದ ಗೋವಿನಂತೆ ಕುರುಡುತನದಿಂದ ಎಲ್ಲೋ ಒಂದು ಕಡೆ ವಾಸ ಮಾಡುತ್ತದೆ.

ಅಗ್ನಿಹೋತ್ರಫಲಾ ವೇದಾಃ ಶೀಲವೃತ್ತಫಲಂ ಶ್ರುತಮ್ |
ರತಿಪುತ್ರಫಲಾ ನಾರೀ ದತ್ತಭುಕ್ತಫಲಂ ಧನಮ್ ॥66॥
ಅಗ್ನಿಹೋತ್ರವು ವೇದದ ಫಲ. ಶೀಲ-ವೃತ್ತಗಳು ಶ್ರವಣದ ಫಲ. ರತಿ ಮತ್ತು ಪುತ್ರರು ಭಾರ್ಯೆಯ ಫಲ. ದಾನ ಮತ್ತು ಭೋಗವು ಧನದ ಫಲ.
ಅಧರ್ಮೋಪಾರ್ಜಿತೈರರ್ಥೈರ್ಯಃ ಕರೋತ್ಯೌರ್ಧ್ವದೈಹಿಕಮ್ |
ನ ಸ ತಸ್ಯ ಫಲಂ ಪ್ರೇತ್ಯ ಭುಂಕ್ತೇಽರ್ಥಸ್ಯ ದುರಾಗಮಾತ್ ॥67॥
ಅಧರ್ಮದಿಂದ ಧನವನ್ನು ಗಳಿಸಿ, ಅದರಿಂದ ಪರಲೋಕದಲ್ಲಿ ಸುಖಕ್ಕೆ ಸಾಧನವಾದ ಕರ್ಮಗಳನ್ನು ಮಾಡಿದರೆ, ಅವನು ಕೆಟ್ಟದಾಗಿ ಧನವನ್ನು ಸಂಪಾದನೆ ಮಾಡಿರುವುದರಿಂದ ಸ್ವರ್ಗದಲ್ಲಿ ಅದರ ಫಲವನ್ನು ಭೋಗಿಸುವುದಿಲ್ಲ.
ಕಾಂತಾರವನದುರ್ಗೇಷು ಕೃಚ್ಛ್ರಾಸ್ವಾಪತ್ಸು ಸಂಭ್ರಮೇ |
ಉದ್ಯತೇಷು ಚ ಶಸ್ತ್ರೇಷು ನಾಸ್ತಿ ಸತ್ವವತಾಂ ಭಯಮ್ ॥68॥
ಕಾಡಿನಲ್ಲಿ, ದುರ್ಗಗಳಲ್ಲಿ, ಕಷ್ಟಮಯವಾದ ಆಪತ್ತುಗಳಲ್ಲಿ, ಸಂಭ್ರಮದಲ್ಲಿ, ಎತ್ತಿದ ಆಯುಧಗಳಿರುವಲ್ಲಿ ಧೈರ್ಯವಿದ್ದವರಿಗೆ ಭಯವಿಲ್ಲ.
ಉತ್ಥಾನಂ ಸಂಯಮೋ ದಾಕ್ಷ್ಯಮಪ್ರಮಾದೋ ಧೃತಿಃ ಸ್ಮೃತಿಃ |
ಸಮೀಕ್ಷ್ಯ ಚ ಸಮಾರಂಭೋ ವೃದ್ಧಿಮೂಲಂ ಭವಸ್ಯ ತು ॥69॥
ಉತ್ಸಾಹ, ಸಂಯಮ, ದಕ್ಷತೆ, ಅಪ್ರಮಾದ, ಧೈರ್ಯ, ಸ್ಮೃತಿ, ವಿಚಾರ ಮಾಡಿ ಕಾರ್ಯಾರಂಭ ಮಾಡುವುದು ಇವು ಸಂಸಾರದಲ್ಲಿ (ಜೀವನದಲ್ಲಿ) ಸಮೃದ್ಧಿಗೆ ಮೂಲವಾದವುಗಳು.
ತಪೋ ಬಲಂ ತಾಪಸಾನಾಂ ಬ್ರಹ್ಮ ಬ್ರಹ್ಮವಿದಾಂ ಬಲಮ್ |
ಹಿಂಸಾ ಬಲಮಸಾಧೂನಾಂ ಕ್ಷಮಾ ಗುಣವತಾಂ ಬಲಮ್ ॥70॥
ತಪಸ್ವಿಗಳಿಗೆ ತಪಸ್ಸು ಬಲ. ಬ್ರಹ್ಮಜ್ಞಾನಿಗಳಿಗೆ ವೇದವು ಬಲ. ಅಸಜ್ಜನರಿಗೆ ಹಿಂಸೆಯು ಬಲ. ಗುಣವಂತರಿಗೆ ಕ್ಷಮೆಯು ಬಲ.
ಅಷ್ಟೌ ತಾನ್ಯವ್ರತಘ್ನಾನಿ ಆಪೋ ಮೂಲಂ ಘೃತಂ ಪಯಃ |
ಹವಿರ್ಬ್ರಾಹ್ಮಣಕಾಮಾ ಚ ಗುರೋರ್ವಚನಮೌಷಧಮ್ ॥71॥
ಜಲ, ಗೆಡ್ಡೆ-ಗೆಣಸುಗಳು, ಘೃತ, ಕ್ಷೀರ, ಹವಿಸ್ಸು, ಬ್ರಾಹ್ಮಣ ಕಾಮನೆ, ಗುರುವಚನ ಮತ್ತು ಔಷಧಿ - ಈ ಎಂಟು ವಸ್ತುಗಳು ವ್ರತವನ್ನು ಕೆಡಿಸುವುದಿಲ್ಲ.
ನ ತತ್ ಪರಸ್ಯ ಸಂದಿಧ್ಯಾತ್ ಪ್ರತಿಕೂಲಂ ಯದಾತ್ಮನಃ |
ಸಂಗ್ರಹೇಣೈವ ಧರ್ಮಃ ಸ್ಯಾತ್ ಕಾಮಾದನ್ಯಃ ಪ್ರವರ್ತತೇ ॥72॥
ಹಿಂದೆ ಹೇಳಿದ ಅಷ್ಟಧರ್ಮವನ್ನು ಆಚರಿಸುವ ವಿಷಯದಲ್ಲಿ ತನಗೆ ಪ್ರತಿಕೂಲವಾದುದನ್ನು ಪರರಿಗೂ ಯೋಚಿಸಬಾರದು. ಅಂತಹವರನ್ನು ಸಂಗ್ರಹಿಸುವುದರಿಂದ ಧರ್ಮವುಂಟಾಗುತ್ತದೆ. ಉಳಿದವರು ಕಾಮದಿಂದ ಪ್ರವೃತ್ತರಾಗುತ್ತಾರೆ.
ಅಕ್ರೋಧೇನ ಜಯೇತ್ ಕ್ರೋಧಮಸಾಧುಂ ಸಾಧುನಾ ಜಯೇತ್ |
ಜಯೇತ್ ಕದರ್ಯಂ ದಾನೇನ ಜಯೇತ್ ಸತ್ಯೇನ ಚಾನೃತಮ್ ॥73॥
ಕ್ರೋಧವನ್ನು ಮಾಡದಿರುವುದರಿಂದ ಕ್ರೋಧವನ್ನು ಜಯಿಸಬೇಕು. ಸಾಧುತ್ವದಿಂದ ಅಸಾಧು ಸ್ವಭಾವವನ್ನು ಜಯಿಸಬೇಕು. ಅಧಮ ಪುರುಷನನ್ನು ದಾನದಿಂದ ಜಯಿಸಬೇಕು. ಅನೃತವನ್ನು ಸತ್ಯದಿಂದ ಜಯಿಸಬೇಕು.
ಸ್ತ್ರೀಷು ಧೂರ್ತೇಽಲಸೇ ಭೀರೌ ಚಂಡೇ ಪರುಷವಾದಿನಿ |
ಚೋರೇ ಕೃತಘ್ನೇ ವಿಶ್ವಾಸೋ ನ ಕಾರ್ಯೋ ನ ಚ ನಾಸ್ತಿಕೇ ॥74॥
ಸ್ತ್ರೀಯರಲ್ಲಿ, ಧೂರ್ತರಲ್ಲಿ, ಸೋಮಾರಿಯಲ್ಲಿ, ಭೀರುವಿನಲ್ಲಿ, ಹಠಮಾರಿಯಲ್ಲಿ, ಒರಟಾಗಿ ಮಾತನಾಡುವವನಲ್ಲಿ, ಚೋರನಲ್ಲಿ, ಕೃತಘ್ನನಲ್ಲಿ, ನಾಸ್ತಿಕನಲ್ಲಿ ವಿಶ್ವಾಸವನ್ನು ಮಾಡಬಾರದು.
ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ |
ಚತ್ವಾರಿ ಸಂಪ್ರವರ್ಧಂತೇ ಆಯುಃ ಪ್ರಜ್ಞಾ ಯಶೋ ಬಲಮ್ ॥75॥
ಹಿರಿಯರ ಸೇವೆಯನ್ನು ಮಾಡಿ, ನಿತ್ಯವೂ ಅವರಿಗೆ ನಮಸ್ಕಾರ ಮಾಡುವವರಿಗೆ ಆಯುಸ್ಸು, ಪ್ರಜ್ಞೆ, ಕೀರ್ತಿ ಮತ್ತು ಬಲ ಈ ನಾಲ್ಕು ಅಭಿವೃದ್ಧಿ ಹೊಂದುತ್ತವೆ.
ಅತಿಕ್ಲೇಶೇನ ಯೇಽರ್ಥಾಃ ಸ್ಯುರ್ಧರ್ಮಸ್ಯಾತಿಕ್ರಮೇಣ ಚ |
ಅರೇರ್ವಾ ಪ್ರಣಿಪಾತೇನ ಮಾ ಸ್ಮ ತೇಷು ಮನಃ ಕೃಥಾಃ ॥76॥
ಬಹಳ ಕ್ಲೇಶದಿಂದ ಯಾವ ಅರ್ಥವನ್ನು ಸಂಪಾದಿಸಬಹುದೋ, ಧರ್ಮವನ್ನು ಮೀರುವುದರಿಂದ ಅಥವಾ ಶತ್ರುವಿಗೆ ನಮಸ್ಕಾರ ಮಾಡುವುದರಿಂದ ಯಾವ ಅರ್ಥವನ್ನು ಸಂಪಾದಿಸಬಹುದೋ ಅದರಲ್ಲಿ ಮನಸ್ಸು ಇಡಬೇಡ.
ಅವಿದ್ಯಃ ಪುರುಷಃ ಶೋಚ್ಯಃ ಶೋಚ್ಯಂ ಮೈಥುನಮಪ್ರಜಮ್ |
ನಿರಾಹಾರಾಃ ಪ್ರಜಾಃ ಶೋಚ್ಯಾಃ ಶೋಚ್ಯಂ ರಾಜ್ಯಮರಾಜಕಮ್ ॥77॥
ವಿದ್ಯೆ ಇಲ್ಲದ ಪುರುಷನೂ, ಮಕ್ಕಳಿಲ್ಲದ ಮೈಥುನವೂ, ಆಹಾರವಿಲ್ಲದ ಪ್ರಜೆಗಳೂ, ರಾಜನಿಲ್ಲದ ರಾಷ್ಟ್ರವೂ ಶೋಚನೀಯವಾದವುಗಳು.
ಅಧ್ವಾ ಜರಾ ದೇಹಭೃತಾಂ ಪರ್ವತಾನಾಂ ಜಲಂ ಜರಾ |
ಅಸಂಭೋಗೋ ಜರಾ ಸ್ತ್ರೀಣಾಂ ವಾಕ್ಶಲ್ಯಂ ಮನಸೋ ಜರಾ ॥78॥
ದೇಹವನ್ನು ಧರಿಸಿದವರಿಗೆ ಮಾರ್ಗವು ಮುಪ್ಪು. ಪರ್ವತಗಳಿಗೆ ಜಲವು ಮುಪ್ಪು. ಸಂಭೋಗ ಮಾಡದಿರುವುದು ಸ್ತ್ರೀಯರಿಗೆ ಮುಪ್ಪು.

ವಾಗ್ಬಾಣಗಳು ಮನಸ್ಸಿಗೆ ಮುಪ್ಪು.
ಅನಾಮ್ನಾಯಮಲಾ ವೇದಾ ಬ್ರಾಹ್ಮಣಸ್ಯಾವ್ರತಂ ಮಲಮ್ |
ಮಲಂ ಪೃಥಿವ್ಯಾ ಬಾಹ್ಲೀಕಾಃ ಪುರುಷಸ್ಯಾನೃತಂ ಮಲಮ್ ॥79॥
ವೇದಗಳಿಗೆ ಅಭ್ಯಾಸ ಮಾಡದಿರುವ ಮಲ. ಬ್ರಾಹ್ಮಣನಿಗೆ ವ್ರತವನ್ನು ಮಾಡದಿರುವುದು ಮಲ. ಭೂಮಿಗೆ ಬಾಹ್ಲೀಕ ದೇಶವು ಮಲ. ಪುರುಷನಿಗೆ ಅನೃತವು ಮಲ.
ಕೌತೂಹಲಮಲಾ ಸಾಧ್ವೀ ವಿಪ್ರವಾಸಮಲಾಃ ಸ್ತ್ರಿಯಃ ॥80॥
ಸುವರ್ಣಸ್ಯ ಮಲಂ ರೂಪ್ಯಂ ರೂಪ್ಯಸ್ಯಾಪಿ ಮಲಂ ತ್ರಪು |
ಜ್ಞೇಯಂ ತ್ರಪುಮಲಂ ಸೀಸಂ ಸೀಸಸ್ಯಾಪಿ ಮಲಂ ಮಲಮ್ ॥81॥
ಸಾಧ್ವಿಗೆ ಕುತೂಹಲವು ಮಲ. ಸ್ತ್ರೀಯರಿಗೆ ಪ್ರಯಾಣವು ಮಲ. ಸುವರ್ಣಕ್ಕೆ ಬೆಳ್ಳಿಯು ಮಲ. ಬೆಳ್ಳಿಗೆ ತ್ರಪುವು ಮಲ. ಸೀಸವು ತ್ರಪುವಿಗೆ ಮಲ. ಸೀಸಕ್ಕೆ ಅಮೇಧ್ಯವು ಮಲ.
ನಸ್ವಪ್ನೇನ ಜಯೇನ್ನಿದ್ರಾಂ ನಕಾಮೇನ ಜಯೇತ್ ಸ್ತ್ರಿಯಃ |
ನೇಂಧನೇನ ಜಯೇದಗ್ನಿಂ ನಪಾನೇನ ಸುರಾಂ ಜಯೇತ್ ॥82॥
ಜಾಗರಣೆಯಿಂದ ನಿದ್ರೆಯನ್ನು ಜಯಿಸಬೇಕು. ಅಕಾಮದಿಂದ ಸ್ತ್ರೀಯರನ್ನು ಜಯಿಸಬೇಕು. ಕಟ್ಟಿಗೆಯನ್ನು ಹಾಕದೆ ಅಗ್ನಿಯನ್ನು ಜಯಿಸಬೇಕು. ಪಾನವನ್ನು ಮಾಡದೆ ಮದ್ಯವನ್ನು ಜಯಿಸಬೇಕು.
ಯಸ್ಯ ದಾನಜಿತಂ ಮಿತ್ರಂ ಶತ್ರವೋ ಯುಧಿ ನಿರ್ಜಿತಾಃ |
ಅನ್ನಪಾನಜಿತಾ ದಾರಾಃ ಸಫಲಂ ತಸ್ಯ ಜೀವಿತಮ್ ॥83॥
ಯಾವನಿಗೆ ಮಿತ್ರರು ದಾನದಿಂದ ಜಿತರಾಗುತ್ತಾರೋ, ಶತ್ರುಗಳು ಯುದ್ಧದಿಂದ ಜಿತರಾಗುತ್ತಾರೆಯೋ, ಪತ್ನಿಯರು ಅನ್ನ-ಪಾನಗಳಿಂದ ಜಿತರಾಗುತ್ತಾರೆಯೋ ಅವನ ಜೀವನವು ಸಾರ್ಥಕವಾದುದು.
ಸಹಸ್ರಿಣೋಽಪಿ ಜೀವಂತಿ ಜೀವಂತಿ ಶತಿನಸ್ತಥಾ |
ಧೃತರಾಷ್ಟ್ರ ವಿಮುಂಚೇಚ್ಛಾಂ ನ ಕಥಂಚಿನ್ನ ಜೀರ್ಯತಿ ॥84॥
ಸಹಸ್ರ ಧನವಿದ್ದವರೂ ಬದುಕುತ್ತಾರೆ, ಅದರಂತೆ ಶತಧನವಿದ್ದವರೂ ಬದುಕುತ್ತಾರೆ. ಧೃತರಾಷ್ಟ್ರನೇ ಆಸೆಯನ್ನು ಬಿಡು, ಆಸೆಯು ಎಂದೂ ಮುಪ್ಪನ್ನು ಹೊಂದುವುದಿಲ್ಲ.
ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ |
ನಾಲಮೇಕಸ್ಯ ತತ್ ಸರ್ವಮಿತಿ ಪಶ್ಯನ್ ನ ಮುಹ್ಯತಿ ॥85॥
ಪೃಥಿವಿಯಲ್ಲಿ ಎಷ್ಟು ಧಾನ್ಯಗಳು, ಸುವರ್ಣ, ಪಶುಗಳು ಮತ್ತು ಸ್ತ್ರೀಯರು ಇದ್ದಾರೆಯೋ ಅವೆಲ್ಲವೂ ಒಬ್ಬನ ಭೋಗಕ್ಕೆ ಸಾಕಾಗುವುದಿಲ್ಲ ಎಂದು ತಿಳಿದು ಮೋಹವನ್ನು ಬಿಡಬೇಕು.
ರಾಜನ್ ಭೂಯೋ ಬ್ರವೀಮಿ ತ್ವಾಂ ಪುತ್ರೇಷು ಸಮಮಾಚರ |
ಸಮತಾ ಯದಿ ತೇ ರಾಜನ್ ಸ್ವೇಷು ಪಾಂಡುಸುತೇಷು ಚ ॥86॥
ರಾಜನೇ, ನಿನಗೆ ಪುನಃ ಹೇಳುತ್ತಿದ್ದೇನೆ. ನಿನ್ನಲ್ಲಿ ಸಮತೆ ಇರುವುದಾದರೆ ಪುತ್ರರಲ್ಲಿ ಸಮವಾಗಿ ವರ್ತಿಸು. ರಾಜನೇ, ನಿನ್ನ ಪುತ್ರರಲ್ಲೂ, ಪಾಂಡುಪುತ್ರರಲ್ಲೂ ಸಮನಾಗಿರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತನೆಯ ಅಧ್ಯಾಯ
ವಿದುರನೀತಿ. ವರ್ಣಾಶ್ರಮ ಧರ್ಮಕಥನ.
ಪಾಂಡವರಿಗೆ ರಾಜ್ಯವನ್ನು ಕೊಡಲು ಒತ್ತಾಯ.
ವಿದುರಃ
ಯೋಽಭ್ಯರ್ಥಿತಃ ಸದ್ಭಿರಸಜ್ಜಮಾನಃ
ಕರೋತ್ಯರ್ಥಂ ಶಕ್ತಿಮಹಾಪಯಿತ್ವಾ |
ಕ್ಷಿಪ್ರಂ ಪ್ರಶತಂ ಸಮುಪೈತಿ ಸದ್ಭಿಃ
ಅಲಂ ಪ್ರಸನ್ನಾ ಹಿ ಸುಖಾಯ ಸಂತಃ ॥1॥
ವಿದುರ ಯಾವನು ಸಜ್ಜನರಿಂದ ಪ್ರಾರ್ಥಿಸಲ್ಪಟ್ಟವನಾಗಿ, ದುರ್ಜನರನ್ನು ಸೇರದೆ ತನ್ನ ಶಕ್ತಿಯನ್ನು ಕಡಿಮೆ ಮಾಡಿಕೊಳ್ಳದೆ (ಶಕ್ತಿ ಇದ್ದಷ್ಟು), ಕಾರ್ಯವನ್ನು ಸಾಧಿಸುತ್ತಾನೆಯೋ ಅವನು ಕ್ಷಿಪ್ರವಾಗಿ ಸಜ್ಜನರಿಂದ ಪ್ರಶಂಸಿಸಲ್ಪಡುತ್ತಾನೆ (ಅಥವಾ ಸಜ್ಜನರ ಅನುಗ್ರಹದಿಂದ ಪ್ರಶಸ್ತ ಫಲವನ್ನು ಪಡೆಯುತ್ತಾನೆ). ಸಜ್ಜನರು ಪ್ರಸನ್ನರಾದರೆ ಸುಖದ ಫಲವನ್ನು ಕೊಡಲು ಸಮರ್ಥರಾದವರು.
ಮಹಾಂತಮಪ್ಯರ್ಥಮಧರ್ಮಯುಕ್ತಂ
ಯಃ ಸಂತ್ಯಜತ್ಯನುಪಾಕೃಷ್ಟ ಏವ |
ಸುಖಂ ಸ ದುಃಖಾನ್ಯವಮುಚ್ಯ ಶೇತೇ

ಜೀರ್ಣಾಂ ತ್ವಚಂ ಸರ್ಪ ಇವಾವಮುಚ್ಯ ॥2॥
ಯಾವನು ಯಾರೂ ನಿಂದಿಸದಿದ್ದರೂ ಅಧರ್ಮಯುಕ್ತವಾದ ದೊಡ್ಡ ಅರ್ಥವನ್ನು ತ್ಯಾಗ ಮಾಡುತ್ತಾನೆಯೋ ಅಂತಹವನು ಸರ್ಪವು ಹಳೆಯ ಚರ್ಮವನ್ನು ಬಿಟ್ಟಂತೆ ದುಃಖವನ್ನು ಬಿಟ್ಟು ಸುಖವಾಗಿ ನಿದ್ರಿಸುತ್ತಾನೆ.
ಅನೃತೇ ಚ ಸಮುತ್ಕರ್ಷೋ ರಾಜಗಾಮಿ ಚ ಪೈಶುನಮ್ |
ಗುರೋಶ್ಚಾಲೀಕನಿರ್ಬಂಧಂ ಸಮಾನಿ ಬ್ರಹ್ಮಹತ್ಯಯಾ ॥3॥
ಅನೃತದಿಂದ ಉಂಟಾಗುವ ಸಮೃದ್ಧಿ, ರಾಜನವರೆಗೂ ಹೇಳುವ ಚಾಡಿ, ಗುರುವಿಗೆ ಮಾಡುವ ಅನ್ಯಾಯದ ಒತ್ತಾಯ ಇವು ಬ್ರಹ್ಮಹತ್ಯೆಗೆ ಸಮನಾದವುಗಳು.
ಅಸೂಯೈಕಪದಂ ಮೃತ್ಯುರತಿವಾದಃ ಶ್ರಿಯೋ ವಧಃ |
ಅಶುಶ್ರೂಷಾ ತ್ವರಾ ಶ್ಲಾಘಾ ವಿದ್ಯಾಯಾಃ ಶತ್ರವಸ್ತ್ರಯಃ ॥4॥
ಅಸೂಯೆಯು ಮೃತ್ಯು ಎಂಬುದಕ್ಕೆ ಇನ್ನೊಂದು ಶಬ್ದ. ಅತಿವಾದವು (ಬಹಳವಾಗಿ ಹೊಗಳಿಕೊಳ್ಳುವುದು ಅಥವಾ ಬಹಳವಾಗಿ ಮಾತನಾಡುವುದು) ಸಂಪತ್ತಿಗೆ ವಧೆ. ಗುರುಸೇವೆಯನ್ನು ಮಾಡದಿರುವುದು, ತ್ವರೆ ಮಾಡುವುದು ಮತ್ತು ತನ್ನನ್ನು ಹೊಗಳಿಕೊಳ್ಳುವುದು ಈ ಮೂರು ವಿದ್ಯೆಯ ಶತ್ರುಗಳು.
ಆಲಸ್ಯಂ ಮದಮೋಹೌ ಚ ಚಾಪಲಂ ಗೋಷ್ಠಿರೇವ ಚ |
ಸ್ತಬ್ಧತಾ ಚಾತಿಮಾನಿತ್ವಂ ತಥಾ ತ್ಯಾಗಿತ್ವಮೇವ ಚ ॥5॥
ಏತೇ ವೈ ಸಪ್ತ ದೋಷಾಸ್ಸು ಸದಾ ವಿದ್ಯಾರ್ಥಿನಾಂ ಮತಾಃ ॥6॥
ಆಲಸ್ಯ, ಮದಮೋಹಗಳು, ಚಾಪಲ್ಯ, ಒಟ್ಟಿಗೆ ಕುಳಿತು ವ್ಯರ್ಥವಾಗಿ ಮಾತನಾಡುವುದು, ಹಿರಿಯರು ಮಾತನಾಡಿಸಿದರೆ ಮಾತನಾಡದೇ ಇರುವುದು, ಅಹಂಕಾರ ಮತ್ತು ವಿಸ್ಮೃತಿ - ಈ ಏಳು ವಿದ್ಯಾರ್ಥಿಗಳ ದೋಷಗಳೆಂದು ಸದಾ ತಿಳಿಯಲ್ಪಡುತ್ತವೆ.
ಸುಖಾರ್ಥಿನಃ ಕುತೋ ವಿದ್ಯಾ
ನಾಸ್ತಿ ವಿದ್ಯಾರ್ಥಿನಃ ಸುಖಮ್ |
ಸುಖಾರ್ಥೀ ವಾ ತ್ಯಜೇದ್ ವಿದ್ಯಾಂ
ವಿದ್ಯಾರ್ಥೀ ವಾ ತ್ಯಜೇತ್ ಸುಖಮ್ ॥7॥
ಸುಖವನ್ನು ಬಯಸುವವನಿಗೆ ವಿದ್ಯೆಯು ಎಲ್ಲಿಂದ? ವಿದ್ಯೆಯನ್ನು ಬಯಸುವವನಿಗೆ ಸುಖವಿಲ್ಲ. ಸುಖಾರ್ಥಿಯಾದವನು ವಿದ್ಯೆಯನ್ನು ಬಿಡಬೇಕು ಅಥವಾ ವಿದ್ಯಾರ್ಥಿಯಾದವನು ಸುಖವನ್ನು ಬಿಡಬೇಕು.
ನಾಗ್ನಿಸ್ತೃಪ್ಯತಿ ಕಾಷ್ಠಾನಾಂ ನಾಪಗಾನಾಂ ಮಹೋದಧಿಃ |
ನಾಂತಕಃ ಸರ್ವಭೂತಾನಾಂ ನ ಪುಂಸಾಂ ವಾಮಲೋಚನಾಃ ॥8॥
ಅಗ್ನಿಯು ಕಾಷ್ಠಗಳಿಂದ ತೃಪ್ತಿಯನ್ನು ಪಡೆಯುವುದಿಲ್ಲ. ಮಹಾಸಮುದ್ರವು ನದಿಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ. ಯಮನು ಎಲ್ಲ ಜೀವರಿಂದ ತೃಪ್ತಿಯನ್ನು ಹೊಂದುವುದಿಲ್ಲ. ಸ್ತ್ರೀಯರು ಎಲ್ಲ ಪುರುಷರಿಂದಲೂ ತೃಪ್ತಿಯನ್ನು ಹೊಂದುವುದಿಲ್ಲ.
ಆಶಾ ಧೃತಿಂ ಹಂತಿ ಸಮೃದ್ಧಿಮಂತಕಃ
ಕ್ರೋಧಃ ಶ್ರಿಯಂ ಹಂತಿ ಯಶಃ ಕದರ್ಯತಾ |
ಅಪಾಲನಂ ಹಂತಿ ಪಶೂಂಶ್ಚ ರಾಜನ್
ಏಕಃ ಕ್ರುದ್ಧೋ ಬ್ರಾಹ್ಮಣೋ ಹಂತಿ ರಾಷ್ಟ್ರಮ್ ॥9॥
ಆಸೆಯು ಧೈರ್ಯವನ್ನು ನಾಶ ಮಾಡುತ್ತದೆ. ಅಂತಕನು ಸಮೃದ್ಧಿಯನ್ನೂ, ಕ್ರೋಧವು ಸಂಪತ್ತನ್ನೂ, ನೀಚ ನಡವಳಿಕೆಯು ಕೀರ್ತಿಯನ್ನು ನಾಶ ಮಾಡುತ್ತದೆ. ರಾಜನೇ, ಅರಕ್ಷಣೆಯು ಪಶುಗಳನ್ನು ನಾಶ ಮಾಡುತ್ತದೆ. ಕೋಪಗೊಂಡ ಒಬ್ಬ ಬ್ರಾಹ್ಮಣನು ರಾಷ್ಟ್ರವನ್ನು ನಾಶ ಮಾಡುತ್ತಾನೆ.
ಅಜಾಶ್ಚ ಕಾಂಸ್ಯಂ ರಜತಂ ಚ ನಿತ್ಯಂ
ಮಧ್ವಾದರ್ಶಃ ಶಕುನಿಃ ಶ್ರೋತ್ರಿಯಶ್ಚ |
ವೃದ್ಧೋ ಜ್ಞಾತಿರವಸನ್ನಃ ಕುಲೀನ
ಏತಾನಿ ತೇ ಸಂತು ಗೃಹೇ ಸದೈವ ॥10॥
ಆಡುಗಳು, ಕಂಚಿನ ಪಾತ್ರೆಗಳು, ರಜತ, ಜೇನುತುಪ್ಪ, ಕನ್ನಡಿ, ಪಕ್ಷಿಗಳು, ಶ್ರೋತ್ರಿಯನಾದ ಬ್ರಾಹ್ಮಣ, ವೃದ್ಧನಾದ ದಾಯಾದಿ, ಕಷ್ಟಕ್ಕೆ ಸಿಲುಕಿದ ಕುಲೀನ ಇಷ್ಟು ಮಂದಿ ಯಾವಾಗಲೂ ನಿನ್ನ ಮನೆಯಲ್ಲಿ ವಾಸವನ್ನು ಮಾಡಲಿ.
ಅಜೋಽಶ್ವಶ್ಚಂದನಂ ವೀಣಾ ಆದರ್ಶೋ ಮಧುಸರ್ಪಿಷೀ |
ವಿಷಮೌದುಂಬರಂ ಶಂಖಃ ಸ್ವರ್ಣನಾಭೋಽಥ ರೋಚನಾ ॥11॥
ಗೃಹೇ ಸ್ಥಾಪಯಿತವ್ಯಾನಿ ಧರ್ಮ್ಯಾಣಿ ಮನುರಬ್ರವೀತ್ |
ದೇವಬ್ರಾಹ್ಮಣಪೂಜಾರ್ಥಮತಿಥೀನಾಂ ಚ ಭಾರತ ॥12॥
ಆಡು, ಅಶ್ವ, ಚಂದನ, ವೀಣೆ, ಕನ್ನಡಿ, ಜೇನುತುಪ್ಪ ಮತ್ತು ಘೃತ, ಜಲ, ಅಕ್ಕಿ, ಶಂಖ, ಸ್ವರ್ಣನಾಭ, ರೋಚನ ಈ ಧಾರ್ಮಿಕ ಪದಾರ್ಥಗಳನ್ನು ಮನೆಯಲ್ಲಿ ಯಾವಾಗಲೂ ಇಡಬೇಕೆಂದು ಮನುವು ಹೇಳಿದನು. ಭಾರತನೇ, ದೇವ-ಬ್ರಾಹ್ಮಣ ಪೂಜೆಯ ಸಲುವಾಗಿ ಮತ್ತು ಅತಿಥಿಗಳ ಸಲುವಾಗಿ ಇವು ನಿನ್ನ ಮನೆಯಲ್ಲಿ ಇರಲಿ.
ಇದಂ ಚ ತ್ವಾಂ ಸರ್ವಪರಂ ಬ್ರವೀಮಿ
ಪುಣ್ಯಂ ಪದಂ ತಾತ ಮಹಾವಿಶಿಷ್ಟಮ್ |
ನ ಜಾತು ಕಾಮಾನ್ನ ಭಯಾನ್ನ ಲೋಭಾದ್

ಧರ್ಮಂ ಜಹ್ಯಾ ಜೀವಿತಸ್ಯಾಪಿ ಹೇತೋಃ ॥13॥
ಪುಣ್ಯಕ್ಕೆ ಕಾರಣವಾದ, ಮಹಾವಿಶಿಷ್ಟವಾದ, ಎಲ್ಲಕ್ಕಿಂತಲೂ ಮಿಗಿಲಾದ ಈ ವಿಷಯವನ್ನು ನಿನಗೆ ಹೇಳುತ್ತಿದ್ದೇನೆ. ಅದೇನೆಂದರೆ ಕಾಮದಿಂದಲಾಗಲಿ, ಭಯದಿಂದಲಾಗಲಿ, ಲೋಭದಿಂದಲಾಗಲಿ, ಜೀವನದ ಸಲುವಾಗಿಯೇ ಆಗಲಿ ಧರ್ಮವನ್ನು ಬಿಡಬೇಡ.
ನಿತ್ಯೋ ಧರ್ಮಃ ಸುಖದುಃಖೇ ಹ್ಯನಿತ್ಯೇ
ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ |
ತ್ಯಕ್ತ್ವಾಽನಿತ್ಯಂ ಪ್ರತಿಷ್ಠಸ್ವ ನಿತ್ಯೇ
ಸಂತುಷ್ಯ ಸಂತೋಷಪರಾ ಹಿ ಸಂತಃ ॥14॥
ಧರ್ಮವು ನಿತ್ಯವಾದುದು. ಸುಖ-ದುಃಖಗಳು ಅನಿತ್ಯವೆಂದು ಪ್ರಸಿದ್ಧವಾಗಿವೆ. ಜೀವನು ನಿತ್ಯನಾದವನು, ಅವನ ಶರೀರದ ಧಾತುಗಳು ಅನಿತ್ಯವಾದವುಗಳು. ಅನಿತ್ಯವಾದುದನ್ನು ಬಿಟ್ಟು ನಿತ್ಯವಾದ ಧರ್ಮದಲ್ಲಿ ಪ್ರತಿಷ್ಠಿತನಾಗಿ ಸಂತೋಷಪಡು. ಸಜ್ಜನರು ಸಂತೋಷಪಡುವ ಸ್ವಭಾವವುಳ್ಳವರು.
ಮಹಾಬಲಾನ್ ಪಶ್ಯ ಮಹಾನುಭಾವಾನ್
ಪ್ರಶಾಸ್ಯ ಭೂಮಿಂ ಧನಧಾನ್ಯಪೂರ್ಣಾಮ್ |
ಸಜ್ಜಾನ್ ಹಿತ್ವಾ ವಿಪುಲಾಂಶ್ಚ ಭೋಗಾನ್
ಗತಾನ್ ನರೇಂದ್ರಾನ್ ವಶಮಂತಕಸ್ಯ ॥15॥
ಮಹಾಬಲಿಷ್ಠರೂ, ಮಹಾನುಭಾವರು, ಧನ-ಧಾನ್ಯಸಮೃದ್ಧವಾದ ಭೂಮಿಯನ್ನು ಆಳಿದವರೂ ಆದ ರಾಜರು ಸಿದ್ಧವಾದ ವಿಪುಲವಾದ ಭೋಗವನ್ನು ಬಿಟ್ಟು ಅಂತಕನ ವಶವಾಗಿರುವುದನ್ನು ನೋಡು.
ಮೃತಂ ಪುತ್ರಂ ದುಃಖಪುಷ್ಟಂ ಮನುಷ್ಯಾ
ಉತ್ಕ್ಷಿಪ್ಯ ರಾಜನ್ ಸ್ವಗೃಹಾನ್ನಿರ್ಹರಂತಿ |
ತಂ ಮುಕ್ತಕೇಶಾಃ ಕರುಣಂ ರುದಂತಃ
ಚಿತಾಮಧ್ಯೇ ಕಾಷ್ಠಮಿವ ಕ್ಷಿಪಂತಿ ॥16॥
ಕಷ್ಟದಿಂದ ಸಾಕಿ ಮೃತನಾದ ಪುತ್ರನನ್ನು ಮನುಷ್ಯರು ತಮ್ಮ ಮನೆಯಿಂದ ಎತ್ತಿಕೊಂಡು ಹೊರಟು ದಹಿಸುತ್ತಾರೆ. ತಲೆಗೂದಲುಗಳನ್ನು ಬಿಚ್ಚಿಕೊಂಡು ಕರುಣಾಜನಕವಾಗಿ ಅಳುತ್ತಾ ಚಿತೆಯ ಮಧ್ಯದಲ್ಲಿ ಕಾಷ್ಠದಂತೆ ಅವನನ್ನು ಎಸೆಯುತ್ತಾರೆ.
ಅನ್ಯೋ ಧನಂ ಪ್ರೇತಗತಸ್ಯ ಭುಂಕ್ತೇ
ವಯಾಂಸಿ ಚಾಗ್ನಿಶ್ಚ ಶರೀರಧಾತೂನ್ |
ದ್ವಾಭ್ಯಾಮಯಂ ಸಹ ಗಚ್ಛತ್ಯಮುತ್ರ
ಪುಣ್ಯೇನ ಪಾಪೇನ ಚ ವೇಷ್ಟ್ಯಮಾನಃ ॥17॥
ಮರಣ ಹೊಂದಿದವನ ಧನವನ್ನು ಇನ್ನೊಬ್ಬನು ಭೋಗಿಸುತ್ತಾನೆ. ಪಕ್ಷಿಗಳೂ ಮತ್ತು ಅಗ್ನಿಯು ಅವನ ಶರೀರದ ಧಾತುಗಳನ್ನು ಭೋಗಿಸುತ್ತಾರೆ. ಪುಣ್ಯ-ಪಾಪ ಇವೆರಡರಿಂದ ಸುತ್ತಲ್ಪಟ್ಟು ಜೀವನು ಪರಲೋಕಕ್ಕೆ ಹೋಗುತ್ತಾನೆ.
ಉತ್ಸೃಜ್ಯ ವಿನಿವರ್ತಂತೇ ಜ್ಞಾತಯಃ ಸುಹೃದಃ ಸುತಾಃ |
ಅಪುಷ್ಪಾನಫಲಾನ್ ವೃಕ್ಷಾನ್ ಯಥಾ ತಾತ ಪತತ್ರಿಣಃ ॥18॥
ಪುಷ್ಪ-ಫಲಗಳಿಲ್ಲದ ವೃಕ್ಷಗಳನ್ನು ಪಕ್ಷಿಗಳು ಬಿಡುವಂತೆ ಜ್ಞಾತಿಗಳು ಮತ್ತು ಬಾಂಧವರು ಮತ್ತು ಮಕ್ಕಳು ಆ ದೇಹವನ್ನು ಅಲ್ಲಿಯೇ ಬಿಟ್ಟು ಹಿಂದಿರುಗುತ್ತಾರೆ.
ಅಗ್ನೌ ಪ್ರಾಸ್ತಂ ತು ಪುರುಷಂ ಕರ್ಮೈವಾನ್ವೇತಿ ಯತ್ ಕೃತಮ್ |
ತಸ್ಮಾತ್ ತು ಸುಸುಖೋ ಯತ್ನಾದ್ ಧರ್ಮಂ ಸಂಚಿನುಯಾಚ್ಛನೈಃ ॥
ಅಗ್ನಿಯಲ್ಲಿ ಬಿದ್ದ ಪುರುಷನ ಜೊತೆಯಲ್ಲಿ ಅವನು ಹಿಂದೆ ಮಾಡಿದ ಕರ್ಮಗಳು ಮಾತ್ರ ಹೋಗುತ್ತವೆ. ಆದ್ದರಿಂದ ಎಷ್ಟೇ ಸುಖವಿದ್ದರೂ ಪ್ರಯತ್ನಪೂರ್ವಕವಾಗಿ ನಿಧಾನವಾಗಿ ಧರ್ಮವನ್ನು ಸಂಪಾದಿಸಬೇಕು.
ಅಸ್ಮಾಲ್ಲೋಕಾದೂರ್ಧ್ವಮಮುಷ್ಯ ಚಾಧೋ
ಮಹತ್ ತಮಸ್ತಿಷ್ಠತಿ ಹ್ಯಂಧಕಾರಮ್ |
ತದ್ವೈ ಮಹನ್ಮೋಹನಮಿಂದ್ರಿಯಾಣಾಂ
ಬುದ್ಧ್ಯಸ್ವ ಮಾ ತ್ವಾಂ ಪ್ರಲಭೇತ ರಾಜನ್ ॥20॥
ಈ ಲೋಕದ ಮೇಲ್ಭಾಗದಲ್ಲಿ ಮತ್ತು ಕೆಳಭಾಗದಲ್ಲಿ ದೊಡ್ಡ ಅಂಧಕಾರವಿದೆ. ಅದು ಇಂದ್ರಿಯಗಳಿಗೆ ದೊಡ್ಡ ಅಜ್ಞಾನವನ್ನು ಉಂಟುಮಾಡುವಂತಹದು. ಆ ಎರಡು ಲೋಕಗಳನ್ನು ಸರಿಯಾಗಿ ತಿಳಿದುಕೊ. ಇನ್ನೊಬ್ಬರಿಗೆ ವಂಚನೆಯನ್ನು ಮಾಡಬೇಡ.
ಇದಂ ವಚಃ ಶಕ್ಷ್ಯತಿ ಚೇತ್ ಯಥಾವತ್
ನಿಶಮ್ಯ ಸರ್ವಂ ಪ್ರತಿಪತ್ತುಮೇವ |
ಯಶಃ ಪರಂ ಪ್ರಾಪ್ಸ್ಯಸಿ ಜೀವಲೋಕೇ
ಭಯಂ ನ ಚಾಮುತ್ರ ನ ಚೇಹ ತೇಽಸ್ತಿ ॥21॥
ನಾನು ಹೇಳಿದ ಎಲ್ಲ ಮಾತುಗಳನ್ನೂ ಸರಿಯಾಗಿ ಕೇಳಿ ತಿಳಿದುಕೊಳ್ಳಲು ಶಕ್ತನಾದರೆ ಈ ಜೀವಲೋಕದಲ್ಲಿ ಶ್ರೇಷ್ಠವಾದ ಕೀರ್ತಿಯನ್ನು ಹೊಂದುವಿ. ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ನಿನಗೆ ಭಯವಿರುವುದಿಲ್ಲ.
ಆತ್ಮಾ ನದೀ ಭಾರತ ಪುಣ್ಯತೀರ್ಥಾ
ಸತ್ಯೋದಕಾ ಶೀಲಕೂಲಾ ದಮೋರ್ಮಿಃ |

ಯಸ್ಯಾಂ ಸ್ನಾತಃ ಪೂಯತೇ ಪುಣ್ಯಕರ್ಮಾ
ಯಥಾತ್ಮಾನಂ ಪುಣ್ಯವಂತೋ ಜನಾಶ್ಚ ॥22॥
ಎಲೈ ಭಾರತನೇ, ಆತ್ಮನು ಪುಣ್ಯಶಾಸನಗಳಿರುವ ನದಿ, ಸತ್ಯವೇ ಅದರ ಉದಕ, ಶೀಲವು ದಡ, ಇಂದ್ರಿಯ ನಿಗ್ರಹವು ಅಲೆ, ಅದರಲ್ಲಿ ಸ್ನಾನ ಮಾಡಿದವನು ಪುಣ್ಯವಂತ. ಜನರು ಪರಮಾತ್ಮನನ್ನು ಹೊಂದಿ ಪವಿತ್ರರಾಗುವಂತೆ ಇವನೂ ಪುಣ್ಯಕರ್ಮವನ್ನು ಮಾಡಿ ಪವಿತ್ರನಾಗುತ್ತಾನೆ.

ಕಾಮಕ್ರೋಧಗ್ರಾಹವತೀಂ ಪಂಚೇಂದ್ರಿಯಜಲಾಂ ನದೀಮ್ |
ನಾವಂ ಧೃತಿಮಯೀಂ ಕೃತ್ವಾ ಜನ್ಮದುರ್ಗಾಣಿ ಸಂತರ ॥23॥
ಕಾಮ-ಕ್ರೋಧಗಳೆಂಬ ಮೊಸಳೆಗಳಿರುವ ಪಂಚೇಂದ್ರಿಯಗಳ ಜಲವುಳ್ಳ ಈ ಸಂಸಾರವೆಂಬ ನದಿಯನ್ನು ಧೈರ್ಯವನ್ನು ದೋಣಿಯನ್ನಾಗಿ ಮಾಡಿ ಜನನ-ಮರಣಗಳೆಂಬ ದುರ್ಗಗಳನ್ನು ದಾಟುವವನಾಗು.

ಪ್ರಜ್ಞಾವೃದ್ಧಂ ಧರ್ಮವೃದ್ಧಂ ಸ್ವಬಂಧುಂ
ವಿದ್ಯಾವೃದ್ಧಂ ವಯಸಾ ಚಾಪಿ ವೃದ್ಧಮ್ |
ಕಾರ್ಯಾಕಾರ್ಯೇ ಚಾಭಿಪದ್ಯ ಪ್ರಸಾದ್ಯ
ಯಃ ಸಂಪೃಚ್ಛೇನ್ನ ಸ ಮುಹ್ಯೇತ್ ಕದಾಚಿತ್ ॥24॥
ಯಾವನು ಜ್ಞಾನವೃದ್ಧನೂ, ಧರ್ಮವೃದ್ಧನೂ, ತನ್ನ ಬಂಧುವೂ, ವಿದ್ಯಾವೃದ್ಧನೂ, ವಯೋವೃದ್ಧನೂ ಆದವನನ್ನು ಸಮೀಪಿಸಿ, ಸಂತೋಷಪಡಿಸಿ ಕಾರ್ಯಾಕಾರ್ಯಗಳನ್ನು ಪ್ರಶ್ನೆ ಮಾಡಿ ತಿಳಿಯುತ್ತಾನೆಯೋ ಅವನು ಎಂದೂ ಮೋಹಕ್ಕೆ ಒಳಗಾಗುವುದಿಲ್ಲ.

ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ |
ಚಕ್ಷುಃಶ್ರೋತ್ರೇ ಚ ಮನಸಾ ಮನೋ ವಾಚಂ ಚ ವಿದ್ಯಯಾ ॥25॥
ಧೈರ್ಯದಿಂದ ಶಿಶ್ನೋದರಗಳನ್ನು ರಕ್ಷಿಸಬೇಕು. ಚಕ್ಷುಸ್ಸಿನಿಂದ ಹಸ್ತ-ಪಾದಗಳನ್ನು ರಕ್ಷಿಸಬೇಕು. ಚಕ್ಷುಃ-ಶ್ರೋತ್ರಗಳನ್ನು ಮನಸ್ಸಿನಿಂದ ರಕ್ಷಿಸಬೇಕು. ಮನಸ್ಸು ಮತ್ತು ವಾಗಿಂದ್ರಿಯವನ್ನು ವಿದ್ಯೆಯಿಂದ ರಕ್ಷಿಸಬೇಕು.

ನಿತ್ಯೋದಕೀ ನಿತ್ಯಯಜ್ಞೋಪವೀತೀ
ನಿತ್ಯಸ್ವಾಧ್ಯಾಯೀ ಪತಿತಾನ್ನವರ್ಜೀ |
ಸತ್ಯಂ ಬ್ರುವನ್ ಗುರವೇ ಕರ್ಮ ಕುರ್ವನ್
ನ ಬ್ರಾಹ್ಮಣಃ ಚ್ಯವತೇ ಬ್ರಹ್ಮಲೋಕಾತ್ ॥26॥
ನಿತ್ಯಸ್ನಾನ ಮಾಡುವವನು ನಿತ್ಯವೂ ಯಜ್ಞೋಪವೀತವನ್ನು ಧರಿಸಿದವನೂ, ನಿತ್ಯವೂ ವೇದಾಧ್ಯಯನವನ್ನು ಮಾಡುವವನೂ, ಪತಿತಾನ್ನವನ್ನು ತೊರೆದವನೂ, ಸತ್ಯವನ್ನು ನುಡಿಯುವವನೂ, ಗುರುಗಳು ಹೇಳಿದ ಕರ್ಮವನ್ನು ಮಾಡುವವನೂ ಆದ ಬ್ರಾಹ್ಮಣನು ಬ್ರಹ್ಮಲೋಕದಿಂದ ಚ್ಯುತನಾಗುವುದಿಲ್ಲ.

ಅಧೀತ್ಯ ವೇದಾನ್ ಪರಿಸಂಸ್ತೀರ್ಯ ಚಾಗ್ನೀನ್
ಇಷ್ಟ್ವಾ ಯಜ್ಞೈಃ ಪಾಲಯಿತ್ವಾ ಪ್ರಜಾಶ್ಚ |
ಗೋಬ್ರಾಹ್ಮಣಾರ್ಥೇ ಶಸ್ತ್ರಪೂತಾಂತರಾತ್ಮಾ
ಹತಃ ಸಂಗ್ರಾಮೇ ಕ್ಷತ್ರಿಯಃ ಸ್ವರ್ಗಮೇತಿ ॥27॥
ವೇದವನ್ನು ಅಧ್ಯಯನ ಮಾಡಿ, ಸಂಸ್ತನಾದಿಗಳನ್ನು ಮಾಡಿ, ಅಗ್ನಿಗಳಲ್ಲಿ ಯಜ್ಞಗಳನ್ನು ಮಾಡಿ, ಪ್ರಜೆಗಳ ಪಾಲನೆಯನ್ನು ಮಾಡಿ, ಗೋ-ಬ್ರಾಹ್ಮಣರ ಸಲುವಾಗಿ ಯುದ್ಧದಲ್ಲಿ ಶಸ್ತ್ರದಿಂದ ಹತನಾಗುವ ಕ್ಷತ್ರಿಯನು ಸ್ವರ್ಗವನ್ನು ಪಡೆಯುತ್ತಾನೆ.

ವೈಶ್ಯೋಽಧೀತ್ಯ ಬ್ರಾಹ್ಮಣಾನ್ ಕ್ಷತ್ರಿಯಾಂಶ್ಚ
ಧನೈಃ ಕಾಲೇ ಸಂವಿಭಜ್ಯಾಶ್ರಿತಾಂಶ್ಚ |
ತ್ರಯೀಪೂತಂ ಧೂಮಮಾಘ್ರಾಯ ಪುಣ್ಯಂ
ಪ್ರೇತ್ಯ ಸ್ವರ್ಗೇ ದೇವಸುಖಾನಿ ಭುಂಕ್ತೇ ॥28॥
ವೈಶ್ಯನು ಅಧ್ಯಯನವನ್ನು ಮಾಡಿ, ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ಮತ್ತು ತನ್ನನ್ನು ಆಶ್ರಯಿಸಿದವರಿಗೂ ಯೋಗ್ಯವಾದ ಕಾಲದಲ್ಲಿ ತನ್ನ ಧನವನ್ನು ಬಿಟ್ಟು, ಮೂರುವೇದಗಳ ತ್ವರೆಯಿಂದ ಪವಿತ್ರವಾದ ಧೂಮವನ್ನು ಆಘ್ರಾಣಿಸಿ, ಮರಣವನ್ನು ಹೊಂದಿ ಸ್ವರ್ಗದಲ್ಲಿ ದೇವತೆಗಳ ಸುಖವನ್ನು ಅನುಭವಿಸುತ್ತಾನೆ.

ಬ್ರಹ್ಮ ಕ್ಷತ್ರಂ ವೈಶ್ಯವರ್ಣಂ ಚ ಶೂದ್ರಃ
ಕ್ರಮೇಣೈತಾನ್ ನ್ಯಾಯತಃ ಪೂಜಯಾನಃ |
ತುಷ್ಟೇಷ್ವೇತೇಷ್ವವ್ಯಥೋ ದಗ್ಧಪಾಪಃ
ತ್ಯಕ್ತತ್ವ ದೇಹಂ ಸಿದ್ಧಸುಖಾನಿ ಭುಂಕ್ತೇ ॥29॥
ಶೂದ್ರನಾದವನು ಕ್ರಮವಾಗಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯವರ್ಣದವರನ್ನು ನ್ಯಾಯದಿಂದ ಪೂಜೆಮಾಡಿ, ಅವರು ಸಂತೋಷಗೊಂಡರೆ ತನ್ನ ಪಾಪಗಳನ್ನು ಕಳೆದುಕೊಂಡು ವ್ಯಥೆಯಿಲ್ಲದೆ ದೇಹವನ್ನು ಬಿಟ್ಟು ಸಿದ್ಧರ ಸುಖವನ್ನು ಅನುಭವಿಸುತ್ತಾನೆ.

ಚಾತುರ್ವರ್ಣ್ಯಸ್ಯೈಷ ಧರ್ಮಸ್ತವೋಕ್ತೋ
ಹೇತುಂ ಚಾತ್ರ ಬ್ರುವತೋ ಮೇ ನಿಬೋಧ |
ಕ್ಷಾತ್ರಾದ್ ಧರ್ಮಾದ್ ಈಯತೇ ಪಾಂಡುಪುತ್ರಃ
ತತ್ ತ್ವಂ ರಾಜನ್ ರಾಜಧರ್ಮೇ ನಿಯುಂಕ್ಷ್ವ ॥30॥
ಚಾತುರ್ವರ್ಣದ ಈ ಧರ್ಮಗಳನ್ನು ನಾನು ನಿನಗೆ ಹೇಳಿದ್ದೇನೆ. ಅದಕ್ಕೆ ಕಾರಣವನ್ನು ಹೇಳುತ್ತೇನೆ, ಕೇಳು. ಪಾಂಡವರು ಕ್ಷತ್ರಿಯ

ಧರ್ಮದಿಂದ ಕೂಡಿದವರಾಗಿ ಇರುವುದು ತಿಳಿದುಬರುತ್ತಿದೆ. ಎಲೈ ರಾಜನೇ, ನೀನು ನಿನ್ನನ್ನು ರಾಜಧರ್ಮದಲ್ಲಿ ವಿನಿಯೋಗಿಸು.
ಧೃತರಾಷ್ಟ್ರಃ
ಏವಮೇತದ್ ಯಥಾಽಽತ್ಥ ತ್ವಮನುಶಾಸಸಿ ನಿತ್ಯದಾ |
ಮಮಾಪಿ ಚ ಮತಿಃ ಸೌಮ್ಯ ಭವತ್ಯೇವಂ ಯಥಾಽಽತ್ಥ ಮಾಮ್ ||
ಧೃತರಾಷ್ಟ್ರ ನೀನು ನಿತ್ಯವೂ ಹೇಗೆ ನನಗೆ ಅನುಶಾಸನ ಮಾಡುತ್ತೀಯೋ ಅದರಂತೆ ಎಲ್ಲವೂ ಸರಿ. ಎಲೈ ಸೌಮ್ಯನೇ, ನನಗೂ ಸಹ ನೀನು ಹೇಳಿದಂತೆಯೇ ಬುದ್ಧಿಯು ಉಂಟಾಗುತ್ತದೆ.
ವಿದುರಃ
ಸಾಧುಬುದ್ಧಿಃ ಕೃತಾಽಪ್ಯೇವಂ ಪಾಂಡವಾನ್ ಪ್ರತಿ ಭಾರತ |
ದುರ್ಯೋಧನಂ ಸಮಾಸಾದ್ಯ ಪುನರ್ವಿಪರಿವರ್ತತೇ ||32||
ವಿದುರ ಭಾರತನೇ, ಪಾಂಡವರ ವಿಷಯದಲ್ಲಿ ಇಂತಹ ಸದ್ಬುದ್ಧಿ ಉಂಟಾದರೂ ದುರ್ಯೋಧನನನ್ನು ನೋಡಿದ ಕೂಡಲೇ ನಿನ್ನ ಬುದ್ಧಿಯು ತಿರುಗಿಬಿಡುತ್ತದೆ.
ನ ದಿಷ್ಟ್ಯಮಭ್ಯತಿಕ್ರಾಂತುಂ ಶಕ್ಯಂ ಭೂತೇನ ಕೇನಚಿತ್ |
ದಿಷ್ಟ್ಯಮೇವ ಧ್ರುವಂ ಮನ್ಯೇ ಪೌರುಷಂ ತು ನಿರರ್ಥಕಮ್ ||33||
ವಿಧಿಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ವಿಧಿಯೇ ಧ್ರುವವೆಂದು ಭಾವಿಸುತ್ತೇನೆ. ಪುರುಷ ಪ್ರಯತ್ನವು ನಿರರ್ಥಕವಾದುದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತ್ವಾರಿಂಶೋಽಧ್ಯಾಯಃ ||
|| ಪ್ರಜಾಗರಪರ್ವಣಿ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂದನೆಯ ಅಧ್ಯಾಯ
ತಾನು ಶೂದ್ರನಾದುದರಿಂದ ವಿದುರನ ಉಪದೇಶ ಸಂಕ್ಷೇಪ
ಮತ್ತು ಸನತ್ಕುಮಾರರ ಆಗಮನ.
ಧೃತರಾಷ್ಟ್ರಃ
ಅನುಕ್ತಂ ಯದಿ ತೇ ಕಿಂಚಿದ್ ವಾಚಾ ವಿದುರ ವಿದ್ಯತೇ |
ತನ್ಮೇ ಶುಶ್ರೂಷವೇ ಬ್ರೂಹಿ ವಿಚಿತ್ರಾಣಿ ಹಿ ಭಾಷಸೇ ||1||
ಧೃತರಾಷ್ಟ್ರ ವಿದುರನೇ, ನೀನು ಹೇಳದೇ ಇರುವುದು ಏನಾದರೂ ಇದ್ದರೆ ಕೇಳಲು ಬಯಸುವ ನನಗೆ ಅದನ್ನು ಹೇಳು. ವಿಚಿತ್ರವಾಗಿ ಮಾತನಾಡುತ್ತಿದ್ದೀಯೆ.
ವಿದುರಃ
ಧೃತರಾಷ್ಟ್ರ ಕುಮಾರೋ ವೈ ಯಃ ಪುರಾಣಃ ಸನಾತನಃ |
ಸನತ್ಸುಜಾತಃ ಪ್ರೋವಾಚ ಮೃತ್ಯುರ್ನಾಸ್ತೀತಿ ಭಾರತ ||2||
ಸ ತೇ ಗುಹ್ಯಾನ್ ಪ್ರಕಾಶಾಂಶ್ಚ ಸರ್ವಾನ್ ಹೃದಯಸಂಶ್ರಯಾನ್ |
ಪ್ರವಕ್ಷ್ಯತಿ ಮಹಾರಾಜ ಸರ್ವಬುದ್ಧಿಮತಾಂ ವರಃ ||3||
ವಿದುರ ಧೃತರಾಷ್ಟ್ರನೇ, ಪ್ರಾಚೀನನಾದ, ಕುಮಾರನಾದ ಸನಾತನ ಮತ್ತು ಸನತ್ಸುಜಾತ ಎಂದು ಕರೆಸಿಕೊಳ್ಳಲ್ಪಡುವ ಸನತ್ಕುಮಾರನು ಎಲೈ ಭಾರತನೇ, ಮೃತ್ಯುವು ನಾಸ್ತಿ ಎಂದು ಹೇಳಿದನು. ಅವನು ಗುಹ್ಯವಾದ ಮತ್ತು ಪ್ರಕಾಶವಾದ ನಿನ್ನ ಹೃದಯದ ಎಲ್ಲ ಸಂಶಯಗಳಿಗೂ ಉತ್ತರವನ್ನು ಹೇಳುವನು. ಮಹಾರಾಜನೇ, ಅವನು ಎಲ್ಲಾ ಬುದ್ಧಿವಂತರಲ್ಲಿ ಶ್ರೇಷ್ಠನಾದವನು.
ಧೃತರಾಷ್ಟ್ರಃ
ಕಿಂ ತ್ವಂ ನ ವೇದ ತದ್ ಭೂಯೋ ಯನ್ಮೇ ಬ್ರೂಯಾತ್ ಸನಾತನಃ |
ತ್ವಮೇವ ವಿದುರ ಬ್ರೂಹಿ ಪ್ರಜ್ಞಾಶೇಷೋಽಸ್ತಿ ಚೇತ್ ತವ ||4||
ಧೃತರಾಷ್ಟ್ರ ಸನಾತನನು ನನಗೆ ಪುನಃ ಏನು ಹೇಳುವನೋ ಅದನ್ನು ನೀನು ತಿಳಿದಿಲ್ಲವೇ? ವಿದುರನೇ, ನೀನು ಹೇಳಬೇಕಾದ ವಿಷಯವಿನ್ನೂ ಇದ್ದರೆ ನೀನೇ ಹೇಳುವವನಾಗು.
ವಿದುರಃ
ಶೂದ್ರಯೋನಾವಹಂ ಜಾತೋ ನಾತೋಽನ್ಯದ್ ವಕ್ತುಮುತ್ಸಹೇ |
ಕುಮಾರಸ್ಯ ತು ಯಾ ಬುದ್ಧಿರ್ವೇದ ತಾಂ ಶಾಶ್ವತೀಮಹಮ್ ||5||
ಬ್ರಾಹ್ಮೀಂ ಹಿ ಯೋನಿಮಾಪನ್ನಃ ಸುಗುಹ್ಯಮಪಿ ಯೋ ವದೇತ್ |
ನ ತೇನ ಗರ್ಹ್ಯೋ ದೇವಾನಾಂ ತಸ್ಮಾದೇತದ್ ಬ್ರವೀಮಿ ತೇ ||6||
ನಾನು ಶೂದ್ರಯೋನಿಯಲ್ಲಿ ಜನಿಸಿದವನು. ಇದಕ್ಕಿಂತ ಹೆಚ್ಚು ಹೇಳಲಾರೆ. ಸನತ್ಕುಮಾರನ ಬುದ್ಧಿಯು ಶಾಶ್ವತವಾದುದು (ಸರ್ವವಿಷಯಕವಾದುದು ಎಂದು ನಾನು ತಿಳಿದಿದ್ದೇನೆ). ಬ್ರಾಹ್ಮಣನಾದ ಅವನು ಅತ್ಯಂತ ರಹಸ್ಯವನ್ನೂ ನಿನಗೆ ಹೇಳಬಹುದು. ಆದ್ದರಿಂದ ನಾನು ಹೆಚ್ಚು ಹೇಳುವುದಿಲ್ಲ ಎಂದು ಹೇಳಿದ ಕಾರಣದಿಂದಾಗಿ ದೇವತೆಗಳಿಂದ ನಾನು ನಿಂದನೀಯನಾಗುವುದಿಲ್ಲ. ಆದ್ದರಿಂದ ನಾನು ಇದನ್ನು ಹೇಳುತ್ತಿದ್ದೇನೆ.
ಧೃತರಾಷ್ಟ್ರಃ
ಬ್ರವೀಹಿ ವಿದುರ ತ್ವಂ ಮೇ ಪುರಾಣಂ ತಂ ಸನಾತನಮ್ |

ಕಥಮೇತೇನ ದೇಹೇನ ಸ್ಯಾದಿಹೈವ ಸಮಾಗಮಃ ॥7॥
ಧೃತರಾಷ್ಟ್ರ, ವಿದುರನೇ, ಆ ಪ್ರಾಚೀನನಾದ ಸನಾತನರ ಸಂಗಮವು ನನಗೆ ಈ ದೇಹದಲ್ಲಿಯೇ ಇಲ್ಲಿಯೇ ಹೇಗಾಗುತ್ತದೆ ಎಂದು ಹೇಳು.
ವೈಶಂಪಾಯನಃ
ಚಿಂತಯಾಮಾಸ ವಿದುರಃ ತಮೃಷಿಂ ಸಂಶಿತವ್ರತಮ್ |
ಸ ಚ ತಚ್ಚಿಂತಿತಂ ಜ್ಞಾತ್ವಾ ದರ್ಶಯಾಮಾಸ ಭಾರತ ॥8॥
ವೈಶಂಪಾಯನ ವಿದುರನು ಒಳ್ಳೆಯ ವ್ರತಧಾರಿಗಳಾದ ಆ ಋಷಿಯನ್ನು ಮನಸ್ಸಿನಲ್ಲಿ ಚಿಂತಿಸಿದನು. ಎಲೈ ಭಾರತನೇ, ಅವನಾದರೂ ಅವನ ಚಿಂತನೆಯನ್ನು ತಿಳಿದು ಪ್ರತ್ಯಕ್ಷನಾದನು.
ಸ ಚೈನಂ ಪ್ರತಿಜಗ್ರಾಹ ವಿಧಿದೃಷ್ಟೇನ ಕರ್ಮಣಾ |
ಸುಖೋಪವಿಷ್ಟಂ ವಿಶ್ರಾಂತಮಥೈನಂ ವಿದುರೋಽಬ್ರವೀತ್ ॥9॥
ವಿದುರನು ಅವನನ್ನು ವಿಧಿಪೂರ್ವಕವಾಗಿ ಸ್ವೀಕರಿಸಿದನು. ಅನಂತರ ವಿಶ್ರಾಂತಿಯನ್ನು ಪಡೆದು ಸುಖವಾಗಿ ಕುಳಿತ ಅವನನ್ನು ಕುರಿತು ವಿದುರನು ಹೇಳಿದನು.
ಭಗವಾನ್ ಸಂಶಯಃ ಕಶ್ಚಿದ್ ಧೃತರಾಷ್ಟ್ರಸ್ಯ ಮಾನಸೇ |
ಯೋ ನ ಶಕ್ಯೋ ಮಯಾ ವಕ್ತುಂ ತ್ವಮಸ್ಮೈ ವಕ್ತುಮರ್ಹಸಿ ॥10॥
ಪೂಜ್ಯರೇ, ಧೃತರಾಷ್ಟ್ರನ ಮನಸ್ಸಿನಲ್ಲಿ ಒಂದು ಸಂಶಯವಿದೆ. ಅದನ್ನು ನಾನು ಬಿಡಿಸಲಾರೆ. ನೀವು ಅವನಿಗೆ ಅದನ್ನು ಪರಿಹರಿಸಬೇಕು.
ಯಂ ಶ್ರುತ್ವಾಽಯಂ ಮನುಷ್ಯೇಂದ್ರಃ ಸರ್ವದುಃಖಾತಿಗೋ ಭವೇತ್ ॥
ಲಾಭಾಲಾಭೌ ಪ್ರಿಯದ್ವೇಷೌ ಯಥೈನಂ ನ ಜರಾಂತಕೌ |
ವಿಷಹೇರನ್ ಕ್ಷಯಾಮರ್ಷೌ ಕ್ಷುತ್ಪಿಪಾಸೇ ಭಯಾಭಯೇ ॥12॥
ಅರತಿಶ್ಚೈವ ತಂದ್ರೀ ಚ ಕಾಮಕ್ರೋಧೌ ಕ್ಷಯೋದಯೌ ॥13॥
ಯಾವುದನ್ನು ಕೇಳಿದರೆ ಅವನನ್ನು ಲಾಭಾಲಾಭಗಳೂ, ಹಿತಾಹಿತಗಳೂ, ಜರಾಮೃತ್ಯುಗಳೂ, ಹಾನಿ ಮತ್ತು ಕ್ರೋಧಗಳೂ, ಹಸಿವು-ನೀರಡಿಕೆಗಳೂ, ಭಯಾಭಯಗಳೂ, ಅರತಿ ಮತ್ತು ಸೋಮಾರಿತನಗಳೂ, ಕಾಮ-ಕ್ರೋಧಗಳೂ, ಸಮೃದ್ಧಿ ಮತ್ತು ಕ್ಷಯಗಳೂ ಅವನ ಮೇಲೆ ಪರಿಣಾಮವನ್ನು ಮಾಡದೇ ಈ ಮನುಷ್ಯೇಂದ್ರನು ಎಲ್ಲ ದುಃಖಗಳನ್ನು ದಾಟಿ ಹೋಗುವನೋ ಅಂತಹ ಉಪದೇಶವನ್ನು ನೀವು ಮಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಏಕಚತ್ವಾರಿಂಶೋಽಧ್ಯಾಯಃ ॥
॥ ಪ್ರಜಾಗರಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೊಂದನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಪ್ರಜಾಗರಪರ್ವ ॥
* * * * *
4. ಸನತ್ಸುಜಾತಪರ್ವ
ನಲವತ್ತೆರಡನೆಯ ಅಧ್ಯಾಯ
ವೈಶಂಪಾಯನಃ
ತತೋ ರಾಜಾ ಧೃತರಾಷ್ಟ್ರೋ ಮನೀಷೀ
ಸಂಪೂಜ್ಯಂ ತಂ ಧರ್ಮಭೃತಾಂ ವರಿಷ್ಠಮ್ |
ಸನತ್ಕುಮಾರಂ ರಹಿತೇ ಮಹಾತ್ಮಾ
ಪಪ್ರಚ್ಛ ಬುದ್ಧಿಂ ಪರಮಾಂ ಬುಭೂಷನ್ ॥1॥
ವೈಶಂಪಾಯನ ಸಾಕ್ಷಾತ್ ಯಮಾವತಾರನಾದ ವಿದುರನು, ಸ್ವರೂಪದಲ್ಲಿ ತನಗಿಂತ ಅವರನಾದ ಧೃತರಾಷ್ಟ್ರನೆಂದು ನಾಮಕನಾದ ಗಂಧರ್ವನು ಭೂಮಿಯಲ್ಲಿ ಕ್ಷತ್ರಿಯ ಕುಲದಲ್ಲಿ ತನ್ನ ಅಣ್ಣನಾಗಿ ಧೃತರಾಷ್ಟ್ರನೆಂಬ ಹೆಸರಿನಿಂದಲೇ ಪ್ರಸಿದ್ಧನಾಗಿ, ಅಸುರಾವೇಷಬಲದಿಂದ ದುಷ್ಟನಾದ ಪುತ್ರನ ಸ್ನೇಹದಿಂದ ಉಂಟಾದ ಮಹಾಪಾತಕಗಳ ಫಲವಾಗಿ ನರಕಾದಿ ಅನರ್ಥಭಾಜನನಾದ ತನ್ನ ಅಣ್ಣನನ್ನು ಉದ್ಧಾರ ಮಾಡಲು ಬಯಸಿ ಮೊದಲು ಗುಡಜಿಹ್ವಿಕಾ ನ್ಯಾಯದಿಂದ ಅಧ್ಯಾತ್ಮಜ್ಞಾನಗರ್ಭಿತವಾದ ನೀತಿಶಾಸ್ತ್ರವನ್ನು ಅವನಿಗೆ ಬೋಧಿಸಿ, ಅದರಿಂದ ಅವನಿಗೆ ವೇದಾಂತಶಾಸ್ತ್ರಶ್ರವಣದಲ್ಲಿ ಅಭಿರುಚಿಯನ್ನು ಉಂಟುಮಾಡಿದನು. ಆಗ ಧೃತರಾಷ್ಟ್ರನು ಮೊದಲು ಶೋಕ- ಮೋಹಾದಿಗಳಿಂದ ತಪ್ತನಾಗಿದ್ದರೂ ತನಗಿಂತ ಉತ್ತಮನಾದ ಗುರುವಾದ ವಿದುರನ ಉಪದೇಶದಿಂದ ವೈರಾಗ್ಯವನ್ನು ಹೊಂದಿ ಬ್ರಹ್ಮಜ್ಞಾನವನ್ನು ಪಡೆದವನು ಶೋಕವನ್ನು ದಾಟುತ್ತಾನೆ ಎಂಬ ನಿಯಮದಂತೆ ತನ್ನ ಶೋಕದ ಪರಿಹಾರಕ್ಕಾಗಿ ಬ್ರಹ್ಮವಿದ್ಯೆಯನ್ನು ಕೇಳಲು ಬಯಸಿ ಪುನಃ ವಿದುರನನ್ನು ಕುರಿತು ವಿದುರನೇ, ನೀನು ಹೇಳದೆ ಇರುವುದು ಏನಾದರೂ ಉಳಿದಿದ್ದರೆ ಅದನ್ನೂ ನನಗೆ ಹೇಳು ಎಂದು ಕೇಳುತ್ತಾನೆ.
ಧೃತರಾಷ್ಟ್ರನು ಈ ಪ್ರಶ್ನೆಯನ್ನು ಮಾಡಿದ ಮೇಲೆ `ಧೃತರಾಷ್ಟ್ರಕುಮಾರೋವೈ' ಎಂಬ ಎರಡು ಶ್ಲೋಕಗಳಿಂದ ವಿದುರನು ಸನತ್ಸುಜಾತನು ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ ಎಂದು ಹೇಳಿದ ಮೇಲೆ ಪುನಃ ಧೃತರಾಷ್ಟ್ರನು ಅವನು ಎಲ್ಲವನ್ನೂ ತಿಳಿದಿದ್ದಾನೆಯೇ? ನೀನೇ ಎಲ್ಲವನ್ನೂ ತಿಳಿದಿರುವಿ. ಆದ್ದರಿಂದ ನೀನೇ ನನಗೆ ಉಪದೇಶವನ್ನು ಮಾಡು ಎಂದು ಹೇಳಿದನು. ಆಗ ವಿದುರನು ತಾನು ಬ್ರಹ್ಮಜ್ಞಾನ ಸಂಪನ್ನನಾದರೂ ಶೂದ್ರಜಾತಿಯಲ್ಲಿ ಅವತಾರ ಮಾಡಿರುವುದರಿಂದ ಉಪದೇಶವನ್ನು ಕೊಡಲು

ಅನರ್ಹನೆಂದು ಭಾವಿಸಿ, ವೇದಾಂತ ಉಪದೇಶವನ್ನು ಕೊಡಲು ಬ್ರಾಹ್ಮಣರಿಗೇ ಅಧಿಕಾರ, ಇನ್ನೊಬ್ಬರಿಗೆ ಇಲ್ಲ ಎಂದು ಸೂಚಿಸುತ್ತಾ `ಶೂದ್ರಯೋನಾ ವಹಂ ಜಾತಃ' ಎಂಬ ಎರಡು ಶ್ಲೋಕಗಳಿಂದ ತನಗೆ ಅಧಿಕಾರವಿಲ್ಲದಿರುವುದರಿಂದ ಸನತ್ಸುಜಾತರನ್ನೇ ಕೇಳುವಂತೆ ಹೇಳುತ್ತಾನೆ. ಆಗ ಧೃತರಾಷ್ಟ್ರನು ಪರಮಹಂಸರೂ, ಯೋಗಿಪ್ರತ್ಯಕ್ಷಕ್ಕೆ ಮಾತ್ರ ವಿಷಯರೂ ಆದ ಸನತ್ಸುಜಾತರನ್ನು ನಾನು ನೋಡಲು ಸಾಧ್ಯವಿಲ್ಲ. ನೀನೇ ಅವರನ್ನು ತೋರಿಸು ಎಂದು ಪ್ರಾರ್ಥಿಸಿದಾಗ ವಿದುರನು ಸನತ್ಸುಜಾತರನ್ನು ಸ್ಮರಿಸುತ್ತಾನೆ. ವಿದುರನ ಚಿಂತೆಯನ್ನು ತಿಳಿದ ಸನತ್ಸುಜಾತರು ತಕ್ಷಣ ಪ್ರತ್ಯಕ್ಷರಾಗುತ್ತಾರೆ. ಅವರೇ ಸನತ್ಕುಮಾರರು. ಆಗ ವಿದುರನು ಅವರನ್ನು ಪೂಜಿಸಿ, ರಾಜನಿಗೆ ನಿವೇದಿಸಿ ರಾಜನ ಶೋಕವನ್ನು ಪರಿಹಾರ ಮಾಡಬೇಕೆಂದು `ಭಗವನ್ ಸಂಶಯಃ ಕಶ್ಚಿತ್' ಮುಂತಾದ ನಾಲ್ಕು ಶ್ಲೋಕಗಳಿಂದ ಪ್ರಾರ್ಥನೆ ಮಾಡುತ್ತಾರೆ.

ವಿದುರನು ತನ್ನ ಮಾತನ್ನು ಮುಗಿಸಿದ ಮೇಲೆ ಮೇಧಾವಿಯಾದ ಧೃತರಾಷ್ಟ್ರನು ವಿದುರನು ಹೇಳಿದ ನೀತಿರೂಪವಾದ ಮಾತುಗಳನ್ನು ಪೂಜಿಸಿ ದುಷ್ಟಜನರಹಿತವಾದ ಒಂದು ಏಕಾಂತಸ್ಥಳದಲ್ಲಿ ಪ್ರಶ್ನೆ ಮಾಡುತ್ತಾನೆ. ಸನತ್ಸುಜಾತ ಎಂಬಲ್ಲಿ ಸನತ್ ಎಂಬುದು ಅವ್ಯಯ. ಅವ್ಯಯಗಳಿಗೆ ಅನೇಕಾರ್ಥಗಳಿರುವುದರಿಂದ ನಿತ್ಯ ಎಂದು ಅರ್ಥ. `ಸನತ್' ಎಂದರೆ ನಿತ್ಯನಾದ, `ಸು' ಎಂದರೆ ಚೆನ್ನಾಗಿ, `ಜಾತ' ಎಂದರೆ ಅಭಿವ್ಯಕ್ತನಾದವನು ಎಂದು ಅರ್ಥ. ಸನತ್ಕುಮಾರ ಎಂಬುದು ದೇವರ ಶುದ್ಧವಾದ ರೂಪ. ಬ್ರಹ್ಮದೇವರ ಮಕ್ಕಳಾದ ಸನತ್ಕುಮಾರರಲ್ಲಿ ಸನತ್ಕುಮಾರ ನಾಮಕನಾದ ಪರಮಾತ್ಮನ ವಿಶೇಷ ಸನ್ನಿಧಾನವಿದೆ. ಬ್ರಹ್ಮದೇವರ ಮಕ್ಕಳಾದ ಸನತ್ಕುಮಾರರ ವಿಷಯದಲ್ಲಿ ಸನತ್ಸುಜಾತ ಎಂಬ ಶಬ್ದವು ಸನತ್=ನಿತ್ಯರಾದ, ಸು=ಬ್ರಹ್ಮದೇವರಿಂದ, ಜಾತ= ಹುಟ್ಟಿದವರು ಎಂಬ ಅರ್ಥದಲ್ಲಿದೆ. ಆಚಾರ್ಯರು ಸನತ್ಕುಮಾರ ನಾಮಕ ಭಗವಂತನ ಸನ್ನಿಧಾನವು ಬ್ರಹ್ಮಪುತ್ರರಾದ ಸನತ್ಕುಮಾರರಲ್ಲಿ ಇದೆ ಎಂಬ ವಿಷಯವನ್ನು `ಸ ಏವ ಪ್ರಥಮಂ ದೇವಃ' ಎಂಬ ಶ್ರೀಮದ್ಭಾಗವತ ಶ್ಲೋಕದ (1-3-6) ತಾತ್ಪರ್ಯದಲ್ಲಿ ಹೇಳಿದ್ದಾರೆ. ಕೆಲವು ವ್ಯಾಖ್ಯಾನಕಾರರು ಈ ತಾತ್ಪರ್ಯದ ಪರಿಜ್ಞಾನವಿಲ್ಲದೆ ಸನತ್ಕುಮಾರ ಎಂದರೆ ಬ್ರಹ್ಮದೇವರ ಪುತ್ರ ಎಂದು ಮಾತ್ರ ಹೇಳುತ್ತಾರೆ. ಅಂತಹ ವ್ಯಾಖ್ಯಾನವು ಅಪ್ರಾಮಾಣಿಕವಾದುದರಿಂದ ಅದನ್ನು ಬಿಡಬೇಕು. ಅಂತಹ ಸನತ್ಕುಮಾರರನ್ನು ಕುರಿತು ಪರಾಪರತತ್ತ್ವವಿಷಯಕವಾದ ಶ್ರೇಷ್ಠವಾದ ಜ್ಞಾನವನ್ನು ಹೊಂದಲು ಬಯಸಿ ಧೃತರಾಷ್ಟ್ರನು ಪ್ರಶ್ನೆ ಮಾಡಿದನು. `ಪರಮಾಂ' ಎಂಬ ಶಬ್ದಕ್ಕೆ `ಪರ' ಎಂದರೆ ಪೂರ್ಣಾನಂದ ಅದ್ವಿತೀಯತ್ವಾದಿ ಗುಣವಿಶಿಷ್ಟನಾದ ಜಗತ್ತಿಗಿಂತ ಅತ್ಯಂತ ಭಿನ್ನನಾದ ಭಗವಂತನು, `ಮಾ' ಎಂದರೆ ಯಾವುದರಿಂದ ತಿಳಿಯಲ್ಪಡುತ್ತಾನೆಯೋ ಅಂತಹ ಶ್ರೇಷ್ಠವಾದ ಎಂದು ಅರ್ಥ. ಅದು ವಿದ್ಯೆ ಎಂಬುದಕ್ಕೆ ವಿಶೇಷಣ. ಕೆಲವು ಪುಸ್ತಕಗಳಲ್ಲಿ ಸನತ್ಸುಜಾತ ಎಂಬುದಕ್ಕೆ ಬದಲಾಗಿ ಸನತ್ಕುಮಾರ ಎಂದೇ ಪಾಠವಿದೆ.

ಧೃತರಾಷ್ಟ್ರಃ

ಸನತ್ಸುಜಾತ ಯದಿಮಂ ಶೃಣೋಮಿ
ಮೃತ್ಯುರ್ಹಿ ನಾಸ್ತೀತಿ ತವೋಪದೇಶಮ್ |
ದೇವಾಸುರಾಭ್ಯಂತರಚಾರಿಣಸ್ತೇ
ಅಮೃತ್ಯವೇ ತತ್ ಕತರನ್ನು ಸತ್ಯಮ್ ॥2॥

ಧೃತರಾಷ್ಟ್ರ ಹೀಗೆ ವಿದುರನ ಮುಖದಿಂದ ಒಳ್ಳೆಯ ನೀತಿಶಾಸ್ತ್ರವನ್ನು ಕೇಳಿದ ಧೃತರಾಷ್ಟ್ರನು ಪ್ರಾರಬ್ಧವಶದಿಂದ ದುಷ್ಟಪುತ್ರನಲ್ಲಿ ಸ್ನೇಹವನ್ನು ಹೊಂದಿ ಪರಾಪರ ತತ್ತ್ವಜ್ಞಾನವನ್ನು ಮರೆತರೂ ಪರಮಸಜ್ಜನನಾದ ವಿದುರನ ಸಹವಾಸದಿಂದ ಉಂಟಾದ ತಾತ್ಕಾಲಿಕವಾದ ವಿಷಯವೈರಾಗ್ಯವನ್ನು ಹೊಂದಿ, ಸನತ್ಸುಜಾತರು ಉಪದೇಶ ಮಾಡುವ ಪರತತ್ತ್ವವನ್ನು ಕೇಳಲು ಬಯಸಿ, ಸನತ್ಸುಜಾತರಿಂದ ಹಿಂದೆ ಉಪದಿಷ್ಟವಾದ ಮೃತ್ಯುವು ಇಲ್ಲ ಎಂಬ ವಾಕ್ಯದ ಅಭಿಪ್ರಾಯವನ್ನು ತಿಳಿಯದೆ ಈ ಶ್ಲೋಕದಲ್ಲಿ ಆ ವಾಕ್ಯದ ಅಭಿಪ್ರಾಯವನ್ನು ಕುರಿತೇ ಪ್ರಶ್ನೆ ಮಾಡುತ್ತಾನೆ.

ಎಲೈ ಸನತ್ಸುಜಾತರೇ ಎಂದರೆ ಎಲೈ ಸನತ್ಕುಮಾರರೇ, ನೀವು ಶಿಷ್ಯರನ್ನು ಕುರಿತು ಮೃತ್ಯುವು ಇಲ್ಲ ಎಂದು ಉಪದೇಶವನ್ನು ಮಾಡಿದಿರಿ ಎಂಬ ವಿಷಯವನ್ನು ನಾನು ವಿದುರನಿಂದ ತಿಳಿದಿದ್ದೇನೆ. ಆದ್ದರಿಂದ ನಾನು ಲೋಕದಲ್ಲಿ ಯಾರಿಗೂ ಮೃತ್ಯುವಿಲ್ಲವೆಂದು ಭಾವಿಸುತ್ತೇನೆ. ಆದರೆ ಛಾಂದೋಗ್ಯ ಉಪನಿಷತ್ತಿನಲ್ಲಿ ಇಂದ್ರನು ಒಂದುನೂರು ವರ್ಷಗಳ ಕಾಲ ಬ್ರಹ್ಮದೇವರಲ್ಲಿ ಬ್ರಹ್ಮಚರ್ಯವನ್ನು ಮಾಡಿದನು. ಆಗ ದೇವತೆಗಳೂ ಮತ್ತು ಅಸುರರೂ ಜ್ಞಾನವನ್ನು ಪಡೆದರು ಎಂದು ಆರಂಭಿಸಿ ಅವರು ಮೂವತ್ತೆರಡು ವರ್ಷಗಳ ಕಾಲ ಬ್ರಹ್ಮಚರ್ಯವ್ರತವನ್ನು ಅನುಷ್ಠಾನ ಮಾಡಿದರು ಮುಂತಾದ ವಾಕ್ಯಗಳಿಂದ ಇಂದ್ರ-ವಿರೋಚನರಿಬ್ಬರೂ ಮೃತ್ಯುವನ್ನು ಪರಿಹಾರ ಮಾಡಿಕೊಳ್ಳಲು ಬ್ರಹ್ಮಚರ್ಯಾಚರಣ ಮೊದಲಾದವನ್ನು ಮಾಡಿದರೆಂದು ಕೇಳಿಬರುತ್ತದೆ. ಅಂತಹ ಶ್ರುತಿವಾಕ್ಯಕ್ಕೂ ತಮ್ಮ ಉಪದೇಶಕ್ಕೂ ವಿರೋಧ ಕಾಣುತ್ತದೆ. ಮೃತ್ಯುವು ಇದೆ ಎಂದು ತಿಳಿಯುತ್ತದೆ. ಮೃತ್ಯುವೇ ಇಲ್ಲದಿದ್ದರೆ ಅದರ ಪರಿಹಾರಕ್ಕಾಗಿ ಅವರು ಏಕೆ ಪ್ರಯತ್ನಪಡುತ್ತಾರೆ? ಆದ್ದರಿಂದ ಮೃತ್ಯುವು ಇದೆ ಮತ್ತು ಮೃತ್ಯುವಿಲ್ಲ ಎಂಬ ಎರಡು ಪಕ್ಷದಲ್ಲಿ ಯಾವುದು ಸತ್ಯವೆಂದು ನನಗೆ ನಿಶ್ಚಿತವಾಗಿ ಹೇಳಿ.

`ದೇವಾಸುರಾಭ್ಯಂತರಚಾರಿಣಃ' ಎಂಬ ಪದಕ್ಕೆ ದೇವತೆಗಳ ಮತ್ತು ಅಸುರರ ಹೃದಯದಲ್ಲಿ ಕಾಮರೂಪದಿಂದ ಸಂಚರಿಸುವ ನಿಮಗೆ ಎಂದು ಅರ್ಥ. ಸನತ್ಕುಮಾರರು ಕಾಮಾವತಾರರಾದ್ದರಿಂದ ಮತ್ತು ಸನತ್ಕುಮಾರನಾಮಕನಾದ ಪರಮಾತ್ಮನು ಸರ್ವಾಂತರ್ಯಾಮಿಯಾದುದರಿಂದ ದೇವತೆಗಳ ಮತ್ತು ಅಸುರರ ಮನಸ್ಸಿನಲ್ಲಿ ಸಂಚರಿಸುವ ನಿಮಗೆ ಎಲ್ಲವೂ ತಿಳಿದಿದೆ ಎಂದು ಅಭಿಪ್ರಾಯ. ಆದ್ದರಿಂದ ಮೃತ್ಯುವೇ ಇಲ್ಲದಿದ್ದರೆ ಮೃತ್ಯು ಪರಿಹಾರಕ್ಕಾಗಿ ದೇವತೆಗಳು ಏಕೆ ಅಮೃತಪಾನವನ್ನು ಮಾಡಿದರು? ಅಸುರರು ರುದ್ರಾದಿಗಳನ್ನು ಕುರಿತು ಏಕೆ ಉಗ್ರವಾದ ತಪಸ್ಸನ್ನು ಮಾಡಿದರು? ಎಂದು ಪ್ರಶ್ನೆಯ ಅಭಿಪ್ರಾಯ.

ಸನತ್ಸುಜಾತಃ

ಅಮೃತ್ಯುಃ ಕರ್ಮಣಾ ಕೇಚಿನ್ಮೃತ್ಯುರ್ನಾಸ್ತೀತಿ ಚಾಪರೇ |
ಶೃಣು ಮೇ ಬ್ರುವತೋ ರಾಜನ್ ಯಥೈತನ್ಮಾ ವಿಶಂಕಿಥಾಃ ॥3॥

ಸನತ್ಸುಜಾತ ಹೀಗೆ ಧೃತರಾಷ್ಟ್ರನಿಂದ ಕೇಳಲ್ಪಟ್ಟು ಮೃತ್ಯುವು ಇದೆ ಮತ್ತು ಮೃತ್ಯುವು ಇಲ್ಲ ಎಂಬ ಎರಡು ಪಕ್ಷಗಳು ಬೇರೆ ಬೇರೆ ಜ್ಞಾನಿಗಳಿಗೆ ಬೇರೆ ಬೇರೆ ದೃಷ್ಟಿಗಳಿಂದ ಸಮ್ಮತವಾಗಿದೆ ಎಂದು ಹೇಳುವವರಾಗಿ ಆ ಜ್ಞಾನಿಗಳ ಅಭಿಪ್ರಾಯವನ್ನು ಹೇಳುವುದಕ್ಕಾಗಿ

ಇಲ್ಲಿ ಪ್ರತಿಜ್ಞೆಯನ್ನು ಮಾಡುತ್ತಾರೆ.
ಎಲೈ ರಾಜನೇ, ಯದ್ಯಪಿ ಮೃತ್ಯುವಿದೆ. ಆದರೂ ವೇದೋದಿತಕರ್ಮರೂಪವಾದ ತನಗೆ ಉಚಿತವಾದ ಕರ್ಮಾನುಷ್ಠಾನದಿಂದ ಮೃತ್ಯುವಿನ ಅಭಾವವು ಉಂಟಾಗುತ್ತದೆ ಎಂದು ಕೆಲವು ಜ್ಞಾನಿಗಳು ಹೇಳುತ್ತಾರೆ ಅಥವಾ ಅಮೃತ್ಯು ಎಂದರೆ ಸಂಸಾರಾಭಾವರೂಪ ಮೋಕ್ಷವು, ಕರ್ಮ ಎಂದರೆ ಸರ್ವಕರ್ತೃವಾದ ಸರ್ವಜ್ಞನಾದ ಪರಮಾತ್ಮನ ಅನುಗ್ರಹದಿಂದ ಉಂಟಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಇನ್ನು ಕೆಲವು ಜ್ಞಾನಿಗಳು ಮೃತ್ಯುವೇ ಇಲ್ಲವೆಂದು ಹೇಳುತ್ತಾರೆ. ಇವೆರಡು ಪರಸ್ಪರ ವಿರುದ್ಧವಾಗಿ ತೋರುವ ಪಕ್ಷಗಳಿಗೆ ಹೇಗೆ ವಿರೋಧವಿಲ್ಲ ಎಂದು ನಾನು ಹೇಳುತ್ತೇನೆ. ನನ್ನ ಮಾತಿನಲ್ಲಿ ಸಂಶಯವನ್ನು ಪಡದೆ ಅದನ್ನು ಕೇಳುವವನಾಗು.

ಉಭೇ ಸತ್ಯೇ ಕ್ಷತ್ರಿಯಾದ್ಯ ಪ್ರವೃತ್ತೇ
ಮೋಹೋ ಮೃತ್ಯುಃ ಸಮ್ಮತೋ ಯಃ ಕವೀನಾಮ್ |
ಪ್ರಮಾದಂ ವೈ ಮೃತ್ಯುಮಹಂ ಬ್ರವೀಮಿ
ಸದಾऽಪ್ರಮಾದಮಮೃತತ್ವಂ ಬ್ರವೀಮಿ ॥4॥

ಈ ಶ್ಲೋಕಗಳಲ್ಲಿ ದೇಹವಿಯೋಗರೂಪವಾದ ಮರಣವು ಮೃತ್ಯುಶಬ್ದದ ಅರ್ಥವೆಂದು ಅಭಿಪ್ರಾಯವಲ್ಲ. ಏಕೆಂದರೆ ದೇಹ-ವಿಯೋಗರೂಪವಾದ ಮರಣವು ಬ್ರಹ್ಮದೇವರಿಂದ ಆರಂಭಿಸಿ ಎಲ್ಲರಿಗೂ ಪ್ರತ್ಯಕ್ಷಸಿದ್ಧವಾಗಿದೆ. ಆದರೆ ಸ್ವತಃ ಅಚ್ಛೇದ್ಯನೂ ಅಭೇದ್ಯನೂ ಆದ ಸಂಸಾರಿಜೀವನಿಗೆ ಈಶ್ವರನ ಇಚ್ಛೆಯಿಂದ ಒದಗಿದ ಸಂಸಾರವೇ ಮೃತ್ಯುರೂಪವಾದುದು ಎಂದು ಮೃತ್ಯುವು ಇದೆ ಎಂದು ಹೇಳುವ ಜ್ಞಾನಿಗಳ ಅಭಿಪ್ರಾಯ. ಅಂತಹ ಸಂಸಾರವು ಈಶ್ವರೇಚ್ಛೆಯಿಂದ ಎಂದಾದರೂ ಒಂದು ದಿನ ಅವಶ್ಯವಾಗಿ ನಾಶವನ್ನು ಹೊಂದುವುದರಿಂದ ಜೀವನಾದರೂ ನಾಶವನ್ನು ಹೊಂದದೆ ಉಳಿಯುವುದರಿಂದ ಮೃತ್ಯುವು ಇಲ್ಲ ಎಂಬುದು ಇನ್ನು ಕೆಲವು ಜ್ಞಾನಿಗಳ ಅಭಿಪ್ರಾಯ. ಹೀಗೆ ಎರಡು ಮತಗಳಿಗೂ ಅಭಿಪ್ರೇತವಾದ ಸತ್ಯತ್ವವನ್ನು ಅರ್ಧಶ್ಲೋಕದಿಂದ ಹೇಳಿ ತಮ್ಮ ಅಭಿಪ್ರಾಯವನ್ನು ಉಳಿದ ಅರ್ಧಶ್ಲೋಕದಿಂದ ಹೇಳುತ್ತಾರೆ.
ಎಲೈ ಕ್ಷತ್ರಿಯನೇ, ಅನಾದಿಕಾಲದಿಂದ ಉಂಟಾಗಿರುವ ಮೃತ್ಯುವು ಇದೆ ಮತ್ತು ಇಲ್ಲ ಎಂಬ ಎರಡು ಪಕ್ಷಗಳೂ ಸತ್ಯವಾದವುಗಳೇ. ಪರಸ್ಪರವಿರುದ್ಧವಾದ ಎರಡು ಧರ್ಮಗಳು ಒಂದೇ ಅಧಿಕರಣದಲ್ಲಿ ಇರುವುದು ಹೇಗೆ ವಿರುದ್ಧವಾಗುವುದಿಲ್ಲ ಎಂದರೆ ಆ ಮಾತಿನ ಅಭಿಪ್ರಾಯವನ್ನು ಹೇಳುತ್ತಾರೆ.
`ಮೃತ್ಯು' ಎಂದರೆ ಮೋಹ. ಮೋಹ ಎಂದರೆ ಚಿತ್ತವೈಕಲ್ಯ ಎಂಬುದು `ಮುಹ` ಧಾತುವಿನಿಂದ ಲಬ್ಧವಾದ ಅರ್ಥ. ಮುಕ್ತಿಯೋಗ್ಯರಾದ ಸಾತ್ವಿಕಜೀವರು ಸ್ವಬಿಂಬೋಪಾಸನೆಯನ್ನು ಬಿಟ್ಟು ದೇಹ-ಗೇಹಾದಿಗಳಲ್ಲಿ ಅಭಿಮಾನವುಳ್ಳ ಕಾರಣದಿಂದ ಒದಗಿಬರುವ ಸಂಸಾರವೇ ಅವರಿಗೆ ಮೃತ್ಯು. ತಮೋಧಿಕಾರಿಗಳು ತಮಗೂ ಮತ್ತು ತಮ್ಮ ಬಿಂಬನಿಗೂ ಐಕ್ಯೋಪಾಸನೆಯನ್ನು ಮುಖ್ಯವಾಗಿ ಮಾಡಿ, ಜೊತೆಗೆ ವೇದವಿಹಿತವಾದ ಧರ್ಮವನ್ನು ಆಚರಿಸಿ, ವಿಪರೀತ ಜ್ಞಾನ ಮೂಲಕವಾಗಿ ಒದಗಿ ಬಂದ ಸಂಸಾರವೇ ಅವರಿಗೆ ಮೃತ್ಯು. ಅಂತಹ ಮೃತ್ಯುವು ಎಲ್ಲರಿಗೂ ಇದೆ ಎಂದು ಅಸ್ತಿತ್ವವಾದಿಗಳ ಅಭಿಪ್ರಾಯ. ನಾಸ್ತಿತ್ವವಾದಿಗಳ ಪಕ್ಷದಲ್ಲಿ ಅಮೃತ್ಯು ಮತ್ತು ಅಮೋಹ ಎಂದು ಪದಚ್ಛೇದ. ಅಮೋಹ ಎಂದರೆ ಬಾಹ್ಯ ಅಂತಃಕರಣದಲ್ಲಿರುವ ಸಂಶಯವಿಪರೀತಜ್ಞಾನಾಭಾವ ಅದರ ಅಭಾವವು ಮುಕ್ತಿದೆಶೆಯಲ್ಲಿರುತ್ತದೆ. ಅದೇ ಅಮೃತ್ಯು. ಎಂದರೆ ಮುಕ್ತಿದೆಶೆಯಲ್ಲಿ ಬಾಹ್ಯಾಂತಃಕರಣಗತವಾದ ಸಂಶಯವಿಪರ್ಯಯಗಳು ಇರುವುದಿಲ್ಲ. ಇದು ನಾಸ್ತಿತ್ವವಾದಿಗಳ ಅಭಿಪ್ರಾಯ. ಈ ಅಮೃತ್ಯುವಾದರೂ ಸಾತ್ವಿಕ, ರಾಜಸ, ತಾಮಸ ಜೀವರಿಗೆ ಸಮಾನವಾಗಿಯೇ ಇರುತ್ತದೆ. ಏಕೆಂದರೆ ಎಲ್ಲರಿಗೂ ಲಿಂಗಭಂಗಾನಂತರದಲ್ಲಿ ಪುನರಾವರ್ತಿಯು ಉಂಟಾಗುವುದಿಲ್ಲ. ಯದ್ಯಪಿ ಜ್ಞಾನಿಗಳಿಗೆ ಮೋಹ ಮತ್ತು ಅಮೋಹಗಳು ಮೃತ್ಯು ಮತ್ತು ಅಮೃತ್ಯುವೆಂದು ಸಮ್ಮತವಾಗಿದೆ. ನನಗೆ (ಸನತ್ಸುಜಾತರಿಗೆ) ಸಮ್ಮತವಾದ ಮೃತ್ಯುವೆಂದರೆ ಪ್ರಮಾದ. ಪ್ರಮಾದ ಎಂದರೆ ಅನವಧಾನತೆ. ಎಂದರೆ ಎಲ್ಲ ಪ್ರಮಾದಗಳಿಗೂ ಕಾರಣವಾದ ಅಹಂಕಾರ ಎಂದರೆ ತನ್ನಲ್ಲಿ ಸ್ವತಂತ್ರಕರ್ತೃತ್ವರೂಪವಾದ ಮಿಥ್ಯಾಜ್ಞಾನವೇ ಪ್ರಮಾದ. ನನ್ನ ಅಭಿಪ್ರಾಯದಲ್ಲಿ ಅದೇ ಮೃತ್ಯು. ಏಕೆಂದರೆ ಅದು ಪುನರಾವರ್ತಿ ಇಲ್ಲದ ತಮಸ್ಸಿಗೆ ಕೊಂಡೊಯ್ಯುತ್ತದೆ. ಅಂತಹ ಮಿಥ್ಯಾಜ್ಞಾನರಾಹಿತ್ಯವನ್ನು ಅಮೃತ್ಯು ಎಂದು ಹೇಳುತ್ತೇನೆ. ಹಾಗಾದರೆ ಮೃತ್ಯುವೇ ಇಲ್ಲ ಎಂಬ ನಿಮ್ಮ ಮಾತಿಗೆ ಏನು ಅಭಿಪ್ರಾಯವೆಂದು ಕೇಳಿದರೆ ಸ್ವತಃ ಚಿದಾನಂದಾತ್ಮಕನಾದ ಸಾತ್ವಿಕಜೀವನಿಗೆ ಮತ್ತು ಸ್ವಭಾವತಃ ವಿಪರೀತ ಜ್ಞಾನಾನಂದಾತ್ಮಕನಾದ ತಾಮಸಜೀವರಿಗೆ ನಾವು ಹೇಳಿದ ಮೃತ್ಯುಶಬ್ದವಾಚಕವಾದ ಸಂಸಾರವು ಅಸ್ವಾಭಾವಿಕವಾದುದರಿಂದ ಮೃತ್ಯುವು ಇಲ್ಲ ಎಂದು ನನ್ನ ಅಭಿಪ್ರಾಯ. ಸ್ವಾಭಾವಿಕವಲ್ಲ ಎಂದು ತಾತ್ಪರ್ಯ.

ಪ್ರಮಾದಾದ್ವಾ ಅಸುರಾಃ ಪರಾಭವನ್
ಅಪ್ರಮಾದಾದ್ ಬ್ರಹ್ಮಭೂತಾಃ ಸುರಾಶ್ಚ |
ನ ವೈ ಮೃತ್ಯುರ್ವ್ಯಾಘ್ರ ಇವಾತ್ತಿ ಜಂತೂನ್
ನಾಪ್ಯಸ್ಯ ರೂಪಮುಪಲಭ್ಯತೇ ಹ ॥5॥

ಅಹಂಕಾರ ಮತ್ತು ಅನಹಂಕಾರ ಎಂಬ ಪರ್ಯಾಯ ಶಬ್ದಗಳಿಂದ ವಾಚ್ಯವಾದ ಪ್ರಮಾದ ಮತ್ತು ಅಪ್ರಮಾದ ಶಬ್ದಗಳಿಂದ ಹೇಳಲ್ಪಟ್ಟ ಮೃತ್ಯು ಮತ್ತು ಅಮೃತ್ಯುಗಳು ಶತ್ರುವಿನಂತೆ ಕ್ರಮವಾಗಿ ಪರಾಭವಕ್ಕೂ ಮತ್ತು ಬ್ರಹ್ಮಭಾವಕ್ಕೂ ಕಾರಣಗಳೆಂದು ದೃಢೀಕರಿಸುತ್ತಾ, ದೇವಾಸುರರ ಸ್ವಭಾವವನ್ನೂ ಮತ್ತು ಅವರ ಗತಿಯನ್ನೂ ಈ ಶ್ಲೋಕದಲ್ಲಿ ಹೇಳುತ್ತಾರೆ.
`ಪ್ರಮಾದಾತ್' ಎಂದರೆ ವಿಶ್ವವು ಮಿಥ್ಯಾ, ಬ್ರಹ್ಮನು ನಿರ್ಗುಣ, ಜೀವನು ಬ್ರಹ್ಮಾಭಿನ್ನನು, ವೇದವು ಅಪ್ರಮಾಣ ಮೊದಲಾದ ಮಿಥ್ಯಾಜ್ಞಾನದಿಂದ ಎಂದು ಅರ್ಥ. `ವಾ' ಶಬ್ದಕ್ಕೆ ಅವಧಾರಣೆಯು ಅರ್ಥ. ಎಂದರೆ ಇಂತಹ ಮಿಥ್ಯಾಜ್ಞಾನದಿಂದಲೇ ಅಸುರರು ಎಂದರೆ ವಿಷ್ಣುವೈಷ್ಣವದ್ವೇಷಿಗಳಾದ ಕಲಿ ಮೊದಲಾದ ದೈತ್ಯರು ಪರಾಭವವನ್ನು ಹೊಂದಿದರು. ಪರಾಭವವೆಂದರೆ ಈ ಲೋಕದಲ್ಲಿ ಪರಾಜಯಾದಿ ಅನಿಷ್ಟಗಳು ಮತ್ತು ಪರಲೋಕದಲ್ಲಿ ತಮಃಪ್ರಾಪ್ತಿರೂಪವಾದ ಅನಿಷ್ಟ ಎಂದು ಅರ್ಥ. ಮುಖ್ಯಪ್ರಾಣ ಮೊದಲಾದ ದೇವತೆಗಳು ಅಪ್ರಮಾದದಿಂದ ಎಂದರೆ ವಿಶ್ವವು ಸತ್ಯ, ಹರಿಯು ಸ್ವತಂತ್ರಕರ್ತಾ, ಜೀವನು ಪಾರಮಾರ್ಥಿಕವಾಗಿ ಬ್ರಹ್ಮನಿಂದ ಭಿನ್ನನಾದವನು, ವೇದಗಳು ಸತ್ಯ ಮತ್ತು ಪ್ರಮಾಣ ಮೊದಲಾದ ತತ್ತ್ವಜ್ಞಾನದಿಂದ ಉಂಟಾದ ಈಶ್ವರಾನುಗ್ರಹಕ್ಕೆ ಪಾತ್ರರಾದ್ದರಿಂದ ಪ್ರಮಾದವನ್ನು ಹೊಂದದೆ ಬ್ರಹ್ಮಭೂತರಾದರು. ಎಂದರೆ ಬ್ರಹ್ಮನಲ್ಲೇ ನೆಟ್ಟಮನಸ್ಸುಳ್ಳವರೂ ಮತ್ತು ಮೋಕ್ಷದಲ್ಲಿ ಬ್ರಹ್ಮನಲ್ಲಿಯೇ

ಸ್ಥಿತಿಯುಳ್ಳವರೂ ಆದರು. ಅಥವಾ ಮೋಕ್ಷದಲ್ಲಿ ಆನಂದಾದಿಗಳ ಅಭಿವೃದ್ಧಿಯನ್ನು ಹೊಂದಿದವರೂ ಆದರು ಎಂದೂ ಅರ್ಥ. ಎಲ್ಲ ಜೀವರನ್ನೂ ಕೊಲ್ಲುವ ಮೃತ್ಯುವು ಇಲ್ಲಿ ಅಭಿಪ್ರೇತವಲ್ಲ. ಏಕೆಂದರೆ ಆಯುಸ್ಸು ಮುಗಿದಾಗ ಎಲ್ಲರಿಗೂ ದೇಹಪಾತವು ಅವಶ್ಯವಾಗಿ ಆಗಲೇಬೇಕು. ಮತ್ತು ಮೃತ್ಯುಶಬ್ದವಾಚ್ಯನಾದ ದೇವತೆಯೂ ಸಹ ಹರಿಯ ಆಜ್ಞೆಯಿಂದಲೇ ನಿಮಿತ್ತಮಾತ್ರನಾಗಿ ಜೀವರಿಗೆ ಮರಣವನ್ನು ಉಂಟುಮಾಡುತ್ತಾನೆ ಮತ್ತು ಮಹಾಪ್ರಳಯದಲ್ಲಿ ಆ ಮೃತ್ಯುದೇವತೆಗೂ ಮರಣವು ಇದೆ. ಅದೂ ಅಲ್ಲದೆ ಮರಣದೆಶೆಯಲ್ಲಿ ಆ ಮೃತ್ಯುದೇವತೆಯನ್ನು ಯಾರೂ ನೋಡಿರುವುದಿಲ್ಲ. ಆದ್ದರಿಂದ ಇಲ್ಲಿ ಅದು ವಿವಕ್ಷಿತವಲ್ಲ. ಅದೂ ಅಲ್ಲದೆ ಆ ಮೃತ್ಯುದೇವತೆಯು ವ್ಯಾಘ್ರದಂತೆ ಕಣ್ಣೆದುರಿಗೆ ಬಂದು ಯಾವಾಗಲೂ ಜನರಿಗೆ ಮರಣವನ್ನು ಉಂಟುಮಾಡುವುದಿಲ್ಲ. ಆಯುಸ್ಸಿನ ಕ್ಷಯ ಉಂಟಾದಾಗಲೇ ಮರಣವನ್ನು ಉಂಟುಮಾಡುತ್ತದೆ. ಆ ಮೃತ್ಯುವಿನ ರೂಪವೂ ಸಹ ಯಾರಿಗೂ ಗೋಚರವಾಗುವುದಿಲ್ಲ. ಪ್ರಮಾದರೂಪವಾದ ಮೃತ್ಯುವಿನ ರೂಪವು ಮಾತ್ರ ಅದು ಅಸುರರ ಸ್ವರೂಪಕ್ಕಿಂತ ಅಭಿನ್ನವಾದುದರಿಂದ ಮೋಕ್ಷ ದೆಶೆಯಲ್ಲಿ ತೋರಿಯೇ ತೋರುತ್ತದೆ. ಆದ್ದರಿಂದ ಆ ಮೃತ್ಯುವೇ ಇಲ್ಲಿ ಅಭಿಪ್ರೇತವಾದುದು.

ಒಟ್ಟಿನಲ್ಲಿ ಪ್ರಸಿದ್ಧವಾದ ಮೃತ್ಯುವು ಇಲ್ಲಿ ವಿವಕ್ಷಿತವಲ್ಲ. ಇಲ್ಲಿ ಪ್ರಮಾದರೂಪವಾದ ಮೃತ್ಯುವೇ ಮೇಲೆ ಹೇಳಿದ ಕಾರಣದಿಂದಾಗಿ ವಿವಕ್ಷಿತವಾದುದು ಎಂದು ಅಭಿಪ್ರಾಯ.

ಭಾರತ ಶ್ರೀನಿವಾಸಾಚಾರ್ಯರು ಛಾಂದೋಗ್ಯಭಾಷ್ಯವನ್ನು ಉದಾಹರಿಸಿ ಅಪ್ರಮಾದದ ಲಕ್ಷಣವನ್ನು ಹೇಳಿರುತ್ತಾರೆ.

`ಅವಿಸ್ಮೃತಿಃ ಸದಾ ವಿಷ್ಣೋಃ ಅನ್ಯಥಾಜ್ಞಾನವರ್ಜನಂ
ಶಾಸ್ತ್ರಾಭ್ಯಾಸಃ ಸದೋದ್ಯೋಗಾತ್ ಶ್ರವಣಾಚ್ಚ ವಿರಾಗತಃ |
ನಿಷಿದ್ಧಕರ್ಮಣಾಂ ತ್ಯಾಗಃ ಸ್ವಧರ್ಮಸ್ಯ ಕೃತಿಃ ಸದಾ
ಅಪ್ರಮಾದ ಇತಿ ಪ್ರೋಕ್ತಃ ಶಾಸ್ತ್ರಂ ವೇದಾಶ್ಚ ಪಂಚ ಚ ॥'

ಎಂದರೆ ಯಾವಾಗಲೂ ವಿಷ್ಣುವಿನ ಸ್ಮರಣೆ, ಅನ್ಯಥಾಜ್ಞಾನರಾಹಿತ್ಯ, ಪ್ರಯತ್ನಪೂರ್ವಕವಾಗಿ ವೈರಾಗ್ಯವೃತ್ತನಾಗಿ ಗುರುಮುಖಶ್ರವಣದಿಂದ ಶಾಸ್ತ್ರಾಭ್ಯಾಸ, ನಿಷಿದ್ಧಕರ್ಮಗಳ ತ್ಯಾಗ, ಸ್ವಧರ್ಮಾಚರಣೆ, ಇತಿಹಾಸಾದಿ ಸಹಿತವಾದ ಋಗಾದಿ ಐದುವೇದಗಳಲ್ಲಿ ಪ್ರಾಮಾಣ್ಯಬುದ್ಧಿ ಇದಕ್ಕೆ ಅಪ್ರಮಾದವೆಂದು ಹೆಸರು. ಬೃಹದಾರಣ್ಯಕ ಉಪನಿಷತ್ತಿನಲ್ಲಿ `ಮೃತ್ಯುರ್ವೈತಮಃ ಜ್ಯೋತಿರಮೃತಂ' ಎಂದು ಹೇಳಿ ಅಜ್ಞಾನಕ್ಕೆ ಮೃತ್ಯುತ್ವವನ್ನು ಹೇಳಿದ್ದಾರೆ. ಏಕೆಂದರೆ `ನ ಚೇದಿಹಾವೇದೀತ್ ಮಹತೀ ವಿನಷ್ಟಿಃ' ಎಂದು ಇನ್ನೊಂದು ಉಪನಿಷತ್ತಿನಲ್ಲಿ ಅಜ್ಞಾನಕ್ಕೆ ಮಹಾವಿನಾಶ ಕಾರಣತ್ವವನ್ನು ಹೇಳಿದ್ದಾರೆ ಎಂದು ಭಾರತ ಶ್ರೀನಿವಾಸಾಚಾರ್ಯರು ನಿರೂಪಿಸಿದ್ದಾರೆ.

ಯಮಂ ತ್ವೇಕೇ ಮೃತ್ಯುಮತೋಽನ್ಯಮಾಹುಃ
ಆತ್ಮಾ ವಾಸೀದಮೃತಂ ಬ್ರಹ್ಮಚರ್ಯಮ್ |
ಪಿತೃಲೋಕೇ ರಾಜ್ಯಮನುಶಾಸ್ತಿ ದೇವಃ
ಶಿವಃ ಶಿವಾನಾಮಶಿವೋಽಶಿವಾನಾಮ್ ॥6॥

ಹೀಗೆ ಸನತ್ಸುಜಾತರು ಮೃತ್ಯುರೂಪವಾದ ಸಂಸಾರದ ಭಯವನ್ನು ಪರಿಹರಿಸಿ ಸ್ವರೂಪಾನಂದಾವಿರ್ಭಾವಕ್ಕೆ ಜ್ಞಾನವೇ ಸಾಧನವಾದುದು, ಇನ್ನು ಯಾವುದೂ ಅಲ್ಲ ಎಂದು ಶ್ರುತಿಯ ಸಮ್ಮತಿಯಿಂದ ಹೇಳಿದ ಮೇಲೆ ಆ ಜ್ಞಾನ ಮಹಿಮೆಯನ್ನು ಕೇಳಿದ ಧೃತರಾಷ್ಟ್ರನು ದುಃಖದ ಪರಿಹಾರ ಮತ್ತು ಸುಖಪ್ರಾಪ್ತಿಗಾಗಿ ಶ್ರುತಿಯಲ್ಲಿ ಹೇಳಿದ ಜ್ಯೋತಿಷ್ಟೋಮಾದಿ ಯಾಗವನ್ನು ಮಾಡುವುದರಿಂದ ಉಂಟಾದ ಪುಣ್ಯದಿಂದಲೇ ಅಂತಹ ಸುಖರೂಪವಾದ ಸ್ವರ್ಗಾದಿ ಲೋಕಪ್ರಾಪ್ತಿಯು ಕೇಳಿಬರುವುದರಿಂದ ಜ್ಞಾನವೇ ಮುಖ್ಯಕಾರಣ, ಬೇರೆ ಯಾವುದೂ ಅಲ್ಲ ಎಂದು ನಿರ್ಧಾರವನ್ನು ಮಾಡಲು ಹೇಗೆ ಸಾಧ್ಯ ಮತ್ತು `ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂಬ ಮುಖ್ಯಸಾಧನತ್ವವನ್ನು ಹೇಳುವ ಶ್ರುತಿವಾಕ್ಯಕ್ಕೂ `ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ಜ್ಯೋತಿಷ್ಟೋಮಕ್ಕೆ ಸ್ವರ್ಗಸುಖಸಾಧನತ್ವವನ್ನು ಹೇಳುವ ಶ್ರುತಿವಾಕ್ಯಕ್ಕೂ ಪರಸ್ಪರ ವಿರೋಧವು ಬರುವುದರಿಂದ ಜ್ಞಾನಿಗಳ ಪ್ರವೃತ್ತಿಯು ಯಾವ ರೀತಿ ಇರುತ್ತದೆ ಎಂದು ಪ್ರಶ್ನೆ ಮಾಡುತ್ತಾನೆ.

ಹೀಗೆ ಕೇಳಲ್ಪಟ್ಟ ಸನತ್ಸುಜಾತರು ಅಧ್ಯಾತ್ಮದೃಷ್ಟಿಯಿಂದ ಪ್ರಮಾದರೂಪವಾದ ಮಿಥ್ಯಾಜ್ಞಾನವೇ ಮೃತ್ಯುಶಬ್ದದ ಅರ್ಥ ಎಂದು ಹೇಳಿ ಈಗ ಈ ಶ್ಲೋಕದಲ್ಲಿ ಮುಖ್ಯಾಮುಖ್ಯಮೃತ್ಯುಗಳನ್ನೂ ಮತ್ತು ಅಂತಹ ಯಾವ ಮೃತ್ಯುವೂ ಇಲ್ಲದ ಭಗವಂತನ ಸ್ವರೂಪವನ್ನೂ ಉಪದೇಶ ಮಾಡುತ್ತಾರೆ. ಕೆಲವು ಜ್ಞಾನಿಗಳು ಯಮನನ್ನು ಸರ್ವಜನಮಾರಕನಾದ ಮೃತ್ಯುದೇವತೆ ಎಂದು ಹೇಳುತ್ತಾರೆ. ಅವನು ಮುಖ್ಯನಾದ ಮೃತ್ಯು. ಏಕೆಂದರೆ ಅಮುಖ್ಯಮಾರಕರಾದ ಯಮನ ತಮ್ಮನಿಗೂ ಮೃತ್ಯುಶಬ್ದ ವಾಚ್ಯತ್ವ ಇರುವುದರಿಂದ ಯಮನು ಮುಖ್ಯವಾದ ಮೃತ್ಯು ಎಂದು `ತು' ಶಬ್ದವು ಸೂಚಿಸುತ್ತದೆ. ಅಥವಾ ನರಸಿಂಹನು ಮೃತ್ಯುವಿಗೂ ಮಾರಕನಾದ ಮೃತ್ಯುವು ಎಂಬ ಪ್ರಮಾಣವಿರುವುದರಿಂದ ಭಗವಂತನ ಸ್ವರೂಪವನ್ನು ತಿಳಿದ ಇನ್ನೂ ಕೆಲವು ಜ್ಞಾನಿಗಳು ಮೃತ್ಯುಶಬ್ದವಾಚ್ಯರಾದ ಯಮಾದಿಗಳಿಗಿಂತಲೂ ಭಿನ್ನನಾದ ನರಸಿಂಹನನ್ನೇ ಮುಖ್ಯವಾದ ಮೃತ್ಯು ಎಂದು ಹೇಳುತ್ತಾರೆ. ಯಮ ಎಂದರೆ ಸರ್ವಪ್ರೇರಕನಾದ ನರಸಿಂಹ ಎಂದು ಅರ್ಥ. `ಆತ್ಮಾ ವಾ ಇದಮೇಕನ್ಯ ಏವ ಅಗ್ರ ಆಸೀತ್' ಎಂಬ ಶ್ರುತಿಯಿಂದಲೂ `ಶಿಷ್ಯತೇ ಅಶೇಷಸಂಜ್ಞಃ' ಎಂಬ ಭಾಗವತ ಸ್ಮೃತಿಯಿಂದಲೂ ಈ ಅರ್ಥವು ಸೂಚಿತವಾಗುತ್ತದೆ ಎಂದು ತಿಳಿಸಲು `ಆತ್ಮಾವಾಸೀತ್' ಎಂದು ಪ್ರತ್ಯೇಕ ಗ್ರಹಣವನ್ನು ಮಾಡಿದ್ದಾರೆ. ಎಂದರೆ ಜಗತ್ತಿನ ಉತ್ಪತ್ತಿಗಿಂತಲೂ ಮೊದಲೇ ಮಹಾಪ್ರಳಯದಲ್ಲಿ ಪೂರ್ಣಸಚ್ಚಿದಾನಂದಾತ್ಮಕನಾಗಿ ಮುಖ್ಯತಃ ಸರ್ವಸ್ವತಂತ್ರನಾಗಿ ಇರುವವನು ಎಂದು ಅರ್ಥ. `ಅಮೃತಮ್' ಎಂದರೆ ಮೃತ ಪದದಿಂದ ಹೇಳಲ್ಪಟ್ಟ ಅನೇಕ ವಿಧವಾದ ವಸ್ತುಗಳಿಗಿಂತಲೂ ವಿಲಕ್ಷಣ ಎಂದು ಅರ್ಥ. `ತದೇವ ಸತ್ಯಮಮೃತಂ ತದ್ಬ್ರಹ್ಮ ತದಾಹುಃ' ಎಂಬ ಶ್ರುತಿಯು ಅವನನ್ನು ಅಮೃತನೆಂದು ಹೇಳುವುದಷ್ಟೆ? ಅಮೃತಶಬ್ದಕ್ಕೆ ನಾನಾವಿಧಮೃತ್ಯುರಹಿತನಾದವನು ಎಂದು ಅರ್ಥಮಾಡಬಹುದು. ಬ್ರಹ್ಮಚರ್ಯ ಎಂಬ ಶಬ್ದದಲ್ಲಿ ಬ್ರಹ್ಮ ಎಂದರೆ ವೇದಗಳು. ಅದರಿಂದ ಚರ್ಯನಾದವನು ಜ್ಞೇಯನಾದವನು ಎಂದು ಒಂದು ಅರ್ಥ. ಅಥವಾ `ಚರ ಗತಿ ಭಕ್ಷಣಯೋಃ' ಎಂದು ಧಾತುವಿರುವುದರಿಂದ ಚರ್ಯ ಎಂದರೆ ಸರ್ವಭಕ್ಷಕ. ಬ್ರಹ್ಮ ಎಂದರೆ ಪೂರ್ಣ ಎಂದು ಅರ್ಥ.

ಇಂತಹ ನರಸಿಂಹನಾಮಕನಾದ ವಸ್ತುವು ಪಿತೃಲೋಕದಲ್ಲಿ ಎಂದರೆ ಯಮಲೋಕದಲ್ಲಿ ಇದ್ದು ಯಮಾದಿಗಳನ್ನು ಅನುಶಾಸನ ಮಾಡುತ್ತದೆ ಮತ್ತು ಸರ್ವಸಂಹಾರವನ್ನೂ ಮಾಡುತ್ತದೆ. `ರಾಮೋ ಯಮಸಭಾತಲೇ' ಎಂಬ ವಚನವಿರುವುದರಿಂದ ಯಮಲೋಕದಲ್ಲಿ ರಾಮಚಂದ್ರರೂಪಿಯಾದ ಪರಮಾತ್ಮನಿದ್ದಾನೆ ಅಥವಾ `ನೃಸಿಂಹೋ ಬ್ರಹ್ಮಸದನೇ ರಾಮೋ ಯಮಸಭಾತಲೇ ಉಪೇಂದ್ರಶ್ಚಾಮರಾವತ್ಯಾಂ ಸ್ಥಿತ್ವಾ ತತ್ರಾನುಶಾಸ್ತಿ ಹಿ' (ನರಸಿಂಹನು ಬ್ರಹ್ಮಸದನದಲ್ಲಿಯೂ ರಾಮಚಂದ್ರನು ಯಮಸಭೆಯಲ್ಲಿಯೂ, ಉಪೇಂದ್ರನು ಅಮರಾವತಿಯಲ್ಲಿಯೂ ಇದ್ದು ಅಲ್ಲಲ್ಲಿ ಅನುಶಾಸನ ಮಾಡುತ್ತಾರೆ) ಎಂಬ ವಚನವಿರುವುದರಿಂದ ಪಿತೃಲೋಕೇ ಎಂದರೆ ಸತ್ಯಲೋಕ ಎಂದೂ ಅರ್ಥವನ್ನು ಮಾಡಬಹುದು. ಏಕೆಂದರೆ ಆದಿವರಾಹದೇವರು ಚತುರ್ಮುಖಬ್ರಹ್ಮದೇವರ ನಾಸಿಕದಿಂದ ಹೊರಗೆ ಬಂದುದರಿಂದ ಚತುರ್ಮುಖದೇವರು ಆದಿವರಾಹನ ಪಿತೃಗಳು. ಪಿತೃಲೋಕ ಎಂದರೆ ಅವರ ಲೋಕವಾದ ಸತ್ಯಲೋಕ. ಅಲ್ಲಿ ಅನುಶಾಸನ ಮಾಡುತ್ತಾರೆ ಎಂದರೆ ಬ್ರಹ್ಮದೇವರ ಸಹಭೋಗರೂಪವಾದ ರಾಜ್ಯವನ್ನು ಅನುಶಾಸನ ಮಾಡುತ್ತಾರೆ ಎಂದು ಅರ್ಥ. ಬ್ರಹ್ಮಪುತ್ರ ಎಂದು ಹೇಳಿದುದರಿಂದ ಕ್ರೀಡಾದಿ ಗುಣವಿಶಿಷ್ಟನಾದ ಪರಮಾತ್ಮನಿಗೆ ಯಾವ ದೋಷವೂ ಇಲ್ಲ ಎಂದು ಸೂಚನೆ ಮಾಡಲು ದೇವ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಸತ್ಯಲೋಕದಲ್ಲಿ ಪರಮಾತ್ಮನು ಬ್ರಹ್ಮದೇವರಿಂದ ಪೂಜಿಸಲ್ಪಟ್ಟು ವಾಸಿಸುತ್ತಾನೆ ಎಂಬ ವಿಷಯವು `ಅತೋಽಸುರಾಣಾಂ ಪ್ರವರಃ ಸುರಾರ್ಚಿತಃ ಸ್ವಯೇಕತನ್ವಾನ್ಯವಸತ್ಸುರಾಲಯೇ' ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿದೆ. ಯಮಾದಿಲೋಕದಲ್ಲಿ ಇರುವ ನರಸಿಂಹರೂಪಿಯಾದ ನಾರಾಯಣನು ರಾಜ್ಯಾನುಶಾಸನವನ್ನು ಮಾಡುವ ಕ್ರಮವನ್ನು ಈ ಶ್ಲೋಕದ ನಾಲ್ಕನೆಯ ಪಾದದಿಂದ ಹೇಳುತ್ತಾರೆ. ಯಮಲೋಕಗತನಾದ ರಾಮಚಂದ್ರನು ಅಲ್ಲಿಗೆ ಬಂದ ಪುಣ್ಯಶೀಲರಾದ ಪ್ರಾಣಿಗಳಿಗೆ ಮಾಂಗಲ್ಯವನ್ನು ಉಂಟುಮಾಡುವವನಾಗಿ ಸ್ವರ್ಗಾದಿಲೋಕಗಳನ್ನು ಕೊಡುತ್ತಾನೆ. ಅಶಿವರಿಗೆ ಎಂದರೆ ಪಾಪಶೀಲರಿಗೆ ಭಯಂಕರ ರೂಪವನ್ನು ತೋರಿಸಿ ನರಕಯಾತನೆಗಳನ್ನು ನೀಡುತ್ತಾನೆ. ಸತ್ಯಲೋಕದಲ್ಲಿರುವ ಪರಮಾತ್ಮನೂ ಸಹ ಸತ್ಯಲೋಕಕ್ಕೆ ಬಂದ ಮುಕ್ತಿಯೋಗ್ಯರಿಗೆ ಮುಕ್ತಿರೂಪವಾದ ಮಂಗಳವನ್ನು ಕೊಡುತ್ತಾನೆ. ಅಶಿವರಾದ ತಾಮಸರಿಗೆ ಅವನು ತಮಸ್ಸು ಮೊದಲಾದವುಗಳನ್ನು ಕೊಡುತ್ತಾನೆ. ಇಂತಹ ನಾರಾಯಣನೇ ನೃಸಿಂಹ ಮೊದಲಾದ ರೂಪದಿಂದ ಸರ್ವಮಾರಕಮೃತ್ಯುಶಬ್ದದಿಂದ ಮುಖ್ಯವಾಗಿ ವಾಚ್ಯನಾದವನು ಎಂದು ಸಿದ್ಧವಾಗುತ್ತದೆ.

ಅಸ್ಯಾದೇಶಾನ್ನಿಃಸರತೇ ನರಾಣಾಂ (ಆಸ್ಯಾದೇಷ....)
ಕ್ರೋಧಃ ಪ್ರಮಾದೋ ಮೋಹರೂಪಶ್ಚ ಮೃತ್ಯುಃ |
ಅಹಂಗತೇನೈವ ಚರನ್ ವಿಮಾರ್ಗಾನ್
ನ ಚಾತ್ಮನೋ ಯೋಗಮುಪೈತಿ ಕಶ್ಚಿತ್ ॥7॥

ಸನತ್ಸುಜಾತರು ಹೀಗೆ ಪ್ರಸಂಗದಿಂದ ಪ್ರಾಪ್ತವಾದ ನಿತ್ಯಸಿದ್ಧನಾದ ನರಸಿಂಹರೂಪನಾದ ಮೃತ್ಯುದೇವತೆಯ ಸ್ವರೂಪವನ್ನು ಹೇಳಿ ಈಗ ತಾವು ಹೇಳಿದ ಮಿಥ್ಯಾಜ್ಞಾನರೂಪವಾದ ಪ್ರಮಾದವೇ ಮೃತ್ಯು ಎಂಬುದಕ್ಕೆ ಸಂಬಂಧಿಸಿದಂತೆ ಅಂತಹ ಮೃತ್ಯುವಿನ ಉತ್ಪತ್ತಿಕಾರಣವನ್ನೂ, ಕ್ರೋಧ-ಮೋಹಗಳು ಮೃತ್ಯುವಿನ ಅಂಶವೆಂಬುದನ್ನೂ, ಅವುಗಳ ಸಂಬಂಧದಿಂದಲೇ ಜೀವನು ಅಜ್ಞಾನದಿಂದ ದುರ್ಮಾರ್ಗದಲ್ಲಿ ಪ್ರವೃತ್ತನಾಗುತ್ತಾನೆಂಬುದನ್ನೂ ಇಲ್ಲಿ ತಿಳಿಸುತ್ತಾರೆ. ಈ ಪ್ರಮಾದಾತ್ಮಕವಾದ ಮೃತ್ಯುವು ಜೀವನ ಅನಾದಿಕಾಲದಿಂದ ಪ್ರಾಪ್ತವಾದ ಲಿಂಗದೇಹ ಸಂಬಂಧದಿಂದ ಉಂಟಾದ ತನ್ನಲ್ಲಿ ಇಲ್ಲದಿರುವ ಮಿಥ್ಯಾಭೂತವಾದ ಸ್ವಾತಂತ್ರ್ಯರೂಪವಾದ ಅಹಂಕಾರದಿಂದ ಉತ್ಪನ್ನವಾಗುತ್ತದೆ. ದುರಹಂಕಾರವು ಆಸ್ಯಶಬ್ದವಾಚ್ಯ ಎಂಬ ವಿಷಯದಲ್ಲಿ `ಸರ್ವದಾಕ್ಷೇಪಸಂಯೋಗಾತ್ ಅಸುಧಾತು ಸಮನ್ವಯಾತ್ | ಆಸ್ಯ ಇಚ್ಛತೇ ಘೋರಃಹ್ಯಹಂಕಾರೋ ಸುಷು ಸ್ಥಿತಃ' (ಅಸುನಿರಶನ ಎಂಬ ಧಾತುಪಾಠ ಇರುವುದರಿಂದ ಯಾವಾಗಲೂ ಇನ್ನೊಬ್ಬರ ಆಕ್ಷೇಪದಿಂದ ಕೂಡಿರುವುದರಿಂದ ಜೀವರಲ್ಲಿರುವ ಘೋರವಾದ ಅಹಂಕಾರವು ಆಸ್ಯ ಎಂದು ಹೇಳಲ್ಪಡುತ್ತದೆ) ಎಂಬ ಪ್ರಮಾಣ ಇರುವುದರಿಂದ `ಆಸ್ಯ' ಶಬ್ದಕ್ಕೆ ಅಹಂಕಾರ ಎಂಬ ಅರ್ಥವನ್ನು ಮಾಡಿದ್ದಾಯಿತು. ಅಥವಾ `ಅಸ್ಯಾದೇಶಾತ್' ಎಂಬ ಪಾಠವನ್ನು ಇಟ್ಟುಕೊಂಡರೆ `ಅಸ್ಯ' ಎಂದರೆ ಈ ಸರ್ವಸ್ವಾಮಿಯಾದ ನಾರಾಯಣನ `ಆದೇಶಾತ್' ಆಜ್ಞಾಶಕ್ತಿಯಿಂದಲೇ, ನಿಸ್ಸರತೇ- ಈ ಪ್ರಮಾದರೂಪವಾದ ಮೃತ್ಯುವು ಉತ್ಪನ್ನವಾಗುತ್ತದೆ. ಇಲ್ಲಿಯೂ ಕೂಡ ಮೋಹರೂಪಶ್ಚ ಎಂಬಲ್ಲಿರುವ ಚಶಬ್ದದಿಂದ ಲಿಂಗದೇಹದ ಸಂಬಂಧವೇ ಇನ್ನೊಂದು ಕಾರಣ ಎಂದು ತಿಳಿಯಬೇಕು. ಈ ಪ್ರಮಾದವಾದರೂ ಕ್ರೋಧ ಮತ್ತು ಮೋಹರೂಪವಾದುದು. ಈ ಜೀವನು `ಅಹಂಗತೇನ' ಎಂದರೆ ಮಿಥ್ಯಾಭೂತವಾದ ಅಹಂಕಾರದಿಂದ ಉಂಟಾದ ಪ್ರಮಾದರೂಪವಾದ ಮೃತ್ಯುವಿನ ಸಂಬಂಧದಿಂದಲೇ, ವಿಮಾರ್ಗಾನ್- ಶ್ರುತಿಸ್ಮೃತಿ ವಿರುದ್ಧವಾದ ಅನೇಕ ವಿಧವಾದ ದುರ್ಮಾರ್ಗಗಳನ್ನು, ಚರನ್- ಆಚರಿಸುತ್ತಾನೆ. ಆತ್ಮನಃ- ಪರಮಾತ್ಮನ ವಿಷಯದಲ್ಲಿ, ಯೋಗಂ- ಜ್ಞಾನಯೋಗ, ಭಕ್ತಿಯೋಗ ಮತ್ತು ಕರ್ಮಯೋಗಗಳಲ್ಲಿ ಒಂದು ಯೋಗವನ್ನೂ ಸಹ, ನೋಪಯಾತಿ- ಹೊಂದುವುದಿಲ್ಲ. `ಆತ್ಮಾವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿದ್ಯಾಸಿತವ್ಯಃ' ಎಂಬ ಶ್ರುತಿಯಲ್ಲಿ ಹೇಳಿದಂತೆ ಶ್ರವಣ, ಮನನ, ಧ್ಯಾನಗಳಲ್ಲಿ ಒಂದು ಉಪಾಯವನ್ನೂ ಅನುಷ್ಠಾನವನ್ನು ಮಾಡುವುದಿಲ್ಲ. ರಾಜಸತಾಮಸರು ಮಿಶ್ರಿತ ಜ್ಞಾನವುಳ್ಳವರಾದ್ದರಿಂದ ಅವರಿಗೆ ಇದು ಸಹಜವಾದರೂ, ಕಶ್ಚಿತ್- ಸುಖಜ್ಞಾನಸ್ವರೂಪನಾದ ಸಾತ್ವಿಕಜೀವನೂ ಸಹ ಲಿಂಗದೇಹ ಇರುವವರೆಗೆ ಕರ್ಮನಿಬಂಧನೆಗೊಳಗಾಗಿ, ಸಂಸಾರದಶೆಯಲ್ಲಿ ಅಹಂಕಾರವನ್ನು ಹೊಂದಿದವನಾಗಿ, ದುರ್ಮಾರ್ಗಗಳಲ್ಲಿ ಸಂಚರಿಸುತ್ತಾ ಭಗವಂತನ ತತ್ತ್ವಜ್ಞಾನವನ್ನು ಶೀಘ್ರವಾಗಿ ಹೊಂದುವುದಿಲ್ಲ ಎಂದು ಅಭಿಪ್ರಾಯ.

ತೇ ಮೋಹಿತಾಸ್ತದ್ವಶೇ ವರ್ತಮಾನಾ
ಇತಃ ಪ್ರೇತಾಸ್ತತ್ರ ಪುನಃ ಪತಂತಿ |
ತತಸ್ತಂ ದೇವಾ ಅನುಪರಿಪ್ಲವಂತೇ
ತತೋ ಮೃತ್ಯುಃ ಮರಣಾದಭ್ಯುಪೈತಿ ॥8॥

ಹೀಗೆ ಮಿಥ್ಯಾಭೂತವಾದ ಅಹಂಕಾರದಿಂದ ಉಂಟಾದ, ಪ್ರಮಾದರೂಪವಾದ ಮೃತ್ಯುವಿನ ಸಂಬಂಧದಿಂದ ಪರಮಾತ್ಮನ ವಿಸ್ಮರಣೆಗೆ ಕಾರಣವಾದ, ದುರ್ಮಾರ್ಗಾಚರಣೆಯನ್ನು ಮಾಡುತ್ತಾ ಸ್ವರ್ಗ-ನರಕಾದಿ ಲೋಕಗಳಲ್ಲಿ ಪುನಃ ಪುನಃ ಚಕ್ರದಂತೆ

ತಿರುಗುತ್ತಾ ಅಂತಹ ಜೀವರು ಸಂಸಾರದಿಂದ ಎದ್ದು ಮೇಲೆ ಬರುವುದಿಲ್ಲವೆಂಬ ವಿಷಯವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಆ ಜೀವರು ಪ್ರಮಾದರೂಪವಾದ ಮೃತ್ಯುವಿನ ವಶದಲ್ಲಿ ಇರುವವರಾಗಿ ಆದ್ದರಿಂದಲೇ ಮೋಹಿತರಾಗಿ ಸಂಸಾರದೆಶೆಯನ್ನು ಹೊಂದಿ, ಇಲ್ಲಿ ಮನುಷ್ಯದೇಹದಿಂದ ಮರಣವನ್ನು ಹೊಂದಿ, ಪುನಃ ನರಕಾದಿಗಳಲ್ಲಿ ಸ್ವಲ್ಪಕಾಲ ವಾಸವನ್ನು ಮಾಡಿ ತಮ್ಮ ಕರ್ಮದ ಫಲವನ್ನು ಅನುಭವಿಸಿ, ಸ್ವಲ್ಪ ಪಾಪ-ಪುಣ್ಯಶೇಷವನ್ನು ಇಟ್ಟುಕೊಂಡು ವರ್ಷಾದಿಕ್ರಮಗಳಲ್ಲಿ (ಕೆಲವರು ಒಂದುವರ್ಷದ ಕಾಲದಲ್ಲಿ, ಕೆಲವರು ಅದಕ್ಕಿಂತಲೂ ಕಡಿಮೆ ಕಾಲದಲ್ಲಿ, ಇನ್ನು ಕೆಲವರು ಅದಕ್ಕಿಂತಲೂ ಹೆಚ್ಚಿನ ಕಾಲದಲ್ಲಿ) ದೈವವಶರಾಗಿ ಪುನಃ ಮನುಷ್ಯಗರ್ಭವನ್ನು ಪ್ರವೇಶಿಸುತ್ತಾರೆ. ತತಃ ಜೀವರು ಮನುಷ್ಯಗರ್ಭವನ್ನು ಪ್ರವೇಶ ಮಾಡಿದ ಮೇಲೆ, ದೇವಾಃ ಹರಿ, ಮುಖ್ಯಪ್ರಾಣ ಮತ್ತು ತತತ್ತ್ವಭಿಮಾನಿದೇವತೆಗಳು, ಅನು ಕ್ರಮವಾಗಿ, ಪರಿ ತಮ್ಮ ತಮ್ಮ ಸ್ಥಾನಗಳಲ್ಲಿ, ಪ್ಲವಂತೇ ಪ್ರವೇಶ ಮಾಡುತ್ತಾರೆ. ಆ ದೇವತೆಗಳು ಪ್ರವೇಶಮಾಡುವುದು ಅಯೋಗ್ಯಜೀವನಿಂದ ಪಾಪಕರ್ಮವನ್ನು ಮಾಡಿಸುವುದಕ್ಕಾಗಿಯೇ ಹೊರತು ಅವನಿಗೆ ಉಪಕಾರ ಮಾಡುವುದಕ್ಕಲ್ಲ ಎಂಬುದನ್ನು ಪ್ಲವಂತೇ ಎಂಬಲ್ಲಿ ಇರುವ ಆತ್ಮನೇ ಪದದಿಂದ ಸೂಚಿಸುತ್ತಾರೆ. ತತತ್ತ್ವಭಿಮಾನಿ ದೇವತೆಗಳು ಪ್ರವೇಶಮಾಡಿದ ಮೇಲೆ ಮೃತ್ಯುದೇವತೆಯು ಪ್ರವೇಶ ಮಾಡುತ್ತದೆ. ಮರಣಾತ್ ಎಂಬುದು ಲ್ಯಬ್‌ಲೋಪನಿಮಿತ್ತ ಪಂಚಮೀ ವಿಭಕ್ತಿ. ಪ್ರವೇಶ ಮಾಡಿದ ದೇವತೆಗಳು ಮರಣವುಂಟಾಗುವವರೆಗೆ ಆ ದೇಹದಲ್ಲಿ ಇರುತ್ತಾರೆ ಎಂದು ಅಭಿಪ್ರಾಯ. ಮರಣಾನಂತರದಲ್ಲಿ ಈ ಜೀವನು ಪುನರ್ಜನ್ಮವನ್ನು ಹೊಂದುತ್ತಾನೆ. `ಜಾತೋ ಜಾತಃ ಮೃತೋ ಮೃತಃ' ಎಂಬ ಪ್ರಮಾಣಕ್ಕೆ ಅನುಸಾರವಾಗಿ ಮರಣಾನಂತರದಲ್ಲಿ ಹಿಂದಿನಂತೆ ನರಕಾದಿಗಳಲ್ಲಿ ವಾಸವನ್ನು ಮಾಡಿ ಪುನಃ ಕರ್ಮಸಂಪಾದಿತವಾದ ದೇಹವನ್ನೂ ಪುನಃ ಮೃತ್ಯುವನ್ನೂ ಪಡೆದು ಹೀಗೆ ಜನ್ಮ-ಮರಣಚಕ್ರಕ್ಕೆ ಸಿಲುಕಿ ಎಂದೂ ಬಿಡುಗಡೆಯನ್ನು ಹೊಂದುವುದಿಲ್ಲ ಎಂದು ಅಭಿಪ್ರಾಯ. ಭಾರತ ಶ್ರೀನಿವಾಸಾಚಾರ್ಯರು ಬ್ರಹ್ಮಸೂತ್ರಭಾಷ್ಯಕ್ಕೆ ಅನುಗುಣವಾಗಿ ಮರಣಹೊಂದಿದಾಗ ದೇವತೆಗಳು ಒಂದು ಭಾಗದಿಂದ ತಮ್ಮ ಮೂಲರೂಪಗಳಿಗೂ, ಇನ್ನೊಂದು ಭಾಗದಿಂದ ಜೀವನ ಜೊತೆಯಲ್ಲಿಯೂ ಹೋಗುತ್ತಾರೆ. ಜೀವನು ಪುನಃ ಇನ್ನೊಂದು ದೇಹವನ್ನು ಪಡೆದಾಗ ಮೂಲರೂಪವನ್ನು ಸೇರಿದ ಆ ಅಂಶಗಳೇ ಪುನಃ ಬಂದು ಜೀವನಲ್ಲಿರುವ ತಮ್ಮ ಅಂಶಗಳೊಂದಿಗೆ ಸೇರಿಕೊಳ್ಳುತ್ತವೆ ಎಂದು ತಿಳಿಸಿದ್ದಾರೆ.

ಕರ್ಮೋದಯೇ ಕರ್ಮಫಲಾನುರಾಗಾಃ<br>
ತತ್ರಾನುಯಾಂತಿ ನ ತರಂತಿ ಮೃತ್ಯುಮ್ |<br>
ಸದರ್ಥಯೋಗಾನವಗಮಾತ್ ಸಮಂತಾತ್<br>
ಪ್ರವರ್ತತೇ ಭೋಗಯೋಗೇನ ದೇಹೀ ॥9॥

ಹೀಗೆ ಪ್ರಮಾದರೂಪವಾದ ಮೃತ್ಯುವಿನ ಸಂಬಂಧದಿಂದ ಪುನಃ ಪುನಃ ಜನನ-ಮರಣ ರೂಪವಾದ ಸಂಸಾರದಿಂದ ಮೇಲೆ ಏಳದಿರಲು ವಿಷಯಾನುರಾಗವೇ ಮುಖ್ಯವಾದ ಕಾರಣವೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ. `ಸ್ವರ್ಗಕಾಮೋ ಯಜೇತ' ಮೊದಲಾದ ವೇದವಾಕ್ಯಗಳನ್ನು ನೋಡಿ ಬಹಿರ್ಮುಖರಾಗಿ ಕಾಮ್ಯಕರ್ಮವನ್ನು ಮಾಡುವ ಜೀವರಿಗೆ `ಕರ್ಮೋದಯೇ' ಎಂದರೆ ನಶ್ವರವಾದ ಕರ್ಮಫಲವು ಉಂಟಾಗುತ್ತಿರಲು ಅವರು ಪುನಃ `ಕರ್ಮಫಲಾನುರಾಗಾಃ' ಸ್ರಕ್‌ಚಂದನ ವನಿತಾದಿ ಭೋಗರೂಪವಾದ ಕರ್ಮಫಲದಲ್ಲಿಯೇ ಸ್ನೇಹದಿಂದ ಕೂಡಿದವರಾಗಿರುತ್ತಾರೆ. ಆ ಭೋಗವು ಮುಗಿದರೂ ಪ್ರಬಲವಾದ ಸಂಸ್ಕಾರಕ್ಕೆ ವಶರಾಗಿ ಪುನಃ ಅಂತಹದೇ ಕಾಮ್ಯಕರ್ಮವನ್ನು ಮಾಡಿ ಪುನಃ ಪುನಃ ಪ್ರವೃತ್ತರಾಗುತ್ತಾರೆ. ಆದ್ದರಿಂದ ಸಂಸಾರವನ್ನು ದಾಟುವುದಿಲ್ಲ. ಸಂಸಾರ ಸಮುದ್ರವನ್ನು ದಾಟಿಸುವವನನ್ನೂ ಸೇರುವುದಿಲ್ಲ. ಯದ್ಯಪಿ `ನ ಕರ್ಮಣಾಂ ಅನಾರಂಭಾತ್ ನೈಷ್ಕರ್ಮ್ಯಂ ಪುರುಷೋಽಶ್ನುತೇ' (ಕರ್ಮವನ್ನು ಮಾಡದಿರುವುದರಿಂದ ಯಾವ ಪುರುಷನೂ ಮೋಕ್ಷವನ್ನು ಪಡೆಯುವುದಿಲ್ಲ) `ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' (ಜನಕಾದಿರಾಜನು ಕರ್ಮದಿಂದಲೇ ಪೂರ್ಣಸಿದ್ಧಿಯನ್ನು ಪಡೆದರು) ಇತ್ಯಾದಿ ವಚನಗಳು ಕರ್ಮಕ್ಕೂ ಮೋಕ್ಷಸಾಧನತ್ವವನ್ನು ಹೇಳುತ್ತವೆ. ಆದರೆ ಅದು ಜ್ಞಾನಪೂರ್ವಕವಾಗಿ ಮಾಡಿದ ಕರ್ಮವಿಷಯಕವಾದುದು. ಆದರೆ ಅಜ್ಞಾನಿಗಳಿಗೆ ಆ ಜ್ಞಾನವಿಲ್ಲ. `ತದರ್ಥಯೋಗ ಅನನುಗಮ' ತದರ್ಥ ಎಂದರೆ ಸರ್ವೋತ್ತಮವಾದ ವಸ್ತು ಪರಮಾತ್ಮ. ಅವನ ಯೋಗ ಎಂದರೆ ಚಿಂತನೆ. ಅದರ ಅವಗಮ ಎಂದರೆ ಅನುಸಂಧಾನ. ಭಗವಂತನ ಚಿಂತನೆ ಇಲ್ಲದೆ ಮಾಡಿದ ಪುಣ್ಯಕರ್ಮಗಳೂ ಸಹ ನಶ್ವರವಾದ ಫಲವನ್ನೇ ಕೊಡುತ್ತವೆ. ಈ ವಿಷಯವನ್ನು `ಅನೇವಂ ವಿತ್‌ಪುಣ್ಯಂ ಕರ್ಮ ಕರೋತಿ ತದ್ಧಾಸ್ಯ ಅಂತತಃ ಕ್ಷೀಯತೇ ಏವ' ಎಂಬ ಶ್ರುತಿಯು ಹೇಳುತ್ತದೆ. ಅಂತಹ ಭಗವದನುಸಂಧಾನ ಇಲ್ಲದಿರುವುದರಿಂದ `ದೇಹಿ' ಎಂದರೆ ಜೀವನು, `ಭೋಗಯೋಗೇನ' ಭೋಗದ ಆಸೆಯಿಂದಲೇ, `ಸರ್ವಥಾ ಪ್ರವರ್ತತೇ' ಎಲ್ಲಕಡೆಯಲ್ಲಿಯೂ ಪ್ರವೃತ್ತಿ ಮಾಡುತ್ತಾನೆ. ಯದ್ಯಪಿ ಶ್ರುತಿಯು ಹೇಳಿರುವ ಕರ್ಮಾನುಷ್ಠಾನಕ್ಕೆ ಮೋಕ್ಷಸಾಧನತ್ವವು ಇದೆ. ಆದರೆ ಅಜ್ಞರಿಗೆ ಜ್ಞಾನಪೂರ್ವಕವಾದ ಅನುಷ್ಠಾನವು ಇಲ್ಲದಿರುವುದರಿಂದ ಅದು ಬರುವುದಿಲ್ಲ. ಜ್ಞಾನಪೂರ್ವಕವಾಗಿ ಅನುಷ್ಠಾನ ಮಾಡಿದ ಕರ್ಮವೇ ಶ್ರೇಷ್ಠ ಫಲವನ್ನು ಕೊಡಲು ಸಮರ್ಥವಾಗುವುದೆಂದು `ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ', `ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪುರುಷಃ ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮಸಮಾಚರ' ಮುಂತಾದ ಗೀತಾ ವಾಕ್ಯಗಳಲ್ಲಿ ಫಲಾಪೇಕ್ಷೆ ಇಲ್ಲದೆ ಆಯಾ ಕರ್ಮ ಮತ್ತು ದೇವತಾಂತರ್ಯಾಮಿಯಾಗಿ ಭಗವಂತನನ್ನು ಚಿಂತಿಸಿ `ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂದು ಗೀತೆಯಲ್ಲಿ ಹೇಳಿದ ರೀತಿಯಲ್ಲಿ ಆ ಕರ್ಮಫಲವನ್ನು ಭಗವಂತನಲ್ಲಿ ಸಮರ್ಪಿಸಿ, ಇಂತಹ ಅನುಸಂಧಾನಪೂರ್ವಕವಾಗಿ ಮಾಡಿದ ಕರ್ಮಗಳೇ ಮೋಕ್ಷಸಾಧನವೆಂಬ ನಿರ್ದುಷ್ಟವಾದ ಜ್ಞಾನವಿಲ್ಲದಿರುವುದರಿಂದ ಜೀವರು ಪುನಃ ಪುನಃ ಸಂಸಾರದಲ್ಲಿ ತೊಡಗುತ್ತಾರೆ. ಆದ್ದರಿಂದ ಯಾವಾಗಲೂ ಸಂಸಾರದಿಂದ ಮೇಲೆದ್ದು ಬರುವುದಿಲ್ಲ ಎಂದು ತಾತ್ಪರ್ಯ.

ತದ್ವೈ ಮಹಾಮೋಹನಮಿಂದ್ರಿಯಾಣಾಂ<br>
ಮಿಥ್ಯಾರ್ಥಯೋಗೇಽಸ್ಯ ಗತಿರ್ಹಿ ನಿತ್ಯಾ |<br>
ಮಿಥ್ಯಾರ್ಥಯೋಗಾಭಿಹತಾಂತರಾತ್ಮಾ<br>
ಸ್ಮರನ್ನುಪಾಸ್ತೇ ವಿಷಯಾನ್ ಸಮಂತಾತ್ ॥10॥

ಹಿಂದಿನ ಶ್ಲೋಕದಲ್ಲಿ ಸಂಸಾರಿಜೀವರು ಸಂಸಾರದಿಂದ ಮೇಲೆ ಏಳದಿರುವುದಕ್ಕೆ ಭಗವತ್‌ಸ್ಮರಣೆಯನ್ನು ಉಂಟುಮಾಡದಿರುವ

ವಿಷಯಾಸಕ್ತಿಯೇ ಕಾರಣ, ಬೇರೆ ಯಾವುದೂ ಅಲ್ಲ ಎಂದು ಹೇಳಿದ ವಿಷಯಾಸಕ್ತಿ ಪ್ರಕಾರವನ್ನೇ ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ. ತತ್ ಎಂದರೆ ವಿಷಯಗಳಲ್ಲಿ ರಾಗದಿಂದ ಪ್ರವೃತ್ತಿ ಮಾಡುವುದೇ ಇಂದ್ರಿಯಗಳಿಗೆ ಮಹಾಮೋಹಸಂಪಾದಕವಾದುದು. ಈ ವಿಷಯಗಳಾದರೂ ಮಿಥ್ಯಾ ಎಂದರೆ ವ್ಯರ್ಥವಾದವುಗಳು. `ಯತ್ರ ತ್ರಿಸರ್ಗೋಽಮೃಷಾ' `ಮಿಥ್ಯೈಷವ್ಯವಸಾಯಸ್ತೇ' ಮುಂತಾದ ಪ್ರಯೋಗಗಳಲ್ಲಿ ಮಿಥ್ಯಾ, ಮೃಷಾ ಶಬ್ದಗಳು ವ್ಯರ್ಥ ಎನ್ನುವ ಅರ್ಥಗಳನ್ನು ಹೊಂದಿವೆ. ಆದ್ದರಿಂದಲೇ ಮಿಥ್ಯಾಭೂತವಾದ ಅರ್ಥಗಳು ಎಂದರೆ ವ್ಯರ್ಥವಾದ ಅರ್ಥಗಳನ್ನು ಎಂದರ್ಥ. ಅವುಗಳ ಯೋಗದಿಂದ ಎಂದರೆ ಸಂಬಂಧದಿಂದ ಅಭಿಹತವಾದ ಎಂದರೆ ಸರ್ವತ್ರ ವಿಷಯಾಸಕ್ತಿಯಿಂದ ತುಚ್ಛೀಕೃತವಾದ, ತಿರಸ್ಕೃತವಾದ, ಅಂತರಾತ್ಮ ಅಂತಃಕರಣವುಳ್ಳ ಜೀವನು, ಎಂದರೆ ನಿರರ್ಥಕವಾದ ಸತತಧ್ಯಾನದಿಂದ ಕಲುಷಿತಗೊಂಡ ಜೀವನು ಎಂದು ತಾತ್ಪರ್ಯ. ಅಂತಹ ಜೀವನು ಕಲುಷಿತವಾದ ಮನಸ್ಸಿನಿಂದ ಹಿಂದಿನ ಸಂಸ್ಕಾರಕ್ಕೆ ವಶನಾಗಿ ಮೊದಲು ಅನುಭವಿಸಿದ ವಿಷಯಗಳನ್ನೇ ಮತ್ತೆ ಮತ್ತೆ ಸ್ಮರಣೆ ಮಾಡಿ ಧ್ಯಾನಮಾಡುತ್ತಾ ಸ್ವರ್ಗಾದಿ ಲೋಕಗಳಲ್ಲಿಯೂ ಅದನ್ನೇ ಸೇವಿಸುತ್ತಾನೆ. ಎಂದೂ ಭಗವಂತನನ್ನು ಸ್ಮರಣೆ ಮಾಡುವುದಿಲ್ಲ ಎಂದು ಅಭಿಪ್ರಾಯ.
ಭಾರತ ಶ್ರೀನಿವಾಸಾಚಾರ್ಯರು `ನ ಜಾತು ಕಾಮಃ ಕಾಮಾನಾಂ' ಎಂಬ ಶ್ಲೋಕವನ್ನು ಉದಾಹರಣೆ ಮಾಡಿ ಕಾಮಭೋಗದಿಂದ ಮನಸ್ಸಿನ ಆಸೆಯ ನಿವೃತ್ತಿಯು ಎಂದೂ ಉಂಟಾಗುವುದಿಲ್ಲ ಎಂದು ತಿಳಿಸಿದ್ದಾರೆ.

ಅಭಿಧ್ಯಾ ವೈ ಪ್ರಥಮಂ ಹಂತಿ ಚೈನಂ
ಕಾಮಕ್ರೋಧೌ ಗೃಹ್ಯ ಚೈನಂ ಚ(ತು) ಪಶ್ಚಾತ್ |
ಏತಾನ್ ಬಾಲಾನ್ ಮೃತ್ಯವೇ ಪ್ರಾಪಯಂತಿ
ಧೀರಾಸ್ತು ಧೈರ್ಯೇಣ ತರಂತಿ ಮೃತ್ಯುಮ್ ॥11॥

ಸ್ರಕ್‌ಚಂದನ ವನಿತಾದಿ ವಿಷಯಗಳು ಸುಖಕ್ಕೆ ಕಾರಣವಾದುದರಿಂದ ಅವುಗಳ ನಿರಂತರ ಚಿಂತನೆಯಿಂದ ಪುನಃ ಪುನಃ ಅವುಗಳ ಪ್ರಾಪ್ತಿಯೂ ಮತ್ತು ಅವುಗಳಿಂದ ಸುಖವೂ ಉಂಟಾಗುವುದರಿಂದ ವಿಷಯಾನುಸ್ಮರಣೆಗೆ ದುಃಖಕಾರಣತ್ವವನ್ನು ಏಕೆ ಹೇಳುತ್ತಾರೆ ಎಂಬ ಪ್ರಶ್ನೆಗೆ ಇಲ್ಲಿ ವಿಷಯಗಳು ಅನಿತ್ಯವಾದುದರಿಂದ ಕಾಮದಿಂದ ಕೂಡಿದ ಮನಸ್ಸುಳ್ಳ ಪಾಮರರು ನಿರಂತರವಾಗಿ ಅವುಗಳನ್ನು ಚಿಂತನೆ ಮಾಡುವುದರಿಂದ ಅವು ದೊರೆಯುವುದಿಲ್ಲವಾದ್ದರಿಂದ ಕ್ರೋಧಾದಿಗಳು ಉಂಟಾಗುತ್ತವೆ. ಕಾಮ-ಕ್ರೋಧಗಳ ಸಮುಚ್ಚಯದಿಂದ ಸರ್ವನಾಶಕವಾದ ಮೋಹವೇ ಉಂಟಾಗುತ್ತದೆ ಎಂದು ತಿಳಿದು ವಿವೇಕಿಗಳಾದವರು ವಿಷಯವೈರಾಗ್ಯದಿಂದ ಕೂಡಿ, ಭಗವದಪರೋಕ್ಷ ಜ್ಞಾನವನ್ನು ಪಡೆದು, ಮೃತ್ಯುಶಬ್ದವಾಚ್ಯವಾದ ಸಂಸಾರವನ್ನು ದಾಟುತ್ತಾರೆ ಎಂಬ ಉತ್ತರವನ್ನು ಹೇಳುತ್ತಾರೆ. ಅಭಿದ್ಯಾ= ದುರ್ವಿಷಯಗಳ ನಿರಂತರ ಚಿಂತನೆಯು, ಏನಂ ದೇಹಿನಂ= ಈ ಸಂಸಾರಿ ಜೀವನನ್ನು, ಪ್ರಥಮಂ= ಮೊದಲು, ಹಂತಿ= ಹಿಂಸಿಸುತ್ತದೆ. ಹಂತಿ ಎಂದರೆ ಇಲ್ಲಿ ಕೊಲ್ಲುತ್ತದೆ ಎಂದು ಅರ್ಥವಲ್ಲ. ಆದರೆ `ಚಿಂತಾಯಾಶ್ಚ ಚಿತಾಯಾಶ್ಚ ಬಿಂದುಮಾತ್ರಂ ವಿಶಿಷ್ಯತೇ | ಚಿತಾದಹತಿ ನಿರ್ಜೀವಂ ಚಿಂತಾ ದಹತಿ ಜೀವಿತಂ' (ಚಿಂತಾ ಮತ್ತು ಚಿತಾ ಶಬ್ದಗಳಿಗೆ ಒಂದು ಅನುಸ್ವಾರ ಮಾತ್ರ ವ್ಯತ್ಯಾಸವಿದೆ. ಚಿತೆಯು ನಿರ್ಜೀವವಾದುದನ್ನು ಸುಡುತ್ತದೆ. ಚಿಂತೆಯು ಜೀವಸಹಿತವಾದುದನ್ನು ಸುಡುತ್ತದೆ) ಎಂದು ಹೇಳಿದ ರೀತಿಯಲ್ಲಿ ಪ್ರಾಣನಾಶಕ್ಕೆ ಸಮವಾದ ದುಃಖವನ್ನು ಕೊಡುವ ಚಿಂತೆಯೇ ಇಲ್ಲಿ ಹನನವೆಂದು ಹೇಳಲ್ಪಡುತ್ತದೆ. ಪಶ್ಚಾತ್= ವಿಷಯಾಭಿಜ್ಞಾನದ ಅನಂತರದಲ್ಲಿ, ಕಾಮಕ್ರೋಧೌ= ಕಾಮ-ಕ್ರೋಧಗಳು ಉಂಟಾಗುತ್ತವೆ. ಏಕೆಂದರೆ ಕಾಮಾತ್ ಕ್ರೋಧೋಭಿಜಾಯತೇ (ಕಾಮದಿಂದ ಕ್ರೋಧವು ಉಂಟಾಗುತ್ತದೆ ಎಂದು ನಿಯಮವಿದೆ). ಆ ಕಾಮ-ಕ್ರೋಧಗಳೆರಡೂ ಸೇರಿ, ಏನಂ= ದುರ್ವಿಷಯಗಳ ಚಿಂತನೆಯಿಂದ ಮೃತನಂತಿರುವ ಅದೇ ದೇಹಿಯನ್ನು, ಗೃಹ್ಯ= ಹಿಡಿದುಕೊಂಡು, ಸ್ವಾಧೀನಪಡಿಸಿಕೊಂಡು, ಚ= ಎಂದರೆ ನಾಶವನ್ನೂ ಮಾಡುತ್ತವೆ ಎಂದು ಇಟ್ಟುಕೊಳ್ಳಬೇಕು. ಇಲ್ಲಿಯೂ ನಾಶವೆಂದರೆ ಕ್ರೋಧಾದ್ಭವತಿ ಸಂಮೋಹಃ (ಕ್ರೋಧದಿಂದ ಸಂಮೋಹವು ಉಂಟಾಗುತ್ತದೆ ಎಂಬ ಪ್ರಮಾಣಕ್ಕೆ ಅನುಸಾರವಾಗಿ) ವಿವೇಕಜ್ಞಾನಶೂನ್ಯತೆ ಎಂದು ಅರ್ಥ. ಕಾಮ-ಕ್ರೋಧಗಳು ದೇಹಿಯನ್ನು ವಿವೇಕಜ್ಞಾನಶೂನ್ಯನನ್ನಾಗಿ ಮಾಡುತ್ತವೆ. ಯದ್ಯಪಿ ಕ್ರೋಧಾತ್ ಎಂಬಲ್ಲಿ ಪಂಚಮೀ ವಿಭಕ್ತಿ ಇದೆ. ಆದ್ದರಿಂದ ಕ್ರೋಧವೇ ಸಂಮೋಹಕ್ಕೆ ಕಾರಣವೆಂದು ತೋರುತ್ತದೆ. ಆದರೂ ಕ್ರೋಧ-ಕಾಮಗಳಿಗೆ ಕಾರ್ಯ-ಕಾರಣಭಾವವಿರುವುದರಿಂದ ಮತ್ತು ಕಾರಣವಾದ ಕಾಮವು ಕಾರ್ಯವಾದ ಕ್ರೋಧದಲ್ಲಿ ಹೊಂದಿಕೊಂಡಿರುವುದರಿಂದ ಕಾಮಕ್ರೋಧಗಳೆರಡನ್ನೂ ಒಂದೆಂದು ಭಾವಿಸಿ `ಕ್ರೋಧಾತ್' ಎಂದು ಏಕವಚನವನ್ನು ಪ್ರಯೋಗ ಮಾಡಿದ್ದಾರೆ. ಏತಾನ್= ಕಾಮ-ಕ್ರೋಧಸಂಬಂಧದಿಂದ ಸಂಮೋಹಿತರಾದ ಬಾಲಾನ್= ವಿವೇಕಜ್ಞಾನಶೂನ್ಯರಾದ ದೇಹಿಗಳನ್ನು, ಮೃತ್ಯವೇ ಪ್ರಾಪಯಂತಿ= ಸಂಸಾರಕ್ಕೆ ತಳ್ಳುತ್ತವೆ. ಪ್ರಾಪಯಂತಿ ಎಂಬ ಬಹುವಚನವು ಚಿಂತನೆ, ಕಾಮ ಮತ್ತು ಕ್ರೋಧ ಈ ಮೂರೂ ಸೇರಿ ದೇಹಿಯನ್ನು ಸಂಸಾರದಲ್ಲಿ ಕೆಡವುತ್ತವೆ ಎಂಬ ಅಭಿಪ್ರಾಯವನ್ನು ಸೂಚಿಸುತ್ತದೆ. ಉತ್ತರಾರ್ಧದಲ್ಲಿ ಏತಾನ್ ಎಂದು ದೇಹಿಗಳನ್ನು ಹೇಳುವ ಶಬ್ದಗಳು ಬಹುವಚನಾಂತವಾದ್ದರಿಂದ ಪೂರ್ವಾರ್ಧದಲ್ಲಿ `ಏನಂ' ಎಂದು ಏಕವಚನವು ಜಾತ್ಯೇಕವಚನದ ಅಭಿಪ್ರಾಯದಲ್ಲಿ ಪ್ರಯೋಗಿಸಲ್ಪಟ್ಟಿದೆ. ಹಾಗಾದರೆ ಸಂಸಾರದಿಂದ ಯಾರೂ ಮುಕ್ತರಾಗುವುದಿಲ್ಲ ಎಂಬ ಪ್ರಸಂಗವಿಲ್ಲ. ಏಕೆಂದರೆ ಧೀರಾಃ= ಭಗವದ್ವಿಷಯಕಜ್ಞಾನದಿಂದ ಸಂತೋಷಪಡುವ ಬ್ರಹ್ಮಾದಿ ತೃಣಾಂತರಾದ ಮುಕ್ತಿಯೋಗ್ಯರಾದ ಸಾತ್ವಿಕ ಜೀವರು, ಧೈರ್ಯೇಣ= ನಶ್ವರವಾದ ವಿಷಯದಲ್ಲಿ ವಿರಕ್ತಿಯಿಂದ ಕೂಡಿದ ಸ್ವಬಿಂಬ ವಿಷಯದ ಅಪರೋಕ್ಷಜ್ಞಾನದಿಂದ ಮೃತ್ಯುಂ= ಅಜ್ಞಾನದಶೆಯಲ್ಲಿ ಅಭಿಧ್ಯಾದಿ ಸಂಸರ್ಗದಿಂದ ಉಂಟಾದ ಸಂಸಾರರೂಪವಾದ ಮೃತ್ಯುವನ್ನು ತರಂತಿ= ದಾಟುತ್ತಾರೆ.
ಭಾರತ ಶ್ರೀನಿವಾಸಾಚಾರ್ಯರು ಗೀತೆಯಲ್ಲಿನ `ಧ್ಯಾಯತೋ ವಿಷಯಾನ್ ಪುಂಸಃ' ಎಂಬ ಶ್ಲೋಕವನ್ನು ಉದಾಹರಣೆ ಮಾಡಿ ವಿಷಯಾಭಿಧ್ಯಾನದಿಂದ ಬುದ್ಧಿನಾಶದವರೆಗೆ ನಡೆಯುವ ಪ್ರಕ್ರಿಯೆಯನ್ನು ವಿವರಿಸಿದ್ದಾರೆ.

ಯೋಽಭಿಧ್ಯಾಯನ್ ಪ್ರತ್ಯಭೀಕ್ಷ್ಣಂ ನಿಹನ್ಯಾದ್
ಅನಾದರೇಣಾಪ್ರತಿಬುಧ್ಯಮಾನಃ |
ಸ ವೈ ಮೃತ್ಯುರ್ಮೃತ್ಯುರಿವಾತ್ತಿ ಭೂತಾ-
ನೇವಂ ವಿದ್ವಾನ್ ಯೋ ನಿಹಂತೀಹ ಕಾಮಾನ್ ॥12॥

ಈ ರೀತಿಯಲ್ಲಿ ಈಶ್ವರೇಚ್ಛೆಯಿಂದ ಅನಾದಿಕಾಲದಿಂದ ಬಂದ ಅಜ್ಞಾನರೂಪವಾದ ಲಿಂಗಸಂಬಂಧದಿಂದ ಉಂಟಾದ

ಮಿಥ್ಯಾಜ್ಞಾನರೂಪವಾದ ಪ್ರಮಾದವೆಂಬ ಹೆಸರಿನ ಮೃತ್ಯುಸಂಬಂಧದಿಂದ ಸಂಸಾರಕ್ಕೆ ಬಂದು, ವಿವಿಧ ಸಾಂಸಾರಿಕ ದುಃಖದರ್ಶನದಿಂದ ವಿಷಯವಿರಕ್ತಿಯನ್ನು ಹೊಂದಿದ ಮೋಕ್ಷಾಧಿಕಾರಿಗಳಾದ ಸಾತ್ವಿಕ ಜೀವರಿಗೆ ಈಶ್ವರನ ಅನುಗ್ರಹದಿಂದ ಯಾವುದೋ ಒಂದು ಜನ್ಮದಲ್ಲಿ ಸ್ವೋತ್ತಮರಾದ ಜ್ಞಾನಿಗಳಾದ ಗುರುಗಳ ಸಹವಾಸ ಉಂಟಾಗಿ, ಅದರಿಂದ ತಮ್ಮ ಬಿಂಬಾಪರೋಕ್ಷ ಜ್ಞಾನವನ್ನು ಪಡೆದು, ಅಪರೋಕ್ಷಜ್ಞಾನದ್ವಾರಾ ಮೃತ್ಯು ಶಬ್ದವಾಚ್ಯವಾದ ಸಂಸಾರವನ್ನು ದಾಟುತ್ತಾರೆ ಎಂದು ಹೇಳಿ ಈಗ ರಾಜಸ, ತಾಮಸ ಜೀವರ ಪ್ರವೃತ್ತಿಯನ್ನು ಅಥವಾ ಅಂತಹ ಪ್ರವೃತ್ತಿಯಿಂದ ಉಂಟಾಗುವ ಫಲವನ್ನು ಉಪದೇಶ ಮಾಡುತ್ತಾರೆ. ಯಃ= ಯಾವ ಪುರುಷನು, ಪ್ರತ್ಯಭೀಕ್ಷಂ= ಪ್ರತಿ ಪ್ರತಿ ವಿಷಯದಲ್ಲಿಯೂ ಪುನಃ ಪುನಃ, ಅಭಿದ್ಯಾಯನ್= ಚಿಂತಿಸುವವನಾಗಿ, ಪ್ರತ್ಯಭೀಕ್ಷ್ಣಂ ಎಂಬುದಕ್ಕೆ ಬದಲಾಗಿ ಉತ್ಪತಿಷ್ಣೂನ್ ಎಂಬ ಪಾಠದಲ್ಲಿ ಅನಿತ್ಯ ಸ್ವಭಾವವುಳ್ಳ ವಿಷಯವನ್ನು ಪುನಃ ಪುನಃ ಚಿಂತಿಸುವವನಾಗಿ ಎಂದು ಅರ್ಥ. ಹೀಗೆ ಪೂರ್ವಾನುಭೂತವಾದ ವಿಷಯವನ್ನೇ ಸ್ಮರಿಸುತ್ತಾ, ಅನಾಚಾರೇಣ (ಅನಾದರೇಣ)= ಶ್ರುತಿ-ಸ್ಮೃತಿ ವಿಹಿತವಲ್ಲದ ಕೇವಲ ಸ್ವಾರ್ಥಪರವಾದ, ವಿರುದ್ಧ ಕರ್ಮಾಚರಣೆಯನ್ನು ಮಾಡುವವನಾಗಿ (ಶ್ರುತಿಯಲ್ಲಿ ಹೇಳಿದ ಶ್ರೇಯೋಮಾರ್ಗದಲ್ಲಿ ಆದರವಿಲ್ಲದವನಾಗಿ) ಅಪ್ರತಿಬುದ್ಯಮಾನಃ= ನಾನು ನನ್ನ ಸಲುವಾಗಿ ಕೊಂದ ಈ ಪಶುಗಳು ನರಕಕ್ಕೆ ಹೋದಮೇಲೆ ನನ್ನನ್ನೇ ಕೊಲ್ಲುತ್ತವೆ ಎಂದು ತಿಳಿಯದೇ ಅಥವಾ ಬ್ರಹ್ಮಾರ್ಪಣಂ ಬ್ರಹ್ಮಹವಿ ಎಂಬ ವಾಕ್ಯಕ್ಕೆ ಅನುಸಾರವಾಗಿ ಎಲ್ಲವೂ ಭಗವತ್ಪೂಜೆ ಎಂಬ ಅನುಸಂಧಾನವಿಲ್ಲದೆ, ನಿಹನ್ಯಾತ್= ಈ ಲೋಕದಲ್ಲಿ ಪಶುಗಳನ್ನು ಕೊಲ್ಲುವನೋ, ಸವೈ ಮೃತ್ಯುಃ= ವೃಥಾ ಪಶುಹನನ ಜನ್ಯವಾದ ಪಾಪವೆಂಬ ಮೃತ್ಯುವು, ಮೃತ್ಯುರಿವ ವೈ= ಪ್ರಸಿದ್ಧವಾದ ಮೃತ್ಯುವಿನಂತೆಯೇ ಆ ಪಶುಹನನ ಮಾಡಿ ಮರಣವನ್ನು ಹೊಂದಿ ನರಕಕ್ಕೆ ಹೋದ ಪಾಪಿಯನ್ನು, ಅತ್ತಿ= ಕಾಕ, ಬಕಾದಿ ಪಕ್ಷಿಗಳ ರೂಪದಿಂದ ಅಥವಾ ಪಶುಗಳ ರೂಪದಿಂದ ತಿನ್ನುತ್ತದೆ. `ಪ್ರೇತ್ಯ ಖಾದಂತಿ ತೇ ಚ ತಾನ್' ಎಂದು ಇಲ್ಲಿಯೇ ಈ ವಿಷಯವನ್ನು ಮುಂದೆ ಹೇಳುವವರಿದ್ದಾರೆ. ಯಾವ ಪುರುಷನು ಏವಂ= ಸ್ವಾರ್ಥಕ್ಕಾಗಿ ಪ್ರಾಣಿ ಹಿಂಸೆ ಮಾಡುವವರಿಗೆ ಮಹಾನರ್ಥಪ್ರಾಪ್ತಿಯಾಗುತ್ತದೆ ಎಂದು ತಿಳಿದು, ಇಹ= ಮನುಷ್ಯ ಲೋಕದಲ್ಲಿ, ಭೂತಾನ್= ತನ್ನ ಮನಸ್ಸಿನಲ್ಲಿ ಅನಾದಿ ಸಂಸ್ಕಾರ ವಶದಿಂದ ಪುನಃ ಪುನಃ ಉದ್ಭೂತವಾಗುವ, ಕಾಮಾನ್= ವಿಷಯಗಳನ್ನು, ಹಂತಿ= ವೈರಾಗ್ಯದಿಂದ ತ್ಯಜಿಸುತ್ತಾನೆಯೋ, ಸಃ= ಅವನೇ, ವಿದ್ವಾನ್= ವಿವೇಕಿಯಾದವನು. ಇಲ್ಲಿ ಕಾಮಗಳ ಹನನ ಎಂದರೆ ಅನನುಸ್ಮರಣವನ್ನೇ ಪರಿತ್ಯಾಗ ಎಂದು ತಿಳಿಯಬೇಕು.

ಅಥವಾ ಈ ಶ್ಲೋಕಕ್ಕೆ ಇನ್ನೊಂದು ರೀತಿಯಲ್ಲಿಯೂ ವ್ಯಾಖ್ಯಾನ ಮಾಡಬಹುದು. ಹಿಂದಿನ ಶ್ಲೋಕದ ಕೊನೆಯ ಪಾದದಲ್ಲಿ `ಧೀರಾಸ್ತು ಧೈರ್ಯೇಣ ತರಂತಿ' ಎಂದು ಜ್ಞಾನಿವರ್ಗದ ಲಕ್ಷಣವನ್ನು ಹೇಳಿ, ಈ ಶ್ಲೋಕದಲ್ಲಿ ಜ್ಞಾನಿಗಳ ಪ್ರವೃತ್ತಿಯ ಸ್ವರೂಪವನ್ನು ಉಪದೇಶ ಮಾಡುತ್ತಾರೆ. ಯಃ= ಯಾವ ಜ್ಞಾನಿಯು, ಅಭೀಕ್ಷ್ಣಂ= ನಿರಂತರವಾಗಿ, ಅಭಿದ್ಯಾಯನ್= ವಿಷಯಗಳು ಅನಿತ್ಯ, ಅಶುಚಿ ಮತ್ತು ದುಃಖವನ್ನು ತಂದು ಕೊಡುವಂತಹವು ಎಂದು ಅವುಗಳ ದೋಷವನ್ನು ಚಿಂತಿಸುವವನಾಗಿ, ಉತತಿಷ್ಣುನ್ ಎಂಬ ಪಾಠದಲ್ಲಿ ವಾಸನಾವಶದಿಂದ ತನ್ನ ಮನಸ್ಸಿನಲ್ಲಿ ಪುನಃ ಮೇಲೆದ್ದು ಸ್ಮೃತಿಗೆ ವಿಷಯವಾಗುವಂತಹ ಎಂದು ಅರ್ಥ. ಇಂತಹ ವಿಷಯಗಳನ್ನು, ಅಪ್ರತಿಬುಧ್ಯಮಾನಃ= ವಿರಕ್ತನಾಗಿ ಅವುಗಳ ಕಡೆಗೆ ಗಮನವನ್ನು ಕೊಡದೆ ವಿಷಯಗಳನ್ನು ಚಿಂತಿಸದೆ, ನಿಹನ್ಯಾತ್= ವಿಷಯಗಳ ಪರಿತ್ಯಾಗರೂಪವಾದ ಹನನವನ್ನು ಮಾಡುತ್ತಾನೆಯೋ ಅಂತಹವನು ಎಂದು ಅರ್ಥ. ವಿಷಯವಿರಕ್ತನಾದ ಜ್ಞಾನಿಯು ವಿಷಯ ಹನನ ಸಾಮರ್ಥ್ಯವನ್ನು ಹೊಂದಿರುವುದು `ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ಅರ್ಜುನ' ಇತ್ಯಾದಿ ಗೀತೆಯಲ್ಲಿ ಹೇಳಲ್ಪಟ್ಟಿದೆ. ಅಂತಹ ಜ್ಞಾನಿಯು ಮೂಲಸಹಿತವಾಗಿ ಮೃತ್ಯುವನ್ನು ನಾಶಮಾಡುತ್ತಾನೆ ಎಂಬ ವಿಷಯವನ್ನು ಸರ್ವಜನ ನಾಶಕವಾದ ಮೃತ್ಯುವಿನ ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ. ಸ ವೈ= ವಿಷಯಾಲಂಬುದ್ದಿಯಿಂದ ಕೂಡಿದ ಜ್ಞಾನಿಯೇ, ಮೃತ್ಯುರಿವ= ದೇಹಗಳನ್ನು ಪುನಃ ಏಳದಂತೆ ಮಾಡುವ ಹನನಸಾಮರ್ಥ್ಯವುಳ್ಳ ಪ್ರಸಿದ್ಧ ಮೃತ್ಯುವಿನಂತೆ, ಮೃತ್ಯುಃ= ತನ್ನ ಸಂಸಾರಕ್ಕೆ ಮಾರಕನಾಗಿ, ಭವತಿ= ಆಗುತ್ತಾನೆ ಎಂದು ಇಟ್ಟುಕೊಳ್ಳಬೇಕು. ಯಾವ ಜ್ಞಾನಿಯು ವಾಸನಾವಶದಿಂದ ಮನಸ್ಸಿನಲ್ಲಿ ಮತ್ತೆ ಮತ್ತೆ ಉಂಟಾಗುವ ಕಾಮ್ಯವಾದ ವಿಷಯಗಳನ್ನು ಪೂರ್ವೋಕ್ತ ರೀತಿಯಲ್ಲಿ ಈ ಮನುಷ್ಯ ಶರೀರದಲ್ಲಿ ಸರ್ವಥಾ ಪರಿತ್ಯಾಗ ಮಾಡುತ್ತಾನೆಯೋ ಅವನೇ ವಿದ್ವಾನ್= ಅವನೇ ಜ್ಞಾನಿ. ಎಂದರೆ ವಿಷಯಲಂಪಟನಾಗದಿರುವ ಕಾರಣ ಶಾಸ್ತ್ರಾಧ್ಯಯನವನ್ನು ಮಾಡಿ ಜ್ಞಾನಿಯಾಗುತ್ತಾನೆ ಎಂದು ಅಭಿಪ್ರಾಯ.

ಭಾರತ ಶ್ರೀನಿವಾಸಾಚಾರ್ಯರು ಆಚಾರ್ಯರು ಅನುವ್ಯಾಖ್ಯಾನದಲ್ಲಿರುವ `ವಿಷಯೇಷು ಚ ಸಂಸರ್ಗಾತ್ ಶಾಶ್ವತಸ್ಯ ಚ ಸಂಶಯಾತ್ | ಮನಸಾ ಚಾನ್ಯದಾಕಾಂಕ್ಷಾತ್ ಪರಂನಪ್ರತಿಪದ್ಯತೇ' ಎಂಬ ಶ್ಲೋಕವನ್ನು ಉದಾಹರಿಸಿ ವಿಷಯಗಳ ಸಂಸರ್ಗ, ಶಾಶ್ವತವಾದ ಸಂಶಯ, ಮನಸ್ಸಿನ ಅನ್ಯಾಕಾಂಕ್ಷೆ ಇವುಗಳು ಭಗವಂತನ ಜ್ಞಾನಕ್ಕೆ ಪ್ರತಿಬಂಧಕಗಳು ಎಂದು ಉಪಪಾದನೆ ಮಾಡಿದ್ದಾರೆ.

ಕಾಮಾನುಸಾರೀ ಪುರುಷಃ ಕಾಮಾನನು ವಿನಶ್ಯತಿ |
ಕಾಮಾನ್ ವ್ಯುದಸ್ಯ ಧುನುತೇ ಯತ್ ಕಿಂಚಿತ್ ಪುರುಷೋ ರಜಃ ॥13॥

ಸಂಸಾರಕ್ಕೆ ಬಂದ ಜೀವರಿಗೆ ನಿರಂತರವಾದ ವಿಷಯಸೇವನೆಯೇ ಅನರ್ಥವನ್ನುಂಟು ಮಾಡುವಂತಹುದು. ವಿಷಯಗಳಿಂದ ದೂರವಿರುವುದೇ ದೊಡ್ಡ ಅನರ್ಥವನ್ನು ನಾಶಮಾಡುವಂತಹದು ಎಂಬುದನ್ನು ಇಲ್ಲಿ ಹೇಳುತ್ತಾರೆ.

ಯಾವ ಪುರುಷನು ಕಾಮಾನುಸಾರೀ= ಚಂಚಲವಾದ ಮನಸ್ಸಿನಿಂದ ಚರ್ವಿತ ಚರ್ವಣದಂತಿರುವ ವಿಷಯಭೋಗದಲ್ಲಿಯೇ ಪ್ರವೃತ್ತಿಯನ್ನು ಮಾಡುತ್ತಾನೆಯೋ ಅಂತಹ ಪುರುಷನು ಕಾಮಾನ್= ನಶ್ವರವಾದ ವನಿತಾದಿ ವಿಷಯಗಳನ್ನು ಅನು= ಅನುಸರಿಸಿ ಎಂದರೆ ಅವುಗಳು ನಾಶವನ್ನು ಹೊಂದಿದರೆ ಅದನ್ನು ಅನುಸರಿಸಿ ವಿನಶ್ಯತಿ= ಅನಂತರ ಅವುಗಳ ಚಿಂತನೆಯಿಂದ ತಾನೂ ನಷ್ಟನಾಗುತ್ತಾನೆ. ಪರಾಪರ ತತ್ವಜ್ಞಾನಶೂನ್ಯನಾಗುತ್ತಾನೆ ಎಂದು ಅಭಿಪ್ರಾಯ. ಯಾವ ಪುರುಷನು ಕಾಮಾನ್ ವ್ಯುದಸ್ಯ= ವೈರಾಗ್ಯವನ್ನು ಹೊಂದಿ ವಿಷಯಗಳ ಚಿಂತನೆಯನ್ನು ಮಾಡದೆ ಅವುಗಳನ್ನು ಪರಿತ್ಯಜಿಸಿ ಯತ್‌ಕಿಂಚಿತ್‌ರಜಃ= ತನಗೆ ಪಾಪಜನಕವಾದ ಅಥವಾ ತನ್ನ ಪಾಪಜನ್ಯವಾದ ಅಲ್ಪಪ್ರಮಾಣದ ರಜೋಗುಣವನ್ನು ಧುನುತೇ= ಪೂರ್ಣವಾಗಿ ನಾಶಮಾಡುತ್ತಾನೆ. ಆದ್ದರಿಂದ ವಿಷಯಭೋಗಗಳ ಚಿಂತನೆಯನ್ನು ಮಾಡಬಾರದು ಎಂದು ಅಭಿಪ್ರಾಯ.

ಭಾರತ ಶ್ರೀನಿವಾಸಾಚಾರ್ಯರು ಕಾಮಗಳು ಅನಿತ್ಯವಾದುದರಿಂದ ಅವುಗಳ, ಕಾಲಕ್ರಮದಲ್ಲಿ ನಾಶಹೊಂದಿದ ಮೇಲೆ, ಅವುಗಳನ್ನು ಚಿಂತಿಸುವವನೂ ನಾಶವನ್ನು ಹೊಂದುತ್ತಾನೆ. ಅವುಗಳನ್ನು ಪರಿತ್ಯಾಗ ಮಾಡಿದವನು ತನಗೆ ಉಂಟಾದ ಅಲ್ಪ ರಜಸ್ಸನ್ನು ಎಂದರೆ

ಪಾಪವನ್ನು ವಿನಾಶ ಮಾಡುತ್ತಾನೆ ಎಂದು ವ್ಯಾಖ್ಯಾನ ಮಾಡುತ್ತಾರೆ.
ದೇಹೋಽಪ್ರಕಾಶೋ ಭೂತಾನಾಂ ನರಕೋ ಯಃ ಪ್ರದೃಶ್ಯತೇ |
ಗೃಧ್ಯಂತ ಏವ ಧಾವಂತಿ ಗಚ್ಛಂತಃ ಶ್ವಭ್ರಮುನ್ಮುಖಾಃ ॥14॥
ಸರ್ವಸುಖಕ್ಕೆ ಸಾಧನವಾದ ಶಿರೀಷಪುಷ್ಪಕ್ಕಿಂತಲೂ ಮೃದುವಾದ ವನಿತಾದಿದೇಹ ಶಬ್ದವಾಚ್ಯವಾದ ವಿಷಯಸಮೂಹವು ದುಃಖಾತ್ಮಕವೆಂದು ಅಂಗೀಕರಿಸಿ ಹೇಯವೆಂದು ಹೇಗೆ ಹೇಳುತ್ತೀರಿ ಎಂಬ ಪ್ರಶ್ನೆಗೆ ಉತ್ತರವಾಗಿ `ದೇಹ' ಶಬ್ದದಿಂದ ಉಪಲಕ್ಷಿತವಾದ ಎಲ್ಲ ವಿಷಯವೂ ನರಕಕ್ಕೆ ಸದೃಶವಾದುದೆಂದು ಇಲ್ಲಿ ಉಪಪಾದಿಸುತ್ತಾರೆ. ಭೂತಾನಾಂ= ಪತ್ನಿ-ಪುತ್ರಾದಿಗಳ, ಯೋ ದೇಹಃ= ಯಾವ ದೇಹವರ್ಗವು, ಪ್ರದೃಶ್ಯತೇ= ಸೌಕುಮಾರ್ಯ ಮೊದಲಾದ ಗುಣಗಳಿಂದ ಕೂಡಿ ಸುಖಸಾಧನವೆಂದು ಪ್ರತ್ಯಕ್ಷವಾಗಿ ಕಾಣುತ್ತದೆಯೋ ಅಂತಹ ಆ ದೇಹವರ್ಗವು, ಅಪ್ರಕಾಶೋ ನರಕಃ= ಆಚ್ಛಾದಿತವಾದ ನರಕ, ಏಕೆಂದರೆ ಶ್ಲೇಷ್ಮ, ರಕ್ತ, ಕೀವು, ಮಲ-ಮೂತ್ರಗಳಿಂದ ಅದು ಒಳಗೆ ತುಂಬಿದೆ. ಮನುವು `ಅಸ್ಥಿಸ್ಥೂಣಂ ಸ್ನಾಯುಬದ್ಧಂ ಮಾಂಸ- ಶೋಣಿತಲೇಪನಮ್ | ಚರ್ಮಾವನದ್ಧಂ ದುರ್ಗಂಧಿ ಪೂರ್ಣಂ ಮೂತ್ರಪುರೀಷಯೋಃ' `ಜರಾಶೋಕಸಮಾವಿಷ್ಟಂ ರೋಗಾಯತನಮಾತುರಂ | ರಜಸ್ವಲಮನಿತ್ಯಂ ಚ ಭೂತಾವಾಸಮಿಮಂ ತ್ಯಜೇತ್' (ಮೂಳೆಗಳೆಂಬ ಕಂಬಗಳನ್ನೂ, ಸ್ನಾಯುಗಳೆಂಬ ರಜ್ಜುಗಳನ್ನೂ, ಮಾಂಸ-ಶೋಣಿತವೆಂಬ ಲೇಪನವನ್ನೂ ಹೊಂದಿದ ಮೇಲುಚರ್ಮದ ಹೊದಿಕೆಯನ್ನು ಹೊಂದಿದ ಈ ದೇಹವು ಮೂತ್ರ-ಮಲಗಳಿಂದ ಪೂರಿತವಾಗಿ ದುರ್ಗಂಧವುಳ್ಳದ್ದಾಗಿದೆ. ಜರಾ-ಶೋಕಗಳಿಂದ ಕೂಡಿ ಎಲ್ಲ ರೋಗಗಳಿಗೂ ಆಶ್ರಯವಾಗಿ ದುರ್ಬಲವಾಗಿ ಕಶ್ಮಲದಿಂದ ಕೂಡಿದ ಈ ಅನಿತ್ಯವಾದ ಶರೀರವನ್ನು ತ್ಯಜಿಸಬೇಕು) ಎಂದು ಹೇಳಿದ್ದಾನಷ್ಟೆ? ಆದ್ದರಿಂದ ಮೇಲೆ ಚರ್ಮದ ಹೊದಿಕೆ ಇದ್ದರೂ ಒಳಗೆ ಅಸಹ್ಯಪದಾರ್ಥಗಳಿಂದ ತುಂಬಿರುವ ಈ ದೇಹವು ಆಚ್ಛಾದಿತ ನರಕ ಎಂದು ಹೇಳಲ್ಪಡುತ್ತದೆ. ಗೃಧ್ಯಂತಃ= ಸುಖವನ್ನು ಪಡೆಯಲು ದುಃಖಸಾಧನವಾದ ನರಕಕ್ಕೆ ಸದೃಶವಾದ ವನಿತಾದಿ ದೇಹವನ್ನು ಅಪೇಕ್ಷಿಸುವ ಪ್ರಾಣಿಗಳು, ಧಾವಂತಿ= ಅದರ ಪ್ರಾಪ್ತಿಗಾಗಿ ಸಾಧನವನ್ನು ಅನುಷ್ಠಾನ ಮಾಡಲು ತ್ವರೆಯಿಂದ ಸಂಚರಿಸುತ್ತಾರೆ. ಏವ ಧಾವಂತಿ ಎಂಬಲ್ಲಿರುವ ಏವ ಶಬ್ದವು ನರಕಸದೃಶವಾದ ಮಾತಾ-ಪಿತೃಗಳ ದೇಹದಲ್ಲಿಯೂ ಮತ್ತು ಪ್ರಸಿದ್ಧವಾದ ನರಕದಲ್ಲಿಯೂ ಬೀಳುತ್ತಾರೆ ಎಂದು ಸೂಚಿಸುತ್ತದೆ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ಉನ್ಮುಖಾಃ= ಹೆಜ್ಜೆಯನ್ನು ಇಡಲು ಭೂಮಿಯನ್ನು ನೋಡದೆ ಮುಖವನ್ನೆತ್ತಿ ಆಕಾಶವನ್ನು ನೋಡಿಕೊಂಡು ನಡೆಯುವ ಪುರುಷರು ಹೇಗೆ, ಶ್ವಭ್ರಂ= ಹಳ್ಳದಲ್ಲಿ ಬೀಳುತ್ತಾರೆಯೋ ಅದರಂತೆ ಎಂದು ದೃಷ್ಟಾಂತ.

ಅಮೂಢವೃತ್ತೇಃ ಪುರುಷಸ್ಯೇಹ ಕುರ್ಯಾತ್
ಕಿಂ ವೈ ಮೃತ್ಯುಸ್ತಾರ್ಣ ಇವಾಸ್ಯ ವ್ಯಾಘ್ರಃ |
ಅಮನ್ಯಮಾನಃ ಕ್ಷತ್ರಿಯ ಕಂಚಿದನ್ಯಂ
ನಾಧೀಯೀತ ನಿರ್ನುದಭಿ ವಾಸ್ಯ ವಾಯುಃ ॥15॥

ಹಾಗಾದರೆ ದೇಹ-ಗೇಹಾದಿ ಸಂಬಂಧವು ಯಾವಾಗಲೂ ಇರುವುದರಿಂದ ಅವುಗಳಿಂದ ಉಂಟಾಗುವ ಅನರ್ಥ ಪರಂಪರೆಯು ಯಾವಾಗಲೂ ವಿನಾಶವನ್ನು ಹೊಂದದಿರುವುದರಿಂದ ಯಾರಿಗೂ ಸಂಸಾರದಿಂದ ಉತ್ಥಾನವಾಗಲಾರದು ಎಂಬ ಪ್ರಶೆನಗೆ ಅಭಿಧ್ಯಾದಿಗಳು ಪ್ರಬಲ ಎಂದು ಮೂರುಶ್ಲೋಕಗಳಿಂದ ಅಭಿಧ್ಯೆಯ ಸಾಮರ್ಥ್ಯವನ್ನು ಹೇಳಿ ಪುನಃ ಜ್ಞಾನಶೂನ್ಯರಾದವರಿಗೆ ಕಾಮಾದಿಗಳ ವಶತ್ವವನ್ನು ಪ್ರದರ್ಶಿಸಿ ಈಗ `ಬ್ರಹ್ಮವಿದಾಪ್ನೋತಿ ಪರಂ', `ಜ್ಞಾನೇನ ಅಮೃತೀಭವತಿ', `ಜ್ಞಾನವಾನ್ ಮಾಂ ಪ್ರಪದ್ಯತೇ' ಮುಂತಾದ ಶ್ರುತಿ-ಸ್ಮೃತಿಗಳಿಂದ ಜ್ಞಾನಮಾರ್ಗ ವರ್ತಿಯಾದ ಅಧಿಕಾರಿಜೀವನಿಗೆ ಅಂತಹ ಮೃತ್ಯುವಿನ ಭಯವು ಇಲ್ಲವೆಂದು ದೃಷ್ಟಾಂತ ಮುಖದಿಂದ ಉಪಪಾದನೆ ಮಾಡುತ್ತಾರೆ.
ಅಮೂಢವೃತ್ತೇಃ ಪುರುಷಸ್ಯ= ಮೋಹವನ್ನು ಹೊಂದದಿರುವ ಪುರುಷನಿಗೆ, ಮೃತ್ಯುಃ= ಮೃತ್ಯುವು, ತಾರ್ಣಃ ವ್ಯಾಘ್ರ ಇವ= ತೃಣಮಯವಾದ ವ್ಯಾಘ್ರದಂತೆ, ಕಿಂ ವೈ= ಏನು ಮಾಡಲು ಸಾಧ್ಯ? ಏನೂ ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ. ಕ್ಷತ್ರಿಯ= ಎಲೈ ಕ್ಷತ್ರಿಯನಾದ ಧೃತರಾಷ್ಟ್ರನೇ, ಅಮನ್ಯಮಾನಃ= ಕಾಮವನ್ನು ಬಿಟ್ಟು ಬೇರೆ ಪುರುಷಾರ್ಥವನ್ನು ತಿಳಿಯದಿರುವವನು, ನಾಧೀಯೀತ= ವೇದಾಧ್ಯಯನಾದಿಗಳನ್ನು ಮಾಡುವುದಿಲ್ಲ, ನಿರ್ನುತ್= ಎಲ್ಲವನ್ನೂ ನಿರ್ಮೂಲ ಮಾಡುವ, ಅಭಿವಾಯುಃ= ಸುಂಟರಗಾಳಿಯು, ಅಸ್ಯ= ಅಂತಹ ಪುರುಷನಿಗೆ, ವಾ= ಉಪಮಾ ದೃಷ್ಟಾಂತವಾಗುತ್ತದೆ. `ವಾ ವಿಕಲ್ಪೋಪಮಾನಯೋಃ' (ಎಂದು ಕೋಶ ಇರುವುದರಿಂದ ವಾ ಶಬ್ದಕ್ಕೆ ಉಪಮಾನ ಎಂದು ಅರ್ಥವನ್ನು ಮಾಡಬಹುದು)

ಕ್ರೋಧಾಲ್ಲೋಭಾನ್ಮೋಹಭಯಾಂತರಾತ್ಮಾ
ಸ ವೈ ಮೃತ್ಯುಸ್ತ್ವಚ್ಛರೀರೇ ಯ ಏಷಃ ॥16॥

ಹೀಗೆ ಉಪದೇಶವನ್ನು ಮಾಡುತ್ತಾ ಪರಮ ದಯಾಳುಗಳಾದ ಸನತ್ಸುಜಾತರು ಧೃತರಾಷ್ಟ್ರನಿಗೆ ವೈರಾಗ್ಯವನ್ನು ಉಂಟುಮಾಡಲು ತಾವು ಮಹಾಸಜ್ಜನರಾದ ಪಾಂಡವರ ಪಕ್ಷಪಾತಿಗಳಾದುದರಿಂದ ಅವರಿಗೆ ರಾಜ್ಯವನ್ನು ಕೊಡದಿರುವುದೇ ನಾನು ಹೇಳಿದ ಲೋಭ-ಮೋಹಾತ್ಮಕವಾದ ಭ್ರಮಾದಿರೂಪವಾದ ಮೃತ್ಯು. ಅದು ನಿನ್ನ ಶರೀರದಲ್ಲಿಯೇ ಕಾಣುತ್ತಿದೆ ಎಂದು ಶೃಂಗಿಗ್ರಾಹಕತಯಾ ಉಪದೇಶ ಮಾಡುತ್ತಾರೆ. ಧೃತರಾಷ್ಟ್ರನಿಗೂ ಸಹ ಪಾಂಡವರು ಅರ್ಧರಾಜ್ಯವನ್ನು ಕೇಳುತ್ತಾರೆಂದು ಕೋಪ. ತನ್ನ ಭಾಗ್ಯಹಾನಿ ಉಂಟಾಗುವುದೆಂಬ ಭಯದಿಂದ ಕೊಡಬಾರದು ಎಂಬ ಲೋಭ. ಕ್ರೋಧದಿಂದ ಮೋಹ ಮತ್ತು ಲೋಭದಿಂದ ಭಯ ಇವುಗಳು ಇವೆ. ಕ್ರೋಧದಿಂದ ಉಂಟಾದ ಮೋಹದಿಂದಲೂ, ಲೋಭದಿಂದ ಉಂಟಾದ ಭಯದಿಂದಲೂ ಕೂಡಿದ ಮನಸ್ಸುಳ್ಳ ಈ ನಿನ್ನ ಶರೀರದಲ್ಲಿಯೇ ನಾನು ಈವರೆಗೆ ಹೇಳಿದ ಪ್ರಮಾದರೂಪವಾದ ಮೃತ್ಯುವು ಕಾಣಿಸುತ್ತಿದೆ ಎಂದು ಸನತ್ಸುಜಾತರ ಅಭಿಪ್ರಾಯ.

ಏವಂ ಮೃತ್ಯುಂ ಜಾಯಮಾನಂ ವಿದಿತ್ವಾ
ಜ್ಞಾನೇನ ತಿಷ್ಠನ್ ನ ಬಿಭೇತೀಹ ಮೃತ್ಯೋಃ |
ವಿನಶ್ಯತೇ ವಿಷಯೇ ತಸ್ಯ ಮೃತ್ಯುಃ
ಮೃತ್ಯೋರ್ಯಥಾ ವಿಷಯಂ ಪ್ರಾಪ್ಯ ಮರ್ತ್ಯಃ ॥17॥

ಏವಂ= ಹಿಂದೆ ಹೇಳಿದ ಪ್ರಕಾರದಿಂದ ಉಂಟಾಗುವ, ಲಿಂಗದೇಹ ಸಂಬಂಧದಿಂದ ಪ್ರಾಪ್ತವಾದ, ಅಹಂಕಾರ ರೂಪವಾದ,

ಮಿಥ್ಯಾಜ್ಞಾನರೂಪವಾದ, ಪ್ರಮಾದದಿಂದ ಉಂಟಾದ, ಮೃತ್ಯುಂ= ಸಂಸಾರರೂಪವಾದ ಮೃತ್ಯುವನ್ನು, ವಿದಿತ್ವಾ= ತಿಳಿದು (ಅದರ ಸ್ವರೂಪವನ್ನು ಚೆನ್ನಾಗಿ ತಿಳಿದು ಎಂದು ಅಭಿಪ್ರಾಯ), ಜ್ಞಾನೇನ= ದೇಹ-ಗೇಹಾದಿ ಎಲ್ಲ ವಿಷಯವರ್ಗವೂ ನಶ್ವರವಾದುದು ಎಂಬ ಜ್ಞಾನದ ನಿಮಿತ್ತದಿಂದ, ತಿಷ್ಠನ್= ನಿವೃತ್ತಿಮಾರ್ಗದಲ್ಲಿ ಸ್ಥಿರನಾಗಿ ಇರುವಂತಹ ಅಥವಾ ಭಗವನ್ನಿಷ್ಠೆಯಲ್ಲಿ ಸ್ಥಿರನಾಗಿ ಇರುವಂತಹ ಅಥವಾ ವಿಷ್ಣುಸರ್ವೋತ್ತಮತ್ವ ಜ್ಞಾನದಲ್ಲಿ ಸ್ಥಿರವಾಗಿ ಇರುವಂತಹ, ಜ್ಞಾನಿಯಾದ ಪುರುಷನು, ಮೃತ್ಯೋಃ= ಸಂಸಾರಾಖ್ಯವಾದ ಮೃತ್ಯುವಿಗೆ, ನ ಬಿಭೇತಿ= ಹೆದರುವುದಿಲ್ಲ. ಏಕೆಂದರೆ ಯಥಾ= ಹೇಗೆ, ಮೃತ್ಯೋಃ= ಸರ್ವಮಾರಕನಾದ ಮೃತ್ಯುವಿನ, ವಿಷಯಂ= ಮಾರ್ಗವನ್ನು, ಪ್ರಾಪ್ಯ= ಹೊಂದಿದ, ಮರ್ತ್ಯಃ= ಮರಣಶೀಲನಾದ ದೇಹಿಯು, ವಿನಶ್ಯತೇ= ನಾಶವನ್ನು ಹೊಂದುತ್ತಾನೆಯೋ ಅದರಂತೆ, ತಸ್ಯ ವಿಷಯೇ= ಆ ಜ್ಞಾನಿಯ ವಿಷಯದಲ್ಲಿ, ಮೃತ್ಯುಃ= ಸಂಸಾರರೂಪವಾದ ಮೃತ್ಯುವೇ, ವಿನಶ್ಯತೇ= ನಾಶವನ್ನು ಹೊಂದುತ್ತದೆ.

ಧೃತರಾಷ್ಟ್ರಃ

ಯಾನೇವಾಹುರಿಜ್ಯಯಾ ಸಾಧುಲೋಕಾನ್
ದ್ವಿಜಾತೀನಾಂ ಪುಣ್ಯತಮಾನ್ ಸನಾತನಾನ್ |
ತೇಷಾಮಪಾರ್ಥಾನ್ ಕಥಯಂತೀಹ ವೇದಾ
ಏವಂ ವಿದ್ವಾನೇತಿ ಕಥಂ ನು ಕರ್ಮ ॥18॥

ಹೀಗೆ ಸನತ್ಸುಜಾತರು ಮೃತ್ಯುಶಬ್ದವಾಚ್ಯವಾದ ಸಂಸಾರದ ಭಯವನ್ನು ಪರಿಹರಿಸಿ ಸ್ವರೂಪಾನಂದಾವಿರ್ಭಾವಕ್ಕೆ ಜ್ಞಾನವನ್ನು ಬಿಟ್ಟು ಬೇರೆ ಸಾಧನವಿಲ್ಲ ಎಂದು ಶ್ರುತಿ ಸಮ್ಮತಿಯಿಂದ ಪ್ರತಿಪಾದನೆ ಮಾಡಿದರು. ಅನಂತರ `ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಮುಂತಾದ ವಾಕ್ಯಗಳಿಂದ ಜ್ಯೋತಿಷ್ಟೋಮಾದಿ ಯಜ್ಞಜನ್ಯ ಪುಣ್ಯಕ್ಕೂ ಮಹಾಫಲ ಪ್ರಾಪ್ತಿಯು ತಿಳಿದು ಬರುವುದರಿಂದ, ಜ್ಞಾನವನ್ನು ಬಿಟ್ಟು ಬೇರೆ ಸಾಧನವಿಲ್ಲ ಎಂದು ಅನ್ಯಯೋಗವ್ಯವಚ್ಛೇದವನ್ನು ಮಾಡಿ, ಸಾರ್ವತ್ರಿಕವಾದ ಮಹಾಫಲ ಪ್ರಾಪ್ತಿಗಾಗಿ ಜ್ಞಾನವೇ ಹೇಗೆ ಮುಖ್ಯಕಾರಣವಾಗುತ್ತದೆ ಎಂಬ ಶಂಕೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಧೃತರಾಷ್ಟ್ರನು ಜ್ಞಾನಕ್ಕೇ ಮುಖ್ಯತ್ವ ಪ್ರತಿಪಾದಕವಾದ `ನಾನ್ಯಃಪಂಥಾ ಅಯನಾಯ ವಿದ್ಯತೇ' ಎಂಬ ವಾಕ್ಯಗಳಿಗೂ ಕರ್ಮಕ್ಕೂ ಮುಖ್ಯತ್ವ ಪ್ರತಿಪಾದಕವಾದ `ನ ಕರ್ಮಣಾಮನಾರಂಭಾತ್ ನೈಷ್ಕರ್ಮ್ಯಂ ಪುರುಷೋಽಶ್ನುತೇ, ಸ್ವರ್ಗಕಾಮೋ ಯಜೇತ' ಮುಂತಾದ ವಾಕ್ಯಗಳಿಗೂ ಪರಸ್ಪರ ವಿರೋಧವನ್ನು ಆಶಂಕಿಸಿ ಇಲ್ಲಿ ಪ್ರಶ್ನೆಯನ್ನು ಮಾಡುತ್ತಾನೆ.

ಯಾನ್ ಸನಾತನಾನ್= ಯಾವ ನಿತ್ಯವಾದ, ಪುಣ್ಯತಮಾನ್= ಪರಮ ಪವಿತ್ರವಾದ, ಸಾಧುಲೋಕಾನ್= ವೈಕುಂಠಾದಿ ಲೋಕಗಳನ್ನು, ದ್ವಿಜಾತೀನಾಂ= ಬ್ರಾಹ್ಮಣರಿಗೆ, ಯೇವೇದಾಃ= ಯಾವ ವೇದಗಳು, ಕಥಯಂತಿ= ಹೇಳುತ್ತವೆಯೋ, ಅಥವಾ ಯಾನ್= ಎಂದರೆ ಜ್ಞಾನಾತ್ಮಕವಾದ ಎಂದೂ ಅರ್ಥವನ್ನು ಮಾಡಬಹುದು. ಯೇತಿ ಜ್ಞಾನಂ ಸಮುದ್ದಿಷ್ಟಂ (ಯ ಎಂಬುದು ಜ್ಞಾನವನ್ನು ಹೇಳುತ್ತದೆ) ಎಂಬ ವಚನವಿದೆ. ಅಂತಹ ವೇದಗಳು, ತೇಷಾಂ= ವೇದರಹಿತ ಯಜ್ಞಾನುಷ್ಠಾನದಿಂದ ಪ್ರಾಪ್ತವಾದ ಆ ಲೋಕಗಳನ್ನೇ, ಅಪಾರ್ಥಾನ್= ಮೋಕ್ಷರೂಪವಾದ ಪ್ರಯೋಜನರಹಿತವಾಗಿ, ಆಹುಃ= ಹೇಳುತ್ತವೆ. ಈ ಅಜ್ಞಾನಿಗಳಿಂದ ಪ್ರಾಪ್ತವಾದ ಧರ್ಮವು ಮೋಕ್ಷಕ್ಕೆ ಉಪಯೋಗಿಯಲ್ಲ ಎಂದು ಹೇಳುತ್ತವೆ ಎಂದು ತಾತ್ಪರ್ಯ. ಹಾಗಾದರೆ ವೇದವಾಕ್ಯಗಳಿಗೇ ಪರಸ್ಪರ ವಿರೋಧವು ಬರುವುದರಿಂದ ಈ ರೀತಿಯಲ್ಲಿ ಕರ್ಮದಿಂದ ಪಡೆಯುವ ಲೋಕಗಳು ಅನಿತ್ಯವೆಂದು ತಿಳಿಯುವ ಜ್ಞಾನಿಯು ಪುನಃ, ಕರ್ಮ ಕಥಂ ನು ಏತಿ= ವೇದರಹಿತವಾದ ಯಾಗಾದಿ ಕರ್ಮಗಳನ್ನು ಹೇಗೆ ಅನುಷ್ಠಾನ ಮಾಡುತ್ತಾನೆ? ವೇದರಹಿತವಾದ ಯಾಗಾದಿ ಕರ್ಮಗಳು ವ್ಯರ್ಥವಾದರೆ ಜ್ಞಾನಿಗಳು ಆ ಕರ್ಮಗಳನ್ನು ಏಕೆ ಅನುಷ್ಠಾನ ಮಾಡುತ್ತಾರೆ ಎಂದು ಪ್ರಶ್ನೆಯ ಅಭಿಪ್ರಾಯ.

ಸನತ್ಸುಜಾತಃ

ಏವಂ ವಿದ್ವಾನ್ ಪ್ರತಿಯಾತಿ ತತ್ರ
ತಥಾಽರ್ಥಜಾತಂ ಚ ವದಂತಿ ವೇದಾಃ |
ಸ ನೇಹ ಆಯಾತಿ ಪರಂ ಪರಾತ್ಮಾ
ಪ್ರಯಾತಿ ಮಾರ್ಗೇಣ ನಿಹಂತಿ ಮಾರ್ಗಾನ್ ॥19॥

ಹೀಗೆ ಧೃತರಾಷ್ಟ್ರನಿಂದ ಕೇಳಲ್ಪಟ್ಟ ಸನತ್ಸುಜಾತರು `ಜ್ಞಾನೇನ ಅಮೃತೀ ಭವತಿ' (ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆ) ಮೊದಲಾದ ವಾಕ್ಯಗಳಿರುವುದರಿಂದ ಮಹಾಫಲರೂಪವಾದ ಮೋಕ್ಷಫಲ ಪ್ರಾಪ್ತಿಗಾಗಿ ಭಗವಜ್ಞಾನವೇ ಮುಖ್ಯಸಾಧನ. ಆದರೂ `ಕರ್ಮಣಾ ಜ್ಞಾನಮಾತನೋತಿ' (ಕರ್ಮದಿಂದ ಜ್ಞಾನವನ್ನು ಸಂಪಾದನೆ ಮಾಡುತ್ತಾನೆ) ಮುಂತಾದ ವಾಕ್ಯಗಳಿಂದ ಸ್ವಯೋಗ್ಯ ಜ್ಞಾನಪ್ರಾಪ್ತಿಗಾಗಿ `ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪುರುಷಃ' ಎಂದು ಹಿಂದೆ ಹೇಳಿದ ರೀತಿಯಲ್ಲಿ ವಿಷ್ಣು ಅನುಸಂಧಾನ ಪೂರ್ವಕವಾಗಿ ಮಾಡಿದ ಕರ್ಮವೂ ಸಹ ಜ್ಞಾನಾಭಿವ್ಯಕ್ತಿ ದ್ವಾರಾ ಪರಮಪುರುಷಾರ್ಥ ಸಾಧನವಾಗುವುದಾದರೂ ಬಹಿರ್ಮುಖರಾದ ಜೀವರಿಗೆ ಮಾತ್ರ ಪರಸ್ಪರ ವಿರುದ್ಧವಾಗಿ ಕಾಣುವ ಈ ವೇದವಾಕ್ಯಗಳು ಜ್ಞಾನಿಗಳ ದೃಷ್ಟಿಯಲ್ಲಿ `ಸರ್ವೇ ವೇದಾ ಯತ್ಪದಮಾಮನಂತಿ' (ಎಲ್ಲ ವೇದಗಳೂ ಯಾವ ಅವನ ಸ್ವರೂಪವನ್ನೇ ತಿಳಿಸುತ್ತವೆಯೋ) ಮುಂತಾದ ವಾಕ್ಯಗಳು ಹೇಳುವ ರೀತಿಯಲ್ಲಿ ಜ್ಞಾನಪೂರ್ವಕವಾಗಿ ಆಚರಿಸುವ ಕರ್ಮಾನುಷ್ಠಾನಕ್ಕೆ ಅಂತಹ ಫಲವಿರುವುದರಿಂದ ಜ್ಞಾನಿಗಳ ದೃಷ್ಟಿಯಲ್ಲಿ ಇಂತಹ ವಾಕ್ಯಗಳಿಗೆ ವಿರೋಧವಿಲ್ಲ ಎಂದು ಹೇಳುತ್ತಾ ಧೃತರಾಷ್ಟ್ರನ ಶಂಕೆಯನ್ನು ಪರಿಹರಿಸುತ್ತಾರೆ.

ಏವಂ ವಿದ್ವಾನ್= ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ (ಪುಣ್ಯವು ನಾಶವಾದ ಮೇಲೆ ಮರ್ತ್ಯಲೋಕಕ್ಕೆ ಬರುತ್ತಾರೆ) ಇತ್ಯಾದಿ ಪ್ರಮಾಣಗಳಲ್ಲಿ ಹೇಳಿದ ರೀತಿಯಲ್ಲಿ ಕಾಮ್ಯಕರ್ಮದಿಂದ ಲಭ್ಯವಾದ ಸ್ವರ್ಗಾದಿಗಳು ಅನಿತ್ಯವಾದುದರಿಂದ ಅದು ಪುರುಷಾರ್ಥವಲ್ಲ ಎಂದು ತಿಳಿದ ಜ್ಞಾನಿಯು, ತತ್ರ= ಜ್ಞಾನಪೂರ್ವಕವಾಗಿ ಆಚರಿಸಲ್ಪಡುವ ಕರ್ಮಮಾರ್ಗದಲ್ಲಿ, ಪ್ರತಿಯಾತಿ= ಭಗವಜ್ಞಾನಪ್ರಾಪ್ತಿಗಾಗಿ ವಿಷ್ಣ್ವರ್ಪಣಬುದ್ಧಿಯಿಂದ ಪ್ರವೃತ್ತನಾಗುತ್ತಾನೆ. ತಥಾ= ಹೀಗೆ ಅನುಸಂಧಾನ ಪೂರ್ವಕವಾಗಿ ಜ್ಞಾನಿಯು ಕರ್ಮಕಲಾಪವನ್ನು ಮಾಡುತ್ತಿರಲು, ವೇದಾಃ= `ಅಪಾಮಸೋಮಂ ಅಮೃತಾ ಅಭೂಮ' (ಸೋಮಪಾನವನ್ನು ಮಾಡುತ್ತೇವೆ, ಮುಕ್ತರಾಗುತ್ತೇವೆ) ಇತ್ಯಾದಿ ವಾಕ್ಯಗಳು, ಅರ್ಥಜಾತಂ= ಧರ್ಮಾದಿಯಾಗಿ ಮೋಕ್ಷ ಪರ್ಯಂತವಾದ ಪುರುಷಾರ್ಥಸಮೂಹವನ್ನು, ವದಂತಿ= ಹೇಳುತ್ತವೆ. ಸಃ=

ಸರ್ವ ಪುರುಷಾರ್ಥಭಾಜನನಾದ, ಜ್ಞಾನಪೂರ್ವಕವಾಗಿ ಕರ್ಮಾನುಷ್ಠಾನವನ್ನು ಮಾಡುವ ಪುರುಷನು, ಇಹ= ಸಂಸಾರ ಮಾರ್ಗದಲ್ಲಿ ಅಥವಾ ಮೃತ್ಯುಲೋಕದಲ್ಲಿ, ನಾಯಾತಿ= ಪುನಃ ಬರುವುದಿಲ್ಲ. ಹಾಗಾದರೆ ಎಲ್ಲಿ ಹೋಗುತ್ತಾನೆ ಎಂದು ಕೇಳಿದರೆ ಪರಾತ್ಮಾ= ಪರೇ- ಶ್ರೇಷ್ಠನಾದ ಭಗವಂತನಲ್ಲಿ, ಆತ್ಮಾ- ಮನಸ್ಸನ್ನು ಹೊಂದಿದ ಆ ಜ್ಞಾನಿಯು, ಪರಂ= ಪೃಪಾಲನ ಪೂರಣಯೋಃ ಎಂಬ ಧಾತು ಇರುವುದರಿಂದ ಸರ್ವಜನ ಪಾಲನಾದಿ ಕರ್ತೃವಾದ ಶ್ರೀಮನ್ನಾರಾಯಣನನ್ನು, ಮಾರ್ಗೇಣ= ಅರ್ಚಿರಾದಿ ಮಾರ್ಗಗಳಿಂದ, ಪ್ರಯಾತಿ= ಹೊಂದುತ್ತಾನೆ ಅಥವಾ ಪರಂ= ವೈಕುಂಠಾದಿ ಸ್ಥಾನವನ್ನು, ಪ್ರಯಾತಿ= ಹೊಂದುತ್ತಾನೆ. ಮಾರ್ಗಾನ್= ಜನರಿಂದ ಅನ್ವೇಷಿಸಲ್ಪಡುವ ವಿಷಯಮಾರ್ಗಗಳನ್ನು, ನಿಹಂತಿ= ನಾಶಗೊಳಿಸುತ್ತಾನೆ, ಪರಿತ್ಯಾಗ ಮಾಡುತ್ತಾನೆ ಎಂದು ಅರ್ಥ.
ಧೃತರಾಷ್ಟ್ರಃ
ಕೋಽಸೌ ನಿಯುಂಕ್ತೇ ತಮಜಂ ಪುರಾಣಂ
ಸ ಚೇದಿದಂ ಸರ್ವಮನುಕ್ರಮೇತ |
ಕಿಂ ವಾಽಸ್ಯ ಕಾರ್ಯಮಥವಾ ಸುಖಂ ಚ
ತನ್ಮೇ ವಿದ್ವನ್ ಬ್ರೂಹಿ ಸರ್ವಂ ಯಥಾವತ್ ॥20॥
ಹೀಗೆ ಸನತ್ಸುಜಾತರ ಉಪದೇಶದಿಂದ ಎಲ್ಲ ವೇದವಾಕ್ಯಗಳೂ ಭಗವಂತನನ್ನೇ ಹೇಳುತ್ತವೆ ಎಂಬ ಜ್ಞಾನವನ್ನು ಪಡೆದ ಧೃತರಾಷ್ಟ್ರನು ಹಿಂದಿನ ಶ್ಲೋಕದಲ್ಲಿ `ಪರಂ ಪ್ರಯಾತಿ' ಎಂದು ಹೇಳಿದ ಪರವಸ್ತು ಸ್ವರೂಪವನ್ನು ಕೇಳಲು ಅಪೇಕ್ಷಿಸಿ ಪ್ರಶ್ನೆ ಮಾಡುತ್ತಾನೆ.
ವಿದ್ವನ್= ಎಲೈ ಸರ್ವಜ್ಞರಾದ ಸನತ್ಸುಜಾತರೇ, ಅಜಂ= ಜನನರಹಿತನಾದ, ಪುರಾಣಂ= ಅನಾದಿಕಾಲದಿಂದಲೂ ಇರುವ, ಜೀವಂ= ಜೀವನನ್ನು, ಯಃ= ಯಾವ ಪರಮಾತ್ಮನು, ನಿಯುಂಕ್ತೇ= ಪ್ರೇರಣೆ ಮಾಡುತ್ತಾನೆಯೋ, ಅಸೌ= ಅಂತಹ ಪುರುಷನು, ಕಃ= ಯಾವನಾಗುತ್ತಾನೆ, ಎಂತಹ ಲಕ್ಷಣ ಉಳ್ಳವನಾಗುತ್ತಾನೆ ಎಂದು ಅಭಿಪ್ರಾಯ. ಸಃ= ಜೀವನಿಯಾಮಕನಾದ ಆ ವಿಷ್ಣುವು, ಇದಂ ಸರ್ವಂ= ಈ ಜಗತ್ತೆಲ್ಲವನ್ನೂ, ಅನುಕ್ರಮೇತ= ಸೃಷ್ಟ್ಯಾದಿ ಕರ್ಮದಿಂದ ಪ್ರವರ್ತಿಸುವವನಾದರೆ, ಅಸ್ಯ= ಆ ವಿಷ್ಣುವಿಗೆ, ಕಿಂ ಕಾರ್ಯಂ= ಅದರಿಂದ ಸಾಧ್ಯವಾದ ಪ್ರಯೋಜನವು ಏನು? ವಿಷ್ಣುವು ಯಾವ ಪ್ರಯೋಜನವನ್ನು ಉದ್ದೇಶಿಸಿ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಾನೆ ಎಂದು ಪ್ರಶ್ನೆಯ ಅಭಿಪ್ರಾಯ ಅಥವಾ ಕಿಂ ಸುಖಂ= ಅಥವಾ ಸೃಷ್ಟ್ಯಾದಿ ವ್ಯಾಪಾರಗಳಿಂದ ಅವನಿಗೆ ಉಂಟಾಗುವ ಸುಖವಾದರೂ ಏನು? ಯಾವ ಪ್ರಯೋಜನವೂ ಇಲ್ಲದೆ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂದು ಅಂಗೀಕರಿಸಿದರೆ, `ಪ್ರಯೋಜನಮನುದ್ದಿಶ್ಯ ನಮಂದೋಽಪಿ ಪ್ರವರ್ತತೇ' (ಪ್ರಯೋಜನದ ಉದ್ದೇಶವಿಲ್ಲದೆ ಮೂರ್ಖನೂ ಪ್ರವೃತ್ತನಾಗುವುದಿಲ್ಲ) ಎಂಬ ಮಾತಿರುವುದರಿಂದ ಪ್ರಯೋಜನವಿರುವಂತೆ ತೋರುತ್ತದೆ. ಅದೆಲ್ಲವನ್ನೂ ಯಥಾವತ್= ಯಥಾರ್ಥವಾಗಿ, ಬ್ರೂಹಿ= ನನಗೆ ಹೇಳಿ (ಎಂದು ಧೃತರಾಷ್ಟ್ರನು ಪ್ರಶ್ನೆ ಮಾಡುತ್ತಾನೆ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಸನತ್ಸುಜಾತಪರ್ವಣಿ ಪ್ರಥಮೋಽಧ್ಯಾಯಃ ॥
॥ ಇತಿ ಉದ್ಯೋಗಪರ್ವಣಿ ಸನತ್ಸುಜಾತದುರ್ಬೋಧಾರ್ಥಪ್ರಕಾಶಿಕಾಯಾಂ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ಮೂರನೆಯ ಅಧ್ಯಾಯ
ಸನತ್ಸುಜಾತಃ
ಅಯಂ ಮಹಾನತ್ರ ಬಿಭೇದ ಯೋಗೈಃ
ಹ್ಯನಾದಿಯೋಗೇನ ಭವಂತಿ ನಿತ್ಯಾಃ |
ತಥಾಽಸ್ಯ ನಾಧಿಕ್ಯಮುಪೈತಿ ಕಿಂಚಿದ್
ಅನಾದಿಯೋಗೇನ ಭವಂತಿ ಪುಂಸಃ ॥1॥
ಈ ರೀತಿಯಲ್ಲಿ ಧೃತರಾಷ್ಟ್ರನಿಂದ ಪ್ರಶ್ನೆ ಮಾಡಲ್ಪಟ್ಟ ಸನತ್ಸುಜಾತರು `ದೇವಸ್ಯೈಷ ಸ್ವಭಾವೋಽಯಮ್ ಆಪ್ತಕಾಮಸ್ಯ ಕಾ ಸ್ಪೃಹಾ', `ನ ಪ್ರಯೋಜನವತ್ತ್ವಾತ್', `ಲೋಕವತ್ತು ಲೀಲಾಕೈವಲ್ಯಮ್', `ಬಾಲಃ ಕ್ರೀಡನಕೈರಿವ' ಇವೇ ಮೊದಲಾದ ಶ್ರುತಿ-ಸೂತ್ರ-ಸ್ಮೃತಿಗಳ ಪ್ರಮಾಣದಿಂದ ಅನಾದಿಕಾಲದಿಂದಲೂ ಸಿದ್ಧವಾದ ಸಕಲ ಕಾಮಗಳುಳ್ಳ ವಿಷ್ಣುವಿಗೆ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಂದ ತನಗೆ ಆಗಬೇಕಾದ ಪ್ರಯೋಜನವಿಲ್ಲದಿದ್ದರೂ ಅನಾದಿಸಿದ್ಧರಾದ, ಆದಿಮಧ್ಯಾಂತಶೂನ್ಯರಾದ, ಅಸ್ವತಂತ್ರರಾದ, ಅನಂತರಾದ, ಅನೇಕ ವಿಧವಾದ ಭೇದಗಳಿಂದ ಕೂಡಿದ ಸಾತ್ವಿಕಾದಿ ಜೀವರಿಗೆ ಅವರ ಸ್ವರೂಪದಿಂದ ಅಭಿನ್ನವಾದ, ಅನಾದಿಕಾಲದಿಂದಲೂ ಬಂದಿರುವ ಅವರ ಯೋಗ್ಯತೆಯನ್ನು ಅಭಿವ್ಯಕ್ತವನ್ನಾಗಿ ಮಾಡಿ, ಶುಭಾಶುಭ ಫಲಗಳನ್ನು ಕೊಡುವುದರಿಂದ ಸರ್ವೋಪಕಾರಕನಾದ ಕಾರಣ ವಿಷ್ಣುವಿಗೆ ಜಗಜ್ಜನ್ಮಾದಿಕರ್ತೃತ್ವವು ಉಪಪನ್ನವಾಗುತ್ತದೆ ಎಂದು ಉಪದೇಶ ಮಾಡುತ್ತಾ ಧೃತರಾಷ್ಟ್ರನ ಶಂಕೆಯನ್ನು ಪರಿಹರಿಸುತ್ತಾರೆ.
ಅತ್ರ= ಈ ಜಗತ್ತಿನಲ್ಲಿ, ಮಹಾನ್= `ಮಹ ಪೂಜಾಯಾಮ್' ಎಂಬ ಧಾತುವಿರುವುದರಿಂದ ಸರ್ವಪೂಜ್ಯನಾದ, ಅಯಂ= ಈ ಪರಮಾತ್ಮನು, ಯೋಗೈಃ= `ಯೋಗಃ ಸನ್ನಹನೋಪಾಯಃ' ಎಂದು ಅಭಿಧಾನವಿರುವುದರಿಂದ ತನ್ನ ಲೀಲಾರೂಪವಾದ ಉಪಾಯಗಳಿಂದ, ಜೀವರನ್ನು ಎಂದು ಅಧ್ಯಾಹಾರ ಮಾಡಬೇಕು, ಬಿಭೇದ= ದೇವಾದಿಭೇದ ವಿಶಿಷ್ಟರನ್ನಾಗಿ ಸೃಷ್ಟಿ ಮಾಡಿದನು.
ಅನಾದಿನಿತ್ಯರಾದ ಜೀವರಿಗೆ ಈಶ್ವರನಿಂದಲಾದರೂ ಹೇಗೆ ಉತ್ಪತ್ತಿಯು ಉಂಟಾಗುತ್ತದೆ ಎಂಬ ಶಂಕೆಗೆ `ಯಾವಲ್ಲಿಂಗಾನ್ವಿತೋ ಹ್ಯಾತ್ಮಾ ತಾವತ್ ಕರ್ಮನಿಬಂಧನಮ್' (ಜೀವನು ಲಿಂಗದೇಹದಿಂದ ಕೂಡಿರುವವರೆಗೆ ಅವನ ಜೊತೆಯಲ್ಲಿ ಕರ್ಮಗಳು ಮತ್ತು ಆ ಕರ್ಮ ಸಂಬಂಧದಿಂದ ಬಂದ ದೇಹವೂ ಇರುತ್ತದೆ), `ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ' (ಜೀವನು ನಿತ್ಯನಾದವನು ಆದರೆ ಅವನ

ಶರೀರಧಾತುವಾದ ರಕ್ತ-ಮಾಂಸಾದಿಗಳು ಅನಿತ್ಯವಾದವು) ಇತ್ಯಾದಿ ಪ್ರಮಾಣಗಳಲ್ಲಿ ಹೇಳಿದ ರೀತಿಯಲ್ಲಿ ಜೀವರು ಸ್ವರೂಪತಃ ನಿತ್ಯರಾದರೂ ಅನಾದಿಸಿದ್ಧವಾದ ಲಿಂಗದೇಹದ ಸಂಬಂಧದಿಂದ ಮಧ್ಯೆ ಉಂಟಾಗುವ ಜನನಾದಿ ಧರ್ಮವಿಶಿಷ್ಟವಾದ ಸ್ಥೂಲದೇಹಗಳು ಭಗವಂತನಿಂದ ಸೃಷ್ಟಿಸಲ್ಪಡುತ್ತವೆ ಎಂದು `ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವುದರಿಂದ ದೇಹವಿಶಿಷ್ಟರಾದ ಜೀವರ ಉತ್ಪತ್ತಿಯು ಉಪಪನ್ನವಾಗುತ್ತದೆ ಎಂದು ಹೇಳಿ, ಧೃತರಾಷ್ಟ್ರನ ಶಂಕೆಯನ್ನು ಪರಿಹರಿಸುತ್ತಾರೆ. ಅನಾದಿಯೋಗೇನ= ಅನಾದಿಕಾಲದಿಂದ ಪ್ರಾಪ್ತವಾದ ಲಿಂಗದೇಹ ಸಂಬಂಧ ಎಂಬ ಕಾರಣದಿಂದಾಗಿ, ನಿತ್ಯಃ= ಸ್ವರೂಪವಿವಕ್ಷೆಯಿಂದ ಜೀವರು ನಿತ್ಯರಾದರೂ, ಭವಂತಿ= ಈಶ್ವರನಿಂದಲೇ ಸೃಷ್ಟಿಸಲ್ಪಡುತ್ತಾರೆ. ಹಾಗಾದರೆ ಇಂತಹ ಅನಂತ ಜೀವರ ಮಧ್ಯದಲ್ಲಿ ಈಶ್ವರನಿಗೂ ಮತ್ತು ಜೀವರಿಗೂ ಚೇತನತ್ವ ಸಾಮ್ಯವಿರುವುದರಿಂದ ಯಾವನಾದರೂ ಒಬ್ಬ ಜೀವನು ವಿಷ್ಣುವಿನ ಸಾಮ್ಯಾಧಿಕ್ಯವನ್ನು ಪಡೆಯುತ್ತಾನೆಯೋ ಎಂಬ ಶಂಕೆಗೆ `ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ' (ವಿಷ್ಣುವೇ ದೇವನೇ ಹಿಂದೆ ಹುಟ್ಟಿದವನು, ಈಗ ಹುಟ್ಟಿರುವವನು ಮತ್ತು ಮುಂದೆ ಹುಟ್ಟುವವನು ಯಾವನೂ ನಿನ್ನ ಮಹಿಮೆಯ ಅಂತವನ್ನು ಹೊಂದಲಾರ), `ಸಾಮ್ಯಂ ನ ಚಾಸ್ಯ ಪರಮೇಣ ಚ ಕೇನ ಚಾಽಪ್ಯಮ್' (ಯಾವ ಜೀವನೂ ಸತ್ತಮನಾದ ಪರಮಾತ್ಮನೂ ಸಾಮ್ಯವನ್ನು ಹೊಂದುವುದಿಲ್ಲ), `ನ ವಿಷ್ಣೋಃ ಸದೃಶಃ ಕಶ್ಚಿತ್ ಭೂತೋ ವಾ ಭವಿತಾಽಪಿ ವಾ' (ಹಿಂದೆ ಹುಟ್ಟಿದ ಅಥವಾ ಮುಂದೆ ಹುಟ್ಟುವ ಯಾವನೂ ವಿಷ್ಣುವಿಗೆ ಸದೃಶನಾಗುವುದಿಲ್ಲ) ಇತ್ಯಾದಿ ಅನೇಕ ಶ್ರುತಿ-ಸ್ಮೃತಿಗಳ ಬಲದಿಂದ ಯಾವ ಜೀವನೂ ವಿಷ್ಣುವಿನ ಸಾಮ್ಯವನ್ನಾಗಲೀ, ಆಧಿಕ್ಯವನ್ನಾಗಲೀ ಪಡೆಯುವುದಿಲ್ಲ ಎಂದು ಹೇಳುತ್ತಾರೆ. ಮೂರನೆಯ ಪಾದದಲ್ಲಿರುವ ತಥಾ ಎಂಬುದು ಒಂದು ಅವ್ಯಯ. ಅವ್ಯಯಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ತಥಾಶಬ್ದಬಲದಿಂದಾಗಿ ಸಾಮ್ಯ ಎಂದು ಅನುಸಂಧಾನ ಮಾಡಲ್ಪಡುತ್ತದೆ. ತಥಾ ಎಂದರೆ ಆದರೂ ಎಂದು ಇನ್ನೊಂದು ಅರ್ಥ. ಈಗ ತಥಾ= ಜೀವೇಶ್ವರರು ಇಬ್ಬರೂ ಚೇತನತ್ವ ಸಾಮ್ಯವನ್ನು ಹೊಂದಿದ್ದರೂ, ಅಸ್ಯ= ಈ ವಿಷ್ಣುವಿನ, ಕಿಂಚಿತ್= ಸ್ವಲ್ಪವಾದರೂ, ಆಧಿಕ್ಯಂ= ಆಧಿಕ್ಯವನ್ನಾಗಲೀ, ಅಥವಾ ತಥಾ ಶಬ್ದ ಸೂಚಕವಾದ ಸಾಮ್ಯವನ್ನಾಗಲೀ, ನೋಪೈತಿ= ಪಡೆಯುವುದಿಲ್ಲ, ಈಶ್ವರನಿಗೆ ಸಮಾಧಿಕರು ಇಲ್ಲದಿರುವುದರಿಂದ ಅವನು ಸರ್ವೋತ್ತಮನಾಗಲಿ, ಆದರೆ ಅವನಿಗೆ ಸರ್ವಜೀವನಿಯಾಮಕತ್ವವನ್ನು ಏಕೆ ಒಪ್ಪಬೇಕು ಎಂಬ ಪ್ರಶ್ನೆಗೆ `ರೂಪಂ ರೂಪಂ ಪ್ರತಿರೂಪೋ ಬಭೂವ' (ಜೀವನ ಒಂದೊಂದು ರೂಪಕ್ಕೂ ಪರಮಾತ್ಮನು ಬಿಂಬನಾಗಿದ್ದಾನೆ, ಪರಮಾತ್ಮನ ಒಂದೊಂದು ರೂಪಕ್ಕೆ ಒಬ್ಬೊಬ್ಬ ಜೀವನು ಪ್ರತಿಬಿಂಬನಾಗಿದ್ದಾನೆ), `ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ' (ಜೀವೇಶ್ವರರೆಂಬ ಎರಡು ಹಕ್ಕಿಗಳು ದೇಹವೆಂಬ ಒಂದೇ ವೃಕ್ಷದಲ್ಲಿ ಸ್ನೇಹಿತರಾಗಿ ಜೊತೆಗೂಡಿ ಒಬ್ಬೊರನ್ನೊಬ್ಬರು ಆಲಿಂಗಿಸಿಕೊಂಡಿದ್ದಾರೆ) ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಜೀವೇಶ್ವರರಿಗೆ ಅನಾದಿಕಾಲದಿಂದಲೂ ಬಿಂಬ-ಪ್ರತಿಬಿಂಬಭಾವವು ಸಿದ್ಧವಾಗಿರುವುದರಿಂದ ಪ್ರತಿಬಿಂಬನಾದ ಜೀವನು ಈಶ್ವರನಿಗೆ ಅಧೀನವಾದ ಅಸಿತತ್ವವುಳ್ಳವನು, ಈಶ್ವರನು ಸ್ವತಂತ್ರವಾದ ಅಸ್ತಿತ್ವವುಳ್ಳವನು ಎಂಬ ಕಾರಣದಿಂದ ಜೀವರಿಗೆ ನಿಯಮ್ಯತ್ವವೂ ಈಶ್ವರನಿಗೆ ನಿಯಾಮಕತ್ವವೂ ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ. ಪುಂಸಃ= ಪೂರ್ಣಷಡ್ಗುಣವುಳ್ಳ ವಿಷ್ಣುವಿನ, ಅನಾದಿಯೋಗೇನ= ಅನಾದಿಸಿದ್ಧವಾದ ಬಿಂಬರೂಪನಾದ ಅವನ ಸಂಬಂಧದಿಂದ, ಭವಂತಿ= ಅನಾದಿ ಕಾಲದಿಂದಲೂ ಅವನ ಅಧೀನವಾದ ಅಸ್ತಿತ್ವವುಳ್ಳ ಪ್ರತಿಬಿಂಬರಾದ ಸರ್ವಜೀವರೂ ಉತ್ಪತ್ತಿಯನ್ನು ಪಡೆಯುತ್ತಾರೆ. ಸಮಾಧಿಕರಹಿತನಾದುದರಿಂದ ಮತ್ತು ಆಪ್ತ ಸಮಸ್ತ ಕಾಮನಾದುದರಿಂದ ವಿಷ್ಣುವಿಗೆ ಜಗತ್ತಿನ ಸೃಷ್ಟ್ಯಾದಿಗಳಿಂದ ತನಗೆ ಪ್ರಯೋಜನವಿಲ್ಲದಿದ್ದರೂ ತನಗೆ ಅಧೀನರಾದ ಅನಂತಜೀವರಿಗೆ ಅವರವರ ಯೋಗ್ಯತೆಯನ್ನು ಅಭಿವ್ಯಕ್ತ ಮಾಡಿ ಚಿದಚಿದಾತ್ಮಕವಾದ ಮುಕ್ತಿ, ತಮಸ್ಸುಗಳನ್ನು ಕೊಡುವುದರಿಂದ ಸ್ವಾಭಾವಿಕವಾದ ಪರೋಪಕಾರರೂಪವಾದ ಪ್ರಯೋಜನವು ಸಿದ್ಧವಾಗುತ್ತದೆ ಎಂದು ಸಮಗ್ರ ಶ್ಲೋಕದ ಅಭಿಪ್ರಾಯ.

ಇದೇ ಶ್ಲೋಕದಲ್ಲಿ ಪೂರ್ವಾರ್ಧಕ್ಕೆ `ದೋಷೋ ಮಹಾನತ್ರ ಬಿಭೇದಯೋಗೇ ಹ್ಯನಾದಿಯೋಗೇನ ಭವಂತಿ ನಿತ್ಯಾಃ' ಎಂದು ಪಾಠಾಂತರವಿದೆ. ಆ ಪಾಠವನ್ನು ತೆಗೆದುಕೊಂಡರೆ ಅತ್ರ= ಭೂತ-ಭವಿಷ್ಯದ್-ವರ್ತಮಾನಭೇದದಿಂದ ಮೂರುರೂಪವಾದ ಕಾಲದಲ್ಲಿ, ಅನಾದಿಯೋಗೇನ= ಅನಾದಿಕಾಲದಿಂದಲೂ ಭಗವಂತನಿಂದ ಅಭಿನ್ನನಾಗಿರುವ ಅವನ ಇಚ್ಛಾನಿಮಿತ್ತದಿಂದ, ಹಿಶಬ್ದಸೂಚಿತವಾದ ಪ್ರತ್ಯೇಕವಾಗಿ ಅನಾದಿನಿತ್ಯವಾದ ಅನಂತ ಭಗವದವತಾರಗಳು, ಭವಂತಿ= ಇರುತ್ತವೆ, ಬಿಭೇದಯೋಗೇ= ಇಂತಹ ಪರಮಾತ್ಮನ ಅವತಾರರೂಪಗಳಿಗೆ ಪರಸ್ಪರ ಭೇದ ಸಂಬಂಧವನ್ನು ಅಂಗೀಕಾರ ಮಾಡಿದರೆ, ಮಹಾನ್ ದೋಷಃ= ಪುನರಾವೃತ್ತಿ ಇಲ್ಲದಿರುವ ತಮಃ ಪ್ರಾಪ್ತಿಸಾಧಕವಾದ ಮಿಥ್ಯಾಜ್ಞಾನರೂಪವಾದ ದೊಡ್ಡ ದೋಷವು ಉಂಟಾಗುತ್ತದೆ ಎಂದು ಅಭಿಪ್ರಾಯ.

ಭಾರತ ಶ್ರೀನಿವಾಸಾಚಾರ್ಯರು ಅತ್ರ= ನಿರ್ದುಷ್ಟನಾದ ಪರಮಾತ್ಮನಲ್ಲಿ, ಮಹಾನ್ ದೋಷಃ= ಪಾರತಂತ್ರ್ಯಾದಿ ದೋಷವು, ನ= ಕೂಡುವುದಿಲ್ಲ ಮುಂತಾದ ರೀತಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ. ಅವರು `ದೋಷೋ ಮಹಾನ್ ನಾತ್ರ' ಎಂಬ ಪಾಠವನ್ನು ಹಿಡಿದಿರುತ್ತಾರೆ.

ಯದೇತದಾಹ ಭಗವಾನ್ ಸ ನಿತ್ಯಂ
ವಿಕಾರಯೋಗೇನ ಕರೋತಿ ವಿಶ್ವಮ್ |
ತಥಾಽಸ್ಯ ಶಕ್ತಿಶ್ಚ ತಥೇತಿ ಮನ್ಯೇ
ತಥಾಽರ್ಥಯೋಗೇ ಚ ಭವಂತಿ ವೇದಾಃ ॥2॥

ಸರ್ವಜ್ಞರಾದ ಸನತ್ಸುಜಾತರು ಹೀಗೆ ಮೊದಲನೆಯ ಶ್ಲೋಕದಲ್ಲಿ ಅನ್ಯನಿರಪೇಕ್ಷನಾಗಿಯೇ ಪರಬ್ರಹ್ಮನು ಜಗಜ್ಜನ್ಮಾದಿಗಳನ್ನು ಮಾಡುತ್ತಾನೆ ಎಂದು ಹೇಳಿ, ಈ ಎರಡನೆಯ ಶ್ಲೋಕದಲ್ಲಿ ಅನೇಕ ಶ್ರುತಿ-ಸ್ಮೃತಿಗಳಲ್ಲಿ ಉಕ್ತವಾದ ವಚನಗಳಿಗೆ ಅನುಸಾರವಾಗಿ ಪ್ರವಾಹತಃ ಅನಾದಿ ನಿತ್ಯವಾದ, ಪ್ರಕೃತಿವಿಕಾರವಾದ, ಸತ್ಯವಾದ, ಇನ್ನೊಬ್ಬನಿಂದ ಮಾಡಲು ಅಸಾಧ್ಯವಾದ ಜಗತ್‌ಸೃಷ್ಟಿಯನ್ನು ಹೇಳುವ ಮೂಲಕ ಹಿಂದಿನ ಶ್ಲೋಕದಲ್ಲಿ ಹೇಳಿದ ಕರ್ತೃತ್ವವನ್ನೇ ಸ್ಪಷ್ಟಪಡಿಸುತ್ತಾರೆ. ಹಿಂದಿನ ಶ್ಲೋಕದಲ್ಲಿ ಚೇತನ ಸೃಷ್ಟಿಯನ್ನು ಹೇಳಿದ್ದಾಯಿತು. ಇಲ್ಲಿ ಜಡ ಸೃಷ್ಟಿಯನ್ನು ಹೇಳುತ್ತಾರೆ.

ಸಃ ಭಗವಾನ್= ನಿತ್ಯಾನಂದನಾದ ಭಗವಂತನು, ನಿತ್ಯಂ= ಪ್ರವಾಹ ರೂಪದಿಂದ ಅನಾದಿನಿತ್ಯವಾದ ಪ್ರತ್ಯಕ್ಷಾದಿಸಿದ್ಧವಾದ, ವಿಶ್ವಂ=

`ವಿಶ್ವಂ ಸತ್ಯಂ ಮಘವಾನಾ ಯುವೋಃ' (ಎಲೈ ಮಘವಂತರೇ ನೀವಿಬ್ಬರೂ ಸೃಷ್ಟಿ ಮಾಡಿದ ಈ ಪ್ರಪಂಚವು ಸತ್ಯವಾದುದು) ಇತ್ಯಾದಿ ಶ್ರುತಿ ಸಿದ್ಧವಾದ ಸತ್ಯವಾದ ಜಗತ್ತನ್ನು, ವಿಕಾರಯೋಗೇನ= ಗುಣತ್ರಯಗಳು, ಮಹದಹಂಕಾರ, ಪಂಚಭೂತಗಳು ಮತ್ತು ಪಂಚತನ್ಮಾತ್ರಗಳು ಇವುಗಳ, ಯೋಗೇನ ಎಂದರೆ ಪಂಚೀಕರಣ ಉಪಾಯದಿಂದ, ಕರೋತಿ= ನಿರ್ಮಾಣ ಮಾಡುತ್ತಾನೆ. ಏತತ್= ಈ ಪ್ರಮೇಯವನ್ನು, ಭಗವಾನ್= ಸರ್ವಪೂಜ್ಯವಾದ, ವೇದಃ= ವೇದವು, ಆಹ= `ತತ್ಸೃಷ್ಟ್ವಾ ತದೇವಾನು ಪ್ರಾವಿಶತ್' ಇತ್ಯಾದಿ ವಾಕ್ಯಗಳಿಂದ ಹೇಳುತ್ತದೆ. ಅನೇಕ ವೇದವಾಕ್ಯಗಳು ಬ್ರಹ್ಮನಿಗೇ ಜಗಜ್ಜನ್ಮಾದಿಕರ್ತೃತ್ವವೆಂದು ಹೇಳಲಿ, ಆದರೆ ನೀವು ಸರ್ವಜ್ಞರಾದ ಋಷಿಗಳಾದ್ದರಿಂದ ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ಎಂಬ ಪ್ರಶ್ನೆಗೆ ಉತ್ತರಾರ್ಧದಲ್ಲಿ ಉತ್ತರವನ್ನು ಹೇಳುತ್ತಾರೆ. ಮನ್ಯೇ ಎಂಬ ಉತ್ತಮ ಪುರುಷ ಕ್ರಿಯಾಪದ ಪ್ರಯೋಗವಿರುವುದರಿಂದ, ಅಹಂ ಎಂಬ ಪದವು ಲಬ್ಧವಾಗುತ್ತದೆ. ಅಹಂ ಚ= ಸನತ್ಸುಜಾತ ನಾಮವನ್ನು ಧರಿಸಿದ ನಾನೂ ಸಹ, ತಥಾ= ಶ್ರುತ್ಯಾದಿಗಳಲ್ಲಿ ಹೇಳಿದುದಕ್ಕೆ ಅನುಗುಣವಾಗಿಯೇ, ಶಕ್ತಿಃ ಇತಿ= ಭಗವಂತನಿಂದ ಅಭಿನ್ನವಾದ ಅವನ ಶಕ್ತಿಯು, ಕರೋತಿ ಇತಿ ಮನ್ಯೇ= ಸೃಷ್ಟಿ ಮಾಡುತ್ತದೆ ಎಂದು ತಿಳಿಯುತ್ತೇನೆ. ಶಕ್ತಿ ಮತ್ತು ಶಕ್ತಿ ಉಳ್ಳ ಪದಾರ್ಥಗಳಿಗೆ ಅಭೇದವಿರುವ ಅಭಿಪ್ರಾಯದಿಂದ ಪರಮಾತ್ಮನ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದರೂ ಪರಮಾತ್ಮನ ಶಕ್ತಿಯು ಸೃಷ್ಟಿ ಮಾಡುತ್ತದೆ ಎಂದು ಉತ್ತರವನ್ನು ಹೇಳುತ್ತಾರೆ. ಪರಮಾತ್ಮನೇ ಜಗತ್ಸೃಷ್ಟಿಯನ್ನು ಮಾಡುತ್ತಾನೆ ಎಂದು ನಾನೂ ಸಹ ತಿಳಿದಿದ್ದೇನೆ ಎಂದು ತಾತ್ಪರ್ಯ. ತಮ್ಮ ಅಭಿಪ್ರಾಯವೂ ಸಹ ವೇದಗಳಿಗೆ ಅನುಗುಣವಾದುದೆಂದು ತಿಳಿಸಲು ಪುನಃ ವೇದವಾಕ್ಯಗಳ ಸಮ್ಮತಿಯನ್ನು ನಾಲ್ಕನೆಯ ಚರಣದಿಂದ ಹೇಳುತ್ತಾರೆ. ವೇದಾಃ= `ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' (ಅವನ ಸರ್ವೋತ್ತಮವಾದ ಶಕ್ತಿಯು ಅನೇಕ ವಿಧವಾದುದೆಂದು ಶ್ರುತಿಗಳಲ್ಲಿ ತಿಳಿದುಬರುತ್ತದೆ. ಅದರಂತೆ ಅವನ ಸ್ವಾಭಾವಿಕವಾದ ಜ್ಞಾನ-ಬಲ-ಕ್ರಿಯೆಗಳೂ ಶ್ರುತಿಗಳಿಂದ ತಿಳಿದುಬರುತ್ತವೆ) ಇತ್ಯಾದಿ ವೇದಗಳು, ತಥಾರ್ಥಯೋಗೇ ಚ = ನನ್ನ ಅಭಿಪ್ರಾಯಕ್ಕೂ ಅನುಗುಣವಾದ ಜಗತ್ತು ಭಗವಂತನ ಶಕ್ತಿಯಿಂದ ಜನ್ಯ ಎಂಬ ಅರ್ಥಸಂಬಂಧವನ್ನು ಹೇಳುವ ವಿಷಯದಲ್ಲಿ, ಭವಂತಿ= ಪ್ರಮಾಣವಾಗುತ್ತವೆ. ಸಮ್ಮತಿಯನ್ನು ಸೂಚಿಸುತ್ತವೆ. ಆದ್ದರಿಂದ ವೇದವಚನಕ್ಕೂ ಮತ್ತು ನನ್ನ ಅಭಿಪ್ರಾಯಕ್ಕೂ ಏಕವಾಕ್ಯತೆ ಇದೆ ಎಂದು ತಾತ್ಪರ್ಯ.

ಧೃತರಾಷ್ಟ್ರಃ

ಯಸ್ಮಾದ್ ಧರ್ಮಾನಾಚರಂತೀಹ ಕೇಚಿತ್
 ತಥಾऽಧರ್ಮಾನ್ ಕೇಚಿದಿಹಾಚರಂತಿ |
ಧರ್ಮಃ ಪಾಪೇನ ಪ್ರತಿಹನ್ಯತೇ ವಾ
 ಉತಾಹೋ ಧರ್ಮಃ ಪ್ರತಿಹಂತಿ ಪಾಪಮ್ ॥3॥

ಹೀಗೆ ಸಕಲ ಶಾಸ್ತ್ರಸಮ್ಮತಿಯಿಂದ ಭಗವಂತನ ಜಗಜ್ಜನ್ಮಾದಿ ಕರ್ತೃತ್ವ ನಿಯಮವನ್ನು ತಿಳಿದ ಧೃತರಾಷ್ಟ್ರನು ಈಗ ಶ್ರುತಿವಿಹಿತವಾದ ನಿಷ್ಕಾಮ, ಸಕಾಮ ಭೇದಭಿನ್ನವಾದ ಎರಡು ವಿಧವಾದ ಪುಣ್ಯಕರ್ಮಗಳ ಮಧ್ಯದಲ್ಲಿ ನಿಷ್ಕಾಮ ಕರ್ಮವೇ ಪುನರಾವೃತ್ತಿ ರಹಿತವಾದ ಸ್ಥಾನವನ್ನು ಹೊಂದಿಸುವುದರಿಂದ ಅದನ್ನೇ ಮಾಡಬೇಕೇ? ಅಥವಾ ಕಾಮ್ಯಕರ್ಮಗಳನ್ನು ಮಾಡಬೇಕೇ? ಎಂದು ಕರ್ಮಸ್ವರೂಪವನ್ನು ತಿಳಿಯಲು ಬಯಸಿ ಪ್ರಶ್ನೆಯನ್ನು ಮಾಡುತ್ತಾನೆ. ಇಹ ಲೋಕೇ= ಮನುಷ್ಯ ಲೋಕದಲ್ಲಿ, ಕೇಚಿತ್= ಅಪರೋಕ್ಷ ಜ್ಞಾನಸಂಪನ್ನರಾದ ಕೆಲವು ಅಧಿಕಾರಿಗಳು, ಧರ್ಮಾನ್= ನಿವೃತ್ತಿ ಧರ್ಮಗಳನ್ನು, ಆಚರಂತಿ= ನಿಷ್ಕಾಮನೆಯಿಂದ ವಿಷ್ಣುಪ್ರೀತ್ಯರ್ಥವಾಗಿ ಆಚರಿಸುತ್ತಾರೆ ಎಂದು ಪ್ರಸಿದ್ಧವಾಗಿದೆ. ತಥಾ= ಅದರಂತೆ ಪ್ರಾರಬ್ಧವಶದಿಂದ ಅವರೇ, ಅಧರ್ಮಾನ್= ಅಗಮ್ಯಾಗಮನಾದಿ ರೂಪ ಕರ್ಮಗಳನ್ನೂ, ಆಚರಂತಿ= ಆಚರಿಸುತ್ತಾರೆ. ಹೀಗಿರುವಾಗ, ಧರ್ಮಃ= ಮೊದಲು ಆಚರಣೆ ಮಾಡಿದ ನಿವೃತ್ತಿ ಧರ್ಮವು, ಪಾಪೇನ= ಅನಂತರದಲ್ಲಿ ಮಾಡಿದ ಪಾಪಕರ್ಮದಿಂದ, ಪ್ರತಿಹನ್ಯತೇ ವಾ= ವಿನಾಶವನ್ನು ಹೊಂದುತ್ತದೆಯೇ? ಉತಾಹೋ= ಅಥವಾ, ಧರ್ಮಃ= ಮೊದಲು ಮಾಡಿದ ನಿವೃತ್ತಿ ಧರ್ಮವೇ ಸ್ವಯಂ ವಿನಾಶವನ್ನು ಹೊಂದದೆ, ಪಾಪಂ= ಅನಂತರ ಮಾಡಿದ ಪಾಪವನ್ನು, ಪ್ರತಿಹಂತಿ ವಾ= ವಿನಾಶವನ್ನು ಮಾಡುತ್ತದೆಯೇ?

ಅಥವಾ ಇಲ್ಲಿ ಕೇಚಿತ್ ಎಂಬ ಪದದಿಂದ ಗೃಹಸ್ಥಾಶ್ರಮಿಗಳನ್ನೇ ತೆಗೆದುಕೊಳ್ಳಬೇಕು. ಯಸ್ಮಾತ್= ಶ್ರುತಿಯಲ್ಲಿ ವಿಹಿತವಾಗಿದೆ ಎಂಬ ಕಾರಣದಿಂದ, ಇಹಲೋಕೇ= ಈ ಮನುಷ್ಯಲೋಕದಲ್ಲಿ, ಕೇಚಿತ್= ಮಧ್ಯಮಾಧಿಕಾರಿಗಳಾದ ಗೃಹಸ್ಥಾಶ್ರಮಿಗಳಾದ ಪುರುಷರು, ಧರ್ಮಾನ್= `ಪ್ರಾತಃಸಂಧ್ಯಾಂ ಉಪಾಸೀತ' ಮೊದಲಾದ ಶ್ರುತಿ ವಿಹಿತವಾದ ಧರ್ಮಗಳನ್ನು, ಆಚರಂತಿ= ಆಚರಿಸುತ್ತಾರೆ. ತಥಾ= ಅದರಂತೆ, ಅಧರ್ಮಾನ್= ದುಷ್ಟ ಪ್ರತಿಗ್ರಹರೂಪವಾದ ಅಧರ್ಮವನ್ನೂ, ಆಚರಂತಿ= ಆಚರಿಸುತ್ತಾರೆ. ಧರ್ಮಃ= ತಾವು ಅನುಷ್ಠಾನ ಮಾಡಿದ ಸಂಧ್ಯಾವಂದನಾದಿ ರೂಪವಾದ ನಿಷ್ಕಾಮ ಧರ್ಮವು, ಪಾಪೇನ= ದುಷ್ಟ ಪ್ರತಿಗ್ರಹ ಮೊದಲಾದ ಪಾಪಗಳಿಂದ, ಪ್ರತಿಹನ್ಯತೇ ಕಿಂ= ವಿನಾಶವನ್ನು ಹೊಂದುತ್ತದೆಯೇ? ಉತಾಹೋ= ಅಥವಾ, ಧರ್ಮಃ= ಸಂಧ್ಯಾವಂದನಾದಿ ರೂಪವಾದ ಧರ್ಮವೇ, ಪಾಪಂ= ದುಷ್ಟಪ್ರತಿಗ್ರಹಾದಿ ರೂಪವಾದ ಅಧರ್ಮವನ್ನು, ಪ್ರತಿಹಂತಿ ವಾ= ವಿನಾಶವನ್ನು ಮಾಡುತ್ತದೆಯೇ? ಹೀಗೆ ಅನುಷ್ಠಾನ ಮಾಡಿದ ಸಕಾಮ, ನಿಷ್ಕಾಮ ಕರ್ಮಗಳು ಪರಸ್ಪರ ವಿರುದ್ಧವಾದುದರಿಂದ ಒಂದರಿಂದ ಇನ್ನೊಂದು ನಾಶವನ್ನು ಹೊಂದುತ್ತದೆಯೇ ಅಥವಾ ಇಲ್ಲವೇ ಎಂದು ಪ್ರಶ್ನೆಯ ಅಭಿಪ್ರಾಯ.

`ಇಹ ಕೇಚಿತ್' ಎಂಬ ಒಂದು ಪಾಠವೂ, `ಇಹ ಲೋಕೇ' ಎಂದು ಇನ್ನೊಂದು ಪಾಠವೂ ಇರುವುದರಿಂದ ಇಲ್ಲಿ `ಇಹ ಲೋಕೇ' ಎಂಬ ಪಾಠವನ್ನು ಹಿಡಿದು ವ್ಯಾಖ್ಯಾನ ಮಾಡಿದ್ದಾರೆ.

ಸನತ್ಸುಜಾತಃ

ತಸ್ಮಿನ್ ಸ್ಥಿತೋ ವಾऽಪ್ಯುಭಯಂ ಹಿ ನಿತ್ಯಂ
 ಜ್ಞಾನೇನ ವಿದ್ವಾನ್ ಪ್ರತಿಹಂತಿ ಸಿದ್ಧಿಮ್ |
ಅತೋऽನ್ಯಥಾ ಪುಣ್ಯಮುಪೈತಿ ದೇಹೀ
 ತಥಾಗತಂ ಪಾಪಮುಪೈತಿ ಸಿದ್ಧಿಮ್ ॥4॥

ಹೀಗೆ ಧೃತರಾಷ್ಟ್ರನಿಂದ ಕೇಳಲ್ಪಟ್ಟ ಸನತ್ಸುಜಾತರು ಜ್ಞಾನಿ ಮತ್ತು ಅಜ್ಞಾನಿಗಳು ಆಚರಿಸಿದ ಪುಣ್ಯಪಾಪ ಕರ್ಮಗಳಿಗೆ

ಅಧಿಕಾರಿಭೇದದಿಂದ ಆಯಾ ಅಧಿಕಾರಿಗಳಿಗೆ ಅನುಸಾರವಾದ ಫಲವೇ ಉಂಟಾಗುವುದೆಂದು ತಿಳಿಸಲು ಉಭಯವಿಧವಾದ ಅಧಿಕಾರಿಗಳ ಪ್ರವೃತ್ತಿ ಪ್ರಕಾರವನ್ನು ತಿಳಿಸುತ್ತಾರೆ.
ತಸ್ಮಿನ್= ಆ ಪರಮಾತ್ಮನಲ್ಲಿ, ನಿತ್ಯಂ ಸ್ಥಿತಃ= ಒಂದೇ ರೀತಿಯಿಂದ ಅವನಲ್ಲೇ ನಿಷ್ಠೆಯನ್ನುಳ್ಳ, ವಿದ್ವಾನ್= ಅಪರೋಕ್ಷ ಜ್ಞಾನಿಯು, ಉಭಯಂ= ಸಂಚಿತ ಮತ್ತು ಆಗಾಮಿಗಳಾದ ಪುಣ್ಯ-ಪಾಪವೆರಡನ್ನೂ, ಪ್ರತಿಹಂತಿ= `ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' (ಅಪರೋಕ್ಷ ಜ್ಞಾನಿಯು ಪುಣ್ಯ ಪಾಪವೆರಡನ್ನೂ ಕಳೆದುಕೊಂಡು ದೋಷರಹಿತನಾಗಿ ಪರಮಾತ್ಮನ ನಿರ್ದುಃಖತ್ವಾದಿ ರೂಪವಾದ ಶ್ರೇಷ್ಠ ಸಾಮ್ಯವನ್ನೂ ಹೊಂದುತ್ತಾನೆ). `ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್' (ಪರಮಾತ್ಮನ ಅಪರೋಕ್ಷ ಜ್ಞಾನವು ಉಂಟಾದಾಗ ಸಂಚಿತ ಮತ್ತು ಆಗಾಮಿ ಪಾಪಗಳು ವಿನಾಶವನ್ನೂ ಮತ್ತು ಅಶ್ಲೇಷವನ್ನು ಪಡೆಯುತ್ತವೆ) ಎಂಬ ಪ್ರಮಾಣಗಳಿಗೆ ಅನುಸಾರವಾಗಿ ವಿನಾಶಗೊಳಿಸುತ್ತಾನೆ. ಸಿದ್ಧಿಂ ಹಿ= ನಶ್ವರ ಪುಣ್ಯ-ಪಾಪ ಜನಿತವಾದ ಸ್ವರ್ಗ-ನರಕಾದಿ ಪ್ರಾಪ್ತಿರೂಪವಾದ ಸಿದ್ಧಿಯನ್ನೂ ಸಹ, ಪ್ರತಿಹಂತಿ= ಅದನ್ನೂ ನಾಶ ಮಾಡುತ್ತಾನೆ. ಈ ರೀತಿಯಾಗಿ ಭಗವದ್ಭಕ್ತಿಭರಿತನಾದ ಅಪರೋಕ್ಷ ಜ್ಞಾನಿಯು ಎಲ್ಲ ಪುಣ್ಯಕರ್ಮಗಳನ್ನೂ ಭಗವಂತನ ಪ್ರೀತಿಯ ಉದ್ದೇಶದಿಂದ ಅನುಷ್ಠಾನ ಮಾಡಬೇಕೆಂದು ತಿಳಿದು ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ. ಅತಃ ಅನ್ಯಥಾ= ಇದಕ್ಕೆ ವಿಪರೀತವಾಗಿ ಧರ್ಮಾಚರಣಶೀಲನಾದ, ದೇಹೀ= ಅಪಕ್ವಯೋಗಿಯಾದ ಪುರುಷನು, ತಥಾ ಗತಂ= ಫಲೋದ್ದೇಶಪೂರ್ವಕವಾಗಿ ಮಾಡಿದ ಕರ್ಮಾಚರಣೆಯಿಂದ ಉಂಟಾದ ಫಲಾನುಭವವನ್ನು ಮಾಡದಿದ್ದರೆ ಎಂದೂ ನಾಶವನ್ನು ಹೊಂದದಿರುವ, ಪುಣ್ಯಂ= ಪುಣ್ಯವನ್ನೂ, `ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ' (ಒಂದು ಕೋಟಿ ಕಲ್ಪಗಳಾದರೂ ಭೋಗಿಸದಿದ್ದ ಕರ್ಮವು ವಿನಾಶವನ್ನು ಹೊಂದುವುದಿಲ್ಲ ಎಂಬುದಾಗಿ ಕಾಮ್ಯಕರ್ಮಸ್ವರೂಪವನ್ನು ಹೇಳಿರುವುದರಿಂದ) ಸಿದ್ಧಿಂ ಚ= ಅದರಿಂದ ಉಂಟಾದ ಸ್ವರ್ಗಪ್ರಾಪ್ತಿ ಮೊದಲಾದ ಸಿದ್ಧಿಯನ್ನೂ, ಉಪೈತಿ= ಹೊಂದುತ್ತಾನೆ. ಅಂತಹ ಕರ್ಮದಿಂದಲೇ ಪ್ರಾಪ್ತವಾದ ನರಕಾದಿ ಫಲವನ್ನೂ ಹೊಂದುತ್ತಾನೆ. ಹೀಗೆ ಪಕ್ವ ಅಪರೋಕ್ಷ ಜ್ಞಾನವುಳ್ಳವನಿಗೆ ಅಪರೋಕ್ಷ ಜ್ಞಾನ ಬಂದ ಕಾಲದಲ್ಲಿಯೇ ಸಂಚಿತಾಗಾಮೀ ಪುಣ್ಯಾದಿ ಕರ್ಮಗಳು ಸ್ವರೂಪತಃ ನಾಶವನ್ನು ಹೊಂದುವುದರಿಂದ ಅದರಿಂದ ಉಂಟಾದ ಸುಖ-ದುಃಖಾದಿ ರೂಪವಾದ ಫಲವನ್ನೂ ಅವನು ಅನುಭವಿಸುವುದಿಲ್ಲ. ಅಪಕ್ವಯೋಗಿಯಾದರೂ ಪುಣ್ಯ-ಪಾಪರೂಪವಾದ ಕರ್ಮನಾಶವನ್ನು ಹೊಂದುವುದಿಲ್ಲವಾದ್ದರಿಂದ ಅದರಿಂದ ಉಂಟಾದ ಸುಖ-ದುಃಖ ರೂಪವಾದ ಫಲವನ್ನು ಹೊಂದುತ್ತಾನೆ ಎಂದು (ಧೃತರಾಷ್ಟ್ರನ ಪ್ರಶ್ನೆಯ) ಉತ್ತರದ ಸಾರಾಂಶ.

ಸ್ಥಿತ್ವೋಭಯಂ ಕರ್ಮಣಿ ಭೋಜ್ಯತೇ ಸ್ಥಿರಂ
ಶುಭಸ್ಯ ಪಾಪಸ್ಯ ಸ ಚಾಪಿ ಕರ್ಮಣಃ |
ಧರ್ಮೇಣ ಪಾಪಂ ಪ್ರಣುದತೀಹ ವಿದ್ವಾನ್
ಧರ್ಮೋ ಬಲೀಯಾನಿತಿ ತಸ್ಯ ವಿದ್ಧಿ ॥5॥

ಈ ಶ್ಲೋಕದಲ್ಲಿ ಅಪರೋಕ್ಷದಶಾವಿಶಿಷ್ಟನಾದ ಜ್ಞಾನಿಯು ಮತ್ತು ಅಜ್ಞಾನಿಯು ಆಚರಿಸಿದ ಪುಣ್ಯ-ಪಾಪ ಕರ್ಮಗಳು ಕ್ರಮವಾಗಿ ನಶ್ವರವಾದ ಫಲಪ್ರಾಪಕಗಳಲ್ಲ ಮತ್ತು ಅಂತಹ ಫಲಪ್ರಾಪಕಗಳು ಎಂದು ವರ್ಣಿಸುತ್ತಾರೆ.
ಸ್ಥಿತ್ವಾ ಸ್ಥಿರಂ= ಸ್ಥಿರಂ ಎಂಬುದು ಕ್ರಿಯಾ ವಿಶೇಷಣ, `ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ' (ಇಷ್ಟಾಪೂರ್ತಗಳೇ ಶ್ರೇಷ್ಠವಾದ ಸುಖಸಾಧನವೆಂದು ತಿಳಿದು ಮೂಢರಾದ ಜನರು ಅದಕ್ಕಿಂತ ಭಿನ್ನವಾದ ಪರಮಶ್ರೇಯಸ್ಸಾಧನವನ್ನು ತಿಳಿಯುವುದಿಲ್ಲ), `ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ' (ಪಾಮರ ಜನರು ನನ್ನನ್ನು ಯಜ್ಞಗಳಿಂದ ಆರಾಧಿಸಿ, ಸೋಮಪಾನವನ್ನು ಮಾಡಿ, ಪಾಪವನ್ನು ಕಳೆದುಕೊಂಡು ಸ್ವರ್ಗಪ್ರಾಪ್ತಿಯನ್ನು ಅಪೇಕ್ಷಿಸುತ್ತಾರೆ), `ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ', `ಅನ್ನದಾನಾದೇತೇ ಲೋಕಾಃ' (ಅನ್ನದಾನದಿಂದ ಇಂತಹ ಶುಭಲೋಕಗಳ ಪ್ರಾಪ್ತಿಯಾಗುತ್ತದೆ) ಇವೇ ಮೊದಲಾದ ಶ್ರುತಿಗಳಲ್ಲಿ ಹೇಳಿದ ಫಲದ ಆಸೆಯಿಂದ, ಕರ್ಮಣಿ= ಕಾಮ್ಯಕರ್ಮದಲ್ಲಿ, ಸ್ಥಿರಂ ಸ್ಥಿತ್ವಾ= ಸ್ಥಿರವಾಗಿ ನಿಂತು, ಅದರ ಅನುಷ್ಠಾನ ಮಾಡಿ ಎಂದು ಇಟ್ಟುಕೊಳ್ಳಬೇಕು, ಸಃ= ಕಾಮ್ಯಕರ್ಮಾನುಷ್ಠಾನ ಶೀಲನಾದ ಪುರುಷನು, ಶುಭಸ್ಯ= ನಶ್ವರ ಕಾಮ್ಯ ಕರ್ಮದಿಂದ ಉಂಟಾದ ಪುಣ್ಯದ ಅದರಂತೆ, ಪಾಪಸ್ಯಾಪಿ= ಪಾಪಕರ್ಮಗಳ, ನರಕಾಪಾದಕವಾದ ನಶ್ವರ ಪಾಪಕರ್ಮಗಳ ಫಲವನ್ನು, ಭೋಜ್ಯತೇ= ಯಮದೂತರಿಂದಲೂ ಮತ್ತು ಸ್ವರ್ಗದೂತರಿಂದಲೂ ಭೋಗಿಸುವಂತೆ ಮಾಡಲ್ಪಡುತ್ತಾನೆ. ಭುಂಜತೇ ಎಂಬ ಪಾಠವಿದ್ದರೆ ಚೆನ್ನಾಗಿ ಅನುಭವಿಸುತ್ತಾನೆ ಎಂದು ಅರ್ಥ. ವಿದ್ವಾನ್= `ಧರ್ಮಸ್ಯ ಹ್ಯಾಪವರ್ಗ್ಯಸ್ಯ ನಾರ್ಥೋರ್ಥಾಯೇಹ ಕಲ್ಪತೇ | ನಾರ್ಥಸ್ಯ ಧರ್ಮೈಕಾಂತಸ್ಯ ಕಾಮೋ ಲಾಭಾಯ ಹಿ ಸ್ಮೃತಃ ॥' (ಮೋಕ್ಷ ಸಾಧನವಾದ ಧರ್ಮಕ್ಕೆ ಅರ್ಥಪ್ರಾಪ್ತಿಯು ಪ್ರಯೋಜನವಲ್ಲ. ಧರ್ಮ ಒಂದನ್ನೇ ಪ್ರಯೋಜನವಾಗಿ ಹೊಂದಿದ ಅರ್ಥಕ್ಕೆ ಭೋಗವು ಪ್ರಯೋಜನವಲ್ಲ- ಭಾಗವತ), `ವಾಸುದೇವಪರಾ ಮಖಾಃ' (ಎಲ್ಲ ಯಜ್ಞಗಳು ವಾಸುದೇವನನ್ನು ಉದ್ದೇಶಿಸಿಕೊಂಡು ಪ್ರವೃತ್ತವಾಗುತ್ತವೆ- ಭಾಗವತ).
`ಮಯಿ ಸರ್ವಾಣಿ ಕರ್ಮಾಣಿ ಸನ್ನಸ್ಯಾಧ್ಯಾತ್ಮಚೇತಸಾ | ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥' (ಅಧ್ಯಾತ್ಮನಿಷ್ಠನಾಗಿ ಎಲ್ಲ ಕರ್ಮಗಳ ಫಲಗಳನ್ನು ನನ್ನಲ್ಲಿ ಸಮರ್ಪಿಸಿ, ಫಲದ ಆಸೆಯನ್ನಾಗಲೀ, ಅಹಂಕಾರವನ್ನಾಗಲೀ ಮಾಡದೆ ನಿರಾತಂಕವಾಗಿ ಯುದ್ಧವನ್ನು ಮಾಡು- ಗೀತಾ). `ಕಾಮ್ಯಾನಾಂ ಕರ್ಮಣಾಂ ನ್ಯಾಸಮ್' (ಜ್ಞಾನಿಗಳು ಕಾಮ್ಯಕರ್ಮಗಳನ್ನು ಬಿಡುವುದನ್ನೇ ಸಂನ್ಯಾಸ ಎಂದು ತಿಳಿಯುತ್ತಾರೆ - ಗೀತಾ) ಇತ್ಯಾದಿ ಅನೇಕ ಪ್ರಮಾಣಗಳಲ್ಲಿ ಕಾಮ್ಯಕರ್ಮಗಳ ಪರಿತ್ಯಾಗವು ಕೇಳಿ ಬರುವುದರಿಂದ `ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಶ್ನುತೇ' ಮುಂತಾದ ಪ್ರಮಾಣಗಳಲ್ಲಿ ಕರ್ಮಾಚರಣೆಯು ಆವಶ್ಯಕವೆಂದು ಕೇಳಿ ಬರುವುದರಿಂದ ಶ್ರುತ್ಯುಕ್ತವಾದ ಎಲ್ಲ ಕರ್ಮಗಳನ್ನೂ ವಿಷ್ಣ್ವರ್ಪಣ ಬುದ್ಧಿಯಿಂದ ಮಾಡಿದರೆ ಅವು ಸಾರ್ಥಕವಾಗುತ್ತವೆ ಎಂದು ತಿಳಿದು ಅನುಷ್ಠಾನ ಮಾಡುವ ಅಪರೋಕ್ಷ ಜ್ಞಾನಿಯು, ಧರ್ಮೇಣ= ತಾನು ಅನುಷ್ಠಾನ ಮಾಡಿದ ವಿಹಿತವಾದ ಧರ್ಮದಿಂದ, ಪಾಪಂ= ತಾನು ಪೂರ್ವದಲ್ಲಿ ಸಂಪಾದಿಸಿದ ಪಾಪವನ್ನು, ಪ್ರಣುದತಿ= ವಿನಾಶ ಮಾಡುತ್ತಾನೆ. ಇಹ= ಜ್ಞಾನಿ-ಅಜ್ಞಾನಿಗಳು ಆಚರಿಸಿದ ಕರ್ಮಗಳ ಮಧ್ಯದಲ್ಲಿ, ತಸ್ಯ= ಜ್ಞಾನಿಯು ಅನುಷ್ಠಾನ ಮಾಡಿದ ಆ, ಧರ್ಮಃ= ವಿಷ್ಣ್ವರ್ಪಣ

ರೂಪವಾದ ಧರ್ಮವು, ಬಲೀಯಾನ್ ಇತಿ= ಪಾಪನಾಶಕ ಶಕ್ತಿ ಉಳ್ಳದ್ದೆಂದು, ವಿದ್ಧಿ= ತಿಳಿಯುವವನಾಗು. ಇದರಿಂದ ಫಲೋದ್ದೇಶ ಪೂರ್ವಕವಾಗಿ ಅಜ್ಞಾನಿಗಳು ಆಚರಿಸುವ ಕಾಮ್ಯಕರ್ಮಗಳಿಗೆ ಅದರಿಂದ ಉಂಟಾದ ಪುಣ್ಯ-ಪಾಪಗಳ ಫಲಗಳ ಭೋಗವು ನಿಯತವಾಗಿ ಇರುತ್ತದೆ. ಅದೇ ಕರ್ಮಗಳನ್ನು ವಿಷ್ಣ್ವರ್ಪಣ ಬುದ್ಧಿಯಿಂದ ಮಾಡುವ ಜ್ಞಾನಿಗಳಿಗೆ ಪ್ರಬಲವಾದ ಪುಣ್ಯದ ಸಂಬಂಧದಿಂದ ಅನಿಷ್ಟಾಪಾದಕವಾದ ಪಾಪಗಳು ನಾಶವನ್ನು ಹೊಂದುತ್ತವೆ ಎಂಬ ತಾತ್ಪರ್ಯವು ಸೂಚಿತವಾಗುತ್ತದೆ.
ಧೃತರಾಷ್ಟ್ರಃ
ಯಾನಿಹಾಹುಃ ಸ್ವಸ್ಯ ಧರ್ಮಸ್ಯ ಲೋಕಾನ್
ದ್ವಿಜಾತೀನಾಂ ಪುಣ್ಯಕೃತಾಂ ಸನಾತನಾನ್ |
ತೇಷಾಂ ಕ್ರಮಾನ್ ಕಥಯ ತತೋಽಪಿ ಚಾನ್ಯಾನ್
ಏತದ್ ವಿದ್ವನ್ ವೇತ್ತುಮಿಚ್ಛಾಮಿ ಕರ್ಮ ॥6॥
ಧೃತರಾಷ್ಟ್ರ, ಎಲೈ ಸರ್ವಜ್ಞರಾದ ಸನತ್ಸುಜಾತರೇ, ಪುಣ್ಯವನ್ನು ಆಚರಿಸುವ ಬ್ರಾಹ್ಮಣರಿಗೆ ತಾವು ಆಚರಣೆ ಮಾಡಿದ ಪುಣ್ಯದಿಂದ ಯಾವ ಸನಾತನ ಲೋಕಗಳನ್ನು ವೇದಗಳು ಮತ್ತು ಜ್ಞಾನಿಗಳು ಹೇಳುತ್ತಾರೆಯೋ ಆ ಲೋಕಗಳ ಕ್ರಮವನ್ನೂ ಮತ್ತು ಅದಕ್ಕಿಂತ ಅಧಿಕವಾದ ಲೋಕಗಳನ್ನೂ ನಾನು ತಿಳಿಯಲು ಬಯಸುತ್ತೇನೆ. ಈ ಕರ್ಮಸಾಧ್ಯವಾದ ಲೋಕಗಳ ವಿವರವನ್ನು ನನಗೆ ಹೇಳಿ.
ಸನತ್ಸುಜಾತಃ
ಯೇಷಾಂ ಧರ್ಮೇಷು(ವ್ರತೇಽಥ) ವಿಸ್ಪರ್ಧಾ ಬಲೇ ಬಲವತಾಮಿವ |
ತೇ ಬ್ರಾಹ್ಮಣಾ ಇತಃ ಪ್ರೇತ್ಯ ಸ್ವರ್ಗೇ ಯಾಂತಿ ಪ್ರಕಾಶತಾಮ್ ॥7॥
ಈಗ ಪೂರ್ವಶ್ಲೋಕದಲ್ಲಿ ಜ್ಞಾನಿ ಮತ್ತು ಅಜ್ಞಾನಿಗಳು ಆಚರಿಸಿದ ಒಂದೇ ಪುಣ್ಯಕರ್ಮಕ್ಕೆ ಮೋಕ್ಷ ಮತ್ತು ಸ್ವರ್ಗಫಲವನ್ನು ಹೇಳಿ ಮುಂದಿನ ಶ್ಲೋಕಗಳಲ್ಲಿ ಅವುಗಳನ್ನು ವಿವರಿಸುವವರಾಗಿ ಮೊದಲು ಕಾಮ್ಯಕರ್ಮಿಗಳಿಗೆ ಸ್ವರ್ಗಾದಿಗಳು ಉಂಟಾಗುವ ಪ್ರಕಾರವನ್ನು ತಿಳಿಸುತ್ತಾರೆ. ಯೇಷಾಂ= ಯಾವ ವಿಷಯಾಭಿಲಾಷೆಯುಳ್ಳ ಪುರುಷರಿಗೆ, ಧರ್ಮೇಷು= ಪ್ರವೃತ್ತಕರ್ಮಗಳಲ್ಲಿ, ವಿಸ್ಪರ್ಧಾ= ವಿಶೇಷವಾದ ಸ್ಪರ್ಧೆಯು ಇರುತ್ತದೆಯೋ, ಅಧಿಕ ಪುಣ್ಯದಿಂದ ಸ್ವರ್ಗದಲ್ಲಿ ಅಧಿಕ ಸುಖ ಎಂದು ಕೇಳಿ ಸ್ವರ್ಗಸುಖಕ್ಕಾಗಿ ಪುಣ್ಯಕರ್ಮಾನುಷ್ಠಾನವನ್ನು ಮಾಡುವ ಬೇರೆ ಪುರುಷರನ್ನು ನೋಡಿ ನಾನು ಅವರಿಗಿಂತ ಹೆಚ್ಚು ಪುಣ್ಯವನ್ನು ಆಚರಿಸಿ ಸ್ವರ್ಗದಲ್ಲಿ ಅವರಿಗಿಂತ ಹೆಚ್ಚು ಸುಖವನ್ನು ಅನುಭವಿಸುತ್ತೇನೆ ಎಂಬ ಸ್ಪರ್ಧೆಯುಳ್ಳವರಿಗೆ ಎಂದು ಅಭಿಪ್ರಾಯ, ಈ ವಿಷಯದಲ್ಲಿ `ಬಲೇ ಬಲವತಾಮಿವ' ಎಂದು ದೃಷ್ಟಾಂತವನ್ನು ಹೇಳುತ್ತಾರೆ. ತನ್ನ ಸೈನ್ಯದಿಂದ ಕೂಡಿದ ಇನ್ನೊಬ್ಬ ರಾಜನು ತನಗಿಂತ ಬಲಿಷ್ಠನಾಗಿರುವುದನ್ನು ನೋಡಿ ನಾನೂ ಸಹ ಅವನಿಗಿಂತ ದೊಡ್ಡ ಸೈನ್ಯವನ್ನು ಸಂಪಾದಿಸಿ ಯುದ್ಧದಲ್ಲಿ ಅವನನ್ನು ಸೋಲಿಸಿ ಅವನಿಗಿಂತ ಹೆಚ್ಚು ಸುಖವಾಗಿರುತ್ತೇನೆ ಎಂದು ದುರ್ಬಲನಾದ ರಾಜನು ಚಿಂತಿಸುವಂತೆ ಎಂದು ದೃಷ್ಟಾಂತದ ಅಭಿಪ್ರಾಯ. ಕಾಮ್ಯಕರ್ಮವನ್ನು ಅನುಷ್ಠಾನ ಮಾಡುವವರ ಸ್ಪರ್ಧೆಯೂ ಸಹ ಅದೇ ರೀತಿಯಾದುದು. ತೇ ಬ್ರಾಹ್ಮಣಾಃ= ಕಾಮ್ಯಕರ್ಮಾಚರಣೆಯನ್ನು ಮಾಡುವ ಸ್ವಭಾವವುಳ್ಳ ಅದೇ ಬ್ರಾಹ್ಮಣರು, ಇತಃ= ಈ ಭೂಲೋಕದಿಂದ, ಪ್ರೇತ್ಯ= ಮರಣವನ್ನು ಹೊಂದಿ ಹೋಗುವವರಾಗಿ, ಸ್ವರ್ಗೇ= ಸ್ವರ್ಗಲೋಕದಲ್ಲಿ, ಪ್ರಕಾಶತಾಮ್= ಧರ್ಮಾಧಿಕ್ಯದಿಂದ ಸೌಖ್ಯಾಧಿಕ್ಯವನ್ನು, ಕಾಂತಿಯ ಆಧಿಕ್ಯವನ್ನು, ಯಾಂತಿ= ಹೊಂದುತ್ತಾರೆ.
ಯೇಷಾಂ ಧರ್ಮೇ ನ ಚ ಸ್ಪರ್ಧಾ ತೇಷಾಂ ತತ್ ಜ್ಞಾನಸಾಧನಮ್ |
ತೇ ಬ್ರಾಹ್ಮಣಾ ಇತೋ ಮುಕ್ತಾಃ ಸ್ವರ್ಗಂ ಯಾಂತಿ ತ್ರಿವಿಷ್ಟಪಮ್ ॥8॥
ಹೀಗೆ ಸ್ವರ್ಗಾದಿ ಸುಖದಲ್ಲಿ ಆಸೆಯುಳ್ಳ ಪುರುಷರಿಗೆ `ಸ್ವರ್ಗಕಾಮೋ ಯಜೇತ' ಮುಂತಾದ ಶ್ರುತಿಗಳ ಬಾಹ್ಯವಾದ ಅರ್ಥದ ಅನುಸಂಧಾನ ಪೂರ್ವಕವಾಗಿ ಅನುಷ್ಠಾನ ಮಾಡಿದ ಪುಣ್ಯಕರ್ಮಗಳಿಂದ ಅನಿತ್ಯವಾದ ಸ್ವರ್ಗಾದಿ ಲೋಕಪ್ರಾಪ್ತಿಯು ಸ್ವಲ್ಪ ಸಮಯದವರೆಗೆ ಉಂಟಾಗುತ್ತದೆ ಎಂದು ಹೇಳಿ ಈಗ ಭಗವದೇಕನಿಷ್ಠರಾದ ವಿರಕ್ತರಾದ ಜ್ಞಾನಿಗಳು `ಸ್ವರ್ಗಕಾಮೋ ಯಜೇತ' ಎಂಬ ಅದೇ ವಾಕ್ಯದಿಂದ ವಿಹಿತವಾದ ಜ್ಯೋತಿಷ್ಟೋಮಾದಿ ಯಾಗಗಳನ್ನು ಅನುಷ್ಠಾನ ಮಾಡಿ ಸ್ವರ್ಗಶಬ್ದವಾಚ್ಯವಾದ ವೈಕುಂಠಾದಿ ಲೋಕವನ್ನು ಹೊಂದುವ ಪ್ರಕಾರವನ್ನು ತಿಳಿಸುತ್ತಾರೆ.
ಯೇಷಾಂ= ಯಾವ ಜ್ಞಾನಿಗಳಿಗೆ, ಧರ್ಮೇ= ಸಕಾಮ ಧರ್ಮಾಚರಣೆಯಲ್ಲಿ, ಸ್ಪರ್ಧಾ ನ ಚ= ಅನಿತ್ಯವಾದ ಫಲವು ಹೇಯವೆಂದು ತಿಳಿದಿರುವುದರಿಂದ ಫಲದ ಆಸೆಯುಳ್ಳವರಿಗೆ ಇರುವಂತೆ ಸ್ಪರ್ಧೆ ಇರುವುದಿಲ್ಲವೋ, ಫಲದ ಆಸೆಯನ್ನು ಬಿಟ್ಟು ತಾವು ವಿಧಿ-ನಿಷೇಧಕ್ಕೆ ವಿಷಯವಾಗಿರುವುದರಿಂದ ಕರ್ಮಾಚರಣೆಯು ವಿಹಿತವಾಗಿರುವುದರಿಂದ ವಿಷ್ಣುಪ್ರೀತ್ಯರ್ಥವಾಗಿಯೇ ಕರ್ಮಗಳನ್ನು ಆಚರಿಸುತ್ತೇನೆ ಎಂದು ಆಚರಣೆ ಮಾಡುತ್ತಾರೆಯೋ ಎಂದು ತಾತ್ಪರ್ಯ. ಇಂತಹ ವಿಧವಾದ ಸ್ವಭಾವವು ಯಾರಲ್ಲಿರುತ್ತದೆಯೋ, ತೇಷಾಂ= ಅಂತಹ ಜ್ಞಾನಿಗಳಿಗೆ, ತತ್= ಅವರು ಮಾಡುವ ಧರ್ಮಾಚರಣೆಯು, ಜ್ಞಾನಸಾಧನಮ್= ಅಪರೋಕ್ಷ ಜ್ಞಾನ ಸಾಧನವಾಗುತ್ತದೆ, ತೇ ಬ್ರಾಹ್ಮಣಾಃ= ಇಂತಹ ಆಚರಣ ಶೀಲರಾದ, ಬ್ರಹ್ಮ ಜಿಜ್ಞಾಸಾ ಶೀಲರಾದ ಜ್ಞಾನಿಗಳು, ಇತಃ= ಈ ಲೋಕದಿಂದ ಅಥವಾ ಲಿಂಗದೇಹದಿಂದ, ಮುಕ್ತಾಃ= ಬಿಡುಗಡೆಯನ್ನು ಹೊಂದಿದವರಾಗಿ, ತ್ರಿವಿಷ್ಟಪಂ= ಶ್ವೇತದ್ವೀಪಾನಂತಾಸನವೈಕುಂಠ ಎಂಬ ಮೂರು ಸ್ಥಾನಗಳುಳ್ಳ, ಸ್ವರ್ಗಂ= ಮೋಕ್ಷವನ್ನು, ಅಥವಾ `ಪರಃ ಸ್ವೋ ಹರಿರುದ್ದಾಮಃ' ಎಂಬ ಕೋಶವಿರುವುದರಿಂದ ಸ್ವತಂತ್ರನಾದ ಮತ್ತು ಜ್ಞಾನರೂಪನಾದ ವಿಷ್ಣುವನ್ನು, ಯಾಂತಿ= ಹೊಂದುತ್ತಾರೆ, ವೈಕುಂಠಾದಿ ಲೋಕಗತನಾದ ವಿಷ್ಣುವನ್ನೇ ಹೊಂದುತ್ತಾರೆ ಎಂದು ತಾತ್ಪರ್ಯ.
ತಸ್ಯ ಸಮ್ಯಕ್ ಸಮಾಚಾರಮಾಹುರ್ವೇದವಿದೋ ಜನಾಃ |
ನೈನಂ ಮನ್ಯೇತ ಭೂಯಿಷ್ಠಂ ಬಾಹ್ಯಮಾಭ್ಯಂತರಂ ಜನಃ |
ಯತ್ರ ಮನ್ಯೇತ ಭೂಯಿಷ್ಠಂ ಪ್ರಾವೃಷೀವ ತೃಣೋದಕಮ್ ॥9॥
ಜ್ಞಾನಪೂರ್ವಕವಾಗಿ ಅನುಷ್ಠಾನ ಮಾಡುವ ಸ್ವಭಾವವುಳ್ಳ ಜ್ಞಾನಿಯ ಆಚರಣೆಯೇ ಶ್ರೇಷ್ಠವಾದುದೆಂಬ ವಿಷಯದಲ್ಲಿ ಶಿಷ್ಟಸಮ್ಮತಿಯು ಇದೆ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ವೇದವಿದಃ= `ವೇದೋ ನಾರಾಯಣಸ್ಸಾಕ್ಷಾತ್' ಎಂಬ ವಚನದಂತೆ ವೇದ

ಎಂದರೆ ವಿಷ್ಣು, ಅವನನ್ನು ತಿಳಿದವರು ವೇದವಿದರು ಅಥವಾ ಎಲ್ಲ ವೇದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿದವರು ವೇದವಿದರು. ಜನಾಃ= ಜ್ಞಾನಿ ಜನರು, ತಸ್ಯ= ನಿಷ್ಕಾಮನೆಯಿಂದ ವಿಷ್ಣುಪ್ರೀತ್ಯರ್ಥವಾಗಿಯೇ ಸರ್ವಧರ್ಮಗಳನ್ನೂ ಆಚರಣೆಯನ್ನು ಮಾಡುವ ಸ್ವಭಾವವುಳ್ಳ ಜ್ಞಾನಿಯ, ಆಚಾರಂ= ವಿಷ್ಣ್ವರ್ಪಣ ರೂಪವಾದ ಆಚಾರವನ್ನು, ಸಂ= ಸಮೀಚೀನವಾದುದೆಂಬ, ಸಮ್ಯಕ್ ಆಹುಃ= ಚೆನ್ನಾಗಿ ಹೇಳುತ್ತಾರೆ. ಜ್ಞಾನಿಗಳು ಜ್ಞಾನಪೂರ್ವಕವಾಗಿ ಕರ್ಮಾನುಷ್ಠಾನ ಮಾಡುವುದೇ ಬಹಳ ಶ್ರೇಷ್ಠವೆಂದು ಹೇಳುತ್ತಾರೆ ಎಂದು ಅಭಿಪ್ರಾಯ. ಇಂತಹ ಜ್ಞಾನಿಗಳ ಸ್ವರೂಪವು ಅಜ್ಞಾನಿಗಳಿಗೆ ತಿಳಿಯುವುದಿಲ್ಲ ಎಂದು ಮುಂದಿನ ಸಾಲಿನಲ್ಲಿ ಹೇಳುತ್ತಾರೆ. ಜನಃ= ವಿಷಯ ಅಭಿಲಾಷೆಯುಳ್ಳ ಜನರು, ಏನಂ= ಜ್ಞಾನಪೂರ್ವಕವಾಗಿ ಕರ್ಮಾನುಷ್ಠಾನ ಮಾಡುವ ಸ್ವಭಾವವುಳ್ಳ, ಬಾಹ್ಯಂ= ಅಪರೋಕ್ಷ ಜ್ಞಾನವಿಲ್ಲದ ಜ್ಞಾನಿಯನ್ನು, ಆಂತರಂ= ಅಪರೋಕ್ಷ ಜ್ಞಾನವುಳ್ಳ ಜ್ಞಾನಿಯನ್ನು, ಭೂಯಿಷ್ಠಂ= `ಭೂಃ ಪೂರ್ಣತಾಯಾಮ್' ಎಂಬ ಧಾತು ಇರುವುದರಿಂದ, ಯ ಕಾರವು ಜ್ಞಾನವನ್ನು ಹೇಳುವುದರಿಂದ, ಭೂಯಃ ಎಂದರೆ ಪೂರ್ಣಜ್ಞಾನವುಳ್ಳ ವಿಷ್ಣು, ಅವನಲ್ಲಿ ಸ್ಥಾ ಎಂದರೆ ಚಾಂಚಲ್ಯವಿಲ್ಲದೇ ಮನಸ್ಸಿನಿಂದ ನಿಂತಿರುವವರು, ಭಗವದೇಕನಿಷ್ಠೆಯುಳ್ಳವರು ಎಂದು ಅರ್ಥ. ನ ಮನ್ಯೇತ= ತಿಳಿಯುವುದಿಲ್ಲ. ಇದರಿಂದ ಅಪರೋಕ್ಷ ಜ್ಞಾನವುಳ್ಳ ಮತ್ತು ಅಪರೋಕ್ಷ ಜ್ಞಾನವಿಲ್ಲದಿರುವ ಉಭಯ ವಿಧವಾದ ಜ್ಞಾನಿಗಳ ಸ್ವರೂಪವೂ ಅವರ ಪ್ರವೃತ್ತಿಯೂ ಅಜ್ಞಜನರಿಗೆ ತಿಳಿಯುವುದಿಲ್ಲ ಎಂದು ಹೇಳಿದ್ದಾಯಿತು. ಅಥವಾ ಬಾಹ್ಯಂ= ಕಾಮ್ಯ ರೂಪವಾದ ಧರ್ಮವನ್ನು, ಆಂತರಂ= ನಿಷ್ಕಾಮ ರೂಪವಾದ ಧರ್ಮವನ್ನು, ಏನಂ= ವಿಷ್ಣುಪ್ರೀತಿ ಸಾಧನವಾದ ಈ ಎರಡು ಧರ್ಮವನ್ನು, ಜನಃ= ಬಹಿರ್ಮುಖರಾದ ಜನರು, ನ ಮನ್ಯೇತ= ಇದೇ ಮೋಕ್ಷಸಾಧನವಾದ ಮಹಾಧರ್ಮವೆಂದು ತಿಳಿಯುವುದಿಲ್ಲ, ವಿಷಯಾಭಿಲಾಷೆಯುಳ್ಳ ಬಹಿರ್ಮುಖರಾದ ಜನರಿಗೆ ಭಾಗವತ ಧರ್ಮದಲ್ಲಿ ಶ್ರೇಷ್ಠತ್ವ ಜ್ಞಾನವು ಇರುವುದಿಲ್ಲ ಎಂದು ಅಭಿಪ್ರಾಯ.

ಪ್ರಾಕೃತರಿಗೆ ಜ್ಞಾನಿಗಳ ಸ್ವರೂಪವು ತಿಳಿಯದಿದ್ದರೂ ಯಾರಿಗೂ ತಿಳಿಯುವುದಿಲ್ಲ ಎಂಬ ಪ್ರಸಂಗವಿಲ್ಲ. ಜ್ಞಾನಿಗಳಿಗೇ ಜ್ಞಾನಿಗಳ ಸ್ವರೂಪವು ತಿಳಿಯುತ್ತದೆ ಎಂದು ಮುಂದಿನ ಪಾದದಿಂದ ಹೇಳುತ್ತಾರೆ. ಯತ್ರ= ಯಾವ ಜ್ಞಾನಿಯು ದೃಷ್ಟನಾದರೆ, ಜ್ಞಾನಿಯಾದ ಪುರುಷನೇ, ಭೂಯಿಷ್ಠಂ ಮನ್ಯೇತ= ನಾನು ನೋಡಿದ ಈ ಜ್ಞಾನಿಯು ಮಹಾತ್ಮನಾದವನು ಎಂದು ತಿಳಿಯುತ್ತಾನೆಯೋ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ಪ್ರಾವೃಷಿ= ಮಳೆಗಾಲದಲ್ಲಿ, ತೃಣೋದಕಮಿವ= ಇರುವ ತೃಣೋದಕದಂತೆ ಎಂದರೆ ಮಳೆಗಾಲದಲ್ಲಿ ತೃಣವು ಮತ್ತು ಉದಕವು ಹೇರಳವಾಗಿರುವುದರಿಂದ ಜ್ಞಾನಿಯು ಪ್ರತ್ಯಕ್ಷವಾಗಿ ಅದನ್ನು ನೋಡುತ್ತಾನೆ, ಅಜ್ಞಾನಿಯು ಮಾತ್ರ ತೃಣದಿಂದ ಆಚ್ಛಾದಿತವಾದ ಉದಕವು ಹೇಗೆ ಕಾಣುವುದಿಲ್ಲವೋ ಅದರಂತೆ ಜ್ಞಾನಿಗಳ ಮಾಹಾತ್ಮ್ಯವನ್ನು ಕಾಣುವುದಿಲ್ಲ ಎಂದು ಅಭಿಪ್ರಾಯ. ಈ ದೃಷ್ಟಾಂತವು ಮಹತ್ತ್ವಜ್ಞಾನ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

ಅನ್ನಂ ಪಾನಂ ಬ್ರಾಹ್ಮಣಸ್ಯ ತಜ್ಜೀವನ್ ನಾನುಸಂಜ್ವರೇತ್ |
ಯತ್ರಾಕಥಯಮಾನಸ್ಯ ಪ್ರಯಚ್ಛತ್ಯಶಿವಂ ಭಯಮ್ ॥10॥

ಅನ್ನಂ ಪಾನಂ= ಅನ್ನ ಮತ್ತು ಪಾನಗಳು, ಬ್ರಾಹ್ಮಣಸ್ಯ= ಬ್ರಾಹ್ಮಣನ ಭಾಗವಾಗಿವೆ, ತತ್= ಆದ್ದರಿಂದ ಜೀವನಾರ್ಥಿಯಾದ ಜ್ಞಾನಿಯು, ಅನು= ಅನ್ನಾದಿಗಳಿಗಾಗಿ, ನ ಸಂಜ್ವರೇತ್= ಕ್ಲೇಶವನ್ನು ಪಡಬಾರದು, ಯತ್ರ= ಯಾವ ಜ್ಞಾನಿಯ ವಿಷಯದಲ್ಲಿ, ಅಕಥಯಮಾನಸ್ಯ= ಆಹ್ವಾನವನ್ನು ಮಾಡದಿರುವ ಪುರುಷನಿಗೆ ಉಂಟಾದ, ಅಶಿವಂ= ಪಾಪವು, ನರಕ ಭಯವನ್ನು, ಪ್ರಯಚ್ಛತಿ= ಕೊಡುತ್ತದೆ.

ಅಥವಾ ಜ್ಞಾನಿಗೇ ಮಹತ್ವವಿದೆ ಎಂಬ ಕಾರಣದಿಂದ ಗೃಹಸ್ಥನಾಗಿ ಜೀವಿಸುವ ಪುರುಷನು ಬ್ರಹ್ಮಜ್ಞಾನ ಸಂಪನ್ನನಾದ ಜ್ಞಾನಿಗೆ ಸದನ್ನವನ್ನು ಮತ್ತು ಶುಚಿಯಾದ ಉದಕವನ್ನು ಕೊಟ್ಟು, ನಾನುಸಂಜ್ವರೇತ್= ಅಭಿತಪ್ತನಾಗುವುದಿಲ್ಲ, ಸಾಂಸಾರಿಕ ತಾಪತ್ರಯಗಳಿಂದ ಪೀಡಿತನಾಗುವುದಿಲ್ಲ. `ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ', (ಮಹಾತ್ಮರ ಸೇವೆಯನ್ನು ಮುಕ್ತಿಯ ದ್ವಾರವೆಂದು ಹೇಳುತ್ತಾರೆ). `ಸತ್ಸಂಗಮೋ ತದ್ಯೈವ ಸದ್ಗತೌ' (ಸಜ್ಜನರ ಸಹವಾಸವೇ ಸದ್ಗತಿಗೆ ಕಾರಣ) ಇತ್ಯಾದಿ ವಚನಗಳಿಂದ ಮಹಾತ್ಮರ ಸೇವೆಯು ಮಹಾಫಲಪ್ರದವೆಂದು ತಿಳಿದು ಬರುತ್ತದೆ. ಆದ್ದರಿಂದ ಮಹಾತ್ಮರ ಸೇವೆಯೇ ಸಂಸಾರಿಗಳಿಗೆ ಸರ್ವಾನಿಷ್ಟನಿವರ್ತಕವಾದುದೆಂದು ಇಲ್ಲಿ ಸೂಚಿಸಲ್ಪಡುತ್ತದೆ.

ಮಹಾಫಲ ಪ್ರಾಪ್ತಿಯನ್ನು ಕುರಿತು ಎಲ್ಲ ಸಾಧನಗಳಲ್ಲಿ ಮಹತ್ಸೇವೆಯೇ ಮುಖ್ಯವಾದ ಸಾಧನವಾದ್ದರಿಂದ ಸನ್ಮಾರ್ಗದಲ್ಲಿ ನಡೆಯುವ ಪುರುಷನು

`ಊರ್ಧ್ವಂ ಪ್ರಾಣಾ ಉತ್ಕ್ರಮಂತಿ ಯೂನಃ ಸ್ಥವಿರ ಆಗತೇ |
ಅಭ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥',

(ಹಿರಿಯರು ಬಂದಾಗ ಯುವಕರ ಪ್ರಾಣಗಳು ಮೇಲಕ್ಕೆ ಎದ್ದು ಹೊರಡಲು ಉದ್ಯುಕ್ತವಾಗುತ್ತವೆ. ಚಿಕ್ಕವರು ಎದ್ದು ನಮಸ್ಕಾರವನ್ನು ಮಾಡಿದ ಮೇಲೆ ಆ ಪ್ರಾಣಗಳು ತಮ್ಮ ಸ್ಥಾನದಲ್ಲಿಯೇ ನೆಲೆಸುತ್ತವೆ).

`ದೃಷ್ಟಿಂ ದದ್ಯಾನ್ಮನೋ ದದ್ಯಾತ್ ವಾಚಂ ದದ್ಯಾಚ್ಚ ಸೂನೃತಾಮ್ |
ಉತ್ಥಾಯ ಚಾಸನಂ ದದ್ಯಾದೇಷ ಧರ್ಮಃ ಸನಾತನಃ ॥'

(ದೊಡ್ಡವರು ಬಂದಾಗ ಮೊದಲು ದೃಷ್ಟಿಯನ್ನು ಕೊಡಬೇಕು, ಅನಂತರ ಮನಸ್ಸನ್ನು ಕೊಡಬೇಕು, ಅನಂತರ ಮಧುರವಾದ ಮಾತನ್ನು ಕೊಡಬೇಕು, ಎದ್ದು ಆಸನವನ್ನು ಕೊಡಬೇಕು ಇದು ಸನಾತನವಾದ ಧರ್ಮ).

ಇವೇ ಮುಂತಾದ ಪ್ರಮಾಣಗಳಿಗೆ ಅನುಸಾರವಾಗಿ ಮಹತ್ಸೇವೆಯನ್ನೇ ಮಾಡಬೇಕು. ಇಲ್ಲದಿದ್ದರೆ ತನಗೆ ಅನರ್ಥ ಉಂಟಾಗುತ್ತದೆ ಎಂದು ಶ್ಲೋಕದ ಉತ್ತರಾರ್ಧದಿಂದ ಪ್ರತಿಪಾದನೆ ಮಾಡುತ್ತಾರೆ.

ಯತ್ರ= ಯಾವ ಜ್ಞಾನಿಯು ನೋಡಲ್ಪಟ್ಟಾಗ, ಅಕಥಯಮಾನಸ್ಯ= ಅವನ ಜೊತೆಯಲ್ಲಿ ಭಕ್ತಿಯಿಂದ ಕುಶಲ ಪ್ರಶ್ನಾದಿ ಸಂಭಾಷಣೆಯನ್ನು ಮಾಡದಿರುವ ಮನುಷ್ಯನ, ಅಶಿವಂ= ಅಲ್ಪಾಯುಸ್ಸನ್ನು ಹೊಂದಿ ಉಂಟಾಗುವ ಮರಣಾದಿ ರೂಪವಾದ ಅಮಂಗಳವು, ಭಯಂ= ಪಾರತ್ರಿಕ ನರಕಾದಿ ಭಯವನ್ನು, ಪ್ರಯಚ್ಛತಿ= ಕೊಡುತ್ತದೆ. ಪ್ರಯಚ್ಛಂತಿ ಎಂದು ಪಾಠವಿದ್ದರೆ ಅಲ್ಪಾಯುಷ್ಯಾದಿ ಮರಣಾದಿ ರೂಪವಾದ ಅಮಂಗಳವನ್ನು ಮತ್ತು ಪಾರತ್ರಿಕವಾದ ನರಕ ಭಯವನ್ನು ದೇವತೆಗಳು ಕೊಡುತ್ತಾರೆ

ಎಂದು ಅರ್ಥ ಮಾಡಬೇಕು.
ಅತಿರಿಕ್ತಮಿವಾಕುರ್ವನ್ ಸ ಶ್ರೇಯಾನ್ ನೇತರೋ ಜನಃ |
ಯೋ ವಾऽಕಥಯಮಾನಸ್ಯ ಹ್ಯಾತ್ಮಾನಂ ನಾನುಸಂಜ್ವರೇತ್ ॥11॥
ಯಾವ ಜ್ಞಾನಿಯನ್ನು ನೋಡಿದಾಗ ಸತ್ಕಾರವನ್ನು ಮಾಡದಿದ್ದರೆ ದೊಡ್ಡ ಅನರ್ಥದ ಪ್ರಾಪ್ತಿಯಾಗುವುದೋ ಅಂತಹ ಜ್ಞಾನಿಯ ಲಕ್ಷಣವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.
ಯಾವ ಜ್ಞಾನಿಯು ತನ್ನನ್ನು, ಅತಿರಿಕ್ತಂ ಇವ= ಇನ್ನೊಬ್ಬರು ಅವಮಾನವನ್ನು ಮಾಡಿದಾಗ ಕೋಪಾದಿಗಳ ಅತಿರೇಕವನ್ನು ಹೊಂದಿದವನಂತೆ, ನ ಕುರ್ವನ್= ತನ್ನನ್ನು ಮಾಡಿಕೊಳ್ಳದೆ ಇರುತ್ತಾನೆಯೋ, ಸಃ= ಅಂತಹ ಜ್ಞಾನಿಯೇ, ಶ್ರೇಯಾನ್= ಶ್ರೇಷ್ಠನಾದವನು. ಅವನೇ ಅಧಿಕ ಪುಣ್ಯವನ್ನು ಹೊಂದಿದವನು ಮತ್ತು ಶ್ರೇಷ್ಠನಾದವನು ಎಂದು ಅರ್ಥ. ಇತರಃ ಜನಃ= ಮಾನಾಪಮಾನಗಳಿಂದ ಉಂಟಾದ, ಸುಖ-ದುಃಖಾದಿಗಳಿಂದ ಉಂಟಾದ, ರಾಗ-ದ್ವೇಷಗಳನ್ನು ಹೊಂದುವ ಮನುಷ್ಯನು, ನ ಶ್ರೇಯಾನ್= ಶ್ರೇಷ್ಠನಲ್ಲ. ಹೀಗೆ ಹೇಳಿರುವುದರಿಂದ
`ವಾಸ್ಯೈಕಂ ತಕ್ಷತೋ ಬಾಹುಂ ಚಂದನೇನೈಕಮುಕ್ಷತಃ |
ನಾಕಲ್ಯಾಣಂ ನ ಕಲ್ಯಾಣಂ ಚಿಂತಯೀತೋಭಯೋಸ್ತಯೋಃ ॥'
(ಒಂದು ಬಾಹುವನ್ನು ಒಬ್ಬನು ಬಾಚಿಯಿಂದ ಕೆತ್ತಿದರೂ, ಇನ್ನೊಂದು ಬಾಹುವಿಗೆ ಇನ್ನೊಬ್ಬನು ಚಂದನದಿಂದ ಲೇಪವನ್ನು ಮಾಡಿದರೂ ಆ ಇಬ್ಬರ ಪುರುಷರ ವಿಷಯದಲ್ಲಿ ಒಳ್ಳೆಯದನ್ನಾಗಲೀ ಅಥವಾ ಕೆಟ್ಟದನ್ನಾಗಲೀ ಚಿಂತಿಸದೆ ಇರುವವನು ಶ್ರೇಷ್ಠನಾದ ಜ್ಞಾನಿಯಾದವನು) ಎಂಬ ಪ್ರಮಾಣಕ್ಕೆ ಅನುಸಾರಿಯಾದ ಪ್ರವೃತ್ತಿಯುಳ್ಳವನೇ ಅಪರೋಕ್ಷ ಜ್ಞಾನಿಯಾದವನು. ಉತ್ಸೇಕಾದಿಗಳಿಗೆ ಒಳಗಾದವನು ಜ್ಞಾನಿಯಲ್ಲ ಎಂದು ಜ್ಞಾನಿಯ ಲಕ್ಷಣವು ಹೇಳಲ್ಪಡುತ್ತದೆ. ಅದರಂತೆ `ಜನೇನಾವಮತೋ ಯೋಗೀ ಯೋಗಸಿದ್ಧಿಂ ಸ ವಿಂದತಿ' (ಜನರಿಂದ ಅವಮಾನಕ್ಕೆ ಒಳಗಾದ ಯೋಗಿಯು ಯೋಗಸಿದ್ಧಿಯನ್ನು ಪಡೆಯುತ್ತಾನೆ).
`ಸಮ್ಮಾನಾದ್ ಬ್ರಾಹ್ಮಣೋ ನಿತ್ಯಮುದ್ವಿಜೇನ ವಿಷಾದಿವ |
ಅಸನ್ಮಾನಾತ್ ತಪೋವೃದ್ಧಿಃ ಸನ್ಮಾನಾತ್ ತಪಸಃ ಕ್ಷಯಃ ॥'
(ಬ್ರಾಹ್ಮಣನಾದವನು ವಿಷಕ್ಕೆ ಹೆದರುವಂತೆ ತನ್ನ ಸನ್ಮಾನಕ್ಕೆ ಯಾವಾಗಲೂ ಹೆದರಬೇಕು. ಯಾರಿಂದಲೂ ಸನ್ಮಾನವನ್ನು ಸ್ವೀಕರಿಸದಿದ್ದರೆ ಅವನ ತಪಸ್ಸು ವೃದ್ಧಿಯನ್ನು ಹೊಂದುತ್ತದೆ. ಸನ್ಮಾನದಿಂದ ತಪಸ್ಸಿನ ಕ್ಷಯವಾಗುತ್ತದೆ). ಇವೇ ಮೊದಲಾದ ಪ್ರಮಾಣಗಳು ಹೇಳಿದ ಅನುಸಂಧಾನವನ್ನು ಹೊಂದಿ ಅಭಿಮಾನಶೂನ್ಯನಾದವನೇ ಜ್ಞಾನಿ ಎಂದು ಅವನ ಲಕ್ಷಣವನ್ನು ಉತ್ತರಾರ್ಧದಲ್ಲಿಯೂ ಹೇಳುತ್ತಾರೆ. ಯಃ= ವಿಷಯ ಸ್ನೇಹವಿಲ್ಲದಿರುವ ಯಾವ ಜ್ಞಾನಿಯು, ಅಕಥಯಮಾನಸ್ಯ= ಇನ್ನೊಬ್ಬರು ತನ್ನನ್ನು ಹೊಗಳಿ ತನಗೆ ಖ್ಯಾತಿಯನ್ನು ಉಂಟುಮಾಡದಿದ್ದಾಗ, ನಾನುಸಂಜ್ವರೇತ್= ಖೇದಾದಿಗಳಿಂದ ತನ್ನ ಮನಸ್ಸಿಗೆ ತಾಪವನ್ನು ಉಂಟುಮಾಡಿಕೊಳ್ಳುವುದಿಲ್ಲವೋ (ಅವನೇ ಶ್ರೇಷ್ಠನಾದ ಜ್ಞಾನಿ). ಇದು ಜ್ಞಾನಿಯ ಇನ್ನೊಂದು ಲಕ್ಷಣ.
ಬ್ರಹ್ಮಸ್ವಂ ನೋಪಹನ್ಯಾದ್ವಾ ತದನ್ನಂ (ತದ್ದತ್ತಂ) ಸಮ್ಮತಂ ಸತಾಮ್ |
ಕುಶವಲ್ಕಲಚೇಲಾದ್ಯಂ ಬ್ರಹ್ಮ ಸ್ವಂ ಯೋಗಿನೋ ವಿದುಃ ॥12॥
ಬ್ರಹ್ಮಸ್ವಂ= ಪರಬ್ರಹ್ಮನ ಸ್ವತ್ತಾದ ಸರ್ವಸ್ವಾತಂತ್ರ್ಯಾದಿ ಧರ್ಮವನ್ನು, ನೋಪಹನ್ಯಾತ್= ಹಿಂಸಿಸಬಾರದು. ಇಲ್ಲಿ ಬ್ರಹ್ಮಸ್ವಹನನ ಎಂದರೆ `ಅಹಂ ಬ್ರಹ್ಮಾಸ್ಮಿ' ಎಂದು ತನ್ನಲ್ಲಿ ಪರಬ್ರಹ್ಮನ ಅಭೇದವನ್ನು ಚಿಂತಿಸಿ ದುಷ್ಟವಾದ ಉಪಾಸನೆಯನ್ನು ಮಾಡುವುದು ಎಂದು ಅರ್ಥ. ತತ್‌ದತ್ತಂ= ವಿಷಯಾಲಂಬುದ್ಧಿಯುಳ್ಳ ಬ್ರಹ್ಮಜ್ಞಾನಿಗೆ ಕೊಟ್ಟ ಅನ್ನವು, ಸತಾಂ= ಸಜ್ಜನರಿಗೆ, ಸಮ್ಮತಂ= ಶ್ರೇಷ್ಠವಾದುದು, `ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್' (ಸತ್ಪಾತ್ರರಲ್ಲಿ ಮಾಡಿದ ದಾನವು ಖಂಡಿತವಾಗಿ ಶುಭಫಲವನ್ನು ಕೊಡುತ್ತದೆ ಎಂಬ ಅನುಸಂಧಾನದಿಂದ) ಜ್ಞಾನಿಗಳಿಗೆ ಸಮರ್ಪಿತವಾದ ದ್ರವ್ಯವು, ಸತಾಂ= ಜ್ಞಾನಿಗಳಿಗೆ, ಸಮ್ಮತಂ= ಮಹಾಫಲಪ್ರದವೆಂದು ಸಮ್ಮತವಾಗಿರುತ್ತದೆ. ಅಥವಾ ತತ್ ದತ್ತಂ= ಅಂತಹ ಬ್ರಹ್ಮಜ್ಞಾನಿಯು ಕೊಟ್ಟ ಅನ್ನಾದಿಗಳು, ಸತಾಂ= ಸಜ್ಜನರಿಗೆ, ಸಮ್ಮತಂ= ಬಹಳ ಶ್ರೇಯಸ್ಕರವಾದುದು.
`ಪಾತಕೇ ಮಹತಿ ಪ್ರಾಪ್ತೇ ಪ್ರಾಯಶ್ಚಿತ್ತವಿವರ್ಜಿತೇ |
ಯಾಚಯೇದ್ ವೈಷ್ಣವಸ್ಯಾನ್ನಂ ತದಭಾವೇ ಜಲಂ ಪಿಬೇತ್ ॥'
(ಪ್ರಾಯಶ್ಚಿತ್ತವಿಲ್ಲದಂತಹ ಮಹಾಪಾತಕವನ್ನು ಮಾಡಿದಾಗ ವೈಷ್ಣವರ ಅನ್ನವನ್ನು ಯಾಚಿಸಬೇಕು. ಅದು ದೊರೆಯದಿದ್ದರೆ ನೀರನ್ನು ಮಾತ್ರ ಕುಡಿಯಬೇಕು) ಎಂದು ಪ್ರಮಾಣವಿರುವುದರಿಂದ ಜ್ಞಾನಿಗಳು ಕೊಟ್ಟ ಅನ್ನಾದಿಗಳನ್ನು ಸ್ವೀಕಾರ ಮಾಡುವುದರಿಂದ ಪಾತಕಿಗಳಿಗೆ ಮಹಾಪಾಪಗಳು ನಿವೃತ್ತವಾಗುತ್ತವೆಂಬುದು ಜ್ಞಾನಿಗಳಿಗೆ ಸಮ್ಮತವಾದುದು ಎಂದೂ ಅರ್ಥ.
ಯಥಾ ಸ್ವಂ ವಾಂತಮಶ್ನಾತಿ ಶ್ವಾ ವೈ ನಿತ್ಯಮಭೂತಯೇ |
ಏವಂ ತೇ ವಾಂತಮಶ್ನಾತಿ ಸ್ವವೀರ್ಯಸ್ಯೋಪಭೋಜನಾತ್ ॥13॥
ಪರಮಹಂಸಾಚಾರ್ಯರೂ, ಸರ್ವಜ್ಞರೂ ಆದ ಸನತ್ಸುಜಾತ ಮುನಿಗಳು ಇದುವರೆಗೆ ಗೃಹಸ್ಥಾಶ್ರಮಿಗಳು ಅನುಷ್ಠಾನ ಮಾಡಬೇಕಾದ ಕಾಮ್ಯಕರ್ಮನ್ಯಾಸವನ್ನು `ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ', `ಸ ಸನ್ನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ' (ಕಾಮ್ಯಕರ್ಮವನ್ನು ತ್ಯಾಗ ಮಾಡುವುದೇ ಸಂನ್ಯಾಸವೆಂದು ಜ್ಞಾನಿಗಳು ತಿಳಿಯುತ್ತಾರೆ, ಅವನೇ ಸಂನ್ಯಾಸಿ ಮತ್ತು ಯೋಗಿ. ಅಗ್ನಿಕಾರ್ಯವನ್ನು ಮಾಡದವನು ಮತ್ತು ಬೇರೆ ಕ್ರಿಯೆಗಳನ್ನು ಮಾಡದವನು ಸಂನ್ಯಾಸಿಯಲ್ಲ) ಇತ್ಯಾದಿ ಪ್ರಮಾಣಗಳಿಗೆ ಅನುಸಾರವಾಗಿ ನಿರೂಪಣೆ ಮಾಡಿ ಈಗ ಪರಮಹಂಸಾಶ್ರಮಧರ್ಮಗಳನ್ನು ಹೇಳಲು ಬಯಸಿ ಚತುರ್ಥಾಶ್ರಮವನ್ನು ಸ್ವೀಕರಿಸಿದವರು ತಮ್ಮ ಆಶ್ರಮ ಧರ್ಮವನ್ನು ತಿಳಿಯದೇ ತಾವು ಪೂರ್ವಾಶ್ರಮದಲ್ಲಿ ಸಂಪಾದಿಸಿದ ಧನ-ಕನಕಾದಿಗಳಿಂದ ತಮ್ಮ ದೇಹ ಯಾತ್ರೆಯನ್ನು ಮಾಡಿದರೆ ಮಹಾ ಅನರ್ಥಪ್ರಾಪ್ತಿಯಾಗುತ್ತದೆ ಎಂದು ದೃಷ್ಟಾಂತಪೂರ್ವಕವಾಗಿ ಉಪಪಾದನೆ ಮಾಡುತ್ತಾರೆ. ಮೂಢರಾದ ಮನುಷ್ಯರು ಶ್ವಾವೈ= ನಾಯಿಗಳಂತೆ, ಅಭೂತಯೇ= ತಮ್ಮ ಪಾಪಕರ್ಮದ ಫಲದ ಭೋಗಕ್ಕಾಗಿ, ನಿತ್ಯಂ= ಯಾವಾಗಲೂ, ವಾಂತಂ= ತಾವು ವಮನ ಮಾಡಿದುದನ್ನೇ, ಅಶ್ನಂತಿ= ತಿನ್ನುತ್ತಾರೆ. ಹೇಗೆ ನಾಯಿಗಳು ತಾವು ವಾಂತಿ ಮಾಡಿದುದನ್ನೇ

ಪುನಃ ತಿನ್ನುತ್ತವೆಯೋ ಅದರಂತೆ ಮೂಢರಾದ ಪುರುಷರು ಸಂನ್ಯಾಸವನ್ನು ಸ್ವೀಕರಿಸಿ, ಸಂನ್ಯಾಸಧರ್ಮವನ್ನು ತಿಳಿಯದೆ ಮೂರ್ಖ ಸಂನ್ಯಾಸಿಗಳಾಗಿ, ಸ್ವವೀರ್ಯಸ್ಯ= ತಾವು ಸಂನ್ಯಾಸವನ್ನು ಸ್ವೀಕರಿಸುವ ಮೊದಲೇ ತಮ್ಮ ಸಾಮರ್ಥ್ಯದಿಂದ ಸಂಪಾದಿಸಿದ ವಸ್ತುಗಳ, ಉಪಭೋಜನಾತ್= ಉಪಭೋಗದಿಂದ ತಮ್ಮ ದೇಹಯಾತ್ರೆಯನ್ನು ನಡೆಸುವುದರಿಂದ, ವಾಂತಂ= ತಮ್ಮ ವಮನವನ್ನೇ, ಅಶ್ನಂತಿ= ತಿನ್ನುತ್ತಾರೆ ಎಂದು ಹೇಳಲ್ಪಡುತ್ತಾರೆ. ಸಂನ್ಯಾಸವನ್ನು ತೆಗೆದುಕೊಳ್ಳುವಾಗ, `ಸರ್ವಂ ಸಂನ್ಯಸ್ತಂ' ಎಂದು ಹೇಳಿ ತಾವು ಅಲ್ಲಿಯವರೆಗೆ ಸಂಪಾದಿಸಿದ್ದೆಲ್ಲವನ್ನೂ ಪರಿತ್ಯಾಗವನ್ನು ಮಾಡಿ ಅನಂತರ ಸಂನ್ಯಾಸವನ್ನು ತೆಗೆದುಕೊಳ್ಳುವುದರಿಂದ ಸಂನ್ಯಾಸಾಶ್ರಮಸ್ವೀಕಾರದ ನಂತರದಲ್ಲಿಯೂ ಮೊದಲಿನ ವಿತ್ತಾದಿಗಳನ್ನು ಸ್ವೀಕಾರ ಮಾಡಿದರೆ ಅವರು ತಮ್ಮ ವಮನ ಭಕ್ಷಕರಾಗುತ್ತಾರೆ ಎಂಬುದು ಶಾಸ್ತ್ರನಿರ್ಣಯ. ಸಂನ್ಯಾಸಿಗಳಾದವರು ತಾವು ಪೂರ್ವಾಶ್ರಮದಲ್ಲಿ ಸಂಪಾದಿಸಿದ ಯಾವುದನ್ನೂ ಉಪಯೋಗಿಸಬಾರದು ಎಂದು ಅಭಿಪ್ರಾಯ.

ನಿತ್ಯಮಜ್ಞಾತಚರ್ಯಾ ಮ ಇತಿ ಮನ್ಯೇತ ಬ್ರಾಹ್ಮಣಃ |
ಜ್ಞಾತೀನಾಂ ತು ವಸನ್ ಮಧ್ಯೇ ನೈವಂ ವಿಂದೇತ ಕಿಂಚನ ॥14॥

ಶ್ರುತಿ-ಸ್ಮೃತಿಗಳು ಹೇಳಿದ ವರ್ಣಾಶ್ರಮ ಧರ್ಮಗಳು ಜ್ಞಾನ ಸಹಕೃತವಾದರೆ ಮಾತ್ರ ಮೋಕ್ಷಸಾಧನವಾಗುತ್ತವೆ, ಇಲ್ಲದಿದ್ದರೆ ಇಲ್ಲ ಎಂದು ಸೂಚಿಸಲು `ಗೃಹಸ್ಥೋಽಪಿ ವಿಮುಚ್ಯತೇ' (ಗೃಹಸ್ಥನೂ ಮುಕ್ತನಾಗುತ್ತಾನೆ) ಇದೇ ಮೊದಲಾದ ಪ್ರಮಾಣಗಳಿಗೆ ಅನುಸಾರವಾಗಿ ಜ್ಞಾನ ಹೀನವಾದ ಸಂನ್ಯಾಸಾಶ್ರಮಕ್ಕಿಂತಲೂ ಜ್ಞಾನ ಸಂಪನ್ನನಾದ ನಿವೃತ್ತಧರ್ಮಾನುಷ್ಠಾನಪರನಾದ ಗೃಹಸ್ಥನೇ ಶ್ರೇಷ್ಠನಾದವನು ಎಂದು ಅವನ ಪ್ರವೃತ್ತಿ ಪ್ರಕಾರವನ್ನು ತಿಳಿಸುತ್ತಾರೆ.

ಬ್ರಾಹ್ಮಣಃ= ಬ್ರಹ್ಮಜ್ಞಾನಿಯಾದ ಗೃಹಸ್ಥನು, ನಿತ್ಯಂ= ಯಾವಾಗಲೂ, ಮೇ= ಜ್ಞಾನಿಯಾದ ನನಗೆ, ಅಜ್ಞಾತಚರ್ಯಾ= ನನ್ನ ಮಹಿಮೆಯನ್ನು ಗೂಹನೆ ಮಾಡಿಕೊಂಡಿರುವ ನಡವಳಿಕೆಯು, ಅಸ್ತು= ಉಂಟಾಗಲಿ, ಎಂದು ಮನ್ಯೇತ= ತಿಳಿಯಬೇಕು. ಅಥವಾ ಅಜ್ಞಾತಚರ್ಯೆ ಎಂದರೆ ಎಲ್ಲರಿಂದಲೂ ಸಾಕಲ್ಯೇನ ಅಜ್ಞಾತನಾದ ವಿಷ್ಣುವಿನ ವಿಷಯದಲ್ಲಿ ನನ್ನ ಎಲ್ಲಾ ಚರ್ಯೆಗಳೂ ಎಂದರೆ ಎಲ್ಲ ಇಂದ್ರಿಯಗಳ ಪ್ರವೃತ್ತಿಗಳೂ ನಿತ್ಯದಲ್ಲಿಯೂ ಇರಬೇಕು ಎಂದು ತಿಳಿಯಬೇಕು ಎಂದೂ ಅರ್ಥ. ಏವಂ= ಇಂತಹ ಜ್ಞಾನಿಯು, ಜ್ಞಾತೀನಾಂ= ಪತ್ನೀ-ಪುತ್ರಾದಿಗಳ ಮಧ್ಯೆ, ವಸನ್= ವಾಸವನ್ನು ಮಾಡಿದರೂ ಕೂಡ, ಗಾರ್ಹಸ್ಥ್ಯ ಧರ್ಮದಿಂದ ವಾಸವನ್ನು ಮಾಡಿದರೂ ಕೂಡ, ಕಿಂಚನ= ಸ್ವಲ್ಪ ಪಾಪವನ್ನೂ ಸಹ, ನೈವ ವಿಂದೇತ= ಹೊಂದುವುದಿಲ್ಲ. ಇದರಿಂದ ಜ್ಞಾನಪೂರ್ವಕ ಕರ್ಮಾನುಷ್ಠಾನವೇ ಮೋಕ್ಷಸಾಧನವೇ ಹೊರತು ಕೇವಲ ಸಂನ್ಯಾಸಾಶ್ರಮವಲ್ಲ ಎಂಬ ನಿರ್ಣಯವು ಸೂಚಿಸಲ್ಪಡುತ್ತದೆ.

ಕೋ ಹ್ಯೇನಮಂತರಾತ್ಮಾನಂ ಬ್ರಾಹ್ಮಣೋ ಮಂತುಮರ್ಹತಿ |
ನಿರ್ಲಿಂಗಮಚಲಂ ಶುದ್ಧಂ ಸರ್ವದ್ವಂದ್ವವಿವರ್ಜಿತಮ್ ॥15॥

ಅಲ್ಲಲ್ಲಿ ಬ್ರಹ್ಮನ ಜ್ಞಾನವು ದುರ್ಲಭ ಎಂದು ಹೇಳುವುದರಿಂದ ಬ್ರಹ್ಮನ ಜ್ಞಾನವೇ ಇಲ್ಲದಿದ್ದರೆ ಅವನು ಶಶವಿಷಾಣದಂತೆ ಶಬ್ದದಿಂದ ನಿರೂಪಿಸಲು ಸಾಧ್ಯವಿಲ್ಲದವನಾಗುತ್ತಾನೆ ಎಂಬ ಕಾರಣದಿಂದ `ಯತೋ ವಾಚೋ ನಿವರ್ತಂತೇ', `ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ' ಇತ್ಯಾದಿ ಶ್ರುತಿ-ಸ್ಮೃತಿಗಳು ಸರ್ವಾಂತರ್ಯಾಮಿತ್ವಾದಿ ಗುಣವಿಶಿಷ್ಟನಾದ ಪರಮಾತ್ಮನು ಪೂರ್ಣನಾಗಿ ಜ್ಞೇಯನಲ್ಲ ಎಂಬ ಕಾರಣದಿಂದ ಮಾತ್ರ ಅವನನ್ನು ಅಜ್ಞಾತವೆಂದು ಹೇಳುತ್ತವೆಯೇ ಹೊರತಾಗಿ ಅವನ ಜ್ಞಾನವು ಸ್ವಲ್ಪವೂ ಉಂಟಾಗುವುದಿಲ್ಲ ಎಂಬ ಕಾರಣದಿಂದಲ್ಲ. ಆದ್ದರಿಂದ ಯಾವ ಶಂಕೆಗೂ ಅವಕಾಶವಿಲ್ಲ ಎಂದು ತಿಳಿಸುತ್ತಾ ಬ್ರಹ್ಮನ ಸರ್ವ ಅಪರಿಜ್ಞೇಯತ್ವಾದಿ ಮಹಿಮೆಯನ್ನು ಇಲ್ಲಿ ಹೇಳುತ್ತಾರೆ. ಕಃ ಬ್ರಾಹ್ಮಣಃ= ಯಾವ ಜ್ಞಾನಿಯಾದ ಪುರುಷನು ತಾನೇ, ಏನಂ= ಶ್ರುತ್ಯಾದಿಗಳಲ್ಲಿ ಅಪರಿಜ್ಞೇಯ ಮಹಿಮೆಯುಳ್ಳವನೆಂದು ಪ್ರಸಿದ್ಧನಾದಂತಹ ಈ, ಅಂತರಾತ್ಮಾನಂ= ಸರ್ವಾಂತರ್ಯಾಮಿಯಾದ, ನಿರ್ಲಿಂಗಂ= ಅನಾದಿ ಕಾಲದಿಂದಲೂ ಲಿಂಗ ಸಂಬಂಧದಿಂದ ದೂರನಾದ, ಸರ್ವದಾ ಏಕಪ್ರಕಾರನಾಗಿರುವ, ಶುದ್ಧಂ= ನಿರ್ದುಷ್ಟನಾದ, ಸರ್ವದ್ವಂದ್ವವಿವರ್ಜಿತಂ= ಶೀತೋಷ್ಣಾದಿ ಸಂಬಂಧ ಜನಿತನಾದ, ಸುಖ-ದುಃಖಾದಿ ಲೇಪದಿಂದ ರಹಿತನಾದ ಇಂತಹ ಭಗವಂತನನ್ನು, ಮಂತುಂ= ಪೂರ್ಣವಾಗಿ ತಿಳಿಯಲು, ಅರ್ಹತಿ= ಸಮರ್ಥನಾದಾನು? ಪೂರ್ಣವಾಗಿ ತಿಳಿಯಲು ಯಾವನೂ ಸಮರ್ಥನಾಗುವುದಿಲ್ಲ ಎಂದು ಅಭಿಪ್ರಾಯ.

ಇದೇ ಶ್ಲೋಕವನ್ನು ವಾದಿರಾಜರು ತಮ್ಮ ಸನತ್ಸುಜಾತೀಯ ಸ್ವತಂತ್ರ ವ್ಯಾಖ್ಯಾನದಲ್ಲಿ ಬೇರೆ ರೀತಿಯಾಗಿ ಪಠಿಸಿ ಅರ್ಥವನ್ನು ಹೇಳಿದ್ದಾರೆ.

`ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಭಾಷತೇ |
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥

ನಾರಾಯಣನು ಸ್ವತಂತ್ರ, ಜಗಜ್ಜನ್ಮಾದಿ ಕರ್ತಾ, ಅನಂತಕಲ್ಯಾಣ ಗುಣ ಪರಿಪೂರ್ಣ, ಶ್ರೀಬ್ರಹ್ಮಾದಿಗಳು ಅವನಿಂದ ಭಿನ್ನರು. ಅವನಿಗೆ ಅಧೀನರಾಗಿ ತರತಮ ಭಾವವನ್ನು ಹೊಂದಿದವರು ಎಂದು ಯಾವನು ತಿಳಿಯುತ್ತಾನೆಯೋ ಅವನೇ ಜ್ಞಾನಿ. ಬೇರೆ ರೀತಿಯಲ್ಲಿ ತಿಳಿಯುವವನು ಚೋರನೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

ಯಃ= ಯಾವ ಮನುಷ್ಯನು, ಅನ್ಯಥಾ ಸಂತಂ= ಜೀವ ವಿಲಕ್ಷಣನಾಗಿರುವ ಪರಮಾತ್ಮನನ್ನು, ಅನ್ಯಥಾ= ಬೇರೆ ರೀತಿಯಲ್ಲಿ ಎಂದರೆ ಜೀವಾಭಿನ್ನನೆಂದು, ಪ್ರತಿಪದ್ಯತೇ= ತಿಳಿಯುತ್ತಾನೆಯೋ, ಯಾವನು= ಬ್ರಹ್ಮನಿಗೆ ಜೀವೈಕ್ಯವನ್ನು ತಿಳಿಯುತ್ತಾನೆಯೋ ಅವನು ಬ್ರಹ್ಮನನ್ನು ಅಪಹರಿಸುವ ಚೋರ ಎಂದು ಅಭಿಪ್ರಾಯ. ಜೀವ ವ್ಯತಿರಿಕ್ತನಾದ ಆತ್ಮನೇ ಇಲ್ಲ ಎಂದು ಹೇಳುವ ವಾದಿಯು ಆತ್ಮಾಪಹಾರಕನಾದ ಚೋರ. ಆತ್ಮಾಪಹಾರಿಣಾ ಚೋರಿಣಾ= ಅಂತಹ ಆತ್ಮಾಪಹಾರವನ್ನು ಮಾಡುವ ಚೋರನಿಂದ, ಕಿಂ ಪಾಪಂ= ಯಾವ ಪಾಪವು, ನ ಕೃತಂ= ಮಾಡಲ್ಪಡುವುದಿಲ್ಲ? ಅವನು ಸರ್ವಪಾಪಗಳನ್ನೂ ಮಾಡಿದವನು ಎಂದು ಅಭಿಪ್ರಾಯ. ಹಾಗೆ ತಿಳಿಯುವವನು ಬ್ರಹ್ಮಜ್ಞಾನಿಯಲ್ಲ, ಬ್ರಹ್ಮಚೋರನೆಂದೆನಿಸುತ್ತಾನೆ ಎಂದು ತಾತ್ಪರ್ಯ.

ಅಶ್ರಾಂತಃ ಸ್ಯಾದನಾದಾತಾ ಸಮ್ಮತೋ ನಿರುಪದ್ರವಃ |
ಶಿಷ್ಟೋ ನಾಶಿಷ್ಟವತ್ ಸ ಸ್ಯಾದ್ ಬ್ರಾಹ್ಮಣೋ ಬ್ರಹ್ಮವಿತ್ ಕವಿಃ ॥16॥

ಹೀಗೆ ಜೀವೇಶಾಭೇದಜ್ಞಾನರೂಪವಾದ ಮಿಥ್ಯಾಜ್ಞಾನವು ಅಂಧಂತಮಸ್ಸನ್ನು ಹೊಂದಿಸುವ ಮಹಾಪಾಪ ಸಾಧನವಾದುದರಿಂದ

ವಿಷಯ ವಿರಕ್ತಿಯನ್ನು ಹೊಂದಿದ ಮುಮುಕ್ಷುವು ಎಂದೂ ಮಿಥ್ಯಾಜ್ಞಾನವನ್ನು ಹೊಂದಬಾರದು ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ.
ಅನಾದಾತಾ= ಬ್ರಹ್ಮನ ಸ್ವಾತಂತ್ರ್ಯಾದಿ ಸದ್ಗುಣಗಳನ್ನು ತನ್ನಲ್ಲಿ ಅನುಸಂಧಾನವನ್ನು ಮಾಡಿಕೊಳ್ಳದೆ, ಅಶ್ರಾಂತಃ= ಮಿಥ್ಯಾಜ್ಞಾನ, ನಿಮಿತ್ತವಾದ, ದುಃಖಾತ್ಮಕವಾದ ತಮಃಪ್ರಾಪ್ತಿರೂಪವಾದ ಶ್ರಮವನ್ನು ಹೊಂದದೆ, ಸ್ಯಾತ್= ಇರುವವನಾಗಬೇಕು (ಸ್ಯಾತ್ ಎಂಬುದನ್ನು ಪ್ರತಿಯೊಂದು ವಿಶೇಷಣಕ್ಕೂ ಅನ್ವಯಿಸಬೇಕು) ಅಥವಾ ಅನಾದಾನಾತ್= `ಮಾತ್ರಾ ಸ್ಪರ್ಶಾಸ್ತು ಕೌಂತೇಯಃ' ಇತ್ಯಾದಿಗಳಲ್ಲಿ ಹೇಳಿದಂತೆ ವಿಷಯಭೋಗವು ದುಃಖಕ್ಕೆ ಕಾರಣವಾದುದರಿಂದ ಅಂತಹ ವಿಷಯ ಭೋಗಗಳನ್ನು ಸ್ವೀಕಾರ ಮಾಡದೆ, ಅಶ್ರಾಂತಃ ಸ್ಯಾತ್= ಅವುಗಳ ಅನುಭವದಿಂದ ಉಂಟಾದ ಶ್ರಮದಿಂದ ರಹಿತನಾಗಿರಬೇಕು, ಸಮ್ಮತಃ ಸ್ಯಾತ್= ಶಿಷ್ಟರಿಗೆ ಸಮ್ಮತವಾದ ಸದಾಚಾರವನ್ನು ಅನುಷ್ಠಾನ ಮಾಡಿ ವೇದ, ಶಾಸ್ತ್ರಗಳಿಗೆ ಸಮ್ಮತನಾಗಿರಬೇಕು, ನಿರುಪದ್ರುವಃ ಸ್ಯಾತ್= ದೇಹ-ಗೇಹಾದಿಗಳಲ್ಲಿ ಬಹಳ ಆಸಕ್ತಿಯನ್ನು ಹೊಂದಿ ಅದರಿಂದ ಉಂಟಾಗುವ ಸಾಂಸಾರಿಕ ಕ್ಲೇಶಗಳಿಂದ ರಹಿತನಾಗಿರಬೇಕು ಅಥವಾ ಕಾಮಕ್ರೋಧಾದಿ ಅರಿಷಡ್ವರ್ಗಗಳಿಂದ ಉಂಟಾಗುವ ಉಪದ್ರುವಗಳಿಂದ ರಹಿತನಾಗಿರಬೇಕು, ಶಿಷ್ಟಃ= ಗುರುಗಳಿಂದ ಸರ್ವದಾ ಶಾಸ್ತ್ರ ಶ್ರವಣ ಮಾಡಿ ಅನುಶಿಷ್ಟನಾಗಿದ್ದರೂ ನಾನು ಎಲ್ಲವನ್ನೂ ಕಲಿತಿದ್ದೇನೆ, ಗುರುಗಳಿಂದ ಅನುಶಿಷ್ಟನಾಗಿದ್ದೇನೆ. ಇನ್ನು ನನಗೆ ಗುರುಗಳು ಹೇಳಬೇಕಾದ ಅಂಶವು ಯಾವುದೂ ಇಲ್ಲ ಎಂಬ ದುರಹಂಕಾರವನ್ನು ಬಿಟ್ಟು, ಶಿಷ್ಟ ಸಜ್ಜನರನ್ನು ಅನುಸರಿಸಿ ಪುನಃ ಪುನಃ ಸಚ್ಛಾಸ್ತ್ರ ಶ್ರವಣ ಮಾಡುವ ವಿಷಯದಲ್ಲಿ, ಅಶಿಷ್ಟವತ್ ಸ್ಯಾತ್= ಹಿಂದೆ ಶಾಸ್ತ್ರ ಶ್ರವಣವನ್ನು ಮಾಡದವನಂತೆ ಆದರದಿಂದ ಕೂಡಿದವನಾಗಿರಬೇಕು. ಎಂದರೆ ಗುರುಗಳಿಂದ ಶಿಕ್ಷಿತನಾಗಿದ್ದರೂ ಪುನಃ ಜ್ಞಾನವನ್ನು ಸಂಪಾದಿಸುವ ವಿಷಯದಲ್ಲಿ ತಾನು ಉತ್ತಮರಿಂದ ಶಿಕ್ಷಿತನಾದವನಂತೆ ತೋರಿಸಿಕೊಳ್ಳಬಾರದು ಎಂದು ಅಭಿಪ್ರಾಯ. ಬ್ರಾಹ್ಮಣಃ= ಇಂತಹ ವಿಧವಾದ ಬ್ರಾಹ್ಮಣನೇ, ಬ್ರಹ್ಮವಿತ್= ಬ್ರಹ್ಮಜ್ಞಾನಿ, ಇನ್ನೊಬ್ಬನಲ್ಲ. ಅಂತಹ ಬ್ರಹ್ಮಜ್ಞಾನಿಯೇ, ಕವಿಃ= ತನ್ನನ್ನು ಉದ್ಧಾರ ಮಾಡಿಕೊಳ್ಳಲು ಚತುರನಾಗಿರುತ್ತಾನೆ.
ಅನಾಢ್ಯಾ ಮಾನುಷೇ ವಿತ್ತೇ ಆಢ್ಯಾ ವೇದೇಷು ಯೇ ದ್ವಿಜಾಃ |
ತೇ ದುರ್ಧರ್ಷಾ ದುಷ್ಪ್ರಕಂಪಾಃ ತಾನ್ ವಿದ್ಯಾದ್ ಬ್ರಹ್ಮಣಸ್ತನೂನ್ ||
ಸಂನ್ಯಾಸಿಗಳಿಗೆ ಧನಾದಿ ಸ್ವೀಕಾರವೇ ಇಲ್ಲದಿದ್ದರೆ ಅವರಿಗೆ ಜೀವನ ಯಾತ್ರೆಯೇ ನಡೆಯುವುದಿಲ್ಲವಾದ್ದರಿಂದ ಸಂನ್ಯಾಸ ಧರ್ಮಾಚರಣೆಗೆ ಚ್ಯುತಿ ಉಂಟಾಗುತ್ತದೆ ಎಂಬ ಶಂಕೆಯು ಉಂಟಾದರೆ `ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಮ್' (ದಾರಿಯಲ್ಲಿ ಹರಿದ ಬಟ್ಟೆಗಳು ಸಿಗುವುದಿಲ್ಲವೇ? ವೃಕ್ಷಗಳು ಹಣ್ಣುಗಳನ್ನು ಕೊಡುವುದಿಲ್ಲವೇ?) ಇತ್ಯಾದಿ ಭಾಗವತ ವಾಕ್ಯಗಳಂತೆ ವಿರಕ್ತಿಯೇ ಭೂಷಣರಾದ ಸಂನ್ಯಾಸಿಗಳಿಗೆ ಬೇರೆ ರೀತಿಯಿಂದಲೂ ಜೀವನಲ್ಲಿರುವ ಅಹವು ಉಂಟಾಗ ಬಹುದಾದ್ದರಿಂದ `ಕಸ್ಮಾದ್ ಭಜಂತಿ ಕವಯೋ ಧನದುರ್ಮದಾಂಧಾನ್' (ಧನ ಮದದಿಂದ ಮತ್ತರಾದವರನ್ನು ಜ್ಞಾನಿಗಳು ಏಕೆ ಭಜಿಸುತ್ತಾರೆ) ಎಂದು ಧನಾರ್ಜನೆಯನ್ನು ನಿಂದಿಸಿರುವುದರಿಂದಲೂ ಕೂಡ ಆ ಧನಾರ್ಜನೆಯನ್ನು ಬಿಟ್ಟು ವೈದಿಕ ಧನದ ಸಂಪಾದನೆಯನ್ನೇ ಮಾಡಬೇಕು. ಏಕೆಂದರೆ ಅದೇ ಮಹಾಪುರುಷಾರ್ಥ ಸಾಧನವಾದುದು ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಮಾನುಷೇ ವಿತ್ತೇ= ಪ್ರವೃತ್ತಿ ಮಾರ್ಗ ನಿರತರಾದ ಮನುಷ್ಯರ ಸಂಬಂಧಿಯಾದ ಹಿರಣ್ಯಾದಿ ಸಂಸಾರ ರೂಪಿಯಾದ ಧನದಲ್ಲಿ, ಅನಾಢ್ಯಾಃ= ದರಿದ್ರರಾಗಿ, ವೇದೇಷು= ಪರಮಾತ್ಮನ ಜ್ಞಾನವನ್ನುಂಟು ಮಾಡುವ ವೇದಾದಿ ಸಚ್ಛಾಸ್ತ್ರರೂಪವಾದ ಧನಗಳಲ್ಲಿ, ಆಢ್ಯಾಃ= ಅವುಗಳ ಅಧ್ಯಯನದಿಂದ ಸಂಪನ್ನರಾದ ಇಂತಹ, ಯೇ ದ್ವಿಜಾ= ಯಾವ ಸಂನ್ಯಾಸಿಗಳಿದ್ದಾರೆಯೋ, ಒಂದೇ ಜನ್ಮದಲ್ಲಿ ಮೊದಲು ಬ್ರಹ್ಮಚರ್ಯಾದಿ ಆಶ್ರಮ ತ್ರಯಗಳನ್ನು ಅನುಭವಿಸಿ, ಸಂನ್ಯಾಸ ಸ್ವೀಕಾರ ಕಾಲದಲ್ಲಿ ತಮಗಿಂತ ಉತ್ತಮರಾದ ಪರಮಹಂಸರ ಕರಕಮಲ ಸಂಜಾತರಾಗುವ ಕಾರಣ ಪುನಃ ಜನ್ಮಾಂತರ ಉಂಟಾಗುವುದರಿಂದ ಯತಿಗಳೂ ದ್ವಿಜರೆನಿಸುತ್ತಾರೆ. ಅಥವಾ ದ್ವಿಜಾಃ ಎಂಬ ಶಬ್ದಕ್ಕೆ ಬ್ರಹ್ಮಚರ್ಯಾದಿ ಆಶ್ರಯವಿಶಿಷ್ಟರಾದ ಬ್ರಾಹ್ಮಣರು ಎಂದೂ ಅರ್ಥವನ್ನು ಮಾಡಬಹುದು. ತೇ= ಅಂತಹ ಬ್ರಾಹ್ಮಣರು, ದುರ್ಧರ್ಷಾಃ= ದುಷ್ಟರಿಂದಾಗಲಿ ಅಥವಾ ಮಿಥ್ಯಾಜ್ಞಾನಿಗಳಿಂದಾಗಲಿ ನಿಗ್ರಹಿಸಲ್ಪಡದವರು, ದುಷ್ಪ್ರಕಂಪ್ಯಾಃ= ನಿವೃತ್ತಿ ಮಾರ್ಗಾನುಷ್ಠಾನದಿಂದ ಅಲ್ಲಾಡಿಸಲು ಸಾಧ್ಯವಿಲ್ಲದವರು, ದುರ್ಜನರಿಂದಲೂ ಅಲ್ಲಾಡಿಸಲು ಸಾಧ್ಯವಿಲ್ಲದವರು, ತಾನ್= ಅಂತಹ ಬ್ರಾಹ್ಮಣರನ್ನು, ಬ್ರಹ್ಮಣಸ್ತನೂ= `ಜ್ಞಾನೀ ತ್ವಾತ್ಮೈವ ಮೇ ಮತಮ್' ಇತ್ಯಾದಿ ಪ್ರಮಾಣಕ್ಕೆ ಅನುಸಾರವಾಗಿ ವಿಶೇಷ ಪರಮಾತ್ಮನ ಸನ್ನಿಧಾನಕ್ಕೆ ಪಾತ್ರರಾದ ಪರಮಾತ್ಮನ ವಿಶಿಷ್ಟ ಪ್ರತಿಮೆಗಳೆಂದು, ವಿದ್ಯಾತ್= ತಿಳಿಯಬೇಕು.
ಸರ್ವಾನ್ ಸ್ವಿಷ್ಟಕೃತೋ ದೇವಾನ್ ವಿದ್ಯಾದ್ ಯ ಇಹ ಕಶ್ಚನ |
ನ ಸಮಾನೋ ಬ್ರಾಹ್ಮಣಃ ಸ್ಯಾದ್ ಯಸ್ಮಿನ್ ಪ್ರಯತತೇ ಸ್ವಯಮ್ ||18||
ನಿತ್ಯವೂ ಸರ್ವೋತ್ತಮತ್ವ, ಸರ್ವೋಪಕಾರಿತ್ವ, ಸರ್ವಸ್ವತಂತ್ರತ್ವಾದಿ ಅನಂತ ಗುಣಪರಿಪೂರ್ಣ ಎಂದು ನಾರಾಯಣನನ್ನು ಭಜಿಸುವ ಜ್ಞಾನಿಯು ತನ್ನ ಸರ್ವೇಂದ್ರಿಯಗಳನ್ನು ಸನ್ಮಾರ್ಗದಲ್ಲಿ ಪ್ರೇರಣೆ ಮಾಡುವುದರಿಂದ ನಾರಾಯಣನಿಗೆ ಅಧೀನವಾದ ಸತ್ತಾದಿಗಳನ್ನುಳ್ಳ ರಮಾದಿ ತತ್ತ್ವದೇವತೆಗಳಲ್ಲಿಯೂ ಮಹೋಪಕಾರಿತ್ವ ಜ್ಞಾನವನ್ನು ಹೊಂದಿ ವಿಶೇಷವಾಗಿ ಭಗವದನುಗ್ರಹ ಪ್ರಾಪ್ತಿಗಾಗಿ ಅವರನ್ನೂ ಭಜಿಸಬೇಕು ಎಂದು ಹೇಳುತ್ತಾರೆ.
ಕಶ್ಚನ ಎಂಬುದನ್ನು ಕಃ ಚ ನ ಎಂದು ಪದಚ್ಛೇದ ಮಾಡಬೇಕು. ಯಃ ಕಃ= ಯಾವ ಜ್ಞಾನಿಯು, ಇಹ= ಈ ತನ್ನ ಸ್ವದೇಹದಲ್ಲಿ, ಸರ್ವಾನ್ ದೇವಾನ್= ತತ್ವಾಭಿಮಾನಿಗಳಾದ ಎಲ್ಲ ದೇವತೆಗಳನ್ನೂ, ಸ್ವಿಷ್ಟಕೃತಃ= ತನ್ನ ಅಭೀಷ್ಟವನ್ನು ಪೂರಣ ಮಾಡುವವರೆಂದು, ವಿದ್ಯಾತ್= ತಿಳಿಯುತ್ತಾನೆಯೋ, ಸಃ= ಅವನೇ, ಬ್ರಾಹ್ಮಣಃ= ಬ್ರಾಹ್ಮಣನಾದವನು. ಅಂತಹವನೇ ಸಮಾನಃ= ಮಾನವೆಂದರೆ ಯಥಾರ್ಥ ಜ್ಞಾನ, ಅದರಿಂದ ಕೂಡಿದವನು, ಜ್ಞಾನದಿಂದ ಸಂಪನ್ನನಲ್ಲ ಎಂದು ಹೇಳಲು ಸಾಧ್ಯವಿಲ್ಲ, ಏಕೆಂದರೆ ಅವನೇ ಜ್ಞಾನಸಂಪನ್ನನಾದವನು. ಇದರಿಂದ ರಮಾದಿ ಸರ್ವ ತತ್ವದೇವತೆಗಳನ್ನು ತನಗೆ ಮಹೋಪಕಾರವನ್ನು ಮಾಡಿದವರೆಂದು ತಿಳಿದು ಅವರಲ್ಲಿ ತಾರತಮ್ಯಜ್ಞಾನವನ್ನು ಹೊಂದಿದವನೇ ಜ್ಞಾನಿಯೇ ಹೊರತು ಆ ಜ್ಞಾನವಿಲ್ಲದೆ ಶಾಸ್ತ್ರಾಧ್ಯಯನವನ್ನು ಮಾಡುವವನು ಜ್ಞಾನಿಯಲ್ಲ ಎಂಬ ಅಭಿಪ್ರಾಯವು ಸೂಚಿಸಲ್ಪಡುತ್ತದೆ. `ಕಶ್ಚನ' ಎಂದೂ ಒಟ್ಟಿಗೆ ಇಟ್ಟುಕೊಳ್ಳಬೇಕು. `ಯಃ ಕಶ್ಚನ ಬ್ರಾಹ್ಮಣಃ' =ಯಾವನಾದರೂ ಒಬ್ಬ ಬ್ರಾಹ್ಮಣನು ತನ್ನ ಇಷ್ಟವನ್ನು ಸಲ್ಲಿಸುವ ದೇವತೆಗಳನ್ನು ತಾರತಮ್ಯ ಜ್ಞಾನವಿಲ್ಲದೆ, ವಿದ್ಯಾತ್= ತಿಳಿಯುವವನಾದರೆ, ಸಃ= ಆ ಬ್ರಾಹ್ಮಣನು, ಸಮಾನಃ ನ ಸ್ಯಾತ್= ಆ ತತ್ವಾಭಿಮಾನಿ ದೇವತೆಗಳಿಗೆ ತಾರತಮ್ಯವನ್ನು ತಿಳಿದ ಜ್ಞಾನಿಗೆ

ಸಮನಾಗುವುದಿಲ್ಲ. ಆದರೆ ನೀಚನಾದವನು ಎಂದು ಅಭಿಪ್ರಾಯ. ಏಕೆಂದರೆ ಸ್ವಯಂ= ತಾನೇ, ಸ್ವತಃ ಆ ಬ್ರಾಹ್ಮಣನು, ಯಸ್ಮಿನ್= ತನ್ನ ಅಭಿಮಾನವುಳ್ಳ ಸಂಸಾರದಲ್ಲಿ, ಯತತೇ= ಪ್ರಯತ್ನಪಡುತ್ತಾನೆ, ದೇಹ-ಗೇಹಾದಿಗಳಲ್ಲಿಯೇ ಅಭಿಮಾನವನ್ನು ಹೊಂದಿ ಅಲ್ಲಿಯೇ ಪ್ರಯತ್ನಶೀಲನಾಗುತ್ತಾನೆ ಎಂದು ಅಭಿಪ್ರಾಯ. ಆದ್ದರಿಂದ ವಿರುದ್ಧ ಧರ್ಮವನ್ನುಳ್ಳ ಅಥವಾ ತಾರತಮ್ಯ ಜ್ಞಾನ ಮತ್ತು ತದಭಾವರೂಪವಾದ ವಿರುದ್ಧ ಧರ್ಮವನ್ನುಳ್ಳ ಜ್ಞಾನಿಗಳು ಎಂದೂ ಸಮಾನರಾಗುವುದಿಲ್ಲ ಎಂದು ಅಭಿಪ್ರಾಯ. ಅಥವಾ ಸ ಬ್ರಾಹ್ಮಣಃ= ಅಂತಹ ತಾರತಮ್ಯಜ್ಞಾನವುಳ್ಳ ಜ್ಞಾನಿಯು, ಸಮಾನಃ ನ ಸ್ಯಾತ್= ಅಹಂಕಾರದಿಂದ ಕೂಡಿದವನಾಗಿರಬಾರದು, ಕೂಡಿದವನಾಗಿರುವುದಿಲ್ಲ ಎಂದು ಅರ್ಥವನ್ನು ಮಾಡಬಹುದು. ಇದರಿಂದ ಸಂಸಾರದಲ್ಲಿ ಅಭಿಮಾನವುಳ್ಳ ಶಾಸ್ತ್ರಜ್ಞಾನ ಸಂಪನ್ನನಾದವನು ಸಂಸಾರ ವಿಮುಕ್ತನಾದ ನಿರಭಿಮಾನಿಯಾದ ಅಪರೋಕ್ಷ ಜ್ಞಾನಿಗೆ ಎಂದೂ ಸಮಾನನಾಗುವುದಿಲ್ಲ ಎಂದು ಹೇಳಲ್ಪಡುತ್ತದೆ.

ಯಮಪ್ರಯತಮಾನಂ ತು ಮಾನಯಂತಿ ಸ ಮಾನಿತಾಃ |
ಸ ಮಾನ್ಯಮಾನೋ ಮನ್ಯೇತ ನಾವಮಾನೇಽನುಸಂಜ್ವರೇತ್ ॥19॥

ಹಿಂದಿನ ಶ್ಲೋಕಗಳಲ್ಲಿ ಮಾನಾಪಮಾನಜ್ಞಾನಶೂನ್ಯನಾದ, ದೇಹಾಭಿಮಾನ ಜ್ಞಾನಶೂನ್ಯನಾದ ಅಸಂಪ್ರಜ್ಞಾತ ಸಮಾಧಿಯಲ್ಲಿ ಪರಮಾತ್ಮನನ್ನು ನೋಡಿ ಆ ಸುಖದಲ್ಲಿ ಮಗ್ನನಾದ ಜ್ಞಾನಿಯ ಸಾಮಾನ್ಯ ಲಕ್ಷಣವನ್ನು ಹೇಳಿ ಈಗ ಅಂತಹ ಜ್ಞಾನಿಯ ವಿಶೇಷ ಲಕ್ಷಣವನ್ನು ಹೇಳುತ್ತಾರೆ.

ಅಪ್ರಯತಮಾನಂ= ಇನ್ನೊಬ್ಬರಿಂದ ಮರ್ಯಾದೆಯನ್ನು ಮಾಡಿಸಿಕೊಳ್ಳಲು ಪ್ರಯತ್ನ ಪಡದಿರುವ, ಯಾವ ಜ್ಞಾನಿಯನ್ನು ನೋಡಿ ಎಂದು ಅಧ್ಯಾಹಾರ ಮಾಡಬೇಕು, ಮಾನಿತಾಃ= ಜ್ಞಾನಿಗಳು, `ಮಾಙ್ ಮಾನೇ' ಎಂಬ ಧಾತುವಿನಿಂದಲೂ, `ಇಣ್ ಗತೌ' ಎಂಬ ಧಾತುವಿನಿಂದಲೂ ನಿಷ್ಪನ್ನವಾಗಿರುವುದರಿಂದ ಮಾನೇನ ಎಂದರೆ ಜ್ಞಾನದಿಂದ, ಇತಾಃ= ಕೂಡಿದವರು ಎಂಬ ಅರ್ಥದಲ್ಲಿ, ಮಾನಿತಾಃ ಎಂದರೆ ಜ್ಞಾನಿಗಳು ಎಂದು ಅರ್ಥವಾಗುತ್ತದೆ. ಅಥವಾ ಮಾನಿತಾಃ= ಮಾನ ಎಂದರೆ ಅಹಂಕಾರ, ಅದರಿಂದ ಕೂಡಿದವರು, ಐಶ್ವರ್ಯಾದಿ ಅಹಂಕಾರದಿಂದ ಕೂಡಿದ ರಾಜರು ಎಂದಾದರೂ ಅರ್ಥವನ್ನು ಮಾಡಬಹುದು, ಮಾನಯಂತಿ= ನಮಸ್ಕಾರಾದಿ ಸತ್ಕಾರವನ್ನು ಮಾಡುತ್ತಾರೆಯೋ, ಮಾನ್ಯ ಮಾನಃ= ಮಾನ್ಯ= ಜ್ಞಾನಿ ಜನರಿಂದ ಮಾನ್ಯವಾದ, ಮಾನಃ= ಜ್ಞಾನವುಳ್ಳ, ಸಃ= ಅಂತಹ ಜ್ಞಾನವುಳ್ಳ ಇನ್ನೊಬ್ಬ ಜ್ಞಾನಿಯು, ಮನ್ಯೇತ= ಹೀಗೆ ಸರ್ವಜ್ಞಾನಿಗಳಿಂದಲೂ ಮಾನ್ಯನಾದವನನ್ನೇ ಜ್ಞಾನಿ ಎಂದು ತಿಳಿಯಬೇಕು. ಅಥವಾ ನಾನೂ ಸಹ ಇದೇ ರೀತಿಯಲ್ಲಿ ದೇಹಾಭಿಮಾನಶೂನ್ಯನಾದ ಜ್ಞಾನಿಯಾಗಬೇಕು ಎಂದು ಅವನನ್ನು ನೋಡಿ ಚಿಂತಿಸಬೇಕು ಎಂದೂ ಅರ್ಥ. ಅನಂತರದಲ್ಲಿ ಅವಮಾನೇ= ತನಗೆ ಇನ್ನೊಬ್ಬನಿಂದ ಅವಮಾನ ಉಂಟಾದರೂ, ನ ಸಂಜ್ವರೇತ್= ಅದರಿಂದ ಕ್ಲೇಶವನ್ನು ಪಡಬಾರದು, ಇದರಿಂದ ಜ್ಞಾನಿಯು ದೇಹಾಭಿಮಾನ ಶೂನ್ಯನಾದ ಇನ್ನೊಬ್ಬ ಜ್ಞಾನಿಯನ್ನು ನೋಡಿ ತಾನೂ ಸಹ ಅವನಂತೆಯೇ ಆಚಾರಶೀಲನಾಗಬೇಕೆಂದು ಬಯಸಬೇಕು ಎಂಬ ಅಭಿಪ್ರಾಯವು ಸೂಚಿತವಾಗುತ್ತದೆ.

ಲೋಕಸ್ವಭಾವ ಏಷೋ ಹಿ ನಿಮೇಷೋನ್ಮೇಷವತ್ ಸದಾ |
ವಿದ್ವಾಂಸೋ ಮಾನಯಂತೀಹ ಇತಿ ಮನ್ಯೇತ ಮಾನಿತಃ ॥20॥

ಈಗ ದ್ವಂದ್ವಸಹಿಷ್ಣುತ್ವವೇ ಜ್ಞಾನಿಯ ಮುಖ್ಯಧರ್ಮವೆಂದು ತಿಳಿಸಲು ಜ್ಞಾನಿಯೂ ಸಹ ಒಬ್ಬ ಮನುಷ್ಯನಾದುದರಿಂದ ಇನ್ನೊಬ್ಬರು ಮಾನಾವಮಾನವನ್ನು ಮಾಡಿದಾಗ ಸುಖ-ದುಃಖಗಳ ಅನುಭವವಿದ್ದರೂ ತಾನು ಜ್ಞಾನಿಯಾದುದರಿಂದ ಪಾಮರ ಜನರು ಮಾಡಿದ ಮಾನಾಪಮಾನಗಳು ತಾತ್ಕಾಲಿಕವಾದವುಗಳೆಂದು ತಿಳಿದು ತನ್ನ ಜ್ಞಾನದಾರ್ಢ್ಯದಿಂದ ಉಂಟಾಗುವ, ಸುಖದಿಂದ ಉಂಟಾದ ಮುಖದ ವಿಕಾಸಾದಿಗಳನ್ನು ಇನ್ನೊಬ್ಬರಿಗೆ ತೋರಿಸಬಾರದು ಎಂದು ಹೇಳುತ್ತಾರೆ.

ಏಷಃ= ಮಾನಾಪಮಾನಗಳನ್ನು ಮಾಡುವುದು, ಲೋಕಸ್ವಭಾವಃ= ಪಾಮರ ಜನರ ಸ್ವಭಾವ, ಸ್ವಾಭಾವಿಕವಾದ ಧರ್ಮ. ನಿಮೇಷೋನ್ಮೇಷವತ್= ಕಣ್ಣುಗಳನ್ನು ಮುಚ್ಚಿ ತೆಗೆಯುವಂತೆ, ಸದಾ= ಸರ್ವಕಾಲದಲ್ಲಿಯೂ ಇರುವಂತಹದು, ಹಿ= ಇದು ಪ್ರಸಿದ್ಧವಾದುದು. ಸುಖದ ಅನಂತರ ದುಃಖ, ದುಃಖದ ಅನಂತರ ಸುಖವು ಬರುವುದು ಸಂಸಾರದ ಸ್ವಾಭಾವಿಕವಾದ ಧರ್ಮ ಎಂದು ತಿಳಿದು, ವಿದ್ವಾಂಸಃ= ಅಪರೋಕ್ಷ ಜ್ಞಾನಿಗಳು, ಮಾನಯಂತಿ= ಮಾನಂ= ಜ್ಞಾನವನ್ನು, ಯಂತಿ= ಹೊಂದುತ್ತಾರೆ.

ಸುಖ-ದುಃಖಗಳನ್ನು ಒಂದರ ನಂತರ ಒಂದರಂತೆ ಅನುಭವಿಸಬೇಕಾದ್ದರಿಂದ ಅವು ಅನಿತ್ಯವೆಂದು ತಿಳಿಯುತ್ತಾರೆ ಎಂದು ಅರ್ಥ. ಆ ಕಾರಣದಿಂದ ಮಾನಿತಃ= ಜನರಿಂದ ಮಾನವನ್ನು ಹೊಂದಿದವನು, ಅವಮಾನ ಹೊಂದಿದವನೂ ಸಹ ಎಂದೂ ಇಟ್ಟುಕೊಳ್ಳಬೇಕು. ಇಹ= ಈ ಸಂಸಾರದಲ್ಲಿ, ಮನ್ಯೇತ= ಇನ್ನೊಬ್ಬರಿಂದ ಉಂಟಾದ ಸುಖ-ದುಃಖಗಳು ಅನಿತ್ಯವಾದವು ಎಂದು ತಿಳಿಯಬೇಕು. ಅಥವಾ ಅಲ್ಪವಾದ ಪರಗುಣಗಳನ್ನೂ ದೊಡ್ಡದೆಂದು ತಿಳಿದು ಅವರನ್ನು ಸನ್ಮಾನ ಮಾಡುವುದು ಲೋಕದಲ್ಲಿ ಸಜ್ಜನರ ಸ್ವಭಾವ. ಆ ಕಾರಣದಿಂದ ನನಗೆ ಸತ್ಕಾರವನ್ನು ಮಾಡುತ್ತಿದ್ದಾರೆ. ನನ್ನಲ್ಲಿ ಅಂತಹ ಗುಣವೇನೂ ಇಲ್ಲ ಎಂದು ತಿಳಿದು ನಿರಹಂಕಾರಿಯಾಗಿರಬೇಕು.

ಅಧರ್ಮವಿದುಷೋ ಮೂಢಾ ಲೋಕಶಾಸ್ತ್ರವಿವರ್ಜಿತಾಃ |
ನ ಮಾನ್ಯಂ ಮಾನಯಿಷ್ಯಂತೀತ್ಯೇವಂ ಮನ್ಯೇದಮಾನಿತಃ ॥21॥

ಸನ್ಮಾನಯೋಗ್ಯರಾದ ಜ್ಞಾನಿಗಳಿಗೆ ದುಷ್ಟರು ಅಸನ್ಮಾನವನ್ನು ಮಾಡುವುದಕ್ಕೆ ಸಚ್ಛಾಸ್ತ್ರಾಭ್ಯಾಸವನ್ನು ಮಾಡದಿರುವ ಅವರ ಧರ್ಮಜ್ಞಾನ ಶೂನ್ಯತ್ವವೇ ಕಾರಣವೆಂದು ತಿಳಿದು ಜ್ಞಾನಿಯು ಅವರಿಂದ ಅವಮಾನಿತನಾದರೂ ಕ್ಲೇಶ ಪಡಬಾರದೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

ಲೋಕೇ= ಮನುಷ್ಯಲೋಕದಲ್ಲಿ, ಯೇ ಶಾಸ್ತ್ರವಿವರ್ಜಿತಾಃ= ಯಾರು ಸಚ್ಛಾಸ್ತ್ರಾಧ್ಯಯನದಿಂದ ಉಂಟಾಗುವ ಜ್ಞಾನಹೀನರಾಗಿರುತ್ತಾರೆಯೋ ಮತ್ತು ಆ ಕಾರಣದಿಂದಲೇ, ಅಧರ್ಮವಿದುಷಃ= ಧರ್ಮಜ್ಞಾನಶೂನ್ಯರಾಗಿ ಅಧರ್ಮ ಜ್ಞಾನದಿಂದ ಕೂಡಿರುತ್ತಾರೆಯೋ, ಅಂತಹ ಅಜ್ಞಾನಿಗಳೇ, ಮಾನ್ಯಂ= ಸನ್ಮಾನಕ್ಕೆ ಯೋಗ್ಯನಾದ ಜ್ಞಾನಿಯನ್ನು, ನ ಮಾನಯಿಷ್ಯಂತಿ= ಸನ್ಮಾನಿಸುವುದಿಲ್ಲ, ಇತಿ= ಈ ರೀತಿಯಾಗಿ, ಅಮಾನಿತಃ= ಅವರಿಂದ ಅವಮಾನಿತನಾದ ಜ್ಞಾನಿಯು, ಮನ್ಯೇತ್= ತಿಳಿಯಬೇಕು.

ನ ವೈ ಮಾನಂ ಚ ಮೌನಂ ಚ ಸಹಿತೌ ವಸತಃ ಸದಾ |

ಅಯಂ ಹಿ ಲೋಕೋ ಮಾನಸ್ಯ ಹ್ಯಸೌ ಮೌನಸ್ಯ ತದ್ವಿದುಃ ॥22॥
ಹೀಗೆ ಅಜ್ಞಾನಜನಿತವಾದ ದೇಹ-ಗೇಹಾದಿ ಅಭಿಮಾನಶೂನ್ಯರಾದ ಜ್ಞಾನಿ ಲಕ್ಷಣವನ್ನು ಹೇಳಿ ಈಗ ವಿರುದ್ಧ ಧರ್ಮಗಳಾದ ದುರಭಿಮಾನ ಮತ್ತು ಅನಭಿಮಾನಗಳಿಗೆ ಆಶ್ರಯಗಳನ್ನು ಹೇಳುತ್ತಾರೆ.
ಮಾನಂ= ದೇಹಾದಿಗಳು ನನ್ನದು ಎಂಬ ದುರಭಿಮಾನವೂ, ಮೌನಂ= ಸನ್ಮಾನದಿಂದ ಉಂಟಾದ ಸುಖದಿಂದ ಮುಖದ ವಿಕಾಸವನ್ನು ಪ್ರದರ್ಶಿಸದೇ ಸುಮ್ಮನಿರುವುದೂ, ಚ ಚ= ಇವೆರಡೂ, ಸಹಿತೌ= ಒಟ್ಟಿಗೆ ಒಂದೇ ಆಶ್ರಯದಲ್ಲಿ ಸಹಿತವಾಗಿ, ನ ವಸತಃ= ಇರುವುದಿಲ್ಲ, ಹಾಗಾದರೆ ಮಾನವು ಎಲ್ಲಿರುತ್ತದೆ ಮೌನವು ಎಲ್ಲಿರುತ್ತದೆ ಎಂಬ ಪ್ರಶ್ನೆಗೆ ಉತ್ತರಾರ್ಧದಲ್ಲಿ ಉತ್ತರವನ್ನು ಹೇಳುತ್ತಾರೆ. ಅಯಂ= ಪ್ರತ್ಯಕ್ಷ ಗೋಚರನಾದ, ಲೋಕಃ= ಸಂಸಾರಿಯಾದ ಜನರು, ಮಾನಸ್ಯ= ಅಭಿಮಾನಕ್ಕೆ, ಆಶ್ರಯವಾಗಿರುತ್ತಾರೆ ಎಂದು ಇಟ್ಟುಕೊಳ್ಳಬೇಕು, ಅಸೌ= ನಿವೃತ್ತಿ ಮಾರ್ಗವರ್ತಿಯಾದವನ ಅಪರೋಕ್ಷ ಜ್ಞಾನಕ್ಕೆ ಸಂಬಂಧಿಸಿದ, ಲೋಕಃ= ಜ್ಞಾನಿಜನರು, ಮೌನಸ್ಯ= ದ್ವಂದ್ವ ಸಹಿಷ್ಣುತಾ ರೂಪವಾದ ಮೌನಕ್ಕೆ ಆಶ್ರಯರಾಗಿರುತ್ತಾರೆ. ತತ್= ಅಂತಹ ಈ ವಿಷಯವನ್ನು, ವಿದುಃ= ಜ್ಞಾನಿಗಳು ತಿಳಿದಿರುತ್ತಾರೆ. ಅಥವಾ ಅಯಂ ಲೋಕಃ= ಈ ಪ್ರತ್ಯಕ್ಷವಾದ ಭೂಲೋಕವು, ಮಾನಸ್ಯ= ಅಭಿಮಾನವುಳ್ಳವರಿಗೆ (ಅಹಂಕಾರವುಳ್ಳವರಿಗೆ ಆಶ್ರಯವಾದುದು ಎಂದು) ಹಿ= ಪ್ರಸಿದ್ಧವಾದುದು, ಅಸೌ= ಮೋಕ್ಷಲೋಕವು, ಮೌನಸ್ಯ= ಅಭಿಮಾನ ರಹಿತರಾದವರಿಗೆ ಆಶ್ರಯವಾದುದು, ಮೋಕ್ಷಾರ್ಥಿಗಳಿಗೆ ಮೌನವೇ ಪ್ರಿಯವಾದುದು. ಸಂಸಾರಿಗಳು ಮಾತ್ರ ಅಭಿಮಾನವನ್ನು ಬಿಡುವುದಿಲ್ಲ ಎಂದೂ ಅರ್ಥವನ್ನು ಮಾಡಬಹುದು.
ಶ್ರೀರ್ಹಿ ಮಾನಾರ್ಥಸಂಜಾತಾ ಸಾ ಚಾಪಿ ಪರಿಪಂಥಿನೀ |
ಬ್ರಾಹ್ಮೀ ಸುದುರ್ಲಭಾ ಶ್ರೀರ್ಹಿ ಪ್ರಜ್ಞಾಹೀನೇನ ಕ್ಷತ್ರಿಯ ॥23॥
ಅತಿ ಪ್ರಯತ್ನ ಸಾಧ್ಯವಾದ ವಿಷಯ ವಿರಕ್ತಿ, ನಿರಭಿಮಾನ, ಭಗವದರ್ಪಣ ಮತ್ತು ಸರಿಯಾದ ಅನುಸಂಧಾನ ಇವುಗಳಿಂದ ಸಹಿತವಾದ ಸಂನ್ಯಾಸ ಧರ್ಮಾಚರಣೆಯೇ ಸ್ವರೂಪ ಸುಖಾಭಿವ್ಯಕ್ತಿಗೆ ಕಾರಣವೆಂದು ಹೇಳಿದರೆ ಅಂತಹ ಸುಖವು ದುರಭಿಮಾನಸಹಿತವಾದ, ಅಲ್ಪಾಯಾಸಸಾಧ್ಯವಾದ ಕಾಮ್ಯಕರ್ಮಾನುಷ್ಠಾನದಿಂದಲೂ ದೊರೆಯುವುದರಿಂದ ಸಂನ್ಯಾಸ ಧರ್ಮವನ್ನೇ ಏಕೆ ಆಚರಿಸಬೇಕು ಎಂಬ ಪ್ರಶ್ನೆಗೆ ಉತ್ತರವಾಗಿ,
ಹಿತ್ವಾ ಸ್ವಧರ್ಮಂ ಚರಣಾಂಬುಜಂ ಹರೇ
ಭರ್ಜನ್ನಪಕ್ವೋಥ ಪತೇತ್ ತಥೋ ಯದಿ |
ಯತ್ರ ಕ್ವ ವಾ ಭದ್ರಮಭೂದಮುಷ್ಯ
ಕೋ ವಾರ್ಥ ಆಪ್ತೋ ಭಜತಾಂ ಸ್ವಧರ್ಮಮ್ ॥'
(ತನ್ನ ಕುಲಾಗತವಾದ ಧರ್ಮವನ್ನು ಬಿಟ್ಟು ಪರಮಾತ್ಮನ ಪಾದವನ್ನು ಭಜಿಸುತ್ತಾ ಅಪಕ್ವನಾಧಿಕಾರಿಯು ಎಲ್ಲಾದರೂ ಜಾರಿದರೂ ಸಹ ಅವನಿಗೆ ಎಲ್ಲಿಯಾದರೂ ಒಳ್ಳೆಯದೇ ಆಗುತ್ತದೆ. ಹರಿಪಾದ ಭಜನೆಯನ್ನು ಬಿಟ್ಟು ಕುಲಧರ್ಮವನ್ನು ಆಚರಿಸುವವನು ಯಾವುದನ್ನು ಸಂಪಾದಿಸುತ್ತಾನೆ?) ಎಂಬ ಭಾಗವತ ವಚನಕ್ಕೆ ಅನುಸಾರವಾಗಿ ಅಭಿಮಾನ ಸಹಿತವಾಗಿ ಆಚರಿಸಿದ ಕರ್ಮಗಳು ಮೋಕ್ಷಕ್ಕೆ ವಿರೋಧಿಯಾದುದರಿಂದ ಮತ್ತು ಪತನಾನಂತರದಲ್ಲಿ ದುಃಖಕ್ಕೆ ಕಾರಣವಾದುದರಿಂದ ಕಾಮ್ಯಕರ್ಮಜನ್ಯವಾದ ಸ್ವರ್ಗಾದಿಗಳು ಪಾಮರರಿಗೆ ಸುಖದಂತೆ ತೋರಿದರೂ ಮುಮುಕ್ಷು ಅದು ಹೇಯವಾದುದು ಎಂದು ಉಪದೇಶ ಮಾಡುತ್ತಾ ಅಭಿಮಾನ ರಹಿತವಾಗಿ ಮತ್ತು ಸಹಿತವಾಗಿ ಮಾಡಿದ ಕರ್ಮಗಳ ಪಾರತ್ರಿಕ ಫಲದ ವೈಲಕ್ಷಣ್ಯವನ್ನು ಇಲ್ಲಿ ಹೇಳುತ್ತಾರೆ.
ಮಾನಾರ್ಥಸಂಜಾತಾ=ಮಾನ ಎಂದರೆ ದುರಭಿಮಾನ, ಅರ್ಥ ಎಂದರೆ ವಿಷಯವರ್ಗಗಳು, ಇವುಗಳಿಂದ ಉಂಟಾದ ಅಥವಾ ಮಾನಾರ್ಥಸಂಜಾತಾ= ಮಾನಾರ್ಥಂ ದುರಭಿಮಾನವನ್ನು ಹುಟ್ಟಿಸುವ ಸಲುವಾಗಿಯೇ, ಸಂಜಾತಾ= ಉಂಟಾದಂತಹ, ಅಥವಾ ಕಾಮಾರ್ಥ ಸಂಜಾತಾ ಎಂಬ ಪಾಠವಿದ್ದರೆ ಕಾಮ ಎಂದರೆ ವಿಷಯಗಳು, ಅವುಗಳನ್ನು ಸಂಪಾದಿಸುವ ಸಲುವಾಗಿ ಉಂಟಾದ ಎಂದರೆ ಅಭಿಮಾನ ಪೂರ್ವಕವಾಗಿ ಮಾಡಿದ ಕಾಮ್ಯಕರ್ಮದಿಂದ ಉಂಟಾದ ಸ್ವರ್ಗಾದಿ ರೂಪವಾದ ಎಂದು ಅರ್ಥ. ಶ್ರೀಃ= ಸಂಪತ್ತು, ಪರಿಪಂಥಿನೀ= ಅನಿತ್ಯವೂ ದುಷ್ಟವೂ ಆದುದರಿಂದ ಮೋಕ್ಷಮಾರ್ಗದ ವಿರೋಧಿಯಾದುದು. `ಹಿ' ಎಂಬ ನಿಪಾತವು ಅದು ದುಷ್ಟವಾದುದರಿಂದ ಹೇಯವೆಂದು ಸೂಚಿಸುತ್ತದೆ. ಬ್ರಾಹ್ಮೀ= ಬ್ರಹ್ಮ ಜ್ಞಾನದಿಂದ ಉಂಟಾದ, ಶ್ರೀಃ= ಮೋಕ್ಷರೂಪವಾದ ಸಂಪತ್ತು, ಪ್ರಜ್ಞಾಹೀನೇನ = ನಿರಹಂಕಾರಪೂರ್ವಕವಾಗಿ ವಿಷ್ಣುಸರ್ವೋತ್ತಮತ್ವಜ್ಞಾನವನ್ನು ಹೊಂದದಿರುವ ಪುರುಷನಿಂದ, ದುರ್ಲಭಾ= ಅಪ್ರಾಪ್ಯವಾದುದು, ಇಲ್ಲಿಯೂ ಕೂಡ `ಹಿ' ಎಂಬ ನಿಪಾತದಿಂದ ಬ್ರಾಹ್ಮೀ ಸಂಪತ್ತು ನಿತ್ಯವೂ ಸುಖಾತ್ಮಕವಾಗಿರುವುದರಿಂದ ಅದನ್ನೇ ಸಂಪಾದಿಸಬೇಕು ಎಂದು ಸೂಚಿಸಲ್ಪಡುತ್ತದೆ.
ದ್ವಾರಾಣಿ ತಸ್ಯಾಃ ಪ್ರವದಂತಿ ಸಂತೋ
ಬಹುಪ್ರಕಾರಾಣಿ ದುರಾಚರಾಣಿ |
ಸತ್ಯಾರ್ಜವೇ ಹ್ರೀರ್ದಮಶೌಚವಿದ್ಯಾಃ
ಷಣ್ಮಾನಮೋಹಪ್ರತಿಬಂಧನಾನಿ ॥24॥
ಸರ್ವಜ್ಞರಾದ ಸನತ್ಸುಜಾತರು `ಪ್ರಮಾದಂ ವೈ ಮೃತ್ಯುಮಹಂ ಬ್ರವೀಮಿ' ಎಂದು ಆರಂಭಿಸಿ ಅಧ್ಯಾಯದ ಕೊನೆಯವರೆಗೆ ಅಜ್ಞಾನ ಮತ್ತು ಮಿಥ್ಯಾಜ್ಞಾನಿಗಳಿಗೇ ಅನರ್ಥಪ್ರದತ್ವವನ್ನೂ, ಅದರ ಪರಿಹಾರಸಾಧನವಾದ ವಿಷ್ಣುಸರ್ವೋತ್ತಮತ್ವ ಜ್ಞಾನವೇ ಮೋಕ್ಷಪ್ರದವೆಂಬುದನ್ನೂ, ಪರಿಹಾರ ಸಾಧನವಾದ ವಿಷ್ಣುಸರ್ವೋತ್ತಮತ್ವ ಜ್ಞಾನವಾದರೂ ಅನೇಕ ಆಗಮಗಳ ಪ್ರಮಾಣದಿಂದ ಉಂಟಾಗುತ್ತದೆ ಎಂಬುದನ್ನೂ ಸಮರ್ಥಿಸಿ, ಉಪಸಂಹಾರವನ್ನು ಮಾಡಿ ಪುನಃ ಧೃತರಾಷ್ಟ್ರನ ಮುಂದಿನ ಪ್ರಶ್ನೆಗೆ ಅವಕಾಶವನ್ನು ಮಾಡಿಕೊಡಲು ಮಿಥ್ಯಾಜ್ಞಾನ ಮತ್ತು ಅಜ್ಞಾನಶಬ್ದಗಳ ಪರ್ಯಾಯ ಶಬ್ದಗಳಾದ ಮಾನ ಮತ್ತು ಮೋಹಗಳ ವಿನಾಶಕ್ಕೋಸ್ಕರ ಸ್ತ್ರೀ-ಶೂದ್ರಾದಿ ಸರ್ವಾಧಿಕಾರಿಗಳು ಅನುಷ್ಠಾನ ಮಾಡಬೇಕಾದ ಆರು ಸಾಧನಗಳನ್ನು ಹೇಳುತ್ತಾರೆ.
ಸಂತಃ= ಶಾಸ್ತ್ರಾರ್ಥವನ್ನು ತಿಳಿದ ಜ್ಞಾನಿಗಳು, ಮಾನಮೋಹ ಪ್ರತಿಬಂಧನಾನಿ= ದೇಹದಲ್ಲಿ ನನ್ನದು ಎಂಬ ಬುದ್ಧಿಯು ಮಾನ, ಅದು ಮಿಥ್ಯಾಹಂಕಾರ ರೂಪವಾದುದು, ದೇಹ-ಗೇಹಾದಿಗಳಲ್ಲಿ ಪ್ರತ್ಯಕ್ಷವಾಗಿ ಅನಿತ್ಯತ್ವವನ್ನು ನೋಡಿದರೂ ನೋಡದವನಂತೆ

ಪ್ರವೃತ್ತನಾಗುವುದು ಮೋಹ. ಇಂತಹ ಮಾನಮೋಹಗಳಿಗೆ ಪ್ರತಿಬಂಧನಾನಿ= ಸ್ತಂಭಕವಾದ, ಷಟ್= ಆರು ಸಾಧನಗಳನ್ನು ಪ್ರವದಂತಿ= ಹೇಳುತ್ತಾರೆ. ಆ ಸಾಧನಗಳಾದರೂ ಬಹುಪ್ರಕಾರಾಣಿ= ಅನೇಕ ಪ್ರಕಾರಗಳಿಂದ ಕೂಡಿದವು ಮತ್ತು ದುರಾಚರಾಣಿ= ಕಷ್ಟಪಟ್ಟು ಆಚರಣೆ ಮಾಡಲು ಸಾಧ್ಯವಾದವುಗಳು, ಅವು ಯಾವುವೆಂದರೆ ಸತ್ಯಾರ್ಜವೇ= ಸತ್ಯ ಎಂದರೆ ಯಥಾರ್ಥ ಭಾಷಣ ಅಥವಾ ಸಜ್ಜನರಿಗೆ ಹಿತವಾದ ಭಾಷಣ, ಆರ್ಜವ ಎಂದರೆ ಋಜು ಮಾರ್ಗದಲ್ಲಿ ನಡೆಯುವಿಕೆ ಇವು ಎರಡು. ಹ್ರೀಃ= ನಿಷಿದ್ದವನ್ನು ಮಾಡುವುದರಲ್ಲಿ ಲಜ್ಜೆ ಇದು ಮೂರನೆಯದು. ದಮ= ಇಂದ್ರಿಯ ನಿಗ್ರಹ- ಇದು ನಾಲ್ಕನೆಯದು, ಶೌಚಂ= ಮೃಜ್ಜಲಗಳಿಂದ ಬಾಹ್ಯ ಶೌಚ, ಮನಸ್ಸಿನ ಶುದ್ಧಿಯಿಂದ ಆಂತರ್ಯದ ಶೌಚ - ಈ ಎರಡು ಶುದ್ಧಿಗಳು - ಇವು ಐದನೆಯವು. ವಿದ್ಯಾ= ಪರಾಪರವಿಷಯವಾದ ಬ್ರಹ್ಮವಿದ್ಯೆ- ಇದು ಆರನೆಯದು. ಈ ಆರು ಗುಣಗಳು ಮಾನ-ಮೋಹಗಳನ್ನು ನಾಶ ಮಾಡುತ್ತವೆ ಎಂದು ಅಭಿಪ್ರಾಯ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ವೈಯಾಸಿಕ್ಯಾಮ್
ಉದ್ಯೋಗಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
॥ ಸನತ್ಸುಜಾತಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ಮೂರನೆಯ
ಅಧ್ಯಾಯ ಮುಗಿಯಿತು.

* * * * *

ನಲವತ್ನಾಲ್ಕನೆಯ ಅಧ್ಯಾಯ

ಧೃತರಾಷ್ಟ್ರನಿಂದ ಸನತ್ಕುಮಾರರನ್ನು ಕುರಿತು ಸಂನ್ಯಾಸ ಸ್ವರೂಪ. ತಪಸ್ಸಿನ ಋದ್ಧಿ, ಅತಿವೃದ್ಧಿಭೇಧಗಳು, ತಪಸ್ಸಿನ ಕಲ್ಮಷಗಳು. ಆ ಕಲ್ಮಷಗಳ ಪರಿಹಾರ.

ಬ್ರಹ್ಮಜ್ಞಾನ ಮತ್ತು ಬ್ರಹ್ಮಜ್ಞಾನಿಯ ಲಕ್ಷಣ ವಿಷಯದಲ್ಲಿ ಪ್ರಶ್ನೆ. ಸನತ್ಕುಮಾರರಿಂದ ಅವುಗಳ ಪರಿಹಾರ.

ಧೃತರಾಷ್ಟ್ರಃ

ಕಸ್ಯೈಷ ಮೌನಃ ಕತರನ್ನು ಮೌನಂ
ಪ್ರಬ್ರೂಹಿ ವಿದ್ವನ್ನಿಹ ಮೌನಭಾವಮ್ |
ಮಾನೇನ ವಿದ್ವಾನುಪಯಾತಿ ಮೌನಂ
ಕಥಂ ಮುನೇ ಮೌನಮಿಹಾಚರಂತಿ ॥1॥

ಅಸೌ ಮೌನಸ್ಯ ಇತ್ಯಾದಿಗಳಿಂದ ಮೌನ ವಿಷಯಕವಾದ ಜ್ಞಾನಿ ಲಕ್ಷಣವನ್ನು ತಿಳಿದ ಧೃತರಾಷ್ಟ್ರನು ಪುನಃ ಅದನ್ನೇ ವಿಶೇಷವಾಗಿ ತಿಳಿಯಲು ಮೌನಾದಿ ಸ್ವರೂಪವನ್ನು ಕುರಿತು ಪ್ರತ್ಯೇಕವಾಗಿ ಪ್ರಶ್ನೆಯನ್ನು ಮಾಡುತ್ತಾನೆ.

ಹೇ ವಿದ್ವನ್= ಸರ್ವಜ್ಞರಾದ ಸನತ್ಸುಜಾತರೇ, ಏಷ ಮೌನಃ= `ಅಸೌ ಮೌನಸ್ಯ' ಮೊದಲಾದ ಶ್ಲೋಕಗಳಲ್ಲಿ ನೀವು ಹೇಳಿದ ಮೌನವು, ಕಸ್ಯ= ಎಂತಹ ಬ್ರಾಹ್ಮಣನ ವಿಷಯದಲ್ಲಿ ಸಲ್ಲುತ್ತದೆ? ಮೌನಂ ಕತರತ್= ಮೌನವು ಯಾರ ಪಕ್ಷದಲ್ಲಿ ಸಲ್ಲುತ್ತದೆ? ಅಥವಾ ಮೌನದ ಲಕ್ಷಣವೇನು? ಮೌನಭಾವಂ ಎಂದರೆ ಮೌನಸ್ವಭಾವ ಅಥವಾ ಮೌನದ ಇರುವಿಕೆಯನ್ನೂ, ಮೌನೇನ= ಯಾವ ಮೌನದ ಅಧಿಷ್ಠಾನದಿಂದ, ವಿದ್ವಾನ್= ಜ್ಞಾನಿಯು, ಮೌನಂ= ಮುನಿಪ್ರಾಪ್ಯನಾದ ಭಗವಂತನನ್ನು ಅಥವಾ ಪುಣ್ಯಸಾಧನವಾದ ಪ್ರಸಿದ್ಧವಾದ ಮೌನವನ್ನು, ಉಪಯಾತಿ= ಹೊಂದುತ್ತಾನೆ? ಹೇ ಮುನೇ= ಎಲೈ ಮೌನರೂಪವಾದ ಧರ್ಮನಿಷ್ಠ ಸನತ್ಸುಜಾತರೇ, ಮೌನಂ= ಮಹಾಪುರುಷಾರ್ಥ ಸಾಧನವಾದ ನಿಮಗೆ ಅಭಿಮತವಾದ ಮೌನವನ್ನು, ಕಥಂ= ಯಾವ ರೀತಿಯಿಂದ, ಇಹ= ಸಾಧನಾನುಷ್ಠಾನ ಸಮಯದಲ್ಲಿ, ಆಚರಂತಿ= ಜ್ಞಾನಿಗಳು ಆಚರಿಸುತ್ತಾರೆ? ಇವುಗಳನ್ನು ಪ್ರಬ್ರೂಹಿ= ವಿಶೇಷವಾಗಿ ತಿಳಿಸಿ. ಮೌನಾದಿಗಳು ಅವಶ್ಯವಾಗಿ ತಿಳಿಯಲೇಬೇಕಾದ ವಿಷಯಗಳು ಎಂದು ಸೂಚಿಸಲು `ಪ್ರಬ್ರೂಹಿ' ಎಂದು `ಪ್ರ' ಎಂಬ ಉಪಸರ್ಗವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ ಬ್ರೂಹಿ ಎಂದು ಇಷ್ಟೇ ಸಾಕಾಗುತ್ತಿದ್ದಿತು.

ಸನತ್ಸುಜಾತಃ

ಯತೋ ನ ವೇದಾ ಮನಸೈವ ಹೀನಮ್
ಅನುಪ್ರವಿಶಂತಿ ತತೋ ನ ಮೌನಮ್ |
ಯತ್ರೋತ್ಥಿತೋ ವೇದಶಬ್ದಸ್ತಥಾಽಯಂ
ನ ತನ್ಮಯತ್ವೇನ ವಿಭಾತಿ ರಾಜನ್ ॥2॥

ಹೀಗೆ ಹಿಂದೆ `ಅಸೌ ಮೌನಸ್ಯ' ಮುಂತಾದ ವಾಕ್ಯಗಳಿಂದ ಬ್ರಹ್ಮಜ್ಞಾನಿ ಮತ್ತು ಮೌನಗಳಿಗೆ ಸಾಮಾನ್ಯವಾಗಿ ವಿಷಯ-ವಿಷಯೀಭಾವ ಸಂಬಂಧವನ್ನು ತಿಳಿದ ಧೃತರಾಷ್ಟ್ರನು ಪುನಃ ಬ್ರಹ್ಮಜ್ಞಾನಿಗೆ ಸಂಬಂಧಿಸಿದ ಮೌನಸ್ವರೂಪವನ್ನು ವಿಶೇಷವಾಗಿ ತಿಳಿಯಲು `ಕಸ್ಯೈಷ ಮೌನಂ' ಇತ್ಯಾದಿ ವಾಕ್ಯದಿಂದ ಐದು ರೀತಿಯಲ್ಲಿ ಪ್ರಶ್ನಿಸಲ್ಪಟ್ಟ ಸನತ್ಸುಜಾತರು ಎಲ್ಲ ಪ್ರಶ್ನೆಗಳಿಗೂ `ಯತಃ' ಎಂಬ ಒಂದೇ ಶ್ಲೋಕದಿಂದ ಉತ್ತರವನ್ನು ಕೊಡುತ್ತಾರೆ.

ಯತಃ= ಅನಾದಿ ಕಾಲದಿಂದ ಬಂದ ಸಂಸಾರಪ್ರಯುಕ್ತವಾದ ಅಜ್ಞಾನ ಮತ್ತು ಅನ್ಯಥಾ ಜ್ಞಾನದ ನಿಮಿತ್ತದಿಂದ, ಹೀನಂ= ಭಗವದ್ವಿಷಯಕವಾದ ಜ್ಞಾನ, ಧ್ಯಾನಾದಿ ಹೀನನಾದ ಈ ಪುರುಷನನ್ನು, ವೇದಾಃ= ವೇದಯಂತೀತಿ ವೇದಾಃ= ಭಗವದ್ಗುಣಗಳನ್ನು ತಿಳಿಸಿಕೊಡುವುದರಿಂದ ವೇದಗಳು ಎಂದು ಕರೆಸಿಕೊಳ್ಳುವ ಶಬ್ದರಾಶಿಗಳು, ಮನಸಾ= ಮನು ಅವಬೋಧನೆ ಎಂದು ಧಾತುವಿರುವುದರಿಂದ, `ಸರ್ವೇ ವೇದಾ ಯತ್ಪದಮಾಮನಂತಿ' ಇತ್ಯಾದಿ ಪ್ರಮಾಣಗಳಿಂದ ಭಗವಂತನೇ ಮುಖ್ಯವಾಗಿ ಅನಂತವೇದ ಪ್ರತಿಪಾದ್ಯ ಎಂಬ ಅನುಸಂಧಾನದ ಜೊತೆಯಲ್ಲಿ, ನ ಅನುಪ್ರವಿಶಂತಿ= ಅನುಕೂಲವಾಗಿ ಪ್ರವೇಶಿಸುವುದಿಲ್ಲ, ತತಃ= ವೇದಾನುಗ್ರಹೀತವಾದ ಬ್ರಹ್ಮಜ್ಞಾನವು ಇಲ್ಲದಿರುವ ಕಾರಣದಿಂದ, ಮೌನಂ= ಬ್ರಹ್ಮಜ್ಞಾನವೂ ಸಹ, ನ= ಉಂಟಾಗುವುದಿಲ್ಲ. ಇದರಿಂದ ಅಜ್ಞಾನ ಮತ್ತು ಅನ್ಯಥಾ ಜ್ಞಾನವಿಶಿಷ್ಟನಾದ ಬ್ರಾಹ್ಮಣನಲ್ಲಿ ಯದ್ಯಪಿ ವೇದವಿದ್ಯಾಧಿಕಾರವಿದೆ. ಆದರೂ ಅವನಿಗೆ ವೇದಾಧ್ಯಯನದಿಂದ ಬ್ರಹ್ಮಜ್ಞಾನವು ಉಂಟಾಗುವುದಿಲ್ಲ ಎಂದು ಹೇಳಲ್ಪಡುತ್ತದೆ. ಇದರಿಂದ ಮೌನಶಬ್ದವು ಜ್ಞಾನಶಬ್ದ

ಪರ್ಯಾಯವೆಂದೂ, ಜ್ಞಾನಿಗೆ ಸಂಬಂಧಿಸಿದ್ದೆಂದೂ ತಿಳಿಸಲ್ಪಡುತ್ತದೆ. ಇದರಿಂದ `ಕಸ್ಯೈಷ ಮೌನಃ, ಕತರನ್ನು ಮೌನಮ್' ಎಂದು ಎರಡು ಪ್ರಶ್ನೆಗಳಿಗೆ ಉತ್ತರವನ್ನು ಹೇಳಿದಂತಾಯಿತು. ಯತ್ರ= ಯಾವ ಅಧಿಕಾರಿ ಪುರುಷನಲ್ಲಿ, ಅಯಂ= ಅನಂತ ಪ್ರಮಾಣ ಪ್ರಸಿದ್ಧನಾದ, ವೇದಶಬ್ದಃ= `ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ' ಇತ್ಯಾದಿ ಪ್ರಮಾಣಗಳಿಂದ ವೇದಶಬ್ದಿತನಾದ ಎಂದರೆ ವೇದಗಳಿಂದ ಪ್ರತಿಪಾದಿತನಾದ ನಾರಾಯಣನು, ಉತ್ಥಿತಃ= ಜ್ಞಾನ-ಧ್ಯಾನಾದಿವಿಷಯನಾಗಿ ಉತ್ಕರ್ಷದಿಂದ ಸ್ಥಿತನಾಗಿರುತ್ತಾನೆಯೋ, ಇದರಿಂದ ಅಧಿಕಾರಿಯಾದವನೂ ಸಹ ವೇದಪ್ರತಿಪಾದಿತವಾದ ಯಥಾರ್ಥ ಬ್ರಹ್ಮಜ್ಞಾನಪೂರ್ವಕವಾಗಿ ವೇದಾಧ್ಯಯನವನ್ನು ಮಾಡಬೇಕೆಂದು ಸೂಚಿತವಾಗುತ್ತದೆ. ಸಃ= ಇಂತಹ ಬ್ರಹ್ಮಜ್ಞಾನಿಯು, ತನ್ಮಯತ್ವೇನ= ತನ್ನಲ್ಲಿ ಸಚ್ಛಬ್ದವಾಚ್ಯವಾದ ಭಗವಂತನ ಪ್ರಾಧಾನ್ಯ ಜ್ಞಾನವಿರುವ ನಿಮಿತ್ತದಿಂದ, ವಿಭಾತಿ= ತನಗೆ ಯೋಗ್ಯವಾದ ಬ್ರಹ್ಮಜ್ಞಾನಾದಿ ಸಂಪತ್ತಿನಿಂದ ವಿಶಿಷ್ಟವಾಗಿ ಪ್ರಕಾಶಿಸುತ್ತಾನೆ. ಹೇ ರಾಜನೇ! ಎಂಬ ಸಂಬೋಧನೆಯಿಂದ ನೀನೂ ಸಹ ಇಂತಹ ಮೌನವನ್ನು ಸಂಪಾದನೆ ಮಾಡಬೇಕೆಂದು ಸೂಚಿತವಾಗುತ್ತದೆ. `ಯತ್ರೋತ್ಥಿತೋ ವೇದಶಬ್ದಃ' ಎಂಬುದರಿಂದ `ಮೌನೇನ ವಿದ್ವಾನುಪಯಾತಿ ಮೌನಮ್' ಎಂಬುದು ವಿವರಿಸಲ್ಪಡುತ್ತದೆ. `ಅನುಪ್ರವಿಶಂತಿ ತತೋ ನ ಮೌನಮ್' ಎಂಬುದರಿಂದ `ಮೌನಭಾವಮ್' ಎಂಬುದು ವಿವರಿಸಲ್ಪಡುತ್ತದೆ. `ಸ ತನ್ಮಯತ್ವೇನ ವಿಭಾತಿ' ಎಂಬುದರಿಂದ `ಕಥಂ ಮುನೇ ಮೌನಮಿಹಾಚರಂತಿ' ಎಂಬ ಪ್ರಶ್ನೆಗೆ ಉತ್ತರವು ಹೇಳಲ್ಪಡುತ್ತದೆ. ಹೀಗೆ ಐದು ಪ್ರಶ್ನೆಗಳಿಗೂ ಒಂದೇ ಶ್ಲೋಕದಿಂದ ಪರಿಹಾರವು ದೊರೆಯುತ್ತದೆ.

ಧೃತರಾಷ್ಟ್ರಃ

ಋಚೋ ಯಜೂಂಷ್ಯಥೋಽಧೀತೇ ಸಾಮವೇದಂ ಚ ಯೋ ದ್ವಿಜಃ |
ಪಾಪಾನಿ ಕುರ್ವನ್ ಪಾಪೇನ ಲಿಪ್ಯತೇ ಕಿಂ ನ ಲಿಪ್ಯತೇ ॥3॥

ಮೌನ-ಮೌನಿಸ್ವರೂಪಗಳ ವಿಚಾರಪ್ರಸಂಗದಲ್ಲಿ ವೇದಗಳು ಮಹಾಫಲ ಪ್ರಾಪಕಗಳೆಂದು ಕೇಳಿದ ಧೃತರಾಷ್ಟ್ರನು ಮೋಕ್ಷಸಾಧನವಾದ ಅಪರೋಕ್ಷ ಜ್ಞಾನ ಸಂಬಂಧದಿಂದ ಅಪರೋಕ್ಷ ಜ್ಞಾನಿಗೆ ಪೂರ್ವೋತ್ತರ ಪಾಪಗಳು ವಿನಾಶ, ಅಶ್ಲೇಷಗಳನ್ನು ಹೊಂದುವಂತೆ ಋಗಾದಿ ವೇದಗಳನ್ನು ಮಾತ್ರ ಅಧ್ಯಯನ ಮಾಡಿ ಅಪರೋಕ್ಷ ಜ್ಞಾನವಿಲ್ಲದೆ ಋಗಾದಿ ವೇದಾಧ್ಯಯನದಿಂದ ಬಂದ ಪುಣ್ಯದಿಂದ ಮಾತ್ರ ಸಂಬದ್ಧನಾದ ಬ್ರಾಹ್ಮಣನಿಗೆ ಹತ್ಯಾದಿಗಳಿಂದ ಉಂಟಾದ ಪಾಪದ ಲೇಪವು ಇದೆಯೇ, ಇಲ್ಲವೇ ಎಂದು ಪ್ರಶ್ನೆ ಮಾಡುತ್ತಾನೆ. ಋಚಃ= ಋಕ್‌ಶಾಖೆಗಳನ್ನು, ಯಜೂಂಷಿ= ಯಜುಶ್ಶಾಖೆಗಳನ್ನು, ಸಾಮವೇದಂ ಚ= ಮತ್ತು ಸಾಮವೇದಗಳನ್ನು, ಯಃ ದ್ವಿಜಃ= ಯಾವ ಬ್ರಾಹ್ಮಣನು, ಅಧೀತೇ= ಅಧ್ಯಯನವನ್ನು ಮಾಡುತ್ತಾನೆಯೋ, ಆ ಬ್ರಾಹ್ಮಣನು, ಪಾಪಾನಿ= ಅನಿಷ್ಟಾಪಾದಕ ಪಾಪಕೃತ್ಯಗಳನ್ನು, ಕುರ್ವನ್= ಮಾಡುವವನಾದರೆ ಆ ಪಾಪಗಳಿಂದ ಲಿಪ್ಯತೇ ವಾ= ಲೇಪಿಸಲ್ಪಡುತ್ತಾನೆಯೇ? ನ ಲಿಪ್ಯತೇ ವಾ= ಅಥವಾ ಲೇಪಿಸಲ್ಪಡುವುದಿಲ್ಲವೇ? (ಎಂದು ಪ್ರಶ್ನೆ).

ಸನತ್ಸುಜಾತಃ

ನೈನಂ ಸಾಮಾನ್ಯೃಚೋ ವಾಽಪಿ ಯಜೂಂಷಿ ಚ ವಿಚಕ್ಷಣ |
ತ್ರಾಯಂತೇ ಕರ್ಮಣಃ ಪಾಪಾನ್ನ ತೇ ಮಿಥ್ಯಾ ಬ್ರವೀಮ್ಯಹಮ್ ॥4॥

ಹೀಗೆ ಪ್ರಶ್ನೆ ಮಾಡಲ್ಪಟ್ಟ ಸನತ್ಸುಜಾತರು ಉತ್ತರವನ್ನು ಹೇಳುತ್ತಾರೆ. ಹೇ ವಿಚಕ್ಷಣ= ಎಲೈ ಚತುರನಾದ ಧೃತರಾಷ್ಟ್ರನೇ, ಏನಂ= ಅಧ್ಯಯನವನ್ನು ಮಾತ್ರ ಮಾಡಿ ಪಾಪ ಕೃತ್ಯವನ್ನು ಮಾಡುವ ಬ್ರಾಹ್ಮಣನನ್ನು, ಸಾಮಾನಿ ವಾ= ಸಾಮವೇದಗಳಾಗಲೀ, ಋಚಃ= ಋಗ್ವೇದಗಳಾಗಲೀ, ಯಜೂಂಷಿ ವಾ= ಯಜುರ್ವೇದಗಳಾಗಲೀ, ಪಾಪಾತ್ ಕರ್ಮಣಃ= ಅವನು ಮಾಡಿದ ಪಾಪಕರ್ಮಗಳ ದೆಶೆಯಿಂದ, ನ ತ್ರಾಯಂತೇ ಹಿ= ಅವನನ್ನು ರಕ್ಷಿಸುವುದಿಲ್ಲವಷ್ಟೆ! ವೇದಪಾಠಗಳಿಂದ ಉಂಟಾದ ಕರ್ಮವು ಮಹಾಪಾಪ ನಾಶನವಾದುದರಿಂದ ಅವನನ್ನು ಪಾಪದಿಂದ ರಕ್ಷಿಸುವುದಿಲ್ಲ ಎಂಬ ಮಾತು ಹೇಗೆ ಸಂಗತವಾಗುತ್ತದೆ ಎಂದು ನೀನು ಶಂಕಿಸಬೇಡ ಎಂದು ಉಪದೇಶಿಸುತ್ತಾರೆ. ತೇ= ನಿನಗೆ, ಈ ವಿಷಯದಲ್ಲಿ, ಮಿಥ್ಯಾ= ಸುಳ್ಳನ್ನು, ನ ಬ್ರವೀಮಿ= ಹೇಳುತಿತಲ್ಲ. ಋಗಾದಿ ವೇದಗಳು ಅನೇಕ ಶಾಖೆಗಳಿಂದ ಕೂಡಿರುವುದರಿಂದ ಋಗ್ವೇದಗಳು, ಯಜುರ್ವೇದಗಳು ಎಂದು ಮೊದಲಾಗಿ ಬಹುವಚನವು ಪ್ರಯೋಗಿಸಲ್ಪಟ್ಟಿದೆ.

ನ ಛಂದಾಂಸಿ ವೃಜಿನಾತ್ ತಾರಯಂತಿ
ಮಾಯಾವಿನಂ ಮಾಯಯಾ ವರ್ತಮಾನಮ್ |
ಛಂದಾಂಸ್ಯೇನಂ ಪ್ರಜಹತ್ಯಂತಕಾಲೇ
ನೀಡಂ ಶಕುಂತಾ ಇವ ಜಾತಪಕ್ಷಾಃ ॥5॥

ಅಧ್ಯಯನ ಮಾಡಿದ ವೇದಗಳು ಅದ್ಯೇತೃ ಬ್ರಾಹ್ಮಣನನ್ನು ಪಾಪದಿಂದ ರಕ್ಷಣೆ ಮಾಡದಿದ್ದರೆ ಬೇರೆ ಏನನ್ನು ಮಾಡುತ್ತವೆ ಎಂಬ ಪ್ರಶ್ನೆಗೆ ಉತ್ತರವಾಗಿ `ಯಸ್ತಂ ನ ವೇದ ಕಿಮೃಚಾ ಕರಿಷ್ಯತಿ' (ಯಾವನು ವೇದಪ್ರತಿಪಾದ್ಯನಾದ ನಾರಾಯಣನನ್ನು ತಿಳಿಯುವುದಿಲ್ಲವೋ ಅವನು ಕೇವಲ ವೇದಗಳಿಂದ ಏನು ಮಾಡುತ್ತಾನೆ) ಎಂಬ ಶ್ರುತಿಗೆ ಅನುಸಾರವಾಗಿ ವೇದಪ್ರತಿಪಾದ್ಯವಾದ ವಸ್ತುಗಳಲ್ಲಿ ಅತಿಮುಖ್ಯನಾದ ಪರಮಾತ್ಮನ ಜ್ಞಾನಶೂನ್ಯನಾಗಿ ಕೇವಲ ವೇದಪಾಠವನ್ನು ಮಾಡಿ ಮೋಹಾಚಾರವನ್ನು ಮಾಡುವ ಮಿಥ್ಯಾಜ್ಞಾನಿಯಾದ ದುಷ್ಟಬ್ರಾಹ್ಮಣನಿಗೆ ಪಾಪ ಪರಿಹಾರವನ್ನು ಮಾಡದೆ ವೇದಗಳು ಅವನ ಅಂತ್ಯಕಾಲದಲ್ಲಿ ಅವನನ್ನು ಬಿಟ್ಟು ಹೋಗುತ್ತವೆ ಎಂದು ಹೇಳುತ್ತಾರೆ.

ಇಲ್ಲಿ ಛಂದಾಂಸಿ ಮೊದಲಾದ ಶಬ್ದಗಳಿಂದ ವರ್ಣಾತ್ಮಕಗಳಾದ ಛಂದಸ್ಸುಗಳು ಜಡವಾದ್ದರಿಂದ ಆ ಶಬ್ದಗಳಿಂದ ವಾಚ್ಯರಾದ ಛಂದೋಭಿಮಾನಿ ದೇವತೆಗಳನ್ನೇ ತೆಗೆದುಕೊಳ್ಳಬೇಕು. ಛಂದಾಂಸಿ= ಋಗಾದಿ ನಾಮಕರಾದ ದೇವತೆಗಳು, ಮಾಯಾವಿನಂ= ಮಿಥ್ಯಾಜ್ಞಾನವುಳ್ಳ ಅಥವಾ ಕಪಟಧರ್ಮವನ್ನು ಆಚರಿಸುವ, ಮಾಯಯಾ =ವೇದಾರ್ಥ ಜ್ಞಾನವಿಲ್ಲದೆ ತನ್ನ ಪ್ರಜ್ಞೆಯಿಂದಲೇ, ವರ್ತಮಾನಂ= ಕರ್ಮಗಳಲ್ಲಿ ಪ್ರವೃತ್ತನಾಗುವ, ಏನಂ ಹಿ= ಈ ಬ್ರಾಹ್ಮಣನನ್ನು, ವೃಜಿನಾತ್= ಅವನ ಪಾಪಕರ್ಮಗಳಿಂದ ಉಂಟಾಗುವ ನರಕಾದಿಗಳಿಂದ, ನ ತಾರಯಂತಿ= ದಾಟಿಸುವುದಿಲ್ಲ. ಆದರೆ ಅಂತಕಾಲೇ= ಅವನ ಮರಣಕಾಲದಲ್ಲಿ, ಏನಂ (ತಂ)= ಆ ಪಾಪಿಯಾದ ಬ್ರಾಹ್ಮಣನನ್ನು ಅವನು ತಮಗೆ ಅಭಿಪ್ರೇತವಾದ ವೇದಾರ್ಥ ಪರಿಜ್ಞಾನ ಶೂನ್ಯನಾಗಿದ್ದಾನೆ ಎಂಬ ಕೋಪದಿಂದ,

ಪ್ರಜಹತಿ= ಅವನನ್ನು ಬಿಟ್ಟು ಬೇರೆ ಕಡೆಗೆ ಹೋಗುತ್ತಾರೆ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ಜಾತಪಕ್ಷಾಃ= ರೆಕ್ಕೆಗಳು ಮೂಡಿದ, ಶಕುಂತಾಃ= ಪಕ್ಷಿಗಳು, ನೀಡಮಿವ= ತಮ್ಮ ಉತ್ಪತ್ತಿ ಸ್ಥಾನವಾದ ಗೂಡನ್ನು ಬಿಡುವಂತೆ ಎಂದು ದೃಷ್ಟಾಂತ. ಇದರಿಂದ ವೇದಾರ್ಥದ ಅನುಸಂಧಾನವಿಲ್ಲದೆ ಕೇವಲ ವೇದಪಾಠವನ್ನು ಮಾಡಿದ ಬ್ರಾಹ್ಮಣನನ್ನು ಅವನು ಪಠಿಸುವ ವೇದಗಳು ಅವನು ಆಚರಿಸುವ ದುಷ್ಕರ್ಮಗಳಿಂದ ಉಂಟಾಗುವ ನರಕಾದಿ ಅನರ್ಥಗಳನ್ನು ಪರಿಹರಿಸುವುದಿಲ್ಲ ಎಂದು ನಿರ್ಣಯಿಸಲ್ಪಡುತ್ತದೆ.
ಧೃತರಾಷ್ಟ್ರಃ
ನ ಚೇದ್ ವೇದಾ ವೇದವಿದಂ ತ್ರಾತುಂ ಶಕ್ತಾ ವಿಚಕ್ಷಣ |
ಅಥ ಕಸ್ಮಾತ್ ಪ್ರಲಾಪೋಽಯಂ ಬ್ರಾಹ್ಮಣಾನಾಂ ಸನಾತನಃ ॥6॥
ಅಧ್ಯಯನಾದಿಗಳಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿಕೊಡುವ ವೇದಗಳು ಅಧ್ಯಯನವನ್ನು ಮಾಡುವ ಬ್ರಾಹ್ಮಣನು ಮಾಡಿದ ಪಾಪಪರಿಹಾರವನ್ನು ಮಾಡುವ ಸಾಮರ್ಥ್ಯವಿಲ್ಲದೆ ಪುರುಷಾರ್ಥಹೇತುವಲ್ಲವಾದರೆ ವೇದಪಾಠಗಳು ಅರಣ್ಯ ರೋದನದಂತೆ ವ್ಯರ್ಥವಾಗುವುದಾದರೆ ಬ್ರಾಹ್ಮಣರು ಏತಕ್ಕೆ ವ್ಯರ್ಥವಾಗಿ ವೇದಪಾಠದ ಶ್ರಮವನ್ನು ವಹಿಸುತ್ತಾರೆ ಎಂದು ಧೃತರಾಷ್ಟ್ರನು ಪ್ರಶ್ನೆ ಮಾಡುತ್ತಾನೆ.
ಹೇ ವಿಚಕ್ಷಣಾ= ಎಲೈ ವಿಶೇಷವಾಗಿ ಭಗವಂತನ ಜ್ಞಾನವನ್ನು ಹೊಂದಿದ ಸನತ್ಸುಜಾತರೇ, ವೇದಾಃ= ಋಗಾದಿ ವೇದಗಳು, ವೇದವಿದಂ= ವೇದಪಾಠವನ್ನು ಮಾತ್ರ ಮಾಡುವಷ್ಟು ಜ್ಞಾನ ಸಂಪನ್ನನಾದ ಬ್ರಾಹ್ಮಣನನ್ನು, ತ್ರಾತುಂ= ನರಕಾದಿಗಳಿಂದ ರಕ್ಷಿಸಲು, ನ ಶಕ್ತಾಶ್ಚೇತ್= ಸಾಮರ್ಥ್ಯವನ್ನು ಹೊಂದದಿದ್ದರೆ, ಅತಃ= ಹಾಗಾದರೆ, ಸನಾತನಃ= ಅನಾದಿಕಾಲದಿಂದಲೂ ಪ್ರಾಪ್ತವಾಗಿ ಬಂದ, ಬ್ರಾಹ್ಮಣಾನಾಂ= ಬ್ರಾಹ್ಮಣರ, ಅಯಂ ಪ್ರಲಾಪಃ= ಅರಣ್ಯರೋದನದಂತಿರುವ ವೇದವಿಷಯಕವಾದ ವ್ಯರ್ಥಪಾಠರೂಪವಾದ ವಾಗ್ವ್ಯವಹಾರವು, ಕಸ್ಮಾತ್= ಯಾವ ಕಾರಣದಿಂದ ಮಾಡಲ್ಪಡುತ್ತದೆ?
ಸನತ್ಸುಜಾತಃ
ತಸ್ಯೈವ ನಾಮಾದಿವಿಶೇಷರೂಪೈಃ
ಇದಂ ಜಗದ್ ಭಾತಿ ಮಹಾನುಭಾವ |
ನಿರ್ದಿಶ್ಯ ಸಮ್ಯಕ್ ಪ್ರವದಂತಿ ವೇದಾಃ
ತದ್ ವಿಶ್ವವೈರೂಪ್ಯಮುದಾಹರಂತಿ ॥7॥
ವೇದಗಳು ಸರ್ವಥಾ ನಿರರ್ಥಕವಾದರೆ ವೇದಪಾಠವು ಅರಣ್ಯರೋದನವಾಗುತ್ತಿದ್ದಿತು. ಆದರೆ ಹಾಗಲ್ಲ. ಮತ್ತೇನೆಂದರೆ, `ಆತ್ಮನ ಆಕಾಶಃ ಸಂಭೂತಃ', `ಯತೋ ವಾ ಇಮಾನಿ ಭೂತಾನಿ ಜಾಯಂತೇ', `ಜನ್ಮಾದ್ಯಸ್ಯ ಯತಃ' ಇತ್ಯಾದಿ ಪ್ರಮಾಣಗಳಿಂದ ಭಗವಂತನಿಗೆ ಜಗಜ್ಜನ್ಮಾದಿ ಕಾರಣತ್ವವು ಸಿದ್ಧವಾಗುವುದರಿಂದ ಋಗಾದಿ ಸರ್ವವೇದಗಳಿಗೂ ಭಗವಂತನಲ್ಲಿ ಮಹಾತಾತ್ಪರ್ಯವನ್ನು ಅನುಸಂಧಾನವನ್ನು ಮಾಡಿ ತತ್ಪೂರ್ವಕವಾದ ಪಾಠಕ್ರಮವು ಅನಾದಿಕಾಲದಿಂದ ಶಿಷ್ಟಪರಿಗ್ರಹೀತವಾಗಿರುವುದರಿಂದ ಖಂಡಿತವಾಗಿ ವೇದಪಾಠಕ್ಕೆ ಸಾರ್ಥಕ್ಯವಿದೆ. ಅಜ್ಞಾನಪೂರ್ವಕವಾದ ವೇದಪಾಠವನ್ನು ಮಾತ್ರ ವ್ಯರ್ಥವೆಂದು ಹೇಳಲಾಗಿದೆ ಎಂದು ಉಪದೇಶವನ್ನು ಮಾಡುತ್ತಾ ಸನತ್ಸುಜಾತರು ಸರ್ವವೇದಗಳಿಗೂ ಅಭಿಪ್ರೇತವಾದ ಭಗವತ್ಪರವಾದ ಅರ್ಥವನ್ನು ಅನುವಾದ ಮಾಡುತ್ತಾರೆ.
ವೇದಾಃ= ಎಲ್ಲ ವೇದಗಳು, ತಸ್ಯೈವ= ಮೂಲರೂಪನಾದ ವಿಷ್ಣುವಿನದೇ ಆದ, ನಾಮಾದಿ ವಿಶೇಷರೂಪೈಃ= ನಾಮಾದಿಗಳು ಎಂದರೆ ವಾಸುದೇವಾದಿ ರೂಪಗಳು, ಅವುಗಳನ್ನೇ ವಿಶೇಷಬಲದಿಂದ ಭೇದವುಳ್ಳವುಗಳಂತೆ ನಿರೂಪಣೆ ಮಾಡುವ ವೇದಗಳಿಂದ, ಅಥವಾ ನಾಮಾದಿಗಳು ಎಂದರೆ ಆನಂದಾದಿ ಗುಣಗಳು ಎಂದರ್ಥ. ಅವುಗಳನ್ನು ವಾಸುದೇವಾದಿ ರೂಪಗಳಲ್ಲಿ ವಿಶೇಷವಾಗಿ ನಿರೂಪಿಸುವ ವೇದಗಳಿಂದ ನಿರ್ದಿಶ್ಯ= ವಾಸುದೇವಾದಿ ಅನಂತರೂಪಗಳನ್ನು ಚೆನ್ನಾಗಿ ನಿರ್ದೇಶ ಮಾಡಿ, ಇದಂ ಜಗತ್= ಈ ಪ್ರತ್ಯಕ್ಷಸಿದ್ಧವಾದ ಜಗತ್ತೂ ಕೂಡ, ಭಾತಿ= ಪ್ರಕಾಶಿಸುತ್ತದೆ ಎಂಬುದನ್ನು, ಪ್ರವದಂತಿ= ನಿಸ್ಸಂಶಯವಾಗಿ ವೇದಗಳೇ ಪ್ರತಿಪಾದನೆ ಮಾಡುತ್ತವೆ. ತತ್= ನಾನಾ ರೂಪಗಳಿಂದ ಸ್ವತಂತ್ರವಾಗಿ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಕಾರಣದಿಂದ, ತತ್= ಆ ಪರಬ್ರಹ್ಮನನ್ನು, ವಿಶ್ವವೈರೂಪ್ಯಂ= ಸರ್ವ ಜಗದ್ವೈಲಕ್ಷಣ್ಯವುಳ್ಳವನೆಂದು, ಉದಾಹರಂತಿ= ಪ್ರತಿಪಾದನೆ ಮಾಡುತ್ತವೆ. ಮಹಾನುಭಾವ= ಎಲೈ ಮಹಾನುಭಾವನೇ ಎಂದು ಧೃತರಾಷ್ಟ್ರನ ಸಂಬೋಧನೆ. ಮಹತಿ= ದೊಡ್ಡ ವಸ್ತುವಾದ ಭಗವಂತನಲ್ಲಿ, ಅನು= ತಾರತಮ್ಯರತಸರ್ವೋತ್ತಮತ್ವಕ್ಕೆ ಅನುಕೂಲವಾಗಿ, ಭಾವಃ= ಭಕ್ತಿಯುಳ್ಳವನೇ ಎಂದು ಅಭಿಪ್ರಾಯ. ಇದು ಧೃತರಾಷ್ಟ್ರನ ಸಂಬೋಧನೆ). ಅಥವಾ ತಸ್ಯೈವ= ಅದೇ ಪರಮಾತ್ಮನ, ನಾಮಾದಿ ವಿಶೇಷ ರೂಪೈಃ= ನಾಮ, ವಾಕ್ಯಗಳು ಎಂಬ ವಿಶೇಷ ರೂಪವನ್ನು ಹೊಂದಿದ ವೇದವಾಕ್ಯಗಳಿಂದ, ಇದಂ ಜಗತ್= ಈ ಜಗತ್ತನ್ನೂ ಕೂಡ ಸಮಾಕರ್ಷ ಮಾಡಿ, ಸಂತಃ= ಸಜ್ಜನರು, ಉದಾಹರಂತಿ= ವ್ಯವಹಾರವನ್ನು ಮಾಡುತ್ತಾರೆ. ನಿರ್ದಿಶ್ಯ= ಭಗವಂತನನ್ನು ಪರಮಮುಖ್ಯವೃತಿತಯಿಂದ ನಿರ್ದೇಶಮಾಡಿ ಅವನಿಗೆ, ವಿಶ್ವವೈರೂಪ್ಯಂ= ಸರ್ವಜಗದ್ವೈಲಕ್ಷಣ್ಯವನ್ನು, ಉದಾಹರಂತಿ= ವೇದಗಳು ಪ್ರತಿಪಾದನೆ ಮಾಡುತ್ತವೆ. ಎಂದರೆ ವೇದಗಳು ಪದಸಮನ್ವಯ ಮತ್ತು ವಾಕ್ಯಸಮನ್ವಯ ಎಂಬ ಎರಡು ಪ್ರಕಾರಗಳಿಂದ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ. ಪದಸಮನ್ವಯದಲ್ಲಿ ಪ್ರತಿಯೊಂದು ಪದವೂ ದೇವರ ಮಹಿಮೆಯನ್ನು ಹೇಳಿ ಸ್ವತಂತ್ರವಾಗಿ ದೇವರ ಸಂಬೋಧನೆಯ ರೂಪವಾಗಿದೆ. ಆಗ ವೇದದಲ್ಲಿರುವ ಎಲ್ಲ ಪದಗಳೂ ನಾಮಪದವೇ ಆಗುತ್ತವೆ. ವಾಕ್ಯಸಮನ್ವಯದಲ್ಲಿ ವೇದದಲ್ಲಿರುವ ಪ್ರತಿಯೊಂದು ವಾಕ್ಯವೂ ಭಗವಂತನ ವಿಶಿಷ್ಟವಾದ ಒಂದೊಂದು ಮಹಿಮೆಯನ್ನು ಹೇಳುತ್ತದೆ. ವಾಕ್ಯಸಮಯದಲ್ಲಿ ಕರ್ತೃಪದ, ಕ್ರಿಯಾಪದ ಮೊದಲಾದ ವಿಭಾಗಗಳು ಇರುತ್ತವೆ. ವಾಕ್ಯಸಮನ್ವಯದಲ್ಲಿ ಆಗುವಾಗ ವಾಕ್ಯದಲ್ಲಿರುವ ಇಂದ್ರಾದಿ ಪದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನು ಹೇಳಿ ಅಮುಖ್ಯವೃತ್ತಿಯಿಂದ ಈ ಜಗತ್ತನ್ನು ಹೇಳುತ್ತವೆ. ಜ್ಞಾನಿಗಳಾದವರು ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನು ಹೇಳುವ ಶಬ್ದಗಳನ್ನು ಅವನಿಂದ ಚೆನ್ನಾಗಿ ಎಳೆದು ಅಮುಖ್ಯವೃತಿತಯಿಂದ ಅದೇ ಪದಗಳಿಂದ ಜಗತ್ತನ್ನೂ ವ್ಯವಹರಿಸುತ್ತಾರೆ.ಇಲ್ಲದಿದ್ದರೆ ಜಗತ್ತಿನ ವಿಷಯದಲ್ಲಿ ವಾಗ್ವ್ಯವಹಾರವೇ ಕೂಡುವುದಿಲ್ಲ ಎಂದು ಅಭಿಪ್ರಾಯ.
ತದರ್ಥಮುಕ್ತಂ ತಪ ಏತದಿಜ್ಯಾ

ತಾಭ್ಯಾಮಸೌ ಪುಣ್ಯಮುಪೈತಿ ವಿದ್ವಾನ್ |
ಪುಣ್ಯೇನ ಪಾಪಂ ವಿನಿಹತ್ಯ ಪಶ್ಚಾತ್
ಸ ಜಾಯತೇ ಜ್ಞಾನವಿದೀಪಿತಾತ್ಮಾ ॥8॥

ಸರ್ವಜ್ಞರಾದ ಸನತ್ಸುಜಾತ ಮುನಿಗಳು ಭಗವದನುಸಂಧಾನ ವಿಶಿಷ್ಟವಾದ ಭಕ್ತಿಪೂರ್ವಕವಾಗಿ ಅಧ್ಯಯನ ಮಾಡಿದ ವೇದಗಳಿಗೇ ಸಾರ್ಥಕ್ಯವಿದೆ ಎಂದು ಉಪಪಾದನೆಯನ್ನು ಮಾಡಿ ಈಗ `ಅಹರಹಃಸಂಧ್ಯಾಂ ಉಪಾಸೀತ' ಮೊದಲಾದ ವೇದಗಳಿಂದ ವಿಹಿತವಾದ, ಬ್ರಾಹ್ಮಣಾದಿಗಳು ಅನುಷ್ಠಾನ ಮಾಡಬೇಕಾದ ನಿತ್ಯನೈಮಿತ್ತಿಕಾದಿ ಭೇದಭಿನ್ನವಾದ ಎಲ್ಲ ಕರ್ಮಗಳೂ ಅಂತಃಕರಣ ಶುದ್ಧಿದ್ವಾರಾ ಭಗವದಪರೋಕ್ಷಜ್ಞಾನಕ್ಕೆ ಕಾರಣವಾಗುವುದರಿಂದ ಪರಂಪರೆಯಿಂದ ಮೋಕ್ಷಸಾಧನವಾಗುತ್ತವೆ ಎಂದು ಉಪಪಾದನೆ ಮಾಡುತ್ತಾರೆ. ಏತತ್= ಜ್ಞಾನಿಗಳು ಆಚರಿಸುವ ಉಪವಾಸಾದಿ ರೂಪವಾದ, ತಪಃ= ತಪಸ್ಸು, ಇಜ್ಯಾ ಚ= ಮತ್ತು ಅಗ್ನಿಹೋತ್ರಾದಿ ರೂಪವಾದ ಯಜನಕ್ರಿಯೆಯೂ ಸಹ, ತದರ್ಥಂ= ಭಗವತ್ಪ್ರೀತ್ಯರ್ಥವಾಗಿ, ಉಕ್ತಂ= ವೇದಗಳಲ್ಲಿ ಪ್ರತಿಪಾದಿತವಾಗಿದೆ. ತಾಭ್ಯಾಂ= ಭಗವತ್ಪ್ರೀತಿಸಾಧನವಾದ, ವೇದವಿಹಿತವಾದ, ತಪೋಯಜ್ಞಗಳಿಂದ ಯುಕ್ತನಾದ, ಅಸೌ ವಿದ್ವಾನ್= ಈ ಸಾಧಕನಾದ ಜ್ಞಾನಿಯು, ಪುಣ್ಯಂ= ಕರ್ಮಣಾ ಜ್ಞಾನಮಾತನೋತಿ ಎಂಬ ಪ್ರಮಾಣಬಲದಿಂದ, ಪುನಂ ಪಾವಿತ್ರ್ಯಾಪಾದಕವಾದ, ಯಂ ಜ್ಞಾನವನ್ನು, ಉಪೈತಿ= ಪಡೆಯುತ್ತಾನೆ, ಸ್ವಸಿದ್ಧವಾದ ಪುಣ್ಯವನ್ನೂ ಹೊಂದುತ್ತಾನೆ. ಪುಣ್ಯೇನ= ಭಗವತ್ಪ್ರೀತಿಜನಕವಾದ ವೇದವಿಹಿತವಾದ ಕರ್ಮಾನುಷ್ಠಾನದಿಂದ ಉಂಟಾದ ಶುದ್ಧಾಂತಃಕರಣದಿಂದ ಸಂಪಾದಿಸಿದ ಪರೋಕ್ಷ ಜ್ಞಾನ ಮತ್ತು ಅಪರೋಕ್ಷ ಜ್ಞಾನರೂಪವಾದ ಪುಣ್ಯಶಬ್ದವಾಚ್ಯವಾದ ಪವಿತ್ರಜ್ಞಾನದಿಂದ, ಪಾಪಂ= ಪರೋಕ್ಷ ಮತ್ತು ಅಪರೋಕ್ಷದಶೆಯಲ್ಲಿ ಮಾಡಿದ ತನ್ನ ಪಾಪಗಳನ್ನು, ವಿನಿಹತ್ಯ= ಅಶ್ಲೇಷ ವಿನಾಶ ಭಾವದಿಂದ ನಾಶವನ್ನು ಮಾಡಿ, ಪಶ್ಚಾತ್= ಸರ್ವಪಾಪಕ್ಷಯದ ಅನಂತರದಲ್ಲಿ, ಸಃ= ಆ ಅಧಿಕಾರಿಯು, ಜ್ಞಾನವಿದೀಪಿತಾತ್ಮಾ= ನಿರ್ದುಷ್ಟವಾದ ಅಪರೋಕ್ಷ ಜ್ಞಾನದಿಂದ ಪ್ರಕಾಶಿತವಾದ ಸ್ವರೂಪವುಳ್ಳವನಾಗಿ, ಜಾಯತೇ= ಆಗುತ್ತಾನೆ. `ಆತ್ಮಾ ದೇಹೇ (ಪ್ರಾಣೇ) ಧೃತೌ ಜೀವೇ ಸ್ವಭಾವೇ ಪರಮಾತ್ಮನಿ' ಎಂದು ಕೋಶವಿರುವುದರಿಂದ ಇಲ್ಲಿ ಆತ್ಮ ಶಬ್ದಕ್ಕೆ ಸ್ವರೂಪವೆಂದು ಅರ್ಥವನ್ನು ಮಾಡಲಾಗಿದೆ. ಇದರಿಂದ ವೇದವಿಹಿತವಾದ ನಿಷ್ಕಾಮಕರ್ಮವನ್ನು ಅನುಷ್ಠಾನ ಮಾಡಿ ತನ್ಮೂಲಕವಾಗಿ ಅಂತಃಕರಣಶುದ್ಧಿಯನ್ನು ಸಂಪಾದಿಸಿದ ಅಧಿಕಾರಿಗೇ ಅಪರೋಕ್ಷಜ್ಞಾನ ಪ್ರಾಪ್ತಿಯಾಗುತ್ತದೆ ಎಂದು ಸಿದ್ಧವಾಗುತ್ತದೆ. ಕೇವಲ ವೇದಪಾಠದಿಂದ ಪಾಪವು ಪರಿಹಾರವಾಗುವುದಿಲ್ಲ. ವೇದೋಕ್ತ ಕರ್ಮಾನುಷ್ಠಾನದಿಂದ ಉಂಟಾದ ಪುಣ್ಯದಿಂದ ಮಾತ್ರ ಪಾಪವು ಪರಿಹಾರವಾಗುತ್ತದೆ ಎಂದು ಒಟ್ಟು ಅಭಿಪ್ರಾಯ.

ಜ್ಞಾನೇನ ಚಾತ್ಮಾನಮುಪೈತಿ ವಿದ್ವಾನ್
ಅಥಾನ್ಯಥಾ ವರ್ಗಫಲಾನುಕಾಂಕ್ಷೀ |
ಅಸ್ಮಿನ್ ಕೃತಂ ತತ್ ಪರಿಗೃಹ್ಯ ಸರ್ವಮ್
ಅಮುತ್ರ ಭುಂಕ್ತೇ ಪುನರೇತಿ ಮಾರ್ಗಮ್ ॥9॥

ಇಂತಹ ಸಾಧನದಿಂದ ಉಂಟಾದ ಅಪರೋಕ್ಷಜ್ಞಾನದಿಂದ ಪ್ರಕಾಶಿಸುವ ಅಧಿಕಾರಿಗೆ ಅನಂತರದಲ್ಲಿ ಪ್ರಾಪ್ಯವಾದ ಅಂತರ್ಯಾಮಿ ಭಗವದ್ರೂಪದ ಅಪರೋಕ್ಷ ಜ್ಞಾನರೂಪವಾದ ಮಹಾಫಲವನ್ನು ಇಲ್ಲಿ ಹೇಳುತ್ತಾರೆ.

ವಿದ್ವಾನ್= ಆ ಜ್ಞಾನಿಯು, ಜ್ಞಾನೇನ= ಸ್ವಯೋಗ್ಯವಾದ ಬಿಂಬಾಪರೋಕ್ಷ ಜ್ಞಾನದಿಂದ, ಆತ್ಮಾನಂ= ತನ್ನ ಅಂತರ್ಯಾಮಿಯಾದ ಭಗವಂತನನ್ನು, ಉಪೈತಿ= ಹೊಂದುತ್ತಾನೆ. ಅದರಂತೆ ತನ್ನ ಯೋಗ್ಯತೆಯನ್ನು ಮೀರದಂತೆ ಅನಂತರದಲ್ಲಿ ಮುಕ್ತನೂ ಆಗುತ್ತಾನೆ ಎಂದು ಇಟ್ಟುಕೊಳ್ಳಬೇಕು. ಅಥ= ಅದನ್ನು ಬಿಟ್ಟು, ಅನ್ಯಥಾ= ಬೇರೆ ರೀತಿಯಲ್ಲಿ, ಸರ್ವವೇದಗಳಿಗೂ ವೇದೋಕ್ತ ಕರ್ಮಗಳಿಗೂ ಭಗವದರ್ಪಣಾನುಸಂಧಾನವಿಲ್ಲದೆ ವಿಪರೀತವಾದ ಅನುಷ್ಠಾನವನ್ನು ಮಾಡಿದರೆ, ವರ್ಗಫಲಾನುಕಾಂಕ್ಷೀ ಇಂದ್ರಿಯ ವರ್ಗಗಳ ಅಥವಾ ವಿಷಯವರ್ಗಗಳ ಫಲವಾದ ಸುಖವನ್ನು ಪ್ರತಿಕ್ಷಣವೂ ಬಯಸುವ ಕಾಮಿಯಾದ ಪುರುಷನು ಅಸ್ಮಿನ್= ಈ ಮನುಷ್ಯಲೋಕದಲ್ಲಿ, ಕೃತಂ= ಕಾಮಸಹಿತವಾಗಿ ಆಚರಿಸಿದ, ತತ್= ಆ ಪುಣ್ಯಾಪಾಪರೂಪವಾದ ಕರ್ಮವನ್ನು, ಪರಿಗೃಹ್ಯ= ತೆಗೆದುಕೊಂಡು, ಅಮುತ್ರ= ಸ್ವರ್ಗಾದಿಪದವಾಚ್ಯವಾದ ಪರಲೋಕದಲ್ಲಿ, ಸವರ್ಂ= ಸ್ವಲ್ಪ ಶೇಷವನ್ನು ಇಟ್ಟುಕೊಂಡು ಎಲ್ಲವನ್ನೂ, ಭುಂಕ್ತೇ= ಅನುಭವಿಸುತ್ತಾನೆ. ಕಾಮ್ಯಪುಣ್ಯಜನ್ಯವಾದ ಸುಖವನ್ನು ಪಡೆಯುತ್ತಾನೆ ಎಂದು ಅಭಿಪ್ರಾಯ. ಪುನಃ= ಆ ಪುಣ್ಯವು ಕ್ಷಯವಾದ ನಂತರ, ಮಾರ್ಗಂ= ಮನುಷ್ಯಲೋಕದ ಮಾರ್ಗವನ್ನು ಕುರಿತು, ಏತಿ= ಬರುತ್ತಾನೆ. `ತೇ ತಂ ಭುಕತ್ವ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' (ಕಾಮ್ಯಪುಣ್ಯವನ್ನು ಸಂಪಾದಿಸಿದ ಜೀವರು ವಿಶಾಲವಾದ ಸ್ವರ್ಗಲೋಕದಲ್ಲಿ ಅದರ ಫಲವಾದ ಸುಖವನ್ನು ಭೋಗಿಸಿ ಪುಣ್ಯವು ನಾಶವಾಗುತ್ತಿರಲು ಪುನಃ ಮನುಷ್ಯಲೋಕಕ್ಕೆ ಬರುತ್ತಾರೆ) ಎಂಬುದು ಈ ವಿಷಯದಲ್ಲಿ ಪ್ರಮಾಣ.

ಅಸ್ಮಿನ್ ಲೋಕೇ ತಪಸ್ತಪ್ತಂ ಫಲಮನ್ಯತ್ರ ಭುಜ್ಯತೇ |
ಬ್ರಾಹ್ಮಣಾನಾಮಿಮೇ ಲೋಕಾ ಋದ್ಧೇ ತಪಸಿ ಸಂಯತಾಃ ॥10॥

ಪ್ರವೃತ್ತಿ-ನಿವೃತ್ತಿ ಕರ್ಮಗಳೆರಡೂ ಪರಲೋಕದಲ್ಲಿ ಫಲವನ್ನು ಕೊಡುವ ವಿಷಯದಲ್ಲಿ ಸಮಾನವಾಗಿರುವುದರಿಂದ ಆಯಾಸಸಾಧ್ಯವಾದ ನಿವೃತ್ತಧರ್ಮಾನುಷ್ಠಾನವನ್ನೇ ಏಕೆ ಮಾಡಬೇಕು ಎಂಬ ಪ್ರಶ್ನೆಯು ಸರಿಯಲ್ಲ. ಏಕೆಂದರೆ ಕರ್ಮಗಳು ಆಯಾ ಅಧಿಕಾರಿಗಳು ಮಾಡಿದ ಕಾಮ್ಯ, ಅಕಾಮ್ಯ ಭೇದದಿಂದ ಪರಲೋಕದಲ್ಲಿ ನಶ್ವರ ಮತ್ತು ಅನಶ್ವರ ಫಲಗಳನ್ನು ಕೊಡುವುದರಿಂದ ಅನಶ್ವರವಾದ ಫಲದ ಪ್ರಾಪ್ತಿಗಾಗಿ ನಿವೃತ್ತಧರ್ಮಾನುಷ್ಠಾನವನ್ನೇ ಅವಶ್ಯವಾಗಿ ಅನುಷ್ಠಾನ ಮಾಡಬೇಕು ಎಂದು ಉಪದೇಶ ಮಾಡುತ್ತಾ ಮೊದಲು ಅಂತಹ ಅಧಿಕಾರಿಗಳ ವೈವಿಧ್ಯವನ್ನೂ ಮತ್ತು ಅವರು ಮಾಡಿದ ಕರ್ಮಗಳಿಂದ ಉಂಟಾದ ಪುಣ್ಯರೂಪವಾದ ಫಲದ ವೈಲಕ್ಷಣ್ಯವನ್ನೂ ಉಪದೇಶ ಮಾಡುತ್ತಾರೆ.

ಅಸ್ಮಿನ್ ಲೋಕೇ= ಈ ಕರ್ಮಭೂಮಿಯಲ್ಲಿ, ತಪಃ= ತಪಸ್ ಎಂಬುದು ಉಪಲಕ್ಷಣ, ತಪಸ್ಸು, ಯಾಗ ಮೊದಲಾದ ಕರ್ಮಗಳನ್ನು, ತಪ್ತಂ ಚೇತ್= ಮಾಡಿದರೆ, ಫಲಂ= ಅದರಿಂದ ಉಂಟಾದ ಫಲವು, ಅನ್ಯತ್ರ= ಪರಲೋಕದಲ್ಲಿ, ಭುಜ್ಯತೇ= ಅನುಭವಿಸಲ್ಪಡುತ್ತದೆ. ಬ್ರಾಹ್ಮಣಾನಾಂ= ಬ್ರಹ್ಮಜ್ಞಾನಿಗಳಿಗೆ ಉಂಟಾಗುವ, ಇಮೇ ಲೋಕಾಃ= ಈ ಶ್ರೇಷ್ಠವಾದ ಲೋಕಗಳು, ಋದ್ಧೇ ತಪಸಿ= ಸಮೃದ್ಧವಾದ

ತಪಸ್ಸಿನಲ್ಲಿ, ಸಂಯತಾಃ= ನಿಯತವಾಗಿವೆ.
ಬ್ರಾಹ್ಮಣಾನಾಂ ತಪಸ್ಯರ್ಥಂ ತ್ವನ್ಯೇಷಾಂ ತಾವದೇವ ತತ್ |
ಏತತ್ ಸಮೃದ್ಧಮತ್ಯೃದ್ಧಂ ತಪೋ ಭವತಿ ಕೇವಲಮ್ ॥11॥
ಈ ಲೋಕದಲ್ಲಿ ಮಾಡಿದ ಕರ್ಮದ ಫಲವು ಪರಲೋಕದಲ್ಲಿ ಅನುಭವಿಸಲ್ಪಡುತ್ತದೆ ಎಂಬುದು ಸಕಾಮ-ನಿಷ್ಕಾಮವಿಧವಾದ ಎರಡು ಅಧಿಕಾರಿಗಳಿಗೂ ಸಮಾನವಾಗಿರುವುದರಿಂದ ವಿಶೇಷವಾಗಿ ನಿಷ್ಕಾಮಾಧಿಕಾರಿಗಳಿಗೆ ಹೇಗೆ ಆಧಿಕ್ಯವು ಕೂಡುತ್ತದೆ ಎಂದು ಉಪಪಾದನೆ ಇಲ್ಲಿ ಮಾಡುತ್ತಾರೆ.
ಬ್ರಾಹ್ಮಣಾನಾಂ= ಬ್ರಹ್ಮನಲ್ಲಿಯೇ ದರ್ಶನ, ಸ್ಪರ್ಶಾದಿಗಳಿಂದ ಸರ್ವೇಂದ್ರಿಯ ಚೇಷ್ಟೆಯನ್ನು ಮಾಡುವ ಜ್ಞಾನಿಗಳು ಮಾಡಿದ ಯಜ್ಞಾದಿ ರೂಪವಾದ ತಪಸ್ಸು, ವೃದ್ಧಂ ತು = ಸಮೃದ್ಧವೇ ಆಗುತ್ತದೆ. ಎಂದರೆ ಅನುಷ್ಠಾನಕಾಲದಲ್ಲಿಯೇ ಅನಂತವಾಗಿ ಮುಕಿತದೆಶೆಯಲ್ಲಿ ವೇದದಲ್ಲಿ ಹೇಳಿದ ಫಲಕ್ಕಿಂತಲೂ ಅಧಿಕವಾದ ಫಲವನ್ನು ಕೊಡುತ್ತವೆ ಎಂದು ಅಭಿಪ್ರಾಯ. ಅನ್ಯೇಷಾಂ= ಬ್ರಹ್ಮಜ್ಞಾನ ಹೀನರಾದ ಜನರಿಗೆ, ತತ್= ಆ ಕರ್ಮದಿಂದ ಉಂಟಾದ ಫಲವು, ತಾವದೇವ= ವೇದದಲ್ಲಿ ಎಷ್ಟು ಹೇಳಿದೆಯೋ ಅಷ್ಟು ಮಾತ್ರ. ಇದರಿಂದ `ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' (ಯಾವ ಕರ್ಮವನ್ನು ಜ್ಞಾನಪೂರ್ವಕವಾಗಿ ಶ್ರದ್ಧೆಯಿಂದ ಮಾಡುತ್ತಾನೆಯೋ ಅದೇ ಅಧಿಕಫಲಪ್ರದವಾಗುತ್ತದೆ ಎಂಬ ಶ್ರುತಿಯ ಅರ್ಥವು ವಿವರಿಸಲ್ಪಡುತ್ತದೆ). ಅದರಿಂದ ಜ್ಞಾನಿಯು ಆಚರಿಸಿದ ಕರ್ಮಕ್ಕೇ ಮಹಾಫಲಪ್ರದತ್ವವಿದೆ ಎಂದು ಸಿದ್ಧವಾಗುತ್ತದೆ.
ಬ್ರಾಹ್ಮಣಾನಾಂ= ಹಿಂದೆ ಹೇಳಿದಂತಹ ಬ್ರಹ್ಮಜ್ಞಾನಿಗಳಿಗೆ, ತಪಸಿ= ಯಾವ ತಪಸ್ಸಿದೆಯೋ ಅದರಲ್ಲಿ, ಅರ್ಥಂ= ಅರ್ಧದಷ್ಟು ಮಾತ್ರ, ಅನ್ಯೇಷಾಂ= ಕ್ಷತ್ರಿಯರಿಗೆ, ತತ್= ಆ ತಪಸ್ಸು ಮತ್ತು ಅದರಲ್ಲಿ ಜನ್ಯ ಫಲವೂ ಸಹ, ತಾವದೇವ= ಸಂಪೂರ್ಣವಾಗುತ್ತದೆ. ಕೇವಲಂ= ಶಿಲೋಂಛ ವೃತ್ತ್ಯಾದಿಗಳಲ್ಲಿ ಪರಪೀಡನೆ ಇಲ್ಲದಿರುವುದರಿಂದ ಕೇವಲ ಪುಣ್ಯಜನಕವಾದ, ಏತತ್= ಬ್ರಾಹ್ಮಣರು ಮಾಡಿದ, ತಪಃ= ಈ ತಪಸ್ಸು, ಅತ್ಯರ್ಥಂ (ಅತ್ಯೃದ್ಧಂ)= ಕ್ಷತ್ರಿಯರು ಮಾಡಿದ ತಪಸ್ಸಿಗಿಂತ ಬಹಳವಾಗಿ, ಸಮೃದ್ಧಂ ಭವತಿ= ಸಮೃದ್ಧವಾಗುತ್ತದೆ.
ಧೃತರಾಷ್ಟ್ರಃ
ಕಥಂ ಸಮೃದ್ಧಮತ್ಯೃದ್ಧಂ ತಪೋ ಭವತಿ ಕೇವಲಮ್ |
ಸನತ್ಸುಜಾತ ತದ್ ಬ್ರೂಹಿ ಕಥಂ ವಿದ್ಯಾಮಹಂ ಪ್ರಭೋ ॥12॥
ಬ್ರಾಹ್ಮಣರು ಮಾಡಿದ ತಪಸ್ಸಿಗೆ ಪರಲೋಕದಲ್ಲಿ ಫಲಾತಿಶಯವಿದೆ ಎಂದು ಕೇಳಿದ ಧೃತರಾಷ್ಟ್ರನು ಹಿಂದೆ ಹೇಳಿದ ವಿಧಾನದಿಂದ ಮಾಡಿದ ತಪಸ್ಸಾದಿಗಳೇ ಋದ್ಧವಾಗುವುದರಿಂದ ಅವು ಪುನಃ ಸಮೃದ್ಧವಾಗುವುದು ಹೇಗೆ ಎಂದು ಪ್ರಶ್ನೆ ಮಾಡುತ್ತಾನೆ.
ಹೇ ಸನತ್ಸುಜಾತ= ಎಲೈ ಸನತ್ಸುಜಾತರೇ, ಋದ್ಧಂ= ವೇದದಲ್ಲಿ ಹೇಳಿದ ವಿಧಾನದಿಂದ ಅನುಷ್ಠಾನ ಮಾಡಿದ ಕರ್ಮವು ಅತಿಶಯವನ್ನು ಹೊಂದಿದ ಮೇಲೆ, ತಪಃ= ಅದೇ ತಪಸ್ಸು, ಪುನಃ ಕೇವಲಂ ಸಮೃದ್ಧಂ= ಅತ್ಯಂತ ಸಮೃದ್ಧವಾಗಿ, ಕಥಂ= ಯಾವ ಪ್ರಕಾರದಿಂದ ಆಗುತ್ತದೆ. ಪ್ರಭೋ= ಎಲೈ ಪ್ರಶ್ನೆಯನ್ನು ಬಿಡಿಸುವ ಸಾಮರ್ಥ್ಯವುಳ್ಳ ಸನತ್ಸುಜಾತರೇ, ಅಹಂ= ನಾನು, ಒಂದೇ ತಪಸ್ಸಿಗೆ ಋದ್ಧತ್ವವನ್ನೂ ಮತ್ತು ಸಮೃದ್ಧತ್ವವನ್ನು, ಕಥಂ= ಯಾವ ರೀತಿಯಲ್ಲಿ, ವಿದ್ಯಾಂ= ತಿಳಿದೇನೋ, ತತ್= ಆ ರೀತಿಯಲ್ಲಿ, ಬ್ರೂಹಿ= ಹೇಳಿ (ಎಂದು ಧೃತರಾಷ್ಟ್ರನು ಪ್ರಶ್ನೆ ಮಾಡಿದನು).
ಸನತ್ಸುಜಾತಃ
ನಿಷ್ಕಲ್ಮಷಂ ತಪಸ್ತ್ವೇತತ್ ಕೇವಲಂ ಪರಿಚಕ್ಷತೇ |
ಏತತ್ ಸಮೃದ್ಧಮಪ್ಯೃದ್ಧಂ ತಪೋ ಭವತಿ ನಾನ್ಯಥಾ ॥13॥
ಉಕ್ತವಿಧಿಯಿಂದ ಮಾಡಿದ ತಪಸ್ಸು ಕೇವಲವಾಗುವುದು (ಸಮೃದ್ಧವಾಗುವುದು) ಹೇಗೆ ಎಂಬ ಪ್ರಶ್ನೆಗೆ ಉತ್ತರವಾಗಿ ಸನತ್ಸುಜಾತರೇ
`ಆಮಯೋಯಂ ಹಿ ಭೂತಾನಾಂ ಜಾಯತೇ ಯೇನ ಸುವ್ರತ |
ತದೇವ ಹ್ಯಾಮಯದ್ರವ್ಯಂ ತತ್ಪುನಾತಿ ಚಿಕಿತ್ಸಿತಮ್ ॥'
(ಎಲೈ ಸುವ್ರತನೇ, ಯಾವ ದ್ರವ್ಯವು ಪ್ರಾಣಿಗಳಿಗೆ ರೋಗವನ್ನು ಉಂಟು ಮಾಡುತ್ತದೆಯೋ ಅದೇ ದ್ರವ್ಯವು ಇನ್ನೊಂದು ದ್ರವ್ಯದ ಜೊತೆಯಲ್ಲಿ ಬೆರೆಸಿ ಸಂಸ್ಕರಿಸಿದಾಗ ಅದೇ ರೋಗವನ್ನು ನಿವಾರಣೆ ಮಾಡುತ್ತದೆ ಎಂದು ಹೇಳಿದಂತೆ ರೋಗವನ್ನು ಉಂಟುಮಾಡುವ ಕದಲಿ ಮೊದಲಾದ ದ್ರವ್ಯಗಳು ದ್ರವ್ಯಾಂತರ ಸಂಯುಕ್ತವಾಗಿ ಆ ರೋಗಗಳನ್ನು ನಾಶಮಾಡಿ ಮಹಾಫಲವನ್ನು ಕೊಡುವುದು ದೃಷ್ಟವಾದಂತೆ) ಇಲ್ಲಿಯೂ ಕೂಡ ಸಾಂಗವಾಗಿ ಅನುಷ್ಠಾನ ಮಾಡಿದ ತಪ ಆದಿ ಕರ್ಮಗಳು ನಶ್ವರವಾದ ಸ್ವರ್ಗಾದಿ ಫಲವನ್ನು ಕೊಡುವುದರಿಂದ ಅನರ್ಥಪ್ರದವಾದರೂ ಅವೇ ತಪಸ್ಸುಗಳು ಭಗವಂತನ ಅನುಗ್ರಹ ಎಂಬ ದ್ರವ್ಯಾಂತರ ಸಂಯೋಗವನ್ನು ಹೊಂದಿದವಂಥವುಗಳಾಗಿ ಅನಶ್ವರ ಫಲವನ್ನು ಕೊಡುವ ಜ್ಞಾನಕ್ಕೆ ಸಾಧನಗಳಾದುದರಿಂದ ಅವುಗಳಿಗೆ ಶ್ರೇಷ್ಠತ್ವವೂ, ಸಮೃದ್ಧತ್ವವೂ ಉಂಟಾಗುತ್ತದೆ ಎಂದು ಉಪದೇಶ ಮಾಡುತ್ತಾ ಮೊದಲು ತಮ್ಮ ಮಾತನ್ನು ದೃಢೀಕರಿಸುವುದಕ್ಕೆ ಜ್ಞಾನಿ ಜನರ ಸಮ್ಮತಿಯನ್ನು ಅನುವಾದ ಮಾಡಿ, ಧೃತರಾಷ್ಟ್ರನ ಸಂಶಯವನ್ನು ಪರಿಹರಿಸುತ್ತಾರೆ.
ಏತತ್= ನಾವು ವಿಚಾರ ಮಾಡುತ್ತಿರುವ ಇಂತಹ ತಪಸ್ಸು, ನಿಷ್ಕಲ್ಮಷಂ ತು= ಮುಂದೆ ಹೇಳಿದ ದೋಷಗಳಿಂದ ರಹಿತವಾದಾಗ ಮಾತ್ರ ಅದೇ, ಕೇವಲಂ= ಶ್ರೇಷ್ಠವಾದುದು ಮತ್ತು ಸಮೃದ್ಧವಾದುದು ಎಂದು, ಪರಿಚಕ್ಷತೇ= ಜ್ಞಾನಿಗಳು ಹೇಳುತ್ತಾರೆ. ಏತತ್= ಭಗವದನುಸಂಧಾನಸಹಿತವಾಗಿ ವಿಷಯರಾಗದಿಂದ ಮಾಡಿದ ಜ್ಞಾನಪೂರ್ವಕವಾದ, ತಪಃ= ತಪಾದಿ ಕರ್ಮವೂ ಕೂಡ ಋದ್ಧವಾದುದೆಂದು ಜ್ಞಾನಿಗಳು ಹೇಳುತ್ತಾರೆ ಎಂದು ಹಿಂದಿನಿಂದ ಅನ್ವಯ ಮಾಡಬೇಕು. ಅಪಿ ಶಬ್ದದಿಂದ ಋದ್ಧವೆಂದು ಹೇಳುತ್ತಾರೆಯೇ ಹೊರತು ಸಮೃದ್ಧವೆಂದು ಹೇಳುವುದಿಲ್ಲ ಎಂದು ತಿಳಿಯುತ್ತದೆ. ಏಕೆಂದರೆ ಅನ್ಯಥಾ= ಅಂತಹ ಕರ್ಮವು, ತನ್ನ ಅನುಷ್ಠಾನ ಪುಣ್ಯದಿಂದ ಉಂಟಾದ ಫಲವನ್ನು ಅನ್ಯಥಾಕರಣ ಮಾಡಲು ಎಂದರೆ ಅದರಲ್ಲಿ ಅತಿಶಯವನ್ನುಂಟು ಮಾಡಿ ಬದಲಾಯಿಸಲು, ನ ಭವತಿ= ಸಮರ್ಥವಾಗುವುದಿಲ್ಲ ಎಂದು ಅಭಿಪ್ರಾಯ.
ತಪೋಮೂಲಮಿದಂ ಸರ್ವಂ ಯನ್ಮಾಂ ಪೃಚ್ಛಸಿ ಕ್ಷತ್ರಿಯ |
ತಪಸಾ ವೇದವಿದ್ವಾಂಸಃ ಪರೇತ್ಯಾಮೃತಮಾಪ್ನುಯುಃ ॥14॥

ಹೀಗೆ ಒಂದೇ ತಪಸ್ಸಿಗೆ ಎರಡು ರೀತಿಯ ಫಲವನ್ನು ಕೊಡುವ ಪ್ರಕಾರವನ್ನು ಹೇಳಿ ಈಗ ಈ ಲೋಕದ ಮತ್ತು ಪರಲೋಕದ ಸಮಸ್ತ ಫಲಗಳನ್ನೂ ಕೊಡುವಂತಹದು ತಪಸ್ಸು ಮಾತ್ರ ಎಂದು ಹೇಳಿ ತಪಸ್ಸನ್ನು ಸ್ತೋತ್ರ ಮಾಡುತ್ತಾರೆ.
ಹೇ ಕ್ಷತ್ರಿಯ= ಎಲೈ ಧೃತರಾಷ್ಟ್ರನೇ, ಇದಂ ಸರ್ವಂ= ಪ್ರತ್ಯಕ್ಷಾಪ್ರತ್ಯಕ್ಷವಾದ ಈ ಲೋಕದ ಮತ್ತು ಪರಲೋಕದ ಅನೇಕ ವಿಧವಾದ ಸುಖಗಳು ಏನಿವೆಯೋ, ಯತ್= ಅವು ಹೇಗೆ ದೊರಕುತ್ತವೆ ಎಂದು ಯಾವುದನ್ನು ನೀನು, ಪೃಚ್ಛಸಿ= ಕೇಳುತಿತದ್ದೀಯೋ, ತತ್ ಸರ್ವಂ= ಆ ಎಲ್ಲವೂ, ತಪೋ ಮೂಲಂ= ತಪಸ್ಸನ್ನೇ ಮೂಲಕಾರಣವನ್ನಾಗಿ ಹೊಂದಿವೆ ಎಂದು ತಿಳಿಯುವವನಾಗು.
ತಪಸ್ಸಿನಿಂದಲೇ ಎಲ್ಲವೂ ದೊರೆಯುತ್ತದೆ ಎಂಬ ವಿಷಯದಲ್ಲಿ ತಸ್ಮಾತ್ ತಪಸಿ ರಮಂತೇ, ಆದ್ದರಿಂದ ಜ್ಞಾನಿಗಳು ತಪಸ್ಸಿನಲ್ಲಿಯೇ ಸಂತೋಷ ಪಡುತ್ತಾರೆ ಎಂಬ ಉಪನಿಷತ್‌ಸಿದ್ಧವಾದ ವಿದ್ವಾಂಸರ ಸಮ್ಮತಿಯನ್ನು ಹೇಳುತ್ತಾರೆ. ವೇದ ವಿದ್ವಾಂಸಃ= ವಿಶೇಷವಾದ ಜ್ಞಾನವನ್ನು ಪಡೆದ ಜ್ಞಾನಿಗಳು, ತಪಸಾ= ತಾವು ಅನುಷ್ಠಾನ ಮಾಡಿದ ತಪಸ್ಸಿನಿಂದ ಉಂಟಾದ ಶ್ರೇಯಸ್ಸಿನಿಂದ, ಪರೇತ್ಯ= ಲಿಂಗಭಂಗರೂಪವಾದ ಮರಣವನ್ನು ಹೊಂದಿ, ಅಮೃತಂ= `ಅಮೃತಂ ಕ್ಷೇಮಮಭಯಂ' ಎಂದು ಭಾಗವತದಲ್ಲಿ ಹೇಳಿದಂತೆ ಅಮೃತಶಬ್ದವಾಚ್ಯನಾದ ವೈಕುಂಠಾಖ್ಯ ವಿಷ್ಣುವನ್ನೂ ಮತ್ತು ವೈಕುಂಠ ಲೋಕವನ್ನೂ, ಆಪ್ನುವಯುಃ= ಪಡೆಯುತ್ತಾರೆ. ಇದರಿಂದ ಮೋಕ್ಷಪ್ರದವಾದ ಭಗವಂತನ ಪ್ರಾಪ್ತಿಯೂ ಮತ್ತು ಮೋಕ್ಷಪ್ರಾಪ್ತಿಯೂ ಸಹ ತಪಸ್ಸಿನಿಂದಲೇ ಉಂಟಾಗುತ್ತದೆ ಎಂದು ನಿರ್ಧರಿಸಲ್ಪಡುತ್ತದೆ.
ಧೃತರಾಷ್ಟ್ರಃ
ಕಲ್ಮಷಂ ತಪಸೋ ಬ್ರೂಹಿ ಶ್ರುತಂ ನಿಷ್ಕಲ್ಮಷಂ ತಪಃ |
ಸನತ್ಸುಜಾತ ಯೇನೇದಂ ವಿದ್ಯಾಂ ಗುಹ್ಯಂ ಸನಾತನಮ್ ॥15॥
ಹೀಗೆ ಸನತ್ಸುಜಾತರಿಂದ ನಿಷ್ಕಲ್ಮಷವಾದ, ಕೇವಲ ಸಮೃದ್ಧವಾದ ತಪಸ್ಸಿನ ವೈಭವವನ್ನು ಕೇಳಿದ ಧೃತರಾಷ್ಟ್ರನು ತಪಸ್ಸಿನ ಕಲ್ಮಷವನ್ನು ಕೇಳಲು ಪ್ರಶ್ನೆ ಮಾಡುತ್ತಾನೆ. ಸನತ್ಸುಜಾತ= ಎಲೈ ಸನತ್ಸುಜಾತ ಋಷಿಗಳೇ, ನನ್ನಿಂದ ನಿಮ್ಮ ಮುಖದಿಂದ, ನಿಷ್ಕಲ್ಮಷಂ= ನಿರ್ದುಷ್ಟವಾದ, ತಪಃ= ತಪಸ್ಸಿನ ಲಕ್ಷಣವು, ಶ್ರುತಮ್= ಕೇಳಲ್ಪಟ್ಟಿತು. ಆದರೆ ತಪಸ್ಸಿನ ಕಲ್ಮಷವು ಕೇಳಲ್ಪಡಲಿಲ್ಲ. ತಪಸಃ ಕಲ್ಮಷಂ= ತಪಸ್ಸಿನ ದೋಷವು ಯಾವುದು ಎಂದು, ಬ್ರೂಹಿ= ನನಗೆ ಹೇಳಿ. ಯೇನ= ಯಾವ ನಿಷ್ಕಲ್ಮಷವಾದ ತಪಸ್ಸನ್ನು ಆಚರಿಸಿ ಆ ತಪಸ್ಸಿನಿಂದ, ಗುಹ್ಯಂ= ಗೋಪ್ಯನಾದ, ಸನಾತನಮ್= ವೇದಪ್ರತಿಪಾದ್ಯನಾದ ಬ್ರಹ್ಮನನ್ನು, ವಿದ್ಯಾಂ= ನಾನು ತಿಳಿದೇನು?

ನಿಷ್ಕಲ್ಮಷವಾದ ತಪಸ್ಸೇ ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಕಾರಣವಾಗಿರುವುದರಿಂದ ತಪಸ್ಸಿನ ಕಲ್ಮಷವನ್ನು ತಿಳಿಯದೆ ನಿಷ್ಕಲ್ಮಷವಾದ ತಪಸ್ಸನ್ನು ಆಚರಿಸಲು ಸಾಧ್ಯವಿಲ್ಲವಾದ್ದರಿಂದ ತಪಸ್ಸಿನ ಕಲ್ಮಷಜ್ಞಾನವು ಆವಶ್ಯಕ. ಆದ್ದರಿಂದ ಅದನ್ನು ನನಗೆ ಹೇಳಿ ಎಂದು ಅಭಿಪ್ರಾಯ.
ಸನತ್ಸುಜಾತಃ(ಕುಮಾರಃ)
ಕ್ರೋಧಾದಯೋ ದ್ವಾದಶ ಯಸ್ಯ ದೋಷಾಃ
ತಥಾ ನೃಶಂಸಾನಿ ಚ ಸಪ್ತ ರಾಜನ್ |
ಜ್ಞಾನಾದಯೋ ದ್ವಾದಶ ಚಾತತಾನಾಃ
ಶಾಸ್ತ್ರೇ ಗುಣಾ ಯೇ ವಿದಿತಾ ದ್ವಿಜಾನಾಮ್ ॥16॥
ಹೀಗೆ ಧೃತರಾಷ್ಟ್ರನಿಂದ ಕೇಳಲ್ಪಟ್ಟ ಸನತ್ಸುಜಾತರು ಭಗವದನುಸಂಧಾನರಹಿತವಾದ ತಪಸ್ಸಿಗೆ ಅನೇಕ ದೋಷಗಳನ್ನು ಹೇಳುತ್ತಾರೆ. ಯಸ್ಯ= ಯಾವ ತಪಸ್ಸಿಗೆ, ಕ್ರೋಧಾದಯಃ= ಕ್ರೋಧವೇ ಮೊದಲಾದ, ದ್ವಾದಶ= ಹನ್ನೆರಡು ಸಂಖ್ಯೆಯ ಕಲ್ಮಷಗಳಿವೆಯೋ, ತಥಾ= ತಪಸ್ಸಿಗೆ ಕ್ರೋಧಾದಿ ಅನೇಕ ದೋಷಗಳಿರುವಂತೆ, ಅನೇಕ ನೃಶಂಸ ದೋಷಗಳೂ ಇವೆ ಎಂದು ತಿಳಿಸಲು `ತಥಾ' ಎಂದು ಪ್ರಯೋಗಿಸಿದ್ದಾರೆ. ತಥಾ= ಅದರಂತೆ, ನೃಶಂಸಾನಿ= ಕ್ರೌರ್ಯಗಳು, ಸಪ್ತ= ಏಳು ಸಂಖ್ಯೆಯನ್ನು ಹೊಂದಿವೆ. `ಸಪ್ತ ಚ' ಎಂಬಲ್ಲಿರುವ ಚ ಶಬ್ದದಿಂದ ಮುಂದೆ ಹೇಳಲಿರುವ ಆರು ನೃಶಂಸಗಳನ್ನು ಸಂಗ್ರಹಿಸಬೇಕು. ಒಟ್ಟು ಹದಿಮೂರು ನೃಶಂಸಗಳಾಗುತ್ತವೆ.
ಜ್ಞಾನಾದಯಃ= ಜ್ಞಾನವೇ ಮೊದಲಾದ, ದ್ವಾದಶ ಗುಣಾಃ= ಹನ್ನೆರಡು ಗುಣಗಳು, ಆತತಾನಾಃ= ಅದೇ ತಪಸ್ಸಿಗೆ ಒಳ್ಳೆಯ ವಿಸ್ತಾರವನ್ನು ಉಂಟುಮಾಡುವವುಗಳಾಗಿ ಇಂತಹ ಗುಣಗಳು, ದ್ವಿಜಾನಾಂ= ಬ್ರಾಹ್ಮಣರ, ಗುಣಾ ಇತಿ= ಗುಣಗಳೆಂದು, ಶಾಸ್ತ್ರೇ= ಧರ್ಮಶಾಸ್ತ್ರದಲ್ಲಿ, ವಿದಿತಾಃ= ಪ್ರತಿಪಾದಿಸಲ್ಪಟ್ಟಿವೆ. ಜ್ಞಾನಾದಿ ದ್ವಾದಶಗುಣಗಳು ತಪಸ್ಸಿಗೆ ಅತಿಶಯವನ್ನು ಉಂಟು ಮಾಡುತ್ತವೆ ಎಂದು ಆತತಾನಾಃ ಎಂಬ ಶಬ್ದವು ಸೂಚಿಸುತ್ತದೆ.
ಕ್ರೋಧಃ ಕಾಮೋ ಲೋಭಮೋಹೌ ವಿವಿತ್ಸಾಽ-
ಕೃಪಾಽಸೂಯಾ ಮಾನಶೋಕೌ ಸ್ಪೃಹಾ ಚ |
ಈರ್ಷ್ಯಾ ಜುಗುಪ್ಸಾ ಚ ಮಹಾಗುಣೇನ
ಸದಾ ವರ್ಜ್ಯಾ ದ್ವಾದಶೈತೇ ನರೇಣ ॥17॥
ಕ್ರೋಧಾದಿಗಳು ಎಂದು ಸಾಮಾನ್ಯಾಕಾರವಾಗಿ ಹೇಳಿದ ಅಸಜ್ಜನರಿಂದ ಸೇವ್ಯವಾದ, ಸಜ್ಜನರಿಂದ ವರ್ಜ್ಯವಾದ ದ್ವಾದಶ ಸಂಖ್ಯಾಕವಾದ ದೋಷಗಳ ಹೆಸರುಗಳನ್ನು ಇಲ್ಲಿ ಹೇಳುತ್ತಾರೆ.
ಕ್ರೋಧ= ಕಾಮಾದಿ ಹೇತುಕವಾದ ಅಂತಃಕರಣದ ಕ್ಷೋಭೆ, ದೇಹದ ಬೆವರು ಮತ್ತು ಕಂಪನದಿಂದ ಉಂಟಾದ ಹುಬ್ಬುಗಂಟಿಕ್ಕುವಿಕೆ ಮೊದಲಾದವುಗಳಿಂದ ಊಹಿಸಲ್ಪಡುವುದು ಅಥವಾ ಇನ್ನೊಬ್ಬರಿಗೆ ಹಿಂಸೆಯನ್ನು ಉಂಟು ಮಾಡುವುದಕ್ಕೆ ಕಾರಣವಾದ ಮನೋವೃತ್ತಿ ವಿಶೇಷ. ಕಾಮಃ= ವನಿತಾದಿಗಳ ಅಭಿಲಾಷೆ. ಲೋಭಃ= ಶಕ್ತಿಯಿರುವಾಗ ಸತ್ಪಾತ್ರರಲ್ಲಿ ದಾನ ಮಾಡದಿರುವುದು, ಮೋಹಃ= ಕಾರ್ಯಾಕಾರ್ಯ ಜ್ಞಾನಶೂನ್ಯತೆ ಅಥವಾ ತನ್ನ ಹಿತದ ಅಜ್ಞಾನ. ವಿವಿತ್ಸಾ= ಅನೇಕ ಉಪಾಯಗಳಿಂದ ವಿಶೇಷವಾಗಿ ವಿಷಯಗಳನ್ನು ಹುಡುಕುವ ಇಚ್ಛೆ ಅಥವಾ ಧನಲಾಭದ ಇಚ್ಛೆ, ಅಕೃಪಾ= ನಿಷ್ಠುರತೆ ಅಥವಾ ದಯಾಶೂನ್ಯತೆ, ಅಸೂಯಾ= ಸಜ್ಜನರ ಗುಣಗಳಲ್ಲಿ ದೋಷ ಚಿಂತನೆ ಅಥವಾ ಇನ್ನೊಬ್ಬರ ಗುಣಗಳನ್ನು ನೋಡಿ ಸಹಿಸದಿರುವುದು, ಮಾನಂ= ತನ್ನಲ್ಲಿ ಮಹತ್ವ

ಜ್ಞಾನ, ಶೋಕಃ= ಹಿಂದಿನ ಘಟನೆಯ ಸ್ಮರಣೆಯಿಂದ ಉಂಟಾದ ದುಃಖವಿಶೇಷ, ಸ್ಪೃಹಾ= ವಿಷಯೇಚ್ಛಾನುರೂಪವಾದ ಅತಿಯಾದ ಆಸೆ, ಈರ್ಷ್ಯಾ= ಇನ್ನೊಬ್ಬರ ಐಶ್ವರ್ಯವನ್ನು ನೋಡಿ ಸಹಿಸದಿರುವುದು, ಜುಗುಪ್ಸಾ= ಭೀಭತ್ಸೆ ಅಥವಾ ಇನ್ನೊಬ್ಬರ ಗುಣಗಳನ್ನು ಮರೆಮಾಚುವುದು, ಈ ಕ್ರೋಧಾದಿ ಹನ್ನೆರಡು ದೋಷಗಳು ತಪಸ್ಸಿಗೆ ಕಲ್ಮಷರೂಪವಾದವು. ಇವುಗಳನ್ನು ಮಹಾಗುಣವುಳ್ಳ ಮನುಷ್ಯನು ಜೀವನದಲ್ಲಿ ಯಾವಾಗಲೂ ಪರಿತ್ಯಾಗ ಮಾಡಬೇಕು. ಬ್ರಾಹ್ಮಣನ ಮಹಾಗುಣಿತ್ವವೆಂದರೆ

`ಮಹದ್‌ಬ್ರಹ್ಮೇತಿ ಯತ್ ಪ್ರೋಕ್ತಂ ಮಹತಃತತ್ವನ್ಮಹತಾಮಪಿ |
ತತ್ಪ್ರಾಪ್ತಿಗುಣಸಂಯುಕ್ತೋ ಮಹಾಗುಣ ಇತಿ ಸ್ಮೃತಃ ||'

(ಮಹತ್ಪದಾರ್ಥಗಳಿಂದಲೂ ಮಹತ್ತಾಗಿರುವುದರಿಂದ ಬ್ರಹ್ಮನನ್ನು `ಮಹತ್' ಎಂದು ಕರೆಯುತ್ತಾರೆ. ಅಂತಹ ಬ್ರಹ್ಮನ ಪ್ರಾಪ್ತಿಗೆ ಅನುಕೂಲವಾದ ಗುಣಗಳನ್ನು ಹೊಂದಿದವನು ಮಹಾಗುಣನೆಂದು ಎನಿಸುತ್ತಾನೆ) ಅಥವಾ ಬ್ರಾಹ್ಮಣನು ಇಂತಹ ಮಹಾಗುಣಗಳನ್ನು ಹೊಂದಬೇಕಾದರೆ ಇರಬೇಕಾದ ಗುಣಗಳು ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿವೆ

`ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ |
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಮ್ ||'

(ಶಮ, ದಮ, ತಪಸ್ಸು, ಶೌಚ, ಶಾಂತಿ, ಆರ್ಜವ, ಜ್ಞಾನ, ವಿಜ್ಞಾನ ಮತ್ತು ಆಸ್ತಿಕ್ಯಗಳು ಬ್ರಾಹ್ಮಣರಿಗೆ ಸ್ವಭಾವಜನ್ಯವಾದ ಗುಣಗಳು) ಎಂಬ ಪ್ರಮಾಣವಿರುವುದರಿಂದ ಮಹಾಗುಣ ಶಬ್ದಕ್ಕೆ ಬ್ರಹ್ಮಜ್ಞಾನಿಯಾದ ಬ್ರಾಹ್ಮಣ ಎಂದು ಅರ್ಥವನ್ನು ಮಾಡಬಹುದು. ಈ ಹನ್ನೆರಡು ದೋಷಗಳು ಇಂತಹ ಗುಣವುಳ್ಳ ಬ್ರಾಹ್ಮಣನಿಂದ ಯಾವಾಗಲೂ ತ್ಯಾಜ್ಯವಾದವು. ಯಾವಾಗಲೂ ಎಂದು ಹೇಳುವ `ಸದಾ' ಎಂಬ ಶಬ್ದವು ತಪಸ್ಸು, ವ್ರತ ಮೊದಲಾದವುಗಳನ್ನು ಅನುಷ್ಠಾನ ಮಾಡುವಾಗ ಈ ದೋಷವನ್ನು ಬಿಡಬೇಕೆಂದು ಕೈಮುತ್ಯನ್ಯಾಯದಿಂದ ಸೂಚಿಸುತ್ತದೆ.

ಏಕೈಕಮೇಷಾಂ ರಾಜೇಂದ್ರ ಮನುಷ್ಯಂ ಪರ್ಯುಪಾಸತೇ |
ಲಿಪ್ಸಮಾನೋಽಂತರಂ ತೇಷಾಂ ಮೃಗಾಣಾಮಿವ ಲುಬ್ಧಕಃ ||18||

ಕ್ರೋಧಾದಿಗಳನ್ನು ಸರ್ವದಾ ತ್ಯಾಗ ಮಾಡುವುದಕ್ಕೆ ಏನು ಕಾರಣ ಎಂಬ ಶಂಕೆಗೆ ದಾರಿಹೋಕನಿಗೆ ಕಾಡಿನಲ್ಲಿ ಸಿಂಹ-ವ್ಯಾಘ್ರಾದಿ ಮೃಗಗಳು ಉಪದ್ರವವನ್ನು ಕೊಡುವಂತೆ ಕ್ರೋಧಾದಿಗಳು ಮೋಕ್ಷಮಾರ್ಗಪ್ರತಿಬಂಧಕವಾಗಿ ದೊಡ್ಡ ಅನರ್ಥಕ್ಕೆ ಕಾರಣವಾಗುವುದರಿಂದ ಅವುಗಳನ್ನು ಬಿಡಬೇಕು ಎಂದು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

ರಾಜೇಂದ್ರ= ಎಲೈ ರಾಜೇಂದ್ರನೇ, ಏತೇ= ಈ ಕ್ರೋಧಾದಿಗಳು, ಏಕೈಕಂ= ಒಂದೊಂದೂ ಪ್ರತ್ಯೇಕವಾಗಿ, ಮನುಷ್ಯಂ= ದೇಹಿಯನ್ನು, ಪರ್ಯುಪಾಸತೇ= ಸರ್ವದೇಹವನ್ನೂ ವ್ಯಾಪಿಸಿ ಇರುತ್ತವೆ. ಅವನ ಒಂದು ದೌರ್ಬಲ್ಯವನ್ನು ಅನ್ವೇಷಣೆ ಮಾಡುತ್ತಾ ಎಂದು ಇಟ್ಟುಕೊಳ್ಳಬೇಕು. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ತೇಷಾಂ= ತಮ್ಮ ದೃಷ್ಟಿಗೆ ಗೋಚರವಾದ, ಮೃಗಾಣಾಂ= ಹರಿಣ ಮೊದಲಾದ ಪ್ರಾಣಿಗಳಲ್ಲಿ, ಅಂತರಂ= ಮೇಲೆರಗುವ ಅವಕಾಶವನ್ನು, ಲಿಪ್ಸಮಾನಃ= ಪಡೆಯಲು ಬಯಸಿದ, ಲುಬ್ಧಕಃ= ಮೃಗಮಾರಕನಾದ ವ್ಯಾಘ್ರವು ಅಥವಾ ವ್ಯಾಧನು ವೃಕ್ಷಾದಿಗಳನ್ನು ಅವಲಂಬಿಸಿ ನಿಂತಿರುವಂತೆ ಈ ದೋಷಗಳು ದೇಹಿಯನ್ನು ಆಶ್ರಯಿಸಿ ನಿಂತಿರುತ್ತವೆ ಎಂದು ಅಭಿಪ್ರಾಯ.

ವಿಕತ್ಥನಃ ಸ್ಪೃಹಯಾಲುರ್ಮನಸ್ವೀ
ಬಿಭ್ರತ್ ಕ್ರೋಧಂ ಚಪಲೋಽರಕ್ಷಣಶ್ಚ |
ಏತೇ ಪ್ರೋಕ್ತಾಃ ಷಣ್ಣರಾಃ ಪಾಪಶೀಲಾಃ
ಪ್ರಕುರ್ವತೇ ನೈವ ಧರ್ಮಂ ಸುಧರ್ಮಮ್
(ಏತೇ ಪ್ರಾಪ್ತಾಃ ಷಟ್ ಪರಾನ್ ಪಾಪಧರ್ಮಾನ್
ಪ್ರಕುರ್ವತೇ ನೋತ ಸಂತಃ ಸುದುರ್ಗೇ) ||19||

ಹಿಂದಿನ ಶ್ಲೋಕದಲ್ಲಿ ಹೇಳಿದ ತಪಸ್ಸಿನ ಕಲ್ಮಷಗಳಾದ ಕ್ರೋಧಾದಿ ಹದಿಮೂರು ನೃಶಂಸ ಪದಾರ್ಥಗಳನ್ನು ಪರಿತ್ಯಾಗ ಮಾಡಬೇಕೆಂದು ಸೂಚಿಸಲು ಎರಡು ಶ್ಲೋಕಗಳಿಂದ ಅವುಗಳನ್ನು ಹೇಳುತ್ತಾರೆ.

ವಿಕತ್ಥನಃ= ಅಸಂಬದ್ಧ ಪ್ರಲಾಪವನ್ನು ಮಾಡುವವನು, ಸ್ಪೃಹಯಾಲುಃ= ವಿಷಯ ಲೋಲುಪ, ಮನಸ್ವೀ= ತನ್ನ ಇಚ್ಛೆಯಂತೆ ನಡೆಯುವವನು, ಕ್ರೋಧಂ ಬಿಭ್ರತ್= ಸರ್ವದಾ ಕೋಪಶೀಲನಾದವನು, ಚಪಲಃ= ಚಂಚಲನಾದವನು, ಮಾನವಾನ್= ಅಹಂಕಾರಿಯಾದವನು, ಮಾನವಾನ್ ಎಂಬ ಪಾಠದ ಬದಲು ಕೆಲವು ಪಾಠಗಳಲ್ಲಿ ಅರಕ್ಷಣಃ ಎಂಬ ಪಾಠವಿದೆ. ಅರಕ್ಷಣ ಎಂದರೆ ತನ್ನ ಧರ್ಮವನ್ನು ರಕ್ಷಣೆ ಮಾಡಿಕೊಳ್ಳದವನು ಎಂದು ಅರ್ಥ. ಏತೇ ಪ್ರೋಕ್ತಾಃ= ಹೀಗೆ ಹೇಳಲ್ಪಟ್ಟ, ಈ ಪಾಪಶೀಲಾಃ= ಪಾಪಸ್ವಭಾವದ, ಷಣ್ಣರಾಃ= ಆರು ಪುರುಷರು, ಧರ್ಮಂ= ಪ್ರವೃತ್ತಿಧರ್ಮವನ್ನು, ಸುಧರ್ಮಂ= ನಿವೃತ್ತಿ ಧರ್ಮವನ್ನಾಗಿ, ನೈವ ಪ್ರಕುರ್ವತೇ= ಮಾಡುವುದಿಲ್ಲ. ವಾದಿರಾಜರು `ಏತೇ ಪ್ರಾಪ್ತಾಃ ಷಟ್ ಪರಾನ್ ಪಾಪಧರ್ಮಾನ್ ಪ್ರೋಕುರ್ವತೇ ನೋತ ಸಂತಃ ಸುದುರ್ಗೇ' ಎಂಬ ಪಾಠವನ್ನೂ ಇಟ್ಟುಕೊಂಡು ಬೇರೆ ವ್ಯಾಖ್ಯಾನವನ್ನು ಮಾಡಿದ್ದಾರೆ, ಏತೇ ಷಟ್= ಈ ಆರು ನೃಶಂಸ ಪುರುಷರು (ಕ್ರೂರಿಗಳಾದ ಪುರುಷರು), ಪಾಪಧರ್ಮಾನ್= ಪಾಪನಿಷ್ಠರಾದ ತಾಮಸ ಜೀವರನ್ನು, ಪ್ರಾಪ್ತಾಃ= ಬಂದು ಸೇರಿವೆ. ಎಂದರೆ ಇವು ತಾಮಸ ಜೀವರಿಗೆ ಮಾತ್ರ ಸಂಬಂಧಪಟ್ಟವುಗಳು ಎಂದು ಅಭಿಪ್ರಾಯ. ಇಲ್ಲಿ ನೃಶಂಸಾದಿ ಧರ್ಮಗಳನ್ನು ಹೇಳುವ ಬದಲು ನೃಶಂಸಾದಿ ಧರ್ಮಗಳನ್ನುಳ್ಳ ಧರ್ಮಿಗಳಾದ ಪುರುಷರನ್ನು ಹೇಳಿರುವುದು ತಾಮಸ ಜೀವರಿಗೂ ಮತ್ತು ಅವರ ಈ ದೋಷರೂಪವಾದ ಧರ್ಮಗಳಿಗೂ ಅಭೇದವಿದೆ ಎಂದು ಜ್ಞಾಪಿಸುವುದಕ್ಕಾಗಿ. ಇಲ್ಲದಿದ್ದರೆ ನೋತ ಸಂತಃ ಸುದುರ್ಗೇ' ಎಂದು ಸಜ್ಜನ ಸ್ವರೂಪಿಗಳಾದ ಧರ್ಮಿಗಳನ್ನು ಹೇಳುವುದು ಉಪಪನ್ನವಾಗುವುದಿಲ್ಲ. ಯೇ ಸಂತಃ= ಯಾವ ಸಜ್ಜನ ಜೀವರಿದ್ದಾರೋ ಅವರು, ಸುದುರ್ಗೇ= ಎಂತಹ ದೊಡ್ಡ ಆಪತ್ತಿನಲ್ಲಿಯೂ, ನ ಪ್ರಕುರ್ವತೇ= ವಿಕತ್ಥನಾದಿಗಳನ್ನು ಮಾಡುವುದಿಲ್ಲ.

ಸಂಭೋಗಸಂವಿದ್ ವಿಷಮೋಽಥ ಮಾನೀ
ದತ್ತಾನುತಾಪೀ ಕೃಪಣೋಽಬಲೀಯಾನ್ |

ವರ್ಗಪ್ರಶಂಸೀ ವನಿತಾಂ ಚ ದ್ವೇಷ್ಟಾ (ವನಿತಾವಿರೋಧೀ)
ಏತೇ ಪರೇ ಸಪ್ತ ನೃಶಂಸರೂಪಾಃ ॥20॥
ಇನ್ನು ಉಳಿದ ಏಳು ನೃಶಂಸಗಳ ಸ್ವರೂಪವನ್ನು ಹೇಳುತ್ತಾರೆ.
ಸಂಭೋಗ ಸಂವಿತ್= ಸಂಭೋಗ ಮೊದಲಾದ ವಿಷಯ ಭೋಗದ ಚಿಂತೆಯನ್ನು ಯಾವಾಗಲೂ ಹೊಂದಿದವನು,
ವಿಷಮೇಧಮಾನಃ= ವಿಷಮೇಧ ಎಂದರೆ ಪತನಹೇತುವಾದ್ದರಿಂದ ತನ್ನ ನಾಶಕ್ಕೆ ಕಾರಣವಾದ ಮಿಥ್ಯಾಜ್ಞಾನ, ಅದರಲ್ಲಿ ಮಾನಃ ಎಂದರೆ ಪ್ರಾಮಾಣ್ಯ ಬುದ್ಧಿಯುಳ್ಳವನು ಅಥವಾ ಅವುಗಳಿಗೆ ಪ್ರಾಮಾಣ್ಯವನ್ನು ಸಾಧಿಸಲು ದುಷ್ಟ ಪ್ರಮಾಣಗಳನ್ನು ಹೊಂದಿದವನು. ಅಥವಾ ವಿಷ ಎಂದರೆ ಸ್ವೋತ್ತಮರ ದ್ವೇಷ, ಅದನ್ನು ಏಧಮಾನಃ= ವರ್ಧಿಸುವವನು ಎಂದು ಅರ್ಥ.
ದತ್ವಾನುತಾಪೀ= ಸಜ್ಜನರಿಗೆ ದಾನವನ್ನು ಮಾಡಿ ಪಶ್ಚಾತ್ತಾಪ ಪಡುವವನು, ಅಬಲೀಯಾನ್= ಸಚ್ಛಾಸ್ತ್ರ, ಜನ್ಯವಾದ ಜ್ಞಾನ ಬಲಹೀನನಾದವನು, ವರ್ಗಪ್ರಶಂಸೀ= ಸ್ತ್ರೀ ಮೊದಲಾದ ವಿಷಯವರ್ಗವನ್ನು ಯಾವಾಗಲೂ ಹೊಗಳುವವನು, ವನಿತಾವಿರೋಧೀ= ಪತಿವ್ರತೆಯಾದ ತನ್ನ ಪತ್ನಿಯನ್ನಾಗಲೀ ಅಥವಾ ಬೇರೆ ಸ್ತ್ರೀಯನ್ನಾಗಲೀ ದ್ವೇಷಿಸುವವನು. ಏತೇ ಪರೇ ಸಪ್ತ= ಹಿಂದೆ ಹೇಳಿದ ಆರು ಜನರಿಂದ ಭಿನ್ನರಾದ ಈ ಏಳು ಜನರು, ನೃಶಂಸರೂಪಾಃ= ನೃಶಂಸಾತ್ಮಕರಾದವರು. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಇಲ್ಲಿಯೂ ಧರ್ಮವನ್ನು ಹೇಳುವ ಬದಲಾಗಿ ಧರ್ಮಿಯನ್ನು ಹೇಳಿರುವುದು ಈ ಧರ್ಮ-ಧರ್ಮಿಗಳಿಗೆ ಅಭೇದವನ್ನು ಸೂಚಿಸುವುದಕ್ಕಾಗಿ ಎಂದು ತಿಳಿಯಬೇಕು. ಹೀಗೆ ಒಟ್ಟು ಹದಿಮೂರು ನೃಶಂಸಗಳು.
ಜ್ಞಾನಂ ಚ ಸತ್ಯಂ ಚ ದಮಃ ಶ್ರುತಂ ಚ
ಅಮಾತ್ಸರ್ಯಂ ಹ್ರೀಸ್ತಿತಿಕ್ಷಾಽನಸೂಯಾ |
ಯಜ್ಞಶ್ಚ ದಾನಂ ಚ ಧೃತಿಃ ಶಮಶ್ಚ
ಮಹಾವ್ರತಾ ದ್ವಾದಶ ಬ್ರಾಹ್ಮಣಸ್ಯ ॥21॥
ಹೀಗೆ ಚೆನ್ನಾಗಿ ಅನುಷ್ಠಾನ ಮಾಡಿದ ತಪಸ್ಸನ್ನು ಹ್ರಾಸಗೊಳಿಸುವಂತಹ ಕ್ರೋಧಾದಿ ಸ್ವರೂಪವನ್ನು ಹೇಳಿ, ಈಗ `ಜ್ಞಾನಾದಯೋ ದ್ವಾದಶ ಚಾತತಾನಾಃ' ಎಂದು ಹಿಂದೆ ಹೇಳಿದ, ಚೆನ್ನಾಗಿ ಅನುಷ್ಠಾನ ಮಾಡಿದ, ತಪಸ್ಸಿನ ಫಲವನ್ನು ವೃದ್ಧಿಗೊಳಿಸುವ ಜ್ಞಾನಾದಿ ಧರ್ಮಗಳನ್ನು ಹೇಳುತ್ತಾರೆ.
ಜ್ಞಾನಂ= ಪರಾಪರ ತತ್ವವಿಷಯಕವಾದ ಜ್ಞಾನ, ಸತ್ಯಂ= ಯಥಾರ್ಥ ಭಾಷಣ ಅಥವಾ ಸಜ್ಜನಹಿತವಾದ ಭಾಷಣ, ದಮಃ= ಇಂದ್ರಿಯ ನಿಗ್ರಹ, ಶ್ರುತಂ= ಮಹಾಭಾರತಾದಿ ಮಹಾಶಾಸ್ತ್ರಗಳ ಶ್ರವಣ, ಅಮಾತ್ಸರ್ಯಂ= ಗುಣಿಗಳಾದ ಸ್ವೋತ್ತಮರಲ್ಲಿ ಸ್ನೇಹ, ಹ್ರೀಃ= ನಿಷಿದ್ಧವನ್ನು ಆಚರಿಸುವುದರಲ್ಲಿ ಲಜ್ಜೆ, ತಿತಿಕ್ಷಾ= ದ್ವಂದ್ವಸಹಿಷ್ಣುತೆ, ಅನಸೂಯಾ= ಮಹಾತ್ಮರಲ್ಲಿ ದೋಷವನ್ನು ಹುಡುಕದಿರುವುದು, ಯಜ್ಞಃ= ನಿತ್ಯವೂ ಮಾಡಬೇಕಾದ ಬ್ರಹ್ಮಯಜ್ಞಾದಿಗಳು ಅಥವಾ ಜ್ಯೋತಿಷ್ಟೋಮಾದಿ ಯಾಗಗಳು, ದಾನಂ= ಸತ್ಪಾತ್ರರಲ್ಲಿ ದ್ರವ್ಯತ್ಯಾಗ, ಧೃತಿಃ= ವಿಷಯಸನ್ನಿಧಿಯಲ್ಲಿ ಇಂದ್ರಿಯವನ್ನು ನಿಗ್ರಹಿಸುವ ಶಕ್ತಿ, ಶಮಃ= ಭಗವನ್ನಿಷ್ಠವಾದ ಬುದ್ಧಿ, ಏತೇ ದ್ವಾದಶ= ಈ ಹನ್ನೆರಡು, ಬ್ರಾಹ್ಮಣಸ್ಯ= ಅಧಿಕಾರಿಯಾದ ಬ್ರಾಹ್ಮಣನಿಗೆ, ಮಹಾವ್ರತಾಃ= ಮೋಕ್ಷಸಂಪಾದಕ ಜ್ಞಾನಸಾಧನಗಳಾದ ವ್ರತಗಳು.
ಯಸ್ತ್ವೇತೇಭ್ಯಃ ಪ್ರವಸೇದ್ ದ್ವಾದಶಭ್ಯಃ
ಸರ್ವಾಮಪೀಮಾಂ ಪೃಥಿವೀಂ ಸ (ಪ್ರ) ಶಿಷ್ಯಾತ್ |
ತ್ರಿಭಿರ್ದ್ವಾಭ್ಯಾಮೇಕತೋ ವಾಽವಿಶಿಷ್ಟೋ
ನ ಸಂತರಸ್ವೀತಿ ಸ ವೇದಿತವ್ಯಃ ॥22॥
ಹೀಗೆ ಅಪರೋಕ್ಷ ಜ್ಞಾನಿ ಸಾಧಾರಣವಾದ ಜ್ಞಾನಾದಿ ಹನ್ನೆರಡು ಮಹಾಗುಣಗಳನ್ನು ಹೇಳಿ ಈಗ ಅವುಗಳ ಮಹಿಮಾ ಕಥನಪೂರ್ವಕವಾಗಿ ಅವುಗಳ ಸಾಮರ್ಥ್ಯದಿಂದ ಉಂಟಾಗುವ ಮುಕ್ತಿರೂಪವಾದ ಫಲವನ್ನು ಉಪದೇಶಿಸುತ್ತಾರೆ. ಯಃ= ಯಾವ ಅಧಿಕಾರಿಯು, ಏತೇಭ್ಯಃ ದ್ವಾದಶಭ್ಯಃ= ಈ ಹನ್ನೆರಡು ಗುಣಗಳನ್ನು ಸಂಪಾದಿಸಲು, ಪ್ರವಸೇತ್= ಮನೆಯನ್ನು ಬಿಟ್ಟು ಹೊರಟು ಉತ್ತಮವಾದ ಗುರುಕುಲವಾಸವನ್ನು ಮಾಡುತ್ತಾನೆಯೋ, ಸಃ= ಅಂತಹ ಅಧಿಕಾರಿಯು, ಇಮಾಂ ಪೃಥಿವೀಂ ಸರ್ವಾಮಪಿ= ಈ ಎಲ್ಲ ಪೃಥಿವಿಯನ್ನೂ, ಪ್ರಶಿಷ್ಯಾತ್= ಆಳಿಯಾನು. ಇಲ್ಲಿ ಯಸ್ತ್ವೇತೇಭ್ಯಃ ಎಂಬಲ್ಲಿರುವ ತು ಶಬ್ದವು ವಿಶೇಷವನ್ನು ಸೂಚಿಸುತ್ತದೆ. ಅದೇನೆಂದರೆ ಇಲ್ಲಿ ಹೇಳಿದ ಪ್ರಶಾಸ ಪ್ರಸಿದ್ಧವಾದ ರಾಜ್ಯಪಾಲನೆಯಲ್ಲ. ಏಕೆಂದರೆ ಅದು ಅನ್ಯದೇವತೋದ್ದೇಶಕವಾದ ಕಾಮ್ಯಕರ್ಮದಿಂದಲೂ ಲಭಿಸುತ್ತದೆ. ಆದ್ದರಿಂದ `ಬ್ರಹ್ಮವಿದಾಪ್ನೋತಿ ಪರಂ, ಜ್ಞಾನೇನ ಆನಂದೀ ಭವತಿ' (ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ, ಜ್ಞಾನದಿಂದ ಆನಂದಪೂರ್ಣನಾಗುತ್ತಾನೆ) ಮೊದಲಾದ ಪ್ರಮಾಣಗಳಿಗೆ ಅನುಸಾರವಾಗಿ ಜ್ಞಾನಾದಿಗಳಿಗೆ ಅವರವರ ಯೋಗ್ಯತಾನುಸಾರಿಯಾದ ಮೋಕ್ಷಫಲವೇ ನಿಯಮೇನ ಉಂಟಾಗುತ್ತದೆ ಎಂದು ಹೇಳಿರುವುದರಿಂದ ಇಲ್ಲಿಯೂ ಪೃಥಿವೀ ಪ್ರಶಾಸನವೆಂದರೆ ತೈತ್ತಿರೀಯ ಉಪನಿಷತ್ತಿನಲ್ಲಿ ಆನಂದಮೀಮಾಂಸಾ ಪ್ರಕರಣದಲ್ಲಿ ಹೇಳಿರುವ `ತಸ್ಯೈಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್' (ಆ ಮುಕ್ತನಾದವನಿಗೆ ಸರ್ವವಿತ್ತಪೂರ್ಣನಾದ ಪೃಥಿವೀಪಾಲಕನಾದ ರಾಜನಿಗೆ ಇರುವಷ್ಟು ಆನಂದವಿರುತ್ತದೆ) ಎಂದು ಹೇಳಿದಂತೆ ಸ್ವಯೋಗ್ಯವಾದ ಆನಂದಾನುಭವ ರೂಪವಾದ ಮೋಕ್ಷಪ್ರಾಪ್ತಿಯೇ ಪ್ರಶಾಸನವೆಂದು ತಿಳಿಯಬೇಕು. ಇಲ್ಲದಿದ್ದರೆ `ಜ್ಞಾನವಾನ್ ಮಾಂ ಪ್ರಪದ್ಯತೇ' (ಅಪರೋಕ್ಷ ಜ್ಞಾನಿಯು ನನ್ನನ್ನು ಹೊಂದುತ್ತಾನೆ) ಇತ್ಯಾದಿಗಳು ಹೇಳುವ ಅಪರೋಕ್ಷ ಜ್ಞಾನಕ್ಕೆ ಮೋಕ್ಷಫಲ ಜನಕತ್ವ ರೂಪವಾದ ಪ್ರಮೇಯಕ್ಕೆ ವಿರೋಧ ಉಂಟಾಗುತ್ತದೆ. ತು ಎಂಬ ನಿಪಾತವು ಈ ಅರ್ಥವನ್ನೇ ಸೂಚಿಸುತ್ತದೆ.
ಹಾಗಾದರೆ ಜ್ಞಾನಾದಿ ಹನ್ನೆರಡು ಗುಣಗಳೂ ಇದ್ದವರಿಗೆ ಮಾತ್ರ ಮೋಕ್ಷ ಪ್ರಾಪ್ತಿಯಾಗುತ್ತದೆ, ಒಂದೆರಡು ಗುಣಗಳು ಕಡಿಮೆಯಾದರೆ ಮೋಕ್ಷ ಪ್ರಾಪ್ತಿಯಾಗುವುದಿಲ್ಲ ಎಂಬ ಪ್ರಸಂಗವಿಲ್ಲ. ಆಯಾ ಅಧಿಕಾರಿಗಳ ಯೋಗ್ಯತೆಯನ್ನು ಅನುಸರಿಸಿ ಒಂದೆರಡು ಗುಣಗಳಿಂದ ಸಹಕೃತವಾಗದಿದ್ದರೂ ಜ್ಞಾನಾದಿಗಳು ಉಳಿದ ಗುಣಗಳ ಸಹಕಾರದಿಂದ ಯಥಾಯೋಗ್ಯವಾದ ಮುಕ್ತಿಫಲವನ್ನು ಕೊಡುತ್ತವೆ ಎಂದು ಉಪದೇಶ ಮಾಡುತ್ತಾರೆ. `ತ್ರಿಭಿಃ ದ್ವಾಭ್ಯಾಂ ಏಕತೋ ವಾ'= ಮೂರು, ಎರಡು ಅಥವಾ ಒಂದು ಗುಣದಿಂದ, ಅವಿಶಿಷ್ಟಃ= ಊನನಾದ

ಅಧಿಕಾರಿಯು, ನ ಸಂತರಸ್ವೀತಿ= ಸಂಸಾರವನ್ನು ಚೆನ್ನಾಗಿ ದಾಟುವುದಿಲ್ಲ ಎಂದು, ವೇದಿತವ್ಯಃ= ತಿಳಿಯಬೇಕು (ಚೆನ್ನಾಗಿ ದಾಟುವುದಿಲ್ಲ ಎಂದರೆ ಮುಕ್ತಿಯನ್ನೇ ಪಡೆಯುವುದಿಲ್ಲ ಎಂದು ಅರ್ಥವಲ್ಲ. ಹನೆರಡು ಗುಣಗಳೂ ಇದ್ದವರಿಗಿಂತ ಸ್ವಲ್ಪ ಕಡಿಮೆಯ ಆನಂದ ದೆಶೆಯನ್ನು ಪಡೆಯುತ್ತಾನೆ ಎಂದು ಅರ್ಥ). ನಾಲ್ಕನೆಯ ಪಾದದಲ್ಲಿ `ನ ಸಂತರಸ್ವೀತಿ ಸ ವೇದಿತವ್ಯಃ' ಎಂಬ ಪಾಠಕ್ಕೆ ಬದಲಾಗಿ ವಾದಿರಾಜರು ಮತ್ತು ಭಾರತ ಶ್ರೀನಿವಾಸಾಚಾರ್ಯರು `ಕ್ರಮಾದ್ವಿಮುಕ್ತಾಃ ಮೌನಭೂತಾ ಭವಂತಿ' ಎಂಬ ಪಾಠವನ್ನೂ ಇಟ್ಟುಕೊಂಡು ವ್ಯಾಖ್ಯಾನ ಮಾಡಿದ್ದಾರೆ. ಮೂರು, ಎರಡು ಅಥವಾ ಒಂದುಗುಣಗಳಿಂದ ಹೀನರಾದವರು ವಿಮುಕ್ತಾಃ= ಇಲ್ಲಿ ಜೀವನ್ಮುಕ್ತರಾಗಿ, ಕ್ರಮಾತ್= ಅಪರೋಕ್ಷ ಜ್ಞಾನಾನಂತರದಲ್ಲಿ ಅನುಷ್ಠಾನ ಮಾಡುವ ಸಾಧನೆಯ ಕ್ರಮದಿಂದ ಅಥವಾ ತಮಗಿಂತ ಉತ್ತಮರಾದ ದೇವತೆಗಳನ್ನು ಪ್ರವೇಶ ಮಾಡುವ ಕ್ರಮದಿಂದ, ವಿಮುಕ್ತಾಃ= `ವಿ ನಿಷೇಧೇ ವಿಶೇಷೇ ಚ ಪತತ್ರಿಣಿ ಹರಾವಪಿ' ಎಂದು ಕೋಶವಿರುವುದರಿಂದ `ವಿ' ಎಂಬ ನಿಪಾತಕ್ಕೆ ನಿಷಿದ್ಧ ಎಂದು ಅರ್ಥ. ಆದ್ದರಿಂದ ಅತಿನಿಷಿದ್ಧವಾದ ಲಿಂಗ ಸಂಬಂಧದಿಂದ ಮುಕ್ತರಾಗಿ ಎಂದು ಅರ್ಥ. ಅನಂತರದಲ್ಲಿ ಮೌನಭೂತಾಃ= ಮುನಿಪ್ರಾಪ್ಯನಾದ ನಾರಾಯಣನೇ ಮೌನ, ಅಂತಹವನಲ್ಲಿ ಸಾಯುಜ್ಯಭಾವದಿಂದಾಗಲೀ, ಸಾಮೀಪ್ಯಭಾವದಿಂದಾಗಲೀ, ಸಾರೂಪ್ಯಭಾವದಿಂದಾಗಲೀ, ಭವಂತಿ= ಇರುವವರಾಗುತ್ತಾರೆ ಎಂದೂ ವ್ಯಾಖ್ಯಾನ ಮಾಡಿದ್ದಾರೆ.

ದಮಸ್ತ್ಯಾಗೋಽಥಾಪ್ರಮಾದ ಏತೇಷ್ವಮೃತಮಾಹಿತಮ್ |
ತಾನಿ ಸತ್ಯಮುಖಾನ್ಯಾಹುರ್ಬ್ರಾಹ್ಮಣಾನಾಂ ಮನೀಷಿಣಾಮ್ ॥23॥

ಹೀಗೆ ಹಿಂದೆ ಹೇಳಿದ ಮಹಾಧಿಕಾರಿಯಲ್ಲಿರುವ ನಿರ್ದುಷ್ಟವಾದ ಹನ್ನೆರಡು ಗುಣಗಳಲ್ಲಿ ನಿರ್ದುಷ್ಟವಾದ ದಮಾದಿ ಮೂರು ಗುಣಗಳು ಅತ್ಯಾವಶ್ಯಕವಾದವು. ಉಳಿದ ಜ್ಞಾನಾದಿ ಒಂಬತ್ತು ಗುಣಗಳು ದಮಾದಿ ಮೂರುಗುಣಗಳ ಮೂಲಕವಾಗಿಯೇ ಬಲಿಷ್ಠವಾಗುತ್ತವೆ ಎಂದು ಹೇಳುತ್ತಾ, ವಿವೇಕಿಯಾದವನು ದಮಾದಿ ಮೂರುಗುಣಗಳನ್ನೇ ಮೊದಲು ಸಂಪಾದನೆ ಮಾಡಬೇಕೆಂದು ಹೇಳುತ್ತಾ ಅವುಗಳ ಅಸಾಧಾರಣ ಲಕ್ಷಣವನ್ನು ಹೇಳುತ್ತಾರೆ.

ದಮಃ= ಇಂದ್ರಿಯನಿಗ್ರಹ, ತ್ಯಾಗಃ= ವಿಷಯಾಭಿಲಾಷೆಯ ತ್ಯಾಗ, ಅಪ್ರಮಾದಃ= ಅನವಧಾನತೆ ಇಲ್ಲದಿರುವುದು, ಯಾವಾಗಲೂ ಎಚ್ಚರಿಕೆಯಿಂದಿರುವುದು, ಯಾವಾಗಲೂ ದೇವರ ಸ್ಮರಣೆಯಲ್ಲಿರುವುದು, ಇದೇ ಶಮವೆಂದು ಹೇಳಲ್ಪಡುತ್ತದೆ. ಏತೇಷು= ನಿರ್ದುಷ್ಟವಾದ ಈ ಮೂರು ಗುಣಗಳಲ್ಲಿ, ಅಮೃತಂ= ನಿತ್ಯಮುಕ್ತನಾದ ಬ್ರಹ್ಮನು, ಆಹಿತಂ= ಸ್ಥಿತನಾಗಿದ್ದಾನೆ. ಹೀಗೆ ಹೇಳುವುದರಿಂದ ನಿರ್ದುಷ್ಟವಾದ ಜಿತೇಂದ್ರಿಯತ್ವ, ವಿಷಯ ವೈರಾಗ್ಯ ಮತ್ತು ಭಗವನ್ನಿಷ್ಠೆ ರೂಪವಾದ ಗುಣಗಳನ್ನು ಹೊಂದಿದ ಬ್ರಾಹ್ಮಣನಲ್ಲಿ, ಜ್ಞಾನಾದಿ ಮಹಾಗುಣಗಳನ್ನು ಕೊಡುವುದಕ್ಕಾಗಿಯೇ ಪರಮಾತ್ಮನು ಸ್ಥಿತನಾಗಿರುತ್ತಾನೆ ಎಂಬ ಅಭಿಪ್ರಾಯ ಸೂಚಿತವಾಗುವುದರಿಂದ ಮೊದಲು ದಮಾದಿ ಗುಣತ್ರಯಗಳನ್ನೇ ಸಂಪಾದಿಸಬೇಕು ಎಂದು ಸೂಚಿತವಾಗುತ್ತದೆ. ಜ್ಞಾನಾದಿ ಮಹಾಗುಣಪ್ರಾಪ್ತಿಗಾಗಿ ದಮಾದಿಗಳನ್ನು ಸಂಪಾದಿಸಬೇಕಾದರೆ ದಮಾದಿ ಗುಣಪ್ರಾಪ್ತಿಗಾಗಿ ಮೊದಲು ಏನು ಸಾಧನವನ್ನು ಮಾಡಬೇಕು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ.

ತಾನಿ= ಜ್ಞಾನಾದಿ ಗುಣಗಳಿಗೆ ಸಾಧನವಾದ ದಮಾದಿಗಳು, ಸತ್ಯಮುಖಾನಿ= `ಯತ್ಸತಾಂ ಹಿತಮತ್ಯಂತಂ ತತ್ಸತ್ಯಮಿತಿ ಚೋಚ್ಯತೇ' (ಯಾವುದು ಸಜ್ಜನರಿಗೆ ಹಿತವಾಗಿರುತ್ತದೆಯೋ ಅದೇ ಸತ್ಯವೆಂದು ಹೇಳಲ್ಪಡುತ್ತದೆ) ಎಂಬ ವಚನವಿರುವುದರಿಂದ ತನಗಿಂತ ಉತ್ತಮರಾದ ಸಜ್ಜನರಿಗೆ ಹಿತವನ್ನು ಉಂಟುಮಾಡಿ ಅದರಿಂದ ಅವರು ಮಾಡುವ ಅನುಗ್ರಹವೇ ಸತ್ಯವೆನಿಸುತ್ತದೆ. ದಮಾದಿಗಳು ಅಂತಹ ಸತ್ಯವನ್ನು, ಮುಖಂ= ಮುಖ್ಯವಾದ ಸಾಧನೆಯಾಗಿ ಹೊಂದಿದವುಗಳಾಗಿ ಇರುತ್ತವೆ. ಇದರಿಂದ ದಮಾದಿ ಪ್ರಾಪ್ತಿಗಾಗಿ ಸಜ್ಜನರ ಸೇವೆಯೇ ಸಾಧನವೆಂದು ಸೂಚಿತವಾಗುತ್ತದೆ. ಈ ವಿಷಯದಲ್ಲಿ ನಿಯಾಮಕ ಏನು ಎಂಬುದಕ್ಕೆ `ಬ್ರಾಹ್ಮಣಾ ವೈ ಮನೀಷಿಣಃ' (ಬ್ರಾಹ್ಮಣಾಹುರ್ಮನೀಷಿಣಃ) ಎಂದು ಹೇಳುತ್ತಾರೆ. ಬ್ರಾಹ್ಮಣಾಃ= ವೇದಶಾಸ್ತ್ರಸಂಪನ್ನರಾದ, ಯೇ ಮನೀಷಿಣಃ= ಯಾವ ಜ್ಞಾನಿಗಳಿದ್ದಾರೋ ಅಂತಹವರು, ಆಹುಃ= ಹೇಳುತ್ತಾರೆ ಎಂದು ಇಟ್ಟುಕೊಳ್ಳಬೇಕು. `ಬ್ರಾಹ್ಮಣಾನಾಂ ಮನೀಷಿಣಾಮ್' ಎಂಬ ಪಾಠದಲ್ಲಿ ಮನೀಷಿಣಾಂ= ವಿವೇಕಿಗಳಾದ, ಬ್ರಾಹ್ಮಣಾನಾಂ= ವೇದಜ್ಞಾನ ಸಂಪನ್ನರಾದವರ, ವಚನವೇ ಪ್ರಮಾಣವೆಂದು ಇಟ್ಟುಕೊಳ್ಳಬೇಕು. ಹೀಗೆ ಹೇಳಿ ಸನತ್ಸುಜಾತರು ತಾವು ಹೇಳಿದ ವಿಷಯವನ್ನು ದೃಢೀಕರಿಸಲು ಶಿಷ್ಟ ಸಮ್ಮತಿಯನ್ನೂ ತೋರಿಸಿದಂತೆ ಆಯಿತು.

ಭಾರತ ಶ್ರೀನಿವಾಸಾಚಾರ್ಯರು ಹೀಗೆಯೇ ವ್ಯಾಖ್ಯಾನ ಮಾಡುತ್ತಾ, ದಮಾದಿಗಳು ಸತ್ಯದಿಂದ ಉಂಟಾಗುವವು, ನೀನು ಮಾತ್ರ ದಮಾದಿಗಳಿಂದಲೇ ಮೋಕ್ಷವನ್ನು ಸಾಧನ ಮಾಡುತ್ತೇನೆ. ಆದ್ದರಿಂದ ಪಾಂಡವರಿಗೆ ರಾಜ್ಯವನ್ನು ಕೊಡುವುದಿಲ್ಲ ಎಂದು ತಿಳಿದಿದ್ದೀಯೆ. ಇದು ಅಸತ್ಯವಾದುದು. ಯಾವ ಪುರುಷನಲ್ಲಿ ಸತ್ಯವು ಇರುವುದಿಲ್ಲವೋ ಅವನಲ್ಲಿ ದಮಾದಿಗಳೂ ಇರುವುದಿಲ್ಲ. ನೀನು ರಾಜ್ಯಲೋಭದಿಂದ ಪಾಂಡವರಿಗೆ ಅಸತ್ಯವನ್ನು ನುಡಿಯುತ್ತಿದ್ದೀಯೆ. ಆದ್ದರಿಂದ ನಿನ್ನನ್ನು ಯಾವ ಪುಣ್ಯವೂ ಕಷ್ಟದಿಂದಾಗಲೀ ಅಥವಾ ಸಂಸಾರದಿಂದಾಗಲೀ ದಾಟಿಸುವುದಿಲ್ಲ ಎಂದು ಮನೀಷಿಣಃ= ಜ್ಞಾನಿಗಳಾದ, ಬ್ರಾಹ್ಮಣಾಃ= ಬ್ರಾಹ್ಮಣರು, ಆಹುಃ= ಹೇಳುತ್ತಾರೆ ಎಂದು ವ್ಯಾಖ್ಯಾನ ಮಾಡುತ್ತಾರೆ.

`ಬ್ರಾಹ್ಮಣಾಹುರ್ಮನೀಷಿಣಃ' ಎಂಬ ಪಾಠವನ್ನಿಟ್ಟುಕೊಂಡು ವ್ಯಾಖ್ಯಾನ ಮಾಡಿದ್ದಾರೆ. `ಬ್ರಾಹ್ಮಣಾಃ ಆಹುಃ' ಎಂಬ ಸ್ಥಳದಲ್ಲಿ `ಬ್ರಾಹ್ಮಣಾಹುಃ' ಎಂಬ ಸಂಧಿಯು ಸಂಧಿಗರ್ಭಸಂಧಿ ಎಂದು ಹೇಳಲ್ಪಡುತ್ತದೆ. ಇಂತಹ ಸಂಧಿಗಳು ಪುರಾಣಗಳಲ್ಲಿ ಬಹಳವಾಗಿ ಕಂಡುಬರುತ್ತವೆ. ಇದಕ್ಕೆ ಸಾರಸ್ವತವ್ಯಾಕರಣದ ಸಮ್ಮತಿಯೂ ಇದೆ.

ದಮೋಽಷ್ಟಾದಶದೋಷಃ ಸ್ಯಾತ್ ತ್ಯಾಗೋ ಭವತಿ ಷಡ್ಗುಣಃ |
ದೋಷತ್ಯಾಗೋಽಪ್ರಮಾದಃ ಸ್ಯಾತ್ ಸ ಚಾಪ್ಯಷ್ಟಗುಣೋ ಮತಃ ॥24॥

ದಮಾದಿಗಳು ಮೋಕ್ಷವನ್ನು ಕುರಿತು ಪ್ರದಾನ ಸಾಧನವಾದುದರಿಂದ ಅವುಗಳಾದರೂ ನಿರ್ದುಷ್ಟವಾದವುಗಳೇ ಫಲಕ್ಕೆ ಕಾರಣವಾಗುವುದರಿಂದ ಅವುಗಳನ್ನು ನಿರ್ದುಷ್ಟವಾಗಿ ಅನುಷ್ಠಾನ ಮಾಡಲು ದೋಷಗಳ ಜ್ಞಾನವು ಅವಶ್ಯಕವಾದುದರಿಂದ ದಮಾದಿಗಳ ದೋಷಗಳನ್ನು ಹೇಳುತ್ತಾರೆ.

ದಮಃ= ಇಂದ್ರಿಯನಿಗ್ರಹವು, ಅಷ್ಟಾದಶ ದೋಷಃ ಸ್ಯಾತ್= ಹದಿನೆಂಟು ದೋಷಗಳಿಂದ ಕೂಡಿರುತ್ತದೆ. ತ್ಯಾಗಃ= ಸತ್ಪಾತ್ರರಲ್ಲಿ

ತ್ಯಾಗವು, ಷಡ್ಗುಣಃ ಭವತಿ= ಆರು ಗುಣಗಳಿಂದ ಕೂಡಿರುತ್ತದೆ. ಅಪ್ರಮಾದಃ= ಅಪ್ರಮಾದವೆಂದರೆ, ದೋಷತ್ಯಾಗಃ ಸ್ಯಾತ್= ದೋಷತ್ಯಾಗರೂಪವಾಗುತ್ತದೆ. ಸ ಚಾಪಿ= ಅದಾದರೂ ಕೂಡ, ಅಷ್ಟಗುಣಃ= ಎಂಟು ಗುಣಗಳುಳ್ಳದ್ದೆಂದು, ಮತಃ= ಸಮ್ಮತವಾಗಿರುತ್ತದೆ.

ಅನೃತಂ ಪೈಶುನಂ ತೃಷ್ಣಾ ಪ್ರಾತಿಕೂಲ್ಯಂ ತಮೋಽರತಿಃ |
ಲೋಕದ್ವೇಷೋಽತಿಮಾನಶ್ಚ ವಿವಾದಃ ಪ್ರಾಣಿಪೀಡಿತಮ್ ॥25॥

ಮುಕ್ತಿಸಾಧನವಾದ, ಅಪರೋಕ್ಷ ಜ್ಞಾನರೂಪವಾದ, ಮಹಾಗುಣಕ್ಕೆ ಸಾಧನವಾದ ದಮಾದಿ ಮೂರುಗುಣಗಳೂ ಸಹ ದೋಷದೂರವಾಗಿದ್ದರೆ ಮಾತ್ರ ಅಂತಹ ಸಾಮರ್ಥ್ಯವನ್ನು ಹೊಂದಿರುತ್ತದೆ, ಇಲ್ಲದಿದ್ದರೆ ಇಲ್ಲ ಎಂದು ತಿಳಿಸುತ್ತಾ ಮೂರರ ಪಂಕಿತಯಲ್ಲಿ ಮೊದಲು ಹೇಳಿದ ದಮದ ದೋಷಗಳನ್ನು ಮೂರುಶ್ಲೋಕಗಳಿಂದ ಹೇಳುತ್ತಾರೆ. ವಾದಿರಾಜರು

ದಮೋಽಷ್ಟಾದಶದೋಷಃ ಸ್ಯಾತ್ ಪ್ರತಿಕೂಲಂ ಕೃತೇರ್ಭವೇತ್ |
ಪೈಶುನ್ಯಮನೃತಂ ತೃಷ್ಣಾ ಪ್ರಾತಿಕೂಲ್ಯಂ ತಮೋಽರತಿಃ ॥

ಎಂಬ ಮೂಲವನ್ನು ತೆಗೆದುಕೊಂಡೂ ವ್ಯಾಖ್ಯಾನವನ್ನು ಮಾಡುತ್ತಾರೆ. ದಮಃ= ಇಂದ್ರಿಯನಿಗ್ರಹರೂಪವಾದ ದಮವು, ಅಷ್ಟಾದಶ ದೋಷಃ= ಹದಿನೆಂಟು ದೋಷಗಳಿಂದ ಕೂಡಿರುತ್ತದೆ ಅಥವಾ ಹದಿನೆಂಟು ದೋಷಗಳನ್ನು ಉಂಟು ಮಾಡುತ್ತದೆ. ಆ ದೋಷವರ್ಗದಿಂದ, ಕೃತೇಃ= ಜ್ಞಾನಾದಿಗುಣಸಾಧನವಾದ ದಮರೂಪವಾದ ಕರ್ಮಕ್ಕೆ (ಪ್ರಯತ್ನಕ್ಕೆ), ಪ್ರತಿಕೂಲಂ= ಪ್ರತಿಕೂಲತೆಯು ಎಂದರೆ ತಮ್ಮ ಅನುಷ್ಠಾನದಿಂದ ಉಂಟಾದ ಪುಣ್ಯದಿಂದ ಜ್ಞಾನಾದಿಗುಣವನ್ನು ಉತ್ಪತ್ತಿ ಮಾಡುವ ಸಾಮರ್ಥ್ಯವಿಲ್ಲದಿರುವಿಕೆಯು ಅಥವಾ ಭಾವರೂಪವಾದ ಪ್ರತಿಬಂಧಕತ್ವವು, ಭವೇತ್= ಉಂಟಾದೀತು. ಅಥವಾ `ಪ್ರತಿಕೂಲಂ ಕೃತೇ ಭವೇತ್' ಎಂಬ ಪಾಠವನ್ನು ಇಟ್ಟುಕೊಂಡರೆ ಕೃತೇ= ಯಾವ ದೋಷಗಳಲ್ಲಿ ಒಂದನ್ನಾದರೂ ಮಾಡಿದರೆ ದಮಕ್ಕೆ ಪ್ರತಿಕೂಲತಾ= ಪ್ರತಿಕೂಲತೆಯು, ಭವೇತ್= ಉಂಟಾದೀತು ಎಂದೂ ಅರ್ಥವನ್ನು ಮಾಡಿದ್ದಾರೆ. ದಮದ ದೋಷಗಳು ಯಾವುವು ಎಂಬುದಕ್ಕೆ ಉತ್ತರವನ್ನು ಹೇಳುತ್ತಾರೆ: (1) ಪೈಶುನ್ಯಂ = ಚಾಡಿಯನ್ನು ಹೇಳುವುದು, (2) ಅನೃತಮ್ = ಸುಳ್ಳನ್ನು ಹೇಳುವುದು, (3) ತೃಷ್ಣಾ = ವಿಷಯದ ಅಭಿಲಾಷೆ, (4) ಪ್ರಾತಿಕೂಲ್ಯಂ= ತಮಗಿಂತ ಉತ್ತಮರಿಗೆ ಹಿತವನ್ನು ಮಾಡುವುದಕ್ಕೆ ವಿರೋಧವನ್ನು ಮಾಡುವುದು ಅಥವಾ ಎಲ್ಲರಿಗೂ ಪ್ರತಿಕೂಲವನ್ನು ಮಾಡುವುದು, (5) ತಮಃ= ಶಾಸ್ತ್ರಜನ್ಯಜ್ಞಾನಹೀನತೆ, (6)ಅರತಿಃ= ಯದೃಚ್ಛಾಲಾಭದಿಂದ ತೃಪ್ತಿ ಇಲ್ಲದಿರುವುದು, ಅಥವಾ ಯಾವುದರಿಂದಲೂ ತೃಪ್ತಿಯನ್ನು ಹೊಂದದಿರುವುದು, (7) ಲೋಕದ್ವೇಷಃ= ತನಗಿಂತ ಉತ್ತಮರಾದ ಜ್ಞಾನಿಜನರನ್ನು ದ್ವೇಷ ಮಾಡುವುದು, (8) ಅಭಿಮಾನಃ= ತನ್ನಲ್ಲಿ ಮಹತ್ತ್ವಜ್ಞಾನವನ್ನು ಹೊಂದಿರುವುದು, (9) ವಿವಾದಃ= ನಿಷಿದ್ಧವಾದ ಮಾತನ್ನು ಆಡುವುದು ಅಥವಾ ಉತ್ತಮರ ಜೊತೆಯಲ್ಲಿ ವಿತಂಡವನ್ನು ಮಾಡುವುದು, (10) ಪ್ರಾಣಿಪೀಡನಮ್= ತನ್ನ ಬಂಧುಗಳ ಪೋಷಣೆಗಾಗಿ ಇನ್ನೊಬ್ಬರ ಪೀಡೆಯನ್ನು ಮಾಡುವುದು ಅಥವಾ ಕಲಿಯುಗದಲ್ಲಿ ವಿಹಿತವಲ್ಲದ ವಾಜಪೇಯಾದಿಗಳನ್ನು ಆಚರಿಸಿ ಅಜಾದಿಪಶುಗಳನ್ನು ಕೊಲ್ಲುವುದು.

ಪರಿವಾದೋಽತಿವಾದಶ್ಚ ಪರಿತಾಪೋಽಕ್ಷಮಾಽಧೃತಿಃ |
ಅಸಂಧಿಃ ಪಾಪಕೃತ್ಯಂ ಚ ಹಿಂಸಾ ಚೇತಿ ಪ್ರಕೀರ್ತಿತಾಃ ॥26॥
ಏತೈರ್ದೋಷೈರ್ವಿಮುಕ್ತೋ ಯಃ ಸ ದಮಃ ಸದ್ಭಿರುಚ್ಯತೇ ॥27॥

(11)ಪರಿವಾದಃ= ತನಗಿಂತ ಉತ್ತಮರ ನಿಂದೆ ಅಥವಾ ಸರ್ವಲೋಕ ನಿಂದೆ, (12) ಅತಿವಾದಃ= ನಿರರ್ಥಕವಾದ ಮಾತುಗಳು ಅಥವಾ ಶಾಸ್ತ್ರವಿರುದ್ಧವಾದ ಮಾತುಗಳು, (13) ಪರಿತಾಪಃ= ವ್ಯರ್ಥವಾಗಿ ದುಃಖವನ್ನೇ ಯೋಚಿಸುತ್ತಿರುವುದು, (14) ಅಕ್ಷಮಾ= ದ್ವಂದ್ವಸಹಿಷ್ಣುತೆ ಇಲ್ಲದಿರುವುದು ಅಥವಾ ತನಗಿಂತ ಉತ್ತಮರನ್ನು ನೋಡಿ ಸಹಿಸದಿರುವುದು, (15) ಅಧೃತಿಃ= ವಿಷಯಗಳಲ್ಲಿ ಚಪಲತೆ, (16) ಅಸಿದ್ಧಿಃ (ಅಸಂಧಿಃ)= ಪ್ರಾರಂಭಿಸಿದ ಕರ್ಮವನ್ನು ಪೂರೈಸದಿರುವುದು, (17) ಪಾಪಕೃತ್ಯಂ= ನಿಷಿದ್ಧ ಕರ್ಮಾಚರಣೆ, (18) ಹಿಂಸಾ= ಪ್ರಾಣಿಹಿಂಸೆ ಅಥವಾ ವಿಹಿತವಲ್ಲದ ಹಿಂಸೆ. ಏತೈಃ ದೋಷೈಃ= ಈ ಹದಿನೆಂಟು ದೋಷಗಳಿಂದ, ವಿಮುಕ್ತಃ= ಜೊತೆಗೂಡದ, ಯಃ ದಮಃ= ಯಾವ ದಮವಿದೆಯೋ, ಸಃ= ಅದೇ, ದಮಃ= ದಮವೆಂದು, ಸದ್ಭಿಃ= ಸಜ್ಜನರಿಂದ, ಉಚ್ಯತೇ= ಹೇಳಲ್ಪಡುತ್ತದೆ. ಇದರಿಂದ ಸಜ್ಜನರ ಸಮ್ಮತಿ ವಿಶಿಷ್ಟವಾದ ದಮವೇ ಶ್ರೇಷ್ಠವಾದುದೆಂದು ಸೂಚಿಸಲ್ಪಡುತ್ತದೆ.

ವಿಪರ್ಯಯಾತ್ ಸ್ಮೃತಾ ಏತೇ ಶಮದೋಷಾ ಉದಾಹೃತಾಃ |
ದೋಷಾ ದಮಸ್ಯ ಯೇ ಪ್ರೋಕ್ತಾಃ ತಾನ್ ದೋಷಾನ್ ಪರಿವರ್ಜಯೇತ್॥

ಉದಾಹೃತಾಃ ಏತೇ= ದಮಕ್ಕೆ ಹೇಳಲ್ಪಟ್ಟ ಈ ದೋಷಗಳೇ, ವಿಪರ್ಯಯಾತ್= ಶಮಕ್ಕೂ ವಿರೋಧವನ್ನು ಮಾಡುವುದರಿಂದ, ಶಮದೋಷಾಃ= ಶಮ ದೋಷಗಳೆಂದು, ಸ್ಮೃತಾಃ= ಹೇಳಲ್ಪಡುತ್ತವೆ. ದಮಸ್ಯ= ದಮಕ್ಕೆ, ಯೇ ದೋಷಾಃ= ಯಾವ ದೋಷಗಳು, ಪ್ರೋಕ್ತಾಃ= ಹೇಳಲ್ಪಟ್ಟಿವೆಯೋ, ತಾನ್ ದೋಷಾನ್= ಆ ದೋಷಗಳನ್ನು, ಪರಿವರ್ಜಯೇತ್= ಬಿಡಬೇಕು.

ವಾದಿರಾಜರು ಈ ಶ್ಲೋಕಕ್ಕೆ ಬೇರೆ ಪಾಠವನ್ನು ಇಟ್ಟುಕೊಂಡು ವ್ಯಾಖ್ಯಾನ ಮಾಡುತ್ತಾರೆ. ಆ ಪಾಠವು ಹೀಗಿದೆ

ಶಮೋಽಷ್ಟಾದಶದೋಷಃ ಸ್ಯಾತ್ ತ್ಯಾಗೋ ಭವತಿ ಷಡ್ವಿಧಃ |
ವಿಪರ್ಯಯಾತ್ ಸ್ಮೃತಾ ಏತೇ ದಮದೋಷಾ ಉದಾಹೃತಾಃ ॥ - (ಮೂಲಮ್)

ಹೀಗೆ ದಮದೋಷಗಳನ್ನು ಹೇಳಿ, ಈಗ ಅಪ್ರಮಾದರೂಪವಾದ ಶಮದ ಅಷ್ಟಾದಶ ದೋಷಗಳನ್ನೂ ಹೇಳುತ್ತಾರೆ.

ಶಮಃ= ಶಮ ಎಂಬ ಹೆಸರಿನ ಅಪ್ರಮಾದವು, ಅಷ್ಟಾದಶ ದೋಷಃ ಸ್ಯಾತ್= ಹದಿನೆಂಟು ದೋಷಗಳಿಂದ ಕೂಡಿರುತ್ತದೆ. ತ್ಯಾಗಃ= ಹಿಂದೆ ಹೇಳಿದ ತ್ಯಾಗವು, ಷಡ್ವಿಧಃ= ಆರು ಪ್ರಕಾರವಾಗಿ, ಭವತಿ= ಇರುತ್ತದೆ. `ವಿಪರ್ಯಯಾತ್' ಎಂಬ ಶಬ್ದದಿಂದ ಶ್ರುತ್ಯಾದಿಗಳಿಗೆ, ಶಮ-ದಮಗಳಿಗೆ ದೋಷವನ್ನು ಉಂಟು ಮಾಡುವ ಪ್ರಸಿದ್ಧವಾದ ಪೈಶುನ್ಯಾದಿ ಯಾವ ದೋಷಗಳು ಹೇಳಲ್ಪಟ್ಟಿವೆಯೋ ಅವುಗಳ ವಿರುದ್ಧಾಚರಣೆಯಿಂದ ಶಮ-ದಮಾದಿಗಳಿಗೆ ನಿರ್ದೋಷತ್ವವೂ ಹೇಳಲ್ಪಡುತ್ತದೆ ಎಂದು ಹೇಳುತ್ತಾರೆ. ಯಾವ ಪೈಶುನ್ಯಾದಿ ದೋಷಗಳು ದಮ-ಶಮಾದಿ ದೋಷಗಳೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆಯೋ ಅವುಗಳೇ ವಿಪರ್ಯಯಾತ್= ಅಪೈಶುನ್ಯ-ಸತ್ಯಭಾಷಣ-ಅತೃಷ್ಣಾ-ಅಪ್ರಾತಿಕೂಲ್ಯ-ಅತಮಃ= ರತಿ- ಲೋಕಾದ್ವೇಷ-

ಅನಭಿಮಾನ-ಅವಿವಾದ-ಅಪ್ರಾಣಿಪೀಡಾ-ಅಪರಿವಾದ- ಅನತಿವಾದ- ಅಪರಿತಾಪ-ಕ್ಷಮಾ-ಧೃತಿ-ಸಿದ್ಧಿ-ಅಪಾಪಕೃತ್ಯ-ಅಹಿಂಸಾ ಎಂಬ ವ್ಯತಿರೇಕಗಳಿಂದ ಎಂದರೆ ವಿರುದ್ಧಾಚರಣೆಗಳಿಂದ, ದಮದೋಷಾಃ= ದಮದ ದೋಷಗಳನ್ನು ಖಂಡಿಸುವವುಗಳಾಗಿ (ದಮದೋಷದೋಷಾಃ ಎಂದು ಮಧ್ಯಮಪದ ಸಮಾಸವನ್ನು ಮಾಡಬೇಕು, ಕೊನೆಯ ದೋಷ ಎಂಬ ಶಬ್ದವು `ದೋ ಅವಖಂಡನೇ' ಎಂಬ ಧಾತುವಿನಿಂದ ನಿಷ್ಪನ್ನವಾದುದು) ಎಂದು, ಉದಾಹೃತಾಃ= ಶಾಸ್ತ್ರಗಳಲ್ಲಿ ಹೇಳಲ್ಪಡುತ್ತವೆ. ಇದರಿಂದ ಪೈಶುನ್ಯಾದಿಗಳಿಗೆ ದೋಷವನ್ನು ಉಂಟು ಮಾಡುವ ಸಾಮರ್ಥ್ಯವೂ ಪೈಶುನ್ಯಾದಿಗಳ ವಿಪರ್ಯಯಕ್ಕೆ ಗುಣವನ್ನು ಉಂಟುಮಾಡುವ ಸಾಮರ್ಥ್ಯವೂ ಇದೆ ಎಂದು ತಿಳಿಯುತ್ತದೆ.

ಶ್ರೇಯಾಂಸ್ತು ಷಡ್ವಿಧಸ್ತ್ಯಾಗಃ ತೃತೀಯಸ್ತತ್ರ ದುಷ್ಕರಃ |
ತೇನ ದುಃಖಂ ತರತ್ಯೇವ ತಸ್ಮಿಂಸ್ತ್ಯಕ್ತೇ ಜಿತಂ ಭವೇತ್ ॥29॥

ಹೀಗೆ ಶಮ-ದಮಾದಿ ದೋಷಗಳೇ ತ್ಯಾಗಕ್ಕೂ ದೋಷಗಳಾಗುತ್ತವೆ ಎಂದು ತ್ಯಾಗಕ್ಕೂ ಹದಿನೆಂಟು ದೋಷಗಳನ್ನು ಹೇಳಿ, ಅವುಗಳನ್ನು ವಿಪರೀತವಾಗಿ ಆಚರಿಸುವುದರಿಂದ ಶ್ರೇಯಸ್ಸುಂಟಾಗುತ್ತದೆ ಎಂದು ಹೇಳಿ, ಈಗ ಸತ್ಪಾತ್ರರಲ್ಲಿ ದಾನರೂಪವಾದ ನಿರ್ದೋಷತ್ಯಾಗಗುಣವೂ ಅಮುಖ್ಯವಾದುದು. ಕಾಮಾದಿ ಆರು ಶತ್ರುಗಳ ತ್ಯಾಗವೇ ಮಹಾಶ್ರೇಯಸ್ಸಾಧನವಾದುದರಿಂದ ಮುಖ್ಯವಾದುದು ಎಂಬ ದೃಷ್ಟಿಯಿಂದ `ಶ್ರೇಯಾಂಸ್ತು ಷಡ್ವಿಧಸ್ತ್ಯಾಗಃ' ಎಂಬ ಶ್ಲೋಕದಲ್ಲಿ ಆರೂ ತ್ಯಾಗಗಳ ಸಾಮಾನ್ಯ ಸಾಮರ್ಥ್ಯವನ್ನು ಹೇಳಿ `ಅರ್ಹತೇ ಯಾಚಮಾನಾಯ' ಎಂಬ ಉತ್ತರ ಶ್ಲೋಕದಲ್ಲಿ ಒಂದೊಂದು ತ್ಯಾಗದಲ್ಲಿಯೂ ದ್ವೈವಿಧ್ಯವನ್ನು ಹೇಳುವವರಾಗಿ ಆ ತ್ಯಾಗಗಳಲ್ಲಿ ಮೂರನೆಯ ತ್ಯಾಗವಾದ ಕಾಮತ್ಯಾಗವು ಅತ್ಯಂತ ದುಷ್ಕರವಾದುದು ಎಂದು ಹೇಳುತ್ತಾರೆ. ತ್ಯಾಗಃ= ತ್ಯಾಗರೂಪವಾದ ಗುಣವು, ಷಡ್ವಿಧಃ= ಕಾಮಾದಿ ಆರು ಶತ್ರುಗಳ ಸಂಬಂಧಿಯಾಗಿ ಆರುವಿಧವಾಗಿರುತ್ತದೆ. ಶ್ರೇಯಾನ್= `ಶ್ರಿ ಶ್ರಯೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಪರಿತ್ಯಾಗ ಮಾಡುವುದಕ್ಕಾಗಿ ಆಶ್ರಯಿಸಲು ಯೋಗ್ಯ ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದ ಶ್ರೇಯಾನ್ ಎಂದರೆ ಪರಿತ್ಯಾಗಕ್ಕೆ ಯೋಗ್ಯವಾದವು ಎಂದು ಅರ್ಥ. ಶ್ರೇಷ್ಠವಾದುದು ಎಂದು ಅರ್ಥವಲ್ಲ. ಇದರಿಂದ ಸಜ್ಜನರು ಮಹಾಪ್ರಯತ್ನದಿಂದ ಕಾಮಾದಿ ಆರು ಶತ್ರುಗಳನ್ನು ಜಯಿಸಲು ಸಾಧ್ಯ ಎಂದು ಸೂಚಿತವಾಗುತ್ತದೆ. ಆರು ತ್ಯಾಗಗಳಿಗೂ ಸಂಬಂಧಪಟ್ಟ ವಿಷಯವನ್ನು ಹೇಳಿ ಮೂರನೆಯ ತ್ಯಾಗಕ್ಕೆ ಸಂಬಂಧಪಟ್ಟ ಅಸಾಧಾರಣ ವಿಷಯವನ್ನು ಹೇಳುತ್ತಾರೆ. ಷಟ್ಸು= ಆರು ರೀತಿಯಾದ ತ್ಯಾಗಗಳಲ್ಲಿ, ತೃತೀಯಃ= ಉತ್ತರ ಶ್ಲೋಕದಲ್ಲಿ ಎರಡು ವಿಧದಿಂದ ಕೂಡಿದುದು ಎಂದು ಹೇಳಲಿರುವ ಮೂರನೆಯ ತ್ಯಾಗವು, ದುಷ್ಕರಃ= ಮಾಡಲು ಅಶಕ್ಯವಾದುದು. ತೇನ= ಅಂತಹ ತೃತೀಯ ತ್ಯಾಗದಿಂದ, ಅಧ್ಯಾತ್ಮಾದಿ ಭೇದದಿಂದ ಭಿನ್ನವಾದ, ದುಃಖಂ= ಸಂಸಾರ ದುಃಖವನ್ನು, ತರಂತಿ= ದಾಟುತ್ತಾರೆ. ತಸ್ಮಿನ್ ತ್ಯಕ್ತೇ= ಆ ತೃತೀಯ ತ್ಯಾಗವು ಆಚರಿಸಲ್ಪಡುತ್ತಿರಲು, ಸರ್ವಂ= ಎಲ್ಲವೂ, ಜಿತಂ ಭವೇತ್= ಜಿತವಾಗುತ್ತದೆ.

ಅರ್ಹತೇ ಯಾಚಮಾನಾಯ ಪುತ್ರಾನ್ ವಿತ್ತಂ ದದಾತಿ ಯತ್ |
ಇಷ್ಟಾಪೂರ್ತಂ ದ್ವಿತೀಯಂ ಸ್ಯಾನ್ನಿತ್ಯಂ ವೈರಾಗ್ಯಯೋಗತಃ ॥30॥

ಹಿಂದಿನ ಶ್ಲೋಕದಲ್ಲಿ ಹೇಳಿದ ಷಡ್ವಿಧ ತ್ಯಾಗವನ್ನೇ ಇಲ್ಲಿ ಬಿಡಿಸಿ ತೋರಿಸುತ್ತಾರೆ. ಅರ್ಹತೇ= `ವಿಪ್ರಾಯ ವೇದವಿದುಷೇ ದರಿದ್ರಾಯ ಕುಟುಂಬಿನೇ' ಎಂಬಂತೆ ವೇದವಿದ್ವಾಂಸನಾಗಿ ಗುಣಸಂಪನ್ನನಾದ ದಾನಯೋಗ್ಯನಾದ ಯಾಚಮಾನಾಯ= ತನ್ನ ಕುಟುಂಬ ನಿರ್ವಹಣೆಗಾಗಿ ದೇಹಿ ಎಂದು ಯಾಚನೆಯನ್ನು ಮಾಡುವ ಗುಣಸಂಪನ್ನನಾದ ಬ್ರಾಹ್ಮಣನಿಗೆ, ಪುತ್ರಾನ್= ದುಃಖವನ್ನು ಪರಿಹರಿಸುವ ಅಪತ್ಯರನ್ನು, ವಿತ್ತಂ= ಹಿರಣ್ಯಾದಿ ಧನವನ್ನೂ, ಯಃ= ಯಾವ ಜ್ಞಾನಿಯು, ದದಾತಿ= ಕೊಡುತ್ತಾನೆಯೋ, ಇದು ಮೊದಲನೆಯ ದ್ವಿವಿಧವಾದ ತ್ಯಾಗ. ಇದರಿಂದ ಕಾಮಾದಿ ಆರು ತ್ಯಾಗಗಳಲ್ಲಿ ಕ್ರೋಧ, ಲೋಭಗಳ ತ್ಯಾಗವು ಹೇಳಲ್ಪಡುತ್ತದೆ. ಅದರಲ್ಲಿ ಪುತ್ರಾದಿ ತ್ಯಾಗದಿಂದ ಕ್ರೋಧತ್ಯಾಗವೂ, ವಿತ್ತತ್ಯಾಗದಿಂದ ಲೋಭತ್ಯಾಗವೂ ಉಂಟಾಗುತ್ತದೆ. ಪುತ್ರತ್ಯಾಗವು ದಶರಥಾದಿಗಳಲ್ಲಿ ದೃಷ್ಟವಾಗಿದೆ. ವಿತ್ತತ್ಯಾಗವು ಇಷ್ಟಾಪೂರ್ತಾದಿಗಳಲ್ಲಿ ಪ್ರಸಿದ್ಧವಾಗಿದೆ. ನಿತ್ಯಂ= ಬದುಕಿರುವವರೆಗೆ, ವೈರಾಗ್ಯಯೋಗತಃ= ಧನಾದಿ ಸಂಗ್ರಹವು ಅನಿತ್ಯವಾದುದು. ಆದ್ದರಿಂದ ಗಳಿಸಿದ ಧನದಿಂದ ಯಜ್ಞಾದಿಗಳನ್ನು ಮಾಡಿ ಅದನ್ನು ವ್ಯಯ ಮಾಡುವುದೇ ಶ್ರೇಷ್ಠವಾದುದು ಎಂಬ ವೈರಾಗ್ಯಸಂಬಂಧದಿಂದ, ಇಷ್ಟಾಪೂರ್ತಮ್= ಯಜ್ಞಾದಿಗಳನ್ನು ಮಾಡುವುದು ಮತ್ತು ತಟಾಕಾದಿ ನಿರ್ಮಾಣ ಮಾಡುವುದು, ದ್ವಿತೀಯಂ= ಎರಡನೆಯ ವಿಧವಾದ ತ್ಯಾಗ. ಇದರಿಂದ ಮದ-ಮತ್ಸರಗಳ ತ್ಯಾಗವು ಪ್ರದರ್ಶಿಸಲ್ಪಡುತ್ತದೆ. ಪಾರತ್ರಿಕ ನರಕಭೀತಿಯಿಂದ ಯಜ್ಞವನ್ನು ಮಾಡಿ ವಿತ್ತತ್ಯಾಗವನ್ನು ಮಾಡುವುದರಿಂದ ಮದತ್ಯಾಗವು ತಿಳಿಯುತ್ತದೆ. ಏಕೆಂದರೆ ಮದವಿದ್ದರೆ ಯಜ್ಞಾದಿಗಳನ್ನು ಆಚರಿಸುವುದೇ ಇಲ್ಲ. ಪೂರ್ತಾಚರಣದಿಂದ ಮತ್ಸರ ತ್ಯಾಗವು ಸೂಚಿತವಾಗುತ್ತದೆ. ಏಕೆಂದರೆ ಆ ಧನಿಕನು ಮಾಡಿದ ದೊಡ್ಡ ತಟಾಕ ನಿರ್ಮಾಣವನ್ನು ಮಾಡಿ, ದೊಡ್ಡವನಾಗುತ್ತೇನೆ ಎಂಬ ಮಾತ್ಸರ್ಯವನ್ನು ಬಿಟ್ಟು ಪುಣ್ಯಾರ್ಥವಾಗಿ ತಟಾಕಾದಿ ನಿರ್ಮಾಣಗಳನ್ನು ಮಾಡುತ್ತಾನೆ. ಆ ಕಾರಣದಿಂದ ಮಾತ್ಸರ್ಯ ತ್ಯಾಗವು ಸೂಚಿತವಾಗುತ್ತದೆ.

ಕಾಮತ್ಯಾಗಶ್ಚ ರಾಜೇಂದ್ರ ಸ ತೃತೀಯ ಇತಿ ಸ್ಮೃತಃ |
ತ್ಯಕ್ತ್ವೈವ ವಿಪ್ರಿಯಂ ಭೂಯೋ ನೋಪಯುಂಕ್ತೇ ಚ ಕಾಮತಃ |
ಅಪ್ರಿಯೇ ತು ಸಮುತ್ಪತ್ಯ ತ್ಯಕ್ತಂ ಜಾತು ನ ವಾಂಛತಿ ॥31॥

ಈ ಶ್ಲೋಕದಲ್ಲಿ ದುಷ್ಕರವಾದ ಕಾಮತ್ಯಾಗವನ್ನು ಹೇಳುತ್ತಾರೆ. ರಾಜೇಂದ್ರ= ಎಲೈ ರಾಜೇಂದ್ರನೇ, ಕಾಮತ್ಯಾಗಃ= ಕಾಮತ್ಯಾಗವೆಂಬುದು ಏನಿದೆಯೋ, ಸಃ= ಅದು, ತೃತೀಯ ಇತಿ= ಮೂರನೆಯದೆಂದು, ಸ್ಮೃತಃ= ಹೇಳಲ್ಪಡುತ್ತದೆ. ವಿಪ್ರಿಯಂ= ಅಪ್ರಿಯವಾದ ಕಾಮವನ್ನು, ತ್ಯಕ್ತ್ವೈವ= ಬಾಲ್ಯದಲ್ಲಿಯೇ ತ್ಯಜಿಸಿ, ಭೂಯಃ= ಪುನಃ, ಕಾಮತಃ= ಕಾಮದಿಂದ, ನೋಪಯುಂಕ್ತೇ= ಇನ್ನೊಮ್ಮೆ ಭೋಗಿಸುವುದಿಲ್ಲ, ಅಪ್ರಿಯೇ= ಅಪ್ರಿಯವಾದ, ಕಾಮೇ= ಕಾಮ್ಯಪದಾರ್ಥದಲ್ಲಿ, ಸಮುತ್ಪತ್ಯ= ಒಂದು ಸಲ ಬಿದ್ದು ಅದನ್ನು ಬಿಟ್ಟು, ತ್ಯಕ್ತಂ= ಬಿಡಲ್ಪಟ್ಟ ಅದನ್ನು, ಜಾತು= ಎಂದೂ, ನ ವಾಂಛತಿ= ಬಯಸುವುದಿಲ್ಲ. ಇದರಿಂದ ಕಾಮತ್ಯಾಗವೂ ಸಹ ಅಪ್ರಿಯವಾದ ವಸ್ತುವನ್ನು ಬಿಡುವುದು ಮತ್ತು ಪರಿತ್ಯಾಗ ಮಾಡಿದ ವಸ್ತುವನ್ನು ಬಯಸದಿರುವುದು ಎಂದು ಎರಡು ವಿಧವಾದುದು ಎಂದು ಹೇಳಲ್ಪಡುತ್ತದೆ.

ಅಪ್ರಮಾದೀ ಭವೇದೇತೈಃ ಸ ಚಾಪ್ಯಷ್ಟಗುಣೋ ಮಹಾನ್ |
ಸತ್ಯಂ ನ್ಯೂನಂ(ಧ್ಯಾನಂ) ಸಮಾಧಾನಂ ಚೋದ್ಯಂ ವೈರಾಗ್ಯಮೇವ ಚ |
ಅಸ್ತೇಯೋ ಬ್ರಹ್ಮಚರ್ಯಂ ಚ ತಥಾಽಸಂಗ್ರಹ ಏವ ಚ ॥32॥
ಏತೈಃ= ಲೋಭಮೋಹಕಾಮ ತ್ಯಾಗಗಳಿಂದ, ಅದರಂತೆ ಕ್ರೋಧ ಮದ ಮತ್ಸರಗಳ ತ್ಯಾಗದಿಂದಲೂ ಎಂದು ಇಟ್ಟುಕೊಳ್ಳಬೇಕು. ಈ ಆರು ತ್ಯಾಗಗಳಿಂದ ವಿವೇಕಿಯಾದವನು, ಅಪ್ರಮಾದೀ= ಪ್ರಮಾದ ರಹಿತನಾಗುತ್ತಾನೆ. ಸ ಚಾಪಿ= ಆ ಅಪ್ರಮಾದವಾದರೂ, ಅಷ್ಟಗುಣಃ= ಅಷ್ಟಗುಣಗಳಿಂದ ಕೂಡಿ, ಮಹಾನ್= ಶ್ರೇಷ್ಠವಾದುದು, ಅದು ಸತ್ಯ, ನ್ಯೂನ ಮೊದಲಾದ ಎಂಟು ಗುಣಗಳಿಂದ ಕೂಡಿರುತ್ತದೆ. ವಾದಿರಾಜರು
ಕಾಮತ್ಯಾಗಶ್ಚ ರಾಜೇಂದ್ರ ಸ ತೃತೀಯ ಉದಾಹೃತಃ |
ಅಪ್ರಮಾದೀ ಭವೇದೇತೈಃ ಸಚಾಪ್ಯಷ್ಟ ಗುಣೋ ಮಹಾನ್ ॥
ಇತ್ಯಾದಿಯಾಗಿಯೇ ಮೂಲಪಾಠವನ್ನು ಇಟ್ಟುಕೊಂಡು ಇನ್ನೊಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ರಾಜೇಂದ್ರ= ಎಲೈ ರಾಜೇಂದ್ರನೇ, ಸಃ= ದುಷ್ಕರವೆಂದು ಹೇಳಲ್ಪಟ್ಟ, ಕಾಮತ್ಯಾಗಃ= ವಿವಿಧವಾದ ಕಾಮತ್ಯಾಗವು, ತೃತೀಯಃ= ಮೂರನೆಯದೆಂದು, ಉದಾಹೃತಃ= ಹೇಳಲ್ಪಡುತ್ತದೆ. ವೈರಾಗ್ಯಯೋಗತಃ ಎಂದು ವೈರಾಗ್ಯವನ್ನು ಹೊಂದುವುದು ಒಂದು ವಿಧದ ಕಾಮತ್ಯಾಗ. ವಿಷಯದ ಅಭಿಲಾಷೆಯನ್ನು ತ್ಯಜಿಸುವುದು ಇನ್ನೊಂದು ವಿಧವಾದ ಕಾಮತ್ಯಾಗ ಎಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ ಎಂದು ಅಭಿಪ್ರಾಯ. ಇದರಿಂದ ಡಂಭ ಮತ್ತು ಕಾಮಗಳ ತ್ಯಾಗವು ಸೂಚಿಸಲ್ಪಡುತ್ತದೆ. ಏಕೆಂದರೆ ಡಾಂಭಿಕವಾದ ಕರ್ಮದಲ್ಲಿ ವೈರಾಗ್ಯ ಸಂಬಂಧ ಇರುವುದಿಲ್ಲ. ಆದ್ದರಿಂದ `ವೈರಾಗ್ಯಯೋಗತಃ' ಎಂಬುದರಿಂದ ಡಂಭವನ್ನು ನಿರಾಕರಣೆ ಮಾಡಿದಂತಾಯಿತು. ಕಾಮ್ಯವಾದ ವಿಷಯಗಳ ತ್ಯಾಗವನ್ನು ಹೇಳಿರುವುದರಿಂದ ಕಾಮತ್ಯಾಗವನ್ನು ಹೇಳಿದಂತಾಯಿತು. ಇಲ್ಲಿ ಹೇಳಿದ ಎರಡು ವಿಧವಾದ ಮೂರನೆಯ ತ್ಯಾಗವು ವೈರಾಗ್ಯದಿಂದ ವಿಷಯ ಪರಿತ್ಯಾಗರೂಪವಾದುದರಿಂದ ವನಿತಾದಿ ವಿಷಯಗಳನ್ನು ಪರಿತ್ಯಾಗ ಮಾಡಲು ಬಹಳ ಕಷ್ಟವಾದುದರಿಂದ ಆರು ತ್ಯಾಗಗಳಲ್ಲಿ ಮೂರನೆಯದಾದ ಈ ತ್ಯಾಗವು ಅತ್ಯಂತ ದುಷ್ಕರವಾದುದು ಎಂದು ಸನತ್ಸುಜಾತರ ಅಭಿಪ್ರಾಯ. ಏತೈಃ= ತಾನು ಸಂಪಾದಿಸಿದ ಈ ಆರು ತ್ಯಾಗಗಳಿಂದ, ಅಪ್ರಮಾದೀ= ಭಗವತ್ಸೇವಾರೂಪವಾದ ವಿಹಿತಾಚರಣೆಯಲ್ಲಿ ಅವಧಾನವುಳ್ಳವನಾಗಿ, ಭವೇತ್= ಆಗುತ್ತಾನೆ. ಇದರಿಂದ ಷಡ್ವಿಧ ತ್ಯಾಗಗುಣಸಂಬಂಧದಿಂದ ಅಪ್ರಮಾದವು ಉಂಟಾಗುತ್ತದೆ ಎಂದು ಸೂಚಿತವಾಗುತ್ತದೆ. ಹೇಳಿದ ಎಲ್ಲ ಗುಣಗಳು ಅಪ್ರಮಾಣದಿಂದಲೇ ಉತ್ಕರ್ಷವನ್ನು ಹೊಂದುವುದರಿಂದ ಅಪ್ರಮಾದ ಗುಣವು ಮಹಾನ್ ಎಂದು ಹೇಳಲ್ಪಡುತ್ತದೆ. ಆ ಎಂಟುಗುಣಗಳು ಯಾವುವೆಂದರೆ (1) ಸತ್ಯಂ= ಯಥಾರ್ಥ ಭಾಷಣ ಅಥವಾ ಸಜ್ಜನರಿಗೆ ಹಿತವಾದ ಆಚರಣೆ, (2) ನ್ಯೂನಂ= `ನ್ಯೂನಂ ಸ್ಯಾದೂನಗರ್ಹ್ಯಯೋಃ' ಎಂದು ಕೋಶವಿರುವುದರಿಂದ ನಿ ಊನಂ= ಊನಶಬ್ದವಾಚ್ಯವಾದ ಗರ್ಹ್ಯ ಕರ್ಮವು ಇಲ್ಲದಿರುವಿಕೆ ಎಂದರೆ ಅನಿಂದಿತವಾದ ಕರ್ಮಾಚರಣೆ ಎಂದು ಅರ್ಥ (ನಿಂದಿತವಾದ ಕರ್ಮಾಚರಣೆಯ ತ್ಯಾಗವೂ ಒಂದು ಅರ್ಥ). (3) ಸಮಾಧಾನಂ= ಭಗವಂತನಲ್ಲಿ ಮನಸ್ಸನ್ನು ಚೆನ್ನಾಗಿ ಇಡುವುದು, (4) ಚೋದ್ಯಂ= ಸಂಶಯವನ್ನು ನಿರಾಸೆ ಮಾಡಿಕೊಳ್ಳಲು ಗುರುಕುಲಕ್ಕೆ ಹೋಗಿ ತತ್ತ್ವವಿಷಯದಲ್ಲಿ ಪ್ರಶ್ನೆಯನ್ನು ಮಾಡುವುದು. ಏಕೆಂದರೆ `ಪರಿಪ್ರಶ್ನೇನ ಸೇವಯಾ' ಎಂದು ಹೇಳಲ್ಪಟ್ಟಿದೆ. (5) ವೈರಾಗ್ಯಂ = ವಿಷಯವೈರಾಗ್ಯ. (6) ಅಸ್ತೇಯಂ= ತನ್ನಲ್ಲಿ ಪರಬ್ರಹ್ಮತ್ವವನ್ನು ಅನುಸಂಧಾನ ಮಾಡದಿರುವುದು. ಏಕೆಂದರೆ ಹಿಂದೆಯೇ ತಿಳಿಸಿದಂತೆ ತನಗಿಂತ ಭಿನ್ನನಾದ ಪರಮಾತ್ಮನನ್ನು ತನ್ನಿಂದ ಅಭಿನ್ನನೆಂದು ತಿಳಿದರೆ ಅವನು ಪರಮಾತ್ಮನನ್ನೇ ಅಪಹಾರ ಮಾಡಿದ ಚೋರನೆಂದು ಹೇಳಲ್ಪಟ್ಟಿದೆಯಷ್ಟೆ! (7) ಬ್ರಹ್ಮಚರ್ಯಂ= ಅಷ್ಟಾಂಗಮೈಥುನ ತ್ಯಾಗ. ಅಷ್ಟಾಂಗ ಮೈಥುನವು ಹೇಳಲ್ಪಟ್ಟಿದೆ.
`ದರ್ಶನಂ ಸ್ಪರ್ಶನಂ ಕೇಲಿಃ ಕೀರ್ತನಂ ಗುಹ್ಯಭಾಷಣಮ್ |
ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ ॥
ಪಶು-ಪಕ್ಷಿಗಳ ಮೈಥುನವನ್ನು ನೋಡುವುದು, ಅಪ್ರಿಯರನ್ನು ಸ್ಪರ್ಶ ಮಾಡುವುದು, ಕಾಮವ್ಯಾಪಾರವನ್ನು ಮಾಡುವುದು, ಮೈಥುನದ ಬಗ್ಗೆ ಮಾತನಾಡುವುದು, ಸಂಕೇತ ಭಾಷೆಯಿಂದ ಮಾತನಾಡುವುದು, ಮೈಥುನವನ್ನು ಮಾಡುವೆನೆಂದು ಸಂಕಲ್ಪಿಸುವುದು, ಅನಂತರ ನಿಶ್ಚಯಿಸುವುದು, ಅನಂತರ ಮೈಥುನ ಕ್ರಿಯೆಯನ್ನೇ ನೆರವೇರಿಸುವುದು ಇವು ಅಷ್ಟಾಂಗಗಳಿಂದ ಕೂಡಿದ ಮೈಥುನ. ಈ ಎಲ್ಲದರಿಂದಲೂ ರಹಿತವಾದುದು ಶುದ್ಧವಾದ ಬ್ರಹ್ಮಚರ್ಯ ಎಂದು ಹೇಳಲ್ಪಟ್ಟಿದೆ. (8) ಅಸಂಗ್ರಹಃ= ತನ್ನ ಜೀವನಕ್ಕೆ ಬೇಕಾದ ಧನಕ್ಕಿಂತ ಹೆಚ್ಚು ಧನವನ್ನು ಸಂಗ್ರಹಿಸದಿರುವುದು. ಹೀಗೆ ಅಪ್ರಮಾದವು ಎಂಟು ಗುಣಗಳಿಂದ ಕೂಡಿರುತ್ತದೆ.
ಏವಂ ದೋಷಾ ದಮಸ್ಯೋಕ್ತಾಃ
ತಾನ್ ದೋಷಾನ್ ಪರಿವರ್ಜಯೇತ್ |
ದೋಷತ್ಯಾಗೋಽಪ್ರಮಾದಃ ಸ್ಯಾತ್
ಸ ಚಾಪ್ಯಷ್ಟಗುಣೋ ಮತಃ ॥33॥
`ದಮೋ ಅಷ್ಟಾದಶ ದೋಷಃ ಸ್ಯಾತ್' ಎಂಬುದರಿಂದ ಆರಂಭಿಸಿ `ಸತ್ಯಂ ನ್ಯೂನಂ' ಎಂಬ ಶ್ಲೋಕದವರೆಗೆ ದಮ-ಶಮಾದಿಗಳ ದೋಷಗಳನ್ನು ನಿರೂಪಣೆ ಮಾಡುವುದರ ಪ್ರಯೋಜನವೆಂದರೆ ಗುಣ-ದೋಷಗಳನ್ನು ತಿಳಿದು ದೋಷವನ್ನು ತ್ಯಾಗ ಮಾಡಿ ಗುಣಗಳನ್ನು ಸಂಪಾದಿಸುವುದೇ ಆಗಿದೆ. ಗುಣದೋಷಗಳ ಜ್ಞಾನವಿಲ್ಲದವರಿಗೆ ಅದರ ಉಪದೇಶವು ಸಾರ್ಥಕವಾಗುತ್ತದೆ ಎಂಬ ದೃಷ್ಟಿಯಿಂದ ಹೇಳುತ್ತಾರೆ.
ಏವಂ= ಈ ರೀತಿಯಾಗಿ, ದಮಸ್ಯ= ದಮಕ್ಕೆ, ಯೇ ದೋಷಾ ಉಕ್ತಾಃ= ಯಾವ ದೋಷಗಳು ಪೂರ್ವದಲ್ಲಿ ಹೇಳಲ್ಪಟ್ಟಿವೆಯೋ, ತಾನ್ ದೋಷಾನ್= ಆ ದೋಷಗಳನ್ನು, ಪರಿವರ್ಜಯೇತ್= ಸರ್ವತ್ರ ಸರ್ವದಾ ಅಧಿಕಾರಿಯಾದ ಪುರುಷನು ತ್ಯಜಿಸಬೇಕು. ಯಃ ಅಪ್ರಮಾದಃ= ಯಾವ ಅಪ್ರಮಾದರೂಪವಾದ ಗುಣವು, ಅಷ್ಟಗುಣಃ= ಎಂಟು ಗುಣಗಳಿಂದ ಕೂಡಿದುದು ಎಂದು, ಮತಃ= ಹೇಳಲ್ಪಡುತ್ತದೆಯೋ, ಸಃ ಅಪಿ= ಆ ಅಪ್ರಮಾದವಾದರೂ, ದೋಷತ್ಯಾಗಃ ಸ್ಯಾತ್= ದೋಷತ್ಯಾಗ ರೂಪವೇ ಆಗಿದೆ. ದಮಾದಿ ಗುಣಗಳ ಸಂಬಂಧಿಯಾದ ದೋಷಗಳಲ್ಲಿ ಹೇಯತ್ವ ಜ್ಞಾನವನ್ನು ಹೊಂದಿ ಅವುಗಳನ್ನು ಪರಿತ್ಯಾಗ ಮಾಡುವುದೇ ಅಪ್ರಮಾದ. ಆ

ದೋಷಪರಿತ್ಯಾಗವನ್ನು ಬಿಟ್ಟು ಅಪ್ರಮಾದ ರೂಪವಾದ ಇನ್ನೊಂದು ಗುಣವಿಲ್ಲ ಎಂದು ಅಭಿಪ್ರಾಯ.
ತಾಂಸ್ತು ಸತ್ಯಮುಖಾನ್ಯಾಹುಃ ಸತ್ಯೇ ಹ್ಯಮೃತಮಾಹಿತಮ್ |
ಸತ್ಯಾತ್ಮಾ ಭವ ರಾಜೇಂದ್ರ ಸತ್ಯೇ ಲೋಕಾಃ ಪ್ರತಿಷ್ಠಿತಾಃ ॥34॥
ಈಗ ಸಜ್ಜನನ ಹಿತಾಚರಣದಲ್ಲಿ ರತರಾದ ಸನತ್ಸುಜಾತರು ಧೃತರಾಷ್ಟ್ರರಾಜನು ಮಹಾಧಿಕಾರಿಯಾದ ಧೃತರಾಷ್ಟ್ರನಾಮಕನಾದ ಗಂಧರ್ವನ ಅವತಾರನಾಗಿದ್ದರೂ ಪ್ರಾರಬ್ಧವಶದಿಂದ ದುಷ್ಟಪುತ್ರನಲ್ಲಿ ಮಾಡಿದ ಸ್ನೇಹದಿಂದ ಉಂಟಾದ ಕಲ್ಯಾವೇಶದಿಂದ ಅಜ್ಞಾನಾವೃತನಾಗಿ ತನ್ನನ್ನು ಉದ್ಧರಿಸುವ ಸಾಮರ್ಥ್ಯವುಳ್ಳ ಶ್ರೀಕೃಷ್ಣ ಪಕ್ಷದಲ್ಲಿರುವ ದೇವೋತ್ತಮರ ಅವತಾರವಾದ ಪಾಂಡವರಿಗೆ ವಿರೋಧ ಮಾಡಿದ ಅಪರಾಧದ ಕಾರಣದಿಂದ ಮನಸ್ಸಮಾಧಾನವನ್ನು ಹೊಂದದಿರುವುದರಿಂದ ಕೃಷ್ಣನ ಅನುಗ್ರಹದಿಂದಲೇ ಮನಸ್ಸಮಾಧಾನವುಂಟಾಗುವುದೆಂದು ತಿಳಿದು, ಅವನ ಅನುಗ್ರಹವನ್ನು ಹೊಂದಲು ಅವನಿಗೆ ಹಿತವಾದುದನ್ನು ಆಚರಿಸುವಂತಹ ಸೇವೆಯನ್ನೇ ನೀನು ಮಾಡಬೇಕು ಎಂಬ ಉಪದೇಶಗರ್ಭಿತವಾದ ಸತ್ಯಪ್ರಶಂಸೆಯನ್ನು ಮಾಡುತ್ತಾರೆ.
ತಾನ್= ಹಿಂದೆ ಹೇಳಿದ ತ್ಯಾಗ ಗುಣಗಳನ್ನು, ಸತ್ಯಮುಖಾನಿ= `ಯತ್ ಸತಾಂ ಹಿತಮತ್ಯಂತಂ ತತ್ಸತ್ಯಮಿತಿ ಚೋಚ್ಯತೇ', `ಯತ್ಸತಾಂ ಧಾರಕೋ ಧರ್ಮಃ' ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾದ ಸಜ್ಜನರ ಹಿತಾಚರಣ ರೂಪವಾದ ಸತ್ಯಶಬ್ದವಾಚ್ಯವಾದ ಧರ್ಮವೇ, ಮುಖ ಎಂದರೆ ಪ್ರಧಾನವಾದುದನ್ನಾಗಿ ಅಥವಾ ಉಳಿದ ಗುಣಗಳಿಗೆ ಮುಖ್ಯತ್ವಾಪಾದಕವಾಗಿ ಇರುವುದೆಂದು ಆ ಗುಣಗಳನ್ನು, ಆಹುಃ= ಜ್ಞಾನಿಗಳು ಹೇಳುತ್ತಾರೆ.
ಸತಾಮನಿಷ್ಟಕರಣಾದ್ ಧರ್ಮಹಾನಿಃ ಪದೇ ಪದೇ |
ತೇಷಾಮೇವೇಷ್ಟಕರಣಾದ್ ಧರ್ಮವೃದ್ಧಿಃ ಪದೇ ಪದೇ ॥
(ಸಜ್ಜನರಿಗೆ ಅನಿಷ್ಟವನ್ನು ಮಾಡುವುದರಿಂದ ಹೆಜ್ಜೆ ಹೆಜ್ಜೆಗೂ ಧರ್ಮಹಾನಿಯಾಗುತ್ತದೆ. ಅವರಿಗೇ ಇಷ್ಟವನ್ನು ಮಾಡುವುದರಿಂದ ಹೆಜ್ಜೆ ಹೆಜ್ಜೆಗೂ ಧರ್ಮದ ಅಭಿವೃದ್ಧಿಯಾಗುತ್ತದೆ) ಎಂಬ ವಾಕ್ಯವನ್ನು ಪ್ರಮಾಣವಾಗಿ ಉದಾಹರಿಸಿದಂತೆ ಆಗುತ್ತದೆ. ಎಲ್ಲಾ ಧರ್ಮಗಳೂ ಸತ್ಯಮುಖವಾಗುವುದಕ್ಕೆ ಕಾರಣವನ್ನು ಹೇಳುತ್ತಾರೆ. ಅದೇನೆಂದರೆ ಸತ್ಯೇ= ಸದ್ಧಿತಾಚರಣರೂಪವಾದ ಧರ್ಮದಲ್ಲಿ, ಅಮೃತಂ= ಮೋಕ್ಷವು, ಆಹಿತಂ= ಸ್ಥಾಪಿತವಾಗಿದೆ, ಸತ್ಯದ ಅಧೀನವಾಗಿದೆ ಎಂದು ಅರ್ಥ. `ಸತ್ಯೇನ ನ ಸುವರ್ಗಾಲ್ಲೋಕಾಚ್ಚ್ಯವಂತೇ ತಸ್ಮಾತ್ ಸತ್ಯಂ ಪರಮಂ ವದಂತಿ' (ಒಳ್ಳೆಯ ಭೋಗವಿರುವ ಮೋಕ್ಷದಿಂದ ಸತ್ಯವನ್ನು ಆಚರಿಸುವ ಜೀವನು ಚ್ಯುತನಾಗುವುದಿಲ್ಲ) `ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ' (ದೊಡ್ಡವರ ಸೇವೆಯೇ ಮೋಕ್ಷಕ್ಕೆ ದ್ವಾರವೆಂದು ಹೇಳುತ್ತಾರೆ) ಇತ್ಯಾದಿ ಶ್ರುತಿ-ಸ್ಮೃತಿಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ. ಆದ್ದರಿಂದ ಮಹಾಫಲವನ್ನು ಪಡೆಯಲು ಆಶಿಸುವ ಪುರುಷನು ಮಹತ್ಸೇವೆಯನ್ನೇ ಮಾಡಬೇಕೆಂದು ಅಭಿಪ್ರಾಯ. ಅಥವಾ ಸತ್ಯೇ= ಯಥಾರ್ಥಭಾಷಣರೂಪ ಸತ್ಯನಾಮಕವಾದ ಧರ್ಮದಲ್ಲಿ, ಅಮೃತಂ= ಸ್ವರ್ಗಾದಿಗಳು, ಆಹಿತಂ= ಸ್ಥಾಪಿತವಾಗಿವೆ ಎಂದು ಹೇಳುತ್ತಾರೆ. ಹೀಗೆ ಸತ್ಯರೂಪವಾದ ಧರ್ಮವೇ ಎಲ್ಲ ಧರ್ಮಗಳಲ್ಲಿಯೂ ಶ್ರೇಷ್ಠವಾದುದರಿಂದ ಈಗ ಅಂತಹ ಸತ್ಯದ ಅನುಷ್ಠಾನದಿಂದ ನಿನಗೂ ಸಹ ಸಜ್ಜನೋತ್ತಮರಾದ ಪಾಂಡವರ ದ್ವೇಷದಿಂದ ಉಂಟಾದ ದೊಡ್ಡ ಅನಿಷ್ಟದ ನಿವೃತ್ತಿಯು ಆದೀತು ಎಂಬ ತಮ್ಮ ಗೂಢವಾದ ಅಭಿಪ್ರಾಯವನ್ನು ಅಭಿವ್ಯಕ್ತಪಡಿಸುವವರಂತೆ ಧೃತರಾಷ್ಟ್ರನನ್ನೇ ಕುರಿತು ನೇರವಾಗಿ ಉಪದೇಶ ಮಾಡುತ್ತಾರೆ. ರಾಜೇಂದ್ರ= ಎಲೈ ರಾಜಶ್ರೇಷ್ಠನಾದ ಧೃತರಾಷ್ಟ್ರನೇ, ನೀನೂ ಸಹ, ಸತ್ಯಾತ್ಮಾ ಭವ= ಸದ್ಧಿತಾಚರಣಶೀಲವಾದ ಮನಸ್ಸುಳ್ಳವನಾಗು. ನಾನು ಹೇಳಿದ ಈ ಧರ್ಮವು ಶಿಷ್ಟರಿಂದ ಪರಿಗೃಹೀತವಾದ ಕಾರಣವಾದ್ದರಿಂದಲೂ ಸಹ ಅನುಷ್ಠೇಯವಾದುದು ಎಂದೂ ಸಹ ತಮ್ಮ ಮಾತನ್ನು ದೃಢೀಕರಿಸಲು ಶಿಷ್ಟಾಚಾರವನ್ನು ತೋರಿಸುತ್ತಾರೆ. ಸತ್ಯೇ= ನಾನು ಹೇಳಿದ ಸತ್ಯದಲ್ಲಿ, ಲೋಕಃ= `ಲುಕ್ ಪ್ರಕಾಶೇ' ಎಂಬ ಧಾತುವಿರುವುದರಿಂದ ಜ್ಞಾನಪ್ರಕಾಶವುಳ್ಳ ಜ್ಞಾನಿಜನರು, ಪ್ರತಿಷ್ಠಿತಾಃ= ಶ್ರೇಷ್ಠವಾಗಿ ಚಾಂಚಲ್ಯವಿಲ್ಲದೆ ನಿಂತಿದ್ದಾರೆ, ಅಂತಹ ಸತ್ಯದ ಆಚರಣೆಯಲ್ಲಿಯೇ ರತರಾಗಿದ್ದಾರೆ ಎಂದು ಅಭಿಪ್ರಾಯ. ಅದರಿಂದ ಇಂತಹ ಧರ್ಮವನ್ನು ಎಲ್ಲರೂ ಅನುಷ್ಠಾನ ಮಾಡಬೇಕೆಂದು ತಾತ್ಪರ್ಯ.
ನಿವರ್ತನ್ನೇವ ದೋಷೇಣ ತಪೋವ್ರತಮಿಹಾಚರೇತ್ |
ಏತದ್ ಧಾತೃಕೃತಂ ವೃತ್ತಂ ಸತ್ಯಮೇವ ಸತಾಂ ವ್ರತಮ್ ॥35॥
ಹೀಗೆ ತಪಸ್ಸಿನಲ್ಲಿ ರತರಾದವರಿಗೆ ತಪಸ್ಸಿನ ಗುಣ-ದೋಷಗಳ ಜ್ಞಾನವು ಅವಶ್ಯಕವಾದುದರಿಂದ ಅವುಗಳನ್ನು ಹೇಳಿ, ಈಗ ನಿರ್ದುಷ್ಟವಾದ ಮತ್ತು ಗುಣ ಸಂಪನ್ನವಾದ ತಪಸ್ಸನ್ನೇ ಸಜ್ಜನರು ಆಚರಿಸಬೇಕು ಎಂದು ವಿಧಾನ ಮಾಡುತ್ತಾರೆ. ನಿವೃತ್ತೇನೇಹ ಎಂಬ ಪಾಠವಿದ್ದಲ್ಲಿ, ಇಹ= ಬ್ರಾಹ್ಮಣಜನ್ಮದಲ್ಲಿ, ತಪೋವ್ರತಂ= ತಪೋ ರೂಪವಾದ ವ್ರತವನ್ನು ಎಂದರೆ ಆಚರಣನಿಯಮವನ್ನು, ನಿವೃತ್ತೇನ= ದೋಷ ಪರಿಹಾರ ಪೂರ್ವಕವಾಗಿ, ಆಚರೇತ್= ಆಚರಿಸಬೇಕು. ತಾವು ಹೇಳಿದ ವಿಷಯದಲ್ಲಿ ಶಿಷ್ಟಸಮ್ಮತಿಯನ್ನು ತೋರಿಸುತ್ತಾರೆ. ಏತತ್= ನಾನು ಹೇಳಿದ ಈ ತಪಸ್ಸಿನ ಆಚರಣೆಯು ಧಾತೃಕೃತಂ= ಬ್ರಹ್ಮದೇವರಿಂದಲೂ ಮಾಡಲ್ಪಟ್ಟಿದೆ. `ಮಯಾ ಕೃತಮ್' ಎಂಬ ಪಾಠವಿದ್ದರೆ ತಾವೂ ಸಹ ಒಬ್ಬ ಋಷಿಯಾದ್ದರಿಂದ ತಮ್ಮ ಆಚರಣೆಯೂ ಎಲ್ಲ ಋಷಿಗಳ ಆಚರಣೆಗೆ ಅನುಸಾರವಾಗಿರುವುದರಿಂದ ಅದೂ ಪ್ರಮಾಣವಾಗುತ್ತದೆ ಎಂದು ಅಭಿಪ್ರಾಯ. ಅಥವಾ ತಾನೂ ಒಬ್ಬ ಋಷಿಶ್ರೇಷ್ಠನಾದ್ದರಿಂದ ಉಳಿದ ಋಷಿಗಳು ತನ್ನ ಆಚರಣೆಯನ್ನೇ ಅನುಸರಿಸುವುದರಿಂದ ತನ್ನ ಸಮ್ಮತಿಯು ಪ್ರಮಾಣವಾಗುತ್ತದೆ ಎಂದು ಅಭಿಪ್ರಾಯ. ಆದ್ದರಿಂದ ಎಲ್ಲರೂ ಅನುಷ್ಠಾನ ಮಾಡಬೇಕೆಂದು ತಾತ್ಪರ್ಯ. ಈ ವಿಷಯದಲ್ಲಿ ಎಲ್ಲಾ ಶಿಷ್ಟರ ಸಮ್ಮತಿಯನ್ನೂ ಹೇಳುತ್ತಾರೆ. ಸತ್ಯಂ= ನಾನು ಹೇಳಿದ ಈ ಸತ್ಯವೇ, ಸತಾಂ= ಎಲ್ಲ ಸಜ್ಜನರಿಗೂ, ವ್ರತಂ= ಆಚರಣೆಯಾಗಿದೆ. ಮತಂ ಎಂಬ ಪಾಠವಿದ್ದರೆ ಎಲ್ಲ ಸಜ್ಜನರಿಗೂ ಸಮ್ಮತವಾಗಿದೆ ಎಂದು ಅಭಿಪ್ರಾಯ.
ದೋಷೈರೇತೈರ್ವಿಯುಕ್ತಂ ತು ಗುಣೈರೇತೈಃ ಸಮನ್ವಿತಮ್ |
ಏತತ್ ಸಮೃದ್ಧಮತ್ಯರ್ಧ್ಯಂ ತಪೋ ಭವತಿ ಕೇವಲಮ್ ॥36॥
ಹೀಗೆ ಸಕಲಶಾಸ್ತ್ರಾರ್ಥ ಸಮ್ಮತಿಯಿಂದ ನಿರ್ದುಷ್ಟವಾದ ಮತ್ತು ಗುಣವಿಶಿಷ್ಟವಾದ ತಪಸ್ಸೇ ಶ್ರೇಷ್ಠವೆಂದು ಸಾಧಿಸಿ ಈಗ ಉಪಸಂಹಾರ ಮಾಡುತ್ತಾ ಕೇವಲ ಋದ್ಧವಾದ ತಪಸ್ಸನ್ನು ಆಚರಿಸಬೇಕೆಂದು ಹೇಳುತ್ತಾರೆ. ಏತೈಃ= ಪೂರ್ವೋಕ್ತ ಕ್ರೋಧಾದಿಗಳಿಂದ, ವಿಯುಕ್ತಂ= ರಹಿತವಾದ, ಏತೈಃ= ಹಿಂದೆ ಹೇಳಿದ, ಗುಣೈಃ= ಜ್ಞಾನಾದಿ ಗುಣಗಳಿಂದ, ಸಮನ್ವಿತಂ= ಕೂಡಿದ, ಏತತ್ತು= ಇಂತಹ ತಪಸ್ಸೇ,

ಜ್ಞಾನಿನಾಂ= ಜ್ಞಾನಿಗಳಿಗೆ, ಕೇವಲಂ= ನಿರ್ದುಷ್ಟವೂ ಮತ್ತು ಋದ್ಧ= ಸಮೃದ್ಧವೂ, ಎಂದರೆ ಮೋಕ್ಷದಲ್ಲಿ ಕ್ಲೃಪ್ತವಾದ ಆನಂದ ಜನಕವೂ, ಭವತಿ= ಆಗುತ್ತದೆ. ಆಯಾ ತಪಸ್ಸನ್ನು ಆಚರಿಸುವುದರಿಂದ ಆಯಾ ಕರ್ಮಗಳಿಗೆ ಅಭಿಮಾನಿಗಳಾದ ಆಯಾ ದೇವತೆಗಳನ್ನು ಭಗವದಧೀನರೆಂದು ಅನುಸಂಧಾನ ಮಾಡಿ ಅನುಷ್ಠಾನ ಮಾಡಿದ ಜ್ಞಾನಿಗಳ ತಪಸ್ಸು ಮೋಕ್ಷದಲ್ಲಿ ಕ್ಲೃಪ್ತವಾದ ಆನಂದಾತಿಶಯವನ್ನು ಉಂಟುಮಾಡುತ್ತದೆ ಎಂದು ಅಭಿಪ್ರಾಯ.

ಯನ್ಮಾಂ ಪೃಚ್ಛಸಿ ರಾಜೇಂದ್ರ ಸಂಕ್ಷೇಪಾದ್ ತದ್ ಬ್ರವೀಮಿ ತೇ |
ಏತತ್ ಪಾಪಹರಂ ಶುದ್ಧಂ ಜನ್ಮಮೃತ್ಯುಜರಾಪಹಮ್ ॥37॥

ತನ್ನ ಪ್ರಶ್ನೆಗೆ ಉತ್ತರವನ್ನು ಹೇಳುವುದು ಸಮಾಪ್ತವಾದುದರಿಂದ ಇನ್ನು ಸನತ್ಸುಜಾತರು ಸುಮ್ಮನೆ ಕೂಡುತ್ತಾರೆಯೇ ಎಂಬ ಧೃತರಾಷ್ಟ್ರನ ಮನಸ್ಸಿನ ಶಂಕೆಯನ್ನು ಪರಿಹರಿಸುತ್ತಾರೆ.

ರಾಜೇಂದ್ರ= ಎಲೈ ಧೃತರಾಷ್ಟ್ರನೇ, ಇಲ್ಲಿಂದ ಮುಂದೆ ಮಾಂ= ನನ್ನನ್ನು ಕುರಿತು, ಯತ್= ಎಂತಹ ಪ್ರಮೇಯವನ್ನು, ಪೃಚ್ಛಸಿ= ಕೇಳುತ್ತೀಯೋ, ತತ್= ಆ ಪ್ರಮೇಯವನ್ನೂ ಕೂಡ, ಸಂಕ್ಷೇಪಾತ್= ಸಂಕ್ಷೇಪವಾಗಿ, ತೇ= ನಿನಗೆ, ಬ್ರವೀಮಿ= ಹೇಳುವೆನು.

ಸನತ್ಸುಜಾತರು ಮುಂದೆ ಹೇಳುವ ವಿಷಯದಲ್ಲಿ ಹೀಗೆ ಪ್ರತಿಜ್ಞೆಯನ್ನು ಮಾಡಿ `ಪ್ರಮಾದಂ ವೈ ಮೃತ್ಯುಮಹಂ' ಎಂದು ಆರಂಭಿಸಿ `ದೋಷೈರೇತೈಃ' ಎಂಬ ಶ್ಲೋಕದವರೆಗೆ ತಾವು ಹೇಳಿದ ಪ್ರಮೇಯಗಳಿಗೆ ಫಲಶ್ರುತಿಯನ್ನು ಹೇಳುತ್ತಾರೆ. ಏತತ್= ನಾನು ಹೇಳಿದ ಈ ಪ್ರಮೇಯಗಳು, ಶುದ್ಧಂ= ನಿರ್ದುಷ್ಟವಾದುದು, ಪಾಪಹರಂ= ಪಾಪಪರಿಹಾರಕವಾದುದು, ಜನ್ಮಮೃತ್ಯುಜರಾಪಹಂ= ಜನನ-ಮರಣ ಮತ್ತು ಜರಾರೂಪವಾದ ಸಂಸಾರವನ್ನು ನಾಶಮಾಡುವಂತಹದು. ಇದನ್ನು ಯಾರು ಶ್ರವಣ-ಮನನವನ್ನು ಮಾಡುತ್ತಾರೆಯೋ ಅಂತಹವರಿಗೆ ಇಂತಹ ಫಲವು ದೊರೆಯುವುದು ಎಂದು ಅಭಿಪ್ರಾಯ.

ಧೃತರಾಷ್ಟ್ರಃ

ಋದ್ಧಾತ್ಯೃದ್ಧವಿಭೇದಂ ಮೇ ಕಥಯಸ್ವ ಮಹಾಮುನೇ ॥38॥

ಧೃತರಾಷ್ಟ್ರ ಎಲೈ ಮಹಾಮುನಿಗಳಾದ ಸನತ್ಸುಜಾತರೇ, ನನಗೆ ಋದ್ಧ ಮತ್ತು ಅತ್ಯೃದ್ಧವಾದ ತಪಸ್ಸಿನ ಭೇದಗಳನ್ನು ತಿಳಿಸಿ.

ಸನತ್ಕುಮಾರಃ

ಋದ್ಧಂ ತದ್ ಬ್ರಾಹ್ಮಣಾನಾಂ ಯದ್ ಅತ್ಯೃದ್ಧಮಿಹ ಕಾಮಿನಾಮ್ ॥

ಸನತ್ಕುಮಾರ ಬ್ರಾಹ್ಮಣಾನಾಂ= ಬ್ರಹ್ಮಜ್ಞಾನಿಗಳಿಗೆ, ಯದ್= ಯಾವ ತಪಸ್ಸು, ಋದ್ಧಂ= ಋದ್ಧವೆನಿಸುತ್ತದೆಯೋ, ತದ್= ಅದೇ, ಕಾಮಿನಾಮ್= ಕಾಮ್ಯ ಕರ್ಮವನ್ನು ಮಾಡುವವರಿಗೆ, ಇಹ= ಈ ಲೋಕದಲ್ಲಿ, ಅತ್ಯೃದ್ಧ್ಯಂ= ಅತಿಯಾಗಿ ಋದ್ಧವೆನಿಸುತ್ತದೆ.

ಇಂದ್ರಿಯೇಭ್ಯಶ್ಚ ಪಂಚಭ್ಯೋ ಮನಸಶ್ಚೈವ ಭಾರತ |
ಅತೀತಾನಾಗತೇಭ್ಯಶ್ಚ ಮುಕ್ತಶ್ಚೇತ್ ಸ ಸುಖೀ ಭವೇತ್ ॥40॥

ಸನತ್ಸುಜಾತರಾದ ನೀವು ಹೇಳಿದ ಪ್ರಮೇಯ ಶ್ರವಣದಿಂದ ಜನನ-ಮರಣ ರೂಪವಾದ ಸಂಸಾರವು ನಿರ್ಮೂಲಗೊಂಡು, ಪಾಪಾದ್ಯನಿಷ್ಟಗಳು ನಿವೃತ್ತವಾಗುತ್ತವೆ ಎಂಬುದು ಹೇಗೆ ಎಂಬ ಶಂಕೆಗೆ ಉತ್ತರವಾಗಿ, `ನ ತಪೋಽನಶನಾತ್ ತುಲ್ಯಮ್' ಎಂದು ಹಿಂದೆ ಹೇಳಿದ ರೀತಿಯಲ್ಲಿ ಉಪವಾಸಾದಿಗಳನ್ನು ಮಾಡಿ, ವಿಷಯದಲ್ಲೇ ತೊಡಗಿರುವ ಇಂದ್ರಿಯಗಳನ್ನು ತ್ಯಜಿಸಿ, ವಿಷಯವಿರಕ್ತಿಯನ್ನು ಹೊಂದಿ ಅನುಷ್ಠಾನ ಮಾಡಿದ ಶ್ರವಣಾದಿ ಸಾಧನಗಳಿಂದ ಭಗವಂತನು ಸುಪ್ರೀತನಾಗಿ ಅಪರೋಕ್ಷ ಜ್ಞಾನವನ್ನು ಕೊಟ್ಟು, ಸಂಚಿತ ಮತ್ತು ಆಗಾಮಿ ಪಾಪಗಳನ್ನು ನಾಶಮಾಡಿ, ಜೀವನ್ಮುಕ್ತಿಯನ್ನು ಕೊಡುವುದರಿಂದ ಸರ್ವಾನಿಷ್ಟ ನಿವೃತ್ತಿಯಾಗುತ್ತದೆ ಎಂಬ ಅಭಿಪ್ರಾಯದಿಂದ ಉತ್ತರವನ್ನು ಹೇಳುತ್ತಾರೆ.

ಭಾರತ= ಎಲೈ ಧೃತರಾಷ್ಟ್ರನೇ, ನಾನು ಹೇಳಿದ ನಿರ್ದುಷ್ಟವಾದ ತಪಸ್ಸು ಮುಂತಾದವುಗಳನ್ನು ಅನುಷ್ಠಾನ ಮಾಡುವ, ಸಃ= ಆ ತಪಸ್ವಿಯಾದ ಪುರುಷನು, ಪಂಚಭ್ಯಃ ಇಂದ್ರಿಯೇಭ್ಯಃ= ಐದು ಜ್ಞಾನೇಂದ್ರಿಯಗಳಿಂದ, ಚಶಬ್ದದಿಂದ ಐದು ಕರ್ಮೇಂದ್ರಿಯಗಳಿಂದಲೂ ಎಂದು ಇಟ್ಟುಕೊಳ್ಳಬೇಕು, ಕರ್ಮೇಂದ್ರಿಯಗಳು ಅಪ್ರಧಾನವಾದುದರಿಂದ ಅದನ್ನು ಚಶಬ್ದದಿಂದ ಸಂಗ್ರಹಿಸಿದ್ದಾರೆ. ಮನಸಶ್ಚ= ನಾನಾ ವಾಸನೆಗಳಿಂದ ತುಂಬಿದ ಮನಸ್ಸಿನಿಂದಲೂ, ಅತೀತಾನಾಗತೇಭ್ಯಃ= ಸಂಚಿತಾಗಾಮಿ ಕರ್ಮಗಳಿಂದಲೂ, ಚಶಬ್ದದಿಂದ ಅನಿಷ್ಟಪುಣ್ಯದಿಂದಲೂ ಎಂದು ಇಟ್ಟುಕೊಳ್ಳಬೇಕು, ಮುಕ್ತಃ= ವಿಮುಕ್ತನಾಗಿ, ಸುಖೀ ಭವೇತ್= ಸ್ವರೂಪಸುಖವುಳ್ಳವನಾಗುತ್ತಾನೆ. ಮೋಕ್ಷದೆಶೆಯಲ್ಲಿ ಪ್ರಾಕೃತ ಇಂದ್ರಿಯಗಳು ನಾಶವನ್ನು ಹೊಂದುವುದರಿಂದ ಅವುಗಳನ್ನು ತ್ಯಜಿಸಿ ಸ್ವರೂಪೇಂದ್ರಿಯದಿಂದಲೇ ಎಲ್ಲ ಸುಖವನ್ನೂ ಅನುಭವಿಸುತ್ತಾನೆ ಎಂದು ಅಭಿಪ್ರಾಯ.

ಸಂಸಾರದಲ್ಲಿಯೂ ಕೂಡ ಐದು ಜ್ಞಾನೇಂದ್ರಿಯಗಳ ಮತ್ತು ಕರ್ಮೇಂದ್ರಿಯಗಳ ಮತ್ತು ಮನಸ್ಸಿನ ಜಯವನ್ನು ಯಥಾಯೋಗ್ಯವಾಗಿ ಪಡೆದು ನಷ್ಟದ್ರವ್ಯದಿಂದ ಉಂಟಾದ ದುಃಖದಿಂದಲೂ, ಅನಾಗತವಾದ ದ್ರವ್ಯದ ಲಾಭಕ್ಕಾಗಿ ಮಾಡುವ ದುಃಖದಿಂದಲೂ ಮುಕ್ತನಾಗಿ ಸುಖದಿಂದಿರುತ್ತಾನೆ ಎಂದು ಅಭಿಪ್ರಾಯ.

ಧೃತರಾಷ್ಟ್ರಃ

ಆಖ್ಯಾನಪಂಚಮೈರ್ವೇದೈರ್ಭೂಯಿಷ್ಠಂ ಕಥ್ಯತೇ ಜನಃ |
ತಥಾ ಚಾನ್ಯೇ ಚತುರ್ವೇದಾಃ ತ್ರಿವೇದಾಶ್ಚ ತಥಾ ಪರೇ ॥41॥

ಸನತ್ಸುಜಾತರ ಮುಖದಿಂದ ಮೋಕ್ಷಸಾಧನವಾದ ತಪಸ್ಸಿನ ಮಹಿಮೆಯನ್ನು ಕೇಳಿದ ಧೃತರಾಷ್ಟ್ರನು ಈಗ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರೇ ಸತ್ಪಾತ್ರರೆಂದು ಸಾಮಾನ್ಯವಾಗಿ ತಿಳಿದಿದ್ದರೂ ವಿಶೇಷವಾಗಿ ತಿಳಿಯಲು ಬಯಸಿ, ಲೋಕದಲ್ಲಿ ಭಾರತ ಸಹಿತವಾದ ನಾಲ್ಕುವೇದಗಳನ್ನು ಅಧ್ಯಯನವನ್ನು ಮಾಡಿದ ಪುರುಷರೂ ಇರುತ್ತಾರೆ. ಅವರು ಉತ್ತಮಪಾತ್ರರೆಂದು ಮಹಾಜನರಲ್ಲಿ ಪ್ರಸಿದ್ಧಿಯೂ ಇದೆ. ಆದರೆ ಎಲ್ಲ ಬ್ರಾಹ್ಮಣರೂ ಐದುವೇದಗಳನ್ನು ತಿಳಿದಿರುವುದಿಲ್ಲ. ತಮ್ಮ ಶಕ್ತಿಗೆ ಅನುಗುಣವಾಗಿ ಕೆಲವರು ನಾಲ್ಕು, ಮೂರು, ಎರಡು ಅಥವಾ ಒಂದೇ ವೇದವನ್ನು ತಿಳಿದಿರುತ್ತಾರೆ. ಪಂಚವೇದವನ್ನು ತಿಳಿದವರೇ ಪಾತ್ರರು, ಉಳಿದವರಲ್ಲ ಎಂಬ ನಿಯಮವಿದೆಯೇ? ಅಥವಾ ಯೋಗ್ಯತಾನುಸಾರೇಣ ಉಳಿದವರೂ ಪಾತ್ರರಾಗುತ್ತಾರೆಯೇ ಎಂಬ ನಿರ್ಣಯವಿಲ್ಲದೆ ಪ್ರಶ್ನೆಯನ್ನು ಮಾಡುವ ನನಗೆ ಯಾರು ಉತ್ತಮಪಾತ್ರರು ಎಂಬ ಸಂಶಯವನ್ನು ನಿರಾಕರಿಸಿ ಎಂದು ಎರಡು

ಶ್ಲೋಕಗಳಿಂದ ಕೇಳುತ್ತಾನೆ.
ಆಖ್ಯಾನ ಪಂಚಮೈಃ= ಆಖ್ಯಾನ ಎಂದರೆ ಮಹಾಭಾರತರೂಪವಾದ ಇತಿಹಾಸ, ಅದನ್ನೇ ಐದನೆಯ ಸಂಖ್ಯೆಯಾಗಿ ಉಳ್ಳ, ವೇದೈಃ= ನಾಲ್ಕು ವೇದಗಳಿಂದ, ಜನಃ= ಬ್ರಾಹ್ಮಣವರ್ಗವು ಅಥವಾ ಬ್ರಾಹ್ಮಣದೇಹವು, ಭೂಯಿಷ್ಠಮ್= ಅತ್ಯಂತ ಶ್ರೇಷ್ಠವಾದುದು ಎಂದು, ಕಥ್ಯತೇ= ಮಹತ್ವಬುದ್ಧಿಯಿಂದ ತನ್ನನ್ನು ತಾನು ಹೊಗಳಿಕೊಳ್ಳುತ್ತದೆ. ಇಲ್ಲಿ ಕಥ್ಯತೇ ಮತ್ತು ಕತ್ಥತೇ ಎಂದು ಎರಡು ಪಾಠವಿದೆ. ಕಥ್ಯತೇ ಎಂಬ ಪಾಠದಲ್ಲಿ ಎಲ್ಲರಿಂದಲೂ ಹೇಳಲ್ಪಡುತ್ತದೆ ಎಂದು ಇಷ್ಟೇ ಅರ್ಥ. ತಥಾ= ಅದರಂತೆ, ಅನ್ಯೇ= ಕೆಲವರು, ಚತುರ್ವೇದಾಃ= ನಾಲ್ಕುವೇದಗಳನ್ನು ಅಧ್ಯಯನ ಮಾಡಿದವರಾಗಿರುತ್ತಾರೆ. ತಥಾ= ಅದರಂತೆ, ಪರೇ= ಇನ್ನು ಕೆಲವರು, ತ್ರಿವೇದಾಶ್ಚ= ಮೂರುವೇದಗಳನ್ನು ಅಧ್ಯಯನವನ್ನು ಮಾಡಿದವರಾಗಿರುತ್ತಾರೆ. ಪಂಚವೇದಗಳನ್ನು ಅಧ್ಯಯನ ಮಾಡಿದವರಂತೆ ನಾಲ್ಕುವೇದಗಳನ್ನು ಅಥವಾ ಮೂರುವೇದಗಳನ್ನು ಅಧ್ಯಯನ ಮಾಡಿದವರು ತಮ್ಮಲ್ಲಿ ಮಹಾತ್ಮಬುದ್ಧಿಯಿಂದ ತಾವೇ ಶ್ರೇಷ್ಠರೆಂದು ಹೊಗಳಿಕೊಳ್ಳುತ್ತಾರೆ.
ದ್ವಿವೇದಾಶ್ಚೈಕವೇದಾಶ್ಚಾಪ್ಯನೃಚಶ್ಚ ತಥಾ ಪರೇ |
ಏತೇಷು ಮೇऽಧಿಕಂ ಬ್ರೂಹಿ ಯಮಹಂ ವೇದ ಬ್ರಾಹ್ಮಣಮ್ ॥42॥
ತಥಾ= ಅದರಂತೆ, ಪರೇ= ಇನ್ನು ಕೆಲವರು, ದ್ವಿವೇದಾಃ= ಎರಡೇ ವೇದಗಳನ್ನು ಅಧ್ಯಯನ ಮಾಡಿದವರು, ಏಕವೇದಾಶ್ಚ= ಮತ್ತು ಒಂದೇ ವೇದವನ್ನು ಅಧ್ಯಯನ ಮಾಡಿದವರು ಮತ್ತು, ಅನೃಚಶ್ಚ= ಒಂದು ವೇದವನ್ನೂ ಅಧ್ಯಯನ ಮಾಡದೆ ಧ್ಯಾನದಲ್ಲಿ ನಿರತರಾದವರು. ಏತೇಷು= ಇಷ್ಟು ಜನರಲ್ಲಿ, ಯಂ ಬ್ರಾಹ್ಮಣಮ್= ಯಾವ ಬ್ರಾಹ್ಮಣನು ನಾನು, ಅಧಿಕಂ= ಶ್ರೇಷ್ಠಪಾತ್ರನೆಂದು, ವೇದ= ತಿಳಿಯುವೆನೋ, ಅಂತಹ ಬ್ರಾಹ್ಮಣನನ್ನು, ಬ್ರೂಹಿ= ನನಗೆ ಹೇಳಿ. ಇಲ್ಲೆಲ್ಲಾ ವೇದಗಳನ್ನು ತಿಳಿದವರು ಎಂದರೆ ವೇದಾರ್ಥಜ್ಞಾನವುಳ್ಳವರು ಎಂದೇ ಅರ್ಥ. ಕೇವಲ ವೇದಪಾಠವನ್ನು ಮಾಡಿದವರು ಎಂದು ಅರ್ಥವಲ್ಲ.
ಸನತ್ಕುಮಾರಃ
ಏಕವೇದಸ್ಯ ಚಾಜ್ಞಾನಾದ್ ವೇದಾಸ್ತೇ ಬಹವೋऽಭವನ್ |
ಸತ್ಯಸ್ಯೈಕಸ್ಯ ರಾಜೇಂದ್ರ ಸತ್ಯೇ ಕಶ್ಚಿದವಸ್ಥಿತಃ ॥43॥
ಹೀಗೆ ಧೃತರಾಷ್ಟ್ರನಿಂದ ಸತ್ಪಾತ್ರರ ವಿಷಯದಲ್ಲಿ ಪ್ರಶ್ನೆ ಮಾಡಲ್ಪಟ್ಟ ಸನತ್ಸುಜಾತರು ಐದು, ನಾಲ್ಕು ಮೊದಲಾದ ಸಂಖ್ಯೆಯ ವೇದಾಧ್ಯಯನವೇ ಬ್ರಾಹ್ಮಣನಿಗೆ ಸತ್ಪಾತ್ರತ್ವವನ್ನು ತಂದುಕೊಡುವುದಿಲ್ಲ. ಆದರೆ ವೇದಮುಖ್ಯಾರ್ಥನಾದ ವಿಷ್ಣುವಿನ ಅನುಸಂಧಾನಪೂರ್ವಕವಾಗಿ ಅಧ್ಯಯನ ಮಾಡುವ ಸ್ವಭಾವವುಳ್ಳವನೇ ಉತ್ತಮಪಾತ್ರನಾಗುತ್ತಾನೆ ಎಂದು ಮುಂದಿನ ಶ್ಲೋಕಗಳಲ್ಲಿ ಹೇಳುವವರಾಗಿ, ವೇದಗಳಿಗೆ ಪರಮಮುಖ್ಯ ಮತ್ತು ಅಮುಖ್ಯ ಎಂಬ ವೃತ್ತಿಗಳಿಂದ ಇರುವ ಅರ್ಥಭೇದಗಳನ್ನು ವೇದಗಳು ಅನಂತವಾದ್ದರಿಂದ, ತಿಳಿಯಲು ಸಾಧ್ಯವಾಗದ ಅಲ್ಪಮತಿಯುಳ್ಳ ಅಧಿಕಾರಿಗಳನ್ನು ಉದ್ಧಾರ ಮಾಡಲು, ಪರಮದಯಾಳುವಾದ ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾದ ನಾರಾಯಣನು ವ್ಯಾಸರೂಪದಿಂದ ಅವತಾರ ಮಾಡಿ ಆಯಾ ಅಧಿಕಾರಿಗಳಿಗೆ ಯೋಗ್ಯವಾದ ಭಗವದಪರೋಕ್ಷ ಜ್ಞಾನದ ಪ್ರಾಪ್ತಿಯ ಸಲುವಾಗಿ ಒಂದೇ ರಾಶಿಯಾಗಿದ್ದ ವೇದವನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ಭಾಗಗಳನ್ನಾಗಿ ಮಾಡಿದರು ಎಂದು ಉಪೋದ್ಘಾತರೂಪವಾಗಿ ಹೇಳುತ್ತಿದ್ದಾರೆ.
ಏಕವೇದಸ್ಯ= ಋಗಾದಿ ವೇದಗಳೆಂಬ ವಿಭಾಗವಿಲ್ಲದಿರುವ, ಅವಿಭಕ್ತವಾದ ವೇದರಾಶಿಯನ್ನು, ಅಜ್ಞಾನಾತ್= ತಿಳಿಯಲು ಅಲ್ಪಾಧಿಕಾರಿಗಳಿಗೆ ಸಾಮರ್ಥ್ಯವಿಲ್ಲದಿದ್ದರಿಂದ, ತೇ ವೇದಾಃ= ಒಂದೇ ಆಗಿದ್ದ ಆ ವೇದಗಳು, ಬಹವಃ ಅಭವನ್= ಋಗಾದಿ ಶಬ್ದವೇದದಿಂದ ಅನೇಕಗಳಾದವು. ಅದನ್ನು
`ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ವಿಭುಃ |
ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥'
(ಅವಿಭಕ್ತವಾದ ವೇದರಾಶಿಯಿಂದ ಋಕ್ಕುಗಳನ್ನೂ, ಯಜುಸ್ಸುಗಳನ್ನೂ, ಸಾಮಗಳನ್ನೂ ತೆಗೆದುಕೊಂಡು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂಬ ನಾಲ್ಕುವೇದಗಳನ್ನು ಮಾಡಿದರು. ಇವುಗಳಿಗೆ ಮೂಲ ಋಗ್ವೇದ, ಮೂಲ ಯಜುರ್ವೇದ ಎಂದು ಹೆಸರು. ಅನಂತರ ಅಧಿಕಾರಿಗಳಿಗೆ ಶಕ್ತಿಹ್ರಾಸವಾದ್ದರಿಂದ ಮೂಲಋಗ್ವೇದದಿಂದ ಕೆಲವೇ ಋಕ್ಕುಗಳನ್ನು ತೆಗೆದುಕೊಂಡು ಅದರಂತೆ ಮೂಲಯಜುರ್ವೇದದಿಂದ ಕೆಲವು ಯಜುಸ್ಸುಗಳನ್ನು ತೆಗೆದುಕೊಂಡು ಈ ಕ್ರಮದಲ್ಲಿ ಇನ್ನೂ ಸಣ್ಣ ಪರಿಮಾಣದ ವೇದಗಳನ್ನು ಮಾಡಿದರು. ಇವುಗಳನ್ನು ಉಪವೇದಗಳು ಎಂದು ಕರೆಯುತ್ತಾರೆ. ಅನಂತರ ಈ ಉಪವೇದಗಳಿಂದ ಅವಾಂತರ ವೇದಗಳು ಮತ್ತು ಶಾಖೆಗಳು ಉಂಟಾದವು ಎಂದು ಋಗ್ಭಾಷ್ಯ ಟೀಕಾ ಟಿಪ್ಪಣಿಯಲ್ಲಿ ಹೇಳಿದ್ದಾರೆ. ಹೀಗೆ ಬಹುಧಾವಿಭಕ್ತವಾದ ವೇದಗಳ ಅಧ್ಯಯನದಿಂದ ಭಗವದಪರೋಕ್ಷ ಜ್ಞಾನರೂಪವಾದ ಮಹಾಫಲವಿರುವುದರಿಂದ ಆ ವೇದಗಳನ್ನು ಅವಶ್ಯವಾಗಿ ಅಧ್ಯಯನ ಮಾಡಬೇಕೆಂದು ಹೇಳುತ್ತಾರೆ.
ರಾಜೇಂದ್ರ= ಎಲೈ ಧೃತರಾಷ್ಟ್ರನೇ, ಏಕಸ್ಯ= ಸಮಾಧಿಕ ಶೂನ್ಯನಾದ ಅಥವಾ ಸ್ವಗತಭೇದವರ್ಜಿತನಾದ, ಸತ್ಯಸ್ಯ= ಪರಬ್ರಹ್ಮನ ಅಥವಾ ಆನಂದಾದಿಪೂರ್ಣನಾದ ನಾರಾಯಣನ, ಜ್ಞಾನವನ್ನು ಪಡೆಯುವ ಸಲುವಾಗಿ ಎಂದು ಇಟ್ಟುಕೊಳ್ಳಬೇಕು, ವೇದಗಳು ಅನೇಕವಾದವು.
`ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮ್' (ಈ ಪರಬ್ರಹ್ಮನಿಗೆ ಸತ್ಯವೆಂದು ಹೆಸರು) ಎಂದು ಪ್ರಮಾಣವಿರುವುದರಿಂದ
`ಉತ್ತಮಾನಂದಸಂವಿದ್ಭ್ಯಾಂ ಪೂರ್ಣತ್ವಾದನಿಶಂ ಹರಿಃ |
ಸತ್ಯ ಇತ್ಯುಚ್ಯತೇ ವೇದೈಃ ಸತ್ಯಸಂಕಲ್ಪತಃ ಸದಾ ॥'
(ಶ್ರೇಷ್ಠವಾದ ಜ್ಞಾನಾನಂದಗಳಿಂದ ಯಾವಾಗಲೂ ಪೂರ್ಣನಾಗಿರುವುದರಿಂದ ಮತ್ತು ಸತ್ಯಸಂಕಲ್ಪನಾಗಿರುವುದರಿಂದ ಹರಿಯು ವೇದಗಳಲ್ಲಿ ಸತ್ಯನೆಂದು ಹೇಳಲ್ಪಡುತ್ತಾನೆ ಎಂಬ ಪ್ರಮಾಣಗಳು ಇರುವುದರಿಂದ ಸತ್ಯಶಬ್ದಕ್ಕೆ ಹರಿ ಎಂದು ಅರ್ಥ). ಅಂತಹ ವೇದಧ್ಯಯನದಿಂದ ಭಗವದಪರೋಕ್ಷವನ್ನು ಪಡೆಯುವದಾರು ಯಾರು ಎಂಬುದಕ್ಕೆ ಉತ್ತರವನ್ನು ಹೇಳುತ್ತಾರೆ.
ರಾಜೇಂದ್ರ= ಎಲೈ ಧೃತರಾಷ್ಟ್ರನೇ, ಸತ್ಯೇ= ಅಂತಹ ಹಿಂದೆ ಹೇಳಿದ ಹರಿಯಲ್ಲಿ, ಕಶ್ಚಿತ್ಯೈಃ= ಕಃ ಎಂದರೆ ಸುಖ, ಚಿತ್ ಎಂದರೆ ಜ್ಞಾನ,

ಎಂದರೆ ಸ್ವರೂಪದಲ್ಲಿ ಜ್ಞಾನಾನಂದರೂಪಿಯಾದ ಅಧಿಕಾರಿಯು ಮಾತ್ರ, ಅವಸ್ಥಿತಃ= ನಿಷ್ಠೆಯನ್ನು ಹೊಂದಿರುತ್ತಾನೆ. ವೇದಾಧ್ಯಯನವನ್ನು ಮಾಡಿದವರಿಗೆಲ್ಲಾ ಭಗವದಪರೋಕ್ಷ ಜ್ಞಾನವು ಉಂಟಾಗುವುದಿಲ್ಲ. ಸಾತ್ವಿಕನಾದ ಅಧಿಕಾರಿಗೆ ಮಾತ್ರ ಉಂಟಾಗುತ್ತದೆ ಎಂದು ಅಭಿಪ್ರಾಯ. ಈ ವಿಷಯವು `ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ' (ಎಲ್ಲರೂ ಪ್ರಯತ್ನಪಟ್ಟರೂ ಸಾಧನಪೂರ್ತಿಯನ್ನು ಮಾಡಿದ ಸಾತ್ವಿಕಾಧಿಕಾರಿಯೊಬ್ಬನೇ ನನ್ನನ್ನು ತಿಳಿಯುತ್ತಾನೆ ಮತ್ತು ಹೊಂದುತ್ತಾನೆ) ಎಂಬ ಗೀತಾವಚನವು ಪ್ರಮಾಣವಾಗುತ್ತದೆ. ಅಥವಾ ಕಃ ಎಂದರೆ ವಾಯು, ಚಿತ್ ಎಂದರೆ ತನಗಿಂತ ಅವರವಾದ ಎಲ್ಲವನ್ನೂ ತಿಳಿದಿರುವುದರಿಂದ ಅವರಿಗೇ ಚಿತ್ ಎಂದು ಹೆಸರು. ಕಶ್ಚಿತ್ ಎಂದರೆ ಮುಖ್ಯಪ್ರಾಣ, ಅವನು ಸತ್ಯೇ= ನಿರ್ದುಷ್ಟನಾದ, ಜ್ಞಾನಾನಂದ ಪೂರ್ಣನಾದ ಭಗವಂತನಲ್ಲಿ, ಅವಸ್ಥಿತಃ= ಎಲ್ಲ ವೇದಗಳೂ ಭಗವತ್ಪರವೆಂದು ತಿಳಿದು ಅಖಂಡ ಭಕ್ತಿಯುಳ್ಳವನಾಗಿ ಆ ಪರಮಾತ್ಮನಲ್ಲಿಯೇ ಸ್ಥಿತನಾಗಿದ್ದಾನೆಂದು ಅಭಿಪ್ರಾಯ.

ಯ ಏನಂ ವೇದ ತತ್ಸತ್ಯಂ ಪ್ರಾಜ್ಞೋ ಭವತಿ ನಿತ್ಯದಾ |
ದಾನಮಧ್ಯಯನಂ ಯಜ್ಞೋ ಲೋಭಾದೇತತ್ ಪ್ರವರ್ತತೇ ॥44॥

ತತ್= ಆ ಕಾರಣದಿಂದ, ಯಃ= ಯಾವ ವಾಯುದೇವರು, ಏನಂ= ಈ ಪ್ರಪಂಚವನ್ನು, ಸತ್ಯಂ= ಸತ್ಯವೆಂದು ತಿಳಿಯುತ್ತಾರೆಯೋ ಆ ವಾಯುದೇವರು, ಪ್ರಾಜ್ಞಃ= ಪ್ರಜ್ಞಾಸಂಬಂಧಿಯಾದ ಪೂರ್ಣಪ್ರಜ್ಞನಾಮವುಳ್ಳವರಾಗಿ, ಭವತಿ= ಆಗುತ್ತಾರೆ (ಅಥವಾ ಹಿಂದಿನ ಶ್ಲೋಕದ ಉತ್ತರಾರ್ಧದ ಜೊತೆಯಲ್ಲಿ ಸೇರಿಸಿ ಹೀಗೂ ವ್ಯಾಖ್ಯಾನ ಮಾಡಬಹುದು). ಏಕಸ್ಯ= ಜಗತ್ತಿನಲ್ಲೂ ಬ್ರಹ್ಮನಲ್ಲಿಯೂ, ಒಂದೇ ರೂಪವಾಗಿರುವ, ಸತ್ಯಸ್ಯ= ಭಾವಪ್ರಧಾನ ನಿರ್ದೇಶವಾದುದರಿಂದ, ಪಾರಮಾರ್ಥಿಕ ಸತ್ಯತ್ವದ ಎಂದು ಅರ್ಥ. ಅಜ್ಞಾನಾತ್= ಜ್ಞಾನವಿಲ್ಲದಿರುವುದರಿಂದ ಒಬ್ಬ ವಾದಿಯು ಅನೇಕ ವಿಧವಾದ ಸತ್ಯತ್ವವನ್ನು ಅಂಗೀಕರಿಸುತ್ತಾನೆ. ತತ್= ಆ ಕಾರಣದಿಂದ, ಏನಂ= ಈ ಪ್ರಪಂಚವನ್ನು, ಸತ್ಯಂ= ಪಾರಮಾರ್ಥಿಕ ಸತ್ಯವೆಂದು, ಯಃ ವೇದ= ಯಾವನು ತಿಳಿಯುತ್ತಾನೆಯೋ, ಸಃ= ಅವನು, ನಿತ್ಯದಾ= ಯಾವಾಗಲೂ, ಪ್ರಾಜ್ಞೋ ಭವತಿ= ಪ್ರಾಜ್ಞನಾಗುತ್ತಾನೆ. ದಾನಂ= ದಾನವು, ಅಧ್ಯಯನಂ= ಅಧ್ಯಯನವು, ಯಜ್ಞಾ= ಯಜ್ಞವು, ಏತತ್= ಈ ಮೂರು ವಸ್ತುಗಳು, ಲೋಭಾತ್= ಸ್ವರ್ಗರೂಪವಾದ ಫಲದ ಲೋಭದಿಂದ, ಪ್ರವರ್ತತೇ= ಉಂಟಾಗುತ್ತದೆ.

ಸತ್ಯಾತ್ ಪ್ರಚ್ಯವಮಾನಾನಾಂ ಸಂಕಲ್ಪಶ್ಚ ವೃಥಾ ಭವೇತ್ |
ತತಃ ಕರ್ಮ ಪ್ರಭಾಸೇತ ಸತ್ಯಸ್ಯಾನವಧಾರಣಾತ್ ॥45॥

`ಸ್ವರ್ಗಕಾಮೋ ಯಜೇತ' ಇತ್ಯಾದಿ ವೇದವಾಕ್ಯವಿಹಿತವಾದ ಯಾಗಗಳನ್ನು ಅನುಷ್ಠಾನ ಮಾಡಿ, ಅದರಿಂದ ಪ್ರಸನ್ನರಾದ ದೇವತೆಗಳ ಅನುಗ್ರಹದಿಂದಲೇ ಸ್ವರ್ಗಾದಿ ಪುರುಷಾರ್ಥವು ಈ ಪ್ರಕಾರದಿಂದಲೂ ದೊರಕುವುದರಿಂದ ಅತ್ಯಾಯಾಸ ಸಾಧ್ಯವಾದ ಸತ್ಯಶಬ್ದವಾಚ್ಯ ಭಗವದುಪಾಸನಾದಿಗಳನ್ನು ಏಕೆ ಮಾಡಬೇಕೆಂದು ಪ್ರಶ್ನೆಯನ್ನು ಮಾಡಿದರೆ ಅದಕ್ಕೆ ಉತ್ತರವಾಗಿ, ವಿಷ್ಣುಸರ್ವೋತ್ತಮತ್ವ ಜ್ಞಾನವಿಲ್ಲದೆ ಮಿಥ್ಯಾಜ್ಞಾನದಿಂದ ಅನ್ಯದೇವತೆಗಳ ಉಪಾಸನೆಯನ್ನು ಮಾಡಿ, ಅದರಿಂದ ಉಂಟಾದ ಪುಣ್ಯದಿಂದ ನಮಗೆ ಇಷ್ಟವಾದ ಸರ್ವದುಃಖನಿವೃತ್ತಿ ಮತ್ತು ಶಾಶ್ವತ ಸುಖಪ್ರಾಪ್ತಿರೂಪವಾದ ಫಲವು ದೊರೆಯದಿರುವುದರಿಂದ ಅಂತಹ ಅನುಷ್ಠಾನವು ವ್ಯರ್ಥವಾದುದು, ಸತ್ಯನಾಮಕನಾದ ಬ್ರಹ್ಮನ ಉಪಾಸನೆಯನ್ನೇ ಮಾಡಬೇಕು ಎಂದು ಇಲ್ಲಿ ಹೇಳುತ್ತಾರೆ.

ಸತ್ಯಾತ್= ಉತ್ತಮ ಜ್ಞಾನಾನಂದ ರೂಪನಾದ ವಿಷ್ಣುವಿನಿಂದ ಎಂದರೆ ವಿಷ್ಣ್ವೇಕ ನಿಷ್ಠೆಯಿರುವ ಜ್ಞಾನದಿಂದ, ಚ್ಯವಮಾನಾನಾಂ= ಚ್ಯುತಿಯನ್ನು ಹೊಂದುವಂತಹ ಪುರುಷರಿಗೆ, ಸಂಕಲ್ಪಾಃ= `ಯದಿ ಪಿತೃಲೋಕಕಾಮಃ' ಇತ್ಯಾದಿ ಉಪನಿಷದ್ವಾಕ್ಯಗಳಲ್ಲಿ ಹೇಳಿದ ಸಂಕಲ್ಪಗಳು, ವಿತಥಾ ಭವನ್= ವ್ಯರ್ಥವಾಗುತ್ತವೆ. ವೃಥಾ ಭವೇತ್ ಎಂಬ ಪಾಠಕ್ಕೆ ಬದಲಾಗಿ ವೃಥಾ ಭವನ್ ಎಂಬ ಪಾಠವನ್ನು ಇಟ್ಟುಕೊಂಡಿದ್ದಾರೆ. ತತಃ= ಹಿಂದೆ ಹೇಳಿದಂತೆ ಸಂಕಲ್ಪವು ವ್ಯರ್ಥವಾದ ಮೇಲೆ, ಸತ್ಯಸ್ಯ= ಸತ್ಯಶಬ್ದಾಭಿಧೇಯನಾದ ಬ್ರಹ್ಮನ, ಅನವಧಾರಣಾತ್= ದುಷ್ಟವಾದ ಮತ್ತು ವ್ಯರ್ಥವಾದ ಜ್ಞಾನವನ್ನು ಹೊಂದಿ ಸರಿಯಾದ ಜ್ಞಾನವು ಇಲ್ಲದಿರುವ ಕಾರಣದಿಂದ, ಕರ್ಮ= ಕಾಮ್ಯಫಲವನ್ನು ಕೊಡುವ ಕಾಮ್ಯಕರ್ಮವು, ಪ್ರಭಾಸೇತ= ಜ್ಞಾನರೂಪವಾಗಿ ತೋರುತ್ತದೆ. ಅಥವಾ ಕರ್ಮ= ಪ್ರವೃತ್ತಿ ಕರ್ಮವೇ, ಪ್ರ= ಶ್ರೇಷ್ಠವಾಗಿ, ಭಾಸೇತ= ತೋರುತ್ತದೆ. `ಪ್ರಕಾಶೋ ಜ್ಞಾನಮಾಲೋಕೋ ಲೋಕೋ ಭಾಸಶ್ಚ ಕಥ್ಯತೇ' ಎಂದು ಕೋಶವಿರುವುದರಿಂದ ಭಾಸೇತ ಎಂಬ ಕ್ರಿಯಾಪದಕ್ಕೇ ಪ್ರಕಾಶಿಸುತ್ತದೆ ಎಂದು ಅರ್ಥವನ್ನು ಮಾಡಿದೆ. `ಅನೇವಂವಿತ್ ಮಹತ್ ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತ ಏವ' (ಬ್ರಹ್ಮಜ್ಞಾನವಿಲ್ಲದವನು ದೊಡ್ಡಪುಣ್ಯಕರ್ಮವನ್ನು ಮಾಡಿದರೂ ಅದರ ಫಲವು ಕೊನೆಗೆ ನಾಶವನ್ನೇ ಹೊಂದುತ್ತದೆ), `ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ' (ನಾನು ಯಜ್ಞವನ್ನು ಮಾಡುವೆನು, ದಾನವನ್ನು ಮಾಡುವೆನು, ಅದರಿಂದ ಸುಖವನ್ನು ಹೊಂದುವೆನು ಎಂಬ ಭ್ರಾಂತಿಯಿಂದ ಮೋಹಿತರಾಗಿರುತ್ತಾರೆ). ಮೊದಲಾದ ಪ್ರಮಾಣಗಳಿಗೆ ಅನುಸಾರವಾಗಿ ಜ್ಞಾನಶೂನ್ಯವಾದ ಕರ್ಮಗಳು ಅಜ್ಞಾನವೇ ಮೊದಲಾದ ಅನರ್ಥವನ್ನು ಕೊಡುತ್ತವೆ ಎಂದು ತಾತ್ಪರ್ಯ.

ಭಾರತ ಶ್ರೀನಿವಾಸಾಚಾರ್ಯರು ಭಾಗವತ ತೃತೀಯಸ್ಕಂದದ ತಾತ್ಪರ್ಯದಲ್ಲಿ ಉದಾಹರಿಸಿದ ವಾಮನ ಪುರಾಣವನ್ನು ಉದಾಹರಿಸಿ
ಈಶದ್ಭಕ್ತೋ ಭಗವತಿ ಸುಕರ್ಮಾ ಸ್ವರ್ಗಮೇಷ್ಯತಿ |
ಅಭಕ್ತೋ ನರಕಂ ಯಾತಿ ಸುಕರ್ಮಾಪಿ ನ ಸಂಶಯಃ ॥

ಹರಿಯಲ್ಲಿ ಸ್ವಲ್ಪ ಭಕ್ತಿಯುಳ್ಳವನು ಒಳ್ಳೆಯ ಕರ್ಮವನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾನೆ. ಹರಿಭಕ್ತಿ ಇಲ್ಲದವನು ಒಳ್ಳೆಯ ಕರ್ಮವನ್ನು ಮಾಡಿದರೂ ನರಕಕ್ಕೆ ಹೋಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ ಎಂದು ಹೇಳಿ ಬ್ರಹ್ಮಜ್ಞಾನವಿಲ್ಲದೆ ವೇದಪಾಠವನ್ನು ಮಾಡುವ ಪುರುಷನು ಪುನಃ ಪುನಃ ಸಂಸಾರದಲ್ಲಿಯೇ ಬೀಳುತ್ತಾನೆ. ಅವನಿಗೆ ಯಾವಾಗಲೂ ಮುಕ್ತಿಯುಂಟಾಗುವುದಿಲ್ಲ. ಆದ್ದರಿಂದ ಅವನಿಗಿಂತ ಬ್ರಹ್ಮನ ಪರೋಕ್ಷ, ಅಪರೋಕ್ಷಜ್ಞಾನವನ್ನು ಪಡೆದ ಪುರುಷನು ಉತ್ತಮನು ಎಂದು ವ್ಯಾಖ್ಯಾನ ಮಾಡಿರುತ್ತಾರೆ.

ಮನಸಾಽನ್ಯಸ್ಯ ಭವತಿ ವಾಚಾಽನ್ಯಸ್ಯಾಥ ಕರ್ಮಣಾ |
ಸಂಕಲ್ಪಸಿದ್ಧಃ ಪುರುಷಃ ಸಂಕಲ್ಪಾನಧಿತಿಷ್ಠತಿ ॥46॥

ಮನಸಾ= ಮನಸ್ಸಿನಿಂದ, ಅನ್ಯಸ್ಯ= ಬೇರೆ ವಿಷಯದ ಚಿಂತನೆಯೇ, ಭವತಿ= ಆಗುತ್ತದೆ. ವಾಚಾ= ಮಾತಿನಿಂದ, ಅನ್ಯಸ್ಯ= ಬೇರೆ

ವಿಷಯದ ಚಿಂತನೆಯೇ, ಭವತಿ= ಆಗುತ್ತದೆ. ಅಥ= ಮತ್ತು, ಕರ್ಮಣಾ= ಕರ್ಮದಿಂದ, ಅನ್ಯಸ್ಯ= ಬೇರೆ ವಿಷಯಕ್ಕೆ ಸಂಬಂಧಿಸಿದ ಕಾರ್ಯವೇ, ಭವತಿ= ಆಗುತ್ತದೆ. ಇದು ಅಸತ್ಪುರುಷರ ಲಕ್ಷಣ. ಪುರುಷಃ= ಸತ್ಪುರುಷನು ಮಾತ್ರ, ಸಂಕಲ್ಪಸಿದ್ಧಃ= ತನ್ನ ಸಂಕಲ್ಪವನ್ನು ಸಾಧಿಸಿ, ಸಂಕಲ್ಪಾನ್= ಸಂಕಲ್ಪಿತ ಫಲಗಳನ್ನು, ಅಧಿತಿಷ್ಠತಿ= ಪಡೆಯುತ್ತಾನೆ.
ಅನ್ಯೈಭೃತ್ಯೇನ ವೈತಸ್ಯ ದೀಕ್ಷಿತೋ ವ್ರತಮಾಚರೇತ್ |
ನಾಮೈತದ್ ಧಾತುನಿರ್ವೃತ್ತಂ ಸತ್ಯಮೇವ ಸತಾಂ ಪರಮ್ ॥47॥
ಏತಸ್ಯ= ಸಂಕಲ್ಪಿತವಾದ ಕಾಮ್ಯಫಲಗಳು, ಅನ್ಯೈಭೃತ್ಯೇನ= ಅನಿತ್ಯವಾದ ಕಾರಣದಿಂದ, ದೀಕ್ಷಿತಃ= ವೈಷ್ಣವ ದೀಕ್ಷೆಯನ್ನು ಹೊಂದಿದವನಾಗಿ, ವ್ರತಂ= ವೈಷ್ಣವ ವ್ರತವನ್ನು ಅಥವಾ ವಿಷ್ಣುಪ್ರೀತಿಕರವಾದ ವ್ರತವನ್ನು, ಆಚರೇತ್= ಆಚರಿಸಬೇಕು. ಏತತ್ ನಾಮ= ಸತ್ಯವೆಂಬ ಈ ನಾಮವು, ಧಾತುನಿರ್ವೃತ್ತಂ= ಷದ್‌ಲೃ ಎಂಬ ಧಾತುವಿನಿಂದ ಉಂಟಾಗಿದೆ (ಸತ್ಯ ಎಂದರೆ ಜಗತ್ತಿನ ಸೃಷ್ಟಿಕರ್ತ, ಕಾರಣಕರ್ತ ಮತ್ತು ಸಂಹಾರಕರ್ತ ಎಂದು ಅರ್ಥ. ಆ ಕಾರಣದಿಂದ), ಸತಾಂ= ಸಜ್ಜನರಿಗೆ, ಸತ್ಯಮೇವ= ಜಗತ್ತಿನ ಸೃಷ್ಟ್ಯಾದಿಕರ್ತನಾದ ಹರಿಯೇ, ಪರಂ= ಸರ್ವೋತ್ತಮನಾದವನು.
ಜ್ಞಾನಂ ವೈ ನಾಮ ಪ್ರತ್ಯಕ್ಷಂ ಪರೋಕ್ಷಂ ಜಾಯತೇ ತಪಃ |
ತಸ್ಮಾತ್ ಕ್ಷತ್ರಿಯ ಮಾ ಮಂಸ್ಥಾ ಜಪಿತೇನೈವ ವೈ ದ್ವಿಜಮ್ ॥48॥
ಕ್ಷತ್ರಿಯ= ಎಲೈ ಧೃತರಾಷ್ಟ್ರನೇ, ಜ್ಞಾನಂ ನಾಮ= ಜ್ಞಾನವೆಂಬುದು, ಪ್ರತ್ಯಕ್ಷಂ= ಉಪದೇಶಾದಿಗಳಿಂದ ತಿಳಿಯುವುದಷ್ಟೆ! ತಪಃ= ತಪಸ್ಸಿನ ಅನುಷ್ಠಾನವು, ಪರೋಕ್ಷಂ= ಪ್ರತ್ಯಕ್ಷಕ್ಕೆ ಅವಿಷಯವಾಗಿ, ಜಾಯತೇ= ಉಂಟಾಗುತ್ತದೆ. ತಸ್ಮಾತ್= ಆ ಕಾರಣದಿಂದ, ಜಪಿತೇನೈವ= ಕೇವಲ ವೇದಪಾಠದಿಂದಲೇ, ದ್ವಿಜಂ= ಬ್ರಾಹ್ಮಣನು ಉತ್ತಮ ಪಾತ್ರನೆಂದು, ಮಾ ಮಂಸ್ಥಾಃ= ತಿಳಿಯಬೇಡ.
ವಿದ್ಯಾತ್ ಬಹು ಪಠಂತಂ ತು ದ್ವಿಜಂ ವೈ ಬಹುಪಾಠಿನಮ್ |
ಯ ಏವ ಸತ್ಯಾನ್ನಾಪೈತಿ ಸ ಜ್ಞೇಯೋ ಬ್ರಾಹ್ಮಣಸ್ತ್ವಯಾ ॥49॥
ಹೀಗೆ ಅನಂತವೇದ ಪ್ರತಿಪಾದ್ಯನೂ, ಆನಂದಚಿದ್ಘನನೂ ಆದ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿಯುವ ಜ್ಞಾನಿಗೆ ಮಹಾಪುರುಷಾರ್ಥ ಉಂಟಾಗುವುದೆಂದು ಸಂಕ್ಷೇಪವಾಗಿ ಬ್ರಾಹ್ಮಣೋತ್ತಮರ ಸ್ವರೂಪವನ್ನು ತಿಳಿಸಿದ ಸನತ್ಸುಜಾತರು ಈಗ ಉತ್ತಮ ಪಾತ್ರರ ಲಕ್ಷಣವನ್ನು ಸ್ಪಷ್ಟಪಡಿಸುತ್ತಾ ಅಂತಹ ಬ್ರಾಹ್ಮಣರು ಅನೇಕ ವಿಧರಾಗಿರುತ್ತಾರೆ ಎಂದು ಹೇಳುತ್ತಾರೆ.
ಬಹುಪಠಂತಮ್= ಅನೇಕ ಬಾರಿ ವೇದಪಾಠವನ್ನು ಮಾಡುವ, ತುಶಬ್ದವು ಅರ್ಥಜ್ಞಾನವಿಲ್ಲದೆ ಮಾಡುವವನು ಎಂಬುದನ್ನು ಸೂಚಿಸುತ್ತದೆ. ಇಂತಹ ಬ್ರಾಹ್ಮಣನನ್ನು, ಬಹುವಾಗಿತಿ= ಅನೇಕಬಾರಿ ಪಾರಾಯಣ ಮಾಡುವವನು ಎಂದು, ವಿದ್ಯಾತ್= ತಿಳಿಯಬೇಕು. ಪಾತ್ರಸ್ವರೂಪವನ್ನು ವಿಚಾರ ಮಾಡುವ ಪುರುಷನು ಹೀಗೆ ತಿಳಿಯಬೇಕು ಎಂದು ಅಭಿಪ್ರಾಯ.
`ಬಹುಪಾಠಿನಂ' ಎಂಬ ಪಾಠಕ್ಕೆ ಬದಲಾಗಿ ಕೋಶಗಳಲ್ಲಿ `ಬಹುಪಠಂತಂ' ಎಂಬ ಪಾಠವೂ, ಇನ್ನು ಕೆಲವು ಕೋಶಗಳಲ್ಲಿ `ಪಠಂತಂ ತಂ ಬಹುವಾಗಿತಿ ಬ್ರಾಹ್ಮಣಂ' ಎಂದೂ ಪಾಠವಿದೆ. ಬಹುವಾಕ್ ಎಂದು ಹೇಳಿದ್ದರಿಂದ ಅಂತಹವನು ಉತ್ತಮಪಾತ್ರನಲ್ಲವೆಂದು ಸೂಚಿತವಾಗುತ್ತದೆ. ಹಾಗಾದರೆ ಬ್ರಾಹ್ಮಣ ಶಬ್ದವಾಚ್ಯನಾದವನು ಯಾರು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ಯಃ= ಯಾವ ಪುರುಷನು, ಸತ್ಯಾತ್= ಜ್ಞಾನಾನಂದಪೂರ್ಣನಾದ ವಿಷ್ಣುವಿನ ಸರ್ವೋತ್ತಮತ್ವ ಜ್ಞಾನದಿಂದ ಅಥವಾ ವೈಷ್ಣವದೀಕ್ಷೆಯಿಂದ, ನಾಪೈತಿ= ದೂರಸರಿಯುವುದಿಲ್ಲವೋ, ಇಲ್ಲಿ ಅಪಯಾನ ಎಂದರೆ ವಿಷ್ಣುಸರ್ವೋತ್ತಮತ್ವ ಜ್ಞಾನಪೂರ್ವಕವಾಗಿ ತಾನು ವೈಷ್ಣವನೆಂದು ತೋರಿಸಿಕೊಳ್ಳಲು ತಪ್ತಮುದ್ರಾದಿ ಧಾರಣೆಯನ್ನು ಮಾಡಿಕೊಳ್ಳದಿರುವುದೇ ಆಗಿದೆ. ಏಷಃ= ಇಂತಹ ಲಕ್ಷಣವುಳ್ಳ ಬ್ರಾಹ್ಮಣನು ಯಾವನಿದ್ದಾನೆಯೋ, ಸಃ= ಅಂತಹ ವೈಷ್ಣವನೇ, ತ್ವಯಾ= ಧೃತರಾಷ್ಟ್ರನಾಮಕನಾದ ನಿನ್ನಿಂದ, ಬ್ರಾಹ್ಮಣಃ= ಬ್ರಾಹ್ಮಣ ಶಬ್ದವಾಚ್ಯನಾದ ಉತ್ತಮಪಾತ್ರನೆಂದು, ಜ್ಞೇಯಃ= ತಿಳಿಯಲ್ಪಡಬೇಕು. ಅವನು ಬಹಳ ವೇದಪಾಠಗಳನ್ನು ಮಾಡದಿದ್ದರೂ ವಿಷ್ಣುವಿನ ಪ್ರೀತಿಯ ಉದ್ದೇಶದಿಂದಲೇ ವೇದವಿಹಿತವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಅನುಷ್ಠಾನ ಮಾಡುವುದರಿಂದ ಅವನೇ ಬ್ರಾಹ್ಮಣಶಬ್ದದಿಂದ ನಿಜವಾಗಿ ಹೇಳಲ್ಪಡುವವನು.
ಪದ್ಮಪುರಾಣದಲ್ಲಿ ಹೀಗೆ ಹೇಳಲ್ಪಟ್ಟಿದೆ
`ಅಗ್ನಿಹೋತ್ರಂ ಯಥಾ ನಿತ್ಯಂ ವೇದಸ್ಯಾಧ್ಯಯನಂ ಯಥಾ |
ಬ್ರಾಹ್ಮಣಸ್ಯ ತಥಾ ವೇದಾತ್ ತಪ್ತಮುದ್ರಾಧಿಕಾರಿತಾ ॥
(ಬ್ರಾಹ್ಮಣನಿಗೆ ಅಗ್ನಿಹೋತ್ರವು, ವೇದಾಧ್ಯಯನವು ಹೇಗೆ ನಿತ್ಯವಾಗಿದೆಯೋ ಅದರಂತೆ ವೇದದಿಂದಲೇ ತಪ್ತಮುದ್ರಾಂಕನವೂ ನಿತ್ಯವಾಗಿ ಸಿದ್ಧವಾಗಿದೆ).
ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಹೇಳಲ್ಪಟ್ಟಿದೆ
`ತಪ್ತಚಕ್ರಧರಂ ದೃಷ್ಟ್ವಾ ಯೋ ವೈ ನಿಂದತಿ ಮೂಢಧೀಃ |
ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲುತಮ್ ॥'
ತಪ್ತಚಕ್ರಾಂಕನವನ್ನು ಹೊಂದಿದ ಮನುಷ್ಯನನ್ನು ನೋಡಿ ಯಾವ ಮೂರ್ಖನು ನಿಂದಿಸುತ್ತಾನೆಯೋ ಅವನು ಪ್ರಳಯಕಾಲದವರೆಗೆ ಘೋರವಾದ ನರಕವನ್ನು ಅನುಭವಿಸುತ್ತಾನೆ. ಬ್ರಹ್ಮವೈವರ್ತ ಪುರಾಣದಲ್ಲಿಯೇ ಹೀಗೆ ಪುನಃ ಹೇಳಲ್ಪಟ್ಟಿದೆ
`ಉಚ್ಚವರ್ಣೋಽಪಿ ಯೋ ವಿಪ್ರೋ ವೇದವೇದಾಂಗಪಾರಗಃ |
ಸದಾಚಾರರತೋಽಪಿ ಸ್ಯಾದ್ ವಿಷ್ಣುದೀಕ್ಷಾವಿವರ್ಜಿತಃ |
ಸ ಚೋರವದ್ ಬಹಿಷ್ಕಾರ್ಯಸ್ತಸ್ಮೈ ದತ್ತಂ ಚ ನಿಷ್ಫಲಮ್ ॥'
(ಶ್ರೇಷ್ಠವರ್ಣಕ್ಕೆ ಸೇರಿ, ವೇದವೇದಾಂಗಪಾರಗನಾದ ಬ್ರಾಹ್ಮಣನು ಸದಾಚಾರ ಸಂಪನ್ನನಾಗಿದ್ದರೂ ವಿಷ್ಣುದೀಕ್ಷೆ ಇಲ್ಲದಿದ್ದರೆ ಅವನನ್ನು ಕಳ್ಳನಂತೆ ಹೊರಗೆ ಹಾಕಬೇಕು. ಅವನಿಗೆ ಕೊಟ್ಟ ದಾನವು ನಿಷ್ಫಲವಾಗುತ್ತದೆ).
ಮತ್ತು ಶತಪಥಬ್ರಾಹ್ಮಣದಲ್ಲಿ ಹೀಗೆ ಹೇಳಲ್ಪಟ್ಟಿದೆ
ಸ ಹೋವಾಚ ಯಾಜ್ಞವಲ್ಕ್ಯಃ | ತಸ್ಮಾದಾತ್ಮಹಿತಾಯ ಹರಿಂ ಭಜೇತ್ | ಸುಶ್ಲೋಕಪೌಲೇರ್ವರ್ಮಾಣ್ಯಗ್ನಿನಾ ಸಂದಧಾತಿ'

(ಯಾಜ್ಞವಲ್ಕ್ಯರು ಹೀಗೆ ಮಾತನಾಡಿದರು. ಆದ್ದರಿಂದ ತನ್ನ ಹಿತಕ್ಕಾಗಿ ಹರಿಯನ್ನು ಭಜಿಸಬೇಕು. ಕೀರ್ತಿವಂತರಲ್ಲಿ ಅಗ್ರಗಣ್ಯನಾದ ಅವನ ಆಯುಧಗಳನ್ನು ಅಗ್ನಿಯ ಜೊತೆಯಲ್ಲಿ ದೇಹದಲ್ಲಿ ಧರಿಸಬೇಕು) ಇತ್ಯಾದಿಯಾಗಿ ಹೇಳಲ್ಪಟ್ಟಿವೆ. ಆದ್ದರಿಂದ ವೈಷ್ಣವ ದೀಕ್ಷೆಯುಳ್ಳ ಬ್ರಾಹ್ಮಣನೇ ಉತ್ತಮಪಾತ್ರನಾದವನು. ಕೇವಲ ವೇದಪಾಠಕನಲ್ಲ ಎಂದು ನಾವು ಹೇಳಿದುದು ಯಥಾರ್ಥವಾಗಿದೆ.

ಛಂದಾಂಸಿ ನಾಮ ಕ್ಷತ್ರಿಯ ತಾನ್ಯಥರ್ವಣಃ
ಪುರಾ ಜಗೌ ಮಹರ್ಷಿಸಂಘ ಏಷಃ |
ಛಂದೋವಿದಸ್ತೇ ಯ ಉತಾನಧೀತವೇದಾ
ನ ವೇದವೇದ್ಯಸ್ಯ ವಿದುರ್ಹಿ ತತ್ವಮ್ ॥50॥

ಛಂದಾಂಸಿ ನಾಮ ದ್ವಿಪದಾಂ ವರಿಷ್ಠ
ಸ್ವಚ್ಛಂದಯೋಗೇನ ಭವಂತಿ ತತ್ರ |
ಛಂದೋವಿದಸ್ತೇನ ಚ ತಾನಧೀತ್ಯ
ಗತಾ ಹಿ ವೇದಸ್ಯ ನ ವೇದ್ಯಮಾರ್ಯಾಃ ॥51॥

ಹೀಗೆ ಬಹುವೇದ ಪಾಠವನ್ನು ಮಾಡಿದರೂ ಪಠನ ಮಾಡಿದ ವೇದಗಳಿಂದ ಮುಖ್ಯಪ್ರತಿಪಾದ್ಯವಸ್ತುವಾದ ಭಗವಂತನ ಸ್ವರೂಪ ಜ್ಞಾನವಿಲ್ಲದ ಕಾರಣ ಬ್ರಾಹ್ಮಣ ಶಬ್ದವಾಚ್ಯರಾಗುವುದಿಲ್ಲ ಎಂದು ಹೇಳಿ, ಈಗ ಉತ್ತಮ ಬ್ರಾಹ್ಮಣರ ಸ್ವರೂಪವನ್ನು ಹೇಳಲು ಹಿಂದೆ ಹೇಳಿದಂತೆ ವಿಷ್ಣುಜ್ಞಾನಾರ್ಥವಾಗಿಯೇ ಸರ್ವವೇದಗಳ ಪ್ರವೃತ್ತಿ ಎಂದು ಹೇಳುತ್ತಾರೆ. ಅಥವಾ ಎಲ್ಲ ವೇದಗಳೂ ಸತ್ಯಪರವಾದುದರಿಂದ ಸತ್ಯಪರಿತ್ಯಾಗವನ್ನು ಮಾಡಿ, ಅನುಷ್ಠಾನ ಮಾಡಿದ ಸತ್ಕರ್ಮಗಳಿಂದ ಫಲವು ದೊರೆಯದಿರುವುದರಿಂದ ಸತ್ಯಜ್ಞಾನವನ್ನು ಅವಶ್ಯವಾಗಿ ಸಂಪಾದನೆ ಮಾಡಬೇಕೆಂದು ಇಲ್ಲಿ ಹೇಳುತ್ತಾರೆ.

ದ್ವಿಪದಾಂ ವರಿಷ್ಠ= ಎಲೈ ಮನುಷ್ಯಶ್ರೇಷ್ಠನಾದ ಧೃತರಾಷ್ಟ್ರನೇ, ಛಂದಾಂಸಿ= ಸರ್ವವೇದಗಳು, ಸ್ವಚ್ಛಂದಯೋಗೇ= ಗುರೂಪದೇಶವಿಲ್ಲದೆ ತನ್ನ ಇಚ್ಛೆಯಿಂದಲೇ ಪಾಠಾದಿ ಉಪಾಯಗಳ ಪ್ರಯತ್ನವನ್ನು ಮಾಡಿದರೆ, ತತ್ರ= ಹರಿಯಲ್ಲಿ, ನ ಭವಂತಿ ನಾಮ= ಹರಿಯನ್ನು ಸೇರುವುದಿಲ್ಲವಷ್ಟೆ! ಇದರಿಂದ ತನ್ನ ಮನಸ್ಸಿಗೆ ಬಂದಂತೆ ವೇದ ಪಾಠವನ್ನು ಮಾಡುವುದರಿಂದ ಭಗವದ್ಜ್ಞಾನವು ಉಂಟಾಗುವುದಿಲ್ಲವೆಂದು ತಿಳಿಸಲ್ಪಡುತ್ತದೆ. ಛಂದೋವಿದಃ= ವೇದಗಳಿಗೆ ಗುರುಮುಖದಿಂದ ಅಧ್ಯಯನ ಮಾಡಿದರೆ ಮಾತ್ರ ಜ್ಞಾನಾದಿ ಪ್ರದತ್ವ ಎಂಬ ಜ್ಞಾನವನ್ನು ಹೊಂದಿದ, ಆರ್ಯಾಃ= ಆರ್ಯವೃದ್ಧರು, ತೇನ= ಗುರುಮುಖದಿಂದ ಜ್ಞಾನವಿಲ್ಲದಿದ್ದರೆ ಭಗವದ್‌ಪ್ರಸಾದವು ಉಂಟಾಗುವುದಿಲ್ಲವಾದ ಕಾರಣದಿಂದ, ತಾನ್= ಆ ವೇದಗಳನ್ನು, ಅಧೀತ್ಯ= ಸದ್ಗುರುಗಳ ಮುಖದಿಂದಲೇ, ವಿಷ್ಣುಸರ್ವೋತ್ತಮತ್ವ ಜ್ಞಾನಪರ್ಯಂತವಾದ ಅರ್ಥಾನುಸಂಧಾನಪೂರ್ವಕವಾಗಿ ಅಧ್ಯಯನವನ್ನು ಮಾಡಿ, ವೇದಸ್ಯ= ಸಮಸ್ತವೇದ ಸಮೂಹದ (ಸಮೂಹದಿಂದ), ವೇದ್ಯಂ= ಜ್ಞೇಯನಾದ ಭಗವಂತನನ್ನೇ, ಗತಾಃ= ತಿಳಿದರು ಮತ್ತು ಅವನ ಪ್ರಾಪ್ತಿಯನ್ನು ಹೊಂದಿದರು. ಈ ವಿಷಯದಲ್ಲಿ `ಆಚಾರ್ಯಾದೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ' (ಗುರುಮುಖದಿಂದ ಸಂಪಾದಿಸಿದ ವಿದ್ಯೆಯೇ ಅತ್ಯಂತ ಸಾಧುವಾದ ಫಲವನ್ನು ಕೊಡುತ್ತದೆ) ಎಂಬ ಶ್ರುತಿಯು ಪ್ರಮಾಣವಾಗಿ ಸೂಚಿಸಲ್ಪಡುತ್ತದೆ.

ಅಥವಾ ದ್ವಿಪದಾಂ ವರಿಷ್ಠ= ಎಲೈ ಧೃತರಾಷ್ಟ್ರನೇ, ಛಂದಾಂಸಿ= ವೇದಗಳು, ಸ್ವಚ್ಛಂದಯೋಗೇನ= ಸ್ವಚ್ಛಂದ ಎಂದರೆ ಮುಖ್ಯವೃತ್ತಿ, ಅದರ ಯೋಗ ಎಂದರೆ ಸಂಬಂಧಗಳು, ಆದ್ದರಿಂದ ಮುಖ್ಯವೃತ್ತಿಯಿಂದ, ತತ್ರ= ಭಗವಂತನಲ್ಲಿ, ನಾಮ ಭವಂತಿ= ಮಹಾಯೋಗ ಮತ್ತು ವಿದ್ವದ್ರೂಢಿಗಳಿಂದ ಭಗವತ್‌ಪ್ರತಿಪಾದಕವಾದ ನಾಮಗಳೇ ಆಗುತ್ತವೆ. ತೇನ= ಹೀಗೆ ಸರ್ವವೇದಗಳು ಭಗವತ್ಪರವಾಗಿರುವ ಕಾರಣ, ಛಂದೋವಿದಃ= ವೇದಗಳಿಗೆ ಭಗವತ್ಪರತ್ವವನ್ನು ತಿಳಿದ, ಆರ್ಯಾಃ= ಪೂಜ್ಯರಾದ ಜ್ಞಾನವೃದ್ಧರು, ತಾಂ= ವೇದಗಳನ್ನು, ಅಧೀತ್ಯ= ಪಾಠದ ದೃಷ್ಟಿಯಿಂದಲೂ ಮತ್ತು ಅರ್ಥದ ದೃಷ್ಟಿಯಿಂದಲೂ ಅಧ್ಯಯನವನ್ನು ಮಾಡಿ, ವೇದಸ್ಯ= ಜ್ಞಾನರೂಪನಾದ ವಿಷ್ಣುವಿನ, ವೇದ್ಯಂ= ಜ್ಞಾನೈಕಗಮ್ಯವಾದ ಸ್ವರೂಪವನ್ನು, ಗತಾ= ಹೊಂದಿದರು. ಹಿ ಎಂಬುದು ಪ್ರಸಿದ್ಧಿಯನ್ನು ಸೂಚಿಸುತ್ತದೆ. ಅಥವಾ ಎಲ್ಲ ವೇದಗಳೂ ಅನೇಕಾರ್ಥಗರ್ಭಿತವಾಗಿರುವುದರಿಂದ ಬಹಿರ್ಮುಖರಾದ ಜನರಿಗೆ ಅಭಿರುಚಿಯನ್ನು ಉಂಟುಮಾಡಲು ಅವರಿಗೆ ಇಷ್ಟವಾದ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ ಎಂದು ಸೂಚಿಸುತ್ತಾರೆ. ದ್ವಿಪದಾಂ ವರಿಷ್ಠ= ಎಲೈ ಧೃತರಾಷ್ಟ್ರನೇ, ಸ್ವಚ್ಛಂದಯೋಗೇನ= ತನ್ನ ಇಚ್ಛೆಯಂತೆ ಮಾಡುವ ಪಾಠಾದಿಗಳ ಸಂಬಂಧದಿಂದ, ಛಂದಾಂಸಿ= ಇಂದ್ರಶ್ರೇಷ್ಠಾನಿ ಇತ್ಯಾದಿ ವೇದಗಳು, ತತ್ರ= ಆಯಾ ಕರ್ಮಗಳಲ್ಲಿ ಅಧಿಕೃತವಾದ ದೇವತೆಗಳಲ್ಲಿ ಅಮುಖ್ಯವೃತ್ತಿಯಿಂದ, ನಾಮ= ನಾಮಗಳಾಗಿ, ಭವಂತಿ= ಆಗುತ್ತವೆ. ನಾಮ ಎಂಬುದು ಜಾತ್ಯೇಕವಚನ. ಛಂದೋವಿದಃ= ವೇದಪಾಠಗಳನ್ನು ಮಾಡಿದ ಬಹಿರ್ಮುಖರಾದ, ಆರ್ಯಾಃ= ವಯೋವೃದ್ಧರು, ತಾನ್ ಅಧೀತ್ಯ= ಅಮುಖ್ಯವೃತ್ತಿಯಿಂದ ಇಂದ್ರಾದಿಗಳನ್ನು ಹೇಳುವ ವೇದಗಳನ್ನು ಸರಿಯಾದ ಗುರುಗಳಿಲ್ಲದೆ ಅಧ್ಯಯನವನ್ನು ಮಾಡಿ, ವೇದಸ್ಯ= ಸರ್ವವೇದ ಸಮೂಹದ, ವೇದ್ಯಂ= ಮುಖ್ಯಜ್ಞೇಯನಾದ ಭಗವಂತನನ್ನು, ನ ಗತಾಃ= ತಿಳಿಯುವುದಿಲ್ಲವಷ್ಟೆ! ಹಿ ಎಂಬುದು ಇಲ್ಲಿಯೂ ಪ್ರಸಿದ್ಧಿಯನ್ನು ತೋರಿಸುತ್ತದೆ.

ನ ವೇದಾನಾಂ ವೇದಿತಾ ಕಶ್ಚಿದಸ್ತಿ
ಕಶ್ಚಿತ್ತ್ವೇತಾನ್ ಬುದ್ಧ್ಯತೇ ವಾಽಪಿ ರಾಜನ್ |
ಯೋ ವೇದ ವೇದಾನ್ ಸ ಚ ವೇದ ವೇದ್ಯಂ
ಸತ್ಯೇ ಸ್ಥಿತೋ ಯಸ್ತು ಸ ವೇದ ವೇದ್ಯಮ್ ॥52॥

ನ ವೇದಾನಾಂ ವೇದಿತಾ ಕಶ್ಚಿದಸ್ತಿ
ವೇದೇವ ವೇದ್ಯಂ ನ ವಿದುರ್ನ ವೇದಮ್ |
ಯೋ ವೇದ ವೇದಂ ಸ ಚ ವೇದ ವೇದ್ಯಂ
ಯೋ ವೇದ ವೇದ್ಯಂ ನ ಸ ವೇದ ಸತ್ಯಮ್ ॥53॥

ವೇದಪಾಠ ಮತ್ತು ವೇದಾರ್ಥಗಳ ಪರಿಜ್ಞಾನಗಳು ಭಗವತ್ಪ್ರಾಪ್ತಿ ಸಾಧನವಾಗುವುದಾದರೆ, ವೇದಗಳು ಮತ್ತು ವೇದಾರ್ಥಗಳು ಸರ್ವದಾ ಸರ್ವತ್ರ ಇರುವುದರಿಂದ ಎಲ್ಲರಿಗೂ ಭಗವತ್‌ಪ್ರಾಪ್ತಿಯಾಗಲಿ ಎಂಬ ಪ್ರಸಂಗಕ್ಕೆ ಅವಕಾಶವಿಲ್ಲ. ವೇದಗಳು ಅನೇಕ ಅಧಿಕಾರಿಗಳ

ವಿವಕ್ಷೆಯಿಂದ ವಿಶ್ವತೋಮುಖವಾಗಿರುವುದರಿಂದ ವಿವಕ್ಷಿತಾರ್ಥಪರಿಜ್ಞಾನದಿಂದಲೇ ಫಲಪ್ರಾಪ್ತಿಯಾಗುತ್ತದೆ. ವಿವಕ್ಷಿತಾರ್ಥ ಪರಿಜ್ಞಾನವಾದರೂ ದುಸ್ಸಾಧ್ಯವಾದುದು. ಆದ್ದರಿಂದ ವೇದಪಾಠವು ಎಲ್ಲ ಕಡೆಯಲ್ಲಿಯೂ ಇದ್ದರೂ ತತ್ಪ್ರಾಪ್ಯ ಫಲವು ಮಾತ್ರ ದೊರೆಯುವುದಿಲ್ಲ ಎಂದು ಹೇಳುತ್ತಾರೆ.

ವೇದಾನಾಂ `ವೇದಯಂತೀತಿ ವೇದಾಃ' ಇತಿ ಪ್ರಮಾಣವು ಇರುವುದರಿಂದ ಸರ್ವಾರ್ಥಜ್ಞಾಪಕವಾದ ವೇದಗಳ ಅಭಿಪ್ರೇತವಾದ ಅರ್ಥವನ್ನು ಎಂದು ಇಟ್ಟುಕೊಳ್ಳಬೇಕು. ವೇದಿತಾ= ತಿಳಿಯುವವನು, ಕಶ್ಚಿದ್ಯಃ= ಯಾವ ಪುರುಷನೂ ಸಹ, ನಾಸ್ತಿ= ಪ್ರಾಯಶಃ ಇಲ್ಲ. ಪ್ರಾತಿಶಾಖ್ಯಾದಿಗಳಲ್ಲಿ ಹೇಳಿದ ಲಕ್ಷಣಜ್ಞಾನಪೂರ್ವಕವಾಗಿ ವೇದಾಧ್ಯಯನವನ್ನು ಮಾಡುವವರು ಪ್ರತ್ಯಕ್ಷ ಸಿದ್ಧರಾಗಿರುವಾಗ ಒಬ್ಬನೂ ಇಲ್ಲ ಎಂದು ಹೇಗೆ ಹೇಳುವುದು ಎಂಬ ಪ್ರಶ್ನೆಗೆ ವೇದಗಳಿಂದ ವೇದಪಾಠಕರಿಗೆ ವೇದಗಳಿಗೆ ಅಭಿಪ್ರೇತವಾದ ವಸ್ತುವಿನ ಜ್ಞಾನವು ಉಂಟಾಗದಿರುವುದರಿಂದ ವೇದಗಳನ್ನು ಯಾವನೂ ತಿಳಿದಿಲ್ಲ ಎಂದು ಹೇಳುವುದೇ ಹೊರತು, ಸರ್ವಥಾ ವೇದಗಳ ಪರಿಜ್ಞಾನವೇ ಇಲ್ಲ ಎಂಬ ಅಭಿಪ್ರಾಯದಿಂದಲ್ಲ ಎಂದು ಉತ್ತರವನ್ನು ಹೇಳುತ್ತಾರೆ. ವೇದೇನ= ಲಕ್ಷಣಜ್ಞಾನವಿಶಿಷ್ಟವಾಗಿ ಪಠ್ಯಮಾನವೇದಗಳಿಂದ ವೇದೈಕವೇದ್ಯನಾದ, ವೇದಂ= `ವೇದೋ ನಾರಾಯಣಸ್ಸಾಕ್ಷಾತ್' ಎಂದು ಹೇಳಿರುವುದರಿಂದ ಜ್ಞಾನರೂಪಿಯಾದ ನಾರಾಯಣನನ್ನು, ನ ವಿದುಃ= ತಿಳಿದಿರುವುದಿಲ್ಲ. ಹಾಗಾದರೆ ಯಾರಿಗೂ ಬ್ರಹ್ಮಜ್ಞಾನವಾಗಲಾರದು ಎಂದು ಶಂಕಿಸಿದರೆ `ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನ ಇದಂ ಸರ್ವಂ ವಿದಿತಮ್' (ಎಲೌ ಗಾರ್ಗಿಯೇ, ಪರಮಾತ್ಮನ ಜ್ಞಾನದಿಂದ, ಶ್ರವಣದಿಂದ, ಮನನದಿಂದ ಮತ್ತು ವಿಜ್ಞಾನದಿಂದ ಈ ಜಗತ್ತೆಲ್ಲವೂ ತಿಳಿಯಲ್ಪಡುತ್ತದೆ) ಎಂಬ ಶ್ರುತಿಯಿಂದಲೂ, `ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಮ್' (ಅನಂತರ ನನ್ನನ್ನು ಯಥಾರ್ಥವಾಗಿ ತಿಳಿದು ನನ್ನನ್ನು ಪ್ರವೇಶಿಸುತ್ತಾರೆ) ಎಂಬ ಶ್ರುತಿ ಇರುವುದರಿಂದಲೂ ಅನೇಕ ಮನುಷ್ಯರ ಮಧ್ಯದಲ್ಲಿ ಯಾವನೋ ಒಬ್ಬ ಅಧಿಕಾರಿಯು ಭಗವದನುಗ್ರಹದಿಂದ ಉಂಟಾದ ಶ್ರವಣಾದಿ ಸಾಧನ ಪರಿಪಾಕದಿಂದ ಭಗವಂತನನ್ನು ಅಪರೋಕ್ಷವಾಗಿ ತಿಳಿಯುತ್ತಾನೆ ಎಂದು ಹೇಳುತ್ತಾರೆ. ಯಃ= `ಯೇತಿ ಜ್ಞಾನಂ ಸಮುದ್ದಿಷ್ಟಮ್' ಎಂದು ಹೇಳಿರುವುದರಿಂದ ಜ್ಞಾನಿರೂಪನಾದ ಯಾವನೋ ಒಬ್ಬ ಸಾತ್ವಿಕ ಅಧಿಕಾರಿಯು, ಸಃ= ಅವನು ಮಾತ್ರ, ವೇದ್ಯಂ= ವೇದೈಕಗಮ್ಯನಾದ ನಾರಾಯಣನನ್ನು, ವೇದ= ತನ್ನ ಯೋಗ್ಯತೆಗೆ ಅನುಗುಣವಾಗಿ ತಿಳಿಯುತ್ತಾನೆ. ಅಥವಾ ಯಃ= ಯಾವ ಅಧಿಕಾರಿಯು, ವೇದಂ= ಋಗಾದಿ ಐದುವೇದಗಳ ಮಧ್ಯದಲ್ಲಿ ಒಂದು ವೇದವನ್ನಾದರೂ, ವೇದ= ತಿಳಿದಿದ್ದಾನೆಯೋ, ಸಃ= ಅವನು, ವೇದ್ಯಂ= ವೇದ್ಯನಾದ ನಾರಾಯಣನನ್ನು, ವೇದ= ತಿಳಿದಿದ್ದಾನೆ. ಹಾಗಾದರೆ `ನಾಹಂ ವೇದೈರ್ನ ತಪಸಾ ನ ದಾನೇನ' ಇತ್ಯಾದಿ ಪ್ರಮಾಣಗಳಿಗೆ ಏನು ಗತಿ ಎಂದು ಕೇಳಿದರೆ `ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಮುಂತಾದ ಶ್ರುತಿಗಳ ಬಲದಿಂದ ಸಾಕಲ್ಯೇನ ಭಗವದ್‌ಜ್ಞಾನವುಂಟಾಗುವುದಿಲ್ಲವೆಂದು ಅರ್ಥವೇ ಹೊರತು ಸರ್ವಥಾ ಭಗವದ್‌ಜ್ಞಾನವು ಉಂಟಾಗುವುದಿಲ್ಲ ಎಂಬ ಅಭಿಪ್ರಾಯವಲ್ಲ. ಆದರೆ `ನಭಃ ಪತಂತ್ಯಾತ್ಮಸಮಂ ಪತತ್ರಿಣಃ' (ಪಕ್ಷಿಗಳು ತಮ್ಮ ಶಕ್ತಿ ಇದ್ದಷ್ಟು ಆಕಾಶದಲ್ಲಿ ಮೇಲಕ್ಕೆ ಹಾರುತ್ತವೆ) ಎಂದು ಹೇಳಿದಂತೆ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ವೇದ್ಯನನ್ನು ತಿಳಿದಿದ್ದಾರೆ ಎಂದು ಹೇಳುತ್ತಾರೆ. ಯಃ= ಯಾವ ಅಧಿಕಾರಿಯು, ವೇದ್ಯಂ= ಭಗವಂತನನ್ನು, ವೇದ= ತಿಳಿದಿದ್ದಾನೆಯೋ, ಸಃ= ಅವನು, ಸತ್ಯಮ್= ನಿರ್ದುಷ್ಟವಾದ, ಜ್ಞಾನಾನಂದಾದಿ ಅನಂತಗುಣಪೂರ್ಣನಾದ ನಾರಾಯಣನನ್ನು, ನ ವೇದ= ಪೂರ್ಣವಾಗಿ ತಿಳಿದಿಲ್ಲ. `ಸ ವೇದ ವೇದ್ಯಮ್' ಎಂಬ ಪಾಠವಿದ್ದರೂ ನಾರಾಯಣನನ್ನು ಅಲ್ಪವಾಗಿ ತಿಳಿದಿದ್ದಾನೆ ಎಂದೇ ಅರ್ಥ.

ಯೋ ವೇದ ವೇದಾನ್ ಸ ಚ ವೇದ ವೇದ್ಯಂ<br>
ನ ತಂ ವಿದುರ್ವೇದವಿದೋ ನ ವೇದಾಃ |<br>
ತಥಾಽಪಿ ವೇದೇನ ವಿದಂತಿ ವೇದ್ಯಂ<br>
ಯೇ ಬ್ರಾಹ್ಮಣಾ ವೇದವಿದೋ ಭವಂತಿ ॥54॥

ಹಿಂದಿನ ಶ್ಲೋಕದಲ್ಲಿ ವೇದೇನ ವೇದ ಎಂದು ವೇದವನ್ನು ಏಕವಚನದಿಂದ ನಿರ್ದೇಶಮಾಡಿ, ಅನೇಕ ಶಾಖೆಗಳಿಂದ ಕೂಡಿದ ವೇದಪ್ರತಿಪಾದ್ಯನಾದ ಶ್ರೀನಾರಾಯಣನು ಅದರ ಒಂದು ಶಾಖೆಯ ಅಧ್ಯಯನದಿಂದಲೇ ಮೋಕ್ಷಸಾಧನೆ ರೂಪ ಪರೋಕ್ಷಾಪರೋಕ್ಷ ಜ್ಞಾನವನ್ನು ಕೊಡುವವನೆಂದು ತೋರುತ್ತದೆ. ಆದರೆ ಅದು ಸರಿಯಲ್ಲ. ಏಕೆಂದರೆ, `ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾ' ಎಂಬ ಬ್ರಹ್ಮಸೂತ್ರದಲ್ಲಿ ಸರ್ವಶಾಖೆಗಳ ಅಧ್ಯಯನಜನ್ಯಜ್ಞಾನದಿಂದಲೇ ಭಗವಂತನ ಪ್ರಾಪ್ತಿತಯನ್ನು ಹೇಳಿದ್ದಾರೆ. ಆದ್ದರಿಂದ ಹಿಂದಿನ ಶ್ಲೋಕದಲ್ಲಿ `ವೇದೇನ' ಎಂದು ಹೇಳಿದುದು ಜಾತ್ಯೇಕವಚನಾಭಿಪ್ರಾಯದಿಂದ ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ತಿಳಿಸುತ್ತಾರೆ.

ಯಃ= ಯಾವ ಅಧಿಕಾರಿಯು, ವೇದಾನ್= ಋಗಾದಿ ಸರ್ವವೇದಗಳನ್ನೂ, ವೇದ= ಪಾಠದಿಂದಲೂ, ಅರ್ಥದಿಂದಲೂ ತಿಳಿಯುತ್ತಾನೆಯೋ, ಸ ಚ= ಅವನೇ, ವೇದ್ಯಂ= ವೇದೈಕಗಮ್ಯನಾದ ಭಗವಂತನನ್ನು, ವೇದ= ತಿಳಿಯುತ್ತಾನೆ. ಹಾಗಾದರೆ ವೇದದ ಏಕದೇಶಜ್ಞಾನದಿಂದ ಭಗವತ್‌ಪ್ರಾಪ್ತಿಯಾಗದಿದ್ದರೂ ಸರ್ವವೇದಾಧ್ಯಯನದಿಂದ ತತ್ಪ್ರಾಪ್ತಿಯು ಉಂಟಾಗುತ್ತದೆ ಎಂಬುದೂ ಸರಿಯಲ್ಲ. ಸರ್ವವೇದಗಳೂ ಪರಿಪೂರ್ಣವಾಗಿ ಹರಿಯ ಮಹಿಮೆಯನ್ನು ಪ್ರತಿಪಾದನೆ ಮಾಡುವುದಿಲ್ಲವಾದ್ದರಿಂದ ಹರಿಯ ಪರಿಪೂರ್ಣವಾದ ಜ್ಞಾನವು ಯಾರಿಗೂ ಬರುವುದಿಲ್ಲ ಎಂದು ಹೇಳುತ್ತಾರೆ. ವೇದವಿದಃ= ಋಗಾದಿ ಐದು ವೇದಗಳನ್ನು ತಿಳಿದವರೂ ಸಹ, ತಂ= ಅಪರಿಚ್ಛಿನ್ನನಾದ ಪರಮಾತ್ಮನನ್ನು, ನ ವಿದುಃ= ಪೂರ್ಣವಾಗಿ ತಿಳಿಯುವುದಿಲ್ಲ. ಹಾಗಾದರೆ ಶಾಖೆಗಳಿಗಿಂತ ಶಾಖೆಗಳನ್ನು ಹೊಂದಿದ ವೇದಗಳು ಪ್ರಧಾನವಾದ್ದರಿಂದ ಅನೇಕಾನೇಕ ಶಾಖೆಗಳನ್ನುಳ್ಳ ವೇದವೃಕ್ಷದಿಂದ ಸಾಕಲ್ಯೇನ ಜ್ಞಾನವುಂಟಾದೀತು ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ. ವೇದಾಃ= ಅನಂತ ವೇದಾಭಿಮಾನಿಗಳೂ ಸಹ, ತಂ= ಆ ಪರಮಾತ್ಮನನ್ನು, ನ ವಿದುಃ= ತಿಳಿಯುವುದಿಲ್ಲ. `ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' (ವಾಕ್ ಮತ್ತು ಮನಸ್ಸುಗಳು ಭಗವಂತನನ್ನು ಮುಟ್ಟದೇ ಹಿಂದಿರುಗುತ್ತವೆ), `ಶಬ್ದೋ ನ ಯತ್ರ ಪುರು ಕಾರಕವಾನ್ ಕ್ರಿಯಾರ್ಥೋ ಮಾಯಾ ಪರೈತ್ಯಭಿಮುಖೇ ಚ ವಿಲಜ್ಜಮಾನಾ' (ಶಬ್ದವು ಯಾವನ ಜ್ಞಾನವನ್ನು ಉಂಟುಮಾಡುವುದರಲ್ಲಿ ಬಹಳ ಸಮರ್ಥವಾಗುವುದಿಲ್ಲವೋ) ಎಂದು ಬಹುಶ್ರುತಿ-ಸ್ಮೃತಿಗಳಿರುವುದರಿಂದ ಪೂರ್ಣವಾಗಿ ತಿಳಿಯುವುದಿಲ್ಲ ಎಂದು ಅರ್ಥ. ಸರ್ವವೇದಗಳಿಂದಲೂ ಭಗವಂತನ ಜ್ಞಾನ ಬರುವುದಿಲ್ಲವಾದರೆ ಭಗವಂತನ ವೇದೈಕ್ಯಗಮ್ಯತ್ವವು ಭಗ್ನವಾಗುತ್ತದೆ ಎಂದು ಶಂಕಿಸಿದರೆ, ವೇದಾಭಿಮಾನಿ ದೇವತೆಗಳಿಗೂ ಸಹ ಸಾಕಲ್ಯೇನ ಭಗವಂತನ ಜ್ಞಾನವಿಲ್ಲ,

ತಮ್ಮ ಯೋಗ್ಯತೆಗೆ ಅನುಗುಣವಾಗಿ ಭಗವಂತನ ಮಹಿಮೆಯ ಏಕದೇಶದ ಜ್ಞಾನವಿದೆ ಎಂದು ಹೇಳುತ್ತಾರೆ. ತಥಾಪಿ= ವೇದಾಭಿಮಾನಿದೇವತೆಗೆ ಭಗವಂತನ ಜ್ಞಾನಸಾಕಲ್ಯವು ಇಲ್ಲದಿದ್ದರೂ, ಯೇ ಬ್ರಾಹ್ಮಣಾಃ= ಪರಬ್ರಹ್ಮವಿಚಾರಶೀಲರಾದ, ವೇದವಿದಃ = ವೇದಾರ್ಥಜ್ಞಾನವನ್ನು ಹೊಂದಿದ ಯಾವ ಬ್ರಾಹ್ಮಣರಿದ್ದಾರೆಯೋ ಅವರೇ, ವೇದೇನ= ವೇದದಿಂದ ಉಂಟಾದ ಜ್ಞಾನದಿಂದ, ವೇದಂ= ನಾರಾಯಣನನ್ನು, ವಿದಂತಿ= ಹೊಂದುತ್ತಾರೆ. ಅಥವಾ ಯಥಾಯೋಗ್ಯವಾಗಿ ತಿಳಿಯುತ್ತಾರೆ.

ಧರ್ಮಾಂಶಭಾಜೋSಸ್ಯ ತಥಾ ಹಿ ವೇದಾ
ಯಥಾ ಹಿ ಶಾಖಾ ಚ ಮಹೀರುಹಸ್ಯ |
ಸಂವೇದನೇ ಚೈವ ಸಮಾಮನಂತಿ
ತಸ್ಮಿನ್ ಹಿ ನಿತ್ಯೇ ಪರಮಾತ್ಮನೋSರ್ಥೇ ॥55॥

ವೇದಗಳು ಅನಂತವಾದರೂ `ವಿಷ್ಣೋರ್ನುಕಂ ವೀರ್ಯಾಣಿ' ಇತ್ಯಾದಿ ವೇದವಾಕ್ಯವು ವೇದಗಳು ಹೇಳದಿರುವ ಅನಂತಗುಣಗಳು ಪರಮಾತ್ಮನಲ್ಲಿ ಇವೆ ಎಂದು ಹೇಳುವುದರಿಂದ ವಿಷ್ಣುವಿನ ಅನಂತಗುಣಗಳು ಪೂರ್ಣವಾಗಿ ಯಾರಿಂದಲೂ ತಿಳಿಯಲ್ಪಡದಿದ್ದರೂ ವೇದಗಳು ಅವನ ಮಹಿಮೆಯ ಒಂದಂಶವನ್ನು ಮಾತ್ರ ಅನುವಾದ ಮಾಡುತ್ತವೆ. ಪೂರ್ಣವಾದ ಮಹಿಮೆಯನ್ನು ಅನುವಾದ ಮಾಡುವುದಿಲ್ಲ ಎಂಬ ವಿಷಯವನ್ನು ಇಲ್ಲಿ ದೃಷ್ಟಾಂತ ಮುಖೇನ ಉಪಪಾದನೆ ಮಾಡುತ್ತಾರೆ.

ವೇದಾಃ= ಅನಂತವಾದರೂ ವೇದಗಳು, ಅಸ್ಯ= ಅನಂತಗುಣಪೂರ್ಣನಾದ ವಿಷ್ಣುವಿನ, ಧರ್ಮಾಂಶಭಾಜಃ= ಭಗವಂತನಿಂದ ಅಭಿನ್ನವಾದ ಐಶ್ವರ್ಯಾದಿ ಧರ್ಮಗಳು ಏನು ಇವೆಯೋ ಅವುಗಳ ಒಂದು ಅಂಶವನ್ನು ಎಂದರೆ ಮಾಹಾತ್ಮ್ಯಲೇಶವನ್ನು ಅನುವಾದದಿಂದ ಭಜಿಸುತ್ತವೆ. ಇದರಿಂದ ಎಲ್ಲ ವೇದಗಳು ಅಪರಿಮಿತಗುಣಪೂರ್ಣನಾದ ವಿಷ್ಣುವಿನ ಗುಣಗಳ ಏಕದೇಶಾನುವಾದವೇ ಹೊರತು ಸಮಗ್ರಾನುವಾದಕಗಳಲ್ಲ ಎಂಬ ಪ್ರಮೇಯವು ಹೇಳಲ್ಪಡುತ್ತದೆ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ಶಾಖಾಃ= ಕೊಂಬೆಗಳು, ಮಹೀರುಹಸ್ಯ= ವೃಕ್ಷದ, ಧರ್ಮಾಂಶಭಾಜಃ= ಅಂಕುರೋತ್ಪತ್ತಿಮತ್ತ್ವ-ಪಾದಪತ್ವ- ಜೀವವಿಶಿಷ್ಟತ್ವಾದಿ ಅಂಶಿಯ ಸ್ವಾಭಾವಿಕವಾದ ಧರ್ಮಗಳಲ್ಲಿ ಒಂದು ಅಂಶವಾದ ಜಡತ್ವಾದಿ ಗುಣಗಳನ್ನು, ಯಥಾ= ಹೇಗೆ ಹೊಂದುತ್ತವೆಯೋ ಅದರಂತೆ ಎಂದು ದೃಷ್ಟಾಂತ. ಹೀಗೆ ವೇದಗಳು ಭಗವಂತನ ಧರ್ಮಾಂಶದ ಅನುವಾದಕಗಳಾದ್ದರಿಂದ ವೇದಗಳಿಂದಲೇ ಪರಮಾತ್ಮನ ಸ್ವರೂಪ ಜ್ಞಾನವುಂಟಾಗುತ್ತದೆ, ಬೇರೆ ಯಾವುದರಿಂದಲೂ ಅಲ್ಲ ಎಂದು ಹೇಳುತ್ತಾರೆ. ಎಲ್ಲ ಅಧಿಕಾರಿಗಳಿಗೂ ಅವರವರ ಯೋಗ್ಯತೆಯನ್ನು ಮೀರದಂತೆ, ಪರಮಾತ್ಮನಃ= ಸರ್ವಸ್ವಾಮಿಯಾದ ವಿಷ್ಣುವಿನ, ಸಂವೇದನೇನ= ಭಗವತ್ಸ್ವರೂಪಜ್ಞಾಪಕತ್ವರೂಪವಾದ ತನ್ನಲ್ಲಿರುವ ಹೇತುವಿನಿಂದ, (ಸಂವೇದನೇನೈವ ಸಮಾಮನಂತಿ ಎಂಬ ಪಾಠವನ್ನು ಇಟ್ಟುಕೊಂಡಿದ್ದಾರೆ). ನಿತ್ಯೇ ಅರ್ಥೇ= ಅವಿನಾಶಿಯಾದ ಎಲ್ಲರಿಂದಲೂ ಪ್ರಾರ್ಥಿಸಲ್ಪಡುವ ವಿಷ್ಣುವಿನಲ್ಲಿಯೇ, ಸಮಾಮನಂತಿ= ಪದವಾಕ್ಯ ಸಮನ್ವಯ ಬಲದಿಂದ ಪ್ರತಿಪಾದನೆ ಮಾಡುತ್ತವೆ.

ವೇದಗಳು ಪದಸಮನ್ವಯ ಮತ್ತು ವಾಕ್ಯಸಮನ್ವಯ ಪ್ರಕಾರದಿಂದ ವಿಷ್ಣುವಿನ ಮಹಿಮೆಯ ಏಕದೇಶವನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದನ್ನು ಸಮಾಮನಂತಿ ಎಂಬಲ್ಲಿರುವ `ಸಂ' ಮತ್ತು `ಅ' ಎಂಬ ಉಪಸರ್ಗಗಳು ಸೂಚಿಸುತ್ತವೆ. ಇಲ್ಲದಿದ್ದರೆ ಪ್ರಳಯದಲ್ಲಿ ಕರ್ಮವಿಲ್ಲದಿರುವುದರಿಂದ ಕರ್ಮಗಳನ್ನು ಹೇಳುವ ವೇದಭಾಗವು ನಿರರ್ಥಕವಾಗುತ್ತದೆ ಎಂದು ಸೂಚಿಸಲು `ನಿತ್ಯೇ' ಎಂದು ಹೇಳಿದ್ದಾರೆ. ಆದ್ದರಿಂದಲೇ ಶ್ರುತಿಗೀತೆಯು `ಕ್ವಚಿತ್ ಅಜಯಾ ಆತ್ಮನಾ ಅನುಚರತೋ ಅನುಚರೇತ್ ನಿಗಮಃ' ಎಂದು ಹೇಳಿದೆ. ಅಜಯಾ= ಮಹಾಲಕ್ಷ್ಮಿಯಿಂದ, ಆತ್ಮನಾ= ಮತ್ತು ತನ್ನಿಂದಲೂ ಕೂಡ, ಕ್ವಚಿತ್= ಸೃಷ್ಟಿಕಾಲದಲ್ಲಿ ಕೃಷ್ಣ-ರಾಮಾದಿ ರೂಪದಿಂದ ಅವತಾರವನ್ನು ಮಾಡಿ, ಅನುಚರತಃ= ವೇದಕ್ಕೆ ಅನುಕೂಲವಾಗುವಂತೆ ಎಂದರೆ ವೇದಪ್ರಾಮಾಣ್ಯವನ್ನು ರಕ್ಷಿಸುವಂತೆ ಯಜ್ಞಾದಿಗಳನ್ನು ಆಚರಿಸುವ ನಿನ್ನ ಪ್ರೀತ್ಯರ್ಥವಾಗಿ, ನಿಗಮಃ= ವೇದಗಳೂ ಕೂಡ, ಅನುಚರೇತ್= ನಿನ್ನ ಕ್ರಿಯೆಗಳಿಗೆ ಅನುಸಾರವಾಗಿ ವಿಧಿ-ನಿಷೇಧ ರೂಪದಿಂದ ಸಂಚರಿಸುತ್ತವೆ. ಪ್ರಳಯಕಾಲದಲ್ಲಿ ಕರ್ಮಗಳು ಇಲ್ಲದಿರುವುದರಿಂದ ವೇದದ ಎಲ್ಲ ಪದಗಳೂ ನಿನ್ನನ್ನೇ ಹೇಳುತ್ತವೆ ಎಂದು ಆ ಶ್ರುತಿಯ ಅರ್ಥ. ವೇದಗಳು ವಿಧಿ-ನಿಷೇಧರೂಪದಿಂದ ಪ್ರವೃತ್ತವಾಗಿ ಪರಮಾತ್ಮನ ಪ್ರೀತಿಯಲ್ಲಿ ಪರ್ಯವಸಾನವನ್ನು ಹೊಂದಿದರೆ ಅದಕ್ಕೆ ವಾಕ್ಯಸಮನ್ವಯ ಎಂದು ಹೆಸರು. ಇಲ್ಲದಿದ್ದರೆ ವೇದಗಳಲ್ಲಿರುವ ಪದಗಳೆಲ್ಲವೂ ಪರಮಾತ್ಮನ ಸಂಬೋಧರೂಪವಾದ ನಾಮಗಳೇ ಆಗುತ್ತವೆ. ಇದು ಕರ್ಮಗಳಿಲ್ಲದಿರುವ ಪ್ರಳಯಕಾಲದಲ್ಲಿ. ನಾಮಗಳು ಪರಮಾತ್ಮನ ಮಹಿಮೆಯನ್ನು ಹೇಳುವ ಈ ಅವಸ್ಥೆಗೆ ಪದಸಮನ್ವಯ ಎಂದು ಹೆಸರು. ಹೀಗೆ ವೇದಗಳು ವಾಕ್ಯಸಮನ್ವಯದಿಂದಲೂ ಮತ್ತು ಪದಸಮನ್ವಯದಿಂದಲೂ ಪರಮಾತ್ಮನ ಮಹಿಮೆಗಳ ಏಕದೇಶವನ್ನೇ ಹೇಳುತ್ತವೆ ಎಂದು `ಸಂ' `ಅ' ಎಂಬ ಎರಡು ಉಪಸರ್ಗಗಳಿಂದ `ಸಮಾಮನಂತಿ' ಎಂಬ ಕ್ರಿಯಾಪದವು ಹೇಳುತ್ತದೆ.

ಅಭಿಜಾನಾಮಿ ಬ್ರಾಹ್ಮಣಂ ವ್ಯಾಖ್ಯಾತಾರಂ ವಿಚಕ್ಷಣಮ್ |
ಏವಂ ಯೋ ಹಿ ವಿಜಾನಾತಿ ಸ ಜಾನಾತಿ ಪರಂ ಹಿ ತತ್ ॥56॥

ಇದು ತಾಳೆಗರಿಗಳಲ್ಲಿ ಕಂಡುಬರುವ ಶ್ಲೋಕ. ವಾದಿರಾಜರು ಈ ಶ್ಲೋಕದ ಉತ್ತರಾರ್ಧವನ್ನು

ಅಭಿಜಾನಾಮಿ ಬ್ರಾಹ್ಮಣಂ ವ್ಯಾಖ್ಯಾತಾರಂ ವಿಚಕ್ಷಣಮ್ |
ಪರಂ ಹಿ ತತ್ಪರಂ ಬ್ರಹ್ಮ ಜಾನಾತ್ಯೇವ ಹಿ ಬ್ರಾಹ್ಮಣಃ ॥ (ಮೂಲಮ್)

ಎಂದು ಪಠಿಸಿ ವ್ಯಾಖ್ಯಾನ ಮಾಡಿದ್ದಾರೆ.

ಹೀಗೆ ಅಪರಿಮಿತ ಅನಂತಗುಣಪರಿಪೂರ್ಣನಾದ ವಿಷ್ಣುವನ್ನೇ ವೇದಗಳು ಸರ್ವಾತ್ಮನಾ ಪ್ರತಿಪಾದಿಸುತ್ತವೆ ಎಂದು ಹೇಳಿ, ವೇದಗಳಿಗೆ ಭಗವತ್ಪರತ್ವವನ್ನು ಸಮರ್ಥನೆ ಮಾಡಿ, ಈಗ ಅದೇ ವೇದಗಳಿಗೆ ಮೂರು ಅರ್ಥಗಳಿರುವುದರಿಂದ ಉತ್ತಮಾಧಿಕಾರಿಗಳ ವಿಷಯದಲ್ಲಿ ಮೊದಲು ಹೇಳಿದ ಅರ್ಥವು ಉಪಪನ್ನವಾದರೂ ಬಹಿರ್ಮುಖರಾದ ಅನಧಿಕಾರಿಗಳಿಗೆ ಮುಖ್ಯವೃತ್ತಿಯಿಂದ ಬ್ರಹ್ಮ, ಇಂದ್ರ, ರುದ್ರ ಮೊದಲಾದ ಅನ್ಯದೇವತೆಗಳನ್ನೇ ಪ್ರತಿಪಾದನೆ ಮಾಡುವಂತೆ ತೋರುವ ಎಲ್ಲ ವೇದವಾಕ್ಯಗಳಿಗೂ ಪರಮಮುಖ್ಯವೃತ್ತಿಯಿಂದ ಭಗವದ್ಗುಣಪ್ರತಿಪಾದಕತ್ವವೇ ಇದೆ ಎಂದು ಪ್ರವಚನವನ್ನು ಮಾಡುವ ಬ್ರಾಹ್ಮಣನೇ ನನಗೆ ಬ್ರಾಹ್ಮಣೋತ್ತಮನೆಂದು ಸಮ್ಮತನಾದವನು ಎಂದು ಹೇಳಿ ಉತ್ತಮಪಾತ್ರನ ಸ್ವರೂಪವನ್ನು ನಿರೂಪಿಸುತ್ತಾರೆ.

ಅಹಂ= ಸನತ್ಸುಜಾತನಾದ ನಾನು, ವ್ಯಾಖ್ಯಾತಾರಂ= ಭಗವತ್ಪರವಾಗಿ ವೇದಗಳನ್ನು ವ್ಯಾಖ್ಯಾನ ಮಾಡುವ ಶಕ್ತಿ ಉಳ್ಳ, ವಿಚಕ್ಷಣಂ= ವಿ ವಿಶೇಷವಾಗಿ, ಚಕ್ಷಣಂ= ಜ್ಞಾನಚಕ್ಷುವಿನಿಂದ ಎಲ್ಲಾ ವೇದಾರ್ಥಗಳನ್ನು ಭಗತ್ಪರತಯಾ ನೋಡುತ್ತಾನೆ ಎಂಬ ಕಾರಣದಿಂದ ವಿಚಕ್ಷಣನಾದ, ಬ್ರಾಹ್ಮಣಂ= ಬ್ರಾಹ್ಮಣನನ್ನೇ, ಅಭಿಜಾನಾಮಿ= ಅಭಿ ಎಂಬ ಅವ್ಯಯದ ಬಲದಿಂದ ಬ್ರಾಹ್ಮಣೋತ್ತಮನೆಂದು ತಿಳಿಯುತ್ತೇನೆ ಎಂದು ಅರ್ಥ. ಬೇರೆ ಬ್ರಾಹ್ಮಣರಿದ್ದರೂ ವೇದವ್ಯಾಖ್ಯಾನವನ್ನು ಮಾಡುವವನೇ ಏಕೆ ಬ್ರಾಹ್ಮಣೋತ್ತಮನಾಗುತ್ತಾನೆ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ಬ್ರಾಹ್ಮಣಃ= ಭಗವತ್ಪರತಯಾ ವೇದವ್ಯಾಖ್ಯಾನವನ್ನು ಮಾಡುವ ಸ್ವಭಾವವುಳ್ಳ ಬ್ರಾಹ್ಮಣನು, ತತ್= ವ್ಯಾಪ್ತನಾದ, ಬ್ರಹ್ಮ= ಪರಬ್ರಹ್ಮನನ್ನು, ಪರಂ ಇತಿ= ಸರ್ವೋತ್ತಮನೆಂದು, ಜಾನಾತಿ= ತಿಳಿದಿದ್ದಾನೆ. ಏವ ಎಂಬ ಅವಧಾರಣವು ಬ್ರಹ್ಮಜ್ಞಾನಸಂಪನ್ನನಾದುದರಿಂದ ಅವನೇ ಉತ್ತಮನಾದ ಬ್ರಾಹ್ಮಣ, ಬೇರೆಯವರಲ್ಲ ಎಂದು ಸೂಚಿಸುತ್ತದೆ.
ಯಶ್ಛಿನ್ನವಿಚಿಕಿತ್ಸಃ ಸ ವ್ಯಾಚಷ್ಟೇ ಸರ್ವಸಂಶಯಾನ್ |
ತಸ್ಯ ಪರ್ಯೇಷಣಂ ಗಚ್ಛೇತ್ ಪ್ರತ್ಯರ್ಥಿಷು ಕಥಂಚನ ॥57॥
ಯಃ= ಯಾವನು, ಛಿನ್ನವಿಚಿಕಿತ್ಸಃ= ತಾನು ಸ್ವತಃ ಸಂಶಯಗಳನ್ನು ಕಳೆದುಕೊಂಡಿದ್ದಾನೆಯೋ, ಸಃ= ಅವನು, ಸರ್ವಸಂಶಯಾನ್= ಇನ್ನೊಬ್ಬರು ಕೇಳಿದ ಎಲ್ಲ ಸಂಶಯಗಳಿಗೂ, ವ್ಯಾಚಷ್ಟೇ= ಪರಿಹಾರರೂಪವಾದ ಉತ್ತರವನ್ನು ಕೊಡುತ್ತಾನೆ. ಎಲೈ ಧೃತರಾಷ್ಟ್ರನೇ, ನೀನು ತಸ್ಯ= ಅಂತಹ ಭಗವದನುಸಂಧಾನಪೂರ್ವಕವಾಗಿ ವೇದವ್ಯಾಖ್ಯಾನ ಮಾಡುವ ಸ್ವಭಾವವುಳ್ಳ ಬ್ರಾಹ್ಮಣನ, ಪರ್ಯೇಷಣಂ= ಅನ್ವೇಷಣವನ್ನು ಅಥವಾ ಅನ್ವೇಷಣಲಕ್ಷಣವಾದ ಸೇವೆಯನ್ನು, ಗಚ್ಛ= ಹೊಂದುವವನಾಗು. ಪ್ರತ್ಯರ್ಥಿಷು= ಅಂತಹ ಬ್ರಾಹ್ಮಣರಿಗೆ ವಿರೋಧವನ್ನು ಮಾಡುವ ಅವೈಷ್ಣವರಲ್ಲಿ, ಕಥಂಚನ= ಯಾವ ಕಾರಣದಿಂದಲೂ ಎಂದರೆ ದಾಕ್ಷಿಣ್ಯದಿಂದಾಗಲೀ ಅಥವಾ ಅರ್ಥಲೋಭದಿಂದಾಗಲೀ, ಪರ್ಯೇಷಣಂ= ಅನ್ವೇಷಣೆಯನ್ನು, ಭಜನೆಯನ್ನು, ನ ಗಚ್ಛ= ಮಾಡಬೇಡ. ಅವೈಷ್ಣವ ಭಜನೆಯನ್ನು ಮಾಡಬೇಡ ಎಂದು ಅಭಿಪ್ರಾಯ ಅಥವಾ ಪ್ರತ್ಯರ್ಥಿಷು= ಪ್ರತಿವಾಕ್ಯಗಳಲ್ಲಿಯೂ ಇದು ಅರ್ಥ ಎಂದು ಹೇಳುವ ಜ್ಞಾನಿಗಳಲ್ಲಿಯೂ, ಕಥಂಚನ= ಗುರುಶುಶ್ರೂಷೆಯಿಂದಾಗಲೀ ಅಥವಾ ವಿದ್ಯೆಯಿಂದಾಗಲೀ ಅಥವಾ ಧನದಿಂದಾಗಲೀ, ತಸ್ಯ= ಆ ಪರಮಾತ್ಮನ, ಪರ್ಯೇಷಣಂ= ಶವಣ, ಮನನ, ಧ್ಯಾನರೂಪವಾದ ವಿಷಯವನ್ನು, ಗಚ್ಛೇತ್= ಮಾಡುವವನಾಗು.
ಅವಿಚಿನ್ವನ್ನಿಮಂ ವೇದೇ ನ ಚ ಪಶ್ಯತಿ ತಂ ಪ್ರಭುಮ್ |
ನಾಸ್ಯ ಪರ್ಯೇಷಣಂ ಗಚ್ಛೇತ್ ಪ್ರತಿಪದ್ಯೇತ ಸಾಕ್ಷಿಣಮ್ ॥58॥
ವೇದೇ= ವೇದಜ್ಞಾನಸಂಪನ್ನನಾದ ಬ್ರಾಹ್ಮಣನಲ್ಲಿ, ಇಮಂ= ಶ್ರೀನಾರಾಯಣನನ್ನು, ಅವಿಚಿನ್ವನ್= ಅನ್ವೇಷಣವನ್ನು ಮಾಡದೆ ಇದರಿಂದ ಭಗವತ್ಸ್ವರೂಪದ ಅನ್ವೇಷಣೆಯನ್ನು ಸತ್ಸಂಗತಿ ಮೂಲಕವಾಗಿಯೇ ಮಾಡಬೇಕು ಎಂದು ಗುಹ್ಯಾರ್ಥವು ಸೂಚಿತವಾಗುತ್ತದೆ. ಅಥವಾ ವೇದೇ= ವೇದಗಳಲ್ಲಿ, ಇಮಂ= ಈ ನಾರಾಯಣನನ್ನು, ಅವಿಚಿನ್ವನ್= ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದ ವಿಚಾರ ಮಾಡದೆ, ಅಥವಾ, `ಅತ್ರೈವ ಮೃಗ್ಯಃ ಪುರುಷೋ ನೇತಿ ನೇತೀತ್ಯತತ್ ತ್ಯಜನ್' (ಇವನು ಜಡನಲ್ಲ, ಜೀವನಲ್ಲ ಎಂದು ಹೇಳುತ್ತಾ ವೇದ, ಭಾರತ, ಪಂಚರಾತ್ರಗಳಲ್ಲಿಯೇ ನಾರಾಯಣನನ್ನು ಹುಡುಕಬೇಕು. ಪಾಶುಪತಾದ್ಯಾಗಮಗಳಲ್ಲಿ ಹುಡುಕಬಾರದು. ಅಂತಹ ಪಾಶುಪತಾದಿ ಆಗಮಗಳನ್ನು, ಅವಿಚಿನ್ವನ್ ಅಂದರೆ ತ್ಯಾಗವನ್ನು ಮಾಡುವವನಾಗಿ), ಪ್ರತ್ಯರ್ಥಿಷು= ಸಚ್ಛಾಸ್ತ್ರವಿರೋಧಿಗಳಾದ ಪಾಶುಪತಾದಿ ಕುಶಾಸ್ತ್ರಗಳಲ್ಲಿ, ಪರ್ಯೇಷಣಮ್= ಶ್ರವಣಾದಿ-ಮನನಾದಿರೂಪವಾದ ವಿಚಾರವನ್ನು, ನ ಗಚ್ಛೇತ್= ಮಾಡಬಾರದು. ಹಾಗೆ ಕುಶಾಸ್ತ್ರವನ್ನು ಅಧ್ಯಯನವನ್ನು ಮಾಡದೆ ಸಚ್ಛಾಸ್ತ್ರವನ್ನು ಅಧ್ಯಯನ ಮಾಡುವುದರಿಂದ, ತಂ= ಆ ವೇದಗಮ್ಯನಾದ, ಪ್ರಭುಂ= ಸರ್ವಸಮರ್ಥನಾದ ನಾರಾಯಣನನ್ನು ಅಥವಾ ಸಾಕ್ಷಿಣಂ= ಸರ್ವಸಾಕ್ಷಿಯಾದ ನಾರಾಯಣನನ್ನು, ಪಶ್ಯತಿ= ಅಪರೋಕ್ಷವಾಗಿ ನೋಡುತ್ತಾನೆ. `ನಾಸ್ಯ ಪರ್ಯೇಷಣಮ್ ಗಚ್ಛೇತ್ ತಥಾ ಪಶ್ಯತಿ ತಂ ಪ್ರಭುಮ್' ಎಂಬ ಪಾಠವನ್ನು ಇಟ್ಟುಕೊಂಡು ವಾದಿರಾಜರು ವ್ಯಾಖ್ಯಾನವನ್ನು ಮಾಡಿದ್ದಾರೆ.
ತೂಷ್ಣೀಂಭೂತ ಉಪಾಸೀತ ಶ್ರುತಮಸ್ಯಾಂತರಾತ್ಮನಿ |
ಅಭ್ಯಾವರ್ತೇತ ಬ್ರಹ್ಮಾಸ್ಮೈ ಬಹ್ವನಂತರಮಾಪ್ನುಯಾತ್ ॥59॥
ಅಂತರಾತ್ಮನಿ= ಒಳಗೆ ಪರಮಾತ್ಮನನ್ನು ಹೊಂದಿದ ಅಪರೋಕ್ಷ ಜ್ಞಾನಿಯು ಅಂತರಾತ್ಮ. ಅಂತಹ ಅಪರೋಕ್ಷಜ್ಞಾನಿಯು ಅಥವಾ ಯೋಗಿವರ್ಯನು, ಆಗತೇ ಸತಿ= ಬಂದಾಗ, ಅಸ್ಯ= ಹರಿಯ, ಶ್ರುತಂ= ವೇದಪ್ರತಿಪಾದ್ಯ ಮಹಿಮೆಯನ್ನು, ಬುದ್ಧ್ವಾ= ಅವನ ಮುಖದಿಂದ ಶ್ರವಣದಿಂದ ತಿಳಿದು ಬೇರೆಯ ಸಮಯದಲ್ಲಿ, ತೂಷ್ಣೀಂಭೂತಃ= ಮೌನದಿಂದ ಕುಳಿತು, ಉಪಾಸೀತ= ಪರಮಾತ್ಮನ ಚಿಂತನೆಯನ್ನು ಮಾಡಬೇಕು. ಅಸ್ಮೈ= ಅಪರೋಕ್ಷ ಜ್ಞಾನಕ್ಕಾಗಿ, ಬ್ರಹ್ಮ= ವೇದವನ್ನು (ವೇದಶಾಸ್ತ್ರವನ್ನು), ಬಹು= ಬಹಳವಾಗಿ, ಅಭ್ಯಾವರ್ತೇತ= ಆವೃತ್ತಿಯನ್ನು ಮಾಡಬೇಕು. `ಆವೃತ್ತಿರಸಕೃದುಪದೇಶಾತ್' ಎಂದು ಸೂತ್ರವಿದೆಯಷ್ಟೆ! ಅನಂತರಂ= ಅನಂತರದಲ್ಲಿ, ಅನಂತರಂ= ಕೇವಲ ಅಂತರನೇ ಅಲ್ಲದೆ, ಸರ್ವಬಾಹ್ಯನೂ ಆಗಿ ವ್ಯಾಪ್ತನಾದ ಪರಮಾತ್ಮನನ್ನು, ಆಪ್ನುಯಾತ್= ಅಪರೋಕ್ಷವಾಗಿ ತಿಳಿಯಬೇಕು ಅಥವಾ ವೈಕುಂಠಾದಿ ಲೋಕಗಳಲ್ಲಿ ಅವನನ್ನೇ ಹೊಂದಬೇಕು.
ಹೀಗೆ ಸರ್ವಪುರುಷಾರ್ಥಸಾಧನವಾದ ಭಗವದಪರೋಕ್ಷಜ್ಞಾನವನ್ನು ಸಂಪಾದಿಸಲು ವೇದಾಂತಶಾಸ್ತ್ರಾಭ್ಯಾಸದಿಂದ ಉಂಟಾದ ವಿಷ್ಣುಸರ್ವೋತ್ತಮತ್ವವನ್ನು ಹೊಂದಿದ ಬ್ರಾಹ್ಮಣೋತ್ತಮರ ಸೇವೆಯೇ ಮುಖ್ಯವಾದ ಸಾಧನ, ಬೇರೆ ಯಾವುದೂ ಅಲ್ಲ ಎಂದು ಯಾವ ಸೇವೆಯನ್ನು ಹಿಂದೆ ಹೇಳಿದೆಯೋ ಆ ಸೇವೆಯಾದರೂ ವೈರಾಗ್ಯ ಸಹಕೃತವಾದರೆ ಮಾತ್ರ ಮಹಾಫಲಪ್ರದವಾದುದು ಎಂದು ಇಲ್ಲಿ ಹೇಳುತ್ತಾರೆ. ಸಾಧಕಪುರುಷನು ತೂಷ್ಣೀಂಭೂತಃ= ಫಲಾಪೇಕ್ಷಾರಹಿತನಾಗಿ, ಉಪಾಸೀತ= ಶ್ರೀನಾರಾಯಣನನ್ನು ಅಥವಾ ವಿದ್ಯೋಪದೇಶ ಮಾಡಿದ ಗುರುವನ್ನು ಸೇವಿಸಬೇಕು. `ನ ಚೇಚ್ಛೇತ್ ಮನಸಾಽಪಿ ಚ' ಎಂಬ ಪಾಠವನ್ನು ಇಟ್ಟುಕೊಂಡು ವ್ಯಾಖ್ಯಾನ ಮಾಡುತ್ತಾರೆ. ಮನಸಾಽಪಿ= ಮನಸ್ಸಿನಿಂದಲೂ ಕೂಡ, ನ ಚೇಚ್ಛೇತ್= ಫಲವನ್ನು ಬಯಸಬಾರದು. ಮನಸ್ಸಿನಿಂದಲೂ ಬಯಸಬಾರದು ಎಂದು ಹೇಳಿದುದರಿಂದ ಮಾತಿನಿಂದ ಬಯಸಬಾರದು ಎಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ. ಚಶಬ್ದವು ದುರ್ವಿಷಯಗಳನ್ನು ಯೋಚನೆ ಮಾಡಬಾರದು ಎಂಬುದನ್ನು ಸಮುಚ್ಚಯ ಮಾಡುತ್ತದೆ. ಅಸ್ಮೈ= ಇಂತಹ ವಿಧವಾದ ಉಪಾಸಕನಿಗೆ, ಬ್ರಹ್ಮ= ಪರಬ್ರಹ್ಮನು, ಅಭ್ಯಾವರ್ತೇತ= ಅನುಗ್ರಹವನ್ನು ಮಾಡಲು ಅಭಿಮುಖವಾಗಿ ಇರುತ್ತಾನೆ. ಅನಂತರಂ= ಭಗವಂತನನ್ನು ಅನುಗ್ರಹೋನ್ಮುಖನನ್ನಾಗಿ ಮಾಡಿಕೊಂಡಮೇಲೆ, ಬಹು= ಪೂಣರ್ನಾದ, ಬ್ರಹ್ಮ= ಪರಮಾತ್ಮನನ್ನು ಅಥವಾ

ಯಥೇಷ್ಟಾನಂದವನ್ನು ಅಥವಾ ವೈಕುಂಠಾದಿ ಲೋಕವನ್ನು, ಆಪ್ನುಯಾತ್= ಹೊಂದುತ್ತಾನೆ. `ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ' ಎಂಬ ಪ್ರಮಾಣಕ್ಕೆ ಅನುಸಾರವಾಗಿ ಬ್ರಹ್ಮಪ್ರಾಪ್ತಿಯನ್ನು ಪಡೆದ ಮೇಲೆ ಕರತಲಾಮಲಕದಂತೆ ಅನಾಯಾಸವಾಗಿ ಸರ್ವಪುರುಷಾರ್ಥಗಳನ್ನೂ ಹೊಂದುತ್ತಾನೆ.

ಅಥವಾ ಜ್ಞಾನವನ್ನು ಸಂಪಾದಿಸಲು ಬಯಸುವ ಸಾಧಕನು ಗುರೂಪಸತ್ತಿಯ ಮೂಲಕವೇ ಜ್ಞಾನವನ್ನು ಸಂಪಾದಿಸಬೇಕು, ಬೇರೆ ರೀತಿಯಿಂದಲ್ಲ ಎಂದು ನಿಯಮವಿರುವುದರಿಂದ ಮೊದಲು ಅಂತಹ ಗುರೂಪಸತ್ತಿಯನ್ನು ಮಾಡುವ ಪ್ರಕಾರವನ್ನು ತಿಳಿಸುತ್ತಾರೆ. ತೂಷ್ಣೀಂಭೂತಃ= ವಿದ್ಯಾರ್ಥಿಯಾಗಿ ಗುರುಕುಲ ವಾಸವನ್ನು ಮಾಡುವವನು ತನ್ನ ಸುಖ-ದುಃಖಗಳನ್ನು ಹೇಳಿಕೊಳ್ಳದೆ ಮೌನದಿಂದ, ಉಪಾಸೀತ= ಗುರುಗಳ ಸೇವೆಯನ್ನು ಮಾಡಬೇಕು. ಮನಸಾಽಪಿ= ಮನಸ್ಸಿನಿಂದಲೂ ಕೂಡ ಗುರುವಿಗೆ ಅಪ್ರಿಯವಾದುದನ್ನು, ನ ಚ ಇಚ್ಛೇತ್= ಬಯಸಬಾರದು. `ಮನಸಾಽಪಿ' ಎಂದು ಹೇಳಿದುದರಿಂದಲೇ ಮಾತಿನಿಂದಲೂ ಅಪ್ರಿಯವನ್ನು ಮಾತನಾಡಬಾರದು ಎಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ. ಅಸ್ಮೈ= ಹೀಗೆ ಗುರೂಪಸತ್ತಿಯನ್ನು ಮಾಡುವ ಬ್ರಾಹ್ಮಣನಿಗೆ, ಬ್ರಹ್ಮ= ವೇದವಿದ್ಯೆಯು, ಅಭ್ಯಾವರ್ತೇತ= ಅನಾಯಾಸವಾಗಿ ತನ್ನನ್ನೇ ಕೊಟ್ಟುಕೊಳ್ಳಲು ಅಭಿಮುಖವಾಗಿ ಬರುತ್ತದೆ. ಅನಂತರಂ= ವೇದಾಭಿಮಾನಿ ದೇವತೆಗಳ ಅನುಗ್ರಹದಿಂದ ವೇದವಿದ್ಯೆಯನ್ನು ಪಡೆದ ಬಳಿಕ, ಬಹು= ಆದ್ಯಂತಶೂನ್ಯನಾದ, ಬ್ರಹ್ಮ= ಪರಮಾತ್ಮನನ್ನು ಅಥವಾ ಪರಮಾತ್ಮವಿಷಯಕ ಅಪರೋಕ್ಷಜ್ಞಾನವನ್ನು, ಆಪ್ನುಯಾತ್= ಹೊಂದುತ್ತಾನೆ.

ಮೌನಾದ್ಧಿ ಮುನಿರ್ಭವತಿ ನಾರಣ್ಯವಸನಾನ್ಮುನಿಃ |
ಅಕ್ಷರಂ ತಂ ತು ಯೋ ವೇದ ಸ ಮುನಿಃ ಶ್ರೇಷ್ಠ ಉಚ್ಯತೇ ॥60॥

`ಯೇ ವಾ ಗೃಹಂ ಪರಿತ್ಯಜ್ಯ ವನಮೇವ ಸಮಾಶ್ರಿತಾಃ |
ವಿಷಯೇಷು ವಿರಾಗಾದ್ಯಾಃ ಮುನಯಸ್ತೇ ಸಮೀರಿತಾಃ ॥',
`ಪೂಜ್ಯಾಸ್ತೇ ಮುನಯೋ ಲೋಕೇ ಬ್ರಾಹ್ಮಣಾ ನ್ಯಾಸಿನಶ್ಚ ಯೇ'

(ಯಾರು ಗೃಹವನ್ನು ತ್ಯಜಿಸಿ, ಅರಣ್ಯದಲ್ಲಿ ವಾಸಿಸಿ, ವಿಷಯವೈರಾಗ್ಯವನ್ನು ಹೊಂದಿರುತ್ತಾರೆಯೋ ಅಂತಹವರು ಮುನಿಗಳು. ಅಂತಹ ಮುನಿಗಳೂ ಮತ್ತು ಸಂನ್ಯಾಸಿಗಳೂ ಆದ ಬ್ರಾಹ್ಮಣರು ಪೂಜ್ಯರಾದವರು) ಇತ್ಯಾದಿ ಪ್ರಮಾಣಗಳು ಅರಣ್ಯವಾಸಿಗಳಿಗೇ ಉತ್ತಮತ್ವವನ್ನು ಹೇಳುವುದರಿಂದ ವಿಷಯವಿರಕ್ತಿಯುಳ್ಳ ವೇದವಿದ್ಯಾಸಂಪನ್ನನಿಗೇ ಬ್ರಾಹ್ಮಣತ್ವವನ್ನು ಮತ್ತು ಪೂಜ್ಯತ್ವವನ್ನು ಹೇಗೆ ಹೇಳುತ್ತೀರಿ ಎಂಬ ಪ್ರಶ್ನೆಗೆ ಉತ್ತರವಾಗಿ

`ವಿಷ್ಣುಭಕ್ತಿಪರೋ ಯಸ್ತು ಸದಾಚಾರರತಃ ಸದಾ |
ವೇದಾಂತಪರಿನಿಷ್ಣಾತೋ ಗಾರ್ಹಸ್ಥ್ಯಪರಿಪೋಷಕಃ ॥
ವಿವಿಕ್ತಸೇವೀ ಲಘ್ವಾಶೀ ಪೂಜ್ಯೋ ಬ್ರಾಹ್ಮಣಸತ್ತಮಃ |
ನಾರಣ್ಯವಾಸೀ ದುಷ್ಟಾತ್ಮಾ ವಿಪ್ರಃ ಸ್ವಾಧ್ಯಾಯಶೀಲ್ಯಪಿ ॥'

(ಯಾವನು ವಿಷ್ಣುಭಕ್ತಿಪರಾಯಣನಾಗಿ, ಸದಾಚಾರರತನಾಗಿ, ವೇದಾಂತದಲ್ಲಿ ಚೆನ್ನಾಗಿ ನಿಷ್ಠೆಯನ್ನು ಹೊಂದಿದವನಾಗಿ, ಗೃಹಸ್ಥಧರ್ಮಗಳನ್ನು ಪೋಷಿಸುತ್ತಾ, ಏಕಾಂತವಾಸಿಯೂ, ಅಲ್ಪಾಹಾರವುಳ್ಳವನೂ ಆಗಿರುತ್ತಾನೆಯೋ ಅಂತಹ ಬ್ರಾಹ್ಮಣ ಶ್ರೇಷ್ಠನು, ಪೂಜ್ಯನಾದವನು. ಅರಣ್ಯವಾಸವನ್ನು ಮಾಡಿ ಸ್ವಾಧ್ಯಾಯ ಸಂಪನ್ನನಾದರೂ ಮನಶ್ಶುದ್ಧಿಯಿಲ್ಲದ ಬ್ರಾಹ್ಮಣನು ಪೂಜ್ಯನಲ್ಲ) ಮುಂತಾದ ಪ್ರಮಾಣಗಳಿಂದ ಮನೋನೈರ್ಮಲ್ಯವಿಲ್ಲದ ವನವಾಸಕ್ಕಿಂತಲೂ ಮನಶ್ಶುದ್ಧಿಯುಳ್ಳ ಗೃಹಸ್ಥಾಶ್ರಮಿಯೇ ಶ್ರೇಷ್ಠನಾದವನು ಎಂದು ಹೇಳುತ್ತಾರೆ.

ಅರಣ್ಯವಸನಾತ್= ಅರಣ್ಯದಲ್ಲಿ ವಾಸ ಮಾಡುವುದರಿಂದ, ಸಃ= ಮನೋದೋಷಯುಕ್ತನಾದ, ಅರಣ್ಯವಾಸಿಯಾದ ಬ್ರಾಹ್ಮಣನು, ಮುನಿಃ ನ ಭವತಿ= ಮುನಿಶಬ್ದದಿಂದ ಹೇಳಲ್ಪಡುವುದಿಲ್ಲ. ಹಾಗಾದರೆ ಗೃಹಸ್ಥನಾದವನಿಗೆ ಮುನಿಶಬ್ದವಾಚ್ಯತ್ವವು ಹೇಗೆ ಉಂಟಾಗುತ್ತದೆ ಎಂಬುದನ್ನು ಹೇಳುತ್ತಾರೆ. ಸಃ= ಗೃಹವಾಸಿಯಾದ ಬ್ರಾಹ್ಮಣನು, ಮೌನಾತ್= ಮುನಿಪ್ರಾಪ್ಯನಾದ ವಿಷ್ಣುವಿನ ಸಂಬಂಧದಿಂದಲೇ, ಮುನಿಃ ಭವತಿ= ಮುನಿಶಬ್ದವಾಚ್ಯನಾಗುತ್ತಾನೆ. ಅಥವಾ ಮೌನಾತ್= ಕೇವಲ ವಾಙ್ನಿಯಮನವನ್ನು ಮಾಡಿ ಸುಮ್ಮನೆ ಇರುವುದರಿಂದ, ಅರಣ್ಯವಸನಾಚ್ಚ= ಮನೆಯಲ್ಲಿ ವಾಸ ಮಾಡದೆ ಅರಣ್ಯದಲ್ಲಿ ವಾಸಮಾಡುವುದರಿಂದ, ಸಃ= ಮೌನದಿಂದ ಅರಣ್ಯವಾಸ ಮಾಡುವ ಬ್ರಾಹ್ಮಣನು, ಮುನಿಃ ನ ಭವತಿ= ಮುನಿಶಬ್ದವಾಚ್ಯನಾಗುವುದಿಲ್ಲ. ಆದರೆ ಯಃ= ಯಾವ ಬ್ರಾಹ್ಮಣನು, ಅಕ್ಷರಂ= ನಾಶರಹಿತನಾದ ವಿಷ್ಣುವನ್ನು, `ಅಕ್ಷರಂ ಯೋ ತಪೋವೇದ' ಎಂಬ ಪಾಠವನ್ನು ಇಟ್ಟುಕೊಂಡರೆ

`ವಿಷ್ಣುಮುದ್ದಿಶ್ಯ ಯತ್ಕರ್ಮ ವಿಷ್ಣುಪ್ರೀತ್ಯರ್ಥಮೇವ ಚ |
ಕ್ರಿಯತೇ ಕಾರ್ಯಮಿತ್ಯೇವ ತದಾನಂತ್ಯಾಯ ಕಲ್ಪತೇ ॥'

(ವಿಷ್ಣುವನ್ನು ಉದ್ದೇಶಿಸಿ ಕೇವಲ ವಿಷ್ಣುಪ್ರೀತ್ಯರ್ಥವಾಗಿ ಮಾಡುವ ಕರ್ಮವು ಅನಂತ ಫಲವನ್ನು ಕೊಡುತ್ತದೆ) ಎಂಬ ಪ್ರಮಾಣಕ್ಕೆ ಅನುಸಾರವಾಗಿ ಅಂತಹ ಕರ್ಮವೇ ಅಕ್ಷರತಪಃಶಬ್ದವಾಚ್ಯವೆಂದು ಯಾವನು ತಿಳಿದಿರುತ್ತಾನೆಯೋ ಅಥವಾ ಅಂತಹ ಅಕ್ಷರವಾದ ತಪಸ್ಸನ್ನು ಮಾಡಲು ಯಾವನು ತಿಳಿದಿರುತ್ತಾನೆಯೋ, ಸಃ= ಅಂತಹ ಬ್ರಾಹ್ಮಣನೇ, ಮುನಿಶ್ರೇಷ್ಠಃ= ಮುನಿಶಬ್ದವಾಚ್ಯರಾದವರಲ್ಲಿ ಶ್ರೇಷ್ಠನಾದವನು. ಅಥವಾ ಶ್ರೇಷ್ಠನಾದ ಮುನಿ ಎಂದು ಉಚ್ಯತೇ= ಶಾಸ್ತ್ರಗಳಲ್ಲಿ ಹೇಳಲ್ಪಡುತ್ತದೆ. `ಮುನಿಃಶ್ರೇಷ್ಠ' ಎಂಬ ಪಾಠವನ್ನು, `ಮುನಿಶ್ರೇಷ್ಠಃ' ಎಂಬ ಪಾಠವನ್ನು ಇಟ್ಟುಕೊಂಡು ಈ ಎರಡು ಅರ್ಥಗಳನ್ನು ಹೇಳಿದ್ದಾರೆ.

ಸರ್ವಾರ್ಥಾನಾಂ ವ್ಯಾಕರಣಾದ್ ವೈಯಾಕರಣ ಉಚ್ಯತೇ |
ತನ್ಮೂಲತೋ ವ್ಯಾಕರಣಂ ವ್ಯಾಕರೋತೀತಿ ತತ್ ತಥಾ ॥61॥

ಲೋಕದಲ್ಲಿ ಶಬ್ದಶಾಸ್ತ್ರಪಟುಗಳಾದ ವೈಯಾಕರಣರನ್ನು ಬ್ರಾಹ್ಮಣೋತ್ತಮರೆಂದು ಹೇಳುವುದರಿಂದ ಅಕ್ಷರತಪೋವೇದಿಗಳಾದ ಬ್ರಾಹ್ಮಣರೇ ಬ್ರಾಹ್ಮಣೋತ್ತಮರು ಎಂಬುದು ಹೇಗೆ ಎಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಹೇಳುತ್ತಾರೆ. ಕೇವಲ ಶಬ್ದಶಾಸ್ತ್ರವನ್ನು ಅಭ್ಯಾಸ ಮಾಡಿದವರೇ ಬ್ರಾಹ್ಮಣೋತ್ತಮರಲ್ಲ. ಮತ್ತೇನೆಂದರೆ `ಶಬ್ದಸ್ಯ ಬ್ರಹ್ಮಣ ಏಷ ಪಂಥಾಃ' (ಎಲ್ಲ ಶಬ್ದಗಳೂ ಬ್ರಹ್ಮನ ದಾರಿಯಲ್ಲಿಯೇ ಹೋಗಿ ಬ್ರಹ್ಮನನ್ನೇ ಹೇಳುತ್ತವೆ) ಮುಂತಾದ ಪ್ರಮಾಣಗಳಿಗೆ ಅನುಸಾರವಾಗಿ ಸರ್ವಶಬ್ದಬ್ರಹ್ಮನನ್ನು ಎಂದರೆ

ಶಬ್ದರಾಶಿಯನ್ನು ಪರಬ್ರಹ್ಮನಿಗೆ ಸಂಬಂಧಿಸಿದಂತೆ ವ್ಯಾಖ್ಯಾನ ಮಾಡುವ ಬ್ರಾಹ್ಮಣರೇ ವೈಯಾಕರಣರು ಮತ್ತು ಬ್ರಾಹ್ಮಣೋತ್ತಮರು ಎಂದು ಹೇಳಿ, ಅಂತಹ ವೈಯಾಕರಣರು ಅಕ್ಷರತಪೋವೇದಿಗಳಲ್ಲೇ ಸೇರುತ್ತಾರೆ ಎಂದು ಉತ್ತರವನ್ನು ನೀಡುತ್ತಾರೆ.
ಸರ್ವಾರ್ಥಾನಾಂ= ಸರ್ವಶಬ್ದಗಳ ಅರ್ಥಗಳನ್ನು, ವ್ಯಾಕರಣಾತ್= `ವಿಃ ಪಕ್ಷಿಪರಮಾತ್ಮನೋಃ' ಎಂದು ಕೋಶವಿರುವುದರಿಂದ, ವೌ= ಹರಿಯಲ್ಲಿ, ಆ= ಚೆನ್ನಾಗಿ, ಕರಣಾತ್= ವಿಷಯೀಕರಣವನ್ನು ಮಾಡುವುದರಿಂದ, ವೈಯಾಕರಣಃ= ವೈಯಾಕರಣನೆಂದು, ಉಚ್ಯತೇ= ಹೇಳಲ್ಪಡುತ್ತದೆ. ಹೊರತು ಕೇವಲ ಶಬ್ದಶಾಸ್ತ್ರ ಜ್ಞಾನದಿಂದ ಅಲ್ಲ. ಇಂತಹ ನಿಯಮವು ಏಕೆ ಎಂಬ ಪ್ರಶ್ನೆಗೆ ತನ್ಮೂಲತಃ ಎಂದು ಉತ್ತರವನ್ನು ಹೇಳುತ್ತಾರೆ. ವ್ಯಾಕರಣಂ= ಸರ್ವಶಬ್ದಗಳಿಗೂ ಯಥಾಸ್ಥಿತವಾದ ಅರ್ಥವನ್ನು ಸ್ಪಷ್ಟೀಕರಿಸುವ ಶಬ್ದಶಾಸ್ತ್ರವೇನಿದೆಯೋ ಅದು, ತನ್ಮೂಲತಃ= ಶಬ್ದಬ್ರಹ್ಮನಾಮಕವಾದ ವೇದಮೂಲವಾಗಿರುವುದರಿಂದಲೇ ಈ ನಿಯಮ ಎಂದು ತಿಳಿಯಬೇಕು. ತಸ್ಮಾತ್= ಆ ಕಾರಣದಿಂದ, ತತ್= ವೇದರೂಪವಾದ ಶಬ್ದಬ್ರಹ್ಮವೇ, ತಥಾ= ಮುಖ್ಯವಾಗಿ ವ್ಯಾಕರಣಶಬ್ದವಾಚ್ಯವಾದುದು ಬೇರೆ ಶಾಸ್ತ್ರವಲ್ಲ. ಹೀಗೆ ಹೇಳುವುದರಿಂದ ಅನಂತವಾಗಿರುವುದರಿಂದ ಮುಖ್ಯವಾಗಿ ಎಲ್ಲ ಶಬ್ದಾರ್ಥವನ್ನೂ ಸ್ಪಷ್ಟಪಡಿಸುವ ಸಾಮರ್ಥ್ಯವನ್ನು ಹೊಂದಿರುವುದರಿಂದ, ಜಗತ್ತಿನಲ್ಲಿ ಪ್ರಸಿದ್ಧವಾದ ವ್ಯಾಕರಣಶಾಸ್ತ್ರವು ತನ್ಮೂಲಕವಾಗಿರುವುದರಿಂದ, ಸರ್ವತ್ರ ವಿಷ್ಣ್ವೇಕವಿಷಯಕವಾದುದರಿಂದ ವೇದಗಳೇ ಮುಖ್ಯವಾಗಿ ವ್ಯಾಕರಣಶಬ್ದವಾಚ್ಯವಾದವು. ಅವುಗಳ ಜ್ಞಾನವನ್ನು ಹೊಂದಿದ ಬ್ರಾಹ್ಮಣೋತ್ತಮನೇ ಮುಖ್ಯವಾಗಿ ವೈಯಾಕರಣಶಬ್ದವಾಚ್ಯನಾದವನು ಎಂದು ನಿರ್ಣಯಿಸಲ್ಪಡುತ್ತದೆ.
ಭಾರತಶ್ರೀನಿವಾಸಾಚಾರ್ಯರು ಈ ಶ್ಲೋಕಕ್ಕೆ ಇನ್ನೊಂದು ರೀತಿಯಲ್ಲಿ ವ್ಯಾಖ್ಯಾನವನ್ನು ಮಾಡುತ್ತಾರೆ. ಸರ್ವಾರ್ಥಾನಾಂ= ಸಮಸ್ತವಾದ ಬ್ರಹ್ಮಾದಿ ಪದಾರ್ಥಗಳನ್ನು, ವ್ಯಾಕರಣಾತ್= ವಿಶೇಷವಾಗಿ ಸೃಷ್ಟಿ ಮಾಡುವುದರಿಂದ, ಅಸೌ= ಈ ಪರಮಾತ್ಮನು, ವೈಯಾಕರಣ ಉಚ್ಯತೇ= ವೈಯಾಕರಣನೆಂದು ಹೇಳಲ್ಪಡುತ್ತಾನೆ. `ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' (ಈ ಜೀವ ಎಂಬ ಅನಿರುದ್ಧರೂಪದಿಂದ ಪ್ರವೇಶಿಸಿ ವಸ್ತುಗಳ ನಾಮರೂಪಗಳನ್ನು ಉಂಟು ಮಾಡುತ್ತೇನೆ) ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣ. ಜಗತ್ತು ಬ್ರಹ್ಮಾದಿಗಳಿಂದ ಸೃಷ್ಟವಾದುದರಿಂದ ಪರಮಾತ್ಮನು ಹೇಗೆ ವೈಯಾಕರಣಶಬ್ದವಾಚ್ಯನಾಗುತ್ತಾನೆ ಎಂಬ ಪ್ರಶ್ನೆಗೆ `ತನ್ಮೂಲತಃ' ಎಂದು ಉತ್ತರವನ್ನು ಹೇಳುತ್ತಾರೆ. ತತ್= ಆ ಪರಬ್ರಹ್ಮನು, ಮೂಲತಃ ವ್ಯಾಕರಣಂ= ಮೂಲಕಾರಣನಾದವನು. ಬ್ರಹ್ಮಾದಿಗಳು ಅವಾಂತರ ಕಾರಣರಾದವರು ಅಥವಾ ಬ್ರಹ್ಮಾದಿಗಳು ಮಾಡುವ, ವ್ಯಾಕರಣಂ= ಸೃಷ್ಟಿಯು, ತನ್ಮೂಲತಃ= ಅವನ ಅನುಗ್ರಹದಿಂದಲೇ ಆಗುತ್ತದೆ. ಆದ್ದರಿಂದ ಅವನೇ ವೈಯಾಕರಣ. ತತ್= ಬ್ರಹ್ಮನು, ಯಥಾಸ್ಥಿತಂ= ಹೇಗಿದ್ದಾನೆಯೋ, ತಥಾ= ಹಾಗೆಯೇ ವಿವರಿಸುತ್ತದೆ ಎಂಬ ನಿಮಿತ್ತದಿಂದ ವ್ಯಾಕರಣವು ವ್ಯಾಕರಣವೆನಿಸುತ್ತದೆ. ಇದರಿಂದ ವ್ಯಾಕರಣವು ಹೇಗೆ ವೇದಾಂಗವಾಗುತ್ತದೆ ಮತ್ತು ಯಾವ ನಿಮಿತ್ತದಿಂದ ವ್ಯಾಕರಣ ಶಬ್ದವಾಚ್ಯವಾಗುತ್ತದೆ ಎಂಬುದನ್ನು ಹೇಳಿದಂತಾಯಿತು.
ಪ್ರತ್ಯಕ್ಷದರ್ಶೀ ಲೋಕಾನಾಂ ಸರ್ವದರ್ಶೀ ಭವೇನ್ನರಃ |
ಸತ್ಯೇ ವೈ ಬ್ರಾಹ್ಮಣಸ್ತಿಷ್ಠನ್ ತದ್ವಿದ್ವಾನ್ ಸರ್ವವಿದ್ ಭವೇತ್ ॥62॥
ಬ್ರಾಹ್ಮಣನು ವ್ಯಾಕರಣಶಬ್ದವಾಚ್ಯವಾದ ವೇದಗಳನ್ನು ಭಗವತ್ಪರವಾಗಿ ವ್ಯಾಖ್ಯಾನ ಮಾಡುವುದರಿಂದ ಅವನಿಗೆ ಎಂತಹ ಫಲವು ಉಂಟಾಗುತ್ತದೆ ಎಂದರೆ ಸ್ವಬಿಂಬಾಪರೋಕ್ಷಜ್ಞಾನಪೂರ್ವಕವಾಗಿ ಸ್ವಸ್ವರೂಪಾಭಿವ್ಯಕ್ತಿಯುಂಟಾಗಿ ಅದರಿಂದ ಯಥಾಯೋಗ್ಯವಾಗಿ ಸರ್ವವಸ್ತುಗಳ ಅಪರೋಕ್ಷಜ್ಞಾನವು ಉಂಟಾಗುತ್ತದೆ ಎಂದು ಹೇಳುತ್ತಾರೆ.
ಪ್ರತ್ಯಕ್ಷದರ್ಶೀ= ಪರಮಾತ್ಮನನ್ನು ಪ್ರತ್ಯಕ್ಷವಾಗಿ ನೋಡಿದವನು ಎಂದರೆ ಅಪರೋಕ್ಷಜ್ಞಾನಿಯಾದ, ನರಃ= `ರೀಙ್ ಕ್ಷಯೇ' ಎಂದು ಧಾತುವಿರುವುದರಿಂದ ಕ್ಷಯವನ್ನು ಹೊಂದದ ಪುರುಷನು, ಲೋಕಾನಾಂ= ಅಜ್ಞಜನರ, ಸರ್ವದರ್ಶೀ= ವಿಷಯಾಭಿಲಾಷೆಯುಳ್ಳ ಮನಸ್ಸಿನಿಂದ ಮಾಡಿದ ಎಲ್ಲ ಅಶುಭಕರ್ಮಗಳನ್ನೂ ತನ್ನ ಜ್ಞಾನಚಕ್ಷುಸ್ಸಿನಿಂದ ನೋಡುವವನಾಗಿ, ಭವೇತ್= ಆಗುತ್ತಾನೆ. ಅಥವಾ ಪ್ರತ್ಯಕ್ಷದರ್ಶೀ= ಪ್ರತ್ಯಕ್ಷ ಎಂದರೆ ಇಂದ್ರಿಯವೂ ತನ್ನ ಪ್ರತಿಯೊಂದು ಇಂದ್ರಿಯಗಳು ಭಗವಂತನ ಆರಾಧನೆಯ ಸಲುವಾಗಿಯೇ ಇವೆಯೇ ಹೊರತು ಭೋಗಸಾಧನವಾಗಿಲ್ಲ ಎಂದು ತಿಳಿಯುವ ಜ್ಞಾನಿಯು, ಲೋಕಾನಾಂ= ಜನರ, ಅಂತರ್ಯಾಮಿಯಾದ ಎಂದು ಇಟ್ಟುಕೊಳ್ಳಬೇಕು, ಸರ್ವದರ್ಶೀ= ಸರ್ವವ್ಯಾಪ್ತನಾದ, ಸರ್ವಶಬ್ದವಾಚ್ಯನಾದ ಪರಮಾತ್ಮನನ್ನು ನೋಡುವವನಾಗುತ್ತಾನೆ. `ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' (ನೀನು ಸರ್ವವನ್ನೂ ವ್ಯಾಪಿಸಿರುವುದರಿಂದ ಸರ್ವನಾಮಕನಾದವನು), `ಸರ್ವಃ ಶರ್ವಃ' (ವಿಷ್ಣುಸಹಸ್ರನಾಮದ ನಾಮಗಳು) ಅಪರೋಕ್ಷ ಜ್ಞಾನಿಯು `ಸರ್ವತ್ರ ವಿದಿತಾತ್ಮನಾಮ್' ಎಂಬ ಪ್ರಮಾಣದಂತೆ ಸರ್ವಾಧಿಷ್ಠಾನದಲ್ಲಿ ಭಗವಂತನ ಆರಾಧನೆಯನ್ನು ಮಾಡುವ ಯೋಗ್ಯತೆಯನ್ನು ಹೊಂದಿರುವುದರಿಂದ ಸರ್ವಶಬ್ದವಾಚ್ಯನಾದ ಸರ್ವಾಂತರ್ಯಾಮಿಯಾದ ನಾರಾಯಣನನ್ನು ನೋಡುವುದರಿಂದ, ಸರ್ವದರ್ಶೀ ಭವೇತ್= ಸರ್ವದರ್ಶಿಯಾಗುತ್ತಾನೆ, ಸರ್ವದರ್ಶೀ ಎನಿಸುತ್ತಾನೆ. ಇದರಿಂದ ಸರ್ವವೇದಗಳನ್ನೂ ಭಗವತ್ಪರವಾಗಿ ಪ್ರತಿಪಾದನೆ ಮಾಡುವುದರಿಂದ ಇಂತಹ ಅಪರೋಕ್ಷಜ್ಞಾನವು ಉಂಟಾಗುತ್ತದೆ ಎಂದು ಫಲವನ್ನು ಹೇಳಿದಂತಾಯಿತು. ತತ್= ಆ ಕಾರಣದಿಂದ, ಸತ್ಯೇ= `ಸತ್ಯಂ ಪರಂ ಧೀಮಹಿ' ಎಂದು ಹೇಳಿದ ಸತ್ಯಶಬ್ದವಾಚ್ಯನಾದ ಭಗವಂತನಲ್ಲಿಯೇ, ವಾ ಶಬ್ದವು ಅವಧಾರಣೆಯನ್ನು ಹೇಳುತ್ತದೆ. ತಿಷ್ಠನ್= ನಿಷ್ಠೆಯುಳ್ಳವನಾಗಿ ಎಂದರೆ ಭಗವಂತನಲ್ಲಿ ಅವನ ಅನುಗ್ರಹವನ್ನು ಬಿಟ್ಟು ಬೇರೆ ಯಾವುದನ್ನೂ ಬೇಡದೆ ಇರುವ, ತಿಷ್ಠನ್= ನಿಷ್ಠಾವಂತನಾದ, ವಿದ್ವಾನ್ ಬ್ರಾಹ್ಮಣಃ= ವಿದ್ವಾಂಸನಾದ ಬ್ರಾಹ್ಮಣನು, ಸರ್ವವಿತ್ ಭವೇತ್= ಭೂತ- ಭವಿಷ್ಯದ್-ವರ್ತಮಾನರೂಪವಾದ ಮೂರುಕಾಲಕ್ಕೆ ಸಂಬಂಧಿಸಿದ, ತನಗೆ ಯೋಗ್ಯವಾದ ಸರ್ವವಿಷಯಕ ಜ್ಞಾನವನ್ನು ಹೊಂದುವವನಾಗುತ್ತಾನೆ.
ಜ್ಞಾನಾದಿಷು ಸ್ಥಿತೋಽಪ್ಯೇವಂ ಕ್ಷತ್ರಿಯೋ ಬ್ರಹ್ಮ ಪಶ್ಯತಿ |
ವೇದಾನಾಂ ಚಾನುಪೂರ್ವ್ಯೇಣ ಚೈತದ್ ವಿದ್ವಾನ್ ಬ್ರವೀಮಿ ತೇ ॥
ಇಂತಹ ಭಗವದ್ವಿಷಯಕವಾದ ಸಾಧನಾನುಷ್ಠಾನವನ್ನು ಮಾಡುವುದರಿಂದ ಬ್ರಾಹ್ಮಣರಿಗೆ ಮಾತ್ರ ಮಹಾನಿಷ್ಟವು ನಿವೃತ್ತವಾಗುತ್ತದೆ ಎಂಬುದಲ್ಲ, ಕ್ಷತ್ರಿಯರಿಗೂ ಅಂತಹ ಫಲವು ದೊರೆಯುತ್ತದೆ. ನೀನೂ ಸಹ ಶ್ರೇಷ್ಠನಾದ ಗಂಧರ್ವನ ಅಂಶನಾದುದರಿಂದ, ಮಹಾಧಿಕಾರಿಯಾಗಿರುವುದರಿಂದ, ನಿನಗಿಂತ ಉತ್ತಮರಾದ ಯುಧಿಷ್ಠಿರಾದಿಗಳಲ್ಲಿ ದ್ವೇಷವನ್ನು ಮಾಡಿದುದರಿಂದ ಉಂಟಾಗುವ ಮಹಾ ಅನರ್ಥವನ್ನು ಪರಿಹರಿಸಿಕೊಳ್ಳಲು ನಾನು ಹೇಳಿದ ಸಾಧನೆಯನ್ನು ಬಿಟ್ಟು ಬೇರೆ ಮಾರ್ಗವಿಲ್ಲ. ಆದ್ದರಿಂದ ಅಂತಹ

ಸಾಧನೆಯನ್ನೇ ಸಂಪಾದಿಸುವವನಾಗು ಎಂದು ಸನತ್ಸುಜಾತರು ಧೃತರಾಷ್ಟ್ರನಿಗೆ ಉಪದೇಶವನ್ನು ಮಾಡುತ್ತಾರೆ.
ಜ್ಞಾನಾದಿಷು= ಪರೋಕ್ಷ-ಅಪರೋಕ್ಷವಿಷಯಕವಾದ ಜ್ಞಾನ ಮತ್ತು ಭಕ್ತಿ-ವೈರಾಗ್ಯಗಳು ಇವುಗಳಲ್ಲಿ, ಸ್ಥಿತಃ= ನಿಷ್ಣಾತನಾಗಿ ಎಂದರೆ ನಿಷ್ಠೆಯುಳ್ಳವನಾಗಿ, ಏವಂ= ಜ್ಞಾನಾದಿ ಗುಣಸಂಪನ್ನನಾದ ಬ್ರಾಹ್ಮಣನಂತೆ, ವಿದ್ವಾನ್= ತನಗೆ ಯೋಗ್ಯವಾದ ಜ್ಞಾನವನ್ನು ಹೊಂದಿದ, ಕ್ಷತ್ರಿಯ ಅಪಿ= ಕ್ಷತ್ರಿಯ ಕುಲೋತ್ಪನ್ನನೂ ಕೂಡ, ಅಪಿ ಶಬ್ದವು ಬ್ರಾಹ್ಮಣನಿಗಿಂತ ಕ್ಷತ್ರಿಯನು ಅಧಮನೆಂದು ಸೂಚಿಸುತ್ತದೆ. ವೇದಾನಾಂ= ಸರ್ವವೇದಗಳಿಗೆ, ಚಾರಪೂರ್ವೇಣ= ವಿಚಾರಪೂರ್ವಕವಾಗಿ ಎಂದರೆ ವಿಚಾರವನ್ನೇ ಮುಂದೆ ಮಾಡಿಕೊಂಡು, ಎಂದರೆ ವೇದವಿಚಾರವನ್ನೇ ಪ್ರಧಾನವನ್ನಾಗಿ ಮಾಡಿಕೊಂಡು ಅನುಷ್ಠಾನ ಮಾಡುವ ಸಾಧನಗಳಿಂದ, ಬ್ರಹ್ಮ= ಪರಬ್ರಹ್ಮನನ್ನು, ಪಶ್ಯತಿ= ಅಪರೋಕ್ಷವಾಗಿ ನೋಡುತ್ತಾನೆ. ಏತತ್= ಇದೇ, ಸಾಧನಂ= ಸಾಧನವನ್ನು, ತೇ= ಧೃತರಾಷ್ಟ್ರನಾದ ನಿನಗೆ, ಬ್ರವೀಮಿ= ದೊಡ್ಡ ಅನರ್ಥವನ್ನು ನಿವಾರಣೆ ಮಾಡುವುದೆಂದು ನಾನು ಉಪದೇಶ ಮಾಡುತ್ತಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
॥ ಇತಿ ಶ್ರೀಮನ್ಮಹಾಭಾರತೇ ಉದ್ಯೋಗಪರ್ವಣಿ ಸನತ್ಸುಜಾತೀಯೇ ವಿಷಮವಾಕ್ಯಾರ್ಥಪ್ರಕಾಶೇ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತೈದನೆಯ ಅಧ್ಯಾಯ
ಸನತ್ಸುಜಾತರಿಂದ ಧೃತರಾಷ್ಟ್ರನನ್ನು ಕುರಿತು ತತ್ತ್ವೋಪದೇಶ.
ಧೃತರಾಷ್ಟ್ರಃ
ಸನತ್ಸುಜಾತ ಯದಿಮಾಂ ಪರಾರ್ಥಾಂ
ಬ್ರಾಹ್ಮೀಂ ವಾಚಂ ವದಸಿ ಹಿ ವಿಶ್ವರೂಪಮ್ |
ಪರಾಂ ಹಿ ಕಾರ್ಯೇಷು ಸುದುರ್ಲಭಾಂ ಕಥಾಂ
ತದ್ ಬ್ರೂಹಿ ಮೇ ವಾಕ್ಯಮೇವಂ ಕುಮಾರ ॥1॥
ಎಲ್ಲಾ ಆಶ್ರಮಗಳು ಮತ್ತು ಆಶ್ರಮ ಧರ್ಮಗಳೂ ಬ್ರಹ್ಮಚರ್ಯ ಮೂಲವಾದುದರಿಂದ ಬ್ರಹ್ಮಚರ್ಯಾಶ್ರಮದಲ್ಲಿಯೂ ಮೊದಲನೆಯದು ಗುರುಕುಲ ವಾಸವಾದ್ದರಿಂದ ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡಲು ಮೊದಲು ಬ್ರಹ್ಮಚರ್ಯಾಶ್ರಮ ಧರ್ಮವನ್ನು ಅನುಷ್ಠಾನ ಮಾಡಿ, ವೇದವಿದ್ಯೆಯನ್ನು ಸಂಪಾದಿಸಬೇಕು ಎಂದು ಈ ಅಧ್ಯಾಯದಲ್ಲಿ ನಿರೂಪಿಸಲ್ಪಡುತ್ತದೆ.
ಧೃತರಾಷ್ಟ್ರನು ಹಿಂದಿನ ಅಧ್ಯಾಯದಲ್ಲಿ ಸನತ್ಸುಜಾತರು ಮಾಡಿದ ಉಪದೇಶವನ್ನು ಪ್ರಶಂಸೆ ಮಾಡಿ ಅವರನ್ನು ಕುರಿತು ತನಗೆ ಅಭಿಪ್ರೇತವಾದ ಅರ್ಥವನ್ನು ಪುನಃ ಪ್ರಶ್ನೆ ಮಾಡುತ್ತಾನೆ.
ಸನತ್ಸುಜಾತ= ಎಲೈ ಸನತ್ಸುಜಾತರೇ, ಕುಮಾರ= ಐದು ವರ್ಷದ ಮಗುವಿನಂತೆ ಕಾಣುವವರೇ ಅಥವಾ ಬ್ರಹ್ಮಪುತ್ರರೇ ಅಥವಾ ಸುಸ್ಥಿರವಾದ ಸಂಸಾರವನ್ನು ನಿಮ್ಮ ಉಪದೇಶದಿಂದ ನಾಶಮಾಡುವವರೆ, ಇಮಾಂ= ಈ ಪರಾಪರತತ್ತ್ವ ವಿಷಯವಾದ, ಪರಾರ್ಥಾಂ= ಅದರಲ್ಲಿಯೂ ವಿಶೇಷವಾಗಿ ಸರ್ವೋತ್ತಮನಾದ ವಿಷ್ಣುವನ್ನೇ ಪ್ರತಿಪಾದನೆ ಮಾಡುವ, ವಿಶ್ವರೂಪಾಂ= ಅನೇಕ ಅರ್ಥಗಳನ್ನು ಪ್ರತ್ಯೇಕವಾಗಿ ಪ್ರತಿಪಾದನ ಮಾಡುವ ಸಾಮರ್ಥ್ಯವನ್ನು ಹೊಂದಿದ ಎಂದರೆ ವಿಶ್ವತೋಮುಖವಾದ, ಕಾರ್ಯೇಷು= ಅನುಷ್ಠಾನ ಮಾಡಲು ಯೋಗ್ಯವಾದ ನಿತ್ಯನೈಮಿತ್ತಿಕಾದಿ ಶ್ರೌತ ಕರ್ಮಗಳಲ್ಲಿಯೂ ಸಹ, ಪರಾಂ= ಅನ್ಯಾರ್ಥವಿಷಯಕವಾಗಿ ಅಮುಖ್ಯವಾದ ತಾತ್ಪರ್ಯವನ್ನು ಹೊಂದಿದ, ಸುದುರ್ಲಭಾಮ್= ನಮ್ಮಂತಹ ಅಲ್ಪಜ್ಞರು ಸುಲಭವಾಗಿ ಪಡೆಯಲು ಅಸಾಧ್ಯವಾದ, ಬ್ರಾಹ್ಮೀಂ= ಬ್ರಹ್ಮಶಬ್ದವಾಚ್ಯವಾದ ವೇದ ಸಂಬಂಧಿಯಾದ, ವಾಚಂ= ಉಪದೇಶ ರೂಪವಾದ ವಾಕ್ಯವನ್ನು, ವದಸಿ= ನನ್ನನ್ನು ಕುರಿತು ಹೇಳುತ್ತಿದ್ದೀರಿ. ಆದ್ದರಿಂದ ಹೀಗೆ ನನಗೆ ಸುಲಭವಾದ ವಾಕ್ಯಂ= ವಾಕ್ಯವನ್ನು, ಪ್ರಬ್ರೂಹಿ= ಹೇಳುವವರಾಗಿ. `ವಾಚ್ಯಮೇಕಮ್' ಎಂಬ ಪಾಠವಿದ್ದಲ್ಲಿ ನನ್ನಂತಹ ಅಜ್ಞರಿಗೆ ಹೇಳಲು ಯೋಗ್ಯವಾದ ನಿರ್ಣೀತಾರ್ಥವಿಷಯಕವಾದ, ಮುಖ್ಯವಾದ ಅರ್ಥವನ್ನು ಹೇಳಿ ಎಂದು ಅಭಿಪ್ರಾಯ.
ಸನತ್ಸುಜಾತಃ
ನೈತದ್ ಬ್ರಹ್ಮ ತ್ವರಮಾಣೇನ ಲಭ್ಯಂ
ಯನ್ಮಾಂ ಪೃಚ್ಛಸ್ಯಭಿಷಂಗೇಣ ರಾಜನ್ |
ಬುದ್ಧೌ ಪ್ರಲೀನೇ ಮನಸಿ ಪ್ರಚಿಂತ್ಯಾ
ವಿದ್ಯಾಽಹಿಂಸಾಬ್ರಹ್ಮಚರ್ಯೇಣ ಲಭ್ಯಾ ॥2॥
ಬಹಳ ಕಾಲದಲ್ಲಿ ಬಹಳ ಆಯಾಸದಿಂದ ಸಂಪಾದಿಸಬೇಕಾದ ಬ್ರಹ್ಮಜ್ಞಾನದ ವಿಷಯದಲ್ಲಿ ಸುಲಭೋಪಾಯವನ್ನು ಕೇಳಿದ ಧೃತರಾಷ್ಟ್ರನನ್ನು ಕುರಿತು ಸನತ್ಸುಜಾತರು ಬ್ರಹ್ಮಜ್ಞಾನವು ತ್ವರೆಯಿಂದ ಲಭ್ಯವಲ್ಲ, ಆದರೆ ಮನೋಜಯವನ್ನು ಸಂಪಾದಿಸಿ, ಭಗವನ್ನಿಷ್ಠೆಯನ್ನು ಹೊಂದಿ, ಅಹಿಂಸಾ ಸಹಕೃತವಾದ ಬ್ರಹ್ಮಚರ್ಯ ರೂಪವಾದ ಕಷ್ಟಕರ ಪ್ರಯತ್ನದಿಂದ ಪ್ರಾಪ್ಯವಾದುದು ಎಂದು ಹೇಳುತ್ತಾರೆ.
ರಾಜನ್= ಎಲೈ ಧೃತರಾಷ್ಟ್ರನೇ, ಅಭಿಷಂಗೇಣ= ಸ್ನೇಹದಿಂದ ಅಥವಾ ಭಕ್ತಿಯಿಂದ, ಬ್ರಹ್ಮ ಪೃಚ್ಛಸಿ= ತ್ವರೆಯಿಂದ ಹೊಂದಲು ಯೋಗ್ಯನಾದ ಬ್ರಹ್ಮನನ್ನು ಕೇಳುತ್ತಿದ್ದೀಯೆ. ಏತತ್= ನೀನು ಕೇಳಿದ ಈ ಪರಬ್ರಹ್ಮನು, ತ್ವರಮಾಣೇನ= ತ್ವರೆಯಿಂದ ಯುಕ್ತನಾದ ಪುರುಷನಿಂದ, ನ ಲಭ್ಯಂ= ಪ್ರಾಪ್ಯನಲ್ಲ, ಆದರೆ ನಿಧಾನವಾದ ಪ್ರಯತ್ನದಿಂದಲೇ ಲಭ್ಯನಾದವನು. ಬ್ರಹ್ಮಪ್ರಾಪ್ತಿಯಲ್ಲಿ ಮಹಾಪ್ರಯತ್ನವು ಅಪೇಕ್ಷಿತವಾದಂತೆ ಬ್ರಹ್ಮವಿದ್ಯೆಯ ಪ್ರಾಪ್ತಿಯಲ್ಲಿಯೂ ಮಹಾಪ್ರಯತ್ನವು ಅಪೇಕ್ಷಿತವಾಗುತ್ತದೆ. ಬುದ್ಧೌ=

ಜ್ಞಾನರೂಪನಾದ ವಿಷ್ಣುವು, ಮನಸಿ= ತನ್ನ ಮನಸ್ಸಿನಲ್ಲಿ ಎಂದರೆ ಅಧಿಕಾರಿಯ ಮನಸ್ಸಿನಲ್ಲಿ, ಪ್ರಲೀನೇ= ಪ್ರತ್ಯಕ್ಷವಿಷಯನಾಗದೆ ಇರುತ್ತಿರಲು, ಪ್ರಚಿಂತ್ಯಾ= ಅನವರತವಾದ ವಿಚಾರದಿಂದ ವಿಚಾರ ಮಾಡಬೇಕಾದ, ವಿದ್ಯಾ= ಬ್ರಹ್ಮವಿದ್ಯೆಯು, ಅಹಿಂಸಾ ಬ್ರಹ್ಮಚರ್ಯೇಣ= ಅಹಿಂಸಾ ಸಹಕೃತವಾದ ಬ್ರಹ್ಮಚರ್ಯರೂಪವಾದ ಪ್ರಯತ್ನದಿಂದ, ಲಭ್ಯಾ= ಹೊಂದಲು ಯೋಗ್ಯವಾದುದು. ಬೇರೆ ಸುಲಭ ಪ್ರಯತ್ನದಿಂದ ಹೊಂದಲು ಯೋಗ್ಯವಾದುದಲ್ಲ.
ಭಾರತ ಶ್ರೀನಿವಾಸಾಚಾರ್ಯರು, ಮನಸಿ= ವಿಷಯಗಳಿಂದ ಹಿಂದಿರುಗಿದ ಮನಸ್ಸು, ಬುದ್ಧೌ= ವೈರಾಗ್ಯವನ್ನು ಪಡೆಯಲು ನಿಶ್ಚಿತವಾದ ಬುದ್ಧಿಯಲ್ಲಿ, ಪ್ರಲೀನೇ= ವಿಲೀನಗೊಳ್ಳುತ್ತಿರಲು ಎಂದರೆ ಬುದ್ಧಿಯ ಮಾರ್ಗದಲ್ಲೇ ಮನಸ್ಸು ಬರುತ್ತಿರಲು ಆ ಬ್ರಹ್ಮವಿದ್ಯೆಯು ವಿಚಾರದಿಂದ ಸಂಪಾದಿಸಲ್ಪಡಬೇಕಾದುದು ಎಂದು ವ್ಯಾಖ್ಯಾನ ಮಾಡುತ್ತಾರೆ.

ಆದ್ಯಾಂ ವಿದ್ಯಾಂ ವದಸಿ ಹಿ ಸತ್ಯರೂಪಾಂ
ಯಾ ಪ್ರಾಪ್ಯತೇ ಬ್ರಹ್ಮಚರ್ಯೇಣ ಸದ್ಭಿಃ |
ಯಾಂ ಪ್ರಾಪ್ಯೈನಂ ಮರ್ತ್ಯಭಾವಂ ತ್ಯಜಂತಿ
ಯಾ ವೈ ವಿದ್ಯಾ ಗುರುವೃದ್ಧೇಷು ನಿತ್ಯಾ ॥3॥

ಪರಬ್ರಹ್ಮಪ್ರಾಪ್ತಿಯನ್ನು ಕುರಿತು ವಿದ್ಯೆಯೇ ಮುಖ್ಯಕಾರಣ. ಅದಕ್ಕೆ ಬ್ರಹ್ಮಚರ್ಯವು ಸಹಕಾರಿ ಎಂದು ಇಲ್ಲಿ ನಿರೂಪಿಸುತ್ತಾರೆ. ಎಲೈ ಧೃತರಾಷ್ಟ್ರನೇ, ಸತ್ಯರೂಪಾಂ= ಸತ್ಯ ಎಂದರೆ ವಿಷ್ಣು, ಅವನನ್ನು ನಿರೂಪಿಸುವ ಅಥವಾ ಅವಿನಾಶಿಸ್ವರೂಪವುಳ್ಳ, ಆದ್ಯಾಮ್= ಆ ಎಲ್ಲ ಕಡೆಗಳಲ್ಲಿಯೂ, ದ್ಯಾಂ= ಪ್ರಕಾಶಿಸುವ ಅಥವಾ ಅನಾದಿಯಾದ, ವಿದ್ಯಾಮ್= ವಿದ್ಯೆಯನ್ನು, ವದಸಿ= ಉಪದೇಶ ಮಾಡು ಎಂದು ಕೇಳುತ್ತಿದ್ದೀಯೆ. ಯಾ= ಅಂತಹ ವಿದ್ಯೆಯು, ಸದ್ಭಿಃ= ಸಜ್ಜನರಿಂದ, ಬ್ರಹ್ಮಚರ್ಯೇಣ= ಬ್ರಹ್ಮಚರ್ಯಾಶ್ರಮಧರ್ಮದಿಂದ, ಪ್ರಾಪ್ಯತೇ= ಹೊಂದಲ್ಪಡುತ್ತದೆ. ಯಾಂ ಏನಾಂ (ಯಾಮೇನಂ)= ನಾನು ಉಪದೇಶ ಮಾಡುವ ಈ ವಿದ್ಯೆಯನ್ನು, ಪ್ರಾಪ್ಯ= ಪಡೆದು ಅಧಿಕಾರಿಗಳು, ಮರ್ತ್ಯಭಾವಂ= ಮನುಷ್ಯಲೋಕವನ್ನು ಅಥವಾ ಮನುಷ್ಯದೇಹವನ್ನು, ತ್ಯಜಂತಿ= ಪರಿತ್ಯಾಗ ಮಾಡುತ್ತಾರೆ. ಇಂತಹ ವಿದ್ಯೆಯು ಎಲ್ಲಿರುತ್ತದೆ ಎಂಬುದಕ್ಕೆ ಉತ್ತರವನ್ನು ಹೇಳುತ್ತಾರೆ: ಯಾ ವಿದ್ಯಾ= ನಾನು ಉಪದೇಶ ಮಾಡುವ ವಿದ್ಯೆಯು, ಗುರುವೃದ್ಧೇಷು = ಗುರುಗಳ ಅನುಗ್ರಹದಿಂದ ಶ್ರೇಷ್ಠತೆಯನ್ನು ಪಡೆದವರಲ್ಲಿ ಎಂದರೆ ಗುರುಗಳ ಅನುಗ್ರಹದಿಂದ ಅಭಿವೃದ್ಧಿಯನ್ನು ಹೊಂದಿದವರಲ್ಲಿ, ನಿತ್ಯಾ= ಸನಾತನವಾಗಿ ಇರುತ್ತದೆ, ಎಂದರೆ ಯಾವಾಗಲೂ ಇರುತ್ತದೆ.

ಧೃತರಾಷ್ಟ್ರಃ
ಬ್ರಹ್ಮಚರ್ಯೇಣ ಯಾ ವಿದ್ಯಾ ಶಕ್ಯಾ ವೇದಿತುಮಂಜಸಾ |
ತತ್ ಕಥಂ ಬ್ರಹ್ಮಚರ್ಯಂ ಸ್ಯಾದೇತತ್ ವಿದ್ವನ್ ಬ್ರವೀಹಿ ಮೇ ॥4॥

ಪರಬ್ರಹ್ಮ ಪ್ರಾಪ್ತಿಗೆ ಸಾಧನವಾದ ಬ್ರಹ್ಮವಿದ್ಯೆಯನ್ನು ಪಡೆಯಲು ಸಹಕಾರಿಯಾದ ಬ್ರಹ್ಮಚರ್ಯ ಲಕ್ಷಣವನ್ನು ಧೃತರಾಷ್ಟ್ರನು ಕೇಳುತ್ತಾನೆ.
ವಿದ್ವನ್= ಎಲೈ ಮಹಾಮುನಿಗಳಾದ ಸನತ್ಸುಜಾತರೇ, ವಿದ್ಯಾ= ನೀವು ಹೇಳಿದ ಬ್ರಹ್ಮವಿದ್ಯೆಯು, ಬ್ರಹ್ಮಚರ್ಯೇಣ= ಬ್ರಹ್ಮಚರ್ಯರೂಪವಾದ ಉಪಾಯದಿಂದ, ಅಂಜಸಾ= ಚೆನ್ನಾಗಿ, ವೇದಿತುಂ ಶಕ್ಯಾ= ತಿಳಿಯಲು ಸಾಧ್ಯವಾಗುತ್ತದೆ (ತಿಳಿಯಲು ಸಾಧ್ಯವಾಗುವುದಾದರೆ), ತತ್= ನೀವು ಹೇಳಿದ ಬ್ರಹ್ಮವಿದ್ಯಾಸಾಧನವಾದ, ಬ್ರಹ್ಮಚರ್ಯಂ= ಬ್ರಹ್ಮಚರ್ಯವು, ಕಥಂ= ಯಾವ ರೀತಿಯಿಂದ, ಸ್ಯಾತ್= ತದ್ವಿದ್ಯಾ ಪ್ರಾಪಕವಾಗುತ್ತದೆ. ಅದನ್ನು ನೀವು ಮೇ= ನನಗೆ, ಬ್ರೂಹಿ= ಹೇಳಿ.

ಸನತ್ಸುಜಾತಃ
ಆಚಾರ್ಯಯೋನಿಮಿಹ ಯೇ ಪ್ರವಿಶ್ಯ
ಭೂತ್ವಾ ಗರ್ಭಂ ಬ್ರಹ್ಮಚರ್ಯಂ ಚರಂತಿ |
ಇಹೈವ ತೇ ಶಾಸ್ತ್ರಕಾರಾ ಭವಂತಿ
ವಿಹಾಯ ದೇಹಂ ಪರಮಂ ಯಾಂತಿ ಸತ್ಯಮ್ ॥5॥

ಹೀಗೆ ಧೃತರಾಷ್ಟ್ರನಿಂದ ಕೇಳಲ್ಪಟ್ಟ ಸನತ್ಸುಜಾತರು, ಬ್ರಾಹ್ಮಣಕುಲೋತ್ಪನ್ನನಾದ ಪುರುಷನಿಗೆ ಕೇವಲ ಗಾಯತ್ರಿ ಉಪದೇಶ ರೂಪವಾದ ಧರ್ಮದಿಂದ ಪರವಿದ್ಯಾ ಪ್ರಾಪಕವಾದ ಬ್ರಹ್ಮಚರ್ಯ ಉಂಟಾಗುವುದಿಲ್ಲ. ಆದರೆ ಗಾಯತ್ರೀ ಉಪದೇಶವನ್ನು ಪಡೆದು, ಗುರುಕುಲ ವಾಸವನ್ನು ಮಾಡಿ ಗುರುಸೇವೆಯಿಂದ ಗುರುವಿನ ಅನುಗ್ರಹವನ್ನು ಸಂಪಾದಿಸಿ, ಜಿತೇಂದ್ರಿಯನಾಗಿ, ಅಧ್ಯಯನಕ್ಕೆ ಬೇಕಾಗುವಷ್ಟು ವರ್ಷಗಳ ಕಾಲ ವೇದಾದಿ ಸಕಲ ಶಾಸ್ತ್ರವನ್ನು ಅಧ್ಯಯನ ಮಾಡಿದರೆ ಮಾತ್ರ ಬ್ರಹ್ಮಚರ್ಯವ್ರತವು ಪೂರ್ಣವಾಗುತ್ತದೆ ಎಂದು ತಿಳಿಸುವವರಾಗಿ ಬ್ರಹ್ಮಚರ್ಯ ಪ್ರಾಪ್ತಿ ಸಾಧನವನ್ನೂ, ಅದರ ಫಲವನ್ನೂ ಹೇಳುತ್ತಾರೆ.
ಇಹ= ಅಧಿಕಾರವರ್ಗದಲ್ಲಿ, ಯೇ= ಯಾರು, ಆಚಾರ್ಯಯೋನಿಂ ಪ್ರವಿಶ್ಯ = ಆಚಾರ್ಯ ಕುಲವನ್ನು ಪ್ರವೇಶಿಸಿ, ಗರ್ಭಂ ಭೂತ್ವಾ = ಗರ್ಭದಂತೆ ಅವರಿಗೆ ಪ್ರಿಯರಾಗಿ, ಬ್ರಹ್ಮಚರ್ಯಂ= ಗುಹ್ಯೇಂದ್ರಿಯ ನಿಯಮನಾದಿ ರೂಪವಾದ ವ್ರತವನ್ನು, ಚರಂತಿ= ಮಾಡುತ್ತಾರೆಯೋ, ತೇ= ಅವರು, ಇಹೈವ= ಈ ಜನ್ಮದಲ್ಲಿಯೇ, ಶಾಸ್ತ್ರಕಾರಾಃ= ಸರ್ವವೇದಾರ್ಥ ಪ್ರತಿಪಾದಕ ಗ್ರಂಥಕರ್ತೃಗಳಾಗಿ, ಭವಂತಿ= ಆಗುತ್ತಾರೆ. ತೇ= ಅವರು, ದೇಹಂ= ಚರಮ ದೇಹವನ್ನು, ವಿಹಾಯ= ಪರಿತ್ಯಾಗವನ್ನು ಮಾಡಿ, ಪರಮಂ= ಶ್ರೇಷ್ಠವಾದ, ನಿರ್ದೋಷಜ್ಞಾನಾನಂದಾನುಭವ ರೂಪವಾದ, ಸತ್ಯಂ= ಪರಬ್ರಹ್ಮನನ್ನು, ಯಾಂತಿ= ಹೊಂದುತ್ತಾರೆ.

ಯೇಽಸ್ಮಿಂಲ್ಲೋಕೇ ವಿಜಯಂತೀಹ ಕಾಮಾನ್
ಬ್ರಾಹ್ಮೀಂ ಸ್ಥಿತಿಮನುತಿತಿಕ್ಷಮಾಣಾಃ |
ತ ಆತ್ಮಾನಂ ನಿರ್ವಹಂತೀಹ ದೇಹಾತ್
ಮುಂಜಾದಿಷೀಕಾಮಿವ ಧೀರಭಾವಾತ್ ॥6॥

ಮತ್ತು ಯೇ= ಯಾರು, ಅಸ್ಮಿನ್ ಲೋಕೇ= ಈ ಲೋಕದಲ್ಲಿ, ಕಾಮಾನ್= ವಿಷಯಗಳನ್ನು, ವಿಜಯಂತಿ= ಜಯಿಸುತ್ತಾರೆಯೋ, ಜಯಿಸಿ ಗುರುಕುಲ ವಾಸವನ್ನು ಮಾಡುತ್ತಾರೆಯೋ ಅವರು, ಬ್ರಾಹ್ಮೀಂ ಸ್ಥಿತಿಂ= ಪರಬ್ರಹ್ಮವಿಷಯಕವಾದ ಸ್ಥಿತಿಯನುನ, ಎಂದರೆ

ಬ್ರಹ್ಮಚರ್ಯವನ್ನು, ಅನುತಿತಿಕ್ಷಮಾಣಾಃ= ಪ್ರತಿದಿನವೂ ಸಹಿಸಿಕೊಳ್ಳುವವರಾಗಿ, ಆತ್ಮಾನಂ= ಜೀವನನ್ನು ಅಥವಾ ಪರಮಾತ್ಮನನ್ನು, ದೇಹಾತ್= ದೇಹಾದಿ ಸಂಘಾತದಿಂದ, ನಿರ್ವಹಂತಿ= ಭಿನ್ನನಾಗಿ ನಿಷ್ಕೃಷ್ಟವಾಗಿ ತಿಳಿಯುತ್ತಾರೆಯೋ, ದೇಹಾತ್ ಎಂಬುದಕ್ಕೆ ಬದಲು ಕಾಮಾತ್ ಎಂಬ ಪಾಠವಿದ್ದಲ್ಲಿ ಕಾಮಾತ್= ಸ್ವೇಚ್ಛೆಯಿಂದ ಎಂದು ಅರ್ಥ. ಧೀರಭಾವಾತ್= ಧೈರ್ಯದಿಂದಲೂ ಕೂಡ ತಿಳಿಯುತ್ತಾರೆಯೋ ಎಂದು ಇಟ್ಟುಕೊಳ್ಳಬೇಕು. ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ. ಮುಂಜಾತ್= ತೃಣವಿಶೇಷದಿಂದ, ಇಷೀಕಾಮಿವ= ಒಳಗಿರುವ ಹೆಂಚಿಕಡ್ಡಿಯನ್ನು ತೆಗೆದಂತೆ, ನಿರ್ವಹಂತಿ= ಅವರು ಪೃಥಕ್ಕರಿಸಿ ತಿಳಿಯುತ್ತಾರೆ.

ಶರೀರಮೇತೌ ಕುರುತಃ ಪಿತಾ ಮಾತಾ ಚ ಭಾರತ |
ಆಚಾರ್ಯತಸ್ತು ಯಜ್ಜನ್ಮ ತತ್ ಸತ್ಯಂ ವೈ ಯಥಾಽಮೃತಮ್ ॥7॥

ಹಿಂದೆ ಆಚಾರ್ಯಯೋನಿಂ ಎಂಬ ಶ್ಲೋಕದಲ್ಲಿ ತಿಳಿಸಿದ ಆಚಾರ್ಯರಿಗೆ ಇರುವ ಜನಕತ್ವವು ಮಾತಾ-ಪಿತೃಸಾಧಾರಣವಲ್ಲ ಎಂದು ಇಲ್ಲಿ ಹೇಳುತ್ತಾರೆ.

ಭಾರತ= ಎಲೈ ಧೃತರಾಷ್ಟ್ರನೇ, ಏತೌ ಪಿತಾ ಮಾತಾ ಚ= ಈ ತಂದೆ ತಾಯಿಗಳು, ಶರೀರಂ= ಪುತ್ರಶರೀರವನ್ನು, ಕುರಾತಃ= ಸೃಷ್ಟಿ ಮಾಡುತ್ತಾರೆ. ತು= ಆದರೆ, ಆಚಾರ್ಯತಃ= ಆಚಾರ್ಯರಿಂದ, ಯಜ್ಜನ್ಮ= ಉಂಟಾಗುವ ಯಾವ ಜನನವಿದೆಯೋ, ತತ್= ಅದು, ಅಮೃತಂ ಯಥಾ= ಅಮೃತದಂತೆ, ಸತ್ಯಂ= ವಿನಾಶಾಭಾವ ಸಂಪಾದಕವಾದುದು.

ಭಾರತ ಶ್ರೀನಿವಾಸಾಚಾರ್ಯರು ತಂದೆ, ತಾಯಿಗಳು ಶರೀರವನ್ನು ಸೃಷ್ಟಿ ಮಾಡಿದರೂ ಆಚಾರ್ಯರೇ ತಂದೆ-ತಾಯಿಗಳೂ ಸಹ. ಷಡ್ಪ್ರಶ್ನೋಪನಿಷತ್ತಿನಲ್ಲಿ ಉಪದೇಶ ಮಾಡುವ ಗುರುಗಳನ್ನು ಕುರಿತು `ತ್ವಹಿನಃ ಪಿತಾ ಇಹಾಸ್ಮಾಕಂ ಅವಿದ್ಯಾಃ ಪರಮಂ ಪಾರಂ ಪಾರಯತಿ' (ಅವಿದ್ಯೆಯನ್ನು ದಾಟಿಸುವ ನೀವೇ ನಮ್ಮ ತಂದೆ ಎಂದು ಹೇಳಿದ್ದಾರಷ್ಟೆ). ಅದರಂತೆ ಅಪಸ್ತಂಭ ಸೂತ್ರವೂ ಇದೆ. `ಸಹಿ ವಿದ್ಯಾತಸ್ತಂ ಜನಯತಿ ತತ್ಶ್ರೇಷ್ಠಂ ಜನ್ಮ ಶರೀರಮೇವ ಮಾತಾಪಿತರೋ ಜನಯತಃ' (ತಂದೆ ತಾಯಿಗಳು ಶರೀರವನ್ನು ಮಾತ್ರ ಸೃಷ್ಟಿ ಮಾಡುತ್ತಾರೆ. ಆಚಾರ್ಯರು ವಿದ್ಯೆಯಿಂದ ಅವನಿಗೆ ಪುನರ್ಜನ್ಮವನ್ನು ಕೊಡುತ್ತಾರೆ. ಅದು ಶ್ರೇಷ್ಠವಾದ ಜನ್ಮ) ಎಂದು ವ್ಯಾಖ್ಯಾನ ಮಾಡಿದ್ದಾರೆ.

ಯ ಆಸ್ತೃಣೋತ್ಯವಿತಥೇನ ಕರ್ಣಾ-
ವದುಃಖಂ ಕುರ್ವನ್ನಮೃತಂ ಸಂಪ್ರಯಚ್ಛನ್ |
ತಂ ಮನ್ಯೇತ ಪಿತರಂ ಮಾತರಂ ಚ
ತಸ್ಮೈ ನ ದ್ರುಹ್ಯೇತ್ ಕೃತಮಸ್ಯ ಜಾನನ್ ॥8॥

ಯಃ= ಯಾರು, ಅಮೃತಂ= ಮರಣವನ್ನು ಹೊಂದಿಸದಿರುವ ಪರಬ್ರಹ್ಮ ವಿಷಯಕ ಜ್ಞಾನವನ್ನು ಅಥವಾ ವೇದವನ್ನು, ಸಂಪ್ರಯಚ್ಛನ್= ಕೊಡುತ್ತಾ, ಅವಿತಥೇನ= ಸತ್ಯವಾದ ಉಪದೇಶಗಳಿಂದ, ಕರ್ಣೌ= ಕಿವಿಗಳಿಗೆ, ಅದುಃಖಂ ಕುರ್ವನ್= ಹಿಂಸೆಯಾಗದಂತೆ ಮಾಡಿ, ಆಸ್ತೃಣೋತಿ= ಶಿಷ್ಯನ ಜ್ಞಾನವನ್ನು ವಿಸ್ತಾರ ಮಾಡುತ್ತಾನೆಯೋ, ತಂ= ಅಂತಹ ಗುರುವನ್ನು, ಪಿತರಂ ಮಾತರಂ ಚ= ತಂದೆ ಮತ್ತು ತಾಯಿ ಎಂದು, ಮನ್ಯೇ= ತಿಳಿಯಬೇಕು.ಅಸ್ಯ= ಅವರು ಮಾಡಿದ, ಕೃತಂ= ಉಪಕಾರವನ್ನು, ಜಾನನ್= ತಿಳಿದವನಾಗಿ, ತಸ್ಮೈ= ಅಂತಹ ಗುರುಗಳಿಗೆ, ನ ದ್ರುಹ್ಯೇತ್= ದ್ರೋಹವನ್ನು ಮಾಡಬಾರದು.

ಗುರುಂ ಶಿಷ್ಯೋ ನಿತ್ಯಮಭಿವಾದಯೀತ
ಸ್ವಾಧ್ಯಾಯಮಿಚ್ಛೇಚ್ಛುಚಿರಪ್ರಮತ್ತಃ |
ಯನ್ಮಾದತೇ ನಾದಧೀತಾಥ ರೋಷಂ
ಏಷ ಪ್ರಥಮೋ ಬ್ರಹ್ಮಚರ್ಯಸ್ಯ ಪಾದಃ ॥9॥

ಸ್ವಾಧ್ಯಾಯಗಳನ್ನು ಮಾಡಲು ಬಯಸುವ ಶಿಷ್ಯನು, ಶುಚಿಯೂ, ಪ್ರಮಾದ ರಹಿತನೂ ಆಗಿ ನಿತ್ಯವೂ ಗುರುವಿಗೆ ನಮಸ್ಕಾರವನ್ನು ಮಾಡಬೇಕು. ಗುರುವಿನ ವಿಷಯದಲ್ಲಿ ಯಾವಾಗಲೂ ಸಂತೋಷವನ್ನು ಹೊಂದಬೇಕು. ಗುರುವು ತಾನು ಮಾಡಿದ ಅಪರಾಧಕ್ಕೆ ಶಿಕ್ಷೆಯನ್ನು ಕೊಟ್ಟರೂ ಅವರ ಮೇಲೆ ಕೋಪವನ್ನು ಹೊಂದಬಾರದು. ಇದು ಬ್ರಹ್ಮಚರ್ಯದ ಮೊದಲನೆಯ ಪಾದ.

ಶಿಷ್ಯವೃತ್ತಿಕ್ರಮೇಣೈವ ವಿದ್ಯಾಮಾಪ್ನೋತಿ ಯಃ ಶುಚಿಃ |
ಬ್ರಹ್ಮಚರ್ಯವ್ರತಸ್ಯಾಸ್ಯ ಪ್ರಥಮಃ ಪಾದ ಉಚ್ಯತೇ ॥10॥

ಶಿಷ್ಯನು ನಡೆದುಕೊಳ್ಳಬೇಕಾದ ರೀತಿಯಲ್ಲಿಯೇ ಶುದ್ಧನಾಗಿದ್ದು ಗುರುಗಳಲ್ಲಿ ನಡೆದುಕೊಂಡು ಯಾವನು ವಿದ್ಯೆಯನ್ನು ಪಡೆಯುತ್ತಾನೆಯೋ ಅದೂ ಪ್ರಥಮ ಪಾದವೆನಿಸಿಕೊಳ್ಳುತ್ತದೆ.

ಯಥಾ ನಿತ್ಯಂ ಗುರೌ ವೃತ್ತಿಃ ಗುರುಪತ್ನ್ಯಾಂ ತಥಾಽಽಚರೇತ್ |
ತತ್ಪುತ್ರೇ ಚ ತಥಾ ಕುರ್ವನ್ ದ್ವಿತೀಯಃ ಪಾದ ಉಚ್ಯತೇ ॥11॥

ಗುರುವಿನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಾನೆಯೋ, ಗುರುಪತ್ನಿಯ ವಿಷಯದಲ್ಲಿಯೂ ಮತ್ತು ಗುರುಪುತ್ರನ ವಿಷಯದಲ್ಲಿಯೂ ಹಾಗೆಯೇ ನಡೆದುಕೊಳ್ಳಬೇಕು. ಇದು ಬ್ರಹ್ಮಚರ್ಯದ ಎರಡನೆಯ ಪಾದವೆನಿಸುತ್ತದೆ. ಇದನ್ನು ಆಪಸ್ತಂಬ ಸೂತ್ರದಲ್ಲಿ `ಆಚಾರ್ಯವತ್ ಆಚಾರ್ಯದಾರೇಷು ವೃತ್ತಿಃ | ಆಚಾರ್ಯವತ್ ಆಚಾರ್ಯಪುತ್ರೇಷು ವೃತ್ತಿಃ ॥' ಎಂದು ಹೇಳಿದ್ದಾರೆ.

ಆಚಾರ್ಯೇಣಾಥ ಕೃತಂ ವಿಜಾನನ್
ಜ್ಞಾತ್ವಾ ಚಾರ್ಥಂ ಭಾವಿತೋಽಸ್ಮೀತ್ಯನೇನ |
ಯನ್ಮನ್ಯತೇ ತಂ ಪ್ರತಿ ಹೃಷ್ಟಬುದ್ಧಿಃ
ಸ ವೈ ತೃತೀಯೋ ಬ್ರಹ್ಮಚರ್ಯಸ್ಯ ಪಾದಃ ॥12॥

ಆಚಾರ್ಯರು ತನಗೆ ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು, ಅವರ ಉಪದೇಶವನ್ನು ತಿಳಿದುಕೊಂಡು, ಜ್ಞಾನದಾನವನ್ನು ಮಾಡಿ ಅವರು ನನ್ನನ್ನು ಬದುಕಿಸಿದ್ದಾರೆ ಎಂದು ತಿಳಿದು, ಅವರ ವಿಷಯದಲ್ಲಿ ಸಂತೋಷದಿಂದ ಇರುವುದು ಬ್ರಹ್ಮಚರ್ಯದ ಮೂರನೆಯ ಪಾದವೆನಿಸುತ್ತದೆ.

ಏವಂ ಚ ಸಂಗತಂ ಯದುಪಪ್ಲವೇದ್ಧಿ (ಯದ್ಧನಮುಪಪ್ಲವೇತ್)
ಆಚರ್ಯಯಾ ಕೃತಮಿತಿ ಚಾಭಿಮನ್ಯೇತ್ |
ಪ್ರಾಜ್ಞೋ ಮನ್ಯೇನ್ನೈತದಹಂ ಕರೋಮಿ
ಸ ವೈ ಚತುರ್ಥೋ ಬ್ರಹ್ಮಚರ್ಯಸ್ಯ ಪಾದಃ ॥13॥
ಹೀಗೆ ಯಾವುದಾದರೂ ಧನವು ಸಮೀಚೀನವಾಗಿ ಪ್ರಾಪ್ತವಾದರೆ ಅದನ್ನು ಆಚಾರ್ಯ ಸೇವೆಯಿಂದ ಪ್ರಾಪ್ತವಾದ ಫಲವೆಂದು ತಿಳಿಯಬೇಕು. ಪ್ರಾಜ್ಞನಾದವನು ಇದನ್ನು ನಾನು ಮಾಡುತ್ತಿದ್ದೇನೆ. ಅದರ ಫಲವಾಗಿ ಈ ಧನವು ದೊರಕಿದೆ ಎಂದು ತಿಳಿಯಬಾರದು. ಇದು ಬ್ರಹ್ಮಚರ್ಯದ ನಾಲ್ಕನೆಯ ಪಾದ.
ಆಚಾರ್ಯಾಯ ಪ್ರಿಯಂ ಕುರ್ಯಾತ್ ಪ್ರಾಣೈರಪಿ ಧನೈರಪಿ |
ಕರ್ಮಣಾ ಮನಸಾ ವಾಚಾ ಚತುರ್ಥಃ ಪಾದ ಉಚ್ಯತೇ ॥14॥
ತನ್ನ ಪ್ರಾಣಗಳಿಂದಲೂ, ಧನದಿಂದಲೂ, ಕರ್ಮ-ಮನಸ್ಸು ಮತ್ತು ಮಾತುಗಳಿಂದಲೂ, ಆಚಾರ್ಯರಿಗೆ ಪ್ರಿಯವನ್ನು ಮಾಡಬೇಕು. ಇದು ಬ್ರಹ್ಮಚರ್ಯದ ನಾಲ್ಕನೆಯ ಪಾದವೆನಿಸುತ್ತದೆ.
ಜ್ಞಾನೇನ(ಕಾಲೇನ) ಪಾದಂ ಲಭತೇ ತಥಾऽರ್ಥಂ
ತಥೈವ ಪಾದಂ ಗುರುಯೋಗತಶ್ಚ |
ಉತ್ಸಾಹಯೋಗೇನ ಚ ಪಾದಮೃಚ್ಛೇತ್
ಶಾಸ್ತ್ರೇಣ ಪಾದಂ ಚ ತತೋऽಭಿಯಾತಿ ॥15॥
ವಿದ್ಯೆಯ ನಾಲ್ಕು ಪಾದಗಳನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಇಲ್ಲಿ ಹೇಳುವ ಕ್ರಮವು ವಿವಕ್ಷಿತವಲ್ಲ. ಗುರುಯೋಗತಃ= ಗುರುಗಳ ಅನುಗ್ರಹರೂಪವಾದ ಉಪಾಯದಿಂದ ಪ್ರಥಮ ಪಾದಂ= ಮೊದಲನೆಯ ಪಾದವನ್ನು, ಲಭತೇ= ಹೊಂದುತ್ತಾನೆ. ಅನಂತರ ಉತ್ಸಾಹ ಯೋಗೇನ= ಉತ್ಸಾಹ ಎಂದರೆ ಪ್ರಯತ್ನ ಅದರಿಂದ ಸಾಧ್ಯವಾದ ಬುದ್ಧಿ ವಿಶೇಷವನ್ನು ತೆಗೆದುಕೊಳ್ಳಬೇಕು. ಅಂತಹ ಬುದ್ಧಿ ವಿಶೇಷದಿಂದ ಪಾದಂ= ದ್ವಿತೀಯ ಪಾದವನ್ನು, ಋಚ್ಛೇತ್= ಹೊಂದುತ್ತಾನೆ. ಅದರಂತೆ, ಕಾಲೇನ= ಸಹಪಾಠಿಗಳ ಸಮಾಗಮದ ಕಾಲದಲ್ಲಿ ಶಾಸ್ತ್ರವನ್ನು ಚರ್ಚೆ ಮಾಡಿ, ಪಾದಂ= ತೃತೀಯ ಪಾದವನ್ನು ಪಡೆಯುತ್ತಾನೆ. ಜ್ಞಾನೇನ ಪಾದಂ ಎಂಬ ಪಾಠದ ಬದಲು ಇಲ್ಲಿ ಕಾಲೇನ ಪಾದಂ ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ತತ= ಅನಂತರದಲ್ಲಿ, ಶಾಸ್ತ್ರೇಣ= ತನ್ನ ಶಿಷ್ಯರಿಗೆ ಉಪದೇಶ ಮಾಡುವುದರಿಂದ, ಪಾದಂ= ನಾಲ್ಕನೆಯ ಪಾದವನ್ನು, ಅಭಿಯಾತಿ= ಪಡೆಯುತ್ತಾನೆ. ಈ ವಿಷಯವು
`ಆಚಾರ್ಯಾತ್ ಪಾದಮಾದತ್ತೇ ಪಾದಂ ಶಿಷ್ಯಃ ಸ್ವಬುದ್ಧಿತಃ (ಸ್ವಮೇಧಯಾ) |
ಪಾದಂ ಸಬ್ರಹ್ಮಚಾರಿಭ್ಯಃ ಪಾದಂ ವ್ಯಾಖ್ಯಾನಕೌಶಲಾತ್ ॥'
(ಶಿಷ್ಯನು ಗುರುಗಳ ಉಪದೇಶದಿಂದ ಒಂದು ಪಾದವನ್ನು ಸ್ವೀಕರಿಸುತ್ತಾನೆ. ತನ್ನ ಬುದ್ಧಿಯಿಂದ ಇನ್ನೊಂದು ಪಾದವನ್ನೂ, ಸಹಪಾಠಿಗಳ ಜೊತೆಯಲ್ಲಿ ಇನ್ನೊಂದು ಪಾದವನ್ನೂ ಮತ್ತು ತನ್ನ ವ್ಯಾಖ್ಯಾನಕೌಶಲದಿಂದ ಇನ್ನೊಂದು ಪಾದವನ್ನು ಪಡೆಯುತ್ತಾನೆ) ಎಂದು ಪ್ರಮಿತವಾಗಿದೆ.
ಜ್ಞಾನಾದಯೋ ದ್ವಾದಶ ಯಸ್ಯ ರೂಪಮ್
ಅನ್ಯಾನಿ ಚಾಂಗಾನಿ ತಥಾ ಬಲಂ ಚ |
ಆಚಾರ್ಯಯೋಗೇ ಫಲತೀತಿ ಚಾಹುಃ
ಬ್ರಹ್ಮಾರ್ಥಯೋಗೇನ ಚ ಬ್ರಹ್ಮಚರ್ಯಮ್ ॥16॥
ಯಸ್ಯ= ಯಾವ ಅಧಿಕಾರಿಗೆ, ಜ್ಞಾನಾದಯೋ ದ್ವಾದಶ= ಜ್ಞಾನಾದಿ ಹನ್ನೆರಡು ಗುಣಗಳು, ರೂಪಂ= ಸ್ವರೂಪವಾಗಿವೆಯೋ, ಅನ್ಯಾನಿ ಚಾಂಗಾನಿ= ಉಳಿದ ಜ್ಞಾನದ ಅಂಗಗಳು, ಎಂದರೆ `ಸತ್ಯಂ ನ್ಯೂನಂ' ಎಂಬಲ್ಲಿ ಹೇಳಿದಂತೆ ಉಳಿದ ಅಂಗಗಳು, ತಥಾ ಬಲಂ ಚ= ಮೀಮಾಂಸಾ, ಯುಕ್ತಿಬಲಗಳೆಲ್ಲವೂ, ಆಚಾರ್ಯಯೋಗೇ= ಗುರು ಪ್ರಾಪ್ತಿ ಉಂಟಾದಾಗ, ಫಲತೀತಿ= ಅಭಿವೃದ್ಧಿಯನ್ನು ಹೊಂದುತ್ತವೆ ಅಥವಾ ಉಂಟಾಗುತ್ತವೆ ಎಂದು, ಆಹುಃ= ಪ್ರಾಜ್ಞರು ಹೇಳುತ್ತಾರೆ. ಸದ್ಗುರುಗಳ ಪ್ರಾಪಿತಯಾದಾಗ ಮಾತ್ರ ಜ್ಞಾನಾದಿ ದ್ವಾದಶ ಗುಣಗಳು, ಅವುಗಳ ಅಂಗಗಳಿಂದ ಮತ್ತು ಬಲಗಳಿಂದ ಕೂಡಿಕೊಂಡು ಉಂಟಾಗುತ್ತವೆ ಎಂದು ಅಭಿಪ್ರಾಯ.
ಬ್ರಹ್ಮಾರ್ಥಯೋಗೇನ= ಪರಬ್ರಹ್ಮನಲ್ಲಿ ಭಕ್ತಿರೂಪವಾದ ಉಪಾಯವನ್ನು ಹೊಂದುವುದರಿಂದ, ಬ್ರಹ್ಮಚರ್ಯಂ ಚ= ಬ್ರಹ್ಮಚರ್ಯ ವ್ರತವೂ ಸಹ, ಫಲತಿ= ಸಿದ್ಧಿಸುತ್ತದೆ.
ಏವಂ ವಸನ್ ತದ್ ಯದುಪಪ್ಲವೇದ್ ಧನಮ್
ಹ್ಯಾಚಾರ್ಯಾಯ ತದನುಪ್ರಯಚ್ಛೇತ್ |
ಸತಾಂ ವೃತ್ತಿಂ ಬಹುಗುಣಾಮೇವಮೇತಿ
ಗುರೋಃ ಪುತ್ರೇ ಭವತಿ ಚ ವೃತ್ತಿರೇಷಾ ॥17॥
ಹೀಗೆ ಗುರುಕುಲವಾಸವನ್ನು ಮಾಡುವವನಿಗೆ ಯಾವುದಾದರೂ ಧನವು ಒದಗಿದರೆ ಅದನ್ನು ಗುರುಗಳಿಗೇ ಸಮರ್ಪಿಸಬೇಕು. ಆಚರ್ಯಯಾ ಎಂಬ ಪಾಠವಿದ್ದರೆ ತನ್ನ ಗುರುಸೇವೆಯಿಂದ ಬಂದಿದೆ ಎಂದು ತಿಳಿದು ಎಂದರೆ ಗುರುಸೇವೆಯಿಂದ ಪ್ರಸನ್ನರಾದ ಗುರುಗಳ ಅನುಗ್ರಹದಿಂದ ಬಂದಿದೆ ಎಂದು ತಿಳಿದು ಅದನ್ನು ಗುರುಗಳಿಗೇ ಸಮರ್ಪಿಸಬೇಕು. ಹೀಗೆ ಮಾಡಿದರೆ ಸಜ್ಜನರ ಬಹಳ ಶ್ರೇಷ್ಠವಾದ ನಡತೆಯನ್ನು ಅವನು ಅನುಸರಿಸುತ್ತಾನೆ. ಗುರುವಿನ ಪುತ್ರನ ವಿಷಯದಲ್ಲಿಯೂ ಹೀಗೆಯೇ ನಡೆದುಕೊಳ್ಳಬೇಕು.
ಏವಂ ವಸನ್ ಸರ್ವತೋ ವರ್ಧತೇ ಚ
ಬಹೂನ್ ಪುತ್ರಾನ್ ಲಭತೇ ಚ ಪ್ರತಿಷ್ಠಾಮ್ |
ವರ್ಷಂತಿ ಚಾಸ್ಮೈ ಪ್ರದಿಶೋ ದಿಶಶ್ಚ
ವಸತ್ಯಸ್ಮಿನ್ ಬ್ರಹ್ಮಚರ್ಯೇ ಜನಾಶ್ಚ ॥18॥

ಹೀಗೆ ಗುರುಕುಲ ವಾಸವನ್ನು ಮಾಡುವವನು ಎಲ್ಲ ರೀತಿಯಿಂದಲೂ ಅಭಿವೃದ್ಧಿಯನ್ನು ಹೊಂದುತ್ತಾನೆ. ಅನೇಕ ಪುತ್ರರನ್ನು ಪಡೆಯುತ್ತಾನೆ. ದಿಕ್ಕು -ವಿದಿಕ್ಕುಗಳಲ್ಲಿ ಪ್ರತಿಷ್ಠೆಯನ್ನು ಎಂದರೆ ಕೀರ್ತಿಯನ್ನು ಪಡೆಯುತ್ತಾನೆ. ದಿಕ್ಕು ಮತ್ತು ವಿದಿಕ್ಕುಗಳಿಗೆ ಅಭಿಮಾನಿಗಳಾದ ದೇವತೆಗಳು ಅವನಿಗೆ ಬೇಕಾದ ಎಲ್ಲವನ್ನೂ ಕೊಡುತ್ತಾರೆ. ಅಂತಹವನ ಬ್ರಹ್ಮಚರ್ಯದಲ್ಲಿ ಎಲ್ಲರೂ ನಂಬಿಕೆಯನ್ನು ಇಡುತ್ತಾರೆ. `ಧೀರಸ್ವತೋ ಬ್ರಹ್ಮಚರ್ಯಂ ಚರೇತ' ಎಂದು ನಾಲ್ಕನೆಯ ಪಾದಕ್ಕೆ ಪಾಠಾಂತರವಿದೆ. ಆಗ ಈ ಮೇಲೆ ಹೇಳಿದ ಕಾರಣಗಳಿಂದ ಧೀರನಾದವನು ಬ್ರಹ್ಮಚರ್ಯವ್ರತವನ್ನು ಮಾಡಬೇಕು ಎಂದು ಅರ್ಥ.

ಏತೇನ ಬ್ರಹ್ಮಚರ್ಯೇಣ ದೇವಾ ದೇವತ್ವಮಾಪ್ನುವನ್ |
ಋಷಯಶ್ಚ ಮಹಾಭಾಗ ಬ್ರಹ್ಮಚರ್ಯೇಣ ಚಾಭವನ್ ॥19॥

ಈ ಬ್ರಹ್ಮಚರ್ಯಕ್ಕೆ ಹಿಂದೆ ಹೇಳಿದುದಷ್ಟೇ ಫಲವಲ್ಲ. ದೇವತೆಗಳೂ ಸಹ ಬ್ರಹ್ಮಚರ್ಯದಿಂದ ದೇವಪದವಿಯನ್ನು ಹೊಂದಿದ್ದಾರೆ. ಋಷಿಗಳೂ ಸಹ ಬ್ರಹ್ಮಚರ್ಯದಿಂದ ಮಹಾನುಭಾವರಾಗಿದ್ದಾರೆ.

ಏತೇನೈವ ಸಗಂಧರ್ವಾ ರೂಪಮಪ್ಸರಸೋಽಜಯನ್ |
ಏತೇನ ಬ್ರಹ್ಮಚರ್ಯೇಣ ಸೂರ್ಯ ಅಹ್ನಾಯ ಜಾಯತೇ ॥20॥

ಈ ಬ್ರಹ್ಮಚರ್ಯದಿಂದಲೇ ಗಂಧರ್ವಸಹಿತರಾದ ಅಪ್ಸರೆಯರು ಶ್ರೇಷ್ಠವಾದ ಸೌಂದರ್ಯವನ್ನು ಪಡೆದರು. ಈ ಬ್ರಹ್ಮಚರ್ಯದಿಂದಲೇ ಸೂರ್ಯನು ಜಗತ್ತನ್ನು ಬೆಳಗಲು ನಿತ್ಯವೂ ಉದಯಿಸುತ್ತಾನೆ.

ಯ ಆಶ್ರಯೇತ್ ಪಾವಯೇಚ್ಚಾಪಿ ರಾಜನ್
ಸರ್ವಂ ಶರೀರಂ ತಪಸಾ ತಪ್ಯಮಾನಃ |
ಏತೇನ ವೈ ಬಾಲ್ಯಮತ್ಯೇತಿ ವಿದ್ವಾನ್
ಮೃತ್ಯುಂ ತಥಾ ಸ ಜಯತ್ಯಂತಕಾಲೇ ॥21॥

ಯಾವ ಪುರುಷನು ಬ್ರಹ್ಮಚರ್ಯವ್ರತವನ್ನು ಆಶ್ರಯಿಸಿ, ತಪಸ್ಸನ್ನು ಮಾಡುತ್ತಾ ತನ್ನ ಶರೀರವನ್ನು ಪವಿತ್ರೀಕರಿಸುತ್ತಾನೆಯೋ ಅಂತಹ ಜ್ಞಾನಿಯು, ಬಾಲ್ಯಂ= ಎಂದರೆ ಬಾಲ್ಯ ಸಹಜವಾದ ಅಜ್ಞತ್ವವನ್ನು ಅಥವಾ ಮೂರ್ಖತನವನ್ನು, ಅತ್ಯೇತಿ= ದಾಟುತ್ತಾನೆ. ತಥಾ= ಅದರಂತೆ, ಅಂತಕಾಲೇ= ಶರೀರಪಾತಕಾಲದಲ್ಲಿ ಬಂದ, ಮೃತ್ಯುಂ= ಮರಣವನ್ನೂ ಸಹ, ಜಯತಿ= ಜಯಿಸುತ್ತಾನೆ.

ಆಕಾಂಕ್ಷಾರ್ಥಸ್ಯ ಸಂಯೋಗಾದ್ ರಸಭೇದಾರ್ಥಿನಾಮಿವ |
ಏವಂ ಹ್ಯೇತತ್ ಸಮಾಜ್ಞಾಯ ತಾದೃಗ್ ಭಾವಂ ಗತಾ ಇಮೇ ॥ (ಮೂಲಮ್)

ರಸಭೇದಾಃ= ರಸ ಎಂದರೆ ಶ್ರೇಷ್ಠ, ಭೇದ ಎಂದರೆ ವಿಶೇಷ, ಶ್ರೇಷ್ಠ ವಸ್ತು ವಿಶೇಷಗಳಾದ ಕಲ್ಪವೃಕ್ಷ, ಚಿಂತಾಮಣಿ ಮೊದಲಾದವುಗಳು, ಅರ್ಥಿನಾಂ= ಪ್ರಾರ್ಥಿಸುವವರಿಗೆ, ಆಕಾಂಕ್ಷಾರ್ಥಸ್ಯ ಸಂಯೋಗಾತ್ ಇವ= ಅವರಿಗೆ ಆಕಾಂಕ್ಷಿತವಾದ ಫಲವನ್ನು ಕೊಡುವ ಸಂಬಂಧವನ್ನು ಉಂಟುಮಾಡುವಂತೆ, ಏವಂ= ಅದೇ ರೀತಿಯಲ್ಲಿ, ಏತತ್= ಈ ಬ್ರಹ್ಮಚರ್ಯವನ್ನು, ಸಮಾಜ್ಞಾಯ= ಚೆನ್ನಾಗಿ ತಿಳಿದು ಆಚರಿಸಿ, ಇಮೇ= ಈ ದೇವತಾದಿಗಳು, ಪ್ರಾದುರ್ಭಾವಂ= ದೇವತ್ವಾದಿಗಳನ್ನು, ಗತಾಃ= ಹೊಂದಿದ್ದಾರೆ. ಆದ್ದರಿಂದ ಬ್ರಹ್ಮಚರ್ಯವ್ರತವು ಪರಮಪುರುಷಾರ್ಥ ಸಾಧನವಾದುದರಿಂದ ಆಚಾರ್ಯರ ಕುಲಕ್ಕೆ ಹೋಗಿ, ಅವರಿಗೆ ಶಿಷ್ಯನಾಗಿ ಬ್ರಹ್ಮಚರ್ಯವನ್ನು ಆಚರಿಸಬೇಕು ಎಂದು ತಾತ್ಪರ್ಯ.

ಅಂತವಂತಃ ಕ್ಷತ್ರಿಯಾಸ್ತೇ ಜಯಂತಿ
ಲೋಕಾನ್ ಜನಾಃ ಕರ್ಮಣಾ ನಿರ್ಮಲೇನ |
ಜ್ಞಾನೇನ ವಿದ್ವಾಂಸ್ತೇಜ ಅಭ್ಯೇತಿ ನಿತ್ಯಂ
ನ ವಿದ್ಯತೇ ಹ್ಯನ್ಯಥಾ ತಸ್ಯ ಪಂಥಾಃ ॥22॥

ಅಂತವಂತಃ= ಕರ್ಮಸ್ವರೂಪದ ನಿರ್ಣಯವುಳ್ಳ, ಕ್ಷತ್ರಿಯಾ ಜನಾಃ= ಕ್ಷತ್ರಿಯ ಜನರೂ ಸಹ, ನಿರ್ಮಲೇನ ಕರ್ಮಣಾ= ಶುದ್ಧವಾದ ಕರ್ಮಾಚರಣೆಯಿಂದ, ಲೋಕಾನ್= ಸ್ವರ್ಗಾದಿ ಲೋಕಗಳನ್ನು, ಜಯಂತಿ= ಪಡೆಯುತ್ತಾರೆ. ವಿದ್ವಾನ್= ವಿದ್ವಾಂಸನಾದವನು, ಜ್ಞಾನೇನ= ಜ್ಞಾನಬಲದಿಂದ, ನಿತ್ಯಂ= ಸರ್ವದಾ, ತೇಜಃ= ಜ್ಞಾನಾತ್ಮಕವಾದ ಹರಿಯನ್ನು, ಅಭ್ಯೇತಿ= ಹೊಂದುತ್ತಾನೆ. ತಸ್ಯ= ಆ ಹರಿಪ್ರಾಪ್ತಿಯನ್ನು ಕುರಿತು, ಅನ್ಯಥಾ= ಬೇರೆ ರೀತಿಯಲ್ಲಿ, ಪಂಥಾಃ= ಮಾರ್ಗವು, ನ ವಿದ್ಯತೇ= ಇರುವುದಿಲ್ಲ.

ಅಂತವತಃ ಎಂದು ಪಾಠವಿದ್ದರೆ ಅದನ್ನು ಲೋಕಾನ್ ಎಂಬುದಕ್ಕೆ ವಿಶೇಷವನ್ನಾಗಿ ಮಾಡಿ ಅನಿತ್ಯವಾದ ಸ್ವರ್ಗಾದಿ ಲೋಕಗಳನ್ನು ಎಂದು ಅರ್ಥವನ್ನು ಮಾಡಬೇಕು. ಕರ್ಮಣಾ ನಿರ್ಮಿತೇನ ಎಂಬ ಪಾಠವಿದ್ದರೆ ತಾವು ಆಚರಣೆ ಮಾಡಿದ ಕರ್ಮದಿಂದ ಎಂದು ಅರ್ಥವನ್ನು ಮಾಡಬೇಕು. ಕ್ಷತ್ರಿಯ ತೇ ಜಯಂತಿ ಎಂಬ ಪಾಠವಿದ್ದರೆ ಎಲೈ ಕ್ಷತ್ರಿಯನಾದ ಧೃತರಾಷ್ಟ್ರನೇ, ತೇ ಜನಾಃ= ಬ್ರಹ್ಮಚರ್ಯವ್ರತವನ್ನು ಆಚರಿಸುವ ಪುರುಷರು ಎಂದು ಅರ್ಥವನ್ನು ಮಾಡಬೇಕು.

ಧೃತರಾಷ್ಟ್ರಃ

ಆಭಾತಿ ಶುಕ್ಲಮಿವ ಲೋಹಿತಮಿವಾಥೋ
ಕೃಷ್ಣಮಥಾರ್ಜುನಂ ಕಾದ್ರವಂ ವಾ |
ಯದ್ ಬ್ರಾಹ್ಮಣಃ ಪಶ್ಯತಿ ತದ್ಧಿ ವಿದ್ವಾನ್
ಕಥಂ ರೂಪಂ ತದಮೃತಮಕ್ಷರಂ ಪರಮ್ ॥23॥

ಹೀಗೆ ಧೃತರಾಷ್ಟ್ರನು ಬ್ರಹ್ಮಚರ್ಯಸ್ವರೂಪವನ್ನು ತಿಳಿದು ಅದರಿಂದ ಪ್ರಾಪ್ಯನಾದ ಬ್ರಹ್ಮನು ಹೇಗಿದ್ದಾನೆಂದು ಪ್ರಶ್ನೆ ಮಾಡುತ್ತಾನೆ. ವಿದ್ವಾನ್ ಬ್ರಾಹ್ಮಣಃ= ಜ್ಞಾನಿಯಾದ ಬ್ರಾಹ್ಮಣನು, ಯತ್ಪಶ್ಯತಿ= ಯಾವ ಬ್ರಹ್ಮನನ್ನು ನೋಡುತ್ತಾನೆಯೋ, ತತ್= ಆ, ಅಮೃತಂ= ಮರಣರಹಿತವಾದ, ಅಕ್ಷರಂ= ನಾಶರಹಿತವಾದ, ಪರಂ= ಸರ್ವೋತ್ತಮವಾದ, ತತ್= ಬ್ರಹ್ಮನಾ, ಶುಕ್ಲಮಿವ= ಬಿಳಿಯ ಬಣ್ಣವನ್ನು ಹೊಂದುವಂತೆ, ಆಭಾತಿ= ತೋರುತ್ತಾನೆಯೇ. ಲೋಹಿತಮಿವ= ಕೆಂಪು ಬಣ್ಣವನ್ನು ಹೊಂದುವಂತೆ ತೋರುತ್ತಾನೆಯೇ? ಅಥೋ= ಅಥವಾ, ಕೃಷ್ಣಂ= ಕಪ್ಪು ಬಣ್ಣದಿಂದ ಕೂಡಿರುವಂತೆ ತೋರುತ್ತಾನೆಯೇ? ಅರ್ಜುನಂ ಕಾದ್ರವಂ ವಾ= ಅಥವಾ ಬಿಳಿಯ ಬಣ್ಣದಿಂದ

ಅಥವಾ ಕಂದುಬಣ್ಣದಿಂದ ಕೂಡಿರುವಂತೆ ತೋರುತ್ತಾನೆಯೇ? `ತದ್ ಬ್ರಾಹ್ಮಣಃ ಪಶ್ಯತಿ ಯತ್ರ ವಿದ್ವಾನ್' ಎಂದು ಮೂರನೆಯ ಪಾದದ ಪಾಠವಿದ್ದರೆ `ಯತ್ರ' ಎಂಬುದಕ್ಕೆ ಎಲ್ಲಿ ಎಂದು ಅರ್ಥ. `ಅಸ್ತಂ ಯತ್ರ ಚ ಗಚ್ಛತಿ' (ಎಲ್ಲಿ ಅಸ್ತನಾಗುತ್ತಾನೆ?), `ಧಾರಣಾ ಯತ್ರ ಸಮ್ಮತಾ' (ಎಲ್ಲಿ ಧಾರಣೆಯನ್ನು ಮಾಡಬೇಕು) ಮುಂತಾದ ಪ್ರಯೋಗಗಳಲ್ಲಿ ಯತ್ರ ಎಂದರೆ ಎಲ್ಲಿ ಎಂಬ ಅರ್ಥವು ಪ್ರಸಿದ್ಧವಾಗಿದೆ. ವಿದ್ವಾಂಸನಾದ ಬ್ರಾಹ್ಮಣನು ಅಂತಹ ಹರಿಯನ್ನು ಎಲ್ಲಿ ನೋಡುತ್ತಾನೆ ಮತ್ತು ಅವನ ರೂಪವು ಹೇಗಿರುತ್ತದೆ ಎಂದು ಪ್ರಶ್ನೆಯ ಅಭಿಪ್ರಾಯ.

ಸನತ್ಸುಜಾತಃ

ನಾ(ಅ)ಭಾತಿ ಶುಕ್ಲಮಿವ ಲೋಹಿತಮಿವಾಥೋ
　　ಕೃಷ್ಣಮಥಾರ್ಜುನಂ ಕಾದ್ರವಂ ವಾ |
ನ ಪೃಥಿವ್ಯಾಂ ತಿಷ್ಠತಿ ನಾಂತರಿಕ್ಷೇ
　　ನೈತತ್ ಸಮುದ್ರೇ ಸಲಿಲಂ ಬಿಭರ್ತಿ ॥24॥

ಆ ಪರಮಾತ್ಮನ ರೂಪವು ಬಿಳಿಯ ಬಣ್ಣದಿಂದ ಕೂಡಿರುವಂತೆ ಕೆಂಪು ಬಣ್ಣದಿಂದ, ಕಪ್ಪು ಬಣ್ಣದಿಂದ, ಪರಿಶುದ್ಧವಾದ ಬಿಳಿಯ ಬಣ್ಣದಿಂದ ಮತ್ತು ಕಂದು ಬಣ್ಣದಿಂದ ಕೂಡಿರುವಂತೆ ತೋರುತ್ತದೆ. ಪರಮಾತ್ಮನ ಆ ಬಣ್ಣಗಳು ಅಪ್ರಾಕೃತವಾದುದರಿಂದ ಬಿಳಿಯ ಬಣ್ಣದಂತೆ ಇತ್ಯಾದಿ ಎಲ್ಲ ಕಡೆಯಲ್ಲಿಯೂ `ಇವ' ಶಬ್ದವನ್ನು ಪ್ರಯೋಗಿಸಿದ್ದಾರೆ. ಪರಮಾತ್ಮನು ಸ್ವತಂತ್ರನಾಗಿರುವುದರಿಂದ ಆಧಾರದ ಅಪೇಕ್ಷೆ ಇಲ್ಲದಿರುವುದರಿಂದ ಅವನ ರೂಪವು ಭೂಮಿಯಲ್ಲಾಗಲೀ, ಅಂತರಿಕ್ಷದಲ್ಲಾಗಲೀ, ಅನ್ಯಾಧಾರವಾಗಿ ಇರುವುದಿಲ್ಲ. ಅವನು ಬಹಳ ದೊಡ್ಡ ಜ್ಞಾನಾನಂದಮಯವಾದ ಶರೀರ ಹೊಂದಿರುವುದರಿಂದ ಅಗಾಧವಾದ ಸಮುದ್ರಜಲವೂ ಸಹ ಅವನಿಗೆ ಆಶ್ರಯವಾಗಲಾರದು. ಅವನು ಅದನ್ನೂ ಮೀರಿದ ಬಹಳ ದೊಡ್ಡ ಪರಿಮಾಣ ಉಳ್ಳವನು. `ನಾಭಾತಿ' ಎಂಬ ಪಾಠದಲ್ಲಿ ಪ್ರಾಕೃತವಾದ ಶುಕ್ಲಾದಿರೂಪವುಳ್ಳವನಂತೆ ತೋರುವುದಿಲ್ಲ ಎಂದು ಅರ್ಥ.

ನ ತಾರಕಾಸು ನ ಚ ವಿದ್ಯುದಾಶ್ರಿತಂ
　　ನ ಚಾಭ್ರೇಷು ದೃಶ್ಯತೇ ರೂಪಮಸ್ಯ |
ನ ಚಾಪಿ ವಾಯೌ ನ ಚ ದೇವತಾಸು
　　ನ ವೈ ಚಂದ್ರೇ ದೃಶ್ಯತೇ ನೋತ ಸೂರ್ಯೇ ॥25॥

ಅವನ ರೂಪವು ನಕ್ಷತ್ರಗಳಲ್ಲಾಗಲೀ, ಮಿಂಚಿನಲ್ಲಾಗಲೀ ಆಶ್ರಯಿಸಿಕೊಂಡಿರುವುದಿಲ್ಲ ಅಥವಾ ಮೋಡಗಳನ್ನು ಆಶ್ರಯಿಸಿಕೊಂಡಿರುವುದಿಲ್ಲ. ವಾಯುವಿನಲ್ಲಾಗಲೀ, ದೇವತೆಗಳಲ್ಲಾಗಲೀ, ಚಂದ್ರನಲ್ಲಾಗಲೀ ಅಥವಾ ಸೂರ್ಯನಲ್ಲಾಗಲಿ ಆಶ್ರಿತವಾಗಿರುವುದಿಲ್ಲ.

ಪ್ರಕಾಶಮಾನವಾದರೂ ಅವನು ಪ್ರಕಾಶಿಸುವ ವಸ್ತುಗಳಾದ ನಕ್ಷತ್ರಗಳು, ವಿದ್ಯುತ್, ಸೂರ್ಯ-ಚಂದ್ರನಲ್ಲಿ ಆಶ್ರಿತನಲ್ಲ. ಮೇಘಶ್ಯಾಮನಾದರೂ ಮೇಘಗಳಲ್ಲಿ ಆಶ್ರಯವನ್ನು ಹೊಂದಿಲ್ಲ. ಅದೃಶ್ಯನಾದರೂ ಅದೃಶ್ಯರಾದ ವಾಯುವಿನಲ್ಲಿ, ದೇವತೆಗಳಲ್ಲಿ ಆಶ್ರಿತನಲ್ಲ ಎಂದು ಅಭಿಪ್ರಾಯ.

ನೈವರ್ಕ್ಷು ತನ್ನ ಯಜುಷ್ಷು ನಾಪ್ಯಥರ್ವಸು
　　ನ ದೃಶ್ಯತೇ ವೈ ವಿಮಲೇಷು ಸಾಮಸು |
ರಥಂತರೇ ಬಾರ್ಹತೇ ವಾಽಪಿ ರಾಜನ್
　　ಮಹಾವ್ರತಸ್ಯಾತ್ಮನಿ ದೃಶ್ಯತೇಽಪಿ ತತ್ ॥26॥

ಎಲೈ ರಾಜನೇ, ಅವನ ರೂಪಗಳು ಅನೇಕ ಶಾಖೆಗಳಿಂದ ಕೂಡಿದ ಋಗ್ವೇದಗಳಲ್ಲಿ ಕಾಣುವುದಿಲ್ಲ. ಯಜುರ್ವೇದಗಳಲ್ಲಿ ಕಾಣುವುದಿಲ್ಲ. ಅಥರ್ವವೇದಗಳಲ್ಲಿ ಕಾಣುವುದಿಲ್ಲ. ಪರಿಶುದ್ಧವಾದ ರಥಂತರ, ಬೃಹತೀ ಮೊದಲಾದ ಸಾಮಗಳಲ್ಲಿಯೂ ಕಾಣುವುದಿಲ್ಲ. ಆದರೆ ಮಹಾವ್ರತವನ್ನು ಧರಿಸಿದ ಜ್ಞಾನಿಯ ಮನಸ್ಸಿನಲ್ಲಿ ಮಾತ್ರ ಕಾಣುತ್ತದೆ.

ಅಪಾರಣೀಯಂ ತಮಸಃ ಪರಸ್ತಾತ್
　　ತದಂತಕೋಽನ್ವೇತಿ ವಿನಾಶಕಾಲೇ |
ಅಣೀಯರೂಪಂ ಚ ತಥಾಽಪ್ಯಣೀಯಸಾಂ
　　ಮಹತ್ ಸ್ವರೂಪಂ ತ್ವಪಿ ಪರ್ವತೇಭ್ಯಃ ॥27॥

ಅದರ ಅಂತವನ್ನು ಯಾರೂ ಮುಟ್ಟಲಾರರು. ಏಕೆಂದರೆ ಅದು ಅನಂತ. `ಅಪಾರಣೀಯಂ' ಎಂಬ ಪಾಠವಿದ್ದರೆ ಯಾರಿಂದಲೂ ನಿರಾಕರಿಸಲು ಅಸಾಧ್ಯವಾದುದು ಎಂದು ಅರ್ಥ. `ಆವಾರಣೀಯಂ' ಎಂಬ ಪಾಠವಿದ್ದರೆ ಯಾವುದರಿಂದಲೂ ಆವರಿಸಲು ಪಡಲು ಸಾಧ್ಯವಿಲ್ಲದುದು, ವ್ಯಾಪ್ತವಾದುದು ಎಂದು ಅರ್ಥ. ಅದು ಅಜ್ಞಾನದಿಂದ ದೂರವಾದುದು ಎಂದರೆ ಅಜ್ಞಾನ ಸ್ಪರ್ಶವಿಲ್ಲದುದು ಎಂದು ಅರ್ಥ. ಜಗತ್ತಿನ ಪ್ರಳಯದ ಸಮಯದಲ್ಲಿ ಕೊನೆಯಲ್ಲಿ ಉಳಿಯುವ ಮಹತತ್ತ್ವಭಿಮಾನಿಗಳಾದ ಬ್ರಹ್ಮದೇವರು ಅವನನ್ನು ಪ್ರವೇಶಿಸುತ್ತಾರೆ. ಅದು ಅಣುಗಳಿಗಿಂತಲೂ ಪರಮ ಅಣುವಾದುದು. ಪರ್ವತಗಳಿಗಿಂತಲೂ ದೊಡ್ಡ ಪರಿಮಾಣವನ್ನು ಹೊಂದಿರುವಂತಹದು.

ಸಾ ಪ್ರತಿಷ್ಠಾ ತದಮೃತಂ ಲೋಕಸ್ತದ್ ಬ್ರಹ್ಮ ತದ್ ಯಶಃ |
ಭೂತಾನಿ ಜಜ್ಞಿರೇ ತಸ್ಮಾತ್ ಪ್ರಲಯಂ ಯಾಂತಿ ತತ್ರ ಚ ॥28॥

ಆ ಪರಮಾತ್ಮನೇ ಜಗತ್ತಿಗೆ ಆಶ್ರಯನಾದವನು. ಅಮೃತಂ= ನಾಶರಹಿತನಾದವನು, ಲೋಕಃ= ಪ್ರಕಾಶರೂಪನಾದವನು, ಬ್ರಹ್ಮ= ಪೂರ್ಣನಾದವನು, ಯಶಃ= ಯಶೋ ರೂಪನಾದವನು, ತಸ್ಮಾತ್= ಅವನಿಂದಲೇ, ಭೂತಾನಿ= ಎಲ್ಲ ಜೀವ-ಜಡರೂ, ಜಜ್ಞಿರೇ= ಉತ್ಪತ್ತಿಯನ್ನು ಹೊಂದಿದರು, ಪ್ರಲಯ ಕಾಲದಲ್ಲಿ, ತತ್ರ ಚ= ಅವನಲ್ಲಿಯೇ, ಪ್ರಲಯಂ ಯಾಂತಿ= ಲಯವನ್ನು ಹೊಂದುತ್ತಾರೆ.

ಅನಾಮಯಂ ತನ್ಮಹದುದ್ಯತಂ ಯಶೋ

ವಾಚೋ ವಿಕಾರಾತ್ ಕವಯೋ ವದಂತಿ |
ಅಸ್ಮಿನ್ ಜಗತ್ ಸರ್ವಮಿದಂ ಪ್ರತಿಷ್ಠಿತಂ
ಯೇ ತದ್ವಿದುರಮೃತಾಸ್ತೇ ಭವಂತಿ ॥29॥
ತತ್= ಆ ಪರಮಾತ್ಮನು-ಅನಾಮಯಂ= ನಿರ್ದುಷ್ಟನಾದವನು, ಮಹತ್= ದೇಶ, ಕಾಲಗುಣಗಳಿಂದ ಅನಂತನಾದವನು, ಉದ್ಯತಂ= ಸೃಷ್ಟ್ಯಾದಿಗಳಲ್ಲಿ ಸ್ವತಂತ್ರವಾಗಿ ಪ್ರಯತ್ನವನ್ನು ಮಾಡುವವನು, ಯಶಃ= ಯಶೋರೂಪನಾದವನು, ಕವಯಃ= ಜ್ಞಾನಿಗಳು, ವಾಚೋ ವಿಕಾರಾತ್= ಶಬ್ದಗಳ ವಿವಿಧ ಆಕಾರಗಳುಳ್ಳ ಋಗಾದಿ ಅಪೌರುಷೇಯಗ್ರಂಥಗಳಿಂದಲೂ ಮತ್ತು ಪೌರುಷೇಯ ಗ್ರಂಥಗಳಿಂದಲೂ, ವದಂತಿ= ಹೇಳುತ್ತಾರೆ. ಅವನಲ್ಲಿ ಈ ಜಗತ್ತೆಲ್ಲವೂ ಆಶ್ರಯಿಸಿಕೊಂಡಿದೆ. ಯಾರು ಇದನ್ನು ತಿಳಿಯುವರೋ ಅವರು ಮುಕ್ತರಾಗುವರು.
ತದೇತದಹ್ನಾ ಸಂಸ್ಥಿತಂ ಭಾತಿ ಸರ್ವಂ
ತದಾತ್ಮವಿತ್ ಪಶ್ಯತಿ ಜ್ಞಾನಯೋಗಾತ್ |
ತಸ್ಮಿನ್ ಜಗತ್ ಸರ್ವಮಿದಂ ಪ್ರತಿಷ್ಠಿತಂ
ಯ ಏತದ್ ವಿದುರಮೃತಾಸ್ತೇ ಭವಂತಿ ॥30॥
ಅಂತಹ ಪರಮಾತ್ಮನ ರೂಪವು ಪ್ರಕಾಶಮಾನವಾದ ಸೂರ್ಯನಲ್ಲಿ ಇದ್ದು ಎಲ್ಲವನ್ನೂ ಪ್ರಕಾಶಿಸುತ್ತದೆ. ಪರಮಾತ್ಮನನ್ನು ಜ್ಞಾನಿಯಾದವನು ತನ್ನ ಜ್ಞಾನ ರೂಪವಾದ ಉಪಾಯದಿಂದ ಅವನನ್ನು ನೋಡುತ್ತಾನೆ. ಆ ಪರಮಾತ್ಮನಲ್ಲಿ ಈ ಜಗತ್ತೆಲ್ಲವೂ ಪ್ರತಿಷ್ಠಿತವಾಗಿದೆ. ಯಾರು ಪರಮಾತ್ಮನ ಈ ಮಹಿಮೆಯನ್ನು ತಿಳಿಯುತ್ತಾರೆಯೋ ಅವರು ಮುಕ್ತರಾಗುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಚತ್ವಾರಿಂಶೋऽಧ್ಯಾಯಃ ॥
॥ ಸನತ್ಸುಜಾತಪರ್ವಣಿ ಚತುರ್ಥೋऽಧ್ಯಾಯಃ ॥
॥ ಇತಿ ಶ್ರೀಮನ್ಮಹಾಭಾರತೇ ಉದ್ಯೋಗಪರ್ವಣಿ ಸನತ್ಸುಜಾತೀಯೇ ವಿಷಮವಾಕ್ಯಾರ್ಥಪ್ರಕಾಶೇ ಚತುರ್ಥೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತಾರನೆಯ ಅಧ್ಯಾಯ
ಸನತ್ಸುಜಾತರಿಂದ ಧೃತರಾಷ್ಟ್ರನನ್ನು ಕುರಿತು ತತ್ತ್ವೋಪದೇಶ.
ಸನತ್ಸುಜಾತಃ
ಶೋಕಃ ಕ್ರೋಧಶ್ಚ ಕಾಮಶ್ಚ ಲೋಭೋ ಮಾನಃ ಪರಾಸುತಾ |
ಈರ್ಷ್ಯಾ ಮೋಹೋऽವಿವಿತ್ಸಾ ಚಾಕೃಪಾऽಸೂಯಾ ಜುಗುಪ್ಸತಾ ॥1॥
ದ್ವಾದಶೈತೇ ಮಹಾದೋಷಾ ಮನುಷ್ಯಪ್ರಾಣನಾಶನಾಃ ॥2॥
ಹಿಂದೆ ಹೇಳಿದ ಕ್ರೋಧಾದಿ ದೋಷಗಳು ಕೇವಲ ತಪಸ್ಸಿಗೆ ವಿರೋಧಿಗಳಲ್ಲ, ಐಹಿಕವಾದ ಅನಿಷ್ಟವನ್ನೂ ಉಂಟುಮಾಡುತ್ತವೆ ಎಂದು ಹೇಳಿ, ತಪಸ್ಸಿನ ಸಮೃದ್ಧಿ ಮತ್ತು ತದಭಾವಗಳನ್ನು ಈ ಅಧ್ಯಾಯದಲ್ಲಿ ಪ್ರತಿಪಾದನೆ ಮಾಡುತ್ತಾರೆ. ಮೊದಲು ಕ್ರೋಧಾದಿಗಳಿಗೆ ಈ ಲೋಕದ ಅನಿಷ್ಟಕರಗಳನ್ನು ಹೇಳುತ್ತಾರೆ.
ಶೋಕ, ಕ್ರೋಧ, ಕಾಮ ಮೊದಲಾದ ಹನ್ನೆರಡು ಮಹಾದೋಷಗಳು ಮನುಷ್ಯನ ಪ್ರಾಣವನ್ನು ನಾಶಮಾಡುತ್ತವೆ. ಪರಾಸುತಾ= ಪರೇ= ಪ್ರಾಜ್ಞನಾಮಕನಾದ ಪರಮಾತ್ಮನಲ್ಲಿ ಅಸುಃ= ಪ್ರಾಣವು ಹೋಗಿ ಸೇರುವ ಅವಸ್ಥೆ= ನಿದ್ರೆ ಎಂದು ಅರ್ಥ, ಅಥವಾ ಪರಾಸುತಾ ಎಂದರೆ ಇನ್ನೊಬ್ಬರ ದ್ರವ್ಯವನ್ನು ಅಪಹಾರ ಮಾಡುವ ಇಚ್ಛೆ ಎಂದು ಅರ್ಥ. ಮೋಹ ಶಬ್ದವು ಮಿಥ್ಯಾಜ್ಞಾನವನ್ನು ಹೇಳುವಂತೆ, ಕೃತ್ಯಾಕೃತ್ಯವಿವೇಕ ರಾಹಿತ್ಯವನ್ನೂ ಹೇಳುತ್ತದೆ. ಹಿಂದಿನ ಅಧ್ಯಾಯದಲ್ಲಿ ಹೇಳಿದ ಹನ್ನೆರಡು ದೋಷಗಳಲ್ಲಿ ಒಂದಾದ ಸ್ಪೃಹಾ ಎಂಬುದು ಇಲ್ಲಿ ಕಾಮ ಪದದಿಂದ ಹೇಳಲ್ಪಟ್ಟಿದೆ. ಉಳಿದ ಪದಗಳಿಗೆ ಹಿಂದಿನ ಅಧ್ಯಾಯದಲ್ಲಿಯೇ ವ್ಯಾಖ್ಯಾನವನ್ನು ಮಾಡಲಾಗಿದೆ.
ಏಕೈಕಮೇತೇ ರಾಜೇಂದ್ರ ಮನುಷ್ಯಾನ್ ಪರ್ಯುಪಾಸತೇ |
ಯೈರಾವಿಷ್ಟೋ ನರಃ ಪಾಪಂ ಮೂಢಸಂಜ್ಞೋ ವ್ಯವಸ್ಯತಿ ॥3॥
ಕ್ರೋಧಾದಿಗಳು ಎಲ್ಲವೂ ಸೇರಿ ಪ್ರಾಣಾಪಹಾರವನ್ನು ಮಾಡುತ್ತವೆ ಎಂದಲ್ಲ. ಅವುಗಳಲ್ಲಿ ಒಂದೊಂದೂ ಸಹ ಅಂತಹ ಶಕ್ತಿಯನ್ನು ಪಡೆದಿವೆ ಎಂದು ಹೇಳುತ್ತಾರೆ. ಎಲೈ ರಾಜೇಂದ್ರನೇ, ಇವುಗಳಲ್ಲಿ ಒಂದೊಂದೂ ಸಹ ಮನುಷ್ಯನನ್ನು ಬಂದು ಸೇರಿಕೊಳ್ಳುತ್ತವೆ. ಅವುಗಳಲ್ಲಿ ಯಾವ ಒಂದರಿಂದ ಕೂಡಿದರೂ ಸಹ ಮನುಷ್ಯನು ಕರ್ತವ್ಯಪ್ರಜ್ಞೆಯನ್ನು ಕಳೆದುಕೊಂಡು ಪರಸ್ತ್ರೀಗಮನಾದಿ ಪಾಪಕಾರ್ಯಗಳನ್ನು ಮಾಡಲು ನಿರ್ಧರಿಸುತ್ತಾನೆ.
ಸ್ಪೃಹಯಾಲುರುಗ್ರಃ ಪರುಷೋ ವಾऽವದಾನ್ಯಃ
ಕ್ರೋಧಂ ಬಿಭ್ರನ್ ಮನಸಾ ವೈ ವಿಕತ್ಥೀ |
ನೃಶಂಸಧರ್ಮಾಃ ಷಡಿಮೇ ಜನಾ ವೈ
ಪ್ರಾಪ್ಯಾಪ್ಯರ್ಥಂ ನೋತ ಸಭಾಜಯಂತೇ ॥4॥
ಹಿಂದಿನ ಅಧ್ಯಾಯದಲ್ಲಿ ಹೇಳಿದ ನೃಶಂಸ ಪದಾರ್ಥಗಳಿಗೆ ಈ ಶ್ಲೋಕದಲ್ಲಿ ಐಹಿಕವಾದ ಅನಿಷ್ಟಾಪಾದಕತ್ವವನ್ನು ಹೇಳುತ್ತಾರೆ. ಹಿಂದೆ ಹೇಳಿದ ಚಪಲ ಶಬ್ದದ ಅರ್ಥದಲ್ಲಿ ಇಲ್ಲಿ ಉಗ್ರ ಎಂಬ ಪದವಿದೆ. ಅಮನಸ್ವೀ ಎಂಬ ಪದದ ಅರ್ಥದಲ್ಲಿ ಅವದಾನ್ಯಃ-ಉದಾರತೆ ಇಲ್ಲದವನು ಎಂಬ ಪದವಿದೆ. `ಮನಸಾ ಕ್ರೋಧಂ ಬಿಭ್ರತ್' ಎಂದು ಅನ್ವಯವನ್ನು ಮಾಡಿ ಮನಸ್ಸಿನಲ್ಲಿ ಯಾವಾಗಲೂ ಕೋಪದಿಂದ ಕೂಡಿದವನು ಎಂದು ಅರ್ಥವನ್ನು ಮಾಡಬೇಕು. ನೃಶಂಸ ಧರ್ಮವುಳ್ಳ ಈ ಆರು ಜನರು ತಾವು ಅಭೀಷ್ಟವಾದ ವಸ್ತುಗಳನ್ನು ಪಡೆದರೂ ಸಂತೋಷದಿಂದಿರುವುದಿಲ್ಲ.

ಸಂಭೋಗಸಂವಿದ್ ವಿಷಮೋಽತಿಮಾನೀ
ದತ್ವಾ ವಿಕತ್ಥೀ ಕೃಪಣೋ ದುರ್ಬಲಶ್ಚ |
ಬಹುಪ್ರಶಂಸೀ ವನಿತಾದ್ವಿಟ್ ಸದೈವ
ಸಪ್ತೈವೋಕ್ತಾ ಪಾಪಶೀಲಾ ನೃಶಂಸಾಃ ॥5॥
ಹಿಂದಿನ ಅಧ್ಯಾಯದಲ್ಲಿ ಹೇಳಿದ ಹದಿಮೂರು ನೃಶಂಸಗಳಲ್ಲಿ ಹಿಂದಿನ ಶ್ಲೋಕದಲ್ಲಿ ಆರು ನೃಶಂಸಗಳನ್ನು ಹೇಳಿ, ಇಲ್ಲಿ ಉಳಿದ ಏಳನ್ನು ಹೇಳುತ್ತಾರೆ. ಹಿಂದಿನ ಅಧ್ಯಾಯದಲ್ಲಿ ಹೇಳಿದ `ವಿಷಮೇಧಮಾನಃ' ಎಂಬುದನ್ನು ಇಲ್ಲಿ `ವಿಷಮ' ಎಂದು ಹೇಳಿದ್ದಾರೆ. ವೈಷಮ್ಯವುಳ್ಳವನು ಎಂದು ಅರ್ಥ ಅಥವಾ ಬಹಳ ಅಭಿಮಾನವುಳ್ಳವನು ಎಂದು ಅರ್ಥ. ಹಿಂದೆ `ದತ್ತಾನುತಾಪೀ' ಎಂದು ಹೇಳಿದುದನ್ನು ಇಲ್ಲಿ ದತ್ವಾ ವಿತತ್ಥೀ' ದಾನವನ್ನು ಮಾಡಿ ತನ್ನನ್ನೇ ಹೊಗಳಿಕೊಳ್ಳುವವನು ಎಂದು ಹೇಳಿದ್ದಾರೆ. ಉಳಿದ ಪದಗಳಿಗೆ ಹಿಂದೆಯೇ ವ್ಯಾಖ್ಯಾನ ಮಾಡಲಾಗಿದೆ.
ಧರ್ಮಶ್ಚ ಸತ್ಯಂ ಚ ತಪೋ ದಮಶ್ಚ
ಅಮಾತ್ಸರ್ಯಂ ಹ್ರೀಸ್ತಿತಿಕ್ಷಾಽನಸೂಯಾ |
ದಾನಂ ಶ್ರುತಂ ಚೈವ ಧೃತಿಃ ಕ್ಷಮಾ ಚ
ಮಹಾವ್ರತಾ ದ್ವಾದಶ ಬ್ರಾಹ್ಮಣಸ್ಯ ॥6॥
ಹಿಂದೆ ತಪೋವೃದ್ಧಿಕರವಾಗಿ ಹೇಳಲ್ಪಟ್ಟ ಧರ್ಮಗಳು ಮೋಕ್ಷಾದಿ ಪುರುಷಾರ್ಥಕ್ಕೂ ಕಾರಣವಾಗುತ್ತವೆ ಎಂದು ಹೇಳುತ್ತಾರೆ. ಹಿಂದಿನ ಅಧ್ಯಾಯದಲ್ಲಿ ಶ್ರಮಃ ಎಂದು ಹೇಳಿದ್ದನ್ನು ಇಲ್ಲಿ ಕ್ಷಮಾ ಎಂಬ ಶಬ್ದದಿಂದ ಸಂಗ್ರಹಿಸಿದ್ದಾರೆ.
ಯ ಏತೇಭ್ಯಃ ಪ್ರಚ್ಯವೇದ್ ದ್ವಾದಶಭ್ಯಃ
ಸರ್ವಾಮಪೀಮಾಂ ಪೃಥಿವೀಂ ಸ ಶಿಷ್ಯಾತ್ |
ತ್ರಿಭಿರ್ದ್ವಾಭ್ಯಾಮೇಕತೋ ವಾಽರ್ಥಿತೋ ಯೋ
ನಾಸ್ಯ ಸ್ವಮಸ್ತೀತಿ ಚ ವೇದಿತವ್ಯಮ್ ॥7॥
ಯಾವನು ಇಂತಹ ಹನ್ನೆರಡು ಗುಣಗಳನ್ನು ಸಂಪಾದಿಸುವುದಕ್ಕಾಗಿ ಮನೆಯಿಂದ ಹೊರಟು ಗುರುಕುಲವಾಸವನ್ನು ಮಾಡುತ್ತಾನೆಯೋ ಅವನು ಈ ಎಲ್ಲಾ ಪೃಥಿವಿಯನ್ನೂ ಆಳುತ್ತಾನೆ (ಈ ವಾಕ್ಯದ ಅಭಿಪ್ರಾಯವನ್ನು ಹಿಂದೆಯೇ ಹೇಳಲಾಗಿದೆ). ಈ ಹನ್ನೆರಡು ಗುಣಗಳಲ್ಲಿ ಮೂರು ಅಥವಾ ಎರಡು ಅಥವಾ ಒಂದು ಗುಣಗಳಿಂದ ಕೂಡಿದವನೂ ಸಹ ಈ ಪ್ರಪಂಚದಲ್ಲಿ ತನ್ನದು ಏನೂ ಇಲ್ಲ, ಎಲ್ಲವೂ ಭಗವದಧೀನ ಎಂದು ತಿಳಿಯುತ್ತಾನೆ. `ಯ ಏತೇಭ್ಯಃ' ಎಂಬ ಪಾಠದ ಬದಲು `ಯೋ ನೈತೇಭ್ಯಃ' ಎಂದು ಪಾಠವಿದ್ದರೆ ಯಾವನು ಈ ಹನ್ನೆರಡು ಗುಣಗಳಿಂದ ರಹಿತನಾಗುವುದಿಲ್ಲವೋ ಅವನು ಎಲ್ಲ ಭೂಮಿಯನ್ನು ಆಳುತ್ತಾನೆ ಎಂದು ಅರ್ಥವನ್ನು ಮಾಡಬೇಕು.
ದಮಸ್ತ್ಯಾಗೋಽಪ್ಯಪ್ರಮಾದ ಇತ್ಯೇತೇ ಹ್ಯಮೃತಂ ಸ್ಮೃತಮ್ |
ಏತಾನಿ ಬ್ರಹ್ಮಮುಖ್ಯಾನಾಂ ಬ್ರಾಹ್ಮಣಾನಾಂ ಮನೀಷಿಣಾಮ್ ॥8॥
ದಮ ಮೊದಲಾದವುಗಳ ಸ್ವರೂಪವನ್ನು ಹೇಳಲು ಇಲ್ಲಿ ಅವುಗಳನ್ನು ಸ್ತೋತ್ರ ಮಾಡುತ್ತಾರೆ. ಈ ಶ್ಲೋಕವನ್ನು ಹಿಂದೆ ವ್ಯಾಖ್ಯಾನ ಮಾಡಲಾಗಿದೆ.
ಸದ್ವಾಽಸದ್ವಾ ಪರೀವಾದೋ ಬ್ರಾಹ್ಮಣಸ್ಯ ನ ಶಸ್ಯತೇ |
ನರಕಪ್ರತಿಷ್ಠಾಸ್ತೇ ವೈ ಸ್ಯುಃ ಯ ಏವಂ ಕುರ್ವತೇ ನರಾಃ ॥9॥
ಬ್ರಾಹ್ಮಣನಲ್ಲಿ ದೋಷವಿರಲಿ ಅಥವಾ ಇಲ್ಲದಿರಲಿ,ಅವನನ್ನು ನಿಂದಿಸುವುದು ಒಳ್ಳೆಯದಲ್ಲ. ಹಾಗೆ ಮಾಡುವ ಮನುಷ್ಯರು ನರಕದಲ್ಲಿ ನೆಲೆಸುತ್ತಾರೆ ಎಂದು ಪ್ರಸಂಗ ಸಂಗತಿಯಿಂದ ಬ್ರಾಹ್ಮಣನಿಂದೆಗೆ ಅನಿಷ್ಟ ಹೇತುತ್ವವನ್ನು ಹೇಳುತ್ತಾರೆ.
ದಮೋಽಷ್ಟಾದಶದೋಷಃ ಸ್ಯಾಲ್ಲೋಮಶೇನ ಪ್ರಕೀರ್ತಿತಃ |
ಲೋಕದ್ವೇಷಃ ಪ್ರಾತಿಕೂಲ್ಯಮಭ್ಯಸೂಯಾ ಮೃಷಾ ವಚಃ ॥10॥
ದಮದ ಹದಿನೆಂಟು ದೋಷಗಳನ್ನು ಹೇಳುತ್ತಾರೆ. ಅಭ್ಯಸೂಯಾ ಎಂದರೆ ಇನ್ನೊಬ್ಬರ ಸಂಪತ್ತನ್ನು ನೋಡಿ ಸಹಿಸದಿರುವಿಕೆ ಎಂದು ಅರ್ಥ.
ಕಾಮಕ್ರೋಧೌ ಪರಾದ್ಯೈನ್ಯಂ ಪರಿವಾದೋಽಥ ಪೈಶುನಮ್ |
ಅರ್ಥಹಾನಿರ್ವಿವಾದಶ್ಚ ಮಾತ್ಸರ್ಯಂ ಪ್ರಾಣಿಪೀಡನಮ್ ॥11॥
ಕೆಲವು ಪಾಠದಲ್ಲಿ `ಪಾರತಂತ್ರ್ಯಂ' ಎಂಬ ಶಬ್ದಕ್ಕೆ ಬದಲಾಗಿ `ಪರಾದ್ಯೈನ್ಯಂ' ಎಂಬ ಪಾಠವಿದೆ. ಪರಾದ್ಯೈನ್ಯಂ ಎಂದರೆ ಪರಾ= ಶ್ರೇಷ್ಠರಾದವರ ಮುಂದೆ, ಅದೈನ್ಯಂ= ದಾಸನಂತೆ ನಡೆದುಕೊಳ್ಳದೇ ಇರುವುದು ಎಂದು ಅರ್ಥ. ಅರ್ಥಹಾನಿ ಎಂದರೆ ಪ್ರಯೋಜನದ ಅನುಸಂಧಾನವಿಲ್ಲದೆ ಪ್ರವೃತ್ತಿ ಮಾಡುವುದು ಎಂದು ಅರ್ಥ. ಮಾತ್ಸರ್ಯ ಎಂದರೆ ಸ್ವೋತ್ತಮರ ಗುಣಗಳಲ್ಲಿ ದ್ವೇಷ ಮಾಡುವುದು ಎಂದು ಅರ್ಥ.
ಈರ್ಷ್ಯಾ ಮೋಹೋಽತಿಮಾನಶ್ಚ ಸಂಜ್ಞಾನಾಶೋಽಭ್ಯಸೂಯತಾ |
ತಸ್ಮಾತ್ ಪ್ರಾಜ್ಞೋ ನ ಮಾದ್ಯೇತ ಸತಾಂ ಹ್ಯೇತದ್ ವಿಗರ್ಹಿತಮ್ ॥12॥
ಈರ್ಷ್ಯಾ= ಇನ್ನೊಬ್ಬರ ಗುಣವನ್ನು ಅಪಲಾಪ ಮಾಡುವುದು, ಅಭ್ಯಸೂಯತಾ= ಗುಣಗಳನ್ನು ದೋಷವೆಂದು ಆರೋಪಿಸುವುದು, ಸಂಜ್ಞಾನಾಶಃ= ಅಧ್ಯಯನ ಮಾಡಿದ ಶಾಸ್ತ್ರದ ವಿಸ್ಮರಣೆ. ಉಳಿದ ಪದಗಳಿಗೆ ಹಿಂದೆಯೇ ಅರ್ಥವನ್ನು ಹೇಳಲಾಗಿದೆ. ಇಂತಹ ನಿಂದಿತವಾದ ದೋಷಗಳಿರುವುದರಿಂದ ಪ್ರಾಜ್ಞನಾದವನು ಎಂದೂ ಮದವನ್ನು, ಅಹಂಕಾರವನ್ನು ಹೊಂದಬಾರದು. ಹತ್ತನೆಯ ಶ್ಲೋಕದಲ್ಲಿ `ಮದೋ ಅಷ್ಟಾದಶ ದೋಷಃಸ್ಯಾತ್' ಎಂಬ ಪಾಠವಿರುವುದರಿಂದ ಅದನ್ನು ಅನುಸರಿಸಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ.
ಸೌಹೃದೇ ವೈ ಷಡ್ಗುಣಾ ವೇದಿತವ್ಯಾಃ

ಪ್ರಿಯೇ ಹೃಷ್ಯಂತ್ಯಪ್ರಿಯೇ ಚ ವ್ಯಥಂತೇ |
ಸ್ಯಾದಾತ್ಮನಃ ಸುಹಿತಂ ಯಾಚಿತೋ ಯೋ
ದದಾತ್ಯಯಾಚ್ಯಮಪಿ ದೇಯಂ ಖಲು ಸ್ಯಾತ್ ||13||
ಪ್ರಸಂಗಸಂಗತಿಯಿಂದ ಮಿತ್ರಭಾವದ ಆರುಗುಣಗಳನ್ನು ಹೇಳುತ್ತಾರೆ. ಸ್ನೇಹವಿರುವಲ್ಲಿ ಆರು ಗುಣಗಳನ್ನು ತಿಳಿಯಬೇಕು. ಮಿತ್ರನಿಗೆ ಪ್ರಿಯನಾದರೆ ತಾನು ಸಂತೋಷ ಪಡುತ್ತಾನೆ ಮತ್ತು ಅಪ್ರಿಯನಾದರೆ ದುಃಖವನ್ನು ಪಡುತ್ತಾನೆ. ತನಗೆ ಬಹಳ ಪ್ರಿಯವಾದುದು ಯಾವುದು ಇರುತ್ತದೋ ಅಂತಹ ಬೇಡಬಾರದ್ದನ್ನು ಬೇಡಿದರೂ ಸಹ ಅದನ್ನು ಕೊಡಲು ಸಾಧ್ಯವಾಗುವುದಾದರೆ (ಧರ್ಮಶಾಸ್ತ್ರ ವಿರೋಧವಿಲ್ಲದಿದ್ದರೆ) ಅದನ್ನೂ ಕೊಡುತ್ತಾನೆ.
ಇಷ್ಟಾನ್ ಪುತ್ರಾನ್ ವಿಭವಾನ್ ಸ್ವಾಂಶ್ಚ ದಾರಾನ್
ಅಭ್ಯರ್ಥಿತಶ್ಚಾರ್ಹತೇ ಶುದ್ಧಭಾವಃ |
ತ್ಯಕ್ತದ್ರವ್ಯಃ ಸಂವಸತೇ ನ ಕಾಮಾದ್
ಭುಂಕ್ತೇ ಕರ್ಮ ಸ್ವಾಶಿಷಂ ಬಾಧತೇ ಚ ||14||
ಪುನಃ ಮಿತ್ರಭಾವವನ್ನೇ ವಿವರಿಸುತ್ತಾರೆ. ಯಃ= ಯಾವನು, ಅಭ್ಯರ್ಥಿತಃ= ಯೋಗ್ಯನಾದ ಮಿತ್ರನಿಂದ ಪ್ರಾರ್ಥಿತನಾಗಿ, ಶುದ್ಧಭಾವಃ= ಮನಸ್ಸಂತೋಷ ಪೂರ್ವಕವಾಗಿ, ಇಷ್ಟಾನ್ ವಿಭವಾನ್= ಇಷ್ಟವಾದ ಧನಾದಿ ವೈಭವವನ್ನೂ, ದಾರಾನ್= ಪತ್ನಿಯನ್ನೂ, ಪುತ್ರಾದೀನ್= ಮತ್ತು ಮಕ್ಕಳನ್ನೂ, ದದಾತಿ= ಕೊಡುತ್ತಾನೆಯೋ ಇದು ಮೂರನೆಯ ಗುಣ. ಯಾವನು ತ್ಯಕ್ತದ್ರವ್ಯಃ= ಯಾಚನೆ ಮಾಡದಿದ್ದರೂ ಮಿತ್ರನ ಅಭಿಪ್ರಾಯವನ್ನು ತಿಳಿದು ದ್ರವ್ಯವನ್ನು ಕೊಟ್ಟು, ಕಾಮಾದ್ ನ ಸಂವಸತೇ= ತನ್ನ ಆಸೆಯಿಂದ ಆ ದ್ರವ್ಯವನ್ನು ಪುನಃ ಭೋಗಿಸುವುದಿಲ್ಲವೋ, ಅವನ ಅಂತಹ ಗುಣವು ನಾಲ್ಕನೆಯ ಗುಣವು. ಮತ್ತು ಯಾವನು ಕರ್ಮ= ಸ್ನೇಹಿತನು ಮಾಡಬೇಕಾದ ಕಾರ್ಯವನ್ನು, ಭುಂಕ್ತೇ= ತಾನೇ ಮಾಡುತ್ತಾನೆಯೋ (ಆ ಕಾರ್ಯದಿಂದ ಉಂಟಾಗುವ ಶ್ರಮವನ್ನು ತಾನೇ ಅನುಭವಿಸುತ್ತಾನೆಯೋ) ಮತ್ತು ಸ್ವಾಶಿಷಂ= ತನಗೆ ಇಷ್ಟವಾದುದನ್ನು, ಬಾಧತೇ= ಪರಿತ್ಯಾಗ ಮಾಡುತ್ತಾನೆಯೋ, ಮಿತ್ರನ ಕರ್ಮವನ್ನು ಮಾಡಿ ಶ್ರಮ ಪಡುವುದು ಐದನೆಯ ಗುಣ, ತನ್ನ ಇಷ್ಟವನ್ನು ಪರಿತ್ಯಾಗ ಮಾಡುವುದು ಆರನೆಯ ಗುಣ.
ದ್ರವ್ಯವಾನ್ ಗುಣವಾನ್ ಯಶ್ಚ ತ್ಯಾಗೀ ಭವತಿ ಸಾತ್ವಿಕಃ |
ಪಂಚಭೂತಾನಿ ಪಂಚಭ್ಯೋ ನಿವರ್ತಯತಿ ತಾದೃಶಃ ||15||
ಯಶ್ಚ= ಯಾವನು, ದ್ರವ್ಯವಾನ್= ಸಂಪದ್ಯುಕ್ತನಾಗಿ, ಗುಣವಾನ್= ಗುಣವಂತನಾಗಿ, ಸಾತ್ವಿಕಃ= ಸಾತ್ವಿಕನಾಗಿರುತ್ತಾನೆಯೋ, ಸ ಏವ= ಅವನೇ, ತ್ಯಾಗೀ ಭವತಿ= ತ್ಯಾಗವನ್ನು ಮಾಡುವವನಾಗುತ್ತಾನೆ. ಅಂತಹ ತ್ಯಾಗದ ಫಲವನ್ನು ಹೇಳುತ್ತಾರೆ. ತಾದೃಶಃ= ಅಂತಹ ತ್ಯಾಗಿಯು, ಪಂಚಭ್ಯಃ= ಐದು ವಿಷಯಗಳಿಗೆ, ಪಂಚಭೂತಾನಿ= ಪಂಚ ಮಹಾಭೂತಗಳು, ನಿವರ್ತಯತಿ= ಹಿಂದಿರುಗಿಸುತ್ತಾನೆ. (ಪಾರ್ಥಿವ ದ್ರವ್ಯವನ್ನು ಕೊಡುವುದರಿಂದ ಪೃಥಿವಿಯನ್ನೂ, ಜಲವನ್ನು ಕೊಡುವುದರಿಂದ ಜಲವನ್ನೂ ಈ ರೀತಿಯಾಗಿ ಪಂಚಭೂತಗಳನ್ನು ಹಿಂದಕ್ಕೆ ಕೊಡುತ್ತಾನೆ ಎಂದು ಅಭಿಪ್ರಾಯ).
ಏತತ್ಸಮೃದ್ಧಮಪ್ಯೃದ್ಧಂ ತಪೋ ಭವತಿ ಕೇವಲಮ್ |
ಸತ್ತ್ವಾತ್ ಪ್ರಚ್ಯವಮಾನಾನಾಂ ಸಂಕಲ್ಪೇನ ಸಮಾಹಿತಮ್ |
ತತೋ ಯಜ್ಞಾಃ ಪ್ರವರ್ಧಂತೇ ಸತ್ಯಸ್ಯೈವಾವಧಾರಣಾತ್ ||16||
ಹೀಗೆ ಋದ್ಧ ಮತ್ತು ಸಮೃದ್ಧವಾದ ತಪಸ್ಸಿಗೆ ಸಾಧಾರಣವಾದ ಕೇವಲತ್ವವನ್ನು ವಿಸ್ತಾರವಾಗಿ ಹೇಳಿ ಈಗ ತಪಸ್ಸಿನ ಸಮೃದ್ಧಿಗೆ ಅಸಾಧಾರಣ ಕಾರಣವನ್ನು ಹೇಳುತ್ತಾರೆ. ಕೇವಲವಾದ ಈ ತಪಸ್ಸು ಸತ್ಯಸ್ಯ= ಮುಕ್ತಾಮುಕ್ತನಿಯಾಮಕನಾದ ಭಗವಂತನ, ಅವಧಾರಣಾತ್ ಏವ (ಅವಬೋಧನಾತ್ ಎಂಬ ಪಾಠವೂ ಇದೆ)= ಜ್ಞಾನದಿಂದಲೇ, ಸಮೃದ್ಧಂ= ಅನಂತ ಫಲವನ್ನು ಕೊಡುವುದಾಗಿ, ಭವತಿ= ಆಗುತ್ತದೆ. ಕೇವಲ ತಪಸ್ಸಷ್ಟೇ ಅಲ್ಲ, ಯಜ್ಞಾಃ= ಯಜ್ಞಗಳೂ ಸಹ, ತತಃ= ಆ ಪರಮಾತ್ಮನ ಜ್ಞಾನದಿಂದಲೇ, ಪ್ರವರ್ಧಂತೇ= ಶ್ರೇಷ್ಠವಾದ ಫಲವನ್ನು ಕೊಡುತ್ತವೆ. `ಯದೇವ ವಿದ್ಯಯಾ ಕರೋತಿ' ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣ. ಜ್ಞಾನವೇ ಫಲವನ್ನು ಕೊಡುತ್ತದೆ ಎಂಬ ಅವಧಾರಣೆಯಿಂದ ವ್ಯಾವರ್ತ್ಯವಾದ ವಿಷಯವನ್ನು ಹೇಳುತ್ತಾರೆ. ಸತ್ತ್ವಾತ್= ಅಂತಹ ಭಗವಂತನಿಂದ, ಪ್ರಚ್ಯವಮಾನಾಃ= ದೂರ ಸರಿಯುವ ಎಂದರೆ ಅಂತಹ ಭಗವಂತನ ಜ್ಞಾನವಿಲ್ಲದಿರುವ ಜನರಿಗೆ, ಸಂಕಲ್ಪೇನ= ಅವರ ಸಂಕಲ್ಪದಿಂದ, ಸಮಾಹಿತಂ= ಚೆನ್ನಾಗಿ ಮನಸ್ಸಿನಲ್ಲಿ ಇಡಲ್ಪಟ್ಟ ಫಲವು ಸಮೃದ್ಧವಾಗುವುದಿಲ್ಲ ಎಂದು ಇಟ್ಟುಕೊಳ್ಳಬೇಕು. `ಅನೇವಂ ವಿತ್ ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತೇ' ಪರಮಾತ್ಮನ ಜ್ಞಾನವಿಲ್ಲದೆ ಮಾಡಿದ ಪುಣ್ಯಕಾರ್ಯವೂ ಕೂಡ ಕೊನೆಯಲ್ಲಿ ನಾಶವನ್ನೇ ಹೊಂದುತ್ತದೆ ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣ.
ಮನಸಾಽನ್ಯಸ್ಯ ಭವತಿ ವಾಚಾಽನ್ಯಸ್ಯ ಚ ಕರ್ಮಣಾ ||17||
ಮನೋ-ವಾಕ್-ಕರ್ಮಗಳಿಗೆ ಒಂದೇ ವಿಷಯವಾದರೆ ಅದು ತಪಸ್ಸಿನ ಸಿದ್ಧಿಗೆ ಕಾರಣವಾಗುತ್ತದೆ ಎಂಬ ಅಭಿಪ್ರಾಯದಿಂದ ಅದನ್ನು ಹೊಂದದಿರುವ ದುಷ್ಟರ ಸ್ವಭಾವವನ್ನು ಹೇಳುತ್ತಾರೆ. ದುರಾತ್ಮನಾದವನು ಮನಸ್ಸಿನಿಂದಲೇ ಬೇರೆ ವ್ಯಾಪಾರವನ್ನು, ಮಾತಿನಿಂದಲೇ ಬೇರೆ ವ್ಯಾಪಾರವನ್ನು ಮತ್ತು ಕೃತಿಯಿಂದಲೇ ಬೇರೆ ಕಾರ್ಯವನ್ನು ಮಾಡುತ್ತಾನೆ.
ಸಂಕಲ್ಪಸಿದ್ಧಂ ಪುರುಷಮಸಂಕಲ್ಪೋಽಧಿತಿಷ್ಠತಿ |
ಬ್ರಾಹ್ಮಣಸ್ಯ ವಿಶೇಷೇಣ ಕಿಂಚಾನ್ಯದಪಿ ಮೇ ಶೃಣು ||18||
ಸಂಕಲ್ಪಸಿದ್ಧಂ ಪುರುಷಂ= ಮನೋವಾಕ್ಕರ್ಮಗಳಲ್ಲಿ ಏಕವಿಷಯಕವಾಗಿರುವ ಪುರುಷನನ್ನು, ಅಸಂಕಲ್ಪಃ= ಸಮೀಚೀನವಾದ ಪಕ್ಷವಿಲ್ಲದ, ಎಂದರೆ ಮನೋವಾಕ್ಕರ್ಮಗಳಲ್ಲಿ ಭಿನ್ನಭಿನ್ನ ವಿಷಯಕನಾದ ಪುರುಷನು, ಅಧಿತಿಷ್ಠತಿ= ಮೀರಿರುವೆನೆಂದು ತಿಳಿಯುತ್ತಾನೆ. ಆದ್ದರಿಂದ ಅದು ದುಷ್ಟಸ್ವಭಾವ. ಸಂಕಲ್ಪಸಿದ್ಧಃ ಪುರುಷಃ ಸಂಕಲ್ಪಾದಧಿತಿಷ್ಠತಿ ಎಂಬ ಪಾಠವಿದ್ದರೆ ಮನೋವಾಕ್ಕರ್ಮಗಳಲ್ಲಿ ಏಕವಿಷಯಕನಾಗಿರುವ ಪುರುಷನು ಅಂತಹ ಮನೋವಾಕ್ಕರ್ಮಗಳ ಏಕವಿಷಯಕತ್ವ ರೂಪವಾದ ಗುಣದಿಂದ ಉಳಿದವರನ್ನು ಮೀರಿರುತ್ತಾನೆ ಎಂದು ಅರ್ಥ. ಇದು ಬ್ರಾಹ್ಮಣನು ವಿಶೇಷವಾಗಿ ಅನುಸರಿಸಬೇಕಾದ ಧರ್ಮ.

ಬ್ರಾಹ್ಮಣನು ಅನುಷ್ಠಾನ ಮಾಡಬೇಕಾದ ಇನ್ನೊಂದು ಧರ್ಮವನ್ನು ಹೇಳುತ್ತೇನೆ, ಕೇಳುವವನಾಗು.
ಅಧ್ಯಾಪಯೇತ್ ಮಹದೇತದ್ ಯಶಸ್ಯಂ
ವಾಚೋ ವಿಕಾರಂ ಕವಯೋ ವದಂತಿ |
ಅಸ್ಮಿನ್ ಯೋಗೇ ಸರ್ವಮಿದಂ ಪ್ರತಿಷ್ಠಿತಂ
ಯೇ ತದ್ವಿದುರಮೃತಾಸ್ತೇ ಭವಂತಿ ॥19॥
ಕವಯಃ= ಜ್ಞಾನಿಗಳು, ಏತತ್= ಯಾವ ಈ ವಸ್ತುವನ್ನು, ಮಹತ್= ಪೂರ್ಣವಾದುದು, ಯಶಸ್ಯಂ= ಯಶಃಪ್ರದವಾದುದು, ವಾಚೋ ವಿಕಾರಂ= `ಏಕಮೇಕಂ ಸುಶಸ್ತಿಭಿಃ', `ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ', `ತ್ರಿಪಾದೂರ್ಧ್ವ ಉದೈತ್ಪುರುಷಃ', `ಚತುರ್ಭಿಸ್ಸಾಕಂ ನವತಿಂ ಚ', ಇತ್ಯಾದಿ ವಿವಿಧ ವಾಕ್ಯಗಳಲ್ಲಿ ವಿವಿಧವಾದ ಆಕಾರವನ್ನು ಉಳ್ಳದ್ದೆಂದು ವರ್ಣಿಸುತ್ತಾರೆಯೋ, ಏತತ್= ಅಂತಹ ಈ ಬ್ರಹ್ಮನನ್ನು, ಅಧ್ಯಾಪಯೇತ್= ಶಿಷ್ಯರನ್ನು ಕುರಿತು ಉಪದೇಶ ಮಾಡಬೇಕು. ಅಸ್ಮಿನ್ ಯೋಗೇ= ಈ ಸಕಲ ಗುಣಗಳಿಗೆ ಆಶ್ರಯನಾದ ಬ್ರಹ್ಮನಲ್ಲಿ, ಇದಂ ಸರ್ವಂ= ಈ ಜಗತ್ತೆಲ್ಲವೂ, ಪ್ರತಿಷ್ಠಿತಂ= ಪ್ರತಿಷ್ಠಿತವಾಗಿದೆ, ಯ ಏತತ್ ವಿದುಃ= ಯಾರು ಇದನ್ನು ತಿಳಿಯುತ್ತಾರೆಯೋ, ತೇ= ಅವರು, ಅಮೃತಾ ಭವಂತಿ= ಮುಕ್ತರಾಗುತ್ತಾರೆ.
ನ ಕರ್ಮಣಾ ಸುಕೃತೇನೇಹ ರಾಜನ್
ಸತ್ಯಂ ವದೇಜ್ಜುಹುಯಾದ್ ವಾ ಯಜೇದ್ ವಾ |
ನೈತೇನ ಬಾಲೋ ಮೃತ್ಯುಮತ್ಯೇತಿ ರಾಜನ್
ಮತಿಂ ಚಾಸೌ ನ ಲಭತ್ಯಂತಕಾಲೇ ॥20॥
ಎಲೈ ರಾಜನೇ, ಬಾಲನು ಎಂದರೆ ಅಪರೋಕ್ಷ ಜ್ಞಾನವಿಲ್ಲದವನು ಸರಿಯಾದ ರೀತಿಯಲ್ಲಿ ಒಳ್ಳೆಯ ಕರ್ಮವನ್ನು ಅನುಷ್ಠಾನ ಮಾಡಿದರೂ ಅದರಿಂದ ಮೃತ್ಯುರೂಪವಾದ ಮಿಥ್ಯಾಜ್ಞಾನವನ್ನು ದಾಟುವುದಿಲ್ಲ. ಮಿಥ್ಯಾಜ್ಞಾನವು ಯಥಾರ್ಥ ಜ್ಞಾನದಿಂದಲೇ ನಾಶವನ್ನು ಹೊಂದಬೇಕಾಗಿರುವುದರಿಂದ ಕರ್ಮದಿಂದ ನಾಶವನ್ನು ಹೊಂದುವುದಿಲ್ಲ. ಆದ್ದರಿಂದ ಮಿಥ್ಯಾಜ್ಞಾನ ಮೂಲಕವಾದ ಸಂಸಾರದ ನಿವೃತ್ತಿಯೂ ಸಹ ಕರ್ಮದಿಂದ ಉಂಟಾಗುವುದಿಲ್ಲ ಎಂದು ಅಭಿಪ್ರಾಯ. ಅಪರೋಕ್ಷ ಜ್ಞಾನಿಯಲ್ಲದ ಬಾಲಕನಂತಿರುವ ಅವನು ಯಾವ ಸತ್ಯವನ್ನು ಮಾತನಾಡುತ್ತಾನೆಯೋ ಅಥವಾ ಹೋಮವನ್ನು ಮಾಡುತ್ತಾನೆಯೋ ಅಥವಾ ಯಾಗವನ್ನು ಮಾಡುತ್ತಾನೆಯೋ ಅದರಿಂದ ದೇಹೋತ್ಕ್ರಮಣ ಕಾಲದಲ್ಲಿ ಒಳ್ಳೆಯ ಬುದ್ಧಿಯನ್ನೂ ಹೊಂದುವುದಿಲ್ಲ. `ಮತಿಂ ಚಾತೋ ನ ಲಭತಿ' ಎಂಬ ಪಾಠವಿದ್ದರೆ ಜ್ಞಾನಗಳು ಉತ್ಕ್ರಮಣವನ್ನು ಹೊಂದುವಾಗ ಹೊಂದುವ ಸುಖವನ್ನೂ ಅವನು ಪಡೆಯುವುದಿಲ್ಲ ಎಂದು ಅರ್ಥ.
ತೂಷ್ಣೀಮೇಕ ಉಪಾಸೀತ ನ ಚೇಚ್ಚೇತ್ ಮನಸಾऽಪಿ ನ |
ಅತಿಸಂಸ್ತುತಿನಿಂದಾಭ್ಯಾಂ ಪ್ರೀತಿರೋಷೌ ವಿಸರ್ಜಯೇತ್ ॥21॥
ವಾಙ್ನಿಯಮನ ಪೂರ್ವಕವಾಗಿ ಸಮಾಧಿಕ ವಸ್ತುರಹಿತನಾದ ಆ ಪರಮಾತ್ಮನನ್ನೇ ಉಪಾಸನೆ ಮಾಡಬೇಕು. ಮನಸ್ಸಿನಲ್ಲಿಯೂ ಸಹ ವಿಷಯಗಳನ್ನು ಬಯಸಬಾರದು. ಯಾರಾದರೂ ಬಹಳವಾಗಿ ಸ್ತೋತ್ರವನ್ನು ಮಾಡಿದರೆ ಅದರಿಂದ ಸಂತೋಷವನ್ನೂ, ನಿಂದೆಯನ್ನು ಮಾಡಿದರೆ ಅವರ ಮೇಲೆ ರೋಷವನ್ನೂ ಹೊಂದಬಾರದು.
ಅತ್ರೈವ ತಿಷ್ಠನ್ ಕ್ಷತ್ರಿಯ ಬ್ರಹ್ಮಾವಿಶತಿ ಪಶ್ಯತಿ |
ವೇದೇಷು ಚಾನುಪೂರ್ವ್ಯೇಣ ಏತದ್ವಿದ್ವಾನ್ ಬ್ರವೀಮಿ ತೇ ॥22॥
ಎಲೈ ಕ್ಷತ್ರಿಯನಾದ ಧೃತರಾಷ್ಟ್ರನೇ, ಇಂತಹ ಉಪಾಸನೆಯಲ್ಲಿಯೇ ನಿರತನಾದ ಮನುಷ್ಯನು ಪರಮಾತ್ಮನನ್ನು ನೋಡುತ್ತಾನೆ ಮತ್ತು ಅವನನ್ನು ಪ್ರವೇಶಿಸುತ್ತಾನೆ. ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾನು ವೇದಗಳಲ್ಲಿ ಹೇಳಲ್ಪಟ್ಟ ಈ ವಿಷಯವನ್ನು ಕ್ರಮವಾಗಿ ತಿಳಿದು ನಿನಗೆ ಹೇಳುತ್ತಿದ್ದೇನೆ. ಅಥವಾ ಅತ್ರೈವ ತಿಷ್ಠನ್ ಎಂಬ ಶಬ್ದಕ್ಕೆ ಗೃಹಸ್ಥಾಶ್ರಮಿಯಾಗಿಯೇ ಇದ್ದು ಎಂದೂ ಅರ್ಥವನ್ನು ಮಾಡಬಹುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್ಚತ್ವಾರಿಂಶೋऽಧ್ಯಾಯಃ ॥
॥ ಸನತ್ಸುಜಾತಪರ್ವಣಿ ಪಂಚಮೋऽಧ್ಯಾಯಃ ॥
॥ ಇತಿ ಶ್ರೀಮನ್ಮಹಾಭಾರತೇ ಉದ್ಯೋಗಪರ್ವಣಿ ಸನತ್ಸುಜಾತೀಯೇ ವಿಷಮವಾಕ್ಯಾರ್ಥಪ್ರಕಾಶೇ ಪಂಚಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತೇಳನೆಯ ಅಧ್ಯಾಯ
ಸನತ್ಸುಜಾತರಿಂದ ಧೃತರಾಷ್ಟ್ರನನ್ನು ಕುರಿತು ತತ್ತ್ವೋಪದೇಶ
ಸನತ್ಸುಜಾತಃ
ಯತ್ತಚ್ಛುಕ್ಲಂ ಮಹಜ್ಜ್ಯೋತಿರ್ದೀಪ್ಯಮಾನಂ ಮಹದ್ಯಶಃ |
ಯದ್ವೈ ದೇವಾ ಉಪಾಸಂತೇ ಯಸ್ಮಾತ್ ಸೂರ್ಯೋ ವಿರಾಜತೇ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥1॥
ಪೂರ್ವಾಧ್ಯಾಯದಲ್ಲಿ `ಯ ಏತದ್ವಿದುರಮೃತಾಸ್ತೇ ಭವಂತಿ' ಎಂದು ಬ್ರಹ್ಮಜ್ಞಾನದಿಂದ ಮೋಕ್ಷಪ್ರಾಪ್ತಿಯು ಹೇಳಲ್ಪಟ್ಟಿದೆ. ಈಗ ಆ ಬ್ರಹ್ಮಸ್ವರೂಪವು ಎಂತಹದು ಮತ್ತು ಆ ಬ್ರಹ್ಮಜ್ಞಾನವು ಯಾರಿಗೆ ಉಂಟಾಗುತ್ತದೆ ಎಂಬ ಎರಡು ವಿಷಯಗಳನ್ನೂ ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ. ಅದರಲ್ಲಿ ಮೊದಲು ಪರಮಾತ್ಮನ ಸರ್ವಪ್ರಕಾಶಕತ್ವ ಮತ್ತು ದೇವೋಪಾಸ್ಯತ್ವ ಸ್ವರೂಪವಾದ

ಮಹಿಮೆಯನ್ನು ಹೇಳಿ, ಅಂತಹ ಜ್ಞಾನದಲ್ಲಿ ಅಧಿಕಾರಿಗಳು ಯಾರು ಎಂಬುದನ್ನು ತಿಳಿಸುತ್ತಾರೆ.
ಯತ್= ಯಾವ, ತತ್= ವ್ಯಾಪ್ತವಾದ, ಶುಕ್ಲಂ= ಶುದ್ಧವಾದ (ಶುಕ್ಲ ಎಂಬುದಕ್ಕೆ ಬದಲಾಗಿ ಕೆಲವು ಪಾಠಗಳಲ್ಲಿ ಎಲ್ಲ ಕಡೆಯಲ್ಲಿಯೂ ಶುಕ್ರ ಎಂಬ ಪದವೇ ಇದೆ. ಅದಕ್ಕೂ ಶುದ್ಧ ಎಂದೇ ಅರ್ಥ). ಮಹಜ್ಜ್ಯೋತಿಃ= ಸರ್ವಪ್ರಕಾಶಕವಾದ, ದೀಪ್ಯಮಾನಂ= ಪ್ರಕಾಶಮಾನವಾದ, ಮಹದ್ಯಶಃ= ಯಶಃಪೂರ್ಣವಾದ ವಸ್ತುವಿದೆಯೋ, ಯಸ್ಮಾಚ್ಚ= ಮತ್ತು ಯಾವನಿಂದ, ಸೂರ್ಯಃ= ಸೂರ್ಯನು, ವಿರಾಜತೇ= ಪ್ರಕಾಶಿಸುತ್ತಾನೆಯೋ, ತದ್ವೈ= ಅಂತಹ ಬ್ರಹ್ಮನನ್ನೇ, ದೇವಾಃ= ಬ್ರಹ್ಮಾದಿ ದೇವತೆಗಳು, ಉಪಾಸಂತೇ= ಉಪಾಸನೆ ಮಾಡುತ್ತಾರೆ. `ವೈ' ಎಂಬ ನಿಪಾತದಿಂದ `ವಿಶ್ವೇದೇವಾ ಉಪಾಸತೇ' ಮೊದಲಾದ ಶ್ರುತಿಪ್ರಸಿದ್ಧಿಯನ್ನು ಉಪದೇಶಿಸುತ್ತಾರೆ. ಅಂತಹ ಗುಣವಿಶಿಷ್ಟನಾದ ಬ್ರಹ್ಮನನ್ನು ಜ್ಞಾನಾದಿಯೋಗಸಂಪನ್ನರಾದ ಯೋಗಿಗಳು ಚೆನ್ನಾಗಿ ತಿಳಿಯುತ್ತಾರೆ.
ಶುಕ್ಲಾದ್ ಬ್ರಹ್ಮ ಪ್ರಭವತಿ ಬ್ರಹ್ಮ ಶುಕ್ಲೇನ ವರ್ಧತೇ |
ತಚ್ಛುಕ್ಲಂ ಜ್ಯೋತಿಷಾಂ ಮಧ್ಯೇಽತಪ್ತಂ ತಪತಿ ತಾಪನಮ್ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥2॥
ಈ ಶ್ಲೋಕದಲ್ಲಿ ಭಗವಂತನ ಚತುರ್ಮುಖೋತ್ಪಾದಕತ್ವಾದಿ ಮಹಿಮೆಯನ್ನು ಹೇಳುತ್ತಾರೆ. ಪರಿಶುದ್ಧನಾದ ಪರಮಾತ್ಮನಿಂದ ಚತುರ್ಮುಖ ಬ್ರಹ್ಮನು ಉತ್ಪತ್ತಿಯನ್ನು ಹೊಂದುತ್ತಾನೆ. ಆ ಚತುರ್ಮುಖ ಬ್ರಹ್ಮನು ಶುದ್ಧನಾದ ಪರಮಾತ್ಮನಿಂದಲೇ ಅಭಿವೃದ್ಧಿಯನ್ನು ಹೊಂದುತ್ತಾನೆ. `ಯೋ ಬ್ರಹ್ಮಾಣಮ್ ವಿಧದಾತಿ ಪೂರ್ವಂ' ಎಂಬ ಶ್ರುತಿಯು, ಪರಮಾತ್ಮನು ಮೊದಲು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದವನ್ನು ಉಪದೇಶ ಮಾಡಿ ಅಭಿವೃದ್ಧಿಯನ್ನು ಹೊಂದಿಸುತ್ತಾನೆ ಎಂದು ಹೇಳುತ್ತದೆ. ಆ ಶುದ್ಧನಾದ ಬ್ರಹ್ಮನು ಜ್ಯೋತಿಸ್ಸುಗಳ ಮಧ್ಯದಲ್ಲಿ ಇದ್ದು, ಅವುಗಳಿಂದ ಪ್ರಕಾಶಿತನಾಗದೆ ತಾನೇ ಸ್ವಯಂ ಪ್ರಕಾಶರೂಪನಾಗಿ ಸೂರ್ಯಾದಿ ಜ್ಯೋತಿಸ್ಸುಗಳನ್ನೂ ಪ್ರಕಾಶಿಸುತ್ತಾನೆ. `ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ' ಎಂಬ ಶ್ರುತಿಯು `ಯದಾದಿತ್ಯಗತಂ ತೇಜಃ' ಎಂಬ ಸ್ಮೃತಿಯೂ ಸಹ ಈ ವಿಷಯದಲ್ಲಿ ಪ್ರಮಾಣವಾಗಿವೆ.
ಪೂರ್ಣಾತ್ ಪೂರ್ಣಮುದ್ಧರಂತಿ ಪೂರ್ಣಾತ್ ಪೂರ್ಣಂ ಪ್ರಚಕ್ಷತೇ |
ಹರಂತಿ ಪೂರ್ಣಾತ್ ಪೂರ್ಣಂ ಚ ಪೂರ್ಣಮೇವಾವಶಿಷ್ಯತೇ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥3॥
ಈ ಶ್ಲೋಕದಲ್ಲಿ ಯೋಗಿಗಳ ಇನ್ನೊಂದು ಮಹಿಮೆಯನ್ನು ಹೇಳುತ್ತಾರೆ. ಯೋಗಿಗಳು, ಪೂರ್ಣಾತ್= ಗುಣಪೂರ್ಣವಾದ ಮೂಲರೂಪದಿಂದ, ಪೂರ್ಣಂ= ಗುಣಪೂರ್ಣವಾದ ಅವತಾರ ರೂಪವನ್ನು, ಉದ್ಧರಂತಿ= ತಮ್ಮ ಪ್ರಯೋಜನಕ್ಕಾಗಿ ಪ್ರತ್ಯೇಕಿಸಿಕೊಳ್ಳುತ್ತಾರೆ. ಪೂರ್ಣಾತ್= ಪೂರ್ಣವಾದ ಮೂಲರೂಪದಿಂದ, ಪೂರ್ಣಂ= ಅವತಾರರೂಪವನ್ನು, ಹರಂತಿ= ಭೂಮ್ಯಾದಿ ಲೋಕಗಳಿಗೆ ಕರೆದುಕೊಂಡು ಬರುತ್ತಾರೆ. ಶ್ವೇತದ್ವೀಪಾದಿಗಳಿಗೆ ಹೋಗಿ, ಅನೇಕ ವಿಧವಾದ ಸ್ತೋತ್ರಗಳಿಂದ ಅವನನ್ನು ಪ್ರಸನ್ನೀಕರಿಸಿಕೊಂಡು, ತಮಗೆ ಅಭಿಮತವಾದ ಪ್ರಯೋಜನವನ್ನು ಪಡೆಯಲು ಯಾವಾಗಲೂ ಇರುವ ರಾಮಾದಿ ರೂಪವನ್ನು ಮೂಲ ರೂಪದಿಂದ ಪೃಥಕ್ಕರಿಸಿ ಭೂಲೋಕಾದಿಗಳಿಗೆ ಕರೆದುಕೊಂಡು ಬರುತ್ತಾರೆ ಎಂದು ತಾತ್ಪರ್ಯ. ಪೂರ್ಣಾತ್= ಪೂರ್ಣವಾದ ಮೂಲರೂಪದಿಂದ ಹೊರಗೆ ಬಂದ ಅವತಾರರೂಪವನ್ನೂ, ಪೂರ್ಣಂ= ಪೂರ್ಣವಾದುದು ಎಂದು, ಪ್ರಚಕ್ಷತೇ= ಹೇಳುತ್ತಾರೆ. ಪೂರ್ಣಂ ಚ= ಮೊದಲೇ ಪೂರ್ಣವಾದ ಮೂಲರೂಪವೂ ಸಹ, ಪೂರ್ಣಮೇವ= ಅವತಾರರೂಪಗಳು ಅದರಲ್ಲಿ ಪ್ರವೇಶಿಸಿದರೂ ಪೂರ್ಣವಾಗಿಯೇ, ಅವಶಿಷ್ಯತೇ= ಉಳಿಯುತ್ತದೆ. ಯೋಗಿಗಳು ವೇದ ಪ್ರತಿಪಾದ್ಯನಾದ ಅಂತಹ ಭಗವಂತನನ್ನು ನೋಡುತ್ತಾರೆ.
ಆಪೋಽಥಾದ್ಭ್ಯಃ ಸಲಿಲಸ್ಯ ಮಧ್ಯೇ
ಉಭೇ ದೇವ್ಯೌ ಶಿಶ್ರಿಯಾತೇಽಂತರಿಕ್ಷೇ |
ಸ ಸಧ್ರೀಚೀಃ ಸ ಸವಿಷೂಚೀರ್ವಸಾನ
ಉಭೇ ಬಿಭರ್ತಿ ಪೃಥಿವೀಂ ದಿವಂ ಚ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥4॥
ಈ ಶ್ಲೋಕದಲ್ಲಿ ಪರಮಾತ್ಮನ ಶ್ರೀಭೂಧಾರಕತ್ವ ರೂಪವಾದ ಮಹಿಮೆಯನ್ನು ಹೇಳುತ್ತಾರೆ. ಅಥ= ಸೂಕ್ಷ್ಮಸೃಷ್ಟಿಯ ಅನಂತರದಲ್ಲಿ, ಅದ್ಭ್ಯಃ= ಬಾಹ್ಯಾವರಣದಲ್ಲಿರುವ ಜಲದಿಂದ, ಆಪಃ= ಬ್ರಹ್ಮಾಂಡದ ಒಳಗಿರುವ ಗರ್ಭೋದಕ ರೂಪವಾದ ಜಲಗಳು, ಉತ್ಪನ್ನವಾದವು ಎಂದು ಇಟ್ಟುಕೊಳ್ಳಬೇಕು. ತಸ್ಯ ಸಲಿಲಸ್ಯ ಮಧ್ಯೇ= ಬ್ರಹ್ಮಾಂಡದ ಒಳಗಿರುವ ನೀರಿನ ಮಧ್ಯದಲ್ಲಿ, ಅಂತರಿಕ್ಷೇ= ಆಕಾಶದಲ್ಲಿ, ಉಭೇ ದೇವ್ಯೌ= ಶ್ರೀ-ಭೂದೇವಿಯರು, ಶಿಶ್ರಿಯಾತೇ= ನೆಲೆಸಿದ್ದಾರೆ. ಸಧ್ರೀಚೀಃ= ಸಮೀಚೀನವಾಗಿರುವ, ವಿಷೂಚೀಃ= ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವ, ಆಪಃ= ನೀರನ್ನು ಎಂದು ಇಟ್ಟುಕೊಳ್ಳಬೇಕು, ವಸಾನಃ= ವಸ್ತ್ರದಂತೆ ಸುತ್ತಲೂ ಧರಿಸಿದವನಾಗಿ ಅಥವಾ `ಸಧ್ರೀಚೀ' ಎಂದರೆ ಪೂರ್ವಾದಿ ದಿಕ್ಕುಗಳು, 'ವಿಷೂಚೀ' ಎಂದರೆ ಆಗ್ನೇಯಾದಿ ವಿದಿಕ್ಕುಗಳು. ದ್ವಿತೀಯಾ ವಿಭಕ್ತಿಯು ಸಪ್ತಮೀ ವಿಭಕ್ತಿಯ ಅರ್ಥದಲ್ಲಿದೆ. ಆ ದಿಕ್ಕಿನಲ್ಲಿ ವಾಸ ಮಾಡುವ ಎಂದು ಅರ್ಥ. ಐತರೇಯ ಭಾಷ್ಯದಲ್ಲಿ ಹೀಗೆ ಹೇಳಲ್ಪಟ್ಟಿದೆ. `ಸ ಚಾಸು ಪೂರ್ವಾದಿದಿಕ್ಷ್ವೇತೌ ಚ ಚತುರ್ಷ್ವಪಿ | ನಿತ್ಯದಾ ವಸತಃ ಕೋಣದಿಕ್ಷ್ವಪ್ಯಾಸು ವಿಷೂಚಿಷು' (ಪರಮಾತ್ಮನು ಮತ್ತು ಶ್ರೀ-ಭೂದೇವಿಯರು ನಿತ್ಯವೂ ಪೂರ್ವಾದಿ ದಿಕ್ಕುಗಳಲ್ಲಿಯೂ, ಕೋಣಾದಿ ವಿದಿಕ್ಕುಗಳಲ್ಲಿಯೂ ನೆಲೆಸಿದ್ದಾರೆ) ಎಂದು ಹೇಳಲ್ಪಟ್ಟಿದೆ. ಅಂತಹ ಜಲಮಯವಾದ ವಸ್ತ್ರವನ್ನು ಧರಿಸಿದ, ಸಃ= ವೇದಾದಿಗಳಲ್ಲಿ ಪ್ರಸಿದ್ಧನಾದ ಪರಮಾತ್ಮನು, ಪೃಥಿವೀಂ= ಪೃಥಿವಿಯ ಅಭಿಮಾನಿಯಾದ ಭೂದೇವಿಯನ್ನೂ, ದಿವಂ= ಅಂತರಿಕ್ಷಕ್ಕೆ ಅಭಿಮಾನಿಯಾದ ಪ್ರಕಾಶಮಾನಳಾದ ಶ್ರೀದೇವಿಯನ್ನೂ, ಉಭೇ= ಈ ಇಬ್ಬರನ್ನೂ, ಬಿಭರ್ತಿ= ಧರಿಸಿ ಪೋಷಿಸುತ್ತಾನೆ.
`ಆಪೋಽಥಾದ್ಭ್ಯಃ ಸಲಿಲಂ ತಸ್ಯ ಮಧ್ಯೇ
ಉಭೌ ದೇವೌ ಶಿಶ್ರಿಯಾತೇಽಂತರಿಕ್ಷೇ |
ಆದಧ್ರೀಚೀಃ ಸವಿಷೂಚೀರ್ವಸಾನೌ
ಉಭೌ ಬಿಭರ್ತಿ ಪೃಥಿವೀಂ ದಿವಂ ಚ ॥'

ಎಂಬ ಪಾಠವನ್ನು ತೆಗೆದುಕೊಂಡರೆ ಹೀಗೆ ಅರ್ಥವನ್ನು ಮಾಡಬೇಕು. ಅಥ= ಮಹದಾದಿ ತತ್ವಗಳ ಸೃಷ್ಟಿಯ ಅನಂತರದಲ್ಲಿ, ಆಪಃ= ಜಲದಿಂದ ಉಪಲಕ್ಷಿತವಾದ ಪಂಚಮಹಾಭೂತಗಳು ಸೃಷ್ಟವಾದವು ಎಂದು ಇಟ್ಟುಕೊಳ್ಳಬೇಕು. ಅದ್ಭ್ಯಃ= ಆ ಪಂಚಭೂತಗಳಿಂದ, ಸಲಿಲಂ= ಜಲಾದಿ ಪಂಚಭೂತಾತ್ಮಕವಾದ ಸ್ಥೂಲದೇಹವನ್ನು ಸೃಷ್ಟಿಯನ್ನು ಮಾಡಿ, ತಸ್ಯ= ಆ ಸ್ಥೂಲದೇಹದ, ಮಧ್ಯೇ= ಮಧ್ಯದಲ್ಲಿ, ಅಂತರಿಕ್ಷೇ= ಹೃದಯಾಕಾಶದಲ್ಲಿ, ಉಭೌ ದೇವೌ= ನಾರಾಯಣ-ಮುಖ್ಯಪ್ರಾಣರು, ಶಿಶ್ರಿಯಾತೇ= ನೆಲೆಸಿದ್ದಾರೆ. ಇವರಿಬ್ಬರೂ ಶರೀರಾಕಾಶದಲ್ಲಿ ಮಾತ್ರ ನೆಲೆಸಿರುವುದಲ್ಲ, ಎಲ್ಲ ಕಡೆಯಲ್ಲಿಯೂ ನೆಲೆಸಿದ್ದಾರೆ ಎಂಬ ವಿಶೇಷವನ್ನು ಹೇಳುತ್ತಾರೆ. ಸ ವಿಷೂಚೀಃ= ಆಗ್ನೇಯಾದಿ ವಿದಿಕ್ಕುಗಳಿಂದ ಸಹಿತವಾದ, ಆದಧ್ರೀಚೀಃ= ಅಭಿಮುಖವಾಗಿರುವ ಪೂರ್ವಾದಿ ದಿಕ್ಕುಗಳನ್ನು, ವಸಾನೌ= ಆಚ್ಛಾದಿಸುವವರಾಗಿ, ಸರ್ವತ್ರ ವ್ಯಾಪಿಸುವವರಾಗಿ ಎಂದು ಅಭಿಪ್ರಾಯ. ಉಭೌ= ನಾರಾಯಣ- ಮುಖ್ಯಪ್ರಾಣರಿಬ್ಬರೂ, ಪೃಥಿವೀಂ= ಭೂಲೋಕವನ್ನು, ದಿವಂ ಚ= ಮತ್ತು ಅಂತರಿಕ್ಷ ಲೋಕವನ್ನು, ಬಿಭರ್ತಿ= ಧರಿಸಿರುತ್ತಾರೆ. ಬಿಭರ್ತಿ ಎಂಬ ಏಕವಚನ ಪ್ರಯೋಗವನ್ನು ದ್ವಿವಚನಾರ್ಥದಲ್ಲಿರುವ ಛಾಂಧಸ ಪ್ರಯೋಗವೆಂದು ತಿಳಿಯಬೇಕು.

ಉಭೌ ಚ ದೇವೌ ಪೃಥಿವೀಂ ದಿವಂ ಚ<br>
ದಿಶಶ್ಚ ಶುಕ್ರಂ ಭುವನಂ ಬಿಭರ್ತಿ |<br>
ತಸ್ಮಾದ್ ದಿಶಃ ಸರಿತಶ್ಚ ಸ್ರವಂತಿ<br>
ತಸ್ಮಾತ್ ಸಮುದ್ರಾ ವಿಹಿತಾ ಮಹಾಂತಾಃ ॥<br>
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥5॥

ಶುಕ್ರಂ= ಶುದ್ಧನಾದ ಪರಮಾತ್ಮನು, ಉಭೌ ದೇವೌ= ಸೂರ್ಯ-ಚಂದ್ರ ಇಬ್ಬರು ದೇವತೆಗಳನ್ನೂ, ಪೃಥಿವೀಂ ದಿವಂ ಚ= ಭೂಮಿ ಮತ್ತು ಅಂತರಿಕ್ಷಗಳನ್ನೂ ಮತ್ತು ಅವುಗಳ ಅಭಿಮಾನಿ ದೇವತೆಗಳನ್ನೂ, ದಿಶಶ್ಚ= ಮತ್ತು ದಿಕ್ಕುಗಳ ಅಭಿಮಾನಿ ದೇವತೆಗಳನ್ನೂ, ಭುವನಂ= ಎಲ್ಲ ಲೋಕಗಳನ್ನೂ ಮತ್ತು ಅವುಗಳ ಅಭಿಮಾನಿ ದೇವತೆಗಳನ್ನೂ, ಬಿಭರ್ತಿ= ಧರಿಸಿದ್ದಾನೆ. ತಸ್ಮಾತ್= ಆ ಪರಮಾತ್ಮನಿಂದ, ದಿಶಃ= ಸೂರ್ಯಾದಿಗಳಿಂದ ಕೂಡಿದ ದಿಕ್ಕುಗಳು, ತಮ್ಮ ಕಾರ್ಯವನ್ನು ಮಾಡುತ್ತವೆ ಎಂದು ಇಟ್ಟುಕೊಳ್ಳಬೇಕು. ಸರಿತಶ್ಚ= ನದಿಗಳೂ ಸಹ, ಸ್ರವಂತಿ= ಅವನಿಂದಲೇ ಹರಿಯುತ್ತವೆ. ತಸ್ಮಾತ್= ಆ ಬ್ರಹ್ಮನಿಂದಲೇ, ಮಹಾಂತಃ= ಲಕ್ಷಾದಿ ಯೋಜನ ವಿಸ್ತಾರವಾದ, ಸಮುದ್ರಾಃ= ಸಮುದ್ರಗಳೂ ಸಹ, ವಿಹಿತಾಃ= ಸೃಷ್ಟಿ ಮಾಡಲ್ಪಟ್ಟಿವೆ. ಅಂತಹ ಗುಣವಿಶಿಷ್ಟನಾದ ಪರಮಾತ್ಮನನ್ನು ಯೋಗಿಗಳು ಮಾತ್ರ ನೋಡುತ್ತಾರೆ.

ಚಕ್ರೇಣಾವರ್ತ್ಯ ತಿಷ್ಠಂತಿ ಧ್ರುವಸ್ಯಾವ್ಯಯಕರ್ಮಣಃ |<br>
ಕೇತುಮಂತಂ ವಹಂತ್ಯಶ್ವಾಃ ತಂ ದಿವ್ಯಮಜರಂ ದಿವಿ |<br>
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥6॥

ಅವ್ಯಯ ಕರ್ಮಣಃ= ಯಾವಾಗಲೂ ಕಾರ್ಯನಿರತವಾದ, ಧ್ರುವಸ್ಯ= ಧ್ರುವ ಮಂಡಲ ಸಂಬಂಧಿಯಾದ, ಚಕ್ರೇಣ= ಜ್ಯೋತಿಶ್ಚಕ್ರದಿಂದ, ಆವರ್ತ್ಯ= ಗ್ರಹ ನಕ್ಷತ್ರಾದಿಗಳನ್ನು ಸುತ್ತಲೂ ತಿರುಗಿಸುತ್ತಾ, ತಿಷ್ಠಂತಂ= ನೆಲೆಸಿರುವ, ಕೇತುಮಂತಂ= ಧ್ವಜಸಹಿತನಾದ, ದಿವ್ಯಂ= ಲೋಕವಿಲಕ್ಷಣನಾದ, ತಂ= ಸೂರ್ಯರಥ ನಿಯಾಮಕನಾಗಿ ಸೂರ್ಯರಥದಲ್ಲಿರುವ ಆ ಪರಮಾತ್ಮನನ್ನು, ಅಶ್ವಾಃ= ಸೂರ್ಯರಥಕ್ಕೆ ಹೂಡಿದ ಏಳು ಕುದುರೆಗಳು ದಿವಿ= ಅಂತರಿಕ್ಷಮಾರ್ಗದಲ್ಲಿ, ವಹಂತಿ= ಎಳೆದುಕೊಂಡು ಹೋಗುತ್ತವೆ.

ನ ಸಂದೃಶೇ ತಿಷ್ಠತಿ ರೂಪಮಸ್ಯ<br>
ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ |<br>
ಮನೀಷಯಾಽಥೋ ಮನಸಾ ಹೃದಾ ಚ<br>
ಯ ಏನಂ ವಿದುರಮೃತಾಸ್ತೇ ಭವಂತಿ ॥<br>
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥7॥

ಅಸ್ಯ= ಈ ಪರಮಾತ್ಮನ, ರೂಪಂ= ಜ್ಯೋತಿಶ್ಚಕ್ರ, ಸೂರ್ಯಮಂಡಲ, ಸೂರ್ಯರಥ ಇವುಗಳಿಗೆ ನಿಯಾಮಕವಾದ ರೂಪವು, ತಿಷ್ಠತಿ= ಯಾವುದು ಇದೆಯೋ ಅದು, ನ ಸಂದೃಶೇ= ನ ಸಂದದೃಶೇ, ಚೆನ್ನಾಗಿ ನೋಡಲ್ಪಡುವುದಿಲ್ಲ. ಅಥವಾ ಅಂತಹ ಪರಮಾತ್ಮ ರೂಪವು ಸಂದೃಶೇ= ಸಮೀಚೀನ ಜ್ಞಾನಕ್ಕಾಗಿ, ನ ತಿಷ್ಠತಿ= ಇರುವುದಿಲ್ಲ, ಪೂರ್ಣವಾಗಿ ಜ್ಞಾನವಿಷಯವಾಗುವುದಿಲ್ಲ ಎಂದು ಅರ್ಥ. ಅದಕ್ಕೆ ನ ಚಕ್ಷುಷಾ ಎಂದು ಕಾರಣವನ್ನು ಹೇಳುತ್ತಾರೆ. ನ ಚಕ್ಷುಷಾ ಎಂದು ಹೇಳುವುದು ಉಪಲಕ್ಷಣ. ಕಶ್ಚನ= ಯಾವ ಅಧಿಕಾರಿಯೂ ಸಹ, ಚಕ್ಷುಷಾ= ಚಕ್ಷುರಾದಿ ಪ್ರಮಾಣದಿಂದ, ಏನಂ= ಈ ಭಗವಂತನನ್ನು, ನ ಪಶ್ಯತಿ= ಪೂರ್ಣವಾಗಿ ತಿಳಿಯುವುದಿಲ್ಲ. ಯೇ ಚ= ಮತ್ತು ಯಾರು, ಮನೀಷಯಾ= ಶಾಸ್ತ್ರಜನ್ಯವಾದ ಜ್ಞಾನದಿಂದ, ಅದರಂತೆ ಹೃದಾ= ತದೇಕನಿಷ್ಠವಾದ ಮನಸ್ಸಿನಿಂದ ಅಥವಾ ಸ್ನೇಹರೂಪವಾದ ಭಕ್ತಿಯಿಂದ ಅಥವಾ ಹೃದಯಸ್ಥಿತನಾಗಿ ಹೃದಯಪ್ರೇರಕನಾದ್ದರಿಂದ ಹೃದಯ ಶಬ್ದವಾಚ್ಯನಾದ ಭಗವಂತನ ಪ್ರಸಾದದಿಂದ, ಏನಂ= ಈ ಪರಮಾತ್ಮನನ್ನು, ವಿದುಃ= ತಮ್ಮ ಯೋಗ್ಯತೆಗೆ ಅನುಗುಣವಾಗಿ ತಿಳಿಯುತ್ತಾರೆಯೋ, ತೇ= ಅವರು, ಅಮೃತಾ ಭವಂತಿ= ಮುಕ್ತರಾಗುತ್ತಾರೆ. ಅಂತಹ ಪರಮಾತ್ಮನ ರೂಪವನ್ನು ಯೋಗಿಗಳು ಮಾತ್ರ ನೋಡುತ್ತಾರೆ ಎಂದು ಎಲ್ಲ ಕಡೆಯಲ್ಲೂ ಇಟ್ಟುಕೊಳ್ಳಬೇಕು. `ನ ಸಾದೃಶ್ಯೇ ತಿಷ್ಠತಿ ರೂಪಮಸ್ಯ' ಎಂದು ಕೆಲವು ಕಡೆಗಳಲ್ಲಿ ಪಾಠವಿದೆ. ಆಗ ಪರಮಾತ್ಮನ ರೂಪವು ಯಾವ ಸಾದೃಶ್ಯಕ್ಕೂ ನಿಲುಕುವುದಿಲ್ಲ, ಅಸದೃಶವಾದುದು. ಅವನ ರೂಪಕ್ಕೆ ಉಚಿತವಾದ ಒಂದು ಉಪಮಾನವು ಇಲ್ಲ ಎಂದು ಅಭಿಪ್ರಾಯ.

ದ್ವಾದಶಧಾ ದಶಧಾ ಸರಿತೋ ದೇವರಕ್ಷಿತಾಃ |<br>
ಮದಿಷ್ಠಾ ಈಶತೇ ತಸ್ಯ ಸಂಚರಂತೀಹ ಯಾ ಅರಮ್ |<br>
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥8॥

ತಸ್ಯ= ಆ ಪರಮಾತ್ಮನ, ಮದಿಷ್ಠಾಃ= ಅತಿಶಯವಾಗಿ ಸಂತೋಷವನ್ನು ಕೊಡುವ, ಸರಿತಃ= ಗಂಗಾ-ಯಮುನಾದಿ ನದಿಗಳು, ಈಶತೇ=

ಮನುಷ್ಯ ಪಾಪವನ್ನು ವಿನಾಶ ಮಾಡಲು ಸಮರ್ಥವಾಗುತ್ತವೆ. ಯಾಃ= ಯಾವ, ದೇವರಕ್ಷಿತಾಃ= ಕ್ರೀಡಾದಿ ಗುಣವಿಶಿಷ್ಟನಾದ ಪರಮಾತ್ಮನಿಂದ ರಕ್ಷಿತವಾದ, ದ್ವಾದಶಧಾ ದಶಧಾ= ಹತ್ತು ಹನ್ನೆರಡು ಕವಲುಗಳಾಗಿ, ಇಹ= ಈ ಭೂಲೋಕದಲ್ಲಿ, ಅರಂ= ಚೆನ್ನಾಗಿ, ಸಂಚರಂತಿ= ಪ್ರವಹಿಸುತ್ತವೆಯೋ ಅಂತಹ ನದಿಗಳು ಪಾಪಪರಿಹಾರವನ್ನು ಮಾಡಲು ಸಮರ್ಥವಾಗಿವೆ ಎಂದು ಅನ್ವಯ.
ದ್ವಾದಶಪೂಗಾಃ ಸರಿತೋ ದೇವರಕ್ಷಿತಾ ಮಧ್ವೀಶತೇ |
ತದನುವಿಧಾಯಿನ್ಯಸ್ತದಾ ಸದಾಚರಂತಿ ಘೋರಮ್ ॥
ಎಂಬ ಪಾಠವನ್ನು ತೆಗೆದುಕೊಂಡರೆ ಹೀಗೆ ಅರ್ಥವನ್ನು ಮಾಡಬೇಕು. ದ್ವಾದಶಪೂಗಾಃ= ಐದುಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಸೇರಿ ಹನ್ನೆರಡು ವಸ್ತುಗಳಾಗುತ್ತವೆ. ಇವುಗಳ ಸಮೂಹಗಳು, ಒಬ್ಬೊಬ್ಬ ಪುರುಷನಲ್ಲಿ ಒಂದೊಂದು ಸಮೂಹವಿರುವುದರಿಂದ ಪುರುಷ ಬಹುತ್ವದಿಂದ ಸಮೂಹಗಳು ಎಂಬ ಬಹುವಚನಗಳು ಉಪಪನ್ನವಾಗುತ್ತವೆ. ಸರಿತಃ= ವಿಷಯಗಳ ಕಡೆಗೆ ಹರಿಯುತ್ತವೆ, ಸ್ವಾಭಾವಿಕವಾಗಿ ವಿಷಯಗಳ ಕಡೆಗೆ ಹೋಗುವ ಸ್ವಭಾವ ಉಳ್ಳವುಗಳು ಎಂದು ತಾತ್ಪರ್ಯ. ದೇವರಕ್ಷಿತಾಃ= ಕ್ರೀಡಾದಿ ಗುಣವಿಶಿಷ್ಟನಾದ ಭಗವಂತನಿಂದ ನಿಯಮಿತವಾದ ಇವು, ಮಧು= ಮೇಲ್ನೋಟಕ್ಕೆ ಮನೋಹರವಾದ ವಿಷಯ ಸಮೂಹವನ್ನು, ಕುರಿತು ಹೋಗಲು ಎಂದು ಇಟ್ಟುಕೊಳ್ಳಬೇಕು, ಈಶತೇ= ಸಮರ್ಥವಾಗುತ್ತವೆ. ಯಾವಾಗ ಇವು ವಿಷಯಗಳ ಕಡೆ ಹೋಗುತ್ತವೆಯೋ ಆಗ, ತದನುವಿಧಾಯಿನ್ಯಃ= ಪರಮಾತ್ಮನಿಗೆ ಅಧೀನವಾಗಿ, ೋರಂ= ಅನಿಷ್ಟವಾದ ಫಲಗಳನ್ನು, ಸದಾ ಚರಂತಿ= ಯಾವಾಗಲೂ ಕೊಡುತ್ತವೆ.
ಅಥವಾ `ದ್ವಾದಶಪೂಗಾಃ ಸರಿತೋ ದೇವರಕ್ಷಿತಾ ಮಧ್ವೀಶತೇ |
ತದನುವಿಧಾಯಿನ್ಯಸ್ತದಾ ಸದಾಚರಂತಿ ಘೋರಮ್ ॥'
ಎಂಬ ಪಾಠವನ್ನು ತೆಗೆದುಕೊಂಡರೆ, ಹತ್ತು ಹನ್ನೆರಡು ಕವಲುಗಳಾಗಿ ಹರಿಯುವ ಸಂತೋಷಕರವಾದ ಗಂಗಾ-ಯಮುನಾದಿ ನದಿಗಳು ಸಜ್ಜನರ ಪಾಪವನ್ನು ಪರಿಹರಿಸಲು ಸಮರ್ಥವಾಗಿವೆ. ಆ ಗಂಗಾ-ಯಮುನಾದಿ ನದಿಗಳು, ಇಹ= ಈ ಲೋಕದಲ್ಲಿ, ತದನುವಿಧಾಯಿನ್ಯಃ= ಸಮುದ್ರದಲ್ಲಿರುವ ವಡವಾಗ್ನಿಯ ಅಂತರ್ಯಾಮಿಯಾದ ನರಸಿಂಹದೇವರಿಗೆ ಅಧೀನರಾಗಿ, ಘೋರಂ= ಉಗ್ರವಾದ ಆ ನರಸಿಂಹ ರೂಪದ ಪೂಜೆಯನ್ನು ಉದ್ದೇಶಿಸಿ, ಸದಾ ಚರಂತಿ= ಯಾವಾಗಲೂ ಪ್ರವಹಿಸುತ್ತವೆ. ಆಚಾರ್ಯರು ಕರ್ಮನಿರ್ಣಯದಲ್ಲಿ ಉದಾಹರಿಸಿರುವ
`ಭೂತಾನಿ ಭೂತೋಽಂಬುನಿಧಾನಮಧ್ಯೇ ಭೂತ್ವಾ ಹರಿಃ ಸರ್ವಹರೋಽತಿಧಾಮ್ನಾ |
ಅಗಾಧಮಂಭೋ ವಿದಧಾತಿ ಭಸ್ಮ ಯೋ ಬಾಡವಾಗ್ನಿರ್ನೃಹರಿರ್ವಿಚಿಂತ್ಯಃ ॥'
ಎಂಬ ವೈಹಾಯಸ ಸಂಹಿತೆಯ ವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ.
ಭಾರತ ಶ್ರೀನಿವಾಸಾಚಾರ್ಯರು `ದ್ವಾದಶಭೋಗಾಃ ಸರಿತೋ ನದೌ ದೇವರಕ್ಷಿತಾಃ॥ ಮಧ್ವೀಶತೇ ತಾನ್ ಸ್ವವಶೇ ನಯಿತ್ವಾ ॥'' ಎಂಬ ಪಾಠವನ್ನು ಇಟ್ಟುಕೊಂಡು ಯೋಗಿಗಳು ತಾನ್= ಆ ಇಂದ್ರಿಯಸಮೂಹಗಳನ್ನು, ಸ್ವವಶೇ ನಯಿತ್ವಾ= ತಮ್ಮ ಅಧೀನವನ್ನಾಗಿ ಮಾಡಿಕೊಂಡು ಪರಮಾತ್ಮನನ್ನು ನೋಡುತ್ತಾರೆ ಎಂದು ಅರ್ಥವನ್ನು ಮಾಡಿದ್ದಾರೆ.
ತದರ್ಪ್ಯಮಾಣಮಪಿಬನ್ ಸಂಚಿತಂ ಭ್ರಮರಾ ಮಧು |
ಈಶಾನಃ ಸರ್ವಭೂತೇಷು ಹವಿರ್ಭೂತಮಕಲ್ಪಯತ್ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥9॥
ಭ್ರಮರಾಃ= ಮಧುಪಾನಾಸಕ್ತರಾದ ಭ್ರಮರಗಳಂತೆ ಇರುವ ಪೂರ್ವಾದಿ ದಿಕ್ಕುಗಳಲ್ಲಿರುವ ಆದಿತ್ಯರು, ರುದ್ರರು, ವಸುಗಳು, ಮರುತ್ತುಗಳು ಮತ್ತು ಸಾಧ್ಯರು, ತದರ್ಪ್ಯಮಾಣಂ= ಆ ಭಗವಂತನಿಂದ ಅರ್ಪಿಸಲ್ಪಟ್ಟ, ಸಂಚಿತಂ= ತಮ್ಮ ಕರ್ಮದಿಂದ ಸಂಪಾದಿಸಲ್ಪಟ್ಟ, ಮಧು= `ಮದಿ ಹರ್ಷೇ' ಎಂಬ ಧಾತುವಿರುವುದರಿಂದಲೂ, `ತೃತೀಯೋಽತಿಶಯೇ' ಎಂಬ ವ್ಯಾಕರಣಸೂತ್ರಗಳಿಂದಲೂ ಅತಿಶಯವಾಗಿ ಆನಂದಕರವಾದ ಮಧುಸ್ಥಾನೀಯನಾದ ಸೂರ್ಯಮಂಡಲಸ್ಥ ಪರಮಾತ್ಮನನ್ನು, ಅಪಿಬನ್= ಉಪಜೀವಿಸುತ್ತಾರೆ. ಈ ವಿಷಯವು ಛಾಂದೋಗ್ಯ ಉಪನಿಷತ್ತಿನಲ್ಲಿ ಸ್ಪಷ್ಟವಾಗಿದೆ. ಭಗವಂತನು ಆದಿತ್ಯಾದಿ ದೇವತೆಗಳಿಗೆ ಮಾತ್ರ ಮಧುಪರ್ಕವಾಗಿ ಉಪಜೀವ್ಯನಲ್ಲ. ಆದರೆ ಎಲ್ಲಾ ಭೂತಗಳಿಗೂ ಉಪಜೀವ್ಯನಾದವನು ಎಂದು ಹೇಳುತ್ತಾರೆ. ಈಶಾನಃ= ಸರ್ವಸ್ವಾಮಿಯಾದ ಪರಮಾತ್ಮನು, ಸರ್ವಭೂತೇಷು= ಸರ್ವಭೂತಗಳಿಗಾಗಿ (ನಿಮಿತ್ತ ಸಪ್ತಮಿಯಾದ್ದರಿಂದ ಸರ್ವಭೂತಗಳ ನಿಮಿತ್ತವಾಗಿ ಎಂದು ಅರ್ಥ), ಹವಿರ್ಭೂತಂ= ಪ್ರಾಣಾಗ್ನಿ ಹೋತ್ರದಲ್ಲಿ ಹವಿರ್ದ್ರವ್ಯರೂಪವಾದ, ಅನ್ನಂ= ಆಹಾರವನ್ನು, ಅಕಲ್ಪಯತ್= ಸೃಷ್ಟಿ ಮಾಡಿದನು.
ಭಾರತ ಶ್ರೀನಿವಾಸಾಚಾರ್ಯರು
`ತ್ರಯಮೇಕಂ ತ್ರಯಸಿತ್ರಂಶತ್ ಪಂಚ ಚಾಸ್ಮಾತ್ ಪ್ರಜಾಯತೇ |
ಯೋಗಿನಃ ತಂ ಪ್ರಪಶ್ಯಂತಿ ...................................... ॥ '
ಎಂದು ಒಂದು ಅಧಿಕ ಶ್ಲೋಕವನ್ನು ತೆಗೆದುಕೊಂಡು ವ್ಯಾಖ್ಯಾನ ಮಾಡಿದ್ದಾರೆ. ತ್ರಯಂ= ಗುಣತ್ರಯಗಳು, ಏಕಂ= ಒಂದು ಮಹತ್ತತ್ತ್ವ, ತ್ರಯಸಿತ್ರಂಶತ್= ಮೂವತ್ತ ಮೂರು, ಅಹಂಕಾರ-ಬುದ್ಧಿ-ಮನಸ್ಸುಗಳು ಮೂರು, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಸೇರಿ ಹತ್ತು, ಪಂಚತನ್ಮಾತ್ರ ಮತ್ತು ಪಂಚಮಹಾಭೂತಗಳು ಸೇರಿ ಹತ್ತು, ಪ್ರಾಣಾದಿ-ನಾಗಾದಿ ಪಂಚಗಳು ಸೇರಿ ಹತ್ತು, ಹೀಗೆ ಒಟ್ಟು ಮೂವತ್ತು ಮೂರು ಪದಾರ್ಥಗಳು, ಪಂಚ= ಶಬ್ದಾದಿ ಪಂಚಕವನ್ನೂ ಸೃಷ್ಟಿ ಮಾಡಿದನು. ಯೋಗಿಗಳು ಅಂತಹ ಪರಮಾತ್ಮನನ್ನು ನೋಡುತ್ತಾರೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಅದರಂತೆಯೇ
`ಯಸ್ಯಾದಿಗಮತಃ ಪೂರ್ವಂ ಉತ್ತರಂಚ ಪ್ರಗೃಹ್ಯತೇ |
ಸುಹೃದೋಽಹೃದಶ್ಚೈವ ಮತಂಯನ್ನ ಭವಿದ್ವಿತತ್ ॥'
ಎಂದು ಇನ್ನೊಂದು ಶ್ಲೋಕವನ್ನು ಅಧಿಕವಾಗಿ ಪಠಿಸಿ ವ್ಯಾಖ್ಯಾನ ಮಾಡಿದ್ದಾರೆ. ಯಸ್ಯ= ಯಾವ ಪರಮಾತ್ಮನ, ಅಧಿಕಮತಃ= ಅಪರೋಕ್ಷ ಜ್ಞಾನಾನಂತರದಲ್ಲಿ, ಪೂರ್ವಂ= ಅಪರೋಕ್ಷ ಜ್ಞಾನಕ್ಕಿಂತ ಪೂರ್ವದಲ್ಲಿ ಮಾಡಿದ, ಉತ್ತರಂ ಚ= ಅಪರೋಕ್ಷ ಜ್ಞಾನದ

ಅನಂತರದಲ್ಲಿ ಮಾಡಿದ ಪುಣ್ಯ-ಪಾಪಕರ್ಮಗಳನ್ನು, ಸುಹೃದಃ= ಸ್ನೇಹಪಾತ್ರರು, ಅಸುಹೃದಶ್ಚೈವ= ಮತ್ತು ಶತ್ರುಗಳು, ಸುಹೃಹ್ಣತೆ= ಸ್ವೀಕರಿಸುತ್ತಾರೆಯೋ, ಯತ್- ಯಾವ ಪರಮಾತ್ಮನ ರೂಪವು, ಮತಂ ನ ಭವೇತ್= ಪೂರ್ಣವಾಗಿ ತಿಳಿಯುವುದಿಲ್ಲವೋ ಅಂತಹ ಪರಮಾತ್ಮನನ್ನು ಯೋಗಿಗಳು ನೋಡುತ್ತಾರೆ ಎಂದು ವ್ಯಾಖ್ಯಾನ ಮಾಡಿದ್ದಾರೆ.
ಹಿರಣ್ಯವರ್ಣ(ಪರ್ಣ)ಮಶ್ವತ್ಥಮಭಿಪತ್ಯ ಸಪಕ್ಷಕಾಃ |
ತೇ ತತ್ರ ಪಕ್ಷಿಣೋ ಭೂತ್ವಾ ಪ್ರಪತಂತಿ (ಪ್ರಭವಂತಿ) ಯಥಾಸುಖಮ್ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥10॥
ಸಪಕ್ಷಕಾಃ= ರೆಕ್ಕೆಗಳಿಂದ ಕೂಡಿದ, ತೇ= ಆ ಮುಕ್ತರು, ಪಕ್ಷಿಣೋ ಭೂತ್ವಾ= ಪಕ್ಷಿಗಳಾಗಿ, ಹಿರಣ್ಯವರ್ಣಂ= ಚಿನ್ನದ ಬಣ್ಣವಿರುವ ಎಲೆಗಳಿಂದ ಕೂಡಿದ, ಚಿನ್ಮಯವಾದ ಲಕ್ಷ್ಮೀಸ್ವರೂಪವಾದ, ಅಶ್ವತ್ಥಂ= ಶ್ವೇತದ್ವೀಪದಲ್ಲಿರುವ ಅಮೃತವನ್ನು ಸುರಿಸುವ ಅಶ್ವತ್ಥವೃಕ್ಷವನ್ನು, ಅಭಿಪತ್ಯ= ಸಮೀಪಿಸಿ, ಯಥಾಸುಖಂ= ತಮಗೆ ಸುಖವಾಗುವ ರೀತಿಯಲ್ಲಿ, ಪ್ರಭವಂತಿ= ಪ್ರಕೃಷ್ಟರಾಗುತ್ತಾರೆ ಅಥವಾ ಹಾರಿ ಬಂದು ಅದರ ಮೇಲೆ ಇಳಿಯುತ್ತಾರೆ. ಆ ಅಶ್ವತ್ಥವೃಕ್ಷವು ಛಾಂದೋಗ್ಯಭಾಷ್ಯದಲ್ಲಿ `ತತ್ರಾಶ್ವತ್ಥಃ ಸುಧಾಸ್ರವಃ | ಚಿತ್ಸುವರ್ಣಮಯಂ ದಿವ್ಯಂ ಲಕ್ಷ್ಮೀಸ್ತತ್ರಸ್ವರೂಪಿಣೀ' ಎಂದು ಶ್ವೇತದ್ವೀಪದಲ್ಲಿ ಅಮೃತವನ್ನು ಸುರಿಸುವ ಚಿದಾತ್ಮಕವಾದ ಸುವರ್ಣವರ್ಣದಿಂದ ಕೂಡಿದ ಲಕ್ಷ್ಮೀಸ್ವರೂಪವಾದ ಅಶ್ವತ್ಥವೃಕ್ಷವಿದೆ ಎಂದು ಹೇಳಿದ್ದಾರೆ. ಅಲ್ಲಿರುವ ಭಗವಂತನನ್ನು ಹೊಂದಿ ಪ್ರಕೃಷ್ಟರಾಗುತ್ತಾರೆ ಎಂದು ಅಭಿಪ್ರಾಯ. ಕೆಲವು ಪುಸ್ತಕಗಳಲ್ಲಿ `ಸಪಕ್ಷಕಾಃ' ಎಂಬುದಕ್ಕೆ `ಸಪಕ್ಷ' ಎಂದರೆ `ಸ್ವಪಕ್ಷ' ತಮ್ಮ ಜೊತೆಯಲ್ಲಿಯೇ ಮುಕ್ತರಾದವರು, `ಸಪಕ್ಷಕಾಃ' ಎಂದರೆ ಅಂತಹ ಮುಕ್ತರಿಂದ ಸಹಿತರಾಗಿ ಪಕ್ಷಿಗಳ ರೂಪವನ್ನು ಧರಿಸಿ ಇತ್ಯಾದಿಯಾಗಿ ಅರ್ಥವನ್ನು ಮಾಡಬೇಕು. ಇಂತಹ ಪರಮಾತ್ಮನನ್ನು ಯೋಗಿಗಳು ನೋಡುತ್ತಾರೆ ಎಂದು ಎಲ್ಲ ಶ್ಲೋಕದಲ್ಲಿಯೂ ಕೊನೆಯ ಸಾಲಿನ ಅರ್ಥವು ಇದ್ದೇ ಇದೆ.
ಯಸ್ಮಾಚ್ಚ ವಾಯುರಾಯಾತೋ ಯಸ್ಮಾಚ್ಚ ಪ್ರುಲಯಸ್ತಥಾ |
ತಸ್ಮಾದಗ್ನಿಶ್ಚ ಸೋಮಶ್ಚ ತಸ್ಮಾಚ್ಚ ಪ್ರಾಣ ಆಗತಃ |
ಸರ್ವಮೇವ ಸ ವೈ ವಿದ್ವಾಂಸ್ತಂ ತು ವಕ್ತುಂ ನ ಶಕ್ನುಮಃ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತಮ್ ॥11॥
ಯಸ್ಮಾತ್= ಯಾವ ಪರಮಾತ್ಮನ ದೆಶೆಯಿಂದ, ವಾಯುಃ= ಭೂತವಾಯುವು, ಆಯಾತಃ= ಜನ್ಮವನ್ನು ತಳೆದಿದ್ದಾನೆಯೋ, ಯಸ್ಮಾಚ್ಚ= ಯಾವ ಪರಮಾತ್ಮನ ದೆಸೆಯಿಂದ, ತಥಾ= ಅದರಂತೆ, ಪ್ರುಳಯ= ಪ್ರುಳಯವು ಉಂಟಾಗುತ್ತದೆಯೋ, ತಸ್ಮಾತ್= ಅಂತಹ ಪರಮಾತ್ಮನ ದೆಶೆಯಿಂದಲೇ, ಅಗ್ನಿಶ್ಚ= ಅಗ್ನಿಯೂ, ಸೋಮಶ್ಚ= ಚಂದ್ರನೂ, ಪ್ರಾಣಃ= ಅಹಂಕಾರಿಕ ಪ್ರಾಣನೂ, ಆಗತಃ= ಜನ್ಮವನ್ನು ಹೊಂದಿದ್ದಾರೆ. ಪ್ರುಲಯಸ್ತಥಾ ಎಂಬುದಕ್ಕೆ ಬದಲಾಗಿ `ಪ್ರವಹಸ್ತಥಾ' ಎಂದೂ ಪಾಠವಿದೆ. ಆಗ ವಾಯುವು ಎಂದರೆ ಭೂತವಾಯು, ಪ್ರವಹ ಎಂದರೆ ಪ್ರವಹನಾಮಕ ವಾಯು ಎಂದು ಅರ್ಥವನ್ನು ಮಾಡಬೇಕು.
ಅಪಾನಂ ಗಿರತಿ ಪ್ರಾಣಃ ಪ್ರಾಣಂ ಗಿರತಿ ಚಂದ್ರಮಾಃ |
ಆದಿತ್ಯೋ ಗಿರತೇ ಚಂದ್ರಮಾದಿತ್ಯಂ ಗಿರತೇ ಪರಃ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥12॥
`ಪ್ರಭವಂತಿ ಯಥಾಸುಖಮ್' ಎಂಬ ಹಿಂದಿನ ಒಂದು ಶ್ಲೋಕದಲ್ಲಿ ಅಧಿಕಾರಿಗಳಿಗೆ ಮೋಕ್ಷಪ್ರಾಪ್ತಿ ಹೇಳಲ್ಪಟ್ಟಿದೆ. ಅದರಲ್ಲಿ ಮೋಕ್ಷಕಾಲದಲ್ಲಿ ದೇವತೆಗಳಿಗೆ ಉಂಟಾಗುವ ಸ್ವೋತ್ತಮ ಪ್ರವೇಶದ ಸ್ವಲ್ಪ ಅಂಶವನ್ನು ಮಾತ್ರ ಇಲ್ಲಿ ತಿಳಿಸುತ್ತಾರೆ. ಪ್ರಾಣಃ= ಅವಾಂತರ ವಾಯುವು, ಅಪಾನಂ ಗಿರತಿ= ಅಪಾನವನ್ನು ಸಂಹರಿಸುತ್ತಾನೆ. ಆದಿತ್ಯಃ= ಅದಿತಿಯ ಪುತ್ರನಾದ ಅದಿತ್ಯನು, ಚಂದ್ರಂ= ಚಂದ್ರನನ್ನು ಸಂಹರಿಸುತ್ತಾನೆ. ಅನಿರುದ್ಧನನ್ನು ಪರಃ= ಅವನಿಗಿಂತ ಶ್ರೇಷ್ಠನಾದ, ಕಾಮಃ= ಮನ್ಮಥನು ಸಂಹರಿಸುತ್ತಾನೆ. ಈ ಕ್ರಮದಿಂದ, ಪರಃ= ಸರ್ವೋತ್ತಮನಾದ ಪರಮಾತ್ಮನು ಬ್ರಹ್ಮದೇವನನ್ನು ಸಂಹರಿಸುತ್ತಾನೆ. ಇದನ್ನು ಅನುವ್ಯಾಖ್ಯಾನದಲ್ಲಿ ಆಚಾರ್ಯರು
`ಸೋಮಸ್ತು ವಾರೀಶಯುತೋಽನಿರುದ್ಧಂ ವಿಶತ್ಯಸೌ ಕಾಮಮಸೌ ಚ ವಾರುಣೀಮ್|
ಸಾ ಶೇಷದೇವಂ ಸ ಗಿರಂ ಚ ಸೈವ ವಾಯುಂ ವಿಶಂತ್ಯಂಜ ಇತೀಹ ನಿರ್ಣಯಃ ॥'
(ಚಂದ್ರನು ವರುಣಸಹಿತನಾಗಿ ಅನಿರುದ್ಧನನ್ನು ಪ್ರವೇಶಿಸುತ್ತಾನೆ, ಅನಿರುದ್ಧನು ಮನ್ಮಥನನ್ನು, ಮನ್ಮಥನು ಶೇಷಪತ್ನಿಯಾದ ವಾರುಣಿಯನ್ನು, ವಾರುಣಿಯು ಶೇಷನನ್ನು, ಶೇಷನು ಭಾರತಿಯನ್ನು, ಭಾರತಿಯು ವಾಯುದೇವರನ್ನು ಪ್ರವೇಶಿಸುತ್ತಾಳೆ ಎಂಬುದು ಈ ವಿಷಯದಲ್ಲಿ ಸರಿಯಾಗಿ ನಿರ್ಣಯವಾಗಿದೆ) ಎಂದು ಹೇಳಿದ್ದಾರೆ.
ಏಕಂ ಪಾದಂ ಸಮುತ್ಕ್ಷಿಪತಿ ಸಲಿಲಾರ್ಥಂ ಸಮುಚ್ಚರನ್ |
ತಂ ಚೇತ್ ಸತತಮೃತ್ವಾಂಗಂ ನ ಮೃತ್ಯುರ್ನಾಮೃತಂ ಭವೇತ್ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥13॥
ಸಲಿಲಾರ್ಥಂ= ಸಲಿಲ ಎಂದರೆ ಗರ್ಭೋದಕವು, ಅರ್ಥವಾಗುವಂತೆ, ಉಚ್ಚರನ್= ಬ್ರಹ್ಮಾಂಡದ ಒಳಗೆ ಮೇಲ್ಭಾಗದಲ್ಲಿ ಸಂಚರಿಸುತ್ತಾ, ಸಃ= ಆ ನಾರಾಯಣನು, ಏಕಂ ಪಾದಂ= ಜೀವರೂಪನಾದ ಭಿನ್ನಾಂಶನನ್ನು, ಕ್ಷಿಪತಿ= ಈ ಲೋಕದಲ್ಲಿ ಸ್ಥಾಪಿಸುತ್ತಾನೆ. ಏಕಂ ಪಾದಂ= ಇನ್ನೊಂದು ಪಾದವನ್ನು, ಇಲ್ಲಿ ಏಕವಚನವು ಜಾತ್ಯೇಕವಚನವಾಗಿದೆ. ಆದ್ದರಿಂದ ಉಳಿದ ಸ್ವರೂಪಾಂಶವನ್ನು ಎಂದು ಅರ್ಥ. ಸಮುತ್ಕ್ಷಿಪತಿ= ಮೇಲಿನ ವೈಕುಂಠಾದಿ ಲೋಕತ್ರಯದಲ್ಲಿ ಚೆನ್ನಾಗಿ ಸ್ಥಾಪಿಸುತ್ತಾನೆ. `ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗುತ್ತದೆ. ಅಂಗಂ= ಪ್ರಿಯನಾದ ಅವನನ್ನು, ಸತತಂ= ಯಾವಾಗಲೂ, ಋತ್ವಾಚೇತ್= ವೇದಾಂತ ಶ್ರವಣಾದಿಗಳಿಂದ ವಿಚಾರ ಮಾಡಿ ಅಪರೋಕ್ಷ ಜ್ಞಾನದಿಂದ ಅವನನ್ನು ಹೊಂದಿದರೆ ಅಂತಹ ಅಧಿಕಾರಿಗೆ, ಮೃತ್ಯುಃ ನ= ಮರಣವು ಉಂಟಾಗುವುದಿಲ್ಲ. ಆಮೃತಂ ನ= ಸರ್ವದಿಕ್ಕುಗಳಲ್ಲಿಯೂ ಮರಣರೂಪವಾಗಿರುವ ಸಂಸಾರವೂ ಉಂಟಾಗುವುದಿಲ್ಲ.

`ಏಕಂ ಪಾದಂ ನೋತ್ಕ್ಷಿಪತಿ ಸಲಿಲಾದ್ಧಂಸ ಉಚ್ಚರನ್' ಎಂಬ ಪಾಠದಲ್ಲಿ ಹಂಸಃ= ಪರಮಶುದ್ಧನಾದ ಭಗವಂತನು, ಸಲಿಲಾತ್= ಭೂತಭೌತಿಕರೂಪವಾದ ಸಂಸಾರದಿಂದ, ಏಕಂ ಪಾದಂ= `ಪಾದೋಽಸ್ಯ ವಿಶ್ವಾಭೂತಾನಿ' ಎಂಬ ಶ್ರುತಿ ಇರುವುದರಿಂದ ಭಿನ್ನಾಂಶರೂಪನಾದ ಜೀವನನ್ನು, ನೋತ್ಕ್ಷಿಪತಿ= ವೈಕುಂಠಾದಿ ಊರ್ಧ್ವಲೋಕಗಳಲ್ಲಿ ತನ್ನ ಸ್ವರೂಪಾಂಶತ್ರಯವನ್ನು ಇಟ್ಟಂತೆ ಇಡುವುದಿಲ್ಲ ಎಂದು ಅಭಿಪ್ರಾಯ.

ಏವಂರೂಪೋ ಮಹಾತ್ಮಾ ಸ ಪಾವಕಂ ಪುರುಷೋಽಂಗಿರಾಃ |
ಯೋ ವೈ ತಂ ಪುರುಷಂ ವೇದ ತಸ್ಯೇಹಾತ್ಮಾ ನ ರಿಷ್ಯತೇ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥14॥

ಏವಂ ನೃಪಃ= ಇಂತಹ ಗುಣವಿಶಿಷ್ಟನಾದ, ಸಃ= ಆ ಪರಮಾತ್ಮನು, ಮಹಾತ್ಮಾ= ಮಹಾನುಭಾವನಾದವನು, ಅಂಗಿರಾಃ= ಅಂಗದೇವತಾಯುಕ್ತವಾದ ಹರಿಯು ಅಂಗಿ, ಅವನಲ್ಲಿ ರಮಿಸುವವನು ಎಂದರೆ ಜ್ಞಾನಿಯಾದವನು ಅಂಗಿರಾ ಅಂತಹ ಜ್ಞಾನಿಯಾದ, ಯಃ ಪುರುಷಃ= ಯಾವ ಪುರುಷನು, ತಂ= ಅಂತಹ, ಪಾವಕಂ= ನಾಮಮಾತ್ರದ ಸ್ಮರಣೆಯಿಂದ ಪವಿತ್ರೀಕರಿಸುವ, ಪುರುಷಂ= ಪೂರ್ಣಷಡ್ಗುಣೈಶ್ವರ್ಯ ಸಂಪನ್ನನಾದ ಹರಿಯನ್ನು, ವೇದ= ಅಪರೋಕ್ಷವಾಗಿ ತಿಳಿಯುತ್ತಾನೆಯೋ, ತಸ್ಯ= ಅಂತಹ ಜ್ಞಾನಿಗೆ, ಇಹ= ಈ ಲೋಕದಲ್ಲಿ, ಆತ್ಮಾ= ಅವನ ಸ್ವರೂಪವು, ನ ರಿಷ್ಯತೇ= ದುಃಖಾದಿ ಅನರ್ಥಕ್ಕೆ ಒಳಗಾಗುವುದಿಲ್ಲ.
ಅಥವಾ ಆತ್ಮಾ= ಪರಮಾತ್ಮನು, ತಸ್ಯ= ಆ ಜ್ಞಾನಿಗೆ, ನ ರಿಷ್ಯತೇ= ನಷ್ಟನಾಗುವುದಿಲ್ಲ, ಫಲಪ್ರದನಾಗದೇ ಇರುವುದಿಲ್ಲ ಎಂದು ಅರ್ಥ. ಪ್ರಯೋಜನವನ್ನು ಕೊಡದಿರುವ ವಸ್ತುವನ್ನು ನಷ್ಟವೆಂದು ಹೇಳುತ್ತಾರೆ ಎಂಬ ವಿಷಯವನ್ನು `ತಸ್ಯ ಅಹಂ ನ ಪ್ರಣಷ್ಯಾಮಿ' (ಜ್ಞಾನಿಗೆ ನಾನು ನಷ್ಟವಾಗುವುದಿಲ್ಲ) ಎಂಬ ಗೀತಾವಾಕ್ಯ ವ್ಯಾಖ್ಯಾನ ಸಂದರ್ಭದಲ್ಲಿ ಆಚಾರ್ಯರು ಹೇಳಿದ್ದಾರೆ. `ಪೂಜ್ಯಂ ಚ ಪಾವಕಂ ಪುರುಷೋ ಗಿರನ್' ಎಂಬ ಪಾಠದಲ್ಲಿ ಪೂಜ್ಯನಾದ ಅಗ್ನಿಯನ್ನೂ ಪಾವಕನಾದ ವಾಯುದೇವರನ್ನೂ ಸಂಹರಿಸುವ ಯಾವ ಪರಮಾತ್ಮನನ್ನು ಜ್ಞಾನಿಯು ತಿಳಿಯುತ್ತಾನೆಯೋ ಎಂದು ಅರ್ಥ. `ಏವಂ ರೂಪೋ ಮಹಾತ್ಮಾ ಸಃ ಸಾವೃತಿಂ ಪುರುಷೋ ಅವಿರತ್' ಎಂಬ ಪಾಠದಲ್ಲಿ ಪೂರ್ಣ ಷಡ್ಗುಣೈಶ್ವರ್ಯ ಸಂಪನ್ನನಾದ ಅವನು ಆವರಣ ಸಹಿತವಾದ ಬ್ರಹ್ಮಾಂಡವನ್ನು ಅವಿರತ್= ಉದ್ಗಿರತ್= ಉತ್ಪಾದನೆ ಮಾಡಿದನು ಎಂದು ಅರ್ಥವನ್ನು ಮಾಡಬೇಕು.

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ
ಲಿಂಗಸ್ಯ ಯೋಗೇನ ಸ ಯಾತಿ ನಿತ್ಯಮ್ |
ತಮೀಶಮೀಡ್ಯಮನುಕಲ್ಪಮಾದ್ಯಂ
ಪಶ್ಯಂತಿ ಮೂಢಾ ನ ವಿರಾಜಮಾನಮ್ |
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥15॥

ಯಃ= ಯಾವ ಪರಮಾತ್ಮನು, ಅಂಗುಷ್ಠಮಾತ್ರಃ= ಅಂಗುಷ್ಠ ಪರಿಮಾಣ ಉಳ್ಳವನೋ, ಪುರುಷಃ= ಪೂರ್ಣಷಡ್ಗುಣಸಂಪನ್ನನಾದ, ಅಂತರಾತ್ಮಾ= ಅಂತರ್ಯಾಮಿಯಾದ, ಸಃ= ಆ ಪರಮಾತ್ಮನು, ಅನುಕಲ್ಪಂ= ಪ್ರತಿಕಲ್ಪದಲ್ಲಿಯೂ, ಯಾತಿ= ರಾಮಾದಿ ಅವತಾರ ರೂಪದಿಂದ ಭೂಲೋಕಕ್ಕೆ ಬರುತ್ತಾನೆ. ನಿತ್ಯಂ= ನಾಶವಿಲ್ಲದಿರುವ, ಈಶಂ= ಸ್ವಾಮಿಯಾದ, ಈಡ್ಯಂ= ಸ್ತುತ್ಯನಾದ, ಆದ್ಯಂ= ಅನಾದಿ ಕಾಲದಿಂದಲೂ ಇರುವ, ವಿರಾಜಮಾನಂ= ಪ್ರಕಾಶಮಾನನಾದ, ತಂ= ಅವನನ್ನು, ಲಿಂಗಸ್ಯ ಯೋಗೇನ= ಲಿಂಗದೇಹದ ಸಂಬಂಧದಿಂದ, ಮೂಢಾಃ= ಅಜ್ಞಾನಕ್ಕೆ ಒಳಗಾದ ಜೀವರು, ನ ಪಶ್ಯಂತಿ= ಕಾಣುವುದಿಲ್ಲ. ಅಥವಾ ಲಿಂಗಸ್ಯ= ದೇಹದ ಮಧ್ಯದಲ್ಲಿ, ಯೋಗೇನ= ತನ್ನ ಸಾಮರ್ಥ್ಯದಿಂದಲೇ, ವಿರಾಜಮಾನಂ= ವಿಶೇಷವಾಗಿ ಪ್ರಕಾಶಮಾನನಾಗಿರುವ ಅವನನ್ನು ನೋಡುವುದಿಲ್ಲ ಎಂದು ಅನ್ವಯ.

ನಾತ್ಮಾನಮಾತ್ಮಸ್ಥಮವೈತಿ ಮೂಢಃ
ಸಂಸಾರಕೂಪೇ ಪರಿವರ್ತತೇ ಯಃ |
ತ್ಯಕ್ತ್ವಾಽಽತ್ಮರೂಪಂ ವಿಷಯಾಂಶ್ಚ ಭುಂಕ್ತೇ
ಸ ವೈ ಜನೋ ಗರ್ದಭ ಏವ ಸಾಕ್ಷಾತ್ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥

ಯಃ ಮೂಢಃ= ಯಾವ ಮೂಢನು, ಆತ್ಮಸ್ಥಂ= ತನ್ನೊಳಗಿರುವ, ಆತ್ಮಾನಂ= ಪರಮಾತ್ಮನನ್ನು, ನಾವೈತಿ= ತಿಳಿಯುವುದಿಲ್ಲವೋ, ಸಃ= ಅಂತಹ ಮೂಢನು, ಸಂಸಾರಕೂಪೇ= ಸಂಸಾರವೆಂಬ ಕೂಪದಲ್ಲಿ, ಪರಿವರ್ತತೇ= ತೊಳಲಾಡುತ್ತಾನೆ. ಆತ್ಮರೂಪಂ= ಪರಮಾತ್ಮನ ಸ್ವರೂಪವನ್ನು, ತ್ಯಕ್ತ್ವಾ= ಪರಿತ್ಯಜಿಸಿ, ಪರಮಾತ್ಮನ ಸ್ಮರಣಾದಿಗಳನ್ನು ಮಾಡದೆ, ವಿಷಯಂ= ಶಬ್ದಾದಿ ವಿಷಯಗಳನ್ನು, ಭುಂಕ್ತೇ= ಅನುಭವಿಸುತ್ತಾನೆ. ಸ ಜನಃ= ಅಂತಹ ಮನುಷ್ಯನು, ಸಾಕ್ಷಾತ್= ಮುಖ್ಯವಾಗಿಯೇ, ಗರ್ದಭಃ ವೈ= ಕತ್ತೆಯೇ ಆಗಿರುತ್ತಾನೆ. ಯಾವನು ತನ್ನ ಹೃದಯದಲ್ಲಿರುವ ಪರಮಾತ್ಮನನ್ನು ತಿಳಿಯದೆ ವಿಷಯಭೋಗದಲ್ಲಿ ಮಗ್ನನಾಗಿರುತ್ತಾನೆಯೋ ಅವನನ್ನು ಯಾವ ಸಂಕೋಚವೂ ಇಲ್ಲದೆ ಕತ್ತೆ ಎಂದು ಹೇಳಬಹುದು. ಅಂತಹ ಪರಮಾತ್ಮನನ್ನು ಯೋಗಿಗಳು ನೋಡುತ್ತಾರೆ.
ಭಾರತ ಶ್ರೀನಿವಾಸಾಚಾರ್ಯರು, ಸಃ= ಆ ಪರಮಾತ್ಮನು, ಲಿಂಗಸ್ಯ ಯೋಗೇನ= ಲಿಂಗದೇಹದ ಸಂಬಂಧದಿಂದ ಕೂಡಿರುವ ಜೀವನನ್ನು, ನಿತ್ಯಂ= ಪ್ರತಿದಿವಸವೂ, ಯಾತಿ= ಸುಷುಪ್ತಿಯ ಕಾಲದಲ್ಲಿ ಹೃದಯದಲ್ಲಿರುವ ಪರಮಾತ್ಮನ ಜೊತೆಯಲ್ಲಿ ಸೇರಿಸುತ್ತಾನೆ ಎಂದು ಅರ್ಥವನ್ನು ಮಾಡುತ್ತಾರೆ.

ಗೂಹಂತಿ ಸರ್ಪಾ ಇವ ಗಹ್ವರೇಷು
ಕ್ಷಯಂ ನೀತ್ವಾ ಸ್ವೇನ ವೃತ್ತೇನ ಮರ್ತ್ಯಾಃ |
ತೇ ವಿಪ್ರಮುಹ್ಯಂತಿ ಜನಾ ವಿಮೂಢಾಃ
ತೈರ್ದತ್ತಂ ವೈ ಗೂಹಯಂತೇ ಭವಾಯ ॥

ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥16॥
ಮರ್ತ್ಯಾಃ= ಜ್ಞಾನಿಪುರುಷರು, ವೃತ್ತೇನ= ಶ್ರವಣಾದಿಗಳ ಆವರ್ತನದಿಂದ, ಆ ಪರಮಾತ್ಮನನ್ನು, ಕ್ಷಯಂ= ತಮ್ಮ ಹೃದಯಗುಹಾ ಮಂದಿರಕ್ಕೆ, ನೀತ್ವಾ= ಕರೆದುಕೊಂಡು ಹೋಗಿ, ಗೂಹಯಂತಿ= ಮುಚ್ಚಿಡುತ್ತಾರೆ. ಗಹ್ವರೇಷು= ಗುಹೆಗಳಲ್ಲಿ, ಸರ್ಪಾ ಇವ= ಕುಂಡಲಾಕಾರವಾಗಿ ಮಲಗಿರುವ ಸರ್ಪಗಳು ತಮ್ಮ ಶಿರೋರತ್ನವನ್ನು ಮುಚ್ಚಿಕೊಳ್ಳುವಂತೆ, ತೇ= ಆ ಜ್ಞಾನಿಗಳು, ತೈಃ= ತಮಗಿಂತ ಉತ್ತಮರಾದ ಜ್ಞಾನಿಗಳಿಂದ, ದತ್ತಮ್= ಉಪದಿಷ್ಟನಾದ ಹರಿಯನ್ನು, ಭವಾಯ= ತಮ್ಮ ಆಧ್ಯಾತ್ಮಿಕ ಸಂಪತ್ತಿಗಾಗಿ, ಗೂಹಯಂತಿ= ಮುಚ್ಚಿಟ್ಟುಕೊಳ್ಳುತ್ತಾರೆ.
ಅಥವಾ (ಹೇಗೆ) ಸರ್ಪಾಃ= ಸರ್ಪಗಳು, ಗಹ್ವರೇಷು= ತಮ್ಮ ಗುಹೆಗಳಿಂದ ಹೊರಗೆ ಬಂದು, ಸ್ವೇನವೃತ್ತೇನ= ತಮ್ಮ ದಂಶನಾದಿ ವ್ಯಾಪಾರದಿಂದ, ಮರ್ತ್ಯಾನ್= ಮನುಷ್ಯರನ್ನು, ಕ್ಷಯಂ ನೀತ್ವಾ= ನಾಶಮಾಡಿ, ಗಹ್ವರೇಷು= ಗುಹೆಗಳಲ್ಲಿ ಪುನಃ, ಸ್ವಾತ್ಮಾನಂ= ತಮ್ಮನ್ನು, ಗೂಹಂತಿ= ಮುಚ್ಚಿಕೊಳ್ಳುತ್ತವೆಯೋ ಅದರಂತೆ ಶ್ರೋತ್ರಾದಿ ಇಂದ್ರಿಯಗಳು ತಮ್ಮ ಗೋಳಕಗಳಿಂದ ಹೊರಬಂದು ವಿಷಯಾನುಭವರೂಪವಾದ ತಮ್ಮ ಸ್ವಭಾವದಿಂದ ಜೀವರಿಗೆ ನಾಶವನ್ನು ಉಂಟುಮಾಡಿ ಪುನಃ ಗೋಳಕವನ್ನು ಪ್ರವೇಶಿಸಿ ತಮ್ಮನ್ನು ಮುಚ್ಚಿಕೊಳ್ಳುತ್ತವೆ. ಇಂದ್ರಿಯವು ಉಂಟುಮಾಡುವ ನಾಶವು ಎಂತಹದು ಎಂಬುದನ್ನು `ತೇ ವಿಪ್ರಮುಹ್ಯಂತಿ' ಎಂಬುದರಿಂದ ಹೇಳುತ್ತಾರೆ. ತೇ= ವಿಮೂಢರಾದ ವಿಷಯಾನುಭವದಲ್ಲಿ ಆಸಕ್ತರಾದ ಜನರು, ವಿಪ್ರಮುಹ್ಯಂತಿ= ಪರಾಪರ ತತ್ತ್ವಜ್ಞಾನಶೂನ್ಯರಾಗುತ್ತಾರೆ. ತಾವು ಸ್ವತಃ ತತ್ತ್ವಜ್ಞಾನದಿಂದ ಶೂನ್ಯರಾಗುವುದು ಇಷ್ಟೇ ಅಲ್ಲ, ತೈಃ= ಆ ಇಂದ್ರಿಯಗಳಿಂದ, ದತ್ತಮ್= ಕೊಡಲ್ಪಟ್ಟ ವಿಷಯಭೋಗವುಳ್ಳವರಾಗಿ ಇನ್ನೊಬ್ಬರಿಗೂ ಸಹ, ಗೂಹಯಂತಿ= ಮೋಹವನ್ನು ಉಂಟುಮಾಡುತ್ತಾರೆ. ಅಂತಹ ಈ ಮೋಹವು ಪರಮಾತ್ಮನ ಅಜ್ಞಾನದಿಂದ, ಭವಾಯ= ಸಂಸಾರವನ್ನು ಉಂಟುಮಾಡುವುದು, ಭವತಿ= ಆಗುತ್ತದೆ. ಪರಮಾತ್ಮನ ಅಜ್ಞಾನದಿಂದಲೇ ಸಂಸಾರ ಎಂದು ತಾತ್ಪರ್ಯ.
`ಸ್ವೇನ ವೃತ್ತೇನ ಮರ್ತ್ಯಾಃ |' ........ ತೈರ್ದತ್ತಮಾದ್ಯಂ ಗೃಹ್ಯಂತೇ ಭವಾರ್ಥೇ' ಎಂಬ ಪಾಠದಲ್ಲಿ ಸ್ವೇನ ವೃತ್ತೇನ= ತಾವು ಅನುಷ್ಠಾನ ಮಾಡಿದ ಶ್ರವಣಾದಿಗಳಿಂದ ಪರಮಾತ್ಮನನ್ನು, ಕ್ಷಯಂ ನೀತ್ವಾ= ತಮ್ಮ ಹೃದಯಮಂದಿರದಲ್ಲಿ ಸ್ಥಾಪಿಸಿ, ಗೂಹಂತಿ= ಆಚ್ಛಾದನೆ ಮಾಡುತ್ತಾರೆ. ಎಂದರೆ ಅನಧಿಕಾರಿಗಳಿಗೆ ಉಪದೇಶಿಸುವುದಿಲ್ಲ. ಈ ವಿಷಯದಲ್ಲಿ ಗುಹೆಗಳಲ್ಲಿ ಮಂಡಲಾಕಾರವಾಗಿ ಮಲಗಿರುವ ಸರ್ಪಗಳು ತಮ್ಮ ಶಿರೋರತ್ನವನ್ನು ಮುಚ್ಚಿಡುವಂತೆ ಎಂದು ದೃಷ್ಟಾಂತವನ್ನು ಹೇಳುತ್ತಾರೆ. ಅಂತಹ ಪುರುಷರು ವಿಪ್ರಮುಹ್ಯಂತಿ= ಭಗವಂತನು ಜೀವನಿಂದ ಅಭಿನ್ನನಾದವನು, ನಿರ್ಗುಣನಾದವನು, ನಿರಾಕಾರನಾದವನು ಇತ್ಯಾದಿಯಾದ ಮಿಥ್ಯಾಜ್ಞಾನವನ್ನು ಹೊಂದುತ್ತಾರೆ. ಏಕೆಂದರೆ ವಿಮೂಢಾಃ= ತತ್ವಮಸ್ಯಾದಿ ಶ್ರುತಿವಾಕ್ಯಗಳ ತಾತ್ಪರ್ಯಜ್ಞಾನರಹಿತರಾಗಿದ್ದಾರೆ. ಅಧಿಕಾರಿಗಳಾದವರು ಮಾತ್ರ, ತೇ ದತ್ತಮ್= ಜ್ಞಾನಿಗಳಿಂದ ಉಪದಿಷ್ಟನಾದ ಪರಮಾತ್ಮನನ್ನು ತಮ್ಮ ಹೃದಯದಲ್ಲಿ ಸ್ಥಾಪಿಸಿಕೊಂಡು ಅನಧಿಕಾರಿಗಳಿಗೆ ತಿಳಿಯದಂತೆ ಮುಚ್ಚಿಟ್ಟುಕೊಳ್ಳುತ್ತಾರೆ. ಇಂತಹ ತತ್ತ್ವಜ್ಞಾನ ಗೂಹನವು ಅವರಿಗೆ ಸರ್ವಮಂಗಳವನ್ನು ಉಂಟು ಮಾಡುತ್ತದೆ. `ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯಮಾಂ ಶೇವಧಿಸ್ತೇಹಮಸ್ಮಿ' (ವಿದ್ಯಾಭಿಮಾನಿದೇವತೆಗಳು ಬ್ರಹ್ಮನ ಬಳಿಗೆ ಬಂದು, ನಾವು ನಿನಗೆ ಸುಖನಿಧಿಗಳಾಗಿರುತ್ತೇವೆ. ನಮ್ಮನ್ನು ಮುಚ್ಚಿಟ್ಟುಕೊಳ್ಳುವವನಾಗು ಎಂದು ಪ್ರಾರ್ಥಿಸಿದರು) ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗುತ್ತದೆ.
ಸದಾಽಧ್ವಸಾತ್ ಕೃತೋಽಸ್ಯಾನ್ನಮ್(ಕೃತೋಽಸ್ಯ ನ ಮೃತ್ಯುಃ)
ಅಪ್ಯವ್ಯಯಸ್ಯೇಹಾಮೃತಂ ಕೃತಃ ಸ್ಯಾತ್ |
ಸತ್ಯಾನೃತೇ ಸತ್ಯಸಮಾನಬಂಧಿನೀ
ಸತಶ್ಚ ಯೋನಿಮಸತಶ್ಚೈಕಮನ್ನಮ್ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥17॥
ಸತಃ= ಸಜ್ಜನರಿಗೆ, ಅಸತಶ್ಚ= ಮತ್ತು ದುರ್ಜನರಿಗೆ, ಯೋನಿಂ= ಪೋಷಕವಾಗಿ ಕಾರಣವಾದ, ಏಕಂ= ಮುಖ್ಯವಾದ, ಅನ್ನಂ= ಅನ್ನಸ್ಥನಾದ, ಅನ್ನನಾಮಕನಾದ ಪರಮಾತ್ಮನನ್ನು, ಸದಾ= ಯಾವಾಗಲೂ, ಅಧ್ವಸಾತ್ ಕೃತಃ= ಮೋಕ್ಷಮಾರ್ಗವಾಗಿ ಮಾಡಿಕೊಳ್ಳುವ, ಅಲ್ಪಾಹಾರವನ್ನು ಸ್ವೀಕರಿಸುವ ಎಂದು ಅರ್ಥ. ಮತ್ತು ಅಮೃತಂ= ಅದನ್ನೇ ಅಮೃತಪ್ರಾಯವನ್ನಾಗಿ, ಕೃತಃ= ಮಾಡಿಕೊಳ್ಳುವ, ಅಲ್ಪಾಹಾರವನ್ನು ಸ್ವೀಕರಿಸಿದರೂ ಚಿಂತೆಯನ್ನು ಮಾಡದಿರುವ, ಸತ್ಯಸಮಾನುಬಂಧಿನೀ= ಸತ್ಯಕ್ಕೆ ಸಮಾನವಾಗಿ ಫಲವನ್ನು ಕೊಡುವ, ಸತ್ಯಾನೃತೇ= ಸತ್ಯ ಮತ್ತು ಅನೃತಗಳನ್ನು, ಕೃತಃ= ಅನುಷ್ಠಾನ ಮಾಡುವ, `ಸತ್ಯಮೋಮಿತಿ ಸಂಪ್ರೋಕ್ತಂ ಯನ್ನೇತ್ಯಾಹಾನೃತಂ ಹಿ ತತ್' ಎಂಬ ವಚನದಂತೆ ಧನವಿರುವಾಗ ದ್ರವ್ಯದಾನ ಮಾಡಲು ಸಮ್ಮತಿಸುವ ವಚನವು ಸತ್ಯವೆನಿಸುತ್ತದೆ. ಧನವಿಲ್ಲದಿರುವಾಗ ಇಲ್ಲ ಎಂಬ ವಚನವೂ ಅನೃತವೆನಿಸುತ್ತದೆ. ಧನವಿರುವಾಗ ಕೊಡುತ್ತೇನೆ ಎಂಬ ಅನೃತವಚನವೂ ಧನವಿಲ್ಲದಿದ್ದಾಗ ದಾನ ಮಾಡುವುದಿಲ್ಲ ಎಂಬ ವಚನವು ಸತ್ಯವಚನಕ್ಕೇ ಸಮಾನವಾದುದು. ಅಸ್ಯ= ಅಂತಹ ಜ್ಞಾನಿಗೆ, ನ ಮೃತ್ಯುಃ= ಮೃತ್ಯುವು ಉಂಟಾಗುವುದಿಲ್ಲ, ಅಂತಹ ಜ್ಞಾನಿಯು ಮುಕ್ತನಾಗುತ್ತಾನೆ ಎಂದು ಅಭಿಪ್ರಾಯ.
ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ
ನ ದೃಶ್ಯತೇಽಸೌ ಹೃದಯೇ ನಿವಿಷ್ಟಃ |
ಅಂತಶ್ಚರೋ ದಿವಾರಾತ್ರಮತಂದ್ರಿತಸ್ತಂ
ಮತ್ವಾ ಕವಿರಾಸ್ತೇ ಪ್ರಸನ್ನಃ ॥
ಯೋಗಿನಸ್ತಂ .................... ॥
ಎಂದು ಇನ್ನೊಂದು ಶ್ಲೋಕವನ್ನು ಉದಾಹರಿಸಿ ವಾದಿರಾಜರು ವ್ಯಾಖ್ಯಾನ ಮಾಡಿದ್ದಾರೆ. ಮೊದಲನೆಯ ಅರ್ಧದ ಅರ್ಥವನ್ನು ಹಿಂದೆಯೇ ಹೇಳಲಾಗಿದೆ. ದಿವಾರಾತ್ರಂ= ನಿತ್ಯವೂ, ಅತಂದ್ರಿತಃ= ಆಲಸ್ಯವಿಲ್ಲದೆ, ಅಂತಶ್ಚರಃ= ದೇಹದ ಒಳಗೇ ಇರುವ ಪರಮಾತ್ಮನನ್ನು, ಮತ್ವಾ= ಮನನ ಮಾಡಿ, ಕವಿಃ= ಜ್ಞಾನಿಯು, ಪ್ರಸನ್ನ ಆಸ್ತೇ= ಸ್ವರೂಪಸುಖವನ್ನು ಪಡೆಯುತ್ತಾನೆ ಎಂದು ಅರ್ಥ.

ಭಾರತ ಶ್ರೀನಿವಾಸಾಚಾರ್ಯರು `ದಿವಾ ಚ ರಾತ್ರಂ ಚ ಪ್ರಸನ್ನ ಆಸ್ತೇ' ಎಂಬ ಪಾಠವನ್ನು ಹಿಡಿದು ಅಂತಹ ಜ್ಞಾನಿಯು ಸರ್ವಕಾಲದಲ್ಲಿಯೂ ಪ್ರಸನ್ನನಾಗಿರುತ್ತಾನೆ ಎಂದು ಅರ್ಥವನ್ನು ಮಾಡುತ್ತಾರೆ.
ಭಾರತ ಶ್ರೀನಿವಾಸಾಚಾರ್ಯರು ಇನ್ನೊಂದು ಶ್ಲೋಕವನ್ನು ಉದಾಹರಿಸಿ ವ್ಯಾಖ್ಯಾನ ಮಾಡಿದ್ದಾರೆ
ತಥಾ ಸತಾ ಸತ್ಕೃತಃ ಸ್ಯಾನ್ ಮೃತ್ಯುರಮೃತಂ ತಯೋಃ |
ಸತ್ಯಾನೃತೇ ತಸ್ಯ ಚ ಮಾನಬಂಧನೇ
ಸತಶ್ಚ ಯೋನಿಃ ಅಸತಶ್ಚೈಕ ಏವ ॥
ಸಃ= ಆ ಪರಮಾತ್ಮನು, ಸಜ್ಜನರಿಂದ ಸತ್ಕೃತನಾಗಿ, ಅಸಜ್ಜನರಿಂದ ಅಸತ್ಕೃತನಾಗಿ ಎಂದರೆ ಪೂಜಿತನಾಗದೆ, ತಯೋಃ= ಅವರಿಬ್ಬರಲ್ಲಿ, ಪೂಜಕನಿಗೆ ಅಮೃತವನ್ನೂ, ಅಪೂಜಕನಿಗೆ ಮೃತ್ಯುವನ್ನೂ ಕೊಡುತ್ತಾನೆ. ಸತ್ಯಾನೃತಗಳು ಅವನ ಮಾನ ಮತ್ತು ಬಂಧನಗಳು. ಎಂದರೆ ಸತ್ಯವು ಅವನ ಪ್ರೀತಿಗೆ ಸಾಧನ, ಅನೃತವು ಅವನಿಗೆ ಉಂಟಾಗುವ ಬಂಧನಕ್ಕೆ, ಅವನ ಅಪ್ರೀತಿಗೆ ಸಾಧನ. ಆದ್ದರಿಂದ ಸತ್ಯವನ್ನು ಹೇಳಬೇಕು, ಅನೃತವನ್ನು ಹೇಳಬಾರದು. ಅವನು ಸಜ್ಜನರಿಗೂ ಮತ್ತು ಅಸಜ್ಜನರಿಗೂ ಮುಖ್ಯವಾದ ಕಾರಣನಾಗಿದ್ದಾನೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಇಲ್ಲಿ ಎಲ್ಲಾ ಕಡೆಯಲ್ಲಿಯೂ `ಯೋಗಿನಸ್ತಂ ಪ್ರಪಶ್ಯಂತಿ' ಎಂಬ ಕೊನೆಯ ಎರಡು ಪಾದಗಳನ್ನು ಇಟ್ಟುಕೊಳ್ಳಬೇಕು.
ಅಸಾಧನಾ ವಾಽಪಿ ಸಸಾಧನಾ ವಾ
ಸಮಾನಮೇತದ್ ದೃಶ್ಯತೇ ಮಾನುಷೇಷು |
ಸಮಾನಮೇತದಮೃತಸ್ಯೋತ್ತರಸ್ಯ(ಮೃತಸ್ಯೇತರಸ್ಯ)
ಯುಕ್ತಾಸ್ತತ್ರ ಮಧ್ವನುತ್ತಂ ಸಮಾಪುಃ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥18॥
ಭಗವಂತನ ಇನ್ನೊಂದು ಮಹಿಮೆಯನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಅಸಾಧನಾಃ= ಮೋಕ್ಷಸಾಧನರಹಿತರಾಗಿ, ಸಸಾಧನಾ ವಾ= ಅಥವಾ ಮೋಕ್ಷ ಸಾಧನ ಸಹಿತರಾಗಿ, ಯಾವ ಮನುಷ್ಯರು ಇರುತ್ತಾರೆಯೋ, ಮಾನುಷೇಷು= ಅಂತಹ ಮನುಷ್ಯರಲ್ಲಿ, ಏತತ್= ಈ ಪರಮಾತ್ಮನು, ಸಮಾನಂ= ನ್ಯೂನಾದಿ ಭಾವ ರಹಿತನಾಗಿ ಒಂದೇ ರೀತಿಯಲ್ಲಿ, ದೃಶ್ಯತೇ= ಯೋಗಿಗಳಿಂದ ನೋಡಲ್ಪಡುತ್ತಾನೆ. ಉತ್ತರಸ್ಯ= ಪುರುಷಾರ್ಥಗಳಲ್ಲಿ ಉತ್ಕೃಷ್ಟವಾದ, ಮೋಕ್ಷಸ್ಯ= ಮೋಕ್ಷದ ವಿಷಯದಲ್ಲಿಯೂ ಸಹ, ಏತತ್= ಈ ಬ್ರಹ್ಮನು, ಸಮಾನಂ= ಸಮಾನನಾಗಿರುತ್ತಾನೆ. ಅವರವರ ಯೋಗ್ಯತೆಯನ್ನು ಅನುಸರಿಸಿ ಯೋಗ್ಯರಿಗೆ ತಾರತಮ್ಯೋಪೇತವಾದ ಮೋಕ್ಷವನ್ನು ಕೊಡುತ್ತಾನೆ. ಅಯೋಗ್ಯರಿಗೆ ಕೊಡುವುದಿಲ್ಲ ಎಂದು ಅಭಿಪ್ರಾಯ. ಇದನ್ನೇ ಇನ್ನೂ ಸ್ಪಷ್ಟಪಡಿಸುತ್ತಾರೆ. ತತ್ರ= ಯೋಗ್ಯಾಯೋಗ್ಯ ಜೀವರಲ್ಲಿ, ಯುಕ್ತಾಃ= ಯಾರು ಯೋಗ್ಯತೆಯಿಂದ ಕೂಡಿರುತ್ತಾರೆಯೋ ಅಂತಹವರು, ಮಧ್ವನುತ್ತಂ= ಮಧ್ವನಾಮಕರಾದ ವಾಯುದೇವರ ಅವತಾರದಿಂದ ಪ್ರೇರಿತನಾದ, ಬ್ರಹ್ಮ= ಪರಮಾತ್ಮನನ್ನು, ಸಮಾಪುಃ= ಚೆನ್ನಾಗಿ ಹೊಂದುತ್ತಾರೆ.
`ಮಧ್ವ ಉತ್ಸಂ ಸಮಾಪುಃ' ಎಂಬ ಪಾಠವಿದ್ದಲ್ಲಿ ಮಧ್ವಃ= ಮಧುವಿನ ಎಂದರೆ ಆನಂದದ, ಉತ್ಸಂ= ಉತ್ ಎಂದರೆ ಉತ್ಕರ್ಷದಿಂದ, ಸಂಶೇತೇ ಅಸ್ಮಿನ್ ಎಂಬ ವ್ಯುತ್ಪತ್ತಿಯಿಂದ ಆಧಾರನಾದ ಎಂದರೆ ಆನಂದಕ್ಕೆ ಮುಖ್ಯಾಧಾರನಾದ ಪರಬ್ರಹ್ಮನನ್ನು ಹೊಂದುತ್ತಾರೆ ಎಂದು ಅರ್ಥ. `ಅಮೃತಸ್ಯೇತರಸ್ಯ' ಎಂದು ಪಾಠವಿದ್ದರೆ ಅಮೃತಸ್ಯ= ಮೋಕ್ಷದ ವಿಷಯದಲ್ಲಿಯೂ, ಇತರಸ್ಯ= ಸಂಸಾರದ ವಿಷಯದಲ್ಲಿಯೂ ಪರಮಾತ್ಮನು ಸಮಾನನಾಗಿರುತ್ತಾನೆ ಎಂದು ಅರ್ಥ. ಸಾಧನೆಯನ್ನು ಪೂರ್ತಿ ಮಾಡಿದವರಿಗೆ ಮೋಕ್ಷವನ್ನೂ, ಸಾಧನೆಯನ್ನು ಪೂರ್ತಿ ಮಾಡದಿದ್ದವರಿಗೆ ಸಂಸಾರವನ್ನೂ ಕೊಡುತ್ತಾನೆ. ಆದ್ದರಿಂದ ಆಗಲೂ ಸಮಾನನಾಗಿಯೇ ಇರುತ್ತಾನೆ.
ಉಭೌ ಲೋಕೌ ವಿದ್ಯಯಾ ವ್ಯಾಪ್ಯ ಯಾಂತಿ
ತದಾ ಹುತ್ವಾ ಚಾನುಹುತಮಗ್ನಿಹೋತ್ರಮ್ |
ಮಾತ್ರೇ ಬ್ರಾಹ್ಮೀಂ ಲಘುತಾಮಾದಧಾನಾಃ
ಪ್ರಜ್ಞಾಂ ನಾಮ ಚಾಸ್ಯ ಧೀರಾ ಲಭಂತೇ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥19॥
ಮಾತ್ರೇ= ಪಂಚತನ್ಮಾತ್ರಮಯವಾದ ದೇಹದಲ್ಲಿ, ಬ್ರಾಹ್ಮೀಂ= ವೇದ ಸಂಬಂಧಿನಿಯಾದ ಎಂದರೆ ವೇದಪ್ರತಿಪಾದ್ಯವಾದ, ಲಘುತಾಂ= ಅಸಾರತ್ವ ಜ್ಞಾನವನ್ನು ಆದಧಾನಾಃ= ಹೊಂದುವವರಾಗಿ, ಅನುಹುತಮ್= ಜ್ಞಾನಕ್ಕೆ ಅನುಕೂಲವಾಗುವ ರೀತಿಯಲ್ಲಿ ಪೂರ್ವಜನರು ಹೋಮ ಮಾಡಿದ, ಅಗ್ನಿಹೋತ್ರಂ= ಅಗ್ನಿಹೋತ್ರವನ್ನು, ಹುತ್ವಾ= ಮಾಡಿ, ಧೀರಾಃ= ಧೈರ್ಯಶಾಲಿಗಳಾದವರು, ಅಸ್ಯ= ಈ ಪರಮಾತ್ಮನ, ಪ್ರಜ್ಞಾಂ= ಶ್ರೇಷ್ಠವಾದ ಜ್ಞಾನವನ್ನು, ಲಭಂತೇ ನಾಮ= ಹೊಂದುತ್ತಾರಷ್ಟೆ? ಅನಂತರದಲ್ಲಿ ವಿದ್ಯಯಾ= ಆ ಜ್ಞಾನದ ಸಾಮರ್ಥ್ಯದಿಂದ, ಉಭೌ ಲೋಕೌ= ಈ ಲೋಕ ಮತ್ತು ಪರಲೋಕ ಎರಡನ್ನೂ, ವ್ಯಾಪ್ಯ= ವ್ಯಾಪಿಸಿ ಎಂದರೆ ಎರಡು ಲೋಕಗಳಲ್ಲಿಯೂ ಅನೇಕ ಭೋಗಗಳನ್ನು ಅನುಭವಿಸಿ, ಇಮಂ= ಈ ಪರಮಾತ್ಮನನ್ನೇ, ಯಾಂತಿ= ಹೊಂದುತ್ತಾರೆ.
`ಮಾತ್ರೇ ಬ್ರಾಹ್ಮೀಂ ಲಘುತಾಂ ಮಾದಧೀತ' ಎಂದು ಪಾಠವಿದ್ದರೆ ಎಲೈ ರಾಜನೇ, ಈ ವೇದಪ್ರತಿಪಾದ್ಯವಾದ ವಿದ್ಯೆಯಲ್ಲಿ, ಲಘುತಾಂ= ಅಲ್ಪತ್ವ ಜ್ಞಾನವನ್ನು, ಮಾ ಆದಧೀತ= ಹೊಂದಬೇಡ ಎಂದು ಅರ್ಥ.
ಯಃ ಸಹಸ್ರಂ ಸಹಸ್ರಾಣಾಂ ಪಕ್ಷಾನಾಹೃತ್ಯ ಸಂಪತೇತ್ |
ನಾಂತಂ ಗಚ್ಛೇತ್ ಕಾರಣಸ್ಯ ಅಪಿ ವಾ ಸ್ಯಾನ್ಮನೋಜವಃ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥20॥
ಈ ಶ್ಲೋಕದಲ್ಲಿ ಭಗವಂತನ ಸಾಕಲ್ಯೇನ ಅವೇದ್ಯತ್ವ ಮಹಿಮೆಯನ್ನು ಹೇಳುತ್ತಾರೆ. ಯಃ= ಯಾವ ಅಧಿಕಾರಿಯು, ಸಹಸ್ರಾಣಾಂ ಸಹಸ್ರಮ್ ಪಕ್ಷಾನ್= ಸಹಸ್ರ ಸಹಸ್ರ ಪಕ್ಷಗಳಷ್ಟು ಕಾಲದಲ್ಲಿ, ಪಕ್ಷಾನ್= ಗತಿಸಾಧನಸದೃಶವಾದುದರಿಂದ ಪಕ್ಷ ಶಬ್ದವಾಚ್ಯವಾದ ಭಾರತಾದಿ ಗ್ರಂಥಗಳನ್ನು, ಆಹೃತ್ಯ= ಚೆನ್ನಾಗಿ ಅಧ್ಯಯನ ಮಾಡಿ, ಸಂಪತೇತ್= ಚೆನ್ನಾಗಿ ವಿಚಾರವನ್ನು ಮಾಡಿದರೂ, ಅಪಿ ವಾ ಮನೋಜವಸ್ಯ= ಮತ್ತು ಅವನು ಮನೋಜವವನ್ನೇ ಹೊಂದಿದ್ದರೂ, ಕಾರಣಸ್ಯ= ಜಗತ್ಕಾರಣನಾದ ಪರಮಾತ್ಮನ, ಅಂತಂ=

ಕೊನೆಯನ್ನು, ನ ಗಚ್ಛೇತ್= ಮುಟ್ಟುವುದಿಲ್ಲ.
ಅಥವಾ ಮನೋಜವವುಳ್ಳ ಯಾವನು ಸಹಸ್ರ ಸಹಸ್ರ ರೆಕ್ಕೆಗಳನ್ನು ಉಳ್ಳವನಾಗಿ ಸಹಸ್ರ ಸಹಸ್ರ ಪಕ್ಷಗಳವರೆಗೆ ಹಾರಿದರೂ ಕೂಡ ಆ ಜಗತ್ಕಾರಣವಾದ ವಸ್ತುವಿನ ಅಂತವನ್ನು ತಲುಪುವುದಿಲ್ಲ. ಆದ್ದರಿಂದ ಜಗತ್ಕಾರಣವಾದ ವಸ್ತುವು ದೇಶದಿಂದ ಅನಂತವಾದುದು. ಅದರಂತೆ ಕಾಲದಿಂದಲೂ ಮತ್ತು ಗುಣಗಳಿಂದಲೂ ಅನಂತವಾದುದು ಎಂದು ತಿಳಿಯಬೇಕು.
`ಯೋಗಿನಸ್ತಂ ಪ್ರಪಶ್ಯಂತಿ' ಎಂದರೆ ಯೋಗಿಗಳು ಅಂತಹ ಕಾಲನಿಯಾಮಕ ಭಗವದ್ರೂಪವನ್ನು ನೋಡುತ್ತಾರೆ ಎಂದು ಅರ್ಥ.
ನದರ್ಶನೇ ತಿಷ್ಠತಿ ರೂಪಮಸ್ಯ
ಪಶ್ಯಂತಿ ಚೈನಂ ಸುಸಮಿದ್ಧಸತ್ತ್ವಃ |
ಹೀನೋ ಮನೀಷೀ ಮನಸಾऽಭಿಪಶ್ಯೇದ್
ಯೇ ಪ್ರವ್ರಜೇಯುರಮೃತಾಸ್ತೇ ಭವಂತಿ ॥
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥21॥
ಅಸ್ಯ ರೂಪಂ= ಆ ಪರಮಾತ್ಮನ ರೂಪವು, ದರ್ಶನೇ ನ ತಿಷ್ಠತಿ= ದರ್ಶನ ವಿಷಯವಾಗುವುದಿಲ್ಲ, ಹಾಗಾದರೆ ಅವನು ಶೂನ್ಯನೇ ಎಂಬ ಶಂಕೆಗೆ ಸಮಾಧಾನವನ್ನು ಹೇಳುತ್ತಾರೆ. ಸುಸಮಿದ್ಧಸತ್ತ್ವಃ= ಚೆನ್ನಾಗಿ ಅಭಿವೃದ್ಧವಾದ ಸತ್ವಗುಣವುಳ್ಳ ಯೋಗಿಗಳು, ಏನಂ ಹಿ= ಪರಮಾತ್ಮನನ್ನು, ಪಶ್ಯಂತಿ= ನೋಡುತ್ತಾರೆ. ಪರಮಾತ್ಮನ ದರ್ಶನಕ್ಕೆ ಅವಶ್ಯಕವಾದ ಬೇರೆ ಸಾಧನಗಳನ್ನೂ ಹೇಳುತ್ತಾರೆ. ಹೀನಃ= ರಾಗ-ದ್ವೇಷಾದಿ ಹೀನರಾಗಿ, ಮನೀಷೀ= ಶಾಸ್ತ್ರಾರ್ಥಜ್ಞಾನವನ್ನು ಹೊಂದಿ, ಯೇ ಪ್ರವ್ರಜೇಯುಃ= ಯಾರು ಗುರುಕುಲ ವಾಸಾದಿಗಳನ್ನು ಮಾಡಿರುತ್ತಾರೆಯೋ, ಅಥವಾ ಸಂನ್ಯಾಸವನ್ನು ಸ್ವೀಕರಿಸಿರುತ್ತಾರೆಯೋ ಅವರು, ಮನಸಾ= ತಮ್ಮ ಮನಸ್ಸಿನಿಂದಲೇ, ಅವಿಪಶ್ಯೇತ್= ಅವನನ್ನು ನೋಡುತ್ತಾರೆ. ತೇ= ಅಂತಹ ಯೋಗಿಗಳು, ಅಮೃತಾ ಭವಂತಿ= ಮುಕ್ತರಾಗುತ್ತಾರೆ.
ಇಮಂ ಯಃ ಸರ್ವಭೂತೇಷು ಆತ್ಮಾನಮನುಪಶ್ಯತಿ |
ಅನ್ಯತ್ರಾನ್ಯತ್ರ ಯುಕ್ತೇಷು ಕಿಂ ಸ ಶೋಚೇತ್ ತತಃ ಪರಮ್ ॥22॥
ಇಂದ್ರಿಯಾದಿಗಳಿಂದ ಯುಕ್ತವಾದ ಸರ್ವಜೀವರ ಬೇರೆ ಬೇರೆ ದೇಹಗಳಲ್ಲಿ ಯಾವನು ಈ ಪರಮಾತ್ಮನನ್ನು ನೋಡುತ್ತಾನೆಯೋ ಅವನು ಅನಂತರ ಪುನಃ ಸಂಸಾರ ದುಃಖವನ್ನು ಅನುಭವಿಸುತ್ತಾನೆಯೇ? ಎಂದಿಗೂ ಇಲ್ಲ ಎಂದು ಅಭಿಪ್ರಾಯ.
ಯಥೋದಪಾನೇ ಮಹತಿ ಸರ್ವತಃ ಸಂಪ್ಲುತೋದಕೇ |
ಏವಂ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥23॥
ಹೇಗೆ ಬಾಯಾರಿದವನಿಗೆ ಉದಪಾನೇ ಎಂದರೆ ಕೂಪದಲ್ಲಿ ತೃಷಾನಿವೃತ್ತಿ ರೂಪ ಫಲವು ಉಂಟಾಗುತ್ತದೆಯೋ, ಸರ್ವತಃ ಸಂಪ್ಲುತೋದಕೇ= ಎಲ್ಲ ಕಡೆಯಲ್ಲಿಯೂ ನೀರು ತುಂಬಿರುವ, ಮಹತಿ= ಅದಕ್ಕಿಂತ ದೊಡ್ಡ ಪರಿಮಾಣವುಳ್ಳ ಸಮುದ್ರದಲ್ಲಿ, ಅದಕ್ಕಿಂತ ಹೆಚ್ಚಿನ ಪ್ರಯೋಜನವು ದೊರೆಯುತ್ತದೆ. ಅದರಂತೆ ಎಲ್ಲ ಜೀವರಲ್ಲಿಯೂ ಪರಮಾತ್ಮನನ್ನು ನೋಡುವ ಜ್ಞಾನಿಗೆ ಕಾಮ್ಯಕರ್ಮದಿಂದ ಉಂಟಾಗುವ ಸ್ವರ್ಗಾದಿ ಫಲವೂ ಮತ್ತು ಅದಕ್ಕಿಂತ ಅಧಿಕವಾದ ಮೋಕ್ಷಾದಿ ಫಲವೂ ಉಂಟಾಗುತ್ತದೆ ಎಂದು ಅರ್ಥ. ಇದರಿಂದ ಸ್ವರ್ಗಾದಿ ಸರ್ವಫಲ ಸಾಧನಜ್ಞಾನವಿಷಯತ್ವರೂಪವಾದ ಪರಮಾತ್ಮನ ಮಹಿಮೆಯು ಹೇಳಲ್ಪಡುತ್ತದೆ.
ಅಹಮೇವಾಸ್ಮಿ ತೇ ಮಾತಾ ಪಿತಾ ಪುತ್ರೋऽಸ್ಮ್ಯಹಂ ಪುನಃ |
ಆತ್ಮಾऽಹಮಪಿ ಸರ್ವಸ್ಯ ಯಚ್ಚ ನಾಸ್ತಿ ಯದಸ್ತಿ ಚ ॥24॥
ಈಗ ಭಗವಂತನ ಗುಣಾಂತರ ಪ್ರತಿಪಾದಕವಾದ ಭಗವಂತನೇ ಜೀವರನ್ನು ಕ
ುರಿತು ಆಡಿದ ಮಾತುಗಳನ್ನು ಸನತ್ಸುಜಾತರು ಅನುವಾದ ಮಾಡುತ್ತಾರೆ. ಅಥವಾ ಈ ಮಾತುಗಳನ್ನು `ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಸನತ್ಸುಜಾತರ ಅಂತರ್ಯಾಮಿಯ ಅಭಿಪ್ರಾಯದಿಂದಲೂ ಕೂಡಿಸಬಹುದು. ಎಲೈ ಜೀವರೇ, ನಾನು ನಿಮ್ಮ ತಂದೆ, ತಾಯಿ ಮತ್ತು ಪುನ್ನಾಮ ನರಕದಿಂದ ರಕ್ಷಿಸುವ ಪುತ್ರನೂ ಆಗಿದ್ದೇನೆ. ಯಾವುದು ಈಗ ಇಲ್ಲವೋ ಅಂತಹ ಅತೀತ-ಭವಿಷ್ಯತ್ಪದಾರ್ಥಗಳಿಗೂ, ಯಾವುದು ಈಗ ಇದೆಯೋ ಅಂತಹ ವರ್ತಮಾನ ಪದಾರ್ಥಗಳಿಗೂ, ಸರ್ವಸ್ಯ ಎಲ್ಲದಕ್ಕೂ ನಾನು ಸ್ವಾಮಿಯಾಗಿದ್ದೇನೆ.
ಪಿತಾಮಹೋऽಸ್ಮಿ ಸ್ಥವಿರಃ ಪಿತಾ ಪುತ್ರಶ್ಚ ಭಾರತ |
ಮಮೈವ ಯೂಯಮಾತ್ಮಸ್ಥಾ ನ ಮೇ ಯೂಯಂ ನ ಚಾಪ್ಯಹಮ್ ॥
ಭಾರತ ಎಂದು ಧೃತರಾಷ್ಟ್ರನನ್ನು ಕುರಿತು ಸನತ್ಸುಜಾತರ ಸಂಬೋಧನೆ. ಅಥವಾ ಭಾ= ಜ್ಞಾನದಲ್ಲಿ, ರತ= ಆಸಕ್ತನಾದ ಜೀವನೇ ಎಂದು ಜೀವರನ್ನು ಕುರಿತು ಪರಮಾತ್ಮನ ಸಂಬೋಧನೆ. ಈ ಶ್ಲೋಕದಲ್ಲಿ ಮತ್ತು ಹಿಂದಿನ ಶ್ಲೋಕದಲ್ಲಿ ಭಾರತ ಎಂದು ತೇ ಎಂದು ಏಕವಚನವಿದ್ದರೂ ಅದು ಸಮುದಾಯಏಕವಚನವಾದ್ದರಿಂದ ಎಲ್ಲ ಜೀವರನ್ನೂ ಉದ್ದೇಶಿಸಿ ಆಡಿದ ಮಾತುಗಳು ಎಂದು ತಿಳಿಯಬೇಕು. ಇದೂ ಸಹ ಪರಮಾತ್ಮನದೇ ಮಾತು. ನಾನು ಈ ಜಗತ್ತಿಗೆ ಪ್ರಪಿತಾಮಹನಾಗಿದ್ದೇನೆ. ಪಿತೃವೂ ಆಗಿದ್ದೇನೆ. `ಯೋನಃ ಪಿತಾ ಜನಿತಾ' ಎಂದು ಶ್ರುತಿ ಇದೆಯಷ್ಟೆ! ಮತ್ತು ಪುತ್ರನೂ ಆಗಿದ್ದೇನೆ. ನೀವೆಲ್ಲರೂ ನನ್ನ ದೇಹದಲ್ಲಿಯೇ ಇರುವವರು (ನನ್ನ ಸ್ವರೂಪವಾದ ನನಗಿಂತ ಅಭಿನ್ನವಾದ ನನ್ನ ದೇಹವನ್ನೇ ಆಶ್ರಯಿಸಿ ಇರುವವರು). ನೀವು ನನಗೆ ಸಂಬಂಧಿಸಿದವರಲ್ಲ (ನಾನು ನಿಮ್ಮನ್ನು ಉಪಜೀವಿಸಿ ಇರುವುದಿಲ್ಲ ಮತ್ತು ನಿಮ್ಮ ದುಃಖದಿಂದ ದುಃಖವನ್ನೂ ಪಡುವುದಿಲ್ಲ). ನಾನೂ ಕೂಡ ನಿಮಗೆ ಸಂಬಂಧಿಸಿದವನಲ್ಲ (ಸಂಬಂಧವಿದ್ದರೂ ನಿಮಗೆ ಸಂಬಂಧದ ಜ್ಞಾನವಿಲ್ಲದಿರುವುದರಿಂದ ಸಂಬಂಧಿಸಿದವನಲ್ಲ ಎಂದು ಅಭಿಪ್ರಾಯ).
ಅಂತರ್ಯಾಮಿ ವಿವಕ್ಷೆಯಿಂದ ಸನತ್ಸುಜಾತರ ಮಾತುಗಳನ್ನು ಕೂಡಿಸಬೇಕು ಎಂದು ವಾದಿರಾಜರು ಹೇಳಿರುವುದರಿಂದ ಎಲೈ ಧೃತರಾಷ್ಟ್ರನೇ, ನಾನೇ ನಿನ್ನ ತಂದೆಯೂ ಆಗಿದ್ದೇನೆ, ತಾಯಿಯೂ ಆಗಿದ್ದೇನೆ, ದುರ್ಯೋಧನಾದಿ ಪುತ್ರನೂ ಆಗಿದ್ದೇನೆ ಎಂಬ ಪರಕೀಯ ವ್ಯಾಖ್ಯಾನವು ಪೂರ್ವೋತ್ತರ ವಿರುದ್ಧವಾದುದರಿಂದ ಸ್ವೀಕಾರಾರ್ಹವಲ್ಲ ಎಂದು ಸಿದ್ಧವಾಗುತ್ತದೆ.
ಆತ್ಮೈವ ಸ್ಥಾನಂ ಮಮ ಜನ್ಮ ಚಾತ್ಮಾ

ಓತಪ್ರೋತೋಽಹಮಜರಪ್ರತಿಷ್ಠಃ |
ಅಜಶ್ಚರೋ ದಿವಾರಾತ್ರಮತಂದ್ರಿತೋಽಹಂ
ಮಾಂ ವಿಜ್ಞಾಯ ಕವಿರಾಸ್ತೇ ಪ್ರಸನ್ನಃ ॥26॥
ಈಗ ಪರಮಾತ್ಮನು ತಾನು ಅನ್ಯಾಪೇಕ್ಷೆ ಇಲ್ಲದವನು ಎಂದು ಹೇಳುತ್ತಾನೆ. ಮಮ= ನನಗೆ, ಆತ್ಮೈವ= ನಾನೇ, ಸ್ಥಾನಮ್= ಆಶ್ರಯನಾದವನು, ಆತ್ಮಾ= ನಾನೇ, ಜನ್ಮ= ನನ್ನ ಪ್ರಾದುರ್ಭಾವಕ್ಕೆ ನಿಯಾಮಕನಾದವನು. ಅಜರಪ್ರತಿಷ್ಠಃ= ಜರಾರಹಿತವಾದ ವೈಕುಂಠಾದಿ ಲೋಕಗಳಲ್ಲಿ ಪ್ರತಿಷ್ಠಿತನಾಗಿರುವ ನಾನು, ಓತಪ್ರೋತಃ= ನನ್ನಲ್ಲೇ ವ್ಯಾಪಿಸಿಕೊಂಡಿದ್ದೇನೆ. ಅಜಃ= ನಾನು ಜನ್ಮವಿಲ್ಲದವನು, ಅತಂದ್ರಿತಃ= ಆಲಸ್ಯವಿಲ್ಲದೆ, ದಿವಾರಾತ್ರಂ= ಹಗಲೂ ಮತ್ತು ರಾತ್ರಿಯೂ, ಚರಃ= ಎಲ್ಲ ಕ್ರಿಯೆಗಳನ್ನೂ ಮಾಡುವವನು, ನ ಋತೇ ತ್ವತ್ಕ್ರಿಯತೇ= ನೀನಿಲ್ಲದೇ ಯಾವ ಕಾರ್ಯವೂ ಮಾಡಲ್ಪಡುವುದಿಲ್ಲ ಎಂಬ ಶ್ರುತಿಯ ವಿವಕ್ಷೆಯಿಂದ ನನ್ನನ್ನು ತಿಳಿದು ಜ್ಞಾನಿಯಾದವನು ಸ್ವರೂಪ ಸುಖವನ್ನು ಅನುಭವಿಸುತ್ತಾನೆ.
ಅಣೋರಣೀಯಾನ್ ಸುಮನಾಃ ಸರ್ವಭೂತೇಷ್ವವಸ್ಥಿತಃ |
ಪಿತರಂ ಸರ್ವಭೂತಾನಾಂ ಪುಷ್ಕರೇ ನಿಹಿತಂ ವಿದುಃ ॥27॥
ಸನತ್ಸುಜಾತರು ಪುನಃ ಭಗವಂತನ ಮಹಿಮೆಯನ್ನು ಹೇಳುತ್ತಾರೆ. ಭಗವಂತನು ಅಣುವಿಗಿಂತಲೂ ಬಹಳ ಸೂಕ್ಷ್ಮವಾದ ಅಣುವಾದವನು. ಸುಮನಾಃ= ಒಳ್ಳೆಯ ಮನಸ್ಸುಳ್ಳವನು, ಸರ್ವಭೂತೇಷು ಅವಸ್ಥಿತಃ= ಎಲ್ಲ ಭೂತಗಳಲ್ಲಿಯೂ ನೆಲೆಸಿದ್ದಾನೆ. ಸರ್ವಭೂತಾನಾಂ= ಎಲ್ಲ ಪ್ರಾಣಿಗಳ, ಪಿತರಂ= ತಂದೆಯಾದ ಅವನನ್ನು, ಪುಷ್ಕರೇ= ಹೃದಯಕಮಲದಲ್ಲಿ, ನಿಹಿತಂ= ಇರುವವನೆಂದು, ವಿದುಃ= ಜ್ಞಾನಿಗಳು ತಿಳಿದಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
॥ ಸನತ್ಸುಜಾತಪರ್ವಣಿ ಷಷ್ಠೋಽಧ್ಯಾಯಃ ॥
॥ ಇತಿ ಶ್ರೀಮನ್ಮಹಾಭಾರತೇ ಉದ್ಯೋಗಪರ್ವಣಿ ಸನತ್ಸುಜಾತೀಯೇ ವಿಷಮವಾಕ್ಯಾರ್ಥಪ್ರಕಾಶೇ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೇಳನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಸನತ್ಸುಜಾತೀಯ ಪರ್ವ ॥
* * * * *

ಮಹಾಭಾರತ
ಉದ್ಯೋಗಪರ್ವ
5. ವ್ಯಾಸಾಭಿಗಮನಪರ್ವ
ನಲವತ್ತೆಂಟನೆಯ ಅಧ್ಯಾಯ
ಪಾಂಡವರ ವಚನವನ್ನು ಕೇಳಲು ಧೃತರಾಷ್ಟ್ರಾದಿಗಳ ಸಭಾಪ್ರವೇಶ. ಸಂಜಯನಿಂದ ಧೃತರಾಷ್ಟ್ರಾದಿಗಳಿಗೆ ಪಾಂಡವರ ಪ್ರತಿಸಂದೇಶದ ಕಥನ.
ವೈಶಂಪಾಯನಃ
ಏವಂ ಸನತ್ಸುಜಾತೇನ ವಿದುರೇಣ ಚ ಧೀಮತಾ |
ಸಾರ್ಧಂ ಕಥಯತೋ ರಾಜ್ಞಃ ಸಾ ವ್ಯತೀತಾಯ ಶರ್ವರೀ ॥1॥
ವೈಶಂಪಾಯನ ಹೀಗೆ ಸನತ್ಸುಜಾತ ಮತ್ತು ವಿದುರನ ಜೊತೆಯಲ್ಲಿ ಮಾತನಾಡುತ್ತಿದ್ದ ಮೇಧಾವಿಯಾದ ಧೃತರಾಷ್ಟ್ರ ರಾಜನಿಗೆ ಆ ರಾತ್ರಿಯು ಕಳೆಯಿತು.
ತಸ್ಯಾಂ ರಜನ್ಯಾಂ ವ್ಯುಷ್ಟಾಯಾಂ ರಾಜಾನಃ ಸರ್ವಪಾರ್ಥಿವಾಃ |
ಸಭಾಮಾವಿವಿಶುರ್ಹೃಷ್ಟಾಃ ಸೂತಸ್ಯೋಪದಿದೃಕ್ಷಯಾ ॥2॥
ಆ ರಾತ್ರಿಯು ಕಳೆದ ಮೇಲೆ ಬೇರೆ ಬೇರೆ ಭೂಭಾಗದ ಎಲ್ಲ ರಾಜರೂ ಸಂಜಯನನ್ನು ಹತ್ತಿರದಿಂದ ನೋಡುವ ಆಸೆಯಿಂದ ಸಭೆಯನ್ನು ಸಂತೋಷದಿಂದ ಪ್ರವೇಶಿಸಿದರು.
ಶುಶ್ರೂಷಮಾಣಾಃ ಪಾರ್ಥಾನಾಂ ವಾಚೋ ಧರ್ಮಾರ್ಥಸಂಹಿತಾಃ |
ಧೃತರಾಷ್ಟ್ರಪ್ರಮುಖಾಃ ಸರ್ವೇ ಯಯೂ ರಾಜನ್ ಸಭಾಂ ಶುಭಾಮ್॥
ಸುಧಾವದಾತಾಂ ಸಂಪೂರ್ಣಕನಕಾಜಿರಭೂಷಣಾಮ್ |
ಚಂದ್ರಪ್ರಭಾಂ ಸುರುಚಿರಾಂ ಸಿಕ್ತಾಂ ಚಂದನವಾರಿಣಾ ॥4॥
ರುಚಿರೈರಾಸನೈಃ ತೀರ್ಣಾಂ ಕಾಂಚನೈರ್ದಾರವೈರಪಿ |
ಅಶ್ಮಸಾರಮಯೈರ್ದಾಂತೈಃ ಸ್ವಾಸ್ತೀರ್ಣೈಃ ಸೋತ್ತರಚ್ಛದೈಃ ॥5॥
ಎಲೈ ರಾಜನೇ, ಪಾಂಡವರ ಧರ್ಮಾರ್ಥಯುಕ್ತವಾದ ಮಾತುಗಳನ್ನು ಕೇಳಲು ಬಯಸಿ ಧೃತರಾಷ್ಟ್ರ ಮೊದಲಾದವರೆಲ್ಲರೂ ಸುಣ್ಣದ ಲೇಪವನ್ನು ಹೊಂದಿದ್ದ, ಕನಕಭೂಷಿತವಾದ ಅಂಗಳಗಳನ್ನುಳ್ಳ, ಮನೋಹರವಾದ ಚಂದ್ರಪ್ರಭೆಯುಳ್ಳ, ಸುಗಂಧಯುಕ್ತವಾದ ಜಲದಿಂದ ಚಿಮುಕಿಸಲ್ಪಟ್ಟ, ಸುವರ್ಣಮಯವಾದ, ದಾರುಮಯವಾದ, ಶಿಲಾಮಯವಾದ ಮತ್ತು ದಂತಮಯವಾದ, ಒಳ್ಳೆಯ ಹಾಸುಗಳನ್ನು ಹಾಸಿದ ಸುಂದರವಾದ ಆಸನಗಳುಳ್ಳ ಆ ಶುಭವಾದ ಸಭೆಯನ್ನು ಪ್ರವೇಶಿಸಿದರು.
ಭೀಷ್ಮೋ ದ್ರೋಣಃ ಕೃಪಃ ಶಲ್ಯಃ ಕೃತವರ್ಮಾ ಜಯದ್ರಥಃ |
ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತಶ್ಚ ಬಾಹ್ಲಿಕಃ ॥6॥

ವಿದುರಶ್ಚ ಮಹಾಪ್ರಾಜ್ಞೋ ಯುಯುತ್ಸುಶ್ಚ ಮಹಾರಥಃ |
ಸರ್ವೇ ಚ ಸಹಿತಾಃ ಶೂರಾಃ ಪಾರ್ಥಿವಾ ಭರತರ್ಷಭ ॥7॥
ಧೃತರಾಷ್ಟ್ರಂ ಪುರಸ್ಕೃತ್ಯ ವಿವಿಶುಸ್ತಾಂ ಸಭಾಂ ಶುಭಾಮ್ ॥8॥
ಎಲೈ ಭರತರ್ಷಭನೇ, ಭೀಷ್ಮ, ದ್ರೋಣ, ಕೃಪ, ಶಲ್ಯ, ಕೃತವರ್ಮ, ಜಯದ್ರಥ, ಅಶ್ವತ್ಥಾಮಾ, ವಿಕರ್ಣ, ಸೋಮದತ್ತ, ಬಾಹ್ಲಿಕ, ಮಹಾಪ್ರಾಜ್ಞನಾದ ವಿದುರ, ಮಹಾರಥನಾದ ಯುಯುತ್ಸು ಈ ಎಲ್ಲ ಶೂರರೂ ಒಟ್ಟಾಗಿ ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ಶುಭವಾದ ಸಭೆಯನ್ನು ಪ್ರವೇಶಿಸಿದರು.
ದುಃಶಾಸನಶ್ಚಿತ್ರಸೇನಃ ಶಕುನಿಶ್ಚಾಪಿ ಸೌಬಲಃ |
ದುರ್ಮುಖೋ ದುಃಸಹಃ ಕರ್ಣ ಉಲೂಕೋಽಥ ವಿವಿಂಶತಿಃ ॥9॥
ಏತೇ ಚಾನ್ಯೇ ಚ ಬಹವಃ ಪಾರ್ಥಿವಾ ಭರತರ್ಷಭ |
ಕುರುರಾಜಂ ಪುರಸ್ಕೃತ್ಯ ದುರ್ಯೋಧನಮಮರ್ಷಣಮ್ ॥10॥
ವಿವಿಶುಸ್ತಾಂ ಸಭಾಂ ರಾಜನ್ ಸುರಾಃ ಶಕ್ರಸದೋ ಯಥಾ ॥11॥
ಎಲೈ ಭರತರ್ಷಭನೇ, ರಾಜನ್ನೇ, ದುಶ್ಶಾಸನ, ಚಿತ್ರಸೇನ, ಸೌಬಲನಾದ ಶಕುನಿ, ದುರ್ಮುಖ, ದುಃಸಹ, ಕರ್ಣ, ಉಲೂಕ ಮತ್ತು ವಿವಿಂಶತಿ ಇವರೇ ಮೊದಲಾದ ಅನೇಕ ರಾಜರು ಕೋಪಶೀಲನಾದ, ಕುರುರಾಜನಾದ ದುರ್ಯೋಧನನನ್ನು ಮುಂದೆ ಮಾಡಿಕೊಂಡು ದೇವತೆಗಳು ಇಂದ್ರನ ಸಭೆಯನ್ನು ಪ್ರವೇಶಿಸಿದಂತೆ ಆ ಸಭೆಯನ್ನು ಪ್ರವೇಶಿಸಿದರು.
ಆವಿಶದ್ಭಿಸ್ತಥಾ ರಾಜನ್ ಶೂರೈಃ ಪರಿಘಬಾಹುಭಿಃ |
ಶುಶುಭೇ ಸಾ ಸಭಾ ರಾಜನ್ ಸಿಂಹೈರಿವ ಗಿರೇರ್ಗುಹಾ ॥12॥
ಎಲೈ ರಾಜನ್ನೇ, ಒನಕೆಯಂತಹ ಬಾಹುಗಳುಳ್ಳ ಆ ರಾಜರು ಸಭೆಯನ್ನು ಪ್ರವೇಶಿಸುವಾಗ ಆ ಸಭೆಯು ಸಿಂಹಗಳಿಂದ ಕೂಡಿದ ಪರ್ವತದ ಗುಹೆಯಂತೆ ಶೋಭಿಸಿತು.
ತೇ ಪ್ರವಿಶ್ಯ ಮಹೇಷ್ವಾಸಾಃ ಸಭಾಂ ಸರ್ವೇ ಮಹೌಜಸಃ |
ಆಸನಾನಿ ವಿಚಿತ್ರಾಣಿ ಭೇಜಿರೇ ಸೂರ್ಯವರ್ಚಸಃ ॥13॥
ಮಹಾಧನುರ್ಧಾರಿಗಳೂ, ಮಹಾಬಲರೂ, ಸೂರ್ಯನ ಸಮಾನವಾದ ಕಾಂತಿಯುಳ್ಳವರೂ ಆದ ಅವರೆಲ್ಲರೂ ಸಭೆಯನ್ನು ಪ್ರವೇಶಿಸಿ ವಿಚಿತ್ರವಾದ ಆಸನಗಳಲ್ಲಿ ಕುಳಿತುಕೊಂಡರು.
ಆಸನಸ್ಥೇಷು ಸರ್ವೇಷು ತೇಷು ರಾಜಸು ಭಾರತ |
ದ್ವಾಃಸ್ಥೋ ನಿವೇದಯಾಮಾಸ ಸೂತಪುತ್ರಮುಪಸ್ಥಿತಮ್ ॥14॥
ಅಯಂ ಸ ರಥ ಆಯಾತಿ ಯೋಽಯಾಸೀತ್ ಪಾಂಡವಾನ್ ಪ್ರತಿ |
ದೂತೋ ನಸ್ತೂರ್ಣಮಾಯಾತಃ ಸೈಂಧವೈಃ ಸಾಧುವಾಹಿಭಿಃ ॥15॥
ಎಲೈ ಭಾರತನೇ, ಆ ಎಲ್ಲ ರಾಜರೂ ಸಭೆಯಲ್ಲಿ ಕುಳಿತುಕೊಳ್ಳುತ್ತಿರಲು ದ್ವಾರಪಾಲಕನು ಸಮೀಪದಲ್ಲಿ ಬರುತ್ತಿದ್ದ ಸೂತಪುತ್ರನಾದ ಸಂಜಯನನ್ನು ನೋಡಿ, ಪಾಂಡವರ ಬಳಿಗೆ ಹೋದ ಆ ರಥವು ಹಿಂದಿರುಗುತ್ತಿದೆ. ನಮ್ಮ ದೂತನಾದ ಸಂಜಯನು ಚೆನ್ನಾಗಿ ರಥವನ್ನು ಹೊರುವ, ಸಿಂಧುದೇಶದ ಅಶ್ವಗಳನ್ನು ಹೂಡಿದ ರಥದಲ್ಲಿ ಶೀಘ್ರವಾಗಿ ಬರುತ್ತಿದ್ದಾನೆ ಎಂದು ನಿವೇದಿಸಿದನು.
ಉಪೇಯಾಯ ಸ ತು ಕ್ಷಿಪ್ರಂ ರಥಾತ್ ಪ್ರಸ್ಕಂದ್ಯ ಕುಂಡಲೀ |
ಪ್ರವಿವೇಶ ಸಭಾಂ ಪೂರ್ಣಾಂ ಮಹೀಪಾಲೈರ್ಮಹಾತ್ಮಭಿಃ ॥16॥
ಕುಂಡಲಗಳನ್ನು ಧರಿಸಿದ್ದ ಸಂಜಯನು ರಥದಿಂದ ಇಳಿದು ಶೀಘ್ರವಾಗಿ ಸಭೆಯನ್ನು ಸಮೀಪಿಸಿ ಮಹಾತ್ಮರಾದ ರಾಜರಿಂದ ತುಂಬಿದ್ದ ಆ ಸಭೆಯನ್ನು ಪ್ರವೇಶಿಸಿದನು.
ಸಂಜಯಃ
ಪ್ರಾಪ್ತೋಽಸ್ಮಿ ಪಾಂಡವಾನ್ ಗತ್ವಾ ಮಾಂ ವಿಜಾನೀತ ಕೌರವಾಃ |
ಯಥಾವಯಃ ಕುರೂನ್ ಸರ್ವಾನ್ ಪ್ರತಿನಂದಂತಿ ಪಾಂಡವಾಃ ॥17॥
ಸಂಜಯ ಎಲೈ ಕೌರವರೇ, ನಾನು ಪಾಂಡವರ ಸಮೀಪಕ್ಕೆ ಹೋಗಿ ಹಿಂದಿರುಗಿದ್ದೇನೆ ಎಂದು ತಿಳಿಯಿರಿ. ಪಾಂಡವರು ಎಲ್ಲ ಕುರುಗಳನ್ನೂ ಅವರವರ ವಯಸ್ಸಿಗೆ ಉಚಿತವಾದ ರೀತಿಯಲ್ಲಿ ಅಭಿನಂದಿಸುತ್ತಾರೆ.
ಅಭಿವಾದಯಂತಿ ವೃದ್ಧಾಂಶ್ಚ ವಯಸ್ಯಾಂಶ್ಚ ವಯಸ್ಯವತ್ |
ಪುನಶ್ಚಾಭ್ಯವದನ್ ಪಾರ್ಥಾಃ ಪ್ರತಿಪೂಜ್ಯ ಯಥಾವಯಃ ॥18॥
ಹಿರಿಯರಿಗೆ ನಮಸ್ಕಾರವನ್ನು ಮಾಡುತ್ತಾರೆ. ಸ್ನೇಹಿತರಲ್ಲಿ ಸ್ನೇಹಿತರಂತೆ ನಡೆದುಕೊಳ್ಳುತ್ತಾರೆ ಮತ್ತು ವಯಸ್ಸಿಗೆ ಅನುಗುಣವಾಗಿ ಹೀಗೆ ಪೂಜೆಯನ್ನು ಸಲ್ಲಿಸಿ ಪಾಂಡವರು ಮಾತನಾಡಿದರು.
ಯಥಾಽಹಂ ಧೃತರಾಷ್ಟ್ರೇಣ ಶಿಷ್ಟಃ ಪೂರ್ವಮಿತೋ ಗತಃ |
ಅಬ್ರುವಂ ಪಾಂಡವಾನ್ ಗತ್ವಾ ತಂ ನಿಬೋಧತ ಪಾರ್ಥಿವಾಃ ॥19॥
ಅಬ್ರೂತಾಂ ತತ್ರ ಧರ್ಮೇಣ ವಾಸುದೇವಧನಂಜಯೌ ॥20॥
ಎಲೈ ರಾಜರೇ, ನಾನು ಧೃತರಾಷ್ಟ್ರನ ಆದೇಶವನ್ನು ಸ್ವೀಕರಿಸಿ ಮೊದಲು ಇಲ್ಲಿಂದ ಹೋಗಿ ಪಾಂಡವರಿಗೆ ಏನು ಹೇಳಿದೆ ಎಂಬುದನ್ನು ತಿಳಿಯಿರಿ. ಅನಂತರ ಕೃಷ್ಣ ಮತ್ತು ಅರ್ಜುನರಿಬ್ಬರೂ ಧರ್ಮಯುಕ್ತವಾದ ಮಾತುಗಳನ್ನು ಆಡಿದರು (ಅದನ್ನೂ ಕೇಳಿ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಪ್ರಥಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತೊಂಬತ್ತನೆಯ ಅಧ್ಯಾಯ
ಸಂಜಯನಿಂದ ಕೃಷ್ಣನ ಸಂದೇಶಕಥನ.
ಧೃತರಾಷ್ಟ್ರಃ
ಪೃಚ್ಛಾಮಿ ತ್ವಾಂ ಸಂಜಯ ರಾಜಮಧ್ಯೇ
ಯದಬ್ರುವೀದ್ ವಾಕ್ಯಮದೀನಸತ್ವಃ |
ಜನಾರ್ದನಸ್ತಾತ ಯುಧಾಂ ಪ್ರಣೇತಾ
ದುರಾತ್ಮನಾಂ ಜೀವಿತಚ್ಛಿನ್ ಮಹಾತ್ಮಾ ॥1॥
ಧೃತರಾಷ್ಟ್ರ ಪ್ರೀತಿಪಾತ್ರನಾದ ಸಂಜಯನೇ, ಮಹಾತ್ಮನೂ, ದುರಾತ್ಮರ ಪ್ರಾಣಾಪಹಾರಿಯೂ, ಅಧೀನಧೈರ್ಯವುಳ್ಳವನೂ, ಪಾಂಡವರ ಯುದ್ಧ ನಾಯಕನೂ ಆದ ಜನಾರ್ದನನು ರಾಜರ ಮಧ್ಯದಲ್ಲಿ ಯಾವ ಮಾತುಗಳನ್ನು ಆಡಿದನೆಂದು ನಿನ್ನನ್ನು ಕೇಳುತ್ತಿದ್ದೇನೆ.
ಸಂಜಯಃ
ಆಗುಲ್ಫೇಭ್ಯೋಽಪಿ ಸಂವೀತಃ ಸರ್ವತೋಽಹಂ ಕೃತಾಂಜಲಿಃ |
ಶುದ್ಧಾಂತಂ ಪ್ರಾವಿಶಂ ರಾಜನ್ನಾಖ್ಯಾತೋ ನರಸಿಂಹಯೋಃ ॥2॥
ಸಂಜಯ ರಾಜನೇ, ನಾನು ಪಾದದ ಗಂಟಿನವರೆಗೂ ಚೆನ್ನಾಗಿ ವಸ್ತ್ರವನ್ನು ಧರಿಸಿ ಕೈಗಳನ್ನು ಮುಗಿದು ದ್ವಾರಪಾಲಕನಿಂದ ತಿಳಿಸಲ್ಪಟ್ಟು ಆ ಇಬ್ಬರು ನರಶ್ರೇಷ್ಠರಿದ್ದ ಅಂತಃಪುರವನ್ನು ಪ್ರವೇಶಿಸಿದೆನು.
ನ ಚಾಭಿಮನ್ಯುರ್ನ ಯಮೌ ತಂ ದೇಶಮಭಿಜಗ್ಮತುಃ |
ಯತ್ರ ಕೃಷ್ಣೌ ಚ ಕೃಷ್ಣಾ ಚ ಸತ್ಯಭಾಮಾ ಚ ಭಾಮಿನೀ ॥3॥
ಎಲ್ಲಿ ಕೃಷ್ಣಾರ್ಜುನರು, ದ್ರೌಪದಿಯು ಮತ್ತು ಭಾಮಿನಿಯಾದ ಸತ್ಯಭಾಮೆಯು ಇದ್ದರೋ ಅಲ್ಲಿಗೆ ಅಭಿಮನ್ಯುವಾಗಲೀ, ನಕುಲ-ಸಹದೇವರಾಗಲೀ ಬರಲಿಲ್ಲ.
ಉಭೌ ಮಧ್ವಾಸವಕ್ಷೀಬೌ ವರಚಂದನರೂಷಿತೌ |
ಸ್ರಗ್ವಿಣೌ ವರವಸತ್ರಂಗೌ ವರಾಭರಣಭೂಷಿತೌ ॥4॥
ಇಬ್ಬರೂ ಮಧುಪಾನವನ್ನು ಮಾಡಿ, ಶ್ರೇಷ್ಠವಾದ ಚಂದನಲೇಪಿತರಾಗಿ, ಪುಷ್ಪಮಾಲೆಗಳನ್ನು ಧರಿಸಿ, ಶ್ರೇಷ್ಠವಸ್ತ್ರವನ್ನು ಧರಿಸಿ, ಶ್ರೇಷ್ಠವಾದ ಆಭರಣಗಳಿಂದ ಭೂಷಿತರಾಗಿದ್ದರು.
ನೈಕರತ್ನವಿಚಿತ್ರಂ ಚ ಕಾಂಚನಂ ಚ ವರಾಸನಮ್ |
ನಾನಾಸ್ತರಣಸಂಸ್ತೀರ್ಣಂ ಯತ್ರಾಸ್ತಾಂ ತೌ ನರರ್ಷಭೌ ॥5॥
ಆ ನರಶ್ರೇಷ್ಠರಿದ್ದ ಶ್ರೇಷ್ಠವಾದ ಆಸನವು ಅನೇಕ ರತ್ನಗಳಿಂದ ಕೂಡಿದ ಸುವರ್ಣದಿಂದ ನಿರ್ಮಿತವಾಗಿದ್ದು ಅನೇಕ ಹೊದಿಕೆಗಳು ಹಾಸಲ್ಪಟ್ಟು ಶೋಭಿಸುತ್ತಿದ್ದಿತು.
ಸತ್ಯಾಂಕಮುಪಧಾನಂ ತು ಕೃತ್ವಾ ಶೇತೇ ಜನಾರ್ದನಃ |
ಅರ್ಜುನಾಂಕಗತೌ ಪಾದೌ ಕೇಶವಸ್ಯೋಪಲಕ್ಷಯೇ ॥6॥
ಅರ್ಜುನಸ್ಯ ಚ ಕೃಷ್ಣಾಯಾಃ ಶುಭಾಯಾಶ್ಚಾಂಗಗಾವುಭೌ ॥7॥
ಜನಾರ್ದನನು ಸತ್ಯಭಾಮೆಯ ತೊಡೆಯನ್ನು ದಿಂಬು ಮಾಡಿಕೊಂಡು ಮಲಗಿದ್ದನು. ಕೃಷ್ಣನ ಪಾದಗಳು ಅರ್ಜುನನ ತೊಡೆಯಲ್ಲಿದ್ದುದನ್ನು ನಾನು ಗಮನಿಸಿದೆ. ಅರ್ಜುನನ ಪಾದಗಳಾದರೂ ಮಂಚದ ಸಮೀಪದಲ್ಲಿ ಕೆಳಗೆ ಸುವರ್ಣಮಯ ಪೀಠದಲ್ಲಿ ಕುಳಿತಿದ್ದ ಪವಿತ್ರಳಾದ ದ್ರೌಪದಿಯ ತೊಡೆಯ ಮೇಲಿದ್ದವು.
ಕಾಂಚನಂ ಪಾದಪೀಠಂ ತು ಪಾರ್ಥೋ ಮೇ ಪ್ರಾದಿಶನ್ಮುದಾ |
ದಾಸೀಭ್ಯಾಮಾಹೃತಂ ಮಹ್ಯಂ ಸ್ಪೃಷ್ಟ್ವಾ ಭೂಮಾವುಪಾವಿಶಮ್ ॥8॥
ಅರ್ಜುನನು ದಾಸಿಯರಿಂದ ತರಲ್ಪಟ್ಟ ಸುವರ್ಣಮಯವಾದ ಪಾದಪೀಠವನ್ನು ನನಗೆ ನೀಡಿದನು. ನಾನು ಅದನ್ನು ಮುಟ್ಟಿ ನೆಲದ ಮೇಲೆ ಕುಳಿತೆನು.
ಊರ್ಧ್ವರೇಖಾಂಕಿತೌ ಪಾದೌ ಪಾರ್ಥಸ್ಯ ಶುಭಲಕ್ಷಣೌ |
ಪಾದಪೀಠಾದಪಹೃತೌ ಧಾರಯೇತಾಂ ವರಸ್ತ್ರಿಯೌ ॥9॥
ಅರ್ಜುನನ ಶುಭಲಕ್ಷಣಗಳನ್ನುಳ್ಳ, ಊರ್ಧ್ವರೇಖಾಂಕಿತವಾದ ಪಾದಗಳನ್ನು ಪಾದಪೀಠದಿಂದ ಅವನು ತೆಗೆದಮೇಲೆ ಶ್ರೇಷ್ಠ ಸ್ತ್ರೀಯರು ಧರಿಸಿದರು.
ನ ನೂನಂ ಕಲ್ಮಷಂ ಕಿಂಚಿನ್ಮಮ ಕರ್ಮಸು ವಿದ್ಯತೇ |
ಸ್ತ್ರೀರತ್ನಾಭ್ಯಾಂ ಸಮೇತೌ ಯನ್ಮಿಥೋ ಮಾಮಭ್ಯಭಾಷತಾಮ್ ॥10॥
ಸ್ತ್ರೀರತ್ನಗಳಿಂದ ಕೂಡಿದ ಅವರಿಬ್ಬರೂ ನನ್ನ ಜೊತೆಯಲ್ಲಿ ಮಾತನಾಡುವುದಕ್ಕೆ ಮುಖ್ಯನಿಮಿತ್ತವೆಂದರೆ ನನ್ನ ಮನಸ್ಸಿನಲ್ಲಾಗಲೀ ಅಥವಾ ಕ್ರಿಯೆಯಲ್ಲಾಗಲೀ ಯಾವ ಕಲ್ಮಷವೂ ಇರುವುದಿಲ್ಲ.
ವಿಸ್ಮಯೋ ಮೇ ಮಹಾನಾಸೀದ್ ಆಸ್ರಂ ಮೇ ಬಹುಸಂಗತಮ್ |
ಹೃಷ್ಟಾನಿ ಚೈವ ರೋಮಾಣಿ ದೃಷ್ಟ್ವಾ ತೌ ಸಹಿತಾವುಭೌ ॥11॥

ಆ ಇಬ್ಬರು ಕೃಷ್ಣಾರ್ಜುನರು ಒಟ್ಟಿಗೆ ಇರುವುದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಯಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ರೋಮಾಂಚವೂ ಆಯಿತು.
ಶ್ಯಾಮೌ ಬೃಹಂತೌ ತರುಣೌ ನಾಗಾವಿವ ಸಮುಚ್ಛ್ರಿತೌ |
ಏಕಶಯ್ಯಾಗತೌ ದೃಷ್ಟ್ವಾ ಭಯಂ ಮೇ ಮಹದಾವಿಶತ್ ॥12॥
ಶ್ಯಾಮವರ್ಣದವರೂ, ಬೃಹತ್ಕಾಯರೂ, ತರುಣರೂ, ಗಜಗಳಂತೆ ಎತ್ತರವಾದವರೂ, ಒಂದೇ ಶಯ್ಯೆಯಲ್ಲಿ ಕುಳಿತವರೂ ಆದ ಅವರನ್ನು ನೋಡಿ ನನಗೆ ಬಹಳ ಭಯವಾಯಿತು.
ತತೋ ಹ್ಯಚಿಂತಯಂ ತತ್ರ ದೃಷ್ಟ್ವಾ ತೌ ಪುರುಷರ್ಷಭೌ ॥13॥
ಸಂಕಲ್ಪೋ ಧರ್ಮರಾಜಸ್ಯ ನಾನವಾಪ್ಯೋಽಸ್ತಿ ಕಶ್ಚನ |
ನಿರ್ದೇಶಗಾವಿಮೌ ಯಸ್ಯ ನರನಾರಾಯಣಾವುಭೌ ॥14॥
ಆ ಪುರುಷಶ್ರೇಷ್ಠರನ್ನು ನೋಡಿ ನಾನು ಯಾವ ಧರ್ಮರಾಜನ ಶಾಸನವನ್ನು ನರ-ನಾರಾಯಣರಾದ ಇವರಿಬ್ಬರೂ ಪಾಲಿಸುತ್ತಾರೆಯೋ ಅಂತಹ ಧರ್ಮರಾಜನ ಯಾವ ಸಂಕಲ್ಪವೂ ಸಿದ್ಧಿಸದೆ ಇರುವುದಿಲ್ಲ ಎಂದು ಚಿಂತಿಸಿದೆನು.
ಸತ್ಕೃತಶ್ಚಾನ್ನಪಾನಾಭ್ಯಾಮಹಂ ವೈ ಲಬ್ಧಸತ್ಕ್ರಿಯಃ |
ಅಂಜಲಿಂ ಮೂರ್ಧ್ನಿ ಸಂಧಾಯ ಸಂದೇಶಂ ಚಾಭ್ಯಚೋದಯಮ್ ॥
ಅನ್ನ-ಪಾನಗಳಿಂದ ಸತ್ಕೃತನಾಗಿ ಯೋಗ್ಯವಾದ ಗೌರವವನ್ನು ಸ್ವೀಕರಿಸಿದ ನಾನು ನನ್ನ ತಲೆಯ ಮೇಲೆ ಕೈಗಳನ್ನು ಮುಗಿದು ನಿನ್ನ ಸಂದೇಶವನ್ನು ತಿಳಿಸಿದೆನು.
ಧನುರ್ಧರೋಚಿತೇನಾಥ ಪಾಣಿನೈಕಂ ಸುಲಕ್ಷಣಮ್ |
ಪಾದಮಾನಾಯಯತ್ ಪಾರ್ಥ ಕೇಶವಸ್ಯ ಯಶಸ್ವಿನಃ ॥16॥
ಆಗ ಅರ್ಜುನನು ಧನುಸ್ಸನ್ನು ಹಿಡಿಯಲು ಯೋಗ್ಯವಾದ ತನ್ನ ಶುಭಲಕ್ಷಣವುಳ್ಳ ಹಸ್ತದಿಂದ ಕೀರ್ತಿವಂತನಾದ ಕೃಷ್ಣನ ಪಾದವನ್ನು ಕೆಳಗಿಳಿಸಿದನು.
ಇಂದ್ರಕೇತುರಿವೋತ್ಥಾಯ ದಿವ್ಯಾಭರಣಭೂಷಿತಃ |
ಇಂದ್ರವೀರ್ಯೋಪಮಃ ಕೃಷ್ಣಃ ಸಂವಿಷ್ಟೋ ಮಾಂ ಹ್ಯಭಾಷತ ॥17॥
ಇಂದ್ರನ ವೀರ್ಯಕ್ಕೆ ಸಮನಾದ ವೀರ್ಯವುಳ್ಳ, ದಿವ್ಯಾಭರಣಭೂಷಿತನಾದ ಕೃಷ್ಣನು ಇಂದ್ರಧ್ವಜದಂತೆ ಎದ್ದು ಕುಳಿತು ನನ್ನನ್ನು ಕುರಿತು ಮಾತನಾಡಿದನು.
ಸ ವಾಚಂ ವದತಾಂ ಶ್ರೇಷ್ಠ ಆದದೇ ವಚನಕ್ಷಮಾಮ್ |
ದೀಪನೀಂ ಧಾರ್ತರಾಷ್ಟ್ರಾಣಾಂ ಮೃದುಪೂರ್ವಾಂ ಸುದಾರುಣಾಮ್ ॥
ಮಾತನಾಡುವವರಲ್ಲಿ ಅಗ್ರಗಣ್ಯನಾದ ಅವನು ಆ ಕಾಲದಲ್ಲಿ ಆಡಲು ಯೋಗ್ಯವಾದ, ಧೃತರಾಷ್ಟ್ರ ಪುತ್ರರನ್ನು ತಪ್ತರನ್ನಾಗಿ ಮಾಡುವ, ಮೃದುಪೂರ್ವವಾದ, ದಾರುಣಾಂತವಾದ ಮಾತುಗಳನ್ನು ಆಡಿದನು.
ಬಹಿಶ್ಚರಸ್ಯ ಪ್ರಾಣಸ್ಯ ಪ್ರಿಯಸ್ಯ ಪ್ರಿಯಕಾರಿಣಃ |
ಮತಿಮಾನ್ ಮತಿಮಾಸ್ಥಾಯ ಕೇಶವಃ ಸಂದಧೇ ವಚಃ ॥19॥
ತನ್ನ ಬಹಿಶ್ಚರ ಪ್ರಾಣದಂತಿರುವ ಅರ್ಜುನನಿಗೆ ಪ್ರಿಯನೂ ಮತ್ತು ಪ್ರಿಯಕಾರಿಯೂ ಆದ ಕೃಷ್ಣನು ಅರ್ಜುನನ ಬುದ್ಧಿಯನ್ನೇ ಅವಲಂಬಿಸಿ ಮಾತನಾಡಿದನು.
ವಚನಂ ವಚನಜ್ಞಸ್ಯ ಶಿಕ್ಷಾಕ್ಷರಸಮನ್ವಿತಮ್ |
ಮನಃಪ್ರಹ್ಲಾದಮಶ್ರೌಷಂ ಪಶ್ಚಾದ್ ಹೃದಯತಾಪನಮ್ ॥20॥
ಮಾತನಾಡಲು ಬಲ್ಲ ಅವನ ಶಿಕ್ಷಾಶಾಸ್ತ್ರಸಮ್ಮತವಾದ, ಮನಸ್ಸಿಗೆ ಸಂತೋಷ ಉಂಟುಮಾಡುವ, ಕೊನೆಗೆ ಕ್ಲೇಶವನ್ನುಂಟು ಮಾಡುವ ಮಾತುಗಳನ್ನು ನಾನು ಕೇಳಿದೆನು.
ಶ್ರೀಭಗವಾನ್
ಸಂಜಯೈತದ್ ವಚೋ ಬ್ರೂಯಾಃ ಪ್ರಾಪ್ಯ ಕ್ಷತ್ರಿಯಸಂಸದಮ್ |
ಛಂದತಃ ಕುರುವೃದ್ಧಸ್ಯ ಆಚಾರ್ಯಸ್ಯ ಚ ಧೀಮತಃ ॥21॥
ಶ್ರೀಭಗವಾನ್ ಸಂಜಯನೇ, ಕ್ಷತ್ರಿಯರ ಸಭೆಗೆ ಹೋಗಿ ನಿನ್ನ ಇಚ್ಛಾನುಸಾರವಾಗಿ ಕುರುವೃದ್ಧನಾದ ಭೀಷ್ಮನಿಗೂ ಮತ್ತು ಮೇಧಾವಿಯಾದ ದ್ರೋಣರಿಗೂ ಕೇಳುವಂತೆ ಈ ಮಾತುಗಳನ್ನು ಆಡು.
ಅರ್ಥಾಂಸ್ತ್ಯಜತ ಪಾತ್ರೇಷು ಸುಖಮಾಪ್ನುತ ಕಾಮಜಮ್ |
ಪ್ರಿಯಂ ಪ್ರಿಯೇಭ್ಯಶ್ಚರತ ರಾಜಾ ಹಿ ತ್ವರತೇ ಜಯೇ ॥22॥
ಪಾತ್ರರಲ್ಲಿ ದಾನವನ್ನು ಮಾಡಿ; ಬಯಸಿದ ಸುಖಗಳನ್ನು ಅನುಭವಿಸಿ; ಪ್ರಿಯರಿಗೆ ಮಾಡಬೇಕಾದ ಪ್ರಿಯಗಳನ್ನು ಮಾಡಿ; ಏಕೆಂದರೆ ಧರ್ಮರಾಜನು ಜಯವನ್ನು ಪಡೆಯಲು ತ್ವರೆ ಮಾಡುತ್ತಿದ್ದಾನೆ.
ಯಜಧ್ವಂ ವಿವಿಧೈರ್ಯಜ್ಞೈರ್ದಕ್ಷಿಣಾಶ್ಚ ಪ್ರಯಚ್ಛತ |
ಪುತ್ರೈರ್ದಾರೈಶ್ಚ ಮೋದಧ್ವಮಾಗತಂ ವೋ ಮಹದ್ಭಯಮ್ ॥23॥
ಅನೇಕ ಯಜ್ಞಗಳನ್ನು ಮಾಡಿ; ದಕ್ಷಿಣೆಗಳನ್ನು ನೀಡಿ; ಪತ್ನೀ-ಪುತ್ರರ ಜೊತೆಯಲ್ಲಿ ಸಂತೋಷವನ್ನು ಪಡಿ; ನಿಮಗೆ ದೊಡ್ಡ ಭಯವು ಬಂದೊದಗಿದೆ.
ಗೋವಿಂದೇತಿ ಯದಾಕ್ರಂದತ್ ಕೃಷ್ಣಾ ಮಾಂ ದೂರವಾಸಿನಮ್ |
ಋಣಂ ಪ್ರವೃದ್ಧಮಿವ ಮೇ ಹೃದಯಾನ್ನಪಸರ್ಪತಿ ॥24॥

ದೂರದಲ್ಲಿದ್ದ ನನ್ನನ್ನು ದ್ರೌಪದಿಯು ಗೋವಿಂದ ಎಂದು ಕರೆದು ಏನು ಋಣ ಉಂಟಾಗಿದೆಯೋ ಅದು ಬೆಳೆದು ನನ್ನ ಮನಸ್ಸಿನಿಂದ ಎಂದೂ ಹೋಗುವುದಿಲ್ಲ.
ತೇಜೋಮಯಂ ದುರಾಧರ್ಷಂ ಬಿಭ್ರತಾ ಗಾಂಡಿವಂ ಧನುಃ |
ಮದ್ದ್ವಿತೀಯೇನ ಪಾರ್ಥೇನ ವೈರಂ ವಃ ಪ್ರತ್ಯುಪಸ್ಥಿತಮ್ ॥25॥
ತೇಜೋಮಯವಾದ, ಸೋಲಿಸಲು ಅಸಾಧ್ಯವಾದ ಗಾಂಡೀವ ಧನುಸ್ಸನ್ನು ಹೊಂದಿದ ನನ್ನ ಸಹಾಯವುಳ್ಳ ಅರ್ಜುನನ ಜೊತೆಯಲ್ಲಿ ನೀವು ವೈರವನ್ನು ಕಟ್ಟಿಕೊಂಡಿದ್ದೀರಿ.
ಸಂಜಯಃ
ಕೃಷ್ಣಸ್ಯೈತದ್ ವಚಃ ಶ್ರುತ್ವಾ ಭಯಂ ಮೇ ಮಹದಾವಿಶತ್ |
ತವ ಪುತ್ರಸ್ಯ ಲೋಭಂ ಚ ವರ್ಧಮಾನಂ ಪ್ರಪಶ್ಯತಃ ॥26॥
ಸಂಜಯ ಕೃಷ್ಣನ ಈ ಮಾತುಗಳನ್ನು ಕೇಳಿ ನಿನ್ನ ಪುತ್ರನಿಗೆ ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಲೋಭವನ್ನೂ ನೋಡಿ ನನಗೆ ದೊಡ್ಡ ಭಯವುಂಟಾಯಿತು.
ಸೋಽಯಮಿಂದ್ರಸಮೌ ವೀರೌ ತೌ ಮಂದೋ ನಾವಬುಧ್ಯತೇ |
ಭೀಷ್ಮದ್ರೋಣಾಶ್ರಯಾಚ್ಚೈವ ಕರ್ಣಸ್ಯ ಚ ವಿಕತ್ಥನಾತ್ ॥27॥
ಕೃಷ್ಣಾರ್ಜುನರು ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ವೀರರು. ಈ ಮಂದನಾದ ದುರ್ಯೋಧನನು ಭೀಷ್ಮ-ದ್ರೋಣರನ್ನು ಆಶ್ರಯಿಸಿರುವುದರಿಂದಲೂ ಮತ್ತು ಕರ್ಣನ ಹೊಗಳಿಕೆಯ ಮಾತುಗಳಿಂದಲೂ ಅದನ್ನು ತಿಳಿಯುತ್ತಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತನೆಯ ಅಧ್ಯಾಯ
ಸಂಜಯನಿಂದ ಧೃತರಾಷ್ಟ್ರನನ್ನು ಕುರಿತು ಅರ್ಜುನಾದಿಗಳ ಸಂದೇಶದ ಕಥನ.
ಧೃತರಾಷ್ಟ್ರಃ
ಪೃಚ್ಛಾಮಿ ತ್ವಾಂ ಸಂಜಯ ರಾಜಮಧ್ಯೇ
ಯದಬ್ರವೀದ್ ವಾಕ್ಯಮದೀನಸತ್ತ್ವಃ |
ಧನಂಜಯಸ್ತಾತ ಯುಧಾಂ ಪ್ರಣೇತಾ
ದುರಾತ್ಮನಾಂ ಜೀವಿತಚ್ಛಿನ್ ಮಹಾತ್ಮಾ ॥1॥
ಧೃತರಾಷ್ಟ್ರ ಎಲೈ ಪ್ರೀತಿಪಾತ್ರನಾದ ಸಂಜಯನೇ, ಮಹಾಧೈರ್ಯಶಾಲಿಯೂ, ದುಷ್ಟರನ್ನು ಸಂಹರಿಸುವವನೂ, ಪಾಂಡವರ ಯುದ್ಧನಾಯಕನೂ, ಮಹಾತ್ಮನೂ ಆದ ಅರ್ಜುನನು ಏನು ಹೇಳಿದನೆಂದು ನಿನ್ನನ್ನು ರಾಜರ ಮಧ್ಯದಲ್ಲಿ ಕೇಳುತ್ತಿದ್ದೇನೆ.
ಸಂಜಯಃ
ದುರ್ಯೋಧನೋ ವಾಚಮಿಮಾಂ ಶೃಣೋತು
ಯದಬ್ರವೀದರ್ಜುನೋ ಯೋತ್ಸ್ಯಮಾನಃ |
ಯುಧಿಷ್ಠಿರಸ್ಯಾನುಮತೇ ಮಹಾತ್ಮಾ
ಧನಂಜಯಃ ಶೃಣ್ವತಃ ಕೇಶವಸ್ಯ ॥2॥
ಸಂಜಯ ಯುದ್ಧವನ್ನು ಮಾಡಲು ಬಯಸಿದ ಮಹಾತ್ಮನಾದ ಅರ್ಜುನನು ಯುಧಿಷ್ಠಿರನ ಅನುಮತಿಯನ್ನು ಪಡೆದು, ಕೃಷ್ಣನ ಸಮ್ಮುಖದಲ್ಲಿ ಏನನ್ನು ಮಾತನಾಡಿದನೋ ಅದನ್ನು ದುರ್ಯೋಧನನು ಕೇಳಲಿ.
ಅವಿತ್ರಸ್ತೋ ಬಾಹುವೀರ್ಯಂ ವಿಜಾನನ್
ಉಪಹ್ವರೇ ವಾಸುದೇವಸ್ಯ ವೀರಃ |
ಅವೋಚನ್ಮಾಂ ಯೋತ್ಸ್ಯಮಾನಃ ಕಿರೀಟೀ
ಮಧ್ಯೇ ಬ್ರೂಯಾ ಧಾರ್ತರಾಷ್ಟ್ರಂ ಕುರೂಣಾಮ್ ॥3॥
ತನ್ನ ಬಾಹುಬಲವನ್ನು ತಿಳಿದ ವೀರನಾದ ಯುದ್ಧವನ್ನು ಬಯಸುವ ಅರ್ಜುನನು ಯಾವ ಹೆದರಿಕೆಯೂ ಇಲ್ಲದೆ ಕೃಷ್ಣನ ಜೊತೆಯಲ್ಲಿ ಏಕಾಂತದಲ್ಲಿದ್ದವನಾಗಿ ನನ್ನನ್ನು ಕುರಿತು ಕುರುಗಳ ಮಧ್ಯದಲ್ಲಿರುವ ದುರ್ಯೋಧನನಿಗೆ ಈ ಮಾತುಗಳನ್ನು ಹೇಳು ಎಂದು ಹೇಳಿದನು.
ಸಂಶೃಣ್ವತಸ್ತಸ್ಯ ದುರ್ಭಾಷಿಣೋ ವೈ
ದುರಾತ್ಮನಃ ಸೂತಪುತ್ರಸ್ಯ ಸೂತ |
ಯೋ ಯೋದ್ಧುಮಾಶಂಸತೇ ಮಾಂ ಸದೈವ
ಮಂದಪ್ರಜ್ಞಃ ಕಾಲಪಕ್ವೋಽತಿಮೂಢಃ ॥4॥
ಎಲೈ ಸೂತನೇ, ದುಷ್ಟವಚನಗಳನ್ನು ಮಾತನಾಡುವ ದುರಾತ್ಮನಾದ ಸೂತಪುತ್ರನಾದ ಯಾವ ಕರ್ಣನು ಮಂದಪ್ರಜ್ಞೆಯುಳ್ಳವನಾಗಿ, ಅತಿಮೂಢನಾಗಿ, ಸನ್ನಿಹಿತ ಮೃತ್ಯುವಾಗಿ ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತಾನೆಯೋ ಅವನೂ ಕೇಳುವಂತೆ

ಹೇಳು.
ಯೇ ವೈ ರಾಜಾನಃ ಪಾಂಡವಾಯೋಧನಾಯ
ಸಮಾನೀತಾಃ ಶೃಣ್ವತಾಂ ಚಾಪಿ ತೇಷಾಮ್ |
ಯಥಾ ಸಮಗ್ರಂ ವಚನಂ ಮಯೋಕ್ತಂ
ಸಹಾಮಾತ್ಯಂ ಶ್ರಾವಯೇಥಾ ನೃಪಂ ತತ್ ॥5॥
ಪಾಂಡವರಾದ ನಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡಲು ಯಾವ ರಾಜರು ದುರ್ಯೋಧನನಿಂದ ಕರೆತರಲ್ಪಟ್ಟಿದ್ದಾರೆಯೋ ಅವರೂ ಕೇಳುವಂತೆ ನನ್ನ ಸಮಗ್ರವಾದ ಮಾತುಗಳನ್ನು ಅಮಾತ್ಯರಿಂದ ಕೂಡಿದ ದುರ್ಯೋಧನನಿಗೆ ಕೇಳಿಸುವವನಾಗು (ಎಂದು ಹೇಳಿದನು).
ಯಥಾ ಗಿರಂ ದೇವರಾಜಸ್ಯ ದೇವಾಃ
ಶುಶ್ರೂಷಂತೇ ವಜ್ರಹಸ್ತಸ್ಯ ಸರ್ವೇ |
ತಥಾಽಶೃಣ್ವನ್ ಪಾಂಡವಾಃ ಸೃಂಜಯಾಶ್ಚ
ಕಿರೀಟಿನಾ ವಾಚಮುಕ್ತಾಂ ಸಮರ್ಥಾಮ್ ॥6॥
ಹೇಗೆ ವಜ್ರಹಸ್ತನಾದ ದೇವರಾಜನಾದ ಇಂದ್ರನ ಮಾತುಗಳನ್ನು ಎಲ್ಲಾ ದೇವತೆಗಳೂ ಕೇಳಲು ಬಯಸುತ್ತಾರೆಯೋ ಅದರಂತೆ ಪಾಂಡವರು ಮತ್ತು ಸೃಂಜಯರು ಅರ್ಜುನನು ಆಡಿದ ಸಮರ್ಥವಾದ ಮಾತುಗಳನ್ನು ಆಲಿಸಿದರು.
ನ ಚೇದ್ ರಾಜ್ಯಂ ಮುಂಚತಿ ಧಾರ್ತರಾಷ್ಟ್ರೋ
ಯುಧಿಷ್ಠಿರಸ್ಯಾಜಮೀಢಸ್ಯ ರಾಜ್ಞಃ ॥7॥
ಅಸ್ತಿ ನೂನಂ ಕರ್ಮ ಕೃತಂ ಪುರಸ್ತಾದ್
ಅನಿರ್ವಿಷ್ಟಂ ಪಾಪಕಂ ಧಾರ್ತರಾಷ್ಟ್ರೈಃ |
ಯೇಷಾಂ ಯುದ್ಧಂ ಭೀಮಸೇನಾರ್ಜುನಾಭ್ಯಾಂ
ತಥಾಽಶ್ವಿಭ್ಯಾಂ ವಾಸುದೇವೇನ ಚೈವ ॥8॥
ಆಜಮೀಢನಾದ ಯುಧಿಷ್ಠಿರ ರಾಜನಿಗೆ ದುರ್ಯೋಧನನು ರಾಜ್ಯವನ್ನು ಕೊಡದಿದ್ದರೆ ಹಿಂದೆ ದುರ್ಯೋಧನಾದಿಗಳು ಮಾಡಿದ ಪಾಪಕೃತ್ಯಗಳಿಗೆ ಪ್ರತೀಕಾರವನ್ನು ಮಾಡದೆ ಅವು ಹಾಗೆಯೇ ಉಳಿದಿವೆ. ಅದರಿಂದ ಅವರಿಗೆ ಭೀಮಸೇನಾರ್ಜುನರಿಂದಲೂ, ನಕುಲ-ಸಹದೇವರಿಂದಲೂ, ಕೃಷ್ಣನಿಂದಲೂ ಯುದ್ಧವು ಪ್ರಾಪ್ತವಾಗಿದೆ.
ಶೈನೇಯೇನ ಧ್ರುವಮಾತ್ತಾಯುಧೇನ
ಧೃಷ್ಟದ್ಯುಮ್ನೇನಾಥ ಶಿಖಂಡಿನಾ ಚ |
ಯುಧಿಷ್ಠಿರೇಣೇಂದ್ರಕಲ್ಪೇನ ಚೈವ
ಯೋಽವಧ್ಯಾನಾನ್ನಿರ್ದಹೇದ್ ಗಾಂ ದಿವಂ ಚ ॥9॥
ಆಯುಧವನ್ನು ಧರಿಸಿದ ಸಾತ್ಯಕಿಯಿಂದಲೂ, ಧೃಷ್ಟದ್ಯುಮ್ನನಿಂದಲೂ ಮತ್ತು ಶಿಖಂಡಿಯಿಂದಲೂ ಅದರಂತೆಯೇ ಇಂದ್ರಸಮಾನನಾದ ಯಾವನು ಕೋಪಪೂರ್ವಕವಾದ ತನ್ನ ಅವಜ್ಞಾನದಿಂದಲೇ ಭೂಮಿಯನ್ನೂ ಮತ್ತು ಅಂತರಿಕ್ಷವನ್ನೂ ಸುಡಬಲ್ಲನೋ ಅಂತಹ ಯುಧಿಷ್ಠಿರನ ಜೊತೆಯಲ್ಲಿಯೂ (ಯುದ್ಧವು) ಪ್ರಾಪ್ತವಾಗಿದೆ.
ತೈಶ್ಚೇದ್ ಯೋದ್ಧುಂ ಮನ್ಯತೇ ಧಾರ್ತರಾಷ್ಟ್ರೋ
ನಿರ್ವೃತ್ತೋಽರ್ಥಃ ಸಕಲಃ ಪಾಂಡವಾನಾಮ್ |
ಮಾ ತತ್ ಕಾರ್ಷೀಃ ಪಾಂಡವಸ್ಯಾರ್ಥಹೇತೋಃ
ಅಪೈಹಿ ಯುದ್ಧಂ ಯದಿ ಮನ್ಯಸೇ ತ್ವಮ್ ॥10॥
ದುರ್ಯೋಧನನು ಅವರ ಜೊತೆಯಲ್ಲಿ ಯುದ್ಧಮಾಡುವುದನ್ನು ನಿಶ್ಚಯಿಸಿದರೆ ಪಾಂಡವರಿಗೆ ಸಕಲಾಭೀಷ್ಟಗಳೂ ಸಿದ್ಧವಾದಂತೆಯೇ. ಪಾಂಡವರ ದ್ರವ್ಯವನ್ನು ಸಂಪಾದಿಸುವುದಕ್ಕಾಗಿ ಯುದ್ಧವನ್ನು ಮಾಡಬೇಡ. ನಿನಗೆ ವಿವೇಕವಿರುವುದಾದರೆ ಯುದ್ಧದಿಂದ ಹಿಂದೆ ಸರಿ.
ಯಾಂ ತಾಂ ವನೇ ದುಃಖಶಯ್ಯಾಮವಾತ್ಸೀತ್
ಪ್ರವ್ರಾಜಿತಃ ಪಾಂಡವೋ ಧರ್ಮಚಾರೀ |
ಆಶ್ಲಿಷ್ಯತೇ ದುಃಖತರಾಮನಾಥಾಮ್
ಅಂತ್ಯಾಂ ಶಯ್ಯಾಂ ಧಾರ್ತರಾಷ್ಟ್ರಃ ಪರಾಸುಃ ॥11॥
ಧರ್ಮಾಚರಣೆಯನ್ನು ಮಾಡುವ ಪಾಂಡುಪುತ್ರನಾದ ಧರ್ಮರಾಜನು ಕಾಡಿಗೆ ಹೋಗಿ ಯಾವ ದುಃಖಶಯನಗಳನ್ನು ಕಳೆದನೋ, ಧೃತರಾಷ್ಟ್ರಪುತ್ರನಾದ ದುರ್ಯೋಧನನು ಪ್ರಾಣಗಳನ್ನು ಕಳೆದುಕೊಂಡು ಅದಕ್ಕಿಂತಲೂ ದುಃಖತರವಾದ ಅನಾಥವಾದ ಅಂತ್ಯಶಯ್ಯೆಯನ್ನು ಪಡೆಯುವನು.
ಮಾಯಾಪದಂ ಪ್ರಣಿಧಾನಾರ್ಜವಾಭ್ಯಾಂ
ತಪೋದಮಾಭ್ಯಾಂ ಧರ್ಮಗುಪ್ತ್ಯಾ ಬಲೇನ |
ಸತ್ಯಂ ಬ್ರುವನ್ ಪ್ರತಿಪನ್ನೋ ನೃಪೋ ನಃ
ತಿತಿಕ್ಷಮಾಣಃ ಕ್ಲಿಶ್ಯಮಾನೋಽತಿವೇಲಮ್ ॥12॥
ಯದಾ ಜ್ಯೇಷ್ಠಃ ಪಾಂಡವಃ ಸಂಶಿತಾತ್ಮಾ
ಕ್ರೋಧಂ ಯಚ್ಛನ್ ವರ್ಷಪೂಗಾನ್ ಸುಘೋರಮ್ |

ಅವಸೃಷ್ಟಾ ಕುರುಷೂದ್ವೃತ್ತಚೇತಾಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನು ಪಶ್ಯೇತ್ ॥13॥
ನಮ್ಮ ರಾಜನಾದ ಯಾವ ಯುಧಿಷ್ಠಿರನು ನಿನ್ನ ಕಪಟದಿಂದ ನಮಗೆ ಉಂಟಾದ ಆಪತ್ತುಗಳನ್ನು ತನ್ನ ಅವಧಾನ ಮತ್ತು ಆರ್ಜವಗಳಿಂದಲೂ, ತಪಸ್ಸು ಮತ್ತು ಇಂದ್ರಿಯ ನಿಗ್ರಹದಿಂದಲೂ, ಧರ್ಮರಕ್ಷಣೆ ಮತ್ತು ಬಲದಿಂದಲೂ, ಸತ್ಯವಚನಗಳಿಂದಲೂ ಸಹನೆ ಮಾಡುತ್ತಾ ಬಹಳ ಕ್ಲೇಶಕ್ಕೆ ಒಳಗಾಗಿದ್ದಾನೆಯೋ ಅಂತಹ ನಮ್ಮ ಜ್ಯೇಷ್ಠನಾದ, ಮನೋನಿಗ್ರಹವುಳ್ಳ, ಘೋರವಾದ ಕ್ರೋಧವನ್ನು ಬಹಳ ಕಾಲದಿಂದ ತಡೆದುಕೊಂಡಿರುವ ಧರ್ಮರಾಜನು ಕುರುಗಳ ಮೇಲೆ ಮನಸ್ಸಿನಲ್ಲಿ ಕೋಪವನ್ನು ತಂದುಕೊಂಡು, ಅದನ್ನು ದುರ್ಯೋಧನನ ಮೇಲೆ ತಿರುಗಿಸಿದರೆ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪ ಪಡಬೇಕಾದೀತು.
ಕೃಷ್ಣವರ್ತ್ಮೇವ ಜ್ವಲಿತಃ ಸಮಿದ್ಧೋ
ಯಥಾ ದಹೇತ್ ಕಕ್ಷಮಗ್ನಿರ್ನಿದಾಘೇ |
ಏವಂ ದಗ್ಧ್ವಾ ಧಾರ್ತರಾಷ್ಟ್ರಸ್ಯ ಸೇನಾಂ
ಯುಧಿಷ್ಠಿರಃ ಕ್ರೋಧದೀಪ್ತೋಽನ್ವವೇಕ್ಷ್ಯ ॥14॥
ಬೇಸಿಗೆಯ ಕಾಲದಲ್ಲಿ ಹೊತ್ತಿಸಿದ ಅಗ್ನಿಯು ಚೆನ್ನಾಗಿ ಬೆಳೆದು ಜ್ವಾಲೆಗಳಿಂದ ಕೂಡಿ ಹುಲ್ಲುಗಾವಲನ್ನು ಹೇಗೆ ಸುಡುವುದೋ ಅದರಂತೆ ಕ್ರೋಧದೀಪ್ತನಾದ ಯುಧಿಷ್ಠಿರನು ದುರ್ಯೋಧನ ಸೇನೆಯನ್ನು ನೋಡಿ ಸುಡುವವನಾಗುತ್ತಾನೆ.
ಯದಾ ದೃಷ್ಟ್ವಾ  ಭೀಮಸೇನಂ ರಥಸ್ಥಂ
ಗದಾಹಸ್ತಂ ಕ್ರೋಧವಿಷಂ ವಮಂತಮ್ |
ದುರ್ಮರ್ಷಣಂ ಪಾಂಡವಂ ಭೀಮವೇಗಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥15॥
ಯಾವಾಗ ರಥದಲ್ಲಿ ಕುಳಿತು ಕೈಯಲ್ಲಿ ಗದೆಯನ್ನು ಹಿಡಿದು ಕ್ರೋಧವಿಷವನ್ನು ಉಗುಳುವ ಭಯಂಕರ ವೇಗವುಳ್ಳ, ಸಹನೆ ಇಲ್ಲದಿರುವ ಪಾಂಡುಪುತ್ರನಾದ ಭೀಮನನ್ನು ದುರ್ಯೋಧನನು ನೋಡುವನೋ ಆಗ ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಸೇನಾಗ್ರಗಂ ದಂಸಿತಂ ಭೀಮಸೇನಂ
ಲಕ್ಷಣ್ಯವಂತಂ ವೀರಹಣಂ ಪರೇಷಾಮ್ |
ಘ್ನಂತಂ ಚಮೂಮಂತಕಸನ್ನಿಕಾಶಂ
ತದಾ ಸ್ಮರ್ತಾ ವಚನಸ್ಯಾತಿಮಾನೀ ॥16॥
ಸೇನೆಯ ಮುಂಭಾಗದಲ್ಲಿ ಕವಚವನ್ನು ಧರಿಸಿದ, ದಿವ್ಯಲಕ್ಷಣಗಳಿಂದ ಕೂಡಿದ, ಶತ್ರುಗಳ ವೀರರನ್ನು ಸಂಹರಿಸುವ, ಯಮನಂತೆ ಕಾಂತಿಯನ್ನು ಹೊಂದಿ ಶತ್ರುಸೈನ್ಯವನ್ನು ಸಂಹರಿಸುವ, ಭೀಮಸೇನನನ್ನು ನೋಡಿದಾಗ ಬಹಳ ಗರ್ವವುಳ್ಳ ದುರ್ಯೋಧನನು ನನ್ನ ಮಾತುಗಳನ್ನು ಸ್ಮರಿಸುವನು.
ಯದಾ ದೃಷ್ಟ್ವಾ ಭೀಮಸೇನೇನ ನಾಗಾನ್
ನಿಪಾತಿತಾನ್ ಗಿರಿಕೂಟಪ್ರಕಾಶಾನ್ |
ಕುಂಭೈರಿವಾಸೃಗ್ವಮತೋ ಭಿನ್ನಕುಂಭಾನ್
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥17॥
ಪರ್ವತಶಿಖರಗಳಂತೆ ಇರುವ, ಹೊಡೆದು ಉರುಳಿಸಲ್ಪಟ್ಟ, ಕುಂಭಸ್ಥಲದಿಂದ ಕೊಡಗಳಿಂದ ರಕ್ತವನ್ನು ಸುರಿಯುವಂತೆ ರಕ್ತವನ್ನು ಸುರಿಸುತ್ತಿರುವ ಕುಂಭಸ್ಥಲವು ಒಡೆದ ಭೀಮಸೇನನಿಂದ ಹತವಾದ ಗಜಗಳನ್ನು ದುರ್ಯೋಧನನು ಯಾವಾಗ ನೋಡುವನೋ ಆಗ ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಮಹಾಸಿಂಹೋ ಗಾ ಇವ ಸಂಪ್ರವಿಶ್ಯ
ಗದಾಪಾಣಿರ್ಧಾರ್ತರಾಷ್ಟ್ರಾನುಪೇತ್ಯ |
ಯದಾ ಭೀಮೋ ಭೀಮರೂಪೋ ನಿಹಂತಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥18॥
ದೊಡ್ಡ ಸಿಂಹವು ಗೋವುಗಳ ಹಿಂಡನ್ನು ಪ್ರವೇಶಿಸಿದಂತೆ ಭಯಂಕರ ರೂಪವುಳ್ಳ ಶತ್ರುಸಂಹಾರಕನಾದ ಗದಾಪಾಣಿಯಾದ ಭೀಮಸೇನನು ಯಾವಾಗ ದುರ್ಯೋಧನನ ಸೈನ್ಯವನ್ನು ಪ್ರವೇಶಿಸುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪ ಪಡುವನು.
ಮಹಾಭಯೇ ವೀತಭಯಃ ಕೃತಾಸ್ತ್ರಃ
ಸಮಾಗಮೇ ಶತ್ರುಬಲಾವಮರ್ದೀ |
ಸಕೃದ್ರಥೇನ ಪ್ರತಿಯಾನ್ ರಥೌಘಾನ್
ಪದಾತಿಸಂಘಾನ್ ಗದಯಾ ವಿನಿಘ್ನನ್ ॥19॥
ಸೈನ್ಯಾನನೇಕಾಂಸ್ತರಸಾ ವಿಮೃದ್ನನ್
ಯದಾ ಚ್ಛೇತ್ತಾ ಧಾರ್ತರಾಷ್ಟ್ರಸ್ಯ ಸೈನ್ಯಮ್ |
ಛಿಂದನ್ ವನಂ ಪರಶುನೇವ ಕೃತ್ಸ್ನಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥20॥
ಮಹಾಭಯಂಕರವಾದ ಯುದ್ಧದಲ್ಲಿ ತಾನು ನಿರ್ಭಯನಾಗಿ ಅಸ್ತ್ರನಿಪುಣನಾದ, ಶತ್ರುಸೈನ್ಯವನ್ನು ಮರ್ದನ ಮಾಡುವ, ಭೀಮಸೇನನು ಒಮ್ಮೆ ರಥದಿಂದ ಶತ್ರುಗಳ ರಥಸಮೂಹವನ್ನು ಸಮೀಪಿಸಿ ಗದೆಯಿಂದ ಪದಾತಿಗಳ ಸಮೂಹವನ್ನು ಸಂಹರಿಸುತ್ತಾ

ಅನೇಕ ಸೈನ್ಯಗಳನ್ನು ತನ್ನ ವೇಗದಿಂದ ಮರ್ದಿಸುತ್ತಾ, ದುರ್ಯೋಧನನ ಸೈನ್ಯವನ್ನು ಕೊಡಲಿಯಿಂದ ವನವನ್ನು ನಾಶಮಾಡಿದಂತೆ ಯಾವಾಗ ನಾಶಮಾಡುವನೋ, ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ತೃಣಪ್ರಾಯಂ ಜ್ವಲನೇನೇವ ದಗ್ಧಂ
ಗ್ರಾಮಂ ಯಥಾ ಧಾರ್ತರಾಷ್ಟ್ರಾನ್ ಸಮೀಕ್ಷ್ಯ |
ಪಕ್ವಂ ಸಸ್ಯಂ ವೈದ್ಯುತೇನೇವ ದಗ್ಧಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥21॥

ತೃಣಕ್ಕೆ ಸಮಾನವಾದ ವಸ್ತುಗಳು ಅಗ್ನಿಯಿಂದ ಸುಡಲ್ಪಡುವಂತೆ ತಪೋವನದ ಫಲಭರಿತ ಸಸ್ಯಗಳು ಸಿಡಿಲಿನಿಂದ ಸುಡಲ್ಪಟ್ಟಂತೆ ಯಾವಾಗ ಭೀಮಸೇನನು ಧೃತರಾಷ್ಟ್ರ ಪುತ್ರರನ್ನು ನೋಡಿ ವ್ಯವಹರಿಸುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಪರಾಜಿತಂ ವಿಪುಲಂ ಸ್ವಂ ಬಲೌಘಂ
ಹತಪ್ರವೀರಂ ವಿಮುಖಂ ಭಯಾರ್ತಮ್ |
ಪರಾಙ್ಮುಖಂ ಪ್ರಾಯಶೋ ನಷ್ಟಯೋಧಂ
ಶಸ್ತ್ರಾರ್ಚಿಷಾ ಭೀಮಸೇನೇನ ದಗ್ಧಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥22॥

ಯಾವಾಗ ತನ್ನ ವಿಪುಲವಾದ ಸೈನ್ಯಪ್ರವಾಹವು ವೀರರನ್ನು ಕಳೆದುಕೊಂಡು ಭಯಾರ್ತವಾಗಿ, ಯುದ್ಧಕ್ಕೆ ವಿಮುಖವಾಗಿ ಯೋಧರನ್ನು ಹೆಚ್ಚಾಗಿ ಕಳೆದುಕೊಂಡು ಭೀಮಸೇನನ ಶಸ್ತ್ರಾಗ್ನಿಯಿಂದ ದಗ್ಧವಾಗಿ ಪರಾಜಿತವಾಗುತ್ತದೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಉಪಾಸಂಗಾದುದ್ಧರನ್ ದಕ್ಷಿಣೇನ
ವರಂ ಶರಂ ನಕುಲಶ್ಚಿತ್ರಯೋಧೀ |
ಯದಾ ರಥಾಗ್ರ್ಯಾನ್ ರಥಿನಃ ಪ್ರವೇಪ್ತಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥23॥

ಚಿತ್ರಯೋಧಿಯಾದ ನಕುಲನು ಬಲಗೈಯಿಂದ ಬತ್ತಳಿಕೆಯಿಂದ ಬಾಣಗಳನ್ನು ತೆಗೆದು ರಥಶ್ರೇಷ್ಠರಾದ ರಥಿಕರನ್ನು ಯಾವಾಗ ಕತ್ತರಿಸುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಸುಖೋಚಿತೋ ದುಃಖಶಯ್ಯಾಂ ವನೇಷು
ದೀರ್ಘಂ ಕಾಲಂ ನಕುಲೋ ಯಾಮಶೇತ |
ಆಶೀವಿಷಃ ಕ್ರುದ್ಧ ಇವಾಚರೇದ್ ಯದಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥24॥

ಸುಖೋಚಿತವಾದ ನಕುಲನು ಕಾಡುಗಳಲ್ಲಿ ಬಹುಕಾಲದವರೆಗೆ ಯಾವ ದುಃಖಶಯ್ಯೆಯನ್ನು ಅನುಭವಿಸಿದನೋ ಅದಕ್ಕೆ ಪ್ರತಿಯಾಗಿ ಅವನು ಕೋಪಗೊಂಡ ಸರ್ಪದಂತೆ ಯುದ್ಧಭೂಮಿಯಲ್ಲಿ ಯಾವಾಗ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ತ್ಯಕ್ತಾತ್ಮಾನಃ ಪಾರ್ಥಿವಾಯೋಧನಾಯ
ಸಮಾದಿಷ್ಟಾ ಧಾರ್ತರಾಷ್ಟ್ರೇಣ ಸೂತ |
ಛಿನ್ನಾಃ ಭಿನ್ನಾಃ ಸಹಸೈನ್ಯಾ ದ್ರುವಂತಿ
ದೃಷ್ಟ್ವಾ ಪಶ್ಚಾತ್ ತಪ್ಸ್ಯತೇ ಧಾರ್ತರಾಷ್ಟ್ರಃ ॥25॥

ಎಲೈ ಸೂತನೇ, ನಮ್ಮ ಪಕ್ಷದ ರಾಜರ ಜೊತೆಯಲ್ಲಿ ಯುದ್ಧವನ್ನು ಮಾಡಲು ದುರ್ಯೋಧನನಿಂದ ಆದಿಷ್ಟರಾಗಿ ತಮ್ಮ ಪ್ರಾಣಗಳ ಮೇಲಿನ ಆಸೆಯನ್ನು ತೊರೆದು ಬಂದ ಸೈನ್ಯಾಧಿಪತಿಗಳಾದ ರಾಜರು ಛಿನ್ನಭಿನ್ನರಾಗಿ ಓಡಿಹೋಗುತ್ತಾರೆ. ಅವರನ್ನು ನೋಡಿ ದುರ್ಯೋಧನನು ಪಶ್ಚಾತ್ತಾಪಪಡುವನು.

ಶಿಶೂನ್ ಮೃಧೇ ತಾನಶಿಶುಪ್ರಕಾಶಾನ್
ಯದಾ ದ್ರಷ್ಟಾ ಕೌರವಃ ಪಂಚ ಶೂರಾನ್ |
ತ್ಯಕ್ತ್ವಾ ಪ್ರಾಣಾನ್ ಕೌರವಾನಾದ್ರವಂತಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥26॥

ಚಿಕ್ಕವರಾದರೂ ದೊಡ್ಡವರಂತೆ ಯುದ್ಧದಲ್ಲಿ ವರ್ತಿಸುವ ತಮ್ಮ ಪ್ರಾಣಗಳ ಹಂಗನ್ನು ತೊರೆದು ಕೌರವರ ಮೇಲೆ ಆಕ್ರಮಣ ಮಾಡುವ ದ್ರೌಪದಿಯ ಐದುಮಕ್ಕಳನ್ನು ನೋಡಿದಾಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಯಥಾ ಶಕ್ರೋ ದಾನವಾನಾಂ ಜಯಾರ್ಥಂ
ಸುವರ್ಣಭಾರಂ ರಥಮುತ್ತಮಾಶ್ವೈಃ |
ದಾಂತೈರ್ಯುಕ್ತಂ ಸಹದೇವೋಽಧಿರೂಢಃ
ಶಿರಾಂಸಿ ರಾಜ್ಞಾಂ ಛೇತ್ಸ್ಯತೇ ಮಾರ್ಗಣೌಘೈಃ ॥27॥

ಮಹಾಭಯೇ ಸಂಪ್ರವೃತ್ತೇ ರಥಸ್ಥಂ
ವಿವರ್ತಮಾನಂ ಸಮರೇ ಕೃತಾಸ್ತ್ರಮ್ |
ಸರ್ವಾ ದಿಶಃ ಸಂಪತಂತಂ ಸಮೀಕ್ಷ್ಯ

ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥28॥
ಹೇಗೆ ದಾನವರನ್ನು ಜಯಿಸಲು ಇಂದ್ರನು ಪಳಗಿದ ಉತ್ತಮಾಶ್ವಗಳಿಂದ ಕೂಡಿದ ಸುವರ್ಣಮಯವಾದ ರಥವನ್ನು ಏರುತ್ತಾನೆಯೋ ಅದರಂತೆ ಶ್ರೇಷ್ಠವಾದ ರಥವನ್ನು ಏರಿದ ಸಹದೇವನು ತನ್ನ ಬಾಣಗಳ ಸಮೂಹದಿಂದ ಯಾವಾಗ ಶತ್ರುಗಳ ಶಿರಸ್ಸನ್ನು ಛೇದಿಸುತ್ತಾನೆಯೋ; ಯುದ್ಧದಲ್ಲಿ ಮಹಾಭಯವುಂಟಾದಾಗ ರಥದಲ್ಲಿ ಕುಳಿತು ಎಲ್ಲಾ ರಣರಂಗದಲ್ಲಿಯೂ ಸಂಚರಿಸಿ ಅಸ್ತ್ರಪಾರಂಗತನಾದ ಅವನು ಎಲ್ಲ ದಿಕ್ಕುಗಳಲ್ಲಿಯೂ ಶತ್ರುಗಳ ಮೇಲೆ ಎರಗುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಹ್ರೀನಿಷೇಧೋ ನಿಪುಣಃ ಸತ್ಯವಾದೀ
ಮಹಾಬಲಃ ಸರ್ವಧರ್ಮೋಪಪನ್ನಃ।
ಗಾಂಧಾರಿಮಾರ್ಛಂಸ್ತುಮುಲೇ ಕ್ಷಿಪ್ರಕಾರೀ
ಕ್ಷೇಪ್ತಾ ಜನಾನ್ ಸಹದೇವಃ ಸಪತ್ನಾನ್ ॥29॥
ದಾಕ್ಷಿಣ್ಯಸ್ವಭಾವದವನೂ, ನಿಪುಣನೂ, ಸತ್ಯವಚನನೂ, ಮಹಾಬಲನೂ, ಸರ್ವಧರ್ಮಗಳಿಂದ ಕೂಡಿದವನೂ, ಬಹಳ ವೇಗವುಳ್ಳವನೂ ಆದ ಸಹದೇವನು ದುರ್ಯೋಧನನನ್ನು ಘೋರವಾದ ಯುದ್ಧದಲ್ಲಿ ಸಮೀಪಿಸಿ ಅವನ ಸೈನ್ಯದ ಯೋಧರನ್ನು ಯಾವಾಗ ಎಸೆಯುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ದೃಷ್ಟ್ವಾ ದ್ರೌಪದೇಯಾನ್ ಮಹೇಷೂನ್
ಶೂರಾನ್ ಕೃತಾಸ್ತ್ರಾನ್ ರಥಯುದ್ಧಕೋವಿದಾನ್।
ಆಶೀವಿಷಾನ್ ಘೋರವಿಷಾನಿವಾಗತಾನ್
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥30॥
ಯಾವಾಗ ರಥಯುದ್ಧದಲ್ಲಿ ಕೋವಿದರೂ, ಅಸ್ತ್ರಪಾರಂಗತರೂ, ಶೂರರೂ, ಮಹಾಬಾಣಗಳನ್ನು ಹೊಂದಿದವರೂ ಆದ ದ್ರೌಪದಿಯ ಪುತ್ರರು ಘೋರವಿಷವುಳ್ಳ ಸರ್ಪಗಳಂತೆ ಯುದ್ಧಕ್ಕೆ ಬಂದ ಶತ್ರುಗಳ ಮೇಲೆ ಎರಗುತ್ತಾರೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾಽಭಿಮನ್ಯುಃ ಪರವೀರಹಂತಾ
ಶರೈಃ ಪರಾನ್ ಮೇಘ ಇವಾಭಿವರ್ಷನ್।
ವಿಗಾಹಿತಾ ಕೃಷ್ಣಸಮಃ ಕೃತಾಸ್ತ್ರಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥31॥
ಪರವೀರಹಂತಕನಾದ ಕೃಷ್ಣನಿಗೆ ಸಮಾನನಾದ, ಅಸ್ತ್ರಪಾರಂಗತನಾದ ಅಭಿಮನ್ಯುವು ಮೋಡವು ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸುತ್ತಾ ಶತ್ರುಸೈನ್ಯದಲ್ಲಿ ಮುನ್ನುಗ್ಗುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ದೃಷ್ಟ್ವಾ ಬಾಲಮಬಾಲವೀರ್ಯಂ
ದ್ವಿಷಚ್ಚಮೂಂ ಮೃತ್ಯುಮಿವೋತ್ಪತಂತಮ್।
ಸೌಭದ್ರಮಿಂದ್ರಪ್ರತಿಮಂ ಕೃತಾಸ್ತ್ರಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥32॥
ಬಾಲನಾದರೂ ದೊಡ್ಡವರ ಪರಾಕ್ರಮವುಳ್ಳ, ಇಂದ್ರನಿಗೆ ಸಮಾನನಾದ, ಅಸ್ತ್ರಪಾರಂಗತನಾದ, ಸುಭದ್ರೆಯ ಮಗನಾದ ಅಭಿಮನ್ಯುವು ಮೃತ್ಯುವಿನಂತೆ ಶತ್ರುಗಳ ಸೈನ್ಯವನ್ನು ಉದ್ದೇಶಿಸಿ ಎರಗುವಾಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಪ್ರಭದ್ರಕಾಃ ಶೀಘ್ರತರಾ ಯುವಾನೋ
ವಿಶಾರದಾಃ ಸಿಂಹಸಮಾನವೀರ್ಯಾಃ।
ಯದಾ ಕ್ಷೇಪ್ತಾರೋ ಧಾರ್ತರಾಷ್ಟ್ರಾನ್ ಸಸೈನ್ಯಾನ್
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥33॥
ಬಹಳ ವೇಗವುಳ್ಳವರೂ, ಯುವಕರೂ, ವಿಶಾರದರೂ, ಸಿಂಹಪರಾಕ್ರಮ ಉಳ್ಳವರೂ ಆದ ಪ್ರಭದ್ರಕರು ತಮ್ಮ ಸೈನ್ಯದಿಂದ ಕೂಡಿದ ಧೃತರಾಷ್ಟ್ರಪುತ್ರರಲ್ಲಿ ಯಾವಾಗ ತಮ್ಮ ಬಾಣಗಳನ್ನು ಎಸೆಯುವರೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ವೃದ್ಧೌ ವಿರಾಟದ್ರುಪದೌ ಮಹಾರಥೌ
ಪೃಥಕ್ಚಮೂಭ್ಯಾಮಭಿವರ್ತಮಾನೌ।
ಯದಾ ದ್ರಷ್ಟಾರೌ ಧಾರ್ತರಾಷ್ಟ್ರಾನ್ ಸಸೈನ್ಯಾನ್
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥34॥
ವೃದ್ಧರೂ, ಮಹಾರಥರೂ, ಬೇರೆ ಬೇರೆ ಅಕ್ಷೋಹಿಣಿ ಸೈನ್ಯಗಳ ಜೊತೆಯಲ್ಲಿ ಪಾಂಡವರನ್ನು ಬಂದು ಸೇರಿದವರೂ ಆದ ವಿರಾಟ, ದ್ರುಪದರು ದುರ್ಯೋಧನನನ್ನೂ, ಅವನ ಸೈನ್ಯವನ್ನೂ ನೋಡುವಾಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ಕೃತಾಸ್ತ್ರೋ ದ್ರುಪದಃ ಪ್ರಚಿನ್ವನ್
ಶಿರಾಂಸಿ ಯೂನಾಂ ಸಮರೇ ರಥಸ್ಥಃ।
ಕ್ರುದ್ಧಃ ಶರೈಶ್ಛೇತ್ಸ್ಯತಿ ಚಾಪಮುಕ್ತೈಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥35॥

ಯಾವಾಗ ಅಸ್ತ್ರಪರಿಣತನಾದ ದ್ರುಪದನು ರಥದಲ್ಲಿ ಕುಳಿತು ಯುದ್ಧದಲ್ಲಿ ಯುವಕರಾದ ಶತ್ರುಗಳ ತಲೆಯನ್ನು ಆರಿಸಿ ಆರಿಸಿ ಕ್ರುದ್ಧನಾಗಿ ಧನುಸ್ಸಿನಿಂದ ಹೊಮ್ಮಿದ ತನ್ನ ಬಾಣಗಳಿಂದ ಭೇದಿಸುವನೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಯದಾ ವಿರಾಟಃ ಪರವೀರಘಾತೀ
ರಣಾಜಿರೇ ಶತ್ರುಚಮೂಂ ಪ್ರವೇಷ್ಟಾ |
ಮತ್ಸ್ಯೈಃ ಸಾರ್ಧಮನೃಶಂಸರೂಪೈಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥36॥

ಪರವೀರಘಾತಕನಾದ ವಿರಾಟನು ರಣರಂಗದಲ್ಲಿ ಕ್ರೂರರಾದ ತನ್ನ ಸೈನಿಕರೊಂದಿಗೆ ಶತ್ರುಸೈನ್ಯವನ್ನು ಯಾವಾಗ ಪ್ರವೇಶಿಸುವನೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪ ಪಡುವನು.

ಜ್ಯೇಷ್ಠಂ ಮಾತ್ಸ್ಯಮನೃಶಂಸಮಾರ್ಯರೂಪಂ
ವಿರಾಟಪುತ್ರಂ ರಥಿನಂ ಪುರಸ್ತಾತ್ |
ಯದಾ ದ್ರಷ್ಟಾ ದಂಸಿತಂ ಪಾಂಡವಾರ್ಥೇ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥37॥

ಆರ್ಯರೂಪವನ್ನು ಧರಿಸಿದವನೂ, ಉಗ್ರನೂ ಆದ ವಿರಾಟರಾಜನ ಜ್ಯೇಷ್ಠ ಪುತ್ರನು ಕವಚವನ್ನು ಧರಿಸಿ ಪಾಂಡವರ ಸಲುವಾಗಿ ಯುದ್ಧವನ್ನು ಮಾಡಲು ರಥದಲ್ಲಿ ಮುಂದೆ ಕುಳಿತಿರುವುದನ್ನು ಯಾವಾಗ ನೋಡುವನೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ರಣೇ ಹತೇ ಕೌರವಾಣಾಂ ಪ್ರವೀರೇ
ಶಿಖಂಡಿನಾ ಸತ್ತಮೇ ಶಂತನೂಜೇ |
ನ ಜಾತು ನಃ ಶತ್ರವೋ ಧಾರಯೇಯುಃ
ಅಸಂಶಯಂ ಸತ್ಯಮೇತದ್ ಬ್ರವೀಮಿ ॥38॥

ಕೌರವರ ಮಹಾವೀರನೂ, ಶಂತನು ಪುತ್ರನೂ, ಸಜ್ಜನರಲ್ಲಿ ಅಗ್ರಗಣ್ಯನೂ ಆದ ಭೀಷ್ಮನು ಯುದ್ಧದಲ್ಲಿ ಶಿಖಂಡಿಯಿಂದ ಹತನಾದ ಮೇಲೆ ಶತ್ರುಗಳು ಎಂದೂ ನಮ್ಮನ್ನು ತಡೆಯಲಾರರು. ಈ ವಿಷಯದಲ್ಲಿ ಸಂಶಯವಿಲ್ಲ. ನಾನು ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ.

ಯದಾ ಶಿಖಂಡೀ ರಥಿನಃ ಪ್ರಚಿನ್ವನ್
ಭೀಷ್ಮಂ ರಥೇನಾಭಿಯಾತಾ ಪ್ರಮಾಥೀ |
ದಿವ್ಯೈರ್ಹಯೈರವಮೃದ್ನನ್ ರಥೌಘಾನ್
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥39॥

ಯಾವಾಗ ಶತ್ರುಗಳನ್ನು ಮರ್ದಿಸುವ ಶಿಖಂಡಿಯು ರಥದಲ್ಲಿ ಕುಳಿತು ರಥಿಕರನ್ನು ಆರಿಸುತ್ತಾ, ದಿವ್ಯ ಅಶ್ವಗಳನ್ನು ಹೂಡಿದ ತನ್ನ ರಥದಿಂದ ಶತ್ರುಗಳ ರಥಸಮೂಹಗಳನ್ನು ಮರ್ದಿಸುತ್ತಾ ಭೀಷ್ಮನಿಗೆ ಎದುರಾಗಿ ಹೋಗುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಯದಾ ದ್ರಷ್ಟಾ ಸೃಂಜಯಾನಾಮನೀಕೇ
ಧೃಷ್ಟದ್ಯುಮ್ನಂ ಪ್ರಮುಖೇ ರೋಚಮಾನಮ್ |
ಅಸ್ತ್ರಂ ಯಸ್ಮೈ ಗುಹ್ಯಮುವಾಚ ಧೀಮಾನ್
ದ್ರೋಣಸ್ತದಾ ತಪ್ಸ್ಯತಿ ಧಾರ್ತರಾಷ್ಟ್ರಃ ॥40॥

ಯಾವ ಧೃಷ್ಟದ್ಯುಮ್ನನಿಗೆ ಮೇಧಾವಿಗಳಾದ ದ್ರೋಣರು ರಹಸ್ಯವಾದ ಅಸ್ತ್ರಗಳನ್ನು ಉಪದೇಶ ಮಾಡಿದರೋ ಅಂತಹ ಧೃಷ್ಟದ್ಯುಮ್ನನು ಸೃಂಜಯರ ಸೈನ್ಯದ ಮುಂಭಾಗದಲ್ಲಿ ಶೋಭಿಸುತ್ತಿರುವುದನ್ನು ಯಾವಾಗ ನೋಡುವನೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಯದಾ ಸ ಸೇನಾಪತಿರಪ್ರಮೇಯಃ
ಪರಾಮೃದ್ನನ್ನಿಷುಭಿರ್ಧಾರ್ತರಾಷ್ಟ್ರಾನ್ |
ದ್ರೋಣಂ ರಣೇ ಶತ್ರುಸಹೋಽಭಿಯಾತಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥41॥

ಅಪ್ರಮೇಯ ಶಕ್ತಿಯುಳ್ಳ ಸೇನಾಧಿಪತಿಯಾದ ಧೃಷ್ಟದ್ಯುಮ್ನನು ತನ್ನ ಬಾಣಗಳಿಂದ ಧೃತರಾಷ್ಟ್ರ ಪುತ್ರರನ್ನು ಮರ್ದಿಸುತ್ತಾ ಶತ್ರುಸಹನಾದ ಅವನು ಯುದ್ಧದಲ್ಲಿ ಯಾವಾಗ ದ್ರೋಣರಿಗೆ ಎದುರಾಗುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.

ಹ್ರೀಮಾನ್ ಮನಸ್ವೀ ಬಲವಾನ್ ಮನೀಷೀ
ಸ ಲಕ್ಷ್ಮೀವಾನ್ ಸೋಮಕಾನಾಂ ಪ್ರಬರ್ಹಃ |
ನ ಜಾತು ತಂ ಶತ್ರವೋಽನ್ಯೇ ಸಹೇರನ್
ಯೇಷಾಂ ಸ ಸ್ಯಾದಗ್ರಣೀರ್ವೃಷ್ಣಿಸಿಂಹಃ ॥42॥

ನಾಚಿಕೆಯ ಸ್ವಭಾವವುಳ್ಳವನೂ, ಧೈರ್ಯಶಾಲಿಯೂ, ಬಲಿಷ್ಠನೂ, ಮೇಧಾವಿಯೂ, ಕಾಂತಿವಂತನೂ, ಸೋಮಕರಲ್ಲಿ ಶ್ರೇಷ್ಠನಾದವನೂ ಆದ ವೃಷ್ಣಿಸಿಂಹನಾದ ಸಾತ್ಯಕಿಯು ಯಾರಿಗೆ ನಾಯಕನಾಗಿರುತ್ತಾನೆಯೋ ಅಂತಹ ಸೈನ್ಯವನ್ನು ಶತ್ರುಗಳು ಎಂದೂ ಸಹಿಸಲಾರರು.

ಬ್ರೂಯಾಚ್ಚ ಮಾಂ ಪ್ರವೃಣೀಷ್ವೇತಿ ಲೋಕೇ
ಯುದ್ಧೇಽದ್ವಿತೀಯಂ ಸಚಿವಂ ರಥಸ್ಥಮ್ |
ಶಿನೇರ್ನಪ್ತಾರಂ ಪ್ರವೃಣೀಮ ಸಾತ್ಯಕಿಂ
ಮಹಾಬಲಂ ವೀತಭಯಂ ಕೃತಾಸ್ತ್ರಮ್ ||43||
ಯಾವ ಸಾತ್ಯಕಿಯು ನನ್ನನ್ನು ಸ್ವೀಕರಿಸಿ ಎಂದು ಕೇಳಿಕೊಳ್ಳುತ್ತಾನೆಯೋ, ಯಾವನು ರಥಸ್ಥನಾಗಿ ಯುದ್ಧದಲ್ಲಿ ಅದ್ವಿತೀಯ ಸಚಿವನಾಗುತ್ತಾನೆಯೋ ಅಂತಹ ಮಹಾಬಲವುಳ್ಳ, ನಿರ್ಭಯನಾದ, ಅಸ್ತ್ರಜ್ಞನಾದ, ಶಿನಿಯ ಮೊಮ್ಮಗನಾದ ಸಾತ್ಯಕಿಯನ್ನು ನಾವು ಸ್ವೀಕರಿಸಿದ್ದೇವೆ.
ಯದಾ ಶಿನೀನಾಮಧಿಪೋ ಮಯೋಕ್ತಃ
ಶರೈಃ ಪರಾನ್ ಮೇಘ ಇವ ಪ್ರವರ್ಷನ್ |
ಪ್ರಚ್ಛಾದಯಿಷ್ಯತ್ಯರಿಹಾ ಯೋಧಮುಖ್ಯಾನ್
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ||44||
ನಾನು ಹೇಳಿದ ಶಿನಿಪ್ರವೀರನಾದ, ಶತ್ರುಸಂಹಾರಕನಾದ ಸಾತ್ಯಕಿಯು ಮೋಡಗಳಂತೆ ಶತ್ರುಗಳ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ, ಅವರ ಮುಖ್ಯರಾದ ಯೋಧರನ್ನು ತನ್ನ ಬಾಣಗಳಿಂದ ಮುಚ್ಚುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ಧೃತಿಂ ಕುರುತೇ ಯೋತ್ಸ್ಯಮಾನಃ
ಸ ದೀರ್ಘಬಾಹುರ್ದೃಢಚಾಪೋ ಮಹಾತ್ಮಾ |
ಸಿಂಹಸ್ಯೇವ ಗಂಧಮಾಘ್ರಾಯ ಗಾವಃ
ಸಂವೇಷ್ಟಂತೇ ಶತ್ರವೋಽಸ್ಮಾದ್ ಯಥಾಽಗ್ನೇಃ ||45||
ಯುದ್ಧ ಮಾಡಲು ಇಚ್ಛಿಸುವ ದೀರ್ಘಬಾಹುವೂ, ದೃಢವಾದ ಬಿಲ್ಲನ್ನು ಉಳ್ಳವನೂ ಮತ್ತು ಮಹಾತ್ಮನೂ ಆದ ಸಾತ್ಯಕಿಯು ಧೈರ್ಯವನ್ನು ಅವಲಂಬಿಸುತ್ತಾನೆಯೋ ಆಗ ಸಿಂಹದ ಗಂಧವನ್ನು ಆಘ್ರಾಣಿಸಿದ ಗೋವುಗಳಂತೆ, ಅಗ್ನಿಯ ಎದುರಿಗೆ ಪದಾರ್ಥಗಳು ಮುದುಡಿ ಹೋಗುವಂತೆ ಶತ್ರುಗಳು ಅವನ ಎದುರಿನಲ್ಲಿ ಮುದುಡಿ ಹೋಗುತ್ತಾರೆ.
ಸ ದೀರ್ಘಬಾಹುರ್ದೃಢಧನ್ವಾ ಮಹಾತ್ಮಾ
ಭಿಂದ್ಯಾತ್ ಗಿರೀನ್ ಸಂಹರೇತ್ ಸರ್ವಲೋಕಾನ್ |
ಅಸ್ತ್ರೇ ಕೃತೌ ನಿಪುಣಃ ಕ್ಷಿಪ್ರಹಸ್ತೋ
ದಿವಿ ಸ್ಥಿತಃ ಸೂರ್ಯ ಇವಾವಭಾತಿ ||46||
ದೀರ್ಘಬಾಹುವೂ, ದೃಢವಾದ ಧನುಸ್ಸುಳ್ಳವನೂ, ಕ್ಷಿಪ್ರಹಸ್ತನೂ, ಅಸ್ತ್ರದಲ್ಲಿಯೂ ಮತ್ತು ಅಭ್ಯಾಸದಲ್ಲಿಯೂ ನಿಪುಣನಾದವನೂ ಮತ್ತು ಮಹಾತ್ಮನೂ ಆದ ಅವನು ಪರ್ವತಗಳನ್ನು ಭೇದಿಸಿಯಾನು, ಎಲ್ಲ ಲೋಕಗಳನ್ನೂ ನಾಶ ಮಾಡಿಯಾನು, ಆಕಾಶದಲ್ಲಿರುವ ಸೂರ್ಯನಂತೆ ಅವನು ಶೋಭಿಸುತ್ತಾನೆ.
ಚಿತ್ರಃ ಸೂಕ್ಷ್ಮಃ ಸುಕೃತೋ ಯಾದವಸ್ಯ
ಅಸ್ತ್ರೇ ಯೋಗೋ ವೃಷ್ಣಿಸಿಂಹಸ್ಯ ಯೋಽಭೂತ್ |
ಯಥಾವಿಧಂ ಯೋಗಮಾಹುಃ ಪ್ರಶಸ್ತಂ
ಸರ್ವೈರ್ಗುಣೈಃ ಸಾತ್ಯಕಿಸ್ತೈರುಪೇತಃ ||47||
ಯದುಕುಲದಲ್ಲಿ ಜನಿಸಿದ ವೃಷ್ಣಿಸಿಂಹನಾದ ಕೃಷ್ಣನಿಗೆ ಎಂತಹ ವಿಚಿತ್ರವಾದ ಸೂಕ್ಷ್ಮವಾದ ಅಸ್ತ್ರಗಳ ಯೋಗವಿದ್ದಿತೋ ಅಂತಹದೇ ಪ್ರಶಸ್ತವಾದ ಸರ್ವಗುಣಗಳಿಂದ ಕೂಡಿದ ಅಸ್ತ್ರಗಳ ಸಂಯೋಗವನ್ನು ಸಾತ್ಯಕಿಯು ಹೊಂದಿದ್ದಾನೆ.
ಹಿರಣ್ಮಯಂ ಶ್ವೇತಹಯೈಶ್ಚತುರ್ಭಿಃ
ಯದಾ ಯುಕ್ತಂ ಸ್ಯಂದನಂ ಮಾಧವಸ್ಯ |
ದ್ರಷ್ಟಾ ಯುದ್ಧೇ ಸಾತ್ಯಕೇರ್ಧಾರ್ತರಾಷ್ಟ್ರಃ
ತದಾ ತಪ್ಸ್ಯತ್ಯಕೃತಾತ್ಮಾ ಸ ಮಂದಃ ||48||
ಮಧುಕುಲದಲ್ಲಿ ಜನಿಸಿದ ಸಾತ್ಯಕಿಯ ನಾಲ್ಕು ಕುದುರೆಗಳನ್ನು ಹೂಡಿದ ಸುವರ್ಣಮಯವಾದ ರಥವನ್ನು ಯುದ್ಧದಲ್ಲಿ ಯಾವಾಗ ನೋಡುವನೋ ಆಗ ಅಕೃತಾತ್ಮನಾದ, ಮಂದನಾದ ದುರ್ಯೋಧನನು ಪಶ್ಚಾತ್ತಾಪ ಪಡುವನು.
ಯದಾ ರಥಂ ಹೇಮಮಣಿಪ್ರಕಾಶಂ
ಶ್ವೇತಾಶ್ವಯುಕ್ತಂ ವಾನರಕೇತುಮುಗ್ರಮ್ |
ದ್ರಷ್ಟಾ ಮಯಾಪ್ಯಾಸ್ಥಿತಂ ಕೇಶವೇನ
ತದಾ ತಪ್ಸ್ಯತ್ಯಕೃತಾತ್ಮಾ ಸ ಮಂದಃ ||49||
ಯಾವಾಗ ಸುವರ್ಣಗಳಿಂದ ಮತ್ತು ರತ್ನಗಳಿಂದ ಪ್ರಕಾಶಿಸುವ, ಶ್ವೇತಾಶ್ವಗಳನ್ನು ಹೂಡಿದ ವಾನರ ಧ್ವಜವುಳ್ಳ ನನ್ನಿಂದ ಮತ್ತು ಕೃಷ್ಣನಿಂದ ಅಧಿಷ್ಠಿತವಾದ ಉಗ್ರವಾದ ರಥವನ್ನು ಅಕೃತಾತ್ಮನಾದ, ಮಂದನಾದ ದುರ್ಯೋಧನನು ನೋಡುವನೋ ಆಗ ಪಶ್ಚಾತ್ತಾಪಪಡುವನು.
ಯದಾ ಮೌರ್ವ್ಯಾಸ್ತಳನಿಷ್ಪೇಷಮುಗ್ರಂ
ಮಹಾಶಬ್ದಂ ವಜ್ರನಿಷ್ಪೇಷತುಲ್ಯಮ್ |
ವಿಧೂಯಮಾನಸ್ಯ ಮಹಾರಣೇ ಮಯಾ

ಸ ಗಾಂಡೀವಸ್ಯ ಶ್ರೋಷ್ಯತಿ ಮಂದಬುದ್ಧಿಃ ॥50॥
ತದಾ ಮೂಢೋ ಧೃತರಾಷ್ಟ್ರಸ್ಯ ಪುತ್ರಃ
ತಪ್ತಾ ಯುದ್ಧೇ ದುರ್ಮತಿರ್ದುಃಸಹಾಯಃ |
ದೃಷ್ಟ್ವಾ ಸೈನ್ಯಂ ಬಾಣವರ್ಷಾಂಧಕಾರೇ
ಪ್ರಭಜ್ಯಂತಂ ಗೋಕುಲವದ್ ರಣಾಗ್ರೇ ॥51॥
ಮಂದಬುದ್ಧಿಯಾದ ಅವನು ನಾನು ಮಹಾಯುದ್ಧದಲ್ಲಿ ಗಾಂಡೀವದ ಹೆದೆಯನ್ನು ಎಳೆದು ಬಿಡುವ, ವಜ್ರದ ಬಡಿತಕ್ಕೆ ಸಮಾನವಾದ ಭಯಂಕರವಾದ ಗಾಂಡೀವದ ಮಹಾಶಬ್ದವನ್ನು ಕೇಳುತ್ತಾನೆಯೋ ಆಗ ರಣರಂಗದಲ್ಲಿ ಬಾಣದ ಮಳೆಯಿಂದ ಉಂಟಾದ ಅಂಧಕಾರದಲ್ಲಿ ಗೋವುಗಳ ಸಮೂಹದಂತೆ ಭಗ್ನಗೊಳ್ಳುವ ತನ್ನ ಸೈನ್ಯವನ್ನು ನೋಡಿ ದುರ್ಮತಿಯೂ, ಸಹಾಯರಹಿತನೂ, ಮೂಢನೂ ಆದ ಧೃತರಾಷ್ಟ್ರಪುತ್ರನು ಪಶ್ಚಾತ್ತಾಪ ಪಡುವನು.
ಬಲಾಹಕಾದುಚ್ಚರತಃ ಸುಭೀಮಾನ್
ವಿದ್ಯುತ್ಸ್ಫುಲಿಂಗಾನಿವ ಘೋರರೂಪಾನ್ |
ಸಹಸ್ರಘ್ನಾನ್ ದ್ವಿಷತಾಂ ಸಂಗರೇಷು
ಅಸ್ಥಿಚ್ಛಿದೋ ಮರ್ಮಭಿದಃ ಸುಪುಂಖಾನ್ ॥52॥
ಸ ಚ ಸೃಷ್ಟ್ವಾ ಜ್ಯಾಮುಖಾದ್ ಬಾಣಸಂಘಾನ್
ಗಾಂಡೀವಮುಕ್ತಾನಾಪತತಃ ಶಿತಾಗ್ರಾನ್ |
ಹಯಾನ್ ಗಜಾನ್ ವರ್ಮಿಣಶ್ಚಾದದಾನಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥53॥
ಅರ್ಜುನನಾದ ನಾನು ಮೋಡದಿಂದ ಹೊರಹೊಮ್ಮುವ, ಭಯಂಕರವಾದ ಸಿಡಿಲಿನ ಕಣಗಳಂತಿರುವ ಘೋರರೂಪವನ್ನು ಧರಿಸಿದ, ಯುದ್ಧದಲ್ಲಿ ಒಂದೇ ಬಾರಿ ಸಹಸ್ರ ಯೋಧರನ್ನು ಕೊಲ್ಲುವ, ಅಸ್ಥಿಗಳನ್ನು ಕತ್ತರಿಸಿ ಮರ್ಮಗಳನ್ನು ಭೇದಿಸುವ, ಒಳ್ಳೆಯ ಪುಂಖಗಳನ್ನು ಹೊಂದಿದ, ನನ್ನ ಗಾಂಡೀವ ಧನುಸ್ಸಿನಿಂದ ಹೊರಹೊಮ್ಮುವ, ಹರಿತವಾದ ತುದಿಗಳನ್ನು ಹೊಂದಿರುವ, ಅರ್ಜುನನಾದ ನನ್ನ ಬಾಣಸಮೂಹಗಳು ಅಶ್ವಗಳನ್ನೂ, ಗಜಗಳನ್ನೂ, ಕವಚವನ್ನು ಧರಿಸಿದ ಯೋಧರನ್ನು ನುಂಗುವಾಗ ಧೃತರಾಷ್ಟ್ರಪುತ್ರನಾದ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ಮಂದಃ ಪರಬಾಣಾನ್ ವಿಮುಕ್ತಾನ್
ಮಹೇಷುಭಿಃ ಕ್ರಿಯಮಾಣಾನ್ ಪ್ರತೀಪಮ್ |
ತಿರ್ಯಗ್ವಿಧಾನ್ ಚ್ಛಿದ್ಯಮಾನಾನ್ ಕ್ಷುರಾಗ್ರೈಃ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥54॥
ಯಾವಾಗ ಮಂದನಾದ ದುರ್ಯೋಧನನು ನಾವು ಪ್ರಯೋಗಿಸಿದ ಬಾಣಗಳಿಗೆ ಪ್ರತಿಯಾಗಿ ದೊಡ್ಡ ಬಾಣಗಳನ್ನು ಪ್ರಯೋಗಿಸಿ ಅವು ನಮ್ಮ ಕ್ಷುರದಂತಿರುವ ಬಾಣಗಳ ತುದಿಯಿಂದ ಕತ್ತರಿಸಲ್ಪಟ್ಟು ತಲೆಕೆಳಗಾಗಿ ಬೀಳುವುದನ್ನು ನೋಡುವನೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ವಿಪಾಠಾ ಭುಜವಿಪ್ರಮುಕ್ತಾ
ದ್ವಿಜಾಃ ಫಲಾನೀವ ಮಹೀರುಹಾಗ್ರಾತ್ |
ಪ್ರಚ್ಛೇತ್ತಾರ ಉತ್ತಮಾಂಗಾನಿ ಯೂನಾಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥55॥
ಯಾವಾಗ ನಮ್ಮ ಭುಜದಿಂದ ಪ್ರಯೋಗಿಸಲ್ಪಟ್ಟ ವಿಪಾಠಗಳು, ಪಕ್ಷಿಗಳು ಮರದ ಮೇಲಿನ ಹಣ್ಣುಗಳನ್ನು ಉದುರಿಸುವಂತೆ ಎಲ್ಲ ಯೋಧರ ಶಿರಸ್ಸುಗಳನ್ನು ಕತ್ತರಿಸುವುವೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ದೃಷ್ಟ್ವಾ ಪತತಃ ಸ್ಯಂದನೇಭ್ಯೋ
ಮಹಾಗಜೇಭ್ಯೋಽಶ್ವಗತಾನ್ ಸುಯೋಧಾನ್ |
ಶಸ್ತ್ರೈರ್ಹತಾನ್ ಪತಿತಾನೇವ ರಂಗೇ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥56॥
ಯಾವಾಗ ರಥದಿಂದಲೂ, ಮಹಾಗಜಗಳಿಂದಲೂ, ಅಶ್ವಗಳಿಂದಲೂ ಶ್ರೇಷ್ಠರಾದ ಯೋಧರು ಶಸ್ತ್ರಹತರಾಗಿ ರಣರಂಗದಲ್ಲಿ ಬೀಳುವುದನ್ನು ನೋಡುತ್ತಾನೆಯೋ ಆಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಪದಾತಿಸಂಘಾನ್ ರಥಸಂಘಾನ್ ಸಮಂತಾದ್
ವ್ಯಾತ್ತಾನನಃ ಕಾಲ ಇವಾಗತೇ ತು |
ಪ್ರಣೋತ್ಸ್ಯಾಮಿ ಜ್ವಲಿತೈರ್ಬಾಣವರ್ಷೈಃ
ಶತ್ರೂಂಸ್ತದಾ ತಪ್ಸ್ಯತಿ ಮಂದಬುದ್ಧಿಃ ॥57॥
ನಾನು ಪದಾತಿಗಳ ಸಮೂಹವನ್ನೂ, ರಥಗಳ ಸಮೂಹವನ್ನೂ, ಮೃತ್ಯುಕಾಲವು ಸನ್ನಿಹಿತವಾದ ಬಾಯಿ ತೆರೆದ ಮೃತ್ಯುವಿನಂತೆ ಎಲ್ಲ ಕಡೆಯಲ್ಲಿಯೂ ನನ್ನ ಜ್ವಲಿಸುವ ಬಾಣಗಳ ಮಳೆಯಿಂದ ಶತ್ರುಗಳನ್ನು ಹಿಂಸಿಸುತ್ತೇನೆ. ಆಗ ಮಂದಬುದ್ಧಿಯುಳ್ಳ ಅವನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಸರ್ವಾ ದಿಶಃ ಸಂಪತತಾ ರಥೇನ
ರಥಾನ್ ಧ್ವಸ್ತಾನ್ ಗಾಂಡಿವೇನಾಪಕೃತ್ತಾನ್ |

ಯದಾ ದ್ರಷ್ಟಾ  ಸ್ವಬಲಂ ಸಂಪ್ರಮೂಢಂ
ತದಾ ಪಶ್ಚಾತ್ ತಪ್ಸ್ಯತಿ ಮಂದಬುದ್ಧಿಃ ॥58॥
ಎಲ್ಲ ದಿಕ್ಕುಗಳಲ್ಲಿಯೂ ವೇಗವಾಗಿ ಸಂಚರಿಸುವ ರಥದಿಂದ ಕೂಡಿದ ನಾನು ಗಾಂಡೀವ ಧನುಸ್ಸಿನಿಂದ ಕತ್ತರಿಸಿ ನಾಶಮಾಡಿದ ರಥಗಳನ್ನೂ, ತನ್ನ ಬಲವು ದಿಗ್ಭ್ರಾಂತವಾದುದನ್ನೂ ಯಾವಾಗ ನೋಡುವನೋ ಆಗ ಮಂದಬುದ್ಧಿಯುಳ್ಳ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಕ್ವಚಿತ್ ಸ್ರುತಂ ಭಿನ್ನಗಾತ್ರಂ ವಿಸಂಜ್ಞಂ
ದುರ್ಯೋಧನೋ ದ್ರಕ್ಷ್ಯತಿ ಸರ್ವಸೈನ್ಯಮ್ |
ಹತಾಶ್ವಪಾದಾತವರೂಥಕುಂಜರಂ
ಪಿಪಾಸಿತಂ ಶ್ರಾಂತಪದಂ ಭಯಾರ್ತಮ್ ॥59॥
ತಮ್ಮ ಶರೀರವೆಲ್ಲವೂ ವ್ರಣಮಯವಾಗಿ, ಮೈಮೇಲೆ ಎಚ್ಚರಿಕೆ ಇಲ್ಲದೆ ಎಲ್ಲಿಯೋ ಓಡಿಹೋದ ರಥ-ಪದಾತಿ-ಅಶ್ವ-ಗಜಗಳುಳ್ಳ ದಣಿದ, ಬಾಯಾರಿದ ಭಯಗ್ರಸ್ತವಾದ ತನ್ನ ಸೈನ್ಯವನ್ನು ದುರ್ಯೋಧನನು ನೋಡುವನು.
ಆರ್ತಸ್ವರಂ ಹನ್ಯಮಾನಂ ಹತಂ ಚ
ವಿಕೀರ್ಣಕೇಶಾಸ್ಥಿಕಪಾಲಸಂಘಮ್ |
ಕಾಲಸ್ಯೇವ ಕರ್ಮ ಯಥಾಽರ್ಥನಿಷ್ಠುರಂ
ತದಾ ದೃಷ್ಟ್ವಾ ತಪ್ಸ್ಯತಿ ಮಂದಬುದ್ಧಿಃ ॥60॥
ಹತವಾಗುತ್ತಿರುವ, ಆರ್ತಸ್ವರವನ್ನು ಮಾಡುವ, ಅಸ್ಥಿಕೇಶಕಪಾಲಗಳು ಎಲ್ಲ ಕಡೆಯಲ್ಲಿಯೂ ಹರಡಿರುವ, ಮೃತ್ಯುವಿನ ಕರ್ಮದಂತೆ ಅತಿ ಭಯಂಕರವಾಗಿ ಕಾಣುವ ಯುದ್ಧಭೂಮಿಯನ್ನು ಯಾವಾಗ ನೋಡುವನೋ ಆಗ ಮಂದಬುದ್ಧಿಯುಳ್ಳ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡುವನು.
ಯದಾ ರಥೇ ಗಾಂಡಿವಂ ವಾಸುದೇವಂ
ದಿವ್ಯಂ ಶಾರ್ಙ್ಗಂ ಪಾಂಚಜನ್ಯಂ ಹಯಾಂಶ್ಚ |
ತೂಷ್ಣಾವಕ್ಷಯ್ಯೌ ದೇವದತ್ತಂ ಚ ಶಂಖಂ
ದೃಷ್ಟ್ವಾ ಯುದ್ಧೇ ಧಾರ್ತರಾಷ್ಟ್ರಃ ಸಮೇತಾನ್ ॥61॥
ಯಾವಾಗ ರಥದಲ್ಲಿ ಗಾಂಡೀವ ಧನುಸ್ಸನ್ನೂ ವಾಸುದೇವನನ್ನೂ ದಿವ್ಯವಾದ ಶಾರ್ಙ್ಗ ಧನುಸ್ಸನ್ನೂ, ಪಾಂಚಜನ್ಯ ಶಂಖವನ್ನೂ, ಅಶ್ವಗಳನ್ನೂ, ಅಕ್ಷಯಬತ್ತಳಿಕೆಗಳನ್ನೂ, ದೇವದತ್ತ ಶಂಖವನ್ನೂ ಒಟ್ಟಿಗೆ ಇರುವುದನ್ನು ಯುದ್ಧದಲ್ಲಿ ನೋಡುವನೋ ಆಗ ದುರ್ಯೋಧನನು ಪಶ್ಚಾತ್ತಾಪಪಡುವನು.
ಉದ್ವರ್ತಯನ್ ದಸ್ಯುಸಂಘಾನ್ ಸಮೇತಾನ್
ಪ್ರಾವರ್ತಯಿಷ್ಯನ್ ಯುಗಪದ್ ಯುಗಾಂತಮ್ |
ಯದಾ ಧಕ್ಷ್ಯಾಮ್ಯಗ್ನಿವತ್ ಕೌರವೇಯಾನ್
ತದಾ ತಪ್ಯೇದ್ ಧೃತರಾಷ್ಟ್ರಃ ಸಪುತ್ರಃ ॥62॥
ಒಟ್ಟುಗೂಡಿದ ದಸ್ಯುಸಮೂಹಗಳನ್ನು ಶೋಷಣೆ ಮಾಡುತ್ತಾ, ಒಮ್ಮೆಲೇ ಯುಗಾಂತ ಪ್ರಳಯವನ್ನು ಪ್ರವರ್ತಿಸುತ್ತಾ ನಾನು ಕೌರವರನ್ನು ಅಗ್ನಿಯಂತೆ ಸುಡುವಾಗ ಪುತ್ರಸಹಿತನಾದ ಧೃತರಾಷ್ಟ್ರನು ಪಶ್ಚಾತ್ತಾಪಪಡುವನು.
ಸಭ್ರಾತಾ ವೈ ಸಹಸೈನ್ಯಃ ಸಭೃತ್ಯೋ
ಭ್ರಷ್ಟೈಶ್ವರ್ಯಃ ಕ್ರೋಧವಶೋಽಲ್ಪಚೇತಾಃ |
ದರ್ಪಸ್ಯಾಂತೇ ನಿಹತೋ ವೇಪಮಾನಃ
ಪಶ್ಚಾನ್ಮಂದಸ್ತಪ್ಸ್ಯತಿ ಧಾರ್ತರಾಷ್ಟ್ರಃ ॥63॥
ತಮ್ಮಂದಿರಿಂದಲೂ ಮತ್ತು ಸೈನ್ಯದಿಂದಲೂ ಮತ್ತು ಸೇವಕರಿಂದಲೂ ಸಹಿತನಾದ ಕ್ರೋಧವಶನೂ, ಅಲ್ಪಚೇತನನೂ ಆದ ದುರ್ಯೋಧನನು ಐಶ್ವರ್ಯವನ್ನು ಕಳೆದುಕೊಂಡು, ದರ್ಪವನ್ನು ಕಳೆದುಕೊಂಡು, ನಡುಗುತ್ತಾ ಹತನಾಗಿ ಮಂದನಾದ ಅವನು ಪಶ್ಚಾತ್ತಾಪವನ್ನು ಪಡುವನು.
ಪೂರ್ವಾಹ್ಣೇ ಮಾಂ ಕೃತಜಪ್ಯಂ ಕದಾಚಿದ್
ವಿಪ್ರಃ ಪ್ರೋವಾಚೋದಕಾಂತೇ ಮನೋಜ್ಞಮ್ |
ಕರ್ತವ್ಯಂ ತೇ ದುಷ್ಕರಂ ಕರ್ಮ ಪಾರ್ಥ
ಯೋದ್ಧವ್ಯಂ ತೇ ಶತ್ರುಭಿಃ ಸವ್ಯಸಾಚಿನ್ ॥64॥
ಈ ದಿನ ಪ್ರಾತಃಕಾಲದಲ್ಲಿ ನನ್ನ ಆಹ್ನಿಕವನ್ನು ಮುಗಿಸಿದ ಮೇಲೆ ಒಬ್ಬ ವಿಪ್ರನು ಜಲಸಮಿಪದಲ್ಲಿ ನನ್ನನ್ನು ಕುರಿತು ಹೀಗೆ ಮಾತನಾಡಿದನು ಪಾರ್ಥನೇ, ನೀನು ದುಷ್ಕರವಾದ ಕರ್ಮವನ್ನು ಮಾಡಬೇಕು. ಸವ್ಯಸಾಚಿಯೇ, ನೀನು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಬೇಕು.
ರುದ್ರೋ ವಾ ತೇ ಹರಿವಾನ್ ವಜ್ರಹಸ್ತಃ
ಪುರಸ್ತಾದ್ ಯಾತು ಸಮರೇಽರೀನ್ ವಿನಿಘ್ನನ್ |
ಸುಗ್ರೀವಯುಕ್ತೇನ ರಥೇನ ವಾ ತೇ
ಪಶ್ಚಾತ್ ಕೃಷ್ಣೋ ರಕ್ಷತು ವಾಸುದೇವಃ ॥65॥
ನಿನ್ನ ಮುಂಭಾಗದಲ್ಲಿ ವಜ್ರಹಸ್ತನಾದ ಇಂದ್ರನಾಗಲೀ ಅಥವಾ ರುದ್ರನಾಗಲೀ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುತ್ತಾ ಮುಂದೆ

ಸಾಗಲಿ.ವಾಸುದೇವನಾದ ಕೃಷ್ಣನು ಸುಗ್ರೀವಾದಿ ಅಶ್ವಗಳಿಂದ ಯುಕ್ತವಾದ ರಥದಲ್ಲಿ ಪ್ರತ್ಯಕ್ಷವಾಗಿ ಅಥವಾ ಅದೃಶ್ಯನಾಗಿ ನಿನ್ನ ಹಿಂಭಾಗದಿಂದ ನಿನ್ನನ್ನು ರಕ್ಷಿಸಲಿ (ಎಂದು ಹೇಳಿದನು).

ವವ್ರೇ ಚಾಹಂ ವಜ್ರಹಸ್ತಾನ್ಮಹೇಂದ್ರಾದ್
ಅಸ್ಮಿನ್ ಯುದ್ಧೇ ವಾಸುದೇವಂ ಸಹಾಯಮ್ |
ಸ ಮೇ ಲಬ್ಧೋ ದಸ್ಯುವಧಾಯ ಕೃಷ್ಣೋ
ಮನ್ಯೇಽಪ್ಯೇತದ್ ವಿಹಿತಂ ದೈವತೈರ್ಮೇ ॥66॥

ನಾನು ವಜ್ರಹಸ್ತನಾದ ಮಹೇಂದ್ರನಿಗಿಂತಲೂ ವಾಸುದೇವನ ಸಹಾಯವನ್ನು ಈ ಯುದ್ಧದಲ್ಲಿ ಬಯಸಿದ್ದೇನೆ. ನನಗೆ ದೈತ್ಯವಧೆಗಾಗಿ ಕೃಷ್ಣನು ಸಹಾಯನಾಗಿ ಲಬ್ಧನಾಗಿದ್ದಾನೆ. ಇದು ದೇವತೆಗಳು ನನಗೆ ಮಾಡಿದ ಅನುಗ್ರಹವೆಂದು ನಾನು ಭಾವಿಸಿದ್ದೇನೆ.

ಅಯುದ್ಧ್ಯಮಾನೋ ಮನಸಾಽಪಿ ಯಸ್ಯ
ಜಯಂ ಕೃಷ್ಣಃ ಪುರುಷಸ್ಯಾಭಿನಂದೇತ್ |
ಧ್ರುವಂ ಸರ್ವಾನ್ ಸೋಽಭ್ಯತೀಯಾದಮಿತ್ರಾನ್
ಸೇಂದ್ರಾನ್ ದೇವಾನ್ ಮಾನುಷೇ ನಾಸ್ತಿ ಚಿಂತಾ ॥67॥

ತಾನು ಯುದ್ಧವನ್ನು ಮಾಡದಿದ್ದರೂ ಕೃಷ್ಣನು ಯಾವ ಪುರುಷನಿಗೆ ಜಯವನ್ನು ಆಶಿಸುತ್ತಾನೆಯೋ ಅಂತಹ ಪುರುಷನು ಇಂದ್ರ ಸಹಿತರಾದ ದೇವತೆಗಳನ್ನೂ ಮತ್ತು ಎಲ್ಲಾ ಶತ್ರುಗಳನ್ನೂ ನಿಶ್ಚಿತವಾಗಿ ಮೀರುತ್ತಾನೆ. ಇನ್ನು ಮನುಷ್ಯ ಶತ್ರುಗಳ ವಿಷಯದಲ್ಲಿ ಚಿಂತೆ ಮಾಡುವುದೇನಿದೆ?

ಸ ಬಾಹುಭ್ಯಾಂ ಸಾಗರಮುತ್ತಿತೀರ್ಷನ್
ಮಹೋದಧಿಂ ಸಲಿಲಸ್ಯಾಪ್ರಮೇಯಮ್ |
ತೇಜಸ್ವಿನಂ ಕೃಷ್ಣಮತ್ಯಂತಶೂರಂ
ಯುದ್ಧೇನ ಯೋ ವಾಸುದೇವಂ ಜಿಗೀಷೇತ್ ॥68॥

ಯಾವನು ಯುದ್ಧದಲ್ಲಿ ತೇಜಸ್ವಿಯೂ, ಅತ್ಯಂತ ಶೂರನೂ ಆದ ಕೃಷ್ಣನನ್ನು ಜಯಿಸಲು ಬಯಸುತ್ತಾನೆಯೋ ಅವನು ತನ್ನ ಬಾಹುಗಳಿಂದಲೇ ಅಪಾರವಾದ ಸಲಿಲರಾಶಿಯಾದ ಸಮುದ್ರವನ್ನು ದಾಟಲು ಬಯಸುತ್ತಾನೆ.

ಗಿರಿಂ ಯ ಇಚ್ಛೇತ್ ತು ತಳೇನ ಭೇತ್ತುಂ
ಶಿಲೋಚ್ಚಯಂ ಶ್ವೇತಮತಿಪ್ರಮಾಣಮ್ |
ತಸ್ಯೈವ ಪಾಣಿಃ ಸನಖೋ ವಿಶೀರ್ಯೇತ್
ನ ಚಾಪಿ ಕಿಂಚಿತ್ ಸ ಗಿರೇಸ್ತು ಕುರ್ಯಾತ್ ॥69॥

ಯಾವನು ಅತಿದೊಡ್ಡ ಪ್ರಮಾಣದ ಶ್ವೇತಪರ್ವತವನ್ನು ತನ್ನ ಹಸ್ತತಳದಿಂದಲೇ ಭೇದಿಸಲು ಬಯಸುತ್ತಾನೆಯೋ ಅವನ ನಖದಿಂದ ಕೂಡಿದ ಹಸ್ತವೇ ಹರಿದು ಹೋದೀತು. ಅವನು ಪರ್ವತಕ್ಕೆ ಏನನ್ನೂ ಮಾಡಲಾರ.

ಅಗ್ನಿಂ ಸಮಿದ್ಧಂ ಶಮಯೇದ್ ಭುಜಾಭ್ಯಾಂ
ಚಂದ್ರಂ ಚ ಸೂರ್ಯಂ ಚ ನಿಪಾತಯೇತ |
ಹರೇದ್ ದೇವಾನಾಮಮೃತಂ ಪ್ರಸಹ್ಯ
ಯುದ್ಧೇನ ಯೋ ವಾಸುದೇವಂ ಜಿಗೀಷೇತ್ ॥70॥

ಯಾವನು ಯುದ್ಧದಲ್ಲಿ ಕೃಷ್ಣನನ್ನು ಜಯಿಸಲು ಬಯಸುತ್ತಾನೆಯೋ ಅವನು ಜ್ವಲಿಸುವ ಅಗ್ನಿಯನ್ನು ತನ್ನ ಭುಜಗಳಿಂದ ಶಾಂತಗೊಳಿಸಿಯಾನು. ಸೂರ್ಯ-ಚಂದ್ರರನ್ನು ಆಕಾಶದಿಂದ ಬೀಳಿಸಿಯಾನು. ದೇವತೆಗಳ ಅಮೃತವನ್ನು ತನ್ನ ಬಲದಿಂದ ಅಪಹರಿಸಿಯಾನು.

ಯೋ ರುಗ್ಮಿಣೀಮೇಕರಥೇನ ಭೋಜಾನ್
ಉಚ್ಛಿದ್ಯ ರಾಜ್ಞಃ ಸಮರೇ ಪ್ರಸಹ್ಯ |
ಉವಾಹ ಭಾರ್ಯಾಂ ಯಶಸಾಂ ಜ್ವಲಂತೀಂ
ಯಸ್ಯಾಂ ಜಜ್ಞೇ ರೌಗ್ಮಿಣೇಯೋ ಮಹಾತ್ಮಾ ॥71॥

ಅವನು ಏಕರಥದಲ್ಲಿ ಕುಳಿತು ಯುದ್ಧದಲ್ಲಿ ತನ್ನ ಬಲದಿಂದ ಭೋಜರಾಜರನ್ನೆಲ್ಲಾ ವಿನಾಶಗೊಳಿಸಿ, ಕೀರ್ತಿಯಿಂದ ಬೆಳಗುವ ರುಗ್ಮಿಣಿಯನ್ನು ಪತ್ನಿಯಾಗಿ ಸ್ವೀಕರಿಸಿದನು. ಅವಳಲ್ಲಿ ಮಹಾತ್ಮನಾದ ಪ್ರದ್ಯುಮ್ನನು ಜನಿಸಿದನು.

ಅಯಂ ಗಾಂಧಾರಾಂಸ್ತರಸಾ ಸಂಪ್ರಮಥ್ಯ
ಜಿತ್ವಾ ಪುತ್ರಾನ್ ನಗ್ನಜಿತಃ ಸಮಗ್ರಾನ್ |
ಬದ್ಧಂ ಮುಮೋಚ ನಿನದಂತಂ ಪ್ರಗೃಹ್ಯ
ಸುದರ್ಶನೀಯೋ ದೇವತಾನಾಂ ಲಲಾಮಃ ॥72॥

ಈ ಅತ್ಯಂತ ಸುಂದರನೂ ಮತ್ತು ದೇವಶ್ರೇಷ್ಠನೂ ಆದ ಕೃಷ್ಣನು ಗಾಂಧಾರ ರಾಜರ ಸೈನ್ಯವನ್ನು ತನ್ನ ಬಲದಿಂದ ಮರ್ದಿಸಿ, ನಗ್ನಜಿತನ ಎಲ್ಲ ಮಕ್ಕಳನ್ನೂ ಜಯಿಸಿ, ಗರ್ಜಿಸುತ್ತಿದ್ದ ಗೂಳಿಗಳನ್ನು ಹಿಡಿದು ಅವುಗಳನ್ನು ಬಿಡಿಸಿದನು.

ಅಯಂ ಕವಾಟೇ ನಿಜಘಾನ ಪಾಂಡ್ಯಂ
ತಥಾ ಕಳಿಂಗಾನ್ ದಂತವಕ್ರಂ ಮಮರ್ದ |
ಅನೇನ ದಗ್ಧಾ ವರ್ಷಪೂಗಾನ್ ವಿನಾಥಾ
ವಾರಾಣಸೀ ನಗರೀ ಸಂಬಭೂವ ॥73॥

ಇವನು ಕವಾಟ ಎಂಬ ಪ್ರದೇಶದಲ್ಲಿ ಪಾಂಡ್ಯರಾಜನನ್ನು ಸಂಹರಿಸಿದನು. ಅದರಂತೆಯೇ ಕಳಿಂಗರನ್ನೂ ಮತ್ತು ದಂತವಕ್ರನನ್ನೂ ಮರ್ದಿಸಿದನು. ಇವನು ದಹಿಸಿದ ವಾರಣಾಸಿ ಪಟ್ಟಣವು ಅನೇಕ ವರ್ಷಗಳವರೆಗೆ ಅನಾಥವಾಗಿದ್ದಿತು.

ಅಯಂ ಸ್ಮ ಯುದ್ಧೇ ಮನ್ಯತೇಽನ್ಯೈರಜೇಯಂ
ತಮೇಕಲವ್ಯಂ ನಾಮ ನಿಷಾದರಾಜಮ್ |
ವೇಗೇನೈವ ಶೈಲಮಭಿಹತ್ಯ ಜಂಭಃ
ಶೇತೇ ಸ ಕೃಷ್ಣೇನ ಹತಃ ಪರಾಸುಃ ॥74॥

ಈ ದುರ್ಯೋಧನನು ನಿಷಾದರಾಜನಾದ ಏಕಲವ್ಯನು ಯುದ್ಧದಲ್ಲಿ ಅಜೇಯನಾದವನು ಎಂದು ತಿಳಿದಿದ್ದಾನೆ. ಜಂಭಾಸುರನು ವೇಗದಿಂದ ಶೈಲವನ್ನು ಗುದ್ದಿ ಹತನಾದಂತೆ ಏಕಲವ್ಯನು ಕೃಷ್ಣನಿಂದ ಹತನಾಗಿ ಪ್ರಾಣವನ್ನು ಬಿಡುತ್ತಾನೆ.

ತಥೋಗ್ರಸೇನಸ್ಯ ಸುತಂ ಸುದುಷ್ಟಂ
ವೃಷ್ಣ್ಯಂಧಕಾನಾಂ ಮಧ್ಯಗತಂ ಸಭಾಸ್ಥಮ್ |
ಅಪಾತಯದ್ ಬಲದೇವದ್ವಿತೀಯೋ
ಹತ್ವಾ ದದೌ ಚೋಗ್ರಸೇನಾಯ ರಾಜ್ಯಮ್ ॥75॥

ಹಾಗೆಯೇ ವೃಷ್ಣ್ಯಂಧಕರ ಮಧ್ಯದಲ್ಲಿ, ಸಭೆಯಲ್ಲಿ ಕುಳಿತಿದ್ದ ಅತ್ಯಂತ ದುಷ್ಟನಾದ, ಉಗ್ರಸೇನನ ಪುತ್ರನಾದ ಕಂಸನನ್ನು, ಬಲರಾಮನ ಜೊತೆಯಲ್ಲಿ ಹೋಗಿ ಅವನನ್ನು ನೆಲಕ್ಕೆ ಎಳೆದು ಸಂಹರಿಸಿ ಉಗ್ರಸೇನನಿಗೆ ರಾಜ್ಯವನ್ನು ಕೊಟ್ಟನು.

ಅಯಂ ಸೌಭಂ ಯೋಧಯಾಮಾಸ ಖಸ್ಥಂ
ವಿಭೀಷಣಂ ಮಾಯಯಾ ಸಾಲ್ವರಾಜಮ್ |
ಸೌಭದ್ವಾರಿ ಪ್ರತ್ಯಗೃಹ್ಣಾಚ್ಛತಘ್ನೀಂ
ದೋರ್ಭ್ಯಾಂ ಕ ಏನಂ ವಿಷಹೇತ ಮರ್ತ್ಯಃ ॥76॥

ಇವನು ಅಂತರಿಕ್ಷದಲ್ಲಿ ತನ್ನ ವಿಮಾನದಲ್ಲಿ ಕುಳಿತು ತನ್ನ ಮಾಯೆಯಿಂದ ಹೆದರಿಸುತ್ತಿದ್ದ ಸಾಲ್ವರಾಜನ ಜೊತೆಯಲ್ಲಿ ಯುದ್ಧ ಮಾಡಿದನು. ಸೌಭದ ಮುಖದಿಂದ ಪ್ರಯೋಗಿಸಿದ ಶತಘ್ನಿಯನ್ನು ಭುಜಗಳಲ್ಲಿ ಹಿಡಿದನು. ಯಾವ ಮನುಷ್ಯನು ಇವನನ್ನು ತಡೆದಾನು?

ಪ್ರಾಗ್ಜ್ಯೋತಿಷಂ ನಾಮ ಬಭೂವ ದುರ್ಗಂ
ಪುರಂ ಘೋರಮಸುರಾಣಾಮಪ್ರಧೃಷ್ಯಮ್ |
ಮಹಾಬಲೋ ನರಕಸ್ತತ್ರ ಭೌಮೋ
ಜಹಾರಾದಿತ್ಯಾ ಮಣಿಕುಂಡಲೇ ಶುಭೇ ॥77॥

ಪ್ರಾಗ್ಜ್ಯೋತಿಷವೆಂಬ ಅಭೇದ್ಯವಾದ ಮತ್ತು ಭಯಂಕರವಾದ ಅಸುರರ ದುರ್ಗವಿದ್ದಿತು. ಅಲ್ಲಿ ಮಹಾಬಲನಾದ ಭೂಮಿಪುತ್ರನಾದ ನರಕಾಸುರನು ಅದಿತಿಯ ಸುಂದರವಾದ ಮಣಿಕುಂಡಲಗಳನ್ನು ಅಪಹರಿಸಿದ್ದನು.

ನ ತಂ ದೇವಾಃ ಸಹ ಶಕ್ರೇಣ ಶೇಕುಃ
ಸಮಾಗತಾ ಯುಧಿ ಮೃತ್ಯೋರಭೀತಾಃ ॥78॥

ಮೃತ್ಯುವಿಗೆ ಹೆದರದ, ಇಂದ್ರನಿಂದ ಕೂಡಿದ ದೇವತೆಗಳೂ ಸಹ ಅವನನ್ನು ಸೋಲಿಸಲು ಸಾಧ್ಯವಾಗಲಿಲ್ಲ.

ದೃಷ್ಟ್ವಾ ಚ ತಂ ವಿಕ್ರಮಂ ಕೇಶವಸ್ಯ
ಬಲಂ ತಥೈವಾಸ್ತ್ರಮವಾರಣೀಯಮ್ |
ಜಾನಂತೋಽಸ್ಯ ಪ್ರಕೃತಿಂ ಕೇಶವಸ್ಯ
ನ್ಯಯೋಜಯತ್ ದಸ್ಯುವಧಾಯ ಕೃಷ್ಣಮ್ ॥79॥
ಸ ತತ್ ಕರ್ಮ ಪ್ರತಿಶುಶ್ರಾವ ದುಷ್ಕರಮ್
ಐಶ್ವರ್ಯವಾನ್ ಸಿದ್ಧಿಷು ವಾಸುದೇವಃ ॥80॥

ದೇವತೆಗಳು ಕೃಷ್ಣನ ಸ್ವಭಾವವನ್ನು ತಿಳಿದವರಾಗಿ, ಅವನ ವಿಕ್ರಮವನ್ನು ನೋಡಿ ಅವನನ್ನು ನಿವಾರಣೆ ಮಾಡಲು ಸಾಧ್ಯವಿಲ್ಲದ ಅವನ ಅಸ್ತ್ರವನ್ನು ಮತ್ತು ಬಲವನ್ನು ನೋಡಿ, ಆ ಶತ್ರುವನ್ನು ವಧೆ ಮಾಡಲು ಕೃಷ್ಣನನ್ನು ನಿಯೋಜಿಸಿದರು. ಎಲ್ಲ ಸಿದ್ಧಿಗಳ ಒಡೆಯನಾದ ಕೃಷ್ಣನು ಆ ದುಷ್ಕರವಾದ ಕಾರ್ಯವನ್ನು ಮಾಡುವುದಾಗಿ ಪ್ರತಿಜ್ಞೆ ಮಾಡಿದನು.

ನಿರ್ಮೋಚನೇ ಷಟ್ ಸಹಸ್ರಾಣಿ ಹತ್ವಾ
ಸಂಛಿದ್ಯ ಪಾಶಾನ್ ಸಹಸಾ ಕ್ಷುರಾಂತಾನ್ |
ಮುರಂ ಹತ್ವಾ ವಿನಿಹತ್ಯೌಘರಕ್ಷೋ
ನಿರ್ಮೋಚನಂ ಚಾಪಿ ಜಗಾಮ ವೀರಃ ॥81॥

ಆ ಸಮಯದಲ್ಲಿ ಪಾಶಗಳನ್ನು ಕತ್ತರಿಸುವಾಗ ಆರು ಸಹಸ್ರ ಯೋಧರನ್ನು ಕೊಂದು, ಕತ್ತಿಯ ಅಲುಗಿನಂತೆ ಹರಿತವಾದ ಪಾಶಗಳನ್ನು ಕತ್ತರಿಸಿ, ಮುರನನ್ನು ಸಂಹರಿಸಿ, ದೇವತೆಗಳ ಸಮೂಹವನ್ನು ರಕ್ಷಿಸುವ ವೀರನಾದ ಇವನು ಪಾಶಗಳನ್ನೂ ನಾಶಮಾಡಿದನು (ಲಕ್ಷಾಲಂಕಾರ).

ತತ್ರೈವ ತೇನಾಸ್ಯ ಬಭೂವ ಯುದ್ಧಂ
ಮಹಾಬಲೇನಾತಿಬಲಸ್ಯ ವಿಷ್ಣೋಃ |
ಶೇತೇ ಸ ಕೃಷ್ಣೇನ ಹತಃ ಪರಾಸುಃ
ವಾತೇನೇವ ಮಥಿತಃ ಕರ್ಣಿಕಾರಃ ॥82॥

ಅಲ್ಲಿಯೇ ಅತಿಬಲನಾದ ವಿಷ್ಣುವಾದ ಕೃಷ್ಣನಿಗೆ ಮಹಾಬಲವುಳ್ಳ ನರಕಾಸುರನ ಜೊತೆಯಲ್ಲಿ ಯುದ್ಧವು ನಡೆಯಿತು. ಅವನು ಕೃಷ್ಣನಿಂದ ಹತನಾಗಿ ಬಿರುಗಾಳಿಯಿಂದ ಮಥಿತವಾದ ಕರ್ಣಿಕಾರ ವೃಕ್ಷದಂತೆ ಪ್ರಾಣಗಳನ್ನು ಕಳೆದುಕೊಂಡು ಬಿದ್ದನು.

ಆಹೃತ್ಯ ಕೃಷ್ಣೋ ಮಣಿಕುಂಡಲೇ ತೇ
ಹತ್ವಾ ಚ ಭೌಮಂ ನರಕಂ ಮುರಂ ಚ |
ಶ್ರಿಯಾ ವೃತೋ ಯಶಸಾ ಚೈವ ವಿದ್ವಾನ್
ಪ್ರತ್ಯಾಜಗಾಮಾಪ್ರತಿಮಪ್ರಭಾವಃ ||83||

ಕೃಷ್ಣನು ಭೂಮಿಪುತ್ರನಾದ ನರಕನನ್ನೂ ಮತ್ತು ಮುರನನ್ನೂ ಸಂಹರಿಸಿ ಆ ಎರಡು ಮಣಿಕುಂಡಲಗಳನ್ನು ತಂದು ಕೀರ್ತಿಯಿಂದಲೂ ಮತ್ತು ಕಾಂತಿಯಿಂದಲೂ ಬೆಳಗುತ್ತಾ ಜ್ಞಾನಿಯೂ, ಅಪ್ರತಿಮ ಪ್ರಭಾವವುಳ್ಳವನೂ ಆದ ಅವನು ಅದಿತಿಗೆ ಹಿಂದಿರುಗಿಸಿದನು.

ಅಸ್ಮೈ ವರಾಣ್ಯದದುಸ್ತತ್ರ ದೇವಾ
ದೃಷ್ಟ್ವಾ ಭೀಮಂ ಕರ್ಮ ಕೃತಂ ರಣೇ ತತ್ |
ಶ್ರಮಶ್ಚ ತೇ ಯುಧ್ಯಮಾನಸ್ಯ ನ ಸ್ಯಾದ್
ಆಕಾಶೇ ಚಾಪ್ಯಪ್ಸು ಚ ತೇ ಕ್ರಮಃ ಸ್ಯಾತ್ ||84||

ಶಸ್ತ್ರಾಣಿ ಗಾತ್ರೇ ನ ಚ ತೇ ಕ್ರಮೇರನ್
ನಿತ್ಯಂ ಚ ಕೃಷ್ಣಶ್ಚ ತತಃ ಕೃತಾರ್ಥಃ |
ಏವಂರೂಪೇ ವಾಸುದೇವೇಽಪ್ರಮೇಯೇ
ಮಹಾಬಲೇ ಗುಣಸಂಪತ್ ಸದೈವ ||85||

ಆಗ ದೇವತೆಗಳು ಯುದ್ಧವನ್ನು ಮಾಡಿದ ಅವನ ಭಯಂಕರ ಕಾರ್ಯವನ್ನು ನೋಡಿ ಯುದ್ಧವನ್ನು ಮಾಡುವಾಗ ನಿನಗೆ ಶ್ರಮವಾಗದಿರಲಿ. ಆಕಾಶದಲ್ಲಿಯೂ ಮತ್ತು ಜಲದಲ್ಲಿಯೂ ನಿನ್ನ ಪಾದವಿಕ್ಷೇಪವು ಸಾಧ್ಯವಾಗಲಿ. ನಿನ್ನ ಶರೀರದಲ್ಲಿ ಯಾವ ಶಸ್ತ್ರಗಳೂ ಯಾವಾಗಲೂ ಪ್ರವೇಶಿಸದಿರಲಿ ಎಂದು ಅವನಿಗೆ ವರಗಳನ್ನು ಕೊಟ್ಟರು. ನಿತ್ಯವೂ ಕೃತಾರ್ಥನಾದ ಕೃಷ್ಣನು ದೇವತೆಗಳ ವರದಿಂದಲೂ ಕೃತಾರ್ಥನಾದನು. ಇಂತಹ ಅಪ್ರಮೇಯನಾದ, ಮಹಾಬಲನಾದ, ವಸುದೇವ ಸುತನಾದ ಕೃಷ್ಣನು ಯಾವಾಗಲೂ ಗುಣಪೂರ್ಣನಾದವನು.

ತಮಸಹ್ಯಂ ವಿಷ್ಣುಮನಂತವೀರ್ಯಮ್
ಆಶಂಸತೇ ಧಾರ್ತರಾಷ್ಟ್ರೋ ವಿಜೇತುಮ್ |
ಸದಾ ಹ್ಯೇನಂ ತರ್ಕಯತೇ ದುರಾತ್ಮಾ
ತಚ್ಚಾಪ್ಯಯಂ ಸಹತೇಽಸ್ಮಾನ್ ಸಮೀಕ್ಷ್ಯ ||86||

ದುರ್ಯೋಧನನು ಅನಂತವೀರ್ಯನಾದ, ಸಹಿಸಲು ಅಸಾಧ್ಯನಾದ ಅಂತಹ ವಿಷ್ಣುವನ್ನು ಜಯಿಸಲು ಬಯಸುತ್ತಾನೆ. ಆ ದುರಾತ್ಮನು ಯಾವಾಗಲೂ ಹೀಗೆಯೇ ಯೋಚಿಸುತ್ತಾನೆ. ಕೃಷ್ಣನಾದರೂ ನಮ್ಮನ್ನು ನೋಡಿ ಅದನ್ನು ಸಹಿಸಿಕೊಂಡಿದ್ದಾನೆ.

ಪರ್ಯಾಗತಂ ಮಮ ಕೃಷ್ಣಸ್ಯ ಚೈವಂ
ಯೋ ಮನ್ಯತೇ ಕಲಹಂ ಸಂಪ್ರಸಹ್ಯ |
ಶಕ್ಯಂ ಹರ್ತುಂ ಪಾಂಡವಾನಾಂ ಚ ಸತ್ವಂ
ತದ್ ವೇದಿತಾ ಸಂಯುಗಂ ತತ್ರ ಗತ್ವಾ ||87||

ಯಾವ ದುರ್ಯೋಧನನು ನನಗೂ ಮತ್ತು ಕೃಷ್ಣನಿಗೂ ಕಲಹವನ್ನು ಉಂಟುಮಾಡಿ ತನ್ನ ಬಲದಿಂದ ಪಾಂಡವರ ಬಲವನ್ನು ಸೋಲಿಸಲು ಸಾಧ್ಯವೆಂದು ತಿಳಿದಿದ್ದಾನೆಯೋ ಅವನು ಯುದ್ಧಭೂಮಿಗೆ ಹೋಗಿ ಅದರ ಸತ್ಯಾಂಶವೇನೆಂದು ತಿಳಿಯಲಿ.

ನಮಸ್ಕೃತ್ವಾ ಶಾಂತನವಾಯ ರಾಜ್ಞೇ
ದ್ರೋಣಾಯಾಥೋ ಸಹಪುತ್ರಾಯ ಚೈವ |
ಶಾರದ್ವತಾಯಾಪ್ರತಿದ್ವಂದ್ವಿನೇ ಚ
ಯೋತ್ಸ್ಯಾಮ್ಯಹಂ ರಾಜ್ಯಮಭೀಪ್ಸಮಾನಃ ||88||

ನಾನು ಶಂತನುಪುತ್ರನಾದ ಭೀಷ್ಮನಿಗೂ, ಧೃತರಾಷ್ಟ್ರರಾಜನಿಗೂ, ಅಶ್ವತ್ಥಾಮರಿಂದೊಡಗೂಡಿದ ದ್ರೋಣರಿಗೂ, ಅಪ್ರತಿದ್ವಂದ್ವಿಗಳಾದ ಕೃಪರಿಗೂ ನಮಸ್ಕಾರವನ್ನು ಮಾಡಿ ರಾಜ್ಯವನ್ನು ಬಯಸಿ ಯುದ್ಧವನ್ನು ಮಾಡುವೆನು.

ಧರ್ಮೇಣಾಪ್ತಂ ನಿಧನಂ ತಸ್ಯ ಮನ್ಯೇ
ಯೋ ಯೋತ್ಸ್ಯತೇ ಪಾಂಡವೈರ್ಧರ್ಮಚಾರೀ |
ಮಿಥ್ಯಾಗ್ಲಹೇ ನಿರ್ಜಿತಾ ವೈ ನೃಶಂಸೈಃ
ಸಂವತ್ಸರಾನ್ ವೈ ದ್ವಾದಶ ರಾಜಪುತ್ರಾಃ ||89||

ಯಾವ ಧರ್ಮಾಚರಣೆಯನ್ನು ಮಾಡುವ ಯೋಧನು ಪಾಂಡವರ ಪರವಾಗಿ ಯುದ್ಧವನ್ನು ಮಾಡಿ ನಿಧನವನ್ನು ಹೊಂದಿದರೆ ಅದು ಧರ್ಮದಿಂದ ಉಂಟಾದ ನಿಧನವೆಂದು ಭಾವಿಸುತ್ತೇನೆ. ಕ್ರೂರರಾದ ದುರ್ಯೋಧನಾದಿಗಳಿಂದ, ಮೋಸದ ದ್ಯೂತದಿಂದ ನಿರ್ಜಿತರಾದ ರಾಜಪುತ್ರರಾದ ನಾವು ಹನ್ನೆರಡು ವರ್ಷಗಳನ್ನು ಕಳೆದೆವು.

ವಾಸಃ ಕೃತ್ಸ್ನೋ ವಿಹಿತಶ್ಚಾಪ್ಯರಣ್ಯೇ
ದೀರ್ಘಂ ಕಾಲಂ ಚೈಕಮಜ್ಞಾತವರ್ಷಮ್ |
ತೇ ಹ್ಯಸ್ಮಾಕಂ ಜೀವಿತಂ ಪಾಂಡವಾನಾಂ

ನ ಮೃಷ್ಯಂತೇ ಧಾರ್ತರಾಷ್ಟ್ರಾಃ ಪದಸ್ಥಾಃ ॥90॥
ನಾವು ಪೂರ್ಣವಾಗಿ ಹನ್ನೆರಡು ವರ್ಷಗಳ ದೀರ್ಘಕಾಲವನ್ನು ಅರಣ್ಯದಲ್ಲಿ ವಾಸಮಾಡಿ ಕಳೆದು ಒಂದು ವರ್ಷದ ಕಾಲ ಅಜ್ಞಾತವಾಸವನ್ನೂ ಮಾಡಿದೆವು. ಅಧಿಕಾರದಲ್ಲಿರುವ ಧೃತರಾಷ್ಟ್ರ ಪುತ್ರರು ಪಾಂಡವರಾದ ನಾವು ಬದುಕಿರುವುದನ್ನೂ ಸಹಿಸುವುದಿಲ್ಲ.

ತೇ ಚೇದಸ್ಮಾನ್ ಯುಧ್ಯಮಾನಾನ್ ಜಯೇಯುಃ
ದೇವೈರ್ಮಹೇಂದ್ರಪ್ರಮುಖೈಃ ಸಹಾಯೈಃ |
ಧರ್ಮಾದಧರ್ಮಶ್ಚರಿತೋ ಗರೀಯಾನ್
ತತೋ ಧ್ರುವಂ ನಾಸ್ತಿ ಕೃತಂ ಚ ಸಾಧು ॥91॥
ಅವರು ಒಂದುಪಕ್ಷ ಇಂದ್ರ ಮೊದಲಾದ ದೇವತೆಗಳ ಸಹಾಯದಿಂದ ಯುದ್ಧ ಮಾಡಿ ನಮ್ಮನ್ನು ಗೆಲ್ಲುವುದಾದರೆ ಧರ್ಮಾಚರಣೆಗಿಂತ ಅಧರ್ಮಾಚರಣೆಯೇ ಶ್ರೇಷ್ಠವಾಗುತ್ತದೆ. ಯಾವ ಸತ್ಕರ್ಮಕ್ಕೂ ಫಲವಿಲ್ಲವೆಂದಾಗುತ್ತದೆ.

ನ ಚೇದಿದಮಪಜಯಂ ಕರ್ಮಬಂಧಂ
ನ ಚೇದಸ್ಮಾನ್ ಮನ್ಯತೇಽಸೌ ವಿಶಿಷ್ಟಾನ್ |
ಆಶಂಸೇಽಹಂ ವಾಸುದೇವದ್ವಿತೀಯೋ
ದುರ್ಯೋಧನಂ ಸಾನುಬಂಧಂ ನಿಹಂತುಮ್ ॥92॥
ನಮಗೆ ಒದಗಿದ ಅಪಜಯವು ತನ್ನ ದುರ್ದ್ಯೂತದ ನಿಮಿತ್ತದಿಂದ ಎಂದು ಅವನು ತಿಳಿಯದಿದ್ದರೆ ಮತ್ತು ನಾವು ಅವರಿಗಿಂತ ಶ್ರೇಷ್ಠರೆಂದು ತಿಳಿಯದಿದ್ದರೆ ನಾನು ಕೃಷ್ಣನ ಸಹಾಯದಿಂದ ದುರ್ಯೋಧನನನ್ನು ಅವನ ಪರಿವಾರ ಸಹಿತವಾಗಿ ಕೊಲ್ಲಲು ಬಯಸುತ್ತೇನೆ (ಲಕ್ಷಾಲಂಕಾರ).

ನ ಚೇದಿದಂ ಕರ್ಮ ನರೇಷು ವಂಧ್ಯಂ
ನ ಚೇದ್ಭವೇತ್ ಸುಕೃತಂ ನಿಷ್ಫಲಂ ವಾ |
ಇದಂ ಚ ತಚ್ಚಾಪಿ ಸಮೀಕ್ಷ್ಯ ನೂನಂ
ಪರಾಜಯೋ ಧಾರ್ತರಾಷ್ಟ್ರಸ್ಯ ಸಾಧುಃ ॥93॥
ಮನುಷ್ಯರು ಮಾಡಿದ ಕರ್ಮವು ವ್ಯರ್ಥವಾಗದಿದ್ದರೆ, ಸತ್ಕರ್ಮವು ನಿಷ್ಫಲವಾಗದಿದ್ದರೆ ನಾನು ಈ ವಿಷಯವನ್ನು ಚೆನ್ನಾಗಿ ಆಲೋಚಿಸಿ ದುರ್ಯೋಧನನಿಗೆ ಪರಾಜಯವಾಗುವುದೇ ಶ್ರೇಷ್ಠವೆಂದು ತಿಳಿಯುತ್ತೇನೆ.

ಪ್ರತ್ಯಕ್ಷಂ ವಃ ಕುರವೋ ಯದ್ ಬ್ರವೀಮಿ
ಯುದ್ಧ್ಯಮಾನಾ ಧಾರ್ತರಾಷ್ಟ್ರಾ ನ ಸಂತಿ |
ಅನ್ಯತ್ರ ಯುದ್ಧಾತ್ ಕುರವೋ ಯದಿ ಸ್ಯುಃ
ನ ಯುದ್ಧೇ ವೈ ಶೇಷ ಇಹಾಸ್ತಿ ಕಶ್ಚಿತ್ ॥94॥
ಎಲೈ ಕುರುಗಳೇ, ನಾನು ನೇರವಾಗಿ ನಿಮಗೆ ಹೇಳುತ್ತಿದ್ದೇನೆ. ನೀವು ಯುದ್ಧವನ್ನು ಮಾಡಿದರೆ ಧೃತರಾಷ್ಟ್ರ ಪುತ್ರರು ಯಾರೂ ಉಳಿಯುವುದಿಲ್ಲ. ಯುದ್ಧವನ್ನು ಮಾಡದೆ ಒಂದುಪಕ್ಷ ಜೀವಿಸಬಹುದು. ಆದರೆ ಯುದ್ಧವನ್ನು ಮಾಡಿದರೆ ಯಾವ ಶೇಷವೂ ಉಳಿಯುವುದಿಲ್ಲ.

ಹತ್ವಾ ತ್ವಹಂ ಧಾರ್ತರಾಷ್ಟ್ರಾನ್ ಸಕರ್ಣಾನ್
ರಾಜ್ಯಂ ಕುರೂಣಾಮಪಿ ಜೇತಾ ಸಮಗ್ರಮ್ |
ಯುದ್ಧಂ ಕಾರ್ಯಂ ತತ್ ಕುರುಧ್ವಂ ಯಥಾಸ್ವಮ್
ಇಷ್ಟಾನ್ ದಾರಾನಾತ್ಮಭೋಗಾನ್ ಭಜಧ್ವಮ್ ॥95॥
ನಾನು ಕರ್ಣಸಹಿತರಾದ ಧೃತರಾಷ್ಟ್ರ ಪುತ್ರರೆಲ್ಲರನ್ನೂ ಕೊಂದು, ಸಮಗ್ರವಾದ ಕುರುರಾಜ್ಯವನ್ನು ಜಯಿಸುವೆನು. ಯುದ್ಧವನ್ನು ಮಾಡಲೇಬೇಕು. ನೀವು ಯುದ್ಧವನ್ನು ಮಾಡಿ. ನಿಮಗೆ ಶಕ್ತಿ ಇದ್ದಷ್ಟು ಇಷ್ಟವಾದ ಭೋಗಗಳನ್ನೂ ಮತ್ತು ಪತ್ನಿಯರನ್ನೂ ಸೇವಿಸುವವರಾಗಿ.

ಅಪ್ಯೇವಂ ನೋ ಬ್ರಾಹ್ಮಣಾಃ ಸಂತಿ ವೃದ್ಧಾ
ಬಹುಶ್ರುತಾಃ ಶೀಲವಂತಃ ಕುಲೀನಾಃ |
ಸಾಂವತ್ಸರಾ ಜ್ಯೋತಿಷಿ ಚಾಭಿಯುಕ್ತಾ
ನಕ್ಷತ್ರಯೋಗೇಷು ಚ ನಿಶ್ಚಯಜ್ಞಾಃ ॥96॥
ನಮ್ಮ ಪಕ್ಷದಲ್ಲಿ ಬಹುಶ್ರುತರೂ, ಶೀಲವಂತರೂ, ಕುಲೀನರೂ, ವೃದ್ಧರೂ ಆದ ಬ್ರಾಹ್ಮಣರಿದ್ದಾರೆ. ಅವರು ನಕ್ಷತ್ರ-ಯೋಗಗಳಲ್ಲಿಯೂ, ಸಂವತ್ಸರ ಫಲಗಳಲ್ಲಿಯೂ, ಜ್ಯೌತಿಷಶಾಸ್ತ್ರದಲ್ಲಿಯೂ ಪರಿಣತರಾದವರು.

ಉಚ್ಚಾವಚಂ ದೈವಯುಕ್ತಂ ರಹಸ್ಯಂ
ದೈವಪ್ರಜ್ಞಾ ಗ್ರಹಚರ್ಯಾ ಮುಹೂರ್ತಾಃ |
ಕ್ಷಯಂ ಮಹಾಂತಂ ಕುರುಸೃಂಜಯಾನಾಂ
ನಿವೇದಯಂತೇ ಪಾಂಡವಾನಾಂ ಜಯಂ ಚ ॥97॥
ಶ್ರೇಷ್ಠ ಮತ್ತು ಕನಿಷ್ಠವಾದ ವಿಧಿಯುಕ್ತವಾದ ರಹಸ್ಯಗಳನ್ನೂ, ಗ್ರಹಚರ್ಯಗಳನ್ನೂ ಮತ್ತು ಮುಹೂರ್ತಗಳನ್ನೂ ಅವರು ದೈವಬಲದಿಂದ ಚೆನ್ನಾಗಿ ತಿಳಿದಿದ್ದಾರೆ. ಅವರು ಕುರುಸೃಂಜಯರಿಗೆ ದೊಡ್ಡ ಅಪಜಯವನ್ನೂ ಮತ್ತು ಪಾಂಡವರ ಜಯವನ್ನೂ ನಿವೇದಿಸುತ್ತಾರೆ.

ಯಥಾ ಹಿ ನೋ ಮನ್ಯತೇಽಜಾತಶತ್ರುಃ
ಸಂಸಿದ್ಧಾರ್ಥೋ ದ್ವಿಷತಾಂ ನಿಗ್ರಹಾಯ |
ಜನಾರ್ದನಶ್ಚಾಪ್ಯಪರೋಕ್ಷವಿದ್ಯೋ
ನ ಸಂಶಯಂ ಪಶ್ಯತಿ ವೃಷ್ಣಿಸಿಂಹಃ ॥98॥
ಅಜಾತಶತ್ರುವಾದ ಯುಧಿಷ್ಠಿರನು ಶತ್ರುಗಳ ನಿಗ್ರಹವನ್ನು ಮಾಡಿ ನಾವು ಕೃತಕೃತ್ಯರಾಗಿದ್ದೇವೆಂದು ಹೇಗೆ ತಿಳಿದಿದ್ದಾನೆಯೋ, ಸರ್ವಾಪರೋಕ್ಷಿಯಾದ ವೃಷ್ಣಿಸಿಂಹನಾದ ಜನಾರ್ದನನು ನಿಸ್ಸಂಶಯವಾಗಿ ಹಾಗೆಯೇ ತಿಳಿದಿದ್ದಾನೆ.
ಭವಿಷ್ಯಂತಿ ವೈ ಪೂರ್ವರೂಪಾಣಿ ಯುಕ್ತ್ಯಾ
ಪಶ್ಯಾಮಿ ಬುದ್ಧ್ಯಾ ಸ್ವಯಮಪ್ರಮತ್ತಃ |
ದೃಷ್ಟಿಶ್ಚ ಮೇ ನ ವ್ಯಥತೇ ಪುರಾಣೀ
ಸಂಯುಧ್ಯಮಾನಾ ಧಾರ್ತರಾಷ್ಟ್ರಾ ನ ಸಂತಿ ॥99॥
ನಮಗೆ ಮೊದಲಿನ ರಾಜ್ಯಾರ್ಹವಾದ ರೂಪಗಳು ಪುನಃ ಉಂಟಾಗುವುವು ಎಂದು ನಾನು ಎಚ್ಚರಿಕೆಯಿಂದ ಕೂಡಿದ ಬುದ್ಧಿಯಿಂದ ಆಲೋಚಿಸಿ ಕಾಣುತ್ತಿದ್ದೇನೆ. ನನ್ನ ಪ್ರಾಚೀನಜ್ಞಾನವು ನಾಶವನ್ನು ಹೊಂದಿಲ್ಲ. ಯುದ್ಧವನ್ನು ಮಾಡುವ ಧೃತರಾಷ್ಟ್ರ ಪುತ್ರರು ಉಳಿಯುವುದಿಲ್ಲ.
ಅನಾಲಬ್ಧಂ ಜೃಂಭತಿ ಗಾಂಡಿವಂ ಧನುಃ
ಅನಾಹತಾ ಕಂಪತಿ ಮೇ ಧನುರ್ಜ್ಯಾ |
ಬಾಣಾಶ್ಚ ತೂಣೀರಮುಖಾದ್ ವಿಸೃತ್ಯ
ಮುಹುರ್ಮುಹುರ್ಗಂತುಮುಶಂತಿ ಚೈವ ॥100॥
ಕೈಯಲ್ಲಿ ಹಿಡಿಯದಿದ್ದರೂ ಗಾಂಡೀವ ಧನುಸ್ಸು ಜೃಂಭಿಸುತ್ತಿದೆ (ನೇರವಾಗುತ್ತಿದೆ). ಧನುಸ್ಸಿನ ಹೆದೆಯನ್ನು ಎಳೆಯದಿದ್ದರೂ ಅದು ಕಂಪಿಸುತ್ತಿದೆ. ಬಾಣಗಳು ಬತ್ತಳಿಕೆಯ ಬಾಯಿಂದ ಪುನಃ ಪುನಃ ತಾವಾಗಿಯೇ ಮೇಲೆ ಬರಲು ಬಯಸುತ್ತಿವೆ.
ಶೈಕ್ಯಃ ಕೋಶಾನ್ನಿಸರತಿ ಪ್ರಸನ್ನೋ
ಹಿತ್ವೇವ ಜೀರ್ಣಾಮುರಗಸ್ತ್ವಚಂ ಸ್ವಾಮ್ |
ಧ್ವಜೇ ವಾಚೋ ರೌದ್ರರೂಪಾ ಭವಂತಿ
ಕದಾ ರಥೋ ಯೋಕ್ಷ್ಯತೇ ತೇ ಕಿರೀಟಿನ್ ॥101॥
ಸರ್ಪವು ತನ್ನ ಜೀರ್ಣವಾದ ಪೊರೆಯಿಂದ ಹೊರಗೆ ಬಂದಂತೆ ಖಡ್ಗವು ತನ್ನ ನಿಲುವಿನ ಕೋಶದಿಂದ ಪ್ರಸನ್ನವಾಗಿ ಹೊರಗೆ ಬರುತ್ತಿದೆ. ಅರ್ಜುನನೇ, ಯಾವಾಗ ರಥವನ್ನು ಹೂಡುತ್ತೀಯೆ ಎಂಬ ಭಯಂಕರವಾದ ಮಾತುಗಳು ಧ್ವಜದಿಂದ ಕೇಳಿ ಬರುತ್ತಿವೆ.
ಗೋಮಾಯುಸಂಘಾಶ್ಚ ನದಂತಿ ರಾತ್ರೌ
ರಕ್ಷಾಂಸ್ಯಥೋ ನಿಷ್ಪತಂತ್ಯಂತರಿಕ್ಷಾತ್ |
ಬಕಾಃ ಸೃಗಾಲಾಃ ಶಿತಿಕಂಠಾಶ್ಚ ಕಾಕಾ
ಗೃಧ್ರಾ ಮೃಗಾಶ್ಚೈವ ತರಕ್ಷವಶ್ಚ ॥102॥
ರಾತ್ರಿಯ ಕಾಲದಲ್ಲಿ ನರಿಗಳು ಕೂಗುತ್ತಿವೆ. ಅಂತರಿಕ್ಷದಿಂದ ರಾಕ್ಷಸರು ಬೀಳುತ್ತಿದ್ದಾರೆ. ಆಹಾರವನ್ನು ಹುಡುಕುವ ಬಕಗಳೂ, ನರಿಗಳೂ, ಹದ್ದುಗಳೂ, ಕಾಗೆಗಳೂ ಮತ್ತು ಹುಲಿಗಳೂ ಎಲ್ಲೆಡೆಯಲ್ಲಿಯೂ ತಿರುಗಾಡುತ್ತಿವೆ.
ಸುವರ್ಣಪತ್ರಾಶ್ಚ ಪತಂತಿ ಪಶ್ಚಾದ್
ದೃಷ್ಟ್ವಾ ರಥಂ ಶ್ವೇತಹಯಪ್ರಯುಕ್ತಮ್ |
ಅಹಂ ಹ್ಯೇಕಃ ಪಾರ್ಥಿವಾನ್ ಸರ್ವಯೋಧಾನ್
ಶರಾನ್ ವರ್ಷನ್ ಮೃತ್ಯುಲೋಕಂ ನಯೇಯಮ್ ॥103॥
ಸಮಾದದಾನಃ ಪೃಥಗಸ್ತ್ರಮಾರ್ಗಾನ್
ಯಥಾಗ್ನಿರಿದ್ಧೋ ಗಹನಂ ನಿದಾಘೇ |
ಸ್ಥೂಣಾಕರ್ಣಂ ಪಾಶುಪತಂ ಮಹಾಸ್ತ್ರಂ
ಬ್ರಾಹ್ಮಂ ಚಾಸ್ತ್ರಂ ಯಚ್ಚ ಶಕ್ರೋಽದದಾನ್ಮೇ ॥104॥
ಸುವರ್ಣಮಯವಾದ ರೆಕ್ಕೆಗಳುಳ್ಳ ಪಕ್ಷಿಗಳು ಶ್ವೇತಹಯಗಳಿಂದ ಕೂಡಿದ ನನ್ನ ರಥಗಳನ್ನು ನೋಡಿ ನನ್ನ ಹಿಂದೆ ಬರುತ್ತಿವೆ. ನಾನೊಬ್ಬನೇ ಬಾಣಗಳ ಮಳೆಯನ್ನು ಸುರಿಸಿ ರಾಜರನ್ನೂ ಮತ್ತು ಸೈನಿಕರನ್ನೂ ಮೃತ್ಯುಲೋಕಕ್ಕೆ ಕಳುಹಿಸುವೆನು. ಬೇರೆ ಬೇರೆ ಅಸ್ತ್ರಮಾರ್ಗಗಳನ್ನು ಅವಲಂಬಿಸಿ ಸ್ಥೂಣಾಕರ್ಣಾಸ್ತ್ರ, ಪಾಶುಪತಮಹಾಸ್ತ್ರ, ಬ್ರಹ್ಮಾಸ್ತ್ರ ಮತ್ತು ಇಂದ್ರನು ಕೊಟ್ಟ ಅಸ್ತ್ರ ಇವುಗಳನ್ನು ತೆಗೆದುಕೊಂಡು ಬೇಸಿಗೆಯ ಕಾಲದಲ್ಲಿ ಅಗ್ನಿಯು ಕಾಡನ್ನು ಸುಡುವಂತೆ (ಶತ್ರುಗಳನ್ನು ನಾಶಮಾಡಿ ಮೃತ್ಯುಲೋಕಕ್ಕೆ ಕಳುಹಿಸುವೆನು).
ವಧೇ ಧೃತೋ ವೇಗವತಃ ಪ್ರಮುಂಚನ್
ನಾಹಂ ಪ್ರಜಾಃ ಕಿಂಚಿದಿಹಾವಶಿಷ್ಯೇ |
ಶಾಂತಿಂ ಲಪ್ಸ್ಯೇ ಪರಮೋ ಹ್ಯೇಷ ಭಾವಃ
ಸ್ಥಿರೋ ಮಮ ಬ್ರೂಹಿ ಗಾವಲ್ಗಣೇ ತಾನ್ ॥105॥
ಶತ್ರುಗಳ ವಧೆಯಲ್ಲಿ ನಿರತನಾದ ನಾನು ವೇಗವುಳ್ಳ ಬಾಣಗಳನ್ನು ಪ್ರಯೋಗಿಸುತ್ತಾ ಶತ್ರುಸೈನ್ಯದ ಯಾವ ಪ್ರಜೆಗಳನ್ನೂ ಉಳಿಸುವುದಿಲ್ಲ. ಆ ಕಾರ್ಯವನ್ನು ಮಾಡಿ ನಾನು ಶಾಂತಿಯನ್ನು ಹೊಂದುವೆನು. ಇದು ನನ್ನ ಸುದೃಢವಾದ ಅಭಿಪ್ರಾಯ.

ಗಾವಲ್ಗಣಿಯೇ, ನೀನು ನಿರ್ಭಯವಾಗಿ ಈ ನನ್ನ ಅಭಿಪ್ರಾಯವನ್ನು ಅವರಿಗೆ (ಕೌರವರಿಗೆ) ಹೇಳು.
ನಿತ್ಯಂ ಪುನಃ ಸಚಿವೈರ್ಯಾನವೋಚತ್
ದೇವಾನಪೀಂದ್ರಪ್ರಮುಖಾನ್ ಸಮೇತಾನ್ |
ತೈರ್ಮನ್ಯತೇ ಕಲಹಂ ಸಂಪ್ರಯುಜ್ಯ
ಸ ಧಾರ್ತರಾಷ್ಟ್ರಃ ಪಶ್ಯತು ಮೋಹಮಸ್ಯ ॥106॥
ದುರ್ಯೋಧನನು ದೇವತೆಗಳ ಜೊತೆಯಲ್ಲಿಯೂ ವಿರೋಧವನ್ನು ಮಾಡಿ, ಇಂದ್ರನಿಂದ ಸಹಿತನಾದ ಎಲ್ಲಾ ದೇವತೆಗಳನ್ನೂ ತಾನು ಗೆಲ್ಲುವೆನೆಂದು ತನ್ನ ಸಹಚರರ ಮುಂದೆ ಯಾವಾಗಲೂ ಹೇಳುತ್ತಾನೆ. ಎಲೈ ಸಂಜಯನೇ, ಅವನ ಮೋಹವನ್ನು ನೋಡು.
ವೃದ್ಧೋ ಭೀಷ್ಮಃ ಶಾಂತನವಃ ಕೃಪಶ್ಚ
ದ್ರೋಣಃ ಸಪುತ್ರೋ ವಿದುರಶ್ಚ ಧೀಮಾನ್
ಏತೇ ಸರ್ವೇ ಯದ್ ವದೇಯುಸ್ತದಸ್ತು
ಆಯುಷ್ಮಂತಃ ಕುರವಃ ಸಂತು ಸರ್ವೇ ॥107॥
ಶಂತನು ಪುತ್ರರಾದ ಭೀಷ್ಮರೂ, ಕೃಪರೂ, ಪುತ್ರಸಹಿತರಾದ ದ್ರೋಣರೂ ಮತ್ತು ಮೇಧಾವಿಯಾದ ವಿದುರ ಎಲ್ಲರೂ ದೊಡ್ಡವರು. ಇವರೆಲ್ಲರೂ ಏನು ಹೇಳುತ್ತಾರೋ ಅದರಂತೆ ಆಗಲಿ. ಎಲ್ಲ ಕುರುಗಳೂ ಆಯುಷ್ಯವನ್ನು ಹೊಂದಿದವರಾಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂದನೆಯ ಅಧ್ಯಾಯ
ಭೀಷ್ಮದ್ರೋಣರ ಸನ್ನಿಧಿಯಲ್ಲಿ ಧೃತರಾಷ್ಟ್ರನ ಪ್ರಶ್ನೆ.
ಕರ್ಣನ ನಿಂದೆ ಮತ್ತು ಕುರುಗಳ ನಿರಾಶೆ.
ವೈಶಂಪಾಯನಃ
ಸಮವೇತೇಷು ಸರ್ವೇಷು ತೇಷು ರಾಜಸು ಭಾರತ |
ದುರ್ಯೋಧನಮಿದಂ ವಾಕ್ಯಂ ಭೀಷ್ಮಃ ಶಾಂತನವೋಽಬ್ರವೀತ್ ॥1॥
ವೈಶಂಪಾಯನ ಎಲೈ ಭಾರತನೇ, ಆ ರಾಜರೆಲ್ಲರೂ ಒಟ್ಟಿಗೆ ಸೇರಿರಲು ಶಂತನು ಪುತ್ರನಾದ ಭೀಷ್ಮನು ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದನು.
ಬೃಹಸ್ಪತಿಶ್ಚೋಶನಾ ಚ ಬ್ರಹ್ಮಾಣಂ ಪರ್ಯುಪಸ್ಥಿತೌ |
ಮರುತಶ್ಚ ಸಹೇಂದ್ರೇಣ ವಸವಶ್ಚಾಗ್ನಿನಾ ಸಹ ॥2॥
ಬೃಹಸ್ಪತಿ ಶುಕ್ರಾಚಾರ್ಯರು, ಇಂದ್ರನಿಂದ ಕೂಡಿದ ಮರುತ್ತುಗಳು, ಅಗ್ನಿಯಿಂದ ಕೂಡಿದ ವಸುಗಳೂ ಸಹ ಬ್ರಹ್ಮದೇವರ ಬಳಿಗೆ ಹೋದರು.
ಆದಿತ್ಯಾಶ್ಚೈವ ಸಾಧ್ಯಾಶ್ಚ ಯೇ ಚ ಸಪ್ತರ್ಷಯೋ ದಿವಿ |
ವಿಶ್ವಾವಸುಶ್ಚ ಗಂಧರ್ವಃ ಸರ್ವೇ ಚಾಪ್ಸರಸಾಂ ಗಣಾಃ ॥3॥
ನಮಸ್ಕೃತ್ಯೋಪಜಗ್ಮುಸ್ತೇ ಲೋಕವೃದ್ಧಂ ಪಿತಾಮಹಮ್ ॥4॥
ಪರಿವಾರ್ಯ ಚ ವಿಶ್ವೇಶಂ ಪರ್ಯಾಸತ ದಿವೌಕಸಃ ॥5॥
ಆದಿತ್ಯರೂ ಮತ್ತು ಸ್ವರ್ಗದಲ್ಲಿರುವ ಸಪ್ತರ್ಷಿಗಳೂ, ವಿಶ್ವಾವಸು ಗಂಧರ್ವರೂ, ಅಪ್ಸರೆಯರೂ, ಲೋಕವೃದ್ಧರಾದ ಪಿತಾಮಹರಾದ ಬ್ರಹ್ಮದೇವರನ್ನು ನಮಸ್ಕರಿಸಿ ಅವರ ಸಮೀಪಕ್ಕೆ ಹೋದರು. ದೇವತೆಗಳೆಲ್ಲರೂ ವಿಶ್ವೇಶರಾದ ಅವರನ್ನು ಸುತ್ತುವರಿದು ಕುಳಿತರು.
ತೇಷಾಂ ಮನಶ್ಚ ತೇಜಶ್ಚಾಪ್ಯಾದದಾನಾವಿವೌಜಸಾ |
ಪೂರ್ವದೇವೌ ವ್ಯತಿಕ್ರಾಂತೌ ನರನಾರಾಯಣಾವೃಷೀ ॥6॥
ತಮ್ಮ ತೇಜಸ್ಸಿನಿಂದ ಆ ದೇವತೆಗಳ ಮನಸ್ಸನ್ನು ಮತ್ತು ತೇಜಸ್ಸನ್ನು ಅಪಹರಿಸುವವರಂತೆ ಪೂರ್ವದೇವತೆಗಳಾದ ನರ-ನಾರಾಯಣ ಋಷಿಗಳು ಆ ಸ್ಥಳದಲ್ಲಿ ಹಾದು ಹೋದರು.
ಬೃಹಸ್ಪತಿಶ್ಚ ಪಪ್ರಚ್ಛ ಬ್ರಹ್ಮಾಣಂ ಕಾವಿಮಾವಿತಿ |
ಭವಂತಂ ನೋಪತಿಷ್ಠೇತೇ ತೌ ನಃ ಶಂಸ ಪಿತಾಮಹ ॥7॥
ಬೃಹಸ್ಪತಿಗಳು ಬ್ರಹ್ಮದೇವರನ್ನು ಕುರಿತು ಇವರಿಬ್ಬರು ಯಾರು? ನಿಮ್ಮನ್ನು ಗೌರವಿಸುತ್ತಿಲ್ಲ. ಪಿತಾಮಹರೇ, ಅವರು ಯಾರು ಎಂದು ನಮಗೆ ತಿಳಿಸಿ ಎಂದು ಕೇಳಿದರು.
ಬ್ರಹ್ಮಾ
ಯಾವೇತೌ ಪೃಥಿವೀಂ ದ್ಯಾಂ ಚ ಭಾಸಯಂತೌ ತಪಸ್ವಿನೌ |
ಜ್ವಲಂತೌ ರೋಚಮಾನೌ ಚ ವ್ಯಾಪ್ಯಾತೀತೌ ಮಹಾಬಲೌ ॥8॥
ನರನಾರಾಯಣಾವೇತೌ ಲೋಕಾಲ್ಲೋಕಂ ಸಮಾಶ್ರಿತೌ |
ಊರ್ಜಿತೌ ಸ್ವೇನ ತಪಸಾ ಮಹಾಸತ್ವಪರಾಕ್ರಮೌ ॥9॥
ಬ್ರಹ್ಮಾ ತಪಸ್ವಿಗಳೂ, ಭೂಮಿಯನ್ನು ಮತ್ತು ಸ್ವರ್ಗವನ್ನು ತಮ್ಮ ಕಾಂತಿಯಿಂದ ಬೆಳಗುವವರೂ, ತಮ್ಮ ತೇಜಸ್ಸಿನಿಂದ ಜ್ವಲಿಸುವವರೂ ಮತ್ತು ಸುಂದರವಾಗಿರುವವರೂ, ಮಹಾಬಲಿಷ್ಠರೂ ಆದ ನಮ್ಮನ್ನು ದಾಟಿಹೋದ ಇವರಿಬ್ಬರೂ ನರನಾರಾಯಣ

ಋಷಿಗಳು. ಒಂದು ಲೋಕದಿಂದ ಇನ್ನೊಂದು ಲೋಕಕ್ಕೆ ಹೋಗುವವರು. ಮಹಾಸತ್ವ ಮತ್ತು ಪರಾಕ್ರಮವನ್ನು ಹೊಂದಿದ ಇವರು ತಮ್ಮ ತಪಸ್ಸಿನಿಂದಲೇ ಸಮೃದ್ಧರಾಗಿದ್ದಾರೆ.
ಏತೌ ಹಿ ಕರ್ಮಣಾ ಲೋಕಂ ನಂದಯಾಮಾಸತುರ್ಧ್ರುವೌ ॥10॥
ದ್ವಿಧಾಭೂತೌ ಮಹಾಪ್ರಾಜ್ಞೌ ವಿದ್ಧಿ ಬ್ರಹ್ಮ ಪರಂತಪೌ।
ಅಸುರಾಣಾಂ ವಿನಾಶಾಯ ದೇವಗಂಧರ್ವಪೂಜಿತೌ ॥11॥
ಇವರು ತಮ್ಮ ಕರ್ಮಗಳಿಂದ ಲೋಕಗಳಿಗೆ ಆನಂದವನ್ನು ನೀಡಿದರು. ಪರಂತಪರೂ, ಮಹಾಪ್ರಾಜ್ಞರೂ ಆದ ಇವರಿಬ್ಬರನ್ನು ಪರಬ್ರಹ್ಮನ ಎರಡು ಶಾಶ್ವತವಾದ ರೂಪವೆಂದು ತಿಳಿ. ಅಸುರರ ವಿನಾಶಕ್ಕಾಗಿ ಇವರು ದೇವ-ಗಂಧರ್ವರಿಂದ ಪೂಜಿಸಲ್ಪಡುತ್ತಾರೆ.
ಭೀಷ್ಮ
ಜಗಾಮ ಶಕ್ರಸ್ತಚ್ಛ್ರುತ್ವಾ ಯತ್ರ ತೌ ತೇಪತುಸ್ತಪಃ।
ಸಾರ್ಧಂ ದೇವಗಣೈಃ ಸರ್ವೈಃ ಸಹಸ್ರಾಕ್ಷಃ ಸಮಾವೃತಃ ॥12॥
ಭೀಷ್ಮ ಸಹಸ್ರಾಕ್ಷನಾದ ಇಂದ್ರನು ದೇವಗಣಗಳಿಂದ ಕೂಡಿದವನಾಗಿ ಅವರ ಜೊತೆಯಲ್ಲಿ ನರ-ನಾರಾಯಣರು ತಪಸ್ಸು ಮಾಡುವ ಸ್ಥಳಕ್ಕೆ ಹೋದನು.
ತಸ್ಮಿನ್ ದೇವಾಸುರೇ ಯುದ್ಧೇ ಭಯೇ ಜಾತೇ ದಿವೌಕಸಾಮ್।
ಅಯಾಚತ ಮಹಾತ್ಮಾನೌ ನರನಾರಾಯಣೌ ವರಮ್ ॥13॥
ಆ ದೇವಾಸುರ ಯುದ್ಧದಲ್ಲಿ ದೇವತೆಗಳಿಗೆ ಭಯ ಉಂಟಾಗುತ್ತಿರಲು ಅವನು ಮಹಾತ್ಮರಾದ ನರ-ನಾರಾಯಣರನ್ನು ವರವನ್ನು ಬೇಡಿದನು.
ತಾವಬ್ರೂತಾಂ ವೃಣೀಷ್ವೇತಿ ತದಾ ಭರತಸತ್ತಮ।
ಅಥೈತಾವಬ್ರವೀಚ್ಛಕ್ರಃ ಸಾಹ್ಯಂ ನಃ ಕ್ರಿಯತಾಮಿತಿ ॥14॥
ಎಲೈ ಭರತಸತ್ತಮನೇ, ಆಗ ಅವರು ವರವನ್ನು ಕೇಳು ಎಂದು ಹೇಳಿದರು. ಆಗ ಇಂದ್ರನು ಅವರನ್ನು ಕುರಿತು ನನಗೆ ಸಹಾಯವನ್ನು ಮಾಡಿ ಎಂದು ಕೇಳಿದನು.
ತತಸ್ತೌ ಶಕ್ರಮಬ್ರೂತಾಂ ಕರಿಷ್ಯಾವೋ ಯದಿಚ್ಛಸಿ।
ತಾಭ್ಯಾಂ ಚ ಸಹಿತಃ ಶಕ್ರೋ ವಿಜಿಗ್ಯೇ ದೈತ್ಯದಾನವಾನ್ ॥15॥
ಅವರಿಬ್ಬರೂ ಇಂದ್ರನನ್ನು ಕುರಿತು ನೀನು ಬಯಸಿದಂತೆ ಮಾಡುತ್ತೇವೆ ಎಂದು ಹೇಳಿದರು. ಅವರಿಂದ ಸಹಿತನಾಗಿ ಇಂದ್ರನು ದೈತ್ಯ-ದಾನವರನ್ನು ಗೆದ್ದನು.
ನರ ಇಂದ್ರಸ್ಯ ಸಂಗ್ರಾಮೇ ಹತ್ವಾ ಶತ್ರೂನ್ ಪರಂತಪಃ।
ಪೌಲೋಮಾನ್ ಕಾಲಕೇಯಾಂಶ್ಚ ಸಹಸ್ರಾಣಿ ಶತಾನಿ ಚ ॥16॥
ಏಷೋಽಭ್ರಾಂತೋ ರಥೇ ತಿಷ್ಠನ್ ಭಲ್ಲೇನಾಪಹರಚ್ಛಿರಃ।
ಜಂಭಸ್ಯ ಗ್ರಸಮಾನಸ್ಯ ತಥಾ ಹ್ಯರ್ಜುನ ಆಹವೇ ॥17॥
ಪರಂತಪನಾದ ನರನು ಇಂದ್ರನ ಆ ಯುದ್ಧದಲ್ಲಿ ಶತ್ರುಗಳನ್ನು ಕೊಂದು ಪೌಲೋಮರನ್ನೂ ಮತ್ತು ಕಾಲಕೇಯರನ್ನೂ ಸಹಸ್ರ ಸಂಖ್ಯೆಯಲ್ಲಿ, ಶತಸಂಖ್ಯೆಯಲ್ಲಿ ಕೊಂದು ಯಾವ ಪ್ರಮಾದವೂ ಇಲ್ಲದೆ ರಥದಲ್ಲಿ ಕುಳಿತು ಎಲ್ಲವನ್ನೂ ನುಂಗುತ್ತಿದ್ದ ಜಂಭಾಸುರನ ಶಿರಸ್ಸನ್ನು ಭಲ್ಲದಿಂದ ಕತ್ತರಿಸಿದನು. ಆ ನರನೇ ಅರ್ಜುನನಾಗಿ ಯುದ್ಧದಲ್ಲಿ ಹಾಗೆಯೇ ನಡೆದುಕೊಳ್ಳುತ್ತಾನೆ.
ಏಷ ಪಾರೇ ಸಮುದ್ರಸ್ಯ ಹಿರಣ್ಯಪುರಮಾರುಜತ್।
ಹತ್ವಾ ಷಷ್ಟಿಸಹಸ್ರಾಣಿ ನಿವಾತಕವಚಾನ್ ರಣೇ ॥18॥
ಈ ನರನು ಸಮುದ್ರ ತೀರದಲ್ಲಿ ಅರವತ್ತು ಸಾವಿರ ನಿವಾತಕವಚರನ್ನು ಯುದ್ಧದಲ್ಲಿ ಕೊಂದು ಹಿರಣ್ಯಪುರವನ್ನು ಮರ್ದಿಸಿದನು.
ಏಷ ದೇವಾನ್ ಸಹೇಂದ್ರೇಣ ಜಿತ್ವಾ ಪರಪುರಂಜಯಃ।
ಅತರ್ಪಯನ್ ಮಹಾಬಾಹುರರ್ಜುನೋ ಜಾತವೇದಸಮ್ ॥19॥
ನಾರಾಯಣಸ್ತಥೈವಾತ್ರ ಭೂಯಸೋಽನ್ಯಾನ್ ಜಘಾನ ಹ ॥20॥
ಪರಪುರಂಜಯನಾದ ಈ ನರನು ಮಹಾಬಾಹುವಾದ ಅರ್ಜುನನಾಗಿ ಇಂದ್ರನಿಂದ ಸಹಿತರಾದ ದೇವತೆಗಳನ್ನು ಗೆದ್ದು, ಅಗ್ನಿಗೆ ತೃಪ್ತಿಯನ್ನು ಉಂಟು ಮಾಡಿದನು. ಹಾಗೆಯೇ ನಾರಾಯಣನೂ ಸಹ ಆ ದೇವಾಸುರ ಯುದ್ಧದಲ್ಲಿ ಬಹಳ ಅಸುರರನ್ನು ಸಂಹಾರ ಮಾಡಿದನು.
ಏವಮೇತೌ ಮಹಾವೀರ್ಯೌ ತೌ ಪಶ್ಯತ ಸಮಾಗತೌ।
ವಾಸುದೇವಾರ್ಜುನೌ ವೀರೌ ಸಮವೇತೌ ಮಹಾರಥೌ ॥21॥
ಹೀಗೆಯೇ ಇವರಿಬ್ಬರೂ ಮಹಾಪರಾಕ್ರಮವುಳ್ಳವರು. ಅವರಿಬ್ಬರೂ ಒಟ್ಟಿಗೆ ಇರುವುದನ್ನು ನೋಡಿ. ಮಹಾರಥರಾದ ಕೃಷ್ಣಾರ್ಜುನರೇ ಒಟ್ಟಿಗೆ ಇರುವ ಆ ವೀರರು.
ನರನಾರಾಯಣೌ ದೇವೌ ಪೂರ್ವದೇವಾವಿತಿ ಶ್ರುತಿಃ।
ಅಜೇಯೌ ಮಾನುಷೇ ಲೋಕೇ ಸೇಂದ್ರೈರಪಿ ಸುರಾಸುರೈಃ ॥22॥
ಶ್ರುತಿಗಳಲ್ಲಿ ನರನಾರಾಯಣರೆಂದು ಕರೆಸಿಕೊಳ್ಳಲ್ಪಡುವ ಈ ದೇವತೆಗಳು ಇಂದ್ರನಿಂದ ಕೂಡಿದ ಸುರಾಸುರರಿಂದಲೂ ಮನುಷ್ಯಲೋಕದಲ್ಲಿ ಅಜೇಯರಾದವರು.
ಏಷ ನಾರಾಯಣಃ ಕೃಷ್ಣಃ ಫಲ್ಗುನಶ್ಚ ನರಃ ಸ್ಮೃತಃ ॥23॥
ನಾರಾಯಣೋ ನರಶ್ಚೈವ ಸತ್ತ್ವಮೇಕಂ ದ್ವಿಧಾ ಕೃತಮ್ ॥24॥

ಈ ಕೃಷ್ಣನೇ ನಾರಾಯಣ ಮತ್ತು ಅರ್ಜುನನೇ ನರ ಎಂದು ಹೇಳಲ್ಪಡುತ್ತದೆ. ನರ-ನಾರಾಯಣರೆಂದರೆ ಒಂದೇ ಸಾಮರ್ಥ್ಯವೇ ಎರಡು ಭಾಗವಾದಂತೆ.
ಏತೌ ಹಿ ಕರ್ಮಣಾ ಲೋಕಾನಶ್ನುವಾತೇಽಕ್ಷಯಾನ್ ಧ್ರುವಾನ್ |
ತತ್ರ ತತ್ರೈವ ಜಾಯೇತೇ ಯುದ್ಧಕಾಲೇ ಪುನಃ ಪುನಃ ॥25॥
ಇವರಿಬ್ಬರೂ ತಮ್ಮ ಶ್ರೇಷ್ಠವಾದ ಕರ್ಮಗಳಿಂದ ಅಕ್ಷಯವೂ, ಶಾಶ್ವತವೂ ಆದ ಲೋಕಗಳನ್ನು ಹೊಂದುತ್ತಾರೆ. ಯುದ್ಧಕಾಲದಲ್ಲಿ ಅಲ್ಲಲ್ಲಿ ಪುನಃ ಪುನಃ ಅವತರಿಸುತ್ತಾರೆ.
ತಸ್ಮಾತ್ ಕರ್ಮೈವ ಕರ್ತವ್ಯಮಿತಿ ಹೋವಾಚ ನಾರದಃ |
ಏತದ್ಧಿ ಸರ್ವಮಾಚಷ್ಟ ವೃಷ್ಣಿಚಕ್ರಸ್ಯ ವೇದವಿತ್ ॥26॥
ಆದ್ದರಿಂದ ನಾರದರು ಸಂಧಿಯನ್ನೇ ಮಾಡಿಕೊಳ್ಳಬೇಕೆಂದು ಹೇಳಿದರು. ವೇದಜ್ಞರಾದ ಅವರು ವೃಷ್ಣಿಸಮೂಹದ ಮುಂದೆ ಈ ಎಲ್ಲಾ ವಿಷಯವನ್ನೂ ಹೇಳಿದರು.
ಶಂಖಚಕ್ರಗದಾಹಸ್ತಂ ಯದಾ ದ್ರಕ್ಷ್ಯಸಿ ಕೇಶವಮ್ |
ಪರ್ಯಾದದಾನಂ ಚಾಸ್ತ್ರಾಣಿ ಭೀಮಧನ್ವಾನಮರ್ಜುನಮ್ ॥27॥
ಸನಾತನೌ ಮಹಾತ್ಮಾನೌ ಕೃಷ್ಣಾವೇಕರಥೇ ಸ್ಥಿತೌ |
ದುರ್ಯೋಧನ ತದಾ ತಾತ ಸ್ಮರ್ತಾಸಿ ವಚನಂ ಮಮ ॥28॥
ನ ಚೇದಯಮಭಾವಃ ಸ್ಯಾತ್ ಕುರೂಣಾಂ ಪ್ರತ್ಯುಪಸ್ಥಿತಃ ॥29॥
ಎಲೈ ಪ್ರೀತಿಪಾತ್ರನಾದ ದುರ್ಯೋಧನನೇ, ಶಂಖಚಕ್ರಗದಾಧಾರಿಯಾದ ಕೃಷ್ಣನನ್ನೂ ಮತ್ತು ಭಯಂಕರ ಧನುಸ್ಸನ್ನೂ ಮತ್ತು ಅಸ್ತ್ರಗಳನ್ನೂ ಕೈಗೆ ತೆಗೆದುಕೊಳ್ಳುವ ಅರ್ಜುನನನ್ನೂ - ಈ ಇಬ್ಬರು ಮಹಾತ್ಮರಾದ ಕೃಷ್ಣರು ಒಂದೇ ರಥದಲ್ಲಿ ಕುಳಿತಿರುವುದನ್ನೂ ನೋಡಿದಾಗ ಕುರುಗಳಾದ ನಮಗೆ ವಿನಾಶಕಾಲವೇ ಸಮೀಪಿಸಿದ್ದರೆ ನನ್ನ ಮಾತನ್ನು ಸ್ಮರಿಸುವಿ.
ಅರ್ಥಾಚ್ಚ ತಾತ ಧರ್ಮಾಚ್ಚ ತವ ಬುದ್ಧಿರುಪಪ್ಲುತಾ |
ನ ಚೇದ್ ಗ್ರಹೀಷ್ಯಸೇ ವಾಕ್ಯಂ ಶ್ರೋತಾಸಿ ಸುಬಹೂನ್ ಹತಾನ್ ॥
ಎಲೈ ಪ್ರೀತಿಪಾತ್ರನೇ, ನಿನ್ನ ಬುದ್ಧಿಯು ಅರ್ಥದಿಂದಲೂ ಮತ್ತು ಧರ್ಮದಿಂದಲೂ ಸರಿದು ಕಲುಷಿತವಾಗಿದೆ. ನನ್ನ ಮಾತನ್ನು ಕೇಳದಿದ್ದರೆ ಬಹಳ ಜನರು ಹತರಾದ ವಾರ್ತೆಯನ್ನು ಕೇಳುವಿ.
ತವೈವ ಹಿ ಮತಿಂ ಸರ್ವೇ ಕುರವಃ ಪರ್ಯುಪಾಸತೇ |
ತ್ರಯಾಣಾಮೇವ ಚ ಮತಂ ತತ್ ತ್ವಮೇಕೋಽನುಮನ್ಯಸೇ ॥31॥
ನಿನ್ನ ಅಭಿಪ್ರಾಯವನ್ನೇ ಎಲ್ಲ ಕುರುಗಳೂ ಅನುಸರಿಸುತ್ತಾರೆ. ಈ ಮೂರು ಜನರ ಅಭಿಪ್ರಾಯವನ್ನು ನೀನೊಬ್ಬನೇ ಸನ್ಮಾನಿಸುತ್ತೀಯೆ.

ರಾಮೇಣ ಚೈವ ಶಪ್ತಸ್ಯ ಕರ್ಣಸ್ಯ ಭರತರ್ಷಭ |
ದುರ್ಜಾತೇಃ ಸೂತಪುತ್ರಸ್ಯ ಶಕುನೇಃ ಸೌಬಲಸ್ಯ ಚ ॥32॥
ತಥಾ ಕ್ಷುದ್ರಸ್ಯ ಪಾಪಸ್ಯ ಭ್ರಾತುರ್ದುಃಶಾಸನಸ್ಯ ಚ ॥33॥
ಎಲೈ ಭರತರ್ಷಭನೇ, ಪರಶುರಾಮರಿಂದ ಶಾಪಕ್ಕೆ ಒಳಗಾದ, ನೀಚಜಾತಿಯಲ್ಲಿ ಹುಟ್ಟಿದ ಸೂತಪುತ್ರನಾದ ಕರ್ಣ, ಸುಬಲಪುತ್ರನಾದ ಶಕುನಿ ಮತ್ತು ಕ್ಷುದ್ರನೂ, ಪಾಪಾತ್ಮನೂ ಆದ ನಿನ್ನ ತಮ್ಮನಾದ ದುಶ್ಶಾಸನ (ಇವರೇ ಆ ಮೂವರು).
ಕರ್ಣಃ
ನೈವಮಾಯುಷ್ಮತಾ ವಾಚ್ಯಂ ಯನ್ಮಾಮಾತ್ಥ ಪಿತಾಮಹ |
ಕ್ಷತ್ರಧರ್ಮೇ ಸ್ಥಿತೋ ಹ್ಯಸ್ಮಿನ್ ಸ್ವಧರ್ಮಾದನಪೇಯಿವಾನ್ ॥34॥
ಕರ್ಣ ಪಿತಾಮಹನಾದ ಭೀಷ್ಮನೇ, ನನಗೆ ಹೇಳಿದಂತೆ ಹಿರಿಯನಾದ ನೀನು ಮಾತನಾಡಬಾರದು. ನಾನು ಕ್ಷತ್ರಧರ್ಮದಲ್ಲಿ ನಿಂತು ಎಂದೂ ಸ್ವಧರ್ಮದಿಂದ ದೂರ ಸರಿದಿಲ್ಲ.
ಕಿಂಚಾನ್ಯನ್ಮಯಿ ದುರ್ವೃತ್ತಂ ಯೇನ ಮಾಂ ಪರಿಗರ್ಹಸೇ |
ನ ಹಿ ಮೇ ವೃಜಿನಂ ಕಿಂಚಿದ್ ಧಾರ್ತರಾಷ್ಟ್ರಾ ವಿದುಃ ಕ್ವಚಿತ್ ॥35॥
ನೀನು ನನ್ನನ್ನು ನಿಂದಿಸಲು ಕಾರಣವಾದ ಕೆಟ್ಟನಡತೆಯಾದರೂ ನನ್ನಲ್ಲಿ ಯಾವುದಿದೆ? ಧೃತರಾಷ್ಟ್ರಪುತ್ರರು ತಿಳಿದಂತೆ ನಾನು ಯಾವ ಅಪರಾಧವನ್ನೂ ಮಾಡಿಲ್ಲ.
ನಾಚರಂ ವೃಜಿನಂ ಕಿಂಚಿದ್ ಧಾರ್ತರಾಷ್ಟ್ರಸ್ಯ ನಿತ್ಯಶಃ |
ಅಹಂ ಹಿ ಪಾಂಡವಾನ್ ಸರ್ವಾನ್ ಹನಿಷ್ಯಾಮಿ ರಣೇ ಸ್ಥಿತಾನ್ ॥
ಪ್ರಾಗ್ವಿರುದ್ಧೈಃ ಶಮಃ ಸದ್ಭಿಃ ಕಥಂ ವಾ ಕ್ರಿಯತೇ ಪುನಃ ॥37॥
ದುರ್ಯೋಧನನಿಗಂತೂ ಯಾವಾಗಲೂ ಯಾವ ಅಪರಾಧವನ್ನೂ ಮಾಡಿಲ್ಲ. ನಾನು ಯುದ್ಧದಲ್ಲಿ ನನ್ನ ಎದುರಿಗೆ ನಿಲ್ಲುವ ಪಾಂಡವರೆಲ್ಲರನ್ನೂ ಕೊಲ್ಲುವೆನು. ಮೊದಲು ವಿರೋಧವನ್ನು ಮಾಡಿದವರ ಜೊತೆಯಲ್ಲಿ ಸಜ್ಜನರು ಪುನಃ ಹೇಗೆ ಸಂಧಿಯನ್ನು ಮಾಡಿಕೊಳ್ಳುತ್ತಾರೆ?
ರಾಜ್ಞೋ ಹಿ ಧೃತರಾಷ್ಟ್ರಸ್ಯ ಸರ್ವಂ ಕಾರ್ಯಂ ಪ್ರಿಯಂ ಮಯಾ |
ತಥಾ ದುರ್ಯೋಧನಸ್ಯಾಪಿ ಸ ಹಿ ರಾಜ್ಯೇ ಸಮಾಹಿತಃ ॥38॥
ಧೃತರಾಷ್ಟ್ರರಾಜನಿಗೆ ನಾನು ಎಲ್ಲ ರೀತಿಯಿಂದಲೂ ಪ್ರಿಯವಾದುದನ್ನೇ ಮಾಡಬೇಕು. ಅದರಂತೆ ದುರ್ಯೋಧನನಿಗೂ ಸಹ. ಏಕೆಂದರೆ ಅವನೇ ರಾಜ್ಯದಲ್ಲಿ ಪ್ರತಿಷ್ಠಿತನಾಗಿದ್ದಾನಷ್ಟೆ?

ವೈಶಂಪಾಯನಃ
ಕರ್ಣಸ್ಯ ತು ವಚಃ ಶ್ರುತ್ವಾ ಭೀಷ್ಮಃ ಶಾಂತನವಃ ಪುನಃ |
ಧೃತರಾಷ್ಟ್ರಂ ಮಹಾರಾಜಮಾಭಾಷ್ಯೇದಂ ವಚೋಽಬ್ರವೀತ್ ॥39॥
ವೈಶಂಪಾಯನ ಕರ್ಣನ ಮಾತುಗಳನ್ನು ಕೇಳಿ ಶಂತನುಪುತ್ರನಾದ ಭೀಷ್ಮನು ಮಹಾರಾಜನಾದ ಧೃತರಾಷ್ಟ್ರನನ್ನು ಸಂಬೋಧಿಸಿ ಪುನಃ ಈ ಮಾತುಗಳನ್ನು ಆಡಿದನು.
ಯದಯಂ ಕತ್ಥತೇ ನಿತ್ಯಂ ಹಂತಾಽಹಂ ಪಾಂಡವಾನಿತಿ |
ನಾಯಂ ಕಲಾಽಪಿ ಸಂಪೂರ್ಣಾ ಪಾಂಡವಾನಾಂ ಮಹಾತ್ಮನಾಮ್ ॥
ಈ ಕರ್ಣನು ಯಾವಾಗಲೂ ನಾನು ಪಾಂಡವರನ್ನು ಕೊಲ್ಲುವೆನು ಎಂದು ಹೊಗಳಿಕೊಳ್ಳುತ್ತಿದ್ದಾನಷ್ಟೆ? ಇವನು ಮಹಾತ್ಮರಾದ ಪಾಂಡವರ ಒಂದು ಕಲೆಗೂ ಪೂರ್ಣವಾಗಿ ಸಮನಾಗುವುದಿಲ್ಲ.
ಅನಯೋ ಯೋಽಯಮಾಗಂತಾ ಪುತ್ರಾಣಾಂ ತೇ ದುರಾತ್ಮನಾಮ್ |
ತದಸ್ಯ ಕರ್ಮ ಜಾನೀಹಿ ಸೂತಪುತ್ರಸ್ಯ ದುರ್ಮತೇಃ ॥41॥
ನಿನ್ನ ಪುತ್ರರಿಗೆ ಯಾವ ವಿಪತ್ತು ಪ್ರಾಪ್ತವಾಗಲಿದೆಯೋ ಅದನ್ನು ಈ ದುರ್ಮತಿಯಾದ ಸೂತಪುತ್ರನ ಕರ್ಮವೆಂದು ತಿಳಿ.
ಏತಮಾಶ್ರಿತ್ಯ ಪುತ್ರಸ್ತೇ ಮಂದಬುದ್ಧಿಃ ಸುಯೋಧನಃ |
ಅವಮನ್ಯತಿ ತಾನ್ ವೀರಾನ್ ದೇವಪುತ್ರಾನರಿಂದಮಾನ್ ॥42॥
ನಿನ್ನ ಪುತ್ರನಾದ ಮಂದಬುದ್ಧಿಯುಳ್ಳ ಸುಯೋಧನನು ಇವನನ್ನು ಆಶ್ರಯಿಸಿ, ದೇವಪುತ್ರರಾದ ಅರಿಂದಮರಾದ ವೀರರಾದ ಪಾಂಡವರನ್ನು ಅವಮಾನಿಸುತ್ತಿದ್ದಾನೆ.
ಕಿಂಚಾಪ್ಯೇತೇನ ತತ್ ಕರ್ಮ ಕೃತಂ ಪೂರ್ವಂ ನ ದುಷ್ಕರಮ್ |
ತೈರ್ಯಥಾ ಪಾಂಡವೈಃ ಸರ್ವೈರೇಕೈಕೇನ ಕೃತಂ ಪುರಾ ॥43॥
ಅಲ್ಲದೆ ಹಿಂದೆ ಪಾಂಡವರು ಒಬ್ಬೊಬ್ಬರೂ ಎಂತಹ ದುಷ್ಕರವಾದ ಕರ್ಮವನ್ನು ಮಾಡಿದ್ದಾರೆಯೋ ಅದರಂತೆ ಇವನು ಹಿಂದೆ ಯಾವ ದುಷ್ಕರವಾದ ಕರ್ಮವನ್ನೂ ಮಾಡಿಲ್ಲ.
ದೃಷ್ಟ್ವಾ ವಿರಾಟನಗರೇ ಭ್ರಾತರಂ ನಿಹತಂ ಪ್ರಿಯಮ್ |
ಧನಂಜಯೇನ ವಿಕ್ರಮ್ಯ ಕಿಮನೇನ ತದಾ ಕೃತಮ್ ॥44॥
ವಿರಾಟನಗರದಲ್ಲಿ ಅರ್ಜುನನಿಂದ ತನ್ನ ಪ್ರಿಯನಾದ ಸಹೋದರನು ಪರಾಕ್ರಮಿಸಿ ಕೊಲ್ಲಲ್ಪಟ್ಟಾಗ ಇವನು ಏನನ್ನು ಮಾಡಿದನು?
ಸರ್ವೇ ಹ್ಯಸ್ತ್ರವಿದಃ ಶೂರಾಃ ಸರ್ವೇ ಪ್ರಾಪ್ತಾ ಮಹದ್ಯಶಃ |
ಅಪಿ ಸರ್ವಾಮರೈಶ್ವರ್ಯಂ ತ್ಯಜೇಯುರ್ನ ಪುನರ್ಜಯಮ್ ॥45॥
ಪಾಂಡವರೆಲ್ಲರೂ ಅಸ್ತ್ರಜ್ಞರು, ಶೂರರು, ಮಹಾಕೀರ್ತಿಯನ್ನು ಪಡೆದವರು. ದೇವತೆಗಳ ಐಶ್ವರ್ಯವನ್ನೆಲ್ಲಾ ತ್ಯಜಿಸಿಯಾರು, ಆದರೆ ಜಯವನ್ನು ಮಾತ್ರ ಬಿಡುವುದಿಲ್ಲ.
ಸಹಿತಾನ್ ಹಿ ಕುರೂನ್ ಸರ್ವಾನ್ ಅಭಿಯಾತೋ ಧನಂಜಯಃ |
ಪ್ರಮಥ್ಯ ಚಾಚ್ಛಿನದ್ ವಾಸಃ ಕಿಮಯಂ ಪ್ರೋಷಿತಸ್ತದಾ ॥46॥
ಅರ್ಜುನನು ಎಲ್ಲಾ ಕುರುಗಳು ಒಟ್ಟಿಗೆ ಇದ್ದಾಗಲೇ ಅವರ ವಿರುದ್ಧವಾಗಿ ಯುದ್ಧವನ್ನು ಮಾಡಿ, ತನ್ನ ಬಲದಿಂದ ಅವರ ವಸ್ತ್ರಗಳನ್ನು ಅಪಹರಿಸಿದನು. ಆಗ ಈ ಕರ್ಣನು ಎಲ್ಲಿಗೆ ಪ್ರಯಾಣ ಮಾಡಿದನು?
ಗಂಧರ್ವೈರ್ಘೋಷಯಾತ್ರಾಯಾಂ ಹ್ರಿಯತೇ ಯತ್ ಸುತಸ್ತವ |
ಕ್ವ ತದಾ ಸೂತಪುತ್ರೋಽಸೌ ಯ ಇದಾನೀಂ ವೃಷಾಯತೇ ॥47॥
ಘೋಷಯಾತ್ರೆಯಲ್ಲಿ ಗಂಧರ್ವರು ನಿನ್ನ ಪುತ್ರರನ್ನು ಎಳೆದುಕೊಂಡು ಹೋಗುವಾಗ ಈಗ ಗಂಡಸಾಗಿ ಮಾತನಾಡುವ ಈ ಕರ್ಣನು ಆಗ ಎಲ್ಲಿಗೆ ಹೋಗಿದ್ದನು?
ನನು ತತ್ರಾಪಿ ಭೀಮೇನ ಪಾರ್ಥೇನ ಚ ಮಹಾತ್ಮನಾ |
ಯಮಾಭ್ಯಾಮೇವ ಸಂಗಮ್ಯ ಗಂಧರ್ವಾಸ್ತೇ ಪರಾಜಿತಾಃ ॥48॥
ಆಗಲೂ ಸಹ ಮಹಾತ್ಮರಾದ ಭೀಮಾರ್ಜುನರು ಮತ್ತು ನಕುಲ-ಸಹದೇವರು ಗಂಧರ್ವರ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವರನ್ನು ಸೋಲಿಸಿದರಷ್ಟೆ?
ಏತಾನ್ಯಸ್ಯ ಮೃಷೋಕ್ತಾನಿ ಬಹೂನಿ ಭರತರ್ಷಭ |
ವೈಕರ್ತನಸ್ಯ ಭದ್ರಂ ತೇ ಸದಾ ಧರ್ಮಾರ್ಥಲೋಪಿನಃ ॥49॥
ಆದ್ದರಿಂದ ಎಲೈ ಭರತರ್ಷಭನೇ, ಇವನು ಆಡಿದ ಬಹಳ ಮಾತುಗಳು ಸುಳ್ಳು. ನಿನಗೆ ಮಂಗಳವಾಗಲಿ, ಈ ಕರ್ಣನು ಯಾವಾಗಲೂ ಧರ್ಮಾರ್ಥಗಳನ್ನು ಲೋಪ ಮಾಡುವವನು.
ವೈಶಂಪಾಯನಃ
ಭೀಷ್ಮಸ್ಯ ವಚನಂ ಶ್ರುತ್ವಾ ಭಾರದ್ವಾಜೋ ಮಹಾಮನಾಃ |
ಧೃತರಾಷ್ಟ್ರಮುವಾಚೇದಂ ರಾಜಮಧ್ಯೇಽಭಿಪೂಜಯನ್ ॥50॥
ವೈಶಂಪಾಯನ ಭೀಷ್ಮರ ಮಾತುಗಳನ್ನು ಕೇಳಿ ಉದಾರಿಗಳಾದ ದ್ರೋಣರು, ರಾಜರ ಮಧ್ಯದಲ್ಲಿ ಧೃತರಾಷ್ಟ್ರನನ್ನು ಗೌರವಿಸುತ್ತಾ ಈ ಮಾತುಗಳನ್ನು ಆಡಿದರು.
ಯದಾಹ ಭರತಶ್ರೇಷ್ಠೋ ಭೀಷ್ಮಸ್ತತ್ ಕ್ರಿಯತಾಂ ನೃಪ |
ನ ಕಾಮಮವಲಿಪ್ತಾನಾಂ ವಚನಂ ಕರ್ತುಮರ್ಹಸಿ ॥51॥

ಪುರಾ ಯುದ್ಧಾತ್ ಸಾಧು ಮನ್ಯೇ ಪಾಂಡವೈಃ ಸಹ ಸಂಗತಮ್ ॥52॥
ಎಲೈ ರಾಜನೇ, ಭರತಶ್ರೇಷ್ಠರಾದ ಭೀಷ್ಮರು ಹೇಳಿದಂತೆ ನಡೆದುಕೊ. ದುರಹಂಕಾರಿಗಳು ಮನಸ್ಸಿಗೆ ಬಂದಂತೆ ಆಡಿದ ಮಾತುಗಳನ್ನು ನೀನು ಕೇಳಬೇಡ. ಯುದ್ಧ ಪ್ರಾರಂಭವಾಗುವುದಕ್ಕಿಂತ ಮೊದಲೇ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವುದು ಯೋಗ್ಯವೆಂದು ನಾನು ಭಾವಿಸುತ್ತೇನೆ.
ಯದ್ವಾಕ್ಯಮರ್ಜುನೇನೋಕ್ತಂ ಸಂಜಯೇನ ನಿವೇದಿತಮ್ |
ಸರ್ವಂ ತದಭಿಜಾನಾಮಿ ಕರಿಷ್ಯತಿ ಚ ಪಾಂಡವಃ ॥53॥
ಅರ್ಜುನನು ಆಡಿದ ಯಾವ ಮಾತುಗಳನ್ನು ಸಂಜಯನು ನಿನಗೆ ನಿವೇದಿಸಿದ್ದಾನೆಯೋ ಅದೆಲ್ಲವನ್ನೂ ನಾನು ಅನುಮೋದಿಸುತ್ತೇನೆ. ಪಾಂಡುಪುತ್ರನಾದ ಅರ್ಜುನನು ಹಾಗೆಯೇ ಮಾಡುವನು.
ವಧೇ ನೂನಂ ಭವೇಚ್ಛಾಂತಿಃ ತವ ವಾ ಫಲ್ಗುನಸ್ಯ ವಾ |
ನ ತು ಜೇತಾಽರ್ಜುನಸ್ಯಾಸ್ತಿ ಹಂತಾ ವಾಽಸ್ಯ ನ ವಿದ್ಯತೇ ॥54॥
ನಿನ್ನ ಅಥವಾ ಅರ್ಜುನನ ವಧೆಯಾದರೆ ಶಾಂತಿ ಉಂಟಾಗುತ್ತದೆ. ಆದರೆ ಅರ್ಜುನನು ಗೆಲ್ಲುವವನಾಗಲೀ ಅಥವಾ ಕೊಲ್ಲುವವನಾಗಲೀ ಯಾವನೂ ಇಲ್ಲ.
ಮನ್ಯುಸ್ತಸ್ಯ ಕಥಂ ಶಾಮ್ಯೇನ್ಮಂದಾನ್ ಪ್ರತಿ ಯ ಉತ್ಥಿತಃ |
ಅನ್ಯೇಽಪ್ಯಸತ್ರಾಣಿ ಜಾನಂತಿ ಯುಧ್ಯಂತಿ ವಿಜಯಂತಿ ಚ ॥55॥
ಅಯಂ ಹಿ ವಿಜಯಸ್ತ್ವೇವ ಶ್ರೂಯತೇ ಫಲ್ಗುನಸ್ಯ ಚ |
ತ್ರಯಸ್ತ್ರಿಂಶತ್ಸಹೇಂದ್ರೇಣ ಖಾಂಡವೇಽಗ್ನಿಮತರ್ಪಯತ್ ॥56॥
ನಿನ್ನ ಮಂದರಾದ ಮಕ್ಕಳ ಮೇಲೆ ಅವನಿಗೆ ಉಂಟಾಗಿರುವ ಕೋಪವು ಹೇಗೆ ಶಮನವನ್ನು ಹೊಂದೀತು? ಬೇರೆಯವರೂ ಅಸ್ತ್ರಗಳನ್ನು ತಿಳಿದಿದ್ದಾರೆ, ಯುದ್ಧವನ್ನು ಮಾಡುತ್ತಾರೆ ಮತ್ತು ಗೆಲ್ಲುತ್ತಾರೆ. ಆದರೆ ಅರ್ಜುನನ ವಿಷಯದಲ್ಲಿ ಮಾತ್ರ ನಿಯಮೇನ ಗೆಲ್ಲುವನೆಂಬ ಅವನ ವಿಜಯವು ಕೇಳಿ ಬರುತ್ತದೆ. ಖಾಂಡವವನದಲ್ಲಿ ಮೂವತ್ಮೂರು ದೇವತೆಗಳಿಂದ ಸಹಿತನಾದ ಇಂದ್ರನನ್ನು ಸೋಲಿಸಿ ಅವನು ಅಗ್ನಿಯನ್ನು ತೃಪ್ತಿಪಡಿಸಿದನು.
ವಿಜಿಗಾಯ ಸುರಾನ್ ಸರ್ವಾನ್ ನಾಸ್ಯ ವೇದ್ಮಿ ಪರಾಜಯಮ್ |
ಯಸ್ಯ ಯಂತಾ ಹೃಷೀಕೇಶಃ ಶೀಲವೃತ್ತಸಮೋ ಯುಧಿ ॥57॥
ನ ಹ್ಯಸ್ಯ ತ್ರಿಷು ಲೋಕೇಷು ಸದೃಶೋಽಸ್ತಿ ಧನುರ್ಧರಃ ॥58॥
ಯಾವನಿಗೆ ತನಗೆ ಸಮಾನವಾದ ಶೀಲವೃತ್ತವುಳ್ಳ ಕೃಷ್ಣನು ಯುದ್ಧದಲ್ಲಿ ಸಾರಥಿಯಾಗಿದ್ದಾನೆಯೋ ಅವನು ಎಲ್ಲ ದೇವತೆಗಳನ್ನೂ ಗೆದ್ದಿದ್ದಾನೆ. ಅವನಿಗೆ ಪರಾಜಯವಾಗುವುದೆಂದು ನಾನು ತಿಳಿಯುವುದಿಲ್ಲ. ಅವನಿಗೆ ಸಮನಾದ ಧನುರ್ಧರರು ಮೂರುಲೋಕಗಳಲ್ಲಿಯೂ ಇಲ್ಲ.
ವೈಶಂಪಾಯನಃ
ಅನಾದೃತ್ಯ ತು ತದ್ವಾಕ್ಯಮರ್ಥವದ್ ದ್ರೋಣಭೀಷ್ಮಯೋಃ |
ತತಃ ಸ ಸಂಜಯಂ ರಾಜಾ ಪರ್ಯಪೃಚ್ಛತ ಪಾಂಡವಾನ್ ॥49॥
ವೈಶಂಪಾಯನ ದ್ರೋಣ-ಭೀಷ್ಮರ ಅರ್ಥವತ್ತಾದ ಆ ಮಾತುಗಳನ್ನು ತಿರಸ್ಕರಿಸಿ ಧೃತರಾಷ್ಟ್ರನು ಸಂಜಯನನ್ನು ಕುರಿತು ಪಾಂಡವರ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದನು.
ತದೈವ ಕುರವಃ ಸರ್ವೇ ನಿರಾಶಾ ಜೀವಿತೇಽಭವನ್ |
ಭೀಷ್ಮದ್ರೋಣೌ ಯದಾ ರಾಜಾ ನ ಸಮ್ಯಗನುಭಾಷತೇ ॥60॥
ಯಾವಾಗ ಭೀಷ್ಮ-ದ್ರೋಣರನ್ನು ಕುರಿತು ಸರಿಯಾಗಿ ಮಾತನಾಡಲಿಲ್ಲವೋ ಆಗಲೇ ಕುರುಗಳೆಲ್ಲರೂ ತಮ್ಮ ಜೀವನದ ಆಸೆಯನ್ನು ತೊರೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಐವತ್ತೆರಡನೆಯ ಅಧ್ಯಾಯ
ಸಂಜಯನಿಂದ ಪಾಂಡವರ ರಣೋದ್ಯೋಗಕ್ಕೆ ಮೂಲವಾದ ಬಲದ ಕಥನ.
ಧೃತರಾಷ್ಟ್ರಃ
ಕಿಮಸೌ ಪಾಂಡವೋ ರಾಜಾ ಧರ್ಮಪುತ್ರೋಽಭ್ಯಭಾಷತ |
ಶ್ರುತ್ವೈತದ್ ಬಹುಲಾಃ ಸೇನಾಃ ಪ್ರೀತ್ಯರ್ಥೇ ನಃ ಸಮಾಗತಾಃ ॥1॥
ಧೃತರಾಷ್ಟ್ರ ಯಾವ ಧರ್ಮರಾಜನ ಮಾತುಗಳನ್ನು ಕೇಳಿ ನಮ್ಮ ಮೇಲಿನ ಪ್ರೀತಿಯಿಂದ ಬಹಳ ಸೈನ್ಯಗಳು ನಮ್ಮನ್ನು ಬಂದು ಸೇರಿವೆಯೋ ಅಂತಹ ಧರ್ಮಪುತ್ರನಾದ, ಪಾಂಡವನಾದ ಆ ಧರ್ಮರಾಜನು ಏನು ಮಾತನಾಡಿದನು?
ಕಿಮಸೌ ಚೇಷ್ಟತೇ ಸೂತ ಯೋತ್ಸ್ಯಮಾನೋ ಯುಧಿಷ್ಠಿರಃ |
ಕೇ ವಾಽಸ್ಮದ್‌ಭ್ರಾತೃಪುತ್ರಾಣಾಂ ಪಶ್ಯಂತ್ಯಾಜ್ಞೇಪ್ಸವೋ ಮುಖಮ್ ॥2॥

ಎಲೈ ಸೂತನೇ, ಯುದ್ಧವನ್ನು ಮಾಡಲು ಬಯಸುವ ಯುಧಿಷ್ಠಿರನು ಏನು ಕಾರ್ಯವನ್ನು ಮಾಡುತ್ತಿದ್ದಾನೆ ಮತ್ತು ಅವರಿಂದ ಆದೇಶವನ್ನು ನಿರೀಕ್ಷಿಸಲು ನನ್ನ ತಮ್ಮನ ಪುತ್ರನ ಮುಖವನ್ನು ಯಾರು ನೋಡುತ್ತಾರೆ?
ಕೇ ಸ್ವಿದೇನಂ ವಾರಯಂತಿ ಯುದ್ಧಾಚ್ಛಾಮ್ಯೇತಿ ವಾ ಪುನಃ |
ನಿಕೃತ್ಯಾ ಕೋಪಿತಂ ಮಂದೈರ್ಧರ್ಮಜ್ಞಂ ಧರ್ಮಚಾರಿಣಮ್ ॥3॥
ಅಲ್ಪಪ್ರಜ್ಞರಾದ ನನ್ನ ಮಕ್ಕಳ ಮೋಸದಿಂದ ಕೋಪಗೊಂಡ ಧರ್ಮಜ್ಞನೂ, ಧರ್ಮವನ್ನು ಆಚರಿಸುವವನೂ ಆದ ಅವನನ್ನು ಯಾರು ಸಂಧಿಯನ್ನು ಮಾಡಿಕೊ ಎಂದು ಹೇಳಿ ಯುದ್ಧದಿಂದ ನಿವಾರಿಸುತ್ತಾರೆ?
ಸಂಜಯಃ
ರಾಜ್ಞೋ ಮುಖಮುದೀಕ್ಷಂತೇ ಪಾಂಚಾಲಾಃ ಪಾಂಡವೈಃ ಸಹ |
ಯುಧಿಷ್ಠಿರಸ್ಯ ಭದ್ರಂ ತೇ ಸ ಸರ್ವಾನನುಶಾಸ್ತಿ ಚ ॥4॥
ಸಂಜಯ ಎಲೈ ರಾಜನೇ, ನಿನಗೆ ಮಂಗಳವಾಗಲಿ. ಪಾಂಚಾಲರು ಮತ್ತು ಪಾಂಡವರು ರಾಜನಾದ ಯುಧಿಷ್ಠಿರನ ಮುಖವನ್ನು ನೋಡುತ್ತಾರೆ. ಅವನು ಎಲ್ಲರಿಗೂ ಆಜ್ಞೆಯನ್ನು ನೀಡುತ್ತಾನೆ.
ಪೃಥಗ್ಭೂತಾಃ ಪಾಂಡವಾನಾಂ ಪಾಂಚಾಲಾನಾಂ ರಥವ್ರಜಾಃ |
ಆಯಾಂತಮಭಿನಂದಂತಿ ಕುಂತೀಪುತ್ರಂ ಯುಧಿಷ್ಠಿರಮ್ ॥5॥
ಪಾಂಚಾಲರ ಮತ್ತು ಪಾಂಡವರ ರಥಸಮೂಹಗಳು ಬೇರೆ ಬೇರೆಯಾಗಿ ನಿಂತು ಕುಂತೀಪುತ್ರನಾದ ಯುಧಿಷ್ಠಿರನು ಬರುವಾಗ ಅವನನ್ನು ಅಭಿನಂದಿಸುತ್ತವೆ.
ನಭಃ ಸೂರ್ಯಮಿವೋದ್ಯಂತಂ ಯಜ್ಞಮಾಶ್ವಿನಶಂಸಿನಮ್ |
ಪಾಂಚಾಲಾಃ ಪ್ರತಿನಂದಂತಿ ತೇಜೋರಾಶಿಮಿವೋದಿತಮ್ ॥6॥
ಆಕಾಶವು ಸೂರ್ಯೋದಯವನ್ನು ಅಭಿನಂದಿಸಿದಂತೆ ಉದಯಿಸುವ ತೇಜೋರಾಶಿಯಂತಿರುವ, ಸಹದೇವನನ್ನು ಕುರಿತು ಪಂಚಯಜ್ಞವನ್ನು ಮಾಡು ಎಂದು ಹೇಳುವ ಧರ್ಮರಾಜನನ್ನು ಪಾಂಚಾಲರು ಅಭಿನಂದಿಸುತ್ತಾರೆ (ಲಕ್ಷ್ಯಾಲಂಕಾರ).
ಆಗೋಪಾಲಾವಿಪಾಲಾಶ್ಚ ನಂದಮಾನಾ ಯುಧಿಷ್ಠಿರಮ್ |
ಪಾಂಚಾಲಾಃ ಕೇಕಯಾ ಮತ್ಸ್ಯಾಃ ಪ್ರತಿನಂದಂತಿ ಪಾಂಡವಮ್ ॥7॥
ಪಾಂಚಾಲದೇಶದ, ಕೇಕಯ ದೇಶದ ಮತ್ತು ಮತ್ಸ್ಯದೇಶದ ಗೋಪಾಲ ಮೇಷಪಾಲರಿಂದ ಹಿಡಿದು ಎಲ್ಲರೂ ಸಂತೋಷದಿಂದ ಪಾಂಡುಪುತ್ರನಾದ ಯುಧಿಷ್ಠಿರನನ್ನು ಅಭಿನಂದಿಸುತ್ತಾರೆ.
ಬ್ರಾಹ್ಮಣ್ಯೋ ರಾಜಪುತ್ರ್ಯಶ್ಚ ವಿಶಾಂ ದುಹಿತರಶ್ಚ ಯಾಃ |
ಕ್ರೀಡಂತ್ಯೋಽಭಿಸಮಾಯಾಂತಿ ಪಾರ್ಥಂ ಸನ್ನದ್ಧಮೀಕ್ಷಿತುಮ್ ॥8॥
ಬ್ರಾಹ್ಮಣಪುತ್ರರೂ, ರಾಜಪುತ್ರಿಯರೂ ಮತ್ತು ವೈಶ್ಯಪುತ್ರಿಯರೂ ಸಹ ಆಟವನ್ನು ಆಡುತ್ತಾ ಯುದ್ಧಸನ್ನಾಹವನ್ನು ಮಾಡುತ್ತಿರುವ ಪಾರ್ಥನನ್ನು ನೋಡಲು ಬರುತ್ತಾರೆ.
ಧೃತರಾಷ್ಟ್ರಃ
ಸಂಜಯಾಚಕ್ಷ್ವ ಕೇನಾಸ್ಮಾನ್ ಪಾಂಡವಾ ಅಭ್ಯಯುಂಜತ |
ಧೃಷ್ಟದ್ಯುಮ್ನಸ್ಯ ಸೈನ್ಯೇನ ಸೋಮಕಾನಾಂ ಬಲೇನ ಚ ॥9॥
ಧೃತರಾಷ್ಟ್ರ ಎಲೈ ಸಂಜಯನೇ, ಧೃಷ್ಟದ್ಯುಮ್ನ ಸೈನ್ಯದಿಂದಲೂ ಮತ್ತು ಸೋಮಕರ ಬಲದಿಂದಲೂ ಕೂಡಿದವರಾಗಿ ಪಾಂಡವರು ಯಾವ ಬಲದಿಂದ ನಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ ಎಂದು ಹೇಳು.
ವೈಶಂಪಾಯನಃ
ಗಾವಲ್ಗಣಿಸ್ತು ತತ್ಪೃಷ್ಟಃ ಸಭಾಯಾಂ ಕುರುಸಂಸದಿ |
ನಿಃಶ್ವಸ್ಯ ಸುಭೃಶಂ ದೀರ್ಘಂ ಮುಹುಃ ಸಂಚಿಂತಯನ್ನಿವ ॥10॥
ವೈಶಂಪಾಯನ ಗವಲ್ಗನರ ಪುತ್ರನಾದ ಸಂಜಯನು ಕುರುಗಳ ಆ ಸಭೆಯಲ್ಲಿ ಹೀಗೆ ಪ್ರಶ್ನೆಮಾಡಲ್ಪಟ್ಟವನಾಗಿ ಬಹಳ ಕಾಲ ಯೋಚನೆಯನ್ನು ಮಾಡುವವನಂತೆ ಪುನಃ ಪುನಃ ನಿಟ್ಟುಸಿರನ್ನು ಬಿಟ್ಟನು.
ತತ್ರಾನಿಮಿತ್ತತೋ ದೈವಾತ್ ಸೂತಂ ಕಶ್ಮಲಮಾವಿಶತ್ |
ತದಾಽಽಚಚಕ್ಷೇ ವಿದುರಃ ಸಭಾಯಾಂ ರಾಜಸಂಸದಿ ॥11॥
ಅಲ್ಲಿ ದೈವಪ್ರೇರಣೆಯಂತೆ ಇದ್ದಕ್ಕಿದ್ದಂತೆಯೇ ಸೂತನಾದ ಅವನಿಗೆ ಮನೋವಿಷಾದ ಉಂಟಾಯಿತು. ರಾಜರು ನೆರೆದಿದ್ದ ಆ ಸಭೆಯಲ್ಲಿ ವಿದುರನು ಧೃತರಾಷ್ಟ್ರನಿಗೆ ಅದನ್ನು ಹೇಳಿದನು.
ಸಂಜಯೋಽಯಂ ಮಹಾರಾಜ ಮೂರ್ಚ್ಛಿತಃ ಪತಿತೋ ಭುವಿ |
ವಾಚಂ ನ ಸೃಜತೇ ಕಾಂಚಿದ್ಧೀನಪ್ರಜ್ಞೋ ವಿಚೇತನಃ ॥12॥
ಎಲೈ ಮಹಾರಾಜನೇ, ಈ ಸಂಜಯನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದಿದ್ದಾನೆ. ಯಾವ ಮಾತನ್ನೂ ಆಡುವುದಿಲ್ಲ. ಪ್ರಜ್ಞೆಯನ್ನು ಕಳೆದುಕೊಂಡು ವಿಚೇತನನಾಗಿದ್ದಾನೆ.
ಧೃತರಾಷ್ಟ್ರಃ
ಅಪಶ್ಯತ್ ಸಂಜಯೋ ನೂನಂ ಕುಂತೀಪುತ್ರಾನ್ ಮಹಾರಥಾನ್ |
ತೈರಸ್ಯ ಪುರುಷವ್ಯಾಘ್ರೈರ್ಭೃಶಮುದ್ವೇಜಿತಂ ಮನಃ ॥13॥
ಧೃತರಾಷ್ಟ್ರ ಸಂಜಯನು ಮಹಾರಥರಾದ ಕುಂತೀಪುತ್ರರನ್ನು ಈಗತಾನೇ ನೋಡಿದ್ದಾನೆ. ಪುರುಷವ್ಯಾಘ್ರರಾದ ಅವರಿಂದ ಇವನ ಮನಸ್ಸಿಗೆ ಉದ್ವೇಗವು ಉಂಟಾಗಿದೆ.

ವೈಶಂಪಾಯನಃ
ಸಂಜಯಶ್ಚೈತನಾಂ ಲಬ್ಧ್ವಾ ಪ್ರತ್ಯಾಶ್ವಸ್ಯೇದಮಬ್ರುವೀತ್ |
ಧೃತರಾಷ್ಟ್ರಂ ಮಹಾರಾಜ ಸಭಾಯಾಂ ಕುರುಸಂಸದಿ ॥14॥
ವೈಶಂಪಾಯನ ಎಲೈ ಜನಮೇಜಯ ಮಹಾರಾಜನೇ, ಸಂಜಯನು ಸ್ವಲ್ಪ ಸುಧಾರಿಸಿಕೊಂಡು ಪುನಃ ಪ್ರಜ್ಞೆಯನ್ನು ಪಡೆದು, ಕೌರವರು ನೆರೆದಿದ್ದ ಸಭೆಯಲ್ಲಿ ಧೃತರಾಷ್ಟ್ರನನ್ನು ಕುರಿತು ಹೀಗೆ ಮಾತನಾಡಿದನು.
ದೃಷ್ಟವಾನಸ್ಮಿ ರಾಜೇಂದ್ರ ಕುಂತೀಪುತ್ರಾನ್ ಮಹಾರಥಾನ್ |
ಮತ್ಸ್ಯರಾಜಗೃಹಾವಾಸನಿರೋಧೇನಾವಕರ್ಶಿತಾನ್ ॥15॥
ರಾಜೇಂದ್ರನೇ, ಮತ್ಸ್ಯರಾಜನಾದ ವಿರಾಟನ ಮನೆಯಲ್ಲಿ ವಾಸ ಮಾಡುವುದರಿಂದ ಬಳಲಿದ ಮಹಾರಥರಾದ ಕುಂತೀಪುತ್ರರನ್ನು ನೋಡಿದ್ದೇನೆ.
ಶೃಣು ಯೈರ್ಹಿ ಮಹಾರಾಜ ಪಾಂಡವಾ ಅಭ್ಯಯುಂಜತ |
ಯಶ್ಚ ತಾನ್ ಪಾಂಡವಾನ್ ಸರ್ವಾನ್ ಸಂಗತಾನ್ ವಾರಣಾವತೇ ॥
ದಾಹತೋ ಮೋಚಯಾಮಾಸ ಕುಂತೀಪುತ್ರೋ ವೃಕೋದರಃ |
ತೇನ ವೋ ಭೀಮಸೇನೇನ ಪಾಂಡವಾ ಅಭ್ಯಯುಂಜತ ॥17॥
ಧೃಷ್ಟದ್ಯುಮ್ನೇನ ವೀರೇಣ ಯುದ್ಧೇ ವಸ್ತೇಽಭ್ಯಯುಂಜತ ॥18॥
ಮಹಾರಾಜನೇ, ಯಾರ ಬಲದಿಂದ ಪಾಂಡವರು ಯುದ್ಧವನ್ನು ಹೂಡಿದ್ದಾರೆ ಎಂದು ಹೇಳುತ್ತೇನೆ, ಕೇಳು. ಯಾವ ಭೀಮಸೇನನು ವಾರಣಾವತದಲ್ಲಿ ಎಲ್ಲ ಪಾಂಡವರನ್ನು ಒಟ್ಟಿಗೆ ಅಗ್ನಿದಾಹದಿಂದ ವಿಮೋಚನೆಗೊಳಿಸಿದನೋ ಅಂತಹ ಕುಂತೀಪುತ್ರನಾದ ವೃಕೋದರನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ. ವೀರನಾದ ಧೃಷ್ಟದ್ಯುಮ್ನನ ಬಲದಿಂದ ಅವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯೋ ವೈ(ನ) ರೋಷಾನ್ನ ಭಯಾನ್ನ ಲೋಭಾನ್ನಾರ್ಥಕಾರಣಾತ್ |
ನ ಹೇತುವಾದಾದ್ ಧರ್ಮಾತ್ಮಾ ಸತ್ಯಂ ಜಹ್ಯಾತ್ ಕದಾಚನ ॥19॥
ಯಃ ಪ್ರಮಾಣಂ ಮಹಾರಾಜ ಧರ್ಮೇ ಧರ್ಮಭೃತಾಂ ವರಃ |
ಅಜಾತಶತ್ರುಣಾ ತೇನ ಪಾಂಡವಾ ಅಭ್ಯಯುಂಜತ ॥20॥
ಯಾವ ಧರ್ಮಾತ್ಮನಾದ ಯುಧಿಷ್ಠಿರನು ರೋಷದಿಂದಲಾಗಲೀ, ಭಯದಿಂದಲಾಗಲೀ, ಧನಲೋಭದಿಂದಾಗಲೀ, ಅರ್ಥದ ನೆಪಗಳಿಂದಾಗಲೀ ಅಥವಾ ಬೇರೆ ಯಾವ ಕಾರಣದ ನಿಮಿತ್ತದಿಂದಾಗಲೀ ಎಂದೂ ಸತ್ಯವನ್ನು ಬಿಡುವುದಿಲ್ಲವೋ, ಧರ್ಮಾಚರಣೆಯನ್ನು ಮಾಡುವವರಲ್ಲಿ ಶ್ರೇಷ್ಠನಾದ ಯಾವನು ಧರ್ಮದ ವಿಷಯದಲ್ಲಿ ಪ್ರಮಾಣಭೂತನಾಗಿದ್ದಾನೆಯೋ, ಎಲೈ ಮಹಾರಾಜನೇ, ಅಂತಹ ಯುಧಿಷ್ಠಿರನ ಬಲದಿಂದ ಪಾಂಡವರು ಯುದ್ಧವನ್ನು ಹೂಡಿದ್ದಾರೆ.
ಯಸ್ಯ ಬಾಹುಬಲೇ ವೀರಃ ಪೃಥಿವ್ಯಾಂ ನಾಸ್ತಿ ಕಶ್ಚನ |
ಯೋ ವೈ ಸರ್ವಾನ್ ಮಹೀಪಾಲಾನ್ ವಶೇ ಚಕ್ರೇ ಧನುರ್ಧರಃ ॥
ಯಃ ಕಾಶೀನಂಗಮಗಧಾನ್ ಕಳಿಂಗಾಂಶ್ಚ ಯುಧಾಽಜಯತ್ |
ತೇನ ವೈ ಭೀಮಸೇನೇನ ಪಾಂಡವಾ ಅಭ್ಯಯುಂಜತ ॥22॥
ಯಾವನ ಬಾಹುಬಲಕ್ಕೆ ಸಮನಾದ ವೀರನು ಭೂಮಿಯಲ್ಲಿ ಯಾವನೂ ಇಲ್ಲವೋ, ಯಾವನು ಧನುರ್ಧಾರಿಯಾಗಿ ಎಲ್ಲರನ್ನೂ ವಶಪಡಿಸಿಕೊಂಡನೋ, ಯಾವನು ಯುದ್ಧದಲ್ಲಿ ಕಾಶಿ, ಅಂಗ, ಮಗಧ, ಕಳಿಂಗ ದೇಶಗಳನ್ನು ಗೆದ್ದನೋ ಆ ಭೀಮಸೇನನ ಬಲದಿಂದ ಪಾಂಡವರು ಯುದ್ಧವನ್ನು ಹೂಡಿದ್ದಾರೆ.
ಯಸ್ಯ ವೀರ್ಯೇಣ ಸಹಸಾ ಚತ್ವಾರೋ ಯುಧಿ ಮಾನವಾಃ |
ನಿಃಸೃತಾ ಜತುಗೇಹಾದ್ವೈ ಹಿಡಿಂಬಾತ್ ಪುರುಷಾದಕಾತ್ ॥23॥
ಯಶ್ಚೈಷಾಮಭವದ್ ದ್ವೀಪಃ ಕುಂತೀಪುತ್ರೋ ವೃಕೋದರಃ ॥24॥
ಯಾವನ ಪರಾಕ್ರಮ ಮತ್ತು ಸಾಹಸ ಶಕ್ತಿಯಿಂದ ನಾಲ್ಕುಜನರೂ ಜತು (ಅರಗಿನ) ಗೃಹದಿಂದ ಹೊರಗೆ ಬಂದರೋ, ನರಭಕ್ಷಕನಾದ ಹಿಡಿಂಬನಿಂದ ಯುದ್ಧದಲ್ಲಿ ಪಾರಾದರೋ, ಯಾವ ಕುಂತೀಪುತ್ರನಾದ ವೃಕೋದರನು ಆಪತ್ತುಗಳಲ್ಲಿ ಅವರಿಗೆ ದ್ವೀಪದಂತೆ ರಕ್ಷಕನಾಗಿದ್ದಾನೆಯೋ ಅವನ ಬಲದಿಂದ ಪಾಂಡವರು ಯುದ್ಧವನ್ನು ಹೂಡಿದ್ದಾರೆ.
ಯಾಜ್ಞಸೇನೀಮಥೋ ಯತ್ರ ಸಿಂಧುರಾಜೋಽಪಕೃಷ್ಟವಾನ್ |
ತತ್ರೈಷಾಮಭವದ್ ದ್ವೀಪಃ ಕುಂತೀಪುತ್ರೋ ವೃಕೋದರಃ ॥25॥
ಸೈಂಧವನು ಯಾಜ್ಞಸೇನಿಯಾದ ದ್ರೌಪದಿಯನ್ನು ಅಪಹರಿಸಿದಾಗಲೂ ಕುಂತೀಪುತ್ರನಾದ ವೃಕೋದರನು ಪಾಂಡವರಿಗೆ ರಕ್ಷಕನಾದನು.
ಯಶ್ಚ ತಾನ್ ಸಂಗತಾನ್ ಸರ್ವಾನ್ ಪಾಂಡವಾನ್ ವಾರಣಾವತೇ |
ದಹ್ಯತೋ ಮೋಚಯಾಮಾಸ ಕುಂತೀಪುತ್ರೋ ವೃಕೋದರಃ ॥26॥
ತೇನ ವೋ ಭೀಮಸೇನೇನ ಪಾಂಡವಾ ಅಭ್ಯಯುಂಜತ ॥27॥
ಯಾವ ಕುಂತೀಪುತ್ರನಾದ ವೃಕೋದರನು ವಾರಣಾವತದಲ್ಲಿ ಎಲ್ಲ ಪಾಂಡವರನ್ನೂ ಅಗ್ನಿದಾಹದಿಂದ ಮೋಚನೆಯನ್ನು ಮಾಡಿದನೋ ಅಂತಹ ಭೀಮಸೇನನ ಬಲದಿಂದ ಪಾಂಡವರು ಯುದ್ಧವನ್ನು ಹೂಡಿದ್ದಾರೆ.
ಕೃಷ್ಣಾಯಾಶ್ಚರತಾ ಪ್ರೀತಿಂ ಯೇನ ಕ್ರೋಧವಶಾ ಹತಾಃ |
ಪ್ರವಿಶ್ಯ ವಿಷಮಂ ಘೋರಂ ಪರ್ವತಂ ಗಂಧಮಾದನಮ್ ॥28॥

ಯಸ್ಯ ನಾಗಾಯುತೈರ್ವೀರ್ಯಂ ಭುಜಯೋಃ ಸಾರಮರ್ಪಿತಮ್ |
ತೇನ ವೋ ಭೀಮಸೇನೇನ ಪಾಂಡವಾ ಅಭ್ಯಯುಂಜತ ||29||
ದ್ರೌಪದಿಗೆ ಸಂತೋಷವನ್ನು ಉಂಟುಮಾಡುತ್ತಾ ಘೋರವೂ ಮತ್ತು ವಿಷಮವೂ ಆದ ಗಂಧಮಾದನ ಪರ್ವತವನ್ನು ಪ್ರವೇಶಿಸಿ, ಯಾವನು ಕ್ರೋಧವಶ ದೈತ್ಯರನ್ನು ಕೊಂದನೋ, ಯಾವನ ಭುಜದಲ್ಲಿ ಹತ್ತುಸಾವಿರ ಆನೆಗಳ ಪರಾಕ್ರಮವು ಮತ್ತು ಬಲವೂ ಆಶ್ರಯಿಸಿದೆಯೋ ಅಂತಹ ಭೀಮಸೇನನ ಬಲದಿಂದ ಪಾಂಡವರು ಯುದ್ಧವನ್ನು ಹೂಡಿದ್ದಾರೆ.
ಕೃಷ್ಣದ್ವಿತೀಯೋ ವಿಕ್ರಮ್ಯ ತುಷ್ಟ್ಯರ್ಥಂ ಜಾತವೇದಸಃ |
ಅಜಯದ್ ಯಃ ಪುರಾ ವೀರೋ ಯುಧ್ಯಮಾನಂ ಪುರಂದರಮ್ ||
ಯಃ ಸ ಸಾಕ್ಷಾನ್ಮಹಾದೇವಂ ಗಿರಿಶಂ ಶೂಲಪಾಣಿನಮ್ |
ತೋಷಯಾಮಾಸ ಯುದ್ಧೇನ ದೇವದೇವಮುಮಾಪತಿಮ್ ||31||
ಯಶ್ಚ ಸರ್ವಾನ್ ವಶೇ ಚಕ್ರೇ ಲೋಕಪಾಲಾನ್ ಧನುರ್ಧರಃ |
ತೇನ ವೋ ವಿಜಯೇನಾಜೌ ಪಾಂಡವಾ ಅಭ್ಯಯುಂಜತ ||32||
ಯಾವ ವೀರನು ಕೃಷ್ಣಸಹಿತನಾಗಿ ಅಗ್ನಿಯನ್ನು ತೃಪ್ತಿಪಡಿಸಲು ಹಿಂದೆ ತನ್ನ ವಿಕ್ರಮವನ್ನು ತೋರಿಸಿ ಯುದ್ಧವನ್ನು ಮಾಡುವ ಇಂದ್ರನನ್ನು ಜಯಿಸಿದನೋ, ಯಾವನು ದೇವದೇವನೂ, ಮಹಾದೇವನೂ, ಗಿರಿಶನೂ, ಶೂಲಪಾಣಿಯೂ ಆದ ಸಾಕ್ಷಾತ್ ಉಮಾಪತಿಯನ್ನು ಸಂತೋಷಪಡಿಸಿದನೋ, ಯಾವ ಧನುರ್ಧಾರಿಯು ಎಲ್ಲ ಲೋಕಪಾಲಕರನ್ನೂ ವಶಪಡಿಸಿಕೊಂಡನೋ, ಅಂತಹ ಅರ್ಜುನನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಃ ಪ್ರತೀಚೀಂ ದಿಶಂ ಚಕ್ರೇ ವಶೇ ಮ್ಲೇಚ್ಛಗಣಾಯುತಾಮ್ |
ಸ ತತ್ರ ನಕುಲೋ ಯೋದ್ಧಾ ಚಿತ್ರಯೋಧೀ ವ್ಯವಸ್ಥಿತಃ ||33||
ತೇನ ವೋ ದರ್ಶನೀಯೇನ ವೀರೇಣಾತಿಧನುರ್ಭೃತಾ |
ಮಾದ್ರೀಪುತ್ರೇಣ ಕೌರವ್ಯ ಪಾಂಡವಾ ಅಭ್ಯಯುಂಜತ ||34||
ಯಾವ ಚಿತ್ರಯೋಧಿಯಾಗಿ ನಿಂತ ನಕುಲನು ಮ್ಲೇಚ್ಛಗಣಗಳಿಂದ ಕೂಡಿದ ಪಶ್ಚಿಮ ದಿಕ್ಕನ್ನು ವಶಪಡಿಸಿಕೊಂಡನೋ ಅಂತಹ ಸುಂದರನೂ, ವೀರನೂ ಮತ್ತು ಧನುರ್ಧಾರಿಯೂ ಆದ ಮಾದ್ರೀಪುತ್ರನಾದ ನಕುಲನ ಬಲದಿಂದ ಎಲೈ ಧೃತರಾಷ್ಟ್ರನೇ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಃ ಕಾಶೀನಂಗಮಗಧಾನ್ ಕಳಿಂಗಾಂಶ್ಚ ಯುಧಾಽಜಯತ್ |
ತೇನ ವಃ ಸಹದೇವೇನ ಪಾಂಡವಾ ಅಭ್ಯಯುಂಜತ ||35||
ಯಾವ ಸಹದೇವನು ಕಾಶಿ, ಅಂಗ, ಮಗಧ, ಕಳಿಂಗ ದೇಶಗಳನ್ನು ಯುದ್ಧದಲ್ಲಿ ಜಯಿಸಿದನೋ ಅಂತಹ ಅವನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಸ್ಯ ವೀರ್ಯೇಣ ಸದೃಶಾಃ ಚತ್ವಾರೋ ಯುಧಿ ಮಾನವಾಃ |
ಅಶ್ವತ್ಥಾಮಾ ಧೃಷ್ಟಕೇತೂ ರುಗ್ಮೀ ಪ್ರದ್ಯುಮ್ನ ಏವ ಚ ||36||
ತೇನ ವಃ ಸಹದೇವೇನ ಪಾಂಡವಾ ಅಭ್ಯಯುಂಜತ ||37||
ಯವೀಯಸಾ ನೃವೀರೇಣ ಮಾದ್ರೀನಂದಕರೇಣ ಚ ||38||
ಯಾವನ ಪರಾಕ್ರಮಕ್ಕೆ ಅಶ್ವತ್ಥಾಮ, ಧೃಷ್ಟಕೇತು, ರುಗ್ಮಿ ಮತ್ತು ಪ್ರದ್ಯುಮ್ನ ಈ ನಾಲ್ವರು (ಸೇರಿ) ಯುದ್ಧದಲ್ಲಿ ಸಮನಾಗಿದ್ದಾರೆಯೋ ಅಂತಹ ಮಾದ್ರಿಗೆ ಸಂತೋಷವನ್ನುಂಟು ಮಾಡುವ, ಮಾದ್ರೀಪುತ್ರರಲ್ಲಿ ಚಿಕ್ಕವನಾದ ವೀರನಾದ ಸಹದೇವನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ತಪಶ್ಚಚಾರ ಯಾ ಘೋರಂ ಕಾಶಿಕನ್ಯಾ ಪುರಾ ಸತೀ |
ಭೀಷ್ಮಸ್ಯ ವಧಮಿಚ್ಛಂತೀ ಪ್ರೇತ್ಯಾಪಿ ಭರತರ್ಷಭ ||39||
ಪಾಂಚಾಲಸ್ಯ ಸುತಾ ಜಜ್ಞೇ ದೈವಾಚ್ಚ ಸ ಪುನಃ ಪುಮಾನ್ |
ಸ್ತ್ರೀಪುಂಸೋಃ ಪುರುಷವ್ಯಾಘ್ರ ಯಃ ಸ ವೇದ ಗುಣಾಗುಣಾನ್ ||40||
ಯಃ ಕಳಿಂಗಾನ್ ಸಮಾಪೇದೇ ಪಾಂಚಾಲ್ಯೋ ಯುದ್ಧದುರ್ಮದಃ |
ಶಿಖಂಡಿನಾ ವಃ ಕುರವಃ ಕೃತಾಸ್ತ್ರೇಣಾಭ್ಯಯುಂಜತ ||41||
ಎಲೈ ಭರತರ್ಷಭನೇ, ಯಾವ ಕಾಶಿರಾಜಕುಮಾರಿಯಾದ ಅಂಬೆಯು ಮರಣ ಹೊಂದಿಯಾದರೂ ಭೀಷ್ಮನ ವಧೆಯನ್ನು ಬಯಸಿ ಹಿಂದೆ ತಪಸ್ಸನ್ನು ಮಾಡಿ ಪಾಂಚಾಲ ರಾಜನ ಕುಮಾರಿಯಾಗಿ ಜನಿಸಿ, ದೈವಬಲದಿಂದ ಪುನಃ ಪುರುಷನಾದನೋ ಎಲೈ ಪುರುಷವ್ಯಾಘ್ರನೇ, ಅವನು ಸ್ತ್ರೀಯರ ಮತ್ತು ಪುರುಷರ ಗುಣ-ದೋಷಗಳನ್ನು ತಿಳಿದಿದ್ದಾನೆ. ಯಾವ ಪಾಂಚಾಲರಾಜ ಕುಮಾರನಾದ ಅವನು ಯುದ್ಧದುರ್ಮದನಾಗಿ ಕಳಿಂಗದೇಶವನ್ನು ವಶಪಡಿಸಿಕೊಂಡನೋ, ಅಸ್ತ್ರಜ್ಞನಾದ ಅಂತಹ ಶಿಖಂಡಿಯ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಂ ಯಕ್ಷಃ ಪುರುಷಂ ಚಕ್ರೇ ಭೀಷ್ಮಸ್ಯ ನಿಧನೇಚ್ಛಯಾ |
ಮಹೇಷ್ವಾಸೇನ ರೌದ್ರೇಣ ಪಾಂಡವಾ ಅಭ್ಯಯುಂಜತ ||42||
ಭೀಷ್ಮರ ವಧೆಯನ್ನು ಬಯಸಿದ ಯಾವನನ್ನು ಯಕ್ಷನು ಪುರುಷನನ್ನಾಗಿ ಮಾಡಿದನೋ ಅಂತಹ ಮಹಾಧನುರ್ಧಾರಿಯೂ, ಭಯಂಕರನೂ ಆದ ಶಿಖಂಡಿಯ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಮಹೇಷ್ವಾಸಾ ರಾಜಪುತ್ರಾ ಭ್ರಾತರಃ ಪಂಚ ಕೇಕಯಾಃ |
ಆಮುಕ್ತಕವಚಾಃ ಶೂರಾಃ ತೈಶ್ಚ ವಸ್ತೇಽಭ್ಯಯುಂಜತ ||43||

ಕೇಕಯ ದೇಶದ ಐದುಜನ ಸಹೋದರರಾದ ರಾಜಕುಮಾರರು ಮಹಾಧನುರ್ಧಾರಿಗಳೂ, ಕವಚವನ್ನು ಧರಿಸಿದವರೂ ಮತ್ತು ಶೂರರು. ಅವರ ಬಲದಿಂದ ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯೋ ದೀರ್ಘಬಾಹುಃ ಕ್ಷಿಪ್ರಾಸೋತ್ರೀ ಧೃತಿಮಾನ್ ಸತ್ಯವಿಕ್ರಮಃ |
ತೇನ ವೋ ವೃಷ್ಣಿವೀರೇಣ ಯುಯುಧಾನೇನ ಸಂಗರಃ ||44||
ಯಾವನು ದೀರ್ಘಬಾಹುವೂ, ಶೀಘ್ರವಾಗಿ ಅಸ್ತ್ರಪ್ರಯೋಗವನ್ನು ಮಾಡುವವನೂ, ಧೈರ್ಯಶಾಲಿಯೂ ಮತ್ತು ಸತ್ಯವಾದ ವಿಕ್ರಮವುಳ್ಳವನೂ ಆಗಿದ್ದಾನೆಯೋ ಅಂತಹ ವೃಷ್ಣಿವೀರನಾದ ಯುಯುಧಾನನಿಂದ (ಸಾತ್ಯಕಿಯಿಂದ) ನಿಮಗೆ ಯುದ್ಧವು ಪ್ರಾಪ್ತವಾಗಿದೆ.
ಯ ಆಸೀಚ್ಚರಣಂ ಕಾಲೇ ಪಾಂಡವಾನಾಂ ಮಹಾತ್ಮನಾಮ್ |
ರಣೇ ತೇನ ವಿರಾಟೇನ ಪಾಂಡವಾ ಅಭ್ಯಯುಂಜತ ||45||
ಮಹಾತ್ಮರಾದ ಪಾಂಡವರಿಗೆ ಆಪತ್ಕಾಲದಲ್ಲಿ ಯಾವನು ಆಶ್ರಯನಾದನೋ ಅಂತಹ ವಿರಾಟನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಸ್ತು ಕಾಶಿಪತೀ ರಾಜಾ ವಾರಾಣಸ್ಯಾಂ ಮಹಾಬಲಃ |
ಸ ತೇಷಾಮಭವದ್ ಯೋದ್ಧಾ ತೇನ ವಸ್ತೇಽಭ್ಯಯುಂಜತ ||46||
ಕಾಶಿದೇಶದಲ್ಲಿರುವ, ವಾರಣಾಸಿಯಲ್ಲಿರುವ ಮಹಾಬಲನಾದ ಯಾವ ರಾಜನು ಪಾಂಡವರಿಗೆ ಯೋಧನಾಗಿದ್ದಾನೆಯೋ ಅವನ ಬಲದಿಂದ ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಶಿಶುಭಿರ್ದುರ್ಜಯೈಃ ಸಂಖೇ ದ್ರೌಪದೇಯೈರ್ಮಹಾತ್ಮಭಿಃ |
ಆಶೀವಿಷಸಮಸ್ಪರ್ಶೈಃ ಪಾಂಡವಾ ಅಭ್ಯಯುಂಜತ ||47||
ಚಿಕ್ಕಮಕ್ಕಳೂ, ಯುದ್ಧದಲ್ಲಿ ದುರ್ಜಯರರೂ, ಮಹಾತ್ಮರೂ, ಸರ್ಪಕ್ಕೆ ಸಮವಾದ ತೀಕ್ಷ್ಣಸ್ಪರ್ಶವುಳ್ಳವರೂ ಆದ ದ್ರೌಪದಿಯರ ಐದು ಪುತ್ರರ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಃ ಕೃಷ್ಣಸದೃಶೋ ವೀರ್ಯೇ ಯುಧಿಷ್ಠಿರಸಮೋ ದಮೇ |
ತೇನಾಭಿಮನ್ಯುನಾ ಸಂಖೇ ಪಾಂಡವಾ ಅಭ್ಯಯುಂಜತ ||48||
ಯಾವನು ಪರಾಕ್ರಮದಲ್ಲಿ ಕೃಷ್ಣನಿಗೂ, ಇಂದ್ರಿಯನಿಗ್ರಹದಲ್ಲಿ ಯುಧಿಷ್ಠಿರನಿಗೂ ಸಮಾನನಾಗಿದ್ದಾನೆಯೋ ಅಂತಹ ಅಭಿಮನ್ಯುವಿನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಯಶ್ಚೈವಾಪ್ರತಿಮೋ ವೀರ್ಯೇ ಧೃಷ್ಟಕೇತುರ್ಮಹಾಯಶಾಃ |
ದುಃಸಹಃ ಸಮರೇ ಕ್ರುದ್ಧಃ ಶೈಶುಪಾಲಿರ್ಮಹಾರಥಃ ||49||
ತೇನ ವಶ್ಚೇದಿರಾಜೇನ ಪಾಂಡವಾ ಅಭ್ಯಯುಂಜತ ||50||
ಯಾವ ಮಹಾಕೀರ್ತಿವಂತನಾದ, ಮಹಾರಥನಾದ, ಶಿಶುಪಾಲನ ಪುತ್ರನಾದ ಧೃಷ್ಟಕೇತುವು ಪರಾಕ್ರಮದಲ್ಲಿ ಅಸದೃಶನೋ, ಕ್ರುದ್ಧನಾದ ಯಾವನನ್ನು ಶತ್ರುಗಳು ಯುದ್ಧದಲ್ಲಿ ತಡೆಯಲು ಸಾಧ್ಯವಿಲ್ಲವೋ ಅಂತಹ ಚೇದಿರಾಜನಾದ ಧೃಷ್ಟಕೇತುವಿನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಅಕ್ಷೋಹಿಣ್ಯಾ ಪರಿವೃತಃ ಪಾಂಡವಾನ್ ಯೋಽಭಿಸಂವೃತಃ ||51||
ಯಃ ಸಂಶ್ರಯಃ ಪಾಂಡವಾನಾಂ ದೇವಾನಾಮಿವ ವಾಸವಃ |
ತೇನ ವೋ ವಾಸುದೇವೇನ ಪಾಂಡವಾ ಅಭ್ಯಯುಂಜತ ||52||
ಯಾವನು ಒಂದು ಅಕ್ಷೋಹಿಣಿ ಸೈನ್ಯದ ಜೊತೆಯಲ್ಲಿ ಪಾಂಡವರ ಸಮೀಪಕ್ಕೆ ಬಂದಿದ್ದಾನೆಯೋ, ಯಾವನು ದೇವತೆಗಳಿಗೆ ಇಂದ್ರನಂತೆ ಪಾಂಡವರಿಗೆ ಆಶ್ರಯನಾಗಿದ್ದಾನೆಯೋ ಅಂತಹ ವಾಸುದೇವನ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ತಥಾ ಚೇದಿಪತೇರ್ಭ್ರಾತಾ ಶರಭೋ ಭರತರ್ಷಭ |
ಶರವರ್ಷೇಣ ಸಹಿತಃ ತಾಭ್ಯಾಂ ವಸ್ತೇಽಭ್ಯಯುಂಜತ ||53||
ಎಲೈ ಭರತರ್ಷಭನೇ, ಅದರಂತೆಯೇ ಚೇದಿಪತಿಯಾದ ಧೃಷ್ಟಕೇತುವಿನ ತಮ್ಮನು, ಶರವರ್ಷನೆಂಬ ತಮ್ಮನಿಂದ ಸಹಿತನಾಗಿದ್ದಾನೆ. ಅವರಿಬ್ಬರ ಬಲದಿಂದ ಪಾಂಡವರು ನಿಮ್ಮ ಮೇಲೆ ಯುದ್ಧವನ್ನು ಹೂಡಿದ್ದಾರೆ.
ಜಾರಾಸಂಧಿಃ ಸಹದೇವೋ ಜಯತ್ಸೇನಶ್ಚ ತಾವುಭೌ |
ಯುದ್ಧೇಽಪ್ರತಿರಥೌ ವೀರೌ ಪಾಂಡವಾರ್ಥೇ ವ್ಯವಸ್ಥಿತೌ ||54||
ಜರಾಸಂಧನ ಮಗನಾದ ಸಹದೇವನೂ ಮತ್ತು ಜಯತ್ಸೇನನೂ ಯುದ್ಧದಲ್ಲಿ ಶ್ರೇಷ್ಠರಥವುಳ್ಳ ವೀರರು. ಅವರು ಪಾಂಡವರ ಸಲುವಾಗಿ ಯುದ್ಧಮಾಡಲು ಸಿದ್ಧರಾಗಿದ್ದಾರೆ.
ದ್ರುಪದಶ್ಚ ಮಹಾತೇಜಾ ಬಲೇನ ಮಹತಾ ವೃತಃ |
ತ್ಯಕ್ತಾತ್ಮಾ ಪಾಂಡವಾರ್ಥಾಯ ಯೋತ್ಸ್ಯಮಾನೋ ವ್ಯವಸ್ಥಿತಃ ||55||
ಮಹಾತೇಜಸ್ವಿಯಾದ ದ್ರುಪದನು ದೊಡ್ಡ ಸೈನ್ಯದಿಂದ ಕೂಡಿದವನಾಗಿ ಪ್ರಾಣದ ಮೇಲಿನ ಹಂಗನ್ನು ತೊರೆದು ಪಾಂಡವರ ಸಲುವಾಗಿ ಯುದ್ಧವನ್ನು ಮಾಡಲು ಬಯಸಿ ಸನ್ನದ್ಧನಾಗಿದ್ದಾನೆ.
ಏತೇ ಚಾನ್ಯೇ ಚ ಬಹವಃ ಪ್ರಾಚ್ಯೋದೀಚ್ಯಾ ಮಹೀಕ್ಷಿತಃ |
ಶತಶೋ ಯಾನುಪಾಶ್ರಿತ್ಯ ಧರ್ಮರಾಜೋ ವ್ಯವಸ್ಥಿತಃ ||56||
ಇವರೂ ಮತ್ತು ಇನ್ನೂ ಅನೇಕ ಪೂರ್ವದಿಕ್ಕು ಮತ್ತು ಉತ್ತರದಿಕ್ಕಿನ ರಾಜರೂ ನೂರಾರು ಸಂಖ್ಯೆಯಲ್ಲಿ ಇದ್ದಾರೆ. ಅವರನ್ನು

ಆಶ್ರಯಿಸಿ ಧರ್ಮರಾಜನು ಯುದ್ಧ ಮಾಡಲು ಸನ್ನದ್ಧನಾಗಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಐವತ್ಮೂರನೆಯ ಅಧ್ಯಾಯ
ಭೀಮಸೇನನ ಪ್ರತಾಪವನ್ನು ನೆನೆದು ಸಂಜಯನ ಎದುರಿಗೆ
ಧೃತರಾಷ್ಟ್ರನ ಪರಿಶೋಚನೆ.
ಧೃತರಾಷ್ಟ್ರಃ
ಸರ್ವ ಏತೇ ಮಹೇಷ್ವಾಸಾ ಯೇ ತ್ವಯಾ ಪರಿಕೀರ್ತಿತಾಃ |
ಏಕತಸ್ತ್ವೇವ ತೇ ಸರ್ವೇ ಸಮೇತಾ ಭೀಮ ಏಕತಃ ॥1॥
ಧೃತರಾಷ್ಟ್ರ ನೀನು ಹೇಳಿದ ವೀರರೆಲ್ಲರೂ ಮಹಾಧನುರ್ಧಾರಿಗಳೇ. ಅವರೆಲ್ಲರೂ ಸೇರಿ ಒಂದು ಕಡೆಯಾದರೆ ಭೀಮಸೇನನೊಬ್ಬನೇ ಇನ್ನೊಂದು ಕಡೆ.
ಭೀಮಸೇನಾದ್ಧಿ ಮೇ ಭೂಯೋ ಭಯಂ ಸಂಜಾಯತೇ ಮಹತ್ |
ಕ್ರುದ್ಧಾದಮರ್ಷಣಾತ್ ತಾತ ವ್ಯಾಘ್ರಾದಿವ ಮಹಾರುರೋಃ ॥2॥
ಪ್ರೀತಿಪಾತ್ರನೇ, ಮಹಾರುರು ವ್ಯಾಘ್ರಕ್ಕೆ ಅಂಜಿದಂತೆ ಕ್ರುದ್ಧನೂ, ರೋಷ ಸ್ವಭಾವವುಳ್ಳವನೂ ಆದ ಭೀಮಸೇನನಿಂದ ನನಗೆ ಪುನಃ ದೊಡ್ಡ ಭಯವುಂಟಾಗಿದೆ.
ಜಾಗರ್ಮಿ ರಾತ್ರಯಃ ಸರ್ವಾ ದೀರ್ಘಮುಷ್ಣಂ ಚ ನಿಃಶ್ವಸನ್ |
ಭೀತೋ ವೃಕೋದರಾತ್ ತಾತ ಸಿಂಹಾತ್ ಪಶುರಿವಾಪರಃ ॥3॥
ಪ್ರೀತಿಪಾತ್ರನೇ, ನಾನು ವೃಕೋದರನಿಗೆ ಹೆದರಿ, ಸಿಂಹಕ್ಕೆ ಹೆದರಿದ ಇತರ ಪಶುಗಳಂತೆ ರಾತ್ರಿಯೆಲ್ಲಾ ದೀರ್ಘವಾದ ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ ಎಚ್ಚರದಿಂದಿರುತ್ತೇನೆ.
ನ ಹಿ ತಸ್ಯ ಮಹಾಬಾಹೋಃ ಶಕ್ರಪ್ರತಿಮತೇಜಸಃ |
ಸೈನ್ಯೇಽಸ್ಮಿನ್ ಪ್ರತಿಪಶ್ಯಾಮಿ ಯ ಏನಂ ವಿಷಹೇದ್ ಯುಧಿ ॥4॥
ಇಂದ್ರನಿಗೆ ಸಮಾನವಾದ ತೇಜಸ್ಸುಳ್ಳವನೂ ಮತ್ತು ಮಹಾಬಾಹುವೂ ಆದ ಅವನನ್ನು ಯುದ್ಧದಲ್ಲಿ ಎದುರಿಸಿ ಸಹಿಸುವಂತಹ ಯಾವೊಬ್ಬನನ್ನೂ ನನ್ನ ಸೈನ್ಯದಲ್ಲಿ ಕಾಣುತ್ತಿಲ್ಲ.
ಅಮರ್ಷಣಶ್ಚ ಕೌಂತೇಯೋ ದೃಢವೈರಶ್ಚ ಪಾಂಡವಃ |
ಅನರ್ಮಹಾಸೀ ಸೋನ್ಮಾದಃ ತಿರ್ಯಕ್‌ಪ್ರೇಕ್ಷೀ ಮಹಾಸ್ವನಃ ॥5॥
ಪಾಂಡುಪುತ್ರನಾದ ಭೀಮಸೇನನು ರೋಷಸ್ವಭಾವದವನೂ, ದೃಢವಾದ ವೈರವನ್ನು ಹೊಂದಿದವನೂ, ವಿನೋದವನ್ನಾಗಲೀ, ಹಾಸವನ್ನಾಗಲೀ ಮಾಡದವನೂ, ಹುಚ್ಚನಂತೆ ಇರುವವನೂ, ವಕ್ರದೃಷ್ಟಿಯಿಂದ ನೋಡುವವನೂ ಮತ್ತು ಮಹಾನಾದವನ್ನು ಮಾಡುವವನು.
ಮಹಾವೇಗೋ ಮಹೋತ್ಸಾಹೋ ಮಹಾಬಾಹುರ್ಮಹಾಬಲಃ |
ಮಂದಾನಾಂ ಮಮ ಪುತ್ರಾಣಾಂ ಯುದ್ಧೇನಾಂತಂ ಕರಿಷ್ಯತಿ ॥6॥
ಝಷಗ್ರಹಗೃಹೀತಾಂ ತಾಂ ಗದಾಂ ಬಿಭ್ರತ್ ವೃಕೋದರಃ |
ಕುರೂಣಾಮೃಷಭೋ ಯುದ್ಧೇ ದಂಡಪಾಣಿರಿವಾಂತಕಃ ॥7॥
ಮಹಾವೇಗವುಳ್ಳವನೂ, ಮಹಾಉತ್ಸಾಹವುಳ್ಳವನೂ, ಮಹಾಬಾಹುವೂ, ಮಹಾಬಲನೂ, ಕುರುಶ್ರೇಷ್ಠನೂ ಆದ ವೃಕೋದರನು ಕೈಯಲ್ಲಿ ದಂಡವನ್ನು ಹಿಡಿದ ಯಮನಂತೆ ಯುದ್ಧದಲ್ಲಿ, ಕೈವರ್ತರು (ಮೀನನ್ನು ಹಿಡಿಯುವವರು) ಧರಿಸುವಂತಹ ಭಾರವಾದ ಗದೆಯನ್ನು ಧರಿಸಿ ಮಂದರಾದ ನನ್ನ ಪುತ್ರರ ವಿನಾಶವನ್ನು ಮಾಡುವನು.
ಅಷ್ಟಾಶ್ರಮಾಯಸೀಂ ಘೋರಾಂ ಗದಾಂ ಕಾಂಚನಭೂಷಣಾಮ್ |
ಮನಸಾಽಹಂ ಪ್ರಪಶ್ಯಾಮಿ ಬ್ರಹ್ಮದಂಡಮಿವೋದ್ಯತಮ್ ॥8॥
ಬ್ರಹ್ಮದಂಡದಂತೆ ಸನ್ನದ್ಧವಾದ, ಎಂಟು ಅಂಚುಗಳಿರುವ, ಸುವರ್ಣಭೂಷಿತವಾದ ಅವನ ಘೋರವಾದ ಗದೆಯನ್ನು ನಾನು ಮನಸ್ಸಿನಿಂದಲೇ ನೋಡುತ್ತಿದ್ದೇನೆ.
ಯಥಾ ಮೃಗಾಣಾಂ ಯೂಥೇಷು ಸಿಂಹೋ ಜಾತಬಲಶ್ಚರೇತ್ |
ಮಾಮಕೇಷು ತಥಾ ಭೀಮೋ ಬಲೇಷು ವಿಚರಿಷ್ಯತಿ ॥9॥
ಜಿಂಕೆಗಳ ಮಧ್ಯದಲ್ಲಿ ಬಲಿಷ್ಠವಾದ ಸಿಂಹವು ಸಂಚರಿಸಿದಂತೆ ಭೀಮಸೇನನು ನನ್ನ ಸೈನ್ಯದಲ್ಲಿ ಸಂಚರಿಸುವನು.
ಸರ್ವೇಷಾಂ ಮಮ ಪುತ್ರಾಣಾಂ ಸ ಏವ ಕ್ರೂರವಿಕ್ರಮಃ |
ಬಹ್ವಾಶೀ ವಿಪ್ರತೀಪಶ್ಚ ಬಾಲ್ಯೇಽಪಿ ರಭಸಃ ಸದಾ ॥10॥
ನನ್ನ ಎಲ್ಲ ಪುತ್ರರಲ್ಲಿ ಅವನೇ ಕ್ರೂರ ಪರಾಕ್ರಮವುಳ್ಳವನು. ಬಹುಭೋಜಿ, ಪ್ರತೀಕಾರವನ್ನು ಮಾಡುವವನು ಮತ್ತು ಬಾಲ್ಯದಲ್ಲಿಯೂ ಸಹ ಯಾವಾಗಲೂ ಸಾಹಸದ ಕೆಲಸವನ್ನು ಮಾಡಿದವನು.
ಉದ್ವೇಪತೇ ಮೇ ಹೃದಯಂ ಯದಾ ದುರ್ಯೋಧನಾದಯಃ |

ಬಾಲ್ಯೇಽಪಿ ತೇನ ಯುದ್ಧ್ಯಂತೋ ವಾರಣೇನೇವ ಮರ್ದಿತಾಃ ॥11॥
ಬಾಲ್ಯದಲ್ಲಿಯೂ ಕೂಡ ಅವನ ಜೊತೆಯಲ್ಲಿ ಯುದ್ಧವನ್ನು ಮಾಡುವ (ಹೋರಾಡುವ) ದುರ್ಯೋಧನಾದಿಗಳು ಗಜದಿಂದಲೋ ಎಂಬಂತೆ ಮರ್ದಿತರಾದುದನ್ನು ನೆನೆದು ನನ್ನ ಹೃದಯವು ನಡುಗುತ್ತದೆ.
ತಸ್ಯ ವೀರ್ಯೇಣ ಸಂಕ್ಲಿಷ್ಟಾ ನಿತ್ಯಮೇವ ಸುತಾ ಮಮ |
ಸ ಏವ ಹೇತುರ್ಭೇದಸ್ಯ ಭೀಷ್ಮೋ ಭೀಮಪರಾಕ್ರಮಃ ॥12॥
ನನ್ನ ಮಕ್ಕಳು ಅವನ ಪರಾಕ್ರಮದಿಂದ ಯಾವಾಗಲೂ ಬಹಳ ಕ್ಲೇಶಕ್ಕೆ ಒಳಗಾಗಿದ್ದಾರೆ. ಭಯಂಕರ ಪರಾಕ್ರಮವುಳ್ಳ ಭೀಮನೇ ಈ ವೈರಕ್ಕೆ ಮೂಲ ಕಾರಣನಾದವನು.
ಗ್ರಸಮಾನಮನೀಕಾನಿ ರಥವಾರಣವಾಜಿನಾಮ್ |
ಪಶ್ಯಾಮೀವಾಗ್ರತೋ ಭೀಮಂ ಕ್ರೋಧಮೂರ್ಚ್ಛಿತಮಾಹವೇ ॥13॥
ಗಜಾಶ್ವರಥಗಳಿಂದ ಕೂಡಿದ ಸೈನ್ಯವನ್ನು ನುಂಗುತ್ತಾ, ಕ್ರೋಧದಿಂದ ಮೂರ್ಛಿತನಾಗಿ ಯುದ್ಧದಲ್ಲಿ ಮುನ್ನುಗ್ಗುವ ಭೀಮನನ್ನು ನಾನು ನೋಡುತ್ತಿದ್ದೇನೆಯೋ ಎನಿಸುತ್ತದೆ.
ಅಸ್ತ್ರೇ ದ್ರೋಣಾರ್ಜುನಸಮಂ ವಾಯುವೇಗಸಮಂ ಜವೇ |
ಮಹೇಶ್ವರಸಮಂ ಕ್ರೋಧೇ ಕೋ ಹನ್ಯಾದ್ ಭೀಮಮಾಹವೇ ॥14॥
ಅಸ್ತ್ರಪ್ರಯೋಗದಲ್ಲಿ ದ್ರೋಣಾರ್ಜುನರಿಗೆ ಸಮನಾದವನೂ, ವೇಗದಲ್ಲಿ ವಾಯುವೇಗಕ್ಕೆ ಸಮನಾದವನೂ, ಕ್ರೋಧದಲ್ಲಿ ರುದ್ರದೇವನಿಗೆ ಸಮನಾದವನೂ ಆದ ಭೀಮನನ್ನು ಯುದ್ಧದಲ್ಲಿ ಯಾರು ಕೊಂದಾರು?
ಸಂಜಯಾಚಕ್ಷ್ವ ಮೇ ಶೂರಂ ಭೀಮಸೇನಮಮರ್ಷಣಮ್ ॥15॥
ಸಂಜಯನೇ, ಆ ರೋಷಸ್ವಭಾವದ ಶೂರನಾದ ಭೀಮಸೇನನ ವಿಷಯಗಳನ್ನು ಇನ್ನೂ ನನಗೆ ಹೇಳು.
ಅತಿಲಾಭಂ ತು ಮನ್ಯೇಽಹಂ ಯತ್ ತೇನ ರಿಪುಘಾತಿನಾ |
ತದೈವ ನ ಹತಾಃ ಸರ್ವೇ ಪುತ್ರಾ ಮಮ ಮನಸ್ವಿನಾ ॥16॥
ಶತ್ರುಘಾತಕನೂ, ಧೈರ್ಯಶಾಲಿಯೂ ಆದ ಅವನು ನನ್ನ ಪುತ್ರರನ್ನು ಹಿಂದೆಯೇ ಕೊಲ್ಲಲಿಲ್ಲ ಎಂಬುದೇ ನಾನು ದೊಡ್ಡಲಾಭವೆಂದು ಭಾವಿಸುತ್ತೇನೆ.
ಯೇನ ಭೀಮಬಲಾ ಯಕ್ಷಾ ರಾಕ್ಷಸಾಶ್ಚ ಪುರಾ ಹತಾಃ |
ಕಥಂ ತಸ್ಯ ರಣೇ ವೇಗಂ ಮಾನುಷಃ ಪ್ರಸಹಿಷ್ಯತಿ ॥17॥
ಭಯಂಕರ ಬಲವುಳ್ಳ ಯಕ್ಷರೂ ಮತ್ತು ರಾಕ್ಷಸರೂ ಸಹ ಯಾವ ಭೀಮನಿಂದ ಹಿಂದೆ ಹತರಾದರೋ ಅಂತಹ ಭೀಮನ ವೇಗವನ್ನು ಯುದ್ಧದಲ್ಲಿ ಯಾವ ಮನುಷ್ಯನು ತಾನೇ ಸಹಿಸುವನು?
ನ ಸ ಜಾತು ವಶೇ ತಸ್ಥೌ ಮಮ ಬಾಲ್ಯೇಽಪಿ ಸಂಜಯ |
ಕಿಂ ಪುನರ್ಮಮ ದುಷ್ಪುತ್ರೈಃ ಕ್ಲಿಷ್ಟಃ ಸಂಪ್ರತಿ ಪಾಂಡವಃ ॥18॥
ಎಲೈ ಸಂಜಯನೇ, ಬಾಲ್ಯದಲ್ಲಿಯೂ ಕೂಡ ನನಗೆ ಅವನು ಯಾವಾಗಲೂ ವಶವರ್ತಿಯಾಗಿರಲಿಲ್ಲ. ಇನ್ನು ನನ್ನ ಕೆಟ್ಟ ಮಕ್ಕಳಿಂದ ಇಷ್ಟು ಕ್ಲೇಶಕ್ಕೆ ಒಳಗಾದ ಪಾಂಡುಪುತ್ರನಾದ ಅವನು ಈ ದಿನ ವಶನಾಗುತ್ತಾನೆಯೇ?
ನಿಷ್ಠುರೋ ರೋಷಣೋಽತ್ಯರ್ಥಂ ಭಜ್ಯೇತಾಪಿ ನ ಸನ್ನಮೇತ್ |
ತಿರ್ಯಕ್‌ಪ್ರೇಕ್ಷೀ ಸಂಹತಭ್ರೂಃ ಕಥಂ ಶಾಮ್ಯೇದ್ ವೃಕೋದರಃ ॥19॥
ನಿಷ್ಠುರಭಾಷಿಯೂ, ರೋಷಸ್ವಭಾವದವನೂ ಆದ ಅವನು ಮುರಿಯಬಹುದೇ ಹೊರತು ಬಾಗಲಾರ. ವಕ್ರದೃಷ್ಟಿಯುಳ್ಳವನೂ, ಕೂಡಿದ ಹುಬ್ಬುಳ್ಳವನೂ ಆದ ವೃಕೋದರನು ಹೇಗೆ ಶಾಂತನಾದಾನು?
ಶೂರಸ್ತಥಾಽಪ್ರತಿಬಲೋ ಗೌರಸ್ತಾಳ ಇವೋನ್ನತಃ |
ಪ್ರಮಾಣತೋ ಭೀಮಸೇನಃ ಪ್ರಾದೇಶೇನಾಧಿಕೋಽರ್ಜುನಾತ್ ॥20॥
ಜವೇನ ವಾಜಿನೋಽತ್ಯೇತಿ ಬಲೇನಾತ್ಯೇತಿ ಕುಂಜರಾನ್ |
ಅವ್ಯಕ್ತಜಲ್ಪೀ ಮಧ್ವಕ್ಷೋ ಮಧ್ಯಮಃ ಪಾಂಡವೋ ಬಲೀ ॥21॥
ಅವನು ಶೂರನಾದವನು, ಅಸದೃಶಬಲವುಳ್ಳವನು, ಗೌರವರ್ಣದವನು, ತಾಳೆ ಮರದಂತೆ ಎತ್ತರವಾಗಿರುವವನು. ಭೀಮಸೇನನು ಅರ್ಜುನನಿಗಿಂತ ಪ್ರಮಾಣದಲ್ಲಿ ಒಂದುಗೇಣು ಎತ್ತರವುಳ್ಳವನಾಗಿದ್ದಾನೆ. ವೇಗದಲ್ಲಿ ಅವನು ಅಶ್ವಗಳನ್ನು ಮೀರಿಸುತ್ತಾನೆ. ಬಲದಲ್ಲಿ ಅವನು ಗಜಗಳನ್ನು ಮೀರುತ್ತಾನೆ. ಅಸ್ಪಷ್ಟವಾಗಿ ಮಾತನಾಡುವ ಜೇನುಬಣ್ಣದ ಕಣ್ಣುಳ್ಳವನೂ, ಪಾಂಡುಪುತ್ರರಲ್ಲಿ ಮಧ್ಯಮನೂ ಆದ ಅವನು ಬಹಳ ಬಲಿಷ್ಠನಾದವನು.
ಇತಿ ಬಾಲ್ಯೇ ಶ್ರುತಃ ಪೂರ್ವಂ ಮಯಾ ವ್ಯಾಸಮುಖಾತ್ ಪುರಾ |
ರೂಪತೋ ವೀರ್ಯತಶ್ಚೈವ ಯಾಥಾತಥ್ಯೇನ ಪಾಂಡವಃ ॥22॥
ಹೀಗೆ ಹಿಂದೆ ವ್ಯಾಸರ ಮುಖದಿಂದ, ಪಾಂಡುಪುತ್ರನಾದ ಭೀಮಸೇನನ ಗುಣಗಳನ್ನು ಯಥಾವತ್ತಾಗಿ ಅವನ ರೂಪ ಮತ್ತು ಪರಾಕ್ರಮಗಳ ದೃಷ್ಟಿಯಿಂದ ಅವನ ಬಾಲ್ಯದಲ್ಲಿಯೇ ನಾನು ಕೇಳಿದ್ದೇನೆ.
ಆಯಸೇನ ಸ ದಂಡೇನ ರಥಾನ್ ನಾಗಾನ್ ಹಯಾನ್ ನರಾನ್ |
ಹನಿಷ್ಯತಿ ರಣೇ ಕ್ರುದ್ಧೋ ರೌದ್ರಃ ಕ್ರೂರಪರಾಕ್ರಮಃ ॥23॥
ಭಯಂಕರನೂ, ಕ್ರೂರಪರಾಕ್ರಮವುಳ್ಳವನೂ ಆದ ಅವನು ಕ್ರೋಧಗೊಂಡು ಯುದ್ಧದಲ್ಲಿ ತನ್ನ ಕಬ್ಬಿಣದ ಗದೆಯಿಂದ ರಥಗಳನ್ನೂ, ಗಜಗಳನ್ನೂ, ಅಶ್ವಗಳನ್ನೂ ಮತ್ತು ಪದಾತಿಗಳನ್ನು ಕೊಲ್ಲುವನು.
ಅಮರ್ಷೀ ನಿತ್ಯಸಂರಬ್ಧೋ ಭೀಮಃ ಪ್ರಹರತಾಂ ವರಃ |

ಮಯಾ ತಾತ ಪ್ರತೀಪಾನಿ ಕುರ್ವನ್ ಪೂರ್ವಂ ವಿಮಾನಿತಃ ॥24॥
ಪ್ರೀತಿಪಾತ್ರನೇ, ರೋಷಸ್ವಭಾವದವನೂ, ನಿತ್ಯವೂ ಕ್ರುದ್ಧನೂ ಮತ್ತು ಪ್ರಹಾರ ಮಾಡುವವರಲ್ಲಿ ಶ್ರೇಷ್ಠನೂ ಆದ ಭೀಮಸೇನನು ಹಿಂದೆ ನನಗೆ ವಿರೋಧವನ್ನು ಮಾಡಿದಾಗ ನಮ್ಮಿಂದ ಅವಮಾನಗೊಳಿಸಲ್ಪಟ್ಟಿದ್ದಾನೆ.
ನಿಷ್ಕರ್ಣಾಮಾಯಸೀಂ ಸ್ಥೂಲಾಂ ಸುಪಾರ್ಶ್ವಾಂ ಕಾಂಚನೀಂ ಗದಾಮ್ |
ಶತಘ್ನೀಂ ಶತನಿರ್ಹ್ರಾದಾಂ ಕಥಂ ಶಕ್ಷ್ಯಂತಿ ಮೇ ಸುತಾಃ ॥25॥
ನಿಷ್ಕರ್ಣವಾದ, ದೊಡ್ಡದಾದ, ಒಳ್ಳೆಯ ಅಂಚುಗಳನ್ನುಳ್ಳ, ನೂರು ಯೋಧರನ್ನು ಕೊಲ್ಲುವ, ಸಿಡಿಲಿನಂತೆ ಶಬ್ಧವನ್ನು ಮಾಡುವ, ಸುವರ್ಣಾಲಂಕೃತವಾದ ಅವನ ಕಬ್ಬಿಣದ ಗದೆಯನ್ನು ನನ್ನ ಮಕ್ಕಳು ಹೇಗೆ ಸಹಿಸುತ್ತಾರೆ?
ಅಪಾರಮಪ್ಲವಾಗಾಧಂ ಸಮುದ್ರಂ ಶರವೇಗಿತಮ್ |
ಭೀಮಸೇನಮಯಂ ದುರ್ಗಂ ತಾತ ಮಂದಾಸ್ತಿತೀರ್ಷವಃ ॥26॥
ಎಲ್ಲೆಯೇ ಇಲ್ಲದ, ನಾವೆಯಿಲ್ಲದ, ಶರವೇಗವುಳ್ಳ, ಭೀಮಸೇನಾತ್ಮಕವಾದ ಸಮುದ್ರಮಯವಾದ ಜಲದುರ್ಗವನ್ನು ಮಂದರಾದ ನನ್ನ ಪುತ್ರರು ದಾಟಲು ಬಯಸುತ್ತಾರೆ.
ಕ್ರೋಶತೋ ಮೇ ನ ಶೃಣ್ವಂತಿ ಬಾಲಾಃ ಪಂಡಿತಮಾನಿನಃ |
ವಿಷಮಂ ನಾವಬುಧ್ಯಂತೇ ಪ್ರಪಾತಂ ಮಧುದರ್ಶಿನಃ ॥27॥
ಸಂಯುಗಂ ಯೇ ಗಮಿಷ್ಯಂತಿ ನರರೂಪೇಣ ಮೃತ್ಯುನಾ |
ನಿಯತಂ ಚೋದಿತಾ ಧಾತ್ರಾ ಸಿಂಹೇನೇವ ಮಹಾಮೃಗಾಃ ॥28॥
ವಿಧಿಯಿಂದ ಪ್ರೇರಿತರಾಗಿ ಸಿಂಹದ ಜೊತೆಯಲ್ಲಿ ದೊಡ್ಡ ಮೃಗಗಳು ಹೊಡೆದಾಡಿದಂತೆ ಯಾವ ನನ್ನ ಪುತ್ರರು ಮನುಷ್ಯರೂಪವನ್ನು ಧರಿಸಿದ ಮೃತ್ಯುವಾದ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಲು ಹೊರಡುವರೋ ಅಂತಹ ಬಾಲರಾದ ನನ್ನ ಮಕ್ಕಳು, ತಮ್ಮನ್ನು ಪಂಡಿತರೆಂದು ತಿಳಿದಿದ್ದಾರೆ. ಹಳ್ಳದಲ್ಲಿರುವ ಜೇನನ್ನು ಅವರು ನೋಡುತ್ತಿದ್ದಾರೆ, ಹಳ್ಳವು ಅವರ ಕಣ್ಣಿಗೆ ಕಾಣಿಸುತ್ತಿಲ್ಲ. ನಾನು ಕಿರುಚುತ್ತಿದ್ದರೂ ನನ್ನ ಮಾತುಗಳನ್ನು ಕೇಳುವುದಿಲ್ಲ.
ಶೈಕ್ಯಾಂ ತಾತ ಚತುಷ್ಕಿಷ್ಕುಂ ಷಡಶ್ರಾಮಮಿತೌಜಸಮ್ |
ಪ್ರಹಿತಾಂ ದುಃಖಸಂಸ್ಪರ್ಶಾಂ ಕಥಂ ಶಕ್ಷ್ಯಂತಿ ಮೇ ಸುತಾಃ ॥29॥
ಎಲೈ ಪ್ರೀತಿಪಾತ್ರನೇ, ಯಾವ ಅವರ ನೆಲುವಿನಲ್ಲಿರುವ ಆರು ಅಂಚುಗಳಿಂದ ಕೂಡಿದ ಅಮಿತಸಾಮರ್ಥ್ಯವುಳ್ಳ ದುಃಖಮಯವಾದ ಸಂಸ್ಪರ್ಶವನ್ನು ಉಂಟುಮಾಡುವ ನಾಲ್ಕು ಕಿಷ್ಕು ಉದ್ದವಾದ ಆ ಗದೆಯನ್ನು ನನ್ನ ಪುತ್ರರು ಹೇಗೆ ಸಹಿಸುತ್ತಾರೆ?
ಗದಾಂ ಭ್ರಾಮಯತಸ್ತಸ್ಯ ಭಿಂದತೋ ಹಸ್ತಿಮಸ್ತಕಾನ್ |
ಸೃಕ್ವಿಣೀ ಲೇಲಿಹಾನಸ್ಯ ಬಾಷ್ಪಮುತ್ಸೃಜತಾ ಮುಹುಃ ॥30॥
ಉದ್ದಿಶ್ಯ ನಾಗಾನ್ ಪತತಃ ಕುರ್ವತೋ ಭೈರವಾನ್ ರವಾನ್ |
ಪ್ರತೀಪಂ ಪತತೋ ಮತ್ತಾನ್ ಪ್ರತಿ ಭಂಜ್ಯ ಚ ಗರ್ಜತಃ ॥31॥
ವಿಗಾಹ್ಯ ರಥಮಾರ್ಗೇಷು ಯೋಧಾನುದ್ದಿಶ್ಯ ನಿಘ್ನತಃ |
ಅಗ್ನೇಃ ಪ್ರಜ್ವಲಿತಸ್ಯೇವ ಅಪಿ ಮುಚ್ಯೇತ ಮೇ ಪ್ರಜಾಃ ॥32॥
ಗದೆಯನ್ನು ತಿರುಗಿಸುವ, ಗಜಮಸ್ತಕಗಳನ್ನು ಭೇದಿಸುವ, ಕಟಬಾಯಿಯನ್ನು ನಾಲಿಗೆಯಿಂದ ಸವರಿಕೊಳ್ಳುವ, ಹವೆಯಂತಿರುವ ನಿಟ್ಟುಸಿರನ್ನು ಬಿಡುವ, ಗಜಗಳನ್ನು ಉದ್ದೇಶಿಸಿ ಮುನ್ನುಗ್ಗುವ, ಭೈರವನಾದಗಳನ್ನು ಮಾಡುವ, ಮತ್ತರಾದವರನ್ನು ಮತ್ತು ತನ್ನ ವಿರೋಧವನ್ನು ಮಾಡುವವರನ್ನು ಮುರಿದು ಗರ್ಜಿಸುವ, ರಥಮಾರ್ಗಗಳಲ್ಲಿ ತನ್ನ ಇಚ್ಛೆಯಂತೆ ಪ್ರವೇಶಮಾಡಿ ಯೋಧರನ್ನು ಉದ್ದೇಶಿಸಿ ಕೊಲ್ಲುವ, ಪ್ರಜ್ವಲಿತವಾದ ಅಗ್ನಿಯಂತಿರುವ ಆ ಭೀಮಸೇನನಿಂದ ನನ್ನ ಮಕ್ಕಳು ಏನಾದರೂ ಪಾರಾಗುತ್ತಾರೆಯೇ?
ವೀಥೀಂ ಕುರ್ವನ್ ಮಹಾಬಾಹುಃ ದ್ರಾವಯನ್ ಮಮ ವಾಹಿನೀಮ್|
ನೃತ್ಯನ್ನಿವ ಗದಾಪಾಣಿರ್ಯುಗಾಂತಂ ದರ್ಶಯಿಷ್ಯತಿ ॥33॥
ಮಹಾಬಾಹುವಾದ ಅವನು ರಣರಂಗದಲ್ಲಿ ಸಂಚಾರಗಳಿಂದ ವೀಥಿಗಳನ್ನು ಮಾಡುತ್ತಾ, ನನ್ನ ಸೈನ್ಯಗಳನ್ನು ಓಡಿಸುತ್ತಾ, ಕೈಯಲ್ಲಿ ಗದೆಯನ್ನು ಹಿಡಿದು ನರ್ತಿಸುವಂತೆ ತೋರುವ ಅವನು ಯುಗಾಂತಕಾಲೀನವಾದ ಪ್ರಳಯವನ್ನೇ ತೋರಿಸುವನು.
ಪ್ರಭಿನ್ನ ಇವ ಮಾತಂಗಃ ಪ್ರಭಂಜನ್ ಪುಷ್ಪಿತಾನ್ ದ್ರುಮಾನ್ |
ಪ್ರವೇಕ್ಷ್ಯತಿ ರಣೇ ಸೇನಾಂ ಪುತ್ರಾಣಾಂ ಮೇ ವೃಕೋದರಃ ॥34॥
ಮದಗಜವು ಪುಷ್ಪಸಹಿತವಾದ ವೃಕ್ಷಗಳನ್ನು ಮುರಿದು ಮುನ್ನುಗ್ಗುವಂತೆ ವೃಕೋದರನು ಯುದ್ಧದಲ್ಲಿ ನನ್ನ ಪುತ್ರರ ಸೈನ್ಯವನ್ನು ಪ್ರವೇಶಿಸುವನು.
ಕುರ್ವನ್ ರಥಾನ್ ವಿಪುರುಷಾನ್ ವಿಸಾರಥಿಹಯಧ್ವಜಾನ್ |
ಆರುಜನ್ ಪುರುಷವ್ಯಾಘ್ರೋ ರಥಿನಃ ಸಾದಿನಸ್ತಥಾ ॥35॥
ಗಾಂಗವೇಗ ಇವಾನೂಪಾನ್ ತೀರಜಾನ್ ವಿವಿಧಾನ್ ದ್ರುಮಾನ್ |
ಪ್ರಭಂಕ್ಷ್ಯತಿ ರಣೇ ಸೇನಾಂ ಪುತ್ರಾಣಾಂ ಮಮ ಸಂಜಯ ॥36॥
ರಥಗಳನ್ನು ರಥಿಕ, ಸಾರಥಿ, ಅಶ್ವ, ಧ್ವಜಗಳಿಂದ ರಹಿತವನ್ನಾಗಿ ಮಾಡುತ್ತಾ, ಪುರುಷವ್ಯಾಘ್ರನಾದ ಅವನು ರಥಿಕರನ್ನೂ ಮತ್ತು ಅಶ್ವಾರೋಹಿಗಳನ್ನು ಮರ್ದಿಸುತ್ತಾ ಗಂಗಾನದಿಯ ಪ್ರವಾಹವು ತೀರದಲ್ಲಿ ಬೆಳೆದ ಅನೇಕವಿಧವಾದ ವೃಕ್ಷಗಳನ್ನು ಮುರಿದಂತೆ ಎಲೈ ಸಂಜಯನೇ, ನನ್ನ ಪುತ್ರರ ಸೈನ್ಯವನ್ನು ನಾಶಗೊಳಿಸುವನು.
ವಧಂ ನೂನಂ ಗಮಿಷ್ಯಂತಿ ಭೀಮಸೇನಬಲಾರ್ದಿತಾಃ |
ಮಮ ಪುತ್ರಾಶ್ಚ ಭೃತ್ಯಾಶ್ಚ ರಾಜಾನಶ್ಚೈವ ಸಂಜಯ ॥37॥

ಎಲೈ ಸಂಜಯನೇ, ಭೀಮಸೇನನ ಬಲದಿಂದ ಪೀಡಿತರಾಗಿ ನನ್ನ ಮಕ್ಕಳೂ, ಭೃತ್ಯರೂ ಮತ್ತು ಉಳಿದ ರಾಜರೂ ಸಹ ಖಂಡಿತವಾಗಿ ವಧೆಯನ್ನು ಹೊಂದುವರು.
ಯೇನ ರಾಜಾ ಮಹಾವೀರ್ಯಃ ಪ್ರವಿಶ್ಯಾಂತಃಪುರಂ ಪುರಾ |
ವಾಸುದೇವಸಹಾಯೇನ ಜರಾಸಂಧೋ ನಿಪಾತಿತಃ ||38||
ಕೃತ್ಸ್ನೇಯಂ ಪೃಥಿವೀ ದೇವೀ ಜರಾಸಂಧೇನ ಧೀಮತಾ |
ಮಗಧೇಂದ್ರೇಣ ಬಲಿನಾ ವಶೇ ಕೃತ್ವಾ ಪ್ರತಾಪಿನಾ ||39||
ಭೀಷ್ಮಪ್ರತಾಪಾತ್ ಕುರವೋ ನಯೇನಾಂಧಕವೃಷ್ಣಯಃ |
ಯನ್ನ ತಸ್ಯ ವಶೇ ಜಗ್ಮುಃ ಕೇವಲಂ ದೈವಮೇವ ತತ್ ||40||
ಯಾವ ಮಹಾವೀರ್ಯವುಳ್ಳ ಭೀಮಸೇನನು ಕೃಷ್ಣನ ಜೊತೆಯಲ್ಲಿ ಹಿಂದೆ ಜರಾಸಂಧನ ಅಂತಃಪುರಕ್ಕೆ ಹೋಗಿ ಅವನನ್ನು ಕೆಡವಿದನೋ - ಮೇಧಾವಿಯಾದ ಮಗಧೇಂದ್ರನಾದ ಬಲಿಷ್ಠನಾದ ಜರಾಸಂಧನಾದರೂ ತನ್ನ ಪ್ರತಾಪದಿಂದ ಸಮಗ್ರವಾದ ಪೃಥಿವಿಯನ್ನು ತನ್ನ ವಶಪಡಿಸಿಕೊಂಡಿದ್ದವನು. ಭೀಷ್ಮಪ್ರತಾಪದಿಂದ ಕುರುಗಳು ಮತ್ತು ಕೃಷ್ಣನ ನೀತಿಯಿಂದ ಅಂಧಕವೃಷ್ಣಿಗಳು ಅವನ ವಶರಾಗಲಿಲ್ಲ ಎಂಬುದು ಕೇವಲ ದೈವವೇ ಸರಿ.
ಸ ಗತ್ವಾ ಪಾಂಡುಪುತ್ರೇಣ ತರಸಾ ಬಾಹುಶಾಲಿನಾ |
ಅನಾಯುಧೇನ ವೀರೇಣ ನಿಹತಃ ಕಿಂ ತತೋಽಧಿಕಮ್ ||41||
ಬಾಹುಶಾಲಿಯಾದ, ವೀರನಾದ ಪಾಂಡುಪುತ್ರನಾದ ಭೀಮಸೇನನು ನಿರಾಯುಧನಾಗಿ ಅಂತಹ ಜರಾಸಂಧನ ಅಂತಃಪುರಕ್ಕೆ ಹೋಗಿ ಅವನನ್ನು ಸಂಹಾರ ಮಾಡಿದನು. ಇದಕ್ಕಿಂತ ದೊಡ್ಡ ನಿದರ್ಶನವು ಏನು ಬೇಕಾಗಿದೆ?
ದೀರ್ಘಕಾಲೇನ ಸಂಸಿದ್ಧಂ ವಿಷಮಾಶೀವಿಷೋ ಯಥಾ |
ಸ ಮೋಕ್ಷ್ಯತಿ ರಣೇ ತೇಜೋ ಮಮ ಪುತ್ರೇಷು ಸಂಜಯ ||42||
ಸಂಜಯನೇ, ಸರ್ಪವು ದೀರ್ಘಕಾಲದಿಂದ ಕೂಡಿಟ್ಟ ವಿಷವನ್ನು ಕಾರುವಂತೆ ಭೀಮಸೇನನು ಯುದ್ಧದಲ್ಲಿ ನನ್ನ ಪುತ್ರರ ಮೆಲೆ ಅಂತಹ ಕ್ರೋಧವನ್ನು ಕಾರುವನು.
ಮಹೇಂದ್ರ ಇವ ವಜ್ರೇಣ ದಾನವಾನ್ ದೇವಸತ್ತಮಃ |
ಭೀಮಸೇನೋ ಗದಾಪಾಣಿಃ ಸೂದಯಿಷ್ಯತಿ ಮೇ ಸುತಾನ್ ||43||
ದೇವಶ್ರೇಷ್ಠನಾದ ಮಹೇಂದ್ರನು ವಜ್ರಾಯುಧದಿಂದ ದಾನವರನ್ನು ಸಂಹರಿಸಿದಂತೆ ಗದಾಪಾಣಿಯಾದ ಭೀಮಸೇನನು ನನ್ನ ಪುತ್ರರನ್ನು ಸಂಹರಿಸುವನು.
ಅವಿಷಹ್ಯಮನಾವಾರ್ಯಂ ತೀವ್ರವೇಗಪರಾಕ್ರಮಮ್ |
ಪಶ್ಯಾಮೀವಾತಿತಾಮ್ರಾಕ್ಷಮಾಪತಂತಂ ವೃಕೋದರಮ್ ||44||
ತಡೆಯಲು ಅಸಾಧ್ಯನಾದವನೂ, ನಿವಾರಣೆ ಮಾಡಲು ಅಸಾಧ್ಯನಾದವನೂ, ತೀವ್ರವೇಗ ಮತ್ತು ಪರಾಕ್ರಮವುಳ್ಳವನೂ, ರಕ್ತಾಕ್ಷನೂ ಆದ ವೃಕೋದರನು ಮುನ್ನುಗ್ಗುತ್ತಿರುವುದನ್ನು ನಾನು ನೋಡುತ್ತಿದ್ದೇನೆ ಎನಿಸುತ್ತದೆ.
ಅಗದಸ್ಯಾಪ್ಯಧನುಷೋ ವಿರಥಸ್ಯ ವಿವರ್ಮಣಃ |
ಬಾಹುಭ್ಯಾಂ ಯುಧ್ಯಮಾನಸ್ಯ ಕಸ್ತಿಷ್ಠೇದಗ್ರತಃ ಪುಮಾನ್ ||45||
ಗದೆ ಇಲ್ಲದೆ, ಧನುಸ್ಸಿಲ್ಲದೆ, ರಥವಿಲ್ಲದೆ, ಕವಚವಿಲ್ಲದೆ ಕೇವಲ ಬಾಹುಗಳಿಂದ ಯುದ್ಧವನ್ನು ಮಾಡಿದರೂ ಅವನ ಎದುರಿಗೆ ಯಾವ ಪುರುಷನು ನಿಂತಾನು?
ಭೀಷ್ಮೋ ದ್ರೋಣಶ್ಚ ವಿಪ್ರೋಽಯಂ ಕೃಪಃ ಶಾರದ್ವತಸ್ತಥಾ |
ಜಾನಂತ್ಯೇತೇ ಯಥೈವಾಹಂ ವೀರ್ಯಜ್ಞಾಸ್ತಸ್ಯ ಧೀಮತಃ ||46||
ಭೀಷ್ಮರೂ, ಬ್ರಾಹ್ಮಣರಾದ ದ್ರೋಣರೂ ಮತ್ತು ಶರದ್ವಂತರ ಪುತ್ರರಾದ ಕೃಪರೂ ಸಹ ನಾನು ತಿಳಿದಂತೆ ಮೇಧಾವಿಯಾದ ಆ ಭೀಮಸೇನನ ಪರಾಕ್ರಮವನ್ನು ತಿಳಿದಿದ್ದಾರೆ.
ಆರ್ಯವೃತ್ತಂ ತು ಜಾನಂತಃ ಸಂಗರಾಂತಂ ವಿಧಿತ್ಸವಃ |
ಸೇನಾಮುಖೇಷು ಸ್ಥಾಸ್ಯಂತಿ ಮಾಮಕಾನಾಂ ನರರ್ಷಭಾಃ ||47||
ನರಶ್ರೇಷ್ಠರಾದ ಅವರು ದೊಡ್ಡ ನಡತೆಯನ್ನು ತಿಳಿದವರಾಗಿ ಯುದ್ಧವನ್ನು ಕೊನೆಗಾಣಿಸಲು ಇಚ್ಛಿಸಿ ನನ್ನ ಮಕ್ಕಳ ಸೈನ್ಯದ ಮುಂಭಾಗದಲ್ಲಿ ನಿಲ್ಲುವರು.
ಬಲೀಯಸ್ತು ಭವೇತ್ ದಿಷ್ಟಂ ಪುರುಷಸ್ಯ ವಿಶೇಷತಃ |
ಪಶ್ಯನ್ನಪಿ ಜಯಂ ತೇಷಾಂ ನ ನಿಯಚ್ಛಾಮಿ ಯತ್ ಸುತಾನ್ ||48||
ಪುರುಷನಿಗೆ ವಿಧಿಯು ಬಹಳ ಪ್ರಬಲವಾದುದು ಎನಿಸುತ್ತದೆ. ಏಕೆಂದರೆ ಪಾಂಡವರ ಜಯವನ್ನು ನಾನು ಕಾಣುತ್ತಿದ್ದರೂ ನನ್ನ ಪುತ್ರರನ್ನು ನಾನು ನಿಯಂತ್ರಿಸುತ್ತಿಲ್ಲ.
ಅವಿಷಹ್ಯಂ ಮಹೇಷ್ವಾಸಾ ಮಾರ್ಗಮೈಂದ್ರಂ ಸಮಾಸ್ಥಿತಾಃ |
ತ್ಯಕ್ಷ್ಯಂತಿ ತುಮುಲೇ ಪ್ರಾಣಾನ್ ರಕ್ಷಂತಃ ಪಾರ್ಥಿವಂ ಯಶಃ ||49||
ಮಹಾಧನುರ್ಧಾರಿಗಳಾದ ಈ ಮೂವರು, ತಡೆಯಲು ಅಸಾಧ್ಯನಾದ ಆ ಭೀಮನನ್ನು ಎದುರಿಸಿ ರಾಜರ ಕೀರ್ತಿಯನ್ನು ಕಾಪಾಡುತ್ತಾ ಇಂದ್ರಲೋಕದ ಮಾರ್ಗದಲ್ಲಿ ಹೋಗುವವರಾಗಿ ಘೋರವಾದ ಯುದ್ಧದಲ್ಲಿ ತಮ್ಮ ಪ್ರಾಣಗಳನ್ನು ತ್ಯಜಿಸುವರು.
ಯಥೈಷಾಂ ಮಾಮಕಾಸ್ತಾತ ತಥೈಷಾಂ ಪಾಂಡವಾ ಅಪಿ |
ಪೌತ್ರಾ ಭೀಷ್ಮಸ್ಯ ಶಿಷ್ಯಾಶ್ಚ ದ್ರೋಣಸ್ಯ ಚ ಕೃಪಸ್ಯ ಚ ||50||

ಪ್ರೀತಿಪಾತ್ರನೇ, ಈ ದೊಡ್ಡವರಿಗೆ ನನ್ನ ಮಕ್ಕಳು ಹೇಗೋ ಪಾಂಡವರೂ ಹಾಗೆಯೇ. ಎಲ್ಲರೂ ಭೀಷ್ಮರ ಮೊಮ್ಮಕ್ಕಳು ಮತ್ತು ದ್ರೋಣ ಮತ್ತು ಕೃಪರ ಶಿಷ್ಯರು.
ಯತ್ತ್ವಸ್ಮದಾಶ್ರಯಾತ್ ಕಿಂಚಿದ್ ದತ್ತಮಿಚ್ಛಂತಿ ಸಂಜಯ |
ತಸ್ಯಾಪಚಿತಿಮಾರ್ಯತ್ವಾತ್ ಕರ್ತಾರಃ ಸ್ಥವಿರಾಸ್ತ್ರಯಃ ॥51॥
ಸಂಜಯನೇ, ಅವರು ಉದಾತ್ತ ನಡತೆಯುಳ್ಳವರಾದ್ದರಿಂದ ಈ ಮೂವರು ವೃದ್ಧರೂ ಸಹ ನಮ್ಮನ್ನು ಅವಲಂಬಿಸಿದ ಕಾರಣದಿಂದ ನಮ್ಮಿಂದ ಪಡೆದುದಕ್ಕೆ ಪ್ರತ್ಯುಪಕಾರವನ್ನು ಮಾಡುವವರಾಗುವರು.
ಆದದಾನಸ್ಯ ಶಸ್ತ್ರಂ ಹಿ ಕ್ಷತ್ರಧರ್ಮಂ ಪರೀಪ್ಸತಃ |
ನಿಧನಂ ಕ್ಷತ್ರಿಯಸ್ಯಾಜೌ ವರಮೇವಾಹುರುತ್ತಮಮ್ ॥52॥
ಕ್ಷತ್ರಿಯಧರ್ಮವನ್ನು ಪಾಲಿಸುತ್ತಾ, ಕೈಯಲ್ಲಿ ಶಸ್ತ್ರವನ್ನು ಹಿಡಿದು ಯುದ್ಧದಲ್ಲಿ ಕ್ಷತ್ರಿಯನು ಮೃತನಾದರೆ ಅದು ಅವನಿಗೆ ಶ್ರೇಷ್ಠವಾದ ಮರಣವೆಂದು ಹೇಳುತ್ತಾರೆ.
ಸ ವೈ ಶೋಚಾಮಿ ಸರ್ವಾನ್ ವೈ ಯೇ ಯುಯುತ್ಸಂತಿ ಪಾಂಡವೈಃ |
ವಿಕ್ರುಷ್ಟಂ ವಿದುರೇಣಾದೌ ತದೇತದ್ ಭಯಮಾಗತಮ್ ॥53॥
ಅಂತಹ ನಾನು ಪಾಂಡವರನ್ನು ಎದುರಿಸಿ ಯುದ್ಧವನ್ನು ಮಾಡುವ ಎಲ್ಲರನ್ನೂ ಕುರಿತು ಶೋಕಪಡುತ್ತಿದ್ದೇನೆ. ವಿದುರನು ಮೊದಲೇ ಏನನ್ನು ಕಿರುಚಿ ಹೇಳಿದ್ದನೋ ಆ ಭಯವು ಈಗ ಪ್ರಾಪ್ತವಾಗಿದೆ.
ನ ತು ಮನ್ಯೇ ವಿಘಾತಾಯ ಜ್ಞಾನಂ ದುಃಖಸ್ಯ ಸಂಜಯ |
ಭವತ್ಯತಿಬಲಂ ಹ್ಯೇತಜ್ಜ್ಞಾನಸ್ಯಾಪ್ಯುಪಘಾತಕಮ್ ॥54॥
ಸಂಜಯನೇ, ಜ್ಞಾನವು ದುಃಖದ ವಿನಾಶಕ್ಕೆ ಕಾರಣವಾಗುತ್ತದೆ ಎಂದು ನಾನು ಭಾವಿಸುವುದಿಲ್ಲ. ದುಃಖವು ಪ್ರಬಲವಾದುದು. ಅದೇ ಜ್ಞಾನವನ್ನು ವಿನಾಶ ಮಾಡುತ್ತದೆ.
ಋಷಯೋ ಹ್ಯಪಿ ನಿರ್ಮುಕ್ತಾಃ ಪಶ್ಯಂತೋ ಲೋಕಸಂಗ್ರಹಾತ್ |
ಸುಖೇ ಭವಂತಿ ಸುಖಿನಃ ತಥಾ ದುಃಖೇನ ದುಃಖಿತಾಃ ॥55॥
ರಾಗಾದಿಗಳಿಂದ ನಿರ್ಮುಕ್ತರಾದ ಋಷಿಗಳೂ ಸಹ ಲೋಕದ ಸುಖ-ದುಃಖಗಳನ್ನು ನೋಡಿ ಲೋಕಸಂಗ್ರಹಕ್ಕಾಗಿ ಸುಖವನ್ನು ನೋಡಿ ಸುಖಿಗಳೂ, ದುಃಖವನ್ನು ನೋಡಿ ದುಃಖಿಗಳೂ ಆಗುತ್ತಾರೆ.
ಕಿಂ ಪುನರ್ಮೋಹಮಾಸಕ್ತಃ ತತ್ರ ತತ್ರ ಸಹಸ್ರಧಾ |
ಪುತ್ರೇಷು ರಾಜ್ಯದಾರೇಷು ಪೌತ್ರೇಷ್ವಪಿ ಚ ಬಂಧುಷು ॥56॥
ಹೀಗಿರುವಾಗ ಪುತ್ರರಲ್ಲಿ, ರಾಜ್ಯದಲ್ಲಿ, ಪತ್ನಿಯರಲ್ಲಿ, ಪೌತ್ರರಲ್ಲಿ, ಬಂಧುಗಳಲ್ಲಿ, ಅಲ್ಲಲ್ಲಿ ಸಹಸ್ರಾರು ರೀತಿಯಿಂದ ಮೋಹವನ್ನು ಹೊಂದಿದ ನನ್ನಂತಹವನ ವಿಷಯದಲ್ಲಿ ಹೇಳುವುದೇನಿದೆ?
ಸಂಶಯೇ ತು ಮಹತ್ಯಸ್ಮಿನ್ ಕಿಂ ನು ಮೇ ಕ್ಷೇಮಮುತ್ತಮಮ್ |
ವಿನಾಶಂ ಹ್ಯೇವ ಪಶ್ಯಾಮಿ ಕುರೂಣಾಮನುಚಿಂತಯನ್ ॥57॥
ಈ ದೊಡ್ಡ ಸಂಶಯವು ಪ್ರಾಪ್ತವಾದಾಗ ನನಗೆ ಯಾವುದರಿಂದ ಶ್ರೇಷ್ಠವಾದ ಕ್ಷೇಮವು ದೊರೆಯುತ್ತದೆ? ಎಷ್ಟು ಯೋಚನೆಯನ್ನು ಮಾಡಿದರೂ ಕುರುಗಳ ವಿನಾಶವೇ ನನಗೆ ಕಾಣುತ್ತಿದೆ.
ದ್ಯೂತಪ್ರಮುಖಮಾಭಾತಿ ಕುರೂಣಾಂ ವ್ಯಸನಂ ಮಹತ್ |
ಮಂದೇನೈಶ್ವರ್ಯಕಾಮೇನ ಲೋಭಾತ್ ಪಾಪಮಿದಂ ಕೃತಮ್ ॥58॥
ಕುರುಗಳಿಗೆ ಬಂದೊದಗಿದ ಈ ದೊಡ್ಡಸಂಕಟವು ದ್ಯೂತದ ಸಲುವಾಗಿ ಬಂದಿದೆ ಎಂದು ತೋರುತ್ತದೆ. ಐಶ್ವರ್ಯಕಾಮುಕನಾದ ಮಂದನಾದ ನನ್ನ ಪುತ್ರನು ಲೋಭದಿಂದ ಈ ಪಾಪಕಾರ್ಯವನ್ನು ಮಾಡಿದನು.
ಮನ್ಯೇ ಪರ್ಯಾಯಧರ್ಮೋಽಯಂ ಕಾಲಸ್ಯಾತ್ಯಂತಗಾಮಿನಃ |
ಚಕ್ರೇ ಪ್ರಧಿರಿವಾಸಕ್ತೋ ನಾಸ್ಯ ಶಕ್ಯಂ ಪಲಾಯಿತುಮ್ ॥59॥
ಅತ್ಯಂತ ಶೀಘ್ರವಾಗಿ ಚಲಿಸುವ ಕಾಲದ ಪರ್ಯಾಯ ಧರ್ಮವೆಂದು ಇದು ನನಗೆ ತೋರುತ್ತಿದೆ. ಚಕ್ರಕ್ಕೆ ಜೋಡಿಸಿದ ಅಂಚಿನಂತೆ ಇದರಿಂದ ಬಿಡಿಸಿಕೊಂಡು ಓಡಲು ಸಾಧ್ಯವಿಲ್ಲ.
ಕಿಂ ನು ಕುರ್ಯಾಂ ಕಥಂ ಕುರ್ಯಾಂ ಕ್ವ ನು ಗಚ್ಛಾಮಿ ಸಂಜಯ |
ಏತೇ ನಶ್ಯಂತಿ ಕುರವೋ ಮಂದಾಃ ಕ್ರೋಧವಶಂ ಗತಾಃ ॥60॥
ಸಂಜಯನೇ, ನಾನು ಏನು ಮಾಡಲಿ? ಹೇಗೆ ಮಾಡಲಿ? ಎಲ್ಲಿಗೆ ಹೋಗಲಿ? ಕ್ರೋಧವಶರಾದ, ಮಂದರಾದ ಈ ಕುರುಗಳು ನಾಶವನ್ನು ಹೊಂದುತ್ತಾರೆ.
ಅವಶೋಽಹಂ ತದಾ ತಾತ ಪುತ್ರಾಣಾಂ ನಿಹತೇ ಶತೇ |
ಶ್ರೋಷ್ಯಾಮಿ ನಿನದಂ ಸ್ತ್ರೀಣಾಂ ಕಥಂ ಮಾಂ ಮರಣಂ ಸ್ಪೃಶೇತ್ ॥
ಪ್ರೀತಿಪಾತ್ರನೇ, ನನ್ನ ನೂರುಮಕ್ಕಳು ಹತರಾದರೆ ಆಗ ನಾನು ಅವಶನಾಗುತ್ತೇನೆ. ಆ ಸೊಸೆಯರ ಆಕ್ರಂದನವನ್ನು ಕೇಳುವವನಾಗುವೆನು. ನನಗೆ ಮರಣವು ಹೇಗೆ ಉಂಟಾದೀತು?
ಯಥಾ ನಿದಾಘೇ ಜ್ವಲನಃ ಸಮಿದ್ಧೋ
ದಹೇತ್ ಕಕ್ಷಂ ವಾಯುನಾ ಚೋದ್ಯಮಾನಃ |
ಗದಾಹಸ್ತಃ ಪಾಂಡವೋ ವೈ ತಥೈವ
ಹಂತಾ ಮದೀಯಾನ್ ಸಹಿತೋಽರ್ಜುನೇನ ॥62॥

ಹೇಗೆ ಬೇಸಿಗೆ ಕಾಲದಲ್ಲಿ ಜ್ವಲಿಸುವ ಅಗ್ನಿಯು ವಾಯುವಿನಿಂದ ಪ್ರೇರಿತವಾಗಿ ಹುಲ್ಲುಗಾವಲನ್ನು ಸುಡುವುದೋ ಅದರಂತೆಯೇ ಕೈಯಲ್ಲಿ ಗದೆಯನ್ನು ಹಿಡಿದ ಪಾಂಡುಪುತ್ರನಾದ ಭೀಮಸೇನನು ಅರ್ಜುನನಿಂದ ಸಹಿತನಾಗಿ ನನ್ನವರನ್ನು ಕೊಲ್ಲುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಷಷ್ಠ್ಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಐವತ್ನಾಲ್ಕನೆಯ ಅಧ್ಯಾಯ
ಅರ್ಜುನಾದಿಗಳ ಪ್ರತಾಪವನ್ನು ವರ್ಣಿಸಿ ಧೃತರಾಷ್ಟ್ರನಿಂದ ಸಂಧಿಗಾಗಿ ಒತ್ತಾಯ.
ಧೃತರಾಷ್ಟ್ರಃ
ಯಸ್ಯ ವೈ ನಾನೃತಾ ವಾಚಃ ಕದಾಚಿದನುಶುಶ್ರುಮ |
ತ್ರೈಲೋಕ್ಯಮಪಿ ತಸ್ಯ ಸ್ಯಾದ್ ಯೋದ್ಧಾ ಯಸ್ಯ ಧನಂಜಯಃ ॥1॥
ಧೃತರಾಷ್ಟ್ರ ಯಾವನ ಮಾತು ಒಮ್ಮೆಯೂ ಸುಳ್ಳಾಗುವುದಿಲ್ಲ ಎಂದು ನಾವು ಕೇಳುತ್ತೇವೆಯೋ ಮತ್ತು ಯಾವ ಯುಧಿಷ್ಠಿರನ ಪರವಾಗಿ ಧನಂಜಯನು ಯುದ್ಧ ಮಾಡುತ್ತಾನೆಯೋ ಅವನಿಗೆ ಮೂರುಲೋಕವೂ ವಶವಾದೀತು.
ತಸ್ಯೈವ ಚ ನ ಪಶ್ಯಾಮಿ ಯುಧಿ ಗಾಂಡೀವಧನ್ವನಃ |
ಅನಿಶಂ ಚಿಂತಯಾನೋಽಪಿ ಯಃ ಪ್ರತೀಯಾದ್ ರಥೇನ ತಮ್ ॥2॥
ಸತತವಾಗಿ ಯೋಚಿಸಿದರೂ ಸಹ ಯುದ್ಧದಲ್ಲಿ ಗಾಂಡೀವ ಧನುಸ್ಸನ್ನುಳ್ಳ ಅರ್ಜುನನ ಎದುರಾಗಿ ರಥದಲ್ಲಿ ಯಾರೂ ಹೋಗುವುದು ಕಾಣುವುದಿಲ್ಲ.
ಅಸ್ಯತಃ ಕರ್ಣಿನಾಲೀಕಾನ್ ಮಾರ್ಗಣಾನ್ ಹೃದಯಚ್ಛಿದಃ |
ಪ್ರತ್ಯೇತಾ ನ ಸಮಃ ಕಶ್ಚಿತ್ ವಿದ್ಯತೇ ಸವ್ಯಸಾಚಿನಾ ॥3॥
ಕರ್ಣಿ, ನಾಲೀಕ, ಮಾರ್ಗಣ ಮೊದಲಾದ ಹೃದಯಭೇದಕವಾದ ಬಾಣಗಳನ್ನು ಪ್ರಯೋಗಿಸುವ ಅರ್ಜುನನಿಗೆ ಸಮನಾಗಿ ಎದುರಿಸುವವನು ಯಾವನೂ ಇಲ್ಲ.
ದ್ರೋಣಕರ್ಣೌ ಪ್ರತೀಯಾತಾಂ ಯದಿ ವೀರೌ ನರರ್ಷಭೌ |
ಕೃತಾಸ್ತ್ರೌ ಬಲಿನಾಂ ಶ್ರೇಷ್ಠೌ ಸಮರೇಷ್ವಪರಾಜಿತೌ ॥4॥
ವೀರರೂ, ಪುರುಷಶ್ರೇಷ್ಠರೂ ಆದ ದ್ರೋಣ ಮತ್ತು ಕರ್ಣರು ಅವನನ್ನು ಎದುರಿಸಬಹುದು. ಅವರಿಬ್ಬರೂ ಬಲಿಷ್ಠರಲ್ಲಿ ಶ್ರೇಷ್ಠರೂ, ಯುದ್ಧಗಳಲ್ಲಿ ಅಪರಾಜಿತರೂ ಮತ್ತು ಒಳ್ಳೆಯ ಅಸ್ತ್ರಗಳನ್ನು ಪಡೆದವರು.
ಉಭಾಭ್ಯಾಂ ಸಂಶಯೋ ಲೋಕೇ ನ ತ್ವಸ್ತಿ ವಿಜಯಾರ್ದನಃ |
ಮಾನೀ ಕರ್ಣಃ ಪ್ರಮಾದೀ ಚ ಆಚಾರ್ಯಃ ಸ್ಥವಿರೋ ಗುರುಃ ॥5॥
ಇಬ್ಬರೂ ಸೇರಿ ಒಟ್ಟಿಗೆ ಅರ್ಜುನನನ್ನು ಎದುರಿಸಿದರೂ ಜಯದ ವಿಷಯದಲ್ಲಿ ಲೋಕದಲ್ಲಿ ಸಂಶಯವುಂಟಾಗುತ್ತದೆ. ಅರ್ಜುನನನ್ನು ಮರ್ದಿಸುವವನು ಯಾವನೂ ಇಲ್ಲ. ಕರ್ಣನು ಅಹಂಕಾರಿ ಮತ್ತು ವಿಸ್ಮರಣಶೀಲ. ದ್ರೋಣಾಚಾರ್ಯರು ವೃದ್ಧರು ಮತ್ತು ಗುರುಗಳು.
ಸಮರ್ಥೋ ಬಲವಾನ್ ಪಾರ್ಥೋ ದೃಢಧನ್ವಾ ಜಿತಕ್ಲಮಃ |
ಭವೇತ್ ಸುತುಮುಲಂ ಯುದ್ಧಂ ಸರ್ವಶೋಽಪ್ಯಪರಾಜಯಃ ॥6॥
ಅರ್ಜುನನಾದರೂ ಸಮರ್ಥನಾಗಿದ್ದಾನೆ, ಬಲಿಷ್ಠನಾಗಿದ್ದಾನೆ, ದೃಢವಾದ ಧನುಸ್ಸನ್ನು ಹೊಂದಿದವನು ಮತ್ತು ದಣಿವಿಲ್ಲದವನೂ ಆಗಿದ್ದಾನೆ. ಘೋರವಾದ ಯುದ್ಧವು ನಡೆದೀತು. ಯಾವ ರೀತಿಯಿಂದಲೂ ಅರ್ಜುನನಿಗೆ ಪರಾಜಯ ಉಂಟಾಗಲಾರದು.
ಸರ್ವೇ ಹ್ಯಸ್ತ್ರವಿದಃ ಶೂರಾಃ ಸರ್ವೇ ಪ್ರಾಪ್ತಾ ಮಹದ್ಯಶಃ |
ಅಪಿ ಸರ್ವಾಮರೈಶ್ವರ್ಯಂ ತ್ಯಜೇಯುರ್ನ ಪುನರ್ಜಯಮ್ ॥7॥
ಎಲ್ಲರೂ ಅಸ್ತ್ರವೇತ್ತರು, ಎಲ್ಲರೂ ಶೂರರು, ಎಲ್ಲರೂ ಮಹಾಕೀರ್ತಿಯನ್ನು ಪಡೆದವರು. ದೇವತೆಗಳ ಐಶ್ವರ್ಯವನ್ನಾದರೂ ಬಿಟ್ಟಾರು, ಆದರೆ (ಪಾಂಡವರು ಜಯವನ್ನು ತೊರೆಯುವವರಲ್ಲ).
ವಧೇ ನೂನಂ ಭವೇಚ್ಛಾಂತಿಃ ತಯೋರ್ವಾ ಫಲ್ಗುನಸ್ಯ ವಾ |
ನ ತು ಜೇತಾಽರ್ಜುನಸ್ಯಾಸ್ತಿ ಹಂತಾ ಚಾಸ್ಯ ನ ವಿದ್ಯತೇ ॥8॥
ದ್ರೋಣ, ಕರ್ಣ ಇವರಿಬ್ಬರ ಅಥವಾ ಅರ್ಜುನನ ವಧೆ ಉಂಟಾದರೆ ಶಾಂತಿಯಾದೀತು. ಆದರೆ ಅರ್ಜುನನನ್ನು ಜಯಿಸುವವನೂ ಯಾವನೂ ಇಲ್ಲ, ಅವನನ್ನು ಕೊಲ್ಲುವವನೂ ಇಲ್ಲ.
ಮನ್ಯುಸ್ತಸ್ಯ ಕಥಂ ಶಾಮ್ಯೇನ್ಮಂದಾನ್ ಪ್ರತಿ ಯ ಉತ್ಥಿತಃ ॥9॥
ತಚ್ಚ ಮಂದಾ ನ ಜಾನಂತಿ ದುರ್ಯೋಧನವಶಾನುಗಾಃ ॥10॥
ಮಂದರಾದ ನನ್ನ ಪುತ್ರರ ಮೇಲೆ ಅವನಿಗೆ ಉಂಟಾಗಿರುವ ಕೋಪವು ಹೇಗೆ ಶಾಂತವಾದೀತು? ಮಂದರಾದ ನನ್ನ ಪುತ್ರರು ದುರ್ಯೋಧನನ ವಶವರ್ತಿಗಳಾಗಿ ಅದನ್ನು ತಿಳಿಯುತ್ತಿಲ್ಲ.
ಶೇಷಯೇದಶನಿರ್ದಿಪ್ತೋ ನಿಷ್ಪತನ್ ಮೂರ್ಧ್ನಿ ಸಂಜಯ |
ನ ತು ಶೇಷಂ ಶರಾಸ್ತಾತ ಕುರ್ಯುರಸ್ತಾಃ ಕಿರೀಟಿನಾ ॥11॥
ಸಂಜಯನೇ, ತಲೆಯ ಮೇಲೆ ಬಿದ್ದ ಸಿಡಿಲು ಪ್ರಾಣವನ್ನು ಉಳಿಸಬಹುದು. ಆದರೆ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಯಾರನ್ನೂ ಉಳಿಸುವುದಿಲ್ಲ.

ಅನ್ಯೇಽಪ್ಯಸ್ತ್ರಾಣಿ ಜಾನಂತಿ ಜೀಯಂತೇ ಚ ಜಯಂತಿ ಚ |
ಏಕಾಂತವಿಜಯಸ್ತ್ವೇವ ಶ್ರೂಯತೇ ಫಲ್ಗುನಸ್ಯ ಹ ||12||
ಬೇರೆಯವರೂ ಅಸ್ತ್ರಗಳನ್ನು ತಿಳಿದಿದ್ದಾರೆ, ಜಯವನ್ನೂ ಹೊಂದುತ್ತಾರೆ ಮತ್ತು ಪರಾಜಯವನ್ನೂ ಹೊಂದುತ್ತಾರೆ. ಅರ್ಜುನನು ಮಾತ್ರ ಯಾವಾಗಲೂ ಜಯವನ್ನು ಹೊಂದುವವನು ಎಂದೇ ಕೇಳಿಬರುತ್ತದೆ.
ಯಸ್ಯ ಯಂತಾ ಹೃಷೀಕೇಶಃ ಶೀಲವೃತ್ತಸಮೋ ಯುಧಿ |
ಧ್ರುವಸ್ತಸ್ಯ ಜಯಸ್ತಾತ ಯಥೇಂದ್ರಸ್ಯ ಜಯಸ್ತಥಾ ||13||
ಎಲೈ ಪ್ರೀತಿಪಾತ್ರನೇ, ಯಾವನಿಗೆ ತನ್ನ ಶೀಲವೃತ್ತಿಗಳಿಂದ ಸಮಾನನಾದ ಕೃಷ್ಣನು ಯುದ್ಧದಲ್ಲಿ ಸಾರಥಿಯಾಗುತ್ತಾನೆಯೋ ಅವನಿಗೆ ಇಂದ್ರನಿಗೆ ಜಯವು ನಿಶ್ಚಿತವಾದಂತೆ ಜಯವು ನಿಶ್ಚಿತವಾದುದು.
ಕೃಷ್ಣಾವೇಕರಥೇ ಯತ್ತಾವಧಿಜ್ಯಂ ಗಾಂಡಿವಂ ಧನುಃ |
ಯುಗಪತ್ ತ್ರೀಣಿ ತೇಜಾಂಸಿ ಸಮೇತಾನ್ಯನುಶುಶ್ರುಮ ||14||
ನೈವಾಸ್ತಿ ನೋ ಧನುಸ್ತಾದೃಙ್ ನ ಯೋದ್ಧಾ ನ ಚ ಸಾರಥಿಃ ||15||
ಒಂದೇ ರಥದಲ್ಲಿ ಕುಳಿತ ಪ್ರಯತ್ನಶೀಲರಾದ ಕೃಷ್ಣಾರ್ಜುನರು ಮತ್ತು ಹೆದೆ ಏರಿಸಿದ ಗಾಂಡೀವ ಧನುಸ್ಸು, ಈ ಮೂರುತೇಜಸ್ಸುಗಳು ಒಂದುಗೂಡಿವೆ ಎಂದು ನಾವು ಕೇಳುತ್ತೇವೆ. ನಮಗಾದರೂ ಅಂತಹ ಧನುಸ್ಸಾಗಲೀ, ಅಂತಹ ಯೋಧನಾಗಲೀ, ಅಂತಹ ಸಾರಥಿಯಾಗಲೀ ಇಲ್ಲ.
ಅಪಿ ಚಾಸ್ಯನ್ನಿವಾಭಾತಿ ವಿನಿಘ್ನನ್ನಿವ ಫಲ್ಗುನಃ |
ಉದ್ಧರನ್ನಿವ ಕಾಯೇಭ್ಯಃ ಶಿರಾಂಸಿ ಶರವೃಷ್ಟಿಭಿಃ ||16||
ಅರ್ಜುನನು ಬಾಣಗಳನ್ನು ಪ್ರಯೋಗಿಸುತ್ತಿರುವವನಂತೆ, ಶತ್ರುಗಳನ್ನು ಕೊಲ್ಲುತ್ತಿರುವವನಂತೆ, ಬಾಣಗಳ ಮಳೆಯಿಂದ ಶತ್ರುಗಳ ದೇಹದಿಂದ ಶಿರಸ್ಸನ್ನು ಉರುಳಿಸುವವನಂತೆ ಕಾಣುತ್ತಿದ್ದಾನೆ.
ಅಪಿ ಬಾಣಮಯಂ ತೇಜಃ ಪ್ರದೀಪ್ತಮಿವ ಸರ್ವತಃ |
ಗಾಂಡೀವೋತ್ಥಂ ದಹೇದಾಜೌ ಪುತ್ರಾಣಾಂ ಮಮ ವಾಹಿನೀಮ್ ||
ಮತ್ತು ಗಾಂಡೀವ ಧನುಸ್ಸಿನಿಂದ ಹೊಮ್ಮಿದ, ಎಲ್ಲ ಕಡೆಯಲ್ಲಿಯೂ ಜ್ವಲಿಸುವ ಬಾಣಮಯವಾದ ತೇಜಸ್ಸು ಯುದ್ಧದಲ್ಲಿ ನನ್ನ ಪುತ್ರರ ಸೈನ್ಯವನ್ನು ದಹಿಸೀತು.
ಅಪಿ ಸಾ ರಥಘೋಷೇಣ ಭಯಾರ್ತಾ ಸವ್ಯಸಾಚಿನಃ |
ವಿತ್ರಸ್ತಾ ಬಹುಲಾ ಸೇನಾ ಭಾರತೀ ಪ್ರತಿಭಾತಿ ಮೇ ||18||
ಮತ್ತು ಅರ್ಜುನನ ರಥದ ಘೋಷದಿಂದ ನಮ್ಮ ದೊಡ್ಡ ಭಾರತಸೈನ್ಯವು ಭಯದಿಂದ ಪೀಡಿತವಾಗಿ ನಡುಗುತ್ತಿರುವಂತೆ ನನಗೆ ಕಾಣುತ್ತಿದೆ.
ಯಥಾ ಕಕ್ಷಂ ಮಹಾನಗ್ನಿಃ ಪ್ರವೃದ್ಧಃ ಸರ್ವತಶ್ಚರನ್ |
ಮಹಾರ್ಚಿರನಿಲೋದ್ಧೂತಃ ತದ್ವದ್ ಧಕ್ಷ್ಯತಿ ಮಾಮಕಾನ್ ||19||
ದೊಡ್ಡ ಅಗ್ನಿಯು ಅಭಿವೃದ್ಧಿಯನ್ನು ಹೊಂದಿ, ಎಲ್ಲ ಕಡೆಯಲ್ಲಿಯೂ ತಿರುಗುತ್ತಾ ದೊಡ್ಡ ಜ್ವಾಲೆಗಳಿಂದ ಕೂಡಿ ವಾಯುವಿನಿಂದ ವೃದ್ಧಿಯನ್ನು ಹೊಂದಿ ಹುಲ್ಲುಗಾವಲನ್ನು ಸುಡುವಂತೆ ಅರ್ಜುನನು ನನ್ನವರನ್ನು ಸುಡುವನು.
ಯತೋಽಬ್ರವೀತ್ ನಿಶಿತಾನ್ ಬಾಣಸಂಘಾನ್
ಯದಾಽಽತತಾಯೀ ಸಮರೇ ಸವ್ಯಸಾಚೀ |
ಸೃಷ್ಟೋಽಂತಕಃ ಸರ್ವಹರೋ ವಿಧಾತ್ರಾ
ಯಥಾ ಭವೇತ್ ತದ್ವದವಾರಣೀಯಃ ||20||
ಸವ್ಯಸಾಚಿಯು ಯುದ್ಧದಲ್ಲಿ ಶಸ್ತ್ರಧಾರಿಯಾಗಿ ಹರಿತವಾದ ಬಾಣಸಮೂಹವನ್ನು ಪ್ರಯೋಗಿಸುವಾಗ ಜನರು ಯಮನು ಹೇಗೆ ನಿವಾರಿಸಲ್ಪಡಲು ಸಾಧ್ಯವಿಲ್ಲವೋ ಅದರಂತೆ ನಿವಾರಿಸಲು ಸಾಧ್ಯವಿಲ್ಲದ ಸರ್ವಪ್ರಾಣಹರನಾಗಿ ಅರ್ಜುನನು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದಾನೆ ಎಂದು ಮಾತನಾಡಿದುದರಿಂದ ಅರ್ಜುನನನ್ನು ತಡೆಯುವವರು ನನ್ನ ಸೈನ್ಯದಲ್ಲಿ ಯಾರೂ ಇಲ್ಲ.
ಯದಾ ಹ್ಯಭೀಕ್ಷ್ಣಂ ಸುಬಹೂನ್ ಪ್ರಣಾದಾನ್
ಶ್ರೋತಾಸ್ಮಿ ತಾನಾವಸಥೇ ಕುರೂಣಾಮ್ |
ತೇಷಾಂ ಸಮಂತಾಚ್ಚ ತಥಾ ರಣಾಗ್ರೇ
ಕ್ಷಯಃ ಕಿಲಾಯಂ ಭರತಾನುಪೈತಿ ||21||
ಯಾವಾಗ ನಾನು ಕುರುಗಳ ನಿವಾಸದಲ್ಲಿ ಸತತವಾಗಿ ಅನೇಕ ವಿಧವಾದ ಪ್ರಣಾದಗಳನ್ನು ಕೇಳುವೆನೋ ಆಗ ಶ್ರೇಷ್ಠವಾದ ಯುದ್ಧದಲ್ಲಿ ಎಲ್ಲ ಕಡೆಗಳಲ್ಲಿಯೂ ಭರತರಿಗೆ ಈ ವಿನಾಶವು ಉಂಟಾಗುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಃಪಂಚಾಶೋಽಧ್ಯಾಯಃ ||
|| ವ್ಯಾಸಾಭಿಗಮನಪರ್ವಣಿ ಸಪ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೈದನೆಯ ಅಧ್ಯಾಯ
ಪಾಂಡವರ ಸೈನ್ಯದ ಪ್ರಾಬಲ್ಯವನ್ನು ಚಿಂತಿಸಿ ಧೃತರಾಷ್ಟ್ರನ ಶೋಕ.

ಧೃತರಾಷ್ಟ್ರಃ
ಯಥೈವ ಪಾಂಡವಾಃ ಸರ್ವೇ ಪರಾಕ್ರಾಂತಾ ಜಿಗೀಷವಃ |
ತಥೈವಾಭಿಸರಾಸ್ತೇಷಾಂ ತ್ಯಕ್ತಾತ್ಮಾನೋ ಜಯೇ ಧೃತಾಃ ॥1॥
ಧೃತರಾಷ್ಟ್ರ ಹೇಗೆ ಪಾಂಡವರೆಲ್ಲರೂ ಜಯಿಸುವ ಇಚ್ಛೆಯುಳ್ಳವರಾಗಿ ಪರಾಕ್ರಮವನ್ನು ಮಾಡುವವರೋ, ಅದರಂತೆ ಅವರ ಭಟರೂ ಸಹ ಪ್ರಾಣವನ್ನಾದರೂ ಬಿಟ್ಟು ಜಯವನ್ನು ಸಾಧಿಸುವುದರಲ್ಲಿ ನಿರತರಾಗಿದ್ದಾರೆ.
ತ್ವಮೇವ ಹಿ ಪರಾಕ್ರಾಂತಾನ್
ಆಚಕ್ಷೀಥಾಃ ಪರಾನ್ ಮಮ |
ಪಾಂಚಾಲಾನ್ ಕೇಕಯಾನ್
ಮತ್ಸ್ಯಾನ್ ಮಗಧಾನ್ ವತ್ಸಭೂಮಿಪಾನ್ ॥2॥
ಪಾಂಚಾಲರು, ಕೇಕಯರು, ಮತ್ಸ್ಯರು, ಮಗಧರು ಮತ್ತು ವತ್ಸದೇಶದ ಸೈನಿಕರು ಎಲ್ಲರೂ ಪರಾಕ್ರಮಶಾಲಿಗಳಾಗಿ ಉದ್ಯುಕ್ತರಾಗಿದ್ದಾರೆ ಎಂದು ನೀನೇ ನನಗೆ ತಿಳಿಸಿದ್ದೀಯೆ.
ಯಶ್ಚ ಸೇಂದ್ರಾನಿಮಾನ್ ಲೋಕಾನ್
ಇಚ್ಛನ್ ಕುರ್ಯಾದ್ ವಶೇ ಬಲೀ |
ಸ ಕೃಷ್ಣೋ ಜಗತಃ ಸ್ರಷ್ಟಾ
ಪಾಂಡವಾನಾಂ ಜಯೇ ಧೃತಃ ॥3॥
ಯಾವನು ಇಂದ್ರಸಹಿತನಾದ ಮೂರುಲೋಕಗಳನ್ನು ಕೇವಲ ತನ್ನ ಇಚ್ಛೆಯಿಂದಲೇ ವಶಪಡಿಸಿಕೊಳ್ಳುವನೋ, ಅಂತಹ ಬಲಿಷ್ಠನೂ, ಜಗತ್ತಿನ ಸೃಷ್ಟಿಕರ್ತನೂ ಆದ ಕೃಷ್ಣನು ಪಾಂಡವರ ಜಯದಲ್ಲಿ ತಾತ್ಪರ್ಯವುಳ್ಳವನಾಗಿದ್ದಾನೆ.
ಸಮಸ್ತಾಮರ್ಜುನಾದ್ ವಿದ್ಯಾಂ ಸಾತ್ಯಕಿಃ ಕ್ಷಿಪ್ರಮಾಪ್ತವಾನ್ |
ಶೈನೇಯಃ ಸಮರೇ ಸ್ಥಾತಾ ಬೀಜವತ್ ಪ್ರವಪನ್ ಶರಾನ್ ॥4॥
ಸಾತ್ಯಕಿಯು ಅರ್ಜುನನಿಂದ ಸಮಗ್ರವಾದ ಅಸ್ತ್ರವಿದ್ಯೆಯನ್ನು ಶೀಘ್ರವಾಗಿ ಕಲಿತಿದ್ದಾನೆ. ಶಿನಿಯ ಪುತ್ರನಾದ ಅವನು ಯುದ್ಧದಲ್ಲಿ ಬೀಜಗಳಂತೆ ಬಾಣಗಳನ್ನು ಚೆಲ್ಲುತ್ತಾ ಸ್ಥಿರವಾಗಿ ನಿಲ್ಲುವವನು.
ಧೃಷ್ಟದ್ಯುಮ್ನಶ್ಚ ಪಾಂಚಾಲ್ಯಃ ಕ್ರೂರಕರ್ಮಾ ಮಹಾರಥಃ |
ಮಾಮಕೇಷು ರಣಂ ಕರ್ತಾ ಬಲೇಷು ಪರಮಾಸ್ತ್ರವಿತ್ ॥5॥
ಪಾಂಚಾಲದೇಶದ ಧೃಷ್ಟದ್ಯುಮ್ನನೂ ಕೂಡ ಕ್ರೂರಕರ್ಮವುಳ್ಳವನು ಮತ್ತು ಮಹಾರಥನಾದವನು. ಪರಮಾಸ್ತ್ರವೇತ್ತನಾದ ಅವನು ನನ್ನ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಯುಧಿಷ್ಠಿರಸ್ಯ ಚ ಕ್ರೋಧಾದ್ ಅರ್ಜುನಸ್ಯ ಚ ವಿಕ್ರಮಾತ್ |
ಯಮಾಭ್ಯಾಂ ಭೀಮಸೇನಾಚ್ಚ ಭಯಂ ಮೇ ತಾತ ಜಾಯತೇ ॥6॥
ಎಲೈ ಪ್ರೀತಿಪಾತ್ರನೇ, ಯುಧಿಷ್ಠಿರನ ಕ್ರೋಧದಿಂದ, ಅರ್ಜುನನ ಪರಾಕ್ರಮದಿಂದ ಹಾಗೆಯೇ ನಕುಲ-ಸಹದೇವರಿಂದ ಮತ್ತು ಭೀಮನಿಂದ ನನಗೆ ಬಹಳ ಹೆದರಿಕೆ ಉಂಟಾಗುತ್ತಿದೆ.
ಅಮಾನುಷಂ ಮನುಷ್ಯೇಂದ್ರೈರ್ಜಾಲಂ ವಿತತಮಂತರಾ |
ನ ಮೇ ಸೈನ್ಯಾಸ್ತರಿಷ್ಯಂತಿ ತತಃ ಕ್ರೋಶಾಮಿ ಸಂಜಯ ॥7॥
ಮನುಷ್ಯಶ್ರೇಷ್ಠರಾದ ಅವರು (ಪಾಂಡವರು) ಅಮಾನುಷವಾದ, ವಿಸ್ತಾರವಾದ ಬಲೆಯನ್ನು ಮಧ್ಯದಲ್ಲಿ ಬೀಸಿದ್ದಾರೆ. ನನ್ನ ಸೈನ್ಯಗಳು ಆ ಬಲೆಯನ್ನು ದಾಟುವುದಿಲ್ಲ. ಸಂಜಯನೇ, ಆದ್ದರಿಂದ ವಿಲಾಪವನ್ನು ಮಾಡುತ್ತಿದ್ದೇನೆ.
ದರ್ಶನೀಯೋ ಮನಸ್ವೀ ಚ ಲಕ್ಷ್ಮೀವಾನ್ ಬ್ರಹ್ಮವರ್ಚಸೀ |
ಮೇಧಾವೀ ಸುಕೃತಪ್ರಜ್ಞೋ ಧರ್ಮಾತ್ಮಾ ಪಾಂಡುನಂದನಃ ॥8॥
ಪಾಂಡುಪುತ್ರನಾದ ಯುಧಿಷ್ಠಿರನು ಸುಂದರನೂ, ಧೈರ್ಯಶಾಲಿಯೂ, ಕಾಂತಿಯುಕ್ತನೂ, ಬ್ರಹ್ಮವರ್ಚಸ್ವಿಯೂ, ಮೇಧಾವಿಯೂ, ಒಳ್ಳೆಯ ಪ್ರಜ್ಞೆಯುಳ್ಳವನೂ ಮತ್ತು ಧರ್ಮಾತ್ಮನೂ ಆಗಿದ್ದಾನೆ.
ನ ತು ನಃ ಕ್ಲಿಶ್ಯಮಾನಾನಾಮುಪೇಕ್ಷೇತ ಯುಧಿಷ್ಠಿರಃ |
ಜುಗುಪ್ಸತಿ ಹ್ಯಧರ್ಮೇಣ ಮಾಮೇವೋದ್ದಿಶ್ಯ ಕಾರಣಮ್ ॥9॥
ಯುಧಿಷ್ಠಿರನು ಸಂಕಟಕ್ಕೆ ಸಿಲುಕಿರುವ ನಮ್ಮನ್ನು ಉದಾಸೀನ ಮಾಡುವುದಿಲ್ಲ. ಅವನು ಅಧರ್ಮವನ್ನು ಮಾಡುವುದಕ್ಕೆ ಹೇಸುತ್ತಾನೆ ಮತ್ತು ಇಷ್ಟು ಸಂಕಟಗಳಿಗೆ ನಾನು ಮಾಡಿದ ಅಧರ್ಮವೇ ಕಾರಣವೆಂದು ಅವನು ತಿಳಿದಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಸ ಆಗತ್ಯಾವದತ್ ತತ್ತ್ವಂ ವಿಷ್ಣೋರ್ಮಾಯಾವಿನಃ ಶುಭಾ |
ನ ಗತಿಶ್ಚೇತ್ಯಥ ಪ್ರಾತಃ ಸಂಜಯಃ ಪಾಂಡವೋದಿತಮ್ |
ಅವದದ್ ಧೃತರಾಷ್ಟ್ರಾಯ ಸಭಾಯಾಂ ಕುರುಸನ್ನಿಧೌ ॥45॥

ಸನತ್ಕುಮಾರ ಬಂದು ವಿಷ್ಣುವಿನ ಸ್ವರೂಪವನ್ನು ಉಪದೇಶಿಸಿದ. ಕಪಟಿಗೆ ಸದ್ಗತಿ ಇಲ್ಲವೆಂದೂ ಹೇಳಿದ. ಮರುದಿನ ಬೆಳಿಗ್ಗೆ ಸಭೆಯಲ್ಲಿ ಕೌರವರ ಉಪಸ್ಥಿತಿಯಲ್ಲಿ ಸಂಜಯನು ಧೃತರಾಷ್ಟ್ರನಿಗೆ ಧರ್ಮರಾಜನ ಸಂದೇಶವನ್ನು ತಿಳಿಸಿದ.
ತಚ್ಛ್ರುತ್ವಾ ಸ ತು ಭೀತೋಽಪಿ ಪುತ್ರಸ್ನೇಹಾನುಗೋ ನೃಪಃ |
ರಾಜ್ಯಂ ನಾದಾತ್ ಪಾಂಡವಾನಾಂ ತತೋ ಧರ್ಮಸುತೋ ನೃಪಃ ॥
ಅದನ್ನು ಕೇಳಿದ ಧೃತರಾಷ್ಟ್ರ ಭೀತನಾದರೂ ಪುತ್ರಮೋಹಕ್ಕೆ ವಶನಾಗಿ ಪಾಂಡವರಿಗೆ ರಾಜ್ಯ ಕೊಡಲಿಲ್ಲ.
* * * * *
ಐವತ್ತಾರನೆಯ ಅಧ್ಯಾಯ
ಸಂಜಯನಿಂದ ನೇರವಾಗಿ ಧೃತರಾಷ್ಟ್ರನ ನಿಂದನೆ.
ಸಂಜಯಃ
ಏವಮೇತನ್ಮಹಾರಾಜ ಯಥಾ ವದಸಿ ಭಾರತ |
ಯುದ್ಧೇ ವಿನಾಶಃ ಕ್ಷತ್ರಸ್ಯ ಗಾಂಡೀವೇನ ಪ್ರದೃಶ್ಯತೇ ॥1॥
ಸಂಜಯ ಎಲೈ ಮಹಾರಾಜನೇ, ಎಲೈ ಭಾರತನೇ, ನೀನು ಹೇಳುವಂತೆ ಎಲ್ಲವೂ ಸರಿ. ಯುದ್ಧದಲ್ಲಿ ಗಾಂಡೀವ ಧನುಸ್ಸಿನಿಂದ ಶತ್ರುಗಳ ವಿನಾಶವು ಕಂಡುಬರುತ್ತಿದೆ.
ಇದಂ ತು ನಾಭಿಜಾನಾಮಿ ತವ ಧೀರಸ್ಯ ಧೀಮತಃ |
ಯತ್ ಪುತ್ರವಶಮಾಗಚ್ಛೇಃ ತತ್ತ್ವಜ್ಞಃ ಸವ್ಯಸಾಚಿನಃ ॥2॥
ಧೀರನೂ, ಮೇಧಾವಿಯೂ ಆದ ನೀನು ಅರ್ಜುನನ ಸಾಮರ್ಥ್ಯವನ್ನು ತಿಳಿದರೂ ಕೂಡ ಮಗನ ವಶವರ್ತಿಯಾಗಿದ್ದೀಯೆ ಎಂಬುದು ನನಗೆ ಅರ್ಥವಾಗುತ್ತಿಲ್ಲ.
ನೈಷ ಕಾಲೋ ಮಹಾರಾಜ ತವ ಶಶ್ವತ್ ಕೃತಾಗಸಃ |
ತ್ವಯಾ ಹ್ಯೇವಾದಿತಃ ಪಾರ್ಥಾ ನಿಕೃತಾ ಭರತರ್ಷಭ ॥3॥
ಮಹಾರಾಜನೇ, ಯಾವಾಗಲೂ ಅಪರಾಧವನ್ನು ಮಾಡಿದ ನಿನಗೆ ಇದು ಒಳ್ಳೆಯ ಕಾಲವಲ್ಲ. ಭರತರ್ಷಭನೇ, ನೀನು ಮೊದಲಿನಿಂದಲೂ ಪಾಂಡವರಿಗೆ ಅಪಚಾರವನ್ನು ಮಾಡಿದ್ದೀಯೆ.
ಸ್ವೀಕೃತಾಸ್ತೈರ್ಜನಪದಾಃ ಕುರವಸ್ತೇ ಸಜಾಂಗಲಾಃ |
ಕಥಂ ವೀರೈರ್ಜಿತಾಂ ಭೂಮಿಮಖಿಲಾಂ ಪ್ರತಿಪದ್ಯಥಾಃ ॥4॥
ವೀರರಾದ ಅವರು ಕುರುಜಾಂಗಲದೇಶಗಳನ್ನು ಜಯಿಸಿದರು. ಅವರು ಜಯಿಸಿದ ಭೂಮಿಯನ್ನು ಸಮಗ್ರವಾಗಿ ನೀನು ಹೇಗೆ ಪಡೆದೆ?
ಪಿತಾ ಶ್ರೇಷ್ಠಃ ಸುಹೃದ್ ಯಶ್ಚ ಸಮ್ಯಕ್ ಪ್ರಣಿಹಿತಾತ್ಮವಾನ್ |
ಆಸ್ಥೇಯಂ ಹಿ ಹಿತಂ ತೇನ ನ ದ್ರೋಗ್ಧಾ ಗುರುರುಚ್ಯತೇ ॥5॥
ಯಾವನು ಸಮಾಧಾನವುಳ್ಳ ಚಿತ್ತವುಳ್ಳವನೋ ಅಂತಹ ತಂದೆಯು ಉತ್ತಮನಾದ ಸುಹೃದ್ ಎನಿಸುತ್ತಾನೆ. ಅಂತಹವನು ಆಶ್ರಿತರಿಗೆ ಹಿತವನ್ನೇ ಮಾಡಬೇಕು. ದ್ರೋಹವನ್ನು ಮಾಡುವವನು ಗುರುವೆಂದು (ಹಿರಿಯನೆಂದು) ಕರೆಸಿಕೊಳ್ಳುವುದಿಲ್ಲ.
ಇದಂ ಜಿತಮಿದಂ ಲಬ್ಧಮಿತಿ ಶ್ರುತ್ವಾ ಪರಾಜಿತಾನ್ |
ದ್ಯೂತಕಾಲೇ ಮಹಾರಾಜ ಸ್ಮಯಸೇ ಸ್ಮ ಕುಮಾರವತ್ ॥6॥
ಮಹಾರಾಜನೇ, ದ್ಯೂತಕಾಲದಲ್ಲಿ ಪಾಂಡವರು ಪರಾಜಿತರಾಗುತ್ತಿರುವುದನ್ನು ಕೇಳಿ ಇದನ್ನು ಗೆದ್ದೆ, ಇದನ್ನು ಪಡೆದೆ ಎಂದು ಬಾಲಕನಂತೆ ನೀನು ನಗುತ್ತಿದ್ದೆ.
ಪರುಷಾಣ್ಯುಚ್ಯಮಾನಾಂಶ್ಚ ಪುರಾ ಪಾರ್ಥಾನುಪೇಕ್ಷಸೇ |
ಕೃತ್ಸ್ನಂ ರಾಜ್ಯಂ ಜಯಂತೀತಿ ಪ್ರಪಾತಂ ನಾನುಪಶ್ಯಸಿ ॥7॥
ಅವರಿಗೆ ಉಗ್ರವಾದ ಮಾತುಗಳನ್ನು ಆಡಿದರೂ ನೀನು ಹಿಂದೆ ಅದನ್ನು ಉಪೇಕ್ಷೆ ಮಾಡಿದೆ. ಎಲ್ಲ ರಾಜ್ಯವನ್ನೂ ಗೆಲ್ಲುತ್ತಾರೆ ಎಂಬ ಭಾವನೆಯಿಂದ ಮುಂದಿರುವ ಪ್ರಪಾತವನ್ನು ಗಮನಿಸುತ್ತಿಲ್ಲ.
ಪಿತ್ರ್ಯಂ ರಾಜ್ಯಂ ಮಹಾರಾಜ ಕುರವಸ್ತೇ ಸಜಾಂಗಲಾಃ |
ಕಥಂ ವೀರಾರ್ಜಿತಾಮುರ್ವೀಮಖಿಲಾಂ ಪ್ರತಿಪದ್ಯಥಾಃ ॥8॥
ಮಹಾರಾಜನೇ, ಕುರು ಮತ್ತು ಜಾಂಗಲ ಪ್ರದೇಶಗಳು ಪಿತ್ರಾರ್ಜಿತವಾದ ರಾಜ್ಯ. ವೀರರಾದ ಅವರು ಸಂಪಾದಿಸಿದ ಆ ಎಲ್ಲಾ ಭೂಮಿಯನ್ನು ನೀನೊಬ್ಬನೇ ಹೇಗೆ ಪಡೆದೆ?
ಬಾಹುವೀರ್ಯೈರ್ಜಿತಾ ಭೂಮಿಸ್ತವ ಪಾರ್ಥೈರ್ನಿವೇದಿತಾ |
ಮಯೇದಂ ಕೃತಮಿತ್ಯೇವ ಮನ್ಯಸೇ ರಾಜಸತ್ತಮ ॥9॥
ಎಲೈ ರಾಜಶ್ರೇಷ್ಠನೇ, ಪಾಂಡವರು ತಮ್ಮ ಬಾಹುಬಲದಿಂದ ಭೂಮಿಯನ್ನು ಗೆದ್ದು ನಿನಗೆ ನಿವೇದಿಸಿದರು. ನೀನು ನಾನೇ ಭೂಮಿಯನ್ನು ಸಂಪಾದಿಸಿದೆ ಎಂದು ತಿಳಿದಿದ್ದೀಯೆ.
ಗ್ರಸ್ತಾನ್ ಗಂಧರ್ವರಾಜೇನ ಮಜ್ಜತೋ ಹ್ಯಪ್ಲವೇಽಂಭಸಿ |
ಆನಿನಾಯ ಪುನಃ ಪಾರ್ಥಃ ಪುತ್ರಾಂಸ್ತೇ ರಾಜಸತ್ತಮ ॥10॥
ಎಲೈ ರಾಜಶ್ರೇಷ್ಠನೇ, ಗಂಧರ್ವರಾಜನಾದ ಚಿತ್ರಸೇನನಿಗೆ ಸಿಲುಕಿ ನಾವೆಯಿಲ್ಲದ ನೀರಿನಲ್ಲಿ ಮುಳುಗುತ್ತಿದ್ದ ನಿನ್ನ ಪುತ್ರರನ್ನು ಅರ್ಜುನನು ಪುನಃ ಕರೆತಂದನು.
ಕುಮಾರವಚ್ಚ ಸ್ಮಯಸೇ ಖುತೇ ವಿನಿಕೃತೇಷು ಯತ್ |
ಪಾಂಡವೇಷು ವನೇ ರಾಜನ್ ಪ್ರವ್ರಜತ್ಸು ಪುನಃ ಪುನಃ ॥11॥

ಎಲ್ಲೈ ರಾಜನೇ, ಸತ್ಯವನ್ನು ದೂರಮಾಡಿ, ಪಾಂಡವರಿಗೆ ಅಪಚಾರವನ್ನು ಮಾಡಿ, ಅವರು ಕಾಡಿಗೆ ಹೊರಡುವಾಗ ನೀನು ಪುನಃ ಪುನಃ ಬಾಲಕನಂತೆ ನಗುತ್ತಿದ್ದೆ.
ಪ್ರವರ್ಷತಃ ಶರವ್ರಾತಾನ್ ಅರ್ಜುನಸ್ಯ ಶಿತಾನ್ ಬಹೂನ್ |
ಅಪ್ಯರ್ಣವಾ ವಿಶುಷ್ಯೇಯುಃ ಕಿಂ ಪುನರ್ಮಾಂಸಯೋನಯಃ ॥12॥
ಅರ್ಜುನನು ಪ್ರಯೋಗಿಸುವ ಹರಿತವಾದ ಅನೇಕವಾದ ಬಾಣಸಮೂಹಗಳಿಗೆ ಸಮುದ್ರಗಳೂ ಬತ್ತಿಹೋದಾವು. ಇನ್ನು ಮಾಂಸಯೋನಿಗಳಾದ ಮನುಷ್ಯರ ಪಾಡೇನು?
ಅಸ್ಯತಾಂ ಫಲ್ಗುನಃ ಶ್ರೇಷ್ಠೋ ಗಾಂಡೀವಂ ಧನುಷಾಂ ವರಮ್ |
ಕೇಶವಃ ಸರ್ವಭೂತಾನಾಮಾಯುಧಾನಾಂ ಸುದರ್ಶನಮ್ ॥13॥
ವಾನರೋ ರೋಚಮಾನಶ್ಚ ಕೇತುಃ ಕೇತುಮತಾಂ ವರಃ ॥14॥
ಬಾಣವನ್ನು ಪ್ರಯೋಗಿಸುವವರಲ್ಲಿ ಅರ್ಜುನನು ಶ್ರೇಷ್ಠನಾದವನು. ಧನುಸ್ಸುಗಳಲ್ಲಿ ಗಾಂಡೀವವು ಶ್ರೇಷ್ಠವಾದುದು. ಎಲ್ಲ ಜಡಚೇತನಗಳಲ್ಲಿ ಕೇಶವನು ಶ್ರೇಷ್ಠನಾದವನು. ಎಲ್ಲ ಆಯುಧಗಳಲ್ಲಿ ಸುದರ್ಶನವು ಶ್ರೇಷ್ಠವಾದುದು. ಪ್ರಕಾಶಮಾನನಾದ ವಾನರನು ಧ್ವಜಗಳಲ್ಲಿ ಶ್ರೇಷ್ಠವಾದ ಧ್ವಜ.
ಏವಮೇತಾನಿ ಸ ರಥೋ ವಹನ್ ಶ್ವೇತಹಯೋ ರಣೇ |
ಕ್ಷಪಯಿಷ್ಯತಿ ನೋ ರಾಜನ್ ಕಾಲಚಕ್ರಮಿವೋದ್ಯತಮ್ ॥15॥
ಎಲೈ ರಾಜನೇ, ಇಂತಹ ಸಲಕರಣೆಗಳನ್ನು ಧರಿಸಿದ, ಶ್ವೇತಹಯಗಳನ್ನು ಹೂಡಿದ ಆ ರಥವು ಯುದ್ಧದಲ್ಲಿ ಉದ್ಯತವಾದ ಕಾಲಚಕ್ರದಂತೆ ನಮ್ಮನ್ನು ನಾಶಮಾಡುವುದು.
ತಸ್ಯಾದ್ಯ ವಸುಧಾ ರಾಜನ್ ನಿಖಿಲಾ ಭರತರ್ಷಭ |
ಯಸ್ಯ ಭೀಮಾರ್ಜುನೌ ಯೋಧೌ ಸ ರಾಜಾ ರಾಜಸತ್ತಮಃ ॥16॥
ಎಲೈ ರಾಜನೇ, ಎಲೈ ಭರತರ್ಷಭನೇ, ಯಾವನಿಗೆ ಭೀಮಾರ್ಜುನರು ಯೋಧರಾಗಿದ್ದಾರೆಯೋ ಈ ದಿನ ಈ ಭೂಮಿಯು ಅವನಿಗೇ ಸೇರಿದುದು. ಅವನೇ ಶ್ರೇಷ್ಠನಾದ ರಾಜ.
ತಥಾ ಭೀಮಹತಪ್ರಾಯಾಂ ಮಜ್ಜಂತೀಂ ತವ ವಾಹಿನೀಮ್ |
ದುರ್ಯೋಧನಮುಖಾ ದೃಷ್ಟ್ವಾ ಕ್ಷಯಂ ಯಾಸ್ಯಂತಿ ಕೌರವಾಃ ॥17॥
ಅದರಂತೆ ಭೀಮನಿಂದ ಹತಪ್ರಾಯವಾಗಿ ಮುಳುಗಿಹೋಗುತ್ತಿರುವ ನಿನ್ನ ಸೈನ್ಯವನ್ನು ನೋಡಿ ದುರ್ಯೋಧನನೇ ಮೊದಲಾದ ಕೌರವರು ವಿನಾಶವನ್ನು ಹೊಂದುವರು.
ನ ಭೀಮಾರ್ಜುನಯೋರ್ಭೀತಾ ಲಪ್ಸ್ಯಂತೇ ವಿಜಯಂ ಪ್ರಭೋ |
ತವ ಪುತ್ರಾ ಮಹಾರಾಜ ರಾಜಾನಶ್ಚಾನುಸಾರಿಣಃ ॥18॥
ಎಲೈ ಮಹಾರಾಜನೇ, ಎಲೈ ಪ್ರಭುವೇ, ನಿನ್ನ ಮಕ್ಕಳು ಮತ್ತು ಅವರನ್ನು ಅನುಸರಿಸಿರುವ ರಾಜರೂ ಸಹ ಭೀಮಾರ್ಜುನರಿಗೆ ಹೆದರಿದ್ದಾರೆ. ಪ್ರಭುವೇ, ಅವರು ವಿಜಯವನ್ನು ಹೊಂದುವುದಿಲ್ಲ.
ಮತ್ಸ್ಯಾಸ್ತ್ವಾಮದ್ಯ ನಾರ್ಚಂತಿ ಪಾಂಚಾಲಾಶ್ಚ ಸಕೇಕಯಾಃ |
ಸಾಲ್ವೇಯಾಃ ಶೂರಸೇನಾಶ್ಚ ಸರ್ವೇ ತ್ವಾಮವಜಾನತೇ ॥19॥
ಈ ದಿನ ಮತ್ಸ್ಯರೂ, ಪಾಂಚಾಲರೂ ಮತ್ತು ಕೇಕಯರೂ ನಿನ್ನನ್ನು ಗೌರವಿಸುವುದಿಲ್ಲ. ಸಾಲ್ವದೇಶದವರೂ ಮತ್ತು ಶೂರಸೇನದೇಶದವರೆಲ್ಲರೂ ನಿನಗೆ ಅವಮಾನವನ್ನು ಮಾಡುತ್ತಾರೆ.
ಪಾರ್ಥಂ ಹ್ಯೇತೇ ಗತಾಃ ಸರ್ವೇ ವೀರ್ಯಜ್ಞಾಸ್ತಸ್ಯ ಧೀಮತಃ ॥20॥
ಪುತ್ರಸ್ಯ ತವ ದೋಷೇಣ ನಾನುಶೋಚಿತುಮರ್ಹಸಿ |
ಭಕ್ತಾ ಅಪಿ ವಿರುದ್ಧ್ಯಂತೇ ತವ ಪುತ್ರೈಃ ಸದೈವ ತೇ ॥21॥
ಮೇಧಾವಿಯಾದ ಅರ್ಜುನನ ಪರಾಕ್ರಮವನ್ನು ತಿಳಿದು ಅವರೆಲ್ಲರೂ ನಿನ್ನ ಮಗನ ದೋಷದಿಂದಲೂ ಸಹ ಅರ್ಜುನನ ಕಡೆಗೆ ಹೋಗಿದ್ದಾರೆ. ನೀನು ಅದಕ್ಕೆ ಶೋಕಪಡಬೇಡ. ನಿನ್ನಲ್ಲಿ ಅನುರಾಗವುಳ್ಳವರೂ ಸಹ ಯಾವಾಗಲೂ ನಿನ್ನ ಪುತ್ರವಿರೋಧವನ್ನು ಮಾಡುತ್ತಾರೆ.
ಅನರ್ಹಾನೇವ ತು ವನೇ ಧರ್ಮಯುಕ್ತಾನ್ ವಿಕರ್ಮಣಾ |
ಯೋಽಕ್ಲೇಶಯತ್ ಪಾಂಡುಪುತ್ರಾನ್ ಯೋ ವಿದ್ವೇಷ್ಟ್ಯಧುನಾಽಪಿ ವಾ ॥
ಸರ್ವೋಪಾಯೈರ್ನಿಯಂತವ್ಯಃ ಸಾನುಗಃ ಪಾಪಪೂರುಷಃ |
ತವ ಪುತ್ರೋ ಮಹಾರಾಜ ನಾನುಶೋಚಿತುಮರ್ಹಸಿ ॥23॥
ಎಲೈ ಮಹಾರಾಜನೇ, ಯಾವನು ಧರ್ಮಯುಕ್ತರಾದ ಮತ್ತು ಕ್ಲೇಶಕ್ಕೆ ಅನರ್ಹರಾದ ಪಾಂಡವರನ್ನು ಮೋಸದ ಕರ್ಮಗಳಿಂದ ಕ್ಲೇಶಗೊಳಿಸಿದನೋ, ಯಾವನು ಈಗಲೂ ಅವರನ್ನು ದ್ವೇಷಿಸುತ್ತಾನೆಯೋ ಅಂತಹ ಪಾಪಪುರುಷನಾದ ನಿನ್ನ ಪುತ್ರನನ್ನೂ ಮತ್ತು ಅವನ ಅನುಚರರನ್ನೂ ಸರ್ವೋಪಾಯಗಳಿಂದ ನಿಯಂತ್ರಿಸಬೇಕು. ನೀನು ಶೋಕಪಡಬೇಡ.
ಅಪರೋಕ್ಷಂ ಮಹಾರಾಜ ಸಾಕ್ಷಾಚ್ಚೈನಂ ಬ್ರವೀಮ್ಯಹಮ್ |
ದ್ಯೂತಕಾಲೇ ಮಯಾ ಚೋಕ್ತಂ ವಿದುರೇಣ ಚ ಧೀಮತಾ ॥24॥
ಮಹಾರಾಜನೇ, ಇದನ್ನು ನಾನು ಪ್ರತ್ಯಕ್ಷವಾಗಿ ಅವನನ್ನೇ ಉದ್ದೇಶಿಸಿ ಹೇಳುತ್ತೇನೆ. ದ್ಯೂತಕಾಲದಲ್ಲಿಯೇ ನಾನು ಇದನ್ನು ಹೇಳಿದೆ ಮತ್ತು ಮೇಧಾವಿಯಾದ ವಿದುರನೂ ಹೇಳಿದನು.
ಯದಿದಂ ತೇ ವಿಲಪಿತಂ ಪಾಂಡವಾನ್ ಪ್ರತಿ ಭಾರತ |

ಅನೀಶೇನೈವ ರಾಜೇಂದ್ರ ಸರ್ವಮೇತನ್ನಿರರ್ಥಕಮ್ ॥27॥
ಎಲೈ ಭಾರತನೇ, ರಾಜೇಂದ್ರನೇ, ಅಸಮರ್ಥನಾದ ನೀನು ಪಾಂಡವರನ್ನು ಕುರಿತು ಈ ಯಾವ ವಿಲಾಪವನ್ನು ಮಾಡುತ್ತಿದ್ದೀಯೋ ಅವೆಲ್ಲವೂ ವ್ಯರ್ಥವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೇಳನೆಯ ಅಧ್ಯಾಯ
ಧೃತರಾಷ್ಟ್ರನನ್ನು ಕುರಿತು ದುರ್ಯೋಧನನ ಸಮಾಧಾನವಚನಗಳು.
ದುರ್ಯೋಧನಃ
ನ ಭೇತವ್ಯಂ ಮಹಾರಾಜ ನ ಶೋಚ್ಯಾ ಭವತಾ ವಯಮ್ |
ಸಮರ್ಥಾಃ ಸ್ಮ ಪರಾನ್ ಜೇತುಂ ಬಲಿನಃ ಸಮರೇ ವಿಭೋ ॥1॥
ದುರ್ಯೋಧನ ಮಹಾರಾಜನೇ, ಹೆದರಬೇಡ. ನಮ್ಮನ್ನು ಕುರಿತು ನೀನು ಶೋಕಪಡುವ ಕಾರಣವಿಲ್ಲ. ವಿಭುವೇ, ಯುದ್ಧದಲ್ಲಿ ನಾವು ಬಲಿಷ್ಠರಾದ ಪಾಂಡವರನ್ನು ಸೋಲಿಸಲು ಸಮರ್ಥರಾಗಿದ್ದೇವೆ.
ವನೇ ಪ್ರವ್ರಾಜಿತಾನ್ ಪಾರ್ಥಾನ್ ಯದಾಯಾನ್ಮಧುಸೂದನಃ |
ಮಹತಾ ಬಲಚಕ್ರೇಣ ಪರರಾಷ್ಟ್ರಾವಮರ್ದಿನಾ ॥2॥
ಕೇಕಯಾ ಧೃಷ್ಟಕೇತುಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ರಾಜಾನಶ್ಚಾನ್ವಯುಃ ಪಾರ್ಥಾನ್ ಬಹವೋಽನ್ಯೇಽನುಯಾಯಿನಃ ॥3॥
ವನವಾಸವನ್ನು ಮಾಡುವ ಪಾಂಡವರ ಬಳಿಗೆ ಕಾಡಿನಲ್ಲಿ ಪರರಾಷ್ಟ್ರವನ್ನು ಮರ್ದಿಸುವ ದೊಡ್ಡ ಸೈನ್ಯದ ಜೊತೆಯಲ್ಲಿ ಮಧುಸೂದನನು ಬಂದಾಗ ಕೇಕಯರೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನೂ, ಇನ್ನೂ ಪಾಂಡವರನ್ನು ಅನುಸರಿಸುವ ಅನೇಕ ರಾಜರೂ ಸಹ ಪಾಂಡವರ ಬಳಿಗೆ ಬಂದರು.
ಇಂದ್ರಪ್ರಸ್ಥಸ್ಯ ಚಾದೂರಾತ್ ಸಮಾಜಗ್ಮುರ್ಮಹಾರಥಾಃ |
ವ್ಯಗರ್ಹಯಂಶ್ಚ ಸಂಗಮ್ಯ ಭವಂತಂ ಕುರುಭಿಃ ಸಹ ॥4॥
ಆ ಮಹಾರಥರು ಇಂದ್ರಪ್ರಸ್ಥದ ಸಮೀಪದಲ್ಲಿ ಪಾಂಡವರ ಜೊತೆಯಲ್ಲಿ ಸಮಾಗಮವನ್ನು ಹೊಂದಿ ನಿನ್ನನ್ನೂ ಮತ್ತು ಕುರುಗಳನ್ನೂ ನಿಂದಿಸಿದರು.
ತೇ ಯುಧಿಷ್ಠಿರಮಾಸೀನಮಜಿನೈಃ ಪರಿವಾರಿತಮ್ |
ಕೃಷ್ಣಪ್ರಧಾನಾಃ ಸಂಹತ್ಯ ಪರ್ಯುಪಾಸತ ಭಾರತ ॥5॥
ಎಲೈ ಭಾರತನೇ, ಕೃಷ್ಣನನ್ನು ಮುಂದೆ ಮಾಡಿಕೊಂಡ ಅವರು ಅಜಿನ (ಚರ್ಮ)ಗಳನ್ನು ಧರಿಸಿದ್ದ ಯುಧಿಷ್ಠಿರನ ಬಳಿ ಒಟ್ಟಿಗೆ ಸುತ್ತುವರಿದು ಕುಳಿತರು (ಒಟ್ಟಿಗೆ ಓಲೈಸಿದರು).
ಪ್ರತ್ಯಾದಾನಂ ಚ ರಾಜ್ಯಸ್ಯ ಕಾರ್ಯಮೂಚುರ್ನರಾಧಿಪಾಃ |
ಭವತಃ ಸಾನುಬಂಧಸ್ಯ ಸಮುಚ್ಛೇದಂ ಚಿಕೀರ್ಷವಃ ॥6॥
ಆ ರಾಜರು ಪರಿವಾರಸಹಿತನಾದ ನಿನ್ನ ವಿನಾಶವನ್ನು ಮಾಡಲು ಬಯಸಿದವರಾಗಿ ರಾಜ್ಯವನ್ನು ಹಿಂದೆ ಪಡೆಯಬೇಕೆಂದು ಮಾತನಾಡಿದರು.
ಶ್ರುತ್ವಾ ಚೈತನ್ಮಯೋಕ್ತಾಸ್ತು ಭೀಷ್ಮದ್ರೋಣಕೃಪಾಸ್ತಥಾ |
ಜ್ಞಾತಿಕ್ಷಯಭಯಾದ್ ರಾಜನ್ ಭೀತೇನ ಭರತರ್ಷಭ ॥7॥
ಪಾಂಡವರ ಸೈನಿಕರು ಆಡಿದ ಈ ಮಾತುಗಳನ್ನು ಕೇಳಿ ಎಲೈ ರಾಜನೇ, ಭರತಶ್ರೇಷ್ಠನೇ, ಬಂಧುಗಳ ವಿನಾಶಕ್ಕೆ ಹೆದರಿ ನಾನು ಭೀಷ್ಮ-ದ್ರೋಣ-ಕೃಪರ ಜೊತೆಯಲ್ಲಿ ಮಾತನಾಡಿದೆನು.
ನ ಚ ಸ್ಥಾಸ್ಯಂತಿ ಸಮಯೇ ಪಾಂಡವಾ ಇತಿ ಮೇ ಮತಿಃ |
ಸಮುಚ್ಛೇದಂ ಹಿ ನಃ ಕೃತ್ಸ್ನಂ ವಾಸುದೇವಶ್ಚಿಕೀರ್ಷತಿ ॥8॥
ಪಾಂಡವರು ತಮ್ಮ ಪ್ರತಿಜ್ಞೆಯನ್ನು ಪಾಲಿಸುವುದಿಲ್ಲ ಎಂದು ನನ್ನ ಅಭಿಪ್ರಾಯ. ಕೃಷ್ಣನು ನಮ್ಮೆಲ್ಲರ ವಿನಾಶವನ್ನು ಪೂರ್ಣವಾಗಿ ಮಾಡಲು ಬಯಸುತ್ತಾನೆ.
ಋತೇ ಚ ವಿದುರಾತ್ ಸರ್ವೇ ಯೂಯಂ ವಧ್ಯಾ ಮತಾ ಮಮ |
ಧೃತರಾಷ್ಟ್ರಸ್ತು ಧರ್ಮಜ್ಞೋ ನ ವಧ್ಯಃ ಕುರುಸತ್ತಮಃ ॥9॥
ವಿದುರನನ್ನು ಬಿಟ್ಟು ನೀವೆಲ್ಲರೂ ಅವನಿಗೆ ವಧ್ಯರಾದವರು. ಧರ್ಮಜ್ಞನಾದ ಕುರುಶ್ರೇಷ್ಠನಾದ ಧೃತರಾಷ್ಟ್ರನು ಮಾತ್ರ ಅವನಿಗೆ ವಧ್ಯನಲ್ಲ ಎಂದು ನನ್ನ ಅಭಿಪ್ರಾಯ.
ಸಮುಚ್ಛೇದಂ ಚ ಕೃತ್ಸ್ನಂ ನಃ ಕೃತ್ವಾ ತಾತ ಜನಾರ್ದನಃ |
ಏಕರಾಜ್ಯಂ ಕುರೂಣಾಂ ಸ್ಮ ಚಿಕೀರ್ಷತಿ ಯುಧಿಷ್ಠಿರೇ ॥10॥
ತಂದೆಯೇ, ಜನಾರ್ದನನು ನಮ್ಮ ಸಂಪೂರ್ಣ ನಾಶವನ್ನು ಮಾಡಿ ಅಖಂಡವಾದ ನಮ್ಮ ರಾಜ್ಯವನ್ನು ಯುಧಿಷ್ಠಿರನಿಗೆ ಒಪ್ಪಿಸುತ್ತಾನೆ.

ತತ್ರ ಕಿಂ ಪ್ರಾಪ್ತಕಾಲಂ ನಃ ಪ್ರಣಿಪಾತಃ ಪಲಾಯನಮ್ |
ಪ್ರಾಣಾನ್ ವಾ ಸಂಪರಿತ್ಯಜ್ಯ ಪ್ರತಿಯುಧ್ಯಾಮಹೇ ಪರಾನ್ ॥11॥
ಈಗ ನಾವು ಮಾಡಬೇಕಾದುದೇನು? ಶರಣಾಗತಿ, ಪಲಾಯನ ಅಥವಾ ಪ್ರಾಣವನ್ನು ಲೆಕ್ಕಿಸದೇ ಶತ್ರುಗಳಾದ ಪಾಂಡವರ ಜೊತೆಯಲ್ಲಿ ಪ್ರತಿಯುದ್ಧವನ್ನು ಮಾಡುವುದು!
ಪ್ರತಿಯುದ್ಧೇ ತು ನಿಯತಃ ಸ್ಯಾದಸ್ಮಾಕಂ ಪರಾಜಯಃ |
ಯುಧಿಷ್ಠಿರಸ್ಯ ಸರ್ವೇ ಹಿ ಪಾರ್ಥಿವಾ ವಶವರ್ತಿನಃ ॥12॥
ಪ್ರತಿಯುದ್ಧವನ್ನು ಮಾಡಿದರೆ ನಮ್ಮ ಪರಾಜಯವು ನಿಶ್ಚಿತವಾದುದು. ಏಕೆಂದರೆ ಎಲ್ಲಾ ರಾಜರೂ ಯುಧಿಷ್ಠಿರನ ವಶವರ್ತಿಗಳಾಗಿದ್ದಾರೆ.
ವಿರಕ್ತರಾಷ್ಟ್ರಾಶ್ಚ ವಯಂ ಮಿತ್ರಾಣಿ ಕುಪಿತಾನಿ ನಃ |
ಧಿಕ್ಕೃತಾಃ ಪಾರ್ಥಿವೈಃ ಸರ್ವೈಃ ಸ್ವಜನೇನ ಚ ಸರ್ವಶಃ ॥13॥
ನಮ್ಮ ರಾಷ್ಟ್ರವು ನಮ್ಮಲ್ಲಿ ಸ್ನೇಹರಹಿತವಾಗಿದೆ. ಮಿತ್ರರು ನಮ್ಮ ಮೇಲೆ ಕೋಪಗೊಂಡಿದ್ದಾರೆ. ನಾವು ಎಲ್ಲಾ ರಾಜರ ಮತ್ತು ಸ್ವಜನರ ಧಿಕ್ಕಾರಕ್ಕೆ ಪಾತ್ರರಾಗಿದ್ದೇವೆ.
ಪ್ರಣಿಪಾತೇ ನ ದೋಷೋಽಸ್ತಿ ಸಂಧಿರ್ನಃ ಶಾಶ್ವತೀಃ ಸಮಾಃ |
ಪಿತರಂ ತ್ವೇವ ಶೋಚಾಮಿ ಪ್ರಜ್ಞಾನೇತ್ರಂ ಜನಾಧಿಪಮ್ ॥14॥
ಮತ್ಕೃತೇ ದುಃಖಮಾಪನ್ನಂ ಕ್ಲೇಶಂ ಪ್ರಾಪ್ತಮನುತ್ತಮಮ್ ॥15॥
ಶರಣಾಗತರಾದರೆ ದೋಷವಿಲ್ಲ. ಬಹುಕಾಲದವರೆಗೆ ಸಂಧಿಯುಂಟಾಗುತ್ತದೆ. ಆದರೆ ನನ್ನ ಸಲುವಾಗಿ ಬಹಳ ದುಃಖವನ್ನು ಹೊಂದಿದ ಪ್ರಜ್ಞಾನೇತ್ರನಾದ ಜನಾಧಿಪನಾದ ನಿನ್ನನ್ನು ಕುರಿತು ದುಃಖಪಡುತ್ತೇನೆ.
ಕೃತಂ ಹಿ ತವ ಪುತ್ರೈಶ್ಚ ಪರೇಷಾಮವರೋಧನಮ್ |
ಮತ್ಪ್ರಿಯಾರ್ಥಂ ಪುರೈವೈತದ್ ವಿದಿತಂ ತೇ ನರೋತ್ತಮ ॥16॥
ಎಲೈ ನರೋತ್ತಮನೇ, ನಿನ್ನ ಪುತ್ರರು ನನಗೆ ಪ್ರಿಯವನ್ನುಂಟುಮಾಡಲು ಪರರಿಗೆ ಉಪದ್ರವವನ್ನು ಉಂಟುಮಾಡಿದ್ದಾರೆ ಎಂದು ಮೊದಲೇ ನಿನಗೆ ತಿಳಿದಿದೆ.
ತೇ ರಾಜ್ಞೋ ಧೃತರಾಷ್ಟ್ರಸ್ಯ ಸಾಮಾತ್ಯಸ್ಯ ಮಹಾರಥಾಃ |
ವೈರಂ ಪ್ರತಿಕರಿಷ್ಯಂತಿ ಕುಲೋಚ್ಛೇದೇನ ಪಾಂಡವಾಃ ॥17॥
ಅಂತಹ ಮಹಾರಥರಾದ ಪಾಂಡವರು ಮಂತ್ರಿಗಳಿಂದ ಕೂಡಿದ ಧೃತರಾಷ್ಟ್ರ ರಾಜನಿಗೆ ಕುಲವಿನಾಶವನ್ನು ಮಾಡಿ ಆ ವೈರವನ್ನು ಹಿಂದಿರುಗಿಸುತ್ತಾರೆ.
ತತೋ ದ್ರೋಣೋಽಬ್ರವೀದ್ ಭೀಷ್ಮಃ ಕೃಪೋ ದ್ರೌಣಿಶ್ಚ ಭಾರತ |
ಮತ್ವಾ ಮಾಂ ಮಹತೀಂ ಚಿಂತಾಮಾಸ್ಥಿತಂ ವ್ಯಥಿತೇಂದ್ರಿಯಮ್ ॥
ಅಭಿದ್ರುಗ್ಧಾಃ ಪರೇ ಚೇನ್ನೋ ನ ಭೇತವ್ಯಂ ಪರಂತಪ |
ಅಸಮರ್ಥಾಃ ಪರೇ ಜೇತುಮಸ್ಮಾನ್ ಯುಧಿ ಸಮಾಸ್ಥಿತಾನ್ ॥19॥
ಏಕೈಕಶಃ ಸಮರ್ಥಾಃ ಸ್ಮೋ ವಿಜೇತುಂ ಸರ್ವಪಾರ್ಥಿವಾನ್ |
ಆಗಚ್ಛಂತು ವಿನೇಷ್ಯಾಮೋ ದರ್ಪಮೇಷಾಂ ಶಿತೈಃ ಶರೈಃ ॥20॥
ಎಲೈ ಭಾರತನೇ, ಆಗ ನಾನು ದೊಡ್ಡಚಿಂತೆಗೆ ಒಳಗಾಗಿ, ದುಃಖಪೂರಿತವಾದ ಇಂದ್ರಿಯಗಳನ್ನು ಹೊಂದಿರುವೆನೆಂದು ತಿಳಿದು ದ್ರೋಣ, ಭೀಷ್ಮ, ಕೃಪ ಮತ್ತು ಅಶ್ವತ್ಥಾಮರು ಪರಂತಪನೇ, ಪಾಂಡವರಿಗೆ ದ್ರೋಹವನ್ನು ಎಸಗಿದ್ದರೆ ಹೆದರಬೇಕಾದುದಿಲ್ಲ. ಯುದ್ಧದಲ್ಲಿ ನಿಂತ ನಮ್ಮನ್ನು ಗೆಲ್ಲಲು ಅವರು ಅಸಮರ್ಥರಾದವರು. ನಮ್ಮಲ್ಲಿ ಒಬ್ಬೊಬ್ಬರೂ ಸಹ ಎಲ್ಲಾ ರಾಜರನ್ನೂ ಗೆಲ್ಲಲು ಸಮರ್ಥರಾಗಿದ್ದೇವೆ. ಅವರು ಯುದ್ಧಕ್ಕೆ ಬರಲಿ, ಹರಿತವಾದ ಬಾಣಗಳಿಂದ ಅವರ ದರ್ಪವನ್ನು ಇಳಿಸುತ್ತೇವೆ ಎಂದು ಹೇಳಿದರು.
ಪುರೈಕೇನ ಹಿ ಭೀಷ್ಮೇಣ ವಿಜಿತಾಃ ಸರ್ವಪಾರ್ಥಿವಾಃ ॥21॥
ಮೃತೇ ಪಿತರ್ಯತಿಕ್ರುದ್ಧೋ ರಥೇನೈಕೇನ ಭಾರತ |
ಜಘಾನ ಸುಬಹೂಂಸ್ತೇಷಾಂ ಸಂರಬ್ಧಃ ಕುರುಸತ್ತಮಃ ॥22॥
ತತಸ್ತೇ ಶರಣಂ ಜಗ್ಮುರ್ದೇವವ್ರತಮಿಮಂ ಭಯಾತ್ ॥23॥
ಎಲೈ ಭಾರತನೇ, ಹಿಂದೆ ತನ್ನ ತಂದೆಯು ಮೃತನಾದಾಗ ಭೀಷ್ಮನು ಬಹಳ ಕೋಪಗೊಂಡು ಒಂದು ರಥದಲ್ಲಿ ತಾನೊಬ್ಬನೇ ಎಲ್ಲ ರಾಜರನ್ನೂ ಜಯಿಸಿದನು. ಕೋಪಗೊಂಡ ಆ ಕುರುಶ್ರೇಷ್ಠನು ಅವರಲ್ಲಿ ಅನೇಕ ರಾಜರನ್ನು ಸಂಹರಿಸಿದನು. ಆಗ ಉಳಿದ ರಾಜರು ಭಯದಿಂದ ಅವನಿಗೆ ಶರಣಾಗತರಾದರು.
ಸ ಭೀಷ್ಮಃ ಸುಸಮರ್ಥೋಽಯಮಸ್ಮಾಭಿಃ ಸಹಿತೋ ರಣೇ |
ಪರಾನ್ ವಿಜೇತುಂ ತಸ್ಮಾತ್ ತೇ ವ್ಯೇತು ಭೀರ್ಭರತರ್ಷಭ ॥24॥
ಎಲೈ ಭರತರ್ಷಭನೇ, ನಮ್ಮಿಂದ ಸಹಿತನಾದ ಭೀಷ್ಮನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ಸಮರ್ಥನಾಗಿದ್ದಾನೆ. ಆದ್ದರಿಂದ ನಿನ್ನ ಭಯವು ದೂರವಾಗಲಿ.
ಇತ್ಯೇಷಾಂ ನಿಶ್ಚಯೋ ಹ್ಯಾಸೀತ್ ತತ್ಕಾಲೇಽಮಿತತೇಜಸಾಮ್ |
ಪುರಾ ಪರೇಷಾಂ ಪೃಥಿವೀ ಕೃತ್ಸ್ನಾಽಽಸೀದ್ ವಶವರ್ತಿನೀ ॥25॥
ಅಸ್ಮಾನ್ ಪುನರಮೀ ನಾದ್ಯ ಸಮರ್ಥಾ ಜೇತುಮಾಹವೇ |
ಛಿನ್ನಪಕ್ಷಾಃ ಪರೇ ಹ್ಯದ್ಯ ವೀರ್ಯಹೀನಾಶ್ಚ ಪಾಂಡವಾಃ ॥26॥

ಹೀಗೆ ಅಮಿತತೇಜಸ್ವಿಗಳಾದ ದ್ರೋಣ-ಭೀಷ್ಮಾದಿಗಳ ಅಭಿಪ್ರಾಯವು ಆ ಕಾಲದಲ್ಲಿ ಇದ್ದಿತು. ಮೊದಲು ಸಮಗ್ರವಾದ ಭೂಮಿಯು ಶತ್ರುಗಳಾದ ಪಾಂಡವರಿಗೆ ವಶವಾಗಿದ್ದಿತು. ಈಗ ಮಾತ್ರ ಅವರು ನಮ್ಮನ್ನು ಯುದ್ಧದಲ್ಲಿ ಗೆಲ್ಲಲಾರರು. ಈಗ ಪಾಂಡವರು ರೆಕ್ಕೆಗಳನ್ನು ಕತ್ತರಿಸಿದ ಪಕ್ಷಿಗಳಂತೆ ಸಾಮರ್ಥ್ಯಹೀನರಾಗಿದ್ದಾರೆ.
ಅಸ್ಮತ್ಸಂಸ್ಥಾ ಚ ಪೃಥಿವೀ ವರ್ತತೇ ಭರತರ್ಷಭ |
ಏಕಾರ್ಥಾಃ ಸುಖದುಃಖೇಷು ಸಮಾನೀತಾಶ್ಚ ಪಾರ್ಥಿವಾಃ ||27||
ಭರತರ್ಷಭನೇ, ಈ ದಿನ ಭೂಮಿಯು ನಮ್ಮ ವಶದಲ್ಲಿದೆ. ನಮಗೆ ಸಮಾನವಾದ ಸುಖ-ದುಃಖವುಳ್ಳ ರಾಜರು ಕರೆತರಲ್ಪಟ್ಟಿದ್ದಾರೆ.
ಅಪ್ಯಗ್ನಿಂ ಪ್ರವಿಶೇಯುಸ್ತೇ ಸಮುದ್ರಂ ವಾ ಪರಂತಪ |
ಮದರ್ಥಂ ಪಾರ್ಥಿವಾಃ ಸರ್ವೇ ತದ್ ವಿದ್ಧಿ ಕುರುಸತ್ತಮ ||28||
ಪರಂತಪನೇ, ಆ ಎಲ್ಲ ರಾಜರೂ ನನ್ನ ಸಲುವಾಗಿ ಅಗ್ನಿಯನ್ನೂ ಪ್ರವೇಶಿಸಿಯಾರು ಅಥವಾ ಸಮುದ್ರವನ್ನೂ ಪ್ರವೇಶಿಸಿಯಾರು. ಎಲ್ಲೈ ಕುರುಸತ್ತಮನೇ, ಅದನ್ನು ತಿಳಿ.
ಉನ್ಮತ್ತಮಿವ ಚಾಪಿ ತ್ವಾಂ ಪ್ರಹಸಂತೀಹ ದುಃಖಿತಮ್ |
ವಿಲಪಂತಂ ಬಹುವಿಧಂ ಭೀತಂ ಪರವಿಕತ್ಥನೇ ||29||
ಹುಚ್ಚನನ್ನು ನೋಡಿದಂತೆ ದುಃಖಿತನಾದ ನಿನ್ನನ್ನು ನೋಡಿ, ಹಾಗೆಯೇ ಪಾಂಡವರನ್ನು ಹೊಗಳಿದಾಗ ಭೀತನಾಗಿ, ಅನೇಕ ವಿಧವಾಗಿ ಪ್ರಲಾಪವನ್ನು ಮಾಡುವ ನಿನ್ನನ್ನು ನೋಡಿ ಹಾಸ್ಯ ಮಾಡುತ್ತಾರೆ.
ಏಷಾಂ ಹ್ಯೇಕೈಕಶೋ ರಾಜ್ಞಾಂ ಸಮರ್ಥಃ ಪಾಂಡವಾನ್ ಪ್ರತಿ |
ಆತ್ಮಾನಂ ಮನ್ಯತೇ ಸರ್ವೋ ವ್ಯೇತು ತೇ ಭಯಮಾಗತಮ್ ||30||
ನಮ್ಮ ಜೊತೆಗೆ ಬಂದ ಒಬ್ಬೊಬ್ಬ ರಾಜರೂ ಸಹ ಪಾಂಡವರನ್ನು ಗೆಲ್ಲಲು ತಾವು ಸಮರ್ಥರಾಗಿದ್ದೇವೆ ಎಂದು ತಿಳಿದಿದ್ದಾರೆ. ನಿನಗೆ ಒದಗಿರುವ ಭಯವು ದೂರವಾಗಲಿ.
ಜೇತುಂ ಸಮಗ್ರಾಂ ಸೇನಾಂ ಮೇ ವಾಸವೋಽಪಿ ನ ಶಕ್ನುಯಾತ್ |
ಹಂತುಮಕ್ಷಯ್ಯರೂಪೇಯಂ ಬ್ರಹ್ಮಣೋಽಪಿ ಸ್ವಯಂಭುವಃ ||31||
ನನ್ನ ಸಮಗ್ರವಾದ ಸೈನ್ಯವನ್ನು ಗೆಲ್ಲಲು ಇಂದ್ರನೂ ಸಮರ್ಥನಾಗಲಾರ. ಅಕ್ಷಯವಾದ ಈ ನನ್ನ ಸೈನ್ಯವನ್ನು ಸ್ವಯಂಭುವಾದ ಬ್ರಹ್ಮನೂ ಕೊಲ್ಲಲಾರ.
ಯುಧಿಷ್ಠಿರಃ ಪುರಂ ಹಿತ್ವಾ ಪಂಚ ಗ್ರಾಮಾನ್ ಪ್ರಯಾಚತೇ |
ಭೀತೋ ಹಿ ಮಾಮಕಾತ್ ಸೈನ್ಯಾತ್ ಪ್ರಭಾವಾಚ್ಚೈವ ಮೇ ವಿಭೋ ||
ಎಲ್ಲೈ ವಿಭುವೇ, ಯುಧಿಷ್ಠಿರನು ನನ್ನ ಸೈನ್ಯಕ್ಕೂ ಮತ್ತು ನನ್ನ ಸಾಮರ್ಥ್ಯಕ್ಕೂ ಹೆದರಿ ನಗರವನ್ನು ಬಿಟ್ಟು ಐದುಗ್ರಾಮಗಳನ್ನು ಬೇಡುತ್ತಿದ್ದಾನೆ.
ಸಮರ್ಥಂ ಮನ್ಯಸೇ ಯಚ್ಚ ಕುಂತೀಪುತ್ರಂ ವೃಕೋದರಮ್ |
ತನ್ಮಿಥ್ಯಾ ನ ಹಿ ಮೇ ಕೃತ್ಸ್ನಂ ಪ್ರಭಾವಂ ವೇತ್ಸಿ ಭಾರತ ||33||
ಎಲ್ಲೈ ಭಾರತನೇ, ಕುಂತೀಪುತ್ರನಾದ ವೃಕೋದರನು ಬಹಳ ಬಲಿಷ್ಠನೆಂದು ನೀನು ತಿಳಿದಿರುವುದು ಸುಳ್ಳು. ನಿನಗೆ ನನ್ನ ಪೂರ್ಣಸಾಮರ್ಥ್ಯವು ತಿಳಿದಿಲ್ಲ.
ಮತ್ಸಮೋ ಹಿ ಗದಾಯುದ್ಧೇ ಪೃಥಿವ್ಯಾಂ ನಾಸ್ತಿ ಕಶ್ಚನ |
ನಾಸೀತ್ ಕಶ್ಚಿದತಿಕ್ರಾಂತೋ ಭವಿತಾ ನ ಚ ಕಶ್ಚನ ||34||
ಗದಾಯುದ್ಧದಲ್ಲಿ ನನಗೆ ಸಮನಾದವನು ಭೂಮಿಯಲ್ಲಿ ಯಾರೂ ಇಲ್ಲ, ಹಿಂದೆ ಇರಲಿಲ್ಲ, ಮತ್ತು ಮುಂದೆ ಉಂಟಾಗುವುದಿಲ್ಲ.
ಯುಕ್ತೋ ದುಃಖೋಷಿತಶ್ಚಾಹಂ ವಿದ್ಯಾಪಾರಗತಸ್ತಥಾ |
ತಸ್ಮಾನ್ನ ಭೀಮಾನ್ನಾನ್ಯೇಭ್ಯೋ ಭಯಂ ಮೇ ವಿದ್ಯತೇ ಕ್ವಚಿತ್ ||35||
ಬಹಳ ಕಷ್ಟದಲ್ಲಿ ಬೆಳೆದವನೂ ಮತ್ತು ವಿದ್ಯಾಪಾರಂಗತನೂ ಆದ ನಾನು ಬಹಳ ಎಚ್ಚರಿಕೆಯಿಂದ ಇದ್ದೇನೆ. ಆದ್ದರಿಂದ ಭೀಮನಿಂದಾಗಲೀ ಅಥವಾ ಬೇರೆ ಇನ್ನೊಬ್ಬರಿಂದಾಗಲೀ ನನಗೆ ಭಯವಿಲ್ಲ.
ದುರ್ಯೋಧನಸಮೋ ನಾಸ್ತಿ ಗದಾಯಾಮಿತಿ ನಿಶ್ಚಯಃ |
ಸಂಕರ್ಷಣಸ್ಯ ಭವನೇ ಯತ್ತದೈನಮುಪಾವಸಮ್ ||36||
ಬಲರಾಮನ ನಿವಾಸದಲ್ಲಿ ನಾನು ಅವನ ಶಿಷ್ಯನಾಗಿದ್ದಾಗ, ಗದಾಯುದ್ಧದಲ್ಲಿ ದುರ್ಯೋಧನನಿಗೆ ಸಮನಾದವನು ಯಾವನೂ ಇಲ್ಲ ಎಂದು ಎಲ್ಲರ ನಿಶ್ಚಯವಾಗಿದ್ದಿತು.
ಯುದ್ಧೇ ಸಂಕರ್ಷಣಸಮೋ ಬಲೇ ನಾಸ್ತ್ಯಧಿಕೋ ಭುವಿ |
ಗದಾಪ್ರಹಾರಂ ಭೀಮೋ ಮೇ ನ ಜಾತು ವಿಷಹೇದ್ ಯುಧಿ ||37||
ಯುದ್ಧದಲ್ಲಿ ಮತ್ತು ಬಲದಲ್ಲಿ ಬಲರಾಮನಿಗೆ ಸಮನಾದವನು ಅಥವಾ ಅಧಿಕನಾದವನು ಭೂಮಿಯಲ್ಲಿ ಯಾವನೂ ಇಲ್ಲ. ಯುದ್ಧದಲ್ಲಿ ನನ್ನ ಗದಾಪ್ರಹಾರವನ್ನು ಭೀಮಸೇನನು ಎಂದೂ ತಡೆದುಕೊಳ್ಳಲಾರ.
ಏಕಂ ಪ್ರಹಾರಂ ಯಂ ದದ್ಯಾಂ ಭೀಮಾಯ ರುಷಿತೋ ನೃಪ |
ಸ ಏವೈನಂ ನಯೇದ್ ಘೋರಃ ಕ್ಷಿಪ್ರಂ ವೈವಸ್ವತಕ್ಷಯಮ್ ||38||
ಎಲ್ಲೈ ರಾಜನೇ, ಕ್ರುದ್ಧನಾಗಿ ನಾನು ಭೀಮಸೇನನಿಗೆ ಕೊಡುವ ಒಂದು ಘೋರವಾದ ಗದಾಪ್ರಹಾರವೇ ಶೀಘ್ರವಾಗಿ ಅವನನ್ನು ಯಮಲೋಕಕ್ಕೆ ಕಳುಹಿಸೀತು.
ಇಚ್ಛೇಯಂ ಚ ಗದಾಹಸ್ತಂ ರಾಜನ್ ದ್ರಷ್ಟುಂ ವೃಕೋದರಮ್ |

ಸುಚಿರಂ ಪ್ರಾರ್ಥಿತೋ ಹ್ಯೇಷ ಮಮ ನಿತ್ಯಂ ಮನೋರಥಃ ॥39॥
ಎಲೈ ರಾಜನೇ, ನಾನು ಗದಾಪಾಣಿಯಾದ ವೃಕೋದರನನ್ನು ನೋಡಲು ಬಯಸುತ್ತೇನೆ. ಇದು ನಾನು ಬಹಳ ಕಾಲದಿಂದ ಯಾವಾಗಲೂ ಅಪೇಕ್ಷಿಸಿದ ನನ್ನ ಮನೋರಥ.
ಗದಯಾ ನಿಹತೋ ಹ್ಯಾಜೌ ಮಯಾ ಪಾರ್ಥೋ ವೃಕೋದರಃ |
ವಿಶೀರ್ಣಗಾತ್ರಃ ಪೃಥಿವೀಂ ಪರಾಸುಃ ಪ್ರಪತಿಷ್ಯತಿ ॥40॥
ನನ್ನ ಗದಾಪ್ರಹಾರದಿಂದ ಹತನಾದ ಪಾಂಡವನಾದ, ವೃಕೋದರನು ತನ್ನ ಶರೀರವು ಬಿರಿದು ಭೂಮಿಯ ಮೇಲೆ ಬಿದ್ದು ಅಸುವನ್ನು ನೀಗುವನು.
ಗದಾಪ್ರಹಾರಾಭಿಹತೋ ಹಿಮವಾನಪಿ ಪರ್ವತಃ |
ಸಕೃನ್ಮಯಾ ವಿದೀರ್ಯೇತ ಗಿರಿಃ ಶತಸಹಸ್ರಧಾ ॥41॥
ನನ್ನ ಒಂದು ಗದಾಪ್ರಹಾರಕ್ಕೆ ಹಿಮಾಲಯಪರ್ವತವೂ ಸಹ ಬಿರಿದು, ನೂರಾರು ಅಥವಾ ಸಾವಿರಾರು ಭಾಗಗಳಾಗುತ್ತದೆ.
ಸ ಚಾಪ್ಯೇತದ್ ವಿಜಾನಾತಿ ವಾಸುದೇವಾರ್ಜುನೌ ತಥಾ |
ದುರ್ಯೋಧನಸಮೋ ನಾಸ್ತಿ ಗದಾಯಾಮಿತಿ ನಿಶ್ಚಯಃ ॥42॥
ಭೀಮಸೇನನೂ ಈ ವಿಷಯವನ್ನು ತಿಳಿದಿದ್ದಾನೆ. ಹಾಗೆಯೇ ಕೃಷ್ಣಾರ್ಜುನರೂ ತಿಳಿದಿದ್ದಾರೆ. ಗದಾಯುದ್ಧದಲ್ಲಿ ದುರ್ಯೋಧನನಿಗೆ ಸಮರಾದವರು ಇಲ್ಲವೆಂಬುದು ನಿಶ್ಚಿತವಾದುದು.
ತತ್ ತೇ ವೃಕೋದರಮಯಂ ಭಯಂ ವ್ಯೇತು ಮಹಾಹವೇ |
ವ್ಯಪನೇಷ್ಯಾಮ್ಯಹಂ ಹ್ಯೇನಂ ಮಾ ರಾಜನ್ ವಿಮನಾ ಭವ ॥43॥
ಆದ್ದರಿಂದ ವೃಕೋದರನ ಸಲುವಾಗಿ ಯುದ್ಧದಲ್ಲಿ ನಿನಗೆ ಉಂಟಾಗಿರುವ ಭಯವು ದೂರವಾಗಲಿ. ರಾಜನೇ, ನಾನು ಅವನನ್ನು ಸಂಹರಿಸುತ್ತೇನೆ. ನೀನು ವಿಷಾದ ಪಡಬೇಡ.
ತಸ್ಮಿನ್ ಮಯಾ ಹತೇ ಕ್ಷಿಪ್ರಮರ್ಜುನಂ ಬಹವೋ ರಥಾಃ |
ತುಲ್ಯರೂಪಾ ವಿಶಿಷ್ಟಾಶ್ಚ ಕ್ಷೇಪ್ಸ್ಯಂತಿ ಭರತರ್ಷಭ ॥44॥
ಎಲೈ ಭರತರ್ಷಭನೇ, ನನ್ನಿಂದ ಭೀಮನು ಹತನಾಗುತ್ತಿರಲು ಅರ್ಜುನನಿಗೆ ಸಮಾನರಾದ ಅಥವಾ ಅರ್ಜುನನಿಗಿಂತಲೂ ಅಧಿಕರಾದ ಅನೇಕ ಮಹಾರಥರು ಅರ್ಜುನನನ್ನು ಶೀಘ್ರವಾಗಿ ಎತ್ತಿ ಎಸೆಯುವರು.
ಭೀಷ್ಮೋ ದ್ರೋಣಃ ಕೃಪೋ ದ್ರೌಣಿಃ ಕರ್ಣೋ ಭೂರಿಶ್ರವಾಸ್ತಥಾ |
ಪ್ರಾಗ್ಜ್ಯೋತಿಷಾಧಿಪಃ ಶಲ್ಯಃ ಸಿಂಧುರಾಜೋ ಜಯದ್ರಥಃ ॥45॥
ಏಕೈಕ ಏಷಾಂ ಶಕ್ತಸ್ತು ಹಂತುಂ ಭಾರತ ಪಾಂಡವಾನ್ |
ಸಮೇತಾಸ್ತು ಕ್ಷಣೇನೈತಾನ್ ನೇಷ್ಯಂತಿ ಯಮಸಾದನಮ್ ॥46॥
ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ಕರ್ಣ, ಭೂರಿಶ್ರವ, ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತ, ಶಲ್ಯ, ಸಿಂಧುರಾಜನಾದ ಜಯದ್ರಥ ಇವರಲ್ಲಿ ಒಬ್ಬೊಬ್ಬರೂ ಪಾಂಡವರನ್ನು ಕೊಲ್ಲಲು ಸಮರ್ಥರಾಗಿದ್ದಾರೆ. ಎಲ್ಲರೂ ಒಟ್ಟಿಗೆ ಸೇರಿದರೆ ಒಂದುಕ್ಷಣದಲ್ಲಿ ಪಾಂಡವರನ್ನು ಯಮಲೋಕಕ್ಕೆ ಕಳುಹಿಸುವರು.
ಸಮಗ್ರಾ ಪಾರ್ಥಿವೀ ಸೇನಾ ಪಾರ್ಥಿವಾನಾಂ ಧನಂಜಯಮ್ |
ಕಸ್ಮಾದಶಕ್ತಾ ನಿರ್ಜೇತುಮಿತಿ ಹೇತುರ್ನ ವಿದ್ಯತೇ ॥47॥
ರಾಜರ ಸಮಗ್ರವಾದ ಸೈನ್ಯಗಳು ಅರ್ಜುನನನ್ನು ಜಯಿಸಲು ಅಸಮರ್ಥವಾಗುತ್ತವೆ ಎಂದು ತಿಳಿಯಲು ಏನೂ ಕಾರಣವಿಲ್ಲ.
ಶರವ್ರಾತೈಸ್ತು ಭೀಷ್ಮೇಣ ಶತಶೋಽಥ ಸಹಸ್ರಶಃ |
ದ್ರೋಣದ್ರೌಣಿಕೃಪೈಶ್ಚೈವ ಗಂತಾ ಪಾರ್ಥೋ ಯಮಕ್ಷಯಮ್ ॥48॥
ಭೀಷ್ಮರ ಮತ್ತು ದ್ರೋಣ-ದ್ರೌಣಿ-ಕೃಪರ ನೂರಾರು, ಸಾವಿರಾರು ಸಂಖ್ಯೆಯ ಬಾಣಗಳ ಸಮೂಹದಿಂದ ಅರ್ಜುನನು ಯಮಲೋಕಕ್ಕೆ ಹೋಗುವವನಾಗುತ್ತಾನೆ.
ಪಿತಾಮಹೋಽಪಿ ಗಾಂಗೇಯಃ ಶಂತನೋ ರಥಿನಾಂ ವರಃ |
ಬ್ರಹ್ಮರ್ಷಿಸದೃಶೋ ಜಜ್ಞೇ ದೇವೈರಪಿ ಸುದುಃಸಹಃ ॥49॥
ಪಿತಾಮಹನೂ, ರಥಿಶ್ರೇಷ್ಠನೂ ಆದ ಗಾಂಗೇಯನಾದ ಭೀಷ್ಮನು, ಬ್ರಹ್ಮರ್ಷಿ ಸದೃಶನಾಗಿ ದೇವತೆಗಳಿಂದಲೂ ಸೋಲಿಸಲು ಅಸಾಧ್ಯನಾಗಿ, ಶಂತನುವಿನ ಪುತ್ರನಾಗಿ ಜನಿಸಿದ್ದಾನೆ.
ನ ಹಂತಾ ವಿದ್ಯತೇ ಚಾಪಿ ರಾಜನ್ ಭೀಷ್ಮಸ್ಯ ಕಶ್ಚನ |
ಪಿತ್ರಾಽಪ್ಯುಕ್ತಃ ಪ್ರಸನ್ನೇನ ನಾಕಾಮಸ್ತ್ವಂ ಮರಿಷ್ಯಸಿ ॥50॥
ಎಲೈ ರಾಜನೇ, ಯುದ್ಧದಲ್ಲಿ ಭೀಷ್ಮನನ್ನು ಕೊಲ್ಲುವವನು ಯಾವನೂ ಇಲ್ಲ. ಪ್ರಸನ್ನನಾದ ಅವನ ತಂದೆಯು ಅವನಿಗೆ ಇಚ್ಛಾಮರಣರೂಪವಾದ ವರವನ್ನೂ ಕೊಟ್ಟಿದ್ದಾನೆ.
ಬ್ರಹ್ಮರ್ಷೇಶ್ಚ ಭರದ್ವಾಜಾದ್ ದ್ರೋಣೋ ದ್ರೋಣ್ಯಾಮಜಾಯತ |
ದ್ರೋಣಾಜ್ಜಜ್ಞೇ ಮಹಾರಾಜ ದ್ರೌಣಿಶ್ಚ ಪರಮಾಸ್ತ್ರವಿತ್ ॥51॥
ಬ್ರಹ್ಮರ್ಷಿಗಳಾದ ಭರದ್ವಾಜರಿಂದ ದ್ರೋಣರು ಕಮಂಡಲುವಿನಲ್ಲಿ ಜನಿಸಿದ್ದಾರೆ. ಮಹಾರಾಜನೇ, ಪರಮಾಸ್ತ್ರವೇತ್ತರಾದ ಅಶ್ವತ್ಥಾಮರು ದ್ರೋಣರಿಂದ ಜನಿಸಿದ್ದಾರೆ.
ಕೃಪಶ್ಚಾಚಾರ್ಯಮುಖ್ಯೋಽಯಂ ಮಹರ್ಷೇರ್ಗೌತಮಾದಪಿ |
ಶರಸ್ತಂಬೋದ್ಭವಃ ಶ್ರೀಮಾನವಧ್ಯ ಇತಿ ಮೇ ಮತಿಃ ॥52॥

ಆಚಾರ್ಯಶ್ರೇಷ್ಠರಾದ ಈ ಕೃಪರು ಮಹರ್ಷಿಗಳಾದ ಗೌತಮರಿಂದ ಶರಸ್ತಂಬದಿಂದ ಜನಿಸಿದ್ದಾರೆ. ಕಾಂತಿಯುಕ್ತರಾದ ಅವರು ಅವಧ್ಯರು ಎಂದು ನನ್ನ ಅಭಿಪ್ರಾಯ.
ಅಯೋನಿಜಾಸ್ತ್ರಯೋ ಹ್ಯೇತೇ ಪಿತಾ ಮಾತಾ ಚ ಮಾತುಲಃ ॥53॥
ಅಶ್ವತ್ಥಾಮಾ ಮಹಾರಾಜ ಸ ಚ ಶೂರಃ ಸ್ಥಿತೋ ಮಮ ॥54॥
ಅವನ ತಂದೆ, ತಾಯಿ ಮತ್ತು ಸೋದರಮಾವ ಈ ಮೂವರು ಅಯೋನಿಜರಾದವರು. ಎಲ್ಲೈ ಮಹಾರಾಜನೇ, ಅಂತಹ ಶೂರನಾದ ಅಶ್ವತ್ಥಾಮನು ನನ್ನ ಪಕ್ಷದಲ್ಲಿದ್ದಾನೆ.
ಸರ್ವ ಏತೇ ಮಹಾರಾಜ ದೇವಕಲ್ಪಾ ಮಹಾರಥಾಃ |
ಶಕ್ರಸ್ಯಾಪಿ ವ್ಯಥಾಂ ಕುರ್ಯುಃ ಸಂಯುಗೇ ಭರತರ್ಷಭ ॥55॥
ಎಲ್ಲೈ ಮಹಾರಾಜನೇ, ಈ ಎಲ್ಲಾ ಮಹಾರಥರೂ ದೇವತೆಗಳಿಗೆ ಸಮಾನರಾದವರು. ಭರತರ್ಷಭನೇ, ಯುದ್ಧದಲ್ಲಿ ಅವರು ಇಂದ್ರನಿಗೂ ವ್ಯಥೆಯನ್ನು ಮಾಡಿಯಾರು.
ನೈತೇಷಾಮರ್ಜುನಃ ಶಕ್ತ ಏಕೈಕಂ ಪ್ರತಿವೀಕ್ಷಿತುಮ್ |
ಸಹಿತಾಸ್ತು ನರವ್ಯಾಘ್ರಾ ಹನಿಷ್ಯಂತಿ ಧನಂಜಯಮ್ ॥56॥
ಅರ್ಜುನನು ಇವರಲ್ಲಿ ಒಬ್ಬೊಬ್ಬರನ್ನೂ ದೃಷ್ಟಿಯಿಂದ ನೋಡಲೂ ಸಾಧ್ಯವಿಲ್ಲ. ಒಟ್ಟುಗೂಡಿದ ಈ ನರವ್ಯಾಘ್ರರು ಧನಂಜಯನನ್ನು ಕೊಲ್ಲುವರು.
ಭೀಷ್ಮದ್ರೋಣಕೃಪಾಣಾಂ ಚ ತುಲ್ಯಃ ಕರ್ಣೋ ಮತೋ ಮಮ |
ಅನುಜ್ಞಾತಶ್ಚ ರಾಮೇಣ ಮತ್ಸಮೋಽಸೀತಿ ಭಾರತ ॥57॥
ಕರ್ಣನು ಭೀಷ್ಮ-ದ್ರೋಣ-ಕೃಪರಿಗೆ ಸಮನಾದವನು ಎಂದು ನನ್ನ ಅಭಿಪ್ರಾಯ. ಅಲ್ಲದೆ ಎಲ್ಲೈ ಭಾರತನೇ, ಪರಶುರಾಮನು ನೀನು ನನಗೆ ಸಮಾನನಾಗಿದ್ದೀಯೆ ಎಂದು ಸಮ್ಮತಿಯನ್ನು ಕೊಟ್ಟಿದ್ದಾನೆ.
ಕುಂಡಲೇ ರುಚಿರೇ ಚಾಸ್ತಾಂ ಕರ್ಣಸ್ಯ ಸಹಜೇ ಶುಭೇ |
ತೇ ಶಕ್ತ್ಯರ್ಥೇ ಮಹೇಂದ್ರೇಣ ಯಾಚಿತಃ ಸ ಪರಂತಪಃ ॥58॥
ಹಿಂದೆ ಕರ್ಣನಲ್ಲಿ ಸಹಜವಾದ, ಸುಂದರವಾದ, ಶುಭವಾದ ಕರ್ಣಕುಂಡಲಗಳಿದ್ದವು. ಪರಂತಪನಾದ ಕರ್ಣನು ಇಂದ್ರನಿಂದ ಯಾಚಿಸಲ್ಪಟ್ಟು ಅವುಗಳ ಬದಲಾಗಿ ಶಕ್ತ್ಯಾಯುಧವನ್ನು ಪಡೆದಿದ್ದಾನೆ.
ಅಮೋಘಯಾ ಮಹಾರಾಜ ಶಕ್ತ್ಯಾ ಪರಮಭೀಮಯಾ |
ತಸ್ಯ ಶಕ್ತ್ಯೋಪಗೂಢಸ್ಯ ಕಸ್ಮಾಜ್ಜೀವೇದ್ ಧನಂಜಯಃ ॥59॥
ಮಹಾರಾಜನೇ, ಅಮೋಘವಾದ ಮತ್ತು ಭಯಂಕರವಾದ ಶಕ್ತ್ಯಾಯುಧದಿಂದ ಸಹಿತನಾದ ಕರ್ಣನ ಎದುರಿಗೆ ಧನಂಜಯನು ಹೇಗೆ ಜೀವಿಸುತ್ತಾನೆ?
ವಿಜಯೋ ಮೇ ಧ್ರುವಂ ರಾಜನ್ ಫಲಂ ಪಾಣಾವಿವಾಹಿತಮ್ |
ಅಭಿವ್ಯಕ್ತಃ ಪರೇಷಾಂ ಚ ಕೃತ್ಸ್ನೋ ಭುವಿ ಪರಾಜಯಃ ॥60॥
ರಾಜನೇ, ನನ್ನ ವಿಜಯವು ಅಂಗೈಯಲ್ಲಿರುವ ಹಣ್ಣಿನಂತೆ ಸ್ಪಷ್ಟವಾಗಿದೆ. ಭೂಮಿಯಲ್ಲಿ ಶತ್ರುಗಳ ಸಮಗ್ರವಾದ ಪರಾಜಯವೂ ಸಹ ಅಷ್ಟೇ ಸ್ಪಷ್ಟವಾಗಿ ತೋರುತ್ತಿದೆ.
ಅಹ್ನಾ ಹ್ಯೇಕೇನ ಭೀಷ್ಮೋಽಯಂ ಪ್ರಯುತಂ ಹಂತಿ ಭಾರತ |
ತತ್ಸಮಾಶ್ಚ ಮಹೇಷ್ವಾಸಾ ದ್ರೋಣದ್ರೌಣಿಕೃಪಾ ಅಪಿ ॥61॥
ಎಲ್ಲೈ ಭಾರತನೇ, ಭೀಷ್ಮನು ಒಂದು ದಿನದಲ್ಲಿ ಹತ್ತುಸಹಸ್ರ ಯೋಧರನ್ನು ಕೊಲ್ಲುತ್ತಾನೆ. ಮಹಾಧನುರ್ಧಾರಿಗಳಾದ ದ್ರೋಣ-ದ್ರೌಣಿ-ಕೃಪರೂ ಸಹ ಅವನಿಗೆ ಸಮಾನರಾದವರು.
ಸಂಶಪ್ತಕಾನಾಂ ವೃಂದಾನಿ ಕ್ಷತ್ರಿಯಾಣಾಂ ಪರಂತಪ |
ಅರ್ಜುನಂ ವಯಮಸ್ಮಾನ್ ವಾ ನಿಹನ್ಯಾತ್ ಕಪಿಕೇತನಃ ॥62॥
ಎಲ್ಲೈ ಪರಂತಪನೇ, ಕ್ಷತ್ರಿಯರಾದ ಸಂಶಪ್ತಕರ ಸಮೂಹಗಳು ಅರ್ಜುನನನ್ನು ನಾವು ಕೊಲ್ಲುತ್ತೇವೆ ಅಥವಾ ಕಪಿಧ್ವಜನಾದ ಅರ್ಜುನನು ನಮ್ಮನ್ನು ಕೊಂದಾನು ಎಂಬ ನಿಶ್ಚಯದಲ್ಲಿದ್ದಾರೆ.
ತಾಂಶ್ಚಾಲಮಿತಿ ಮನ್ಯಂತೇ ಸವ್ಯಸಾಚಿವಧೇ ಧೃತಾಃ |
ಪಾರ್ಥಿವಾಃ ಸ ಭವಾಂಸ್ತೇಭ್ಯೋ ಹ್ಯಕಸ್ಮಾದ್ ವ್ಯಥತೇ ಕಥಮ್ ॥63॥
ಸವ್ಯಸಾಚಿಯಾದ ಅರ್ಜುನನ ವಧೆಯಲ್ಲಿ ಆಸಕ್ತರಾದ ರಾಜರು ಅರ್ಜುನನನ್ನು ಕೊಲ್ಲಲು ಸಂಶಪ್ತಕರು ಸಮರ್ಥರಾಗಿದ್ದಾರೆ ಎಂದು ತಿಳಿದಿದ್ದಾರೆ. ಆದ್ದರಿಂದ ನೀನು ಪಾಂಡವರಿಗೆ ನಿಷ್ಕಾರಣವಾಗಿ ಏಕೆ ಹೆದರುತ್ತಿದ್ದೀಯೆ?
ಭೀಮಸೇನೇ ಚ ನಿಹತೇ ಕೋಽನ್ಯೋ ಯುಧ್ಯೇತ ಭಾರತ |
ಪಾಂಚಾಲೇಷು ಚ ಭಗ್ನೇಷು ಕೋ ನು ಸ್ಥಾತುಮಿಹಾರ್ಹತಿ ॥64॥
ಪರೇಷಾಂ ತನ್ಮಮಾಚಕ್ಷ್ವ ಯದಿ ವೇತ್ಥ ಪರಂತಪ ॥65॥
ಎಲ್ಲೈ ಭಾರತನೇ, ಪರಂತಪನೇ, ಭೀಮಸೇನನು ಹತನಾದರೆ ಬೇರೆ ಯಾವನು ಯುದ್ಧವನ್ನು ಮಾಡಿಯಾನು? ಪಾಂಚಾಲರು ಭಗ್ನರಾದರೆ ನಮ್ಮ ಎದುರಿಗೆ ಶತ್ರುಸೈನ್ಯದಲ್ಲಿ ಬೇರೆ ಯಾವನು ನಿಲ್ಲುತ್ತಾನೆ ಎಂದು ನಿನಗೆ ತಿಳಿದಿದ್ದರೆ ಅದನ್ನು ನನಗೆ ಹೇಳು.
ಪಂಚ ತೇ ಭ್ರಾತರಃ ಸರ್ವೇ ಧೃಷ್ಟದ್ಯುಮ್ನೋಽಥ ಸಾತ್ಯಕಿಃ |
ಪರೇಷಾಂ ಸಪ್ತ ಯೇ ರಾಜನ್ ಯೋಧಾಃ ಸಾರಂ ಬಲಂ ಮತಮ್ ॥
ಪಾಂಡವರು ಐದುಮಂದಿ, ಧೃಷ್ಟದ್ಯುಮ್ನ ಮತ್ತು ಸಾತ್ಯಕಿ. ಎಲ್ಲೈ ರಾಜನೇ, ಈ ಏಳು ಯೋಧರು ಶತ್ರುಸೈನ್ಯದಲ್ಲಿ

ಸಾರರೂಪರಾದವರು ಎಂದು ನನ್ನ ಅಭಿಪ್ರಾಯ.
ಅಸ್ಮಾಕಂ ತು ವಿಶಿಷ್ಟಾ ಯೇ ಭೀಷ್ಮದ್ರೋಣಕೃಪಾದಯಃ |
ದ್ರೌಣಿರ್ವೈಕರ್ತನಃ ಕರ್ಣಃ ಬಾಹ್ಲಿಕಶ್ಚ ಬೃಹದ್ರಥಃ ||67||
ಪ್ರಾಗ್ಜ್ಯೋತಿಷಾಧಿಪಃ ಶಲ್ಯ ಆವಂತ್ಯೋಽಥ ಜಯದ್ರಥಃ |
ದುಃಶಾಸನೋ ದುರ್ಮುಖಶ್ಚೈವ ದುಃಸಹಶ್ಚ ವಿಶಾಂಪತೇ ||68||
ಶ್ರುತಾಯುಶ್ಚಿತ್ರಸೇನಶ್ಚ ಪುರುಮಿತ್ರೋ ವಿವಿಂಶತಿಃ |
ಶಲೋ ಭೂರಿಶ್ರವಾಶ್ಚೈವ ವಿಕರ್ಣಶ್ಚ ತವಾತ್ಮಜಃ ||69||
ಎಲೈ ರಾಜನೇ, ನಮ್ಮ ಸೈನ್ಯದಲ್ಲಿ ಸಾರರೂಪರಾದವರೆಂದರೆ ಭೀಷ್ಮ-ದ್ರೋಣ-ಕೃಪಾದಿಗಳು, ಅಶ್ವತ್ಥಾಮ, ವೈಕರ್ತನನಾದ ಕರ್ಣ, ಬಾಹ್ಲಿಕ ದೇಶದ ಭಾಗಕ್ಕೆ ಅಧಿಪತಿಯಾದ ಬೃಹದ್ರಥ, ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತ, ಶಲ್ಯ, ಅವಂತಿಗೆ ಅಧಿಪತಿಯಾದ ಜಯದ್ರಥ, ದುಃಶಾಸನ, ದುರ್ಮುಖ, ದುಃಸಹ, ಶ್ರುತಾಯು, ಚಿತ್ರಸೇನ, ಪುರುಮಿತ್ರ, ವಿವಿಂಶತಿ, ಶಲ, ಭೂರಿಶ್ರವ ಮತ್ತು ನಿನ್ನ ಪುತ್ರನಾದ ವಿಕರ್ಣ.
ಅಕ್ಷೋಹಿಣ್ಯೋಽಪಿ ಮೇ ರಾಜನ್ ದಶೈಕಾ ಚ ಸಮಾಶ್ರಿತಾಃ |
ನ್ಯೂನಾಃ ಪರೇಷಾಂ ಸಪ್ತೈವ ಕಸ್ಮಾನ್ಮೇ ಸ್ಯಾತ್ ಪರಾಜಯಃ ||70||
ರಾಜನೇ, ನನ್ನ ಬಳಿ ಹನ್ನೊಂದು ಅಕ್ಷೋಹಿಣಿ ಸೈನ್ಯವಿದೆ. ಶತ್ರುಗಳ ಬಳಿ ಏಳು ಅಕ್ಷೋಹಿಣಿಯ ಕಡಿಮೆ ಸೈನ್ಯವಿದೆ. ನನಗೆ ಏಕೆ ಪರಾಜಯವುಂಟಾಗುತ್ತದೆ?
ಬಲಂ ತ್ರಿಗುಣತೋ ಹೀನಂ ಯೋಧ್ಯಂ ಪ್ರಾಹ ಬೃಹಸ್ಪತಿಃ |
ಪರೇಭ್ಯಸ್ತ್ರಿಗುಣಾ ಚೇಯಂ ಮಮ ರಾಜನ್ನನೀಕಿನೀ ||71||
ಮೂರುಪಟ್ಟು ಬಲದಿಂದ ಹೀನವಾದ ಶತ್ರುಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡಬೇಕೆಂದು ಬೃಹಸ್ಪತಿಗಳು ಹೇಳಿದ್ದಾರೆ. ರಾಜನೇ, ನನ್ನ ಸೈನ್ಯವು ಬಲದಲ್ಲಿ ಶತ್ರುಸೈನ್ಯಕ್ಕಿಂತ ಮೂರುಪಟ್ಟು ಅಧಿಕವಾದುದು.
ಗುಣಹೀನಂ ಪರೇಷಾಂ ಚ ಬಹು ಪಶ್ಯಾಮಿ ಭಾರತ |
ಗುಣೋದಯಂ ಬಹುಗುಣಮಾತ್ಮನಶ್ಚ ವಿಶಾಂಪತೇ ||72||
ಎಲೈ ಭಾರತನೇ, ಶತ್ರುಸೈನ್ಯವು ಬಹುವಿಧವಾಗಿ ಗುಣಹೀನವಾಗಿದೆ ಎಂದು ನಾನು ಭಾವಿಸಿದ್ದೇನೆ. ರಾಜನೇ, ನಮ್ಮ ಸೈನ್ಯವು ಅನೇಕ ಗುಣವುಳ್ಳದ್ದೆಂದೂ, ಅಭಿವೃದ್ಧಿ ಹೊಂದುತ್ತಿರುವ ಗುಣವುಳ್ಳದ್ದೆಂದೂ ನಾನು ಕಾಣುತ್ತಿದ್ದೇನೆ.
ಏತತ್ಸರ್ವಂ ಸಮಾಜ್ಞಾಯ ಬಲಾಗ್ರ್ಯಂ ಮಮ ಭಾರತ |
ನ್ಯೂನತಾಂ ಪಾಂಡವಾನಾಂ ಚ ನ ಮೋಹಂ ಗಂತುಮರ್ಹಸಿ ||73||
ಎಲೈ ಭಾರತನೇ, ಪಾಂಡವರ ನ್ಯೂನತೆ ಮತ್ತು ನನ್ನ ಸೈನ್ಯದ ಬಲಜ್ಯೇಷ್ಠತೆ ಇವೆಲ್ಲವನ್ನೂ ಚೆನ್ನಾಗಿ ತಿಳಿದು ನೀನು ಮೋಹವನ್ನು ಪಡುವ ಅವಶ್ಯಕತೆ ಇಲ್ಲ.
ವೈಶಂಪಾಯನಃ
ಇತ್ಯುಕತ್ವ ಸಂಜಯಂ ಭೂಯಃ ಪರ್ಯಪೃಚ್ಛತ ಭಾರತ |
ವಿವಿತ್ಸುಃ ಪ್ರಾಪ್ತಕಾಲಾನಿ ಜ್ಞಾತ್ವಾ ಪರಪುರಂಜಯಃ ||74||
ವೈಶಂಪಾಯನ ಎಲೈ ಭಾರತನೇ, ಇಷ್ಟು ಹೇಳಿ ಪರಪುರಂಜಯನಾದ ದುರ್ಯೋಧನನು ಪಾಂಡವರ ವಿಷಯವನ್ನು ತಿಳಿದು, ಯೋಗ್ಯವಾದ ಸಿದ್ಧತೆಯನ್ನು ಮಾಡಲು ಸಂಜಯನನ್ನು ಕುರಿತು ಪುನಃ ಪ್ರಶ್ನೆಯನ್ನು ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಪಂಚಾಶೋಽಧ್ಯಾಯಃ ||
|| ವ್ಯಾಸಾಭಿಗಮನಪರ್ವಣಿ ದಶಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೆಂಟನೆಯ ಅಧ್ಯಾಯ
ಸಂಜಯನಿಂದ ದುರ್ಯೋಧನನಿಗೆ ಪಾಂಡವರ ರಣೋತ್ಸಾಹದ ವರ್ಣನೆ.
ದುರ್ಯೋಧನಃ
ಅಕ್ಷೋಹಿಣೀಃ ಸಪ್ತ ಲಬ್ಧ್ವಾ ರಾಜಭಿಃ ಸಹ ಸಂಜಯ |
ಕಿಂಸ್ವಿದಿಚ್ಛತಿ ಕೌಂತೇಯೋ ಯುದ್ಧಪ್ರೇಪ್ಸುರ್ಯುಧಿಷ್ಠಿರಃ ||1||
ದುರ್ಯೋಧನ ಎಲೈ ಸಂಜಯನೇ, ರಾಜರಿಂದ ಸಹಿತವಾದ ಏಳು ಅಕ್ಷೋಹಿಣಿ ಸೈನ್ಯವನ್ನು ಹೊಂದಿ ಯುದ್ಧವನ್ನು ಬಯಸುವ ಕುಂತೀಪುತ್ರನಾದ ಯುಧಿಷ್ಠಿರನು ಏನನ್ನು ಮಾಡಲು ಇಚ್ಛಿಸುತ್ತಾನೆ?
ಸಂಜಯಃ
ಅತೀವ ಮುದಿತೋ ರಾಜನ್ ಯುದ್ಧಪ್ರೇಪ್ಸುರ್ಯುಧಿಷ್ಠಿರಃ |
ಭೀಮಸೇನಾರ್ಜುನೌ ಚೋಭೌ ಯಮಾವಪಿ ನ ಬಿಭ್ಯತಃ ||2||
ಸಂಜಯ ರಾಜನೇ, ಯುದ್ಧವನ್ನು ಬಯಸುವ ಯುಧಿಷ್ಠಿರನು ಬಹಳ ಸಂತೋಷದಲ್ಲಿದ್ದಾನೆ. ಭೀಮಸೇನಾರ್ಜುನರು ಮತ್ತು ಅವಳಿ ಮಕ್ಕಳಾದ ನಕುಲ ಸಹದೇವರು ಸಹ ಯುದ್ಧಕ್ಕೆ ಹೆದರುವುದಿಲ್ಲ.
ರಥಂ ತು ದಿವ್ಯಂ ಕೌಂತೇಯಃ ಸರ್ವಾ ವಿಭ್ರಾಜಯನ್ ದಿಶಃ |

ಮಂತ್ರಂ ಜಿಜ್ಞಾಸಮಾನಃ ಸನ್ ಬೀಭತ್ಸುಃ ಸಮಯೋಜಯತ್ ॥3॥
ತಮಪಶ್ಯಾಮ ಸನ್ನದ್ಧಂ ಮೇಘಂ ವಿದ್ಯುದ್ಧ್ಯುತಂ ಯಥಾ ॥4॥
ನನ್ನಿಂದ ನಿನ್ನ ಮಂತ್ರಾಲೋಚನೆಯನ್ನು ತಿಳಿಯುವ ಸಲುವಾಗಿ ಅರ್ಜುನನು ಎಲ್ಲ ದಿಕ್ಕುಗಳನ್ನು ಬೆಳಗುವ ದಿವ್ಯವಾದ ರಥವನ್ನು ಹೂಡಿದನು. ಮಿಂಚಿನಿಂದ ಕೂಡಿರುವ, ಮೇಘದಂತಿದ್ದ, ಸನ್ನದ್ಧವಾದ ಅವನ ರಥವನ್ನು ನೋಡಿದೆನು.
ಸಮಂತಾತ್ ಸಮಭಿಧ್ಯಾಯನ್ ಹೃಷ್ಯಮಾಣೋಽಭ್ಯಭಾಷತ |
ಪೂರ್ವರೂಪಮಿದಂ ಪಶ್ಯ ವಯಂ ಜೇಷ್ಯಾಮ ಸಂಜಯ ॥5॥
ಬೀಭತ್ಸುರ್ಮಾಂ ಯಥೋವಾಚ ತಥಾಽವೈಮ್ಯಹಮಪ್ಯುತ ॥6॥
ಅವನು ಸುತ್ತಲೂ ನೋಡುತ್ತಾ, ರೋಮಾಂಚಿತನಾಗಿ ಚಿಂತಿಸುತ್ತಾ, ನನ್ನನ್ನು ಕುರಿತು ಸಂಜಯನೇ, ಯುದ್ಧಕ್ಕಿಂತ ಮೊದಲಿನ ನಮ್ಮ ಈ ರೂಪವನ್ನು ನೋಡು, ನಾವು ಗೆಲ್ಲುವೆವು ಎಂದು ಹೇಳಿದನು. ಅರ್ಜುನನು ಹೇಗೆ ಹೇಳಿದನೋ ನಾನೂ ಸಹ ಅದನ್ನು ಹಾಗೆಯೇ ತಿಳಿಯುತ್ತೇನೆ.
ದುರ್ಯೋಧನಃ
ಪ್ರಶಂಸಸ್ಯಭಿನಂದಂಸ್ತಾನ್ ಪಾರ್ಥಾನಕ್ಷಪರಾಜಿತಾನ್ |
ಅರ್ಜುನಸ್ಯ ರಥೇ ಬ್ರೂಹಿ ಕಥಮಶ್ವಾಃ ಕಥಂ ಧ್ವಜಾಃ ॥7॥
ದುರ್ಯೋಧನ ನೀನು ಅಕ್ಷಪರಾಜಿತರಾದ ಪಾಂಡವರನ್ನು ಅಭಿನಂದಿಸುತ್ತಾ ಅವರನ್ನು ಹೊಗಳುತ್ತಿದ್ದೀಯೆ. ಅರ್ಜುನನ ರಥದಲ್ಲಿ ಅಶ್ವಗಳು ಹೇಗಿವೆ ಮತ್ತು ಧ್ವಜಗಳು ಹೇಗಿವೆ ಎಂಬುದನ್ನು ಹೇಳು.
ಸಂಜಯಃ
ಭೌವನಃ ಸಹ ಶಕ್ರೇಣ ಬಹುಚಿತ್ರಂ ವಿಶಾಂಪತೇ |
ರೂಪಾಣಿ ಕಲ್ಪಯಾಮಾಸ ತ್ವಷ್ಟಾ ಧಾತ್ರಾ ವಿಶಾಂಪತೇ ॥8॥
ಸಂಜಯ ಎಲೈ ರಾಜನೇ, ಬ್ರಹ್ಮದೇವರ ಆದೇಶದಂತೆ ಇಂದ್ರನಿಂದ ಕೂಡಿಕೊಂಡು ದೇವತೆಗಳ ಬಡಗಿಯಾದ ವಿಶ್ವಕರ್ಮನು ವಿಚಿತ್ರವಾದ ರೂಪವುಳ್ಳ ರಥವನ್ನು ನಿರ್ಮಿಸಿದ್ದಾನೆ.
ಧ್ವಜೇ ಹಿ ತಸ್ಮಿನ್ ರೂಪಾಣಿ ಚಕ್ರುಸ್ತೇ ದೇವಮಾಯಯಾ |
ಮಹಾಧನಾನಿ ದಿವ್ಯಾನಿ ಮಹಾಂತಿ ಚ ಲಘೂನಿ ಚ ॥9॥
ಆ ಧ್ವಜದಲ್ಲಿ ಅವರು ದೇವಮಾಯೆಯಿಂದ ಬೆಲೆಬಾಳುವ ದಿವ್ಯವಾದ ದೊಡ್ಡದಾದ ಮತ್ತು ಚಿಕ್ಕದಾದ ಅನೇಕ ಆಕೃತಿಗಳನ್ನು ರಚಿಸಿದ್ದಾರೆ.
ಭೀಮಸೇನಾನುರೋಧಾಯ ಹನೂಮಾನ್ ಮಾರುತಾತ್ಮಜಃ |
ಆತ್ಮಪ್ರತಿಕೃತಿಂ ತಸ್ಯ ಧ್ವಜ ಆರೋಪಯಿಷ್ಯತಿ ॥10॥
ಭೀಮಸೇನನನ್ನು ಸಂತೋಷಪಡಿಸಲು ಮಾರುತಾತ್ಮಜನಾದ ಹನುಮಂತನು ತನ್ನ ಪ್ರತಿಕೃತಿಯನ್ನು ಆ ಧ್ವಜದ ಮೇಲೆ ಸ್ಥಾಪಿಸುವನು.
ಸರ್ವಾ ದಿಶೋ ಯೋಜನಮಾತ್ರಮಂತರಂ
ಸ ತಿರ್ಯಗೂರ್ಧ್ವಂ ನ ರುರೋಧ ವೈ ಧ್ವಜಃ |
ನ ಸಂಸಜ್ಜೇತ್ ತರುಭಿಃ ಸಂವೃತೋಽಪಿ
ತಥಾ ಹಿ ಮಾಯಾ ವಿಹಿತಾ ಭೌವನೇನ ॥11॥
ಆ ಧ್ವಜಕ್ಕೆ ಸುತ್ತಲೂ ಒಂದುಯೋಜನದವರೆಗೆ ಯಾವ ದಿಕ್ಕುಗಳಲ್ಲಾಗಲೀ ಅಥವಾ ಕೆಳಗೆ ಅಥವಾ ಮೇಲ್ಭಾಗದಲ್ಲಾಗಲೀ ಯಾವ ತಡೆಯೂ ಇರುವುದಿಲ್ಲ. ವೃಕ್ಷಗಳ ಮಧ್ಯದಲ್ಲಿದ್ದರೂ ಅದು ಯಾವ ವೃಕ್ಷಕ್ಕೂ ತಾಕುವುದಿಲ್ಲ. ವಿಶ್ವಕರ್ಮನು ಅಂತಹ ಸಾಮರ್ಥ್ಯವುಳ್ಳದ್ದಾಗಿ ಆ ರಥವನ್ನು ಮಾಡಿದ್ದಾನೆ.
ಯಥಾಽಽಕಾಶೇ ಶಕ್ರಧನುಃ ಪ್ರಕಾಶತೇ
ನ ಚೈಕವರ್ಣಂ ನ ಚ ವಿದ್ಮ ಕಿಂ ನು ತತ್ |
ತಥಾ ಧ್ವಜೋ ವಿಹಿತೋ ಭೌವನೇನ
ಬಹ್ವಾಕಾರಂ ದೃಶ್ಯತೇ ರೂಪಮಸ್ಯ ॥12॥
ಆಕಾಶದಲ್ಲಿ ಕಾಮನಬಿಲ್ಲು ಕಾಣುತ್ತದೆ. ಅದಕ್ಕೆ ಒಂದೇ ವರ್ಣವಿಲ್ಲ. ಅದು ಏನೆಂದು ಯಾರಿಗೂ ತಿಳಿಯುವುದೂ ಇಲ್ಲ. ಅದರಂತೆ ವಿಶ್ವಕರ್ಮನು ನಿರ್ಮಿಸಿದ ಆ ಧ್ವಜವು ಅನೇಕ ವರ್ಣಗಳಿಂದ ಕೂಡಿದುದಾಗಿ ಕಂಡುಬರುತ್ತದೆ.
ಯಥಾಽಗ್ನಿಧೂಮೋ ದಿವಮೇತಿ ರುದ್ಧ್ವಾ
ವರ್ಣಾನ್ ಬಿಭ್ರತ್ ತೈಜಸಾಂಶ್ಚಿತ್ರರೂಪಾನ್ |
ತಥಾ ಧ್ವಜೋ ವಿಹಿತೋ ಭೌವನೇನ
ನ ಚೇದ್ ಭಾರೋ ಭವಿತಾ ನೋತ ಬಾಧಾ ॥13॥
ಹೇಗೆ ಅಗ್ನಿಯಿಂದ ಉಂಟಾದ ಧೂಮವು ತೈಜಸವಾದ, ವಿಚಿತ್ರವಾದ ಅನೇಕ ರೂಪಗಳನ್ನು ಧರಿಸಿ ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿ ಅಂತರಿಕ್ಷಕ್ಕೆ ಏರುತ್ತದೆಯೋ ಅದರಂತೆ ವಿಶ್ವಕರ್ಮನು ಧ್ವಜವನ್ನು ನಿರ್ಮಿಸಿದ್ದಾನೆ. ಅದರಿಂದ ಭಾರವಾಗಲೀ ಅಥವಾ ಬಾಧೆಯಾಗಲೀ ಇರುವುದಿಲ್ಲ.
ಶ್ವೇತಾಸ್ತಸ್ಮಿನ್ ವಾತವೇಗಾಃ ಸದಶ್ವಾ
ದಿವ್ಯಾ ಯುಕ್ತಾಶ್ಚಿತ್ರರಥೇನ ದತ್ತಾಃ |

ಭುವ್ಯಂತರಿಕ್ಷೇ ದಿವಿ ವಾ ನರೇಂದ್ರ
ಯೇಷಾಂ ಗತಿರ್ಹೀಯತೇ ನಾತ್ರ ಸರ್ವಾ ॥14॥
ಆ ರಥದಲ್ಲಿ ವಾಯುವೇಗವುಳ್ಳ, ದಿವ್ಯವಾದ, ಗುಣಯುಕ್ತವಾದ, ಚಿತ್ರರಥ ಗಂಧರ್ವನಿಂದ ಕೊಡಲ್ಪಟ್ಟ ಶ್ವೇತಾಶ್ವಗಳು ಹೂಡಲ್ಪಟ್ಟಿವೆ. ಎಲೈ ರಾಜನೇ, ಭೂಮಿಯಲ್ಲಾಗಲೀ, ಅಂತರಿಕ್ಷದಲ್ಲಾಗಲೀ ಅಥವಾ ಸ್ವರ್ಗದಲ್ಲಾಗಲೀ ಅವುಗಳ ಗತಿಗೆ ತಡೆ ಇರುವುದಿಲ್ಲ.
ಶತಂ ತತ್ ಪೂರ್ಯತೇ ನಿತ್ಯಕಾಲಂ
ಹತಂ ಹತಂ ದತ್ತವರಂ ಪುರಸ್ತಾತ್ |
ತಥಾ ರಾಜ್ಞೋ ದತ್ತವರಾ ಬೃಹಂತೋ
ರಥೇ ಯುಕ್ತಾ ಭಾಂತಿ ತದ್ವೀರ್ಯತುಲ್ಯಾಃ ॥15॥
ಆ ರಥದಲ್ಲಿ ಯಾವಾಗಲೂ ಅಂತಹ ನೂರು ಅಶ್ವಗಳು ಇರುತ್ತವೆ. ಯಾವುದಾದರೂ ಅಶ್ವವು ಹತವಾದರೆ ಆ ಕ್ಷಣದಲ್ಲಿಯೇ ಇನ್ನೊಂದು ಅಶ್ವವು ಬಂದು ನೂರರ ಸಂಖ್ಯೆಯನ್ನು ಪೂರ್ಣಗೊಳಿಸುತ್ತದೆ. ಅಂತಹ ವರವನ್ನುಳ್ಳ ಬೃಹದಾಕಾರದ ಅಶ್ವಗಳು, ರಾಜನಿಂದ ಅಂತಹ ವರಗಳನ್ನು ಹೊಂದಿದವುಗಳಾಗಿ ಅವನಿಗೆ ಸಮಾನವಾದ ಪರಾಕ್ರಮವನ್ನು ಹೊಂದಿ ರಥದಲ್ಲಿ ಹೂಡಲ್ಪಟ್ಟು ಶೋಭಿಸುತ್ತಿವೆ.
ಋಷ್ಯಪುಖ್ಯಾ ಭೀಮಸೇನಸ್ಯ ವಾಹಾ
ರಥೇ ವಾಯೋಸ್ತುಲ್ಯವೇಗಾ ಬಭೂವುಃ ॥16॥
ಭೀಮಸೇನನ ರಥದಲ್ಲಿ ಜಿಂಕೆಗಳಂತೆ ಕಾಣುವ, ವಾಯುವೇಗಕ್ಕೆ ಸಮವಾದ ವೇಗವುಳ್ಳ ಅಶ್ವಗಳು ಇರುತ್ತವೆ.
ಕಲ್ಮಾಷಾಂಗಾಸ್ತಿತ್ತಿರಿಚಿತ್ರಪೃಷ್ಠಾ
ಭ್ರಾತ್ರಾ ದತ್ತಾಃ ಪ್ರೀಯತಾ ಫಲ್ಗುನೇನ |
ಭ್ರಾತುರ್ವೀರಸ್ಯ ಸ್ವೈಸ್ತುರಗೈರ್ವಿಶಿಷ್ಟಾ
ಮುದಾ ಯುಕ್ತಾಃ ಸಹದೇವಂ ವಹಂತಿ ॥17॥
ಕೃಷ್ಣಪಿಂಗಲವರ್ಣದ ಮತ್ತು ತಿತ್ತಿರಿಪಕ್ಷಿಯಂತೆ ಬೆನ್ನುಳ್ಳ ಅಶ್ವಗಳು ಸಂತೋಷದಿಂದ ಅರ್ಜುನನಿಂದ ವೀರನಾದ ತಮ್ಮನಾದ ಸಹದೇವನಿಗೆ ಕೊಡಲ್ಪಟ್ಟಿವೆ. ಅರ್ಜುನನ ಅಶ್ವಗಳಿಗಿಂತ ಶ್ರೇಷ್ಠವಾದ ಅಂತಹ ಅಶ್ವಗಳು ರಥದಲ್ಲಿ ಹೂಡಲ್ಪಟ್ಟು ಸಹದೇವನನ್ನು ಕರೆದುಕೊಂಡು ಹೋಗುತ್ತವೆ.
ಮಾದ್ರೀಪುತ್ರಂ ನಕುಲಂ ತ್ವಾಜಮೀಢಂ
ಮಹೇಂದ್ರದತ್ತಾ ಹರಯೋ ವಾಜಿಮುಖ್ಯಾಃ |
ಸಮಾ ವಾಯೋರ್ಬಲವಂತಸ್ತರಸ್ವಿನೋ
ಮಹಾಜವಾಶ್ಚಿತ್ರರೂಪಾಃ ಸದಶ್ವಾಃ ॥18॥
ಮಹೇಂದ್ರದತ್ತವಾದ, ವಾಯುವಿಗೆ ಸಮವಾದ ಬಲ ಮತ್ತು ಶೀಘ್ರತೆಯುಳ್ಳ, ಮಹಾಜವವುಳ್ಳ, ಚಿತ್ರರೂಪವನ್ನುಳ್ಳ ಒಳ್ಳೆಯ ಕುದುರೆಗಳು ಮಾದ್ರೀಪುತ್ರನಾದ ಆಜಮೀಢನಾದ ನಕುಲನನ್ನು ಹೊರುತ್ತವೆ.
ಸೌಭದ್ರಾದೀನ್ ದ್ರೌಪದೇಯಾನ್ ಕುಮಾರಾನ್
ವಹಂತ್ಯಶ್ವಾ ದೇವದತ್ತಾ ಬೃಹಂತಃ ॥19॥
ಅಭಿಮನ್ಯು ಮೊದಲಾದವರನ್ನು ಮತ್ತು ದ್ರೌಪದಿಯ ಪುತ್ರರನ್ನು ದೇವತೆಗಳು ಕೊಟ್ಟ ದೊಡ್ಡ ಅಶ್ವಗಳು ಹೊರುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂಬತ್ತನೆಯ ಅಧ್ಯಾಯ
ಸಂಜಯನಿಂದ ಪಾಂಡವಸೈನ್ಯದ ಬಲಕಥನ. ಅದನ್ನು ಆಕ್ಷೇಪಿಸಿ ದುರ್ಯೋಧನನಿಂದ ತನ್ನ ಸೈನ್ಯದ ಪ್ರಶಂಸೆ.
ಧೃತರಾಷ್ಟ್ರಃ
ಕಾಂಸ್ತತ್ರ ಸಂಜಯಾಪಶ್ಯಃ ಪ್ರೀತ್ಯರ್ಥೇನ ಸಮಾಗತಾನ್ |
ಯೇ ಯೋತ್ಸ್ಯಂತೇ ಪಾಂಡವಾರ್ಥೇ ಪುತ್ರಸ್ಯ ಮಮ ವಾಹಿನೀಮ್ ॥
ಧೃತರಾಷ್ಟ್ರ ಎಲೈ ಸಂಜಯನೇ, ಪಾಂಡವರ ಮೇಲಿನ ಪ್ರೀತಿಯಿಂದ, ಅವರ ಜೊತೆಯಲ್ಲಿ ನನ್ನ ಮಗನ ಸೈನ್ಯದ ವಿರುದ್ಧವಾಗಿ ಯುದ್ಧ ಮಾಡುವ ಯಾರನ್ನು ನೀನು ಅಲ್ಲಿ ನೋಡಿದೆ?
ಸಂಜಯಃ
ಮುಖಮಂಧಕವೃಷ್ಣೀನಾಮಪಶ್ಯಂ ಕೃಷ್ಣಮಾಗತಮ್ |
ಚೇಕಿತಾನಂ ಚ ತತ್ರೈವ ಯುಯುಧಾನಂ ಚ ಸಾತ್ಯಕಿಮ್ ॥2॥
ಸಂಜಯ ಅಂಧಕವೃಷ್ಣಿಗಳಲ್ಲಿ ಪ್ರಧಾನನಾದ ಕೃಷ್ಣನು ಅಲ್ಲಿಗೆ ಬಂದುದನ್ನು ನೋಡಿದೆನು. ಅಲ್ಲಿ ಚೇಕಿತಾನನನ್ನೂ ಮತ್ತು ಸತ್ಯಕನ ಮಗನಾದ ಯುಯುಧಾನನನ್ನೂ ನೋಡಿದೆನು.
ಪೃಥಗಕ್ಷೋಹಿಣೀಭ್ಯಾಂ ತು ಪಾಂಡವಾನಭಿಸಂಶ್ರಿತೌ |

ಮಹಾರಥೌ ಸಮಾಖ್ಯಾತಾವುಭೌ ಪುರುಷಮಾನಿನೌ ॥3॥
ಮಹಾರಥರೂ ಮತ್ತು ಪುರುಷಮಾನಿಗಳೂ (ತಮ್ಮ ಪೌರುಷದಲ್ಲಿ ನಂಬಿಕೆ ಉಳ್ಳವರು) ಆದ ಚೇಕಿತಾನ ಮತ್ತು ಯುಯುಧಾನರಿಬ್ಬರೂ ಬೇರೆ ಬೇರೆ ಅಕ್ಷೋಹಿಣಿ ಸೈನ್ಯದಿಂದ ಬಂದು ಪಾಂಡವರನ್ನು ಸೇರಿದ್ದಾರೆ.
ಅಕ್ಷೋಹಿಣ್ಯಾಽಥ ಪಾಂಚಾಲ್ಯೋ ದಶಭಿಸ್ತನಯೈರ್ವೃತಃ |
ಸತ್ಯಜಿತ್ ಪ್ರಮುಖೈರ್ವೀರೈರ್ಧೃಷ್ಟದ್ಯುಮ್ನಪುರೋಗಮೈಃ ॥4॥
ಪಾಂಚಾಲರಾಜನಾದ ದ್ರುಪದನು ಸತ್ಯಜಿತ್ ಮೊದಲಾದ ವೀರರಾದ, ಧೃಷ್ಟದ್ಯುಮ್ನ ಪ್ರಧಾನರಾದ ತನ್ನ ಹತ್ತು ಮಕ್ಕಳಿಂದ ಕೂಡಿಕೊಂಡು ಒಂದು ಅಕ್ಷೋಹಿಣಿ ಸೈನ್ಯದ ಜೊತೆಯಲ್ಲಿ ಬಂದು ಸೇರಿದ್ದಾನೆ.
ದ್ರುಪದೋ ವರ್ಧಯನ್ ಮಾನಂ ಶಿಖಂಡಿಪರಿವಾರಿತಃ |
ಉಪಾಯಾತ್ ಸರ್ವಸೈನ್ಯಾನಾಂ ಪ್ರತಿಚ್ಛಾದ್ಯ ಮಹೀಂ ತದಾ ॥5॥
ದ್ರುಪದನು ಶಿಖಂಡಿಯ ಜೊತೆಯಲ್ಲಿ ಕೂಡಿ, ಪಾಂಡವರ ಸೈನ್ಯದ ಬಲವನ್ನು ವರ್ಧಿಸುತ್ತಾ, ಭೂಮಿಯನ್ನು ಆವರಿಸಿ, ತನ್ನ ಎಲ್ಲ ಸೈನ್ಯವನ್ನೂ ತೆಗೆದುಕೊಂಡು ಬಂದಿದ್ದಾನೆ.
ವಿರಾಟಃ ಸಹ ಪುತ್ರಾಭ್ಯಾಂ ಶಂಖೇನೈವೋತ್ತರೇಣ ಚ |
ಸೂರ್ಯದತ್ತಾದಿಭಿರ್ವೀರೈರ್ಮದಿರಾಶ್ವಪುರೋಗಮೈಃ ॥6॥
ಸಹಿತಃ ಪೃಥಿವೀಪಾಲೋ ಭ್ರಾತೃಭಿಃ ತನಯೈಸ್ತಥಾ |
ಅಕ್ಷೋಹಿಣ್ಯೈವ ಸೈನ್ಯಾನಾಂ ವೃತಃ ಪಾರ್ಥಂ ಸಮಾಶ್ರಿತಃ ॥7॥
ವಿರಾಟನು ತನ್ನ ಪುತ್ರರಾದ, ಶಂಖ ಮತ್ತು ಉತ್ತರರಿಂದಲೂ, ಮದಿರಾಶ್ವನೇ ಮುಂದಿರುವ ಸೂರ್ಯದತ್ತ ಮೊದಲಾದ ವೀರರಿಂದಲೂ ತನ್ನ ಸಹೋದರರಿಂದಲೂ ಸಹಿತನಾಗಿ ಒಂದು ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಬಂದು ಯುಧಿಷ್ಠಿರನನ್ನು ಸೇರಿದ್ದಾನೆ.
ಜಾರಾಸಂಧಿರ್ಮಾಗಧಶ್ಚ ಧೃಷ್ಟಕೇತುಶ್ಚ ಚೇದಿರಾಟ್ |
ಪೃಥಕ್ಪೃಥಗನುಪ್ರಾಪ್ತೌ ಪೃಥಗಕ್ಷೋಹಿಣೀವೃತೌ ॥8॥
ಜರಾಸಂಧನ ಪುತ್ರನಾದ ಮಗಧಾದಿಪತಿಯಾದ ಸಹದೇವನೂ, ಚೇದಿಪತಿಯಾದ ಶಿಶುಪಾಲನ ಪುತ್ರನಾದ ಧೃಷ್ಟಕೇತುವೂ ಒಂದೊಂದು ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಬೇರೆ ಬೇರೆಯಾಗಿ ಬಂದಿದ್ದಾರೆ.
ಕೇಕಯಾ ಭ್ರಾತರಃ ಪಂಚ ಸರ್ವೇ ಲೋಹಿತಕಧ್ವಜಾಃ |
ಅಕ್ಷೋಹಿಣೀಪರಿವೃತಾಃ ಪಾಂಡವಾನಭಿಸಂಶ್ರಿತಾಃ ॥9॥
ರಕ್ತವರ್ಣದ ಧ್ವಜವುಳ್ಳ ಪಂಚಕೇಕಯ ಸಹೋದರರು ಒಂದು ಅಕ್ಷೋಹಿಣಿ ಸೈನ್ಯದ ಜೊತೆಯಲ್ಲಿ ಬಂದು ಪಾಂಡವರನ್ನು ಆಶ್ರಯಿಸಿದ್ದಾರೆ.
ಏತಾನೇತಾವತಸ್ತತ್ರ ತಾನಪಶ್ಯಂ ಸಮಾಗತಾನ್ |
ಯೇ ಪಾಂಡವಾರ್ಥೇ ಯೋತ್ಸ್ಯಂತಿ ಧಾರ್ತರಾಷ್ಟ್ರಸ್ಯ ವಾಹಿನೀಮ್ ॥
ಪಾಂಡವರ ಪರವಾಗಿ ದುರ್ಯೋಧನನ ಸೈನ್ಯವನ್ನು ಎದುರಿಸಿ ಯುದ್ಧವನ್ನು ಮಾಡುವಂತಹ ಅಲ್ಲಿಗೆ ಬಂದು ಸೇರಿದ ಇಷ್ಟು ಜನರನ್ನು ನಾನು ನೋಡಿದೆನು.
ಯೋ ವೇದ ಮಾನುಷಂ ವ್ಯೂಹಂ ದೈವಂ ಗಾಂಧರ್ವಮಾಸುರಮ್ |
ಸ ತತ್ರ ಸೇನಾಪ್ರಮುಖೇ ಧೃಷ್ಟದ್ಯುಮ್ನೋ ಮಹಾರಥಃ ॥11॥
ಮಾನುಷವ್ಯೂಹವನ್ನೂ, ದೇವ-ಗಂಧರ್ವ-ಅಸುರವ್ಯೂಹಗಳನ್ನೂ ತಿಳಿದಿರುವ ಮಹಾರಥನಾದ ಧೃಷ್ಟದ್ಯುಮ್ನನು ಅಲ್ಲಿ ಸೇನಾನಾಯಕನಾಗಿದ್ದಾನೆ.
ಭೀಷ್ಮಃ ಶಾಂತನವೋ ರಾಜನ್ ಭಾಗಃ ಕ್ಲೃಪ್ತಃ ಶಿಖಂಡಿನಃ |
ತಂ ವಿರಾಟೋಽನುಸಂಯಾತಾ ಸಾರ್ಧಂ ಮತ್ಸ್ಯೈಃ ಪ್ರಹಾರಿಭಿಃ ॥12॥
ಎಲೈ ರಾಜನೇ, ಶಂತನು ಪುತ್ರನಾದ ಭೀಷ್ಮನು ಶಿಖಂಡಿಯ ಭಾಗವೆಂದು ಕ್ಲೃಪ್ತನಾಗಿದ್ದಾನೆ. ಆ ಶಿಖಂಡಿಯನ್ನು ಮತ್ಸ್ಯಸೈನ್ಯದ ಜೊತೆಯಲ್ಲಿ ವಿರಾಟನು ಹಿಂಬಾಲಿಸುತ್ತಾನೆ.
ಜ್ಯೇಷ್ಠಸ್ಯ ಪಾಂಡುಪುತ್ರಸ್ಯ ಭಾಗೋ ಮದ್ರಾಧಿಪೋ ಬಲೀ |
ತೌ ತು ತತ್ರಾಬ್ರುವನ್ ಕೇಚಿದ್ ವಿಷಮೌ ನೋ ಮತಾವಿತಿ ॥13॥
ಬಲಿಷ್ಠನಾದ ಮದ್ರರಾಜನಾದ ಶಲ್ಯನು ಪಾಂಡುಪುತ್ರರಲ್ಲಿ ಜ್ಯೇಷ್ಠರಾದ ಯುಧಿಷ್ಠಿರನ ಭಾಗವೆಂದು ಕ್ಲೃಪ್ತನಾಗಿದ್ದಾನೆ. ಅಲ್ಲಿದ್ದ ಕೆಲವರು ಇದು ವಿಷಮವಾದ ಜೋಡಿ ಎಂದು ಹೇಳುತ್ತಿದ್ದರು.
ದುರ್ಯೋಧನಃ ಸಹಸುತಃ ಸಾರ್ಧಂ ಭ್ರಾತೃಶತೇನ ಚ |
ಪ್ರಾಚ್ಯಾಶ್ಚ ದಾಕ್ಷಿಣಾತ್ಯಾಶ್ಚ ಭೀಮಸೇನಸ್ಯ ಭಾಗತಃ ॥14॥
ದುರ್ಯೋಧನ, ಅವನ ಮಕ್ಕಳು, ಅವನ ನೂರು ಜನ ತಮ್ಮಂದಿರು, ಪೂರ್ವದಿಕ್ಕಿನ ಮತ್ತು ದಕ್ಷಿಣ ದಿಕ್ಕಿನ ರಾಜರು, ಎಲ್ಲರೂ ಭೀಮಸೇನನ ಭಾಗದಲ್ಲಿದ್ದಾರೆ.
ಅರ್ಜುನಸ್ಯ ತು ಭಾಗೇನ ಕರ್ಣೋ ವೈಕರ್ತನೋ ಮತಃ |
ಅಶ್ವತ್ಥಾಮಾ ವಿಕರ್ಣಶ್ಚ ಸೈಂಧವಶ್ಚ ಜಯದ್ರಥಃ ॥15॥
ಅರ್ಜುನನ ಭಾಗದಲ್ಲಿ ವೈಕರ್ತನನಾದ ಕರ್ಣನಿದ್ದಾನೆ. ಅಶ್ವತ್ಥಾಮ, ವಿಕರ್ಣ, ಸಿಂಧುರಾಜನಾದ ಜಯದ್ರಥ ಇವರೂ ಅರ್ಜುನನ ಭಾಗವಾಗಿದ್ದಾರೆ.

ಅಶಕ್ಯಾಶ್ಚೈವ ಯೇ ಕೇಚಿತ್ ಪೃಥಿವ್ಯಾಂ ಶೂರಮಾನಿನಃ |
ಸರ್ವಾಂಸ್ತಾನರ್ಜುನಃ ಪಾರ್ಥಃ ಕಲ್ಪಯಾಮಾಸ ಭಾಗತಃ ||16||
ಭೂಮಿಯಲ್ಲಿ ಇರುವ ತಾವು ಶೂರರೆಂದು ತಿಳಿದಿರುವ, ಇನ್ನೊಬ್ಬರಿಂದ ಸೋಲಿಸಲು ಅಸಾಧ್ಯರಾದ ವೀರರೆಲ್ಲರನ್ನೂ ಅರ್ಜುನನು ತನ್ನ ಭಾಗವೆಂದು ಕಲ್ಪಿಸಿದ್ದಾನೆ.
ಮಹೇಷ್ವಾಸಾ ರಾಜಪುತ್ರಾಃ ಭ್ರಾತರಃ ಪಂಚ ಕೇಕಯಾಃ |
ಕೇಕಯಾನೇವ ಭಾಗೇನ ಕೃತ್ವಾ ಯೋತ್ಸ್ಯಂತಿ ಸಂಯುಗೇ ||17||
ದೊಡ್ಡಧನುಸ್ಸನ್ನು ಧರಿಸಿದ ಅಣ್ಣತಮ್ಮಂದಿರಾದ ಕೇಕಯ ದೇಶದ ಐವರು ರಾಜಪುತ್ರರು ಕೇಕಯ ದೇಶದ ಇನ್ನೊಂದು ಭಾಗದ ರಾಜರನ್ನು ಗುರಿಮಾಡಿಕೊಂಡು ಯುದ್ಧ ಮಾಡುತ್ತಾರೆ.
ತೇಷಾಮೇವ ಕೃತೋ ಭಾಗೋ ಮಾಲವಾಃ ಸಾಲ್ವಕಾಸ್ತಥಾ |
ತ್ರಿಗರ್ತಾನಾಂ ಚ ವೈ ಮುಖ್ಯೌ ಯೌ ತೌ ಸಂಶಪ್ತಕಾವಿತಿ ||18||
ಮಾಲವರೂ ಸಾಲ್ವಕರೂ ತ್ರಿಗರ್ತರಲ್ಲಿ ಮುಖ್ಯರಾದ ಇಬ್ಬರು ಸಂಶಪ್ತಕರು ಇವರೂ ಕೇಕಯ ದೇಶದ ರಾಜಪುತ್ರರ ಭಾಗವಾಗಿ ಕಲ್ಪಿಸಲ್ಪಟ್ಟಿದ್ದಾರೆ.
ದುರ್ಯೋಧನಸುತಾಃ ಸರ್ವೇ ತಥಾ ದುಃಶಾಸನಸ್ಯ ಚ |
ಸೌಭದ್ರೇಣ ಕೃತೋ ಭಾಗೋ ರಾಜಾ ಚೈವ ಬೃಹದ್ಬಲಃ ||19||
ದುರ್ಯೋಧನನ ಮತ್ತು ದುಶ್ಶಾಸನನ ಎಲ್ಲಾ ಮಕ್ಕಳೂ ಬೃಹದ್ಬಲ ರಾಜನೂ ಸಹ ಅಭಿಮನ್ಯುವಿನ ಭಾಗವಾಗಿ ಮಾಡಲ್ಪಟ್ಟಿದ್ದಾರೆ.
ದ್ರೌಪದೇಯಾ ಮಹೇಷ್ವಾಸಾಃ ಸುವರ್ಣವಿಕೃತಧ್ವಜಾಃ |
ಧೃಷ್ಟದ್ಯುಮ್ನಮುಖಾ ದ್ರೋಣಮಭಿಯಾಸ್ಯಂತಿ ಭಾರತ ||20||
ಎಲೈ ಭಾರತನೇ, ಮಹಾಧನುರ್ಧಾರಿಗಳಾದ, ಸುವರ್ಣಾಲಂಕೃತ ರಥವುಳ್ಳ ದ್ರೌಪದಿಯ ಕುಮಾರರಾದ ಪಂಚ ಉಪಪಾಂಡವರೂ ಮತ್ತು ಧೃಷ್ಟದ್ಯುಮ್ನನೂ ದ್ರೋಣರ ಮೇಲೆ ಎರಗುತ್ತಾರೆ.
ಚೇಕಿತಾನಃ ಸೋಮದತ್ತಂ ದ್ವೈರಥೇ ಯೋದ್ಧುಮಿಚ್ಛತಿ |
ಭೋಜಂ ತು ಕೃತವರ್ಮಾಣಂ ಯುಯುಧಾನೋ ಯುಯುತ್ಸತಿ ||21||
ಚೇಕಿತಾನನು ದ್ವಂದ್ವರಥ ಯುದ್ಧದಲ್ಲಿ ಸೋಮದತ್ತನ ಜೊತೆಯಲ್ಲಿ ಯುದ್ಧ ಮಾಡುತ್ತಾನೆ. ಸಾತ್ಯಕಿಯು ಭೋಜವಂಶದವನಾದ ಕೃತವರ್ಮನನ್ನು ಎದುರಿಸುತ್ತಾನೆ.
ಸಹದೇವಸ್ತು ಮಾದ್ರೇಯಃ ಶೂರಃ ಸಂಕ್ರಂದನೋ ಯುಧಿ |
ಸ್ವಮಂಶಂ ಕಲ್ಪಯಾಮಾಸ ಸ್ಯಾಲಂ ತೇ ಸುಬಲಾತ್ಮಜಮ್ ||22||
ಶೂರನೂ ಶತ್ರುಗಳನ್ನು ರೋದನಕ್ಕೆ ವಶಪಡಿಸುವವನೂ ಆದ ಸಹದೇವನು ದುರ್ಯೋಧನನ ಭಾವಮೈದುನನಾದ ಶಕುನಿಯನ್ನು ತನ್ನ ಭಾಗವಾಗಿ ಕಲ್ಪಿಸಿಕೊಂಡಿದ್ದಾನೆ.
ಉಲೂಕಂ ಚೈವ ಕೈತವ್ಯಂ ಯೇ ಚ ಸಾರಸ್ವತಾ ಗಣಾಃ |
ನಕುಲಃ ಕಲ್ಪಯಾಮಾಸ ಭಾಗಂ ಮಾದ್ರವತೀಸುತಃ ||23||
ಮಾದ್ರಿಯ ಪುತ್ರನಾದ ನಕುಲನು ಮೋಸಗಾರನಾದ ಉಲೂಕನನ್ನೂ ಮತ್ತು ಸರಸ್ವತೀ ನದೀತೀರದಲ್ಲಿ ವಾಸಮಾಡುವ ಯೋಧರನ್ನೂ ತನ್ನ ಭಾಗವಾಗಿ ಕಲ್ಪಿಸಿಕೊಂಡಿದ್ದಾನೆ.
ಯೇ ಚಾನ್ಯೇ ಪಾರ್ಥಿವಾ ರಾಜನ್ ಪ್ರತ್ಯುದ್ಯಾಸ್ಯಂತಿ ಸಂಗರೇ |
ಸಮಾಹ್ವಾನೇನ ತಾಂಶ್ಚಾಪಿ ಪಾಂಡುಪುತ್ರಾ ಅಕಲ್ಪಯನ್ ||24||
ಎಲೈ ರಾಜನೇ, ಬೇರೆ ಯಾವ ರಾಜರು ಯುದ್ಧದಲ್ಲಿ ತಮ್ಮನ್ನು ಎದುರಿಸುತ್ತಾರೆಯೋ ಅವರನ್ನೂ ಆಹ್ವಾನ ಮಾಡಿ ಪಾಂಡವರು ತಮ್ಮ ಭಾಗವಾಗಿ ಕಲ್ಪಿಸಿಕೊಂಡಿದ್ದಾರೆ.
ಏವಮೇಷಾಮನೀಕಾನಿ ಪ್ರವಿಭಕ್ತಾನಿ ಭಾಗಶಃ |
ಯತ್ ತೇ ಕಾರ್ಯಂ ಸಪುತ್ರಸ್ಯ ಕ್ರಿಯತಾಂ ತದಕಾಲಿಕಮ್ ||25||
ಹೀಗೆ ಪಾಂಡವರ ಸೈನ್ಯಗಳು ತಮ್ಮ ಗುರಿಗಳನ್ನು ಹಂಚಿಕೊಂಡಿವೆ. ನೀನು ನಿನ್ನ ಮಗನ ಜೊತೆಯಲ್ಲಿ ಏನು ಮಾಡಬಹುದೋ ಅದನ್ನು ಶೀಘ್ರವಾಗಿ ಮಾಡು.
ಧೃತರಾಷ್ಟ್ರಃ
ನ ಸಂತಿ ಸರ್ವೇ ಪುತ್ರಾ ಮೇ ಮೂಢಾಃ ದುರ್ದ್ಯೂತದೇವಿನಃ |
ಯೇಷಾಂ ಯುದ್ಧಂ ಬಲವತಾ ಭೀಮೇನ ರಣಮೂರ್ಧನಿ ||26||
ಧೃತರಾಷ್ಟ್ರ ಘೋರ ಸಂಗ್ರಾಮದಲ್ಲಿ ಬಲಿಷ್ಠನಾದ ಭೀಮನ ಜೊತೆಯಲ್ಲಿ ಯುದ್ಧವನ್ನು ಹವಣಿಸಿಕೊಂಡಿರುವ ಮೂಢರೂ, ಕೆಟ್ಟದ್ಯೂತವನ್ನು ಆಡುವವರೂ ಆದ ನನ್ನ ಪುತ್ರರು ನಾಶ ಹೊಂದಿದ್ದಾರೆ.
ರಾಜಾನಃ ಪಾರ್ಥಿವಾಃ ಸರ್ವೇ ಪ್ರೋಕ್ಷಿತಾಃ ಕಾಲಧರ್ಮಣಾ |
ಗಾಂಡೀವಾಗ್ನಿಂ ಪ್ರವೇಕ್ಷ್ಯಂತಿ ಪತಂಗಾ ಇವ ಪಾವಕಮ್ ||27||
ಭೂಮಿಯ ಮೇಲಿರುವ ರಾಜರೆಲ್ಲರೂ ಕಾಲಧರ್ಮದಿಂದ ಪ್ರೋಕ್ಷಿತ ಪಶುಗಳಂತಿದ್ದು ಪತಂಗಗಳು ಅಗ್ನಿಯನ್ನು ಪ್ರವೇಶಿಸುವಂತೆ ಗಾಂಡೀವಾಗ್ನಿಯನ್ನು ಪ್ರವೇಶಿಸುವರು.
ವಿದ್ರುತಾಂ ವಾಹಿನೀಂ ಮನ್ಯೇ ಕೃತವೈರೈರ್ಮಹಾತ್ಮಭಿಃ |
ತಾಂ ರಣೇ ಕೇಽನುಯಾಸ್ಯಂತಿ ಪ್ರಭಗ್ನಾಂ ಪಾಂಡವೈರ್ಯುಧಿ ||28||

ವೈರವನ್ನು ಹೊಂದಿದ ಮಹಾತ್ಮರಾದ ಪಾಂಡವರಿಂದ ನಮ್ಮ ಸೈನ್ಯವು ಓಡಿಸಲ್ಪಟ್ಟಿದೆ ಎಂದು ಭಾವಿಸುತ್ತೇನೆ. ಯುದ್ಧದಲ್ಲಿ ಪಾಂಡವರಿಂದ ಭಗ್ನವಾದ ನಮ್ಮ ಸೈನ್ಯವನ್ನು ಯಾರು ಹಿಂಬಾಲಿಸುತ್ತಾರೆ?
ಸರ್ವೇ ಹ್ಯತಿರಥಾಃ ಶೂರಾಃ ಕೀರ್ತಿಮಂತಃ ಪ್ರತಾಪಿನಃ |
ಸೂರ್ಯಪಾವಕಯೋಸ್ತುಲ್ಯಾಃ ತೇಜಸಾ ಸಮಿತಿಂಜಯಾಃ ॥29॥
ಪಾಂಡವರೆಲ್ಲರೂ ಅತಿರಥರು, ಶೂರರು, ತೇಜಸ್ಸಿನಲ್ಲಿ ಸೂರ್ಯಾಗ್ನಿಗಳಿಗೆ ಸಮಾನರಾದವರು, ಯುದ್ಧದಲ್ಲಿ ಗೆಲ್ಲುವವರು.
ಯೇಷಾಂ ಯುಧಿಷ್ಠಿರೋ ನೇತಾ ಗೋಪ್ತಾ ಚ ಮಧುಸೂದನಃ |
ಯೋಧೌ ಚ ಪಾಂಡವೌ ವೀರೌ ಸವ್ಯಸಾಚಿವೃಕೋದರೌ ॥30॥
ನಕುಲಃ ಸಹದೇವಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಸಾತ್ಯಕಿರ್ದ್ರುಪದಶ್ಚೈವ ಧೃಷ್ಟದ್ಯುಮ್ನಶ್ಚ ಚಾತ್ಮಜಾಃ ॥31॥
ಉತ್ತಮೌಜಾಶ್ಚ ಪಾಂಚಾಲ್ಯೋ ಯುಧಾಮನ್ಯುಶ್ಚ ದುರ್ಜಯಃ ॥32॥
ಶಿಖಂಡೀ ಕ್ಷತ್ರದೇವಶ್ಚ ತಥಾ ವೈರಾಟಿರುತ್ತರಃ |
ಕಾಶಯಶ್ಚೇದಯಶ್ಚೈವ ಮತ್ಸ್ಯಾಃ ಸರ್ವೇ ಚ ಸೃಂಜಯಾಃ ॥33॥
ವಿರಾಟಪುತ್ರೋ ಬಭ್ರುಶ್ಚ ಪಾಂಚಾಲಾಶ್ಚ ಪ್ರಭದ್ರಕಾಃ |
ತೇಷಾಮಿಂದ್ರೋಽಪ್ಯಕಾಮಾನಾಂ ನ ಹರೇತ್ ಪೃಥಿವೀಮಿಮಾಮ್ ॥
ವೀರಾಣಾಂ ರಣಧೀರಾಣಾಂ ಯೇ ಭಿಂದ್ಯುಃ ಪರ್ವತಾನಪಿ ॥35॥
ಯಾರಿಗೆ ಯುಧಿಷ್ಠಿರನು ನಾಯಕನಾಗಿದ್ದಾನೆಯೋ, ಮಧುಸೂದನನು ರಕ್ಷಕನಾಗಿದ್ದಾನೆಯೋ, ವೀರರಾದ ಪಾಂಡುಪುತ್ರರಾದ ಭೀಮಾರ್ಜುನರೂ, ನಕುಲ-ಸಹದೇವರೂ, ಪಾರ್ಷತನಾದ ಧೃಷ್ಟದ್ಯುಮ್ನನೂ, ಸಾತ್ಯಕಿ-ದ್ರುಪದ ಮತ್ತು ಧೃಷ್ಟದ್ಯುಮ್ನನ ಪುತ್ರರೂ, ಪಾಂಚಾಲದೇಶದ ಉತ್ತಮೌಜ ಮತ್ತು ದುರ್ಜಯನಾದ ಯುಧಾಮನ್ಯುವೂ, ಶಿಖಂಡಿ, ಕ್ಷತ್ರದೇವ ಮತ್ತು ವಿರಾಟಪುತ್ರನಾದ ಉತ್ತರನೂ, ಕಾಶಿ, ಚೇದಿ, ಮತ್ಸ್ಯ, ಸೃಂಜಯ ದೇಶದ ಸೈನಿಕರೂ, ವಿರಾಟಪುತ್ರನಾದ ಬಭ್ರುವೂ, ಪಾಂಚಾಲದೇಶದ ಪ್ರಭದ್ರಕರೂ ಯೋಧರಾಗಿದ್ದಾರೆಯೋ, ಅಂತಹ ವೀರರೂ ರಣಧೀರರೂ ಪರ್ವತವನ್ನೇ ಭೇದಿಸುವವರೂ ಆದ ಯೋಧರ ಅನುಮತಿ ಇಲ್ಲದೆ ಇಂದ್ರನೂ ಈ ಭೂಮಿಯನ್ನು ಜಯಿಸಲಾರ.
ತಾನ್ ಸರ್ವಗುಣಸಂಪನ್ನಾನ್ ಅಮನುಷ್ಯಪ್ರತಾಪಿನಃ |
ಕ್ರೋಶತೋ ಮಮ ದುಷ್ಪುತ್ರೋ ಯೋದ್ಧುಮಿಚ್ಛತಿ ಸಂಜಯ ॥36॥
ಎಲೈ ಸಂಜಯನೇ, ನನ್ನ ದುಷ್ಟಪುತ್ರನು ನಾನು ಬೇಡವೆಂದು ಕಿರುಚುತ್ತಿದ್ದರೂ ಸರ್ವಗುಣಸಂಪನ್ನರಾದ, ಮನುಷ್ಯರಿಗೆ ಮೀರಿದ ಪ್ರಕಾಶವುಳ್ಳ ಪಾಂಡವರ ಜೊತೆಯಲ್ಲಿ ಯುದ್ಧ ಮಾಡಲು ಬಯಸುತ್ತಿದ್ದಾನೆ.
ದುರ್ಯೋಧನಃ
ಉಭೌ ಸ್ವ ಏಕಜಾತೀಯೌ ತಥೋಭೌ ಭೂಮಿಗೋಚರೌ |
ಅಥ ಕಸ್ಮಾತ್ ಪಾಂಡವಾನಾಮೇಕತೋ ಮನ್ಯಸೇ ಜಯಮ್ ॥37॥
ದುರ್ಯೋಧನ ಇಬ್ಬರೂ ಒಂದೇ ಕ್ಷತ್ರಿಯ ಜಾತಿಗೆ ಸೇರಿದವರು. ಇಬ್ಬರೂ ಭೂಮಿಯ ಮೇಲೆ ವಾಸಿಸುವವರು. ಹೀಗಿರುವಾಗ ಪಾಂಡವರಿಗೇ ಜಯವಾಗುವುದೆಂದು ನೀನು ಹೇಗೆ ಭಾವಿಸುತ್ತೀಯೆ?
ಪಿತಾಮಹಂ ಚ ದ್ರೋಣಂ ಚ ಕೃಪಂ ಕರ್ಣಂ ಚ ದುರ್ಜಯಮ್ |
ಜಯದ್ರಥಂ ಸೋಮದತ್ತಮಶ್ವತ್ಥಾಮಾನಮೇವ ಚ ॥38॥
ಸುತೇಜಸೋ ಮಹೇಷ್ವಾಸಾನ್ ಇಂದ್ರೋಽಪಿ ಸಹಿತೋಽಮರೈಃ |
ಅಶಕ್ತಃ ಸಮರೇ ಜೇತುಂ ಕಿಂ ಪುನಸ್ತಾತ ಪಾಂಡವಾಃ ॥39॥
ಪಿತಾಮಹರಾದ ಭೀಷ್ಮ, ದ್ರೋಣ, ಕೃಪ, ದುರ್ಜಯನಾದ ಕರ್ಣ, ಜಯದ್ರಥ, ಸೋಮದತ್ತ, ಅಶ್ವತ್ಥಾಮ ಈ ಮಹಾಧನುರ್ಧಾರಿಗಳು ತೀವ್ರ ಪರಾಕ್ರಮಿಗಳು. ದೇವತೆಗಳಿಂದ ಸಹಿತನಾದ ಇಂದ್ರನೂ ಸಹ ಯುದ್ಧದಲ್ಲಿ ಅವರನ್ನು ಗೆಲ್ಲಲಾರ. ತಂದೆಯೇ, ಇನ್ನು ಪಾಂಡವರು ಗೆಲ್ಲುವುದು ಹೇಗೆ?
ಸರ್ವೇ ಚ ಪೃಥಿವೀಪಾಲಾ ಮದರ್ಥೇ ತಾತ ಪಾಂಡವಾನ್ |
ಆರ್ಯಾಃ ಶಸ್ತ್ರಭೃತಃ ಶೂರಾಃ ಸಮರ್ಥಾಃ ಪ್ರತಿಬಾಧಿತುಮ್ ॥40॥
ಎಲೈ ತಂದೆಯೇ, ಉದಾತ್ತವಾದ ನಡತೆಯುಳ್ಳ, ಶಸ್ತ್ರಧಾರಿಗಳಾದ, ಶೂರರಾದ ರಾಜರೆಲ್ಲರೂ ನನ್ನ ಸಲುವಾಗಿ ಪಾಂಡವರನ್ನು ಬಾಧಿಸಲು ಸಮರ್ಥರಾಗಿದ್ದಾರೆ.
ನ ಮಾಮಕಾನ್ ಪಾಂಡವಾಸ್ತೇ ಸಮರ್ಥಾಃ ಪ್ರತಿವೀಕ್ಷಿತುಮ್ |
ಪರಾಕ್ರಾಂತೋ ಹ್ಯಹಂ ಪಾಂಡೂನ್ ಸಪುತ್ರಾನ್ ಯೋದ್ಧುಮಾಹವೇ ॥
ಆದರೆ ನನ್ನವರನ್ನು ಮಾತ್ರ ಪಾಂಡವರು ನೋಡಲೂ ಸಾಧ್ಯವಿಲ್ಲ. ನಾನು ಪಾಂಡವರನ್ನು, ಅವರ ಪುತ್ರರನ್ನು ಯುದ್ಧದಲ್ಲಿ ಎದುರಿಸಲು ಸನ್ನದ್ಧನಾಗಿದ್ದೇನೆ.
ಮತ್ಪ್ರಿಯಂ ಪಾರ್ಥಿವಾಃ ಸರ್ವೇ ಯೇ ಚಿಕೀರ್ಷಂತಿ ಭಾರತ |
ತೇ ತಾನಾವಾರಯಿಷ್ಯಂತಿ ಐಣೇಯಾನಿವ ತಂತುನಾ ॥42॥
ಎಲೈ ಭಾರತನೇ, ನನ್ನ ಪ್ರಿಯವನ್ನು ಉಂಟುಮಾಡಲು ಬಂದಿರುವ ರಾಜರೆಲ್ಲರೂ ಜಿಂಕೆಯ ಮರಿಗಳನ್ನು ಬಲೆಯಿಂದ ಹಿಡಿದಂತೆ ಆ ಪಾಂಡವರನ್ನು ತಡೆಯುವರು.
ಮಹತಾ ರಥವಂಶೇನ ಶರಜಾಲೈಶ್ಚ ಮಾಮಕೈಃ |

ಅಭಿದ್ರುತಾ ಭವಿಷ್ಯಂತಿ ಪಾಂಚಾಲಾಃ ಪಾಂಡವೈಃ ಸಹ ॥43॥
ನನ್ನ ದೊಡ್ಡ ರಥಸಮೂಹದಿಂದ ಮತ್ತು ಬಾಣಗಳ ಸಮೂಹದಿಂದ ಹಿಂಬಾಲಿಸಲ್ಪಟ್ಟು ಪಾಂಡವರ ಜೊತೆಯಲ್ಲಿ ಪಾಂಚಾಲರೂ ಸಹ ಯುದ್ಧಭೂಮಿಯಿಂದ ಓಡಿಹೋಗುವರು.
ಧೃತರಾಷ್ಟ್ರಃ
ಉನ್ಮತ್ತ ಇವ ಮೇ ಪುತ್ರೋ ವಿಲಪತ್ಯೇಷ ಸಂಜಯ |
ನ ಹಿ ಶಕ್ತೋ ಯುಧಾ ಜೇತುಂ ಧರ್ಮರಾಜಂ ಯುಧಿಷ್ಠಿರಮ್ ॥44॥
ಧೃತರಾಷ್ಟ್ರ ಸಂಜಯನೇ, ಈ ನನ್ನ ಪುತ್ರನು ಹುಚ್ಚನಂತೆ ಮಾತನಾಡುತ್ತಿದ್ದಾನೆ. ಯುದ್ಧದಲ್ಲಿ ಧರ್ಮರಾಜನಾದ ಯುಧಿಷ್ಠಿರನನ್ನು ಗೆಲ್ಲಲು ಇವನು ಸಮರ್ಥನಲ್ಲ.
ಜಾನಾತಿ ಹಿ ಯಥಾ ಭೀಷ್ಮಃ ಪಾಂಡವಾನಾಂ ಯಶಸ್ವಿನಾಮ್ |
ಬಲವತ್ತಾಂ ಸಪುತ್ರಾಣಾಂ ಧರ್ಮಜ್ಞಾನಾಂ ಮಹಾತ್ಮನಾಮ್ ॥45॥
ಯತೋ ನಾರೋಚಯದಯಂ ವಿಗ್ರಹಂ ತೈರ್ಮಹಾತ್ಮಭಿಃ |
ಕಿಂತು ಸಂಜಯ ಮೇ ಬ್ರೂಹಿ ಪುನಸ್ತೇಷಾಂ ವಿಚೇಷ್ಟಿತಮ್ ॥46॥
ಕೀರ್ತಿವಂತರಾದ, ಪುತ್ರಸಹಿತರಾದ, ಧರ್ಮಜ್ಞರಾದ, ಮಹಾತ್ಮರಾದ ಪಾಂಡವರ ಬಲವನ್ನು ಭೀಷ್ಮನು ಸರಿಯಾಗಿ ತಿಳಿದಿದ್ದಾನೆ. ಆದ್ದರಿಂದಲೇ ಅವನು ಮಹಾತ್ಮರಾದ ಅವರ ಜೊತೆಯಲ್ಲಿ ವೈರವನ್ನು ಅನುಮೋದಿಸಲಿಲ್ಲ. ಆದರೆ ಸಂಜಯನೇ, ನನಗೆ ಪುನಃ ಪಾಂಡವರ ಚೇಷ್ಟೆಯನ್ನು (ಯುದ್ಧಕ್ರಿಯೆಗಳನ್ನು) ಕುರಿತು ಹೇಳುವವನಾಗು.
ಕಸ್ತಾಂಸ್ತರಸ್ವಿನೋ ಭೂಯಃ ಸಂದೀಪಯತಿ ಪಾಂಡವಾನ್ |
ಅರ್ಚಿಷ್ಮತೋ ಮಹೇಷ್ವಾಸಾನ್ ಹವಿಷಾ ಪಾವಕಾನಿವ ॥47॥
ಕಿಡಿಯನ್ನು ಕಾರುವ ಅಗ್ನಿಯನ್ನು ಹವಿಸ್ಸಿನಿಂದ ಉದ್ದೀಪನಗೊಳಿಸಿದಂತೆ ಮಹಾಧನುರ್ಧಾರಿಗಳಾದ, ವೇಗವಂತರಾದ ಆ ಪಾಂಡವರನ್ನು ಯಾರು ಉದ್ದೀಪನಗೊಳಿಸುತ್ತಿದ್ದಾರೆ?
ಸಂಜಯಃ
ಧೃಷ್ಟದ್ಯುಮ್ನಃ ಸದೈವೈತಾನ್ ಸಂದೀಪಯತಿ ಭಾರತ ॥48॥
ಸಂಜಯ ಎಲೈ ಭಾರತನೇ, ಧೃಷ್ಟದ್ಯುಮ್ನನು ಯಾವಾಗಲೂ ಅವರನ್ನು ಉದ್ದೀಪನಗೊಳಿಸುತ್ತಿದ್ದಾನೆ.
ಯುದ್ಧ್ಯಧ್ವಮಿತಿ ಮಾ ಭೈಷ್ಟ ಯುದ್ಧಾದ್ ಭರತಸತ್ತಮಾಃ ॥49॥
ಯೇ ಕೇಚಿತ್ ಪಾರ್ಥಿವಾಸ್ತತ್ರ ಧಾರ್ತರಾಷ್ಟ್ರೇಣ ಸಂವೃತಾಃ |
ಯುದ್ಧೇ ಸಮಾಗಮಿಷ್ಯಂತಿ ತುಮುಲೇ ಶಸ್ತ್ರಸಂಕುಲೇ ॥50॥
ತಾನ್ ಸರ್ವಾನಾಹವೇ ಕ್ರುದ್ಧಾನ್ ಸಾನುಬಂಧಾನ್ ಸಮಾಗತಾನ್ |
ಅಹಮೇಕಃ ಸಮಾದಾಸ್ಯೇ ತಿಮಿರ್ಮತ್ಸ್ಯಾನಿವೌದಕಾತ್ ॥51॥
ಎಲೈ ಭರತಸತ್ತಮರೇ, ಯುದ್ಧಕ್ಕೆ ಹೆದರಬೇಡಿ, ಯುದ್ಧವನ್ನು ಮಾಡಿ. ಯಾವ ರಾಜರು ದುರ್ಯೋಧನನಿಂದ ಸಹಿತರಾಗಿ ಶಸ್ತ್ರನಿಬಿಡವಾದ ಘೋರವಾದ ಯುದ್ಧದಲ್ಲಿ ಬಂದು ಸೇರುವರೋ ಅಂತಹ ಕ್ರುದ್ಧರಾದ, ಸಮಾಗತರಾದ ರಾಜರನ್ನೆಲ್ಲಾ ಅವರ ಪರಿವಾರಸಹಿತವಾಗಿ ನಾನೊಬ್ಬನೇ ತಿಮಿಂಗಿಲವು ಮತ್ಸ್ಯವನ್ನು ನುಂಗಿದಂತೆ ನುಂಗುವೆನು (ಸಂಹರಿಸುವೆನು).
ಭೀಷ್ಮಂ ದ್ರೋಣಂ ಕೃಪಂ ಕರ್ಣಂ ದ್ರೌಣಿಂ ಶಲ್ಯಂ ಸುಯೋಧನಮ್ |
ಏತಾಂಶ್ಚಾಪಿ ನಿರೋತ್ಸ್ಯಾಮಿ ವೇಲೇವ ಮಕರಾಲಯಮ್ ॥52॥
ಭೀಷ್ಮ, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ, ಶಲ್ಯ ಮತ್ತು ಸುಯೋಧನ ಇವರನ್ನು ನಾನು ತೀರವು ಸಮುದ್ರವನ್ನು ತಡೆದಂತೆ ತಡೆಯುವೆನು.
ಸಂಜಯಃ
ತಥಾ ಬ್ರುವಂತಂ ಧರ್ಮಾತ್ಮಾ ಪ್ರಾಹ ರಾಜಾ ಯುಧಿಷ್ಠಿರಃ ॥53॥
ಸಂಜಯ ಹಾಗೆ ಹೇಳುತ್ತಿದ್ದ ಧೃಷ್ಟದ್ಯುಮ್ನನನ್ನು ಕುರಿತು ರಾಜನಾದ, ಧರ್ಮಾತ್ಮನಾದ ಯುಧಿಷ್ಠಿರನು ಹೀಗೆ ಹೇಳಿದನು.
ತವ ಧೈರ್ಯಂ ಚ ವೀರ್ಯಂ ಚ ಪಾಂಚಾಲಾಃ ಪಾಂಡವೈಃ ಸಹ |
ಸರ್ವೇ ಸಮಧಿರೂಢಾಃ ಸ್ಮ ಸಂಗ್ರಾಮಾನ್ನಃ ಸಮುದ್ಧರ ॥54॥
ಪಾಂಚಾಲಸಹಿತರಾದ, ಪಾಂಡವರಾದ ನಾವು ನಿನ್ನ ಧೈರ್ಯವನ್ನೂ ಮತ್ತು ಪರಾಕ್ರಮವನ್ನೂ ಅವಲಂಬಿಸಿದ್ದೇವೆ. ನಮ್ಮನ್ನು ಯುದ್ಧದಿಂದ ಉದ್ಧರಿಸುವವನಾಗು.
ಜಾನಾಮಿ ತ್ವಾಂ ಮಹಾಬಾಹೋ ಕ್ಷತ್ರಧರ್ಮೇ ವ್ಯವಸ್ಥಿತಮ್ |
ಸಮರ್ಥಮೇಕಂ ಪರ್ಯಾಪ್ತಂ ಕೌರವಾಣಾಂ ವಿನಿಗ್ರಹೇ ॥55॥
ಎಲೈ ಮಹಾಬಾಹುವೇ, ನೀನು ಕ್ಷತ್ರಧರ್ಮದಲ್ಲಿ ನಿಷ್ಠನಾಗಿದ್ದೀಯೆ ಮತ್ತು ಕೌರವರನ್ನು ನಿಗ್ರಹಿಸಲು ನೀನೊಬ್ಬನೇ ಸಮರ್ಥನಾಗಿದ್ದೀಯೆ ಎಂದು ನಾನು ತಿಳಿದಿದ್ದೇನೆ.
ಪುರಸ್ತಾದುಪಯಾತಾನಾಂ ಕೌರವಾಣಾಂ ಯುಯುತ್ಸತಾಮ್ ॥56॥
ಭವತಾ ಯದ್ ವಿಧಾತವ್ಯಂ ತನ್ನಃ ಶ್ರೇಯಃ ಪರಂತಪ |
ಸಂಗ್ರಾಮಾದಪಯಾತಾನಾಂ ಭಗ್ನಾನಾಂ ಶರಣೈಷಿಣಾಮ್ ॥57॥
ಪೌರುಷಂ ದರ್ಶಯನ್ ಶೂರೋ ಯಸ್ತಿಷ್ಠೇದಗ್ರತಃ ಪುಮಾನ್ |
ಕ್ರೀಣೀಯಾತ್ ತಂ ಸಹಸ್ರೇಣ ಇತಿ ನೀತಿಮತಾಂ ಮತಮ್ ॥58॥

ಯುದ್ಧವನ್ನು ಮಾಡುವ ಅಪೇಕ್ಷೆಯಿಂದ ಮುನ್ನುಗ್ಗುವ ಕೌರವರಿಗೆ ನೀನು ಏನು ಮಾಡುತ್ತೀಯೋ ಅದು ನಮಗೆ ಶ್ರೇಯಸ್ಕರವಾದುದು. ಎಲೈ ಪರಂತಪನೇ, ಸಂಗ್ರಾಮದಲ್ಲಿ ಭಗ್ನರಾಗಿ, ಶರಣಾರ್ಥಿಗಳಾಗಿ ಹಿಂದೆ ಸರಿಯುವ ಸೈನಿಕರಿಗೆ ಯಾವ ಶೂರನು ತನ್ನ ಪೌರುಷವನ್ನು ತೋರಿಸುತ್ತಾ ಮುಂದೆ ನಿಲ್ಲುವನೋ ಅವನನ್ನು ಸಹಸ್ರಸುವರ್ಣದಿಂದಲಾದರೂ ಕೊಂಡುಕೊಳ್ಳಬೇಕು ಎಂಬುದು ರಾಜನೀತಿಯನ್ನು ತಿಳಿದವರ ಅಭಿಪ್ರಾಯ.

ಸ ತ್ವಂ ಶೂರಶ್ಚ ವೀರಶ್ಚ ವಿಕ್ರಾಂತಶ್ಚ ನರರ್ಷಭ |
ಭಯಾರ್ತಾನಾಂ ಪರಿತ್ರಾತಾ ಸಂಯುಗೇಷು ನ ಸಂಶಯಃ ॥59॥

ಎಲೈ ನರರ್ಷಭನೇ, ಅಂತಹ ನೀನು ಶೂರನೂ, ವೀರನೂ, ಪರಾಕ್ರಮಶಾಲಿಯೂ, ಯುದ್ಧದಲ್ಲಿ ಭಯಗ್ರಸ್ತರಾದವರನ್ನು ರಕ್ಷಿಸುವವನೂ ಆಗಿದ್ದೀಯೆ ಎಂಬ ವಿಷಯದಲ್ಲಿ ಸಂಶಯವಿಲ್ಲ.

ಸಂಜಯಃ
ಏವಂ ಬ್ರುವತಿ ಕೌಂತೇಯೇ ಧರ್ಮಾತ್ಮನಿ ಯುಧಿಷ್ಠಿರೇ |
ಧೃಷ್ಟದ್ಯುಮ್ನ ಉವಾಚೇದಂ ಮಾಂ ವಚೋ ಗತಸಾಧ್ವಸಮ್ ॥60॥

ಸಂಜಯ ಧರ್ಮಾತ್ಮನಾದ ಕುಂತೀಪುತ್ರನಾದ ಯುಧಿಷ್ಠಿರನು ಹೀಗೆ ಮಾತನಾಡುತ್ತಿರಲು, ಧೃಷ್ಟದ್ಯುಮ್ನನು ನನ್ನನ್ನು ಕುರಿತು ನಿರ್ಭಯವಾಗಿ ಈ ಮಾತನ್ನು ಆಡಿದನು.

ಸರ್ವಾನ್ ಜನಪದಾನ್ ಸೂತ ಯೋಧಾ ದುರ್ಯೋಧನಸ್ಯ ಯೇ |
ಸಬಾಹ್ಲಿಕಾನ್ ಕುರೂನ್ ಬ್ರೂಯಾಃ ಪ್ರತಿವೀರಾನ್ ಶರದ್ವತಃ ॥61॥
ಸೂತಪುತ್ರಂ ತಥಾ ದ್ರೋಣಂ ಸಹಪುತ್ರಂ ಜಯದ್ರಥಮ್ |
ಭೀಷ್ಮಂ ಚೈವ ಬ್ರೂಹಿ ಗತ್ವಾ ಆಶು ಗಚ್ಛ ಚ ಮಾಚಿರಮ್ ॥62॥

ಎಲೈ ಸೂತನೇ, ಕೈಯಲ್ಲಿ ಬಾಣವನ್ನು ಹಿಡಿದ ಪ್ರತಿವೀರರಾದ, ದುರ್ಯೋಧನ ಪಕ್ಷಕ್ಕೆ ಸೇರಿದ ಎಲ್ಲಾ ಜನಪದರನ್ನೂ, ಯೋಧರನ್ನೂ, ಬಾಹ್ಲಿಕಸಹಿತರಾದ ಕುರುಗಳನ್ನೂ, ಸೂತಪುತ್ರನಾದ ಕರ್ಣನನ್ನೂ, ಅಶ್ವತ್ಥಾಮನಿಂದ ಸಹಿತರಾದ ದ್ರೋಣರನ್ನೂ, ಜಯದ್ರಥನನ್ನೂ ಮತ್ತು ಭೀಷ್ಮರನ್ನೂ ಸಮಾಗಮವನ್ನು ಹೊಂದಿ ಶೀಘ್ರವಾಗಿ ಹೋಗಿ ಹೇಳುವವನಾಗು.

ಯುಧಿಷ್ಠಿರೋ ಸಾಧುನೈವಾಭ್ಯುಪೈತಿ
ಮಾ ವೋಽವಧೀದರ್ಜುನೋ ದೇವಗುಪ್ತಃ |
ವನಂ ದಗ್ಧಂ ದೇವರಾಜಸ್ಯ ತೂರ್ಣಂ
ಯಾಚಧ್ವಂ ವೈ ಪಾಂಡವಂ ಲೋಕವೀರಮ್ ॥63॥

ಯುಧಿಷ್ಠಿರನು ಸಾಧುಮಾರ್ಗದಿಂದಲೇ ನಡೆಯುತ್ತಾನೆ. ದೇವಗುಪ್ತನಾದ ಅರ್ಜುನನು ನಿಮ್ಮನ್ನು ವಧೆ ಮಾಡದಿರಲಿ. ದೇವರಾಜನಾದ ಇಂದ್ರನ ಖಾಂಡವವನವು ಶೀಘ್ರವಾಗಿ ಅರ್ಜುನನಿಂದ ದಗ್ಧವಾಯಿತು. ಲೋಕವೀರನಾದ ಪಾಂಡವನನ್ನು ನೀವು ಯಾಚಿಸುವವರಾಗಿ.

ನೈತಾದೃಶೋ ಹಿ ಯೋಧೋಽಸ್ತಿ ಪೃಥಿವ್ಯಾಮಿಹ ಕಶ್ಚನ |
ಯಥಾವಿಧಃ ಸವ್ಯಸಾಚೀ ಪಾಂಡವಃ ಸತ್ಯವಿಕ್ರಮಃ ॥64॥

ಪಾಂಡುಪುತ್ರನಾದ, ಸತ್ಯವಿಕ್ರಮನಾದ, ಸವ್ಯಸಾಚಿಯಾದ ಅರ್ಜುನನು ಎಂತಹ ಯೋಧನೋ ಅಂತಹ ಯೋಧನು ಪೃಥಿವಿಯಲ್ಲಿ ಯಾವನೂ ಇಲ್ಲ.

ದೇವೈರ್ಹಿ ಸಂಭೃತೋ ದಿವ್ಯೋ ರಥೋ ಗಾಂಡೀವಧನ್ವನಃ |
ನ ಸ ಜೇಯೋ ಮನುಷ್ಯೇಣ ಮಾ ಸ್ಮ ಕೃದ್ಧ್ವಂ ಮನೋ ಯುಧಿ ॥65॥

ಗಾಂಡೀವಧನುರ್ಧಾರಿಯಾದ ಅರ್ಜುನನಿಗೆ ದೇವತೆಗಳು ದಿವ್ಯವಾದ ರಥವನ್ನು ನೀಡಿದ್ದಾರೆ. ಅವನನ್ನು ಮನುಷ್ಯರು ಜಯಿಸಲು ಸಾಧ್ಯವಿಲ್ಲ. ಯುದ್ಧವನ್ನು ಮಾಡುವ ಮನಸ್ಸನ್ನು ತ್ಯಜಿಸಿ (ಎಂದು ಹೇಳುವವನಾಗು).

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಏಕೋನಷಷ್ಟಿತಮೋಽಧ್ಯಾಯಃ ॥
ವ್ಯಾಸಾಭಿಗಮನಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.

* * * * *

ಅರವತ್ತನೆಯ ಅಧ್ಯಾಯ

ಧೃತರಾಷ್ಟ್ರನ ಮಾತುಗಳನ್ನು ನಿರಾಕರಿಸಿ, ದುರ್ಯೋಧನನಿಂದ ಕರ್ಣ-ದುಶ್ಶಾಸನರ ಜೊತೆಯಲ್ಲಿ ತನ್ನ ಯುದ್ಧೋತ್ಸಾಹದ ಕಥನ.

ಧೃತರಾಷ್ಟ್ರಃ
ಕ್ಷತ್ರತೇಜಾ ಬ್ರಹ್ಮಚಾರೀ ಕೌಮಾರಾದಪಿ ಪಾಂಡವಃ |
ತೇನ ಸಂಯುಗಮೇಷ್ಯಂತಿ ಮಂದಾ ವಿಲಪತೋ ಮಮ ॥1॥

ಧೃತರಾಷ್ಟ್ರ ಪಾಂಡುಪುತ್ರನಾದ ಅರ್ಜುನನು ಬಾಲ್ಯದಿಂದಲೂ ಕ್ಷತ್ರತೇಜಸ್ಸುಳ್ಳವನು ಮತ್ತು ಬ್ರಹ್ಮಚಾರಿ. ಮಂದರಾದ ನನ್ನ ಪುತ್ರರು ನಾನು ಇಷ್ಟು ಗೋಳಾಡುತ್ತಿದ್ದರೂ ಅವನ ಜೊತೆಯಲ್ಲಿ ಯುದ್ಧವನ್ನು ಮಾಡುವರು.

ದುರ್ಯೋಧನ ನಿವರ್ತಸ್ವ ಯುದ್ಧಾದ್ ಭರತಸತ್ತಮ |
ನ ಹಿ ಯುದ್ಧಂ ಪ್ರಶಂಸಂತಿ ಸರ್ವಾವಸ್ಥಾಸ್ವರಿಂದಮ ॥2॥

ಎಲೈ ಭರತಶ್ರೇಷ್ಠನಾದ ದುರ್ಯೋಧನನೇ, ಯುದ್ಧದಿಂದ ಹಿಂದೆ ಸರಿಯುವವನಾಗು. ಎಲೈ ಅರಿಂದಮನೇ, ಎಲ್ಲಾ ಕಾಲದಲ್ಲಿಯೂ ಯುದ್ಧವು ಶ್ರೇಷ್ಠವೆಂದು ರಾಜನೀತಿಯನ್ನು ತಿಳಿದ ಯಾರೂ ಹೇಳುವುದಿಲ್ಲ.
ಅಲಮರ್ಧಂ ಪೃಥಿವ್ಯಾಸ್ತೇ ಸಹಾಮಾತ್ಯಸ್ಯ ಜೀವಿತುಮ್ |
ಪ್ರಯಚ್ಛ ಪಾಂಡುಪುತ್ರಾಣಾಂ ಯಥೋಚಿತಮರಿಂದಮ ॥3॥
ಅರಿಂದಮನೇ, ನೀನು ಮತ್ತು ನಿನ್ನ ಮಂತ್ರಿಗಳು ಜೀವಿಸುವುದಕ್ಕೆ ಭೂಮಿಯ ಅರ್ಧಭಾಗವು ಸಾಕು. ಪಾಂಡುಪುತ್ರರಿಗೆ ಅವರಿಗೆ ಯೋಗ್ಯವಾದ ಭಾಗವನ್ನು ಕೊಟ್ಟುಬಿಡು.
ಏತದ್ಧಿ ಕುರವಃ ಸರ್ವೇ ಮನ್ಯಂತೇ ಧರ್ಮಸಂಹಿತಮ್ |
ಯತ್ ತ್ವಂ ಪ್ರಶಾಂತಿಮಿಚ್ಛೇಥಾಃ ಪಾಂಡುಪುತ್ರೈರ್ಮಹಾತ್ಮಭಿಃ ॥4॥
ನೀನು ಮಹಾತ್ಮರಾದ ಪಾಂಡುಪುತ್ರರ ಜೊತೆಯಲ್ಲಿ ಸಂಧಿಯನ್ನು ಬಯಸಿದರೆ ಇದು ಬಹಳ ಧರ್ಮಯುಕ್ತವಾದುದು ಎಂದು ಕುರುಗಳೆಲ್ಲರೂ ಭಾವಿಸುತ್ತಾರೆ.
ಅಂಗೇಮಾಂ ಸಮವೇಕ್ಷಸ್ವ ಪುತ್ರ ಸ್ವಾಮೇವ ವಾಹಿನೀಮ್ |
ಜಾತ ಏವ ತವಾಭಾವಸ್ತ್ವಂ ತು ಮೋಹಾನ್ನ ಬುಧ್ಯಸೇ ॥5॥
ಪ್ರೀತಿಪಾತ್ರನಾದ ಪುತ್ರನೇ, ನಿನ್ನ ಸೈನ್ಯವನ್ನೇ ನೋಡು. ಈಗಾಗಲೇ ವಿನಾಶ ಉಂಟಾಗಿದೆ. ಆದರೆ ನೀನು ಮೋಹದಿಂದ ಅದನ್ನು ತಿಳಿಯುತ್ತಿಲ್ಲ.
ನ ಹ್ಯಹಂ ಯೋದ್ಧುಮಿಚ್ಛಾಮಿ ನೈತದಿಚ್ಛಂತಿ ಬಾಹ್ಲಿಕಃ |
ನ ಚ ಭೀಷ್ಮೋ ನ ಚ ದ್ರೋಣೋ ನಾಶ್ವತ್ಥಾಮಾ ನ ಸಂಜಯಃ ॥6॥
ನ ಸೋಮದತ್ತೋ ನ ಕೃಪೋ ನ ಶಲ್ಯೋ ಯುದ್ಧಮಿಚ್ಛತಿ ॥7॥
ಸತ್ಯವ್ರತಃ ಪುರುಮಿತ್ರೋ ಜಯೋ ಭೂರಿಶ್ರವಾಸ್ತಥಾ ॥8॥
ತತ್ ತ್ವಂ ಪ್ರಶಾಂತಿಮಿಚ್ಛೇಥಾಃ ಪಾಂಡುಪುತ್ರೈರ್ಮಹಾತ್ಮಭಿಃ ॥9॥
ನಾನು ಯುದ್ಧವನ್ನು ಬಯಸುವುದಿಲ್ಲ. ಬಾಹ್ಲಿಕನೂ ಇದನ್ನು ಬಯಸುವುದಿಲ್ಲ. ಭೀಷ್ಮ, ದ್ರೋಣ, ಅಶ್ವತ್ಥಾಮ, ಸಂಜಯ, ಕೃಪ, ಶಲ್ಯ, ಸತ್ಯವ್ರತ, ಪುರುಮಿತ್ರ, ಜಯ, ಭೂರಿಶ್ರವ ಇವರು ಯಾರೂ ಯುದ್ಧವನ್ನು ಬಯಸುವುದಿಲ್ಲ. ಆದ್ದರಿಂದ ನೀನು ಮಹಾತ್ಮರಾದ ಪಾಂಡುಪುತ್ರರ ಜೊತೆಯಲ್ಲಿ ಸಂಧಿಯನ್ನು ಬಯಸುವವನಾಗು.
ಯೇ ತು ಸಂಪ್ರತಿ ತಿಷ್ಠೇಯುಃ ಕುರವಃ ಪೀಡಿತಾ ಪರೈಃ |
ತೇ ಯುದ್ಧಂ ನಾಭಿನಂದಂತಿ ತತ್ ತುಭ್ಯಂ ತಾತ ರೋಚತಾಮ್ ॥
ಈಗಾಗಲೇ ಯಾವ ಕುರುಗಳು ಪಾಂಡವರಿಂದ ಪೀಡಿತರಾಗಿ ನಿನ್ನ ಜೊತೆಯಲ್ಲಿದ್ದಾರೆಯೋ ಅವರೂ ಯುದ್ಧವನ್ನು ಬಯಸುವುದಿಲ್ಲ. ಪ್ರೀತಿಪಾತ್ರನೇ, ನೀನೂ ಹಾಗೆಯೇ ಬಯಸುವವನಾಗು.
ನ ತ್ವಂ ಕರೋಷಿ ಕಾಮೇನ ಕರ್ಣಃ ಕಾರಯಿತಾ ತವ |
ದುಃಶಾಸನಶ್ಚ ಪಾಪಾತ್ಮಾ ಶಕುನಿಶ್ಚಾಪಿ ಸೌಬಲಃ ॥11॥
ನಿನ್ನ ಇಚ್ಛೆಯಿಂದ ಈ ಯುದ್ಧವನ್ನು ನೀನು ಮಾಡುತ್ತಿಲ್ಲ. ಕರ್ಣನೂ, ದುಶ್ಶಾಸನನೂ ಮತ್ತು ಪಾಪಾತ್ಮನಾದ ಸೌಬಲನಾದ ಶಕುನಿಯೂ ನಿನ್ನಿಂದ ಮಾಡಿಸುತ್ತಿದ್ದಾರೆ.
ದುರ್ಯೋಧನಃ
ನಾಹಂ ಭವತಿ ನ ದ್ರೋಣೇ ನಾಶ್ವತ್ಥಾಮ್ನಿ ನ ಸಂಜಯೇ |
ನ ಭೀಷ್ಮೇ ನ ಚ ಕಾಂಭೋಜೇ ನ ಕೃಪೇ ನ ಚ ಬಾಹ್ಲಿಕೇ ॥12॥
ಸತ್ಯವ್ರತೇ ಪುರುಮಿತ್ರೇ ಭೂರಿಶ್ರವಸಿ ವಾ ಪುನಃ |
ಅನ್ಯೇಷು ವಾ ತಾವಕೇಷು ಭಾರಂ ಕೃತ್ವಾ ಸಮಾಹ್ವಯೇ ॥13॥
ದುರ್ಯೋಧನ ನಾನು ನಿನ್ನನ್ನಾಗಲೀ ಅಥವಾ ದ್ರೋಣರನ್ನಾಗಲೀ ಅಥವಾ ಅಶ್ವತ್ಥಾಮರನ್ನಾಗಲೀ, ಸಂಜಯನನ್ನಾಗಲೀ, ಭೀಷ್ಮರನ್ನಾಗಲೀ, ಕಾಂಭೋಜರಾಜನನ್ನಾಗಲೀ, ಕೃಪರನ್ನಾಗಲೀ, ಬಾಹ್ಲಿಕರಾಜನನ್ನಾಗಲೀ, ಸತ್ಯವ್ರತನನ್ನಾಗಲೀ, ಪುರುಮಿತ್ರನನ್ನಾಗಲೀ ಅಥವಾ ಭೂರಿಶ್ರವನನ್ನಾಗಲೀ ಅಥವಾ ನಿನ್ನವರಾದ ಬೇರೆಯವರನ್ನಾಗಲೀ (ಅವರ ಮೇಲೆ ಭಾರವನ್ನು ಹಾಕಿ) ಅವಲಂಬಿಸಿ ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿಲ್ಲ.
ಅಹಂ ಚ ತಾತ ಕರ್ಣಶ್ಚ ರಣಯಜ್ಞಂ ವಿತತ್ಯ ವೈ |
ಯುಧಿಷ್ಠಿರಂ ಪಶುಂ ಕೃತ್ವಾ ದೀಕ್ಷಿತೌ ಭರತರ್ಷಭ ॥14॥
ಎಲೈ ತಂದೆಯೇ, ಭರತಶ್ರೇಷ್ಠನೇ, ನಾನೂ ಮತ್ತು ಕರ್ಣನೂ ರಣಯಜ್ಞವನ್ನು ಹೂಡಿ ಯುಧಿಷ್ಠಿರನನ್ನು ಪಶುವನ್ನಾಗಿ ಮಾಡಿ ದೀಕ್ಷಿತರಾಗಿದ್ದೇವೆ.
ರಥೋ ವೇದಿಃ ಸ್ರುವಃ ಖಡ್ಗೋ ಗದಾ ಸ್ರುಕ್ ಕವಚೋಽಜಿನಮ್ |
ಚಾತುರ್ಹೋತ್ರಂ ತು ಧುರ್ಯಾ ಮೇ ಶರಾ ದರ್ಭಾ ಹವಿರ್ಯಶಃ ॥
ಆತ್ಮಯಜ್ಞೇನ ನೃಪತೇ ಇಷ್ಟ್ವಾ ವೈವಸ್ವತಂ ರಣೇ |
ವಿಜಿತ್ಯ ಚ ಸಮೇಷ್ಯಾವೋ ಹತಾಮಿತ್ರೌ ಶ್ರಿಯಾ ವೃತೌ ॥16॥
ರಥವೇ ವೇದಿ, ಖಡ್ಗವೇ ಸ್ರುವ, ಗದೆಯೇ ಸ್ರುಕ್, ಕವಚವೇ ಕೃಷ್ಣಾಜಿನ, ನಾಲ್ಕು ಕುದುರೆಗಳೇ ನಾಲ್ವರು ಋತ್ವಿಕ್‌ಗಳು, ಬಾಣಗಳೇ ದರ್ಭೆಗಳು, ಯಶಸ್ಸೇ ಹವಿಸ್ಸು. ಎಲೈ ರಾಜನೇ, ಆತ್ಮಯಜ್ಞದಿಂದ ಯುದ್ಧದಲ್ಲಿ ಯಮನನ್ನು ಉದ್ದೇಶಿಸಿ ಯಾಗವನ್ನು ಮಾಡಿ, ಪಾಂಡವರನ್ನು ಗೆದ್ದು, ಯಾವ ಶತ್ರುಗಳಿಲ್ಲದೆ ಸಂಪತ್ತಿನಿಂದ ಕೂಡಿದವರಾಗಿ ನಾವಿಬ್ಬರೂ ಒಂದುಗೂಡುತ್ತೇವೆ.

ಅಹಂ ಚ ತಾತ ಕರ್ಣಶ್ಚ ಭ್ರಾತಾ ದುಃಶಾಸನಶ್ಚ ಮೇ |
ಏತೇ ವಯಂ ಹನಿಷ್ಯಾಮಃ ಪಾಂಡವಾನ್ ಸಮರೇ ತ್ರಯಃ ॥17॥
ಎಲೈ ತಂದೆಯೇ, ನಾನು, ಕರ್ಣ ಮತ್ತು ನನ್ನ ತಮ್ಮನಾದ ದುಶ್ಶಾಸನ - ಈ ಮೂವರು ಯುದ್ಧದಲ್ಲಿ ಪಾಂಡವರನ್ನು ಕೊಲ್ಲುವೆವು.
ಅಹಂ ಹಿ ಪಾಂಡವಾನ್ ಹತ್ವಾ ಪ್ರಶಸ್ತಾಂ ಪೃಥಿವೀಮಿಮಾಮ್ |
ಮಾಂ ಹತ್ವಾ ಪಾಂಡುಪುತ್ರಾ ವಾ ಭೋಕ್ತಾರಃ ಪೃಥಿವೀಮಿಮಾಮ್ ॥
ನಾನು ಪಾಂಡವರನ್ನು ಕೊಂದು ಈ ಪ್ರಶಸ್ತವಾದ ಭೂಮಿಯನ್ನು ಆಳುವೆನು ಅಥವಾ ಪಾಂಡುಪುತ್ರರು ನನ್ನನ್ನು ಕೊಂದು ಈ ಭೂಮಿಯನ್ನು ಭೋಗಿಸುವರು.
ತ್ಯಕ್ತಂ ಮೇ ಜೀವಿತಂ ರಾಜ್ಯಂ ಧನಂ ಸರ್ವಂ ಚ ಪಾರ್ಥಿವ |
ನ ಜಾತು ಪಾಂಡವೈಃ ಸಾರ್ಧಂ ಭುಂಜೀಯಾಂ ಪೃಥಿವೀಮಿಮಾಮ್ ॥
ಎಲೈ ರಾಜನೇ, ನಾನು ನನ್ನ ಜೀವಿತವನ್ನೂ, ರಾಜ್ಯವನ್ನೂ, ಧನವನ್ನೂ, ಎಲ್ಲವನ್ನೂ ಬಿಟ್ಟಿದ್ದೇನೆ. ಆದರೆ ಎಂದೂ ಪಾಂಡವರ ಜೊತೆಯಲ್ಲಿ ಹಂಚಿಕೊಂಡು ಈ ಭೂಮಿಯನ್ನು ಭೋಗಿಸುವುದಿಲ್ಲ.
ಯಾವದ್ಧಿ ಸೂಚ್ಯಾಸ್ತೀಕ್ಷ್ಣಾಯಾ ವಿಧ್ಯೇದಗ್ರೇಣ ಭಾರತ |
ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಂಡವಾನ್ ಪ್ರತಿ ॥20॥
ಎಲೈ ಭಾರತನೇ, ಸೂಜಿಯ ತುದಿಯಿಂದ ಚುಚ್ಚುವಷ್ಟು ಭೂಮಿಯನ್ನು ಕೂಡ ಪಾಂಡವರಿಗೆ ನಾವು ಕೊಡತಕ್ಕದ್ದಲ್ಲ.
ಧೃತರಾಷ್ಟ್ರಃ
ಸರ್ವಾನ್ ವಸ್ತಾತ ಶೋಚಾಮಿ ತ್ಯಕ್ತೋ ದುರ್ಯೋಧನೋ ಮಯಾ |
ಯೇ ಮಂದಮನುಯಾಸ್ಯಧ್ವಂ ಯಾಂತಂ ವೈವಸ್ವತಕ್ಷಯಮ್ ॥21॥
ಧೃತರಾಷ್ಟ್ರ, ಪ್ರೀತಿಪಾತ್ರರೇ, ನಾನು ದುರ್ಯೋಧನನನ್ನು ಬಿಟ್ಟಿದ್ದೇನೆ. ಯಮಲೋಕಕ್ಕೆ ಹೋಗುವ ಅವನನ್ನು ಅನುಸರಿಸುವ ಮಂದರಾದ ನಿಮ್ಮೆಲ್ಲರನ್ನು ಕುರಿತು ಶೋಕಪಡುತ್ತಿದ್ದೇನೆ.
ಮೃಗಾಣಾಮಿವ ಯೂಥೇಷು ವ್ಯಾಘ್ರಾಃ ಪ್ರಹರತಾಂ ವರಾಃ |
ವರಾನ್ ವರಾನ್ ಹನಿಷ್ಯಂತಿ ಸಮೇತಾ ಯುಧಿ ಪಾಂಡವಾಃ ॥22॥
ಜಿಂಕೆಗಳ ಸಮೂಹದಲ್ಲಿ ವ್ಯಾಘ್ರಗಳು ಸಂಚರಿಸಿದಂತೆ ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಪಾಂಡವರು ಒಟ್ಟುಗೂಡಿ, ಯುದ್ಧದಲ್ಲಿ ಶ್ರೇಷ್ಠರಾದ ಕೌರವರನ್ನು ಆರಿಸಿ ಆರಿಸಿ ಕೊಲ್ಲುವರು.
ಪ್ರತೀಪಮೇತಿ ಮೇ ಸೇನಾ ಯುಯುಧಾನೇನ ಭಾರತೀ |
ವ್ಯಸ್ತಾ ಸೀಮಂತಿನೀ ಗ್ರಸ್ತಾ ಪ್ರಮೃಷ್ಟಾ ದೀರ್ಘಬಾಹುನಾ ॥23॥
ದೀರ್ಘಬಾಹುವಾದ ಪುರುಷನಿಂದ ಒಬ್ಬ ಮುತ್ತೈದೆಯನ್ನು ತಲೆಕೂದಲುಗಳಲ್ಲಿ ಹಿಡಿದು ನಾಶಮಾಡಿದಂತೆ ನನ್ನ ಭಾರತಸೈನ್ಯವು ಸಾತ್ಯಕಿಯಿಂದ ಪ್ರತೀಕಾರಕ್ಕೆ ಒಳಗಾಗುತ್ತದೆ.
ಸಂಪೂರ್ಣಂ ಪೂರಯನ್ ಭೂಯೋ ಬಲಂ ಪಾರ್ಥಸ್ಯ ಮಾಧವಃ |
ಶೈನೇಯಃ ಸಮರೇ ಸ್ಥಾತಾ ಬೀಜವತ್ ಪ್ರವಪನ್ ಶರಾನ್ ॥24॥
ಪೂರ್ಣವಾದ ಬಲವುಳ್ಳ ಅರ್ಜುನನಿಗೆ ಮಧುವಂಶದಲ್ಲಿ ಹುಟ್ಟಿದ ಸಾತ್ಯಕಿಯು ಇನ್ನೂ ಬಲವನ್ನು ತುಂಬುತ್ತಾ, ಯುದ್ಧದಲ್ಲಿ ಬೀಜಗಳನ್ನು ಬಿತ್ತಿದಂತೆ ಬಾಣಗಳ ಮಳೆಯನ್ನು ಸುರಿಸುತ್ತಾ ನಿಲ್ಲುವವನಾಗುತ್ತಾನೆ.
ಸೇನಾಮುಖೇ ಪ್ರಬುದ್ಧಾನಾಂ ಭೀಮಸೇನೋ ಭವಿಷ್ಯತಿ |
ತಂ ಸರ್ವೇ ಸಂಶ್ರಯಿಷ್ಯಂತಿ ಪ್ರಾಕಾರಮಕುತೋಭಯಾಃ ॥25॥
ಸೇನೆಯ ಅಗ್ರಭಾಗದಲ್ಲಿ ಜಾಗರೂಕರಾಗಿರುವವರಿಗೆ ಭೀಮಸೇನನು ಆಶ್ರಯನಾಗುತ್ತಾನೆ. ಕೋಟೆಯ ಗೋಡೆಯನ್ನು ಆಶ್ರಯಿಸಿದಂತೆ ಎಲ್ಲರೂ ಅವನನ್ನು ನಿರ್ಭಯರಾಗಿ ಆಶ್ರಯಿಸುವರು.
ಯದಾ ದ್ರಕ್ಷ್ಯಸಿ ಭೀಮೇನ ಕುಂಜರಾನ್ ವಿನಿಪಾತಿತಾನ್ |
ವಿಶೀರ್ಣದಂತಾನ್ ವಿಕೃಷ್ಟಾನ್ ಭಿನ್ನಕುಂಭಾನ್ ಸಶೋಣಿತಾನ್ ॥
ತಾನಭಿಪ್ರೇಕ್ಷ್ಯ ಸಂಗ್ರಾಮೇ ವಿಶೀರ್ಣಾನಿವ ಪರ್ವತಾನ್ |
ಭೀತೋ ಭೀಮಸ್ಯ ಸಂಸ್ಪರ್ಶಾತ್ ಸ್ಮರ್ತಾಸಿ ವಚನಸ್ಯ ಮೇ ॥27॥
ನೀನು ಯಾವಾಗ ಭೀಮಸೇನನಿಂದ ಹೊಡೆಯಲ್ಪಟ್ಟು, ದಂತಗಳನ್ನು ಮುರಿದುಕೊಂಡು ಅಥವಾ ದಂತಗಳು ಹೊರಗೆ ಎಳೆಯಲ್ಪಟ್ಟು, ಕುಂಭಸ್ಥಳವು ಒಡೆದು ರಕ್ತದಿಂದ ಕೂಡಿದ ಗಜಗಳು ಬಿದ್ದಿರುವುದನ್ನು ನೋಡುವೆಯೋ ಆಗ ಬಿರಿದ ಪರ್ವತಗಳಂತೆ ಯುದ್ಧದಲ್ಲಿ ಭೂಮಿಯ ಮೇಲೆ ಬಿದ್ದಿರುವ ಅವುಗಳನ್ನು ನೋಡಿ ಭೀಮನ ಸ್ಪರ್ಶಕ್ಕೆ ಹೆದರಿ ನನ್ನ ಮಾತುಗಳನ್ನು ಸ್ಮರಿಸುವವನಾಗುವಿ.
ನಿರ್ದಗ್ಧಂ ಭೀಮಸೇನೇನ ಸೈನ್ಯಂ ಹತರಥದ್ವಿಪಮ್ |
ಗತಿಮಗ್ನೇರಿವ ಪ್ರೇಕ್ಷ್ಯ ಸ್ಮರ್ತಾಸಿ ವಚನಂ ಮಮ ॥28॥
ಅಗ್ನಿಯ ಗಮನದಂತೆ ಭೀಮಸೇನನಿಂದ ಹತವಾದ ರಥಾಶ್ವಗಜಗಳುಳ್ಳ ಸೈನ್ಯವನ್ನು ನೋಡಿ ನನ್ನ ಮಾತನ್ನು ಸ್ಮರಿಸುವಿ.
ಮಹನ್ನೋ ಭಯಮಾಗಾಮಿ ನ ಚೇಚ್ಛಾಮೀಹ ಪಾಂಡವೈಃ |
ಗದಯಾ ಭೀಮಸೇನೇನ ಹತಾನ್ ಶಮಮುಪೈಷ್ಯಥ ॥29॥
ನಮಗೆ ದೊಡ್ಡ ಭಯವು ಪ್ರಾಪ್ತವಾಗಲಿದೆ. ನಾನು ಪಾಂಡವರ ಜೊತೆಯಲ್ಲಿ ಯುದ್ಧವನ್ನಾಗಲೀ ಅಥವಾ ಭೀಮಸೇನನಿಂದ ಗದಾಪ್ರಹಾರದಿಂದ ಕೌರವರು ಹತರಾಗುವುದನ್ನಾಗಲೀ ಬಯಸುವುದಿಲ್ಲ. ನೀವು ಸಂಧಿಯನ್ನು ಮಾಡಿಕೊಳ್ಳುವವರಾಗಿ.

ಮಹಾವನಮಿವ ಚ್ಛಿನ್ನಂ ಯದಾ ದ್ರಕ್ಷ್ಯಸಿ ಪಾತಿತಮ್ |
ಬಲಂ ಕುರೂಣಾಂ ಭೀಮೇನ ತದಾ ಸ್ಮರ್ತಾಸಿ ಮೇ ವಚಃ ||30||
ಕತ್ತರಿಸಲ್ಪಟ್ಟ ಕಾಡಿನಂತೆ ನೀನು ಕುರುಗಳ ಸೈನ್ಯವು ಭೀಮಸೇನನಿಂದ ಹೊಡೆದು ಉರುಳಿಸಲ್ಪಟ್ಟಿದ್ದನ್ನು ಯಾವಾಗ ನೋಡುವಿಯೋ ಆಗ ನನ್ನ ಮಾತನ್ನು ಸ್ಮರಿಸುವಿ.
ವೈಶಂಪಾಯನಃ
ಏತಾವದುಕತ್ವ ರಾಜಾ ತು ಸರ್ವಾಂಸ್ತಾನ್ ಪೃಥಿವೀಪತೀನ್ |
ಅನುಭಾಷ್ಯ ಮಹಾರಾಜ ಪುನಃ ಪಪ್ರಚ್ಛ ಸಂಜಯಮ್ ||31||
ವೈಶಂಪಾಯನ ರಾಜನಾದ ಧೃತರಾಷ್ಟ್ರನು ಎಲ್ಲಾ ರಾಜರನ್ನು ಕುರಿತು ಇಷ್ಟು ಮಾತನ್ನು ಹೇಳಿ ಎಲೈ ಮಹಾರಾಜನೇ, ಪುನಃ ಅವರೊಡನೆ ಮಾತನಾಡಿ ಸಂಜಯನನ್ನು ಕುರಿತು ಪುನಃ ಪ್ರಶ್ನೆಯನ್ನು ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಷ್ಟಿತಮೋಽಧ್ಯಾಯಃ ||
|| ವ್ಯಾಸಾಭಿಗಮನಪರ್ವಣಿ ತ್ರಯೋದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂದನೆಯ ಅಧ್ಯಾಯ
ಸಂಧಿಗಾಗಿ ಹೋಗಿದ್ದ ಸಂಜಯನಿಂದ, ಧೃತರಾಷ್ಟ್ರನನ್ನು ಕುರಿತು
ಉಪಪ್ಲಾವ್ಯದಲ್ಲಿ ನಡೆದ ಘಟನೆಗಳ ವರ್ಣನೆ.
ಧೃತರಾಷ್ಟ್ರಃ
ಬ್ರೂಹಿ ಸಂಜಯ ಯಚ್ಛೇಷಂ ವಾಸುದೇವಾದನಂತರಮ್ |
ಯದರ್ಜುನ ಉವಾಚ ತ್ವಾಂ ಪರಂ ಕೌತೂಹಲಂ ಹಿ ಮೇ ||1||
ಧೃತರಾಷ್ಟ್ರ ಸಂಜಯನೇ, ವಾಸುದೇವನು ಮಾತನಾಡಿದ ಅನಂತರದಲ್ಲಿ ಏನು ನಡೆಯಿತು? ಅರ್ಜುನನು ನಿನ್ನನ್ನು ಕುರಿತು ಏನನ್ನು ಮಾತನಾಡಿದನು? ಹೇಳು. ಈ ವಿಷಯದಲ್ಲಿ ನನಗೆ ಬಹಳ ಕುತೂಹಲವಿದೆ.
ಯದಬ್ರೂತಾಂ ಮಹಾತ್ಮಾನೌ ವಾಸುದೇವಧನಂಜಯೌ |
ತನ್ಮೇ ಬ್ರೂಹಿ ಮಹಾಪ್ರಾಜ್ಞ ಶುಶ್ರೂಷೇ ವಚನಂ ತವ ||2||
ಮಹಾಪ್ರಾಜ್ಞನೇ, ಮಹಾತ್ಮರಾದ ಕೃಷ್ಣಾರ್ಜುನರು ಏನನ್ನು ಹೇಳಿದರು? ನಿನ್ನ ಮಾತನ್ನು ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳು.
ಸಂಜಯಃ
ಶೃಣು ರಾಜನ್ ಯಥಾ ದೃಷ್ಟೌ ಮಯಾ ಕೃಷ್ಣಧನಂಜಯೌ |
ಊಚತುಶ್ಚಾಪಿ ಯದ್ ವೀರೌ ತತ್ ತೇ ವಕ್ಷ್ಯಾಮಿ ಭಾರತ ||3||
ಸಂಜಯ ರಾಜನೇ, ನಾನು ಕೃಷ್ಣಾರ್ಜುನರನ್ನು ಹೇಗೆ ನೋಡಿದೆ ಮತ್ತು ವೀರರಾದ ಅವರು ಏನನ್ನು ಹೇಳಿದರು ಎಂದು ನಿನಗೆ ಹೇಳುವೆನು. ಎಲೈ ಭಾರತನೇ, ಅದನ್ನು ಕೇಳುವವನಾಗು.
ಪಾದಾಂಗುಲೀರಭಿಪ್ರೇಕ್ಷನ್ ಪ್ರಯತೋಽಹಂ ಕೃತಾಂಜಲಿಃ |
ಶುದ್ಧಾಂತಂ ಪ್ರಾವಿಶಂ ರಾಜನ್ನಾಖ್ಯಾತುಂ ನರದೇವಯೋಃ ||4||
ಎಲೈ ರಾಜನೇ, ನಾನು ಕೈಗಳನ್ನು ಮುಗಿದು, ಮನಸ್ಸಿನ ಅವಧಾನದಿಂದ ಕೂಡಿ ಕೃಷ್ಣನ ಪಾದಾಂಗುಲಿಗಳನ್ನು ನೋಡುತ್ತಾ ಕೃಷ್ಣಾರ್ಜುನರು ಇದ್ದ ಅಂತಃಪುರವನ್ನು ಪ್ರವೇಶಿಸಿದೆನು.
ನೈವಾಭಿಮನ್ಯುರ್ನ ಯಮೌ ತಂ ದೇಶಮಭಿಯಾತಿ ವೈ |
ಯತ್ರ ಕೃಷ್ಣೌ ಚ ಕೃಷ್ಣಾ ಚ ಸತ್ಯಭಾಮಾ ಚ ಭಾಮಿನೀ ||5||
ಕೃಷ್ಣಾರ್ಜುನರು ದ್ರೌಪದಿಯು ಮತ್ತು ಭಾಮಿನಿಯಾದ ಸತ್ಯಭಾಮೆಯು ಇರುವ ಆ ಸ್ಥಳಕ್ಕೆ ಅಭಿಮನ್ಯುವಾಗಲೀ ಅಥವಾ ನಕುಲ-ಸಹದೇವರಾಗಲೀ ಬರುತ್ತಿರಲಿಲ್ಲ.
ಉಭೌ ಮಧ್ವಾಸವಕ್ಷೀಬಾವುಭೌ ಚಂದನರೂಷಿತೌ |
ಸ್ರಗ್ವಿಣೌ ವರವಸ್ತ್ರೌ ತೌ ದಿವ್ಯಾಭರಣಭೂಷಿತೌ ||6||
ಕೃಷ್ಣಾರ್ಜುನರಿಬ್ಬರೂ ಮಧುಪಾನ ಮಾಡಿದ್ದರು. ಗಂಧಲೇಪನವನ್ನು ಹೊಂದಿ, ಹೂವಿನ ಮಾಲೆಗಳನ್ನೂ ಶ್ರೇಷ್ಠವಾದ ವಸ್ತ್ರಗಳನ್ನೂ ಧರಿಸಿ, ದಿವ್ಯಾಭರಣ- ಭೂಷಿತರಾಗಿದ್ದರು.
ನೈಕರತ್ನವಿಚಿತ್ರಂ ತು ಕಾಂಚನಂ ಮಹದಾಸನಮ್ |
ವಿವಿಧಾಸ್ತರಣಾಸ್ತೀರ್ಣಂ ಯತ್ರಾಸಾತಾಮರಿಂದವೌ ||7||
ಅರಿಂದಮರಾದ ಅವರಿಬ್ಬರೂ ಬಹಳ ರತ್ನಗಳಿಂದ ವಿಚಿತ್ರವಾಗಿದ್ದ ದೊಡ್ಡ ಸುವರ್ಣಮಯವಾದ ಆಸನದ ಮೇಲೆ ಅನೇಕ ಹಾಸುಗಳನ್ನು ಹಾಸಿ ಅದರ ಮೇಲೆ ಇದ್ದರು.
ಅರ್ಜುನೋತ್ಸಂಗಗೌ ಪಾದೌ ಕೇಶವಸ್ಯೋಪಲಕ್ಷಯೇ |
ಅರ್ಜುನಸ್ಯ ಚ ಕೃಷ್ಣಾಯಾಂ ಸತ್ಯಾಯಾಂ ಚ ಮಹಾತ್ಮನಃ ||8||
ಕೃಷ್ಣನ ಒಂದು ಪಾದವು ಅರ್ಜುನನ ತೊಡೆಯ ಮೇಲೆಯೂ, ಮಹಾತ್ಮನಾದ ಅವನ ಇನ್ನೊಂದು ಪಾದವು ಸತ್ಯಭಾಮೆಯ

ತೊಡೆಯ ಮೇಲೆಯೂ ಮತ್ತು ಅರ್ಜುನನ ಪಾದಗಳು ದ್ರೌಪದಿಯ ತೊಡೆಯ ಮೇಲೆಯೂ ಇದ್ದುದನ್ನು ನಾನು ಗಮನಿಸಿದೆನು.
ಕಾಂಚನಂ ಪಾದಪೀಠಂ ತು ಪಾರ್ಥೋ ಮೇ ಪ್ರಾದಿಶತ್ ತದಾ ॥9॥
ತದಹಂ ಪಾಣಿನಾ ಸ್ಪೃಷ್ಟ್ವಾ ತತೋ ಭೂಮಾವುಪಾವಿಶಮ್ ॥10॥
ಅರ್ಜುನನು ನನಗೆ ಸುವರ್ಣಮಯವಾದ ಪಾದಪೀಠವನ್ನು ತೋರಿಸಿದನು. ನಾನು ಅದನ್ನು ಹಸ್ತದಿಂದ ಸ್ಪರ್ಶಮಾಡಿ ನೆಲದ ಮೇಲೆ ಕುಳಿತುಕೊಂಡೆನು.
ಊರ್ಧ್ವರೇಖಾತಳೌ ಪಾದೌ ಪಾರ್ಥಸ್ಯ ಶುಭಲಕ್ಷಣೌ |
ಪಾದಪೀಠಾದಪಹೃತೌ ತತ್ರಾಪಶ್ಯಮಹಂ ಶುಭೌ ॥11॥
ಆಗ ನಾನು ತನ್ನ ಪಾದಪೀಠದಿಂದ ತೆಗೆದ ಅರ್ಜುನನ ಊರ್ಧ್ವರೇಖೆಗಳಿಂದಲೂ ಮತ್ತು ಶುಭಲಕ್ಷಣಗಳಿಂದಲೂ ಕೂಡಿದ ಎರಡು ಪಾದತಳಗಳನ್ನು ನೋಡಿದೆನು.
ಶ್ಯಾಮೌ ಬೃಹಂತೌ ತರುಣೌ ಸಾಲಸ್ಕಂಧಾವಿವೋದ್ಗತೌ |
ಏಕಾಸನಗತೌ ದೃಷ್ಟ್ವಾ ಭಯಂ ಮಾಂ ಮಹದಾವಿಶತ್ ॥12॥
ಶ್ಯಾಮವರ್ಣದವರೂ, ತರುಣರೂ, ದೊಡ್ಡ ಶರೀರವುಳ್ಳವರೂ, ಸಾಲಸ್ಕಂಧದಂತೆ ಎತ್ತರವಾದವರೂ ಮತ್ತು ಒಂದೇ ಆಸನದಲ್ಲಿ ಇದ್ದವರೂ ಆದ ಅವರಿಬ್ಬರನ್ನೂ ನೋಡಿ ನನಗೆ ಬಹಳ ಭಯವುಂಟಾಯಿತು.
ಇಂದ್ರವಿಷ್ಣುಸಮಾವೇತೌ ಮಂದಾತ್ಮಾ ನಾವಬುಧ್ಯತೇ |
ಸಂಶ್ರಯಾದ್ ದ್ರೋಣಭೀಷ್ಮಾಭ್ಯಾಂ ಕರ್ಣಸ್ಯ ಚ ವಿಕತ್ಥನಾತ್ ॥13॥
ಅವರಿಬ್ಬರೂ ಇಂದ್ರ ಮತ್ತು ವಿಷ್ಣುವಿಗೆ ಸಮರಾದವರು. ಮಂದಾತ್ಮನಾದ ದುರ್ಯೋಧನನು ಭೀಷ್ಮ-ದ್ರೋಣರ ಅವಲಂಬನೆಯ ಬಲದಿಂದ ಮತ್ತು ಕರ್ಣನ ಆತ್ಮಶ್ಲಾಘನೆಯ ಮಾತುಗಳಿಂದ ಕೃಷ್ಣಾರ್ಜುನರನ್ನು ತಿಳಿಯುತ್ತಿಲ್ಲ.
ನಿದೇಶಸ್ಥಾವಿಮೌ ಯಸ್ಯ ಮಾನಸಸ್ತಸ್ಯ ಸೇತ್ಸ್ಯತೇ |
ಸಂಕಲ್ಪೋ ಧರ್ಮರಾಜಸ್ಯ ನಿಶ್ಚಯೋ ಮೇ ತದಾಽಭವತ್ ॥14॥
ಈ ಇಬ್ಬರೂ ಮಹಾತ್ಮರು ಯಾವನ ಆಜ್ಞಾಧಾರಕರಾಗಿದ್ದಾರೆಯೋ ಅಂತಹ ಧರ್ಮರಾಜನ ಮನಸ್ಸಿನ ಸಂಕಲ್ಪವು ಸಿದ್ಧಿಸುತ್ತದೆ ಎಂದು ನನಗೆ ಆಗ ನಿಶ್ಚಯ ಉಂಟಾಯಿತು.
ಸತ್ಕೃತಶ್ಚಾನ್ನಪಾನಾಭ್ಯಾಮಚ್ಛನ್ನೋ ಲಬ್ಧಸತ್ಕ್ರಿಯಃ |
ಅಂಜಲಿಂ ಮೂರ್ಧ್ನಿ ಸಂಧಾಯ ತೌ ಸಂದೇಶಮಚೋದಯಮ್ ॥15॥
ಅನ್ನ-ಪಾನಗಳಿಂದ ಸತ್ಕೃತನಾಗಿ, ಒಳ್ಳೆಯ ವಸ್ತ್ರಗಳನ್ನು ಧರಿಸಿ, ಅವರ ಸನ್ಮಾನವನ್ನು ಸ್ವೀಕರಿಸಿ, ಕೈಗಳನ್ನು ತಲೆಯ ಮೇಲೆ ಜೋಡಿಸಿ ನಿನ್ನ ಸಂದೇಶವನ್ನು ಅವರಿಬ್ಬರಿಗೂ ಹೇಳಿದನು.
ಧನುರ್ಬಾಣೋಚಿತೇನೈಕಪಾಣಿನಾ ಶುಭಲಕ್ಷಣಮ್ |
ಪಾದಮಾನಮಯನ್ ಪಾರ್ಥಃ ಕೇಶವಂ ಸಮಚೋದಯತ್ ॥16॥
ಧನುರ್ಬಾಣಗಳಿಗೆ ಉಚಿತವಾದ ಶುಭಲಕ್ಷಣವುಳ್ಳ ತನ್ನ ಹಸ್ತದಿಂದ ಅರ್ಜುನನು ಕೃಷ್ಣನ ಪಾದವನ್ನು ಕೆಳಗೆ ಇಟ್ಟು ಮಾತನಾಡುವಂತೆ ಕೃಷ್ಣನನ್ನು ಪ್ರೇರಿಸಿದನು.
ಇಂದ್ರಕೇತುರಿವೋತ್ಥಾಯ ಸರ್ವಾಭರಣಭೂಷಿತಃ |
ಇಂದ್ರವೀರ್ಯೋಪಮಃ ಕೃಷ್ಣಃ ಸಂವಿಷ್ಟೋ ಮಾಽಭ್ಯಭಾಷತ ॥17॥
ಸರ್ವಾಭರಣಭೂಷಿತನೂ, ಇಂದ್ರನ ಪರಾಕ್ರಮಕ್ಕೆ ಸಮವಾದ ಪರಾಕ್ರಮ ಉಳ್ಳವನೂ ಆದ ಕೃಷ್ಣನು ಇಂದ್ರಧ್ವಜದಂತೆ ಎದ್ದು ಕುಳಿತು ನನ್ನನ್ನು ಕುರಿತು ಮಾತನಾಡಿದನು.
ವಾಚಂ ಸ ವದತಾಂ ಶ್ರೇಷ್ಠೋ ಹ್ಲಾದಿನೀಂ ವಚನಕ್ಷಮಾಮ್ |
ತ್ರಾಸನೀಂ ಧಾರ್ತರಾಷ್ಟ್ರಾಣಾಂ ಮೃದುಪೂರ್ವಾಂ ಸುದಾರುಣಾಮ್ ॥
ಮಾತನಾಡುವವರಲ್ಲಿ ಶ್ರೇಷ್ಠನಾದ ಅವನು ಮಾತನಾಡಲು ಯೋಗ್ಯವಾದ, ಸಂತೋಷವನ್ನು ಉಂಟುಮಾಡುವ, ದುರ್ಯೋಧನಾದಿಗಳಿಗೆ ಭಯವನ್ನು ಉಂಟುಮಾಡುವ, ಮಾತುಗಳನ್ನು ಮೊದಲು ಮೃದುವಾಗಿ ಪ್ರಾರಂಭಿಸಿ ಕೊನೆಯಲ್ಲಿ ದಾರುಣವಾಗಿಯೇ ಹೇಳಿದನು.
ವಾಚಂ ತಾಂ ವಚನಾರ್ಹಸ್ಯ ಶಿಕ್ಷಾಕ್ಷರಸಮನ್ವಿತಾಮ್ |
ಅಶ್ರೌಷಮಹಮಿಷ್ಟಾರ್ಥಾಂ ಪಶ್ಚಾದ್ ಹೃದಯಶೋಷಿಣೀಮ್ ॥19॥
ಒಳ್ಳೆಯ ಮಾತುಗಳನ್ನಾಡುವ, ಶಿಕ್ಷಾಶಾಸ್ತ್ರದ ಲಕ್ಷಣಗಳಿಂದ ಕೂಡಿದ, ಇಷ್ಟಾರ್ಥವನ್ನು ಕೊಡುವ, ಕೊನೆಯಲ್ಲಿ ಮನಸ್ಸಿಗೆ ದುಃಖವನ್ನುಂಟುಮಾಡುವ ಅವನ ಮಾತುಗಳನ್ನು ಕೇಳಿದೆನು.
ವಾಸುದೇವಃ
ಸಂಜಯೇದಂ ವಚೋ ಬ್ರೂಯಾ ಧೃತರಾಷ್ಟ್ರಂ ಮನೀಷಿಣಾಮ್ |
ಶೃಣ್ವತಃ ಕುರುಮುಖ್ಯಸ್ಯ ದ್ರೋಣಸ್ಯಾಪಿ ಚ ಶೃಣ್ವತಃ ॥20॥
ವಾಸುದೇವ ಸಂಜಯನೇ, ಕುರುಮುಖ್ಯನಾದ ಭೀಷ್ಮನೂ ಮತ್ತು ದ್ರೋಣನೂ ಕೇಳುವಂತೆ ಈ ನನ್ನ ಮಾತನ್ನು ಮೇಧಾವಿಯಾದ ಧೃತರಾಷ್ಟ್ರನಿಗೆ ಹೇಳು.
ಯಜಧ್ವಂ ವಿಪುಲೈರ್ಯಜ್ಞೈರ್ವಿಪ್ರೇಭ್ಯೋ ದತ್ತ ದಕ್ಷಿಣಾಃ |
ಪುತ್ರೈರ್ದಾರೈಶ್ಚ ಮೋದಧ್ವಂ ಮಹದ್ ವೋ ಭಯಮಾಗತಮ್ ॥21॥
ವಿಪುಲವಾದ ಯಜ್ಞಗಳನ್ನು ಮಾಡಿ, ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಡಿ. ಹೆಂಡತಿ ಮಕ್ಕಳ ಜೊತೆಯಲ್ಲಿ ಸಂತೋಷವನ್ನು ಪಡಿ.

ನಿಮಗೆ ದೊಡ್ಡ ಭಯವು ಉಂಟಾಗಿದೆ.
ಅರ್ಥಾನ್ ತ್ಯಜತ ಪಾತ್ರೇಭ್ಯಃ ಸುತಾನ್ ಪ್ರಾಪ್ನುತ ಕಾಮಜಾನ್ |
ಪ್ರಿಯಂ ಪ್ರಿಯೇಭ್ಯಶ್ಚರತ ರಾಜಾ ಹಿ ತ್ವರತೇ ಜಯೇ ॥22॥
ಪಾತ್ರರಿಗೆ ದಾನವನ್ನು ಮಾಡಿ, ಇಷ್ಟವಾದಂತಹ ಮಕ್ಕಳನ್ನು ಪಡೆಯಿರಿ, ನೀವು ಪ್ರಿಯರಾದವರಿಗೆ ಮಾಡಬೇಕಾದ ಪ್ರಿಯವನ್ನು ಮಾಡಿ. ಧರ್ಮರಾಜನು ಯುದ್ಧದಲ್ಲಿ ಜಯವನ್ನು ಸಂಪಾದಿಸುವ ತ್ವರೆಯಲ್ಲಿದ್ದಾನೆ.
ಋಣಮೇತತ್ ಪ್ರವೃದ್ಧಂ ಮೇ ಹೃದಯಾನ್ನಾಪಸರ್ಪತಿ |
ಯದ್ ಗೋವಿಂದೇತಿ ಚುಕ್ರೋಶ ಕೃಷ್ಣಾ ಮಾಂ ದೂರವಾಸಿನಮ್ ॥
ದೂರದಲ್ಲಿದ್ದ ನನ್ನನ್ನು ದ್ರೌಪದಿಯು ಗೋವಿಂದ ಎಂದು ಕರೆದ ಅವಳ ಋಣವು ಬಹಳವಾಗಿ ಬೆಳೆದು ನನ್ನ ಮನಸ್ಸನ್ನು ಬಿಟ್ಟುಹೋಗುವುದಿಲ್ಲ.
ತೇಜೋಮಯಂ ದುರಾಧರ್ಷಂ ಗಾಂಡೀವಂ ಯಸ್ಯ ಕಾರ್ಮುಕಮ್ |
ಮದ್ದ್ವಿತೀಯೇನ ತೇನೇಹ ವೈರಂ ವಃ ಸವ್ಯಸಾಚಿನಾ ॥24॥
ತೇಜೋಮಯವಾದ, ಎಂದೂ ಸೋಲನ್ನು ಕಾಣದ ಗಾಂಡೀವಧನುಸ್ಸನ್ನು ಹೊಂದಿದ ಅರ್ಜುನನು ನನ್ನ ಸಹಾಯವನ್ನು ಹೊಂದಿದವನಾಗಿದ್ದಾನೆ. ಅಂತಹ ಸವ್ಯಸಾಚಿಯ ಜೊತೆಯಲ್ಲಿ ನಿಮಗೆ ವೈರವು ಉಂಟಾಗಿದೆ.
ಮದ್ದ್ವಿತೀಯಂ ಪುನಃ ಪಾರ್ಥಂ ಕಃ ಪ್ರಾರ್ಥಯಿತುಮಿಚ್ಛತಿ |
ಯೋ ನ ಕಾಲಪರೀತೋ ವಾಪ್ಯಪಿ ಸಾಕ್ಷಾತ್ ಪುರಂದರಃ ॥25॥
ನನ್ನಿಂದ ಸಹಿತನಾದ ಅರ್ಜುನನನ್ನು ಯುದ್ಧದಲ್ಲಿ ಮೃತ್ಯುಗ್ರಸ್ತನಾದ ಒಬ್ಬನನ್ನು ಬಿಟ್ಟು ಸಾಕ್ಷಾತ್ ಪುರಂದರನೇ ಆದರೂ ಸಹ ಯಾವನು ಆಹ್ವಾನ ಮಾಡಲು ಬಯಸುತ್ತಾನೆ?
ಬಾಹುಭ್ಯಾಮುದ್ವಹೇದ್ ಭೂಮಿಂ ದಹೇತ್ ಕ್ರುದ್ಧ ಇಮಾಃ ಪ್ರಜಾಃ |
ಪಾತಯೇದ್ ತ್ರಿದಿವಾದ್ ದೇವಾನ್ ಯೋಽರ್ಜುನಂ ಸಮರೇ ಜಯೇತ್॥
ಯಾವನು ಅರ್ಜುನನನ್ನು ಯುದ್ಧದಲ್ಲಿ ಜಯಿಸುವನೋ ಅವನು ತನ್ನ ಬಾಹುಗಳಿಂದ ಭೂಮಿಯನ್ನು ಮೇಲಕ್ಕೆ ಎತ್ತಿಯಾನು! ಕೋಪದಿಂದ ಈ ಎಲ್ಲಾ ಪ್ರಜೆಗಳನ್ನೂ ದಹಿಸಿಯಾನು ಮತ್ತು ದೇವತೆಗಳನ್ನು ಸ್ವರ್ಗದಿಂದ ಬೀಳಿಸಿಯಾನು.
ದೇವಾಸುರಮನುಷ್ಯೇಷು ಯಕ್ಷಗಂಧರ್ವಭೋಗಿಷು |
ನ ತಂ ಪಶ್ಯಾಮ್ಯಹಂ ಯುದ್ಧೇ ಪಾಂಡವಂ ಯೋಽಭ್ಯಯಾದ್ ರಣೇ॥
ಯುದ್ಧದಲ್ಲಿ ಎದುರಿಗೆ ಹೋಗಿ ಅರ್ಜುನನ ಜೊತೆಯಲ್ಲಿ ಹೋರಾಡುವ ಒಬ್ಬ ವ್ಯಕ್ತಿಯನ್ನು ದೇವಾಸುರಮನುಷ್ಯರಲ್ಲಾಗಲೀ, ಯಕ್ಷಗಂಧರ್ವಸರ್ಪಗಳಲ್ಲಾಗಲೀ ನಾನು ಕಾಣುವುದಿಲ್ಲ.
ಯತ್ ತದ್ ವಿರಾಟನಗರೇ ಶ್ರೂಯತೇ ಮಹದದ್ಭುತಮ್ |
ಏಕಸ್ಯ ಚ ಬಹೂನಾಂ ಚ ಪರ್ಯಾಪ್ತಂ ತನ್ನಿದರ್ಶನಮ್ ॥28॥
ವಿರಾಟನಗರದಲ್ಲಿ ಒಬ್ಬನಿಗೂ ಮತ್ತು ಅನೇಕರಿಗೂ ಎಂತಹ ಅದ್ಭುತವಾದ ಯುದ್ಧರೂಪವಾದ ಘಟನೆಯು ಸಂಭವಿಸಿತೆಂದು ಕೇಳಿದ್ದೇವೆಯೋ ಅದೊಂದು ದೃಷ್ಟಾಂತವು ಅರ್ಜುನನ ಸಾಮರ್ಥ್ಯವನ್ನು ಹೇಳುವುದಕ್ಕೆ ಸಾಕು.
ಏಕೇನ ಪಾಂಡುಪುತ್ರೇಣ ವಿರಾಟನಗರೇ ಯದಾ |
ಭಗ್ನಾಃ ಪಲಾಯಂತ ದಿಶಃ ಪರ್ಯಾಪ್ತಂ ತನ್ನಿದರ್ಶನಮ್ ॥29॥
ವಿರಾಟನಗರದಲ್ಲಿ ಆಗ ಪಾಂಡುಪುತ್ರನಾದ ಒಬ್ಬನೇ ಅರ್ಜುನನಿಂದ ಭಗ್ನರಾಗಿ ಕೌರವ ಸೈನ್ಯಗಳು ದಿಕ್ಕುದಿಕ್ಕುಗಳಲ್ಲಿ ಓಡಿದವು. ಆ ದೃಷ್ಟಾಂತವು ಸಾಕು.
ಬಲಂ ವೀರ್ಯಂ ಚ ತೇಜಶ್ಚ ಶೀಘ್ರತಾ ಲಘುಹಸ್ತತಾ |
ಅವಿಷಾದಶ್ಚ ಧೈರ್ಯಂ ಚ ಪಾರ್ಥಾನ್ನಾನ್ಯತ್ರ ವಿದ್ಯತೇ ॥30॥
ಬಲ, ವೀರ್ಯ, ತೇಜಸ್ಸು, ವೇಗ, ಹಸ್ತದ ವೇಗ, ವಿಷಾದವಿಲ್ಲದಿರುವಿಕೆ ಮತ್ತು ಧೈರ್ಯ ಈ ಗುಣಗಳು ಅರ್ಜುನನನ್ನು ಬಿಟ್ಟು ಬೇರೆ ಕಡೆ ಇರುವುದಿಲ್ಲ.
ಸಂಜಯಃ
ಇತ್ಯಬ್ರುವೀದ್ ಹೃಷೀಕೇಶಃ ಪಾರ್ಥಮುದ್ಧರ್ಷಯನ್ ಗಿರಾ |
ಗರ್ಜನ್ ಸಮಯವರ್ಷೀವ ಗಗನೇ ಪಾಕಶಾಸನಃ ॥31॥
ಸಂಜಯ ಹೀಗೆ ಅರ್ಜುನನಿಗೆ ತನ್ನ ಮಾತುಗಳಿಂದ ಸಂತೋಷವನ್ನುಂಟು ಮಾಡುತ್ತಾ ಮಳೆಗಾಲದಲ್ಲಿ ಇಂದ್ರನು ಸುರಿಸುವ ಮಳೆಯಂತೆ ಗರ್ಜಿಸುತ್ತಾ ಕೃಷ್ಣನು ಮಾತನಾಡಿದನು.
ವಾಸುದೇವವಚಃ ಶ್ರುತ್ವಾ ಕುಂತೀಪುತ್ರೋ ಧನಂಜಯಃ |
ಉವಾಚ ಕಾಲೇ ದುರ್ಧರ್ಷೋ ವಾಸುದೇವಸ್ಯ ಶೃಣ್ವತಃ ॥32॥
ಕೃಷ್ಣನ ಮಾತುಗಳನ್ನು ಕೇಳಿ ಕುಂತೀಪುತ್ರನೂ, ಎಂದೂ ಸೋಲದವನೂ ಆದ ಅರ್ಜುನನು ಕೃಷ್ಣನು ಕೇಳುವಂತೆ ನನ್ನನ್ನು ಕುರಿತು ಮಾತನಾಡಿದನು.
ಅರ್ಜುನಃ
ಪಿತಾಮಹಂ ಶಾಂತನವಂ ಧೃತರಾಷ್ಟ್ರಂ ಚ ಸಂಜಯ |
ದ್ರೋಣಂ ಕೃಪಂ ಚ ಕರ್ಣಂ ಚ ಮಹಾರಾಜಂ ಚ ಬಾಹ್ಲಿಕಮ್ ॥33॥
ದ್ರೌಣಿಂ ಚ ಸೋಮದತ್ತಂ ಚ ಶಕುನಿಂ ಚಾಪಿ ಸೌಬಲಮ್ |

ದುಃಶಾಸನಂ ಶಲಂ ಚೈವ ಪುರುಮಿತ್ರಂ ವಿವಿಂಶತಿಮ್ ॥34॥
ಅರ್ಜುನ ಎಲೈ ಸಂಜಯನೇ, ಪಿತಾಮಹರಾದ, ಶಂತನುಪುತ್ರರಾದ ಭೀಷ್ಮ, ಧೃತರಾಷ್ಟ್ರ, ದ್ರೋಣ, ಕೃಪ, ಕರ್ಣ, ಮಹಾರಾಜನಾದ ಬಾಹ್ಲಿಕ, ಅಶ್ವತ್ಥಾಮ, ಸೋಮದತ್ತ, ಸೌಬಲನಾದ ಶಕುನಿ, ದುಶ್ಶಾಸನ, ಶಲ, ಪುರುಮಿತ್ರ, ವಿವಿಂಶತಿ;
ವಿಕರ್ಣಂ ಚಿತ್ರಸೇನಂ ಚ ಜಯತ್ಸೇನಂ ಚ ಪಾರ್ಥಿವಮ್ |
ವಿಂದಾನುವಿಂದಾವಾವಂತ್ಯೌ ದುರ್ಮುಖಂ ಚಾಪಿ ಪೌರವಮ್ ॥35॥
ಸೈಂಧವಂ ದುಃಸಹಂ ಚೈವ ಭೂರಿಶ್ರವಸಮೇವ ಚ |
ಭಗದತ್ತಂ ಚ ರಾಜಾನಂ ಜಲಸಂಧಂ ಚ ಪೌರವಮ್ ॥36॥
ವಿಕರ್ಣ, ಚಿತ್ರಸೇನ, ಜಯತ್ಸೇನ ರಾಜ, ಅವಂತಿದೇಶದ ವಿಂದಾನುವಿಂದರು, ಕುರುವಂಶದಲ್ಲಿ ಜನಿಸಿದ ದುರ್ಮುಖ, ಸೈಂಧವ, ದುಃಸಹ, ಭೂರಿಶ್ರವ, ಭಗದತ್ತ ರಾಜ, ಪುರುವಂಶದ ಜಲಸಂಧ;
ಯೇ ಚಾಪ್ಯನ್ಯೇ ಪಾರ್ಥಿವಾಸ್ತತ್ರ ಯೋದ್ಧುಂ
ಸಮಾಗತಾಃ ಕೌರವಾಣಾಂ ಪ್ರಿಯಾರ್ಥಮ್ |
ಮುಮೂರ್ಷವಃ ಪಾಂಡವಾಗ್ನೌ ಪ್ರದೀಪ್ತೇ
ಸಮಾನೀತಾ ಧಾರ್ತರಾಷ್ಟ್ರೇಣ ಸೂತ ॥37॥
ಯಥಾನ್ಯಾಯಂ ಕುಶಲಂ ವಂದನಂ ಚ
ಸಮಾಗತಾ ಮದ್ವಚನೇನ ವಾಚ್ಯಾಃ ॥38॥
ಮತ್ತು ಕೌರವರಿಗೆ ಪ್ರಿಯವನ್ನುಂಟುಮಾಡಲು ಬಂದಿರತಕ್ಕಂತಹ ಮೃತ್ಯುಗ್ರಸ್ತರಾದ, ಪಾಂಡವಾಗ್ನಿಯಲ್ಲಿ ಹೋಮಮಾಡಲ್ಪಡುವ, ಧೃತರಾಷ್ಟ್ರನಿಂದ ಆನೀತರಾದ ಉಳಿದ ರಾಜರು ಯಾರಿದ್ದಾರೆಯೋ ಎಲೈ ಸೂತನೇ, ಆ ಸಮಾಗತರಾದ ರಾಜರೆಲ್ಲರಿಗೂ ನ್ಯಾಯಕ್ಕೆ ಅನುಗುಣವಾಗಿ ನನ್ನ ಮಾತಿನಂತೆ ಕ್ಷೇಮವನ್ನು ಮತ್ತು ನನ್ನ ವಂದನೆಗಳನ್ನು ತಿಳಿಸುವವನಾಗು.
ಇದಂ ಬ್ರೂಯಾಃ ಸಂಜಯ ರಾಜಮಧ್ಯೇ
ಸುಯೋಧನಂ ಪಾಪಕೃತಾಂ ಪ್ರಧಾನಮ್ |
ಅಮರ್ಷಣಂ ದುರ್ಮತಿಂ ರಾಜಪುತ್ರಂ
ಪಾಪಾತ್ಮಾನಂ ಧಾರ್ತರಾಷ್ಟ್ರಂ ಸುಲುಬ್ಧಮ್ ॥39॥
ಸರ್ವಂ ಮಮೈತದ್ ವಚನಂ ಸಮಗ್ರಂ
ಸಹಾಮಾತ್ಯಂ ಸಂಜಯ ಶ್ರಾವಯೇಥಾಃ ॥40॥
ಎಲೈ ಸಂಜಯನೇ, ಪಾಪಿಷ್ಠರಲ್ಲಿ ಪ್ರಧಾನನೂ, ರೋಷಶೀಲನೂ, ದುಷ್ಟಬುದ್ಧಿ ಉಳ್ಳವನೂ, ಬಹಳ ಲೋಭಿಯೂ ಆದ, ರಾಜಕುಮಾರನಾದ ಸುಯೋಧನನನ್ನು ಕುರಿತು ಅವನ ಮಂತ್ರಿಗಳ ಜೊತೆಯಲ್ಲಿ ಅವನಿಗೆ ನಾನು ಹೇಳುವ ಈ ಮಾತುಗಳನ್ನು ರಾಜರ ಮಧ್ಯದಲ್ಲಿ ತಿಳಿಸುವವನಾಗು.
ಸಂಜಯಃ
ಏವಂ ಪರಿಷ್ವಜ್ಯ ಧನಂಜಯೋ ಮಾಂ
ತತೋಽರ್ಥವದ್ ಧರ್ಮವಚ್ಚಾಪಿ ವಾಕ್ಯಮ್ |
ಪ್ರೋವಾಚೇದಂ ವಾಸುದೇವಂ ಸಮೀಕ್ಷ್ಯ
ಪಾರ್ಥೋ ಧೀಮಾನ್ ಲೋಹಿತಾಂತಾಯತಾಕ್ಷಃ ॥41॥
ಸಂಜಯ ಹೀಗೆ ಮೇಧಾವಿಯೂ, ಲೋಹಿತಾಕ್ಷನೂ, ವಿಸ್ತಾರನೇತ್ರನೂ ಆದ ಅರ್ಜುನನು ನನ್ನನ್ನು ಆಲಿಂಗಿಸಿ, ಕೃಷ್ಣನನ್ನು ನೋಡುತ್ತಾ ಧರ್ಮಾರ್ಥಗಳಿಂದ ಕೂಡಿದ ಈ ಮಾತುಗಳನ್ನು ಆಡಿದನು.
ಯಥಾಶ್ರುತಂ ತೇ ವದತೋ ಮಹಾತ್ಮನೋ
ಯದುಪ್ರವೀರಸ್ಯ ವಚಃ ಸಮಾಹಿತಮ್ |
ತಥೈವ ವಾಚ್ಯಂ ಭವತಾಽಪಿ ಮದ್ವಚಃ
ಸಮಾಗತೇಷು ಕ್ಷಿತಿಪೇಷು ಸರ್ವಶಃ ॥42॥
ಸಂಜಯನೇ, ಮಹಾತ್ಮನಾದ, ಕುರುಪ್ರವೀರನಾದ ಕೃಷ್ಣನ ಸಮಾಧಾನಯುಕ್ತವಾದ ಮಾತುಗಳನ್ನು ನೀನು ಹೇಗೆ ಕೇಳಿದೆಯೋ ಅದರಂತೆ ನನ್ನ ಮಾತುಗಳನ್ನೂ ಸಹ ಸಮಾಗತರಾದ ರಾಜರ ಮಧ್ಯದಲ್ಲಿ ನೀನು ಹಾಗೆಯೇ ಹೇಳಬೇಕು.
ಶರಾಗ್ನಿಧೂಮೇ ರಥನೇಮಿನಾದಿತೇ
ಧನುಃಸ್ರುವೇಣಾಸ್ತ್ರಬಲಾಪಹಾರಿಣಾ |
ಯಥಾ ನ ಹೋಮಃ ಕ್ರಿಯತೇ ಮಹಾಮೃಧೇ
ತಥಾ ಸಮೇತ್ಯ ಪ್ರಯತಧ್ವಮಾದೃತಾಃ ॥43॥
ಎಲೈ ಧೃತರಾಷ್ಟ್ರಪುತ್ರರೇ, ಬಾಣಗಳೆಂಬ ಅಗ್ನಿಧೂಮದಿಂದ ಕೂಡಿದ, ರಥಚಕ್ರದ ನಾಗದಿಂದ ಕೂಡಿದ, ಧನುಸ್ಸುಗಳೆಂಬ ಸ್ರುವದಿಂದ ಕೂಡಿದ ಶತ್ರುಬಲವನ್ನು ಅಪಹರಿಸುವ ಅಸ್ತ್ರಗಳಿಂದ ಕೂಡಿದ ದೊಡ್ಡ ಯುದ್ಧದಲ್ಲಿ ಹೋಮವು ಉಂಟಾಗದಂತೆ ನೀವೆಲ್ಲರೂ ಆದರವನ್ನು ವಹಿಸಿ ಪ್ರಯತ್ನವನ್ನು ಮಾಡುವವರಾಗಿ.
ನ ಚೇತ್ ಪ್ರಯಚ್ಛಧ್ವಮಮಿತ್ರಘಾತಿನೋ
ಯುಧಿಷ್ಠಿರಸ್ಯಾಂಶಮಭೀಪ್ಸಿತಂ ಸ್ವಕಮ್ |
ನಯಾಮಿ ವಃ ಸಾಶ್ವಪದಾತಿಕುಂಜರಾನ್

ದಿಶಂ ಪಿತೄಣಾಮಶಿವಾಂ ಶಿತೈಃ ಶರೈಃ ॥44॥
ಶತ್ರುಘಾತಿಯಾದ ಯುಧಿಷ್ಠಿರನಿಗೆ ಅವನಿಗೆ ಸಲ್ಲಬೇಕಾದ ಮತ್ತು ಇಷ್ಟವಾದ ಭಾಗವನ್ನು ನೀವು ಕೊಡದಿದ್ದರೆ ನನ್ನ ಹರಿತವಾದ ಬಾಣಗಳಿಂದ ನಿಮ್ಮೆಲ್ಲರನ್ನೂ ಅಶ್ವಪದಾತಿಗಜಗಳ ಸಹಿತವಾಗಿ ಪಿತೃಗಳು ಇರುವ ಅಮಂಗಳವಾದ ದಿಕ್ಕಿಗೆ ಕಳುಹಿಸುವೆನು.
ಸಂಜಯಃ
ತತೋಽಹಮಾಮಂತ್ರ್ಯ ತದಾ ಧನಂಜಯಂ
ಚತುರ್ಭುಜಂ ಚೈವ ನಮಸ್ಯ ಸತ್ವರಃ |
ಜವೇನ ಸಂಪ್ರಾಪ್ತ ಇಹಾಮರದ್ಯುತೇ
ತವಾಂತಿಕಂ ಪ್ರಾಪಯಿತುಂ ವಚೋ ಮಹತ್ ॥45॥
ಸಂಜಯ ಎಲೈ ದೇವತೆಗಳ ಕಾಂತಿಯನ್ನು ಹೊಂದಿದ ಧೃತರಾಷ್ಟ್ರನೇ, ಆಗ ನಾನು ಅವರಿಬ್ಬರ ಅನುಮತಿಯನ್ನು ಪಡೆದು, ಅರ್ಜುನನಿಗೂ ಮತ್ತು ಚತುರ್ಭುಜನಾದ ಕೃಷ್ಣನಿಗೂ ನಮಸ್ಕಾರವನ್ನು ಮಾಡಿ, ಅವರ ಸಂದೇಶವನ್ನು ತಿಳಿಸಲು ನಿನ್ನ ಬಳಿಗೆ ಶೀಘ್ರವಾಗಿ ಬಂದಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ದೈವಸಹಾಯವುಳ್ಳ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವುದಕ್ಕೆ ಧೃತರಾಷ್ಟ್ರನ ಒತ್ತಾಯ. ದುರ್ಯೋಧನನಿಂದ ಅದನ್ನು ನಿರಾಕರಿಸಿ, ತನಗಿರುವ ದೈವಸಹಾಯದ ಮತ್ತು ಮಂತ್ರಬಲದ ಕಥನ.
ವೈಶಂಪಾಯನಃ
ಸಂಜಯಸ್ಯ ವಚಃ ಶ್ರುತ್ವಾ ಪ್ರಜ್ಞಾಚಕ್ಷುರ್ನರೇಶ್ವರಃ |
ತತಃ ಸಂಖ್ಯಾತುಮಾರೇಭೇ ತದ್ವಚೋ ಗುಣದೋಷತಃ ॥1॥
ವೈಶಂಪಾಯನ ಪ್ರಜ್ಞಾಚಕ್ಷುಸ್ಸನ್ನು ಹೊಂದಿದ ಧೃತರಾಷ್ಟ್ರರಾಜನು ಸಂಜಯನ ಮಾತುಗಳನ್ನು ಕೇಳಿ, ಪಾಂಡವರ ಪಕ್ಷದಲ್ಲಿ ಗುಣಗಳನ್ನು ಮತ್ತು ದುರ್ಯೋಧನನ ಪಕ್ಷದಲ್ಲಿ ದೋಷಗಳನ್ನು ಎಣಿಸಲು ಪ್ರಾರಂಭಿಸಿದನು.
ಪ್ರಸಂಖ್ಯಾಯ ಚ ಸೌಕ್ಷ್ಮ್ಯೇಣ ಗುಣದೋಷಾನ್ ವಿಚಕ್ಷಣಃ |
ಯಥಾವನ್ಮತಿ ತತ್ವೇನ ಜಯಕಾಮಃ ಸುತಾನ್ ಪ್ರತಿ ॥2॥
ಬಲಾಬಲೇ ವಿನಿಶ್ಚಿತ್ಯ ಯಾಥಾತಥ್ಯೇನ ಬುದ್ಧಿಮಾನ್ |
ಯದಾ ತು ಮೇನೇ ಭೂಯಿಷ್ಠಂ ತದ್ವಚೋ ಗುಣದೋಷತಃ ॥3॥
ದೇವಮಾನುಷಯೋಃ ಶಕ್ತ್ಯಾ ತೇಜಸಾ ಚೈವ ಪಾಂಡವಾನ್ |
ಕುರೂನ್ ಶಕ್ತ್ಯಾಽಲ್ಪತರಯಾ ದುರ್ಯೋಧನಮಥಾಬ್ರವೀತ್ ॥4॥
ಮೇಧಾವಿಯೂ, ನಿಪುಣನೂ ಆದ ಅವನು ತನ್ನ ಬುದ್ಧಿಗೆ ತೋರುವಷ್ಟು ಸೂಕ್ಷ್ಮವಾಗಿ ಗುಣ-ದೋಷಗಳನ್ನು ಎಣಿಸಿ, ತನ್ನ ಮಕ್ಕಳಿಗೆ ಜಯವನ್ನು ಬಯಸುವವನಾಗಿ, ಬಲಾಬಲಗಳನ್ನು ಸರಿಯಾಗಿ ನಿಶ್ಚಯಿಸಿ, ದೇವತೆಗಳ ಮತ್ತು ಮನುಷ್ಯರ ಶಕ್ತಿಗೆ ಅನುಗುಣವಾಗಿ ಪಾಂಡವರನ್ನು ಅಧಿಕ ಶಕ್ತಿಯುಳ್ಳವರೆಂದೂ, ಕೌರವರನ್ನು ಅಲ್ಪಶಕ್ತಿಯುಳ್ಳವರೆಂದೂ ನಿಶ್ಚಯಿಸಿ, ಅನಂತರ ದುರ್ಯೋಧನನನ್ನು ಕುರಿತು ಮಾತನಾಡಿದನು.
ಧೃತರಾಷ್ಟ್ರಃ
ದುರ್ಯೋಧನೇಯಂ ಚಿಂತಾ ಮೇ ಶಶ್ವನ್ನ ಹ್ಯುಪಶಾಮ್ಯತಿ ॥5॥
ಈದೃಶೇಽಭಿನಿವಿಷ್ಟಸ್ಯ ಪೃಥಿವೀಕ್ಷಯಕಾರಕೇ |
ಅಧರ್ಮ್ಯೇ ವಾಽಯಶಸ್ಯೇ ವಾ ಕಾರ್ಯೇ ಮಹತಿ ದಾರುಣೇ ॥6॥
ಪಾಂಡವೈರ್ವಿಗ್ರಹಸ್ತಾತ ಸರ್ವಥಾ ಮೇ ನ ರೋಚತೇ ॥7॥
ಎಲೈ ದುರ್ಯೋಧನನೇ, ಪೃಥಿವೀಕ್ಷಯಕಾರಕವಾದ, ಅಧರ್ಮರೂಪವಾದ, ಅಕೀರ್ತಿಕರವಾದ, ಭಯಂಕರವಾದ ಮಹತ್ಕಾರ್ಯದಲ್ಲಿ ಆಸಕ್ತನಾಗಿರುವ ನಿನ್ನನ್ನು ನೋಡಿ ನನ್ನ ಮನಸ್ಸಲ್ಲಿ ಚಿಂತೆಯು ಉಪಶಮನವನ್ನೇ ಹೊಂದುವುದಿಲ್ಲ. ಪ್ರೀತಿಪಾತ್ರನೇ, ಪಾಂಡವರಲ್ಲಿ ಯುದ್ಧವು ನನಗೆ ಸರ್ವಥಾ ಇಷ್ಟವಿಲ್ಲ.
ಸತ್ಯಂ ಹ್ಯೇತದಹಂ ಮನ್ಯೇ ಪ್ರತ್ಯಕ್ಷಂ ನಾನುಮಾನತಃ |
ಆತ್ಮಜೈಸ್ತು ಪರಂ ಸ್ನೇಹಂ ಸರ್ವಭೂತಾನಿ ಕುರ್ವತೇ ॥8॥
ಪ್ರಿಯಾಣಿ ಚೈಷಾಂ ಕುರ್ವಂತಿ ಯಥಾಶಕ್ತಿ ಹಿತಾನಿ ಚ |
ಏವಮೇವೋಪಕರ್ತೄಣಾಂ ಪ್ರಾಯಶೋ ಲಕ್ಷಯಾಮಹೇ ॥9॥
ಇಚ್ಛಂತಿ ಬಹುಲಂ ಸಂತಃ ಪ್ರತಿಕರ್ತುಂ ಮಹತ್ ಪ್ರಿಯಮ್ ॥10॥
ಈ ವಿಷಯವನ್ನು ನಾನು ಪ್ರತ್ಯಕ್ಷವಾಗಿ ಸತ್ಯವಾಗಿ ತಿಳಿದಿದ್ದೇನೆ, ಊಹೆಯಿಂದಲ್ಲ. ಎಲ್ಲ ಪ್ರಾಣಿಗಳೂ ತಮ್ಮ ಮಕ್ಕಳಲ್ಲಿ ಸ್ನೇಹವನ್ನು ಮಾಡುತ್ತವೆ. ತಮಗೆ ಶಕ್ತಿ ಇದ್ದಷ್ಟು ಅವರಿಗೆ ಪ್ರಿಯವನ್ನು ಮತ್ತು ಹಿತವನ್ನು ಉಂಟುಮಾಡುತ್ತವೆ. ಉಪಕಾರವನ್ನು ಮಾಡಿದವರ

ವಿಷಯದಲ್ಲಿಯೂ ಹೆಚ್ಚಾಗಿ ಹೀಗೇ ನಡೆದುಕೊಳ್ಳುವುದನ್ನು ನಾವು ಕಾಣುತ್ತೇವೆ. ಸಜ್ಜನರಾದವರು ಉಪಕಾರವನ್ನು ಮಾಡಿದವರಿಗೆ ದೊಡ್ಡ ಪ್ರತ್ಯುಪಕಾರವನ್ನು ಮಾಡಲು ಬಯಸುತ್ತಾರೆ.
ಅಗ್ನಿಃ ಸಾಚಿವ್ಯಕರ್ತಾ ಸ್ಯಾತ್ ಖಾಂಡವೇ ತತ್ಕೃತಂ ಸ್ಮರನ್ |
ಅರ್ಜುನಸ್ಯಾಪಿ ಭೀಮೇಽಸ್ಮಿನ್ ಕುರುಪಾಂಡವಸಮಾಗಮೇ ||11||
ಈ ಘೋರವಾದ ಕುರುಪಾಂಡವ ಸಂಗ್ರಾಮದಲ್ಲಿ ಅಗ್ನಿಯು ಖಾಂಡವದಹನ ಸಮಯದಲ್ಲಿ ತನಗೆ ಮಾಡಿದ ಉಪಕಾರವನ್ನು ನೆನೆದು ಅರ್ಜುನನಿಗೆ ಸಹಾಯವನ್ನು ಮಾಡುವನು.
ಜಾತಿಗೃದ್ಧ್ಯಾಽಭಿಪನ್ನಾಶ್ಚ ಪಾಂಡವಾನಾಮನೇಕಶಃ |
ಧರ್ಮಾದಯಃ ಸಮೇಷ್ಯಂತಿ ಸಮಾಹೂತಾ ದಿವೌಕಸಃ ||12||
ಧರ್ಮ, ಇಂದ್ರ ಮೊದಲಾದ ದೇವತೆಗಳು ಯುಧಿಷ್ಠಿರಾದಿಗಳು ತಮ್ಮ ಮಕ್ಕಳಾದ್ದರಿಂದ ಅವರು ಆಹ್ವಾನ ಮಾಡಿದಾಗ ಅವರೆಲ್ಲರೂ ಬಂದು ಅವರ ಜೊತೆಯಲ್ಲಿ ಸೇರುತ್ತಾರೆ.
ಭೀಷ್ಮದ್ರೋಣಕೃಪಾದೀನಾಂ ಭಯಾದಶನಿಸನ್ನಿಭಮ್ |
ರಿರಕ್ಷಿಷಂತಃ ಸಂರಂಭಂ ಗಮಿಷ್ಯಂತೀತಿ ಮೇ ಮತಿಃ ||13||
ಭೀಷ್ಮದ್ರೋಣಕೃಪಾದಿಗಳು ತಮ್ಮ ಗುರುಗಳಾದ್ದರಿಂದ ಅವರ ಮೇಲೆ ತಮ್ಮ ರೋಷವನ್ನು ತೀರಿಸಿಕೊಳ್ಳದೆ ಅವರನ್ನು ರಕ್ಷಿಸಿ ಪಾಂಡವರು ತಮ್ಮ ರೋಷವನ್ನು (ನಮ್ಮ ಸೈನ್ಯದಲ್ಲಿ) ಬೇರೆ ಕಡೆಗೆ ತಿರುಗಿಸುತ್ತಾರೆ ಎಂದು ನನ್ನ ಅಭಿಪ್ರಾಯ.
ತದ್ ದೇವಸಹಿತಾಃ ಪಾರ್ಥಾ ನ ಶಕ್ಯಾಃ ಪ್ರತಿವೀಕ್ಷಿತುಮ್ |
ಮಾನುಷೇಣ ನರವ್ಯಾಘ್ರಾ ವೀರ್ಯವಂತೋಽಸ್ತ್ರಪಾರಗಾಃ ||14||
ವೀರ್ಯವಂತರೂ, ಅಸ್ತ್ರಪಾರಂಗತರೂ, ದೇವಸಹಾಯವುಳ್ಳವರೂ ಆದ ನರವ್ಯಾಘ್ರರಾದ ಪಾಂಡವರನ್ನು ಮನುಷ್ಯನು ಎದುರು ನಿಂತು ನೋಡಲೂ ಸಾಧ್ಯವಿಲ್ಲ.
ದುರಾಸದಂ ಯಸ್ಯ ದಿವ್ಯಂ ಗಾಂಡೀವಂ ಧನುರುತ್ತಮಮ್ |
ವಾರುಣೌ ಚಾಕ್ಷಯೌ ದಿವ್ಯೌ ಶರಪೂರ್ಣೌ ಮಹೇಷುಧೀ ||15||
ವಾನರಶ್ಚ ಧ್ವಜೇ ದಿವ್ಯೇ ನಿಃಸಂಗೋ ಧೂಮವದ್‌ಗತಿಃ |
ರಥಸ್ಯ ಚತುರಂತಾಯಾಂ ಯಸ್ಯ ನಾಸ್ತಿ ಸಮಸ್ತ್ವಿಷಾ ||16||
ಯಾವನ ಶ್ರೇಷ್ಠವಾದ ಗಾಂಡೀವ ಧನುಸ್ಸು ದಿವ್ಯವಾದುದೋ ಮತ್ತು ಸೋಲಿಸಲು ಅಸಾಧ್ಯವಾದುದೋ, ಯಾವನ ಬಳಿ ವರುಣನಿಂದ ಕೊಡಲ್ಪಟ್ಟ ಶರಪೂರ್ಣವಾದ ದಿವ್ಯವಾದ ಅಕ್ಷಯವಾದ ಬತ್ತಳಿಕೆಗಳಿವೆಯೋ, ಯಾವನ ಧ್ವಜದಲ್ಲಿ ದಿವ್ಯವಾದ, ಎಲ್ಲಿಯೂ ಸಿಲುಕಿಕೊಳ್ಳದಿರುವ ವಾನರನಿದ್ದಾನೆಯೋ, ಯಾವ ಅವನಿಗೆ ರಥಕ್ಕೆ ಧೂಮದಂತಹ ಗತಿ ಇದೆಯೋ, ಯಾವನ ಧ್ವಜದ ಕಾಂತಿಗೆ ಸಮನಾದ ಕಾಂತಿ ಇಲ್ಲವೋ, ಯಾವನ ರಥಕ್ಕೆ ಚತುಸ್ಸಮುದ್ರಾಂತವಾದ ಭೂಮಿಯಲ್ಲಿ ಹೋಲಿಕೆ ಇಲ್ಲವೋ;
ಮಹಾಮೇಘನಿಭಶ್ಚಾಪಿ ನಿರ್ಘೋಷಃ ಶ್ರೂಯತೇ ಜನೈಃ |
ಮಹಾಶನಿಸಮಃ ಶಬ್ದಃ ಶಾತ್ರವಾಣಾಂ ಭಯಂಕರಃ ||17||
ಯಂ ಚಾತಿಮಾನುಷಂ ವೀರ್ಯೇ ಕೃತ್ಸ್ನೋ ಲೋಕೋ ವ್ಯವಸ್ಯತಿ |
ದೇವಾನಾಮಪಿ ಜೇತಾರಂ ಯಂ ವಿದುಃ ಪಾರ್ಥಿವಾ ರಣೇ ||18||
ಯಾವನ ರಥದ ಘೋಷವು ಮಹಾಮೇಘಗಳ ಘೋಷದಂತೆ ಜನರಿಂದ ಕೇಳಲ್ಪಡುತ್ತದೆಯೋ, ಯಾವ ಆ ರಥಶಬ್ದವು ಸಿಡಿಲಿನಂತೆ ಶತ್ರುಗಳಿಗೆ ಭಯಂಕರವಾಗಿದೆಯೋ, ಯಾವನನ್ನು ಸಮಗ್ರವಾದ ಜನರು ಮನುಷ್ಯಶಕ್ತಿಯನ್ನು ಮೀರಿದವನು ಎಂದು ತಿಳಿಯುತ್ತಾರೆಯೋ, ಯಾವನನ್ನು ಎಲ್ಲ ರಾಜರೂ ಯುದ್ಧದಲ್ಲಿ ದೇವತೆಗಳನ್ನು ಜಯಿಸುವವನು ಎಂದು ತಿಳಿಯುತ್ತಾರೆಯೋ;
ಶತಾನಿ ಪಂಚ ಚೈವೇಷೂನ್ ಯೋ ಗೃಹ್ಣನ್ನೇವ ದೃಶ್ಯತೇ |
ನಿಮೇಷಾಂತರಮಾತ್ರೇಣ ಮುಂಚನ್ ದೂರಂ ಚ ಪಾತಯನ್ ||19||
ಯಮಾಹ ಭೀಷ್ಮೋ ದ್ರೋಣಶ್ಚ ಕೃಪೋ ದ್ರೌಣಿಸ್ತಥೈವ ಚ |
ಮದ್ರರಾಜಸ್ತಥಾ ಶಲ್ಯೋ ಮಧ್ಯಸ್ಥಾ ಯೇ ಚ ಮಾನವಾಃ ||20||
ಯುದ್ಧಾಯಾವಸ್ಥಿತಂ ಪಾರ್ಥಂ ಪಾರ್ಥಿವೈರತಿಮಾನುಷೈಃ |
ಅಶಕ್ಯಂ ರಥಶಾರ್ದೂಲಂ ಪರಾಜೇತುಮರಿಂದಮಮ್ ||21||
ಯಾವನು ಐನೂರುಬಾಣಗಳನ್ನು ತೆಗೆದುಕೊಳ್ಳುವುದು ಮಾತ್ರ ಕಾಣಿಸುತ್ತದೆ, ಒಂದೇ ನಿಮೇಷದಲ್ಲಿ (ರೆಪ್ಪೆಯನ್ನು ಮುಚ್ಚಿ ತೆರೆಯುವಷ್ಟರಲ್ಲಿ) ಅದನ್ನು ಪ್ರಯೋಗಿಸಿ ದೂರದಲ್ಲಿ ಬೀಳಿಸುತ್ತಾನೆ, ಯಾವನನ್ನು ಭೀಷ್ಮ, ದ್ರೋಣ, ಕೃಪ ಅಶ್ವತ್ಥಾಮ, ಸೈಂಧವ, ಶಲ್ಯ ಮತ್ತು ಮಧ್ಯಸ್ಥರಾದ ಮನುಷ್ಯರು ಹೀಗೆಯೇ ಹೇಳುತ್ತಾರೆಯೋ, ಅಂತಹ ಅತಿಮಾನುಷರಾಜರಿಂದ ಕೂಡಿದ ರಥಶಾರ್ದೂಲನಾದ ಅರಿಂದಮನಾದ ಯುದ್ಧಕ್ಕೆ ಸನ್ನದ್ಧನಾದ ಅರ್ಜುನನನ್ನು ಸೋಲಿಸುವುದು ಅಸಾಧ್ಯವಾದುದು.
ಕ್ಷಿಪತ್ಯೇಕೇನ ವೇಗೇನ ಪಂಚಬಾಣಶತಾನಿ ಯಃ ||22||
ಸದೃಶಂ ಬಾಹುವೀರ್ಯೇಣ ಕಾರ್ತವೀರ್ಯಸ್ಯ ಪಾಂಡವಮ್ |
ತಮರ್ಜುನಂ ಮಹೇಷ್ವಾಸಂ ಮಹೇಂದ್ರೋಪೇಂದ್ರರಕ್ಷಿತಮ್ ||23||
ನಿಘ್ನಂತಮಿವ ಪಶ್ಯಾಮಿ ವಿಮರ್ದೇಽಸ್ಮಿನ್ ಮಹಾಮೃಧೇ ||24||
ಅವನು ಒಂದೇ ವೇಗದಿಂದ ಐದುನೂರು ಬಾಣಗಳನ್ನು ಪ್ರಯೋಗಿಸುತ್ತಾನೆ. ಅರ್ಜುನನು ಬಾಹುವೀರ್ಯದಲ್ಲಿ ಕಾರ್ತವೀರ್ಯನಿಗೆ ಸಮಾನನಾಗಿದ್ದಾನೆ. ಅಂತಹ ಇಂದ್ರ ಮತ್ತ ಉಪೇಂದ್ರನಿಂದ ರಕ್ಷಿತನಾದ, ಮಹಾಧನುರ್ಧಾರಿಯಾದ ಅರ್ಜುನನು ಈ ದೊಡ್ಡ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುವುದನ್ನು ನಾನು ನೋಡುತ್ತಿದ್ದೇನೆ.

ಇತ್ಯೇವಂ ಚಿಂತಯನ್ ಕೃತ್ಸ್ನಮಹೋರಾತ್ರಾಣಿ ಭಾರತ |
ಅನಿದ್ರೋ ನಿಃಸುಖಶ್ಚಾಸ್ಮಿ ಕುರೂಣಾಂ ಶಮಚಿಂತಯಾ ॥25॥
ಎಲೈ ಭಾರತನೇ, ಹೀಗೆ ಎಲ್ಲಾ ಹಗಲು-ರಾತ್ರಿಗಳಲ್ಲಿ ಸಮಗ್ರವಾಗಿ ಚಿಂತಿಸುತ್ತಾ, ಕುರುಗಳ ಶಾಂತಿಯನ್ನು ಬಯಸಿ ನಿದ್ರಾಹೀನನೂ ಮತ್ತು ಸುಖಹೀನನೂ ಆಗಿದ್ದೇನೆ.
ಕ್ಷಯೋದಯೋಽಯಂ ಸುಮಹಾನ್ ಕುರೂಣಾಂ ಪ್ರತ್ಯುಪಸ್ಥಿತಃ |
ಅಸ್ಯ ಚೇತ್ ಕಲಹಸ್ಯಾಂತಃ ಶಮಾದನ್ಯೋ ನ ವಿದ್ಯತೇ ॥26॥
ಈ ಕಲಹಕ್ಕೆ ಶಾಂತಿಯನ್ನು ಬಿಟ್ಟು ಬೇರೆ ಶಮನೋಪಾಯವಿಲ್ಲದ ಕಾರಣ ಕುರುಗಳಿಗೆ ದೊಡ್ಡ ವಿನಾಶಕಾಲವು ಬಂದೊದಗಿದೆ.
ಶಮೋ ಮೇ ರೋಚತೇತ್ಯರ್ಥಂ ಪಾರ್ಥೈಃ ಸಹ ನ ವಿಗ್ರಹಃ |
ಕುರುಭ್ಯೋ ಹಿ ಸದಾ ಮನ್ಯೇ ಪಾಂಡವಾನ್ ಶಕ್ತಿಮತ್ತರಾನ್ ॥27॥
ಪಾಂಡವರ ಜೊತೆಯಲ್ಲಿ ನನಗೆ ಸಂಧಿಯು ಇಷ್ಟವಾಗುತ್ತದೆಯೇ ಹೊರತು ವಿರೋಧವಲ್ಲ. ಕುರುಗಳಿಗಿಂತಲೂ ಪಾಂಡವರು ಅಧಿಕಶಕ್ತಿಯುಳ್ಳವರು ಎಂದು ನಾನು ಯಾವಾಗಲೂ ತಿಳಿದಿದ್ದೇನೆ.
ವೈಶಂಪಾಯನಃ
ಪಿತುರೇತದ್ ವಚಃ ಶ್ರುತ್ವಾ ಧಾರ್ತರಾಷ್ಟ್ರೋಽತ್ಯಮರ್ಷಣಃ |
ಆಧಾಯ ವಿಪುಲಂ ಕ್ರೋಧಂ ಪುನರೇವೇದಮಬ್ರವೀತ್ ॥28॥
ವೈಶಂಪಾಯನ ತಂದೆಯ ಈ ಮಾತುಗಳನ್ನು ಕೇಳಿ ರೋಷಶೀಲನಾದ ದುರ್ಯೋಧನನು ವಿಪುಲವಾದ ಕ್ರೋಧವನ್ನು ತಂದುಕೊಂಡು ಪುನಃ ಹೀಗೆ ಮಾತನಾಡಿದನು.
ಅಶಕ್ಯಾ ದೇವಸಚಿವಾಃ ಪಾರ್ಥಾಃ ಸ್ಯುರಿತಿ ಯದ್ ಭವಾನ್ |
ಮನ್ಯತೇ ತದ್ಭಯಂ ವ್ಯೇತು ಭವತೋ ರಾಜಸತ್ತಮ ॥29॥
ಎಲೈ ರಾಜಸತ್ತಮನೇ, ದೇವಸಹಾಯವುಳ್ಳ ಪಾಂಡವರು ಯುದ್ಧದಲ್ಲಿ ಎದುರಿಸಲು ಅಶಕ್ಯರಾದವರು ಎಂದು ಏನು ನಿನ್ನ ಭಯವಿದೆಯೋ ಅದು ದೂರವಾಗಲಿ.
ಅಕಾಮದ್ವೇಷಸಂಯೋಗಾನ್ಮೋಹಾಲ್ಲೋಭಾಚ್ಚ ಭಾರತ |
ಉಪೇಕ್ಷಯಾ ಚ ಭಾವಾನಾಂ ದೇವಾ ದೇವತ್ವಮಾಪ್ನುವನ್ ॥30॥
ಎಲೈ ಭಾರತನೇ, ದೇವತೆಗಳು ಕಾಮ-ದ್ವೇಷರಹಿತರಾದುದರಿಂದ ಮನುಷ್ಯರಿಗಿರುವ ಲೋಭ-ಮೋಹಗಳಿಂದಲೂ ದೂರವಾಗಿರುವುದರಿಂದ ಮತ್ತು ಲೋಭ-ಮೋಹಗಳುಳ್ಳ ಮನುಷ್ಯರನ್ನು ಉಪೇಕ್ಷೆ ಮಾಡುವ ಕಾರಣದಿಂದ ದೇವತೆಗಳು ದೇವತ್ವವನ್ನು ಹೊಂದಿದರು.
ಇತಿ ದ್ವೈಪಾಯನೋ ವ್ಯಾಸೋ ನಾರದಶ್ಚ ಮಹಾತಪಾಃ |
ಜಾಮದಗ್ನ್ಯಶ್ಚ ರಾಮೋ ನಃ ಕಥಾಮಕಥಯನ್ ಪುರಾ ॥31॥
ಹೀಗೆಂದು ದ್ವೈಪಾಯನರಾದ ವ್ಯಾಸರೂ, ಮಹಾತಪಸ್ವಿಗಳಾದ ನಾರದರೂ, ಜಮದಗ್ನಿಪುತ್ರರಾದ ಪರಶುರಾಮರೂ ನಮಗೆ ಹಿಂದೆ ಹೇಳಿದ್ದರು.
ನೈವ ಮಾನುಷವದ್ ದೇವಾಃ ಪ್ರವರ್ತಂತೇ ಕದಾಚನ |
ಕಾಮಾತ್ ಕ್ರೋಧಾತ್ ತಥಾ ಲೋಭಾತ್ ದ್ವೇಷಾಚ್ಚ ಭರತರ್ಷಭ ॥
ಎಲೈ ಭರತರ್ಷಭನೇ, ದೇವತೆಗಳು ಮನುಷ್ಯರಂತೆ ಕಾಮದಿಂದ, ಕ್ರೋಧದಿಂದ, ಲೋಭದಿಂದ ಮತ್ತು ದ್ವೇಷದಿಂದ ಪ್ರವೃತ್ತರಾಗುವುದಿಲ್ಲ.
ಯದಾ ಹ್ಯಗ್ನಿಶ್ಚ ವಾಯುಶ್ಚ ಧರ್ಮ ಇಂದ್ರೋಽಶ್ವಿನಾವಪಿ |
ಕಾಮಯೋಗಾತ್ ಪ್ರವರ್ತೇರನ್ ಅಪಾರ್ಥಾ ದುಃಖಮಾಪ್ನುಯುಃ ॥
ಅಗ್ನಿ, ವಾಯು, ಯಮ, ಇಂದ್ರ, ಅಶ್ವಿನಿಗಳು ಕಾಮದಿಂದ ಪ್ರವೃತ್ತರಾಗುವುದಾದರೆ ಅವರು ತಮ್ಮ ಸ್ವಧರ್ಮವನ್ನು ಕಳೆದುಕೊಂಡು ದುಃಖಿತರಾಗುವರು.
ತಸ್ಮಾನ್ನ ಭವತಾ ಚಿಂತಾ ಕಾರ್ಯೈಷಾ ಸ್ಯಾತ್ ಕಥಂಚನ |
ದೇವಾಶ್ಚೋಪೇಕ್ಷಕಾ ಹ್ಯೇತೇ ಶಶ್ವದ್ ಭಾವೇಷು ಭಾರತ ॥34॥
ಆದ್ದರಿಂದ ನೀನು ಯಾವ ಕಾರಣದಿಂದಲೂ ಇಂತಹ ಚಿಂತೆಯನ್ನು ಮಾಡುವ ಅವಶ್ಯಕತೆ ಇಲ್ಲ. ಎಲೈ ಭಾರತನೇ, ಭೂಮಿಯಲ್ಲಿ ನಡೆಯುವ ಘಟನೆಗಳ ವಿಷಯದಲ್ಲಿ ದೇವತೆಗಳು ಯಾವಾಗಲೂ ಉದಾಸೀನರಾಗಿರುತ್ತಾರೆ.
ಅಥ ಚೇತ್ ಕಾಮಸಂಯೋಗಾದ್ ದ್ವೇಷೋ ಲೋಭಶ್ಚ ಲಕ್ಷ್ಯತೇ |
ದೇವೇಷು ದೇವಪ್ರಾಮಾಣ್ಯಂ ನೈವ ತದ್ ವಿಕ್ರಮಿಷ್ಯತಿ ॥35॥
ದೇವತೆಗಳಲ್ಲಿ ಕಾಮ, ದ್ವೇಷ, ಲೋಭ ಮೊದಲಾದವುಗಳು ಕಂಡುಬಂದರೆ ಅವರ ದೇವತ್ವವೇ ನಾಶವಾಗುವುದರಿಂದ ಅವರು ಯಾವ ಶೌರ್ಯವನ್ನೂ ಹೊಂದಿರುವುದಿಲ್ಲ.
ಮಯಾಽಭಿಮಂತ್ರಿತಃ ಶಶ್ವತ್ ಜಾತವೇದಾಃ ಪ್ರಶಾಮ್ಯತಿ |
ದಿಧಕ್ಷುಃ ಸಕಲಾನ್ ಲೋಕಾನ್ ಪರಿಕ್ಷಿಪ್ಯ ಸಮಂತತಃ ॥36॥
ಎಲ್ಲ ಕಡೆಯಲ್ಲೂ ಹರಡಿ ಸಕಲ ಲೋಕಗಳನ್ನೂ ದಹಿಸಲು ಬಯಸುವ ಅಗ್ನಿಯು ನನ್ನ ಮಂತ್ರಶಕ್ತಿಯಿಂದ ಶಾಂತನಾಗುತ್ತಾನೆ.
ಯದ್ವಾ ಪರಮಕಂ ತೇಜೋ ಯೇನ ಯುಕ್ತಾ ದಿವೌಕಸಃ |
ಮಮಾಪ್ಯನುಪಮಂ ಭೂಯೋ ದೇವೇಭ್ಯೋ ವಿದ್ಧಿ ಭಾರತ ॥37॥

ಎಲೈ ಭಾರತನೇ, ದೇವತೆಗಳಿಗೆ ಯಾವ ಶ್ರೇಷ್ಠವಾದ ತೇಜಸ್ಸಿದೆಯೋ ಹಾಗೆಯೇ ಮತ್ತು ಅದಕ್ಕಿಂತಲೂ ಹೆಚ್ಚು ತೇಜಸ್ಸು ನನ್ನಲ್ಲಿದೆ ಎಂದು ತಿಳಿಯುವವನಾಗು.
ವಿದೀರ್ಯಮಾಣಂ ವಸುಧಾಂ ಗಿರೀಣಾಂ ಶಿಖರಾಣಿ ಚ |
ಲೋಕಸ್ಯ ಪಶ್ಯತೋ ರಾಜನ್ ಸ್ಥಾಪಯಾಮ್ಯಭಿಮಂತ್ರಣಾತ್ ॥38॥
ಎಲೈ ರಾಜನೇ, ಬಿರಿಯುತ್ತಿರುವ ಭೂಮಿಯನ್ನೂ ಮತ್ತು ಸೀಳಿ ಹೋಗುತ್ತಿರುವ ಪರ್ವತ ಶಿಖರಗಳನ್ನು ಜನರ ಕಣ್ಣೆದುರಿಗೆ ನನ್ನ ಮಂತ್ರಶಕ್ತಿಯಿಂದ ನಿಲ್ಲಿಸುತ್ತೇನೆ.
ಚೇತನಾಚೇತನಸ್ಯಾಸ್ಯ ಜಂಗಮಸ್ಥಾವರಸ್ಯ ಚ |
ವಿನಾಶಾಯ ಸಮುತ್ಪನ್ನಂ ಭಯಂ ಘೋರಂ ಮಹಾಸ್ವನಮ್ ॥39॥
ಅಶ್ಮವರ್ಷಂ ಚ ವಾಯುಂ ಚ ಶಮಯಾಮೀಹ ನಿತ್ಯಶಃ |
ಜಗತಃ ಪಶ್ಯತೋಽಭೀಕ್ಷ್ಣಂ ಭೂತಾನಾಮನುಕಂಪಯಾ ॥40॥
ಚೇತನಾಚೇತನಾತ್ಮಕವಾದ, ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚದ ವಿನಾಶಕ್ಕಾಗಿ ಉಂಟಾದ ಭಯಂಕರವಾದ ಮಹಾಘೋರವಾದ, ಕರ್ಕಶಸ್ವರದಿಂದ ಕೂಡಿದ ಅಶ್ಮವರ್ಷವನ್ನೂ (ಕಲ್ಲಿನ ಮಳೆಯನ್ನೂ) ಮತ್ತು ಬಿರುಗಾಳಿಯನ್ನೂ ಪ್ರಾಣಿಗಳ ಮೇಲಿನ ದಯದಿಂದ ಎಲ್ಲರೂ ನೋಡುತ್ತಿರುವಂತೆಯೇ ಶೀಘ್ರವಾಗಿ ನಿಲ್ಲಿಸುತ್ತೇನೆ.
ಸ್ತಂಭಿತಾಸ್ವಪ್ಸು ಗಚ್ಛಂತಿ ಮಯಾ ರಥಪದಾತಯಃ ॥41॥
ದೇವಾಸುರಾಣಾಂ ಭಾವಾನಾಮ್ ಅಹಮೇಕಃ ಪ್ರವರ್ತಿತಾ ॥42॥
ನನ್ನ ರಥಪದಾತಿಗಳು ನಾನು ಸ್ತಂಭನೆ ಮಾಡಿದ ಜಲದ ಮೇಲೆ ಸಂಚಾರ ಮಾಡುತ್ತಾರೆ. ದೇವಾಸುರರು ಮಾಡುವ ಎಲ್ಲ ಕೆಲಸಗಳನ್ನೂ ಪ್ರವರ್ತಿಸುವವನು ನಾನೊಬ್ಬನೇ ಆಗಿದ್ದೇನೆ.
ಅಕ್ಷೋಹಿಣೀಭಿರ್ಯಾನ್ ದೇಶಾನ್ ಯಾಮಿ ಕಾರ್ಯೇಣ ಕೇನಚಿತ್ |
ತತ್ರಾಪೋ ಮೇ ಪ್ರವರ್ತಂತೇ ಯತ್ರ ಯತ್ರಾಭಿಕಾಮಯೇ ॥43॥
ನಾನು ನನ್ನ ಅಕ್ಷೋಹಿಣಿ ಸೈನ್ಯದ ಜೊತೆಯಲ್ಲಿ ಎಲ್ಲಿ ಎಲ್ಲಿಗೆ ಹೋಗುತ್ತೇನೆಯೋ ಅಲ್ಲಿ ನಾನು ಬಯಸಿದ ಸ್ಥಳದಲ್ಲಿ ಜಲವು ಉಂಟಾಗುತ್ತದೆ.
ಭಯಾನಿ ವಿಷಯೇ ರಾಜನ್ ವ್ಯಾಘ್ರಾದೀನಿ ನ ಸಂತಿ ಮೇ |
ಮಂತ್ರಗುಪ್ತಾನಿ ಭೂತಾನಿ ನ ಹಿಂಸಂತಿ ಭಯಂಕರಾಃ ॥44॥
ಎಲೈ ರಾಜನೇ, ನನ್ನ ದೇಶದಲ್ಲಿ ವ್ಯಾಘ್ರಾದಿಗಳ ಭಯವಿಲ್ಲ. ಭಯಂಕರವಾದ ಪ್ರಾಣಿಗಳು ಮಂತ್ರಗುಪ್ತವಾದ ಗೋವು ಮೊದಲಾದ ಪ್ರಾಣಿಗಳನ್ನು ಹಿಂಸೆ ಮಾಡುವುದಿಲ್ಲ.
ನಿಕಾಮವರ್ಷೀ ಪರ್ಜನ್ಯೋ ರಾಜನ್ ವಿಷಯವಾಸಿನಾಮ್ |
ಸಸ್ಯಾನಾಂ ಸರ್ವಜಂತೂನಾಮೀತಯಶ್ಚ ನ ಸಂತಿ ಮೇ ॥45॥
ಎಲೈ ರಾಜನೇ, ನನ್ನ ದೇಶದಲ್ಲಿ ವಾಸಮಾಡುವವರಿಗೆ, ಪರ್ಜನ್ಯನು ಬೇಡಿದಾಗ ಮಳೆಯನ್ನು ಸುರಿಸುತ್ತಾನೆ. ಸಸ್ಯಗಳಿಗಾಗಲೀ ಅಥವಾ ನನ್ನ ರಾಜ್ಯದ ಪ್ರಾಣಿಗಳಿಗಾಗಲೀ ಯಾವ ಈತಿಬಾಧೆಗಳೂ ಇರುವುದಿಲ್ಲ.
ಅಶ್ವಿನಾವಥ ವಾಯ್ವಗ್ನಿಮರುದ್ಭಿಃ ಸಹ ವೃತ್ರಹಾ |
ಧರ್ಮಶ್ಚೈವ ಮಯಾ ದ್ವಿಷ್ಟಾನ್ ನೋತ್ಸಹಂತೇಽಭಿರಕ್ಷಿತುಮ್ ॥46॥
ಅಶ್ವಿನೀದೇವತೆಗಳಾಗಲೀ, ವಾಯು, ಅಗ್ನಿ, ಮರುತ್ತುಗಳಿಂದ ಕೂಡಿದ ಇಂದ್ರನಾಗಲೀ ಅಥವಾ ಯಮಧರ್ಮನಾಗಲೀ ನನ್ನ ದ್ವೇಷಕ್ಕೆ ಪಾತ್ರರಾದವರನ್ನು ರಕ್ಷಿಸಲು ಬಯಸುವುದಿಲ್ಲ.
ಯದಿ ಹ್ಯೇತೇ ಸಮರ್ಥಾಃ ಸ್ಯುರ್ಮದ್ದ್ವಿಷಸ್ತ್ರಾತುಮಂಜಸಾ |
ನ ಸ್ಮ ತ್ರಯೋದಶ ಸಮಾಃ ಪಾರ್ಥಾ ದುಃಖಮವಾಪ್ನುಯುಃ ॥47॥
ಒಂದುಪಕ್ಷ ಈ ದೇವತೆಗಳು ನನ್ನ ಶತ್ರುಗಳನ್ನು ರಕ್ಷಿಸಲು ಸಮರ್ಥರಾಗಿದ್ದರೆ ಪಾಂಡವರು ಹದಿಮೂರು ವರ್ಷಗಳ ಕಾಲ ದುಃಖವನ್ನು ಅನುಭವಿಸುತ್ತಿರಲಿಲ್ಲ.
ನೈವ ದೇವಾ ನ ಗಂಧರ್ವಾ ನಾಸುರಾ ನ ಚ ರಾಕ್ಷಸಾಃ |
ಶಕ್ತಾಸ್ತ್ರಾತುಂ ಮಯಾ ರಿಷ್ಟಾ ಸತ್ಯಮೇತದ್ ಬ್ರವೀಮಿ ತೇ ॥48॥
ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ, ರಾಕ್ಷಸರಾಗಲೀ ನನ್ನ ಮಂತ್ರದ ಸಾಮರ್ಥ್ಯದಿಂದ ತಮ್ಮ ಬಲವನ್ನು ಕಳೆದುಕೊಂಡವರಾಗಿ ನನ್ನ ದ್ವೇಷಿಗಳನ್ನು ರಕ್ಷಿಸಲು ಸಮರ್ಥರಾಗುವುದಿಲ್ಲ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ.
ಯದಭಿಧ್ಯಾಮಹಂ ಶಶ್ವಚ್ಛುಭಂ ವಾ ಯದಿ ವಾಽಶುಭಮ್ |
ತದ್ ಭವೇತ್ ವಿಧಿಪೂರ್ವಂ ಮೇ ಮಿತ್ರೇಷ್ವರಿಷು ಚೋಭಯೋಃ ॥
ನಾನು ನನ್ನ ಶತ್ರುಗಳಿಗೆ ಮತ್ತು ಮಿತ್ರರಿಗೆ ಯಾವ ಅಶುಭವನ್ನೂ ಮತ್ತು ಶುಭವನ್ನು ಸಂಕಲ್ಪಿಸುತ್ತೇನೆಯೋ ಅವು ವಿಧಿಪ್ರಕಾರವಾಗಿ ಶತ್ರು, ಮಿತ್ರರಿಗೆ ಹಾಗೆಯೇ ಉಂಟಾಗುತ್ತವೆ.
ಭವಿಷ್ಯತೀದಮಿತಿ ವಾ ಯದ್ ಬ್ರವೀಮಿ ಪರಂತಪ |
ನಾನ್ಯಥಾ ಭೂತಪೂರ್ವಂ ಚ ಸತ್ಯವಾಗಿತಿ ಮಾಂ ವಿದುಃ ॥50॥
ಎಲೈ ಪರಂತಪನೇ, ನಾನು ಹೀಗೆಯೇ ಆಗುವುದು ಎಂದು ಹೇಳಿದರೆ ಅದು ಹಾಗೆಯೇ ಆಗುತ್ತದೆ. ಹಿಂದೆ ಎಂದೂ ಅದು ಬೇರೆ ರೀತಿಯಲ್ಲಿ ಆಗಿಲ್ಲ. ಆದ್ದರಿಂದ ಜನರು ನನ್ನನ್ನು ಸತ್ಯವಚನವುಳ್ಳವನು ಎಂದು ತಿಳಿಯುತ್ತಾರೆ.
ಲೋಕಸಾಕ್ಷಿಕಮೇತನ್ಮೇ ಮಾಹಾತ್ಮ್ಯಂ ದಿಕ್ಷು ವಿಶ್ರುತಮ್ |

ಆಶ್ವಾಸನಾರ್ಥಂ ಭವತಃ ಪ್ರೋಕ್ತಂ ನ ಶ್ಲಾಘಯಾ ನೃಪ ॥51॥
ಎಲೈ ರಾಜನ್, ಈ ನನ್ನ ಮಹಿಮೆಯು ಲೋಕಸಾಕ್ಷಿಕವಾದುದು. ಎಲ್ಲ ದಿಕ್ಕುಗಳಲ್ಲಿಯೂ ಪ್ರಖ್ಯಾತವಾದುದು. ನಿನಗೆ ನಂಬಿಕೆಯುಂಟಾಗಲಿ ಎಂಬುದಕ್ಕೆ ಮಾತ್ರ ಹೇಳುತ್ತಿದ್ದೇನೆ, ನನ್ನನ್ನು ಹೊಗಳಿಕೊಳ್ಳುವ ಉದ್ದೇಶದಿಂದಲ್ಲ.
ನ ಹ್ಯಹಂ ಶ್ಲಾಘನೋ ರಾಜನ್ ಭೂತಪೂರ್ವಃ ಕದಾಚನ |
ಅಸದಾಚರಿತಂ ಹ್ಯೇತದ್ ಯದಾತ್ಮಾನಂ ಪ್ರಶಂಸತಿ ॥52॥
ಎಲೈ ರಾಜನ್, ನಾನು ಹಿಂದೆ ಎಂದೂ ನನ್ನನ್ನು ಹೊಗಳಿಕೊಂಡವನಲ್ಲ. ತನ್ನನ್ನು ತಾನು ಹೊಗಳಿಕೊಳ್ಳುವುದು ಅಸಜ್ಜನರು ಆಚರಿಸುವ ಮಾರ್ಗ.
ಪಾಂಡವಾಂಶ್ಚೈವ ಮತ್ಸ್ಯಾಂಶ್ಚ ಪಾಂಚಾಲಾನ್ ಕೈಕಯೈಃ ಸಹ |
ಸಾತ್ಯಕಿಂ ವಾಸುದೇವಂ ಚ ಶ್ರೋತಾಸಿ ವಿಜಿತಾನ್ ಮಯಾ ॥53॥
ಪಾಂಡವರು, ಮತ್ಸ್ಯರು, ಕೇಕಯರಿಂದ ಕೂಡಿದ ಪಾಂಚಾಲರು, ಸಾತ್ಯಕಿ ಮತ್ತು ಕೃಷ್ಣ ಎಲ್ಲರೂ ನನ್ನಿಂದ ಪರಾಜಿತರಾದ ವಾರ್ತೆಯನ್ನು ನೀನು ಕೇಳುವಿ.
ಸರಿತಃ ಸಾಗರಂ ಪ್ರಾಪ್ಯ ಯಥಾ ನಶ್ಯಂತಿ ಸರ್ವಶಃ |
ತಥೈವ ತೇ ವಿನಂಕ್ಷ್ಯಂತಿ ಮಾಮಾಸಾದ್ಯ ಸಹಾನ್ವಯಾಃ ॥54॥
ನದಿಗಳು ಸಮುದ್ರವನ್ನು ಸೇರಿ ಪೂರ್ಣವಾಗಿ ನಾಶವನ್ನು ಹೊಂದುವಂತೆ ಶತ್ರುಸೈನ್ಯವು ನನ್ನನ್ನು ಎದುರಿಸಿ ತಮ್ಮ ಪರಿವಾರದೊಡನೆ ನಾಶವನ್ನು ಹೊಂದುವುದು.
ಪರಾ ಬುದ್ಧಿಃ ಪರಂ ತೇಜೋ ವೀರ್ಯಂ ಚ ಪರಮಂ ಮಮ |
ಪರಾ ವಿದ್ಯಾ ಪರೋ ಯೋಗೋ ಮಮ ತೇಭ್ಯೋ ವಿಶಾಂಪತೇ ॥55॥
ನನ್ನ ಬುದ್ಧಿಯು ಶ್ರೇಷ್ಠವಾದುದು. ತೇಜಸ್ಸು ಮತ್ತು ಶೌರ್ಯಗಳೂ ಶ್ರೇಷ್ಠವಾದವು. ವಿದ್ಯೆಯು ಶ್ರೇಷ್ಠವಾದುದು. ಉಪಾಯಗಳು ಶ್ರೇಷ್ಠವಾದವು. ಎಲೈ ರಾಜನ್, ಈ ಎಲ್ಲ ವಿಷಯಗಳಲ್ಲಿಯೂ ನಾನು ಅವರಿಗಿಂತ ಶ್ರೇಷ್ಠನಾಗಿದ್ದೇನೆ.
ಪಿತಾಮಹಶ್ಚ ದ್ರೋಣಶ್ಚ ಕೃಪಃ ಶಲ್ಯಃ ಶಲಸ್ತಥಾ |
ಅಸ್ತ್ರೇಷು ಯದ್ ವಿಜಾನಂತಿ ಸರ್ವಂ ತನ್ಮಯಿ ವಿದ್ಯತೇ ॥56॥
ಪಿತಾಮಹರಾದ ಭೀಷ್ಮರೂ, ದ್ರೋಣರೂ, ಕೃಪರೂ, ಶಲ್ಯ ಮತ್ತು ಶಲರೂ ಯಾವ ಅಸ್ತ್ರಗಳನ್ನು ತಿಳಿದಿದ್ದಾರೆಯೋ ಅವೆಲ್ಲವೂ ನನ್ನೊಬ್ಬನಲ್ಲಿಯೇ ಇವೆ.
ವೈಶಂಪಾಯನಃ
ಇತ್ಯುಕತತ್ವ ಸಂಜಯಂ ಭೂಯಃ ಪರ್ಯಪೃಚ್ಛತ ಭಾರತ |
ಜ್ಞಾತುಂ ಯುಯುತ್ಸೋಃ ಕಾರ್ಯಾಣಿ ಪ್ರಾಪ್ತಕಾಲಮರಿಂದಮಃ ॥57॥
ವೈಶಂಪಾಯನ ಎಲೈ ಭಾರತನೇ, ಹೀಗೆ ಮಾತನಾಡಿ ಅರಿಂದಮನಾದ ಧೃತರಾಷ್ಟ್ರನು ಯುದ್ಧವು ಪ್ರಾಪ್ತವಾದ ಈ ಸಮಯದಲ್ಲಿ ಅರ್ಜುನನು ಏನು ಮಾಡಲು ಬಯಸುತ್ತಿದ್ದಾನೆ ಎಂದು ತಿಳಿದುಕೊಳ್ಳಲು ಸಂಜಯನನ್ನು ಕುರಿತು ಪುನಃ ಪ್ರಶ್ನೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ಮೂರನೆಯ ಅಧ್ಯಾಯ
ಧೃತರಾಷ್ಟ್ರನನ್ನು ತಿರಸ್ಕರಿಸಿ, ಕರ್ಣನಿಂದ ಪಾಂಡವವಧೆಯ ಪ್ರತಿಜ್ಞೆ.
ಭೀಷ್ಮರಿಂದ ನಿಂದಿತನಾದ ಅವನಿಂದ ಶಸ್ತ್ರನ್ಯಾಸ ಮತ್ತು ಸಭಾತ್ಯಾಗ.
ವೈಶಂಪಾಯನಃ
ತಥೈವ ಪೃಚ್ಛಂತಮತೀವ ಪಾರ್ಥಂ
ವೈಚಿತ್ರವೀರ್ಯಂ ತಮಚಿಂತಯಿತ್ವಾ |
ಉವಾಚ ಕರ್ಣೋ ಧೃತರಾಷ್ಟ್ರಪುತ್ರಂ
ಪ್ರಹರ್ಷಯನ್ ಸಂಸದಿ ಕೌರವಾಣಾಮ್ ॥1॥
ವೈಶಂಪಾಯನ ಹಾಗೆಯೇ ಅರ್ಜುನನ ಬಗ್ಗೆ ಪ್ರಶ್ನೆಯನ್ನು ಮಾಡುತ್ತಿದ್ದ ಧೃತರಾಷ್ಟ್ರನನ್ನು ಲೆಕ್ಕಿಸದೆ ಕರ್ಣನು ಕೌರವರ ಸಭೆಯಲ್ಲಿ ದುರ್ಯೋಧನನನ್ನು ಸಂತೋಷಪಡಿಸುತ್ತಾ ಮಾತನಾಡಿದನು.
ಮಿಥ್ಯಾ ಪ್ರತಿಜ್ಞಾಯ ಮಯಾ ಯದಸ್ತ್ರಂ
ರಾಮಾತ್ ಕೃತಂ ಬ್ರಹ್ಮಧೃತಂ ಪುರಸ್ತಾತ್ |
ವಿಜ್ಞಾಯ ತೇನಾಸ್ಮಿ ತದೈವಮುಕ್ತಃ
ತೇ ನಾಂತಕಾಲೇ ಪ್ರತಿಭಾಸ್ಯತೀತಿ ॥2॥
ನಾನು ಪರಶುರಾಮರಿಗೆ ಸುಳ್ಳನ್ನು ಹೇಳಿ ಹಿಂದೆ ಬ್ರಹ್ಮಾಸ್ತ್ರವನ್ನು (ವೇದಮಯವಾದ ಅಸ್ತ್ರವನ್ನು) ಸಂಪಾದಿಸಿದೆನು. ಅದನ್ನು ತಿಳಿದ ಅವರು ನಿನಗೆ ಅಂತ್ಯಕಾಲದಲ್ಲಿ ಇದು ಪ್ರತಿಭಾಸವಾಗುವುದಿಲ್ಲ ಎಂದು ಹೇಳಿದರು.
ಮಹಾಪರಾಧೇ ಹ್ಯಪಿ ಯನ್ನ ತೇನ

ಮಹರ್ಷಿಣಾಽಹಂ ಗುರುಣಾ ಚ ಶಪ್ತಃ |
ಶಕ್ತಃ ಪ್ರದಗ್ಧುಂ ಹ್ಯತಿತಿಗ್ಮತೇಜಾಃ
ಸಸಾಗರಾಮಪ್ಯವನಿಂ ಮಹರ್ಷಿಃ ||3||
ನಾನು ಮಹಾಪರಾಧವನ್ನು ಮಾಡಿದ್ದರೂ ಸಹ ಮಹರ್ಷಿಗಳೂ ಮತ್ತು ಗುರುಗಳೂ ಆದ ಅವರು ನನಗೆ ಶಾಪವನ್ನು ನೀಡಲಿಲ್ಲ. ಅತಿತೀಕ್ಷ್ಣವಾದ ಸಾಮರ್ಥ್ಯವುಳ್ಳ ಆ ಮಹರ್ಷಿಗಳು ಸಾಗರಸಹಿತವಾದ ಭೂಮಿಯನ್ನೂ ಸುಟ್ಟು ಬೂದಿ ಮಾಡಲು ಸಮರ್ಥರಾದವರು.
ಪ್ರಸಾದಿತಂ ಹ್ಯಸ್ಯ ಮನೋ ಮಯಾಽಭೂತ್
ಶುಶ್ರೂಷಯಾ ಸ್ವೇನ ಚ ಪೌರುಷೇಣ |
ತದಸ್ತಿ ಚಾಸ್ತ್ರಂ ಮಮ ಚಾವಶೇಷಂ
ತಸ್ಮಾತ್ ಸಮರ್ಥೋಽಸ್ಮಿ ಮಮೈಷ ಭಾರಃ ||4||
ಆಗ ನಾನು ಅವರನ್ನು ನನ್ನ ಶುಶ್ರೂಷೆಯಿಂದಲೂ ಮತ್ತು ಭೃತ್ಯಜನರು ಮಾಡುವ ಪರಿಚಾರಿಕೆಯಿಂದಲೂ ಸಂತೋಷಗೊಳಿಸಿದೆ. ಆ ಅಸ್ತ್ರವು ನನ್ನಲ್ಲಿ ಇನ್ನೂ ಹಾಗೆಯೇ ಉಳಿದಿದೆ. ಆದ್ದರಿಂದ ಸಮರ್ಥನಾಗಿದ್ದೇನೆ. ಯುದ್ಧದಲ್ಲಿ ಪಾಂಡವರನ್ನು ಗೆಲ್ಲುವುದು ನನ್ನ ಭಾರ.
ನಿಮೇಷಮಾತ್ರಾತ್ ತಮೃಷಿಪ್ರಸಾದಾತ್
ಅವಾಪ್ಯ ಪಾಂಚಾಲಕರೂಶಮತ್ಸ್ಯಾನ್ |
ನಿಹತ್ಯ ಪಾರ್ಥಾನ್ ಸಹ ಪುತ್ರಪೌತ್ರೈಃ
ಲೋಕಾನಹಂ ಶತ್ರುಜನಾನ್ ಪ್ರಪತ್ಸ್ಯೇ ||5||
ನಾನು ಪಾಂಚಾಲ, ಕರೂಶ, ಮತ್ಸ್ಯರ ಸೇನೆಯನ್ನು ಸಂಧಿಸಿ, ಆ ಋಷಿಗಳ ಅನುಗ್ರಹದಿಂದ ಒಂದು ನಿಮಿಷದಲ್ಲಿ ಪುತ್ರಪೌತ್ರ ಸಹಿತರಾದ ಪಾಂಡವರನ್ನು ಕೊಂದು ಶತ್ರುಗಳ ವಧೆಯಿಂದ ಉಂಟಾದ ಶುಭಲೋಕವನ್ನು ಹೊಂದುವೆನು.
ಪಿತಾಮಹಸ್ತಿಷ್ಠತು ತೇ ಸಮೀಪೇ
ದ್ರೋಣಶ್ಚ ಸರ್ವೇ ಚ ನರೇಂದ್ರಮುಖ್ಯಾಃ |
ಋಷಿಪ್ರಸಾದೇನ ಬಲೇನ ಗತ್ವಾ
ಪಾರ್ಥಾನ್ ಹನಿಷ್ಯಾಮಿ ಮಮೈಷ ಭಾರಃ ||6||
ಪಿತಾಮಹರಾದ ಭೀಷ್ಮರೂ, ದ್ರೋಣರೂ ಮತ್ತು ಪ್ರಧಾನರಾದ ರಾಜರೆಲ್ಲರೂ ನಿನ್ನ ಸಮೀಪದಲ್ಲಿಯೇ ಇರಲಿ. ಪರಶುರಾಮಋಷಿಗಳ ಅನುಗ್ರಹದಿಂದ ನಾನು ಸೈನ್ಯವನ್ನು ತೆಗೆದುಕೊಂಡು ಹೋಗಿ ಪಾಂಡವರನ್ನು ಕೊಲ್ಲುವೆನು. ಇದು ನನ್ನ ಜವಾಬ್ದಾರಿ.
ವೈಶಂಪಾಯನಃ
ಏವಂ ಬ್ರುವಂತಂ ತಮುವಾಚ ಭೀಷ್ಮಃ
ಕಿಂ ಕತ್ಥಸೇ ಕಾಲಪರೀತಬುದ್ಧೇ |
ನ ಕರ್ಣ ಜಾನಾಸಿ ಯಥಾ ಪ್ರಧಾನೇ
ಹತೇ ಹತಾಃ ಸ್ಯುರ್ಧೃತರಾಷ್ಟ್ರಪುತ್ರಾಃ ||7||
ವೈಶಂಪಾಯನ ಹೀಗೆ ಮಾತನಾಡುತ್ತಿದ್ದ ಕರ್ಣನನ್ನು ಕುರಿತು ಭೀಷ್ಮರು, ಕಾಲದಿಂದ ಗ್ರಸ್ತವಾದ ಬುದ್ಧಿಯುಳ್ಳವನೇ, ಏಕೆ ನಿನ್ನನ್ನು ನೀನು ಹೊಗಳಿಕೊಳ್ಳುತ್ತಿದ್ದೀಯೆ? ಪ್ರಧಾನಪುರುಷನಾದ ನೀನು ಹತನಾದರೆ ಎಲೈ ಕರ್ಣನೇ, ಧೃತರಾಷ್ಟ್ರ ಪುತ್ರರೆಲ್ಲರೂ ಹತರಾಗುವರು ಎಂಬುದನ್ನು ನೀನು ತಿಳಿಯುತ್ತಿಲ್ಲ.
ಯತ್ ಖಾಂಡವಂ ದಾಹಯತಾ ಕೃತಂ ಹಿ
ಕೃಷ್ಣದ್ವಿತೀಯೇನ ಧನಂಜಯೇನ |
ಶ್ರುತ್ವೈವ ತತ್ ಕರ್ಮ ನಿಯಂತುಮಾತ್ಮಾ
ಯುಕ್ತಸ್ತ್ವಯಾ ವೈ ಸಹಬಾಂಧವೇನ ||8||
ಖಾಂಡವದಹನವನ್ನು ಮಾಡುವ ಕೃಷ್ಣನ ಜೊತೆಯಲ್ಲಿದ್ದ ಅರ್ಜುನನು ಏನು ಮಾಡಿದನೋ ಆ ಕಾರ್ಯವನ್ನು ತಿಳಿದು ನೀನೂ ನಿನ್ನ ಬಂಧುಗಳೂ ನಿಮ್ಮ ನಾಲಿಗೆಯನ್ನು ಮತ್ತು ಮನಸ್ಸನ್ನು ನಿಯಂತ್ರಿಸುವುದು ಒಳ್ಳೆಯದು.
ಯಾಂ ಚಾಪಿ ಶಕ್ತಿಂ ತ್ರಿದಶಾಧಿಪಸ್ತೇ
ದದೌ ಮಹಾತ್ಮಾ ಭಗವಾನ್ ಮಹೇಂದ್ರಃ |
ಭಸ್ಮೀಕೃತಾಂ ತಾಂ ಸಮರೇ ವಿಶೀರ್ಣಾಂ
ಚಕ್ರಾಹತಾಂ ದ್ರಕ್ಷ್ಯಸಿ ಕೇಶವೇನ ||9||
ಮಹಾತ್ಮನೂ, ಪೂಜ್ಯನೂ ಮತ್ತು ಸ್ವರ್ಗಾಧಿಪತಿಯೂ ಆದ ದೇವೇಂದ್ರನು ಯಾವ ಶಕ್ತಿಯನ್ನು ನಿನಗೆ ನೀಡಿದ್ದಾನೆಯೋ ಆ ಆಯುಧವು ಕೃಷ್ಣನ ಚಕ್ರಾಯುಧದಿಂದ ಭಸ್ಮೀಕೃತವಾಗಿ ಯುದ್ಧದಲ್ಲಿ ಪುಡಿಪುಡಿಯಾಗುವುದನ್ನು ನೀನು ನೋಡುವಿ.
ಯಸ್ತೇ ಶರಃ ಸರ್ಪಮುಖೋ ವಿಭಾತಿ
ಸದಾಽಗ್ರ್ಯಮಾಲ್ಯೈರ್ಮಹಿತಃ ಪ್ರಯತ್ನಾತ್ |
ಸ ಪಾಂಡುಪುತ್ರಾಭಿಹತಃ ಶರೌಘೈಃ
ಸಹ ತ್ವಯಾ ಯಾಸ್ಯತಿ ಕರ್ಣ ನಾಶಮ್ ||10||
ನಿನ್ನ ಬಳಿ ನೀನು ಪ್ರಯತ್ನಪೂರ್ವಕವಾಗಿ ಶ್ರೇಷ್ಠವಾದ ಪುಷ್ಪಗಳಿಂದ ಪೂಜಿಸುತ್ತಿರುವ ಸರ್ಪಮುಖವುಳ್ಳ ಬಾಣವಿದೆಯಷ್ಟೆ! ಅದು

ಪಾಂಡುಪುತ್ರನಾದ ಅರ್ಜುನನ ಬಾಣಸಮೂಹದಿಂದ ಹೊಡೆಯಲ್ಪಟ್ಟು ಎಲೈ ಕರ್ಣನೇ, ನಿನ್ನ ಜೊತೆಯಲ್ಲಿಯೇ ನಾಶವನ್ನು ಹೊಂದುವುದು.

ಬಾಣಸ್ಯ ಭೌಮಸ್ಯ ಚ ಕರ್ಣ ಹಂತಾ
ಕಿರೀಟಿನಂ ರಕ್ಷತಿ ವಾಸುದೇವಃ |
ಯಸ್ತ್ವದ್ವಿಶಾನಾಂ ಚ ಗರೀಯಸಾಂ ಚ
ಹಂತಾ ರಿಪೂಣಾಂ ತುಮುಲೇ ಪ್ರಗಾಢೇ ॥11॥

ಎಲೈ ಕರ್ಣನೇ, ಬಾಣಾಸುರನನ್ನು ಮತ್ತು ನರಕಾಸುರನನ್ನು ಸಂಹಾರ ಮಾಡಿದ ಕೃಷ್ಣನು ಅರ್ಜುನನನ್ನು ರಕ್ಷಿಸುತ್ತಾನೆ. ಅವನು ನಿನ್ನಂತಹ ಮತ್ತು ನಿನಗಿಂತಲೂ ದೊಡ್ಡವರಾದ ಶತ್ರುಗಳನ್ನು ಘೋರವಾದ ಯುದ್ಧದಲ್ಲಿ ಕೊಲ್ಲುವನು.

ಕರ್ಣಃ

ಅಸಂಶಯಂ ವೃಷ್ಣಿಪತಿರ್ಯಥೋಕ್ತಃ
ತತಶ್ಚ ಭೂಯಾಂಶ್ಚ ತತೋ ಮಹಾತ್ಮಾ |
ಅಹಂ ಯದುಕ್ತಃ ಪರುಷಂ ತು ಕಿಂಚಿತ್
ಪಿತಾಮಹಸ್ತಸ್ಯ ಫಲಂ ಶೃಣೋತು ॥12॥

ಕರ್ಣ ವೃಷ್ಣಿಪತಿಯಾದ ಕೃಷ್ಣನು ನೀನು ಹೇಳಿದಂತೆಯೇ ಇದ್ದಾನೆ ಎಂಬ ವಿಷಯದಲ್ಲಿ ಸಂಶಯವಿಲ್ಲ. ಆದರೆ ನಾನು ಅವನಿಗಿಂತಲೂ ಅಧಿಕವಾದ ಶಕ್ತಿಯನ್ನು ಹೊಂದಿದವನು. ಆದ್ದರಿಂದ ನಾನೂ ಮಹಾತ್ಮನಾಗಿದ್ದೇನೆ. ಪಿತಾಮಹರಾದ ಭೀಷ್ಮರು ನನಗೆ ಯಾವ ಕ್ರೂರವಾದ ಮಾತುಗಳನ್ನು ಆಡಿದ್ದಾರೆಯೋ ಅದರ ಫಲವನ್ನು ಕೇಳುವವನಾಗು.

ನ್ಯಸ್ಯಾಮಿ ಶಸ್ತ್ರಾಣಿ ನ ಜಾತು ಸಂಖ್ಯೇ
ಪಿತಾಮಹೋ ದ್ರಕ್ಷ್ಯತಿ ಮಾಂ ಸಭಾಯಾಮ್ |
ತ್ವಯಿ ಪ್ರಶಾಂತೇ ತು ಮಮ ಪ್ರಭಾವಂ
ದ್ರಕ್ಷ್ಯಂತಿ ಸರ್ವೇ ಭುವಿ ಭೂಮಿಪಾಲಾಃ ॥13॥

ನಾನು ಯುದ್ಧದಲ್ಲಿ ಎಂದೂ ಶಸ್ತ್ರವನ್ನು ಕೆಳಗಿಡುವುದಿಲ್ಲ. ಪಿತಾಮಹರಾದ ಭೀಷ್ಮರು ನನ್ನನ್ನು ಸಭೆಯಲ್ಲಿ ಮಾತ್ರ ನೋಡುವರು. ಎಲೈ ಭೀಷ್ಮರೇ, ನೀವು ನಾಶ ಹೊಂದಿದ ಮೇಲೆ ಯುದ್ಧದಲ್ಲಿ ನನ್ನ ಸಾಮರ್ಥ್ಯವನ್ನು ಉಳಿದ ರಾಜರು ನೋಡುವರು.

ವೈಶಂಪಾಯನಃ

ಇತ್ಯೇವಮುಕ್ತ್ವಾ ಸ ಮಹಾಧನುಷ್ಮಾನ್
ಹಿತ್ವಾ ಸಭಾಂ ಸ್ವಂ ಭವನಂ ಜಗಾಮ |
ಭೀಷ್ಮಸ್ತು ದುರ್ಯೋಧನಮೇವ ರಾಜನ್
ಮಧ್ಯೇ ಕುರೂಣಾಂ ಪ್ರಹಸನ್ನುವಾಚ ॥14॥

ಹೀಗೆ ಹೇಳಿ ಮಹಾಧನುರ್ಧಾರಿಯಾದ ಕರ್ಣನು ಸಭೆಯನ್ನು ತ್ಯಜಿಸಿ, ತನ್ನ ಮನೆಗೆ ಹೋದನು. ಎಲೈ ರಾಜನೇ, ಭೀಷ್ಮರಾದರೂ ಕುರುಸಭೆಯ ಮಧ್ಯದಲ್ಲಿ ದುರ್ಯೋಧನನನ್ನೇ ಕುರಿತು ನಗುತ್ತಾ ಮಾತನಾಡಿದರು.

ಸತ್ಯಪ್ರತಿಜ್ಞಃ ಕಿಲ ಸೂತಪುತ್ರಃ
ತಥಾ ಸ ಭಾರಂ ವಿಷಹೇತ ಕಸ್ಮಾತ್ |
ವ್ಯೂಹಂ ಪ್ರತಿವ್ಯೂಹ್ಯ ಶಿರಾಂಸಿ ಭಿತ್ತ್ವಾ
ಲೋಕಕ್ಷಯಂ ಪಶ್ಯತು ಭೀಮಸೇನಾತ್ ॥15॥

ಸೂತಪುತ್ರನಾದ ಕರ್ಣನು ಸತ್ಯಪ್ರತಿಜ್ಞೆಯುಳ್ಳವನಷ್ಟೆ? ಆದ್ದರಿಂದ ಅವನು ಏಕೆ ಯುದ್ಧದ ಭಾರವನ್ನು ಹೊತ್ತಾನು? ನಮ್ಮ ವ್ಯೂಹಕ್ಕೆ ಪ್ರತಿಯಾಗಿ ವ್ಯೂಹವನ್ನು ರಚಿಸಿ, ಶತ್ರುಗಳ ಶಿರಸ್ಸನ್ನು ಒಡೆದು, ಭೀಮಸೇನನು ಲೋಕಕ್ಷಯವನ್ನು ಉಂಟುಮಾಡುವುದನ್ನು ಅವನು ನೋಡಲಿ.

ಆವಂತ್ಯಕಾಳಿಂಗಜಯದ್ರಥೇಷು
ಚೇದಿಧ್ವಜೇ ತಿಷ್ಠತಿ ಬಾಹ್ಲಿಕೇ ಚ |
ಅಹಂ ಹನಿಷ್ಯಾಮಿ ಸದಾ ಪರೇಷಾಂ
ಸಹಸ್ರಶಶ್ಚಾಯುತಶಶ್ಚ ಯೋಧಾನ್ ॥16॥

ಅವಂತಿ, ಕಳಿಂಗದೇಶಗಳ ರಾಜರೂ, ಜಯದ್ರಥನೂ, ಚೇದಿರಾಜನಾದ ಧೃಷ್ಟಕೇತುವೂ ಮತ್ತು ಬಾಹ್ಲಿಕ ರಾಜನೂ ಈ ಯುದ್ಧಭೂಮಿಯಲ್ಲಿರುವಾಗಲೇ ನಾನು ಶತ್ರುಗಳ ಸೈನ್ಯದ ಯೋಧರನ್ನು ಸಹಸ್ರಸಂಖ್ಯೆಯಲ್ಲಿ, ಹತ್ತುಸಹಸ್ರಸಂಖ್ಯೆಯಲ್ಲಿ ಕೊಲ್ಲುವೆನು.

ಯದ್ಯೈವ ರಾಮೇ ಭಗವತ್ಯನಿಂದ್ಯೇ
ಬ್ರಹ್ಮ ಬ್ರುವಾಣಃ ಕೃತವಾಂಸ್ತದಸ್ತ್ರಮ್ |
ತದ್ಯೈವ ಧರ್ಮಶ್ಚ ತಪಶ್ಚ ನಷ್ಟಂ
ವೈಕರ್ತನಸ್ಯಾಧಮಪೂರುಷಸ್ಯ ॥17॥

ಕರ್ಣನು ಭಗವಂತನೂ ಮತ್ತು ದೋಷದೂರನೂ ಆದ ಪರಶುರಾಮನಲ್ಲಿ ನಾನು ಬ್ರಾಹ್ಮಣ ಎಂದು ಹೇಳಿ ಯಾವಾಗ ಆ ಅಸ್ತ್ರವನ್ನು ಸ್ವೀಕರಿಸಿದನೋ ಆಗಲೇ ಅಧಮ ಪುರುಷನಾದ ಕರ್ಣನ ಧರ್ಮವೂ ಮತ್ತು ತಪಸ್ಸೂ ನಷ್ಟವಾಯಿತು.

ವೈಶಂಪಾಯನಃ

ತಥೋಕ್ತವಾಕ್ಯೇ ನೃಪತೀಂದ್ರ ಭೀಷ್ಮೇ
ನಿಕ್ಷಿಪ್ಯ ಶಸತ್ರಾಣಿ ಗತೇ ತು ಕರ್ಣೇ |
ವೈಚಿತ್ರವೀರ್ಯಸ್ಯ ಸುತೋಽಲ್ಪಬುದ್ಧಿಃ
ದುರ್ಯೋಧನಃ ಶಾಂತನವಂ ಬಭಾಷೇ ॥18॥
ವೈಶಂಪಾಯನ ಎಲೈ ರಾಜನೇ, ಕರ್ಣನು ಶಸ್ತ್ರವನ್ನು ಕೆಳಗಿಟ್ಟು ಹೋದಮೇಲೆ, ಭೀಷ್ಮರು ಹಾಗೆ ಮಾತನಾಡುತ್ತಿರಲು, ಅಲ್ಪಬುದ್ಧಿಯುಳ್ಳ ಧೃತರಾಷ್ಟ್ರಪುತ್ರನಾದ ದುರ್ಯೋಧನನು ಭೀಷ್ಮರನ್ನು ಕುರಿತು ಮಾತನಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ನಾಲ್ಕನೆಯ ಅಧ್ಯಾಯ
ಭೀಷ್ಮರು ಹೇಳಿದ ಪಾಂಡವರ ಶ್ರೇಷ್ಠತೆಯನ್ನು ಖಂಡಿಸಿದ ದುರ್ಯೋಧನನಿಂದ ಕರ್ಣಾದಿಗಳ ಸಹಾಯದಿಂದ ತಾನೊಬ್ಬನೇ ಯುದ್ಧಮಾಡುವುದಾಗಿ ಕಥನ.
ದುರ್ಯೋಧನಃ
ಸದೃಶಾನಾಂ ಮನುಷ್ಯೇಷು ಸರ್ವೇಷಾಂ ತುಲ್ಯಜನ್ಮನಾಮ್ |
ಕಥಮೇಕಾಂತತಸ್ತೇಷಾಂ ಪಾರ್ಥಾನಾಂ ಮನ್ಯಸೇ ಜಯಮ್ ॥1॥
ದುರ್ಯೋಧನ ಎಲ್ಲ ಮನುಷ್ಯರೂ ಮನುಷ್ಯಜಾತಿಯಿಂದ ಸಮಾನರಾಗಿರುವಾಗ ನೀನು ಪಾಂಡವರಿಗೇ ಏಕೆ ನಿಯಮೇನ ಜಯವನ್ನು ಭಾವಿಸುತ್ತೀಯೆ?
ವಯಂ ಚ ತೇಽಪಿ ತುಲ್ಯಾ ವೈ ವೀರ್ಯೇಣ ಚ ಪರಾಕ್ರಮೈಃ |
ಸಮೇನ ವಯಸಾ ಚೈವ ಪ್ರಜ್ಞಯಾ ಚ ಶ್ರುತೇನ ಚ ॥2॥
ನಾವು ಮತ್ತು ಅವರು ಶೌರ್ಯದಲ್ಲಿಯೂ, ಪರಾಕ್ರಮದಲ್ಲಿಯೂ, ವಯಸ್ಸಿನಲ್ಲಿಯೂ, ಪ್ರಜ್ಞೆಯಲ್ಲಿಯೂ ಮತ್ತು ವಿದ್ಯೆಯಲ್ಲಿಯೂ ಸಮರಾದವರು.
ಅಸ್ತ್ರೇಷು ರಥಚರ್ಯಾಸು ಶೀಘ್ರತ್ವೇ ಕೌಶಲೇ ತಥಾ |
ಸರ್ವೇ ಸ್ಮ ಸಮಜಾತೀಯಾಃ ಸರ್ವೇ ಸ್ಮ ಸಮಯೋನಯಃ ॥3॥
ಪಿತಾಮಹ ವಿಜಾನೀಷೇ ಪಾರ್ಥೇಷು ವಿಜಯಂ ಕಥಮ್ ॥4॥
ಅಸ್ತ್ರಗಳಲ್ಲಿ, ರಥಚರ್ಯಗಳಲ್ಲಿ, ವೇಗದಲ್ಲಿ, ಕೌಶಲದಲ್ಲಿ ನಾವೆಲ್ಲರೂ ಒಂದೇ ಯೋನಿಯವರು ಮತ್ತು ಒಂದೇ ಜಾತಿಯವರು. ಹೀಗಿರುವಾಗ ತಾತನಾದ ಭೀಷ್ಮನೇ, ಪಾಂಡವರೇ ಗೆಲ್ಲುವರೆಂದು ನೀನು ಹೇಗೆ ತಿಳಿಯುತ್ತೀಯೆ?
ನಾಹಂ ಭವತಿ ನ ದ್ರೋಣೇ ನ ಕೃಪೇ ನ ಚ ಬಾಹ್ಲಿಕೇ |
ಅನ್ಯೇಷು ಚ ನರೇಂದ್ರೇಷು ಪರಾಕ್ರಮ್ಯ ಸಮಾರಭೇ ॥5॥
ನಿನ್ನಲ್ಲಾಗಲೀ, ದ್ರೋಣರಲ್ಲಾಗಲೀ, ಕೃಪರಲ್ಲಾಗಲೀ, ಬಾಹ್ಲಿಕರಾಜನಲ್ಲಾಗಲೀ ಅಥವಾ ಬೇರೆ ರಾಜರಲ್ಲಾಗಲೀ ಭಾರವನ್ನು ಹಾಕಿ ಯುದ್ಧವನ್ನು ಆರಂಭಿಸುತ್ತಿಲ್ಲ.
ಅಹಂ ವೈಕರ್ತನಃ ಕರ್ಣೋ ಭ್ರಾತಾ ದುಃಶಾಸನಶ್ಚ ಮೇ |
ಪಾಂಡವಾನ್ ಸಮರೇ ಪಂಚ ಹನಿಷ್ಯಾಮಃ ಶಿತೈಃ ಶರೈಃ ॥6॥
ನಾನು, ವೈಕರ್ತನನಾದ ಕರ್ಣ ಮತ್ತು ತಮ್ಮನಾದ ದುಶ್ಶಾಸನ - ಈ ಮೂವರು ಯುದ್ಧದಲ್ಲಿ ನಮ್ಮ ಹರಿತವಾದ ಬಾಣಗಳಿಂದ ಪಂಚಪಾಂಡವರನ್ನು ಕೊಲ್ಲುವೆವು.
ತತೋ ರಾಜನ್ ಮಹಾಯಜ್ಞೈರ್ವಿವಿಧೈರ್ಭೂರಿದಕ್ಷಿಣೈಃ |
ಬ್ರಾಹ್ಮಣಾಂಸ್ತರ್ಪಯಿಷ್ಯಾಮಿ ಗೋಭಿರಶ್ವೈರ್ಧನೇನ ಚ ॥7॥
ರಾಜನೇ, ಅನಂತರ ಭೂರಿದಕ್ಷಿಣೆಗಳಿಂದ ಕೂಡಿದ ಅನೇಕ ವಿಧವಾದ ಮಹಾಯಜ್ಞಗಳನ್ನು ಮಾಡಿ ಗೋದಾನ, ಅಶ್ವದಾನ ಮತ್ತು ಧನದಾನಗಳನ್ನು ಮಾಡಿ, ಬ್ರಾಹ್ಮಣರನ್ನು ಸಂತೋಷಪಡಿಸುವೆನು.
ಯದಾ ಪರಿಕರಿಷ್ಯಂತಿ ಐಣೇಯಾನಿವ ತಂತುನಾ |
ಅತರಿತ್ರಾನಿವ ಜಲೇ ಬಾಹುಭಿರ್ಮಾಮಕಾ ರಣೇ ॥8॥
ಪಶ್ಯತಸ್ತೇ ಪರಾಂಸ್ತತ್ರ ರಥನಾಗಸಮಾಕುಲಾನ್ |
ತದಾ ದರ್ಪಂ ವಿಮೋಕ್ಷ್ಯಂತಿ ಪಾಂಡವಾಃ ಸ ಚ ಕೇಶವಃ ॥9॥
ನಿನ್ನ ಕಣ್ಣೆದುರಿಗೆ ಗಜಾಶ್ವರಥಸಹಿತರಾದ ಪಾಂಡವರು ನನ್ನ ಸೈನ್ಯದಿಂದ ಸುತ್ತುವರಿಯಲ್ಪಟ್ಟು, ಬಲೆಯಿಂದ ಜಿಂಕೆಯ ಮರಿಗಳನ್ನು ಸುತ್ತುವರಿದಂತೆ, ದೋಣಿಯಿಲ್ಲದಿರುವ ನೀರಿನಲ್ಲಿ ಸಂಕಟಕ್ಕೆ ಒಳಗಾದಂತೆ ಪಾಂಡವರೂ ಮತ್ತು ಕೃಷ್ಣನೂ ಸಿಲುಕುವರು. ಆಗ ಅವರು ತಮ್ಮ ದರ್ಪವನ್ನು ತ್ಯಜಿಸುವರು.
ಸುಖಾನ್ಯವಾಪ್ಯ ಸಹಿತಾಃ ಕೃತ್ವಾ ಕರ್ಮ ಸುದುಷ್ಕರಮ್ |
ವಿಸ್ರಬ್ಧಾಸ್ತು ಭವಿಷ್ಯಾಮಃ ಪ್ರಾಪ್ತೇ ಕಾಲೇ ಗತಜ್ವರಾಃ ॥10॥
ನಾವಾದರೋ ದುಷ್ಕರವಾದ ಕಾರ್ಯವನ್ನು ಮಾಡಿ, ಯೋಗ್ಯವಾದ ಕಾಲದಲ್ಲಿ ಎಲ್ಲಾ ಸಂತಾಪಗಳನ್ನೂ ಕಳೆದುಕೊಂಡು, ಒಟ್ಟಿಗೆ

ಸುಖವನ್ನು ಹೊಂದಿ ನಿಶ್ಚಿಂತರಾಗಿರುವೆವು.
ವೈಶಂಪಾಯನಃ
ಅಥಾಬ್ರವೀನ್ಮಹಾರಾಜೋ ಧೃತರಾಷ್ಟ್ರಃ ಸುದುರ್ಮನಾಃ |
ವಿದುರಂ ವಿದುಷಾಂ ಶ್ರೇಷ್ಠಂ ಸರ್ವಪಾರ್ಥಿವಸನ್ನಿಧೌ ॥11॥
ಮೋಹಿತೋ ಮೃತ್ಯುಪಾಶೇನ ಕಾಲಸ್ಯ ವಶಮಾಗತಃ |
ತಾತ ಕರ್ಣೇನ ಸಹಿತಃ ಪುತ್ರೋ ದುರ್ಯೋಧನೋ ಮಮ ॥12॥
ವೈಶಂಪಾಯನ ಆಗ ಬಹಳ ದುಃಖದಿಂದ ಕೂಡಿದ ಮಹಾರಾಜನಾದ ಧೃತರಾಷ್ಟ್ರನು ಸರ್ವರಾಜರ ಸನ್ನಿಧಿಯಲ್ಲಿ, ವಿದ್ವಾಂಸರಲ್ಲಿ ಶ್ರೇಷ್ಠನಾದ ವಿದುರನನ್ನು ಕುರಿತು ಪ್ರೀತಿಪಾತ್ರನೇ, ಕರ್ಣನಿಂದ ಸಹಿತನಾಗಿ ನನ್ನ ಪುತ್ರನಾದ ದುರ್ಯೋಧನನು ಮೃತ್ಯುಪಾಶದಿಂದ ಮೋಹಿತನಾಗಿ ಕಾಲಕ್ಕೆ ವಶನಾಗಿದ್ದಾನೆ, ಎಂದನು.
ವಿದುರಃ
ಇಹ ನಿಶ್ರೇಯಸಂ ಪ್ರಾಹುರ್ವೃದ್ಧಾ ನಿಶ್ಚಯದರ್ಶಿನಃ |
ಬ್ರಾಹ್ಮಣಸ್ಯ ವಿಶೇಷೇಣ ದಮೋ ಧರ್ಮಃ ಸನಾತನಃ ॥13॥
ವಿದುರ ತತ್ತ್ವಜ್ಞಾನವುಳ್ಳ ಹಿರಿಯರು ಇಲ್ಲಿ ಬ್ರಾಹ್ಮಣನಾದವನಿಗೆ ವಿಶೇಷವಾಗಿ ದಮ ಮತ್ತು ಸನಾತನ ಧರ್ಮವು ಶ್ರೇಯಸ್ಕರವೆಂದು ಹೇಳುತ್ತಾರೆ.
ತಸ್ಯ ದಾನಂ ಕ್ಷಮಾ ಸಿದ್ಧಿರ್ಯಥಾವದುಪಪದ್ಯತೇ |
ದಮೋ ದಾನಂ ತಪೋ ಜ್ಞಾನಮಧೀತಂ ಚಾನುವರ್ತತೇ ॥14॥
ಅಂತಹ ಬ್ರಾಹ್ಮಣನಿಗೆ ದಾನ, ಕ್ಷಮೆ ಮತ್ತು ಸಿದ್ಧಿಗಳು ಯೋಗ್ಯವಾಗಿ ಉಂಟಾಗುತ್ತವೆ. ದಮ, ದಾನ, ತಪಸ್ಸು, ಜ್ಞಾನ ಇವುಗಳು ಬ್ರಾಹ್ಮಣನ ಅಧ್ಯಯನವನ್ನು ಅವಲಂಬಿಸಿ ಇರುತ್ತವೆ.
ದಮಸ್ತೇಜೋ ವರ್ಧಯತಿ ಪವಿತ್ರಂ ದಮ ಉತ್ತಮಮ್ |
ವಿಪ್ರಾತ್ಮಾ ವೃದ್ಧತೇಜಾಸ್ತು ಪುರುಷೋ ವಿಂದತೇ ಮಹತ್ ॥15॥
ದಮವು ತೇಜಸ್ಸನ್ನು ಹೆಚ್ಚಿಸುತ್ತದೆ. ದಮವು ಶ್ರೇಷ್ಠವಾದುದು ಮತ್ತು ಪವಿತ್ರವಾದುದು. ದಮವನ್ನು ಹೊಂದಿದ ಬ್ರಾಹ್ಮಣನು ಅಭಿವೃದ್ಧವಾದ ತೇಜಸ್ಸನ್ನು ಹೊಂದಿದವನಾಗಿ ಶ್ರೇಷ್ಠವಾದ ಪುರುಷಾರ್ಥವನ್ನು ಸಂಪಾದಿಸುತ್ತಾನೆ.
ಕ್ರವ್ಯಾದ್ಭ್ಯಃ ಇವ ಭೂತಾನಾಮದಾಂತೇಭ್ಯಃ ಸದಾ ಭಯಮ್ |
ತೇಷಾಂ ಚ ಪ್ರತಿಷೇಧಾರ್ಥಂ ಕ್ಷತ್ರಂ ಸೃಷ್ಟಂ ಸ್ವಯಂಭುವಾ ॥16॥
ಮಾಂಸಾಹಾರಿ ಪ್ರಾಣಿಗಳಿಗೆ ಉಳಿದ ಪ್ರಾಣಿಗಳು ಹೆದರಿದಂತೆ ದಮವಿಲ್ಲದ ಮನುಷ್ಯರಿಂದ ಸದಾ ಭಯದ ಪ್ರಸಕ್ತಿ ಇದೆ. ಅಂತಹವರನ್ನು ತಡೆಯಲು ಬ್ರಹ್ಮದೇವರು ಕ್ಷತ್ರಿಯರನ್ನು ಸೃಷ್ಟಿಸಿದ್ದಾರೆ.
ಆಶ್ರಮೇಷು ಚತುರ್ಷ್ವಾಹುರ್ದಮಮೇವೋತ್ತಮಂ ವ್ರತಮ್ |
ತಸ್ಯ ಲಿಂಗಂ ಪ್ರವಕ್ಷ್ಯಾಮಿ ಯೇಷಾಂ ಸಮುದಯೋ ದಮಃ ॥17॥
ನಾಲ್ಕು ಆಶ್ರಮಗಳಲ್ಲಿಯೂ ದಮವೇ ಶ್ರೇಷ್ಠವಾದ ವ್ರತವೆಂದು ಹೇಳುತ್ತಾರೆ. ಯಾರಿಗೆ ದಮವಿದೆಯೋ ಅವರ ಚಿಹ್ನೆಗಳನ್ನು ಹೇಳುವೆನು.
ಕ್ಷಮಾ ಧೃತಿರಹಿಂಸಾ ಚ ಸಮತಾ ಸತ್ಯಮಾರ್ಜವಮ್ |
ಇಂದ್ರಿಯಾಭಿಜಯೋ ಧೈರ್ಯಂ ಮಾರ್ದವಂ ಹ್ರೀರಚಾಪಲಮ್ ॥
ಅಕಾರ್ಪಣ್ಯಸಂರಂಭಃ ಸಂತೋಷಃ ಶ್ರದ್ದಧಾನತಾ |
ಏತಾನಿ ಯಸ್ಯ ರಾಜೇಂದ್ರ ಸ ದಾಂತಃ ಪುರುಷಃ ಸ್ಮೃತಃ ॥19॥
ಕ್ಷಮೆ, ಸ್ಥೈರ್ಯ, ಅಹಿಂಸೆ, ಸಮತ್ವ, ಸತ್ಯ, ಆರ್ಜವ (ಸರಳತೆ), ಇಂದ್ರಿಯಜಯ, ಧೈರ್ಯ, ಮಾರ್ದವ, ನಾಚಿಕೆ, ಅಚಾಂಚಲ್ಯ, ಅದೈನ್ಯ, ಕೋಪಾಭಾವ, ಸಂತೋಷ, ಶ್ರದ್ಧೆ. ಎಲೈ ರಾಜೇಂದ್ರನೇ, ಈ ಗುಣಗಳು ಯಾರಲ್ಲಿ ಇರುತ್ತವೆಯೋ ಅವನನ್ನು ದಮವುಳ್ಳ ಪುರುಷನೆಂದು ಕರೆಯುತ್ತಾರೆ.
ಕಾಮೋ ಲೋಭಶ್ಚ ದರ್ಪಶ್ಚ ಮನ್ಯುರ್ನಿದ್ರಾ ವಿಕತ್ಥನಮ್ |
ಮಾನ ಈರ್ಷ್ಯಾ ಚ ಶೋಕಶ್ಚ ನೈತದ್ ದಾಂತೋ ನಿಷೇವತೇ ॥20॥
ದಾಂತನಾದ ಪುರುಷನು ಕಾಮ, ಲೋಭ, ದರ್ಪ, ಕ್ರೋಧ, ನಿದ್ರೆ, ಆತ್ಮಶ್ಲಾಘನೆ, ಅಹಂಕಾರ, ಅಸೂಯೆ ಮತ್ತು ಶೋಕಗಳನ್ನು ಹೊಂದುವುದಿಲ್ಲ.
ಅಜಿಹ್ಮಮಶಠಂ ಶುದ್ಧಮೇತದ್ ದಾಂತಸ್ಯ ಲಕ್ಷಣಮ್ ॥21॥
ಅಲೋಲುಪಸ್ತಥಾಽಲ್ಪೇಪ್ಸುಃ ಕಾಮಾನಾಮವಿಚಿಂತಕಃ |
ಸಮುದ್ರಕಲ್ಪಃ ಪುರುಷಃ ಸ ದಾಂತಃ ಪರಿಕೀರ್ತಿತಃ ॥22॥
ವಕ್ರತೆಯಿಲ್ಲದೆ, ಶಾಠ್ಯವಿಲ್ಲದೆ ಶುದ್ಧನಾಗಿರುವುದು ದಾಂತನ ಲಕ್ಷಣ. ಇಂದ್ರಿಯ ಲೋಲುಪತೆ ಇಲ್ಲದೆ ಅಲ್ಪತೃಪ್ತನಾಗಿ, ಭೋಗವಿಷಯಗಳನ್ನು ಚಿಂತಿಸದೆ ಸಮುದ್ರದಂತೆ ಸ್ಥಿಮಿತನಾಗಿರುವ ಪುರುಷನು ದಾಂತನೆಂದು ಕರೆಯಲ್ಪಡುತ್ತಾನೆ.
ಸುವೃತ್ತಃ ಶೀಲಸಂಪನ್ನಃ ಪ್ರಸನ್ನಾತ್ಮಾಽಽತ್ಮವಿದ್ ಬುಧಃ |
ಪ್ರಾಪ್ಯೇಹ ಲೋಕೇ ಸಮ್ಮಾನಂ ಸ್ವರ್ಗತಿಂ ಪ್ರೇತ್ಯ ಗಚ್ಛತಿ ॥23॥
ಒಳ್ಳೆಯ ನಡತೆಯುಳ್ಳವನೂ, ಶೀಲಸಂಪನ್ನನೂ, ಪ್ರಸನ್ನವಾದ ಮನಸ್ಸುಳ್ಳವನೂ, ಪರಮಾತ್ಮಜ್ಞಾನವನ್ನು ಹೊಂದಿದವನೂ ಆದ ಬುಧನು ಈ ಲೋಕದಲ್ಲಿ ಸನ್ಮಾನವನ್ನು ಹೊಂದಿ ಮರಣಾನಂತರದಲ್ಲಿ ಸ್ವರ್ಗವನ್ನು ಪಡೆಯುತ್ತಾನೆ.

ಅಭಯಂ ಯಸ್ಯ ಭೂತೇಭ್ಯಃ ಸರ್ವೇಷಾಮಭಯಂ ಯತಃ |
ಸ ವೈ ಪರಿಣತಪ್ರಜ್ಞಃ ಪ್ರಖ್ಯಾತೋ ಮನುಜೋತ್ತಮಃ ||24||
ಯಾವನಿಗೆ ಎಲ್ಲಾ ಪ್ರಾಣಿಗಳೂ ಅಭಯವನ್ನು ನೀಡುತ್ತವೆಯೋ ಮತ್ತು ಯಾವನಿಂದ ಎಲ್ಲ ಪ್ರಾಣಿಗಳಿಗೂ ಅಭಯವಿದೆಯೋ ಅವನು ಪರಿಣತಪ್ರಜ್ಞನಾದ ಮನುಷ್ಯಶ್ರೇಷ್ಠನೆಂದು ಪ್ರಖ್ಯಾತನಾಗುವನು.
ಸರ್ವಭೂತಹಿತೋ ಮೈತ್ರಃ ತಸ್ಮಾನ್ನೋದ್ವಿಜತೇ ಜನಃ |
ಸಮುದ್ರ ಇವ ಗಂಭೀರಃ ಪ್ರಜ್ಞಾತೃಪ್ತಃ ಪ್ರಶಾಮ್ಯತಿ ||25||
ಸರ್ವಪ್ರಾಣಿಗಳ ಹಿತದಲ್ಲಿ ರತನಾಗಿ, ಎಲ್ಲರಲ್ಲಿಯೂ ಮೈತ್ರಿಯನ್ನು ಮಾಡಿ ಅವನು ಉದ್ವೇಗವನ್ನು ಹೊಂದುವುದಿಲ್ಲ. ಸಮುದ್ರದಂತೆ ಗಂಭೀರನಾಗಿದ್ದು ತನ್ನ ಪ್ರಜ್ಞೆಯಿಂದ ತೃಪ್ತನಾಗಿ ಶಾಂತನಾಗಿರುತ್ತಾನೆ.
ಕರ್ಮಣಾಽಽಚರಿತಂ ಪೂರ್ವಂ ಸದ್ಭಿರಾಚರಿತಂ ಚ ಯತ್ |
ತದೇವಾಸ್ಥಾಯ ಮೋದಂತೇ ದಾಂತಾಃ ಶಮಪರಾಯಣಾಃ ||26||
ಶಮ ಮತ್ತು ದಮ ಪರಾಯಣರಾದವರು ಪೂರ್ವಕಾಲೀನ ಸಜ್ಜನರು ಏನನ್ನು ಆಚರಿಸಿದರೋ ಅದನ್ನೇ ಆಚರಿಸಿ ಸಂತೋಷಪಡುತ್ತಾರೆ.
ನೈಷ್ಕರ್ಮ್ಯಂ ವಾ ಸಮಾಸ್ಥಾಯ ಜ್ಞಾನತೃಪ್ತೋ ಜಿತೇಂದ್ರಿಯಃ |
ಕಾಲಾಕಾಂಕ್ಷೀ ಚರನ್ ಲೋಕೇ ಬ್ರಹ್ಮಭೂಯಾಯ ಕಲ್ಪತೇ ||27||
ಅಥವಾ ಸಂನ್ಯಾಸವನ್ನಾದರೂ ಸ್ವೀಕಾರ ಮಾಡಿ ಜಿತೇಂದ್ರಿಯರಾಗಿ, ಜ್ಞಾನದಿಂದ ತೃಪ್ತರಾಗಿ, ತಮ್ಮ ಶರೀರಪಾತಸಮಯವನ್ನು ನಿರೀಕ್ಷಿಸುತ್ತಾ, ಭೂಮಿಯಲ್ಲಿ ಸಂಚರಿಸಿ ಶ್ರೇಷ್ಠನಾದ ಬ್ರಹ್ಮನನ್ನೇ ಪಡೆಯುತ್ತಾರೆ.
ಶಕುನೀನಾಮಿವಾಕಾಶೇ ಪದಂ ನೈವೋಪಲಭ್ಯತೇ |
ಏವಂ ಪ್ರಜ್ಞಾನತೃಪ್ತಸ್ಯ ಮುನೇರ್ವರ್ತ್ಮ ನ ದೃಶ್ಯತೇ ||28||
ಆಕಾಶದಲ್ಲಿ ಪಕ್ಷಿಗಳು ಹಾರುವ ಮಾರ್ಗವು ಹೇಗೆ ಕಾಣುವುದಿಲ್ಲವೋ ಅದರಂತೆ ಪ್ರಜ್ಞಾನತೃಪ್ತನಾದ ಋಷಿಯ ನಡತೆಯು ತಿಳಿಯುವುದಿಲ್ಲ.
ಉತ್ಸೃಜ್ಯ ವಾ ಗೃಹಾನ್ ಯಸ್ತು ಮೋಕ್ಷಮೇವಾಭಿಮನ್ಯತೇ |
ಲೋಕಾಸ್ತೇಜೋಮಯಾಸ್ತಸ್ಯ ಕಲ್ಪ್ಯಂತೇ ಶಾಶ್ವತಾ ದಿವಿ ||29||
ಯಾವನು ತನ್ನ ಮನೆಯನ್ನು ತ್ಯಜಿಸಿ ಮೋಕ್ಷಕ್ಕಾಗಿಯೇ ಸಾಧನೆಯನ್ನು ಮಾಡುತ್ತಾನೆಯೋ ಅವನಿಗೆ ಶಾಶ್ವತವಾದ ತೇಜೋಮಯವಾದ ಲೋಕಗಳು ಕೈಗೂಡುತ್ತವೆ.
ಕಶ್ಚಿಚ್ಛಾಕುನಿಕೋ ರಾಜನ್ ಪೂರ್ವಮಾಸೀದಿತಿ ಶ್ರುತಿಃ |
ಶಕುನೀನಾಂ ವಧಾರ್ಥಾಯ ಪಾಶಾನ್ ಭೂಮಾವಯೋಜಯತ್ ||
ಎಲೈ ರಾಜನೇ, ಹಿಂದೆ ಒಬ್ಬ ಪಕ್ಷಿಯನ್ನು ಬೇಟೆಯಾಡುವವನು ಇದ್ದನೆಂದು ಕೇಳಿದ್ದೇವೆ. ಅವನು ಪಕ್ಷಿಗಳನ್ನು ಹಿಡಿದು ಕೊಲ್ಲಲು ಭೂಮಿಯ ಮೇಲೆ ಹಗ್ಗದ ಬಲೆಯನ್ನು ಹರಡಿದನು.
ತಸ್ಮಿನ್ ಯೌ ಶಕುನೌ ಬದ್ಧೌ ಯುಗಪತ್ ಸಹಚಾರಿಣೌ |
ತಾವುಪಾದಾಯ ತಂ ಪಾಶಂ ಜಗ್ಮತುಃ ಖಚರಾವುಭೌ ||31||
ಆ ಬಲೆಯಲ್ಲಿ ಒಟ್ಟಿಗೆ ಸಂಚರಿಸುತ್ತಿದ್ದ ಎರಡು ಪಕ್ಷಿಗಳು ಒಟ್ಟಿಗೆ ಬಿದ್ದು ಆ ಬಲೆಯ ಹಗ್ಗವನ್ನು ಎತ್ತಿಕೊಂಡು ಆಕಾಶದಲ್ಲಿ ಹಾರಿಹೋದವು.
ತೌ ವಿಹಾಯಸಮಾಕ್ರಾಂತೌ ದೃಷ್ಟ್ವಾ ಶಾಕುನಿಕಸ್ತದಾ |
ಅನ್ವಧಾವದನಿರ್ವಿಣ್ಣೋ ಯೇನ ಯೇನ ಸ್ಮ ಗಚ್ಛತಃ ||32||
ಆ ಬೇಡನು ಆಕಾಶದಲ್ಲಿ ಹಾರುತ್ತಿದ್ದ ಆ ಹಕ್ಕಿಗಳನ್ನು ನೋಡಿ, ಏನೂ ನಿರಾಶೆ ಇಲ್ಲದೆ ಅವು ಹೋದಂತೆ ಹೋದಂತೆ ಭೂಮಿಯ ಮೇಲೆ ಓಡುತ್ತಿದ್ದನು.
ತಥಾ ತಮನುಧಾವಂತಂ ಮೃಗಯುಂ ಶಕುನಾರ್ಥಿನಮ್ |
ಆಶ್ರಮಸ್ಥೋ ಮುನಿಃ ಕಶ್ಚಿದ್ ದದರ್ಶಾಥ ಕೃತಾಹ್ನಿಕಃ ||33||
ಆ ರೀತಿಯಲ್ಲಿ ಆ ಪಕ್ಷಿಗಳನ್ನು ಬಯಸಿ ಓಡುತ್ತಿದ್ದ ಆ ಬೇಡನನ್ನು ಆಶ್ರಮದಲ್ಲಿ ತನ್ನ ಆಹ್ನಿಕವನ್ನು ಮುಗಿಸಿದ್ದ ಒಬ್ಬ ಋಷಿಯು ನೋಡಿದನು.
ತಾವಂತರಿಕ್ಷಗೌ ಶೀಘ್ರಮನುಯಾಂತಂ ಮಹೀಚರಮ್ |
ಶ್ಲೋಕೇನಾನೇನ ಕೌರವ್ಯ ಪಪ್ರಚ್ಛ ಸ ಮುನಿಸ್ತದಾ ||34||
ಅಂತರಿಕ್ಷದಲ್ಲಿ ಹಾರುತ್ತಿದ್ದ ಆ ಪಕ್ಷಿಗಳನ್ನು ಅನುಸರಿಸಿ ಭೂಮಿಯ ಮೇಲೆ ಓಡುತ್ತಿದ್ದ ಆ ಬೇಡನನ್ನು ಕಂಡು ಎಲೈ ಕೌರವ್ಯನೇ, ಆಗ ಒಂದು ಶ್ಲೋಕದಲ್ಲಿ ಪ್ರಶ್ನೆಯನ್ನು ಮಾಡಿದನು.
ವಿಚಿತ್ರಮಿದಮಾಶ್ಚರ್ಯಂ ಮೃಗಯೋ ಪ್ರತಿಭಾತಿ ಮೇ |
ಪ್ಲವಮಾನೋ ಹಿ ಖಚರೌ ಪದಾತಿರನುಧಾವತಿ ||35||
ಎಲೈ ಬೇಡನೇ, ಇದು ವಿಚಿತ್ರ ಮತ್ತು ಆಶ್ಚರ್ಯ ಎಂದು ನನಗೆ ತೋರುತ್ತದೆ. ಪಕ್ಷಿಗಳು ಆಕಾಶದಲ್ಲಿ ಹಾರುತ್ತಿವೆ, ನೀನು ಭೂಮಿಯ ಮೇಲೆ ಓಡುತ್ತಿದ್ದೀಯೆ (ಎಂದು ಕೇಳಿದನು).
ಶಾಕುನಿಕಃ
ಪಾಶಾಮೇಕಮುಭಾವೇತೌ ಸಹಿತೌ ಹರತೋ ಮಮ |

ಯತ್ರ ವೈ ವಿವದಿಷ್ಯೇತೇ ತತ್ರ ಮೇ ವಶಮೇಷ್ಯತಃ ॥36॥
ಬೇಡ ನನ್ನ ಬಲೆಯನ್ನು ಎತ್ತಿಕೊಂಡು ಈ ಎರಡು ಹಕ್ಕಿಗಳೂ ಹಾರುತ್ತಿವೆ. ಎಲ್ಲಿ ಅವು ಜಗಳವನ್ನು ಮಾಡುತ್ತವೆಯೋ ಅಲ್ಲಿ ನನಗೆ ವಶವಾಗುವುವು.
ವಿದುರಃ
ತೌ ವಿವಾದಮನುಪ್ರಾಪ್ತೌ ಶಕುನೌ ಮೃತ್ಯುಸಂಧಿತೌ |
ವಿಗೃಹ್ಯ ಪಾಶಂ ದುರ್ಬುದ್ಧೀ ಪೃಥಿವ್ಯಾಂ ಸನ್ನಿಪೇತತುಃ ॥37॥
ವಿದುರ ಮೃತ್ಯುಸನ್ನಿಹಿತವಾದ ಆ ಪಕ್ಷಿಗಳು ಜಗಳವನ್ನಾಡಲು ಪ್ರಾರಂಭಿಸಿದವು. ದುರ್ಬುದ್ಧಿಯುಳ್ಳ ಆ ಪಕ್ಷಿಗಳು ಪಾಶವನ್ನು ಕಿತ್ತು ಭೂಮಿಯ ಮೇಲೆ ಬಿದ್ದವು.
ತೌ ಯುದ್ಧ್ಯಮಾನೌ ಸಂರಬ್ಧೌ ಮೃತ್ಯುಪಾಶವಶಾನುಗೌ |
ಉಪಸೃತ್ಯ ಪ್ರಮತ್ತೌ ತೌ ಜಗ್ರಾಹ ಮೃಗಯುಸ್ತದಾ ॥38॥
ಮೃತ್ಯುಪಾಶಕ್ಕೆ ವಶವಾಗಿ ಕೋಪದಿಂದ ಹೊಡೆದಾಡುತ್ತಾ ಬೇರೆ ಎಚ್ಚರಿಕೆ ಇಲ್ಲದ ಆ ಪಕ್ಷಿಗಳನ್ನು ಸಮೀಪಿಸಿ ಬೇಡನು ಅವುಗಳನ್ನು ಹಿಡಿದುಕೊಂಡನು.
ಏವಂ ಯೇ ಜ್ಞಾತಯೋಽರ್ಥೇಷು ಮಿಥೋ ಗಚ್ಛಂತಿ ವಿಗ್ರಹಮ್ |
ತೇ ಮೃತ್ಯುವಶಮಾಯಾಂತಿ ಶಕುನಾವಿವ ವಿಗ್ರಹಾತ್ ॥39॥
ಹೀಗೆ ದಾಯಾದಿಗಳು ಒಂದೇ ವಸ್ತುವಿನ ವಿಷಯದಲ್ಲಿ ವಿರೋಧವನ್ನು ಮಾಡಿದರೆ ವಿರೋಧವನ್ನು ಮಾಡಿದ ಆ ಪಕ್ಷಿಗಳಂತೆ ಮೃತ್ಯುವಶರಾಗುತ್ತಾರೆ.
ಸಂಭೋಜನಂ ಸಂಕಥನಂ ಸಂಪ್ರಶ್ನೋಽಥ ಸಮಾಗಮಃ |
ಏತಾನಿ ಜ್ಞಾತಿಕಾರ್ಯಾಣಿ ನ ವಿರೋಧಃ ಕದಾಚನ ॥40॥
ಜೊತೆಯಲ್ಲಿ ಭೋಜನವನ್ನು ಮಾಡುವುದು, ಜೊತೆಯಲ್ಲಿ ಕುಳಿತು ಮಾತನಾಡುವುದು, ತಿಳಿಯದ ವಿಷಯವನ್ನು ಇನ್ನೊಬ್ಬರಲ್ಲಿ ಕೇಳುವುದು, ಒಟ್ಟಿಗೆ ಇರುವುದು ಇವುಗಳು ದಾಯಾದಿಗಳು ಮಾಡಬೇಕಾದ ಕಾರ್ಯ ಹೊರತು ಎಂದೂ ವಿರೋಧವನ್ನು ಮಾಡುವುದಲ್ಲ.
ಯೇ ಸ್ಮ ಕಾಲೇ ಸುಮನಸಃ ಸರ್ವೇ ವೃದ್ಧಾನುಪಾಸತೇ |
ಸಿಂಹಗುಪ್ತಮಿವಾರಣ್ಯಮಪ್ರಧೃಷ್ಯಾ ಭವಂತಿ ತೇ ॥41॥
ಯಾವ ದಾಯಾದಿಗಳು ಒಳ್ಳೆಯ ಮನಸ್ಸನ್ನು ಹೊಂದಿದವರಾಗಿ, ಹಿರಿಯರ ಮಾತುಗಳನ್ನು ಕೇಳುತ್ತಾರೆಯೋ ಅವರು ಸಿಂಹಗಳಿಂದ ರಕ್ಷಿತವಾದ ಅರಣ್ಯದಂತೆ ಯಾರಿಗೂ ಸೋಲುವುದಿಲ್ಲ.
ಯೇ ತು ಸನ್ನಿಧಿಮಾಸಾದ್ಯ ದೀನಾ ಇವ ಸಮಾಸತೇ |
ಶ್ರಿಯಂ ತೇ ಸಂಪ್ರಯಚ್ಛಂತಿ ದ್ವಿಷದ್ಭ್ಯೋ ಭರತರ್ಷಭ ॥42॥
ಎಲೈ ಭರತರ್ಷಭನೇ, ಯಾರು ದೊಡ್ಡ ನಿಧಿಯನ್ನು ಪಡೆದು ದೀನರಂತೆ ನಡೆದುಕೊಳ್ಳುತ್ತಾರೆಯೋ ಅವರು ತಮ್ಮ ಸಂಪತ್ತನ್ನು ತಮ್ಮ ಶತ್ರುಗಳಿಗೆ ಕೊಡುತ್ತಾರೆ.
ಧೂಮಾಯಂತೇ ವ್ಯಪೇತಾನಿ ಜ್ವಲಂತಿ ಸಹಿತಾನಿ ಚ |
ಧೃತರಾಷ್ಟ್ರೋಲ್ಮುಕಾನೀವ ಜ್ಞಾತಯೋ ಭರತರ್ಷಭ ॥43॥
ಎಲೈ ಭರತರ್ಷಭನೇ, ಧೃತರಾಷ್ಟ್ರನೇ, ದಾಯಾದಿಗಳು ಕೊಳ್ಳಿಗಳಂತೆ ಬಿಡಿಬಿಡಿಯಾಗಿದ್ದರೆ ಧೂಮವನ್ನು ಕಾರುತ್ತಾರೆ, ಒಟ್ಟಿಗೆ ಸೇರಿದರೆ ಜ್ವಲಿಸುತ್ತಾರೆ.
ಇದಮನ್ಯತ್ ಪ್ರವಕ್ಷ್ಯಾಮಿ ಯಥಾ ದೃಷ್ಟಂ ಗಿರೌ ಮಯಾ |
ಶ್ರುತ್ವಾ ತದಪಿ ಕೌರವ್ಯ ಯಥಾ ಶ್ರೇಯಸ್ತಥಾ ಕುರು ॥44॥
ನಾನು ಪರ್ವತದಲ್ಲಿ ನೋಡಿದ ಇನ್ನೊಂದು ವಿಷಯವನ್ನು ಹೇಳುವೆನು. ಎಲೈ ಧೃತರಾಷ್ಟ್ರನೇ, ಅದನ್ನೂ ಕೇಳಿ ನಿನಗೆ ಯಾವುದು ಶ್ರೇಯಸ್ಸು ಎನಿಸುತ್ತದೋ ಅದರಂತೆ ಮಾಡು.
ವಯಂ ಕಿರಾತೈಃ ಸಹಿತಾ ಗಚ್ಛಾಮೋ ಗಿರಿಮುತ್ತಮಮ್ |
ಬ್ರಾಹ್ಮಣೈರ್ದೇವಕಲ್ಪೈಶ್ಚ ವಿದ್ಯಾವಿನಯಸಾಧನೈಃ ॥45॥
ಕುಂಜಭೂತಂ ಗಿರಿಂ ಸರ್ವಮಭಿತೋ ಗಂಧಮಾದನಮ್ |
ದೀಪ್ಯಮಾನೌಷಧಿಗಣಂ ಸಿದ್ಧಗಂಧರ್ವಸೇವಿತಮ್ ॥46॥
ನಾವು ಕಿರಾತರ ಜೊತೆಯಲ್ಲಿಯೂ ಮತ್ತು ವೇದವಿದ್ಯಾವಿನಯ ಸಂಪನ್ನರಾದ, ದೇವಸಮಾನರಾದ ಬ್ರಾಹ್ಮಣರ ಜೊತೆಯಲ್ಲಿಯೂ ಅನೇಕ ದಿವ್ಯ ಔಷಧಿಗಳಿಂದ ಕೂಡಿದ, ಸಿದ್ಧ, ಗಂಧರ್ವರಿಂದ ಸೇವಿತವಾದ ಸುತ್ತಲೂ ಅನೇಕ ಲತಾಕುಂಜಗಳಿರುವ ಗಂಧಮಾದನ ಪರ್ವತಕ್ಕೆ ಹೋದೆವು.
ತತ್ರಾಪಶ್ಯಾಮ ವೈ ಸರ್ವೇ ಮಧು ಪೀತಕ್ಷಮಾಕ್ಷಿಕಮ್ |
ಮಹಾಪ್ರಪಾತೇ ವಿಷಮೇ ನಿವಿಷ್ಟಂ ಕುಂಭಸಮ್ಮಿತಮ್ ॥47॥
ಅಲ್ಲಿ ಒಂದು ದೊಡ್ಡ ಹಳ್ಳದಲ್ಲಿ ಇದ್ದ, ತುಂಬ ದೊಡ್ಡ ಪ್ರಮಾಣದ ಪರಿಶುದ್ಧವಾದ ಜೇನುತುಪ್ಪವನ್ನು ಎಲ್ಲರೂ ನೋಡಿದೆವು.
ಆಶೀವಿಷೈ ರಕ್ಷ್ಯಮಾಣಂ ಕುಬೇರದಯಿತಂ ಭೃಶಮ್ |
ಯತ್ ಪ್ರಾಶ್ಯ ಪುರುಷೋ ಮರ್ತ್ಯೋಽಪ್ಯಮರತ್ವಂ ನಿಗಚ್ಛತಿ ॥48॥
ಕುಬೇರನಿಗೆ ಪ್ರಿಯವಾದ ಆ ಮಧುವು ಸರ್ಪಗಳಿಂದ ರಕ್ಷಿತವಾಗಿದ್ದಿತು. ಆ ಮಧುವನ್ನು ಪಾನಮಾಡಿದರೆ ಪುರುಷನು ಮೃತ್ಯುವನ್ನೂ

ದೂರಮಾಡುತ್ತಾನೆ.
ಅಚಕ್ಷುರ್ಲಭತೇ ಚಕ್ಷುರ್ವೃದ್ಧೋ ಭವತಿ ವೈ ಯುವಾ |
ಇತಿ ತೇ ಕಥಯಂತಿ ಸ್ಮ ಬ್ರಾಹ್ಮಣಾ ಜಂಭಸಾಧಕಾಃ ॥49॥
ಅಂಧನು ಚಕ್ಷುಸ್ಸನ್ನು ಪಡೆಯುತ್ತಾನೆ, ವೃದ್ಧನು ಯುವಕನಾಗುತ್ತಾನೆ ಎಂದು ಆಹಾರದಲ್ಲಿ ಪರಿಣತರಾದ ಬ್ರಾಹ್ಮಣರು ಹೇಳುತ್ತಾರೆ.
ತತಃ ಕಿರಾತಾಸ್ತಂ ದೃಷ್ಟ್ವಾ ಪ್ರಾರ್ಥಯಂತೋ ಮಹೀಪತೇ |
ವಿನೇಶುರ್ವಿಷಮೇ ತಸ್ಮಿನ್ ಸಸರ್ಪೇ ಗಿರಿಗಹ್ವರೇ ॥50॥
ಎಲೈ ರಾಜನೇ, ಅನಂತರ ಆ ಕಿರಾತರು (ಬೇಡರೆಲ್ಲರೂ) ಆ ಮಧುವನ್ನು ಬಯಸಿ ಆ ಗಿರಿಯ ಗುಹೆಯಲ್ಲಿದ್ದ ಸರ್ಪವಿದ್ದ ಹಳ್ಳದಲ್ಲಿ ವಿನಾಶವನ್ನು ಹೊಂದಿದರು.
ತಥೈವ ತವ ಪುತ್ರೋಽಯಂ ಪೃಥಿವೀಮೇಕ ಇಚ್ಛತಿ |
ಮಧು ಪಶ್ಯತಿ ಸಮ್ಮೋಹಾತ್ ಪ್ರಪಾತಂ ನಾನುಪಶ್ಯತಿ ॥51॥
ಹಾಗೆಯೇ ನಿನ್ನ ಪುತ್ರನು ಒಬ್ಬನೇ ಪೃಥಿವಿಯನ್ನು ಬಯಸುತ್ತಾನೆ. ಸಮ್ಮೋಹದಿಂದ ಅವನಿಗೆ ಮಧುವು ಕಾಣುತ್ತಿದೆ. ಆದರೆ ಪ್ರಪಾತವು ಕಾಣುತ್ತಿಲ್ಲ.
ದುರ್ಯೋಧನೋ ಯೋದ್ಧುಮನಾಃ ಸಮರೇ ಸವ್ಯಸಾಚಿನಾ |
ನ ಚ ಪಶ್ಯಾಮಿ ತೇಜೋಽಸ್ಯ ವಿಕ್ರಮಂ ವಾ ತಥಾವಿಧಮ್ ॥52॥
ದುರ್ಯೋಧನನು ಯುದ್ಧದಲ್ಲಿ ಅರ್ಜುನನ ಜೊತೆಯಲ್ಲಿ ಯುದ್ಧಮಾಡಲು ಬಯಸುತ್ತಾನೆ. ಆದರೆ ಅವನಿಗೆ ಅಂತಹ ತೇಜಸ್ಸಾಗಲೀ ಅಥವಾ ಪರಾಕ್ರಮವಾಗಲೀ ನನಗೆ ಕಾಣಿಸುವುದಿಲ್ಲ.
ಏಕೇನ ರಥಮಾಸ್ಥಾಯ ಪೃಥಿವೀ ಯೇನ ನಿರ್ಜಿತಾ |
ಭೀಷ್ಮದ್ರೋಣಪ್ರಭೃತಯಃ ಸಂತ್ರಸ್ತಾಃ ಸಾಧುಯಾಯಿನಃ ॥53॥
ವಿರಾಟನಗರೇ ಭಗ್ನಾಃ ಕಿಂ ವಾ ತೇಽತ್ರ ನಿದರ್ಶನಮ್ |
ಪ್ರತೀಕ್ಷಮಾಣೋ ಯೋ ವೀರಃ ಕ್ಷಮತೇ ನಿಕೃತಿಂ ತವ ॥54॥
ಅವನು ಒಬ್ಬನೇ ಒಂದೇ ರಥದಲ್ಲಿ ಕುಳಿತು ಭೂಮಿಯನ್ನೆಲ್ಲವನ್ನೂ ಗೆದ್ದವನು. ಸಾಧುಮಾರ್ಗದಲ್ಲಿ ನಡೆಯುವ ಭೀಷ್ಮ-ದ್ರೋಣಾದಿಗಳು ಅವನ ಪರಾಕ್ರಮಕ್ಕೆ ಹೆದರಿದರು. ಅಂತಹವರು ವಿರಾಟನಗರದಲ್ಲಿ ಎಲ್ಲರೂ ಭಗ್ನರಾದರು. ಇದಕ್ಕಿಂತ ಬೇರೆ ನಿದರ್ಶನವು ಬೇಕೆ? ವೀರನಾದ ಅವನು ಕಾಲವನ್ನು ಪ್ರತೀಕ್ಷೆ ಮಾಡುತ್ತಾ ನಿನ್ನ ಮಕ್ಕಳು ಮಾಡಿದ ಅಪಚಾರವನ್ನು ಕ್ಷಮಿಸುತ್ತಿದ್ದಾನೆ.

ದ್ರುಪದೋ ಮತ್ಸ್ಯರಾಜಶ್ಚ ಸಂಕ್ರುದ್ಧಶ್ಚ ಧನಂಜಯಃ |
ನ ಶೇಷಯೇಯುಃ ಸಮರೇ ವಾಯುಯುಕ್ತಾ ಇವಾಗ್ನಯಃ ॥55॥
ದ್ರುಪದನೂ, ಮತ್ಸ್ಯರಾಜನಾದ ವಿರಾಟನೂ, ಕೋಪಗೊಂಡ ಅರ್ಜುನನೂ ಸಹ ವಾಯುಸಹಿತವಾದ ಅಗ್ನಿಗಳಂತೆ ಯುದ್ಧದಲ್ಲಿ ಶತ್ರುಗಳಲ್ಲಿ ಯಾರನ್ನೂ ಉಳಿಸುವುದಿಲ್ಲ.
ಅಂಕೇ ಕುರುಷ್ವ ರಾಜಾನಂ ಧೃತರಾಷ್ಟ್ರ ಯುಧಿಷ್ಠಿರಮ್ |
ಯುಧ್ಯತೋರ್ಹಿ ದ್ವಯೋರ್ಯುದ್ಧೇ ನೈಕಾಂತೇನ ಭವೇಜ್ಜಯಃ ॥56॥
ಧೃತರಾಷ್ಟ್ರನೇ, ರಾಜನಾದ ಯುಧಿಷ್ಠಿರನನ್ನು ತೊಡೆಯ ಮೇಲೆ ಕೂಡಿಸಿಕೋ. ಇಬ್ಬರೂ ಯುದ್ಧವನ್ನು ಮಾಡುವಾಗ ಒಬ್ಬನಿಗೇ ನಿಯಮೇನ ಜಯವುಂಟಾಗುವುದೆಂದು ಹೇಳಲು ಸಾಧ್ಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೈದನೆಯ ಅಧ್ಯಾಯ
ಅರ್ಜುನನು ಕೃಷ್ಣನಿಂದ ರಕ್ಷಿತನಾಗಿರುವುದರಿಂದ ದುರ್ಜಯನೆಂದು ಹೇಳಿ ಧೃತರಾಷ್ಟ್ರನಿಂದ ದುರ್ಯೋಧನನಿಗೆ ಸಂಧಿಮಾಡಿಕೊಳ್ಳುವಂತೆ ಒತ್ತಾಯ.
ಧೃತರಾಷ್ಟ್ರಃ
ದುರ್ಯೋಧನ ವಿಜಾನೀಹಿ ಯತ್ ತ್ವಾಂ ವಕ್ಷ್ಯಾಮಿ ಪುತ್ರಕ |
ಉತ್ಪಥಂ ಮನ್ಯಸೇ ಮಾರ್ಗಮನಭಿಜ್ಞ ಇವಾಧ್ವಗಃ ॥1॥
ಧೃತರಾಷ್ಟ್ರ ಪ್ರೀತಿಯ ಪುತ್ರನೇ, ನಾನು ನಿನಗೆ ಹೇಳುವ ಮಾತನ್ನು ಕೇಳು. ದಾರಿಯನ್ನು ತಿಳಿಯದವನಂತೆ ನೀನು ದುರ್ಮಾರ್ಗವನ್ನು ಸರಿಯಾದ ಮಾರ್ಗವೆಂದು ತಿಳಿದಿದ್ದೀಯೆ.
ಪಂಚಾನಾಂ ಪಾಂಡುಪುತ್ರಾಣಾಂ ಯತ್ ತೇಜಃ ಪ್ರಜಿಹೀರ್ಷಸಿ |
ಪಂಚಾನಾಮಿವ ಭೂತಾನಾಂ ಮಹತಾಂ ಸುಮಹಾತ್ಮನಾಮ್ ॥2॥
ಪಂಚಮಹಾಭೂತಗಳಂತಿರುವ ಮಹಾತ್ಮರಾದ ಪಂಚಪಾಂಡವರ ತೇಜಸ್ಸನ್ನು ಅಪಹರಿಸಲು ನೀನು ಇಚ್ಛಿಸುತ್ತೀಯೆ.
ಯುಧಿಷ್ಠಿರಂ ಹಿ ಕೌಂತೇಯಂ ಪರಂ ಧರ್ಮಮಿಹಾಸ್ಥಿತಮ್ |

ಪರಾಂ ಗತಿಮಸಂಪ್ರೇತ್ಯ ನ ತ್ವಂ ಜೇತುಮಿಹಾರ್ಹಸಿ ॥3॥
ನಿತ್ಯವೂ ಧರ್ಮಾಚರಣೆಯಲ್ಲಿರುವ ಕುಂತೀಪುತ್ರನಾದ ಯುಧಿಷ್ಠಿರನನ್ನು ನೀನು ಮರಣವನ್ನು ಹೊಂದಿ, ಪರಗತಿಯನ್ನು ಹೊಂದದೆ ಜಯಿಸಲು ಸಾಧ್ಯವಿಲ್ಲ (ಮರಣ ಹೊಂದಿದರೂ ಸಾಧ್ಯವಿಲ್ಲ).
ಭೀಮಸೇನಂ ಚ ಕೌಂತೇಯಂ ಯಸ್ಯ ನಾಸ್ತಿ ಸಮೋ ಬಲೇ |
ರಣಾಂತಕಂ ತರ್ಜಯಸೇ ಮಹಾವಾತಮಿವ ದ್ರುಮಃ ॥4॥
ಯಾವನಿಗೆ ಬಲದಲ್ಲಿ ಸಮಾನನಾದವನು ಇಲ್ಲವೋ ಅಂತಹ ರಣಾಂತಕನಾದ ಕುಂತೀಪುತ್ರನಾದ ಭೀಮಸೇನನನ್ನು ನೀನು ಒಂದು ವೃಕ್ಷವು ಬಿರುಗಾಳಿಯನ್ನು ಹೆದರಿಸುವಂತೆ ಹೆದರಿಸುತ್ತಿದ್ದೀಯೆ.
ಸರ್ವಶಸ್ತ್ರಭೃತಾಂ ಶ್ರೇಷ್ಠಂ ಮೇರುಂ ಶಿಖರಿಣಾಮಿವ |
ಯುಧಿ ಗಾಂಡೀವಧನ್ವಾನಂ ಕೋ ನು ಯುಧ್ಯೇತ ಬುದ್ಧಿಮಾನ್ ॥5॥
ಎಲ್ಲ ಪರ್ವತಗಳಿಗೆ ಮೇರುವಿದ್ದಂತೆ, ಎಲ್ಲ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಗಾಂಡೀವ ಧನುಸ್ಸನ್ನು ಹೊಂದಿದ ಅರ್ಜುನನ ಜೊತೆಯಲ್ಲಿ ಯಾವ ವಿವೇಕಿಯು ಯುದ್ಧವನ್ನು ಮಾಡಿಯಾನು?
ಧೃಷ್ಟದ್ಯುಮ್ನಶ್ಚ ಪಾಂಚಾಲ್ಯಃ ಕಮಿವಾದ್ಯ ನ ಶಾತಯೇತ್ |
ಶತ್ರುಮಧ್ಯೇ ಶರಾನ್ ಮುಂಚನ್ ದೇವರಾಡಶನೀಮಿವ ॥6॥
ಪಾಂಚಾಲದೇಶದ ಧೃಷ್ಟದ್ಯುಮ್ನನೂ ಸಹ ಇಂದ್ರನು ಸಿಡಿಲುಗಳನ್ನು ಸಿಡಿಸಿದಂತೆ ಶತ್ರುಗಳ ಮಧ್ಯದಲ್ಲಿ ಬಾಣಗಳನ್ನು ಪ್ರಯೋಗಿಸುತ್ತಾ ಈ ದಿನ ಯಾರನ್ನು ಪುಡಿಪುಡಿ ಮಾಡುವುದಿಲ್ಲ?
ಸಾತ್ಯಕಿಶ್ಚಾಪಿ ದುರ್ಧರ್ಷಃ ಸಮ್ಮತೋಽಂಧಕವೃಷ್ಣಿಷು |
ಧ್ವಂಸಯಿಷ್ಯತಿ ತೇ ಸೇನಾಂ ಪಾಂಡವೇಯಹಿತೇ ರತಃ ॥7॥
ಸಾತ್ಯಕಿಯೂ ಸಹ ಅಂಧಕವೃಷ್ಣಿಗಳಿಗೆ ಸಮ್ಮತನಾದವನು ಮತ್ತು ಸೋಲಿಸಲು ಅಸಾಧ್ಯನಾದವನು. ಪಾಂಡುಪುತ್ರರ ಹಿತದಲ್ಲಿ ಆಸಕ್ತನಾದ ಅವನು ನಿನ್ನ ಸೈನ್ಯವನ್ನು ಧ್ವಂಸಗೊಳಿಸುವನು.
ಯಃ ಪುನಃ ಪ್ರತಿಮಾನೇನ ತ್ರೀನ್ ಲೋಕಾನತಿರಿಚ್ಯತೇ |
ಸ ಶ್ರೇಷ್ಠೋ ಜಗತಃ ಕೃಷ್ಣಃ ಪಾಂಡವಾನಾಂ ಹಿತೇ ರತಃ ॥8॥
ಇನ್ನು ಯಾವನು ತನ್ನ ಗುಣಗಳಿಂದ ಮೂರುಲೋಕಗಳನ್ನು ಮೀರಿದ್ದಾನೆಯೋ ಅಂತಹ ಸರ್ವಜಗತ್ತಿಗೂ ಶ್ರೇಷ್ಠನಾದ ಕೃಷ್ಣನು ಪಾಂಡವರ ಹಿತದಲ್ಲಿ ರತನಾಗಿದ್ದಾನೆ.
ಏಕತೋ ಹ್ಯಸ್ಯ ದಾರಾಶ್ಚ ಜ್ಞಾತಯಶ್ಚ ಸಬಾಂಧವಾಃ |
ಆತ್ಮಾ ಚ ಪೃಥಿವೀ ಚೇಯಮ್ ಏಕತಶ್ಚ ಧನಂಜಯಃ ॥9॥
ಒಂದುಕಡೆ ಅವನ (ಕೃಷ್ಣನ) ಪತ್ನಿಯರೂ, ಜ್ಞಾತಿಗಳೂ, ಬಾಂಧವರೂ, ತಾನು ಮತ್ತು ಸಮಸ್ತವಾದ ಪೃಥಿವಿ. ಇನ್ನೊಂದು ಕಡೆ ಕೇವಲ ಅರ್ಜುನ (ಅರ್ಜುನನು ಕೃಷ್ಣನಿಗೆ ಅಷ್ಟು ಪ್ರೀತಿಪಾತ್ರನಾದವನು ಎಂದು ಅಭಿಪ್ರಾಯ).
ವಾಸುದೇವೋಽಪಿ ದುರ್ಧರ್ಷೋ ಯತಾತ್ಮಾ ಯತ್ರ ಪಾಂಡವಃ |
ಅವಿಷಹ್ಯಂ ಪೃಥಿವ್ಯಾಽಪಿ ತದ್ಬಲಂ ಯತ್ರ ಕೇಶವಃ ॥10॥
ವಾಸುದೇವನೂ ಸಹ ಸೋಲಿಸಲಾರದವನು ಮತ್ತು ಮನೋನಿಗ್ರಹವುಳ್ಳವನು. ಯಾವ ಸೈನ್ಯದಲ್ಲಿ ಅರ್ಜುನನು ಮತ್ತು ಕೃಷ್ಣನು ಇದ್ದಾರೆಯೋ ಆ ಸೈನ್ಯವನ್ನು ಸಮಗ್ರವಾದ ಪೃಥಿವಿಯೂ ಸೋಲಿಸಲಾರದು.
ತಿಷ್ಠ ತಾತ ಸತಾಂ ವಾಕ್ಯೇ ಸುಹೃದಾಮರ್ಥವಾದಿನಾಮ್ |
ವೃದ್ಧಂ ಶಾಂತನವಂ ಭೀಷ್ಮಂ ನಿರೀಕ್ಷಸ್ವ ಪಿತಾಮಹಮ್ ॥11॥
ಮಾಂ ಚ ಬ್ರುವಾಣಂ ಶುಶ್ರೂಷ ಕುರೂಣಾಮರ್ಥದರ್ಶನಮ್ |
ಪ್ರೀತಿಪಾತ್ರನೇ, ನಿನ್ನ ಹಿತವನ್ನು ಬಯಸುವ ಸುಹೃದರಾದ ಸಜ್ಜನರ ಮಾತುಗಳನ್ನು ಕೇಳುವವನಾಗು. ವೃದ್ಧನಾದ, ಶಂತನುಪುತ್ರನಾದ, ಪಿತಾಮಹನಾದ ಭೀಷ್ಮನನ್ನು ನೋಡು. ಕುರುಗಳ ಹಿತವನ್ನು ನೋಡಿ ಮಾತನಾಡುವ ನನ್ನ ಮಾತನ್ನು ಕೇಳುವವನಾಗು.
ದ್ರೋಣಂ ಕೃಪಂ ವಿಕರ್ಣಂ ಚ ಮಹಾರಾಜಂ ಚ ಬಾಹ್ಲಿಕಮ್ ॥12॥
ದ್ರೌಣಿಂ ಚ ಸೋಮದತ್ತಂ ಚ ಶಕುನಿಂ ಚಾಪಿ ಸೌಬಲಮ್ |
ದುಃಶಾಸನಂ ಶಲಂ ಚೈವ ಪುರುಮಿತ್ರಂ ವಿವಿಂಶತಿಮ್ ॥13॥
ವಿಕರ್ಣಂ ಚಿತ್ರಸೇನಂ ಚ ಜಯತ್ಸೇನಂ ಚ ಪಾರ್ಥಿವಮ್ |
ವಿಂದಾನುವಿಂದಾವಾವಂತ್ಯೌ ದುರ್ಮುಖಂ ಚಾಪಿ ಕೌರವಮ್ ॥14॥
ಸೈಂಧವಂ ದುಃಸಹಂ ಚೈವ ಭೂರಿಶ್ರವಸಮೇವ ಚ |
ಭಗದತ್ತಂ ಚ ರಾಜಾನಂ ಜಲಸಂಧಂ ಚ ಪಾರ್ಥಿವಮ್ ॥15॥
ದ್ರೋಣರು, ಕೃಪರು, ವಿಕರ್ಣ, ಬಾಹ್ಲಿಕಮಹಾರಾಜ, ಅಶ್ವತ್ಥಾಮ, ಸೋಮದತ್ತ, ಸೌಬಲನಾದ ಶಕುನಿ, ದುಶ್ಶಾಸನ, ಶಲ, ಪುರುಮಿತ್ರ, ವಿವಿಂಶತಿ, ವಿಕರ್ಣ, ಚಿತ್ರಸೇನ, ಜಯತ್ಸೇನರಾಜ, ಅವಂತಿದೇಶದ ವಿಂದಾನುವಿಂದರು, ಕೌರವನಾದ ದುರ್ಮುಖ, ಸೈಂಧವ, ದುಃಸಹ, ಭೂರಿಶ್ರವ, ಭಗದತ್ತ ರಾಜ ಮತ್ತು ಜಲಸಂಧ ರಾಜ;
ಏತೇ ಹ್ಯಪಿ ಯಥೈವಾಹಂ ಮಂತುಮರ್ಹಸಿ ತಾಂಸ್ತಥಾ |
ಸರ್ವೇ ಧರ್ಮವಿದೋ ಹ್ಯೇತೇ ತುಲ್ಯಸ್ನೇಹಾಶ್ಚ ಭಾರತ ॥16॥
ಇವರೂ ಸಹ ನನ್ನಂತೆಯೇ ಎಂದು ಅವರನ್ನು ನೀನು ತಿಳಿಯಬೇಕು. ಎಲೈ ಭಾರತನೇ, ಎಲ್ಲರೂ ಧರ್ಮವನ್ನು ತಿಳಿದವರು ಮತ್ತು

ನಿನ್ನಲ್ಲಿ ಸಮಾನವಾದ ಸ್ನೇಹವನ್ನು ಹೊಂದಿದವರು.
ಯತ್ ತದ್ ವಿರಾಟನಗರೇ ಸಹ ಭ್ರಾತೃಭಿರಗ್ರತಃ |
ಉತ್ಸೃಜ್ಯ ಗಾಃ ಸುಸಂತ್ರಸ್ತಂ ಬಲಂ ತೇ ಸಮಶೀರ್ಯತ ॥17॥
ವಿರಾಟನಗರದಲ್ಲಿ ಭ್ರಾತೃಸಹಿತನಾದ ನೀನು ಮುಂದಿರುವಾಗಲೇ ಗೋವುಗಳನ್ನು ಬಿಟ್ಟು ನಿನ್ನ ಸೈನ್ಯವು ಹೆದರಿ ಚದುರಿಹೋಯಿತು.
ಯಚ್ಚೈವ ತಸ್ಮಿನ್ ನಗರೇ ಶ್ರೂಯತೇ ಮಹದದ್ಭುತಮ್ |
ಏಕಸ್ಯ ಚ ಬಹೂನಾಂ ಚ ಪರ್ಯಾಪ್ತಂ ತನ್ನಿದರ್ಶನಮ್ ॥18॥
ಮತ್ತು ಆ ನಗರದಲ್ಲಿ ಒಬ್ಬ ಅರ್ಜುನನಿಗೆ ಅನೇಕ ಮಹಾರಥರ ಜೊತೆಯಲ್ಲಿ ಅದ್ಭುತವಾದ ದೊಡ್ಡ ಯುದ್ಧವು ಕೇಳಿಬರುತ್ತದೆಯಷ್ಟೆ. ಅದೊಂದು ನಿದರ್ಶನವು ಸಾಕು.
ಅರ್ಜುನಸ್ತತ್ ತಥಾऽಕಾರ್ಷೀತ್ ಕಿಂ ಪುನಃ ಸರ್ವ ಏವ ತೇ |
ಸಭ್ರಾತೄನಭಿಜಾನೀಹಿ ಪ್ರೀತ್ಯಾ ಚ ಪ್ರತಿಪಾದಯ ॥19॥
ಅರ್ಜುನನೊಬ್ಬನೇ ಹಾಗೆ ಮಾಡಿದನು. ಇನ್ನು ಪಾಂಡವರೆಲ್ಲರೂ ಸೇರಿ ಏನು ಮಾಡಿಯಾರು? ನನ್ನ ತಮ್ಮನ ಮಕ್ಕಳಾದ ಪಾಂಡವರನ್ನು ಗೌರವಿಸಿ ಪ್ರೀತಿಯಿಂದ ಅವರಿಗೆ ಕೊಡಬೇಕಾದ ರಾಜ್ಯಾಂಶವನ್ನು ಕೊಡುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಷಷ್ಟಿತಮೋऽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಅಷ್ಟಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * * *

ಅರವತ್ತಾರನೆಯ ಅಧ್ಯಾಯ
ದುರ್ಯೋಧನನ ಔದ್ಧತ್ಯದಿಂದ ರಾಜರ ನಿರ್ಗಮನ.
ಸಂಜಯ ಮತ್ತು ವ್ಯಾಸರಿಂದ ಸೈನ್ಯಗಳ ಬಲಾಬಲಕಥನ.
ವೈಶಂಪಾಯನಃ
ದುರ್ಯೋಧನೇ ಧಾರ್ತರಾಷ್ಟ್ರೇ ತದ್ವಚೋ ನಾಭಿನಂದತಿ |
ತೂಷ್ಣೀಂಭೂತೇಷು ಸರ್ವೇಷು ಸಮುತ್ತಸ್ಥುರ್ನರರ್ಷಭಾಃ ॥1॥
ವೈಶಂಪಾಯನ ಧೃತರಾಷ್ಟ್ರ ಪುತ್ರನಾದ ದುರ್ಯೋಧನನು ಆ ಮಾತುಗಳನ್ನು ಅಂಗೀಕರಿಸದೆ ಇರುತ್ತಿರಲು ಮತ್ತು ಎಲ್ಲರೂ ಮೌನವಾಗಿರುತ್ತಿರಲು ರಾಜರೆಲ್ಲರು ಎದ್ದರು.
ಉತ್ಥಿತೇಷು ಮಹಾರಾಜ ಪೃಥಿವ್ಯಾಂ ಸರ್ವರಾಜಸು |
ರಹಿತೇ ಸಂಜಯಂ ರಾಜಾ ಪರಿಪ್ರಷ್ಟುಂ ಪ್ರಚಕ್ರಮೇ ॥2॥
ಆಶಂಸಮಾನೋ ವಿಜಯಂ ತೇಷಾಂ ಪುತ್ರವಶಾನುಗಃ |
ಆತ್ಮನಶ್ಚ ಪರೇಷಾಂ ಚ ಪಾಂಡವಾನಾಂ ಚ ನಿಶ್ಚಯಮ್ ॥3॥
ಎಲೈ ಜನಮೇಜಯ ಮಹಾರಾಜನೇ, ಪೃಥಿವಿಯ ಎಲ್ಲಾ ರಾಜರೂ ಎದ್ದು ಹೊರಟಮೇಲೆ ಧೃತರಾಷ್ಟ್ರನು ಪುತ್ರವಶವರ್ತಿಯಾಗಿ, ಅವರ ವಿಜಯವನ್ನು ಆಶಿಸುತ್ತಾ, ತನ್ನ ಮತ್ತು ಪಾಂಡವರ ಸೈನ್ಯಗಳ ಬಲಾಬಲಗಳನ್ನು ತಿಳಿದುಕೊಳ್ಳಲು ಏಕಾಂತದಲ್ಲಿ ಸಂಜಯನನ್ನು ಕುರಿತು ಪ್ರಶ್ನೆ ಮಾಡಲು ಪ್ರಾರಂಭಿಸಿದನು.
ಧೃತರಾಷ್ಟ್ರಃ
ಗಾವಲ್ಗಣೇ ಬ್ರೂಹಿ ನಃ ಸಾರಫಲ್ಗು
ಸ್ವಸೇನಾಯಾಂ ಯಾವದಿಹಾಸ್ತಿ ಕಿಂಚಿತ್ |
ತ್ವಂ ಪಾಂಡವಾನಾಂ ನಿಪುಣಂ ವೇತ್ಥ ಸರ್ವಂ
ಕಿಮೇಷಾಂ ಜ್ಯಾಯಃ ಕಿಮು ತೇಷಾಂ ಕನೀಯಃ ॥4॥
ಧೃತರಾಷ್ಟ್ರ ಎಲೈ ಗಾವಲ್ಗಣಿಯೇ, ನಮ್ಮ ಸೈನ್ಯದಲ್ಲಿರುವ ಉತ್ತಮ ಮತ್ತು ಕನಿಷ್ಠವಾದ ಅಂಶಗಳು ಯಾವುವು ಎಂದು ಹೇಳು. ನೀನು ಪಾಂಡವರ ವಿಷಯದಲ್ಲಿ ಎಲ್ಲವನ್ನೂ ಚೆನ್ನಾಗಿ ತಿಳಿದಿದ್ದೀಯೆ. ಈ ದುರ್ಯೋಧನನ ಸೈನ್ಯವು ಶ್ರೇಷ್ಠವೇ? ಅಥವಾ ಆ ಪಾಂಡವರ ಸೈನ್ಯವು ಕನಿಷ್ಟವೇ?
ತ್ವಮೇತಯೋಃ ಸಾರವಿತ್ ಸರ್ವದರ್ಶೀ
ಧರ್ಮಾರ್ಥಯೋರ್ನಿಪುಣೋ ನಿಶ್ಚಯಜ್ಞಃ |
ಸ ಮೇ ಪೃಷ್ಟಃ ಸಂಜಯ ಬ್ರೂಹಿ ಸರ್ವಂ
ನಿಯುಧ್ಯಮಾನಾಃ ಕತರೇऽಸ್ಮಿನ್ ನ ಸಂತಿ ॥5॥
ನೀನು ಸರ್ವಜ್ಞನಾದವನು, ಇಬ್ಬರ ನಿರ್ಧಾರವನ್ನೂ ತಿಳಿದವನು, ಧರ್ಮಾರ್ಥಗಳಲ್ಲಿ ನಿಪುಣನಾದವನು, ಎರಡೂ ಸೈನ್ಯಗಳ ಬಲವನ್ನು ತಿಳಿದವನು. ಎಲೈ ಸಂಜಯನೇ, ನಾನು ನಿನ್ನನ್ನು ಪ್ರಶ್ನೆಮಾಡುತ್ತಿದ್ದೇನೆ. ಯುದ್ಧವನ್ನು ಮಾಡುವ ಯಾರು ಎರಡು ಪಕ್ಷದಲ್ಲಿ ವಿನಾಶವನ್ನು ಹೊಂದುವರು?
ಸಂಜಯಃ
ನ ತ್ವಾಂ ಬ್ರೂಯಾಂ ರಹಿತೇ ಜಾತು ಕಿಂಚಿದ್

ಅಸೂಯಾ ಹಿ ತ್ವಾಂ ಪ್ರಸಹೇತ ರಾಜನ್ |
ಆನಯಸ್ವ ಪಿತರಂ ಮಹಾವ್ರತಂ
ಗಾಂಧಾರೀಂ ಚ ಮಹಿಷೀಮಾಜಮೀಢ ||6||
ಸಂಜಯ ಎಲ್ಲೈ ರಾಜನೇ, ನಾನು ನಿನಗೆ ಏಕಾಂತದಲ್ಲಿ ಏನನ್ನೂ ಹೇಳುವುದಿಲ್ಲ. ಏಕೆಂದರೆ ನಿನಗೆ ಅಸೂಯೆ ಉಂಟಾದೀತು. ನಿನ್ನ ತಂದೆಯಾದ ಮಹಾವ್ರತರಾದ ವ್ಯಾಸರನ್ನೂ ಮತ್ತು ಮಹಿಷಿಯಾದ ಗಾಂಧಾರಿಯನ್ನು ಕರೆತರೆಸು.
ತೌ ತೇಽಸೂಯಾಂ ವಿನಯೇತಾಂ ನರೇಂದ್ರ
ಧರ್ಮಜ್ಞೌ ತೌ ನಿಪುಣೌ ನಿಶ್ಚಯಜ್ಞೌ |
ತಯೋಸ್ತು ತ್ವಾಂ ಸನ್ನಿಧೌ ತದ್ ವದೇಯಂ
ಕೃತ್ಸ್ನಂ ಮತಂ ಕೇಶವಪಾರ್ಥಯೋರ್ಯತ್ ||7||
ಎಲ್ಲೈ ನರೇಂದ್ರನೇ, ಧರ್ಮಜ್ಞರೂ, ನಿಪುಣರೂ ಮತ್ತು ಪರಸ್ಪರ ನಿರ್ಧಾರವನ್ನು ತಿಳಿದವರೂ ಆದ ಅವರಿಬ್ಬರೂ ನಿನ್ನ ಅಸೂಯೆಯನ್ನು ಹೋಗಲಾಡಿಸಬಹುದು. ಅವರ ಸನ್ನಿಧಿಯಲ್ಲಿ ಕೃಷ್ಣಾರ್ಜುನರ ಸಮಗ್ರ ಅಭಿಪ್ರಾಯವನ್ನು ನಾನು ಹೇಳುವೆನು.
ವೈಶಂಪಾಯನಃ
ಇತ್ಯುಕ್ತೇನ ಚ ಗಾಂಧಾರೀ ವ್ಯಾಸಶ್ಚಾತ್ರಾಜಗಾಮ ಹ |
ಆನೀತೌ ವಿದುರೇಣೇಹ ಸಭಾಂ ಶೀಘ್ರಂ ಪ್ರವೇಶಿತೌ ||8||
ವೈಶಂಪಾಯನ ಹೀಗೆ ಧೃತರಾಷ್ಟ್ರನಿಂದ ಹೇಳಲ್ಪಟ್ಟಾಗ ವಿದುರನು ಗಾಂಧಾರಿಯನ್ನೂ ಮತ್ತು ವ್ಯಾಸರನ್ನೂ ಶೀಘ್ರವಾಗಿ ಕರೆದುಕೊಂಡು ಬಂದು ಸಭೆಯನ್ನು ಪ್ರವೇಶಿಸುವಂತೆ ಮಾಡಿದನು.
ತತಸ್ತನ್ಮತಮಾಜ್ಞಾಯ ಸಂಜಯಸ್ಯಾತ್ಮಜಸ್ಯ ಚ |
ಅಭ್ಯುಪೇತ್ಯ ಮಹಾಪ್ರಾಜ್ಞಃ ಕೃಷ್ಣದ್ವೈಪಾಯನೋಽಬ್ರವೀತ್ ||9||
ಸಂಪೃಚ್ಛತೇ ಧೃತರಾಷ್ಟ್ರಾಯ ಸಂಜಯ
ಆಚಕ್ಷ್ವ ಸರ್ವಂ ಯಾವದೇಷೋಽನುಯುಂಕ್ತೇ |
ಸರ್ವಂ ಯಾವದ್ ವೇತ್ಥ ತಸ್ಮಿನ್ ಯಥಾವದ್
ಯಾಥಾತಥ್ಯಂ ವಾಸುದೇವೇಽರ್ಜುನೇ ಚ ||10||
ಆಗ ಸಂಜಯನ ಮತ್ತು ತನ್ನ ಪುತ್ರನಾದ ಧೃತರಾಷ್ಟ್ರನ ಅಭಿಪ್ರಾಯವನ್ನು ಸ್ವೀಕರಿಸಿ, ಮಹಾಪ್ರಾಜ್ಞರಾದ ಕೃಷ್ಣದ್ವೈಪಾಯನರಾದ ವ್ಯಾಸರು ಸಂಜಯನನ್ನು ಕುರಿತು ಸಂಜಯನೇ, ಧೃತರಾಷ್ಟ್ರನು ಎಷ್ಟು ಪ್ರಶ್ನೆಯನ್ನು ಕೇಳುತ್ತಾನೆಯೋ ಅದಕ್ಕೆ ಅನುಗುಣವಾಗಿ ಕೃಷ್ಣಾರ್ಜುನರ ಅಭಿಪ್ರಾಯವನ್ನು ಸರಿಯಾಗಿ ತಿಳಿದವನಾಗಿ ಉತ್ತರಗಳನ್ನು ಹೇಳು ಎಂದು ಹೇಳಿದರು.
ಸಂಜಯಃ
ಅರ್ಜುನೋ ವಾಸುದೇವಶ್ಚ ಧನ್ವಿನೌ ಪರಮಾರ್ಚಿತೌ |
ಕಾಮಾದನ್ಯತ್ರ ಸಂಭೂತೌ ಪೂರ್ವಭಾವಾಯ ಸಮ್ಮಿತೌ ||11||
ಸಂಜಯ ಅರ್ಜುನ ಮತ್ತು ಕೃಷ್ಣ ಇಬ್ಬರೂ ಪರಮಪೂಜಿತರಾದ ಧನುರ್ಧಾರಿಗಳು. ಕಾಮರಹಿತರಾಗಿ ಜನಿಸಿ ಅವರು ಪೂರ್ವಜರ ಸ್ವಭಾವವನ್ನು ಅನುಸರಿಸುವವರು.
ಜನ್ಮಾಂತರಂ ಸಮಾಸ್ಥಾಯ ಯಥಾಯುಕ್ತಂ ಮನಸ್ವಿನಃ |
ಚಕ್ರಂ ತದ್ ವಾಸುದೇವಸ್ಯ ಮಾಯಯಾ ವರ್ತತೇ ವಿಭೋ ||12||
ಎಲ್ಲೈ ವಿಭುವೇ, ಮನೋಬಲವುಳ್ಳ ವಾಸುದೇವನಾದ ಕೃಷ್ಣನ ಇಚ್ಛೆಯಿಂದ ಈ ಜಗಚ್ಚಕ್ರವು ಜನ್ಮಾಂತರವನ್ನು ಪಡೆದು ಪುನಃ ಪುನಃ ಆವೃತ್ತಿಯನ್ನು ಹೊಂದುತ್ತದೆ.
ನರಕಂ ಶಂಬರಂ ಚೈವ ಕಂಸಂ ಚೈದ್ಯಂ ಚ ಮಾಧವಃ |
ಜಿತವಾನ್ ಘೋರಸಂಕಾಶಾನ್ ಕ್ರೀಡನ್ನಿವ ಜನಾರ್ದನಃ ||13||
ಮಧುವಂಶದಲ್ಲಿ ಅವತರಿಸಿದ ಜನಾರ್ದನನಾದ ಕೃಷ್ಣನು ನರಕ, ಶಂಬರ, ಕಂಸ, ಶಿಶುಪಾಲ ಮೊದಲಾದ ಘೋರರೂಪರಾದವರನ್ನು ಆಟವಾಡುವವನಂತೆ ಸಂಹರಿಸಿದನು.
ಪೃಥಿವೀಂ ಚಾಂತರಿಕ್ಷಂ ಚ ದ್ಯಾಂ ಚೈವ ಪುರುಷೋತ್ತಮಃ |
ಮನಸೈವ ವಿಸ್ಪಷ್ಟಾತ್ಮಾ ನಯತ್ಯಾತ್ಮವಶಂ ವಶೀ ||14||
ಮನಸ್ಸಿನಿಂದಲೇ ಜೀವರಿಗೆ ದೇಹಸಂಬಂಧವನ್ನು ಉಂಟುಮಾಡುವ, ಸರ್ವನಿಯಾಮಕನಾದ ಪುರುಷೋತ್ತಮನಾದ ಅವನು ಭೂಮಿ, ಅಂತರಿಕ್ಷ ಮತ್ತು ಸ್ವರ್ಗಲೋಕವೆಲ್ಲವನ್ನೂ ತನ್ನ ವಶವನ್ನಾಗಿ ಮಾಡಿಕೊಳ್ಳುತ್ತಾನೆ (ಲಕ್ಷ್ಮಾಲಂಕಾರ).
ಭೂಯೋ ಭೂಯೋ ಹಿ ಯದ್ ರಾಜನ್ ಪೃಚ್ಛಸೇ ಪಾಂಡವಾನ್ ಪ್ರತಿ ||
ಸ ಯದ್ ಧ್ರುವಂ ಪಾಂಡವೇಷು ವಿದ್ಧಿ ರಾಜಸು ಸತ್ತಮ |
ಸಾರಾಸಾರಬಲಂ ಜ್ಞಾತುಂ ತತ್ ಸಮಾಸೇನ ಮೇ ಶೃಣು ||16||
ಎಲ್ಲೈ ರಾಜನೇ, ನೀನು ಪುನಃ ಪುನಃ ಪಾಂಡವರ ವಿಷಯದಲ್ಲಿ ಪ್ರಶ್ನೆಯನ್ನು ಮಾಡುತ್ತಿದ್ದೀಯೆ. ಎಲ್ಲೈ ಶ್ರೇಷ್ಠನಾದವನೇ, ಪಾಂಡವರಲ್ಲಿ ಯಾವುದು ನಿತ್ಯವಾಗಿದೆಯೋ ರಾಜರಲ್ಲಿ ಶ್ರೇಷ್ಠವಾದ ಮತ್ತು ಕನಿಷ್ಠವಾದ ಬಲಗಳು ಯಾವುದಿದೆಯೋ ಅದನ್ನು ತಿಳಿದುಕೊಳ್ಳಲು ಬಯಸುವ ನಿನಗೆ ಸಂಕ್ಷೇಪವಾಗಿ ಹೇಳುತ್ತೇನೆ, ಅದನ್ನು ಕೇಳು.
ಏಕತೋ ವಾ ಜಗತ್ ಕೃತ್ಸ್ನಮೇಕತೋ ವಾ ಜನಾರ್ದನಃ |
ಸಾರತೋ ಜಗತಃ ಕೃತ್ಸ್ನಾದತಿರಿಕ್ತೋ ಜನಾರ್ದನಃ ||17||

ಒಂದುಕಡೆ ಸಮಸ್ತ ಜಗತ್ತು, ಇನ್ನೊಂದು ಕಡೆ ಕೃಷ್ಣ ಮಾತ್ರ. ಹೀಗೆ ತೂಗಿದರೆ ಜಗತ್ತಿಗಿಂತ ಕೃಷ್ಣನೇ ಅಧಿಕನಾಗುತ್ತಾನೆ.
ಭಸ್ಮ ಕುರ್ಯಾದ್ ಜಗದಿದಂ ಮನಸೈವ ಜನಾರ್ದನಃ |
ನ ತು ಕೃತ್ಸ್ನಂ ಜಗಚ್ಚಕ್ತಂ ಕಿಂಚಿತ್ ಕರ್ತುಂ ಜನಾರ್ದನೇ ॥18॥
ಜನಾರ್ದನನು ತನ್ನ ಮನಸ್ಸಿನ ಸಂಕಲ್ಪದಿಂದಲೇ ಈ ಜಗತ್ತನ್ನು ಭಸ್ಮಮಾಡಿಯಾನು. ಆದರೆ ಸಮಸ್ತವಾದ ಜಗತ್ತು ಜನಾರ್ದನನಿಗೆ ಏನೂ ಮಾಡಲಾರದು.
ಯತಃ ಸತ್ಯಂ ಯತೋ ಧರ್ಮೋ ಯತೋ ಹ್ರೀರಾರ್ಜವಂ ಯತಃ |
ತತೋ ಭವತಿ ಗೋವಿಂದೋ ಯತಃ ಕೃಷ್ಣಸ್ತತೋ ಜಯಃ ॥19॥
ಎಲ್ಲಿ ಸತ್ಯವಿದೆಯೋ, ಎಲ್ಲಿ ಧರ್ಮವಿದೆಯೋ, ಎಲ್ಲಿ ನಾಚಿಕೆ ಇದೆಯೋ, ಎಲ್ಲಿ ಆರ್ಜವವಿದೆಯೋ ಅಲ್ಲಿ ಗೋವಿಂದನಿದ್ದಾನೆ. ಎಲ್ಲಿ ಕೃಷ್ಣನಿದ್ದಾನೋ ಅಲ್ಲಿ ಜಯವಿದೆ.
ಪೃಥಿವೀಂ ಚಾಂತರಿಕ್ಷಂ ಚ ದಿವಂ ಚ ಪುರುಷೋತ್ತಮಃ |
ಮನಸೈವ ವಿಸೃಷ್ಟಾತ್ಮಾ ಕ್ರೀಡನ್ನಿವ ಜನಾರ್ದನಃ ॥20॥
ಮನಸ್ಸಿನಿಂದಲೇ ಆಟವಾಡುವಂತೆ ಜೀವರನ್ನು ಸೃಷ್ಟಿಸಿದ ಪುರುಷೋತ್ತಮನಾದ ಜನಾರ್ದನನು ಭೂಮಿ, ಅಂತರಿಕ್ಷ ಮತ್ತು ಸ್ವರ್ಗಲೋಕವನ್ನು ತನ್ನ ವಶದಲ್ಲಿಟ್ಟು ಕೊಂಡಿದ್ದಾನೆ.
ಸ ಕೃತ್ವಾ ಪಾಂಡವಾನ್ ಸತ್ರಂ ಲೋಕಂ ಸಮ್ಮೋಹಯನ್ನಿವ |
ಅಧರ್ಮನಿರತಾನ್ ಮೂಢಾನ್ ದಗ್ಧುಮಿಚ್ಛತಿ ತೇ ಸುತಾನ್ ॥21॥
ಅವನು ಪ್ರಪಂಚವನ್ನು ಸಂಮೋಹಗೊಳಿಸುವಂತೆ ಪಾಂಡವರಿಂದ ಒಂದು ಯಜ್ಞವನ್ನು ಮಾಡಿಸಿ, ಅಧರ್ಮನಿರತರೂ ಮತ್ತು ಮೂಢರೂ ಆದ ನಿನ್ನ ಪುತ್ರರನ್ನು ಅದರಲ್ಲಿ ದಹಿಸಲು ಬಯಸುತ್ತಾನೆ.
ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂ ಚ ಕೇಶವಃ |
ಆತ್ಮಯೋಗೇನ ಭಗವಾನ್ ಪರಿವರ್ತಯತೇಽನಿಶಮ್ ॥22॥
ಭಗವಂತನಾದ ಕೇಶವನು ಕಾಲಚಕ್ರವನ್ನೂ, ಜಗಚ್ಚಕ್ರವನ್ನೂ ಮತ್ತು ಯುಗಚಕ್ರವನ್ನೂ ತನ್ನ ಸಾಮರ್ಥ್ಯದಿಂದಲೇ ಸತತವಾಗಿ ತಿರುಗಿಸುತ್ತಾನೆ.
ಕಾಲಸ್ಯ ಚ ಸ ಹಿ ಮೃತ್ಯೋಶ್ಚ ಜಂಗಮಸ್ಥಾವರಸ್ಯ ಚ |
ಈಷ್ಟೇ ಹಿ ಭಗವಾನೇಕಃ ಸತ್ಯಮೇತದ್ ಬ್ರವೀಮಿ ತೇ ॥23॥
ಭಗವಂತನಾದ ಅವನೊಬ್ಬನೇ ಕಾಲಕ್ಕೂ, ಮೃತ್ಯುವಿಗೂ, ಸ್ಥಾವರಜಂಗಮವಾದ ಜಗತ್ತಿಗೂ ಒಡೆಯನಾದವನು. ಈ ಮಾತನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತೋ ಹರಿಃ |
ಕರ್ಮಾಣ್ಯಾರಭತೇ ಕರ್ತುಂ ಕೀನಾಶ ಇವ ದುರ್ಬಲಃ ॥24॥
ಮಹಾಯೋಗಿಯಾದ ಹರಿಯು ಸರ್ವಜಗತ್ತಿಗೆ ಒಡೆಯನಾದರೂ ದುರ್ಬಲನಾದ ಕೃಷಿಕನಂತೆ ಕಾರ್ಯಗಳನ್ನು ಆರಂಭಿಸುತ್ತಾನೆ.
ತೇನ ವಂಚಯತೇ ಲೋಕಾನ್ ಮಾಯಾಯೋಗೇನ ಕೇಶವಃ |
ಯೇ ತಮೇವ ಪ್ರಪದ್ಯಂತೇ ನ ತೇ ಮುಹ್ಯಂತಿ ಮಾನವಾಃ ॥25॥
ಕೇಶವನು ಅದರಿಂದ ತನ್ನ ಇಚ್ಛಾಶಕ್ತಿಯಿಂದ ಜೀವನನ್ನು ವಂಚಿಸುತ್ತಾನೆ. ಯಾವ ಮನುಷ್ಯರು ಅವನನ್ನೇ ಶರಣು ಹೊಂದುವರೋ ಅವರು ಮೋಹಕ್ಕೆ ಒಳಗಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ಷಷ್ಟಿತಮೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೇಳನೆಯ ಅಧ್ಯಾಯ
ಕೃಷ್ಣನ ಮಹಿಮೆಯನ್ನು ಹೇಳಿ, ಅವನಿಗೆ ಶರಣಾಗತನಾಗುವಂತೆ ಸಂಜಯನ ಒತ್ತಾಯ. ದುರ್ಯೋಧನನಿಂದ ಅದರ ನಿರಾಕರಣೆ ಮತ್ತು
ಗಾಂಧಾರಿಯ ಉಗ್ರವಚನಗಳು.
ಧೃತರಾಷ್ಟ್ರಃ
ಕಥಂ ತ್ವಂ ಮಾಧವಂ ವೇತ್ಥ ಸರ್ವಲೋಕಮಹೇಶ್ವರಮ್ |
ಕಥಮೇನಂ ನ ವೇದಾಹಂ ತನ್ಮಮಾಚಕ್ಷ್ವ ಸಂಜಯ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ಕೃಷ್ಣನು ಸರ್ವಲೋಕಮಹೇಶ್ವರನೆಂದು ನೀನು ಹೇಗೆ ತಿಳಿದಿದ್ದೀಯೆ? ನನಗೆ ಏಕೆ ಅವನ ವಿಷಯದಲ್ಲಿ ಅಂತಹ ಜ್ಞಾನವಿಲ್ಲ ಎಂದು ನನಗೆ ತಿಳಿಸು.
ಸಂಜಯಃ
ಶೃಣು ರಾಜನ್ ನ ತೇ ವಿದ್ಯಾ ಮಮ ವಿದ್ಯಾ ನ ಹೀಯತೇ |
ವಿದ್ಯಾಹೀನಸ್ತಮೋಧ್ವಸ್ತೋ ನಾಭಿಜಾನಾಸಿ ಕೇಶವಮ್ ॥2॥

ಸಂಜಯ ಎಲೈ ರಾಜನೇ, ಕೇಳು. ನಿನಗೆ ಜ್ಞಾನವಿಲ್ಲ. ನನ್ನ ಜ್ಞಾನವು ಎಂದೂ ನಶಿಸಿ ಹೋಗುವುದಿಲ್ಲ. ನೀನು ತಮೋಗುಣಕ್ಕೆ ವಶನಾಗಿ ಜ್ಞಾನಹೀನನಾದುದರಿಂದ ಕೃಷ್ಣನನ್ನು ಸರಿಯಾಗಿ ತಿಳಿಯುತ್ತಿಲ್ಲ.
ವಿದ್ಯಯಾ ತಾತ ಜಾನಾಮಿ ತ್ರಿಯುಗಂ ಮಧುಸೂದನಮ್ |
ಕರ್ತಾರಮಕೃತಂ ದೇವಂ ಭೂತಾನಾಂ ಪ್ರಭವಾಪ್ಯಯಮ್ ॥3॥
ಪ್ರೀತಿಪಾತ್ರನೇ, ನನ್ನ ಜ್ಞಾನದಿಂದ ನಾನು ಅವನು ಮೂರು ಯುಗದಲ್ಲಿ ಅವತಾರ ಮಾಡುವವನೆಂದೂ, ಮಧುಸೂದನನೆಂದೂ, ಸೃಷ್ಟ್ಯಾದಿಕರ್ತನೆಂದೂ, ಸ್ವತಃ ಜನ್ಮರಹಿತನೆಂದೂ, ದೇವನೆಂದೂ ಎಲ್ಲ ಜೀವರ ಜನನ-ಮರಣಗಳಿಗೆ ಕಾರಣನೆಂದೂ ತಿಳಿದಿದ್ದೇನೆ.
ಧೃತರಾಷ್ಟ್ರಃ
ಗಾವಲ್ಗಣೇಽತ್ರ ಕಾ ವಿದ್ಯಾ ಯಾತೇ ನಿತ್ಯಾ ಜನಾರ್ದನೇ |
ಯಯಾ ತ್ವಮಭಿಜಾನಾಸಿ ತ್ರಿಯುಗಂ ಮಧುಸೂದನಮ್ ॥4॥
ಧೃತರಾಷ್ಟ್ರ ಗಾವಲ್ಗಣಿಯೇ, ಜನಾರ್ದನನ ವಿಷಯದಲ್ಲಿ ನಿನಗಿರುವ ಜ್ಞಾನವು ಎಂತಹದು? ಅದರ ಬಲದಿಂದ ನೀನು ಕೃಷ್ಣನನ್ನು ತ್ರಿಯುಗನಾದವನು ಮತ್ತು ಮಧುಸೂದನನೆಂದೂ ತಿಳಿದಿರುವೆಯಷ್ಟೆ!
ಸಂಜಯಃ
ಮಾಯಾಂ ನ ಸೇವೇ ಭದ್ರಂ ತೇ ನ ವೃಥಾ ಧರ್ಮಮಾಚರೇ |
ಶುದ್ಧಭಾವಂ ಗತೋ ಭಕ್ತ್ಯಾ ಶಾಸ್ತ್ರಾದ್ ವೇದ್ಮಿ ಜನಾರ್ದನಮ್ ॥5॥
ಸಂಜಯ ನಾನು ಯಾವ ಕಪಟವನ್ನೂ ಮಾಡುವುದಿಲ್ಲ. ನಿನಗೆ ಮಂಗಳವಾಗಲಿ. ವ್ಯರ್ಥವಾದ ಧರ್ಮವನ್ನು ಆಚರಿಸುವುದಿಲ್ಲ. ಭಕ್ತಿಯಿಂದ ಶುದ್ಧವಾದ ಮನಸ್ಸನ್ನು ಹೊಂದಿದ್ದೇನೆ. ಶಾಸ್ತ್ರದಿಂದ ಜನಾರ್ದನನನ್ನು ತಿಳಿದಿದ್ದೇನೆ.
ಧೃತರಾಷ್ಟ್ರಃ
ದುರ್ಯೋಧನ ಹೃಷೀಕೇಶಂ ಪ್ರಪದ್ಯಸ್ವ ಜನಾರ್ದನಮ್ |
ಆಪ್ತೋ ನಃ ಸಂಜಯಸ್ತಾತ ಶರಣಂ ಗಚ್ಛ ಕೇಶವಮ್ ॥6॥
ಧೃತರಾಷ್ಟ್ರ ಪ್ರೀತಿಪಾತ್ರನಾದ ದುರ್ಯೋಧನನೇ, ಜನಾರ್ದನನಾದ ಹೃಷೀಕೇಶನಿಗೆ ಶರಣಾಗತನಾಗು. ಸಂಜಯನು ನಮಗೆ ಆಪ್ತನಾದವನು. ಕೃಷ್ಣನಿಗೆ ಶರಣಾಗತನಾಗು.
ದುರ್ಯೋಧನಃ
ಭಗವಾನ್ ದೇವಕೀಪುತ್ರೋ ಲೋಕಾಂಶ್ಚೇನ್ನಿಹನಿಷ್ಯತಿ |
ಪ್ರವದನ್ನರ್ಜುನೇ ಸಖ್ಯಂ ನಾಹಂ ಗಚ್ಛೇಽದ್ಯ ಕೇಶವಮ್ ॥7॥
ದುರ್ಯೋಧನ ಭಗವಂತನಾದ ದೇವಕೀಪುತ್ರನು ಅರ್ಜುನನ ಸ್ನೇಹವನ್ನು ಸಾರುತ್ತಾ ಲೋಕಗಳನ್ನು ಸಂಹರಿಸುವವನಾದರೆ ನಾನು ಅವನಿಗೆ ಶರಣಾಗತನಾಗುವುದಿಲ್ಲ.
ಧೃತರಾಷ್ಟ್ರಃ
ಅವಾಗ್ ಗಾಂಧಾರಿ ಪುತ್ರಸ್ತೇ ಗಚ್ಛತ್ಯೇಷ ಸುದುರ್ಮತಿಃ |
ಈರ್ಷ್ಯುರ್ದುರಾತ್ಮಾ ಮಾನೀ ಚ ಶ್ರೇಯಸಾಂ ಶಾಸನಾತಿಗಃ ॥8॥
ಧೃತರಾಷ್ಟ್ರ ಎಲೌ ಗಾಂಧಾರಿಯೇ, ಬಹಳ ದುರ್ಮತಿಯಾದ ಈ ನಿನ್ನ ಪುತ್ರನು ಅಧೋಗತಿಯನ್ನು ಹೊಂದುವನು. ಅವನು ಅಸೂಯಾಪರ, ದುರಾತ್ಮನಾದವನು, ಅಹಂಕಾರಿ ಮತ್ತು ಶ್ರೇಷ್ಠರಾದವರ ಶಾಸನವನ್ನು ಮೀರುವವನು.
ಗಾಂಧಾರೀ
ಐಶ್ವರ್ಯಕಾಮ ದುಷ್ಟಾತ್ಮನ್ ವೃದ್ಧಾನಾಂ ಶಾಸನಾತಿಗ |
ಐಶ್ವರ್ಯಜೀವಿತೇ ಹಿತ್ವಾ ಪಿತರಂ ಮಾಂ ಚ ಬಾಲಿಶ ॥9॥
ವರ್ಧಯನ್ ದುರ್ಹೃದಾಂ ಪ್ರೀತಿಂ ಮಾಂ ಚ ಶೋಕಾಯ ರಂಧ್ರಯನ್ |
ನಿಹತೋ ಭೀಮಸೇನೇನ ಸ್ಮರ್ತಾಸಿ ವಚನಂ ಪಿತುಃ ॥10॥
ಗಾಂಧಾರಿ ಐಶ್ವರ್ಯಕಾಮನಾದ ದುಷ್ಟಾತ್ಮನೇ, ದೊಡ್ಡವರ ಶಾಸನವನ್ನು ಮೀರುವವನೇ, ಬಾಲಿಶನಾದವನೇ, ನೀನು ಸಂಪತ್ತನ್ನೂ ಮತ್ತು ಪ್ರಾಣಗಳನ್ನೂ ಬಿಟ್ಟು ನನ್ನನ್ನೂ ಮತ್ತು ನಿನ್ನ ತಂದೆಯನ್ನೂ ಬಿಟ್ಟು, ಶತ್ರುಗಳಿಗೆ ಸಂತೋಷವನ್ನುಂಟು ಮಾಡುತ್ತಾ, ನನ್ನನ್ನು ಶೋಕದಲ್ಲಿ ಕೆಡವಿ, ಭೀಮಸೇನನಿಂದ ಹತನಾಗಿ ನಿನ್ನ ತಂದೆಯ ಮಾತುಗಳನ್ನು ಸ್ಮರಿಸುವಿ.
ವ್ಯಾಸಃ
ಪ್ರಿಯೋಽಸಿ ರಾಜನ್ ಕೃಷ್ಣಸ್ಯ ಧೃತರಾಷ್ಟ್ರ ನಿಬೋಧ ಮೇ |
ಯಸ್ಯ ತೇ ಸಂಜಯೋ ದೂತೋ ಯಸ್ತ್ವಂ ಶ್ರೇಯಸಿ ಯೋಕ್ಷ್ಯತೇ ॥
ವ್ಯಾಸರು ರಾಜನಾದ ಧೃತರಾಷ್ಟ್ರನೇ, ನೀನು ಕೃಷ್ಣನಿಗೆ ಪ್ರಿಯನಾಗಿದ್ದೀಯೆ. ಯಾವ ನಿನಗೆ ಸಂಜಯನು ದೂತನಾಗಿದ್ದಾನೆಯೋ ಮತ್ತು ಯಾವ ಸಂಜಯನು ನಿನ್ನನ್ನು ಶ್ರೇಯೋಮಾರ್ಗದಲ್ಲಿ ಇಡುವವನಾಗಿದ್ದಾನೆಯೋ ಅಂತಹ ನೀನು ನನ್ನ ಮಾತನ್ನು ಕೇಳು.
ಜಾನಾತ್ಯೇಷ ಹೃಷೀಕೇಶಂ ಪುರಾಣಂ ಯಚ್ಚ ವೈ ನವಮ್ |
ಶುಶ್ರೂಷಮಾಣಮೇಕಾಗ್ರಂ ಮೋಕ್ಷ್ಯತೇ ಮಹತೋ ಭಯಾತ್ ॥12॥
ಸಂಜಯನು ಪ್ರಾಚೀನನಾದ ಮತ್ತು ಈಗ ಇರುವ ಕೃಷ್ಣನನ್ನು ತಿಳಿದಿದ್ದಾನೆ. ಅವನು ಏಕಾಂತಚಿತ್ತದಿಂದ ಕೃಷ್ಣನ ಸೇವೆಯನ್ನು ಮಾಡುವವನಾಗಿ ದೊಡ್ಡ ಭಯಗಳಿಂದ ನಿರ್ಮುಕ್ತನಾಗಿದ್ದಾನೆ.
ವೈಚಿತ್ರವೀರ್ಯ ಪುರುಷಾಃ ಕ್ರೋಧಹರ್ಷಸಮಾವೃತಾಃ |
ಸಿತಾ ಬಹುವಿಧೈಃ ಪಾಶೈರ್ಯೇನ ತುಷ್ಟಾಃ ಸ್ವಕೈರ್ಧನೈಃ ॥13॥

ವಿಚಿತ್ರವೀರ್ಯನ ಪುತ್ರನಾದ ಎಲೈ ಧೃತರಾಷ್ಟ್ರನೇ, ಜೀವರು ಹರ್ಷ-ಕ್ರೋಧಗಳಿಂದ ಕೂಡಿದವರಾಗಿ ಅನೇಕ ವಿಧವಾದ ಪಾಶಗಳಿಂದ ಕಟ್ಟಲ್ಪಟ್ಟಿದ್ದಾರೆ. ಅದರಿಂದ ಅವರು ತಮ್ಮ ಸಂಪತ್ತಿನಿಂದ ಸಂತುಷ್ಟರಾಗಿದ್ದಾರೆ.
ಯಮಸ್ಯ ವಶಮಾಯಾಂತಿ ಕಾಮಮೂಢಾಃ ಪುನಃ ಪುನಃ |
ಅಂಧನೇತ್ರಾ ಯಥೈವಾಂಧಾ ನೀಯಮಾನಾಃ ಸ್ವಕರ್ಮಭಿಃ ॥14॥
ಅಂತಹವರು ಕುರುಡನಿಂದ ನಡೆಸಲ್ಪಟ್ಟ ಇನ್ನೊಬ್ಬ ಕುರುಡನಂತೆ ತಮ್ಮ ಕರ್ಮಗಳಿಂದ ನಡೆಸಲ್ಪಟ್ಟವರಾಗಿ ಕಾಮಮೂಢರಾಗಿ ಪುನಃ ಪುನಃ ಯಮನ ವಶರಾಗುತ್ತಾರೆ.
ಏಷ ಏಕಾಯನಃ ಪಂಥಾ ಯೇನ ಯಾಂತಿ ಮನೀಷಿಣಃ |
ತಂ ದೃಷ್ಟ್ವಾ ಮೃತ್ಯುಮತ್ಯೇತಿ ಮಹಾಂಸ್ತತ್ರ ನ ಸಜ್ಜತೇ ॥15॥
ವಿವೇಕಿಗಳು ನಡೆಯುವ ಈ ದಾರಿಯು ಮುಖ್ಯವಾದುದು. ಅಂತಹ ಮಾರ್ಗದಿಂದ ನಡೆದು ಕೃಷ್ಣನನ್ನು ನೋಡಿ ಮೃತ್ಯುವನ್ನು ದಾಟುತ್ತಾರೆ. ಮೃತ್ಯುವು ಅಂತಹ ಜೀವರ ಮೇಲೆ ಪ್ರಭುತ್ವವನ್ನು ಹೊಂದುವುದಿಲ್ಲ.
ಧೃತರಾಷ್ಟ್ರಃ
ಅಂಗ ಸಂಜಯ ಮೇ ಶಂಸ ಪಂಥಾನಮಕುತೋಭಯಮ್ |
ಯೇನ ಗತ್ವಾ ಹೃಷೀಕೇಶಂ ಪ್ರಾಪ್ನುಯಾಂ ಶಾಂತಿಮುತ್ತಮಾಮ್ ॥16॥
ಧೃತರಾಷ್ಟ್ರ ಪ್ರೀತಿಪಾತ್ರನಾದ ಸಂಜಯನೇ, ಯಾವ ಮಾರ್ಗದಲ್ಲಿ ನಡೆದು ಹೃಷೀಕೇಶನನ್ನು ಹೊಂದಿ, ಶ್ರೇಷ್ಠವಾದ ಶಾಂತಿಯನ್ನು ಪಡೆಯುವೆನೋ ಅಂತಹ ನಿರ್ಭಯವಾದ ಮಾರ್ಗವನ್ನು ನನಗೆ ಉಪದೇಶ ಮಾಡುವವನಾಗು.
ಸಂಜಯಃ
ನಾಕೃತಾತ್ಮಾ ಕೃತಾತ್ಮಾನಂ ಜಾತು ವಿದ್ಯಾಜ್ಜನಾರ್ದನಮ್ |
ಆತ್ಮನಸ್ತು ಕ್ರಿಯೋಪಾಯೋ ನಾನ್ಯತ್ರೇಂದ್ರಿಯನಿಗ್ರಹಮ್ ॥17॥
ಮನೋನಿಗ್ರಹ ಇಲ್ಲದವನು ಮನೋಜಯವುಳ್ಳ ಕೃಷ್ಣನನ್ನು ಎಂದೂ ತಿಳಿಯಲಾರನು. ಸರಿಯಾದ ಕರ್ಮಗಳನ್ನು ಮಾಡಲು ಇಂದ್ರಿಯನಿಗ್ರಹವನ್ನು ಬಿಟ್ಟು ಬೇರೆ ಯಾವ ಉಪಾಯವೂ ಇಲ್ಲ.
ಇಂದ್ರಿಯಾಣಾಮುದೀರ್ಣಾನಾಂ ಕಾಮತ್ಯಾಗೋಽಪ್ರಮಾದತಃ |
ಅಪ್ರಮಾದೋಽವಿಹಿಂಸಾ ಚ ಜ್ಞಾನಯೋನಿರಸಂಶಯಮ್ ॥18॥
ಹುಚ್ಚೆದ್ದು ಕುಣಿಯುವ ಇಂದ್ರಿಯಗಳ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಆಸೆಯ ತ್ಯಾಗವನ್ನು ಮಾಡಬೇಕು. ಜಾಗರೂಕತೆ ಮತ್ತು ಅಹಿಂಸೆ ಇವೆರಡೂ ನಿಸ್ಸಂಶಯವಾಗಿ ಜ್ಞಾನಕ್ಕೆ ಕಾರಣವಾಗುತ್ತದೆ.
ಇಂದ್ರಿಯಾಣಾಂ ಯಮೇ ಯತ್ತೋ ಭವ ರಾಜನ್ನತಂದ್ರಿತಃ |
ಬುದ್ಧಿಶ್ಚ ತೇ ಮಾ ಚ್ಯವತು ನಿಯಚ್ಛೈತಾಂ ಯತಸ್ತತಃ ॥19॥
ಎಲೈ ರಾಜನೇ, ಆಲಸ್ಯವಿಲ್ಲದೆ ನಿನ್ನ ಇಂದ್ರಿಯಗಳನ್ನು ನಿಯಂತ್ರಿಸಿ, ಎಚ್ಚರಿಕೆಯಿಂದ ಇರುವವನಾಗು. ನಿನ್ನ ಬುದ್ಧಿಯು ಹಾಳಾಗದಿರಲಿ. ಯಾವ ವಿಷಯಗಳಿಂದ ನಿನ್ನ ಬುದ್ಧಿಯು ವ್ಯಥೆಗೆ ಈಡಾಗುತ್ತದೆಯೋ ಅಂತಹ ವಿಷಯಗಳಿಂದ ನಿನ್ನ ಬುದ್ಧಿಯನ್ನು ನಿಯಂತ್ರಿಸು.
ಏತಜ್ಜ್ಞಾನಂ ವಿದುರ್ವಿಪ್ರಾ ಧ್ರುವಮಿಂದ್ರಿಯಧಾರಣಮ್ |
ಏತಜ್ಜ್ಞಾನಂ ಚ ಪಂಥಾಶ್ಚ ಯೇನ ಯಾಂತಿ ಮನೀಷಿಣಃ ॥20॥
ಜ್ಞಾನಿಗಳಾದ ಬ್ರಾಹ್ಮಣರು ಈ ಇಂದ್ರಿಯಧಾರಣೆಯನ್ನು ನಿಶ್ಚಿತವಾದ ಜ್ಞಾನಕಾರಣವೆಂದು ತಿಳಿಯುತ್ತಾರೆ. ಇದರಿಂದ ಉಂಟಾಗುವುದು ನಿಶ್ಚಿತವಾದ ಜ್ಞಾನ ಮತ್ತು ಇದು ವಿವೇಕಿಗಳು ಹೋಗುವ ಮಾರ್ಗ.
ಅಪ್ರಾಪ್ಯಃ ಕೇಶವೋ ರಾಜನ್ನಿಂದ್ರಿಯೈರಜಿತೈರ್ನೃಭಿಃ |
ಆಗಮಾಧಿಗತೋ ಯೋಗೀ ವಶೀ ತತ್ತ್ವೇ ಪ್ರಸೀದತಿ ॥21॥
ಎಲೈ ರಾಜನೇ, ಇಂದ್ರಿಯಜಯವಿಲ್ಲದ ಪುರುಷರು ಎಂದೂ ಕೇಶವನನ್ನು ಹೊಂದುವುದಿಲ್ಲ. ಇಂದ್ರಿಯಜಯವನ್ನು ಹೊಂದಿ, ಆಗಮಗಳನ್ನು ಅಧ್ಯಯನ ಮಾಡಿ, ಅದರಂತೆ ನಡೆಯುವ ಯೋಗಿಯು ತತ್ತ್ವಜ್ಞಾನವನ್ನು ಹೊಂದಿ ಪ್ರಸನ್ನನಾಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
॥ ವ್ಯಾಸಾಭಿಗಮನಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೆಂಟನೆಯ ಅಧ್ಯಾಯ
ಧೃತರಾಷ್ಟ್ರನನ್ನು ಕುರಿತು ಸಂಜಯನಿಂದ ಕೃಷ್ಣನ ನಾಮಗಳ ನಿರ್ವಚನ.
ಧೃತರಾಷ್ಟ್ರಃ
ಭೂಯೋ ಮೇ ಪುಂಡರೀಕಾಕ್ಷಂ ಸಂಜಯಾಚಕ್ಷ್ವ ತತ್ತ್ವತಃ |
ನಾಮಕರ್ಮಾರ್ಥವಿತ್ ತಾತ ಪ್ರಾಪ್ನುಯಾಂ ಪುರುಷೋತ್ತಮಮ್ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ನನಗೆ ಪುನಃ ಪುಂಡರೀಕಾಕ್ಷನಾದ ಕೃಷ್ಣನ ಯಥಾರ್ಥವಾದ ಸ್ವರೂಪವನ್ನು ಹೇಳು. ಅವನ ನಾಮಗಳ ಸರಿಯಾದ ಅರ್ಥವನ್ನು ಮತ್ತು ಕರ್ಮಗಳನ್ನು ತಿಳಿದು ಎಲೈ ಪ್ರೀತಿಪಾತ್ರನೇ, ನಾನು ಪುರುಷೋತ್ತಮನಾದ ಅವನನ್ನು

ಹೊಂದುವೆನು.
ಸಂಜಯಃ
ಶ್ರುತಂ ಮೇ ವಾಸುದೇವಸ್ಯ ನಾಮನಿರ್ವಚನಂ ಶುಭಮ್ |
ಯಾವತ್ ತತ್ರಾಭಿಜಾನೇಽಹಮ್ ಅಪ್ರಮೇಯೋ ಹಿ ಕೇಶವಃ ॥2॥
ಸಂಜಯ ನಾನು ವಾಸುದೇವನಾದ ಕೃಷ್ಣನ ನಾಮಗಳ ಶುಭವಾದ ನಿರ್ವಚನಗಳನ್ನು ಕೇಳಿದ್ದೇನೆ. ಅವನು ಪೂರ್ಣವಾಗಿ ತಿಳಿಯಲು ಅಶಕ್ಯನಾದವನು. ನಾನು ಎಷ್ಟನ್ನು ತಿಳಿದಿದ್ದೇನೆಯೋ ಅದನ್ನು ಹೇಳುತ್ತೇನೆ.
ವಸನಾತ್ ಸರ್ವಭೂತಾನಾಂ ವಸುತ್ವಾದ್ ದೇವಯೋನಿತಃ |
ವಾಸುದೇವಸ್ತತೋ ವೇದ್ಯೋ ವಿಷುತ್ವಾದ್ ವಿಷ್ಣುರುಚ್ಯತೇ ॥3॥
ಎಲ್ಲರನ್ನೂ ತನ್ನಲ್ಲಿ ವಾಸಮಾಡಿಸಿಕೊಳ್ಳುವುದರಿಂದ ಮತ್ತು ನಿಧಿಯಾದುದರಿಂದ ಮತ್ತು ದೇವಯೋನಿಯನ್ನು ಹೊಂದಿರುವುದರಿಂದ ಅವನನ್ನು ವಾಸುದೇವನೆಂದು ತಿಳಿಯಬೇಕು. ವ್ಯಾಪ್ತನಾದುದರಿಂದ ಅವನನ್ನು ವಿಷ್ಣು ಎಂದು ಕರೆಯುತ್ತಾರೆ.

ಮೌನಾದ್ಧ್ಯಾನಾಚ್ಚ ಯೋಗಾಚ್ಚ ವಿದ್ಧಿ ಭಾರತ ಮಾಧವಮ್ |
ಸರ್ವಸತ್ತ್ವಮಯತ್ವಾಚ್ಚ ಮಧುಹಾ ಮಧುಸೂದನಃ ॥4॥
ಮೌನದಿಂದ, ಧ್ಯಾನದಿಂದ ಮತ್ತು ಜ್ಞಾನಯೋಗದಿಂದ ಅವನನ್ನು ಮಾಧವನೆಂದು ತಿಳಿ. ಸರ್ವಸತ್ವಮಯನಾದುದರಿಂದಲೂ ಮಧುವಿನಂತೆ ಸರ್ವಸಾಮರ್ಥ್ಯಗಳ ಸಾರಸಂಗ್ರಹರೂಪನಾದುದರಿಂದಲೂ ಮಾಧವನೆಂದು ತಿಳಿ. ಮಧುನಾಮಕನಾದ ದೈತ್ಯನ ಸಂಹಾರವನ್ನು ಮಾಡಿದುದರಿಂದ ಅವನು ಮಧುಸೂದನನೆನಿಸುತ್ತಾನೆ.
ಕೃಷಿರ್ಭೂವಾಚಕಃ ಶಬ್ದೋಣಶ್ಚ ನಿರ್ವೃತಿವಾಚಕಃ |
ಕೃಷ್ಣಸ್ತದ್ಭಾವಯೋಗಾಚ್ಚ ಕೃಷ್ಣೋ ಭವತಿ ಶಾಶ್ವತಃ ॥5॥
ಕೃಷಿ ಎಂಬ ಶಬ್ದವು ಭೂಮಿಯನ್ನು ಹೇಳುತ್ತದೆ. ಣಕಾರವು ಆನಂದವನ್ನು ಹೇಳುತ್ತದೆ. ಅವೆರಡನ್ನೂ ಹೊಂದಿರುವುದರಿಂದ ಎಂದರೆ ಭೂಮಿಯಲ್ಲಿದ್ದರೂ ಸುಖಪೂರ್ಣನಾಗಿರುವುದರಿಂದ ಶಾಶ್ವತನಾದ ಅವನು ಕೃಷ್ಣನೆಂದು ಕರೆಯಲ್ಪಡುತ್ತಾನೆ.
ಪುಂಡರೀಕಂ ಪರಂ ಧಾಮ ನಿತ್ಯಮಕ್ಷಯಮಕ್ಷರಮ್ |
ತದ್ಭಾವಾತ್ ಪುಂಡರೀಕಾಕ್ಷೋ ದಸ್ಯುತ್ರಾಸಾಜ್ಜನಾರ್ದನಃ ॥6॥
ಜೀವರ ಹೃದಯ ಪುಂಡರೀಕವು ಅಥವಾ ಮುಕ್ತರ ಹೃದಯಪುಂಡರೀಕವು ಅವನಿಗೆ ನಾಶಹೊಂದದ ನಿವಾಸಸ್ಥಾನವಾಗಿರುವುದರಿಂದ ಅವನು ಪುಂಡರೀಕಾಕ್ಷನೆನಿಸುತ್ತಾನೆ. ದಸ್ಯುಜನರನ್ನು ಪೀಡಿಸುವುದರಿಂದ ಅವನನ್ನು ಜನಾರ್ದನ ಎಂದು ಕರೆಯುತ್ತಾರೆ.
ಯತಃ ಸತ್ವಂ ನ ಚ್ಯವತೇ ಯಚ್ಚ ಸತ್ವಾನ್ನ ಹೀಯತೇ |
ತತ್ತ್ವತಃ ಸಾತ್ವತಸ್ತಸ್ಮಾದ್ ಆರ್ಷಭಾದ್ ವೃಷಭೇಕ್ಷಣಃ ॥7॥
ಯಾವನನ್ನು ಜ್ಞಾನಾದಿ ಸದ್ಗುಣಗಳು ಎಂದೂ ತ್ಯಜಿಸುವುದಿಲ್ಲವೋ ಮತ್ತು ಯಾವನ ಜ್ಞಾನಾದಿ ಸದ್ಗುಣಗಳು ಎಂದೂ ತ್ರಾಸವನ್ನು ಹೊಂದುವುದಿಲ್ಲವೋ ಅಂಥವನನ್ನು ಸಾತ್ವತ ಎಂದು ಕರೆಯುತ್ತಾರೆ. ಶ್ರೇಷ್ಠನಾದುದರಿಂದ ವೃಷಭೇಕ್ಷಣ ಎಂದು ಕರೆಯುತ್ತಾರೆ.
ನ ಜಾಯತೇ ಜನಿತ್ರಾಽಯಮ್ ಅಜಸ್ತಸ್ಮಾದನೀಕಜಿತ್ |
ದೇವಾನಾಂ ಸುಖಶಂಸಿತ್ವಾದ್ ದಮಾದ್ ದಾಮೋದರೋ ವಿಭುಃ ॥8॥
ತಂದೆಯಿಂದ ಜನಿಸುವುದಿಲ್ಲವಾದ್ದರಿಂದ ಅವನು ಅಜನಾದವನು. ದೇವತೆಗಳ ಸುಖವನ್ನು ಆಶಂಸನ ಮಾಡುವುದರಿಂದ ಅವನನ್ನು ಅನೀಕಜಿತ್ ಎಂದು ಕರೆಯುತ್ತಾರೆ. ದಮವನ್ನು ಹೊಂದಿರುವುದರಿಂದ ಮತ್ತು ದೋಷದೂರನಾಗಿರುವುದರಿಂದ ವಿಭುವಾದ ಅವನು ದಾಮೋದರನೆಂದು ಕರೆಯಲ್ಪಡುತ್ತಾನೆ.
ಹರ್ಷಾತ್ ಸುಖಾತ್ ಸುಖೈಶ್ವರ್ಯಾದ್ ಹೃಷೀಕೇಶತ್ವಮಶ್ನುತೇ |
ಬಾಹುಭ್ಯಾಂ ರೋದಸೀ ಬಿಭ್ರನ್ ಮಹಾಬಾಹುರಿತಿ ಸ್ಮೃತಃ ॥9॥
ಹರ್ಷ, ಸುಖ ಮತ್ತು ಐಶ್ವರ್ಯಗಳನ್ನು ಹೊಂದಿರುವುದರಿಂದ ಅವನು ಹೃಷೀ-ಕ-ಈಶ (ಹೃಷೀಕೇಶ) ನೆಂದು ಕರೆಯಲ್ಪಡುತ್ತಾನೆ. ತನ್ನ ಬಾಹುಗಳಿಂದ ಭೂಲೋಕ ಮತ್ತು ದ್ಯುಲೋಕಗಳನ್ನು ಹಿಡಿದಿರುವುದರಿಂದ ಅವನನ್ನು ಮಹಾಬಾಹುವೆಂದು ಕರೆಯುತ್ತಾರೆ.
ಅಧೋ ನ ಕ್ಷೀಯತೇ ಜಾತು ಯಸ್ಮಾತ್ ತಸ್ಮಾದಧೋಕ್ಷಜಃ |
ನರಾಣಾಮಯನಾಚ್ಚಾಪಿ ತತೋ ನಾರಾಯಣಃ ಸ್ಮೃತಃ ॥10॥
ಕೆಳಗೆ ಪಾತವನ್ನು ಹೊಂದಿ ಕ್ಷಯವನ್ನು ಹೊಂದುವುದಿಲ್ಲವಾದ್ದರಿಂದ ಅವನು ಅಧೋಕ್ಷಜನಾದವನು. ನರರಿಗೆ ಆಶ್ರಯನಾದುದರಿಂದ ಅವನು ನಾರಾಯಣನೆನಿಸುತ್ತಾನೆ.
ಪೂರಣಾತ್ ಸಾದನಾಚ್ಚಾಪಿ ತತೋ ವೈ ಪುರುಷೋತ್ತಮಃ ॥11॥
ಅಸತಶ್ಚ ಸತಶ್ಚೈವ ಸರ್ವಸ್ಯ ಪ್ರಭವೋಽಪ್ಯಯಃ ॥12॥
ಸರ್ವಸ್ಯ ಚ ಸದಾ ಜ್ಞಾನಾತ್ ಸರ್ವಜ್ಞಂ ತಂ ಪ್ರಚಕ್ಷತೇ ॥13॥
ಯೋಗ್ಯಜೀವರಿಗೆ ಜ್ಞಾನಾದಿಗಳನ್ನು ಪೂರಣಮಾಡುವುದರಿಂದಲೂ, ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರವನ್ನು ಮಾಡುವುದರಿಂದಲೂ ಅವನು ಪುರುಷೋತ್ತಮ ಎನಿಸುತ್ತಾನೆ. ಅವನು ಎಲ್ಲ ಕಾರ್ಯಕಾರಣಗಳಿಗೂ ಸೃಷ್ಟಿಕರ್ತನೂ ಮತ್ತು ಲಯಕರ್ತನೂ ಆಗಿದ್ದಾನೆ. ಯಾವಾಗಲೂ ಎಲ್ಲ ವಿಷಯಗಳ ಜ್ಞಾನವನ್ನು ಹೊಂದಿರುವುದರಿಂದ ಅವನನ್ನು ಸರ್ವಜ್ಞನೆಂದು ಕರೆಯುತ್ತಾರೆ.
ಸತ್ಯೇ ಪ್ರತಿಷ್ಠಿತಃ ಕೃಷ್ಣಃ ಸತ್ಯಮತ್ರ ಪ್ರತಿಷ್ಠಿತಮ್ |
ಸತ್ತಾಸತ್ತೇ ಚ ಗೋವಿಂದಃ ತಸ್ಮಾತ್ ಸತ್ಯೋಽಪಿ ನಾಮತಃ ॥14॥
ಕೃಷ್ಣನು ಸತ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಸತ್ಯವು ಕೃಷ್ಣನಲ್ಲಿ ಪ್ರತಿಷ್ಠಿತವಾಗಿದೆ. ಸತ್ವ ಮತ್ತು ಅಸತ್ವಗಳಿಗೆ ಗೋವಿಂದನಾದ ಅವನು

ನಿಯಾಮಕನಾದವನು. ಆದ್ದರಿಂದ ಅವನಿಗೆ ಸತ್ಯವೆಂಬ ನಾಮವಿದೆ.
ವಿಷ್ಣುರ್ವಿಕ್ರಮಣಾದ್ ದೇವೋ ಜಯನಾಜ್ಜಿಷ್ಣುರುಚ್ಯತೇ ||15||
ವಿಕ್ರಮಣ ಮಾಡುವುದರಿಂದ ಅವನು ವಿಷ್ಣುವೆನಿಸುತ್ತಾನೆ. ಜಯಶೀಲನಾದುದರಿಂದ ಆ ದೇವನು ಜಿಷ್ಣು ಎನಿಸುತ್ತಾನೆ.
ಶಾಶ್ವತತ್ವಾದನಂತಶ್ಚ ಗೋವಿಂದಶ್ವೇತನಾದಭೂತ್ |
ಅತತ್ತ್ವಂ ಕುರುತೇ ತತ್ತ್ವಂ ಯೇನ ಮೋಹಯತೇ ಪ್ರಜಾಃ ||16||
ಶಾಶ್ವತನಾದುದರಿಂದ ಅವನು ಅನಂತ. ಜ್ಞಾನಪೂರ್ಣನಾದುದರಿಂದ ಅವನು ಗೋವಿಂದ. ಅವನು ತತ್ತ್ವವನ್ನು ಅತತ್ತ್ವವಾಗಿ ಕಾಣುವಂತೆ ಮಾಡುತ್ತಾನೆ. ಅದರಿಂದ ಜೀವರನ್ನು ಮೋಹಿಸುತ್ತಾನೆ.
ಏವಂವಿಧೋ ಧರ್ಮನಿತ್ಯೋ ಭಗವಾನ್ ಮಧುಸೂದನಃ |
ಆಗಂತಾ ಹಿ ಮಹಾಬಾಹುರಾನೃಶಂಸ್ಯಾರ್ಥಮಚ್ಯುತಃ ||17||
ಧರ್ಮನಿತ್ಯನಾದ ಭಗವಂತನಾದ ಮಧುಸೂದನನು ಇಂತಹವನು. ಮಹಾಬಾಹುವಾದ ಆ ಅಚ್ಯುತನು ಒದಗಲಿರುವ ಕ್ರೌರ್ಯವನ್ನು ಪರಿಹರಿಸಲು ಇಲ್ಲಿಗೆ ಬರುವವನಾಗುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ||
|| ವ್ಯಾಸಾಭಿಗಮನಪರ್ವಣಿ ಏಕವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂಬತ್ತನೆಯ ಅಧ್ಯಾಯ
ಕೃಷ್ಣನ ಆಗಮನ ವಾರ್ತೆಯನ್ನು ಕೇಳಿ ಧೃತರಾಷ್ಟ್ರನ ಹರ್ಷವಚನಗಳು.
ಧೃತರಾಷ್ಟ್ರಃ
ಚಕ್ಷುಷ್ಮತಾಂ ವೈ ಸ್ಪೃಹಯಾಮಿ ಸಂಜಯ |
ದ್ರಕ್ಷ್ಯಂತಿ ಯೇ ವಾಸುದೇವಂ ಸಮೀಪೇ |
ವಿಭ್ರಾಜಮಾನಂ ವಪುಷಾ ಪರೇಣ
ಪ್ರಕಾಶಯಂತಂ ಪ್ರದಿಶೋ ದಿಶಶ್ಚ ||1||
ಧೃತರಾಷ್ಟ್ರ ಎಲೈ ಸಂಜಯನೇ, ಯಾರು ತನ್ನ ಶ್ರೇಷ್ಠವಾದ ಶರೀರದಿಂದ ಶೋಭಿಸುವ, ದಿಕ್ಕುವಿದಿಕ್ಕುಗಳನ್ನು ಬೆಳಗುವ ವಾಸುದೇವನಾದ ಕೃಷ್ಣನನ್ನು ಸಮೀಪದಲ್ಲಿ ನೋಡುತ್ತಾರೆಯೋ ಅಂತಹವರ ದೃಷ್ಟಿಯನ್ನು ನಾನು ಬಯಸುತ್ತೇನೆ.
ಸಂಜಯಃ
ವಕ್ತಾ ವಾಚಂ ರಾಜಮಧ್ಯೇ ಸಭಾಯಾಂ
ವೃಷ್ಣಿಶ್ರೇಷ್ಠೋ ಮುನಿಭಿರ್ಭ್ರಾಜಮಾನಃ ||2||
ಸಂಜಯ ಋಷಿಗಳಿಂದ ಕೂಡಿ ಶೋಭಿಸುವ ವೃಷ್ಣಿಶ್ರೇಷ್ಠನಾದ ಕೃಷ್ಣನು ಸಭೆಯಲ್ಲಿ ರಾಜರ ಮಧ್ಯದಲ್ಲಿ ಮಾತನಾಡುವವನಿದ್ದಾನೆ.
ಧೃತರಾಷ್ಟ್ರಃ
ಈರಯಂತಂ ಭಾರತೀಂ ಭಾರತಾನಾಮ್
ಅಭ್ಯರ್ಚನೀಯಾಂ ಶಂಕರೀಂ ಸೃಂಜಯಾನಾಮ್ |
ಬುಭೂಷದ್ಭಿರ್ಗ್ರಹಣೀಯಾಮನಿಂದ್ಯಾಂ
ಪರಾಸೂನಾಮಗ್ರಹಣೀಯರೂಪಾಮ್ ||3||
ಧೃತರಾಷ್ಟ್ರ ಭರತವಂಶದವರಿಗೂ ಮತ್ತು ಸೃಂಜಯರಿಗೂ ಪೂಜನೀಯವಾದ ಸುಖಪ್ರದವಾದ ಶ್ರೇಯಸ್ಕಾಮಿಗಳಿಂದ ಸ್ವೀಕರಿಸಲು ಯೋಗ್ಯವಾದ ಮರಣವು ಪ್ರಾಪ್ತವಾದವರಿಗೆ ಸ್ವೀಕರಿಸಲು ಅಸಾಧ್ಯವಾದ, ಅನಿಂದ್ಯವಾದ ಮಾತುಗಳನ್ನು (ಆಡುವ ಕೃಷ್ಣನಿಗೆ ಶರಣಾಗತನಾಗುತ್ತೇನೆ).
ಸಮುದ್ಯಂತಂ ಸಾತ್ವತಮೇಕವೀರಂ
ಪ್ರಣೇತಾರಮೃಷಭಂ ಯಾದವಾನಾಮ್ |
ನಿಹಂತಾರಂ ಕ್ಷೋಭಣಂ ಶಾತ್ರವಾಣಾಂ
ಮುಷ್ಣಂತಂ ವೈ ದ್ವಿಷತಾಂ ಚೈವ ತೇಜಃ ||4||
ಸಾತ್ವತಕುಲಕ್ಕೆ ಸೇರಿದ, ಸರ್ವೋತ್ತಮವೀರನಾಗಿ ಉದಯಿಸುವ ಯಾದವರ ನಾಯಕನಾದಂತಹ, ಶ್ರೇಷ್ಠನಾದ, ಶತ್ರುಗಳಿಗೆ ಕ್ಷೋಭೆಯನ್ನುಂಟು ಮಾಡಿ ಅವರನ್ನು ಸಂಹರಿಸುವ, ಶತ್ರುಗಳ ತೇಜಸ್ಸನ್ನು ಅಪಹರಿಸುವ (ಕೃಷ್ಣನಿಗೆ ಶರಣಾಗತನಾಗುವೆನು).
ದ್ರಷ್ಟಾರೋ ಹಿ ಕುರವಸ್ತಂ ಸಮೇತಾ
ಮಹಾತ್ಮಾನಂ ಶತ್ರುಹಣಂ ವರೇಣ್ಯಮ್ |
ಬ್ರುವಂತಂ ವಾಚಮನೃಶಂಸರೂಪಾಂ
ವೃಷ್ಣಿಶ್ರೇಷ್ಠಂ ಮೋಹಯಂತಂ ಮದೀಯಾನ್ ||5||
ಎಲ್ಲ ಕುರುಗಳೂ ಒಟ್ಟಿಗೆ ಸೇರಿ ಮಹಾತ್ಮನೂ, ಶತ್ರುಸಂಹಾರಕನೂ ಮತ್ತು ಸ್ತೋತ್ರ ಮಾಡಲ್ಪಡಲು ಯೋಗ್ಯನಾದವನೂ, ಕರುಣಾಪೂರ್ಣವಾದ ಮಾತುಗಳನ್ನು ಆಡುವವನೂ, ನನ್ನ ಪುತ್ರರನ್ನು ಮೋಹಿಸುವವನೂ ಆದ ವೃಷ್ಣಿಶ್ರೇಷ್ಠನನ್ನು ನೋಡುವರು.

ಋಷಿಂ ಸನಾತನತಮಂ ವಿಪಶ್ಚಿತಂ
ವಾಚಃ ಸಮುದ್ರಂ ಕಲಶಂ ಯತೀನಾಮ್ |
ಅರಿಷ್ಟನೇಮಿಂ ಗರುಡಂ ಸುಪರ್ಣಂ
ಹರಿಂ ಪ್ರಜಾನಾಂ ಭುವನಸ್ಯ ಧಾಮ ॥6॥
ಸನಾತನಜ್ಞಾನಿಯಾದಂತಹ, ಸರ್ವಜ್ಞನಾದಂತಹ, ಅವನ ಗುಣಗಳನ್ನು ಹೇಳುವ ವಾಗ್ವಿಷಯದಲ್ಲಿ ಸಮುದ್ರದಂತೆಯೂ, ಯತಿಗಳ ಕಮಂಡಲುವಿನಂತೆಯೂ ಇರುವ (ಕೆಲವು ಜೀವರಿಂದ ವಿಸ್ತಾರವಾದ ಮಾತುಗಳಿಂದಲೂ, ಕೆಲವು ಜೀವರಿಂದ ಅಲ್ಪವಾದ ವಚನಗಳಿಂದಲೂ ಸ್ತೋತ್ರಮಾಡಲ್ಪಡುವ), ಎಂದೂ ನಾಶವಾಗದ ಸುದರ್ಶನಚಕ್ರವನ್ನು ಹೊಂದಿರುವ, ಗರುಡವಾಹನನಾದ, ಪೂರ್ಣಸುಖೋಪನಾದ, ಪ್ರಜೆಗಳಿಗೆ ಮತ್ತು ಲೋಕಗಳಿಗೆ ಆಶ್ರಯನಾದ ಹರಿಯನ್ನು (ಎಲ್ಲ ಕುರುಗಳೂ ನೋಡುವರು) (ಲಕ್ಷಾಲಂಕಾರ).
ಸಹಸ್ರಶೀರ್ಷಂ ಪುರುಷಂ ಪುರಾಣಮ್
ಅನಾದಿಮಧ್ಯಾಂತಮನಂತಕೀರ್ತಿಮ್ |
ಶುಕ್ರಸ್ಯ ಧಾತಾರಮಜಂ ಚ ನಿತ್ಯಂ
ಪರಂ ಪರೇಷಾಂ ಶರಣಂ ಪ್ರಪದ್ಯೇ ॥7॥
ಸಹಸ್ರಶೀರ್ಷನೂ, ಪುರಾಣಪುರುಷನೂ, ಆದಿಮಧ್ಯಾಂತರಹಿತನೂ, ಅನಂತಕೀರ್ತಿಯುಳ್ಳವನೂ, ಜಗತ್ತಿಗೆ ಶುಭವನ್ನು ನೀಡುವವನೂ, ಜನ್ಮರಹಿತನೂ, ಶಾಶ್ವತನೂ, ಉತ್ತಮರಿಗಿಂತಲೂ ಉತ್ತಮನಾದವನೂ ಆದ ಆ ಕೃಷ್ಣನಿಗೆ ಶರಣಾಗತನಾಗುತ್ತೇನೆ.
ತ್ರೈಲೋಕ್ಯನಿರ್ಮಾಣಮಜಂ ಜನಿತ್ರಂ
ದೇವಾಸುರಾಣಾಮಥನಾಗರಕ್ಷಸಾಮ್ |
ನರಾಧಿಪಾನಾಂ ವಿದುಷಾಂ ಪ್ರಧಾನಮ್
ಇಂದ್ರಾನುಜಂ ತಂ ಶರಣಂ ಪ್ರಪದ್ಯೇ ॥8॥
ಮೂರುಲೋಕಗಳನ್ನೂ ನಿರ್ಮಾಣಮಾಡುವವನೂ, ಜನನರಹಿತನೂ, ಜಗತ್ತಿಗೆ ತಂದೆಯೂ, ದೇವಾಸುರರಿಗಿಂತಲೂ ನಾಗ-ರಾಕ್ಷಸರಿಗಿಂತಲೂ, ಚಕ್ರವರ್ತಿಗಳಿಗಿಂತಲೂ ಜ್ಞಾನಿಗಳಿಗಿಂತಲೂ ಶ್ರೇಷ್ಠನಾದವನೂ ಆದ ಉಪೇಂದ್ರನಾದ ಕೃಷ್ಣನನ್ನು ಶರಣುಹೊಂದುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಏಕೋನಸಪ್ತತಿತಮೋಽಧ್ಯಾಯಃ ॥
ವ್ಯಾಸಾಭಿಗಮನಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಯದುಕ್ತವಾನ್ ಸಂಜಯಾಯ ಯದಿ ದಿತ್ಸತಿ ನಃ ಪಿತಾ |
ರಾಜ್ಯಂ ತದಾ ತ್ವಮಾಗಚ್ಛ ವಿದುರೋ ವಾ ನ ಚೇನ್ನ ಚ ॥47॥
ತಾವಥಾನಾಗತೌ ಜ್ಞಾತ್ವಾ ಮಂತ್ರಯಾಮಾಸ ಶೌರಿಣಾ |
ಸೋಽಪ್ಯಾಹಾಹಂ ಗಮಿಷ್ಯಾಮಿ ಸಭಾಯಾಮೃಷಿಸನ್ನಿಧೌ ॥48॥
`ನಮಗೆ ಧೃತರಾಷ್ಟ್ರ ರಾಜ್ಯ ಕೊಡಲು ಒಪ್ಪಿದರೆ ಅದನ್ನು ತಿಳಿಸಲು ನೀನು ಬಾ ಅಥವಾ ವಿದುರ ಬರಲಿ. ಇಲ್ಲದಿದ್ದರೆ ಬೇಡ' ಎಂದು ಧರ್ಮರಾಜ ಸಂಜಯನಿಗೆ ಹೇಳಿದ್ದರಿಂದ ಅವರಿಬ್ಬರೂ ಬಾರದಿದ್ದುದನ್ನು ಕಂಡು ತಾನು ಕೃಷ್ಣನೊಡನೆ ಮಂತ್ರಾಲೋಚನೆ ಮಾಡಿದ. ಶ್ರೀಕೃಷ್ಣನೆಂದ `ನಾನು ಹೋಗುವೆನು. ರಾಜಸಭೆಯಲ್ಲಿ ಋಷಿಗಳ ಸಮಕ್ಷಮದಲ್ಲಿ ಹಿತಕರವಾದ ಯೋಗ್ಯವಾದ ಮಾತುಗಳನ್ನಾಡುವೆನು' ಎಂದು.
॥ ಸಮಾಪ್ತಂ ವ್ಯಾಸಾಭಿಗಮನಪರ್ವ ॥
* * * * *
6. ಭಗವದ್ಯಾನಪರ್ವ
ಎಪ್ಪತ್ತನೆಯ ಅಧ್ಯಾಯ
ಕೃಷ್ಣನನ್ನು ಕುರಿತು ಯುಧಿಷ್ಠಿರನಿಂದ ಯುದ್ಧಪರಿಣಾಮಗಳ ವರ್ಣನೆ.
ಜನಮೇಜಯಃ
ಪ್ರಯಾತೇ ಸಂಜಯೇ ಸಾಧೋ ಕೌರವಾನ್ ಪ್ರತಿ ವೈ ತದಾ |
ಕಿಂ ಚಕ್ರುಃ ಪಾಂಡವಾಸ್ತತ್ರ ಮಮ ಪೂರ್ವಪಿತಾಮಹಾಃ ॥1॥
ಜನಮೇಜಯ ಎಲೈ ಸಜ್ಜನರಾದ ವೈಶಂಪಾಯನರೇ, ಸಂಜಯನು ಕೌರವರ ಬಳಿಗೆ ಪುನಃ ಹಿಂದಿರುಗುತ್ತಿರಲು ನನ್ನ ಪೂರ್ವಪಿತಾಮಹರಾದ ಪಾಂಡವರು ಅಲ್ಲಿ (ಉಪಪ್ಲಾವ್ಯನಗರದಲ್ಲಿ) ಏನು ಮಾಡಿದರು?
ಏತತ್ ಸರ್ವಂ ದ್ವಿಜಶ್ರೇಷ್ಠ ವಿಸ್ತರಂ ಮಮ ಸತ್ತಮ |
ಕಥಯಸ್ವ ಪ್ರಯತ್ನೇನ ಶ್ರೋತುಮಿಚ್ಛಾಮಿ ಪಂಡಿತ ॥2॥
ಎಲೈ ಬ್ರಾಹ್ಮಣಶ್ರೇಷ್ಠರೇ, ವಿದ್ವಾಂಸರೇ, ಸಜ್ಜನರಲ್ಲಿ ಉತ್ತಮರಾದವರೇ, ಇವೆಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳಿ. ನಾನು

ಪ್ರಯತ್ನಪೂರ್ವಕವಾಗಿ ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಸಂಜಯೇ ಪ್ರತಿಯಾತೇ ತು ಧರ್ಮರಾಜೋ ಯುಧಿಷ್ಠಿರಃ |
ಅರ್ಜುನಂ ಭೀಮಸೇನಂ ಚ ಮಾದ್ರೀಪುತ್ರೌ ಚ ಭ್ರಾತರೌ ||3||
ವಿರಾಟದ್ರುಪದೌ ಚೈವ ಕೇಕಯಾನಾಂ ಮಹಾರಥಾನ್ |
ಅಬ್ರವೀದುಪಸಂಗಮ್ಯ ಶಂಖಚಕ್ರಗದಾಧರಮ್ ||4||
ವೈಶಂಪಾಯನ ಸಂಜಯನು ಹೊರಟು ಹೋದಮೇಲೆ ಯುಧಿಷ್ಠಿರನು, ಅರ್ಜುನ, ಭೀಮಸೇನ, ಸಹೋದರರಾದ ನಕುಲ-ಸಹದೇವರು, ವಿರಾಟ, ದ್ರುಪದ, ಕೇಕಯದೇಶದ ಮಹಾರಥರು ಇವರನ್ನು ಸಂಧಿಸಿ, ಶಂಖಚಕ್ರಗದಾಧರನಾದ ಕೃಷ್ಣನ ವಿಷಯದಲ್ಲಿ ಮಾತನಾಡಿದನು.
ಅಭಿಯಾಚಾಮಹೇ ಗತ್ವಾ ಪ್ರಯಾತುಂ ಕುರುಸಂಸದಮ್ ||5||
ತಥಾ ಭೀಷ್ಮೇಣ ದ್ರೋಣೇನ ಬಾಹ್ಲಿಕೇನ ಚ ಧೀಮತಾ |
ಅನ್ಯೈಶ್ಚ ಕುರುಭಿಃ ಸಾರ್ಧಂ ನ ಯುಧ್ಯೇಮಹಿ ಸಂಯುಗೇ ||6||
ಏಷಃ ನಃ ಪ್ರಥಮಃ ಕಲ್ಪ ಏತನ್ನಃ ಶ್ರೇಯ ಉತ್ತಮಮ್ ||7||
ನಾವು ಕೃಷ್ಣನ ಬಳಿಗೆ ಹೋಗಿ ಕುರುಸಭೆಗೆ ಹೋಗುವಂತೆ ಅವನನ್ನು ಪ್ರಾರ್ಥಿಸೋಣ. ಹಾಗೆಯೇ ಅವನು ಭೀಷ್ಮ, ದ್ರೋಣ, ಮೇಧಾವಿಯಾದ ಬಾಹ್ಲಿಕ ಮತ್ತು ಉಳಿದವರ ಜೊತೆಯಲ್ಲೂ ಸಮಾಗಮ ಹೊಂದಲಿ. ನಾವು ಕುರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲ. ಇದು ನಮಗೆ ಶ್ರೇಷ್ಠವಾದ ಮಾರ್ಗ, ಬಹಳ ಶ್ರೇಯಸ್ಕರವಾದುದು.
ವೈಶಂಪಾಯನಃ
ಏವಮುಕ್ತಾಃ ಸುಮನಸಃ ತೇಽಭಿಜಗ್ಮುರ್ಜನಾರ್ದನಮ್ |
ಪಾಂಡವೈಃ ಸಹ ರಾಜಾನೋ ಮರುತ್ವಂತಮಿವಾಮರಾಃ ||8||
ತಥಾ ಚ ದುಃಸಹಾಃ ಸರ್ವೈಃ ಸದಸ್ಯಾಸ್ತೇ ನರರ್ಷಭ ||9||
ವೈಶಂಪಾಯನ ಎಲೈ ನರರ್ಷಭನೇ, ಹೀಗೆ ಹೇಳಲ್ಪಟ್ಟ ಒಳ್ಳೆಯ ಮನಸ್ಸುಳ್ಳ ಎಲ್ಲರಿಂದಲೂ ದುಃಸಹರಾದ ಸಭಾಸದರಾದ ಆ ರಾಜರೆಲ್ಲರೂ ದೇವತೆಗಳು ಇಂದ್ರರ ಜೊತೆಯಲ್ಲಿ ಹೋದಂತೆ ಪಾಂಡವರ ಜೊತೆಯಲ್ಲಿ  ಹೋದರು.
ಜನಾರ್ದನಂ ಸಮಾಸಾದ್ಯ ಕುಂತೀಪುತ್ರೋ ಯುಧಿಷ್ಠಿರಃ |
ಅಭ್ಯಭಾಷತ ದಾಶಾರ್ಹಮ್ ಋಷಭಂ ಸರ್ವಸಾತ್ತ್ವತಾಮ್ ||10||
ಕುಂತೀಪುತ್ರನಾದ ಯುಧಿಷ್ಠಿರನು ಜನಾರ್ದನನನ್ನು ಸಮೀಪಿಸಿ, ಸರ್ವಸಾತ್ತ್ವತ ಶ್ರೇಷ್ಠನಾದ ಆ ದಾಶಾರ್ಹನನ್ನು ಕುರಿತು ಹೀಗೆ ಮಾತನಾಡಿದನು.
ಅಯಂ ಸ ಕಾಲಃ ಸಂಪ್ರಾಪ್ತೋ ಮಿತ್ರಾರ್ಥೇ ಹಿ ಜನಾರ್ದನ |
ನ ಚ ತ್ವದನ್ಯಂ ಪಶ್ಯಾಮಿ ಯೋ ನ ಆಪತ್ಸು ತಾರಯೇತ್ ||11||
ಜನಾರ್ದನನೇ, ಮಿತ್ರರಿಗೆ ಸಹಾಯಮಾಡುವ ಈ ಕಾಲವು ಬಂದೊದಗಿದೆ. ನಿನ್ನನ್ನು ಬಿಟ್ಟು ನಮ್ಮನ್ನು ಆಪತ್ತಿನಿಂದ ಪಾರುಮಾಡುವವರು ಬೇರೆ ಯಾರೂ ಕಾಣುವುದಿಲ್ಲ.
ತ್ವಾಂ ಹಿ ಮಾಧವ ಸಂಶ್ರಿತ್ಯ ನಿರ್ಭಯಾ ಮೋಹದರ್ಪಿತಮ್ |
ಧಾರ್ತರಾಷ್ಟ್ರಂ ಸಹಾಮಾತ್ಯಂ ಸ್ವಮಂಶಮನುಯುಂಕ್ಷ್ಮಹೇ ||12||
ಎಲೈ ಮಾಧವನೇ, ನಿನ್ನನ್ನು ಆಶ್ರಯಿಸಿ ನಾವು ನಿರ್ಭಯರಾಗಿ ಮೋಹದರ್ಪಿತರಾದ ಅಮಾತ್ಯರಿಂದ ಕೂಡಿದ ದುರ್ಯೋಧನನ ಬಳಿಯಲ್ಲಿ ನಮ್ಮ ಭಾಗವನ್ನು ಕೇಳುವವರಾಗುತ್ತೇವೆ.
ಯಥಾ ಹಿ ಸರ್ವಾಸ್ವಾಪತ್ಸು ಪಾಸಿ ವೃಷ್ಣೀನರಿಂದಮ |
ತಥಾ ತೇ ಪಾಂಡವಾ ರಕ್ಷ್ಯಾಃ ಪಾಹ್ಯಸ್ಮಾನ್ ಮಹತೋ ಭಯಾತ್ ||
ಎಲೈ ಅರಿಂದಮನೇ, ವೃಷ್ಣಿಗಳನ್ನು ಎಲ್ಲಾ ಆಪತ್ತುಗಳಲ್ಲಿ ರಕ್ಷಣೆ ಮಾಡಿದಂತೆ ಪಾಂಡವರೂ ಸಹ ನಿನ್ನಿಂದ ರಕ್ಷಿಸಲ್ಪಡಬೇಕಾದವರು. ನಮಗೆ ಒದಗಿರುವ ಮಹಾಭಯದಿಂದ ನಮ್ಮನ್ನು ರಕ್ಷಿಸುವವನಾಗು.
ಶ್ರೀಭಗವಾನ್
ಅಹಮಸ್ಮಿ ಮಹಾಬಾಹೋ ಬ್ರೂಹಿ ಯತ್ ತೇ ವಿವಕ್ಷಿತಮ್ |
ಕರಿಷ್ಯಾಮಿ ಹಿ ತತ್ ಸರ್ವಂ ಯತ್ ತ್ವಂ ವಕ್ಷ್ಯಸಿ ಭಾರತ ||14||
ಶ್ರೀಭಗವಾನ್ ಮಹಾಬಾಹುವೇ, ನಾನು ಸಿದ್ಧನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಹೇಳು. ಎಲೈ ಭಾರತನೇ, ನೀನು ಏನು ಹೇಳುವಿಯೋ ಅವೆಲ್ಲವನ್ನೂ ನಾನು ಮಾಡುವೆನು.
ಯುಧಿಷ್ಠಿರಃ
ಶ್ರುತಂ ತೇ ಧೃತರಾಷ್ಟ್ರಸ್ಯ ಸಪುತ್ರಸ್ಯ ಚಿಕೀರ್ಷಿತಮ್ |
ಏತದ್ಧಿ ಸಕಲಂ ಕೃಷ್ಣ ಸಂಜಯೋ ಮಾಂ ಯದಬ್ರವೀತ್ ||15||
ಮೃದುಪೂರ್ವಂ ಸಾಮಮಿಶ್ರಂ ಸಾಂತ್ವಮುಗ್ರಂ ಚ ಮಾಧವ |
ನ ತು ತನ್ನ್ಯಾಯಮಾಸ್ಥಾಯ ಗರ್ಹಿತಾಶ್ಚ ತತೋ ವಯಮ್ ||16||
ಯುಧಿಷ್ಠಿರ ಕೃಷ್ಣನೇ, ಪುತ್ರಸಹಿತನಾದ ಧೃತರಾಷ್ಟ್ರನ ಅಭಿಪ್ರಾಯವನ್ನು ಸಂಜಯನು ಹೇಳಿದಂತೆ ಎಲ್ಲವನ್ನೂ ನೀನು ಕೇಳಿದ್ದೀಯೆ. ಸಂಜಯನು ಮೊದಲು ಮೃದುವಾಗಿ ಸಾಮೋಪಾಯಮಿಶ್ರಿತವಾದ ಸಾಂತ್ವನವನ್ನೂ, ಕೊನೆಯಲ್ಲಿ ಉಗ್ರಮಾತನ್ನು ಆಡಿದರೂ

ಅವರು ನ್ಯಾಯವಾಗಿ ಆಡಿದ ಆ ಮಾತುಗಳನ್ನು ಸ್ವೀಕರಿಸದೆ ನಮ್ಮನ್ನು ನಿಂದಿಸಿದ್ದಾರೆ.
ತನ್ಮತಂ ಧೃತರಾಷ್ಟ್ರಸ್ಯ ಸೋಽನ್ಯಾತ್ಮಾ ವಿವೃತಾಂತರಃ |
ಯಥೋಕ್ತಂ ದೂತ ಆಚಷ್ಟೇ ವಧ್ಯಃ ಸ್ಯಾದನ್ಯಥಾ ಬ್ರುವನ್ ॥17॥
ದುರ್ಯೋಧನನಲ್ಲಿ ಮನಸ್ಸುಳ್ಳ ಧೃತರಾಷ್ಟ್ರನು ತನ್ನ ಅಂತರಂಗವನ್ನು ಬಯಲು ಪಡಿಸಿದವನಾಗಿ ಅಂತಹ ಅಭಿಪ್ರಾಯವನ್ನು ಹೊಂದಿದ್ದಾನೆ. ದೂತನಾದವನು ಸಂದೇಶವನ್ನು ನೀಡಿದಂತೆಯೇ ಹೇಳಬೇಕು. ಅದನ್ನು ವ್ಯತ್ಯಾಸ ಮಾಡಿದರೆ ಅವನು ವಧ್ಯನಾಗುತ್ತಾನೆ.
ಅಪ್ರದಾನೇನ ರಾಜ್ಯಸ್ಯ ಶಾಂತಿಮಸ್ಮಾಸು ಮಾರ್ಗತೇ |
ಲುಬ್ಧಃ ಪಾಪೇನ ಮನಸಾ ಚರನ್ನಸಮಮಾತ್ಮನಃ ॥18॥
ಪಾಪವನ್ನು ಹೊಂದಿದ ಮನಸ್ಸಿನಿಂದ ರಾಜ್ಯದ ಮೇಲೆ ಲೋಭವುಳ್ಳವನಾಗಿ ತನ್ನ ಸ್ಥಾನಕ್ಕೆ ಅನುಗುಣವಾಗಿ ನಡೆದುಕೊಳ್ಳದೆ ಧೃತರಾಷ್ಟ್ರನು ನಮಗೆ ರಾಜ್ಯವನ್ನು ಕೊಡದೆ ಶಾಂತಿಯನ್ನು ಬಯಸುತ್ತಾನೆ.
ಯತ್ ತದ್ ದ್ವಾದಶವರ್ಷಾಣಿ ವನೇಷ್ವಧ್ಯುಷಿತಾ ವಯಮ್ |
ಛದ್ಮನಾ ಶರದಂ ಚೈಕಾಂ ಧೃತರಾಷ್ಟ್ರಸ್ಯ ಶಾಸನಾತ್ ॥19॥
ಸ್ಥಾತಾ ನಃ ಸಮಯೇ ತಸ್ಮಿನ್ ಧೃತರಾಷ್ಟ್ರ ಇತಿ ಪ್ರಭೋ |
ನಾಹಾಸ್ಮ ಸಮಯಂ ಕೃಷ್ಣ ತದ್ಧಿ ನೋ ಬ್ರಾಹ್ಮಣಾ ವಿದುಃ ॥20॥
ಎಲೈ ಪ್ರಭುವೇ, ಧೃತರಾಷ್ಟ್ರನು ನಮಗೆ ಮಾಡಿದ ಪ್ರತಿಜ್ಞೆಯಂತೆ ನಡೆದುಕೊಳ್ಳುವನು ಎಂದು ಭಾವಿಸಿ ಅವನ ಶಾಸನದಂತೆ ನಾವು ಹನ್ನೆರಡು ವರ್ಷಗಳ ಕಾಲ ವನವಾಸವನ್ನೂ, ಒಂದು ವರ್ಷದ ಕಾಲ ಅಜ್ಞಾತವಾಸವನ್ನೂ ಮಾಡಿದೆವು. ಕೃಷ್ಣನೇ, ನಮ್ಮ ಪ್ರತಿಜ್ಞೆಯನ್ನು ನಾವು ತ್ಯಜಿಸಲಿಲ್ಲ. ಅದನ್ನು ಬ್ರಾಹ್ಮಣರು ತಿಳಿದಿದ್ದಾರೆ.
ವೃದ್ಧೋ ರಾಜಾ ಧೃತರಾಷ್ಟ್ರಃ ಸ್ವಧರ್ಮಂ ನಾನುಪಶ್ಯತಿ |
ಪಶ್ಯನ್ ವಾ ಪುತ್ರಗೃಧ್ನುತ್ವಾನ್ಮಂದಸ್ಯಾನ್ವೇತಿ ಶಾಸನಮ್ ॥21॥
ವೃದ್ಧನಾದ ಧೃತರಾಷ್ಟ್ರನಿಗೆ ತನ್ನ ಸ್ವಧರ್ಮವು ಕಾಣುತ್ತಿಲ್ಲ. ಅಥವಾ ಸ್ವಧರ್ಮವು ಕಂಡರೂ ಪುತ್ರನ ಮೇಲಿನ ಮೋಹದಿಂದ ಮಂದನಾದ ಅವನ ಶಾಸನವನ್ನು ಅನುಸರಿಸುತ್ತಿದ್ದಾನೆ.
ಸುಯೋಧನಮತೇ ತಿಷ್ಠನ್ ರಾಜಾಽಸ್ಮಾಸು ಜನಾರ್ದನ |
ಮಿಥ್ಯಾ ಚರತಿ ಲುಬ್ಧಃ ಸನ್ ಚರನ್ ಹಿ ಪ್ರಿಯಮಾತ್ಮನಃ ॥22॥
ಎಲೈ ಜನಾರ್ದನನೇ, ರಾಜನು ಸುಯೋಧನನ ಅಭಿಪ್ರಾಯದಂತೆ ನಡೆದುಕೊಳ್ಳುವವನಾಗಿ, ರಾಜ್ಯಲೋಭದಿಂದ ತನಗೆ ಪ್ರಿಯವನ್ನು ಮಾಡಿಕೊಳ್ಳುತ್ತಾ ನಮ್ಮ ಜೊತೆಯಲ್ಲಿ ಕಪಟದಿಂದ ವರ್ತಿಸುತ್ತಿದ್ದಾನೆ.
ಇತೋ ದುಃಖತರಂ ಕಿಂ ನು ಯದಹಂ ಮಾತರಂ ತತಃ |
ಸಂವಿಧಾತುಂ ನ ಶಕ್ನೋಮಿ ಮಿತ್ರಾಣಾಂ ವಾ ಜನಾರ್ದನ ॥23॥
ಎಲೈ ಜನಾರ್ದನನೇ, ನನಗೆ ತಾಯಿಯಾದ ಕುಂತಿಯನ್ನಾಗಲೀ ಅಥವಾ ಮಿತ್ರರಾದ ರಾಜರನ್ನಾಗಲೀ ಸಮಾಧಾನ ಮಾಡಲು ಸಾಧ್ಯವಾಗುತ್ತಿಲ್ಲ ಎಂಬುದಕ್ಕಿಂತ ದುಃಖತರವಾದುದು ಏನಿದೆ?
ಕಾಶಿಭಿಶ್ಚೇದಿಪಾಂಚಾಲೈರ್ಮತ್ಸ್ಯೈಶ್ಚ ಮಧುಸೂದನ |
ಭವತಾ ಚೈವ ನಾಥೇನ ಪಂಚ ಗ್ರಾಮಾ ವೃತಾ ಮಯಾ ॥24॥
ಮಧುಸೂದನನೇ, ನಿನ್ನನ್ನು ನಾಥನನ್ನಾಗಿ ಮಾಡಿಕೊಂಡು ನಾನು ಕಾಶಿರಾಜರು, ಚೇದಿರಾಜರು, ಪಾಂಚಾಲ-ಮತ್ಸ್ಯರಾಜರ ಜೊತೆಯಲ್ಲಿ ಐದುಗ್ರಾಮಗಳನ್ನು ಕೇಳಿದೆನು.
ಕುಶಸ್ಥಲಂ ವೃಕಸ್ಥಲಂ ವಾಸಂತೀಂ ವಾರಣಾವತಮ್ |
ಅವಸಾನಂ ಚ ಗೋವಿಂದ ಕಿಂಚಿದೇವ ಚ ಪಂಚಮಮ್ ॥25॥
ಪಂಚ ನಸ್ತಾತ ದೀಯಂತಾಂ ಗ್ರಾಮಾ ವಾ ನಗರಾಣಿ ವಾ |
ವಸೇಮ ಸಹಿತಾ ಯೇಷು ಮಾ ಚ ನೋ ಭರತಾ ನಶನ್ ॥26॥
ಗೋವಿಂದನೇ, ಕುಶಸ್ಥಲ, ವೃಕಸ್ಥಲ, ವಾಸಂತಿ (ಆಸಂದಿ- ಏಕಚಕ್ರನಗರ), ವಾರಣಾವತ ಮತ್ತು ಐದನೆಯ ಯಾವುದಾದರೊಂದು ಗ್ರಾಮ- ಹೀಗೆ ಪ್ರೀತಿಪಾತ್ರನೇ, ಯಾವುದಾದರೂ ಐದುಗ್ರಾಮಗಳನ್ನು ಅಥವಾ ನಗರಗಳನ್ನು ನಮಗೆ ನೀಡಿ. ನಾವೆಲ್ಲರೂ ಅಲ್ಲಿ ಒಟ್ಟಿಗೆ ವಾಸಮಾಡುತ್ತೇವೆ, ಭರತರು ನಾಶವಾಗದಿರಲಿ (ಎಂದು ಹೇಳಿದೆನು).
ನ ಚ ತಾನಪಿ ದುಷ್ಟಾತ್ಮಾ ಧಾರ್ತರಾಷ್ಟ್ರೋಽನುಮನ್ಯತೇ |
ಸ್ವಾಮ್ಯಮಾತ್ಮನಿ ಮತ್ವಾ ಸ ತತೋ ದುಃಖತರಂ ನು ಕಿಮ್ ॥27॥
ದುಷ್ಟಾತ್ಮನಾದ ದುರ್ಯೋಧನನು ತಾನೇ ಎಲ್ಲದಕ್ಕೂ ಒಡೆಯನೆಂದು ತಿಳಿದು ಅದಕ್ಕೂ ಸಮ್ಮತಿಸುವುದಿಲ್ಲ. ಇದಕ್ಕಿಂತ ದುಃಖತರವಾದುದು ಏನಿದೆ?
ಕುಲೇ ಜಾತಸ್ಯ ವೃದ್ಧಸ್ಯ ಪರವಿತ್ತೇಷು ಗೃಧ್ಯತಃ |
ಲೋಭಃ ಪ್ರಜ್ಞಾನಮಾಹಂತಿ ಪ್ರಜ್ಞಾ ಹಂತಿ ಹತಾ ಹ್ರಿಯಮ್ ॥28॥
ಸತ್ಕುಲದಲ್ಲಿ ಪ್ರಸೂತನಾಗಿ, ವೃದ್ಧನಾಗಿ, ಇನ್ನೊಬ್ಬರ ಸಂಪತ್ತನ್ನು ಬಯಸುವವನಿಗೆ ಲೋಭವು ಪ್ರಜ್ಞೆಯನ್ನು ನಾಶಮಾಡುತ್ತದೆ. ಹತವಾದ ಪ್ರಜ್ಞೆಯು ದುಷ್ಟಕಾರ್ಯವನ್ನು ಮಾಡುವುದರಲ್ಲಿ ನಾಚಿಕೆಯನ್ನು ನಾಶಮಾಡುತ್ತದೆ.
ಹ್ರೀರ್ಹತಾ ಬಾಧತೇ ಧರ್ಮಂ ಧರ್ಮೋ ಹಂತಿ ಹತಃ ಶ್ರಿಯಮ್ |
ಶ್ರೀರ್ಹತಾ ಪುರುಷಂ ಹಂತಿ ಪುರುಷಶ್ಚ ಹತಃ ಸ್ವತಾಮ್ ॥29॥

ಹತವಾದ ನಾಚಿಕೆಯು ಧರ್ಮವನ್ನು ಬಾಧಿಸುತ್ತದೆ. ಬಾಧಿಸಲ್ಪಟ್ಟ ಧರ್ಮವು ಕಾಂತಿಯನ್ನು ನಾಶಮಾಡುತ್ತದೆ. ಹತವಾದ ಕಾಂತಿಯು ಪುರುಷನನ್ನು ನಾಶಮಾಡುತ್ತದೆ. ಹತನಾದ ಪುರುಷನು ತನ್ನ ಸಂಪತ್ತೆಲ್ಲವನ್ನೂ ಕಳೆದುಕೊಳ್ಳುತ್ತಾನೆ.

ಅಸ್ವತೋ ವಿನಿವರ್ತಂತೇ ಜ್ಞಾತಯಃ ಸುಹೃದೋ ದ್ವಿಜಾಃ |
ಅಪುಷ್ಪಾದಫಲಾದ್ ವೃಕ್ಷಾದ್ ಯಥಾ ಕೃಷ್ಣ ಪತತಿತ್ರಿಣಃ ॥30॥

ಎಲೈ ಕೃಷ್ಣನೇ, ಪುಷ್ಪ-ಫಲಗಳಿಲ್ಲದ ಮರಗಳಿಂದ ಪಕ್ಷಿಗಳು ನಿವೃತ್ತವಾಗುವಂತೆ ಧನಹೀನನಾದ ಮನುಷ್ಯರನ್ನು ಅಥವಾ ರಾಜರನ್ನು ಜ್ಞಾತಿಗಳು, ಸುಹೃದರು ಮತ್ತು ಬ್ರಾಹ್ಮಣರು ತ್ಯಜಿಸುತ್ತಾರೆ.

ಏತಚ್ಚ ಮರಣಂ ತಾತ ಯದಸ್ಮಾನ್ ಪತಿತಾದಿವ |
ಜ್ಞಾತಯೋ ವಿನಿವರ್ತಂತೇ ಪ್ರೇತಸತ್ವಾದಿವಾಸವಃ ॥31॥

ಎಲೈ ಪ್ರೀತಿಪಾತ್ರನೇ, ಪತಿತನನ್ನು ಎಲ್ಲರೂ ತ್ಯಜಿಸುವಂತೆ, ಶವದಿಂದ ಪ್ರಾಣಗಳು ಹಿಂದೆ ಸರಿದಂತೆ ಜ್ಞಾತಿಗಳು ನಮ್ಮನ್ನು ತೊರೆಯುವುದೇ ಮರಣ.

ನಾತಃ ಪಾಪೀಯಸೀಂ ಕಾಂಶ್ಚಿದವಸ್ಥಾಂ ಶಂಬರೋಽಬ್ರವೀತ್ |
ಯಚ್ಚ ನೈವೋದ್ಯತಃ ಪ್ರಾತರ್ಭೋಜನಂ ಪ್ರತಿದೃಶ್ಯತೇ ॥32॥

ಪ್ರಾತಃಕಾಲದಲ್ಲಿ ಎದ್ದು ಸನ್ನದ್ಧನಾಗಿ ತನಗೆ ಯಾವ ಆಹಾರವನ್ನೂ ಕಾಣದಿರುವುದಕ್ಕಿಂತ ದೊಡ್ಡ ಪಾಪದ ಅವಸ್ಥೆಯು ಇಲ್ಲವೆಂದು ಅರ್ಥಶಾಸ್ತ್ರಜ್ಞನಾದ ಶಂಬರನು ಹೇಳುತ್ತಾನೆ.

ಧನಮಾಹುಃ ಪರಂ ಧರ್ಮಂ ಧನೇ ಸರ್ವಂ ಪ್ರತಿಷ್ಠಿತಮ್ |
ಜೀವಂತಿ ಧನಿನೋ ಲೋಕೇ ಮೃತಾ ಯೇ ತ್ವಧನಾ ನರಾಃ ॥33॥

ಧನವನ್ನು ಶ್ರೇಷ್ಠವಾದ ಧರ್ಮವೆಂದು ಹೇಳುತ್ತಾರೆ. ಎಲ್ಲವೂ ಧನವನ್ನು ಆಶ್ರಯಿಸಿಕೊಂಡಿದೆ. ಧನಿಕರಾದವರೇ ಲೋಕದಲ್ಲಿ ಜೀವನವನ್ನು ಮಾಡುತ್ತಾರೆ. ನಿರ್ಧನರಾದ ಮನುಷ್ಯರು ಮೃತಪ್ರಾಯರು.

ಯೇ ಧನಾದಪಕರ್ಷಂತಿ ನರಂ ಸ್ವಬಲಮಾಶ್ರಿತಃ |
ತೇ ಧರ್ಮಮರ್ಥಂ ಕಾಮಂ ಚ ಪ್ರಮಥ್ನಂತಿ ನರಂ ಚ ತಮ್ ॥34॥

ಯಾರು ತಮ್ಮ ಬಲವನ್ನು ಅವಲಂಬಿಸಿ, ಇನ್ನೊಬ್ಬ ಮನುಷ್ಯನ ಧನವನ್ನು ಕಸಿದುಕೊಳ್ಳುತ್ತಾರೆಯೋ ಅವರು ಆ ಮನುಷ್ಯನ ಧರ್ಮವನ್ನೂ, ಅರ್ಥವನ್ನೂ ಮತ್ತು ಕಾಮವನ್ನೂ ನಾಶಮಾಡುತ್ತಾರೆ.

ಏತಾಮವಸ್ಥಾಂ ಪ್ರಾಪ್ಯೈಕೇ ಮರಣಂ ವವ್ರಿರೇ ಜನಾಃ |
ಗ್ರಾಮಾನೇಕೇ ವನಾಯ್ಯೆಕೇ ನಾಶಾಯ್ಯೆವ ಪ್ರವವ್ರಜುಃ ॥35॥

ಇಂತಹ ಅವಸ್ಥೆಯನ್ನು ಹೊಂದಿದ ಕೆಲವರು ಮರಣವನ್ನು ಬಯಸಿದರು. ಕೆಲವರು ಆತ್ಮನಾಶಕ್ಕಾಗಿ ಗ್ರಾಮಗಳಿಗೂ, ಇನ್ನು ಕೆಲವರು ವನಗಳಿಗೂ ಹೊರಟುಹೋದರು.

ಆತ್ಮಾನಮೇಕೇ ತ್ಯಕ್ಷ್ಯಂತಿ ಯಾಂತ್ಯನ್ಯೇ ದ್ವಿಷತಾಂ ವಶಮ್ |
ದಾಸ್ಯಮೇಕೇ ಚ ಗಚ್ಛಂತಿ ಪರೇಷಾಮರ್ಥಹೇತವೇ ॥36॥

ಕೆಲವರು ದೇಹತ್ಯಾಗವನ್ನು ಮಾಡುತ್ತಾರೆ. ಇನ್ನು ಕೆಲವರು ಶತ್ರುಗಳ ವಶರಾಗುತ್ತಾರೆ. ಇನ್ನು ಕೆಲವರು ಧನದ ನಿಮಿತ್ತದಿಂದ ಪರರಿಗೆ ದಾಸರಾಗುತ್ತಾರೆ.

ಆಪದೇವಾಸ್ಯ ಮರಣಾತ್ ಪುರುಷಸ್ಯ ಗರೀಯಸೀ |
ಯಯಾ ವಿನಾಶ್ಯತೇ ಚಾಸ್ಯ ನಿಮಿತ್ತಂ ಧರ್ಮಕಾಮಯೋಃ ॥37॥

ಮರಣಕ್ಕಿಂತ ಆಪತ್ತೇ ಪುರುಷನಿಗೆ ಬಹಳ ಹೀನಾಯವಾದುದು. ಆದ್ದರಿಂದ ಅವನ ಧರ್ಮ-ಕಾಮದ ನಿಮಿತ್ತವೆಲ್ಲವೂ ನಾಶವನ್ನು ಹೊಂದುತ್ತದೆ.

ಯದಸ್ಯ ಧರ್ಮ್ಯಂ ಮರಣಂ ಶಾಶ್ವತಂ ಲೋಕವರ್ತ್ಮ ತತ್ |
ಸಮಂತಾತ್ ಸರ್ವಭೂತಾನಾಂ ನ ತದತ್ಯೇತಿ ಕಶ್ಚನ ॥38॥

ಧಾರ್ಮಿಕವಾದ ಮರಣವೇನಿದೆಯೋ ಅದು ಶಾಶ್ವತವಾದ ಲೋಕಗಳಿಗೆ ದಾರಿ. ಎಲ್ಲ ಜೀವರಿಗೂ ಅದು ಹಾಗೆಯೇ. ಮರಣವನ್ನು ಯಾವ ಜೀವರೂ ಮೀರುವುದಿಲ್ಲ.

ನ ತಥಾ ಬಾಧ್ಯತೇ ಕೃಷ್ಣ ಪ್ರಕೃತ್ಯಾ ನಿರ್ಧನೋ ಜನಃ |
ಯಥಾ ಭದ್ರಾಂ ಶ್ರಿಯಂ ಪ್ರಾಪ್ಯ ತಯಾ ಹೀನಃ ಸುಖೈಧಿತಃ ॥39॥

ಕೃಷ್ಣನೇ, ಮೊದಲು ಸಂಪತ್ತನ್ನು ಹೊಂದಿ ಸುಖದಿಂದ ಬೆಳೆದವನು, ಅದನ್ನು ಕಳೆದುಕೊಂಡು ನಿರ್ಧನನಾಗಿ ಎಂತಹ ಬಾಧೆಯನ್ನು ಅನುಭವಿಸುತ್ತಾನೋ ಅಂತಹ ಬಾಧೆಯನ್ನು ಯಾವ ಪ್ರಕೃತಿವಿಕೋಪದಿಂದಲೂ ಅನುಭವಿಸುವುದಿಲ್ಲ.

ಸ ತದಾಽಽತ್ಮಾಪರಾಧೇನ ಸಂಪ್ರಾಪ್ತೋ ವ್ಯಸನಂ ಮಹತ್ |
ಸೇಂದ್ರಾನ್ ಗರ್ಹಯತೇ ದೇವಾನ್ ಆತ್ಮಾನಂ ನ ಕಥಂಚನ ॥40॥

ತನ್ನ ಅಪರಾಧದಿಂದ ದೊಡ್ಡ ವ್ಯಥೆಯನ್ನು ತಂದುಕೊಂಡ ಮನುಷ್ಯನು ಆಗ ಇಂದ್ರಾದಿದೇವತೆಗಳನ್ನು ನಿಂದಿಸುತ್ತಾನೆ. ತನ್ನನ್ನು ನಿಂದಿಸಿಕೊಳ್ಳುವುದಿಲ್ಲ.

ನ ಚಾಸ್ಯ ಸರ್ವಶಾಸ್ತ್ರಾಣಿ ಪ್ರತರಂತಿ ನಿಗರ್ಹಣಾತ್ |
ಸೋಽಭಿಕ್ರುದ್ಧ್ಯತಿ ಭೃತ್ಯಾನಾಂ ಸುಹೃದಶ್ಚಾಭ್ಯಸೂಯತಿ ॥41॥

ಅಂತಹ ನಿಂದನೆಯನ್ನು ಮಾಡುವವನನ್ನು ಯಾವ ಶಾಸ್ತ್ರಗಳೂ ದಾಟಿಸುವುದಿಲ್ಲ. ಆಗ ಅವನು ತನ್ನ ಭೃತ್ಯರ ಮೇಲೆ ಕೋಪಗೊಳ್ಳುತ್ತಾನೆ. ಮತ್ತು ತನ್ನ ವಿಶ್ವಾಸಪಾತ್ರರನ್ನು ನೋಡಿ ಅಸೂಯೆ ಪಡುತ್ತಾನೆ.

ತಂ ತದಾ ಮನ್ಯುರೇವೈತಿ ಸ ಭೂಯಃ ಸಂಪ್ರಮುಹ್ಯತಿ |
ಸ ಮೋಹವಶಮಾಪನ್ನಃ ಕ್ರೂರಂ ಕರ್ಮ ನಿಷೇವತೇ ||42||
ಆಗ ಅವನಿಗೆ ಕೋಪವುಂಟಾಗುತ್ತದೆ. ಅವನು ಪುನಃ ಮೋಹಕ್ಕೆ ಒಳಗಾಗುತ್ತಾನೆ. ಮೋಹಕ್ಕೆ ಒಳಗಾದ ಅವನು ಕ್ರೂರಕರ್ಮಗಳನ್ನು ಮಾಡುತ್ತಾನೆ.
ಪಾಪಕರ್ಮತಯಾ ದೇವ ಸಂಕರಂ ತೇನ ಪುಷ್ಯತಿ |
ಸಂಕರೋ ನರಕಾಯೈವ ಸಾ ಕಾಷ್ಠಾ ಪಾಪಕರ್ಮಣಾಮ್ ||43||
ಎಲೈ ದೇವನೇ, ಪಾಪಕರ್ಮವನ್ನು ಮಾಡುವವನು ಸಂಕರವನ್ನು ಪೋಷಿಸುತ್ತಾನೆ. ವರ್ಣಸಂಕರವು ನರಕಕ್ಕೇ ಕರೆದುಕೊಂಡು ಹೋಗುತ್ತದೆ. ಮತ್ತು ಪಾಪಕರ್ಮಗಳಿಗೆ ಅದು ಕೊನೆಯ ಎಲ್ಲೆಯಾಗಿರುತ್ತದೆ.
ನ ಚೇತ್ ಪ್ರಬುಧ್ಯತೇ ಕೃಷ್ಣ ನರಕಾಯೈವ ಗಚ್ಛತಿ |
ತಸ್ಯ ಪ್ರಬೋಧಃ ಪ್ರಜ್ಞೈವ ಪ್ರಜ್ಞಾಚಕ್ಷುರ್ನ ರಿಷ್ಯತಿ ||44||
ಎಲೈ ಕೃಷ್ಣನೇ, ಅವನು ಎಚ್ಚರಗೊಳ್ಳದಿದ್ದರೆ ನರಕಕ್ಕೇ ಹೋಗುತ್ತಾನೆ. ಅವನನ್ನು ಎಚ್ಚರಗೊಳಿಸುವುದು ಪ್ರಜ್ಞೆಯು ಮಾತ್ರ. ಪ್ರಜ್ಞೆಯ ಕಣ್ಣನ್ನು ಹೊಂದಿದವನು ನಾಶವನ್ನು ಹೊಂದುವುದಿಲ್ಲ.
ಪ್ರಜ್ಞಾಲಾಭೇ ಹಿ ಪುರುಷಃ ಶಾಸ್ತ್ರಾಣ್ಯೇವಾನ್ವವೇಕ್ಷತೇ |
ಶಾಸ್ತ್ರನಿಷ್ಠಃ ಪುನರ್ಧರ್ಮಂ ತಸ್ಯ ಹ್ರೀರಂಗಮುತ್ತಮಮ್ ||45||
ಪ್ರಜ್ಞೆಯನ್ನು ಪಡೆದ ಮನುಷ್ಯನು ಶಾಸ್ತ್ರಗಳನ್ನೇ ಅನುಸರಿಸುತ್ತಾನೆ. ಎಲೈ ಪ್ರೀತಿಪಾತ್ರನೇ, ಶಾಸ್ತ್ರನಿಷ್ಠನಾದ ಮನುಷ್ಯನು ಧರ್ಮವನ್ನು, ನಾಚಿಕೆಯನ್ನೂ ಪುನಃ ಶ್ರೇಷ್ಠವಾದ ಧರ್ಮವನ್ನು ಮತ್ತು ಅಧರ್ಮವನ್ನು ಮಾಡಲು ನಾಚಿಕೆಯನ್ನು ಹೊಂದುತ್ತಾನೆ.
ಹ್ರೀಮಾನ್ ಹಿ ಪಾಪಂ ಪ್ರದ್ವೇಷ್ಟಿ ತಸ್ಯ ಶ್ರೀರಭಿವರ್ಧತೇ |
ಶ್ರೀಮಾನ್ ಸ ಯಾವದ್ ಭವತಿ ತಾವದ್ ಭವತಿ ಪೂರುಷಃ ||46||
ನಾಚಿಕೆಯುಳ್ಳವನು ಪಾಪಕರ್ಮವನ್ನು ದ್ವೇಷಿಸುತ್ತಾನೆ. ಅವನ ಸಂಪತ್ತು ಅಭಿವೃದ್ಧಿಯನ್ನು ಹೊಂದುತ್ತದೆ. ಎಲ್ಲಿಯವರೆಗೆ ಸಂಪತ್ತು ಇರುತ್ತದೆಯೋ ಅಲ್ಲಿಯವರೆಗೆ ಅವನು ಮನುಷ್ಯನಾಗುತ್ತಾನೆ.
ಧರ್ಮನಿತ್ಯಃ ಪ್ರಶಾಂತಾತ್ಮಾ ಕಾರ್ಯಯೋಗವಹಃ ಸದಾ |
ನಾಧರ್ಮೇ ಕುರುತೇ ಬುದ್ಧಿಂ ನ ಚ ಪಾಪೇ ಪ್ರವರ್ತತೇ ||47||
ನಿತ್ಯದಲ್ಲಿ ಧರ್ಮಾಚರಣೆಯನ್ನು ಮಾಡುವವನೂ, ಪ್ರಶಾಂತವಾದ ಮನಸ್ಸುಳ್ಳವನೂ, ಮಾಡಬೇಕಾದ ಕಾರ್ಯವನ್ನು ಯಾವಾಗಲೂ ಮಾಡುವವನೂ ಆದ ಅವನು ಅಧರ್ಮವನ್ನು ಮಾಡುವುದಕ್ಕೆ ಬಯಸುವುದಿಲ್ಲ ಮತ್ತು ಪಾಪಕರ್ಮದಲ್ಲಿಯೂ ಪ್ರವೃತ್ತನಾಗುವುದಿಲ್ಲ. .
ಅಹ್ರೀಕೋ ವಾಽಪಿ ಮೂಢೋ ವಾ ನೈವ ಸ್ತ್ರೀ ನ ಪುನಃ ಪುಮಾನ್ |
ನಾಸ್ಯಾಧಿಕಾರೋ ಧರ್ಮೇಽಸ್ತಿ ಯಥಾ ಶೂದ್ರಸ್ತಥೈವ ಸಃ ||48||
ನಾಚಿಕೆಯಿಲ್ಲದ ಮತ್ತು ಮೂಢನಾದ ಮನುಷ್ಯನು ಸ್ತ್ರೀಯಾಗಲೀ ಅಥವಾ ಪುರುಷನಾಗಲೀ ಅವನಿಗೆ ಶೂದ್ರನಂತೆ ಧರ್ಮಾಧಿಕಾರವಿಲ್ಲ.
ಹ್ರೀಮಾನುಪೈತಿ ದೇವಾಂಶ್ಚ ಪಿತೄನಾತ್ಮಾನಮೇವ ಚ |
ತೇನಾಮೃತತ್ವಂ ವ್ರಜತಿ ಸಾ ಕಾಷ್ಠಾ ಪುಣ್ಯಕರ್ಮಣಾಮ್ ||49||
ಪಾಪಕರ್ಮದ ನಾಚಿಕೆಯುಳ್ಳವನು ದೇವತೆಗಳನ್ನೂ ಮತ್ತು ಪಿತೃಗಳನ್ನೂ ಮತ್ತು ಪರಮಾತ್ಮನನ್ನೂ ಹೊಂದಿ ಮೋಕ್ಷವನ್ನು ಪಡೆಯುತ್ತಾನೆ. ಅದು ಪುಣ್ಯಕರ್ಮಗಳ ಕೊನೆಯ ಎಲ್ಲೆ.
ತದಿದಂ ಮಯಿ ತೇ ದೃಷ್ಟಂ ಪ್ರತ್ಯಕ್ಷಂ ಮಧುಸೂದನ |
ಯಥಾ ರಾಜ್ಯಾತ್ ಪರಿಭ್ರಷ್ಟೋ ವಸಾಮಿ ವಸತೀರಿಮಾಃ ||50||
ಎಲೈ ಮಧುಸೂದನನೇ, ನಾನು ರಾಜ್ಯದಿಂದ ಭ್ರಷ್ಟನಾದರೂ ಹೇಗೆ ವಾಸವನ್ನು ಮಾಡುತ್ತಿದ್ದೇನೆಂದು ಈ ವಿಷಯವನ್ನು ನನ್ನಲ್ಲಿ ನೀನು ಪ್ರತ್ಯಕ್ಷವಾಗಿ ನೋಡುತ್ತಿದ್ದೀಯೆ.
ತೇ ವಯಂ ನ ಶ್ರಿಯಂ ಹಾತುಮಲಂ ನ್ಯಾಯೇನ ಕೇನಚಿತ್ |
ಅತ್ರ ನೋ ಯತಮಾನಾನಾಂ ವಧಶ್ಚೇದಪಿ ಸಾಧು ತತ್ ||51||
ನಾವು ನಮಗೆ ಒದಗಿರುವ ಈ ಸಂಪತ್ತನ್ನು ಯಾವ ನ್ಯಾಯದಿಂದಲೂ ತ್ಯಜಿಸಲು ಸಾಧ್ಯವಿಲ್ಲ. ಅದನ್ನು ಉಳಿಸಿಕೊಳ್ಳಲು ಪ್ರಯತ್ನಪಡುವ ನಮಗೆ ಮರಣ ಉಂಟಾದರೂ ಅದು ಶ್ರೇಷ್ಠವಾದದ್ದೇ.
ತತ್ರ ನಃ ಪ್ರಥಮಃ ಕಲ್ಪೋ ಯದ್ ವಯಂ ತೇ ಚ ಮಾಧವ |
ಪ್ರಶಾಂತಾಃ ಸಮಭೂತಾಶ್ಚ ಶ್ರಿಯಂ ತಾಮಶ್ನುವೀಮಹಿ ||52||
ಎಲೈ ಮಾಧವನೇ, ನಾವಿಬ್ಬರೂ ಪ್ರಶಾಂತರಾಗಿ, ಸಮರಾಗಿ ಆ ಸಂಪತ್ತನ್ನು ಹಂಚಿಕೊಳ್ಳುವುದು ಶ್ರೇಷ್ಠವಾದ ಮಾರ್ಗ.
ತತ್ರೈಷಾ ಪರಮಾ ಕಾಷ್ಠಾ ರೌದ್ರಕರ್ಮಕ್ಷಯೋದಯಾ |
ಯದ್ ವಯಂ ಕೌರವಾನ್ ಹತ್ವಾ ತಾನಿ ಶಾಸ್ತ್ರಾಣ್ಯಧೀಮಹಿ ||53||
ನಾವು ಕೌರವರನ್ನು ಕೊಂದು, ಅನಂತರ ವೇದ-ಶಾಸ್ತ್ರಗಳನ್ನು ಅಧ್ಯಯನ ಮಾಡುವುದಾದರೆ ಅದು ಭಯಂಕರವಾದ ಕರ್ಮದ ಪರಾಕಾಷ್ಠೆಯಾಗುತ್ತದೆ.
ಯೇ ಪುನಃ ಸ್ಯುರಸಂಬದ್ಧಾ ಅನಾರ್ಯಾಃ ಕೃಷ್ಣ ಶತ್ರವಃ |
ತೇಷಾಮಪ್ಯವಧಃ ಕಾರ್ಯಃ ಕಿಂಪುನರ್ಯೇ ಸ್ಯುರೀದೃಶಾಃ ||54||

ಎಲೈ ಕೃಷ್ಣನೇ, ನಮಗೆ ಸಂಬಂಧವಿಲ್ಲದ ಶತ್ರುಗಳು ಅನಾರ್ಯರಾದರೂ ಅವರ ವಧೆಯನ್ನು ಮಾಡಬಾರದು. ಹೀಗಿರುವಾಗ ಇಂತಹ ಜ್ಞಾತಿಗಳ ವಿಷಯದಲ್ಲಿ ಹೇಳುವುದೇನಿದೆ?
ಜ್ಞಾತಯಶ್ಚೈವ ಭೂಯಿಷ್ಠಾಃ ಸಹಾಯಾ ಗುರವಶ್ಚ ನಃ |
ತೇಷಾಂ ವಧೋತಿಪಾಪೀಯಾನ್ ಕಿಂ ನು ಯುದ್ಧೇಽಸ್ತಿ ಶೋಭನಮ್ ||
ಅವರು ನಮ್ಮ ಜ್ಞಾತಿಗಳೂ, ಹೆಚ್ಚಾಗಿ ಸಹಾಯವನ್ನು ಮಾಡಿದ ಗುರುಗಳೂ ಆಗಿದ್ದಾರೆ. ಅವರ ವಧೆಯು ಅತ್ಯಂತ ಪಾಪಿಷ್ಠವಾದುದು. ಯುದ್ಧದಲ್ಲಿ ಯಾವ ಒಳ್ಳೆಯ ಅಂಶವಿದೆ?
ಪಾಪಃ ಕ್ಷತ್ರಿಯಧರ್ಮೋಽಯಂ ವಯಂ ಚ ಕ್ಷತ್ರಬಂಧವಃ |
ಸ ನಃ ಸ್ವಧರ್ಮೋಽಧರ್ಮೋ ವಾ ವೃತ್ತಿರನ್ಯಾ ವಿಗರ್ಹಿತಾ ||56||
ಈ ಕ್ಷತ್ರಿಯಧರ್ಮವು ಪಾಪಿಷ್ಠವಾದುದು. ನಾವಾದರೂ ಕ್ಷತ್ರಿಯರಾಗಿದ್ದೇವೆ. ವಧೆಯು ಸ್ವಧರ್ಮವಾಗಲಿ ಅಥವಾ ಅಧರ್ಮವಾಗಲಿ, ಅದನ್ನು ಬಿಟ್ಟು ಬೇರೆ ವೃತ್ತಿಯು ನಮಗೆ ನಿಂದಿತವಾದುದು.
ಶೂದ್ರಃ ಕರೋತಿ ಶುಶ್ರೂಷಾಂ ವೈಶ್ಯಾ ವಾಣಿಜ್ಯಜೀವಿನಃ |
ವಯಂ ವಧೇನ ಜೀವಾಮಃ ಕಾರ್ಪಣ್ಯಂ ಬ್ರಾಹ್ಮಣೈರ್ವೃತಮ್ ||57||
ಶೂದ್ರರು ಸೇವೆಯಿಂದ ಜೀವನವನ್ನು ಮಾಡುತ್ತಾರೆ. ವೈಶ್ಯರು ವಾಣಿಜ್ಯದಿಂದ ಜೀವಿಸುತ್ತಾರೆ. ಕ್ಷತ್ರಿಯರಾದ ನಾವು ವಧೆಯಿಂದ ಜೀವಿಸುತ್ತೇವೆ. ಬ್ರಾಹ್ಮಣರು ಕಾರ್ಪಣ್ಯವನ್ನು (ಕಷ್ಟವನ್ನು) ಜೀವನವಾಗಿ ಆರಿಸಿದ್ದಾರೆ.
ಕ್ಷತ್ರಿಯಃ ಕ್ಷತ್ರಿಯಂ ಹಂತಿ ಮತ್ಸ್ಯೋ ಮತ್ಸ್ಯೇನ ಜೀವತಿ |
ಶ್ವಾ ಶ್ವಾನಂ ಹಂತಿ ದಾಶಾರ್ಹ ಪಶ್ಯ ಧರ್ಮೋ ಯಥಾ ಗತಃ ||58||
ಕ್ಷತ್ರಿಯನು ಕ್ಷತ್ರಿಯನನ್ನು ಕೊಲ್ಲುತ್ತಾನೆ. ಒಂದು ಮೀನು ಇನ್ನೊಂದು ಮೀನನ್ನು ತಿಂದು ಜೀವಿಸುತ್ತದೆ. ಒಂದು ನಾಯಿಯು ಇನ್ನೊಂದು ನಾಯಿಯನ್ನು ಕೊಲ್ಲುತ್ತದೆ. ದಾಶಾರ್ಹನೇ, ಧರ್ಮವು ಯಾವ ಮಾರ್ಗದಲ್ಲಿ ಹೋಗುತ್ತದೆ ಎಂಬುದನ್ನು ನೋಡು.
ಯುದ್ಧೇ ಕೃಷ್ಣ ಕಲಿರ್ನಿತ್ಯಂ ಪ್ರಾಣಾಃ ಸೀದಂತಿ ಸಂಯುಗೇ |
ಬಲಂ ತು ನೀತಿಮಾಸ್ಥಾಯ ಭವೇ ಜಯಪರಾಜಯೌ ||59||
ಎಲೈ ಕೃಷ್ಣನೇ, ಯುದ್ಧದಲ್ಲಿ ಶಾಶ್ವತವಾದ ವಿರೋಧವು ಉಂಟಾಗುತ್ತದೆ ಮತ್ತು ಪ್ರಾಣಗಳ ಹಾನಿಯಾಗುತ್ತದೆ. ನಾನು ಒಳ್ಳೆಯ ನೀತಿಯನ್ನು ಮತ್ತು ಬಲವನ್ನು ಆಶ್ರಯಿಸಿ, ನನ್ನ ಜಯವನ್ನೂ, ಶತ್ರುಗಳ ಪರಾಜಯವನ್ನೂ ಸಂಪಾದಿಸುತ್ತೇನೆ.
ನಾತ್ಮಚ್ಛಂದೇನ ಭೂತಾನಾಂ ಜೀವಿತಂ ಮರಣಂ ತಥಾ |
ನಾಪ್ಯಕಾಲೇ ಸುಖಂ ಪ್ರಾಪ್ಯಂ ದುಃಖಂ ಚಾಪಿ ಯದೂತ್ತಮ ||60||
ಯದೂತ್ತಮನೇ, ಜೀವರಿಗೆ ತಮ್ಮ ಇಚ್ಛೆಯಿಂದ ಜೀವನವಾಗಲೀ, ಮರಣವಾಗಲೀ ಉಂಟಾಗುವುದಿಲ್ಲ. ಅದರಂತೆ ಅಕಾಲದಲ್ಲಿ ಸುಖವಾಗಲೀ ಅಥವಾ ದುಃಖವಾಗಲೀ ಪ್ರಾಪ್ತವಾಗುವುದಿಲ್ಲ.
ಏಕೋ ಹ್ಯಪಿ ಬಹೂನ್ ಹಂತಿ ಘ್ನಂತ್ಯೇಕಂ ಬಹವೋಽಪ್ಯುತ |
ಶೂರಂ ಕಾಪುರುಷೋ ಹಂತಿ ಅಯಶಸ್ವೀ ಯಶಸ್ವಿನಮ್ ||61||
ಒಬ್ಬನು ಅನೇಕ ಜನರನ್ನು ಕೊಲ್ಲುತ್ತಾನೆ ಮತ್ತು ಅನೇಕ ಜನರು ಸೇರಿ ಒಬ್ಬನನ್ನು ಕೊಲ್ಲುತ್ತಾರೆ. ಒಬ್ಬ ಕೆಟ್ಟ ಮನುಷ್ಯನು ಶೂರನನ್ನು ಕೊಲ್ಲುತ್ತಾನೆ. ಅಪಕೀರ್ತಿಯನ್ನು ಪಡೆದವನು ಕೀರ್ತಿವಂತನನ್ನು ಕೊಲ್ಲುತ್ತಾನೆ.
ಜಯೋ ನೈವೋಭಯೋರ್ದೃಷ್ಟೋ ನೋಭಯೋಶ್ಚ ಪರಾಜಯಃ |
ತಥೈವಾಪಚಯೋ ದೃಷ್ಟೋ ವ್ಯಪಯಾನೇ ವ್ಯಯಾವ್ಯಯೌ ||62||
ಯುದ್ಧದಲ್ಲಿ ಎರಡು ಪಕ್ಷಗಳಿಗೂ ಜಯವು ದೃಷ್ಟವಾಗಿಲ್ಲ. ಎರಡು ಪಕ್ಷಗಳಿಗೂ ಪರಾಜಯವೂ ದೃಷ್ಟವಾಗಿಲ್ಲ. ಹಾಗೆಯೇ ಎರಡು ಪಕ್ಷಗಳಿಗೂ ಅಪಚಯವು (ಕ್ಷೀಣತೆಯು) ದೃಷ್ಟವಾಗಿದೆ ಮತ್ತು ಪಲಾಯನವನ್ನು ಮಾಡಿದರೆ ಕೀರ್ತಿಯ ವ್ಯಯವೂ ಮತ್ತು ನಮ್ಮ ಸೈನ್ಯದ ರಕ್ಷಣೆಯೂ ಉಂಟಾಗುತ್ತದೆ.
ಸರ್ವಥಾ ವೃಜಿನಂ ಯುದ್ಧಂ ಕೋ ಘ್ನನ್ ನ ಪ್ರತಿಹನ್ಯತೇ |
ಹತಸ್ಯ ಚ ಹೃಷೀಕೇಶ ಸಮೌ ಜಯಪರಾಜಯೌ ||63||
ಪರಾಜಯಶ್ಚ ಮರಣಾನ್ಮನ್ಯೇ ನೈವ ವಿಶಿಷ್ಯತೇ ||64||
ಹೃಷೀಕೇಶನೇ, ಯುದ್ಧವು ಸರ್ವಥಾ ಪಾಪಕರವಾದುದು. ಇನ್ನೊಬ್ಬನನ್ನು ಹೊಡೆಯುವ ಯಾವನು ಅವನಿಂದ ಹೊಡೆಯಲ್ಪಡುವುದಿಲ್ಲ? ಯುದ್ಧದಲ್ಲಿ ಹತನಾದವನಿಗೆ ಜಯ-ಪರಾಜಯಗಳೆರಡೂ ಸಮವಾದವುಗಳು. ಪರಾಜಯವು ಮರಣಕ್ಕಿಂತಲೂ ಬಹಳ ಭಿನ್ನವಾದುದೇನೂ ಅಲ್ಲ.
ಯಸ್ಯ ಸ್ಯಾದ್ ವಿಜಯಃ ಕೃಷ್ಣ ತಸ್ಯಾಪ್ಯಪಜಯೋ ಧ್ರುವಮ್ |
ಅಂತತೋ ದಯಿತಂ ಘ್ನಂತಿ ಕೇಚಿದಪ್ಯಪರಾಜಿತಾಃ ||65||
ಕೃಷ್ಣನೇ, ಯಾವನಿಗೆ ವಿಜಯ ಉಂಟಾಗುತ್ತದೆಯೋ ಅವನಿಗೆ ನಿಶ್ಚಿತವಾಗಿ ಅಪಜಯವುಂಟಾಗುತ್ತದೆ. ಶತ್ರುಪಕ್ಷದಲ್ಲಿ ಅಪರಾಜಿತರಾಗಿ ಉಳಿದ ಕೆಲವರು ಕೊನೆಯಲ್ಲಿ ವಿಜಯವನ್ನು ಸಾಧಿಸಿದವರಿಗೆ ಪ್ರಿಯರಾದವರನ್ನು ಕೊಲ್ಲುತ್ತಾರೆ.
ತಸ್ಯಾಂಗಬಲಹೀನಸ್ಯ ಪುತ್ರಾನ್ ಭ್ರಾತೄನಪಶ್ಯತಃ |
ನಿರ್ವೇದೋ ಜೀವಿತೇ ಕೃಷ್ಣ ಸರ್ವತಶ್ಚೋಪಜಾಯತೇ ||66||
ಕೃಷ್ಣನೇ, ಪರಿವಾರಬಲದಿಂದ ಹೀನನಾದ, ಪುತ್ರರನ್ನೂ ಮತ್ತು ಸುಹೃದರನ್ನೂ ಕಾಣದಿರುವ ಅವನಿಗೆ ತನ್ನ ಜೀವನದಲ್ಲಿಯೂ ಮತ್ತು ಎಲ್ಲ ವಿಷಯದಲ್ಲಿಯೂ ವೈರಾಗ್ಯ ಉಂಟಾಗುತ್ತದೆ.
ಯೇ ಹ್ಯೇವ ಧೀರಾ ಹ್ರೀಮಂತ ಆರ್ಯಾಃ ಕರುಣವೇದಿನಃ |

ತ ಏವ ಯುದ್ಧೇ ಹನ್ಯಂತೇ ಯವೀಯಾನ್ ಮುಚ್ಯತೇ ಜನಃ ॥67॥
ಯಾರು ಧೀರರೋ, ನಾಚಿಕೆಯುಳ್ಳವರೋ, ಒಳ್ಳೆಯ ನಡತೆಯುಳ್ಳವರೋ, ಕರುಣಾಶಾಲಿಗಳೋ ಅಂತಹವರೇ ಯುದ್ಧದಲ್ಲಿ ಕೊಲ್ಲಲ್ಪಡುತ್ತಾರೆ. ಅವರಿಗಿಂತ ಕೆಳಜನರು ಮುಕ್ತರಾಗುತ್ತಾರೆ.
ಹತ್ವಾಽಪ್ಯನುಶಯೋ ನಿತ್ಯಂ ಪರಾನಪಿ ಜನಾರ್ದನ |
ಅನುಬಂಧಪ್ರಲಾಪಶ್ಚ ಶೇಷಶ್ಚಾಪ್ಯವಶಿಷ್ಯತೇ ॥68॥
ಜನಾರ್ದನನೇ, ಶತ್ರುವನ್ನು ಕೊಂದಮೇಲೆಯೂ ಉದಾತ್ತ ನಡತೆಯುಳ್ಳವನಿಗೆ ಅವನ ಪುತ್ರಾದಿಗಳಿಗೆ ಅನುಕೂಲವನ್ನು ಉಂಟುಮಾಡುವ ಬುದ್ಧಿಯುಂಟಾಗುತ್ತದೆ. ಆ ಕಾಲದಲ್ಲಿ ಸ್ನೇಹದ ಮಾತುಗಳೂ ಉಂಟಾಗುತ್ತವೆ. ಆದರೂ ಶತ್ರುವಿನ ಒಂದು ಶೇಷವು ಹಾಗೆಯೇ ಉಳಿಯುತ್ತದೆ.
ಶೇಷೋ ಹಿ ಬಲಮಾಸಾದ್ಯ ನ ಶೇಷಮವಶೇಷಯೇತ್ |
ಸರ್ವೋಚ್ಛೇದೇ ಚ ಯತತೇ ವೈರಸ್ಯಾಂತವಿಧಿತ್ಸಯಾ ॥69॥
ಆ ಉಳಿದ ಶೇಷವು ಬಲವನ್ನು ಹೊಂದಿ ತನ್ನ ತಂದೆಯನ್ನು (ಸ್ವಾಮಿಯನ್ನು) ಕೊಂದವನನ್ನು ಉಳಿಸುವುದಿಲ್ಲ. ವೈರವನ್ನು ಕೊನೆಗಾಣಿಸುವ ಇಚ್ಛೆಯಿಂದ ಅವನ ಸರ್ವನಾಶವನ್ನು ಮಾಡಲು ಪ್ರಯತ್ನಿಸುತ್ತದೆ.
ಜಯೋ ವೈರಂ ಪ್ರಸೃಜತಿ ದುಃಖಮಾಸ್ತೇ ಪರಾಜಿತಃ |
ಸುಖಂ ಪ್ರಶಾಂತಃ ಸ್ವಪಿತಿ ಹಿತ್ವಾ ಜಯಪರಾಜಯೌ ॥70॥
ಜಯವು ವೈರವನ್ನು ಹುಟ್ಟುಹಾಕುತ್ತದೆ. ಪರಾಜಿತನಾದವನು ದುಃಖವನ್ನು ಅನುಭವಿಸುತ್ತಾನೆ. ಪ್ರಶಾಂತನಾದವನು ಜಯ-ಪರಾಜಯಗಳನ್ನು ಬಿಟ್ಟು ಸುಖವಾಗಿ ನಿದ್ರಿಸುತ್ತಾನೆ.
ಜಾತವೈರಶ್ಚ ಪುರುಷೋ ದುಃಖಂ ಸ್ವಪಿತಿ ನಿತ್ಯದಾ |
ಅನಿರ್ವೃತ್ತೇನ ಮನಸಾ ಸಸರ್ಪ ಇವ ವೇಶ್ಮನಿ ॥71॥
ವೈರವನ್ನು ಕಟ್ಟಿಕೊಂಡ ಪುರುಷನು ಸರ್ಪವಿರುವ ಮನೆಯಲ್ಲಿ ವಾಸಿಸುವಂತೆ, ಯಾವಾಗಲೂ ಅಸಮಾಧಾನದಿಂದ ಕೂಡಿದ ಮನಸ್ಸುಳ್ಳವನಾಗಿ ದುಃಖದಿಂದ ನಿದ್ರೆಯನ್ನು ಮಾಡುತ್ತಾನೆ.
ಉತ್ಸಾದಯತಿ ಯಃ ಸರ್ವಂ ಯಶಸಾ ಸ ವಿಮುಚ್ಯತೇ |
ಅಕೀರ್ತಿಂ ಸರ್ವಭೂತೇಷು ಶಾಶ್ವತೀಂ ಸ ನಿಗಚ್ಛತಿ ॥72॥
ಯಾವನು ಎಲ್ಲರನ್ನೂ ಸಂಹರಿಸುತ್ತಾನೆಯೋ ಅವನು ತನ್ನ ಕೀರ್ತಿಯನ್ನು ಕಳೆದುಕೊಳ್ಳುತ್ತಾನೆ ಮತ್ತು ಸರ್ವಪ್ರಾಣಿಗಳಲ್ಲಿ ಶಾಶ್ವತವಾದ ಅಪಕೀರ್ತಿಯನ್ನು ಹೊಂದುತ್ತಾನೆ.
ನ ಹಿ ವೈರಾಣಿ ಶಾಮ್ಯಂತಿ ದೀರ್ಘಕಾಲಕೃತಾನ್ಯಪಿ |
ಆಖ್ಯಾತಾರಶ್ಚ ವಿದ್ಯಂತೇ ಪುಮಾಂಶ್ಚೇದ್ ವಿದ್ಯತೇ ಕುಲೇ ॥73॥
ದೀರ್ಘಕಾಲದಿಂದ ಬಂದ ವೈರಗಳು ನಾಶವನ್ನು ಹೊಂದುವುದಿಲ್ಲ. ಆ ಕುಲದಲ್ಲಿ ಯಾರಾದರೂ ಇದ್ದರೆ ಅವರಿಗೆ ಹಿಂದಿನ ವೈರವನ್ನು ಹೇಳುವ ಜನರು ಇರುತ್ತಾರೆ.
ನ ಚಾಪಿ ವೈರಂ ವೈರೇಣ ಕೇಶವ ಪ್ರತಿಶಾಮ್ಯತಿ |
ಹವಿಷಾಽಗ್ನಿರ್ಯಥಾ ಕೃಷ್ಣ ಭೂಯ ಏವಾಭಿವರ್ಧತೇ ॥74॥
ಕೇಶವನೇ, ವೈರವು ವೈರದಿಂದ ಶಾಂತವಾಗುವುದಿಲ್ಲ. ಅಗ್ನಿಯು ಹವಿಸ್ಸಿನಿಂದ ಅಭಿವೃದ್ಧಿಯನ್ನು ಹೊಂದಿದಂತೆ ವೈರವು ಇನ್ನೂ ಅಭಿವೃದ್ಧಿಯನ್ನೇ ಹೊಂದುತ್ತದೆ.
ಅತೋಽನ್ಯಥಾ ನಾಸ್ತಿ ಶಾಂತಿರ್ನಿತ್ಯಮಂತರಮಂತತಃ |
ಅಂತರಂ ಲಿಪ್ಸಮಾನಾನಾಮ್ ಅಯಂ ದೋಷೋ ನಿರಂತರಃ ॥75॥
ಆದ್ದರಿಂದ ಬೇರೆ ಯಾವ ರೀತಿಯಿಂದಲೂ ಶಾಂತಿ ಉಂಟಾಗುವುದಿಲ್ಲ. ಕೊನೆಯವರೆಗೂ ಶಾಂತಿಗೆ ಒಂದು ಅವಕಾಶವೇ ದೊರೆಯುವುದಿಲ್ಲ. ಶತ್ರುಗಳಲ್ಲಿ ಒಂದು ಅಂತರವನ್ನು (ಛಿದ್ರವನ್ನು) ಹುಡುಕಲು ಬಯಸುವವರಿಗೆ ಈ ದೋಷವು ಯಾವಾಗಲೂ ಇರುತ್ತದೆ.
ಪೌರುಷೇ ಯೋ ಹಿ ಬಲವಾನ್ ಆಧಿರ್ಹೃದಯತಾಪನಃ |
ತಸ್ಯ ತ್ಯಾಗೇನ ವಾ ಶಾಂತಿರ್ಮರಣೇನಾಪಿ ವಾ ಭವೇತ್ ॥76॥
ಯಾವ ಪುರುಷನು ಅಧಿಕವಾದ ಬಲವನ್ನು ಹೊಂದಿ, ಇನ್ನೊಬ್ಬರ ಮನಸ್ಸಿಗೆ ಖೇದವನ್ನು ಉಂಟುಮಾಡುವನೋ ಅವನ ದೇಶತ್ಯಾಗದಿಂದ ಅಥವಾ ಪ್ರಾಣತ್ಯಾಗದಿಂದ ಅಥವಾ ಕಲಹಕ್ಕೆ ಕಾರಣವಾದ ವಿತ್ತದ ತ್ಯಾಗದಿಂದ ಅಥವಾ ಮರಣದಿಂದ ಶಾಂತಿ ಉಂಟಾದೀತು.
ಅಥವಾ ಮೂಲಘಾತೇನ ದ್ವಿಷತಾಂ ಮಧುಸೂದನ |
ಫಲಂ ನಿವೃತ್ತಿರರ್ಥಸ್ಯ ತನ್ನೃಶಂಸತರಂ ಭವೇತ್ ॥77॥
ಮಧುಸೂದನನೇ, ಅಥವಾ ಶತ್ರುಗಳನ್ನು ಮೂಲಸಹಿತವಾಗಿ ನಾಶವನ್ನು ಮಾಡಿ ನಾವು ಕಳೆದುಕೊಂಡ ಅರ್ಥವನ್ನು ಮರಳಿ ಪಡೆಯಬಹುದು. ಆದರೆ ಅದು ಅತ್ಯಂತ ಕ್ರೂರವಾದುದು.
ಯಾ ತು ತ್ಯಾಗೇನ ಶಾಂತಿಃ ಸ್ಯಾತ್ ತದೃತೇ ವಧ ಏವ ಸಃ |
ಸಂಶಯಾಚ್ಚ ಸಮುಚ್ಛೇದಾದ್ ದ್ವಿಷತಾಮಾತ್ಮನಸ್ತಥಾ ॥78॥
ತ್ಯಾಗದಿಂದ ಯಾವ ಶಾಂತಿ ಉಂಟಾಗುತ್ತದೋ, ತ್ಯಾಗವಿಲ್ಲದಿದ್ದರೆ ಅದು ವಧೆಯಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಏಕೆಂದರೆ ಸಂಶಯದಿಂದಲೂ ಶತ್ರುಗಳು ತನ್ನನ್ನು ಸಮುಚ್ಛೇದ ಮಾಡುತ್ತಾರೆ. ತಾನು ಶತ್ರುಗಳನ್ನು ಸಮುಚ್ಛೇದ ಮಾಡುತ್ತಾನೆ.

ನ ಚ ತ್ಯಕ್ತುಂ ತದಿಚ್ಛಾಮೋ ನ ಚೇಚ್ಛಾಮಃ ಕುಲಕ್ಷಯಮ್ |
ಅತ್ರ ಯಾ ಪ್ರಣಿಪಾತೇನ ಶಾಂತಿಃ ಸೈವ ಗರೀಯಸೀ ॥79॥
ನಮ್ಮ ಸಂಪತ್ತನ್ನು ನಾವು ಬಿಡಲು ಇಚ್ಛಿಸುವುದಿಲ್ಲ ಮತ್ತು ಕುಲಕ್ಷಯವನ್ನೂ ಬಯಸುವುದಿಲ್ಲ. ಪರಸ್ಪರವಾಗಿ ಬಾಗುವುದರಿಂದ (ನಮಸ್ಕಾರ ಮಾಡುವುದರಿಂದ) ಶಾಂತಿ ಉಂಟಾಗುವುದಾದರೆ ಅದು ಬಹಳ ಶ್ರೇಷ್ಠವಾದುದು.
ಸರ್ವಥಾ ಯತಮಾನಾನಾಮ್ ಅಯುದ್ಧಮಭಿಕಾಂಕ್ಷತಾಮ್ |
ಸಾಂತ್ವೇ ಪ್ರತಿಹತೇ ಯುದ್ಧಂ ಪ್ರಸಿದ್ಧಂ ನಾಪರಾಕ್ರಮಃ ॥80॥
ಯುದ್ಧವನ್ನು ಬಯಸದೆ ಎಲ್ಲ ರೀತಿಯಲ್ಲಿಯೂ ಪ್ರಯತ್ನಶೀಲರಾಗಿ ಹೋಗುವವರಿಗೆ, ಸಂಧಿಯು ಮುರಿದುಹೋದರೆ ಯುದ್ಧವೇ ಉಳಿಯುತ್ತದೆ. ಪರಾಕ್ರಮರಹಿತರಾಗಿರುವುದು ಅಲ್ಲ.
ಪ್ರತಿಘಾತೇನ ಸಾಂತ್ವಸ್ಯ ದಾರುಣಂ ಸಂಪ್ರವರ್ತತೇ |
ತಚ್ಛುನಾಮಿವ ಗೋಪಾತೇ ಪಂಡಿತೈರುಪಲಕ್ಷಿತಮ್ ॥81॥
ಸಂಧಿಯು ಮುರಿದುಹೋದರೆ ಭಯಂಕರವಾದ ಪರಿಣಾಮವು ಉಂಟಾಗುತ್ತದೆ. ಅದನ್ನು ಪಂಡಿತರು ಗೋವು ಮರಣವನ್ನು ಹೊಂದಿದ್ದರೆ ಆ ಶರೀರಕ್ಕಾಗಿ ಕಚ್ಚಾಡುವ ನಾಯಿಗಳಿಗೆ ಹೋಲಿಸುತ್ತಾರೆ.
ಲಾಂಗೂಲಚಾಲನಂ ಕ್ಷ್ವೇಲಾ ಪ್ರತಿರಾವೋ ನಿವರ್ತನಮ್ |
ದಂತದರ್ಶನಮಾರಾವಸ್ತತೋ ಯುದ್ಧಂ ಪ್ರವರ್ತತೇ ॥82॥
ಮೊದಲು ಬಾಲವನ್ನು ಅಲ್ಲಾಡಿಸುವುದು, ಅನಂತರ ಮೃದುವಾಗಿ ಕಿರುಚುವುದು, ಅದಕ್ಕೆ ಪ್ರತಿಯಾಗಿ ಕಿರುಚುವುದು, ಸ್ವಲ್ಪ ಹಿಂದೆ ಬರುವುದು, ಹಲ್ಲುಗಳನ್ನು ತೋರಿಸುವುದು, ಗಟ್ಟಿಯಾಗಿ ಬೊಗಳುವುದು, ಅನಂತರ ನಾಯಿಗಳಿಗೆ ಯುದ್ಧವು ಉಂಟಾಗುತ್ತದೆ.
ತತ್ರ ಯೋ ಬಲವಾನ್ ಕೃಷ್ಣ ಜಿತ್ವಾ ಸೋಽತ್ತಿ ತದಾಮಿಷಮ್ |
ಏವಮೇವ ಮನುಷ್ಯೇಷು ವಿಶೇಷೋ ನಾಸ್ತಿ ಕಶ್ಚನ ॥83॥
ಎಲೈ ಕೃಷ್ಣನೇ, ಆ ನಾಯಿಗಳಲ್ಲಿ ಯಾವುದು ಬಲಿಷ್ಠವಾಗಿರುತ್ತದೆಯೋ ಅದು ಇನ್ನೊಂದನ್ನು ಗೆದ್ದು ಆ ಮಾಂಸವನ್ನು ತಿನ್ನುತ್ತದೆ. ಮನುಷ್ಯರಲ್ಲಿಯೂ ಹೀಗಿಯೇ. ಯಾವ ವಿಶೇಷವೂ ಇಲ್ಲ.
ಸರ್ವಥಾ ತ್ವೇತದುಚಿತಂ ದುರ್ಬಲೇಷು ಬಲೀಯಸಾಮ್ |
ಅನಾದರೋ ವಿರೋಧಸ್ಯ ಪ್ರಣಿಪಾತೀ ಹಿ ದುರ್ಬಲಃ ॥84॥
ಪ್ರಬಲರಾದವರು ದುರ್ಬಲರಾದವರ ವಿರೋಧವನ್ನು ಉದಾಸೀನ ಮಾಡುವುದು ಬಹಳ ಯೋಗ್ಯವಾದುದು. ಏಕೆಂದರೆ ದುರ್ಬಲನಾದವನಷ್ಟೇ ನಮಸ್ಕಾರವನ್ನು ಮಾಡುತ್ತಾನೆ.
ಪಿತಾ ರಾಜಾ ಚ ವೃದ್ಧಶ್ಚ ಸರ್ವಥಾ ಮಾನಮರ್ಹತಿ |
ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ಧೃತರಾಷ್ಟ್ರೋ ಜನೇಶ್ವರಃ ॥85॥
ತಂದೆಯಾದವನು, ರಾಜನಾದವನು, ವೃದ್ಧನಾದವನು ಸರ್ವಥಾ ಗೌರವಕ್ಕೆ ಅರ್ಹನಾಗುತ್ತಾನೆ. ಆದ್ದರಿಂದ ಧೃತರಾಷ್ಟ್ರ ರಾಜನು ನಮ್ಮ ಗೌರವಕ್ಕೂ, ಪೂಜೆಗೂ ಅರ್ಹನಾದವನು.
ಪುತ್ರಸ್ನೇಹಶ್ಚ ಬಲವಾನ್ ಧೃತರಾಷ್ಟ್ರಸ್ಯ ಮಾಧವ |
ಸ ಪುತ್ರವಶಮಾಪನ್ನಃ ಪ್ರಣಿಪಾತಂ ಪ್ರಹಾಸ್ಯತಿ ॥86॥
ಎಲೈ ಮಾಧವನೇ, ಧೃತರಾಷ್ಟ್ರನಿಗೆ ಪುತ್ರಸ್ನೇಹವು ಬಹಳ ಪ್ರಬಲವಾಗಿದೆ. ಪುತ್ರವಶನಾದ ಅವನು ನಮಸ್ಕಾರ ಮಾಡುವುದಿಲ್ಲ (ಬಾಗಿ ನಡೆಯುವುದಿಲ್ಲ).
ತತ್ರ ಕಿಂ ಮನ್ಯಸೇ ಕೃಷ್ಣ ಪ್ರಾಪ್ತಕಾಲಮನಂತರಮ್ |
ಕಥಮರ್ಥಾಚ್ಚ ಧರ್ಮಾಚ್ಚ ನ ಹೀಯೇಮಹಿ ಮಾಧವ ॥87॥
ಕೃಷ್ಣನೇ, ಅಂತಹ ಈ ಕಾಲದಲ್ಲಿ ನಾವು ಏನು ಮಾಡಬೇಕೆಂದು ನೀನು ಭಾವಿಸುತ್ತೀಯೆ? ಮಾಧವನೇ, ನಾವು ಅರ್ಥದಿಂದಲೂ ಮತ್ತು ಧರ್ಮದಿಂದಲೂ ಹೇಗೆ ಹೀನರಾಗದೇ ಇದ್ದೇವು?
ಈದೃಶೇಹ್ಯರ್ಥಕೃಚ್ಛ್ರೇಽಸ್ಮಿನ್ ಕಮನ್ಯಂ ಮಧುಸೂದನ |
ಉಪಸಂಪ್ರಷ್ಟುಮರ್ಹಾಮಿ ತ್ವಾಮೃತೇ ಪುರುಷೋತ್ತಮ ॥88॥
ಎಲೈ ಮಧುಸೂದನನೇ, ಪುರುಷೋತ್ತಮನೇ, ಇಂತಹ ಧರ್ಮಾರ್ಥಗಳ ಸಂಕಟಗಳಲ್ಲಿ ನಿನ್ನನ್ನು ಬಿಟ್ಟು ನಾನು ಬೇರೆ ಯಾರನ್ನು ಕೇಳಲು ಸಾಧ್ಯವಾಗುತ್ತದೆ?
ಪ್ರಿಯಶ್ಚ ಪ್ರಿಯಕಾಮಶ್ಚ ಗತಿಜ್ಞಃ ಸರ್ವಕರ್ಮಣಾಮ್ |
ಕೋ ಹಿ ಕೃಷ್ಣಾಸ್ತಿ ನಸಥತ್ವದೃಕ್ ಸರ್ವನಿಶ್ಚಯವಿತ್ ಸುಹೃತ್ ॥89॥
ನೀನು ನಮಗೆ ಪ್ರಿಯನಾದವನು. ನಮ್ಮ ಪ್ರಿಯವನ್ನು ಬಯಸುವವನು. ಎಲ್ಲ ಕರ್ಮಗಳ ಗತಿಯನ್ನು ತಿಳಿದವನು. ಕೃಷ್ಣನೇ, ಎಲ್ಲರ ಅಭಿಪ್ರಾಯವನ್ನು ತಿಳಿದ ನಿನ್ನಂತಹ ಸುಹೃಜ್ಜನರು ನಮಗೆ ಯಾರಿದ್ದಾರೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಇಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ

ವಕ್ಷ್ಯೇ ಪಥ್ಯಾನಿ ಯುಕ್ತಾನಿ ಯದಿ ನಾಸೌ ಗ್ರಹಿಷ್ಯತಿ |
ವಧ್ಯಃ ಸರ್ವಸ್ಯ ಲೋಕಸ್ಯ ಸ ಭವೇತ್ ಸರ್ವಧರ್ಮಹಾ ॥49॥
ಶ್ರೀಕೃಷ್ಣನೆಂದ `ನಾನು ಹೋಗುವೆನು. ರಾಜಸಭೆಯಲ್ಲಿ ಋಷಿಗಳ ಸಮಕ್ಷಮದಲ್ಲಿ ಹಿತಕರವಾದ, ಯೋಗ್ಯವಾದ ಮಾತುಗಳನ್ನಾಡುವೆನು. ಅವನ್ನು ದುರ್ಯೋಧನ ಕೇಳದಿದ್ದರೆ, ಎಲ್ಲ ಜನರ ಕಣ್ಣಿಗೆ ಸರ್ವಧರ್ಮ ಪರಿತ್ಯಾಗಿ ವಧಾರ್ಹನೆನಿಸುತ್ತಾನೆ'.
* * * * *
ಎಪ್ಪತ್ತೊಂದನೆಯ ಅಧ್ಯಾಯ
ಸಂಧಿಯನ್ನು ಸಂಪಾದಿಸಲು ಹಸ್ತಿನಪುರಕ್ಕೆ ಹೋಗಲು ಕೃಷ್ಣನ ನಿರ್ಧಾರ.
ವೈಶಂಪಾಯನಃ
ಏವಮುಕ್ತಃ ಪ್ರತ್ಯುವಾಚ ಧರ್ಮರಾಜಂ ಜನಾರ್ದನಃ |
ಉಭಯೋರೇವ ಶಾಂತ್ಯರ್ಥಂ ಯಾಸ್ಯಾಮಿ ಕುರುಸಂಸದಮ್ ॥1॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಜನಾರ್ದನನು ಧರ್ಮರಾಜನನ್ನು ಕುರಿತು ಎರಡೂ ಪಕ್ಷಗಳ ಶಾಂತಿಗಾಗಿ ನಾನು ಕೌರವರ ಸಭೆಗೆ ಹೋಗುವೆನು ಎಂದು ಹೇಳಿದನು.
ಶಮಂ ತತ್ರ ಲಭೇಯಂ ಚೇದ್ ಯುಷ್ಮದರ್ಥಮಹಾಪಯನ್ |
ಪುಣ್ಯಂ ಮೇ ಸುಮಹದ್ ರಾಜನ್ ಚರಿತಂ ಸ್ಯಾನ್ಮಹಾಫಲಮ್ ॥2॥
ನಿಮ್ಮ ಹಿತವನ್ನು ಕಡೆಗಣಿಸದೆ ಅಲ್ಲಿ ನಾನು ಸಂಧಿಯನ್ನು ಸಂಪಾದನೆ ಮಾಡಲು ಸಾಧ್ಯವಾದರೆ ಎಲೈ ರಾಜನೇ, ನಾನು ಒಳ್ಳೆಯ ಕಾರ್ಯವನ್ನು ಮಾಡಿದಂತಾಗುತ್ತದೆ. ಮತ್ತು ಬಹಳ ಪುಣ್ಯವನ್ನು ಸಂಪಾದಿಸುವೆನು.
ಮೋಚಯೇಯಂ ಮೃತ್ಯುಪಾಶಾತ್ ಸಂರಬ್ಧಾನ್ ಕುರುಸೃಂಜಯಾನ್ |
ಪಾಂಡವಾನ್ ಧಾರ್ತರಾಷ್ಟ್ರಾಂಶ್ಚ ಸರ್ವಾಂ ಚ ಪೃಥಿವೀಮಿಮಾಮ್ ॥
ಕ್ರೋಧಗೊಂಡಿರುವ ಕೌರವರನ್ನೂ, ಸೃಂಜಯರನ್ನೂ, ಪಾಂಡವರನ್ನೂ, ಧೃತರಾಷ್ಟ್ರಪುತ್ರರನ್ನೂ ಮತ್ತು ಈ ಎಲ್ಲಾ ಭೂಮಿಯನ್ನೂ ಮೃತ್ಯುಪಾಶದಿಂದ ಬಿಡುಗಡೆಗೊಳಿಸಿಯೇನು (ಎಂದು ಹೇಳಿದನು).
ಏವಮುಕ್ತಃ ಪ್ರತ್ಯುವಾಚ ಧರ್ಮರಾಜೋ ಜನಾರ್ದನಮ್ |
ಭ್ರಾತೄಣಾಂ ಸಮವೇತಾನಾಂ ಸಕಾಶೇ ಪುರುಷೋತ್ತಮಮ್ ॥4॥
ಹೀಗೆ ಕೃಷ್ಣನು ಹೇಳಿದುದನ್ನು ಕೇಳಿ ಧರ್ಮರಾಜನು ಒಟ್ಟಿಗೆ ಸೇರಿದ ತನ್ನ ಸಹೋದರರ ಜೊತೆಯಲ್ಲಿ ಪುರುಷೋತ್ತಮನಾದ ಅವನನ್ನು ಕುರಿತು ಹೇಳಿದನು.
ನ ಮಮ್ಯೈತನ್ಮತಂ ಕೃಷ್ಣ ಯತ್ ತ್ವಂ ಯಾಯಾಃ ಕುರೂನ್ ಪ್ರತಿ |
ಸುಯೋಧನಃ ಸೂಕ್ತಮಪಿ ನ ಕರಿಷ್ಯತಿ ತೇ ವಚಃ ॥5॥
ಎಲೈ ಕೃಷ್ಣನೇ, ನೀನು ಕುರುಗಳ ಸಭೆಗೆ ಹೋಗುವುದು ನನ್ನ ಅಭಿಪ್ರಾಯವಲ್ಲ. ಸುಯೋಧನನು ನೀನು ಯೋಗ್ಯವಾದುದನ್ನು ಹೇಳಿದರೂ ನಿನ್ನ ಮಾತನ್ನು ನಡೆಸಿಕೊಡುವುದಿಲ್ಲ.
ಸುಯೋಧನೋ ಹಿ ದುಷ್ಟಾತ್ಮಾ ಕರ್ಣಶ್ಚ ಸಹಸೌಬಲಃ |
ಸಮೇತಂ ಪಾರ್ಥಿವಂ ಕ್ಷತ್ರಂ ದುರ್ಯೋಧನವಶಾನುಗಮ್ ॥6॥
ತೇಷಾಂ ಮಧ್ಯೇಽವತರಣಂ ತವ ಕೃಷ್ಣ ನ ರೋಚಯೇ ॥7॥
ಸುಯೋಧನನೂ, ಕರ್ಣನೂ ಮತ್ತು ಶಕುನಿಯೂ ದುಷ್ಟರಾದವರು. ಅಲ್ಲದೆ ಅಲ್ಲಿ ಒಂದುಗೂಡಿದ ಪೃಥಿವಿಯ ಕ್ಷತ್ರಿಯ ಸಮೂಹವು ದುರ್ಯೋಧನನ ವಶದಲ್ಲಿದೆ. ಕೃಷ್ಣನೇ, ನೀನು ಅವರ ಮಧ್ಯೆ ಹೋಗುವುದು ನನಗೆ ಇಷ್ಟವಾಗುವುದಿಲ್ಲ.
ನ ಹಿ ನಃ ಪ್ರೀಣಯೇದ್ ದ್ರವ್ಯಂ ನ ದೇವತ್ವಂ ಕುತಃ ಸುಖಮ್ |
ನ ಚ ಸರ್ವಾಮರೈಶ್ವರ್ಯಂ ತವ ರೋಧೇನ ಮಾಧವ ॥8॥
ಎಲೈ ಮಾಧವನೇ, ನಿನಗೆ ತೊಂದರೆಯಾದರೆ ನಮಗೆ ದ್ರವ್ಯವಾಗಲೀ, ರಾಜತನವಾಗಲೀ, ಸುಖವಾಗಲೀ, ಎಲ್ಲಾ ದೇವತೆಗಳ ಐಶ್ವರ್ಯವೇ ಆಗಲಿ ಸಂತೋಷವನ್ನು ಕೊಡುವುದಿಲ್ಲ.
ಶ್ರೀಭಗವಾನ್
ಜಾನಾಮ್ಯೇತಾಂ ಮಹಾರಾಜ ಧಾರ್ತರಾಷ್ಟ್ರಸ್ಯ ಪಾಪತಾಮ್ |
ಅವಾಚ್ಯಾಸ್ತು ಭವಿಷ್ಯಾಮಃ ಸರ್ವಲೋಕೇ ಮಹೀಕ್ಷಿತಾಮ್ ॥9॥
ಶ್ರೀಭಗವಾನ್ ಮಹಾರಾಜನೇ, ಸುಯೋಧನನ ಈ ದುಷ್ಟತನವನ್ನು ನಾನು ತಿಳಿದಿದ್ದೇನೆ. ನಾನು ಅಲ್ಲಿಗೆ ಹೋಗುವುದರಿಂದ ಈ ಲೋಕದ ಎಲ್ಲಾ ಜನರಿಂದ ಅನಿಂದ್ಯನಾಗುವೆನು.
ನ ಚಾಪಿ ಮಮ ಪರ್ಯಾಪ್ತಾಃ ಸಹಿತಾಃ ಸರ್ವಪಾರ್ಥಿವಾಃ |
ಕ್ರುದ್ಧಸ್ಯ ಸಂಯುಗೇ ಸ್ಥಾತುಂ ಸಿಂಹಸ್ಯೇವೇತರೇ ಮೃಗಾಃ ॥10॥
ಮತ್ತು ಕೋಪಗೊಂಡ ಸಿಂಹದ ಎದುರಿಗೆ ಜಿಂಕೆಗಳು ನಿಲ್ಲಲು ಸಾಧ್ಯವಾಗದಂತೆ ಕ್ರುದ್ಧನಾದ ನನ್ನ ಎದುರಿಗೆ ಎಲ್ಲ ಪಾರ್ಥಿವರೂ ಸೇರಿ ಯುದ್ಧದಲ್ಲಿ ನಿಲ್ಲಲಾರರು.
ಅಥ ಚೈತೇ ಪ್ರವರ್ತಂತೇ ಮಯಿ ಕಿಂಚಿದಸಾಂಪ್ರತಮ್ |
ನಿರ್ದಹೇಯಂ ಕುರೂನ್ ಸರ್ವಾನಿತಿ ಮೇ ಧೀಯತೇ ಮತಿಃ ॥11॥
ಇನ್ನು ಕುರುಗಳು ನನಗೆ ಏನಾದರೂ ಅಪಚಾರವನ್ನು ಮಾಡಿದರೆ ನಾನು ಎಲ್ಲಾ ಕುರುಗಳನ್ನೂ ಸುಟ್ಟುಹಾಕುತ್ತೇನೆ ಎಂದು ನನ್ನ ಅಭಿಪ್ರಾಯವಿದೆ.

ನ ಜಾತು ಗಮನಂ ಪಾರ್ಥ ಭವೇತ್ ತತ್ರ ನಿರರ್ಥಕಮ್ |
ಅರ್ಥಪ್ರಾಪ್ತಿಃ ಕದಾಚಿತ್ ಸ್ಯಾದಂತತೋ ವಾಽಪ್ಯವಾಚ್ಯತಾ ॥12॥
ಎಲೈ ಪಾರ್ಥನೇ, ನಾನು ಅಲ್ಲಿಗೆ ಹೋಗುವುದು ಎಂದೂ ವ್ಯರ್ಥವಾಗುವುದಿಲ್ಲ. ಒಂದುಪಕ್ಷ ಸಂಧಿಯನ್ನು ಸಾಧಿಸಬಹುದು ಅಥವಾ ಕೊನೆಯ ಪಕ್ಷ ಅನಿಂದೆಯನ್ನಾದರೂ ಸಂಪಾದಿಸಬಹುದು.
ಯುಧಿಷ್ಠಿರಃ
ಯತ್ ತುಭ್ಯಂ ರೋಚತೇ ಕೃಷ್ಣ ಸ್ವಸ್ತಿ ಪ್ರಾಪ್ನುಹಿ ಕೌರವಾನ್ |
ಕೃತಾರ್ಥಂ ಸ್ವಸ್ತಿಮಂತಂ ತ್ವಾಂ ದ್ರಕ್ಷ್ಯಾಮಿ ಪುನರಾಗತಮ್ ॥13॥
ಯುಧಿಷ್ಠಿರ ಎಲೈ ಕೃಷ್ಣನೇ, ನಿನಗೆ ಯಾವುದು ಇಷ್ಟವೋ ಅದನ್ನು ಮಾಡು. ಕ್ಷೇಮದಿಂದ ಕೌರವಸಭೆಗೆ ಹೋಗುವವನಾಗು. ನೀನು ಕಾರ್ಯವನ್ನು ಸಾಧಿಸಿ ಕ್ಷೇಮದಿಂದ ಹಿಂದಿರುಗಿ ಬಂದುದನ್ನು ನಾನು ನೋಡುವೆನು.
ವಿಷ್ವಕ್ಸೇನ ಕುರೂನ್ ಗತ್ವಾ ಭರತಾನ್ ಶಮಯ ಪ್ರಭೋ |
ಯಥಾ ಸರ್ವೇ ಸುಮನಸಃ ಸಹ ಸ್ಯಾಮ ಸುಚೇತಸಃ ॥14॥
ಎಲೈ ವಿಶ್ವಕ್ಸೇನನೇ, ಪ್ರಭುವೇ, ಕೌರವರ ಸಮೀಪಕ್ಕೆ ಹೋಗಿ ಎಲ್ಲ ಭರತರೂ ಒಳ್ಳೆಯ ಮನಸ್ಸಿನಿಂದ ಮತ್ತು ಸ್ನೇಹದಿಂದ ಕೂಡಿದವರಾಗಿ ಇರುವಂತೆ ಸಂಧಿಯನ್ನು ಉಂಟುಮಾಡುವವನಾಗು.
ಭ್ರಾತಾ ಚಾಸಿ ಸಖಾ ಚಾಸಿ ಬೀಭತ್ಸೋರ್ಮಮ ಚ ಪ್ರಿಯಃ |
ಸೌಹೃದೇನಾವಿಶಂಕ್ಯೋಽಸಿ ಸ್ವಸ್ತಿ ಪ್ರಾಪ್ನುಹಿ ಭೂತಯೇ ॥15॥
ನೀನು ಅರ್ಜುನನಿಗೆ ಸಹೋದರನೂ ಮತ್ತು ಸ್ನೇಹಿತನೂ ಆಗಿದ್ದೀಯೆ. ನನಗೂ ಪ್ರಿಯನಾಗಿದ್ದೀಯೆ. ನಿನ್ನ ಸೌಹಾರ್ದದ ವಿಷಯದಲ್ಲಿ ಯಾರೂ ಸಂಶಯಪಡಬೇಕಾದ ಕಾರಣವಿಲ್ಲ. ನಿನಗೆ ಕ್ಷೇಮವಾಗಲಿ, ನಮ್ಮ ಅಭ್ಯುದಯಕ್ಕಾಗಿ ನೀನು ಹೋಗಿ ಬಾ.
ಅಸ್ಮಾನ್ ವೇತ್ಥ ಪರಾನ್ ವೇತ್ಥ ವೇತ್ಥಾರ್ಥಾನ್ ವೇತ್ಥ ಭಾಷಿತುಮ್ |
ಯದ್ಯದಸ್ಮದ್ಧಿತಂ ಕೃಷ್ಣ ತತ್ತದ್ ವಾಚ್ಯಃ ಸುಯೋಧನಃ ॥16॥
ನೀನು ನಮ್ಮನ್ನು ತಿಳಿದಿದ್ದೀಯೆ. ಅವರನ್ನು ತಿಳಿದಿದ್ದೀಯೆ. ಎಲ್ಲ ವಿಷಯಗಳನ್ನೂ ತಿಳಿದಿದ್ದೀಯೆ ಮತ್ತು ಹೇಗೆ ಮಾತನಾಡಬೇಕೆಂದೂ ತಿಳಿದಿದ್ದೀಯೆ. ಎಲೈ ಕೃಷ್ಣನೇ, ಯಾವ ಯಾವುದು ನಮಗೆ ಹಿತವೋ ಅವೆಲ್ಲವನ್ನೂ ಸುಯೋಧನನಿಗೆ ಹೇಳಬೇಕು.
ಯದ್ಯದ್ ಧರ್ಮೇಣ ಸಂಯುಕ್ತಮುಪಪದ್ಯೇದ್ಧಿತಂ ವಚಃ |
ತತ್ತತ್ ಕೇಶವ ಭಾಷೇಥಾಃ ಸಾಂತ್ವಂ ವಾ ಯದಿ ವೇತರತ್ ॥17॥
ಯಾವ ಯಾವುದು ಧರ್ಮಯುಕ್ತವಾಗಿರುತ್ತದೆಯೋ ಮತ್ತು ಯಾವ ಯಾವ ಮಾತುಗಳು ನಮಗೆ ಹಿತವನ್ನು ಉಂಟುಮಾಡುತ್ತವೆಯೋ ಎಲೈ ಕೇಶವನೇ, ಅದು ಸಂಧಿಯಾಗಲೀ ಅಥವಾ ಯುದ್ಧವಾಗಲೀ ಆಯಾ ವಿಷಯಗಳನ್ನು ಕುರಿತು ನೀನು ಅಲ್ಲಿ ಮಾತನಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆರಡನೆಯ ಅಧ್ಯಾಯ
ಯುಧಿಷ್ಠಿರನಿಗೆ ಯುದ್ಧಪಕ್ಷವನ್ನು ಸ್ಥಿರಮಾಡಿ, ಲೋಕಸಂಶಯನಿರಾಕರಣೆ ಮಾಡಲು ಸಂಧಿಗಾಗಿ ಪ್ರಯತ್ನ ಮಾಡುವಂತೆ ಕೃಷ್ಣನ ಕಥನ.
ಶ್ರೀಭಗವಾನ್
ಸಂಜಯಸ್ಯ ಶ್ರುತಂ ವಾಕ್ಯಂ ಭವತಶ್ಚ ಶ್ರುತಂ ಮಯಾ |
ಸರ್ವಂ ಜಾನಾಮ್ಯಭಿಪ್ರಾಯಂ ತೇಷಾಂ ಚ ಭವತಶ್ಚ ಯಃ ॥1॥
ಶ್ರೀಭಗವಾನ್ ಸಂಜಯನ ಮಾತುಗಳನ್ನು ಕೇಳಿದೆ ಮತ್ತು ನಿನ್ನ ಮಾತುಗಳನ್ನೂ ಕೇಳಿದೆ. ನಿನ್ನ ಮತ್ತು ಅವರ (ಕೌರವರ) ಎಲ್ಲಾ ಅಭಿಪ್ರಾಯವನ್ನೂ ನಾನು ತಿಳಿದಿದ್ದೇನೆ.
ತವ ಧರ್ಮಾಶ್ರಿತಾ ಬುದ್ಧಿಸ್ತೇಷಾಂ ವೈರಾನ್ವಿತಾ ಮತಿಃ |
ಯದಯುದ್ಧೇನ ಲಭ್ಯೇತ ತತ್ ತೇ ಬಹುಮತಂ ಭವೇತ್ ॥2॥
ನಿನ್ನ ಬುದ್ಧಿಯು ಧರ್ಮವನ್ನು ಆಶ್ರಯಿಸಿದೆ. ಕೌರವರ ಬುದ್ಧಿಯು ವೈರವನ್ನು ಆಶ್ರಯಿಸಿದೆ. ಯುದ್ಧವಿಲ್ಲದೆ ಯಾವುದನ್ನು ಸಂಪಾದಿಸಬಹುದೋ ಅದು ನಿನಗೆ ಮಾನ್ಯವಾಗುತ್ತದೆ.
ನ ಚ ತನ್ನೈಷ್ಠಿಕಂ ಕರ್ಮ ಕ್ಷತ್ರಿಯಸ್ಯ ವಿಶಾಂಪತೇ |
ಆಹುರಾಶ್ರಮಿಣಃ ಸರ್ವೇ ಯದ್ ಭೈಕ್ಷಂ ಕ್ಷತ್ರಿಯಶ್ಚರೇತ್ ॥3॥
ಎಲೈ ರಾಜನೇ, ಕ್ಷತ್ರಿಯನಾದವನು ಭೈಕ್ಷವನ್ನು ಮಾಡುವುದು ಅವನಿಗೆ ವಿಹಿತವಾದ ಕರ್ಮವಲ್ಲವೆಂದು ಎಲ್ಲಾ ಆಶ್ರಮದವರೂ ಹೇಳುತ್ತಾರೆ.
ಜಯೋ ವಧೋ ವಾ ಸಂಗ್ರಾಮೇ ಧಾತ್ರಾಽಽದಿಷ್ಟಃ ಸನಾತನಃ |

ಸ್ವಧರ್ಮಃ ಕ್ಷತ್ರಿಯಸ್ಯೈಷ ಕಾರ್ಪಣ್ಯಂ ನ ಪ್ರಶಸ್ಯತೇ ॥4॥
ಯುದ್ಧದಲ್ಲಿ ಜಯ ಅಥವಾ ವಧೆ ಇದು ಬ್ರಹ್ಮದೇವರು ಕ್ಷತ್ರಿಯರಿಗೆ ಆದೇಶ ಮಾಡಿದ ಸನಾತನವಾದ ಧರ್ಮ. ಇದು ಕ್ಷತ್ರಿಯನ ಸ್ವಧರ್ಮ. ಅವನಿಗೆ ದೈನ್ಯವು ಪ್ರಶಸ್ತವಲ್ಲ.
ನ ಹಿ ಕಾರ್ಪಣ್ಯಮಾಸ್ಥಾಯ ಶಕ್ಯಾ ವೃತ್ತಿರ್ಯುಧಿಷ್ಠಿರ |
ವಿಕ್ರಮಸ್ವ ಮಹಾಬಾಹೋ ಜಹಿ ಶತ್ರೂನರಿಂದಮ ॥5॥
ಎಲೈ ಯುಧಿಷ್ಠಿರನೇ, ದೈನ್ಯವನ್ನು ಅವಲಂಬಿಸಿ ಬದುಕಲು ಸಾಧ್ಯವಿಲ್ಲ. ಮಹಾಬಾಹುವೇ, ಪರಾಕ್ರಮವನ್ನು ತೋರಿಸು. ಅರಿಂದಮನೇ, ಶತ್ರುಗಳನ್ನು ಜಯಿಸುವವನಾಗು.
ಅತಿಗೃದ್ಧಾಃ ಕೃತಸ್ನೇಹಾ ದೀರ್ಘಕಾಲಂ ಸಹೋಷಿತಾಃ |
ಕೃತಮಿತ್ರಾಃ ಕೃತಬಲಾಃ ಧಾರ್ತರಾಷ್ಟ್ರಾಃ ಪರಂತಪ ॥6॥
ಎಲೈ ಪರಂತಪನೇ, ಧೃತರಾಷ್ಟ್ರನ ಪುತ್ರರು ಬಹಳ ದುರಾಸೆಯುಳ್ಳವರು. ದೀರ್ಘಕಾಲದಲ್ಲಿ ಜೊತೆಯಲ್ಲಿ ವಾಸಮಾಡಿ ಪರಸ್ಪರ ಸ್ನೇಹವುಳ್ಳವರಾಗಿದ್ದಾರೆ. ಮಿತ್ರರನ್ನು ಸಂಪಾದಿಸಿ ಸೈನ್ಯವನ್ನೂ ಸಂಪಾದಿಸಿದ್ದಾರೆ.
ನ ಪರ್ಯಾಯೋಽಸ್ತಿ ಯತ್ ಸಾಮ್ಯಂ ತ್ವಯಿ ಕುರ್ಯುರ್ವಿಶಾಂಪತೇ|
ಬಲವತ್ತ್ವಾಂ ಹಿ ಮನ್ಯಂತೇ ಭೀಷ್ಮದ್ರೋಣಕೃಪಾದಿಭಿಃ ॥7॥
ಎಲೈ ರಾಜನೇ, ಅವರು ನಿನ್ನನ್ನು ತಮ್ಮ ಸಮಾನವಾಗಿ ಕಾಣುತ್ತಾರೆ ಎಂಬ ನಿಶ್ಚಯವಿಲ್ಲ. ಭೀಷ್ಮದ್ರೋಣಕೃಪರಿಂದ ಕೂಡಿದ ಅವರು ತಮ್ಮನ್ನು ನಿನಗಿಂತ ಬಲಿಷ್ಠರೆಂದು ತಿಳಿದಿದ್ದಾರೆ (ಲಕ್ಷಾಲಂಕಾರ).
ಯಾವಚ್ಚ ಮಾರ್ದವೇನೈತಾನ್ ರಾಜನ್ನುಪಚರಿಷ್ಯಸಿ |
ತಾವದೇತೇ ಹರಿಷ್ಯಂತಿ ತವ ರಾಜ್ಯಮರಿಂದಮ ॥8॥
ಎಲೈ ರಾಜನೇ, ಎಲೈ ಅರಿಂದಮನೇ, ಎಲ್ಲಿಯವರೆಗೆ ನೀನು ಅವರ ಜೊತೆಯಲ್ಲಿ ಮೃದುವಾಗಿ ನಡೆದುಕೊಳ್ಳುವಿಯೋ ಅಲ್ಲಿಯವರೆಗೆ ಅವರು ನಿನ್ನ ರಾಜ್ಯವನ್ನು ಅಪಹರಿಸುವರು.
ನಾನುಕ್ರೋಶಾನ್ನ ಕಾರ್ಪಣ್ಯಾನ್ನ ಚ ಧರ್ಮಾರ್ಥಸಂಶ್ರಯಾತ್ |
ಅಲಂ ಕರ್ತುಂ ಧಾರ್ತರಾಷ್ಟ್ರಾನ್ ತವ ಕಾಮಮರಿಂದಮ ॥9॥
ಎಲೈ ಅರಿಂದಮನೇ, ದಯೆಯಿಂದಾಗಲೀ, ದೈನ್ಯದಿಂದಾಗಲೀ, ಧರ್ಮಾರ್ಥಯುಕ್ತ ಮಾತುಗಳಿಂದಾಗಲೀ ಧೃತರಾಷ್ಟ್ರಪುತ್ರರನ್ನು ನಿನ್ನ ಇಚ್ಛೆಯನ್ನು ನೆರವೇರಿಸುವಂತೆ ಮಾಡಲು ಸಾಧ್ಯವಿಲ್ಲ.
ಏತದೇವ ನಿಮಿತ್ತಂ ತೇ ಧಾರ್ತರಾಷ್ಟ್ರೋ ಯಥಾ ತ್ವಯಿ |
ನಾನ್ವತಪ್ಯತ ಕೋಪೇನ ತವ ಕೃತ್ವಾಽಪಿ ದುಷ್ಕರಮ್ ॥10॥
ನಿನಗೆ ದುಷ್ಕರವಾದ ಅಪಚಾರವನ್ನು ಮಾಡಿದರೂ ದುರ್ಯೋಧನನು ಪಶ್ಚಾತ್ತಾಪ ಪಡದಿರುವುದಕ್ಕೆ ನಿನ್ನ ಮಾರ್ದವವೇ ಕಾರಣ.
ಪಿತಾಮಹಸ್ಯ ದ್ರೋಣಸ್ಯ ವಿದುರಸ್ಯ ಚ ಧೀಮತಃ |
ಬ್ರಾಹ್ಮಣಾನಾಂ ಚ ಸಾಧೂನಾಂ ರಾಜ್ಞಶ್ಚ ನಗರಸ್ಯ ಚ ॥11॥
ಪಶ್ಯತಾಂ ಕುರುಮುಖ್ಯಾನಾಂ ಸರ್ವೇಷಾಮೇವ ತತ್ತ್ವತಃ |
ದಾನಶೀಲಂ ಮೃದುಂ ದಾಂತಂ ಧರ್ಮಶೀಲಮನುವ್ರತಮ್ ॥12॥
ಯತ್ ತ್ವಾಮುಪಧಿನಾ ರಾಜ್ಯಂ ದ್ಯೂತೇನಾವಂಚಯತ್ ತದಾ |
ನ ಚಾಪತ್ರಪತೇ ಪಾಪೋ ನೃಶಂಸಃ ಸ್ವೇನ ಕರ್ಮಣಾ ॥13॥
ಪಿತಾಮಹರಾದ ಭೀಷ್ಮರೂ, ದ್ರೋಣರೂ, ಮೇಧಾವಿಯಾದ ವಿದುರನೂ, ಬ್ರಾಹ್ಮಣರೂ, ಸಜ್ಜನರೂ, ರಾಜರೂ, ನಾಗರಿಕರೂ, ಕುರುಮುಖ್ಯರೂ ಎಲ್ಲರೂ ಸರಿಯಾಗಿ ನೋಡುತ್ತಿರುವಂತೆಯೇ ದಾನಶೀಲನೂ, ಮೃದುವೂ, ಧರ್ಮಶೀಲನೂ, ಇಂದ್ರಿಯನಿಗ್ರಹವುಳ್ಳವನೂ, ದೊಡ್ಡವರ ಮಾತನ್ನು ಕೇಳುವವನೂ ಆದ ನಿನಗೆ ಕಪಟದ್ಯೂತದಿಂದ ವಂಚನೆಯನ್ನು ಮಾಡಿ, ರಾಜ್ಯವನ್ನು ಅಪಹರಿಸಿ ಆ ಕ್ರೂರಿಯಾದ ದುರ್ಯೋಧನನು ತಾನು ಮಾಡಿದ ಕರ್ಮದಿಂದ ನಾಚಿಕೆಯನ್ನು ಪಡುವುದಿಲ್ಲ.
ತಥಾಶೀಲಸಮಾಚಾರೇ ರಾಜನ್ ಮಾ ಪ್ರಣಯಂ ಕೃಥಾಃ |
ವಧ್ಯಾಸ್ತೇ ಸರ್ವಲೋಕಸ್ಯ ಕಿಂ ಪುನಸ್ತವ ಭಾರತ ॥14॥
ಎಲೈ ರಾಜನೇ, ಅಂತಹ ಶೀಲ ಮತ್ತು ಆಚಾರಗಳುಳ್ಳ ವ್ಯಕ್ತಿಯಲ್ಲಿ ನೀನು ಸ್ನೇಹವನ್ನು ಮಾಡಬೇಡ. ಅವರು ಎಲ್ಲರಿಗೂ ವಧ್ಯರಾದವರು. ನಿನ್ನಿಂದ ವಧ್ಯರಾದವರು ಎಂದು ಪುನಃ ಹೇಳಬೇಕಾದುದಿಲ್ಲ.
ವಾಗ್ಭಿಸ್ತ್ವಪ್ರತಿರೂಪಾಭಿರತುದತ್ ತ್ವಾಂ ಸಹಾನುಜಮ್ |
ನಾಥ್ಯಮಾನಃ ಪ್ರಹೃಷ್ಟಃ ಸನ್ ಭ್ರಾತೃಭಿಃ ಸಹ ಭಾಷತೇ ॥15॥
ಏತಾವತ್ ಪಾಂಡವಾನಾಂ ಹಿ ನಾಸ್ತಿ ಕಿಂಚಿದಿಹ ಸ್ವಕಮ್ |
ನಾಮಧೇಯಂ ಚ ಗೋತ್ರಂ ಚ ತಥಾಽಪ್ಯೇಷಾಂ ತು ಶಿಷ್ಯತೇ ॥16॥
ಕಾಲೇನ ಮಹತಾ ಚೈಷಾಂ ಭವಿಷ್ಯತಿ ಪರಾಭವಃ |
ಪ್ರಕೃತಿಂ ತೇ ಭಜಿಷ್ಯಂತಿ ನಷ್ಟಪ್ರಕೃತಯೋ ಜನಾಃ ॥17॥
ಅಸದೃಶವಾದ ಕೆಟ್ಟಮಾತುಗಳಿಂದ ತಮ್ಮಂದಿರಿಂದ ಕೂಡಿದ ನಿನ್ನನ್ನು ಅವನು ಚುಚ್ಚಿ ಮಾತನಾಡಿದನು. ಅವನನ್ನು ಬೇಡಿದರೂ ಅವನು ಸಂತೋಷದಿಂದ ತಮ್ಮಂದಿರ ಜೊತೆಯಲ್ಲಿ ಬಾಯಿಗೆ ಬಂದಂತೆ ಮಾತನಾಡುತ್ತಾನೆ. ಇಲ್ಲಿ ಪಾಂಡವರ ಧನವು ಸ್ವಲ್ಪವೂ ಇಲ್ಲ. ಆದರೂ ಅವರ ಹೆಸರು ಮತ್ತು ಗೋತ್ರವು ಮಾತ್ರ ಉಳಿದಿದೆ. ಕಾಲಕ್ರಮದಲ್ಲಿ ಅವರಿಗೆ ಪರಾಭವ ಉಂಟಾಗಿ ಅದೂ ನಾಶವನ್ನು ಹೊಂದುತ್ತದೆ. ಅವರು ತಮ್ಮ ಸ್ವಭಾವವನ್ನು ಕಳೆದುಕೊಂಡು ಪ್ರಕೃತಿಯಲ್ಲಿ ಲೀನರಾಗುತ್ತಾರೆ (ಎಂದು ಬಾಯಿಗೆ ಬಂದಂತೆ

ಮಾತನಾಡುತ್ತಾನೆ).
ದುಃಶಾಸನೇನ ಪಾಪೇನ ತದಾ ದುಃಖೇ ಪ್ರವರ್ತಿತೇ |
ಅನಾಥವತ್ ತದಾ ದೇವೀ ದ್ರೌಪದೀ ಸುದುರಾತ್ಮನಾ ॥18॥
ಆಕೃಷ್ಟಕೇಶಾ ರುದತೀ ಸಭಾಯಾಂ ರಾಜಸಂಸದಿ |
ಭೀಷ್ಮದ್ರೋಣಪ್ರಮುಖತೋ ಗೌರಿತಿ ವ್ಯಾಹೃತಾ ಮುಹುಃ ॥19॥
ಪಾಪಿಯೂ, ದುರಾತ್ಮನೂ ಆದ ದುಶ್ಶಾಸನನೂ ದ್ರೌಪದಿಯನ್ನು ತಲೆಗೂದಲಿನಲ್ಲಿ ಹಿಡಿದು ಎಳೆದು ತಂದು, ರಾಜಸಭೆಯಲ್ಲಿ ಭೀಷ್ಮ-ದ್ರೋಣರ ಎದುರಿನಲ್ಲಿ ಅನಾಥಳಂತೆ ಆ ದೇವಿಯು ಅಳುತ್ತಿದ್ದರೂ ಅಂತಹ ದುಃಖವನ್ನು ಕೊಟ್ಟು, ನೀನು ಪಶು ಎಂದು ಅನೇಕ ಬಾರಿ ಕರೆದನು.
ಭವತಾ ವಾರಿತಾಃ ಸರ್ವೇ ಭ್ರಾತರೋ ಭೀಮವಿಕ್ರಮಾಃ |
ಧರ್ಮಪಾಶನಿಬದ್ಧಾಶ್ಚ ನ ಕಿಂಚಿತ್ ಪ್ರತಿಪೇದಿರೇ ॥20॥
ಭಯಂಕರ ಪರಾಕ್ರಮವುಳ್ಳ ನಿನ್ನ ತಮ್ಮಂದಿರನ್ನು ನೀನು ತಡೆದೆ. ಧರ್ಮಪಾಶನಿಬದ್ಧರಾದ ಅವರು ಆಗ ಏನನ್ನೂ ಮಾಡಲಿಲ್ಲ.
ಏತಾಶ್ಚಾನ್ಯಾಶ್ಚ ಪರುಷಾ ವಾಚಃ ಸಂಸದಿ ಚೇರಯನ್ |
ಶ್ಲಾಘತೇ ಜ್ಞಾತಿಮಧ್ಯೇ ಸ್ಮ ತ್ವಯಿ ಪ್ರವ್ರಾಜಿತೇ ವನಮ್ ॥21॥
ಮತ್ತು ಇಂತಹ ಅನೇಕ ಮತ್ತು ಬೇರೆಯ ಉಗ್ರವಾದ ಮಾತುಗಳನ್ನು ಸಭೆಯಲ್ಲಿ ಆಡಿ, ನೀನು ವನವಾಸಕ್ಕೆ ಹೋದ ಮೇಲೆ ತನ್ನ ಬಂಧುಗಳ ಮಧ್ಯದಲ್ಲಿ ದುರ್ಯೋಧನನು ತನ್ನನ್ನು ಹೊಗಳಿಕೊಳ್ಳುತ್ತಾನೆ.
ಯೇ ತತ್ರಾಸನ್ ಸಮಾನೀತಾಸ್ತೇ ದೃಷ್ಟ್ವಾ ತ್ವಾಮನಾಗಸಮ್ |
ಅಶ್ರುಕಂಠಾ ರುದಂತಶ್ಚ ಸಭಾಯಾಮಾಸತೇ ತದಾ ॥22॥
ಆ ಸಭೆಗೆ ಆಹೂತರಾಗಿ ಯಾರು ಬಂದಿದ್ದರೋ ಅವರೆಲ್ಲರೂ ನಿರಪರಾಧಿಯಾದ ನಿನ್ನನ್ನು ನೋಡಿ ಅಶ್ರುಕಂಠರಾಗಿ ಅಳುತ್ತಾ ಸಭೆಯಲ್ಲಿ ಸುಮ್ಮನೆ ಕುಳಿತಿದ್ದರು.
ನಚೈನಮಭ್ಯನಂದಂಸ್ತೇ ರಾಜಾನೋ ಬ್ರಾಹ್ಮಣೈಃ ಸಹ |
ಸರ್ವೇ ದುರ್ಯೋಧನಂ ತತ್ರ ನಿಂದಂತಿ ಸ್ಮ ಸಭಾಸದಃ ॥23॥
ಬ್ರಾಹ್ಮಣರಿಂದ ಸಹಿತರಾದ ಆ ರಾಜರು ಅವನನ್ನು ಅಭಿನಂದಿಸಲಿಲ್ಲ. ಅಲ್ಲಿದ್ದ ಸಭಾಸದರೆಲ್ಲರೂ ದುರ್ಯೋಧನನನ್ನು ನಿಂದಿಸಿದರು.
ಕುಲೀನಸ್ಯ ಚ ಯಾ ನಿಂದಾ ವಧೋ ವಾಽಮಿತ್ರಕರ್ಶನ |
ಮಹಾಗುಣೋ ವಧೋ ರಾಜನ್ ನ ತು ನಿಂದಾ ಕುಜೀವಿನಃ ॥24॥
ಎಲೈ ಶತ್ರುಕರ್ಶನನೇ, ಕುಲೀನನಾದವನಿಗೆ ನಿಂದೆ ಮತ್ತು ವಧೆಗಳಲ್ಲಿ ವಧೆಯು ಬಹಳ ಶ್ರೇಷ್ಠವಾದುದು. ಕೆಟ್ಟಜೀವನವನ್ನು ನಡೆಸುವ ಅವನಿಗೆ ನಿಂದೆಯು ಒಳ್ಳೆಯದಲ್ಲ.
ತದೈವ ನಿಹತೋ ರಾಜನ್ ಯದೈವ ನಿರಪತ್ರಪಃ |
ನಿಂದಿತಶ್ಚ ಮಹಾರಾಜ ಪೃಥಿವ್ಯಾಂ ಸರ್ವರಾಜಭಿಃ ॥25॥
ಎಲೈ ಮಹಾರಾಜನೇ, ನಿರ್ಲಜ್ಜನಾದ ಅವನು ಭೂಮಿಯಲ್ಲಿ ಸರ್ವರಾಜರಿಂದ ನಿಂದಿತನಾದಾಗಲೇ ಅವನು ಮೃತನಾಗಿದ್ದಾನೆ.
ಈಷತ್ಕಾರೋ ವಧಸ್ತಸ್ಯ ಯಸ್ಯ ಚಾರಿತ್ರಮೀದೃಶಮ್ |
ಪ್ರಸ್ಕಂದನಃ ಪ್ರತಿಸ್ತಬ್ಧಃ ಛಿನ್ನಮೂಲ ಇವ ದ್ರುಮಃ ॥26॥
ಯಾವನ ಚರಿತ್ರೆಯು ಈ ರೀತಿಯಾಗಿದೆಯೋ ಅವನನ್ನು ತುಚ್ಛೀಕರಿಸುವುದೇ ಅವನ ವಧೆ. ಸ್ತ್ರೀಲೋಲನೂ, ಪ್ರತಿಸ್ತಬ್ಧನೂ ಆದ ಅವನು ಬುಡವನ್ನು ಕತ್ತರಿಸಿದ ಮರದಂತೆ (ನಾಶವನ್ನು ಹೊಂದುವವನು).
ವಧ್ಯಃ ಸರ್ಪ ಇವಾನಾರ್ಯಃ ಸರ್ವಲೋಕಸ್ಯ ದುರ್ಮತಿಃ ॥27॥
ಜಹ್ಯೇನಂ ತ್ವಮಮಿತ್ರಘ್ನ ಮಾ ರಾಜನ್ ವಿಚಿಕಿತ್ಸಥಾಃ ॥28॥
ಅನಾರ್ಯನೂ, ದುರ್ಮತಿಯೂ ಆದ ಅವನು ಸರ್ಪದಂತೆ ಸರ್ವಲೋಕಕ್ಕೂ ವಧ್ಯನಾದವನು. ಶತ್ರುಸಂಹಾರಕನಾದ ರಾಜನೇ, ಅವನನ್ನು ಸಂಹರಿಸು. ಇದರಲ್ಲಿ ಸಂಶಯಪಡಬೇಡ.
ಸರ್ವಥಾ ತು ಮತಂ ಚೈತದ್ ರೋಚತೇ ಚ ಮಮಾನಘ |
ಯತ್ ತ್ವಂ ಪಿತರಿ ಭೀಷ್ಮೇ ಚ ಪ್ರಣಿಪಾತಂ ಸಮಾಚರೇಃ ॥29॥
ಎಲೈ ನಿರ್ದೋಷನಾದವನೇ, ನೀನು ತಂದೆಯಾದ ಧೃತರಾಷ್ಟ್ರನಿಗೂ ಮತ್ತು ಪಿತಾಮಹರಾದ ಭೀಷ್ಮರಿಗೂ ನಮಸ್ಕಾರ ಮಾಡುವುದು ನನಗೆ ಬಹಳವಾಗಿ ಹಿಡಿಸುತ್ತದೆ.
ಅಹಂ ತು ಸರ್ವಲೋಕಸ್ಯ ಗತ್ವಾ ಚ್ಛೇತ್ಸ್ಯಾಮಿ ಸಂಶಯಮ್ |
ಯೇಷಾಮಸ್ತಿ ದ್ವಿಧಾ ಭಾವೋ ರಾಜನ್ ದುರ್ಯೋಧನಂ ಪ್ರತಿ ॥30॥
ಎಲೈ ರಾಜನೇ, ಯಾರಿಗೆ ದುರ್ಯೋಧನನ ವಿಷಯದಲ್ಲಿ ಒಳ್ಳೆಯವನು ಮತ್ತು ಕೆಟ್ಟವನು ಎಂಬ ಎರಡು ರೀತಿಯಾದ ಬುದ್ಧಿ ಇದೆಯೋ ನಾನು ಅಲ್ಲಿಗೆ ಹೋಗಿ ಎಲ್ಲ ಲೋಕಗಳ ಆ ಸಂಶಯವನ್ನು ಪರಿಹರಿಸುವೆನು.
ಮಧ್ಯೇ ರಾಜ್ಞಾಮಹಂ ತತ್ರ ಪ್ರತಿಪೌರುಷಿಕಾನ್ ಗುಣಾನ್ |
ತವ ಸಂಕೀರ್ತಯಿಷ್ಯಾಮಿ ಯೇ ಚ ತಸ್ಯ ವ್ಯತಿಕ್ರಮಾಃ ॥31॥
ಅಲ್ಲಿ ರಾಜರ ಮಧ್ಯದಲ್ಲಿ ನಾನು ನಿನ್ನ ಅಸಾಧಾರಣ ಗುಣಗಳನ್ನೂ ಮತ್ತು ಅವನ ಅಪಚಾರಗಳನ್ನೂ ನಿರೂಪಿಸುವೆನು.
ಬ್ರುವತಸ್ತತ್ರ ಮೇ ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ |

ನಿಶಮ್ಯ ಪಾರ್ಥಿವಾಃ ಸರ್ವೇ ನಾನಾಜನಪದೇಶ್ವರಾಃ ||32||
ತ್ವಯಿ ಸಂಪ್ರತಿಪತ್ಸ್ಯಂತೇ ಧರ್ಮಾತ್ಮಾ ಸತ್ಯವಾಗಿತಿ ||33||
ಅಸ್ಮಿಂಶ್ಚಾಧಿಗಮಿಷ್ಯಂತಿ ತಥಾ ಲೋಭಾದವರ್ತತ ||34||
ನನ್ನ ಧರ್ಮಾರ್ಥಸಹಿತವಾದ ಹಿತವಾದ, ಮಾತುಗಳನ್ನು ಕೇಳಿ, ಅಲ್ಲಿ ಬಂದಿರುವ ನಾನಾ ದೇಶದ ರಾಜರು ನೀನು ಧರ್ಮಾತ್ಮನೂ ಮತ್ತು ಸತ್ಯವಚನನೆಂದು ನಿನ್ನಲ್ಲಿ ಪ್ರೀತಿಯನ್ನು ಹೊಂದುವರು. ದುರ್ಯೋಧನನು ಲೋಭದಿಂದಲೇ ನಡೆದುಕೊಂಡಿದ್ದಾನೆಂದೂ ನಿಶ್ಚಯಿಸುವರು.
ಗರ್ಹಯಿಷ್ಯಾಮಿ ಚೈವೈನಂ ಪೌರಜಾನಪದೇಷ್ವಪಿ |
ವೃದ್ಧಬಾಲಾನುಪಾದಾಯ ಚಾತುರ್ವರ್ಣ್ಯೇ ಸಮಾಗತೇ ||35||
ವೃದ್ಧರೂ ಮತ್ತು ಬಾಲರನ್ನೂ ಒಳಗೊಂಡ ಚತುರ್ವರ್ಣದ ಪೌರಜಾನಪದರು ಸೇರಿರುವಾಗ ನಾನು ಅವನನ್ನು ನಿಂದಿಸುವೆನು.
ಧರ್ಮಂ ಚೇದ್ ಯಾಚಮಾನಸ್ತ್ವಂ ಧರ್ಮಂ ತತ್ರ ನ ಲಪ್ಸ್ಯಸೇ |
ಕುರೂನ್ ವಿಗರ್ಹಯಿಷ್ಯಂತಿ ಧೃತರಾಷ್ಟ್ರಂ ಚ ಪಾರ್ಥಿವಮ್ ||36||
ಧರ್ಮವನ್ನು ಬೇಡುತ್ತಿರುವ ನೀನು ಅಲ್ಲಿ ಧರ್ಮವನ್ನು ಪಡೆಯದಿದ್ದರೆ ಎಲ್ಲಾ ಕುರುಗಳನ್ನೂ ಮತ್ತು ರಾಜನಾದ ಧೃತರಾಷ್ಟ್ರನನ್ನೂ ನಿಂದಿಸುವೆನು.
ತಸ್ಮಿನ್ ಲೋಕಪರಿತ್ಯಕ್ತೇ ಕಿಂ ಕಾರ್ಯಮವಶಿಷ್ಯತೇ |
ಹತೇ ದುರ್ಯೋಧನೇ ರಾಜನ್ ಯದನ್ಯತ್ ಕ್ರಿಯತಾಮಿತಿ ||37||
ಸುಯೋಧನನು ಹೀಗೆ ಎಲ್ಲರಿಂದಲೂ ಪರಿತ್ಯಕ್ತನಾದ ಮೇಲೆ ಇನ್ನೇನು ಉಳಿದಿರುತ್ತದೆ? ರಾಜನೇ, ದುರ್ಯೋಧನನು ಹತನಾದ ಮೇಲೆ ಏನು ಮಾಡಬೇಕೋ ಅದನ್ನು ಮಾಡುವವನಾಗು.
ಯಾತ್ವಾ ಚಾಹಂ ಕುರೂನ್ ಸರ್ವಾನ್ ಯುಷ್ಮದರ್ಥಮಹಾಪಯನ್|
ಯತಿಷ್ಯೇ ಪ್ರಶಮಂ ಕರ್ತುಂ ಲಕ್ಷಯಿಷ್ಯೇ ಚ ಚೇಷ್ಟಿತಮ್ ||38||
ನಾನು ಎಲ್ಲ ಕುರುಗಳ ಸಮೀಪಕ್ಕೆ ಹೋಗಿ, ನಿಮ್ಮ ಹಿತಕ್ಕೆ ಭಂಗ ಬರದಂತೆ, ಸಂಧಿಗಾಗಿ ಪ್ರಯತ್ನವನ್ನು ಪಟ್ಟು ಅವನ ಚೇಷ್ಟೆಗಳನ್ನು ಗಮನಿಸುವೆನು.
ಕೌರವಾಣಾಂ ಪ್ರವೃತ್ತಿಂ ಚ ಗತ್ವಾ ಯುದ್ಧಾಧಿಕಾರಿಕಾಮ್ |
ನಿಶಾಮ್ಯ ವಿನಿವರ್ತಿಷ್ಯೇ ಜಯಾಯ ತವ ಭಾರತ ||39||
ಕೌರವರು ಯುದ್ಧಕ್ಕಾಗಿ ಮಾಡುತ್ತಿರುವ ಸಿದ್ಧತೆಗಳನ್ನು ನೋಡಿ ಎಲೈ ಭಾರತನೇ, ನಿನ್ನ ಜಯದ ಸಲುವಾಗಿ ಹಿಂದಿರುಗುವೆನು.
ಸರ್ವಥಾ ಯುದ್ಧಮೇವಾಹಮಾಶಂಸಾಮಿ ಪರೈಃ ಸಹ |
ನಿಮಿತ್ತಾನಿ ಹಿ ಸರ್ವಾಣಿ ತಥಾ ಪ್ರಾದುರ್ಭವಂತಿ ಮೇ ||40||
ಎಲ್ಲಾ ರೀತಿಯಿಂದಲೂ ನಾನು ಕೌರವರ ಜೊತೆಯಲ್ಲಿ ಯುದ್ಧವನ್ನೇ ಬಯಸುತ್ತೇನೆ. ಎಲ್ಲಾ ಸೂಚನೆಗಳೂ ಹಾಗೆಯೇ ತೋರುತ್ತಿವೆ.
ಮೃಗಾಃ ಶಕುಂತಾಶ್ಚ ವದಂತಿ ಘೋರಂ
ಹಸ್ತ್ಯಶ್ವಮುಖ್ಯೇಷು ನಿಶಾಮಯೇ ಚ |
ಘೋರಾಣಿ ರೂಪಾಣಿ ತಥೈವ ಚಾಗ್ನಿಃ
ವರ್ಣಾನ್ ಬಹೂನ್ ಪುಷ್ಯತಿ ಘೋರರೂಪಾನ್ ||41||
ಪಕ್ಷಿಗಳು ಮತ್ತು ಮೃಗಗಳು ಘೋರವಾಗಿ ಕಿರುಚುತ್ತಿವೆ. ಪ್ರಧಾನವಾದ ಗಜಗಳು ಮತ್ತು ಅಶ್ವಗಳು ರಾತ್ರಿಯ ಸಮಯದಲ್ಲಿ ಘೋರರೂಪವನ್ನು ತಾಳುತ್ತಿವೆ. ಅಗ್ನಿಯು ಭಯಂಕರವಾದ ವರ್ಣಗಳನ್ನು ತೋರಿಸುತ್ತಾ ಜ್ವಲಿಸುತ್ತಿದೆ.
ಮನುಷ್ಯಲೋಕಕ್ಷಯಕೃತ್ ಸುಘೋರೋ
ನೋ ಚೇದನುಪ್ರಾಪ್ತ ಇಹಾಂತಕಃ ಸ್ಯಾತ್ |
ಶಸತ್ರಣಿ ಯಂತ್ರಂ ಕವಚಾನ್ ರಥಾಂಶ್ಚ
ನಾಗಾನ್ ಧ್ವಜಾಂಶ್ಚ ಪ್ರತಿಪಾದಯಸ್ವ ||42||
ಮನುಷ್ಯಲೋಕಕ್ಕೆ ಕ್ಷಯವನ್ನುಂಟುಮಾಡುವ ಘೋರವಾದ ಸಮಯವು ಪ್ರಾಪ್ತವಾಗಿದೆ. ಇಲ್ಲದಿದ್ದರೆ ಹಂತಕನಾದ ಯಮನೇ ಇಲ್ಲಿಗೆ ಬರುತ್ತಿದ್ದಾನೆ. ನೀನು ಶಸ್ತ್ರಗಳನ್ನೂ, ಯಂತ್ರ, ಕವಚಗಳನ್ನೂ, ರಥಗಜಧ್ವಜಗಳನ್ನೂ ಸಿದ್ಧಪಡಿಸುವವನಾಗು.
ಯೋಧಾಶ್ಚ ಸರ್ವೇ ಕೃತನಿಶ್ಚಯಾಸ್ತೇ
ಭವಂತು ಹಸ್ತ್ಯಶ್ವರಥೇಷು ಯತ್ತಾಃ |
ಸಾಂಗ್ರಾಮಿಕಂ ತೇ ಯದುಪಾರ್ಜನೀಯಂ
ಸರ್ವಂ ಸಮಗ್ರಂ ಕುರು ತನ್ನರೇಂದ್ರ ||43||
ಎಲೈ ನರೇಂದ್ರನೇ, ನಿನ್ನ ಯೋಧರೆಲ್ಲರೂ ಯುದ್ಧವನ್ನು ನಿಶ್ಚಯಿಸಿದವರಾಗಿ ತಮ್ಮ ಅಶ್ವಗಜರಥಗಳಲ್ಲಿ ಸನ್ನದ್ಧರಾಗಿರಲಿ. ಯುದ್ಧದ ಸಲಕರಣೆಗಳನ್ನು ಏನನ್ನು ಸಂಪಾದಿಸಬೇಕೋ ಅವೆಲ್ಲವನ್ನೂ ಸಂಪಾದಿಸುವವನಾಗು.
ದುರ್ಯೋಧನೋ ನ ಹ್ಯಲಮದ್ಯ ದಾತುಂ
ಜೀವಂಸ್ತವೈತನ್ನೃಪತೇ ಕಥಂಚಿತ್ |
ಯತ್ ತೇ ಪುರಸ್ತಾದಭವತ್ ಸಮೃದ್ಧಂ
ದ್ಯೂತೇ ಹೃತಂ ಪಾಂಡವಮುಖ್ಯ ರಾಜ್ಯಮ್ ||44||
ಎಲೈ ರಾಜನೇ, ಎಲೈ ಪಾಂಡವಮುಖ್ಯನೇ, ಹಿಂದೆ ದ್ಯೂತದಲ್ಲಿ ಯಾವ ನಿನ್ನ ಸಮೃದ್ಧವಾದ ರಾಜ್ಯವನ್ನು ದುರ್ಯೋಧನನು

ಅಪಹರಿಸಿದನೋ ಅವನು ಬದುಕಿರುವವರೆಗೆ ಅದನ್ನು ಎಂದೂ ನಿನಗೆ ಕೊಡುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಾಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಇತ್ಯುಕ್ತೇ ವೈರಮಾತ್ಮೋತ್ಥಂ ಲೋಕಮಧ್ಯೇ ಪ್ರಹಾಪಯನ್ |
ಲೋಕಸಂಗ್ರಹಣಾರ್ಥಾಯ ಭೀಮಸೇನೋಽಬ್ರವೀದ್ ವಚಃ ॥50॥
ಶ್ರೀಕೃಷ್ಣ ಹೀಗೆ ಹೇಳಿದಾಗ, ಭೀಮ ತನ್ನಿಂದಾಗಿ ಯುದ್ಧವಾಯಿತೆಂಬ ಗ್ರಹಿಕೆ ಲೋಕಕ್ಕೆ ಆಗುವುದನ್ನು ತಪ್ಪಿಸಲು ಲೋಕರೀತಿಯನ್ನು ಅನುಸರಿಸುವುದಕ್ಕಾಗಿ ಈ ಒಂದು ಮಾತನ್ನು ಹೇಳಿದ.
ನಾಸ್ಮನ್ನಿಮಿತ್ತನಾಶಃ ಸ್ಯಾತ್ ಕುಲಸ್ಯಾಪಿ ವಯಂ ಕುಲಮ್ |
ರಕ್ಷಿತುಂ ಧಾರ್ತರಾಷ್ಟ್ರಸ್ಯ ಭವೇಮಾಧಶ್ಚರಾ ಇತಿ ॥51॥
`ನಮ್ಮ ನಿಮಿತ್ತವಾಗಿ ಕುಲನಾಶವಾಗುವುದು ಬೇಡ. ಕುಲರಕ್ಷಣೆಯ ಸಲುವಾಗಿ ನಾವು ದುರ್ಯೋಧನನ ಕೆಳಗೇ ಇರೋಣ'.
ಇಚ್ಛತಾಽಪ್ಯಖಿಲಾನ್ ಹಂತುಂ ಧಾರ್ತರಾಷ್ಟ್ರಾನ್ ದೃಢಾತ್ಮನಾ |
ಭೀಮೇನೋಕ್ತೋ ವಾಸುದೇವ ಲೋಕಸಂಗ್ರಹಣೇಚ್ಛಯಾ ॥52॥
ಭೀಮ ದೃಢಮನಸ್ಸಿನಿಂದ ಎಲ್ಲ ಕೌರವರನ್ನೂ ಕೊಲ್ಲಲು ಬಯಸಿಯೂ ಕೂಡ ಹೀಗೆ ಲೋಕರೀತಿಯನ್ನು ಅನುಸರಿಸುವ ಇಚ್ಛೆಯಿಂದ ಕೃಷ್ಣನಿಗೆ ಹೇಳಿದ.
* * * * *
ಎಪ್ಪತ್ಮೂರನೆಯ ಅಧ್ಯಾಯ
ದುರ್ಯೋಧನನ ದುರಾರಾಧ್ಯತ್ವವನ್ನು ಹೇಳಿ, ಭೀಮಸೇನನಿಂದ ಕೃಷ್ಣನನ್ನು
ಕುರಿತು ಹೇಗಾದರೂ ಸಂಧಿಯನ್ನು ಸಾಧಿಸುವಂತೆ ಪ್ರಾರ್ಥನೆ.
ಭೀಮಃ
ಯಥಾ ಯಥೈವ ಶಾಂತಿಃ ಸ್ಯಾತ್ ಕುರೂಣಾಂ ಮಧುಸೂದನ |
ತಥಾ ತಥೈವ ಭಾಷೇಥಾ ಮಾ ಸ್ಮ ಯುದ್ಧೇನ ಭೀಷಯೇಃ ॥1॥
ಭೀಮ ಎಲೈ ಮಧುಸೂದನನೇ, ಹೇಗೆ ಹೇಗೆ ಮಾತನಾಡಿದರೆ ಕುರುಗಳ ಜೊತೆಯಲ್ಲಿ ಶಾಂತಿಯು ಸಾಧ್ಯವಾಗುವುದೋ ಹಾಗೆಯೇ ಮಾತನಾಡುವವನಾಗು. ಯುದ್ಧದ ವಾರ್ತೆಯಿಂದ ಅವರನ್ನು ಹೆದರಿಸಬೇಡ.
ಅಮರ್ಷೀ ನಿತ್ಯಸಂರಬ್ಧಃ ಶ್ರೇಯೋದ್ವೇಷೀ ಮಹಾಮನಾಃ |
ನೋಗ್ರಂ ದುರ್ಯೋಧನೋ ವಾಚ್ಯಃ ಸಾಮ್ನೈವೈನಂ ಸಮಾಚರೇಃ ॥2॥
ದುರ್ಯೋಧನನು ರೋಷಕ್ಕೀಡಾದವನು. ಯಾವಾಗಲೂ ಕ್ರುದ್ಧನಾದವನು. ಒಳ್ಳೆಯದನ್ನು ದ್ವೇಷಿಸುವವನು. ಅಹಂಕಾರಿ. ಅವನ ಜೊತೆಯಲ್ಲಿ ಉಗ್ರವಾಗಿ ಮಾತನಾಡಬಾರದು. ಮೃದುವಾಗಿಯೇ ಅವನ ಜೊತೆಯಲ್ಲಿ ವ್ಯವಹರಿಸಬೇಕು.
ಪ್ರಕೃತ್ಯಾ ಪಾಪಸತ್ವಶ್ಚ ತುಲ್ಯಚೇತಾಶ್ಚ ದಸ್ಯುಭಿಃ |
ಐಶ್ವರ್ಯಮದಮತ್ತಶ್ಚ ಕೃತವೈರಶ್ಚ ಪಾಂಡವೈಃ ॥3॥
ಅವನು ಸ್ವಾಭಾವಿಕವಾಗಿಯೇ ಪಾಪಮನಸ್ಸುಳ್ಳವನು, ಕಳ್ಳರಿಗೆ ಸಮಾನವಾದ ಮನಃಸ್ಥಿತಿಯುಳ್ಳವನು, ಐಶ್ವರ್ಯಮದದಿಂದ ಮತ್ತನಾಗಿದ್ದಾನೆ ಮತ್ತು ಪಾಂಡವರ ಜೊತೆಯಲ್ಲಿ ದ್ವೇಷವನ್ನು ಮಾಡಿದ್ದಾನೆ.
ಅದೀರ್ಘದರ್ಶೀ ನಿಷ್ಠೂರೀ ಕ್ಷೇಪ್ತಾ ಕ್ರೂರಪರಾಕ್ರಮಃ |
ದೀರ್ಘಮನ್ಯುರನೇಯಶ್ಚ ಪಾಪಾತ್ಮಾ ನಿಕೃತಿಪ್ರಿಯಃ ॥4॥
ಅವನು ದೀರ್ಘದರ್ಶಿಯಲ್ಲದವನು, ನಿಷ್ಠುರಿಯಾದವನು, ಸರ್ವನಿಂದಕನಾದವನು, ಕ್ರೂರಪರಾಕ್ರಮವುಳ್ಳವನು, ದೀರ್ಘವೈರಿ, ಅವಿಧೇಯನಾದವನು, ಪಾಪಸ್ವರೂಪನಾದವನು ಮತ್ತು ಕಪಟಪ್ರಿಯನಾದವನು.
ಮ್ರಿಯೇತಾಪಿ ನ ಭಜ್ಯೇತ ನೈವ ಜಹ್ಯಾತ್ ಸ್ವಕಂ ಮತಮ್ |
ತಾದೃಶೇನ ಶಮಃ ಕೃಷ್ಣ ಮನ್ಯೇ ಪರಮದುಷ್ಕರಃ ॥5॥
ಅವನು ಮರಣವನ್ನು ಹೊಂದಿಯಾನು, ಆದರೆ ಬಗ್ಗಲಾರ. ತನ್ನ ಅಭಿಪ್ರಾಯವನ್ನು ಏನಾದರೂ ಬಿಡಲಾರ. ಎಲೈ ಕೃಷ್ಣನೇ, ಅಂತಹವನ ಜೊತೆಯಲ್ಲಿ ಸಂಧಿಯು ಬಹಳ ಅಸಾಧ್ಯವಾದುದು ಎಂದು ಭಾವಿಸುತ್ತೇನೆ.
ಸುಹೃದಾಮಪ್ಯವಾಚೀನಃ ತ್ಯಕ್ತಧರ್ಮಾ ಪ್ರಿಯಾನೃತಃ |
ಪ್ರತಿಹಂತ್ಯೇವ ಸುಹೃದಾಂ ವಾಚಶ್ಚೈವ ಮನಾಂಸಿ ಚ ॥6॥
ಅವನು ಸುಹೃಜ್ಜನರನ್ನೂ ತಿರಸ್ಕರಿಸುವವನು, ಧರ್ಮವನ್ನು ತ್ಯಜಿಸಿದವನು, ಅನೃತ ಪ್ರಿಯನಾದವನು, ಸುಹೃಜ್ಜನರ ಮಾತನ್ನೂ ಮತ್ತು ಮನಸ್ಸುಗಳನ್ನೂ ಹಾಳು ಮಾಡುವವನು.
ಸ ಮನ್ಯುವಶಮಾಪನ್ನಃ ಸ್ವಭಾವಂ ದುಷ್ಟಮಾಸ್ಥಿತಃ |
ಸ್ವಭಾವಾತ್ ಪಾಪಮಭ್ಯೇತಿ ತೃಣೈಶ್ಛನ್ನ ಇವೋರಗಃ ॥7॥
ಕ್ರೋಧಕ್ಕೆ ವಶನಾದ ಅವನು ದುಷ್ಟಸ್ವಭಾವವನ್ನು ಹೊಂದಿದ್ದಾನೆ. ಸ್ವಭಾವದಿಂದಲೇ ಪಾಪವನ್ನು ಮಾಡುವ ಅವನು ತೃಣಗಳಿಂದ

ಮುಚ್ಚಲ್ಪಟ್ಟ ಸರ್ಪದಂತಿದ್ದಾನೆ.
ದುರ್ಯೋಧನೋ ಹೃಷೀಕೇಶ ಸರ್ವಥಾ ವಿದಿತಸ್ತವ |
ಯಚ್ಛೀಲೋ ಯತ್ಸ್ವಭಾವಶ್ಚ ಯದ್ಬಲೋ ಯತ್ಪರಾಕ್ರಮಃ ॥8॥
ಎಲೈ ಹೃಷೀಕೇಶನೇ, ದುರ್ಯೋಧನನು ಎಂತಹ ಶೀಲವುಳ್ಳವನು, ಎಂತಹ ಸ್ವಭಾವದವನು, ಅವನ ಬಲವೇನು, ಅವನ ಪರಾಕ್ರಮವೇನು ಎಂಬುದನ್ನು ನೀನು ಸರ್ವಥಾ ತಿಳಿದಿದ್ದೀಯೆ.
ಪುರಾ ಪ್ರಸನ್ನಾಃ ಕುರವಃ ಸಹಪುತ್ರಾಸ್ತಥಾ ವಯಮ್ |
ಇಂದ್ರಜ್ಯೇಷ್ಠಾ ಇವಾಭೂಮ ಮೋದಮಾನಾಃ ಸಬಾಂಧವಾಃ ॥9॥
ಹಿಂದೆ ಮಕ್ಕಳಿಂದ ಸಹಿತರಾದ ಕೌರವರು ಮತ್ತು ನಾವು ಇಂದ್ರಜ್ಯೇಷ್ಠನಾದ ದೇವತೆಗಳಂತೆ ಬಂಧುಗಳ ಜೊತೆಯಲ್ಲಿ ಪ್ರಸನ್ನರಾಗಿ ಸಂತೋಷದಿಂದಿದ್ದೆವು.
ದುರ್ಯೋಧನಸ್ಯ ಕ್ರೋಧಸ್ತು ಭಾರತಾನ್ ಮಧುಸೂದನ |
ಧಕ್ಷ್ಯತೇ ಶಿಶಿರಾಪಾಯೇ ವನಾನೀವ ಹುತಾಶನಃ ॥10॥
ಎಲೈ ಮಧುಸೂದನನೇ, ಶಿಶಿರಋತು ಕಳೆದ ಮೇಲೆ ಅಗ್ನಿಯು ವನಗಳನ್ನು ಸುಡುವಂತೆ ದುರ್ಯೋಧನನ ಕೋಪವು ಭರತವಂಶದವರನ್ನು ಸುಡುವುದು.
ಅಷ್ಟಾದಶೇಮೇ ರಾಜಾನಃ ಪ್ರಖ್ಯಾತಾ ಮಧುಸೂದನ |
ಯೇ ಸಮುಚ್ಚಿಚ್ಛಿದುರ್ಜ್ಞಾತೀನ್ ಸುಹೃದಶ್ಚ ಸಬಾಂಧವಾನ್ ॥11॥
ಎಲೈ ಮಧುಸೂದನನೇ, ತಮ್ಮ ಸುಹೃಜ್ಜನರನ್ನೂ ಮತ್ತು ಜ್ಞಾತಿಗಳನ್ನೂ ಮತ್ತು ಬಾಂಧವರನ್ನೂ ನಾಶಮಾಡಿದ ಈ ಹದಿನೆಂಟು ರಾಜರು ಪ್ರಖ್ಯಾತರಾಗಿದ್ದಾರೆ.
ಅಸುರಾಣಾಂ ಸಮೃದ್ಧಾನಾಂ ಜ್ವಲತಾಮಿವ ತೇಜಸಾ |
ಪರ್ಯಾಯಕಾಲೇ ಧರ್ಮಸ್ಯ ಪ್ರಾಪ್ತೇ ಕಲಿರಜಾಯತ ॥12॥
ಸಮೃದ್ಧರಾಗಿ ತೇಜಸ್ಸಿನಿಂದ ಬೆಳಗುವ ಅಸುರರಿಗೆ ಧರ್ಮಚಕ್ರವು ತಿರುಗಿದಂತೆ ಪರಸ್ಪರ ವಿರೋಧವುಂಟಾಯಿತು.
ಹೇಹಯಾನಾಮುದಾವರ್ತೋ ನೀಪಾನಾಂ ಜನಮೇಜಯಃ |
ಬಹುಲಸ್ತಾಲಜಂಘಾನಾಂ ಕೃಮೀಣಾಮುದ್ಧತೋ ವಸುಃ ॥13॥
ಹೇಹಯದೇಶದ ಉದಾವರ್ತ, ನೀಪದೇಶದ ಜನಮೇಜಯ, ತಾಲಜಂಘದ ಬಹುಲ, ಕೃಮಿಗಳ ಉದ್ಧತನಾದ ವಸು;
ಅಜಬಿಂದುಃ ಸುವೀರಾಣಾಂ ಸುರಾಷ್ಟ್ರಾಣಾಂ ಕುಶರ್ದ್ಧಿಕಃ |
ಅರ್ಕಜಶ್ಚ ಬಲೀಹಾನಾಂ ಚೀನಾನಾಂ ಧೌತಮೂಲಕಃ ॥14॥
ಸುವೀರರ ಅಜಬಿಂದು, ಸುರಾಷ್ಟ್ರದ ಕುಶರ್ದ್ಧಿಕ, ಬಲೀಹದ ಅರ್ಕಜ, ಚೀನರ ಧೌತಮೂಲಕ;
ಹಯಗ್ರೀವೋ ವಿದೇಹಾನಾಂ ವರಯುಶ್ಚ ಮಹೌಜಸಾಮ್ |
ಬಾಹುಃ ಸುಂದರವೇಗಾನಾಂ ದೀಪ್ತಾಕ್ಷಾಣಾಂ ಪುರೂರವಾಃ ॥15॥
ವಿದೇಹರ ಹಯಗ್ರೀವ, ಮಹೌಜಸರ ವರಯು, ಸುಂದರವೇಗರ ಬಾಹು, ದೀಪ್ತಾಕ್ಷರ ಪುರೂರವ;
ಸಹಜಶ್ಚೇದಿಮತ್ಸ್ಯಾನಾಂ ಪ್ರವೀರಾಣಾಂ ವೃಷಧ್ವಜಃ |
ಧಾರಣಶ್ಚೇಂದ್ರವತ್ಸಾನಾಂ ಕರಂಧಾನಾಂ ವಿಗಾಹನಃ ॥16॥
ಚೇದಿ-ಮತ್ಸ್ಯರ ಸಹಜ, ಪ್ರವೀರರ ವೃಷಧ್ವಜ, ಇಂದ್ರವತ್ಸರ ಧಾರಣ, ಕರಂಧರ ವಿಗಾಹನ;
ಶಮಶ್ಚ ನಂದಿವೇಗಾನಾಮಿತ್ಯೇತೇ ಕುಲಪಾಂಸನಾಃ |
ಯುಗಾಂತೇ ಕೃಷ್ಣ ಸಂಭೂತಾಃ ಕುಲೇಷು ಪುರುಷಾಧಮಾಃ ॥17॥
ನಂದಿವೇಗರ ಶಮ- ಇವರು (ಈ ಹದಿನೇಳು ರಾಜರು) ಕುಲನಾಶಕರಾದವರು. ಕೃಷ್ಣನೇ, ಯುಗಾಂತದಲ್ಲಿ ತಮ್ಮ ತಮ್ಮ ಕುಲದ ನಾಶಕ್ಕಾಗಿ ಜನಿಸಿದ ಪುರುಷಾಧಮರು.
ಅಪ್ಯಯಂ ನಃ ಕುರೂಣಾಂ ಸ್ಯಾದ್ ಯುಗಾಂತೇ ಕಾಲಸಂಭೃತಃ |
ದುರ್ಯೋಧನಃ ಕುಲಾಂಗಾರೋ ಜಘನ್ಯಃ ಪಾಪಪೂರುಷಃ ॥18॥
ಯುಗಾಂತದಲ್ಲಿ ಕಾಲವಶನಾಗಿ ಜನಿಸಿದ ಕುಲಾಂಗಾರನಾದ ಈ ಹದಿನೆಂಟು ರಾಜರಲ್ಲಿ ಕೊನೆಯವನಾದ ಪಾಪಪುರುಷನಾದ ಈ ದುರ್ಯೋಧನನು ಕುರುಗಳಾದ ನಮ್ಮ ವಿನಾಶವನ್ನು ಮಾಡುವನೆಂದು ತೋರುತ್ತದೆ.
ತಸ್ಮಾನ್ಮೃದು ಶನೈರ್ಬ್ರೂಯಾ ಧರ್ಮಾರ್ಥಸಹಿತಂ ಹಿತಮ್ |
ಕಾಮಾನುಬಂಧಬಹುಲಂ ನೋಗ್ರಮುಗ್ರಪರಾಕ್ರಮ ॥19॥
ಎಲೈ ಉಗ್ರಪರಾಕ್ರಮವುಳ್ಳ ಕೃಷ್ಣನೇ, ಆದ್ದರಿಂದ ನಿಧಾನವಾಗಿ ಮೃದುವಾಗಿ ಅವನಿಗೆ ಹಿತವಾದ ಧರ್ಮಾರ್ಥಸಹಿತವಾದ, ಅವನ ಇಷ್ಟವನ್ನು ಪೂರೈಸುವಂತಹ ಮಾತುಗಳನ್ನು ಆಡು. ಉಗ್ರವಾದ ಮಾತುಗಳನ್ನು ಆಡಬೇಡ.
ಅಪಿ ದುರ್ಯೋಧನಂ ಕೃಷ್ಣ ಸರ್ವೇ ವಯಮಧಶ್ಚರಾಃ |
ನೀಚೈರ್ಭೂತ್ವಾಽನುಯಾಸ್ಯಾಮೋ ಮಾ ಸ್ಮ ನೋ ಭರತಾ ನಶನ್ ॥
ಎಲೈ ಕೃಷ್ಣನೇ, ನಾವೆಲ್ಲರೂ ದುರ್ಯೋಧನನ ಕೆಳಗೆ ಸಂಚರಿಸುವವರಾಗಿ ಕೆಳಭಾಗದಲ್ಲಿದ್ದು ಜೀವಿಸುತ್ತೇವೆ. ನಮ್ಮ ಭರತರು ನಾಶ ಹೊಂದದಿರಲಿ (ಇದು ಭೀಮಸೇನನ ಅರ್ಥಗರ್ಭಿತವಾದ ಮಾತು. ಅಧಶ್ಚರಾ ಎಂದರೆ ಸೇವಕರೆಂದು ಅರ್ಥವಲ್ಲ. ಅಧಶ್ಚರಾ ಎಂಬುದಕ್ಕೂ ನೀಚೈರ್ಭೂತ್ವಾನುಯಸ್ಯಾಮ ಎಂಬುದಕ್ಕೂ ಕೆಳಗೆ ಸಂಚರಿಸುತ್ತೇವೆ ಎಂದು ಅರ್ಥ. ದುರ್ಯೋಧನನು ಪಾಂಡವರಿಗಿಂತ ಮೊದಲೇ ಮರಣವನ್ನು ಹೊಂದುವುದರಿಂದ ಸ್ವಲ್ಪಕಾಲ ಅವನು ಸಾಂಕಲ್ಪಿಕ ಸ್ವರ್ಗದಲ್ಲಿ ಇರುತ್ತಾನೆ. ಆಗ ಇನ್ನೂ

ಭೂಮಿಯ ಮೇಲೆ ವಾಸಮಾಡುವ ಪಾಂಡವರು ಅವನಿಗಿಂತ ಕೆಳಗೆ ಸಂಚರಿಸುತ್ತಾರೆ ಸಂಚರಿಸುತ್ತೇವೆ ಎಂದು ಇಷ್ಟೇ ಅರ್ಥ ವಾದಿರಾಜರು).
ಅಪ್ಯುದಾಸೀನವೃತ್ತಿಃ ಸ್ಯಾದ್ ಯಥಾ ನಃ ಕುರುಭಿಃ ಸಹ |
ವಾಸುದೇವ ತಥಾ ಕಾರ್ಯಂ ನ ಕುರೂನನಯಃ ಸ್ಪೃಶೇತ್ ॥21॥
ಎಲೈ ವಾಸುದೇವನೇ, ಕುರುಗಳಿಗೆ ಪರಸ್ಪರ ದ್ವೇಷವಿಲ್ಲದಂತೆ, ಪರಸ್ಪರ ಔದಾಸೀನ್ಯವಿದ್ದರೂ ಒಳ್ಳೆಯದು. ಅದರಂತೆ ಮಾಡಬೇಕು. ಕುರುಗಳಿಗೆ ಅನ್ಯಾಯವಾಗದಿರಲಿ.
ವಾಚ್ಯಃ ಪಿತಾಮಹೋ ವೃದ್ಧೋ ಯೇ ಚ ಕೃಷ್ಣ ಸಭಾಸದಃ |
ಭ್ರಾತೄಣಾಮಸ್ತು ಸೌಭ್ರಾತ್ರಂ ಧಾರ್ತರಾಷ್ಟ್ರಃ ಪ್ರಶಾಮ್ಯತಾಮ್ ॥22॥
ಎಲೈ ಕೃಷ್ಣನೇ, ಪಿತಾಮಹರಾದ ಭೀಷ್ಮರಿಗೂ ಮತ್ತು ಸಭಾಸದರಿಗೂ ಅಣ್ಣ-ತಮ್ಮಂದಿರಿಗೂ ಸ್ನೇಹವಿರಲಿ. ದುರ್ಯೋಧನನು ಶಾಂತಿಯನ್ನು ಹೊಂದಿ ಸಂಧಿಯನ್ನು ಮಾಡಿಕೊಳ್ಳುವವನಾಗಲಿ ಎಂದು ಹೇಳಬೇಕು.
ಅಹಮೇತದ್ ಬ್ರವೀಮ್ಯೇವಂ ರಾಜಾ ಚೈವಂ ಪ್ರಶಾಮ್ಯತಿ |
ಅರ್ಜುನೋ ನೈವ ಯುದ್ಧಾರ್ಥೀ ಭೂಯಸೀ ಹಿ ದಯಾಽರ್ಜುನೇ ॥
ನಾನು ಹೀಗೆ ಶಾಂತಿಯನ್ನು ಹೇಳುತ್ತಿದ್ದೇನೆ. ಯುಧಿಷ್ಠಿರನೂ ಸಹ ಹೀಗೆ ಶಾಂತಿಯನ್ನು ಬಯಸುತ್ತಾನೆ. ಅರ್ಜುನನೂ ಯುದ್ಧವನ್ನು ಬಯಸುವುದಿಲ್ಲ. ಏಕೆಂದರೆ ಅವನು ಬಹಳ ದಯಾಶೀಲನಾದವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ನಾಲ್ಕನೆಯ ಅಧ್ಯಾಯ
ಭೀಮಸೇನನನ್ನು ಕುರಿತು ಕೃಷ್ಣನ ಯುದ್ಧಪ್ರೋತ್ಸಾಹವಚನ.
ವೈಶಂಪಾಯನಃ
ಸ ತಚ್ಛ್ರುತ್ವಾ ಮಹಾಬಾಹುಃ ಕೇಶವಃ ಪ್ರಹಸನ್ನಿವ |
ಅಭೂತಪೂರ್ವಂ ಭೀಮಸ್ಯ ಮಾರ್ದವೋಪಹಿತಂ ವಚಃ ॥1॥
ಗಿರೇರಿವ ಲಘುತ್ವಂ ತತ್ ಶೀತತ್ವಮಿವ ಪಾವಕೇ |
ಮತ್ವಾ ರಾಮಾನುಜಃ ಶೌರಿಃ ಶಾರ್ಙ್ಗಧನ್ವಾ ವೃಕೋದರಮ್ ॥2॥
ಸಂತೇಜಯಂಸ್ತದಾ ವಾಗ್ಭಿರ್ಮಾತರಿಶ್ವೇವ ಪಾವಕಮ್ |
ಉವಾಚ ಭೀಮಮಾಸೀನಂ ಕೃಪಯಾಽಭಿಪರಿಪ್ಲುತಮ್ ॥3॥
ವೈಶಂಪಾಯನ ಮಹಾಬಾಹುವಾದ, ಬಲರಾಮನ ತಮ್ಮನಾದ, ಶಾರ್ಙ್ಗ ಧನುರ್ಧಾರಿಯಾದ ಶೌರಿಯಾದ ಕೃಷ್ಣನು ನಗುವವನಂತೆ ಪರ್ವತವು ಹಗುವಾದಂತಿರುವ, ಅಗ್ನಿಯು ಶೀತವಾದಂತಿರುವ ಭೀಮಸೇನನ ಮೃದುವಾದ ಮಾತುಗಳನ್ನು ಕೇಳಿ, ಕೃಪೆಯಿಂದ ತುಂಬಿ ಕುಳಿತಿದ್ದ ಭೀಮಸೇನನನ್ನು ಕುರಿತು ವಾಯುವು ಅಗ್ನಿಯನ್ನು ಉದ್ದೀಪನಗೊಳಿಸಿದಂತೆ ಅವನನ್ನು ಹುರಿದುಂಬಿಸುತ್ತಾ ಮಾತನಾಡಿದನು.
ತ್ವಮನ್ಯದಾ ಭೀಮಸೇನ ಯುದ್ಧಮೇವ ಪ್ರಶಂಸಸಿ |
ವಧಾಭಿನಂದನಃ ಕ್ರೂರಾನ್ ಧಾರ್ತರಾಷ್ಟ್ರಾನ್ ಮಿಮರ್ದಿಷುಃ ॥4॥
ಎಲೈ ಭೀಮಸೇನನನೇ, ನೀನು ಬೇರೆಯ ಕಾಲದಲ್ಲಿ ಕ್ರೂರರಾದ ದುರ್ಯೋಧನಾದಿಗಳನ್ನು ಮರ್ದನ ಮಾಡಲು ಬಯಸಿ ವಧೆಯನ್ನು ಅಭಿನಂದಿಸುತ್ತಾ ಯುದ್ಧವನ್ನೇ ಪ್ರಶಂಸಿಸುತ್ತೀಯೆ.
ನ ಚ ಸ್ವಪಿಷಿ ಜಾಗರ್ಷಿ ಕ್ರುದ್ಧಃ ಶೇಷೇ ಪರಂತಪ |
ಘೋರಾಮಶಾಂತಾಂ ರುಶತೀಂ ಸದಾ ವಾಚಾ ಪ್ರಭಾಷಸೇ ॥5॥
ಎಲೈ ಪರಂತಪನೇ, ನೀನು ರಾತ್ರಿಯಲ್ಲಿ ನಿದ್ರೆಯನ್ನು ಮಾಡುವುದಿಲ್ಲ. ಎಚ್ಚರವಾಗಿರುತ್ತೀಯೆ. ಕೋಪದಿಂದ ಮಲಗುತ್ತೀಯೆ. ಘೋರವಾದ, ಅಶಾಂತವಾದ, ಶತ್ರುದಾಹಕವಾದ ಮಾತುಗಳನ್ನೇ ಯಾವಾಗಲೂ ಆಡುತ್ತೀಯೆ.
ವಿನಿಃಶ್ವಸನ್ನಗ್ನಿವರ್ಣಃ ಸಂತಪ್ತಃ ಸ್ವೇನ ತೇಜಸಾ |
ಅಪ್ರಶಾಂತಮನಾ ಭೀಮ ಸಧೂಮ ಇವ ಪಾವಕಃ ॥6॥
ಏಕಾಂತೇ ನಿಃಶ್ವಸನ್ ಶೇಷೇ ಭಾರಾರ್ತ ಇವ ದುರ್ಬಲಃ |
ಅಪಿ ತ್ವಾಂ ಕೇಚಿದುನ್ಮತ್ತಂ ಮನ್ಯಂತೇಽತದ್ವಿದೋ ಜನಾಃ ॥7॥
ನಿನ್ನ ತೇಜಸ್ಸಿನಿಂದಲೇ ಸಂತಪ್ತನಾಗಿ ಅಗ್ನಿಯ ವರ್ಣವನ್ನು ಹೊಂದಿ ಉಸಿರನ್ನು ಬಿಡುತ್ತಾ, ಸಮಾಧಾನಗೊಳ್ಳದ ಮನಸ್ಸಿನಿಂದ ಕೂಡಿದವನಾಗಿ ಎಲೈ ಭೀಮನೇ, ಧೂಮದಿಂದ ಕೂಡಿದ ಅಗ್ನಿಯಂತೆ ಇರುತ್ತೀಯೆ. ನೀನು ದುರ್ಬಲನು, ಭಾರವನ್ನು ಹೊತ್ತು ಬಳಲಿದಂತೆ ಏಕಾಂತದಲ್ಲಿ ನಿಟ್ಟುಸಿರು ಬಿಡುತ್ತಾ ಮಲಗಿರುತ್ತೀಯೆ. ನಿನ್ನ ಸ್ವರೂಪವನ್ನು ತಿಳಿಯದ ಜನರು ನಿನ್ನನ್ನು ಉನ್ಮತ್ತನೆಂದು ಭಾವಿಸುತ್ತಾರೆ.
ಆರುಜ್ಯ ವೃಕ್ಷಾನ್ ನಿರ್ಮೂಲಾನ್ ಗಜಃ ಪರಿಭವನ್ನಿವ |
ನಿಘ್ನನ್ ಪದ್ಭಿಃ ಕ್ಷಿತಿಂ ಭೀಮ ನಿಷ್ಟನನ್ ಪ್ರತಿಧಾವಸಿ ॥8॥
ಎಲೈ ಭೀಮನೇ, ವೃಕ್ಷಗಳನ್ನು ಬೇರುಸಹಿತವಾಗಿ ಕಿತ್ತು ಅವುಗಳನ್ನು ನಾಶಮಾಡುವ ಗಜದಂತೆ ನೀನು ಭೂಮಿಯನ್ನು ಕಾಲಿನಿಂದ

ಒದೆಯುತ್ತಾ ಗರ್ಜಿಸುತ್ತಾ ಓಡಾಡುತ್ತೀಯೆ.
ನಾಸ್ಮಿನ್ ಜನೇ ಹಿ ರಮಸೇ ರಹಃ ಕ್ಷಿಪಸಿ ಪಾಂಡವ |
ನಾಶ್ನನ್ ನಿಶಿ ದಿವಾ ಚಾಪಿ ಕದಾಚಿದಭಿನಂದಸಿ ॥9॥
ಎಲೈ ಪಾಂಡವನೇ, ನಿನ್ನ ಸುತ್ತಲೂ ಇರುವ ಜನರ ಜೊತೆಯಲ್ಲಿ ನೀನು ಸಂತೋಷ ಪಡುವುದಿಲ್ಲ. ಏಕಾಂತದಲ್ಲಿ (ದುರ್ಯೋಧನಾದಿಗಳನ್ನು) ನಿಂದಿಸುತ್ತೀಯೆ. ಹಗಲೂ ರಾತ್ರಿಯೂ ಸರಿಯಾಗಿ ಭೋಜನವನ್ನು ಮಾಡದೆ ಯಾವಾಗಲೂ ಹರ್ಷರಹಿತನಾಗಿರುತ್ತೀಯೆ.
ಅಸ್ವಸ್ಥೋಽಸ್ಮಯಮಾನಶ್ಚ ರಹಸ್ಯಾಸ್ಸೇ ರುದನ್ನಿವ |
ಜಾನ್ವೋರ್ಮೂರ್ಧಾನಮಾಧಾಯ ಚಿರಮಾಸ್ಸೇ ಪ್ರಮೀಲಿತಃ ॥10॥
ಅಸ್ವಸ್ಥನಾಗಿ ನಗದೇ ಏಕಾಂತದಲ್ಲಿ ಕೊಲ್ಲುವವನಂತೆ ಇರುತ್ತೀಯೆ. ಮಂಡಿಗಳ ಮೇಲೆ ಮುಖವನ್ನು ಇಟ್ಟುಕೊಂಡು ಕಣ್ಣುಗಳನ್ನು ಮುಚ್ಚಿ ಬಹಳ ಕಾಲ ಕುಳಿತಿರುತ್ತೀಯೆ.
ಭ್ರುಕುಟಿಂ ಚ ಪುನಃ ಕುರ್ವನ್ನೋಷ್ಠೌ ಚ ವಿಲಿಹನ್ನಿವ |
ಅಭೀಕ್ಷ್ಣಂ ದೃಶ್ಯಸೇ ಭೀಮ ಸರ್ವಂ ತನ್ಮನ್ಯುಕಾರಿತಮ್ ॥11॥
ಎಲೈ ಭೀಮನೇ, ಪುನಃ ಹುಬ್ಬುಗಳನ್ನು ಗಂಟುಕಟ್ಟಿ, ತುಟಿಗಳನ್ನು ಸತತವಾಗಿ ಸವರಿಕೊಳ್ಳುವುದು ಕಂಡುಬರುತ್ತದೆ. ಎಲೈ ಭೀಮನೇ, ಇವೆಲ್ಲವೂ ಕೋಪದ ಚಿಹ್ನೆಗಳು.
ಯಥಾ ಪುರಸ್ತಾತ್ ಸವಿತಾ ದೃಶ್ಯತೇ ಶುಕ್ರಮುಚ್ಚರನ್ |
ಯಥಾ ಚ ಪಶ್ಚಾನ್ನಿರ್ಮುಕ್ತೋ ಧ್ರುವಂ ಪರ್ಯೇತಿ ರಶ್ಮಿಮಾನ್ ॥12॥
ತಥಾ ಸತ್ಯಂ ಬ್ರವೀಮ್ಯೇತನ್ನಾಸ್ತಿ ತಸ್ಯ ವ್ಯತಿಕ್ರಮಃ |
ಹಂತಾಽಹಂ ಗದಯಾಽಭ್ಯೇತ್ಯ ದುರ್ಯೋಧನಮಮರ್ಷಣಮ್ ॥13॥
ಹೇಗೆ ಸೂರ್ಯನು ಉದಯಿಸುವುದಕ್ಕಿಂತ ಮೊದಲು ಪೂರ್ವದಲ್ಲಿ ಸ್ವಲ್ಪ ಬೆಳಕನ್ನು ಕೊಟ್ಟು ಅನಂತರ ರಾತ್ರಿನಿರ್ಮುಕ್ತನಾಗಿ ಕಿರಣಗಳಿಂದ ಕೂಡಿ ಮೇಲೆ ಬರುವುದು ಸತ್ಯವೋ ಮತ್ತು ಆ ಮಾತಿಗೆ ಹೇಗೆ ವ್ಯತ್ಯಾಸವಿಲ್ಲವೋ ಅದರಂತೆ ನನ್ನ ಮಾತೂ ಸತ್ಯ. ಅದಕ್ಕೆ ವ್ಯತ್ಯಾಸವಿಲ್ಲ. ನಾನು ರೋಷಣಶೀಲನಾದ ದುರ್ಯೋಧನನನ್ನು ಸಮೀಪಿಸಿ ಗದೆಯಿಂದ ಅವನನ್ನು ಕೊಲ್ಲುವೆನು.
ಇತಿ ಸ್ಮ ಮಧ್ಯೇ ಭ್ರಾತೄಣಾಂ ಸತ್ಯೇನಾಲಭಸೇ ಗದಾಮ್ |
ತಸ್ಯ ತೇ ಪ್ರಶಮೇ ಬುದ್ಧಿಃ ಧೀಯತೇಽತ್ರ ಪರಂತಪ ॥14॥
ಹೀಗೆ ಸಹೋದರರ ಮಧ್ಯದಲ್ಲಿ ಮಾತನಾಡಿ, ಗದೆಯನ್ನು ಹಿಡಿದು ಶಪಥ ಮಾಡುತ್ತೀಯೆ. ಎಲೈ ಪರಂತಪನೇ, ಅಂತಹ ನಿನಗೆ ಈ ದಿನ ಶಾಂತಿಯಲ್ಲಿ (ಸಂಧಿಯಲ್ಲಿ) ಬುದ್ಧಿಯುಂಟಾಗಿದೆ!
ಅಹೋ ಯುದ್ಧಾಭಿಕಾಂಕ್ಷಾಣಾಂ ಯುದ್ಧಕಾಲ ಉಪಸ್ಥಿತೇ |
ಚೇತಾಂಸಿ ವಿಪ್ರತೀಪಾನಿ ಯತ್ ತ್ವಾಂ ಭೀರಭಿವಿಂದತಿ ॥15॥
ಏನು ಆಶ್ಚರ್ಯ! ಯುದ್ಧವನ್ನು ಬಯಸುವವರಿಗೆ ಯುದ್ಧಕಾಲವು ಪ್ರಾಪ್ತವಾದಾಗ ಮನಸ್ಸು ವ್ಯತ್ಯಾಸಗೊಳ್ಳುತ್ತದೆ. ಏಕೆಂದರೆ ನಿನ್ನನ್ನೂ ಭಯವು ಆವರಿಸಿದೆ.
ಅಹೋ ಪಾರ್ಥ ನಿಮಿತ್ತಾನಿ ವಿಪರೀತಾನಿ ಪಶ್ಯಸಿ |
ಸ್ವಪ್ನಾಂತೇ ಜಾಗರಾಂತೇ ಚ ತಸ್ಮಾತ್ ಪ್ರಶಮಮಿಚ್ಛಸಿ ॥16॥
ಎಲೈ ಭೀಮಸೇನನೇ, ಇದು ಆಶ್ಚರ್ಯಕರವಾದುದು. ಸ್ವಪ್ನದಲ್ಲಿಯೂ, ಜಾಗ್ರತಕಾಲದಲ್ಲಿಯೂ ನೀನು ವಿಪರೀತವಾದ ಶಕುನಗಳನ್ನು ನೋಡುತ್ತಿದ್ದೀಯೆ. ಆದ್ದರಿಂದ ಶಾಂತಿಯನ್ನು ಬಯಸುತ್ತಿದ್ದೀಯೆ.
ಅಹೋ ನಾಶಂಸಸೇ ಕಿಂಚಿತ್ ಪುಂಸ್ತ್ವಂ ಕ್ಲೀಬ ಇವಾತ್ಮನಿ |
ಕಶ್ಮಲೇನಾಭಿಪನ್ನೋಽಸಿ ತೇನ ತೇ ವಿಕೃತಂ ಮನಃ ॥17॥
ಇದು ಆಶ್ಚರ್ಯ. ನಪುಂಸಕನಂತೆ ನೀನು ಪೌರುಷವನ್ನೇ ಬಯಸುತ್ತಿಲ್ಲ. ವಿಷಾದದಿಂದ ಕೂಡಿದ್ದೀಯೆ. ಆದ್ದರಿಂದ ನಿನ್ನ ಮನಸ್ಸು ವಿಕಾರವನ್ನು ಹೊಂದಿದೆ.
ತದ್ ವೇಪತೇ ತೇ ಹೃದಯಂ ಮನಸ್ತೇ ಪ್ರವಿಷೀದತಿ |
ಊರುಸ್ತಂಭಗೃಹೀತೋಽಸಿ ತಸ್ಮಾತ್ ಪ್ರಶಮಮಿಚ್ಛಸಿ ॥18॥
ಆದ್ದರಿಂದ ನಿನ್ನ ಹೃದಯವು ನಡುಗುತ್ತಿದೆ. ನಿನ್ನ ಮನಸ್ಸು ಉಡುಗಿಹೋಗುತ್ತಿದೆ. ತೊಡೆಗಳು ಸ್ತಂಭಿತವಾಗಿವೆ. ಆದ್ದರಿಂದ ಶಾಂತಿಯನ್ನು ಬಯಸುತ್ತಿದ್ದೀಯೆ.
ಅನಿತ್ಯಂ ಕಿಲ ಮರ್ತ್ಯಸ್ಯ ಪಾರ್ಥ ಚಿತ್ತಂ ಚಲಾಚಲಮ್ |
ವಾಗವೇಗಪ್ರಚಲಿತಾ ಅಷ್ಠೀಲಾ ಶಾಲ್ಮಲೇರಿವ ॥19॥
ಎಲೈ ಪಾರ್ಥನೇ, ಮನುಷ್ಯನ ಚಿತ್ತವು ಅನಿತ್ಯವಾದುದು ಮತ್ತು ಬಹಳ ಚಂಚಲವಾದುದು. ಅದು ಬಿರುಗಾಳಿಯ ವೇಗಕ್ಕೆ ಸಿಕ್ಕಿದ ಬೂರಗದ ಮರದ ದೊಡ್ಡಕೊಂಬೆಯಂತೆ ಚಂಚಲವಾಗಿದೆ.
ತವೈಷಾ ವಿಕೃತಾ ಬುದ್ಧಿರ್ಗವಾಂ ವಾಗಿವ ಮಾನುಷೀ |
ಮನಾಂಸಿ ಪಾಂಡುಪುತ್ರಾಣಾಮಂಜಯಸ್ಯಸ್ರುವಾನಿವ ॥20॥
ಗೋವು ಮನುಷ್ಯನ ವಾಣಿಯಲ್ಲಿ ಮಾತನಾಡುವುದು ಎಷ್ಟು ಆಶ್ಚರ್ಯಕರವೋ ಅದರಂತೆ ನಿನ್ನ ಬುದ್ಧಿಯ ವಿಕಾರವು ಆಶ್ಚರ್ಯವಾಗಿ ಪಾಂಡುಪುತ್ರರ ಮನಸ್ಸನ್ನು ಬಾಲಕನ ಕಣ್ಣೀರು ಅಂಜನವನ್ನು ಹರಡಿದಂತೆ ವಿಷಾದಕ್ಕೆ ಕೆಡವುತ್ತಿದೆ.
ಇದಂ ಮೇ ಮಹದಾಶ್ಚರ್ಯಂ ಪರ್ವತಸ್ಯೇವ ಸರ್ಪಣಮ್ |

ಯದೀದೃಶಂ ಪ್ರಭಾಷೇಥಾ ಭೀಮಸೇನಾಸಮಂ ತವ ॥21॥
ಭೀಮಸೇನನನೇ, ನಿನಗೆ ಅನನುಗುಣವಾಗಿ ಹೀಗೆ ಏನನ್ನು ಮಾತನಾಡುತ್ತಿದ್ದೀಯೋ ಅದು ಪರ್ವತದ ಚಲನೆಯಂತೆ ನನಗೆ ಬಹಳ ಆಶ್ಚರ್ಯಕರವಾಗಿದೆ.
ಸ ದೃಷ್ಟ್ವಾ ಸ್ವಾನಿ ಕರ್ಮಾಣಿ ಕುಲೇ ಜನ್ಮ ಚ ಭಾರತ |
ಉತ್ತಿಷ್ಠಸ್ವ ವಿಷಾದಂ ಮಾ ಕೃಥಾ ವೀರ ಸ್ಥಿರೋ ಭವ ॥22॥
ಎಲೈ ಭಾರತನೇ, ನೀನು ಹಿಂದೆ ಮಾಡಿದ ಕರ್ಮಗಳನ್ನೂ, ಶ್ರೇಷ್ಠವಾದ ಕುಲದಲ್ಲಿ ಜನ್ಮವನ್ನೂ ಸ್ಮರಿಸಿ ಎದ್ದೇಳು. ವಿಷಾದವನ್ನು ಮಾಡಬೇಡ. ವೀರನೇ ಸ್ಥಿರವಾಗಿರು.
ನ ಚೈತದನುರೂಪಂ ತೇ ತೇಷು ಶಾಂತಿರರಿಂದಮ |
ಯದೋಜಸಾ ನ ಲಭತೇ ಕ್ಷತ್ರಿಯೋ ನ ತದಶ್ನುತೇ ॥23॥
ಎಲೈ ಅರಿಂದಮನೇ, ಕೌರವರಲ್ಲಿ ಶಾಂತಿಯು ನಿನಗೆ ಅನುಗುಣವಾದುದಲ್ಲ. ಕ್ಷತ್ರಿಯನು ಯಾವುದನ್ನು ಪರಾಕ್ರಮದಿಂದ ಸಂಪಾದಿಸುವುದಿಲ್ಲವೋ ಅದನ್ನು ಎಂದೂ ಹೊಂದುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ವಧಂ ತೇಷಾಂ ಧರ್ಮಮೇವ ಲೋಕೇ ಖ್ಯಾಪಯಿತುಂ ಹರಿಃ |
ಆಕ್ಷಿಪನ್ನಿವ ಭೀಮಂ ತಂ ಯುದ್ಧಾಯ ಪ್ರೇರಯದ್ ದೃಢಮ್ ॥53॥
ಕೌರವರ ವಧೆ ಧರ್ಮವೆಂದು ಲೋಕಕ್ಕೆ ತಿಳಿಸುವುದಕ್ಕಾಗಿ ಕೃಷ್ಣ ಭೀಮನನ್ನು ಆಕ್ಷೇಪಿಸುವವನಂತೆ ಯುದ್ಧಕ್ಕೆ ದೃಢವಾಗಿ ಪ್ರೇರಿಸಿದ.
ಅಭಿಪ್ರಾಯಂ ಕೇಶವಸ್ಯ ಜಾನನ್ ಭೀಮೋ ನಿಜಂ ಬಲಮ್ |
ರಾಜ್ಞಾಂ ಮಧ್ಯೇಽವದತ್ ತಚ್ಚ ಕೃಷ್ಣೋಽಭ್ಯಧಿಕಮೇವ ಹಿ ॥54॥
ಆಗ ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದ ಭೀಮ ರಾಜರೆಲ್ಲರ ನಡುವೆ ತನ್ನ ಬಲವನ್ನು ಹೇಳಿಕೊಂಡ. ಕೃಷ್ಣ `ಅದು ಅಷ್ಟೇ ಅಲ್ಲ, ಇನ್ನೂ ಹೆಚ್ಚೇ ಇದೆ' ಎಂದ.
* * * * *
ಎಪ್ಪತ್ತೈದನೆಯ ಅಧ್ಯಾಯ
ಕೃಷ್ಣನ ಗೂಢವಾದ ಮಾತುಗಳಿಗೆ ಉತ್ತರವನ್ನು ಹೇಳಿ,
ಭೀಮಸೇನನಿಂದ ತನ್ನ ಸಾಮರ್ಥ್ಯದ ಕಥನ.
ವೈಶಂಪಾಯನಃ
ತಥೋಕ್ತೇ ವಾಸುದೇವೇನ ನಿತ್ಯಮನ್ಯುರಮರ್ಷಣಃ |
ಸದಶ್ವವತ್ ಸಮಾಧಾಯ ಬಭಾಷೇ ತದನಂತರಮ್ ॥1॥
ವೈಶಂಪಾಯನ- ವಾಸುದೇವನು ಹಾಗೆ ಹೇಳುತ್ತಿರಲು ನಿತ್ಯವೂ ಕ್ರುದ್ಧನೂ ಮತ್ತು ಕೋಪಸ್ವಭಾವದವನೂ ಆದ ಭೀಮಸೇನನು ಒಳ್ಳೆಯ ಕುದುರೆಯಂತೆ ಸಮಾಧಾನವನ್ನು ತಂದುಕೊಂಡು ಅನಂತರ ಮಾತನಾಡಿದನು.
ಭೀಮ
ಅನ್ಯಥಾ ಮಾಂ ಚಿಕೀರ್ಷಂತಮನ್ಯಥಾ ಮನ್ಯಸೇಽಚ್ಯುತ |
ಪ್ರಣೀತಭಾವಮತ್ಯರ್ಥಂ ಯುಧಿ ಸತ್ಯಪರಾಕ್ರಮಮ್ ॥2॥
ಭೀಮ ಎಲೈ ಅಚ್ಯುತನೇ, ಸತ್ಯವಾದ ಪರಾಕ್ರಮವುಳ್ಳವನಾಗಿ, ಯುದ್ಧದಲ್ಲಿ ಅತ್ಯಂತ ಆಸಕ್ತನಾಗಿ ಬೇರೆ ರೀತಿಯಲ್ಲೇ ಮಾಡಲು ಯೋಚಿಸುತ್ತಿರುವ ನನ್ನನ್ನು ನೀನು ಬೇರೆ ರೀತಿಯಲ್ಲಿ ತಿಳಿಯುತ್ತಿದ್ದೀಯೆ.
ವೇತ್ಸಿ ದಾಶಾರ್ಹ ಸತ್ತ್ವಂ ಮೇ ದೀರ್ಘಕಾಲಂ ಸಹೋಷಿತಃ |
ಉತ ವಾ ಮಾಂ ನ ಜಾನಾಸಿ ಪ್ಲವದ್‌ಹ್ರದಮಿವಾಪ್ಲವಮ್ ॥3॥
ತಸ್ಮಾದನಭಿರೂಪಾಭಿರ್ವಾಗ್ಭಿರ್ಮಾಂ ತ್ವಂ ಸಮಾರ್ಚ್ಛಸಿ ॥4॥
ಕಥಂ ಹಿ ಭೀಮಸೇನಂ ಮಾಂ ಜಾನನ್ ಕಶ್ಚನ ಮಾಧವ |
ಬ್ರೂಯಾದಪ್ರತಿರೂಪಾಣಿ ಯಥಾ ಮಾಂ ವಕ್ತುಮರ್ಹಸಿ ॥5॥
ಎಲೈ ದಾಶಾರ್ಹನೇ, ಬಹುಕಾಲ ನನ್ನ ಜೊತೆಯಲ್ಲಿ ವಾಸ ಮಾಡಿ, ನನ್ನ ಬಲವನ್ನು ತಿಳಿದಿದ್ದೀಯೆ. ಅಥವಾ ಮಡುವಿನಿಂದ ನೌಕಾನಿರಪೇಕ್ಷವಾಗಿ ಹರಿದುಹೋಗುವ ನೀರಿನಂತೆ ನನ್ನನ್ನು ತಿಳಿದಿಲ್ಲವೇ? ಆದ್ದರಿಂದ ನನಗೆ ಅನನುಗುಣವಾದ ಮಾತುಗಳನ್ನು ಆಡಿ ನನ್ನನ್ನು ಹಿಂಸಿಸುತ್ತಿದ್ದೀಯೆ. ಎಲೈ ಮಾಧವನೇ, ಭೀಮಸೇನನಾದ ನನ್ನನ್ನು ತಿಳಿದ ಯಾವನು ತಾನೇ ನೀನು ಮಾತನಾಡಿದಂತೆ ನನಗೆ ಅನುರೂಪವಲ್ಲದ ಮಾತುಗಳನ್ನು ಆಡಲು ಸಾಧ್ಯ? (ಲಕ್ಷ್ಯಾಲಂಕಾರ).
ತಸ್ಮಾದಿದಂ ಪ್ರವಕ್ಷ್ಯಾಮಿ ವಚನಂ ವೃಷ್ಣಿನಂದನ |
ಆತ್ಮನಃ ಪೌರುಷಂ ಚೈವ ಬಲಂ ಚ ನ ಸಮಂ ಪರೈಃ ॥6॥
ಎಲೈ ವೃಷ್ಣಿನಂದನನೇ, ಆದ್ದರಿಂದ ಈ ಮಾತನ್ನು ಆಡುತ್ತಿದ್ದೇನೆ. ಪರರ ಬಲ-ಪೌರುಷಗಳು ನನ್ನ ಬಲ-ಪೌರುಷಗಳಿಗೆ ಎಂದೂ

ಸಮವಲ್ಲ. (ನನ್ನ ಬಲ-ಪೌರುಷಗಳು ಅತ್ಯಧಿಕವಾದುವು).
ಸರ್ವಥಾಽನಾರ್ಯಕರ್ಮೈತತ್ ಪ್ರಶಂಸಾ ಸ್ವಯಮಾತ್ಮನಃ |
ಅತಿವಾದಾಪವಿದ್ಧಸ್ತು ವಕ್ಷ್ಯಾಮಿ ಬಲಮಾತ್ಮನಃ ||7||
ತನ್ನನ್ನೇ ತಾನು ಹೊಗಳಿಕೊಳ್ಳುವುದು ಸರ್ವಥಾ ಅಸಜ್ಜನರು ಮಾಡುವ ಕಾರ್ಯ. ಆದರೆ ನಿಂದೆಗೆ ಗುರಿಯಾಗಿರುವುದರಿಂದ ನನ್ನ ಬಲವನ್ನು ನಾನು ಹೇಳಿಕೊಳ್ಳುವೆನು.
ಪಶ್ಯೇಮೇ ರೋದಸೀ ಕೃಷ್ಣ ಯಯೋರಾಸನ್ನಿಮಾಃ ಪ್ರಜಾಃ |
ಅಚಲೇ ಚಾಪ್ರತಿಷ್ಠೇ ಚಾಪ್ಯನಂತೇ ಸರ್ವಮಾತರೌ ||8||
ಕೃಷ್ಣನೇ, ಈ ಭೂಲೋಕ ಮತ್ತು ಸ್ವರ್ಗಲೋಕಗಳನ್ನು ನೋಡು, ಇವು ಅಚಲವಾದವು, ಅನಂತವಾದವು, ಎಲ್ಲರಿಗೂ ಆಶ್ರಯವಾಗಿ ಎಲ್ಲ ಪ್ರಜೆಗಳಿಗೂ ತಾಯಿಯರೆಂದು ಹೇಳಲ್ಪಡುವಂಥವುಗಳು.
ಯದಿ ಮೇ ಸಹಸಾಽಽಕೃಷ್ಟೇ ಸಮೇ ಯಾತಾಂ ಶಿಲೇ ಇವ |
ಅಹಮೇತೇ ನಿಗೃಹ್ಣೀಯಾಂ ಬಾಹುಭ್ಯಾಂ ಸಚರಾಚರೇ ||9||
ನಾನು ದೂರದಲ್ಲಿರುವ ಇವುಗಳನ್ನು, ಅವುಗಳಲ್ಲಿರುವ ಚರಾಚರ ಪ್ರಾಣಿಗಳ ಜೊತೆಯಲ್ಲಿ ನನ್ನ ಬಾಹುಬಲದಿಂದ ಎಳೆದು, ಅವುಗಳನ್ನು ಒಟ್ಟಿಗೆ ತಂದು ಶಿಲೆಯಂತೆ ಗಟ್ಟಿಯಾಗಿ ಮಾಡಬಲ್ಲೆ (ಲಕ್ಷ್ಯಾಲಂಕಾರ).
ಪಶ್ಯೈತದಂತರಂ ಬಾಹ್ವೋರ್ಮಹಾಪರಿಘಯೋರಿವ |
ಯ ಏತೌ ಪ್ರಾಪ್ಯ ಮುಚ್ಯೇತ ನ ತಂ ಪಶ್ಯಾಮಿ ಪೂರುಷಮ್ ||10||
ಹಿಮವಾಂಶ್ಚ ಸಮುದ್ರಶ್ಚ ವಜ್ರೀ ವಾ ಬಲಭಿತ್ ಸ್ವಯಮ್ |
ಮಯಾಽಭಿಪನ್ನಂ ತ್ರಾಯೇರನ್ ಬಲಮಾಸ್ಥಾಯ ನ ತ್ರಯಃ ||11||
ಎಲೈ ಕೃಷ್ಣನೇ, ಕಬ್ಬಿಣದ ಒನಕೆಗಳಂತಿರುವ ನನ್ನ ಬಾಹುಗಳ ಮಧ್ಯಭಾಗವನ್ನು ನೋಡು. ಇಲ್ಲಿ ಸಿಲುಕಿದ ಯಾವ ಪುರುಷನೂ ನನ್ನಿಂದ ಬಿಡಿಸಿಕೊಳ್ಳಲಾರ. ಹಿಮಾಲಯ ಪರ್ವತ, ಸಮುದ್ರ ಮತ್ತು ಬಲಸೂದನನಾದ ವಜ್ರಹಸ್ತನಾದ ಇಂದ್ರ ಈ ಮೂವರು ಸೇರಿದರೂ ಸಹ ತಮ್ಮ ಬಲದಿಂದ ನನ್ನ ಕೈಗೆ ಸಿಲುಕಿದವನನ್ನು ರಕ್ಷಿಸಲಾರರು.
ಯುದ್ಧಾರ್ಹಾನ್ ಕ್ಷತ್ರಿಯಾನ್ ಸರ್ವಾನ್ ಪಾಂಡವೇಷ್ವಾತತಾಯಿನಃ |
ಅಧಃ ಪಾದತಳೇನೈತಾನ್ ಅಧಿಷ್ಠಾಸ್ಯಾಮಿ ಭೂತಳೇ ||12||
ಪಾಂಡವರಿಗೆ ದ್ರೋಹವನ್ನು ಮಾಡಿದ, ಯುದ್ಧಕ್ಕೆ ಅರ್ಹರಾದ ಎಲ್ಲ ಕ್ಷತ್ರಿಯರನ್ನೂ ಭೂತಳದಲ್ಲಿ ಹಾಕಿ, ಅವರನ್ನು ನನ್ನ ಪಾದತಳದಿಂದ ಮೆಟ್ಟಿ ನಿಲ್ಲುತ್ತೇನೆ.
ನ ಹಿ ತ್ವಂ ನಾಭಿಜಾನಾಸಿ ಮಮ ವಿಕ್ರಮಮಚ್ಯುತ |
ಯಥಾ ಮಯಾ ವಿನಿರ್ಜಿತ್ಯ ರಾಜಾನೋ ವಶಗಾಃ ಕೃತಾಃ ||13||
ಎಲೈ ಅಚ್ಯುತನೇ, ನಾನು ಹಿಂದೆ ಹೇಗೆ ರಾಜರನ್ನು ಗೆದ್ದು, ಅವರನ್ನು ವಶಪಡಿಸಿಕೊಂಡ ನನ್ನ ಪರಾಕ್ರಮವನ್ನು ನೀನು ತಿಳಿಯದೆ ಇಲ್ಲ.
ಅಥ ಚೇನ್ಮಾಂ ನ ಜಾನಾಸಿ ಯಥಾ ಸೂರ್ಯಮಿವೋದಿತಮ್ |
ವಿಗಾಢೇ ಯುಧಿ ಸಂಬಾಧೇ ವೇತ್ಸ್ಯಸೇ ಮಾಂ ಜನಾರ್ದನ ||14||
ಎಲೈ ಜನಾರ್ದನನೇ, ಒಂದುಪಕ್ಷ ಉದಿಸಿದ ಸೂರ್ಯನಂತಿರುವ ನನ್ನನ್ನು ನೀನು ತಿಳಿಯದಿದ್ದರೆ ಗಾಢವಾದ ಯುದ್ಧದಲ್ಲಿ ಶತ್ರುಗಳ ಜೊತೆಯಲ್ಲಿ ಹೋರಾಟ ಉಂಟಾದಾಗ ನನ್ನ ಸಾಮರ್ಥ್ಯವನ್ನು ತಿಳಿಯುವಿ.
ಕಿಂ ಮಾಽತ್ಯಧಾಕ್ಷೀಃ ಪರುಷೈಃ ವ್ರಣಂ ಸೂಚ್ಯೇವ ಚಾನಘ |
ಯಥಾಮತಿ ಬ್ರವೀಮ್ಯೇತದ್ ವಿದ್ಧಿ ಮಾಮಧಿಕಂ ತತಃ ||15||
ಎಲೈ ಅನಘನೇ, ಗಾಯವನ್ನು ಸೂಜಿಯಿಂದ ಚುಚ್ಚಿದಂತೆ ಏಕೆ ನನ್ನನ್ನು ಉಗ್ರವಾದ ಮಾತುಗಳಿಂದ ದಹಿಸುತ್ತಿದ್ದೀಯೆ? ನಾನು ನನ್ನ ಸಾಮರ್ಥ್ಯವನ್ನು ನನ್ನ ಬುದ್ಧಿಗೆ ತೋರಿದಂತೆ ಅಲ್ಪವಾಗಿಯೇ ಹೇಳಿದ್ದೇನೆ. ನನ್ನನ್ನು ಅದಕ್ಕಿಂತಲೂ ಅಧಿಕ ಸಾಮರ್ಥ್ಯವುಳ್ಳವನೆಂದು ತಿಳಿ.
ದ್ರಷ್ಟಾಸಿ ಯುಧಿ ಸಂಬಾಧೇ ಪ್ರವೃತ್ತೇ ವೈಶಸೇಽಹನಿ |
ಮಯಾ ಪ್ರಣುನ್ನಾನ್ ಮಾತಂಗಾನ್ ರಥಿನಃ ಸಾದಿನಸ್ತಥಾ ||16||
ಯುದ್ಧವು ಪ್ರವೃತ್ತವಾಗಿ ಹಿಂಸೆಯ ದಿನಗಳು ಪ್ರಾಪ್ತವಾದಾಗ ಆ ಸಂಘರ್ಷದಲ್ಲಿ ನನ್ನಿಂದ ಕೊಲ್ಲಲ್ಪಡುವ ಗಜಗಳನ್ನೂ, ರಥಿಕರನ್ನೂ ಮತ್ತು ಅಶ್ವಾರೋಹಿಗಳನ್ನೂ ನೀನು ನೋಡುವಿ.
ತಥಾಽಂತಕಮಿವ ಕ್ರುದ್ಧಂ ನಿಘ್ನಂತಂ ಕ್ಷತ್ರಿಯರ್ಷಭಾನ್ |
ದ್ರಷ್ಟಾ ಮಾ ತ್ವಂ ಚ ಲೋಕಶ್ಚ ನಿಕರ್ಷಂತಂ ಪರಾನ್ ವರಾನ್ ||17||
ಕೋಪಗೊಂಡ ಯಮನಂತೆ ಕ್ಷತ್ರಿಯ ಶ್ರೇಷ್ಠರನ್ನು ಕೊಲ್ಲುತ್ತಾ, ಶತ್ರುಗಳ ಸೈನ್ಯದಲ್ಲಿ ಶ್ರೇಷ್ಠರಾದವರನ್ನು ಆರಿಸಿ, ಎಳೆದಾಡಿ ಕೊಲ್ಲುವ ನನ್ನನ್ನು ನೀನೂ ಮತ್ತು ಸರ್ವಲೋಕವೂ ನೋಡುವುದು.
ನ ಮೇ ಸೀದಂತಿ ಗಾತ್ರಾಣಿ ನ ಚ ಮೇ ವೇಪತೇ ಮನಃ |
ಸರ್ವಲೋಕಾದಭಿಕ್ರುದ್ಧಾನ್ನ ಭಯಂ ವಿದ್ಯತೇ ಮಮ ||18||
ನನ್ನ ಶರೀರವು ಕುಸಿಯುತ್ತಿಲ್ಲ. ನನ್ನ ಮನಸ್ಸು ನಡುಗುತ್ತಿಲ್ಲ. ಎಲ್ಲ ಲೋಕವೂ ಕೋಪಗೊಂಡು ನನ್ನ ಎದುರಿಗೆ ನಿಂತರೂ ನನಗೆ ಭಯವಿಲ್ಲ.
ಕಿಂತು ಸೌಹೃದಮೇವೈತತ್ ಕೃಪಯಾ ಮಧುಸೂದನ |

ಸರ್ವಾನ್ ತಿತಿಕ್ಷೇ ಸಂಕ್ಲೇಶಾನ್ ಮಾ ಸ್ಮ ನೋ ಭರತಾ ನಶನ್ ॥19॥
ಎಲೈ ಮಧುಸೂದನನೇ, ಆದರೆ ಬಂಧುಗಳ ಮೇಲಿನ ಪ್ರೀತಿ ಮತ್ತು ದಯೆಯಿಂದ ಈ ಮಾತುಗಳನ್ನು ಹೇಳುತ್ತಿದ್ದೇನೆ. ನಮ್ಮ ಭರತರಿಗೆ ನಾಶವುಂಟಾಗದಿರಲಿ ಎಂದು ನಾನು ಒದಗಿದ ಎಲ್ಲಾ ಕ್ಲೇಶಗಳನ್ನೂ ಸಹಿಸುತ್ತಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಶಶಂಸ ಸತ್ಯೈಃ ಸದ್ವಾಕ್ಯೈ ರಾಜ್ಞಾಂ ಮಧ್ಯೇ ಪ್ರಕಾಶಯನ್ |
ವಧಂ ಕುರೂಣಾಂ ಸದ್ಧರ್ಮಂ ಗುಣಾನ್ ಭೀಮಸ್ಯ ಚಾಮಿತಾನ್ ॥
ಭೀಮನ ಗುಣಗಳು ಅಪರಿಮಿತವೆಂಬುದನ್ನೂ ಕೌರವರ ವಧೆ ಉತ್ತಮ ಧರ್ಮವೆಂಬುದನ್ನೂ ಪ್ರಕಟಗೊಳಿಸುತ್ತ ಶ್ರೀಕೃಷ್ಣನು ರಾಜರ ನಡುವೆ ಸತ್ಯವಾದ ನಿರ್ದುಷ್ಟವಾದ ಮಾತುಗಳಿಂದ ಭೀಮನನ್ನು ಪ್ರಶಂಸೆ ಮಾಡಿದ.
ನಿತ್ಯಮೇಕಮನಸ್ಕೌ ತಾವಪಿ ಕೇಶವಮಾರುತೀ |
ಶ್ರೀಕೃಷ್ಣ-ಭೀಮರು ಎಂದಿಗೂ ಒಂದೇ ಅಭಿಪ್ರಾಯ ಉಳ್ಳವರು.
* * * * *
ಎಪ್ಪತ್ತಾರನೆಯ ಅಧ್ಯಾಯ
ಕೃಷ್ಣನಿಂದ ಭೀಮಸೇನನ ಮಾತುಗಳ ಅನುಮೋದನೆ
ಶ್ರೀಭಗವಾನ್
ಭಾವಂ ಜಿಜ್ಞಾಸಮಾನೋಽಹಂ ಪ್ರಣಯಾದಿದಮಬ್ರುವಮ್ |
ನ ಚಾಕ್ಷೇಪಾನ್ನ ಪಾಂಡಿತ್ಯಾನ್ನ ಕ್ರೋಧಾನ್ನ ವಿವಕ್ಷಯಾ ॥1॥
ಶ್ರೀಭಗವಾನ್ ನಿನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಳ್ಳಲು ನಾನು ಪ್ರೀತಿಯಿಂದ ಈ ಮಾತುಗಳನ್ನು ಆಡಿದೆ. ನಿನ್ನನ್ನು ಆಕ್ಷೇಪ ಮಾಡುವುದಕ್ಕಾಗಲೀ, ನಿಂದಿಸುವುದಕ್ಕಾಗಲೀ ಅಥವಾ ನನ್ನ ಪಾಂಡಿತ್ಯದಿಂದಾಗಲೀ, ಕ್ರೋಧದಿಂದಾಗಲೀ ಮಾತನಾಡಲಿಲ್ಲ.

ವೇದಾಹಂ ತವ ಮಾಹಾತ್ಮ್ಯಮುತ ತೇ ವೇದ ಯದ್ ಬಲಮ್ |
ಉತ ತೇ ವೇದ ಕರ್ಮಾಣಿ ನ ತ್ವಾಂ ಪರಿಭವಾಮ್ಯಹಮ್ ॥2॥
ನಾನು ನಿನ್ನ ಮಹಿಮೆಯನ್ನೂ, ನಿನ್ನ ಸಾಮರ್ಥ್ಯವನ್ನೂ ತಿಳಿದಿದ್ದೇನೆ. ನೀನು ಮಾಡಿದ ಕರ್ಮಗಳನ್ನೂ ತಿಳಿದಿದ್ದೇನೆ. ನಿನಗೆ ಅವಮಾನವನ್ನು ಮಾಡುವುದಿಲ್ಲ.
ಯತ್ ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ |
ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥3॥
ಎಲೈ ಪಾಂಡುಪುತ್ರನಾದ ಭೀಮಸೇನನನೇ, ನೀನು ನಿನ್ನಲ್ಲಿ ಎಷ್ಟು ಕಲ್ಯಾಣಗುಣಗಳು ಇವೆ ಎಂದು ಭಾವಿಸುತ್ತೀಯೋ ಅದಕ್ಕಿಂತ ಸಹಸ್ರಪಟ್ಟು ಹೆಚ್ಚಾಗಿ ಆ ಗುಣಗಳು ಇವೆ ಎಂದು ನಾನು ಭಾವಿಸುತ್ತೇನೆ.
ಯಾದೃಶೇ ಚ ಕುಲೇ ಜನ್ಮ ಸರ್ವರಾಜಾಭಿಪೂಜಿತೇ |
ಬಂಧುಭಿಶ್ಚ ಸುಹೃದ್ಭಿಶ್ಚ ಭೀಮ ತ್ವಮಸಿ ತಾದೃಶಃ ॥4॥
ಎಲೈ ಭೀಮನೇ, ಎಲ್ಲ ರಾಜರಿಂದಲೂ, ಬಂಧುಗಳಿಂದಲೂ, ಸುಹೃಜ್ಜನರಿಂದಲೂ ಪೂಜಿತವಾದ ಎಂತಹ ಕುಲದಲ್ಲಿ ನೀನು ಅವತರಿಸಿದ್ದೀಯೋ ಅಂತಹ ಕುಲಕ್ಕೆ ಅನುರೂಪನಾಗಿದ್ದೀಯೆ.
ಕಿಂತು ಪರ್ಯಾಯಧರ್ಮಸ್ಯ ಸಂದಿಗ್ಧಸ್ಯ ವೃಕೋದರ |
ಪರ್ಯಾಯಂ ನ ವ್ಯವಸ್ಯಂತಿ ದೇವಮಾನುಷಯೋರ್ಜನಾಃ ॥5॥
ಆದರೆ ವೃಕೋದರನೇ, ಕಾಲಕ್ರಮದಲ್ಲಿ ಧರ್ಮವು ಸಂದಿಗ್ಧವಾದಾಗ ದೇವ-ಮನುಷ್ಯರ ಜಾತಿಗೆ ಸೇರಿದ ಜೀವರು ಯಾವುದನ್ನು ಮಾಡಬೇಕು ಮತ್ತು ಯಾವುದನ್ನು ಬಿಡಬೇಕು ಎಂದು ನಿಶ್ಚಯಿಸಲಾರರು.
ಉದಿತೇಜುಹೋತಿ, ಅನುದಿತೇಜುಹೋತಿ ಸೂರ್ಯೋದಯವಾದ ಮೇಲೆ ಹೋಮ ಮಾಡಬೇಕು, ಸೂರ್ಯೋದಯಕ್ಕಿಂತ ಮೊದಲೇ ಹೋಮ ಮಾಡಬೇಕು ಮುಂತಾದ ಪ್ರಾತಃಕಾಲಾದಿಗಳಲ್ಲಿ ಪ್ರಾಪ್ತವಾಗುವ ಕರ್ಮವು ಹೇಗೆ ಸಾಧಾರಣ ಜನರಿಗೆ ಸಂಶಯವನ್ನುಂಟುಮಾಡುತ್ತದೆಯೋ ಅದರಂತೆ ಕಾಲಕ್ರಮದಲ್ಲಿ ಯುದ್ಧವು ಪ್ರಾಪ್ತವಾದಾಗ ಯುದ್ಧವನ್ನು ಮಾಡಬೇಕೇ ಅಥವಾ ಬಿಡಬೇಕೇ ಎಂಬ ಸಂಶಯವು ಉಂಟಾಗುತ್ತದೆ. ಸಜ್ಜನರ ಜೊತೆಯಲ್ಲಿ ಸಂಧಿಯನ್ನೇ ಮಾಡಿಕೊಳ್ಳಬೇಕು, ದುರ್ಜನರ ಜೊತೆಯಲ್ಲಿ ಯುದ್ಧವನ್ನೇ ಮಾಡಬೇಕು ಎಂಬ ನಿಶ್ಚಯವು ಉಂಟಾಗುವುದು ಕಷ್ಟಕರವಾದುದು ವಾದಿರಾಜರು.
ಯ ಏವ ಹೇತುರ್ಭೂತ್ವಾ ಹಿ ಪುರುಷಸ್ಯಾರ್ಥಸಿದ್ಧಿಷು |
ವಿನಾಶೇಽಪಿ ಸ ಏವಾಸ್ಯ ಸಂದಿಗ್ಧಂ ಕರ್ಮ ಪೌರುಷಮ್ ॥6॥
ಮನುಷ್ಯನ ಅರ್ಥಸಿದ್ಧಿಗೆ ಯಾವುದು ಕಾರಣವಾಗುತ್ತದೆಯೋ ಅದೇ ಅವನ ವಿನಾಶಕ್ಕೂ ಕಾರಣವಾಗುತ್ತದೆ. ಆದ್ದರಿಂದ ಪುರುಷನ ಕರ್ಮ ಅಥವಾ ಶೌರ್ಯವು ಸಿದ್ಧಿಯ ವಿಷಯದಲ್ಲಿ ಸಂದಿಗ್ಧವಾದುದು.
ಅನ್ಯಥಾ ಪರಿದೃಷ್ಟಾನಿ ಕವಿಭಿರ್ದೋಷದರ್ಶಿಭಿಃ |

ಅನ್ಯಥಾ ಪರಿವರ್ತಂತೇ ವೇಗಾ ಇವ ನಭಸ್ವತಃ ॥7॥
ದೋಷದರ್ಶಿಗಳಾದ ಜ್ಞಾನಿಗಳು ಒಂದು ಕರ್ಮವು ಈ ರೀತಿಯಲ್ಲೇ ಆಗುತ್ತದೆ ಎಂದು ನಿಶ್ಚಯಿಸಿದರೆ ಬೀಸುವ ವಾಯುವು ತನ್ನ ವೇಗವನ್ನೂ ಮತ್ತು ದಿಕ್ಕನ್ನೂ ಬದಲಿಸಿದಂತೆ ಅದು ಬೇರೆ ರೀತಿಯಾಗಿಯೇ ಪರಿಣಾಮವನ್ನು ಹೊಂದುತ್ತದೆ.
ಸುಮಂತ್ರಿತಂ ಸುಗೀತಂ ಚ ನ್ಯಾಯತಶ್ಚೋಪಪಾದಿತಮ್ |
ಯತ್ಕೃತಂ ಮಾನುಷಂ ಕರ್ಮ ದೈವೇನಾಪಿ ವಿರುದ್ಧ್ಯತೇ ॥8॥
ಬಹಳ ಆಲೋಚಿಸಿ, ಹಿಂದಿನವರು ಹೊಗಳಿದ ಕರ್ಮಗಳನ್ನು ಮನುಷ್ಯನು ನ್ಯಾಯದಿಂದ ಮಾಡಿದರೂ ದೈವಸಂಕಲ್ಪವಿಲ್ಲದಿದ್ದರೆ ಅದು ಅವನಿಗೆ ವಿರುದ್ಧವಾಗುತ್ತದೆ.
ಕಾಡಿನಲ್ಲಿದ್ದ ಹುಲಿಗಳನ್ನು ತಂದು ಅವುಗಳನ್ನು ಪಳಗಿಸಿ ಆಟವಾಡಿಸಿದರೂ ದೈವ ಪ್ರೇರಣೆಯಿಂದ ಒಂದು ದಿನ ಅವು ಅವನ ಮೇಲೆ ಎರಗಿ ಸಂಹಾರ ಮಾಡುತ್ತವೆ.
ತಥಾ ದೈವಕೃತಂ ಕರ್ಮ ಪೌರುಷೇಣ ವಿಹನ್ಯತೇ |
ಶೀತಮುಷ್ಣಂ ತಥಾ ವರ್ಷಂ ಕ್ಷುತ್ಪಿಪಾಸೇ ಚ ಭಾರತ ॥9॥
ಎಲೈ ಭಾರತನೇ, ಅದರಂತೆಯೇ ದೇವತೆಗಳು ಉಂಟುಮಾಡಿದ ಅನಾವೃಷ್ಟಿ- ಅತಿವೃಷ್ಟಿ, ಶೀತ-ಉಷ್ಣ, ಹಸಿವು-ನೀರಡಿಕೆ ಮನುಷ್ಯನಿಂದ ಪರಿಹರಿಸಲ್ಪಡುತ್ತವೆ.
ಅನಾವೃಷ್ಟ್ಯಾದಿಗಳು ಹಸಿವು-ನೀರಡಿಕೆಗಳು ಮೊದಲಾದವುಗಳು ದೈವಸಂಕಲ್ಪದಿಂದ ಉಂಟಾದಾಗ ಪುರುಷನು ತನ್ನ ಪ್ರಯತ್ನದಿಂದ ಅದನ್ನು ಪರಿಹರಿಸಿಕೊಳ್ಳುತ್ತಾನೆ. ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಎಲ್ಲಿ ದೈವಸಂಕಲ್ಪ ಮತ್ತು ಪುರುಷಪ್ರಯತ್ನಗಳು ವಿರುದ್ಧವಾಗಿರುತ್ತವೆಯೋ ಅಲ್ಲೆಲ್ಲಾ ಹೀಗೆ ನಡೆಯುತ್ತದೆ ವಾದಿರಾಜರು.
ಯದನ್ಯದ್ ದಿಷ್ಟಭಾವಸ್ಯ ಪುರುಷಸ್ಯ ಸ್ವಯಂ ಕೃತಮ್ |
ತಸ್ಮಾದನುಪರೋಧಶ್ಚ ಭಿದ್ಯತೇ ತತ್ರ ಲಕ್ಷಣಮ್ ॥10॥
ಪುರುಷನು ದೈವಸಂಕಲ್ಪಕ್ಕೆ ವಿರುದ್ಧವಾಗಿ, ಇವುಗಳಿಂದ ನನಗೆ ಅನುಕೂಲವಾಗುತ್ತದೆಂದು ತಿಳಿದು ಯಾವುದನ್ನು ಸೇವಿಸುತ್ತಾನೆಯೋ ಅಲ್ಲಿ ಆ ವಸ್ತುಗಳಿಂದ ಅವನು ಅಪೇಕ್ಷಿಸಿದ ಫಲವು ಉಂಟಾಗುವುದಿಲ್ಲ. (ಸುಖವನ್ನು ಪಡೆಯಬೇಕಾದ ವಸ್ತುವೇ ದೈವಸಂಕಲ್ಪದಿಂದ ದುಃಖವನ್ನು ಕೊಡುತ್ತದೆ ಎಂದು ಅಭಿಪ್ರಾಯ).
ಲೋಕಸ್ಯ ನಾನ್ಯತೋ ವೃತ್ತಿಃ ಪಾಂಡವಾನ್ಯತ್ರ ಕರ್ಮಣಃ |
ಏವಂಬುದ್ಧಿಃ ಪ್ರವರ್ತೇತ ಫಲಂ ಸ್ಯಾದುಭಯಾನ್ವಯಾತ್ ॥11॥
ಎಲೈ ಪಾಂಡವನೇ, ಲೋಕಕ್ಕೆ ದೈವದಿಂದ ಸಂಕಲ್ಪಿತವಾದ ಕರ್ಮವನ್ನು ಬಿಟ್ಟು ಬೇರೆಯ ಪ್ರವೃತ್ತಿ ಇಲ್ಲ. ಹೀಗೆ ತಿಳಿದುಕೊಂಡು ಮನುಷ್ಯನು ಪ್ರಯತ್ನವನ್ನು ಮಾಡಬೇಕು. ದೈವಸಂಕಲ್ಪ ಮತ್ತು ಮನುಷ್ಯಪ್ರಯತ್ನ ಎರಡೂ ಪರಸ್ಪರ ಅನುಕೂಲವಾಗಿದ್ದರೆ ಆಗ ಫಲವು ಉಂಟಾಗುತ್ತದೆ.
ಯ ಏವಂ ಕೃತಬುದ್ಧಿಃ ಸನ್ ಕರ್ಮಸ್ವೇವ ಪ್ರವರ್ತತೇ |
ನಾಸಿದ್ಧೌ ವ್ಯಥತೇ ಕಿಂಚಿತ್ ನ ಸಿದ್ಧೌ ಹರ್ಷಮಶ್ನುತೇ ॥12॥
ಯಾವನು ಇಂತಹ ಪರೀಕ್ಷಿತ ಬುದ್ಧಿಯುಳ್ಳವನಾಗಿ ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆಯೋ ಅವನು ಕರ್ಮದ ಫಲವು ಸಿದ್ಧಿಸದಿದ್ದರೆ ವ್ಯಥೆಯನ್ನೂ ಪಡುವುದಿಲ್ಲ, ಫಲವು ಸಿದ್ಧಿಸಿದರೆ ಸಂತೋಷವನ್ನೂ ಪಡುವುದಿಲ್ಲ.
ಯತ್ರೇಯಮರ್ಥಮಾತ್ರಾ ತೇ ಭೀಮಸೇನ ವಿವಕ್ಷಯಾ |
ನೈಕಾಂತಸಿದ್ಧಿರ್ವಕ್ತವ್ಯಾ ಶತ್ರುಭಿಃ ಸಹ ಸಂಯುಗೇ ॥13॥
ಎಲೈ ಭೀಮಸೇನನೇ, ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ನಿಯಮೇನ ಜಯವುಂಟಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ ಎಂಬ ಇಷ್ಟೇ ಅರ್ಥವನ್ನು ತಿಳಿಸುವುದಕ್ಕೋಸ್ಕರ ನಾನು ಮೊದಲು ನಿನಗೆ ಅಂತಹ ಮಾತುಗಳನ್ನು ಆಡಿದೆ.
ನಾತಿಪ್ರಣೀತಬುದ್ಧಿಃ ಸ್ಯಾತ್ ತಥಾ ಭಾವವಿಪರ್ಯಯೇ |
ವಿವೃದ್ಧಿಮಿಚ್ಛೇದ್ ಹಾನಿಂ ವಾಽಪ್ಯೇತಮರ್ಥಂ ಬ್ರವೀಮಿ ತೇ ॥14॥
ವಸ್ತುಗಳು ವಿಪರೀತವಾಗಿ ಪರಿಣಮಿಸಿದಾಗ ಬಹಳ ಚಿಕಿತ್ಸಕ ಬುದ್ಧಿಯನ್ನು ಮಾಡಬಾರದು. ಯಾವುದರಿಂದ ಕ್ಷೇಮವಾಗುತ್ತದೋ ಮತ್ತು ಹಾನಿಯು ದೂರವಾಗುತ್ತದೋ ಅಂತಹ ಕಾರ್ಯವನ್ನು ಮಾಡಬೇಕು ಎಂದು ತಿಳಿಸಲು ನಿನಗೆ ಈ ಮಾತುಗಳನ್ನು ಆಡುತ್ತಿದ್ದೇನೆ.
ಮನೆಗೆ ಬೆಂಕಿ ಹತ್ತಿದಾಗ ಅದನ್ನು ಆರಿಸಲು ವಿಷಘಳಿಗೆ, ಅಮೃತಘಳಿಗೆ ಮೊದಲಾದವುಗಳನ್ನು ನೋಡಬಾರದು. ಏನನ್ನು ಮಾಡಿದರೆ ಅಗ್ನಿದಾಹವು ನಾಶವನ್ನು ಹೊಂದಿ, ತನ್ನ ಮನೆಯು ವೃದ್ಧಿಯನ್ನು ಪಡೆಯುತ್ತದೆಯೋ ಅಂತಹದನ್ನು ಕ್ಷಿಪ್ರವಾಗಿ ಮಾಡಬೇಕು ವಾದಿರಾಜರು.
ಶ್ವೋಭೂತೇ ಧೃತರಾಷ್ಟ್ರಸ್ಯ ಸಮೀಪಂ ಪ್ರಾಪ್ಯ ಪಾಂಡವ |
ಯತಿಷ್ಯೇ ಪ್ರಶಮಂ ಕರ್ತುಂ ಯುಷ್ಮದರ್ಥಮಹಾಪಯನ್ ॥15॥
ಎಲೈ ಪಾಂಡವನೇ, ನಾಳೆಯ ದಿವಸ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ, ನಿಮ್ಮ ಹಿತಕ್ಕೆ ತೊಂದರೆಯಾಗದಂತೆ ಸಂಧಿಯನ್ನು ಮಾಡಲು ಪ್ರಯತ್ನಿಸುವೆನು.
ಶಮಂ ಚೇತ್ ತೇ ಕರಿಷ್ಯಂತಿ ತತೋಽನಂತಂ ಯಶೋ ಮಮ |
ಭವತಾಂ ಚ ಕೃತಃ ಕಾಮಃ ತೇಷಾಂ ಚ ಶ್ರೇಯ ಉತ್ತಮಮ್ ॥16॥
ಅವರು ಶಾಂತರಾಗಿ ನನ್ನ ಮಾತುಗಳನ್ನು ನಡೆಸಿದರೆ ನನಗೆ ಅಪಾರವಾದ ಕೀರ್ತಿಯುಂಟಾಗುವುದು. ನಿಮ್ಮ ಆಸೆಯನ್ನು ನೆರವೇರಿಸಿದಂತೆಯೂ ಮತ್ತು ಅವರಿಗೆ ಶ್ರೇಷ್ಠವಾದ ಶ್ರೇಯಸ್ಸನ್ನು ಮಾಡಿದಂತೆಯೂ ಆಗುವುದು.

ತೇ ಚೇದಭಿನಿವೇಕ್ಷ್ಯಂತಿ ನಾಭ್ಯುಪೇಷ್ಯಂತಿ ಮದ್ವಚಃ |
ಕುರವೋ ಯುದ್ಧಮೇವಾತ್ರ ಘೋರಂ ಕರ್ಮ ಭವಿಷ್ಯತಿ ॥17॥
ಕೌರವರು ತಮ್ಮ ಹಠವನ್ನೇ ಹಿಡಿದು ನನ್ನ ಮಾತುಗಳನ್ನು ನಡೆಸಿಕೊಡದಿದ್ದರೆ ಆಗ ಘೋರಕರ್ಮವಾದ ಯುದ್ಧವೇ ನಡೆಯುವುದು.
ಅಸ್ಮಿನ್ ಯುದ್ಧೇ ಭೀಮಸೇನ ತ್ವಯಿ ಭಾರಃ ಸಮಾಹಿತಃ |
ಧೂರರ್ಜುನೇನ ವೋಢವ್ಯಾ ವೋಢವ್ಯ ಇತರೋ ಜನಃ ॥18॥
ಎಲೈ ಭೀಮಸೇನನೇ, ಈ ಯುದ್ಧದಲ್ಲಿ ಎಲ್ಲ ಭಾರವೂ ನಿನ್ನ ಮೇಲೆಯೇ ಇದೆ. ಅರ್ಜುನನೂ ಕಾರ್ಯವನ್ನು ನಿರ್ವಹಿಸಬೇಕು. ಉಳಿದ ಎಲ್ಲರೂ ನಿಮ್ಮಿಂದ ರಕ್ಷಿಸಲ್ಪಡಬೇಕು.
ಅಹಂ ಹಿ ಯಂತಾ ಬೀಭತ್ಸೋರ್ಭವಿತಾ ಸಂಯುಗೇ ಸತಿ |
ಧನಂಜಯಸ್ಯೈಷ ಕಾರ್ಯೋ ನ ಹಿ ಯುದ್ಧಂ ನ ಕಾಮಯೇ ॥19॥
ಯುದ್ಧವು ಆಗುವುದಾದರೆ ನಾನು ಅರ್ಜುನನ ಸಾರಥಿಯಾಗುವೆನು. ನಾನು ಅರ್ಜುನನಿಗೆ ಈ ಕಾರ್ಯವನ್ನು ಮಾಡಬೇಕು. ಯುದ್ಧವು ನನಗೆ ಇಷ್ಟವಿಲ್ಲ ಎಂದೇನೂ ಅಲ್ಲ.
ತಸ್ಮಾದಾಶಂಕಮಾನೋಽಹಂ ವೃಕೋದರ ಮತಿಂ ತವ |
ತುದನ್ನಕ್ಲೀಬಯಾ ವಾಚಾ ತೇಜಸ್ತೇ ಸಮದೀಪಯಮ್ ॥20॥
ಆದ್ದರಿಂದ ಎಲೈ ವೃಕೋದರನೇ, ನಿನ್ನ ಬುದ್ಧಿಯನ್ನು ಶಂಕಿಸಿ, ನಿನ್ನ ತೇಜಸ್ಸನ್ನು ಉದ್ದೀಪನಗೊಳಿಸಲು ನಾನು ಪೌರುಷದ ವಾಕ್ಯಗಳಿಂದ ನಿನ್ನನ್ನು ಚುಚ್ಚಿ ಮಾತನಾಡಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೇಳನೆಯ ಅಧ್ಯಾಯ
ಅರ್ಜುನನಿಂದ ಸಂಧಿ-ಯುದ್ಧಗಳೆರಡನ್ನೂ ಪ್ರಸ್ತಾಪಿಸಿ,
ಕೃಷ್ಣನ ಮನಸ್ಸಿಗೆ ತೋರಿದಂತೆ ಮಾಡಬೇಕಾಗಿ ಪ್ರಾರ್ಥನೆ.
ಅರ್ಜುನಃ
ಉಕ್ತಂ ಯುಧಿಷ್ಠಿರೇಣೈವ ಯಾವದ್ ವಾಚ್ಯಂ ಜನಾರ್ದನ |
ತವ ವಾಕ್ಯಂ ತು ಮೇ ಶ್ರುತ್ವಾ ಪ್ರತಿಭಾತಿ ಪರಂತಪ ॥1॥
ಅರ್ಜುನ ಎಲೈ ಜನಾರ್ದನನೇ, ಯುಧಿಷ್ಠಿರನು ಏನು ಹೇಳಬೇಕೋ ಅದೆಲ್ಲವನ್ನೂ ಹೇಳಿದ್ದಾನೆ. ಪರಂತಪನೇ, ನಿನ್ನ ಮಾತುಗಳನ್ನು ಕೇಳಿ ನಿನ್ನ ಮಾತುಗಳು ಯೋಗ್ಯವೆಂದು ನನಗೆ ತೋರುತ್ತದೆ.
ನೈವ ಪ್ರಶಮಮತ್ರ ತ್ವಂ ಮನ್ಯಸೇ ಸುಕರಂ ಪ್ರಭೋ |
ಲೋಭಾದ್ವಾ ಧೃತರಾಷ್ಟ್ರಸ್ಯ ದೈನ್ಯಾದ್ವಾ ಸಮುಪಸ್ಥಿತಾತ್ ॥2॥
ಎಲೈ ಪ್ರಭುವೇ, ನಾವು ದ್ರವ್ಯದಲ್ಲಿ ಆಸೆಯನ್ನು ಮಾಡಿ ಅಥವಾ ಧೃತರಾಷ್ಟ್ರನ ಎದುರಿಗೆ ದೈನ್ಯವನ್ನು ತೋರಿ ಸಂಧಿಯನ್ನು ಸಂಪಾದಿಸುವುದು ಸುಲಭವಲ್ಲವೆಂದು ನೀನೂ ತಿಳಿದಿದ್ದೀಯೆ.
ಅಫಲಂ ಮನ್ಯಸೇ ಚಾಪಿ ಪುರುಷಸ್ಯ ಪರಾಕ್ರಮಮ್ |
ನ ಚಾಂತರೇಣ ಕರ್ಮಾಣಿ ಪೌರುಷೇಣ ಫಲೋದಯಃ ॥3॥
ಈ ಸಂದರ್ಭದಲ್ಲಿ ಸಂಧಿಯನ್ನು ಸಂಪಾದಿಸಲು ಮಾಡುವ ಪುರುಷ ಪ್ರಯತ್ನವು ನಿಷ್ಫಲವೆಂದು ತಿಳಿದಿದ್ದೀಯೆ. ದೈವಸಂಕಲ್ಪಿತ ಕರ್ಮಗಳಾದರೂ ಪುರುಷಪ್ರಯತ್ನವಿಲ್ಲದೆ ಫಲವನ್ನು ನೀಡುವುದಿಲ್ಲ ವಾದಿರಾಜರು.
ಯದಿದಂ ಭಾಷಿತಂ ವಾಕ್ಯಂ ತಥೈವ ನ ತಥೈವ ಚ |
ನ ಚೈತದೇವಂ ದ್ರಷ್ಟವ್ಯಮಸಾಧ್ಯಮಿತಿ ಕಿಂಚನ ॥4॥
ನೀನು ಆಡಿದ ಮಾತುಗಳು ಹಾಗೆಯೇ ಆಗುತ್ತವೆ. ಧರ್ಮರಾಜನು ಆಡಿದ ಮಾತುಗಳು ಹಾಗೆಯೇ ಆಗಬಹುದು ಅಥವಾ ಬೇರೆ ರೀತಿಯೂ ಆಗಬಹುದು. ಯಾವುದನ್ನೂ ಅಸಾಧ್ಯವೆಂದು ತಿಳಿಯಬಾರದು (ಲಕ್ಷಾಲಂಕಾರ).
ಕಿಂ ಚೈತನ್ಮನ್ಯಸೇ ಕೃಚ್ಛ್ರಮಸ್ಮಾಕಮುಪಪಾದಿತಮ್ |
ಕುರ್ವಂತಿ ತೇಷಾಂ ಕರ್ಮಾಣಿ ಯೇಷಾಂ ನಾಸ್ತಿ ಫಲೋದಯಃ ॥5॥
ಮತ್ತು ನಮಗೆ ಒದಗಿರುವ ಕ್ಲೇಶವು ನಮ್ಮಿಂದಲೇ ಸಂಪಾದಿತವಾದುದು ಎಂದು ನೀನು ತಿಳಿದಿದ್ದೀಯೆ. ಜೀವರು ಶುಭಫಲವನ್ನು ಕೊಡದಿರುವ ಕರ್ಮಗಳನ್ನೂ ಮಾಡುತ್ತಾರಷ್ಟೆ!
ಸಂಪಾದ್ಯಮಾನಂ ಸಮ್ಯಕ್ ಸ್ಯಾತ್ ತತ್ ಕರ್ಮ ಸಫಲಂ ಪ್ರಭೋ |
ಸ ತಥಾ ಕೃಷ್ಣ ವರ್ತಸ್ವ ಯಥಾ ಶರ್ಮ ಭವೇತ್ ಪರೈಃ ॥6॥
ಎಲೈ ಪ್ರಭುವೇ, ಯಾವ ಕರ್ಮವು ದೈವಸಂಕಲ್ಪ ಮತ್ತು ಸರಿಯಾದ ಮನುಷ್ಯನ ಪ್ರಯತ್ನದಿಂದ ಕೂಡಿರುತ್ತದೆಯೋ ಅದು ಸಫಲವಾಗುತ್ತದೆ. ಕೃಷ್ಣನೇ, ಹೇಗೆ ಮಾಡಿದರೆ ಶತ್ರುಗಳ ಜೊತೆಯಲ್ಲಿ ಸಂಧಿಯುಂಟಾದೀತೋ ಅದರಂತೆ ನಡೆದುಕೊಳ್ಳುವವನಾಗು.
ಪಾಂಡವಾನಾಂ ಕುರೂಣಾಂ ಚ ಭವಾನ್ ಪರಮಕಃ ಸುಹೃತ್ |
ಸುರಾಣಾಮಸುರಾಣಾಂ ಚ ಯಥಾ ವೀರ ಪ್ರಜಾಪತಿಃ ॥7॥

ಎಲೈ ವೀರನೇ, ದೇವತೆಗಳಿಗೂ ಮತ್ತು ದೈತ್ಯರಿಗೂ ಬ್ರಹ್ಮದೇವರು ಹಿತಚಿಂತಕರಾದಂತೆ ಪಾಂಡವರಿಗೂ ಮತ್ತು ಕೌರವರಿಗೂ ನೀನು ಶ್ರೇಷ್ಠನಾದ ಹಿತಚಿಂತಕನಾಗಿದ್ದೀಯೆ.
ಕುರೂಣಾಂ ಪಾಂಡವಾನಾಂ ಚ ಪ್ರವಿಧತ್ಸ್ವ ನಿರಾಮಯಮ್ |
ಅಸ್ಮದ್ಧಿತಮನುಷ್ಠಾತುಂ ನ ಮನ್ಯೇ ತವ ದುಷ್ಕರಮ್ ॥8॥
ಪಾಂಡವರಿಗೂ ಮತ್ತು ಕೌರವರಿಗೂ ಕ್ಷೇಮವನ್ನು ಮಾಡುವವನಾಗು. ನಮಗೆ ಹಿತವನ್ನು ಉಂಟುಮಾಡುವುದು ನಿನಗೆ ಅಸಾಧ್ಯವಲ್ಲವೆಂದು ನಾನು ತಿಳಿದಿದ್ದೇನೆ.
ಏವಂ ಚೇತ್ ಕಾರ್ಯತಾಮೇತಿ ಕಾರ್ಯಂ ತವ ಜನಾರ್ದನ |
ವಚನಂ ಚೈವಮೇವ ತ್ವಂ ಕರಿಷ್ಯಸಿ ಜನಾರ್ದನ ॥9॥
ಎಲೈ ಜನಾರ್ದನನೇ, ಹೀಗಾಗುವುದಾದರೆ ಸಂಧಿರೂಪವಾದ ಕಾರ್ಯವನ್ನು ಮಾಡಲು ಸಾಧ್ಯವಾಗುತ್ತದೆ. ಜನಾರ್ದನನೇ, ನೀನು ಅದಕ್ಕೆ ಅನುಗುಣವಾಗಿಯೇ ಮಾತನಾಡುವವನಾಗು.
ಚಿಕೀರ್ಷಿತಮಥಾನ್ಯತ್ ತೇ ತಸ್ಮಿನ್ ವೀರ ದುರಾತ್ಮನಿ |
ಭವಿಷ್ಯತಿ ಚ ತತ್ ಸರ್ವಂ ಯಥಾ ತವ ಚಿಕೀರ್ಷಿತಮ್ ॥10॥
ಎಲೈ ವೀರನೇ, ನೀನು ಆ ದುರಾತ್ಮನ ವಿಷಯದಲ್ಲಿ ಬೇರೆ ರೀತಿಯಲ್ಲಿ ನಡೆದುಕೊಳ್ಳಬೇಕೆಂದು ಭಾವಿಸಿದರೆ ನಿನ್ನ ಸಂಕಲ್ಪಕ್ಕೆ ಅನುಗುಣವಾಗಿ ಎಲ್ಲವೂ ಹಾಗೆಯೇ ಆಗುತ್ತದೆ.
ಶರ್ಮ ತೈಃ ಸಹ ವಾ ನೋಽಸ್ತು ತವ ವಾ ಯಚ್ಚಿಕೀರ್ಷಿತಮ್ |
ವಿಚಾರ್ಯಮಾಣೋ ಯಃ ಕಾಮಸ್ತವ ಕೃಷ್ಣ ಸ ನೋ ಗುರುಃ ॥11॥
ನಮಗೆ ಕೌರವರ ಜೊತೆಯಲ್ಲಿ ಸಂಧಿಯಾದರೂ ಇರಲಿ ಅಥವಾ ಎಲೈ ಕೃಷ್ಣನೇ, ನೀನು ವಿಚಾರಮಾಡಿ ಯಾವುದನ್ನು ನಿರ್ಧರಿಸುತ್ತೀಯೋ ಅದಾದರೂ ಸಿದ್ಧವಾಗಲಿ. ಕೃಷ್ಣನೇ, ನಿನ್ನ ಅಭಿಪ್ರಾಯವೇ ನಮಗೆ ದೊಡ್ಡದು.
ನ ಸ ನಾರ್ಹತಿ ದುಷ್ಟಾತ್ಮಾ ವಧಂ ಸಸುತಬಾಂಧವಃ |
ಯೇನ ಧರ್ಮಸುತೇ ದೃಷ್ಟ್ವಾ ನ ಸಾ ಶ್ರೀರಪಮರ್ಷಿತಾ ॥12॥
ಯಾವ ದುರ್ಯೋಧನನು ಯುಧಿಷ್ಠಿರನಲ್ಲಿ ನೆಲೆಗೊಂಡ ಸಂಪತ್ತನ್ನು ನೋಡಿ ಸಹಿಸಲಿಲ್ಲವೋ ಅಂತಹ ದುಷ್ಟಾತ್ಮನಾದ ದುರ್ಯೋಧನನು ಬಾಂಧವರ ಮತ್ತು ಪುತ್ರರ ಜೊತೆಯಲ್ಲಿ ಅವಧ್ಯನಾದವನೇನೂ ಅಲ್ಲ.
ಸ ಯೇನಾಪಶ್ಯತೋಽಪಾಯಂ ಧರ್ಮಿಷ್ಠಾನ್ ಮಧುಸೂದನ |
ಉಪಾಯೇನ ನೃಶಂಸೇನ ಹೃತಾ ದುರ್ದ್ಯೂತದೇವಿನಾ ॥13॥
ಎಲೈ ಮಧುಸೂದನನೇ, ಧರ್ಮರಾಜನಲ್ಲಿದ್ದ ಸಂಪತ್ತನ್ನು ಅವನಿಂದ ಕಸಿಯಲು ಬೇರೆ ಯಾವ ಉಪಾಯವನ್ನೂ ಕಾಣದೇ ಕ್ರೂರನಾದ ಅವನು ಕೆಟ್ಟದ್ಯೂತರೂಪವಾದ ಉಪಾಯದಿಂದ ಅದನ್ನು ಅಪಹರಿಸಿದನು.
ಕಥಂ ಹಿ ಪುರುಷೋ ಜಾತಃ ಕ್ಷತ್ರಿಯೇಷು ಧನುರ್ಧರಃ |
ಸಮಾಹೂತೋ ನಿವರ್ತೇತ ಪ್ರಾಣತ್ಯಾಗೇಽಪಿ ಪಂಡಿತಃ ॥14॥
ಕ್ಷತ್ರಿಯನಾಗಿ ಹುಟ್ಟಿ, ಧನುರ್ಧರನಾಗಿ, ವಿವೇಕಿಯಾದವನು ಯುದ್ಧಕ್ಕೆ ಆಹ್ವಾನ ಮಾಡಿದಾಗ ಪ್ರಾಣ ಹೋದರೂ ಹೇಗೆ ಹಿಂದಕ್ಕೆ ಬಂದಾನು?
ಅಧರ್ಮೇಣ ಜಿತಾನ್ ದೃಷ್ಟ್ವಾ ವನೇ ಪ್ರವ್ರಜಿತಾಂಸ್ತಥಾ |
ವಧ್ಯತಾಂ ಮಮ ವಾರ್ಷ್ಣೇಯ ನಿರ್ಗತೋಽಸೌ ಸುಯೋಧನಃ ॥15॥
ಎಲೈ ವಾರ್ಷ್ಣೇಯನೇ, ನಮ್ಮನ್ನು ಅಧರ್ಮದಿಂದ ಜಯಿಸಿ ಕಾಡಿಗೆ ಕಳುಹಿಸಿದ ಸುಯೋಧನನು ಸ್ಪಷ್ಟವಾಗಿ ನನ್ನಿಂದ ವಧ್ಯನಾಗಿದ್ದಾನೆ.
ನ ಚೈತದದ್ಭುತಂ ಕೃಷ್ಣ ಮಿತ್ರಾರ್ಥೇ ಯಚ್ಚಿಕೀರ್ಷಸಿ |
ಕ್ರಿಯತಾಂ ತತ್ತು ಮುಖ್ಯಂ ಸ್ಯಾನ್ಮೃದುನಾ ಚೇತರೇಣ ವಾ ॥16॥
ಕೃಷ್ಣನೇ, ಮಿತ್ರರ ಸಲುವಾಗಿ ಏನು ಮಾಡಲು ಬಯಸಿದ್ದೀಯೋ ಅದು ನಿನ್ನಲ್ಲಿ ಅದ್ಭುತವಲ್ಲ. ಅದು ಮೃದುವಾಗಿರಲೀ ಅಥವಾ ಉಗ್ರವಾಗಿರಲೀ. ನೀನು ಅದನ್ನೇ ಮಾಡುವವನಾಗು.
ಅಥವಾ ಮನ್ಯಸೇ ಜ್ಯಾಯಾನ್ ವಧಸ್ತೇಷಾಮನಂತರಮ್ |
ತದೇವ ಕ್ರಿಯತಾಮಾಶು ನ ವಿಚಾರ್ಯಮತಸ್ತ್ವಯಾ ॥17॥
ಅಥವಾ ಕೌರವರ ವಧೆಯೇ ಶ್ರೇಷ್ಠವೆಂದು ನೀನು ಚಿಂತಿಸುವುದಾದರೆ ಅದನ್ನೇ ಶೀಘ್ರವಾಗಿ ಮಾಡು. ನೀನು ಬೇರೆ ವಿಚಾರವನ್ನು ಮಾಡುವ ಅವಶ್ಯಕತೆ ಇಲ್ಲ.
ಜಾನಾಸಿ ಹಿ ತಥಾ ತೇನ ದ್ರೌಪದೀ ಪಾಪಬುದ್ಧಿನಾ |
ಪರಿಕ್ಲಿಷ್ಟಾ ಸಭಾಮಧ್ಯೇ ತಚ್ಚ ತಸ್ಯೋಪಮರ್ಷಿತಮ್ ॥18॥
ಪಾಪಬುದ್ಧಿಯುಳ್ಳ ಅವನು ಸಭಾಮಧ್ಯದಲ್ಲಿ ದ್ರೌಪದಿಯನ್ನು ಹೇಗೆ ಅವಮಾನ ಮಾಡಿದನು ಎಂದು ನೀನು ತಿಳಿದಿದ್ದೀಯೆ. ನಾವು ಅವನ ಆ ದುಷ್ಕರ್ಮವನ್ನೂ ಸಹಿಸಿದೆವು.
ಸ ನಾಮ ಸಮ್ಯಗ್ ವರ್ತೇತ ಪಾಂಡವೇಷ್ವಿತಿ ಮಾಧವ |
ನ ಮೇ ಸಂಜಾಯತೇ ಬುದ್ಧಿರ್ಬೀಜಮುಪ್ತಮಿವೋಷರೇ ॥19॥
ಎಲೈ ಮಾಧವನೇ, ಮರುಭೂಮಿಯಲ್ಲಿ ಹಾಕಿದ ಬೀಜವು ಹೇಗೆ ಮೊಳಕೆ ಒಡೆಯುವುದಿಲ್ಲವೋ ಅದರಂತೆ ಅವನಿಗೆ ಎಂದಾದರೂ ಪಾಂಡವರಾದ ನಮ್ಮ ವಿಷಯದಲ್ಲಿ ಸರಿಯಾದ ನಡವಳಿಕೆ ಉಂಟಾಗುತ್ತದೆ ಎಂಬ ಬುದ್ಧಿಯು ನನಗೆ ಬರುವುದಿಲ್ಲ.

ತಸ್ಮಾದ್ ಯನ್ಮನ್ಯಸೇ ಯುಕ್ತಂ ಪಾಂಡವಾನಾಂ ಹಿತಂ ಚ ಯತ್ |
ತದಾಶು ಕುರು ವಾರ್ಷ್ಣೇಯ ತನ್ನಃ ಕಾರ್ಯಮನಂತರಮ್ ॥20॥
ಆದ್ದರಿಂದ ವಾರ್ಷ್ಣೇಯನೇ, ಯಾವುದನ್ನು ನೀನು ಯುಕ್ತವಾದುದು ಮತ್ತು ಪಾಂಡವರಿಗೆ ಹಿತವಾದುದು ಎಂದು ಚಿಂತಿಸುತ್ತೀಯೋ ಅದನ್ನೇ ಶೀಘ್ರವಾಗಿ ಮಾಡುವವನಾಗು. ನಾವೂ ಕೂಡ ಅದನ್ನೇ ಮಾಡುವವರಾಗುತ್ತೇವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ತತಃ ಕೃಷ್ಣೋಽರ್ಜುನಂ ಚೈವ ಕೃಪಾಳುಂ ಸಂಧಿಕಾಮುಕಮ್ |
ಹೇತುಮದ್ಭಿಃ ಶುಭೈರ್ವಾಕ್ಯೈರನುನೀಯ ಜಗತ್ಪತಿಃ ॥57॥
ಬಳಿಕ ದಯಾಳುವಾಗಿ ಸಂಧಿಯನ್ನು ಬಯಸಿದ್ದ ಅರ್ಜುನನನ್ನು ಜಗದೊಡೆಯನಾದ ಕೃಷ್ಣ ಯುಕ್ತಿಯುಕ್ತವಾದ ಮಾತುಗಳಿಂದ ಯುದ್ಧಕ್ಕೆ ಒಪ್ಪಿಸಿದ.
* * * * *
ಎಪ್ಪತ್ತೆಂಟನೆಯ ಅಧ್ಯಾಯ
ಸುಯೋಧನನ ಜೊತೆಯಲ್ಲಿ ಸಂಧಿಯು ದುರ್ಲಭವಾದರೂ
ಯುಧಿಷ್ಠಿರನ ಮಾತಿನಂತೆ ಸಂಧಿಗಾಗಿ ತಾನು ಪ್ರಯತ್ನಪಡುವಂತೆ
ಅರ್ಜುನನನ್ನು ಕುರಿತು ಕೃಷ್ಣನ ಉತ್ತರ.
ಶ್ರೀಭಗವಾನ್
ಏವಮೇತನ್ಮಹಾಬಾಹೋ ಯಥಾ ವದಸಿ ಪಾಂಡವ |
ಸರ್ವಂ ತ್ವಿದಂ ಸಮಾಯತ್ತಂ ಬೀಭತ್ಸೋ ಕರ್ಮಣೋರ್ದ್ವಯೋಃ ॥1॥
ಶ್ರೀಭಗವಾನ್ ಎಲೈ ಮಹಾಬಾಹುವಾದ ಪಾಂಡವನೇ, ನೀನು ಹೇಳಿದಂತೆಯೇ ಎಲ್ಲವೂ ಸರಿ. ಎಲೈ ಬೀಭತ್ಸುವೇ, ಇವೆಲ್ಲವೂ ಕೂಡ ಎರಡು ಕರ್ಮಗಳನ್ನು (ದೈವಸಂಕಲ್ಪ ಮತ್ತು ಪುರುಷಪ್ರಯತ್ನವನ್ನು) ಅವಲಂಬಿಸಿವೆ.
ಕ್ಷೇತ್ರಂ ಹಿ ರಸವಚ್ಛುದ್ಧಂ ಕರ್ಷಕೇಣೋಪಪಾದಿತಮ್ |
ಋತೇ ವರ್ಷಾನ್ನ ಕೌಂತೇಯ ಜಾತು ನಿರ್ವರ್ತಯೇತ್ ಫಲಮ್ ॥2॥
ಫಲವತ್ತಾದ ಹೊಲವು ಕೃಷೀವಲನಿಂದ ಸಿದ್ಧಮಾಡಲ್ಪಡುತ್ತದೆ. ಎಲೈ ಕೌಂತೇಯನೇ, ಆದರೂ ಮಳೆ ಇಲ್ಲದಿದ್ದರೆ ಅದು ಅಪೇಕ್ಷಿತವಾದ ಫಲವನ್ನು ಎಂದೂ ಕೊಡುವುದಿಲ್ಲ.
ತತ್ರ ವೈ ಪೌರುಷಂ ಬ್ರೂಯುರಾಸೇಕಂ ಯತ್ನಕಾರಿತಮ್ |
ತತ್ರ ಚಾಪಿ ಧ್ರುವಂ ಪಶ್ಯೇತ್ ಶೋಷಣಂ ದೈವಕಾರಿತಮ್ ॥3॥
ಅಲ್ಲಿಯೂ ಸಹ ಪುರುಷನು ಪ್ರಯತ್ನದಿಂದ ಏನಾದರೂ ನೀರನ್ನು ಹಾಕಿದರೆ ಆಗಲೂ ಕೂಡ ಸಸ್ಯವು ಒಣಗಿಹೋಗುವುದನ್ನು ನೋಡಬಹುದು. ಆ ಸಸ್ಯದ ಒಣಗುವಿಕೆಯು ದೈವದಿಂದ ಉಂಟಾದದ್ದು.
ತದಿದಂ ನಿಶ್ಚಿತಂ ಬುದ್ಧ್ಯಾ ಪೂರ್ವೈರಪಿ ಮಹಾತ್ಮಭಿಃ |
ದೈವಂ ಚ ಮಾನುಷಂ ಚೈವ ಸಂಯುಕ್ತಂ ಲೋಕಕಾರಣಮ್ ॥4॥
ಪೂರ್ವಜರಾದ ಮಹಾತ್ಮರು ತಮ್ಮ ಬುದ್ಧಿಯಿಂದ ಇದನ್ನು ನಿಶ್ಚಯಿಸಿದ್ದರು. ದೈವಸಂಕಲ್ಪ ಮತ್ತು ಮಾನುಷಪ್ರಯತ್ನ, ಎರಡೂ ಸೇರಿಯೇ ಲೋಕದಲ್ಲಿ ಅಪೇಕ್ಷಿತವಾದ ಫಲಕ್ಕೆ ಕಾರಣವಾಗುತ್ತವೆ.
ಅಹಂ ತು ತತ್ ಕರಿಷ್ಯಾಮಿ ಪರಂ ಪುರುಷಕಾರತಃ |
ದೈವಂ ಹಿ ನ ಮಯಾ ಶಕ್ಯಂ ಕರ್ಮ ಕರ್ತುಂ ಕಥಂಚನ ॥5॥
ಪುರುಷಪ್ರಯತ್ನದಿಂದ ಏನು ಮಾಡಬಹುದೋ ಅದನ್ನು ನಾನು ಉತ್ತಮವಾಗಿ ಮಾಡುವೆನು. ಆದರೆ ದೈವಕರ್ಮವನ್ನು ಮಾತ್ರ ನಾನು ಯಾವ ರೀತಿಯಿಂದಲೂ ಮಾಡಲು ಸಾಧ್ಯವಿಲ್ಲ.
ಸ ಹಿ ಧರ್ಮಂ ಚ ಸತ್ಯಂ ಚ ತ್ಯಕ್ತ್ವಾ ಚರತಿ ದುರ್ಮತಿಃ |
ನ ಹಿ ಸಂತಪ್ಯತೇ ತೇನ ತಥಾರೂಪೇಣ ಕರ್ಮಣಾ ॥6॥
ದುರ್ಮತಿಯಾದ ದುರ್ಯೋಧನನು ಧರ್ಮವನ್ನೂ ಮತ್ತು ಸತ್ಯವನ್ನೂ ತ್ಯಜಿಸಿ ನಡೆದುಕೊಳ್ಳುತ್ತಾನೆ ಮತ್ತು ಅಂತಹ ದುಷ್ಕರ್ಮವನ್ನು ಮಾಡಿದರೂ ಸಹ ಪಶ್ಚಾತ್ತಾಪ ಪಡುವುದಿಲ್ಲ.
ತಾಂ ಚಾಪಿ ಬುದ್ಧಿಂ ಪಾಪಿಷ್ಠಾಂ ವರ್ಧಯಂತ್ಯಸ್ಯ ಮಂತ್ರಿಣಃ |
ಶಕುನಿಃ ಸೂತಪುತ್ರಶ್ಚ ಭ್ರಾತಾ ದುಃಶಾಸನಸ್ತಥಾ ॥7॥
ಅವನ ಮಂತ್ರಿಗಳಾದ ಶಕುನಿ, ಕರ್ಣ ಮತ್ತು ತಮ್ಮನಾದ ದುಶ್ಶಾಸನ ಇವರು ಅವನ ಪಾಪದ ಬುದ್ಧಿಯನ್ನು ಇನ್ನೂ ಹೆಚ್ಚುವಂತೆ ಮಾಡುತ್ತಾರೆ.
ಸ ಹಿ ತ್ಯಾಗೇನ ರಾಜ್ಯಸ್ಯ ನ ಶಮಂ ಸಮುಪೈಷ್ಯತಿ |
ಅಂತರೇಣ ವಧಂ ಪಾರ್ಥ ಸಾನುಬಂಧಃ ಸುಯೋಧನಃ ॥8॥

ಎಲೈ ಪಾರ್ಥನೇ, ಸುಯೋಧನನು ಪರಿವಾರ ಸಹಿತನಾಗಿ ವಧೆಯನ್ನು ಹೊಂದದೆ ರಾಜ್ಯದ ಅಂಶವನ್ನು ಕೊಟ್ಟು ಸಂಧಿಯನ್ನು ಮಾಡಿಕೊಳ್ಳುವುದಿಲ್ಲ.
ನ ಚಾಪಿ ಪ್ರಣಿಪಾತೇನ ತ್ಯಕ್ತುಮಿಚ್ಛತಿ ಧರ್ಮಹಾ |
ಯಾಚ್ಯಮಾನಶ್ಚ ರಾಜ್ಯಂ ಸ ನ ಪ್ರದಾಸ್ಯತಿ ದುರ್ಮತಿಃ ॥9॥
ಧರ್ಮವನ್ನು ನಾಶಮಾಡುವ ಅವನು ಅವನಿಗೆ ನಮಸ್ಕಾರವನ್ನು ಮಾಡಿದರೂ ರಾಜ್ಯವನ್ನು ಕೊಡಲು ಬಯಸುವುದಿಲ್ಲ ಮತ್ತು ಬೇಡಿದರೂ ಸಹ ದುರ್ಮತಿಯಾದ ಅವನು ರಾಜ್ಯವನ್ನು ಕೊಡುವುದಿಲ್ಲ.
ನ ತು ಮನ್ಯೇ ಸ ತದ್ವಾಚ್ಯೋ ಯದ್ ಯುಧಿಷ್ಠಿರಶಾಸನಮ್ |
ಉಕ್ತಂ ಪ್ರಯೋಜನಂ ಯತ್ತು ಧರ್ಮರಾಜೇನ ಭಾರತ ॥10॥
ಎಲೈ ಭಾರತನೇ, ಧರ್ಮರಾಜನು ಹೇಳಿದ ಆದೇಶವನ್ನಾಗಲೀ ಮತ್ತು ಅದರ ಪ್ರಯೋಜನವನ್ನಾಗಲೀ ದುರ್ಯೋಧನನಿಗೆ ಹೇಳಬಾರದು ಎಂದು ನಾನು ನುಡಿಯುತ್ತೇನೆ.
ತಥಾ ಪಾಪಸ್ತು ತತ್ ಸರ್ವಂ ನ ಕರಿಷ್ಯತಿ ಕೌರವಃ |
ತಸ್ಮಿಂಶ್ಚಾಕ್ರಿಯಮಾಣೇಽಸೌ ಲೋಕವಧ್ಯೋ ಭವಿಷ್ಯತಿ ॥11॥
ಪಾಪಿಯಾದ ಕೌರವನು ಅವನು ಧರ್ಮರಾಜನು ಹೇಳಿದ ಯಾವುದನ್ನೂ ಮಾಡುವುದಿಲ್ಲ. ಧರ್ಮರಾಜನು ಹೇಳಿದಂತೆ ಅವನು ನಡೆದುಕೊಳ್ಳದಿದ್ದರೆ ಅವನು ಲೋಕದಿಂದಲೇ ವಧ್ಯನಾಗುವನು.
ಮಮ ಚಾಪಿ ಸ ವಧ್ಯೋ ಹಿ ಜಗತಶ್ಚಾಪಿ ಭಾರತ |
ಯೇನ ಕೌಮಾರಕೇ ಯೂಯಂ ಸರ್ವೇ ವಿಪ್ರಕೃತಾಸ್ತದಾ ॥12॥
ಎಲೈ ಭಾರತನೇ, ಯಾವ ದುರ್ಯೋಧನನು ಬಾಲ್ಯದಲ್ಲಿಯೇ ನಿಮಗೆ ಬಹಳವಾಗಿ ಅಪಚಾರಗಳನ್ನು ಮಾಡಿದನೋ ಅವನು ನನಗೂ ಮತ್ತು ಜಗತ್ತಿಗೂ ವಧ್ಯನಾಗಿದ್ದಾನೆ.
ವಿಪ್ರಲುಪ್ತಂ ಚ ವೋ ರಾಜ್ಯಂ ನೃಶಂಸೇನ ದುರಾತ್ಮನಾ |
ನ ಚೋಪಶಾಮ್ಯತೇ ಪಾಪಃ ಶ್ರಿಯಂ ದೃಷ್ಟ್ವಾ ಯುಧಿಷ್ಠಿರೇ ॥13॥
ದುರಾತ್ಮನೂ ಮತ್ತು ಕ್ರೂರಿಯೂ ಆದ ಅವನು ನಿಮ್ಮ ರಾಜ್ಯವನ್ನು ಹಾಳುಮಾಡಿದನು. ಅವನು ಯುಧಿಷ್ಠಿರನ ಸಂಪತ್ತನ್ನು ನೋಡಿ ಸಹಿಸಲಿಲ್ಲ.
ಅಸಕೃಚ್ಚಾಪ್ಯಹಂ ತೇನ ತ್ವತ್ಕೃತೇ ಪಾರ್ಥ ಭೇದಿತಃ |
ನ ಮಯಾ ತದ್ ಗೃಹೀತಂ ಚ ಪಾಪಂ ತಸ್ಯ ಚಿಕೀರ್ಷಿತಮ್ ॥14॥
ನನ್ನನ್ನು ನಿನ್ನಿಂದ ಬೇರೆ ಮಾಡಲು ಅವನು ಅನೇಕ ಬಾರಿ ಭೇದೋಪಾಯಗಳನ್ನು ಮಾಡಿದನು. ಆದರೆ ಎಲೈ ಪಾರ್ಥನೇ, ನಾನು ಆ ಯಾವ ಪಾಪವಿಷಯಗಳನ್ನೂ ಸ್ವೀಕರಿಸಲಿಲ್ಲ ಮತ್ತು ಅವನ ಇಷ್ಟದಂತೆ ನಡೆದುಕೊಳ್ಳಲಿಲ್ಲ.
ಜಾನಾಸಿ ಹಿ ಮಹಾಬಾಹೋ ತ್ವಮಪ್ಯಸ್ಯ ಪರಂ ಮಹತ್ |
ಪ್ರಿಯಂ ಚಿಕೀರ್ಷಮಾಣಂ ಚ ಧರ್ಮರಾಜಸ್ಯ ಮಾಮಪಿ ॥15॥
ಎಲೈ ಮಹಾಬಾಹುವೇ, ನಾನು ಈ ಧರ್ಮರಾಜನಿಗೆ ಎಷ್ಟು ದೊಡ್ಡ ಪ್ರಿಯವನ್ನು ಮಾಡಲು ಬಯಸುತ್ತೇನೆ ಎಂಬುದನ್ನು ನೀನು ತಿಳಿದಿದ್ದೀಯೆ.
ಸ ಜಾನನ್ನಪಿ ಚಾತ್ಮಾನಂ ಮಮ ಚೈವ ಪರಂ ಮತಮ್ |
ಅಜಾನನ್ನಿವ ಮಾಂ ಕಸ್ಮಾದ್ ಅರ್ಜುನಾದ್ಯಾಭಿಶಂಕಸೇ ॥16॥
ಎಲೈ ಅರ್ಜುನನೇ, ನೀನು ನಿನ್ನನ್ನು ಸರಿಯಾಗಿ ತಿಳಿದಿದ್ದರೂ ಮತ್ತು ನನ್ನ ಶ್ರೇಷ್ಠವಾದ ಅಭಿಪ್ರಾಯವನ್ನು ತಿಳಿದಿದ್ದರೂ ಏನೂ ತಿಳಿಯದವನಂತೆ ಈ ದಿನ ಏಕೆ ನನ್ನನ್ನು ಶಂಕಿಸುತ್ತಿದ್ದೀಯೆ?
ಯಚ್ಚಾಪಿ ಪರಮಂ ದಿವ್ಯಂ ತದಪ್ಯವಗತಂ ಮಯಾ |
ವಿಧಾನವಿಹಿತಂ ಪಾರ್ಥ ಕಥಂ ಶರ್ಮ ಭವೇತ್ ಪರೈಃ ॥17॥
ಎಲೈ ಪಾರ್ಥನೇ, ಈ ವಿಷಯದಲ್ಲಿ ಶ್ರೇಷ್ಠವಾದ ದೇವಸಂಕಲ್ಪವೇನಿದೆಯೋ ಅದನ್ನೂ ನಾನು ತಿಳಿದಿದ್ದೇನೆ. ಅವರ ಜೊತೆಯಲ್ಲಿ ಸಂಧಿಯು ಹೇಗೆ ಉಂಟಾದೀತು?
ಯತ್ತು ವಾಚಾ ಮಯಾ ಶಕ್ಯಂ ಕರ್ಮಣಾ ವಾಽಪಿ ಪಾಂಡವ |
ಕರಿಷ್ಯೇ ತದಹಂ ಪಾರ್ಥ ನ ತ್ವಾಶಂಸೇ ಶಮಂ ಪರೈಃ ॥18॥
ಎಲೈ ಪಾಂಡವನೇ, ಮಾತನಾಡಿ ಏನನ್ನು ಮಾಡಬಹುದೋ, ಕ್ರಿಯೆಯನ್ನು ಮಾಡಿ ಏನನ್ನು ಮಾಡಬಹುದೋ ಅದನ್ನು ನಾನು ಮಾಡುವೆನು. ಆದರೆ ಎಲೈ ಪಾರ್ಥನೇ, ನಾನು ಅವರ ಜೊತೆಯಲ್ಲಿ ಸಂಧಿಯನ್ನು ಮಾತ್ರ ಬಯಸುವುದಿಲ್ಲ.
ಕಥಂ ಗೋಗ್ರಹಣೇ ಬ್ರೂಯಾದಿಚ್ಛನ್ ಶರ್ಮ ತಥಾ ಚಿರಮ್ |
ಯಾಚ್ಯಮಾನೋಽಪಿ ಭೀಷ್ಮೇಣ ಸಂವತ್ಸರಗತೇಽಹನಿ ॥19॥
ಅವನು ಸುಖವನ್ನು ಬಯಸುವವನಾದರೆ ಗೋಗ್ರಹಣಕಾಲದಲ್ಲಿ ಭೀಷ್ಮರು ಬೇಡವೆಂದು ಬೇಡುತ್ತಿದ್ದರೂ ಸಹ ಅಜ್ಞಾತವಾಸದ ಸಂವತ್ಸರವು ಕಳೆದಿದ್ದರೂ ಸಹ ಕಳೆದಿಲ್ಲವೆಂಬಂತಹ ಮಾತುಗಳನ್ನು ಹೇಗೆ ಆಡುತ್ತಿದ್ದನು?
ತಥೈವ ತೇ ಪರಾಭೂತಾ ಯಥಾ ಸಂಕಲ್ಪಿತಾಸ್ತ್ವಯಾ |
ಲವಶಃ ಕಣಶಶ್ಚೈವ ನ ಸಂತುಷ್ಟಃ ಸುಯೋಧನಃ ॥20॥
ನಿನ್ನ ಸಂಕಲ್ಪದಂತೆ ಆಗ ಅವರೆಲ್ಲರೂ ಸಹ ನಿನ್ನಿಂದ ಪರಾಭವವನ್ನು ಹೊಂದಿದರು. ಸುಯೋಧನನಿಗೆ ಮಾತ್ರ ಅದರಿಂದ ಲವಲೇಶವೂ ತೃಪ್ತಿಯಿಲ್ಲ.

ಸರ್ವಥಾ ತು ಮಯಾ ಕಾರ್ಯಂ ಧರ್ಮರಾಜಸ್ಯ ಶಾಸನಮ್ |
ವಿಭಾವ್ಯಂ ತಸ್ಯ ಭೂಯಶ್ಚ ಕರ್ಮ ಪಾಪಂ ದುರಾತ್ಮನಃ ॥21॥
ನಾನು ಸರ್ವರೀತಿಯಿಂದಲೂ ಧರ್ಮರಾಜನ ಶಾಸನವನ್ನು ಅನುಸರಿಸಲೇಬೇಕು ಮತ್ತು ಆ ದುರಾತ್ಮನಾದ ದುರ್ಯೋಧನನು ಮಾಡುವ ಪಾಪಕರ್ಮವನ್ನು ಇನ್ನೂ ನೋಡಬೇಕಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಉಕ್ತೋ ಮಾನುಷಯಾ ಬುದ್ಧ್ಯಾ ನಕುಲೇನ ಸುನೀತಿವತ್ |
ಶೌರ್ಯಪ್ರಕಾಶನಾಯೈವ ಯುದ್ಧಂ ಯೋಜಯತಾಂ ಭವಾನ್ |
ಇತ್ಯುಕ್ತಃ ಸಹದೇವೇನ ಯುಯುಧಾನೇನ ಚಾಚ್ಯುತಃ ॥58॥
ನಕುಲ, ಕೃಷ್ಣನಿಗೆ ಅವನೊಬ್ಬ ಮನುಷ್ಯನೆಂಬ ಭಾವನೆಯಿಂದ ಒಬ್ಬ ನೀತಿಜ್ಞನಿಗೆ ಹೇಳುವಂತೆ ಉಪದೇಶದ ಮಾತನ್ನು ಹೇಳಿದ. ಸಹದೇವ ತನ್ನ ಶೌರ್ಯವನ್ನು ಮೆರೆಸುವುದಕ್ಕಾಗಿ ಯುದ್ಧವನ್ನು ಬಯಸಿ ನೀನು ಯುದ್ಧ ನಡೆಯುವಂತೆಯೇ ಮಾಡು ಎಂದ. ಸಾತ್ಯಕಿಯೂ ಹಾಗೇ ಹೇಳಿದ.
ದಸ್ಯೂನಾಂ ನಿಗ್ರಹೋ ಧರ್ಮಃ ಕ್ಷತ್ರಿಯಾಣಾಂ ಯತಃ ಪರಃ |
ಅತೋ ನ ಧಾರ್ತರಾಷ್ಟ್ರೈರ್ನಃ ಸಂಧಿಃ ಸ್ಯಾದಿತಿ ಪಾರ್ಷತೀ ॥59॥
ಜಗಾದ ಕೃಷ್ಣಂ ಸೋಽಪ್ಯೇನಾಮೋಮಿತ್ಯುಕ್ತ್ವಾ ವಿನಿರ್ಯಯೌ ॥60॥
ದ್ರೌಪದಿ ಕೃಷ್ಣನಿಗೆ ಹೇಳಿದಳು, `ದರೋಡೆಕೋರರನ್ನು ನಿಗ್ರಹಿಸುವುದು ಕ್ಷತ್ರಿಯರಿಗೆ ಪರಮಧರ್ಮ. ಅದರಿಂದ ಕೌರವರೊಡನೆ ಸಂಧಿ ಬೇಡ' ಕೃಷ್ಣ ಅವಳಿಗೆ ಹಾಗೇ ಆಗಲಿ ಎಂದು ಹೇಳಿ ಹೊರಟುಹೋದ.
* * * * *
ಎಪ್ಪತ್ತೊಂಬತ್ತನೆಯ ಅಧ್ಯಾಯ
ನಕುಲ-ಸಹದೇವ ಮತ್ತು ಸಾತ್ಯಕಿಯರಿಂದ ಸಂಧಿಯ ವಿಷಯದಲ್ಲಿ ತಮ್ಮ ತಮ್ಮ ಅಭಿಪ್ರಾಯಗಳ ಕಥನ.
ನಕುಲಃ
ಉಕ್ತಂ ಬಹುವಿಧಂ ವಾಕ್ಯಂ ಧರ್ಮರಾಜೇನ ಮಾಧವ |
ಧರ್ಮಜ್ಞೇನ ವದಾನ್ಯೇನ ಧರ್ಮಯುಕ್ತಂ ಚ ತತ್ತ್ವತಃ ॥1॥
ನಕುಲ ಮಾಧವನೇ, ಧರ್ಮಜ್ಞನೂ, ಉದಾರಿಯೂ ಆದ ಧರ್ಮರಾಜನು ಧರ್ಮಯುಕ್ತವಾದ, ಸತ್ಯವಾದ, ತಾತ್ವಿಕವಾದ ಮಾತುಗಳನ್ನು ಆಡಿದ್ದಾನೆ.
ಮತಮಾಜ್ಞಾಯ ರಾಜ್ಞಶ್ಚ ಭೀಮಸೇನೇನ ಮಾಧವ |
ಸಂಶಮಂ ಬಾಹುವೀರ್ಯಂ ಚ ಖ್ಯಾಪಿತಂ ಮಾಧವಾತ್ಮನಃ ॥2॥
ಎಲೈ ಮಾಧವನೇ, ರಾಜನಾದ ಯುಧಿಷ್ಠಿರನ ಅಭಿಪ್ರಾಯವನ್ನು ತಿಳಿದು ಭೀಮಸೇನನು ತನ್ನ ಸಂಧಿಯ ಇಚ್ಛೆಯನ್ನು ಮತ್ತು ಬಾಹುಪರಾಕ್ರಮವನ್ನು ಸ್ಪಷ್ಟಪಡಿಸಿದ್ದಾನೆ.
ತಥೈವ ಫಲ್ಗುನೇನಾಪಿ ಯದುಕ್ತಂ ತತ್ ತ್ವಯಾ ಶ್ರುತಮ್ |
ಆತ್ಮನಶ್ಚ ಮತಂ ವೀರ ಕಥಿತಂ ಭವತಾಽಸಕೃತ್ ॥3॥
ಅದರಂತೆಯೇ, ಅರ್ಜುನನೂ ಏನು ಹೇಳಿದನೋ ಅದನ್ನೂ ನೀನು ಕೇಳಿದ್ದೀಯೆ ಮತ್ತು ಎಲೈ ವೀರನೇ, ನಿನ್ನ ಅಭಿಪ್ರಾಯವನ್ನೂ ಸಹ ಅನೇಕಬಾರಿ ಹೇಳಿದ್ದೀಯೆ.
ಸರ್ವಮೇತದತಿಕ್ರಮ್ಯ ಶ್ರುತ್ವಾ ಪರಮತಂ ಭವಾನ್ |
ಯತ್ ಪ್ರಾಪ್ತಕಾಲಂ ಮನ್ಯೇಥಾಃ ತತ್ ಕುರ್ಯಾಃ ಪುರುಷೋತ್ತಮ ॥
ಎಲೈ ಪುರುಷೋತ್ತಮನೇ, ಇವೆಲ್ಲವನ್ನೂ ಮೀರಿ ನೀನು ಶತ್ರುಗಳ ಅಭಿಪ್ರಾಯದ ದೃಷ್ಟಿಯಲ್ಲಿ ಯಾವುದನ್ನು ಯೋಗ್ಯವೆಂದು ಭಾವಿಸುತ್ತೀಯೋ ಅದನ್ನೇ ಮಾಡುವವನಾಗು.
ತಸ್ಮಿಂಸ್ತಸ್ಮಿನ್ ನಿಮಿತ್ತೇ ಹಿ ಮತಂ ಭವತಿ ಕೇಶವ |
ಪ್ರಾಪ್ತಕಾಲಂ ಮನುಷ್ಯೇಣ ಸ್ವಯಂ ಕಾರ್ಯಮರಿಂದಮ ॥5॥
ಎಲೈ ಕೇಶವನೇ, ಎಲೈ ಅರಿಂದಮನೇ, ಆಯಾ ನಿಮಿತ್ತಗಳು ಉಂಟಾದಾಗ ಆಯಾ ಕಾಲದಲ್ಲಿ ಮನುಷ್ಯನು ಸ್ವತಃ ನಿರ್ಧಾರವನ್ನು ತೆಗೆದುಕೊಂಡು ಯೋಗ್ಯವಾದ ಕಾರ್ಯವನ್ನು ಮಾಡಬೇಕಾಗುತ್ತದೆ.
ಅಥವಾ ಚಿಂತಿತೋ ಹ್ಯರ್ಥಃ ಪುನರ್ಭವತಿ ಸೋಽನ್ಯಥಾ |
ಅನಿತ್ಯಬುದ್ಧಯೋ ಲೋಕೇ ನರಾಃ ಪುರುಷಸತ್ತಮ ॥6॥
ಒಂದು ರೀತಿಯಲ್ಲಿ ಯೋಚಿಸಿದ್ದ ಕಾರ್ಯವು ಇನ್ನೊಂದು ರೀತಿಯಾಗುತ್ತದೆ. ಎಲೈ ಪುರುಷೋತ್ತಮನೇ, ಲೋಕದಲ್ಲಿ ಮನುಷ್ಯರ ಬುದ್ಧಿಯು ಅನಿತ್ಯವಾದುದು.

ಅನ್ಯಥಾಬುದ್ಧಯೋ ಹ್ಯಾಸನ್ನಸ್ಮಾಸು ವನವಾಸಿಷು |
ಅದೃಶ್ಯೇಷ್ವನ್ಯಥಾ ಕೃಷ್ಣ ದೃಶ್ಯೇಷು ಪುನರನ್ಯಥಾ ॥7॥
ಎಲ್ಲೈ ಕೃಷ್ಣನೇ, ನಾವು ವನವಾಸ ಮಾಡುತ್ತಾ ಅವರ ಕಣ್ಣೆದುರಿಗೆ ಇಲ್ಲದಿದ್ದಾಗ ಅವರ ಬುದ್ಧಿಯು ಬೇರೆಯದಾಗಿದ್ದಿತು. ಈಗ ನಾವು ಅವರ ದೃಷ್ಟಿಗೆ ಬಿದ್ದಮೇಲೆ ಬೇರೆಯೇ ಆಗಿದೆ.
ಅಸ್ಮಾಕಮಪಿ ವಾರ್ಷ್ಣೇಯ ವನೇ ವಿಚರತಾಂ ತದಾ |
ನ ತಥಾ ಪ್ರಣಯೋ ರಾಜ್ಯೇ ಯಥಾ ಸಂಪ್ರತಿ ವರ್ತತೇ ॥8॥
ಎಲ್ಲೈ ವಾರ್ಷ್ಣೇಯನೇ, ನಮಗೂ ಸಹ ಕಾಡಿನಲ್ಲಿ ಸಂಚರಿಸುವಾಗ ಇಲ್ಲದಿದ್ದ ರಾಜ್ಯದ ಆಸೆಯು ನಗರಕ್ಕೆ ಬಂದಮೇಲೆ ಈಗ ಉಂಟಾಗಿದೆ.
ನಿವೃತ್ತವನವಾಸಾನ್ ನಃ ಶ್ರುತ್ವಾ ವೀರ ಸಮಾಗತಾಃ |
ಅಕ್ಷೋಹಿಣ್ಯೋ ಹಿ ಸಪ್ತೇಮಾಃ ತ್ವತ್ಪ್ರಸಾದಾಜ್ಜನಾರ್ದನ ॥9॥
ಎಲ್ಲೈ ವೀರನೇ, ಎಲ್ಲೈ ಜನಾರ್ದನನೇ, ನಾವು ವನವಾಸ ಮತ್ತು ಅಜ್ಞಾತವಾಸಗಳನ್ನು ಮುಗಿಸಿದ್ದೇವೆಂದು ತಿಳಿದು ನಿನ್ನ ಅನುಗ್ರಹದಿಂದ ಏಳು ಅಕ್ಷೋಹಿಣಿ ಸೈನ್ಯಗಳು ನಮ್ಮ ಜೊತೆಗೆ ಬಂದು ಸೇರಿವೆ.
ಇಮಾನ್ ಹಿ ಪುರುಷವ್ಯಾಘ್ರಾನ್ ಅಚಿಂತ್ಯಬಲಪೌರುಷಾನ್ |
ಆತ್ತಶಸತ್ರುನ್ ರಣೇ ದೃಷ್ಟ್ವಾ ನ ವ್ಯಥೇದಿಹ ಕಃ ಪುಮಾನ್ ॥10॥
ಕೈಯಲ್ಲಿ ಶಸ್ತ್ರವನ್ನು ಹಿಡಿದ, ಅಚಿಂತ್ಯಪರಾಕ್ರಮಗಳನ್ನುಳ್ಳ ಈ ಪುರುಷವ್ಯಾಘ್ರರನ್ನು ನೋಡಿ ಯುದ್ಧದಲ್ಲಿ ಯಾವ ಮನುಷ್ಯನಿಗೆ ದುಃಖವುಂಟಾಗುವುದಿಲ್ಲ?
ಸ ಭವಾನ್ ಕುರುಮಧ್ಯೇ ತಂ ಸಾಂತ್ವಪೂರ್ವಂ ಭಯೋತ್ತರಮ್ |
ಬ್ರೂಯಾದ್ ವಾಕ್ಯಂ ಯಥಾಽಸ್ಮತ್ತೋ ನ ವ್ಯಥೇತ ಸುಯೋಧನಃ ॥
ಆದ್ದರಿಂದ ನೀನು ಕೌರವರ ಮಧ್ಯದಲ್ಲಿ ಸುಯೋಧನನನ್ನು ಕುರಿತು ಮೊದಲು ಮಧುರವಾಗಿ, ಕೊನೆಯಲ್ಲಿ ಭಯಜನಕವಾಗಿ ಮಾತನಾಡುವವನಾಗು. ಅವನು ನಮ್ಮಿಂದ ವ್ಯಥೆಪಡದಂತೆ ಮಾತನಾಡು.
ಯುಧಿಷ್ಠಿರಂ ಭೀಮಸೇನಂ ಬೀಭತ್ಸುಂ ಚಾಪರಾಜಿತಮ್ |
ಸಹದೇವಂ ಚ ಮಾಂ ಚೈವ ತ್ವಾಂ ಚ ರಾಮಂ ಚ ಕೇಶವ ॥12॥
ಸಾತ್ಯಕಿಂ ಚ ಮಹಾವೀರ್ಯಂ ವಿರಾಟಂ ಚ ಸಹಾತ್ಮಜಮ್ |
ದ್ರುಪದಂ ಚ ಸಹಾಮಾತ್ಯಂ ಧೃಷ್ಟದ್ಯುಮ್ನಂ ಚ ಪಾರ್ಷತಮ್ ॥13॥
ಕಾಶಿರಾಜಂ ಚ ವಿಕ್ರಾಂತಂ ಧೃಷ್ಟಕೇತುಂ ಚ ಚೇದಿಪಮ್ |
ಮಾಂಸಶೋಣಿತಭೃನ್ಮರ್ತ್ಯಃ ಪ್ರತಿಯುಧ್ಯೇತ ಕೋ ಯುಧಿ ॥14॥
ಯುಧಿಷ್ಠಿರ, ಭೀಮಸೇನ, ಅಪರಾಜಿತನಾದ ಅರ್ಜುನ, ಸಹದೇವ, ನಕುಲನಾದ ನಾನು, ನೀನು, ಬಲರಾಮ, ಮಹಾಪರಾಕ್ರಮಿಯಾದ ಸಾತ್ಯಕಿ, ವಿರಾಟ ಮತ್ತು ಅವನ ಮಕ್ಕಳು, ದ್ರುಪದ ಮತ್ತು ಅವನ ಮಂತ್ರಿಗಳು, ದ್ರುಪದನ ಪುತ್ರನಾದ ಧೃಷ್ಟದ್ಯುಮ್ನ, ಪರಾಕ್ರಮಶಾಲಿಯಾದ ಕಾಶಿರಾಜ, ಚೇದಿರಾಜನಾದ ಧೃಷ್ಟಕೇತು ಇಷ್ಟು ಪುರುಷರ ಜೊತೆಯಲ್ಲಿ ಮಾಂಸರಕ್ತಸಹಿತನಾದ ಯಾವ ಪುರುಷನು ಅವರ ಜೊತೆಯಾಗಿ ಯುದ್ಧವನ್ನು ಮಾಡುತ್ತಾನೆ?
ಸ ಭವಾನ್ ಗಮನಾದೇವ ಸಾಧಯಿಷ್ಯತ್ಯಸಂಶಯಮ್ |
ಇಷ್ಟಮರ್ಥಂ ಮಹಾಬಾಹೋ ಧರ್ಮರಾಜಸ್ಯ ಕೇವಲಮ್ ॥15॥
ಎಲ್ಲೈ ಮಹಾಬಾಹುವೇ, ನೀನು ಅಲ್ಲಿಗೆ ಹೋಗುವ ಮಾತ್ರದಿಂದಲೇ ಯುಧಿಷ್ಠಿರನಿಗೆ ಇಷ್ಟವಾದ ಅರ್ಥವನ್ನು ಸಾಧಿಸುವಿ.
ವಿದುರಶ್ಚೈವ ಭೀಷ್ಮಶ್ಚ ದ್ರೋಣಶ್ಚ ಸಹಬಾಹ್ಲಿಕಃ |
ಶ್ರೇಯಃ ಸಮರ್ಥಾ ವಿಜ್ಞಾತುಮುಚ್ಯಮಾನಾಸ್ತ್ವಯಾಽನಘ ॥16॥
ಎಲ್ಲೈ ಅನಘನೇ, ನೀನು ಹೇಳುವ ಶ್ರೇಯಸ್ಕರವಾದ ಮಾತುಗಳನ್ನು ತಿಳಿದುಕೊಳ್ಳಲು ವಿದುರ, ಭೀಷ್ಮ, ದ್ರೋಣ ಮತ್ತು ಬಾಹ್ಲಿಕರು ಸಮರ್ಥರಾಗಿದ್ದಾರೆ.
ತೇ ಚೈನಮನುನೇಷ್ಯಂತಿ ಧೃತರಾಷ್ಟ್ರಂ ಜನಾಧಿಪಮ್ |
ತಂ ಚ ಪಾಪಸಮಾಚಾರಂ ಸಹಾಮಾತ್ಯಂ ಸುಯೋಧನಮ್ ॥17॥
ಪಾಪಾಚಾರವುಳ್ಳ, ಮಂತ್ರಿಗಳಿಂದೊಡಗೂಡಿದ, ಆ ದುರ್ಯೋಧನನನ್ನೂ ಮತ್ತು ರಾಜನಾದ ಧೃತರಾಷ್ಟ್ರನನ್ನೂ ಅವರು ಸಮಾಧಾನಪಡಿಸುವರು.
ಶ್ರೋತಾ ಚಾರ್ಥಸ್ಯ ವಿದುರಃ ತ್ವಂ ಚ ವಕ್ತಾ ಜನಾರ್ದನ |
ಕಿಮಿವಾರ್ಥಂ ನಿವರ್ತೇಥಾಃ ಸ್ಥಾಪಯೇಥಾ ನ ವರ್ತ್ಮನಿ ॥18॥
ಎಲ್ಲೈ ಜನಾರ್ದನನೇ, ಮಾತನಾಡುವವನು ನೀನು ಮತ್ತು ನಿನ್ನ ಮಾತುಗಳನ್ನು ಕೇಳುವವನು ವಿದುರ. ಹೀಗಿರುವಾಗ ಅವರ ಮನಸ್ಸಿನಲ್ಲಿರುವ ಯಾವ ವಿಷಯವನ್ನು ವಿಚಾರಿಸದೆ ಹಿಂದೆ ಬರುತ್ತೀಯೆ? ಯಾರನ್ನು ಸರಿಯಾದ ಮಾರ್ಗದಲ್ಲಿ ಸ್ಥಾಪಿಸುವುದಿಲ್ಲ?
ಸಹದೇವಃ
ಯದೇತತ್ ಕಥಿತಂ ರಾಜ್ಞಾ ಧರ್ಮ ಏಷ ಸನಾತನಃ |
ಯಥಾ ಚ ಯುದ್ಧಮೇವ ಸ್ಯಾತ್ ತಥಾ ಕಾರ್ಯಮರಿಂದಮ ॥19॥
ಸಹದೇವ ರಾಜನಾದ ಯುಧಿಷ್ಠಿರನು ಏನು ಹೇಳುವನೋ ಅವೆಲ್ಲವೂ ಧರ್ಮವೇ. ಆದ್ದರಿಂದ ಅರಿಂದಮನೇ, ಯುದ್ಧವೇ ಉಂಟಾಗುವಂತೆ ನೀನು ಎಲ್ಲವನ್ನು ನಿರ್ವಹಿಸು.

ಯದಿ ಪ್ರಶಮಮಿಚ್ಛೇಯುಃ ವಿನಾಶೇ ಪಾಂಡವೈಃ ಸಹ |
ತಥಾಪಿ ಯುದ್ಧಂ ದಾಶಾರ್ಹ ಯೋಜಯೇಥಾಃ ಸಹೈವ ತೈಃ ॥20॥
ಎಲೈ ದಾಶಾರ್ಹನೇ, ಅವರು ಪಾಂಡವರ ಜೊತೆಯಲ್ಲಿ ಯುದ್ಧವು ಪ್ರಾಪ್ತವಾದಾಗ ಸಂಧಿಯನ್ನೇ ಬಯಸಿದರೂ ಸಹ ಎಲೈ ದಾಶಾರ್ಹನೇ, ಅವರ ಜೊತೆಯಲ್ಲಿ ಯುದ್ಧವನ್ನೇ ಯೋಜಿಸುವವನಾಗು.
ಕಥಂ ನು ದೃಷ್ಟ್ವಾ ಪಾಂಚಾಲೀಂ ತಥಾ ಕ್ಲಿಷ್ಟಾಂ ಸಭಾಗತಾಮ್ |
ಅವಧೇನ ಪ್ರಶಾಮ್ಯೇತ ಮಮ ಮನ್ಯುಃ ಸುಯೋಧನೇ ॥21॥
ಸಭೆಯಲ್ಲಿ ಪಾಂಚಾಲಿಯು ಅಷ್ಟು ಕ್ಲೇಶವನ್ನು ಅನುಭವಿಸಿದ್ದುದನ್ನು ನೋಡಿದ ನನ್ನ ಕೋಪವು ಸುಯೋಧನನ ವಧೆಯನ್ನು ಮಾಡದೆ ಹೇಗೆ ಶಾಂತವಾದೀತು?
ಯದಿ ಭೀಮಾರ್ಜುನೌ ಕೃಷ್ಣ ಧರ್ಮರಾಜಶ್ಚ ಧಾರ್ಮಿಕಃ |
ಧರ್ಮಮುತ್ಸೃಜ್ಯ ತೇನಾಹಂ ಯೋದ್ಧುಮಿಚ್ಛಾಮಿ ಸಂಯುಗೇ ॥22॥
ಎಲೈ ಕೃಷ್ಣನೇ, ಭೀಮಾರ್ಜುನರೂ ಮತ್ತು ಧರ್ಮರಾಜನು ಧಾರ್ಮಿಕರಾಗಿ ಇದ್ದರೆ ಇರಲಿ. ನಾನು ಮಾತ್ರ ಧರ್ಮವನ್ನು ಬಿಟ್ಟು ಅವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತೇನೆ.
ಬ್ರೂಹಿ ಮದ್ವಚನಂ ಕೃಷ್ಣ ಸುಯೋಧನಮಧಾರ್ಮಿಕಮ್ |
ಕೃಚ್ಛ್ರೇ ವನೇ ವಾ ವಸ್ತವ್ಯಂ ಪುರೇ ವಾ ನಾಗಸಾಹ್ವಯೇ ॥23॥
ಎಲೈ ಕೃಷ್ಣನೇ, ಕಾಡಿನಲ್ಲಿ ಕಷ್ಟಕರವಾದ ವನವಾಸವನ್ನು ಮಾಡಬೇಕು ಅಥವಾ ಹಸ್ತಿನಪುರದಲ್ಲಿ ರಾಜ್ಯವಾಳಬೇಕು ಎಂದು ನನ್ನ ಮಾತನ್ನು ಅಧಾರ್ಮಿಕನಾದ ಆ ದುರ್ಯೋಧನನಿಗೆ ಹೇಳು.
ಸಾತ್ಯಕಿಃ
ಸತ್ಯಮಾಹ ಮಹಾಬಾಹೋ ಸಹದೇವೋ ಮಹಾಮತಿಃ |
ದುರ್ಯೋಧನೇ ವಧೇ ಶಾಂತಿಸ್ತಸ್ಯ ಕೋಪಸ್ಯ ಮೇ ಭವೇತ್ ॥24॥
ಸಾತ್ಯಕಿ ಎಲೈ ಮಹಾಬಾಹುವೇ, ಮಹಾಮೇಧಾವಿಯಾದ ಸಹದೇವನು ಸತ್ಯವನ್ನೇ ನುಡಿದಿದ್ದಾನೆ. ನನಗೂ ಸಹ ಉಂಟಾಗಿರುವ ಕೋಪಕ್ಕೆ ದುರ್ಯೋಧನನ ವಧೆಯಿಂದಲೇ ಶಾಂತಿ ಉಂಟಾಗುತ್ತದೆ.
ನ ಜಾನಾಸಿ ಯಥಾ ದೃಷ್ಟ್ವಾ ಚೀರಾಜಿನಧರಾನ್ ವನೇ |
ತವಾಪಿ ಮನ್ಯುರುದ್ಭೂತೋ ದುಃಖಿತಾನ್ ಪ್ರೇಕ್ಷ್ಯ ಪಾಂಡವಾನ್ ॥
ಕೃಷ್ಣನೇ, ಕಾಡಿನಲ್ಲಿ ನಾರುಮಡಿ, ಕೃಷ್ಣಾಜಿನವನ್ನು ಧರಿಸಿ, ದುಃಖಿತರಾದ ಪಾಂಡವರನ್ನು ನೋಡಿ ನಿನಗೆ ಎಷ್ಟು ಕೋಪವುಂಟಾಯಿತೆಂದು ನಿನಗೇ ತಿಳಿದಿಲ್ಲ.
ತಸ್ಮಾನ್ಮಾದ್ರೀಸುತಃ ಶೂರೋ ಯದಾಹ ಪುರುಷರ್ಷಭ |
ವಚನಂ ಸರ್ವಯೋಧಾನಾಂ ತನ್ಮತಂ ಪುರುಷೋತ್ತಮ ॥26॥
ಎಲೈ ಪುರುಷೋತ್ತಮನೇ, ಪುರುಷಶ್ರೇಷ್ಠನೇ, ಆದ್ದರಿಂದ ಮಾದ್ರೀಸುತನಾದ ಶೂರನಾದ ಸಹದೇವನು ಏನು ಹೇಳಿದನೋ ಅದು ಎಲ್ಲಾ ಸೈನಿಕರ ಅಭಿಪ್ರಾಯ.
ವೈಶಂಪಾಯನಃ
ಏವಂ ವದತಿ ವಾಕ್ಯಂ ತು ಯುಯುಧಾನೇ ಮಹಾಮತೌ |
ಸುಭೀಮಃ ಸಿಂಹನಾದೋಽಭೂತ್ ಯೋಧಾನಾಂ ತತ್ರ ಸರ್ವಶಃ ॥
ವೈಶಂಪಾಯನ ಮಹಾಮತಿಯಾದ ಯುಯುಧಾನನು (ಸಾತ್ಯಕಿ) ಹೀಗೆ ಮಾತನಾಡುತ್ತಿರಲು ಎಲ್ಲ ದಿಕ್ಕುಗಳಿಂದಲೂ ಯೋಧರ ಭಯಂಕರವಾದ ಸಿಂಹನಾದವು ಉಂಟಾಯಿತು.
ಸರ್ವೇ ಹಿ ಸರ್ವಶೋ ವೀರಾಃ ತದ್ವಚಃ ಪ್ರತ್ಯಪೂಜಯನ್ |
ಸಾಧು ಸಾಧ್ವಿತಿ ಶೈನೇಯಂ ಹರ್ಷಯಂತೋ ಯುಯುತ್ಸವಃ ॥28॥
ಎಲ್ಲ ವೀರರೂ ಎಲ್ಲ ಕಡೆಗಳಿಂದಲೂ ಯುದ್ಧವನ್ನು ಮಾಡಲು ಬಯಸಿ ಸಾತ್ಯಕಿಯನ್ನು ಸಂತಸಪಡಿಸುತ್ತಾ ಸಾಧು ಸಾಧು ಎಂದು ಹೇಳುತ್ತಾ ಅವನ ಮಾತುಗಳನ್ನು ಗೌರವಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಏಕೋನಾಶೀತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ತನೆಯ ಅಧ್ಯಾಯ
ದ್ರೌಪದಿಯನ್ನು ಸಮಾಧಾನ ಮಾಡಿ,
ಕೃಷ್ಣನಿಂದ ದುರ್ಯೋಧನಾದಿಗಳ ವಧೆಯ ಪ್ರತಿಜ್ಞೆ.
ವೈಶಂಪಾಯನಃ
ರಾಜ್ಞಸ್ತು ವಚನಂ ಶ್ರುತ್ವಾ ಧರ್ಮಾರ್ಥಸಹಿತಂ ಹಿತಮ್ |
ಕೃಷ್ಣಾ ದಾಶಾರ್ಹಮಾಸೀನಮಬ್ರವೀಚ್ಛೋಕಕರ್ಶಿತಾ ॥1॥

ವೈಶಂಪಾಯನ ರಾಜನಾದ ಯುಧಿಷ್ಠಿರನ ಧರ್ಮಾರ್ಥಸಹಿತವಾದ ಮಾತುಗಳನ್ನು ಕೇಳಿ, ಶೋಕದಿಂದ ಬಳಲಿದ ದ್ರೌಪದಿಯು ಕುಳಿತಿದ್ದ ಕೃಷ್ಣನನ್ನು ಕುರಿತು ಮಾತನಾಡಿದಳು.
ಸುತಾ ದ್ರುಪದರಾಜಸ್ಯ ಸ್ವಂಚಿತಾಯತಮೂರ್ಧಜಾ |
ಸಂಪೂಜ್ಯ ಸಹದೇವಂ ಚ ಸಾತ್ಯಕಿಂ ಚ ಮಹಾರಥಮ್ ॥2॥
ಭೀಮಸೇನಂ ಚ ಸಂಶಾಂತಂ ದೃಷ್ಟ್ವಾ ಪರಮದುರ್ಮನಾಃ |
ಅಶ್ರುಪೂರ್ಣೇಕ್ಷಣಾ ವಾಕ್ಯಮುವಾಚೇದಂ ಮನಸ್ವಿನೀ ॥3॥
ದ್ರುಪದರಾಜಕುಮಾರಿಯಾದ ನೀಳವಾದ ಗುಂಗುರುಕೂದಲುಗಳಿಂದ ಕೂಡಿದ, ಕೇಶವುಳ್ಳ ಅವಳು ಸಹದೇವನನ್ನೂ ಮತ್ತು ಮಹಾರಥನಾದ ಸಾತ್ಯಕಿಯನ್ನೂ ಪೂಜಿಸಿ, ಭೀಮಸೇನನು ಮೃದುವಾಗಿರುವುದನ್ನು ನೋಡಿ, ಬಹಳ ದುಃಖಿತಳಾಗಿ ಮಾನವತಿಯಾದ ಅವಳು ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಈ ಮಾತುಗಳನ್ನು ಆಡಿದಳು.
ದ್ರೌಪದೀ
ವಿದಿತಂ ತೇ ಮಹಾಬಾಹೋ ಧರ್ಮಜ್ಞ ಮಧುಸೂದನ |
ಯಥಾ ನಿಕೃತಿಮಾಸ್ಥಾಯ ಭ್ರಂಶಿತಾಃ ಪಾಂಡವಾಃ ಸುಖಾತ್ |
ಧೃತರಾಷ್ಟ್ರಸ್ಯ ಪುತ್ರೇಣ ಸಾಮಾತ್ಯೇನ ಜನಾರ್ದನ ॥4॥
ದ್ರೌಪದೀ ಎಲ್ಲೈ ಧರ್ಮಜ್ಞನಾದ ಮಧುಸೂದನನೇ, ಮಹಾಬಾಹುವೇ, ಜನಾರ್ದನನೇ, ಪಾಂಡವರು ಧೃತರಾಷ್ಟ್ರಪುತ್ರನಾದ, ಮಂತ್ರಿಗಳಿಂದ ಸಹಿತನಾದ ದುರ್ಯೋಧನನ ಮೋಸದಿಂದ ಹೇಗೆ ರಾಜ್ಯಭ್ರಷ್ಟರಾದರೆಂದು ನೀನು ತಿಳಿದಿದ್ದೀಯೆ.
ಯಥಾ ಚ ಸಂಜಯೋ ರಾಜ್ಞಾ ಮಂತ್ರಂ ರಹಸಿ ಶ್ರಾವಿತಃ |
ಯುಧಿಷ್ಠಿರೇಣ ದಾಶಾರ್ಹ ತಚ್ಚಾಪಿ ವಿದಿತಂ ತವ ॥5॥
ಯಥೋಕ್ತಃ ಸಂಜಯಶ್ಚೈವ ತಚ್ಚ ಸರ್ವಂ ಶ್ರುತಂ ತ್ವಯಾ ॥6॥
ಎಲೈ ದಾಶಾರ್ಹನೇ, ರಾಜನಾದ ಯುಧಿಷ್ಠಿರನು ಏಕಾಂತದಲ್ಲಿ ಸಂಜಯನಿಗೆ ಯಾವ ಮಂತ್ರಾಲೋಚನೆಯನ್ನು ಹೇಳಿದನು ಎಂಬುದನ್ನು ನೀನು ಕೇಳಿದ್ದೀಯೆ. ಸಂಜಯನು ಅದಕ್ಕೆ ಏನು ಉತ್ತರವನ್ನು ಹೇಳಿದನೆಂಬುದನ್ನೂ ಸಹ ನೀನು ಕೇಳಿದ್ದೀಯೆ.
ಪಂಚ ನಸ್ತಾತ ದೀಯಂತಾಂ ಗ್ರಾಮಾ ಇತಿ ಮಹಾದ್ಯುತೇ |
ಕುಶಸ್ಥಲಂ ವೃಕಸ್ಥಲಂ ವಾಸಂತೀಂ ವಾರಣಾವತಮ್ ॥7॥
ಅವಸಾನಂ ಮಹಾಬಾಹೋ ಕಿಂಚಿದೇಕಂ ಚ ಪಂಚಮಮ್ |
ಇತಿ ದುರ್ಯೋಧನೋ ವಾಚ್ಯಃ ಸುಹೃದಶ್ಚಾಸ್ಯ ಕೇಶವ ॥8॥
ಪ್ರೀತಿಪಾತ್ರನಾದ ದುರ್ಯೋಧನನೇ, ಮಹಾತೇಜಸ್ವಿಯೇ, ನಮಗೆ ಕುಶಸ್ಥಲ, ವೃಕಸ್ಥಲ, ವಾಸಂತಿ, ವಾರಣಾವತ ಮತ್ತು ಐದನೆಯ ಯಾವುದಾದರೂ ಒಂದು ಗ್ರಾಮ ಇವುಗಳನ್ನು ಕೊಡು ಎಂದು ದುರ್ಯೋಧನಿಗೂ ಮತ್ತು ಅವನ ಸುಹೃದರಿಗೂ ಹೇಳು ಎಂಬುದು ಎಲೈ ಕೇಶವನೇ, ಆ ಮಂತ್ರಾಲೋಚನೆಯಾಗಿದ್ದಿತು.
ನ ಚಾಪಿ ಹ್ಯಕರೋದ್ ವಾಕ್ಯಂ ಶ್ರುತ್ವಾ ಕೃಷ್ಣ ಸುಯೋಧನಃ |
ಯುಧಿಷ್ಠಿರಸ್ಯ ದಾಶಾರ್ಹ ಶ್ರೀಮತಃ ಸಂಧಿಮಿಚ್ಛತಃ ॥9॥
ಎಲೈ ಕೃಷ್ಣನೇ, ಎಲೈ ದಾಶಾರ್ಹನೇ, ಸಂಧಿಯನ್ನು ಬಯಸುವ ಕಾಂತಿಯುಕ್ತನಾದ ಯುಧಿಷ್ಠಿರನ ಆ ಮಾತುಗಳನ್ನೂ ಸುಯೋಧನನು ಕೇಳಲಿಲ್ಲ.
ಅಪ್ರದಾನೇನ ರಾಜ್ಯಸ್ಯ ಯದಿ ಕೃಷ್ಣ ಸುಯೋಧನಃ |
ಸಂಧಿಮಿಚ್ಛೇನ್ನ ಕರ್ತವ್ಯಂ ತತ್ರ ಗತ್ವಾ ಕಥಂಚನ ॥10॥
ರಾಜ್ಯವನ್ನು ಕೊಡದೆ ಸುಯೋಧನನು ಸಂಧಿಯನ್ನು ಬಯಸಿದರೆ ಅಲ್ಲಿಗೆ ಹೋಗಿ ಯಾವ ರೀತಿಯಿಂದಲೂ ನೀನು ಸಂಧಿಯನ್ನು ಮಾಡಿಕೊಳ್ಳಬಾರದು.
ಶಕ್ಷ್ಯಂತಿ ಹಿ ಮಹಾಬಾಹೋ ಪಾಂಡವಾಃ ಸೃಂಜಯೈಃ ಸಹ |
ಧಾರ್ತರಾಷ್ಟ್ರಬಲಂ ಘೋರಂ ಕ್ರುದ್ಧಂ ಪ್ರತಿಸಮಾಸಿತುಮ್ ॥11॥
ಎಲೈ ಮಹಾಬಾಹುವೇ, ಪಾಂಡವರು ಮತ್ತು ಸೃಂಜಯರು ಸೇರಿ ದುರ್ಯೋಧನನ ಘೋರವಾದ ಮತ್ತು ಕ್ರೋಧದಿಂದ ಕೂಡಿದ ಸೈನ್ಯವನ್ನು ಎದುರಿಸಲು ಸಮರ್ಥರಾಗಿದ್ದಾರೆ.
ನ ಹಿ ಸಾಮ್ನಾ ನ ದಾನೇನ ಶಕ್ಯೋಽರ್ಥಸ್ತೇಷು ಕಶ್ಚನ |
ತಸ್ಮಾತ್ ತೇಷು ನ ಕರ್ತವ್ಯಾ ಕೃಪಾ ತೇ ಮಧುಸೂದನ ॥12॥
ಸಾಮದಿಂದಲಾಗಲೀ, ದಾನದಿಂದಲಾಗಲೀ ವ್ಯವಹರಿಸಿ ಅವರಿಂದ ಏನೂ ಪಡೆಯಲು ಸಾಧ್ಯವಿಲ್ಲ. ಮಧುಸೂದನನೇ, ಆದ್ದರಿಂದ ಅವರಲ್ಲಿ ದಯೆಯನ್ನು ತೋರಿಸಬಾರದು.
ಸಾಮ್ನಾ ದಾನೇನ ವಾ ಕೃಷ್ಣ ಯೇ ನ ಶಾಮ್ಯಂತಿ ಶತ್ರವಃ |
ಕ್ಷೇಪ್ತವ್ಯಾಸ್ತೇ ತು ದಂಡೇನ ಜೀವಿತಂ ಪರಿರಕ್ಷತಾ ॥13॥
ಎಲೈ ಕೃಷ್ಣನೇ, ಯಾವ ಶತ್ರುಗಳು ಸಾಮೋಪಾಯದಿಂದ ಅಥವಾ ದಾನೋಪಾಯದಿಂದ ಬಗ್ಗುವುದಿಲ್ಲವೋ ಅವರಿಗೆ ತಾನು ಬದುಕಲು ಬಯಸುವ ಕ್ಷತ್ರಿಯನು ದಂಡವನ್ನೇ ಪ್ರಯೋಗಿಸಬೇಕು.
ತಸ್ಮಾತ್ ತೇಷು ಮಹಾನ್ ದಂಡಃ ಕ್ಷೇಪ್ತವ್ಯಃ ಕ್ಷಿಪ್ರಮಚ್ಯುತ |
ತ್ವಯಾ ಚೈವ ಮಹಾಬಾಹೋ ಪಾಂಡವೈಃ ಸಹ ಸೃಂಜಯೈಃ ॥14॥
ಎಲೈ ಕೃಷ್ಣನೇ, ಮಹಾಬಾಹುವೇ, ಆದ್ದರಿಂದ ನೀನೂ ಪಾಂಡವರೂ ಮತ್ತು ಸೃಂಜಯರೂ ಸೇರಿ ಅವನಿಗೆ ದೊಡ್ಡ ದಂಡವನ್ನೇ

ವಿಧಿಸಬೇಕು.
ಏತತ್ ಸಮರ್ಥಂ ಪಾರ್ಥಾನಾಂ ತವ ಚೈವ ಯಶಸ್ಕರಮ್ |
ಕ್ರಿಯಮಾಣಂ ಭವೇತ್ ಕೃಷ್ಣ ಕ್ಷತ್ರಸ್ಯ ಚ ಸುಖಾವಹಮ್ ||15||
ಎಲೈ ಕೃಷ್ಣನೇ, ಹಾಗೆ ಮಾಡಿದರೆ ಇದು ಪಾಂಡವರಿಗೆ ಯೋಗ್ಯವಾದುದು, ನಿನಗೆ ಕೀರ್ತಿಕರವಾದುದು ಮತ್ತು ಎಲ್ಲಾ ಕ್ಷತ್ರಿಯರಿಗೂ ಸುಖವನ್ನು ಉಂಟುಮಾಡುವಂತಹದಾಗುತ್ತದೆ.
ಕ್ಷತ್ರಿಯೇಣ ಹಿ ಹಂತವ್ಯಃ ಕ್ಷತ್ರಿಯೋ ಲೋಭಮಾಸ್ಥಿತಃ |
ಅಕ್ಷತ್ರಿಯೋ ವಾ ದಾಶಾರ್ಹ ಸ್ವಧರ್ಮಮನುತಿಷ್ಠತಾ ||16||
ಅನ್ಯತ್ರ ಬ್ರಾಹ್ಮಣಾತ್ ತಾತ ಸರ್ವಪಾಪೇಷ್ವವಸ್ಥಿತಮ್ |
ಗುರುರ್ಹಿ ಸರ್ವವರ್ಣಾನಾಂ ಬ್ರಾಹ್ಮಣಃ ಪ್ರಸೃತಾಗ್ರಭುಕ್ ||17||
ಎಲೈ ಕೃಷ್ಣನೇ, ಕ್ಷತ್ರಿಯನಾದವನು ಲೋಭಿಯಾದ ಕ್ಷತ್ರಿಯನನ್ನು ವಧೆ ಮಾಡಬೇಕು. ಪ್ರೀತಿಪಾತ್ರನೇ, ದಾಶಾರ್ಹನೇ, ಅಗ್ರಭೋಜಿಯಾದ ಬ್ರಾಹ್ಮಣನು ಎಲ್ಲ ವರ್ಣದವರಿಗೂ ಗುರುವಾದವನು. ಅವನು ಏನು ಪಾಪವನ್ನು ಮಾಡಿದರೂ ಅವನನ್ನು ಬಿಟ್ಟು ಸ್ವಧರ್ಮದಲ್ಲಿ ನಿರತನಾದ ಕ್ಷತ್ರಿಯನು ಕ್ಷತ್ರಿಯರಲ್ಲದವರನ್ನೂ ದುಷ್ಟರಾದವರನ್ನೂ ವಧೆ ಮಾಡಬೇಕು.
ಯಥಾಽವಧ್ಯೇ ಭವೇದ್ ದೋಷೋ ವಧ್ಯಮಾನೇ ಜನಾರ್ದನ |
ಸ ವಧ್ಯಸ್ಯಾವಧೇ ದೋಷ ಇತಿ ಧರ್ಮವಿದೋ ವಿದುಃ ||18||
ಜನಾರ್ದನನೇ, ಅವಧ್ಯನಾದವನನ್ನು ವಧೆ ಮಾಡಿದರೆ ಹೇಗೆ ದೋಷವಾಗುತ್ತದೆಯೋ ಅದರಂತೆ ವಧ್ಯನಾದವನನ್ನು ವಧೆ ಮಾಡದಿದ್ದರೆ ದೋಷ ಉಂಟಾಗುವುದು ಎಂದು ಧರ್ಮವನ್ನು ತಿಳಿದವರು ಹೇಳುತ್ತಾರೆ (ತಿಳಿದಿದ್ದಾರೆ).
ಯಥಾ ತ್ವಾಂ ನ ಸ್ಪೃಶೇದೇಷ ದೋಷಃ ಕೃಷ್ಣ ತಥಾ ಕುರು |
ಪಾಂಡವೈಃ ಸಹ ದಾಶಾರ್ಹ ಸೃಂಜಯೈಶ್ಚ ಮಹಾಬಲ ||19||
ಎಲೈ ಮಹಾಬಲನಾದ ಕೃಷ್ಣನೇ, ದಾಶಾರ್ಹನೇ, ಪಾಂಡವರು ಮತ್ತು ಸೃಂಜಯರಿಂದ ಕೂಡಿದ ನಿನಗೆ ಈ ದೋಷವು ತಟ್ಟದಂತೆ ನಡೆದುಕೊ.
ಪುನರುಕ್ತಂ ಚ ವಕ್ಷ್ಯಾಮಿ ವಿಸ್ರಂಭೇಣ ಜನಾರ್ದನ |
ಕಾ ನು ಸೀಮಂತಿನೀ ಮಾದೃಕ್ ಪೃಥಿವ್ಯಾಮಸ್ತಿ ಕೇಶವ ||20||
ಎಲೈ ಜನಾರ್ದನನೇ, ಹಿಂದೆ ಹೇಳಿದುದನ್ನೇ ಇನ್ನೊಮ್ಮೆ ಹೇಳುತ್ತಿದ್ದೇನೆ. ಎಲೈ ಕೇಶವನೇ, ಈ ಭೂಮಿಯಲ್ಲಿ ನನ್ನಂತಹ ಸುಮಂಗಲಿಯು ಯಾವಳಿದ್ದಾಳೆ?
ಸುತಾ ದ್ರುಪದರಾಜಸ್ಯ ವೇದಿಮಧ್ಯಾತ್ ಸಮುತ್ಥಿತಾ |
ಧೃಷ್ಟದ್ಯುಮ್ನಸ್ಯ ಭಗಿನೀ ತವ ಕೃಷ್ಣ ಪ್ರಿಯಾ ಸಖೀ ||21||
ಎಲೈ ಕೃಷ್ಣನೇ, ನಾನು ವೇದಿಮಧ್ಯದಿಂದ ಎದ್ದುಬಂದ ದ್ರುಪದರಾಜನ ಮಗಳು, ಧೃಷ್ಟದ್ಯುಮ್ನನ ತಂಗಿ ಮತ್ತು ನಿನ್ನ ಪ್ರಿಯಳಾದ ಸಖೀ.
ಆಜಮೀಢಕುಲಂ ಪ್ರಾಪ್ತಾ ಸ್ನುಷಾ ಪಾಂಡೋರ್ಮಹಾತ್ಮನಃ |
ಮಹಿಷೀ ಪಾಂಡುಪುತ್ರಾಣಾಂ ಪಂಚೇಂದ್ರಸಮವರ್ಚಸಾಮ್ ||22||
ಮಹಾತ್ಮನಾದ ಪಾಂಡುವಿನ ಸೊಸೆಯಾಗಿ ಆಜಮೀಢಕುಲವನ್ನು ಸೇರಿದೆ. ಪಂಚೇಂದ್ರಿಯಗಳಿಗೆ ಸಮಾನವಾದ ತೇಜಸ್ಸುಳ್ಳ ಪಾಂಡುಪುತ್ರರಿಗೆ ಪಟ್ಟದ ರಾಣಿಯಾದೆ.
ಸುತಾ ಮೇ ಪಂಚಭಿರ್ವೀರೈಃ ಪಂಚ ಜಾತಾ ಮಹಾರಥಾಃ |
ಅಭಿಮನ್ಯುರ್ಯಥಾ ಕೃಷ್ಣ ತಥಾ ತೇ ತವ ಧರ್ಮತಃ ||23||
ಎಲೈ ಕೃಷ್ಣನೇ, ನಿನ್ನ ತಂಗಿಯಾದ ಸುಭದ್ರೆಯಲ್ಲಿ ಹೇಗೆ ಅಭಿಮನ್ಯುವು ಧರ್ಮದಿಂದ ಜನಿಸಿದನೋ ಅದರಂತೆ ವೀರರಾದ ಪಂಚಪಾಂಡವರಿಂದ ನನಗೆ ಮಹಾರಥರಾದ ಐದುಮಕ್ಕಳು ಜನಿಸಿದರು.
ಸಾಽಹಂ ಕೇಶಗ್ರಹಂ ಪ್ರಾಪ್ತಾ ಪರಿಕ್ಲಿಷ್ಟಾ ಸಭಾಂ ಗತಾ |
ಪಶ್ಯತಾಂ ಪಾಂಡುಪುತ್ರಾಣಾಂ ತ್ವಯಿ ಜೀವತಿ ಕೇಶವ ||24||
ಅಂತಹ ನಾನು ನೀನು ಬದುಕಿರುವಾಗ, ಪಾಂಡವರು ನೋಡುತ್ತಿರುವಾಗ, ಸಭೆಗೆ ಎಳೆತರಲ್ಪಟ್ಟು, ಕೇಶಗ್ರಹವನ್ನು ಹೊಂದಿ ಬಹಳ ಕ್ಲೇಶಕ್ಕೆ ಒಳಗಾದೆ.
ಜೀವತ್ಸು ಪಾಂಡುಪುತ್ರೇಷು ಪಾಂಚಾಲೇಷ್ವಥ ವೃಷ್ಣಿಷು |
ದಾಸೀಭೂತಾಽಸ್ಮಿ ಪಾಪಾನಾಂ ಸಭಾಮಧ್ಯೇ ವ್ಯವಸ್ಥಿತಾ ||25||
ಪಾಂಡವರೂ ಪಾಂಚಾಲರೂ ಮತ್ತು ವೃಷ್ಣಿಗಳೂ ಬದುಕಿರುವಾಗ ನಾನು ಪಾಪಿಗಳ ಸಭೆಯ ಮಧ್ಯದಲ್ಲಿ ದಾಸಿಯಾಗಿ ಇದ್ದೆನು.
ನಿರಮರ್ಷೇಷ್ವಚೇಷ್ಟೇಷು ಪ್ರೇಕ್ಷಮಾಣೇಷು ಪಾಂಡುಷು |
ಪಾಹಿ ಮಾಮಿತಿ ಗೋವಿಂದ ಮನಸಾ ಚಿಂತಿತೋಽಸ್ಮಿ ಮೇ ||26||
ಕ್ರೋಧಕ್ಕೆ ಒಳಗಾಗದ ಪಾಂಡವರು ನೋಡುತ್ತಾ ಸುಮ್ಮನೆ ಕುಳಿತಿರುವಾಗ ಗೋವಿಂದ, ನನ್ನನ್ನು ರಕ್ಷಿಸು ಎಂದು ನಿನ್ನನ್ನು ಮನಸ್ಸಿನಲ್ಲಿಯೇ ಚಿಂತಿಸಿದೆನು.
ಯತ್ರ ಮಾಂ ಭಗವನ್ ರಾಜಾ ಶ್ವಶುರೋ ವಾಕ್ಯಮಬ್ರವೀತ್ |
ವರಂ ವೃಣೀಷ್ವ ಪಾಂಚಾಲಿ ವರಾರ್ಹಾಽಸಿ ಮತಾ ಮಮ ||27||
ಎಲೈ ಭಗವಂತನೇ, ಅಲ್ಲಿ ಮಾವನಾದ ಧೃತರಾಷ್ಟ್ರರಾಜನು, ಪಾಂಚಾಲಿಯೇ ನೀನು ನನ್ನಿಂದ ವರವನ್ನು ಪಡೆಯಲು

ಯೋಗ್ಯಳಾಗಿದ್ದೀಯೆ. ಆದ್ದರಿಂದ ವರವನ್ನು ಕೇಳು ಎಂದು ಹೇಳಿದನು.
ಅದಾಸಾಃ ಪಾಂಡವಾಃ ಸಂತು ಸರಥಾಃ ಸಾಯುಧಾ ಇತಿ |
ಮಯೋಕ್ತೇ ಯತ್ರ ನಿರ್ಮುಕ್ತಾ ವನವಾಸಾಯ ಕೇಶವ ||28||
ತಮ್ಮ ರಥ ಮತ್ತು ಆಯುಧಗಳಿಂದ ಕೂಡಿದ ಪಾಂಡವರು ತಮ್ಮ ದಾಸ್ಯದಿಂದ ನಿವೃತ್ತರಾಗಲಿ ಎಂದು ನಾನು ಹೇಳಿದಾಗ ಪಾಂಡವರು ಬಿಡುಗಡೆ ಹೊಂದಿದರು. ಆದರೆ ಎಲೈ ಕೇಶವನೇ, ಅದು ವನವಾಸಕ್ಕೆ ಹೋಗುವುದರಲ್ಲಿ ಪರ್ಯವಸಾನವನ್ನು ಹೊಂದಿತು.
ಏವಂವಿಧಾನಾಂ ದುಃಖಾನಾಮಭಿಜ್ಞೋಽಸಿ ಜನಾರ್ದನ |
ತ್ರಾಹಿ ಮಾಂ ಪುಂಡರೀಕಾಕ್ಷ ಸಭರ್ತೃಜ್ಞಾತಿಬಾಂಧವಾಮ್ ||29||
ಎಲೈ ಜನಾರ್ದನನೇ, ನಾನು ಅನುಭವಿಸಿದ ಇಂತಹ ದುಃಖಗಳನ್ನು ನೀನು ಚೆನ್ನಾಗಿ ತಿಳಿದಿದ್ದೀಯೆ. ಪುಂಡರೀಕಾಕ್ಷನೇ, ಪತಿಗಳು, ದಾಯಾದಿಗಳು ಮತ್ತು ಬಂಧುಗಳಿಂದ ಕೂಡಿದ ನನ್ನನ್ನು ರಕ್ಷಿಸು.
ನನ್ವಹಂ ಕೃಷ್ಣ ಭೀಷ್ಮಸ್ಯ ಧೃತರಾಷ್ಟ್ರಸ್ಯ ಚೋಭಯೋಃ |
ಸ್ನುಷಾ ಭವಾಮಿ ಧರ್ಮೇಣ ಸಾಽಹಂ ದಾಸೀಕೃತಾಽಭವಮ್ ||30||
ಎಲೈ ಕೃಷ್ಣನೇ, ಧರ್ಮದಿಂದ ನೋಡಿದರೆ ನಾನು ಭೀಷ್ಮ ಮತ್ತು ಧೃತರಾಷ್ಟ್ರರಿಬ್ಬರಿಗೂ ಸೊಸೆಯಷ್ಟೆ! ಅಂತಹ ನಾನು ದಾಸಿಯಾಗಿ ಮಾಡಲ್ಪಟ್ಟೆ.
ಧಿಕ್ ಪಾರ್ಥಸ್ಯ ಧನುಷ್ಮತ್ತಾಂ ಭೀಮಸೇನಸ್ಯ ಧಿಗ್ ಬಲಮ್ |
ಯತ್ರ ದುರ್ಯೋಧನಃ ಕೃಷ್ಣ ಮುಹೂರ್ತಮಪಿ ಜೀವತಿ ||31||
ಎಲೈ ಕೃಷ್ಣನೇ, ದುರ್ಯೋಧನನು ಒಂದು ಮುಹೂರ್ತಕಾಲವಾದರೂ ಜೀವಿಸಿರುವುದಾದರೆ ಅರ್ಜುನನ ಧನುರ್ವಿದ್ಯೆಗೆ ಧಿಕ್ಕಾರವಿರಲಿ. ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ.
ಯದಿ ತೇಽಹಮನುಗ್ರಾಹ್ಯಾ ಯದಿ ತೇಽಸ್ತಿ ಕೃಪಾ ಮಯಿ |
ಧಾರ್ತರಾಷ್ಟ್ರೇಷು ವೈ ಕೋಪಃ ಸರ್ವಃ ಕೃಷ್ಣ ವಿಧೀಯತಾಮ್ ||32||
ಎಲೈ ಕೃಷ್ಣನೇ, ನೀನು ನನಗೆ ಅನುಗ್ರಹವನ್ನು ಮಾಡುವುದಾದರೆ, ನಿನಗೆ ನನ್ನಲ್ಲಿ ದಯೆ ಇದ್ದರೆ ನಿನ್ನ ಕೋಪವನ್ನೆಲ್ಲಾ ದುರ್ಯೋಧನಾದಿಗಳ ಮೇಲೆ ತಿರುಗಿಸು.
ವೈಶಂಪಾಯನಃ
ಇತ್ಯುಕತ್ವ ಮೃದುಸಂಭಾರಂ ವೃಜಿನಾಗ್ರಂ ಸುದರ್ಶನಮ್ |
ಸುನೀಲಮಸಿತಾಪಾಂಗೀ ಪುಣ್ಯಗಂಧಾಧಿವಾಸಿತಮ್ ||33||
ಸರ್ವಲಕ್ಷಣಸಂಪನ್ನಂ ಮಹಾಭುಜಗವರ್ಚಸಮ್ |
ಕೇಶಪಕ್ಷಂ ವರಾರೋಹಾ ಗೃಹ್ಯ ಸವ್ಯೇನ ಪಾಣಿನಾ ||34||
ಪದ್ಮಾಕ್ಷೀ ಪುಂಡರೀಕಾಕ್ಷಮುಪೇತ್ಯ ಗಜಗಾಮಿನೀ |
ಅಶ್ರುಪೂರ್ಣೇಕ್ಷಣಾ ಕೃಷ್ಣಾ ಕೃಷ್ಣಂ ವಚನಮಬ್ರವೀತ್ ||35||
ವೈಶಂಪಾಯನ ಹೀಗೆ ಹೇಳಿ ತನ್ನ ಮೃದುವಾದ, ಒಳ್ಳೆಯ ಭಾರವುಳ್ಳ ತುದಿಯ ಮುಂಗುರುಳಿನಿಂದ ಕೂಡಿದ್ದ, ನೋಡಲು ಸುಂದರವಾದ, ಪುಣ್ಯಗಂಧಗಳಿಂದ ಭೂಷಿತವಾದ, ಬಹಳ ಕಪ್ಪಾದ, ಸರ್ವಲಕ್ಷಣಸಂಪನ್ನವಾದ, ದೊಡ್ಡ ಸರ್ಪವನ್ನು ಹೋಲುವ ಕೇಶಸಮೂಹವನ್ನು ತನ್ನ ಎಡಗೈಯಲ್ಲಿ ಹಿಡಿದು ಕಪ್ಪಾದ ಕಣ್ಣುಳ್ಳವಳೂ, ಸುಂದರವಾದ ನಿತಂಬವುಳ್ಳವಳೂ, ಪದ್ಮನೇತ್ರೆಯೂ, ಗಜಗಾಮಿನಿಯೂ ಆದ ದ್ರೌಪದಿಯು ಪುಂಡರೀಕಾಕ್ಷನಾದ ಕೃಷ್ಣನ ಸಮೀಪಕ್ಕೆ ಬಂದು ನೀರುತುಂಬಿದ ಕಣ್ಣುಗಳುಳ್ಳವಳಾಗಿ ಕೃಷ್ಣನನ್ನು ಕುರಿತು ಮಾತನಾಡಿದಳು.
ಅಯಂ ತೇ ಪುಂಡರೀಕಾಕ್ಷ ದುಃಶಾಸನಕರೋದ್ಧೃತಃ |
ಸ್ಮರ್ತವ್ಯಃ ಸರ್ವಕಾಲೇಷು ಪರೇಷಾಂ ಸಂಧಿಮಿಚ್ಛತಾಮ್ ||36||
ಎಲೈ ಪುಂಡರೀಕಾಕ್ಷನೇ, ಶತ್ರುಗಳ ಜೊತೆಯಲ್ಲಿ ಸಂಧಿಯನ್ನು ಬಯಸುವ ಮಾತುಗಳನ್ನು ಆಡುವಾಗಲೆಲ್ಲಾ ದುಶ್ಶಾಸನನ ಕೈಯಲ್ಲಿ ಎತ್ತಲ್ಪಟ್ಟ ಈ ನನ್ನ ಕೇಶಪಾಶಗಳನ್ನು ನೀನು ಸ್ಮರಿಸಿಕೊಳ್ಳಬೇಕು.
ಯದಿ ಭೀಮಾರ್ಜುನೌ ಕೃಷ್ಣ ಕೃಪಣೌ ಸಂಧಿಕಾಮುಕೌ |
ಪಿತಾ ಮೇ ಯೋತ್ಸ್ಯತೇ ವೃದ್ಧಃ ಸಹ ಪುತ್ರೈರ್ಮಹಾರಥೈಃ ||37||
ಎಲೈ ಕೃಷ್ಣನೇ, ಭೀಮಾರ್ಜುನರು ಕಾರ್ಪಣ್ಯದಿಂದ ಸಂಧಿಯನ್ನು ಬಯಸಿದರೆ ವೃದ್ಧನಾದ ನನ್ನ ತಂದೆ, ಮಹಾರಥರಾದ ತನ್ನ ಪುತ್ರರ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಪಂಚ ಚೈವ ಮಹಾವೀರ್ಯಾಃ ಪುತ್ರಾ ಮೇ ಮಧುಸೂದನ |
ಅಭಿಮನ್ಯುಂ ಪುರಸ್ಕೃತ್ಯ ಯೋತ್ಸ್ಯಂತೇ ಕುರುಭಿಃ ಸಹ ||38||
ಎಲೈ ಮಧುಸೂದನನೇ, ಮಹಾಪರಾಕ್ರಮಿಗಳಾದ ನನ್ನ ಐದುಜನ ಮಕ್ಕಳು ಅಭಿಮನ್ಯುವನ್ನು ಮುಂದೆ ಮಾಡಿಕೊಂಡು ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡುವರು.
ದುಃಶಾಸನಭುಜಂ ಶ್ಯಾಮಂ ಸಂಛಿನ್ನಂ ಪಾಂಸುಕುಂಠಿತಮ್ |
ಯದ್ಯಹಂ ತು ನ ಪಶ್ಯಾಮಿ ಕಾ ಶಾಂತಿರ್ಹೃದಯಸ್ಯ ಮೇ ||39||
ದುಶ್ಶಾಸನನ ಬಾಹುವು ಕತ್ತರಿಸಲ್ಪಟ್ಟು, ಭೂಮಿಯ ಮೇಲೆ ಧೂಳಿನಿಂದ ಆವೃತವಾದುದನ್ನು ನಾನು ನೋಡದಿದ್ದರೆ ನನ್ನ ಮನಸ್ಸಿಗೆ ಹೇಗೆ ಶಾಂತಿಯುಂಟಾಗುತ್ತದೆ?

ತ್ರಯೋದಶ ಹಿ ವರ್ಷಾಣಿ ಪ್ರತೀಕ್ಷಂತ್ಯಾ ಗತಾನಿ ಮೇ |
ನಿಧಾಯ ಹೃದಯೇ ಮನ್ಯುಂ ಪ್ರದೀಪ್ತಮಿವ ಪಾವಕಮ್ ॥40॥
ಉರಿಯುವ ಅಗ್ನಿಯಂತಿರುವ ಈ ನನ್ನ ಕ್ರೋಧವನ್ನು ಹೃದಯದಲ್ಲಿ ತುಂಬಿಕೊಂಡು, ಇದನ್ನು ನಿರೀಕ್ಷೆ ಮಾಡುತ್ತಾ ನನಗೆ ಹದಿಮೂರುವರ್ಷಗಳು ಕಳೆದವು.
ವಿದೀರ್ಯತೇ ಮೇ ಹೃದಯಂ ಭೀಮವಾಕ್ಶಲ್ಯಪೀಡಿತಮ್ |
ಯೋಽಯಮದ್ಯ ಮಹಾಬಾಹುರ್ಧರ್ಮಂ ಸಮನುಪಶ್ಯತಿ ॥41॥
ಮಹಾಬಾಹುವಾದ ಭೀಮಸೇನನು ಈ ದಿನ ಧರ್ಮದ ದೃಷ್ಟಿಯುಳ್ಳವನಾಗಿ ಆಡಿದ ಸಂಧಿಯ ಮಾತುಗಳು ಶಲ್ಯದಿಂದ ಇರಿದಂತೆ ನನ್ನ ಹೃದಯವನ್ನು ಪೀಡಿಸುತ್ತಿವೆ.
ವೈಶಂಪಾಯನಃ
ಇತ್ಯುಕ್ತ್ವಾ ಬಾಷ್ಪಸನ್ನೇನ ಕಂಠೇನಾಯತಲೋಚನಾ |
ರುರೋದ ಕೃಷ್ಣಾ ಸೋತ್ಕಂಠಂ ಸುಸ್ವರಂ ಬಾಷ್ಪಗದ್ಗದಮ್ ॥42॥
ವೈಶಂಪಾಯನ ಹೀಗೆ ಹೇಳಿ ವಿಶಾಲನೇತ್ರೆಯಾದ ದ್ರೌಪದಿಯು ಕಣ್ಣೀರಿನಿಂದ ಗದ್ಗದವಾದ ಕಂಠದಿಂದ ಸುಸ್ವರದಿಂದ ಬಹಳ ಉದ್ವೇಗದಿಂದ ಅತ್ತಳು.
ಸ್ತನೌ ಪೀನಾಯತಶ್ರೋಣೀ ಸಹಿತಾವಭಿವರ್ಷತೀ |
ದ್ರವೀಭೂತಮಿವಾತ್ಯುಷ್ಣಂ ಮುಂಚಂತೀ ವಾರಿ ನೇತ್ರಜಮ್ ॥43॥
ತನ್ನ ಸ್ತನಗಳನ್ನು ಮತ್ತು ವಿಸ್ತಾರವಾದ, ಪೀನವಾದ ನಿತಂಬಗಳನ್ನು ಬಿಸಿಯಾದ ತನ್ನ ಕಣ್ಣೀರಿನಿಂದ ತೋಯಿಸುತ್ತಾ ತನ್ನ ಕಣ್ಣುಗಳಿಂದ ದ್ರವೀಭೂತವಾದ ಕಣ್ಣೀರನ್ನು ಸುರಿಸುತ್ತಾ ಅತ್ತಳು.
ತಾಮುವಾಚ ಮಹಾಬಾಹುಃ ಕೇಶವಃ ಪರಿಸಾಂತ್ವಯನ್ ॥44॥
ಅಚಿರಾದ್ ದ್ರಕ್ಷ್ಯಸೇ ಕೃಷ್ಣೇ ರುದತೀರ್ಭರತಸ್ತ್ರಿಯಃ ॥45॥
ಏವಂ ತಾ ಭೀರು ರೋತ್ಸ್ಯಂತಿ ನಿಹತಜ್ಞಾತಿಬಾಂಧವಾಃ |
ಹತಮಿತ್ರಾ ಹತಬಲಾ ಯೇಷಾಂ ಕ್ರುದ್ಧಾಽಸಿ ಭಾಮಿನಿ ॥46॥
ಮಹಾಬಾಹುವಾದ ಕೇಶವನು ಅವಳನ್ನು ಸಮಾಧಾನಪಡಿಸುತ್ತಾ ಅವಳನ್ನು ಕುರಿತು ಎಲೌ ಕೃಷ್ಣೆಯೇ, ಭಾಮಿನಿಯೇ, ಶೀಘ್ರದಲ್ಲಿಯೇ ನೀನು ಕೌರವರ ಪತ್ನಿಯರು ಅಳುವುದನ್ನು ನೋಡುವಿ. ನೀನು ಯಾರ ಮೇಲೆ ಕೋಪಗೊಂಡಿದ್ದೀಯೋ ಅಂತಹ ಕೌರವರ ಪತ್ನಿಯರು ತಮ್ಮ ಜ್ಞಾತಿಬಾಂಧವರನ್ನೂ, ಮಿತ್ರರನ್ನೂ ಮತ್ತು ತಮ್ಮ ಸೈನ್ಯಗಳನ್ನೂ ಕಳೆದುಕೊಂಡು ಎಲೌ ಭೀರುವೇ, ನೀನು ಅಳುತ್ತಿರುವಂತೆಯೇ ಅಳುವರು.
ಅಹಂ ಚ ತತ್ ಕರಿಷ್ಯಾಮಿ ಭೀಮಾರ್ಜುನಯಮೈಃ ಸಹ |
ಯುಧಿಷ್ಠಿರನಿಯೋಗೇನ ದೈವಾಚ್ಚ ವಿಧಿನಿರ್ಮಿತಾತ್ ॥47॥
ನಾನು ಯುಧಿಷ್ಠಿರನ ಆದೇಶದಂತೆ ಮತ್ತು ದೈವಪ್ರೇರಣೆಯಂತೆ, ಭೀಮಾರ್ಜುನ, ನಕುಲ-ಸಹದೇವರ ಸಹಾಯದಿಂದ ಅದನ್ನು ಸಾಧಿಸುವೆನು.
ಧಾರ್ತರಾಷ್ಟ್ರಾಃ ಕಾಲಪಕ್ವಾ ನ ಚೇಚ್ಛೃಣ್ವಂತಿ ಮೇ ವಚಃ |
ಶೇಷ್ಯಂತೇ ನಿಹತಾ ಭೂಮೌ ಶ್ವಸೃಗಾಲಾದನೀಕೃತಾಃ ॥48॥
ಕಾಲಪಕ್ವರಾದ ದುರ್ಯೋಧನಾದಿಗಳು ನನ್ನ ಮಾತನ್ನು ಕೇಳದಿದ್ದರೆ ಮಡಿದು ಭೂಮಿಯಲ್ಲಿ ಮಲಗಿ ನಾಯಿ-ನರಿಗಳಿಗೆ ಆಹಾರವಾಗುತ್ತಾರೆ.
ಚಲೇದ್ಧಿ ಹಿಮವಾನ್ ಶೈಲೋ ಮೇದಿನೀ ಶಕಲೀಭವೇತ್ |
ದ್ಯೌಃ ಪತೇಚ್ಚ ಸನಕ್ಷತ್ರಾ ನ ಮೇ ಮೋಘಂ ವಚೋ ಭವೇತ್ ॥49॥
ಶುಷ್ಯೇತ್ ತೋಯನಿಧಿಃ ಕೃಷ್ಣೇ ನ ಮೇ ಮೋಘಂ ವಚೋ ಭವೇತ್ ॥
ಹಿಮಾಲಯಪರ್ವತವು ಚಲಿಸೀತು, ಭೂಮಿಯು ಹೋಳುಹೋಳಾದೀತು, ನಕ್ಷತ್ರದಿಂದ ಕೂಡಿದ ಅಂತರಿಕ್ಷವು ಬಿದ್ದೀತು. ಆದರೆ ನನ್ನ ಮಾತು ಸುಳ್ಳಾಗಲಾರದು. ದ್ರೌಪದಿಯೇ, ಸಮುದ್ರವು ಬತ್ತಿ ಹೋಗಬಹುದು, ಆದರೆ ನನ್ನ ಮಾತು ಸುಳ್ಳಾಗುವುದಿಲ್ಲ.
ಸತ್ಯಂ ತೇ ಪ್ರತಿಜಾನಾಮಿ ಕೃಷ್ಣೇ ಬಾಷ್ಪೋ ನಿಗೃಹ್ಯತಾಮ್ |
ಹತಾಮಿತ್ರಾನ್ ಶ್ರಿಯಾಯುಕ್ತಾನ್ ಅಚಿರಾದ್ ದ್ರಕ್ಷ್ಯಸೇ ಪತೀನ್ ॥
ಎಲೌ ದ್ರೌಪದಿಯೇ, ನಾನು ಪ್ರತಿಜ್ಞೆಯನ್ನು ಮಾಡಿ ಸತ್ಯವನ್ನು ಹೇಳುತ್ತಿದ್ದೇನೆ. ನಿನ್ನ ಕಣ್ಣೀರನ್ನು ತಡೆದುಕೊ. ನಿನ್ನ ಪತಿಗಳು ಶತ್ರುಗಳನ್ನು ಸಂಹರಿಸಿ ಸಂಪದ್ಯುಕ್ತರಾಗಿರುವುದನ್ನು ನೀನು ಬಹಳ ಬೇಗ ನೋಡುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಶೀತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಸಸಾತ್ಯಕಿಃ ಸ್ಯಂದನವರ್ಯಸಂಸ್ಥಿತಃ
ಪೃಥಾತನೂಜೈರಖಿಲೈಃ ಸ ಭೂಮಿಪೈಃ |
ಅನ್ವಾಗತೋ ದೂರತರಂ ಗಿರಾ ತಾನ್

ಸಂಸ್ಥಾಪ್ಯ ವಿಪ್ರಪ್ರವರೈರ್ಯಯೌ ಕುರೂನ್ ॥61॥
ಶ್ರೀಕೃಷ್ಣನು ಸಾತ್ಯಕಿಯೊಡನೆ ಉತ್ತಮವಾದ ರಥವೇರಿ ಕುಳಿತ. ಪಾಂಡವರೂ ಎಲ್ಲ ರಾಜರೂ ಬಹಳ ದೂರದವರೆಗೆ ಅವನನ್ನು ಹಿಂಬಾಲಿಸಿದರು. ಅವರನ್ನು ಮಾತಿನಿಂದ ಹಿಂದೆ ನಿಲ್ಲಿಸಿ ಬ್ರಾಹ್ಮಣರೊಂದಿಗೆ ಕೌರವರ ಬಳಿಗೆ ಹೊರಟ ಶ್ರೀಕೃಷ್ಣ.
ಏಕೋಽಪಿ ವಿಷ್ಣುಃ ಸ ತು ಭಾರ್ಗವಾತ್ಮಾ
ವ್ಯಾಸಃ ಸಶಿಷ್ಯಸ್ತದನನ್ಯದೃಶ್ಯಃ ।
ಯಯೌ ತದುಕ್ತೇರ್ಹಿ ಗುಣಾನ್ ಪ್ರವೇತ್ತುಂ
ನಾನ್ಯೋ ಹಿ ಶಕ್ತಸ್ತಮೃತೇ ಯತಃ ಪ್ರಭುಮ್ ॥62॥
ವಿಷ್ಣು ಒಬ್ಬನೇ ಆದರೂ ಕೃಷ್ಣರೂಪನಾದ ಅವನು ಪರಶುರಾಮರೂಪನಾಗಿಯೂ ವೇದವ್ಯಾಸರೂಪನಾಗಿಯೂ ಶ್ರೇಷ್ಠರಾದ ಮುನಿಗಳೊಂದಿಗೆ ಹೊರಟ. ಏಕೆಂದರೆ ವಿಷ್ಣುವಿನ ಮಾತಿನ ಸ್ವಾರಸ್ಯವನ್ನು ತಿಳಿಯಲು ಪ್ರಭುವಾದ ಆ ವಿಷ್ಣು ಒಬ್ಬನೇ ಹೊರತು ಇನ್ನೊಬ್ಬ ಸಮರ್ಥನಾಗಲಾರ.
* * * * *
ಎಂಬತ್ತೊಂದನೆಯ ಅಧ್ಯಾಯ
ಯುಧಿಷ್ಠಿರನ ಸಂದೇಶದೊಂದಿಗೆ ಹಸ್ತಿನಪುರಕ್ಕೆ ಕೃಷ್ಣನ ಪ್ರಯಾಣ. ಮಾರ್ಗಮಧ್ಯದಲ್ಲಿ ಋಷಿಗಳ ಜೊತೆಯಲ್ಲಿ ಸಂವಾದ.
ಯುಧಿಷ್ಠಿರಃ
ಕುರೂಣಾಮಿವ ಸರ್ವೇಷಾಂ ಭವಾನ್ ಸುಹೃದನುತ್ತಮಃ ।
ಸಂಬಂಧೀ ದಯಿತೋ ನಿತ್ಯಮುಭಯೋಃ ಪಕ್ಷಯೋರಪಿ ॥1॥
ಯುಧಿಷ್ಠಿರ ಎಲೈ ಕೃಷ್ಣನೇ, ಎಲ್ಲ ಕುರುಗಳಿಗೂ ನೀನು ಶ್ರೇಷ್ಠನಾದ ಸ್ನೇಹಿತನಾಗಿರುವವನು. ಎರಡು ಪಕ್ಷಗಳಿಗೂ ನೀನು ಸಂಬಂಧಿಯಾದವನು ಮತ್ತು ಪ್ರಿಯನಾದವನು.
ಪಾಂಡವೈರ್ಧಾರ್ತರಾಷ್ಟ್ರಾಣಾಂ ಪ್ರತಿಪಾದ್ಯಮನಾಮಯಮ್ ।
ಸಮರ್ಥಃ ಪ್ರಶಮಂ ಚೈಷಾಂ ಕರ್ತುಮರ್ಹಸಿ ಕೇಶವ ॥2॥
ಪಾಂಡವರಾದ ನಾವು ಧೃತರಾಷ್ಟ್ರಪುತ್ರನಿಗೆ ಕ್ಷೇಮವನ್ನು ಮಾಡಬೇಕು. ಕೇಶವನೇ, ನೀನು ಅವರನ್ನು ಶಾಂತಗೊಳಿಸಲು ಸಮರ್ಥನಾಗಿದ್ದೀಯೆ. ನೀನು ಅದನ್ನು ಮಾಡಬೇಕು.
ತ್ವಮಿತಃ ಪುಂಡರೀಕಾಕ್ಷ ಸುಯೋಧನಮಮರ್ಷಣಮ್ ।
ಶಾಂತ್ಯರ್ಥಂ ಭ್ರಾತರಂ ಬ್ರೂಯಾ ಯದ್ವಾಚ್ಯಮಿಹ ಶತ್ರುಹನ್ ॥3॥
ಎಲೈ ಪುಂಡರೀಕಾಕ್ಷನೇ, ಶತ್ರುಸಂಹಾರಕನೇ, ನೀನು ಇಲ್ಲಿಂದ ಕ್ರೋಧಶೀಲನಾದ ಸುಯೋಧನನ ಬಳಿಗೆ ಹೋಗಿ, ತಮ್ಮನಾದ ಅವನಿಗೆ ಶಾಂತಿಯ ಸಲುವಾಗಿ ಏನನ್ನು ಮಾತನಾಡಬೇಕೋ ಅದೆಲ್ಲವನ್ನೂ ಮಾತನಾಡುವವನಾಗು.
ತ್ವಯಾ ಧರ್ಮಾರ್ಥಯುಕ್ತಂ ಚೇದುಕ್ತಂ ಶಿವಮನಾಮಯಮ್ ।
ಹಿತಂ ನಾದಾಸ್ಯತೇ ಬಾಲೋ ದಿಷ್ಟಸ್ಯ ವಶಮೇಷ್ಯತಿ ।
ಧರ್ಮ್ಯಮಸ್ಮದ್ಧಿತಂ ಚೈವ ಕುರೂಣಾಂ ಯದನಾಮಯಮ್ ॥4॥
ನೀನು ಆಡುವ ಕ್ಷೇಮಕರವಾದ, ಮಂಗಳವಾದ, ಧರ್ಮಾರ್ಥಯುಕ್ತವಾದ, ಧರ್ಮಕ್ಕೆ ಅನುಗುಣವಾದ, ನಮಗೆ ಹಿತವನ್ನು ಮಾಡುವ ಮತ್ತು ಕೌರವರಿಗೂ ಕ್ಷೇಮವನ್ನು ಮಾಡುವ ಮಾತುಗಳನ್ನು ಬಾಲಿಶತನದಿಂದ ಅವನು ಸ್ವೀಕರಿಸದಿದ್ದರೆ ವಿಧಿಸಂಕಲ್ಪಕ್ಕೆ ಒಳಗಾಗುವನು.
ಶ್ರೀವಾಸುದೇವಃ
ಏಷ ಯಾಸ್ಯಾಮಿ ರಾಜಾನಂ ಧೃತರಾಷ್ಟ್ರಮಭೀಪ್ಸಯಾ ॥5॥
ಶ್ರೀವಾಸುದೇವ ಧೃತರಾಷ್ಟ್ರನನ್ನು ಒಲಿಸುವ ಸಲುವಾಗಿ ಈಗ ನಾನು ಹೊರಡುವೆನು.
ವೈಶಂಪಾಯನಃ
ತತೋ ವ್ಯಪೇತೇ ತಮಸಿ ಸೂರ್ಯೇ ವಿಮಲ ಉದ್ಗತೇ ।
ಮೈತ್ರೇ ಮುಹೂರ್ತೇ ಸಂಪ್ರಾಪ್ತೇ ಋದ್ಧಾರ್ಚಿಷಿ ದಿವಾಕರೇ ॥6॥
ಕೌಮುದೇ ಮಾಸಿ ರೇವತ್ಯಾಂ ಶರದಂತೇ ಹಿಮಾಗತೇ ।
ಸ್ಫೀತಸಸ್ಯಮುಖೇ ಕಾಲೇ ಕಲ್ಯಃ ಸತ್ವವತಾಂ ವರಃ ॥7॥
ಮಂಗಲ್ಯಾಃ ಪುಣ್ಯನಿರ್ಘೋಷಾ ವಾಚಃ ಶೃಣ್ವಂಶ್ಚ ಸೂನೃತಾಃ ।
ಬ್ರಾಹ್ಮಣಾನಾಂ ಪ್ರತೀತಾನಾಮೃಷೀಣಾಮಿವ ವಾಸವಃ ॥8॥
ಕೃತ್ವಾ ಪೌರ್ವಾಹ್ಣಿಕಂ ಕೃತ್ಯಂ ಸ್ನಾತಃ ಶುಚಿರಲಂಕೃತಃ ।
ಉಪತಸ್ಥೇ ವಿವಸ್ವಂತಂ ಪಾವಕಂ ಚ ಜನಾರ್ದನಃ ॥9॥
ವೈಶಂಪಾಯನ ಅನಂತರ ಕತ್ತಲೆಯು ಕಳೆದು ಸೂರ್ಯನು ಉದಯಿಸಿ, ಕ್ರಮವಾಗಿ ಸಮೃದ್ಧಕಿರಣಗಳಿಂದ ಕೂಡಿ ಸ್ನೇಹಕರವಾದ ಮುಹೂರ್ತವು ಒದಗುತ್ತಿರಲು ಕಾರ್ತಿಕಮಾಸದಲ್ಲಿ ಶರದೃತುವಿನ ಕೊನೆಯಲ್ಲಿ ಹೇಮಂತ ಋತುವು ಸನ್ನಿಹಿತವಾಗುತ್ತಿರಲು, ಚಂದ್ರನು ರೋಹಿಣೀ ನಕ್ಷತ್ರದಲ್ಲಿ ಇರುತ್ತಿರಲು, ಸಸ್ಯಗಳೆಲ್ಲಾ ಸಮೃದ್ಧವಾಗಿ ಸುಖವಾಗಿರಲು, ಮಂಗಳಪ್ರದನೂ, ಬಲಿಷ್ಠರಲ್ಲಿ ಶ್ರೇಷ್ಠನೂ ಆದ ಕೃಷ್ಣನು ಮಂಗಳಕರವಾದ, ಪುಣ್ಯಮಯವಾದ ಒಳ್ಳೆಯ ಮಾತುಗಳನ್ನು ಬ್ರಾಹ್ಮಣರ ಮುಖದಿಂದ ಇಂದ್ರನು ಋಷಿಗಳ ಮುಖದಿಂದ ಕೇಳುವಂತೆ ಕೇಳುವವನಾಗಿ, ಸ್ನಾನವನ್ನು ಮಾಡಿ, ಶುಚಿಯಾಗಿ ಅಲಂಕೃತನಾಗಿ ಪ್ರಾತಃ ಆಹ್ನಿಕವನ್ನು ಮಾಡಿ ಸೂರ್ಯನ ಮತ್ತು ಅಗ್ನಿಯ ಉಪಸ್ಥಾನವನ್ನು ಮಾಡಿದನು.

ವೃಷಭಂ ಪೃಷ್ಠ ಆಲಭ್ಯ ಬ್ರಾಹ್ಮಣಾನಭಿವಾದ್ಯ ಚ |
ಅಗ್ನಿಂ ಪ್ರದಕ್ಷಿಣಂ ಕೃತ್ವಾ ಪಶ್ಯನ್ ಕಲ್ಯಾಣಮಗ್ರತಃ ॥10॥
ತತ್ ಪ್ರತಿಜ್ಞಾಯ ವಚನಂ ಪಾಂಡವಸ್ಯ ಜನಾರ್ದನಃ |
ಶಿನೇರ್ನಪ್ತಾರಮಾಸೀನಮಭ್ಯಭಾಷತ ಸಾತ್ಯಕಿಮ್ ॥11॥
ರಥ ಆರೋಪ್ಯತಾಂ ಶಂಖಶ್ಚಕ್ರಂ ಚ ಗದಯಾ ಸಹ |
ಉಪಾಸಂಗಾಶ್ಚ ಶಕ್ತ್ಯಶ್ಚ ಸರ್ವಪ್ರಹರಣಾನಿ ಚ ॥12॥
ವೃಷಭದ ಬಾಲವನ್ನು ಸ್ಪರ್ಶಮಾಡಿ, ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡಿ, ಅಗ್ನಿಗೆ ಪ್ರದಕ್ಷಿಣೆಯನ್ನು ಮಾಡಿ, ಮುಂದೆ ಇಟ್ಟಿರುವ ಮಂಗಳವಸ್ತುಗಳನ್ನು ನೋಡಿ, ಜನಾರ್ದನನು ಪಾಂಡವನಾದ ಧರ್ಮರಾಜನ ಮಾತನ್ನು ನಡೆಸುವುದಾಗಿ ಪ್ರತಿಜ್ಞೆಯನ್ನು ಮಾಡಿ, ಶೈನೇಯನಾದ ಸಾತ್ಯಕಿಯನ್ನು ಕುರಿತು ರಥದಲ್ಲಿ ಶಂಖ-ಚಕ್ರಗಳನ್ನೂ, ಗದೆಯನ್ನೂ, ಬತ್ತಳಿಕೆಯನ್ನೂ, ಶಕ್ತ್ಯಾಯುಧಗಳನ್ನೂ ಮತ್ತು ಉಳಿದ ಆಯುಧಗಳನ್ನೂ ತುಂಬುವವರಾಗಿ ಎಂದು ಮಾತನಾಡಿದನು.
ದುರ್ಯೋಧನೋ ಹಿ ದುಷ್ಟಾತ್ಮಾ ಕರ್ಣಶ್ಚ ಸಹಸೌಬಲಃ |
ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ ॥13॥
ದುರ್ಯೋಧನನು, ಕರ್ಣನು ಮತ್ತು ಶಕುನಿಯು ದುಷ್ಟರಾದವರು. ಬಲಿಷ್ಠನಾದವನು ದುರ್ಬಲನಾದ ಶತ್ರುಗಳ ವಿಷಯದಲ್ಲಿಯೂ ಉದಾಸೀನ ಮಾಡಬಾರದು (ಎಂದು ಹೇಳಿದನು).
ವೈಶಂಪಾಯನಃ
ತತಸ್ತನ್ಮತಮಾಜ್ಞಾಯ ಕೇಶವಸ್ಯ ಪುರಸ್ಸರಾಃ |
ಪ್ರಸಸ್ರುರ್ಯೋಜಯಿಷ್ಯಂತೋ ರಥಂ ಚಕ್ರಗದಾಭೃತಃ ॥14॥
ವೈಶಂಪಾಯನ ಅನಂತರ ಚಕ್ರಗದಾಧಾರಿಯಾದ ಕೇಶವನ ಸೇವಕರು ರಥದಲ್ಲಿ ಎಲ್ಲಾ ಆಯುಧಗಳನ್ನೂ ಇಡಲು ಹೊರಟರು.
ತಂ ದೀಪ್ತಮಿವ ಕಾಲಾಗ್ನಿಮಾಕಾಶಗಮಿವಾಧ್ವಗಮ್ |
ಸೂರ್ಯಚಂದ್ರಪ್ರಕಾಶಾಭ್ಯಾಂ ಚಕ್ರಾಭ್ಯಾಂ ಸಮಲಂಕೃತಮ್ ॥15॥
ಅರ್ಧಚಂದ್ರೈಶ್ಚ ಚಂದ್ರೈಶ್ಚ ಮತ್ಸ್ಯೈಶ್ಚ ಮೃಗಪಕ್ಷಿಭಿಃ |
ಪುಷ್ಪೈಶ್ಚ ವಿವಿಧೈಶ್ಚಿತ್ರೈರ್ಮಣಿರತ್ನೈಶ್ಚ ಸರ್ವಶಃ ॥16॥
ತರುಣಾದಿತ್ಯಸಂಕಾಶಂ ಬೃಹಂತಂ ಚಾರುದರ್ಶನಮ್ |
ಮಣಿಹೇಮವಿಚಿತ್ರಾಂಗಂ ಸುಧ್ವಜಂ ಸುಪತಾಕಿನಮ್ ॥17॥
ಸೂಪಸ್ಕರಮನಾಧೃಷ್ಯಂ ವೈಯಾಘ್ರಪರಿವಾರಣಮ್ |
ಯಶೋಘ್ನಂ ಪ್ರತ್ಯಮಿತ್ರಾಣಾಂ ಬಂಧೂನಾಂ ನಂದಿವರ್ಧನಮ್ ॥18॥
ವಾಜಿಭಿಃ ಸೈನ್ಯಸುಗ್ರೀವಮೇಘಪುಷ್ಪಬಲಾಹಕೈಃ |
ಸೂತಃ ಸಂಪಾದಯಾಂಚಕ್ರೇ ಸಂಪನ್ನೈಃ ಸರ್ವಸಂಪದಾ ॥19॥
ಕಾಲಾಗ್ನಿಯಂತೆ ದೀಪ್ತವಾಗಿದ್ದ, ಆಕಾಶದಲ್ಲಿ ಹೋದಂತೆ ಭೂಮಿಯಲ್ಲಿ ಹೋಗುವ, ಸೂರ್ಯ-ಚಂದ್ರರ ಪ್ರಕಾಶವನ್ನುಳ್ಳ ಚಕ್ರಗಳಿಂದ ಕೂಡಿದ, ಅರ್ಧಚಂದ್ರಗಳಿಂದಲೂ, ಪೂರ್ಣಚಂದ್ರಗಳಿಂದಲೂ, ಮತ್ಸ್ಯಗಳಿಂದಲೂ, ಮೃಗ-ಪಕ್ಷಿಗಳಿಂದಲೂ, ಪುಷ್ಪಗಳಿಂದಲೂ, ಅನೇಕವಿಧವಾದ ಮಣಿಗಳಿಂದಲೂ ಮತ್ತು ರತ್ನಗಳಿಂದಲೂ ಎಲ್ಲಕಡೆಯಲ್ಲಿಯೂ ಚೆನ್ನಾಗಿ ಅಲಂಕೃತವಾದ, ಉದಯಿಸಿದ ಸೂರ್ಯನ ಪ್ರಕಾಶವನ್ನು ಹೊಂದಿದ್ದ, ದೊಡ್ಡದೂ ಮತ್ತು ನೋಡಲು ಸುಂದರವೂ ಆದ, ಮಣಿಸುವರ್ಣಗಳಿಂದ ಶೋಭಿಸುವ, ದೇದೀಪ್ಯವಾದ ಅಂಗಗಳುಳ್ಳ, ಒಳ್ಳೆಯ ಧ್ವಜ ಮತ್ತು ಪತಾಕೆಗಳಿಂದ ಕೂಡಿದ, ಒಳ್ಳೆಯ ಉಪಕರಣಗಳಿಂದ ಕೂಡಿದ, ಯಾರಿಂದಲೂ ಸೋಲಿಸಲ್ಪಡದ, ವ್ಯಾಘ್ರಚರ್ಮದಿಂದ ಸುತ್ತಲೂ ಆವೃತ್ತವಾದ, ಶತ್ರುಗಳ ಯಶಸ್ಸನ್ನು ನಾಶಮಾಡುವ, ಬಾಂಧವರ ಸಂತೋಷವನ್ನು ಅಭಿವೃದ್ದಿಗೊಳಿಸುವ, ಎಲ್ಲ ಸಂಪತ್ತುಗಳಿಂದಲೂ ಕೂಡಿದ, ಸೈನ್ಯ ಸುಗ್ರೀವ ಮೇಘಪುಷ್ಪಬಲಾಹಕ ಕುದುರೆಗಳಿಂದ ಹೂಡಲ್ಪಟ್ಟ ರಥವನ್ನು ಸೂತನು ಸಿದ್ಧಗೊಳಿಸಿದನು.
ಮಹಿಮಾನಂ ಚ ಕೃಷ್ಣಸ್ಯ ಭೂಯ ಏವಾಭಿವರ್ಧಯನ್ |
ಸುಘೋಷಃ ಪತಗೇಂದ್ರೇಣ ಧ್ವಜೇನ ಯುಯುಜೇ ರಥಃ ॥20॥
ಕೃಷ್ಣನ ಮಹಿಮೆಯನ್ನು ಪುನಃ ಹೆಚ್ಚಿಸುವುದಾಗಿ ಒಳ್ಳೆಯ ಘೋಷವುಳ್ಳ ಗರುಡನು ರಥದ ಧ್ವಜದಲ್ಲಿ ಯೋಜಿಸಲ್ಪಟ್ಟನು.
ತಂ ಮೇರುಶಿಖರಪ್ರಖ್ಯಂ ಮೇಘದುಂದುಭಿನಿಸ್ವನಮ್ |
ಆರುರೋಹ ರಥಂ ಶೌರಿರ್ವಿಮಾನಮಿವ ಪುಣ್ಯಕೃತ್ ॥21॥
ಪುಣ್ಯವನ್ನು ಸಂಪಾದಿಸಿದವನು ವಿಮಾನವನ್ನು ಏರುವಂತೆ ಕೃಷ್ಣನು ಮೇರುಶಿಖರದಂತಿದ್ದ, ಮೇಘದುಂದುಭಿಗಳ ಸ್ವರದಿಂದ ಕೂಡಿದ ಆ ರಥವನ್ನು ಏರಿದನು.
ತತಃ ಸಾತ್ಯಕಿಮಾರೋಪ್ಯ ಪ್ರಯಯೌ ಪುರುಷೋತ್ತಮಃ |
ಪೃಥಿವೀಂ ಚಾಂತರಿಕ್ಷಂ ಚ ರಥಘೋಷೇಣ ನಾದಯನ್ ॥22॥
ಅನಂತರ ಪುರುಷೋತ್ತಮನಾದ ಅವನು ಸಾತ್ಯಕಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು, ಭೂಮಿಯನ್ನು ಮತ್ತು ಅಂತರಿಕ್ಷವನ್ನು ರಥಘೋಷದಿಂದ ಪ್ರತಿಧ್ವನಿಸುತ್ತಾ ಹೊರಟನು.
ವ್ಯಪೇತಾಭ್ರಘನಃ ಕಾಲಃ ಕ್ಷಣೇನ ಸಮಜಾಯತ |
ಶಿವಶ್ಚಾನುವವೌ ವಾಯುಃ ಪ್ರಶಾಂತಮಭವದ್ ರಜಃ ॥23॥
ಒಂದುಕ್ಷಣದಲ್ಲಿ ಆಕಾಶವು ಬಿಳಿಯ ಮತ್ತು ಕಪ್ಪು ಮೋಡಗಳಿಂದ ರಹಿತವಾಯಿತು. ವಾಯುವು ಮಂಗಳಕರವಾಗಿ ಬೀಸಿತು. ಧೂಳು

ಅಡಗಿತು.
ಪ್ರದಕ್ಷಿಣಾನುಲೋಮಾಶ್ಚ ಮಂಗಲ್ಯಾ ಮೃಗಪಕ್ಷಿಣಃ |
ಪ್ರಯಾಣೇ ವಾಸುದೇವಸ್ಯ ಬಭೂವುರನುಯಾಯಿನಃ ||24||
ವಾಸುದೇವನು ಪ್ರಯಾಣ ಮಾಡುವಾಗ ಮಂಗಳಕರವಾದ ಮೃಗ-ಪಕ್ಷಿಗಳು ಅವನ ಬಲಭಾಗದಲ್ಲಿ ಅನುಕೂಲವಾಗಿ ಬಂದು ಹಿಂದಿನಿಂದ ಅವನನ್ನು ಹಿಂಬಾಲಿಸಿದವು.
ಮಂಗಲ್ಯಾರ್ಥಪ್ರದೈಃ ಶಬ್ದೈರನ್ವವರ್ತಂತ ಸರ್ವಶಃ |
ಸಾರಸಾಃ ಶತಪತ್ರಾಶ್ಚ ಹಂಸಾಶ್ಚ ಮಧುಸೂದನಮ್ ||25||
ಸಾರಸ, ಚಕ್ರವಾಕ, ಹಂಸ ಮೊದಲಾದ ಪಕ್ಷಿಗಳು ಮಂಗಲಾರ್ಥವನ್ನು ಸೂಚಿಸುವ ತಮ್ಮ ನಾದಗಳಿಂದ ಎಲ್ಲ ಕಡೆಗಳಿಂದಲೂ ಮಧುಸೂದನನನ್ನು ಹಿಂಬಾಲಿಸಿದವು.
ಮಂತ್ರಾಹುತಿಮಹಾಹೋಮೈರ್ಹೂಯಮಾನಶ್ಚ ಪಾವಕಃ |
ಪ್ರದಕ್ಷಿಣಶಿಖೋ ಭೂತ್ವಾ ವಿಧೂಮಃ ಸಮಪದ್ಯತ ||26||
ಮಂತ್ರಸಹಿತವಾದ ಮಹಾಹೋಮಗಳಲ್ಲಿ ಹೋಮಮಾಡಲ್ಪಟ್ಟ ಅಗ್ನಿಯು ಪ್ರದಕ್ಷಿಣಾಕಾರದ ಜ್ವಾಲೆಯುಳ್ಳವನಾಗಿ ಧೂಮರಹಿತನಾಗಿ ಸಿದ್ಧನಾದನು.
ವಸಿಷ್ಠೋ ವಾಮದೇವಶ್ಚ ಭೂರಿದ್ಯುಮ್ನೋ ಗಯಃ ಕ್ರಥಃ |
ಶುಕನಾರದವಾಲ್ಮೀಕಾ ಮರುತ್ತಃ ಕುಶಿಕೋ ಭೃಗುಃ ||27||
ದೇವಬ್ರಹ್ಮರ್ಷಯಶ್ಚೈವ ಕೃಷ್ಣಂ ಯದುಸುಖಾವಹಮ್ |
ಪ್ರದಕ್ಷಿಣಮವರ್ತಂತ ಸಹಿತಾ ವಾಸವಾನುಜಮ್ ||28||
ವಸಿಷ್ಠ, ವಾಮದೇವ, ಭೂರಿದ್ಯುಮ್ನ, ಗಯ, ಕ್ರಥ, ಸುಖ, ನಾರದ, ವಾಲ್ಮೀಕ, ಮರುತ್ತ, ಕುಶಿಕ, ಭೃಗು, ದೇವರ್ಷಿಗಳು ಮತ್ತು ಬ್ರಹ್ಮರ್ಷಿಗಳು ಯದುಕುಲಕ್ಕೆ ಸುಖವನ್ನು ನೀಡುವ, ಇಂದ್ರನ ತಮ್ಮನಾದ ಕೃಷ್ಣನ ಬಲಭಾಗದಲ್ಲಿ ಒಟ್ಟಿಗೆ ಸೇರಿದರು.
ಏವಮೇತೈರ್ಮಹಾಭಾಗೈರ್ಮಹರ್ಷಿಗಣಸಾಧುಭಿಃ |
ಪೂಜಿತಃ ಪ್ರಯಯೌ ಕೃಷ್ಣಃ ಕುರೂಣಾಂ ಸದನಂ ಪ್ರತಿ ||29||
ಹೀಗೆ ಈ ಮಹಾನುಭಾವರಾದ, ಸಜ್ಜನರಾದ ಮಹರ್ಷಿಗಳ ಗಣದಿಂದ ಪೂಜಿತನಾಗಿ ಕೃಷ್ಣನು ಕುರುಗಳ ಪಟ್ಟಣವನ್ನು ಕುರಿತು ಹೊರಟನು.
ದೇವತಾಭ್ಯೋ ನಮಸ್ಕೃತ್ಯ ಬ್ರಾಹ್ಮಣಾನ್ ಸ್ವಸ್ತಿವಾಚ್ಯ ಚ |
ಪ್ರಯಯೌ ಪುಂಡರೀಕಾಕ್ಷ ಸಾತ್ಯಕೇನ ಸಹಾಚ್ಯುತಃ ||30||
ದೇವತೆಗಳನ್ನು ನಮಸ್ಕರಿಸಿ, ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು, ಸಾತ್ಯಕಿಯ ಜೊತೆಯಲ್ಲಿ ಪುಂಡರೀಕಾಕ್ಷನಾದ ಅಚ್ಯುತನು ಹೊರಟನು.
ತಂ ಪ್ರಯಾಂತಮನುಪ್ರಾಯಾತ್ ಕುಂತೀಪುತ್ರೋ ಯುಧಿಷ್ಠಿರಃ |
ಭೀಮಸೇನಾರ್ಜುನೌ ಚೋಭೌ ಮಾದ್ರೀಪುತ್ರೌ ಚ ಪಾಂಡವೌ ||31||
ಚೇಕಿತಾನಶ್ಚ ವಿಕ್ರಾಂತೋ ಧೃಷ್ಟಕೇತುಶ್ಚ ಚೇದಿಪಃ |
ದ್ರುಪದಃ ಕಾಶಿರಾಜಶ್ಚ ಶಿಖಂಡೀ ಚ ಮಹಾರಥಃ ||32||
ಕುಂತೀಪುತ್ರನಾದ ಯುಧಿಷ್ಠಿರ, ಭೀಮಸೇನಾರ್ಜುನರು, ಪಾಂಡವರಾದ ನಕುಲ-ಸಹದೇವರು, ಪರಾಕ್ರಮಶಾಲಿಯಾದ ಚೇಕಿತಾನ, ಚೇದಿರಾಜನಾದ ಧೃಷ್ಟಕೇತು, ದ್ರುಪದ, ಕಾಶಿರಾಜ, ಮಹಾರಥನಾದ ಶಿಖಂಡಿ ಎಲ್ಲರೂ ಪ್ರಯಾಣ ಮಾಡುವ ಕೃಷ್ಣನ ಹಿಂದೆ ಹೋದರು.
ಧೃಷ್ಟದ್ಯುಮ್ನಃ ಸಪುತ್ರಶ್ಚ ವಿರಾಟಃ ಕೇಕಯೈಃ ಸಹ |
ಸಂಸಾಧನಾರ್ಥಂ ಪ್ರಯಯುಃ ಕ್ಷತ್ರಿಯಾಃ ಕ್ಷತ್ರಿಯರ್ಷಭಮ್ ||33||
ಧೃಷ್ಟದ್ಯುಮ್ನ, ತನ್ನ ಮಕ್ಕಳಿಂದ ಕೂಡಿದ ವಿರಾಟ, ಕೇಕಯರ ಜೊತೆಯಲ್ಲಿ ಸೇರಿದ ಕ್ಷತ್ರಿಯರು ಎಲ್ಲರೂ ಕ್ಷತ್ರಿಯವೃಷಭನಾದ ಕೃಷ್ಣನನ್ನು ಬೀಳ್ಕೊಡುವ ಸಲುವಾಗಿ ಅವನನ್ನು ಹಿಂಬಾಲಿಸಿದರು.
ತತೋಽನುವ್ರಜ್ಯ ಗೋವಿಂದಂ ಧರ್ಮರಾಜೋ ಯುಧಿಷ್ಠಿರಃ |
ರಾಜ್ಞಾಂ ಸಕಾಶೇ ದ್ಯುತಿಮಾನುವಾಚೇದಂ ವಚಸ್ತದಾ ||34||
ಧರ್ಮರಾಜನೂ, ಕಾಂತಿಯುಕ್ತನೂ ಆದ ಯುಧಿಷ್ಠಿರನು ಗೋವಿಂದನನ್ನು ಹಿಂಬಾಲಿಸಿ, ರಾಜರ ಎದುರಿನಲ್ಲಿ ಆಗ ಈ ಮಾತುಗಳನ್ನು ಆಡಿದನು.
ಯೋ ವೈ ನ ಕಾಮಾನ್ನ ಭಯಾನ್ನ ಲೋಭಾನ್ನಾರ್ಥಕಾರಣಾತ್ |
ಅನ್ಯಾಯಮನುವರ್ತೇತ ಸ್ಥಿರಬುದ್ಧಿರಲೋಲುಪಃ ||35||
ಧರ್ಮಜ್ಞೋ ಧೃತಿಮಾನ್ ಪ್ರಾಜ್ಞಃ ಸರ್ವಭೂತೇಷು ಕೇಶವಃ |
ಈಶ್ವರಃ ಸರ್ವಭೂತಾನಾಂ ದೇವದೇವಃ ಪ್ರತಾಪವಾನ್ ||36||
ತಂ ಸರ್ವಗುಣಸಂಪನ್ನಂ ಶ್ರೀವತ್ಸಕೃತಲಕ್ಷಣಮ್ |
ಸಂಪರಿಷ್ವಜ್ಯ ಗೋವಿಂದಂ ಸಂದೇಷ್ಟುಮುಪಚಕ್ರಮೇ ||37||
ಯಾವನು ಕಾಮದಿಂದಾಗಲೀ, ಭಯದಿಂದಾಗಲೀ, ಲೋಭದಿಂದಾಗಲೀ, ದ್ರವ್ಯದ ಆಸೆಯಿಂದಾಗಲೀ ಅನ್ಯಾಯವನ್ನು ಅನುಸರಿಸುವುದಿಲ್ಲವೋ, ಯಾವನು ಸ್ಥಿರಬುದ್ಧಿಯುಳ್ಳವನೋ, ವಿಷಯಲೋಲುಪನಲ್ಲವೋ, ಧರ್ಮಜ್ಞನೋ, ಧೈರ್ಯಶಾಲಿಯೋ,

ಪ್ರಾಜ್ಞನೋ, ಸರ್ವಭೂತದಯಾಪರನೋ, ಸರ್ವಭೂತಗಳಿಗೆ ಒಡೆಯನೋ, ದೇವದೇವನೋ, ಪ್ರತಾಪಶಾಲಿಯೋ, ಶ್ರೀವತ್ಸಭೂಷಣನೋ ಅಂತಹ ಸರ್ವಗುಣಸಂಪನ್ನನಾದ ಗೋವಿಂದನನ್ನು ಆಲಿಂಗಿಸಿ ಸಂದೇಶವನ್ನು ಕೊಡಲು ಆರಂಭಿಸಿದನು.
ಯಾ ಸಾ ಬಾಲ್ಯಾತ್ ಪ್ರಭೃತ್ಯಸ್ಮಾನ್ ಪರ್ಯವರ್ಧಯತಾಬಲಾ |
ಉಪವಾಸತಪಃಶೀಲಾ ಗುರೂಣಾಂ ಪೂಜನೇ ರತಾ ||38||
ದೇವತಾತಿಥಿಪೂಜಾಸು ಭೃತ್ಯಾನಾಂ ಪೋಷಣೇ ರತಾ |
ವತ್ಸಲಾ ಪ್ರಿಯಪುತ್ರಾ ಚ ಮಾತಾಽಸ್ಮಾಕಂ ಜನಾರ್ದನ ||39||
ಸುಯೋಧನಭಯಾದ್ ಯಾ ನಃ ಸ್ತ್ರಾಪಿತಾಽಮಿತ್ರಕರ್ಶನ |
ಮಹತೋ ಮೃತ್ಯುಸಂಬಾಧಾದ್ ದುಸ್ತರಾನ್ನೌರಿವಾರ್ಣವಾತ್ ||40||
ಅಸ್ಮತ್ಕೃತೇ ಚ ಸತತಂ ಯಯಾ ದುಃಖಾನಿ ಮಾಧವ |
ಅನುಭೂತಾನ್ಯದುಃಖಾರ್ಹಾಂ ತಾಂ ಸ್ಮ ಪೃಚ್ಛೇರನಾಮಯಮ್ ||41||
ಎಲೈ ಜನಾರ್ದನನೇ, ಶತ್ರುಕರ್ಶನನೇ, ಮಾಧವನೇ, ಯಾವ ನಮ್ಮ ತಾಯಿಯು ಬಾಲ್ಯದಿಂದಲೂ ನಮ್ಮನ್ನು ಪೋಷಿಸಿದಳೋ, ಉಪವಾಸ ತಪಶ್ಶೀಲಳಾಗಿ ಹಿರಿಯರ ಪೂಜೆಯಲ್ಲಿ ರತಳಾಗಿದ್ದಾಳೆಯೋ, ದೇವತಾತಿಥಿಗಳ ಪೂಜೆಯಲ್ಲಿಯೂ, ಸೇವಕರ ರಕ್ಷಣೆಯಲ್ಲಿಯೂ ನಿರತಳಾಗಿದ್ದಾಳೆಯೋ, ವಾತ್ಸಲ್ಯವುಳ್ಳವಳೋ, ಪುತ್ರಸ್ನೇಹವುಳ್ಳವಳೂ ಆಗಿದ್ದಾಳೆಯೋ, ಯಾರನ್ನು ದುರ್ಯೋಧನನಿಂದ ಉಂಟಾಗಬಹುದಾದ ದೊಡ್ಡ ಮೃತ್ಯುಭಯದಿಂದ ರಕ್ಷಿಸಲು ಸಮುದ್ರವನ್ನು ದಾಟುವ ನೌಕೆಯನ್ನು ಸ್ಥಾಪಿಸಿದಂತೆ ನಾವು ನಗರದಲ್ಲಿಯೇ ಉಳಿಸಿದೆವೋ, ನಮ್ಮ ಸಲುವಾಗಿ ದುಃಖಕ್ಕೆ ಅರ್ಹಳಲ್ಲದ ಯಾವಳು ಅನೇಕ ದುಃಖವನ್ನು ಅನುಭವಿಸಿದಳೋ ಅವಳ ಕುಶಲವನ್ನು ಕೇಳುವವನಾಗು.
ಭೃಶಮಾಶ್ವಾಸಯೇಶ್ಚೈನಾಂ ಪುತ್ರಶೋಕಪರಿಪ್ಲುತಾಮ್ |
ಅಭಿವಾದ್ಯ ಸ್ವಜೇಥಾಸ್ತ್ವಂ ಪಾಂಡವಾನ್ ಪರಿಕೀರ್ತಯನ್ ||42||
ಪುತ್ರಶೋಕದಿಂದ ಬಳಲಿದ ಅವಳಿಗೆ ನಮಸ್ಕಾರವನ್ನು ಮಾಡಿ, ಅವಳನ್ನು ಆಲಿಂಗಿಸಿ, ಪಾಂಡವರ ಕ್ಷೇಮವನ್ನು ಹೇಳುತ್ತಾ ಅವಳನ್ನು ಸಮಾಧಾನಗೊಳಿಸುವವನಾಗು.
ಊಢಾತ್ಪ್ರಭೃತಿ ದುಃಖಾನಿ ಸ್ವಸುತಾನಾಮರಿಂದಮ |
ನಿಕಾರಾನತದರ್ಹಾ ಚ ಪಶ್ಯಂತೀ ದುಃಖಮಶ್ನುತೇ ||43||
ಎಲೈ ಅರಿಂದಮನೇ, ವಿವಾಹವಾದ ದಿನದಿಂದಲೂ ಅವಮಾನಕ್ಕೆ ಅರ್ಹಳಲ್ಲದ ಅವಳು ತನ್ನ ಮಕ್ಕಳ ಕ್ಷೇಮವನ್ನು ಚಿಂತಿಸಿ, ತನಗೆ ಉಂಟಾದ ಅಪಮಾನವನ್ನು ನೋಡಿ ದುಃಖವನ್ನು ಪಡುತ್ತಿದ್ದಾಳೆ.
ಅಪಿ ಜಾತು ಸ ಕಾಲಃ ಸ್ಯಾತ್ ಕೃಷ್ಣಾಹಂ ಭೃಶದುಃಖಿತಾಮ್ |
ಯದೇನಾಂ ಮಾತರಂ ಕ್ಲಿಷ್ಟಾಂ ಸುಖೇ ದಧ್ಯಾಮರಿಂದಮ ||44||
ಎಲೈ ಕೃಷ್ಣನೇ, ಅರಿಂದಮನೇ, ಕ್ಲೇಶಕ್ಕೆ ಒಳಗಾಗಿ ಬಹಳ ದುಃಖವನ್ನು ಅನುಭವಿಸುತ್ತಿರುವ ನಮ್ಮ ತಾಯಿಯನ್ನು ಎಂದಾದರೂ ಸುಖದಲ್ಲಿಡುವ ಕಾಲವು ನನಗೆ ಒದಗಿ ಬರುತ್ತದೆಯೇ?
ಪ್ರವ್ರಜತ್ಯನ್ವಧಾವತ್ ಸಾ ಕೃಪಣಾ ಪುತ್ರಗರ್ಧಿನೀ |
ರುದತೀಮಪಹಾಯ್ಯೆನಾಮಗಚ್ಛಾಮ್ಯೈವ ಯದ್ವನಮ್ ||45||
ಮಕ್ಕಳ ಮೇಲೆ ಸ್ನೇಹವುಳ್ಳವಳೂ, ಕೃಪಣಳೂ ಆದ ಅವಳು ನಾವು ಕಾಡಿಗೆ ಹೋಗುವಾಗ ಅಳುತ್ತಾ ನಮ್ಮ ಹಿಂದೆ ಓಡಿಬಂದಳು. ಆದರೆ ನಾವು ಅವಳನ್ನು ಬಿಟ್ಟೇ ಕಾಡಿಗೆ ಹೋದೆವು.
ಸಾ ನೂನಂ ಮ್ರಿಯತೇ ದುಃಖೈಃ ಸಾ ಚೇಜ್ಜೀವತಿ ಕೇಶವ |
ಪೃಥಾ ಪುತ್ರಾಧಿಭಿರ್ಗಾಢಮಾರ್ಯಾ ಮಾತಾ ಚ ಸತ್ಕೃತಾ ||46||
ಅಭಿವಾದ್ಯಾಽಥ ಸಾ ಕುಂತೀ ತ್ವಯಾ ಮದ್ವಚನಾದ್ ವಿಭೋ |
ಸಂಕ್ವಾಮ್ಯಾಥ ನಮಸ್ಕಾರ್ಯಾ ಸರ್ವೇಷಾಂ ವಚನಾದಪಿ ||47||
ಖಂಡಿತವಾಗಿ ಅವಳು ದುಃಖಗಳಿಂದ ಮರಣವನ್ನು ಹೊಂದುತ್ತಾಳೆ. ಎಲೈ ಕೇಶವನೇ, ಮಕ್ಕಳ ಚಿಂತೆಯಿಂದ ಗಾಢವಾಗಿ ಬಳಲಿದ, ನಮ್ಮಿಂದ ಸತ್ಕೃತಳಾದ, ಪೂಜ್ಯಳಾದ ತಾಯಿಯಾದ ನಮ್ಮ ಕುಂತಿಯು ಬದುಕಿದ್ದರೆ ಎಲೈ ವಿಭುವೇ, ನನ್ನ ಮಾತುಗಳಂತೆ ಅವಳಿಗೆ ನಮಸ್ಕಾರವನ್ನು ಮಾಡುವವನಾಗು ಮತ್ತು ಅವಳನ್ನು ಸಮೀಪಿಸಿ ಎಲ್ಲರ ಮಾತಿನಂತೆಯೂ ಸಹ ಅವಳಿಗೆ ನಮಸ್ಕಾರವನ್ನು ಮಾಡುವವನಾಗು.
ಧೃತರಾಷ್ಟ್ರಂ ಚ ಕೌರವ್ಯಂ ರಾಜಾನಂ ಚ ವಯೋಧಿಕಮ್ |
ಭೀಷ್ಮಂ ದ್ರೋಣಂ ಕೃಪಂ ಚೈವ ಮಹಾರಾಜಂ ಚ ಬಾಹ್ಲಿಕಮ್ ||48||
ದ್ರೌಣಿಂ ಚ ಸೋಮದತ್ತಂ ಚ ಸರ್ವಾಂಶ್ಚ ಭರತಾನ್ ಪ್ರತಿ |
ಯಥಾವಯೋ ಯಥಾಸ್ಥಾನಂ ಪೂಜಯಸ್ವ ಜನಾರ್ದನ ||49||
ಎಲೈ ಜನಾರ್ದನನೇ, ಕೌರವನೂ, ವಯೋವೃದ್ಧನೂ ಆದ ಧೃತರಾಷ್ಟ್ರರಾಜ, ಭೀಷ್ಮ ದ್ರೋಣ ಕೃಪ ಬಾಹ್ಲಿಕಮಹಾರಾಜ ಅಶ್ವತ್ಥಾಮ ಸೋಮದತ್ತ ಮತ್ತು ಎಲ್ಲಾ ಭರತರನ್ನೂ ಅವರ ವಯಸ್ಸಿಗೆ ಮತ್ತು ಅವರ ಸ್ಥಾನಕ್ಕೆ ಅನುಗುಣವಾಗಿ ಪೂಜಿಸುವವನಾಗು.
ವಿದುರಂ ಚ ಮಹಾಪ್ರಾಜ್ಞಂ ಕುರೂಣಾಂ ಮಂತ್ರಧಾರಿಣಮ್ |
ಅಗಾಧಬುದ್ಧಿಂ ಧರ್ಮಜ್ಞಂ ಸ್ವಜೇಥಾ ಮಧುಸೂದನ ||50||
ಎಲೈ ಮಧುಸೂದನನೇ, ಕುರುಗಳ ಮಂತ್ರಿಯಾದ ಮಹಾಪ್ರಾಜ್ಞನಾದ ಅಗಾಧಬುದ್ಧಿಯುಳ್ಳ ಧರ್ಮಜ್ಞನಾದ ವಿದುರನನ್ನು ಆಲಿಂಗಿಸುವವನಾಗು.

ಇತ್ಯುಕ್ತ್ವಾ ಕೇಶವಂ ತತ್ರ ರಾಜ್ಞಾಂ ಮಧ್ಯೇ ಯುಧಿಷ್ಠಿರಃ |
ಅನುಜ್ಞಾತೋ ನಿವವೃತೇ ಕೃಷ್ಣಂ ಕೃತ್ವಾ ಪ್ರದಕ್ಷಿಣಮ್ ॥51॥
ಅಲ್ಲಿ ರಾಜರ ಮಧ್ಯೆ ಕೃಷ್ಣನಿಗೆ ಇಷ್ಟು ಮಾತುಗಳನ್ನು ಹೇಳಿ, ಯುಧಿಷ್ಠಿರನು ಅವನ ಅನುಮತಿಯನ್ನು ಪಡೆದು ಕೃಷ್ಣನಿಗೆ ಪ್ರದಕ್ಷಿಣೆಯನ್ನು ಮಾಡಿ ಹಿಂದೆ ಬಂದನು.
ವ್ರಜನ್ನೇವ ತು ಬೀಭತ್ಸುಃ ಸಖಾಯಂ ಪುರುಷರ್ಷಭಮ್ |
ಅಬ್ರವೀತ್ ಪರವೀರಘ್ನಂ ದಾಶಾರ್ಹಮಪರಾಜಿತಮ್ ॥52॥
ಕೃಷ್ಣನು ಹೋಗುತ್ತಿರುವಂತೆಯೇ ಅವನ ಸ್ನೇಹಿತನಾದ ಅರ್ಜುನನು ತನ್ನ ಸ್ನೇಹಿತನೂ ಪುರುಷಶ್ರೇಷ್ಠನೂ, ಪರವೀರಘಾತಿಯೂ, ಅಪರಾಜಿತನೂ ಆದ ದಾಶಾರ್ಹನನ್ನು ಕುರಿತು ಮಾತನಾಡಿದನು.
ಯದಸ್ಮಾಕಂ ವಿಭೋ ವೃತ್ತಂ ಪುರಾ ವೈ ಮಂತ್ರನಿಶ್ಚಯೇ |
ಅರ್ಧರಾಜ್ಯಸ್ಯ ಗೋವಿಂದ ವಿದಿತಂ ಸರ್ವರಾಜಸು ॥53॥
ಎಲೈ ವಿಭುವೇ, ಗೋವಿಂದನೇ, ಎಲ್ಲ ರಾಜರೂ ಸೇರಿದಾಗ ನಾವು ಹಿಂದೆ ಅರ್ಧರಾಜ್ಯವನ್ನು ಕೊಡುವ ವಿಷಯದಲ್ಲಿ ಯಾವ ಮಂತ್ರಾಲೋಚನೆಯನ್ನು ನಡೆಸಿದೆವೋ ಅದು ನಿನಗೆ ತಿಳಿದಿದೆ.
ತಚ್ಚೇದ್ ದದ್ಯುರಸಂಗೇನ ಸತ್ಕೃತ್ಯಾನವಮತ್ಯ ಚ |
ಪ್ರಿಯಂ ಮೇ ಸ್ಯಾನ್ಮಹಾಬಾಹೋ ಮುಚ್ಯೇರನ್ ಮಹತೋ ಭಯಾತ್ ॥
ಎಲೈ ಮಹಾಬಾಹುವೇ, ನಮ್ಮನ್ನು ಸತ್ಕರಿಸಿ ಅವಮಾನವನ್ನು ಮಾಡದೆ, ರಾಜ್ಯ ಲೋಭವನ್ನು ಮಾಡದೆ, ಅರ್ಧರಾಜ್ಯವನ್ನು ಕೊಡುವುದಾದರೆ ಅದು ನನಗೆ ಪ್ರಿಯವಾದೀತು ಮತ್ತು ಒದಗಿದ ದೊಡ್ಡ ಭಯದಿಂದ ಕೌರವರೂ ಮುಕ್ತರಾದಾರು.
ಅತಶ್ಚೇದನ್ಯಥಾ ಕರ್ತಾ ಧಾರ್ತರಾಷ್ಟ್ರೋಽನುಪಾಯವಿತ್ |
ಅಂತಂ ನೂನಂ ಕರಿಷ್ಯಾಮಿ ಕ್ಷತ್ರಿಯಾಣಾಂ ಜನಾರ್ದನ ॥55॥
ಉಪಾಯವನ್ನು ತಿಳಿಯದ ದುರ್ಯೋಧನನು ಅದನ್ನು ಬಿಟ್ಟು ಬೇರೆ ರೀತಿಯಲ್ಲಿ ನಡೆದುಕೊಂಡರೆ ಎಲೈ ಜನಾರ್ದನನೇ, ನಾನು ಖಂಡಿತವಾಗಿ ಕ್ಷತ್ರಿಯರ ವಿನಾಶವನ್ನು ಮಾಡುವೆನು.
ವೈಶಂಪಾಯನಃ
ಏವಮುಕ್ತೇ ಪಾಂಡವೇನ ಸಮಹೃಷ್ಯದ್ ವೃಕೋದರಃ |
ಮುಹುರ್ಮುಹುಃ ಕ್ರೋಧವಶಾತ್ ಪ್ರಾವೇಪತ ಚ ಪಾಂಡವಃ ॥56॥
ವೈಶಂಪಾಯನ ಅರ್ಜುನನು ಹೀಗೆ ಹೇಳುತ್ತಿರಲು ವೃಕೋದರನು ಹರ್ಷಗೊಂಡನು. ಪಾಂಡವನಾದ ಅವನು ಕ್ರೋಧಕ್ಕೆ ವಶನಾಗಿ ಮತ್ತೆ ಮತ್ತೆ ನಡುಗಿದನು.
ವೇಪಮಾನಶ್ಚ ಕೌಂತೇಯಃ ಪ್ರಾಕ್ರೋಶನ್ಮಹತೋ ರವಾನ್ |
ಧನಂಜಯವಚಃ ಶ್ರುತ್ವಾ ಹರ್ಷೋತ್ಸಿಕ್ತಮನಾ ಭೃಶಮ್ ॥57॥
ಧನಂಜಯನ ಮಾತುಗಳನ್ನು ಕೇಳಿ ಬಹಳ ಹರ್ಷದಿಂದ ತುಂಬಿದ ಕುಂತೀಪುತ್ರನಾದ ಅವನು ನಡುಗುತ್ತಾ ಅನೇಕ ಭೈರವ ನಾದಗಳನ್ನು ಮಾಡಿದನು.
ತಸ್ಯ ತಂ ನಿನದಂ ಶ್ರುತ್ವಾ ಸಂಪ್ರಾವೇಪಂತ ಧನ್ವಿನಃ |
ವಾಹನಾನಿ ಚ ಸರ್ವಾಣಿ ಶಕೃನ್ಮೂತ್ರೇ ಪ್ರಸುಸ್ರುವುಃ ॥58॥
ಅವನ ಆ ನಾದವನ್ನು ಕೇಳಿ ಧನುರ್ಧಾರಿಗಳು ನಡುಗಿಹೋದರು. ಅಶ್ವ-ಗಜ ಮೊದಲಾದ ವಾಹನಗಳು ಮಲ-ಮೂತ್ರಗಳನ್ನು ವಿಸರ್ಜಿಸಿದವು.
ಇತ್ಯುಕ್ತ್ವಾ ಕೇಶವಂ ತತ್ರ ತಥಾ ಚೋಕ್ತ್ವಾ ವಿನಿಶ್ಚಯಮ್ |
ಅನುಜ್ಞಾತೋ ನಿವವೃತೇ ಪರಿಷ್ವಜ್ಯ ಜನಾರ್ದನಮ್ ॥59॥
ಅರ್ಜುನನು ಕೃಷ್ಣನನ್ನು ಕುರಿತು ಹೀಗೆ ಮಾತನಾಡಿ, ತನ್ನ ನಿರ್ಧಾರವನ್ನು ತಿಳಿಸಿ, ಜನಾರ್ದನನನ್ನು ಆಲಿಂಗಿಸಿ, ಅವನ ಅನುಜ್ಞೆಯನ್ನು ಪಡೆದು ಹಿಂದಕ್ಕೆ ಬಂದನು.
ತೇಷು ರಾಜಸು ಸರ್ವೇಷು ನಿವೃತ್ತೇಷು ಜನಾರ್ದನಃ |
ತೂರ್ಣಮಭ್ಯಗಮದ್ ಹೃಷ್ಟಃ ಸೈನ್ಯಸುಗ್ರೀವವಾಹನಃ ॥60॥
ರಾಜರೆಲ್ಲರೂ ಹಿಂದಿರುಗಿದ ಮೇಲೆ ಜನಾರ್ದನನು ಸೈನ್ಯಸುಗ್ರೀವಾದಿಗಳನ್ನು ಹೂಡಿದ ತನ್ನ ರಥದಲ್ಲಿ ಶೀಘ್ರವಾಗಿ ಸಂತೋಷದಿಂದ ಹೊರಟನು.
ತೇ ಹಯಾ ವಾಸುದೇವಸ್ಯ ದಾರುಕೇಣ ಪ್ರಚೋದಿತಾಃ |
ಪಂಥಾನಮಾಚೇಮುರಿವ ಗ್ರಸಮಾನಾ ಇವಾಂಬರಮ್ ॥61॥
ದಾರುಕರಿಂದ ಪ್ರಚೋದಿಸಲ್ಪಟ್ಟ ಆ ಕುದುರೆಗಳು ಮಾರ್ಗವನ್ನು ಕುಡಿಯುವಂತೆ, ಆಕಾಶವನ್ನು ನುಂಗುವಂತೆ ಮುಂದೆ ನಡೆದವು.
ಅಥಾಪಶ್ಯನ್ಮಹಾಬಾಹುಃ ಋಷೀನಧ್ವನಿ ಕೇಶವಃ |
ಬ್ರಾಹ್ಮ್ಯಾಶ್ರಿಯಾ ದೀಪ್ಯಮಾನಾನ್ ಸ್ಥಿತಾನುಭಯತಃ ಪಥಿ ॥62॥
ಮುಂದೆ ಹೋಗುತ್ತಾ ಮಹಾಬಾಹುವಾದ ಕೇಶವನು ಮಾರ್ಗದ ಎರಡು ಕಡೆಯಲ್ಲಿಯೂ ಇದ್ದ, ಬ್ರಹ್ಮತೇಜಸ್ಸಿನಿಂದ ಬೆಳಗುವ ಋಷಿಗಳನ್ನು ನೋಡಿದನು.
ಸೋಽವತೀರ್ಯ ರಥಾತ್ ತೂರ್ಣಮಭಿವಾದ್ಯ ಜನಾರ್ದನಃ |
ಯಥಾವತ್ ತಾನೃಷೀನ್ ಸರ್ವಾನ್ ಅಭ್ಯಭಾಷತ ಪೂಜಯನ್ ॥63॥

ಜನಾರ್ದನನು ಶೀಘ್ರವಾಗಿ ರಥದಿಂದ ಇಳಿದು, ಅವರಿಗೆ ನಮಸ್ಕಾರವನ್ನು ಮಾಡಿ, ಗೌರವವನ್ನು ಸಲ್ಲಿಸುತ್ತಾ, ಆ ಎಲ್ಲ ಋಷಿಗಳನ್ನು ಕುರಿತು ಯಥಾಯೋಗ್ಯವಾಗಿ ಮಾತನಾಡಿದನು.
ಕಚ್ಚಿಲ್ಲೋಕೇಷು ಕುಶಲಂ ಕಚ್ಚಿದ್ ಧರ್ಮಃ ಸ್ವನುಷ್ಠಿತಃ |
ಬ್ರಾಹ್ಮಣಾನಾಂ ತ್ರಯೋ ವರ್ಣಾಃ ಕಚ್ಚಿತ್ ತಿಷ್ಠಂತಿ ಶಾಸನೇ ॥64॥
ಪಿತೃದೇವಾತಿಥಿಭ್ಯಶ್ಚ ಕಚ್ಚಿತ್ ಪೂಜಾ ಸ್ವನುಷ್ಠಿತಾ ॥65॥
ಎಲ್ಲ ಲೋಕಗಳಲ್ಲಿಯೂ ಕ್ಷೇಮವೇ? ನಿಮ್ಮ ಧರ್ಮವು ಚೆನ್ನಾಗಿ ಅನುಷ್ಠಾನ ಮಾಡಲ್ಪಡುತ್ತಿದೆಯೇ? ಉಳಿದ ಮೂರು ವರ್ಣದವರೂ ಬ್ರಾಹ್ಮಣರ ಆಜ್ಞೆಯನ್ನು ಪಾಲಿಸುತ್ತಿದ್ದಾರೆಯೇ? ಪಿತೃಗಳ, ದೇವತೆಗಳ ಮತ್ತು ಅತಿಥಿಗಳ ಪೂಜೆಯು ಚೆನ್ನಾಗಿ ನಡೆಯುತ್ತಿದೆಯೇ? (ಎಂದು ಕೇಳಿದನು).
ವೈಶಂಪಾಯನಃ
ತೇಭ್ಯಃ ಪ್ರಯುಜ್ಯ ತಾಂ ಪೂಜಾಂ ಪ್ರೋವಾಚ ಮಧುಸೂದನಃ ॥66॥
ಭಗವಂತಃ ಕ್ವ ಸಂಸಿದ್ಧಾಃ ಕೋಽವಧಿರ್ಭವತಾಮಿಹ |
ಕಿಂ ವಾ ಕಾರ್ಯಂ ಭಗವತಾಮಹಂ ಕಿಂ ಕರವಾಣಿ ವಃ ॥67॥
ಕೇನಾರ್ಥೇನೋಪಸಂಪ್ರಾಪ್ತಾ ಭಗವಂತೋ ಮಹೀತಳಮ್ ॥68॥
ವೈಶಂಪಾಯನ ಮಧುಸೂದನನು, ಅವರಿಗೆ ಆ ಸತ್ಕಾರವನ್ನು ಮಾಡಿ, ಪೂಜ್ಯರಾದ ತಾವು ಎಲ್ಲಿಂದ ಬರುತ್ತಿದ್ದೀರಿ? ನೀವು ಹೋಗಬೇಕಾದ ಸ್ಥಳವು ಯಾವುದು? ಪೂಜ್ಯರಾದ ನಿಮಗೆ ನನ್ನಿಂದ ಏನಾದರೂ ಆಗಬೇಕಾಗಿದೆಯೇ? ಯಾವ ಉದ್ದೇಶದಿಂದ ಪೂಜ್ಯರಾದ ನೀವು ಭೂಮಿಗೆ ಬಂದಿದ್ದೀರಿ? ಎಂದು ಕೇಳಿದನು.
ಏವಮುಕ್ತಾಃ ಕೇಶವೇನ ಮುನಯಃ ಸಂಶಿತವ್ರತಾಃ |
ನಾರದಪ್ರಮುಖಾಃ ಸರ್ವೇ ಪ್ರತ್ಯನಂದಂತ ಕೇಶವಮ್ ॥69॥
ಹೀಗೆ ಕೇಶವನಿಂದ ಕೇಳಲ್ಪಟ್ಟ ಶ್ರೇಷ್ಠವ್ರತಶೀಲರಾದ ನಾರದ ಮೊದಲಾದ ಮುನಿಗಳೆಲ್ಲರೂ ಕೇಶವನನ್ನು ಅಭಿನಂದಿಸಿದರು.
ಅಧಃಶಿರಾಃ ಸರ್ಪಮಾಲೀ ಮಹರ್ಷಿಃ ಸ ಹಿ ದೇವಲಃ |
ಅರ್ವಾವಸುಃ ಸುಜಾನುಶ್ಚ ಮೈತ್ರೇಯಃ ಶುನಕೋ ಬಲೀ ॥70॥
ಬಕೋ ದಾಲ್ಭ್ಯಃ ಸ್ಥೂಲಶಿರಾಃ ಕೃಷ್ಣದ್ವೈಪಾಯನಸ್ತಥಾ |
ಆಯೋದಧೌಮ್ಯೋ ಧೌಮ್ಯಶ್ಚ ಆಣಿಮಾಂಡವ್ಯಕೌಶಿಕೌ ॥71॥
ದಾಮೋಷ್ಣೀಷಸ್ತ್ರಿಷವಣಃ ಪರ್ಣಾದೋ ಘಟಜಾನುಕಃ |
ಮೌಂಜಾಯನೋ ವಾಯುಭಕ್ಷಃ ಪರಾಶರ್ಯೋಽಥ ಶಾರಿಕಃ ॥72॥
ಶೀಲವಾನಶನಿರ್ಧಾತಾ ಶೂನ್ಯಪಾಲೋಽಕೃತವ್ರಣಃ |
ಶ್ವೇತಕೇತುಃ ಕಹೋಳಶ್ಚ ರಾಮಶ್ಚೈವ ಮಹಾತಪಾಃ ॥73॥
ಯಾವಾಗಲೂ ತಲೆಕೆಳಗಾಗಿ ಇದ್ದು ಸರ್ಪಮಾಲೆಯನ್ನು ಧರಿಸಿರುವ ದೇವಲ ಮಹರ್ಷಿಗಳು, ಅರ್ವಾವಸು, ಸುಜಾನು, ಮೈತ್ರೇಯ, ಶುನಕ, ಬಲೀ, ದಾಲ್ಭ್ಯ, ಬಕ, ಸ್ಥೂಲಶಿರಾ, ಕೃಷ್ಣದ್ವೈಪಾಯನ, ಆಯೋದಧೌಮ್ಯ, ಧೌಮ್ಯ, ಆಣಿಮಾಂಡವ್ಯ, ವಿಶ್ವಾಮಿತ್ರ, ದಾಮೋಷ್ಣೀಷ, ತ್ರಿಷವಣ, ಪರ್ಣಾದ, ಘಟಜಾನು, ಮೌಂಜಾಯನ, ವಾಯುಭಕ್ಷ, ಪರಾಶರ್ಯ, ಶಾರಿಕ, ಶೀಲವಾನ್, ಅಶನಿ, ಧಾತಾ, ಶೂನ್ಯಪಾಲ, ಅಕೃತವ್ರಣ, ಶ್ವೇತಕೇತು, ಕಹೋಳ, ಮಹಾತಪಸ್ವಿಯಾದ ಪರಶುರಾಮ (ಎಲ್ಲರೂ ಕೃಷ್ಣನನ್ನು ಅಭಿನಂದಿಸಿದರು).
ತಮಬ್ರವೀಜ್ಜಾಮದಗ್ನ್ಯ ಉಪೇತ್ಯ ಮಧುಸೂದನಮ್ |
ಪರಿಷ್ವಜ್ಯ ಚ ಗೋವಿಂದಂ ಪುರಾಣಚರಿತೇ ಸಖಾ ॥74॥
ಜಮದಗ್ನಿಗಳ ಪುತ್ರನಾದ ಪರಶುರಾಮನು, ಪುರಾಣಚರಿತೆಗಳಲ್ಲಿ ಸ್ನೇಹಿತನಾದ ಮಧುಸೂದನನಾದ ಗೋವಿಂದನನ್ನು ಸಮೀಪಿಸಿ, ಅವನನ್ನು ಆಲಿಂಗಿಸಿ ಮಾತನಾಡಿದನು.
ದೇವರ್ಷಯಃ ಪುಣ್ಯಕೃತೋ ಬ್ರಾಹ್ಮಣಾಶ್ಚ ಬಹುಶ್ರುತಾಃ |
ರಾಜರ್ಷಯಶ್ಚ ಮಾನಾರ್ಹಂ ಮಾನಯಂತಿ ತಪಸ್ವಿನಃ ॥75॥
ದೇವರ್ಷಿಗಳೂ, ಪುಣ್ಯಶೀಲರಾದ ಬ್ರಾಹ್ಮಣರೂ, ಬಹುಶ್ರುತರಾದ ರಾಜರ್ಷಿಗಳೂ ಮತ್ತು ತಪಸ್ವಿಗಳೂ, ಸತ್ಕಾರಕ್ಕೆ ಯೋಗ್ಯರಾದ ನಿನ್ನನ್ನು ಸತ್ಕರಿಸುತ್ತಿದ್ದಾರೆ.
ದೇವಾಸುರಸ್ಯ ದ್ರಷ್ಟಾರಃ ಪುರಾಣಾಶ್ಚ ಮಹಾದ್ಯುತೇ |
ಸಮೇತಂ ಪಾರ್ಥಿವಂ ಕ್ಷತ್ರಂ ದಿದೃಕ್ಷಂತಶ್ಚ ಸರ್ವಶಃ ॥76॥
ಸಭಾಸದಶ್ಚ ರಾಜಾನಃ ತ್ವಾಂ ಚ ಸತ್ಯಂ ಜನಾರ್ದನಮ್ ॥77॥
ಎಲೈ ಮಹಾದ್ಯುತಿಯೇ, ದೇವಾಸುರರನ್ನು ನೋಡಿರುವ ಪ್ರಾಚೀನರಾದ ಇವರು ಭೂಮಿಯಲ್ಲಿ ಒಂದುಗೂಡಿದ ಸಮಸ್ತ ಕ್ಷತ್ರಿಯರನ್ನೂ ನೋಡುವ ಆಸೆಯುಳ್ಳವರಾಗಿದ್ದಾರೆ. ಸಭಾಸದರಾದ ರಾಜರನ್ನೂ, ಸತ್ಯನಾದ ಜನಾರ್ದನನಾದ ನಿನ್ನನ್ನೂ ನೋಡಲು ಬಯಸುತ್ತಾರೆ.
ಏತನ್ಮಹತ್ ಪ್ರೇಕ್ಷಣೀಯಂ ದ್ರಷ್ಟುಂ ಗಚ್ಛಾಮ ಕೇಶವ |
ಧರ್ಮಾರ್ಥಸಹಿತಾ ವಾಚಃ ಶ್ರೋತುಮಿಚ್ಛಾಮ ಮಾಧವ ॥78॥
ತ್ವಯೋಚ್ಯಮಾನಾಃ ಕುರುಷು ರಾಜಮಧ್ಯೇ ಪರಂತಪ ॥79॥
ಎಲೈ ಕೇಶವನೇ, ನೋಡಬೇಕಾದ ಈ ದೊಡ್ಡ ದೃಶ್ಯವನ್ನು ನೋಡಲು ಹೋಗುವೆವು ಮತ್ತು ಮಾಧವನೇ, ಪರಂತಪನೇ, ಕುರುಗಳ ಮತ್ತು ರಾಜರ ಮಧ್ಯದಲ್ಲಿ ನೀನು ಆಡುವ ಧರ್ಮಾರ್ಥಸಹಿತವಾದ ಮಾತುಗಳನ್ನು ಕೇಳಲು ಬಯಸುತ್ತೇವೆ.

ಸಭಾಯಾಂ ಮಧುರಾ ವಾಚಃ ಶುಶ್ರೂಷಂತಸ್ತ್ವಯೇರಿತಾಃ |
ಕುರೂಣಾಂ ಪ್ರತಿಪತ್ತಿಂ ಚ ಶ್ರೋತುಮಿಚ್ಛಾಮ ಮಾಧವ ||80||
ಎಲೈ ಮಾಧವನೇ, ಸಭೆಯಲ್ಲಿ ನೀನು ಆಡುವ ಮಧುರವಾದ ಮಾತುಗಳನ್ನೂ ಮತ್ತು ಕೌರವರ ಅಭಿಪ್ರಾಯವನ್ನೂ ಕೇಳಲು ಬಯಸುತ್ತೇವೆ.
ಭೀಷ್ಮದ್ರೋಣಾದಯಶ್ಚೈವ ವಿದುರಶ್ಚ ಮಹಾಮತಿಃ |
ತ್ವಂ ಚ ಯಾದವಶಾರ್ದೂಲ ಸಭಾಯಾಂ ವೈ ಸಮೇಷ್ಯಥ ||81||
ಎಲೈ ಯಾದವಶಾರ್ದೂಲನೇ, ಭೀಷ್ಮ-ದ್ರೋಣಾದಿಗಳೂ, ಮಹಾಮತಿಯಾದ ವಿದುರನೂ ಮತ್ತು ನೀನೂ ಸಹ ಸಭೆಯಲ್ಲಿ ಒಟ್ಟಿಗೆ ಸೇರುವಿರಿ.
ತವ ವಾಕ್ಯಾನಿ ಸರ್ವಾಣಿ ತಥಾ ತೇಷಾಂ ಚ ಮಾಧವ |
ಶ್ರೋತುಮಿಚ್ಛಾಮ ಗೋವಿಂದ ಸತ್ಯಾನಿ ಚ ಶುಭಾನಿ ಚ ||82||
ಆಪೃಷ್ಟೋಽಸಿ ಮಹಾಬಾಹೋ ಪುನರ್ದ್ರಕ್ಷ್ಯಾಮಹೇ ವಯಮ್ ||
ಎಲೈ ಗೋವಿಂದನೇ, ನಿನ್ನ ಮತ್ತು ಅವರ ಸತ್ಯವಾದ ಮತ್ತು ಶುಭವಾದ ಎಲ್ಲ ಮಾತುಗಳನ್ನೂ ಕೇಳಲು ನಾವು ಇಚ್ಛಿಸುತ್ತೇವೆ. ಎಲೈ ಮಹಾಬಾಹುವೇ, ನಾವು ನಿನಗೆ ಅನುಮತಿಯನ್ನು ಕೊಡುತ್ತಿದ್ದೇವೆ. ಪುನಃ ಸಭೆಯಲ್ಲಿ ನೋಡುವೆವು.
ಯಾಹ್ಯವಿಘ್ನೇನ ವೈ ವೀರ ದ್ರಕ್ಷ್ಯಾಮಸ್ತ್ವಾಂ ಸಭಾಗತಮ್ |
ಆಸೀನಮಾಸನೇ ದಿವ್ಯೇ ಜ್ವಲಂತಂ ತೇಜಸಾಽಚ್ಯುತ ||84||
ಎಲೈ ವೀರನೇ, ನಿರ್ವಿಘ್ನವಾಗಿ ಪ್ರಯಾಣ ಮಾಡುವವನಾಗು. ಎಲೈ ಅಚ್ಯುತನೇ, ನೀನು ಸಭೆಯಲ್ಲಿ ದಿವ್ಯಾಸನದಲ್ಲಿ ಕುಳಿತು ತೇಜಸ್ಸಿನಿಂದ ಬೆಳಗುವುದನ್ನು ನಾವು ನೋಡುವೆವು.
ವೈಶಂಪಾಯನಃ
ಪ್ರಯಾಂತಂ ದೇವಕೀಪುತ್ರಂ ಪರವೀರರುಜೋ ದಶ |
ಮಹಾರಥಾ ಮಹಾಬಾಹುಮನ್ವಯುಃ ಶಸ್ತ್ರಪಾಣಯಃ ||85||
ಪದಾತೀನಾಂ ಸಹಸ್ರಂ ಚ ಸಾದಿನಾಂ ಚ ಪರಂತಪ |
ಭೋಜ್ಯಂ ಚ ವಿಪುಲಂ ರಾಜನ್ ಪ್ರೇಷ್ಯಾಶ್ಚ ಶತಶೋಽಪರೇ ||86||
ವೈಶಂಪಾಯನ ಎಲೈ ಪರಂತಪನೇ, ರಾಜನೇ, ಅಲ್ಲಿಂದ ಮುಂದೆ ದೇವಕೀಪುತ್ರನಾದ ಕೃಷ್ಣನು ಹೊರಟಾಗ ಮಹಾಬಾಹುವಾದ ಅವನನ್ನು ಪರವೀರಘಾತಕರಾದ ಹತ್ತು ಮಹಾರಥರೂ, ಶಸ್ತ್ರಪಾಣಿಗಳಾದ ಸಹಸ್ರ ಪದಾತಿಗಳೂ, ಸಹಸ್ರ ಅಶ್ವಾರೋಹಿಗಳೂ, ವಿಪುಲವಾದ ಭೋಜನಪದಾರ್ಥಗಳೂ ಮತ್ತು ನೂರಾರು ಸೇವಕರು ಹಿಂಬಾಲಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಾಶೀತಿತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ದ್ವಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತೊಂದನೆ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆರಡನೆಯ ಅಧ್ಯಾಯ
ಕುಶಸ್ಥಲದಲ್ಲಿ ಕೃಷ್ಣನ ವಿಶ್ರಾಂತಿ. ಗ್ರಾಮಸ್ಥ ಬ್ರಾಹ್ಮಣರಿಂದ ಅವನ ಪೂಜೆ.
ಜನಮೇಜಯಃ
ಕಥಂ ಪ್ರಯಾತೋ ದಾಶಾರ್ಹೋ ಮಹಾತ್ಮಾ ಮಧುಸೂದನಃ |
ಕಾನಿ ವಾ ವ್ರಜತಸ್ತಸ್ಯ ನಿಮಿತ್ತಾನಿ ಮಹೌಜಸಃ ||1||
ಜನಮೇಜಯ ಮಹಾತ್ಮನಾದ, ದಾಶಾರ್ಹನಾದ ಮಧುಸೂದನನು ಉಪಪ್ಲಾವ್ಯನಗರದಿಂದ ಹೇಗೆ ಹೊರಟನು? ಮಹಾಪರಾಕ್ರಮಶಾಲಿಯಾದ ಅವನು ಹೊರಟಾಗ ಉಂಟಾದ ಶಕುನಗಳು ಯಾವುವು?
ವೈಶಂಪಾಯನಃ
ತಸ್ಯ ಪ್ರಯಾತೋ ಯಾನ್ಯಾಸನ್ ನಿಮಿತ್ತಾನಿ ಮಹಾತ್ಮನಃ |
ತಾನಿ ಮೇ ಶೃಣು ದಿವ್ಯಾನಿ ದೈವಾನ್ಯೌತ್ಪಾತಿಕಾನಿ ಚ ||2||
ವೈಶಂಪಾಯನ ಮಹಾತ್ಮನಾದ ಕೃಷ್ಣನು ಹೊರಟಾಗ ಎಂತಹ ದೈವಕೃತವಾದ ದಿವ್ಯವಾದ ಅಪಶಕುನಗಳು (ಮತ್ತು ಶಕುನಗಳು) ಉಂಟಾದವೆಂದು ಹೇಳುತ್ತೇನೆ, ಕೇಳು.
ಅನಭ್ರೇಽಶನಿನಿರ್ಘೋಷಃ ಸವಿದ್ಯುತ್ ಸಮಜಾಯತ |
ಅನ್ವಗೇವ ಚ ಪರ್ಜನ್ಯಃ ಪ್ರಾವರ್ಷದ್ ವಿಘನೇ ಭೃಶಮ್ ||3||
ಮೋಡವಿಲ್ಲದ ಆಕಾಶದಲ್ಲಿ ಮಿಂಚಿನಿಂದ ಕೂಡಿದ ಸಿಡಿಲುಗಳ ಘೋಷವು ಕೇಳಿಬಂದಿತು. ತಕ್ಷಣವೇ ಮೋಡವಿಲ್ಲದ ಆಕಾಶದಿಂದ ಪರ್ಜನ್ಯನು ಜೋರಾದ ಮಳೆಯನ್ನು ಸುರಿಸಿದನು.
ಪ್ರತ್ಯಗೂಹುರ್ಮಹಾನದ್ಯಃ ಪ್ರಾಙ್ಮುಖಾಃ ಸಿಂಧುಸತ್ತಮಾಃ |
ವಿಪರೀತಾ ದಿಶಃ ಸರ್ವಾ ನ ಪ್ರಾಜ್ಞಾಯತ ಕಿಂಚನ ||4||
ಸಮುದ್ರಪತ್ನಿಯರಾದ ಪೂರ್ವಾಭಿಮುಖವಾಗಿ ಹರಿಯುವ ಮಹಾನದಿಗಳು ಪಶ್ಚಿಮಾಭಿಮುಖವಾಗಿ ಹರಿದವು. ದಿಕ್ಕುಗಳು ವಿಪರೀತವಾಗಿ ತೋರಿದವು. ಏನೂ ತಿಳಿಯದಂತೆ ಆಯಿತು.

ಪ್ರಾಜ್ವಲನ್ ನಾಗ್ನಯೋ ರಾಜನ್ ಪೃಥಿವೀ ಸಮಕಂಪತ |
ಉದಪಾನಾಶ್ಚ ಕುಂಭಾಶ್ಚ ಪ್ರಾಸಿಂಚನ್ ಶತಶೋ ಜಲಮ್ ॥5॥
ಎಲೈ ರಾಜನೇ, ಅಗ್ನಿಗಳು ಪ್ರಜ್ವಲಿಸಲಿಲ್ಲ, ಭೂಮಿಯು ನಡುಗಿತು, ಸರೋವರಗಳಿಂದ ಮತ್ತು ನೀರು ತುಂಬಿದ ಗಡಿಗೆಗಳಿಂದ ಜಲವು ನೂರಾರು ಧಾರೆಗಳಲ್ಲಿ ಹರಿಯಿತು.
ತಮಃಸಂವೃತಮಪ್ಯಾಸೀತ್ ಸರ್ವಂ ಜಗದಿದಂ ತದಾ |
ನ ದಿಶೋ ವಿದಿಶೋ ರಾಜನ್ ಪ್ರಜ್ಞಾಯಂತೇ ಸ್ಮ ರೇಣುನಾ ॥6॥
ಈ ಜಗತ್ತೆಲ್ಲವೂ ಕತ್ತಲಿನಿಂದ ಆವೃತವಾಯಿತು. ಎಲೈ ರಾಜನೇ, ಎಲ್ಲ ಕಡೆಯೂ ಧೂಳು ತುಂಬಿಕೊಂಡು ದಿಕ್ಕುಗಳಾಗಲೀ ಅಥವಾ ವಿದಿಕ್ಕುಗಳಾಗಲೀ ತಿಳಿಯಲಿಲ್ಲ.
ಪ್ರಾದುರಾಸೀನ್ಮಹಾನ್ ಶಬ್ದಃ ಖೇ ಶರೀರಮದೃಶ್ಯತ |
ಸರ್ವೇಷು ರಾಜನ್ ದೇಶೇಷು ತದದ್ಭುತಮಿವಾಭವನ್ ॥7॥
ದೊಡ್ಡ ಶಬ್ದಗಳು ಉಂಟಾದವು. ಎಲೈ ರಾಜನೇ, ಎಲ್ಲ ದೇಶಗಳಲ್ಲಿಯೂ ಆಕಾಶದಲ್ಲಿ ಶರೀರಗಳು ಕಂಡುಬಂದವು. ಅದು ಅದ್ಭುತವಾಗಿದ್ದಿತು.
ಪ್ರಾಮಥ್ನಾದ್ ಹಸ್ತಿನಪುರಂ ವಾತೋ ದಕ್ಷಿಣಪಶ್ಚಿಮಃ |
ಆರುಜನ್ ಗಣಶೋ ವೃಕ್ಷಾನ್ ಪರುಷೋ ಭೀಮನಿಸ್ವನಃ ॥8॥
ನೈಋತ್ಯ ಮಾರುತವು ಹಸ್ತಿನಪುರವನ್ನು ಮರ್ದನಮಾಡಿತು. ಭಯಂಕರವಾದ ಶಬ್ದದಿಂದ ಕೂಡಿದ ಉಗ್ರವಾದ ಆ ವಾತವು ಮರಗಳ ಸಮೂಹಗಳನ್ನು ಉರುಳಿಸಿತು.
ಯತ್ರ ಯತ್ರ ಚ ವಾರ್ಷ್ಣೇಯೋ ವರ್ತತೇ ಪಥಿ ಭಾರತ |
ತತ್ರ ತತ್ರ ಸುಖೋ ವಾಯುಃ ಸರ್ವಂ ಚಾಸೀತ್ ಪ್ರದಕ್ಷಿಣಮ್ ॥9॥
ಎಲೈ ಭಾರತನೇ, ಆದರೆ ಮಾರ್ಗದಲ್ಲಿ ಎಲ್ಲೆಲ್ಲಿ ವಾರ್ಷ್ಣೇಯನಾದ ಕೃಷ್ಣನು ಹೋಗುತ್ತಾನೆಯೋ ಅಲ್ಲಿ ವಾಯುವು ಸುಖಕರವಾಗಿ ಬೀಸಿತು. ಎಲ್ಲವೂ ಕೂಡ ಅನುಕೂಲವಾಗಿದ್ದಿತು.
ವವರ್ಷ ಪುಷ್ಪವರ್ಷಂ ಚ ಕಮಲಾನಿ ಚ ಭೂರಿಶಃ |
ಸಮಶ್ಚ ಪಂಥಾ ನಿರ್ದುಃಖೋ ವ್ಯಪೇತಕುಶಕಂಟಕಃ ॥10॥
ಕಮಲಗಳಿಂದ ಕೂಡಿದ ಪುಷ್ಪವರ್ಷವು ಅನೇಕಬಾರಿ ಉಂಟಾಯಿತು. ಮಾರ್ಗವು ಸಮವಾಗಿದ್ದು ಕುಶ-ಕಂಟಕಗಳಿಲ್ಲದೆ ಸುಖಕರವಾಗಿದ್ದಿತು.
ಸಂಸ್ತೂಯಮಾನೋ ಬ್ರಾಹ್ಮಣೈಃ ರಾಜನ್ ತತ್ರ ತತ್ರ ಮಹಾಭುಜಃ |
ಅರ್ಚ್ಯತೇ ಮಧುಪರ್ಕೈಶ್ಚ ವಸುಭಿಶ್ಚ ವಸುಪ್ರದಃ ॥11॥
ಎಲೈ ರಾಜನೇ, ಮಹಾಭುಜನಾದ, ವಸುಪ್ರದನಾದ ಕೃಷ್ಣನು ಅಲ್ಲಲ್ಲಿ ಬ್ರಾಹ್ಮಣರಿಂದ ಸುತ್ತುವರಿಯಲ್ಪಟ್ಟು, ಮಧುಪರ್ಕಗಳಿಂದಲೂ ಮತ್ತು ದ್ರವ್ಯಗಳಿಂದಲೂ ಪೂಜಿಸಲ್ಪಟ್ಟನು.
ತಂ ಕಿರಂತಿ ಮಹಾತ್ಮಾನಂ ವನ್ಯೈಃ ಪುಷ್ಪೈಃ ಸುಗಂಧಿಭಿಃ |
ಸ್ತ್ರಿಯಃ ಪಥಿ ಸಮಾಗಮ್ಯ ಸರ್ವಭೂತಹಿತೇ ರತಮ್ ॥12॥
ಸ್ತ್ರೀಯರು ಸರ್ವಭೂತಹಿತದಲ್ಲಿ ರತನಾದ, ಮಹಾತ್ಮನಾದ ಕೃಷ್ಣನನ್ನು ಮಾರ್ಗದಲ್ಲಿ ಸಂಧಿಸಿ, ಸುಗಂಧಯುಕ್ತವಾದ ಅರಣ್ಯಪುಷ್ಪಗಳಿಂದ ಅವನ ಮೇಲೆ ಪುಷ್ಪಗಳ ಮಳೆಯನ್ನು ಸುರಿಸಿದರು.
ಸ ಶಾಲಿಭವನಂ ರಮ್ಯಂ ಸರ್ವಸಸ್ಯಸಮಾಚಿತಮ್ |
ಸುಖಂ ಪರಮಧರ್ಮಿಷ್ಠಮತ್ಯಗಾನ್ಮಧುಸೂದನಃ ॥13॥
ಮಧುಸೂದನನು ಸರ್ವಸಸ್ಯಗಳಿಂದ ತುಂಬಿದ, ಪರಮಧರ್ಮಿಷ್ಠವಾದ, ಮನೋಹರವಾದ ಸುಖಕರವಾದ ಶಾಲಿಭವನ ಎಂಬ ಪ್ರದೇಶವನ್ನು ದಾಟಿ ಮುಂದೆ ಬಂದನು.
ಪಶ್ಯನ್ ಬಹುಪಶೂನ್ ಗ್ರಾಮಾನ್ ರಮ್ಯಾನ್ ಹೃದಯತೋಷಣಾನ್|
ಪುರಾಣಿ ವ್ಯತಿಚಕ್ರಾಮ ರಾಷ್ಟ್ರಾಣಿ ನಗರಾಣಿ ಚ ॥14॥
ನಿತ್ಯಂ ಹೃಷ್ಟಾಃ ಸುಮನಸೋ ಭಾರತೈರಭಿರಕ್ಷಿತಾಃ |
ನೋದ್ವಿಗ್ನಾಃ ಪರಚಕ್ರೇಭ್ಯೋ ಹ್ಯನಯಾನಾಮಕೋವಿದಾಃ ॥15॥
ಅನೇಕವಿಧವಾದ ಪಶುಗಳನ್ನೂ, ಮನೋಹರವಾದ ಸುಂದರವಾದ ಗ್ರಾಮಗಳನ್ನೂ, ಪಟ್ಟಣಗಳನ್ನೂ, ರಾಷ್ಟ್ರಗಳನ್ನೂ, ನಗರಗಳನ್ನೂ, ಭಾರತರಿಂದ ರಕ್ಷಿತವಾದ ಒಳ್ಳೆಯ ಮನಸ್ಸುಳ್ಳ ಸಂತೋಷಗೊಂಡ ಉದ್ವೇಗರಹಿತವಾದ ಪರರಾಜರ ಭಯವಿಲ್ಲದ ಅನೀತಿಯನ್ನು ತಿಳಿಯದ ಜನರಿಂದ ತುಂಬಿದ (ನಗರಗಳನ್ನೂ) ನೋಡುತ್ತಾ ಮುಂದೆ ಸಾಗಿದನು.
ಉಪಪ್ಲಾವ್ಯಾದಥಾಗಮ್ಯ ಜನಾಃ ಪುರನಿವಾಸಿನಃ |
ಪಥ್ಯತಿಷ್ಠಂತ ಸಹಿತಾ ವಿಷ್ವಕ್ಸೇನದಿದೃಕ್ಷಯಾ ॥16॥
ಕೃಷ್ಣನು ಉಪಪ್ಲಾವ್ಯದಿಂದ ಹೊರಟಾಗ, ವಿಷ್ವಕ್ಸೇನನಾದ ಅವನನ್ನು ನೋಡುವ ಆಸೆಯಿಂದ ಪುರನಿವಾಸಿಗಳು ಒಟ್ಟಿಗೆ ಸೇರಿ ಮಾರ್ಗದಲ್ಲಿ ನಿಂತರು.
ತೇ ತು ಸರ್ವೇ ಸುನಾಮಾನಮಗ್ನಿಮಿದ್ಧಮಿವ ಪ್ರಭುಮ್ |
ಅರ್ಚಯಾಮಾಸುರರ್ಚಾರ್ಹಂ ದೇಶಾತಿಥಿಮುಪಸ್ಥಿತಮ್ ॥17॥
ಅವರೆಲ್ಲರೂ ಒಳ್ಳೆಯ ನಾಮವನ್ನು ಧರಿಸಿದ, ಪೂಜೆಗೆ ಅರ್ಹನಾದ ಜ್ವಲಿಸುವ ಅಗ್ನಿಯಂತಿರುವ ಪ್ರಭುವಾದ ದೇಶಾತಿಥಿಯಾಗಿ ಬಂದ

ಕೃಷ್ಣನನ್ನು ಪೂಜಿಸಿದರು.
ಕುಶಸ್ಥಲಂ ಸಮಾಸಾದ್ಯ ಕೇಶವಃ ಪರವೀರಹಾ |
ಪ್ರಕೀರ್ಣರಶ್ಮಾವಾದಿತ್ಯೇ ವಿಮಲೇ ಲೋಹಿತಾಯತಿ ||18||
ಅವತೀರ್ಯ ರಥಾತ್ ತೂರ್ಣಂ ಕೃತ್ವಾ ಶೌಚಂ ಯಥಾವಿಧಿ |
ರಥಮೋಚನಮಾದಿಶ್ಯ ಸಂಧ್ಯಾಮುಪವಿವೇಶ ಹ ||19||
ಕುಶಸ್ಥಲ ಗ್ರಾಮಕ್ಕೆ ಬಂದಾಗ ಪರವೀರಹಂತಕನಾದ ಕೇಶವನು, ತನ್ನ ಕಿರಣಗಳನ್ನು ಹರಡಿ, ನಿರ್ಮಲವಾದ ಆದಿತ್ಯನು ಕೆಂಪುಬಣ್ಣಕ್ಕೆ ತಿರುಗುತ್ತಿರಲು, ಶೀಘ್ರವಾಗಿ ರಥದಿಂದ ಇಳಿದು ವಿಧಿಪ್ರಕಾರವಾಗಿ ಶೌಚವನ್ನು ಆಚರಿಸಿ, ರಥವನ್ನು ಬಿಚ್ಚುವಂತೆ ಆದೇಶವನ್ನು ನೀಡಿ ಸಂಧ್ಯಾವಂದನೆಯನ್ನು ಮಾಡಿದನು.
ದಾರುಕೋಽಪಿ ಹಯಾನ್ ಮುಕ್ತ್ವಾ ಪರಿವಾರ್ಯ ಚ ಶಾಸ್ತ್ರತಃ |
ಮುಮೋಚ ಸರ್ವವರ್ಮಾಣಿ ಮುಕ್ತ್ವಾ ಚೈತಾನವಾಸೃಜತ್ ||20||
ದಾರುಕನಾದರೂ ಕುದುರೆಗಳನ್ನು ಬಿಚ್ಚಿ, ಶಾಸ್ತ್ರರೀತಿಯಲ್ಲಿ ಅವುಗಳಿಗೆ ಪ್ರದಕ್ಷಿಣೆಯನ್ನು ಮಾಡಿ, ಅವುಗಳ ಎಲ್ಲಾ ಕವಚಗಳನ್ನೂ ತೆಗೆದು ಅವುಗಳನ್ನು ಸ್ವತಂತ್ರವಾಗಿ ಬಿಟ್ಟನು.
ಅಭ್ಯತೀತ್ಯ ತು ತತ್ ಸರ್ವಮುವಾಚ ಮಧುಸೂದನಃ ||21||
ಯುಧಿಷ್ಠಿರಸ್ಯ ಕಾರ್ಯಾರ್ಥಮಿಹ ವತ್ಸ್ಯಾಮಹೇ ವಯಮ್ ||22||
ಅಷ್ಟು ನಗರಗಳನ್ನು ದಾಟಿ ಬಂದ ಮಧುಸೂದನನು ಕುಶಸ್ಥಲನಿವಾಸಿಗಳನ್ನೂ ಕುರಿತು, ಯುಧಿಷ್ಠಿರನ ಕಾರ್ಯದ ನಿಮಿತ್ತದಿಂದ ನಾವು ಇಲ್ಲಿಗೆ ಬಂದಿದ್ದೇವೆ. ಈ ದಿನ ಇಲ್ಲಿಯೇ ವಾಸಮಾಡುವೆವು ಎಂದು ಹೇಳಿದನು.
ತಸ್ಯ ತನ್ಮತಮಾಜ್ಞಾಯ ಚಕ್ರುರಾವಸಥಂ ನರಾಃ |
ಕ್ಷಣೇನ ಚಾನ್ನಪಾನಾನಿ ರಸವಂತಿ ಸಮಾರ್ಜಯನ್ ||23||
ಅದನ್ನು ಕೇಳಿದ ಆ ಗ್ರಾಮನಿವಾಸಿಗಳು ತಕ್ಷಣ ಬಿಡಾರಗಳನ್ನು ಕಲ್ಪಿಸಿ, ಒಂದು ಕ್ಷಣದಲ್ಲಿ ರಸಭರಿತವಾದ ಅನ್ನ-ಪಾನಗಳನ್ನು ಸಿದ್ಧಪಡಿಸಿದರು.
ತಸ್ಮಿನ್ ಗ್ರಾಮೇ ಪ್ರಧಾನಾಸ್ತು ಯ ಆಸನ್ ಬ್ರಾಹ್ಮಣಾ ನೃಪ |
ಆರ್ಯಾಃ ಕುಲೀನಾ ಹ್ರೀಮಂತೋ ಬ್ರಾಹ್ಮೀಂ ವೃತ್ತಿಮನುಷ್ಠಿತಾಃ ||24||
ತೇಽಭಿಗಮ್ಯ ಮಹಾತ್ಮಾನಂ ಹೃಷೀಕೇಶಮರಿಂದಮಮ್ |
ಪೂಜಾಂ ಚಕ್ರುರ್ಯಥಾನ್ಯಾಯಮಾಶೀರ್ಮಂಗಲಸಂಯುತಮ್ ||25||
ಆ ಗ್ರಾಮದಲ್ಲಿದ್ದ ಬ್ರಾಹ್ಮಣವೃತ್ತಿಯನ್ನು ಅನುಸರಿಸುವ ಮಾನವಂತರೂ, ಕುಲೀನರೂ, ಶ್ರೇಷ್ಠನಡತೆಯುಳ್ಳವರೂ ಆದ ಬ್ರಾಹ್ಮಣರು ಎಲೈ ರಾಜನೇ, ಅರಿಂದಮನಾದ, ಮಹಾತ್ಮನಾದ ಹೃಷೀಕೇಶನ ಬಳಿಗೆ ಬಂದು, ವಿಧಿಗೆ ಅನುಸಾರವಾಗಿ ಮಂಗಲಯುಕ್ತವಾದ ಆಶೀರ್ವಾದಗಳನ್ನು ಮಾಡಿ ಪೂಜೆಯನ್ನು ಮಾಡಿದರು.
ತೇ ಪೂಜಯಿತ್ವಾ ದಾಶಾರ್ಹಂ ಸರ್ವಲೋಕೇಷು ಪೂಜಿತಮ್ |
ನ್ಯವೇದಯಂತ ವೇಶ್ಮಾನಿ ಗುಣವಂತಿ ಮಹಾಂತಿ ಚ ||26||
ಅವರು ಸರ್ವಲೋಕಪೂಜಿತನಾದ, ದಾಶಾರ್ಹನಾದ ಕೃಷ್ಣನನ್ನು ಪೂಜಿಸಿ ಸಿದ್ಧಪಡಿಸಿದ ಶ್ರೇಷ್ಠವಾದ ದೊಡ್ಡದಾದ ತಮ್ಮ ಬಿಡಾರಗಳನ್ನು ನಿವೇದಿಸಿದರು.
ತಾನ್ ಪ್ರಭುಃ ಕೃತಮಿತ್ಯುಕ್ತ್ವಾ ಸತ್ಕೃತ್ಯ ಚ ಯಥಾರ್ಹತಃ |
ಅಭ್ಯೇತ್ಯ ಚೈಷಾಂ ವೇಶ್ಮಾನಿ ಪುನರಾಯಾತ್ ಸಹೈವ ತೈಃ ||27||
ಪ್ರಭುವಾದ ಕೃಷ್ಣನು ಅವರನ್ನು ಚೆನ್ನಾಗಿ ಮಾಡಿದ್ದೀರಿ ಎಂದು ಹೇಳಿ, ಯೋಗ್ಯವಾಗಿ ಸತ್ಕರಿಸುತ್ತಾ ಆ ಗೃಹಗಳಿಗೆ ಹೋಗಿ ಪುನಃ ಅವರ ಜೊತೆಯಲ್ಲಿ ಹೊರಬಂದನು.
ಸುಮೃಷ್ಟಂ ಭೋಜಯಿತ್ವಾ ಚ ಬ್ರಾಹ್ಮಣಾಂಸ್ತತ್ರ ಕೇಶವಃ |
ಭುಕ್ತ್ವಾ ಚ ಸಹ ತೈಃ ಸರ್ವೈರವಸತ್ ತಾಂ ಕ್ಷಪಾಂ ಸುಖಮ್ ||28||
ಕೇಶವನು ಅಲ್ಲಿ ಆ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನವನ್ನು ಮಾಡಿಸಿ, ಅವರ ಜೊತೆಯಲ್ಲಿ ತಾನೂ ಭೋಜನವನ್ನು ಮಾಡಿ, ಅವರ ಜೊತೆಯಲ್ಲಿಯೇ ಆ ರಾತ್ರಿಯನ್ನು ಅಲ್ಲಿ ಸುಖವಾಗಿ ಕಳೆದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ತ್ರಯೋದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ಮೂರನೆಯ ಅಧ್ಯಾಯ
ಧೃತರಾಷ್ಟ್ರನ ಆದೇಶದಂತೆ ಕೃಷ್ಣನು ಬರುವ ಮಾರ್ಗದಲ್ಲಿ
ದುರ್ಯೋಧನನಿಂದ ವಿಚಿತ್ರ ಸಭೆಗಳ ನಿರ್ಮಾಣ.
ಅವುಗಳನ್ನು ನೋಡದೆ ಕೃಷ್ಣನಿಂದ ಕುರುರಾಜ್ಯಪ್ರವೇಶ.
ವೈಶಂಪಾಯನಃ

ತದಾ ದೂತೈಃ ಸಮಾಜ್ಞಾಯ ಆಯಾಂತಂ ಮಧುಸೂದನಮ್ |
ಧೃತರಾಷ್ಟ್ರೋಽಬ್ರವೀದ್ ಭೀಷ್ಮಮರ್ಚಯಿತ್ವಾ ಮಹಾಭುಜಮ್ ॥1॥
ವೈಶಂಪಾಯನ ಆಗ ಧೃತರಾಷ್ಟ್ರನು ಮಧುಸೂದನನು ಬರುತ್ತಿರುವ ವಾರ್ತೆಯನ್ನು ತನ್ನ ದೂತರಿಂದ ತಿಳಿದು ಮಹಾಭುಜನಾದ ಭೀಷ್ಮನನ್ನು ಅರ್ಚಿಸಿ ಮಾತನಾಡಿದನು.
ದ್ರೋಣಂ ಚ ಸಂಜಯಂ ಚೈವ ವಿದುರಂ ಚ ಮಹಾಮತಿಮ್ |
ದುರ್ಯೋಧನಂ ಸಹಾಮಾತ್ಯಂ ಹೃಷ್ಟರೋಮಾಽಬ್ರವೀದಿದಮ್ ॥2॥
ದ್ರೋಣರು, ಸಂಜಯ ಮತ್ತು ಮಹಾಮತಿಯಾದ ವಿದುರ ಇವರ ಸನ್ನಿಧಿಯಲ್ಲಿ ರೋಮಾಂಚಗೊಂಡು, ಮಂತ್ರಿಗಳಿಂದ ಸಹಿತನಾದ ದುರ್ಯೋಧನನನ್ನು ಕುರಿತು ಹೀಗೆ ಮಾತನಾಡಿದನು.
ಅದ್ಭುತಂ ಮಹದಾಶ್ಚರ್ಯಂ ಶ್ರೂಯತೇ ಕುರುನಂದನ |
ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಕಥಯಂತಿ ಗೃಹೇ ಗೃಹೇ ॥3॥
ಎಲೈ ಕುರುನಂದನನೇ, ಅದ್ಭುತವಾದ ಬಹಳ ಆಶ್ಚರ್ಯಕರವಾದ ವಿಷಯವು ಕೇಳಿ ಬರುತ್ತಿದೆ. ಮನೆ ಮನೆಗಳಲ್ಲಿ ಸ್ತ್ರೀಯರು, ಬಾಲಕರು ಮತ್ತು ವೃದ್ಧರು ಅದನ್ನು ಹೇಳುತ್ತಿದ್ದಾರೆ.
ಸತ್ಕೃತ್ಯಾಚಕ್ಷತೇ ಚಾನ್ಯೇ ತಥೈವಾನ್ಯೇ ಸಮಾಗತಾಃ |
ಪೃಥಗ್ವಾದಾಶ್ಚ ವರ್ತಂತೇ ಚತ್ವರೇಷು ಸಭಾಸು ಚ ॥4॥
ಒಬ್ಬರನ್ನೊಬ್ಬರು ಸತ್ಕರಿಸಿ ಮಾತನಾಡುತ್ತಿದ್ದಾರೆ. ಬೇರೆ ದೇಶದಿಂದ ಬಂದವರೂ ಮಾತನಾಡುತ್ತಿದ್ದಾರೆ. ಸಭೆಗಳಲ್ಲಿ ಮತ್ತು ಚತುಷ್ಪಥಗಳಲ್ಲಿ ಸಹ ಎಲ್ಲರೂ ಬೇರೆ ಬೇರೆ ಮಾತನಾಡುತ್ತಿದ್ದಾರೆ.
ಉಪಯಾಸ್ಯತಿ ದಾಶಾರ್ಹಃ ಪಾಂಡವಾರ್ಥೇ ಪರಾಕ್ರಮೀ |
ಸ ನೋ ಮಾನ್ಯಶ್ಚ ಪೂಜ್ಯಶ್ಚ ಸರ್ವಥಾ ಮಧುಸೂದನಃ ॥5॥
ಆ ಆಶ್ಚರ್ಯವಾದ ಘಟನೆ ಎಂದರೆ ಪರಾಕ್ರಮಶಾಲಿಯಾದ ದಾಶಾರ್ಹನು ಪಾಂಡವರ ಸಲುವಾಗಿ ಇಲ್ಲಿಗೆ ಬರುತ್ತಿದ್ದಾನೆ. ಮಧುಸೂದನನಾದ ಅವನು ಸರ್ವಥಾ ನಮ್ಮ ಗೌರವಕ್ಕೆ ಪಾತ್ರನಾದವನು ಮತ್ತು ಪೂಜನೀಯನಾದವನು.
ತಸ್ಮಿನ್ ಹಿ ಯಾತ್ರಾ ಲೋಕಸ್ಯ ಭೂತಾನಾಮಿಶ್ವರೋ ಹಿ ಸಃ |
ತಸ್ಮಿನ್ ಧೃತಿಶ್ಚ ವೀರ್ಯಂ ಚ ಪ್ರಜ್ಞಾ ಚೌಜಶ್ಚ ಮಾಧವೇ ॥6॥
ಅವನು ಲೋಕದ ನಡತೆಯ ಮರ್ಯಾದೆಯನ್ನು ಸ್ಥಾಪಿಸುವವನು. ಅವನು ಎಲ್ಲರಿಗೂ ಪ್ರಭುವಾದವನು. ಆ ಮಾಧವನಲ್ಲಿ ಧೈರ್ಯವೂ, ವೀರ್ಯವೂ, ಪ್ರಜ್ಞೆಯೂ ಮತ್ತು ಬಲವೂ ನೆಲೆಗೊಂಡಿವೆ.
ಸ ಮಾನ್ಯತಾಂ ನರಶ್ರೇಷ್ಠಃ ಸ ಹಿ ಧರ್ಮಃ ಸನಾತನಃ |
ಪೂಜಿತೋ ಹಿ ಸುಖಾಯ ಸ್ಯಾದಸುಖಾಯಾಪ್ಯಪೂಜಿತಃ ॥7॥
ನರಶ್ರೇಷ್ಠನಾದ ಅವನು ಗೌರವಿಸಲ್ಪಡಲಿ. ಅವನೇ ಸನಾತನ ಧರ್ಮ ಎನಿಸುವವನು. ಅವನನ್ನು ಪೂಜಿಸಿದರೆ ಸುಖವುಂಟಾಗುತ್ತದೆ. ಪೂಜಿಸದಿದ್ದರೆ ದುಃಖವುಂಟಾಗುತ್ತದೆ.
ಸ ಚೇತ್ ತುಷ್ಯತಿ ದಾಶಾರ್ಹ ಉಪಚಾರೈರರಿಂದಮಃ |
ಕೃಷ್ಣಾತ್ ಸರ್ವಾನಭಿಪ್ರಾಯಾನ್ ವಯಂ ಲಪ್ಸ್ಯಾಮಹೇ ನೃಷು ॥8॥
ಅರಿಂದಮನಾದ ಆ ದಾಶಾರ್ಹನು ನಾವು ಮಾಡುವ ಉಪಚಾರಗಳಿಂದ ಪ್ರಸನ್ನನಾದರೆ ಆ ಕೃಷ್ಣನಿಂದ ನಾವು ನಮ್ಮ ಎಲ್ಲಾ ಅಭೀಷ್ಟಗಳನ್ನೂ ಪಡೆಯುವೆವು.
ತಸ್ಯ ಪೂಜಾರ್ಥಮದ್ಯೈವ ಸಂವಿಧತ್ಸ್ವ ಪರಂತಪ |
ಸಭಾಃ ಪಥಿ ವಿಧೀಯಂತಾಂ ಸರ್ವಕಾಮಸಮನ್ವಿತಾಃ ॥9॥
ಎಲೈ ಪರಂತಪನೇ, ಅವನ ಪೂಜೆಯ ಸಲುವಾಗಿ ಈ ದಿನವೇ ಅವನು ಬರುವ ಮಾರ್ಗದಲ್ಲಿ ಸರ್ವಭೋಗಸಮನ್ವಿತವಾದ ಸಭೆಗಳನ್ನು ನಿರ್ಮಿಸುವವನಾಗು.
ಯಥಾ ಪ್ರೀತಿರ್ಮಹಾಬಾಹೋ ತ್ವಯಿ ಜಾಯೇತ ತಸ್ಯ ವೈ |
ತಥಾ ಕುರುಷ್ವ ಗಾಂಧಾರೇ ಕಥಂ ವಾ ಭೀಷ್ಮ ಮನ್ಯಸೇ ॥10॥
ಎಲೈ ಗಾಂಧಾರಿ ಪುತ್ರನೇ, ಮಹಾಬಾಹುವೇ, ಹೇಗೆ ಮಾಡಿದರೆ ನಿನ್ನಲ್ಲಿ ಅವನಲ್ಲಿ ಪ್ರೀತಿಯುಂಟಾಗುತ್ತದೆಯೋ ಅದರಂತೆ ನಡೆದುಕೊ. ಭೀಷ್ಮನೇ, ನಿನ್ನ ಅಭಿಪ್ರಾಯವಾದರೂ ಏನು?
ವೈಶಂಪಾಯನಃ
ತತೋ ಭೀಷ್ಮಾದಯಃ ಸರ್ವೇ ಧೃತರಾಷ್ಟ್ರಂ ಜನಾಧಿಪಮ್ |
ಊಚುಃ ಪರಮಮಿತ್ಯೇವ ಪೂಜಯಂತೋಽಸ್ಯ ತದ್ವಚಃ ॥11॥
ವೈಶಂಪಾಯನ ಆಗ ಭೀಷ್ಮಾದಿಗಳೆಲ್ಲರೂ ಧೃತರಾಷ್ಟ್ರನ ಆ ಮಾತುಗಳನ್ನು ಗೌರವಿಸುತ್ತಾ, ರಾಜನಾದ ಅವನನ್ನು ಕುರಿತು ಇದು ಶ್ರೇಷ್ಠವಾದ ಸಲಹೆ ಎಂದು ಹೇಳಿದರು.
ತೇಷಾಮನುಮತಂ ಜ್ಞಾತ್ವಾ ರಾಜಾ ದುರ್ಯೋಧನಸ್ತದಾ |
ಸಭಾವಾಸ್ತೂನಿ ರಮ್ಯಾಣಿ ಪ್ರದೇಷ್ಟುಮುಪಚಕ್ರಮೇ ॥12॥
ಅವರ ಅಭಿಪ್ರಾಯವನ್ನು ತಿಳಿದ ರಾಜನಾದ ದುರ್ಯೋಧನನು ಆಗ ಮನೋಹರವಾದ ಸಭಾನಿರ್ಮಾಣ ವಸ್ತುಗಳನ್ನು ಕಳುಹಿಸಲು ಪ್ರಾರಂಭಿಸಿದನು.
ತತೋ ದೇಶೇಷು ದೇಶೇಷು ರಮಣೀಯೇಷು ಭಾಗಶಃ |

ಸರ್ವರತ್ನಸಮಾಕೀರ್ಣಾಃ ಸಭಾಶ್ಚಕ್ರುರನೇಕಶಃ ॥13॥
ಅನಂತರ ಕೃಷ್ಣನು ಬರುವ ಮಾರ್ಗಗಳಲ್ಲಿ ದೇಶದೇಶಗಳಲ್ಲಿ ರಮಣೀಯವಾದ ಭಾಗಗಳಲ್ಲಿ ಸರ್ವರತ್ನಗಳಿಂದ ತುಂಬಿದ ಅನೇಕ ಸಭೆಗಳನ್ನು ನಿರ್ಮಿಸಿದರು.
ಆಸನಾನಿ ವಿಚಿತ್ರಾಣಿ ಯುತಾನಿ ವಿವಿಧೈರ್ಗುಣೈಃ |
ಸ್ತ್ರಿಯೋ ಗಂಧಾನಲಂಕಾರಾನ್ ವಾಸಾಂಸಿ ವಿವಿಧಾನಿ ಚ ॥14॥
ಗುಣವಂತ್ಯನ್ನಪಾನಾನಿ ಭೋಜ್ಯಾನಿ ವಿವಿಧಾನಿ ಚ |
ಮಾಲ್ಯಾನಿ ಚ ಸುಗಂಧೀನಿ ತಾನಿ ರಾಜಾ ದದೌ ತತಃ ॥15॥
ಅಲ್ಲಿ ಅನೇಕ ಗುಣಗಳಿಂದ ಕೂಡಿದ ವಿಚಿತ್ರವಾದ ಆಸನಗಳನ್ನೂ, ಪರಿಚಾರಿಕೆಯರಾದ ಸ್ತ್ರೀಯರನ್ನೂ, ಗಂಧಾಲಂಕಾರಗಳನ್ನೂ, ವಿವಿಧ ವಸ್ತ್ರಗಳನ್ನೂ, ಶ್ರೇಷ್ಠವಾದ ಅನ್ನ-ಪಾನಗಳನ್ನೂ, ವಿಧವಿಧವಾದ ಭೋಜ್ಯಗಳನ್ನೂ, ಸುಗಂಧಯುಕ್ತವಾದ ಪುಷ್ಪಮಾಲೆಗಳನ್ನೂ ರಾಜನು ಒದಗಿಸಿದನು.
ವಿಶೇಷತಶ್ಚ ವಾಸಾರ್ಥಂ ಸಭಾಂ ಗ್ರಾಮೇ ಕುಶಸ್ಥಲೇ |
ವಿದಧೇ ಕೌರವೋ ರಾಜಾ ಬಹುರತ್ನಾಂ ಮನೋರಮಾಮ್ ॥16॥
ವಿಶೇಷವಾಗಿ ಕುಶಸ್ಥಲಗ್ರಾಮದಲ್ಲಿ ದುರ್ಯೋಧನನು ಬಹುರತ್ನ ವಿಚಿತ್ರವಾದ ಮನೋಹರವಾದ ಸಭೆಯನ್ನು ಕೃಷ್ಣನ ವಾಸಕ್ಕಾಗಿ ಮಾಡಿಸಿದನು (ಕುಶಸ್ಥಲವೆಂದರೆ ಪಾಂಡವರು ಕೇಳಿದ ಐದುಗ್ರಾಮಗಳಲ್ಲಿ ಒಂದು, ದ್ವಾರಕೆಯಲ್ಲ).
ಏತದ್ ವಿಧಾಯ ವೈ ಸರ್ವಂ ದೇವಾರ್ಹಮತಿಮಾನುಷಮ್ |
ಆಚಖ್ಯೌ ಧೃತರಾಷ್ಟ್ರಾಯ ರಾಜಾ ದುರ್ಯೋಧನಸ್ತಥಾ ॥17॥
ದುರ್ಯೋಧನನು ಮನುಷ್ಯರಿಗೆ ಮೀರಿದ, ದೇವತೆಗಳಿಗೆ ಯೋಗ್ಯವಾದ, ಈ ಎಲ್ಲಾ ವಸ್ತುಗಳನ್ನು ಮಾಡಿಸಿ ಧೃತರಾಷ್ಟ್ರನಿಗೆ ನಿವೇದಿಸಿದನು.
ತಾಃ ಸಭಾಃ ಕೇಶವಃ ಸರ್ವಾ ರತ್ನಾನಿ ವಿವಿಧಾನಿ ಚ |
ಅಸಮೀಕ್ಷ್ಯೈವ ದಾಶಾರ್ಹ ಉಪಾಯಾತ್ ಕುರುಸದ್ಮ ತತ್ ॥18॥
ದಾಶಾರ್ಹನಾದ ಕೃಷ್ಣನು ರತ್ನಮಯವಾದ ವಿವಿಧವಾದ ಆ ಸಭೆಗಳನ್ನು ಕಣ್ಣಿನಿಂದಲೂ ನೋಡದೆ ಆ ಕುರುರಾಜ್ಯವನ್ನು ಪ್ರವೇಶಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ॥
ಭಗವದ್ಯಾನಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ನಾಲ್ಕನೆಯ ಅಧ್ಯಾಯ
ಧೃತರಾಷ್ಟ್ರನಿಂದ ಕೃಷ್ಣನಿಗೆ ತಾನು ಮಾಡುವ ಪೂಜೆಯ ಪ್ರಕಾರದ ಕಥನ.
ಅದಕ್ಕೆ ವಿದುರನ ಉತ್ತರ.
ಧೃತರಾಷ್ಟ್ರಃ
ಉಪಪ್ಲಾವ್ಯಾದಿಹ ಕ್ಷತ್ತರುಪಯಾತೋ ಜನಾರ್ದನಃ |
ಕುಶಸ್ಥಲೇ ನಿವಸತಿ ಸ ಚ ಪ್ರಾತರಿಹೈಷ್ಯತಿ ॥1॥
ಧೃತರಾಷ್ಟ್ರ ಎಲೈ ವಿದುರನೇ, ಜನಾರ್ದನನು ಉಪಪ್ಲಾವ್ಯನಗರದಿಂದ ಹೊರಟು ಕುಶಸ್ಥಲಕ್ಕೆ ಬಂದು ತಂಗಿದ್ದಾನೆ. ನಾಳೆ ಪ್ರಾತಃಕಾಲದಲ್ಲಿ ಇಲ್ಲಿಗೆ ಬರುವನು.
ಆಹುಕಾನಾಮಧಿಪತಿಃ ಪುರೋಗಃ ಸರ್ವಸಾತ್ವತಾಮ್ |
ಮಹಾಮನಾ ಮಹಾವೀರ್ಯೋ ಮಹಾಮಾತ್ರೋ ಜನಾರ್ದನಃ ॥2॥
ಜನಾರ್ದನನು ಆಹುಕರಿಗೆ ಅಧಿಪತಿ. ಸರ್ವಸಾತ್ವತರಿಗೆ ನಾಯಕನಾದವನು. ದೊಡ್ಡಮನಸ್ಸುಳ್ಳವನು. ಮಹಾಪರಾಕ್ರಮಿ ಮತ್ತು ಮಹಾಮಾತ್ರನಾದವನು.
ಸ್ಫೀತಸ್ಯ ವೃಷ್ಣಿವಂಶಸ್ಯ ಭರ್ತಾ ಗೋಪ್ತಾ ಚ ಮಾಧವಃ |
ತ್ರಯಾಣಾಮಪಿ ಲೋಕಾನಾಂ ಭಗವಾನ್ ಪ್ರಪಿತಾಮಹಃ ॥3॥
ಮಾಧವನು ಪರಿಶುದ್ಧವಾದ ವೃಷ್ಣಿವಂಶಕ್ಕೆ ಧಾರಕನಾದವನು ಮತ್ತು ರಕ್ಷಕನಾದವನು. ಭಗವಂತನಾದ ಅವನು ಮೂರುಲೋಕಗಳಿಗೂ ಪ್ರಪಿತಾಮಹನಾಗಿದ್ದಾನೆ.
ವೃಷ್ಣ್ಯಂಧಕಾಃ ಸುಮನಸೋ ಯಸ್ಯ ಪ್ರಜ್ಞಾಮುಪಾಸತೇ |
ಆದಿತ್ಯಾ ವಸವೋ ರುದ್ರಾ ಯಥಾ ಬುದ್ಧಿಂ ಬೃಹಸ್ಪತೇಃ ॥4॥
ವಸುರುದ್ರಾದಿತ್ಯರು ಬೃಹಸ್ಪತಿಯ ಬುದ್ಧಿಯನ್ನು ಆಶ್ರಯಿಸಿದಂತೆ ಒಳ್ಳೆಯ ಮನಸ್ಸುಳ್ಳ ವೃಷ್ಣ್ಯಂಧಕರು ಅವನ ಪ್ರಜ್ಞೆಯನ್ನು ಆಶ್ರಯಿಸುತ್ತಾರೆ.
ತಸ್ಮೈ ಪೂಜಾಂ ಪ್ರಯೋಕ್ಷ್ಯಾಮಿ ದಾಶಾರ್ಹಾಯ ಮಹಾತ್ಮನೇ |
ಪ್ರತ್ಯಕ್ಷಂ ತವ ಧರ್ಮಜ್ಞ ತನ್ಮೇ ಕಥಯತಃ ಶೃಣು ॥5॥
ಎಲೈ ಧರ್ಮಜ್ಞನೇ, ಮಹಾತ್ಮನಾದ ದಾಶಾರ್ಹನಿಗೆ ನಾನು ನಿನ್ನ ಎದುರಿನಲ್ಲಿ ಪೂಜೆಯನ್ನು ಮಾಡುವೆನು. ಆ ಪ್ರಕಾರವನ್ನು

ನನ್ನಿಂದ ಕೇಳುವವನಾಗು.
ಏಕವರ್ಣೈಃ ಸುಪುಷ್ಟಾಂಗೈರ್ಬಾಹ್ಲಿಕೈಶ್ಚ ಹಯೋತ್ತಮೈಃ |
ಚತುರ್ಯುಕ್ತಾನ್ ರಥಾಂಸ್ತಸ್ಮೈ ರೌಗ್ಮಾನ್ ದಾಸ್ಯಾಮಿ ಷೋಡಶ ||
ಒಂದೇ ಬಣ್ಣದ ಪುಷ್ಟವಾದ ಅವಯವವುಳ್ಳ ಬಾಹ್ಲಿಕದೇಶದ ಶ್ರೇಷ್ಠವಾದ ನಾಲ್ಕು ಅಶ್ವಗಳಿಂದ ಹೂಡಿದ ಹದಿನಾರು ಸುವರ್ಣಮಯವಾದ ರಥಗಳನ್ನು ಅವನಿಗೆ ಕೊಡುವೆನು.
ನಿತ್ಯಪ್ರಭಿನ್ನಾನ್ ಮಾತಂಗಾನ್ ಈಷಾದಂತಾನ್ ಪ್ರಹಾರಿಣಃ |
ಅಷ್ಟಾನುಚರಮೇಕೈಕಮಷ್ಟೌ ದಾಸ್ಯಾಮಿ ಕೇಶವೇ ||7||
ನಿತ್ಯವೂ ಮದಿಸಿದ, ಬಾಣದಷ್ಟು ದೊಡ್ಡದಾದ ದಂತವುಳ್ಳ, ಯುದ್ಧದಲ್ಲಿ ಪಳಗಿರುವ, ಒಂದೊಂದಕ್ಕೂ ಎಂಟುಜನ ಸೇವಕರಿರುವ ಎಂಟು ಆನೆಗಳನ್ನು ಕೇಶವನಿಗೆ ಕೊಡುವೆನು.
ದಾಸೀನಾಮಪ್ರಜಾತಾನಾಂ ಶುಭಾನಾಂ ರುಗ್ಮವರ್ಚಸಾಮ್ |
ಶತಮಸ್ಮೈ ಪ್ರದಾಸ್ಯಾಮಿ ದಾಸಾನಾಮಪಿ ತಾವತಾಮ್ ||8||
ಮಕ್ಕಳನ್ನು ಹಡೆಯದ, ಯುವತಿಯರಾದ, ಸುವರ್ಣಕಾಂತಿಯುಳ್ಳ ಒಳ್ಳೆಯ ನೂರುದಾಸಿಯರನ್ನು ಮತ್ತು ಅಷ್ಟೇ ದಾಸರನ್ನು ಕೊಡುವೆನು.
ಆವಿಕಂ ಚ ಸುಖಸ್ಪರ್ಶಂ ಪಾರ್ವತೀಯೈರುಪಾಹೃತಮ್ |
ತದಪ್ಯಸ್ಮೈ ಪ್ರದಾಸ್ಯಾಮಿ ಸಹಸ್ರಾಣಿ ದಶಾಷ್ಟ ಚ ||9||
ಪರ್ವತಪ್ರದೇಶದ ರಾಜರು ಉಪಾಯನವಾಗಿ ಕೊಟ್ಟಿರುವ ಸುಖಸ್ಪರ್ಶವುಳ್ಳ ಹದಿನೆಂಟು ಸಾವಿರ ಉಣ್ಣೆಯ ವಸ್ತ್ರಗಳನ್ನು ಅವನಿಗೆ ಕೊಡುವೆನು.
ಅಜಿನಾನಾಂ ಸಹಸ್ರಾಣಿ ಚೀನದೇಶೋದ್ಭವಾನಿ ಚ |
ತಾನ್ಯಪ್ಯಸ್ಮೈ ಪ್ರದಾಸ್ಯಾಮಿ ಯಾವದರ್ಹತಿ ಕೇಶವಃ ||10||
ಚೀನದೇಶದಿಂದ ಬಂದ ಸಹಸ್ರ ಅಜಿನಗಳನ್ನೂ ಅವನಿಗೆ ಕೊಡುವೆನು. ಕೇಶವನು ಎಲ್ಲದಕ್ಕೂ ಅರ್ಹನಾಗಿದ್ದಾನೆ.
ದಿವಾ ರಾತ್ರೌ ಚ ಭಾತ್ಯೇಷ ಸುತೇಜಾ ವಿಮಲೋ ಮಣಿಃ |
ತಮಪ್ಯಸ್ಮೈ ಪ್ರದಾಸ್ಯಾಮಿ ತಮಪ್ಯರ್ಹತಿ ಕೇಶವಃ ||11||
ಹಗಲೂ ಮತ್ತು ರಾತ್ರಿಯೂ ಹೊಳೆಯುವ ಒಳ್ಳೆಯ ತೇಜಸ್ಸುಳ್ಳ ಪರಿಶುದ್ಧವಾದ ಈ ಮಣಿಯನ್ನು ಅವನಿಗೆ ಕೊಡುವೆನು. ಕೇಶವನು ಅದಕ್ಕೂ ಅರ್ಹನಾಗುತ್ತಾನೆ.
ಏಕೇನಾಭಿಪತತ್ಯಹ್ನಾ ಯೋಜನಾನಿ ಚತುರ್ದಶ |
ಯಾನಮಶ್ವತರೀಯುಕ್ತಂ ತದಪ್ಯಸ್ಮೈ ದದಾಮ್ಯಹಮ್ ||12||
ಒಂದು ದಿನದಲ್ಲಿ ಹದಿನಾಲ್ಕು ಯೋಜನಗಳನ್ನು ಪ್ರಯಾಣ ಮಾಡುವ ಹೇಸರಗತ್ತೆಗಳನ್ನು ಹೂಡಿದ ಯಾನವನ್ನೂ ಸಹ ಅವನಿಗೆ ಕೊಡುವೆನು.
ಯಾವಂತಿ ವಾಹನಾನ್ಯಸ್ಯ ಯಾವಂತಃ ಪುರುಷಾಶ್ಚ ವೈ |
ತತೋಽಷ್ಟಗುಣಮಪ್ಯಸ್ಮೈ ಭೋಜ್ಯಂ ದಾಸ್ಯಾಮ್ಯಹಂ ಸದಾ ||13||
ಅವನು ಎಷ್ಟು ವಾಹನಗಳನ್ನು ತಂದಿರುತ್ತಾನೆಯೋ ಮತ್ತು ಎಷ್ಟು ಪುರುಷರನ್ನು ತಂದಿರುತ್ತಾನೆಯೋ ಅದರ ಎಂಟುಪಟ್ಟು ಭೋಜ್ಯವಸ್ತುಗಳನ್ನು ಯಾವಾಗಲೂ ಅವನಿಗೆ ಕೊಡುವೆನು.
ಮಮ ಪುತ್ರಾಶ್ಚ ಪೌತ್ರಾಶ್ಚ ಸರ್ವೇ ದುರ್ಯೋಧನಾದೃತೇ |
ಪ್ರತ್ಯುದ್ಯಾಸ್ಯಂತಿ ದಾಶಾರ್ಹಂ ರಥೈರ್ಮೃಷ್ಟೈಃ ಸ್ವಲಂಕೃತಾಃ ||14||
ದುರ್ಯೋಧನನೊಬ್ಬನನ್ನು ಬಿಟ್ಟು ನನ್ನ ಎಲ್ಲಾ ಮಕ್ಕಳೂ ಮತ್ತು ಮೊಮ್ಮಕ್ಕಳೂ ಅಲಂಕೃತರಾಗಿ, ಅಲಂಕೃತವಾದ ರಥಗಳಿಂದ ದಾಶಾರ್ಹನನ್ನು ಎದುರುಗೊಳ್ಳುತ್ತಾರೆ.
ಸ್ವಲಂಕೃತಾಶ್ಚ ಕಲ್ಯಾಣ್ಯಃ ಪಾದೈರೇವ ಸಹಸ್ರಶಃ |
ವಾರಮುಖ್ಯಾ ಮಹಾಭಾಗಂ ಪ್ರತ್ಯುದ್ಯಾಸ್ಯಂತಿ ಕೇಶವಮ್ ||15||
ಚೆನ್ನಾಗಿ ಅಲಂಕೃತರಾದ, ಮಂಗಳಪ್ರದರಾದ ಸಹಸ್ರವೇಶ್ಯೆಯರು ಬರಿಗಾಲಿನಲ್ಲಿ ನಡೆದು ಮಹಾನುಭಾವನಾದ ಕೇಶವನನ್ನು ಎದುರುಗೊಳ್ಳುತ್ತಾರೆ.
ನಗರಾದಪಿ ಯಾಃ ಕಾಶ್ಚಿದ್ ಗಮಿಷ್ಯಂತಿ ಜನಾರ್ದನಮ್ |
ದ್ರಷ್ಟುಂ ಕನ್ಯಾಶ್ಚ ಕಲ್ಯಾಣ್ಯಃ ತಾಶ್ಚ ಯಾಸ್ಯಂತ್ಯನಾವೃತಾಃ ||16||
ಜನಾರ್ದನನನ್ನು ನೋಡಲು ನಗರದಿಂದ ಹೊರಡುವ ಮಂಗಳರೂಪರಾದ ಕನ್ಯೆಯರೆಲ್ಲರೂ ಯಾವ ಆವರಣವೂ (ಮುಖ ಪರದೆಯೂ) ಇಲ್ಲದೆ ಹೋಗುವರು.
ಸಸ್ತ್ರೀಪುರುಷಬಾಲಂ ಚ ನಗರಂ ಮಧುಸೂದನಮ್ |
ಉದೀಕ್ಷತಾಂ ಮಹಾತ್ಮಾನಂ ಭಾನುಮಂತಮಿವ ಪ್ರಜಾಃ ||17||
ಪ್ರಜೆಗಳು ಸೂರ್ಯನನ್ನು ನೋಡಿದಂತೆ ನಗರದ ಸ್ತ್ರೀ-ಪುರುಷ-ಬಾಲಕರೆಲ್ಲರೂ ಮಹಾತ್ಮನಾದ ಮಧುಸೂದನನನ್ನು ನೋಡಲಿ.
ಮಹಾಧ್ವಜಪತಾಕಾಶ್ಚ ಕ್ರಿಯಂತಾಂ ಸರ್ವತೋ ದಿಶಃ |
ಜಲಾವಸಿಕ್ತೋ ವಿರಜಾಃ ಪಂಥಾ ಕಾರ್ಯಸ್ತು ಸರ್ವತಃ ||18||
ಎಲ್ಲ ಕಡೆಗಳಲ್ಲಿಯೂ ದೊಡ್ಡ ಧ್ವಜಗಳನ್ನೂ ಪತಾಕೆಗಳನ್ನೂ ನಿರ್ಮಿಸಿ, ಮಾರ್ಗಗಳನ್ನು ಧೂಳಿಲ್ಲದಂತೆ ಗುಡಿಸಿ,

ಸುಗಂಧಯುಕ್ತವಾದ ಜಲಗಳಿಂದ ಸಿಂಪಡಿಸಿ.
ದುಃಶಾಸನಸ್ಯ ಚ ಗೃಹಂ ದುರ್ಯೋಧನಗೃಹಾದ್ ವರಮ್ |
ತದದ್ಯ ಕ್ರಿಯತಾಂ ಕ್ಷಿಪ್ರಂ ಸುಸಮ್ಮೃಷ್ಟಮಲಂಕೃತಮ್ ॥19॥
ದುಶ್ಶಾಸನನ ಗೃಹವು ದುರ್ಯೋಧನನ ಗೃಹಕ್ಕಿಂತಲೂ ಶ್ರೇಷ್ಠವಾದುದು. ಅದನ್ನು ಬೇಗ ಶುದ್ಧಿಮಾಡಿ ಅಲಂಕರಿಸಿ ಸಿದ್ಧಪಡಿಸಿ.
ಏತದ್ಧಿ ರುಚಿರಾಕಾರೈಃ ಪ್ರಾಸಾದೈರುಪಶೋಭಿತಮ್ |
ಶಿವಂ ಚ ರಮಣೀಯಂ ಚ ಸರ್ವತ್ರ ಸುಮನೋರಮಮ್ ॥20॥
ಅದು ಮನೋಹರವಾದ ಅನೇಕ ಉಪ್ಪರಿಗೆಯಿಂದ ಕೂಡಿದ್ದು ಎಲ್ಲ ಕಡೆಗಳಲ್ಲಿಯೂ ಮನೋಹರವೂ, ರಮಣೀಯವೂ ಮತ್ತು ಮಂಗಳಪ್ರದವೂ ಆಗಿದೆ.
ಸರ್ವಮಸ್ಮಿನ್ ಗೃಹೇ ರತ್ನಂ ಮಮ ದುರ್ಯೋಧನಸ್ಯ ಚ |
ಯದ್ಯದರ್ಹತಿ ವಾರ್ಷ್ಣೇಯಃ ತತ್ತದ್ ದೇಯಮಸಂಶಯಮ್ ॥21॥
ಆ ಮನೆಯಲ್ಲಿ ನನ್ನ ಮತ್ತು ದುರ್ಯೋಧನನ ಎಲ್ಲ ರತ್ನಗಳೂ ಇವೆ. ವಾರ್ಷ್ಣೇಯನಾದ ಕೃಷ್ಣನು ಯಾವ ಯಾವುದಕ್ಕೆ ಅರ್ಹನಾಗಿದ್ದಾನೆಯೋ ಅವೆಲ್ಲವನ್ನೂ ನಿಸ್ಸಂಶಯವಾಗಿ ಅವನಿಗೆ ಕೊಡತಕ್ಕದ್ದು.
ವಿದುರಃ
ರಾಜನ್ ಬಹುಮತಶ್ಚಾಸಿ ತ್ರೈಲೋಕ್ಯಸ್ಯಾಪಿ ಸತ್ತಮಃ |
ಸಂಭಾವಿತಶ್ಚ ಲೋಕಸ್ಯ ಸಮ್ಮತಶ್ಚಾಸಿ ಭಾರತ ॥23॥
ವಿದುರ ರಾಜನೇ, ನೀನು ಮೂರುಲೋಕಗಳಲ್ಲಿಯೂ ಬಹುಮತನಾಗಿದ್ದೀಯೆ. ಶ್ರೇಷ್ಠ ಸಜ್ಜನನಾಗಿದ್ದೀಯೆ. ಎಲೈ ಭಾರತನೇ, ನೀನು ಜನರಿಂದ ಸಂಭಾವಿತನೂ ಅವರಿಗೆ ಸಮ್ಮತನೂ ಆಗಿದ್ದೀಯೆ.
ಯತ್ ತ್ವಮೇವಂ ಗತೇ(ತಂ) ಬ್ರೂಯಾಃ ಪಶ್ಚಿಮೇ ವಯಸಿ ಸ್ಥಿತಃ |
ಶಾಸ್ತ್ರಾದ್ವಾ ಕಾರಣಾದ್ವಾಪಿ ಸುಸ್ಥಿರಃ ಸ್ಥವಿರೋ ಹ್ಯಸಿ ॥24॥
ಪಶ್ಚಿಮ ವಯಸ್ಸಿನಲ್ಲಿರುವ ನೀನು ಶಾಸ್ತ್ರವಚನದಿಂದಾಗಲೀ ಅಥವಾ ನಿನ್ನ ಯೋಗ್ಯತೆಯ ಕಾರಣದಿಂದಾಗಲೀ ಹೀಗೆ ಮಾತನಾಡುತ್ತಿರುವುದು ಸ್ಥಿರವಾಗಿರಲಿ. ನೀನು ನಿಜವಾಗಿಯೂ ಈಗ ವೃದ್ಧನಾಗಿದ್ದೀಯೆ.
ಲೇಖಾಽಶ್ಮನೀವ ಭಾಃ ಸೂರ್ಯೇ ಮಹೋರ್ಮಿರಿವ ಸಾಗರೇ |
ಧರ್ಮಸ್ತ್ವಯಿ ಮಹಾರಾಜ ಇತಿ ವ್ಯವಸಿತಾಃ ಪ್ರಜಾಃ ॥24॥
ಎಲೈ ಮಹಾರಾಜನೇ, ಶಿಲೆಯಲ್ಲಿ ಬರೆದ ಶಾಸನದಂತೆ, ಸೂರ್ಯನ ಕಾಂತಿಯಂತೆ, ಸಾಗರದ ದೊಡ್ಡ ಅಲೆಯಂತೆ ನಿನ್ನಲ್ಲಿ ಧರ್ಮವಿದೆ ಎಂದು ಪ್ರಜೆಗಳು ತಿಳಿದಿದ್ದಾರೆ.
ಸದೈವ ಭಾವಿತೋ ಲೋಕೋ ಗುಣೌಘೈಸ್ತವ ಪಾರ್ಥಿವ |
ಗುಣಾನಾಂ ರಕ್ಷಣೇ ನಿತ್ಯಂ ಪ್ರಯತಸ್ವ ಸಬಾಂಧವಃ ॥25॥
ಆರ್ಜವಂ ಪ್ರತಿಪದ್ಯಸ್ವ ಮಾ ಬಾಲ್ಯಾದ್ ಬಹುಧಾ ನಶೀಃ ॥26॥
ಎಲೈ ರಾಜನೇ, ನಿನ್ನ ಗುಣಸಮೂಹಗಳಿಂದ ಪ್ರಜೆಗಳನ್ನು ಯಾವಾಗಲೂ ರಕ್ಷಿಸಿದ್ದೀಯೆ (ಗೌರವಿಸಿದ್ದೀಯೆ). ಬಾಂಧವಸಹಿತನಾದ ನೀನು ನಿನ್ನ ಗುಣಗಳನ್ನು ರಕ್ಷಿಸಿಕೊಳ್ಳಲು ಯಾವಾಗಲೂ ಪ್ರಯತ್ನವನ್ನು ಪಡುವವನಾಗು. ಮನೋವಾಕ್ ಕಾಯಗಳಲ್ಲಿ ಆರ್ಜವ (ನೇರತನ)ವನ್ನು ಹೊಂದುವವನಾಗು. ಬಾಲಬುದ್ಧಿಯಿಂದ ಬಹುಪ್ರಕಾರವಾಗಿ ನಾಶವನ್ನು ಹೊಂದಬೇಡ.
ರಾಜನ್ ಪುತ್ರಾಂಶ್ಚ ಪೌತ್ರಾಂಶ್ಚ ಸುಹೃದಶ್ಚೈವ ಸುಪ್ರಿಯಾನ್ |
ಯತ್ ತ್ವಂ ದಿತ್ಸಸಿ ಕೃಷ್ಣಾಯ ರಾಜನ್ನತಿಥಯೇ ಬಹು ॥27॥
ಏತದನ್ಯಚ್ಚ ದಾಶಾರ್ಹಃ ಪೃಥಿವೀಮಪಿ ಚಾರ್ಹತಿ ॥28॥
ರಾಜನೇ, ಅತಿಥಿಯಾದ ಕೃಷ್ಣನಿಗೆ ಪುತ್ರರು, ಪೌತ್ರರು, ಪ್ರಿಯರಾದ ಸುಹೃಜ್ಜನರು ಇವರನ್ನು ನೀನು ಏನು ನಿವೇದಿಸಲು ಬಯಸಿದ್ದೀಯೋ ದಾಶಾರ್ಹನಾದ ಕೃಷ್ಣನು ಅವುಗಳನ್ನೂ ಮತ್ತು ಅದಕ್ಕಿಂತ ದೊಡ್ಡದಾದ ಪೃಥಿವಿಯನ್ನೂ ಸ್ವೀಕರಿಸಲು ಅರ್ಹನಾಗಿದ್ದಾನೆ.
ನ ತು ತ್ವಂ ಧರ್ಮಮುದ್ದಿಶ್ಯ ತಸ್ಯಾ ವಾ ಪ್ರಿಯಕಾರಣಾತ್ |
ಏತದ್ ದಿತ್ಸಸಿ ಕೃಷ್ಣಾಯ ಸತ್ಯೇನಾತ್ಮಾನಮಾಲಭೇ ॥29॥
ಆದರೆ ನೀನು ಧರ್ಮವನ್ನು ಉದ್ದೇಶಿಸಿ ಅಥವಾ ಕೃಷ್ಣನ ಪ್ರೀತಿಯನ್ನು ಉದ್ದೇಶಿಸಿ ಈ ಯಾವುದನ್ನೂ ಅವನಿಗೆ ಕೊಡುತ್ತಿಲ್ಲವೆಂದು ನಾನು ನನ್ನ ಮೇಲೆ ಆಣೆಯನ್ನು ಮಾಡಿ ಹೇಳುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರಶೀತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೈದನೆಯ ಅಧ್ಯಾಯ
ಧೃತರಾಷ್ಟ್ರನನ್ನು ಕುರಿತು ವಿದುರನ ಮಾತುಗಳು.
ವಿದುರಃ

ಮಾಯೈಷಾ ಸತ್ಯಮೇವೈತದ್ ಛದ್ಮೈತದ್ ಭೂರಿದಕ್ಷಿಣಾ |
ಜಾನಾಮಿ ತೇ ಮತಂ ರಾಜನ್ ಗೂಢಂ ಬಾಹ್ಯೇನ ಕರ್ಮಣಾ ||1||
ವಿದುರ ಈ ಭೂರಿದಕ್ಷಿಣೆಯ ಮಾತುಗಳು ಮೋಸ ಮತ್ತು ಕಪಟ. ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ. ರಾಜನೇ, ಬಾಹ್ಯವಾದ ಈ ಕರ್ಮದಿಂದ ನಿನ್ನ ಮನಸ್ಸಿನಲ್ಲಿ ಗೂಢವಾದ ಅಭಿಪ್ರಾಯವೇನಿದೆ ಎಂದು ನಾನು ತಿಳಿದಿದ್ದೇನೆ.
ಪಂಚ ಪಂಚೈವ ಲಿಪ್ಸಂತಿ ಗ್ರಾಮಕಾನ್ ಪಾಂಡವಾ ನೃಪ |
ನ ಚ ದಿತ್ಸಸಿ ತೇಭ್ಯಸ್ತಾನ್ ತತ್ಸಮಂ ಕಿಂ ಕರಿಷ್ಯತಿ ||2||
ಎಲೈ ರಾಜನೇ, ಪಂಚಪಾಂಡವರು ಐದು ಸಣ್ಣಗ್ರಾಮಗಳನ್ನು ಮಾತ್ರ ಪಡೆಯಲು ಬಯಸುತ್ತಾರೆ. ನೀನು ಅವರಿಗೆ ಅದನ್ನು ಕೊಡಲು ಬಯಸುವುದಿಲ್ಲ. ಅದಕ್ಕೆ ಸಮನಾದುದನ್ನು ಬೇರೆ ಏನನ್ನು ಮಾಡುವಿ?
ಅರ್ಥೇನ ತು ಮಹಾಬಾಹುಂ ವಾರ್ಷ್ಣೇಯಂ ತ್ವಂ ಜಿಹೀರ್ಷಸಿ |
ಅನೇನ ಚಾಪ್ಯುಪಾಯೇನ ಪಾಂಡವೇಭ್ಯಃ ಪ್ರದೀಯತಾಮ್ ||3||
ಮಹಾಬಾಹುವಾದ ಕೃಷ್ಣನಿಗೆ ದ್ರವ್ಯವನ್ನು ಕೊಟ್ಟು, ಅವನನ್ನು ಪಾಂಡವರಿಂದ ಬೇರ್ಪಡಿಸಲು ನೀನು ಬಯಸುತ್ತಿದ್ದೀಯೆ. ಈ ಉಪಾಯದ ಬದಲು ಪಾಂಡವರಿಗೆ ಕೊಡಬೇಕಾದುದನ್ನು ಕೊಡು.
ನ ಚ ವಿತ್ತೇನ ಶಕ್ಯೋಽಸೌ ನೋದ್ಯಮೇನ ನ ಗರ್ಹಯಾ |
ಅನ್ಯೋ ಧನಂಜಯಾತ್ ಕರ್ತುಮೇತತ್ ತತ್ತ್ವಂ ಬ್ರವೀಮಿ ತೇ ||4||
ವಿತ್ತದಿಂದಾಗಲೀ, ಬೇರೆ ಪ್ರಯತ್ನದಿಂದಾಗಲೀ ಅಥವಾ ನಿಂದನೆಯಿಂದಾಗಲೀ ಕೃಷ್ಣನನ್ನು ಅರ್ಜುನನಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ವೇದ ಕೃಷ್ಣಸ್ಯ ಮಾಹಾತ್ಮ್ಯಂ ವೇದಾಸ್ಯ ದೃಢಭಕ್ತಿತಾಮ್ |
ಅನನ್ಯಮಸ್ಯ ಜಾನಾಮಿ ಪ್ರಾಣೈಸ್ತುಲ್ಯಂ ಧನಂಜಯಮ್ ||5||
ಅರ್ಜುನನು ಕೃಷ್ಣನ ಮಹಿಮೆಯನ್ನೂ, ಕೃಷ್ಣನಿಗೆ ತನ್ನಲ್ಲಿರುವ ಅನುರಾಗವನ್ನೂ ತಿಳಿದಿದ್ದಾನೆ. ಅರ್ಜುನನು ಕೃಷ್ಣನಿಂದ ಅನನ್ಯನಾದವನು, ಅವನ ಪ್ರಾಣಗಳಿಗೆ ಸಮನಾದವನು ಎಂದು ನಾನು ತಿಳಿದಿದ್ದೇನೆ.
ಅನ್ಯತ್ ಪೂರ್ಣಾದಪಾಂ ಕುಂಭಾದ್ ಅನ್ಯತ್ ಪಾದಾವನೇಜನಾತ್ |
ಅನ್ಯತ್ ಕುಶಲಸಂಪ್ರಶ್ನಾನ್ನ ಚೇಚ್ಛತಿ ಜನಾರ್ದನಃ ||6||
ಪೂರ್ಣಕುಂಭಸ್ವಾಗತ, ಪಾದಪ್ರಕ್ಷಾಳನೆ ಮತ್ತು ಕುಶಲಪ್ರಶ್ನೆಯನ್ನು ಬಿಟ್ಟು ಕೃಷ್ಣನು ಬೇರೆ ಏನನ್ನೂ ಬಯಸುವುದಿಲ್ಲ.
ಯತ್ತ್ವಸ್ಯ ಪ್ರಿಯಮಾತಿಥ್ಯಂ ಮಾನಾರ್ಹಸ್ಯ ಮಹಾತ್ಮನಃ |
ತದಸ್ಮೈ ಕ್ರಿಯತಾಂ ರಾಜನ್ ಮಾನಾರ್ಹೋಽಸೌ ಜನಾರ್ದನಃ ||7||
ಎಲೈ ರಾಜನೇ, ಗೌರವಕ್ಕೆ ಯೋಗ್ಯನಾದ, ಮಹಾತ್ಮನಾದ ಅವನಿಗೆ ಪ್ರಿಯವಾದ ಆತಿಥ್ಯವೇನಿದೆಯೋ ಅದನ್ನು ಮಾಡು. ಈ ಜನಾರ್ದನನು ಎಲ್ಲ ಗೌರವಕ್ಕೂ ಅರ್ಹನಾದವನು.
ಆಶಂಸಮಾನಃ ಕಲ್ಯಾಣಂ ಕುರೂನಭ್ಯೇತಿ ಕೇಶವಃ |
ಯೇನೈವ ರಾಜನ್ನರ್ಥೇನ ತಮೇವಾಸ್ಮಾ ಉಪಾಕುರು ||8||
ಎಲೈ ರಾಜನೇ, ಕೌರವರಿಗೆ ಕ್ಷೇಮವನ್ನು ಬಯಸಿ ಯಾವ ಅಭಿಪ್ರಾಯದಿಂದ ಕೇಶವನು ಇಲ್ಲಿಗೆ ಬರುತ್ತಿದ್ದಾನೆಯೋ ಅದನ್ನೇ ಅವನಿಗೆ ಉಪಾಯನವನ್ನಾಗಿ ಕೊಡು.
ಶಮಮಿಚ್ಛತಿ ದಾಶಾರ್ಹಃ ತವ ದುರ್ಯೋಧನಸ್ಯ ಚ |
ಪಾಂಡವಾನಾಂ ಚ ರಾಜೇಂದ್ರ ತದಸ್ಯ ವಚನಂ ಕುರು ||9||
ಎಲೈ ರಾಜೇಂದ್ರನೇ, ದಾಶಾರ್ಹನಾದ ಅವನು ನಿನಗೂ, ದುರ್ಯೋಧನನಿಗೂ ಮತ್ತು ಪಾಂಡವರಿಗೂ ಶಾಂತಿಯನ್ನು ಬಯಸುತ್ತಾನೆ. ಅವನ ಆ ಮಾತನ್ನು ನಡೆಸು.
ಪಿತಾಽಸಿ ರಾಜನ್ ಪುತ್ರಾಸ್ತೇ ವೃದ್ಧಸ್ತ್ವಂ ಶಿಶವಃ ಪರೇ |
ವರ್ತಸ್ವ ಪಿತೃವತ್ ತೇಷು ವರ್ತಂತೇ ತೇ ಹಿ ಪುತ್ರವತ್ ||10||
ರಾಜನೇ, ನೀನು ತಂದೆಯಾಗಿದ್ದೀಯೆ. ಪಾಂಡವರು ನಿನ್ನ ಮಕ್ಕಳು. ನೀನು ವೃದ್ಧನಾಗಿದ್ದೀಯೆ. ಅವರು ನಿನ್ನ ಶಿಶುಗಳು. ಅವರಲ್ಲಿ ನೀನು ತಂದೆಯಂತೆ ನಡೆದುಕೊ, ಅವರು ನಿನ್ನಲ್ಲಿ ಮಕ್ಕಳಂತೆ ನಡೆದುಕೊಳ್ಳುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಾಶೀತಿತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ಷೋಡಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತಾರನೆಯ ಅಧ್ಯಾಯ
ದುರ್ಯೋಧನನ ಕೃಷ್ಣಬಂಧನ ಸಂಕಲ್ಪ. ಭೀಷ್ಮರ ಸಭಾತ್ಯಾಗ.
ದುರ್ಯೋಧನಃ
ಯದಾಹ ವಿದುರಃ ಕೃಷ್ಣೇ ಸರ್ವಂ ತತ್ ಸತ್ಯಮುಚ್ಯತೇ |
ಅನುರಕ್ತೋಽಪ್ಯಸಂಹಾರ್ಯಃ ಪಾರ್ಥಾನ್ ಪ್ರತಿ ಜನಾರ್ದನಃ ||1||
ದುರ್ಯೋಧನ ವಿದುರನು ಕೃಷ್ಣನ ವಿಷಯದಲ್ಲಿ ಏನು ಹೇಳಿದನೋ ಅದೆಲ್ಲವೂ ಸತ್ಯವಾಗಿದೆ. ನಾವು ಮಾಡುವ ಪೂಜೆಯಿಂದ

ಕೃಷ್ಣನು ನಮ್ಮಲ್ಲಿ ಪ್ರೀತಿಯನ್ನು ಹೊಂದಿದರೂ ಪಾಂಡವರಿಂದ ಅವನನ್ನು ಬೇರ್ಪಡಿಸಲು ಸಾಧ್ಯವಿಲ್ಲ.
ಯತ್ತತ್ ಸತ್ಕಾರಸಂಯುಕ್ತಂ ದೇಯಂ ವಸು ಜನಾರ್ದನೇ |
ಅನೇಕರೂಪಂ ರಾಜೇಂದ್ರ ತನ್ನ ದೇಯಂ ಕದಾಚನ ||2||
ಎಲ್ಲೈ ರಾಜೇಂದ್ರನೇ, ನೀನು ಸತ್ಕಾರಸಹಿತವಾಗಿ ಕೃಷ್ಣನಿಗೆ ಅನೇಕವಿಧವಾದ ದ್ರವ್ಯಗಳನ್ನು ಕೊಡಬೇಕೆಂದು ಏನು ಯೋಚಿಸಿದ್ದಿಯೋ ಅದು ಯಾವುದನ್ನೂ ಖಂಡಿತವಾಗಿ ಕೊಡಬಾರದು.
ದೇಶಃ ಕಾಲಸ್ತಥಾ ಯುಕ್ತೋ ನ ಹಿ ನಾರ್ಹತಿ ಕೇಶವಃ |
ಮಂಸ್ಯತ್ಯಧೋಕ್ಷಜೋ ರಾಜನ್ ಭಯಾದರ್ಚತಿ ಮಾಮಿತಿ ||3||
ದೇಶ-ಕಾಲಗಳು ಹಾಗೆ ಕೂಡಿಬಂದಿವೆ. ಕೇಶವನು ಅದಕ್ಕೆ ಅರ್ಹನಲ್ಲ ಎಂದಲ್ಲ. ಆದರೆ ರಾಜನೇ, ಅವರು ನನ್ನನ್ನು ಭಯದಿಂದ ಅರ್ಚಿಸುತ್ತಿದ್ದಾರೆ ಎಂದು ಕೃಷ್ಣನು ತಿಳಿಯುವನು.
ಅವಮಾನಶ್ಚ ಯತ್ರ ಸ್ಯಾತ್ ಕ್ಷತ್ರಿಯಸ್ಯ ವಿಶಾಂಪತೇ |
ನ ತತ್ ಕುರ್ಯಾದ್ ಬುಧಃ ಕಾರ್ಯಮಿತಿ ಮೇ ನಿಶ್ಚಿತಾ ಮತಿಃ ||4||
ಎಲ್ಲೈ ರಾಜನೇ, ಕ್ಷತ್ರಿಯನಿಗೆ ಯಾವ ಕಾರ್ಯದಿಂದ ಅವಮಾನ ಉಂಟಾಗುತ್ತದೆಯೋ ಅಂತಹ ಕಾರ್ಯವನ್ನು ವಿವೇಕಿಯಾದ ಕ್ಷತ್ರಿಯನು ಮಾಡಬಾರದು ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ಸ ಹಿ ಪೂಜ್ಯತಮೋ ದೇವಃ ಕೃಷ್ಣಃ ಕಮಲಲೋಚನಃ |
ತ್ರಯಾಣಾಮಪಿ ಲೋಕಾನಾಂ ವಿದಿತಂ ಮಮ ಸರ್ವಥಾ ||5||
ಕಮಲಲೋಚನನಾದ, ದೇವನಾದ ಕೃಷ್ಣನು ಮೂರುಲೋಕಗಳಿಗೂ ಅತ್ಯಂತ ಪೂಜ್ಯನಾದವನು ಎಂದು ನಾನು ಚೆನ್ನಾಗಿ ತಿಳಿದಿದ್ದೇನೆ.
ನ ತು ತಸ್ಮೈ ಪ್ರದೇಯಂ ಸ್ಯಾತ್ ತಥಾ ಕಾರ್ಯಗತಿಃ ಪ್ರಭೋ |
ವಿಗ್ರಹಃ ಸಮುಪಾರಬ್ಧೋ ನ ಹಿ ಶಾಮ್ಯತಿ ವಿಗ್ರಹಾತ್ ||6||
ಆದರೆ ಅವನಿಗೆ ಏನನ್ನೂ ಕೊಡಬಾರದು. ಎಲ್ಲೈ ಪ್ರಭುವೇ, ಪರಿಸ್ಥಿತಿಯು ಹಾಗಿದೆ. ಯುದ್ಧವು ಉಪಕ್ರಾಂತವಾಗಿದೆ. ಯುದ್ಧವನ್ನು ತ್ಯಜಿಸುವುದನ್ನು ಬಿಟ್ಟು ಬೇರೆ ಯಾವುದರಿಂದಲೂ ಅವನು ಪ್ರಸನ್ನನಾಗುವುದಿಲ್ಲ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಭೀಷ್ಮಃ ಕುರುಪಿತಾಮಹಃ |
ವೈಚಿತ್ರವೀರ್ಯಂ ರಾಜಾನಮಿದಂ ವಚನಮಬ್ರವೀತ್ ||7||
ವೈಶಂಪಾಯನ ಆ ಮಾತುಗಳನ್ನು ಕೇಳಿ ಕುರುಪಿತಾಮಹನಾದ ಭೀಷ್ಮನು ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರರಾಜನನ್ನು ಕುರಿತು ಹೀಗೆ ಮಾತನಾಡಿದನು.
ಸತ್ಕೃತೋಽಸತ್ಕೃತೋ ವಾಽಪಿ ನ ಕ್ರುದ್ಧ್ಯೇತ ಜನಾರ್ದನಃ |
ನಾವಮಂಸ್ಯತ್ಯವಜ್ಞಾತ್ಯಾನ್ ಅವಜ್ಞಾತೋಽಪಿ ಕೇಶವಃ ||8||
ಗೌರವಿಸಿದರೂ ಅಥವಾ ಗೌರವಿಸದಿದ್ದರೂ ಕೃಷ್ಣನು ಕೋಪಗೊಳ್ಳುವುದಿಲ್ಲ. ಅವನಿಗೆ ಅವಮಾನವನ್ನು ಮಾಡಿದರೂ ಕೃಷ್ಣನು ಅವಮಾನ ಮಾಡಿದವರಿಗೆ ಪ್ರತಿಯಾಗಿ ಅವಮಾನವನ್ನು ಮಾಡುವುದಿಲ್ಲ.
ಯತ್ತು ಕಾರ್ಯಂ ಮಹಾಬಾಹೋ ಮನಸಾ ಕಾರ್ಯತಾಂ ಗತಮ್ |
ಸರ್ವೋಪಾಯೈರ್ನ ತಚ್ಛಕ್ಯಂ ಕೇನಚಿತ್ ಕರ್ತುಮನ್ಯಥಾ ||9||
ಎಲ್ಲೈ ಮಹಾಬಾಹುವೇ, ಯಾವುದನ್ನು ಮಾಡತಕ್ಕದ್ದು ಎಂದು ಅವನು ಮನಸ್ಸಿನಲ್ಲಿ ನಿರ್ಧರಿಸುತ್ತಾನೆಯೋ ಅದನ್ನು ಯಾವ ಉಪಾಯದಿಂದಲೂ ಯಾರಿಂದಲೂ ಬದಲಾಯಿಸಲು ಸಾಧ್ಯವಿಲ್ಲ.
ಸ ಯದ್ ಬ್ರೂಯಾನ್ಮಹಾಬಾಹುಸ್ತತ್ ಕಾರ್ಯಮವಿಶಂಕಯಾ |
ವಾಸುದೇವೇನ ತೀರ್ಥೇನ ಕ್ಷಿಪ್ರಂ ಸಂಶಾಮ್ಯ ಪಾಂಡವೈಃ ||10||
ಮಹಾಬಾಹುವಾದ ಅವನು ಏನನ್ನು ಮಾಡಬೇಕೆಂದು ಹೇಳುತ್ತಾನೆಯೋ ಅದನ್ನು ಶಂಕೆಯನ್ನು ಮಾಡದೆ ಮಾಡಬೇಕು. ಪೂಜ್ಯನಾದ, ಗುರುವಾದ ಕೃಷ್ಣನ ನಿಮಿತ್ತದಿಂದಾಗಿ ಪಾಂಡವರ ಜೊತೆಯಲ್ಲಿ ಶೀಘ್ರವಾಗಿ ಶಾಂತಿಯನ್ನು ಹೊಂದುವವನಾಗು.
ಧರ್ಮ್ಯಮರ್ಥ್ಯಂ ಚ ಧರ್ಮಾತ್ಮಾ ಧ್ರುವಂ ವಕ್ತಾ ಜನಾರ್ದನಃ |
ತಸ್ಮಿನ್ ವಾಚ್ಯಾಃ ಪ್ರಿಯಾ ವಾಚೋ ಭವತಾ ಬಾಂಧವೈಃ ಸಹ ||11||
ಧರ್ಮಾತ್ಮನಾದ ಜನಾರ್ದನನು ಖಂಡಿತವಾಗಿ ಧರ್ಮಸಹಿತವಾದ ಮತ್ತು ಅರ್ಥಸಾಧಕವಾದ ಮಾತುಗಳನ್ನು ಆಡುವನು. ಅವನಿಗೆ ನೀನೂ ಮತ್ತು ನಿನ್ನ ಬಾಂಧವರೂ ಸಹ ಪ್ರಿಯವಾದ ಮಾತುಗಳನ್ನೇ ಆಡಬೇಕು.
ದುರ್ಯೋಧನಃ
ನ ಪರ್ಯಾಪ್ತೋಽಸ್ಮಿ ಯದ್ ರಾಜನ್ ಶ್ರಿಯಂ ನಿಷ್ಕೇವಲಾಮಹಮ್|
ತೈಃ ಸಹೇಮಾಮುಪಾಶ್ನೀಯಾಂ ಯಾವಜ್ಜೀವಂ ಪಿತಾಮಹ ||12||
ದುರ್ಯೋಧನ ಎಲ್ಲೈ ರಾಜನೇ, ಇನ್ನೊಬ್ಬರ ಜೊತೆಯಲ್ಲಿ ಹಂಚಿಕೊಳ್ಳುವ ಸಂಪತ್ತು ನನಗೆ ಎಂದೂ ತೃಪ್ತಿಯನ್ನು ಉಂಟುಮಾಡುವುದಿಲ್ಲ. ಪಿತಾಮಹನೇ, ಬದುಕಿರುವವರೆಗೆ ನಾನು ಪಾಂಡವರ ಜೊತೆಯಲ್ಲಿ ಹಂಚಿಕೊಂಡು ಈ ಭೂಮಿಯನ್ನು ಭೋಗಿಸಲಾರೆ.
ಇದಂ ತು ಸುಮಹತ್ ಕಾರ್ಯಂ ಶೃಣು ಮೇ ಯತ್ ಸಮರ್ಥಿತಮ್|
ಪರಾಯಣಂ ಪಾಂಡವಾನಾಂ ನಿಯಂಸ್ಯಾಮಿ ಜನಾರ್ದನಮ್ ||13||

ನಾನು ಸಂಕಲ್ಪಿಸಿರುವ ಈ ದೊಡ್ಡಕಾರ್ಯವನ್ನು ಕೇಳುವವನಾಗು. ಪಾಂಡವರಿಗೆ ದೊಡ್ಡ ಆಶ್ರಯನಾದ ಕೃಷ್ಣನನ್ನು ನಾನು ಬಂಧಿಸುವೆನು.
ತಸ್ಮಿನ್ ಬದ್ಧೇ ಭವಿಷ್ಯಂತಿ ವೃಷ್ಣಯಃ ಪೃಥಿವೀ ತಥಾ |
ಪಾಂಡವಾಶ್ಚ ವಿಧೇಯಾ ಮೇ ಸ ಚ ಪ್ರಾತರಿಹೈಷ್ಯತಿ ॥14॥
ಕೃಷ್ಣನು ಬದ್ಧನಾದರೆ ಎಲ್ಲ ವೃಷ್ಣಿಗಳೂ, ಪೃಥಿವಿಯೂ ಮತ್ತು ಪಾಂಡವರೂ ನನಗೆ ವಿಧೇಯರಾಗುವರು. ಅವನು ನಾಳೆ ಪ್ರಾತಃಕಾಲದಲ್ಲಿ ಇಲ್ಲಿಗೆ ಬರುವನು.
ಅತ್ರೋಪಾಯಾನ್ ಯಥಾ ಸಮ್ಯಙ್ ನ ಬುದ್ಧ್ಯೇತ ಜನಾರ್ದನಃ |
ಯ ಉಪಾಯೋ ಭವೇತ್ ಕಶ್ಚಿತ್ ತದ್ ಭವಾನ್ ಪ್ರಬ್ರವೀತು ಮೇ ॥
ನಾನು ಅವನನ್ನು ಬಂಧಿಸಲು ಮಾಡುವ ಒಳ್ಳೆಯ ಉಪಾಯಗಳನ್ನು ಅವನು ತಿಳಿಯದಂತೆ ಏನು ಮಾರ್ಗವಿದೆಯೋ ಅದನ್ನು ನನಗೆ ಹೇಳುವವನಾಗು.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಘೋರಂ ಕೃಷ್ಣೇಽಭಿಸಂಹಿತಮ್ |
ಧೃತರಾಷ್ಟ್ರಃ ಸಹಾಮಾತ್ಯೋ ವ್ಯಥಿತೋ ವಿಮನಾ ಭವತ್ ॥16॥
ತತೋ ದುರ್ಯೋಧನಮಿದಂ ಧೃತರಾಷ್ಟ್ರೋಽಬ್ರವೀದ್ ವಚಃ ॥17॥
ವೈಶಂಪಾಯನ ಕೃಷ್ಣನ ವಿಷಯದಲ್ಲಿ ಅವನು ಆಡಿದ ಘೋರವಾದ ಮಾತುಗಳನ್ನು ಕೇಳಿ, ಅಮಾತ್ಯಸಹಿತನಾದ ಧೃತರಾಷ್ಟ್ರನು ವ್ಯಥಿತನಾಗಿ ವಿಷಾದವನ್ನು ಹೊಂದಿದನು. ದುರ್ಯೋಧನನನ್ನು ಕುರಿತು ಹೀಗೆ ಮಾತನಾಡಿದನು.
ಮೈವಂ ವೋಚಃ ಪ್ರಜಾಪಾಲ ನೈಷ ಧರ್ಮಃ ಸನಾತನಃ |
ದೂತಶ್ಚ ಹಿ ಹೃಷೀಕೇಶಃ ಸಂಬಂಧೀ ಚ ಪ್ರಿಯಶ್ಚ ನಃ ॥18॥
ಅಪಾಪಃ ಕೌರವೇಯೇಷು ಸ ಕಥಂ ಬಂಧಮರ್ಹತಿ ॥19॥
ಎಲೈ ಪ್ರಜಾಪಾಲಕನೇ, ಹೀಗೆ ಮಾತನಾಡಬೇಡ. ಇದು ಸನಾತನ ಧರ್ಮವಲ್ಲ. ಹೃಷೀಕೇಶನು ದೂತನಾಗಿ ಬರುತ್ತಿದ್ದಾನೆ. ಜೊತೆಗೆ ನಮ್ಮ ಸಂಬಂಧಿ ಮತ್ತು ನಮಗೆ ಪ್ರಿಯನಾದವನು. ಕೌರವರಿಗೆ ಏನೂ ಕೇಡನ್ನು ಮಾಡದಿದ್ದ ಅವನು ಹೇಗೆ ಬಂಧನಕ್ಕೆ ಅರ್ಹನಾಗುತ್ತಾನೆ?
ಭೀಷ್ಮಃ
ಪರೀತಸ್ತವ ಪುತ್ರೋಽಯಂ ಧೃತರಾಷ್ಟ್ರ ಸುಮಂದಧೀಃ |
ವೃಣೋತ್ಯನರ್ಥಂ ನೈವಾರ್ಥಂ ಯಾಚ್ಯಮಾನಃ ಸುಹೃಜ್ಜನೈಃ ॥20॥
ಭೀಷ್ಮ ಎಲೈ ಧೃತರಾಷ್ಟ್ರನೇ, ಮಂದಬುದ್ಧಿಯುಳ್ಳ ಈ ನಿನ್ನ ಪುತ್ರನು ಮೃತ್ಯುಗ್ರಸ್ತನಾಗಿದ್ದಾನೆ. ಸುಹೃಜ್ಜನರು ಬೇಡಿದರೂ ಅರ್ಥವನ್ನು ಸ್ವೀಕರಿಸುತ್ತಿಲ್ಲ, ಅನರ್ಥವನ್ನೇ ಆರಿಸುತ್ತಿದ್ದಾನೆ.
ಕೃಷ್ಣಮಕ್ಲಿಷ್ಟಕರ್ಮಾಣಮಾಸಾದ್ಯಾಯಂ ಸುದುರ್ಮತಿಃ |
ತವ ಪುತ್ರಃ ಸಹಾಮಾತ್ಯಃ ಕ್ಷಣೇನ ನ ಭವಿಷ್ಯತಿ ॥21॥
ಈ ನಿನ್ನ ಅತ್ಯಂತ ದುರ್ಮತಿಯುಳ್ಳ ಪುತ್ರನು ಅನಾಯಾಸದಲ್ಲಿ ಎಲ್ಲವನ್ನೂ ಮಾಡುವ ಕೃಷ್ಣನನ್ನು ಸಮೀಪಿಸಿ ಒಂದು ಕ್ಷಣದಲ್ಲಿ ಅಮಾತ್ಯರ ಜೊತೆಯಲ್ಲಿ ನಾಶವನ್ನು ಹೊಂದುವನು.
ಪಾಪಸ್ಯಾಸ್ಯ ನೃಶಂಸಸ್ಯ ತ್ಯಕ್ತಧರ್ಮಸ್ಯ ದುರ್ಮತೇಃ |
ನೋತ್ಸಹೇಽನರ್ಥಸಂಯುಕ್ತಾಃ ಶ್ರೋತುಂ ವಾಚಃ ಕಥಂಚನ ॥22॥
ಪಾಪಿಯೂ, ಧರ್ಮತ್ಯಾಗವನ್ನು ಮಾಡಿದವನೂ, ಕ್ರೂರನೂ, ದುರ್ಮತಿಯೂ ಆದ ಇವನ ಅನರ್ಥಕರವಾದ ಮಾತುಗಳನ್ನು ಯಾವ ರೀತಿಯಲ್ಲೂ ಕೇಳಲು ನಾನು ಬಯಸುವುದಿಲ್ಲ.
ವೈಶಂಪಾಯನಃ
ಇತ್ಯುಕ್ತ್ವಾ ಭರತಶ್ರೇಷ್ಠೋ ವೃದ್ಧಃ ಪರಮಮನ್ಯುಮಾನ್ |
ಉತ್ಥಾಯ ತಸ್ಮಾತ್ ಪ್ರಾತಿಷ್ಠದ್ ಭೀಷ್ಮಃ ಸತ್ಯಪರಾಕ್ರಮಃ ॥23॥
ವೈಶಂಪಾಯನ ಹೀಗೆ ಹೇಳಿ ಪರಮಕೋಪದಿಂದ ಕೂಡಿದ ಭರತಶ್ರೇಷ್ಠನೂ, ವೃದ್ಧನೂ, ಸತ್ಯಪರಾಕ್ರಮವುಳ್ಳವನೂ ಆದ ಭೀಷ್ಮನು ಎದ್ದು ಆ ಸಭೆಯಿಂದ ಹೊರಗೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಡಶೀತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ತೇಳನೆಯ ಅಧ್ಯಾಯ
ಕೌರವರ ಅರಮನೆಯನ್ನು ಪ್ರವೇಶಿಸಿ, ಯಥೋಚಿತಸತ್ಕಾರವನ್ನು ಸ್ವೀಕರಿಸಿ, ಕೃಷ್ಣನ ವಿದುರಗೃಹಗಮನ. ವಿದುರನಿಂದ ಅವನ ಪೂಜೆ.
ವೈಶಂಪಾಯನಃ

ಪ್ರಾತರುತ್ಥಾಯ ಕೃಷ್ಣಸ್ತು ಕೃತವಾನ್ ಸರ್ವಮಾಹ್ನಿಕಮ್ |
ಬ್ರಾಹ್ಮಣೈರಭ್ಯನುಜ್ಞಾತಃ ಪ್ರಯಯೌ ನಗರಂ ಪ್ರತಿ ||1||
ವೈಶಂಪಾಯನ ಕೃಷ್ಣನು ಪ್ರಾತಃಕಾಲದಲ್ಲಿ ಎದ್ದು ಎಲ್ಲಾ ಆಹ್ನಿಕಗಳನ್ನೂ ಮಾಡಿ ಬ್ರಾಹ್ಮಣರ ಅನುಮತಿಯನ್ನು ಪಡೆದು (ಹಸ್ತಿನಪುರಕ್ಕೆ) ಹೊರಟನು.
ತಂ ಪ್ರಯಾಂತಂ ಮಹಾಬಾಹುಮನುಜ್ಞಾಪ್ಯ ತತೋ ನೃಪ |
ಪರ್ಯವರ್ತಂತ ತೇ ಸರ್ವೇ ಕುಶಸ್ಥಲನಿವಾಸಿನಃ ||2||
ಎಲೈ ಮಹಾಬಾಹುವೇ, ಕುಶಸ್ಥಲವಾಸಿಗಳಾದ ಆ ಬ್ರಾಹ್ಮಣರೆಲ್ಲರೂ ಆ ಮಹಾನುಭಾವನಾದ ಕೃಷ್ಣನಿಗೆ ಅನುಮತಿಯನ್ನು ಕೊಟ್ಟು ಹಿಂದಿರುಗಿದರು.
ಪ್ರದದೌ ಪುಂಡರೀಕಾಕ್ಷೋ ರತ್ನಾನಿ ಚ ಧನಾನಿ ಚ |
ಪ್ರಯಯೌ ಪುಂಡರೀಕಾಕ್ಷಃ ಕುರೂಣಾಂ ಸದನಂ ಪ್ರತಿ ||3||
ಪುಂಡರೀಕಾಕ್ಷನು ಅವರಿಗೆ ರತ್ನಗಳನ್ನೂ ಮತ್ತು ಧನಗಳನ್ನೂ ಕೊಟ್ಟು, ಕುರುಗಳ ಅರಮನೆಯನ್ನು ಕುರಿತು ಹೊರಟನು.
ಪಂಥಾನಮಾಚೇಮುರಿವ ಗ್ರಸಮಾನಾ ಇವಾಂಬರಮ್ |
ದಾರುಕೇಣ ಪ್ರಚುದಿತಾ ಹಯಾಸ್ತಸ್ಯ ಮಹಾತ್ಮನಃ ||4||
ದಾರುಕನಿಂದ ಪ್ರಚೋದಿತನಾದ ಆ ಮಹಾತ್ಮನ ಅಶ್ವಗಳು ಮಾರ್ಗಗಳನ್ನು ಕುಡಿಯುವಂತೆ, ಆಕಾಶವನ್ನು ನುಂಗುವಂತೆ ಮುಂದೆ ನಡೆದವು.
ಅನ್ನಾನಿ ಶಯ್ಯಾ ವಾಸಾಂಸಿ ತಥಾ ರತ್ನಾನಿ ಸರ್ವಶಃ |
ದುರ್ಯೋಧನೇನ ಕೃಷ್ಣಾರ್ಥಂ ಪಥಿ ಸನ್ನಿಹಿತಂ ಬಹು ||5||
ನಾಭ್ಯನಂದನ್ಮಹಾಬಾಹುರುಪಾಯಾತ್ ಕುರುಸಂಸದಮ್ ||6||
ದುರ್ಯೋಧನನಿಂದ ಕೃಷ್ಣನ ಸಲುವಾಗಿ ಮಾರ್ಗದಲ್ಲಿ ಬಹುವಿಧವಾದ ಅನ್ನಗಳೂ, ಶಯನಗಳೂ, ವಸ್ತ್ರಗಳೂ ಮತ್ತು ಎಲ್ಲಾ ವಿಧವಾದ ರತ್ನಗಳೂ ಇಡಲ್ಪಟ್ಟಿದ್ದವು. ಮಹಾಬಾಹುವಾದ ಅವನು ಅವುಗಳನ್ನು ನೋಡಿ ಸಂತೋಷಪಡದೆ ಕೌರವರ ಸಭೆಗೆ ಬಂದನು.
ಧಾರ್ತರಾಷ್ಟ್ರಾಸ್ತಮಾಯಾಂತಂ ಪ್ರತ್ಯುಜ್ಜಗ್ಮುಃ ಸ್ವಲಂಕೃತಾಃ |
ದುರ್ಯೋಧನಾದೃತೇ ಸರ್ವೇ ಭೀಷ್ಮದ್ರೋಣಕೃಪಾದಯಃ ||7||
ಕೃಷ್ಣನು ಬರುತ್ತಿರಲು ದುರ್ಯೋಧನನನ್ನು ಬಿಟ್ಟು ಉಳಿದ ಎಲ್ಲಾ ಧೃತರಾಷ್ಟ್ರಪುತ್ರರೂ ಭೀಷ್ಮದ್ರೋಣಕೃಪಾದಿಗಳೆಲ್ಲರೂ ಅಲಂಕೃತರಾಗಿ ಎದುರಿಗೆ ಬಂದರು.
ಪೌರಾಶ್ಚ ಬಹುಲಾ ರಾಜನ್ ಹೃಷೀಕೇಶದಿದೃಕ್ಷವಃ |
ಯಾನೈರ್ಬಹುವಿಧೈರನ್ಯೇ ಪದ್ಭಿರೇವ ತಥಾಽಪರೇ ||8||
ಎಲೈ ರಾಜನೇ, ಕೃಷ್ಣನನ್ನು ನೋಡುವ ಆಸೆಯಿಂದ ಪೌರರಲ್ಲಿ ಕೆಲವರು ಬಹುವಿಧ ವಾಹನಗಳಿಂದ ಬಂದರು, ಇನ್ನು ಕೆಲವರು ನಡೆದುಕೊಂಡೇ ಬಂದರು.
ಸ ವೈ ಪಥಿ ಸಮಾಗಮ್ಯ ಭೀಷ್ಮೇಣಾಕ್ಲಿಷ್ಟಕರ್ಮಣಾ |
ದ್ರೋಣೇನ ಧಾರ್ತರಾಷ್ಟೈಶ್ಚ ತೈರ್ವೃತೋ ನಗರಂ ಯಯೌ ||9||
ಕೃಷ್ಣನು ಮಾರ್ಗದಲ್ಲಿ ಅಕ್ಲಿಷ್ಟಕಾರಿಯಾದ ಭೀಷ್ಮರಿಂದಲೂ, ದ್ರೋಣರಿಂದಲೂ ಮತ್ತು ಧೃತರಾಷ್ಟ್ರಪುತ್ರರಿಂದಲೂ ಸಮಾಗಮವನ್ನು ಹೊಂದಿ, ಅವರಿಂದ ಪರಿವೃತನಾಗಿ ನಗರವನ್ನು ಪ್ರವೇಶಿಸಿದನು.
ಕೃಷ್ಣಸಮ್ಮಾನನಾರ್ಥಂ ಚ ನಗರಂ ಸಮಲಂಕೃತಮ್ |
ಬಭೂವ ರಾಜಮಾರ್ಗಾಶ್ಚ ಬಹುರತ್ನಸಮಾಚಿತಾಃ ||10||
ಕೃಷ್ಣನನ್ನು ಗೌರವಿಸುವ ಸಲುವಾಗಿ ನಗರವು ಅಲಂಕೃತವಾಗಿದ್ದಿತು. ರಾಜಮಾರ್ಗಗಳು ಅನೇಕ ರತ್ನಗಳಿಂದ ಅಲಂಕರಿಸಲ್ಪಟ್ಟಿದ್ದವು.

ನ ಚ ಕಶ್ಚಿದ್ ಗೃಹೇ ರಾಜನ್ ತದಾಽಽಸೀತ್ ಭರತರ್ಷಭ |
ನ ಸ್ತ್ರೀ ನ ವೃದ್ಧೋ ನ ಶಿಶುಃ ವಾಸುದೇವದಿದೃಕ್ಷಯಾ ||11||
ಎಲೈ ರಾಜನೇ, ಭರತರ್ಷಭನೇ, ಆಗ ವಾಸುದೇವನನ್ನು ನೋಡುವ ಆಸೆಯಿಂದ ಯಾವ ಸ್ತ್ರೀಯಾಗಲೀ, ವೃದ್ಧನಾಗಲೀ, ಶಿಶುವಾಗಲೀ ಮನೆಯ ಒಳಗೆ ಇರಲಿಲ್ಲ.
ರಾಜಮಾರ್ಗೇ ನರಾಸ್ತಸ್ಮಿನ್ ಸಂಭವಂತ್ಯವನಿಂ ಗತಾಃ |
ತಥಾ ಸಮಭವದ್ ರಾಜನ್ ಹೃಷೀಕೇಶಪ್ರವೇಶನೇ ||12||
ಆ ರಾಜಮಾರ್ಗದಲ್ಲಿ ಮನುಷ್ಯರು ಭೂಮಿಯ ಮೇಲೆ ತುಂಬಿಹೋಗಿದ್ದರು. ಎಲೈ ರಾಜನೇ, ಕೃಷ್ಣನು ಬರುವಾಗ ಅಂತಹ ಸಂಮರ್ದವು ಉಂಟಾಯಿತು.
ಆವೃತಾನಿ ವರಸ್ತ್ರೀಭಿಃ ಗೃಹಾಣಿ ಸುಮಹಾಂತ್ಯಪಿ |
ಪ್ರಚಲಂತೀವ ಭಾರೇಣ ತತ್ರ ತತ್ರ ಮಹೀತಳೇ ||13||
ದೊಡ್ಡದೊಡ್ಡ ಮನೆಗಳೂ ಸಹ ಸುಂದರಸ್ತ್ರೀಯರಿಂದ ತುಂಬಿಹೋಗಿ, ಭಾರದಿಂದ ಭೂಮಿಯ ಮೇಲೆ ಚಲಿಸುವಂತೆ ತೋರುತ್ತಿದ್ದಿತು.
ತಥಾ ಚ ಗತಿಮಂತಸ್ತೇ ವಾಸುದೇವಸ್ಯ ವಾಜಿನಃ |

ಸುಮಂದಗತಯೋಽಭೂವನ್ ರಾಜಮಾರ್ಗೇ ನರೈರ್ವೃತೇ ॥14॥
ಅಂತಹ ಶೀಘ್ರಗತಿಯುಳ್ಳ ಕೃಷ್ಣನ ಅಶ್ವಗಳು ಮನುಷ್ಯರಿಂದ ತುಂಬಿದ ರಾಜಮಾರ್ಗದಲ್ಲಿ ಬಹಳ ನಿಧಾನವಾದ ಗತಿಯಲ್ಲಿ ನಡೆದವು.

ಸ ಗೃಹಂ ಧೃತರಾಷ್ಟ್ರಸ್ಯ ಪ್ರಾವಿಶಚ್ಛತ್ರುಕರ್ಶನಃ |
ಪಾಂಡರಂ ಪುಂಡರೀಕಾಕ್ಷಃ ಪ್ರಾಸಾದೈರುಪಶೋಭಿತಮ್ ॥15॥
ಶತ್ರುಕರ್ಶನನಾದ ಪುಂಡರೀಕಾಕ್ಷನು ಅನೇಕ ಉಪ್ಪರಿಗೆಗಳಿಂದ ಶೋಭಿತವಾದ, ಶುಭ್ರಶ್ವೇತವರ್ಣದ ಧೃತರಾಷ್ಟ್ರನ ಗೃಹವನ್ನು ಪ್ರವೇಶಿಸಿದನು.
ತಿಸ್ರಃ ಕಕ್ಷ್ಯಾ ವ್ಯತಿಕ್ರಮ್ಯ ಕೇಶವೋ ರಾಜವೇಶ್ಮನಃ |
ವೈಚಿತ್ರವೀರ್ಯಂ ರಾಜಾನಮಭ್ಯಗಚ್ಛದರಿಂದಮಃ ॥16॥
ಅರಿಂದಮನಾದ ಕೇಶವನು ಅರಮನೆಯ ಮೂರುಕಕ್ಷೆಗಳನ್ನು ದಾಟಿ ರಾಜನಾದ ಧೃತರಾಷ್ಟ್ರನನ್ನು ಸಮೀಪಿಸಿದನು.
ಅಭ್ಯಾಗಚ್ಛತಿ ದಾಶಾರ್ಹೇ ಪ್ರಜ್ಞಾಚಕ್ಷುರ್ನರಾಧಿಪಃ |
ಸಹೈವ ದ್ರೋಣಭೀಷ್ಮಾಭ್ಯಾಮುದತಿಷ್ಠನ್ ಮಹಾಯಶಾಃ ॥17॥
ಕೃಷ್ಣನು ಸಮೀಪಕ್ಕೆ ಬರುತ್ತಿರಲು ಪ್ರಜ್ಞಾಚಕ್ಷುಸ್ಸನ್ನು ಹೊಂದಿದ, ಮಹಾಕೀರ್ತಿವಂತನಾದ ರಾಜನು ಭೀಷ್ಮ-ದ್ರೋಣರ ಜೊತೆಯಲ್ಲಿ ಎದ್ದುನಿಂತನು.
ಕೃಪಶ್ಚ ಸೋಮದತ್ತಶ್ಚ ಮಹಾರಾಜಶ್ಚ ಬಾಹ್ಲಿಕಃ |
ಆಸನೇಭ್ಯೋಽಚಲನ್ ಸರ್ವೇ ಪೂಜಯಂತೋ ಜನಾರ್ದನಮ್ ॥18॥
ಕೃಪ, ಸೋಮದತ್ತ, ಬಾಹ್ಲಿಕಮಹಾರಾಜ- ಎಲ್ಲರೂ ಕೃಷ್ಣನಿಗೆ ಗೌರವವನ್ನು ಸಲ್ಲಿಸುತ್ತಾ ತಮ್ಮ ಆಸನಗಳಿಂದ ಎದ್ದುನಿಂತರು.
ತತೋ ರಾಜಾನಮಾಸಾದ್ಯ ಧೃತರಾಷ್ಟ್ರಂ ಯಶಸ್ವಿನಮ್ |
ಸಭೀಷ್ಮಂ ಪೂಜಯಾಮಾಸ ವಾರ್ಷ್ಣೇಯೋ ವಾಗ್ಭಿರಂಜಸಾ ॥19॥
ತೇ ಸ್ವಧರ್ಮಾನಕುರ್ವಂತ ಸಂಪೂಜ್ಯ ಮಧುಸೂದನಮ್ ॥20॥
ಅನಂತರ ಕೃಷ್ಣನು ಕೀರ್ತಿವಂತನಾದ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ, ಭೀಷ್ಮರಿಂದ ಸಹಿತನಾದ ಅವನನ್ನು ತನ್ನ ಒಳ್ಳೆಯ ಮಾತುಗಳಿಂದ ಪೂಜಿಸಿದನು. ಅವರೂ ಕೂಡ ಕೃಷ್ಣನನ್ನು ಪೂಜಿಸಿ ತಮ್ಮ ಸ್ವಧರ್ಮವನ್ನು ಅನುಷ್ಠಾನ ಮಾಡಿದರು.
ತೇಷು ಧರ್ಮಾನುಪೂರ್ವೀಂ ತಾಂ ಪ್ರಯುಜ್ಯ ಮಧುಸೂದನಃ |
ಯಥಾವಯಃ ಸಮೀಯಾಯ ರಾಜಭಿಃ ಸಹ ಮಾಧವಃ ॥21॥
ಮಧುಸೂದನನು ಧರ್ಮಕ್ಕೆ ಅನುಗುಣವಾಗಿ ಅವರ ಜೊತೆಯಲ್ಲಿ ನಡೆದುಕೊಂಡು ಉಳಿದ ರಾಜರ ಜೊತೆಯಲ್ಲಿ ವಯಸ್ಸಿಗೆ ಅನುಗುಣವಾಗಿ ಸಮಾಗಮವನ್ನು ಹೊಂದಿದನು.
ಅಥ ದ್ರೋಣಂ ಸಬಾಹ್ಲೀಕಂ ಸಪುತ್ರಂ ಚ ಯಶಸ್ವಿನಮ್ |
ಕೃಪಂ ಚ ಸೋಮದತ್ತಂ ಚ ಸಮೀಯಾಯ ಜನಾರ್ದನಃ ॥22॥
ಅನಂತರ ಜನಾರ್ದನನು ಬಾಹ್ಲೀಕ ಮತ್ತು ಅಶ್ವತ್ಥಾಮರಿಂದ ಸಹಿತರಾದ, ಕೀರ್ತಿಶಾಲಿಗಳಾದ ದ್ರೋಣ, ಕೃಪ ಮತ್ತು ಸೋಮದತ್ತರ ಜೊತೆಯಲ್ಲಿ ಸಮಾಗಮವನ್ನು ಹೊಂದಿದನು.
ತತ್ರಾಸೀದೂರ್ಜಿತಂ ಮೃಷ್ಟಂ ಕಾಂಚನಂ ಮಹದಾಸನಮ್ |
ಶಾಸನಾದ್ ಧೃತರಾಷ್ಟ್ರಸ್ಯ ತತ್ರೋಪಾವಿಶದಚ್ಯುತಃ ॥23॥
ಅಲ್ಲಿ ಧೃತರಾಷ್ಟ್ರನ ಶಾಸನದಂತೆ ಎತ್ತರವಾದ, ಪರಿಶುದ್ಧವಾದ, ಸುವರ್ಣಮಯವಾದ ದೊಡ್ಡ ಆಸನವಿದ್ದಿತು. ಕೃಷ್ಣನು ಅದರಲ್ಲಿ ಕುಳಿತನು.
ಅಥ ಗಾಂ ಮಧುಪರ್ಕಂ ಚಾಪ್ಯುದಕಂ ಚ ಜನಾರ್ದನೇ |
ಉಪಜಹ್ರುರ್ಯಥಾನ್ಯಾಯಂ ಧೃತರಾಷ್ಟ್ರಪುರೋಹಿತಾಃ ॥24॥
ಅನಂತರ ಧೃತರಾಷ್ಟ್ರನ ಪುರೋಹಿತರು ವಿಧಿಗೆ ಅನುಗುಣವಾಗಿ ಕೃಷ್ಣನಿಗೆ ಗೋವನ್ನೂ, ಮಧುಪರ್ಕವನ್ನೂ ಮತ್ತು ಉದಕವನ್ನೂ ನೀಡಿದರು.
ಕೃತಾತಿಥ್ಯಸ್ತು ಗೋವಿಂದಃ ಸರ್ವಾನ್ ಪರಿಹಸನ್ ಕುರೂನ್ |
ಆಸ್ತೇ ಸಂಬಂಧಕಂ ಕುರ್ವನ್ ಕುರುಭಿಃ ಪರಿವಾರಿತಃ ॥25॥
ಆತಿಥ್ಯವನ್ನು ಸ್ವೀಕರಿಸಿದ ಗೋವಿಂದನು ಕೌರವರಿಂದ ಪರಿವಾರಿತನಾಗಿ, ಎಲ್ಲಾ ಕೌರವರನ್ನು ನೋಡಿ ನಗುತ್ತಾ ತನ್ನ ಸಂಬಂಧವನ್ನು ಸೂಚಿಸುತ್ತಿದ್ದನು.
ಸೋಽರ್ಚಿತೋ ಧೃತರಾಷ್ಟ್ರೇಣ ಪೂಜಿತಶ್ಚ ಮಹಾಯಶಾಃ |
ರಾಜಾನಂ ಸಮನುಜ್ಞಾಪ್ಯ ನಿರಕ್ರಾಮದರಿಂದಮಃ ॥26॥
ಧೃತರಾಷ್ಟ್ರನಿಂದ ಗೌರವದಿಂದ ಪೂಜಿಸಲ್ಪಟ್ಟ, ಮಹಾಕೀರ್ತಿಶಾಲಿಯಾದ, ಅರಿಂದಮನಾದ ಅವನು ರಾಜನ ಅನುಮತಿಯನ್ನು ಪಡೆದು ಹೊರಗೆ ಬಂದನು.
ತೈಃ ಸಮೇತ್ಯ ಯಥಾನ್ಯಾಯಂ ಕುರುಭಿಃ ಕುರುಸಂಸದಿ |
ವಿದುರಾವಸಥಂ ರಮ್ಯಮುಪಾತಿಷ್ಠತ ಮಾಧವಃ ॥27॥
ಕುರುಸಭೆಯಲ್ಲಿ ಕೌರವರ ಜೊತೆಯಲ್ಲಿ ಯಥಾಯೋಗ್ಯವಾಗಿ ಸಮಾಗಮವನ್ನು ಹೊಂದಿ ಕೃಷ್ಣನು ವಿದುರನ ಮನೋಹರವಾದ ಮನೆಗೆ ಹೊರಟನು.

ವಿದುರಃ ಸರ್ವಕಲ್ಯಾಣೈರಭಿಗಮ್ಯ ಜನಾರ್ದನಮ್ |
ಅರ್ಚಯಾಮಾಸ ದಾಶಾರ್ಹಂ ಸರ್ವಕಾಮೈರುಪಸ್ಥಿತಮ್ ॥28॥
ವಿದುರನು ಎಲ್ಲ ಮಂಗಳಪದಾರ್ಥವನ್ನೂ ತೆಗೆದುಕೊಂಡು ಕೃಷ್ಣನ ಎದುರಿಗೆ ಬಂದು, ಅವನನ್ನು ಎಲ್ಲ ಕಾಮಗಳಿಂದಲೂ ಸಮೃದ್ಧವಾದ ತನ್ನ ಮನೆಯೊಳಗೆ ಕರೆದುಕೊಂಡು ಹೋದನು.
ಕೃತಾತಿಥ್ಯಂ ತು ಗೋವಿಂದಂ ವಿದುರಃ ಸರ್ವಧರ್ಮವಿತ್ |
ಕುಶಲಂ ಪಾಂಡುಪುತ್ರಾಣಾಂ ಪಪ್ರಚ್ಛ ಮಧುಸೂದನಮ್ ॥29॥
ಗೋವಿಂದನು ಆತಿಥ್ಯವನ್ನು ಸ್ವೀಕರಿಸಿದ ಮೇಲೆ ಸರ್ವಧರ್ಮವನ್ನೂ ತಿಳಿದ ವಿದುರನು ಮಧುಸೂದನನನ್ನು ಕುರಿತು ಪಾಂಡುಪುತ್ರರ ಕ್ಷೇಮವನ್ನು ವಿಚಾರಿಸಿದನು.
ಪ್ರೀಯಮಾಣಸ್ಯ ಸುಹೃದೋ ವಿದುರೋ ಬುದ್ಧಿಮತ್ತರಃ ॥30॥
ಧರ್ಮನಿತ್ಯಸ್ಯ ತು ಸತೋ ಗತರೋಷಸ್ಯ ಧೀಮತಃ |
ತಸ್ಯ ಸರ್ವಂ ಸವಿಸ್ತಾರಂ ಪಾಂಡವಾನಾಂ ವಿಚೇಷ್ಟಿತಮ್ ॥31॥
ಕ್ಷತ್ತುರಾಚಷ್ಟ ದಾಶಾರ್ಹೋ ಯಥಾ ಪ್ರತ್ಯಕ್ಷದರ್ಶಿವಾನ್ ॥32॥
ಶ್ರೇಷ್ಠಬುದ್ಧಿಯುಳ್ಳ ವಿದುರನು ನಿತ್ಯವೂ ಧರ್ಮಶೀಲನೂ, ಸಂತೋಷಗೊಂಡವನೂ, ಮೇಧಾವಿಯೂ, ದೋಷರಹಿತನೂ ಮತ್ತು ಒಳ್ಳೆಯ ಮನಸ್ಸುಳ್ಳವನೂ ಆದ ಕೃಷ್ಣನನ್ನು ಪ್ರಶ್ನಿಸಿದನು. ದಾಶಾರ್ಹನಾದ ಕೃಷ್ಣನು ವಿದುರನಿಗೆ ತಾನು ಪ್ರತ್ಯಕ್ಷವಾಗಿ ನೋಡಿದಂತೆ ಪಾಂಡವರ ಎಲ್ಲಾ ವ್ಯಾಪಾರಗಳನ್ನೂ ವಿಸ್ತಾರವಾಗಿ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ತೆಂಟನೆಯ ಅಧ್ಯಾಯ
ಕೃಷ್ಣನ ಮುಂದೆ ಕುಂತಿಯ ವಿಲಾಪ
ವೈಶಂಪಾಯನಃ
ಅಥೋಪಗಮ್ಯ ವಿದುರಮಪರಾಹ್ಣೇ ಜನಾರ್ದನಃ |
ಪಿತೃಷ್ವಸಾರಂ ಸ ಪೃಥಾಮಭ್ಯಗಚ್ಛದರಿಂದಮಃ ॥1॥
ವೈಶಂಪಾಯನ ಅರಿಂದಮನಾದ ಕೃಷ್ಣನು ಅನಂತರ ಮಧ್ಯಾಹ್ನ ಕಾಲದಲ್ಲಿ ವಿದುರನನ್ನು ಸಂಧಿಸಿ, ಸೋದರತ್ತೆಯಾದ ಕುಂತಿಯ ಬಳಿಗೆ ಹೋದನು.
ಸಾ ದೃಷ್ಟ್ವಾ ಕೃಷ್ಣಮಾಯಾಂತಂ ಪ್ರಸನ್ನಾದಿತ್ಯವರ್ಚಸಮ್ |
ಕಂಠೇ ಗೃಹೀತ್ವಾ ಪ್ರಾಕ್ರೋಶತ್ ಸ್ಮರಂತೀ ತನಯಾನ್ ಪೃಥಾ ॥2॥
ಪ್ರಸನ್ನನಾದ ಸೂರ್ಯನ ಕಾಂತಿಯನ್ನು ಹೊಂದಿದ್ದ ಕೃಷ್ಣನು ಬರುವುದನ್ನು ನೋಡಿ ಅವಳು ತನ್ನ ಮಕ್ಕಳನ್ನು ಸ್ಮರಿಸಿ ಅವನ ಕಂಠವನ್ನು ಹಿಡಿದು ರೋದಿಸಿದಳು.
ತೇಷಾಂ ಸತ್ತ್ವವತಾಂ ಮಧ್ಯೇ ಗೋವಿಂದಂ ಸಹಚಾರಿಣಮ್ |
ಚಿರಸ್ಯ ದೃಷ್ಟ್ವಾ ವಾರ್ಷ್ಣೇಯಂ ಬಾಷ್ಪಮಾಹಾರಯತ್ ಪೃಥಾ ॥3॥
ಬಹಳ ಸಮಯದ ಮೇಲೆ ಆ ಬಲಶಾಲಿಗಳಾದ ಸಹಚರರ ಮಧ್ಯದಲ್ಲಿ ವೃಷ್ಣಿಕುಲ ಸಮುದ್ಭೂತನಾದ ಗೋವಿಂದನನ್ನು ನೋಡಿ ಕಣ್ಣಿನಲ್ಲಿ ನೀರು ತುಂಬಿಕೊಂಡಳು.
ಸಾಽಬ್ರವೀತ್ ಕೃಷ್ಣಮಾಸೀನಂ ಕೃತಾತಿಥ್ಯಂ ಯುಧಾಂಪತಿಮ್ |
ಬಾಷ್ಪಗದ್ಗದಪೂರ್ಣೇನ ಮುಖೇನ ಪರಿಶುಷ್ಯತಾ ॥4॥
ಯುದ್ಧಪತಿಯಾದ ಕೃಷ್ಣನು ಆತಿಥ್ಯವನ್ನು ಸ್ವೀಕರಿಸಿ ಕುಳಿತುಕೊಂಡ ಮೇಲೆ, ಒಣಗಿ ಹೋಗುತ್ತಿದ್ದ ಮುಖದಿಂದ, ಬಾಷ್ಪಗದ್ಗದವಾದ ಕಂಠದಿಂದ ಅವಳು ಕೃಷ್ಣನನ್ನು ಕುರಿತು ಮಾತನಾಡಿದಳು.
ಏತೇ ಬಾಲ್ಯಾತ್ ಪ್ರಭೃತ್ಯೇವ ಗುರುಶುಶ್ರೂಷಣೇ ರತಾಃ |
ಪರಸ್ಪರಸ್ಯ ಸುಹೃದಃ ಸಮ್ಮತಾಃ ಸಮಚೇತಸಃ ॥5॥
ನಿಕೃತ್ಯಾ ಭ್ರಂಶಿತಾ ರಾಜ್ಯಾತ್ ಜನಾರ್ಹಾ ನಿರ್ಜನಂ ಗತಾಃ ॥6॥
ಈ ನನ್ನ ಮಕ್ಕಳು ಬಾಲ್ಯದಿಂದಲೂ ಹಿರಿಯರ ಸೇವೆಯಲ್ಲಿ ನಿರತರಾದವರು. ಪರಸ್ಪರ ಪ್ರೀತಿಯುಳ್ಳವರು. ಎಲ್ಲರಿಗೂ ಸಮ್ಮತರಾದವರು ಮತ್ತು ಸಮಾಧಾನಚಿತ್ತವುಳ್ಳವರು. ಅಂತಹ ಅವರು ಮೋಸದಿಂದ ರಾಜ್ಯಭ್ರಷ್ಟರಾಗಿ ಪಟ್ಟಣದಲ್ಲಿ ವಾಸಿಸಬೇಕಾದವರು ನಿರ್ಜನವಾದ ಕಾಡಿಗೆ ಹೋದರು.
ವಿಜಿತಕ್ರೋಧಹರ್ಷಾಶ್ಚ ಬ್ರಹ್ಮಣ್ಯಾಃ ಸತ್ಯವಾದಿನಃ |
ತ್ಯಕ್ತ್ವಾ ಪ್ರಿಯಸುಖೇ ಪಾರ್ಥಾ ರುದತೀಮಪಹಾಯ ಮಾಮ್ ॥7॥
ಅಹಾರ್ಷುಶ್ಚ ವನಂ ಯಾಂತಃ ಸಮೂಲಂ ಹೃದಯಂ ಮಮ ॥8॥
ಕ್ರೋಧ-ಹರ್ಷಗಳನ್ನು ಜಯಿಸಿ, ಬ್ರಾಹ್ಮಣವತ್ಸಲರಾಗಿ, ಸತ್ಯವಾದಿಗಳಾಗಿ, ಪ್ರಿಯಸುಖಗಳನ್ನು ತ್ಯಜಿಸಿ, ಅಳುತ್ತಿದ್ದ ನನ್ನನ್ನೂ ಬಿಟ್ಟು

ಕಾಡಿಗೆ ಹೋಗುತ್ತಾ ಮೂಲಸಹಿತವಾಗಿ ನನ್ನ ಹೃದಯವನ್ನೇ ಅಪಹರಿಸಿದರು.
ಅತದರ್ಹಾ ಮಹಾತ್ಮಾನಃ ಕಥಂ ಕೇಶವ ಪಾಂಡವಾಃ |
ಊಷುರ್ಮಹಾವನೇ ತಾತ ಸಿಂಹವ್ಯಾಘ್ರಗಜಾಕುಲೇ ॥9॥
ಪ್ರೀತಿಪಾತ್ರನಾದ ಕೇಶವನೇ, ವನವಾಸಕ್ಕೆ ಅರ್ಹರಲ್ಲದ ಮಹಾತ್ಮರಾದ ಪಾಂಡವರು ಸಿಂಹ, ಗಜಗಳಿಂದ ತುಂಬಿದ ದೊಡ್ಡ ಕಾಡಿನಲ್ಲಿ ಹೇಗೆ ವಾಸಿಸಿದರು?
ಬಾಲಾ ವಿಹೀನಾಃ ಪಿತ್ರಾ ಮೇ ಮಯಾ ಸತತಲಾಳಿತಾಃ |
ಅಪಶ್ಯಂತಶ್ಚ ಪಿತರೌ ಕಥಮೂಷುರ್ಮಹಾವನೇ ॥10॥
ತಂದೆಯಿಂದ ವಿಹೀನರಾದ ಅವರನ್ನು ನಾನು ಸತತವಾಗಿ ಲಾಲಿಸಿದೆ. ತಂದೆ ತಾಯಿಗಳನ್ನು ಕಾಣದ ಅವರು ದೊಡ್ಡ ಕಾಡಿನಲ್ಲಿ ಹೇಗೆ ವಾಸಿಸಿದರು?
ಶಂಖದುಂದುಭಿನಿರ್ಘೋಷೈರ್ಮೃದಂಗೈರ್ವೈಣವೈರಪಿ |
ಪಾಂಡವಾಃ ಸಮಬೋಧ್ಯಂತ ಬಾಲ್ಯಾತ್ ಪ್ರಭೃತಿ ಕೇಶವ ॥11॥
ಎಲೈ ಕೇಶವನೇ, ಬಾಲ್ಯದಿಂದಲೂ ಆರಂಭಿಸಿ ಪಾಂಡವರು ಶಂಖ-ದುಂದುಭಿಗಳ ಘೋಷದಿಂದಲೂ ಮೃದಂಗ-ವೇಣುಗಳ ನಾದದಿಂದಲೂ ಎಚ್ಚರಗೊಳ್ಳುತ್ತಿದ್ದರು.
ಯೇ ಸ್ಮ ವಾರಣಶಬ್ದೇನ ಹಯಾನಾಂ ಹ್ರೇಷಿತೇನ ಚ |
ರಥನೇಮಿನಿನಾದೈಶ್ಚ ವ್ಯಬೋಧ್ಯಂತ ಸದಾ ಗೃಹೇ ॥12॥
ಅವರು ಮನೆಯಲ್ಲಿ ಯಾವಾಗಲೂ ಆನೆಗಳ ಹೀಂಕಾರದಿಂದಲೂ, ಕುದುರೆಗಳ ಹ್ರೇಷಶಬ್ದಗಳಿಂದಲೂ, ರಥದ ಅಕ್ಷಗಳ ಶಬ್ದದಿಂದಲೂ ಎಚ್ಚರಗೊಳ್ಳುತ್ತಿದ್ದರು.
ಪುಣ್ಯಾಹಘೋಷಮಿಶ್ರೈಶ್ಚ ಪೂಜ್ಯಮಾನಾ ದ್ವಿಜಾತಿಭಿಃ |
ವಸ್ತ್ರೈ ರತ್ನೈರಲಂಕಾರೈಃ ಪೂಜಯಂತೋ ದ್ವಿಜನ್ಮನಃ ॥13॥
ಪುಣ್ಯಾಹಘೋಷಮಿಶ್ರವಾದ ಅಂತಹ ಶಬ್ದಗಳಿಂದ ಎದ್ದು, ಬ್ರಾಹ್ಮಣರಿಂದ ಪೂಜಿಸಲ್ಪಟ್ಟು, ಬ್ರಾಹ್ಮಣರನ್ನು ವಸ್ತ್ರಗಳಿಂದಲೂ ರತ್ನಗಳಿಂದಲೂ ಅಲಂಕಾರಗಳಿಂದಲೂ ಪೂಜಿಸುತ್ತಿದ್ದರು.
ಗೀರ್ಭಿರ್ಮಂಗಲಯುಕ್ತಾಭಿಃ ಬ್ರಾಹ್ಮಣಾನಾಂ ಮಹಾತ್ಮನಾಮ್ |
ಅರ್ಚಿತೈರರ್ಚನಾರ್ಹೈಶ್ಚ ಸ್ತುವದ್ಭಿರಭಿನಂದಿತಾಃ ॥14॥
ಪ್ರಾಸಾದಾಗ್ರೇಷ್ವಬೋಧ್ಯಂತ ರಾಂಕವಾಜಿನಶಾಯಿನಃ ॥15॥
ಮಹಾತ್ಮರಾದ ಬ್ರಾಹ್ಮಣರ, ಮಂಗಳಕರವಾದ ಆಶೀರ್ವಾದ ಶಬ್ದಗಳಿಂದ, ಸತ್ಕಾರಕ್ಕೆ ಯೋಗ್ಯವಾಗಿ ಸತ್ಕರಿಸಲ್ಪಟ್ಟ ಸ್ತೋತ್ರಮಾಡುವ ಅವರಿಂದ ಅಭಿನಂದಿತರಾಗಿ ರಾಂಕಚರ್ಮದ ಹಾಸಿಗೆಗಳ ಮೇಲೆ ಮಲಗಿದ ಅವರು ಉಪ್ಪರಿಗೆಗಳಲ್ಲಿ ಎಚ್ಚರಿಕೆಗೊಳ್ಳುತಿತದ್ದರು.
ಕ್ರೂರಂ ಚ ನಿನದಂ ಶ್ರುತ್ವಾ ಶ್ವಾಪದಾನಾಂ ಮಹಾವನೇ |
ನ ಸ್ಮೋಪಯಾಂತಿ ನಿದ್ರಾಂ ತೇ ನತದರ್ಹಾ ಜನಾರ್ದನ ॥16॥
ಎಲೈ ಜನಾರ್ದನನೇ, ಅಂತಹ ಅವರು ಮಹಾವನದಲ್ಲಿ ಮಾಂಸಾಹಾರಿ ಪ್ರಾಣಿಗಳ ಕ್ರೂರಶಬ್ದಗಳನ್ನು ಕೇಳಿ ಆ ದುಃಖಕ್ಕೆ ಅರ್ಹರಲ್ಲದ ಅವರು ನಿದ್ರೆಯನ್ನೇ ಮಾಡುವುದಿಲ್ಲ.
ಭೇರೀಮೃದಂಗಪಣವೈಃ ಶಂಖವೈಣವನಿಸ್ವನೈಃ |
ಸ್ತ್ರೀಣಾಂ ಗೀತಿನಿನಾದೈಶ್ಚ ಮಧುರೈರ್ಮಧುಸೂದನ ॥17॥
ವಂದಿಮಾಗಧಸೂತೈಶ್ಚ ಸ್ತುವದ್ಭಿರ್ಬೋಧಿತಾಃ ಕಥಮ್ |
ಮಹಾವನೇಷ್ವಬೋಧ್ಯಂತ ಶ್ವಾಪದಾನಾಂ ರುತೈಸ್ತು ತೇ ॥18॥
ಎಲೈ ಮಧುಸೂದನನೇ, ಭೇರೀ-ಪಣವ-ಮೃದಂಗಶಬ್ದಗಳಿಂದಲೂ, ಶಂಖವೇಣುಶಬ್ದಗಳಿಂದಲೂ, ಸ್ತ್ರೀಯರ ಮಧುರವಾದ ಗಾನಶಬ್ದಗಳಿಂದಲೂ, ವಂದಿಮಾಗಧಸೂತರ ಸ್ತೋತ್ರಗಳಿಂದಲೂ ಎಚ್ಚರಗೊಳ್ಳುತ್ತಿದ್ದ ಅವರು ಕಾಡಿನಲ್ಲಿ ಕ್ರೂರಪ್ರಾಣಿಗಳ ಗರ್ಜನೆಗಳಿಂದ ಹೇಗೆ ಎಚ್ಚರಗೊಂಡರು?
ಹ್ರೀಮಾನ್ ಸತ್ಯಧೃತಿರ್ದಾಂತೋ ಭೂತಾನಾಮನುಕಂಪಿತಾ |
ಕಾಮದ್ವೇಷೌ ವಶೇ ಕೃತ್ವಾ ಸತಾಂ ವರ್ತ್ಮಾನುವರ್ತತೇ ॥19॥
ದಾಕ್ಷಿಣ್ಯಸ್ವಭಾವದವನೂ, ಸತ್ಯವಾದ ಸ್ಥೈರ್ಯವುಳ್ಳವನೂ, ಇಂದ್ರಿಯನಿಗ್ರಹವುಳ್ಳವನೂ, ಸರ್ವಪ್ರಾಣಿಗಳಲ್ಲಿ ದಯೆಯುಳ್ಳವನೂ ಆದ ಯುಧಿಷ್ಠಿರನು ಕಾಮಕ್ರೋಧವನ್ನು ತನ್ನ ವಶದಲ್ಲಿಟ್ಟುಕೊಂಡು ಸಜ್ಜನರ ಮಾರ್ಗವನ್ನು ಅನುಸರಿಸುತ್ತಾನೆ.
ಅಂಬರೀಷಶ್ಚ ಮಾಂಧಾತುಃ ಯಯಾತೇರ್ನಹುಷಸ್ಯ ಚ |
ಭರತಸ್ಯ ದಿಲೀಪಸ್ಯ ಶಿಬೇರೌಶೀನರಸ್ಯ ಚ ॥20॥
ರಾಜರ್ಷೀಣಾಂ ಪುರಾಣಾನಾಂ ಧುರಂ ಧುರ್ಯ ಇವೋದ್ವಹನ್ |
ಶೀಲವೃತ್ತೋಪಸಂಪನ್ನೋ ಧರ್ಮಜ್ಞಃ ಸತ್ಯಸಂಗರಃ ॥21॥
ಪ್ರಾಚೀನರಾಜರ್ಷಿಗಳಾದ ಅಂಬರೀಷ, ಮಾಂಧಾತಾ, ಯಯಾತಿ, ನಹುಷ, ಭರತ, ದಿಲೀಪ, ಔಶೀನರನಾದ ಶಿಬಿ ಮೊದಲಾದವರ ರಾಜ್ಯಭಾರದ ಕ್ರಮದ ಭಾರವನ್ನು ಹೊತ್ತು ಒಳ್ಳೆಯ ಶೀಲ ಮತ್ತು ನಡತೆಗಳಿಂದ ಕೂಡಿದವನಾಗಿ ಧರ್ಮಜ್ಞನೂ, ಸತ್ಯವಾದ ಯುದ್ಧವನ್ನು ಮಾಡುವವನೂ ಆಗಿದ್ದಾನೆ.
ರಾಜಾ ಸರ್ವಗುಣೋಪೇತಃ ತ್ರೈಲೋಕ್ಯಸ್ಯಾಪಿ ಯೋ ಭವೇತ್ |
ಅಜಾತಶತ್ರುರ್ಧರ್ಮಾತ್ಮಾ ಶುದ್ಧಜಾಂಬೂನದಪ್ರಭಃ ॥22॥

ಶ್ರೇಷ್ಠಃ ಕುರುಷು ಸರ್ವೇಷು ಧರ್ಮಜ್ಞಃ ಶ್ರುತವಿತ್ತಮಃ |
ಸುದರ್ಶನೋ ದೀರ್ಘಬಾಹುಃ ಕಥಂ ಕೃಷ್ಣ ಯುಧಿಷ್ಠಿರಃ ||23||
ಸರ್ವಗುಣೋಪೇತನಾದ ಅವನು ಮೂರುಲೋಕಗಳಿಗೂ ರಾಜನಾಗಲು ಅರ್ಹನಾಗಿದ್ದಾನೆ. ಅಂತಹ ಶುದ್ಧಸುವರ್ಣವರ್ಣದ, ಧರ್ಮಾತ್ಮನಾದ, ಅಜಾತಶತ್ರುವಾದ, ಎಲ್ಲ ಕುರುಗಳಲ್ಲಿಯೂ ಶ್ರೇಷ್ಠನಾದ, ಧರ್ಮಜ್ಞನಾದ, ವಿದ್ಯಾವಂತರಲ್ಲಿ ಶ್ರೇಷ್ಠನಾದ, ಒಳ್ಳೆಯ ಆಕೃತಿಯನ್ನು ಹೊಂದಿದ, ದೀರ್ಘಬಾಹುವಾದ ಯುಧಿಷ್ಠಿರನು ಎಲ್ಲೆ ಕೃಷ್ಣನೇ, ಹೇಗಿದ್ದಾನೆ?
ಯಃ ಸ ನಾಗಾಯುತಪ್ರಾಣೋ ವಾತರಂಹಾ ವೃಕೋದರಃ |
ಸಾಮರ್ಷಃ ಪಾಂಡವೋ ನಿತ್ಯಂ ಪ್ರಿಯೋ ಭ್ರಾತುಃ ಪ್ರಿಯಂಕರಃ ||24||
ಹತ್ತುಸಹಸ್ರ ಆನೆಗಳ ಬಲವುಳ್ಳವನೂ, ವಾಯುವೇಗವುಳ್ಳವನೂ, ಕ್ರೋಧಶೀಲನೂ, ಅಣ್ಣನಿಗೆ ಪ್ರಿಯವನ್ನು ಮಾಡುವವನೂ ಮತ್ತು ಅಣ್ಣನಿಗೆ ನಿತ್ಯವೂ ಪ್ರಿಯನಾದವನೂ ಆದ ಪಾಂಡುಪುತ್ರನಾದ ಯಾವ ವೃಕೋದರನಿದ್ದಾನೆಯೋ;
ಕೀಚಕಸ್ಯ ತು ಸಜ್ಞಾತೇಃ ಯೋ ಹಂತಾ ಮಧುಸೂದನ |
ಶೂರಃ ಕ್ರೋಧವಶಾನಾಂ ಚ ಹಿಡಿಂಬಸ್ಯ ಬಕಸ್ಯ ಚ ||25||
ಎಲೈ ಮಧುಸೂದನನೇ, ಯಾವ ಶೂರನು ಬಾಂಧವಸಹಿತರಾದ ಕೀಚಕನನ್ನು ಕೊಂದನೋ, ಕ್ರೋಧವಶದೈತ್ಯರನ್ನೂ, ಹಿಡಿಂಬನನ್ನೂ ಮತ್ತು ಬಕನನ್ನೂ ಸಂಹರಿಸಿದನೋ;
ಪರಾಕ್ರಮೇ ಶಕ್ರಸಮೋ ವಾಯುವೇಗಸಮೋ ಜವೇ |
ಮಹೇಶ್ವರಸಮಃ ಕ್ರೋಧೇ ಭೀಮಃ ಪ್ರಹರತಾಂ ವರಃ ||26||
ಕ್ರೋಧಂ ಬಲಮಮರ್ಷಂ ಚ ಯೋ ನಿಧಾಯ ಪರಂತಪಃ |
ಜಿತಾತ್ಮಾ ಪಾಂಡವೋಽಮರ್ಷೀ ಭ್ರಾತುಸ್ತಿಷ್ಠತಿ ಶಾಸನೇ ||27||
ಪರಾಕ್ರಮದಲ್ಲಿ ಇಂದ್ರನಿಗೆ ಸಮನಾದ, ವೇಗದಲ್ಲಿ ವಾಯುವೇಗಕ್ಕೆ ಸಮನಾದ, ಕ್ರೋಧದಲ್ಲಿ ರುದ್ರನಿಗೆ ಸಮನಾದ, ಯುದ್ಧಮಾಡುವುದರಲ್ಲಿ ಶ್ರೇಷ್ಠನಾದ ಪರಂತಪನಾದ ಅಂತಹ ಭೀಮಸೇನನು ತನ್ನ ಕ್ರೋಧವನ್ನೂ, ಬಲವನ್ನೂ, ರೋಷವನ್ನೂ ಒಂದುಕಡೆ ಇಟ್ಟು, ಜಿತಮನಸ್ಕನಾಗಿ ಅಣ್ಣನ ಶಾಸನದಲ್ಲಿ ನಿಷ್ಠನಾಗಿದ್ದಾನೆ.
ತೇಜೋರಾಶಿಂ ಮಹಾತ್ಮಾನಂ ಬಲೌಘಮಮಿತೌಜಸಮ್ |
ಭೀಮಂ ಪ್ರದರ್ಶನೇನಾಪಿ ಭೀಮಸೇನಂ ಜನಾರ್ದನ ||28||
ತಂ ಮಮಾಚಕ್ಷ್ವ ವಾರ್ಷ್ಣೇಯ ಕಥಮದ್ಯ ವೃಕೋದರಃ |
ಆಸ್ತೇ ಪರಿಘಬಾಹುಃ ಸ ಮಧ್ಯಮಃ ಪಾಂಡವೋಽಚ್ಯುತ ||29||
ಎಲೈ ಜನಾರ್ದನನೇ, ತೇಜೋರಾಶಿಯೂ, ಮಹಾತ್ಮನೂ, ಬಲರಾಶಿಯೂ, ಅಮಿತಪರಾಕ್ರಮಿಯೂ, ದರ್ಶನಮಾತ್ರದಿಂದಲೂ ಭಯಂಕರನೂ, ಒನಕೆಯಂತಹ ಬಾಹುವುಳ್ಳವನೂ ಆದ, ಪಾಂಡುಪುತ್ರರಲ್ಲಿ ಮಧ್ಯನಾದ ವೃಕೋದರನು, ಎಲೈ ಅಚ್ಯುತನೇ, ವಾರ್ಷ್ಣೇಯನೇ, ಈ ದಿನ ಹೇಗಿದ್ದಾನೆ?
ಅರ್ಜುನೇನಾರ್ಜುನೋ ಯೋಽಸೌ ಕೃಷ್ಣ ಬಾಹುಸಹಸ್ರಿಣಾ |
ದ್ವಿಬಾಹುಃ ಸ್ಪರ್ಧತೇ ನಿತ್ಯಮತೀತೇನಾಪಿ ಕೇಶವ ||30||
ಎಲೈ ಕೇಶವನೇ, ಕೃಷ್ಣನೇ, ಯಾವ ಎರಡು ಬಾಹುಗಳುಳ್ಳ ಅರ್ಜುನನು, ಸಹಸ್ರಬಾಹುಗಳನ್ನು ಹೊಂದಿದ್ದ ಹಿಂದಿನ ಕಾಲದಲ್ಲಿದ್ದ ಕಾರ್ತವೀರ್ಯಾರ್ಜುನನ ಜೊತೆಯಲ್ಲಿ ಸ್ಪರ್ಧಿಸುತ್ತಾನೆಯೋ;
ಕ್ಷಿಪತ್ಯೇಕೇನ ವೇಗೇನ ಪಂಚಬಾಣಶತಾನಿ ಯಃ |
ಇಷ್ವಸ್ತ್ರೇ ಸದೃಶೋ ರಾಜ್ಞಃ ಕಾರ್ತವೀರ್ಯಸ್ಯ ಪಾಂಡವಃ ||31||
ತೇಜಸಾಽಽದಿತ್ಯಸದೃಶೋ ಮಹರ್ಷಿಪ್ರತಿಮೋ ದಮೇ |
ಕ್ಷಮಯಾ ಪೃಥಿವೀತುಲ್ಯೋ ಮಹೇಂದ್ರಸಮವಿಕ್ರಮಃ ||32||
ಯಾವನು ಒಂದೇ ವೇಗದಿಂದ ಐದುನೂರುಬಾಣಗಳನ್ನು ಪ್ರಯೋಗಿಸುತ್ತಾನೆಯೋ, ಧನುರ್ವಿದ್ಯೆಯಲ್ಲಿಯೂ ಮತ್ತು ಅಸ್ತ್ರವಿದ್ಯೆಯಲ್ಲಿಯೂ ಕಾರ್ತವೀರ್ಯಾರ್ಜುನನಿಗೆ ಸಮನಾಗಿದ್ದಾನೆಯೋ, ತೇಜಸ್ಸಿನಲ್ಲಿ ಸೂರ್ಯನಿಗೆ ಸದೃಶನಾಗಿದ್ದಾನೆಯೋ, ಇಂದ್ರಿಯನಿಗ್ರಹದಲ್ಲಿ ಮಹರ್ಷಿಗಳಿಗೆ ಸದೃಶನಾಗಿದ್ದಾನೆಯೋ, ಕ್ಷಮೆಯಲ್ಲಿ ಭೂಮಿಗೆ ಸದೃಶನಾಗಿದ್ದಾನೆಯೋ, ವಿಕ್ರಮದಲ್ಲಿ ದೇವೇಂದ್ರನಿಗೆ ಸದೃಶನಾಗಿದ್ದಾನೆಯೋ;
ಆಧಿರಾಜ್ಯಂ ಮಹದ್ ದೀಪ್ತಂ ಪಾರ್ಥಿವಂ ಮಧುಸೂದನ |
ಆಹೃತಂ ಯೇನ ವಿಕ್ರಮ್ಯ ಕುರೂಣಾಂ ಸರ್ವರಾಜಸು ||33||
ಯಸ್ಯ ಬಾಹುಬಲಂ ಘೋರಂ ಕೌರವಾಃ ಪರ್ಯುಪಾಸತೇ |
ಸ ಸರ್ವರಥಿನಾಂ ಶ್ರೇಷ್ಠಃ ಪಾಂಡವಃ ಸತ್ಯವಿಕ್ರಮಃ ||34||
ಎಲೈ ಮಧುಸೂದನನೇ, ಯಾವನು ಬೇರೆ ರಾಜರ ದೀಪ್ತವಾದ ಸಾಮ್ರಾಜ್ಯವನ್ನು ಎಲ್ಲ ರಾಜರಲ್ಲಿಯೂ ತನ್ನ ಪರಾಕ್ರಮವನ್ನು ತೋರಿಸಿ ಕುರುಗಳಿಗೆ ತಂದು ಒಪ್ಪಿಸಿದನೋ, ಯಾವನ ಘೋರವಾದ ಬಾಹುಬಲವನ್ನು ಕೌರವರೆಲ್ಲರೂ ಆಶ್ರಯಿಸಿದ್ದಾರೆಯೋ, ಯಾವ ಪಾಂಡುಪುತ್ರನು ಎಲ್ಲ ರಥಿಗಳಲ್ಲಿ ಶ್ರೇಷ್ಠನೋ ಮತ್ತು ಸತ್ಯವಿಕ್ರಮನೋ;
ಯಂ ಗತ್ವಾಽಭಿಮುಖಃ ಸಂಖ್ಯೇ ನ ಜೀವನ್ ಕಶ್ಚಿದಾವ್ರಜೇತ್ |
ಯೋ ಜೇತಾ ಸರ್ವಭೂತಾನಾಮಜೇಯೋ ಜಿಷ್ಣುರಚ್ಯುತ ||35||
ಯೋಽಪಾಶ್ರಯಃ ಪಾಂಡವಾನಾಂ ದೇವಾನಾಮಿವ ವಾಸವಃ |
ಸ ತೇ ಭ್ರಾತಾ ಸಖಾ ಚೈವ ಕಥಮದ್ಯ ಧನಂಜಯಃ ||36||

ಯುದ್ಧದಲ್ಲಿ ಯಾವನಿಗೆ ಎದುರಾಗಿ ಹೋಗಿ ಯಾವನೂ ಜೀವಸಹಿತನಾಗಿ ಹಿಂದಿರುಗುವುದಿಲ್ಲವೋ, ಯಾವ ಅರ್ಜುನನು ಇನ್ನೊಬ್ಬರಿಂದ ಅಜೇಯನಾಗಿ ಎಲ್ಲರನ್ನೂ ಜಯಿಸುವವನೋ, ಯಾವ ಅವನು ದೇವತೆಗಳಿಗೆ ಇಂದ್ರನು ಆಶ್ರಯನಾದಂತೆ ಪಾಂಡವರಿಗೆ ಆಶ್ರಯನಾಗಿದ್ದಾನೆಯೋ, ಅಂತಹ ನಿನ್ನ ತಮ್ಮನೂ ಸ್ನೇಹಿತನೂ ಆದ ಧನಂಜಯನು ಹೇಗಿದ್ದಾನೆ?
ದಯಾವಾನ್ ಸರ್ವಭೂತೇಷು ಹ್ರೀನಿಷೇವೋ ಮಹಾಸ್ತ್ರವಿತ್ |
ಮೃದುಶ್ಚ ಸುಕುಮಾರಶ್ಚ ಧಾರ್ಮಿಕಶ್ಚ ಪ್ರಿಯಶ್ಚ ಮೇ ॥37॥
ಸಹದೇವೋ ಮಹೇಶ್ವಾಸಃ ಶೂರಃ ಸಮಿತಿಶೋಭನಃ |
ಭ್ರಾತೄಣಾಂ ಕೃಷ್ಣ ಶುಶ್ರೂಷುಃ ಧರ್ಮಾರ್ಥಕುಶಲೋ ಯುವಾ ॥38॥
ಸರ್ವಭೂತಗಳಲ್ಲಿ ದಯೆಯುಳ್ಳವನೂ, ದಾಕ್ಷಿಣ್ಯಸ್ವಭಾವದವನೂ, ಮಹಾಸ್ತ್ರವಿದ್ಯೆಗಳನ್ನು ಬಲ್ಲವನೂ, ಮೃದುವೂ, ಸುಕುಮಾರನೂ, ಧಾರ್ಮಿಕನೂ, ನನಗೆ ಪ್ರಿಯನಾದವನೂ, ದೊಡ್ಡಧನುರ್ಧಾರಿಯೂ, ಶೂರನೂ, ಎಲ್ಲ ಸಭೆಗಳಲ್ಲಿಯೂ ಶೋಭಿಸುವವನೂ, ಅಣ್ಣಂದಿರ ಮಾತುಗಳನ್ನು ಕೇಳುವವನೂ, ಧರ್ಮಾರ್ಥ ಕುಶಲನೂ, ಯುವಕನೂ ಆದ ಸಹದೇವನು;
ಸದೈವ ಸಹದೇವಸ್ಯ ಭ್ರಾತರೋ ಮಧುಸೂದನ |
ವೃತ್ತಂ ಕಲ್ಯಾಣವೃತ್ತಸ್ಯ ಪೂಜಯಂತಿ ಮಹಾತ್ಮನಃ ॥39॥
ಜ್ಯೇಷ್ಠೋಪಚಾಯಿನಂ ವೀರಂ ಸಹದೇವಂ ಯುಧಾಂಪತಿಮ್ |
ಶುಶ್ರೂಷುಂ ಮಮ ವಾರ್ಷ್ಣೇಯ ಮಾದ್ರೀಪುತ್ರಂ ಪ್ರಚಕ್ಷ್ವ ಮೇ ॥40॥
ಎಲೈ ಮಧುಸೂದನನೇ, ಮಹಾತ್ಮನೂ, ಕಲ್ಯಾಣನಡತೆಯುಳ್ಳವನೂ ಆದ ಸಹದೇವನನ್ನು ಅವನ ಅಣ್ಣಂದಿರು ಯಾವಾಗಲೂ ಪೂಜಿಸುತ್ತಾರೆ. ಅಂತಹ ಹಿರಿಯರನ್ನು ಸತ್ಕರಿಸುವ, ಯುದ್ಧಪತಿಯಾದ, ವೀರನಾದ, ನನ್ನ ಸೇವೆಯನ್ನು ಮಾಡುವ ಮಾದ್ರೀಪುತ್ರನಾದ ಸಹದೇವನ ಕ್ಷೇಮವನ್ನು ನನಗೆ ಹೇಳುವವನಾಗು.
ಸುಕುಮಾರೋ ಯುವಾ ಶೂರೋ ದರ್ಶನೀಯಶ್ಚ ಪಾಂಡವಃ |
ಭ್ರಾತೄಣಾಂ ಕೃಷ್ಣ ಸರ್ವೇಷಾಂ ಪ್ರಿಯಃ ಪ್ರಾಣೋ ಬಹಿಶ್ಚರಃ ॥41॥
ಚಿತ್ರಯೋಧೀ ಚ ನಕುಲೋ ಮಹೇಷ್ವಾಸೋ ಮಹಾಬಲಃ |
ಕಚ್ಚಿತ್ ಸ ಕುಶಲೀ ಕೃಷ್ಣ ವತ್ಸೋ ಮಮ ಸುಖೈಧಿತಃ ॥42॥
ಸುಕುಮಾರನೂ, ಯುವಕನೂ, ಶೂರನೂ, ಸುಂದರನೂ, ಎಲ್ಲಾ ಸಹೋದರರಿಗೂ ಪ್ರಿಯನಾದವನೂ, ಹೊರಗೆ ಚಲಿಸುವ ನನ್ನ ಪ್ರಾಣದಂತೆ ಪ್ರಿಯನಾದವನೂ, ಚಿತ್ರಯೋಧಿಯೂ, ದೊಡ್ಡಧನುರ್ಧಾರಿಯೂ, ಮಹಾಬಲನೂ, ಪಾಂಡುಪುತ್ರನೂ ಆದ ನಕುಲನು ಕ್ಷೇಮದಿಂದಿದ್ದಾನೆಯೇ? ಕೃಷ್ಣನೇ, ಸುಖದಿಂದ ಬೆಳೆದ ನನ್ನ ಮಗುವಾದ ನಕುಲನು ಕ್ಷೇಮದಿಂದಿದ್ದಾನೆಯೇ?
ಸುಖೋಚಿತಮದುಃಖಾರ್ಹಂ ಸುಕುಮಾರಂ ಮಹಾರಥಮ್ |
ಅಪಿ ಜಾತು ಮಹಾಬಾಹೋ ಪಶ್ಯೇಯಂ ನಕುಲಂ ಪುನಃ ॥43॥
ದುಃಖಕ್ಕೆ ಅರ್ಹನಲ್ಲದ, ಸುಖಕ್ಕೆ ಯೋಗ್ಯನಾದ ಸುಕುಮಾರನೂ, ಮಹಾರಥನೂ ಆದ ನಕುಲನನ್ನು ಎಲೈ ಮಹಾಬಾಹುವೇ, ನಾನು ಇಂದಾದರೂ ನೋಡುವೆನೆ?
ಪಕ್ಷ್ಮಸಂಪಾತಜೇ ಕಾಲೇ ನಕುಲೇನ ವಿನಾಕೃತಾ |
ನ ಲಭಾಮಿ ಸುಖಂ ವೀರ ಸಾಽದ್ಯ ಜೀವಾಮಿ ಪಶ್ಯ ಮಾಮ್ ॥44॥
ಒಂದು ರೆಪ್ಪೆಯನ್ನು ಮುಚ್ಚುವ ಕಾಲದಷ್ಟು ಸಮಯದಲ್ಲಿ ನಕುಲನನ್ನು ನೋಡದಿದ್ದರೆ ನನ್ನ ಮನಸ್ಸಿಗೆ ಸುಖವಾಗುವುದಿಲ್ಲ. ಎಲೈ ವೀರನಾದ ಕೃಷ್ಣನೇ, ಅಂತಹ ನಾನು ಈ ದಿನ ಬದುಕಿದ್ದೇನೆ, ನನ್ನನ್ನು ನೋಡು.
ಸರ್ವೈಃ ಪುತ್ರೈಃ ಪ್ರಿಯತರಾ ದ್ರೌಪದೀ ಮೇ ಜನಾರ್ದನ |
ಕುಲೀನಾ ಶೀಲಸಂಪನ್ನಾ ಸರ್ವೈಃ ಸಮುದಿತಾ ಗುಣೈಃ ॥45॥
ಎಲೈ ಜನಾರ್ದನನೇ, ನನ್ನ ಎಲ್ಲ ಪುತ್ರರಿಗಿಂತಲೂ ನನಗೆ ಅತ್ಯಂತ ಪ್ರಿಯಳಾದವಳು ದ್ರೌಪದಿ. ಒಳ್ಳೆಯ ಕುಲದಿಂದ ಬಂದವಳೂ, ಶೀಲಸಂಪನ್ನಳೂ ಮತ್ತು ಸಾಧ್ವಿಗೆ ಇರಬೇಕಾದ ಎಲ್ಲ ಗುಣಗಳಿಂದಲೂ ಕೂಡಿದವಳು.
ಪುತ್ರೀ ದ್ರುಪದರಾಜಸ್ಯ ವಿಖ್ಯಾತಾ ಸತ್ಯವಾದಿನೀ |
ಪತಿಲೋಕಾನ್ ಪುತ್ರಲೋಕಾನ್ ವೃಣ್ವಾನಾ ಸತ್ಯವಾದಿನೀ ॥46॥
ಪ್ರಿಯಾನ್ ಪುತ್ರಾನ್ ಪರಿತ್ಯಜ್ಯ ಪಾಂಡವಾನನ್ವವರ್ತತ ॥47॥
ದ್ರುಪದರಾಜನ ಪ್ರಖ್ಯಾತಳಾದ ಪುತ್ರಿ, ಸತ್ಯವನ್ನು ನುಡಿಯುವವಳು, ಸತ್ಯವನ್ನು ನುಡಿದು ಪತಿಲೋಕವನ್ನೂ ಮತ್ತು ಪುತ್ರಲೋಕವನ್ನೂ ಬಯಸುವವಳು. ತನಗೆ ಪ್ರಿಯರಾದ ಮಕ್ಕಳನ್ನು ಬಿಟ್ಟು ಅವಳು ಪಾಂಡವರನ್ನು ಹಿಂಬಾಲಿಸಿದಳು.
ಮಹಾಭಿಜನಸಂಪನ್ನಾ ಸರ್ವಕಾಮೈಃ ಸುಖೈಧಿತಾ |
ಈಶ್ವರೀ ಸರ್ವಕಲ್ಯಾಣೀ ದ್ರೌಪದೀ ಕಥಮಚ್ಯುತ ॥48॥
ಎಲೈ ಅಚ್ಯುತನೇ, ಮಹಾಕುಲದಲ್ಲಿ ಜನಿಸಿದ, ಎಲ್ಲ ಭೋಗಗಳಿಂದಲೂ ಸಮೃದ್ಧವಾಗಿ ಬೆಳೆದ, ಎಲ್ಲ ಮಂಗಳಗಳಿಗೆ ಒಡೆಯಳಾದ ದ್ರೌಪದಿಯು ಹೇಗಿದ್ದಾಳೆ?
ಪತಿಭಿಃ ಪಂಚಭಿಃ ಶೂರೈರಗ್ನಿಕಲ್ಪೈಃ ಪ್ರಹಾರಿಭಿಃ |
ಉಪಪನ್ನಾ ಮಹೇಷ್ವಾಸೈಃ ದ್ರೌಪದೀ ದುಃಖಭಾಗಿನೀ ॥49॥
ಅಗ್ನಿಗೆ ಸಮಾನರಾದ, ಯುದ್ಧದಲ್ಲಿ ಎಲ್ಲರನ್ನೂ ಸದೆಬಡಿಯುವ ಮಹಾಧನುರ್ಧಾರಿಗಳಾದ ಐವರು ಪತಿಗಳನ್ನು ಹೊಂದಿದ ದ್ರೌಪದಿಯು ದುಃಖವನ್ನು ಅನುಭವಿಸುತ್ತಿದ್ದಾಳೆ.
ಚತುರ್ದಶಮಿಮಂ ವರ್ಷಂ ಯಾಂ ನ ಪಶ್ಯಾಮ್ಯರಿಂದಮ |

ಪುತ್ರಾದಿಭಿಃ ಪರಿದ್ಯೂನಾಂ ದ್ರೌಪದೀಂ ಸತ್ಯವಾದಿನೀಮ್ ॥50॥
ಎಲೈ ಅರಿಂದಮನೇ, ಪುತ್ರಾದಿಗಳಿಂದ ದೂರಳಾಗಿ ಸತ್ಯವಾದಿನಿಯಾದ ದ್ರೌಪದಿಯನ್ನು ನೋಡದೆ ನಾನು ಈ ಹದಿನಾಲ್ಕನೆಯ ವರ್ಷವನ್ನು ಕಳೆಯುತ್ತಿದ್ದೇನೆ.
ನ ನೂನಂ ಕರ್ಮಭಿಃ ಶುಕ್ಲೈರಶ್ನುವಂತಿ ಸ್ತ್ರಿಯಃ ಸುಖಮ್ |
ದ್ರೌಪದೀ ಚೇತ್ ತಥಾವೃತ್ತಾ ನಾಶ್ನುತೇ ಸುಖಮವ್ಯಯಮ್ ॥51॥
ಅಂತಹ ನಡತೆಯುಳ್ಳ ದ್ರೌಪದಿಯು ನಿತ್ಯವಾದ ಸುಖವನ್ನು ಪಡೆಯದಿದ್ದರೆ ಶುಭವಾದ ಕರ್ಮಗಳಿಂದ ಸ್ತ್ರೀಯರು ಸುಖವನ್ನು ಪಡೆಯುತ್ತಾರೆ ಎಂದು ನಾನು ಭಾವಿಸುವುದಿಲ್ಲ.
ನ ಮೇ ಪ್ರಿಯಾ ದ್ರೌಪದೇಯಾ ನ ಬೀಭತ್ಸುರ್ಯುಧಿಷ್ಠಿರೌ |
ನ ಭೀಮಸೇನೋ ನ ಯಮೌ ಯದಪಶ್ಯಂ ಸಭಾಗತಾಮ್ ॥52॥
ನ ಮೇ ದುಃಖತರಂ ಕಿಂಚಿದ್ ಭೂತಪೂರ್ವಂ ತತೋಽಧಿಕಮ್ ॥53॥
ನಾನು ಸಭೆಯಲ್ಲಿ ಎಳೆದು ತಂದ ಅವಳನ್ನು ನೋಡಿದುದರಿಂದ ನನಗೆ ದ್ರೌಪದಿಯ ಮಕ್ಕಳೂ ಪ್ರಿಯರಲ್ಲ, ಅರ್ಜುನ-ಯುಧಿಷ್ಠಿರರೂ ಪ್ರಿಯರಲ್ಲ, ಭೀಮಸೇನ-ನಕುಲ ಸಹದೇವರೂ ಪ್ರಿಯರಲ್ಲ. ನನಗೆ ಅಲ್ಲಿಯವರೆಗೆ ಹಿಂದೆ ಎಂದೂ ಅದಕ್ಕಿಂತ ದೊಡ್ಡ ದುಃಖವು ಆಗಿರಲಿಲ್ಲ.
ಸ್ತ್ರೀಧರ್ಮಿಣೀಂ ದ್ರೌಪದೀಂ ಚೇತ್ ಶ್ವಶುರಾಣಾಂ ಸಮೀಪಗಾಮ್ |
ಆನಾಯಿತಾಮನಾರ್ಯೇಣ ಕ್ರೋಧಲೋಭಾನುವರ್ತಿನಾ ॥54॥
ಸರ್ವೇ ಪ್ರೈಕ್ಷಂತ ಕುರವ ಏಕವಸತ್ರಂ ಸಭಾಗತಾಮ್ ॥55॥
ರಜಸ್ವಲೆಯಾದ ದ್ರೌಪದಿಯನ್ನು ಅತ್ತೆ-ಮಾವಂದಿರ ಎದುರಿನಲ್ಲಿ, ಕ್ರೋಧ ಲೋಭಗಳಿಗೆ ವಶನಾದ, ಅನಾರ್ಯನಾದ ದುಶ್ಶಾಸನನು ಎಳೆದು ತರುತ್ತಿರಲು, ಏಕವಸ್ತ್ರವನ್ನು ಧರಿಸಿ ಸಭೆಯ ಮಧ್ಯದಲ್ಲಿದ್ದ ಅವಳನ್ನು ಎಲ್ಲ ಕೌರವರೂ ನೋಡಿದರು.
ತತ್ರೈವ ಧೃತರಾಷ್ಟ್ರಸ್ಯ ಮಹಾರಾಜಶ್ಚ ಬಾಹ್ಲಿಕಃ |
ಕೃಪಶ್ಚ ಸೋಮದತ್ತಶ್ಚ ನಿರ್ವಿಣ್ಣಾಃ ಕುರವಸ್ತಥಾ ॥56॥
ಅಲ್ಲಿಯೇ ಧೃತರಾಷ್ಟ್ರನೂ, ಬಾಹ್ಲೀಕ ಮಹಾರಾಜನೂ, ಕೃಪರೂ ಮತ್ತು ಸೋಮದತ್ತನೂ ಇದ್ದರು. ಕುರುಗಳೆಲ್ಲರೂ ಆಗ ವಿಷಾದಗೊಂಡರು.
ತಸ್ಯಾಂ ಸಂಸದಿ ಸರ್ವೇಷಾಂ ಕ್ಷತ್ತಾರಂ ಪೂಜಯಾಮ್ಯಹಮ್ |
ವೃತ್ತೇನ ಹಿ ಭವತ್ಯಾರ್ಯೋ ನ ಧನೇನ ನ ವಿದ್ಯಯಾ ॥57॥
ಆ ಸಭೆಯಲ್ಲಿ ಇದ್ದ ಎಲ್ಲರಿಗಿಂತಲೂ ನಾನು ವಿದುರನನ್ನು ಗೌರವಿಸುತ್ತೇನೆ. ಮನುಷ್ಯನು ತನ್ನ ನಡತೆಯಿಂದ ದೊಡ್ಡವನಾಗುತ್ತಾನೆ. ಧನದಿಂದಲಾಗಲೀ, ವಿದ್ಯೆಯಿಂದಾಗಲೀ ಅಲ್ಲ.
ತಸ್ಯ ಕೃಷ್ಣ ಮಹಾಬುದ್ಧೇಃ ಗಂಭೀರಸ್ಯ ಮಹಾತ್ಮನಃ |
ಕ್ಷತ್ತುಃ ಶೀಲಮಲಂಕಾರೋ ಲೋಕಾನ್ ವಿಷ್ಟಭ್ಯ ತಿಷ್ಠತಿ ॥58॥
ಎಲೈ ಕೃಷ್ಣನೇ, ಮಹಾಬುದ್ಧಿಯುಳ್ಳ, ಗಂಭೀರನೂ ಮತ್ತು ಮಹಾತ್ಮನೂ ಆದ ಆ ವಿದುರನ ಅಲಂಕಾರರೂಪವಾದ ನಡತೆಯು ಲೋಕಗಳನ್ನು ಮೆಟ್ಟಿ ನಿಲ್ಲುತ್ತದೆ.
ವೈಶಂಪಾಯನಃ
ಸಾ ಶೋಕಾರ್ತಾ ಚ ಹೃಷ್ಟಾ ಚ ದೃಷ್ಟ್ವಾ ಗೋವಿಂದಮಾಗತಮ್ |
ನಾನಾವಿಧಾನಿ ದುಃಖಾನಿ ಸರ್ವಾಣ್ಯೇವಾನ್ವಕೀರ್ತಯತ್ ॥59॥
ವೈಶಂಪಾಯನ ಅವಳು ಗೋವಿಂದನು ಬಂದಿರುವುದನ್ನು ನೋಡಿ ಹರ್ಷವನ್ನೂ ಮತ್ತು ದುಃಖವನ್ನೂ ಹೊಂದಿದವಳಾಗಿ ತಾನು ಅನುಭವಿಸಿದ ನಾನಾ ದುಃಖಗಳನ್ನು ಆಡಿದಳು.
ಪೂರ್ವೈರಾಚರಿತಂ ಯತ್ತತ್ ಕುರಾಜಾಭಿರರಿಂದಮ |
ಅಕ್ಷದ್ಯೂತಂ ಮೃಗವಧಃ ಕಚ್ಚಿದೇಷಾಂ ಸುಖಾವಹಮ್ ॥60॥
ಎಲೈ ಅರಿಂದಮನೇ, ಪೂರ್ವದಲ್ಲಿ ದುಷ್ಟರಾಜರು ಆಚರಿಸಿದಂತಹ ಅಕ್ಷದ್ಯೂತ, ಬೇಟೆ ಮೊದಲಾದವುಗಳು ಅವರಿಗೆ ಏನಾದರೂ ಸುಖವನ್ನು ಕೊಟ್ಟಿತೆ?
ತನ್ಮಾಂ ದಹತಿ ಯಾ ಕೃಷ್ಣಾ ಸಭಾಯಾಂ ಕುರುಸನ್ನಿಧೌ |
ಧಾರ್ತರಾಷ್ಟ್ರೈಃ ಪರಿಕ್ಲಿಷ್ಟಾ ಯಥಾ ನಕುಲಜಾ ತಥಾ ॥61॥
ದ್ರೌಪದಿಯು ಸಭೆಯ ಮಧ್ಯದಲ್ಲಿ, ಕುರುಗಳ ಸನ್ನಿಧಿಯಲ್ಲಿ, ಕುಲೀನಳಲ್ಲದವಳಂತೆ ದುರ್ಯೋಧನಾದಿಗಳಿಂದ ಅನುಭವಿಸಿದ ಕ್ಲೇಶವು ನನ್ನನ್ನು ಸುಡುತ್ತದೆ.
ನಿರ್ವಾಸನಂ ಚ ನಗರಾತ್ ಪ್ರವ್ರಜ್ಯಾ ಚ ಪರಂತಪ |
ನಾನಾವಿಧಾನಾಂ ದುಃಖಾನಾಮಾವಾಸೋಽಸ್ಮಿ ಜನಾರ್ದನ ॥62॥
ಎಲೈ ಪರಂತಪನೇ, ಜನಾರ್ದನನೇ, ಮಕ್ಕಳ ನಗರದಿಂದ ಹೊರಗೆ ವಾಸದಿಂದ ಮತ್ತು ಅವರ ಕಾಡಿನ ವಾಸದಿಂದ ಏನು ನಾನಾವಿಧ ದುಃಖಗಳಾಗಿವೆಯೋ ಎಲ್ಲದಕ್ಕೂ ನಾನು ಆಶ್ರಯಳಾಗಿದ್ದೇನೆ.
ಅಜ್ಞಾತಚರ್ಯಾ ಬಾಲಾನಾಮವರೋಧಶ್ಚ ಮಾಧವ |
ನ ಮೇ ಕ್ಲೇಶತಮಂ ತತ್ ಸ್ಯಾತ್ ಪುತ್ರೈಃ ಸಹ ಪರಂತಪ ॥63॥
ಎಲೈ ಮಾಧವನೇ, ನಾನು ಜೊತೆಯಲ್ಲಿದ್ದಿದ್ದರೆ ಮಕ್ಕಳ ಜೊತೆ ಅಜ್ಞಾತವಾಸವಾಗಲೀ ಅಥವಾ ವನವಾಸವಾಗಲೀ ಅಷ್ಟು ಕ್ಲೇಶ

ಕೊಡುತ್ತಿರಲಿಲ್ಲ.
ದುರ್ಯೋಧನೇನ ನಿಕೃತಾ ವರ್ಷಮದ್ಯ ಚತುರ್ದಶಮ್ |
ದುಃಖಾದಪಿ ಸುದುಃಖಂ ಸ್ಯಾದ್ ಯದಿ ಪುಣ್ಯಫಲಕ್ಷಯಃ ॥64॥
ದುರ್ಯೋಧನನಿಂದ ಮೋಸಕ್ಕೆ ಒಳಗಾಗಿ ಇಂದಿಗೆ ಹದಿನಾಲ್ಕು ವರ್ಷವಾದವು. ನಮ್ಮ ಪುಣ್ಯಫಲವೆಲ್ಲವೂ ನಾಶವನ್ನು ಹೊಂದಿದ್ದರೆ ಅದು ದುಃಖಕ್ಕಿಂತಲೂ ಹೆಚ್ಚು ದುಃಖಕರವಾದುದು.
ನ ಮೇ ವಿಶೇಷೋ ಜಾತ್ವಾಸೀದ್ ಧಾರ್ತರಾಷ್ಟ್ರೇಷು ಪಾಂಡವೈಃ ॥65॥
ತೇನ ಸತ್ಯೇನ ಕೃಷ್ಣ ತ್ವಾಂ ಹತಾಮಿತ್ರಂ ಶ್ರಿಯಾ ವೃತಮ್ |
ಅಸ್ಮಾದ್ ವಿಮುಕ್ತಂ ಸಂಗ್ರಾಮಾತ್ ಪಶ್ಯೇಯಂ ಪಾಂಡವೈಃ ಸಹ ॥66॥
ನನಗೆ ದುರ್ಯೋಧನಾದಿಗಳಿಗೂ ಮತ್ತು ಪಾಂಡವರಿಗೂ ಯಾವ ವ್ಯತ್ಯಾಸವೂ ಎಂದೂ ಇರಲಿಲ್ಲ. ಎಲೈ ಕೃಷ್ಣನೇ, ಆ ಸತ್ಯದಿಂದ ಈ ಕಷ್ಟದಿಂದ ಪಾರಾಗಿ, ಯುದ್ಧದಿಂದ ಪಾರಾಗಿ, ಶತ್ರುಗಳನ್ನು ಸಂಹರಿಸಿ, ಐಶ್ವರ್ಯಯುಕ್ತವಾದ ಪಾಂಡವರನ್ನು ಪುನಃ ನೋಡಿಯೇನು!
ನೈವಂ ಶಕ್ಯಾಃ ಪರಾಜೇತುಂ ಸತ್ವಂ ತೇಷಾಂ ತಥಾವಿಧಮ್ ॥67॥
ಅವರನ್ನು ಯಾರೂ ಸೋಲಿಸಲು ಸಾಧ್ಯವಿಲ್ಲ. ಅವರ ಬಲವು ಅಂತಹ ರೀತಿಯಾದುದು.
ಪಿತರಂ ತ್ವೇವ ಗರ್ಹಾಮಿ ನಾತ್ಮಾನಂ ನ ಸುಯೋಧನಮ್ |
ಯೇನಾಹಂ ಕುಂತಿಭೋಜಾಯ ಧನಂ ಧೂರ್ತೈರಿವಾರ್ಪಿತಾ ॥68॥
ನಾನು ನನ್ನ ತಂದೆಯನ್ನೇ ನಿಂದಿಸುತ್ತೇನೆ. ನನ್ನನ್ನಾಗಲೀ ಅಥವಾ ಸುಯೋಧನನನ್ನಾಗಲೀ ನಿಂದಿಸುವುದಿಲ್ಲ. ಏಕೆಂದರೆ ದುಷ್ಟರಿಗೆ ಧನವನ್ನು ಕೊಟ್ಟಂತೆ ಕುಂತಿಭೋಜನಿಗೆ ನನ್ನನ್ನು ಅರ್ಪಿಸಿದನು.
ಬಾಲಾಂ ಮಮಾರ್ಯಕಸ್ತುಷ್ಯನ್ ಕ್ರೀಡಂತೀಂ ಕಂದುಹಸ್ತಿಕಾಮ್ |
ಅದಾತ್ತು ಕುಂತಿಭೋಜಾಯ ಸಖಾ ಸಖ್ಯೇ ಮಹಾತ್ಮನೇ ॥69॥
ಬಾಲೆಯಾಗಿ ಕೈಯಲ್ಲಿ ಚೆಂಡುಹಿಡಿದು ಆಟವಾಡುತ್ತಿದ್ದ ನನ್ನನ್ನು ಪೂಜ್ಯನಾದ ಅವನು ಮಹಾತ್ಮನಾದ, ಸ್ನೇಹಿತನಾದ ಕುಂತಿಭೋಜನಿಗೆ ಕೊಟ್ಟುಬಿಟ್ಟನು.
ಸಾಽಹಂ ಪಿತ್ರಾ ಚ ನಿಕೃತಾ ಶ್ವಶುರೈಶ್ಚ ಪರಂತಪ |
ಅತ್ಯಂತದುಃಖಿತಾ ಕೃಷ್ಣ ಕಿಂ ಜೀವಿತಫಲಂ ಮಮ ॥70॥
ಅಂತಹ ನಾನು ತಂದೆಯಿಂದಲೂ ಅವಮಾನಿತಳಾಗಿ, ಅತ್ತೆ-ಮಾವಂದಿರಿಂದಲೂ ಅವಮಾನಿತಳಾಗಿ ಅತ್ಯಂತ ದುಃಖಿತಳಾಗಿದ್ದೇನೆ. ಪರಂತಪನಾದ ಕೃಷ್ಣನೇ, ನಾನು ಬದುಕಿ ಏನು ಫಲವಿದೆ?
ಯನ್ಮಾಂ ವಾಗಬ್ರವೀನ್ನಕ್ತಂ ಸೂತಕೇ ಸವ್ಯಸಾಚಿನಃ |
ಪುತ್ರಸ್ತೇ ಪೃಥಿವೀಂ ಜೇತಾ ಯಶಶ್ಚಾಸ್ಯ ದಿವಂ ಸ್ಪೃಶೇತ್ ॥71॥
ಹತ್ವಾ ಕುರೂನ್ ಮಹಾಜನ್ಯೇ ರಾಜ್ಯಂ ಪ್ರಾಪ್ಯ ಧನಂಜಯಃ |
ಭ್ರಾತೃಭಿಃ ಸಹ ಕೌಂತೇಯಃ ತ್ರೀನ್ ಮೇಧಾನಾಹರಿಷ್ಯತಿ ॥72॥
ಅರ್ಜುನನು ಜನಿಸಿದಾಗ ಸಾಯಂಕಾಲದಲ್ಲಿ ನನ್ನನ್ನು ಕುರಿತು ನಿನ್ನ ಮಗನು ಭೂಮಿಯನ್ನು ಜಯಿಸುತ್ತಾನೆ, ಅವನ ಕೀರ್ತಿಯು ಸ್ವರ್ಗವನ್ನು ಮುಟ್ಟುತ್ತದೆ. ಅವನು ದೊಡ್ಡ ಯುದ್ಧದಲ್ಲಿ ಕೌರವರನ್ನು ಸಂಹರಿಸಿ, ರಾಜ್ಯವನ್ನು ಸಂಪಾದಿಸಿ, ಸಹೋದರರ ಜೊತೆಯಲ್ಲಿ ಮೂರು ಅಶ್ವಮೇಧಯಾಗವನ್ನು ಮಾಡುವನು ಎಂದು ಅಶರೀರವಾಣಿ ಆಯಿತಷ್ಟೆ?
ನಾಹಂ ತಾಮಭ್ಯಸೂಯಾಮಿ ನಮೋ ಧರ್ಮಾಯ ವೇಧಸೇ |
ಕೃಷ್ಣಾಯ ಮಹತೇ ನಿತ್ಯಂ ಧರ್ಮೋ ಧಾರಯತಿ ಪ್ರಜಾಃ ॥73॥
ನಾನು ಆ ಅಶರೀರವಾಣಿಯನ್ನೂ ದೂಷಿಸುವುದಿಲ್ಲ. ಎಲ್ಲವನ್ನೂ ವಿಧಿಸುವ ಧರ್ಮಕ್ಕೆ ನಮಸ್ಕಾರ. ಮಹಾತ್ಮನಾದ ಕೃಷ್ಣನಾದ ನಿನಗೆ ನಮಸ್ಕಾರ. ಯಾವಾಗಲೂ ಧರ್ಮವೇ ಪ್ರಜೆಗಳನ್ನು ರಕ್ಷಿಸುತ್ತದೆ.
ಧರ್ಮಶ್ಚೇದಸ್ತಿ ವಾರ್ಷ್ಣೇಯ ಯಥಾ ವಾಗಭ್ಯಭಾಷತ |
ತ್ವಂ ಚಾಪಿ ತತ್ ತಥಾ ಕೃಷ್ಣ ಸರ್ವಂ ಸಂಪಾದಯಿಷ್ಯಸಿ ॥74॥
ಎಲೈ ವಾರ್ಷ್ಣೇಯನೇ, ಕೃಷ್ಣನೇ, ಧರ್ಮವು ಇರುವುದಾದರೆ ಅಶರೀರವಾಣಿಯು ನುಡಿದಂತೆ ನೀನೂ ಸಹ ಎಲ್ಲವನ್ನೂ ಸಂಪಾದಿಸುವಿ.
ನ ಮಾಂ ಮಾಧವ ವೈಧವ್ಯಂ ನಾರ್ಥನಾಶೋ ನ ವೈರಿತಾ |
ತಥಾ ಶೋಕಾಯ ದಹತಿ ಯಥಾ ಪುತ್ರೈರ್ವಿನಾಭವಃ ॥75॥
ಎಲೈ ಮಾಧವನೇ, ಮಕ್ಕಳನ್ನು ಬಿಟ್ಟು ಬದುಕುವುದರಿಂದ ಎಂತಹ ಶೋಕವು ದಹಿಸುತ್ತಿದೆಯೋ ಅಂತಹ ಶೋಕವು ವೈದವ್ಯದಿಂದಾಗಲೀ, ರಾಜ್ಯನಾಶದಿಂದಾಗಲೀ ಅಥವಾ ಶತ್ರುದ್ವೇಷದಿಂದಾಗಲೀ ಉಂಟಾಗಲಿಲ್ಲ.
ಯಾಽಹಂ ಗಾಂಡೀವಧನ್ವಾನಂ ಸರ್ವಶಸ್ತ್ರಭೃತಾಂ ವರಮ್ |
ಧನಂಜಯಂ ನ ಪಶ್ಯಾಮಿ ಕಾ ಶಾಂತಿರ್ಹೃದಯಸ್ಯ ಮೇ ॥76॥
ಯಾವ ನಾನು ಗಾಂಡೀವಧನುರ್ಧಾರಿಯಾದ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನನ್ನು ನೋಡುತ್ತಿಲ್ಲವೋ ಅಂತಹ ನನ್ನ ಮನಸ್ಸಿಗೆ ಯಾವ ಶಾಂತಿ ಇದೆ?
ಇಮಂ ಚತುರ್ದಶಂ ವರ್ಷಂ ಯನ್ನಾಪಶ್ಯಂ ಯುಧಿಷ್ಠಿರಮ್ |
ಧನಂಜಯಂ ಚ ಗೋವಿಂದ ಯಮೌ ತಂ ಚ ವೃಕೋದರಮ್ ॥77॥
ಅರ್ಥತಸ್ತೇ ಮಮ ಮೃತಾಃ ತೇಷಾಂ ಚಾಹಂ ಜನಾರ್ದನ ॥78॥

ಎಲೈ ಗೋವಿಂದನೇ, ಈ ಹದಿನಾಲ್ಕನೆಯ ವರ್ಷದವರೆಗೆ ಯುಧಿಷ್ಠಿರನನ್ನಾಗಲೀ, ಅರ್ಜುನನನ್ನಾಗಲೀ, ಭೀಮಸೇನನನ್ನಾಗಲೀ, ನಕುಲ-ಸಹದೇವರನ್ನಾಗಲೀ ನೋಡದಿರುವುದರಿಂದ ನನ್ನ ಪಾಲಿಗೆ ಅವರು ಮೃತರಾದಂತೆಯೇ. ಅವರ ಪಾಲಿಗೆ ನಾನೂ ಪ್ರಯೋಜನ ದೃಷ್ಟಿಯಿಂದ ಮೃತಳಾದಂತೆಯೇ.
ಬ್ರೂಯಾ ಮಾಧವ ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ ॥79॥
ಬ್ರೂಯಾಸ್ತೇ ಹೀಯತೇ ಧರ್ಮೋ ಮಾ ಪುತ್ರಕ ವೃಥಾ ಕೃಥಾಃ |
ಪರಾಶ್ರಯಾ ವಾಸುದೇವ ಯಾ ಜೀವತಿ ಧಿಗಸ್ತು ಮಾಮ್ ॥80॥
ಎಲೈ ಮಾಧವನೇ, ಧರ್ಮಾತ್ಮನಾದ ಯುಧಿಷ್ಠಿರನಿಗೆ ಹೀಗೆ ಹೇಳು. ನಿನ್ನ ಧರ್ಮವು ನಾಶ ಹೊಂದುತ್ತಿದೆ. ಎಲೈ ಪುತ್ರನೇ, ವ್ಯರ್ಥವಾಗಿ ಸಮಯವನ್ನು ಕಳೆಯಬೇಡ ಎಂದು (ನಾನು ಹೇಳಿದೆನೆಂದು) ಹೇಳು. ಎಲೈ ವಾಸುದೇವನೇ, ಇನ್ನೊಬ್ಬರ ಆಶ್ರಯದಲ್ಲಿ ಬದುಕಿರುವ ನನಗೆ ಧಿಕ್ಕಾರವಿರಲಿ.
ವೃತ್ತೇಃ ಕಾರ್ಪಣ್ಯಲಬ್ಧಾಯಾ ಅಪ್ರತಿಷ್ಠೈವ ಜ್ಯಾಯಸೀ |
ಅಥೋ ಧನಂಜಯಂ ಬ್ರೂಯಾ ನಿತ್ಯೋದ್ಯುಕ್ತಂ ವೃಕೋದರಮ್ ॥81॥
ಕಾರ್ಪಣ್ಯಸಹಿತವಾಗಿ ಜೀವಿಸುವುದಕ್ಕಿಂತಲೂ, ಅನಿಶ್ಚಯದಿಂದ ಜೀವಿಸುವುದೇ ಶ್ರೇಷ್ಠವಾದುದು. ಆದ್ದರಿಂದ ನಿತ್ಯೋತ್ಥಾನಶೀಲರಾದ ಅರ್ಜುನನನ್ನು ಮತ್ತು ಭೀಮಸೇನನನ್ನು ಕುರಿತು ಹೀಗೆ ಹೇಳುವವನಾಗು.
ಯದರ್ಥಂ ಕ್ಷತ್ರಿಯಾ ಸೂತೇ ತಸ್ಯ ಕಾಲೋಽಯಮಾಗತಃ ॥82॥
ಅಸ್ಮಿಂಶ್ಚೇದಾಗತೇ ಕಾಲೇ ಕಾಲೋ ವೋಽತಿಕ್ರಮಿಷ್ಯತಿ |
ಲೋಕಸಂಭಾವಿತಾಃ ಸಂತಃ ಆನೃಶಂಸ್ಯಂ ಕರಿಷ್ಯಥ ॥83॥
ಕ್ಷತ್ರಿಯ ಸ್ತ್ರೀಯು ಯಾವ ಉದ್ದೇಶದಿಂದ ಮಗನನ್ನು ಪಡೆಯುತ್ತಾಳೆಯೋ ಅದರ ಪರೀಕ್ಷೆಯ ಕಾಲವು ಈಗ ಬಂದೊದಗಿದೆ. ಹೀಗೆ ಬಂದೊದಗಿದ ಕಾಲದಲ್ಲಿ ನೀವು ಪ್ರಯತ್ನವನ್ನು ಮಾಡದೆ ಕಾಲವು ಮೀರಿಹೋದರೆ ಲೋಕಪೂಜಿತರಾಗಿ ಬೆಳೆದ ನೀವು ಲೋಕನಿಂದೆಗೆ ಒಳಗಾಗುವಿರಿ.
ನೃಶಂಸೇನ ಚ ವೋ ಯುಕ್ತಾನ್ ತ್ಯಜೇಯಂ ಶಾಶ್ವತೀಃ ಸಮಾಃ |
ಕಾಲೇ ಹಿ ಸಮನುಪ್ರಾಪ್ತೇ ತ್ಯಕ್ತವ್ಯಮಪಿ ಜೀವಿತಮ್ ॥84॥
ಅಂತಹ ಲೋಕನಿಂದೆ ಮತ್ತು ಕ್ರೌರ್ಯಕ್ಕೆ ಒಳಗಾದ ನಿಮ್ಮನ್ನು ನಾನು ಪೂರ್ಣವಾಗಿ ತ್ಯಜಿಸುವೆನು. ಕಾಲವು ಪ್ರಾಪ್ತವಾದಾಗ ಜೀವನವನ್ನೂ ತ್ಯಜಿಸಬೇಕಷ್ಟೆ? (ಎಂದು ಹೇಳು).
ಮಾದ್ರೀಪುತ್ರೌ ಚ ವಕ್ತವ್ಯೌ ಕ್ಷತ್ರಧರ್ಮರತೌ ಸದಾ ॥85॥
ವಿಕ್ರಮೇಣಾರ್ಜಿತಾನ್ ಲೋಕಾನ್ ವೃಣೀತಂ ಜೀವಿತಾದಪಿ ॥86॥
ಸದಾ ಕ್ಷತ್ರಧರ್ಮನಿರತರಾದ, ಮಾದ್ರೀಪುತ್ರರಾದ ನಕುಲ-ಸಹದೇವರನ್ನು ಕುರಿತು ಹೀಗೆ ಹೇಳಬೇಕು. ಬದುಕಿರುವುದಕ್ಕಿಂತಲೂ ವಿಕ್ರಮದಿಂದ ಸಂಪಾದಿಸಿದ ಪರಲೋಕವನ್ನು ಬಯಸುವವರಾಗಿ.
ವಿಕ್ರಮಾಧಿಗತಾ ಹ್ಯರ್ಥಾಃ ಕ್ಷತ್ರಧರ್ಮೇಣ ಜೀವತಃ |
ಮನೋ ಮನುಷ್ಯಸ್ಯ ಸದಾ ಪ್ರೀಣಂತಿ ಪುರುಷೋತ್ತಮ ॥87॥
ಎಲೈ ಪುರುಷೋತ್ತಮನೇ, ಕ್ಷತ್ರಿಯಧರ್ಮದಿಂದ ಜೀವಿಸುವ ಮನುಷ್ಯನಿಗೆ ಪರಾಕ್ರಮದಿಂದ ಸಂಪಾದಿಸಿದ ಪದಾರ್ಥಗಳು ಯಾವಾಗಲೂ ಮನಸ್ಸಿಗೆ ಸಂತೋಷವನ್ನು ಕೊಡುತ್ತವೆ.
ಗತ್ವಾ ಬ್ರೂಹಿ ಮಹಾಬಾಹೋ ಸರ್ವಶಸ್ತ್ರಭೃತಾಂ ವರಮ್ |
ಅರ್ಜುನಂ ಪಾಂಡವಂ ವೀರಂ ದ್ರೌಪದ್ಯಾಃ ಪದವೀಂ ಚರ ॥88॥
ಎಲೈ ಮಹಾಬಾಹುವೇ, ನೀನು ಹೋಗಿ ಸರ್ವಶಸ್ತ್ರಗಳಲ್ಲಿ ಶ್ರೇಷ್ಠನಾದ, ವೀರನಾದ ಪಾಂಡುಪುತ್ರನಾದ ಅರ್ಜುನನಿಗೆ ದ್ರೌಪದಿಯ ಮಾರ್ಗದಲ್ಲಿ ನಡೆ ಎಂದು ಹೇಳು.
ವಿದಿತೌ ಹಿ ತವಾತ್ಯಂತಂ ಕ್ರುದ್ಧಾವಿವ ಯಥಾಽಂತಕೌ |
ಭೀಮಾರ್ಜುನೌ ನಯೇತಾಂ ಹಿ ದೇವಾನಪಿ ಪರಾಭವಮ್ ॥89॥
ತಯೋಶ್ಚೈತದವಜ್ಞಾತಂ ಯತ್ ಸಾ ಕೃಷ್ಣಾ ಸಭಾಂ ಗತಾ ॥90॥
ಭೀಮಾರ್ಜುನರು ಕೋಪಗೊಂಡ ಯಮನಂತೆ ದೇವತೆಗಳನ್ನೂ ಸಹ ಸೋಲಿಸಲು ಶಕ್ತರಾದವರು ಎಂದು ನೀನು ಚೆನ್ನಾಗಿ ತಿಳಿದಿದ್ದೀಯೆ. ದ್ರೌಪದಿಯು ಸಭೆಯಲ್ಲಿ ಎಳೆತರಲ್ಪಟ್ಟದ್ದು ಅವರಿಬ್ಬರ ಔದಾಸೀನ್ಯದಿಂದ.
ದುಃಶಾಸನಶ್ಚ ಕರ್ಣಶ್ಚ ಪರುಷಾಣ್ಯಭ್ಯಭಾಷತಾಮ್ |
ದುರ್ಯೋಧನೋ ಭೀಮಸೇನಮಭ್ಯಗರ್ಜತ್ ಸಭಾಂ ಗತಮ್ ॥91॥
ಪಶ್ಯತಾಂ ಕುರುಮುಖ್ಯಾನಾಂ ತಸ್ಯ ದ್ರಕ್ಷ್ಯತಿ ಯತ್ ಫಲಮ್ ॥92॥
ದುಶ್ಶಾಸನ ಮತ್ತು ಕರ್ಣರು ಕ್ರೂರವಾದ ಮಾತುಗಳನ್ನು ಆಡಿದರು. ದುರ್ಯೋಧನನು ಸಭೆಯಲ್ಲಿದ್ದ ಭೀಮಸೇನನನ್ನು ಉದ್ದೇಶಿಸಿ ಗರ್ಜಿಸಿದನು. ಇವೆರಡೂ ಕೌರವಶ್ರೇಷ್ಠರು ನೋಡುತ್ತಿರುವಂತೆಯೇ ನಡೆಯಿತು. ಅದರ ಫಲವನ್ನು ದುರ್ಯೋಧನನು ಕಾಣುವನು.
ನ ಹಿ ವೈರಂ ಸಮಾಸಾದ್ಯ ಪ್ರಶಾಮ್ಯತಿ ವೃಕೋದರಃ ॥93॥
ಸುಚಿರಾದಪಿ ಭೀಮಸ್ಯ ನ ಹಿ ವೈರಂ ಪ್ರಶಾಮ್ಯತಿ |
ಯಾವದಂತಂ ನ ನಯತಿ ಶಾತ್ರವಾನ್ ಶತ್ರುಕರ್ಶನಃ ॥94॥
ವೈರವನ್ನು ಹೊಂದಿದ ವೃಕೋದರನು ಎಂದೂ ಶಾಂತಿಯನ್ನು ಹೊಂದುವುದಿಲ್ಲ. ಎಷ್ಟೇ ಕಾಲವಾದರೂ ಶತ್ರುಕರ್ಶನನಾದ ಅವನು ಶತ್ರುಗಳನ್ನು ನಾಶ ಮಾಡುವವರೆಗೆ ಅವನ ವೈರವು ಶಾಂತವಾಗುವುದಿಲ್ಲ.

ನ ದುಃಖಂ ರಾಜ್ಯಹರಣಂ ನ ಚ ದ್ಯೂತೇ ಪರಾಜಯಃ |
ಪ್ರವ್ರಾಜನಂ ಚ ಪುತ್ರಾಣಾಂ ನ ಮೇ ತದ್ ದುಃಖಕಾರಣಮ್ ॥95॥
ಯತ್ತು ಸಾ ಬೃಹತೀ ಶ್ಯಾಮಾ ಏಕವಸತ್ರ ಸಭಾಗತಾ |
ಅಶ್ರುಣೋತ್ ಪರುಷಾ ವಾಚಃ ಕಿಂ ನು ದುಃಖತರಂ ತತಃ ॥96॥
ರಾಜ್ಯದ ಅಪಹರಣವು ದುಃಖವಲ್ಲ, ದ್ಯೂತದಲ್ಲಿ ಪರಾಜಯವು ದುಃಖವಲ್ಲ, ಮಕ್ಕಳು ಕಾಡಿಗೆ ಹೋದುದು ನನ್ನ ದುಃಖಕ್ಕೆ ಕಾರಣವಲ್ಲ. ಆದರೆ ಆ ದೊಡ್ಡ ನಡತೆಯುಳ್ಳವಳೂ, ಸುಂದರಿಯೂ ಆದ ದ್ರೌಪದಿಯು ಏಕವಸ್ತ್ರವನ್ನುಟ್ಟು ಸಭೆಗೆ ಬಂದು ಕ್ರೂರವಾದ ಮಾತುಗಳನ್ನು ಕೇಳಿದಳಷ್ಟೆ? ಅದಕ್ಕಿಂತ ದುಃಖತರವಾದುದು ಏನಿದೆ?
ಸ್ತ್ರೀಧರ್ಮಿಣೀ ವರಾರೋಹಾ ಕ್ಷತ್ರಧರ್ಮರತಾ ಸದಾ |
ನಾಧ್ಯಗಚ್ಛತ್ ತದಾ ನಾಥಂ ಕೃಷ್ಣಾ ನಾಥವತೀ ಸತೀ ॥97॥
ರಜಸ್ವಲೆಯೂ, ಸುಂದರಿಯೂ, ಯಾವಾಗಲೂ ಕ್ಷತ್ರಧರ್ಮದಲ್ಲಿ ರತಳಾದವಳೂ, ಆದ ಪಂಚಪತಿಗಳನ್ನು ಹೊಂದಿದ ದ್ರೌಪದಿಯು ಆ ಸಭೆಯಲ್ಲಿ ಯಾವ ನಾಥನನ್ನೂ ಹೊಂದಲಿಲ್ಲ.
ಯಸ್ಯಾ ಮಮ ಸಪುತ್ರಾಯಾಃ ತ್ವಂ ನಾಥೋ ಮಧುಸೂದನ |
ರಾಮಶ್ಚ ಬಲಿನಾಂ ಶ್ರೇಷ್ಠಃ ಪ್ರದ್ಯುಮ್ನಶ್ಚ ಮಹಾರಥಃ ॥98॥
ಸಾಽಹಮೇವಂವಿಧಂ ದುಃಖಂ ಸಹೇಯಂ ಪುರುಷೋತ್ತಮ |
ಭೀಮೇ ಜೀವತಿ ದುರ್ಧರ್ಷೇ ವಿಜಯೇ ಚಾಪಲಾಯಿನಿ ॥99॥
ಎಲೈ ಮಧುಸೂದನನೇ, ಮಕ್ಕಳಿಂದ ಸಹಿತಳಾದ ನನಗೆ ಯಾವ ನೀನು ನಾಥನಾಗಿದ್ದೀಯೋ, ಬಲಿಷ್ಠರಲ್ಲಿ ಶ್ರೇಷ್ಠನಾದ ಬಲರಾಮನೂ, ಮಹಾರಥನಾದ ಪ್ರದ್ಯುಮ್ನನೂ ನಾಥರಾಗಿದ್ದಾರೆಯೋ ಅಂತಹ ನಾನು ಎಲೈ ಪುರುಷೋತ್ತಮನೇ, ಭೀಮನು ಬದುಕಿರುವಾಗ ಎಂದೂ ಸೋಲದ ಅರ್ಜುನನು ಎಲ್ಲಿಯೂ ಪಲಾಯನ ಮಾಡದಿರುವಾಗ ಇಂತಹ ರೀತಿಯ ದುಃಖಗಳನ್ನು ಸಹಿಸುತ್ತಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಾಶೀತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂಬತ್ತನೆಯ ಅಧ್ಯಾಯ
ಕೃಷ್ಣನಿಂದ ಕುಂತಿಯ ಸಮಾಶ್ವಾಸನೆ.
ವೈಶಂಪಾಯನಃ
ತತ ಆಶ್ವಾಸಯಾಮಾಸ ಪುತ್ರಾಧಿಭಿರಭಿಪ್ಲುತಾಮ್ |
ಪಿತೃಷ್ವಸಾರಂ ಶೋಚಂತೀಂ ಪೃಥಾಂ ಪಾರ್ಥಸಖೋ ಹರಿಃ ॥1॥
ವೈಶಂಪಾಯನ ಅನಂತರ ಪಾರ್ಥಸಖನಾದ ಹರಿಯು ಮಕ್ಕಳ ವಿಷಯವಾದ ಮನೋರೋಗದಿಂದ ತುಂಬಿಹೋಗಿ ಶೋಕಪಡುತ್ತಿದ್ದ ತನ್ನ ಸೋದರತ್ತೆಯಾದ ಕುಂತಿಯನ್ನು ಸಮಾಧಾನಪಡಿಸಿದನು.
ಕಾ ನು ಸೀಮಂತಿನೀ ತ್ವಾದೃಗ್ ಲೋಕೇಷ್ವಸ್ತಿ ಪಿತೃಷ್ವಸಃ |
ಶೂರಸ್ಯ ರಾಜ್ಞೋ ದುಹಿತಾ ಆಜಮೀಢಕುಲಂ ಗತಾ ॥2॥
ಮಹಾ ಕುಲೀನಾ ಭವತೀ ಹ್ರದಾದ್ ಹ್ರದಮಿವಾಗತಾ |
ಈಶ್ವರೀ ಸರ್ವಕಲ್ಯಾಣೀ ಭರ್ತ್ರಾ ಪರಮಪೂಜಿತಾ ॥3॥
ವೀರಸೂರ್ವೀರಪತ್ನೀ ತ್ವಂ ಸರ್ವೈಃ ಸಮುದಿತಾ ಗುಣೈಃ |
ಸುಖದುಃಖೇ ಮಹಾಪ್ರಾಜ್ಞೇ ತ್ವಾದೃಶೀ ಸೋಢುಮರ್ಹತಿ ॥4॥
ಸೋದರತ್ತೆಯೇ, ಈ ಲೋಕದಲ್ಲಿ ಯಾವ ಹೆಂಗಸು ನಿನ್ನಂತೆ ಇದ್ದಾಳೆ? ಶೂರ ರಾಜನ ಮಗಳಾಗಿ ಜನಿಸಿ, ಆಜಮೀಢಕುಲವನ್ನು ಸೇರಿದೆ. ಮಹಾಕುಲದಲ್ಲಿ ಜನಿಸಿದ ನೀನು ಒಂದು ಸರೋವರದಿಂದ ಇನ್ನೊಂದು ಸರೋವರಕ್ಕೆ ಬಂದಂತಾಯಿತು. ಎಲ್ಲ ಮಂಗಳಗಳಿಗೂ ನೀನು ಪ್ರಭುವಾಗಿದ್ದೆ. ಪತಿಯಿಂದ ಅತ್ಯಂತ ಪೂಜಿತಳಾಗಿದ್ದೆ. ವೀರರಾದ ಮಕ್ಕಳನ್ನು ಪಡೆದೆ. ವೀರನ ಪತ್ನಿಯಾದೆ. ಎಲ್ಲ ಗುಣಗಳಿಂದಲೂ ಕೂಡಿದವಳಾಗಿದ್ದೀಯೆ. ಮಹಾಪ್ರಾಜ್ಞೆಯೇ, ನಿನ್ನಂತಹವಳು ಸುಖ-ದುಃಖಗಳನ್ನು ಸಹಿಸಬೇಕು.
ನಿದ್ರಾತಂದ್ರೇ ಕ್ರೋಧಹರ್ಷೌ ಕ್ಷುತ್ಪಿಪಾಸೇ ಹಿಮಾತಪೌ |
ಏತಾನಿ ಪಾರ್ಥಾ ನಿರ್ಜಿತ್ಯ ನಿತ್ಯಂ ವೀರಾಃ ಸುಖೇ ರತಾಃ ॥5॥
ನಿನ್ನ ಪುತ್ರರು ನಿದ್ರಾಲಸ್ಯಗಳನ್ನೂ, ಕ್ರೋಧ-ಹರ್ಷಗಳನ್ನೂ, ಹಸಿವು- ನೀರಡಿಕೆಗಳನ್ನೂ, ಚಳಿ-ಬಿಸಿಲುಗಳನ್ನೂ ಜಯಿಸಿ ವೀರರಾದ ಅವರು ಸುಖವಾಗಿದ್ದಾರೆ.
ತ್ಯಕ್ತಗ್ರಾಮ್ಯಸುಖಾಃ ಪಾರ್ಥಾ ನಿತ್ಯಂ ವೀರಸುಖಪ್ರಿಯಾಃ |
ನ ತೇ ಸ್ವಲ್ಪೇನ ತುಷ್ಯೇಯುಃ ಮಹೋತ್ಸಾಹಾ ಮಹಾಬಲಾಃ ॥6॥
ಗ್ರಾಮದಲ್ಲಿ ದೊರಕುವ ಸುಖಗಳನ್ನು ತ್ಯಜಿಸಿ, ನಿತ್ಯವೂ ವೀರಸುಖಪ್ರಿಯರಾದ ಮಹೋತ್ಸಾಹಶಾಲಿಗಳಾದ, ಮಹಾಬಲವುಳ್ಳ ಪಾಂಡವರು ಅಲ್ಪದಿಂದ ತೃಪ್ತರಾಗುವವರಲ್ಲ.

ಅಂತಂ ಧೀರಾ ನಿಷೇವಂತೇ ಮಧ್ಯಂ ಗ್ರಾಮ್ಯಸುಖಪ್ರಿಯಾಃ |
ಉತ್ತಮಾಶ್ಚ ಪರಿಕ್ಲೇಶಾನ್ ಭೋಗಾಂಶ್ಚೈವಾತಿಮಾನುಷಾನ್ ॥7॥
ಧರ್ಮ-ಅರ್ಥ-ಕಾಮ-ಮೋಕ್ಷಗಳಲ್ಲಿ ಗ್ರಾಮ್ಯಸುಖಪ್ರಿಯರಾದವರು ಮಧ್ಯದಲ್ಲಿರುವ ಅರ್ಥ-ಕಾಮಗಳನ್ನು ಬಯಸುತ್ತಾರೆ. ಧೀರರಾದ ಉತ್ತಮ ಪುರುಷರು ಧರ್ಮ-ಮೋಕ್ಷಗಳಲ್ಲಿ ರತರಾಗಿ ಈ ಲೋಕದಲ್ಲಿ ಪರಿಕ್ಲೇಶಗಳನ್ನೂ, ಪರಲೋಕದಲ್ಲಿ ಮನುಷ್ಯರಿಗೆ ಮೀರಿದ ಉತ್ತಮಭೋಗಗಳನ್ನೂ ಅನುಭವಿಸುತ್ತಾರೆ.
ಅಂತೇಷು ರೇಮಿರೇ ಧೀರಾ ನ ತೇ ಮಧ್ಯೇಷು ರೇಮಿರೇ |
ಅಂತಪ್ರಾಪ್ತಿಂ ಸುಖಂ ಪ್ರಾಹುರ್ದುಃಖಮಂತರಮಂತಯೋಃ ॥8॥
ಧೀರರಾದ ಅವರು ಕೊನೆಯಲ್ಲಿರುವ ಧರ್ಮ-ಮೋಕ್ಷಗಳಲ್ಲಿ ಆಸಕ್ತರಾಗಿರುತ್ತಾರೆ. ಅವರು ಮಧ್ಯದಲ್ಲಿರುವ ಅರ್ಥ-ಕಾಮಗಳಲ್ಲಿ ಸಂತೋಷಪಡುವುದಿಲ್ಲ. ಜ್ಞಾನಿಗಳು ಕೊನೆಯಲ್ಲಿರುವ ಧರ್ಮ-ಮೋಕ್ಷದ ಪ್ರಾಪ್ತಿಯು ಸುಖವೆಂದೂ, ಮಧ್ಯದಲ್ಲಿರುವ ಅರ್ಥ-ಕಾಮಗಳ ಪ್ರಾಪ್ತಿಯು ದುಃಖವೆಂದೂ ಹೇಳುತ್ತಾರೆ.
ಅಭಿವಾದಯಂತಿ ಭವತೀಂ ಪಾಂಡವಾಃ ಸಹ ಕೃಷ್ಣಯಾ |
ಆತ್ಮಾನಂ ತೇ ಕುಶಲಿನಂ ನಿವೇದ್ಯಾಹುರನಾಮಯಮ್ ॥9॥
ಪಾಂಡವರು ಮತ್ತು ದ್ರೌಪದಿಯು ನಿನಗೆ ನಮಸ್ಕಾರವನ್ನು ತಿಳಿಸುತ್ತಾರೆ. ತಾವು ಸುಖವಾಗಿದ್ದೇವೆಂದು ತಿಳಿಸಿ ತಮ್ಮ ಕ್ಷೇಮವನ್ನು ನಿವೇದಿಸುತ್ತಾರೆ.
ಅರೋಗಾನ್ ಸರ್ವಸಿದ್ಧಾರ್ಥಾನ್ ಕ್ಷಿಪ್ರಂ ದ್ರಕ್ಷ್ಯಸಿ ಪಾಂಡವಾನ್ |
ಈಶ್ವರಾನ್ ಸರ್ವಲೋಕಸ್ಯ ಹತಾಮಿತ್ರಾನ್ ಶ್ರಿಯಾ ವೃತಾನ್ ॥10॥
ನೀನು ಶೀಘ್ರದಲ್ಲಿಯೇ ಆರೋಗ್ಯವಂತರಾದ, ಸರ್ವಾರ್ಥಗಳನ್ನೂ ಸಂಪಾದಿಸಿದ, ಶತ್ರುಗಳನ್ನು ಜಯಿಸಿದ, ಸಂಪತ್ತಿನಿಂದ ಕೂಡಿದ, ಸರ್ವಲೋಕಕ್ಕೂ ಪ್ರಭುಗಳಾದ ಪಾಂಡವರನ್ನು ನೋಡುವಿ.
ವೈಶಂಪಾಯನಃ
ಏವಮಾಶ್ವಾಸಿತಾ ಕುಂತೀ ಪ್ರತ್ಯುವಾಚ ಜನಾರ್ದನಮ್ |
ಪುತ್ರಾಧಿಭಿರಭಿಧ್ವಸ್ತಾ ನಿಗೃಹ್ಯಾಬುದ್ಧಿಜಂ ತಮಃ ॥11॥
ವೈಶಂಪಾಯನ ಹೀಗೆ ಕೃಷ್ಣನಿಂದ ಸಮಾಧಾನಪಡಿಸಲ್ಪಟ್ಟವಳಾಗಿ ಮಕ್ಕಳ ಚಿಂತೆಯಿಂದ ಕಂಗೆಟ್ಟಿದ್ದ ಕುಂತಿಯು ಅವಿವೇಕದಿಂದ ಉಂಟಾದ ತನ್ನ ಅಜ್ಞಾನವನ್ನು ನಿಗ್ರಹಿಸಿ ಅವನನ್ನು ಕುರಿತು ಮಾತನಾಡಿದಳು.
ಯದ್ಯತ್ ತೇಷಾಂ ಮಹಾಬಾಹೋ ಪಥ್ಯಂ ಸ್ಯಾನ್ಮಧುಸೂದನ |
ಯಥಾ ಯಥಾ ತ್ವಂ ಮನ್ಯೇಥಾಃ ಕುರ್ಯಾಃ ಕೃಷ್ಣ ತಥಾ ತಥಾ ॥12॥
ಅವಿಲೋಪೇನ ಧರ್ಮಸ್ಯ ಅನಿಕೃತ್ಯಾ ಪರಂತಪ ॥13॥
ಎಲೈ ಮಹಾಬಾಹುವೇ, ಮಧುಸೂದನನೇ, ಕೃಷ್ಣನೇ, ಯಾವ ಯಾವುದು ಅವರಿಗೆ ಹಿತವಾಗುವುದೆಂದು ನೀನು ಭಾವಿಸುವಿಯೋ ಅದನ್ನು ಹಾಗೆಯೇ ಮಾಡುವವನಾಗು. ಎಲೈ ಪರಂತಪನೇ, ಧರ್ಮಕ್ಕೆ ಲೋಪವಿಲ್ಲದಂತೆ ಕಪಟವನ್ನು ಆಶ್ರಯಿಸದೆ ಹಾಗೆಯೇ ಮಾಡುವವನಾಗು.
ಪ್ರಭಾವಜ್ಞಾಽಸ್ಮಿ ತೇ ಕೃಷ್ಣ ಸತ್ಯಸ್ಯಾಭಿಜನಸ್ಯ ಚ |
ವ್ಯವಸಾಯಸ್ಯ ಮಿತ್ರೇಷು ಬುದ್ಧಿವಿಕ್ರಮಯೋಸ್ತಥಾ ॥14॥
ಎಲೈ ಕೃಷ್ಣನೇ, ನಿನ್ನ ಪರಿಶುದ್ಧವಾದ ಕುಲವನ್ನೂ, ನಿನ್ನ ಪ್ರಭಾವವನ್ನೂ, ನಿನ್ನ ನಿರ್ಧಾರವನ್ನೂ, ಮಿತ್ರರಿಗೆ ಉಪಕಾರಮಾಡುವ ನಿನ್ನ ಬುದ್ಧಿ ಮತ್ತು ಪರಾಕ್ರಮಗಳನ್ನೂ ನಾನು ಚೆನ್ನಾಗಿ ತಿಳಿದಿದ್ದೇನೆ.
ತ್ವಮೇವ ನಃ ಕುಲೇ ಧರ್ಮಃ ತ್ವಂ ಸತ್ಯಂ ತ್ವಂ ತಪೋ ಮಹತ್ |
ತ್ವಂ ಧಾತಾ ತ್ವಂ ಮಹದ್ಬ್ರಹ್ಮ ತ್ವಯಿ ಸರ್ವಂ ಪ್ರತಿಷ್ಠಿತಮ್ ॥15॥
ಯಥೈವಾತ್ಥ ತಥೈವೈತತ್ ತ್ವಯಿ ಸತ್ಯಂ ಭವಿಷ್ಯತಿ ॥16॥
ಕೃಷ್ಣನೇ, ನೀನೇ ನಮ್ಮ ಕುಲದಲ್ಲಿ ಧರ್ಮ, ನೀನೇ ಸತ್ಯ, ನೀನೇ ಮಹತ್ತಾದ ತಪಸ್ಸು, ನೀನೇ ಎಲ್ಲವನ್ನೂ ಕೊಡುವವನು, ನೀನೇ ಪರಬ್ರಹ್ಮ, ಎಲ್ಲವೂ ನಿನ್ನನ್ನು ಆಶ್ರಯಿಸಿದೆ, ನೀನು ಹೇಳಿದಂತೆಯೇ ಎಲ್ಲವೂ ನಡೆಯುತ್ತದೆ, ಸತ್ಯವು ನಿನ್ನಲ್ಲಿ ಪ್ರತಿಷ್ಠಿತವಾಗಿದೆ.
ಕುರೂಣಾಂ ಪಾಂಡವಾನಾಂ ಚ ಲೋಕಾನಾಂ ಚಾಪರಾಜಿತ |
ಸರ್ವಸ್ಯೈತಸ್ಯ ವಾರ್ಷ್ಣೇಯ ಗತಿಸ್ತ್ವಮಸಿ ಮಾಧವ ॥17॥
ಪ್ರಭಾವೋ ಬುದ್ಧಿವೀರ್ಯಂ ಚ ತಾದೃಶಂ ತವ ಕೇಶವ ॥18॥
ಎಲೈ ಅಪರಾಜಿತನೇ, ಮಾಧವನೇ, ಕೌರವರಿಗೂ ಪಾಂಡವರಿಗೂ, ಈ ಎಲ್ಲಾ ಲೋಕಗಳಿಗೂ ನೀನೇ ಗತಿಯಾಗಿದ್ದೀಯೆ. ಎಲೈ ವಾರ್ಷ್ಣೇಯನೇ, ಎಲೈ ಕೇಶವನೇ, ನಿನ್ನ ಸಾಮರ್ಥ್ಯವು, ಬುದ್ಧಿಯು ಮತ್ತು ಪರಾಕ್ರಮವು ಅಂತಹದಾಗಿದೆ.
ವೈಶಂಪಾಯನಃ
ತಾಮಾಮಂತ್ರ್ಯ ಚ ಗೋವಿಂದಃ ಕೃತ್ವಾ ಚಾಪಿ ಪ್ರದಕ್ಷಿಣಮ್ |
ಪ್ರಾತಿಷ್ಠತ ಮಹಾಬಾಹುಃ ದುರ್ಯೋಧನಗೃಹಾನ್ ಪ್ರತಿ ॥19॥
ವೈಶಂಪಾಯನ ಮಹಾಬಾಹುವಾದ ಗೋವಿಂದನು ಅವಳ ಅನುಮತಿಯನ್ನು ಪಡೆದು, ಅವಳಿಗೆ ಪ್ರದಕ್ಷಿಣೆಯನ್ನು ಮಾಡಿ ದುರ್ಯೋಧನನ ಮನೆಯನ್ನು ಕುರಿತು ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನನವತಿತಮೋಽಧ್ಯಾಯಃ ॥

॥ ಭಗವದ್ಯಾನಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ಎಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಸ ವಂದ್ಯಮಾನೋಽಖಿಲರಾಷ್ಟ್ರವಾಸಿಭಿಃ
ಪ್ರಸೂನವರ್ಷೈರಭಿವರ್ಷಿತಃ ಸುರೈಃ |
ಸಂಸ್ತೂಯಮಾನಃ ಪ್ರಣತೋಽಬ್ಜಜಾದಿಭಿ-
ರ್ಗಜಾಹ್ವಯಂ ಪ್ರಾಪ ಪರೋಽಪ್ರಮೇಯಃ ॥63॥
ಅಪ್ರಮೇಯನಾದ ಸರ್ವೋತ್ತಮನಾದ ಶ್ರೀಕೃಷ್ಣ ಸಕಲ ದೇಶವಾಸಿಗಳು ವಂದಿಸುತ್ತಿದ್ದಂತೆ, ದೇವತೆಗಳು ಹೂಮಳೆಗರೆಯುತ್ತಾ ಚೆನ್ನಾಗಿ ಸ್ತೋತ್ರ ಮಾಡುತ್ತಿದ್ದಂತೆ, ಬ್ರಹ್ಮಾದಿಗಳು ನಮಿಸುತ್ತಿದ್ದಂತೆ ಹಸ್ತಿನಾವತಿ ನಗರವನ್ನು ಸೇರಿದ.
ಸ ಭೀಷ್ಮಮುಖ್ಯೈಃ ಸರಸಾಽಭಿಯಾತಃ
ಸಹೈವ ತೈಃ ಪ್ರಯಯೌ ರಾಜಮಾರ್ಗೇ |
ದಿದೃಕ್ಷವಸ್ತಂ ಜಗದೇಕಸುಂದರಂ
ಗುಣಾರ್ಣವಂ ಪ್ರಾಯಯುರತ್ರ ಸರ್ವೇ ॥64॥
ಭೀಷ್ಮ ಮುಂತಾದವರು ಶ್ರೀಕೃಷ್ಣನನ್ನು ಪ್ರೀತಿಯಿಂದ ಇದಿರುಗೊಂಡರು. ಶ್ರೀಕೃಷ್ಣ ಅವರೊಂದಿಗೆ ರಾಜಮಾರ್ಗದಲ್ಲಿ ನಡೆದ. ಜಗದೇಕಸುಂದರನಾದ, ಸದ್ಗುಣ ಸಾಗರನಾದ ಆತನನ್ನು ಕಾಣಲು ಬಯಸಿ ಪ್ರಜೆಗಳೆಲ್ಲರೂ ಆ ರಾಜಮಾರ್ಗಕ್ಕೆ ಬಂದರು.
ಸಭಾಜಿತಸ್ತೈಃ ಪರಮಾದರೇಣ
ವಿವೇಶ ಗೇಹಂ ನೃಪತೇರನಂತಃ |
ಸ ಭೀಷ್ಮಮುಖ್ಯಾನ್ ಪುರತೋ ನಿಧಾಯ
ವೈಚಿತ್ರವೀರ್ಯೇಣ ಸಮರ್ಚಿತೋಽಜಃ ॥65॥
ರೌಗ್ಮೇ ನಿಷಣ್ಣಃ ಪರಮಾಸನೇ ಪ್ರಭು-
ರ್ಬಭೌ ಸ್ವಭಾಸಾ ಕಕುಭೋಽವಭಾಸಯನ್ ॥65॥
ಎಲ್ಲರಿಂದಲೂ ಪರಮಾದರದಿಂದ ಆದರಿಸಲ್ಪಡುತ್ತ ಶ್ರೀಕೃಷ್ಣ ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿದ. ಧೃತರಾಷ್ಟ್ರನು ಭೀಷ್ಮ ಮುಂತಾದವರನ್ನು ಮುಂದೆ ಮಾಡಿಕೊಂಡು ಬಂದು ಕೃಷ್ಣನನ್ನು ಸತ್ಕರಿಸಿದ. ಪ್ರಭು ಶ್ರೀಕೃಷ್ಣ ತನ್ನ ಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತ ಬಂಗಾರದ ಉತ್ತಮ ಆಸನದಲ್ಲಿ ಕುಳಿತು ಶೋಭಿಸಿದ.
ಯಥೋಚಿತಂ ತೇಷು ವಿಧಾಯ ಕೇಶವೋ
ದೌರ್ಯೋಧನಂ ಪ್ರಾಪ್ಯ ಗೃಹಂ ಚ ಪೂಜಿತಃ |
ಪೂಜಾಂ ತದೀಯಾಂ ಗುಣವದ್ ದ್ವಿಡಿತ್ಯಸೌ
ಜಗ್ರಾಹ ನೋ ವಿದುರಂ ಚಾಜಗಾಮ ॥67॥
ಶ್ರೀಕೃಷ್ಣ ಭೀಷ್ಮ ಮುಂತಾದವರಲ್ಲಿ ಯಥಾಯೋಗ್ಯವಾಗಿ ಗೌರವ ಸಲ್ಲಿಸಿ ದುರ್ಯೋಧನನ ಮನೆಗೆ ಹೋಗಿ, ಅಲ್ಲಿ ಅವನು ಸತ್ಕರಿಸಿದರೂ ಆತ ಗುಣವಂತರಾದ ಪಾಂಡವರ ದ್ವೇಷಿ ಎಂಬ ಕಾರಣದಿಂದ ಅವನ ಆ ಸತ್ಕಾರವನ್ನು ಸ್ವೀಕರಿಸಲಿಲ್ಲ. ಬೇಗನೆ ವಿದುರನ ಮನೆಗೆ ನಡೆದ.
ಸ ಭೀಷ್ಮಮುಖ್ಯೈರಭಿಯಾಚಿತೋಽಪಿ
ಜಗಾಮ ನೈಷಾಂ ಗೃಹಮಾದಿದೇವಃ |
ಉಪೇಕ್ಷಿತಾ ದ್ರೌಪದೀತ್ಯಪ್ರಮೇಯೋ
ಜಗಾಮ ಗೇಹಂ ವಿದುರಸ್ಯ ಶೀಘ್ರಮ್ ॥68॥
ಆದಿ ದೇವನಾದ ಶ್ರೀಕೃಷ್ಣ ಭೀಷ್ಮ ಮುಂತಾದವರಿಂದ ಪ್ರಾರ್ಥಿತನಾದರೂ ದ್ರೌಪದಿಯನ್ನು ಅವರು ಉಪೇಕ್ಷಿಸಿದರೆಂದು ಅವರ ಮನೆಗೆ ಹೋಗಲಿಲ್ಲ. ವಿದುರನ ಮನೆಗೇ ಬೇಗನೆ ನಡೆದ.
ಸ ತೇನ ಭಕ್ತ್ಯಾಽಭಿಗತಃ ಪ್ರಸನ್ನಃ
ಪ್ರವಿಶ್ಯ ಚಾಂತರ್ಗೃಹಮೀಶ್ವರೋಽಜಃ |
ಭಕ್ತ್ಯಾಽಭಿಪೂರ್ಣೇನ ಸಸಂಭ್ರಮೇಣ
ಸಂಪೂಜಿತಃ ಸರ್ವಸಮರ್ಪಣೇನ ॥69॥
ಆದಿದೇವನಾದ ಶ್ರೀಕೃಷ್ಣ ಭೀಷ್ಮ ಮುಂತಾದವರಿಂದ ಪ್ರಾರ್ಥಿತನಾದರೂ ದ್ರೌಪದಿಯನ್ನು ಅವರು ಉಪೇಕ್ಷಿಸಿದರೆಂದು ಅವರ ಮನೆಗೆ ಹೋಗಲಿಲ್ಲ. ವಿದುರನ ಮನೆಗೇ ಬೇಗನೆ ನಡೆದ.
* * * * *
ತೊಂಬತ್ತನೆಯ ಅಧ್ಯಾಯ
ದುರ್ಯೋಧನನ ಮನೆಯ ಭೋಜನವನ್ನು ನಿರಾಕರಿಸಿದ
ಕೃಷ್ಣನಿಗೆ ವಿದುರನ ಮನೆಯಲ್ಲಿ ಸತ್ಕಾರ.
ವೈಶಂಪಾಯನಃ

ಪೃಥಾಮಾಮಂತ್ರ್ಯ ಗೋವಿಂದಃ ಕೃತ್ವಾ ಚಾಪಿ ಪ್ರದಕ್ಷಿಣಮ್ |
ದುರ್ಯೋಧನಗೃಹಂ ಶೌರಿರಭ್ಯಗಚ್ಛದರಿಂದಮಃ ॥1॥
ವೈಶಂಪಾಯನ ಅರಿಂದಮನೂ, ಶೌರಿಯೂ ಆದ ಗೋವಿಂದನು ಕುಂತಿಯ ಅನುಮತಿಯನ್ನು ಪಡೆದು, ಅವಳಿಗೆ ಪ್ರದಕ್ಷಿಣೆಯನ್ನು ಮಾಡಿ ದುರ್ಯೋಧನನ ಮನೆಗೆ ಹೊರಟನು.
ಲಕ್ಷ್ಮ್ಯಾ ಪರಮಯಾ ಯುಕ್ತಂ ಪುರಂದರಗೃಹೋಪಮಮ್ |
ವಿಚಿತ್ರೈರಾಸನೈರ್ಯುಕ್ತಂ ಪ್ರವಿವೇಶ ಜನಾರ್ದನಃ ॥2॥
ಇಂದ್ರನ ಅರಮನೆಯಂತಿದ್ದ, ಮಹಾಸಂಪತ್ತಿನಿಂದ ಕೂಡಿದ, ವಿಚಿತ್ರವಾದ ಆಸನಗಳನ್ನು ಹೊಂದಿದ್ದ ಆ ಗೃಹವನ್ನು ಕೃಷ್ಣನು ಪ್ರವೇಶಿಸಿದನು.
ತಸ್ಯ ಕಕ್ಷ್ಯಾ ವ್ಯತಿಕ್ರಮ್ಯ ತಿಸ್ರೋ ದ್ವಾಃಸ್ಥೈರವಾರಿತಃ |
ತತೋಽಭ್ರಘನಸಂಕಾಶಂ ಗಿರಿಕೂಟಮಿವೋಚ್ಛ್ರಿತಮ್ ॥3॥
ಶ್ರಿಯಾ ಜ್ವಲಂತಂ ಪ್ರಾಸಾದಮಾರುರೋಹ ಮಹಾಯಶಾಃ ॥4॥
ದ್ವಾರಪಾಲಕರಿಂದ ತಡೆಯಲ್ಪಡದೆ, ಆ ಮನೆಯ ಮೂರುಹಂತಗಳನ್ನು ದಾಟಿ, ಪರ್ವತಶಿಖರದಂತೆ ಎತ್ತರವಾಗಿದ್ದ, ಬಿಳಿಯ ಮೋಡಗಳಂತೆ ಶೋಭಿಸುವ, ಕಾಂತಿಯಿಂದ ಬೆಳಗುವ ಉಪ್ಪರಿಗೆಯನ್ನು ಕೀರ್ತಿವಂತನಾದ ಅವನು ಏರಿದನು.
ತತ್ರ ರಾಜಸಹಸ್ರೈಶ್ಚ ಕುರುಭಿಶ್ಚಾಪಿ ಸಂವೃತಮ್ |
ಧಾರ್ತರಾಷ್ಟ್ರಂ ಮಹಾಬಾಹುಂ ದದರ್ಶಾಸೀನಮಾಸನೇ ॥5॥
ಅಲ್ಲಿ ಸಹಸ್ರರಾಜರಿಂದಲೂ, ಕೌರವರಿಂದಲೂ ಸುತ್ತುವರಿಯಲ್ಪಟ್ಟ, ಮಹಾಬಾಹುವಾದ ದುರ್ಯೋಧನನು ಆಸನದಲ್ಲಿ ಕುಳಿತಿರುವುದನ್ನು ನೋಡಿದನು.
ದುಃಶಾಸನಂ ಚ ಕರ್ಣಂ ಚ ಶಕುನಿಂ ಚಾಪಿ ಸೌಬಲಮ್ |
ದುರ್ಯೋಧನಸಮೀಪೇ ತಾನ್ ಆಸನಸ್ಥಾನ್ ದದರ್ಶ ಸಃ ॥6॥
ದುಶ್ಶಾಸನ, ಕರ್ಣ ಮತ್ತು ಶಕುನಿ ಇವರು ದುರ್ಯೋಧನನ ಸಮೀಪದಲ್ಲಿ ಆಸನದಲ್ಲಿ ಕುಳಿತಿರುವುದನ್ನು ಅವನು ನೋಡಿದನು.
ಅಭ್ಯಾಗಚ್ಛತಿ ದಾಶಾರ್ಹೇ ಧಾರ್ತರಾಷ್ಟ್ರೋ ಮಹಾಮನಾಃ |
ಉದತಿಷ್ಠತ್ ಸಹಾಮಾತ್ಯಃ ಪೂಜಯನ್ ಮಧುಸೂದನಮ್ ॥7॥
ಕೃಷ್ಣನು ಬರುತ್ತಿರಲು ಮಹಾಮನನಾದ ದುರ್ಯೋಧನನು ಕೃಷ್ಣನನ್ನು ಗೌರವಿಸುತ್ತಾ ಅಮಾತ್ಯರ ಜೊತೆಯಲ್ಲಿ ಎದ್ದುನಿಂತನು.
ಸಮೇತ್ಯ ಧಾರ್ತರಾಷ್ಟ್ರೇಣ ಸಾಮಾತ್ಯೇನ ಪರಂತಪಃ |
ರಾಜಭಿಸ್ತತ್ರ ವಾರ್ಷ್ಣೇಯಃ ಸಮಾಗಚ್ಛದ್ ಯಥಾವಯಃ ॥8॥
ಪರಂತಪನಾದ ಕೃಷ್ಣನು ದುರ್ಯೋಧನನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಅನಂತರ ವಯಸ್ಸಿಗೆ ಅನುಗುಣವಾಗಿ ಅಲ್ಲಿ ನೆರೆದ ಎಲ್ಲ ರಾಜರಿಂದಲೂ ಸಮಾಗಮವನ್ನು ಹೊಂದಿದನು.
ತತ್ರ ಜಾಂಬೂನದಮಯಂ ಪರ್ಯಂಕಂ ಸುಪರಿಷ್ಕೃತಮ್ |
ವಿವಿಧಾಸ್ತರಣಾಸ್ತೀರ್ಣಮಾವಿವೇಶ ಗದಾಗ್ರಜಃ ॥9॥
ಅಲ್ಲಿ ಸುವರ್ಣಮಯವಾದ, ಚೆನ್ನಾಗಿ ಅಲಂಕರಿಸಿದ, ಅನೇಕ ಹಾಸುಗಳಿಂದ ಹಾಸಲ್ಪಟ್ಟ ಮಂಚದಲ್ಲಿ ಗದಾಗ್ರಜನಾದ ಕೃಷ್ಣನು ಕುಳಿತನು.
ತಸ್ಮೈ ಗಾಂ ಮಧುಪರ್ಕಂ ಚ ಉದಕಂ ಚ ಜನಾರ್ದನೇ |
ನಿವೇದಯಾಮಾಸ ತದಾ ಗೃಹಾನ್ ರಾಜ್ಯಂ ಚ ಕೌರವಃ ॥10॥
ಜನಾರ್ದನನಾದ ಕೃಷ್ಣನಿಗೆ ದುರ್ಯೋಧನನು ಗೋವನ್ನೂ, ಮಧುಪರ್ಕವನ್ನೂ ಮತ್ತು ಉದಕವನ್ನೂ ನೀಡಿ, ತನ್ನ ಮನೆಯನ್ನು ಮತ್ತು ರಾಜ್ಯವನ್ನೂ ನಿವೇದಿಸಿದನು.
ಆಸನಂ ಸರ್ವತೋಭದ್ರಂ ಸರ್ವರತ್ನವಿಭೂಷಿತಮ್ |
ಕೃಷ್ಣಾರ್ಥಮೇವ ಸಂಸಿದ್ಧಂ ಧಾರ್ತರಾಷ್ಟ್ರಸ್ಯ ಶಾಸನಾತ್ ॥11॥
ತತ್ರ ಗೋವಿಂದಮಾಸೀನಂ ಪ್ರಸನ್ನಾದಿತ್ಯವರ್ಚಸಮ್ |
ಉಪಾಸಾಂಚಕ್ರಿರೇ ಸರ್ವೇ ಕುರವೋ ರಾಜಭಿಃ ಸಹ ॥12॥
ದುರ್ಯೋಧನನ ಶಾಸನದಿಂದಲೇ ನಿರ್ಮಿತವಾದ, ಬಹಳ ಮನೋಹರವಾದ, ಸರ್ವರತ್ನಗಳಿಂದ ಭೂಷಿತವಾದ, ಕೃಷ್ಣನಿಗಾಗಿಯೇ ಸಿದ್ಧಪಡಿಸಿದ ಆಸನದಲ್ಲಿ ಪ್ರಸನ್ನನಾಗಿ ಆದಿತ್ಯನ ಕಾಂತಿಯನ್ನು ಹೊಂದಿದ್ದಂತಹ ಆಸೀನನಾದ ಕೃಷ್ಣನನ್ನು ಕೌರವರು ಮತ್ತು ಉಳಿದ ಎಲ್ಲಾ ರಾಜರು ಗೌರವಿಸಿದರು.
ತತೋ ದುರ್ಯೋಧನೋ ರಾಜಾ ವಾರ್ಷ್ಣೇಯಂ ಜಯತಾಂ ವರಮ್|
ನ್ಯಮಂತ್ರಯದ್ ಭೋಜನೇನ ನಾಭ್ಯನಂದಚ್ಚ ಕೇಶವಃ ॥13॥
ಅನಂತರ ದುರ್ಯೋಧನನು ಜಯಶಾಲಿಗಳಲ್ಲಿ ಶ್ರೇಷ್ಠನಾದ ಕೃಷ್ಣನನ್ನು ಭೋಜನಕ್ಕಾಗಿ ಆಮಂತ್ರಿಸಿದನು, ಕೃಷ್ಣನು ಅದನ್ನು ಸ್ವೀಕರಿಸಲಿಲ್ಲ.
ತತೋ ದುರ್ಯೋಧನಃ ಕೃಷ್ಣಮಬ್ರವೀತ್ ಕುರುಸಂಸದಿ |
ಮೃದುಪೂರ್ವಂ ಶಠೋದರ್ಕಂ ಕರ್ಣಮಾಭಾಷ್ಯ ಕೌರವಃ ॥14॥
ಆಗ ಕೌರವನಾದ ದುರ್ಯೋಧನನು ಕರ್ಣನ ಮುಖವನ್ನು ನೋಡುತ್ತಾ ಕುರುಸಭೆಯಲ್ಲಿ ಕೃಷ್ಣನನ್ನು ಕುರಿತು ಮೊದಲು ಮನೋಮೃದುವಾಗಿ ಅನಂತರ ಶಾಠ್ಯದಿಂದ ಕೂಡಿದುದಾಗಿದ್ದ ಮಾತುಗಳನ್ನು ಆಡಿದನು.

ಕಸ್ಮಾದನ್ನಾನಿ ಪಾನಾನಿ ವಾಸಾಂಸಿ ಶಯನಾನಿ ಚ |
ತ್ವದರ್ಥಮುಪನೀತಾನಿ ನಾಭುಂಕ್ಥಾಸ್ತ್ವಂ ಜನಾರ್ದನ ॥15॥
ಎಲೈ ಜನಾರ್ದನನೇ, ನಾವು ನಿನಗಾಗಿ ಸಿದ್ಧಪಡಿಸಿದ ಅನ್ನ-ಪಾನಗಳನ್ನೂ ವಸ್ತ್ರಗಳನ್ನೂ ಮತ್ತು ಶಯನಗಳನ್ನೂ ನೀನು ಏಕೆ ಸ್ವೀಕರಿಸಲಿಲ್ಲ?
ಭೀಷ್ಮದ್ರೋಣಾವತಿಕ್ರಮ್ಯ ಮಾಂ ಚೈವ ಮಧುಸೂದನ |
ಕಿಮರ್ಥಂ ಪುಂಡರೀಕಾಕ್ಷ ಭುಕ್ತಂ ವೃಷಲಭೋಜನಮ್ ॥16॥
ಎಲೈ ಮಧುಸೂದನನೇ, ಭೀಷ್ಮ-ದ್ರೋಣರನ್ನು ಮೀರಿ, ನನ್ನನ್ನೂ ಮೀರಿ, ಎಲೈ ಪುಂಡರೀಕಾಕ್ಷನೇ, ಏಕೆ ಶೂದ್ರಾನ್ನವನ್ನು ಭೋಜನ ಮಾಡಿದೆ?
ಉಭಯೋಶ್ಚ ದದತ್ ಸಾಹ್ಯಮುಭಯೋಶ್ಚ ಹಿತೇ ರತಃ |
ಸಂಬಂಧೀ ದಯಿತಶ್ಚಾಸಿ ಧೃತರಾಷ್ಟ್ರಸ್ಯ ಮಾಧವ ॥17॥
ಎಲೈ ಮಾಧವನೇ, ಕೌರವ-ಪಾಂಡವರಿಬ್ಬರಿಗೂ ಸಹಾಯವನ್ನು ಮಾಡಿರುವ, ಇಬ್ಬರ ಹಿತದಲ್ಲೂ ನಿರತನಾದ ನೀನು ಧೃತರಾಷ್ಟ್ರನಿಗೆ ಸಂಬಂಧಿಯೂ ಮತ್ತು ಪ್ರಿಯನೂ ಆಗಿದ್ದೀಯೆ.
ತ್ವಂ ಹಿ ಗೋವಿಂದ ಧರ್ಮಾರ್ಥೌ ವೇತ್ಥ ತತ್ತ್ವೇನ ಸರ್ವಶಃ |
ತತ್ರ ಕಾರಣಮಿಚ್ಛಾಮಿ ಶ್ರೋತುಂ ತವ ಜನಾರ್ದನ ॥18॥
ಎಲೈ ಗೋವಿಂದನೇ, ನೀನು ಧರ್ಮಾರ್ಥಗಳನ್ನು ಚೆನ್ನಾಗಿ ತಿಳಿದಿದ್ದೀಯೆ. ಎಲೈ ಜನಾರ್ದನನೇ, ನೀನು ನಮ್ಮ ಸತ್ಕಾರವನ್ನು ನಿರಾಕರಿಸಲು ಕಾರಣವನ್ನು ಕೇಳಲು ಬಯಸುತ್ತೇನೆ.
ಸ ಏವಮುಕ್ತೋ ಗೋವಿಂದಃ ಪ್ರತ್ಯುವಾಚ ಮಹಾಮನಾಃ |
ಓಘಮೇಘಸ್ವನಃ ಕಾಲೇ ಪ್ರಗೃಹ್ಯ ವಿಪುಲಂ ಭುಜಮ್ ॥19॥
ಅನಂಬೂಕೃತಮತ್ರಸ್ತಮನಿಸ್ತಮಸಕುಂಡಲಃ |
ರಾಜೀವನೇತ್ರೋ ರಾಜಾನಂ ಹೇತುಮದ್ವಾಕ್ಯಮುತ್ತಮಮ್ ॥20॥
ಹೀಗೆ ಪ್ರಶ್ನಿಸಲ್ಪಟ್ಟ ಮಹಾಮನನಾದ ರಾಜೀವನೇತ್ರನೂ, ಪ್ರಕಾಶನಮಾನವಾದ ಕರ್ಣಕುಂಡಲಗಳನ್ನು ಧರಿಸಿದವನೂ ಆದ ಗೋವಿಂದನು ಭುಜವನ್ನು ಎತ್ತಿ ದುರ್ಯೋಧನನನ್ನು ಕುರಿತು, ಮೇಘಗಂಭೀರವಾದ ತನ್ನ ವಾಣಿಯಿಂದ ಅಬದ್ಧವಲ್ಲದ ನಿರ್ಭಯವಾದ ಶ್ರೇಷ್ಠವಾದ ಕಾರಣಸಹಿತವಾದ ಮಾತುಗಳನ್ನು ಮಾತನಾಡಿದನು.
ಕೃತಾರ್ಥಾ ಭುಂಜತೇ ದೂತಾಃ ಪೂಜಾಂ ಗೃಹ್ಣಂತಿ ಚೈವ ಹಿ |
ಕೃತಾರ್ಥಂ ಮಾ ಸಹಾಮಾತ್ಯಂ ಸಮರ್ಚಿಷ್ಯಸಿ ಭಾರತ ॥21॥
ದೂತರು ತಮ್ಮ ಕಾರ್ಯವು ಸಿದ್ಧಿಸಿದ ಮೇಲೆ ಭೋಜನವನ್ನು ಮಾಡುತ್ತಾರೆ ಮತ್ತು ಸತ್ಕಾರವನ್ನೂ ಸ್ವೀಕರಿಸುತ್ತಾರೆ. ಎಲೈ ಭಾರತನೇ, ಹಾಗೆ ಕೃತಾರ್ಥನಾದ ನನ್ನನ್ನು ಅಮಾತ್ಯರ ಜೊತೆಯಲ್ಲಿ ಪೂಜಿಸುವಿ.
ವೈಶಂಪಾಯನಃ
ಏವಮುಕ್ತಃ ಪ್ರತ್ಯುವಾಚ ಧಾರ್ತರಾಷ್ಟ್ರೋ ಜನಾರ್ದನಮ್ ॥22॥
ನ ಯುಕ್ತಂ ಭವತಾಽಸ್ಮಾಸು ಪ್ರತಿಪಕ್ತುಮಸಾಂಪ್ರತಮ್ ॥23॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ದುರ್ಯೋಧನನು ಕೃಷ್ಣನನ್ನು ಕುರಿತು ನಮ್ಮ ವಿಷಯದಲ್ಲಿ ನೀನು ಹೀಗೆ ಮಾತನಾಡುವುದು ಉಚಿತವಲ್ಲ ಎಂದು ಹೇಳಿದನು.
ಕೃತಾರ್ಥಂ ವಾಽಕೃತಾರ್ಥಂ ವಾ ತ್ವಾಂ ವಯಂ ಮಧುಸೂದನ |
ಯತಾಮಹೇ ಪೂಜಯಿತುಂ ದಾಶಾರ್ಹ ನ ಚ ಶಕ್ನುಮಃ ॥24॥
ಎಲೈ ಮಧುಸೂದನನೇ, ನೀನು ಕೃತಾರ್ಥನಾಗಲಿ ಅಥವಾ ಅಕೃತಾರ್ಥನಾಗಲಿ ನಿನ್ನನ್ನು ಪೂಜಿಸಲು ನಾವು ಪ್ರಯತ್ನಪಡುತ್ತೇವೆ. ಆದರೆ ದಾಶಾರ್ಹನೇ, ಅದನ್ನು ಮಾಡಲು ಸಾಧ್ಯವಾಗುತ್ತಿಲ್ಲ.
ನ ಚ ತತ್ಕಾರಣಂ ವಿದ್ಮೋ ಯಸ್ಮಾನ್ನೋ ಮಧುಸೂದನ |
ಪೂಜಾಂ ಕೃತಾಂ ಪ್ರೀಯಮಾಣೈರ್ನ ಭುಂಜೀಥಾಃ ಪರಂತಪ ॥25॥
ಎಲೈ ಮಧುಸೂದನನೇ, ಪರಂತಪನೇ, ನಾವು ಪ್ರೀತಿಯಿಂದ ಮಾಡಿದ ಪೂಜೆಯನ್ನು ನೀನು ಸ್ವೀಕರಿಸದೇ ಇರುವುದಕ್ಕೆ ನಾವು ಕಾರಣವನ್ನೂ ತಿಳಿಯುತ್ತಿಲ್ಲ.
ವೈರಂ ನೋ ನಾಸ್ತಿ ಭವತಾ ಗೋವಿಂದ ನ ಚ ವಿಗ್ರಹಃ |
ಸ ಭವಾನ್ ಪ್ರಸಮೀಕ್ಷ್ಯೈತನ್ನೇದೃಶಂ ವಕ್ತುಮರ್ಹತಿ ॥26॥
ಗೋವಿಂದನೇ, ನಿನ್ನ ಜೊತೆಯಲ್ಲಿ ನಮಗೆ ವೈರವಾಗಲೀ, ವಿರೋಧವಾಗಲೀ ಇಲ್ಲ. ನೀನು ಇದನ್ನು ಗಮನಿಸಿ ಹೀಗೆ ಮಾತನಾಡುವುದು ಯೋಗ್ಯವಲ್ಲ.
ಏವಮುಕ್ತಃ ಪ್ರತ್ಯುವಾಚ ಧಾರ್ತರಾಷ್ಟ್ರಂ ಜನಾರ್ದನಃ |
ಅಭಿವೀಕ್ಷ್ಯ ಸಹಾಮಾತ್ಯಂ ದಾಶಾರ್ಹಃ ಪ್ರಹಸನ್ನಿವ ॥27॥
ದುರ್ಯೋಧನನು ಹೀಗೆ ಮಾತನಾಡಿದಾಗ ದಾಶಾರ್ಹನಾದ ಜನಾರ್ದನನು ನಗುತ್ತಾ ಅಮಾತ್ಯರ ಜೊತೆಯಲ್ಲಿದ್ದ ದುರ್ಯೋಧನನನ್ನು ನೋಡಿ ಮಾತನಾಡಿದನು.
ನಾಹಂ ಕಾಮಾನ್ನ ಸಂರಂಭಾನ್ನ ದ್ವೇಷಾನ್ನಾರ್ಥಕಾರಣಾತ್ |
ನ ಹೇತುವಾದಾಲ್ಲೋಭಾದ್ವಾ ಧರ್ಮಂ ಜಹ್ಯಾಂ ಕಥಂಚನ ॥28॥

ನಾನು ಕಾಮದಿಂದಾಗಲೀ, ಕ್ರೋಧದಿಂದಾಗಲೀ, ದ್ವೇಷದಿಂದಾಗಲೀ, ಪ್ರಯೋಜನದ ಅಪೇಕ್ಷೆಯಿಂದಾಗಲೀ, ಹೇತುವಾದದಿಂದಾಗಲೀ, ಲೋಭದಿಂದಾಗಲೀ ಎಂದೂ ಧರ್ಮವನ್ನು ಬಿಡುವವನಲ್ಲ.
ಸಂಪ್ರೀತಿಭೋಜ್ಯಾನ್ಯನ್ನಾನಿ ಆಪದ್ಭೋಜ್ಯಾನಿ ವಾ ಪುನಃ |
ನ ಚ ಸಂಪ್ರೀಯಸೇ ರಾಜನ್ ನ ಚೈವಾಪದ್ಗತಾ ವಯಮ್ ॥29॥
ಸಂಪ್ರೀತಿ ಇರುವಲ್ಲಿ ಭೋಜನವನ್ನು ಮಾಡಬೇಕು ಅಥವಾ ಆಪತ್ತಿನಲ್ಲಿ ಭೋಜನವನ್ನು ಮಾಡಬೇಕು. ಎಲೈ ರಾಜನೇ, ನೀನು ನಮ್ಮ ಮೇಲೆ ಪ್ರೀತಿಯುಳ್ಳವನಲ್ಲ ಮತ್ತು ನಮಗೆ ಆಪತ್ತೂ ಒದಗಿಲ್ಲ.
ಅಕಸ್ಮಾದ್ ದ್ವಿಷಸೇ ರಾಜನ್ ಜನ್ಮಪ್ರಭೃತಿ ಪಾಂಡವಾನ್ |
ಪ್ರಿಯಾನುವರ್ತಿನೋ ಭ್ರಾತೄನ್ ಸರ್ವೈಃ ಸಮುದಿತಾನ್ ಗುಣೈಃ ॥30॥
ಎಲೈ ರಾಜನೇ, ನೀನು ಹುಟ್ಟಿದಾಗಿನಿಂದಲೂ ನಿಷ್ಕಾರಣವಾಗಿ ಸರ್ವಗುಣಗಳಿಂದಲೂ ಕೂಡಿದ, ಪ್ರಿಯವನ್ನು ಮಾಡುವ ನಿನ್ನ ಸಹೋದರರಾದ ಪಾಂಡವರನ್ನು ದ್ವೇಷಿಸುತ್ತಿದ್ದೀಯೆ.
ಅಕಸ್ಮಾಚ್ಚೈವ ಪಾರ್ಥಾನಾಂ ದ್ವೇಷಣಂ ನೋಪಪದ್ಯತೇ |
ಧರ್ಮೇ ಸ್ಥಿತಾಃ ಪಾಂಡವೇಯಾಃ ಕಸ್ತಾನ್ ಕಿಂ ವಕ್ತುಮರ್ಹತಿ ॥31॥
ನಿಷ್ಕಾರಣವಾಗಿ ಪಾಂಡವರನ್ನು ದ್ವೇಷಿಸುವುದು ಸರಿಯಲ್ಲ. ಪಾಂಡವರು ಧರ್ಮದಲ್ಲಿ ಸ್ಥಿತರಾದವರು. ಯಾವನು ತಾನೇ ಅವರ ವಿಷಯದಲ್ಲಿ ಏನನ್ನು ಹೇಳಲು ಸಾಧ್ಯ?
ಯಸ್ತಾನ್ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತಾನನು ಸ ಮಾಮನು |
ಐಕಾತ್ಮ್ಯಂ ಮಾಂ ಗತಂ ವಿದ್ಧಿ ಪಾಂಡವೈರ್ಧರ್ಮಚಾರಿಭಿಃ ॥32॥
ಯಾವನು ಪಾಂಡವರನ್ನು ದ್ವೇಷಿಸುತ್ತಾನೆಯೋ ಅವನು ನನ್ನನ್ನು ದ್ವೇಷಿಸುತ್ತಾನೆ. ಯಾವನು ಪಾಂಡವರಿಗೆ ಹಿತನೋ ಅವನು ನನಗೂ ಹಿತನು. ಧರ್ಮಶೀಲರಾದ ಪಾಂಡವರ ಜೊತೆಯಲ್ಲಿ ನಾನು ಏಕಾತ್ಮಭಾವವನ್ನು ಹೊಂದಿದ್ದೇನೆಂದು ತಿಳಿ.
ಕಾಮಕ್ರೋಧಾನುವರ್ತೀ ಹಿ ಯೋ ಮೋಹಾದ್ ವಿರುರುತ್ಸತೇ |
ಗುಣವಂತಂ ಚ ಯೋ ದ್ವೇಷ್ಟಿ ತಮಾಹುಃ ಪುರುಷಾಧಮಮ್ ॥33॥
ಯಾವನು ಕಾಮ-ಕ್ರೋಧಗಳಿಗೆ ವಶನಾಗಿ ಮೋಹದಿಂದ ಗುಣವಂತನನ್ನು ದ್ವೇಷಮಾಡಿ, ಅವನಿಗೆ ವಿರೋಧವನ್ನು ಮಾಡಲು ಬಯಸುತ್ತಾನೆಯೋ ಅವನನ್ನು ಪುರುಷಾಧಮನೆಂದು ಕರೆಯುತ್ತಾರೆ.
ಯಃ ಕಲ್ಯಾಣಗುಣಂ ರಾಜನ್ ಮೋಹಾನ್ನೋತ ದಿದೃಕ್ಷತೇ |
ಸೋಽಜಿತಾತ್ಮಾಽಜಿತಕ್ರೋಧೋ ನ ಚಿರಂ ತಿಷ್ಠತೇ ಶ್ರಿಯಾ ॥34॥
ಎಲೈ ರಾಜನೇ, ಯಾವನು ತನ್ನ ಮೋಹದಿಂದ (ಮಿಥ್ಯಾಜ್ಞಾನದಿಂದ) ಕಲ್ಯಾಣಗುಣಗಳು ಇರುವ ಕಡೆ ಗಮನಿಸಲು ಬಯಸುವುದಿಲ್ಲವೋ ಅಂತಹ ಮನೋಜಯವಿಲ್ಲದ, ಕ್ರೋಧವನ್ನು ಜಯಿಸದ ಮನುಷ್ಯನು ಬಹಳ ಕಾಲ ಸಂಪತ್ತನ್ನು ಹೊಂದಿರುವುದಿಲ್ಲ.
ಅಥ ಯೋ ಗುಣಸಂಪನ್ನಾನ್ ಹೃದಯಸ್ಯಾಪ್ರಿಯಾನಪಿ |
ಪ್ರಿಯೇಣ ಕುರುತೇ ವಶ್ಯಾನ್ ಚಿರಂ ಯಶಸಿ ತಿಷ್ಠತಿ ॥35॥
ಮತ್ತು ಯಾವನು ತನ್ನ ಮನಸ್ಸಿಗೆ ಅಪ್ರಿಯವಾದರೂ ಗುಣಸಂಪನ್ನರಿಗೆ ಪ್ರಿಯವನ್ನು ಮಾಡಿ ಅವರನ್ನು ವಶೀಕರಿಸಿಕೊಳ್ಳುತ್ತಾನೆಯೋ ಅವನು ಬಹುಕಾಲ ಕೀರ್ತಿಯನ್ನು ಪಡೆಯುತ್ತಾನೆ.
ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ |
ಪಾಂಡವಾನ್ ದ್ವಿಷಸೇ ರಾಜನ್ ಮಮ ಪ್ರಾಣಾ ಹಿ ಪಾಂಡವಾಃ ॥
ದ್ವೇಷವನ್ನು ಮಾಡುವವನ ಮನೆಯ ಅನ್ನವನ್ನು ಭುಂಜಿಸಬಾರದು ಮತ್ತು ದ್ವೇಷವನ್ನು ಮಾಡುವವನಿಗೆ ಅನ್ನವನ್ನೂ ಕೊಡಬಾರದು. ರಾಜನೇ, ನೀನು ಪಾಂಡವರನ್ನು ದ್ವೇಷಿಸುತ್ತೀಯೆ. ಆದರೆ ಪಾಂಡವರು ನನ್ನ ಪ್ರಾಣರಾದವರು.
ಸರ್ವಮೇತನ್ನ ಭೋಕ್ತವ್ಯಮನ್ನಂ ದುಷ್ಟಾಭಿಸಂಹಿತಮ್ |
ಕ್ಷತ್ತುರೇಕಸ್ಯ ಭೋಕ್ತವ್ಯಮಿತಿ ಮೇ ಧೀಯತೇ ಮತಿಃ ॥37॥
ದುರುದ್ದೇಶದಿಂದ ಕೂಡಿದ ನೀನು ಮಾಡಿದ ಈ ಯಾವ ಅನ್ನವನ್ನೂ ತಿನ್ನಬಾರದು. ವಿದುರನೊಬ್ಬನ ಅನ್ನವನ್ನು ಸ್ವೀಕರಿಸಬೇಕೆಂದು ನನ್ನ ಅಭಿಪ್ರಾಯ.
ಏವಮುಕತ್ವಾ ಮಹಾಬಾಹುಃ ದುರ್ಯೋಧನಮಮರ್ಷಣಮ್ |
ನಿಶ್ಚಕ್ರಾಮ ತತಃ ಶುಭ್ರಾದ್ ಧಾರ್ತರಾಷ್ಟ್ರನಿವೇಶನಾತ್ ॥38॥
ಮಹಾಬಾಹುವಾದ ಕೃಷ್ಣನು ರೋಷಶೀಲನಾದ ದುರ್ಯೋಧನನಿಗೆ ಹೀಗೆ ಮಾತನಾಡಿ ಶುಭ್ರವಾದ ದುರ್ಯೋಧನನ ಮನೆಯಿಂದ ಹೊರಗೆ ಬಂದನು.
ನಿರ್ಯಾಯ ಚ ಮಹಾಬಾಹುಃ ವಾಸುದೇವೋ ಮಹಾಮನಾಃ |
ನಿವೇಶಾಯ ಯಯೌ ವೇಶ್ಮ ವಿದುರಸ್ಯ ಮಹಾತ್ಮನಃ ॥39॥
ಹೊರಗೆ ಬಂದ ಮಹಾಬಾಹುವಾದ, ಮಹಾಮನನಾದ ವಾಸುದೇವನು ಮಹಾತ್ಮನಾದ ವಿದುರನ ಮನೆಗೆ ಹೋದನು.
ತಮಭ್ಯಗಚ್ಛದ್ ದ್ರೋಣಶ್ಚ ಕೃಪೋ ಭೀಷ್ಮೋಽಥ ಬಾಹ್ಲಿಕಃ |
ಕುರವಶ್ಚ ಮಹಾಬಾಹುಂ ವಿದುರಸ್ಯ ಗೃಹಾತಿಥಿಮ್ ॥40॥
ದ್ರೋಣ, ಕೃಪ, ಭೀಷ್ಮ, ಬಾಹ್ಲೀಕ ಮತ್ತು ಕುರುಗಳು ವಿದುರನ ಮನೆಗೆ ಅತಿಥಿಯಾಗಿ ಬಂದ ಆ ಮಹಾಬಾಹುವನ್ನು ಹಿಂಬಾಲಿಸಿದರು.
ತೇಽಭಿಗಮ್ಯಾಬ್ರುವಂಸ್ತತ್ರ ಕುರವೋ ಮಧುಸೂದನಮ್ ॥41॥

ನಿವೇದಯಾಮೋ ವಾರ್ಷ್ಣೇಯ ಸರತ್ನಾಂಸ್ತೇ ಗೃಹಾನ್ ವಯಮ್ ॥
ಆ ಕೌರವರು ಮಧುಸೂದನನನ್ನು ಸಮೀಪಿಸಿ ಅಲ್ಲಿ ಎಲೈ ಕೃಷ್ಣನೇ, ರತ್ನಸಹಿತವಾದ ನಮ್ಮ ಮನೆಗಳನ್ನು ನಿನಗೆ ನಿವೇದಿಸುತ್ತೇವೆ ಎಂದು ಹೇಳಿದರು.
ತಾನುವಾಚ ಮಹಾತೇಜಾಃ ಕೌರವಾನ್ ಮಧುಸೂದನ ॥43॥
ಸರ್ವೇ ಭವಂತೋ ಗಚ್ಛಂತು ಸರ್ವಾ ಮೇಽಪಚಿತಿಃ ಕೃತಾ ॥44॥
ಮಹಾತೇಜಸ್ವಿಯಾದ ಮಧುಸೂದನನು ಆ ಕೌರವರನ್ನು ಕುರಿತು ನೀವೆಲ್ಲರೂ ಹೊರಟುಹೋಗಿ ನನಗೆ ಎಲ್ಲಾ ಪೂಜೆಯೂ ಸಂದಿದೆ ಎಂದು ಹೇಳಿದನು.
ವೈಶಂಪಾಯನ
ಯಾತೇಷು ಕುರುಷು ಕ್ಷತ್ತಾ ದಾಶಾರ್ಹಮಪರಾಜಿತಮ್ ।
ಅಭ್ಯರ್ಚಯಾಮಾಸ ತದಾ ಸರ್ವಕಾಮ್ಯೈರುಪಸ್ಥಿತಃ ॥45॥
ವೈಶಂಪಾಯನ ಕೌರವರು ಹೊರಟು ಹೋದ ಮೇಲೆ ವಿದುರನು ಅಪರಾಜಿತನಾದ ಕೃಷ್ಣನನ್ನು ಸರ್ವವಸ್ತುಗಳಿಂದಲೂ ಸಿದ್ಧನಾಗಿ ಪೂಜಿಸಿದನು.
ತತಃ ಕ್ಷತ್ತಾಽನ್ನಪಾನಾನಿ ಶುಚೀನಿ ಗುಣವಂತಿ ಚ ।
ಉಪಾಹರದನೇಕಾನಿ ಕೇಶವಾಯ ಮಹಾತ್ಮನೇ ॥46॥
ಆಗ ವಿದುರನು ಮಹಾತ್ಮನಾದ ಕೇಶವನಿಗೆ ಶುಚಿಯಾದ, ಗುಣದಿಂದ ಕೂಡಿದ ಅನೇಕ ಬಗೆಯ ಅನ್ನ-ಪಾನಗಳನ್ನು ನೀಡಿದನು.
ತೈಸ್ತರ್ಪಯಿತ್ವಾ ಪ್ರಥಮಂ ಬ್ರಾಹ್ಮಣಾನ್ ಮಧುಸೂದನಃ ।
ವೇದವಿದ್ಭ್ಯೋ ದದೌ ಕೃಷ್ಣಃ ಪರಮದ್ರುವಿಣಾನ್ಯಪಿ ॥47॥
ಮಧುಸೂದನನಾದ ಕೃಷ್ಣನು ಮೊದಲು ಆ ಅನ್ನ-ಪಾನಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ, ವೇದವೇತ್ತರಾದ ಅವರಿಗೆ ಶ್ರೇಷ್ಠವಾದ ದ್ರವ್ಯಗಳನ್ನು ದಾನಮಾಡಿದನು.
ಭುಕ್ತವತ್ಸು ದ್ವಿಜಾಗ್ರ್ಯೇಷು ನಿಷಣ್ಣೇಷು ವರಾಸನೇ ।
ಶುಚಿಃ ಸುಪ್ರಯತೋ ಭೂತ್ವಾ ವಿದುರೋಽನ್ನಮುಪಾಹರತ್ ॥48॥
ಶ್ರದ್ಧಯಾ ಪರಯಾ ಯುಕ್ತ ಇದಂ ವಚನಮಬ್ರವೀತ್ ॥49॥
ಬ್ರಾಹ್ಮಣರು ಭೋಜನವನ್ನು ಮಾಡಿ ಶ್ರೇಷ್ಠವಾದ ಆಸನಗಳ ಮೇಲೆ ಕುಳಿತ ಮೇಲೆ ವಿದುರನು ಶುಚಿಯಾಗಿ, ಪರಮಶ್ರದ್ಧೆಯಿಂದ ಕೂಡಿದವನಾಗಿ ಎಚ್ಚರಿಕೆಯಿಂದ ಅನ್ನವನ್ನು ಬಡಿಸುತ್ತಾ ಹೀಗೆ ಮಾತನಾಡಿದನು.
ಸಂಭ್ರಮ್ಯೈಸ್ತುಷ್ಯ ಗೋವಿಂದ ಏತನ್ನಃ ಪರಮಂ ಧನಮ್ ।
ಅನ್ಯಥಾ ಹಿ ವಿಶೇಷೇಣ ಕಸ್ತ್ವಾಮರ್ಚಿತುಮರ್ಹತಿ ॥50॥
ಗೋವಿಂದನೇ, ನಮ್ಮ ಭಕ್ತಿಉದ್ರೇಕದಿಂದಲೇ ನೀನು ತೃಪ್ತಿಪಡಬೇಕು. ಇದೇ ನಮ್ಮ ಶ್ರೇಷ್ಠವಾದ ಧನ. ಇಲ್ಲದಿದ್ದರೆ ಯಾರು ನಿನ್ನನ್ನು ವಿಶೇಷವಾಗಿ ಪೂಜಿಸಲು ಸಮರ್ಥರಾಗುತ್ತಾರೆ?
ವೈಶಂಪಾಯನಃ
ತತೋಽನುಯಾಯಿಭಿಃ ಸಾರ್ಧಂ ನಿಷಣ್ಣಃ ಪರಮಾಸನೇ ।
ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿ ಚ ॥51॥
ವೈಶಂಪಾಯನ ಅನಂತರ ಶ್ರೇಷ್ಠವಾದ ಆಸನದಲ್ಲಿ ಕುಳಿತ ಕೃಷ್ಣನು ತನ್ನ ಅನುಚರರಿಂದ ಸಹಿತನಾಗಿ ಶುಚಿಯೂ, ಗುಣಪೂರಿತವೂ ಆಗಿದ್ದ ವಿದುರನ ಅನ್ನಗಳನ್ನು ಭುಂಜಿಸಿದನು.
ತಂ ಭುಕ್ತವಂತಂ ವಿವಿಧಾಃ ಸುಶಬ್ದಾಃ ಸೂತಮಾಗಧಾಃ ।
ಅಭಿತುಷ್ಟುವುರಾಸೀನಂ ದಾಶಾರ್ಹಮಪರಾಜಿತಮ್ ॥52॥
ಕೃಷ್ಣನು ಭೋಜನವನ್ನು ಮಾಡಿ ಕುಳಿತಿರಲು ಅಪರಾಜಿತನಾದ ಆ ದಾಶಾರ್ಹನನ್ನು ಸೂತ-ಮಾಗಧರು ಅನೇಕ ವಿಧವಾದ ಒಳ್ಳೆಯ ಶಬ್ದಗಳಿಂದ ಕೂಡಿದ ಸ್ತೋತ್ರಗಳಿಂದ ಸ್ತೋತ್ರ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ನವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂದನೆಯ ಅಧ್ಯಾಯ
ಉದ್ಧತನಾದ ದುರ್ಯೋಧನನ ಬಳಿಗೆ ಸಂಧಿಗಾಗಿ
ಹೋಗದಿರುವಂತೆ ಕೃಷ್ಣನ ಬಳಿ ವಿದುರನ ಒತ್ತಾಯ.
ವೈಶಂಪಾಯನಃ
ತಂ ಭುಕ್ತವಂತಮಾಶ್ವಸ್ತಂ ನಿಶಾಯಾಂ ವಿದುರೋಽಬ್ರವೀತ್ ।
ನೇದಂ ಸಮ್ಯಗ್ ವ್ಯವಸಿತಂ ಕೇಶವಾಗಮನಂ ತವ ॥1॥
ವೈಶಂಪಾಯನ ಭೋಜನವನ್ನು ಮಾಡಿ ವಿಶ್ರಾಂತಿಯನ್ನು ಪಡೆಯುತ್ತಿದ್ದ ಕೃಷ್ಣನನ್ನು ಕುರಿತು ರಾತ್ರಿಯ ವೇಳೆಯಲ್ಲಿ ವಿದುರನು ಕೇಶವನೇ, ನೀನು ಇಲ್ಲಿಗೆ ಬಂದುದು ಸರಿಯಾದ ನಿರ್ಧಾರವಲ್ಲ ಎಂದು ಹೇಳಿದನು.
ಅರ್ಥಧರ್ಮಾತಿಗೋ ಮೂಢಃ ಸಂರಂಭೀ ಚ ಜನಾರ್ದನ ।

ಮಾನಘ್ನೋ ಮಾನಕಾಮಶ್ಚ ವೃದ್ಧಾನಾಂ ಶಾಸನಾತಿಗಃ ॥2॥
ಎಲೈ ಜನಾರ್ದನನೇ, ದುರ್ಯೋಧನನು ಅರ್ಥ-ಧರ್ಮಗಳೆರಡನ್ನೂ ಮೀರಿದವನು, ಮೂಢನಾದವನು, ಕ್ರೋಧವುಳ್ಳವನು, ಇನ್ನೊಬ್ಬರಿಗೆ ಮರ್ಯಾದೆಯನ್ನು ಕೊಡದವನು. ತಾನು ಮಾತ್ರ ಎಲ್ಲರಿಂದಲೂ ಗೌರವವನ್ನು ಅಪೇಕ್ಷಿಸುವವನು ಮತ್ತು ದೊಡ್ಡವರ ಮಾತನ್ನು ಮೀರುವವನು.
ಧರ್ಮಶಾಸ್ತ್ರಾತಿಗೋ ಮಂದೋ ದುರಾತ್ಮಾ ಪ್ರಗ್ರಹಂ ಗತಃ |
ಅನೇಯಃ ಶ್ರೇಯಸಾಂ ಪಾಪೋ ಧಾರ್ತರಾಷ್ಟ್ರೋ ಜನಾರ್ದನ ॥3॥
ಜನಾರ್ದನನೇ, ಅವನು ಧರ್ಮಶಾಸ್ತ್ರವನ್ನು ಮೀರಿದವನು, ಮಂದನಾದವನು, ದುಷ್ಟನೂ, ಕೆಟ್ಟಹಠವನ್ನು ಹೊಂದಿದವನೂ, ಶ್ರೇಯೋಮಾರ್ಗದಲ್ಲಿ ನಡೆಯದವನೂ ಮತ್ತು ಪಾಪಿಯೂ ಆಗಿದ್ದಾನೆ.
ಕಾಮಾತ್ಮಾ ಪ್ರಾಜ್ಞಮಾನೀ ಚ ಮಿತ್ರಧ್ರುಕ್ ಸರ್ವಶಂಕಿತಾ |
ಅಕರ್ತಾ ಚಾಕೃತಜ್ಞಶ್ಚ ತ್ಯಕ್ತಧರ್ಮಾ ಪ್ರಿಯಾನೃತಃ ॥4॥
ಭೋಗದಲ್ಲಿ ಮನಸ್ಸುಳ್ಳವನೂ, ತನ್ನನ್ನು ಪ್ರಾಜ್ಞನೆಂದು ತಿಳಿದವನೂ, ಮಿತ್ರದ್ರೋಹಿಯೂ, ಎಲ್ಲರಲ್ಲಿಯೂ ಸಂಶಯಪಡುವವನೂ, ಒಳ್ಳೆಯ ಕೆಲಸವನ್ನು ಮಾಡದವನೂ, ಕೃತಜ್ಞನಲ್ಲದವನೂ, ಧರ್ಮವನ್ನು ತ್ಯಜಿಸಿದವನೂ ಮತ್ತು ಅನೃತಪ್ರಿಯನೂ ಆಗಿದ್ದಾನೆ.
ಗೂಢಶ್ಚಾಕೃತಬುದ್ಧಿಶ್ಚ ಇಂದ್ರಿಯಾಣಾಮನೀಶ್ವರಃ |
ಕಾಮಾನುಸಾರೀ ಕೃತ್ಯೇಷು ಸರ್ವೇಷು ಕೃತನಿಶ್ಚಯಃ ॥5॥
ತನ್ನ ಮನಸ್ಸಿನ ಅಭಿಪ್ರಾಯವನ್ನು ಇನ್ನೊಬ್ಬರಿಗೆ ಹೇಳದವನೂ, ಅಸಂಸ್ಕೃತ ಬುದ್ಧಿಯುಳ್ಳವನೂ, ಇಂದ್ರಿಯಜಯವಿಲ್ಲದವನೂ, ಕಾಮಕ್ಕೆ ವಶನಾದವನೂ ಮತ್ತು ಎಲ್ಲಾ ಕಾರ್ಯಗಳನ್ನೂ ತಾನು ಹೇಳಿದಂತೆಯೇ ಮಾಡಬೇಕೆಂಬ ಹಠವುಳ್ಳವನು.
ಏತೈಶ್ಚಾನ್ಯೈಶ್ಚ ಬಹುಭಿಃ ದೋಷೈರೇವ ಸಮನ್ವಿತಃ |
ತ್ವಯೋಚ್ಯಮಾನಂ ಶ್ರೇಯೋಽಪಿ ಸಂರಂಭಾನ್ನ ಕರಿಷ್ಯತಿ ॥6॥
ಇವುಗಳಿಂದ ಮತ್ತು ಇನ್ನೂ ಅನೇಕ ದೋಷಗಳಿಂದ ಕೂಡಿದ ಅವನು ತನ್ನ ಕೋಪದಿಂದ ನೀನು ಹೇಳುವ ಶ್ರೇಯೋಮಾರ್ಗವನ್ನು ಅನುಸರಿಸುವುದಿಲ್ಲ.
ಭೀಷ್ಮೇ ದ್ರೋಣೇ ಕೃಪೇ ಕರ್ಣೇ ದ್ರೋಣಪುತ್ರೇ ಜಯದ್ರಥೇ |
ಭೂಯಸೀ ವರ್ತತೇ ವೃತ್ತಿಃ ನ ಶಮೇ ಕುರುತೇ ಮನಃ ॥7॥
ಭೀಷ್ಮ, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ ಮತ್ತು ಜಯದ್ರಥ ಇವರು ಅವನು ಕೊಟ್ಟ ಧನ-ದಾನಾದಿಗಳಿಂದ ಅವನನ್ನು ಬಹಳವಾಗಿ ಅನುಸರಿಸುತ್ತಾರೆ. ಆದ್ದರಿಂದ ಅವನು ಸಂಧಿಯನ್ನು ಒಪ್ಪುವುದಿಲ್ಲ.
ನಿಶ್ಚಿತಂ ಧಾರ್ತರಾಷ್ಟ್ರಾಣಾಂ ಸಕರ್ಣಾನಾಂ ಜನಾರ್ದನ |
ಭೀಷ್ಮದ್ರೋಣಮುಖಾನ್ ಪಾರ್ಥಾ ನ ಶಕ್ತಾಃ ಪ್ರತಿವೀಕ್ಷಿತುಮ್ ॥8॥
ಎಲೈ ಜನಾರ್ದನನೇ, ಭೀಷ್ಮ-ದ್ರೋಣಾದಿಗಳನ್ನು ಪಾಂಡವರು ಕಣ್ಣಿನಿಂದ ನೋಡುವುದಕ್ಕೂ ಅಸಮರ್ಥರು ಎಂದು ಕರ್ಣಸಹಿತರಾದ ಧೃತರಾಷ್ಟ್ರಪುತ್ರರೆಲ್ಲರಿಗೂ ಇರುವ ನಿಶ್ಚಯ.
ಸೇನಾಸಮುದಯಂ ದೃಷ್ಟ್ವಾ ಪಾರ್ಥಿವಂ ಮಧುಸೂದನ |
ಕೃತಾರ್ಥಂ ಮನ್ಯತೇ ಬಾಲ ಆತ್ಮಾನಮವಿಚಕ್ಷಣಃ ॥9॥
ಬಾಲನೂ, ಅವಿವೇಕಿಯೂ ಆದ ದುರ್ಯೋಧನನು ಎಲೈ ಮಧುಸೂದನನೇ, ರಾಜರ ಸೇನಾಸಮುದಾಯವನ್ನು ನೋಡಿ ತನ್ನನ್ನು ಕೃತಾರ್ಥನೆಂದು ಭಾವಿಸಿದ್ದಾನೆ.
ಏಕಃ ಕರ್ಣಃ ಪರಾನ್ ಜೇತುಂ ಸಮರ್ಥ ಇತಿ ನಿಶ್ಚಯಃ |
ಧಾರ್ತರಾಷ್ಟ್ರಸ್ಯ ದುರ್ಬುದ್ಧೇಃ ಸ ಶಮಂ ನೋಪಲಪ್ಸ್ಯತೇ ॥10॥
ದುರ್ಬುದ್ಧಿಯುಳ್ಳ ದುರ್ಯೋಧನನಿಗೆ ಕರ್ಣನೊಬ್ಬನೇ ಎಲ್ಲಾ ಶತ್ರುಗಳನ್ನೂ ಜಯಿಸಲು ಸಮರ್ಥನೆಂಬ ನಿಶ್ಚಯವಿದೆ. ಅವನು ಸಂಧಿಯನ್ನು ಒಪ್ಪುವುದಿಲ್ಲ.
ನಿಶ್ಚಿತಂ ಧಾರ್ತರಾಷ್ಟ್ರಾಣಾಂ ಸರ್ವೇಷಾಮೇವ ಕೇಶವ |
ಶಮೇ ಪ್ರಯತಮಾನಸ್ಯ ತವ ಶಾಸನಲಂಘನಮ್ ॥11॥
ಎಲೈ ಕೇಶವನೇ, ಸಂಧಿಗಾಗಿ ಪ್ರಯತ್ನಪಡುವ ನಿನ್ನ ಶಾಸನವನ್ನು ಎಲ್ಲ ಧೃತರಾಷ್ಟ್ರ ಪುತ್ರರೂ ಮೀರುತ್ತಾರೆ ಎಂಬುದು ನಿಶ್ಚಿತವಾಗಿದೆ.
ನ ಪಾಂಡವಾನಾಮಸ್ಮಾಭಿಃ ಪ್ರತಿದೇಯಂ ಯಥೋಚಿತಮ್ |
ಇತಿ ವ್ಯವಸಿತಾಸ್ತೇಷು ವಚನಂ ಸ್ಯಾನ್ನಿರರ್ಥಕಮ್ ॥12॥
ಪಾಂಡವರಿಗೆ ನಾವು ಯೋಗ್ಯವಾದ ರಾಜ್ಯಾಂಶವನ್ನು ಕೊಡಬಾರದು ಎಂದು ಅವರ ನಿರ್ಧಾರವಿದೆ. ನಿನ್ನ ಮಾತುಗಳು ಅವರಲ್ಲಿ ವ್ಯರ್ಥವಾಗುತ್ತವೆ.
ಯತ್ರ ಸೂಕ್ತಂ ದುರುಕ್ತಂ ಚ ಸಮಂ ಸ್ಯಾನ್ಮಧುಸೂದನ |
ನ ತತ್ರ ಪ್ರಲಪೇತ್ ಪ್ರಾಜ್ಞೋ ಬಧಿರೇಷ್ವಿವ ಗಾಯನಃ ॥13॥
ಎಲೈ ಮಧುಸೂದನನೇ, ಎಲ್ಲಿ ಒಳ್ಳೆಯ ಮಾತುಗಳು ಮತ್ತು ಕೆಟ್ಟ ಮಾತುಗಳು ಸಮಾನವಾಗುತ್ತವೆಯೋ ಅಲ್ಲಿ ವಿವೇಕಿಯಾದವನು ಸಂಗೀತಗಾರನು ಕಿವುಡನ ಮುಂದೆ ಗಾನವನ್ನು ಮಾಡಿದಂತೆ ಮಾತನಾಡಬಾರದು.
ಅವಿಜಾನತ್ಸು ಮೂಢೇಷು ನಿರ್ಮರ್ಯಾದೇಷು ಮಾಧವ |
ತತ್ತ್ವಂ ವಾಕ್ಯಂ ಬ್ರುವನ್ ನಿಂದ್ಯಃ ಚಂಡಾಲೇಷು ದ್ವಿಜೋ ಯಥಾ ॥

ಎಲೈ ಮಾಧವನೇ, ಜ್ಞಾನರಹಿತರಾದ, ಮೂಢರಾದ, ಮರ್ಯಾದಾರಹಿತರಾದ ವ್ಯಕ್ತಿಗಳಿಗೆ ತತ್ತ್ವೋಪದೇಶವನ್ನು ಮಾಡುವವನು, ಚಂಡಾಲನಿಗೆ ವೇದೋಪದೇಶವನ್ನು ಮಾಡುವ ದ್ವಿಜನಂತೆ ನಿಂದ್ಯನಾಗುತ್ತಾನೆ.
ಸೋಽಯಂ ಬಲಸ್ಥೋ ಮೂಢಶ್ಚ ನ ಕರಿಷ್ಯತಿ ತೇ ವಚಃ |
ತಸ್ಮಿನ್ ನಿರರ್ಥಕಂ ವಾಕ್ಯಮುಕ್ತಂ ಸಂಪತ್ಸ್ಯತೇ ತವ ॥15॥
ಅಂತಹ ಈ ದುರ್ಯೋಧನನು ಸೈನ್ಯದ ಮಧ್ಯದಲ್ಲಿದ್ದಾನೆ ಮತ್ತು ಮೂಢನಾಗಿದ್ದಾನೆ. ನಿನ್ನ ಮಾತುಗಳನ್ನು ನಡೆಸುವುದಿಲ್ಲ. ನೀನು ಆಡುವ ಮಾತುಗಳು ಅವನಲ್ಲಿ ನಿರರ್ಥಕವಾಗುವುವು.
ತೇಷಾಂ ಸಮುಪವಿಷ್ಟಾನಾಂ ಸರ್ವೇಷಾಂ ಪಾಪಚೇತಸಾಮ್ |
ತವ ಮಧ್ಯಾವತರಣಂ ಮಮ ಕೃಷ್ಣ ನ ರೋಚತೇ ॥16॥
ಎಲೈ ಕೃಷ್ಣನೇ, ಪಾಪಬುದ್ಧಿಯುಳ್ಳ ಅವರೆಲ್ಲರೂ ಒಟ್ಟಿಗೆ ಕುಳಿತಿರುವಾಗ ಮಧ್ಯದಲ್ಲಿ ನೀನು ಹೋಗುವುದು ನನಗೆ ಇಷ್ಟವಾಗುವುದಿಲ್ಲ.
ದುರ್ಬುದ್ಧೀನಾಮಶಿಷ್ಟಾನಾಂ ಬಹೂನಾಂ ಪಾಪಚೇತಸಾಮ್ |
ಪ್ರತೀಪಂ ವಚನಂ ಮಧ್ಯೇ ತವ ಕೃಷ್ಣ ನ ರೋಚತೇ ॥17॥
ಎಲೈ ಕೃಷ್ಣನೇ, ದುರ್ಬುದ್ಧಿಗಳೂ, ಅಶಿಷ್ಟರೂ, ಪಾಪಬುದ್ಧಿಯುಳ್ಳವರೂ ಆದ ಅನೇಕ ಜನರ ಮುಂದೆ ನೀನು ಆಡುವ ವಿರೋಧಿಯಾದ ಮಾತುಗಳು ನನಗೆ ಇಷ್ಟವಾಗುವುದಿಲ್ಲ.
ಅನುಪಾಸಿತವೃದ್ಧತ್ವಾತ್ ಶ್ರಿಯೋ ಮೋಹೇನ ದರ್ಪಿತಃ |
ವಯೋದರ್ಪಾದಮರ್ಷಾಚ್ಚ ನ ತೇ ಶ್ರೇಯೋ ಗ್ರಹೀಷ್ಯತಿ ॥18॥
ದೊಡ್ಡವರ ಸೇವೆಯನ್ನು ಮಾಡದೆ ಸಂಪತ್ತಿನ ಮೋಹದಿಂದ ದರ್ಪಿಷ್ಠನಾದ ಅವನು ವಯಸ್ಸು, ದರ್ಪ ಮತ್ತು ರೋಷದಿಂದ ಕೂಡಿದವನಾಗಿ ನೀನು ಹೇಳುವ ಶ್ರೇಯಸ್ಸನ್ನು ಗ್ರಹಿಸುವುದಿಲ್ಲ.
ವಚೋ ಬಲವದಪ್ಯಸ್ಯ ಯದಿ ವಕ್ಷ್ಯಸಿ ಮಾಧವ |
ತ್ವಯ್ಯಸ್ಯ ಮಹತೀ ಶಂಕಾ ನ ಕರಿಷ್ಯತಿ ತೇ ವಚಃ ॥19॥
ಎಲೈ ಮಾಧವನೇ, ನೀನು ಅವನಿಗೆ ಪ್ರಬಲವಾದ ಮಾತುಗಳನ್ನು ಹೇಳಿದರೂ ಅವನಿಗೆ ನಿನ್ನಲ್ಲಿ ದೊಡ್ಡಸಂಶಯವೇ ಉಂಟಾಗುತ್ತದೆ. ನಿನ್ನ ಮಾತುಗಳನ್ನು ಕೇಳುವುದಿಲ್ಲ.
ನೇದಮಸ್ಯ ಯುಧಾ ಶಕ್ಯಮಿಂದ್ರೇಣಾಪಿ ಸಹಾಮರೈಃ |
ಇತಿ ವ್ಯವಸಿತಾಃ ಸರ್ವೇ ಧಾರ್ತರಾಷ್ಟ್ರಾ ಜನಾರ್ದನ ॥20॥
ಎಲೈ ಜನಾರ್ದನನೇ, ದುರ್ಯೋಧನನ ರಾಜ್ಯವನ್ನು ಇಂದ್ರಾದಿ ದೇವತೆಗಳೂ ಸಹ ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ ಎಂದು ದುರ್ಯೋಧನಾದಿಗಳೆಲ್ಲರ ನಿಶ್ಚಿತವಾದ ಅಭಿಪ್ರಾಯವಿದೆ.
ತೇಷ್ವೇವಮುಪಪನ್ನೇಷು ಕಾಮಕ್ರೋಧಾನುವರ್ತಿಷು |
ಸಮರ್ಥಮಪಿ ತೇ ವಾಕ್ಯಮಸಮರ್ಥಂ ಭವಿಷ್ಯತಿ ॥21॥
ಕಾಮ-ಕ್ರೋಧಗಳಿಗೆ ವಶರಾದ ಅವರು ಇಂತಹ ಬುದ್ಧಿಯನ್ನು ಹೊಂದಿರುವಾಗ ಸಮರ್ಥವಾದರೂ ನಿನ್ನ ಮಾತುಗಳು ಅಸಮರ್ಥವಾಗುತ್ತವೆ.
ಮಧ್ಯೇ ತಿಷ್ಠನ್ ಹಸ್ತಿಯೂಥಸ್ಯ ಮಂದೋ
 ರಥಾಶ್ವಯುಕ್ತಸ್ಯ ಬಲಸ್ಯ ಮೂಢಃ |
ದುರ್ಯೋಧನೋ ಮನ್ಯತೇ ವೀತಮನ್ಯುಃ
 ಕೃತ್ಸ್ನಾ ಮಮೇಯಂ ಪೃಥಿವೀ ಜಿತೇತಿ ॥22॥
ಮೂಢನೂ, ಮಂದನೂ ಆದ ದುರ್ಯೋಧನನು ಪಾಂಡವರ ಮೇಲೆ ಬಹಳ ಕೋಪವನ್ನು ಹೊಂದಿದವನಾಗಿ, ರಥಾಶ್ವಯುಕ್ತವಾದ ಗಜಗಳ ಮಧ್ಯೆ ಇದ್ದು, ನಾನು ಸಮಸ್ತವಾದ ಪೃಥಿವಿಯನ್ನೂ ಗೆದ್ದಿದ್ದೇನೆ ಎಂದೇ ತಿಳಿದಿದ್ದಾನೆ.
ಆಶಂಸತೇ ವೈ ಧೃತರಾಷ್ಟ್ರಸ್ಯ ಪುತ್ರೋ
 ಮಹದ್ ರಾಜ್ಯಮಸಪತ್ನಂ ಪೃಥಿವ್ಯಾಮ್ |
ತಸ್ಮಿನ್ ಶಮಃ ಕೇವಲೋ ನೋಪಲಭ್ಯೋ
 ಯಶ್ಚಾಶಮಂ ಮನ್ಯತೇ ಪ್ರಾಪ್ತಮರ್ಥಮ್ ॥23॥
ಧೃತರಾಷ್ಟ್ರಪುತ್ರನಾದ ದುರ್ಯೋಧನನು ಸಮಸ್ತ ಪೃಥಿವಿಯ ರಾಜ್ಯವು ಶತ್ರುರಹಿತವಾಗಿ ತನಗೇ ಸೇರಿದುದೆಂದು ಬಯಸುತ್ತಾನೆ. ಅವನು ಸಂಧಿಯನ್ನು ಮಾಡಿಕೊಳ್ಳದಿರುವುದೇ ಪ್ರಯೋಜನವೆಂದು ತಿಳಿದಿದ್ದಾನೆ. ಅವನಲ್ಲಿ ಸಂಧಿಯು ಯಾವ ರೀತಿಯಿಂದಲೂ ಸಾಧ್ಯವಾಗುವುದಿಲ್ಲ.
ಪರ್ಯಾಪ್ತೇಯಂ ಪೃಥಿವೀ ಕಾಲಪಕ್ವಾ
 ದುರ್ಯೋಧನಾರ್ಥೇ ಪಾಂಡವಾನ್ ಯೋದ್ಧುಕಾಮಾಃ |
ಸಮಾಗತಾಃ ಸರ್ವಯೋಧಾಃ ಪೃಥಿವ್ಯಾಂ
 ರಾಜಾನಶ್ಚ ಕ್ಷಿತಿಪಾಲೈಃ ಸಮೇತಾಃ ॥24॥
ಈ ಭೂಮಿಯು ದುರ್ಯೋಧನನ ಸಲುವಾಗಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿದ ರಾಜರಿಂದ ತುಂಬಿ ಹೋಗಿ ಕಾಲ ಪಕ್ವವಾಗಿದೆ. ಪೃಥಿವಿಯಲ್ಲಿರುವ ಎಲ್ಲಾ ಯೋಧರ ಸಹಿತವಾಗಿ ಭೂಮಿಗೆ ಒಡೆಯರಾದ ರಾಜರು ಬಂದು ನೆರೆದಿದ್ದಾರೆ. ಅಂತಹ ರಾಜರಿಂದ ಭೂಮಿಯು ತುಂಬಿಹೋಗಿದೆ.

ಸರ್ವೇ ಚೈತೇ ಕೃತವೈರಾಃ ಪುರಸ್ತಾತ್
ತ್ವಯಾ ರಾಜಾನೋ ಹೃತಸಾರಾಶ್ಚ ಕೃಷ್ಣ |
ತವೋದ್ವೇಗಾತ್ ಸಂಶ್ರಿತಾ ಧಾರ್ತರಾಷ್ಟ್ರಾನ್
ಸುಸಂಹತಾಃ ಸಹ ಕರ್ಣೇನ ವೀರಾಃ ॥25॥
ಎಲ್ಲೈ ಕೃಷ್ಣನೇ, ಅವರೆಲ್ಲರೂ ನಿನ್ನಲ್ಲಿ ವೈರವನ್ನು ಮಾಡಿದವರು. ಹಿಂದೆ ಆ ರಾಜರೆಲ್ಲರೂ ನಿನಗೆ ಸೋತು ನೀನು ಅವರ ಸಂಪತ್ತನ್ನು ಪಡೆದಿದ್ದೀಯೆ. ನಿನ್ನ ಮೇಲಿನ ಕೋಪದಿಂದ ವೀರರಾದ ಅವರೆಲ್ಲರೂ ಕರ್ಣನ ಜೊತೆಯಲ್ಲಿ ಸೇರಿ ಧೃತರಾಷ್ಟ್ರ ಪುತ್ರರನ್ನು ಆಶ್ರಯಿಸಿದ್ದಾರೆ.
ತ್ಯಕ್ತಾತ್ಮಾನಃ ಸಹ ದುರ್ಯೋಧನೇನ
ಹೃಷ್ಟಾ ಯೋದ್ಧುಂ ಪಾಂಡವಾನ್ ಸರ್ವಯೋಧಾಃ |
ಮೃತ್ಯುರ್ಜಯೋ ವೇತಿ ಕೃತೇ ಕೃತಾಶಾಃ
ಕಾಮಾತ್ಮಾನೋ ಮನ್ಯುವಶಾವಿನೀತಾಃ ॥26॥
ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಹರ್ಷಪಡುವ ಎಲ್ಲ ಯೋಧರೂ ದುರ್ಯೋಧನನಂತೆ ತಮ್ಮ ಜೀವದ ಹಂಗನ್ನು ತೊರೆದಿದ್ದಾರೆ. ಕಾಮಾತ್ಮರೂ, ಮನ್ಯುವಶರೂ ಮತ್ತು ಅವಿನೀತರೂ ಆದ ಅವರು ಮೃತ್ಯುವಾಗಲಿ ಅಥವಾ ಜಯವಾಗಲಿ ಉಂಟಾಗಲಿ ಎಂದು ಯುದ್ಧದಲ್ಲಿಯೇ ಆಸೆಯನ್ನು ಉಳ್ಳವರಾಗಿದ್ದಾರೆ.
ತೇಷಾಂ ಮಧ್ಯೇ ಪ್ರವಿಶೇಥಾ ಯದಿ ತ್ವಂ
ನ ತನ್ಮತಂ ಮಮ ದಾಶಾರ್ಹವೀರ ॥27॥
ಎಲ್ಲೈ ದಾಶಾರ್ಹವೀರನೇ, ನೀನು ಅವರ ಮಧ್ಯದಲ್ಲಿ ಪ್ರವೇಶ ಮಾಡುವುದು ನನಗೆ ಸಮ್ಮತವಲ್ಲ.
ತೇಷಾಂ ಸಮುಪವಿಷ್ಟಾನಾಂ ಬಹೂನಾಂ ದುಷ್ಟಚೇತಸಾಮ್ |
ಕಥಂ ಮಧ್ಯೇ ಪ್ರಪದ್ಯೇಥಾಃ ಶತ್ರೂಣಾಂ ಶತ್ರುಕರ್ಶನ ॥28॥
ಎಲ್ಲೈ ಶತ್ರುಕರ್ಶನನೇ, ದುಷ್ಟಬುದ್ಧಿಯಿಂದ ಕುಳಿತಿರುವ ಅನೇಕ ಶತ್ರುಗಳ ಮಧ್ಯೆ ನೀನು ಹೇಗೆ ಪ್ರವೇಶ ಮಾಡುವಿ?
ಸರ್ವಥಾ ತ್ವಂ ಮಹಾಬಾಹೋ ದೇವೈರಪಿ ದುರುತ್ಸಹಃ |
ಪ್ರಭಾವಂ ಪೌರುಷಂ ಬುದ್ಧಿಂ ಜಾನಾಮಿ ತವ ಶತ್ರುಹನ್ ॥29॥
ಎಲ್ಲೈ ಮಹಾಬಾಹುವೇ, ದೇವತೆಗಳೂ ಸಹ ಯಾವ ರೀತಿಯಿಂದಲೂ ನಿನ್ನನ್ನು ಸೋಲಿಸಲಾರರು. ಎಲ್ಲೈ ಶತ್ರುಹಂತಕನೇ, ನಿನ್ನ ಸಾಮರ್ಥ್ಯವನ್ನೂ, ಪರಾಕ್ರಮವನ್ನೂ ಮತ್ತು ಬುದ್ಧಿಯನ್ನೂ ನಾನು ತಿಳಿದಿದ್ದೇನೆ.
ಯಾ ಮೇ ಪ್ರೀತಿಃ ಪಾಂಡವೇಷು ಭೂಯಃ ಸಾ ತ್ವಯಿ ಮಾಧವ |
ಪ್ರೇಮ್ಣಾ ಚ ಬಹುಮಾನಾಚ್ಚ ಸೌಹೃದಾಚ್ಚ ಬ್ರವೀಮ್ಯಹಮ್ ॥30॥
ಎಲ್ಲೈ ಮಾಧವನೇ, ನನಗೆ ಪಾಂಡವರಲ್ಲಿ ಎಷ್ಟು ಪ್ರೀತಿ ಇದೆಯೋ, ಅದಕ್ಕಿಂತಲೂ ಹೆಚ್ಚು ಪ್ರೀತಿ ನಿನ್ನಲ್ಲಿದೆ. ಆ ಪ್ರೇಮದಿಂದಲೂ, ನಿನ್ನ ಮೇಲಿನ ಗೌರವದಿಂದಲೂ ಮತ್ತು ಸ್ನೇಹದಿಂದಲೂ ಈ ಮಾತುಗಳನ್ನು ಆಡುತ್ತಿದ್ದೇನೆ.
ಯಾ ಮೇ ಪ್ರೀತಿಃ ಪುಷ್ಕರಾಕ್ಷ ತ್ವದ್ದರ್ಶನಸಮುದ್ಭವಾ |
ಸಾ ಕಿಮಾಖ್ಯಾಯತೇ ತುಭ್ಯಮಂತರಾತ್ಮಾಽಸಿ ದೇಹಿನಾಮ್ ॥31॥
ಎಲ್ಲೈ ಪುಷ್ಕರಾಕ್ಷನೇ, ನಿನ್ನ ದರ್ಶನದಿಂದ ನನಗೆ ಎಂತಹ ಸಂತೋಷ ಉಂಟಾಗಿದೆ ಎಂದು ನಾನು ನಿನಗೆ ಹೇಗೆ ಹೇಳಲಿ? ನೀನು ಎಲ್ಲ ಜೀವರ ಅಂತರ್ಯಾಮಿಯಾಗಿದ್ದೀಯೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕನವತಿತಮೋಽಧ್ಯಾಯಃ ॥
ಭಗವದ್ಯಾನಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆರಡನೆಯ ಅಧ್ಯಾಯ
ವಿದುರನ ಮಾತುಗಳಿಗೆ ಕೃಷ್ಣನ ಉತ್ತರ.
ವೈಶಂಪಾಯನಃ
ವಿದುರಸ್ಯ ವಚಃ ಶ್ರುತ್ವಾ ಪ್ರಶ್ರಿತಂ ಪುರುಷೋತ್ತಮಃ |
ಇದಂ ಹೋವಾಚ ವಚನಂ ಭಗವಾನ್ ಮಧುಸೂದನಃ ॥1॥
ವೈಶಂಪಾಯನ ವಿದುರನ ವಿನಯದ ಮಾತುಗಳನ್ನು ಕೇಳಿ ಭಗವಂತನೂ, ಪುರುಷೋತ್ತಮನೂ ಆದ ಮಧುಸೂದನನು ಈ ಮಾತುಗಳನ್ನು ಆಡಿದನು.
ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾದ್ ವಿಚಕ್ಷಣಃ |
ಯಥಾ ವಾಚ್ಯಸ್ತ್ವದ್ವಿಧೇನ ಸುಹೃದಾ ಮದ್ವಿಧಃ ಕೃತಮ್ ॥2॥
ಧರ್ಮಾರ್ಥಯುಕ್ತಂ ತಥ್ಯಂ ಚ ತಥಾ ತ್ವಯ್ಯುಪಪದ್ಯತೇ |
ತಥಾ ವಚನಮುಕ್ತೋಽಸ್ಮಿ ತ್ವಯೈತತ್ ಪಿತೃಮಾತೃವತ್ ॥3॥
ಮಹಾಪ್ರಾಜ್ಞನಾದವನೂ, ವಿಚಕ್ಷಣನಾದವನೂ, ಸುಹೃಜ್ಜನನೂ ಆದ ನಿನ್ನಂತಹವನು ನನ್ನ ಜೊತೆಯಲ್ಲಿ ಹೇಗೆ

ಮಾತನಾಡಬೇಕೋ ಅದರಂತೆ ಧರ್ಮಾರ್ಥಯುಕ್ತವಾದ ಸತ್ಯವಾದ ಮಾತುಗಳು ನಿನ್ನಲ್ಲಿ ಉಪಪನ್ನವಾಗುತ್ತವೆ. ತಂದೆ-ತಾಯಿಗಳಂತೆ ನೀನು ನನ್ನನ್ನು ಕುರಿತು ಅಂತಹ ಮಾತುಗಳನ್ನು ಆಡಿದ್ದೀಯೆ.
ಸರ್ವಂ ಪ್ರಾಪ್ತಂ ಚ ಯುಕ್ತಂ ಚ ಏವಮೇವ ಯಥಾಽಽತ್ಥ ಮಾಮ್ |
ಶೃಣುಷ್ವಾಗಮನೇ ಹೇತುಂ ವಿದುರಾವಹಿತೋ ಮಮ ॥4॥
ನೀನು ಆಡಿದ ಮಾತುಗಳೆಲ್ಲವೂ ಸಮಯೋಚಿತವಾಗಿವೆ ಮತ್ತು ಯುಕ್ತವಾಗಿವೆ. ನೀನು ಹೇಳಿದ ಮಾತುಗಳು ಎಲ್ಲವೂ ಅದರಂತೆಯೇ ಸರಿ. ಎಲೈ ವಿದುರನೇ, ನಾನು ಇಲ್ಲಿಗೆ ಬರಲು ಕಾರಣವನ್ನು ಹೇಳುತ್ತೇನೆ, ಅವಧಾನದಿಂದ ಕೇಳು.
ಗೃಹೀತುಂ ಧಾರ್ತರಾಷ್ಟ್ರಾಣಾಂ ಪಾಂಡವಾನಾಂ ಚ ವೈರಿತಾಮ್ |
ಸರ್ವಮೇತದಹಂ ಜಾನನ್ ಕ್ಷತ್ತಃ ಪ್ರಾಪ್ತೋಽದ್ಯ ಕೌರವಾನ್ ॥5॥
ಎಲೈ ವಿದುರನೇ, ನಾನು ಎಲ್ಲವನ್ನೂ ತಿಳಿದಿದ್ದರೂ ಪಾಂಡವರಿಗೆ ಮತ್ತು ಕೌರವರಿಗೆ ಇರುವ ವೈರವನ್ನು ಜಗತ್ತಿಗೆ ತಿಳಿಸಲು ಈ ದಿನ ಕೌರವರ ಬಳಿಗೆ ಬಂದಿದ್ದೇನೆ.
ಪರ್ಯಸ್ತಾಂ ಪೃಥಿವೀಂ ಸರ್ವಾಂ ಸಾಶ್ವಾಂ ಸರಥಕುಂಜರಾಮ್ |
ಯೋ ಮೋಚಯೇನ್ಮೃತ್ಯುಪಾಶಾತ್ ಪ್ರಾಪ್ನುಯಾದ್ ಧರ್ಮಮುತ್ತಮಮ್॥
ರಥಾಶ್ವಕುಂಜರಗಳಿಂದ ತುಂಬಿರುವ ಈ ಸಮಸ್ತವಾದ ಪೃಥಿವಿಯನ್ನು ಯಾವನು ಮೃತ್ಯುಪಾಶದಿಂದ ಬಿಡಿಸುವನೋ ಅವನು ಶ್ರೇಷ್ಠವಾದ ಧರ್ಮವನ್ನು ಹೊಂದಿಯಾನು.
ಧರ್ಮಕಾರ್ಯೇ ಯತಾತ್ಮಾ ಯೋ ನ ಚೇಚ್ಛಕ್ನೋತಿ ಮಾನವಃ |
ಪ್ರಾಪ್ತೋ ಭವತಿ ತತ್ಪುಣ್ಯಮತ್ರ ಮೇ ನಾಸ್ತಿ ಸಂಶಯಃ ॥7॥
ಯಾವ ಮನುಷ್ಯನು ಧರ್ಮಕಾರ್ಯವನ್ನು ಮಾಡಲು ಪ್ರಯತ್ನಪಟ್ಟರೂ ಅದನ್ನು ಮಾಡಲು ಸಮರ್ಥನಾಗುವುದಿಲ್ಲವೋ ಅವನಿಗೂ ಧರ್ಮಕಾರ್ಯವನ್ನು ಮಾಡಿದ ಪುಣ್ಯವು ಉಂಟಾಗುತ್ತದೆ ಎಂಬುದರಲ್ಲಿ ನನಗೆ ಸಂಶಯವಿಲ್ಲ.
ಮನಸಾ ಚಿಂತಯನ್ ಪಾಪಂ ಕರ್ಮಣಾ ನಾಭಿರೋಚಯನ್ |
ನ ಪ್ರಾಪ್ನೋತಿ ಫಲಂ ತಸ್ಯೇತ್ಯೇವಂ ಧರ್ಮವಿದೋ ವಿದುಃ ॥8॥
ಒಂದು ಕಾರ್ಯವು ಪಾಪವೆಂದು ಮನಸ್ಸಿನಲ್ಲಿ ಚಿಂತನೆ ಮಾಡಿ ಅದನ್ನು ಪರಿಹರಿಸುವ ಕಾರ್ಯವನ್ನು ಮಾಡಲು ಇಷ್ಟಪಡದವನು ಕರ್ಮವನ್ನು ಪರಿಹಾರ ಮಾಡಿದ ಪುಣ್ಯಫಲವನ್ನು ಹೊಂದುವುದಿಲ್ಲ ಎಂದು ಧರ್ಮವನ್ನು ತಿಳಿದವರು ಹೇಳುತ್ತಾರೆ.
ಸೋಽಹಂ ಯತಿಷ್ಯೇ ಪ್ರಶಮಂ ಕ್ಷತ್ತಃ ಕರ್ತುಮಮಾಯಯಾ |
ಕುರೂಣಾಂ ಸೃಂಜಯಾನಾಂ ಚ ಸಂಗ್ರಾಮೇ ವಿನಶಿಷ್ಯತಾಮ್ ॥9॥
ಎಲೈ ವಿದುರನೇ, ಅಂತಹ ನಾನು ಯುದ್ಧದಲ್ಲಿ ನಾಶಹೊಂದಲಿರುವ ಕುರುಗಳಿಗೂ ಮತ್ತು ಸೃಂಜಯರಿಗೂ ಸಂಧಿಯನ್ನು ಉಂಟುಮಾಡಲು ನಿಷ್ಕಪಟವಾಗಿ ಪ್ರಯತ್ನವನ್ನು ಮಾಡುವೆನು.
ಸೇಯಮಾಪನ್ಮಹಾಘೋರಾ ಕುರುಷ್ವೇವ ಸಮುತ್ಥಿತಾ |
ಕರ್ಣದುರ್ಯೋಧನಕೃತಾ ಸರ್ವೇ ಹ್ಯೇತೇ ತದನ್ವಯಾಃ ॥10॥
ಈಗ ಒದಗಿ ಬಂದಿರುವ ಮಹಾಘೋರವಾದ ಈ ಆಪತ್ತು ಕುರುಗಳಲ್ಲಿಯೇ ಉತ್ಪನ್ನವಾಗಿದೆ. ಇದು ಕರ್ಣ-ದುರ್ಯೋಧನರಿಂದ ಉಂಟಾಗಿದೆ. ಉಳಿದುದೆಲ್ಲವೂ ಅವರನ್ನು ಅನುಸರಿಸಿಕೊಂಡು ಬಂದಿವೆ.
ವ್ಯಸನೇ ಕ್ಲಿಶ್ಯಮಾನಂ ಹಿ ಯೋ ಮಿತ್ರಂ ನಾಭಿಪದ್ಯತೇ |
ಅನುನೀಯ ಯಥಾಶಕ್ತಿ ತಂ ನೃಶಂಸಂ ವಿದುರ್ಬುಧಾಃ ॥11॥
ವ್ಯಸನದಲ್ಲಿ ಸಿಲುಕಿ ಕ್ಲೇಶಪಡುವ ಮಿತ್ರರನ್ನು ಯಾವನು ಸಮೀಪಿಸಿ ತನ್ನ ಶಕ್ತಿ ಇದ್ದಷ್ಟು ಅನುನಯ (ಸಮಾಧಾನ) ಮಾಡುವುದಿಲ್ಲವೋ ಅವನನ್ನು ವಿವೇಕಿಗಳು ಕ್ರೂರಿ ಎಂದು ಹೇಳುತ್ತಾರೆ.
ಆಕೇಶಗ್ರಹಣಾನ್ಮಿತ್ರಮಕಾರ್ಯಾತ್ ಸನ್ನಿವರ್ತಯನ್ |
ಅವಾಚ್ಯಃ ಕಸ್ಯಚಿದ್ ಭವತಿ ಕೃತಯತ್ನೋ ಯಥಾಬಲಮ್ ॥12॥
ತನ್ನ ತಲೆಯ ಕೂದಲನ್ನು ಹಿಡಿಯುವವರೆಗೆ ಮಿತ್ರನನ್ನು ಅಯೋಗ್ಯವಾದ ಕಾರ್ಯದಿಂದ ನಿವರ್ತಿಸಲು ತನ್ನ ಶಕ್ತಿ ಇದ್ದಷ್ಟು ಪ್ರಯತ್ನ ಪಡುವವನು ಯಾರಿಂದಲೂ ನಿಂದಿತನಾಗುವುದಿಲ್ಲ.
ತತ್ ಸಮರ್ಥಂ ಶುಭಂ ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ |
ಧಾರ್ತರಾಷ್ಟ್ರಃ ಸಹಾಮಾತ್ಯೋ ಗೃಹೀತುಂ ವಿದುರಾರ್ಹತಿ ॥13॥
ಆದ್ದರಿಂದ ಸಮರ್ಥವಾದ ಶುಭವಾದ ಹಿತವಾದ ಧರ್ಮಾರ್ಥಸಹಿತವಾದ ಮಾತುಗಳನ್ನು ಎಲೈ ವಿದುರನೇ, ದುರ್ಯೋಧನನೂ ಮತ್ತು ಅವನ ಅಮಾತ್ಯರೂ ಸ್ವೀಕರಿಸಬೇಕಾಗುತ್ತದೆ.
ಹಿತಂ ಹಿ ಧಾರ್ತರಾಷ್ಟ್ರಾಣಾಂ ಪಾಂಡವಾನಾಮಥೋ ಹಿತಮ್ |
ಪೃಥಿವ್ಯಾಂ ಕ್ಷತ್ರಿಯಾಣಾಂ ಚ ಯತಿಷ್ಯೇಽಹಮಮಾಯಯಾ ॥14॥
ದುರ್ಯೋಧನಾದಿಗಳಿಗೆ ಹಿತವಾದುದನ್ನೂ, ಪಾಂಡವರಿಗೆ ಹಿತವಾದುದನ್ನೂ ಮತ್ತು ಭೂಮಿಯಲ್ಲಿರುವ ಎಲ್ಲಾ ಕ್ಷತ್ರಿಯರಿಗೆ ಹಿತವಾದುದನ್ನೂ ಸಂಪಾದಿಸಲು ನಾನು ನಿಷ್ಕಪಟವಾಗಿ ಪ್ರಯತ್ನಪಡುವೆನು.
ಹಿತೇ ಪ್ರಯತಮಾನಂ ಮಾಂ ಶಂಕೇದ್ ದುರ್ಯೋಧನೋ ಯದಿ |
ಹೃದಯಸ್ಯ ಚ ಮೇ ಪ್ರೀತಿರಾನೃಣ್ಯಂ ಚ ಭವಿಷ್ಯತಿ ॥15॥
ಅವನ ಹಿತದಲ್ಲಿ ಪ್ರಯತ್ನಪಡುವ ನನ್ನನ್ನು ದುರ್ಯೋಧನನು ಶಂಕಿಸುವುದಾದರೆ ನನ್ನ ಮನಸ್ಸಿಗೆ ಸಂತೋಷವುಂಟಾಗುತ್ತದೆ. ನಾನು ಋಣಮುಕ್ತವಾಗುವೆನು.

ಜ್ಞಾತೀನಾಂ ಹಿ ಮಿಥೋ ಭೇದೇ ಯನ್ಮಿತ್ರಂ ನಾಭಿಪದ್ಯತೇ |
ಸರ್ವಯತ್ನೇನ ಮಾಧ್ಯಸ್ಥ್ಯಂ ನ ತನ್ಮಿತ್ರಂ ವಿದುರ್ಬುಧಾಃ ॥16॥
ದಾಯಾದಿಗಳಿಗೆ ಪರಸ್ಪರ ವೈರ ಉಂಟಾದಾಗ ಯಾವ ಸ್ನೇಹಿತನು ತಟಸ್ಥನಾಗಿ ಅವರನ್ನು ಸಮೀಪಿಸಿ, ಸರ್ವಪ್ರಯತ್ನದಿಂದ ವಿರೋಧವನ್ನು ಪರಿಹರಿಸಲು ಪ್ರಯತ್ನ ಪಡುವುದಿಲ್ಲವೋ ಅವನು ಸ್ನೇಹಿತನಲ್ಲ ಎಂದು ಜ್ಞಾನಿಗಳು ಹೇಳುತ್ತಾರೆ.
ನ ಮಾಂ ಬ್ರೂಯುರಧರ್ಮಿಷ್ಠಾ ಮೂಢಾ ಹ್ಯಸುಹೃದಸ್ತಥಾ |
ಶಕ್ತೋ ನಾವಾರಯತ್ ಕೃಷ್ಣಃ ಸಂರಬ್ಧಾನ್ ಕುರುಪಾಂಡವಾನ್ ॥17॥
ಅಧರ್ಮಿಷ್ಠರೂ, ಮೂಢರೂ, ಸುಹೃಜ್ಜನರಲ್ಲದವರೂ ಆದವರು ಕೃಷ್ಣನು ಸಮರ್ಥನಾಗಿದ್ದರೂ ಕೋಪಗೊಂಡ ಕುರು-ಪಾಂಡವರನ್ನು ಯುದ್ಧದಿಂದ ಹಿಮ್ಮೆಟ್ಟಿಸಲಿಲ್ಲ ಎಂದು ಹೇಳುವಂತೆ ಆಗಬಾರದು.
ಉಭಯೋಃ ಸಾಧಯನ್ನರ್ಥಮಹಮಾಗತ ಇತ್ಯುತ |
ತತ್ರ ಯತ್ನಮಹಂ ಕೃತ್ವಾ ಧರ್ಮಸ್ಯಾನೃಣ್ಯತಾಮಿಯಾಮ್ ॥18॥
ಎರಡು ಪಕ್ಷಗಳಿಗೂ ಹಿತವನ್ನು ಸಾಧಿಸಲು ನಾನು ಇಲ್ಲಿಗೆ ಬಂದಿದ್ದೇನೆ. ಆದ್ದರಿಂದ ನಾನು ಆ ಪ್ರಯತ್ನವನ್ನು ಮಾಡಿ ಧರ್ಮದ ದೃಷ್ಟಿಯಲ್ಲಿ ಋಣಮುಕ್ತನಾಗುವೆನು.
ಮಮ ಧರ್ಮಾರ್ಥಯುಕ್ತಂ ಹಿ ಶ್ರುತ್ವಾ ವಾಕ್ಯಮನಾಮಯಮ್ |
ನ ಚೇದಾದಾಸ್ಯತೇ ಬಾಲೋ ದಿಷ್ಟಸ್ಯ ವಶಮೇಷ್ಯತಿ ॥19॥
ಬಾಲನಾದ ದುರ್ಯೋಧನನು ಧರ್ಮಾರ್ಥಯುಕ್ತವಾದ ಮತ್ತು ನಿರ್ದುಷ್ಟವಾದ ನನ್ನ ಮಾತುಗಳನ್ನು ಸ್ವೀಕರಿಸದಿದ್ದರೆ ವಿಧಿಯ ವಶನಾಗುವನು.
ಅಹಾಪಯನ್ ಪಾಂಡವಾನಾಂ ಹಿತಾರ್ಥಂ
ಶಮಂ ಕುರೂಣಾಂ ಸಹ ಸರ್ವರಾಜಭಿಃ |
ಪುಣ್ಯಂ ಚ ಮೇ ಸ್ಯಾಚ್ಚರಿತಂ ಮಹಾರ್ಥಂ
ಮುಚ್ಯೇರಂಶ್ಚ ಕುರವೋ ಮೃತ್ಯುಪಾಶಾತ್ ॥20॥
ಪಾಂಡವರ ಹಿತವನ್ನು ತ್ಯಜಿಸದೇ, ಕೌರವರಿಗೂ, ಸರ್ವರಾಜರಿಗೂ ಮತ್ತು ಪಾಂಡವರಿಗೂ ಸಂಧಿಯನ್ನು ಉಂಟುಮಾಡಿದರೆ ನಾನು ದೊಡ್ಡಕಾರ್ಯವನ್ನು ಸಾಧಿಸಿದ ಪುಣ್ಯವನ್ನು ಹೊಂದುವೆನು. ಕೌರವರೆಲ್ಲರೂ ಮೃತ್ಯುಪಾಶದಿಂದ ಮುಕ್ತರಾದಾರು.
ಅಪಿ ವಾಚಂ ಭಾಷಮಾಣಸ್ಯ ಕಾಮ್ಯಾಂ
ಧರ್ಮಾರಾಮಾಮರ್ಥವತೀಮಹಿಂಸ್ರಾಮ್ |
ಅಪೇಕ್ಷೇರನ್ ಧಾರ್ತರಾಷ್ಟ್ರಾಃ ಸಮಗ್ರಾಂ
ಮಾಂ ಚ ಪ್ರಾಪ್ತಂ ಕುರವಃ ಪೂಜಯೇಯುಃ ॥21॥
ಅವರಿಗೆ ಹಿತವಾದ ಧರ್ಮಸಮ್ಮತವಾದ ಅರ್ಥಸಾಧಕವಾದ ಹಿಂಸೆಯನ್ನು ಮಾಡದ ಮಾತುಗಳನ್ನು ನಾನು ಆಡಿದರೆ ಧೃತರಾಷ್ಟ್ರ ಪುತ್ರರೆಲ್ಲರೂ ಆ ಮಾತುಗಳನ್ನು ಸ್ವೀಕರಿಸುತ್ತಾರೆಯೇ? ಅಲ್ಲಿಗೆ ಬಂದ ನನ್ನನ್ನು ಗೌರವಿಸುತ್ತಾರೆಯೇ? (ಎಂದು ನೋಡಬೇಕಾಗಿದೆ)
ನ ಚಾಪಿ ಮಮ ಪರ್ಯಾಪ್ತಾಃ ಸಹಿತಾಃ ಸರ್ವಪಾರ್ಥಿವಾಃ |
ಕ್ರುದ್ಧಸ್ಯ ಪ್ರಮುಖೇ ಸ್ಥಾತುಂ ಸಿಂಹಸ್ಯೇವೇತರೇ ಮೃಗಾಃ ॥22॥
ಸಿಂಹದ ಎದುರಿನಲ್ಲಿ ಇತರ ಪ್ರಾಣಿಗಳು ನಿಲ್ಲಲು ಸಾಧ್ಯವಾಗದಂತೆ ಕೋಪಗೊಂಡ ನನ್ನ ಎದುರು ನಿಲ್ಲಲು ಎಲ್ಲ ರಾಜರು ಒಟ್ಟುಗೂಡಿದರೂ ಸಾಧ್ಯವಾಗುವುದಿಲ್ಲ.
ಇತ್ಯೇವಮುಕತ್ತ್ವ ವಚನಂ ವೃಷ್ಣೀನಾಮೃಷಭಸ್ತದಾ |
ಶಯನೇ ಸುಖಸಂಸ್ಪರ್ಶೇ ಶಿಶ್ಯೇ ಯದುಸುಖಾವಹಃ ॥23॥
ವೃಷ್ಣಿಗಳ ನಾಯಕನಾದ ಕೃಷ್ಣನು ಹೀಗೆ ಮಾತನಾಡಿ ಸುಖಸ್ಪರ್ಶವುಳ್ಳ ಹಾಸಿಗೆಯಲ್ಲಿ ಮಲಗಿ, ಯದುಗಳಿಗೆ ಸುಖಪ್ರದನಾದ ಅವನು ನಿದ್ರೆಯನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿನವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಪರೇ ದಿನೇಽಸೌ ಧೃತರಾಷ್ಟ್ರಸೂನುನಾ
ಸಮಾನೀತಃ ಸಂಸದಿ ಕೌರವಾಣಾಮ್ |
ವಿವೇಶ ದಿವ್ಯೇ ಮಣಿಕಾಂಚನಾಸನೇ
ಸಾರ್ಧಂ ಮುನೀಂದ್ರೈಃ ಪರಮಾರ್ಥವೇದಿಭಿಃ ॥70॥
ಮರುದಿನ ಶ್ರೀಕೃಷ್ಣ ಕೌರವರ ಸಭೆಯಲ್ಲಿ ದುರ್ಯೋಧನನಿಂದ ಕರೆಸಲ್ಪಟ್ಟ ಮಹಾತತ್ವಜ್ಞರಾದ ಮುನೀಶ್ವರರೊಂದಿಗೆ ದಿವ್ಯ ರತ್ನ ಸುವರ್ಣಮಯ ಆಸನದಲ್ಲಿ ಕುಳಿತ.
* * * * *

ತೊಂಬತ್ತೂರನೆಯ ಅಧ್ಯಾಯ
ಕೃಷ್ಣನ ಧೃತರಾಷ್ಟ್ರಸಭಾಪ್ರವೇಶ.
ವೈಶಂಪಾಯನಃ
ತಥಾ ಕಥಯತೋರೇವ ತಯೋರ್ಬುದ್ಧಿಮತೋಸ್ತದಾ |
ಶಿವಾ ನಕ್ಷತ್ರಸಂಪನ್ನಾ ಸಾ ವ್ಯತೀತಾಯ ಶರ್ವರೀ ||1||
ವೈಶಂಪಾಯನ ಮೇಧಾವಿಗಳಾದ ಅವರಿಬ್ಬರೂ ಹಾಗೆ ಮಾತನಾಡುತ್ತಿರುವಂತೆಯೇ ನಕ್ಷತ್ರಗಳಿಂದ ಕೂಡಿದ ಮಂಗಳಕರವಾದ ಆ ರಾತ್ರಿಯು ಕಳೆದುಹೋಯಿತು.
ಧರ್ಮ್ಯಾ ರಮ್ಯಾಶ್ಚಾರ್ಥವತೀಃ ವಿಚಿತ್ರಾರ್ಥಪದಾಕ್ಷರಾಃ |
ಶೃಣ್ವತೋ ವಿವಿಧಾ ವಾಚೋ ವಿದುರಸ್ಯ ಮಹಾತ್ಮನಃ ||2||
ಕಥಾಭಿರನುಕೂಲಾಭೀ ರಕ್ತಸ್ಯಾಮಿತತೇಜಸಃ |
ಅಕಾಮಸ್ಯೈವ ಕೃಷ್ಣಸ್ಯ ಸಾ ವ್ಯತೀತಾಯ ಶರ್ವರೀ ||3||
ಮಹಾತ್ಮನಾದ ವಿದುರನ ಧರ್ಮಸಂಬಂಧಿಯಾದ ಮನೋಹರವಾದ ಶ್ರೇಷ್ಠವಾದ ಅರ್ಥವನ್ನು ಹೊಂದಿದ ವಿಚಿತ್ರ ಪದಾಕ್ಷರಗಳಿಂದ ಕೂಡಿದ ವಾರ್ತೆಗಳಿಂದ ಕೂಡಿದ ಅನುಕೂಲವಾದ ಅನೇಕ ಕಥೆಗಳನ್ನು ಕೇಳುತ್ತಾ ಅದರಲ್ಲಿಯೇ ಆಸಕ್ತವಾದ ಮನಸ್ಸುಳ್ಳ ಅಮಿತ ತೇಜಸ್ವಿಯಾದ ಕೃಷ್ಣನಿಗೆ ಇಚ್ಛೆ ಇಲ್ಲದಂತೆಯೇ ಆ ರಾತ್ರಿಯು ಕಳೆಯಿತು.
ತತಸ್ತು ಸ್ವರಸಂಪನ್ನಾ ಬಹವಃ ಸೂತಮಾಗಧಾಃ |
ಶಂಖದುಂದುಭಿನಿರ್ಘೋಷೈಃ ಕೇಶವಂ ಪ್ರತ್ಯಬೋಧಯನ್ ||4||
ಅನಂತರ ಮಧುರಸ್ವರದಿಂದ ಕೂಡಿದ ಅನೇಕ ಸೂತ-ಮಾಗಧರು ಶಂಖ ದುಂದುಭಿಘೋಷಗಳ ಜೊತೆಯಲ್ಲಿ ಕೇಶವನನ್ನು ಎಬ್ಬಿಸಿದರು.
ಬ್ರಹ್ಮಾದಿವಾಸುದೇವಾಂತಂ ವಂಶಂ ಸಮನುಕೀರ್ತಯನ್ |
ತುಷ್ಟುವುಃ ಪುಂಡರೀಕಾಕ್ಷಂ ಬಹವಃ ಸೂತಮಾಗಧಾಃ ||5||
ಅನೇಕ ಸೂತ-ಮಾಗಧರು ಬ್ರಹ್ಮದೇವರಿಂದ ಹಿಡಿದು ಕೃಷ್ಣನವರೆಗಿನ ವಂಶವನ್ನು ಹೇಳುತ್ತಾ ಪುಂಡರೀಕಾಕ್ಷನನ್ನು ಸ್ತೋತ್ರ ಮಾಡಿದರು.
ತತ ಉತ್ಥಾಯ ದಾಶಾರ್ಹ ಋಷಭಃ ಸರ್ವಸಾತ್ವತಾಮ್ |
ಸರ್ವಮಾವಶ್ಯಕಂ ಚಕ್ರೇ ಪ್ರಾತಃಕಾರ್ಯಂ ಜನಾರ್ದನಃ ||6||
ಅನಂತರ ಸರ್ವಸಾತ್ವತಶ್ರೇಷ್ಠನಾದ ದಾಶಾರ್ಹನಾದ ಜನಾರ್ದನನು ಶಯನದಿಂದ ಎದ್ದು ಅವಶ್ಯಕವಾದ ಎಲ್ಲಾ ಪ್ರಾತಃಕಾರ್ಯಗಳನ್ನು ಮಾಡಿದನು.
ಕೃತೋದಕಃ ಕೃತಜಪ್ಯೋ ಹುತಾಗ್ನಿಃ ಸಮಲಂಕೃತಃ |
ತತ ಆದಿತ್ಯಮುದ್ಯಂತಮುಪಾತಿಷ್ಠತ ಮಾಧವಃ ||7||
ಸ್ನಾನವನ್ನು ಮಾಡಿ, ಜಪವನ್ನು ಮುಗಿಸಿ, ಅಗ್ನಿಯಲ್ಲಿ ಹೋಮವನ್ನು ಮಾಡಿ ಅಲಂಕೃತನಾಗಿ ಅನಂತರ ಉದಯಿಸುವ ಸೂರ್ಯನನ್ನು ಮಾಧವನು ಸ್ತೋತ್ರ ಮಾಡಿದನು.
ಅಥ ದುರ್ಯೋಧನಃ ಕರ್ಣಃ ಶಕುನಿಶ್ಚಾಪಿ ಸೌಬಲಃ |
ಸಂಧ್ಯಾಂ ತಿಷ್ಠಂತಮಭ್ಯಾಯನ್ ದಾಶಾರ್ಹಮಪರಾಜಿತಮ್ ||8||
ಅಪರಾಜಿತನಾದ ದಾಶಾರ್ಹನು ಸಂಧ್ಯಾವಂದನೆಯನ್ನು ಮಾಡುತ್ತಿರುವಂತೆಯೇ ದುರ್ಯೋಧನ, ಕರ್ಣ ಮತ್ತು ಸೌಬಲನಾದ ಶಕುನಿಯು ಅಲ್ಲಿಗೆ ಬಂದರು.
ಆಚಖ್ಯುಸ್ತೇ ತು ಕೃಷ್ಣಸ್ಯ ಧೃತರಾಷ್ಟ್ರಂ ಸಭಾಗತಮ್ |
ಕುರೂಂಶ್ಚ ಭೀಷ್ಮಪ್ರಮುಖಾನ್ ರಾಜ್ಞಃ ಸರ್ವಾಂಶ್ಚ ಪಾರ್ಥಿವಾನ್ ||9||
ಅವರು ಭೀಷ್ಮ ಮೊದಲಾದ ಕೌರವರೂ, ಭೂಮಿಯ ಎಲ್ಲಾ ಪ್ರದೇಶದ ರಾಜರೂ ಮತ್ತು ಧೃತರಾಷ್ಟ್ರನೂ ಸಭೆಗೆ ಬಂದಿದ್ದಾರೆಂದು ಕೃಷ್ಣನಿಗೆ ಹೇಳಿದರು.
ತ್ವಾಮರ್ಥಯಂತೇ ಗೋವಿಂದ ದಿವಿ ಶಕ್ರಮಿವಾಮರಾಃ |
ತಾನಭ್ಯನಂದದ್ ಗೋವಿಂದಃ ಸಾಮ್ನಾ ಪರಮವಲ್ಗುನಾ ||10||
ಗೋವಿಂದನೇ, ಸ್ವರ್ಗದಲ್ಲಿ ಇಂದ್ರನನ್ನು ದೇವತೆಗಳು ನಿರೀಕ್ಷಿಸಿದಂತೆ ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ ಎಂದು ಹೇಳಿದರು. ಗೋವಿಂದನು ಬಹಳ ಮಧುರವಾದ ಮೃದುವಾದ ಮಾತುಗಳಿಂದ ಅವರನ್ನು ಅಭಿನಂದಿಸಿದನು.
ತತೋ ವಿಮಲ ಆದಿತ್ಯೇ ಬ್ರಾಹ್ಮಣೇಭ್ಯೋ ಜನಾರ್ದನಃ |
ದದೌ ಹಿರಣ್ಯಂ ವಾಸಾಂಸಿ ಗವಾಶ್ವಾಂಶ್ಚ ಪರಂತಪಃ ||11||
ಅನಂತರ ಸೂರ್ಯನು ಶ್ವೇತವರ್ಣಕ್ಕೆ ತಿರುಗುತ್ತಿರಲು ಪರಂತಪನಾದ ಜನಾರ್ದನನು ಬ್ರಾಹ್ಮಣರಿಗೆ ಹಿರಣ್ಯವನ್ನೂ, ವಸ್ತ್ರಗಳನ್ನೂ, ಗೋವುಗಳನ್ನೂ ಮತ್ತು ಅಶ್ವಗಳನ್ನೂ ನೀಡಿದನು.
ವಿಸೃಷ್ಟವಂತಂ ರತ್ನಾನಿ ದಾಶಾರ್ಹಮಪರಾಜಿತಮ್ |
ತಿಷ್ಠಂತಮುಪಸಂಗಮ್ಯ ವವಂದೇ ಸಾರಥಿಸ್ತದಾ ||12||
ರತ್ನವನ್ನು ದಾನಮಾಡಿ ನಿಂತಿದ್ದ ಅಪರಾಜಿತನಾದ ದಾಶಾರ್ಹನನ್ನು ಸಮೀಪಿಸಿ ಸಾರಥಿಯು ಅವನಿಗೆ ನಮಸ್ಕಾರವನ್ನು ಮಾಡಿದನು.

ತತೋ ರಥೇನ ಶುಭ್ರೇಣ ಮಹತಾ ಕಿಂಕಿಣೀಕಿನಾ |
ಹಯೋತ್ತಮಯುಜಾ ಶೀಘ್ರಮುಪಾತಿಷ್ಠತ ದಾರುಕಃ ॥13॥
ಅನಂತರ ಶುಭ್ರವಾದ ದೊಡ್ಡದಾದ, ಸಣ್ಣಬಟ್ಟೆಗಳಿಂದ ಅಲಂಕೃತವಾದ ಶ್ರೇಷ್ಠ ಅಶ್ವಗಳನ್ನು ಹೂಡಿದ ರಥವನ್ನು ದಾರುಕನು ಶೀಘ್ರವಾಗಿ ಸಮೀಪಕ್ಕೆ ತಂದನು.
ತಸ್ಯೈ ರಥವರೋ ಯುಕ್ತಃ ಶುಶುಭೇ ಲೋಕವಿಶ್ರುತಃ |
ವಾಜಿಭಿಃ ಸೈನ್ಯಸುಗ್ರೀವಮೇಘಪುಷ್ಪಬಲಾಹಕೈಃ ॥14॥
ಸೈನ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳಿಂದ ಹೂಡಲ್ಪಟ್ಟ ಲೋಕವಿಶ್ರುತವಾದ ಕೃಷ್ಣನ ಶ್ರೇಷ್ಠವಾದ ರಥವು ಶೋಭಿಸಿತು.
ಸೈನ್ಯಸ್ತು ಶುಕಪತ್ರಾಭಃ ಸುಗ್ರೀವಃ ಕಿಂಶುಕಪ್ರಭಃ |
ಮೇಘಪುಷ್ಪೋ ಮೇಘವರ್ಣಃ ಪಾಂಡರಸ್ತು ಬಲಾಹಕಃ ॥15॥
ಸೈನ್ಯವೆಂಬ ಅಶ್ವವು ಗಿಣಿಯ ರೆಕ್ಕೆಯ ಬಣ್ಣವನ್ನೂ, ಸುಗ್ರೀವಾಶ್ವವು ಮುತ್ತುಗದ ಹೂವಿನ ಬಣ್ಣವನ್ನೂ, ಮೇಘಪುಷ್ಪವು ಮೋಡದ ಬಣ್ಣವನ್ನೂ, ಬಲಾಹಕವು ಶ್ವೇತವರ್ಣವನ್ನೂ ಹೊಂದಿದ್ದಿತು.
ದಕ್ಷಿಣಂ ಚಾವಹತ್ ಸೈನ್ಯಃ ಸುಗ್ರೀವಃ ಸವ್ಯತೋಽವಹತ್ |
ಪೃಷ್ಠವಾಹೌ ತಯೋರಾಸ್ತಾಂ ಮೇಘಪುಷ್ಪಬಲಾಹಕೌ ॥16॥
ರಥದ ಮುಂಭಾಗದಲ್ಲಿ ಬಲಗಡೆಯಲ್ಲಿ ಸೈನ್ಯವೂ, ಎಡಗಡೆಯಲ್ಲಿ ಸುಗ್ರೀವವೂ, ಪಕ್ಕಗಳಲ್ಲಿ ಮೇಘಪುಷ್ಪ-ಬಲಾಹಕಗಳೂ ಇದ್ದವು.
ವಿಶ್ವಕರ್ಮಕೃತಾಪೀಡಾ ರತ್ನಜಾಲವಿಭೂಷಿತಾ |
ಆಶ್ರಿತಾ ವೈ ರಥೇ ತಸ್ಮಿನ್ ಧ್ವಜಯಷ್ಟಿರಶೋಭತ ॥17॥
ವಿಶ್ವಕರ್ಮನಿಂದ ಅಲಂಕೃತವಾದ, ರತ್ನಸಮೂಹಗಳಿಂದ ಭೂಷಿತವಾದ ಧ್ವಜಯಷ್ಟಿಯು ಆ ರಥವನ್ನು ಆಶ್ರಯಿಸಿ ಶೋಭಿಸುತ್ತಿದ್ದಿತು.
ವೈನತೇಯಃ ಸ್ಥಿತಸ್ತಸ್ಯಾಂ ಪ್ರಭಾಕರಮಿವ ಸ್ಪೃಶನ್ |
ತಸ್ಯ ಸತ್ವವತಃ ಕೇತೌ ಭುಜಗಾರಿರಶೋಭತ ॥18॥
ಬಲಿಷ್ಠವಾದ ಆ ರಥದ ಧ್ವಜದಲ್ಲಿ ಸರ್ಪಶತ್ರುವಾದ ಗರುಡನು ಸೂರ್ಯನನ್ನು ಮುಟ್ಟುವಂತೆ ದೊಡ್ಡರೂಪವನ್ನು ತೆಗೆದುಕೊಂಡು ಶೋಭಿಸಿದನು.
ತಸ್ಯ ಕೀರ್ತಿಮತಸ್ತೇನ ಭಾಸ್ವರೇಣ ವಿರಾಜತಾ |
ಶುಶುಭೇ ಸ್ಯಂದನಶ್ರೇಷ್ಠಃ ಪತಗೇಂದ್ರೇಣ ಕೇತುನಾ ॥19॥
ಕೀರ್ತಿಶಾಲಿಯಾದ ಕೃಷ್ಣನ ಶ್ರೇಷ್ಠವಾದ ಆ ರಥವು ಪ್ರಕಾಶಿಸುತ್ತಾ ಶೋಭಿಸುವ ಗರುಡಧ್ವಜದಿಂದ ಶೋಭಿಸಿತು.
ರುಗ್ಮಜಾಲೈಃ ಪತಾಕಾಭಿಃ ಸೌವರ್ಣೇನ ಚ ಕೇತುನಾ |
ಬಭೂವ ಸ ರಥಶ್ರೇಷ್ಠಃ ಕಾಲಸೂರ್ಯ ಇವೋದಿತಃ ॥20॥
ಸುವರ್ಣಜಾಲಗಳಿಂದಲೂ, ಪತಾಕೆಗಳಿಂದಲೂ, ಸುವರ್ಣಮಯವಾದ ಧ್ವಜದಿಂದಲೂ ಕೂಡಿದ ಆ ಶ್ರೇಷ್ಠವಾದ ರಥವು ಉದಯಿಸಿದ ಕಾಲಸೂರ್ಯನಂತೆ ಇದ್ದಿತು.
ಪಕ್ಷಿಪಕ್ಷವಿತಾನೈಶ್ಚ ರುಗ್ಮಜಾಲಕೃತಾಂತರೈಃ |
ದಂಡಮಾರ್ಗವಿಭಾಗೈಶ್ಚ ಸುಕೃತೈರ್ವಿಶ್ವಕರ್ಮಣಾ ॥21॥
ಗರುಡನ ವಿಶಾಲವಾದ ರೆಕ್ಕೆಗಳ ಆಶ್ರಯದಲ್ಲಿ ಸುವರ್ಣಜಾಲಗಳ ಮಧ್ಯದಲ್ಲಿ ಅಂತರಗಳಿಂದ ಕೂಡಿ ಮತ್ತು ವಿಶ್ವಕರ್ಮನು ಚೆನ್ನಾಗಿ ನಿರ್ಮಿಸಿದ ದಂಡಮಾರ್ಗ ವಿಭಾಗದಿಂದಲೂ ಕೂಡಿ ಆ ರಥವು ಶೋಭಿಸಿತು.
ಪ್ರವಾಲಮಣಿಹೇಮೈಶ್ಚ ಮುಕ್ತಾವೈಡೂರ್ಯಭೂಷಣೈಃ |
ಕಿಂಕಿಣೀಶತಸ್ರೃಂಶ್ಚ ವಾಲಜಾಲಕೃತಾಂತರೈಃ ॥22॥
ಕಾರ್ತಸ್ವರಮಯೀಭಿಶ್ಚ ಪದ್ಮಿನೀಭಿರಲಂಕೃತಃ |
ಶುಶುಭೇ ಸ್ಯಂದನಶ್ರೇಷ್ಠಃ ತಪನೀಯೈಶ್ಚ ಪಾದಪೈಃ ॥23॥
ಹವಳ, ನವರತ್ನಗಳು ಮತ್ತು ಸುವರ್ಣದಿಂದಲೂ, ಮುತ್ತು ಮತ್ತು ವೈಡೂರ್ಯಗಳ ಆಭರಣಗಳಿಂದಲೂ, ನೂರಾರು ಸಣ್ಣಗಂಟೆಗಳ ಸಮೂಹದಿಂದಲೂ, ಅಲ್ಲಲ್ಲಿ ಸ್ಥಾಪಿಸಿದ ಚಾಮರಗಳ ಸಮೂಹದಿಂದಲೂ, ಸುವರ್ಣಮಯವಾದ ಪದ್ಮಗಳಿಂದಲೂ, ಸುವರ್ಣಮಯವಾದ ವೃಕ್ಷಗಳಿಂದಲೂ ಆ ಶ್ರೇಷ್ಠವಾದ ರಥವು ಶೋಭಿಸಿತು.
ವ್ಯಾಘ್ರಸಿಂಹವರಾಹೈಶ್ಚ ಗೋವೃಷೈರ್ಮೃಗಪಕ್ಷಿಭಿಃ |
ತಾರಾಭಿರ್ಭಾಸ್ಕರೈಶ್ಚಾಪಿ ವಾರಣೈಶ್ಚ ಹಿರಣ್ಮಯೈಃ ॥24॥
ಆ ರಥದಲ್ಲಿ ವ್ಯಾಘ್ರಸಿಂಹವರಾಹಗಳ ವೃಷಭಗಳ ಮೃಗಪಕ್ಷಿಗಳ ನಕ್ಷತ್ರಗಳ ಸೂರ್ಯನ ಮತ್ತು ಆನೆಗಳ ಸುವರ್ಣಮಯವಾದ ಕೃತ್ರಿಮಪ್ರತಿಮೆಗಳು ಇದ್ದವು.
ವಜ್ರಾಂಕುಶವಿಮಾನೈಶ್ಚ ಕೂಬರಾವರ್ತಸಂಧಿಷು |
ಸಮುಚ್ಛ್ರಿತಮಹಾನಾಭಿಃ ಸ್ತನಯಿತ್ನುಮಹಾಸ್ವನಃ ॥25॥
ತಮುಪಸ್ಥಿತಮಾಜ್ಞಾಯ ರಥಂ ದಿವ್ಯಂ ಮಹಾಮನಾಃ |
ಮಹಾಭ್ರಘನಸಂಕಾಶಂ ಸರ್ವರತ್ನವಿಭೂಷಿತಮ್ ॥26॥
ಅಗ್ನಿಂ ಪ್ರದಕ್ಷಿಣಂ ಕೃತ್ವಾ ಬ್ರಾಹ್ಮಣಾಂಶ್ಚ ಜನಾರ್ದನಃ |
ಕೌಸ್ತುಭಂ ಮಣಿಮಾಬಧ್ಯ ಶ್ರಿಯಾ ಪರಮಯಾ ಜ್ವಲನ್ ॥27॥

ಕುರುಭಿಃ ಸಂವೃತಃ ಕೃಷ್ಣೋ ವೃಷ್ಣಿಭಿಶ್ಚಾಭಿರಕ್ಷಿತಃ |
ಆತಿಷ್ಠತ ರಥಂ ಶೌರಿಃ ಸರ್ವಯಾದವನಂದನಃ ॥28॥
ಕೂಬರ, ಆವರ್ತಗಳ ಸಂಧಿಗಳಲ್ಲಿ ವಜ್ರಾಂಕುಶವಿಮಾನಗಳ ಚಿಹ್ನೆಗಳಿಂದ ಕೂಡಿದ ಎತ್ತರವಾದ ದೊಡ್ಡ ಅಕ್ಷಪ್ರದೇಶವುಳ್ಳ ಸಿಡಿಲಿನ ಮಹಾಗರ್ಜನೆಯನ್ನು ಹೊಂದಿದ ಘನವಾದ ಮೋಡಗಳ ಕಾಂತಿಯನ್ನು ಹೊಂದಿದ ಸರ್ವರತ್ನವಿಭೂಷಿತವಾದ ಆ ದಿವ್ಯವಾದ ರಥವು ಸಮೀಪಕ್ಕೆ ಬಂದುದನ್ನು ತಿಳಿದು ಮಹಾಮನನಾದ ಜನಾರ್ದನನು ಅಗ್ನಿಗೆ ಮತ್ತು ಬ್ರಾಹ್ಮಣರಿಗೆ ಪ್ರದಕ್ಷಿಣೆಯನ್ನು ಮಾಡಿ ಕೌಸ್ತುಭ ಮಣಿಯನ್ನು ಕಂಠದಲ್ಲಿ ಧರಿಸಿ ಪರಮಕಾಂತಿಯಿಂದ ಶೋಭಿಸುತ್ತಾ, ಕೌರವರಿಂದಲೂ, ವೃಷ್ಣಿಗಳಿಂದಲೂ ರಕ್ಷಿಸಲ್ಪಟ್ಟವನಾಗಿ, ಸರ್ವಯಾದವರಿಗೂ ಸಂತೋಷವನ್ನು ಕೊಡುವ ಶೌರಿಯಾದ ಕೃಷ್ಣನು ರಥವನ್ನು ಏರಿದನು.
ಅನ್ವಾರುರೋಹ ದಾಶಾರ್ಹಂ ವಿದುರಃ ಸರ್ವಧರ್ಮವಿತ್ |
ಸರ್ವಪ್ರಾಣಭೃತಾಂ ಶ್ರೇಷ್ಠಂ ಸರ್ವಬುದ್ಧಿಮತಾಂ ವರಮ್ ॥29॥
ಸರ್ವಧರ್ಮವನ್ನೂ ತಿಳಿದ ವಿದುರನು, ಸರ್ವಚೇತನರಲ್ಲಿ ಶ್ರೇಷ್ಠನಾದ, ಸರ್ವಬುದ್ಧಿವಂತರಲ್ಲಿ ಶ್ರೇಷ್ಠನಾದ, ದಾಶಾರ್ಹನಾದ ಕೃಷ್ಣನ ನಂತರ ಆ ರಥವನ್ನು ಏರಿದನು.
ತತೋ ದುರ್ಯೋಧನಃ ಕರ್ಣಃ ಶಕುನಿಶ್ಚಾಪಿ ಸೌಬಲಃ |
ದ್ವಿತೀಯೇನ ರಥೇನೈನಮನ್ವಯುಸ್ತೇ ಪರಂತಪಮ್ ॥30॥
ಅನಂತರ ದುರ್ಯೋಧನ, ಕರ್ಣ ಮತ್ತು ಸೌಬಲನಾದ ಶಕುನಿ ಇವರು ಇನ್ನೊಂದು ರಥದಿಂದ ಪರಂತಪನಾದ ಕೃಷ್ಣನನ್ನು ಹಿಂಬಾಲಿಸಿದರು.
ಸಾತ್ಯಕಿಃ ಕೃತವರ್ಮಾ ಚ ವೃಷ್ಣೀನಾಂ ಚ ಮಹಾರಥಾಃ |
ಪೃಷ್ಠತೋಽನುಯಯುಃ ಕೃಷ್ಣಂ ಗಜೈರಶ್ವೈ ರಥೈರಪಿ ॥31॥
ಸಾತ್ಯಕಿ, ಕೃತವರ್ಮ ಮತ್ತು ವೃಷ್ಣಿಗಳ ಮಹಾರಥರು ಗಜಗಳಿಂದಲೂ, ಅಶ್ವಗಳಿಂದಲೂ ಮತ್ತು ರಥಗಳಿಂದಲೂ ಕೃಷ್ಣನನ್ನು ಹಿಂಬಾಲಿಸಿದರು.
ತೇಷಾಂ ಹೇಮಪರಿಷ್ಕಾರೈರ್ಯುಕ್ತಾಃ ಪರಮವಾಜಿಭಿಃ |
ಯಾಸ್ಯತಾಂ ಘೋಷಿಣಶ್ಚಿತ್ರಾಃ ಚಾರು ಬಭ್ರಾಜಿರೇ ರಥಾಃ ॥32॥
ಸುವರ್ಣ ಅಲಂಕಾರಗಳಿಂದಲೂ, ಶ್ರೇಷ್ಠವಾದ ಅಶ್ವಗಳಿಂದಲೂ ಕೂಡಿದ ಅವರ ಸುಂದರವಾದ ರಥಗಳು ಅವರು ಹೋಗುತ್ತಿರುವಾಗ ವಿಚಿತ್ರವಾದ ಶಬ್ದಗಳನ್ನು ಮಾಡುತ್ತಾ ಶೋಭಿಸಿದವು.
ಸಮ್ಮೃಷ್ಟಸಂಸಿಕ್ತರಜಃ ಪ್ರತಿಪೇದೇ ಮಹಾಪಥಮ್ |
ರಾಜರ್ಷಿಚರಿತಂ ಕಾಲೇ ಕೃಷ್ಣೋ ಧೀಮಾನ್ ಶ್ರಿಯಾ ಜ್ವಲನ್ ॥33॥
ಮೇಧಾವಿಯಾದ ಕೃಷ್ಣನು ಕಾಂತಿಯಿಂದ ಕಂಗೊಳಿಸುತ್ತಾ ಸ್ವಲ್ಪ ಸಮಯದಲ್ಲಿ ರಾಜರ್ಷಿಗಳು ನಡೆದ, ಸಾರಿಸಿ ಗಂಧವನ್ನು ಚುಮುಕಿಸಿದ ರಾಜಮಾರ್ಗವನ್ನು ಪ್ರವೇಶಿಸಿದನು.
ತತಃ ಪ್ರಯಾತೇ ದಾಶಾರ್ಹೇ ಪ್ರಾವಾದ್ಯಂತೇ ಸ್ಮ ಪುಷ್ಕರಾಃ |
ಶಂಖಾಶ್ಚ ದಧ್ಮಿರೇ ತತ್ರ ವಾದ್ಯಾನ್ಯನ್ಯಾನಿ ಯಾನಿ ಚ ॥34॥
ದಾಶಾರ್ಹನಾದ ಕೃಷ್ಣನು ಹೋಗುತ್ತಿರಲು ಅಲ್ಲಿ ಪುಷ್ಕರ, ಶಂಖ ಮತ್ತು ಇತರ ವಾದ್ಯಗಳೂ ಮೊಳಗಿದವು.
ಪ್ರವೀರಾಃ ಸರ್ವಲೋಕಸ್ಯ ಯುವಾನಃ ಸಿಂಹವಿಕ್ರಮಾಃ |
ಪರಿವಾರ್ಯ ರಥಂ ಶೌರೇರಗಚ್ಛಂತ ಪರಂತಪಾಃ ॥35॥
ಸರ್ವಲೋಕದ ವೀರರೂ, ಸಿಂಹ ಪರಾಕ್ರಮವುಳ್ಳ ಯುವಕರೂ, ಪರಂತಪರೂ ಆದ ರಾಜರು ಕೃಷ್ಣನ ರಥವನ್ನು ಸುತ್ತುಗಟ್ಟಿ ಮುಂದೆ ಸಾಗಿದರು.
ತತೋಽನ್ಯೇ ಬಹುಸಾಹಸ್ರಾ ವಿಚಿತ್ರಾದ್ಭುತವಾಸಸಃ |
ಅಸಿಪ್ರಾಸಾಯುಧಧರಾಃ ಕೃಷ್ಣಸ್ಯಾಸನ್ ಪುರಸ್ಸರಾಃ ॥36॥
ಇನ್ನು ಅನೇಕ ಸಹಸ್ರ ಯೋಧರು ವಿಚಿತ್ರವಾದ ಅದ್ಭುತವಾದ ವೇಷವನ್ನು ಧರಿಸಿ ಅಸಿ, ಪ್ರಾಸ ಮೊದಲಾದ ಆಯುಧಗಳನ್ನು ಹಿಡಿದು ಕೃಷ್ಣನ ಮುಂಭಾಗದಲ್ಲಿ ನಡೆದರು.
ಗಜಾಃ ಪಂಚಶತಾಸ್ತತ್ರ ರಥಾಶ್ಚಾಸನ್ ಸಹಸ್ರಶಃ |
ಪ್ರಯಾಂತಮನ್ವಯುರ್ವೀರಂ ದಾಶಾರ್ಹಮಪರಾಜಿತಮ್ ॥37॥
ಅಪರಾಜಿತನಾದ ಕೃಷ್ಣನು ಹೋಗುತ್ತಿರುವಾಗ ವೀರನಾದ ಅವನನ್ನು ಐದು ನೂರು ಗಜಗಳು ಮತ್ತು ಸಹಸ್ರಾರು ರಥಗಳು ಹಿಂಬಾಲಿಸಿದವು.
ಪುರಂ ಕುರೂಣಾಂ ಸಂವೃತ್ತಂ ದ್ರಷ್ಟುಕಾಮಂ ಜನಾರ್ದನಮ್ |
ಆಬಾಲವೃದ್ಧಂ ಸಸ್ತ್ರೀಕಂ ರಥ್ಯಾಗತಮರಿಂದಮಮ್ ॥38॥
ಮಹಾಮಾರ್ಗವನ್ನು ಪ್ರವೇಶಿಸಿದ ಅರಿಂದಮನಾದ ಕೃಷ್ಣನನ್ನು ನೋಡುವ ಆಸೆಯಿಂದ ಕೌರವರ ಆ ಪಟ್ಟಣವು ಬಾಲಕರಿಂದ ಹಿಡಿದು ವೃದ್ಧರವರೆಗೆ ಎಲ್ಲರಿಂದಲೂ ಮತ್ತು ಸ್ತ್ರೀಯರಿಂದಲೂ ತುಂಬಿಹೋಯಿತು.
ವೇದಿಕಾಮಾಶ್ರಿತಾಭಿಶ್ಚ ಸಮಾಕ್ರಾಂತಾನ್ಯನೇಕಶಃ |
ಪ್ರಚಲಂತೀವ ಭಾರೇಣ ಯೋಷಿದ್ಭಿರ್ಭವನಾನ್ಯುತ ॥39॥
ಸಂಪೂಜ್ಯಮಾನಃ ಕುರುಭಿಃ ಸಂಶೃಣ್ವನ್ ವಿವಿಧಾಃ ಕಥಾಃ |
ಯಥಾರ್ಹಂ ಪ್ರತಿಸತ್ಕುರ್ವನ್ ಪ್ರೇಕ್ಷಮಾಣಃ ಶನೈರ್ಯಯೌ ॥40॥

ಅಲ್ಲಲ್ಲಿ ಎತ್ತರವಾದ ವೇದಿಕೆಗಳ ಮೇಲೆ ಅನೇಕ ಜನರು ಗುಂಪು ಗುಂಪಾಗಿ ನಿಂತಿದ್ದರು. ಮನೆಗಳು ಸ್ತ್ರೀಯರ ಭಾರದಿಂದ ಚಲಿಸುವಂತೆ ತೋರುತ್ತಿದ್ದಿತು. ಕೃಷ್ಣನು ಕೌರವರಿಂದ ಪೂಜಿಸಲ್ಪಟ್ಟು ತನ್ನ ಪ್ರಶಂಸಾ ರೂಪವಾದ ಅನೇಕ ಮಾತುಗಳನ್ನು ಕೇಳುತ್ತಾ ಯಥಾಯೋಗ್ಯವಾಗಿ ಅವರನ್ನು ನೋಡಿ ಸತ್ಕಾರವನ್ನು ಮಾಡುತ್ತಾ ನಿಧಾನವಾಗಿ ಸಾಗಿದನು.
ತತಃ ಸಭಾಂ ಸಮಾಸಾದ್ಯ ಕೇಶವಸ್ಯಾನುಯಾಯಿನಃ |
ಸಶಂಖೈರ್ವೇಣುನಿರ್ಘೋಷೈಃ ದಿಶಃ ಸರ್ವಾ ವ್ಯನಾದಯನ್ ॥41॥
ಅನಂತರ ಸಭೆಯನ್ನು ಸೇರಿದ ಕೃಷ್ಣನನ್ನು ಹಿಂಬಾಲಿಸಿದ ಯೋಧರು ಶಂಖ, ವೇಣುಗಳ ನಾದದಿಂದ ಎಲ್ಲ ದಿಕ್ಕುಗಳೂ ಪ್ರತಿಧ್ವನಿಸುವಂತೆ ಮಾಡಿದರು.
ತತಃ ಸಾ ಸಮಿತಿಃ ಸರ್ವಾ ರಾಜ್ಞಾಮಮಿತತೇಜಸಾಮ್ |
ಸಂಪ್ರಾಕಂಪತ ಹರ್ಷೇಣ ಕೃಷ್ಣಾಗಮನಕಾಂಕ್ಷಯಾ ॥42॥
ಅನಂತರ ಕೃಷ್ಣನ ಆಗಮನವನ್ನು ನಿರೀಕ್ಷಿಸುತ್ತಿದ್ದ ಅಮಿತತೇಜಸ್ವಿಗಳಾದ ಆ ಎಲ್ಲಾ ರಾಜರ ಸಭೆಯು ಸಂತೋಷದಿಂದ ಕಂಪಿಸಿತು.
ತತೋಽಭ್ಯಾಶಂ ಗತೇ ಕೃಷ್ಣೇ ಸಮಹೃಷ್ಯನ್ ನರಾಧಿಪಾಃ |
ಶ್ರುತ್ವಾ ತಂ ರಥನಿರ್ಘೋಷಂ ಪರ್ಜನ್ಯನಿನದೋಪಮಮ್ ॥43॥
ಕೃಷ್ಣನು ಸಮೀಪಕ್ಕೆ ಬರುತ್ತಿರುವಾಗಲೇ ಪರ್ಜನ್ಯನಿನಾದದಂತಿದ್ದ ರಥಘೋಷವನ್ನು ಕೇಳಿ ರಾಜರೆಲ್ಲರೂ ಸಂತೋಷಪಟ್ಟರು.
ಆಸಾದ್ಯ ತು ಸಭಾದ್ವಾರಮ್ ಋಷಭಃ ಸರ್ವಸಾತ್ವತಾಮ್ |
ಅವತೀರ್ಯ ರಥಾಚ್ಛೌರಿಃ ಕೈಲಾಸಶಿಖರೋಪಮಾತ್ ॥44॥
ನಗಮೇಘಪ್ರತೀಕಾಶಂ ಜ್ವಲಂತೀಮಿವ ತೇಜಸಾ |
ಮಹೇಂದ್ರಸದನಪ್ರಖ್ಯಂ ಪ್ರವಿವೇಶ ಸಭಾಂ ತತಃ ॥45॥
ಸರ್ವಸಾತ್ವತಶ್ರೇಷ್ಠನಾದ ಶೌರಿಯು ಕೈಲಾಸಶಿಖರದಂತೆ ಎತ್ತರವಾಗಿದ್ದ ಸಭೆಯ ದ್ವಾರಕ್ಕೆ ಬಂದು ರಥದಿಂದ ಇಳಿದು ಮೇಘಸಹಿತವಾದ ಪರ್ವತವನ್ನು ಹೋಲುವ ಕಾಂತಿಯಿಂದ ಬೆಳಗುವ ಮಹೇಂದ್ರಭವನವನ್ನು ಹೋಲುವ ಸಭೆಯನ್ನು ಪ್ರವೇಶಿಸಿದನು.
ಪಾಣೌ ಗೃಹೀತ್ವಾ ವಿದುರಂ ಸಾತ್ಯಕಿಂ ಚ ಮಹಾಯಶಾಃ |
ಜ್ಯೋತೀಂಷ್ಯಾದಿತ್ಯವದ್ ರಾಜನ್ ಕುರೂನ್ ಪ್ರಾಚ್ಛಾದಯಚ್ಛ್ರಿಯಾ ॥
ಮಹಾಕೀರ್ತಿವಂತನಾದ ಕೃಷ್ಣನು ತನ್ನ ಕೈಗಳಿಂದ ಒಂದುಕಡೆ ಸಾತ್ಯಕಿಯನ್ನೂ, ಇನ್ನೊಂದು ಕಡೆ ವಿದುರನನ್ನೂ ಹಿಡಿದು ಎಲೈ ರಾಜನೇ, ಸೂರ್ಯನು ಉಳಿದ ಗ್ರಹಗಳನ್ನು ತನ್ನ ಕಾಂತಿಯಿಂದ ಮುಚ್ಚುವಂತೆ ಕೌರವರನ್ನು ತನ್ನ ಕಾಂತಿಯಿಂದ ಮುಚ್ಚಿದನು.
ಅಗ್ರತೋ ವಾಸುದೇವಸ್ಯ ಕರ್ಣದುರ್ಯೋಧನಾವುಭೌ |
ವೃಷ್ಣಯಃ ಕೃತವರ್ಮಾ ಚಾಪ್ಯಾಸನ್ ಕೃಷ್ಣಸ್ಯ ಪೃಷ್ಠತಃ ॥47॥
ಕೃಷ್ಣನ ಮುಂಭಾಗದಲ್ಲಿ ಕರ್ಣ-ದುರ್ಯೋಧನರಿಬ್ಬರೂ ಮತ್ತು ಕೃಷ್ಣನ ಹಿಂಭಾಗದಲ್ಲಿ ವೃಷ್ಣಿಗಳೂ ಮತ್ತು ಕೃತವರ್ಮನೂ ಇದ್ದನು.
ಧೃತರಾಷ್ಟ್ರಂ ಪುರಸ್ಕೃತ್ಯ ಭೀಷ್ಮದ್ರೋಣಾದಯಶ್ಚ ತೇ |
ಆಸನೇಭ್ಯೋಽಚಲನ್ ಸರ್ವೇ ಪೂಜಯಂತೋ ಜನಾರ್ದನಮ್ ॥48॥
ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ಆ ಭೀಷ್ಮ-ದ್ರೋಣಾದಿಗಳೆಲ್ಲರೂ ಕೃಷ್ಣನಿಗೆ ಗೌರವವನ್ನು ಸಲ್ಲಿಸುತ್ತಾ ತಮ್ಮ ಆಸನಗಳಿಂದ ಎದ್ದರು.
ಅಭ್ಯಾಗಚ್ಛತಿ ದಾಶಾರ್ಹೇ ಪ್ರಜ್ಞಾಚಕ್ಷುರ್ಮಹಾಮನಾಃ |
ಸಹೈವ ದ್ರೋಣಭೀಷ್ಮಾಭ್ಯಾಮುದತಿಷ್ಠನ್ ಮಹಾಯಶಾಃ ॥49॥
ಕೃಷ್ಣನು ಸಭೆಯನ್ನು ಪ್ರವೇಶಿಸುತ್ತಿರಲು ಮಹಾಕೀರ್ತಿವಂತನೂ, ಪ್ರಜ್ಞಾಚಕ್ಷುವೂ, ಉದಾರವಾದ ಮನಸ್ಸುಳ್ಳವನೂ ಆದ ಧೃತರಾಷ್ಟ್ರನು ಭೀಷ್ಮ-ದ್ರೋಣರ ಜೊತೆಯಲ್ಲಿ ಎದ್ದು ನಿಂತನು.
ಉತ್ತಿಷ್ಠತಿ ಮಹಾರಾಜೇ ಧೃತರಾಷ್ಟ್ರೇ ಜನೇಶ್ವರೇ |
ತಾನಿ ರಾಜಸಹಸ್ರಾಣಿ ಸಮುತ್ತಸ್ಥುಃ ಸಮಂತತಃ ॥50॥
ಮಹಾರಾಜನಾದ ಎಲ್ಲ ಜನರಿಗೆ ಪ್ರಭುವಾದ ಧೃತರಾಷ್ಟ್ರನು ಎದ್ದು ನಿಲ್ಲುತ್ತಿರಲು ಸುತ್ತಲೂ ಇದ್ದ ಆ ಸಹಸ್ರಾರು ರಾಜರು ಎದ್ದು ನಿಂತರು.
ಆಸನಂ ಸರ್ವತೋಭದ್ರಂ ಜಾಂಬೂನದಪರಿಷ್ಕೃತಮ್ |
ಕೃಷ್ಣಾರ್ಥೇ ಕಲ್ಪಿತಂ ತತ್ರ ಧೃತರಾಷ್ಟ್ರಸ್ಯ ಶಾಸನಾತ್ ॥51॥
ಧೃತರಾಷ್ಟ್ರನ ಶಾಸನದಂತೆ ಅಲ್ಲಿ ಕೃಷ್ಣನಿಗಾಗಿ ಸರ್ವಮಂಗಳಕರವಾದ ಸುವರ್ಣಾಲಂಕೃತವಾದ ಆಸನ ಒಂದನ್ನು ಸಿದ್ಧಪಡಿಸಿದ್ದರು.
ಸ್ಮಯಮಾನಸ್ತು ರಾಜಾನಂ ಭೀಷ್ಮದ್ರೋಣೌ ಚ ಮಾಧವಃ |
ಅಭ್ಯಭಾಷತ ಧರ್ಮಾತ್ಮಾ ರಾಜ್ಞಶ್ಚಾನ್ಯಾನ್ ಯಥಾವಯಃ ॥52॥
ಮಾಧವನು ಧೃತರಾಷ್ಟ್ರನನ್ನೂ, ಭೀಷ್ಮ-ದ್ರೋಣರನ್ನೂ ನೋಡಿ ಮುಗುಳ್ನಗೆಯನ್ನು ಸೂಚಿಸುತ್ತಾ ಧರ್ಮಾತ್ಮನಾದ ಅವನು ಉಳಿದ ರಾಜರ ಜೊತೆಯಲ್ಲಿ, ಅವರ ವರ ವಯಸ್ಸಿಗೆ ಅನುಗುಣವಾಗಿ ಮಾತನಾಡಿದನು.
ತತ್ರ ಕೇಶವಮಾನರ್ಚುಃ ಸಮ್ಯಗಭ್ಯಾಗತಂ ಸಭಾಮ್ |
ರಾಜಾನಃ ಪಾರ್ಥಿವಾಃ ಸರ್ವೇ ಕುರವಶ್ಚ ಜನಾರ್ದನಮ್ ॥53॥

ಭೂಮಿಯ ಎಲ್ಲಾ ರಾಜರು ಮತ್ತು ಎಲ್ಲಾ ಕೌರವರು ಅಭ್ಯಾಗತನಾಗಿ ಸಭೆಯನ್ನು ಪ್ರವೇಶಿಸಿದ ಜನಾರ್ದನನಾದ ಕೃಷ್ಣನನ್ನು ಅರ್ಚಿಸಿದರು.
ತತ್ರ ತಿಷ್ಠನ್ ಸ ದಾಶಾರ್ಹೋ ರಾಜಮಧ್ಯೇ ಪರಂತಪಃ |
ಅಪಶ್ಯದಂತರಿಕ್ಷಸ್ಥಾನ್ ಋಷೀನ್ ಪರಪುರಂಜಯಃ ||54||
ರಾಜರ ಮಧ್ಯದಲ್ಲಿ ನಿಂತ ಪರಂತಪನೂ, ಪರಪುರಂಜಯನೂ ಆದ ಕೃಷ್ಣನು ಅಂತರಿಕ್ಷದಲ್ಲಿ ನಿಂತ ಋಷಿಗಳನ್ನು ನೋಡಿದನು.
ತತಸ್ತಾನಭಿಸಂಪ್ರೇಕ್ಷ್ಯ ನಾರದಪ್ರಮುಖಾನ್ ಋಷೀನ್ |
ಅಭ್ಯಭಾಷತ ದಾಶಾರ್ಹೋ ಭೀಷ್ಮಂ ಶಾಂತನವಂ ಶನೈಃ ||55||
ಆ ನಾರದ ಮೊದಲಾದ ಋಷಿಗಳನ್ನು ನೋಡಿದ ಕೃಷ್ಣನು ಶಂತನು ಪುತ್ರನಾದ ಭೀಷ್ಮನನ್ನು ಕುರಿತು ಮೆಲ್ಲನೆ (ಹೀಗೆ) ಮಾತನಾಡಿದನು.
ಪಾರ್ಥಿವೀಂ ಸಮಿತಿಂ ದ್ರಷ್ಟುಮ್ ಋಷಯೋಽಭ್ಯಾಗತಾ ನೃಪ |
ನಿಮಂತ್ರ್ಯಂತಾಮಾಸನೈಶ್ಚ ಸತ್ಕಾರೇಣ ಚ ಭೂಯಸಾ ||56||
ಎಲೈ ರಾಜನೇ, ಭೂಮಿಯಲ್ಲಿರುವ ಸಭೆಯನ್ನು ನೋಡಲು ಋಷಿಗಳು ಬಂದಿದ್ದಾರೆ. ಅವರನ್ನು ಆಸನ ಮತ್ತು ಬಹಳ ಸತ್ಕಾರಗಳಿಂದ ಆಮಂತ್ರಿಸುವವನಾಗು.
ನೈತೇಷ್ವನುಪವಿಷ್ಟೇಷು ಶಕ್ಯಂ ಕೇನಚಿದಾಸಿತುಮ್ |
ಪೂಜಾ ಪ್ರಯುಜ್ಯತಾಮಾಶು ಮುನೀನಾಂ ಭಾವಿತಾತ್ಮನಾಮ್ ||57||
ಅವರು ಕುಳಿತುಕೊಳ್ಳುವವರೆಗೆ ಯಾರೂ ಕುಳಿತುಕೊಳ್ಳಲು ಸಾಧ್ಯವಿಲ್ಲ. ಪರಿಶುದ್ಧವಾದ ಮನಸ್ಸುಳ್ಳ ಈ ಋಷಿಗಳಿಗೆ ಬೇಗ ಪೂಜೆಯನ್ನು ಸಲ್ಲಿಸುವವನಾಗು.
ವೈಶಂಪಾಯನಃ
ಋಷೀನ್ ಶಾಂತನವೋ ದೃಷ್ಟ್ವಾ ಸಭಾದ್ವಾರಮುಪಸ್ಥಿತಾನ್ |
ತ್ವರಮಾಣಸ್ತತೋ ಭೃತ್ಯಾನ್ ಆಸನಾನೀತ್ಯಚೋದಯತ್ ||58||
ವೈಶಂಪಾಯನ ಸಭಾದ್ವಾರವನ್ನು ಸಮೀಪಿಸಿದ ಋಷಿಗಳನ್ನು ನೋಡಿ ಶಂತನು ಪುತ್ರನಾದ ಭೀಷ್ಮನು ತ್ವರೆಮಾಡುತ್ತಾ ಭೃತ್ಯರನ್ನು ಕುರಿತು ಆಸನಗಳನ್ನು ತನ್ನಿ ಎಂದು ಹೇಳಿದನು.
ಆಸನಾನ್ಯಥ ಮೃಷ್ಟಾನಿ ಮಹಾಂತಿ ವಿಪುಲಾನಿ ಚ |
ಮಣಿಕಾಂಚನಚಿತ್ರಾಣಿ ಸಮಾಜಹ್ರುಸ್ತತಸ್ತತಃ ||59||
ಆಗ ಸೇವಕರು ಶುದ್ಧವಾದ ವಿಸ್ತಾರವಾದ ಮಣಿಸುವರ್ಣಗಳಿಂದ ಅಲಂಕೃತವಾದ ದೊಡ್ಡ ಆಸನಗಳನ್ನು ಬೇರೆ ಬೇರೆ ಕಡೆಗಳಿಂದ ತೆಗೆದುಕೊಂಡು ಬಂದರು.
ತೇಷು ತತ್ರೋಪವಿಷ್ಟೇಷು ಗೃಹೀತಾರ್ಘ್ಯೇಷು ಭಾರತ |
ನಿಷಸಾದಾಸನೇ ಕೃಷ್ಣೋ ರಾಜಾನಶ್ಚ ಯಥಾಸನಮ್ ||60||
ಎಲೈ ಭಾರತನೇ, ಋಷಿಗಳು ಅಲ್ಲಿ ಕುಳಿತು ಅರ್ಘ್ಯವನ್ನು ಸ್ವೀಕರಿಸಿದ ಮೇಲೆ ಕೃಷ್ಣನು ತನ್ನ ಆಸನದಲ್ಲಿ ಕುಳಿತುಕೊಂಡನು. ಉಳಿದ ರಾಜರು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು.
ದುಃಶಾಸನಃ ಸಾತ್ಯಕಯೇ ದದಾವಾಸನಮುತ್ತಮಮ್ |
ವಿವಿಂಶತಿರ್ದದೌ ಪೀಠಂ ಕಾಂಚನಂ ಕೃತವರ್ಮಣೇ ||61||
ದುಶ್ಶಾಸನನು ಸಾತ್ಯಕಿಗೆ ಶ್ರೇಷ್ಠವಾದ ಆಸನವನ್ನು ಕೊಟ್ಟನು. ವಿವಿಂಶತಿಯು ಕೃತವರ್ಮನಿಗೆ ಸುವರ್ಣಮಯವಾದ ಆಸನವನ್ನು ಕೊಟ್ಟನು.
ಅವಿದೂರೇ ತು ಕೃಷ್ಣಸ್ಯ ಕರ್ಣದುರ್ಯೋಧನಾವುಭೌ |
ಏಕಾಸನೇ ಮಹಾತ್ಮಾನೌ ನಿಷೀದತುರರಿಂದಮೌ ||62||
ಕೃಷ್ಣನಿಗೆ ಸಮೀಪದಲ್ಲಿ ಅರಿಂದಮರಾದ ಮಹಾಪ್ರಯತ್ನಶಾಲಿಗಳಾದ ಕರ್ಣ-ದುರ್ಯೋಧನರಿಬ್ಬರೂ ಒಂದೇ ಆಸನದಲ್ಲಿ ಕುಳಿತರು.
ಗಾಂಧಾರರಾಜಃ ಶಕುನಿಃ ಗಾಂಧಾರೈರಭಿರಕ್ಷಿತಃ |
ನಿಷಸಾದಾಸನೇ ರಾಜಾ ಸಹಪುತ್ರೈರ್ವಿಶಾಂಪತೇ ||63||
ಎಲೈ ರಾಜನೇ, ಗಾಂಧಾರರಾಜನಾದ ಶಕುನಿಯು ಗಾಂಧಾರಯೋಧರಿಂದ ರಕ್ಷಿಸಲ್ಪಟ್ಟವನಾಗಿ ತನ್ನ ಪುತ್ರರ ಜೊತೆಯಲ್ಲಿ ಆಸನದಲ್ಲಿ ಕುಳಿತುಕೊಂಡನು.
ವಿದುರೋ ಮಣಿಪೀಠೇ ತು ಶುಕ್ಲಸ್ಪರ್ಧ್ಯಾಜಿನೋತ್ತರೇ |
ಸಂಸ್ಪೃಶನ್ನಾಸನಂ ಶೌರೇಃ ಮಹಾಮತಿರುಪಾವಿಶತ್ ||64||
ಮಹಾಮತಿಯಾದ ವಿದುರನು ಕೃಷ್ಣನ ಆಸನವನ್ನು ಮುಟ್ಟಿ ಅತ್ಯಂತ ಬಿಳಿಯಾದ ಚರ್ಮವನ್ನು ಹಾಸಿದ ಮಣಿಪೀಠದಲ್ಲಿ ಕುಳಿತುಕೊಂಡನು.
ಚಿರಸ್ಯ ದೃಷ್ಟ್ವಾ ದಾಶಾರ್ಹಂ ರಾಜಾನಃ ಸರ್ವಪಾರ್ಥಿವಾಃ |
ಅಮೃತಸ್ಯೇವ ನಾತೃಪ್ಯನ್ ಪ್ರೇಕ್ಷಮಾಣಾ ಜನಾರ್ದನಮ್ ||64||
ಭೂಮಿಯಲ್ಲಿದ್ದ ಎಲ್ಲ ರಾಜರು ಬಹುಕಾಲದಮೇಲೆ ಕೃಷ್ಣನನ್ನು ನೋಡಿ ಅಮೃತವನ್ನು ಕುಡಿದಂತೆ ಕೃಷ್ಣನನ್ನು ನೋಡುತ್ತಾ ತೃಪ್ತಿಯನ್ನೇ ಹೊಂದಲಿಲ್ಲ.

ಅಸತೀಪುಷ್ಪಸಂಕಾಶಃ ಪೀತವಾಸಾ ಜನಾರ್ದನಃ ।
ವ್ಯಭ್ರಾಜತ ಸಭಾಮಧ್ಯೇ ಹೇಮ್ನೀವೋಪಹಿತೋ ಮಣಿಃ ॥66॥
ಅಗಸೆಯ ಹೂವಿನ ಕಾಂತಿಯುಳ್ಳ ಪೀತಾಂಬರಧಾರಿಯಾದ ಕೃಷ್ಣನು ಆ ಸಭೆಯ ಮಧ್ಯದಲ್ಲಿ ಸುವರ್ಣಮಧ್ಯದಲ್ಲಿರುವ ಮರಕತಮಣಿಯಂತೆ ಶೋಭಿಸಿದನು.
ತತಸ್ತೂಷ್ಣೀಂ ಸರ್ವಮಾಸೀದ್ ಗೋವಿಂದಗತಮಾನಸಮ್ ।
ನ ತತ್ರ ಕಶ್ಚಿದ್ ಕಿಂಚಿದ್ವಾ ವ್ಯಾಜಹಾರ ಪುಮಾನ್ ಕ್ವಚಿತ್ ॥67॥
ಅನಂತರ ಅಲ್ಲಿದ್ದ ಎಲ್ಲರೂ ಕೃಷ್ಣನಲ್ಲಿ ನೆಟ್ಟಮನಸ್ಸುಳ್ಳವರಾಗಿ ಮೌನದಿಂದ ಕುಳಿತರು. ಯಾವ ಪುರುಷನೂ ಏನನ್ನೂ ಮಾತನಾಡಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿನವತಿತಮೋऽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತುರ್ವಿಂಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೂರನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
ಸಂಪೂಜಿತೋ ಭೀಷ್ಮಮುಖ್ಯೈಃ ಸಮಸ್ತೈ
ರರಾಜ ರಾಜೀವಸಮಾನನೇತ್ರಃ ।
ಯಥೋಚಿತಾಸ್ತತ್ರ ವಿಧಾಯ ವಾರ್ತಾ
ಜಗಾದ ಕಾಲೇ ಕಲಿಕಲ್ಮಷಾಪಹಃ ॥71॥
ಕಲಿಕಲ್ಮಷವನ್ನು ಕಳೆವ ಕಮಲಲೋಚನನಾದ ಶ್ರೀಕೃಷ್ಣ ಭೀಷ್ಮಾದಿಗಳೆಲ್ಲರಿಂದಲೂ ಸತ್ಕೃತನಾಗಿ ಸಂದರ್ಭೋಚಿತವಾದ ಮಾತುಗಳನ್ನಾಡಿ ಯೋಗ್ಯಕಾಲದಲ್ಲಿ ಹೀಗೆ ನುಡಿದ.
ವೈಚಿತ್ರವೀರ್ಯ ಸ್ವಕುಲಸ್ಯ ವೃದ್ಧ್ಯೈ
ಪ್ರದೇಹಿ ರಾಜ್ಯಂ ತವ ಸತ್ಸುತಾಯ ।
ಯಶಶ್ಚ ಧರ್ಮಂ ಪರಮಂ ಪ್ರಸಾದಂ
ಮಮ ತ್ವಮಾಪ್ನೋಷಿ ತದೈವ ರಾಜನ್ ॥72॥
`ಧೃತರಾಷ್ಟ್ರ! ನಿನ್ನ ಕುಲದ ಏಳಿಗೆಗಾಗಿ ನಿನ್ನ ಸುಪುತ್ರರಿಗೆ ರಾಜ್ಯನೀಡು. ಆಗಲೆ ನೀನು ಕೀರ್ತಿಯನ್ನೂ ಪುಣ್ಯವನ್ನೂ ನನ್ನ ಪರಮಾನುಗ್ರಹವನ್ನೂ ಪಡೆಯುವಿ'.
ಅತೋऽನ್ಯಥಾ ಯಶಸೋ ಧರ್ಮತಶ್ಚ
ಹೀನಃ ಪ್ರತೀಪತ್ವಮುಪೈಷಿ ಮೇऽತಃ ।
ಇತೀರಿತಃ ಪ್ರಾಹ ಮಮಾತಿವರ್ತಿನಂ
ಸುತಂ ಸ್ವಯಂ ಮೇ ಪ್ರತಿಬೋಧಯೇತಿ ॥73॥
`ಹಾಗೆ ಮಾಡದಿದ್ದರೆ ಕೀರ್ತಿಯನ್ನೂ ಪುಣ್ಯವನ್ನೂ ಕಳೆದುಕೊಂಡು ನನಗೆ ವಿರೋಧಿ ಎನಿಸುವೆ' ಕೃಷ್ಣ ಹೀಗೆ ಹೇಳಿದಾಗ ಧೃತರಾಷ್ಟ್ರನೆಂದ, `ನನ್ನ ಮಗ ನನ್ನ ಮಾತನ್ನು ಮೀರುತ್ತಾನೆ. ಸ್ವಯಂ ನೀನೇ ತಿಳಿಯ ಹೇಳು'.
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ಧೃತರಾಷ್ಟ್ರನನ್ನು ಕುರಿತು ಕೃಷ್ಣನಿಂದ ಸಂಧಿಯ ಗುಣಗಳ ಮತ್ತು
ಯುದ್ಧದ ದೋಷಗಳ ಉಪದೇಶ.
ವೈಶಂಪಾಯನಃ
ತೇಷ್ವಾಸೀನೇಷು ಸರ್ವೇಷು ತೂಷ್ಣೀಂಭೂತೇಷು ರಾಜಸು ।
ವಾಕ್ಯಮಭ್ಯಾದದೇ ಕೃಷ್ಣಃ ಸುದಂಷ್ಟ್ರೋ ದುಂದುಭಿಸ್ವನಃ ॥1॥
ವೈಶಂಪಾಯನ ಎಲ್ಲ ರಾಜರು ಅಲ್ಲಿ ಮೌನವಾಗಿ ಕುಳಿತಿರಲು ಒಳ್ಳೆಯ ದಂತಶೋಭಿತನಾದ, ದುಂದುಭಿಯ ಧ್ವನಿಯುಳ್ಳ ಕೃಷ್ಣನು ಮಾತನಾಡಲು ಆರಂಭಿಸಿದನು.
ಜೀಮೂತ ಇವ ಘರ್ಮಾಂತೇ ಸರ್ವಾಂ ಸಂಶ್ರಾವಯನ್ ಸಭಾಮ್ ।
ಧೃತರಾಷ್ಟ್ರಮಭಿಪ್ರೇಕ್ಷ್ಯ ಸಮಭಾಷತ ಮಾಧವಃ ॥2॥
ಬೇಸಿಗೆಯ ನಂತರ ಮಳೆಗಾಲದಲ್ಲಿ ಗುಡುಗುವ ಮೋಡದಂತೆ ಮಾಧವನು ಎಲ್ಲಾ ಸಭೆಗೂ ಕೇಳಿಸುವಂತೆ ಧೃತರಾಷ್ಟ್ರನನ್ನು ನೋಡಿ ಮಾತನಾಡಿದನು.
ಕುರೂಣಾಂ ಪಾಂಡವಾನಾಂ ಚ ಶಮಃ ಸ್ಯಾದಿತಿ ಭಾರತ ।
ಅಪ್ರಣಾಶೇನ ವೀರಾಣಾಮೇತದ್ ಯಾಚಿತುಮಾಗತಃ ॥3॥
ಎಲೈ ಭಾರತನೇ, ವೀರರಿಗೆ ನಾಶವಾಗದಿರುವಂತೆ ಕೌರವರಿಗೂ ಮತ್ತು ಪಾಂಡವರಿಗೂ ಸಂಧಿ ಉಂಟಾಗಲೆಂದು ಇದನ್ನು ಬೇಡಲು ನಾನು ಇಲ್ಲಿಗೆ ಬಂದಿದ್ದೇನೆ.

ರಾಜನ್ ನಾನ್ಯತ್ ಪ್ರವಕ್ತವ್ಯಂ ತವ ನೈಶ್ರೇಯಸಂ ವಚಃ |
ವಿದಿತಂ ಹ್ಯೇವ ತೇ ಸರ್ವಂ ವೇದಿತವ್ಯಮರಿಂದಮ ||4||
ಎಲೈ ರಾಜನೇ, ಇದನ್ನು ಬಿಟ್ಟು ನಿನಗೆ ಶ್ರೇಯಸ್ಕರವಾದ ಬೇರೆ ಮಾತುಗಳನ್ನು ಆಡುವ ಅವಶ್ಯಕತೆ ಇಲ್ಲ. ಎಲೈ ಅರಿಂದಮನೇ, ತಿಳಿಯಬೇಕಾದುದನ್ನೆಲ್ಲಾ ನೀನು ತಿಳಿದೇ ಇದ್ದೀಯೆ.
ಇದಂ ಹ್ಯದ್ಯ ಕುಲಂ ಶ್ರೇಷ್ಠಂ ಪೃಥಿವ್ಯಾಂ ಸರ್ವರಾಜಸು |
ಶ್ರುತವೃತ್ತೋಪಸಂಪನ್ನಂ ಸರ್ವೈಃ ಸಮುದಿತಂ ಗುಣೈಃ ||5||
ಈ ನಿಮ್ಮ ಕುಲವು ಒಳ್ಳೆಯ ಗುಣ ಮತ್ತು ವಿದ್ಯೆಗಳಿಂದಲೂ ಮತ್ತು ಎಲ್ಲಾ ಶ್ರೇಷ್ಠವಾದ ಗುಣಗಳಿಂದಲೂ ಕೂಡಿದುದಾಗಿ ಭೂಮಿಯಲ್ಲಿ ಎಲ್ಲ ರಾಜಕುಲಗಳಿಗಿಂತ ಶ್ರೇಷ್ಠವಾಗಿದೆ.
ಕೃಪಾನುಕಂಪಾ ಕಾರುಣ್ಯಮಾನೃಶಂಸ್ಯಂ ಚ ಭಾರತ |
ತಥಾಽಽರ್ಜವಂ ಕ್ಷಮಾ ಸತ್ಯಂ ಕುರುಷ್ವೇವ ವಿಭಾವ್ಯತೇ ||6||
ಎಲೈ ಭಾರತನೇ, ದಯೆ, ಅನುಕಂಪ, ಕರುಣೆ, ಅಕ್ರೌರ್ಯ, ಆರ್ಜವ, ಕ್ಷಮೆ, ಸತ್ಯ ಇವೆಲ್ಲವೂ ಕುರುಗಳಲ್ಲಿಯೇ ಕಂಡುಬರುತ್ತವೆ.
ತಸ್ಮಿನ್ನೇವಂವಿಧೇ ರಾಜನ್ ಕುಲೇ ಮಹತಿ ತಿಷ್ಠತಿ |
ತ್ವನ್ನಿಮಿತ್ತಂ ವಿಶೇಷೇಣ ನೇಹ ಯುಕ್ತಮಸಾಂಪ್ರತಮ್ ||7||
ಎಲೈ ರಾಜನೇ, ಇಂತಹ ದೊಡ್ಡ ಕುಲವು ಇರುತ್ತಿರಲು ನಿನ್ನ ನಿಮಿತ್ತದಿಂದ ವಿಶೇಷವಾಗಿ ಯಾವ ಅನುಚಿತವಾದದ್ದೂ ಸಂಭವಿಸಬಾರದು.
ತ್ವಂ ಹಿ ವಾರಯಿತಾ ಶ್ರೇಷ್ಠಃ ಕುರೂಣಾಂ ಕುರುಸತ್ತಮ |
ಮಿಥ್ಯಾ ಪ್ರಚರತಾಂ ತಾತ ಬಾಹ್ಯೇಷ್ವಾಭ್ಯಂತರೇಷು ಚ ||8||
ಎಲೈ ಕುರುಶ್ರೇಷ್ಠನೇ, ಪ್ರೀತಿಪಾತ್ರನೇ, ಶ್ರೇಷ್ಠನಾದ ನೀನು ಮೋಸವನ್ನು ಮಾಡುವ ಅಂತರಂಗದ ಮತ್ತು ಬಹಿರಂಗದ ಜನರನ್ನು ತಡೆಯುವವನಾಗಬೇಕಷ್ಟೆ?
ಪುತ್ರಾಸ್ತವ ತು ಕೌರವ್ಯ ದುರ್ಯೋಧನಪುರೋಗಮಾಃ |
ಧರ್ಮಾರ್ಥೌ ಪೃಷ್ಠತಃ ಕೃತ್ವಾ ಪ್ರಚರಂತಿ ನೃಶಂಸವತ್ ||9||
ಎಲೈ ಕೌರವ್ಯನೇ, ದುರ್ಯೋಧನ ಮೊದಲಾದ ನಿನ್ನ ಮಕ್ಕಳು ಧರ್ಮಾರ್ಥಗಳನ್ನು ಹಿಂದಕ್ಕೆ ಹಾಕಿ ಕ್ರೂರವಾಗಿ ನಡೆದುಕೊಳ್ಳುತ್ತಿದ್ದಾರೆ.
ಅಶಿಷ್ಟಾ ಗತಮರ್ಯಾದಾ ಲೋಭೇನ ಹೃತಚೇತಸಃ |
ಸ್ವೇಷು ಬಂಧುಷು ಮುಖ್ಯೇಷು ತದ್ ವೇತ್ಥ ಪುರುಷರ್ಷಭ ||10||
ಎಲೈ ಪುರುಷರ್ಷಭನೇ, ಅವರು ಶಿಷ್ಟಾಚಾರವನ್ನು ಮೀರಿ ಯಾವ ಮರ್ಯಾದೆಯೂ ಇಲ್ಲದೆ ಲೋಭದಿಂದ ಕೂಡಿದ ಮನಸ್ಸುಳ್ಳವರಾಗಿ ತಮ್ಮ ಮುಖ್ಯಬಂಧುಗಳ ವಿಷಯದಲ್ಲಿಯೇ ಹೀಗೆ ನಡೆದುಕೊಳ್ಳುತ್ತಿದ್ದಾರೆಂಬುದನ್ನು ನೀನು ತಿಳಿದಿದ್ದೀಯೆ.
ಸೇಯಮಾಪನ್ಮಹಾಘೋರಾ ಕುರುಷ್ವೇವ ಸಮುತ್ಥಿತಾ |
ಉಪೇಕ್ಷ್ಯಮಾಣಾ ಕೌರವ್ಯ ಪೃಥಿವೀಂ ಘಾತಯಿಷ್ಯತಿ ||11||
ಎಲೈ ಕೌರವ್ಯನೇ, ಈ ಘೋರವಾದ ದೊಡ್ಡ ಆಪತ್ತು ಕುರುಗಳಲ್ಲಿಯೇ ಉದ್ಭವಿಸಿದೆ. ಇದನ್ನು ಉದಾಸೀನ ಮಾಡಿದರೆ ಪೃಥಿವಿಯನ್ನೇ ನಾಶಪಡಿಸುತ್ತದೆ.
ಶಕ್ಯಾ ಚೇಯಂ ಶಮಯಿತುಂ ತ್ವಂ ಚೇದಿಚ್ಛಸಿ ಭಾರತ |
ಸುದುಷ್ಕರೋಽಪ್ಯತ್ರ ಶಮೋ ಮತೋ ಮೇ ಭರತರ್ಷಭ ||12||
ಎಲೈ ಭಾರತನೇ, ನಿನಗೆ ಮನಸ್ಸಿದ್ದರೆ ಈ ಆಪತ್ತನ್ನು ನಿವಾರಿಸಲು ಸಾಧ್ಯ. ಎಲೈ ಭರತರ್ಷಭನೇ, ಬಹಳ ಕಷ್ಟವಾದರೂ ಸಂಧಿಯು ಅಸಾಧ್ಯವಲ್ಲ ಎಂದು ನನ್ನ ಅಭಿಪ್ರಾಯ.
ತ್ವದಧೀನಃ ಶಮೋ ರಾಜನ್ ಮಯಿ ಚೈವ ವಿಶಾಂಪತೇ |
ಪುತ್ರಾನ್ ಸ್ಥಾಪಯ ಕೌರವ್ಯ ಸ್ಥಾಪಯಿಷ್ಯಾಮ್ಯಹಂ ಪರಾನ್ ||13||
ಎಲೈ ರಾಜನೇ, ಈ ಸಂಧಿಯು ನಿನ್ನನ್ನು ಮತ್ತು ನನ್ನನ್ನು ಅವಲಂಬಿಸಿದೆ. ಎಲೈ ಕೌರವ್ಯನೇ, ನೀನು ನಿನ್ನ ಮಕ್ಕಳನ್ನು ತಡೆಯುವವನಾಗು. ನಾನು ಬೇರೆಯವರಾದ ಪಾಂಡವರನ್ನು ನಿಲ್ಲಿಸುವೆನು.
ಅನುಜ್ಞಾತಂ ಹಿ ಭವತಾ ಸರ್ವೈಃ ಪುತ್ರೈಃ ಸಹಾನುಗೈಃ |
ಹಿತಂ ಬಲವದಪ್ಯೇಷಾಂ ತಿಷ್ಠತಾಂ ತವ ಶಾಸನೇ ||14||
ನೀನು ಅನುಮತಿಯನ್ನು ಕೊಟ್ಟರೆ ನಿನ್ನ ಶಾಸನದಲ್ಲಿರುವ ನಿನ್ನ ಎಲ್ಲಾ ಪುತ್ರರೂ ಮತ್ತು ಅವರ ಅನುಚರರೂ ದೊಡ್ಡ ಹಿತವನ್ನು ಪಡೆಯುವವರಾಗಲಿ.
ಹಿತಂ ಹಿ ಧಾರ್ತರಾಷ್ಟ್ರಾಣಾಂ ಪಾಂಡವಾನಾಂ ತಥಾ ಹಿತಮ್ |
ಶಮೇ ಪ್ರಯತಮಾನಸ್ಯ ತವ ಶಾಸನಕಾಂಕ್ಷಿಣಃ ||14||
ಸಂಧಿಯನ್ನು ಮಾಡಲು ಪ್ರಯತ್ನಪಟ್ಟು ನಿನ್ನ ಆದೇಶವನ್ನು ನಿರೀಕ್ಷಿಸುತ್ತಿರುವ ನನಗೆ ನಿನ್ನ ಪುತ್ರರಿಗೂ ಮತ್ತು ಪಾಂಡವರಿಗೂ ಹಿತವಾಗುತ್ತದೆ (ಎಂಬ ನಿಶ್ಚಯವಿದೆ).
ತೇಷಾಂ ನಿಷ್ಕಲ್ಮಷಂ ರಾಜನ್ ಸಂವಿಧತ್ಸ್ವ ವಿಶಾಂಪತೇ |
ಸಹಭೂತಾಸ್ತು ಭರತಾಃ ತವೈವ ಸ್ಯುರ್ಜನಾಧಿಪ ||15||
ಎಲೈ ರಾಜನೇ, ಪ್ರಜಾಪತಿಯೇ, ನಿನ್ನ ಪುತ್ರರು ನಿಷ್ಕಲ್ಮಷರಾಗಿರುವಂತೆ ಮಾಡು. ಎಲೈ ರಾಜನೇ, ಭರತರೆಲ್ಲರೂ ಒಂದುಗೂಡಿದರೆ

ಅದು ನಿನಗೇ ಲಾಭವಾಗುತ್ತದೆ.
ಧರ್ಮಾರ್ಥಯೋಸ್ತಿಷ್ಠ ರಾಜನ್ ಪಾಂಡವೈರಭಿರಕ್ಷಿತಃ |
ನ ಹಿ ಶಕ್ಯಾಸ್ತಥಾಭೂತಾ ಯತ್ನಾದಪಿ ನರಾಧಿಪ ॥16॥
ಎಲ್ಲೈ ರಾಜನೇ, ಪಾಂಡವರಿಂದ ರಕ್ಷಿತನಾಗಿ ಧರ್ಮಾರ್ಥಗಳನ್ನು ಅನುಷ್ಠಾನ ಮಾಡುವವನಾಗು. ಎಲ್ಲೈ ನರಾಧಿಪನೇ, ಅಂತಹ ಪಾಂಡವರು ಪ್ರಯತ್ನಪಟ್ಟರೂ ಯಾರಿಗೂ ಸೋಲುವವರಲ್ಲ.
ನ ಹಿ ತ್ವಾಂ ಪಾಂಡವೈರ್ಜೇತುಂ ರಕ್ಷ್ಯಮಾಣಂ ಮಹಾತ್ಮಭಿಃ |
ಇಂದ್ರೋಽಪಿ ದೇವೈಃ ಸಹಿತಃ ಪ್ರಸಹೇತ ಕುತೋ ನೃಪಾಃ ॥17॥
ಮಹಾತ್ಮರಾದ ಪಾಂಡವರಿಂದ ರಕ್ಷಿಸಲ್ಪಡುವ ನಿನ್ನನ್ನು ದೇವತೆಗಳಿಂದ ಸಹಿತನಾದ ಇಂದ್ರನೂ ಸಹ ಜಯಿಸಲು ಸಮರ್ಥನಾಗಲಾರ. ಇನ್ನು ಉಳಿದ ರಾಜರು ಹೇಗೆ ಜಯಿಸಬಹುದು?
ಯತ್ರ ಭೀಷ್ಮಶ್ಚ ದ್ರೋಣಶ್ಚ ಕೃಪಃ ಕರ್ಣೋ ವಿವಿಂಶತಿಃ |
ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತೋಽಥ ಬಾಹ್ಲಿಕಃ ॥18॥
ಸೈಂಧವಶ್ಚ ಕಳಿಂಗಶ್ಚ ಕಾಂಭೋಜಶ್ಚ ಸುದಕ್ಷಿಣಃ |
ಯುಧಿಷ್ಠಿರೋ ಭೀಮಸೇನಃ ಸವ್ಯಸಾಚೀ ಯಮೌ ತಥಾ ॥19॥
ಸಾತ್ಯಕಿಶ್ಚ ಮಹಾತೇಜಾ ಯುಯುತ್ಸುಶ್ಚ ಮಹಾರಥಃ |
ತತ್ರ ಯುಧ್ಯೇತ ಕೋ ರಾಜನ್ ಜೀವಿತಪ್ರೇಪ್ಸುರಾಹವೇ ॥20॥
ಎಲ್ಲಿ ಭೀಷ್ಮರು, ದ್ರೋಣರು, ಕೃಪ, ಕರ್ಣ, ವಿವಿಂಶತಿ, ಅಶ್ವತ್ಥಾಮ, ವಿಕರ್ಣ, ಸೋಮದತ್ತ, ಬಾಹ್ಲೀಕ, ಸೈಂಧವ, ಕಳಿಂಗ, ಕಾಂಭೋಜದೇಶದ ಸುದಕ್ಷಿಣ, ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ-ಸಹದೇವರು, ಮಹಾತೇಜಸ್ವಿಯಾದ ಸಾತ್ಯಕಿ, ಮಹಾರಥನಾದ ಯುಯುತ್ಸು ಇವರು ಇರುತ್ತಾರೆಯೋ ಅಂತಹ ವರ ಎದುರಿನಲ್ಲಿ ಬದುಕಲು ಬಯಸುವ ಯಾವನು ತಾನೆ ಯುದ್ಧವನ್ನು ಮಾಡಿಯಾನು?
ಗೌರವಂ ಸರ್ವರಾಜ್ಞಾಂ ಹಿ ಶತ್ರುಭಿಶ್ಚಾಪ್ರಧೃಷ್ಯತಾಮ್ |
ಪ್ರಾಪ್ಸ್ಯಸಿ ತ್ವಮಮಿತ್ರಘ್ನ ಸಹಿತಃ ಕುರುಪಾಂಡವೈಃ ॥21॥
ಎಲ್ಲೈ ಶತ್ರುಸಂಹಾರಕನೇ, ನೀನು ಕುರು-ಪಾಂಡವರಿಂದ ಸಹಿತನಾದರೆ ಎಲ್ಲ ರಾಜರಿಂದ ಗೌರವವನ್ನೂ ಮತ್ತು ಶತ್ರುಗಳಿಂದ ಅಜೇಯತ್ವವನ್ನೂ ಹೊಂದುವಿ.
ತಸ್ಯ ತೇ ಪೃಥಿವೀಪಾಲಾಃ ತ್ವತ್ಸಮಾಃ ಪೃಥಿವೀಪತೇ |
ಶ್ರೇಯಾಂಸಶ್ಚೈವ ರಾಜಾನಃ ಸಂಧಾಸ್ಯಂತೇ ಪರಂತಪ ॥22॥
ಎಲ್ಲೈ ಪರಂತಪನೇ, ಎಲ್ಲೈ ಪೃಥಿವೀಪತಿಯೇ, ನಿನಗೆ ಸಮನಾದ ಮತ್ತು ನಿನಗಿಂತ ಅಧಿಕರಾದ ಎಲ್ಲ ರಾಜರೂ ಆಗ ನಿನ್ನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವರು.
ಸ ತ್ವಂ ಪುತ್ರೈಶ್ಚ ಪೌತ್ರೈಶ್ಚ ಪಿತೃಭಿರ್ಭ್ರಾತೃಭಿಸ್ತಥಾ |
ಸುಹೃದ್ಭಿಃ ಸರ್ವತೋ ಗುಪ್ತಃ ಸುಖಂ ಶಕ್ಷ್ಯಸಿ ಜೀವಿತುಮ್ ॥23॥
ನೀನು ಪುತ್ರ-ಪೌತ್ರರಿಂದಲೂ, ಪಿತೃ-ಭ್ರಾತೃಗಳಿಂದಲೂ, ಸುಹೃಜ್ಜನರಿಂದಲೂ ಎಲ್ಲ ರೀತಿಯಿಂದಲೂ ರಕ್ಷಿತನಾಗಿ ಸುಖವಾಗಿ ಜೀವಿಸಲು ಸಾಧ್ಯವಾಗುತ್ತದೆ.
ಏತಾನೇವ ಪುರೋಧಾಯ ಸತ್ಕೃತ್ಯ ಚ ಯಥಾ ಪುರಾ |
ಅಖಿಲಾಂ ಭೋಕ್ಷ್ಯಸೇ ಸರ್ವಾಂ ಪೃಥಿವೀಂ ಪೃಥಿವೀಪತೇ ॥24॥
ಎಲ್ಲೈ ಪೃಥಿವೀಪತಿಯೇ, ಹಿಂದಿನಂತೆ ಇವರನ್ನೇ (ಪಾಂಡವರನ್ನೇ) ಸತ್ಕರಿಸಿ ಮುಂದೆ ಇಟ್ಟುಕೊಂಡು ಅಖಂಡವಾದ ಎಲ್ಲಾ ಪೃಥಿವಿಯನ್ನೂ ಭೋಗಿಸುವಿ.
ಏತೈರ್ಹಿ ಸಹಿತಃ ಸರ್ವೈಃ ಪಾಂಡವೈಃ ಸ್ವೈಶ್ಚ ಭಾರತ |
ಅನ್ಯಾನ್ ವಿಜೇಷ್ಯಸೇ ಶತ್ರೂನ್ ಏಷ ಸ್ವಾರ್ಥಸ್ತವಾಖಿಲಃ ॥25॥
ಎಲ್ಲೈ ಭಾರತನೇ, ಈ ಎಲ್ಲ ಪಾಂಡವರಿಂದಲೂ ಮತ್ತು ನಿನ್ನ ಮಕ್ಕಳಿಂದಲೂ ಸಹಿತನಾದ ನೀನು ಉಳಿದ ಶತ್ರುಗಳನ್ನು ಜಯಿಸುವಿ. ಆದ್ದರಿಂದ ಈ ಸಂಧಿಯು ನಿನಗೇ ಹೆಚ್ಚಿನ ಸ್ವಾರ್ಥವನ್ನು ಉಂಟುಮಾಡುವಂತಹದು.
ತೈರೇವೋಪಾರ್ಜಿತಾಂ ಭೂಮಿಂ ಭೋಕ್ಷ್ಯಸೇ ಚ ಪರಂತಪ |
ಯದಿ ಸಂಧಿತ್ಸಸೇ ರಾಜನ್ ಪಾಂಡವೈಶ್ಚ ಪರಂತಪ ॥26॥
ಎಲ್ಲೈ ಪರಂತಪನೇ, ರಾಜನೇ, ಪಾಂಡವರ ಜೊತೆಯಲ್ಲಿ ನೀನು ಸಂಧಿಯನ್ನು ಮಾಡಿಕೊಂಡರೆ ಅವರೇ ಸಂಪಾದಿಸಿದ ಭೂಮಿಯನ್ನು ನೀನು ಭೋಗಿಸುವಿ.
ಸಂಯುಗೇ ವೈ ಮಹಾರಾಜ ದೃಶ್ಯತೇ ವೈ ಮಹಾನ್ ಕ್ಷಯಃ |
ಕ್ಷಯೇ ಚೋಭಯತೋ ರಾಜನ್ ಕಂ ಧರ್ಮಮನುಪಶ್ಯಸಿ ॥27॥
ಎಲ್ಲೈ ಮಹಾರಾಜನೇ, ಯುದ್ಧ ಉಂಟಾದರೆ ದೊಡ್ಡ ವಿನಾಶವು ಕಂಡುಬರುತ್ತದೆ. ರಾಜನೇ, ಎರಡು ಪಕ್ಷಗಳಲ್ಲಿಯೂ ವಿನಾಶವನ್ನು ಉಂಟುಮಾಡುವುದರಲ್ಲಿ ಯಾವ ಧರ್ಮವಿದೆ ಎಂದು ತಿಳಿಯುತ್ತೀಯೆ?
ಪಾಂಡವೈರ್ನಿಹತೈಃ ಸಂಖ್ಯೇ ಪುತ್ರೈರ್ವಾಽಪಿ ಮಹಾಬಲೈಃ |
ಯದ್ ವಿಂದೇಥಾಃ ಸುಖಂ ರಾಜನ್ ತದ್ ಬ್ರೂಹಿ ಭರತರ್ಷಭ ॥
ಎಲ್ಲೈ ಭರತರ್ಷಭನೇ, ಯುದ್ಧದಲ್ಲಿ ಪಾಂಡವರು ಹತರಾದರೂ ಅಥವಾ ಮಹಾಬಲರಾದ ನಿನ್ನ ಪುತ್ರರು ಹತರಾದರೂ ನಿನಗೆ ಏನು

ಸುಖವುಂಟಾಗುತ್ತದೆ ಎಂಬುದನ್ನು ಹೇಳು.
ಶೂರಾಶ್ಚ ಹಿ ಕೃತಾಸಶ್ರಾಶ್ಚ ಸರ್ವೇ ಯುದ್ಧಾಭಿಕಾಂಕ್ಷಿಣಃ |
ಪಾಂಡವಾಸ್ತಾವಕಾಶ್ಚೈವ ತಾನ್ ರಕ್ಷ ಮಹತೋ ಭಯಾತ್ ॥29॥
ಶೂರರೂ, ಶಸ್ತ್ರಸಂಪನ್ನರೂ ಆದ ಪಾಂಡವರು ಮತ್ತು ಕೌರವರು ಎಲ್ಲರೂ ಯುದ್ಧವನ್ನು ಬಯಸುತ್ತಿದ್ದಾರೆ. ಅವರನ್ನು ದೊಡ್ಡ ಭಯದಿಂದ ಪಾರುಮಾಡುವವನಾಗು.
ನ ಪಶ್ಯೇಮ ಕುರೂನ್ ಸರ್ವಾನ್ ಪಾಂಡವಾಂಶ್ಚೈವ ಸಂಯುಗೇ |
ಕ್ಷೀಣಾನುಭಯತಃ ಶೂರಾನ್ ರಥಿನೋ ರಥಿಭಿರ್ಹತಾನ್ ॥30॥
ರಥಿಕರೂ, ಶೂರರಾದ ಪಾಂಡವ-ಕೌರವರೆಲ್ಲರೂ ಯುದ್ಧದಲ್ಲಿ ರಥಿಕರಿಂದ ಹತರಾಗಿ, ಇಬ್ಬರೂ ಕ್ಷಯವನ್ನು ಹೊಂದುವುದನ್ನು ನಾವು ನೋಡುವುದು ಬೇಡ.
ಸಮವೇತಾಃ ಪೃಥಿವ್ಯಾಂ ಹಿ ರಾಜಾನೋ ರಾಜಸತ್ತಮ |
ಅಮರ್ಷವಶಮಾಪನ್ನಾ ನಾಶಯೇಯುರಿಮಾಃ ಪ್ರಜಾಃ ॥31॥
ಎಲ್ಲೈ ರಾಜಶ್ರೇಷ್ಠನೇ, ಭೂಮಿಯಲ್ಲಿರುವ ಕ್ರೋಧವಶರಾದ ಎಲ್ಲ ರಾಜರೂ ಒಂದುಗೂಡಿದ್ದಾರೆ. ಅವರು ಎಲ್ಲಾ ಪ್ರಜೆಗಳನ್ನೂ ನಾಶಮಾಡಿಯಾರು.
ತ್ರಾಹಿ ರಾಜನ್ನಿಮಂ ಲೋಕಂ ನ ನಶ್ಯೇಯುರಿಮಾಃ ಪ್ರಜಾಃ |
ತ್ವಯಿ ಪ್ರಕೃತಿಮಾಪನ್ನೇ ಶೇಷಂ ಸ್ಯಾತ್ ಕುರುನಂದನ ॥32॥
ರಾಜನೇ, ಈ ಲೋಕವನ್ನು ರಕ್ಷಿಸುವವನಾಗು. ಈ ಪ್ರಜೆಗಳು ನಾಶ ಹೊಂದದಿರಲಿ. ಎಲ್ಲೈ ಕುರುನಂದನನೇ, ನೀನು ಸಮಾಧಾನವನ್ನು ಹೊಂದಿದರೆ ಉಳಿದುದೆಲ್ಲವೂ ಸುಗಮವಾಗುತ್ತದೆ.
ಶುದ್ಧಾ ವದಾನ್ಯಾ ಹ್ರೀಮಂತ ಆರ್ಯಾಃ ಪುಣ್ಯಾಭಿಜಾತಯಃ |
ಅನ್ಯೋನ್ಯಸಚಿವಾ ರಾಜನ್ ತಾನ್ ಪಾಹಿ ಮಹತೋ ಭಯಾತ್ ॥
ಎಲ್ಲೈ ರಾಜನೇ, ಈ ರಾಜರು ಶುದ್ಧರೂ, ಉದಾರಿಗಳೂ, ದಾಕ್ಷಿಣ್ಯಸ್ವಭಾವದವರೂ ಶ್ರೇಷ್ಠವಾದ ನಡತೆಯುಳ್ಳವರೂ, ಪವಿತ್ರವಾದ ಕುಲದಲ್ಲಿ ಜನಿಸಿದವರೂ ಮತ್ತು ಪರಸ್ಪರ ಸಚಿವರೂ ಆಗಿದ್ದಾರೆ. ಅವರನ್ನು ದೊಡ್ಡ ಭಯದಿಂದ ರಕ್ಷಿಸುವವನಾಗು.
ಸುಖೇನೇಮೇ ಭೂಮಿಪಾಲಾಃ ಪರಿಷ್ವಜ್ಯ ಪರಸ್ಪರಮ್ |
ಸಹ ಭುಕತ್ವ ಚ ಪೀತ್ವಾ ಚ ಪ್ರತಿಯಾಂತು ಯಥಾಗೃಹಮ್ ॥34॥
ಸುವಾಸಸಃ ಸ್ರಗ್ವಿಣಶ್ಚ ಸತ್ಕೃತಾ ಭರತರ್ಷಭ |
ಅಮರ್ಷಂ ಚ ನಿರಾಕೃತ್ಯ ವೈರಾಣಿ ಚ ಪರಂತಪ ॥35॥
ಎಲ್ಲೈ ಭರತರ್ಷಭನೇ, ಪರಂತಪನೇ, ಈ ಎಲ್ಲ ರಾಜರು ಒಳ್ಳೆಯ ವಸ್ತ್ರಗಳನ್ನು ಧರಿಸಿ, ನಿನ್ನಿಂದ ಸತ್ಕೃತರಾಗಿ, ರೋಷಗಳನ್ನೂ ಮತ್ತು ದ್ವೇಷವನ್ನೂ ಬಿಟ್ಟು ಪರಸ್ಪರವಾಗಿ ಆಲಿಂಗಿಸಿ, ಜೊತೆಯಲ್ಲಿ ಕುಳಿತು ಭೋಜನವನ್ನು ಮಾಡಿ, ಪಾನವನ್ನು ಮಾಡಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಲಿ.
ಹಾರ್ದಂ ಯತ್ ಪಾಂಡವೇಷ್ವಾಸೀತ್ ಪ್ರಾಕ್ ತಸ್ಮಿನ್ ನಾಗಸಾಹ್ವಯೇ |
ತದೇವ ತೇ ಭವತ್ವದ್ಯ ಸಂಧತ್ಸ್ವ ಭರತರ್ಷಭ ॥36॥
ಎಲ್ಲೈ ಭರತರ್ಷಭನೇ, ಹಿಂದೆ ಹಸ್ತಿನಪುರದಲ್ಲಿದ್ದಾಗ ಪಾಂಡವರ ಜೊತೆಯಲ್ಲಿ ಯಾವ ಪ್ರೀತಿ ಇದ್ದಿತೋ ಈ ದಿನವೂ ಆ ಪ್ರೀತಿಯೇ ಇರಲಿ. ಅವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವವನಾಗು.
ಬಾಲಾ ವಿಹೀನಾಃ ಪಿತ್ರಾ ತೇ ತ್ವಯ್ಯೇವ ಪರಿವರ್ಧಿತಾಃ |
ತಾನ್ ಪಾಲಯ ಯಥಾನ್ಯಾಯಂ ಪುತ್ರಾಂಶ್ಚ ಭರತರ್ಷಭ ॥37॥
ಅವರು ಬಾಲಕರು, ತಂದೆಯನ್ನು ಕಳೆದುಕೊಂಡವರು, ಅವರನ್ನು ನೀನೇ ಪೋಷಿಸಿದ್ದೀಯೆ. ಎಲ್ಲೈ ಭರತರ್ಷಭನೇ, ನಿನ್ನ ಮಕ್ಕಳಾದ ಅವರನ್ನು ನ್ಯಾಯದಿಂದ ಪಾಲನೆ ಮಾಡುವವನಾಗು.
ಭವತೈವ ಹಿ ರಕ್ಷ್ಯಾಸ್ತೇ ವ್ಯಸನೇಷು ವಿಶೇಷತಃ |
ಮಾ ತೇ ಧರ್ಮಸ್ತಥೈವಾರ್ಥೋ ನಶ್ಯೇತ ಭರತರ್ಷಭ ॥38॥
ಅವರಿಗೆ ಸಂಕಟ ಒದಗಿದಾಗ ನೀನೇ ರಕ್ಷಣೆ ಮಾಡಬೇಕಾದವನು. ಎಲ್ಲೈ ಭರತರ್ಷಭನೇ, ನಿನ್ನ ಧರ್ಮವಾಗಲೀ ಅಥವಾ ಅರ್ಥವಾಗಲೀ ನಾಶವನ್ನು ಹೊಂದದಿರಲಿ.
ಆಹುಸ್ತ್ವಾಂ ಪಾಂಡವಾ ರಾಜನ್ನಭಿವಾದ್ಯ ಪ್ರಸಾದ್ಯ ಚ |
ಭವತಃ ಶಾಸನಾದ್ ದುಃಖಮನುಭೂತಂ ಸಹಾನುಗೈಃ ॥39॥
ಎಲ್ಲೈ ರಾಜನೇ, ಪಾಂಡವರು ನಿನಗೆ ನಮಸ್ಕರಿಸಿ, ಪ್ರಸನ್ನೀಕರಿಸಿಕೊಂಡು ಹೀಗೆ ಹೇಳುತ್ತಾರೆ. ನಿನ್ನ ಶಾಸನಕ್ಕೆ ಅನುಗುಣವಾಗಿ ನಾವೂ ಮತ್ತು ನಮ್ಮ ಅನುಚರರೂ ದುಃಖಗಳನ್ನು ಅನುಭವಿಸಿದೆವು.
ದ್ವಾದಶೇಮಾನಿ ವರ್ಷಾಣಿ ವನೇ ನಿರ್ವ್ಯುಷಿತಾನಿ ನಃ |
ತ್ರಯೋದಶಂ ತಥಾಽಜ್ಞಾತೈಃ ಉಷಿತಃ ಪರಿವತ್ಸರಮ್ ॥40॥
ಈ ಹನ್ನೆರಡು ವರ್ಷಗಳನ್ನು ವನವಾಸದಲ್ಲಿ ಕಳೆದೆವು. ಅದರಂತೆ ಹದಿಮೂರನೆಯ ವರ್ಷದಲ್ಲಿ ಒಂದು ವರ್ಷದ ಕಾಲ ಅಜ್ಞಾತವಾಸವನ್ನೂ ಮಾಡಿದೆವು.
ಸ್ಥಾತಾ ನಃ ಸಮಯೇ ತಸ್ಮಿನ್ ಪಿತೇತಿ ಕೃತನಿಶ್ಚಯಾಃ |
ತೀರ್ಣಾಃ ಸ್ಮ ಸಮಯಂ ರಾಜನ್ ತಚ್ಚ ನೋ ಬ್ರಾಹ್ಮಣಾ ವಿದುಃ ॥

ನಮ್ಮ ತಂದೆಯು ಹಿಂದೆ ಮಾಡಿದ ಪ್ರತಿಜ್ಞೆಯಂತೆ ನಡೆದುಕೊಳ್ಳುತ್ತಾನೆ ಎಂದು ನಿಶ್ಚಯಿಸಿ ನಾವು ನಮ್ಮ ಪ್ರತಿಜ್ಞೆಯನ್ನು ನೆರವೇರಿಸಿದೆವು. ಎಲೈ ರಾಜನೇ, ಅದನ್ನು ಬ್ರಾಹ್ಮಣರು ತಿಳಿದಿದ್ದಾರೆ.
ತಸ್ಮಿನ್ ನಃ ಸಮಯೇ ತಿಷ್ಠ ಸ್ಥಿತಾನಾಂ ಭರತರ್ಷಭ |
ನಿತ್ಯಂ ಸಂಕ್ಲೇಶಿತಾ ರಾಜನ್ ಸ್ವಾರಾಜ್ಯಾಂಶಂ ಲಭೇಮಹಿ ॥42॥
ಧರ್ಮಮರ್ಥಂ ಚ ಯುಂಜಾನಃ ಸಮ್ಯಙ್ ನಸಾತ್ರತುಮರ್ಹಸಿ ॥43॥
ಎಲೈ ಭರತರ್ಷಭನೇ, ನಮ್ಮ ಪ್ರತಿಜ್ಞೆಯನ್ನು ಪರಿಪಾಲನೆ ಮಾಡಿದ ನಮ್ಮ ವಿಷಯದಲ್ಲಿ ನಿನ್ನ ಪ್ರತಿಜ್ಞೆಯಂತೆ ನಡೆದುಕೊ. ಎಲೈ ರಾಜನೇ, ನಿತ್ಯವೂ ಕ್ಲೇಶಕ್ಕೆ ಒಳಗಾದ ನಾವು ನಮ್ಮ ರಾಜ್ಯಾಂಶವನ್ನು ಪಡೆದೇವು. ಧರ್ಮವನ್ನೂ ಮತ್ತು ಅರ್ಥವನ್ನೂ ಅನುಷ್ಠಾನ ಮಾಡುವವನಾಗಿ ನಮ್ಮನ್ನು ಚೆನ್ನಾಗಿ ರಕ್ಷಿಸು.
ಗುರುತ್ವಂ ಭವತಿ ಪ್ರೇಕ್ಷ್ಯ ಬಹೂನ್ ಕ್ಲೇಶಾನ್ ಸಹಾಮಹೇ |
ಸ ಭವಾನ್ ಮಾತೃಪಿತೃವದ್ ಅಸ್ಮಾಸು ಪ್ರತಿಪದ್ಯತಾಮ್ ॥44॥
ನೀನು ನಮ್ಮ ಗುರುವೆಂದು ಭಾವಿಸಿ ಅನೇಕ ಕ್ಲೇಶಗಳನ್ನು ಸಹಿಸಿದ್ದೇವೆ. ಅಂತಹ ನೀನು ನಮ್ಮಲ್ಲಿ ತಾಯಿಯಂತೆ, ತಂದೆಯಂತೆ ನಡೆದುಕೊಳ್ಳುವವನಾಗು.
ಗುರೋರ್ಗರೀಯಸೀ ವೃತ್ತಿಃ ಯಾ ಚ ಶಿಷ್ಯಸ್ಯ ಭಾರತ |
ವರ್ತಾಮಹೇ ತ್ವಯಿ ಚ ತಾಂ ತ್ವಂ ಚ ವರ್ತಸ್ವ ನಸ್ತಥಾ ॥45॥
ಎಲೈ ಭಾರತನೇ, ಶಿಷ್ಯನಾದವನು ಗುರುವಿನ ವಿಷಯದಲ್ಲಿ ಯಾವ ಶ್ರೇಷ್ಠವಾದ ನಡತೆಯನ್ನು ಹೊಂದಿರಬೇಕೋ ಅಂತಹ ನಡತೆಯನ್ನು ನಾವು ನಿನ್ನ ವಿಷಯದಲ್ಲಿ ಹೊಂದಿದ್ದೇವೆ. ನೀನೂ ಸಹ ನಮ್ಮನ್ನು ಹಾಗೆಯೇ ನೋಡಿಕೊಳ್ಳುವವನಾಗು.
ಪಿತ್ರಾ ಸ್ಥಾಪಯಿತವ್ಯಾ ಹಿ ವಯಮುತ್ಪಥಮಾಸ್ಥಿತಾಃ |
ಸಂಸ್ಥಾಪಯ ಪಥಿಷ್ವಸ್ಮಾನ್ ತಿಷ್ಠ ಧರ್ಮೇ ಸ್ವವರ್ತ್ಮನಿ ॥46॥
ಮಕ್ಕಳು ದುರ್ಮಾರ್ಗಕ್ಕೆ ಹೋದರೆ ತಂದೆಯು ಅವರನ್ನು ಸನ್ಮಾರ್ಗದಲ್ಲಿ ಸ್ಥಾಪಿಸಬೇಕು. ನಮ್ಮನ್ನು ಸನ್ಮಾರ್ಗದಲ್ಲಿ ಸ್ಥಾಪಿಸುವವನಾಗು. ನೀನೂ ಸಹ ನಿನ್ನ ಧರ್ಮ ಮಾರ್ಗದಲ್ಲಿ ನಡೆಯುವವನಾಗು.
ಆಹುಶ್ಚೇಮಾಂ ಪರಿಷದಂ ಪುತ್ರಾಸ್ತೇ ಭರತರ್ಷಭ |
ಧರ್ಮಜ್ಞೇಷು ಸಭಾಸತ್ಸು ನೇಹ ಯುಕ್ತಮಸಾಂಪ್ರತಮ್ ॥47॥
ಎಲೈ ಭರತರ್ಷಭನೇ, ನಿನ್ನ ಪುತ್ರರು ಈ ಸಭೆಯನ್ನು ಪರಿಷತ್ತೆಂದು ಹೇಳುತ್ತಾರೆ (ಪರಿಷತ್ತೆಂದರೆ ಧರ್ಮವನ್ನು ತಿಳಿದವರು ಇರುವ ಸಭಾಸದರ ಸಭೆ). ಧರ್ಮಜ್ಞರಾದ ಸಭಾಸದರು ಇರುವ ಈ ಸ್ಥಳದಲ್ಲಿ ಅನುಚಿತವಾದುದು ಏನೂ ನಡೆಯಬಾರದು.
ಯತ್ರ ಧರ್ಮೋ ಹ್ಯಧರ್ಮೇಣ ಸತ್ಯಂ ಯತ್ರಾನೃತೇನ ಚ |
ಹನ್ಯತೇ ಪ್ರೇಕ್ಷಮಾಣಾನಾಂ ಹತಾಸ್ತತ್ರ ಸಭಾಸದಃ ॥48॥
ಎಲ್ಲಿ ಸಭಾಸದರು ನೋಡುತ್ತಿರುವಂತೆಯೇ ಧರ್ಮವು ಅಧರ್ಮದಿಂದ ನಾಶವನ್ನು ಹೊಂದುತ್ತದೆಯೋ, ಸತ್ಯವು ಅನೃತದಿಂದ ನಾಶವನ್ನು ಹೊಂದುತ್ತದೆಯೋ ಅಲ್ಲಿ ಸಭಾಸದರು ಹತರಾದಂತೆಯೇ.
ವಿದ್ಧೋ ಧರ್ಮೋ ಹ್ಯಧರ್ಮೇಣ ಸಭಾಂ ಯತ್ರ ಪ್ರಪದ್ಯತೇ ॥49॥
ಧರ್ಮ ಏತಾನಾರುಜತಿ ಯಥಾ ನದ್ಯನುಕೂಲಜಾನ್ ॥50॥
ಯಾವ ಸಭೆಯಲ್ಲಿ ಧರ್ಮವು ಅಧರ್ಮದಿಂದ ಪೀಡಿತವಾಗುತ್ತದೆಯೋ ಅಲ್ಲಿ ಧರ್ಮವೇ ನದಿಯು ತೀರದಲ್ಲಿ ಬೆಳೆದ ಮರಗಳನ್ನು ಕೊಚ್ಚಿಕೊಂಡು ಹೋಗುವಂತೆ ಸಭಾಸದರನ್ನು ಕೊಚ್ಚಿಕೊಂಡು ಹೋಗುತ್ತದೆ.
ಯೇ ಧರ್ಮಮನುಪಶ್ಯಂತಃ ತೂಷ್ಣೀಂ ಧ್ಯಾಯಂತ ಆಸತೇ |
ತೇ ಸತ್ಯಮಾಹುರ್ಧರ್ಮ್ಯಂ ಚ ನ್ಯಾಯ್ಯಂ ಚ ಭರತರ್ಷಭ ॥51॥
ಎಲೈ ಭರತರ್ಷಭನೇ, ಯಾರು ಧರ್ಮವನ್ನು ತಿಳಿದು ಮೌನವಾಗಿ ಧ್ಯಾನ ಮಾಡುತ್ತಾ ಕುಳಿತಿದ್ದಾರೆಯೋ ಅವರನ್ನು ಕೇಳಿದರೆ ಮಾತ್ರ ಅವರು ಸತ್ಯವನ್ನೂ, ಧರ್ಮವನ್ನೂ ಮತ್ತು ನ್ಯಾಯವನ್ನೂ ಹೇಳುತ್ತಾರೆ.
ಶಕ್ಯಂ ಕಿಮನ್ಯದ್ ವಕ್ತುಂ ತೇ ದಾನಾದನ್ಯದ್ ಜನೇಶ್ವರ |
ಬ್ರುವಂತು ವಾ ಮಹೀಪಾಲಾಃ ಸಭಾಯಾಂ ಯೇ ಸಮಾಸತೇ ॥52॥
ಎಲೈ ರಾಜನೇ, ಪಾಂಡವರಿಗೆ ಅವರ ರಾಜ್ಯಾಂಶವನ್ನು ಕೊಡು ಎಂದು ಹೇಳುವುದನ್ನು ಬಿಟ್ಟು ನಾನು ನಿನಗೆ ಬೇರೆ ಏನನ್ನು ಹೇಳಲು ಸಾಧ್ಯ? ನಾನೇನಾದರೂ ತಪ್ಪು ಮಾತನಾಡಿದ್ದರೆ ಸಭೆಯಲ್ಲಿ ಕುಳಿತಿರುವ ರಾಜರು ಹೇಳಲಿ.
ಧರ್ಮಾರ್ಥೌ ಸಂಪ್ರಧಾರ್ಯೈವ ಯದಿ ಸತ್ಯಂ ಬ್ರವೀಮ್ಯಹಮ್ |
ಪ್ರಮುಂಚೇಮಾನ್ ಮೃತ್ಯುಪಾಶಾತ್ ಕ್ಷತ್ರಿಯಾನ್ ಪುರುಷರ್ಷಭ ॥53॥
ಪ್ರಶಾಮ್ಯ ಭರತಶ್ರೇಷ್ಠ ಮಾ ಮನ್ಯುವಶಮನ್ವಗಾಃ ॥54॥
ಎಲೈ ಪುರುಷರ್ಷಭನೇ, ಧರ್ಮಾರ್ಥಗಳನ್ನು ನಿಶ್ಚಯಿಸಿಯೇ ನಾನು ಮಾತನಾಡುತ್ತಿದ್ದೇನೆಂದು ನೀನು ತಿಳಿಯುವುದಾದರೆ ಈ ಕ್ಷತ್ರಿಯರನ್ನು ಮೃತ್ಯುಪಾಶದಿಂದ ಬಿಡುಗಡೆಗೊಳಿಸುವವನಾಗು. ಎಲೈ ಭರತಶ್ರೇಷ್ಠನೇ, ಸಂಧಿಯನ್ನು ಮಾಡಿಕೊಳ್ಳುವವನಾಗು, ಕ್ರೋಧಕ್ಕೆ ವಶನಾಗಬೇಡ.
ಪಿತ್ರ್ಯಂ ತೇಭ್ಯಃ ಪ್ರದಾಯಾಂಶಂ ಪಾಂಡವೇಭ್ಯೋ ಯಥೋಚಿತಮ್ |
ತತಃ ಸಪುತ್ರಃ ಸಿದ್ಧಾರ್ಥೋ ಭುಂಕ್ಷ್ವ ಭೋಗಾನ್ ಪರಂತಪ ॥55॥
ಎಲೈ ಪರಂತಪನೇ, ಪಾಂಡವರ ಪಿತ್ರಂಶವನ್ನು ಕೌರವರಿಂದ ಯಥೋಚಿತವಾಗಿ ತೆಗೆದು ಪಾಂಡವರಿಗೆ ಕೊಟ್ಟು ಅನಂತರ ಪುತ್ರರಿಂದೊಡಗೂಡಿ ಸಿದ್ಧಾರ್ಥನಾಗಿ ಭೋಗಗಳನ್ನು ಭೋಗಿಸು.

ಅಜಾತಶತ್ರುಂ ಜಾನೀಷೇ ಸ್ಥಿತಂ ಧರ್ಮೇ ಸತಾಂ ಸದಾ |
ಸಪುತ್ರೇ ತ್ವಯಿ ವೃತ್ತಿಂ ಚ ವರ್ತತೇ ಯಾಂ ನರಾಧಿಪ ॥56॥
ಎಲೈ ನರಾಧಿಪನೇ, ಯಾವಾಗಲೂ ಸಜ್ಜನರ ಧರ್ಮದಲ್ಲಿಯೇ ಇರುವ ಅಜಾತಶತ್ರುವು ಪುತ್ರರಿಂದ ಕೂಡಿದ ನಿನ್ನಲ್ಲಿ ಹೇಗೆ ನಡೆದುಕೊಂಡಿದ್ದಾನೆ ಎಂಬುದು ನೀನೇ ತಿಳಿದಿರುವ ವಿಷಯ.
ದ್ರೋಹಿತಶ್ಚ ನಿರಸ್ತಶ್ಚ ತ್ವಾಮೇವೋಪಾಶ್ರಿತಃ ಪುನಃ |
ಇಂದ್ರಪ್ರಸ್ಥಂ ತ್ವಯೈವಾಸೌ ಸಪುತ್ರೇಣ ವಿವಾಸಿತಃ ॥57॥
ದ್ರೋಹವನ್ನು ಮಾಡಿ ನಿರಾಕರಿಸಿದ್ದರೂ ಅವನು ಪುನಃ ನಿನ್ನನ್ನೇ ಆಶ್ರಯಿಸುತ್ತಿದ್ದಾನೆ. ನೀನೂ ಮತ್ತು ನಿನ್ನ ಪುತ್ರರೂ ಸೇರಿ ಅವನನ್ನು ಮೊದಲು ಇಂದ್ರಪ್ರಸ್ಥಕ್ಕೆ ಗಡೀಪಾರು ಮಾಡಿದಿರಿ.
ಸ ತತ್ರ ನಿರ್ವಸನ್ ಸರ್ವಾನ್ ವಶಮಾನೀಯ ಪಾರ್ಥಿವಾನ್ |
ತ್ವನ್ಮುಖಾನಕರೋದ್ ರಾಜನ್ ನ ಚ ತ್ವಾಮತ್ಯವರ್ತತ ॥58॥
ಅವನು ಅಲ್ಲಿಯೇ ವಾಸಮಾಡಿ ಎಲ್ಲ ರಾಜರನ್ನೂ ವಶಮಾಡಿಕೊಂಡು ಎಲ್ಲರೂ ನಿನಗೆ ವಶವಾಗಿರುವಂತೆ ಮಾಡಿದನು. ರಾಜನೇ, ನಿನ್ನನ್ನು ಎಂದೂ ಮೀರಲಿಲ್ಲ.
ತಸ್ಯೈವಂ ವರ್ತಮಾನಸ್ಯ ಸೌಬಲೇನ ಜಿಹೀರ್ಷತಾ |
ರಾಷ್ಟ್ರಾಣಿ ಧನಧಾನ್ಯಂ ಚ ಪ್ರಯುಕ್ತಃ ಪರಮೋಪಧಿಃ ॥59॥
ಹೀಗಿದ್ದ ಅವನ ರಾಷ್ಟ್ರವನ್ನೂ ಮತ್ತು ಧನ-ಧಾನ್ಯಗಳನ್ನೂ ಅಪಹರಿಸುವ ಇಚ್ಛೆಯಿಂದ ಶಕುನಿಯು ದೊಡ್ಡ ಮೋಸವನ್ನು ಹೂಡಿದನು.
ಸ ತಾಮವಸ್ಥಾಂ ಸಂಪ್ರಾಪ್ಯ ಕೃಷ್ಣಾಂ ಪ್ರೇಕ್ಷ್ಯ ಸಭಾಗತಾಮ್ |
ಕ್ಷತ್ರಧರ್ಮಾದಮೇಯಾತ್ಮಾ ನಾಕಂಪತ ಯುಧಿಷ್ಠಿರಃ ॥60॥
ಅವನು ಅಂತಹ ದುರವಸ್ಥೆಯನ್ನು ಹೊಂದಿದರೂ, ಸಭೆಗೆ ಬಂದ ದ್ರೌಪದಿಯನ್ನು ನೋಡಿದರೂ, ಹೇಳಲು ಅಸಾಧ್ಯವಾದ ಸದ್ಗುಣವುಳ್ಳ ಯುಧಿಷ್ಠಿರನು ಕ್ಷತ್ರಿಯ ಧರ್ಮದಿಂದ ಅಲುಗಾಡಲಿಲ್ಲ.
ಅಹಂ ತು ತವ ತೇಷಾಂ ಚ ಶ್ರೇಯ ಇಚ್ಛಾಮಿ ಭಾರತ |
ಧರ್ಮಾದರ್ಥಾತ್ ಸುಖಾಚ್ಚೈವ ರಾಜನ್ ಮಾ ನೀನಶಃ ಪ್ರಜಾಃ ॥
ಎಲೈ ಭಾರತನೇ, ನಾನು ನಿನಗೂ ಮತ್ತು ಅವರಿಗೂ ಶ್ರೇಯಸ್ಸನ್ನು ಬಯಸುತ್ತೇನೆ. ರಾಜನೇ, ಪ್ರಜೆಗಳನ್ನು ಧರ್ಮದಿಂದಲೂ, ಅರ್ಥದಿಂದಲೂ ಮತ್ತು ಸುಖದಿಂದಲೂ ಭ್ರಂಶಿತರನ್ನಾಗಿ ಮಾಡಬೇಡ.
ಅನರ್ಥಮರ್ಥಂ ಮನ್ವಾನೋಽಪ್ಯರ್ಥಂ ಚಾನರ್ಥಮಾತ್ಮನಃ |
ಲೋಭೇಽತಿಪ್ರಸೃತಾನ್ ಪುತ್ರಾನ್ ನಿಗೃಹ್ಣೀಷ್ವ ವಿಶಾಂಪತೇ ॥62॥
ಎಲೈ ರಾಜನೇ, ಅರ್ಥವನ್ನು ಅನರ್ಥವೆಂದೂ, ಅನರ್ಥವನ್ನು ಅರ್ಥವೆಂದೂ ತಿಳಿದು ಲೋಭದಲ್ಲಿ ಆಸಕ್ತರಾಗಿರುವ ನಿನ್ನ ಮಕ್ಕಳನ್ನು ತಡೆಯುವವನಾಗು.
ಸ್ಥಿತಾಃ ಶುಶ್ರೂಷಿತುಂ ಪಾರ್ಥಾಃ ಸ್ಥಿತಾ ಯೋದ್ಧುಮರಿಂದಮಾಃ |
ಯತ್ ತೇ ಪಥ್ಯತಮಂ ರಾಜನ್ ತಸ್ಮಿಂಸ್ತಿಷ್ಠ ಪರಂತಪ ॥63॥
ಪಾಂಡವರು ನಿನ್ನ ಸೇವೆಯನ್ನು ಮಾಡಲು ಸಿದ್ಧರಾಗಿದ್ದಾರೆ. ಅರಿಂದಮರಾದ ಅವರು ಯುದ್ಧವನ್ನು ಮಾಡಲೂ ಸಿದ್ಧರಾಗಿದ್ದಾರೆ. ಎಲೈ ರಾಜನೇ, ಪರಂತಪನೇ, ನೀನು ಯಾವುದನ್ನು ಹಿತವೆಂದು ತಿಳಿಯುತ್ತೀಯೋ ಅದನ್ನು ಆಚರಿಸುವವನಾಗು.
ವೈಶಂಪಾಯನಃ
ತದ್ವಾಕ್ಯಂ ಪಾರ್ಥಿವಾಃ ಸರ್ವೇ ಹೃದಯೈಃ ಸಮಪೂಜಯನ್ |
ನ ತತ್ರ ಕಶ್ಚಿದ್ ವಕ್ತುಂ ಹಿ ವಾಚಂ ಪ್ರಾಕ್ರಾಮದಗ್ರತಃ ॥64॥
ವೈಶಂಪಾಯನ ಕೃಷ್ಣನ ಆ ಮಾತುಗಳನ್ನು ಎಲ್ಲ ರಾಜರು ತಮ್ಮ ಮನಸ್ಸಿನಲ್ಲಿಯೇ ಗೌರವಿಸಿದರು. ಆದರೆ ಎದುರಿಗೆ ಯಾವನೂ ಯಾವ ಮಾತನ್ನೂ ಆಡಲು ಪ್ರಯತ್ನಿಸಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ನವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತೈದನೆಯ ಅಧ್ಯಾಯ
ಪರಶುರಾಮರು ದಂಭೋದ್ಭವ ಕಥೆಯನ್ನು ಹೇಳಿ,
ಕೃಷ್ಣಾರ್ಜುನರು ನರ-ನಾರಾಯಣರೆಂದು ನಿರೂಪ ಮಾಡುವರು.
ವೈಶಂಪಾಯನಃ
ತಸ್ಮಿನ್ನಭಿಹಿತೇ ವಾಕ್ಯೇ ಕೇಶವೇನ ಮಹಾತ್ಮನಾ |
ಸ್ತಿಮಿತಾ ಹೃಷ್ಟರೋಮಾಣ ಆಸನ್ ಸರ್ವೇ ಸಭಾಸದಃ ॥1॥
ವೈಶಂಪಾಯನ ಮಹಾತ್ಮನಾದ ಕೇಶವನು ಆ ಮಾತುಗಳನ್ನು ಆಡುತ್ತಿರಲು ಎಲ್ಲ ಸಭಾಸದರು ರೋಮಾಂಚಗೊಂಡು ಮೌನವನ್ನು

ತಾಳಿದರು.
ಕಶ್ಚಿದುತ್ತರಮೇತೇಷಾಂ ವಕ್ತುಂ ನೋತ್ಸಹತೇ ಪುಮಾನ್ |
ಇತಿ ಸರ್ವೇ ಮನೋಭಿಸ್ತೇ ಚಿಂತಯಂತಿ ಸ್ಮ ಪಾರ್ಥಿವಾಃ ॥2॥
ಈ ಮಾತುಗಳಿಗೆ ಯಾವನೂ ಉತ್ತರವನ್ನು ಕೊಡುವ ಪ್ರಯತ್ನವನ್ನು ಮಾಡುತ್ತಿಲ್ಲ ಎಂದು ಆ ಎಲ್ಲ ರಾಜರೂ ತಮ್ಮ ಮನಸ್ಸಿನಲ್ಲಿ ಚಿಂತಿಸಿದರು.
ತಥಾ ತೇಷು ಚ ಸರ್ವೇಷು ತೂಷ್ಣೀಂಭೂತೇಷು ರಾಜಸು |
ಜಾಮದಗ್ನ್ಯ ಇದಂ ವಾಕ್ಯಮಬ್ರವೀತ್ ಕುರುಸಂಸದಿ ॥3॥
ಆ ರೀತಿಯಲ್ಲಿ ಕೌರವಸಭೆಯಲ್ಲಿ ಎಲ್ಲ ರಾಜರೂ ಸುಮ್ಮನೆ ಇರುತ್ತಿರಲು ಪರುಶುರಾಮರು ಈ ಮಾತುಗಳನ್ನು ಆಡಿದರು.
ಇಮಾಂ ಮೇ ಸೋಪಮಾಂ ವಾಚಂ ಶೃಣು ಸತ್ಯಾಮಶಂಕಿತಃ |
ತಾಂ ಶ್ರುತ್ವಾ ಶ್ರೇಯ ಆದತ್ಸ್ವ ಯದಿ ಸಾಧ್ವಿತಿ ಮನ್ಯಸೇ ॥4॥
ಈ ನನ್ನ ಸತ್ಯವಾದ ಮತ್ತು ದೃಷ್ಟಾಂತಸಹಿತವಾದ ಮಾತನ್ನು ನಿಶ್ಶಂಕೆಯಿಂದ ಕೇಳು. ಅದನ್ನು ಕೇಳಿ ಅದು ನಿನಗೆ ಸರಿ ಎನಿಸಿದರೆ ಶ್ರೇಯಸ್ಸಿನ ಮಾರ್ಗವನ್ನು ಹಿಡಿಯುವವನಾಗು.
ರಾಜಾ ದಂಭೋದ್ಭವೋ ನಾಮ ಸಾರ್ವಭೌಮಃ ಪುರಾಽಭವತ್ |
ಅಖಿಲಾಂ ಬುಭುಜೇ ಸರ್ವಾಂ ಪೃಥಿವೀಮಿತಿ ನಃ ಶ್ರುತಮ್ ॥5॥
ಹಿಂದೆ ದಂಭೋದ್ಭವನೆಂಬ ಸಾರ್ವಭೌಮನಾದ ರಾಜನಿದ್ದನು. ಅವನು ಸಮಸ್ತವಾದ ಪೃಥಿವಿಯನ್ನು ಭೋಗಿಸುತ್ತಿದ್ದನೆಂದು ನಾವು ಕೇಳಿದ್ದೇವೆ.
ಸ ಸ್ಮ ನಿತ್ಯಂ ನಿಶಾಪಾಯೇ ಪ್ರಾತರುತ್ಥಾಯ ವೀರ್ಯವಾನ್ |
ಬ್ರಾಹ್ಮಣಾನ್ ಕ್ಷತ್ರಿಯಾನ್ ವೈಶ್ಯಾನ್ ಪೃಚ್ಛನ್ನಾಸ್ತೇ ಮಹಾರಥಃ ॥6॥
ಅಸ್ತಿ ಕಶ್ಚಿದ್ ವಿಶಿಷ್ಟೋ ವಾ ಮದ್ವಿಧೋ ವಾ ಭವೇದ್ ಯುಧಿ |
ಶೂದ್ರೋ ವೈಶ್ಯಃ ಕ್ಷತ್ರಿಯೋ ವಾ ಬ್ರಾಹ್ಮಣೋ ವಾಽಪಿ ಶಸ್ತ್ರಭೃತ್ ॥7॥
ಪರಾಕ್ರಮಶಾಲಿಯೂ, ಮಹಾರಥನೂ ಆದ ಅವನು ರಾತ್ರಿಯು ಕಳೆದ ಮೇಲೆ ನಿತ್ಯವೂ ಪ್ರಾತಃಕಾಲದಲ್ಲಿ ಎದ್ದು ಬ್ರಾಹ್ಮಣರನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ ಮತ್ತು ಶೂದ್ರರನ್ನು ಯುದ್ಧದಲ್ಲಿ ನನಗೆ ಸಮಾನನಾದ ಅಥವಾ ನನಗಿಂತ ಶ್ರೇಷ್ಠನಾದ ಶಸ್ತ್ರಧಾರಿಯಾದ ಶೂದ್ರನಾಗಲೀ, ವೈಶ್ಯನಾಗಲೀ, ಕ್ಷತ್ರಿಯನಾಗಲೀ ಅಥವಾ ಬ್ರಾಹ್ಮಣನಾಗಲೀ ಇದ್ದಾನೆಯೇ ಎಂದು ಕೇಳುತ್ತಿದ್ದನು.
ಇತಿ ಬ್ರುವನ್ನನ್ವಚರತ್ ಸ ರಾಜಾ ಪೃಥಿವೀಮಿಮಾಮ್ |
ದರ್ಪೇಣ ಮಹತಾ ಮತ್ತಃ ಕಂಚಿದನ್ಯಮಚಿಂತಯನ್ ॥8॥
ಆ ರಾಜನು ಹೀಗೆ ಹೇಳುತ್ತಾ ಇನ್ನೊಬ್ಬನನ್ನು ಲೆಕ್ಕಿಸದೆ ಬಹಳ ದರ್ಪದಿಂದ ಕೂಡಿದವನಾಗಿ ಮತ್ತನಾಗಿ ಈ ಭೂಮಿಯಲ್ಲಿ ಸಂಚರಿಸಿದನು.
ತಂ ಸ್ಮ ವೈದ್ಯಾ ಅಕೃಪಣಾ ಬ್ರಾಹ್ಮಣಾಃ ಸರ್ವತೋಽಭಯಾಃ |
ಪ್ರತ್ಯಷೇಧಂತ ರಾಜಾನಂ ಶ್ಲಾಘಮಾನಂ ಪುನಃ ಪುನಃ ॥9॥
ಮತ್ತೆ ಮತ್ತೆ ತನ್ನನ್ನೇ ಹೊಗಳಿಕೊಳ್ಳುತ್ತಿದ್ದ ರಾಜನನ್ನು ನೋಡಿ ವಿದ್ವಾಂಸರೂ, ಕೃಪಣರಲ್ಲದವರೂ, ಎಲ್ಲರಿಗೂ ಅಭಯವನ್ನು ಕೊಡುವವರೂ ಆದ ಬ್ರಾಹ್ಮಣರು ಅವನನ್ನು ನಿಷೇಧಿಸಿದರು.
ನಿಷಿದ್ಧ್ಯಮಾನೋಽಪ್ಯಸಕೃತ್ ಪೃಚ್ಛತ್ಯೇವ ಸ ವೈ ದ್ವಿಜಾನ್ |
ಅಭಿಮಾನೀ ಶ್ರಿಯಾ ಮತ್ತಃ ತಮೂಚುರ್ಬ್ರಾಹ್ಮಣಾಸ್ತದಾ ॥10॥
ತಪಸ್ವಿನೋ ಮಹಾತ್ಮಾನೋ ವೇದವ್ರತಸಮನ್ವಿತಾಃ |
ಉದೀರ್ಯಮಾಣಂ ರಾಜಾನಂ ಕ್ರೋಧದೀಪ್ತಾ ದ್ವಿಜಾತಯಃ ॥11॥
ಅನೇಕಜನನಂ ಸಖ್ಯಂ ಯಯೋಃ ಪುರುಷಸಿಂಹಯೋಃ |
ತಯೋಸ್ತ್ವಂ ನ ಸಮೋ ಯುದ್ಧೇ ಭವಿತಾಸಿ ಕದಾಚನ ॥12॥
ಅವರು ನಿನ್ನನ್ನು ಹೊಗಳಿಕೊಳ್ಳಬೇಡ ಎಂದು ಅನೇಕ ಬಾರಿ ನಿಷೇಧಿಸುತ್ತಿದ್ದರೂ ಅಹಂಕಾರಿಯೂ, ಸಂಪತ್ತಿನಿಂದ ಮತ್ತನೂ ಆದ ಅವನು ಬ್ರಾಹ್ಮಣರನ್ನು ಕೇಳುತ್ತಲೇ ಇದ್ದನು. ಆಗ ತಪಸ್ವಿಗಳೂ, ಮಹಾತ್ಮರೂ, ವೇದವ್ರತಗಳಿಂದ ಕೂಡಿದವರೂ ಆದ ಬ್ರಾಹ್ಮಣರು ಕ್ರೋಧದಿಂದ ಕೂಡಿದವರಾಗಿ ಅಹಂಕಾರದಿಂದ ಬಿರಿದು ಹೋಗುತ್ತಿದ್ದ ರಾಜನನ್ನು ಕುರಿತು ಯಾವ ಇಬ್ಬರು ಪುರುಷಸಿಂಹರಿಗೆ ಅನೇಕ ಜನ್ಮಗಳ ಸಖ್ಯವಿದೆಯೋ ಅಂತಹ ಪುರುಷಸಿಂಹರಿಗೆ ನೀನು ಯುದ್ಧದಲ್ಲಿ ಎಂದೂ ಸಮನಾಗುವುದಿಲ್ಲ ಎಂದು ಹೇಳಿದರು.
ಏವಮುಕ್ತಃ ಸ ರಾಜಾ ತು ಪುನಃ ಪಪ್ರಚ್ಛ ತಾನ್ ದ್ವಿಜಾನ್ ॥13॥
ಕ್ವ ತೌ ವೀರೌ ಕ್ವಜನ್ಮಾನೌ ಕಿಂಕರ್ಮಾಣೌ ಚ ಕೌ ಚ ತೌ ॥14॥
ಹೀಗೆ ಹೇಳಲ್ಪಟ್ಟ ಆ ರಾಜನು ಪುನಃ ಬ್ರಾಹ್ಮಣರನ್ನು ಕುರಿತು ಆ ವೀರರು ಎಲ್ಲಿದ್ದಾರೆ? ಎಲ್ಲಿ ಜನಿಸಿದ್ದಾರೆ? ಏನು ಮಾಡುತ್ತಾರೆ? ಮತ್ತು ಅವರು ಯಾರು ಎಂದು ಕೇಳಿದನು.
ಬ್ರಾಹ್ಮಣಾಃ
ನರೋ ನಾರಾಯಣಶ್ಚೈವ ತಾಪಸಾವಿತಿ ನಃ ಶ್ರುತಮ್ |
ಅಜಾತೌ ಮಾನುಷೇ ಲೋಕೇ ತಾಭ್ಯಾಂ ಯುದ್ಧ್ಯಸ್ವ ಪಾರ್ಥಿವ ॥15॥
ಬ್ರಾಹ್ಮಣರು ಅವರು ತಪಸ್ವಿಗಳಾದ ನರ-ನಾರಾಯಣರೆಂದು ನಾವು ಕೇಳಿದ್ದೇವೆ. ಅವರು ಮನುಷ್ಯಲೋಕದಲ್ಲಿ ಜನಿಸಿಲ್ಲ. ಎಲೈ ರಾಜನೇ, ಅವರ ಜೊತೆಯಲ್ಲಿ ಯುದ್ಧವನ್ನು ಮಾಡು.

ಶ್ರೂಯತೇ ತೌ ಮಹಾತ್ಮಾನೌ ನರನಾರಾಯಣಾವುಭೌ |
ತಪೋ ಘೋರಮನಿರ್ದೇಶ್ಯಂ ತಪ್ಯೇತೇ ಗಂಧಮಾದನೇ ||16||
ಮಹಾತ್ಮರಾದ ಆ ನರ-ನಾರಾಯಣರಿಬ್ಬರೂ ಗಂಧಮಾದನಪರ್ವತದಲ್ಲಿ ಘೋರವಾದ ಮತ್ತು ವರ್ಣಿಸಲು ಅಸಾಧ್ಯವಾದ ತಪಸ್ಸನ್ನು ಮಾಡುತ್ತಿದ್ದಾರೆಂದು ಕೇಳುತ್ತಿದ್ದೇವೆ.
ಜಾಮದಗ್ನ್ಯಃ
ಸ ರಾಜಾ ಮಹತೀಂ ಸೇನಾಂ ಯೋಜಯಿತ್ವಾ ಷಡಂಗಿನೀಮ್ |
ಅಮೃಷ್ಯಮಾಣಃ ಸಂಪ್ರಾಯಾದ್ ಯತ್ರ ತಾವಪರಾಜಿತೌ ||17||
ಜಾಮದಗ್ನ್ಯ ಆ ರಾಜನು ಆ ಮಾತನ್ನು ಕೇಳಿ ಸಹಿಸದೆ ದೊಡ್ಡ ಷಡಂಗ ಸೈನ್ಯವನ್ನು ಹೂಡಿ ಅಪರಾಜಿತರಾದ ಅವರಿಬ್ಬರೂ ಇರುವಲ್ಲಿಗೆ ಹೊರಟನು.
ಸ ಗತ್ವಾ ವಿಷಮಂ ಘೋರಂ ಪರ್ವತಂ ಗಂಧಮಾದನಮ್ |
ಮಾರ್ಗಮಾಣೋಽಭ್ಯಗಚ್ಛದ್ ತೌ ತಾಪಸಾವಪರಾಜಿತೌ ||18||
ಅವನು ವಿಷಮವೂ, ಘೋರವೂ ಆದ ಗಂಧಮಾದನಪರ್ವತವನ್ನು ಸೇರಿ, ಎಲ್ಲ ಕಡೆಗಳಲ್ಲಿ ಹುಡುಕುತ್ತಾ ಅಪರಾಜಿತರಾದ, ತಪಸ್ವಿಗಳಾದ ಅವರಿಬ್ಬರ ಸಮೀಪಕ್ಕೆ ಹೋದನು.
ತೌ ದೃಷ್ಟ್ವಾ ಕ್ಷುತ್ಪಿಪಾಸಾಭ್ಯಾಂ ಕೃಶೌ ಧಮನಿಸಂತತೌ |
ಶೀತವಾತಾತಪೈರುಗ್ರೈಃ ಕರ್ಶಿತೌ ಪುರುಷೋತ್ತಮೌ ||19||
ಅಭಿವಾದ್ಯೋಪಸಂಗೃಹ್ಯ ಪರ್ಯಪೃಚ್ಛದನಾಮಯಮ್ ||20||
ಹಸಿವು, ನೀರಡಿಕೆಗಳಿಂದ ಕೃಶರಾದವರೂ, ಮತ್ತು ದೇಹದಲ್ಲಿ ಎದ್ದು ಕಾಣುವ ನರವುಳ್ಳವರೂ, ಉಗ್ರವಾದ ಚಳಿ-ಮಳೆ-ಬಿಸಿಲುಗಳಿಂದ ಬಳಲಿದವರೂ ಆದ ಆ ಪುರುಷೋತ್ತಮರನ್ನು ನೋಡಿ ಅವರಿಗೆ ನಮಸ್ಕಾರವನ್ನು ಮಾಡಿ, ಅವರನ್ನು ಸಮೀಪಿಸಿ ಅವರ ಕುಶಲವನ್ನು ವಿಚಾರಿಸಿದನು.
ತಮರ್ಚಿತ್ವಾ ಮೂಲಫಲೈರಾಸನೇನೋದಕೇನ ಚ |
ಅಬ್ರೂತಾಂ ಪರವೀರಘ್ನಂ ಕಿಂ ಕಾರ್ಯಂ ಕ್ರಿಯತಾಮಿತಿ ||21||
ಅವರು ಶತ್ರುವೀರ ಹಂತಕನಾದ ಅವನನ್ನು ಆಸನ, ಉದಕ ಮತ್ತು ಮೂಲಫಲಗಳಿಂದ ಅರ್ಚಿಸಿ ಪೂಜಿಸಿ ನಿನಗೆ ನಮ್ಮಿಂದ ಏನಾಗಬೇಕಾಗಿದೆ ಎಂದು ಕೇಳಿದರು.
ದಂಭೋದ್ಭವಃ
ಬಾಹುಭ್ಯಾಂ ಮೇ ಜಿತಾ ಭೂಮಿರ್ನಿಹತಾಃ ಸರ್ವಶತ್ರವಃ |
ಭವದ್ಭ್ಯಾಂ ಯುದ್ಧಮಾಕಾಂಕ್ಷನ್ನುಪಯಾತೋಽಸ್ಮಿ ಪರ್ವತಮ್ ||22||
ಆತಿಥ್ಯಂ ದೀಯತಾಮೇತತ್ ಕಾಂಕ್ಷಿತಂ ಮೇ ಚಿರಂ ಪ್ರತಿ ||23||
ದಂಭೋದ್ಭವ ನಾನು ನನ್ನ ಬಾಹುಗಳಿಂದ ಭೂಮಿಯನ್ನು ಗೆದ್ದಿದ್ದೇನೆ. ಎಲ್ಲ ಶತ್ರುಗಳನ್ನೂ ಸಂಹರಿಸಿದ್ದೇನೆ. ನಿಮ್ಮ ಜೊತೆಯಲ್ಲಿ ಯುದ್ಧವನ್ನು ಬಯಸುತ್ತಾ ಈ ಗಂಧಮಾದನ ಪರ್ವತಕ್ಕೆ ಬಂದಿದ್ದೇನೆ. ನಾನು ಬಹುಕಾಲದಿಂದ ಬಯಸಿದ ಈ ಯುದ್ಧರೂಪವಾದ ಆತಿಥ್ಯವನ್ನು ನನಗೆ ಕೊಡಿ.
ನರನಾರಾಯಣೌ
ಅಪೇತಕ್ರೋಧಲೋಭೋಽಯಮಾಶ್ರಮೋ ರಾಜಸತ್ತಮ ||24||
ನ ಹ್ಯಸ್ಮಿನ್ನಾಶ್ರಮೇ ಯುದ್ಧಂ ಕುತಃ ಶಸ್ತ್ರಂ ಕುತೋಽನೃಜುಃ |
ಅನ್ಯತ್ರ ಯುದ್ಧಮಾಕಾಂಕ್ಷ ಬಹವಃ ಕ್ಷತ್ರಿಯಾಃ ಕ್ಷಿತೌ ||25||
ನರ-ನಾರಾಯಣರು ಎಲೈ ರಾಜಶ್ರೇಷ್ಠನೇ, ಈ ಆಶ್ರಮವು ಕ್ರೋಧ ಲೋಭಗಳಿಂದ ರಹಿತವಾದುದು. ಈ ಆಶ್ರಮದಲ್ಲಿ ಯುದ್ಧವು ನಡೆಯುವುದಿಲ್ಲ. ಇನ್ನು ಶಸ್ತ್ರವಾಗಲೀ, ಕ್ರೋಧಾದಿಗಳಿಗೆ ಪಾತ್ರನಾದ ವಕ್ರಪುರುಷನಾಗಲೀ ಎಲ್ಲಿಂದ ಬರಬೇಕು? ಭೂಮಿಯಲ್ಲಿ ಅನೇಕ ಜನ ಕ್ಷತ್ರಿಯರಿದ್ದಾರೆ. ಅವರ ಜೊತೆಯಲ್ಲಿ ಯುದ್ಧವನ್ನು ಬಯಸುವವನಾಗು.
ಜಾಮದಗ್ನ್ಯಃ
ಉಚ್ಯಮಾನಸ್ತಥಾಽಪಿ ಸ್ಮ ಭೂಯ ಏವಾಭ್ಯಭಾಷತ |
ಪುನಃ ಪುನಃ ಕ್ಷಾಮ್ಯಮಾಣಃ ಸಾಂತ್ವ್ಯಮಾನಶ್ಚ ಭಾರತ ||26||
ದಂಭೋದ್ಭವೋ ಯುದ್ಧಮಿಚ್ಛನ್ನಾಹ್ವಯತ್ಯೇವ ತಾಪಸೌ ||27||
ಜಾಮದಗ್ನ್ಯ ಅವನನ್ನು ಕುರಿತು ಹಾಗೆ ಹೇಳಿದರೂ ಮತ್ತು ಪುನಃ ಪುನಃ ಶಾಂತಿಯನ್ನು ಹೊಂದು ಎಂದು ಸಮಾಧಾನ ಮಾಡಿದರೂ ಅವನು ಪುನಃ ಹಾಗೆಯೇ ಮಾತನಾಡಿದನು. ಎಲೈ ಭಾರತನೇ, ದಂಭೋದ್ಭವನು ಯುದ್ಧವನ್ನು ಬಯಸಿ ಆ ತಪಸ್ವಿಗಳನ್ನು ಆಹ್ವಾನ ಮಾಡುತ್ತಲೇ ಇದ್ದನು.
ತತೋ ನರಸ್ತ್ವಿಷೀಕಾಣಾಂ ಮುಷ್ಟಿಮಾದಾಯ ಭಾರತ |
ಅಬ್ರವೀದೇಹಿ ಯುದ್ಧ್ಯಸ್ವ ಯುದ್ಧಕಾಮ ಮಯಾ ಸಹ ||28||
ಎಲೈ ಭಾರತನೇ, ಆಗ ನರನು ಒಂದು ಹಿಡಿ ಹಂಚಿಕಡ್ಡಿಗಳನ್ನು ತೆಗೆದುಕೊಂಡು ಎಲೈ ಯುದ್ಧವನ್ನು ಬಯಸುವವನೇ, ಬಾ, ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡು ಎಂದು ಹೇಳಿದನು.
ಸರ್ವಶಸತ್ರಣಿ ಚಾದತ್ಸ್ವ ಯೋಜಯಸ್ವ ಚ ವಾಹಿನೀಮ್ |
ಸನ್ನಹ್ಯಸ್ವ ಚ ವರ್ಮಾಣಿ ಯಾನಿ ಚಾನ್ಯಾನಿ ಸಂತಿ ತೇ ||29||

ಅಹಂ ಹಿ ತೇ ವಿನೇಷ್ಯಾಮಿ ಯುದ್ಧಶ್ರದ್ಧಾಮಿತಃ ಪರಮ್ |
ಯದಾಹ್ವಯಸಿ ದರ್ಪೇಣ ಬ್ರಾಹ್ಮಣಪ್ರಮುಖಾನ್ ಜನಾನ್ ॥30॥
ನಿನ್ನ ಎಲ್ಲಾ ಆಯುಧಗಳನ್ನೂ ತೆಗೆದುಕೊ, ಸೈನ್ಯವನ್ನು ಹೂಡು, ಕವಚಗಳನ್ನು ಧರಿಸು, ಬೇರೆ ಕವಚಗಳಿದ್ದರೆ ಅವುಗಳನ್ನೂ ಧರಿಸು. ನೀನು ದರ್ಪದಿಂದ ಬ್ರಾಹ್ಮಣರೇ ಮೊದಲಾದ ಜನರನ್ನು ಯುದ್ಧಕ್ಕೆ ಆಹ್ವಾನ ಮಾಡುತ್ತಿರುವುದರಿಂದ ನಾನು ನಿನ್ನ ಯುದ್ಧದ ಬಯಕೆಯನ್ನು ಈ ದಿನ ಹೋಗಲಾಡಿಸುತ್ತೇನೆ.
ದಂಭೋದ್ಭವಃ
ಯದ್ಯೇತದಸ್ತ್ರಮಸ್ಮಾಸು ಯುಕ್ತಂ ತಾಪಸ ಮನ್ಯಸೇ |
ಏತೇನಾಪಿ ತ್ವಯಾ ಯೋತ್ಸ್ಯೇ ಯುದ್ಧಾರ್ಥೀ ಹ್ಯಹಮಾಗತಃ ॥31॥
ದಂಭೋದ್ಭವ ಎಲೈ ತಾಪಸನೇ, ನೀನು ನಿನ್ನ ಕೈಯಲ್ಲಿ ಹಿಡಿದಿರುವ ಈ ಕಡ್ಡಿಗಳು ಯೋಗ್ಯವೆಂದು ಭಾವಿಸುವುದಾದರೆ ಯುದ್ಧವನ್ನು ಬಯಸಿ ಬಂದಿರುವ ನಾನು ಈ ಅಸ್ತ್ರದ ಎದುರಾಗಿಯೂ ಸಹ ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ಜಾಮದಗ್ನ್ಯಃ
ಇತ್ಯುಕತ್ವ ಶರವರ್ಷೇಣ ಸರ್ವತಃ ಸಮವಾಕಿರತ್ |
ದಂಭೋದ್ಭವಸ್ತಾಪಸೌ ತೌ ಜಿಘಾಂಸುರ್ಬಲದರ್ಪಿತಃ ॥32॥
ಜಾಮದಗ್ನ್ಯ ದಂಭೋದ್ಭವನು ಹೀಗೆ ಹೇಳಿ, ಬಲದರ್ಪಿತನಾಗಿ ಅವರಿಬ್ಬರನ್ನೂ ಕೊಲ್ಲಲು ಬಯಸಿ ಆ ತಪಸ್ವಿಗಳ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಸ್ಯ ತಾನಸ್ಯತಃ ಕ್ಷಿಪ್ರಮಿಷೂನ್ ಪರತನುಚ್ಛಿದಃ |
ಕದರ್ಥೀಕೃತ್ಯ ಸ ಮುನಿರಿಷೀಕಾಭಿರಪಾನುದತ್ ॥33॥
ಶೀಘ್ರವಾಗಿ ಅವನು ಪ್ರಯೋಗಿಸಿದ ಇನ್ನೊಬ್ಬರ ಶರೀರವನ್ನು ಭೇದಿಸುವ ಆ ಬಾಣಗಳನ್ನು ತಾತ್ಸಾರ ಮಾಡಿ ಆ ಋಷಿಯು ಹಂಚಿಕಡ್ಡಿಗಳಿಂದ ಅವುಗಳನ್ನು ಪರಿಹರಿಸಿದನು.
ತತೋಽಸ್ಮೈ ಪ್ರಾಸೃಜದ್ ಘೋರಮೈಷೀಕಮಪರಾಜಿತಃ |
ಅಸ್ತ್ರಮಪ್ರತಿಸಂಧೇಯಂ ತದದ್ಭುತಮಿವಾಭವತ್ ॥34॥
ಅನಂತರ ದಂಭೋದ್ಭವನನ್ನು ಕುರಿತು ಅಪರಾಜಿತನಾದ ಆ ಮುನಿಯು ಪ್ರತ್ಯಸ್ತ್ರವಿಲ್ಲದ ಘೋರವಾದ ಐಷೀಕಾಸ್ತ್ರವನ್ನು ಪ್ರಯೋಗಿಸಿದನು. ಅದು ಅದ್ಭುತವಾಗಿದ್ದಿತು.
ತೇಷಾಮಕ್ಷೀಣಿ ಕರ್ಣಾಂಶ್ಚ ನಾಸಿಕಾಶ್ಚೈವ ಮಾಯಯಾ |
ನಿಮಿತ್ತವೇಧೀ ಸ ಮುನಿರಿಷೀಕಾಭಿಃ ಸಮರ್ಪಯತ್ ॥35॥
ಸ ದೃಷ್ಟ್ವಾ ಸ್ವಿತಮಾಕಾಶಮಿಷೀಕಾಭಿಃ ಸಮಾಚಿತಮ್ |
ಪಾದಯೋರ್ನ್ಯಪತದ್ ರಾಜಾ ಸ್ವಸ್ತಿ ಮೇಽಸ್ತ್ವಿತಿ ಚಾಬ್ರವೀತ್ ॥36॥
ಎಷ್ಟು ಕಾರಣವಿದೆಯೋ ಅಷ್ಟೇ ಹಿಂಸೆಯನ್ನು ಮಾಡುವ ಆ ಋಷಿಯು ತನ್ನ ಸಾಮರ್ಥ್ಯದಿಂದ ಆ ಹಂಚಿಕಡ್ಡಿಗಳಿಂದ ಯೋಧರ ಮತ್ತು ದಂಭೋದ್ಭವನ ಕಣ್ಣುಗಳನ್ನೂ, ಕಿವಿಗಳನ್ನೂ, ಮೂಗುಗಳನ್ನೂ ತುಂಬಿದನು (ಆ ಹಂಚಿಕಡ್ಡಿಗಳು ಚಕ್ಷುರಾದಿಗಳ ಸ್ಪರ್ಶವನ್ನು ಮಾತ್ರ ಮಾಡಿದವು ಎಲ್ಲೂ ಗಾಯವನ್ನು ಮಾಡಲಿಲ್ಲ ವಾದಿರಾಜರು).
ತಮಬ್ರವೀನ್ನರೋ ರಾಜನ್ ಶರಣ್ಯಃ ಶರಣೈಷಿಣಾಮ್ ॥37॥
ಶುದ್ಧವಾದ ಆಕಾಶವು ಹಂಚಿಕಡ್ಡಿಗಳಿಂದ ತುಂಬಿ ಹೋಗಿರುವುದನ್ನು ನೋಡಿ ಆ ರಾಜನು ನನಗೆ ಕ್ಷೇಮವಾಗಲಿ ಎಂದು ಹೇಳುತ್ತಾ ಅವನ ಪಾದಗಳ ಮೇಲೆ ಬಿದ್ದನು.
ಬ್ರಹ್ಮಣ್ಯೋ ಭವ ಧರ್ಮಾತ್ಮಾ ಮಾ ಚ ಸ್ಮೈವಂ ಪುನಃ ಕೃಥಾಃ ॥38॥
ಮಾ ಚ ದರ್ಪಸಮಾವಿಷ್ಟಃ ಕ್ಷೇಪ್ಸೀಃ ಕಾಂಶ್ಚಿತ್ ಕದಾಚನ |
ಸದೃಶಾನ್ ಶ್ರೇಯಸೋ ವಾಽಪಿ ತತ್ ತೇ ರಾಜನ್ ಸಮಾಹಿತಮ್ ॥
ಎಲೈ ರಾಜನೇ, ಶರಣಾಗತರಾದವರಿಗೆ ಕ್ಷೇಮವನ್ನು ಉಂಟುಮಾಡುವ ನರನು ಅವನನ್ನು ಕುರಿತು ಬ್ರಾಹ್ಮಣರಲ್ಲಿ ವಾತ್ಸಲ್ಯದಿಂದ ನಡೆದುಕೊ, ಧರ್ಮಾತ್ಮನಾಗಿರು, ಪುನಃ ಹೀಗೆ ಮಾಡಬೇಡ, ದರ್ಪದಿಂದ ಕೂಡಿದವನಾಗಿ ಎಂದೂ ಯಾರನ್ನೂ ನಿಂದಿಸಬೇಡ, ಎಂದೂ ನಿನಗೆ ಸಮನಾದ ಅಥವಾ ಶ್ರೇಷ್ಠರಾದ ಯಾರನ್ನೂ ನಿಂದಿಸಬೇಡ. ಎಲೈ ರಾಜನೇ, ಅದರಿಂದ ನಿನಗೆ ಒಳ್ಳೆಯದಾಗುತ್ತದೆ.
ಜಿತಕ್ರೋಧಃ ಕೃತಪ್ರಜ್ಞೋ ನಿರಹಂಕಾರ ಆತ್ಮವಾನ್ |
ದಾಂತಃ ಶಾಂತೋ ಮೃದುಃ ಕ್ಷೇಮಂ ಪ್ರಜಾಃ ಪಾಲಯ ಸರ್ವದಾ ॥
ಮಾ ಸ್ಮ ಭೂಯಃ ಕ್ಷಿಪೇಃ ಕಂಚಿದವಿದಿತ್ವಾ ಬಲಾಬಲಮ್ |
ಅನುಜ್ಞಾತಃ ಸ್ವಸ್ತಿ ಗಚ್ಛ ಸ್ವಗೃಹಂ ರಾಜಸತ್ತಮ ॥41॥
ಕುಶಲಂ ಬ್ರಾಹ್ಮಣಾನ್ ಪೃಚ್ಛೇರಾವಯೋರ್ವಚನಾದ್ ಭೃಶಮ್ ॥42॥
ಕ್ರೋಧವನ್ನು ಜಯಿಸಿ ಒಳ್ಳೆಯ ಪ್ರಜ್ಞೆಯನ್ನು ಹೊಂದಿದವನಾಗಿ, ಅಹಂಕಾರವನ್ನು ಪಡದೇ, ಮನೋನಿಗ್ರಹವನ್ನು ಹೊಂದಿದವನಾಗಿ, ಶಾಂತನೂ, ದಾಂತನೂ, ಮೃದುವೂ ಆಗಿ, ಯಾವಾಗಲೂ ಕ್ಷೇಮದಿಂದ ಪ್ರಜೆಗಳನ್ನು ಪಾಲಿಸುವವನಾಗು. ಎಲೈ ರಾಜಶ್ರೇಷ್ಠನೇ, ಬಲಾಬಲಗಳನ್ನು ತಿಳಿಯದೆ ಪುನಃ ಯಾರನ್ನೂ ನಿಂದಿಸಬೇಡ. ನಿನಗೆ ಅನುಮತಿಯನ್ನು ನೀಡಿದ್ದೇನೆ, ಮಂಗಳವಾಗಲಿ, ಹೋಗಿಬಾ. ನಮ್ಮ ಮಾತಿನಂತೆ ಬ್ರಾಹ್ಮಣರನ್ನು ಕುರಿತು ಚೆನ್ನಾಗಿ ಕುಶಲಪ್ರಶ್ನೆಯನ್ನು ಮಾಡುವವನಾಗು (ಎಂದು ಹೇಳಿದನು).
ಜಾಮದಗ್ನ್ಯಃ

ತತೋ ರಾಜಾ ತಯೋಃ ಪಾದಾವಭಿವಾದ್ಯ ಮಹಾತ್ಮನೋಃ |
ಪ್ರತ್ಯಾಜಗಾಮ ಸ್ವಪುರಂ ಧರ್ಮಂ ಚೈವಾಚರದ್ ಭೃಶಮ್ ॥43॥
ಜಾಮದಗ್ನ್ಯ ಅನಂತರ ರಾಜನು ಮಹಾತ್ಮರಾದ ಅವರ ಪಾದಗಳಿಗೆ ನಮಸ್ಕರಿಸಿ ತನ್ನ ಪಟ್ಟಣಕ್ಕೆ ಹಿಂದಿರುಗಿ ಶ್ರೇಷ್ಠವಾದ ಧರ್ಮಾಚರಣೆಯನ್ನು ಮಾಡಿದನು.
ತಸ್ಮಾದ್ ಯಾವದ್ ಧನುಃಶ್ರೇಷ್ಠೇ ಗಾಂಡೀವೇಽಸ್ತ್ರಂ ನ ಯುಜ್ಯತೇ |
ತಾವತ್ ತ್ವಂ ಮಾನಮುತ್ಸೃಜ್ಯ ಗಚ್ಛ ರಾಜನ್ ಧನಂಜಯಮ್ ॥44॥
ಆದ್ದರಿಂದ ಶ್ರೇಷ್ಠವಾದ ಧನುಸ್ಸಾದ ಗಾಂಡೀವದಲ್ಲಿ ಎಲ್ಲಿಯವರೆಗೆ ಅಸ್ತ್ರವು ಹೂಡಲ್ಪಡುವುದಿಲ್ಲವೋ ಅದಕ್ಕಿಂತ ಮೊದಲೇ ಅಹಂಕಾರವನ್ನು ಬಿಟ್ಟು ಎಲೈ ರಾಜನೇ, ಅರ್ಜುನನ ಬಳಿಗೆ ಹೋಗುವವನಾಗು.
ಕಂಕುದೀಪಂ ಕಂಕುಲಾಸಮಕ್ಷಿಸಂತರ್ಜನಂ ತಥಾ |
ಸಂತಾನಂ ನರ್ತಕಂ ಘೋರಂ ಹಾಸ್ಯಮೌದಕಮಷ್ಟಮಮ್ ॥45॥
ಕಂಕುದೀಪ= ತಲೆಯಲ್ಲಿ ಅಗ್ನಿಯ ತಾಪವನ್ನು ಮಾಡುವಂತಹದು, ಕಂಕುಲಾಸ= ತಲೆಯನ್ನು ಕುದಿಸುವಂತೆ ಮಾಡುವುದು, ಆಕ್ಷೇಪ= ಎತ್ತಿ ಎಸೆಯುವಂತೆ ಮಾಡುವುದು, ತರ್ಜನ= ಹೆದರಿಸುವುದು, ಸಂತಾನ= ಒಂದು ಬಾಣವನ್ನು ಪ್ರಯೋಗಿಸಿದರೆ ಕೋಟಿ ಬಾಣಗಳನ್ನು ಸೃಷ್ಟಿಸುವುದು, ಘೋರನರ್ತಕ= ಭಯಂಕರವಾಗಿ ನೃತ್ಯವನ್ನು ಮಾಡಿಸುವುದು, ಹಾಸ್ಯ= ಕಾರಣವಿಲ್ಲದೇ ಸದಾ ನಗುವಂತೆ ಮಾಡುವುದು, ಔದಕ= ಯಾವಾಗಲೂ ಮೂತ್ರವನ್ನು ವಿಸರ್ಜಿಸುವಂತೆ ಮಾಡುವುದು, ಇದು ಎಂಟನೆಯದು. ಇವೆಲ್ಲವೂ ಅಸ್ತ್ರವಿಶೇಷಗಳ ಹೆಸರುಗಳು (ವಾದಿರಾಜರು).
ಏತೈರ್ವಿದ್ಧಾಃ ಸರ್ವ ಏವ ಮರಣಂ ಯಾಂತಿ ಮಾನವಾಃ |
ಉನ್ಮತ್ತಾಶ್ಚ ವಿಚೇಷ್ಟಂತೇ ನಷ್ಟಸಂಜ್ಞಾ ವಿಚೇತಸಃ ॥46॥
ಸ್ವಪಂತಿ ಚ ಪ್ಲವಂತೇ ಚ ಚರ್ದಯಂತಿ ಚ ಮಾನವಾಃ |
ಮೂತ್ರಯಂತೇ ಚ ಸತತಂ ರುದಂತಿ ಚ ಹಸಂತಿ ಚ ॥47॥
ಈ ಅಸ್ತ್ರಗಳಿಂದ ಪ್ರಹಾರ ಮಾಡಲ್ಪಟ್ಟ ಮಾನವರೆಲ್ಲರೂ ಮರಣವನ್ನು ಹೊಂದುತ್ತಾರೆ. ಹುಚ್ಚರಂತೆ ಚೇಷ್ಟೆಯನ್ನು ಮಾಡುತ್ತಾರೆ. ಸಂಜ್ಞೆಯನ್ನು ಕಳೆದುಕೊಂಡು ಮೂರ್ಛೆಯನ್ನು ಹೊಂದುತ್ತಾರೆ. ನಿದ್ರೆಯನ್ನು ಮಾಡುತ್ತಾರೆ. ಹಾರುತ್ತಾರೆ. ವಮನವನ್ನು ಮಾಡುತ್ತಾರೆ. ಸತತವಾಗಿ ಮೂತ್ರವನ್ನು ಮಾಡುತ್ತಾರೆ. ಹಾಗೆಯೇ ರೋದನವನ್ನು ಮಾಡುತ್ತಾರೆ ಮತ್ತು ನಗುತ್ತಾರೆ.
ಅಸಂಖ್ಯೇಯಾ ಗುಣಾಃ ಪಾರ್ಥೇ ತದ್ವಿಶಿಷ್ಟೋ ಜನಾರ್ದನಃ |
ತ್ವಮೇವ ಭೂಯೋ ಜಾನಾಸಿ ಕುಂತೀಪುತ್ರಂ ಧನಂಜಯಮ್ ॥48॥
ಅರ್ಜುನನಲ್ಲಿ ಎಣಿಸಲು ಸಾಧ್ಯವಿಲ್ಲದಷ್ಟು ಗುಣಗಳಿವೆ. ಕೃಷ್ಣನು ಅವನಿಗಿಂತಲೂ ಶ್ರೇಷ್ಠನಾದವನು ಮತ್ತು ಕುಂತೀಪುತ್ರನಾದ ಅರ್ಜುನನನ್ನು ನೀನೇ ಚೆನ್ನಾಗಿ ತಿಳಿದಿದ್ದೀಯೆ.
ನರನಾರಾಯಣೌ ಯೌ ತೌ ತಾವೇವಾರ್ಜುನಕೇಶವೌ |
ವಿಜಾನೀಹಿ ಮಹಾರಾಜ ಪ್ರವೀರೌ ಪುರುಷೋತ್ತಮೌ ॥49॥
ಎಲೈ ಮಹಾರಾಜನೇ, ಮಹಾವೀರರೂ ಪುರುಷೋತ್ತಮರೂ ಆದ ಆ ನರ-ನಾರಾಯಣರೇ ಈ ಅರ್ಜುನ ಮತ್ತು ಕೃಷ್ಣರೆಂದು ತಿಳಿ.
ಯದ್ಯೇತದೇವಂ ಜಾನಾಸಿ ನ ಚ ಮಾಮಭಿಶಂಕಸೇ |
ಅರ್ಯಾಂ ಮತಿಂ ಸಮಾಸ್ಥಾಯ ಶಾಮ್ಯ ಭಾರತ ಪಾಂಡವೈಃ ॥50॥
ನೀನು ಹೀಗೆ ತಿಳಿದರೆ ನನ್ನನ್ನು ಶಂಕಿಸುವುದಿಲ್ಲ. ಶ್ರೇಷ್ಠವಾದ ಬುದ್ಧಿಯನ್ನು ಹೊಂದಿದವನಾಗಿ ಎಲೈ ಭಾರತನೇ, ಪಾಂಡವರ ಜೊತೆಯಲ್ಲಿ ಶಾಂತಿ ಸಂಧಾನವನ್ನು ಮಾಡಿಕೊ.
ಅಥ ಚೇನ್ಮನ್ಯಸೇ ಶ್ರೇಯೋ ನ ಮೇ ಭೇದೋ ಭವೇದಿತಿ |
ಪ್ರಶಾಮ್ಯ ಭರತಶ್ರೇಷ್ಠ ಮಾ ಚ ಯುದ್ಧೇ ಮನಃ ಕೃಥಾಃ ॥51॥
ಎಲೈ ಭರತಶ್ರೇಷ್ಠನೇ, ನನಗೆ ಶ್ರೇಯಸ್ಸಾಗಬೇಕು. ನಮಗೆ ಪರಸ್ಪರ ವಿರೋಧ ಉಂಟಾಗಬಾರದು ಎಂದು ನೀನು ಭಾವಿಸುವುದಾದರೆ ಸಂಧಿಯನ್ನು ಮಾಡಿಕೊಳ್ಳುವವನಾಗು. ಯುದ್ಧದಲ್ಲಿ ಮನಸ್ಸನ್ನು ಮಾಡಿಕೊಳ್ಳಬೇಡ.
ನಿರ್ಮಾತಾ ಸರ್ವಲೋಕಾನಾಮೀಶ್ವರಃ ಸರ್ವಲೋಕಕೃತ್ |
ಯಸ್ಯ ನಾರಾಯಣೋ ಬಂಧುರರ್ಜುನೋ ದುಃಸಹೋ ಯುಧಿ ॥52॥
ಯಾವನಿಗೆ ಸರ್ವಲೋಕಸೃಷ್ಟಿಕರ್ತನಾದ, ಸರ್ವಲೋಕಸಂಹಾರಕನಾದ ಪ್ರಭುವಾದ ನಾರಾಯಣನು ಬಂಧುವಾಗಿದ್ದಾನೆಯೋ ಅಂತಹ ಅರ್ಜುನನನ್ನು ಯುದ್ಧದಲ್ಲಿ ಯಾರೂ ಸಹಿಸಲಾರರು.
ಕಃ ಸಮುತ್ಸಹತೇ ಜೇತುಂ ತ್ರಿಷು ಲೋಕೇಷು ಭಾರತ |
ವೀರಂ ಕಪಿಧ್ವಜಂ ಜಿಷ್ಣುಂ ಯಸ್ಯ ನಾಸ್ತಿ ಸಮೋ ಯುಧಿ ॥53॥
ಎಲೈ ಭಾರತನೇ, ಯಾವ ಕಪಿಧ್ವಜನಾದ, ವೀರನಾದ ಅರ್ಜುನನಿಗೆ ಮೂರು ಲೋಕಗಳಲ್ಲಿಯೂ ಯುದ್ಧದಲ್ಲಿ ಸಮಾನರಾದವರು ಇಲ್ಲವೋ ಅಂತಹ ಅವನನ್ನು ಜಯಿಸಲು ಯಾವನು ಉದ್ಯುಕ್ತನಾಗುತ್ತಾನೆ?
ಭವತಾಂ ಚ ಕುರುಶ್ರೇಷ್ಠ ಕುಲಂ ಬಹುಮತಂ ಭುವಿ |
ತತ್ ತಥೈವಾಸ್ತು ಭದ್ರಂ ತೇ ಸ್ವಾರ್ಥಮತ್ರಾನುಚಿಂತಯ ॥54॥
ಎಲೈ ಕುರುಶ್ರೇಷ್ಠನೇ, ನಿಮ್ಮ ಕುಲವು ಭೂಮಿಯಲ್ಲಿ ಗೌರವಿಸಲ್ಪಟ್ಟಿದೆ. ಅದು ಹಾಗೆಯೇ ಉಳಿಯಲಿ. ನಿನಗೆ ಮಂಗಳವಾಗಲಿ. ಈ ವಿಷಯದಲ್ಲಿ ನಿನ್ನ ಸ್ವಾರ್ಥವನ್ನಾದರೂ ಚಿಂತಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ

ಪಂಚನವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತಾರನೆಯ ಅಧ್ಯಾಯ
ಕಣ್ವೋಪದೇಶ. ಮಾತಲಿಕನ್ಯಾಕಥಾ.
ವೈಶಂಪಾಯನಃ
ಜಾಮದಗ್ನ್ಯವಚಃ ಶ್ರುತ್ವಾ ಕಣ್ವೋಽಪಿ ಭಗವಾನ್ ಋಷಿಃ |
ದುರ್ಯೋಧನಮಿದಂ ವಾಕ್ಯಮಬ್ರವೀತ್ ಕುರುಸಂಸದಿ ॥1॥
ವೈಶಂಪಾಯನ ಪರಶುರಾಮರ ಮಾತನ್ನು ಕೇಳಿ ಪೂಜ್ಯರಾದ ಕಣ್ವಋಷಿಗಳೂ ಸಹ ಕುರುಸಭೆಯಲ್ಲಿ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದರು.
ಅಕ್ಷಯಶ್ಚಾವ್ಯಯಶ್ಚೈವ ಬ್ರಹ್ಮಾ ಲೋಕಪಿತಾಮಹಃ |
ತಥೈವ ಭಗವಂತೌ ತೌ ನರನಾರಾಯಣಾವೃಷೀ ॥2॥
ಸರ್ವಲೋಕಪಿತಾಮಹನಾದ ಬ್ರಹ್ಮನು ಶಾಶ್ವತನಾದವನು ಮತ್ತು ನಾಶವನ್ನು ಹೊಂದದಿರುವವನು. ಅದರಂತೆಯೇ ಪೂಜ್ಯರಾದ ನರನಾರಾಯಣಋಷಿಗಳೂ ಸಹ.
ಆದಿತ್ಯಾನಾಂ ಹಿ ಸರ್ವೇಷಾಂ ವಿಷ್ಣುರೇಕಃ ಸನಾತನಃ |
ಅಜಯ್ಯಶ್ಚಾವ್ಯಯಶ್ಚೈವ ಶಾಶ್ವತಃ ಪ್ರಭುರೀಶ್ವರಃ ॥3॥
ಅದಿತಿಯ ಎಲ್ಲಾ ಮಕ್ಕಳಲ್ಲಿ ವಿಷ್ಣು ಒಬ್ಬನೇ ಸನಾತನನಾದವನು, ಜಯಿಸಲು ಸಾಧ್ಯವಿಲ್ಲದವನು, ನಾಶವಿಲ್ಲದವನು, ಶಾಶ್ವತನಾದವನು, ಪ್ರಭುವಾದವನು ಮತ್ತು ಸಮರ್ಥನಾದವನು.
ನಿಮಿತ್ತಮರಣಾಶ್ಚಾನ್ಯೇ ಚಂದ್ರಸೂರ್ಯೌ ಮಹೀ ಜಲಮ್ |
ವಾಯುರಗ್ನಿಸ್ತಥಾಽಽಕಾಶಂ ಗ್ರಹಾಸ್ತಾರಾಗಣಾಸ್ತಥಾ ॥4॥
ಚಂದ್ರ-ಸೂರ್ಯರು, ಭೂಮಿ, ಜಲ, ವಾಯು, ಅಗ್ನಿ, ಆಕಾಶ, ಗ್ರಹಗಳು ಮತ್ತು ನಕ್ಷತ್ರಗಳು ಇವುಗಳಿಗೆಲ್ಲಾ ನಿಮಿತ್ತದಿಂದ (ಪ್ರಳಯಕಾಲರೂಪವಾದ ನಿಮಿತ್ತದಿಂದ) ಮರಣವುಂಟಾಗುತ್ತದೆ.
ತೇ ಚ ಕ್ಷಯಾಂತೇ ಜಗತೋ ಹಿತ್ವಾ ಲೋಕತ್ರಯಂ ಸದಾ |
ಕ್ಷಯಂ ಗಚ್ಛಂತಿ ವೈ ಸರ್ವೇ ಸೃಜ್ಯಂತೇ ಚ ಪುನಃ ಪುನಃ ॥5॥
ಇವರಾದರೂ ಪ್ರಳಯಕಾಲದಲ್ಲಿ ಜಗತ್ತಿನ ಕ್ಷಯವುಂಟಾದಾಗ ಲೋಕತ್ರಯವನ್ನು ಬಿಟ್ಟು ನಾಶವನ್ನು ಹೊಂದುತ್ತಾರೆ ಮತ್ತು ಪುನಃ ಪುನಃ ಎಲ್ಲರೂ ಸೃಷ್ಟಿಸಲ್ಪಡುತ್ತಾರೆ.
ಮುಹೂರ್ತಮರಣಾಶ್ಚಾನ್ಯೇ ಮಾನುಷಾ ಮೃಗಪಕ್ಷಿಣಃ |
ತಿರ್ಯಗ್ಯೋನ್ಯಶ್ಚ ಯೇ ಚಾನ್ಯೇ ಜೀವಲೋಕಚರಾಃ ಸ್ಮೃತಾಃ ॥6॥
ಇನ್ನು ಮನುಷ್ಯರು, ತಿರ್ಯಗ್ಯೋನಿಗತವಾದ ಮೃಗ-ಪಕ್ಷಿಗಳು ಮುಂತಾದ ಜೀವಲೋಕದಲ್ಲಿ ಸಂಚರಿಸುವ ಜೀವರು ಮುಹೂರ್ತ ಮರಣರೆಂದು ಹೇಳಲ್ಪಡುತ್ತಾರೆ (ಶೀಘ್ರವಾಗಿ ಮರಣ ಹೊಂದುವವರು ಎಂದು ಅಭಿಪ್ರಾಯ).
ಭೂಯಿಷ್ಠೇನ ತು ರಾಜಾನಃ ಶ್ರಿಯಂ ಭುಕ್ತ್ವಾಽಽಯುಷಃ ಕ್ಷಯೇ |
ಮರಣಂ ಪ್ರತಿಗಚ್ಛಂತಿ ಭೋಕ್ತುಂ ಸುಕೃತದುಷ್ಕೃತೇ ॥7॥
ರಾಜರು ಹೆಚ್ಚಾಗಿ ಸಂಪತ್ತನ್ನು ಭೋಗಿಸಿ ಆಯುಸ್ಸು ಮುಗಿದಾಗ, ತಾವು ಮಾಡಿದ ಪುಣ್ಯ-ಪಾಪಗಳ ಫಲವನ್ನು ಭೋಗಿಸಲು ಮರಣವನ್ನು ಹೊಂದುತ್ತಾರೆ.
ಸ ಭವಾನ್ ಧರ್ಮಪುತ್ರೇಣ ಶಮಂ ಕರ್ತುಮಿಹಾರ್ಹತಿ |
ಪಾಂಡವಾಃ ಕುರವಶ್ಚೈವ ಪಾಲಯಂತು ವಸುಂಧರಾಮ್ ॥8॥
ಅಂತಹ (ಅಲ್ಪಾಯುಷ್ಯವುಳ್ಳ ಮರಣವು ಸನ್ನಿಹಿತವಾದ) ನೀನು ಯುಧಿಷ್ಠಿರನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವುದು ಯೋಗ್ಯವಾದುದು.ಪಾಂಡವರೂ, ಕೌರವರೂ ಸೇರಿ ಭೂಮಿಯನ್ನು ಆಳಲಿ.
ಬಲವಾನಹಮಿತ್ಯೇಷ ನ ಮಂತವ್ಯಂ ಸುಯೋಧನ |
ಬಲವಂತೋ ಬಲಿಭ್ಯೋ ಹಿ ದೃಶ್ಯಂತೇ ಪುರುಷರ್ಷಭ ॥9॥
ಎಲೈ ಸುಯೋಧನನನೇ, ನಾನು ಬಲಿಷ್ಠ ಎಂದು ಎಂದೂ ತಿಳಿಯಬಾರದು. ಎಲೈ ಪುರುಷರ್ಷಭನೇ, ಲೋಕದಲ್ಲಿ ಬಲಿಷ್ಠರಿಗಿಂತಲೂ ಬಲಾಢ್ಯರಾದವರು ಕಂಡುಬರುತ್ತಾರೆ.
ನ ಬಲಂ ಬಲಿನಾಂ ಮಧ್ಯೇ ಬಲಂ ಭವತಿ ಕೌರವ |
ಬಲವಂತೋ ಹಿ ತೇ ಸರ್ವೇ ಪಾಂಡವಾ ದೇವವಿಕ್ರಮಾಃ ॥10॥
ಎಲೈ ಕೌರವನೇ, ಬಲಿಷ್ಠರ ಮಧ್ಯದಲ್ಲಿ ಬಲವು ಬಲವಾಗುವುದಿಲ್ಲ. ದೇವಪರಾಕ್ರಮವುಳ್ಳ ಎಲ್ಲಾ ಪಾಂಡವರೂ ಬಹಳ ಬಲಿಷ್ಠರಾದವರಷ್ಟೆ!
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮಾತಲೇರ್ದಾತುಕಾಮಸ್ಯ ಕನ್ಯಾಂ ಮೃಗಯತೋ ವರಮ್ ॥11॥

ಈ ವಿಷಯದಲ್ಲಿ ಕನ್ಯಾದಾನವನ್ನು ಮಾಡಲು ಬಯಸಿ ವರನನ್ನು ಹುಡುಕುವ ಮಾತಲಿಯ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಮತಸ್ತ್ರಿಲೋಕರಾಜಸ್ಯ ಮಾತಲಿರ್ನಾಮ ಸಾರಥಿಃ |
ತಸ್ಯೈಕೈವ ಕುಲೇ ಕನ್ಯಾ ರೂಪತೋ ಲೋಕವಿಶ್ರುತಾ ॥12॥
ಮೂರುಲೋಕಗಳಿಗೆ ರಾಜನಾದ ಇಂದ್ರನಿಗೆ ಮಾತಲಿ ಎಂಬ ಸಾರಥಿಯು ಬಹುಮತನಾದವನು. ಅವನ ಕುಲದಲ್ಲಿ ರೂಪದಿಂದ ಲೋಕದಲ್ಲಿ ಪ್ರಖ್ಯಾತಳಾದ ಒಬ್ಬಳೇ ಕನ್ಯೆಯು ಜನಿಸಿದಳು.
ಗುಣಕೇಶೀತಿ ವಿಖ್ಯಾತಾ ನಾಮ್ನಾ ಸಾ ದೇವರೂಪಿಣೀ |
ಶ್ರಿಯಾ ಚ ವಪುಷಾ ಚೈವ ಸ್ತ್ರಿಯೋಽನ್ಯಾಃ ಸಾಽತಿರಿಚ್ಯತೇ ॥13॥
ಗುಣಕೇಶಿ ಎಂಬ ಹೆಸರಿನಿಂದ ಪ್ರಖ್ಯಾತಳಾದ ಆ ದೇವರೂಪಿಣಿಯಾದ ಕನ್ಯೆಯು ತನ್ನ ಕಾಂತಿಯಿಂದಲೂ, ದೇಹದ ಸೌಂದರ್ಯದಿಂದಲೂ ಉಳಿದ ಸ್ತ್ರೀಯರನ್ನು ಮೀರಿದ್ದಳು.
ತಸ್ಯಾಃ ಪ್ರದಾನಸಮಯಂ ಮಾತಲಿಃ ಸಹ ಭಾರ್ಯಯಾ |
ಜ್ಞಾತ್ವಾ ವಿಮಮೃಶೇ ರಾಜನ್ ತದ್ಧಿತಂ ಪರಿಚಿಂತಯನ್ ॥14॥
ಅವಳನ್ನು ದಾನಮಾಡುವ ಸಮಯವು ಒದಗಿದೆ ಎಂದು ತಿಳಿದ ಮಾತಲಿಯು ಎಲೈ ರಾಜನೇ, ಅವಳ ಹಿತವನ್ನು ಚಿಂತಿಸುತ್ತಾ ಪತ್ನಿಯ ಜೊತೆಯಲ್ಲಿ ವಿಚಾರ ಮಾಡಿದನು.
ಮಾತಲಿಃ
ಧಿಕ್ ಖಲ್ವಲಘುಶೀಲಾನಾಮುಚ್ಛ್ರಿತಾನಾಂ ಯಶಸ್ವಿನಾಮ್ |
ನರಾಣಾಮೃದ್ಧಸತ್ವಾನಾಂ ಕುಲೇ ಕನ್ಯಾಪ್ರರೋಹಣಮ್ ॥15॥
ಮಾತಲಿ ಒಳ್ಳೆಯ ಶೀಲವುಳ್ಳ ಶ್ರೇಷ್ಠರಾದ, ಕೀರ್ತಿವಂತರಾದ ಮಹಾಪರಾಕ್ರಮಿಗಳಾದ ಮನುಷ್ಯರ ಕುಲದಲ್ಲಿ ಕನ್ಯೆಯನ್ನು ನೀಡುವುದಕ್ಕೆ ಧಿಕ್ಕಾರವಿರಲಿ.
ಮಾತುಃ ಕುಲಂ ಪಿತೃಕುಲಂ ಯತ್ರ ಚೈವ ಪ್ರದೀಯತೇ |
ಕುಲತ್ರಯಂ ಸಂಶಯಿತಂ ಕುರುತೇ ಕನ್ಯಕಾ ಸತೀ ॥16॥
ಕನ್ಯೆಯು ಕೊಡುವ ವಿಷಯದಲ್ಲಿ ತನ್ನ ಮಾತೃಕುಲಕ್ಕೂ, ಪಿತೃಕುಲಕ್ಕೂ ಮತ್ತು ಸ್ವೀಕಾರ ಮಾಡುವ ವಿಷಯದಲ್ಲಿ ತಾನು ಯಾವ ಕುಲಕ್ಕೆ ಹೋಗುತ್ತಾಳೆಯೋ ಆ ಕುಲಕ್ಕೂ ಕೊಡಬೇಕೇ ಬೇಡವೇ, ಸ್ವೀಕರಿಸಬೇಕೇ ಬೇಡವೇ ಎಂಬ ಸಂಶಯವನ್ನು ಉಂಟುಮಾಡುತ್ತಾಳೆ.
ದೇವಮಾನುಷಲೋಕೌ ದ್ವೌ ಮನಸಾ ಚೈವ ಚಕ್ಷುಷಾ |
ಅವಗಾಹ್ಯೈವ ವಿಚಿತೌ ನ ಚ ಮೇ ರೋಚತೇ ವರಃ ॥17॥
ನಾನು ದೇವಲೋಕ ಮತ್ತು ಮನುಷ್ಯಲೋಕ ಇವೆರಡನ್ನೂ ಮನಸ್ಸಿನಿಂದಲೂ ಪ್ರವೇಶ ಮಾಡಿ ಮತ್ತು ಕಣ್ಣಿನಿಂದಲೂ ನೋಡಿ ವಿಚಾರ ಮಾಡಿದೆ. ಯಾವ ವರನೂ ನನಗೆ ಇಷ್ಟವಾಗುವುದಿಲ್ಲ.
ಕಣ್ವಃ
ನ ದೇವಾನ್ ನೈವ ದಿತಿಜಾನ್ ನ ಗಂಧರ್ವಾನ್ ನ ಮಾನುಷಾನ್ |
ಅರೋಚಯದ್ ವರಕೃತೇ ತ್ರಿಷು ಲೋಕೇಷು ವೈ ಋಷೀನ್ ॥18॥
ಕಣ್ವ ಅವನು ಮೂರುಲೋಕಗಳಲ್ಲಿ ದೇವತೆಗಳನ್ನಾಗಲೀ, ದೈತ್ಯರನ್ನಾಗಲೀ, ಗಂಧರ್ವರನ್ನಾಗಲೀ, ಮನುಷ್ಯರನ್ನಾಗಲೀ, ಋಷಿಗಳನ್ನಾಗಲೀ ವರನೆಂದು ಇಷ್ಟಪಡಲಿಲ್ಲ.
ಭಾರ್ಯಯಾ ತು ಸ ಸಮ್ಮಂತ್ರ್ಯ ಸಹ ರಾತ್ರೌ ಸುಧರ್ಮಯಾ |
ಮಾತಲಿರ್ನಾಗಲೋಕಾಯ ಚಕಾರ ಗಮನೇ ಮತಿಮ್ ॥19॥
ರಾತ್ರಿಯ ಕಾಲದಲ್ಲಿ ಮಾತಲಿಯು ಸುಧರ್ಮಾ ಎಂಬ ತನ್ನ ಪತ್ನಿಯ ಜೊತೆಯಲ್ಲಿ ಆಲೋಚನೆಯನ್ನು ಮಾಡಿ ನಾಗಲೋಕಕ್ಕೆ ಹೋಗಲು ನಿಶ್ಚಯಿಸಿದನು.
ನ ಮೇ ದೇವಮನುಷ್ಯೇಷು ಗುಣಕೇಶ್ಯಾಃ ಸಮೋ ವರಃ |
ರೂಪತೋ ದೃಶ್ಯತೇ ಕಶ್ಚಿನ್ನಾಗೇಷು ಭವಿತಾ ಧ್ರುವಮ್ ॥20॥
ನನಗೆ ದೇವತೆಗಳಲ್ಲಿ ಮತ್ತು ಮನುಷ್ಯರಲ್ಲಿ ಗುಣಕೇಶಿಯ ರೂಪಕ್ಕೆ ಸಮನಾದ ವರನು ಯಾವನೂ ಕಾಣುವುದಿಲ್ಲ. ನಾಗಲೋಕದಲ್ಲಿ ಯಾರಾದರೂ ಖಂಡಿತವಾಗಿ ಸಿಗಬಹುದು.
ಇತ್ಯಾಮಂತ್ರ್ಯ ಸುಧರ್ಮಾಂ ಸ ಕೃತ್ವಾ ಚಾಭಿಪ್ರದಕ್ಷಿಣಮ್ |
ಕನ್ಯಾಂ ಶಿರಸ್ಯುಪಾಘ್ರಾಯ ಪ್ರವಿವೇಶ ಮಹೀತಳಮ್ ॥21॥
ಎಂದು ಮಂತ್ರಾಲೋಚನೆಯನ್ನು ಮಾಡಿ ಸುಧರ್ಮ ಸಭೆಗೆ (ಇಂದ್ರನ ಸಭೆಗೆ ಸುಧರ್ಮ ಎಂದು ಹೆಸರು) ಪ್ರದಕ್ಷಿಣೆಯನ್ನು ಮಾಡಿ ಕನ್ಯೆಯನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ಮಹೀತಳವನ್ನು ಪ್ರವೇಶಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಣ್ಣವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತಾರನೆಯ
ಅಧ್ಯಾಯ ಮುಗಿಯಿತು.

* * * * *
തോമ്ബത്തേಳನೆಯ ಅಧ್ಯಾಯ
ನಾರದರಿಂದ ವರುಣಲೋಕದಲ್ಲಿ ಮಾತಲಿಗೆ ಅನೇಕ ವಸ್ತುಗಳ ಪರಿಚಯ.
ಕಣ್ವಃ
ಮಾತಲಿಸ್ತು ವ್ರಜನ್ ಮಾರ್ಗೇ ನಾರದೇನ ಮಹರ್ಷಿಣಾ |
ವರುಣಂ ಗಚ್ಛತಾ ದ್ರಷ್ಟುಂ ಸಮಾಗಚ್ಛದ್ ಯದೃಚ್ಛಯಾ ||1||
ಕಣ್ವ ಮಾತಲಿಯು ಮಾರ್ಗದಲ್ಲಿ ಹೋಗುತ್ತಾ ವರುಣನನ್ನು ನೋಡಲು ಹೋಗುತ್ತಿದ್ದ ಮಹರ್ಷಿಗಳಾದ ನಾರದರ ಜೊತೆಗೆ ಅನಿರೀಕ್ಷಿತವಾಗಿ ಸಮಾಗಮವನ್ನು ಹೊಂದಿದನು.
ನಾರದೋಽಬ್ರವೀದೇನಂ ಕ್ವ ಭವಾನ್ ಗಂತುಮುದ್ಯತಃ |
ಸ್ವೇನ ವಾ ಸೂತ ಕಾರ್ಯೇಣ ಶಾಸನಾದ್ವಾ ಶತಕ್ರತೋಃ ||2||
ನಾರದರು ಅವನನ್ನು ಕುರಿತು ಎಲೈ ಸೂತನೇ, ನೀನು ಎಲ್ಲಿಗೆ ಹೊರಟಿರುವಿ? ನಿನ್ನ ಕಾರ್ಯಕ್ಕಾಗಿಯೋ ಅಥವಾ ಇಂದ್ರನ ಶಾಸನದಿಂದಾಗಿಯೋ ಎಂದು ಕೇಳಿದರು.
ಮಾತಲಿರ್ನಾರದೇನೈವಂ ಸಂಪೃಷ್ಟಃ ಪಥಿ ಗಚ್ಛತಾ |
ಯಥಾವತ್ ಸರ್ವಮಾಚಷ್ಟ ಸ್ವಕಾರ್ಯಂ ನಾರದಂ ಪ್ರತಿ ||3||
ದಾರಿಯಲ್ಲಿ ಹೋಗುತ್ತಿದ್ದ ನಾರದರಿಂದ ಹೀಗೆ ಕೇಳಲ್ಪಟ್ಟ ಮಾತಲಿಯು ತನ್ನ ಕಾರ್ಯವೆಲ್ಲವನ್ನೂ ನಾರದರಿಗೆ ಸರಿಯಾಗಿ ಹೇಳಿದನು.
ತಮುವಾಚಾಥ ಸ ಮುನಿರ್ಗಚ್ಛಾವಃ ಸಹಿತಾವಿತಿ ||4||
ಸಲಿಲೇಶದಿದೃಕ್ಷಾರ್ಥಮಹಮಪ್ಯುದ್ಯತೋ ದಿವಃ ||5||
ಅದನ್ನು ಕೇಳಿದ ನಾರದರು ಅವನನ್ನು ಕುರಿತು ನಾನೂ ಸಹ ಜಲೇಶ್ವರನಾದ ವರುಣನನ್ನು ನೋಡಲು ಸ್ವರ್ಗದಿಂದ ಬರುತ್ತಿದ್ದೇನೆ. ಇಬ್ಬರೂ ಒಟ್ಟಿಗೆ ಹೋಗೋಣ ಎಂದು ಹೇಳಿದರು.
ಅಹಂ ತೇ ಸರ್ವಮಾಖ್ಯಾಸ್ಯೇ ದರ್ಶಯನ್ ವಸುಧಾತಳೇ |
ದೃಷ್ಟ್ವಾ ತತ್ರ ವರಂ ಕಂಚಿದ್ ರೋಚಯಿಷ್ಯಾವ ಮಾತಲೇ ||6||
ಎಲೈ ಮಾತಲಿಯೇ, ನಾನು ನಿನಗೆ ಭೂತಳದಲ್ಲಿ ಎಲ್ಲವನ್ನೂ ಪರಿಚಯ ಮಾಡಿಕೊಡುತ್ತೇನೆ. ಅದನ್ನು ನೋಡಿ ಯಾವನಾದರೂ ಒಬ್ಬ ವರನನ್ನು ಆರಿಸೋಣ.
ಕಣ್ವಃ
ಅವಗಾಹ್ಯ ತತೋ ಭೂಮಿಮುಭೌ ಮಾತಲಿನಾರದೌ |
ದದೃಶಾತೇ ಮಹಾತ್ಮಾನೌ ಲೋಕಪಾಲಮಪಾಂಪತಿಮ್ ||7||
ಕಣ್ವ ಅನಂತರ ಮಹಾತ್ಮರಾದ ಮಾತಲಿ ನಾರದರಿಬ್ಬರೂ ಭೂಮಿಗಿಳಿದು ಲೋಕಪಾಲಕನಾದ ಜಲಾಧಿಪತಿಯಾದ ವರುಣನನ್ನು ನೋಡಿದರು.
ತತ್ರ ದೇವರ್ಷಿಸದೃಶೀಂ ಪೂಜಾಂ ಸ ಪ್ರಾಪ ನಾರದಃ |
ಮಹೇಂದ್ರಸದೃಶೀಂ ಚೈವ ಮಾತಲಿಃ ಪ್ರತ್ಯಪದ್ಯತ ||8||
ಅಲ್ಲಿ ನಾರದರು ದೇವರ್ಷಿಗಳಿಗೆ ಉಚಿತವಾದ ಪೂಜೆಯನ್ನೂ ಮಾತಲಿಯು ದೇವೇಂದ್ರನಿಗೆ ಇಷ್ಟವಾದ ಪೂಜೆಯನ್ನೂ ಹೊಂದಿದರು.
ತಾವುಭೌ ಪ್ರೀತಮನಸೌ ಕಾರ್ಯವಂತೌ ನಿವೇದ್ಯ ಹ |
ವರುಣೇನಾಭ್ಯನುಜ್ಞಾತೌ ನಾಗಲೋಕಂ ವಿಚೇರತುಃ ||9||
ಸಂತೋಷಗೊಂಡ ಅವರಿಬ್ಬರೂ ನಮಗೆ ಬೇರೆ ಕಾರ್ಯವಿದೆ ಎಂದು ಹೇಳಿ ವರುಣನ ಅಪ್ಪಣೆಯನ್ನು ಪಡೆದು ನಾಗಲೋಕದಲ್ಲಿ ಸಂಚರಿಸಿದರು.
ನಾರದಃ ಸರ್ವಭೂತಾನಾಮಂತರ್ಭೂಮಿನಿವಾಸಿನಾಮ್ |
ಜಾನಂಶ್ಚಕಾರ ವ್ಯಾಖ್ಯಾನಂ ಯಂತುಃ ಸರ್ವಮಜಾನತಃ ||10||
ಭೂಮಿಯ ಕೆಳಗೆ ವಾಸಿಸುವ ಎಲ್ಲಾ ಪ್ರಾಣಿಗಳನ್ನೂ ತಿಳಿದಿದ್ದ ನಾರದರು ಅವೆಲ್ಲವನ್ನೂ ತಿಳಿಯದ ಮಾತಲಿಗೆ ಪರಿಚಯ ಮಾಡಿಕೊಟ್ಟರು.
ನಾರದಃ
ದೃಷ್ಟಸ್ತೇ ವರುಣಃ ಸೂತ ಪುತ್ರಪೌತ್ರಸಮಾವೃತಃ |
ಪಶ್ಯ ತೋಯನಿಧೇಃ ಸ್ಥಾನಂ ಸರ್ವತೋಭದ್ರಮೃದ್ಧಿಮತ್ ||11||
ನಾರದ ಎಲೈ ಸೂತನೇ, ಪುತ್ರಪೌತ್ರಸಮನ್ವಿತನಾದ ವರುಣನನ್ನು ನೀನು ನೋಡಿದೆ. ಎಲ್ಲ ಕಡೆಯಲ್ಲಿಯೂ ಸಮೃದ್ಧಿಯನ್ನು ಹೊಂದಿದ, ಮಂಗಳಕರವಾದ ಸಮುದ್ರದ ಸ್ಥಾನವನ್ನು ನೋಡು.
ಏಷ ಪುತ್ರೋ ಮಹಾಪ್ರಾಜ್ಞೋ ವರುಣಸ್ಯೇಹ ಗೋಪತೇಃ |
ಏಷ ವೈ ಶೀಲವೃತ್ತೇನ ಶೌಚೇನ ಚ ವಿಶಿಷ್ಯತೇ ||12||
ಇವನು ಜಲಾಧಿಪತಿಯಾದ ವರುಣನ ಜ್ಞಾನವುಳ್ಳ ಪುತ್ರ. ಇವನು ತನ್ನ ಶೌಚದಲ್ಲಿಯೂ ಶೀಲವೃತ್ತಿಗಳಲ್ಲಿಯೂ ಉಳಿದವರನ್ನು ಮೀರುತ್ತಾನೆ.

ಏಷೋಽಸ್ಯ ಪುತ್ರೋಽಭಿಮತಃ ಪುಷ್ಕರಃ ಪುಷ್ಕರೇಕ್ಷಣಃ |
ರೂಪವಾನ್ ದರ್ಶನೀಯಶ್ಚ ಸೋಮಪುತ್ರ್ಯಾ ವೃತಃ ಪತಿಃ ||13||
ಇವನು ಕಮಲನಯನನಾದ ಪುಷ್ಕರನೆಂಬ ಅವನ ಪುತ್ರ. ರೂಪವಂತನೂ ಸುಂದರನೂ ಆದ ಇವನು ಚಂದ್ರನ ಪುತ್ರಿಯಿಂದ ಪತಿಯಾಗಿ ವರಿಸಲ್ಪಟ್ಟಿದ್ದಾನೆ.
ಜ್ಯೋತ್ಸ್ನಾಕಾಲೀತಿ ಯಾಮಾಹುರ್ದ್ವಿತೀಯಾಂ ರೂಪತಃ ಶ್ರಿಯಮ್ |
ಅದಿತ್ಯಾಶ್ಚೈವ ಗೋಪುತ್ರೋ ಜ್ಯೇಷ್ಠಃ ಪುತ್ರಕೃತೇ ಕೃತಃ ||14||
ಚಂದ್ರನ ಪುತ್ರಿಯ ಹೆಸರು ಜ್ಯೋತ್ಸ್ನಾಕಾಲಿ ಎಂದು. ಅವಳು ರೂಪದಲ್ಲಿ ಎಳೆಯ ಲಕ್ಷ್ಮಿಯಂತೆ ಇದ್ದಾಳೆ. ಅದಿತಿಯ ಜ್ಯೇಷ್ಠನಾದ ಗೋಪುತ್ರನನ್ನು ಅವಳು ಪುತ್ರನನ್ನಾಗಿ ಸ್ವೀಕರಿಸಿದಳು.
ಭವನಂ ಪಶ್ಯ ವಾರುಣ್ಯಂ ಯದೇತತ್ ಸರ್ವಕಾಂಚನಮ್ |
ಯಾಂ ಪ್ರಾಪ್ಯ ಸುರತಾಂ ಪ್ರಾಪ್ತಾಃ ಸುರಾಃ ಸುರಪತೇಃ ಸಖೇ ||15||
ದೇವೇಂದ್ರನ ಸ್ನೇಹಿತನೇ, ವರುಣನ ಸರ್ವಸುವರ್ಣಮಯವಾದ ಈ ಭವನವನ್ನು ನೋಡು. ಇಲ್ಲಿ ದೊರೆಯುವ ವಾರುಣೀಮದ್ಯವನ್ನು ಪಡೆದು ದೇವತೆಗಳು ಬಹಳ ಸುಖವನ್ನು ಹೊಂದಿದರು.
ಏತಾನಿ ಹೃತರಾಜ್ಯಾನಾಂ ದೈತೇಯಾನಾಂ ಚ ಮಾತಲೇ |
ದೀಪ್ಯಮಾನಾನಿ ದೃಶ್ಯಂತೇ ಸರ್ವಪ್ರಹರಣಾನ್ಯುತ ||16||
ಎಲೈ ಮಾತಲಿಯೇ, ಇವು ರಾಜ್ಯವನ್ನು ಕಳೆದುಕೊಂಡ ದೈತ್ಯರ ಕಾಂತಿಯುಕ್ತವಾದ ಎಲ್ಲಾ ಆಯುಧಗಳು. ಇವು ಇಲ್ಲಿ ಕಂಡುಬರುತ್ತಿವೆ.
ಅಕ್ಷಯಾಣಿ ಕಿಲೈತಾನಿ ಪ್ರವರ್ತಂತೇ ಸ್ಮ ಮಾತಲೇ |
ಅನುಭಾವಪ್ರಯುಕ್ತಾನಿ ಸುರೈರವಜಿತಾನಿ ಹ ||17||
ಎಲೈ ಮಾತಲಿಯೇ, ಇವು ನಾಶವನ್ನು ಹೊಂದದವುಗಳು. ಸಾಮರ್ಥ್ಯದಿಂದ ಪ್ರಯೋಗಿಸಲ್ಪಡಬೇಕಾದ ಇವುಗಳನ್ನು ದೇವತೆಗಳು ವಶಪಡಿಸಿಕೊಂಡರು.
ಅತ್ರ ರಾಕ್ಷಸಜಾತ್ಯಶ್ಚ ಭೂತಯೋನ್ಯಶ್ಚ ಮಾತಲೇ |
ದಿವ್ಯಪ್ರಹರಣಾಶ್ಚಾಸನ್ ಪೂರ್ವದೈವತನಿರ್ಮಿತಾಃ ||18||
ಎಲೈ ಮಾತಲಿಯೇ, ಇಲ್ಲಿ ರಥಗಳಿಂದ ನಿರ್ಮಿತವಾದ ರಾಕ್ಷಸಜಾತಿಗಳಿಗೆ ಸೇರಿದವೂ ಮತ್ತು ಭೂತಾದಿಗಳ ಜಾತಿಗೆ ಸೇರಿದವೂ ಆದ ದಿವ್ಯವಾದ ಆಯುಧಗಳೂ ಇದ್ದವು.
ಅಗ್ನಿರೇಷ ಮಹಾರ್ಚಿಷ್ಮಾನ್ ಜಾಗರ್ತಿ ವರುಣಹ್ರದೇ |
ವೈಷ್ಣವಂ ಚಕ್ರಮಾವಿದ್ಧಂ ವಿಧೂಮೇನ ಹವಿಷ್ಮತಾ ||19||
ವರುಣಹ್ರದದಲ್ಲಿ ಮಹಾಜ್ವಾಲೆಗಳಿಂದ ಕೂಡಿದ ಈ ಅಗ್ನಿಯು ಯಾವಾಗಲೂ ಉರಿಯುತ್ತಾನೆ. ಧೂಮರಹಿತನಾದ ಈ ಅಗ್ನಿಯಿಂದ ವಿಷ್ಣುವಿನ ಸುದರ್ಶನ ಚಕ್ರವು ಯಾವಾಗಲೂ ಧರಿಸಲ್ಪಟ್ಟಿದೆ.
ಏಷ ಗಾಂಡೀವಕಶ್ಚಾಪೋ ಲೋಕಸಂಹಾರಸಂಭವಃ |
ರಕ್ಷ್ಯತೇ ದೈವತೈರ್ನಿತ್ಯಂ ಯತಸ್ತದ್ ಗಾಂಡಿವಂ ಧನುಃ ||20||
ಇದು ಲೋಕಸಂಹಾರಕ್ಕಾಗಿ ಜನಿಸಿದ ಗಾಂಡೀವ ಧನುಸ್ಸು. ಇದನ್ನು ದೇವತೆಗಳು ಯಾವಾಗಲೂ ರಕ್ಷಿಸುತ್ತಾರೆ. ಅರ್ಜುನನ ಗಾಂಡೀವ ಧನುಸ್ಸೂ ಸಹ ಇದರಿಂದಲೇ ಉಂಟಾಯಿತು.
ಏಷ ಕೃತ್ಯೇ ಸಮುತ್ಪನ್ನೇ ತತ್ತದ್ ಧಾರಯತೇ ಬಲಮ್ |
ಸಹಸ್ರಶತಸಂಖ್ಯೇನ ಪ್ರಾಣೇನ ಸತತಂ ಧ್ರುವಃ ||21||
ಇದು ಅವಶ್ಯಕತೆ ಒದಗಿದಾಗ ನೂರಾರು, ಸಾವಿರಾರು ಧನುಸ್ಸುಗಳ ಬಲವನ್ನು ಹೊಂದುತ್ತದೆ. ಇದರಲ್ಲಿ ಸತತವಾಗಿ ಬಹಳ ಶಕ್ತಿ ಇರುತ್ತದೆ.
ಅಶಿಷ್ಟಾನಪಿ ಶಾಸ್ತ್ಯೇಷ ರಕ್ಷೋಬಂಧುಷು ರಾಜಸು |
ಸೃಷ್ಟಃ ಪ್ರಥಮಜೋ ದಂಡೋ ಬ್ರಹ್ಮಣಾ ಬ್ರಹ್ಮವಾದಿನಾ ||22||
ಇದು ಅಶಿಷ್ಟರನ್ನೂ ಶಾಸನ ಮಾಡುತ್ತದೆ. ಇದನ್ನು ವೇದಗರ್ಭರಾದ ಬ್ರಹ್ಮದೇವರು ರಾಕ್ಷಸಬಂಧುಗಳಾದ ರಾಜರನ್ನು ದಮನ ಮಾಡಲು ಮೊದಲನೆಯ ದಂಡವಾಗಿ ಸೃಷ್ಟಿಸಿದರು.
ಏತಚ್ಛಸ್ತ್ರಂ ನರೇಂದ್ರಾಣಾಂ ಮಹಚ್ಚಕ್ರೇಣ ಭೂಷಿತಮ್ |
ಪುತ್ರಾಃ ಸಲಿಲರಾಜಸ್ಯ ಧಾರಯಂತಿ ಮಹೋದಯಮ್ ||23||
ಇದು ನರೇಂದ್ರರ ಶಸ್ತ್ರ. ದೊಡ್ಡ ಚಕ್ರದಿಂದ ಭೂಷಿತವಾಗಿದೆ. ಮಹಾಸಂಪತ್ತನ್ನು ಕೊಡುವ ಈ ಶಸ್ತ್ರವನ್ನು ಸಲಿಲರಾಜನ ಮಕ್ಕಳು ಧರಿಸುತ್ತಾರೆ.
ಏತತ್ ಸಲಿಲರಾಜಸ್ಯ ಛತ್ರಂ ಛತ್ರಗೃಹೇ ಸ್ಥಿತಮ್ |
ಸರ್ವತಃ ಸಲಿಲಂ ಶೀತಂ ಜೀಮೂತ ಇವ ವರ್ಷತಿ ||24||
ಛತ್ರಗೃಹದಲ್ಲಿರುವ ಇದು ವರುಣನ ಛತ್ರ. ಮೋಡದಂತೆ ಇದು ಎಲ್ಲ ಕಡೆಗಳಿಂದಲೂ ಶೀತವಾದ ಜಲವನ್ನು ಸ್ರವಿಸುತ್ತದೆ.
ಏತಚ್ಛತ್ರಾತ್ ಪರಿಭ್ರಷ್ಟಂ ಸಲಿಲಂ ಸೋಮನಿರ್ಮಲಮ್ |
ತಮಸಾ ಮಿಶ್ರಿತಂ ಭಾತಿ ಯೇನ ನಾರ್ಹತಿ ದರ್ಶನಮ್ ||25||
ಈ ಛತ್ರದಿಂದ ಕೆಳಗೆ ಬೀಳುವ ಜಲವು ಸೋಮರಸದಂತೆ ನಿರ್ಮಲವಾಗಿದ್ದು, ತಮಸ್ಸಿನಿಂದ ಮಿಶ್ರಿತವಾದ ಕಾರಣ ಯಾರ ಕಣ್ಣಿಗೂ

ಕಾಣುವುದಿಲ್ಲ.
ಬಹೂನ್ಯದ್ಭುತರೂಪಾಣಿ ದ್ರಷ್ಟವ್ಯಾನೀಹ ಭೂತಳೇ |
ತವ ಕಾರ್ಯೋಪರೋಧಃ ಸ್ಯಾತ್ ತಸ್ಮಾದ್ ಗಚ್ಛಾವ ಮಾಚಿರಮ್ ॥
ಎಲೈ ಮಾತಲಿಯೇ, ಭೂತಳದಲ್ಲಿ ನೋಡಬೇಕಾದ ಅದ್ಭುತವಾದ ವಸ್ತುಗಳು ಅನೇಕವಿವೆ. ಆದರೆ ನಿನ್ನ ಕಾರ್ಯಕ್ಕೆ ತೊಂದರೆಯಾದೀತು. ಆದ್ದರಿಂದ ಶೀಘ್ರವಾಗಿ ಹೊರಡೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತನವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆಂಟನೆಯ ಅಧ್ಯಾಯ
ಮಾತಲಿಯನ್ನು ಪಾತಾಳಕ್ಕೆ ಕರೆದುಕೊಂಡು ಹೋಗಿ, ಅಲ್ಲಿದ್ದ ವಸ್ತುಗಳನ್ನು ತೋರಿಸಿ, ನಾರದರಿಂದ ಅವುಗಳ ಗುಣನಿರೂಪಣೆ
ನಾರದಃ
ಏತತ್ತು ನಾಗಲೋಕಸ್ಯ ನಾಭಿಸ್ಥಾನೇ ಸ್ಥಿತಂ ಪುರಮ್ |
ಪಾತಾಳಮಿತಿ ವಿಖ್ಯಾತಂ ದೈತ್ಯದಾನವಸೇವಿತಮ್ ॥1॥
ಇದು ನಾಗಲೋಕದ ನಾಭಿಸ್ಥಾನದಲ್ಲಿ ಇರುವ ಪಟ್ಟಣ. ದೈತ್ಯ-ದಾನವರಿಂದ ಸೇವಿತವಾದ ಈ ಪಟ್ಟಣವು ಪಾತಾಳವೆಂದು ಪ್ರಸಿದ್ಧವಾಗಿದೆ.
ಇದಮದ್ಭಿಃ ಸಮಂ ಪ್ರಾಪ್ತಾ ಯೇ ಕೇಚಿದ್ ಧ್ರುವಜಂಗಮಾಃ |
ಪ್ರವಿಶಂತೋ ಮಹಾನಾದಂ ನದಂತಿ ಭಯಪೀಡಿತಾಃ ॥2॥
ಶುದ್ಧೋದ ಸಮುದ್ರದಿಂದಲೂ, ಕ್ಷೀರಸಮುದ್ರದಿಂದಲೂ ಸೋರುವ ನೀರಿನ ಜೊತೆಯಲ್ಲಿ ಸ್ಥೂಲಶರೀರವುಳ್ಳ ಸ್ಥಿರವಾದ ಪೃಷ್ಠವುಳ್ಳ ಆಮೆ, ಚೇಳು, ಮೊಸಳೆ ಮೊದಲಾದ ಪ್ರಾಣಿಗಳು ಸೋರುವ ಜಲದ ಸಮೀಪದಲ್ಲಿ ಇರುವ ಅಗ್ನಿಜ್ವಾಲೆಗಳನ್ನು ನೋಡಿ ಭಯದಿಂದ ಪೀಡಿತರಾಗಿ ಮಹಾನಾದಗಳನ್ನು ಮಾಡುತ್ತವೆ ವಾದಿರಾಜರು.
ಅತ್ರಾಸುರೋಽಗ್ನಿಃ ಸತತಂ ದೀಪ್ಯತೇ ವಾರಿಭೋಜನಃ |
ವ್ಯಾಪಾರೇಣ ಮಹಾತ್ಮಾನಂ ನಿಬಧ್ಯ ಸಮಬಧ್ಯತ ॥3॥
ಇಲ್ಲಿ ಅಸುರಸಂಹಾರಕ್ಕಾಗಿ ನಿರ್ಮಿಸಲ್ಪಟ್ಟ ದಕ್ಷಿಣಾಗ್ನಿಯು ನೀರನ್ನು ಪಾನಮಾಡುತ್ತಾ ಜ್ವಲಿಸುತ್ತಾನೆ. ಅಗ್ನಿಯು ಕಾಡಿನ ಮಧ್ಯದಲ್ಲಿದ್ದ ಒಬ್ಬ ಋಷಿಯ ಸುತ್ತಲೂ ಇದ್ದು ಅವನನ್ನು ಬಂಧಿಸಿ ಕೋಪಗೊಂಡ ಅವನು ಪಾತಾಳಕ್ಕೆ ಬೀಳು ಎಂದು ಶಾಪವನ್ನು ಕೊಟ್ಟಾಗ ಸುತ್ತಲೂ ಬಹುಯೋಜನ ವಿಸ್ತಾರವಾದ ಸಮುದ್ರದ ಅಂಚಿನ ನೀರಿನಲ್ಲಿ ಯಾವಾಗಲೂ ಕಟ್ಟಿಹಾಕಲ್ಪಟ್ಟಿದ್ದಾನೆ ವಾದಿರಾಜರು.
ಅತ್ರಾಮೃತಂ ಸುರೈಃ ಪೀತ್ವಾ ನಿಹಿತಂ ನಿಹತಾರಿಭಿಃ |
ತತಃ ಸೋಮಸ್ಯ ಹಾನಿಶ್ಚ ವೃದ್ಧಿಶ್ಚೈವ ಪ್ರದೃಶ್ಯತೇ ॥4॥
ಇಲ್ಲಿ ಪಾತಾಳಮಧ್ಯಪ್ರದೇಶದಲ್ಲಿ ಭಗವದಾಜ್ಞೆಯಿಂದ ಪಾತಾಳದ ಮೇಲೆ ಸಂಚರಿಸುವ ಚಂದ್ರನು ಅಮಾವಾಸ್ಯೆಯವರೆಗೆ ಹೆಚ್ಚಾಗಿ ಹಗಲಿನಲ್ಲಿ ಸಂಚರಿಸುವುದರಿಂದ ಸೂರ್ಯಕಿರಣಗಳಿಂದ ಅವನ ಕಿರಣಗಳು ಮುಚ್ಚಲ್ಪಡುತ್ತಿರಲು ಅಮೃತಸ್ಪರ್ಶವಿಲ್ಲದಿರುವುದರಿಂದ ಕ್ರಮವಾಗಿ ಕಲೆಗಳ ಹಾನಿಯನ್ನು ಹೊಂದುತ್ತಾನೆ. ಪುನಃ ಪೂರ್ಣಿಮಾ ಪರ್ಯಂತವಾಗಿ ರಾತ್ರಿಯಲ್ಲಿಯೇ ಹೆಚ್ಚಾಗಿ ಸಂಚಾರ ಮಾಡುವುದರಿಂದ ಅಮೃತಸ್ಪರ್ಶವು ಕ್ರಮವಾಗಿ ಅಭಿವೃದ್ಧಿಯಾಗುವುದರಿಂದ ಕಲಾಭಿವೃದ್ಧಿಯು ಕಂಡುಬರುತ್ತದೆ ವಾದಿರಾಜರು.
ಅತ್ರ ದಿವ್ಯೋ ಹಯಶಿರಾಃ ಕಾಲೇ ಪರ್ವಣಿ ಪರ್ವಣಿ |
ಉತ್ತಿಷ್ಠತಿ ಸುವರ್ಣಾಭಃ ಅದ್ಭಿರಾಪೂರಯಜ್ಜಗತ್ ॥5॥
ಈ ಪಾತಾಳದಲ್ಲಿ ಕುದುರೆಯ ಮುಖವುಳ್ಳ ದಿವ್ಯನಾದ ಸುವರ್ಣೋಪೇತನಾದ ವಡವಾಗ್ನಿಯು ಪೌರ್ಣಿಮಾಸಿ ಮತ್ತು ಅಮಾವಾಸ್ಯೆಗಳಲ್ಲಿ ಅಭಿವೃದ್ಧಿಯನ್ನು ಹೊಂದುವ ಜಲದ ಪಾನಕ್ಕೋಸ್ಕರವಾಗಿ ಮೊದಲೇ ಇದ್ದ ಅಗ್ನಿಗೆ ಉತ್ತೇಜಕನಾಗಿ ಮೇಲೇಳುತ್ತಾನೆ. ಅನಂತರ ಜಗತ್ತಿನಲ್ಲಿ ಆ ಜಲವನ್ನು ತುಂಬುತ್ತಾನೆ ವಾದಿರಾಜರು.
ಯಸ್ಮಾದತ್ರ ಸಮಗ್ರಾಸ್ತಾಃ ಪತಂತಿ ಜಲಮೂರ್ತಯಃ |
ತಸ್ಮಾತ್ ಪಾತಾಲಮಿತ್ಯೇವ ಖ್ಯಾಯತೇ ಪುರಮುತ್ತಮಮ್ ॥6॥
ಯಾವ ಕಾರಣದಿಂದ ಇಲ್ಲಿ ಜಲಚರಗಳಿಂದ ಮಿಶ್ರಿತವಾದ ಜಲರಾಶಿಗಳು ಬೀಳುತ್ತವೆಯೋ ಆ ಕಾರಣದಿಂದ ಈ ಪಟ್ಟಣವನ್ನು ಪಾತಾಳ ಎಂದು ಕರೆಯುತ್ತಾರೆ. ಪಾತ= ಜಲಪಾತನಿಮಿತ್ತದಿಂದ, ಅ= ಅಕಾರವಾಚ್ಯನಾದ ನಾರಾಯಣನನ್ನು, ಲ= ತಮ್ಮೊಳಗೆ ಧರಿಸಿಕೊಂಡಿರುವುದರಿಂದ, ಪಾತ+ಅ+ಳ= ಪಾತಾಳ.
ಐರಾವತೋಽಸ್ಮಾತ್ ಸಲಿಲಂ ಪ್ರಗೃಹ್ಯ ಜಗತೋ ಹಿತಮ್ |
ಮೇಘೇಷ್ವಾಮುಂಚತೇ ಶೀತಂ ಯನ್ಮಹೇಂದ್ರಃ ಪ್ರವರ್ಷತಿ ॥7॥
ಐರಾವತ ಎಂಬ ಗಜವು ಪಾತಾಳದಲ್ಲಿರುವ ಜಲಾಶಯದಿಂದ ತನ್ನ ಸೊಂಡಿಲಿನ ಮುಖಾಂತರ ನೀರನ್ನು ತೆಗೆದುಕೊಂಡು ಅದನ್ನು

ಕೆಲವು ಕಡೆಗಳಲ್ಲಿ ಪಾತಾಳ ಪರ್ಯಂತರವಾಗಿಯೂ ಆಳವಾಗಿರುವ ಲವಣಸಮುದ್ರದ ಜಲದಲ್ಲಿ ಸೇರಿಸಿ ತನ್ಮೂಲಕವಾಗಿ ಮೇಘಗಳಲ್ಲಿ ಸೇರಿಸುತ್ತದೆ. ಮಹೇಂದ್ರನು ಶೀತವಾದ ಆ ಉದಕವನ್ನು ಮಳೆಯ ರೂಪದಲ್ಲಿ ಸುರಿಸುತ್ತಾನೆ ವಾದಿರಾಜರು.
ಐರಾವತೋ ನಾಗರಾಜೋ ವಾಮನಃ ಕುಮುದೋಽಂಜನಃ |
ಪ್ರಸೂತಾಃ ಸುಪ್ರತೀಕಸ್ಯ ವಂಶೇ ವಾರಣಸತ್ತಮಾಃ ॥8॥
ಐರಾವತ, ವಾಮನ, ಕುಮುದ, ಅಂಜನ ಎಂಬ ಶ್ರೇಷ್ಠವಾದ ದಿಗ್ಗಜಗಳು ಸುಪ್ರತೀಕ ಗಜದ ವಂಶದಲ್ಲಿ ಜನಿಸಿವೆ. ಅಲ್ಲಿ ಬೇರೆ ಶ್ರೇಷ್ಠವಾದ ಗಜಗಳೂ ಇವೆ.
ಅತ್ರ ನಾನಾವಿಧಾಕಾರಾಃ ತಿಮಯೋ ನೈಕರೂಪಿಣಃ |
ಅಪ್ಸು ಸೋಮಪ್ರಭಾಂ ಪೀತ್ವಾ ವಸಂತಿ ಜಲಚಾರಿಣಃ ॥9॥
ಇಲ್ಲಿ ನಾನಾವಿಧವಾದ ಆಕಾರವನ್ನು ಹೊಂದಿದ, ನಾನಾ ಬಣ್ಣಗಳಿಂದ ಕೂಡಿದ ತಿಮಿಂಗಿಲ ಮೊದಲಾದವುಗಳು ನೀರಿನಲ್ಲಿ ಚಂದ್ರಪ್ರಭೆಯು ಬಿದ್ದುದರಿಂದ ಅಮೃತದಂತಾದ ಜಲಗಳನ್ನು ಕುಡಿದು ವಾಸಮಾಡುತ್ತವೆ.
ಅತ್ರ ಸೂರ್ಯಾಂಶುಭಿರ್ಭಿನ್ನಾಃ ಪಾತಾಳತಳಮಾಶ್ರಿತಾಃ |
ಮೃತಾ ಹಿ ದಿವಸೇ ಸೂತ ಪುನರ್ಜೀವಂತಿ ವೈ ನಿಶಿ ॥10॥
ಪಾತಾಳದಲ್ಲಿ ದೇವರ ಆಜ್ಞೆಗೆ ಅನುಗುಣವಾಗಿ ಸೂರ್ಯ-ಚಂದ್ರರಂತೆ, ಹತ್ತು ಯೋಜನದ ದೂರದಲ್ಲಿಯೇ ಸಂಚಾರ ಮಾಡುವ ಆ ಸೂರ್ಯನು ಅತಿ ಸಮೀಪದಲ್ಲಿರುವುದರಿಂದ ಅವನ ಅತ್ಯಂತ ಉಷ್ಣವಾದ ಕಿರಣಗಳಿಂದ ತಪ್ತರಾದಂತಹ ಜೀವರು ಮಧ್ಯಾಹ್ನದಲ್ಲಿ ಮೃತರಾಗುತ್ತಾರೆ. ರಾತ್ರಿಯ ವೇಳೆಯಲ್ಲಿ ಚಂದ್ರನೂ ಅತಿಸಮೀಪದಲ್ಲಿ ಸಂಚಾರ ಮಾಡುವುದರಿಂದ ಅವನ ಅಮೃತಕಿರಣಗಳ ಸ್ಪರ್ಶದಿಂದ ಶುಕ್ಲಪಕ್ಷದಲ್ಲಿಯೂ, ಕೃಷ್ಣಪಕ್ಷದಲ್ಲಿ ಶೀತಲವಾಯುವು ತಂದ ಅಮೃತಕಣಗಳಿಂದಲೂ ಬದುಕುತ್ತಾರೆ. ಭೂಮಿಯ ಮೇಲೆ ಜ್ಯೋತಿಶ್ಚಕ್ರದಲ್ಲಿ ಇರುವ ಸೂರ್ಯ-ಚಂದ್ರರು ಆರಹಂ.... ಎಂಬ ಶ್ರುತಿಯಂತೆ ಉತ್ತರದಿಕ್ಕಿಗೆ ಹೋಗಿ ಮೇರುವನ್ನು ಪ್ರದಕ್ಷಿಣೆ ಮಾಡುತ್ತಾರೆ. ಬೇರೆ ರೂಪವನ್ನು ತೆಗೆದುಕೊಂಡು ದೇವರ ಆಜ್ಞೆಯಂತೆ ಪಾತಾಳದಲ್ಲಿ ಸಂಚರಿಸುತ್ತಾರೆ ಎಂದು ತಿಳಿಯಬೇಕು ಲಕ್ಷಾಲಂಕಾರ.
ಉದಯನ್ ನಿತ್ಯಶಶ್ಚಾತ್ರ ಚಂದ್ರಮಾ ರಶ್ಮಿಬಾಹುಭಿಃ |
ಅಮೃತಂ ಸಂಸ್ಪೃಶನ್ ಸ್ಪರ್ಶಾನ್ ಸಂಜೀವಯತಿ ದೇಹಿನಃ ॥11॥
ಇಲ್ಲಿ ನಿತ್ಯವೂ ಚಂದ್ರನು ಉದಯಿಸುತ್ತಾ ತನ್ನ ರಶ್ಮಿರೂಪವಾದ ಬಾಹುಗಳಿಂದ ಅಮೃತದ ಸ್ಪರ್ಶವನ್ನು ಉಂಟುಮಾಡುತ್ತಾ ಮಧ್ಯಾಹ್ನದಲ್ಲಿ ಮೃತರಾದ ಜೀವರನ್ನು ತನ್ನ ಸ್ಪರ್ಶದಿಂದ ಬದುಕಿಸುತ್ತಾನೆ.
ಅತ್ರ ತೇಽಧರ್ಮನಿರತಾ ಬದ್ಧಾಃ ಕಾಲೇನ ಪೀಡಿತಾಃ |
ದೈತೇಯಾ ನಿವಸಂತಿ ಸ್ಮ ವಾಸವೇನ ಹೃತಶ್ರಿಯಃ ॥12॥
ಅತ್ರ ಭೂತಪತಿರ್ನಾಮ ಸರ್ವಭೂತಮಹೇಶ್ವರಃ |
ಭೂತಯೇ ಸರ್ವಭೂತಾನಾಮಚರತ್ ತಪ ಉತ್ತಮಮ್ ॥13॥
ಇಲ್ಲಿ ಅಧರ್ಮನಿರತರಾಗಿ ಇಂದ್ರನಿಗೆ ಸೋತು ತಮ್ಮ ಸಂಪತ್ತನ್ನು ಕಳೆದುಕೊಂಡ ದೈತ್ಯರು ಪಾತಾಳ ಜಲಸಮುದ್ರದಲ್ಲಿ ಮೃತ್ಯುಪಾಶದಿಂದಲೂ ಮತ್ತು ವರುಣಪಾಶದಿಂದಲೂ ಬದ್ಧರಾಗಿ ವಾಸಿಸುತ್ತಾರೆ. ಇಲ್ಲಿ ತನ್ನ ಭೃತ್ಯರ ಜೊತೆಯಲ್ಲಿ ಅಮೃತವನ್ನು ರಕ್ಷಣೆ ಮಾಡುವ ಭೂತಪತಿಯಾದ ಮಹಾದೇವನು ಸರ್ವಜೀವರ ಸಂಪತ್ತಿಗಾಗಿ ಶ್ರೇಷ್ಠವಾದ ತಪಸ್ಸನ್ನು ಆಚರಿಸಿದನು.
ಅತ್ರ ಗೋಪ್ರತಿಮಾ ವಿಪ್ರಾಃ ಸ್ವಾಧ್ಯಾಯಾಮ್ನಾಯಕರ್ಶಿತಾಃ |
ತ್ಯಕ್ತಪ್ರಾಣಾ ಜಿತಸ್ವರ್ಗಾ ನಿವಸಂತಿ ಮಹರ್ಷಯಃ ॥14॥
ಇಲ್ಲಿ ಗೋವಿನಂತೆ ಪರಮಶಾಂತರಾದ ಸ್ವಾಧ್ಯಾಯ ಮತ್ತು ಶಾಸ್ತ್ರಗಳ ಅಧ್ಯಯನದಿಂದ ಕರ್ಶಿತರಾದ ಮಹರ್ಷಿಗಳಾದ ಬ್ರಾಹ್ಮಣರು ಉಳಿದ ಎಲ್ಲಾ ವ್ಯಾಪಾರವನ್ನೂ ತ್ಯಜಿಸಿ ಸ್ವರ್ಗವನ್ನು ಸಂಪಾದಿಸಿ ವಾಸಮಾಡುತ್ತಾರೆ.
ಯತ್ರತತ್ರಶಯೋ ನಿತ್ಯಂ ಯೇನಕೇನಚಿದಾಶಿತಃ |
ಯೇನಕೇನಚಿದಾಚ್ಛನ್ನಃ ಸ ಗೋವ್ರತ ಇಹೋಚ್ಯತೇ ॥15॥
ನಿತ್ಯವೂ ಎಲ್ಲಾದರೂ ಮಲಗಿ, ಯಾವುದಾದರೂ ಆಹಾರವನ್ನು ಸೇವಿಸಿ, ಯಾವುದಾದರೂ ವಸ್ತ್ರವನ್ನೋ ನಾರುಮಡಿಯನ್ನೋ ಧರಿಸುವ ವಿರಕ್ತರೂ ಅಸದೃಶರೂ ಆದ ಬ್ರಾಹ್ಮಣರು ಗೋವ್ರತವನ್ನು ಧರಿಸಿದವರು ಎನಿಸುತ್ತಾರೆ.
ಪಶ್ಯ ಯದ್ಯತ್ರ ತೇ ಕಶ್ಚಿದ್ ರೋಚತೇ ಗುಣತೋ ವರಃ |
ವರಯಿಷ್ಯಾಮಿ ತಂ ಗತ್ವಾ ಯತ್ನಮಾಸ್ಥಾಯ ಮಾತಲೇ ॥16॥
ಎಲೈ ಮಾತಲಿಯೇ, ಇಲ್ಲಿ ಯಾವನಾದರೂ ವರನು ತನ್ನ ಗುಣದಿಂದ ನಿನಗೆ ಇಷ್ಟವಾಗುತ್ತಾನೆಯೇ ಎಂದು ನೋಡು. ನಾನು ಹೋಗಿ ಪ್ರಯತ್ನಪೂರ್ವಕವಾಗಿ ಅವನನ್ನು ಒಲಿಸುವೆನು.
ನಾಸ್ಯ ಜಾತಿಂ ನಿಸರ್ಗಂ ವಾ ಕಥ್ಯಮಾನಂ ಶೃಣೋಮಿ ವೈ |
ಪಿತರಂ ಮಾತರಂ ಚಾಪಿ ನಾಸ್ಯ ಜಾನಾತಿ ಕಶ್ಚನ ॥17॥
ಇಲ್ಲಿ ವಾಸಮಾಡುವವರ ಜಾತಿಯನ್ನಾಗಲೀ, ಅವರ ಹುಟ್ಟಿದ ರೀತಿಯನ್ನಾಗಲೀ ಯಾರಾದರೂ ಹೇಳುವುದನ್ನು ನಾನು ಕೇಳಿಲ್ಲ. ಪಾತಾಳನಿವಾಸಿಗಳಾದ ಜನರಿಗೆ ತಂದೆ ಯಾರು, ತಾಯಿ ಯಾರು ಎಂದು ಯಾರೂ ತಿಳಿದಿಲ್ಲ.
ಅತಃ ಕಿಲ ಮಹಾನಗ್ನಿರಂತಕಾಲೇ ಸಮುತ್ಥಿತಃ |
ಧಕ್ಷ್ಯತೇ ಮಾತಲೇ ಸರ್ವಂ ತ್ರೈಲೋಕ್ಯಂ ಸಚರಾಚರಮ್ ॥18॥
ಅಂಶಮೇತಜ್ಜಲೇ ನ್ಯಸ್ತಂ ದೀಪ್ಯಮಾನಮಿವ ಶ್ರಿಯಾ |
ಅಪ್ರಜಾನಾನ್ನಿಸರ್ಗಾದ್ವೈ ನೋದ್ಭಿದ್ಯತಿ ನ ಸರ್ಪತಿ ॥19॥

ಎಲೈ ಮಾತಲಿಯೇ, ಪ್ರಳಯಕಾಲದಲ್ಲಿ ಈ ಪಾತಾಳ ಲೋಕದಿಂದ ಹುಟ್ಟಿದ ಅಗ್ನಿಯು ಚರಾಚರ ಜೀವಸಹಿತವಾದ ಮೂರುಲೋಕಗಳನ್ನೂ ದಹಿಸುವನು. ಹಿಂದೆ ಹೇಳಿದಂತೆ ಜಲದಲ್ಲಿ ಒಂದು ಅಂಶದಿಂದ ಇಡಲ್ಪಟ್ಟ ಅಗ್ನಿಯು ಇಲ್ಲಿ ಇಂದನವು ಇಲ್ಲದಿರುವುದರಿಂದ ಹೆಚ್ಚು ಪ್ರಕಾಶವನ್ನು ಹೊಂದದೇ ಸ್ವಾಭಾವಿಕವಾಗಿಯೇ ಊರ್ಧ್ವಮುಖವಾಗಿ ಜ್ವಲಿಸುವುದಿಲ್ಲ ಮತ್ತು ಒಂದು ಕಡೆಯಿಂದ ಇನ್ನೊಂದು ಕಡೆಗೂ ಹೋಗುವುದಿಲ್ಲ (ಹಬ್ಬುವುದಿಲ್ಲ).

ಕಣ್ವಃ

ಮಾತಲಿಸ್ತ್ವಬ್ರುವೀತ್ ಶ್ರುತ್ವಾ ನಾರದಸ್ಯಾಥ ಭಾಷಿತಮ್ |
ನ ಮೇಽತ್ರ ರೋಚತೇ ಕಶ್ಚಿದ್ ಅನ್ಯತೋ ವ್ರಜ ಮಾ ಚಿರಮ್ ॥20॥

ಕಣ್ವ ಅನಂತರ ಮಾತಲಿಯು ನಾರದರ ಮಾತುಗಳನ್ನು ಕೇಳಿ ನನಗೆ ಇಲ್ಲಿ ಯಾರೂ ಇಷ್ಟವಾಗುವುದಿಲ್ಲ. ಬೇಗ ಇನ್ನೊಂದು ಕಡೆಗೆ ಹೋಗು ಎಂದು ಹೇಳಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟನವತಿತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.

* * * * *

ತೊಂಬತ್ತೊಂಬತ್ತನೆಯ ಅಧ್ಯಾಯ

ನಾರದರಿಂದ ಮಾತಲಿಗೆ ಹಿರಣ್ಯಪುರ ದರ್ಶನ. ಮಾತಲಿಯಿಂದ
ಅಲ್ಲಿ ವರಾನ್ವೇಷಣದ ನಿರಾಕರಣೆ.

ನಾರದಃ

ಹಿರಣ್ಯಪುರಮಿತ್ಯೇತತ್ ಖ್ಯಾತಂ ಪುರವರಂ ಮಹತ್ |
ದೈತ್ಯಾನಾಂ ದಾನವಾನಾಂ ಚ ಮಾಯಾಶತವಿಹಾರಿಣಮ್ ॥1॥

ನಾರದ ಇದು ಹಿರಣ್ಯಪುರವೆಂದು ಪ್ರಖ್ಯಾತವಾದ ದೊಡ್ಡ ಮತ್ತು ಶ್ರೇಷ್ಠವಾದ ಪಟ್ಟಣ. ಇದು ನೂರು ಮಾಯೆಗಳಿಂದ ವಿಹರಿಸುವ ದೈತ್ಯರ ಮತ್ತು ದಾನವರ ಸ್ಥಳವಾಗಿದೆ.

ಅನಲ್ಪೇನ ಪ್ರಯತ್ನೇನ ನಿರ್ಮಿತಂ ವಿಶ್ವಕರ್ಮಣಾ |
ಮಯೇನ ಮನಸಾ ಸೃಷ್ಟಂ ಪಾತಾಳತಳಮಾಶ್ರಿತಮ್ ॥2॥

ಬಡಗಿಯಾದ ಮಯನು ಮಹಾಪ್ರಯತ್ನವನ್ನು ಮಾಡಿ, ತನ್ನ ಮನಸ್ಸಿನಿಂದ ಬಹಳ ಯೋಚನೆಯನ್ನು ಮಾಡಿ
ಪಾತಾಳತಳದಲ್ಲಿರುವ ಈ ಪಟ್ಟಣವನ್ನು ನಿರ್ಮಿಸಿದನು.

ಅತ್ರ ಮಾಯಾಸಹಸ್ರಾಣಿ ವಿಕುರ್ವಾಣಾ ಮಹೌಜಸಃ |
ದಾನವಾ ನಿವಸಂತಿ ಸ್ಮ ಶೂರಾ ದತ್ತವರಾಃ ಪುರಾ ॥3॥

ಇಲ್ಲಿ ಹಿಂದೆ ವರಗಳನ್ನು ಪಡೆದ ಶೂರರೂ, ಮಹಾಸಾಮರ್ಥ್ಯವುಳ್ಳವರೂ ಆದ ದಾನವರು ಒಂದು ಸಹಸ್ರ ಮಾಯೆಗಳನ್ನು
ಪ್ರಯೋಗ ಮಾಡುತ್ತಾ ವಾಸಮಾಡುತ್ತಾರೆ.

ನೈತೇ ಶಕ್ರೇಣ ನಾನ್ಯೇನ ಯಮೇನ ವರುಣೇನ ವಾ |
ಶಕ್ಯಂತೇ ವಶಮಾನೇತುಂ ತಥೈವ ಧನದೇನ ಚ ॥4॥

ಇಂದ್ರನಾಗಲೀ ಅಥವಾ ಯಮನಾಗಲೀ, ವರುಣನಾಗಲೀ ಅಥವಾ ಕುಬೇರನಾಗಲೀ ಇವರನ್ನು ವಶಪಡಿಸಿಕೊಳ್ಳಲು ಸಾಧ್ಯವಿಲ್ಲ.

ಪೌಲೋಮಾಃ ಕಾಲಕೇಯಾಶ್ಚ ಕಶ್ಯಪಸ್ಯ ಕುಲೋದ್ಭವಾಃ |
ನೈರ್ಋತಾ ಯಾತುಧಾನಾಶ್ಚ ಬ್ರಹ್ಮಪಾದೋದ್ಭವಾಶ್ಚ ಯೇ ॥5॥
ದಂಷ್ಟ್ರಿಣೋ ಭೀಮವೇಗಾಶ್ಚ ವಾಯುವೇಗಪರಾಕ್ರಮಾಃ |
ಮಾಯಾವೀರ್ಯೋಪಸಂಪನ್ನಾ ನಿವಸಂತ್ಯಾತ್ಮರಕ್ಷಿಣಃ ॥6॥
ನಿವಾತಕವಚಾ ನಾಮ ದಾನವಾ ಯುದ್ಧದುರ್ಮದಾಃ |
ಜಾನಾಸಿ ಚ ಯಥಾ ಶಕ್ರೋ ನೈತಾನ್ ಶಕ್ನೋತಿ ಬಾಧಿತುಮ್ ॥7॥

ಕೋರೆದಾಡೆಗಳನ್ನು ಹೊಂದಿದ, ಭಯಂಕರ ವೇಗವುಳ್ಳ, ವಾಯುವೇಗವನ್ನೂ ಮತ್ತು ಪರಾಕ್ರಮವನ್ನೂ ಹೊಂದಿರುವ, ಮಹಾಸಾಮರ್ಥ್ಯದಿಂದ ಕೂಡಿದ, ತಮ್ಮನ್ನು ತಾವೇ ರಕ್ಷಿಸಿಕೊಳ್ಳುವ, ಕಶ್ಯಪಕುಲದಲ್ಲಿ ಜನಿಸಿದ ಪೌಲೋಮರೂ ಮತ್ತು ಕಾಲಕೇಯರೂ ಬ್ರಹ್ಮದೇವರ ಪಾದದಿಂದ ಜನಿಸಿದ ನೈಋತರೂ ಮತ್ತು ಯಾತುಧಾನರೂ ಇಲ್ಲಿ ವಾಸಿಸುತ್ತಾರೆ. ನಿವಾತಕವಚರೆಂಬ ಯುದ್ಧದುರ್ಮದರಾದ ದಾನವರೂ ಇಲ್ಲಿ ವಾಸಿಸುತ್ತಾರೆ. ಇಂದ್ರನು ಅವರನ್ನು ಬಾಧಿಸಲು ಶಕ್ತನಾಗುವುದಿಲ್ಲ ಎಂಬುದನ್ನು ನೀನು ತಿಳಿದಿದ್ದೀಯೆ.

ಬಹುಶೋ ಮಾತಲೇ ತ್ವಂ ಚ ತವ ಪುತ್ರಶ್ಚ ಗೋಮುಖಃ |
ನಿರ್ಭಗ್ನೋ ದೇವರಾಜಶ್ಚ ಸಹಪುತ್ರಃ ಶಚೀಪತಿಃ ॥8॥

ಎಲೈ ಮಾತಲಿಯೇ, ನೀನೂ ನಿನ್ನ ಪುತ್ರನಾದ ಗೋಮುಖನೂ ಮತ್ತು ತನ್ನ ಪುತ್ರನಾದ ಜಯಂತನಿಂದ ಕೂಡಿದ ದೇವರಾಜನಾದ ಶಚೀಪತಿಯಾದ ಇಂದ್ರನೂ ಸಹ ಅನೇಕ ಬಾರಿ ಇಲ್ಲಿ ಸೋತುಹೋಗಿದ್ದೀರಿ.

ಪಶ್ಯ ವೇಶ್ಮಾನಿ ರೌಗ್ಮಾಣಿ ಮಾತಲೇ ರಾಜತಾನಿ ಚ |

ಕರ್ಮಣಾ ವಿಧಿಯುಕ್ತೇನ ಯುಕ್ತಾನ್ಯುಪಗತಾನಿ ಚ ॥9॥
ಎಲೈ ಮಾತಲಿಯೇ, ಇಲ್ಲಿರುವ ಸುವರ್ಣಮಯವಾದ ಮತ್ತು ರಜತಮಯವಾದ ಮನೆಗಳನ್ನು ನೋಡು. ಇವು ವಿಧಿಗೆ ಅನುಗುಣವಾಗಿ ಕಟ್ಟಲ್ಪಟ್ಟು ನಿಬಿಡವಾಗಿವೆ.
ವೈಡೂರ್ಯಹಾರಿತಾನೀವ ಪ್ರವಾಳರುಚಿರಾಣಿ ಚ |
ಅರ್ಕಸ್ಫಟಿಕಶುಭ್ರಾಣಿ ವಜ್ರಸಾರೋಜ್ಜ್ವಲಾನಿ ಚ ॥10॥
ವೈಡೂರ್ಯಬಣ್ಣದ ಹರಿತಬಣ್ಣದ ಹವಳದಂತೆ ಸುಂದರವಾಗಿರುವ, ಸೂರ್ಯ ಸ್ಫಟಿಕದಂತೆ ಶುಭ್ರವಾಗಿರುವ ಶ್ರೇಷ್ಠವಜ್ರಗಳಂತೆ ಜ್ವಲಿಸುವ ಈ ಮನೆಗಳನ್ನು ನೋಡು.
ಪಾರ್ಥಿವಾನೀವ ಚಾಭಾಂತಿ ಪದ್ಮರಾಗಮಯಾನಿ ಚ |
ಶೈಲಾನೀವ ಚ ದೃಶ್ಯಂತೇ ತಾರಕಾಣೀವ ಚಾಪ್ಯುತ ॥11॥
ಸೂರ್ಯರೂಪಾಣಿ ಚಾಭಾಂತಿ ದೀಪ್ತಾಗ್ನಿಸದೃಶಾನಿ ಚ |
ಮಣಿಜಾಲವಿಚಿತ್ರಾಣಿ ಪ್ರಾಂಶೂನಿ ವಿವಿಧಾನಿ ಚ ॥12॥
ಪದ್ಮರಾಗದಿಂದ ನಿರ್ಮಿಸಿದ ಈ ಮನೆಗಳು ಮಣ್ಣಿನಿಂದ ನಿರ್ಮಿಸಿದ ಮನೆಗಳಂತೆ ತೋರುತ್ತವೆ. ಕೆಲವು ಪರ್ವತಗಳಂತೆಯೂ ಇನ್ನು ಕೆಲವು ನಕ್ಷತ್ರಗಳಂತೆಯೂ ತೋರುತ್ತವೆ. ಕೆಲವು ಸೂರ್ಯನಂತೆಯೂ, ಇನ್ನು ಕೆಲವು ಜ್ವಲಿಸುವ ಅಗ್ನಿಯಂತೆಯೂ ಇದ್ದು ಮಣಿಜಾಲಗಳಿಂದ ವಿಚಿತ್ರವಾಗಿ ಕಾಣುತ್ತಿದ್ದು ಎತ್ತರವಾಗಿಯೂ ಮತ್ತು ವಿಧವಿಧವಾಗಿಯೂ ಇವೆ.
ನೈತಾನಿ ಶಕ್ಯಂ ನಿರ್ದೇಷ್ಟುಂ ರೂಪತೋ ದ್ರವ್ಯತಸ್ತಥಾ |
ಗುಣತಶ್ಚೈವ ಸಿದ್ಧಾನಿ ಪ್ರಮಾಣಗುಣವಂತಿ ಚ ॥13॥
ಈ ಮನೆಗಳನ್ನು ಅವುಗಳ ರೂಪದಿಂದಾಗಲೀ, ದ್ರವ್ಯದಿಂದಾಗಲೀ, ಗುಣದಿಂದಾಗಲೀ ಹೀಗೆಯೇ ಇವೆ ಎಂದು ನಿರ್ದೇಶಮಾಡಲು ಸಾಧ್ಯವಿಲ್ಲ. ಇವು ಒಳ್ಳೆಯ ಪ್ರಮಾಣಗಳಲ್ಲಿ ಕಟ್ಟಲ್ಪಟ್ಟಿವೆ.
ಆಕ್ರೀಡಾನ್ ಪಶ್ಯ ದೈತ್ಯಾನಾಂ ತಥೈವ ಶಯನಾನ್ಯುತ |
ರತ್ನವಂತಿ ಮಹಾರ್ಹಾಣಿ ಭಾಜನಾನ್ಯಾಸನಾನಿ ಚ ॥14॥
ದೈತ್ಯರ ಕ್ರೀಡಾಗಾರಗಳನ್ನು ನೋಡು. ಹಾಗೆಯೇ ಅವರ ಶಯನಗಳನ್ನೂ ನೋಡು. ಬಹಳ ಬೆಲೆಬಾಳುವ ರತ್ನಗಳಿಂದ ಕೂಡಿದ ಅವರ ಪಾತ್ರೆಗಳನ್ನೂ ಮತ್ತು ಆಸನಗಳನ್ನೂ ನೋಡು.
ಜಲದಾಭಾಂಸ್ತಥಾ ಶೈಲಾನ್ ತೋಯಪ್ರಸ್ರವಣಾನ್ವಿತಾನ್ |
ಕಾಮಪುಷ್ಪಫಲಾಂಶ್ಚಾಪಿ ಪಾದಪಾನ್ ಕಾಮಚಾರಿಣಃ ॥15॥
ನೀರಿನ ಝರಿಗಳಿಂದ ಕೂಡಿದ, ಮೋಡದ ಕಾಂತಿಯನ್ನು ಹೊಂದಿದ ಪರ್ವತಗಳನ್ನು ನೋಡು. ಜ್ವಲಿಸಿದ ಪುಷ್ಪ-ಫಲಗಳನ್ನು ಕೊಡುವ, ತಮ್ಮ ಇಚ್ಛೆಯಂತೆ ಚಲಿಸುವ ವೃಕ್ಷಗಳನ್ನು ನೋಡು.
ಮಾತಲೇ ಕಶ್ಚಿದತ್ರಾಪಿ ರುಚಿರಸ್ತೇ ವರೋ ಭವೇತ್ |
ಅಥವಾಽನ್ಯಾಂ ದಿಶಂ ಭೂಮೇಃ ಗಚ್ಛಾವ ಯದಿ ಮನ್ಯಸೇ ॥16॥
ಎಲೈ ಮಾತಲಿಯೇ, ಇಲ್ಲಿ ಯಾವನಾದರೂ ವರನು ನಿನಗೆ ಇಷ್ಟವಾಗಬಹುದು ಅಥವಾ ನೀನು ಬಯಸಿದರೆ ಭೂಮಿಯ ಇನ್ನೊಂದು ದಿಕ್ಕಿಗೆ ಹೋಗೋಣ.
ಕಣ್ವಃ
ಮಾತಲಿಸ್ತ್ವಬ್ರವೀದೇನಂ ಭಾಷಮಾಣಂ ತಥಾವಿಧಮ್ ॥17॥
ದೇವರ್ಷೇ ನೈವ ಮೇ ಕಾರ್ಯಂ ವಿಪ್ರಿಯಂ ತ್ರಿದಿವೌಕಸಾಮ್ ॥18॥
ಕಣ್ವ ಹೀಗೆ ಮಾತನಾಡುತ್ತಿದ್ದ ನಾರದರನ್ನು ಕುರಿತು ಮಾತಲಿಯು ದೇವರ್ಷಿಯೇ, ನಾನು ದೇವತೆಗಳಿಗೆ ಯಾವ ವಿಪ್ರಿಯವನ್ನೂ ಮಾಡಬಾರದು ಎಂದು ಹೇಳಿದನು.
ನಿತ್ಯಾನುಷಕ್ತವೈರಾ ಹಿ ಭ್ರಾತರೋ ದೇವದಾನವಾಃ |
ಅರಿಪಕ್ಷೇಣ ಸಂಬಂಧಂ ರೋಚಯಿಷ್ಯಾಮ್ಯಹಂ ಕಥಮ್ ॥19॥
ಸಹೋದರರಾದ ದೇವ-ದಾನವರು ಯಾವಾಗಲೂ ಪರಸ್ಪರ ವೈರವನ್ನು ಹೊಂದಿದವರು. ಶತ್ರುಪಕ್ಷದ ಜೊತೆಯಲ್ಲಿ ಸಂಬಂಧವನ್ನು ನಾನು ಹೇಗೆ ಬಯಸುವೆನು?
ಅನ್ಯತ್ರ ಸಾಧು ಗಚ್ಛಾಮೋ ದ್ರಷ್ಟುಂ ನಾರ್ಹಸಿ ದಾನವಾನ್ |
ಜಾನಾಮಿ ತವ ಚಾತ್ಮಾನಂ ಇಚ್ಛಸೇ ಕಲಹಾನಿತಿ ॥20॥
ನಾವು ಬೇರೆ ಕಡೆಗೆ ಹೋಗೋಣ. ನೀನು ದಾನವರನ್ನು ನೋಡಬೇಕಾದುದಿಲ್ಲ. ನಿನ್ನ ಹೃದಯವು ನನಗೆ ಗೊತ್ತಿದೆ. ನೀನು ಕಲಹಪ್ರಿಯನಾದವನು (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರನೆಯ ಅಧ್ಯಾಯ

ನಾರದರು ಮಾತಲಿಯನ್ನು ಸುಪರ್ಣಲೋಕಕ್ಕೆ ಕರೆದುಕೊಂಡು
ಹೋಗಿ, ಅಲ್ಲಿಂದ ಬೇರೆಯ ಲೋಕಕ್ಕೆ ಗಮನ.
ನಾರದಃ
ಅಯಂ ಲೋಕಃ ಸುಪರ್ಣಾನಾಂ ಪಕ್ಷಿಣಾಂ ಪನ್ನಗಾಶಿನಾಮ್ |
ವಿಕ್ರಮೇ ಗಮನೇ ಭಾರೇ ನೈಷಾಮಸ್ತಿ ಪರಿಶ್ರಮಃ ॥1॥
ನಾರದ ಈ ಲೋಕವು ಸರ್ಪಭಕ್ಷಕರಾದ ಗರುಡನ ಕುಲದ ಪಕ್ಷಿಗಳ ಆವಾಸಸ್ಥಾನ. ಈ ಪಕ್ಷಿಗಳಿಗೆ ಪರಾಕ್ರಮದಿಂದಾಗಲೀ, ದೂರಗಮನದಿಂದಾಗಲೀ, ಭಾರವನ್ನು ಹೊರುವುದರಿಂದಾಗಲೀ ಶ್ರಮವುಂಟಾಗುವುದಿಲ್ಲ.
ವೈನತೇಯಸುತೈಃ ಸೂತ ಷಡ್ಭಿಸ್ತತಮಿದಂ ಕುಲಮ್ ॥2॥
ಸುಮುಖೇನ ಸುದಾಮ್ನಾ ಚ ಸುನೇತ್ರೇಣ ಸುವರ್ಚಸಾ |
ಸುರುಚಾ ಪಕ್ಷಿರಾಜೇನ ಸುಬಲೇನ ಚ ಮಾತಲೇ ॥3॥
ಎಲೈ ಮಾತಲಿಯೇ, ಗರುಡನ ಆರುಮಕ್ಕಳಾದ ಸುಮುಖ, ಸುದಾಮ, ಸುನೇತ್ರ, ಸುವರ್ಚ, ಪಕ್ಷಿರಾಜನಾದ ಸುರುಕ್ ಮತ್ತು ಸುಬಲ ಇವರಿಂದ ಈ ಕುಲವು ವಿಸ್ತಾರವನ್ನು ಹೊಂದಿತು.
ವರ್ಧಿತಾನಿ ಪ್ರಸೂತ್ಯಾ ವೈ ವಿನತಾಕುಲಕರ್ತೃಭಿಃ |
ಪಕ್ಷಿರಾಜಾಭಿಜಾತ್ಯಾನಾಂ ಸಹಸ್ರಾಣಿ ಶತಾನಿ ಚ ॥4॥
ಕಶ್ಯಪಸ್ಯ ತತೋ ವಂಶೇ ಜಾತೈರ್ಭೂತಿವಿವರ್ಧನೈಃ ॥5॥
ವಿನತೆಯ ಕುಲವನ್ನು ಬೆಳೆಸುವ ಪಕ್ಷಿರಾಜನಾದ ಗರುಡನ ಕುಲಕ್ಕೆ ಸೇರಿದ ಸಾವಿರಾರು ನೂರಾರು ವಂಶಗಳು ಕಶ್ಯಪರ ವಂಶದಲ್ಲಿ ಜನಿಸಿದ ಐಶ್ವರ್ಯಸಾಧಕವಾದ ಸಂತತಿ ಪರಂಪರೆಗಳಿಂದ ಅಭಿವೃದ್ಧಿಗೊಳಿಸಲ್ಪಟ್ಟವು.
ಸರ್ವೇ ಹ್ಯೇತೇ ಶ್ರಿಯಾ ಯುಕ್ತಾಃ ಸರ್ವೇ ಶ್ರೀವತ್ಸಲಕ್ಷಣಾಃ |
ಸರ್ವೇ ಶ್ರಿಯಮಭೀಪ್ಸಂತೋ ಧಾರಯಂತಿ ಬಲಾನ್ಯುತ ॥6॥
ಇವರೆಲ್ಲರೂ ಶ್ರೀವತ್ಸಲಕ್ಷಣಗಳನ್ನು ಹೊಂದಿ ಸಂಪತ್ತಿನಿಂದ ಕೂಡಿದವರು. ಸಂಪತ್ತನ್ನು ಬಯಸುವ ಇವರೆಲ್ಲರೂ ಬಹಳ ಬಲಿಷ್ಠರಾಗಿದ್ದಾರೆ.
ಕರ್ಮಣಾ ಕ್ಷತ್ರಿಯಾ ಹ್ಯೇತೇ ನಿರ್ಘೃಣಾ ಭೋಗಿಭೋಜಿನಃ |
ಜ್ಞಾತಿಸಂಕ್ಷಯಕರ್ತೃತ್ವಾತ್ ಬ್ರಾಹ್ಮಣ್ಯಂ ನ ಲಭಂತಿ ವೈ ॥7॥
ಸರ್ಪಗಳನ್ನು ಭಕ್ಷಿಸುವ ಇವರು ಕರ್ಮದಿಂದ ಕ್ಷತ್ರಿಯರಾಗಿ ನಿರ್ದಯರಾಗಿದ್ದಾರೆ. ತಮ್ಮ ದಾಯಾದಿಗಳನ್ನೇ ನಾಶಮಾಡುವುದರಿಂದ ಬ್ರಾಹ್ಮಣ ಸ್ವಭಾವವಾದ ಮಾರ್ದವವನ್ನು ಇವರು ಹೊಂದುವುದಿಲ್ಲ.
ನಾಮಾನಿ ಚೈಷಾಂ ವಕ್ಷ್ಯಾಮಿ ಯಥಾ ಪ್ರಾಧಾನ್ಯತಃ ಶೃಣು |
ಮಾತಲೇ ಶ್ಲಾಘ್ಯಮೇತದ್ಧಿ ಕುಲಂ ವಿಷ್ಣುಪರಿಗ್ರಹಮ್ ॥8॥
ಎಲೈ ಮಾತಲಿಯೇ, ವಿಷ್ಣುವಿನಿಂದ ಪರಿಗ್ರಹಿಸಲ್ಪಟ್ಟ ಈ ಕುಲವು ಶ್ಲಾಘನೀಯವಾದುದು. ಅವರಲ್ಲಿ ಪ್ರಧಾನರಾದವರ ಹೆಸರುಗಳನ್ನು ಹೇಳುವೆನು, ಕೇಳುವವನಾಗು.
ದೈವತಂ ವಿಷ್ಣುರೇತೇಷಾಂ ವಿಷ್ಣುರೇವ ಪರಾಯಣಮ್ |
ಹೃದಿ ಚೈಷಾಂ ಸದಾ ವಿಷ್ಣುಃ ವಿಷ್ಣುರೇವ ಗತಿಸ್ತಥಾ ॥9॥
ಇವರಿಗೆ ದೇವತೆ ಮತ್ತು ಪರಮಾಶ್ರಯ ಎಂದರೆ ವಿಷ್ಣುವೇ. ಇವರ ಮನಸ್ಸಿನಲ್ಲಿ ಯಾವಾಗಲೂ ವಿಷ್ಣುವಿನ ಸ್ಮರಣೆ ಇರುತ್ತದೆ. ವಿಷ್ಣುವೇ ಅವರಿಗೆ ಗತಿಯಾದವನು.
ಸುವರ್ಣಚೂಡೋ ನಾಗಾಶೀ ದಾರುಣಶ್ಚಂಡತುಂಡಕಃ |
ಅನಿಲಶ್ಚಾನಲಶ್ಚೈವ ವಿಶಾಲಾಕ್ಷೋಽಥ ಕುಂಡಲೀ ॥10॥
ಕಾಶ್ಯಪಿರ್ಧ್ವಜವಿಷ್ಕಂಭೋ ವೈನತೇಯೋಽಥ ವಾಮನಃ |
ವಾತವೇಗೋ ನಿಶಾಚಕ್ಷುಃ ನಿಮೇಷೋಽನಿಮಿಷಸ್ತಥಾ ॥11॥
ಸುವರ್ಣಚೂಡ, ನಾಗಾಶೀ, ದಾರುಣ, ಚಂಡತುಂಡ, ಅನಿಲ, ಅನಲ, ವಿಶಾಲಾಕ್ಷ, ಕುಂಡಲೀ, ಕಾಶ್ಯಪಿ, ಧ್ವಜವಿಷ್ಕಂಭ, ವೈನತೇಯ, ವಾಮನ, ವಾತವೇಗ, ನಿಶಾಚಕ್ಷು, ನಿಮೇಷ, ಅನಿಮಿಷ;
ತ್ರಿವಾರಃ ಸಪ್ತವಾರಶ್ಚ ವಾಲ್ಮೀಕಿರ್ದ್ವೀಪಕಸ್ತಥಾ |
ದೈತ್ಯದ್ವೀಪಸ್ತಪೋದ್ವೀಪಃ ಸಾರಸಃ ಪದ್ಮಲೋಚನಃ ॥12॥
ಸುಮುಖಶ್ಚಿತ್ರಕೇತುಶ್ಚ ಚಿತ್ರಬರ್ಹಸ್ತಥಾಽನಘಃ |
ಮೇಘಹೃತ್ ಕುಮುದೋ ದಕ್ಷಃ ಸರ್ಪಾಂತಃ ಸೋಮಭೋಜನಃ ॥13॥
ತ್ರಿವಾರ, ಸಪ್ತವಾರ, ವಾಲ್ಮೀಕಿ, ದ್ವೀಪಕ, ದೈತ್ಯದ್ವೀಪ, ತಪೋದ್ವೀಪ, ಸಾರಸ, ಪದ್ಮಲೋಚನ, ಸುಮುಖ, ಚಿತ್ರಕೇತು, ಚಿತ್ರಬರ್ಹ, ಅನಘ, ಮೇಘಹೃತ್, ಕುಮುದ, ದಕ್ಷ, ಸರ್ಪಾಂತ, ಸೋಮಭೋಜನ;
ಗುರುಭಾರಃ ಕಪೋತಶ್ಚ ಸೂರ್ಯನೇತ್ರಶ್ಚಿರಾಂತಕಃ |
ವಿಷ್ಣುಧನ್ವಾ ಕುಮಾರಶ್ಚ ಪರಿಬರ್ಹೋ ಹರಿಸ್ತಥಾ ॥14॥
ಸುಸ್ವರೋ ಮಧುಪರ್ಕಶ್ಚ ಹೇಮವರ್ಣಸ್ತಥೈವ ಚ |
ಮಲಯೋ ಮಾತರಿಶ್ವಾ ಚ ದಿವಾಕರನಿಶಾಕರೌ ॥15॥
ಗುರುಭಾರ, ಕಪೋತ, ಸೂರ್ಯನೇತ್ರ, ಚಿರಾಂತಕ, ವಿಷ್ಣುಧನ್ವಾ, ಕುಮಾರ, ಪರಿಬರ್ಹ, ಹರಿ, ಸುಸ್ವರ, ಮಧುಪರ್ಕ, ಹೇಮವರ್ಣ,

ಮಲಯ, ಮಾತರಿಶ್ವ, ದಿವಾಕರ, ನಿಶಾಕರ;
ಏತೇ ಪ್ರಾದೇಶಮಾತ್ರೇಣ ಮಯೋಕ್ತಾ ಗರುಡಾತ್ಮಜಾಃ |
ಪ್ರಾಧಾನ್ಯತಸ್ತೇ ಯಶಸಾ ಕೀರ್ತಿತಾಃ ಪಕ್ಷಿಣಶ್ಚ ಯೇ ॥16॥
ಗರುಡವಂಶದಲ್ಲಿ ಪ್ರಸೂತರಾದ ಕೀರ್ತಿವಂತರಾದ ಈ ಕೆಲವು ಪಕ್ಷಿಗಳನ್ನು ಮಾತ್ರ ನಾನು ನಿನಗೆ ಹೇಳಿದ್ದೇನೆ.
ಯದ್ಯತ್ರ ನ ರುಚಿಃ ಕಾಚಿದ್ ಏಹಿ ಗಚ್ಛಾವ ಮಾತಲೇ |
ತಂ ನಯಿಷ್ಯಾಮಿ ದೇಶಂ ತ್ವಾಂ ವರಂ ಯತ್ರೋಪಲಪ್ಸ್ಯಸೇ ॥17॥
ಎಲೈ ಮಾತಲಿಯೇ, ನಿನಗೆ ಇಲ್ಲಿ ಅಭಿಪ್ರಾಯವಿಲ್ಲದಿದ್ದರೆ ಎಲ್ಲಿ ನೀನು ವರನನ್ನು ಕಾಣಬಹುದೋ ಅಂತಹ ಬೇರೆ ದೇಶಕ್ಕೆ ಕರೆದುಕೊಂಡು ಹೋಗುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂದನೆಯ ಅಧ್ಯಾಯ
ಮಾತಲಿಯನ್ನು ರಸಾತಲಲೋಕಕ್ಕೆ ಕರೆದುಕೊಂಡು ಹೋಗಿ,
ನಾರದರಿಂದ ಸುರಭಿಸಂತತಿಯ ಪ್ರಶಂಸೆ.
ನಾರದಃ
ಇದಂ ರಸಾತಳಂ ನಾಮ ಸಪ್ತಮಂ ಪೃಥಿವೀತಳಮ್ |
ಯತ್ರಾಸ್ತೇ ಸುರಭಿರ್ಮಾತಾ ಗವಾಮಮೃತಸಂಭವಾ ॥1॥
ಕ್ಷರಂತೀ ಸತತಂ ಕ್ಷೀರಂ ಪೃಥಿವೀಸಾರಸಂಭವಮ್ |
ಷಣ್ಣಾಂ ರಸಾನಾಂ ಸಾರೇಣ ರಸಮೇಕಮನುತ್ತಮಮ್ ॥2॥
ನಾರದ ಇದು ರಸಾತಳವೆಂಬ ಏಳನೆಯ ಪೃಥಿವೀತಳ. ಇಲ್ಲಿ ಅಮೃತಮಥನ ಕಾಲದಲ್ಲಿ ಜನಿಸಿದ ಗೋಮಾತೆಯಾದ ಸುರಭಿಯು ಆರು ರಸಗಳ ಸಾರದಿಂದ ಕೂಡಿದ, ಪೃಥ್ವಿಯ ಸಾರದಿಂದ ಉಂಟಾದ ಶ್ರೇಷ್ಠವಾದ ಒಂದು ಕ್ಷೀರರಸವನ್ನು ಸತತವಾಗಿ ಸುರಿಸುತ್ತಾ ವಾಸಿಸುತ್ತಾಳೆ.
ಅಮೃತೇನಾಭಿತೃಪ್ತಸ್ಯ ವಾಚಮುದ್ಗಿರತಃ ಪುರಾ |
ಪಿತಾಮಹಸ್ಯ ವಚನಾದ್ ಉದತಿಷ್ಠದನಿಂದಿತಾ ॥3॥
ಹಿಂದೆ ಅಮೃತವನ್ನು ಪಾನಮಾಡಿ ಮಾತನಾಡುವ ಬ್ರಹ್ಮದೇವರ ಮುಖದಿಂದ ನಿರ್ದುಷ್ಟಳಾದ ಇವಳು ಮೊದಲು ಹೊರಗೆ ಬಂದಳು.
ಯಸ್ಯಾಃ ಕ್ಷೀರಸ್ಯ ಧಾರಾಯಾ ನಿಪತಂತ್ಯಾ ಮಹೀತಳೇ |
ಹ್ರದಃ ಕೃತಃ ಕ್ಷೀರನಿಧಿಃ ಪವಿತ್ರಂ ಪರಮಂ ಪದಮ್ ॥4॥
ಭೂಮಿಯ ಮೇಲೆ ಬೀಳುವ ಅವಳ ಕ್ಷೀರಧಾರೆಗಳಿಂದ ಪವಿತ್ರವಾದ ಪರಮಪದವೆನಿಸುವ ಕ್ಷೀರಸಮುದ್ರರೂಪವಾದ ದೊಡ್ಡ ಸರೋವರವು ಉಂಟಾಯಿತು.
ಪುಷ್ಪಿತಸ್ಯೇವ ಫೇನೇನ ಪರ್ಯಂತಮನುವೇಷ್ಟಿತಮ್ |
ಪಿಬಂತೋ ನಿವಸಂತ್ಯತ್ರ ಫೇನಪಾ ಮುನಿಸತ್ತಮಾಃ ॥5॥
ಇದು ತೀರದವರೆಗೂ ಸುತ್ತುವರಿದು ಇರುವ ನೊರೆಗಳಿಂದ ಪುಷ್ಪಗಳಿಂದ ಕೂಡಿರುವಂತೆ ಕಾಣುತ್ತದೆ. ೇನಪರು ಎಂಬ ಮುನಿಶ್ರೇಷ್ಠರು ಈ ನೊರೆಯನ್ನು ಕುಡಿಯುತ್ತಾ ಇಲ್ಲಿ ವಾಸವನ್ನು ಮಾಡುತ್ತಾರೆ.
ಫೇನಪಾ ನಾಮ ತೇ ಖ್ಯಾತಾಃ ಫೇನಾಹಾರಾಶ್ಚ ಮಾತಲೇ |
ಉಗ್ರೇ ತಪಸಿ ವರ್ತಂತೇ ಯೇಷಾಂ ಬಿಭ್ಯತಿ ದೇವತಾಃ ॥6॥
ಎಲೈ ಮಾತಲಿಯೇ, ನೊರೆಯನ್ನೇ ಆಹಾರವಾಗುಳ್ಳ ೇನಪರೆಂದು ಪ್ರಖ್ಯಾತರಾದ ಋಷಿಗಳು ಇಲ್ಲಿ ಉಗ್ರವಾದ ತಪಸ್ಸನ್ನು ಆಚರಿಸುತ್ತಾರೆ. ಎಲೈ ಮಾತಲಿಯೇ, ಅವರಿಗೆ ದೇವತೆಗಳೂ ಹೆದರುತ್ತಾರೆ.
ಅಸ್ಯಾಶ್ಚತಸ್ರೋ ಧೇನ್ವೋಽನ್ಯಾ ದಿಕ್ಷು ಸರ್ವಾಸು ಮಾತಲೇ |
ನಿವಸಂತಿ ದಿಶಾಂ ಪಾಲ್ಯೋ ಧಾರಯಂತ್ಯೋ ದಿಶಃ ಸ್ಮ ತಾಃ ॥7॥
ಈ ಸುರಭಿಯ ಮಕ್ಕಳಾದ ಬೇರೆಯ ನಾಲ್ಕು ಧೇನುಗಳು ದಿಕ್ಪಾಲಕರಾಗಿ ಆಯಾ ದಿಕ್ಕುಗಳನ್ನು ಧರಿಸುತ್ತಾ ವಾಸಮಾಡುತ್ತವೆ.
ಪೂರ್ವಾಂ ದಿಶಂ ಧಾರಯತೇ ಸುರೂಪಾ ನಾಮ ಸೌರಭೀ |
ದಕ್ಷಿಣಾಂ ಹಂಸಿಕಾ ನಾಮ ಧಾರಯತ್ಯಪರಾ ದಿಶಮ್ ॥8॥
ಪೂರ್ವದಿಕ್ಕನ್ನು ಸುರೂಪಾ ಎಂಬ ಸೌರಭಪುತ್ರಿಯೂ, ದಕ್ಷಿಣ ದಿಕ್ಕನ್ನು ಹಂಸಿಕಾ ಎಂಬ ಸೌರಭ ಪುತ್ರಿಯೂ ಧಾರಣೆ ಮಾಡುತ್ತಾರೆ.
ಪಶ್ಚಿಮಾ ವಾರುಣೀ ದಿಕ್ ಚ ಧಾರ್ಯತೇ ವೈ ಸುಭದ್ರಯಾ |
ಮಹಾನುಭಾವಯಾ ನಿತ್ಯಂ ಮಾತಲೇ ವಿಶ್ವರೂಪಯಾ ॥9॥
ಎಲೈ ಮಾತಲಿಯೇ, ವರುಣನಿಗೆ ಸಂಬಂಧಿಸಿದ ಪಶ್ಚಿಮ ದಿಕ್ಕನ್ನು ಮಹಾನುಭಾವಳೂ, ಅನೇಕ ರೂಪವನ್ನು ಧರಿಸಿದವನೂ ಆದ ಸುಭದ್ರೆಯು ನಿತ್ಯವೂ ಧರಿಸುತ್ತಾಳೆ.
ಸರ್ವಕಾಮದುಘಾ ನಾಮ ಧೇನುರ್ಧಾರಯತೇ ದಿಶಮ್ |
ಉತ್ತರಾಂ ಮಾತಲೇ ಧರ್ಮ್ಯಾಂ ತಥೈಲಬಿಲಿಸಂಶ್ರಯಾಮ್ ॥10॥

ಮಾತಲಿಯೇ, ಧರ್ಮಸಂಬಂಧಿಯಾದ ಕುಬೇರನಿಂದ ಆಶ್ರಿತವಾದ ಉತ್ತರದಿಕ್ಕನ್ನು ಸರ್ವಕಾಮದುಘಾ ಎಂಬ ಸುರಭಿಪುತ್ರಿಯು ಧರಿಸುತ್ತಾಳೆ.
ಆಸಾಂ ತು ಪಯಸಾ ಮಿಶ್ರಂ ಪಯೋ ನಿರ್ಮಥ್ಯ ಸಾಗರೇ |
ಮಂಥಾನಂ ಮಂದರಂ ಕೃತ್ವಾ ದೇವೈರಸುರಸಂಹಿತೈಃ ||11||
ಉದ್ಧೃತಾ ವಾರುಣೀ ಲಕ್ಷ್ಮೀಃ ಅಮೃತಂ ಚಾಪಿ ಮಾತಲೇ |
ಉಚ್ಚೈಃಶ್ರವಾಶ್ಚಾಶ್ವರಾಜೋ ಮಣಿರತ್ನಂ ಚ ಕೌಸ್ತುಭಮ್ ||12||
ಇವುಗಳ ಕ್ಷೀರದಿಂದ ಮಿಶ್ರಿತವಾದ ಕ್ಷೀರಸಾಗರವನ್ನು ದೇವತೆಗಳೂ ಮತ್ತು ಅಸುರರೂ ಸೇರಿ ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಿ ವಾರುಣಿಯನ್ನೂ, ಲಕ್ಷ್ಮಿಯನ್ನೂ, ಅಮೃತವನ್ನೂ, ಉಚ್ಚೈಃಶ್ರವಸ್ ಎಂಬ ಅಶ್ವರಾಜನನ್ನೂ ಮತ್ತು ಮಣಿಶ್ರೇಷ್ಠವಾದ ಕೌಸ್ತುಭವನ್ನೂ ಪಡೆದರು.
ಸುಧಾಹಾರೇಷು ಚ ಸುಧಾಂ ಸ್ವಧಾಭೋಜಿಷು ಚ ಸ್ವಧಾಮ್ |
ಅಮೃತಂ ಚಾಮೃತಾಶೇಷು ಸುರಭಿಃ ಕ್ಷರತೇ ಪಯಃ ||13||
ಸುರಭಿಯು ಅಮೃತಭೋಗಿಗಳಾದ ದೇವತೆಗಳಿಗೆ ಸ್ವಾಹಾರೂಪವಾದ ಅನ್ನವನ್ನೂ, ಸ್ವಧಾಭೋಜಿಗಳಾದ ಪಿತೃಗಳಿಗೆ ಸ್ವಧಾರೂಪವಾದ ಅನ್ನವನ್ನೂ, ಅಮೃತವನ್ನು ಸ್ವೀಕಾರ ಮಾಡುವ ದೇವತೆಗಳಿಗೆ ಅಮೃತರೂಪವಾದ ಅನ್ನವನ್ನೂ, ತನ್ನ ಕ್ಷೀರರೂಪದಲ್ಲಿ ಸ್ರವಿಸುತ್ತದೆ.
ಅತ್ರ ಗಾಥಾ ಪುರಾ ಗೀತಾ ರಸಾತಳನಿವಾಸಿಭಿಃ |
ಪೌರಾಣೀ ಶ್ರೂಯತೇ ಲೋಕೇ ಗೀಯತೇ ಯಾ ಮನೀಷಿಭಿಃ ||14||
ನ ನಾಗಲೋಕೇ ನ ಸ್ವರ್ಗೇ ನ ವಿಮಾನೇ ತ್ರಿವಿಷ್ಟಪೇ |
ಪರಿವಾಸಃ ಸುಖಸ್ತಾದೃಕ್ ರಸಾತಳತಳೇ ಯಥಾ ||15||
ನಾಗಲೋಕದಲ್ಲಾಗಲೀ, ಬಹಳ ಉನ್ನತವಾದ ಮೂರು ಸ್ಥಾನಗಳಿರುವ ಸ್ವರ್ಗದಲ್ಲಾಗಲೀ ವಾಸವು ರಸಾತಳಲೋಕದ ವಾಸದಂತೆ ಸುಖಕರವಲ್ಲ ಎಂಬ ಗೀತೆಯನ್ನು ರಸಾತಳ ಲೋಕದ ನಿವಾಸಿಗಳು ಹಾಡುತ್ತಾರೆ ಎಂಬ ಪ್ರಾಚೀನವಾದ ಕಥೆಯು ಜ್ಞಾನಿಗಳಿಂದ ಹಾಡಲ್ಪಡುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಶತತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ದ್ವಾತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಒಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎರಡನೆಯ ಅಧ್ಯಾಯ
ನಾರದರಿಂದ ಮಾತಲಿಯನ್ನು ಭೋಗವತಿಗೆ ಕರೆದುಕೊಂಡು ಹೋಗಿ
ಸರ್ಪಗಳ ಪರಿಚಯ. ಮಾತಲಿಯಿಂದ ಸುಮುಖನ ದರ್ಶನ.
ನಾರದಃ
ಇಯಂ ಭೋಗವತೀ ನಾಮ ಪುರೀ ವಾಸುಕಿಪಾಲಿತಾ |
ಯಾದೃಶೀ ದೇವರಾಜಸ್ಯ ಪುರೀ ವರ್ಯಾಽಮರಾವತೀ ||1||
ನಾರದ ಇದು ಭೋಗವತಿ ಎಂಬ ವಾಸುಕಿಯಿಂದ ಪಾಲಿತವಾದ ಪಟ್ಟಣ. ದೇವರಾಜನ ಅಮರಾವತಿ ಪಟ್ಟಣದಲ್ಲಿರುವ ಅದರಂತೆಯೇ ಇದು ಶ್ರೇಷ್ಠವಾಗಿದೆ.
ಏಷ ಶೇಷಃ ಸ್ಥಿತೋ ನಾಗೋ ಯೇನೇದಂ ಧಾರ್ಯತೇ ಸದಾ |
ತಪಸಾ ಲೋಕಮುಖ್ಯೇನ ಪ್ರಭಾವಮಹಿತಾ ಮಹೀ ||2||
ತನ್ನ ಸಾಮರ್ಥ್ಯದಿಂದ ಪೂಜಿತವಾದ ಭೂಮಿಯು ಯಾವ ಲೋಕಶ್ರೇಷ್ಠನಾದ ಶೇಷನಿಂದ ತಪೋಬಲದಿಂದ ಧರಿಸಲ್ಪಡುತ್ತದೆಯೋ ಅಂತಹ ಶೇಷನಾಮವುಳ್ಳ ಈ ನಾಗನು ಇಲ್ಲಿ ಇರುತ್ತಾನೆ.
ಶ್ವೇತೋಚ್ಚಯನಿಭಾಕಾರೋ ನಾನಾವಿಧವಿಭೂಷಣಃ |
ಸಹಸ್ರಂ ಧಾರಯನ್ ಮೂರ್ಧ್ನಾಂ ಜ್ವಾಲಾಜಿಹ್ವೋ ಮಹಾಬಲಃ ||3||
ಅವನು ಶ್ವೇತಪರ್ವತಕ್ಕೆ ಸದೃಶವಾದ ಆಕಾರವನ್ನು ಹೊಂದಿ, ನಾನಾವಿಧ ಭೂಷಣಗಳಿಂದ ಅಲಂಕೃತನಾಗಿ, ಮಹಾಬಲನಾಗಿ ಜ್ವಾಲೆಯಂತಿರುವ ಜಿಹ್ವೆಗಳನ್ನು ಹೊಂದಿ ತಲೆಗಳ ಮೇಲೆ ಸಹಸ್ರಮಣಿಗಳನ್ನು ಧರಿಸಿದ್ದಾನೆ.
ಇಹ ನಾನಾವಿಧಾಕಾರಾ ನಾನಾವಿಧವಿಭೂಷಣಾಃ |
ಕಾಶ್ಯಪಸ್ಯ ಸುತಾ ನಾಗಾ ನಿವಸಂತಿ ಗತವ್ಯಥಾಃ ||4||
ಇಲ್ಲಿ ಕಾಶ್ಯಪರ ಪುತ್ರರಾದ ನಾನಾವಿಧವಾದ ಆಕಾರವುಳ್ಳ ಮತ್ತು ನಾನಾ ವಿಧವಾದ ಅಲಂಕಾರವುಳ್ಳ ನಾಗಗಳು ಯಾವ ವ್ಯಥೆಯೂ ಇಲ್ಲದೆ ವಾಸಮಾಡುತ್ತವೆ.
ಮಣಿಸ್ವಸ್ತಿಕಚಕ್ರಾಂಕಕಮಂಡಲುಕಲಕ್ಷಣಾಃ |
ಸಹಸ್ರಸಂಖ್ಯಾ ಬಲಿನಃ ಸರ್ವೇ ರೌದ್ರಾಃ ಸ್ವಭಾವತಃ ||5||
ನಾಗಮಣಿ, ಸ್ವಸ್ತಿಕ ಚಿಹ್ನೆ ಮತ್ತು ಚಕ್ರಚಿಹ್ನೆಗಳನ್ನು ಧರಿಸಿದ ಶಿರಸ್ಸುಗಳನ್ನು ಹೊಂದಿ ಮಂಡಲಾಕಾರದ ಸ್ವಭಾವವುಳ್ಳ ಸಹಸ್ರಾರು ಸಂಖ್ಯೆಯಲ್ಲಿರುವ ಈ ಸರ್ಪಗಳೆಲ್ಲವೂ ಬಲಿಷ್ಠವಾದವು ಮತ್ತು ಸ್ವಾಭಾವಿಕವಾಗಿಯೇ ಉಗ್ರವಾದವುಗಳು.

ಸಹಸ್ರಶಿರಸಃ ಕೇಚಿತ್ ಕೇಚಿತ್ ಪಂಚಶತಾನನಾಃ |
ಶತಶೀರ್ಷಾಸ್ತಥಾ ಕೇಚಿತ್ ಕೇಚಿತ್ ತ್ರಿಶಿರಸೋಽಪಿ ಚ ||6||
ತ್ರಿಪಂಚಶಿರಸಃ ಕೇಚಿತ್ ಕೇಚಿತ್ ಸಪ್ತಮುಖಾಸ್ತಥಾ |
ಮಹಾಬಲಾ ಮಹಾಕಾಯಾಃ ಪನ್ನಗಾ ಭೋಗಭೋಗಿನಃ ||7||
ಕೆಲವು ಸಹಸ್ರಶಿರಸ್ಸುಗಳನ್ನೂ, ಕೆಲವು ಐದುನೂರು ಶಿರಸ್ಸುಗಳನ್ನೂ, ಕೆಲವು ನೂರುಶಿರಸ್ಸುಗಳನ್ನೂ, ಕೆಲವು ಮೂರುಶಿರಸ್ಸುಗಳನ್ನೂ, ಕೆಲವು ಹದಿನೈದು ಶಿರಸ್ಸುಗಳನ್ನೂ, ಕೆಲವು ಸಪ್ತಮುಖಗಳನ್ನೂ ಹೊಂದಿ ಮಹಾಬಲವುಳ್ಳವೂ, ಮಹಾಶರೀರವುಳ್ಳವೂ ಮತ್ತು ಒಳ್ಳೆಯ ಭೋಗಗಳನ್ನು ಅನುಭವಿಸುವವೂ ಆದ ಸರ್ಪಗಳಾಗಿವೆ.
ಬಹೂನೀಹ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ನಾಗಾನಾಮೇಕವಂಶಾನಾಂ ಯಥಾಶ್ರೇಷ್ಠಂ ತು ಮೇ ಶೃಣು ||8||
ಇಲ್ಲಿ ಒಂದೇ ವಂಶಕ್ಕೆ ಸೇರಿದ ಅನೇಕ ಸಹಸ್ರ ಅಥವಾ ಲಕ್ಷ ಅಥವಾ ಅರ್ಬುದ ಸಂಖ್ಯೆಯ ನಾಗಗಳಿವೆ. ಅವುಗಳನ್ನು ಶ್ರೇಷ್ಠತೆಯ ಕ್ರಮದಿಂದ ಹೇಳುತ್ತೇನೆ, ಕೇಳು.
ವಾಸುಕಿಸ್ತಕ್ಷಕಶ್ಚೈವ ಕಾರ್ಕೋಟಕಧನಂಜಯೌ |
ಕಾಲೀಯೋ ನಹುಷಶ್ಚೈವ ಕಂಬಲಾಶ್ವತರಾವುಭೌ ||9||
ಬಾಹ್ಯಕುಂಡೋ ಮಣಿರ್ನಾಗಃ ತಥೈವಾಪೂರಣಃ ಖಗಃ |
ವಾಮನಶ್ಚೈಲಪತ್ರಶ್ಚ ಕುಕುರಃ ಕುಕುಣಸ್ತಥಾ ||10||
ವಾಸುಕಿ, ತಕ್ಷಕ, ಕಾರ್ಕೋಟಕ, ಧನಂಜಯ, ಕಾಲೀಯ, ನಹುಷ, ಕಂಬಲ ಮತ್ತು ಅಶ್ವತರಗಳು, ಬಾಹ್ಯಕುಂಡ, ಮಣಿ, ನಾಗ, ಆಪೂರಣ, ಖಗ, ವಾಮನ, ಏಲಪತ್ರ, ಕುಕುರ, ಕುಕುಣ;
ಆರ್ಯಕೋ ನಂದಕಶ್ಚೈವ ತಥಾ ಶಲಕಪೋತಕೌ |
ಕೈಲಾಸಕಃ ಪಿಂಜರಕೋ ನಾಗಶ್ಚೈರಾವತಸ್ತಥಾ ||11||
ಸುದಾಮನೋ ದಧಿಮುಖಃ ಶಂಖೋ ನಂದೋಪನಂದಕೌ |
ಆಪ್ತಃ ಕೋಟರಕಶ್ಚೈವ ಶಿಖಂಡೀ ನಿಷ್ಠುರಸ್ತಥಾ ||12||
ಆರ್ಯಕ, ನಂದಕ, ಶಲಕ ಮತ್ತು ಪೋತಕಗಳು, ಕೈಲಾಸಕ, ಪಿಂಜರಕ, ಐರಾವತ, ಸುದಾಮನ, ದಧಿಮುಖ, ಶಂಖ, ನಂದ ಮತ್ತು ಉಪನಂದಕಗಳು, ಆಪ್ತ, ಕೋಟರಕ, ಶಿಖಂಡೀ, ನಿಷ್ಠುರ;
ತಿತ್ತಿರಿರ್ಹಸ್ತಿಭದ್ರಶ್ಚ ಕುಮುದೋ ಮಾಲ್ಯಪಿಂಡಕಃ |
ದ್ವೌ ಪದ್ಮೌ ಪುಂಡರೀಕಶ್ಚ ಪುಷ್ಪೋ ಮುದ್ಗರಪರ್ಣಕಃ ||13||
ಕರವೀರಃ ಪೀಠಕರಃ ಸಂವೃತ್ತೋ ವೃತ್ತ ಏವ ಚ |
ಪಿಂಡಾರೋ ಬಿಲ್ವಪತ್ರಶ್ಚ ಮೂಷಿಕಾದಃ ಶಿರೀಷಕಃ ||14||
ತಿತ್ತಿರಿ, ಹಸ್ತಿಭದ್ರ, ಕುಮುದ, ಮಾಲ್ಯಪಿಂಡಕ, ದ್ವಿಪದ್ಮ, ಪುಂಡರೀಕ, ಪುಷ್ಪ, ಮುದ್ಗರಪರ್ಣ, ಕರವೀರ, ಪೀಠಕರ, ಸಂವೃತ್ತ, ವೃತ್ತ, ಪಿಂಡಾರ, ಬಿಲ್ವಪತ್ರ, ಮೂಷಿಕಾದ, ಶಿರೀಷಕ;
ದಿಲೀಪಃ ಶಂಖಶೀರ್ಷಶ್ಚ ಜ್ಯೋತಿಷ್ಕೋಽಥಾಪರಾಜಿತಃ |
ಕೌರವ್ಯೋ ಧೃತರಾಷ್ಟ್ರಶ್ಚ ಕುಹಕಃ ಕುಶಕಸ್ತಥಾ ||15||
ವಿರಜಾ ಧಾರಣಶ್ಚೈವ ಸುಬಾಹುರ್ಮುಖರೋ ಜಯಃ |
ಬಧಿರಶ್ಚ ವಿಕುಂಡಶ್ಚ ವಿರಥಃ ಸುರಥಸ್ತಥಾ ||16||
ದಿಲೀಪ, ಶಂಖಶೀರ್ಷ, ಜ್ಯೋತಿಷ್ಕ, ಅಪರಾಜಿತ, ಕೌರವ್ಯ, ಧೃತರಾಷ್ಟ್ರ, ಕುಹಕ, ಕುಶಕ, ವಿರಜ, ಧಾರಣ, ಸುಬಾಹು, ಮುಖರ, ಜಯ, ಬಧಿರ, ವಿಕುಂಡ, ವಿರಥ, ಸುರಥ;
ಏತೇ ಚಾನ್ಯೇ ಚ ಬಹವಃ ಕಾಶ್ಯಪಸ್ಯಾತ್ಮಜಾಃ ಸ್ಮೃತಾಃ |
ಮಾತಲೇ ಪಶ್ಯ ಯದ್ಯತ್ರ ಕಶ್ಚಿತ್ ತೇ ರೋಚತೇ ವರಃ ||17||
ಇವರು ಮತ್ತು ಇನ್ನೂ ಅನೇಕ ಸರ್ಪಗಳು ಕಾಶ್ಯಪರ ಮಕ್ಕಳೆಂದು ಪ್ರಸಿದ್ಧವಾಗಿವೆ. ಎಲೈ ಮಾತಲಿಯೇ, ನಿನಗೆ ಇಲ್ಲಿ ಯಾವನಾದರೂ ವರನು ಇಷ್ಟನಾಗುವುದಾದರೆ ನೋಡು.
ಕಣ್ವಃ
ಮಾತಲಿಸ್ತ್ವೇವಮವ್ಯಗ್ರಃ ಸತತಂ ಸನ್ನಿರೀಕ್ಷ್ಯ ವೈ |
ಪಪ್ರಚ್ಛ ನಾರದಂ ತತ್ರ ಪ್ರೀತಿಮಾನಿವ ಚಾಭವತ್ ||18||
ಕಣ್ವ ಮಾತಲಿಯು ಸತತವಾಗಿ ಅವಧಾನದಿಂದ (ಲಕ್ಷ್ಯ ವಹಿಸಿ)ಚೆನ್ನಾಗಿ ನೋಡಿ ಸಂತೋಷಗೊಂಡವನಾಗಿ ಅಲ್ಲಿ ನಾರದರನ್ನು ಕೇಳಿದನು.
ಮಾತಲಿಃ
ಸ್ಥಿತೋ ಯ ಏಷ ಪುರತಃ ಕೌರವ್ಯಸ್ಯಾರ್ಯಕಸ್ಯ ತು |
ದ್ಯುತಿಮಾನ್ ದರ್ಶನೀಯಶ್ಚ ಕಸ್ಯೈಷ ಕುಲನಂದನಃ ||19||
ಮಾತಲಿ ಕೌರವ್ಯ ಮತ್ತು ಆರ್ಯಕ ನಾಗಗಳ ಮುಂದೆ ಇರುವ ಕಾಂತಿಮಂತನೂ ಮತ್ತು ಸುಂದರನೂ ಆದ ಈ ನಾಗನು ಯಾರ ಕುಲಕ್ಕೆ ಸಂತೋಷ ಕೊಡುವವನಾಗಿದ್ದಾನೆ?
ಕಃ ಪಿತಾ ಜನನೀ ಚಾಸ್ಯ ಕತಮಸ್ಯೈಷ ಭೋಗಿನಃ |

ವಂಶಸ್ಯ ಕಸ್ಯೈಷ ಮಹಾನ್ ಕೇತುಭೂತ ಇವ ಸ್ಥಿತಃ ॥20॥
ಇವರ ತಂದೆ ಯಾರು? ತಾಯಿ ಯಾರು? ಇವನು ಯಾವ ವಂಶಕ್ಕೆ ಸೇರಿದವನು? ಇವನು ಯಾವ ವಂಶಕ್ಕೆ ಮಹಾಧ್ವಜದಂತೆ ಇದ್ದಾನೆ?

ಪ್ರಣಿಧಾನೇನ ಧೈರ್ಯೇಣ ರೂಪೇಣ ವಚಸಾ ಚ ಮೇ |
ಮನಃ ಪ್ರವಿಷ್ಟೋ ದೇವರ್ಷೇ ಗುಣಕೇಶ್ಯಾಃ ಪತಿರ್ವರಃ ॥21॥
ಎಲೈ ದೇವರ್ಷಿಯೇ, ಇವನು ತನ್ನ ಅವಧಾನದಿಂದ ಧೈರ್ಯದಿಂದ ರೂಪದಿಂದ ಮತ್ತು ವಯಸ್ಸಿನಿಂದ ನನ್ನ ಮನಸ್ಸನ್ನು ಪ್ರವೇಶಿಸಿದ್ದಾನೆ. ಇವನು ಗುಣಕೇಶಿಗೆ ಯೋಗ್ಯವಾದ ಪತಿಯಾಗುವನು.
ಕಣ್ವಃ
ಮಾತಲಿಂ ಪ್ರೀತಮನಸಂ ದೃಷ್ಟ್ವಾ ಸುಮುಖದರ್ಶನಾತ್ |
ನಿವೇದಯಾಮಾಸ ತದಾ ಮಾಹಾತ್ಮ್ಯಂ ಜನ್ಮ ಕರ್ಮ ಚ ॥22॥
ಕಣ್ವ ಸುಮುಖನ ದರ್ಶನದಿಂದ ಸಂತೋಷಗೊಂಡ ಮನಸ್ಸುಳ್ಳ ಮಾತಲಿಯನ್ನು ನೋಡಿ ನಾರದರು ಆಗ ಅವನ ಮಹಿಮೆಯನ್ನೂ ಮತ್ತು ಜನ್ಮಕರ್ಮಗಳನ್ನೂ ಹೇಳಿದರು.
ನಾರದಃ
ಐರಾವತಕುಲೇ ಜಾತಃ ಸುಮುಖೋ ನಾಮ ನಾಗರಾಟ್ |
ಆರ್ಯಕಸ್ಯ ಮತಃ ಪೌತ್ರೋ ದೌಹಿತ್ರೋ ಮೇನಕಸ್ಯ ಚ ॥23॥
ನಾರದ ಇವನು ಐರಾವತ ಕುಲದಲ್ಲಿ ಜನಿಸಿದ ಸುಮುಖನೆಂಬ ನಾಗರಾಜ. ಆರ್ಯಕನ ಪೌತ್ರನೂ ಮತ್ತು ಮೇನಕನ ದೌಹಿತ್ರನೂ ಆಗಿದ್ದಾನೆ.
ಏತಸ್ಯ ಹಿ ಪಿತಾ ನಾಗಃ ಚಿಕುರೋ ನಾಮ ಮಾತಲೇ |
ನಚಿರಾದ್ ವೈನತೇಯೇನ ಪಂಚತ್ವಮುಪಪಾದಿತಃ ॥24॥
ಎಲೈ ಮಾತಲಿಯೇ, ಇವನ ತಂದೆಯಾದ ಚಿಕುರ ಎಂಬ ನಾಗನು ಈಚೆಗೆ ಗರುಡನಿಂದ ಮರಣವನ್ನು ಹೊಂದಿದ್ದಾನೆ.
ಕಣ್ವಃ
ತತೋಽಬ್ರವೀತ್ ಪ್ರೀತಮನಾ ಮಾತಲಿರ್ನಾರದಂ ವಚಃ ॥25॥
ಏಷ ಮೇ ರುಚಿತಸ್ತಾತ ಜಾಮಾತಾ ಭುಜಗೋತ್ತಮಃ ॥26॥
ಕ್ರಿಯತಾಮತ್ರ ಯತ್ನೋ ಹಿ ಪ್ರೀತಿಮಾನಸ್ಮ್ಯನೇನ ವೈ |
ಅಸ್ಯ ನಾಗಪತೇರ್ದಾತುಂ ಪ್ರಿಯಾಂ ದುಹಿತರಂ ಮುನೇ ॥27॥
ಕಣ್ವ ಆಗ ಮಾತಲಿಯು ಸಂತೋಷಗೊಂಡ ಮನಸ್ಸುಳ್ಳವನಾಗಿ ನಾರದರನ್ನು ಕುರಿತು ಎಲೈ ಪ್ರೀತಿಪಾತ್ರನೇ, ಈ ಭುಜಗಶ್ರೇಷ್ಠನು ನನಗೆ ಅಳಿಯನಾಗಿ ಇಷ್ಟವಾಗುತ್ತಾನೆ. ಇವನನ್ನು ನೋಡಿ ನಾನು ಸಂತೋಷಗೊಂಡಿದ್ದೇನೆ. ಎಲೈ ಋಷಿಯೇ, ಇವನಿಗೆ ನನ್ನ ಮಗಳನ್ನು ಕೊಡಲು ಈ ವಿಷಯದಲ್ಲಿ ಪ್ರಯತ್ನವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವ್ಯಧಿಕಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರಮೂರನೆಯ ಅಧ್ಯಾಯ
ಸುಮುಖನಿಗೆ ಗರುಡನಿಂದ ಒದಗಲಿರುವ ಪ್ರಾಣಭಯವನ್ನು ತಿಳಿದು ವಿಷ್ಣುಪ್ರೇರಣೆಯಂತೆ ಇಂದ್ರನಿಂದ ಅವನಿಗೆ ದೀರ್ಘಾಯುಷ್ಯ ವರದಾನ
ಮತ್ತು ಸುಮುಖ-ಗುಣಕೇಶಿಯರ ವಿವಾಹ.
ಕಣ್ವಃ
ಮಾತಲೇರ್ವಚನಂ ಶ್ರುತ್ವಾ ನಾರದೋ ಮುನಿಸತ್ತಮಃ |
ಅಬ್ರವೀನ್ನಾಗರಾಜಾನಮಾರ್ಯಕಂ ಕುರುನಂದನ ॥1॥
ಕಣ್ವ ಎಲೈ ಕುರುನಂದನನೇ, ಮಾತಲಿಯ ಮಾತುಗಳನ್ನು ಕೇಳಿದ ಮುನಿಶ್ರೇಷ್ಠನಾದ ನಾರದರು ನಾಗರಾಜನಾದ ಆರ್ಯಕನನ್ನು ಕುರಿತು ಮಾತನಾಡಿದರು.
ಸೂತೋಽಯಂ ಮಾತಲಿರ್ನಾಮ ಶಕ್ರಸ್ಯ ದಯಿತಃ ಸುಹೃತ್ |
ಶುಚಿಃ ಶೀಲಗುಣೋಪೇತಃ ತೇಜಸ್ವೀ ವೀರ್ಯವಾನ್ ಬಲೀ ॥2॥
ಈ ಮಾತಲಿ ಎಂಬ ಸೂತನು ಇಂದ್ರನ ಪ್ರೀತಿಪಾತ್ರನಾದವನು ಮತ್ತು ಸ್ನೇಹಿತನಾದವನು. ಇವನು ಶುಚಿ, ಶೀಲಗುಣೋಪೇತನಾದವನು, ತೇಜಸ್ವಿ, ವೀರ್ಯವಂತ ಮತ್ತು ಬಲಿಷ್ಠನಾದವನು.
ಶಕ್ರಸ್ಯಾಯಂ ಸಖಾ ಚೈವ ಮಂತ್ರೀ ಸಾರಥಿರೇವ ಚ |
ಅಲ್ಪಾಂತರಪ್ರಭಾವಶ್ಚ ವಾಸವೇನ ಸಮೋ ರಣೇ ॥3॥
ಇವನು ಇಂದ್ರನಿಗೆ ಸ್ನೇಹಿತ, ಮಂತ್ರಿ ಮತ್ತು ಸಾರಥಿಯೂ ಕೂಡ. ಇಂದ್ರನಿಂದ ಸ್ವಲ್ಪವೇ ಕಡಿಮೆಯಾದ ಪ್ರಭಾವವುಳ್ಳವನು.

ಯುದ್ಧದಲ್ಲಿ ಇಂದ್ರನಿಗೆ ಸಮಾನನಾದವನು.
ಅಯಂ ಹರಿಸಹಸ್ರೇಣ ಯುಕ್ತಂ ಚೈಂದ್ರಂ ರಥೋತ್ತಮಮ್ |
ದೇವಾಸುರೇಷು ಯುದ್ಧೇಷು ಮನಸೈವ ನಿಯಚ್ಛತಿ ॥4॥
ಇವನು ಸಹಸ್ರ ಅಶ್ವಗಳಿಂದ ಕೂಡಿದ ಇಂದ್ರನ ಶ್ರೇಷ್ಠವಾದ ರಥವನ್ನು ದೇವಾಸುರ ಯುದ್ಧಗಳಲ್ಲಿ ಮನಸ್ಸಿನಿಂದಲೇ ನಿಯಂತ್ರಿಸುತ್ತಾನೆ.
ಅನೇನ ವಿಜಿತಾನಶ್ವೈಃ ದೋರ್ಭ್ಯಾಂ ಜಯತಿ ವಾಸವಃ |
ಅನೇಹ ಪ್ರಹೃತೇ ಪೂರ್ವಂ ಬಲಭಿತ್ ಪ್ರಹರತ್ಯುತ ॥5॥
ಇವನು ಮೊದಲು ಅಶ್ವಗಳಿಂದ ಜಯಿಸಿದ ಮೇಲೆ ಇಂದ್ರನು ಬಾಹುಗಳಿಂದ ಜಯಿಸುತ್ತಾನೆ. ಇವನು ಮೊದಲು ಪ್ರಹಾರವನ್ನು ಮಾಡಿದ ಮೇಲೆ ಇಂದ್ರನು ಪ್ರಹಾರವನ್ನು ಮಾಡುತ್ತಾನೆ.
ಅಸ್ಯ ಕನ್ಯಾ ವರಾರೋಹಾ ರೂಪೇಣಾಸದೃಶೀ ಭುವಿ |
ಸತ್ವಶೀಲಗುಣೋಪೇತಾ ಗುಣಕೇಶೀತಿ ವಿಶ್ರುತಾ ॥6॥
ಇವನ ಮಗಳು ಸುಂದರಿಯೂ, ಲೋಕದಲ್ಲಿ ಅಸದೃಶವಾದ ರೂಪವುಳ್ಳವಳೂ, ಧೈರ್ಯಶೀಲ ಮೊದಲಾದ ಗುಣಗಳಿಂದ ಕೂಡಿದವಳೂ ಆಗಿ ಗುಣಕೇಶಿಯೆಂಬ ಹೆಸರಿನಿಂದ ಪ್ರಖ್ಯಾತಳಾಗಿದ್ದಾಳೆ.
ತಸ್ಯಾಸ್ಯ ಯತ್ನಾಚ್ಚರತಃ ತ್ರೈಲೋಕ್ಯಮಮರದ್ಯುತೇಃ |
ಸುಮುಖೋ ಭವತಃ ಪೌತ್ರೋ ರೋಚತೇ ದುಹಿತುಃ ಪತಿಃ ॥7॥
ಅವಳ ಸಲುವಾಗಿ ಮೂರುಲೋಕಗಳನ್ನು ಪ್ರಯತ್ನಪೂರ್ವಕವಾಗಿ ಸಂಚರಿಸುತ್ತಿರುವ ದೇವಕಾಂತಿಯುಳ್ಳ ಈ ಮಾತಲಿಗೆ ನಿನ್ನ ಪೌತ್ರನಾದ ಸುಮುಖನು ತನ್ನ ಮಗಳಿಗೆ ಪತಿಯಾಗಿ ಇಷ್ಟವಾಗಿದ್ದಾನೆ.
ಯದಿ ತೇ ರೋಚತೇ ಸೌಮ್ಯ ಭುಜಗೋತ್ತಮ ಮಾಚಿರಮ್ |
ಕ್ರಿಯತಾಮಾರ್ಯಕ ಕ್ಷಿಪ್ರಂ ಬುದ್ಧಿಃ ಕನ್ಯಾಪರಿಗ್ರಹೇ ॥8॥
ಎಲೈ ಭುಜಗಶ್ರೇಷ್ಠನಾದ ಆರ್ಯಕನೇ, ಸೌಮ್ಯನೇ, ನಿನಗೆ ಈ ಸಂಬಂಧವು ಇಷ್ಟವಾಗುವುದಾದರೆ ಕನ್ಯೆಯನ್ನು ಸ್ವೀಕಾರ ಮಾಡುವ ವಿಷಯದಲ್ಲಿ ಶೀಘ್ರವಾಗಿ ನಿಶ್ಚಯವನ್ನು ಮಾಡುವವನಾಗು.
ಯಥಾ ವಿಷ್ಣುಕುಲೇ ಲಕ್ಷ್ಮೀಃ ಯಥಾ ಸ್ವಾಹಾ ವಿಭಾವಸೌ |
ಕುಲೇ ತವ ತಥೈವಾಸ್ತು ಗುಣಕೇಶೀ ಸುಮಧ್ಯಮಾ ॥9॥
ವಿಷ್ಣುವಿನ ಮನೆಯಲ್ಲಿ ಹೇಗೆ ಲಕ್ಷ್ಮಿಯೋ, ಅಗ್ನಿಯ ಜೊತೆಯಲ್ಲಿ ಹೇಗೆ ಸ್ವಾಹಾ ದೇವಿಯೋ ಹಾಗೆ ಸುಂದರಿಯಾದ ಗುಣಕೇಶಿಯು ನಿನ್ನ ಕುಲದಲ್ಲಿ ಇರಲಿ.
ಪೌತ್ರಸ್ಯಾರ್ಥೇ ಭವಾಂಸ್ತಸ್ಮಾದ್ ಗುಣಕೇಶೀಂ ಪ್ರತೀಚ್ಛತು |
ಸದೃಶೀಂ ಪ್ರತಿರೂಪಸ್ಯ ವಾಸವಸ್ಯ ಶಚೀಮಿವ ॥10॥
ಇಂದ್ರನಿಗೆ ಪ್ರತಿರೂಪದಂತಿರುವ ನಿನ್ನ ಪೌತ್ರನಿಗೆ ಶಚಿಗೆ ಸದೃಶಳಾದ ಗುಣಕೇಶಿಯನ್ನು ನೀನು ಸ್ವೀಕರಿಸುವವನಾಗು.
ಪಿತೃಹೀನಮಪಿ ಹ್ಯೇನಂ ಗುಣತೋ ವರಯಾಮಹೇ |
ಬಹುಮಾನಾಚ್ಚ ಭವತಃ ತಥೈವೈರಾವತಸ್ಯ ಚ ॥11॥
ಅವನು ಪಿತೃಹೀನನಾದರೂ ಅವನ ಗುಣಗಳ ಕಾರಣದಿಂದ ಮತ್ತು ನಿನ್ನ ಮತ್ತು ಐರಾವತನ ಮೇಲಿನ ಗೌರವದಿಂದ ಅವನನ್ನು ವರಿಸುತ್ತಿದ್ದೇವೆ.
ಸುಮುಖಸ್ಯ ಗುಣೈಶ್ಚೈವ ಶೀಲಶೌಚದಮಾದಿಭಿಃ |
ಅಭಿಗಮ್ಯ ಸ್ವಯಂ ಕನ್ಯಾಮಯಂ ದಾತುಂ ಸಮುದ್ಯತಃ ॥12॥
ಮಾತಲೇಸ್ತಸ್ಯ ಸಮ್ಮಾನಂ ಕರ್ತುಮರ್ಹೋ ಭವಾನಪಿ ॥13॥
ಸುಮುಖನ ಶೀಲ, ಶೌಚ, ದಮ ಮೊದಲಾದ ಗುಣಗಳ ಕಾರಣದಿಂದ ಈ ಮಾತಲಿಯು ಬಂದು ತಾನೇ ಕನ್ಯೆಯನ್ನು ಕೊಡಲು ಉದ್ಯುಕ್ತನಾಗಿದ್ದಾನೆ. ನೀನಾದರೂ ಈ ಮಾತಲಿಗೆ ಸನ್ಮಾನವನ್ನು ಮಾಡಲು ಅರ್ಹನಾಗಿದ್ದೀಯೆ.
ಕಣ್ವಃ
ಸ ತು ದೀನಃ ಪ್ರಹೃಷ್ಟಶ್ಚ ಪ್ರಾಹ ನಾರದಮಾರ್ಯಕಃ |
ವ್ರಿಯಮಾಣೇ ತಥಾ ಪೌತ್ರೇ ಪುತ್ರೇ ಚ ನಿಧನಂ ಗತೇ ॥14॥
ಕಣ್ವ ತನ್ನ ಪುತ್ರನು ನಿಧನವನ್ನು ಹೊಂದಿ ಪೌತ್ರನು ಹೀಗೆ ವರಿಸಲ್ಪಡುತ್ತಿರಲು ಆರ್ಯಕನು ಸಂತುಷ್ಟನೂ ಮತ್ತು ದುಃಖಿತನೂ ಆಗಿ ನಾರದರನ್ನು ಕುರಿತು ಮಾತನಾಡಿದನು.
ನ ಮೇ ನೈತದ್ ಬಹುಮತಂ ಮಹರ್ಷೇ ವಚನಂ ತವ |
ಸಖಾ ಶಕ್ರಸ್ಯ ಸಂಯುಕ್ತಃ ಕಸ್ಯಾಯಂ ನೇಪ್ಸಿತೋ ಭವೇತ್ ॥15॥
ಕಾರಣಸ್ಯ ತು ದೌರ್ಬಲ್ಯಾತ್ ಚಿಂತಯಾಮಿ ಮಹಾಮುನೇ ॥16॥
ಎಲೈ ಮಹರ್ಷಿಗಳೇ, ನಿಮ್ಮ ಮಾತುಗಳು ನನಗೆ ಇಷ್ಟವಿಲ್ಲ ಎಂದು ಏನೂ ಅಲ್ಲ. ಇಂದ್ರನ ಸ್ನೇಹಿತನ ಜೊತೆ ಈ ಸಂಬಂಧವು ಯಾರಿಗೆ ಇಷ್ಟವಾಗುವುದಿಲ್ಲ? ಆದರೆ ಮಹಾಮುನಿಗಳೇ, ಕಾರಣವು ದುರ್ಬಲವಾಗಿರುವುದರಿಂದ ನಾನು ಚಿಂತಿಸುತ್ತಿದ್ದೇನೆ.
ಅಸ್ಯ ದೇಹಕರಸ್ತಾತ ಮಮ ಪುತ್ರೋ ಮಹಾಮುನೇ |
ಭಕ್ಷಿತೋ ವೈನತೇಯೇನ ದುಃಖಾರ್ತಾಸ್ತೇನ ವೈ ವಯಮ್ ॥17॥
ಎಲೈ ಪ್ರೀತಿಪಾತ್ರರಾದ ಮಹರ್ಷಿಗಳೇ, ಇವನ ತಂದೆಯಾದ ನನ್ನ ಪುತ್ರನು ಗರುಡನಿಂದ ಭಕ್ಷಿಸಲ್ಪಟ್ಟಿದ್ದಾನೆ. ಅದರಿಂದ ನಾವು

ದುಃಖಾರ್ತರಾಗಿದ್ದೇವೆ.
ಪುನರೇವ ಚ ತೇನೋಕ್ತಂ ವೈನತೇಯೇನ ಗಚ್ಛತಾ |
ಮಾಸೇನಾನ್ಯೇನ ಸುಮುಖಂ ಭಕ್ಷಯಿಷ್ಯ ಇತಿ ಪ್ರಭೋ ॥18॥
ಪ್ರಭುಗಳೇ, ಅದೂ ಅಲ್ಲದೆ ಗರುಡನು ಹೋಗುತ್ತಾ ಇನ್ನು ಒಂದು ತಿಂಗಳಿನಲ್ಲಿ ನಾನು ಸುಮುಖನನ್ನು ಭಕ್ಷಿಸುವೆನು ಎಂದೂ ಹೇಳಿದ್ದಾನೆ.
ಧ್ರುವಂ ತಥಾ ತದ್ ಭವಿತಾ ಜಾನೀಮಸ್ತಸ್ಯ ನಿಶ್ಚಯಮ್ |
ತೇನ ಹರ್ಷಃ ಪ್ರನಷ್ಟೋ ಮೇ ಸುಪರ್ಣವಚನೇನ ಚ ॥19॥
ಅವನ ಮಾತು ಖಂಡಿತವಾಗಿ ನಡೆಯುವುದು. ಅವನ ನಿರ್ಧಾರವನ್ನು ನಾವು ತಿಳಿದಿದ್ದೇವೆ. ಗರುಡನ ಆ ಮಾತುಗಳಿಂದ ನನ್ನ ಸಂತೋಷವು ನಷ್ಟವಾಗಿದೆ.
ಕಣ್ವಃ
ಆರ್ಯಕಸ್ಯ ವಚಃ ಶ್ರುತ್ವಾ ಗರುಡಂ ಪ್ರತಿ ಭಾಷಿತಮ್ |
ಮಾತಲಿಸ್ತ್ವಬ್ರವೀದೇನಂ ಬುದ್ಧಿರತ್ರ ಕೃತಾ ಮಯಾ ॥20॥
ಜಾಮಾತೃಭಾವೇನ ವೃತಃ ಸುಮುಖಸ್ತವ ಪುತ್ರಜಃ ॥21॥
ಸೋಽಯಂ ಮಯಾ ಚ ಸಹಿತೋ ನಾರದೇನ ಚ ಪನ್ನಗಃ |
ತ್ರಿಲೋಕೇಶಂ ಸುರಪತಿಂ ಗತ್ವಾ ಪಶ್ಯತು ವಾಸವಮ್ ॥22॥
ಕಣ್ವ ಗರುಡನ ವಿಷಯದಲ್ಲಿ ಆರ್ಯಕನು ಆಡಿದ ಮಾತುಗಳನ್ನು ಕೇಳಿ ಮಾತಲಿಯು ಅವನನ್ನು ಕುರಿತು ಈ ವಿಷಯದಲ್ಲಿ ನಾನು ಯೋಚನೆಯನ್ನು ಮಾಡಿದ್ದೇನೆ. ನಿನ್ನ ಪೌತ್ರನಾದ ಸುಮುಖನನ್ನು ನಾನು ಅಳಿಯನಾಗಿ ವರಿಸಿದ್ದೇನೆ. ಅಂತಹ ಸುಮುಖನು ನನ್ನ ಮತ್ತು ನಾರದರ ಜೊತೆಯಲ್ಲಿ ಹೋಗಿ ಸ್ವರ್ಗಪತಿಯೂ, ತ್ರಿಲೋಕೇಶನೂ ಆದ ಇಂದ್ರನನ್ನು ನೋಡಲಿ ಎಂದು ಹೇಳಿದನು.
ಶೇಷೇಣೈವಾಸ್ಯ ಕಾರ್ಯಸ್ಯ ಪ್ರಾಪ್ತಂ ಸ್ಯಾನ್ಮಹದಾಯುಷಃ |
ಸುಪರ್ಣಸ್ಯ ವಿಘಾತೇ ಚ ಪ್ರಯತಿಷ್ಯಾಮಿ ಸತ್ತಮ ॥23॥
ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ದೇವತಾಕಾರ್ಯವಿಶೇಷವು ಇರುವುದರಿಂದ ಇಂದ್ರನ ಅನುಗ್ರಹದಿಂದ ಇವನು ದೊಡ್ಡ ಆಯುಸ್ಸನ್ನು ಪಡೆಯುವನು. ಗರುಡನ ಸಂಕಲ್ಪವನ್ನು ವಿಘಾತಗೊಳಿಸುವುದಕ್ಕೆ ನಾನು ಪ್ರಯತ್ನಪಡುವೆನು.
ಸುಮುಖಶ್ಚ ಮಯಾ ಸಾರ್ಧಂ ದೇವೇಶಮಭಿಗಚ್ಛತು |
ಕಾರ್ಯಸಂಸಾಧನಾರ್ಥಾಯ ಸ್ವಸ್ತಿ ತೇಽಸ್ತು ಭುಜಂಗಮ ॥24॥
ಸುಮುಖನು ನನ್ನ ಜೊತೆಯಲ್ಲಿ ಕಾರ್ಯವನ್ನು ಸಾಧಿಸುವುದಕ್ಕಾಗಿ ದೇವೇಂದ್ರನ ಬಳಿಗೆ ಬರಲಿ. ಎಲೈ ಭುಜಂಗಮನೇ, ನಿನಗೆ ಮಂಗಳವಾಗಲಿ (ಎಂದು ಹೇಳಿದನು).
ಆರ್ಯಕೇಣಾಭ್ಯನುಜ್ಞಾತಾ ಗಮ್ಯತಾಮಿತಿ ಭಾರತ ॥25॥
ತತಸ್ತೇ ಸುಮುಖಂ ಗೃಹ್ಯ ಸರ್ವ ಏವ ಮಹೌಜಸಃ |
ದದೃಶುಃ ಶಕ್ರಮಾಸೀನಂ ದೇವರಾಜಂ ಮಹಾದ್ಯುತಿಮ್ ॥26॥
ಎಲೈ ಭಾರತನೇ, ಆರ್ಯಕನಿಂದ ಹೋಗಿ ಬನ್ನಿ ಎಂದು ಅನುಜ್ಞೆಯನ್ನು ಪಡೆದು ಮಹಾಸಮರ್ಥರಾದ ನಾರದ ಮತ್ತು ಮಾತಲಿಗಳು ಸುಮುಖನನ್ನು ಕರೆದುಕೊಂಡು ಎಲ್ಲರೂ ಇಂದ್ರನ ಬಳಿಗೆ ಬಂದು ಆಸೀನನಾಗಿದ್ದ ಮಹಾದ್ಯುತಿಯುಳ್ಳ ದೇವರಾಜನನ್ನು ನೋಡಿದರು.
ಸಂಗತ್ಯಾ ತತ್ರ ಭಗವಾನ್ ವಿಷ್ಣುರಾಸೀಚ್ಚತುರ್ಭುಜಃ |
ತತಸ್ತತ್ ಸರ್ವಮಾಚಖ್ಯೌ ನಾರದೋ ಮಾತಲಿಂ ಪ್ರತಿ ॥27॥
ತಮ್ಮನಾದ ಕಾರಣದಿಂದ ಚತುರ್ಭುಜನಾದ ಭಗವಂತನಾದ ವಿಷ್ಣುವು ಅಲ್ಲಿದ್ದನು. ಆಗ ನಾರದರು ಮಾತಲಿಯ ವಿಷಯವನ್ನೆಲ್ಲಾ ಅವರಿಗೆ ಹೇಳಿದರು.
ತತಃ ಪುರಂದರಂ ವಿಷ್ಣುರುವಾಚ ಭುವನೇಶ್ವರಮ್ ॥28॥
ಅಮೃತಂ ದೀಯತಾಮಸ್ಮೈ ಕ್ರಿಯತಾಮಮರೈಃ ಸಮಃ ॥29॥
ಆಗ ತ್ರಿಲೋಕೇಶ್ವರನಾದ ಪುರಂದರನನ್ನು ಕುರಿತು ವಿಷ್ಣುವು, ಇವನಿಗೆ ಅಮೃತವನ್ನು ಕೊಟ್ಟು ದೇವತೆಗಳಿಗೆ ಸಮಾನನನ್ನಾಗಿ ಮಾಡು.
ಮಾತಲಿರ್ನಾರದಶ್ಚೈವ ಸುಮುಖಶ್ಚೈವ ವಾಸವ |
ಲಭಂತಾಂ ಭವತಃ ಕಾಮಾತ್ ಕಾಮಮೇತಂ ಯಥೇಪ್ಸಿತಮ್ ॥30॥
ಎಲೈ ಇಂದ್ರನೇ, ಮಾತಲಿ, ನಾರದ ಮತ್ತು ಸುಮುಖರು ನಿನ್ನಿಂದ ಸಂತೋಷ ಪೂರ್ವಕವಾಗಿ ಈ ತಮ್ಮ ಇಷ್ಟಾರ್ಥವನ್ನು ಪಡೆಯಲಿ (ಎಂದು ಹೇಳಿದನು).
ಕಣ್ವಃ
ಪುರಂದರೋಽಥ ಸಂಚಿತ್ಯ ವೈನತೇಯಪರಾಕ್ರಮಮ್ |
ವಿಷ್ಣುಮೇವಾಬ್ರವೀದೇನಂ ಭವಾನೇವ ದದಾತ್ವಿತಿ ॥31॥
ಕಣ್ವ ಅನಂತರ ಪುರಂದರನು ಗರುಡನ ಪರಾಕ್ರಮವನ್ನು ಚಿಂತಿಸಿ ನೀನೇ ವರವನ್ನು ಕೊಡುವವನಾಗು ಎಂದು ವಿಷ್ಣುವಿಗೆ ಹೇಳಿದನು.
ಶ್ರೀಭಗವಾನ್

ಈಶಸ್ತ್ವಂ ಸರ್ವಲೋಕಾನಾಂ ಚರಾಣಾಮಚರಾಶ್ಚ ಯೇ |
ತ್ವಯಾ ದತ್ತಮದತ್ತಂ ಕಃ ಕರ್ತುಮುತ್ಸಹತೇ ವಿಭೋ ॥32॥
ಶ್ರೀಭಗವಾನ್ ಚರಾಚರವಾದ ಎಲ್ಲ ಲೋಕಗಳಿಗೂ ನೀನೇ ಪ್ರಭುವಾದವನು. ಎಲೈ ವಿಭುವೇ, ನೀನು ಕೊಟ್ಟಿರುವುದನ್ನು ಕೊಟ್ಟಿಲ್ಲ ಎಂದು ಮಾಡುವವರು ಯಾರು?
ಕಣ್ವಃ
ಪ್ರಾದಾತ್ ಶಕ್ರಸ್ತತಸ್ತಸ್ಮೈ ಪನ್ನಗಾಯಾಯುರುತ್ತಮಮ್ |
ನ ತ್ವೇನಮಮೃತಪ್ರಾಶಂ ಚಕಾರ ಬಲವೃತ್ರಹಾ ॥33॥
ಕಣ್ವ ಅನಂತರ ಇಂದ್ರನು ಆ ನಾಗನಿಗೆ ಶ್ರೇಷ್ಠವಾದ ಆಯುಸ್ಸನ್ನು ಕೊಟ್ಟನು. ಆದರೆ ಬಲವೃತ್ರಹಂತಕನಾದ ಅವನು ಅವನಿಗೆ ಅಮೃತಪ್ರಾಶನವನ್ನು ಮಾಡಿಸಲಿಲ್ಲ.
ಲಬ್ಧ್ವಾ ವರಂ ತು ಸುಮುಖಃ ಸುಮುಖಃ ಸಂಬಭೂವ ಹ |
ಕೃತದಾರೋ ಯಥಾಕಾಮಂ ಜಗಾಮ ಚ ಗೃಹಾನ್ ಪ್ರತಿ ॥34॥
ವರವನ್ನು ಪಡೆದ ಸುಮುಖನು ಪ್ರಸನ್ನವದನನಾದನು. ವಿವಾಹವನ್ನು ಮಾಡಿಕೊಂಡು ತನ್ನ ಇಚ್ಛೆಗೆ ಅನುಗುಣವಾಗಿ ತನ್ನ ಮನೆಗೆ ಹೋದನು.
ನಾರದಸ್ತ್ವಾರ್ಯಕಶ್ಚೈವ ಕೃತಕಾರ್ಯೌ ಮುದಾ ಯುತೌ |
ಪ್ರತಿಜಗ್ಮತುರಭ್ಯರ್ಚ್ಯ ದೇವರಾಜಂ ಮಹಾದ್ಯುತಿಮ್ ॥35॥
ನಾರದ ಮತ್ತು ಆರ್ಯಕರಿಬ್ಬರೂ ಕೃತಕೃತ್ಯರಾಗಿ ಸಂತೋಷದಿಂದ ಕೂಡಿ ಮಹಾದ್ಯುತಿಯುಳ್ಳ ದೇವೇಂದ್ರನನ್ನು ಪೂಜಿಸಿ ಹೊರಟುಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರ್ಯಧಿಕಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತುಶ್ಚತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರಮೂರನೆಯ
ಅಧ್ಯಾಯ ಮುಗಿಯಿತು.
* * * * *

ನೂರನಾಲ್ಕನೆಯ ಅಧ್ಯಾಯ

ಸುಮುಖನ ನಿವೃತ್ತ್ಯದಿಂದ ಗರುಡನ ಮಾನಭಂಗವನ್ನು ಹೇಳಿ, ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವಂತೆ ಕಣ್ವರ ಪ್ರೇರಣೆ, ದುರ್ಯೋಧನನು ತೊಡೆಯನ್ನು ತಟ್ಟುತ್ತಿರಲು ಊರುಭಂಗ ಶಾಪದಾನ.
ಕಣ್ವಃ
ಗರುಡಸ್ತತ್ರ ಶುಶ್ರಾವ ಯಥಾವೃತ್ತಂ ಮಹಾಬಲಃ |
ಆಯುಃಪ್ರದಾನಂ ಶಕ್ರೇಣ ಸುಮುಖಸ್ಯ ತು ಭಾರತ ॥1॥
ಕಣ್ವ ಎಲೈ ಭಾರತನೇ, ಮಹಾಬಲನಾದ ಗರುಡನು ಇಂದ್ರನು ಸುಮುಖನಿಗೆ ಆಯುಸ್ಸನ್ನು ಪ್ರದಾನ ಮಾಡಿದ ವಿಷಯವನ್ನು ಸರಿಯಾಗಿ ಕೇಳಿದನು.
ಪಕ್ಷವಾತೇನ ಮಹತಾ ರುದ್ಧ್ವಾ ತ್ರಿಭುವನಂ ಖಗಃ |
ಸುಪರ್ಣಃ ಪರಮಕ್ರುದ್ಧೋ ವಾಸವಂ ಸಮುಪಾದ್ರವತ್ ॥2॥
ಪಕ್ಷಿಯಾದ ಗರುಡನು ತನ್ನ ರೆಕ್ಕೆಗಳ ದೊಡ್ಡ ವಾಯುವಿನಿಂದ ಮೂರು ಲೋಕಗಳನ್ನೂ ಹಿಂಸೆಗೆ ಒಳಪಡಿಸಿ ಬಹಳ ಕೋಪದಿಂದ ಇಂದ್ರನ ಬಳಿಗೆ ಬಂದನು.
ಗರುಡಃ
ಭಗವನ್ ಕಿಮಿವಾಜ್ಞಾನಾತ್ ಸುಧಾಂ ಪ್ರತಿ ಭಯೇ ಮಮ |
ಕಾಮಕಾರವರಂ ದತ್ತ್ವಾ ಪುನಶ್ಚಲಿತವಾನಸಿ ॥3॥
ಗರುಡ ಪೂಜ್ಯನೇ, ಅಮೃತದ ರಕ್ಷಣೆಯ ವಿಷಯದಲ್ಲಿ ಭಯವಿರುವಾಗ ನನಗೆ ಅದರ ರಕ್ಷಣೆಯ ಭಾರವನ್ನು ವಹಿಸಿ, ಅದಕ್ಕಾಗಿ ನನಗೆ ಇಷ್ಟಬಂದಂತೆ ಇರಬಹುದಾದ ವರವನ್ನು ಕೊಟ್ಟು, ಈಗ ಅಜ್ಞಾನದಿಂದ ಏಕೆ ಹಿಂದೆ ಸರಿಯುತ್ತಿದ್ದೀಯೆ?
ನಿಸರ್ಗಾತ್ ಸರ್ವಭೂತಾನಾಂ ಸರ್ವಭೂತೇಶ್ವರೇಣ ಮೇ |
ಆಹಾರೋ ವಿಹಿತೋ ಧಾತ್ರಾ ಕಿಮರ್ಥಂ ವಾರ್ಯತೇ ತ್ವಯಾ ॥4॥
ಸರ್ವಭೂತೇಶ್ವರನಾದ ಬ್ರಹ್ಮನು ಎಲ್ಲಾ ಪ್ರಾಣಿಗಳಿಗೂ ಸ್ವಾಭಾವಿಕವಾದ ಆಹಾರವನ್ನು ಕಲ್ಪಿಸಿದ್ದಾನೆ. ನನ್ನ ಆಹಾರವನ್ನು ನೀನು ಏಕೆ ತಡೆಯುತ್ತಿದ್ದೀಯೆ?
ವೃತಶ್ಚೈಷ ಮಹಾನಾಗಃ ಸ್ಥಾಪಿತಃ ಸಮಯಶ್ಚ ಮೇ |
ಅನೇನ ಚ ಮಯಾ ದೇವ ಭರ್ತವ್ಯಃ ಪ್ರಸವೋ ಮಹಾನ್ ॥5॥
ಈ ಸುಮುಖ ಮಹಾನಾಗನನ್ನು ನಾನು ಆಹಾರವೆಂದು ಸ್ವೀಕರಿಸಿ ಕಾಲದ ಮಿತಿಯನ್ನು ಹೇಳಿದ್ದೆನು. ಎಲೈ ದೇವನೇ, ಇವನ ದೇಹದಿಂದ ನನ್ನ ದೊಡ್ಡ ಸಂತತಿಯನ್ನು ನಾನು ರಕ್ಷಿಸಬೇಕಾಗಿದೆ.
ಏತಸ್ಮಿಂಸ್ತ್ವನ್ಯಥಾ ಭೂತೇ ನಾನ್ಯಂ ಹಿಂಸಿತುಮುತ್ಸಹೇ |
ಕ್ರೀಡಸೇ ಕಾಮಕಾರೇಣ ದೇವರಾಜ ಯಥೇಪ್ಸಿತಮ್ ॥6॥

ನನ್ನ ಆಹಾರವೆಂದು ಸಂಕಲ್ಪಿತವಾಗಿದ್ದ ಒಂದುಸರ್ಪವು ಹೀಗಾದರೆ ನಾನು ಬೇರೆ ಸರ್ಪವನ್ನು ಹಿಂಸಿಸಲು ಬಯಸುವುದಿಲ್ಲ. ಎಲೈ ದೇವರಾಜನೇ, ನೀನು ನಿನ್ನ ಮನಸ್ಸಿಗೆ ಬಂದಂತೆ ಆಟವಾಡುತ್ತಿದ್ದೀಯೆ.
ಸೋಽಹಂ ಪ್ರಾಣಾನ್ ವಿಮೋಕ್ಷ್ಯಾಮಿ ತಥಾ ಪರಿಜನೋ ಮಮ |
ಯೇ ಚ ಭೃತ್ಯಾ ಮಮ ಗೃಹೇ ಪ್ರೀತಿಮಾನ್ ಭವ ವಾಸವ ॥7॥
ನಾನು, ನನ್ನ ಬಂಧುಗಳು ಮತ್ತು ಮನೆಯಲ್ಲಿರುವ ನನ್ನ ಸೇವಕರು ಪ್ರಾಣಗಳನ್ನು ಬಿಡುವೆವು. ಎಲೈ ಇಂದ್ರನೇ, ಸಂತೋಷದಿಂದಿರು.
ಕಣ್ವಃ
ಶ್ರುತ್ವಾ ಸುಪರ್ಣವಚನಂ ಸುಮುಖೋ ದುರ್ಮುಖಸ್ತದಾ |
ತ್ಯಕ್ತತ್ವ ರೂಪಂ ವಿವರ್ಣಸ್ತು ಸರ್ಪರೂಪಧರೋಽಭವತ್ ॥8॥
ಗತ್ವಾ ವಿಷ್ಣುಸಮೀಪಂ ತು ಪಾದಪೀಠಂ ಸಮಾಶ್ಲಿಷತ್ ॥9॥
ಕಣ್ವ ಗರುಡನ ಮಾತುಗಳನ್ನು ಕೇಳಿ ಸುಮುಖನು ದುರ್ಮುಖನಾಗಿ, ತನ್ನ ಕಾಂತಿಯನ್ನು ಕಳೆದುಕೊಂಡು ಅಲ್ಲಿಯವರೆಗೆ ಮನುಷ್ಯಪತ್ನಿಯ ಪ್ರೀತಿಗಾಗಿ ಧರಿಸಿದ್ದ ಮನುಷ್ಯರೂಪವನ್ನು ಬಿಟ್ಟು ಸರ್ಪರೂಪವನ್ನು ಧರಿಸಿದನು. ವಿಷ್ಣುವಿನ ಸಮೀಪಕ್ಕೆ ಹೋಗಿ ವಿಷ್ಣುವಿನ ಪಾದಪೀಠವನ್ನು ಆಲಿಂಗಿಸಿದನು.
ಇಂದ್ರಃ
ನ ಮತ್ಕೃತಂ ವೈನತೇಯ ನ ಮಾಂ ಕ್ರೋದ್ಧುಂ ತ್ವಮರ್ಹಸಿ |
ದತ್ತಾಭಯಃ ಸ ಸುಮುಖೋ ವಿಷ್ಣುನಾ ಪ್ರಭವಿಷ್ಣುನಾ ॥10॥
ಇಂದ್ರ ಗರುಡನೇ, ಇದು ನಾನು ಮಾಡಿದುದಲ್ಲ. ನನ್ನ ಮೇಲೆ ಕೋಪವನ್ನು ಮಾಡಬೇಡ. ಸರ್ವಪ್ರಭುವಾದ ವಿಷ್ಣುವು ಸುಮುಖನಿಗೆ ಅಭಯವನ್ನು ನೀಡಿದ್ದಾನೆ.
ಕಣ್ವಃ
ಶ್ರುತ್ವಾ ಪುರಂದರೇಣೋಕ್ತಮುವಾಚ ವಿನತಾಸುತಃ ॥11॥
ಏತಚ್ಚೈವಾಹಮರ್ಹಾಮಿ ಭೂಯಶ್ಚ ಬಲವೃತ್ರಹನ್ |
ತ್ರೈಲೋಕ್ಯಸ್ಯೇಶ್ವರೋ ಯೋಽಹಂ ಪರಭೃತ್ಯತ್ವಮಾಗತಃ ॥12॥
ಕಣ್ವ ಇಂದ್ರನ ಮಾತುಗಳನ್ನು ಕೇಳಿ ವಿನತಾಸುತನಾದ ಗರುಡನು ಹೀಗೆ ಹೇಳಿದನು `ಎಲೈ ಬಲವೃತ್ರಸೂದನನೇ, ನಾನು ಇದಕ್ಕಿಂತ ಹೆಚ್ಚಿನ ಗೌರವಕ್ಕೆ ಅರ್ಹನಾಗಿದ್ದೇನೆ. ಮೂರುಲೋಕಕ್ಕೂ ಪ್ರಭುವಾದ ನಾನು ಈಗ ಇನ್ನೊಬ್ಬರಿಗೆ ಭೃತ್ಯನಾಗಬೇಕಾಗಿ ಬಂದಿತು'.
ತ್ವಯಿ ತಿಷ್ಠತಿ ದೇವೇಶ ನ ವಿಷ್ಣುಃ ಕಾರಣಂ ಮಮ |
ತ್ರೈಲೋಕ್ಯರಾಜರಾಜ್ಯಂ ಹಿ ತ್ವಯಿ ವಾಸವ ಶಾಶ್ವತಮ್ ॥13॥
ಎಲೈ ದೇವೇಶನೇ, ನೀನಿರುವಾಗ ವಿಷ್ಣುವು ನನಗೆ ಯಾವ ಲೆಕ್ಕಕ್ಕೂ ಇಲ್ಲ. ಮೂರುಲೋಕಗಳ ರಾಜ್ಯವು ಎಲೈ ಇಂದ್ರನೇ, ನಿನ್ನಲ್ಲಿ ಶಾಶ್ವತವಾಗಿ ಪ್ರತಿಷ್ಠಿತವಾಗಿದೆಯಷ್ಟೆ!
ಮಮಾಪಿ ದಕ್ಷಸ್ಯ ಸುತಾ ಜನನೀ ಕಾಶ್ಯಪಃ ಪಿತಾ |
ಅಹಮಪ್ಯುತ್ಸಹೇ ಲೋಕಾನ್ ಸಮಂತಾದ್ ವೋಢುಮೋಜಸಾ ॥14॥
ನನಗೂ ಸಹ ದಕ್ಷನ ಮಗಳಾದ ವಿನತೆಯು ತಾಯಿ ಮತ್ತು ಕಾಶ್ಯಪನು ತಂದೆ. ನಾನೂ ಸಹ ಎಲ್ಲ ಲೋಕಗಳನ್ನೂ ನನ್ನ ಸಾಮರ್ಥ್ಯದಿಂದ ರಕ್ಷಿಸಲು ಸಿದ್ಧನಾಗಿದ್ದೇನೆ.
ಅಸಹ್ಯಂ ಸರ್ವಭೂತಾನಾಂ ಮಮಾಪಿ ವಿಪುಲಂ ಬಲಮ್ |
ಮಯಾಪಿ ಸುಮಹತ್ ಕರ್ಮ ಕೃತಂ ದೈತೇಯವಿಗ್ರಹೇ ॥15॥
ನನಗೂ ಸಹ ಯಾವ ಪ್ರಾಣಿಗಳೂ ಸಹಿಸಲಾರದ ವಿಪುಲವಾದ ಬಲವಿದೆ. ದೈತ್ಯರ ನಿಗ್ರಹವನ್ನು ಮಾಡುವಾಗ ನಾನೂ ಸಹ ದೊಡ್ಡ ಕಾರ್ಯವನ್ನು ಎಸಗಿದ್ದೇನೆ.
ಶ್ರುತಶ್ರೀಃ ಶ್ರುತಸೇನಶ್ಚ ವಿವಸ್ವಾನ್ ರೋಚನಾಮುಖಃ |
ಪ್ರಸಹಃ ಕಾಲಕಾಂಕ್ಷಶ್ಚ ಮಯಾಽಪಿ ದಿತಿಜಾ ಹತಾಃ ॥16॥
ಶ್ರುತಶ್ರೀ, ಶ್ರುತಸೇನ, ವಿವಸ್ವಾನ್, ರೋಚನಾಮುಖ, ಪ್ರಸಹ, ಕಾಲಕಾಂಕ್ಷ ಈ ದೈತ್ಯರು ನನ್ನಿಂದಲೇ ಹತರಾಗಿದ್ದಾರೆ.
ಯತ್ತು ಧ್ವಜಸ್ಥಾನಗತೋ ಯತ್ನಾತ್ ಪರಿಚರಾಮ್ಯಹಮ್ |
ವಹಾಮಿ ಚೈವಾನುಜಂ ತೇ ತೇನ ಮಾಮವಮನ್ಯಸೇ ॥17॥
ನಾನು ನಿನ್ನ ತಮ್ಮನ ಧ್ವಜದಲ್ಲಿದ್ದು, ಅವನ ಪರಿಚಾರಿಕೆಯನ್ನು ಮಾಡಿ, ಅವನನ್ನು ಹೊರುವ ಕಾರಣದಿಂದ ನೀನು ನನಗೆ ಅವಮಾನವನ್ನು ಮಾಡುತ್ತಿದ್ದೀಯೆ.
ಕೋಽನ್ಯೋ ಭಾರಸಹೋ ಹ್ಯಸ್ತಿ ಕೋಽನ್ಯೋಽಸ್ತಿ ಬಲವತ್ತರಃ |
ಮಯಾ ಯೋಽಹಿ ವಿಶಿಷ್ಟಃ ಸನ್ ವಹಾಮೀಮಂ ಸಬಾಂಧವಮ್ ॥
ನನಗಿಂತ ಶ್ರೇಷ್ಠನಾದ ಭಾರವನ್ನು ಹೊರುವ ಇನ್ನೊಬ್ಬ ವ್ಯಕ್ತಿಯು ಯಾವನಿದ್ದಾನೆ? ನನಗಿಂತ ಶ್ರೇಷ್ಠನಾದ ಬಲಿಷ್ಠನು ಇನ್ನೊಬ್ಬನು ಯಾವನಿದ್ದಾನೆ? ನಾನು ಪತ್ನೀ ಸಹಿತನಾದ ವಿಷ್ಣುವನ್ನು ಹೊರುತ್ತೇನಷ್ಟೆ!
ಅವಜ್ಞಾಯ ತು ಯತ್ ತೇಽಹಂ ಭೋಜನಾದವರೋಪಿತಃ |
ತೇನ ಮೇ ಗೌರವಂ ನಷ್ಟಂ ತ್ವತ್ತಶ್ಚಾಸ್ಮಾಚ್ಚ ವಾಸವ ॥19॥
ಎಲೈ ಇಂದ್ರನೇ, ನನಗೆ ಅವಮಾನವನ್ನು ಮಾಡಿ ನೀನೂ ಮತ್ತು ಈ ವಿಷ್ಣುವು ನನ್ನ ಭೋಜನವನ್ನು ಕಳೆದುದರಿಂದ ನನ್ನ ಗೌರವವು ನಷ್ಟವಾಗಿದೆ.

ಅದಿತ್ಯಾ ಯ ಇಮೇ ಜಾತಾ ಬಲವಿಕ್ರಮಶಾಲಿನಃ |
ತ್ವಮೇಷಾಂ ಕಿಲ ಸರ್ವೇಷಾಂ ವಿಶೇಷಾದ್ ಬಲವತ್ತರಃ ॥20॥
ಅದಿತಿಯಲ್ಲಿ ಜನಿಸಿದ ಈ ಬಲವಿಕ್ರಮಶಾಲಿಗಳು ಯಾರಿದ್ದಾರೆಯೋ ಅವರೆಲ್ಲರಲ್ಲಿ ನೀನೇ (ವಿಷ್ಣುವೇ) ವಿಶೇಷವಾಗಿ ಬಲಿಷ್ಠನಾದವನಷ್ಟೆ!
ಸೋಽಹಂ ಪಕ್ಷೈಕದೇಶೇನ ವಹಾಮಿ ತ್ವಾಂ ಪರಾಕ್ರಮಾತ್ |
ವಿಮೃಶ ತ್ವಂ ಶನೈಸ್ತಾತ ಕೋ ನ್ವತ್ರ ಬಲವಾನಿತಿ ॥21॥
ನಾನು ನನ್ನ ಪರಾಕ್ರಮದಿಂದ ನನ್ನ ರೆಕ್ಕೆಯ ಒಂದು ಭಾಗದಲ್ಲಿ ನಿನ್ನನ್ನು ಹೊರುತ್ತೇನೆ. ಪ್ರೀತಿಪಾತ್ರನೇ, ಇಲ್ಲಿ ಯಾರು ಬಲಿಷ್ಠರೆಂದು ನಿಧಾನವಾಗಿ ನೀನೇ ಯೋಚನೆಯನ್ನು ಮಾಡು.
ಕಣ್ವಃ
ಸ ತಸ್ಯ ವಚನಂ ಶ್ರುತ್ವಾ ಖಗಸ್ಯೋದರ್ಕದಾರುಣಮ್ |
ಅಕ್ಷೋಭ್ಯಂ ಕ್ಷೋಭಯಂಸ್ತಾರ್ಕ್ಷ್ಯಮುವಾಚ ರಥಚಕ್ರಭೃತ್ ॥22॥
ಕಣ್ವ ಗರುಡನ ಅಹಂಕಾರದಿಂದ ಕೂಡಿದ ದಾರುಣವಾದ ಮಾತುಗಳನ್ನು ಕೇಳಿ ಅಕ್ಷೋಭ್ಯನಾದ (ಅಲುಗಾಡಿಸಲು ಸಾಧ್ಯವಿಲ್ಲದ) ಆ ಗರುಡನನ್ನು ಕ್ಷೋಭೆಗೊಳಿಸುತ್ತಾ ರಥಚಕ್ರಧರನಾದ ವಿಷ್ಣುವು ಮಾತನಾಡಿದನು.
ಶ್ರೀಭಗವಾನ್
ಗರುತ್ಮನ್ ಮನ್ಯಸೇ ತ್ಮಾನಂ ಬಲವಂತಂ ಸುದುರ್ಬಲಮ್ |
ಅಲಮಸ್ಮತ್ಸಮಕ್ಷಂ ತೇ ಸ್ತೋತುಮಾತ್ಮಾನಮಂಡಜ ॥23॥
ಶ್ರೀಭಗವಾನ್ ಎಲೈ ಗರುಡನೇ, ದುರ್ಬಲನಾದ ನೀನು ನಿನ್ನನ್ನು ಬಲಿಷ್ಠನೆಂದು ತಿಳಿದಿದ್ದೀಯೆ. ಎಲೈ ಪಕ್ಷಿಯೇ, ನನ್ನ ಎದುರಿನಲ್ಲಿ ನಿನ್ನನ್ನು ನೀನು ಸ್ತೋತ್ರ ಮಾಡಿಕೊಳ್ಳುವುದು ಸಾಕು.
ತ್ರೈಲೋಕ್ಯಮಪಿ ಮೇ ಕೃತ್ಸ್ನಮಶಕ್ತಂ ದೇಹಧಾರಣೇ |
ಅಹಮೇವಾತ್ಮನಾಽಽತ್ಮಾನಂ ವಹಾಮಿ ತ್ವಂ ಚ ಧಾರಯೇ ॥24॥
ಮೂರುಲೋಕ ಸೇರಿದರೂ ನನ್ನ ದೇಹವನ್ನು ಹೊರಲು ಸಾಧ್ಯವಾಗುವುದಿಲ್ಲ. ನಾನೇ ನನ್ನನ್ನು ಧರಿಸುತ್ತೇನೆ, ಜೊತೆಗೆ ನಿನ್ನನ್ನೂ ಧರಿಸುತ್ತೇನೆ.
ನ ತ್ವಂ ವಹಸಿ ಮಾಂ ದೋರ್ಭ್ಯಾಂ ಮೋಘಂ ತವ ವಿಕತ್ಥನಮ್ |
ಇಮಂ ತಾವನ್ಮಮೈಕಂ ತ್ವಂ ಬಾಹುಂ ಸವ್ಯೇತರಂ ವಹ ॥25॥
ಯದ್ಯೇನಂ ಧಾರಯಸ್ಯೇಕಂ ಸಫಲಂ ತೇ ವಿಕತ್ಥನಮ್ ॥26॥
ನೀನು ನನ್ನನ್ನು ನಿನ್ನ ಭುಜಗಳಿಂದ ಹೊರುವುದಿಲ್ಲ. ನಿನ್ನ ಆತ್ಮಶ್ಲಾಘನೆಯು ವ್ಯರ್ಥವಾದುದು. ಮೊದಲು ಈ ನನ್ನ ದಕ್ಷಿಣಬಾಹುವನ್ನು ಎತ್ತು. ಈ ಒಂದು ಬಾಹುವನ್ನು ನೀನು ಎತ್ತಿದರೆ ನಿನ್ನ ಆತ್ಮಶ್ಲಾಘನೆಯು ಸಫಲವಾದೀತು!
ಕಣ್ವಃ
ಇತ್ಯುಕತ್ವ ಭಗವಾಂಸ್ತಸ್ಯ ಸ್ಕಂಧೇ ಬಾಹುಂ ಸಮಾಸಜತ್ ॥27॥
ಆರೋಪಿತಂ ಸಮುದ್ವೋಢುಂ ಭುಜಂ ತಂ ನಾಶಕದ್ ಬಲಾತ್ |
ನಿಪಪಾತ ಸ ಭಾರಾರ್ತೋ ವಿಹ್ವಲೋ ನಷ್ಟಚೇತನಃ ॥28॥
ಕಣ್ವ ಹೀಗೆ ಹೇಳಿ ಭಗವಂತನು ಅವನ ಹೆಗಲ ಮೇಲೆ ತನ್ನ ಬಾಹುವನ್ನು ಇಟ್ಟನು. ಗರುಡನು ತನ್ನ ಹೆಗಲಿನ ಮೇಲೆ (ರೆಕ್ಕೆಯ ಮೇಲೆ) ಇಟ್ಟ ಆ ಬಾಹುವನ್ನು ತನ್ನ ಎಲ್ಲಾ ಬಲದಿಂದಲೂ ಎತ್ತಲು ಸಾಧ್ಯವಾಗಲಿಲ್ಲ. ಭಾರದಿಂದ ಬಳಲಿ ವಿಹ್ವಲನಾಗಿ ಪ್ರಜ್ಞಾಹೀನನಾಗಿ ಅವನು ಕೆಳಗೆ ಬಿದ್ದನು.
ಯಾವಾನ್ ಹಿ ಭಾರಃ ಕೃತ್ಸ್ನಾಯಾಃ ಪೃಥಿವ್ಯಾಃ ಪರ್ವತೈಃ ಸಹ |
ಏಕಸ್ಯಾ ದೇಹಶಾಖಾಯಾ ತಾವದ್ ಭಾರಮಮನ್ಯತ ॥29॥
ಪರ್ವತಗಳಿಂದ ಕೂಡಿದ ಸಮಸ್ತ ಪೃಥಿವಿಯ ಭಾರವು ಎಷ್ಟಿದೆಯೋ ವಿಷ್ಣುವಿನ ಒಂದೇ ಭುಜವು ಅಷ್ಟು ಭಾರವುಳ್ಳದ್ದು ಎಂದು ಅವನು ತಿಳಿದನು.
ನ ಚೈನಂ ಪೀಡಯಾಮಾಸ ಬಲೇನ ಪುರುಷೋತ್ತಮಃ |
ತತೋ ಹಿ ಜೀವಿತಂ ತಸ್ಯ ನ ವ್ಯನೀನಶದಚ್ಯುತಃ ॥30॥
ಪುರುಷೋತ್ತಮನಾದ ವಿಷ್ಣುವು ತನ್ನ ಬಲದಿಂದ ಅವನನ್ನು ಹಿಂಸಿಸಲಿಲ್ಲ. ಆದ್ದರಿಂದ ಅಚ್ಯುತನು ಅವನ ಜೀವಿತವನ್ನು ನಾಶಮಾಡಲಿಲ್ಲ.
ವಿಪಕ್ಷಃ ಸ್ರಸ್ತಕಾಯಶ್ಚ ವಿಚೇತಾ ವಿಹ್ವಲಃ ಖಗಃ |
ಮುಮೋಚ ಪತ್ರಾಣಿ ತದಾ ಗುರುಭಾರಪ್ರಪೀಡಿತಃ ॥31॥
ದೊಡ್ಡ ಭಾರದಿಂದ ಪೀಡಿತನಾದ ಗರುಡನು ಆಗ ರೆಕ್ಕೆಯನ್ನು ಕಳೆದುಕೊಂಡು ಶಿಥಿಲವಾದ ದೇಹವುಳ್ಳವನಾಗಿ ಪ್ರಜ್ಞಾಹೀನನಾಗಿ ವಿಹ್ವಲನಾಗಿ ತನ್ನ ರೆಕ್ಕೆಯ ಗರಿಗಳನ್ನು ಉದುರಿಸಿದನು.
ಸ ವಿಷ್ಣುಂ ಶಿರಸಾ ಪಕ್ಷೀ ಪ್ರಣಮ್ಯ ವಿನತಾಸುತಃ |
ವಿಚೇತಾ ವಿಹ್ವಲೋ ದೀನಃ ಕಿಂಚಿದ್ ವಚನಮಬ್ರವೀತ್ ॥32॥
ವಿಚೇತನನೂ, ವಿಹ್ವಲನೂ, ದೀನನೂ ಆದ ಪಕ್ಷಿಯಾದ ಆ ವಿನತಾಸುತನು ವಿಷ್ಣುವಿಗೆ ಶಿರಸಾ ಪ್ರಣಾಮವನ್ನು ಮಾಡಿ ಸ್ವಲ್ಪ ಮಾತನಾಡಿದನು.

ಭಗವನ್ ಲೋಕಸಾರಸ್ಯ ಸದೃಶೇನ ವಪುಷ್ಮತಾ |
ಭುಜೇನ ಸ್ವೈರಮುಕ್ತೇನ ನಿಷ್ಪಿಷ್ಟೋಽಸ್ಮಿ ಮಹೀತಳೇ ||33||
ಭಗವಂತನೇ, ಲೋಕದ ಭಾರಕ್ಕೆ ಸದೃಶವಾದ ಭಾರವುಳ್ಳ ನೀನು ಅನಾಯಾಸವಾಗಿಟ್ಟ ಒಂದು ಭುಜದಿಂದಲೇ ನಾನು ಭೂತಳದಲ್ಲಿ ಬಿದ್ದು ಪುಡಿಪುಡಿಯಾಗಿದ್ದೇನೆ.
ಕ್ಷಂತುಮರ್ಹಸಿ ಮೇ ದೇವ ವಿಹ್ವಲಸ್ಯಾಲ್ಪಚೇತಸಃ |
ಬಲದಾಹವಿದಗ್ಧಸ್ಯ ಪಕ್ಷಿಣೋ ಧ್ವಜವಾಸಿನಃ ||34||
ಎಲೈ ದೇವನೇ, ಅಸುರರ ಸೈನ್ಯವನ್ನು ದಾಹ ಮಾಡುವುದರಲ್ಲಿ ನಿಪುಣನಾದ, ನಿನ್ನ ಧ್ವಜವಾಸಿಯಾದ ಪಕ್ಷಿಯಾದ ವಿಹ್ವಲನಾದ ಅಲ್ಪಜ್ಞಾನವುಳ್ಳ ನನ್ನ ಅಪರಾಧವನ್ನು ನೀನು ಸಹಿಸಬೇಕು.
ನ ಹಿ ಜ್ಞಾತಂ ಬಲಂ ದೇವ ಮಯಾ ತೇ ಪರಮಂ ವಿಭೋ |
ತೇನ ಮನ್ಯೇ ಹ್ಯಹಂ ವೀರ್ಯಮಾತ್ಮನೋ ನ ಸಮಂ ಪರೈಃ ||35||
ಎಲೈ ವಿಭುವೇ, ದೇವನೇ, ನಿನ್ನ ಸರ್ವೋತ್ಕೃಷ್ಟವಾದ ಬಲವನ್ನು ನಾನು ತಿಳಿಯಲಿಲ್ಲ. ಆ ಕಾರಣದಿಂದ ನಾನು ಪರಾಕ್ರಮದಲ್ಲಿ ನನ್ನ ಸಮನಾದವರು ಯಾರೂ ಇಲ್ಲ ಎಂದು ತಿಳಿದಿದ್ದೆನು.
ಕಣ್ವಃ
ತತಶ್ಚಕ್ರೇ ಸ ಭಗವಾನ್ ಪ್ರಸಾದಂ ವೈ ಗರುತ್ಮತಃ |
ಮೈವಂ ಭೂಯ ಇತಿ ಸ್ನೇಹಾತ್ ತದಾ ಚೈನಮುವಾಚ ಹ ||36||
ಕಣ್ವ ಆಗ ಭಗವಂತನು ಗರುಡನಿಗೆ ಅನುಗ್ರಹವನ್ನು ಮಾಡಿ ಅವನನ್ನು ಕುರಿತು ಸ್ನೇಹದಿಂದ ಇನ್ನೊಮ್ಮೆ ಹೀಗೆ ಮಾಡಬೇಡ ಎಂದು ಹೇಳಿದನು.
ಪಾದಾಂಗುಷ್ಠೇನ ಚಿಕ್ಷೇಪ ಸುಮುಖಂ ಗರುಡೋರಸಿ |
ತತಃ ಪ್ರಭೃತಿ ರಾಜೇಂದ್ರ ಸಹ ಸರ್ಪೇಣ ವರ್ತತೇ ||37||
ತನ್ನ ಪಾದಾಂಗುಷ್ಠದಿಂದ ಸುಮುಖನನ್ನು ಗರುಡನ ವಕ್ಷಸ್ಥಲದಲ್ಲಿ ಚಿಮ್ಮಿದನು. ಎಲೈ ರಾಜೇಂದ್ರನೇ, ಆಗಿನಿಂದಲೂ ಗರುಡನು ಆ ಸರ್ಪದ ಜೊತೆಯಲ್ಲಿಯೇ ಇರುತ್ತಾನೆ.
ಏವಂ ವಿಷ್ಣುಬಲಾಕ್ರಾಂತೋ ಗರ್ವನಾಶಮುಪಾಗಮತ್ |
ಗರುಡೋ ಬಲವಾನ್ ರಾಜನ್ ವೈನತೇಯೋ ಮಹಾಯಶಾಃ ||38||
ಎಲೈ ರಾಜನಾದ ದುರ್ಯೋಧನನೇ, ಹೀಗೆ ಬಲಿಷ್ಠನೂ, ಮಹಾಕೀರ್ತಿವಂತನೂ, ವಿನುತಾಸುತನೂ ಆದ ಗರುಡನು ವಿಷ್ಣುವಿನ ಬಲಕ್ಕೆ ಒಳಗಾಗಿ ಗರ್ವನಾಶವನ್ನು ಹೊಂದಿದನು.
ತಥಾ ತ್ವಮಪಿ ಗಾಂಧಾರೇ ಯಾವತ್ ಪಾಂಡುಸುತಾನ್ ರಣೇ |
ನಾಸಾದಯಸಿ ತಾನ್ ವೀರಾನ್ ತಾವಜ್ಜೀವಸಿ ಪುತ್ರಕ ||39||
ಅದರಂತೆ ಎಲೈ ಗಾಂಧಾರಿ ಸುತನೇ, ಪುತ್ರನೇ, ಎಲ್ಲಿಯವರೆಗೆ ನೀನು ಯುದ್ಧದಲ್ಲಿ ವೀರರಾದ ಪಾಂಡವರನ್ನು ಸಮೀಪಿಸುವುದಿಲ್ಲವೋ ಅಲ್ಲಿಯವರೆಗೆ ಬದುಕಿರುತ್ತೀಯೆ.
ಭೀಮಃ ಪ್ರಹರತಾಂ ಶ್ರೇಷ್ಠೋ ವಾಯುಪುತ್ರೋ ಮಹಾಬಲಃ |
ಧನಂಜಯಶ್ಚೇಂದ್ರಸುತೋ ನಿಹನ್ಯಾತ್ ತಾವಕಾನ್ ರಣೇ ||40||
ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಮಹಾಬಲನಾದ ವಾಯುಪುತ್ರನಾದ ಭೀಮನೂ ಮತ್ತು ಇಂದ್ರಪುತ್ರನಾದ ಅರ್ಜುನನೂ ಯುದ್ಧದಲ್ಲಿ ನಿನ್ನವರನ್ನು ಕೊಲ್ಲುವರು.
ವಿಷ್ಣುರ್ವಾಯುಶ್ಚ ಶಕ್ರಶ್ಚ ಧರ್ಮಸ್ತಾವಶ್ವಿನಾವುಭೌ |
ಏತೇ ದೇವಾಸ್ತ್ವಯಾ ಕೇನ ಹೇತುನಾ ವೀಕ್ಷಿತುಂ ಕ್ಷಮಾಃ ||41||
ವಿಷ್ಣು, ವಾಯು, ಇಂದ್ರ, ಯಮ ಮತ್ತು ಆ ಇಬ್ಬರು ಅಶ್ವಿನಿದೇವತೆಗಳು- ಈ ದೇವತೆಗಳನ್ನು ನೀನು ಯಾವ ಕಾರಣದಿಂದ ನೋಡಲು ಸಮರ್ಥನಾಗುತ್ತೀಯೆ?
ತದಲಂ ತೇ ವಿರೋಧೇನ ಶಮಂ ಗಚ್ಛ ನೃಪಾತ್ಮಜ |
ವಾಸುದೇವೇನ ತೀರ್ಥೇನ ಕುಲಂ ರಕ್ಷಿತುಮರ್ಹಸಿ ||42||
ಎಲೈ ರಾಜಕುಮಾರನೇ, ಆದ್ದರಿಂದ ವಿರೋಧವನ್ನು ಸಾಕುಮಾಡು. ಸಂಧಿಯನ್ನು ಮಾಡಿಕೊ. ಪೂಜ್ಯನಾದ ವಾಸುದೇವನಿಂದ ನಿನ್ನ ಕುಲವನ್ನು ರಕ್ಷಿಸುವವನಾಗು.
ಪ್ರತ್ಯಕ್ಷದರ್ಶೀ ಸರ್ವಸ್ಯ ನಾರದೋಽಯಂ ಮಹಾತಪಾಃ |
ಮಾಹಾತ್ಮ್ಯಸ್ಯ ತದಾ ವಿಷ್ಣೋಃ ಸೋಽಯಂ ಚಕ್ರಗದಾಧರಃ ||43||
ಮಹಾತಪಸ್ವಿಗಳಾದ ಈ ನಾರದರು ವಿಷ್ಣುವಿನ ಮಹಿಮೆಯೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದವರು. ಆ ಚಕ್ರಗದಾಧರನಾದ ವಿಷ್ಣುವೇ ಈ ಕೃಷ್ಣ.
ವೈಶಂಪಾಯನಃ
ದುರ್ಯೋಧನಸ್ತು ತಚ್ಛ್ರುತ್ವಾ ನಿಃಶ್ವಸನ್ ಭ್ರುಕುಟೀಮುಖಃ |
ರಾಧೇಯಮಭಿಸಂಪ್ರೇಕ್ಷ್ಯ ಜಹಾಸ ಸ್ವನವತ್ ತದಾ ||44||
ಆ ಮಾತುಗಳನ್ನು ಕೇಳಿ ದುರ್ಯೋಧನನು ಹುಬ್ಬುಗಳನ್ನು ಗಂಟಿಕ್ಕಿ ನಿಟ್ಟುಸಿರು ಬಿಡುತ್ತಾ ಕರ್ಣನನ್ನು ನೋಡಿ ಆಗ ಗಟ್ಟಿಯಾಗಿ ನಕ್ಕನು.

ಕದರ್ಥೀಕೃತ್ಯ ತದ್ವಾಕ್ಯಮ್ ಋಷೇಃ ಕಣ್ವಸ್ಯ ದುರ್ಮತಿಃ |
ಊರುಂ ಗಜಕರಾಕಾರಂ ತಾಡಯನ್ನಿದಮಬ್ರವೀತ್ ||45||
ದುರ್ಮತಿಯಾದ ಅವನು ಕಣ್ವಋಷಿಗಳ ಆ ಮಾತುಗಳನ್ನು ಧಿಕ್ಕರಿಸಿ ಆನೆಯ ಸೊಂಡಿಲಿನಂತಿದ್ದ ತನ್ನ ತೊಡೆಯನ್ನು ತಟ್ಟಿ ಹೀಗೆ ಮಾತನಾಡಿದನು.
ಯಥೈವೇಶ್ವರಸೃಷ್ಟೋಽಸ್ಮಿ ತದ್ಭಾವಿ ಯಾ ಚ ಮೇ ಗತಿಃ |
ತಥಾ ಮಹರ್ಷೇ ವರ್ತಾಮಿ ಕಿಂ ಪ್ರಲಾಪಃ ಕರಿಷ್ಯತಿ ||46||
ಹೇಗೆ ಈಶ್ವರನು ನನ್ನನ್ನು ಸೃಷ್ಟಿ ಮಾಡಿದ್ದಾನೆಯೋ ನನಗೆ ಯಾವ ಗತಿಯಾಗ ಬೇಕೆಂದಿದೆಯೋ ಅದರಂತೆಯೇ ಆಗುತ್ತದೆ ಅಥವಾ ನಾನು ಅದರಂತೆಯೇ ನಡೆದುಕೊಳ್ಳುತ್ತೇನೆ. ಮಹರ್ಷಿಯೇ, ನಿನ್ನ ಪ್ರಲಾಪಗಳಿಂದ ಏನು ಪ್ರಯೋಜನ?
ವೈಶಂಪಾಯನಃ
ತತಃ ಕಣ್ವೋಽಬ್ರವೀತ್ ಕ್ರುದ್ಧೋ ದುರ್ಯೋಧನಮಪಂಡಿತಮ್ |
ಯಸ್ಮಾದೂರುಂ ತಾಡಯಸಿ ಊರೌ ಮೃತ್ಯುರ್ಭವಿಷ್ಯತಿ ||47||
ವೈಶಂಪಾಯನ ಆಗ ಕೋಪಗೊಂಡ ಕಣ್ವರು ಅಪಂಡಿತನಾದ ದುರ್ಯೋಧನನನ್ನು ಕುರಿತು, ನೀನು ತೊಡೆಯನ್ನು ತಟ್ಟುತ್ತಿರುವ ಕಾರಣದಿಂದ ನಿನಗೆ ತೊಡೆಯಲ್ಲಿಯೇ ಮೃತ್ಯುವುಂಟಾಗುವುದು ಎಂದು ಹೇಳಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಚತುರಧಿಕಶತತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ಪಂಚತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐದನೆಯ ಅಧ್ಯಾಯ
ಹಠವು ಅನರ್ಥಕಾರಿ ಎಂದು ತೋರಿಸಲು ನಾರದರಿಂದ
ವಿಶ್ವಾಮಿತ್ರ ಮತ್ತು ಗಾಲವರ ಕಥೆಯ ನಿರೂಪಣೆ.
ಜನಮೇಜಯಃ
ಅನರ್ಥೇ ಜಾತನಿರ್ಬಂಧಂ ಪರಾರ್ಥೇ ಲೋಭಮೋಹಿತಮ್ |
ಅನಾರ್ಯಕೇಷ್ವಭಿರತಂ ಮರಣೇ ಕೃತನಿಶ್ಚಯಮ್ ||1||
ಜ್ಞಾತೀನಾಂ ದುಃಖಕರ್ತಾರಂ ಬಂಧೂನಾಂ ಶೋಕವರ್ಧನಮ್ |
ಸುಹೃದಾಂ ಕ್ಲೇಶದಾತಾರಂ ದ್ವಿಷತಾಂ ಹರ್ಷವರ್ಧನಮ್ ||2||
ಕಥಂ ನೈನಂ ವಿಮಾರ್ಗಸ್ಥಂ ವಾರಯಂತೀಹ ಬಾಂಧವಾಃ |
ಸೌಹೃದಾದ್ವಾ ಸುಹೃತ್ ಸ್ನಿಗ್ಧೋ ಭಗವಾನ್ ವಾ ಪಿತಾಮಹಃ ||3||
ಜನಮೇಜಯ ಅನರ್ಥದಲ್ಲಿ ಹಠವನ್ನು ಹಿಡಿದ, ಇನ್ನೊಬ್ಬರ ದ್ರವ್ಯದಲ್ಲಿ ಆಸೆ ಮತ್ತು ಮೋಹಗಳನ್ನು ಹೊಂದಿದ, ನೀಚರಾದ ಜನರ ಸ್ನೇಹವನ್ನು ಮಾಡಿದ, ಮರಣವನ್ನು ನಿಶ್ಚಯಿಸಿದ, ಜ್ಞಾತಿಗಳಿಗೆ ದುಃಖವನ್ನುಂಟು ಮಾಡುವ, ಬಂಧುಗಳಿಗೆ ಶೋಕವನ್ನು ಹೆಚ್ಚಿಸುವ, ಸುಹೃಜ್ಜನರಿಗೆ ಕ್ಲೇಶವನ್ನು ಕೊಡುವ, ಶತ್ರುಗಳಿಗೆ ಸಂತೋಷವನ್ನು ಹೆಚ್ಚಿಸುವ, ದುರ್ಮಾರ್ಗಚರನಾದ ಈ ದುರ್ಯೋಧನನನ್ನು ಬಾಂಧವರು ಏಕೆ ತಡೆಯಲಿಲ್ಲ? ಸೌಹಾರ್ದದ ನಿಮಿತ್ತದಿಂದ ಸುಹೃಜ್ಜನನೂ, ಸ್ನೇಹವನ್ನು ಉಳ್ಳವನೂ ಆದ ಪೂಜ್ಯಪಿತಾಮಹನಾದರೂ ಏಕೆ ನಿವಾರಿಸಲಿಲ್ಲ?
ವೈಶಂಪಾಯನಃ
ಉಕ್ತಂ ಭಗವತಾ ವಾಕ್ಯಮುಕ್ತಂ ಭೀಷ್ಮೇಣ ಯತ್ ಕ್ಷಮಮ್ |
ಉಕ್ತಂ ಬಹುವಿಧಂ ಚೈವ ನಾರದೇನಾಪಿ ತಚ್ಛೃಣು ||4||
ವೈಶಂಪಾಯನ ಭಗವಂತನೂ ಉಪದೇಶವನ್ನು ಮಾಡಿದ್ದಾಯಿತು. ಭೀಷ್ಮರು ಏನು ಹೇಳಬಹುದೋ ಅದನ್ನು ಹೇಳಿದ್ದಾಯಿತು. ನಾರದರೂ ಸಹ ಬಹುವಿಧವಾಗಿ ಹೇಳಿದರು. ಅದನ್ನು ಕೇಳು.
ನಾರದಃ
ದುರ್ಲಭೋ ವೈ ಸುಹೃಚ್ಛ್ರೋತಾ ದುರ್ಲಭಶ್ಚ ಹಿತಃ ಸುಹೃತ್ |
ತಿಷ್ಠತೇ ಹಿ ಸುಹೃದ್ ಯತ್ರ ನ ಬಂಧುಸ್ತತ್ರ ತಿಷ್ಠತೇ ||5||
ನಾರದ ಹೇಳಿದ ಮಾತನ್ನು ಕೇಳುವ ಸುಹೃಜ್ಜನನು ದುರ್ಲಭನಾದವನು. ಹಿತವನ್ನು ಮಾಡುವ ಸುಹೃಜ್ಜನನೂ ದುರ್ಲಭನಾದವನು. ಎಲ್ಲಿ ಸುಹೃಜ್ಜನನಿರುತ್ತಾನೆಯೋ ಅಲ್ಲಿ ಬಂಧುವು ಇರುವುದಿಲ್ಲ.
ಶ್ರೋತವ್ಯಮಪಿ ಪಶ್ಯಾಮಿ ಸುಹೃದಾಂ ಕುರುನಂದನ |
ನ ಕರ್ತವ್ಯಶ್ಚ ನಿರ್ಬಂಧೋ ನಿರ್ಬಂಧೋ ಹಿ ಸುದಾರುಣಃ ||6||
ಎಲೈ ಕುರುನಂದನನೇ, ಸುಹೃಜ್ಜನನ ಮಾತುಗಳನ್ನು ಕೇಳಬೇಕು. ಆದರೆ ಒತ್ತಾಯವನ್ನು ಮಾಡಬಾರದು. ಒತ್ತಾಯವು (ಹಠವು) ಬಹಳ ದಾರುಣವಾದುದು.
ದುರ್ಯೋಧನ ನಿಬೋಧೇದಂ ವಚನಂ ಮಮ ಭಾರತ |
ನಿರ್ಬಂಧಶ್ಚಾಪಿ ಮಾನಶ್ಚ ತ್ವಯಾ ತ್ಯಾಜ್ಯೋ ಮಹಾಮತೇ ||7||

ಎಲೈ ಭಾರತನೇ, ದುರ್ಯೋಧನನೇ, ನನ್ನ ಈ ಮಾತನ್ನು ಕೇಳು. ಮಹಾಮತಿಯೇ, ನೀನು ಹಠವನ್ನು ಮತ್ತು ಅಹಂಕಾರವನ್ನು ಬಿಡಬೇಕು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಥಾ ನಿರ್ಬಂಧತಃ ಪ್ರಾಪ್ತೋ ಗಾಲವೇನ ಪರಾಜಯಃ ॥8॥
ಗಾಲವನು ಹೇಗೆ ಹಠದಿಂದ ಪರಾಜಯವನ್ನು ಹೊಂದಿದನೆಂಬ ಪುರಾತನವಾದ ಈ ಇತಿಹಾಸವನ್ನು ತಿಳಿದವರು ಹೇಳುತ್ತಾರೆ.
ವಿಶ್ವಾಮಿತ್ರಂ ತಪಸ್ಯಂತಂ ಧರ್ಮೋ ಜಿಜ್ಞಾಸಯಾ ಪುರಾ |
ಅಭ್ಯಾಗಚ್ಛತ್ ಸ್ವಯಂ ಭೂತ್ವಾ ವಸಿಷ್ಠೋ ಭಗವಾನೃಷಿಃ ॥9॥
ಸಪ್ತರ್ಷೀಣಾಮನ್ಯತಮಂ ವೇಷಮಾಸ್ಥಾಯ ಭಾರತ |
ಬುಭುಕ್ಷುಃ ಕ್ಷುಧಿತೋ ರಾಜನ್ನಾಶ್ರಮಂ ಕೌಶಿಕಸ್ಯ ತು ॥10॥
ತಪಸ್ಸನ್ನು ಮಾಡುತ್ತಿದ್ದ ವಿಶ್ವಾಮಿತ್ರನನ್ನು ಚೆನ್ನಾಗಿ ತಿಳಿಯಲು ಹಿಂದೆ ಯಮಧರ್ಮನೇ ಸಪ್ತರ್ಷಿಗಳಲ್ಲಿ ಒಬ್ಬರಾದ ವಸಿಷ್ಠರ ವೇಷವನ್ನು ಧರಿಸಿ ಸ್ವಯಂ ಬಂದನು. ಎಲೈ ಭಾರತನೇ, ರಾಜನೇ, ಅವನು ಹಸಿದು, ನೀರಡಿಕೆಯಿಂದ ಕೂಡಿದವನಾಗಿ ವಿಶ್ವಾಮಿತ್ರರ ಆಶ್ರಮಕ್ಕೆ ಬಂದನು.
ವಿಶ್ವಾಮಿತ್ರೋಽಥ ಸಂಭ್ರಾಂತಃ ಶ್ರಪಯಾಮಾಸ ವೈ ಚರುಮ್ |
ಪರಮಾನ್ನಂ ಸ ಯತ್ನೇನ ನ ಚ ತಂ ಪ್ರತ್ಯಪಾಲಯತ್ ॥11॥
ಅನಂತರ ವಿಶ್ವಾಮಿತ್ರರು ಗಾಬರಿಯಿಂದ ಪ್ರಯತ್ನಪೂರ್ವಕವಾಗಿ ಚರುವನ್ನೂ ಮತ್ತು ಪರಮಾನ್ನವನ್ನೂ ಸಿದ್ಧಪಡಿಸಿದರು. ಆದರೆ ಧರ್ಮನು ಬರಲಿಲ್ಲ.
ಅನ್ನಂ ತೇನ ತದಾ ಭುಕ್ತಮನ್ಯೈರ್ದತ್ತಂ ತಪಸ್ವಿಭಿಃ |
ಅಥ ಗೃಹ್ಯಾನ್ನಮತ್ಯುಷ್ಣಂ ವಿಶ್ವಾಮಿತ್ರೋಽಪ್ಯುಪಾಗಮತ್ ॥12॥
ಧರ್ಮನು ಬೇರೆ ತಪಸ್ವಿಗಳು ಕೊಟ್ಟ ಅನ್ನವನ್ನು ಆಗ ಸ್ವೀಕಾರ ಮಾಡಿದನು. ಆ ವೇಳೆಗೆ (ಧರ್ಮನು ಭೋಜನ ಮಾಡುತ್ತಿದ್ದ ವೇಳೆಗೆ) ವಿಶ್ವಾಮಿತ್ರರು ಬಿಸಿಯಾದ ಅನ್ನವನ್ನು ತೆಗೆದುಕೊಂಡು ಬಂದರು.
ಭುಕ್ತಂ ಮೇ ತಿಷ್ಠ ತಾವತ್ ತ್ವಮ್ ಇತ್ಯುಕ್ತ್ವಾ ಭಗವಾನ್ ಯಯೌ|
ವಿಶ್ವಾಮಿತ್ರಸ್ತತೋ ರಾಜನ್ ಸ್ಥಿತ ಏವ ಮಹಾದ್ಯುತಿಃ ॥13॥
ನನ್ನ ಭೋಜನವು ಮುಗಿಯಿತು. ಸ್ವಲ್ಪ ಸಮಯ ಕಾಯುತ್ತಿರು ಎಂದು ಹೇಳಿ ಪೂಜ್ಯನಾದ ಧರ್ಮನು ಹೊರಟು ಹೋದನು. ಎಲೈ ರಾಜನೇ, ಮಹಾದ್ಯುತಿಯುಳ್ಳ ವಿಶ್ವಾಮಿತ್ರರು ಹಾಗೆಯೇ ನಿಂತರು.
ಭಕ್ತಂ ಪ್ರಗೃಹ್ಯ ಮೂರ್ಧ್ನಾ ವೈ ಬಾಹುಭ್ಯಾಂ ಪಾರ್ಶ್ವತೋ ವಹನ್ |
ಸ್ಥಿತಃ ಸ್ಥಾಣುರಿವಾಭ್ಯಾಶೇ ನಿಶ್ಚೇಷ್ಟೋ ಮರುತಾಶನಃ ॥14॥
ತಲೆಯ ಮೇಲೆ ಆಹಾರವನ್ನು ಹೊತ್ತು ಆ ಪಾತ್ರೆಯನ್ನು ಎರಡು ಕೈಗಳಿಂದಲೂ ಪಕ್ಕದಲ್ಲಿ ಹಿಡಿದು ಮರದ ತುಂಡಿನಂತೆ ನಿಶ್ಚೇಷ್ಟರಾಗಿ ಕೇವಲ ವಾಯುಭಕ್ಷರಾಗಿ ನಿಂತರು.
ತಸ್ಯ ಶುಶ್ರೂಷಣೇ ಯತ್ನಮಕರೋದ್ ಗಾಲವೋ ಮುನಿಃ |
ಗೌರವಾದ್ ಬಹುಮಾನಾಚ್ಚ ಹಾರ್ದೇನ ಪ್ರಿಯಕಾಮ್ಯಯಾ ॥15॥
ಗಾಲವ ಋಷಿಗಳು ವಿಶ್ವಾಮಿತ್ರರ ಮೇಲಿನ ಗೌರವದಿಂದ ಮತ್ತು ಬಹುಮಾನದಿಂದ ಅವರಿಗೆ ಪ್ರಿಯವನ್ನು ಉಂಟುಮಾಡಬೇಕು ಎನ್ನುವ ಮನಸ್ಸಿನಿಂದಲೂ ಪ್ರಯತ್ನ ಪೂರ್ವಕವಾಗಿ ಅವರ ಶುಶ್ರೂಷೆಯನ್ನು ಮಾಡಿದರು.
ಅಥ ವರ್ಷಶತೇ ಪೂರ್ಣೇ ಧರ್ಮಃ ಪುನರುಪಾಗಮತ್ |
ವಾಶಿ(ಸಿ)ಷ್ಠಂ ವೇಷಮಾಸ್ಥಾಯ ಕೌಶಿಕಂ ಭೋಜನೇಪ್ಸಯಾ ॥16॥
ಒಂದು ನೂರು ವರ್ಷಗಳು ಕಳೆದ ಮೇಲೆ ಧರ್ಮನು ಪುನಃ ವಸಿಷ್ಠರೂಪವನ್ನು ಧರಿಸಿ ಭೋಜನವನ್ನು ಬಯಸಿ ವಿಶ್ವಾಮಿತ್ರರ ಬಳಿಗೆ ಬಂದನು.
ಸ ದೃಷ್ಟ್ವಾ ಶಿರಸಾ ಭಕ್ತಂ ಧ್ರಿಯಮಾಣಂ ಮಹರ್ಷಿಣಾ |
ತಿಷ್ಠತಾ ವಾಯುಭಕ್ಷೇಣ ವಿಶ್ವಾಮಿತ್ರೇಣ ಧೀಮತಾ ॥17॥
ಪ್ರತಿಗೃಹ್ಯ ತತೋ ಧರ್ಮಃ ತಥೈವೋಷ್ಣಂ ತಥಾ ನವಮ್ |
ಭುಕ್ತ್ವಾ ಪ್ರೀತೋಽಸ್ಮಿ ವಿಪ್ರೇತಿ ತಮುಕ್ತ್ವಾ ಸ ಮುನಿರ್ಗತಃ ॥18॥
ಮಹರ್ಷಿಗಳೂ, ಮೇಧಾವಿಗಳೂ ಆದ ವಿಶ್ವಾಮಿತ್ರರು ಕೇವಲ ವಾಯುಭಕ್ಷರಾಗಿ ನಿಂತು ತಲೆಯ ಮೇಲೆ ಹಿಡಿದಿದ್ದ ಆಹಾರವನ್ನು ಸ್ವೀಕರಿಸಿ ಹಾಗೆಯೇ ಹೊಸದಾಗಿಯೂ ಮತ್ತು ಬಿಸಿಯಾಗಿಯೂ ಇದ್ದ ಆ ಅನ್ನವನ್ನು ತಿಂದು ಬ್ರಾಹ್ಮಣನೇ, ನಾನು ಪ್ರಸನ್ನನಾಗಿದ್ದೇನೆ ಎಂದು ವಿಶ್ವಾಮಿತ್ರರಿಗೆ ಹೇಳಿ ಹೊರಟು ಹೋದನು.
ಕ್ಷತ್ರಭಾವಾದಪಗತೋ ಬ್ರಾಹ್ಮಣತ್ವಮುಪಾಗತಃ |
ಧರ್ಮಸ್ಯ ವಚನಾತ್ ಪ್ರೀತೋ ವಿಶ್ವಾಮಿತ್ರಸ್ತದಾಽಭವತ್ ॥19॥
ಕ್ಷತ್ರಿಯಭಾವವನ್ನು ಕಳೆದುಕೊಂಡು ಬ್ರಾಹ್ಮಣತ್ವವನ್ನು ಪಡೆದ ವಿಶ್ವಾಮಿತ್ರರು ಆಗ ಧರ್ಮನ ವಚನದಿಂದ ಸಂತೋಷಗೊಂಡರು.
ವಿಶ್ವಾಮಿತ್ರಸ್ತು ಶಿಷ್ಯಸ್ಯ ಗಾಲವಸ್ಯ ತಪಸ್ವಿನಃ |
ಶಿಶ್ರೂಷಯಾ ಚ ಭಕ್ತ್ಯಾ ಚ ಪ್ರೀತಿಮಾನಿತ್ಯುವಾಚ ಹ ॥20॥
ಅನುಜ್ಞಾತೋ ಮಯಾ ವತ್ಸ ಯಥೇಚ್ಛಂ ಗಚ್ಛ ಗಾಲವ ॥21॥
ವಿಶ್ವಾಮಿತ್ರರಾದರೂ ಶಿಷ್ಯರಾದ ತಪಸ್ವಿಗಳಾದ ಗಾಲವರ ಶುಶ್ರೂಷೆಯಿಂದಲೂ ಮತ್ತು ಭಕ್ತಿಯಿಂದಲೂ ಸಂತೋಷಗೊಂಡವರಾಗಿ

ಅವರನ್ನು ಕುರಿತು `ಎಲೈ ವತ್ಸ ಗಾಲವನೇ, ನಾನು ಅನುಮತಿಯನ್ನು ಕೊಟ್ಟಿದ್ದೇನೆ, ನೀನು ಹಿಂದಿರುಗು' ಎಂದು ಹೇಳಿದರು.
ನಾರದಃ
ಇತ್ಯುಕ್ತಃ ಪ್ರತ್ಯುವಾಚೇದಂ ಗಾಲವೋ ಮುನಿಸತ್ತಮಮ್ |
ಪ್ರೀತೋ ಮಧುರಯಾ ವಾಚಾ ವಿಶ್ವಾಮಿತ್ರಂ ಮಹಾದ್ಯುತಿಮ್ ॥22॥
ನಾರದ ಹೀಗೆ ಹೇಳಲ್ಪಟ್ಟ ಗಾಲವರು ಮುನಿಶ್ರೇಷ್ಠರೂ, ಮಹಾಕಾಂತಿವಂತರೂ ಆದ ವಿಶ್ವಾಮಿತ್ರರನ್ನು ಕುರಿತು ಸಂತೋಷದಿಂದ ಮತ್ತು ಮಧುರವಾದ ಮಾತುಗಳಿಂದ ಹೀಗೆ ಹೇಳಿದರು.
ದಕ್ಷಿಣಾಃ ಕಾಃ ಪ್ರಯಚ್ಛಾಮಿ ಭವತೇ ಗುರುಕರ್ಮಣಿ |
ದಕ್ಷಿಣಾಭಿರುಪೇತಂ ಹಿ ಕರ್ಮ ಸಿದ್ಧ್ಯತಿ ಮಾನವಮ್ ॥23॥
ತಾವು ಮಾಡಿಸಿದ ಅಧ್ಯಯನಕ್ಕೆ ಗುರುದಕ್ಷಿಣೆಯಾಗಿ ಏನನ್ನು ಕೊಡಲಿ? ದಕ್ಷಿಣೆಗಳಿಂದ ಕೂಡಿದ ಕರ್ಮವೇ ಮನುಷ್ಯನಿಗೆ ಫಲಸಿದ್ಧಿಯನ್ನು ಉಂಟು ಮಾಡಿಕೊಡುವುದಷ್ಟೆ!
ದಕ್ಷಿಣಾನಾಂ ವಿಸೃಷ್ಟಾನಾಮ್ ಅಪವರ್ಗೇಣ ಭುಜ್ಯತೇ |
ಸ್ವರ್ಗೇ ಕ್ರತುಫಲಂ ಸದ್ಭಿರ್ದಕ್ಷಿಣಾ ಶಾಂತಿರುಚ್ಯತೇ ॥24॥
ಕಿಮಾಹರಾಮಿ ಗುರ್ವರ್ಥಂ ಬ್ರವೀತು ಭಗವಾನಿತಿ ॥25॥
ದಕ್ಷಿಣೆಗಳನ್ನು ಕೊಟ್ಟವನು ಸ್ವರ್ಗದಲ್ಲಿ ಯಾಗದ ಫಲವನ್ನು ಭೋಗಿಸುತ್ತಾನೆ. ಸಜ್ಜನರು ದಕ್ಷಿಣೆಯನ್ನೇ ಶಾಂತಿ ಎಂದು ಹೇಳುತ್ತಾರೆ. ನಾನು ಗುರುದಕ್ಷಿಣೆಯನ್ನಾಗಿ ಏನನ್ನು ಕೊಡಲಿ ಎಂದು ಪೂಜ್ಯರು ಹೇಳಬೇಕು (ಎಂದು ಹೇಳಿದರು).
ನಾರದಃ
ಜಾನಮಾನಶ್ಚ ಭಗವಾನ್ ಖಿನ್ನಂ ಶಿಶ್ರೂಷಣೇನ ಚ |
ವಿಶ್ವಾಮಿತ್ರಮಸಕೃದ್ ಗಚ್ಛ ಗಚ್ಛೇತ್ಯಚೋದಯತ್ ॥26॥
ನಾರದ ಪೂಜ್ಯರಾದ ವಿಶ್ವಾಮಿತ್ರರು, ಶಿಷ್ಯನು ತಮ್ಮ ಸೇವೆಯಿಂದ ಬಳಲಿದ್ದಾನೆಂದು ತಿಳಿದು ಅನೇಕ ಬಾರಿ ನೀನು ಸುಮ್ಮನೆ ಹೋಗು, ಹೋಗು ಎಂದು ಪ್ರೇರಿಸಿದರು.
ಅಸಕೃದ್ ಗಚ್ಛ ಗಚ್ಛೇತಿ ವಿಶ್ವಾಮಿತ್ರೇಣ ಭಾಷಿತಃ |
ಕಿಂ ದದಾನೀತಿ ಬಹುಶೋ ಗಾಲವಃ ಪ್ರತ್ಯಭಾಷತ ॥27॥
ಅನೇಕ ಬಾರಿ ವಿಶ್ವಾಮಿತ್ರರಿಂದ ನೀನು ಹೋಗು, ಹೋಗು ಎಂಬ ಮಾತನ್ನು ಕೇಳಿದರೂ ಅನೇಕ ಬಾರಿ ಏನು ಕೊಡಲಿ? ಏನು ಕೊಡಲಿ? ಎಂದೇ ಗಾಲವರು ಕೇಳಿದರು.
ನಿರ್ಬಂಧತಸ್ತು ಬಹುಶೋ ಗಾಲವಸ್ಯ ತಪಸ್ವಿನಃ |
ಕಿಂಚಿದಾಗತಸಂರಂಭೋ ವಿಶ್ವಾಮಿತ್ರೋಽಬ್ರವೀದಿದಮ್ ॥28॥
ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚಂದ್ರವರ್ಚಸಾಮ್ |
ಅಷ್ಟೌ ಶತಾನಿ ಮೇ ದೇಹಿ ಗಚ್ಛ ಗಾಲವ ಮಾಚಿರಮ್ ॥29॥
ತಪಸ್ವಿಗಳಾದ ಗಾಲವರು ಪುನಃ ಪುನಃ ಆಡಿದ ಒತ್ತಾಯದ ಮಾತುಗಳಿಂದ ಸ್ವಲ್ಪ ಕೋಪಗೊಂಡ ವಿಶ್ವಾಮಿತ್ರರು ಹೀಗೆ ಹೇಳಿದರು `ಪೂರ್ಣವಾಗಿ ಚಂದ್ರನಂತೆ ಬಿಳಿಯ ಬಣ್ಣವನ್ನು ಹೊಂದಿ ಒಂದು ಕಿವಿಯು ಮಾತ್ರ ಕಪ್ಪಾಗಿರುವ ಎಂಟುನೂರು ಅಶ್ವಗಳನ್ನು ತೆಗೆದುಕೊಂಡು ಬಂದು ಕೊಡು. ಗಾಲವನೇ, ಬೇಗ ಹೋಗು'.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಾಧಿಕಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಷಟ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಆರನೆಯ ಅಧ್ಯಾಯ
ಅಶ್ವಗಳನ್ನು ಪಡೆಯುವ ಉಪಾಯವನ್ನು ಕಾಣದೆ ಗಾಲವರಿಂದ ವಿಷ್ಣುವಿನ ಉಪಾಸನೆಯನ್ನು ಮಾಡಲು ನಿರ್ಧಾರ. ಸ್ನೇಹಿತನಾದ ಗರುಡನಿಂದ ಅವರ ಅಭಿಮತದೇಶಪ್ರಾಪ್ತಿ.
ನಾರದಃ
ಏವಮುಕ್ತಸ್ತದಾ ತೇನ ವಿಶ್ವಾಮಿತ್ರೇಣ ಧೀಮತಾ |
ನಾಸ್ತೇ ನ ಶೇತೇ ನಾಹಾರಂ ಕುರುತೇ ಗಾಲವಸ್ತದಾ ॥1॥
ನಾರದ ಮೇಧಾವಿಗಳಾದ ವಿಶ್ವಾಮಿತ್ರರಿಂದ ಹೀಗೆ ಹೇಳಲ್ಪಟ್ಟ ಗಾಲವರು ಆಗ ಕುಳಿತುಕೊಳ್ಳಲಿಲ್ಲ, ನಿದ್ರೆಯನ್ನು ಮಾಡಲಿಲ್ಲ ಮತ್ತು ಆಹಾರವನ್ನೂ ಸೇವಿಸಲಿಲ್ಲ.
ತ್ವಗಸ್ಥಿಭೂತೋ ಹರಿಣಃ ಚಿಂತಾಶೋಕಪರಾಯಣಃ |
ಶೋಚಮಾನೋಽತಿಮಾತ್ರಂ ಸ ದಹ್ಯಮಾನಶ್ಚ ಮನ್ಯುನಾ ॥2॥
ಗಾಲವೋ ದುಃಖಿತೋ ದುಃಖಾದ್ ವಿಲಲಾಪ ಸುಯೋಧನ ॥3॥
ಕೇವಲ ಚರ್ಮಾಸ್ಥಿಗಳುಳ್ಳ ಶರೀರವುಳ್ಳವರಾಗಿ, ಬಿಳಿಯ ಬಣ್ಣಕ್ಕೆ ತಿರುಗಿ, ಚಿಂತಾಶೋಕ ಪರಾಯಣರಾಗಿ ಶೋಕದಿಂದಲೂ ಮತ್ತು

ತಮ್ಮ ಮೇಲಿನ ಕೋಪದಿಂದಲೂ ಸುಟ್ಟು ಹೋಗುತ್ತಾ ಬಹಳ ದುಃಖಿತರಾಗಿ ಎಲೈ ಸುಯೋಧನನೇ, ದುಃಖದಿಂದ ವಿಲಾಪವನ್ನು ಮಾಡಿದರು.
ಗಾಲವಃ
ಕುತಃ ಪುಷ್ಟಾನಿ ಮಿತ್ರಾಣಿ ಕುತೋಽರ್ಥಾಃ ಸಂಚಯಃ ಕುತಃ |
ಹಯಾನಾಂ ಚಂದ್ರಶುಭ್ರಾಣಾಂ ಶತಾನ್ಯಷ್ಟೌ ಕುತೋ ಮಮ ॥4॥
ಗಾಲವ ನಾನು ಸ್ನೇಹಿತರನ್ನು ಹೇಗೆ ಸಂತೋಷಪಡಿಸಲಿ? ನನಗೆ ಧನವು ಎಲ್ಲಿಂದ? ಧನದ ಸಂಚಯವು ಎಲ್ಲಿಂದ? ಚಂದ್ರನಂತೆ ಶುಭ್ರವಾದ ಎಂಟುನೂರು ಕುದುರೆಗಳು ನನಗೆ ಎಲ್ಲಿಂದ?
ಕುತೋ ಮೇ ಭೋಜನೇ ಶ್ರದ್ಧಾ ಸುಖಶ್ರದ್ಧಾ ಕುತಶ್ಚ ಮೇ |
ಶ್ರದ್ಧಾ ಮೇ ಜೀವಿತಸ್ಯಾಪಿ ಕಿಂ ಫಲಂ ಜೀವಿತೇನ ಮೇ ॥5॥
ನಾನು ಭೋಜನವನ್ನು ಮಾಡುವುದಕ್ಕೆ ಏಕೆ ಬಯಸಬೇಕು? ನನಗೆ ಸುಖದ ಆಸೆಯಾದರೂ ಏತಕ್ಕೆ? ಬದುಕುವ ಬಯಕೆಯಾದರೂ ಏತಕ್ಕೆ? ನಾನು ಬದುಕಿ ಏನು ಪ್ರಯೋಜನ?
ಅಹಂ ಪಾರಂ ಸಮುದ್ರಸ್ಯ ಪೃಥಿವ್ಯಾ ವಾ ಪರಾತ್ ಪರಮ್ |
ಗತ್ವಾಽಽತ್ಮಾನಂ ವಿಮುಂಚಾಮಿ ಕಿಂ ಫಲಂ ಜೀವಿತಸ್ಯ ಮೇ ॥6॥
ನಾನು ಸಮುದ್ರದ ಅಥವಾ ಭೂಮಿಯ ದೂರದ ದಡಕ್ಕೆ ಹೋಗಿ ಶರೀರವನ್ನು ತ್ಯಜಿಸುತ್ತೇನೆ. ನಾನು ಬದುಕಿ ಏನು ಪ್ರಯೋಜನ?
ಅಧನಸ್ಯಾಕೃತಾರ್ಥಸ್ಯ ತ್ಯಕ್ತಸ್ಯ ವಿವಿಧೈಃ ಫಲೈಃ |
ಋಣಂ ಧಾರಯಮಾಣಸ್ಯ ಕುತಃ ಸುಖಮನೀಹಯಾ ॥7॥
ನಿರ್ಧನನಾದ, ಮಾಡಬೇಕಾದ ಕಾರ್ಯವನ್ನು ಮಾಡದಿರುವ, ವಿವಿಧ ಫಲಗಳಿಂದ ವಂಚಿತನಾದ, ಸಾಲವನ್ನು ಹೊತ್ತುಕೊಂಡಿರುವ ನನಗೆ ಅನಾಯಾಸವಾಗಿ ಸುಖವು ಎಲ್ಲಿಂದ ಬರಬೇಕು?
ಸುಹೃದಾಂ ಹಿ ಧನಂ ಭುಕ್ತ್ವಾ ಕೃತ್ವಾ ಪ್ರಣಯಮೀಪ್ಸಿತಮ್ |
ಪ್ರತಿಕರ್ತುಮಶಕ್ತಸ್ಯ ಜೀವಿತಾನ್ಮರಣಂ ವರಮ್ ॥8॥
ಮಿತ್ರರ ಧನವನ್ನು ಭೋಗಿಸಿ, ಇಷ್ಟವಾದ ಸ್ನೇಹವನ್ನು ಮಾಡಿ, ಪ್ರತ್ಯುಪಕಾರವನ್ನು ಮಾಡಲು ಅಸಮರ್ಥನಾದವನಿಗೆ ಜೀವನಕ್ಕಿಂತ ಮರಣವೇ ಶ್ರೇಷ್ಠವಾದುದು.
ಪ್ರತಿಶ್ರುತ್ಯ ಕರಿಷ್ಯೇತಿ ಕರ್ತವ್ಯಂ ತದಕುರ್ವತಃ |
ಮಿಥ್ಯಾವಚನದಗ್ಧಸ್ಯ ಇಷ್ಟಾಪೂರ್ತಂ ಪ್ರಣಶ್ಯತಿ ॥9॥
ನಾನು ಮಾಡುತ್ತೇನೆ ಎಂದು ಅತಿಶಯವಾಗಿ ಪ್ರತಿಜ್ಞೆಯನ್ನು ಮಾಡಿ ಆ ಕಾರ್ಯವನ್ನು ಮಾಡದೆ ಮಿಥ್ಯಾವಚನದಿಂದ ದಗ್ಧನಾದವನಿಗೆ ಇಷ್ಟಾಪೂರ್ತಗಳು ನಾಶವನ್ನು ಹೊಂದುತ್ತವೆ.
ನ ರೂಪಮನೃತಸ್ಯಾಸ್ತಿ ನಾನೃತಸ್ಯಾಸ್ತಿ ಸಂತತಿಃ |
ನಾನೃತಸ್ಯಾಧಿಪತ್ಯಂ ಚ ಕುತ ಏವ ಗತಿಃ ಶುಭಾ ॥10॥
ಸುಳ್ಳನ್ನು ಆಡುವ ಮನುಷ್ಯನಿಗೆ ಒಳ್ಳೆಯ ರೂಪವಿರುವುದಿಲ್ಲ, ಸಂತತಿಯು ಇರುವುದಿಲ್ಲ, ಆಧಿಪತ್ಯವು ಇರುವುದಿಲ್ಲ, ಸದ್ಗತಿಯು ಹೇಗೆ ಉಂಟಾದೀತು?
ಕುತಃ ಕೃತಘ್ನಸ್ಯ ಯಶಃ ಕುತಃ ಸ್ಥಾನಂ ಕುತಃ ಸುಖಮ್ |
ಅಶ್ರದ್ಧೇಯಃ ಕೃತಘ್ನೋ ಹಿ ಕೃತ್ನೇ ನಾಸ್ತಿ ನಿಷ್ಕೃತಿಃ ॥11॥
ಕೃತಘ್ನನಾದವನಿಗೆ ಕೀರ್ತಿಯು ಎಲ್ಲಿಂದ ಬಂದೀತು? ಆಶ್ರಯವು ಎಲ್ಲಿಂದ? ಸುಖವು ಎಲ್ಲಿಂದ? ಕೃತಘ್ನನನ್ನು ಯಾರೂ ನಂಬುವುದಿಲ್ಲ. ಕೃತಘ್ನನಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ.
ನ ಜೀವತ್ಯಧನಃ ಪಾಪಃ ಕುತಃ ಪಾಪಸ್ಯ ಸಾ ಘೃಣಾ |
ಪಾಪೋ ಧ್ರುವಮವಾಪ್ನೋತಿ ವಿನಾಶಂ ನಾಶಯನ್ ಕೃತಮ್ ॥12॥
ನಿರ್ಧನನಾದವನು ಪಾಪಿಯಾಗಿ ಜೀವಿಸುವುದಿಲ್ಲ. ಪಾಪಿಯ ಮೇಲೆ ಇನ್ನೊಬ್ಬರ ಕರುಣೆ ಹೇಗಿರುತ್ತದೆ? ಪಾಪವನ್ನು ಮಾಡುವವನು ತಾನು ಮಾಡಿದ ಪುಣ್ಯಕರ್ಮಗಳನ್ನು ನಾಶ ಮಾಡಿಕೊಂಡು ನಿಶ್ಚಯವಾಗಿ ವಿನಾಶವನ್ನು ಹೊಂದುತ್ತಾನೆ.
ಸೋಽಹಂ ಪಾಪಃ ಕೃತಘ್ನಶ್ಚ ಕೃಪಣಶ್ಚಾನೃತೋಽಪಿ ಚ |
ಗುರೋರ್ಯಃ ಕೃತಕಾರ್ಯಃ ಸನ್ ತತ್ ಕರೋಮಿ ನ ಭಾಷಿತಮ್ ॥
ನಾನು ಪಾಪಿ, ಕೃತಘ್ನ, ಲೋಭಿ, ಸುಳ್ಳು ಮಾತನಾಡುವವನು. ಏಕೆಂದರೆ ಗುರುಗಳಿಂದ ಉಪಕಾರವನ್ನು ಪಡೆದು ಅವರಿಗೆ ಕೊಟ್ಟ ಮಾತನ್ನು ನಾನು ನಡೆಸುತ್ತಿಲ್ಲ.
ಸೋಽಹಂ ಪ್ರಾಣಾನ್ ವಿಮೋಕ್ಷ್ಯಾಮಿ ಕೃತ್ವಾ ಯತ್ನಮನುತ್ತಮಮ್ |
ಅರ್ಥಿತಾ ನ ಮಯಾ ಕಾಚಿತ್ ಕೃತಪೂರ್ವಾ ದಿವೌಕಸಾಮ್ ॥14॥
ಮಾನಯಂತಿ ಚ ಮಾಂ ಸರ್ವೇ ತ್ರಿದಶಾ ಯಜ್ಞಸಂಸ್ತರೇ ॥15॥
ಆದ್ದರಿಂದ ನಾನು ಶ್ರೇಷ್ಠವಾದ ಪ್ರಯತ್ನವನ್ನು ಮಾಡಿ ಪ್ರಾಣವನ್ನು ತೊರೆಯುವೆನು. ನಾನು ಹಿಂದೆ ದೇವತೆಗಳನ್ನು ಏನನ್ನೂ ಬೇಡಲಿಲ್ಲ. ದೇವತೆಗಳೆಲ್ಲರೂ ನನ್ನನ್ನು ಯಜ್ಞಭೂಮಿಯಲ್ಲಿ ಗೌರವಿಸುತ್ತಾರೆ.
ಅಹಂ ತು ವಿಬುಧಶ್ರೇಷ್ಠಂ ದೇವಂ ತ್ರಿಭುವನೇಶ್ವರಮ್ |
ವಿಷ್ಣುಂ ಗಚ್ಛಾಮ್ಯಹಂ ಕೃಷ್ಣಂ ಗತಿಂ ಗತಿಮತಾಂ ವರಮ್ ॥16॥
ನಾನು ವಿಬುಧಶ್ರೇಷ್ಠನಾದ ತ್ರಿಭುವನೇಶ್ವರನಾದ ಗತಿಯನ್ನು ಅಪೇಕ್ಷಿಸುವವರಿಗೆ ಶ್ರೇಷ್ಠನಾದ ವಿಷ್ಣುವಾದ ಕೃಷ್ಣನನ್ನು ಶರಣು

ಹೊಂದುವೆನು.
ಭೋಗಾ ಯಸ್ಮಾತ್ ಪ್ರವರ್ತಂತೇ ಪ್ರಾಪ್ಯ ಸರ್ವಾನ್ ಸುರಾಸುರಾನ್ |
ಪ್ರಯತೋ ದ್ರಷ್ಟುಮಿಚ್ಛಾಮಿ ಕೃಷ್ಣಂ ಯೋಗಿನಮವ್ಯಯಮ್ ||17||
ಸುರಾಸುರರೆಲ್ಲರಿಗೂ ಭೋಗಗಳು ಯಾವನ ಅನುಗ್ರಹದಿಂದ ಉಂಟಾಗುತ್ತವೆಯೋ ಅಂತಹ ಯೋಗಿಯೂ ಮತ್ತು ಶಾಶ್ವತನೂ ಆದ ಕೃಷ್ಣನನ್ನು ನಿಯಮಬದ್ಧನಾಗಿ ನೋಡಲು ಬಯಸುತ್ತೇನೆ.
ನಾರದಃ
ಏವಮುಕ್ತೇ ಸಖಾ ತಸ್ಯ ಗರುಡೋ ವಿನತಾಸುತಃ |
ದರ್ಶಯಾಮಾಸ ತಂ ಪ್ರಾಹ ಸಂಹೃಷ್ಟಃ ಪ್ರಿಯಕಾಮ್ಯಯಾ ||18||
ನಾರದ ಹೀಗೆ ಅವನು ಹೇಳುತ್ತಿರಲು ಅವನ ಸ್ನೇಹಿತನಾದ ವಿನತಾಪುತ್ರನಾದ ಗರುಡನು ಅವನಿಗೆ ಪ್ರಿಯವನ್ನು ಮಾಡಲು ಬಯಸಿ ತನ್ನನ್ನು ತೋರಿಸಿಕೊಂಡು ಸಂತೋಷದಿಂದ ಈ ಮಾತುಗಳನ್ನು ಹೇಳಿದನು.
ಗರುಡಃ
ಸುಹೃದ್ಭವಾನ್ ಮಮ ಮತಃ ಸುಹೃದಾಂ ಚ ಮತಃ ಸುಹೃತ್ |
ಈಪ್ಸಿತೇನಾಭಿಲಾಷೇಣ ಯೋಕ್ತವ್ಯೋ ವಿಭವೇ ಸತಿ ||19||
ಗರುಡ ನೀನು ನನ್ನ ಸ್ನೇಹಿತನಾಗಿದ್ದೀಯೆ. ಸ್ನೇಹಿತನೆಂದು ತಿಳಿಯಲ್ಪಡುವವನು ಅವನಿಗೆ ಸಾಮರ್ಥ್ಯವಿದ್ದರೆ ಸ್ನೇಹಿತನಿಗೆ ಈಪ್ಸಿತವಾದ ಫಲವನ್ನು ಉಂಟುಮಾಡಬೇಕು.
ವಿಭವಶ್ಚಾಸ್ತಿ ಮೇ ವಿಪ್ರ ವಾಸವಾವರಜೋ ದ್ವಿಜ |
ಪೂರ್ವಮುಕ್ತಸ್ತ್ವದರ್ಥಂ ಚ ಕೃತಃ ಕಾಮಶ್ಚ ತೇನ ಮೇ ||20||
ಎಲೈ ಬ್ರಾಹ್ಮಣನೇ, ನನಗೆ ಅಂತಹ ಸಾಮರ್ಥ್ಯವಿದೆ. ಎಲೈ ಬ್ರಾಹ್ಮಣನೇ, ವಿಷ್ಣುವು ಹಿಂದೆ ನನ್ನ ಆಸೆಗಳನ್ನು ನೆರವೇರಿಸಿದ್ದಾನೆ. ನಿನ್ನ ಸಲುವಾಗಿ ಹಿಂದೆ ನಾನು ಅವನ ಬಳಿಯಲ್ಲಿ ಮಾತನಾಡಿದ್ದೇನೆ.
ಸ ಭವಾನೇತು ಗಚ್ಛಾವ ನಯಿಷ್ಯೇ ತ್ವಾಂ ಯಥೇಪ್ಸಿತಮ್ |
ದೇಶಂ ಪಾರಂ ಪೃಥಿವ್ಯಾ ವಾ ಗಚ್ಛ ಗಾಲವ ಮಾಚಿರಮ್ ||21||
ಆದ್ದರಿಂದ ನೀನು ಬಾ. ನಾನು ನೀನು ಇಷ್ಟಪಟ್ಟ ದೇಶಕ್ಕೆ ಅಥವಾ ಭೂಮಿಯ ಆಚೆಯ ದಡಕ್ಕೆ ನಿನ್ನನ್ನು ಕರೆದುಕೊಂಡು ಹೋಗುವೆನು. ಗಾಲವನೇ, ನನ್ನ ಜೊತೆಯಲ್ಲಿ ಬಾ, ತಡಮಾಡಬೇಡ (ಎಂದು ಹೇಳಿದನು).
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಡಧಿಕಶತತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ಸಪ್ತತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಆರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಏಳನೆಯ ಅಧ್ಯಾಯ
ಗರುಡನಿಂದ ಗಾಲವರಿಗೆ ಪೂರ್ವದಿಕ್ಕಿನ ಗುಣವರ್ಣನೆ
ಸುಪರ್ಣಃ
ಅನುಶಿಷ್ಟೋಽಸ್ಮಿ ದೇವೇನ ಗಾಲವ ಜ್ಞಾನಯೋನಿನಾ |
ಬ್ರೂಹಿ ಕಾಮಂ ತು ಕಾಂ ಯಾಮಿ ದ್ರಷ್ಟುಂ ಪ್ರಥಮತೋ ದಿಶಮ್ ||
ಪೂರ್ವಾಂ ವಾ ದಕ್ಷಿಣಾಂ ವೇಮಾಮಥವಾ ಪಶ್ಚಿಮಾಂ ದಿಶಮ್ |
ಉತ್ತರಾಂ ವಾ ದ್ವಿಜಶ್ರೇಷ್ಠ ಕುತೋ ಗಚ್ಛಾಮಿ ಗಾಲವ ||2||
ಸುಪರ್ಣ ಎಲೈ ಗಾಲವನೇ, ಜ್ಞಾನಕಾರಣನಾದ ವಿಷ್ಣುವಿನಿಂದ ನಾನು ಶಿಕ್ಷಿತನಾಗಿದ್ದೇನೆ. ನಿನ್ನ ಆಸೆಯು ಏನಿದೆ ಎಂದು ಹೇಳು. ಮೊದಲು ಯಾವ ದಿಕ್ಕನ್ನು ನೋಡಲು ಹೋಗಲಿ? ಎಲೈ ಗಾಲವನೇ, ದ್ವಿಜಶ್ರೇಷ್ಠನೇ, ಪೂರ್ವದಿಕ್ಕಿಗೋ? ಅಥವಾ ಈ ದಕ್ಷಿಣ ದಿಕ್ಕಿಗೋ? ಪಶ್ಚಿಮ ದಿಕ್ಕಿಗೋ? ಅಥವಾ ಉತ್ತರದಿಕ್ಕಿಗೋ? (ಎಂದು ಹೇಳು).
ಯಸ್ಯಾಮುದಯತೇ ಪೂರ್ವಂ ಸರ್ವಲೋಕಪ್ರಭಾವನಃ |
ಸವಿತಾ ಯತ್ರ ಸಾಧ್ಯಾನಾಂ ಸಿದ್ಧಾನಾಂ ವರ್ಧತೇ ತಪಃ ||3||
ಯಸ್ಯಾಂ ಪೂರ್ವಂ ದ್ಯುತಿರ್ಜಾತಾ ಯಯಾ ವ್ಯಾಪ್ತಮಿದಂ ಜಗತ್ |
ಚಕ್ಷುಷೀ ಯತ್ರ ಧರ್ಮಸ್ಯ ಯತ್ರ ಧರ್ಮಃ ಪ್ರತಿಷ್ಠಿತಃ ||4||
ಹುತಂ ಯತೋ ಮುಖೇ ಹವ್ಯಂ ಸರ್ಪತೇ ಸರ್ವತೋದಿಶಮ್ |
ಏತದ್ ದ್ವಾರಂ ದ್ವಿಜಶ್ರೇಷ್ಠ ದಿವಸಸ್ಯ ತಥಾಽಧ್ವನಃ ||5||
ಸರ್ವಲೋಕಕ್ಕೂ ಪ್ರಭೆಯನ್ನುಂಟು ಮಾಡುವ ಸೂರ್ಯನು ಎಲ್ಲಿ ಮೊದಲು ಉದಯಿಸುತ್ತಾನೆಯೋ, ಎಲ್ಲಿ ಸಾಧ್ಯರ ಮತ್ತು ಸಿದ್ಧರ ತಪಸ್ಸು ಅಭಿವೃದ್ಧಿಯನ್ನು ಹೊಂದುತ್ತದೆಯೋ, ಎಲ್ಲಿ ಮೊದಲು ಉಂಟಾದ ಬೆಳಕಿನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗುತ್ತದೆಯೋ, ಎಲ್ಲಿ ಧರ್ಮದ ಚಕ್ಷುಸ್ಸುಗಳು ಇವೆಯೋ, ಎಲ್ಲಿ ಧರ್ಮವು ಪ್ರತಿಷ್ಠಿತವಾಗಿದೆಯೋ, ಎಲ್ಲಿ ಮುಖದಲ್ಲಿ ಹುತವಾದ ಹವಿಸ್ಸು ಎಲ್ಲ ದಿಕ್ಕುಗಳಲ್ಲಿಯೂ ಹರಡುತ್ತದೆಯೋ, ಎಲೈ ದ್ವಿಜಶ್ರೇಷ್ಠನೇ, ಅಂತಹ ಈ ಪೂರ್ವದಿಕ್ಕು ದಿವಸಕ್ಕೂ ಮತ್ತು ಮಾರ್ಗಕ್ಕೂ ದ್ವಾರವಾಗಿದೆ.
ಅತ್ರ ಪೂರ್ವಂ ಪ್ರಸೂತಾ ವೈ ದಾಕ್ಷಾಯಣ್ಯಸ್ತಥಾ ಸ್ತ್ರಿಯಃ |

ಯಸ್ಯಾಂ ದಿಶಿ ಪ್ರವೃದ್ಧಾಶ್ಚ ಕಾಶ್ಯಪಸ್ಯಾತ್ಮಸಂಭವಾಃ ॥6॥
ದಾಕ್ಷಾಯಿಣಿಯರಾದ ಸ್ತ್ರೀಯರೆಲ್ಲರೂ ಇಲ್ಲಿಯೇ ಮೊದಲು ಪ್ರಸೂತರಾದರು ಮತ್ತು ಕಾಶ್ಯಪರ ಮಕ್ಕಳಾಗಿ ಹುಟ್ಟಿದ ಅವರು ಈ ದಿಕ್ಕಿನಲ್ಲಿಯೇ ಬೆಳೆದರು.
ಯತೋಮೂಲಾ ಸುರಾಣಾಂ ಶ್ರೀಃ ಯತ್ರ ಶಕ್ರೋಽಭ್ಯಷಿಚ್ಯತ |
ಸುರರಾಜೇನ ವಿಪ್ರರ್ಷೇ ದೇವೈಶ್ಚಾತ್ರ ತಪಶ್ಚಿತಮ್ ॥7॥
ದೇವತೆಗಳ ಸಂಪತ್ತಿಗೆ ಇದೇ ಮೂಲವಾಗಿದೆ. ಇಂದ್ರನು ಇಲ್ಲಿಯೇ ಅಭಿಷಿಕ್ತನಾದನು. ವಿಪ್ರರ್ಷಿಯೇ, ದೇವೇಂದ್ರನೂ ಮತ್ತು ದೇವತೆಗಳೂ ಇಲ್ಲಿ ತಪಸ್ಸನ್ನು ಮಾಡಿದರು.
ಏತಸ್ಮಾತ್ ಕಾರಣಾತ್ ಬ್ರಹ್ಮನ್ ಪೂರ್ವೇತ್ಯೇಷಾ ದಿಗುಚ್ಯತೇ |
ಯಸ್ಮಾತ್ ಪೂರ್ವತರೇ ಕಾಲೇ ಪೂರ್ವಮೇಷಾ ವೃತಾ ಸುರೈಃ ॥8॥
ಎಲ್ಲೈ ಬ್ರಾಹ್ಮಣರೇ, ಆ ಕಾರಣದಿಂದ ಈ ದಿಕ್ಕಿಗೆ ಪೂರ್ವ ಎಂದು ಹೆಸರು. ಏಕೆಂದರೆ ಪೂರ್ವತರವಾದ ಕಾಲದಲ್ಲಿ ಈ ದಿಕ್ಕು ದೇವತೆಗಳಿಂದ ಮೊದಲು ಆರಿಸಲ್ಪಟ್ಟಿತು.
ಅತ ಏವ ಚ ಸರ್ವೇಷಾಂ ಪೂರ್ವಮಾಶಾಮವೇಕ್ಷತಾಮ್ |
ಪೂರ್ವಂ ಕಾರ್ಯಾಣಿ ಸರ್ವಾಣಿ ದೈವಾನಿ ಸುಖಮೀಪ್ಸತಾ ॥9॥
ಆದ್ದರಿಂದಲೇ ತಮ್ಮ ಹಿಂದಿನ ಆಸೆಯನ್ನು ಗಮನಿಸಿ ಸುಖವನ್ನು ಬಯಸುವವರೆಲ್ಲರೂ ದೈವ ಕಾರ್ಯಗಳೆಲ್ಲವನ್ನೂ ಪೂರ್ವದಲ್ಲಿಯೇ ಮಾಡಬೇಕು.
ಅತ್ರ ವೇದಾನ್ ಜಗೌ ಪೂರ್ವಂ ಭಗವಾನ್ ಲೋಕಭಾವನಃ |
ಅತ್ರೈವೋಕ್ತಾ ಸವಿತ್ರಾಽಽಸೀತ್ ಸಾವಿತ್ರೀ ಬ್ರಹ್ಮವಾದಿಷು ॥10॥
ಇಲ್ಲಿ ಲೋಕಭಾವನನಾದ ವಿಷ್ಣುವು ಮೊದಲು ವೇದಗಳನ್ನು ಉಚ್ಚರಿಸಿದನು. ಇಲ್ಲಿಯೇ ಸವಿತೃವು ಬ್ರಹ್ಮವಾದಿಗಳಿಗೆ ಸಾವಿತ್ರೀ ಮಂತ್ರವನ್ನು ಉಪದೇಶ ಮಾಡಿದನು.
ಅತ್ರ ದತ್ತಾನಿ ಸೂರ್ಯೇಣ ಯಜೂಂಷಿ ದ್ವಿಜಸತ್ತಮ |
ಅತ್ರ ಲಬ್ಧವರಃ ಸೋಮಃ ಸುರೈಃ ಕ್ರತುಷು ಪೀಯತೇ ॥11॥
ಎಲ್ಲೈ ದ್ವಿಜಶ್ರೇಷ್ಠರೇ, ಇಲ್ಲಿಯೇ ಸೂರ್ಯನು ಯಜುಸ್ಸುಗಳನ್ನು ನೀಡಿದನು. ಇಲ್ಲಿ ವರವನ್ನು ಪಡೆದ ಸೋಮನು (ಚಂದ್ರನಿಂದ ಅಭಿಮನ್ಯಮಾನವಾದ ಸೋಮರಸವು) ಯಜ್ಞಗಳಲ್ಲಿ ದೇವತೆಗಳಿಂದ ಪಾನಮಾಡಲ್ಪಡುತ್ತದೆ.
ಅತ್ರ ತೃಪ್ತಾ ಹುತವಹಾಃ ಸ್ವಾಂ ಯೋನಿಮುಪಭುಂಜತೇ |
ಅತ್ರ ಪಾತಾಳಮಾಶ್ರಿತ್ಯ ವರುಣಃ ಶ್ರಿಯಮಾಪ ಚ ॥12॥
ಇಲ್ಲಿ ತೃಪ್ತರಾದ ಅಗ್ನಿಗಳು ತಮ್ಮ ವೃದ್ಧಿಗೆ ಕಾರಣವಾದ ಆಜ್ಯಸೋಮಾದಿಗಳನ್ನು ಉಪಭೋಗಿಸುತ್ತಾರೆ. ಇಲ್ಲಿ ಪಾತಾಳಲೋಕದಲ್ಲಿ ವರುಣನು ಸಂಪತ್ತನ್ನು ಹೊಂದಿದನು.
ಅತ್ರ ಪೂರ್ವಂ ವಶಿ(ಸಿ)ಷ್ಠಸ್ಯ ಪೌರಾಣಸ್ಯ ದ್ವಿಜರ್ಷಭ |
ಪ್ರಸೂತಿಶ್ಚ ಪ್ರತಿಷ್ಠಾ ಚ ಧರ್ಮಶ್ಚೈವ ಪ್ರಕಾಶತೇ ॥13॥
ಎಲ್ಲೈ ದ್ವಿಜಶ್ರೇಷ್ಠರೇ, ಇಲ್ಲಿಯೇ ಎಲ್ಲರನ್ನೂ ವಶೀಕರಿಸುವ ಪುರಾಣಗಳ ಉತ್ಪತ್ತಿಯೂ ಪ್ರತಿಷ್ಠೆಯೂ ಮತ್ತು ಪುರಾಣೋಕ್ತವಾದ ಧರ್ಮಗಳೂ ಪ್ರಕಾಶಿಸುತ್ತವೆ.
ಓಂಕಾರಸ್ಯಾತ್ರ ಜಾಯಂತೇ ಸೂತಯೋ ದಶತೀರ್ದಶ |
ಪಿಬಂತಿ ಮುನಯೋ ಯತ್ರ ಹವಿರ್ಧಾನೇ ಸ್ಮ ಸೋಮಪಾಃ ॥14॥
ಇಲ್ಲಿ ಓಂಕಾರದ ಸಾವಿರಾರು ಸ್ವರಜಾತಿಗಳು ಉತ್ಪನ್ನವಾಗುತ್ತವೆ. ಇಲ್ಲಿ ಸೋಮಪಾನಾರ್ಹರಾದ, ಮನನವನ್ನು ಮಾಡುವುದರಿಂದ ಮುನಿಶಬ್ದವಾಚ್ಯರಾದ ದೇವತೆಗಳು ಹವಿರ್ಧಾನದಲ್ಲಿ (ಯಜ್ಞದಲ್ಲಿ) ಸೋಮವನ್ನು ಪಾನ ಮಾಡುತ್ತಾರೆ.
ಪ್ರೋಕ್ಷಿತಾ ಯತ್ರ ಬಹವೋ ವರಾಹಾದ್ಯಾ ಮೃಗಾ ವನೇ |
ಶಕ್ರೇಣ ಯಜ್ಞಭಾಗಾರ್ಥೇ ದೈವತೇಷು ಪ್ರಕಲ್ಪಿತಾಃ ॥15॥
ಯಾವ ಈ ದಿಕ್ಕಿನಲ್ಲಿ ಕಾಡಿನಲ್ಲಿ ಪ್ರೋಕ್ಷಿತವಾದ ವರಾಹಾದಿ ಮೃಗಗಳು ದೇವತೆಗಳ ಯಜ್ಞಭಾಗವೆಂದು ಇಂದ್ರನಿಂದ ಕಲ್ಪಿತವಾದವು.

ಅತ್ರಾಹಿತಾಃ ಕೃತಘ್ನಾಶ್ಚ ಮಾನುಷಾಶ್ಚಾಸುರಾಶ್ಚ ಯೇ |
ಉದಯಂಸ್ತಾನ್ ಹಿ ಸರ್ವಾನ್ ವೈ ಕ್ರೋಧಾದ್ಧಂತಿ ವಿಭಾವಸುಃ ॥16॥
ಇಲ್ಲಿ ಅಹಿತರಾದ, ಕೃತಘ್ನರಾದ ಎಲ್ಲಾ ಮನುಷ್ಯರನ್ನೂ ಮತ್ತು ಅಸುರರನ್ನೂ ಸೂರ್ಯನು ಉದಯಿಸುತ್ತಾ ಕ್ರೋಧದಿಂದ ನಾಶ ಮಾಡುತ್ತಾನೆ.
ಏತದ್ ದ್ವಾರಂ ದ್ವಿಜಶ್ರೇಷ್ಠ ಸ್ವರ್ಗಸ್ಯ ಚ ಸುಖಸ್ಯ ಚ |
ಏಷ ಪೂರ್ವೋ ದಿಶಾಂ ಭಾಗೋ ಗಚ್ಛಾವೋಽತ್ರ ಯದೀಚ್ಛಸಿ ॥17॥
ಎಲ್ಲೈ ದ್ವಿಜಶ್ರೇಷ್ಠರೇ, ಇದು ಸ್ವರ್ಗಕ್ಕೂ ಮತ್ತು ಸುಖಕ್ಕೂ ದ್ವಾರವಾದುದು. ಇದು ದಿಕ್ಕುಗಳ ಪೂರ್ವಭಾಗ. ನಿನಗೆ ಇಚ್ಛೆ ಇದ್ದರೆ ಅಲ್ಲಿಗೆ ಹೋಗೋಣ.
ಪ್ರಿಯಂ ಕಾರ್ಯಂ ಹಿ ಮೇ ತಸ್ಯ ಯಸ್ಯಾಸ್ಮಿ ವಚನೇ ಸ್ಥಿತಃ |
ಬ್ರೂಹಿ ಗಾಲವ ಯಾಸ್ಯಾಮಿ ಶೃಣು ಚಾಪ್ಯಪರಾಂ ದಿಶಮ್ ॥18॥
ಯಾವ ನಿನ್ನ ಮಾತಿನಂತೆ ನಾನು ನಡೆದುಕೊಳ್ಳುತ್ತೇನೆಯೋ ಅಂತಹ ನಾನು ನಿನಗೆ ಪ್ರಿಯವನ್ನು ಮಾಡಬೇಕು. ಗಾಲವನೇ ಹೇಳು,

ಹೋಗುವೆನು. ಅಥವಾ ಇನ್ನೊಂದು ದಿಕ್ಕಿನ ವರ್ಣನೆಯನ್ನಾದರೂ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಏಳನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಎಂಟನೆಯ ಅಧ್ಯಾಯ
ಗರುಡನಿಂದ ಗಾಲವರಿಗೆ ದಕ್ಷಿಣ ದಿಕ್ಕಿನ ಗುಣವರ್ಣನೆ
ಸುಪರ್ಣಃ
ಇಯಂ ವಿವಸ್ವತಾ ಪೂರ್ವಂ ಶ್ರೌತೇನ ವಿಧಿನಾ ಕಿಲ |
ಗುರವೇ ದಕ್ಷಿಣಾ ದತ್ತಾ ದಕ್ಷಿಣೇತ್ಯುಚ್ಯತೇ ಚ ದಿಕ್ ॥1॥
ಸುಪರ್ಣ ಇದನ್ನು ಹಿಂದೆ ವಿವಸ್ವಾನ್ ನಾಮಕ ಸೂರ್ಯನು ಶ್ರೌತವಿಧಾನದಿಂದ ಗುರುಗಳಿಗೆ ದಕ್ಷಿಣೆಯಾಗಿ ಕೊಟ್ಟನು. ಆದ್ದರಿಂದ ಈ ದಿಕ್ಕು ದಕ್ಷಿಣಾ ಎಂದು ಕರೆಯಲ್ಪಡುತ್ತದೆ.
ಅತ್ರ ಲೋಕತ್ರಯಸ್ಯಾಪಿ ಪಿತೃಪಕ್ಷಃ ಪ್ರತಿಷ್ಠಿತಃ |
ಅತ್ರೋಷ್ಮಪಾಣಾಂ ದೇವಾನಾಂ ನಿವಾಸಃ ಶ್ರೂಯತೇ ದ್ವಿಜ ॥2॥
ಇಲ್ಲಿ ಮೂರುಲೋಕಗಳ ಪಿತೃಗಣಗಳು ಪ್ರತಿಷ್ಠಿತವಾಗಿವೆ. ಎಲೈ ಬ್ರಾಹ್ಮಣನೇ, ಊಷ್ಮಪಾನವನ್ನು ಮಾಡುವ ದೇವತೆಗಳಿಗೆ ಇದು ನಿವಾಸ ಸ್ಥಾನವೆಂದು ಹೇಳಲ್ಪಡುತ್ತದೆ.
ಅತ್ರ ವಿಶ್ವೇ ಸದಾ ದೇವಾಃ ಪಿತೃಭಿಃ ಸಾರ್ಧಮಾಸತೇ |
ಇಜ್ಯಮಾನಾಃ ಸ್ಮ ಲೋಕೇಷು ಸಂಪ್ರಾಪ್ತಾಸ್ತುಲ್ಯಭಾಗತಾಮ್ ॥3॥
ಇಲ್ಲಿ ವಿಶ್ವೇದೇವತೆಗಳು ಪಿತೃಗಳ ಜೊತೆಯಲ್ಲಿ ವಾಸ ಮಾಡುತ್ತಾರೆ. ಅವರು ಲೋಕಗಳಲ್ಲಿ ಪೂಜಿಸಲ್ಪಟ್ಟು ಪಿತೃಗಳ ಸಮಾನ ಭಾಗವನ್ನು ಹೊಂದಿದವರಾಗಿದ್ದಾರೆ.
ಏತದ್ ದ್ವಿತೀಯಂ ಧರ್ಮಸ್ಯ ದ್ವಾರಮಾಚಕ್ಷತೇ ದ್ವಿಜ |
ತ್ರುಟಿಶೋ ಲವಶಶ್ಚಾಪಿ ಗಣ್ಯತೇ ಕಾಲನಿಶ್ಚಯಃ ॥4॥
ಎಲೈ ಬ್ರಾಹ್ಮಣರೇ, ಇದನ್ನು ಎರಡನೆಯ ಧರ್ಮದ್ವಾರವೆಂದು ಹೇಳುತ್ತಾರೆ. ಇಲ್ಲಿ ತ್ರುಟಿ ಮತ್ತು ಲವಗಳಲ್ಲಿ ಕಾಲವು ಎಣಿಸಲ್ಪಡುತ್ತದೆ.
ಅತ್ರ ದೇವರ್ಷಯೋ ದಿವ್ಯಾಃ ಪಿತೃಲೋಕರ್ಷಯಸ್ತಥಾ |
ತಥಾ ರಾಜರ್ಷಯಃ ಸರ್ವೇ ನಿವಸಂತಿ ಗತವ್ಯಥಾಃ ॥5॥
ಇಲ್ಲಿ ದಿವ್ಯರಾದ ದೇವರ್ಷಿಗಳು, ಪಿತೃಲೋಕದ ಋಷಿಗಳು, ಅದರಂತೆ ಎಲ್ಲಾ ರಾಜರ್ಷಿಗಳು ಯಾವ ವ್ಯಥೆಯೂ ಇಲ್ಲದೆ ವಾಸ ಮಾಡುತ್ತಾರೆ.
ಅತ್ರ ಧರ್ಮಶ್ಚ ಸತ್ಯಂ ಚ ಕರ್ಮ ಚಾತ್ರ ನಿಯಮ್ಯತೇ |
ಗತಿರೇಷಾ ದ್ವಿಜಶ್ರೇಷ್ಠ ಕರ್ಮಣಾಮವಸಾಯಿನಾಮ್ ॥6॥
ಧರ್ಮ, ಸತ್ಯ ಮತ್ತು ಕರ್ಮಗಳು ಇಲ್ಲಿ ನಿಯಂತ್ರಿಸಲ್ಪಡುತ್ತವೆ. ಎಲೈ ಬ್ರಾಹ್ಮಣರೇ, ಅಧಮ ಕರ್ಮವನ್ನು ಮಾಡಿದವರಿಗೆ ಈ ದಿಕ್ಕೇ ಗತಿ.
ಏಷಾ ದಿಕ್ ಸಾ ದ್ವಿಜಶ್ರೇಷ್ಠ ಯಾಂ ಸರ್ವಃ ಪ್ರತಿಪದ್ಯತೇ |
ಮೃತಾತ್ಮಾಽನವಬೋಧೇನ ಸುಖಂ ತೇನ ನ ಗಮ್ಯತೇ ॥7॥
ಎಲೈ ದ್ವಿಜಶ್ರೇಷ್ಠನೇ, ಅಜ್ಞಾನದಿಂದ ಕೂಡಿದ ಎಲ್ಲರೂ ಮರಣವನ್ನು ಹೊಂದಿ ಈ ದಿಕ್ಕಿಗೆ ಬರುತ್ತಾರೆ. ಅವರು ಇಲ್ಲಿ ಸುಖವನ್ನು ಹೊಂದುವುದಿಲ್ಲ.
ನೈರ್ಋತಾನಾಂ ಸಹಸ್ರಾಣಿ ಬಹೂನ್ಯತ್ರ ದ್ವಿಜರ್ಷಭ |
ಸೃಷ್ಟಾನಿ ಪ್ರತಿಕೂಲಾನಿ ದ್ರಷ್ಟವ್ಯಾನ್ಯಕೃತಾತ್ಮಭಿಃ ॥8॥
ಎಲೈ ಬ್ರಾಹ್ಮಣಶ್ರೇಷ್ಠರೇ, ಸತ್ಕರ್ಮವನ್ನು ಮಾಡದವರು ಇಲ್ಲಿ ದೇವನಿಂದ ಸೃಷ್ಟರಾದ, ತಮಗೆ ಪ್ರತಿಕೂಲರಾದ ಅನೇಕ ಸಹಸ್ರ ರಾಕ್ಷಸರನ್ನು ನೋಡಬೇಕಾಗುತ್ತದೆ.
ಅತ್ರ ಮಂದರಕುಂಜೇಷು ವಿಪ್ರರ್ಷಿಸದನೇಷು ಚ |
ಗಾಯಂತಿ ಗಾಥಾ ಗಂಧರ್ವಾಃ ಚಿತ್ತಬುದ್ಧಿಹರಾ ದ್ವಿಜ ॥9॥
ಎಲೈ ದ್ವಿಜರೇ, ಇಲ್ಲಿ ಮಂದರಪರ್ವತದ ಲತಾಕುಂಜಗಳಲ್ಲಿಯೂ, ಬ್ರಾಹ್ಮಣರ ಮತ್ತು ಋಷಿಗಳ ನಿವಾಸ ಸ್ಥಾನದಲ್ಲಿಯೂ ಗಂಧರ್ವರು ಮನೋಹರವಾದ ಮತ್ತು ಬುದ್ಧಿಹರವಾದ ಗಾಥೆಗಳನ್ನು ಗಾನ ಮಾಡುತ್ತಾರೆ.
ಅತ್ರ ಸಾಮಾನಿ ಗಾಥಾಭಿಃ ಶ್ರುತ್ವಾ ಗೀತಾನಿ ರೈವತಃ |
ಗತದಾರೋ ಗತಾಮಾತ್ಯೋ ಗತರಾಜ್ಯೋ ವನಂ ಗತಃ ॥10॥
ಇಲ್ಲಿ ಗಾಥೆಗಳಿಂದ ಕೂಡಿದ ಸಾಮಗಾನವನ್ನು ಕೇಳಿ ರೈವತರಾಜನು ಪತ್ನಿಯನ್ನೂ, ಅಮಾತ್ಯರನ್ನೂ ಮತ್ತು ರಾಜ್ಯವನ್ನೂ ಕಳೆದುಕೊಂಡು ಕಾಡಿಗೆ ಹೋದನು.

ಅತ್ರ ಸಾವರ್ಣಿನಾ ಚೈವ ಯವಕ್ರೀತಾತ್ಮಜೇನ ಚ |
ಮರ್ಯಾದಾ ಸ್ಥಾಪಿತಾ ಬ್ರಹ್ಮನ್ ಯಾಂ ಸೂರ್ಯೋ ನಾತಿವರ್ತತೇ ||
ಇಲ್ಲಿ ಸಾವರ್ಣಿ ಮನುವಿನಿಂದ ಮತ್ತು ಯವಕ್ರೀತರ ಪುತ್ರರಿಂದ ಸೂರ್ಯನಿಗೆ ಎಲ್ಲೆಯು ಸ್ಥಾಪಿಸಲ್ಪಟ್ಟಿದೆ. ಎಲೈ ಬ್ರಾಹ್ಮಣರೇ, ಸೂರ್ಯನು ಆ ಎಲ್ಲೆಯನ್ನು ಮೀರುವುದಿಲ್ಲ.
ಅತ್ರ ರಾಕ್ಷಸರಾಜೇನ ಪೌಲಸ್ತ್ಯೇನ ಮಹಾತ್ಮನಾ |
ರಾವಣೇನ ತಪಶ್ಚರ್ತ್ವಾ ಸುರೇಭ್ಯೋಽಮರತಾ ವೃತಾ ||12||
ಇಲ್ಲಿ ಮಹಾಪ್ರಯತ್ನಶೀಲನೂ, ಪೌಲಸ್ತ್ಯವಂಶದವನೂ, ರಾಕ್ಷಸರಾಜನೂ ಆದ ರಾವಣನು ತಪಸ್ಸನ್ನು ಆಚರಿಸಿ ದೇವತೆಗಳಿಂದ ಅಮರತ್ವ ವರವನ್ನು ಪ್ರಾರ್ಥಿಸಿದನು.
ಅತ್ರ ವೃತ್ರೇನ ವೃತ್ರೋಽಪಿ ಶಕ್ರಶತ್ರುತ್ವಮೇಯಿವಾನ್ |
ಅತ್ರ ಸರ್ವಾಸವಃ ಪ್ರಾಪ್ತಾ ಪುನರ್ಗಚ್ಛಂತಿ ಪಂಚಧಾ ||13||
ವೃತ್ರಾಸುರನೂ ಸಹ ಇಲ್ಲಿಯೇ ಇದ್ದು ಇಂದ್ರನ ಶತ್ರುವಾದನು. ಇಲ್ಲಿ ಎಲ್ಲ ಪ್ರಾಣಗಳು ಒಂದುಗೂಡಿ ಪುನಃ ಐದುಭಾಗವಾಗಿ ಹೋಗುತ್ತವೆ.
ಅತ್ರ ದುಷ್ಕೃತಕರ್ಮಾಣೋ ನರಾಃ ಪಚ್ಯಂತಿ ಗಾಲವ |
ಅತ್ರ ವೈತರಣೀ ನಾಮ ನದೀ ಪಿತೃಗಣೈರ್ವೃತಾ ||14||
ಎಲೈ ಗಾಲವರೇ, ಇಲ್ಲಿ ದುಷ್ಕರ್ಮವನ್ನು ಮಾಡಿದ ಮನುಷ್ಯರು ಬೇಯಿಸಲ್ಪಡುತ್ತಾರೆ. ಇಲ್ಲಿ ಪಿತೃಗಣಗಳಿಂದ ಕೂಡಿದ ವೈತರಣೀ ಎಂಬ ನದಿಯಿದೆ.
ಅತ್ರ ಗತ್ವಾ  ಸುಖಸ್ಯಾಂತಂ ದುಃಖಸ್ಯಾಂತಂ ಪ್ರಪದ್ಯತೇ |
ಅತ್ರ ವೃತ್ತೋ ದಿನಕರಃ ಸುರಸಂ ಕ್ಷರತೇ ಪಯಃ ||15||
ಇಲ್ಲಿ ಸುಖದ ಪ್ರದೇಶಕ್ಕೆ ಹೋಗಿ ಅನಂತರ ಜೀವರು ದುಃಖದ ಪ್ರದೇಶಕ್ಕೆ ಹೋಗುತ್ತಾರೆ. ಈ ದಿಕ್ಕಿನಲ್ಲಿರುವ ಸೂರ್ಯನು ಒಳ್ಳೆಯ ರಸವುಳ್ಳ ನೀರನ್ನು (ಮಳೆಯನ್ನು ಸುರಿಸುತ್ತಾನೆ).
ಕಾಷ್ಠಾಂ ಚಾಸಾದ್ಯ ವಾಸಿಷ್ಠಾಂ ಹಿಮಮುತ್ಸೃಜತೇ ಪುನಃ ||16||
ಅನಂತರ ವಾಸಿಷ್ಠರ ದಿಕ್ಕನ್ನು (ಪಶ್ಚಿಮ ದಿಕ್ಕನ್ನು) ತಲುಪಿದ ಸೂರ್ಯನು ಹಿಮವನ್ನು ಉಂಟುಮಾಡುತ್ತಾನೆ.
ಅತ್ರಾಹಂ ಗಾಲವ ಪುರಾ ಕ್ಷುಧಾರ್ತಃ ಪರಿಚಿಂತಯನ್ |
ಲಬ್ಧವಾನ್ ಯುಧ್ಯಮಾನೌ ದ್ವೌ ಬೃಹಂತೌ ಗಜಕಚ್ಛಪೌ ||17||
ಎಲೈ ಗಾಲವರೇ, ನಾನು ಹಿಂದೆ ಇಲ್ಲಿ ಹಸಿವಿನಿಂದ ಆರ್ತನಾಗಿ ಚಿಂತಿಸುತ್ತಾ ಪರಸ್ಪರ ಹೋರಾಡುತ್ತಿದ್ದ ಎರಡು ಗಜ ಮತ್ತು ಕೂರ್ಮಗಳನ್ನು ಆಹಾರವಾಗಿ ಪಡೆದೆನು.
ಅತ್ರ ಶಕ್ರಧನುರ್ನಾಮ ಸೂರ್ಯಾಜ್ಜಾತೋ ಮಹಾನೃಷಿಃ |
ವಿದುರ್ಯಂ ಕಪಿಲಂ ದೇವಂ ಯೇನಾಸ್ತಾಃ ಸಗರಾತ್ಮಜಾಃ ||18||
ಇಲ್ಲಿ ಸೂರ್ಯನಿಂದ ಜನಿಸಿದ ಶಕ್ರಧನುಸ್ಸೆಂಬ ದೊಡ್ಡ ಋಷಿ ಇದ್ದಾನೆ. ಅವನನ್ನು ಕಪಿಲದೇವನೆಂದು ಕರೆಯುತ್ತಾರೆ. ಅವನು ಸಗರಾತ್ಮಜರನ್ನು ಧ್ವಂಸ ಮಾಡಿದನು.
ಅತ್ರ ಸಿದ್ಧಾಃ ಶಿವಾ ನಾಮ ಬ್ರಾಹ್ಮಣಾ ವೇದಪಾರಗಾಃ |
ಅಧೀತ್ಯ ಸಕಲಾನ್ ವೇದಾನ್ ನಾಲಭಂತ ಯಮಕ್ಷಯಮ್ ||19||
ಇಲ್ಲಿ ಶಿವ ಎಂಬ ವೇದಪಾರಂಗತರಾದ ಬ್ರಾಹ್ಮಣರು ಸಕಲ ವೇದಗಳನ್ನೂ ಅಧ್ಯಯನವನ್ನು ಮಾಡಿ ಸಿದ್ಧರಾಗಿ ಯಮನ ಪಟ್ಟಣಕ್ಕೆ ಹೋಗಲಿಲ್ಲ.
ಅತ್ರ ಭೋಗವತೀ ನಾಮ ಪುರೀ ವಾಸುಕಿಪಾಲಿತಾ |
ತಕ್ಷಕೇಣ ಚ ನಾಗೇನ ತಥೈವೈರಾವತೇನ ಚ ||20||
ಇಲ್ಲಿ ವಾಸುಕಿಯಿಂದಲೂ, ತಕ್ಷಕನಿಂದಲೂ ಮತ್ತು ಐರಾವತ ನಾಗನಿಂದಲೂ ರಕ್ಷಿತವಾದ ಭೋಗವತಿ ಎಂಬ ಪಟ್ಟಣವಿದೆ.
ಅತ್ರ ನಿರ್ಯಾಣಕಾಲೇ ಹಿ ತಮಃ ಸಂಪ್ರಾಪ್ಯತೇ ಮಹತ್ |
ಅಭೇದ್ಯಂ ಭಾಸ್ಕರೇಣಾಪಿ ಸ್ವಯಂ ವಾ ಕೃಷ್ಣವರ್ತ್ಮನಾ ||21||
ಇಲ್ಲಿ ಮರಣವನ್ನು ಹೊಂದಿ ಪ್ರಯಾಣವನ್ನು ಮಾಡುವ ಕಾಲದಲ್ಲಿ ದೊಡ್ಡ ತಮಸ್ಸು ಸಿಗುತ್ತದೆ. ಅದನ್ನು ಸೂರ್ಯನಿಂದಾಗಲೀ ಅಥವಾ ಸ್ವಯಂ ಅಗ್ನಿಯಿಂದಾಗಲೀ ಭೇದಿಸಲು ಸಾಧ್ಯವಿಲ್ಲ.
ಏಷ ತೇ ಖ್ಯಾಪಿತೋ ಮಾರ್ಗಃ ಪರಿತಾಪಸ್ಯ ಗಾಲವ |
ಬ್ರೂಹಿ ಮೇ ಯದಿ ಗಂತವ್ಯಂ ಪ್ರತೀಚೀಂ ಶೃಣು ವಾ ಮಮ ||22||
ಎಲೈ ಗಾಲವರೇ, ಈ ಸಂತಾಪಮಯವಾದ ಮಾರ್ಗವನ್ನು ನಿಮಗೆ ಹೇಳಿದ್ದೇನೆ. ಪಶ್ಚಿಮ ದಿಕ್ಕಿಗೆ ಹೋಗಬೇಕೆ ಎಂದು ಹೇಳಿ ಅಥವಾ ಪಶ್ಚಿಮ ದಿಕ್ಕಿನ ಗುಣಗಳನ್ನು ನನ್ನಿಂದ ಕೇಳಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಅಷ್ಟೋತ್ತರಶತತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಟನೆಯ
ಅಧ್ಯಾಯ ಮುಗಿಯಿತು.

* * * * *
नूರ ಒಂಬತ್ತನೆಯ ಅಧ್ಯಾಯ
ಗರುಡನಿಂದ ಗಾಲವರಿಗೆ ಪಶ್ಚಿಮ ದಿಕ್ಕಿನ ಗುಣವರ್ಣನೆ
ಸುಪರ್ಣಃ
ಇಯಂ ದಿಗ್ ದಯಿತಾ ರಾಜ್ಞೋ ವರುಣಸ್ಯ ತು ಗೋಪತೇಃ |
ಸದಾ ಸಲಿಲರಾಜಸ್ಯ ಪ್ರತಿಷ್ಠಾ ಚಾದಿರೇವ ಚ ॥1॥
ಸುಪರ್ಣ ಇದು ಜಲಪತಿಯಾದ ವರುಣನಿಗೆ ಪ್ರಿಯವಾದ ದಿಕ್ಕು. ಸಲಿಲರಾಜನಾದ ಅವನಿಗೆ ಇದು ಉತ್ಪತ್ತಿ ಮತ್ತು ಪ್ರತಿಷ್ಠೆಯ ಸ್ಥಾನ.
ಅತ್ರ ಪಶ್ಚಾದಹಃ ಸೂರ್ಯೋ ವಿಸರ್ಜಯತಿ ಭಾಃ ಸ್ವಜಾಃ |
ಪಶ್ಚಿಮೇತ್ಯಭಿವಿಖ್ಯಾತಾ ದಿಗಿಯಂ ದ್ವಿಜಸತ್ತಮ ॥2॥
ಇಲ್ಲಿ ಮಧ್ಯಾಹ್ನದ ಮೇಲೆ ಸೂರ್ಯನು ತನ್ನ ಕಾಂತಿಯನ್ನು ತ್ಯಜಿಸುತ್ತಾನೆ. ಎಲೈ ದ್ವಿಜಶ್ರೇಷ್ಠನೇ, ಈ ದಿಕ್ಕು ಪಶ್ಚಿಮವೆಂದು ಪ್ರಖ್ಯಾತವಾಗಿದೆ.
ಯಾದಸಾಮತ್ರ ರಾಜ್ಯೇನ ಸಲಿಲಸ್ಯ ತು ಗುಪ್ತಯೇ |
ಕಾಶ್ಯಪೋ ಭಗವಾನ್ ದೇವೋ ವರುಣಂ ಸ್ಮಾಭ್ಯಷೇಚಯತ್ ॥3॥
ಜಲರಾಶಿಯ ರಕ್ಷಣೆಗಾಗಿ ಪೂಜ್ಯರಾದ ಕಶ್ಯಪರು (ಕಶ್ಯಪರ ಪುತ್ರನಾದ ಉಪೇಂದ್ರನು) ಇಲ್ಲಿ ಜಲಚರ ಪ್ರಾಣಿಗಳ ರಾಜ್ಯದಲ್ಲಿ ವರುಣನಿಗೆ ಪಟ್ಟಾಭಿಷೇಕವನ್ನು ಮಾಡಿದನು.
ಅತ್ರ ಪೀತ್ವಾ ಸಮಸ್ತಾನ್ ವೈ ವರುಣಸ್ಯ ರಸಾಂಸ್ತು ಷಟ್ |
ಜಾಯತೇ ತರುಣಃ ಸೋಮಃ ಶುಕ್ಲಸ್ಯಾದೌ ತಮಿಸ್ರಹಾ ॥4॥
ಇಲ್ಲಿ ಕತ್ತಲೆಯನ್ನು ನಿವಾರಿಸುವ ಚಂದ್ರನು ವರುಣನ ಎಲ್ಲಾ ಆರು ರಸಗಳನ್ನು ಪಾನ ಮಾಡಿ ಶುಕ್ಲಪಕ್ಷದ ಆದಿಯಲ್ಲಿ ತರುಣನಾಗಿ ಜನಿಸುತ್ತಾನೆ.
ಅತ್ರ ಪಶ್ಚಾತ್ ಕೃತಾ ದೈತ್ಯಾ ವಾಯುನಾ ಸಂಯುತಾಸ್ತದಾ |
ನಿಃಶ್ವಸಂತೋ ಮಹಾನಾಗೈರರ್ದಿತಾಃ ಸುಷುಪುರ್ದ್ವಿಜ ॥5॥
ಎಲೈ ದ್ವಿಜಶ್ರೇಷ್ಠರೇ, ಇಲ್ಲಿ ಒಟ್ಟಾದ ದೈತ್ಯರು ವಾಯುವಿನಿಂದ ಹಿಂದೆ ನೂಕಲ್ಪಟ್ಟು ನಿಟ್ಟುಸಿರನ್ನು ಬಿಡುತ್ತಾ ದೊಡ್ಡ ಸರ್ಪಗಳಿಂದ ಪೀಡಿತರಾಗಿ ಮಲಗಿದರು.
ಅತ್ರ ಪ್ರಲಂಬಿನಂ ಸೂರ್ಯಂ ಪ್ರತಿಗೃಹ್ಣಾತಿ ಪರ್ವತಃ |
ಅಸ್ತೋ ನಾಮ ಯತಃ ಸಂಧ್ಯಾ ಪಶ್ಚಿಮಾ ಪ್ರತಿಸರ್ಪತಿ ॥6॥
ಇಲ್ಲಿ ಇಳಿಬಿದ್ದ ಸೂರ್ಯನನ್ನು ಅಸ್ತ ಎಂಬ ಪರ್ವತವು ಹಿಡಿದುಕೊಳ್ಳುತ್ತದೆ. ಅಲ್ಲಿಂದ ಮುಂದೆ ಪಶ್ಚಿಮ ಸಂಧ್ಯೆಯು ಪ್ರಾರಂಭವಾಗುತ್ತದೆ.
ಅತೋ ರಾತ್ರಿಶ್ಚ ನಿದ್ರಾ ಚ ನಿರ್ಗತಾ ದಿವಸಕ್ಷಯೇ |
ಜಾಯತೇ ಜೀವಲೋಕಸ್ಯ ಹರ್ತುಮರ್ಧಮಿವಾಯುಷಃ ॥7॥
ಹಗಲಿನ ಅವಸಾನದಲ್ಲಿ ಪಶ್ಚಿಮ ದಿಕ್ಕಿನ ಮಧ್ಯಭಾಗದಿಂದ ರಾತ್ರಿ ಮತ್ತು ನಿದ್ರೆಗಳು ಉದಯಿಸಿ ಜೀವಲೋಕದ ಆಯುಸ್ಸಿನ ಅರ್ಧಭಾಗವನ್ನು ಅಪಹರಿಸುತ್ತವೆ.
ಅತ್ರ ದೇವೀಂ ದಿತಿಂ ಸುಪ್ತಾಮಾತ್ಮಪ್ರಸವಧಾರಿಣೀಮ್ |
ವಿಗರ್ಭಾಮಕರೋಚ್ಛಕ್ರೋ ಯತ್ರ ಜಾತೋ ಮರುದ್ಗಣಃ ॥8॥
ಇಂದ್ರನು ಇಲ್ಲಿ ತನ್ನ ಮಕ್ಕಳನ್ನು ಗರ್ಭದಲ್ಲಿ ಧರಿಸಿ ಮಲಗಿದ ದಿತಿದೇವಿಯ ಗರ್ಭವು ಹೊರಗೆ ಬರುವಂತೆ ಮಾಡಿದನು. ಆಗ ಮರುದ್ಗಣವು ಜನಿಸಿತು.
ಅತ್ರ ಮೂಲಂ ಹಿ ಮರುತೋ ಮಂದರಂ ಯಾತಿ ಶಾಶ್ವತಮ್ |
ಅಪಿ ವರ್ಷಸಹಸ್ರೇಣ ನ ಚಾಸ್ಯಾಂತೋಽಧಿಗಮ್ಯತೇ ॥9॥
ಇಲ್ಲಿ ವಾಯುದೇವನ ಉತ್ಪತ್ತಿಸ್ಥಾನವಿದೆ. ಶಾಶ್ವತವಾದ ಮಂದರಪರ್ವತವೂ ಇದೆ. ಒಂದು ಸಹಸ್ರವರ್ಷಗಳ ಕಾಲ ನಡೆದರೂ ಅದರ ಕೊನೆಯು ಕಾಣುವುದಿಲ್ಲ.
ಅತ್ರ ಕಾಂಚನಶೈಲಸ್ಯ ಕಾಂಚನಾಂಬುರುಹಸ್ಯ ಚ |
ಉದಧೇಸ್ತೀರಮಾಸಾದ್ಯ ಸುರಭಿಃ ಕ್ಷರತೇ ಪಯಃ ॥10॥
ಇಲ್ಲಿ ಸುವರ್ಣಶೈಲ ಮತ್ತು ಸುವರ್ಣಪದ್ಮವಿರುವ ಸಮುದ್ರದ ತೀರವನ್ನು ತಲುಪಿ ಸುರಭಿಯು ಕ್ಷೀರವನ್ನು ಸುರಿಸುತ್ತದೆ.
ಅತ್ರ ಮಧ್ಯೇ ಸಮುದ್ರಸ್ಯ ಕಬಂಧಃ ಪ್ರತಿದೃಶ್ಯತೇ |
ಸ್ವರ್ಭಾನೋಃ ಸೂರ್ಯಕಲ್ಪಸ್ಯ ಸೋಮಸೂರ್ಯೌ ಜಿಘಾಂಸತಃ ॥11॥
ಇಲ್ಲಿ ಸಮುದ್ರದ ಮಧ್ಯದಲ್ಲಿ ಸೂರ್ಯ-ಚಂದ್ರರನ್ನು ಕೊಲ್ಲಲು ಇಚ್ಛಿಸುವ ಸೂರ್ಯಸದೃಶನಾದ ರಾಹುವಿನ ಕಬಂಧವು (ರುಂಡವು) ಕಂಡುಬರುತ್ತದೆ.
ಸುವರ್ಣಶಿರಸೋಽಪ್ಯತ್ರ ಹರಿರೋಮ್ಣಃ ಪ್ರಗಾಯತಃ |
ಅದೃಶ್ಯಸ್ಯಾಪ್ರಮೇಯಸ್ಯ ಶ್ರೂಯತೇ ವಿಪುಲೋ ಧ್ವನಿಃ ॥12॥
ಇಲ್ಲಿ ಅದೃಶ್ಯನೂ ಮತ್ತು ಅಪ್ರಮೇಯನೂ ಆದ ಸುವರ್ಣಶಿರಸ್ ಮತ್ತು ಹರಿರೋಮ ಎಂಬ ಗಾನವನ್ನು ಮಾಡುವ (ಗಂಧರ್ವರ) ವಿಪುಲವಾದ ಧ್ವನಿಯು ಕೇಳಿಬರುತ್ತದೆ.

ಅತ್ರ ಧ್ವಜವತೀ ನಾಮ ಕುಮಾರೀ ಹರಿಮೇಧಸಃ |
ಆಕಾಶೇ ತಿಷ್ಠ ತಿಷ್ಠೇತಿ ತಸ್ಥೌ ಸೂರ್ಯಸ್ಯ ಶಾಸನಾತ್ ॥13॥
ಇಲ್ಲಿ ಹರಿಮೇಧಸ್ಸಿನ ಪುತ್ರಿಯಾದ ಧ್ವಜವತೀ ಎಂಬುವಳು ಆಕಾಶದಲ್ಲಿ ನಿಲ್ಲು, ನಿಲ್ಲು ಎಂಬ ಸೂರ್ಯನ ಶಾಸನದಂತೆ ಅಲ್ಲಿಯೇ ನಿಂತಿದ್ದಾಳೆ.
ಅತ್ರ ವಾಯುಸ್ತಥಾ ವಹ್ನಿರಾಪಃ ಖಂ ಚಾಪಿ ಗಾಲವ |
ಆಹ್ನಿಕಂ ಚೈವ ನೈಶಂ ಚ ದುಃಖಸ್ಪರ್ಶಂ ವಿಮುಂಚತಿ ॥14॥
ಎಲೈ ಗಾಲವರೇ, ಇಲ್ಲಿ ವಾಯು, ಅಗ್ನಿ, ಜಲ ಮತ್ತು ಆಕಾಶಗಳು ಹಗಲು ಮತ್ತು ರಾತ್ರಿಯ ಕಾಲದಲ್ಲಿ ಉಂಟಾದ ದುಃಖಸ್ಪರ್ಶವನ್ನು ಕಳೆದುಕೊಳ್ಳುತ್ತವೆ.
ಅತಃಪ್ರಭೃತಿ ಸೂರ್ಯಸ್ಯ ತಿರ್ಯಗಾವರ್ತತೇ ಗತಿಃ |
ಅತ್ರ ಜ್ಯೋತೀಂಷಿ ಸರ್ವಾಣಿ ವಿಶಂತ್ಯಾದಿತ್ಯಮಂಡಲಮ್ ॥15॥
ಇಲ್ಲಿಂದ ಮುಂದೆ ಸೂರ್ಯನ ಉತ್ತರಾಭಿಮುಖವಾದ ಗಮನವು ಪ್ರಾರಂಭವಾಗುತ್ತದೆ. ಇಲ್ಲಿ ಎಲ್ಲ ಜ್ಯೋತಿಸ್ಸುಗಳು ಆದಿತ್ಯಮಂಡಲವನ್ನು ಪ್ರವೇಶಿಸುತ್ತವೆ.
ಅಷ್ಟಾವಿಂಶತಿರಾತ್ರಂ ಚ ಚಂಕ್ರಮ್ಯ ಸಹ ಭಾನುನಾ |
ನಿಷ್ಪತಂತಿ ಪುನಃ ಸೂರ್ಯಾತ್ ಸೋಮಸಂಯೋಗಯೋಗತಃ ॥16॥
ಇಪ್ಪತ್ತೆಂಟು ದಿನಗಳ ಕಾಲ ಸೂರ್ಯನ ಜೊತೆಯಲ್ಲಿ ಸಂಚಾರ ಮಾಡಿ ಪುನಃ ಸೂರ್ಯನನ್ನು ಸೇರಿ ಚಂದ್ರನು ಇಲ್ಲಿಂದ ಸೂರ್ಯನಿಂದ ಹೊರಬರುತ್ತಾನೆ.
ಅತ್ರ ನಿತ್ಯಂ ಸ್ರವಂತೀನಾಂ ಪ್ರಭವಃ ಸಾಗರೋದಯಃ |
ಅತ್ರ ಲೋಕತ್ರಯಸ್ಯಾಪಃ ತಿಷ್ಠಂತಿ ವರುಣಾಶ್ರಯಾಃ ॥17॥
ಇಲ್ಲಿ ಸಾಗರಜಲವೃದ್ಧಿಯನ್ನು ಉಂಟುಮಾಡುವ, ನಿತ್ಯವೂ ಪ್ರವಾಹದಿಂದ ಕೂಡಿದ ನದಿಗಳ ಉತ್ಪತ್ತಿ ಸ್ಥಾನವಿದೆ. ಮೂರುಲೋಕದ ಜಲಗಳೂ ಸಹ ವರುಣನನ್ನು  ಆಶ್ರಯಿಸಿ ಇರುತ್ತವೆ.
ಅತ್ರ ಪನ್ನಗರಾಜಸ್ಯಾಪ್ಯನಂತಸ್ಯ ನಿವೇಶನಮ್ |
ಅನಾದಿನಿಧನಸ್ಯಾತ್ರ ವಿಷ್ಣೋಃ ಸ್ಥಾನಮನುತ್ತಮಮ್ ॥18॥
ಇಲ್ಲಿ ಸರ್ಪರಾಜನಾದ ಅನಂತನ ವಾಸಸ್ಥಾನವಿದೆ. ಹಾಗೆಯೇ ಅನಾದಿ ನಿಧನನಾದ ವಿಷ್ಣುವಿನ ಶ್ರೇಷ್ಠವಾದ ಸ್ಥಾನವೂ ಇದೆ.
ಅತ್ರಾನಲಸಖಸ್ಯಾಪಿ ಪವನಸ್ಯ ನಿವೇಶನಮ್ |
ಮಹರ್ಷೇಃ ಕಾಶ್ಯಪಸ್ಯಾತ್ರ ಮಾರೀಚಸ್ಯ ನಿವೇಶನಮ್ ॥19॥
ಇಲ್ಲಿ ಅಗ್ನಿಸಖನಾದ ವಾಯುವಿನ ನಿವೇಶನವೂ, ಮರೀಚಿಪುತ್ರರಾದ ಕಾಶ್ಯಪ ಮಹರ್ಷಿಗಳ ನಿವೇಶನವೂ ಇದೆ.
ಏಷ ತೇ ಪಶ್ಚಿಮೋ ಮಾರ್ಗೋ ದಿಗ್ದ್ವಾರೇಣ ಪ್ರಕೀರ್ತಿತಃ |
ಬ್ರೂಹಿ ಗಾಲವ ಗಚ್ಛಾವೋ ಬುದ್ಧಿಃ ಕಾ ದ್ವಿಜಸತ್ತಮ ॥20॥
ಎಲೈ ದ್ವಿಜಶ್ರೇಷ್ಠರೇ, ಹೀಗೆ ಪಶ್ಚಿಮ ಮಾರ್ಗದ ದಿಗ್ಮಾತ್ರವನ್ನು ನಿಮಗೆ ನಿರೂಪಿಸಿದ್ದೇನೆ. ನಿಮ್ಮ ಬುದ್ಧಿ ಎಲ್ಲಿಗೆ ಹೋಗಬೇಕೆಂದಿದೆ, ಹೇಳಿ. ಎಲೈ ಗಾಲವರೇ, ಅಲ್ಲಿಗೆ ಹೋಗೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ನವೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ನೂರ ಹತ್ತನೆಯ ಅಧ್ಯಾಯ

ಗರುಡನಿಂದ ಗಾಲವರಿಗೆ ಉತ್ತರ ದಿಕ್ಕಿನ ಗುಣವರ್ಣನೆ ಮತ್ತು ಇಷ್ಟವಾದ ದಿಕ್ಕಿಗೆ ಹೋಗಲು ತನ್ನ ಬೆನ್ನಿನ ಮೇಲೆ ಕುಳಿತುಕೊಳ್ಳುವಂತೆ ಆಹ್ವಾನ.

ಸುಪರ್ಣಃ
ಯಸ್ಮಾದುತ್ತಾರ್ಯತೇ ಪಾಪಾದ್ ಯಸ್ಮಾನ್ನಿಶ್ರೇಯಸೋಽಶ್ನುತೇ |
ಅಸ್ಮಾದುತ್ತಾರಣಫಲಾದ್ ಉತ್ತರೇತ್ಯುಚ್ಯತೇ ಬುಧೈಃ ॥1॥
ಸುಪರ್ಣ ಇದು ಪಾಪದಿಂದ ದಾಟಿಸುವ ಕಾರಣದಿಂದ ಮತ್ತು ಶ್ರೇಯಸ್ಸನ್ನು ಹೊಂದಿಸುವ ಕಾರಣದಿಂದ, ಉತ್ತಾರಣರೂಪ ಫಲವಿರುವುದರಿಂದ ಜ್ಞಾನಿಗಳಿಂದ ಉತ್ತರವೆಂದು ಕರೆಸಿಕೊಳ್ಳಲ್ಪಡುತ್ತದೆ.
ಉತ್ತರಸ್ಯ ಹಿ ಪುಣ್ಯಸ್ಯ ಪರಿವಾಪಸ್ಯ ಗಾಲವ |
ಮಾರ್ಗಃ ಪಶ್ಚಿಮಪೂರ್ವಾಭ್ಯಾಂ ದಿಗ್ಭ್ಯಾಂ ವೈ ಮಧ್ಯಮಃ ಸ್ಮೃತಃ ॥2॥
ಎಲೈ ಗಾಲವರೇ, ಪುಣ್ಯವನ್ನು ಬಿತ್ತುವ ಉತ್ತರ ದಿಕ್ಕಿನ ಮಾರ್ಗವು ಪಶ್ಚಿಮ- ಪೂರ್ವ ದಿಕ್ಕುಗಳ ಮಾರ್ಗಗಳ ಮಧ್ಯದಲ್ಲಿ ಇದೆ ಎಂದು ಹೇಳಲಾಗುತ್ತದೆ.
ಅಸ್ಯಾಂ ದಿಶಿ ವರಿಷ್ಠಾಯಾಮುತ್ತರಾಯಾಂ ದ್ವಿಜರ್ಷಭ |
ನಾಸೌಮ್ಯೋ ನಾವಿಧೇಯಾತ್ಮಾ ನಾಧರ್ಮೋ ವರ್ತತೇ ಜನಃ ॥3॥

ಎಲೈ ದ್ವಿಜಶ್ರೇಷ್ಠರೇ, ಶ್ರೇಷ್ಠವಾದ ಈ ಉತ್ತರ ದಿಕ್ಕಿನಲ್ಲಿ ಸೌಮ್ಯನಲ್ಲದ, ವಿಧೇಯನಲ್ಲದ, ಧರ್ಮವನ್ನು ಮಾಡದ ಯಾವ ವ್ಯಕ್ತಿಯೂ ಇರುವುದಿಲ್ಲ.
ಅತ್ರ ನಾರಾಯಣಃ ಕೃಷ್ಣೋ ಜಿಷ್ಣುಶ್ಚೈವ ನರೋತ್ತಮಃ |
ಬದರ್ಯಾಮಾಶ್ರಮಪದೇ ತಥಾ ಬ್ರಹ್ಮಾ ಚ ಶಾಶ್ವತಃ ||4||
ಇಲ್ಲಿ ಬದರಿಕಾಶ್ರಮದಲ್ಲಿ ನಾರಾಯಣ, ಕೃಷ್ಣ ಮತ್ತು ಜಯಶೀಲನಾದ ನರೋತ್ತಮರೂ ಇದ್ದಾರೆ.  ಹಾಗೆಯೇ ಶಾಶ್ವತನಾದ ಬ್ರಹ್ಮನೂ ಇದ್ದಾನೆ.
ಅತ್ರ ವೈ ಹಿಮವತ್ಪೃಷ್ಠೇ ನಿತ್ಯಮಾಸ್ತೇ ಮಹೇಶ್ವರಃ |
ಪ್ರಕೃತ್ಯಾ ಪುರುಷಃ ಸಾರ್ಧಂ ಯುಗಾಂತಾಗ್ನಿಸಮಪ್ರಭಃ ||5||
ಇಲ್ಲಿ ಹಿಮಾಲಯದ ಪೃಷ್ಠದಲ್ಲಿ ಯುಗಾಂತಾಗ್ನಿಯ ಕಾಂತಿಯನ್ನು ಹೊಂದಿರುವ ಮಹೇಶ್ವರನು ಪುರುಷರೂಪವನ್ನು ಧರಿಸಿ, ಪ್ರಕೃತಿಯಾದ ಪಾರ್ವತಿಯಿಂದ ಕೂಡಿಕೊಂಡು ನಿತ್ಯದಲ್ಲಿಯೂ ಇರುತ್ತಾನೆ.
ನ ಸಂದೃಶ್ಯೋ ಮುನಿಗಣೈಸ್ತಥಾ ದೇವೈಃ ಸವಾಸವೈಃ |
ಗಂಧರ್ವಯಕ್ಷಸಿದ್ಧೈರ್ವಾ ನರನಾರಾಯಣಾದೃತೇ ||6||
ನರ-ನಾರಾಯಣರನ್ನು ಬಿಟ್ಟು ಮುನಿಗಣಗಳಿಗಾಗಲೀ, ಇಂದ್ರನಿಂದ ಕೂಡಿದ ದೇವತೆಗಳಿಗಾಗಲೀ, ಗಂಧರ್ವಯಕ್ಷಸಿದ್ಧರಿಗಾಗಲೀ ಅವನು ಗೋಚರಿಸುವುದಿಲ್ಲ.
ಅತ್ರ ವಿಷ್ಣುಃ ಸಹಸ್ರಾಕ್ಷಃ ಸಹಸ್ರಚರಣೋಽವ್ಯಯಃ |
ಸಹಸ್ರಶಿರಸಃ ಶ್ರೀಮಾನ್ ಏಕಃ ಪಶ್ಯತಿ ಮಾಯಯಾ ||7||
ಇಲ್ಲಿ ಸಹಸ್ರಾಕ್ಷನೂ, ಸಹಸ್ರಪಾದನೂ, ಸಹಸ್ರಶಿರಸ್ಸುಳ್ಳವನೂ, ಅವ್ಯಯನೂ, ಕಾಂತಿಮಂತನೂ ಆದ ವಿಷ್ಣು ಒಬ್ಬನೇ ತನ್ನ ಸಾಮರ್ಥ್ಯದಿಂದ ಅವನನ್ನು ನೋಡುತ್ತಾನೆ.
ಅತ್ರ ರಾಜ್ಯೇನ ವಿಪ್ರಾಣಾಂ ಚಂದ್ರಮಾಶ್ಚಾಭ್ಯಷಿಚ್ಯತ ||8||
ಅತ್ರ ಗಂಗಾಂ ಮಹಾದೇವಃ ಪತಂತೀಂ ಗಗನಾಚ್ಚ್ಯುತಾಮ್ |
ಪ್ರತಿಗೃಹ್ಯ ದದೌ ಲೋಕೇ ಮಾನುಷೇ ಬ್ರಹ್ಮವಿತ್ತಮಃ ||9||
ಇಲ್ಲಿ ವಿಪ್ರರಾಜ್ಯದಲ್ಲಿ ಚಂದ್ರನು ರಾಜನಾಗಿ ಅಭಿಷಿಕ್ತನಾದನು. ಇಲ್ಲಿ ಮಹಾದೇವನು ಆಕಾಶದಿಂದ ಬೀಳುತ್ತಿರುವ ಗಂಗೆಯನ್ನು ಹಿಡಿದು, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಅವನು ಮನುಷ್ಯಲೋಕಕ್ಕೆ ಕೊಟ್ಟನು.
ಅತ್ರೋಮಯಾ ತಪಸ್ತಪ್ತಂ ಮಹೇಶ್ವರಪರೀಪ್ಸಯಾ |
ಅತ್ರ ಕಾಮಶ್ಚ ರೋಷಶ್ಚ ಶೈಲಶ್ಚೋಮಾ ಚ ಸಂಬಭುಃ ||10||
ಇಲ್ಲಿ ಪಾರ್ವತಿಯು ಮಹೇಶ್ವರನನ್ನು ಪತಿಯನ್ನಾಗಿ ಹೊಂದಲು ಬಯಸಿ ತಪಸ್ಸನ್ನು ಮಾಡಿದಳು. ಇಲ್ಲಿ ಕಾಮ, ರೋಷ, ಮೈನಾಕ ಪರ್ವತ, ಉಮಾ ಎಲ್ಲರೂ ಜನಿಸಿದರು.
ಅತ್ರ ರಾಕ್ಷಸಯಕ್ಷಾಣಾಂ ಗಂಧರ್ವಾಣಾಂ ಚ ಗಾಲವ |
ಆಧಿಪತ್ಯೇನ ಕೈಲಾಸೇ ಧನದೋಽಪ್ಯಭಿಷೇಚಿತಃ ||11||
ಎಲೈ ಗಾಲವರೇ, ಇಲ್ಲಿ ಯಕ್ಷ-ರಾಕ್ಷಸ-ಗಂಧರ್ವರ ಆಧಿಪತ್ಯದಲ್ಲಿ ಕೈಲಾಸ ಪರ್ವತದಲ್ಲಿ ಕುಬೇರನೂ ಅಭಿಷಿಕ್ತನಾಗಿದ್ದಾನೆ.
ಅತ್ರ ಚೈತ್ರರಥಂ ರಮ್ಯಮನು ವೈಖಾನಸಾಶ್ರಮಃ ||12||
ಅತ್ರ ಮಂದಾಕಿನೀ ಚೈವ ಮಂದರಶ್ಚ ದ್ವಿಜರ್ಷಭ |
ಅತ್ರ ಸೌಗಂಧಿಕವನಂ ದೈವತೈರಭಿರಕ್ಷ್ಯತೇ ||13||
ಶಾದ್ವಲಂ ಕದಳೀಸ್ಕಂಧಮತ್ರ ಸಂತಾನಗಾ ನಗಾಃ ||14||
ಎಲೈ ದ್ವಿಜಶ್ರೇಷ್ಠರೇ, ಇಲ್ಲಿ ವೈಖಾಸನಾಶ್ರಮ ಸಮೀಪದಲ್ಲಿ ಮನೋಹರವಾದ ಚೈತ್ರರಥವಿದೆ. ಮಂದಾಕಿನಿಯೂ ಮತ್ತು ಮಂದರಪರ್ವತವೂ ಇವೆ. ಇಲ್ಲಿರುವ ಸೌಗಂಧಿಕ ವನವು ದೇವತೆಗಳಿಂದ ರಕ್ಷಿಸಲ್ಪಡುತ್ತಿದೆ. ಇಲ್ಲಿ ಮೃದುವಾದ ಕದಳೀ ವನವೂ ಮತ್ತು ಸಾಂತಾನಿಕ ವೃಕ್ಷಗಳೂ ಇವೆ.
ಅತ್ರ ಸಂಯಮನಿತ್ಯಾನಾಂ ಸಿದ್ಧಾನಾಂ ಸ್ವೈರಚಾರಿಣಾಮ್ |
ವಿಮಾನಾನ್ಯನುರೂಪಾಣಿ ಕಾಮಭೋಗ್ಯಾನಿ ಗಾಲವ ||15||
ಎಲೈ ಗಾಲವರೇ, ಇಲ್ಲಿ ನಿತ್ಯವೂ ಸಂಯಮವನ್ನು ಹೊಂದಿ, ತಮ್ಮ ಇಚ್ಛೆಯಂತೆ ತಿರುಗುವ ಸಿದ್ಧರ, ಇಷ್ಟವಾದ ಭೋಗಗಳಿಂದ ಕೂಡಿದ ಅನುರೂಪವಾದ ವಿಮಾನಗಳಿವೆ.
ಅತ್ರ ತೇ ಋಷಯಃ ಸಪ್ತ ದೇವೀ ಚಾರುಂಧತೀ ತಥಾ |
ಅತ್ರ ತಿಷ್ಠತಿ ವೈ ಸ್ವಾತಿರತ್ರಾಸ್ಯಾ ಉದಯಃ ಸ್ಮೃತಃ ||16||
ಇಲ್ಲಿ ಸಪ್ತರ್ಷಿಗಳೂ ಮತ್ತು ಅರುಂಧತಿ ದೇವಿಯೂ ಇದ್ದಾಳೆ. ಇಲ್ಲಿ ಸ್ವಾತಿ ಇದ್ದಾಳೆ. ಇದು ಸ್ವಾತಿಯ ಉದಯಸ್ಥಾನವೆಂದು ಹೇಳಲ್ಪಡುತ್ತದೆ.
ಅತ್ರ ಯಜ್ಞಂ ಸಮಾರುಹ್ಯ ಧ್ರುವಂ ಸ್ಥಾತಾ ಪಿತಾಮಹಃ |
ಜ್ಯೋತೀಂಷಿ ಚಂದ್ರಸೂರ್ಯೌ ಚ ಪರಿವರ್ತಂತಿ ನಿತ್ಯಶಃ ||17||
ಇಲ್ಲಿ ಪಿತಾಮಹರಾದ ಬ್ರಹ್ಮದೇವರು ಯಜ್ಞದೀಕ್ಷಿತರಾಗಿ ಶಾಶ್ವತವಾಗಿ ಇರುತ್ತಾರೆ. ಎಲ್ಲ ಜ್ಯೋತಿಸ್ಸುಗಳು ಮತ್ತು ಚಂದ್ರ-ಸೂರ್ಯರು ಯಾವಾಗಲೂ ಈ ಉತ್ತರದಿಕ್ಕಿನಲ್ಲಿಯೇ ತಿರುಗುತ್ತವೆ.
ಅತ್ರ ಗಂಗಾಮಹಾದ್ವಾರಂ ರಕ್ಷಂತಿ ದ್ವಿಜಸತ್ತಮಾಃ |

ಧಾಮಾ ನಾಮ ಮಹಾತ್ಮಾನೋ ಮುನಯಃ ಸತ್ಯವಾದಿನಃ ॥18॥
ಇಲ್ಲಿ ಗಂಗೆಯ ಉಗಮಸ್ಥಾನವನ್ನು ಧಾಮ ಎಂಬ ಹೆಸರಿನ ಮಹಾತ್ಮರೂ, ಸತ್ಯವಾದಿಗಳೂ, ದ್ವಿಜಶ್ರೇಷ್ಠರೂ ಆದ ಮುನಿಗಳು ರಕ್ಷಿಸುತ್ತಾರೆ.
ನ ತೇಷಾಂ ಜ್ಞಾಯತೇ ಸೂತಿರ್ನಾಕೃತಿರ್ನ ತು ಪಶ್ಚಿಮಃ।
ಪರಿವರ್ತಸಹಸ್ರಾಣಿ ಕಾಮಭೋಗ್ಯಾನಿ ಗಾಲವ ॥19॥
ಎಲೈ ಗಾಲವರೇ, ಅವರ ಉತ್ಪತ್ತಿಯಾಗಲೀ, ಅವರ ಆಕೃತಿಯಾಗಲೀ, ಅವರ ದೇಹದ ಹಿಂಭಾಗವಾಗಲೀ, ಅವರ ಸಹಸ್ರಪರಿವರ್ತನೆಗಳಾಗಲೀ ಅಥವಾ ಅವರಿಗೆ ಇಷ್ಟವಾದ ಭೋಗಗಳಾಗಲೀ ಯಾರಿಗೂ ತಿಳಿಯುವುದಿಲ್ಲ.
ಯಥಾ ಯಥಾ ಪ್ರವೇಕ್ಷ್ಯಂತಿ ತಸ್ಮಾತ್ ಪರತರಂ ನರಃ।
ತಥಾ ತಥಾ ದ್ವಿಜಶ್ರೇಷ್ಠ ಪ್ರವಿಲೀಯತಿ ಗಾಲವ ॥20॥
ಎಲೈ ಗಾಲವರೇ, ಮನುಷ್ಯನು ಹೇಗೆ ಹೇಗೆ ಇಲ್ಲಿಂದ ಮುಂದಕ್ಕೆ ಹೋಗುತ್ತಾನೆಯೋ ಎಲೈ ದ್ವಿಜಶ್ರೇಷ್ಠರೇ, ಹಾಗೆ ಹಾಗೆ ಅವನು ಅದೃಶ್ಯನಾಗುತ್ತಾನೆ.
ನೈತತ್ ಕೇನಚಿದನ್ಯೇನ ಗತಪೂರ್ವಂ ದ್ವಿಜರ್ಷಭ।
ಋತೇ ನಾರಾಯಣಂ ದೇವಂ ನರಂ ವಾ ಜಿಷ್ಣುಮವ್ಯಯಮ್ ॥21॥
ಎಲೈ ದ್ವಿಜರ್ಷಭರೇ, ದೇವನಾದ ನಾರಾಯಣನನ್ನು ಬಿಟ್ಟು ಜಯಶೀಲನಾದ ಅವ್ಯಯನಾದ ನರನನ್ನು ಬಿಟ್ಟು ಬೇರೆ ಯಾವನೂ ಈ ದಿಕ್ಕಿನಲ್ಲಿ ಮುಂದೆ ಹೋಗಿಲ್ಲ.
ಅತ್ರ ಕೈಲಾಸಮಿತ್ಯುಕ್ತಂ ಸ್ಥಾನಮೈಲಬಿಲಸ್ಯ ತತ್।
ಅತ್ರ ವಿದ್ಯುತ್ಪ್ರಭಾ ನಾಮ ಜಜ್ಞಿರೇಽಪ್ಸರಸೋ ದಶ ॥22॥
ಇಲ್ಲಿ ಕೈಲಾಸವೆಂದು ಕರೆಯುವ ಕುಬೇರನ ಸ್ಥಾನವಿದೆ. ವಿದ್ಯುತ್ಪ್ರಭಾ ಎಂಬ ಹೆಸರಿನ ಹತ್ತು ಅಪ್ಸರೆಯರು ಇಲ್ಲಿಯೇ ಜನಿಸಿದರು.
ಅತ್ರ ವಿಷ್ಣುಪದಂ ನಾಮ ಕ್ರಮತಾ ವಿಷ್ಣುನಾ ಕೃತಮ್।
ತ್ರಿಲೋಕವಿಕ್ರಮೇ ಬ್ರಹ್ಮನ್ನುತ್ತರಾಂ ದಿಶಮಾಶ್ರಿತಮ್ ॥23॥
ಎಲೈ ಬ್ರಾಹ್ಮಣರೇ, ವಿಷ್ಣುವು ಮೂರುಲೋಕಗಳನ್ನು ಅಳೆಯುವಾಗ ಉತ್ತರ ದಿಕ್ಕಿನಲ್ಲಿ ಪಾದವನ್ನು ಇಟ್ಟಾಗ ಉಂಟಾದ ವಿಷ್ಣುಪದ ಎಂಬ ಸ್ಥಾನವು ಇಲ್ಲಿದೆ.
ಅತ್ರ ರಾಜ್ಞಾ ಮರುತ್ತೇನ ಯಜ್ಞೇನೇಷ್ಟಂ ದ್ವಿಜೋತ್ತಮ।
ಉಶೀರಬೀಜೇ ವಿಪ್ರರ್ಷೇ ಯತ್ರ ಜಾಂಬೂನದಂ ಸರಃ ॥24॥
ಎಲೈ ದ್ವಿಜೋತ್ತಮರೇ, ಇಲ್ಲಿ ಉಶೀರಬೀಜ ಎಂಬ ಕ್ಷೇತ್ರದಲ್ಲಿ ಮರುತ್ತ ರಾಜನು ಯಜ್ಞವನ್ನು ಮಾಡಿದನು. ಎಲೈ ವಿಪ್ರರ್ಷಿಗಳೇ, ಅಲ್ಲಿ ಸುವರ್ಣಮಯವಾದ ಒಂದು ಸರೋವರವಿದೆ.
ಜೀಮೂತಸ್ಯಾತ್ರ ವಿಪ್ರರ್ಷೇರುಪತಸ್ಥೇ ಮಹಾತ್ಮನಃ।
ಸಾಕ್ಷಾದ್ಧೈಮವತಃ ಪುಣ್ಯೋ ವಿಮಲಃ ಕಮಲಾಕರಃ ॥24॥
ಇಲ್ಲಿ ಮಹಾತ್ಮನಾದ ಜೀಮೂತನೆಂಬ ವಿಪ್ರರ್ಷಿಯ ಆಶ್ರಮಕ್ಕೆ ಹಿಮಾಲಯದ ಪವಿತ್ರವಾದ ನಿರ್ಮಲವಾದ ಸರೋವರವು ತಾನಾಗಿಯೇ ಬಂದಿದೆ.
ಬ್ರಾಹ್ಮಣೇಷು ಚ ಯತ್ ಕೃತ್ಸ್ನಂ ಸ್ವಕಂ ಕೃತ್ವಾ ಧನಂ ಮಹತ್।
ವವ್ರೇ ವನಂ ಮಹರ್ಷಿಃ ಸ ಜೈಮೂತಂ ತದ್ವನಂ ತತಃ ॥26॥
ತನ್ನಲ್ಲಿದ್ದ ಮಹಾಧನವನ್ನೆಲ್ಲಾ ಬ್ರಾಹ್ಮಣರಿಗೆ ಕೊಟ್ಟು ಆ ಜೀಮೂತ ಮಹರ್ಷಿಗಳು ಈ ವನವನ್ನು ಆರಿಸಿದರು. ಆದ್ದರಿಂದ ಈ ವನಕ್ಕೆ ಜೈಮೂತವನ ಎಂದು ಹೆಸರು ಬಂದಿದೆ.
ಅತ್ರ ನಿತ್ಯಂ ದಿಶಾಂ ಪಾಲಾಃ ಸಾಯಂ ಪ್ರಾತರ್ದ್ವಿಜರ್ಷಭ।
ಕಸ್ಯ ಕಾರ್ಯಂ ಕಿಮಿತಿ ವೈ ಪರಿಕ್ರೋಶಂತಿ ಗಾಲವ ॥27॥
ಎಲೈ ದ್ವಿಜಶ್ರೇಷ್ಠರಾದ ಗಾಲವರೇ, ಇಲ್ಲಿ ನಿತ್ಯವೂ ದಿಕ್ಪಾಲಕರು ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿ ಸೇರಿ ಯಾರಿಗೆ ಏನು ಕಾರ್ಯವಾಗಬೇಕಾಗಿದೆ ಎಂದು ಗಟ್ಟಿಯಾಗಿ ಕಿರುಚುತ್ತಾರೆ.
ಏವಮೇಷಾ ದ್ವಿಜಶ್ರೇಷ್ಠ ಗುಣೈರನ್ಯೈರ್ದಿಗುತ್ತರಾ।
ಉತ್ತರೇತಿ ಪರಿಖ್ಯಾತಾ ಸರ್ವಕರ್ಮಸು ಚೋತ್ತರಾ ॥28॥
ಎಲೈ ದ್ವಿಜಶ್ರೇಷ್ಠರೇ, ಹೀಗೆ ಈ ದಿಕ್ಕು ತನ್ನ ಗುಣಗಳಿಂದ ಉಳಿದ ದಿಕ್ಕುಗಳನ್ನು ಮೀರಿದೆ. ಆದ್ದರಿಂದ ಉತ್ತರ ಎಂದೇ ಪ್ರಸಿದ್ಧವಾಗಿದೆ. ಎಲ್ಲ ಕರ್ಮಗಳಲ್ಲಿಯೂ ಉತ್ತರವಾಗಿಯೇ (ಶ್ರೇಷ್ಠವಾಗಿಯೇ) ಇದೆ.
ಏತಾ ವಿಸ್ತರಶಸ್ತಾತ ತವ ಸಂಕೀರ್ತಿತಾ ದಿಶಃ।
ಚತಸ್ರಃ ಕ್ರಮಯೋಗೇನ ಕಾಮಾಶಾಂ ಗಂತುಮಿಚ್ಛಸಿ ॥29॥
ಎಲೈ ಪ್ರೀತಿಪಾತ್ರರೇ, ಈ ನಾಲ್ಕು ದಿಕ್ಕುಗಳನ್ನು ನಾನು ಕ್ರಮವಾಗಿ, ವಿಸ್ತಾರವಾಗಿ ನಿಮಗೆ ಹೇಳಿದ್ದೇನೆ. ಯಾವ ದಿಕ್ಕಿಗೆ ಹೋಗಲು ಬಯಸುತ್ತೀರಿ?
ಉದ್ಯತೋಽಹಂ ದ್ವಿಜಶ್ರೇಷ್ಠ ತವ ದರ್ಶಯಿತುಂ ಜಗತ್।
ಪೃಥಿವೀಂ ಚಾಖಿಲಾಂ ಬ್ರಹ್ಮನ್ ತಸ್ಮಾದಾರೋಹ ಮಾಂ ದ್ವಿಜ ॥30॥
ಎಲೈ ದ್ವಿಜಶ್ರೇಷ್ಠರೇ, ಬ್ರಾಹ್ಮಣರೇ, ನಾನು ನಿಮಗೆ ಎಲ್ಲಾ ಪೃಥಿವಿಯನ್ನು ಮತ್ತು ಜಗತ್ತನ್ನು ತೋರಿಸಲು ಉದ್ಯುಕ್ತನಾಗಿದ್ದೇನೆ. ಆದ್ದರಿಂದ ಎಲೈ ಬ್ರಾಹ್ಮಣರೇ ನನ್ನ ಬೆನ್ನಿನ ಮೇಲೆ ಕುಳಿತುಕೊಳ್ಳಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೊಂದನೆಯ ಅಧ್ಯಾಯ
ಗರುಡನ ವೇಗವನ್ನು ಸಹಿಸಲಾರದೆ ಗಾಲವರಿಂದ ಹಿಂದಿರುಗುವಂತೆ ಪ್ರಾರ್ಥನೆ. ವೃಷಭಾಚಲದಲ್ಲಿ ವಿಶ್ರಮಿಸಿ ಹಾಗೆ ಮಾಡುವಂತೆ ಗರುಡನ ಸಮ್ಮತಿ.
ಗಾಲವಃ
ಗರುತ್ಮನ್ ಭುಜಗೇಂದ್ರಾರೇ ಸುಪರ್ಣ ವಿನತಾತ್ಮಜ |
ನಯ ಮಾಂ ತಾರ್ಕ್ಷ್ಯ ಪೂರ್ವೇಣ ಯತ್ರ ಧರ್ಮಸ್ಯ ಚಕ್ಷುಷೀ ॥1॥
ಗಾಲವ ಎಲೈ ವಿನತಾತ್ಮಜನಾದ, ಭುಜಗೇಂದ್ರಶತ್ರುವಾದ, ಒಳ್ಳೆಯ ರೆಕ್ಕೆಗಳಿಂದ ಕೂಡಿದ, ಕಶ್ಯಪರ ಪುತ್ರರಾದ ಗರುಡನೇ, ಧರ್ಮದ ಕಣ್ಣುಗಳಿರುವ ಪೂರ್ವದಿಕ್ಕಿಗೆ ನನ್ನನ್ನು ಕರೆದುಕೊಂಡು ಹೋಗು.
ಪೂರ್ವಾಮೇವ ದಿಶಂ ಗಚ್ಛ ಯಾ ಪೂರ್ವಂ ಪರಿಕೀರ್ತಿತಾ |
ದೇವತಾನಾಂ ಹಿ ಸಾನ್ನಿಧ್ಯಮತ್ರ ಕೀರ್ತಿತವಾನಸಿ ॥2॥
ಅತ್ರ ಸತ್ಯಂ ಚ ಧರ್ಮಶ್ಚ ತ್ವಯಾ ಸಮ್ಯಕ್ ಪ್ರಕೀರ್ತಿತೌ ॥3॥
ನೀನು ಹೇಳಿದ ಪೂರ್ವದಿಕ್ಕಿಗೇ ಹೋಗುವವನಾಗು. ಅಲ್ಲಿ ದೇವತೆಗಳ ಸಾನ್ನಿಧ್ಯವನ್ನು ಹೇಳಿದ್ದಿಯಷ್ಟೆ! ಮತ್ತು ಅಲ್ಲಿ ಸತ್ಯ ಮತ್ತು ಧರ್ಮಗಳು ಪ್ರತಿಷ್ಠಿತವಾಗಿವೆ ಎಂದೂ ಹೇಳಿದ್ದೀಯೆ.
ಇಚ್ಛೇಯಂ ತು ಸಮಾಗಂತುಂ ಸಮಸ್ತೈರ್ದೈವತೈರಹಮ್ |
ಭೂಯಶ್ಚ ತಾನ್ ಸುರಾನ್ ದ್ರಷ್ಟುಮಿಚ್ಛೇಯಮರುಣಾನುಜ ॥4॥
ನಾನು ಎಲ್ಲ ದೇವತೆಗಳ ಜೊತೆಯಲ್ಲಿ ಸಮಾಗಮವನ್ನು ಹೊಂದಲು ಇಚ್ಛಿಸುತ್ತೇನೆ. ಎಲೈ ಅರುಣನ ತಮ್ಮನೇ, ಪುನಃ ಅಲ್ಲಿ ಆ ದೇವತೆಗಳನ್ನು ನೋಡಲು ಬಯಸುತ್ತೇನೆ.
ನಾರದಃ
ತಮಾಹ ವಿನತಾಸೂನುರಾರೋಹಸ್ವೇತಿ ವೈ ದ್ವಿಜಮ್ |
ಆರುರೋಹಾಥ ಸ ಮುನಿಃ ಗರುಡಂ ಗಾಲವಸ್ತಥಾ ॥5॥
ನಾರದ ಗರುಡನು ಆ ಬ್ರಾಹ್ಮಣರಿಗೆ ನನ್ನ ಮೇಲೆ ಕುಳಿತುಕೊಳ್ಳಿ ಎಂದು ಹೇಳಿದನು. ಗಾಲವ ಋಷಿಗಳು ಗರುಡನ ಮೇಲೆ ಕುಳಿತರು.
ಗಾಲವಃ
ಕ್ರಮಮಾಣಸ್ಯ ತೇ ರೂಪಂ ದೃಶ್ಯತೇ ಪನ್ನಗಾಶನ |
ಭಾಸ್ಕರಸ್ಯೇವ ಪೂರ್ವಾಹ್ಣೇ ಸಹಸ್ರಾಂಶೋರ್ವಿವಸ್ವತಃ ॥6॥
ಗಾಲವ ಎಲೈ ಪನ್ನಗಾಶನನೇ, ಹಾರುತ್ತಿರುವ ನಿನ್ನ ರೂಪವು ಪ್ರಾತಃಕಾಲದಲ್ಲಿ ಸಹಸ್ರಕಿರಣಗಳಿಂದ ಕೂಡಿದ ಸೂರ್ಯನ ರೂಪದಂತೆ ಕಂಡುಬರುತ್ತದೆ.
ಪಕ್ಷವಾತಪ್ರಣುನ್ನಾನಾಂ ವೃಕ್ಷಾಣಾಮನುಗಾಮಿನಾಮ್ |
ಪ್ರಸ್ಥಿತಾನಾಮಿವ ಸಮಂ ಪಶ್ಯಾಮೀಹ ಗತಿಂ ಖಗ ॥7॥
ನಿನ್ನ ರೆಕ್ಕೆಗಳಿಂದ ಉಂಟಾದ ವಾಯುವಿನಿಂದ ನಿನ್ನ ಹಿಂದೆ ಬರುತ್ತಿರುವ ವೃಕ್ಷಗಳು ತಾವು ಪ್ರಯಾಣಕ್ಕೆ ಹೊರಟಿರುವಂತೆ ಇರುವಂತಹ ನಿನ್ನ ಗಮನವನ್ನು ನಾನು ನೋಡುತ್ತಿದ್ದೇನೆ.
ಸಸಾಗರವನಾಮುರ್ವೀಂ ಸಶೈಲವನಕಾನನಾಮ್ |
ಆಕರ್ಷನ್ನಿವ ಚಾಭಾಸಿ ಪಕ್ಷವಾತೇನ ಖೇಚರ ॥8॥
ಎಲೈ ಖೇಚರನೇ (ಪಕ್ಷಿಯೇ), ಸಾಗರ-ವನಗಳಿಂದ ಶೈಲ-ವನ-ಕಾನನಗಳಿಂದ ಕೂಡಿದ ಭೂಮಿಯನ್ನು ನಿನ್ನ ರೆಕ್ಕೆಗಳ ವಾಯುವಿನಿಂದ ಎಳೆದುಕೊಂಡು ಹೋಗುವವನಂತೆ ತೋರುತ್ತಿದ್ದೀಯೆ.
ಸಮೀನನಾಗನಕ್ರಂ ಚ ಖಮಿವಾರೋಪ್ಯತೇ ಜಲಮ್ |
ವಾಯುನಾ ಚೈವ ಮಹತಾ ಪಕ್ಷವಾತೇನ ಚಾನಿಶಮ್ ॥9॥
ನಿನ್ನ ರೆಕ್ಕೆಗಳಿಂದ ಉಂಟಾದ ದೊಡ್ಡ ವಾಯುವಿನಿಂದ ಮತ್ಸ್ಯ-ಸರ್ಪ- ತಿಮಿಂಗಿಲಗಳಿಂದ ಕೂಡಿದ ಸಮುದ್ರದ ಜಲವು ಆಕಾಶವನ್ನು ಸತತವಾಗಿ ಏರುತ್ತಿದೆ.
ತುಲ್ಯರೂಪಾನನಾನ್ ಮತ್ಸ್ಯಾನ್ ತಥಾ ತಿಮಿತಿಮಿಂಗಿಲಾನ್ |
ನಾಗಾಶ್ವತರವಕ್ತ್ರಾಂಶ್ಚ ಪಶ್ಯಾಮ್ಯುನ್ಮಥಿತಾನಿವ ॥10॥
ಸಮಾನರೂಪವನ್ನು ಮತ್ತು ಮುಖವನ್ನು ಧರಿಸಿದ ಮೀನುಗಳನ್ನೂ, ತಿಮಿ ತಿಮಿಂಗಿಲಗಳನ್ನೂ, ಗಜ-ಹೇಸರಗತ್ತೆಗಳ ಮುಖವನ್ನು ಹೊಂದಿದ ಮೀನುಗಳನ್ನೂ ನಿನ್ನಿಂದ ಹಿಂಸೆಗೆ ಒಳಗಾದವುಗಳಂತೆ ನೋಡುತ್ತಿದ್ದೇನೆ.
ಮಹಾರ್ಣವಸ್ಯ ಚ ರವೈಃ ಶ್ರೋತ್ರೇ ಮೇ ಬಧಿರೇ ಕೃತೇ |
ನ ಶೃಣೋಮಿ ನ ಪಶ್ಯಾಮಿ ನಾತ್ಮನೋ ವೇದ್ಮಿ ಕಾರಣಮ್ ॥11॥

ಶನೈಃ ಸ ತು ಭವಾನ್ ಯಾತು ಬ್ರಹ್ಮವಧ್ಯಾಮನುಸ್ಮರನ್ ॥12॥
ಮಹಾಸಮುದ್ರದ ಘೋಷಗಳಿಂದ ನನ್ನ ಕಿವಿಗಳು ಕಿವುಡಾಗಿವೆ. ನನಗೆ ಏನೂ ಕೇಳುತ್ತಿಲ್ಲ, ಏನೂ ಕಾಣುತ್ತಿಲ್ಲ. ನನ್ನ ಕಾರಣವೂ ತಿಳಿಯುತ್ತಿಲ್ಲ. ಬ್ರಹ್ಮಹತ್ಯೆಯ ಸಂಭವವನ್ನು ಯೋಚಿಸಿ ನೀನು ನಿಧಾನವಾಗಿ ಹೋಗುವವನಾಗು.
ನ ದೃಶ್ಯತೇ ರವಿಸ್ತಾತ ನ ದಿಶೋ ನ ಚ ಖಂ ಖಗ |
ತಮ ಏವ ತು ಪಶ್ಯಾಮಿ ಶರೀರಂ ತೇ ನ ಲಕ್ಷಯೇ ॥13॥
ಪ್ರೀತಿಪಾತ್ರನೇ, ಸೂರ್ಯನು ಕಾಣುತ್ತಿಲ್ಲ. ಪಕ್ಷಿಯೇ, ದಿಕ್ಕುಗಳಾಗಲೀ, ಆಕಾಶವಾಗಲೀ ಕಾಣುತ್ತಿಲ್ಲ. ಎಲ್ಲ ಕಡೆಯಲ್ಲಿಯೂ ಕತ್ತಲನ್ನು ನೋಡುತ್ತಿದ್ದೇನೆ. ನನ್ನ ಶರೀರವು ನನಗೆ ಕಾಣುತ್ತಿಲ್ಲ.
ಮಣೀ ವ ಜಾತ್ಯೌ ಪಶ್ಯಾಮಿ ಚಕ್ಷುಷೀ ತೇಽಹಮಂಡಜ |
ಶರೀರಂ ತು ನ ಪಶ್ಯಾಮಿ ತವ ಚೈವಾತ್ಮನಶ್ಚ ಹ ॥14॥
ಪದೇ ಪದೇ ತು ಪಶ್ಯಾಮಿ ಸಲಿಲಾದಗ್ನಿಮುತ್ಥಿತಮ್ ॥15॥
ಎಲ್ಲೈ ಪಕ್ಷಿಯೇ, ಜಾತಿಮಣಿಗಳಂತೆ ಇರುವ ನಿನ್ನ ಕಣ್ಣುಗಳನ್ನು ನೋಡುತ್ತಿದ್ದೇನೆ. ನಿನ್ನ ಮತ್ತು ನನ್ನ ಶರೀರಗಳು ಕಾಣುತ್ತಿಲ್ಲ. ಪುನಃ ಪುನಃ ನೀರಿನಿಂದ ಮೇಲೆ ಬರುತ್ತಿರುವ ಅಗ್ನಿಯನ್ನು ನೋಡುತ್ತಿದ್ದೇನೆ.
ಸ ಮೇ ನಿರ್ವಾಪ್ಯ ಸಹಸಾ ಚಕ್ಷುಷೀ ಶಾಮ್ಯತೇ ಪುನಃ |
ತನ್ನಿವರ್ತ ಮಹಾನ್ ಕಾಲೋ ಗಚ್ಛತೋರ್ವಿನತಾತ್ಮಜ ॥16॥
ಆ ಅಗ್ನಿಯು ನನ್ನ ಕಣ್ಣುಗಳಿಗೆ ಹಿಂಸೆಯನ್ನು ಉಂಟುಮಾಡಿ ಪುನಃ ಆರಿ ಹೋಗುತ್ತಿದೆ. ವಿನತೆಯ ಪುತ್ರನೇ, ನಾವು ಹೊರಟು ಬಹಳ ಕಾಲವಾಯಿತು. ಆದ್ದರಿಂದ ಹಿಂದಿರುಗು.
ನ ಮೇ ಪ್ರಯೋಜನಂ ಕಿಂಚಿದ್ ಗಮನೇ ಪನ್ನಗಾಶನ |
ಸನ್ನಿವರ್ತ ಮಹಾಭಾಗ ನ ವೇಗಂ ವಿಷಹಾಮಿ ತೇ ॥17॥
ಎಲ್ಲೈ ಪನ್ನಗಾಶನನೇ, ನಾವು ಹೀಗೆ ಹೋಗುವುದರಿಂದ ನನಗೆ ಯಾವ ಪ್ರಯೋಜನವೂ ಕಾಣುವುದಿಲ್ಲ. ಎಲ್ಲೈ ಮಹಾನುಭಾವನೇ, ಹಿಂದಿರುಗು. ನಿನ್ನ ವೇಗವನ್ನು ಸಹಿಸಲಾರೆ.
ಗುರವೇ ಮಚ್ಛ್ರುತಾನೀಹ ಶತಾನ್ಯಷ್ಟೌ ಚ ವಾಜಿನಾಮ್ |
ಏಕತಃ ಶ್ಯಾಮಕರ್ಣಾನಾಂ ಶುಭ್ರಾಣಾಂ ಚಂದ್ರವರ್ಚಸಾಮ್ ॥18॥
ನಾನು ಗುರುಗಳಿಗೆ ಒಂದು ಕಡೆ ಕಪ್ಪಾದ ಕಿವಿ ಇರುವ, ಶುಭ್ರವಾದ ಚಂದ್ರನ ಕಾಂತಿಯನ್ನು ಹೊಂದಿರುವ ಎಂಟುನೂರು ಅಶ್ವಗಳನ್ನು ಕೊಡುವುದಾಗಿ ಪ್ರತಿಜ್ಞೆ ಮಾಡಿದ್ದೇನೆ.
ತೇಷಾಂ ಚೈವಾಪವರ್ಗಾಯ ಮಾರ್ಗಂ ಪಶ್ಯಾಮಿ ನಾಂಡಜ |
ತತೋಽಯಂ ಜೀವಿತತ್ಯಾಗೇ ದೃಷ್ಟೋ ಮಾರ್ಗೋ ಮಯಾ ದ್ವಿಜ ॥
ಎಲ್ಲೈ ಪಕ್ಷಿಯೇ, ಅವುಗಳನ್ನು ಕೊಡುವ ಯಾವ ಮಾರ್ಗವೂ ಕಾಣುತ್ತಿಲ್ಲ. ಆದ್ದರಿಂದ ಎಲ್ಲೈ ಪಕ್ಷಿಯೇ, ನಾನು ಜೀವಿತವನ್ನು ತ್ಯಜಿಸಲು ಈ ಮಾರ್ಗವನ್ನು ಕಂಡುಕೊಂಡಿದ್ದೇನೆ.
ನೈವ ಮೇಽಸ್ತಿ ಧನಂ ಕಿಂಚಿನ್ನ ಧನೇನಾನ್ವಿತಃ ಸುಹೃತ್ |
ನ ಚಾರ್ಥೇನಾಪಿ ಮಹತಾ ಶಕ್ಯಮೇತದ್ ವ್ಯಪೋಹಿತುಮ್ ॥20॥
ನನ್ನ ಬಳಿ ಸ್ವಲ್ಪವೂ ಧನವಿಲ್ಲ. ನನಗೆ ಧನಿಕನಾದ ಮಿತ್ರನೂ ಇಲ್ಲ. ಒಂದುಪಕ್ಷ ಮಹಾಧನವಿದ್ದರೂ ಈ ಕಷ್ಟವನ್ನು ಧನದಿಂದ ನೀಗಿಸಲು ಸಾಧ್ಯವಿಲ್ಲ.
ನಾರದಃ
ಏವಂ ಬಹು ಚ ದೀನಂ ಚ ಬ್ರುವಾಣಂ ಗಾಲವಂ ತದಾ |
ಪ್ರತ್ಯುವಾಚ ವ್ರಜನ್ನೇವ ಪ್ರಹಸನ್ ವಿನತಾತ್ಮಜಃ ॥21॥
ನಾರದ ಹೀಗೆ ಬಹಳ ದೀನರಾಗಿ ಮಾತನಾಡುತ್ತಿದ್ದ ಗಾಲವರನ್ನು ಕುರಿತು ವಿನತಾಪುತ್ರನಾದ ಗರುಡನು ಮುಂದೆ ಸಾಗುತ್ತಲೇ ನಗುತ್ತಾ ಮಾತನಾಡಿದನು.
ನಾತಿಪ್ರಜ್ಞೋಽಸಿ ವಿಪ್ರರ್ಷೇ ಯೋ ತ್ಮಾನಂ ತ್ಯಕ್ತುಮಿಚ್ಛಸಿ |
ನ ಚಾಪಿ ಕೃತ್ರಿಮಃ ಕಾಲಃ ಕಾಲೋ ಹಿ ಪರಮೇಶ್ವರಃ ॥22॥
ಎಲ್ಲೈ ವಿಪ್ರರ್ಷಿಯೇ, ದೇಹತ್ಯಾಗವನ್ನು ಮಾಡಲು ಬಯಸುವ ನೀನು ಬಹಳ ವಿವೇಕವುಳ್ಳವನಲ್ಲ. ಕ್ಷಲವಾದಿ ಕಾಲವು ಕೃತ್ರಿಮವಲ್ಲ. ಕಾಲವು ಪರಮೇಶ್ವರನ ಒಂದು ರೂಪ.
ಕಿಮಹಂ ಪೂರ್ವಮೇವೇದಂ ಭವತಾ ನಾಭಿಚೋದಿತಃ |
ಉಪಾಯೋಽತ್ರ ಮಹಾನಸ್ತಿ ಯೇನೈತದುಪಪದ್ಯತೇ ॥23॥
ಈ ವಿಷಯವನ್ನು ನೀನು ಮೊದಲೇ ನನಗೆ ಏಕೆ ಹೇಳಲಿಲ್ಲ? ಇದನ್ನು ಸಾಧಿಸುವ ಒಂದು ದೊಡ್ಡ ಉಪಾಯವು ಇಲ್ಲಿದೆ.
ತದೇವ ಋಷಭೋ ನಾಮ ಪರ್ವತಃ ಸಾಗರೋರಸಿ |
ಅತ್ರ ವಿಶ್ರಮ್ಯ ಭುಕ್ತ್ವಾ ಚ ನಿವರ್ತಿಷ್ಯಾವ ಗಾಲವ ॥24॥
ಸಾಗರದ ಸಮೀಪದಲ್ಲಿ ಋಷಭವೆಂಬ ಈ ಪರ್ವತವಿದೆ. ಎಲ್ಲೈ ಗಾಲವರೇ, ಇಲ್ಲಿ ವಿಶ್ರಾಂತಿಯನ್ನು ತೆಗೆದುಕೊಂಡು ಭೋಜನವನ್ನು ಮಾಡಿ ಹಿಂದಿರುಗೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಾದಶೋತ್ತರಶತತಮೋಽಧ್ಯಾಯಃ ॥

॥ ಭಗವದ್ಯಾನಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹನ್ನೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೆರಡನೆಯ ಅಧ್ಯಾಯ
ಋಷಭಾಚಲದಲ್ಲಿ ಶಾಂಡಿಲಿಯ ಜೊತೆಯಲ್ಲಿ ಸಂಭಾಷಣೆ
ನಾರದಃ
ಋಷಭಸ್ಯ ತತಃ ಶೃಂಗೇ ನಿಪತ್ಯ ದ್ವಿಜಪಕ್ಷಿಣೌ |
ಶಾಂಡಿಲೀಂ ಬ್ರಾಹ್ಮಣೀಂ ತತ್ರ ದದೃಶಾತೇ ತಪೋನ್ವಿತಾಮ್ ॥1॥
ನಾರದ ಅನಂತರ ಬ್ರಾಹ್ಮಣ ಮತ್ತು ಗರುಡ ಇವರಿಬ್ಬರೂ ಋಷಭಾಚಲದ ಶಿಖರದಲ್ಲಿ ಇಳಿದು, ತಪಸ್ಸಿನಿಂದ ಕೂಡಿದ ಬ್ರಾಹ್ಮಣಿಯಾದ ಶಾಂಡಿಲಿಯನ್ನು ಅಲ್ಲಿ ನೋಡಿದರು.
ಅಭಿವಾದ್ಯ ಸುಪರ್ಣಸ್ತು ಗಾಲವಶ್ಚಾಭಿಪೂಜ್ಯ ತಾಮ್ |
ತಯಾ ಚ ಸ್ವಾಗತೇನೋಕ್ತೌ ವಿಷ್ಟರೇ ಸನ್ನಿಷೀದತುಃ ॥2॥
ಗಾಲವ ಮತ್ತು ಗರುಡರು ಅವಳಿಗೆ ನಮಸ್ಕಾರವನ್ನು ಮಾಡಿ ಪೂಜೆಯನ್ನು ಸಲ್ಲಿಸಿ ಅವಳಿಂದ ಸ್ವಾಗತಿಸಲ್ಪಟ್ಟು ಆಸನದಲ್ಲಿ ಕುಳಿತುಕೊಂಡರು.
ಸಿದ್ಧಮನ್ನಂ ತಯಾ ಕ್ಷಿಪ್ರಂ ಬಲಿಮಂತ್ರೋಪಬೃಂಹಿತಮ್ |
ಭುಕ್ತ್ವಾ ತೃಪ್ತಾವುಭೌ ಭೂಮೌ ಸುಪ್ತೌ ಚೈವ ಸಮಾಹಿತೌ ॥3॥
ಅವಳು ನೀಡಿದ ಬಲಿಮಂತ್ರಗಳಿಂದ ಸಂಸ್ಕೃತವಾದ ಅನ್ನವನ್ನು ಶೀಘ್ರವಾಗಿ ಭುಂಜಿಸಿ ತೃಪ್ತರಾಗಿ ಇಬ್ಬರೂ ಸಮಾಧಾನದಿಂದ ಭೂಮಿಯ ಮೇಲೆ ಮಲಗಿದರು.
ಮುಹೂರ್ತಾತ್ ಪ್ರತಿಬುದ್ಧಸ್ತು ಸುಪರ್ಣೋ ಗಮನೇಪ್ಸಯಾ |
ಅಥ ಭ್ರಷ್ಟತನೂಜಾಂಗಮಾತ್ಮಾನಂ ದದೃಶೇ ಖಗಃ ॥4॥
ಹೊರಡುವ ಇಚ್ಛೆಯಿಂದ ಒಂದುಮುಹೂರ್ತದ ಮೇಲೆ ಎಚ್ಚರಗೊಂಡ ಗರುಡನು ತನ್ನ ರೆಕ್ಕೆಗಳು ಬಿದ್ದುಹೋಗಿರುವುದನ್ನು ಗಮನಿಸಿದನು.
ಮಾಂಸಪಿಂಡೋಪಮೋಽಭೂತ್ ಸ ಮುಖಪಾದಾನ್ವಿತಃ ಖಗಃ |
ಗಾಲವಸ್ತಂ ತಥಾ ದೃಷ್ಟ್ವಾ ವಿಷಣ್ಣಃ ಪರ್ಯಪೃಚ್ಛತ ॥5॥
ಮುಖ-ಪಾದಗಳಿಂದ ಕೂಡಿದ ಗರುಡನು ಮಾಂಸಪಿಂಡದಂತೆ ಇದ್ದನು. ಗಾಲವರು ಅವನನ್ನು ನೋಡಿ ವಿಷಣ್ಣರಾಗಿ ಪ್ರಶ್ನೆಯನ್ನು ಮಾಡಿದರು.
ಕಿಮಿದಂ ಭವತಾ ಪ್ರಾಪ್ತಮಿಹಾಗಮನಜಂ ಫಲಮ್ |
ವಾಸೋಽಯಮಿಹ ಕಾಲಂ ತು ಕಿಯಂತಂ ನೋ ಭವಿಷ್ಯತಿ ॥6॥
ಇಲ್ಲಿಗೆ ಬಂದುದರ ಯಾವ ಫಲವು ನಿನಗೆ ದೊರಕಿದೆ? ನಾವು ಇಲ್ಲಿ ಎಷ್ಟು ಸಮಯ ಇರಬೇಕಾಗುವುದು?
ಕಿಂ ನು ತೇ ಮನಸಾ ಧ್ಯಾತಮಶುಭಂ ಪತತಾಂ ವರ |
ನ ಹ್ಯಯಂ ಭವತಃ ಸ್ವಲ್ಪೋ ವ್ಯಭಿಚಾರೋ ಭವಿಷ್ಯತಿ ॥7॥
ಎಲೈ ಪಕ್ಷಿಯೇ, ನೀನು ಯಾವ ಕೆಟ್ಟ ವಿಷಯವನ್ನು ಮನಸ್ಸಿನಲ್ಲಿ ಯೋಚಿಸಿದೆ? ನೀನು ಮನಸ್ಸಿನಲ್ಲಿ ಮಾಡಿದ ಅಪಚಾರವು ಅಲ್ಪವಾಗಿರಲಾರದು!
ನಾರದಃ
ಸುಪರ್ಣೋಽಥಾಬ್ರವೀದ್ ವಿಪ್ರಂ ಪ್ರಧ್ಯಾತಂ ವೈ ಮಯಾ ದ್ವಿಜ |
ಇಮಾಂ ಸಿದ್ಧಾಮಿತೋ ನೇತುಂ ತತ್ರ ಯತ್ರ ಪ್ರಜಾಪತಿಃ ॥8॥
ನಾರದ ಗರುಡನು ಅನಂತರ ಆ ಬ್ರಾಹ್ಮಣರನ್ನು ಕುರಿತು ಮಾತನಾಡಿದನು. ಎಲೈ ಬ್ರಾಹ್ಮಣರೇ, ನಾನು ಈ ಸಿದ್ಧ ಸ್ತ್ರೀಯನ್ನು ಪ್ರಜಾಪತಿ ಇರುವಲ್ಲಿಗೆ ಕರೆದುಕೊಂಡು ಹೋಗಬೇಕೆಂದು ಯೋಚಿಸಿದೆ.
ಯತ್ರ ದೇವೋ ಮಹಾದೇವೋ ಯತ್ರ ವಿಷ್ಣುಃ ಸನಾತನಃ |
ಯತ್ರ ಧರ್ಮಶ್ಚ ಯಜ್ಞಶ್ಚ ತತ್ರೇಯಂ ನಿವಸೇದಿತಿ ॥9॥
ಎಲ್ಲಿ ದೇವನಾದ ಮಹೇಶ್ವರನು, ಸನಾತನನಾದ ವಿಷ್ಣುವು, ಧರ್ಮ ಮತ್ತು ಯಜ್ಞಗಳು ಇರುತ್ತವೆಯೋ ಅಲ್ಲಿ ಇವಳು ವಾಸ ಮಾಡಲಿ ಎಂದು (ನನ್ನ ಅಭಿಪ್ರಾಯವಾಗಿದ್ದಿತು).
ಸೋಽಹಂ ಭಗವತೀಂ ಯಾಚೇ ಪ್ರಣತಃ ಪ್ರಿಯಕಾಮ್ಯಯಾ |
ಮಯ್ಯೈತನ್ನಾಮ ಪ್ರಧ್ಯಾತಂ ಮನಸಾ ಶೋಚತಾ ಕಿಲ ॥10॥
ತದೇವಂ ಬಹುಮಾನಂ ತೇ ಮಯೇಹಾನೀಪ್ಸಿತಂ ಕೃತಮ್ |
ಸುಕೃತಂ ದುಷ್ಕೃತಂ ವಾ ತ್ವಂ ಮಾಹಾತ್ಮ್ಯಾತ್ ಕ್ಷಂತುಮರ್ಹಸಿ ॥11॥
ನಾನು ಪೂಜ್ಯಳಾದ ಇವಳನ್ನು ನಮಸ್ಕರಿಸಿ ನನಗೆ ಪ್ರಿಯವನ್ನು ಮಾಡುವಂತೆ ಬೇಡುತ್ತೇನೆ. ಶೋಕಪಡುವ ನಾನು ಮನಸ್ಸಿನಲ್ಲಿ ಈ ರೀತಿ ಯೋಚಿಸಿದೆನಷ್ಟೆ! ನಿನಗೆ ಇಂತಹ ಬಹುಮಾನವನ್ನು ಮಾಡಬೇಕೆಂದು ನಾನು ನನಗೆ ಅರಿವಿಲ್ಲದೆಯೇ ಚಿಂತಿಸಿದೆ. ಅದು ಒಳ್ಳೆಯದಾಗಿರಲಿ ಅಥವಾ ಕೆಟ್ಟದಾಗಿರಲಿ, ನೀನು ನಿನ್ನ ಮಹಿಮೆಯಿಂದ ಅದನ್ನು ಕ್ಷಮಿಸಬೇಕು.

ಸಾ ತೌ ತದಾಽಬ್ರವೀತ್ ತುಷ್ಟಾ ಪನ್ನಗೇಂದ್ರದ್ವಿಜರ್ಷಭೌ ॥12॥
ನ ಭೇತವ್ಯಂ ಸುಪರ್ಣೋಽಸಿ ಸುಪರ್ಣ ತ್ಯಜ ಸಂಭ್ರಮಮ್ ॥13॥
ಆ ಬ್ರಾಹ್ಮಣ ಮತ್ತು ಪಕ್ಷಿ ಇಬ್ಬರನ್ನು ನೋಡಿದ ಅವಳು ಸಂತೋಷಗೊಂಡು ಎಲೈ ಗರುಡನೇ, ನೀನು ಒಳ್ಳೆಯ ರೆಕ್ಕೆಗಳಿಂದ ಕೂಡಿದವನಾಗಿದ್ದೀಯೆ. ಹೆದರಬೇಡ. ಎಲೈ ಗರುಡನೇ, ಗಾಬರಿಯನ್ನು ಬಿಡು ಎಂದು ಹೇಳಿದಳು.
ನಿಂದಿತಾಽಸ್ಮಿ ತ್ವಯಾ ವತ್ಸ ನ ಚ ನಿಂದಾಂ ಕ್ಷಮಾಮ್ಯಹಮ್ ।
ಲೋಕೇಭ್ಯಃ ಸಪದಿ ಭ್ರಶ್ಯೇದ್ ಯೋ ಮಾಂ ನಿಂದೇತ ಪಾಪಕೃತ್ ॥14॥
ವತ್ಸನೇ, ನೀನು ನನ್ನನ್ನು ನಿಂದಿಸಿದ್ದೀಯೆ. ನಾನು ನಿಂದೆಯನ್ನು ಕ್ಷಮಿಸುವುದಿಲ್ಲ. ಯಾವ ಪಾಪಿಯು ನನ್ನನ್ನು ನಿಂದಿಸುವನೋ ಅವನು ತಾನು ಸಂಪಾದಿಸಿದ ಲೋಕವನ್ನು ಕಳೆದುಕೊಳ್ಳುವನು.
ಹೀನಯಾ ಲಕ್ಷಣೈಃ ಸರ್ವೈಃ ತಥಾ ನಿಂದಿತಯಾ ಮಯಾ ।
ಆಚಾರಂ ಪ್ರತಿಗೃಹ್ಣಂತ್ಯಾ ಸಿದ್ಧಿಃ ಪ್ರಾಪ್ತೇಯಮುತ್ತಮಾ ॥15॥
ಲಕ್ಷಣಗಳಿಂದ ರಹಿತಳಾಗಿ ಎಲ್ಲರಿಂದಲೂ ಹಾಗೆ ನಿಂದಿತಳಾದ ನಾನು ಸದಾಚಾರವನ್ನು ಸ್ವೀಕರಿಸಿ ಈ ಶ್ರೇಷ್ಠವಾದ ಸಿದ್ಧಿಯನ್ನು ಪಡೆದಿದ್ದೇನೆ.
ಆಚಾರಲಕ್ಷಣೋ ಧರ್ಮೋ ಹ್ಯಾಚಾರಾಲ್ಲಭತೇ ಧನಮ್ ।
ಆಚಾರಾಚ್ಛ್ರೇಯ ಆಪ್ನೋತಿ ಆಚಾರೋ ಹಂತ್ಯಲಕ್ಷಣಮ್ ॥16॥
ಆಚಾರದಿಂದ ಧರ್ಮವುಂಟಾಗುತ್ತದೆ. ಆಚಾರದಿಂದ ಧನವು ಲಭಿಸುತ್ತದೆ. ಆಚಾರದಿಂದ ಶ್ರೇಯಸ್ಸನ್ನು ಹೊಂದುತ್ತಾನೆ. ಆಚಾರವು ಅವಲಕ್ಷಣಗಳನ್ನು ನಾಶ ಮಾಡುತ್ತದೆ.
ತದಾಯುಷ್ಮನ್ ಖಗಪತೇ ಯಥೇಷ್ಟಂ ಗಮ್ಯತಾಮಿತಃ ।
ನ ಚ ತೇ ಗರ್ಹಣೀಯಾಽಸ್ಮಿ ಗರ್ಹಿತವ್ಯಾಃ ಸ್ತ್ರಿಯಃ ಕ್ವಚಿತ್ ॥17॥
ಭವಿತಾಸಿ ಯಥಾ ಪೂರ್ವಂ ಬಲವೀರ್ಯಸಮನ್ವಿತಃ ॥18॥
ಆದ್ದರಿಂದ ಎಲೈ ಗರುಡನೇ, ಪಕ್ಷಿರಾಜನೇ, ಆಯುಷ್ಮಂತನೇ, ನೀನು ಇಲ್ಲಿಂದ ಹೊರಡಬಹುದು. ನನ್ನನ್ನು ನಿಂದಿಸಬಾರದು. ಯಾವ ಸ್ತ್ರೀಯರನ್ನೂ ನಿಂದಿಸಬಾರದು. ನೀನು ಮೊದಲಿನಂತೆಯೇ ಬಲ, ಪರಾಕ್ರಮದಿಂದ ಕೂಡಿದವನಾಗಿರುತ್ತೀಯೆ.
ನಾರದಃ
ಬಭೂವತುಸ್ತತಸ್ತಸ್ಯ ಪಕ್ಷೌ ದ್ರವಣವತ್ತರೌ ।
ಅನುಜ್ಞಾತಸ್ತು ಶಾಂಡಿಲ್ಯಾ ಯಥಾಗತಮುಪಾಗಮತ್ ॥19॥
ನೈವ ಚಾಸಾದಯಾಮಾಸ ತಥಾರೂಪಾಂಸ್ತುರಂಗಮಾನ್ ॥20॥
ನಾರದ ಆಗ ಗರುಡನಿಗೆ ವೇಗವನ್ನು ಉಂಟುಮಾಡುವುದಕ್ಕೆ ಸಮರ್ಥವಾದ ಎರಡು ರೆಕ್ಕೆಗಳು ಮೂಡಿದವು. ಶಾಂಡಿಲಿಯ ಅನುಮತಿಯನ್ನು ಪಡೆದು ಅವನು ಬಂದಂತೆಯೇ ಹಿಂದಿರುಗಿದನು. ಆದರೆ ಅಂತಹ ಕುದುರೆಗಳನ್ನು ಮಾತ್ರ ಕಾಣಲಿಲ್ಲ.
ವಿಶ್ವಾಮಿತ್ರೋಽಥ ತಂ ದೃಷ್ಟ್ವಾ ಗಾಲವಂ ಚಾಧ್ವನಿ ಸ್ಥಿತಮ್ ।
ಉವಾಚ ವದತಾಂ ಶ್ರೇಷ್ಠೋ ವೈನತೇಯಸ್ಯ ಸನ್ನಿಧೌ ॥21॥
ವಿಶ್ವಾಮಿತ್ರರು ಮಾರ್ಗದಲ್ಲಿ ವೈನತೇಯನ ಜೊತೆಯಲ್ಲಿರುವ ಗಾಲವರನ್ನು ನೋಡಿ ಮಾತನಾಡುವವರಲ್ಲಿ ಶ್ರೇಷ್ಠರಾದ ಅವರು ಮಾತನಾಡಿದರು.
ವಿಶ್ವಾಮಿತ್ರಃ
ಯಸ್ತ್ವಯಾ ಸ್ವಯಮೇವಾರ್ಥಃ ಪ್ರತಿಜ್ಞಾತೋ ಮಮ ದ್ವಿಜ ।
ತಸ್ಯ ಕಾಲೋಽಪವರ್ಗಸ್ಯ ಯಥಾ ವಾ ಮನ್ಯತೇ ಭವಾನ್ ॥22॥
ವಿಶ್ವಾಮಿತ್ರ ಎಲೈ ಬ್ರಾಹ್ಮಣನೇ, ನೀನಾಗಿಯೇ ಪ್ರತಿಜ್ಞೆ ಮಾಡಿದ ಯಾವ ವಿಷಯವಿದೆಯೋ ಅದನ್ನು ನನಗೆ ಕೊಡುವ ಕಾಲವು ಬಂದಿದೆ. ನಿನ್ನ ಅಭಿಪ್ರಾಯವೇನು?
ಪ್ರತೀಕ್ಷಿಷ್ಯಾಮ್ಯಹಂ ಕಾಲಮೇತಾವಂತಂ ತಥಾ ಪರಮ್ ।
ಯಥಾ ಸಂಸಿದ್ಧ್ಯತೇ ವಿಪ್ರ ಸ ಮಾರ್ಗಃ ಪ್ರವಿಮೃಶ್ಯತಾಮ್ ॥23॥
ನಾನು ಇಲ್ಲಿಯವರೆಗೆ ಅದರ ನಿರೀಕ್ಷೆಯಲ್ಲಿದ್ದೇನೆ. ಮುಂದೆಯೂ ನಿರೀಕ್ಷಿಸುವೆನು. ಆ ವಿಷಯವು ಸಿದ್ಧವಾಗುವ ಮಾರ್ಗವನ್ನು ಚಿಂತಿಸುವವನಾಗು.
ನಾರದಃ
ಸುಪರ್ಣೋಽಥಾಬ್ರವೀದ್ ದೀನಂ ಗಾಲವಂ ಭೃಶದುಃಖಿತಮ್ ॥24॥
ಪ್ರತ್ಯಕ್ಷಂ ಖಲ್ವಿದಾನೀಂ ಮೇ ವಿಶ್ವಾಮಿತ್ರೋ ಯದುಕ್ತವಾನ್ ॥25॥
ನಾರದ ಆಗ ಗರುಡನು ದೀನರೂ ಮತ್ತು ಬಹಳ ದುಃಖಿತರೂ ಆದ ಗಾಲವರನ್ನು ಕುರಿತು ಈಗ ವಿಶ್ವಾಮಿತ್ರರು ನನ್ನ ಎದುರಿಗೆ ಹೇಳಿದುದೆಲ್ಲವನ್ನೂ ನಾನು ಪ್ರತ್ಯಕ್ಷವಾಗಿ ಕೇಳಿದ್ದೇನೆ.
ತದಾಗಚ್ಛ ದ್ವಿಜಶ್ರೇಷ್ಠ ಮಂತ್ರಯಿಷ್ಯಾವ ಗಾಲವ ।
ನಾದತ್ತಾತ್ವ ಗುರವೇ ಶಕ್ಯಂ ಕೃತ್ಸ್ನಮರ್ಥಂ ತ್ವಯಾಽಽಸಿತುಮ್ ॥26॥
ಆದ್ದರಿಂದ ದ್ವಿಜಶ್ರೇಷ್ಠರಾದ ಗಾಲವರೇ, ನನ್ನ ಜೊತೆಯಲ್ಲಿ ಬನ್ನಿ. ಆಲೋಚನೆಯನ್ನು ಮಾಡೋಣ. ಗುರುಗಳಿಗೆ ಪ್ರತಿಜ್ಞೆ ಮಾಡಿದ ಎಲ್ಲಾ ವಸ್ತುಗಳನ್ನೂ ಕೊಡದೆ ನೀವು ಇರಲು ಸಾಧ್ಯವಿಲ್ಲ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ

ದ್ವಾದಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿಮೂರನೆಯ ಅಧ್ಯಾಯ
ಗರುಡನು ಯಯಾತಿಯ ಬಳಿಗೆ ಗಾಲವರನ್ನು ಕರೆದುಕೊಂಡು ಹೋಗಿ ಗುರುದಕ್ಷಿಣೆಯ ಯಾಚನೆ.
ನಾರದಃ
ಅಥಾಹ ಗಾಲವಂ ದೀನಂ ಸುಪರ್ಣಃ ಪತತಾಂ ವರಃ ॥1॥
ನಿರ್ಮಿತಂ ವಹ್ನಿನಾ ಭೂಮೌ ವಾಯುನಾ ವರ್ಧಿತಂ ತಥಾ |
ಯಸ್ಮಾದ್ಧಿರಣ್ಮಯಂ ಸರ್ವಂ ಹಿರಣ್ಯಂ ತೇನ ಚೋಚ್ಯತೇ ॥2॥
ನಾರದ ಆಗ ದೀನರಾದ ಗಾಲವರನ್ನು ಕುರಿತು ಪಕ್ಷಿಶ್ರೇಷ್ಠನಾದ ಗರುಡನು ಮಾತನಾಡಿದನು. ಇದು ಅಗ್ನಿಯಿಂದ ನಿರ್ಮಿಸಲ್ಪಟ್ಟು ವಾಯುವಿನಿಂದ ಅಭಿವೃದ್ಧಿಯನ್ನು ಹೊಂದಿತು. ಇದು ಎಲ್ಲಾ ರೋಗವನ್ನು ಕಳೆಯುವುದರಿಂದ ಮತ್ತು ಸುಖವನ್ನು ಕೊಡುವುದರಿಂದ ಇದನ್ನು ಹಿರಣ್ಯವೆಂದು ಕರೆಯುತ್ತಾರೆ.
ಧತ್ತೇ ಧಾರಯತೇ ಚೇದಮೇತಸ್ಮಾತ್ ಕಾರಣಾದ್ ಧನಮ್ |
ತದೇತತ್ ತ್ರಿಷು ಲೋಕೇಷು ಧನಂ ತಿಷ್ಠತಿ ಶಾಶ್ವತಮ್ ॥3॥
ಇದು ಸುಖವನ್ನು ಕೊಡುತ್ತದೆ ಮತ್ತು ಮನುಷ್ಯರನ್ನು ಧರಿಸುತ್ತದೆ. ಆ ಕಾರಣದಿಂದ ಇದನ್ನು ಧನವೆಂದೂ ಕರೆಯುತ್ತಾರೆ. ಅಂತಹ ಈ ಧನವು ಮೂರುಲೋಕಗಳಲ್ಲಿಯೂ ಶಾಶ್ವತವಾಗಿರುತ್ತದೆ.
ನಿತ್ಯಂ ಪ್ರೋಷ್ಠಪದಾಭ್ಯಾಂ ಚ ಚಕ್ರೇ ಧನಪತೌ ತಥಾ |
ಮನುಷ್ಯೇಭ್ಯಃ ಸದಾಽಽದತ್ತೇ ಶಕ್ರಶ್ಚಿತ್ತಾರ್ಜಿತಂ ಧನಮ್ ॥4॥
ಪ್ರೋಷ್ಠಪದ ನಕ್ಷತ್ರದಲ್ಲಿ ಪೂರ್ಣಿಮೆಯು ಉಂಟಾಗುವ ಭಾದ್ರಪದ ಮಾಸದಲ್ಲಿ ಎಂದರೆ ವಾಮನಾವತಾರದ ಕಾಲದಲ್ಲಿ ಈ ಧನವು ಇಂದ್ರನಲ್ಲಿರುತ್ತದೆ. ಹಾಗೆಯೇ ಕುಬೇರನಲ್ಲಿಯೂ ಇರುತ್ತದೆ. ಮನುಷ್ಯರು ಮನಃಪೂರ್ವಕವಾಗಿ ಸಂಪಾದಿಸಿದ ಈ ಧನವನ್ನು ಮನುಷ್ಯರಿಂದ ಇಂದ್ರನು ಸ್ವೀಕರಿಸುತ್ತಾನೆ.
ಅಜೈಕಪಾದಾಹಿರ್ಬುಧ್ನ್ಯೌ ರಕ್ಷೇತೇ ಧನದೇನ ಚ |
ಏವಂ ನ ಶಕ್ಯತೇ ಲಬ್ಧುಮಲಬ್ಧವ್ಯಂ ದ್ವಿಜರ್ಷಭ ॥5॥
ಋತೇ ನ ಧನಮಶ್ವಾನಾಮವಾಪ್ತಿರ್ವಿದ್ಯತೇ ತವ ॥6॥
ಈ ಧನವನ್ನು ಅಜೈಕಪಾತ್, ಅಹಿರ್ಬುಧ್ನ ಎಂಬ ಇಬ್ಬರು ರುದ್ರರೂ ಮತ್ತು ಕುಬೇರನೂ ರಕ್ಷಿಸುತ್ತಾರೆ. ಎಲೈ ದ್ವಿಜಶ್ರೇಷ್ಠರೇ, ಪಡೆಯಲು ಅರ್ಹವಲ್ಲದ ಈ ಧನವನ್ನು ನೀವು ಪಡೆಯಲು ಸಾಧ್ಯವಿಲ್ಲ. ಧನವಿಲ್ಲದೆ ನಿಮಗೆ ಅಶ್ವಗಳ ಪ್ರಾಪ್ತಿ ಉಂಟಾಗುವುದಿಲ್ಲ (ಧನವನ್ನು ಯಾಚಿಸಿ ಪಡೆಯದಿರುವುದು, ಅದನ್ನು ಯಾಚಿಸಿ ಪಡೆದರೂ ಅಶ್ವಗಳು ದೊರೆಯುವುದಿಲ್ಲ ಎಂದು ಅಭಿಪ್ರಾಯ).
ಅರ್ಥಂ ಯಾಚಸ್ವ ರಾಜಾನಂ ಕಂಚಿದ್ ರಾಜರ್ಷಿವಂಶಜಮ್ |
ಅಪೀಡ್ಯ ರಾಜಾ ಪೌರಾನ್ ಹಿ ಯೋ ನೌ ಕುರ್ಯಾತ್ ಕೃತಾರ್ಥಿನೌ ॥
ಯಾವ ರಾಜನು ಪ್ರಜೆಗಳನ್ನು ಹಿಂಸಿಸದೆ ನಮ್ಮನ್ನು ಕೃತಕೃತ್ಯರನ್ನಾಗಿ ಮಾಡಬಹುದೋ ಅಂತಹ ರಾಜರ್ಷಿವಂಶದಲ್ಲಿ ಜನಿಸಿದ ಒಬ್ಬ ರಾಜನನ್ನು ಬೇಡುವವನಾಗು.
ಅಸ್ತಿ ಸೋಮಾನ್ವವಾಯೇ ಮೇ ಜಾತಃ ಕಶ್ಚಿನ್ನೃಪಃ ಸಖಾ |
ಅಭಿಗಚ್ಛಾವಹೇ ತಂ ವೈ ಯಸ್ಯಾಸ್ತಿ ವಿಭವೋ ಭುವಿ ॥8॥
ಚಂದ್ರನ ವಂಶದಲ್ಲಿ ಜನಿಸಿದ ಒಬ್ಬ ರಾಜನು ನನಗೆ ಸ್ನೇಹಿತನಾಗಿದ್ದಾನೆ. ಅವನಿಗೆ ಭೂಮಿಯಲ್ಲಿ ಬಹಳ ವೈಭವವು ಇದೆ. ನಾವಿಬ್ಬರೂ ಅವನ ಬಳಿಗೆ ಹೋಗೋಣ.
ಯಯಾತಿರ್ನಾಮ ರಾಜರ್ಷಿಃ ನಾಹುಷಃ ಸತ್ಯವಿಕ್ರಮಃ |
ಸ ದಾಸ್ಯತಿ ಮಯಾ ಚೋಕ್ತೋ ಭವತಾ ಚಾರ್ಥಿತಃ ಸ್ವಯಮ್ ॥9॥
ಅವನು ನಹುಷನ ಮಗನಾದ, ಸತ್ಯವಿಕ್ರಮನಾದ ಯಯಾತಿ ಎಂಬ ರಾಜರ್ಷಿ. ನೀನು ಬೇಡಿದರೆ ಮತ್ತು ನಾನು ಹೇಳಿದರೆ ಅವನು ಸ್ವತಃ ಧನವನ್ನು ಕೊಡುವನು.
ವಿಭವಶ್ಚಾಸ್ಯ ಸುಮಹಾನ್ ಆಸೀದ್ ಧನಪತೇರಿವ |
ಏವಂ ಗುರುಧನಂ ವಿದ್ವನ್ ದಾನೇನೈವ ವಿಶೋಧಯ ॥10॥
ಅವನ ಬಳಿ ಹಿಂದೆ ಕುಬೇರನಿಗೆ ಇರುವಂತಹ ಐಶ್ವರ್ಯವು ಇದ್ದಿತು. ಎಲೈ ವಿದ್ವಾಂಸರೇ, ನಿಮ್ಮ ಗುರುದಕ್ಷಿಣೆಯನ್ನು ದಾನದಿಂದಲೇ ಪೂರೈಸುವವರಾಗಿ.
ನಾರದಃ
ತಥಾ ತೌ ಕಥಯಂತೌ ಚ ಚಿಂತಯಂತೌ ಚ ಯತ್ ಕ್ಷಮಮ್ |
ಪ್ರತಿಷ್ಠಾನೇ ನರಪತಿಂ ಯಯಾತಿಂ ಪ್ರತ್ಯುಪಸ್ಥಿತೌ ॥11॥
ನಾರದ ಹಾಗೆ ಮಾತನಾಡುತ್ತಾ ಮತ್ತು ಯಾವುದನ್ನು ಮಾಡಲು ಸಾಧ್ಯವೆಂದು ಚಿಂತಿಸುತ್ತಾ ಅವರು ಪ್ರತಿಷ್ಠಾನ ನಗರದಲ್ಲಿದ್ದ

ಯಯಾತಿ ರಾಜನ ಸಮೀಪಕ್ಕೆ ಬಂದರು.
ಪ್ರತಿಗೃಹ್ಯ ಚ ಸತ್ಕಾರೈರರ್ಘ್ಯಪಾದ್ಯಾದಿಕಂ ದದೌ |
ಪೃಷ್ಟಶ್ಚಾಗಮನೇ ಹೇತುಮುವಾಚ ವಿನತಾಸುತಃ ॥12॥
ಅವನು ಅವರನ್ನು ಸತ್ಕಾರಪೂರ್ವಕವಾಗಿ ಸ್ವೀಕರಿಸಿ ಅರ್ಘ್ಯಪಾದ್ಯಾದಿಗಳನ್ನು ನೀಡಿದನು. ಅವರ ಆಗಮನಕ್ಕೆ ಕಾರಣವನ್ನು ಕೇಳಿದಾಗ ಗರುಡನು ಮಾತನಾಡಿದನು.
ಅಯಂ ಮೇ ನಾಹುಷ ಸಖಾ ಗಾಲವಸ್ತಾಪಸೋ ನಿಧಿಃ |
ವಿಶ್ವಾಮಿತ್ರಸ್ಯ ಶಿಷ್ಯೋಽಭೂತ್ ವರ್ಷಾಣ್ಯಯುತಶೋ ನೃಪ ॥13॥
ಎಲೈ ನಹುಷಪುತ್ರನೇ, ಇವರು ಗಾಲವರೆಂಬ ತಪೋನಿಧಿಗಳಾದ ನನ್ನ ಸ್ನೇಹಿತರು. ಎಲೈ ರಾಜನೇ, ಹತ್ತಾರು ಸಾವಿರ ವರ್ಷಗಳ ಕಾಲ ಇವರು ವಿಶ್ವಾಮಿತ್ರರ ಶಿಷ್ಯರಾಗಿದ್ದರು.
ಸೋಽಯಂ ತೇನಾಭ್ಯನುಜ್ಞಾತ ಉಪಕಾರೇಪ್ಸಯಾ ದ್ವಿಜಃ |
ತಮಾಹ ಭಗವನ್ ಕಿಂ ತೇ ದದಾನಿ ಗುರುದಕ್ಷಿಣಾಮ್ ॥14॥
ಈ ಬ್ರಾಹ್ಮಣರು ನೀನು ಮನೆಗೆ ಹೋಗು ಎಂದು ಅವರಿಂದ ಅನುಮತಿಯನ್ನು ಪಡೆದ ಮೇಲೆ ಅವರಿಗೆ ಉಪಕಾರವನ್ನು ಮಾಡಲು ಬಯಸಿ ಪೂಜ್ಯರೇ, ನಿಮಗೆ ಯಾವ ಗುರುದಕ್ಷಿಣೆಯನ್ನು ಕೊಡಲಿ ಎಂದು ಕೇಳಿದರು.
ಅಸಕೃತ್ ತೇನ ಚೋಕ್ತೇನ ಕಿಂಚಿದಾಗತಮನ್ಯುನಾ |
ಅಯಮುಕ್ತಃ ಪ್ರಯಚ್ಛೇತಿ ಜಾನತಾ ವಿಭವಂ ಲಘು ॥15॥
ಏಕತಃ ಶ್ಯಾಮಕರ್ಣಾನಾಂ ಶುಭ್ರಾಣಾಂ ಶುದ್ಧಜನ್ಮನಾಮ್ |
ಅಷ್ಟೌ ಶತಾನಿ ಮೇ ದೇಹಿ ಹಯಾನಾಂ ಚಂದ್ರವರ್ಚಸಾಮ್ ॥16॥
ಇವರು ಅನೇಕ ಬಾರಿ ಹಾಗೆ ಕೇಳಿದುದರಿಂದ ಸ್ವಲ್ಪ ಕೋಪವನ್ನು ಹೊಂದಿದ ವಿಶ್ವಾಮಿತ್ರರು ಇವರಿಗಿರುವ ಅಲ್ಪ ಧನವನ್ನು ತಿಳಿದರೂ ಒಂದು ಕಡೆ ಕಪ್ಪು ಕಿವಿಯನ್ನು ಹೊಂದಿದ, ಶುಭ್ರವಾದ ಚಂದ್ರನ ಕಾಂತಿಯನ್ನು ಹೊಂದಿದ, ಶುದ್ಧವಾದ ಜನ್ಮವನ್ನು ಹೊಂದಿದ ಎಂಟುನೂರು ಅಶ್ವಗಳನ್ನು ಕೊಡು ಎಂದು ಹೇಳಿದರು.
ಗುರ್ವರ್ಥೋ ದೀಯತಾಮೇಷ ಯದಿ ಗಾಲವ ಮನ್ಯಸೇ |
ಇತ್ಯೇವಮಾಹ ಸಕ್ರೋಧೋ ವಿಶ್ವಾಮಿತ್ರಸ್ತಪೋಧನಃ ॥17॥
ಕ್ರೋಧದಿಂದ ಕೂಡಿದ ತಪೋಧನರಾದ ವಿಶ್ವಾಮಿತ್ರರು ಎಲೈ ಗಾಲವನೇ, ನೀನು ಕೊಡುವುದಾದರೆ ಇದನ್ನು ಗುರುದಕ್ಷಿಣೆಯಾಗಿ ಕೊಡು ಎಂದು ಹೇಳಿದರು.
ಸೋಽಯಂ ಶೋಕೇನ ಮಹತಾ ತಪ್ಯಮಾನೋ ದ್ವಿಜರ್ಷಭಃ |
ಅಶಕ್ತಃ ಪ್ರತಿಕರ್ತುಂ ತದ್ ಭವಂತಂ ಶರಣಂ ಗತಃ ॥18॥
ಅಂತಹ ಈ ಬ್ರಾಹ್ಮಣಶ್ರೇಷ್ಠರು ಬಹಳ ಶೋಕದಿಂದ ಪರಿತಪಿಸುತ್ತಾ ಗುರುದಕ್ಷಿಣೆಯನ್ನು ಕೊಡಲು ಸಾಧ್ಯವಾಗದೆ ನಿನಗೆ ಶರಣಾಗತರಾಗಿದ್ದಾರೆ.
ಪ್ರತಿಗೃಹ್ಯ ನರವ್ಯಾಘ್ರ ತ್ವತ್ತೋ ಭಿಕ್ಷಾಂ ಗತವ್ಯಥಃ |
ಕೃತ್ವಾಽಪವರ್ಗಂ ಗುರವೇ ಚರಿಷ್ಯತಿ ಮಹತ್ ತಪಃ ॥19॥
ಎಲೈ ನರವ್ಯಾಘ್ರನೇ, ನಿನ್ನಿಂದ ಭಿಕ್ಷೆಯನ್ನು ಸ್ವೀಕರಿಸಿ, ತಮ್ಮ ವ್ಯಥೆಯನ್ನು ಕಳೆದುಕೊಂಡು, ಗುರುದಕ್ಷಿಣೆಯನ್ನು ನೀಡಿ ಪುನಃ ದೊಡ್ಡ ತಪಸ್ಸನ್ನು ಮಾಡುವರು.
ತಪಸಃ ಸಂವಿಭಾಗೇನ ಭವಂತಮಪಿ ಯೋಕ್ಷ್ಯತೇ |
ಸ್ವೇನ ರಾಜರ್ಷಿತಪಸಾ ಪೂರ್ಣಂ ತ್ವಾಂ ಪೂರಯಿಷ್ಯತಿ ॥20॥
ತಮ್ಮ ರಾಜರ್ಷಿ ತಪಸ್ಸಿನಿಂದಲೇ ಪೂರ್ಣವಾಗಿರುವ ಅವರು ನಿನಗೆ ತಮ್ಮ ತಪಸ್ಸಿನ ಒಂದು ಭಾಗವನ್ನೂ ಕೊಡುವರು.
ಯಾವಂತಿ ರೋಮಾಣಿ ಹಯೇ ಭವಂತೀಹ ನರೇಶ್ವರ |
ತಾವತೋ ವಾಜಿದಾ ಲೋಕಾನ್ ಪ್ರಾಪ್ನುವಂತಿ ಮಹೀಪತೇ ॥21॥
ಎಲೈ ನರೇಶ್ವರನೇ, ಮಹೀಪತಿಯೇ, ಅಶ್ವವನ್ನು ದಾನವಾಗಿ ಕೊಡುವವನು ಅಶ್ವ ಶರೀರದಲ್ಲಿ ಎಷ್ಟು ರೋಮಗಳಿರುತ್ತವೆಯೋ ಅಷ್ಟು ಲೋಕಗಳನ್ನು ಹೊಂದುತ್ತಾನೆ.
ಪಾತ್ರಂ ಪ್ರತಿಗ್ರಹಸ್ಯಾಯಂ ದಾತುಂ ಪಾತ್ರಂ ತಥಾ ಭವಾನ್ |
ಶಂಖೇ ಕ್ಷೀರಮಿವಾಸಕ್ತಂ ಭವತ್ವೇತತ್ ತಥೋಪಮಮ್ ॥22॥
ದಾನವನ್ನು ಸ್ವೀಕಾರ ಮಾಡಲು ಇವರು ಒಳ್ಳೆಯ ಪಾತ್ರರಾಗಿದ್ದಾರೆ. ದಾನವನ್ನು ಕೊಡಲು ನೀನು ಒಳ್ಳೆಯ ಅಧಿಕಾರಿಯಾಗಿದ್ದೀಯೆ. ಶಂಖದಲ್ಲಿ ಕ್ಷೀರವು ಸೇರಿದಂತೆ ಈ ಸಮಾಗಮವು ಸಾರ್ಥಕವಾಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ತ್ರಯೋದಶಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹದಿಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾಲ್ಕನೆಯ ಅಧ್ಯಾಯ

ನಿರ್ಧನನಾದ ಯಯಾತಿಯಿಂದ ತನ್ನ ಮಗಳಾದ ಮಾಧವಿಯ ಸಮರ್ಪಣೆ. ಗಾಲವರಿಂದ ಅವಳನ್ನು ಕರೆದುಕೊಂಡು ಹರ್ಯಶ್ವನ ಬಳಿಗೆ ಗಮನ.
ನಾರದಃ
ಏವಮುಕ್ತಃ ಸುಪರ್ಣೇನ ತಥ್ಯಂ ವಚನಮುತ್ತಮಮ್ |
ವಿಮೃಶ್ಯಾವಹಿತೋ ರಾಜಾ ನಿಶ್ಚಿತ್ಯ ಚ ಪುನಃ ಪುನಃ ||1||
ಯಷ್ಟಾ ಕ್ರತುಸಹಸ್ರಾಣಾಂ ದಾತಾ ದಾನಪತಿಃ ಪ್ರಭುಃ |
ಯಯಾತಿಃ ಸೂರ್ಯಸಂಕಾಶ ಇದಂ ವಚನಮಬ್ರವೀತ್ ||2||
ದೃಷ್ಟ್ವಾ ಪ್ರಿಯಸಖಂ ತಾರ್ಕ್ಷ್ಯಂ ಗಾಲವಂ ಚ ತಪೋನಿಧಿಮ್ |
ನಿದರ್ಶನಂ ಚ ತಪಸೋ ಭಿಕ್ಷಾಂ ಶ್ಲಾಘ್ಯಾಂ ಚ ಕೀರ್ತಿತಾಮ್ ||3||
ಅತೀತ್ಯ ಚ ನೃಪಾನನ್ಯಾನ್ ಆದಿತ್ಯಕುಲಸಂಭವಾನ್ |
ಮತ್ಸಕಾಶಮನುಪ್ರಾಪ್ತಾವೇತಾಂ ಬುದ್ಧಿಮವೇಕ್ಷ್ಯ ಚ ||4||
ನಾರದ ಹೀಗೆ ಗರುಡನು ಹೇಳಿದ ಸತ್ಯವಾದ, ಶ್ರೇಷ್ಠವಾದ ಮಾತನ್ನು ಕೇಳಿ ರಾಜನು ಅವಧಾನದಿಂದ ಪುನಃ ಪುನಃ ವಿಮರ್ಶೆ ಮಾಡಿ, ಪುನಃ ಪುನಃ ಮನಸ್ಸಿನಲ್ಲಿ ನಿಶ್ಚಯಿಸಿ ಪ್ರಿಯ ಸ್ನೇಹಿತನಾದ ಗರುಡನನ್ನು ಮತ್ತು ತಪಸ್ಸಿಗೆ ನಿದರ್ಶನರಾಗಿದ್ದ ತಪೋನಿಧಿಯಾದ ಗಾಲವರನ್ನೂ ಅವರು ಕೇಳಿದ ಶ್ಲಾಘ್ಯವಾದ ಭಿಕ್ಷೆಯನ್ನೂ ಗಮನಿಸಿ ಸೂರ್ಯವಂಶದಲ್ಲಿ ಹುಟ್ಟಿದ ಉಳಿದ ರಾಜರ ಬಳಿಗೆ ಹೋಗದೆ ತನ್ನ ಬಳಿಗೇ ಇವರು ಬಂದಿದ್ದಾರೆಂಬ ಅವರ ಚಿಂತನೆಯನ್ನೂ ಗಮನಿಸಿ, ಸಾವಿರ ಯಾಗಗಳನ್ನು ಮಾಡಿದ ದಾನಪತಿಯೂ, ಪ್ರಭುವೂ ಆದ, ಸೂರ್ಯನಂತೆ ಪ್ರಕಾಶಮಾನನಾದ ಯಯಾತಿಯು ಈ ಮಾತುಗಳನ್ನು ಆಡಿದನು.
ಅದ್ಯ ಮೇ ಸಫಲಂ ಜನ್ಮ ತಾರಿತಂ ಚಾದ್ಯ ಮೇ ಕುಲಮ್ |
ಅದ್ಯಾಯಂ ಪಾವಿತೋ ದೇಶೋ ಮಮ ತಾರ್ಕ್ಷ್ಯ ತ್ವಯಾಽನಘ ||5||
ಈ ದಿನ ನನ್ನ ಜನ್ಮವು ಸಫಲವಾಗಿದೆ. ಈ ದಿನ ನನ್ನ ಕುಲವು ಉದ್ಧಾರವನ್ನು ಹೊಂದಿದೆ. ಎಲೈ ಅನಘನಾದ ತಾರ್ಕ್ಷ್ಯನೇ, ನಿನ್ನಿಂದ ಈ ದೇಶವು ಈ ದಿನ ಪವಿತ್ರವಾಗಿದೆ.
ವಕ್ತುಮಿಚ್ಛಾಮಿ ತು ಸಖೇ ಯಥಾ ಜಾನಾಸಿ ಮಾಂ ಪುರಾ |
ನ ತಥಾ ವಿತ್ತವಾನಸ್ಮಿ ಕ್ಷೀಣಂ ವಿತ್ತಂ ಹಿ ಮೇ ಸಖೇ ||6||
ಎಲೈ ಸ್ನೇಹಿತನೇ, ನಿನ್ನ ಜೊತೆಯಲ್ಲಿ ಮಾತನಾಡಲು ಬಯಸುತ್ತೇನೆ. ನೀನು ಹಿಂದೆ ತಿಳಿದಂತೆ ನಾನು ಈಗ ಧನವಂತನಾಗಿಲ್ಲ. ಎಲೈ ಸ್ನೇಹಿತನೇ, ನನ್ನ ಧನವು ಕ್ಷೀಣವಾಗಿದೆ.
ನ ಚ ಶಕ್ತೋಽಸ್ಮಿ ತೇ ಕರ್ತುಂ ಮೋಘಮಾಗಮನಂ ಖಗ |
ನ ಚಾಶಾಮಸ್ಯ ವಿಪ್ರರ್ಷೇರ್ವಿತಥಾಂ ಕರ್ತುಮುತ್ಸಹೇ ||7||
ಆದರೆ ಇಲ್ಲಿಗೆ ನಿನ್ನ ಆಗಮನವನ್ನು ವ್ಯರ್ಥಗೊಳಿಸಲಾರೆ ಮತ್ತು ಈ ವಿಪ್ರರ್ಷಿಯ ಆಸೆಯನ್ನೂ ಸಹ ವ್ಯರ್ಥವನ್ನಾಗಿ ಮಾಡಲು ಬಯಸುವುದಿಲ್ಲ.
ಪುತ್ರೀಂ ದಾಸ್ಯಾಮಿ ಯತ್ ಕಾರ್ಯಂ ದ್ವಯಂ ಸಂಪಾದಯಿಷ್ಯತಿ |
ಅಭಿಗಮ್ಯ ಹತಾಶೋ ಹಿ ನಿವೃತ್ತೋ ದಹತೇ ಕುಲಮ್ ||8||
ದಾತೃವಿನ ಬಳಿಗೆ ಬಂದು ಹತಾಶನಾಗಿ ಹಿಂದಿರುಗುವವನು ಅವನ ಕುಲವನ್ನು ದಹಿಸುತ್ತಾನೆ. ಆದ್ದರಿಂದ ನನ್ನ ಪುತ್ರಿಯನ್ನು ಕೊಡುವೆನು. ಅವಳು ಎರಡು ಕಾರ್ಯಗಳನ್ನೂ ಸಾಧಿಸುತ್ತಾಳೆ (ಧನಸಂಪಾದನೆ ಮತ್ತು ಅಶ್ವಪ್ರಾಪ್ತಿ).
ನಾತಃ ಪರಂ ವೈನತೇಯ ಕಿಂಚಿತ್ ಪಾಪಿಷ್ಠಮುಚ್ಯತೇ |
ಯಥಾಽಽಶಾನಾಶನಂ ಲೋಕೇ ದೇಹಿ ನಾಸ್ತೀತಿ ವಾ ವಚಃ ||9||
ಎಲೈ ವೈನತೇಯನೆ, ದೇಹಿ ಎಂದು ಬೇಡಿ ಬಂದವನಿಗೆ ನಾಸ್ತಿ ಎಂದು ಹೇಳಿ ಅವನ ಆಸೆಯನ್ನು ಕಡಿಯುವುದಕ್ಕಿಂತ ಅಧಿಕವಾದ ಪಾಪಕಾರ್ಯವು ಇನ್ನೊಂದಿಲ್ಲ.
ಹತಾಶೋ ಹ್ಯಕೃತಾರ್ಥಃ ಸನ್ ಹತಸಂಭಾವನೋ ನರಃ |
ಹಿನಸ್ತಿ ತಸ್ಯ ಪುತ್ರಾಂಶ್ಚ ಪೌತ್ರಾಂಶ್ಚಾಕುರ್ವತೋಽರ್ಥಿತಾಮ್ ||10||
ಯಾವ ಮನುಷ್ಯನ ಆಸೆಯು ಭಗ್ನವಾಗುತ್ತದೆಯೋ ಅವನು ಪೂಜೆಯನ್ನು ಸ್ವೀಕರಿಸದೆ ಅಕೃತಾರ್ಥನಾಗಿ ತನ್ನ ಆಸೆಯನ್ನು ನೆರವೇರಿಸದವನ ಪುತ್ರ-ಪೌತ್ರರನ್ನು ನಾಶಗೊಳಿಸುತ್ತಾನೆ.
ತಸ್ಮಾಚ್ಚತುರ್ಣಾಂ ವರ್ಣಾನಾಂ ಸ್ಥಾಪಯಿತ್ರೀ ಸುತಾ ಮಮ |
ಮಾಧವೀ ನಾಮ ತಾರ್ಕ್ಷ್ಯೇಯಂ ಸರ್ವಧರ್ಮಪ್ರದಾಯಿನೀ ||11||
ಆದ್ದರಿಂದ ಎಲೈ ಗರುಡನೇ, ಈ ನನ್ನ ಮಗಳು ನಾಲ್ಕುವರ್ಣದವರನ್ನೂ ಅವರ ಧರ್ಮದಲ್ಲಿ ಸ್ಥಾಪಿಸುವವಳು. ಸರ್ವಧರ್ಮಗಳನ್ನೂ ಉಂಟುಮಾಡುವವಳು. ಮಾಧವೀ ಎಂದು ಅವಳ ಹೆಸರು.
ಇಯಂ ಸುರಸುತಪ್ರಖ್ಯಾ ಸರ್ವಧರ್ಮೋಪಚಾಯಿನೀ |
ಸದಾ ದೇವಮನುಷ್ಯಾಣಾಮಸುರಾಣಾಂ ಚ ಗಾಲವ |
ಕಾಂಕ್ಷಿತಾ ರೂಪತೋ ಬಾಲಾ ಸುತಾ ಮೇ ಪ್ರತಿಗೃಹ್ಯತಾಮ್ ||13||
ದೇವಕುಮಾರಿಯಂತಿರುವ ಇವಳು ಎಲ್ಲ ಧರ್ಮಗಳನ್ನೂ ಅಭಿವೃದ್ಧಿಪಡಿಸುವವಳು. ಎಲೈ ಗಾಲವರೇ, ಇವಳು ದೇವತೆಗಳಿಗೂ, ಮನುಷ್ಯರಿಗೂ ಮತ್ತು ಅಸುರರಿಗೂ ತನ್ನ ರೂಪದಿಂದ ಕಾಂಕ್ಷಿತಳಾದ ಬಾಲೆ. ಈ ನನ್ನ ಮಗಳನ್ನು ಸ್ವೀಕರಿಸಿ.
ಅಸ್ಯಾಃ ಶುಲ್ಕಂ ಪ್ರದಾಸ್ಯಂತಿ ನೃಪಾ ರಾಜ್ಯಮಪಿ ಧ್ರುವಮ್ |

ಕಿಂ ಪುನಃ ಶ್ಯಾಮಕರ್ಣಾನಾಂ ಹಯಾನಾಂ ದ್ವೇ ಚತುಃಶತೇ ॥14॥
ಇವಳ ಸಲುವಾಗಿ ರಾಜರು ಶುಲ್ಕವನ್ನು ಕೊಡುವರು. ಬೇಕಾದರೆ ರಾಜ್ಯವನ್ನೂ ಕೊಡುತ್ತಾರೆ. ಹೀಗಿರುವಾಗ ಶ್ಯಾಮಕರ್ಣವುಳ್ಳ ಎಂಟುನೂರು ಕುದುರೆಗಳು ಯಾವ ದೊಡ್ಡ ವಿಷಯ?
ಸ ಭವಾನ್ ಪ್ರತಿಗೃಹ್ಣಾತು ಮಮೈತಾಂ ಮಾಧವೀಂ ಸುತಾಮ್ |
ದೌಹಿತ್ರಪೂತಃ ಸ್ಯಾಮೇಷ ಏಷ ಮೇ ಸ್ಯಾದ್ ವರಃ ಪ್ರಭೋ ॥15॥
ಆದ್ದರಿಂದ ನೀವು ನನ್ನ ಮಗಳಾದ ಈ ಮಾಧವಿಯನ್ನು ಸ್ವೀಕರಿಸಿ. ನಾನು ದೌಹಿತ್ರರಿಂದ ಪವಿತ್ರನಾಗುವೆನು. ಪ್ರಭುಗಳೇ, ಇದೇ ನಾನು ನೀಡುವ ವರ.
ನಾರದಃ
ಸ ತಸ್ಯ ವಚನಂ ಶ್ರುತ್ವಾ ಬ್ರಾಹ್ಮಣಃ ಶಂಸಿತವ್ರತಃ |
ಪ್ರತಿಗೃಹ್ಯ ಚ ತಾಂ ಕನ್ಯಾಂ ಗಾಲವಃ ಸಹ ಪಕ್ಷಿಣಾ ॥16॥
ಪುನರ್ದ್ರಕ್ಷ್ಯಾವ ಇತ್ಯುಕ್ತ್ವಾ ಪ್ರತಸ್ಥೇ ಸಹ ಕನ್ಯಯಾ ॥17॥
ನಾರದ ಯಯಾತಿಯ ಆ ಮಾತುಗಳನ್ನು ಕೇಳಿದ ಶಂಸಿತವ್ರತವುಳ್ಳ ಬ್ರಾಹ್ಮಣರಾದ ಗಾಲವರು ಗರುಡನ ಜೊತೆಯಲ್ಲಿ ಆ ಕನ್ಯೆಯನ್ನು ಸ್ವೀಕರಿಸಿ ಪುನಃ ನಿನ್ನನ್ನು ನೋಡುವೆವು ಎಂದು ಹೇಳಿ ಕನ್ಯೆಯ ಜೊತೆಯಲ್ಲಿ ಹೊರಟರು.
ಉಪಲಬ್ಧಮಿದಂ ದ್ವಾರಮಶ್ವಾನಾಮಿತಿ ಚಾಂಡಜಃ |
ಉಕ್ತ್ವಾ ಗಾಲವಮಾಪೃಚ್ಛ್ಯ ಜಗಾಮ ಭವನಂ ಪ್ರತಿ ॥18॥
ಅಶ್ವಗಳನ್ನು ಪಡೆಯಲು ನಿನಗೆ ಇದೊಂದು ದ್ವಾರವು ಲಭಿಸಿತು ಎಂದು ಹೇಳಿ ಗರುಡನು ಗಾಲವರ ಅನುಮತಿಯನ್ನು ಪಡೆದು ತನ್ನ ಮನೆಗೆ ಹೋದನು.
ಗತೇ ಪತಗರಾಜೇ ತು ಗಾಲವಃ ಸಹ ಕನ್ಯಯಾ |
ಚಿಂತಯಾನಃ ಕ್ಷಮಂ ದಾನೇ ರಾಜಾನಂ ಶುಲ್ಕತೋಽಗಮತ್ ॥19॥
ಗರುಡನು ಹೊರಟು ಹೋದ ಮೇಲೆ ಕನ್ಯೆಯಿಂದ ಸಹಿತರಾದ ಗಾಲವರು ದಾನವನ್ನು ಕೊಡಲು ಸಮರ್ಥನಾದ ರಾಜನನ್ನು ಚಿಂತಿಸುತ್ತಾ ಒಬ್ಬ ರಾಜನ ಬಳಿಗೆ ಹೋದರು.
ಸೋಽಗಚ್ಛನ್ಮನಸೈಕ್ಷ್ವಾಕುಂ ಹರ್ಯಶ್ವಂ ರಾಜಸತ್ತಮಮ್ |
ಅಯೋಧ್ಯಾಯಾಂ ಮಹಾವೀರ್ಯಂ ಚತುರಂಗಬಲಾನ್ವಿತಮ್ ॥20॥
ಅವರು ಮನಸ್ಸಿನಲ್ಲಿಯೇ ಇಕ್ಷ್ವಾಕುವಂಶದ ಚತುರಂಗಬಲಾನ್ವಿತನಾದ ಮಹಾಪರಾಕ್ರಮಿಯಾದ ಅಯೋಧ್ಯೆಯ ರಾಜನಾದ ರಾಜಶ್ರೇಷ್ಠನಾದ ಹರ್ಯಶ್ವನನ್ನು ಚಿಂತಿಸಿದರು.
ಕೋಶಧಾನ್ಯಬಲೋಪೇತಂ ಪ್ರಿಯಪೌರಂ ಪ್ರಿಯದ್ವಿಜಮ್ |
ಪ್ರಜಾಭಿಕಾಮಂ ಶಾಮ್ಯಂತಂ ಕುರ್ವಾಣಂ ತಪ ಉತ್ತಮಮ್ ॥21॥
ತಮುಪಾಗಮ್ಯ ವಿಪ್ರಃ ಸ ಹರ್ಯಶ್ವಂ ಗಾಲವೋಽಬ್ರವೀತ್ ॥22॥
ಕೋಶ, ಧಾನ್ಯ ಮತ್ತು ಸೈನ್ಯಗಳಿಂದ ಕೂಡಿದ, ಪೌರರಿಗೂ ಮತ್ತು ಬ್ರಾಹ್ಮಣರಿಗೂ ಪ್ರಿಯನಾದ, ಪ್ರಜೆಗಳ ಕ್ಷೇಮವನ್ನು ಬಯಸುವ, ಶಾಂತನಾಗಿ ಶ್ರೇಷ್ಠವಾದ ತಪಸ್ಸನ್ನು ಮಾಡುವ ಆ ಹರ್ಯಶ್ವನ ಬಳಿಗೆ ಹೋಗಿ ಬ್ರಾಹ್ಮಣರಾದ ಗಾಲವರು ಹೀಗೆ ಮಾತನಾಡಿದರು.
ಕನ್ಯೇಯಂ ಮಮ ರಾಜೇಂದ್ರ ಪ್ರಸವೈಃ ಕುಲವರ್ಧಿನೀ |
ಇಯಂ ಶುಲ್ಕೇನ ಭಾರ್ಯಾರ್ಥೇ ಹರ್ಯಶ್ವ ಪ್ರತಿಗೃಹ್ಯತಾಮ್ ॥23॥
ಶುಲ್ಕಂ ತೇ ಕೀರ್ತಯಿಷ್ಯಾಮಿ ತಚ್ಛ್ರುತ್ವಾ ಸಂಪ್ರಧಾರ್ಯತಾಮ್ ॥24॥
ಎಲೈ ರಾಜೇಂದ್ರನೇ, ಈ ಕನ್ಯೆಯು ತನ್ನ ಸಂತತಿಯಿಂದ ನಿನ್ನ ಕುಲವನ್ನು ಅಭಿವೃದ್ಧಿಪಡಿಸುತ್ತಾಳೆ. ಎಲೈ ಹರ್ಯಶ್ವನೇ, ಇವಳನ್ನು ಬಾಡಿಗೆಗಾಗಿ ಪತ್ನಿಯಾಗಿ ಸ್ವೀಕರಿಸು. ನಾನು ಶುಲ್ಕಧನವನ್ನು ಹೇಳುವೆನು. ಅದನ್ನು ಕೇಳಿ ನಿಶ್ಚಯವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ದಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹದಿನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನೈದನೆಯ ಅಧ್ಯಾಯ
ಹರ್ಯಶ್ವನಿಂದ ಮಾಧವಿಯಲ್ಲಿ ವಸುಮನನ ಉತ್ಪತ್ತಿ.
ಮಾಧವಿಯನ್ನು ಕರೆದುಕೊಂಡು ಗಾಲವರಿಂದ ದಿವೋದಾಸನ ಬಳಿಗೆ ಗಮನ.
ನಾರದಃ
ಹರ್ಯಶ್ವಸ್ತ್ವಬ್ರವೀದ್ ವಾಕ್ಯಂ ವಿಚಿಂತ್ಯ ಬಹುಧಾ ತತಃ |
ದೀರ್ಘಕಾಲಂ ವಿನಿಃಶ್ವಸ್ಯ ಪ್ರಜಾಹೇತೋರ್ನೃಪೋತ್ತಮಃ ॥1॥
ನಾರದ ನೃಪಶ್ರೇಷ್ಠನಾದ ಹರ್ಯಶ್ವನು ಗಾಲವರ ಮಾತುಗಳನ್ನು ಕುರಿತು ಬಹಳವಾಗಿ ಯೋಚನೆಯನ್ನು ಮಾಡಿ ಪುತ್ರನ ಸಲುವಾಗಿ ದೀರ್ಘವಾಗಿ ನಿಟ್ಟುಸಿರನ್ನು ಬಿಟ್ಟು ಮಾತನಾಡಿದನು.
ಉನ್ನತೇಷೂನ್ನತಾ ಷಟ್ಸು ಸೂಕ್ಷ್ಮಾ ಸೂಕ್ಷ್ಮೇಷು ಸಪ್ತಸು |

ಗಂಭೀರಾ ತ್ರಿಷು ಗಂಭೀರೇಷ್ವಿಯಂ ರಕ್ತಾ ಹಿ ಪಂಚಸು ॥2॥
ಇವಳು ಉನ್ನತಳಾಗಿರಬೇಕಾದ ಆರು ಸ್ಥಾನಗಳಲ್ಲಿ ಉನ್ನತಳೂ, ಏಳು ಸೂಕ್ಷ್ಮ ಸ್ಥಾನಗಳಲ್ಲಿ ಸೂಕ್ಷ್ಮಳೂ, ಗಂಭೀರವಾಗಿರಬೇಕಾದ ಮೂರು ಸ್ಥಾನಗಳಲ್ಲಿ ಗಂಭೀರಳೂ ಮತ್ತು ಐದು ಸ್ಥಾನಗಳಲ್ಲಿ ಕೆಂಪು ಬಣ್ಣದಿಂದ ಕೂಡಿದವಳೂ ಆಗಿದ್ದಾಳೆ.
ಶ್ರೋಣ್ಯೌ ಲಲಾಟಕಕ್ಷೌ ಚ ಘ್ರಾಣಂ ಚೇತಿ ಷಡುನ್ನತಮ್ |
ಸೂಕ್ಷ್ಮಾಣ್ಯಂಗುಲಿಪರ್ವಾಣಿ ಕೇಶರೋಮನಖತ್ವಚಃ ॥3॥
ಎರಡು ಕಟಿಗಳು, ಎರಡು ಪಕ್ಕಗಳು, ಹಣೆ ಮತ್ತು ನಾಸಿಕ ಈ ಸ್ಥಾನಗಳಲ್ಲಿ ಎತ್ತರವನ್ನು ಹೊಂದಿದ್ದಾಳೆ. ಅಂಗುಲಿಗಳ ಪರ್ವಗಳು, ಕೇಶ, ರೋಮ, ನಖ ಮತ್ತು ಚರ್ಮಗಳು ಮೃದುವಾಗಿವೆ.
ಸ್ವರಃ ಸತ್ವಂ ಚ ನಾಭಿಶ್ಚ ತ್ರಿಗಂಭೀರಂ ಪ್ರಚಕ್ಷತೇ |
ಪಾಣಿಪಾದತಳೇ ರಕ್ತೇ ನೇತ್ರಾಂತಾಸ್ಯನಖಾನಿ ಚ ॥4॥
ಸ್ವರ, ಸತ್ವ ಮತ್ತು ನಾಭಿಗಳು ಮೂರೂ ಗಂಭೀರವಾಗಿವೆ ಎಂದು ಹೇಳುತ್ತಾರೆ. ಹಸ್ತ-ಪಾದತಳಗಳು, ಕಣ್ಣಿನ ಅಂಚು, ಮುಖ ಮತ್ತು ನಖಗಳು ಕೆಂಪಾಗಿವೆ.
ಬಹುದೇವಾಸುರಾಲೋಕಾ ಬಹುಗಂಧರ್ವದರ್ಶನಾ |
ಬಹುಲಕ್ಷಣಸಂಪನ್ನಾ ಬಹುಕಲ್ಯಾಣಚಾರಿಣೀ ॥5॥
ದೇವತೆಗಳು ಮತ್ತು ಅಸುರರು ಹಾಗೆಯೇ ಗಂಧರ್ವರು ಬಹಳವಾಗಿ ನೋಡಲು ಇವಳು ಬಯಸಲ್ಪಡುವವಳು. ಬಹಳ ಸಲ್ಲಕ್ಷಣಗಳಿಂದ ಕೂಡಿದ್ದಾಳೆ ಮತ್ತು ಬಹಳ ಶುಭಕಾರ್ಯಗಳನ್ನು ಆಚರಿಸುವವಳು.
ಸಮರ್ಥೇಯಂ ಜನಯಿತುಂ ಚಕ್ರವರ್ತಿನಮಾತ್ಮಜಮ್ |
ಬ್ರೂಹಿ ಶುಲ್ಕಂ ದ್ವಿಜಶ್ರೇಷ್ಠ ಸಮೀಕ್ಷ್ಯ ವಿಭವಂ ಮಮ ॥6॥
ಇವಳು ಚಕ್ರವರ್ತಿಯಾದ ಮಗನನ್ನು ಪಡೆಯಲು ಸಮರ್ಥಳಾಗಿದ್ದಾಳೆ. ಎಲೈ ಬ್ರಾಹ್ಮಣಶ್ರೇಷ್ಠರೇ, ನನ್ನ ಸಂಪತ್ತನ್ನು ನೋಡಿ ಅದಕ್ಕೆ ಅನುಗುಣವಾಗಿ ಶುಲ್ಕವನ್ನು ಹೇಳಿ.
ಗಾಲವಃ
ಏಕತಃ ಶ್ಯಾಮಕರ್ಣಾನಾಂ ಶತಾನ್ಯಷ್ಟೌ ಚ ದೇಹಿ ಮೇ |
ಹಯಾನಾಂ ಚಂದ್ರಶುಭ್ರಾಣಾಂ ದೇಶಜಾನಾಂ ವಪುಷ್ಮತಾಮ್ ॥7॥
ಗಾಲವ ಒಂದು ಕಿವಿ ಕಪ್ಪಾಗಿರುವ ಒಳ್ಳೆಯ ಶರೀರವನ್ನು ಹೊಂದಿರುವ, ಚಂದ್ರನಂತೆ ಶುಭ್ರವಾದ, ಒಳ್ಳೆಯ ದೇಶದಲ್ಲಿ ಉತ್ಪನ್ನವಾದ ಎಂಟುನೂರು ಅಶ್ವಗಳನ್ನು ನನಗೆ ಕೊಡು.
ತತಸ್ತವ ಭವಿತ್ರೀಯಂ ಪುತ್ರಾಣಾಂ ಜನನೀ ಶುಭಾ |
ಅರಣೀವ ಹುತಾಶಾನಾಂ ಯೋನಿರಾಯತಲೋಚನಾ ॥8॥
ಅನಂತರ ಈ ಶುಭಳಾದ ವಿಶಾಲನೇತ್ರೆಯು ಅರಣಿಯು ಅಗ್ನಿಯ ಉತ್ಪತ್ತಿಗೆ ಕಾರಣವಾದಂತೆ ನಿನ್ನ ಮಕ್ಕಳಿಗೆ ತಾಯಿಯಾಗುತ್ತಾಳೆ.
ನಾರದಃ
ಸ ತಚ್ಛ್ರುತ್ವಾ ವಚೋ ರಾಜಾ ಹರ್ಯಶ್ವಃ ಕಾಮಮೋಹಿತಃ |
ಉವಾಚ ಗಾಲವಂ ದೀನೋ ರಾಜರ್ಷಿರ್ಋಷಿಸತ್ತಮಮ್ ॥9॥
ಗಾಲವರ ಆ ಮಾತುಗಳನ್ನು ಕೇಳಿ ರಾಜರ್ಷಿಯಾದ ಹರ್ಯಶ್ವರಾಜನು ಕಾಮಮೋಹಿತನಾಗಿ ದೀನನಾಗಿ ಋಷಿಶ್ರೇಷ್ಠರಾದ ಗಾಲವರನ್ನು ಕುರಿತು ಮಾತನಾಡಿದನು.
ದ್ವೇ ಮೇ ಶತೇ ಸನ್ನಿಹಿತೇ ಹಯಾನಾಂ ಯದ್ವಿಧಾಸ್ತವ |
ಏಷ್ಟವ್ಯಾಃ ಶತಶಸ್ತ್ವನ್ಯೇ ಚರಂತಿ ಮಮ ವಾಜಿನಃ ॥10॥
ನಿಮಗೆ ಬೇಕಾದಂತಹ ಅಶ್ವಗಳು ನನ್ನಲ್ಲಿ ಎರಡುನೂರು ಮಾತ್ರ ಇವೆ. ನನ್ನ ಬಳಿ ಬೇರೆ ಕುದುರೆಗಳಿವೆ. ಅವುಗಳನ್ನು ಬೇಕಾದರೆ ನೀವು ಪಡೆಯಬಹುದು (ಅಥವಾ ಬೇರೆ ಆರುನೂರು ಕುದುರೆಗಳನ್ನು ನೀವು ಬೇರೆ ಕಡೆಯಿಂದ ಸಂಪಾದಿಸಬೇಕು)
ಸೋऽಹಮೇಕಮಪತ್ಯಂ ವೈ ಜನಯಿಷ್ಯಾಮಿ ಗಾಲವ |
ಅಸ್ಯಾಮೇತಂ ಭವಾನ್ ಕಾಮಂ ಸಂಪಾದಯತು ಮೇ ವರಮ್ ॥11॥
ಎಲೈ ಗಾಲವರೇ, ನಾನು ಇವಳಲ್ಲಿ ಒಬ್ಬ ಮಗನನ್ನು ಪಡೆಯುವೆನು. ನೀವು ನನ್ನ ಆಸೆಯನ್ನು ಪೂರ್ಣ ಮಾಡಿ ವರವನ್ನು ಕೊಡಬೇಕು.
ನಾರದಃ
ಏತಚ್ಛ್ರುತ್ವಾ ತು ಸಾ ಕನ್ಯಾ ಗಾಲವಂ ವಾಕ್ಯಮಬ್ರವೀತ್ ॥12॥
ಮಮ ದತ್ತೋ ವರಃ ಕಶ್ಚಿತ್ ಕೇನಚಿದ್ ಬ್ರಹ್ಮವಾದಿನಾ |
ಪ್ರಸೂತ್ಯಂತೇ ಪ್ರಸೂತ್ಯಂತೇ ಕನ್ಯೈವ ತ್ವಮಿತಿ ಪ್ರಭೋ ॥13॥
ಸ ತ್ವಂ ದದಸ್ವ ಮಾಂ ರಾಜ್ಞೇ ಪರಿಗೃಹ್ಯ ಹಯೋತ್ತಮಾನ್ ॥14॥
ನಾರದ ಈ ಮಾತನ್ನು ಕೇಳಿ ಆ ಕನ್ಯೆಯು ಗಾಲವರನ್ನು ಕುರಿತು ಒಬ್ಬ ಬ್ರಹ್ಮವಾದಿಯಾದ ಬ್ರಾಹ್ಮಣನು ನನಗೆ ವರವನ್ನು ಕೊಟ್ಟಿದ್ದಾನೆ. ನಾನು ಪ್ರತಿಯೊಂದು ಪ್ರಸವವಾದ ಮೇಲೆ ಕನ್ಯೆಯೇ ಆಗುತ್ತೇನೆ. ಎಲೈ ಪ್ರಭುವೇ, ಶ್ರೇಷ್ಠವಾದ ಕುದುರೆಗಳನ್ನು ತೆಗೆದುಕೊಂಡು ನನ್ನನ್ನು ರಾಜನಿಗೆ ಕೊಡು ಎಂದು ಹೇಳಿದಳು.
ನೃಪೇಭ್ಯೋ ಹಿ ಚತುರ್ಭ್ಯಸ್ತೇ ಪೂರ್ಣಾನ್ಯಷ್ಟೌ ಶತಾನಿ ವೈ |
ಭವಿಷ್ಯಂತಿ ತಥಾ ಪುತ್ರಾ ಮಮ ಚತ್ವಾರ ಏವ ಚ ॥15॥

ಕ್ರಿಯತಾಮುಪಸಂಹಾರೋ ಗುರ್ವರ್ಥಂ ದ್ವಿಜಸತ್ತಮ |
ಏಷಾ ತಾವನ್ಮಮ ಪ್ರಜ್ಞಾ ಯಥಾ ವಾ ಮನ್ಯಸೇ ದ್ವಿಜ ॥16॥
ನಾಲ್ಕು ಜನ ರಾಜರಿಂದ ನಿನ್ನ ಎಂಟುನೂರು ಸಂಖ್ಯೆಯು ಪೂರ್ಣವಾಗುತ್ತದೆ. ಹಾಗೆಯೇ ನನಗೆ ನಾಲ್ವರು ಪುತ್ರರು ಜನಿಸುವರು. ಎಲೈ ಬ್ರಾಹ್ಮಣಶ್ರೇಷ್ಠರೇ, ಗುರುದಕ್ಷಿಣೆಯನ್ನು ಕೊಟ್ಟು ಮುಗಿಸುವವರಾಗಿ. ಇದು ನನಗೆ ತೋರುವ ಬುದ್ಧಿ. ಬ್ರಾಹ್ಮಣರೇ, ನಿಮ್ಮ ಅಭಿಪ್ರಾಯವೇನು? (ಎಂದು ಕೇಳಿದಳು)
ನಾರದಃ
ಏವಮುಕ್ತಸ್ತು ಸ ಮುನಿಃ ಕನ್ಯಯಾ ಗಾಲವಸ್ತದಾ |
ಹರ್ಯಶ್ವಂ ಪೃಥಿವೀಪಾಲಮಿದಂ ವಚನಮಬ್ರವೀತ್ ॥17॥
ಇಯಂ ಕನ್ಯಾ ನರಶ್ರೇಷ್ಠ ಹರ್ಯಶ್ವ ಪ್ರತಿಗೃಹ್ಯತಾಮ್ |
ಚತುರ್ಭಾಗೇನ ಶುಲ್ಕಸ್ಯ ಜನಯಸ್ವೈಕಮಾತ್ಮಜಮ್ ॥18॥
ನಾರದ ಹೀಗೆ ಕನ್ಯೆಯಿಂದ ಹೇಳಲ್ಪಟ್ಟ ಆ ಗಾಲವರು ರಾಜನಾದ ಹರ್ಯಶ್ವನನ್ನು ಕುರಿತು ಹರ್ಯಶ್ವನೇ, ಶುಲ್ಕದ ನಾಲ್ಕನೆಯ ಒಂದುಭಾಗದಿಂದ ಈ ಕನ್ಯೆಯನ್ನು ಸ್ವೀಕರಿಸಿ, ಇವಳಲ್ಲಿ ಒಬ್ಬ ಪುತ್ರನನ್ನು ಪಡೆಯುವವನಾಗು ಎಂದು ಹೇಳಿದರು.
ಪರಿಗೃಹ್ಯ ಸ ತಾಂ ಕನ್ಯಾಂ ಗಾಲವಂ ಪ್ರತಿನಂದ್ಯ ಚ |
ಸಮಯೇ ದೇಶಕಾಲೇ ಚ ಲಬ್ಧವಾನ್ ಪುತ್ರಮೀಪ್ಸಿತಮ್ ॥19॥
ಹರ್ಯಶ್ವನು ಗಾಲವರನ್ನು ಅಭಿನಂದಿಸಿ ಆ ಕನ್ಯೆಯನ್ನು ಸ್ವೀಕರಿಸಿ ಯೋಗ್ಯವಾದ ದೇಶ, ಕಾಲಗಳಲ್ಲಿ ಅವಳಲ್ಲಿ ಅಭಿಪ್ರೇತನಾದ ಒಬ್ಬ ಪುತ್ರನನ್ನು ಪಡೆದನು.
ಜಾತೋ ವಸುಮನಾ ನಾಮ ವಸುಭ್ಯೋ ವಸುಸತ್ತಮಃ |
ವಸುಪ್ರಖ್ಯೋ ನರಪತಿಃ ಸ ಬಭೂವ ವಸುಪ್ರದಃ ॥20॥
ವಸುಮನಸ್ ಎಂಬ ಹೆಸರಿನ ವಸುಗಳಿಗಿಂತಲೂ ಶ್ರೀಮಂತನಾದ, ವಸುಗಳಿಗೆ ಸಮಾನನಾದ ರಾಜನು ಜನಿಸಿದನು. ಅವನು ವಸುಪ್ರದನಾದನು.
ಅಥ ಕಾಲೇ ಪುನರ್ಧೀಮಾನ್ ಗಾಲವಃ ಪ್ರತ್ಯುಪಸ್ಥಿತಃ |
ಉಪಸಂಗಮ್ಯ ಹೋವಾಚ ಹರ್ಯಶ್ವಂ ಪ್ರೀತಮಾನಸಮ್ ॥21॥
ಜಾತೋ ನೃಪ ಸುತಸ್ತೇಽಯಂ ಬಾಲೋ ಭಾಸ್ಕರಸನ್ನಿಭಃ |
ಕಾಲೋ ಗಂತುಂ ನರಶ್ರೇಷ್ಠ ಶುಲ್ಕಾರ್ಥಮಪರಂ ನೃಪಮ್ ॥22॥
ಅನಂತರ ಸ್ವಲ್ಪಕಾಲದ ಮೇಲೆ ಮೇಧಾವಿಗಳಾದ ಗಾಲವರು ಪುನಃ ರಾಜನ ಬಳಿಗೆ ಬಂದು ಸಂತೋಷದಲ್ಲಿದ್ದ ಹರ್ಯಶ್ವನನ್ನು ಕುರಿತು ಎಲೈ ರಾಜನೇ, ನಿನಗೆ ಸೂರ್ಯನಂತಿರುವ ಈ ಪುತ್ರನು ಜನಿಸಿದ್ದಾನೆ. ಎಲೈ ನರಶ್ರೇಷ್ಠನೇ, ನನ್ನ ಶುಲ್ಕದ ಸಲುವಾಗಿ ಬೇರೆ ರಾಜರ ಬಳಿಗೆ ಹೋಗುವ ಕಾಲವು ಒದಗಿದೆ ಎಂದು ಹೇಳಿದರು.
ಹರ್ಯಶ್ವಃ ಸತ್ಯವಚನೇ ತತಃ ಸ್ಥಿತ್ವಾ ಚ ಪೌರುಷೇ |
ದುರ್ಲಭತ್ವಾದ್ಧಯಾನಾಂ ಚ ಪ್ರದದೌ ಮಾಧವೀಂ ಪುನಃ ॥23॥
ಹರ್ಯಶ್ವನು ಸತ್ಯವಚನದಲ್ಲಿ ರತನಾಗಿ, ನಾರಾಯಣನ ಪ್ರೇರಣೆಯಂತೆ, ತನ್ನ ಬಳಿ ಇನ್ನೂ ಹೆಚ್ಚಿನ ಅಂತಹ ಅಶ್ವಗಳು ಇಲ್ಲದ ಕಾರಣದಿಂದ ಮಾಧವಿಯನ್ನು ಪುನಃ ಗಾಲವರಿಗೆ ಕೊಟ್ಟನು.
ಮಾಧವೀ ಚ ಪುನರ್ದೀಪ್ತಾಂ ಪರಿತ್ಯಜ್ಯ ನೃಪಶ್ರಿಯಮ್ |
ಕುಮಾರೀ ಕಾಮತೋ ಭೂತ್ವಾ ಗಾಲವಂ ಪೃಷ್ಠತೋಽನ್ವಗಾತ್ ॥24॥
ಮಾಧವಿಯು ಶೋಭಿಸುತ್ತಿದ್ದ ರಾಜನ ಸಂಪತ್ತನ್ನು ಬಿಟ್ಟು ತನ್ನ ಇಚ್ಛೆಯಿಂದಲೇ ಕುಮಾರಿಯಾಗಿ ಗಾಲವರ ಹಿಂದೆ ನಡೆದಳು.
ತ್ವಯ್ಯೇವ ತಾವತ್ ತಿಷ್ಠಂತು ಹಯಾ ಇತ್ಯುಕ್ತವಾನ್ ದ್ವಿಜಃ |
ಪ್ರಯಯೌ ಕನ್ಯಯಾ ಸಾರ್ಧಂ ದಿವೋದಾಸಂ ಪ್ರಜೇಶ್ವರಮ್ ॥25॥
ಗಾಲವ ಬ್ರಾಹ್ಮಣರು ಸದ್ಯಕ್ಕೆ ಅಶ್ವಗಳು ನಿನ್ನ ಬಳಿಯಲ್ಲಿಯೇ ಇರಲಿ ಎಂದು ಹೇಳಿ ಕನ್ಯೆಯ ಜೊತೆಯಲ್ಲಿ ದಿವೋದಾಸರಾಜನ ಬಳಿಗೆ ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚದಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಷಟ್ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹದಿನೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾರನೆಯ ಅಧ್ಯಾಯ
ಹಾಗೆಯೇ ದಿವೋದಾಸನು ಮಾಧವಿಯಲ್ಲಿ ಒಬ್ಬ ಪುತ್ರನನ್ನು ಪಡೆದು
ಗಾಲವರಿಗೆ ಕನ್ಯೆಯ ಅರ್ಪಣೆ.
ಗಾಲವಃ
ಮಹಾವೀರ್ಯೋ ಮಹೀಪಾಲಃ ಕಾಶೀನಾಮೀಶ್ವರಃ ಪ್ರಭುಃ |
ದಿವೋದಾಸ ಇತಿ ಖ್ಯಾತೋ ಭೈಮಸೇನಿರ್ನರಾಧಿಪಃ ॥1॥

ತತ್ರ ಗಚ್ಛಾವಹೇ ಭದ್ರೇ ಶನೈರಾಗಚ್ಛ ಮಾ ಶುಚಃ |
ಧಾರ್ಮಿಕಃ ಸಂಯಮೇ ಯುಕ್ತಃ ಸತ್ಯಶ್ಚೈವ ಜನೇಶ್ವರಃ ॥2॥
ಗಾಲವ ಮಹಾಪರಾಕ್ರಮಿಯೂ, ಭೂಪತಿಯೂ, ಕಾಶೀದೇಶಕ್ಕೆ ಒಡೆಯನೂ, ಭೀಮಸೇನನ ಪುತ್ರನೂ ಆದ ದಿವೋದಾಸನೆಂಬ ರಾಜನಿದ್ದಾನೆ. ಎಲೈ ಮಂಗಳಸ್ವರೂಪಳೇ, ಅಲ್ಲಿಗೆ ಹೋಗೋಣ. ನಿಧಾನವಾಗಿ ಬಾ. ಶೋಕಪಡಬೇಡ. ಆ ರಾಜನು ಧಾರ್ಮಿಕನಾದವನು, ಸಂಯಮವುಳ್ಳವನು ಮತ್ತು ಸತ್ಯವಚನನಾದವನು.
ನಾರದಃ
ತಮುಪಾಗಮ್ಯ ಸ ಮುನಿಃ ನ್ಯಾಯತಸ್ತೇನ ಸತ್ಕೃತಃ |
ಗಾಲವಃ ಪ್ರಸವಸ್ಯಾರ್ಥೇ ತಂ ನೃಪಂ ಪ್ರತ್ಯಚೋದಯತ್ ॥3॥
ನಾರದ ಆ ಗಾಲವಋಷಿಗಳು ಆ ದಿವೋದಾಸನ ಬಳಿಗೆ ಹೋಗಿ, ಧಾರ್ಮಿಕವಾಗಿ ಅವನಿಂದ ಪೂಜಿಸಲ್ಪಟ್ಟು ಒಬ್ಬ ಪುತ್ರನನ್ನು ಪಡೆಯುವ ವಿಷಯದಲ್ಲಿ ರಾಜನಿಗೆ ಒತ್ತಾಯ ಪಡಿಸಿದರು.
ದಿವೋದಾಸಃ
ಶ್ರುತಮೇತನ್ಮಯಾ ಪೂರ್ವಂ ಕಿಮುಕ್ತ್ವಾ ವಿಸ್ತರಂ ದ್ವಿಜ |
ಕಾಂಕ್ಷಿತೋ ಹಿ ಮಯೈಷೋಽರ್ಥಃ ಶ್ರುತ್ವೈವ ದ್ವಿಜಸತ್ತಮ ॥4॥
ದಿವೋದಾಸ ಎಲೈ ಬ್ರಾಹ್ಮಣರೇ, ಇದನ್ನು ನಾನು ಮೊದಲೇ ಕೇಳಿದ್ದೇನೆ. ವಿಸ್ತಾರವಾಗಿ ಮಾತನಾಡಿ ಏನು ಪ್ರಯೋಜನ? ಎಲೈ ದ್ವಿಜಶ್ರೇಷ್ಠರೇ, ಈ ವಿಷಯವನ್ನು ಕೇಳಿದಾಗಲೇ ನಾನೂ ಈ ಫಲವನ್ನು ಅಪೇಕ್ಷಿಸಿದೆ.
ಏತಚ್ಚ ಮೇ ಬಹುಮತಂ ಯದುತ್ಸೃಜ್ಯ ನರಾಧಿಪಾನ್ |
ಮಾಮೇವಮುಪಯಾತೋಽಸಿ ಭಾವಿ ಚೈತದಸಂಶಯಮ್ ॥5॥
ಉಳಿದ ರಾಜರನ್ನು ಬಿಟ್ಟು ನನ್ನ ಸಮೀಪಕ್ಕೇ ಬಂದ ಕಾರಣ ನಾನು ಬಹಳ ಸಂತೋಷಪಟ್ಟಿದ್ದೇನೆ. ನಿಮ್ಮ ಸಂಕಲ್ಪವು ನಿಸ್ಸಂಶಯವಾಗಿ ನೆರವೇರುವುದು.
ಸ ಏವ ವಿಭವೋಽಸ್ಮಾಕಮಶ್ವಾನಾಮಪಿ ಗಾಲವ |
ಅಹಮಪ್ಯೇಕಮೇವಾಸ್ಯಾಂ ಜನಯಿಷ್ಯಾಮಿ ಪಾರ್ಥಿವಮ್ ॥6॥
ಎಲೈ ಗಾಲವರೇ, ಅಶ್ವಗಳ ವಿಷಯದಲ್ಲಿ ನಮ್ಮದೂ ಅದೇ ಪರಿಸ್ಥಿತಿ (ಇನ್ನೂರು ಅಶ್ವಗಳು ಮಾತ್ರ ಇವೆ). ನಾನೂ ಸಹ ಇವಳಲ್ಲಿ ಒಬ್ಬ ರಾಜನನ್ನು ಪಡೆಯುವೆನು.
ನಾರದಃ
ತಥೇತ್ಯುಕ್ತ್ವಾ ದ್ವಿಜಶ್ರೇಷ್ಠಃ ಪ್ರಾದಾತ್ ಕನ್ಯಾಂ ಮಹೀಪತೇಃ |
ವಿಧಿಪೂರ್ವಾಂ ಚ ತಾಂ ರಾಜಾ ಕನ್ಯಾಂ ಪ್ರತಿಗೃಹೀತವಾನ್ ॥7॥
ಹಾಗೆಯೇ ಆಗಲಿ ಎಂದು ಹೇಳಿ ಆ ದ್ವಿಜಶ್ರೇಷ್ಠರು ರಾಜನಿಗೆ ಆ ಕನ್ಯೆಯನ್ನು ವಿಧಿಪೂರ್ವಕವಾಗಿ ಕೊಟ್ಟರು. ರಾಜನೂ ಸಹ ಅವಳನ್ನು ಸ್ವೀಕರಿಸಿದನು.
ರೇಮೇ ಸ ತಸ್ಯಾಂ ರಾಜರ್ಷಿಃ ಪ್ರಭಾವತ್ಯಾಂ ಯಥಾ ರವಿಃ |
ಸ್ವಾಹಾಯಾಂ ಚ ಯಥಾ ವಹ್ನಿರ್ಯಥಾ ಶಚ್ಯಾಂ ಚ ವಾಸವಃ ॥8॥
ಯಥಾ ಚಂದ್ರಶ್ಚ ರೋಹಿಣ್ಯಾಂ ಯಥಾ ಧೂಮೋರ್ಣಯಾ ಯಮಃ |
ವರುಣಶ್ಚ ಯಥಾ ಗೌರ್ಯಾಂ ಯಥಾ ಚರ್ಧ್ಯಾಂ ಧನೇಶ್ವರಃ ॥9॥
ರಾಜರ್ಷಿಯಾದ ದಿವೋದಾಸನು ಸೂರ್ಯನು ಪ್ರಭಾವತಿಯ ಜೊತೆಯಲ್ಲಿ, ಅಗ್ನಿಯು ಸ್ವಾಹಾದೇವಿಯ ಜೊತೆಯಲ್ಲಿ, ಇಂದ್ರನು ಶಚಿಯ ಜೊತೆಯಲ್ಲಿ, ಚಂದ್ರನು ರೋಹಿಣಿಯ ಜೊತೆಯಲ್ಲಿ, ಯಮನು ಧೂಮೋರ್ಣೆಯ ಜೊತೆಯಲ್ಲಿ, ವರುಣನು ಗೌರಿಯ ಜೊತೆಯಲ್ಲಿ, ಕುಬೇರನು ಋದ್ಧಿಯ ಜೊತೆಯಲ್ಲಿ ವಿಹರಿಸಿದಂತೆ ಮಾಧವಿಯ ಜೊತೆ ವಿಹರಿಸಿದನು.
ಯಥಾ ನಾರಾಯಣೋ ಲಕ್ಷ್ಮ್ಯಾಂ ಜಾಹ್ನವ್ಯಾಂ ಚ ಯಥೋದಧಿಃ |
ಯಥಾ ರುದ್ರಶ್ಚ ರುದ್ರಾಣ್ಯಾಂ ಯಥಾ ವಾಣ್ಯಾಂ ಪಿತಾಮಹಃ ॥10॥
ಅದೃಶ್ಯಂತ್ಯಾಂ ಚ ವಾಸಿಷ್ಠೋ ವಸಿಷ್ಠಶ್ಚಾಕ್ಷಮಾಲಯಾ |
ಚ್ಯವನಶ್ಚ ಸುಕನ್ಯಾಯಾಂ ಪುಲಸ್ತ್ಯಃ ಸಂಧ್ಯಯಾ ಯಥಾ ॥11॥
ನಾರಾಯಣನು ಲಕ್ಷ್ಮಿಯ ಜೊತೆಯಲ್ಲಿ, ವರುಣನು ಗಂಗೆಯ ಜೊತೆಯಲ್ಲಿ, ರುದ್ರನು ಪಾರ್ವತಿಯ ಜೊತೆಯಲ್ಲಿ, ಬ್ರಹ್ಮನು ವಾಣಿಯ ಜೊತೆಯಲ್ಲಿ, ಶಕ್ತಿ ಋಷಿಯು ಅದೃಶ್ಯಂತಿಯ ಜೊತೆಯಲ್ಲಿ, ವಸಿಷ್ಠರು ಅಕ್ಷಮಾಲೆಯ ಜೊತೆಯಲ್ಲಿ (ಅರುಂಧತಿಗೆ ಅಕ್ಷಮಾಲೆ ಎಂದು ಇನ್ನೊಂದು ಹೆಸರು), ಚ್ಯವನರು ಸುಕನ್ಯೆಯ ಜೊತೆಯಲ್ಲಿ, ಪುಲಸ್ತ್ಯರು ಸಂಧಿಯ ಜೊತೆಯಲ್ಲಿ (ವಿಹರಿಸಿದಂತೆ ವಿಹರಿಸಿದನು).
ಅಗಸ್ತ್ಯಶ್ಚಾಪಿ ವೈದರ್ಭ್ಯಾಂ ಸಾವಿತ್ರ್ಯಾಂ ಸತ್ಯವಾನ್ ಯಥಾ |
ಯಥಾ ಭೃಗುಃ ಪುಲೋಮಾಯಾಮದಿತ್ಯಾಂ ಕಾಶ್ಯಪೋ ಯಥಾ ॥12॥
ರೇಣುಕಾಯಾಂ ಯಥರ್ಚೀಕೋ ಹೈಮವತ್ಯಾಂ ಚ ಕೌಶಿಕಃ |
ಬೃಹಸ್ಪತಿಶ್ಚ ತಾರಾಯಾಂ ಶುಕ್ರಶ್ಚ ಶತಪರ್ವಯಾ ॥13॥
ಅಗಸ್ತ್ಯರು ವಿದರ್ಭರಾಜಕುಮಾರಿಯಾದ ಲೋಪಾಮುದ್ರೆಯ ಜೊತೆಯಲ್ಲಿ, ಸತ್ಯವಂತನು ಸಾವಿತ್ರಿಯ ಜೊತೆಯಲ್ಲಿ, ಭೃಗುವು ಪುಲೋಮೆಯ ಜೊತೆಯಲ್ಲಿ, ಕಾಶ್ಯಪರು ಅದಿತಿಯ ಜೊತೆಯಲ್ಲಿ, ಜಮದಗ್ನಿಗಳು ರೇಣುಕೆಯ ಜೊತೆಯಲ್ಲಿ, ವಿಶ್ವಾಮಿತ್ರರು ಮೇನಕೆಯ ಜೊತೆಯಲ್ಲಿ, ಬೃಹಸ್ಪತಿಗಳು ತಾರೆಯ ಜೊತೆಯಲ್ಲಿ, ಶುಕ್ರನು ಶತಪರ್ವಳ ಜೊತೆಯಲ್ಲಿ (ವಿಹರಿಸಿದಂತೆ ವಿಹರಿಸಿದನು).
ಯಥಾ ಭೂಮ್ಯಾಂ ಭೂಮಿಪತಿರುರ್ವಶ್ಯಾಂ ಚ ಪುರೂರವಾಃ |

ದಧೀಚಿಃ ಸತ್ಯಧೃತ್ಯಾಂ ಚ ಸರಸ್ವತ್ಯಾಂ ಯಥಾ ಮನುಃ ॥14॥
ಶಕುಂತಲಾಯಾಂ ದುಷ್ಯಂತೋ ಧೃತ್ಯಾಂ ಧರ್ಮಶ್ಚ ಶಾಶ್ವತಃ |
ದಮಯಂತ್ಯಾಂ ನಳಶ್ಚೈವ ಸತ್ಯವತ್ಯಾಂ ಚ ಭಾರ್ಗವಃ ॥15॥
ಭೂಮಿಪತಿಯು ಭೂಮಿಯ ಜೊತೆಯಲ್ಲಿ, ಪುರೂರವನು ಊರ್ವಶಿಯ ಜೊತೆಯಲ್ಲಿ, ದಧೀಚಿಯು ಸತ್ಯಧೃತಿಯ ಜೊತೆಯಲ್ಲಿ, ಮನುವು ಸರಸ್ವತಿಯ ಜೊತೆಯಲ್ಲಿ, ದುಷ್ಯಂತನು ಶಕುಂತಲೆಯಲ್ಲಿ, ಶಾಶ್ವತನಾದ ಧರ್ಮನು ಧೃತಿಯ ಜೊತೆಯಲ್ಲಿ, ನಳನು ದಮಯಂತಿಯ ಜೊತೆಯಲ್ಲಿ, ಪರಶುರಾಮನು ಸತ್ಯವತಿಯ ಜೊತೆಯಲ್ಲಿ (ವಿಹರಿಸಿದಂತೆ ಮಾಧವಿಯ ಜೊತೆ ವಿಹರಿಸಿದನು).
ಜರತ್ಕಾರುರ್ಜರತ್ಕಾರ್ವಾಂ ರತ್ಯಾಂ ಚ ಮದನೋ ಯಥಾ |
ಮೇನಕಾಯಾಂ ಯಥೋರ್ಣಾಯುಃ ತುಂಬುರುಶ್ಚೈವ ರಂಭಯಾ ॥16॥
ವಾಸುಕಿಃ ಶತಶೀರ್ಷಾಯಾಂ ಕುಮಾರ್ಯಾಂ ಚ ಧನಂಜಯಃ |
ವೈದೇಹ್ಯಾಂ ಚ ಯಥಾ ರಾಮೋ ರುಗ್ಮಿಣ್ಯಾಂ ಚ ಜನಾರ್ದನಃ ॥17॥
ಜರತ್ಕಾರುವು ಜರತ್ಕಾರುವಿನ ಜೊತೆಯಲ್ಲಿ, ಮನ್ಮಥನು ರತಿಯ ಜೊತೆಯಲ್ಲಿ, ಊರ್ಣಾಯುವು ಮೇನಕೆಯ ಜೊತೆಯಲ್ಲಿ, ತುಂಬುರುವು ರಂಭೆಯ ಜೊತೆಯಲ್ಲಿ, ವಾಸುಕಿಯು ಶತಶೀರ್ಷಳ ಜೊತೆಯಲ್ಲಿ, ಧನಂಜಯನು (ಧನಂಜಯನೆಂಬ ಸರ್ಪವು) ಕುಮಾರಿಯ ಜೊತೆಯಲ್ಲಿ, ರಾಮನು ಸೀತೆಯ ಜೊತೆಯಲ್ಲಿ, ಕೃಷ್ಣನು ರುಗ್ಮಿಣಿಯ ಜೊತೆಯಲ್ಲಿ (ವಿಹರಿಸಿದಂತೆ ಮಾಧವಿಯ ಜೊತೆ ವಿಹರಿಸಿದನು).
ತಥಾ ತು ರಮಮಾಣಸ್ಯ ದಿವೋದಾಸಸ್ಯ ಭೂಪತೇಃ |
ಮಾಧವೀ ಜನಯಾಮಾಸ ಪುತ್ರಮೇಕಂ ಪ್ರತರ್ದನಮ್ ॥18॥
ಹಾಗೆ ವಿಹರಿಸುತ್ತಿದ್ದ ದಿವೋದಾಸರಾಜನಿಂದ ಮಾಧವಿಯು ಪ್ರತರ್ದನನೆಂಬ ಒಬ್ಬ ಪುತ್ರನನ್ನು ಪಡೆದಳು.
ಅಥಾಜಗಾಮ ಭಗವಾನ್ ದಿವೋದಾಸಂ ಸ ಗಾಲವಃ |
ಸಮಯೇ ಸಮನುಪ್ರಾಪ್ತೇ ವಚನಂ ಚೇದಮಬ್ರವೀತ್ ॥19॥
ಅನಂತರ ಸೂಕ್ತವಾದ ಸಮಯದಲ್ಲಿ ಪೂಜ್ಯರಾದ ಗಾಲವರು ಬಂದು ದಿವೋದಾಸನನ್ನು ಕುರಿತು ಹೀಗೆ ಹೇಳಿದರು.
ನಿರ್ಯಾತಯತು ಮೇ ಕನ್ಯಾಂ ಭವಾಂಸ್ತಿಷ್ಠಂತು ವಾಜಿನಃ |
ಯಾವದನ್ಯತ್ರ ಗಚ್ಛಾಮಿ ಶುಲ್ಕಾರ್ಥಂ ಪೃಥಿವೀಪತೇ ॥20॥
ನನ್ನ ಕನ್ಯೆಯನ್ನು ನನಗೆ ಹಿಂದಿರುಗಿಸು. ಕುದುರೆಗಳು ನಿನ್ನ ಬಳಿಯಲ್ಲಿಯೇ ಇರಲಿ. ಎಲೈ ರಾಜನೇ, ಅಷ್ಟರಲ್ಲಿ ನಾನು ಶುಲ್ಕಾರ್ಥವಾಗಿ ಬೇರೆ ಕಡೆಗೆ ಹೋಗುತ್ತೇನೆ.
ನಾರದಃ
ದಿವೋದಾಸೋಽಥ ಧರ್ಮಾತ್ಮಾ ಸಮಯೇ ಗಾಲವಸ್ಯ ತಾಮ್ |
ಕನ್ಯಾಂ ನಿರ್ಯಾತಯಾಮಾಸ ಸ್ಥಿತಃ ಸತ್ಯೇ ಮಹೀಪತಿಃ ॥21॥
ನಾರದ ಆಗ ಸತ್ಯವಚನನಾದ, ಧರ್ಮಾತ್ಮನಾದ ದಿವೋದಾಸರಾಜನು ತನ್ನ ಪ್ರತಿಜ್ಞೆಗೆ ಅನುಗುಣವಾಗಿ ಗಾಲವರಿಗೆ ಆ ಕನ್ಯೆಯನ್ನು ಹಿಂದಿರುಗಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷೋಡಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೇಳನೆಯ ಅಧ್ಯಾಯ
ಕನ್ಯೆಯನ್ನು ಸ್ವೀಕರಿಸಿದ ಉಶೀನರನಿಂದ ಶಿಬಿಯ ಉತ್ಪತ್ತಿ ಮತ್ತು ಗಾಲವರಿಗೆ ಪುನಃ ಕನ್ಯಾಸಮರ್ಪಣೆ
ನಾರದಃ
ತಥೈವ ತಾಂ ಶ್ರಿಯಂ ತ್ಯಕ್ತ್ವಾ ಕನ್ಯಾ ಭೂತ್ವಾ ಯಶಸ್ವಿನೀ |
ಮಾಧವೀ ಗಾಲವಂ ವಿಪ್ರಮನ್ವಯಾತ್ ಸತ್ಯಸಂಗರಾ ॥1॥
ನಾರದ ಮೊದಲಿನಂತೆಯೇ ಯಶಸ್ವಿನಿಯಾದ ಮತ್ತು ಸತ್ಯಪ್ರತಿಜ್ಞೆಯುಳ್ಳ ಮಾಧವಿಯು ರಾಜಸಂಪತ್ತನ್ನು ಬಿಟ್ಟು ಕನ್ಯೆಯಾಗಿ ಬ್ರಾಹ್ಮಣರಾದ ಗಾಲವರನ್ನು ಹಿಂಬಾಲಿಸಿದಳು.
ಗಾಲವೋ ವಿಮೃಶನ್ನೇವ ಸ್ವಕಾರ್ಯಗತಮಾನಸಃ |
ಜಗಾಮ ಭೋಜನಗರಂ ದ್ರಷ್ಟುಮೌಶೀನರಂ ನೃಪಮ್ ॥2॥
ಗಾಲವರು ತಮ್ಮ ಕಾರ್ಯದಲ್ಲೇ ಮನಸ್ಸುಳ್ಳವರಾಗಿ ವಿಚಾರ ಮಾಡುತ್ತಾ ಉಶೀನರ ರಾಜನನ್ನು ನೋಡಲು ಭೋಜನಗರಕ್ಕೆ ಹೋದರು.
ತಮುವಾಚಾಥ ಗತ್ವಾ ತು ಭೂಪತೇ ಸತ್ಯವಿಕ್ರಮಮ್ ॥3॥
ಇಯಂ ಕನ್ಯಾ ಸುತೌ ದ್ವೌ ತೇ ಜನಯಿಷ್ಯತಿ ಪಾರ್ಥಿವೌ |
ಅಸ್ಯಾಂ ಭವಾನವಾಪ್ತಾರ್ಥೋ ಭವಿತಾ ಪ್ರೇತ್ಯ ಚೇಹ ಚ ॥4॥

ಸೋಮಾರ್ಕಪ್ರತಿಸಂಕಾಶೌ ಜನಯಿತ್ವಾ ಸುತೌ ನೃಪ ॥5॥
ಎಲೈ ಜನಮೇಜಯ ರಾಜನೇ, ಅಲ್ಲಿಗೆ ಹೋಗಿ ಸತ್ಯವಿಕ್ರಮನಾದ ಆ ರಾಜನನ್ನು ಕುರಿತು ಮಾತನಾಡಿದರು `ಎಲೈ ರಾಜನೇ, ಈ ಕನ್ಯೆಯು ನಿನ್ನಿಂದ ರಾಜರಾಗುವ ಎರಡು ಮಕ್ಕಳನ್ನು ಪಡೆಯುವಳು. ಚಂದ್ರ-ಸೂರ್ಯಸದೃಶರಾದ ಎರಡು ಮಕ್ಕಳನ್ನು ಇವಳಲ್ಲಿ ಪಡೆದು ನೀನು ಕೃತ್ಯಕೃತ್ಯನಾಗಿ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖವಾಗಿರುತ್ತೀಯೆ'.
ಶುಲ್ಕಂ ತು ಸರ್ವಧರ್ಮಜ್ಞ ಹಯಾನಾಂ ಚಂದ್ರವರ್ಚಸಾಮ್ |
ಏಕತಃ ಶ್ಯಾಮಕರ್ಣಾನಾಂ ದೇಯಂ ಮಹ್ಯಂ ಚತುಃಶತಮ್ ॥6॥
ಸರ್ವಧರ್ಮಜ್ಞನೇ, ಚಂದ್ರನ ಕಾಂತಿಯುಳ್ಳ ಒಂದು ಕಡೆ ಕಪ್ಪಾದ ಕಿವಿಯುಳ್ಳ ನಾಲ್ಕುನೂರು ಅಶ್ವಗಳನ್ನು ನೀನು ನನಗೆ ಶುಲ್ಕವಾಗಿ ಕೊಡಬೇಕು (ಎಂದು ಹೇಳಿದರು).
ಗುರ್ವರ್ಥೋಽಯಂ ಸಮಾರಂಭೋ ನ ಹಯೈಃ ಕೃತ್ಯಮಸ್ತಿ ಮೇ |
ಯದಿ ಶಕ್ಯಂ ಮಹಾರಾಜ ಕ್ರಿಯತಾಮವಿಚಾರಿತಮ್ ॥7॥
ನನ್ನ ಈ ಪ್ರಯತ್ನವು ಗುರುದಕ್ಷಿಣೆಯನ್ನು ಕೊಡುವುದಕ್ಕಾಗಿ. ನನಗೆ ಅಶ್ವಗಳಿಂದ ಆಗಬೇಕಾದುದೇನೂ ಇಲ್ಲ. ಎಲೈ ಮಹಾರಾಜನೇ, ಸಾಧ್ಯವಾದರೆ ವಿಚಾರ ಮಾಡದೆ ಹೀಗೆ ಮಾಡು.
ಅನಪತ್ಯೋಽಸಿ ರಾಜರ್ಷೇ ಸುತೌ ಜನಯ ಪಾರ್ಥಿವ |
ಪಿತೄನ್ ಪುತ್ರಪ್ಲವೇನ ತ್ವಮಾತ್ಮಾನಂ ಚೈವ ತಾರಯ ॥8॥
ಎಲೈ ರಾಜರ್ಷಿಯೇ, ನೀನು ಪುತ್ರಹೀನನಾಗಿದ್ದೀಯೆ. ಎಲೈ ರಾಜನೇ, ಪುತ್ರನೆಂಬ ದೋಣಿಯಿಂದ ಪಿತೃಗಳನ್ನು ಮತ್ತು ನಿನ್ನನ್ನು ಪಾರು ಮಾಡುವವನಾಗು.
ನ ಪುತ್ರಫಲಭೋಕ್ತಾ ಹಿ ರಾಜರ್ಷೇ ಪಾತ್ಯತೇ ದಿವಃ |
ನ ಯಾತಿ ನರಕಂ ಘೋರಂ ಯತ್ರ ಗಚ್ಛಂತ್ಯನಾತ್ಮಜಾಃ ॥9॥
ಪುತ್ರರೂಪ ಫಲವನ್ನು ಹೊಂದಿದ ಮನುಷ್ಯನು ಸ್ವರ್ಗದಿಂದ ತಳ್ಳಲ್ಪಡುವುದಿಲ್ಲ. ಎಲೈ ರಾಜರ್ಷಿಯೇ, ಪುತ್ರರಿಲ್ಲದವರು ಹೋಗುವ ಘೋರ ನರಕಕ್ಕೆ ಅವನು ಹೋಗುವುದಿಲ್ಲ.
ನಾರದಃ
ಏತಚ್ಚಾನ್ಯಚ್ಚ ವಿವಿಧಂ ಶ್ರುತ್ವಾ ಗಾಲವಭಾಷಿತಮ್ |
ಉಶೀನರಃ ಪ್ರತಿವಚೋ ದದೌ ತಸ್ಯ ನರಾಧಿಪಃ ॥10॥
ನಾರದ ಗಾಲವರು ನುಡಿದ ಈ ಮಾತುಗಳನ್ನು ಮತ್ತು ಇನ್ನೂ ಅನೇಕ ವಿವಿಧವಾದ ಮಾತುಗಳನ್ನು ಕೇಳಿ ಉಶೀನರ ರಾಜನು ಅವರಿಗೆ ಪ್ರತಿವಚನವನ್ನು ನೀಡಿದನು.
ಶ್ರುತವಾನಸ್ಮಿ ತೇ ವಾಕ್ಯಂ ಯಥಾ ವದಸಿ ಗಾಲವ |
ವಿಧಿಸ್ತು ಬಲವಾನ್ ಬ್ರಹ್ಮನ್ ಪ್ರವಣಂ ಹಿ ಮನೋ ಮಮ ॥11॥
ಎಲೈ ಗಾಲವರೇ, ನೀವು ಹೇಳುವಂತೆ ನಿಮ್ಮ ಮಾತನ್ನು ಮೊದಲೇ ಕೇಳಿದ್ದೇನೆ. ಎಲೈ ಬ್ರಾಹ್ಮಣರೇ, ವಿಧಿಯು ಪ್ರಬಲವಾದುದು. ನನ್ನ ಮನಸ್ಸು ಅವಳಲ್ಲಿ ಲಗ್ನವಾಗಿದೆ.
ಶತೇ ದ್ವೇ ತು ಮಯಾಽಶ್ವಾನಾಮೀದೃಶಾನಾಂ ದ್ವಿಜೋತ್ತಮ |
ಇತರೇಷಾಂ ಸಹಸ್ರಾಣಿ ಸುಬಹೂನಿ ಚರಂತಿ ಮೇ ॥12॥
ಎಲೈ ದ್ವಿಜೋತ್ತಮರೇ, ನನ್ನ ಬಳಿಯೂ ಇಂತಹ ಇನ್ನೂರು ಕುದುರೆಗಳು ಮಾತ್ರ ಇವೆ. ಉಳಿದ ಸಹಸ್ರಾರು ಕುದುರೆಗಳು ಮೇಯುತ್ತಿರುತ್ತವೆ.
ಅಹಮಪ್ಯೇಕಮೇವಾಸ್ಯಾಂ ಜನಯಿಷ್ಯಾಮಿ ಗಾಲವ |
ದ್ವಿಜ ಪುತ್ರಗತಂ ಮಾರ್ಗಂ ಗಮಿಷ್ಯಾಮಿ ಪರೈರಹಮ್ ॥13॥
ಎಲೈ ಗಾಲವರೇ, ನಾನೂ ಸಹ ಇವಳಲ್ಲಿ ಒಬ್ಬ ಪುತ್ರನನ್ನು ಪಡೆಯುವೆನು. ಎಲೈ ಬ್ರಾಹ್ಮಣರೇ, ಉಳಿದವರು ಪುತ್ರ ನಿಮಿತ್ತದಿಂದ ಪಡೆಯುವ ಮಾರ್ಗವನ್ನು ನಾನೂ ಸಹ ಪಡೆಯುವೆನು.
ಮೂಲ್ಯೇನಾಪಿ ಸಮಂ ಕುರ್ಯಾಂ ತವಾಹಂ ದ್ವಿಜಸತ್ತಮ |
ಪೌರಜಾನಪದಾರ್ಥಂ ತು ಮಮಾರ್ಥೋ ನಾತ್ಮಭೋಗತಃ ॥14॥
ಎಲೈ ದ್ವಿಜಶ್ರೇಷ್ಠರೇ, ನೀವು ಕೇಳಿದ ಮೌಲ್ಯವನ್ನೂ ನಾನು ಸರಿಯಾಗಿ ಕೊಡುವೆನು. ಈ ನನ್ನ ಪ್ರಯತ್ನವು ಪೌರಜಾನಪದರ ರಕ್ಷಣೆಗಾಗಿ ಹೊರತು ನನ್ನ ಸ್ವಂತ ಭೋಗಕ್ಕಾಗಿ ಅಲ್ಲ.
ಕಾಮತೋ ಹಿ ಧನಂ ರಾಜಾ ಪಾರಕ್ಯಂ ಯಃ ಪ್ರಯಚ್ಛತಿ |
ನ ಸ ಧರ್ಮೇಣ ಧರ್ಮಾತ್ಮನ್ ಯುಜ್ಯತೇ ಯಶಸಾಽಪಿ ಚ ॥15॥
ಎಲೈ ಧರ್ಮಾತ್ಮರೇ, ಯಾವ ರಾಜನು ತನ್ನ ಪ್ರಜೆಗಳಿಗೆ ಸೇರಿದ ಧನವನ್ನು ತನ್ನ ಕಾಮಕ್ಕಾಗಿ ಕೊಡುತ್ತಾನೆಯೋ ಅವನಿಗೆ ಧರ್ಮವಾಗಲೀ, ಕೀರ್ತಿಯಾಗಲೀ ಉಂಟಾಗುವುದಿಲ್ಲ.
ಸೋಽಹಂ ಪ್ರತಿಗ್ರಹೀಷ್ಯಾಮಿ ದದಾತ್ವೇತಾಂ ಭವಾನ್ ಮಮ |
ಕುಮಾರೀಂ ದೇವಗರ್ಭಾಭಾಮೇಕಪುತ್ರಭವಾಯ ಮೇ ॥16॥
ನಾನು ಸ್ವೀಕರಿಸುವೆನು. ಒಬ್ಬ ಪುತ್ರನನ್ನು ಪಡೆಯುವ ಸಲುವಾಗಿ ನನಗೆ ದೇವಗರ್ಭದಂತಿರುವ ಈ ಕುಮಾರಿಯನ್ನು ನೀವು ಕೊಡಿ.
ನಾರದಃ
ತಥಾ ತು ಬಹುಕಲ್ಯಾಣಮುಕ್ತವಂತಂ ನರಾಧಿಪಮ್ |

ಉಶೀನರಂ ದ್ವಿಜಶ್ರೇಷ್ಠೋ ಗಾಲವಃ ಪ್ರತ್ಯಪೂಜಯತ್ ॥17॥
ನಾರದ ಆ ರೀತಿಯಲ್ಲಿ ಕನ್ಯೆಯನ್ನು ಉದ್ದೇಶಿಸಿ ಬಹಳ ಕಲ್ಯಾಣವಾದ ಮಾತುಗಳನ್ನು ಆಡಿದ ಉಶೀನರ ರಾಜನನ್ನು ದ್ವಿಜಶ್ರೇಷ್ಠರಾದ ಗಾಲವರು ಪ್ರತಿಯಾಗಿ ಪೂಜಿಸಿದರು.
ಉಶೀನರಂ ಪ್ರತಿಗ್ರಾಹ್ಯ ಗಾಲವಃ ಪ್ರಯಯೌ ವನಮ್ |
ರೇಮೇ ಸ ತಾಂ ಸಮಾಸಾದ್ಯ ಕೃತಪುಣ್ಯ ಇವ ಶ್ರಿಯಮ್ ॥18॥
ಕಂದರೇಷು ಚ ಶೈಲಾನಾಂ ನದೀನಾಂ ನಿರ್ಝರೇಷು ಚ |
ಉದ್ಯಾನೇಷು ವಿಚಿತ್ರೇಷು ವನೇಷೂಪವನೇಷು ಚ ॥19॥
ಹರ್ಮ್ಯೇಷು ರಮಣೀಯೇಷು ಪ್ರಾಸಾದಶಿಖರೇಷು ಚ |
ವಾತಾಯನವಿಮಾನೇಷು ತಥಾ ಗರ್ಭಗೃಹೇಷು ಚ ॥20॥
ಗಾಲವರು ಉಶೀನರನಿಗೆ ಕನ್ಯೆಯನ್ನು ಕೊಟ್ಟು ಕಾಡಿಗೆ ಹೋದರು. ಪುಣ್ಯವನ್ನು ಮಾಡಿದವನು ಸಂಪತ್ತನ್ನು ಪಡೆದಂತೆ ಉಶೀನರನು ಅವಳನ್ನು ಪಡೆದು ಅವಳ ಜೊತೆಯಲ್ಲಿ ಪರ್ವತದ ಕಂದರಗಳಲ್ಲಿಯೂ, ನದಿಗಳ ಪ್ರವಾಹಗಳಲ್ಲಿಯೂ, ವಿಚಿತ್ರವಾದ ಉದ್ಯಾನಗಳಲ್ಲಿಯೂ, ವನೋಪವನಗಳಲ್ಲಿಯೂ, ಸುಂದರವಾದ ಪ್ರಾಸಾದಗಳಲ್ಲಿಯೂ, ಪ್ರಾಸಾದ ಶಿಖರಗಳಲ್ಲಿಯೂ, ಗವಾಕ್ಷಗಳಿದ್ದ ವಿಮಾನಗಳಲ್ಲಿಯೂ, ಅಂತೆಯೇ ಏಕಾಂತಗೃಹಗಳಲ್ಲಿಯೂ ವಿಹರಿಸಿದನು.
ತತೋಽಸ್ಯ ಸಮಯೇ ಜಜ್ಞೇ ಪುತ್ರೋ ಬಾಲರವಿಪ್ರಭಃ |
ಶಿಬಿರ್ನಾಮ್ನಾಽತಿವಿಖ್ಯಾತೋ ಯಃ ಸ ಪಾರ್ಥಿವಸತ್ತಮಃ ॥21॥
ಅನಂತರ ಸೂಕ್ತವಾದ ಸಮಯದಲ್ಲಿ ಬಾಲರವಿಯ ಕಾಂತಿಯನ್ನು ಹೊಂದಿದ ಶಿಬಿ ಎಂಬ ಅತಿವಿಖ್ಯಾತನಾದ ರಾಜಶ್ರೇಷ್ಠನಾದ ಪುತ್ರನು ಜನಿಸಿದನು.
ಉಪಸ್ಥಾಯ ಸ ತಂ ವಿಪ್ರೋ ಗಾಲವಃ ಪ್ರತಿಗೃಹ್ಯ ತಾಮ್ |
ಕನ್ಯಾಂ ಪ್ರಾದಾಚ್ಚ ತಂ ರಾಜ್ಞೇ ದೃಷ್ಟವಾನ್ ವಿನತಾತ್ಮಜಮ್ ॥22॥
ಬ್ರಾಹ್ಮಣರಾದ ಗಾಲವರು ರಾಜನ ಸಮೀಪಕ್ಕೆ ಬಂದು ಕನ್ಯೆಯನ್ನು ಸ್ವೀಕರಿಸಿ ರಾಜನಿಗೆ ಶಿಬಿಯನ್ನು ಕೊಟ್ಟು ಗರುಡನನ್ನು ನೋಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತದಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹದಿನೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನೆಂಟನೆಯ ಅಧ್ಯಾಯ
ವಿಶ್ವಾಮಿತ್ರರಿಗೆ ಗುರುದಕ್ಷಿಣೆಯನ್ನು ಕೊಟ್ಟು ಯಯಾತಿಗೆ
ಮಾಧವಿಯನ್ನು ಹಿಂದಿರುಗಿಸಿ ಗಾಲವರ ವನಗಮನ.
ನಾರದಃ
ಗಾಲವಂ ವೈನತೇಯೋಽಥ ಪ್ರಹಸನ್ನಿದಮಬ್ರವೀತ್ ॥1॥
ದಿಷ್ಟ್ಯಾ ಕೃತಾರ್ಥಂ ಪಶ್ಯಾಮಿ ಭವಂತಮಿಹ ವೈ ದ್ವಿಜ ॥2॥
ನಾರದ ಆಗ ಗರುಡನು ನಗುತ್ತಾ ಗಾಲವರನ್ನು ಕುರಿತು ಎಲೈ ಬ್ರಾಹ್ಮಣರೇ, ದೈವಯೋಗದಿಂದ ಕೃತಾರ್ಥರಾದ ನಿಮ್ಮನ್ನು ಇಲ್ಲಿ ನೋಡುತ್ತಿದ್ದೇನೆ ಎಂದು ಹೇಳಿದನು.
ಗಾಲವಸ್ತು ವಚಃ ಶ್ರುತ್ವಾ ವೈನತೇಯೇನ ಭಾಷಿತಮ್ |
ಚತುರ್ಭಾಗಾವಶಿಷ್ಟಂ ತಮಾಚಖ್ಯೌ ಕಾರ್ಯಮಸ್ಯ ಹಿ ॥3॥
ಗರುಡನ ಮಾತನ್ನು ಕೇಳಿದ ಗಾಲವರು ಅವನನ್ನು ಕುರಿತು ತಾವು ಮಾಡಬೇಕಾದ ಕಾರ್ಯದ ನಾಲ್ಕನೆಯ ಒಂದು ಭಾಗವು ಇನ್ನೂ ಹಾಗೆಯೇ ಉಳಿದಿದೆ ಎಂದು ಹೇಳಿದರು.
ಸುಪರ್ಣಸ್ತ್ವಬ್ರವೀದೇನಂ ಗಾಲವಂ ಪತತಾಂ ವರಃ ॥4॥
ಪ್ರಯತ್ನಸ್ತೇ ನ ಕರ್ತವ್ಯೋ ನೈಷ ಸಂಪತ್ಸ್ಯತೇ ತವ ॥5॥
ಆ ಪಕ್ಷಿಶ್ರೇಷ್ಠನಾದ ಗರುಡನು ಗಾಲವರನ್ನು ಕುರಿತು ನೀವು ಪ್ರಯತ್ನ ಪಡಬೇಡಿ. ಅದು ನಿಮಗೆ ಸಿದ್ಧಿಸುವುದಿಲ್ಲ ಎಂದು ಹೇಳಿದನು.
ಪುರಾ ಹಿ ಕನ್ಯಾಕುಬ್ಜೇ ವೈ ಗಾಧೇಃ ಸತ್ಯವತೀಂ ಸುತಾಮ್ |
ಭಾರ್ಯಾರ್ಥೇ ವರಯನ್ ಕನ್ಯಾಮ್ ಋಚೀಕಸ್ತೇನ ಭಾಷಿತಃ ॥6॥
ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚಂದ್ರವರ್ಚಸಾಮ್ |
ಭಗವನ್ ದೀಯತಾಂ ಮಹ್ಯಂ ಸಹಸ್ರಮಿತಿ ಗಾಲವ ॥7॥
ಎಲೈ ಗಾಲವರೇ, ಹಿಂದೆ ಕನ್ಯಾಕುಬ್ಜದಲ್ಲಿ ಗಾಧಿಯ ಮಗಳಾದ ಸತ್ಯವತಿಯನ್ನು ಪತ್ನಿಯಾಗಿ ಸ್ವೀಕರಿಸಲು ಹೊರಟ ಋಚೀಕರನ್ನು ಕುರಿತು ಗಾಧಿಯು ಎಲೈ ಪೂಜ್ಯರೇ, ಒಂದು ಕಡೆ ಕಪ್ಪು ಕಿವಿ ಇರುವ ಚಂದ್ರಕಾಂತಿಯುಳ್ಳ ಸಹಸ್ರ ಅಶ್ವಗಳನ್ನು ನನಗೆ ಕೊಡಿ ಎಂದು ಕೇಳಿದನು.
ಋಚೀಕಸ್ತು ತಥೇತ್ಯುಕ್ತ್ವಾ ವರುಣಸ್ಯಾಲಯಂ ಗತಃ |

ಅಶ್ವತೀರ್ಥೇ ಹಯಾನ್ ಲಬ್ಧ್ವಾ ದತ್ತವಾನ್ ಪಾರ್ಥಿವಾಯ ವೈ ॥8॥
ಋಚೀಕರು ಹಾಗೆಯೇ ಆಗಲಿ ಎಂದು ಹೇಳಿ ವರುಣನ ಮನೆಗೆ ಹೋದರು. ಅಶ್ವತೀರ್ಥದಲ್ಲಿ ಆ ಅಶ್ವಗಳನ್ನು ಪಡೆದು ರಾಜನಿಗೆ ಅವುಗಳನ್ನು ಕೊಟ್ಟರು.
ಇಷ್ಟ್ವಾ ತೇ ಪುಂಡರೀಕೇಣ ದತ್ತಾ ರಾಜ್ಞಾ ದ್ವಿಜಾತಿಷು |
ತೇಭ್ಯೋ ಮೇ ದ್ವೇ ಶತೇ ಕ್ರೀತ್ವಾ ಪ್ರಾಪ್ತಾಸ್ತೈಃ ಪಾರ್ಥಿವೈಸ್ತದಾ ॥9॥
ರಾಜನಾದ ಗಾಧಿಯು ಪುಂಡರೀಕ ಯಾಗವನ್ನು ಮಾಡಿ ಆ ಅಶ್ವಗಳನ್ನು ದ್ವಿಜರಿಗೆ (ಕ್ಷತ್ರಿಯರಿಗೆ) ದಾನವಾಗಿ ಕೊಟ್ಟನು. ಆ ರಾಜರಿಂದ ನಾನು ಧನವನ್ನು ಕೊಟ್ಟು ಕ್ರಯಮಾಡಿ ಇನ್ನೂರು ಅಶ್ವಗಳನ್ನು ತೆಗೆದುಕೊಂಡೆ.
ಅಪರಾಣ್ಯಪಿ ಚತ್ವಾರಿ ಶತಾನಿ ದ್ವಿಜಸತ್ತಮ |
ನೀಯಮಾನಾನಿ ಸಂತಾರೇ ಹೃತಾನ್ಯಾಸನ್ವಿತಸ್ತತಃ ॥10॥
ಏವಂ ನ ಶಕ್ಯಮಪ್ರಾಪ್ಯಂ ಪ್ರಾಪ್ತುಂ ಗಾಲವ ಕರ್ಹಿಚಿತ್ ॥11॥
ಎಲೈ ದ್ವಿಜಶ್ರೇಷ್ಠರೇ, ಅಲ್ಲದೇ ಇನ್ನೂ ನಾನ್ನೂರು ಕುದುರೆಗಳು ಅವುಗಳನ್ನು ಅಲ್ಲಿಂದ ಇಲ್ಲಿಗೆ ಸಾಗಿಸಲು ಕರೆದುಕೊಂಡು ಹೋಗುವಾಗ ಕದಿಯಲ್ಪಟ್ಟವು. ಆದ್ದರಿಂದ ನೀವು ಉಳಿದ ಇನ್ನೂರು ಕುದುರೆಗಳನ್ನು ಪಡೆಯಲು ಯಾವ ರೀತಿಯಿಂದಲೂ ಸಾಧ್ಯವಿಲ್ಲ.
ಇಮಾಮಶ್ವಶತಾಭ್ಯಾಂ ವೈ ದ್ವಾಭ್ಯಾಂ ತಸ್ಮೈ ನಿವೇದಯ |
ವಿಶ್ವಾಮಿತ್ರಾಯ ಧರ್ಮಾತ್ಮನ್ ಷಡ್ಭಿರಶ್ವಶತೈಃ ಸಹ ॥12॥
ತತೋಽಸಿ ಗತಸಮ್ಮೋಹಃ ಕೃತಕೃತ್ಯೋ ದ್ವಿಜೋತ್ತಮ ॥13॥
ಎಲೈ ಧರ್ಮಾತ್ಮರೇ, ಈ ಮಾಧವಿಯನ್ನು ಇನ್ನೂರು ಕುದುರೆಗಳ ಸಲುವಾಗಿ ವಿಶ್ವಾಮಿತ್ರರಿಗೇ ಕೊಡಿ ಮತ್ತು ಈಗ ಸಂಪಾದಿಸಿರುವ ಆರುನೂರು ಕುದುರೆಗಳನ್ನೂ ಕೊಡಿ. ಎಲೈ ದ್ವಿಜಶ್ರೇಷ್ಠರೇ, ಅದರಿಂದ ನೀವು ಯಾವ ಸಂಮೋಹವಿಲ್ಲದೇ ಕೃತಕೃತ್ಯರಾಗುವಿರಿ.
ನಾರದಃ
ಗಾಲವಸ್ತಂ ತಥೇತ್ಯುಕ್ತ್ವಾ ಸುಪರ್ಣಸಹಿತಸ್ತತಃ |
ಆದಾಯಾಶ್ವಾಂಶ್ಚ ಕನ್ಯಾಂ ಚ ವಿಶ್ವಾಮಿತ್ರಮುಪಾಗಮತ್ ॥14॥
ನಾರದ ಗಾಲವರು ಹಾಗೆಯೇ ಆಗಲಿ ಎಂದು ಹೇಳಿ ಆ ಅಶ್ವಗಳನ್ನೂ ಮತ್ತು ಕನ್ಯೆಯನ್ನೂ ಕರೆದುಕೊಂಡು ಗರುಡನಿಂದ ಸಹಿತರಾಗಿ ವಿಶ್ವಾಮಿತ್ರರ ಸಮೀಪಕ್ಕೆ ಬಂದರು.
ಅಶ್ವಾನಾಂ ಕಾಂಕ್ಷಿತಾರ್ಥಾನಾಂ ಷಡಿಮಾನಿ ಶತಾನಿ ವೈ |
ಶತದ್ವಯೇನ ಕನ್ಯೇಯಂ ಭವತಾ ಪ್ರತಿಗೃಹ್ಯತಾಮ್ ॥15॥
ನೀವು ಅಪೇಕ್ಷಿಸಿದ ಕುದುರೆಗಳಲ್ಲಿ ಇವು ಆರುನೂರು ಕುದುರೆಗಳು. ಉಳಿದ ಎರಡುನೂರು ಕುದುರೆಗಳ ಸಲುವಾಗಿ ಈ ಕನ್ಯೆಯನ್ನು ತಾವು ಸ್ವೀಕರಿಸಿ.
ಅಸ್ಯಾಂ ರಾಜರ್ಷಿಭಿಃ ಪುತ್ರಾ ಜಾತಾ ವೈ ಧಾರ್ಮಿಕಾಸ್ತ್ರಯಃ |
ಚತುರ್ಥಂ ಜನಯತ್ವೇಕಂ ಭವಾನಪಿ ನರೋತ್ತಮಮ್ ॥16॥
ಇವಳಲ್ಲಿ ರಾಜರ್ಷಿಗಳು ಧಾರ್ಮಿಕರಾದ ಮೂರು ಮಕ್ಕಳನ್ನು ಪಡೆದಿದ್ದಾರೆ. ನೀವೂ ಸಹ ನರಶ್ರೇಷ್ಠನಾದ ನಾಲ್ಕನೆಯ ಪುತ್ರನನ್ನು ಪಡೆಯುವವರಾಗಿರಿ.
ಪೂರ್ಣಾನ್ಯೇವಂ ಶತಾನ್ಯಷ್ಟೌ ತುರಗಾಣಾಂ ಭವಂತು ತೇ |
ಭವತೋ ಹ್ಯನೃಣೋ ಭೂತ್ವಾ ತಪಃ ಕುರ್ಯಾಂ ಯಥಾಸುಖಮ್ ॥
ಹೀಗೆ ನಿಮ್ಮ ಎಂಟುನೂರು ಕುದುರೆಗಳು ನಿಮಗೆ ಪೂರ್ಣವಾಗುತ್ತವೆ. ನಾನು ನಿಮ್ಮಿಂದ ಋಣಮುಕ್ತನಾಗಿ ಸುಖವಾಗಿ ತಪಸ್ಸನ್ನು ಮಾಡುವೆನು.
ವಿಶ್ವಾಮಿತ್ರಸ್ತು ತಂ ದೃಷ್ಟ್ವಾ ಗಾಲವಂ ಸಹ ಪಕ್ಷಿಣಾ |
ಕನ್ಯಾಂ ಚ ತಾಂ ವರಾರೋಹಾಮಿದಮಿತ್ಯಬ್ರವೀದ್ ವಚಃ ॥18॥
ವಿಶ್ವಾಮಿತ್ರರು ಗರುಡನಿಂದ ಕೂಡಿದ ಗಾಲವರನ್ನೂ ಆ ಸುಂದರಿಯಾದ ಕನ್ಯೆಯನ್ನೂ ನೋಡಿ ಹೀಗೆ ಮಾತನಾಡಿದರು.
ಕಿಮಿಯಂ ಪೂರ್ವಮೇವೇಹ ನ ದತ್ತಾ ಮಮ ಗಾಲವ |
ಪುತ್ರಾ ಮಮೈವ ಚತ್ವಾರೋ ಭವೇರನ್ ಕುಲಭಾವನಾಃ ॥19॥
ಎಲೈ ಗಾಲವನೇ, ನೀನು ಮೊದಲೇ ಈ ವಿಷಯವನ್ನು ನನಗೆ ಏಕೆ ಹೇಳಲಿಲ್ಲ? ಹೇಳಿದ್ದರೆ ನನಗೇ ಕುಲಭಾವಕರಾದ ನಾಲ್ಕು ಮಕ್ಕಳು ಇರುತ್ತಿದ್ದರು.
ಪ್ರತಿಗೃಹ್ಣಾಮಿ ತೇ ಕನ್ಯಾಮೇಕಪುತ್ರಫಲಾಯ ವೈ |
ಅಶ್ವಾಶ್ಚಾಶ್ರಮಮಾಸಾದ್ಯ ತಿಷ್ಠಂತು ಮಮ ಸರ್ವಶಃ ॥20॥
ಒಬ್ಬ ಪುತ್ರನನ್ನು ಪಡೆಯುವುದಕ್ಕಾಗಿ ನಿನ್ನ ಕನ್ಯೆಯನ್ನು ಸ್ವೀಕರಿಸುತ್ತೇನೆ. ಎಲ್ಲಾ ಅಶ್ವಗಳು ನನ್ನ ಆಶ್ರಮದಲ್ಲಿರಲಿ.
ಸ ತಯಾ ರಮಮಾಣೋಽಥ ವಿಶ್ವಾಮಿತ್ರೋ ಮಹಾದ್ಯುತಿಃ |
ಆತ್ಮಜಂ ಜನಯಾಮಾಸ ಮಾಧವೀಪುತ್ರಮಷ್ಟಕಮ್ ॥21॥
ಮಹರ್ಷಿಗಳಾದ ವಿಶ್ವಾಮಿತ್ರರು ಅವಳ ಜೊತೆಯಲ್ಲಿ ವಿಹರಿಸುತ್ತಾ ಅವಳಲ್ಲಿ ಅಷ್ಟಕನೆಂಬ ತಮ್ಮ ಪುತ್ರನನ್ನು ಪಡೆದರು.
ಜಾತಮಾತ್ರಂ ಸುತಂ ತಂ ಚ ವಿಶ್ವಾಮಿತ್ರೋ ಮಹಾಮುನಿಃ |
ಸಂಯೋಜ್ಯಾರ್ಥೈಸ್ತಥಾ ಧರ್ಮೈರಶ್ವೈಸ್ತೈಃ ಸಮಯೋಜಯತ್ ॥22॥

ಪುತ್ರನು ಹುಟ್ಟಿದ ಕೂಡಲೇ ಮಹಾಮುನಿಗಳಾದ ವಿಶ್ವಾಮಿತ್ರರು ಅವನನ್ನು ಅರ್ಥಗಳಿಂದಲೂ, ಧರ್ಮಗಳಿಂದಲೂ ಮತ್ತು ಆ ಅಶ್ವಗಳಿಂದಲೂ ಸಂಯುಕ್ತನಾಗಿರುವಂತೆ ಮಾಡಿದರು.
ಅಥಾಷ್ಟಕಃ ಪುರಂ ಪ್ರಾಯಾತ್ ತದಾ ಸೋಮಪುರಪ್ರಭಮ್ |
ನಿರ್ಯಾತ್ಯ ಕನ್ಯಾಂ ಶಿಷ್ಯಾಯ ಕೌಶಿಕೋಽಪಿ ವನಂ ಯಯೌ ॥23॥
ಅನಂತರ ಅಷ್ಟಕನು ಇಂದ್ರನ ಪಟ್ಟಣದಂತಿದ್ದ ತನ್ನ ಪಟ್ಟಣಕ್ಕೆ ಹೋದನು. ವಿಶ್ವಾಮಿತ್ರರೂ ಸಹ ಕನ್ಯೆಯನ್ನು ಶಿಷ್ಯನಿಗೆ ಹಿಂದಿರುಗಿಸಿ ಕಾಡಿಗೆ ಹೋದರು.
ಗಾಲವೋಽಪಿ ಸುಪರ್ಣೇನ ಸಹ ನಿರ್ಯಾತ್ಯ ದಕ್ಷಿಣಾಮ್ |
ಮನಸಾಽಭಿಪ್ರಣೀತೇನ ಕನ್ಯಾಮಿದಮುವಾಚ ಹ ॥24॥
ಗಾಲವರೂ ಸಹ ಗರುಡನ ಜೊತೆಯಲ್ಲಿ ಮನಸ್ಸಿನಲ್ಲಿ ಸಂಕಲ್ಪಿಸಿದ್ದ ಗುರುದಕ್ಷಿಣೆಯನ್ನು ಕೊಟ್ಟು ಆ ಕನ್ಯೆಯನ್ನು ಕುರಿತು ಹೀಗೆ ಹೇಳಿದರು.
ಜಾತೋ ದಾನಪತಿಃ ಪುತ್ರಃ ತ್ವಯಾ ಶೂರಸ್ತಥಾಽಪರಃ |
ಸತ್ಯಧರ್ಮರತಶ್ಚಾನ್ಯೋ ಯಜ್ವಾ ಚಾಪಿ ತಥಾಽಪರಃ ॥25॥
ನಿನಗೆ ದಾನಪತಿಯಾದ ಒಬ್ಬ ಪುತ್ರನೂ, ಶೂರನಾದ ಇನ್ನೊಬ್ಬ ಪುತ್ರನೂ, ಸತ್ಯಧರ್ಮರತನಾದ ಇನ್ನೊಬ್ಬ ಪುತ್ರನೂ ಮತ್ತು ಯಾಗವನ್ನು ಮಾಡುವ ಇನ್ನೊಬ್ಬ ಪುತ್ರನೂ ಜನಿಸಿದ್ದಾರೆ.
ತದಾಗಚ್ಛ ವರಾರೋಹೇ ತಾರಿತಸ್ತೇ ಪಿತಾ ಸುತೈಃ |
ಚತ್ವಾರಶ್ಚೈವ ರಾಜಾನಃ ತಥಾಽಹಂ ಚ ಸುಮಧ್ಯಮೇ ॥26॥
ಆದ್ದರಿಂದ ಸುಂದರಿಯೇ ಬಾ, ನಿನ್ನ ಮಕ್ಕಳಿಂದ ನಿನ್ನ ತಂದೆಯು ಸಂಕಟದಿಂದ ದಾಟಿಸಲ್ಪಟ್ಟಿದ್ದಾನೆ. ಹಾಗೆಯೇ ಸುಂದರಿಯೇ, ನಾಲ್ಕುಜನ ರಾಜರೂ ಮತ್ತು ನಾನೂ ಸಹ ಪಾರುಮಾಡಲ್ಪಟ್ಟಿದ್ದೇವೆ.
ವೈಶಂಪಾಯನಃ
ನಾರದಸ್ಯ ತು ತದ್ವಾಕ್ಯಂ ಶ್ರುತ್ವಾ ಸರ್ವೇ ಸಭಾಸದಃ |
ಪೂಜಯಾಮಾಸುರತ್ಯರ್ಥಂ ಸರ್ವಜ್ಞಂ ನಾರದಂ ತದಾ ॥27॥
ವೈಶಂಪಾಯನ ನಾರದರ ಆ ಮಾತುಗಳನ್ನು ಕೇಳಿದ ಎಲ್ಲಾ ಸಭಾಸದರು ಆಗ ಸರ್ವಜ್ಞರಾದ ನಾರದರನ್ನು ಬಹಳವಾಗಿ ಪೂಜಿಸಿದರು.
ನಾರದಃ
ಗಾಲವಸ್ತ್ವಭ್ಯನುಜ್ಞಾಯ ಸುಪರ್ಣಂ ಪನ್ನಗಾಶನಮ್ |
ಪಿತುರ್ನಿರ್ಯಾತ್ಯ ತಾಂ ಕನ್ಯಾಂ ಪ್ರಯಯೌ ವನಮೇವ ಹ ॥28॥
ನಾರದ ಗಾಲವರಾದರೂ ಸರ್ಪಭೋಜನನಾದ ಗರುಡನ ಅನುಮತಿಯನ್ನು ಪಡೆದು, ಆ ಕನ್ಯೆಯನ್ನು ತಂದೆಯಾದ ಯಯಾತಿಗೆ ಹಿಂದಿರುಗಿಸಿ ಕಾಡಿಗೇ ಹೊರಟು ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಾದಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕೋನಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹದಿನೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹತ್ತೊಂಬತ್ತನೆಯ ಅಧ್ಯಾಯ
ಸ್ವಯಂವರದಲ್ಲಿ ಎಲ್ಲ ವರರನ್ನೂ ಮೀರಿ ಮಾಧವಿಯಿಂದ
ವನದ ವರಣ, ತಪೋನುಷ್ಠಾನ.
ಸ್ವರ್ಗಸ್ಥನಾದ ಯಯಾತಿಯಿಂದ ಋಷಿಗಳ ಅವಮಾನ.
ನಾರದಃ
ಸ ತು ರಾಜಾ ಪುನಸ್ತಸ್ಯಾಃ ಕರ್ತುಕಾಮಃ ಸ್ವಯಂವರಮ್ |
ಉಪಗಮ್ಯಾಶ್ರಮಪದಂ ಗಂಗಾಯಾಮುನಸಂಗಮೇ ॥1॥
ಗೃಹೀತಮಾಲ್ಯದಾಮಾಂ ತಾಂ ರಥಮಾರೋಪ್ಯ ಮಾಧವೀಮ್ |
ಪುರುರ್ಯದುಶ್ಚ ಭಗಿನೀಮ್ ಆಶ್ರಮೇ ಪರ್ಯಧಾವತಾಮ್ ॥2॥
ನಾರದ ಆ ರಾಜನು ಪುನಃ ಅವಳ ಸ್ವಯಂವರವನ್ನು ಮಾಡಲು ಉದ್ದೇಶಿಸಿ ಗಂಗಾ-ಯಮುನಾ ಸಂಗಮದಲ್ಲಿ ಒಂದು ಆಶ್ರಮಕ್ಕೆ ಬಂದು ಸ್ವಯಂವರ ಮಾಲೆಯನ್ನು ಹಿಡಿದಿದ್ದ ಆ ಮಾಧವಿಯನ್ನು ರಥದಲ್ಲಿ ಕೂಡಿಸಿದನು. ಯಯಾತಿಯ ಮಕ್ಕಳಾದ ಪುರು ಮತ್ತು ಯದು ಇವರು ತಮ್ಮ ಸಹೋದರಿಯನ್ನು ಆಶ್ರಮದಲ್ಲಿ ತಿರುಗಾಡಿಸಿದರು.
ನಾಗಯಕ್ಷಮನುಷ್ಯಾಣಾಂ ಪತತ್ರಿಮೃಗಪಕ್ಷಿಣಾಮ್ |
ಶೈಲದ್ರುಮವನೌಕಾನಾಮಾಸೀತ್ ತತ್ರ ಸಮಾಗಮಃ ॥3॥
ನಾಗಯಕ್ಷಮನುಷ್ಯರು, ಮೃಗಪಕ್ಷಿಗಳು, ಶೈಲದ್ರುಮಗಳು, ವನವಾಸಿಗಳು ಎಲ್ಲರೂ ಅಲ್ಲಿ ನೆರೆದಿದ್ದರು.
ನಾನಾಪುರುಷದೇಶ್ಯಾನಾಮೀಶ್ವರೈಶ್ಚ ಸಮಾಕುಲಮ್ |

ಋಷಿಭಿಶ್ಚ ಮಹಾಭಾಗ್ಯೈಃ ಸಮಂತಾದಾವೃತಂ ವನಮ್ ॥4॥
ಅನೇಕ ದೇಶದ ರಾಜರೂ, ಮಹಾನುಭಾವರಾದ ಋಷಿಗಳೂ ಆ ವನದಲ್ಲಿ ಎಲ್ಲ ಕಡೆಗಳಲ್ಲಿಯೂ ತುಂಬಿಹೋಗಿದ್ದರು.
ನಿರ್ದಿಶ್ಯಮಾನೇಷು ತು ಸಾ ವರೇಷು ವರವರ್ಣಿನೀ |
ವರಾನುತ್ಕ್ರಮ್ಯ ಸರ್ವಾಂಸ್ತಾನ್ ವರಂ ವೃತವತೀ ವನಮ್ ॥5॥
ವರರ ಹೆಸರುಗಳನ್ನು ಹೇಳುತ್ತಿರಲು ಸುಂದರಿಯಾದ ಅವಳು ಬಂದಿದ್ದ ವರರೆಲ್ಲರನ್ನೂ ತಿರಸ್ಕರಿಸಿ ವನವನ್ನೇ ತನ್ನ ಪತಿಯಾಗಿ ವರಿಸಿದಳು.
ಅವತೀರ್ಯ ರಥಾತ್ ಕನ್ಯಾ ನಮಸ್ಕೃತ್ಯ ಚ ಬಂಧುಷು |
ಉಪಗಮ್ಯ ವನಂ ಪುಣ್ಯಂ ತಪಸ್ತೇಪೇ ಯಯಾತಿಜಾ ॥6॥
ಯಯಾತಿಯ ಮಗಳಾದ ಆ ಕನ್ಯೆಯು ರಥದಿಂದ ಇಳಿದು ಬಂಧುಗಳಿಗೆ ನಮಸ್ಕರಿಸಿ ಪವಿತ್ರವಾದ ವನವನ್ನು ಸೇರಿ ತಪಸ್ಸನ್ನು ಮಾಡಿದಳು.
ಉಪವಾಸೈಶ್ಚ ವಿವಿಧೈಃ ದೀಕ್ಷಾಭಿರ್ನಿಯಮೈಸ್ತಥಾ |
ಆತ್ಮನೋ ಲಘುತಾಂ ಕೃತ್ವಾ ಬಭೂವ ಮೃಗಚಾರಿಣೀ ॥7॥
ವಿವಿಧವಾದ ಉಪವಾಸಗಳಿಂದಲೂ, ದೀಕ್ಷೆಗಳಿಂದಲೂ ಮತ್ತು ನಿಯಮಗಳಿಂದಲೂ ಶರೀರವನ್ನು ಕೃಶವನ್ನಾಗಿ ಮಾಡಿ ಅವಳು ಮೃಗಚಾರಿಣಿಯಾದಳು.
ವೈಡೂರ್ಯಾಂಕುರಕಲ್ಪಾನಿ ಮೃದೂನಿ ಹರಿತಾನಿ ಚ |
ಚರಂತೀ ಶ್ಲಕ್ಷ್ಣಶಷ್ಪಾಣಿ ತಿಕ್ತಾನಿ ಮಧುರಾಣಿ ಚ ॥8॥
ಸ್ರವಂತೀನಾಂ ಚ ಪುಣ್ಯಾನಾಂ ಸುರಸಾನಿ ಶುಚೀನಿ ಚ |
ಪಿಬಂತೀ ವಾರಿಮುಖ್ಯಾನಿ ಶೀತಾನಿ ವಿಮಲಾನಿ ಚ ॥9॥
ವನೇಷ್ವಮೃತಕಲ್ಪೇಷು ಸಿಂಹವಿಪ್ರೋಷಿತೇಷು ಚ |
ದವಾಗ್ನಿವಿಪ್ರಮುಕ್ತೇಷು ಶೂನ್ಯೇಷು ಗಹನೇಷು ಚ ॥10॥
ಚರಂತೀ ಹರಿಣೈಃ ಸಾರ್ಧಂ ಮೃಗೀವ ವನಚಾರಿಣೀ |
ಚಚಾರ ವಿಪುಲಂ ಧರ್ಮಂ ಬ್ರಹ್ಮಚರ್ಯೇಣ ಸಂವೃತಾ ॥11॥
ವೈಡೂರ್ಯದ ಕುಡಿಗಳಂತಿರುವ ಮೃದುವಾದ, ಕಹಿಯಾದ ಮತ್ತು ಸಿಹಿಯಾದ, ಹಸಿರು ಬಣ್ಣದ ಎಳೆಯ ಹುಲ್ಲುಗರಿಕೆಗಳನ್ನು ತಿನ್ನುತ್ತಾ ಪುಣ್ಯನದಿಗಳ ಶುಚಿಯಾದ, ಮಧುರವಾದ, ಸ್ವಚ್ಛವಾದ, ಶೀತವಾದ ಶ್ರೇಷ್ಠಜಲಗಳನ್ನು ಪಾನ ಮಾಡುತ್ತಾ; ದಾವಾಗ್ನಿ ಇಲ್ಲದಿರುವ ಏಕಾಂತವಾದ ಮತ್ತು ದಟ್ಟವಾದ ಅಮೃತದಂತಿರುವ ಕಂದ-ಮೂಲ ಫಲಗಳನ್ನು ಕೊಡುವ, ಸಿಂಹಾದಿಗಳು ಇಲ್ಲದಿರುವ ಕಾಡಿನಲ್ಲಿ ಜಿಂಕೆಗಳ ಜೊತೆಯಲ್ಲಿ ಜಿಂಕೆಯಂತೆಯೇ ಸಂಚರಿಸುತ್ತಾ ಬ್ರಹ್ಮಚರ್ಯದಿಂದ ಕೂಡಿದವಳಾಗಿ ವಿಪುಲವಾದ ಧರ್ಮವನ್ನು ಆಚರಿಸಿದಳು.
ಯಯಾತಿರಪಿ ಪೂರ್ವೇಷಾಂ ರಾಜ್ಞಾಂ ವೃತ್ತಮನುಷ್ಠಿತಃ |
ಬಹುವರ್ಷಸಾಹಸ್ರಾಯುಃ ಯುಯುಜೇ ಕಾಲಧರ್ಮಣಾ ॥12॥
ಯಯಾತಿಯೂ ಕೂಡ ಹಿಂದಿನ ರಾಜರ ನಡತೆಯನ್ನೇ ಅನುಸರಿಸುವವನಾಗಿ ಅನೇಕ ಸಹಸ್ರವರ್ಷಗಳ ಕಾಲ ಆಯುಸ್ಸನ್ನು ಹೊಂದಿ ಕೊನೆಗೆ ಕಾಲವಶನಾದನು.
ಪೂರುರ್ಯದುಶ್ಚ ದ್ವೌ ವಂಶೇ ವರ್ಧಮಾನೌ ನರೋತ್ತಮೌ |
ತಾಭ್ಯಾಂ ಪ್ರತಿಷ್ಠಿತೋ ಲೋಕೋ ಪರಲೋಕೇ ಚ ನಾಹುಷಃ ॥13॥
ಪೂರು ಮತ್ತು ಯದು ಇಬ್ಬರು ಆ ವಂಶದಲ್ಲಿ ಪ್ರವರ್ಧಮಾನವಾದ ರಾಜರು. ಅವರಿಂದ ಈ ಲೋಕವೂ ಪ್ರತಿಷ್ಠಿತವಾಯಿತು ಮತ್ತು ಪರಲೋಕದಲ್ಲಿ ಯಯಾತಿಯೂ ಪ್ರತಿಷ್ಠಿತನಾದನು.
ನ ಹೀಯತೇ ನರಪತಿಃ ಯಯಾತಿಃ ಸ್ವರ್ಗಮಾಸ್ಥಿತಃ |
ಮಹರ್ಷಿಕಲ್ಪೋ ನೃಪತಿಃ ಸ್ವರ್ಗಾಗ್ರ್ಯಫಲಭುಗ್ ವಿಭುಃ ॥14॥
ಸ್ವರ್ಗದ ಶ್ರೇಷ್ಠ ಫಲಗಳನ್ನು ಅನುಭವಿಸಿ ಮಹರ್ಷಿಸದೃಶನಾದ, ವಿಭುವಾದ, ರಾಜನಾದ ಯಯಾತಿಯು ಸ್ವರ್ಗದಲ್ಲಿ ಇರುವವನಾಗಿ ಯಾವ ಭೋಗದಿಂದಲೂ ರಹಿತನಾಗಲಿಲ್ಲ.
ಅಥ ವರ್ಷಸಹಸ್ರಾಂತೇ ಕಾಲೇ ಬಹುಗುಣೇ ಗತೇ |
ರಾಜರ್ಷಿಷು ನಿಷಣ್ಣೇಷು ಮಹೀಯಸ್ಸು ಮಹರ್ಧಿಷು ॥15॥
ಅವಮೇನೇ ನರಾನ್ ಸರ್ವಾನ್ ದೇವಾನ್ ಋಷಿಗಣಾಂಸ್ತಥಾ |
ಯಯಾತಿರ್ಮೂಢವಿಜ್ಞಾನೋ ವಿಸ್ಮಯಾವಿಷ್ಟಚೇತನಃ ॥16॥
ಅನಂತರ ಹೀಗೆ ಬಹುಗುಣವುಳ್ಳ ಒಂದು ಸಹಸ್ರ ವರ್ಷದ ಕಾಲವು ಕಳೆಯುತ್ತಿರಲು ಮಹಾಸಂಪತ್ತನ್ನು ಹೊಂದಿದ ಮಹಾನುಭಾವರಾದ ರಾಜರ್ಷಿಗಳು ಕುಳಿತಿರುವಾಗ ಮೌಢ್ಯದಿಂದ ಮತ್ತು ವಿಸ್ಮಯಾವಿಷ್ಟ ಮನಸ್ಸಿನಿಂದ ಕೂಡಿದ ಯಯಾತಿಯು ಎಲ್ಲ ಮನುಷ್ಯರನ್ನೂ, ಋಷಿಗಳನ್ನೂ ಮತ್ತು ದೇವತೆಗಳನ್ನೂ ಅವಮಾನಗೊಳಿಸಿದನು.
ತತಸ್ತಂ ಬುಬುಧೇ ದೇವಃ ಶಕ್ರೋ ಬಲನಿಷೂದನಃ |
ತೇ ಚ ರಾಜರ್ಷಯಃ ಸರ್ವೇ ಧಿಗ್ಧಿಗಿತ್ಯೇವಮಬ್ರುವನ್ ॥17॥
ಆಗ ಬಲನಿಷೂದನನಾದ ದೇವೇಂದ್ರನು ಅದನ್ನು ತಿಳಿದನು. ಆ ರಾಜರ್ಷಿಗಳೆಲ್ಲರೂ ಅವನಿಗೆ ಧಿಕ್ಕಾರವನ್ನು ಮಾಡಿದರು.
ವಿಚಾರಶ್ಚ ಸಮುತ್ಪನ್ನೋ ನಿರೀಕ್ಷ್ಯ ನಹುಷಾತ್ಮಜಮ್ ॥18॥

ಕೋನ್ವಯಂ ಕಸ್ಯ ವಾ ರಾಜ್ಞಃ ಕಥಂ ವಾ ಸ್ವರ್ಗಮಾಗತಃ |
ಕರ್ಮಣಾ ಕೇನ ಸಿದ್ಧೋಽಯಂ ಕ್ವ ವಾಽನೇನ ತಪಶ್ಚಿತಮ್ ॥19॥
ನಹುಷ ಪುತ್ರನಾದ ಯಯಾತಿಯನ್ನು ನೋಡಿ ಇವನು ಯಾರು? ಯಾವ ರಾಜನ ಪುತ್ರ? ಹೇಗೆ ಸ್ವರ್ಗಕ್ಕೆ ಬಂದ? ಯಾವ ಕರ್ಮದಿಂದ ಸಿದ್ಧಿಯನ್ನು ಪಡೆದಿದ್ದಾನೆ? ಇವನು ಎಲ್ಲಿ ತಪಸ್ಸನ್ನು ಮಾಡಿದನು? ಎಂಬ ವಿಚಾರವು ಉಂಟಾಯಿತು.
ಏವಂ ವಿಚಾರಯಂತಸ್ತೇ ರಾಜಾನಂ ಸ್ವರ್ಗವಾಸಿನಃ |
ದೃಷ್ಟ್ವಾ ಪಪ್ರಚ್ಛುರನ್ಯೋನ್ಯಂ ಯಯಾತಿಂ ನೃಪತಿಂ ಪ್ರತಿ ॥20॥
ಹೀಗೆ ಸ್ವರ್ಗವಾಸಿಗಳು ಯಯಾತಿಯನ್ನು ನೋಡಿ, ರಾಜನ ವಿಷಯದಲ್ಲಿ ವಿಚಾರವನ್ನು ಮಾಡುತ್ತಾ ಪರಸ್ಪರವಾಗಿ ಪ್ರಶ್ನೆಯನ್ನು ಮಾಡಿದರು.
ವಿಮಾನಪಾಲಾಃ ಶತಶಃ ಸ್ವರ್ಗದ್ವಾರಾಭಿರಕ್ಷಿಣಃ |
ಪೃಷ್ಟಾ ಆಸನಪಾಲಾಶ್ಚ ನ ಜಾನೀಮ ಇತಿ ಬ್ರುವನ್ ॥21॥
ವಿಮಾನಪಾಲಕರನ್ನೂ ಸ್ವರ್ಗದ್ವಾರವನ್ನು ಕಾಯುವ ನೂರಾರು ದೂತರನ್ನೂ, ಆಸನವನ್ನು ಪಾಲನೆ ಮಾಡುವವರನ್ನೂ ಕೇಳಿದಾಗ ನಮಗೆ ತಿಳಿದಿಲ್ಲ ಎಂದು ಹೇಳಿದರು.
ಸರ್ವೇ ತೇ ಹ್ಯಾವೃತಜ್ಞಾನಾ ನಾಭ್ಯಜಾನಂತ ತಂ ನೃಪಮ್ |
ಸ ಮುಹೂರ್ತಾದಥ ನೃಪೋ ಹತೌಜಾಶ್ಚಾಭವತ್ ತದಾ ॥22॥
ಅವರೆಲ್ಲರ ಜ್ಞಾನವು ಆವೃತವಾಗಿರಲು ಅವರು ಯಾರೂ ಯಯಾತಿಯನ್ನು ತಿಳಿಯಲಿಲ್ಲ. ಆಗ ರಾಜನಾದ ಯಯಾತಿಯು ಒಂದು ಮುಹೂರ್ತದಲ್ಲಿ ತನ್ನ ಕಾಂತಿ, ಸಾಮರ್ಥ್ಯಗಳನ್ನು ಕಳೆದುಕೊಂಡನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತನೆಯ ಅಧ್ಯಾಯ
ಸ್ವರ್ಗದಿಂದ ಯಯಾತಿಯ ಪತನ. ದೌಹಿತ್ರಪ್ರಭಾವದಿಂದ ಮತ್ತು ಮಾಧವಿಯ ತಪಸ್ಸಿನ ಪ್ರಭಾವದಿಂದ ಪುನಃ ಸ್ವರ್ಗಾರೋಹಣ.
ನಾರದಃ
ಅಥ ಪ್ರಚಲಿತಃ ಸ್ಥಾನಾದ್ ಆಸನಾಚ್ಚ ಪರಿಚ್ಯುತಃ |
ಕಂಪಿತೇನೈವ ಮನಸಾ ಧರ್ಷಿತಃ ಶೋಕವಹ್ನಿನಾ ॥1॥
ನಾರದ ಆಗ ಯಯಾತಿಯು ತನ್ನ ಆಸನದಿಂದ ಚ್ಯುತನಾಗಿ ತನ್ನ ಸ್ಥಾನದಿಂದ ಭ್ರಷ್ಟನಾಗಿ ನಡುಗುತ್ತಿರುವ ಮನಸ್ಸಿನಿಂದ ಶೋಕಾಗ್ನಿಯಿಂದ ಪೀಡಿಸಲ್ಪಟ್ಟು ಅವಮಾನವನ್ನು ಹೊಂದಿದನು.
ಮ್ಲಾನಸ್ರಗ್ ಭ್ರಷ್ಟವಿಜ್ಞಾನಃ ಪ್ರಭ್ರಷ್ಟಮುಕುಟಾಂಗದಃ |
ವಿಘೂರ್ಣಸ್ರಸ್ತಸರ್ವಾಂಗಃ ಪ್ರಭ್ರಷ್ಟಾಭರಣಾಂಬರಃ ॥2॥
ಅದೃಶ್ಯಮಾನಸ್ತಾನ್ ಪಶ್ಯನ್ ಅಪಶ್ಯಂಶ್ಚ ಪುನಃ ಪುನಃ |
ಶೂನ್ಯಃ ಶೂನ್ಯೇನ ಮನಸಾ ಪ್ರಾಪತತ್ ಸ ಮಹೀತಳಮ್ ॥3॥
ಬಾಡಿದ ಮಾಲೆಯುಳ್ಳವನಾಗಿ, ತನ್ನ ಜ್ಞಾನವನ್ನು ಕಳೆದುಕೊಂಡು, ತನ್ನ ಕಿರೀಟ ಅಂಗದಗಳನ್ನು ಕಳೆದುಕೊಂಡು, ಶಿಥಿಲವಾದ ಎಲ್ಲಾ ಅವಯವವುಳ್ಳವನಾಗಿ, ತನ್ನ ವಸಕತ್ರಭರಣಗಳನ್ನೂ ಕಳೆದುಕೊಂಡು, ಸ್ವರ್ಗವಾಸಿಗಳನ್ನು ಒಮ್ಮೆ ನೋಡುತ್ತಾ, ಒಮ್ಮೊಮ್ಮೆ ನೋಡಲು ಸಾಧ್ಯವಾಗದೆ, ಅವರ ದೃಷ್ಟಿಗೆ ಗೋಚರನಾಗದೆ ಎಲ್ಲವನ್ನೂ ಕಳೆದುಕೊಂಡು ಶೂನ್ಯವಾದ ಮನಸ್ಸಿನಿಂದ ಭೂಮಿಯ ಮೇಲೆ ಬಿದ್ದನು.
ಕಿಂ ಮಯಾ ಮನಸಾ ಧ್ಯಾತಮಶುಭಂ ಸ್ವರ್ಗದೂಷಣಮ್ |
ಯೇನಾಹಂ ಚಾಲಿತಃ ಸ್ಥಾನಾದಿತಿ ರಾಜಾ ವ್ಯಚಿಂತಯತ್ ॥4॥
ನಾನು ಸ್ವರ್ಗದಲ್ಲಿದ್ದ ನನ್ನ ಸ್ಥಾನದಿಂದ ಬೀಳುವಂತಹ ಸ್ವರ್ಗದೂಷಣವಾದ ಯಾವ ಕೆಟ್ಟ ವಿಷಯವನ್ನು ಮನಸ್ಸಿನಲ್ಲಿ ಯೋಚಿಸಿದೆ ಎಂದು ಆ ರಾಜನು ಚಿಂತಿಸಿದನು.
ತೇ ತು ತತ್ರೈವ ರಾಜಾನಃ ಸಿದ್ಧಾಶ್ಚಾಪ್ಸರಸಸ್ತಥಾ |
ಅಪಶ್ಯಂತ ನಿರಾಲಂಬಂ ಯಯಾತಿಂ ಸ್ವರ್ಗತಶ್ಚ್ಯುತಮ್ ॥5॥
ಅಲ್ಲಿದ್ದ ರಾಜರೂ, ಸಿದ್ಧರೂ ಮತ್ತು ಅಪ್ಸರೆಯರೂ ಯಾವ ಆಶ್ರಯವೂ ಇಲ್ಲದೆ ಸ್ವರ್ಗವನ್ನು ಕಳೆದುಕೊಂಡ ಯಯಾತಿಯನ್ನು ನೋಡಿದರು.
ಅಥೈತ್ಯ ಪುರುಷಃ ಕಶ್ಚಿತ್ ಕ್ಷೀಣಪುಣ್ಯಂ ನಿಪಾತಿತಮ್ |
ಯಯಾತಿಮಬ್ರವೀದ್ ರಾಜನ್ ದೇವರಾಜಸ್ಯ ಶಾಸನಾತ್ ॥6॥
ಅತೀವ ಮದಮತ್ತಸ್ತ್ವಂ ನ ಕಂಚಿನ್ನಾವಮನ್ಯಸೇ |
ಮಾನೇನ ಭ್ರಷ್ಟಃ ಸ್ವರ್ಗಸ್ತೇ ನಾರ್ಹಸ್ತ್ವಂ ಪಾರ್ಥಿವಾತ್ಮಜ ॥7॥

ನ ಚ ಪ್ರಜ್ಞಾಯಸೇ ಗಚ್ಛ ಪತಸ್ವೇತಿ ತಮಬ್ರವೀತ್ ॥8॥
ಆಗ ಒಬ್ಬ ಪುರುಷನು ತನ್ನ ಪುಣ್ಯವನ್ನು ಕಳೆದುಕೊಂಡು ಕೆಳಗೆ ಬೀಳುವ ಯಯಾತಿಯನ್ನು ಸಮೀಪಿಸಿ ದೇವೇಂದ್ರನ ಅಪ್ಪಣೆಯಂತೆ ಅವನನ್ನು ಕುರಿತು ಎಲೈ ರಾಜನೇ, ನೀನು ಬಹಳ ಮದಮತ್ತನಾಗಿದ್ದೀಯೆ. ಯಾವೊಬ್ಬರನ್ನು ಅವಮಾನ ಮಾಡುವುದಿಲ್ಲ ಎಂದು ಇಲ್ಲ. ನಿನ್ನ ಅಹಂಕಾರದಿಂದ ನೀನು ಸ್ವರ್ಗದಿಂದ ಭ್ರಷ್ಟನಾಗಿದ್ದೀಯೆ. ಎಲೈ ರಾಜಪುತ್ರನೇ, ನೀನು ಸ್ವರ್ಗದಲ್ಲಿರಲು ಯೋಗ್ಯನಲ್ಲ. ಇಲ್ಲಿ ಯಾರೂ ನಿನ್ನನ್ನು ಗುರುತಿಸುವುದಿಲ್ಲ. ನೀನು ಹೋಗಿ ಭೂಮಿಯಲ್ಲಿ ಬೀಳು ಎಂದು ಹೇಳಿದನು.
ಪತೇಯಂ ಸತ್ಸ್ವಿತಿ ವಚಃ ತ್ರಿರುಕ್ತ್ವಾ ನಹುಷಾತ್ಮಜಃ |
ಪತಿಷ್ಯಂಶ್ಚಿಂತಯಾಮಾಸ ಗತಿಂ ಗತಿಮತಾಂ ವರಃ ॥9॥
ನಾನು ಸಜ್ಜನರ ಮಧ್ಯದಲ್ಲಿ ಬಿದ್ದೇನು ಎಂದು ಮೂರು ಬಾರಿ ಹೇಳಿದ ನಹುಷ ಪುತ್ರನಾದ ಯಯಾತಿಯು ಹಾಗೆ ಬೀಳುತ್ತಾ ಗತಿಯನ್ನು ಹೊಂದಿದವರಲ್ಲಿ ಶ್ರೇಷ್ಠನಾದ ಅವನು ತನ್ನ ಮುಂದಿನ ಗತಿಯನ್ನು ಚಿಂತಿಸಿದನು.
ಏತಸ್ಮಿನ್ನೇವ ಕಾಲೇ ತು ನೈಮಿಶೇ ಪಾರ್ಥಿವರ್ಷಭಾನ್ |
ಚತುರೋಽಪಶ್ಯತ ನೃಪಃ ತೇಷಾಂ ಮಧ್ಯೇ ಪಪಾತ ಸಃ ॥10॥
ಅದೇ ಕಾಲದಲ್ಲಿ ನೈಮಿಶಾರಣ್ಯದಲ್ಲಿ ನಾಲ್ಕುಜನ ರಾಜಶ್ರೇಷ್ಠರನ್ನು ನೋಡಿ ರಾಜನು ಅವರ ಮಧ್ಯದಲ್ಲಿ ಬಿದ್ದನು.
ಪ್ರತರ್ದನೋ ವಸುಮನಾಃ ಶಿಬಿರೌಶೀನರೋಽಷ್ಟಕಃ |
ವಾಜಪೇಯೇನ ಯಜ್ಞೇನ ತರ್ಪಯಂತಿ ಸುರೇಶ್ವರಮ್ ॥11॥
ಪ್ರತರ್ದನ, ವಸುಮನ, ಉಶೀನರನ ಮಗನಾದ ಶಿಬಿ ಮತ್ತು ಅಷ್ಟಕ ಇವರು ವಾಜಪೇಯ ಯಾಗದಿಂದ ದೇವೇಂದ್ರನನ್ನು ಸಂತೋಷಪಡಿಸುತ್ತಿದ್ದರು.
ತೇಷಾಮಧ್ವರಜಂ ಧೂಮಂ ಸ್ವರ್ಗದ್ವಾರಮುಪಸ್ಥಿತಮ್ |
ಯಯಾತಿರುಪಜಿಘ್ರನ್ ವೈ ನಿಪಪಾತ ಮಹೀಂ ಪ್ರತಿ ॥12॥
ಭೂಮೌ ಸ್ವರ್ಗೇ ಚ ಸಂಬದ್ಧಾಂ ನದೀಂ ಧೂಮಮಯೀಮಿವ |
ಗಂಗಾಂ ಗಾಮಿವ ಗಚ್ಛಂತೀಮಾಲಂಬ್ಯ ಜಗತೀಪತಿಃ ॥13॥
ಅವರ ಯಜ್ಞದಿಂದ ಉಂಟಾದ ಸ್ವರ್ಗದ್ವಾರದವರೆಗೆ ಹಬ್ಬಿದ ಹೋಮಧೂಮವು ಭೂಮಿಗೂ ಸ್ವರ್ಗಕ್ಕೂ ಸಂಬದ್ಧವಾಗಿ ಧೂಮಮಯವಾದ ನದಿಯಂತಿದ್ದಿತು. ಯಯಾತಿಯು ಆ ಧೂಮವನ್ನು ಆಘ್ರಾಣಿಸುತ್ತಾ ಸ್ವರ್ಗದಿಂದ ಭೂಮಿಗೆ ಹೋಗುವ ಗಂಗೆಯಂತಿರುವ ಆ ನದಿಯನ್ನು ಹಿಡಿದು ಭೂಮಿಯಲ್ಲಿ ಬಿದ್ದನು.
ಶ್ರೀಮತ್ಸ್ವವಭೃಥಾಗ್ರ್ಯೇಷು ಚತುರ್ಷು ಪ್ರಿಯಬಂಧುಷು |
ಮಧ್ಯೇ ನಿಪತಿತೋ ರಾಜಾ ಲೋಕಪಾಲೋಪಮೇಷು ಸಃ ॥14॥
ಕಾಂತಿಯುಕ್ತರಾದ ಶ್ರೇಷ್ಠವಾದ, ಅವಭೃಥಸ್ನಾನವನ್ನು ಮಾಡಿದ, ಲೋಕಪಾಲಕನನ್ನು ಹೋಲುವ, ಪ್ರಿಯಬಂಧುಗಳಾದ ನಾಲ್ವರ ಮಧ್ಯದಲ್ಲಿ ರಾಜನು ಬಿದ್ದನು.
ಚತುರ್ಷು ಹುತಕಲ್ಪೇಷು ರಾಜಸಿಂಹಮಹಾಗ್ನಿಷು |
ಪಪಾತ ಮಧ್ಯೇ ರಾಜರ್ಷಿಃ ಯಯಾತಿಃ ಪುಣ್ಯಸಂಕ್ಷಯೇ ॥15॥
ಹುತಪ್ರಾಯವಾದ ನಾಲ್ಕು ರಾಜಸಿಂಹಾಗ್ನಿಗಳ ಮಧ್ಯದಲ್ಲಿ ರಾಜರ್ಷಿಯಾದ ಯಯಾತಿಯು ಪುಣ್ಯವನ್ನು ಕಳೆದುಕೊಂಡು ಬಿದ್ದನು.
ತಮಾಹುಃ ಪಾರ್ಥಿವಾಃ ಸರ್ವೇ ದೀಪ್ಯಮಾನಮಿವ ಶ್ರಿಯಾ ॥16॥
ಕೋ ಭವಾನ್ ಕಸ್ಯ ವಾ ಬಂಧುಃ ದೇಶಸ್ಯ ನಗರಸ್ಯ ವಾ |
ಯಕ್ಷೋ ವಾಽಪ್ಯಥವಾ ದೇವೋ ಗಂಧರ್ವೋ ರಾಕ್ಷಸೋಽಪಿ ವಾ ॥
ನ ಹಿ ಮಾನುಷರೂಪೋಽಸಿ ಕೋ ವಾಽರ್ಥಃ ಕಾಂಕ್ಷಿತಸ್ತ್ವಯಾ ॥18॥
ಕಾಂತಿಯಿಂದ ಬೆಳಗುತ್ತಿದ್ದ ಅವನನ್ನು ಕಂಡು ಆ ರಾಜರು ನೀನು ಯಾರು? ಯಾರ ಬಂಧು? ಯಾವ ದೇಶ ಅಥವಾ ನಗರಕ್ಕೆ ಸೇರಿದವನು? ನೀನು ಯಕ್ಷನೋ? ಅಥವಾ ದೇವತೆಯೋ? ಅಥವಾ ಗಂಧರ್ವನೋ? ಅಥವಾ ರಾಕ್ಷಸನೋ? ನೀನು ಮನುಷ್ಯರ ರೂಪವನ್ನು ಹೊಂದಿಲ್ಲ. ನೀನು ಏನನ್ನು ಬಯಸುತ್ತೀಯೇ? ಎಂದು ಕೇಳಿದರು.
ಯಯಾತಿಃ
ಯಯಾತಿರಸ್ಮಿ ರಾಜರ್ಷಿಃ ಕ್ಷೀಣಪುಣ್ಯಶ್ಚ್ಯುತೋ ದಿವಃ |
ಪತೇಯಂ ಸತ್ಸ್ವಿತಿ ಧ್ಯಾಯನ್ ಭವತ್ಸು ಪತಿತಸ್ತತಃ ॥19॥
ಯಯಾತಿ ನಾನು ರಾಜರ್ಷಿಯಾದ ಯಯಾತಿ. ಪುಣ್ಯವನ್ನು ಕಳೆದುಕೊಂಡು ಸ್ವರ್ಗದಿಂದ ಬಿದ್ದಿದ್ದೇನೆ. ಸಜ್ಜನರ ಮಧ್ಯದಲ್ಲಿ ಬೀಳಬೇಕು ಎಂದು ಯೋಚಿಸುತ್ತಾ ನಿಮ್ಮ ಮಧ್ಯದಲ್ಲಿ ಬಿದ್ದಿದ್ದೇನೆ.
ರಾಜಾನಃ
ಸತ್ಯಮೇತದ್ ಭವತು ತೇ ಕಾಂಕ್ಷಿತಂ ಪುರುಷರ್ಷಭ |
ಸರ್ವೇಷಾಂ ನಃ ಕ್ರತುಫಲಂ ಧರ್ಮಶ್ಚ ಪ್ರತಿಗೃಹ್ಯತಾಮ್ ॥20॥
ರಾಜರು ಎಲೈ ಪುರುಷಶ್ರೇಷ್ಠನೇ, ನಿನ್ನ ಆಸೆಯು ಸತ್ಯವಾಗಲಿ. ನಮ್ಮೆಲ್ಲರ ಯಾಗದ ಫಲವಾದ ಪುಣ್ಯವನ್ನೂ ಮತ್ತು ಧರ್ಮವನ್ನೂ ಸ್ವೀಕರಿಸು.
ಯಯಾತಿಃ
ನಾಹಂ ಪ್ರತಿಗ್ರಹಧನೋ ಬ್ರಾಹ್ಮಣಃ ಕ್ಷತ್ರಿಯೋ ಹ್ಯಹಮ್ |
ನ ಚ ಮೇ ಪ್ರವಣಾ ಬುದ್ಧಿಃ ಪರಪುಣ್ಯವಿನಾಶನೇ ॥21॥

ಯಯಾತಿ ನಾನು ಪ್ರತಿಗ್ರಹವನ್ನು ಮಾಡಿ ಧನವನ್ನು ಸಂಪಾದಿಸುವ ಬ್ರಾಹ್ಮಣನಲ್ಲ. ನಾನು ಕ್ಷತ್ರಿಯ. ನನಗೆ ಇನ್ನೊಬ್ಬರ ಪುಣ್ಯವನ್ನು ನಾಶ ಮಾಡುವುದರಲ್ಲಿ ಮನಸ್ಸಿಲ್ಲ.
ನಾರದಃ
ಏತಸ್ಮಿನ್ನೇವ ಕಾಲೇ ತು ಮೃಗಚರ್ಯಾಕ್ರಮಾಗತಾಮ್ |
ಮಾಧವೀಂ ಪ್ರೇಕ್ಷ್ಯ ರಾಜಾನಸ್ತ್ವಭಿವಾದ್ಯೇದಮಬ್ರುವನ್ ॥22॥
ಕಿಮಾಗಮನಕೃತ್ಯಂ ತೇ ಕಿಂ ಕುರ್ಮಃ ಶಾಸನಂ ತವ |
ಆಜ್ಞಾಪ್ಯಾ ಹಿ ವಯಂ ಸರ್ವೇ ತವ ಪುತ್ರಾಸ್ತಪೋಧನೇ ॥23॥
ನಾರದ ಅದೇ ಕಾಲಕ್ಕೆ ಸರಿಯಾಗಿ ಮೃಗಚರ್ಯಾಕ್ರಮದಿಂದ ಅಲ್ಲಿಗೆ ಬಂದ ಮಾಧವಿಯನ್ನು ನೋಡಿ ಆ ರಾಜರು ಅವಳಿಗೆ ನಮಸ್ಕಾರವನ್ನು ಮಾಡಿ ತಪೋಧನಳಾದವಳೇ, ಇಲ್ಲಿಗೆ ನೀನು ಬಂದ ಉದ್ದೇಶವೇನು? ನಿನ್ನ ಯಾವ ಆದೇಶವನ್ನು ನಾವು ನೆರವೇರಿಸೋಣ? ನಾವೆಲ್ಲರೂ ನಿನ್ನ ಮಕ್ಕಳು. ನೀನು ನಮಗೆ ಆಜ್ಞೆಯನ್ನು ಮಾಡು ಎಂದು ಹೇಳಿದರು.
ತೇಷಾಂ ತದ್ ಭಾಷಿತಂ ಶ್ರುತ್ವಾ ಮಾಧವೀ ಪರಯಾ ಮುದಾ |
ಪಿತರಂ ಸಮುಪಾಗಚ್ಛದ್ ಯಯಾತಿಂ ಸಾ ವವಂದ ಚ ॥24॥
ಸ್ಪೃಷ್ಟ್ವಾ ಮೂರ್ಧನಿ ತಾನ್ ಪುತ್ರಾನ್ ತಾಪಸೀ ವಾಕ್ಯಮಬ್ರವೀತ್ ॥
ಅವರ ಆ ಮಾತನ್ನು ಕೇಳಿದ ಮಾಧವಿಯು ಬಹಳ ಸಂತೋಷದಿಂದ ತಂದೆಯಾದ ಯಯಾತಿಯ ಹತ್ತಿರ ಹೋಗಿ ಅವನಿಗೆ ನಮಸ್ಕರಿಸಿದಳು. ತಾಪಸಿಯಾದ ಅವಳು ತನ್ನ ಮಕ್ಕಳ ಶಿರಸ್ಸನ್ನು ಮುಟ್ಟಿ ಹೀಗೆ ಮಾತನಾಡಿದಳು.
ದೌಹಿತ್ರಾಸ್ತವ ರಾಜೇಂದ್ರ ಮಮ ಪುತ್ರಾ ನ ತೇ ಪರಾಃ |
ಇಮೇ ತ್ವಾಂ ತಾರಯಿಷ್ಯಂತಿ ದೃಷ್ಟಮೇತತ್ ಪುರಾತನಮ್ ॥26॥
ಎಲೈ ರಾಜೇಂದ್ರನೇ, ಇವರು ನಿನ್ನ ದೌಹಿತ್ರರು. ನನ್ನ ಮಕ್ಕಳು. ಬೇರೆಯವರಲ್ಲ. ಇವರು ನಿನ್ನನ್ನು ಸಂಕಟದಿಂದ ಪಾರುಮಾಡುವರು. ಇದು ಹಿಂದಿನಿಂದಲೂ ನಡೆದುಕೊಂಡು ಬಂದಿರುವುದು ಕಂಡಿದೆ.
ಅಹಂ ತೇ ದುಹಿತಾ ರಾಜನ್ ಮಾಧವೀ ಮೃಗಚಾರಿಣೀ |
ಮಯಾಽಪ್ಯುಪಚಿತೋ ಧರ್ಮಃ ತತೋಽರ್ಧಂ ಪ್ರತಿಗೃಹ್ಯತಾಮ್ ॥
ಎಲೈ ರಾಜನೇ, ನಾನು ನಿನ್ನ ಮಗಳಾದ ಮೃಗಚಾರಿಣಿಯಾದ ಮಾಧವಿ. ನಾನೂ ಸಹ ಧರ್ಮವನ್ನು ಸಂಪಾದಿಸಿದ್ದೇನೆ. ಅದರ ಅರ್ಧಭಾಗವನ್ನು ನೀನು ಸ್ವೀಕರಿಸು.
ಯಸ್ಮಾದ್ ರಾಜನ್ ನರಾಃ ಸರ್ವೇ ಅಪತ್ಯಫಲಭಾಗಿನಃ |
ತಸ್ಮಾದಿಚ್ಛಂತಿ ದೌಹಿತ್ರಾನ್ ಯಥಾ ತ್ವಂ ವಸುಧಾಧಿಪ ॥28॥
ಎಲೈ ರಾಜನೇ, ಮನುಷ್ಯರೆಲ್ಲರೂ ಮಕ್ಕಳು ಸಂಪಾದಿಸಿದ ಪುಣ್ಯಕ್ಕೆ ಭಾಗಿಗಳಾಗುವುದರಿಂದ ಎಲೈ ರಾಜನೇ, ನಿನ್ನಂತೆ ದೌಹಿತ್ರರನ್ನು ಬಯಸುತ್ತಾರೆ (ಎಂದು ಹೇಳಿದಳು).
ತತಸ್ತೇ ಪಾರ್ಥಿವಾಃ ಸರ್ವೇ ಶಿರಸಾ ಜನನೀಂ ತದಾ |
ಅಭಿವಾದ್ಯ ನಮಸ್ಕೃತ್ಯ ಮಾತಾಮಹಮಥಾಬ್ರುವನ್ ॥29॥
ಉಚ್ಚೈರನುಪಮೈಃ ಸ್ನಿಗ್ಧೈಃ ಸ್ವರೈರಾಪೂರ್ಯ ಮೇದಿನೀಮ್ |
ಮಾತಾಮಹಂ ನೃಪತಯಸ್ತಾರಯಂತೋ ದಿವಶ್ಚ್ಯುತಮ್ ॥30॥
ರಾಜಧರ್ಮಗುಣೋಪೇತಾಃ ಸತ್ಯಧರ್ಮಪರಾಯಣಾಃ |
ದೌಹಿತ್ರಾಸ್ತೇ ವಯಂ ರಾಜನ್ ದಿವಮಾರೋಹ ಪಾರ್ಥಿವ ॥31॥
ಆಗ ಆ ರಾಜರೆಲ್ಲರೂ ತಮ್ಮ ತಾಯಿಗೆ ಶಿರಸಾ ನಮಸ್ಕಾರವನ್ನು ಮಾಡಿ ಮಾತಾಮಹನಾದ ಯಯಾತಿಯನ್ನು ಕುರಿತು ತಮ್ಮ ಉಚ್ಚವಾದ, ಅಸದೃಶವಾದ, ಗಂಭೀರವಾದ ಸ್ವರದಿಂದ ಭೂಮಿಯನ್ನೆಲ್ಲಾ ತುಂಬುತ್ತಾ ಸ್ವರ್ಗದಿಂದ ಬಿದ್ದ ಮಾತಾಮಹನನ್ನು ಸಂಕಟದಿಂದ ಪಾರು ಮಾಡುತ್ತಾ ಎಲೈ ರಾಜನೇ, ನಾವು ರಾಜಧರ್ಮಗುಣಗಳಿಂದ ಕೂಡಿದ ಸತ್ಯಧರ್ಮಪರಾಯಣರಾದ ನಿನ್ನ ದೌಹಿತ್ರರು. ಎಲೈ ರಾಜನೇ, ಆ ಕಾರಣದಿಂದ ನೀನು ಪುನಃ ಸ್ವರ್ಗಕ್ಕೆ ಹೋಗುವವನಾಗು ಎಂದು ಹೇಳಿದರು.
ಅಥಾಕಸ್ಮಾದುಪಗತೋ ಗಾಲವೋಽಪ್ಯಾಹ ಪಾರ್ಥಿವಮ್ ॥32॥
ತಪಸೋ ಮೇಽಷ್ಟಭಾಗೇನ ಸ್ವರ್ಗಮಾರೋಹತಾಂ ಭವಾನ್ ॥33॥
ಆಗ ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಗಾಲವರೂ ಸಹ ರಾಜನನ್ನು ಕುರಿತು ನನ್ನ ತಪಸ್ಸಿನ ಎಂಟನೆಯ ಒಂದು ಭಾಗದಿಂದ ನೀನು ಸ್ವರ್ಗಾರೋಹಣವನ್ನು ಮಾಡು ಎಂದು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂದನೆಯ ಅಧ್ಯಾಯ
ತನ್ನ ದೌಹಿತ್ರರು ಕೊಟ್ಟ ಪುಣ್ಯಫಲ ಪ್ರಭಾವದಿಂದ ಯಯಾತಿಯ ಸ್ವರ್ಗಗಮನ
ನಾರದಃ

ಪ್ರತ್ಯಭಿಜ್ಞಾತಮಾತ್ರೋಽಥ ಸದ್ಭಿಸ್ತೈರ್ನರಪುಂಗವೈಃ |
ಯಯಾತಿರ್ದಿವ್ಯಸಂಸ್ಥಾನೋ ಬಭೂವ ವಿಗತಜ್ವರಃ ||1||
ಸಮಾರುರೋಹ ನೃಪತಿರಸ್ಪೃಶನ್ ವಸುಧಾತಳಮ್ ||2||
ನಾರದ ಆ ನರಶ್ರೇಷ್ಠರಾದ ಸಜ್ಜನರು ಯಯಾತಿಯನ್ನು ಗುರುತಿಸುತ್ತಿರಲು ಯಯಾತಿಯು ದಿವ್ಯರೂಪವನ್ನು ಧರಿಸಿ ಚಿಂತಾಹೀನನಾದನು. ಭೂಮಿಯನ್ನು ಸ್ಪರ್ಶ ಮಾಡದೆ ರಾಜನು ಸ್ವರ್ಗವನ್ನು ಏರಲು ಪ್ರಾರಂಭಿಸಿದನು.
ದಿವ್ಯಮಾಲ್ಯಾಂಬರಧರೋ ದಿವ್ಯಾಭರಣಭೂಷಿತಃ |
ದಿವ್ಯಗಂಧಗುಣೋಪೇತೋ ನ ಪೃಥ್ವೀಮಸ್ಪೃಶನ್ ಪದಾ ||3||
ದಿವ್ಯಮಾಲ್ಯ, ವಸ್ತ್ರಗಳನ್ನು ಧರಿಸಿ, ದಿವ್ಯಾಭರಣಭೂಷಿತನಾಗಿ, ದಿವ್ಯಗಂಧ ಲಿಪ್ತನಾಗಿ ಆಗ ರಾಜನು ಭೂಮಿಯ ಸ್ಪರ್ಶವನ್ನು ಮಾಡದೆ ನಿಂತನು.
ತತೋ ವಸುಮನಾಃ ಪೂರ್ವಮುಚ್ಚೈರುಚ್ಚಾರಯನ್ ವಚಃ |
ಖ್ಯಾತೋ ದಾನಪತಿರ್ಲೋಕೇ ವ್ಯಾಜಹಾರ ನೃಪಂ ತದಾ ||4||
ಪ್ರಾಪ್ತವಾನಸ್ಮಿ ಯಲ್ಲೋಕೇ ಸರ್ವವರ್ಣೇಷ್ವಗರ್ಹಯಾ |
ತದಪ್ಯಥ ಚ ದಾಸ್ಯಾಮಿ ತೇನ ಸಂಯುಜ್ಯತಾಂ ಭವಾನ್ ||5||
ಯತ್ಫಲಂ ದಾನಶೀಲಸ್ಯ ಕ್ಷಮಾಶೀಲಸ್ಯ ಯತ್ ಫಲಮ್ |
ಯಚ್ಚ ಮೇ ಫಲಮಾಧಾನೇ ತೇನ ಸಂಯುಜ್ಯತಾಂ ಭವಾನ್ ||6||
ಆಗ ಲೋಕದಲ್ಲಿ ದಾನಪತಿ ಎಂದು ವಿಖ್ಯಾತನಾದ ವಸುಮನನು ಗಟ್ಟಿಯಾದ ಸ್ವರದಲ್ಲಿ ರಾಜನನ್ನು ಕುರಿತು, ನಾನು ಲೋಕದಲ್ಲಿ ಯಾವ ವರ್ಣದವರನ್ನೂ ನಿಂದಿಸದೆ ಯಾವ ಪುಣ್ಯವನ್ನು ಗಳಿಸಿದ್ದೇನೆಯೋ ಅದನ್ನು ನಿನಗೆ ಕೊಡುವೆನು. ನೀನು ಅದರಿಂದ ಯುಕ್ತನಾಗು. ದಾನಶೀಲನಾದ ನನಗೆ ಕ್ಷಮಾಶೀಲನಾದುದರಿಂದ ಮತ್ತು ಗರ್ಭಾಧಾನ ಮಾಡಿದುದರಿಂದ ಏನು ಪುಣ್ಯ ಉಂಟಾಗಿದೆಯೋ ಅದರ ಸಂಯೋಗವನ್ನೂ ಹೊಂದುವವನಾಗು ಎಂದು ಹೇಳಿದನು.
ತತಃ ಪ್ರತರ್ದನೋಽಪ್ಯಾಹ ವಾಚಂ ಕ್ಷತ್ರಿಯಪುಂಗವಃ ||7||
ಯಥಾ ಧರ್ಮರತಿರ್ನಿತ್ಯಂ ನಿತ್ಯಂ ಯುದ್ಧಪರಾಯಣಃ |
ಪ್ರಾಪ್ತವಾನಸ್ಮಿ ಯಲ್ಲೋಕೇ ಕ್ಷತ್ರವಂಶೋದ್ಭವಂ ಯಶಃ ||8||
ವೀರಶಬ್ದಫಲಂ ಚೈವ ತೇನ ಸಂಯುಜ್ಯತಾಂ ಭವಾನ್ |
ಯಥಾ ಧರ್ಮೇ ರತಿರ್ನಿತ್ಯಂ ತೇನ ಸತ್ಯೇನ ಸ್ವಂ ವ್ರಜ ||9||
ಆಗ ಕ್ಷತ್ರಿಯಶ್ರೇಷ್ಠನಾದ ಪ್ರತರ್ದನನೂ ಸಹ, ಹೇಗೆ ನಾನು ನಿತ್ಯವೂ ಧರ್ಮರತನಾಗಿ ಯುದ್ಧಪರಾಯಣನಾಗಿ ಕ್ಷತ್ರಿಯ ವಂಶದಲ್ಲಿ ಉಂಟಾದ ಕೀರ್ತಿಯನ್ನು ಪಡೆದಿದ್ದೇನೆಯೋ ಮತ್ತು ವೀರಶಬ್ದವನ್ನು ಪಡೆದಿದ್ದೇನೆಯೋ ಆ ಪುಣ್ಯದಿಂದ ನೀನು ಸಂಯೋಗವನ್ನು ಹೊಂದುವವನಾಗು. ನನಗೆ ಧರ್ಮದಲ್ಲಿ ಹೇಗೆ ನಿತ್ಯವಾದ ಪ್ರೀತಿ ಇದೆಯೋ ಆ ಸತ್ಯದಿಂದ ನೀನು ಸ್ವರ್ಗಕ್ಕೆ ಹೋಗುವವನಾಗು ಎಂದು ಮಾತನಾಡಿದನು.
ಶಿಬಿರೌಶೀನರೋ ಧೀಮಾನುವಾಚ ಮಧುರಾಂ ಗಿರಮ್ ||10||
ಉಶೀನರನ ಪುತ್ರನಾದ ಮೇಧಾವಿಯಾದ ಶಿಬಿಯು ಮಧುರವಾಗಿ ಮಾತನಾಡಿದನು.
ಯಥಾ ಬಾಲೇಷು ನಾರೀಷು ವೈವಾಹ್ಯೇಷು ತಥೈವ ಚ |
ಸಂಗರೇಷು ನಿಪಾತೇಷು ತಥಾ ಚ ವ್ಯಸನೇಷು ಚ ||11||
ಅನೃತಂ ನೋಕ್ತಪೂರ್ವಂ ಮೇ ತೇನ ಸತ್ಯೇನ ಸ್ವಂ ವ್ರಜ ||12||
ನಾನು ಬಾಲಕರಲ್ಲಿ, ಸ್ತ್ರೀಯರಲ್ಲಿ, ವಿವಾಹದ ಸಂದರ್ಭದಲ್ಲಿ, ಯುದ್ಧದಲ್ಲಿ,ಸಂಕಟಗಳಲ್ಲಿ, ದುಃಸ್ಥಿತಿಗಳಲ್ಲಿ ಎಂದೂ ಸುಳ್ಳನ್ನು ಆಡಿಲ್ಲ. ಆ ಸತ್ಯದಿಂದ ನೀನು ಸ್ವರ್ಗಕ್ಕೆ ಹೋಗು.
ಯಥಾ ಪ್ರಾಣಾಂಶ್ಚ ರಾಜ್ಯಂ ಚ ರಾಜಕರ್ಮಸುಖಾನಿ ಚ |
ತ್ಯಜೇಯಂ ನ ತ್ವಹಂ ಸತ್ಯಂ ತೇನ ಸತ್ಯೇನ ಸ್ವಂ ವ್ರಜ ||13||
ನಾನು ಪ್ರಾಣವನ್ನಾದರೂ, ರಾಜ್ಯವನ್ನಾದರೂ, ರಾಜನ ಕಾರ್ಯ ಮತ್ತು ಸುಖವನ್ನಾದರೂ ಬಿಟ್ಟೇನು. ಆದರೆ ಸತ್ಯವನ್ನು ಮಾತ್ರ ಬಿಡುವುದಿಲ್ಲ. ಆ ಸತ್ಯದಿಂದ ನೀನು ಸ್ವರ್ಗಕ್ಕೆ ಹೋಗು.
ಯಥಾ ಸತ್ಯೇನ ಮೇ ಧರ್ಮೋ ಯಥಾ ಸತ್ಯೇನ ಮೇ ಯಮಃ |
ಪ್ರೀತಃ ಶತಕ್ರತುಶ್ಚೈವ ತೇನ ಸತ್ಯೇನ ಸ್ವಂ ವ್ರಜ ||14||
ಹೇಗೆ ಸತ್ಯದಿಂದ ನನ್ನ ಧರ್ಮವು, ಸತ್ಯದಿಂದ ಇಂದ್ರಿಯ ನಿಗ್ರಹವು ಪೀಡಿಸಲ್ಪಡುವುದಿಲ್ಲವೋ, ಹೇಗೆ ಇಂದ್ರನು ನನ್ನ ಮೇಲೆ ಪ್ರಸನ್ನನಾಗಿದ್ದಾನೆಯೋ ಆ ಸತ್ಯದಿಂದ ನೀನು ಸ್ವರ್ಗಕ್ಕೆ ಹೋಗು (ಎಂದು ಹೇಳಿದನು).
ಅಷ್ಟಕಸ್ತ್ವಥ ರಾಜರ್ಷಿಃ ಕೌಶಿಕೋ ಮಾಧವೀಸುತಃ |
ಅನೇಕಶತಯಜ್ವಾನಂ ವಚನಂ ಪ್ರಾಹ ಧರ್ಮವಿತ್ ||15||
ಶತಶಃ ಪುಂಡರೀಕಾ ಮೇ ಗೋಸವಾ ರಚಿತಾಃ ಪ್ರಭೋ |
ಕ್ರತವೋ ವಾಜಪೇಯಾಶ್ಚ ತೇಷಾಂ ಫಲಮವಾಪ್ನುಹಿ ||16||
ನ ಮೇ ರತ್ನಾನಿ ನ ಧನಂ ನ ತಥಾಽನ್ಯೇ ಪರಿಚ್ಛದಾಃ |
ಕ್ರತುಷ್ವನುಪಯುಕ್ತಾನಿ ತೇನ ಸತ್ಯೇನ ಸ್ವಂ ವ್ರಜ ||17||
ಅನಂತರ ರಾಜರ್ಷಿಯಾದ ವಿಶ್ವಾಮಿತ್ರ ಮತ್ತು ಮಾಧವಿಯ ಪುತ್ರನಾದ, ಧರ್ಮಜ್ಞನಾದ ಅಷ್ಟಕನು ನೂರಾರು ಯಾಗಗಳನ್ನು

ಮಾಡಿದ ಯಯಾತಿಯನ್ನು ಕುರಿತು ಮಾತನಾಡಿದನು. ಎಲೈ ಪ್ರಭುವೇ, ನಾನು ನೂರಾರು ಪುಂಡರೀಕ ಯಾಗಗಳನ್ನೂ,
ಗೋಸವಗಳನ್ನೂ ಆಚರಿಸಿದ್ದೇನೆ. ಕ್ರತುಗಳನ್ನೂ, ವಾಜಪೇಯಗಳನ್ನೂ ಆಚರಿಸಿದ್ದೇನೆ. ನೀನು ಅವುಗಳ ಫಲವನ್ನು
ಹೊಂದುವವನಾಗು. ನನ್ನ ಬಳಿ ಯಜ್ಞಗಳಲ್ಲಿ ಉಪಯೋಗಿಸದಿದ್ದ ಯಾವ ರತ್ನವಾಗಲೀ, ಯಾವ ಧನವಾಗಲೀ ಅಥವಾ ಯಾವ
ಸಲಕರಣೆಯಾಗಲೀ ಇಲ್ಲ. ಆ ಸತ್ಯದಿಂದ ನೀನು ಸ್ವರ್ಗಕ್ಕೆ ಹೋಗು (ಎಂದು ಹೇಳಿದನು).
ಯಥಾ ಯಥಾ ಹಿ ಜಲ್ಪಂತಿ ದೌಹಿತ್ರಾಸ್ತಂ ನರಾಧಿಪಮ್ |
ತಥಾ ತಥಾ ವಸುಮತೀಂ ತ್ಯಕ್ತ್ವಾ ರಾಜಾ ದಿವಂ ಯಯೌ ॥18॥
ದೌಹಿತ್ರರು ಆ ರಾಜನನ್ನು ಕುರಿತು ಮಾತನಾಡಿದಂತೆ ಅವನು ಭೂಮಿಯನ್ನು ಬಿಟ್ಟು ಮೇಲೆ ಮೇಲೆ ಹೋಗಿ ಸ್ವರ್ಗವನ್ನು ಸೇರಿದನು.
ಏವಂ ಸರ್ವೈಃ ಸಮಸ್ತೈಸ್ತೈಃ ರಾಜಾನಃ ಸುಕೃತೈಸ್ತದಾ |
ಯಯಾತಿಂ ಸ್ವರ್ಗತೋ ಭ್ರಷ್ಟಂ ತಾರಯಾಮಾಸುರಂಜಸಾ ॥19॥
ಹೀಗೆ ಆ ರಾಜರೆಲ್ಲರೂ ಒಟ್ಟಿಗೆ ಸೇರಿ ತಮ್ಮ ಪುಣ್ಯಗಳಿಂದ ಸ್ವರ್ಗದಿಂದ ಭ್ರಷ್ಟನಾದ ಯಯಾತಿಯನ್ನು ಸಂಕಟದಿಂದ ಚೆನ್ನಾಗಿ
ಪಾರುಮಾಡಿದರು.
ದೌಹಿತ್ರಾಃ ಸ್ವೇನ ಧರ್ಮೇಣ ಯಜ್ಞದಾನಕೃತೇನ ವೈ |
ಚತುರ್ಷು ರಾಜವಂಶೇಷು ಸಂಭೂತಾಃ ಕುಲವರ್ಧನಾಃ ॥20॥
ಮಾತಾಮಹಂ ಮಹಾಪ್ರಾಜ್ಞಂ ದಿವಮಾರೋಪಯಂತ ತೇ ॥21॥
ನಾಲ್ಕು ರಾಜವಂಶಗಳಲ್ಲಿ ಜನಿಸಿದ ಕುಲವರ್ಧನರಾದ ಆ ದೌಹಿತ್ರರು ಯಜ್ಞ-ದಾನಗಳಿಂದ ಉಂಟಾದ ತಮ್ಮ ಪುಣ್ಯದಿಂದ
ಮಹಾಪ್ರಾಜ್ಞನಾದ ತಮ್ಮ ಮಾತಾಮಹನನ್ನು ಸ್ವರ್ಗಕ್ಕೆ ಏರಿಸಿದರು.
ರಾಜಾನಃ
ರಾಜಧರ್ಮಗುಣೋಪೇತಾಃ ಸತ್ಯಧರ್ಮಗುಣಾನ್ವಿತಾಃ |
ದೌಹಿತ್ರಾಸ್ತೇ ವಯಂ ರಾಜನ್ ದಿವಮಾರೋಹ ಪಾರ್ಥಿವ ॥22॥
ರಾಜರು ಎಲೈ ರಾಜನೇ, ನಾವು ರಾಜಧರ್ಮಗಳಿಂದಲೂ ಮತ್ತು ಗುಣಗಳಿಂದಲೂ ಕೂಡಿದ, ಸತ್ಯಧರ್ಮಗುಣ ಯುಕ್ತರಾದ ನಿನ್ನ
ದೌಹಿತ್ರರು. ಎಲೈ ಪಾರ್ಥಿವನೇ, ಸ್ವರ್ಗಕ್ಕೆ ಹೋಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಏಕವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ದ್ವಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೆರಡನೆಯ ಅಧ್ಯಾಯ
ಯಯಾತಿ-ಚತುರ್ಮುಖರ ಸಂವಾದವನ್ನು ಹೇಳಿ, ದುರ್ಯೋಧನನಿಗೆ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳಲು
ನಾರದರ ಒತ್ತಾಯ.
ನಾರದಃ
ಸದ್ಭಿರಾರೋಪಿತಃ ಸ್ವರ್ಗಂ ಪಾರ್ಥಿವೈರ್ಭೂರಿದಕ್ಷಿಣೈಃ |
ಅಭ್ಯನುಜ್ಞಾಯ ದೌಹಿತ್ರಾನ್ ಯಯಾತಿರ್ದಿವಮಾಸ್ಥಿತಃ ॥1॥
ನಾರದ ಭೂರಿದಕ್ಷಿಣೆಯನ್ನು ಕೊಡುವ ಸಜ್ಜನರಾದ ರಾಜರಿಂದ ಯಯಾತಿಯು ಸ್ವರ್ಗವನ್ನು ಹೊಂದಿದನು. ದೌಹಿತ್ರರ
ಅನುಮತಿಯನ್ನು ಪಡೆದು ಯಯಾತಿಯು ಸ್ವರ್ಗದಲ್ಲಿ ನೆಲೆಸಿದನು.
ಅಭಿವೃಷ್ಟಶ್ಚ ವರ್ಷೇಣ ನಾನಾಪುಷ್ಪಸುಗಂಧಿನಾ |
ಪರಿಷ್ವಕ್ತಶ್ಚ ಪುಣ್ಯೇನ ವಾಯುನಾ ಚ ಸುಗಂಧಿನಾ ॥2॥
ನಾನಾ ಸುಗಂಧಪುಷ್ಪಗಳ ಪುಷ್ಪವೃಷ್ಟಿಯನ್ನೂ, ಸುಗಂಧಯುಕ್ತವಾದ ಪುಣ್ಯವಾದ ವಾಯುವಿನ ಆಲಿಂಗನವನ್ನೂ
ಅನುಭವಿಸಿದನು.
ಅಚಲಂ ಸ್ಥಾನಮಾರುಹ್ಯ ದೌಹಿತ್ರಫಲನಿರ್ಜಿತಮ್ |
ಕರ್ಮಭಿಃ ಸ್ವೈರುಪಚಿತೋ ಜಜ್ವಾಲ ಪರಯಾ ಶ್ರಿಯಾ ॥3॥
ದೌಹಿತ್ರರ ಪುಣ್ಯದಿಂದ ಸಂಪಾದಿಸಿದ ಅಚಲವಾದ ಸ್ಥಾನವನ್ನು ಹೊಂದಿ, ತನ್ನ ಕರ್ಮಗಳಿಂದ ಅಭಿವೃದ್ಧಿಯನ್ನು ಹೊಂದಿ
ಶ್ರೇಷ್ಠವಾದ ಕಾಂತಿಯಿಂದ ಬೆಳಗಿದನು.
ಉಪಗೀತೋಪನೃತ್ತಶ್ಚ ಗಂಧರ್ವಾಪ್ಸರಸಾಂ ಗಣೈಃ |
ಪ್ರೀತ್ಯಾ ಪ್ರತಿಗೃಹೀತಶ್ಚ ಸ್ವರ್ಗೇ ದುಂದುಭಿನಿಸ್ವನೈಃ ॥4॥
ಗಂಧರ್ವರ ಮತ್ತು ಅಪ್ಸರೆಯರ ಗಣಗಳು ಅವನ ಸಮೀಪದಲ್ಲಿ ನೃತ್ಯ, ಗಾನಗಳನ್ನು ಮಾಡಿದರು. ಸ್ವರ್ಗದಲ್ಲಿ ದುಂದುಭಿ
ನಾದಪೂರ್ವಕವಾಗಿ ಅವನು ಪ್ರೀತಿಯಿಂದ ಸ್ವೀಕರಿಸಲ್ಪಟ್ಟನು.
ಅಭಿಷ್ಟುತಶ್ಚ ವಿವಿಧೈಃ ದೇವರಾಜರ್ಷಿಚಾರಣೈಃ |
ಅರ್ಚಿತಶ್ಚೋತ್ತಮಾರ್ಘೇಣ ದೈವತೈರಭಿನಂದಿತಃ ॥5॥
ದೇವರ್ಷಿಗಳಿಂದಲೂ, ರಾಜರ್ಷಿಗಳಿಂದಲೂ ಮತ್ತು ಚಾರರಿಂದಲೂ ಅನೇಕ ವಿಧವಾಗಿ ಸ್ತೋತ್ರ ಮಾಡಲ್ಪಟ್ಟು ಬೆಲೆಬಾಳುವ

ವಸ್ತುಗಳಿಂದ ಪೂಜಿಸಲ್ಪಟ್ಟನು. ದೇವತೆಗಳು ಅವನನ್ನು ಅಭಿನಂದಿಸಿದರು.
ಪ್ರಾಪ್ತಃ ಸ್ವರ್ಗಫಲಂ ಚೈವ ತಮುವಾಚ ಪಿತಾಮಹಃ |
ನಿರ್ವೃತಂ ಶಾಂತಮನಸಂ ವಚೋಭಿಸ್ತರ್ಪಯನ್ನಿವ ||6||
ಸ್ವರ್ಗಫಲವನ್ನು ಪಡೆದು ಧನ್ಯನಾಗಿ, ಶಾಂತವಾದ ಮನಸ್ಸುಳ್ಳ ಅವನನ್ನು ಕುರಿತು ಪಿತಾಮಹರಾದ ಬ್ರಹ್ಮದೇವರು ತಮ್ಮ ಮಾತುಗಳಿಂದ ತೃಪ್ತಿಪಡಿಸುತ್ತಾ ಮಾತನಾಡಿದರು.
ಬ್ರಹ್ಮಾ
ಚತುಷ್ಪಾದಸ್ತ್ವಯಾ ಧರ್ಮಶ್ಚಿತೋ ಲೌಕ್ಯೇನ ಕರ್ಮಣಾ |
ಅಕ್ಷಯಸ್ತವ ಲೋಕೋಽಯಂ ಕೀರ್ತಿಶ್ಚೈವಾಕ್ಷಯಾ ದಿವಿ ||7||
ಬ್ರಹ್ಮಾ ನೀನು ಲೋಕದಲ್ಲಿ ವಿಹಿತವಾದ ಕರ್ಮಗಳಿಂದ ನಾಲ್ಕುಪಾದವುಳ್ಳ ಧರ್ಮವನ್ನು ಸಂಪಾದಿಸಿದ್ದೀಯೆ. ನಿನಗೆ ಈ ಲೋಕವು ಅಕ್ಷಯವಾಗಿದೆ. ಸ್ವರ್ಗದಲ್ಲಿ ನಿನ್ನ ಕೀರ್ತಿಯೂ ಅಕ್ಷಯವಾಗಿದೆ.
ಪುನಸ್ತ್ವಯೈವ ರಾಜರ್ಷೇ ಸತ್ಕೃತೇನ ವಿಘಾತಿತಮ್ |
ಆವೃತಂ ತಮಸಾ ಚೇತಃ ಸರ್ವೇಷಾಂ ಸ್ವರ್ಗವಾಸಿನಾಮ್ ||8||
ಯೇನ ತ್ವಾಂ ನಾಭಿಜಾನಂತಿ ತತೋ ಜ್ಞಾತ್ವಾಽಸಿ ಪಾತಿತಃ |
ಪ್ರೀತ್ಯೈವ ಚಾಸಿ ದೌಹಿತ್ರೈಃ ತಾರಿತಸ್ತ್ವಮಿಹಾಗತಃ ||9||
ರಾಜರ್ಷಿಯೇ, ಆದರೆ ಇಂತಹ ಸತ್ಕಾರಕ್ಕೆ ಒಳಗಾದ ನೀನು ನೀನಾಗಿಯೇ ಎಲ್ಲವನ್ನೂ ನಾಶಮಾಡಿಕೊಂಡೆ. ಸ್ವರ್ಗವಾಸಿಗಳಾದ ಎಲ್ಲರ ಮನಸ್ಸು ಅಜ್ಞಾನದಿಂದ ಕೂಡಿದುದರಿಂದ ನಿನ್ನನ್ನು ಯಾರೂ ಗುರುತಿಸಲಿಲ್ಲ. ಅದನ್ನು ತಿಳಿದ ಇಂದ್ರನಿಂದ ನೀನು ಬೀಳಿಸಲ್ಪಟ್ಟಿದ್ದೀಯೆ. ನಿನ್ನ ದೌಹಿತ್ರರು ಪ್ರೀತಿಯಿಂದ ನಿನ್ನನ್ನು ಸಂಕಟದಿಂದ ಪಾರುಮಾಡಿದ ಕಾರಣದಿಂದ ಪುನಃ ಇಲ್ಲಿಗೆ ಬಂದಿದ್ದೀಯೆ.
ಸ್ಥಾನಂ ಚ ಪ್ರತಿಪನ್ನೋಽಸಿ ಕರ್ಮಣಾ ಸ್ವೇನ ನಿರ್ಜಿತಮ್ |
ಅಚಲಂ ಶಾಶ್ವತಂ ಪುಣ್ಯಮುತ್ತಮಂ ಧ್ರುವಮವ್ಯಯಮ್ ||10||
ನಿನ್ನ ಕರ್ಮಗಳಿಂದಲೇ ಸಂಪಾದಿಸಿದ ಅಚಲವಾದ, ಶಾಶ್ವತವಾದ, ಪವಿತ್ರವಾದ, ಸ್ಥಿರವಾದ ಸ್ಥಾನವನ್ನು ಹೊಂದಿದ್ದೀಯೆ.
ಯಯಾತಿಃ
ಭಗವನ್ ಸಂಶಯೋ ಮೇಽಸ್ತಿ ಕಚ್ಚಿತ್ ತಂ ಭೇತ್ತುಮರ್ಹಸಿ |
ನ ಹ್ಯನ್ಯಮಹಮರ್ಹಾಮಿ ಪ್ರಷ್ಟುಂ ಲೋಕಪಿತಾಮಹ ||11||
ಯಯಾತಿ ಪೂಜ್ಯನೇ, ನನಗೆ ಒಂದು ಸಂಶಯವಿದೆ. ಅದನ್ನು ನೀನು ಪರಿಹರಿಸಬೇಕು. ಎಲೈ ಲೋಕಪಿತಾಮಹನೇ, ನಿನ್ನನ್ನು ಬಿಟ್ಟು ಯಾರಿಗೂ ಅದನ್ನು ಕೇಳಲಾರೆ.
ಬಹುವರ್ಷಸಹಸ್ರಾಂತಂ ಪ್ರಜಾಪಾಲನವರ್ಧಿತಮ್ |
ಅನೇಕಕ್ರತುದಾನೌಘೈಃ ಯನ್ಮಯೋಪಾರ್ಜಿತಂ ಫಲಮ್ ||12||
ಕಥಂ ತದಲ್ಪಕಾಲೇನ ಕ್ಷೀಣಂ ಯೇನಾಸ್ಮಿ ಪಾತಿತಃ |
ಭಗವನ್ ವೇತ್ಥ ಲೋಕಾಂಶ್ಚ ಶಾಶ್ವತಾನ್ ಮಮ ನಿರ್ಮಿತಾನ್ ||
ಕಥಂ ನು ಮಮ ತತ್ ಸರ್ವಂ ವಿಪ್ರನಷ್ಟಂ ಮಹಾದ್ಯುತೇ ||14||
ನಾನು ಅನೇಕ ಸಹಸ್ರವರ್ಷಗಳ ಕಾಲ ಪ್ರಜಾಪಾಲನೆಯನ್ನು ಮಾಡಿ ಸಂಪಾದಿಸಿದ್ದ, ಅನೇಕ ಯಾಗಗಳನ್ನೂ ಮಾಡಿ, ದಾನಗಳನ್ನೂ ಕೊಟ್ಟು ಸಂಪಾದಿಸಿದ್ದ ಪುಣ್ಯಫಲವು ಹೇಗೆ ಅಲ್ಪಕಾಲದಲ್ಲಿ ನಾಶವನ್ನು ಹೊಂದಿ ನಾನು ಕೆಳಗೆ ಬೀಳುವಂತಾಯಿತು? ಪೂಜ್ಯನೇ, ನೀನು ನಾನು ಸಂಪಾದಿಸಿದ ಶಾಶ್ವತ ಲೋಕಗಳನ್ನು ತಿಳಿದಿದ್ದೀಯೆ. ಮಹಾದ್ಯುತಿಯೇ, ಅವೆಲ್ಲವೂ ನನಗೆ ಹೇಗೆ ನಷ್ಟವಾಯಿತು? (ಎಂದು ಕೇಳಿದನು)
ಬ್ರಹ್ಮಾ
ಬಹುವರ್ಷಸಹಸ್ರಾಂತಂ ಪ್ರಜಾಪಾಲನವರ್ಧಿತಮ್ |
ಅನೇಕಕ್ರತುದಾನೌಘೈಃ ಯತ್ ತ್ವಯೋಪಾರ್ಜಿತಂ ಫಲಮ್ ||15||
ತದನೇನೈವ ದೋಷೇಣ ಕ್ಷೀಣಂ ಯೇನಾಸಿ ಪಾತಿತಃ |
ಅಭಿಮಾನೇನ ರಾಜೇಂದ್ರ ಧಿಕ್ಕೃತಃ ಸ್ವರ್ಗವಾಸಿಭಿಃ ||16||
ಬ್ರಹ್ಮಾ ಅನೇಕ ಸಹಸ್ರವರ್ಷಗಳ ಪರ್ಯಂತ ಪ್ರಜಾಪಾಲನೆಯಿಂದ ಗಳಿಸಿದ, ಅನೇಕ ಯಜ್ಞಗಳಿಂದ ಮತ್ತು ದಾನಗಳಿಂದ ನೀನು ಗಳಿಸಿದ ಫಲವೆಲ್ಲವೂ ಎಲೈ ರಾಜೇಂದ್ರನೇ, ಈ ಒಂದು ದೋಷದಿಂದಲೇ ಕ್ಷಯವನ್ನು ಹೊಂದಿ, ಅದರಿಂದ ನೀನು ಬೀಳುವಂತಾಯಿತು. ಈ ಅಹಂಕಾರದಿಂದ ನೀನು ಸ್ವರ್ಗವಾಸಿಗಳಿಂದ ಧಿಕ್ಕಾರವನ್ನು ಹೊಂದಿದೆ.
ನಾಯಂ ಮಾನೇನ ರಾಜರ್ಷೇ ನ ಬಲೇನ ನ ಹಿಂಸಯಾ |
ನ ಶಾಠ್ಯೇನ ನ ಮಾಯಾಭಿಃ ಲೋಕೋ ಭವತಿ ಶಾಶ್ವತಃ ||17||
ಎಲೈ ರಾಜರ್ಷಿಯೇ, ಈ ಲೋಕವು ಅಹಂಕಾರದಿಂದಾಗಲೀ, ಬಲದಿಂದಾಗಲೀ, ಹಿಂಸೆಯಿಂದಾಗಲೀ, ಶಾಠ್ಯದಿಂದಾಗಲೀ, ಕಪಟದಿಂದಾಗಲೀ ಶಾಶ್ವತವಾಗುವುದಿಲ್ಲ.
ನಾವಮಾನ್ಯಾಸ್ತ್ವಯಾ ರಾಜನ್ನಧಮೋತ್ಕೃಷ್ಟಮಧ್ಯಮಾಃ |
ನ ಹಿ ಮಾನಪ್ರದಗ್ಧಾನಾಂ ಕಶ್ಚಿದಸ್ತಿ ಶಮಃ ಕ್ವಚಿತ್ ||18||
ಎಲೈ ರಾಜನೇ, ನಿನಗಿಂತ ಉತ್ತಮ, ಮಧ್ಯಮ ಮತ್ತು ಅಧಮರಾದ ಜನರನ್ನು ನೀನು ಅವಮಾನ ಮಾಡಬಾರದು. ಯಾರು ತಮ್ಮ

ಅಹಂಕಾರವನ್ನು ಸುಟ್ಟು ನಿರಹಂಕಾರಿಗಳಾಗಿರುತ್ತಾರೆಯೋ ಅವರಿಗೆ ತಾವು ಸಂಪಾದಿಸಿದ ಯಾವುದೂ ನಾಶವನ್ನು ಹೊಂದುವುದಿಲ್ಲ (ವಾದಿರಾಜರು).
ಪತನಾರೋಹಣಮಿದಂ ಕಥಯಿಷ್ಯಂತಿ ಯೇ ನರಾಃ |
ವಿಷಮಾಣ್ಯಪಿ ತೇ ಪ್ರಾಪ್ತಾಃ ತರಿಷ್ಯಂತಿ ನ ಸಂಶಯಃ ॥19॥
ಸ್ವರ್ಗದಿಂದ ನಿನ್ನ  ಪತನ ಮತ್ತು ಪುನಃ ಸ್ವರ್ಗಾರೋಹಣವನ್ನು ಯಾವ ಮನುಷ್ಯರು ಹೇಳುತ್ತಾರೆಯೋ ಅವರು ಸಂಕಟಗಳನ್ನು ಹೊಂದಿದರೂ ಅವುಗಳನ್ನು ದಾಟುವರು. ಇದರಲ್ಲಿ ಸಂಶಯವಿಲ್ಲ.
ನಾರದಃ
ಏಷ ದೋಷೋಽಭಿಮಾನೇನ ಪುರಾ ಪ್ರಾಪ್ತೋ ಯಯಾತಿನಾ |
ನಿರ್ಬಂಧತಶ್ಚಾತಿಮಾತ್ರಂ ಚ ಗಾಲವೇನ ಮಹೀಪತೇ ॥20॥
ನಾರದ ಈ ಸರ್ವಕ್ಷಯರೂಪವಾದ ದೋಷವು ಯಯಾತಿಗೆ ಅಹಂಕಾರದಿಂದ ಉಂಟಾಯಿತು. ಎಲೈ ರಾಜನೇ, ಗಾಲವರಿಗೆ ಬಹಳ ಹಠ ಮಾಡುವುದರಿಂದ ಈ ದೋಷವು ಉಂಟಾಯಿತು.
ಶ್ರೋತವ್ಯಂ ಹಿತಕಾಮಾನಾಂ ಸುಹೃದಾಂ ಭೂತಿಮಿಚ್ಛತಾಮ್ |
ನ ಕರ್ತವ್ಯೋ ಹಿ ನಿರ್ಬಂಧೋ ನಿರ್ಬಂಧೋ ಹಿ ಕ್ಷಯಾವಹಃ ॥21॥
ಹಿತವನ್ನೂ ಮತ್ತು ಸಮೃದ್ಧಿಯನ್ನೂ ಬಯಸುವ ಸ್ನೇಹಿತರ ಮಾತುಗಳನ್ನು ಕೇಳಬೇಕು. ಹಠವನ್ನು ಮಾಡಬಾರದು. ಹಠವು ವಿನಾಶವನ್ನು ತಂದೊಡ್ಡುತ್ತದೆ.
ತಸ್ಮಾತ್ ತ್ವಮಪಿ ಗಾಂಧಾರೇ ಮಾನಂ ಕ್ರೋಧಂ ಚ ವರ್ಜಯ |
ಸಂಧತ್ಸ್ವ ಪಾಂಡವೈರ್ವೀರ ಸಂರಂಭಂ ತ್ಯಜ ಪಾರ್ಥಿವ ॥22॥
ಆದ್ದರಿಂದ ಎಲೈ ಗಾಂಧಾರಿ ಪುತ್ರನೇ, ನೀನೂ ಸಹ ಅಹಂಕಾರವನ್ನೂ ಮತ್ತು ಕೋಪವನ್ನೂ ತ್ಯಜಿಸು. ಎಲೈ ವೀರನೇ, ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ. ಎಲೈ ರಾಜನೇ, ಕ್ರೋಧವನ್ನು ಬಿಡು.
ಸ ಭವಾನ್ ಸುಹೃದಾಂ ಪಥ್ಯಂ ವಚೋ ಗೃಹ್ಣಾತು ಮಾಽನೃತಮ್ |
ಸಮರ್ಥೈರ್ವಿಗ್ರಹಂ ಕೃತ್ವಾ ವಿಷಮಸ್ಥೋ ಭವಿಷ್ಯಸಿ ॥23॥
ನೀನು ಸುಹೃಜ್ಜನರ ಹಿತವಾದ ಮಾತುಗಳನ್ನು ಸ್ವೀಕರಿಸು. ಮೋಸದ ಮಾತುಗಳನ್ನು ಕೇಳಬೇಡ. ಬಲಿಷ್ಠರ ಜೊತೆಯಲ್ಲಿ ವಿರೋಧವನ್ನು ಮಾಡಿದರೆ ನೀನು ಸಂಕಟಕ್ಕೆ ಸಿಲುಕುವಿ.
ದದಾತಿ ಯತ್ ಪಾರ್ಥಿವ ಯತ್ ಕರೋತಿ
ಯದ್ವಾ ತಪಸ್ತಪ್ಯತಿ ಯಜ್ಜುಹೋತಿ |
ನ ತಸ್ಯ ನಾಶೋಽಸ್ತಿ ನ ಚಾಪಕರ್ಷೋ
ನಾನ್ಯಸ್ತದಶ್ನಾತಿ ಸ ಏವ ಕರ್ತಾ ॥24॥
ಎಲೈ ರಾಜನೇ, ದಾನವನ್ನು ಮಾಡಿದ, ಕರ್ಮವನ್ನು ಮಾಡಿದ, ತಪಸ್ಸನ್ನು ಮಾಡಿದ, ಹೋಮವನ್ನು ಮಾಡಿದ ಪುಣ್ಯವು ನಾಶವನ್ನು ಹೊಂದುವುದಿಲ್ಲ, ಕಡಿಮೆಯೂ ಆಗುವುದಿಲ್ಲ. ಅದನ್ನು ಮಾಡಿದವನೇ ಅದರ ಫಲವನ್ನು ಭೋಗಿಸುತ್ತಾನೆ. ಇನ್ನೊಬ್ಬನು ಭೋಗಿಸುವುದಿಲ್ಲ.
ಇದಂ ಮಹಾಖ್ಯಾನಮನುತ್ತಮಂ ಮತಂ
ಬಹುಶ್ರುತಾನಾಂ ಗತರೋಷರಾಗಿಣಾಮ್ |
ಸಮೀಕ್ಷ್ಯ ಲೋಕೇ ಬಹುಧಾ ಪ್ರಧಾವತಾಂ
ತ್ರಿವರ್ಗದೃಷ್ಟಿಃ ಪೃಥಿವೀಮುಪಾಶ್ನುತೇ ॥25॥
ಬಹುಶ್ರುತರ, ರಾಗ-ದ್ವೇಷಗಳನ್ನು ಪರಿತ್ಯಾಗ ಮಾಡಿದವರ ಈ ಆಖ್ಯಾನವು ಬಹಳ ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ. ಇದನ್ನು ಚಿಂತನೆ ಮಾಡುವ ನಾನಾವಿಧವಾಗಿ ಓಡಾಡುವ ಜನರಿಗೆ ಧರ್ಮಾರ್ಥಕಾಮಗಳ ದೃಷ್ಟಿಯುಂಟಾಗಿ ಅದು ಭೂಮಿಯಲ್ಲಿ ವ್ಯಾಪಿಸುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಾವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತ
ಉದ್ಯೋಗಪರ್ವ
ನೂರ ಇಪ್ಪತ್ಮೂರನೆಯ ಅಧ್ಯಾಯ
ಕೃಷ್ಣನಿಂದ ಧೃತರಾಷ್ಟ್ರನ ಪ್ರಾರ್ಥನೆಯಂತೆ ದುರ್ಯೋಧನನ ಅನುನಯ.
ಧೃತರಾಷ್ಟ್ರಃ
ಭಗವನ್ನೇವಮೇವೈತದ್ ಯಥಾ ವದಸಿ ನಾರದ |
ಇಚ್ಛಾಮಿ ಚಾಹಮಪ್ಯೇವಂ ನ ತ್ವೀಶೋ ಭಗವನ್ನಹಮ್ ॥1॥

ಧೃತರಾಷ್ಟ್ರ ಪೂಜ್ಯರಾದ ನಾರದರೇ, ನೀವು ಹೇಳಿದಂತೆಯೇ ಎಲ್ಲವೂ ಸರಿ. ನಾನೂ ಹಾಗೆಯೇ ಆಶಿಸುತ್ತೇನೆ. ಆದರೆ ಪೂಜ್ಯರೇ, ನಾನು ಸ್ವತಂತ್ರನಲ್ಲ.
ವೈಶಂಪಾಯನಃ
ಏವಮುಕ್ತ್ವಾ ತತಃ ಕೃಷ್ಣಮಭ್ಯಭಾಷತ ಭಾರತ ॥2॥
ಸ್ವರ್ಗ್ಯಂ ಲೋಕ್ಯಂ ಚ ಮಾಮಾತ್ಥ ಧರ್ಮ್ಯಂ ನ್ಯಾಯ್ಯಂ ಚ ಮಾಧವ |
ನ ತ್ವಹಂ ಸ್ವವಶಸ್ತಾತ ಕ್ರಿಯಮಾಣಂ ನ ಮೇ ಪ್ರಿಯಮ್ ॥3॥
ವೈಶಂಪಾಯನ ಎಲ್ಲೈ ಭಾರತನೇ, ಹೀಗೆ ಹೇಳಿ ಅನಂತರ ಧೃತರಾಷ್ಟ್ರನು ಕೃಷ್ಣನನ್ನು ಕುರಿತು ಮಾಧವನೇ, ನೀನು ಧರ್ಮದಿಂದ ಮತ್ತು ನ್ಯಾಯದಿಂದ ಕೂಡಿದ ಇಹಲೋಕ ಮತ್ತು ಸ್ವರ್ಗಲೋಕಕ್ಕೆ ಸಾಧನವಾದ ಮಾತುಗಳನ್ನು ನನ್ನನ್ನು ಕುರಿತು ಆಡಿದ್ದೀಯೆ. ಪ್ರೀತಿಪಾತ್ರನೇ, ಆದರೆ ನಾನು ಸ್ವತಂತ್ರನಲ್ಲ, ನನ್ನ ಪುತ್ರರು ಮಾಡುತ್ತಿರುವ ಕಾರ್ಯವು ನನಗೆ ಇಷ್ಟವಲ್ಲ.
ನ ಮಂಸ್ಯತೇ ದುರಾತ್ಮಾನಃ ಪುತ್ರಾ ಮಮ ಜನಾರ್ದನ ॥4॥
ಅಂಗ ದುರ್ಯೋಧನಂ ಕೃಷ್ಣ ಮಂದಂ ಶಾಸ್ತ್ರಾತಿಗಂ ಮಮ |
ಅನುನೇತುಂ ಮಹಾಬಾಹೋ ಯತಸ್ವ ಪುರುಷೋತ್ತಮ ॥5॥
ಎಲ್ಲೈ ಜನಾರ್ದನನೇ, ದುರಾತ್ಮರಾದ ನನ್ನ ಮಕ್ಕಳು ಇದನ್ನು ತಿಳಿಯುವುದಿಲ್ಲ. ಪ್ರೀತಿಪಾತ್ರನಾದ ಕೃಷ್ಣನೇ, ಮಹಾಬಾಹುವೇ, ಪುರುಷೋತ್ತಮನೇ, ಶಾಸ್ತ್ರವನ್ನು ಮೀರಿದ ಮಂದನಾದ ನನ್ನ ಪುತ್ರನಾದ ದುರ್ಯೋಧನನನ್ನು ಸರಿಯಾದ ಮಾರ್ಗಕ್ಕೆ ತರಲು ಪ್ರಯತ್ನಿಸು.
ನ ಶೃಣೋತಿ ಮಹಾಬಾಹೋ ವಚನಂ ಸಾಧುಭಾಷಿತಮ್ ॥6॥
ಗಾಂಧಾರ್ಯಾಶ್ಚ ಹೃಷೀಕೇಶ ವಿದುರಸ್ಯ ಚ ಧೀಮತಃ |
ಅನ್ಯೇಷಾಂ ಚೈವ ಸುಹೃದಾಂ ಭೀಷ್ಮಾದೀನಾಂ ಹಿತೈಷಿಣಾಮ್ ॥7॥
ಎಲ್ಲೈ ಮಹಾಬಾಹುವೇ, ಹೃಷೀಕೇಶನೇ, ಗಾಂಧಾರಿಯ, ಮೇಧಾವಿಯಾದ ವಿದುರನ, ಉಳಿದ ಹಿತೈಷಿಗಳಾದ ಭೀಷ್ಮಾದಿ ಸಜ್ಜನರ ಒಳ್ಳೆಯ ಮಾತುಗಳನ್ನು ಅವನು ಕೇಳುತ್ತಿಲ್ಲ.
ಸ ತ್ವಂ ಪಾಪಮತಿಂ ಕ್ರೂರಂ ಸ್ವಯಂ ದುರ್ಯೋಧನಂ ನೃಪಮ್ |
ಅನುಶಾಧಿ ದುರಾತ್ಮಾನಂ ಸ್ವಯಂ ದುರ್ಯೋಧನಂ ನೃಪಮ್ ॥8॥
ಸುಹೃತ್ಕಾರ್ಯಂ ತು ಸುಮಹತ್ ಕೃತಂ ತೇ ಸ್ಯಾಜ್ಜನಾರ್ದನ ॥9॥
ನೀನು ಕ್ರೂರನೂ, ಜ್ಞಾನರಹಿತನೂ, ಪಾಪಬುದ್ಧಿಯುಳ್ಳವನೂ, ದುರಾತ್ಮನೂ ಆದ ದುರ್ಯೋಧನನನ್ನು ಸ್ವತಃ ಶಾಸನ ಮಾಡುವವನಾಗು. ಜನಾರ್ದನನೇ, ಹಾಗೆ ಮಾಡಿದರೆ ನೀನು ದೊಡ್ಡ ಬಂಧುಕಾರ್ಯವನ್ನು ಮಾಡಿದಂತಾಗುತ್ತದೆ.
ವೈಶಂಪಾಯನಃ
ತತೋ ವ್ಯಾವೃತ್ಯ ವಾರ್ಷ್ಣೇಯೋ ದುರ್ಯೋಧನಮಮರ್ಷಣಮ್ |
ಅಬ್ರವೀನ್ಮಧುರಾಂ ವಾಚಂ ಸೂಕ್ಷ್ಮಧರ್ಮಾರ್ಥತತ್ತ್ವವಿತ್ ॥10॥
ಆಗ ಸೂಕ್ಷ್ಮಧರ್ಮಾರ್ಥಗಳನ್ನು ತಿಳಿದ ವಾರ್ಷ್ಣೇಯನಾದ ಕೃಷ್ಣನು ರೋಷಶೀಲನಾದ ದುರ್ಯೋಧನನ ಕಡೆಗೆ ತಿರುಗಿ ಮಧುರವಾದ ಮಾತುಗಳನ್ನು ಆಡಿದನು.
ದುರ್ಯೋಧನ ನಿಬೋಧೇದಂ ಮದ್ವಾಕ್ಯಂ ಕುರುಸತ್ತಮ |
ಸಮರ್ಥಂ ತೇ ವಿಶೇಷೇಣ ಸಾನುಬಂಧಸ್ಯ ಭಾರತ ॥11॥
ಎಲ್ಲೈ ಕುರುಶ್ರೇಷ್ಠನಾದ ದುರ್ಯೋಧನನೇ, ಭಾರತನೇ, ನಿನಗೆ ಮತ್ತು ನಿನ್ನ ಪರಿವಾರಕ್ಕೆ ವಿಶೇಷವಾಗಿ ಯೋಗ್ಯವಾದ ಈ ಮಾತುಗಳನ್ನು ಕೇಳು.
ಮಹಾಪ್ರಾಜ್ಞಕುಲೇ ಜಾತಃ ಸಾಧ್ವೇತತ್ ಕರ್ತುಮರ್ಹಸಿ |
ಶ್ರುತವೃತ್ತೋಪಸಂಪನ್ನಃ ಸರ್ವೈಃ ಸಮುದಿತೋ ಗುಣೈಃ ॥12॥
ಮಹಾಪ್ರಾಜ್ಞರ ಕುಲದಲ್ಲಿ ಜನಿಸಿ, ವಿದ್ಯೆ ಮತ್ತು ನಡತೆಗಳಿಂದ ಸಂಪನ್ನನಾಗಿ ಸರ್ವಗುಣಗಳಿಂದಲೂ ಕೂಡಿರುವ ನೀನು ನಾನು ಹೇಳುವ ಕಾರ್ಯವನ್ನು ಮಾಡುವುದು ಉಚಿತವಾಗುತ್ತದೆ.
ದೌಷ್ಕುಲೇಯಾ ದುರಾತ್ಮಾನೋ ನೃಶಂಸಾ ನಿರಪತ್ರಪಾಃ |
ತ ಏತದೀದೃಶಂ ಕುರ್ಯುರ್ಯಥಾ ತ್ವಂ ತಾತ ವರ್ತಸೇ ॥13॥
ಎಲ್ಲೈ ಪ್ರೀತಿಪಾತ್ರನೇ, ದುಷ್ಕುಲಗಳಲ್ಲಿ ಜನಿಸಿದವರೂ, ದುರಾತ್ಮರೂ, ಕ್ರೂರಿಗಳೂ, ಲಜ್ಜೆಗೆಟ್ಟವರೂ ನೀನು ಮಾಡುತ್ತಿರುವಂತಹ ಇಂತಹ ಕರ್ಮಗಳನ್ನು ಮಾಡುತ್ತಾರೆ.
ಧರ್ಮಾರ್ಥಯುಕ್ತಾ ಲೋಕೇಽಸ್ಮಿನ್ ಪ್ರವೃತ್ತಿರ್ಲಕ್ಷ್ಯತೇ ಸತಾಮ್ |
ಅಸತಾಂ ವಿಪರೀತಾ ತು ಲಕ್ಷ್ಯತೇ ಭರತರ್ಷಭ ॥14॥
ವಿಪರೀತಾ ತ್ವಿಯಂ ವೃತ್ತಿರಸಕೃಲ್ಲಕ್ಷ್ಯತೇ ತ್ವಯಿ ॥15॥
ಈ ಲೋಕದಲ್ಲಿ ಸಜ್ಜನರಲ್ಲಿ ಧರ್ಮಾರ್ಥಯುಕ್ತವಾದ ಪ್ರವೃತ್ತಿಯು ಕಂಡುಬರುತ್ತದೆ. ಎಲ್ಲೈ ಭರತರ್ಷಭನೇ, ಅಸಜ್ಜನರಲ್ಲಿ ಇದಕ್ಕೆ ವಿರುದ್ಧವಾದ ಪ್ರವೃತ್ತಿಯು ಕಂಡುಬರುತ್ತದೆ. ಈ ವಿರುದ್ಧವಾದ ಪ್ರವೃತ್ತಿಯು ನಿನ್ನಲ್ಲಿ ಅನೇಕ ಬಾರಿ ಕಂಡುಬಂದಿದೆ.
ಅನರ್ಥಶ್ಚಾನುಬಂಧೋಽತ್ರ ಘೋರಃ ಪ್ರಾಣಹರೋ ಮಹಾನ್ |
ಅನೇಕಶಸ್ತ್ವನ್ನಿಮಿತ್ತಮಯಶಸ್ಯಂ ಚ ಭಾರತ ॥16॥
ಎಲ್ಲೈ ಭಾರತನೇ, ಈ ಪ್ರವೃತ್ತಿಯ ಫಲವೆಂದರೆ ಘೋರವಾದ, ಪ್ರಾಣಹರವಾದ ದೊಡ್ಡ ಅನರ್ಥ. ಎಲ್ಲೈಭಾರತನೇ, ಅನೇಕ ರೂಪವಾದ

ಈ ಅನರ್ಥವು ಅಕೀರ್ತಿಕರವಾದುದು.
ತಮನರ್ಥಂ ಪರಿಹರನ್ನಾತ್ಮಶ್ರೇಯಃ ಕರಿಷ್ಯಸಿ |
ಭ್ರಾತೃಣಾಮಥ ಭೃತ್ಯಾನಾಂ ಮಿತ್ರಾಣಾಂ ಚ ಪರಂತಪ ॥17॥
ಅಧರ್ಮ್ಯಾದಯಶಸ್ಯಾಚ್ಚ ಕರ್ಮಣಸ್ತ್ವಂ ಪ್ರಮೋಕ್ಷ್ಯಸೇ ॥18॥
ಎಲೈ ಪರಂತಪನೇ, ಅಂತಹ ಅನರ್ಥವನ್ನು ಪರಿಹರಿಸಿ ನಿನಗೂ, ನಿನ್ನ ಸಹೋದರರಿಗೂ, ಭೃತ್ಯರಿಗೂ ಮತ್ತು ಮಿತ್ರರಿಗೂ ಶ್ರೇಯಸ್ಸನ್ನು ಉಂಟುಮಾಡುವಿ (ನಾನು ಹೇಳಿದಂತೆ ಕೇಳಿದರೆ ಅಧರ್ಮಯುಕ್ತವಾದ, ಅಕೀರ್ತಿಕರವಾದ ಕರ್ಮದಿಂದ ನೀನು ಬಿಡುಗಡೆಯನ್ನು ಹೊಂದುವಿ).
ಪ್ರಾಜ್ಞೈಃ ಶೂರೈರ್ಮಹೋತ್ಸಾಹೈರಾತ್ಮವಿದ್ಭಿರ್ಬಹುಶ್ರುತೈಃ |
ಸಂಧತ್ಸ್ವ ಪುರುಷವ್ಯಾಘ್ರ ಪಾಂಡವೈರ್ಭರತರ್ಷಭ ॥19॥
ಎಲೈ ಪುರುಷವ್ಯಾಘ್ರನೇ, ಭರತರ್ಷಭನೇ, ಪ್ರಾಜ್ಞರೂ, ಶೂರರೂ, ಮಹೋತ್ಸಾಹ ಉಳ್ಳವರೂ, ಆತ್ಮಜ್ಞಾನವನ್ನು ಹೊಂದಿದವರೂ, ಬಹುವಿದ್ಯಾಸಂಪನ್ನರೂ ಆದ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ.
ತದ್ಧಿತಂ ಚ ಪ್ರಿಯಂ ಚೈವ ಧೃತರಾಷ್ಟ್ರಸ್ಯ ಧೀಮತಃ |
ಪಿತಾಮಹಸ್ಯ ದ್ರೋಣಸ್ಯ ವಿದುರಸ್ಯ ಮಹಾಮತೇಃ ॥20॥
ಕೃಪಸ್ಯ ಸೋಮದತ್ತಸ್ಯ ಬಾಹ್ಲೀಕಸ್ಯ ಚ ಧೀಮತಃ |
ಅಶ್ವತ್ಥಾಮ್ನೋ ವಿಕರ್ಣಸ್ಯ ಸಂಜಯಸ್ಯ ವಿವಿಂಶತೇಃ ॥21॥
ಜ್ಞಾತೀನಾಂ ಚೈವ ಭೂಯಿಷ್ಠಂ ಮಿತ್ರಾಣಾಂ ಚ ಪರಂತಪ |
ಶಮೇ ಶರ್ಮ ಭವೇತ್ ತಾತ ಸರ್ವಸ್ಯ ಜಗತಸ್ತಥಾ ॥22॥
ಅದು ಮೇಧಾವಿಯಾದ ಧೃತರಾಷ್ಟ್ರನಿಗೆ ಹಿತವೂ, ಪ್ರಿಯವೂ ಆಗುತ್ತದೆ. ಪಿತಾಮಹರಾದ ಭೀಷ್ಮರಿಗೂ, ದ್ರೋಣರಿಗೂ, ಮಹಾಮತಿಯಾದ ವಿದುರನಿಗೂ, ಕೃಪರಿಗೂ, ಸೋಮದತ್ತನಿಗೂ, ಮೇಧಾವಿಯಾದ ಬಾಹ್ಲೀಕನಿಗೂ, ಅಶ್ವತ್ಥಾಮನಿಗೂ, ವಿಕರ್ಣನಿಗೂ, ಸಂಜಯನಿಗೂ, ವಿವಿಂಶತಿಗೂ, ದಾಯಾದಿಗಳಿಗೂ ಮತ್ತು ಮಿತ್ರರಿಗೂ ಬಹಳವಾಗಿ ಹಿತವೂ ಪ್ರಿಯವೂ ಆಗುತ್ತದೆ. ಎಲೈ ಪರಂತಪನೇ, ಪ್ರೀತಿಪಾತ್ರನೇ, ಸಂಧಿಯನ್ನು ಮಾಡಿಕೊಂಡರೆ ಎಲ್ಲ ಜಗತ್ತಿಗೂ ಸುಖವುಂಟಾಗುತ್ತದೆ.
ಹ್ರೀಮಾನಸಿ ಕುಲೇ ಜಾತಃ ಶ್ರುತವಾನಾನೃಶಂಸ್ಯವಾನ್ |
ತಿಷ್ಠ ತಾತ ಪಿತುಃ ಶಾಸ್ತ್ರೇ ಮಾತುಶ್ಚ ಭರತರ್ಷಭ ॥23॥
ನೀನು ಒಳ್ಳೆಯ ಕುಲದಲ್ಲಿ ಜನಿಸಿ ನಾಚಿಕೆಯ ಪುಜ್ಞೆಯನ್ನು ಹೊಂದಿದ್ದೀಯೆ. ವಿದ್ಯಾಭ್ಯಾಸವನ್ನು ಮಾಡಿ ದಯಾಪರನಾಗಿದ್ದೀಯೆ. ಎಲೈ ಭರತರ್ಷಭನೇ, ತಂದೆಯ ಮತ್ತು ತಾಯಿಯ ಶಾಸನದಲ್ಲಿ ಇರುವವನಾಗು.
ಏತಚ್ಛ್ರೇಯೋ ಹಿ ತನ್ಮನ್ಯೇ ಪಿತಾ ಯಚ್ಛಾಸ್ತಿ ಭಾರತ |
ಉತ್ತಮಾಪದ್ಗತಃ ಪೂರ್ವಂ ಪಿತುಃ ಸ್ಮರಸಿ ಶಾಸನಮ್ ॥24॥
ಎಲೈ ಭಾರತನೇ, ನಿನ್ನ ತಂದೆಯು ಏನು ಶಾಸನವನ್ನು ಮಾಡುತ್ತಿದ್ದಾನೆಯೋ ಅದು ನಿನಗೆ ಶ್ರೇಯಸ್ಕರವೆಂದು ನಾನು ತಿಳಿದಿದ್ದೇನೆ. ಇಲ್ಲದಿದ್ದರೆ ನೀನು ಆಪತ್ತಿಗೆ ಸಿಲುಕಿ ಹಿಂದೆ ತಂದೆಯು ಹೇಳುತ್ತಿದ್ದ ಶಾಸನವನ್ನು ಸ್ಮರಿಸುತ್ತೀಯೆ.
ರೋಚತೇ ತೇ ಪಿತುಸ್ತಾತ ಪಾಂಡವೈಃ ಸಹ ಸಂಗಮಃ |
ಸಾಮಾತ್ಯಸ್ಯ ಕುರುಶ್ರೇಷ್ಠ ತತ್ ತುಭ್ಯಂ ತಾತ ರೋಚತಾಮ್ ॥25॥
ಎಲೈ ಕುರುಶ್ರೇಷ್ಠನೇ, ಅಮಾತ್ಯರಿಂದ ಕೂಡಿದ ನಿನ್ನ ತಂದೆಗೆ ಪಾಂಡವರ ಜೊತೆಯಲ್ಲಿ ಸಂಧಿಯು ಇಷ್ಟವಾಗುತ್ತದೆ. ಪ್ರೀತಿಪಾತ್ರನೇ, ಅದು ನಿನಗೂ ಇಷ್ಟವಾಗಲಿ.
ಶ್ರುತ್ವಾ ಯಃ ಸುಹೃದಾಂ ಶಾಸ್ತ್ರಂ ಮರ್ತ್ಯೋ ನ ಪ್ರತಿಪದ್ಯತೇ |
ವಿಪಾಕಾಂತೇ ದಹತ್ಯೇನಂ ಕಿಂಪಾಕಮಿವ ಭಕ್ಷಿತಮ್ ॥26॥
ಯಾವನು ಸುಹೃಜ್ಜನರ ಶಾಸನವನ್ನು ಕೇಳಿ ಅದರಂತೆ ನಡೆದುಕೊಳ್ಳುವುದಿಲ್ಲವೋ ಅಂತಹವನಿಗೆ ತನ್ನ ನಡತೆಯಿಂದ ಉಂಟಾಗುವ ವಿರುದ್ಧ ಪರಿಣಾಮವು ಭಕ್ಷಣೆ ಮಾಡಿದ ತೊಂಡೆ ಹಣ್ಣಿನಂತೆ ಅವನನ್ನು ಸುಡುತ್ತದೆ.
ಯಸ್ತು ನಿಃಶ್ರೇಯಸಂ ವಾಕ್ಯಂ ಮೋಹಾನ್ನ ಪ್ರತಿಪದ್ಯತೇ |
ಸ ದೀರ್ಘಸೂತ್ರೋ ಹೀನಾರ್ಥಃ ಪಶ್ಚಾತ್ ತಾಪೇನ ಯುಜ್ಯತೇ ॥27॥
ಯಾವನು ಶ್ರೇಯಸ್ಕರವಾದ ವಾಕ್ಯಗಳನ್ನು ಮೋಹದಿಂದ ಅನುಸರಿಸುವುದಿಲ್ಲವೋ ಅವನು ದೀರ್ಘದ್ವೇಷಿಯಾಗಿ ತನ್ನ ಎಲ್ಲವನ್ನೂ ಕಳೆದುಕೊಂಡು ಪಶ್ಚಾತ್ತಾಪವನ್ನು ಹೊಂದುತ್ತಾನೆ.
ಯಸ್ತು ನಿಃಶ್ರೇಯಸಂ ಶ್ರುತ್ವಾಽಪಾಪಮೇವಾಭಿಪದ್ಯತೇ |
ಆತ್ಮನೋ ಮತಮುತ್ಸೃಜ್ಯ ಸ ಲೋಕೇ ಸುಖಮೇಧತೇ ॥28॥
ಯಾವನು ಶ್ರೇಯಸ್ಕರವಾದ ವಾಕ್ಯಗಳನ್ನು ಕೇಳಿ, ತನ್ನ ಸ್ವಂತ ಅಭಿಪ್ರಾಯವನ್ನು ಬಿಟ್ಟು, ಪಾಪವಲ್ಲದ ಮಾರ್ಗವನ್ನೇ ಅನುಸರಿಸುತ್ತಾನೆಯೋ ಅವನು ಲೋಕದಲ್ಲಿ ಸುಖವನ್ನು ಹೊಂದುತ್ತಾನೆ.
ಯೋಽರ್ಥಕಾಮಸ್ಯ ವಚನಂ ಪ್ರಾತಿಕೂಲ್ಯಾನ್ನ ಮೃಷ್ಯತೇ |
ಶೃಣೋತಿ ಪ್ರತಿಕೂಲಾನಿ ದ್ವಿಷತಾಂ ವಶಮೇತಿ ಸಃ ॥29॥
ಯಾವನು ತನ್ನ ಹಿತವನ್ನು ಬಯಸುವವರ ಮಾತುಗಳು ತನಗೆ ಅನುಕೂಲವಾಗಿಲ್ಲ ಎಂಬ ಕಾರಣದಿಂದ ಅವುಗಳನ್ನು ಸಹಿಸುವುದಿಲ್ಲವೋ ಅವನು ಶತ್ರುಗಳಿಗೆ ವಶನಾಗಿ ಅವರ ಪ್ರತಿಕೂಲ ವಚನಗಳನ್ನು ಕೇಳುತ್ತಾನೆ.
ಸತಾಂ ಮತಮತಿಕ್ರಮ್ಯ ಯೋಽಸತಾಂ ವರ್ತತೇ ಮತೇ |

ಶೋಚಂತೇ ವ್ಯಸನೇ ತಸ್ಯ ಸುಹೃದೋ ನಚಿರಾದಿವ ॥30॥
ಯಾವನು ಸಜ್ಜನರ ಅಭಿಪ್ರಾಯವನ್ನು ಮೀರಿ ಅಸಜ್ಜನರ ಅಭಿಪ್ರಾಯದಂತೆ ನಡೆದುಕೊಳ್ಳುತ್ತಾನೆಯೋ ಅವನ ಹಿತೈಷಿಗಳು ಶೀಘ್ರದಲ್ಲಿ ಒದಗಲಿರುವ ಅವನ ವ್ಯಸನಕಾಲದಲ್ಲಿ ಶೋಕಪಡುತ್ತಾರೆ.
ಮುಖ್ಯಾನಮಾತ್ಯಾನುತ್ಸೃಜ್ಯ ಯೋ ನಿಹೀನಾನ್ ನಿಷೇವತೇ |
ಸ ಘೋರಮಾಪದಂ ಪ್ರಾಪ್ಯ ನೋತ್ತಾರಮಧಿಗಚ್ಛತಿ ॥31॥
ಯಾವನು ತನ್ನ ಶ್ರೇಷ್ಠರಾದ ಅಮಾತ್ಯರನ್ನು ಬಿಟ್ಟು ನೀಚರಾದವರನ್ನು ಸೇವಿಸುತ್ತಾನೆಯೋ ಅವನು ಘೋರವಾದ ಆಪತ್ತನ್ನು ಹೊಂದಿ ದಾಟಿಸುವ ಯಾರನ್ನೂ ಕಾಣುವುದಿಲ್ಲ.
ಯೋಽಸತ್ಸೇವೀ ವೃಥಾಚಾರೋ ನಶ್ರೋತಾ ಸುಹೃದಾಂ ಸತಾಮ್ |
ಪರಾನ್ ವೃಣೀತೇ ಸ್ವಾನ್ ದ್ವೇಷ್ಟಿ ತಂ ಗೌಸ್ತ್ಯಜತಿ ಭಾರತ ॥32॥
ಎಲೈ ಭಾರತನೇ, ಯಾವನು ಅಸಜ್ಜನರ ಸಹವಾಸದಲ್ಲಿದ್ದು, ಮೋಸದ ಆಚಾರಗಳನ್ನು ಮಾಡಿ, ಸಜ್ಜನರಾದ ಸುಹೃಜ್ಜನರ ಮಾತುಗಳನ್ನು ಕೇಳುವುದಿಲ್ಲವೋ, ತನ್ನವರನ್ನು ದ್ವೇಷ ಮಾಡಿ ಪರರನ್ನು ಸ್ವೀಕರಿಸುತ್ತಾನೆಯೋ ಅವನನ್ನು ಭೂಮಿಯು ತ್ಯಜಿಸುತ್ತದೆ.
ಸ ತ್ವಂ ವಿರುದ್ಧ್ಯ ತೈರ್ವೀರೈರನ್ಯೇಭ್ಯಸ್ತ್ರಾಣಮಿಚ್ಛಸಿ |
ಅಶಿಷ್ಟೇಭ್ಯೋಽಸಮರ್ಥೇಭ್ಯೋ ಮೂಢೇಭ್ಯೋ ಭರತರ್ಷಭ ॥33॥
ಎಲೈ ಭರತರ್ಷಭನೇ, ಅಂತಹ ನೀನು ಆ ವೀರರ ಜೊತೆಯಲ್ಲಿ ವಿರೋಧವನ್ನು ಮಾಡಿ ಅಶಿಷ್ಟರೂ, ಅಸಮರ್ಥರೂ, ಮೂಢರೂ ಆದ ಬೇರೆಯವರಿಂದ ರಕ್ಷಣೆಯನ್ನು ಬಯಸುತ್ತಿದ್ದೀಯೆ.
ಕೋ ಹಿ ಶಕ್ರಸಮಾನ್ ಜ್ಞಾತೀನತಿಕ್ರಮ್ಯ ಮಹಾರಥಾನ್ |
ಅನ್ಯೇಭ್ಯಸ್ತ್ರಾಣಮಾಶಂಸೇತ್ ತ್ವದನ್ಯೋ ಭುವಿ ಮಾನವಃ ॥34॥
ನಿನ್ನನ್ನು ಬಿಟ್ಟು ಬೇರೆ ಯಾವನು ತಾನೇ ಇಂದ್ರನಿಗೆ ಸಮರಾದ, ಮಹಾರಥರಾದ ಜ್ಞಾತಿಗಳನ್ನು ಬಿಟ್ಟು ಬೇರೆಯವರಿಂದ ರಕ್ಷಣೆಯನ್ನು ಆಶಿಸಿಯಾನು?
ಜನ್ಮಪ್ರಭೃತಿ ಕೌಂತೇಯಾ ನಿತ್ಯಂ ವಿನಿಕೃತಾಸ್ತ್ವಯಾ |
ನ ಚ ತೇ ಜಾತು ಕುಪ್ಯಂತಿ ಧರ್ಮಾತ್ಮಾನೋ ಹಿ ಪಾಂಡವಾಃ ॥35॥
ನೀನು ಹುಟ್ಟಿದಾಗಿನಿಂದಲೂ ಪಾಂಡವರಿಗೆ ಅಪಕಾರವನ್ನು ಮಾಡಿದ್ದೀಯೆ. ಆದರೆ ಅವರು ಎಂದೂ ನಿನ್ನ ಮೇಲೆ ಕೋಪಗೊಂಡಿಲ್ಲ. ಏಕೆಂದರೆ ಪಾಂಡವರು ಧರ್ಮಾತ್ಮರು.
ಮಿಥ್ಯೋಪಚರಿತಾಸ್ತಾತ ಜನ್ಮಪ್ರಭೃತಿ ಪಾಂಡವಾಃ |
ತ್ವಯಿ ಸಮ್ಯಗ್ ಮಹಾಬಾಹೋ ಪ್ರತಿಪನ್ನಾ ಯಶಸ್ವಿನಃ ॥36॥
ಎಲೈ ಮಹಾಬಾಹುವೇ, ಕೀರ್ತಿವಂತರಾದ ಪಾಂಡವರು ನಿನ್ನಲ್ಲಿ ಒಳ್ಳೆಯ ರೀತಿಯಿಂದ ನಡೆದುಕೊಂಡಿದ್ದಾರೆ. ಆದರೆ ಪ್ರೀತಿಪಾತ್ರನೇ, ನೀನು ಹುಟ್ಟಿದಾಗಿನಿಂದಲೂ ಪಾಂಡವರಿಗೆ ಕಪಟವನ್ನೇ ಆಚರಿಸಿದ್ದೀಯೆ.
ತ್ವಯಾಽಪಿ ಪ್ರತಿಪತ್ತವ್ಯಂ ತಥೈವ ಭರತರ್ಷಭ |
ಸ್ವೇಷು ಬಂಧುಷು ಮುಖ್ಯೇಷು ಮಾ ಮನ್ಯುವಶಮನ್ವಗಾಃ ॥37॥
ಎಲೈ ಭರತರ್ಷಭನೇ, ಅವರು ನಿನ್ನನ್ನು ನೋಡಿದಂತೆಯೇ ನೀನೂ ಅವರನ್ನು ನೋಡಬೇಕು. ನಿನ್ನ ಮುಖ್ಯವಾದ ಬಂಧುಗಳ ವಿಷಯದಲ್ಲಿ ಕೋಪಕ್ಕೆ ವಶನಾಗಬೇಡ.
ತ್ರಿವರ್ಗಯುಕ್ತಃ ಪ್ರಾಜ್ಞಾನಾಮಾರಂಭೋ ಭರತರ್ಷಭ |
ಧರ್ಮಾರ್ಥಾವನುರುದ್ಧ್ಯಂತೇ ತ್ರಿವರ್ಗಾಸಂಭವೇ ನರಾಃ ॥38॥
ಎಲೈ ಭರತರ್ಷಭನೇ, ವಿವೇಕಿಗಳ ಕಾರ್ಯಾರಂಭವು ಧರ್ಮಾರ್ಥಕಾಮಗಳ ಉದ್ದೇಶದಿಂದ ಕೂಡಿರುತ್ತದೆ. ತ್ರಿವರ್ಗವು ಕೂಡದಿದ್ದರೆ ಮನುಷ್ಯರು ಧರ್ಮಾರ್ಥಗಳನ್ನು ಅನುಸರಿಸುತ್ತಾರೆ.
ಪೃಥಕ್ ಚ ವಿನಿವಿಷ್ಟಾನಾಂ ಧರ್ಮಂ ಧೀರೋಽನುರುದ್ಧ್ಯತೇ |
ಮಧ್ಯಮೋಽರ್ಥಂ ಕಲಿಂ ಬಾಲಃ ಕಾಮಮೇವಾನುರುದ್ಧ್ಯತೇ ॥39॥
ಧರ್ಮಾರ್ಥಕಾಮಗಳು ಭಿನ್ನಭಿನ್ನವಾಗಿದ್ದಾಗ ಧೀರನು ಧರ್ಮವನ್ನು ಅನುಸರಿಸುತ್ತಾನೆ, ಮಧ್ಯಮನು ಅರ್ಥವನ್ನು ಅನುಸರಿಸುತ್ತಾನೆ, ಅಧಮನಾದ ಬಾಲನು ಕಾಮವನ್ನೂ ಮತ್ತು ವಿರೋಧವನ್ನೂ ಅನುಸರಿಸುತ್ತಾನೆ.
ಇಂದ್ರಿಯೈಃ ಪ್ರಸೃತೋ ಬಾಲಃ ಧರ್ಮಂ ವಿಪ್ರಜಹಾತಿ ಯಃ |
ಕಾಮಾರ್ಥಾವನುಪಾಯೇನ ಲಿಪ್ಸಮಾನೋ ವಿನಶ್ಯತಿ ॥40॥
ಯಾವನು ಬಾಲನಾಗಿ ಇಂದ್ರಿಯಗಳನ್ನು ಹರಿಯಲು ಬಿಟ್ಟು ಧರ್ಮವನ್ನು ತ್ಯಜಿಸುತ್ತಾನೆಯೋ ಅವನು ಉಪಾಯವಲ್ಲದ ರೀತಿಯಿಂದ ಕಾಮಾರ್ಥಗಳನ್ನು ಪಡೆಯಲು ಬಯಸಿ ವಿನಾಶವನ್ನು ಹೊಂದುತ್ತಾನೆ.
ಕಾಮಾರ್ಥೌ ಲಿಪ್ಸಮಾನಸ್ತು ಧರ್ಮಮೇವಾದಿತಶ್ಚರೇತ್ |
ನ ಹಿ ಧರ್ಮಾದಪೈತ್ಯರ್ಥಃ ಕಾಮೋ ವಾಽಪಿ ಕದಾಚನ ॥41॥
ಕಾಮಾರ್ಥಗಳನ್ನು ಹೊಂದಲು ಅಪೇಕ್ಷಿಸುವವನು ಮೊದಲು ಧರ್ಮವನ್ನೇ ಆಚರಿಸಬೇಕು. ಅರ್ಥವಾಗಲೀ ಅಥವಾ ಕಾಮವಾಗಲೀ ಎಂದೂ ಧರ್ಮವನ್ನು ಬಿಟ್ಟಿರುವುದಿಲ್ಲ.
ಉಪಾಯಂ ಧರ್ಮಮೇವಾಹುಃ ತ್ರಿವರ್ಗಸ್ಯ ವಿಶಾಂಪತೇ |
ಲಿಪ್ಸಮಾನೋ ಹಿ ತೇನಾಶು ಕಕ್ಷೇಽಗ್ನಿರಿವ ವರ್ಧತೇ ॥42॥

ಎಲೈ ರಾಜನ್, ತ್ರಿವರ್ಗಸಾಧನೆಗೆ ಧರ್ಮವೇ ಉಪಾಯವೆಂದು ಹೇಳುತ್ತಾರೆ. ಧರ್ಮದಿಂದ ತ್ರಿವರ್ಗವನ್ನು ಸಂಪಾದಿಸಲು ಬಯಸುವವನು ಹುಲ್ಲುಗಾವಲಿನಲ್ಲಿ ಬಿದ್ದ ಅಗ್ನಿಯಂತೆ ಅಭಿವೃದ್ಧಿಯನ್ನು ಹೊಂದುತ್ತಾನೆ.
ಸ ತ್ವಂ ತಾತಾನುಪಾಯೇನ ಲಿಪ್ಸಸೇ ಭರತರ್ಷಭ |
ಆಧಿರಾಜ್ಯಂ ಮಹದ್ ದೀಪ್ತಂ ಪ್ರಥಿತಂ ಸರ್ವರಾಜಸು ॥43॥
ಎಲೈ ಭರತರ್ಷಭನೇ, ಪ್ರೀತಿಪಾತ್ರನೇ, ನೀನು ಎಲ್ಲ ರಾಜರಲ್ಲೂ ಪ್ರಖ್ಯಾತವಾದ ದೊಡ್ಡದಾಗಿ ಪ್ರಜ್ವಲಿಸುವ ಆಧಿರಾಜ್ಯವನ್ನು ಅನುಪಾಯದಿಂದ ಪಡೆಯಲು ಬಯಸುತ್ತಿದ್ದೀಯೆ.
ಆತ್ಮಾನಂ ತಕ್ಷತಿ ಹ್ಯೇಷ ವನಂ ಪರಶುನಾ ಯಥಾ |
ಯಃ ಸಮ್ಯಗ್ ವರ್ತಮಾನೇಷು ಮಿಥ್ಯಾ ರಾಜನ್ ಪ್ರವರ್ತತೇ ॥44॥
ಎಲೈ ರಾಜನ್, ಯಾವನು ತನ್ನ ಬಗ್ಗೆ ಸರಿಯಾಗಿ ನಡೆದುಕೊಳ್ಳುತ್ತಿರುವವರಲ್ಲಿ ಕಪಟದಿಂದ ನಡೆದುಕೊಳ್ಳುತ್ತಾನೆಯೋ ಅವನು ವನವನ್ನು ಕೊಡಲಿಯಿಂದ ಕತ್ತರಿಸಿದಂತೆ ತನ್ನನ್ನೇ ಕೆತ್ತಿಕೊಳ್ಳುತ್ತಾನೆ.
ಅಮಿತ್ರೋ ನಾತಿಕರ್ತವ್ಯಃ ನಾತಿದೇಯಃ ಕದಾಚನ |
ಜೀವಿತಂ ಹ್ಯಪಿ ದುಃಖಾರ್ತಾಃ ಸಂತ್ಯಜಂತಿ ಕದಾಚನ ॥45॥
ಶತ್ರುವಾದವನಿಗೆ ಅತಿಯಾಗಿ ಅಪಚಾರವನ್ನೂ ಮಾಡಬಾರದು, ಅತಿಯಾಗಿ ಬಹುಮಾನವನ್ನೂ ಮಾಡಬಾರದು. ದುಃಖಾರ್ತರಾದವರು ಒಮ್ಮೊಮ್ಮೆ ಜೀವನವನ್ನೂ ತೊರೆಯುತ್ತಾರೆ.
ಸ ಸಂಪನ್ನಮಭಿಚ್ಛಿಂದ್ಯಾತ್ ಯಸ್ಯ ನೇಚ್ಛೇತ್ ಪರಾಭವಮ್ ॥46॥
ಅಭಿಚ್ಛಿನ್ನಸ್ಯ ಧೀರಸ್ಯ ಕಲ್ಯಾಣೇ ಧೀಯತೇ ಮತಿಃ ॥47॥
ಯಾವನಿಗೆ ಪರಾಭವವಾಗಬಾರದೆಂದು ಬಯಸುತ್ತಾನೆಯೋ ಅವನ ಬುದ್ಧಿ ಭೇದವನ್ನು ಮಾಡಬೇಕು (ಕೆಟ್ಟಬುದ್ಧಿಯನ್ನು ಛೇದಿಸಬೇಕು). ಬುದ್ಧಿಯು ಕೆಟ್ಟ ವಸ್ತುವಿನಿಂದ ಛೇದವನ್ನು ಹೊಂದಿದರೆ ಧೀರನಾದ ಅವನ ಬುದ್ಧಿಯು ಶುಭದಲ್ಲಿಯೇ ನಿಲ್ಲುತ್ತದೆ.
ತ್ಯಕ್ತಾತ್ಮಾನಂ ನ ಬಾಧೇತ ತ್ರಿಷು ಲೋಕೇಷು ಭಾರತ |
ಅಪ್ಯನ್ಯಂ ಪ್ರಾಕೃತಂ ಕಂಚಿತ್ ಕಿಮು ತಾನ್ ಪಾಂಡವರ್ಷಭಾನ್ ॥48॥
ಎಲೈ ಭಾರತನೇ, ಜೀವದ ಹಂಗನ್ನು ತೊರೆದ ಪ್ರಾಕೃತಜನರನ್ನೂ ಸಹ ಮೂರುಲೋಕದಲ್ಲಿಯೂ ಬಾಧಿಸಬಾರದು. ಇನ್ನು ಪಾಂಡವರ್ಷಭರ ವಿಷಯದಲ್ಲಿ ಹೇಳುವುದೇನಿದೆ?
ಅಮರ್ಷವಶಮಾಪನ್ನೋ ನ ಕಿಂಚಿದ್ ಬುಧ್ಯತೇ ನರಃ |
ಭಿದ್ಯತೇ ಹ್ಯಾತತಂ ಸರ್ವಂ ಪ್ರಮಾಣಂ ಪಶ್ಯ ಭಾರತ ॥49॥
ಎಲೈ ಭಾರತನೇ, ರೋಷಕ್ಕೆ ವಶನಾದವನು ಏನನ್ನೂ ತಿಳಿಯುವುದಿಲ್ಲ. ಅತಿ ಎತ್ತರವಾದುದೆಲ್ಲವೂ ಒಡೆದು ಹೋಗುತ್ತದೆ. ಈ ವಿಷಯದಲ್ಲಿ ನಿನ್ನ ಅನುಭವ ರೂಪ ಪ್ರಮಾಣವನ್ನು ನೋಡು.
ಶ್ರೇಯಸ್ತೇ ದುರ್ಜನಾತ್ ತಾತ ಪಾಂಡವೈಃ ಸಹ ಸಂಗತಮ್ ॥50॥
ತೈರ್ಹಿ ಸಂಪ್ರೀಯಮಾಣಸ್ತ್ವಂ ಪರಾನ್ ಕಾಮಾನವಾಪ್ಸ್ಯಸಿ |
ಪಾಂಡವೈರ್ನಿರ್ಜಿತಾಂ ಭೂಮಿಂ ಭುಂಜಾನೋ ರಾಜಸತ್ತಮ ॥51॥
ಎಲೈ ಪ್ರೀತಿಪಾತ್ರನೇ, ದುರ್ಜನರ ಸಂಗಕ್ಕಿಂತಲೂ ಪಾಂಡವರ ಸಂಗವು ನಿನಗೆ ಶ್ರೇಯಸ್ಕರವಾದುದು. ಎಲೈ ರಾಜಶ್ರೇಷ್ಠನೇ, ನೀನು ಅವರ ಜೊತೆಯಲ್ಲಿ ಪ್ರೀತಿಯಿಂದಿದ್ದರೆ ಪಾಂಡವರು ಜಯಿಸಿದ ಭೂಮಿಯನ್ನು ಭೋಗಿಸುತ್ತಾ ಶ್ರೇಷ್ಠವಾದ ಕಾಮಗಳನ್ನು ಹೊಂದುವಿ.
ಪಾಂಡವಾನ್ ಪೃಷ್ಠತಃ ಕೃತ್ವಾ ತ್ರಾಣಮಾಶಂಸಸೇಽನ್ಯತಃ |
ದುಃಶಾಸನೇ ದುರ್ವಿಷಹೇ ಕರ್ಣೇಽಥಾಪಿ ಚ ಸೌಬಲೇ ॥52॥
ಪಾಂಡವರನ್ನು ತಿರಸ್ಕರಿಸಿ ದುಃಶಾಸನ, ದುರ್ವಿಷಹ, ಕರ್ಣ, ಶಕುನಿ ಮೊದಲಾದವರಿಂದ ರಕ್ಷಣೆಯನ್ನು ಬಯಸುತ್ತಿದ್ದೀಯೆ.
ಏತೇಷ್ವೈಶ್ವರ್ಯಮಾಧಾಯ ಭೂತಿಮಿಚ್ಛಸಿ ಭಾರತ |
ನ ಚೈತೇ ತವ ಪರ್ಯಾಪ್ತಾ ಜ್ಞಾನೇ ಧರ್ಮಾರ್ಥಯೋಸ್ತಥಾ ॥53॥
ಎಲೈ ಭಾರತನೇ, ಇವರಲ್ಲಿ ನಿನ್ನ ಐಶ್ವರ್ಯವನ್ನು ಹಾಕಿ ಸಮೃದ್ಧಿಯನ್ನು ಬಯಸುತ್ತಿದ್ದೀಯೆ. ಇವರು ಜ್ಞಾನದಲ್ಲಾಗಲೀ, ಧರ್ಮಾರ್ಥಗಳಲ್ಲಾಗಲೀ ನಿನಗೆ ಸಾಟಿಯಲ್ಲ.
ವಿಕ್ರಮೇ ಚಾಪ್ಯಪರ್ಯಾಪ್ತಾಃ ಪಾಂಡವಾನ್ ಪ್ರತಿ ಭಾರತ |
ನ ಹೀಮೇ ಸರ್ವರಾಜಾನಃ ಪರ್ಯಾಪ್ತಾಃ ಸಹಿತಾಸ್ತ್ವಯಾ ॥54॥
ಎಲೈ ಭಾರತನೇ, ಇವರು ವಿಕ್ರಮದಲ್ಲಿ ಪಾಂಡವರಿಗೆ ಎಂದೂ ಸರಿಗಟ್ಟುವವರಲ್ಲ. ನಿನ್ನಿಂದ ಸಹಿತರಾದ ಈ ಎಲ್ಲ ರಾಜರೂ ಸಹ ಪಾಂಡವರಿಗೆ ಸರಿಸಾಟಿಯಾಗುವುದಿಲ್ಲ.
ಕ್ರುದ್ಧಸ್ಯ ಭೀಮಸೇನಸ್ಯ ಪ್ರೇಕ್ಷಿತುಂ ಮುಖಮಾಹವೇ |
ಇದಂ ಸನ್ನಿಹಿತಂ ತಾತ ಸಮಗ್ರಂ ಪಾರ್ಥಿವಂ ಬಲಮ್ ॥55॥
ಎಲೈ ಪ್ರೀತಿಪಾತ್ರನೇ, ಯುದ್ಧದಲ್ಲಿ ಕ್ರುದ್ಧನಾದ ಭೀಮಸೇನನ ಮುಖವನ್ನು ನೋಡಲು ಸನ್ನಿಹಿತವಾದ ಸಮಗ್ರವಾದ ರಾಜರ ಬಲಕ್ಕೇ ಸಾಧ್ಯವಿಲ್ಲ.
ಅಯಂ ಭೀಷ್ಮಸ್ತಥಾ ದ್ರೋಣಃ ಕರ್ಣಶ್ಚಾಪಿ ತಥಾ ಕೃಪಃ |
ಭೂರಿಶ್ರವಾಃ ಸೌಮದತ್ತಿರಶ್ವತ್ಥಾಮಾ ಜಯದ್ರಥಃ ॥56॥
ಅಶಕ್ತಾಃ ಸರ್ವ ಏವೈತೇ ಪ್ರತಿಯೋದ್ಧುಂ ಧನಂಜಯಮ್ ॥57॥

ಈ ಭೀಷ್ಮ, ದ್ರೋಣ, ಕರ್ಣ, ಕೃಪ, ಸೋಮದತ್ತನ ಮಗನಾದ ಭೂರಿಶ್ರವ, ಅಶ್ವತ್ಥಾಮ, ಜಯದ್ರಥ ಇವರೆಲ್ಲರೂ ಧನಂಜಯನ ಜೊತೆಯಲ್ಲಿ ಯುದ್ಧ ಮಾಡಲು ಸಮರ್ಥರಲ್ಲ.
ಅಜೇಯೋ ಹ್ಯರ್ಜುನಃ ಕ್ರುದ್ಧಃ ಸರ್ವೈರಪಿ ಸುರಾಸುರೈಃ |
ಮಾನುಷ್ಯೈರಪಿ ಗಂಧರ್ವೈರ್ಮಾ ಯುದ್ಧೇ ಚೇತ ಆದಧಾಃ ॥58॥
ಕ್ರುದ್ಧನಾದ ಅರ್ಜುನನು ಯುದ್ಧದಲ್ಲಿ ಎಲ್ಲಾ ಸುರಾಸುರರಿಂದಲೂ, ಮನುಷ್ಯರಿಂದಲೂ ಮತ್ತು ಗಂಧರ್ವರಿಂದಲೂ ಅಜೇಯನಾದವನು. ಯುದ್ಧದಲ್ಲಿ ಮನಸ್ಸನ್ನು ಇಡಬೇಡ.
ದೃಶ್ಯತಾಂ ವಾ ಪುಮಾನ್ ಕಶ್ಚಿತ್ ಸಮಗ್ರೇ ಪಾರ್ಥಿವೇ ಬಲೇ |
ಯೋಽರ್ಜುನಂ ಸಮರೇ ಪ್ರಾಪ್ಯ ಸ್ವಸ್ತಿಮಾನಾವ್ರಜೇದ್ ಗೃಹಾನ್ ॥
ಅರ್ಜುನನನ್ನು ಯುದ್ಧದಲ್ಲಿ ಎದುರಿಸಿ ಕ್ಷೇಮದಿಂದ ಮನೆಗೆ ಹಿಂದಿರುಗುವ ಒಬ್ಬ ಪುರುಷನನ್ನು ಈ ಸಮಸ್ತವಾದ ರಾಜರ ಸೈನ್ಯದಲ್ಲಿ ಒಬ್ಬನನ್ನಾದರೂ ತೋರಿಸು.
ಕಿಂ ತೇ ಜನಕ್ಷಯೇಣೇಹ ಕೃತೇನ ಭರತರ್ಷಭ |
ಯಸ್ಮಿನ್ ಜಿತೇ ಜಿತಂ ತೇ ಸ್ಯಾತ್ ಪುಮಾನೇಕಃ ಸ ದೃಶ್ಯತಾಮ್ ॥60॥
ಎಲೈ ಭರತರ್ಷಭನೇ, ಈ ಜನಕ್ಷಯವನ್ನು ಮಾಡಿ ನಿನಗೆ ಏನು ಪ್ರಯೋಜನ? ಯಾವನನ್ನು ವಶಪಡಿಸಿಕೊಂಡರೆ ಎಲ್ಲವೂ ವಶವಾಗುವುದೋ ಅಂತಹ ಒಬ್ಬ ಪುರುಷನನ್ನು ನೋಡು.
ಯಃ ಸ ದೇವಾನ್ ಸಗಂಧರ್ವಾನ್ ಸಯಕ್ಷಾಸುರಪನ್ನಗಾನ್ |
ಅಜಯತ್ ಖಾಂಡವಪ್ರಸ್ಥೇ ಕಸ್ತಂ ಯುದ್ಧ್ಯೇತ ಮಾನವಃ ॥61॥
ಯಾವ ಅರ್ಜುನನು ಖಾಂಡವಪ್ರಸ್ಥದಲ್ಲಿ ಗಂಧರ್ವರಿಂದ ಮತ್ತು ಯಕ್ಷರಾಕ್ಷಸಸರ್ಪಗಳಿಂದ ಸಹಿತರಾದ ದೇವತೆಗಳನ್ನು ಜಯಿಸಿದನೋ ಅವನ ಜೊತೆಯಲ್ಲಿ ಯಾವ ಮನುಷ್ಯನು ಯುದ್ಧ ಮಾಡಿಯಾನು?
ತಥಾ ವಿರಾಟನಗರೇ ಶ್ರೂಯತೇ ಮಹದದ್ಭುತಮ್ |
ಏಕಸ್ಯ ಚ ಬಹೂನಾಂ ಚ ಪರ್ಯಾಪ್ತಂ ತನ್ನಿದರ್ಶನಮ್ ॥62॥
ವಿರಾಟನಗರದಲ್ಲಿ ಒಬ್ಬ ಅರ್ಜುನನಿಗೆ ಅನೇಕರ ಜೊತೆಯಲ್ಲಿ ನಡೆದ ಮಹದದ್ಭುತವಾದ ಯುದ್ಧವು ಕೇಳಿ ಬರುತ್ತದೆ. ಅದೊಂದು ದೃಷ್ಟಾಂತವು ಸಾಕು.
ತಮಜೇಯಮನಾಧೃಷ್ಯಂ ವಿಜೇತುಂ ಜಿಷ್ಣುಮಚ್ಯುತಮ್ |
ಆಶಂಸಸೀಹ ಸಮರೇ ವೀರಮರ್ಜುನಮೂರ್ಜಿತಮ್ ॥63॥
ಅಜೇಯನಾದ, ಸೋಲಿಸಲು ಸಾಧ್ಯವಿಲ್ಲದ, ತನ್ನ ಗುಣಗಳಿಂದ ಚ್ಯುತನಾಗದ, ಜಯಶೀಲನಾದ, ವೀರನಾದ, ಅಭಿವೃದ್ಧಿಯನ್ನು ಹೊಂದುತ್ತಿರುವ ಅರ್ಜುನನನ್ನು ಯುದ್ಧದಲ್ಲಿ ಗೆಲ್ಲಲು ಬಯಸುತ್ತಿದ್ದೀಯೆ.
ಮದ್ದ್ವಿತೀಯಂ ಪುನಃ ಪಾರ್ಥಂ ಕಃ ಪ್ರಾಪಯಿತುಮರ್ಹತಿ |
ಯುದ್ಧೇ ಪ್ರತೀಯಮಾನಂ ತಮಪಿ ಸಾಕ್ಷಾತ್ ಪುರಂದರಃ ॥64॥
ಯುದ್ಧದಲ್ಲಿ ಮುನ್ನುಗ್ಗುತ್ತಿರುವ ನನ್ನ ಸಹಾಯವುಳ್ಳ ಪಾರ್ಥನನ್ನು ಸಾಕ್ಷಾತ್ ಪುರಂದರನೇ ಆದರೂ ಯಾವನು ಹಿಂದಿರುಗಿಸುತ್ತಾನೆ?
ಬಾಹುಭ್ಯಾಮುದ್ಧರೇದ್ ಭೂಮಿಂ ದಹೇತ್ ಕ್ರುದ್ಧ ಇಮಾ ಪ್ರಜಾಃ |
ಪಾತಯೇತ್ ತ್ರಿವಿಧಾನ್ ದೇವಾನ್ ಯೋಽರ್ಜುನಂ ಸಮರೇ ಜಯೇತ್॥
ಯಾವನು ಅರ್ಜುನನನ್ನು ಯುದ್ಧದಲ್ಲಿ ಜಯಿಸುವನೋ ಅವನು ತನ್ನ ಬಾಹುಗಳಿಂದ ಭೂಮಿಯನ್ನು ಎತ್ತಿಯಾನು? ಕ್ರೋಧದಿಂದ ಎಲ್ಲ ಪ್ರಜೆಗಳನ್ನೂ ಸುಟ್ಟಾನು! ಮೂರುವಿಧರಾದ ದೇವತೆಗಳನ್ನೂ ಸ್ವರ್ಗದಿಂದ ಬೀಳಿಸಿಯಾನು!
ಪಶ್ಯ ಪುತ್ರಾಂಸ್ತಥಾ ಭ್ರಾತೄನ್ ಜ್ಞಾತೀನ್ ಸಂಬಂಧಿಬಾಂಧವಾನ್ |
ತ್ವತ್ಕೃತೇ ನ ವಿನಶ್ಯೇಯುರಿಮೇ ಭರತಸತ್ತಮಾಃ ॥66॥
ನಿನ್ನ ಸಹೋದರರನ್ನೂ, ಪುತ್ರರನ್ನೂ, ಜ್ಞಾತಿಗಳನ್ನೂ ಮತ್ತು ಸಂಬಂಧಿ ಬಾಂಧವರನ್ನೂ ನೋಡು. ನಿನ್ನ ಸಲುವಾಗಿ ಈ ಭರತಶ್ರೇಷ್ಠರು ನಾಶವನ್ನು ಹೊಂದದಿರಲಿ.
ಅಸ್ತು ಶೇಷಂ ಕೌರವಾಣಾಂ ಮಾ ಪರಾಭೂದಿದಂ ಕುಲಮ್ |
ಕುಲಘ್ನ ಇತಿ ನೋಚ್ಯೇಥಾ ನಷ್ಟಕೀರ್ತಿರ್ನರಾಧಿಪ ॥67॥
ಎಲೈ ನರಾಧಿಪನೇ, ಕೌರವರು ಉಳಿಯಲಿ. ಈ ಕುಲವು ನಾಶ ಹೊಂದದಿರಲಿ. ನಿನಗೆ ಕುಲನಾಶಕನೆಂಬ ಅಪಕೀರ್ತಿಯು ಬರದಿರಲಿ.
ತ್ವಾಮೇವ ಸ್ಥಾಪಯಿಷ್ಯಂತಿ ಯೌವರಾಜ್ಯೇ ಮಹಾರಥಾಃ |
ಮಹಾರಾಜ್ಯೇಽಪಿ ಪಿತರಂ ಧೃತರಾಷ್ಟ್ರಂ ಜನೇಶ್ವರಮ್ ॥68॥
ಮಹಾರಥರಾದ ಪಾಂಡವರು ನಿನ್ನ ತಂದೆಯಾದ ಧೃತರಾಷ್ಟ್ರನನ್ನು ಮಹಾರಾಜ್ಯದಲ್ಲಿ ಸ್ಥಾಪಿಸಿ, ನಿನ್ನನ್ನೇ ಯೌವರಾಜ್ಯದಲ್ಲಿ ಸ್ಥಾಪಿಸುವರು.
ಮಾ ತಾತ ಶ್ರಿಯಮಾಯಾಂತೀಮವಮಂಸ್ಥಾಃ ಸಮುದ್ಯತಾಮ್ |
ಅರ್ಧಂ ಪ್ರದಾಯ ಪಾರ್ಥೇಭ್ಯೋ ಮಹತೀಂ ಶ್ರಿಯಮಾಪ್ಸ್ಯಸಿ ॥69॥
ಎಲೈ ಪ್ರೀತಿಪಾತ್ರನೇ, ತಾನಾಗಿ ಬರುತ್ತಿರುವ ಅಪಾರವಾದ ಸಂಪತ್ತಿಗೆ ಅವಮಾನ ಮಾಡಬೇಡ. ಪಾಂಡವರಿಗೆ ಅರ್ಧವನ್ನು ಕೊಟ್ಟು ದೊಡ್ಡ ಸಂಪತ್ತನ್ನು ಹೊಂದುವಿ.
ಪಾಂಡವೈಃ ಸಂಶಮಂ ಕೃತ್ವಾ ಕೃತ್ವಾ ಚ ಸುಹೃದಾಂ ವಚಃ |

ಸಂಪ್ರೀಯಮಾಣೋ ಮಿತ್ರೈಶ್ಚ ಚಿರಂ ಭದ್ರಾಣ್ಯವಾಪ್ಸ್ಯಸಿ ॥70॥
ಸುಹೃಜ್ಜನರ ಮಾತುಗಳನ್ನು ಕೇಳಿ, ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಂಡು, ಮಿತ್ರರ ಜೊತೆಯಲ್ಲಿ ಸಂತೋಷದಿಂದಿದ್ದು, ಬಹುಕಾಲದವರೆಗೆ ಎಲ್ಲಾ ಮಂಗಳಗಳನ್ನೂ ಹೊಂದುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತುಃಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *

ನೂರ ಇಪ್ಪತ್ನಾಲ್ಕನೆಯ ಅಧ್ಯಾಯ
ಭೀಷ್ಮ-ದ್ರೋಣ-ವಿದುರ-ಧೃತರಾಷ್ಟ್ರರಿಂದ ಕೃಷ್ಣನ ಮಾತುಗಳನ್ನು ಸ್ವೀಕರಿಸುವಂತೆ ದುರ್ಯೋಧನನಿಗೆ ಒತ್ತಾಯ.
ವೈಶಂಪಾಯನಃ
ತತಃ ಶಾಂತನವೋ ಭೀಷ್ಮೋ ದುರ್ಯೋಧನಮರಿಂದಮಮ್ ।
ಕೇಶವಸ್ಯ ವಚಃ ಶ್ರುತ್ವಾ ಪ್ರೋವಾಚ ಭರತರ್ಷಭ ॥1॥
ವೈಶಂಪಾಯನ ಎಲೈ ಭರತರ್ಷಭನೇ, ಅನಂತರ ಕೇಶವನ ಮಾತುಗಳನ್ನು ಕೇಳಿ, ಶಂತನುಪುತ್ರನಾದ ಭೀಷ್ಮನು ಅರಿಂದಮನಾದ ದುರ್ಯೋಧನನನ್ನು ಕುರಿತು ಮಾತನಾಡಿದನು.
ಕೃಷ್ಣೇನ ವಾಕ್ಯಮುಕ್ತೋಽಸಿ ಸುಹೃದಾಂ ಶಮಮಿಚ್ಛತಾ ।
ಅನ್ವಪದ್ಯಸ್ವ ತತ್ ತಾತ ಮಾ ಮನ್ಯುವಶಮನ್ವಗಾಃ ॥2॥
ಬಾಂಧವರಲ್ಲಿ ಶಾಂತಿಯನ್ನು ಬಯಸುವ ಕೃಷ್ಣನ ಮಾತುಗಳನ್ನು ನೀನು ಕೇಳಿದ್ದೀಯೆ. ಪ್ರೀತಿಪಾತ್ರನೇ, ಆ ಮಾತಿನಂತೆ ನಡೆದುಕೊ. ಕ್ರೋಧಕ್ಕೆ ವಶನಾಗಬೇಡ.
ಅಕೃತ್ವಾ ವಚನಂ ತಸ್ಯ ಕೇಶವಸ್ಯ ಮಹಾತ್ಮನಃ ।
ಶ್ರೇಯೋ ನ ಜಾತು ನ ಸುಖಂ ನ ಕಲ್ಯಾಣಮವಾಪ್ಸ್ಯಸಿ ॥3॥
ಮಹಾತ್ಮನಾದ ಕೇಶವನ ಮಾತುಗಳನ್ನು ನಡೆಸದಿದ್ದರೆ ಎಂದಿಗೂ ನೀನು ಶ್ರೇಯಸ್ಸನ್ನಾಗಲೀ, ಸುಖವನ್ನಾಗಲೀ, ಕಲ್ಯಾಣವನ್ನಾಗಲೀ ಹೊಂದುವುದಿಲ್ಲ.
ಧರ್ಮ್ಯಮರ್ಥ್ಯಂ ಮಹಾಬಾಹುರಾಹ ತ್ವಾಂ ತಾತ ಕೇಶವಃ ।
ತಮರ್ಥಮಭಿಪದ್ಯಸ್ವ ಮಾ ರಾಜನ್ ನೀನಶಃ ಪ್ರಜಾಃ ॥4॥
ಎಲೈ ಪ್ರೀತಿಪಾತ್ರನೇ, ಮಹಾಬಾಹುವಾದ ಕೇಶವನು ನಿನಗೆ ಧರ್ಮಾರ್ಥ ಸಾಧಕವಾದ ಮಾತುಗಳನ್ನು ಹೇಳಿದ್ದಾನೆ. ರಾಜನೇ, ಅದರಂತೆ ನಡೆದುಕೊ. ಪ್ರಜೆಗಳನ್ನು ನಾಶ ಮಾಡಬೇಡ.
ಜ್ವಲಿತಾಂ ತ್ವಮಿಮಾಂ ಲಕ್ಷ್ಮೀಂ ಭಾರತೀಂ ಸರ್ವರಾಜಸು ।
ಜೀವತೋ ಧೃತರಾಷ್ಟ್ರಸ್ಯ ದೌರಾತ್ಮ್ಯಾದ್ ಭ್ರಂಶಯಿಷ್ಯಸಿ ॥5॥
ಎಲ್ಲ ರಾಜರಲ್ಲಿ ಪ್ರಜ್ವಲಿಸುವ ಈ ಭರತವಂಶದ ಲಕ್ಷ್ಮಿಯನ್ನು ಧೃತರಾಷ್ಟ್ರನು ಬದುಕಿರುವಾಗಲೇ ನೀನು ದೌರಾತ್ಮ್ಯದಿಂದ ನಾಶ ಮಾಡುವಿ.
ಆತ್ಮಾನಂ ಚ ಸಹಾಮಾತ್ಯಂ ಸಪುತ್ರಭ್ರಾತೃಬಾಂಧವಮ್ ।
ಅಹಮಿತ್ಯನಯಾ ಬುದ್ಧ್ಯಾ ಜೀವಿತಾದ್ ಭ್ರಂಶಯಿಷ್ಯಸಿ ॥6॥
ನಿನ್ನ ಅಹಂಕಾರಬುದ್ಧಿಯಿಂದ ನಿನ್ನನ್ನೂ, ಅಮಾತ್ಯರನ್ನೂ, ಪುತ್ರ-ಭ್ರಾತೃ ಬಾಂಧವರನ್ನೂ ಜೀವಿತದಿಂದ ಭ್ರಷ್ಟರಾಗುವಂತೆ ಮಾಡುವಿ.
ಅತಿಕ್ರಾಮನ್ ಕೇಶವಸ್ಯ ತಥ್ಯಂ ವಚನಮರ್ಥವತ್ ।
ಪಿತುಶ್ಚ ಭರತಶ್ರೇಷ್ಠ ವಿದುರಸ್ಯ ಚ ಧೀಮತಃ ॥7॥
ಮಾ ಕುಲಘ್ನಃ ಕುಪುರುಷೋ ದುರ್ಮತಿಃ ಕಾಪಥಂ ಗಮಃ ॥8॥
ಮಾತರಂ ಪಿತರಂ ಚೈವ ವೃದ್ಧೌ ಶೋಕಾಯ ಮಾ ದದಾಃ ॥9॥
ಎಲೈ ಭರತಶ್ರೇಷ್ಠನೇ, ಕೇಶವನ ಹಿತವಾದ ಮತ್ತು ಅರ್ಥವತ್ತಾದ ಮಾತುಗಳನ್ನು ಮೀರಿ, ತಂದೆಯ ಮತ್ತು ಮೇಧಾವಿಯಾದ ವಿದುರನ ಮಾತುಗಳನ್ನು ಮೀರಿ, ಕುಲವನ್ನು ನಾಶಮಾಡಿ, ಕೆಟ್ಟ ಪುರುಷನಾಗಿ ದುರ್ಮತಿಯನ್ನು ಹೊಂದಿ, ದುರ್ಗತಿಯನ್ನು ಹೊಂದಬೇಡ. ವೃದ್ಧರಾದ ತಂದೆ-ತಾಯಿಗಳನ್ನು ಶೋಕಕ್ಕೆ ಗುರಿಮಾಡಬೇಡ.
ಅಥ ದ್ರೋಣೋಽಬ್ರವೀತ್ ತತ್ರ ದುರ್ಯೋಧನಮಿದಂ ವಚಃ ।
ಅಮರ್ಷವಶಮಾಪನ್ನಂ ನಿಃಶ್ವಸಂತಂ ಪುನಃ ಪುನಃ ॥10॥
ಅನಂತರ ಅಲ್ಲಿ ದ್ರೋಣರು ಕ್ರೋಧವಶನಾಗಿ ಪುನಃಪುನಃ ನಿಟ್ಟುಸಿರನ್ನು ಬಿಡುತ್ತಿದ್ದ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಆಡಿದರು.
ಧರ್ಮಾರ್ಥಯುಕ್ತಂ ವಚನಮಾಹ ತ್ವಾಂ ತಾತ ಕೇಶವಃ ।
ತಥಾ ಭೀಷ್ಮಃ ಶಾಂತನವಃ ತಜ್ಜುಷಸ್ವ ನರಾಧಿಪ ॥11॥

ಎಲೈ ಪ್ರೀತಿಪಾತ್ರನೇ, ಕೇಶವನು ಧರ್ಮಾರ್ಥಯುಕ್ತವಾದ ಮಾತುಗಳನ್ನೇ ನಿನಗೆ ಹೇಳಿದ್ದಾನೆ. ಹಾಗೆಯೇ ಶಂತನುಪುತ್ರರಾದ ಭೀಷ್ಮರೂ ಹೇಳಿದ್ದಾರೆ. ರಾಜನೇ, ಅದನ್ನು ಇಷ್ಟಪಡುವವನಾಗು.
ಪ್ರಾಜ್ಞೌ ಮೇಧಾವಿನೌ ದಾಂತಾವರ್ಥಕಾಮೌ ಬಹುಶ್ರುತೌ |
ಆಹತುಸ್ತತ್ತ್ವಂ ಹಿತಂ ವಾಕ್ಯಂ ತದಾದತ್ಸ್ವ ನರಾಧಿಪ ॥12॥
ಎಲೈ ನರಾಧಿಪನೇ, ಪ್ರಾಜ್ಞರೂ, ಮೇಧಾವಿಗಳೂ, ಇಂದ್ರಿಯನಿಗ್ರಹವುಳ್ಳವರೂ, ನಿನ್ನ ಹಿತವನ್ನು ಬಯಸುವವರೂ, ಬಹುಶ್ರುತರೂ ಆದ ಅವರಿಬ್ಬರೂ ನಿನಗೆ ಹಿತವನ್ನೇ ಹೇಳಿದ್ದಾರೆ. ಅದನ್ನು ಸ್ವೀಕರಿಸು.
ಅನುತಿಷ್ಠ ಮಹಾಪ್ರಾಜ್ಞ ಕೃಷ್ಣಭೀಷ್ಮೌ ಯದೂಚತುಃ |
ಮಾ ವಚೋ ಲಘುಬುದ್ಧೀನಾಂ ಸಮಾಸ್ಥಾಸ್ತ್ವಂ ಪರಂತಪ ॥13॥
ಎಲೈ ಮಹಾಪ್ರಾಜ್ಞನೇ, ಕೃಷ್ಣ ಮತ್ತು ಭೀಷ್ಮರು ಹೇಳಿದುದನ್ನು ಅನುಷ್ಠಾನಕ್ಕೆ ತೆಗೆದುಕೊಂಡು ಬಾ. ಎಲೈ ಪರಂತಪನೇ, ಲಘುಬುದ್ಧಿಯುಳ್ಳವರ ಮಾತುಗಳನ್ನು ಕೇಳಬೇಡ.
ಮಾಧವಂ ಬುದ್ಧಿಮೋಹೇನ ಮಾಽವಮಂಸ್ಥಾಃ ಪರಂತಪ |
ಯೇ ತ್ವಾಂ ಪ್ರೋತ್ಸಾಹಯಂತ್ಯೇತೇ ನೈತೇ ಕೃತ್ಯಾಯ ಕರ್ಹಿಚಿತ್ ॥14॥
ವೈರಂ ಪರೇಷಾಂ ಗ್ರೀವಾಯಾಂ ಪ್ರತಿಮೋಕ್ಷ್ಯಂತಿ ಸಂಯುಗೇ ॥15॥
ಎಲೈ ಪರಂತಪನೇ, ಮಾಧವನ ಮಾತುಗಳನ್ನು ಬುದ್ಧಿಮೋಹದಿಂದ ಅವಮಾನಗೊಳಿಸಬೇಡ. ನಿನಗೆ ಪ್ರೋತ್ಸಾಹವನ್ನು ಕೊಡುತ್ತಿರುವ ಇವರು ಯಾವ ಪ್ರಯೋಜನಕ್ಕೂ ಬಂದವರಲ್ಲ. ಇವರು ಯುದ್ಧದಲ್ಲಿ ನಮ್ಮ ಕುತ್ತಿಗೆಗೆ ಪಾಂಡವರ ವೈರವನ್ನು ಕಟ್ಟುತ್ತಾರೆ.
ಮಾ ನೀನಶಃ ಪ್ರಜಾಃ ಸರ್ವಾಃ ಪುತ್ರಾನ್ ಭ್ರಾತೄಂಸ್ತಥೈವ ಚ |
ವಾಸುದೇವಾರ್ಜುನೌ ಯತ್ರ ವಿದ್ಧ್ಯಜೇಯಂ ಬಲಂ ಹಿ ತತ್ ॥16॥
ಎಲ್ಲ ಪ್ರಜೆಗಳನ್ನೂ ಮತ್ತು ಪುತ್ರ-ಭ್ರಾತೃಗಳನ್ನೂ ನಾಶಮಾಡಬೇಡ. ಎಲ್ಲಿ ಕೃಷ್ಣಾರ್ಜುನರು ಇದ್ದಾರೆಯೋ ಆ ಸೈನ್ಯವು ಅಜೇಯವೆಂದೇ ತಿಳಿ.
ಏತಚ್ಚೈವ ಮತಂ ಸತ್ಯಂ ಸುಹೃದೋಃ ಕೃಷ್ಣಭೀಷ್ಮಯೋಃ |
ಯದಿ ನಾದಾಸ್ಯತೇ ತಾತ ಪಶ್ಚಾತ್ ತಪ್ಸ್ಯಸಿ ಭಾರತ ॥17॥
ಹಿತಚಿಂತಕರಾದ ಕೃಷ್ಣ ಮತ್ತು ಭೀಷ್ಮರ ಈ ಸತ್ಯವಾದ ಅಭಿಪ್ರಾಯವನ್ನು ನೀನು ಸ್ವೀಕರಿಸದಿದ್ದರೆ ಎಲೈ ಪ್ರೀತಿಪಾತ್ರನಾದ ಭಾರತನೇ, ನೀನು ಪಶ್ಚಾತ್ತಾಪವನ್ನು ಪಡುವಿ.
ಯಥೋಕ್ತಂ ಜಾಮದಗ್ನ್ಯೇನ ಭೂಯಾನೇಷ ತತೋಽರ್ಜುನಃ |
ಕೃಷ್ಣೋ ಹಿ ದೇವಕೀಪುತ್ರೋ ದೇವೈರಪಿ ಸುದುಃಸಹಃ ॥18॥
ಪರಶುರಾಮರು ಹೇಳಿದಂತೆ ಈ ಅರ್ಜುನನು ಕಾರ್ತವೀರ್ಯಾರ್ಜುನನಿಗಿಂತ ಮಿಗಿಲಾದವನು. ದೇವಕೀಪುತ್ರನಾದ ಕೃಷ್ಣನಾದರೂ ದೇವತೆಗಳಿಗೂ ದುಃಸಹನಾದವನು.
ಕಿಂ ತೇ ಮುಖಪ್ರಿಯೇಣೇಹ ಪ್ರೋಕ್ತೇನ ಭರತರ್ಷಭ ॥19॥
ಏತತ್ ತೇ ಸರ್ವಮಾಖ್ಯಾತಂ ಯಥೇಚ್ಛಸಿ ತಥಾ ಕುರು |
ನ ಹಿ ತ್ವಾಮುತ್ಸಹೇ ವಕ್ತುಂ ಭೂಯೋ ಭರತಸತ್ತಮ ॥20॥
ಎಲೈ ಭರತರ್ಷಭನೇ, ನಿನ್ನ ಮುಖಸ್ತುತಿಯನ್ನು ಮಾಡಿ ಏನು ಪ್ರಯೋಜನ? ಎಲ್ಲವನ್ನೂ ಹೇಳಿದ್ದೇನೆ. ನಿನಗೆ ಇಷ್ಟಬಂದಂತೆ ಮಾಡು. ಎಲೈ ಭರತಸತ್ತಮನೇ, ಇದಕ್ಕಿಂತ ಹೆಚ್ಚು ಏನನ್ನೂ ಹೇಳಲಾರೆ.
ತಸ್ಮಿನ್ ವಾಕ್ಯಾಂತರೇ ವಾಕ್ಯಂ ಕ್ಷತ್ತಾಽಪಿ ವಿದುರೋಽಬ್ರವೀತ್ |
ದುರ್ಯೋಧನಮಭಿಪ್ರೇಕ್ಷ್ಯ ಧಾರ್ತರಾಷ್ಟ್ರಮಮರ್ಷಣಮ್ ॥21॥
ದ್ರೋಣರ ವಾಕ್ಯವು ಮುಗಿಯುತ್ತಿರಲು ವಿದುರನೂ ಸಹ ರೋಷಾವಿಷ್ಟನಾಗಿದ್ದ ದುರ್ಯೋಧನನನ್ನು ನೋಡಿ ಮಾತನಾಡಿದನು.
ದುರ್ಯೋಧನ ನ ಶೋಚಾಮಿ ತ್ವಾಮಹಂ ಭರತರ್ಷಭ |
ಇಮೌ ತು ವೃದ್ಧೌ ಶೋಚಾಮಿ ಗಾಂಧಾರೀಂ ಪಿತರಂ ಚ ತೇ ॥22॥
ಎಲೈ ಭರತಶ್ರೇಷ್ಠನಾದ ದುರ್ಯೋಧನನೇ, ನಿನಗಾಗಿ ನಾನು ಶೋಕಪಡುತ್ತಿಲ್ಲ. ವೃದ್ಧರಾದ ನಿನ್ನ ತಂದೆಯನ್ನೂ ಮತ್ತು ಗಾಂಧಾರಿಯನ್ನೂ ಕುರಿತು ಶೋಕಪಡುತ್ತಿದ್ದೇನೆ.
ಯಾವನಾಥೌ ಭವಿಷ್ಯೇತೇ ತ್ವಯಾ ನಾಥೇನ ದುರ್ಹೃದಾ |
ಹತಮಿತ್ರೌ ಹತಾಮಾತ್ಯೌ ಲೂನಪಕ್ಷವಿವಾಂಡಜೌ ॥23॥
ನಿನ್ನಂತಹ ಕೆಟ್ಟ ಹೃದಯವುಳ್ಳ ನಾಥನನ್ನು ಹೊಂದಿ, ಅವರು ಮಿತ್ರರನ್ನು ಕಳೆದುಕೊಂಡು, ಅಮಾತ್ಯರನ್ನು ಕಳೆದುಕೊಂಡು ರೆಕ್ಕೆಗಳನ್ನು ಕತ್ತರಿಸಿದ ಪಕ್ಷಿಗಳಂತೆ ಅನಾಥರಾಗುವರು.
ಭಿಕ್ಷುಕೌ ವಿಚರಿಷ್ಯೇತೇ ಶೋಚಂತೌ ಪೃಥಿವೀಮಿಮಾಮ್ |
ಕುಲಘ್ನಮೀದೃಶಂ ಪಾಪಂ ಜನಯಿತ್ವಾ ಕುಪೂರುಷಮ್ ॥24॥
ನಿನ್ನಂತಹ ಕುಲನಾಶಕನಾದ ಕುಪುರುಷನಾದ ಪಾಪಿಯನ್ನು ಮಗನನ್ನಾಗಿ ಪಡೆದು ಶೋಕಪಡುತ್ತಾ, ಭಿಕ್ಷೆಯನ್ನು ಬೇಡುತ್ತಾ ಈ ಭೂಮಿಯಲ್ಲಿ ತಿರುಗುವರು.
ಅಥ ದುರ್ಯೋಧನಂ ರಾಜಾ ಧೃತರಾಷ್ಟ್ರೋಽಭ್ಯಭಾಷತ |
ಆಸೀನಂ ಭ್ರಾತೃಭಿಃ ಸಾರ್ಧಂ ರಾಜಭಿಃ ಪರಿವಾರಿತಮ್ ॥25॥

ಅನಂತರ ರಾಜರಿಂದ ಪರಿವಾರಿತನಾಗಿ ತಮ್ಮಂದಿರ ಜೊತೆಯಲ್ಲಿ ಕುಳಿತಿದ್ದ ದುರ್ಯೋಧನನನ್ನು ಕುರಿತು ರಾಜನಾದ ಧೃತರಾಷ್ಟ್ರನು ಮಾತನಾಡಿದನು.
ದುರ್ಯೋಧನ ನಿಬೋಧೇದಂ ಶೌರಿಣೋಕ್ತಂ ಮಹಾತ್ಮನಾ |
ಆದತ್ಸ್ವ ಶಿವಮತ್ಯಂತಂ ಯೋಗಕ್ಷೇಮವದವ್ಯಯಮ್ ॥26॥
ದುರ್ಯೋಧನನೇ, ಮಹಾತ್ಮನಾದ ಶೌರಿಯು ಹೇಳಿದ ಮಾತುಗಳನ್ನು ಚೆನ್ನಾಗಿ ತಿಳಿದುಕೊ. ನಮ್ಮ ಯೋಗಕ್ಷೇಮಕ್ಕೆ ಸಾಧಕವಾದ, ಅತ್ಯಂತ ಮಂಗಳವಾದ ಅವ್ಯಯವಾದ ಆ ಮಾತುಗಳನ್ನು ಸ್ವೀಕರಿಸು.
ಅನೇನ ಹಿ ಸಹಾಯೇನ ಕೃಷ್ಣೇನಾಕ್ಲಿಷ್ಟಕರ್ಮಣಾ |
ಇಷ್ಟಾನ್ ಸರ್ವಾನಭಿಪ್ರಾಯಾನ್ ಪ್ರಾಪ್ಸ್ಯಾಮಃ ಸರ್ವರಾಜಸು ॥27॥
ಅಕ್ಲಿಷ್ಟಕಾರಿಯಾದ ಈ ಕೃಷ್ಣನ ಸಹಾಯದಿಂದ ನಾವು ಸರ್ವರಾಜರಲ್ಲಿ ನಮಗೆ ಅಭೀಷ್ಟವಾದ ಎಲ್ಲಾ ವಸ್ತುಗಳನ್ನೂ ಪಡೆಯುವೆವು.

ಸುಸಂಹಿತಃ ಕೇಶವೇನ ತಾತ ಗಚ್ಛ ಯುಧಿಷ್ಠಿರಮ್ |
ಚರ ಸ್ವಸ್ತ್ಯಯನಂ ಕೃತ್ಸ್ನಂ ಭರತಾನಾಮನಾಮಯಮ್ ॥28॥
ಎಲೈ ಪ್ರೀತಿಪಾತ್ರನೇ, ಕೇಶವನ ಜೊತೆಯಲ್ಲಿ ಒಂದಾಗಿ ಯುಧಿಷ್ಠಿರನ ಬಳಿಗೆ ಹೋಗು. ಭರತರಿಗೆಲ್ಲಾ ಕ್ಷೇಮವನ್ನೂ ಮತ್ತು ಸಮಗ್ರವಾದ ಮಂಗಳವನ್ನೂ ಉಂಟು ಮಾಡುವವನಾಗು.
ವಾಸುದೇವೇನ ತೀರ್ಥೇನ ತಾತ ಗಚ್ಛಸ್ವ ಸಂಗತಿಮ್ |
ಕಾಲಪ್ರಾಪ್ತಮಿದಂ ಮನ್ಯೇ ಮಾ ತ್ವಂ ದುರ್ಯೋಧನಾತಿಗಾಃ ॥29॥
ಎಲೈ ಪ್ರೀತಿಪಾತ್ರನೇ, ಪೂಜ್ಯನಾದ ವಾಸುದೇವನಿಂದ ಒಂದುಗೂಡುವವನಾಗು. ಇದು ಈ ಕಾಲಕ್ಕೆ ಯೋಗ್ಯವಾದುದೆಂದು ಭಾವಿಸುತ್ತೇನೆ. ದುರ್ಯೋಧನನೇ ಅವನ ಮಾತನ್ನು ಮೀರಬೇಡ.
ಶಮಂ ಚೇದ್ಯಾಚಮಾನಂ ತ್ವಂ ನಾಖ್ಯಾಸ್ಯಸಿ ಕೇಶವಮ್ |
ತ್ವದರ್ಥಮಭಿಜಲ್ಪಂತಂ ನ ತವಾಸ್ತ್ಯಪರಾಭವಃ ॥30॥
ನಿನ್ನ ಹಿತಕ್ಕಾಗಿ ಮಾತನಾಡುತ್ತಾ ಸಂಧಿಯನ್ನು ಯಾಚಿಸುವ ಕೇಶವನಿಗೆ ನೀನು ಸಂಧಿಯ ಮಾತನ್ನು ಹೇಳದಿದ್ದರೆ ನಿನಗೆ ಸೋಲು ಉಂಟಾಗದೇ ಇರಲು ಸಾಧ್ಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ವಿಂಶೋತ್ತರಶತತಮೋऽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚಪಂಚಾಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೈದನೆಯ ಅಧ್ಯಾಯ
ಪಾಂಡವರು ಯುದ್ಧಸನ್ನದ್ಧರಾಗುವುದಕ್ಕಿಂತ ಮೊದಲೇ ಸಂಧಿಯನ್ನು ಮಾಡಿಕೊಳ್ಳುವಂತೆ ಭೀಷ್ಮ-ದ್ರೋಣರಿಂದ ದುರ್ಯೋಧನನಿಗೆ ಕಥನ.
ವೈಶಂಪಾಯನಃ
ಧೃತರಾಷ್ಟ್ರವಚಃ ಶ್ರುತ್ವಾ ಭೀಷ್ಮದ್ರೋಣೌ ಸಮೇತ್ಯ ತೌ |
ದುರ್ಯೋಧನಮಿದಂ ವಾಕ್ಯಮೂಚತುಃ ಶಾಸನಾತಿಗಮ್ ॥1॥
ವೈಶಂಪಾಯನ ಧೃತರಾಷ್ಟ್ರನ ಮಾತುಗಳನ್ನು ಕೇಳಿ ಭೀಷ್ಮ-ದ್ರೋಣರು ದೊಡ್ಡವರ ಶಾಸನವನ್ನು ಮೀರುವ ದುರ್ಯೋಧನನನ್ನು ಕುರಿತು ಒಟ್ಟಿಗೆ ಈ ಮಾತುಗಳನ್ನು ಆಡಿದರು.
ಯಾವತ್ ಕೃಷ್ಣಾವಸನ್ನದ್ಧೌ ಯಾವತ್ ತಿಷ್ಠತಿ ಗಾಂಡಿವಮ್ |
ಯಾವದ್ ಧೌಮ್ಯೋ ನ ಸೇನಾಗ್ನೌ ಜುಹೋತೀಹ ದ್ವಿಷದ್ಬಲಮ್ ॥2॥
ಯಾವನ್ನ ಪ್ರೇಕ್ಷತೇ ಕ್ರುದ್ಧಃ ಸೇನಾಂ ತವ ಯುಧಿಷ್ಠಿರಃ |
ಹ್ರೀನಿಷೇಧೋ ಮಹಾಬಾಹುಃ ತಾವಚ್ಛಾಮ್ಯತು ವೈಶಸಮ್ ॥3॥
ಎಲ್ಲಿಯವರೆಗೆ ಕೃಷ್ಣಾರ್ಜುನರು ಯುದ್ಧಸನ್ನದ್ಧವಾಗುವುದಿಲ್ಲವೋ, ಗಾಂಡೀವವು ಸುಮ್ಮನೆ ಇರುತ್ತದೆಯೋ, ಎಲ್ಲಿಯವರೆಗೆ ಧೌಮ್ಯರು ಸೇನಾಗ್ನಿಯಲ್ಲಿ ಶತ್ರುಸೈನ್ಯವನ್ನು ಹೋಮಮಾಡುವುದಿಲ್ಲವೋ, ಎಲ್ಲಿಯವರೆಗೆ ದಾಕ್ಷಿಣ್ಯಸ್ವಭಾವದವನೂ, ಮಹಾಬಾಹುವೂ ಆದ ಯುಧಿಷ್ಠಿರನು ಕ್ರುದ್ಧನಾಗಿ ನಿನ್ನ ಸೈನ್ಯವನ್ನು ನೋಡುವುದಿಲ್ಲವೋ ಅಷ್ಟರೊಳಗೆ ಯುದ್ಧವು ಶಾಂತವಾಗಲಿ.
ಯಾವನ್ನ ದೃಶ್ಯತೇ ಪಾರ್ಥಃ ಸ್ವೇಷ್ವನೀಕೇಷ್ವವಸ್ಥಿತಃ |
ಭೀಮಸೇನೋ ಮಹೇಷ್ವಾಸಃ ತಾವಚ್ಛಾಮ್ಯತು ವೈಶಸಮ್ ॥4॥
ಎಲ್ಲಿಯವರೆಗೆ ತನ್ನ ಸೈನ್ಯದಲ್ಲಿರುವ ಅರ್ಜುನನೂ ಮಹಾಧನುರ್ಧಾರಿಯಾದ ಭೀಮಸೇನನೂ ಕಂಡುಬರುವುದಿಲ್ಲವೋ ಅಷ್ಟರೊಳಗೆ ಯುದ್ಧವು ಶಾಂತವಾಗಲಿ.
ಯಾವನ್ನ ಚರತೇ ಮಾರ್ಗಾನ್ ಪೃತನಾಮಭಿಹರ್ಷಯನ್ |
ಭೀಮಸೇನೋ ಗದಾಪಾಣಿಸ್ತಾವತ್ ಸಂಶಾಮ್ಯ ಪಾಂಡವೈಃ ॥5॥
ಎಲ್ಲಿಯವರೆಗೆ ಭೀಮಸೇನನು ಗದೆಯನ್ನು ಹಿಡಿದು ಮಾರ್ಗಗಳಲ್ಲಿ ಸಂಚರಿಸುತ್ತಾ ತನ್ನ ಸೈನ್ಯವನ್ನು ಸಂತೋಷಗೊಳಿಸುವುದಿಲ್ಲವೋ

ಅಷ್ಟರೊಳಗೆ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ.
ಯಾವನ್ನ ಶಾತಯತ್ಯಾಜೌ ಶಿರಾಂಸಿ ಗಜಯೋಧಿನಾಮ್ |
ಗದಯಾ ವೀರಘಾತಿನ್ಯಾ ಫಲಾನೀವ ವನಸ್ಪತೇಃ ॥6॥
ಕಾಲೇನ ಪರಿಪಕ್ವಾನಿ ತಾವಚ್ಛಾಮ್ಯತು ವೈಶಸಮ್ ॥7॥
ಎಲ್ಲಿಯವರೆಗೆ ಭೀಮಸೇನನು ವೀರರನ್ನು ಕೊಲ್ಲುವ ತನ್ನ ಗದೆಯಿಂದ ಕಾಲದಿಂದ ಪಕ್ವವಾದ ಫಲಗಳನ್ನು ವೃಕ್ಷದಿಂದ ಬೀಳಿಸಿದಂತೆ ಯುದ್ಧದಲ್ಲಿ ಗಜಯೋಧಿಗಳ ಶಿರಸ್ಸನ್ನು ಕೆಡಹುವುದಿಲ್ಲವೋ ಅಷ್ಟರೊಳಗೆ ಯುದ್ಧವು ಶಾಂತವಾಗಲಿ.
ನಕುಲಃ ಸಹದೇವಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ವಿರಾಟಶ್ಚ ಶಿಖಂಡೀ ಚ ಶೈಶುಪಾಲಿಶ್ಚ ದಂಸಿತಾಃ ॥8॥
ಯಾವನ್ನ ಪ್ರವಿಶಂತ್ಯೇತೇ ನಕ್ರಾ ಇವ ಮಹಾರ್ಣವಮ್ |
ಕೃತಾಸ್ತ್ರಾಃ ಕ್ಷಿಪ್ರಮಸ್ಯಂತಃ ತಾವಚ್ಛಾಮ್ಯತು ವೈಶಸಮ್ ॥9॥
ಎಲ್ಲಿಯವರೆಗೆ ಅಸ್ತ್ರಜ್ಞರಾದ ನಕುಲ, ಸಹದೇವ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ವಿರಾಟ, ಶಿಖಂಡಿ, ಶಿಶುಪಾಲನ ಮಗನಾದ ಧೃಷ್ಟಕೇತು ಇವರು ಕವಚಗಳನ್ನು ಧರಿಸಿ, ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸುತ್ತಾ, ಮೊಸಳೆಗಳು ಸಮುದ್ರವನ್ನು ಪ್ರವೇಶ ಮಾಡಿದಂತೆ ಸೈನ್ಯವನ್ನು ಪ್ರವೇಶಿಸುವುದಿಲ್ಲವೋ ಅಷ್ಟರೊಳಗೆ ಯುದ್ಧವು ಶಾಂತವಾಗಲಿ.
ಯಾವನ್ನ ಸುಕುಮಾರೇಷು ಶರೀರೇಷು ಮಹೀಕ್ಷಿತಾಮ್ |
ಗಾರ್ಧ್ರಪತ್ರಾಃ ಪತಂತ್ಯುಗ್ರಾಃ ತಾವಚ್ಛಾಮ್ಯತು ಕೇಶವಮ್ ॥10॥
ಎಲ್ಲಿಯವರೆಗೆ ರಾಜರ ಸುಕುಮಾರ ಶರೀರಗಳಲ್ಲಿ ಹದ್ದಿನ ಗರಿಗಳ ಪುಂಖವನ್ನು ಹೊಂದಿದ ಉಗ್ರವಾದ ಬಾಣಗಳು ಬೀಳುವುದಿಲ್ಲವೋ ಅಷ್ಟರೊಳಗೆ ಯುದ್ಧವು ಶಾಂತವಾಗಲಿ.
ಚಂದನಾಗರುದಿಗ್ಧೇಷು ಹಾರನಿಷ್ಕಧರೇಷು ಚ |
ನೋರಸ್ಸು ಯಾವದ್ಯೋಧಾನಾಂ ಮಹೇಷ್ವಾಸೈರ್ಮಹೇಷವಃ ॥11॥
ಕೃತಾಸ್ತ್ರೈಃ ಕ್ಷಿಪ್ರಮಸ್ಯದ್ಭಿರ್ದೂರಪಾತಿಭಿರಾಯಸಾಃ |
ಅತಿಲಕ್ಷ್ಯೈರ್ನಿಪಾತ್ಯಂತೇ ತಾವಚ್ಛಾಮ್ಯತು ವೈಶಸಮ್ ॥12॥
ಎಲ್ಲಿಯವರೆಗೆ ಚಂದನಾಗರು ಲೇಪಿತವಾದ ಹಾರನಿಷ್ಕಗಳನ್ನು ಧರಿಸಿದ ಯೋಧರ ವಕ್ಷಸ್ಥಲಗಳಲ್ಲಿ ಮಹಾಧನುರ್ಧಾರಿಗಳೂ, ಕೃತಾಸ್ತ್ರರೂ, ಕ್ಷಿಪ್ರವಾಗಿ ಬಾಣಗಳನ್ನು ಪ್ರಯೋಗಿಸುವವರೂ, ದೂರದವರೆಗೆ ಬಾಣಪ್ರಯೋಗವನ್ನು ಮಾಡುವವರೂ, ಅತಿಶಯವಾಗಿ ಲಕ್ಷ್ಯವನ್ನು ಭೇದಿಸುವವರೂ ಆದ ಶತ್ರುಯೋಧರ ಉಕ್ಕಿನ ಬಾಣಗಳು ಬೀಳುವುದಿಲ್ಲವೋ ಅಷ್ಟರೊಳಗೆ ಯುದ್ಧವು ಶಾಂತವಾಗಲಿ.
ಅಭಿವಾದಯಮಾನಂ ತ್ವಾಂ ಶಿರಸಾ ರಾಜಕುಂಜರಃ |
ಪಾಣಿಭ್ಯಾಂ ಪ್ರತಿಗೃಹ್ಣಾತು ಧರ್ಮರಾಜೋ ಮಹಾಮತಿಃ ॥13॥
ರಾಜಶ್ರೇಷ್ಠನೂ, ಮಹಾಮತಿಯೂ ಆದ ಧರ್ಮರಾಜನು ಶಿರಸಾ ನಮಸ್ಕಾರ ಮಾಡುವ ನಿನ್ನನ್ನು ತನ್ನ ಕೈಗಳಿಂದ ಸ್ವೀಕರಿಸಲಿ.
ಧ್ವಜಾಂಕುಶಪತಾಕಾಂಕಂ ದಕ್ಷಿಣಂ ತೇ ಸುದಕ್ಷಿಣಮ್ |
ಸ್ಕಂಧೇ ನಿಕ್ಷಿಪತಾಂ ಬಾಹುಂ ಶಾಂತಯೇ ಭರತರ್ಷಭ ॥14॥
ಎಲೈ ಭರತರ್ಷಭನೇ, ಧ್ವಜಾಂಕುಶಪತಾಕ ರೇಖೆಗಳಿಂದ ಕೂಡಿದ, ಬಹಳ ದಕ್ಷಿಣೆಗಳನ್ನೂ ನೀಡಿದ ನಿನ್ನ ದಕ್ಷಿಣ ಬಾಹುವನ್ನು ಶಾಂತಿಗಾಗಿ ತನ್ನ ಹೆಗಲಿನ ಮೇಲೆ ಇಟ್ಟುಕೊಳ್ಳಲಿ.
ರತ್ನೌಷಧಿಸಮೇತೇನ ರತ್ನಾಂಗುಲಿತಳೇನ ಚ |
ಉಪವಿಷ್ಟಸ್ಯ ಪೃಷ್ಠಂ ತೇ ಪಾಣಿನಾ ಪರಿಮಾರ್ಜತಾಮ್ ॥15॥
ಬ್ರಾಹ್ಮಣರಿಗೆ ದಾನ ಕೊಡುವ ಸಮಯದಲ್ಲಿ ರತ್ನದ ಉಂಗುರ ಸಂಬಂಧವುಳ್ಳ ರತ್ನಾಂಗುಲಿತಳಗಳನ್ನು ಧರಿಸಿದ ತನ್ನ ಹಸ್ತದಿಂದ ಅವನ ಸಮೀಪದಲ್ಲಿ ಕುಳಿತ ನಿನ್ನ ಬೆನ್ನನ್ನು ನೇವರಿಸುವವನಾಗಲಿ.
ಸಾಲಸ್ಕಂಧೋ ಮಹಾಬಾಹುಃ ತ್ವಾಂ ಸಜಾತೋ ವೃಕೋದರಃ |
ಸಾಮ್ನಾಽಭಿವದತಾಂ ಚಾಪಿ ಶಾಂತಯೇ ಭರತರ್ಷಭ ॥16॥
ಎಲೈ ಭರತರ್ಷಭನೇ, ಸಾಲಸ್ಕಂಧದಂತೆ ಉನ್ನತವಾದವನೂ, ಮಹಾಬಾಹುವೂ, ನಿನಗೆ ಸಮಾನನಾಗಿ ಜನಿಸಿದವನೂ ಆದ ವೃಕೋದರನು ಶಾಂತಿಗಾಗಿ ನಿನ್ನ ಜೊತೆಯಲ್ಲಿ ಮಧುರವಾಗಿ ಮಾತನಾಡಲಿ.
ಅರ್ಜುನೇನ ಯಮಾಭ್ಯಾಂ ಚ ತ್ರಿಭಿಸ್ತೈರಭಿವಾದಿತಃ |
ಮೂರ್ಧ್ನಿ ತಾನ್ ಸಮುಪಾಘ್ರಾಯ ಪ್ರೇಮ್ಣಾಽಭಿವದ ಪಾರ್ಥಿವ ॥17॥
ಎಲೈ ರಾಜನೇ, ಅರ್ಜುನ, ನಕುಲ-ಸಹದೇವರು ಈ ಮೂವರಿಂದ ನಮಸ್ಕರಿಸಲ್ಪಟ್ಟು, ಅವರನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ, ಪ್ರೀತಿಯಿಂದ ಅವರ ಜೊತೆಯಲ್ಲಿ ಮಾತನಾಡು.
ದೃಷ್ಟ್ವಾ ತ್ವಾಂ ಪಾಂಡವೈರ್ವೀರೈಃ ಭ್ರಾತೃಭಿಃ ಸಹ ಸಂಗತಮ್ |
ಯಾವದಾನಂದಜಾಶ್ರೂಣಿ ಪ್ರಮುಂಚಂತು ನರಾಧಿಪಾಃ ॥18॥
ನೀನು ವೀರರೂ, ಸಹೋದರರೂ ಆದ ಪಾಂಡವರ ಜೊತೆಯಲ್ಲಿ ಸಂಗತವಾದುದನ್ನು ನೋಡಿ ರಾಜರು ಆನಂದಾಶ್ರುಗಳನ್ನು ಸುರಿಸಲಿ.
ಘುಷ್ಯತಾಂ ರಾಜಧಾನೀಷು ಸರ್ವಸಂಪನ್ಮಹೀಕ್ಷಿತಾಮ್ |
ಪೃಥಿವೀ ಭ್ರಾತೃಭಾವೇನ ಭುಜ್ಯತಾಂ ವಿಜ್ವರೋ ಭವ ॥19॥

ಎಲ್ಲ ರಾಜರ ರಾಜಧಾನಿಗಳಲ್ಲಿ ಸರ್ವಸಂಪತ್ತು (ಸರ್ವಸಂಪತ್ತಿನಿಂದ ಕೂಡಿದ ಮಹೋತ್ಸವವು) ಘೋಷಿಸಲ್ಪಡಲಿ. ಭೂಮಿಯು ಭ್ರಾತೃಭಾವದಿಂದ ಇಬ್ಬರಿಂದಲೂ ಭೋಗಿಸಲ್ಪಡಲಿ, ನಿಶ್ಚಿಂತನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಪಂಚವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತಾರನೆಯ ಅಧ್ಯಾಯ
ಪಾಂಡವರಿಗೆ ಸೂಜಿಯ ಮೊನೆಯಿಂದ ಚುಚ್ಚುವಷ್ಟು ಭೂಮಿಯನ್ನೂ ಕೊಡುವುದಿಲ್ಲವೆಂದು ದುರ್ಯೋಧನನ ಉತ್ತರ.
ವೈಶಂಪಾಯನಃ
ಶ್ರುತ್ವಾ ದುರ್ಯೋಧನೋ ವಾಕ್ಯಂ ಹೇತುಮತ್ ಕುರುಸಂಸದಿ |
ಪ್ರತ್ಯುವಾಚ ಮಹಾಬಾಹುಂ ವಾಸುದೇವಂ ಯಶಸ್ವಿನಮ್ ॥1॥
ವೈಶಂಪಾಯನ ಕುರುಸಭೆಯಲ್ಲಿ ಹೇತುಬದ್ಧವಾದ ಮಾತುಗಳನ್ನು ಕೇಳಿ ದುರ್ಯೋಧನನು ಮಹಾಬಾಹುವೂ, ಕೀರ್ತಿವಂತನೂ ಆದ ವಾಸುದೇವನನ್ನು ಕುರಿತು ಮಾತನಾಡಿದನು.
ಪ್ರಸಮೀಕ್ಷ್ಯ ಭವಾನೇತದ್ ವಕ್ತುಮರ್ಹತಿ ಕೇಶವ |
ಮಾಮೇವ ಹಿ ವಿಶೇಷೇಣ ವಿಭಾಷ್ಯ ಪರಿಗರ್ಹಸೇ ॥2॥
ಎಲೈ ಕೇಶವನೇ, ನೀನು ಎಲ್ಲವನ್ನೂ ಸರಿಯಾಗಿ ತಿಳಿದು ಮಾತನಾಡಬೇಕು. ಏಕೆಂದರೆ ವಿಶೇಷವಾಗಿ ನನ್ನನ್ನೇ ಸಂಬೋಧಿಸಿ ನೀನು ನಿಂದಿಸುತ್ತಿದ್ದೀಯೆ.
ಭಕ್ತಿವಾದೇನ ಪಾರ್ಥಾನಾಮಕಸ್ಮಾನ್ಮಧುಸೂದನ |
ಭವಾನ್ ಗರ್ಹಯತೇ ನಿತ್ಯಂ ಕಿಂ ಸಮೀಕ್ಷ್ಯ ಬಲಾಬಲಮ್ ॥3॥
ಎಲೈ ಮಧುಸೂದನನೇ, ಪಾಂಡವರಿಗೆ ನಿನ್ನ ಮೇಲಿರುವ ಪ್ರೀತಿಯಿಂದ ನಿತ್ಯವೂ ಯಾವ ಬಲಾಬಲಗಳನ್ನು ಗಮನಿಸಿ ನನ್ನನ್ನು ನಿಂದಿಸುತ್ತಿದ್ದೀಯೆ?
ಭವಾನ್ ಕ್ಷತ್ತಾ ಚ ರಾಜಾ ಚ ಆಚಾರ್ಯೋ ವಾ ಪಿತಾಮಹಃ |
ಮಾಮೇವ ಪರಿಗರ್ಹಂತೇ ನಾನ್ಯಂ ಕಶ್ಚನ ಪಾರ್ಥಿವಮ್ ॥4॥
ನೀನು, ವಿದುರ, ರಾಜನಾದ ಧೃತರಾಷ್ಟ್ರ, ಆಚಾರ್ಯರಾದ ದ್ರೋಣರು ಮತ್ತು ಪಿತಾಮಹರಾದ ಭೀಷ್ಮರು ನನ್ನನ್ನೇ ನಿಂದಿಸುತ್ತಿದ್ದೀರಿ. ಬೇರೆ ಯಾವ ರಾಜನನ್ನೂ ನಿಂದಿಸುವುದಿಲ್ಲ.
ನ ಚಾಹಂ ಲಕ್ಷಯೇ ಕಂಚಿದ್ ವ್ಯಭಿಚಾರಮಿಹಾತ್ಮನಃ |
ಅಥ ಸರ್ವೇ ಭವಂತೋ ಮಾಂ ವಿದ್ವಿಷಂತಿ ಸರಾಜಕಾಃ ॥5॥
ನಾನು ಮಾಡಿದ ಯಾವ ಅಪಚಾರವೂ ನನಗೆ ಕಾಣುವುದಿಲ್ಲ. ಆದರೂ ನೀವೆಲ್ಲರೂ ರಾಜರಿಂದ ಸಹಿತರಾಗಿ ನನ್ನನ್ನು ದ್ವೇಷ ಮಾಡುತ್ತೀರಿ.
ನ ಚಾಹಂ ಕಂಚಿದತ್ಯರ್ಥಮಪರಾಧಮರಿಂದಮ |
ವಿಚಿಂತಯನ್ ಪ್ರಪಶ್ಯಾಮಿ ಸುಸೂಕ್ಷ್ಮಮಪಿ ಕೇಶವ ॥6॥
ಎಲೈ ಅರಿಂದಮನೇ, ಕೇಶವನೇ, ನಾನು ಎಷ್ಟು ಯೋಚಿಸಿದರೂ ಅಲ್ಪವಾದ ಅಪರಾಧವನ್ನು ನಾನು ಮಾಡಿರುವುದೂ ಕಾಣುವುದಿಲ್ಲ.
ಪ್ರಿಯಾಭ್ಯುಪಗತೇ ದ್ಯೂತೇ ಪಾಂಡವಾ ಮಧುಸೂದನ |
ಜಿತಾಃ ಶಕುನಿನಾ ರಾಜ್ಯಂ ತತ್ರ ಕಿಂ ಮಮ ದುಷ್ಕೃತಮ್ ॥7॥
ಎಲೈ ಮಧುಸೂದನನೇ, ಪ್ರೀತಿಯಿಂದ ನಡೆದ ದ್ಯೂತದಲ್ಲಿ ಶಕುನಿಗೆ ಪಾಂಡವರು ರಾಜ್ಯವನ್ನು ಸೋತರೆ ಅಲ್ಲಿ ನಾನು ಮಾಡಿದ ದುಷ್ಕೃತ್ಯವೇನು?
ಯತ್ಪುನರ್ದ್ರವಿಣಂ ಕಿಂಚಿತ್ ತತ್ರಾಜೀಯಂತ ಪಾಂಡವಾಃ |
ತೇಭ್ಯ ಏವಾಭ್ಯನುಜ್ಞಾತಂ ತತ್ ತದಾ ಮಧುಸೂದನ ॥8॥
ಎಲೈ ಮಧುಸೂದನನೇ, ಪಾಂಡವರು ಆ ದ್ಯೂತದಲ್ಲಿ ಯಾವ ದ್ರವ್ಯವನ್ನು ಕಳೆದುಕೊಂಡರೋ ಅದನ್ನು ಆಗಲೇ ಅವರಿಗೆ ಹಿಂದಿರುಗಿಸಿದ್ದಾಯಿತು.
ಅಪರಾಧೋ ನ ಚಾಸ್ಮಾಕಂ ಯತ್ ತೇ ಹ್ಯಕ್ಷಪರಾಜಿತಾಃ |
ಅಜೇಯಾ ಜಯತಾಂ ಶ್ರೇಷ್ಠ ಪಾರ್ಥಾಃ ಪ್ರವ್ರಾಜಿತಾ ವನಮ್ ॥9॥
ಜಯಶೀಲರಲ್ಲಿ ಶ್ರೇಷ್ಠನಾದವನೇ, ಅಜೇಯರಾದ ಪಾಂಡವರು ದ್ಯೂತದಲ್ಲಿ ಪರಾಜಿತರಾಗಿ ಕಾಡಿಗೆ ಹೋದುದರಲ್ಲಿ ನಮ್ಮ ಅಪರಾಧವೇನೂ ಇಲ್ಲ.
ಕೇನ ವಾಽಪ್ಯವಮಾನೇನ ವಿರುದ್ಧ್ಯಂತ್ಯರಿಭಿಃ ಸಹ |
ಅಶಕ್ತಾಃ ಪಾಂಡವಾಃ ಕೃಷ್ಣ ಪ್ರಕೃಷ್ಟಾಃ ಸ(ಪ್ರ)ತ್ಯಮಿತ್ರವತ್ ॥10॥
ಎಲೈ ಕೃಷ್ಣನೇ, ನಾನು ಮಾಡಿದ ಯಾವ ಅವಮಾನದ ನಿಮಿತ್ತದಿಂದಾಗಿ ಅಶಕ್ತರಾದ ಪಾಂಡವರು ದ್ಯೂತದಲ್ಲಿ ರಾಜ್ಯವನ್ನು

ಕಳೆದುಕೊಂಡು, ಈಗ ನಮ್ಮ ಶತ್ರುಗಳ ಜೊತೆಯಲ್ಲಿ ಸೇರಿ ತಾವೂ ಶತ್ರುಗಳಂತೆ ವಿರೋಧವನ್ನು ಏಕೆ ಮಾಡುತ್ತಿದ್ದಾರೆ?
ಕಿಮಸ್ಮಾಭಿಃ ಕೃತಂ ತೇಷಾಂ ಕಸ್ಮಿನ್ ವಾ ಪುನರಾಗಸಿ |
ಧಾರ್ತರಾಷ್ಟ್ರಾನ್ ಜಿಘಾಂಸಂತಿ ಪಾಂಡವಾಃ ಸೃಂಜಯೈಃ ಸಹ ॥11॥
ನಾವು ಅವರಿಗೆ ಏನು ಮಾಡಿದೆವು? ಯಾವ ಅಪರಾಧದ ನಿಮಿತ್ತದಿಂದಾಗಿ ಪಾಂಡವರು ಸೃಂಜಯರ ಜೊತೆಯಲ್ಲಿ ಧೃತರಾಷ್ಟ್ರನ ಪುತ್ರರನ್ನು ಕೊಲ್ಲಲು ಬಯಸುತ್ತಾರೆ?
ನ ಚಾಪಿ ವಯಮುಗ್ರೇಣ ಕರ್ಮಣಾ ವಚನೇನ ವಾ |
ವಿತ್ರಸ್ತಾಃ ಪ್ರಣಮಾಮೇಹ ಭಯಾದಪಿ ಶತಕ್ರತೋಃ ॥12॥
ನಾವಾದರೂ ಉಗ್ರವಾದ ಕರ್ಮದಿಂದಾಗಲೀ, ಉಗ್ರವಚನದಿಂದಾಗಲೀ ಹೆದರಿ, ಇಂದ್ರನ ಭಯದಿಂದಲಾದರೂ ನಮಸ್ಕಾರ ಮಾಡುವವರಲ್ಲ.
ನ ಚ ತಂ ಕೃಷ್ಣ ಪಶ್ಯಾಮಿ ಕ್ಷತ್ರಧರ್ಮಮನುಷ್ಠಿತಮ್ |
ಉತ್ಸಹೇತ ಯುಧಾ ಜೇತುಂ ಯೋ ನಃ ಶತ್ರುನಿಬರ್ಹಣ ॥13॥
ಎಲೈ ಶತ್ರುಸಂಹಾರಕನಾದ ಕೃಷ್ಣನೇ, ಕ್ಷತ್ರಧರ್ಮವನ್ನು ಅನುಷ್ಠಾನ ಮಾಡುವ ಮತ್ತು ನಮ್ಮನ್ನು ಯುದ್ಧದಲ್ಲಿ ಗೆಲ್ಲುವ ಉತ್ಸಾಹವುಳ್ಳ ಯಾವೊಬ್ಬ ಕ್ಷತ್ರಿಯನನ್ನೂ ನಾನು ಕಾಣುವುದಿಲ್ಲ.
ನ ಹಿ ಭೀಷ್ಮಕೃಪದ್ರೋಣಾಃ ಸಕರ್ಣಾ ಮಧುಸೂದನ |
ದೇವೈರಪಿ ಯುಧಾ ಜೇತುಂ ಶಕ್ಯಾಃ ಕಿಮುತ ಪಾಂಡವೈಃ ॥14॥
ಎಲೈ ಮಧುಸೂದನನೇ, ಕರ್ಣನಿಂದ ಸಹಿತರಾದ ಭೀಷ್ಮ-ಕೃಪ-ದ್ರೋಣರನ್ನು ಯುದ್ಧದಲ್ಲಿ ದೇವತೆಗಳೂ ಗೆಲ್ಲಲಾರರು. ಇನ್ನು ಪಾಂಡವರ ಮಾತೇನು?
ಸ್ವಧರ್ಮಮನುಪಶ್ಯಂತೋ ಯದಿ ಮಾಧವ ಸಂಯುಗೇ |
ಅಸ್ತ್ರೇಣ ನಿಧನಂ ಕಾಲೇ ಪ್ರಾಪ್ಸ್ಯಾಮಃ ಸ್ವರ್ಗಮೇವ ತತ್ ॥15॥
ಎಲೈ ಮಾಧವನೇ, ನಮ್ಮ ಧರ್ಮವನ್ನು ಅನುಷ್ಠಾನ ಮಾಡುತ್ತಾ, ಯೋಗ್ಯವಾದ ಕಾಲದಲ್ಲಿ ಯುದ್ಧದಲ್ಲಿ ಅಸ್ತ್ರದಿಂದ ನಿಧನವನ್ನು ಹೊಂದಿದರೆ ಅದು ನಮಗೆ ಸ್ವರ್ಗವೇ ಸರಿ.
ಮುಖ್ಯಶ್ಚೈವೇಷ ನೋ ಧರ್ಮಃ ಕ್ಷತ್ರಿಯಾಣಾಂ ಜನಾರ್ದನ |
ಯಚ್ಛಯೀಮಹಿ ಸಂಗ್ರಾಮೇ ಶರತಲ್ಪಗತಾ ವಯಮ್ ॥16॥
ಎಲೈ ಜನಾರ್ದನನೇ, ಯುದ್ಧದಲ್ಲಿ ಶರತಲ್ಪಗತರಾಗಿ ಮಲಗುವುದು ಕ್ಷತ್ರಿಯರಾದ ನಮಗೆ ಮುಖ್ಯವಾದ ಧರ್ಮವೇ ಆಗಿದೆ.
ತೇ ವಯಂ ವೀರಶಯನಂ ಪ್ರಾಪ್ಸ್ಯಾಮೋ ಯದಿ ಸಂಯುಗೇ |
ಅಪ್ರಣಮ್ಯೈವ ಶತ್ರೂಣಾಂ ನ ನಸ್ತಪ್ಸ್ಯತಿ ಕೃಷ್ಣ ತತ್ ॥17॥
ಎಲೈ ಕೃಷ್ಣನೇ, ಅಂತಹ ನಾವು ಶತ್ರುಗಳಿಗೆ ಬಗ್ಗದೇ ಯುದ್ಧದಲ್ಲಿ ವೀರಶಯನವನ್ನು ಹೊಂದುವುದಾದರೆ ಅದು ನಮಗೆ ತಾಪವನ್ನು ಉಂಟುಮಾಡುವುದಿಲ್ಲ.
ಕಶ್ಚ ಜಾತು ಕುಲೇ ಜಾತಃ ಕ್ಷತ್ರಧರ್ಮೇಣ ವರ್ತಯನ್ |
ಭಯಾದ್ವಾ ವೃತ್ತಿಹೇತೋರ್ವಾ ಪ್ರಣಮೇದಿಹ ಕಸ್ಯಚಿತ್ ॥18॥
ಕ್ಷತ್ರಿಯ ಕುಲದಲ್ಲಿ ಜನಿಸಿ ಕ್ಷತ್ರಧರ್ಮದಿಂದ ಜೀವಿಸುವ ಯಾವನು ತಾನೇ ಭಯದಿಂದಾಗಲೀ, ಬದುಕುವ ಆಸೆಯಿಂದಾಗಲೀ ಇನ್ನೊಬ್ಬನಿಗೆ ನಮಸ್ಕಾರವನ್ನು ಮಾಡಿಯಾನು?
ಉದ್ಯಚ್ಛೇದೇವ ನ ನಮೇದ್ ಉದ್ಯಮೋ ಹ್ಯೇವ ಪೌರುಷಮ್ |
ಅಪ್ಯಪರ್ವಣಿ ಭಜ್ಯೇತ ನ ನಮೇದಿಹ ಕಸ್ಯಚಿತ್ ॥19॥
ಉದ್ಯಮವನ್ನೇ ಮಾಡಬೇಕು, ಬಗ್ಗಬಾರದು, ಉದ್ಯಮವೇ ಪೌರುಷ. ಪರ್ವವಲ್ಲದ ಸ್ಥಳದಲ್ಲಿ ಮುರಿಯಬಹುದು. ಆದರೆ ಯಾರಿಗೂ ಬಗ್ಗಬಾರದು.
ಇತಿ ಮಾತಂಗವಚನಂ ಪರೀಪ್ಸಂತಿ ಹಿತೇಪ್ಸವಃ |
ಧರ್ಮಾಯ ಚೈವ ಪ್ರಣಮೇದ್ ಬ್ರಾಹ್ಮಣೇಭ್ಯಶ್ಚ ಮದ್ವಿಧಃ ॥20॥
ಎಂಬ ಈ ಮಾತಂಗಋಷಿಗಳ ವಾಕ್ಯವನ್ನು, ಹಿತವನ್ನು ಬಯಸುವವರು ಬಯಸುತ್ತಾರೆ. ನನ್ನಂತಹವನು ಧರ್ಮಕ್ಕೆ ಮತ್ತು ಬ್ರಾಹ್ಮಣರಿಗೆ ಬಗ್ಗಬೇಕು (ನಮಸ್ಕಾರವನ್ನು ಮಾಡಬೇಕು)
ಅಚಿಂತಯನ್ ಕಂಚಿದನ್ಯಂ ಯಾವಜ್ಜೀವಂ ತಥಾ ಚರೇತ್ |
ಏಷ ಧರ್ಮಃ ಕ್ಷತ್ರಿಯಾಣಾಂ ಮತಮೇತಚ್ಚ ಮೇ ಸದಾ ॥21॥
ಇನ್ನೊಂದು ವಿಷಯವನ್ನು ಯೋಚಿಸದೆ ಬದುಕಿರುವವರೆಗೆ ಹಾಗೆಯೇ ಮಾಡಬೇಕು. ಇದು ಕ್ಷತ್ರಿಯರ ಧರ್ಮ, ಇದು ಸದಾ ನನಗೆ ಅಭಿಪ್ರೇತವಾದುದು.
ರಾಜ್ಯಾಂಶಶ್ಚಾಭ್ಯನುಜ್ಞಾತೋ ಯೋ ಮೇ ಪಿತ್ರಾ ಪುರಾಽಭವತ್ |
ನ ಸ ಲಭ್ಯಃ ಪುನರ್ಜಾತು ಮಯಿ ಜೀವತಿ ಕೇಶವ ॥22॥
ಎಲೈ ಕೇಶವನೇ, ನನ್ನ ತಂದೆಯು ಹಿಂದೆ ಪಾಂಡವರಿಗೆ ಯಾವ ರಾಜ್ಯಭಾಗವನ್ನು ಕೊಟ್ಟನೋ ಅದನ್ನು ನಾನು ಬದುಕಿರುವವರೆಗೆ ಅವರು ಪುನಃ ಪಡೆಯಲಾರರು.
ಯಾವತ್ ತು ರಾಜಾ ಧ್ರಿಯತೇ ಧೃತರಾಷ್ಟ್ರೋ ಜನಾರ್ದನ |
ನ್ಯಸ್ತಶಸ್ತ್ರಾ ವಯಂ ತೇ ವಾಽಪ್ಯುಪಜೀವಾಮ ಮಾಧವ ॥23॥

ಎಲೈ ಮಾಧವನೇ, ಜನಾರ್ದನನೇ, ಎಲ್ಲಿಯವರೆಗೆ ರಾಜನಾದ ಧೃತರಾಷ್ಟ್ರನು ಜೀವಿಸಿರುತ್ತಾನೆಯೋ ಅಲ್ಲಿಯವರೆಗೆ ನಾವಾಗಲೀ ಅಥವಾ ಅವರಾಗಲೀ ಶಸ್ತ್ರವನ್ನು ಕೆಳಗಿಟ್ಟು ಜೀವಿಸುವುದು ಒಳ್ಳೆಯದು.
ಯದ್ಧಿ ದೇಯಂ ಪುರಾ ದತ್ತಂ ರಾಜ್ಯಂ ಪರವತೋ ಮಮ ॥24॥
ಅಜ್ಞಾನಾದ್ವಾ ಭಯಾದ್ವಾಽಪಿ ಮಯಿ ಬಾಲೇ ಜನಾರ್ದನ |
ನ ತದದ್ಯ ಪುನರ್ಲಭ್ಯಂ ಪಾಂಡವೈರ್ವೃಷ್ಣಿನಂದನ ॥25॥
ಎಲೈ ಜನಾರ್ದನನೇ, ನಾನು ಚಿಕ್ಕವನಿರುವಾಗ ಅಜ್ಞಾನದಿಂದಾಗಲೀ, ಭಯದಿಂದಾಗಲೀ ಯಾವ ಪರಾಧೀನನಾದ ನನ್ನ ರಾಜ್ಯವು ಅವರಿಗೆ ಕೊಡಲ್ಪಟ್ಟಿತ್ತೋ ಎಲೈ ವೃಷ್ಣಿನಂದನನೇ, ಆ ರಾಜ್ಯಭಾಗವು ಪಾಂಡವರಿಗೆ ಈ ದಿನ ಲಭ್ಯವಿಲ್ಲ.
ಧ್ರಿಯಮಾಣೇ ಮಹಾಬಾಹೋ ಮಯಿ ಸಂಪ್ರತಿ ಕೇಶವ ॥26॥
ಯಾವದ್ಧಿ ತೀಕ್ಷ್ಣಯಾ ಸೂಚ್ಯಾ ವಿದ್ಯೇದಗ್ರೇಣ ಮಾಧವ |
ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಂಡವಾನ್ ಪ್ರತಿ ॥27॥
ಎಲೈ ಮಹಾಬಾಹುವೇ, ಕೇಶವನೇ, ಮಾಧವನೇ, ನಾನು ಬದುಕಿರುವವರೆಗೆ ಈಗ ಸೂಜಿಯ ತುದಿಯಿಂದ ಚುಚ್ಚುವಷ್ಟು ಭೂಮಿಯ ಭಾಗವನ್ನೂ ಸಹ ನಮ್ಮಿಂದ ಪಾಂಡವರಿಗೆ ಕೊಡಲ್ಪಡತಕ್ಕದ್ದಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಡ್‌ವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಸಪ್ತಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಇಪ್ಪತ್ತೇಳನೆಯ ಅಧ್ಯಾಯ

ಕೃಷ್ಣನಿಂದ ದುರ್ಯೋಧನನು ಪಾಂಡವರಿಗೆ ಮಾಡಿದ ಅಪಚಾರಗಳ ವರ್ಣನೆ. ಕುಲದ ಕ್ಷೇಮಕ್ಕಾಗಿ ದುರ್ಯೋಧನಾದಿಗಳನ್ನು ಬಂಧಿಸುವಂತೆ
ಭೀಷ್ಮಾದಿಗಳಿಗೆ ಸೂಚನೆ.
ವೈಶಂಪಾಯನಃ
ತತಃ ಪ್ರಸಹ್ಯ ದಾಶಾರ್ಹಃ ಕ್ರೋಧಪರ್ಯಾಕುಲೇಕ್ಷಣಃ |
ದುರ್ಯೋಧನಮಿದಂ ವಾಕ್ಯಮಬ್ರವೀತ್ ಕುರುಸಂಸದಿ ॥1॥
ವೈಶಂಪಾಯನ ಆಗ ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಕೃಷ್ಣನು ಕೌರವ ಸಭೆಯಲ್ಲಿ ಗಟ್ಟಿಯಾದ ಸ್ವರದಲ್ಲಿ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಆಡಿದನು.
ಲಪ್ಸ್ಯಸೇ ವೀರಶಯನಂ ಕಾಮಮೇತದವಾಪ್ಸ್ಯಸಿ |
ಸ್ಥಿರೋ ಭವ ಸಹಾಮಾತ್ಯೋ ವಿಮರ್ದೋ ಭವಿತಾ ಮಹಾನ್ ॥2॥
ವೀರಶಯನವನ್ನು ಪಡೆಯುವಿ. ನಿನ್ನ ಈ ಆಸೆಯು ಪೂರ್ಣವಾಗುವುದು. ಅಮಾತ್ಯರ ಜೊತೆಯಲ್ಲಿ ಸ್ಥಿರವಾಗಿರು. ದೊಡ್ಡ ಸಂಘರ್ಷವು ನಡೆಯುವುದು.
ಯಚ್ಚೈವಂ ಮನ್ಯಸೇ ಮೂಢ ನ ಮೇ ಕಶ್ಚಿದ್ ವ್ಯತಿಕ್ರಮಃ |
ಪಾಂಡವೇಷ್ವಿತಿ ತತ್ ಸರ್ವಂ ನಿಬೋಧ ತ್ವಂ ನರಾಧಿಪ ॥3॥
ಎಲೈ ನರಾಧಿಪನೇ, ಮೂಢನೇ, ಪಾಂಡವರಿಗೆ ಏನೂ ಅಪಚಾರ ಮಾಡಿಲ್ಲವೆಂದು ತಿಳಿದಿದ್ದೀಯಷ್ಟೆ! ಅದೆಲ್ಲವನ್ನೂ ಕೇಳುವವನಾಗು.
ಶ್ರಿಯಾ ಸಂತಪ್ಯಮಾನೇನ ಪಾಂಡವಾನಾಂ ಮಹಾತ್ಮನಾಮ್ |
ತ್ವಯಾ ದುರ್ಮಂತ್ರಿತಂ ದ್ಯೂತಂ ಸೌಬಲೇನ ಚ ಭಾರತ ॥4॥
ಎಲೈ ಭಾರತನೇ, ಮಹಾತ್ಮರಾದ ಪಾಂಡವರ ಸಂಪತ್ತನ್ನು ನೋಡಿ ಸಹಿಸದೇ ನೀನು ಶಕುನಿಯ ಜೊತೆಯಲ್ಲಿ ದ್ಯೂತದ ದುರಾಲೋಚನೆಯನ್ನು ಮಾಡಿದೆ.
ಕಥಂ ನು ಜ್ಞಾತಯಸ್ತಾತ ಶ್ರೇಯಾಂಸಃ ಸಾಧುಸಮ್ಮತಾಃ |
ತಥಾ ನ್ಯಾಯ್ಯಮುಪಸ್ಥಾತುಂ ಜಿಹ್ಮೇನಾಜಿಹ್ಮಚಾರಿಣಃ ॥5॥
ಪ್ರೀತಿಪಾತ್ರನೇ, ಶ್ರೇಷ್ಠರೂ, ಸಾಧುಸಮ್ಮತರೂ, ನೇರವಾದ ನಡತೆಯುಳ್ಳವರೂ ಆದ ಬಂಧುಗಳ ವಿಷಯದಲ್ಲಿ ಕಪಟದಿಂದ ವರ್ತಿಸುವುದು ಹೇಗೆ ನ್ಯಾಯವಾಗುತ್ತದೆ?
ಅಕ್ಷದ್ಯೂತಂ ಮಹಾಪ್ರಾಜ್ಞ ಸತಾಂ ಮತಿವಿನಾಶನಮ್ |
ಅಸತಾಂ ತತ್ರ ಜಾಯಂತೇ ಭೇದಾಶ್ಚ ವ್ಯಸನಾನಿ ಚ ॥6॥
ಎಲೈ ಮಹಾಪ್ರಾಜ್ಞನೇ, ಅಕ್ಷದ್ಯೂತವು ಸಜ್ಜನರಿಗೆ ಬುದ್ಧಿಯನ್ನು ನಾಶಮಾಡುತ್ತದೆ. ಅಸಜ್ಜನರಿಗೆ ವಿರೋಧವನ್ನೂ ಮತ್ತು ಚಟಗಳನ್ನೂ ಉಂಟುಮಾಡುತ್ತದೆ.
ತದಿದಂ ವ್ಯಸನಂ ಘೋರಂ ತ್ವಯಾ ದ್ಯೂತಮುಖಂ ಕೃತಮ್ |
ಅಸಮೀಕ್ಷ್ಯ ಸದಾಚಾರಾನ್ ಸಾರ್ಧಂ ಪಾಪಾನುಬಂಧನೈಃ ॥7॥
ನೀನು ಸದಾಚಾರಗಳನ್ನು ಗಮನಿಸದೆ ಪಾಪದಲ್ಲಿಯೇ ಪ್ರೀತಿಯುಳ್ಳವರ ಜೊತೆಯಲ್ಲಿ ಸೇರಿ ದ್ಯೂತಮುಖದಿಂದ ಉಂಟಾದ ಈ ಘೋರವಾದ ವ್ಯಸನವನ್ನು ತಂದೊಡ್ಡಿದ್ದೀಯೆ.

ಕಶ್ಚಾನ್ಯೋ ಜ್ಞಾತಿದಾರಾನ್ ವೈ ವಿಪ್ರಕರ್ತುಂ ತಥಾಽರ್ಹತಿ |
ಆನೀಯ ಚ ಸಭಾಂ ವಕ್ತುಂ ಯಥೋಕ್ತಾ ದ್ರೌಪದೀ ತ್ವಯಾ ॥8॥
ಸಹೋದರರ ಪತ್ನಿಯರನ್ನು, ದುರ್ವಾಕ್ಯಗಳನ್ನು ಆಡುವುದಕ್ಕಾಗಿಯೇ ಸಭೆಗೆ ಕರೆತಂದು, ಹಾಗೆ ದುರ್ವಾಕ್ಯಗಳನ್ನು ನೀನು ಮಾತನಾಡಿದಂತೆ ಮಾತನಾಡಿ ಯಾರು ಅಪಚಾರವನ್ನು ಮಾಡುತ್ತಾರೆ?
ಕುಲೀನಾ ಶೀಲಸಂಪನ್ನಾ ಪ್ರಾಣೇಭ್ಯೋಽಪಿ ಗರೀಯಸೀ |
ಮಹಿಷೀ ಪಾಂಡುಪುತ್ರಾಣಾಂ ತಥಾ ವಿನಿಕೃತಾ ತ್ವಯಾ ॥9॥
ಕುಲೀನಳೂ, ಶೀಲಸಂಪನ್ನಳೂ, ಪಾಂಡವರಿಗೆ ಪ್ರಾಣಕ್ಕಿಂತಲೂ ಪ್ರಿಯಳಾದ ಪತ್ನಿಯೂ ಆದ ಅವಳನ್ನು ನೀನು ಹಾಗೆ ಅವಮಾನ ಮಾಡಿದೆ.
ಜಾನಂತಿ ಕುರವಃ ಸರ್ವೇ ಯಥೋಕ್ತಾಃ ಕುರುಸಂಸದಿ |
ದುಃಶಾಸನೇನ ಕೌಂತೇಯಾಃ ಪ್ರವ್ರಜಂತಃ ಪರಂತಪಾಃ ॥10॥
ಪರಂತಪರಾದ ಪಾಂಡವರು ಕಾಡಿಗೆ ಹೋಗುವಾಗ ದುಃಶಾಸನನು ಹೇಗೆ ಮಾತನಾಡಿದನೆಂದು ಸಭೆಯಲ್ಲಿದ್ದ ಎಲ್ಲ ಕೌರವರೂ ತಿಳಿದಿದ್ದಾರೆ.
ಸಮ್ಯಗ್ ವೃತ್ತೇಷ್ವಲುಬ್ಧೇಷು ಸತತಂ ಧರ್ಮಚಾರಿಷು |
ಸ್ವೇಷು ಬಂಧುಷು ಕಃ ಸಾಧುಃ ಚರೇದೇವಮಸಾಂಪ್ರತಮ್ ॥11॥
ಯಾವಾಗಲೂ ಒಳ್ಳೆಯ ನಡತೆಯುಳ್ಳ, ಲೋಭವಿಲ್ಲದ, ಯಾವಾಗಲೂ ಧರ್ಮಾಚರಣೆಯನ್ನು ಮಾಡುವ ತನ್ನ ಬಂಧುಗಳ ವಿಷಯದಲ್ಲಿ ಯಾವ ಸಜ್ಜನನು ಹೀಗೆ ಅಯೋಗ್ಯವಾದ ರೀತಿಯಲ್ಲಿ ನಡೆದುಕೊಳ್ಳುತ್ತಾನೆ?
ನೃಶಂಸಾನಾಮನಾರ್ಯಾಣಾಂ ಯಥಾ ಪರುಷಭಾಷಣಮ್ |
ಕರ್ಣದುಃಶಾಸನಾಭ್ಯಾಂ ಚ ತ್ವಯಾ ಚ ಬಹುಶಃ ಕೃತಮ್ ॥12॥
ಕ್ರೂರಿಗಳು, ಅನಾರ್ಯರು ಹೇಗೆ ಒರಟಾದ ಮಾತುಗಳನ್ನು ಆಡುತ್ತಾರೆಯೋ ಅದರಂತೆ ನೀನೂ ಮತ್ತು ಕರ್ಣ-ದುಃಶಾಸನರು ಅನೇಕ ಬಾರಿ ಮಾತನಾಡಿದ್ದೀರಿ.
ಸಹ ಮಾತ್ರಾ ಪ್ರದಗ್ಧುಂ ತಾನ್ ಬಾಲಕಾನ್ ವಾರಣಾವತೇ |
ಆಸ್ಥಿತಃ ಪರಮೋ ಯತ್ನೋ ನ ಸಮೃದ್ಧಂ ಚ ತತ್ ತವ ॥13॥
ವಾರಣಾವತದಲ್ಲಿ ತಾಯಿಯಾದ ಕುಂತಿಯ ಜೊತೆಯಲ್ಲಿ ಆ ಬಾಲಕರನ್ನು ದಹಿಸಲು ನೀನು ಬಹಳ ಪ್ರಯತ್ನವನ್ನು ಮಾಡಿದೆ. ಆದರೆ ಅದು ನಿನಗೆ ಫಲಿಸಲಿಲ್ಲ.
ಊಷುಶ್ಚ ಸುಚಿರಂ ಕಾಲಂ ಪ್ರಚ್ಛನ್ನಾಃ ಪಾಂಡವಾಸ್ತದಾ |
ಮಾತ್ರಾ ಸಹೈಕಚಕ್ರಾಯಾಂ ಬ್ರಾಹ್ಮಣಸ್ಯ ನಿವೇಶನೇ ॥14॥
ಪಾಂಡವರು ಪ್ರಚ್ಛನ್ನರಾಗಿ ತಾಯಿಯ ಜೊತೆಯಲ್ಲಿ ಏಕಚಕ್ರಾನಗರದಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಬಹುಕಾಲ ವಾಸವನ್ನು ಮಾಡಿದರು.
ವಿಷೇಣ ಬಂಧೈಃ ಸರ್ಪೈಶ್ಚ ಘಾತಿತಾಃ ಪಾಂಡವಾಸ್ತ್ವಯಾ |
ಸರ್ವೋಪಾಯೈರ್ವಿನಾಶಾಯ ನ ಸಮೃದ್ಧಂ ಚ ತತ್ ತವ ॥15॥
ವಿಷಪ್ರಯೋಗದಿಂದ, ಬಂಧನಗಳಿಂದ, ಸರ್ಪಗಳಿಂದ ಪಾಂಡವರನ್ನು ಕೊಲ್ಲಲು ನೀನು ಪ್ರಯತ್ನಪಟ್ಟೆ. ಎಲ್ಲಾ ಉಪಾಯಗಳಿಂದಲೂ ಪಾಂಡವರ ವಿನಾಶಕ್ಕೆ ಪ್ರಯತ್ನವನ್ನು ಮಾಡಿದೆ. ಆದರೆ ಅವು ನಿನಗೆ ಫಲಿಸಲಿಲ್ಲ.
ಏವಂವೃತ್ತಃ ಕಥಂ ರಾಜ್ಯೇ ಸ್ಥಾತುಮರ್ಹಸಿ ಪಾಪಕೃತ್ |
ಸ ರಾಜ್ಯಾಚ್ಚ ಸುಖಾಚ್ಚೈವ ಹಾಸ್ಯಸೇ ಕುಲಪಾಂಸನ ॥16॥
ಇಂತಹ ನಡತೆಯುಳ್ಳ ಪಾಪಾಚಾರಿಯಾದ ನೀನು ರಾಜ್ಯದಲ್ಲಿ ಇರಲು ಹೇಗೆ ಅರ್ಹನಾಗುತ್ತೀಯೆ? ಎಲೈ ಕುಲಪಾಂಸನನೇ, ನೀನು ರಾಜ್ಯದಿಂದಲೂ ಮತ್ತು ಸುಖದಿಂದಲೂ ಭ್ರಷ್ಟನಾಗುವಿ.
ಏವಂಬುದ್ಧಿಃ ಪಾಂಡವೇಷು ಮಿಥ್ಯಾವೃತ್ತಃ ಸದಾ ಭವಾನ್ |
ಕಥಂ ತೇ ನಾಪರಾಧೋಽಸ್ತಿ ಪಾಂಡವೇಷು ಮಹಾತ್ಮಸು ॥17॥
ಪಾಂಡವರಲ್ಲಿ ಇಂತಹ ಬುದ್ಧಿಯನ್ನು ಹೊಂದಿ ನೀನು ಯಾವಾಗಲೂ ಕಪಟದಿಂದಲೇ ನಡೆದುಕೊಂಡಿದ್ದೀಯೆ. ಮಹಾತ್ಮರಾದ ಪಾಂಡವರಿಗೆ ನೀನು ಅಪರಾಧವನ್ನು ಮಾಡಿಲ್ಲ ಎನ್ನುವುದು ಹೇಗೆ?
ಕೃತ್ವಾ ಬಹೂನ್ಯಕಾರ್ಯಾಣಿ ಪಾಂಡವೇಷು ನೃಶಂಸವತ್ |
ಮಿಥ್ಯಾವೃತ್ತಿರನಾರ್ಯಃ ಸನ್ನದ್ಯ ವಿಪ್ರತಿಪದ್ಯಸೇ ॥18॥
ಪಾಂಡವರಿಗೆ ಕ್ರೂರಿಯಂತೆ ಅನೇಕ ಅಕಾರ್ಯಗಳನ್ನು ಮಾಡಿ, ಅನಾರ್ಯನಾಗಿ ಕಪಟದ ಕ್ರಿಯೆಗಳನ್ನು ಮಾಡಿ, ಈ ದಿನ ಏನೂ ಮಾಡಿಲ್ಲವೆಂದು ಹೇಳುತ್ತಿದ್ದೀಯೆ.
ಮಾತಾಪಿತೃಭ್ಯಾಂ ಭೀಷ್ಮೇಣ ದ್ರೋಣೇನ ವಿದುರೇಣ ಚ |
ಶಾಮ್ಯೇತಿ ಮುಹುರುಕ್ತೋಽಸಿ ನ ಚ ಶಾಮ್ಯಸಿ ಪಾರ್ಥಿವ ॥19॥
ಎಲೈ ರಾಜನೇ, ತಂದೆ-ತಾಯಿಗಳಿಂದ, ಭೀಷ್ಮದ್ರೋಣ ವಿದುರರಿಂದ ಸಂಧಿಯನ್ನು ಮಾಡಿಕೊ ಎಂದು ಮತ್ತೆ ಮತ್ತೆ ಹೇಳಿಸಿಕೊಂಡರೂ ನೀನು ಶಾಂತಿಯನ್ನು ಹೊಂದಿ ಸಂಧಿಯನ್ನು ಮಾಡಿಕೊಳ್ಳುತ್ತಿಲ್ಲ.
ಶಮೇ ಹಿ ಸುಮಹಾನ್ ಲಾಭಸ್ತವ ಪಾರ್ಥಸ್ಯ ಚೋಭಯೋಃ |
ತತ್ ತೇ ನ ರೋಚತೇ ರಾಜನ್ ಕಿಮನ್ಯದ್ ಬುದ್ಧಿಲಾಘವಾತ್ ॥20॥

ಸಂಧಿಯನ್ನು ಮಾಡಿಕೊಂಡರೆ ನಿನಗೂ ಮತ್ತು ಪಾಂಡವರಿಗೂ ದೊಡ್ಡ ಲಾಭವಿದೆ. ಆದರೆ ಅದು ನಿನಗೆ ಹಿಡಿಸುವುದಿಲ್ಲ. ರಾಜನೇ, ಇದಕ್ಕೆ ನಿನ್ನ ಅಲ್ಪಬುದ್ಧಿಯನ್ನು ಬಿಟ್ಟು ಬೇರೆ ಏನು ಕಾರಣವಿದೆ?
ನ ಶರ್ಮ ಪ್ರಾಪ್ಸ್ಯಸೇ ರಾಜನ್ನುತ್ಕ್ರಮ್ಯ ಸುಹೃದಾಂ ವಚಃ |
ಅಧರ್ಮ್ಯಮಯಶಸ್ಯಂ ಚ ಕ್ರಿಯತೇ ಪಾರ್ಥಿವ ತ್ವಯಾ ॥21॥
ಎಲೈ ರಾಜನೇ, ಸುಹೃಜ್ಜನರ ಮಾತನ್ನು ಮೀರಿ ನೀನು ಸುಖವನ್ನು ಹೊಂದುವುದಿಲ್ಲ. ಎಲೈ ಪಾರ್ಥಿವನೇ, ನೀನು ಯಾವಾಗಲೂ ಅಧರ್ಮವನ್ನು ಉಂಟುಮಾಡುವ ಅಕೀರ್ತಿಕರವಾದ ಕಾರ್ಯಗಳನ್ನೇ ಮಾಡುತ್ತೀಯೆ.
ಏವಂ ಬ್ರುವತಿ ದಾಶಾರ್ಹೇ ದುರ್ಯೋಧನಮಮರ್ಷಣಮ್ |
ದುಃಶಾಸನ ಇದಂ ವಾಕ್ಯಮಬ್ರವೀತ್ ಕುರುಸಂಸದಿ ॥22॥
ದಾಶಾರ್ಹನಾದ ಕೃಷ್ಣನು ಕೌರವರ ಸಭೆಯಲ್ಲಿ ರೋಷಾವಿಷ್ಟನಾದ ದುರ್ಯೋಧನನನ್ನು ಕುರಿತು ಹೀಗೆ ಮಾತನಾಡುತ್ತಿರಲು ದುಃಶಾಸನನು ಈ ಮಾತುಗಳನ್ನು ಆಡಿದನು.
ನ ಚೇತ್ ಸಂಧಾಸ್ಯಸೇ ರಾಜನ್ ಸ್ವೇನ ಕಾಮೇನ ಪಾಂಡವೈಃ |
ಬದ್ಧ್ವಾ ಕಿಲ ತ್ವಾಂ ದಾಸ್ಯಂತಿ ಕುಂತೀಪುತ್ರಾಯ ಕೌರವಾಃ ॥23॥
ಎಲೈ ರಾಜನೇ, ನಿನ್ನ ಸ್ವಂತ ಇಚ್ಛೆಯಿಂದ ನೀನು ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳದಿದ್ದರೆ ಕೌರವರು ನಿನ್ನನ್ನು ಬಂಧಿಸಿ ಧರ್ಮರಾಜನಿಗೆ ಕೊಡುವರು.
ವೈಕರ್ತನಂ ತ್ವಾಂ ಚ ಮಾಂ ಚ ತ್ರೀನೇತಾನ್ ಮನುಜರ್ಷಭ |
ಪಾಂಡವೇಭ್ಯಃ ಪ್ರದಾಸ್ಯಂತಿ ಭೀಷ್ಮೋ ದ್ರೋಣಃ ಪಿತಾ ಚ ತೇ ॥24॥
ಎಲೈ ಮನುಜರ್ಷಭನೇ, ಭೀಷ್ಮ-ದ್ರೋಣ ಮತ್ತು ನಿನ್ನ ತಂದೆ ಈ ಮೂವರೂ ಸೇರಿ ಕರ್ಣ, ನೀನು ಮತ್ತು ನಾನು ಈ ಮೂವರನ್ನು ಪಾಂಡವರಿಗೆ ಕೊಡುವರು.
ಭ್ರಾತುರೇತದ್ವಚಃ ಶ್ರುತ್ವಾ ಧಾರ್ತರಾಷ್ಟ್ರಃ ಸುಯೋಧನಃ |
ಕ್ರುದ್ಧಃ ಪ್ರಾತಿಷ್ಠತೋತ್ಥಾಯ ಮಹಾನಾಗ ಇವ ಶ್ವಸನ್ ॥
ವಿದುರಂ ಧೃತರಾಷ್ಟ್ರಂ ಚ ಮಹಾರಾಜಂ ಚ ಬಾಹ್ಲಿಕಮ್ |
ಕೃಪಂ ಚ ಸೋಮದತ್ತಂ ಚ ಭೀಷ್ಮಂ ದ್ರೋಣಂ ಜನಾರ್ದನಮ್ ॥25॥
ಸರ್ವಾನೇತಾನನಾದೃತ್ಯ ದುರ್ಮತಿರ್ನಿರಪತ್ರಪಃ |
ಅಶಿಷ್ಟವದಮರ್ಯಾದೋ ಮಾನೀ ಮಾನ್ಯಾವಮಾನಿತಾ ॥27॥
ತಮ್ಮನ ಈ ಮಾತನ್ನು ಕೇಳಿ ಕೋಪಗೊಂಡ ದುರ್ಯೋಧನನು ಮಹಾಸರ್ಪದಂತೆ ಉಸಿರನ್ನು ಬಿಡುತ್ತಾ ವಿದುರನನ್ನೂ, ಧೃತರಾಷ್ಟ್ರನನ್ನೂ, ಮಹಾರಾಜನಾದ ಬಾಹ್ಲಿಕನನ್ನೂ, ಕೃಪರನ್ನೂ, ಸೋಮದತ್ತನನ್ನೂ, ಭೀಷ್ಮ-ದ್ರೋಣ-ಕೃಷ್ಣರನ್ನೂ ಮತ್ತು ಉಳಿದ ಎಲ್ಲರನ್ನೂ ತಿರಸ್ಕರಿಸಿ ಲಜ್ಜಾ ರಹಿತನೂ, ದುರ್ಬುದ್ಧಿಯುಳ್ಳವನೂ, ಅಹಂಕಾರಿಯೂ, ಗೌರವಕ್ಕೆ ಯೋಗ್ಯರಾದವರನ್ನು ಅವಮಾನ ಮಾಡುವವನೂ, ಅಶಿಷ್ಟರಂತೆ ಮರ್ಯಾದಾ ರಹಿತನೂ ಆದ ಅವನು ಎದ್ದು ಹೊರಗೆ ಹೊರಟನು.
ತಂ ಪ್ರಸ್ಥಿತಮಭಿಪ್ರೇಕ್ಷ್ಯ ಭ್ರಾತರೋ ಭರತರ್ಷಭ |
ಅನುಜಗ್ಮುಃ ಸಹಾಮಾತ್ಯಾ ರಾಜಾನಶ್ಚಾಪಿ ಸರ್ವಶಃ ॥28॥
ಎಲೈ ಭರತರ್ಷಭನೇ, ಹೊರಗೆ ಹೊರಟ ಅವನನ್ನು ನೋಡಿ ಅವನ ತಮ್ಮಂದಿರೂ, ಮಂತ್ರಿಗಳೂ ಮತ್ತು ಅವನ ಸಹಾಯಕ್ಕೆ ಬಂದಿದ್ದ ಎಲ್ಲಾ ರಾಜರೂ ಅವನನ್ನು ಹಿಂಬಾಲಿಸಿದರು.
ಸಭಾಯಾಮುತ್ಥಿತಂ ಕ್ರುದ್ಧಂ ಪ್ರಸ್ಥಿತಂ ಭ್ರಾತೃಭಿಃ ಸಹ |
ದುರ್ಯೋಧನಮಭಿಪ್ರೇಕ್ಷ್ಯ ಭೀಷ್ಮಃ ಶಾಂತನವೋಽಬ್ರವೀತ್ ॥29॥
ಸಭೆಯಲ್ಲಿ ಎದ್ದು ಕ್ರುದ್ಧನಾಗಿ ತಮ್ಮಂದಿರ ಜೊತೆಯಲ್ಲಿ ಹೊರಗೆ ಹೊರಟ ದುರ್ಯೋಧನನನ್ನು ನೋಡಿ ಶಂತನು ಪುತ್ರರಾದ ಭೀಷ್ಮರು ಮಾತನಾಡಿದರು.
ಧರ್ಮಾರ್ಥಾವಭಿಸಂತ್ಯಜ್ಯ ಸಂರಂಭಂ ಯೋಽನುಪದ್ಯತೇ |
ಹಸಂತಿ ವ್ಯಸನೇ ತಸ್ಯ ದುರ್ಹೃದೋ ನಚಿರಾದಿವ ॥30॥
ಯಾವನು ಧರ್ಮಾರ್ಥಗಳನ್ನು ತ್ಯಜಿಸಿ ಕ್ರೋಧವನ್ನೇ ಹೊಂದುತ್ತಾನೆಯೋ ಅವನು ಶೀಘ್ರದಲ್ಲಿಯೇ ಅನರ್ಥಕ್ಕೆ ಸಿಲುಕಿದಾಗ ಅವನ ಶತ್ರುಗಳು ನಗುತ್ತಾರೆ.
ದುರಾತ್ಮಾ ರಾಜಪುತ್ರೋಽಯಂ ಧಾರ್ತರಾಷ್ಟ್ರೋಽನುಪಾಯವಿತ್ |
ಮಿಥ್ಯಾಭಿಮಾನೀ ರಾಜ್ಯಸ್ಯ ಕ್ರೋಧಲೋಭವಶಾನುಗಃ ॥31॥
ಈ ದುರಾತ್ಮನಾದ ರಾಜಪುತ್ರನಾದ ದುರ್ಯೋಧನನು ಯಾವ ಒಳ್ಳೆಯ ಮಾರ್ಗವನ್ನೂ ಬಲ್ಲವನಲ್ಲ. ಕೆಟ್ಟ ಅಹಂಕಾರವುಳ್ಳವನು. ರಾಜ್ಯದ ಆಸೆಯುಳ್ಳವನು. ಕ್ರೋಧ ಮತ್ತು ಲೋಭಗಳಿಗೆ ವಶನಾಗಿದ್ದಾನೆ.
ಕಾಲಪಕ್ವಮಿದಂ ಮನ್ಯೇ ಸರ್ವಕ್ಷತ್ರಂ ಜನಾರ್ದನ |
ಸರ್ವೇ ಹ್ಯನುಸೃತಾ ಮೋಹಾತ್ ಪಾತಿತಾಃ ಸಹ ಮಂತ್ರಿಭಿಃ ॥32॥
ಎಲೈ ಜನಾರ್ದನನೇ, ಈ ಎಲ್ಲ ಕ್ಷತ್ರಿಯರೂ ಕಾಲದಿಂದ ಪಕ್ವರಾಗಿದ್ದಾರೆ ಎಂದು ನಾನು ಭಾವಿಸುತ್ತೇನೆ. ಮೋಹದಿಂದ ಅವನನ್ನು ಅನುಸರಿಸಿ ಹೊರಟ ಎಲ್ಲ ರಾಜರೂ ಮತ್ತು ಮಂತ್ರಿಗಳೂ ಪಾತವನ್ನು ಹೊಂದಿದ್ದಾರೆ.
ಭೀಷ್ಮಸ್ಯಾಥ ವಚಃ ಶ್ರುತ್ವಾ ದಾಶಾರ್ಹಃ ಪುಷ್ಕರೇಕ್ಷಣಃ |
ಭೀಷ್ಮದ್ರೋಣಮುಖಾನ್ ಸರ್ವಾನಭ್ಯಭಾಷತ ವೀರ್ಯವಾನ್ ॥33॥

ಅನಂತರ ಭೀಷ್ಮರ ಮಾತುಗಳನ್ನು ಕೇಳಿ ಕಮಲನಯನನಾದ ಪರಾಕ್ರಮಶಾಲಿಯಾದ ಕೃಷ್ಣನು ಭೀಷ್ಮ-ದ್ರೋಣ ಮೊದಲಾದ ಎಲ್ಲರನ್ನೂ ಕುರಿತು ಮಾತನಾಡಿದನು.
ಸರ್ವೇಷಾಂ ಕುರುವೃದ್ಧಾನಾಂ ಮಹಾನಯಮತಿಕ್ರಮಃ |
ಪ್ರಸಹ್ಯ ಮಂದಮೈಶ್ವರ್ಯೇ ನ ನಿಯಚ್ಛಂತಿ ಯನ್ನೃಪಮ್ ॥34॥
ಮಂದನಾದ ದುರ್ಯೋಧನನನ್ನು ಬಲಾತ್ಕಾರದಿಂದ ಹಿಡಿದು, ಆ ರಾಜನನ್ನು ಪ್ರಭುತ್ವದ ವಿಷಯದಲ್ಲಿ ನಿಯಂತ್ರಿಸುವುದಿಲ್ಲವಾದ ಕಾರಣ ಎಲ್ಲಾ ಕುರುವೃದ್ಧರಿಗೂ ಈ ದೊಡ್ಡ ಅಪಚಾರವು ತಗಲುತ್ತದೆ.
ತತ್ರ ಕಾರ್ಯಮಹಂ ಮನ್ಯೇ ಪ್ರಾಪ್ತಕಾಲಮರಿಂದಮಾಃ |
ಕ್ರಿಯಮಾಣೇ ಭವೇಚ್ಛ್ರೇಯಃ ತತ್ ಸರ್ವಂ ಶೃಣುತಾನಘಾಃ ॥35॥
ಎಲೈ ಅರಿಂದಮರೇ, ಇಂತಹ ಸಂದರ್ಭದಲ್ಲಿ ಯಾವುದನ್ನು ಮಾಡಿದರೆ ಉಚಿತವೂ ಮತ್ತು ಶ್ರೇಯಸ್ಸೂ ಆಗುತ್ತದೆ ಎಂದು ನಾನು ತಿಳಿದಿದ್ದೇನೆಯೋ ಅದನ್ನು ಹೇಳುತ್ತೇನೆ, ಎಲೈ ಅನಘರೇ, ನೀವೆಲ್ಲರೂ ಕೇಳಿ.
ಪ್ರತ್ಯಕ್ಷಮೇತದ್ ಭವತಾಂ ಯದ್ ವಕ್ಷ್ಯಾಮಿ ಹಿತಂ ವಚಃ |
ಭವತಾಮಾನುಕೂಲ್ಯೇನ ಯದಿ ರೋಚೇತ ಭಾರತಾಃ ॥36॥
ಎಲೈ ಭಾರತರೇ, ನಿಮ್ಮ ಎದುರಿಗೇ ನಿಮ್ಮ ಅನುಕೂಲಕ್ಕಾಗಿ ಈ ಹಿತವಾದ ನುಡಿಗಳನ್ನು ಆಡುವೆನು. ನಿಮಗೆ ಅದು ಇಷ್ಟವಾಗುವುದಾದರೆ ಸರಿಯಾದೀತು.
ಭೋಜರಾಜಸ್ಯ ವೃದ್ಧಸ್ಯ ದುರಾಚಾರೋ ಹ್ಯನಾತ್ಮವಾನ್ |
ಜೀವತಃ ಪಿತುರೈಶ್ವರ್ಯಂ ಹೃತ್ವಾ ಮೃತ್ಯುವಶಂ ಗತಃ ॥37॥
ವೃದ್ಧನಾದ ಭೋಜರಾಜನ ಮಗನಾದ ದುರಾಚಾರಿಯೂ, ಮನೋಜಯರಹಿತನೂ ಆದ ಕಂಸನು ತಂದೆಯು ಬದುಕಿರುವಾಗಲೇ ಪ್ರಭುತ್ವವನ್ನು ಕಿತ್ತುಕೊಂಡು ಮೃತ್ಯುವಶನಾದನು.
ಉಗ್ರಸೇನಸುತಃ ಕಂಸಃ ಪರಿತ್ಯಕ್ತಃ ಸ ಬಾಂಧವೈಃ |
ಜ್ಞಾತೀನಾಂ ಹಿತಕಾಮೇನ ಮಯಾ ಶಸ್ತೋ ಮಹಾಮೃಧೇ ॥38॥
ಉಗ್ರಸೇನನ ಸುತನಾದ ಆ ಕಂಸನು ಬಾಂಧವರಿಂದ ಪರಿತ್ಯಕ್ತನಾದನು. ಬಂಧುಗಳಿಗೆ ಹಿತವನ್ನು ಮಾಡಲು ಬಯಸಿ ನಾನು ದೊಡ್ಡ ಯುದ್ಧದಲ್ಲಿ ಅವನನ್ನು ಸಂಹರಿಸಿದೆನು.
ಆಹುಕಃ ಪುನರಸ್ಮಾಭಿಃ ಜ್ಞಾತಿಭಿಶ್ಚಾಭಿಸತ್ಕೃತಃ |
ಉಗ್ರಸೇನಃ ಕೃತೋ ರಾಜಾ ಭೋಜರಾಜನ್ಯವರ್ಧನಃ ॥39॥
ಆಹುಕನು ಪುನಃ ದಾಯಾದಿಗಳಾದ ನಮ್ಮಿಂದ ಗೌರವಿಸಲ್ಪಟ್ಟನು. ಭೋಜರಾಜ ಕುಲವನ್ನು ಅಭಿವೃದ್ಧಿಪಡಿಸುವ ಉಗ್ರಸೇನನನ್ನು ರಾಜನನ್ನಾಗಿ ಮಾಡಿದೆವು.
ಕಂಸಮೇಕಂ ಪರಿತ್ಯಜ್ಯ ಕುಲಾರ್ಥೇ ಸರ್ವಯಾದವಾಃ |
ಸಂಭೂಯ ಸುಖಮೇಧಂತೇ ಭಾರತಾಂಧಕವೃಷ್ಣಯಃ ॥40॥
ಎಲೈ ಭಾರತನೇ, ಕುಲದ ಕ್ಷೇಮದ ಸಲುವಾಗಿ ಕಂಸನೊಬ್ಬನನ್ನು ಪರಿತ್ಯಜಿಸಿ ಎಲ್ಲ ಯಾದವರೂ, ಅಂಧಕರೂ ಮತ್ತು ವೃಷ್ಣಿಗಳೂ ಒಟ್ಟಿಗೆ ಇದ್ದು ಸುಖವನ್ನು ಪಡೆಯುತ್ತಿದ್ದಾರೆ.
ಅಪಿ ಚಾಪ್ಯವದದ್ ರಾಜನ್ ಪರಮೇಷ್ಠೀ ಪ್ರಜಾಪತಿಃ |
ವ್ಯೂಢೇ ದೇವಾಸುರೇ ಯುದ್ಧೇಽಭ್ಯುದ್ಯತೇಷ್ವಾಯುಧೇಷು ಚ ॥41॥
ದ್ವೈಧೀಭೂತೇಷು ಲೋಕೇಷು ವಿನಶ್ಯತ್ಸು ಚ ಭಾರತ |
ಅಬ್ರವೀತ್ ತು ತದಾ ದೇವೋ ಭಗವಾನ್ ಲೋಕಭಾವನಃ ॥42॥
ದೇವಾಸುರ ಯುದ್ಧದಲ್ಲಿ ಸೈನ್ಯವನ್ನು ವ್ಯೂಹ ಮಾಡಿ, ಆಯುಧಗಳನ್ನು ಹಿಡಿದು ಲೋಕವು ಇಬ್ಭಾಗವಾಗಿ ವಿನಾಶದ ಸಮೀಪದಲ್ಲಿದ್ದಾಗ ಎಲೈ ಭಾರತನೇ, ಲೋಕಭಾವನನಾದ, ಪೂಜ್ಯನಾದ ಬ್ರಹ್ಮದೇವನು ಮಾತನಾಡಿದನು.
ಪರಾಭವಿಷ್ಯಂತ್ಯಸುರಾಃ ದೈತೇಯಾ ದಾನವೈಃ ಸಹ |
ಆದಿತ್ಯಾ ವಸವೋ ರುದ್ರಾ ಭವಿಷ್ಯಂತಿ ದಿವೌಕಸಃ ॥43॥
ದೇವಾಸುರಮನುಷ್ಯಾಶ್ಚ ಗಂಧರ್ವೋರಗರಾಕ್ಷಸಾಃ |
ಅಸ್ಮಿನ್ ಯುದ್ಧೇ ಸುಸಂಯತ್ತಾ ಭವಿಷ್ಯಂತಿ ಪರಸ್ಪರಮ್ ॥44॥
ಇತಿ ಮತ್ವಾಽಬ್ರವೀದ್ ಧರ್ಮಂ ಪರಮೇಷ್ಠೀ ಪ್ರಜಾಪತಿಃ ॥45॥
ವರುಣಾಯ ಪ್ರಯಚ್ಛೈತಾನ್ ಬದ್ಧ್ವಾ ದೈತೇಯದಾನವಾನ್ ॥46॥
ಅಸುರರೂ, ದೈತ್ಯರೂ ಮತ್ತು ದಾನವರೂ ಪರಾಭವವನ್ನು ಹೊಂದುವರು. ಆದಿತ್ಯರೂ, ವಸುಗಳೂ ಮತ್ತು ರುದ್ರರೂ ಮತ್ತು ಉಳಿದ ದೇವತೆಗಳೂ ಸಮೃದ್ಧಿಯನ್ನು ಹೊಂದುವರು. ದೇವಾಸುರ ಮನುಷ್ಯರೂ, ಗಂಧರ್ವೋರಗರಾಕ್ಷಸರೂ ಈ ಯುದ್ಧದಲ್ಲಿ ಪರಸ್ಪರವಾಗಿ ಬಹಳ ಎಚ್ಚರಿಕೆಯಿಂದ ಸನ್ನದ್ಧರಾಗಿ ಇರುವರು ಎಂದು ತಿಳಿದ ಪ್ರಜಾಪತಿಯಾದ ಬ್ರಹ್ಮದೇವರು ಧರ್ಮನನ್ನು ಕುರಿತು (ಯಮನನ್ನು ಕುರಿತು) ಹೇಳುವವರಾಗಿ ಈ ದೈತ್ಯ-ದಾನವರನ್ನು ಬಂಧಿಸಿ ವರುಣನಿಗೆ ಕೊಟ್ಟುಬಿಡು ಎಂದು ಹೇಳಿದರು.
ಏವಮುಕ್ತಸ್ತತೋ ಧರ್ಮೋ ನಿಯೋಗಾದ್ ಪರಮೇಷ್ಠಿನಃ |
ವರುಣಾಯ ದದೌ ಸರ್ವಾನ್ ಬದ್ಧ್ವಾ ದೈತೇಯದಾನವಾನ್ ॥47॥
ಹೀಗೆ ಹೇಳಲ್ಪಟ್ಟ ಯಮಧರ್ಮನು ಬ್ರಹ್ಮದೇವರ ಅಪ್ಪಣೆಯಂತೆ ದೈತ್ಯ-ದಾನವರನ್ನು ಬಂಧಿಸಿ ಅವರೆಲ್ಲರನ್ನೂ ವರುಣನಿಗೆ ನೀಡಿದನು.

ತಾನ್ ಬದ್ಧ್ವಾ ಧರ್ಮಪಾಶೈಶ್ಚ ಸ್ವೈಶ್ಚ ಪಾಶೈರ್ಜಲೇಶ್ವರಃ |
ವರುಣಃ ಸಾಗರೇ ಯತ್ತೋ ನಿತ್ಯಂ ರಕ್ಷತಿ ದಾನವಾನ್ ||48||
ವರುಣನು ಅವರೆಲ್ಲರನ್ನೂ ಧರ್ಮಪಾಶಗಳಿಂದಲೂ ಮತ್ತು ತನ್ನ ಪಾಶಗಳಿಂದಲೂ ಬಿಗಿದು ಸಮುದ್ರದಲ್ಲಿ ಹಾಕಿ ಎಚ್ಚರಿಕೆಯಿಂದ ಯಾವಾಗಲೂ ಆ ದಾನವರನ್ನು ರಕ್ಷಿಸುತ್ತಿದ್ದಾನೆ.
ತಥಾ ದುರ್ಯೋಧನಂ ಕರ್ಣಂ ಶಕುನಿಂ ಚಾಪಿ ಸೌಬಲಮ್ |
ಬದ್ಧ್ವಾ ದುಃಶಾಸನಂ ಚಾಪಿ ಪಾಂಡವೇಭ್ಯಃ ಪ್ರಯಚ್ಛತ ||49||
ಅದರಂತೆ ದುರ್ಯೋಧನ, ಕರ್ಣ ಮತ್ತು ಸೌಬಲನಾದ ಶಕುನಿ ಮತ್ತು ದುಃಶಾಸನ ಇವರನ್ನು ಬಂಧಿಸಿ ಪಾಂಡವರಿಗೆ ಕೊಟ್ಟುಬಿಡು.
ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ |
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ||50||
ಒಂದು ಕುಲದ ಸಲುವಾಗಿ ಒಬ್ಬ ಪುರುಷನನ್ನು ತ್ಯಜಿಸಬೇಕು. ಗ್ರಾಮದ ಸಲುವಾಗಿ ಒಂದು ಕುಲವನ್ನು ತ್ಯಜಿಸಬೇಕು. ರಾಜ್ಯದ ಸಲುವಾಗಿ ಒಂದು ಗ್ರಾಮವನ್ನು ತ್ಯಜಿಸಬೇಕು. ತನ್ನ ಸಲುವಾಗಿ ಸಮಗ್ರವಾದ ಭೂಮಿಯನ್ನೇ ತ್ಯಜಿಸಬೇಕು.
ತಸ್ಮಾದ್ ದುರ್ಯೋಧನಂ ಬದ್ಧ್ವಾ ತತಃ ಸಂಶಾಮ್ಯ ಪಾಂಡವೈಃ |
ತ್ವತ್ಕೃತೇ ನ ವಿನಶ್ಯೇಯುಃ ಕ್ಷತ್ರಿಯಾಃ ಕ್ಷತ್ರಿಯರ್ಷಭ ||51||
ಆದ್ದರಿಂದ ದುರ್ಯೋಧನನನ್ನು ಬಂಧಿಸಿ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ. ಎಲೈ ಕ್ಷತ್ರಿಯರ್ಷಭನೇ, ನಿನ್ನ ನಿಮಿತ್ತದಿಂದಾಗಿ ಕ್ಷತ್ರಿಯರು ನಾಶವನ್ನು ಹೊಂದುವುದು ಬೇಡ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತವಿಂಶೋತ್ತರಶತತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ಅಷ್ಟಪಂಚಾಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಇಪ್ಪತ್ತೆಂಟನೆಯ ಅಧ್ಯಾಯ
## ದುರ್ಯೋಧನನಿಗೆ ಗಾಂಧಾರಿಯ ಉಪದೇಶ

ವೈಶಂಪಾಯನಃ
ಕೃಷ್ಣಸ್ಯ ತು ವಚಃ ಶ್ರುತ್ವಾ ಧೃತರಾಷ್ಟ್ರೋ ಜನೇಶ್ವರಃ |
ವಿದುರಂ ಸರ್ವಧರ್ಮಜ್ಞಂ ತ್ವರಮಾಣೋಽಭ್ಯಭಾಷತ ||1||
ವೈಶಂಪಾಯನ ಕೃಷ್ಣನ ಮಾತುಗಳನ್ನು ಕೇಳಿ ರಾಜನಾದ ಧೃತರಾಷ್ಟ್ರನು ಸರ್ವಧರ್ಮವನ್ನು ತಿಳಿದ ವಿದುರನನ್ನು ಕುರಿತು ಶೀಘ್ರವಾಗಿ ಮಾತನಾಡಿದನು.
ಗಚ್ಛ ತಾತ ಮಹಾಪ್ರಾಜ್ಞ ಗಾಂಧಾರೀಂ ದೀರ್ಘದರ್ಶಿನೀಮ್ |
ಆನಯೇಹ ತಯಾ ಸಾರ್ಧಮನುನೇಷ್ಯಾಮಿ ದುರ್ಮತಿಮ್ ||2||
ಎಲೈ ಪ್ರೀತಿಪಾತ್ರನಾದ ಮಹಾಪ್ರಾಜ್ಞನೇ, ಹೋಗಿ ದೀರ್ಘದೃಷ್ಟಿಯುಳ್ಳ ಗಾಂಧಾರಿಯನ್ನು ಇಲ್ಲಿಗೆ ಕರೆದುಕೊಂಡು ಬಾ. ಅವಳ ಜೊತೆಯಲ್ಲಿ ದುರ್ಮತಿಯಾದ ದುರ್ಯೋಧನನನ್ನು ಶಾಂತಗೊಳಿಸುವೆನು.
ಯದಿ ಸಾ ನ ದುರಾತ್ಮಾನಂ ಶಮಯೇದ್ ದುಷ್ಟಚೇತಸಮ್ |
ಅಪಿ ಕೃಷ್ಣಸ್ಯ ಸುಹೃದಃ ತಿಷ್ಠೇಮ ವಚನೇ ವಯಮ್ ||3||
ಒಂದು ಪಕ್ಷ ಅವಳು ದುರಾತ್ಮನೂ, ದುಷ್ಟಚೇತನನೂ ಆದ ದುರ್ಯೋಧನನನ್ನು ಸಮಾಧಾನಗೊಳಿಸದಿದ್ದರೆ ನಾವಾದರೂ ಹಿತೈಷಿಯಾದ ಕೃಷ್ಣನ ಮಾತಿನಂತೆ ನಡೆದುಕೊಳ್ಳೋಣ.
ಅಪಿ ಲೋಭಾಭಿಭೂತಸ್ಯ ಪಂಥಾನಮನುದರ್ಶಯೇತ್ |
ದುರ್ಬುದ್ಧೇಃ ದುಸ್ಸಹಾಯಸ್ಯ ಸಮಕ್ಷಂ ಬ್ರುವತೀ ವಚಃ ||4||
ಪ್ರತ್ಯಕ್ಷವಾಗಿ ಮಾತನಾಡುತ್ತಾ ಗಾಂಧಾರಿಯು ದುರ್ಬುದ್ಧಿಯೂ, ದುಷ್ಟ ಸಹಾಯವುಳ್ಳವನೂ, ಲೋಭದಿಂದ ಕೂಡಿದವನೂ ಆದ ಅವನಿಗೆ ಸರಿಯಾದ ದಾರಿಯನ್ನು ತೋರಿಸಿಯಾಳು.
ಅಪಿ ನೋ ವ್ಯಸನಂ ಘೋರಂ ದುರ್ಯೋಧನಕೃತಂ ಮಹತ್ |
ಶಮಯೇಚ್ಚಿರರಾತ್ರಾಯ ಯೋಗಕ್ಷೇಮವದವ್ಯಯಮ್ ||5||
ನಮಗೆ ದುರ್ಯೋಧನನಿಂದ ಉಂಟಾದ ಘೋರಸಂಕಟವು ಶಮನವನ್ನು ಹೊಂದಿ, ಶಾಶ್ವತವಾದ ಯೋಗಕ್ಷೇಮವು ಉಂಟಾದೀತು (ಎಂದು ಹೇಳಿದನು).
ರಾಜ್ಞಸ್ತು ವಚನಂ ಶ್ರುತ್ವಾ ವಿದುರೋ ದೀರ್ಘದರ್ಶಿನೀಮ್ |
ಆನಯಾಮಾಸ ಗಾಂಧಾರೀಂ ಧೃತರಾಷ್ಟ್ರಸ್ಯ ಶಾಸನಾತ್ ||6||
ರಾಜನ ಮಾತುಗಳನ್ನು ಕೇಳಿ ವಿದುರನು ಧೃತರಾಷ್ಟ್ರನ ಅಪ್ಪಣೆಯಂತೆ ದೀರ್ಘದರ್ಶಿನಿಯಾದ ಗಾಂಧಾರಿಯನ್ನು ಕರೆತಂದನು.
ಧೃತರಾಷ್ಟ್ರ
ಏಷ ಗಾಂಧಾರಿ ಪುತ್ರಸ್ತೇ ದುರಾತ್ಮಾ ಶಾಸನಾತಿಗಃ |
ಐಶ್ವರ್ಯಲೋಭಾದೈಶ್ವರ್ಯಂ ಜೀವಿತಂ ಚ ಪ್ರಹಾಸ್ಯತಿ ||7||

ಧೃತರಾಷ್ಟ್ರ ಎಲೌ ಗಾಂಧಾರಿಯೇ, ಈ ನಿನ್ನ ದುಷ್ಟನೂ, ದೊಡ್ಡವರ ಶಾಸನವನ್ನು ಮೀರುವವನೂ ಆದ ಪುತ್ರನು ಐಶ್ವರ್ಯಲೋಭದಿಂದ ಐಶ್ವರ್ಯವನ್ನೂ ಮತ್ತು ಜೀವಿತವನ್ನೂ ತೊರೆಯುವನು.
ಅಶಿಷ್ಟವದಮರ್ಯಾದಃ ಪಾಪೈಃ ಸಹ ದುರಾತ್ಮಭಿಃ |
ಸಭಾಯಾ ನಿರ್ಗತೋ ಮೂಢೋ ವ್ಯತಿಕ್ರಮ್ಯ ಸುಹೃದ್ವಚಃ ॥8॥
ಅಶಿಷ್ಟರಂತೆ ಮರ್ಯಾದಾಹೀನನಾಗಿ ಮೂಢನಾದ ಅವನು ಸುಹೃಜ್ಜನರ ಮಾತುಗಳನ್ನು ಮೀರಿ ದುಷ್ಟರ ಜೊತೆಯಲ್ಲಿ ಸಭೆಯಿಂದ ಹೊರಗೆ ಹೋಗಿದ್ದಾನೆ.
ವೈಶಂಪಾಯನಃ
ಸಾ ಭರ್ತೃವಚನಂ ಶ್ರುತ್ವಾ ರಾಜಪುತ್ರೀ ಯಶಸ್ವಿನೀ |
ಅನ್ವಿಚ್ಛಂತೀ ಮಹಚ್ಛ್ರೇಯೋ ಗಾಂಧಾರೀ ವಾಕ್ಯಮಬ್ರವೀತ್ ॥9॥
ವೈಶಂಪಾಯನ ಪತಿಯ ಮಾತುಗಳನ್ನು ಕೇಳಿದ ಯಶಸ್ವಿನಿಯಾದ, ರಾಜಪುತ್ರಿಯಾದ ಗಾಂಧಾರಿಯು ದೊಡ್ಡ ಶ್ರೇಯಸ್ಸನ್ನು ಬಯಸುವವಳಾಗಿ ಮಾತನಾಡಿದಳು.
ಆನಯೈನಂ ಸುತಂ ಕ್ಷಿಪ್ರಂ ರಾಜ್ಯಕಾಮುಕಮಾತುರಮ್ ॥10॥
ನ ಹಿ ರಾಜ್ಯಮಶಿಷ್ಟೇನ ಶಕ್ಯಂ ಧರ್ಮಾರ್ಥಲೋಪಿನಾ |
ಆಪ್ತುಮಾಪ್ತಂ ಯಥಾಽಪೀದಮವಿನೀತೇನ ಸರ್ವಥಾ ॥11॥
ರಾಜ್ಯಕಾಮುಕನೂ, ಸಜ್ಜನರ ದ್ವೇಷವೆಂಬ ರೋಗಗ್ರಸ್ತನೂ ಆದ ಈ ನನ್ನ ಪುತ್ರನನ್ನು ಕರೆಸು. ಅಶಿಷ್ಟನಾದವನೂ ಮತ್ತು ಧರ್ಮಾರ್ಥಗಳನ್ನು ತ್ಯಜಿಸುವವನೂ ಆದ ವ್ಯಕ್ತಿಯಿಂದ ರಾಜ್ಯವನ್ನು ಹೊಂದಲು ಸಾಧ್ಯವಿಲ್ಲ. ಆದರೂ ಸರ್ವಥಾ ಅವಿನೀತನಾದ ಅವನು ಈ ರಾಜ್ಯವನ್ನು ಹೊಂದಿದನು.
ತ್ವಮೇವಾತ್ರ ಭೃಶಂ ಗರ್ಹ್ಯೋ ಧೃತರಾಷ್ಟ್ರ ಸುತಪ್ರಿಯಃ |
ಯೋ ಜಾನನ್ ಪಾಪತಾಮಸ್ಯ ತತ್ಪ್ರಜ್ಞಾಮನುವರ್ತಸೇ ॥12॥
ಎಲೈ ಧೃತರಾಷ್ಟ್ರನೇ, ಅವನ ಪಾಪತ್ವವನ್ನು ತಿಳಿದಿದ್ದರೂ ಅವನ ಬುದ್ಧಿಯನ್ನೇ ಅನುಸರಿಸುವ ಸುತಪ್ರಿಯನಾದ ನೀನೇ ವಿಶೇಷವಾಗಿ ನಿಂದನೀಯನಾದವನು.
ಸ ಏಷ ಕಾಮಮನ್ಯುಭ್ಯಾಂ ಪ್ರಲಬ್ಧೋ ಮೋಹಮಾಸ್ಥಿತಃ |
ಅಶಕ್ಯೋಽದ್ಯ ತ್ವಯಾ ರಾಜನ್ ವಿನಿವರ್ತಯಿತುಂ ಬಲಾತ್ ॥13॥
ಎಲೈ ರಾಜನೇ, ಅಂತಹ ಈ ಯಾವ ದುರ್ಯೋಧನನು ಕಾಮ-ಕ್ರೋಧಗಳಿಂದ ಪ್ರಲೋಭಕ್ಕೆ ಒಳಗಾಗಿ ಮೋಹವನ್ನು ಹೊಂದಿದ್ದಾನೆಯೋ ಅವನನ್ನು ನೀನು ಈ ದಿನ ನಿನ್ನ ಬಲದಿಂದ ಹಿಂದಕ್ಕೆ ತಿರುಗಿಸಲು ಸಾಧ್ಯವಿಲ್ಲ.
ರಾಷ್ಟ್ರಪ್ರದಾನೇ ಮೂಢಸ್ಯ ಬಾಲಿಶಸ್ಯ ದುರಾತ್ಮನಃ |
ದುರ್ಯೋಧನಸ್ಯ ಲುಬ್ಧಸ್ಯ ಧೃತರಾಷ್ಟ್ರೋಽಶ್ನುತೇ ಫಲಮ್ ॥14॥
ದುರಾತ್ಮನೂ, ಬಾಲಿಶನೂ, ಮೂಢನೂ, ಲೋಭಿಯೂ ಆದ ದುರ್ಯೋಧನನಿಗೆ ರಾಷ್ಟ್ರವನ್ನು ಕೊಟ್ಟುದರ ಫಲವನ್ನು ಈ ದಿನ ಧೃತರಾಷ್ಟ್ರನು ಅನುಭವಿಸುತ್ತಾನೆ.
ಕಥಂ ಹಿ ಸ್ವಜನೇ ಭೇದಮುಪೇಕ್ಷೇತ ಮಹೀಪತಿಃ |
ಭಿನ್ನಂ ಹಿ ಸ್ವಜನೇನ ತ್ವಾಂ ಪ್ರಹಸಿಷ್ಯಂತಿ ಶತ್ರವಃ ॥15॥
ರಾಜನಾದವನು ಸ್ವಜನರಲ್ಲಿ ವಿರೋಧವನ್ನು ಹೇಗೆ ಉದಾಸೀನ ಮಾಡಿಯಾನು? ಸ್ವಜನರ ವಿರೋಧವನ್ನು ಸಂಪಾದಿಸಿದ ನಿನ್ನನ್ನು ಶತ್ರುಗಳು ಅಪಹಾಸ ಮಾಡುವರು.
ಯೋ ಹಿ ಶಕ್ಯೋ ಮಹಾರಾಜ ಸಾಮ್ನಾ ಭೇದೇನ ವಾ ಪುನಃ |
ನಿಸ್ತರ್ತುಮಾಪದಃ ಸ್ವೇಷು ದಂಡಂ ಕಸ್ತತ್ರ ಪಾತಯೇತ್ ॥16॥
ಎಲೈ ಮಹಾರಾಜನೇ, ಯಾವ ಆಪತ್ತನ್ನು ಸಾಮಭೇದೋಪಾಯಗಳಿಂದ ದಾಟಲು ಸಾಧ್ಯವೋ ಅಂತಹ ಆಪತ್ತು ಒದಗಿದಾಗ ಅದನ್ನು ದಾಟಲು ಯಾವನು ತನ್ನವರಲ್ಲಿಯೇ ದಂಡವನ್ನು ವಿಧಿಸಿಯಾನು?
ವೈಶಂಪಾಯನಃ
ಶಾಸನಾದ್ ಧೃತರಾಷ್ಟ್ರಸ್ಯ ದುರ್ಯೋಧನಮಮರ್ಷಣಮ್ |
ಮಾತುಶ್ಚ ವಚನಾದ್ ಕ್ಷತ್ತಾ ಸಭಾಂ ಪ್ರಾವೇಶಯತ್ ಪುನಃ ॥17॥
ವೈಶಂಪಾಯನ ಧೃತರಾಷ್ಟ್ರನ ಶಾಸನದಂತೆ ಮತ್ತು ತಾಯಿಯಾದ ಗಾಂಧಾರಿಯ ವಚನದಂತೆ ಕೋಪಶೀಲನಾದ ದುರ್ಯೋಧನನನ್ನು ವಿದುರನು ಪುನಃ ಸಭೆಗೆ ಕರೆತಂದನು.
ಸ ಮಾತುರ್ವಚನಾಕಾಂಕ್ಷೀ ಪ್ರವಿವೇಶ ಪುನಃ ಸಭಾಮ್ |
ಅತಿತಾಮ್ರೇಕ್ಷಣಃ ಕ್ರೋಧಾನ್ನಿಃಶ್ವಸನ್ನಿವ ಪನ್ನಗಃ ॥18॥
ತಾಯಿಯ ಮಾತನ್ನು ಕೇಳುವ ಆಕಾಂಕ್ಷೆಯಿಂದ ಬಹಳ ಕೆಂಪಾದ ಕಣ್ಣುಳ್ಳವನೂ, ಕ್ರೋಧದಿಂದ ಸರ್ಪದಂತೆ ಉಸಿರಾಡುತ್ತಿದ್ದವನೂ ಆದ ದುರ್ಯೋಧನನು ಪುನಃ ಸಭೆಗೆ ಬಂದನು.
ತಂ ಪ್ರವಿಷ್ಟಮಭಿಪ್ರೇಕ್ಷ್ಯ ಪುತ್ರಮುತ್ಪಥಮಾಸ್ಥಿತಮ್ |
ವಿಗರ್ಹಮಾಣಾ ಗಾಂಧಾರೀ ಶಮಾರ್ಥಂ ವಾಕ್ಯಮಬ್ರವೀತ್ ॥19॥
ಸಭೆಯನ್ನು ಪ್ರವೇಶಿಸಿದ ಉನ್ಮಾರ್ಗಗಾಮಿಯಾದ ಪುತ್ರನನ್ನು ನೋಡಿ ಗಾಂಧಾರಿಯು ಅವನನ್ನು ನಿಂದಿಸುತ್ತಾ ಶಾಂತಿಯ ಸಲುವಾಗಿ ಮಾತನಾಡಿದಳು.

ದುರ್ಯೋಧನ ನಿಬೋಧೇದಂ ವಚನಂ ಮಮ ಪುತ್ರಕ |
ಹಿತಂ ತೇ ಸಾನುಬಂಧಸ್ಯ ತಥಾऽऽಯತ್ಯಾಂ ಸುಖೋದಯಮ್ ॥20॥
ಎಲೈ ಪ್ರೀತಿಯ ಪುತ್ರನಾದ ದುರ್ಯೋಧನನೇ, ನಿನಗೂ ಮತ್ತು ನಿನ್ನ ಪರಿವಾರಕ್ಕೂ ಹಿತವಾದ ದೀರ್ಘಕಾಲದಲ್ಲಿ ಸುಖವನ್ನು ಸಂಪಾದಿಸುವ ಈ ನನ್ನ ಮಾತುಗಳನ್ನು ಕೇಳು.
ದುರ್ಯೋಧನ ಯದಾಹ ತ್ವಾಂ ಪಿತಾ ಭರತಸತ್ತಮಃ |
ಭೀಷ್ಮೋ ದ್ರೋಣಃ ಕೃಪಃ ಕ್ಷತ್ತಾ ಸುಹೃದಾಂ ಕುರು ತದ್ವಚಃ ॥21॥
ದುರ್ಯೋಧನನೇ, ನಿನಗೆ ಭರತಶ್ರೇಷ್ಠನಾದ ತಂದೆಯೂ, ಭೀಷ್ಮದ್ರೋಣಕೃಪರೂ ಮತ್ತು ವಿದುರನೂ ಏನು ಹೇಳಿದರೋ ಅಂತಹ ಸುಹೃಜ್ಜನರ ಮಾತನ್ನು ನಡೆಸು.
ಭೀಷ್ಮಸ್ಯ ತು ಪಿತುಶ್ಚೈವ ಮಮ ಚಾಪಚಿತಿಃ ಕೃತಾ |
ಭವೇದ್ ದ್ರೋಣಮುಖಾನಾಂ ಚ ಸುಹೃದಾಂ ಶಾಮ್ಯತಾ ತ್ವಯಾ ॥
ನೀನು ಶಾಂತನಾದರೆ ಭೀಷ್ಮರಿಗೂ, ದ್ರೋಣರಿಗೂ ಮತ್ತು ನನಗೂ ಮತ್ತು ಸುಹೃಜ್ಜನರಿಗೂ ಪೂಜೆಯನ್ನು ಮಾಡಿದಂತಾಗುತ್ತದೆ.
ನ ಹಿ ರಾಜ್ಯಂ ಮಹಾಪ್ರಾಜ್ಞ ಸ್ವೇನ ಕಾಮೇನ ಶಕ್ಯತೇ |
ಅವಾಪ್ತುಂ ರಕ್ಷಿತುಂ ವಾऽಪಿ ಭೋಕ್ತುಂ ಭರತಸತ್ತಮ ॥23॥
ಎಲೈ ಭರತಸತ್ತಮನೇ, ಮಹಾಪ್ರಾಜ್ಞನೇ, ತನ್ನ ಇಚ್ಛೆಯಿಂದ ರಾಜ್ಯವನ್ನು ಪಡೆಯಲು ಅಥವಾ ರಕ್ಷಿಸಲು ಅಥವಾ ಭೋಗಿಸಲು ಸಾಧ್ಯವಿಲ್ಲ.
ನ ಹ್ಯವಶ್ಯೇಂದ್ರಿಯೋ ರಾಜ್ಯಮಶ್ನೀಯಾದ್ ದೀರ್ಘಮಂತರಮ್ |
ವಿಜಿತಾತ್ಮಾ ತು ಮೇಧಾವೀ ಸ ರಾಜ್ಯಮಭಿಪಾಲಯೇತ್ ॥24॥
ಜಿತೇಂದ್ರಿಯನಲ್ಲದವನು ದೀರ್ಘಕಾಲದವರೆಗೆ ರಾಜ್ಯವನ್ನು ಭೋಗಿಸಲಾರ. ಮನೋಜಯವುಳ್ಳ ಮೇಧಾವಿಯು ಮಾತ್ರ ರಾಜ್ಯವನ್ನು ಪಾಲಿಸಿಯಾನು.
ಕಾಮಕ್ರೋಧೌ ಹಿ ಪುರುಷಮರ್ಥೇಭ್ಯೋ ವ್ಯಪಕರ್ಷತಃ |
ತೌ ತು ಶತ್ರೂ ವಿನಿರ್ಜಿತ್ಯ ರಾಜಾ ವಿಜಯತೇ ಮಹೀಮ್ ॥25॥
ಕಾಮ-ಕ್ರೋಧಗಳು ಪುರುಷನನ್ನು ಅರ್ಥದಿಂದ ದೂರಸೆಳೆಯುತ್ತವೆ. ಶತ್ರುಗಳಾದ ಅವೆರಡನ್ನು ಜಯಿಸಿ ರಾಜನು ಭೂಮಿಯನ್ನು ಜಯಿಸುತ್ತಾನೆ.
ಲೋಕೇಶ್ವರಾಭಿಭೂತಂ ಹಿ ಮಹದೇತದ್ ದುರಾತ್ಮಭಿಃ |
ರಾಜ್ಯಂ ನಾಮೇಪ್ಸಿತಂ ಸ್ಥಾನಂ ನ ಶಕ್ಯಮಭಿರಕ್ಷಿತುಮ್ ॥26॥
ಲೋಕೇಶ್ವರರ ಅವಕೃಪೆಗೆ ಪಾತ್ರವಾದ ಈ ದೊಡ್ಡ ರಾಜ್ಯವು ಮತ್ತು ರಾಜನ ಸ್ಥಾನವು ದುಷ್ಟಾತ್ಮರಿಂದ ರಕ್ಷಿಸಲ್ಪಡಲು ಸಾಧ್ಯವಿಲ್ಲ.
ಇಂದ್ರಿಯಾಣಿ ಮಹತ್ ಪ್ರೇಪ್ಸುರ್ನಿಯಚ್ಛೇದರ್ಥಧರ್ಮಯೋಃ |
ಇಂದ್ರಿಯೈರ್ನಿಯತೈರ್ಬುದ್ಧಿರ್ವರ್ಧತೇऽಗ್ನಿರಿವೇಂಧನೈಃ ॥27॥
ದೊಡ್ಡದನ್ನು ಸಂಪಾದಿಸಲು ಬಯಸುವವನು ಇಂದ್ರಿಯಗಳನ್ನು ಅರ್ಥಗಳಲ್ಲಿ ನಿಯಂತ್ರಿಸಬೇಕು. ಇಂದ್ರಿಯಗಳನ್ನು ನಿಯಂತ್ರಿಸಿದರೆ ಕಟ್ಟಿಗೆಗಳಿಂದ ಅಗ್ನಿಯು ಬೆಳೆದಂತೆ ಬುದ್ಧಿಯು ಅಭಿವೃದ್ಧಿಯನ್ನು ಹೊಂದುತ್ತದೆ.
ಅವಿಧೇಯಾನಿ ಹೀಮಾನಿ ವ್ಯಾಪಾದಯಿತುಮಪ್ಯಲಮ್ |
ಅವಿಧೇಯಾ ಇವಾದಾಂತಾ ಹಯಾಃ ಪಥಿಷು ಸಾರಥಿಮ್ ॥28॥
ಅವಿಧೇಯವಾದ ಅಶ್ವಗಳು ದಾರಿಯಲ್ಲಿ ಸಾರಥಿಯನ್ನು ಕೊಲ್ಲುವಂತೆ, ಅವಿಧೇಯವಾದ ಈ ಇಂದ್ರಿಯಗಳು ಪುರುಷನನ್ನು ಕೊಲ್ಲಲೂ ಸಮರ್ಥವಾಗಿವೆ.
ಅವಿಜಿತ್ಯ ಯ ಆತ್ಮಾನಮಮಾತ್ಯಾನ್ ವಿಜಿಗೀಷತೇ |
ಅಜಿತಾತ್ಮಾऽಜಿತಾಮಾತ್ಯಃ ಸೋऽವಶಃ ಪರಿಹೀಯತೇ ॥29॥
ಯಾವನು ತನ್ನನ್ನು ಗೆಲ್ಲದೇ ಅಮಾತ್ಯರನ್ನು ಗೆಲ್ಲಲು ಬಯಸುತ್ತಾನೋ ಅಜಿತಾತ್ಮನಾದ ಅವನು ಅಮಾತ್ಯರನ್ನು ಗೆಲ್ಲಲು ಸಾಧ್ಯವಾಗದೇ ಅವಶನಾಗಿ ಕ್ಷಯವನ್ನು ಹೊಂದುತ್ತಾನೆ.
ಆತ್ಮಾನಮೇವ ಪ್ರಥಮಂ ದ್ವೇಷ್ಯರೂಪೇಣ ಯೋಜಯೇತ್ |
ತತೋऽಮಾತ್ಯಾನಮಿತ್ರಾಂಶ್ಚ ನ ಮೋಘಂ ವಿಜಿಗೀಷತೇ ॥30॥
ಕಷ್ಟಸಾಧ್ಯವಾದ ಕಾರ್ಯಗಳಲ್ಲಿ ಮೊದಲು ತನ್ನನ್ನೇ ವಿನಿಯೋಗಿಸಿಕೊಳ್ಳಬೇಕು. ಅನಂತರ ಅಮಾತ್ಯರನ್ನು ಮತ್ತು ಶತ್ರುಗಳನ್ನು ವಿನಿಯೋಗಿಸಬೇಕು. ಅಂತಹವನ ಜಯದ ಆಸೆಯು ವ್ಯರ್ಥವಾಗುವುದಿಲ್ಲ.
ವಶ್ಯೇಂದ್ರಿಯಂ ಜಿತಾಮಾತ್ಯಂ ಧೃತದಂಡಂ ವಿಕಾರಿಷು |
ಪರೀಕ್ಷ್ಯಕಾರಿಣಂ ವೀರಮತ್ಯರ್ಥಂ ಶ್ರೀರ್ನಿಷೇವತೇ ॥31॥
ಇಂದ್ರಿಯ ಜಯವುಳ್ಳ, ಅಮಾತ್ಯರನ್ನು ಜಯಿಸಿದ, ದುಷ್ಟರಲ್ಲಿ ದಂಡವನ್ನು ಪ್ರಯೋಗಿಸುವ, ವಿಚಾರ ಮಾಡಿ ಎಲ್ಲ ಕಾರ್ಯಗಳನ್ನು ಮಾಡುವ ವೀರನನ್ನು ಸಂಪತ್ತು ಬಹಳವಾಗಿ ಸೇವಿಸುತ್ತದೆ.
ಕ್ಷುದ್ರಾಕ್ಷೇಣೇವ ಜಾಲೇನ ಝಷಾವಪಿಹಿತಾವುಭೌ |
ಕಾಮಕ್ರೋಧೌ ಶರೀರಸ್ಥೌ ಪ್ರಜ್ಞಾನಂ ತೌ ವಿಲುಂಪತಃ ॥32॥
ಅಲ್ಪವಾದ ಶಂಕುಗಳಿರುವ ಬಲೆಯಿಂದ ಕಾಮ-ಕ್ರೋಧಗಳೆಂಬ ಎರಡು ಮೀನುಗಳು ಮುಚ್ಚಲ್ಪಟ್ಟಿವೆ. ಮೀನುಗಳು ಆ ಬಲೆಯನ್ನೂ ಹರಿದಂತೆ ಶರೀರದಲ್ಲಿರುವ ಕಾಮ-ಕ್ರೋಧಗಳು ಪ್ರಜ್ಞೆಯನ್ನೇ ನಾಶಮಾಡುತ್ತವೆ.

ಯಾಭ್ಯಾಂ ಹಿ ದೇವಾಃ ಸ್ವರ್ಯಾತುಃ ಸ್ವರ್ಗಸ್ಯಾಪಿದಧುರ್ಮುಖಮ್ |
ಬಿಭ್ಯತೋಽನುಪರಾಗಸ್ಯ ಕಾಮಕ್ರೋಧೌ ಸ್ಮ ವರ್ಧಿತೌ ॥33॥
ಯಾವ ಕಾಮ-ಕ್ರೋಧಗಳನ್ನು ನೋಡಿ ಅದರ ಜೊತೆಯಲ್ಲಿ ಬರುವ ಮನುಷ್ಯರಿಗೆ ದೇವತೆಗಳು ಸ್ವರ್ಗದ ಬಾಗಿಲನ್ನೇ ಮುಚ್ಚಿದರೋ ಅಂತಹ ಕಾಮ-ಕ್ರೋಧಗಳು ವಿಷಯ ಸೇವನೆಯಿಂದ ಅಭಿವೃದ್ಧಿಯನ್ನು ಹೊಂದಿದ್ದರೂ ವಿಷಯಾಭಿಲಾಷೆ ಇಲ್ಲದ ಮನುಷ್ಯನಿಗೆ ತಾವೇ ಹೆದರುತ್ತವೆ.
ಕಾಮಂ ಕ್ರೋಧಂ ಚ ಲೋಭಂ ಚ ಡಂಭಂ ದರ್ಪಂ ಚ ಭೂಮಿಪ |
ಸಮ್ಯಗ್ ವಿಜೇತುಂ ಯೋ ವೇದ ಸ ಮಹೀಮಭಿಜಾನತೇ ॥34॥
ಎಲೈ ರಾಜನೇ, ಕಾಮ, ಕ್ರೋಧ, ಲೋಭ, ಡಂಭ ಮತ್ತು ದರ್ಪಗಳನ್ನು ಯಾವನು ಸರಿಯಾಗಿ ಜಯಿಸಲು ತಿಳಿದಿದ್ದಾನೆಯೋ ಅವನೇ ಭೂಮಿಯನ್ನು ಪಡೆಯುತ್ತಾನೆ.
ಸತತಂ ನಿಗ್ರಹೇ ಯುಕ್ತ ಇಂದ್ರಿಯಾಣಾಂ ಭವೇನ್ನೃಪಃ |
ಈಪ್ಸನ್ನರ್ಥಂ ಚ ಧರ್ಮಂ ಚ ದ್ವಿಷತಾಂ ಚ ಪರಾಭವಮ್ ॥35॥
ಅರ್ಥದಿಂದ ಧರ್ಮವನ್ನು ಬಯಸುವ ಮತ್ತು ಶತ್ರುಗಳ ಪರಾಭವವನ್ನು ಬಯಸುವ ರಾಜನು ಸತತವಾಗಿ ಇಂದ್ರಿಯಗಳನ್ನು ನಿಗ್ರಹಿಸುವುದರಲ್ಲಿ ಜಾಗರೂಕನಾಗಿರಬೇಕು.
ಕಾಮಾಭಿಭೂತಃ ಕ್ರೋಧಾದ್ವಾ ಯೋ ಮಿಥ್ಯಾ ಪ್ರತಿಪದ್ಯತೇ |
ಸ್ವೇಷು ಚಾನ್ಯೇಷು ವಾ ತಸ್ಯ ನ ಸಹಾಯಾ ಭವಂತ್ಯುತ ॥36॥
ಕಾಮದಿಂದಲೂ ಅಥವಾ ಕ್ರೋಧದಿಂದಲೂ ಅಭಿಭೂತನಾಗಿ ಯಾವನು ತನ್ನವರ ಅಥವಾ ಪರರ ವಿಷಯದಲ್ಲಿ ಕೆಟ್ಟ ರೀತಿಯಲ್ಲಿ ನಡೆದುಕೊಳ್ಳುತ್ತಾನೆಯೋ ಅವನಿಗೆ ಯಾರೂ ಸಹಾಯವನ್ನು ಮಾಡುವುದಿಲ್ಲ.
ಏಕೀಭೂತೈರ್ಮಹಾಪ್ರಾಜ್ಞೈಃ ಶೂರೈರರಿನಿಬರ್ಹಣೈಃ |
ಪಾಂಡವೈಃ ಪೃಥಿವೀಂ ತಾತ ಭೋಕ್ಷ್ಯಸೇ ಸಹಿತಃ ಸುಖೀ ॥37॥
ಶೂರರೂ, ಶತ್ರುಸಂಹಾರಕರೂ, ಮಹಾಪ್ರಾಜ್ಞರೂ ಆದ ಪಾಂಡವರ ಜೊತೆಯಲ್ಲಿ ಒಂದುಗೂಡಿ ಎಲೈ ಪ್ರೀತಿಪಾತ್ರನೇ, ನೀನು ಅವರ ಜೊತೆಯಲ್ಲಿ ಸುಖವಾಗಿ ಭೂಮಿಯನ್ನು ಆಳುವಿ.
ಯಥಾ ಭೀಷ್ಮಃ ಶಾಂತನವೋ ದ್ರೋಣಶ್ಚಾಪಿ ಮಹಾಯಶಾಃ |
ಆಹತುಸ್ತಾತ ತತ್ ಸತ್ಯಮಜೇಯೌ ಕೃಷ್ಣಪಾಂಡವೌ ॥38॥
ಎಲೈ ಪ್ರೀತಿಪಾತ್ರನೇ, ಶಂತನುಪುತ್ರರಾದ ಭೀಷ್ಮರು ಮತ್ತು ಮಹಾಕೀರ್ತಿಶಾಲಿಗಳಾದ ದ್ರೋಣರು ಹೇಳಿದುದು ಸತ್ಯವಾದ ಮಾತು, ಕೃಷ್ಣಾರ್ಜುನರು ಅಜೇಯರಾದವರು.
ಪ್ರಪದ್ಯಸ್ವ ಮಹಾಬಾಹುಂ ಕೃಷ್ಣಮಕ್ಲಿಷ್ಟಕಾರಿಣಮ್ |
ಪ್ರಪನ್ನೋ ಹಿ ಸುಖಾಯ ಸ್ಯಾದುಭಯೋರೇವ ಕೇಶವಃ ॥39॥
ಮಹಾಬಾಹುವೂ, ಅಕ್ಲಿಷ್ಟಕಾರಿಯೂ ಆದ ಕೃಷ್ಣನನ್ನು ಶರಣುಹೊಂದು. ಕೇಶವನು ಪ್ರಸನ್ನನಾದರೆ ಎರಡು ಪಕ್ಷಗಳಿಗೂ ಸುಖವುಂಟಾದೀತು.
ಸುಹೃದಾಮರ್ಥಕಾಮಾನಾಂ ಯೋ ನ ತಿಷ್ಠತಿ ಶಾಸನೇ |
ಪ್ರಾಜ್ಞಾನಾಂ ಕೃತವಿದ್ಯಾನಾಂ ಸ ನರಃ ಶತ್ರುನಂದನಃ ॥40॥
ಯಾವ ಮನುಷ್ಯನು ತನ್ನ ಹಿತವನ್ನು ಬಯಸುವ ಪ್ರಾಜ್ಞರಾದ, ವಿದ್ಯಾಸಂಪನ್ನರಾದ ಸುಹೃಜ್ಜನರ ಶಾಸನದಲ್ಲಿ ಇರುವುದಿಲ್ಲವೋ ಅವನು ಶತ್ರುಗಳಿಗೆ ಸಂತೋಷವನ್ನು ಉಂಟುಮಾಡುವವನಾಗುತ್ತಾನೆ.
ನ ಯುದ್ಧೇ ತಾತ ಕಲ್ಯಾಣಂ ನ ಧರ್ಮಾರ್ಥೌ ಕುತಃ ಸುಖಮ್ |
ನ ಚಾಪಿ ವಿಜಯೋ ನಿತ್ಯಂ ಮಾ ಯುದ್ಧೇ ಚೇತ ಆದಧಾಃ ॥41॥
ಪ್ರೀತಿಪಾತ್ರನೇ, ಯುದ್ಧದಲ್ಲಿ ಯಾವ ಕಲ್ಯಾಣವೂ ಇಲ್ಲ, ಧರ್ಮಾರ್ಥಗಳೂ ಇಲ್ಲ. ಇನ್ನು ಸುಖವು ಎಲ್ಲಿಂದ ಬರಬೇಕು? ಮತ್ತು ವಿಜಯವು ಉಂಟಾಗುವುದೆಂಬ ನಿಶ್ಚಯವೂ ಇಲ್ಲ. ಆದ್ದರಿಂದ ಯುದ್ಧದಲ್ಲಿ ಮನಸ್ಸನ್ನು ಮಾಡಬೇಡ.
ಭೀಷ್ಮೇಣ ಹಿ ಮಹಾಪ್ರಾಜ್ಞ ಪಿತ್ರಾ ತೇ ಬಾಹ್ಲಿಕೇನ ಚ |
ದತ್ತೋಽಂಶಃ ಪಾಂಡುಪುತ್ರಾಣಾಂ ಭೇದಾದ್ ಭೀತೈರರಿಂದಮ ॥42॥
ಎಲೈ ಮಹಾಪ್ರಾಜ್ಞನೇ, ಅರಿಂದಮನೇ, ಭೀಷ್ಮರೂ, ನಿನ್ನ ತಂದೆಯೂ ಮತ್ತು ಬಾಹ್ಲಿಕರಾಜನೂ ಸೇರಿ ವಿರೋಧ ಉಂಟಾಗಬಹುದೆಂಬ ಭಯದಿಂದ ಪಾಂಡವರಿಗೆ ರಾಜ್ಯದ ಅಂಶವನ್ನು ಕೊಟ್ಟರು.
ತಸ್ಯ ಚೈತತ್ ಪ್ರದಾನಸ್ಯ ಫಲಮದ್ಯಾನುಪಶ್ಯಸಿ |
ಯದ್ ಭುಂಕ್ಷೇ ಪೃಥಿವೀಂ ಕೃತ್ಸ್ನಾಂ ಶೂರೈರ್ನಿಹತಕಂಟಕಾಮ್ ॥43॥
ಪಾಂಡವರಿಗೆ ರಾಜ್ಯಾಂಶವನ್ನು ದಾನಮಾಡಿದ ಫಲವನ್ನು ಈ ದಿನ ನೀನು ನೋಡುತ್ತಿದ್ದೀಯೆ. ಏಕೆಂದರೆ ಶೂರರಾದ ಅವರಿಂದ ಸಂಪಾದಿಸಲ್ಪಟ್ಟ, ನಿಹತಕಂಟಕವಾದ (ಶತ್ರುಗಳಿಲ್ಲದ) ಸಮಸ್ತವಾದ ಪೃಥಿವಿಯನ್ನು ನೀನು ಭೋಗಿಸುತ್ತಿದ್ದೀಯೆ.
ಪ್ರಯಚ್ಛ ಪಾಂಡುಪುತ್ರಾಣಾಂ ಯಥೋಚಿತಮರಿಂದಮ |
ಯದೀಚ್ಛಸಿ ಸಹಾಮಾತ್ಯೋ ಭೋಕ್ತುಮರ್ಧಮಹೀಮಿಮಾಮ್ ॥44॥
ಅರಿಂದಮನೇ, ನೀನು ಅಮಾತ್ಯರ ಜೊತೆಯಲ್ಲಿ ಈ ಭೂಮಿಯ ಅರ್ಧಭಾಗವನ್ನು ಭೋಗಿಸಲು ಬಯಸುವುದಾದರೆ ಪಾಂಡುಪುತ್ರರಿಗೆ ಯಥೋಚಿತವಾದ ಭಾಗವನ್ನು ಕೊಡು.
ಅಲಮರ್ಧಂ ಪೃಥಿವ್ಯಾಸ್ತೇ ಸಹಾಮಾತ್ಯಸ್ಯ ಜೀವಿತುಮ್ |

ಸುಹೃದಾಂ ವಚನೇ ತಿಷ್ಠನ್ ಯಶಃ ಪ್ರಾಪ್ಸ್ಯಸಿ ಭಾರತ ॥45॥
ನೀನು ಮತ್ತು ನಿನ್ನ ಮಂತ್ರಿಗಳು ಜೀವಿಸಲು ಪೃಥಿವಿಯ ಅರ್ಧಭಾಗವು ಸಾಕು. ಎಲೈ ಭಾರತನೇ, ಸುಹೃಜ್ಜನರ ಶಾಸನದಂತೆ ನಡೆದುಕೊಂಡು ನೀನು ಬಹಳ ಕೀರ್ತಿಯನ್ನು ಹೊಂದುವಿ.
ಶ್ರೀಮದ್ಭಿರಾತ್ಮವದ್ಭಿಸ್ತೈಃ ಬುದ್ಧಿಮದ್ಭಿರ್ಜಿತೇಂದ್ರಿಯೈಃ |
ಪಾಂಡವೈರ್ವಿಗ್ರಹಸ್ತಾತ ಭ್ರಂಶಯೇನ್ಮಹತಃ ಸುಖಾತ್ ॥46॥
ಎಲೈ ಪ್ರೀತಿಪಾತ್ರನೇ, ತೇಜಸ್ವಿಗಳೂ, ಜಿತಮನಸ್ಕರೂ, ಬುದ್ಧಿವಂತರೂ, ಜಿತೇಂದ್ರಿಯರೂ ಆದ ಪಾಂಡವರ ಜೊತೆಯಲ್ಲಿ ವಿರೋಧವು ದೊಡ್ಡ ಸುಖವನ್ನು ನಾಶಮಾಡುತ್ತದೆ.
ನಿಗೃಹ್ಯ ಸುಹೃದಾಂ ಮನ್ಯುಂ ಶಾಧಿ ರಾಜ್ಯಂ ಯಥೋಚಿತಮ್ |
ಸ್ವಮಂಶಂ ಪಾಂಡುಪುತ್ರೇಭ್ಯಃ ಪ್ರದಾಯ ಪುರುಷರ್ಷಭ ॥47॥
ಎಲೈ ಪುರುಷರ್ಷಭನೇ, ಪಾಂಡವರಿಗೆ ಅವರ ಭಾಗವನ್ನು ಕೊಟ್ಟು ಸುಹೃಜ್ಜನರಿಗೆ ಉಂಟಾಗಿರುವ ಕೋಪವನ್ನು ಶಮನಗೊಳಿಸಿ ಯಥೋಚಿತವಾಗಿ ರಾಜ್ಯವನ್ನು ಆಳು.
ಅಲಂ ಮಹಾನ್ ನಿಕಾರೋಽಯಂ ತ್ರಯೋದಶಸಮಾಃ ಕೃತಾಃ |
ಶಮಯೈನಂ ಮಹಾಪ್ರಾಜ್ಞ ಕಾಮಕ್ರೋಧಸಮೇಧಿತಮ್ ॥48॥
ಈ ಹದಿಮೂರು ವರ್ಷಗಳ ಕಾಲ ಪಾಂಡವರಿಗೆ ಮಾಡಿದ ಅಪಚಾರವು ಸಾಕು. ಮಹಾಪ್ರಾಜ್ಞನೇ, ಕಾಮ-ಕ್ರೋಧಗಳಿಂದ ಉದ್ಬುದ್ಧವಾದ ಈ ಅಪಚಾರವನ್ನು ಶಾಂತಗೊಳಿಸುವವನಾಗು.
ನ ಚೈಷ ಶಕ್ತಃ ಪಾರ್ಥಾನಾಂ ಯಸ್ತ್ವದರ್ಥಮಭೀಪ್ಸತಿ |
ಸೂತಪುತ್ರೋ ದೃಢಕ್ರೋಧೋ ಭ್ರಾತಾ ದುಃಶಾಸನಶ್ಚ ತೇ ॥49॥
ನಿನ್ನ ಸಲುವಾಗಿ ಯುದ್ಧವನ್ನು ಬಯಸುವ, ಬಹಳ ಕ್ರೋಧವುಳ್ಳ ಸೂತಪುತ್ರನಾದ ಕರ್ಣನಾಗಲೀ ಅಥವಾ ನಿನ್ನ ತಮ್ಮನಾದ ದುಃಶಾಸನನಾಗಲೀ ಪಾಂಡವರನ್ನು ಜಯಿಸಲು ಶಕ್ತರಲ್ಲ.
ಭೀಷ್ಮೇ ದ್ರೋಣೇ ಕೃಪೇ ಕರ್ಣೇ ಭೀಮಸೇನೇ ಧನಂಜಯೇ |
ಧೃಷ್ಟದ್ಯುಮ್ನೇ ಚ ಸಂಕ್ರುದ್ಧೇ ನ ಸ್ಯುಃ ಸರ್ವಾಃ ಪ್ರಜಾ ಧ್ರುವಮ್ ॥50॥
ಭೀಷ್ಮರೂ, ದ್ರೋಣರೂ, ಕೃಪರೂ, ಕರ್ಣ, ಭೀಮಸೇನ, ಅರ್ಜುನ, ಧೃಷ್ಟದ್ಯುಮ್ನ ಇವರೆಲ್ಲರೂ ಸಂಕ್ರುದ್ಧರಾದರೆ ಖಂಡಿತವಾಗಿ ಯಾವ ಪ್ರಜೆಗಳೂ ಉಳಿಯಲಾರರು.
ಅಮರ್ಷವಶಮಾಪನ್ನೋ ಮಾ ಕುರುಸ್ತಾತ ಜೀವನಃ |
ಸರ್ವಾ ಹಿ ಪೃಥಿವೀ ತಾತ ಮಾ ಗಮತ್ ತ್ವತ್ಕೃತೇ ವಧಮ್ ॥51॥
ಪ್ರೀತಿಪಾತ್ರನೇ, ಜೀವಿಸುವ ಯಾವ ಕೌರವನೂ ಕ್ರೋಧವಶನಾಗುವುದು ಬೇಡ. ನಿನ್ನ ಸಲುವಾಗಿ ಎಲ್ಲ ಭೂಮಿಯೂ ವಧೆಯನ್ನು ಹೊಂದದಿರಲಿ.
ಯಚ್ಚ ತ್ವಂ ಮನ್ಯಸೇ ಮೂಢ ಭೀಷ್ಮದ್ರೋಣಕೃಪಾಃ ಪರಾನ್ |
ಯೋತ್ಸ್ಯಂತೇ ಸರ್ವಶಕ್ತ್ಯೇತಿ ನೈತದದ್ಯೋಪಪದ್ಯತೇ ॥52॥
ಎಲೈ ಮೂಢನೇ, ಭೀಷ್ಮದ್ರೋಣಕೃಪರು ಪಾಂಡವರ ಜೊತೆಯಲ್ಲಿ ಸರ್ವಶಕ್ತಿಯಿಂದ ಯುದ್ಧವನ್ನು ಮಾಡುವರು ಎಂದು ಏನು ಭಾವಿಸಿದ್ದೀಯೋ ಅದು ಈ ದಿನ ಹಾಗೆ ಆಗುವುದಿಲ್ಲ.
ಸಮಂ ಹಿ ರಾಜ್ಯಂ ಪ್ರೀತಿಶ್ಚ ಸ್ಥಾನಂ ಚ ವಿದಿತಾತ್ಮನಾಮ್ |
ಪಾಂಡವೇಷ್ವಥ ಯುಷ್ಮಾಸು ಧರ್ಮಸ್ತ್ವಭ್ಯಧಿಕಸ್ತತಃ ॥53॥
ವಿವೇಕಿಗಳಾದವರ ದೃಷ್ಟಿಯಲ್ಲಿ ರಾಜ್ಯ, ಪ್ರೀತಿ, ಸ್ಥಾನ ಇವುಗಳು ನಿನಗೂ ಮತ್ತು ಪಾಂಡವರಿಗೂ ಸಮವಾಗಿವೆ. ಆದರೆ ಪಾಂಡವರಲ್ಲಿ ಧರ್ಮವು ಅಧಿಕವಾಗಿದೆ.
ಧೃತರಾಷ್ಟ್ರಃ
ರಾಜಪಿಂಡಭಯಾದೇತೇ ಯದಿ ಹಾಸ್ಯಂತಿ ಜೀವಿತಮ್ |
ನ ಹಿ ಶಕ್ಷ್ಯಂತಿ ರಾಜಾನಂ ಯುಧಿಷ್ಠಿರಮುದೀಕ್ಷಿತುಮ್ ॥54॥
ಧೃತರಾಷ್ಟ್ರ ರಾಜನ ಅನ್ನದ ಋಣದಿಂದ ಈ ಭೀಷ್ಮಾದಿಗಳು ಜೀವಿತವನ್ನು ತೊರೆಯಲು ಬಯಸಿದರೂ ಯುಧಿಷ್ಠಿರನನ್ನು ನೋಡುವುದಕ್ಕೂ ಸಮರ್ಥರಾಗುವುದಿಲ್ಲ.
ನ ಲೋಭಾದರ್ಥಸಂಪತ್ತಿರ್ನರಾಣಾಮಿಹ ದೃಶ್ಯತೇ |
ತದಲಂ ತಾತ ಲೋಭೇನ ಪ್ರಶಾಮ್ಯ ಭರತರ್ಷಭ ॥55॥
ಲೋಭದಿಂದ ಮನುಷ್ಯರಿಗೆ ಧನಸಂಪತ್ತಿಯು ಎಲ್ಲೂ ಕಾಣಬರುವುದಿಲ್ಲ. ಪ್ರೀತಿಪಾತ್ರನೇ, ಲೋಭವನ್ನು ಮಾಡಬೇಡ. ಭರತರ್ಷಭನೇ, ಪಾಂಡವರ ಜೊತೆಯಲ್ಲಿ ಶಾಂತಿಸಂಧಾನವನ್ನು ಮಾಡಿಕೊಳ್ಳುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಾವಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *

ಸ ವಾಸುದೇವೇನ ವಿಬೋಧಿತೋऽಪಿ
ಪಾಪಾಭಿಸಂಧಿರ್ಧೃತರಾಷ್ಟ್ರಸೂನುಃ |
ಉತ್ಥಾಯ ತಸ್ಮಾದನುಜೈರಮಾತ್ಯೈ-
ರ್ನಿಯಂತುಮೀಶಂ ಕುಮತಿರ್ವ್ಯಧಾನ್ಮತಿಮ್ ‖74‖
ಶ್ರೀಕೃಷ್ಣ ಎಷ್ಟು ಬೋಧಿಸಿದರೂ ಪಾಪಸಂಕಲ್ಪವುಳ್ಳ, ದುರ್ಬುದ್ಧಿಯವನಾದ ದುರ್ಯೋಧನ ತಮ್ಮಂದಿರೊಡನೆ ಮತ್ತು ಮಂತ್ರಿಗಳೊಡನೆ ಅಲ್ಲಿಂದ ಎದ್ದು ಹೋಗಿ ಕೃಷ್ಣನನ್ನು ಬಂಧಿಸಲು ಸಂಕಲ್ಪಿಸಿದ.
ಯೇ ಯೇ ತದಾ ಕೇಶವಸಂಯಮಾಯ
ನ್ಯಮಂತ್ರಯಂಸ್ತೇ ವಿಬುಧಪ್ರತೀಪಾಃ |
ಅತೋ ವಿಕರ್ಣಪ್ರಮುಖಾ ಅಪಿ ಸ್ಮ
ವಧ್ಯತ್ವಮಾಯನ್ನಶುಭಾಂ ಗತಿಂ ಚ ‖75‖
ಯಾರು ಯಾರು ಕೃಷ್ಣನ ಬಂಧನ ಮಾಡಬೇಕೆಂದು ಆಲೋಚಿಸಿದರೋ ಅವರೆಲ್ಲರೂ ಅಸುರರು. ಅದರಿಂದ ವಿಕರ್ಣ ಮುಂತಾದವರೂ ವಧಾರ್ಹರೆನಿಸಿದರು. ದುರ್ಗತಿಗೆ ಈಡಾದರು.
ಕರ್ಣಃ ಸುರಾಗ್ರ್ಯೋऽಪಿ ಸುಯೋಧನಾರ್ಥೇ
ನ್ಯಮಂತ್ರಯದ್ ಭಾವತೋ ನೈವ ದುಷ್ಟಃ |
ಅತೋ ಗತಿಶ್ಚಾಸ್ಯ ಸುಶೋಭನಾऽಭೂದ್
ಯೇऽತ್ರಾನುಕೂಲಾಃ ಪರಮಸ್ಯ ತೇ ಶುಭಾಃ ‖76‖
ಕರ್ಣ ದೇವಾಂಶನಾದರೂ ಅಸುರಾವೇಶದಿಂದ ದುರ್ಯೋಧನನ ಸಂತೋಷಕ್ಕಾಗಿಯೇ ಮಂತ್ರಾಲೋಚನೆಯಲ್ಲಿ ಸೇರಿದ್ದ ಹೊರತು ಹೃದಯದಲ್ಲಿ ದುಷ್ಟನಲ್ಲ. ಅದರಿಂದ ಅವನಿಗೆ ಒಳ್ಳೆಯ ಗತಿಯೇ ಆಯಿತು. ಈ ಸಮಯದಲ್ಲಿ ಯಾರು ಕೃಷ್ಣನಿಗೆ ಅನುಕೂಲರಾಗಿದ್ದರೋ ಅವರೆಲ್ಲರೂ ಸಜ್ಜನರು.
ಋಷಿಭಿರ್ಜಾಮದಗ್ನ್ಯೇನ ವ್ಯಾಸೇನಾಪ್ಯಮಿತೌಜಸಾ |
ವಾಸುದೇವಾತ್ಮನಾ ಚೈವ ತ್ರಿರೂಪೇಣೈವ ವಿಷ್ಣುನಾ ‖77‖
ಮಾತಾಪಿತೃಭ್ಯಾಂ ಭೀಷ್ಮಾದ್ಯೈರನುಶಿಷ್ಟೋऽಪಿ ದುರ್ಮತಿಃ |
ದುರ್ಯೋಧನೋ ಮಂತ್ರಯತೇ ಮುಕುಂದಸ್ಯಾऽಶು ಬಂಧನಮ್ ‖
ಋಷಿಗಳು, ಪರಶುರಾಮ ವೇದವ್ಯಾಸ ಕೃಷ್ಣ ಎಂಬ ಮೂರು ರೂಪಗಳಿಂದಿದ್ದ ವಿಷ್ಣು ತಾಯಿ-ತಂದೆಗಳು, ಭೀಷ್ಮ ಮುಂತಾದ ಎಲ್ಲರೂ ಉಪದೇಶಿಸಿದರೂ ದುರ್ಬುದ್ಧಿಯವನಾದ ದುರ್ಯೋಧನ ಭವಬಂಧಮೋಚಕನಾದ ಕೃಷ್ಣನ ಬಂಧನಕ್ಕೆ ಮಂತ್ರಾಲೋಚನೆ ಮಾಡಿದ.
ಸಾತ್ಯಕಿಃ ಕೃತವರ್ಮಾ ಚ ತಚ್ಛುಶ್ರುವತುರಂಜಸಾ |
ಸಂಸ್ಥಾಪ್ಯ ಕೃತವರ್ಮಾಣಂ ರಹಃ ಸಾತ್ಯಕಿರತ್ರ ಚ |
ಅಭ್ಯೇತ್ಯ ಕೇಶವಂ ಪ್ರಾಹ ದುರ್ಯೋಧನವಿನಿಶ್ಚಯಮ್ ‖79‖
ಸಾತ್ಯಕಿ, ಕೃತವರ್ಮರು ಈ ಮಂತ್ರಾಲೋಚನೆಯ ಮಾತುಗಳನ್ನು ಕೇಳಿಸಿಕೊಂಡರು. ಸಾತ್ಯಕಿ ಕೃತವರ್ಮನನ್ನು ಸಭಾದ್ವಾರದಲ್ಲಿ ನಿಲ್ಲಿಸಿ ಕೃಷ್ಣನ ಬಳಿಗೆ ಬಂದು ರಹಸ್ಯದಲ್ಲಿ ದುರ್ಯೋಧನನ ನಿರ್ಧಾರವನ್ನು ಹೇಳಿದ.
ಜಾನನ್ನಪ್ಯಖಿಲಂ ಕೃಷ್ಣಸ್ತಚ್ಛ್ರುತ್ವಾ ಸಾತ್ಯಕೇರ್ಮುಖಾತ್ |
ವೈಚಿತ್ರವೀರ್ಯಮವದತ್ ಪಶ್ಯ ಮಾಮಿತಿ ಸರ್ವಗಮ್ ‖80‖
ಕೃಷ್ಣ ಎಲ್ಲವನ್ನೂ ತಿಳಿದವನೇ ಆದರೂ ಸಾತ್ಯಕಿಯ ಮುಖದಿಂದ ಕೇಳಿದ ಬಳಿಕ ಧೃತರಾಷ್ಟ್ರನಿಗೆ ಹೇಳಿದ `ಸರ್ವವ್ಯಾಪ್ತನಾದ ನನ್ನನ್ನು ನೋಡು' ಎಂದು.
ಅಥ ತೇನಾऽಹುತೇ ಪುತ್ರೇ ಸಾಮಾತ್ಯೇ ಪುರುಷೋತ್ತಮಃ |
ಸ್ವಂ ರೂಪಂ ದರ್ಶಯಾಮಾಸ ಸರ್ವಗಂ ಪೂರ್ಣಸದ್ಗುಣಮ್ ‖81‖
ಬಳಿಕ ಧೃತರಾಷ್ಟ್ರ ದುರ್ಯೋಧನನನ್ನೂ ಅವನ ಮಂತ್ರಿಗಳನ್ನು ಕರೆಸಿದಾಗ ಶ್ರೀಕೃಷ್ಣ ಸರ್ವವ್ಯಾಪ್ತವಾದ ತನ್ನ ಷಡ್ಗುಣಪೂರ್ಣರೂಪವನ್ನು ತೋರಿದ.
ತತ್ಕಾಲಸೂರ್ಯಾಮಿತದೀಪ್ತಿ ಸರ್ವಜಗದ್ಧರಂ
ಶಾಶ್ವತಮಪ್ರಮೇಯಮ್ |
ದೃಷ್ಟ್ವೈವ ಚಕ್ಷೂಂಷಿ ಸುಯೋಧನಾದ್ಯಾ
ನ್ಯಮೀಲಯನ್ ದೀಧಿತಿವಾರಿತಾನಿ ‖82‖
ಪ್ರಳಯಕಾಲದ ಸೂರ್ಯನಂಥ ಅಮಿತಪ್ರಕಾಶವುಳ್ಳ ಸಕಲ ಲೋಕಧಾರಕ ಶಾಶ್ವತ ಅಪ್ರಮೇಯವಾದ ಆ ವಿಶ್ವರೂಪವನ್ನು ಕಂಡೊಡನೆ ದುರ್ಯೋಧನ ಮುಂತಾದವರು ಕಣ್ಣುಮುಚ್ಚಿಕೊಂಡರು. ಏಕೆಂದರೆ ಆ ಬೆಳಕು ಕಣ್ಣುಕೋರೈಸುತ್ತಿತ್ತು.
ಪಿಧಾಯ ರೂಪಂ ಪುನರೇವ ತದ್ಧರಿ-
ರ್ವೈಚಿತ್ರವೀರ್ಯೇಣ ಸಮರ್ಥಿತಃ ಪುನಃ |
ಕೃತ್ವಾऽಂಧಮೇವ ಪ್ರಯಯೌ ಸುಯೋಧನಂ
ಸಹಾನುಗಂ ಪಾಪತಮಂ ಪ್ರಕಾಶ್ಯ ‖83‖

ಶ್ರೀಕೃಷ್ಣ ವಿಶ್ವರೂಪವನ್ನು ಮರೆಮಾಡಿ, ಧೃತರಾಷ್ಟ್ರ ಪುನಃ ಪುನಃ ಬೇಡಿಕೊಂಡದ್ದರಿಂದ ಅವನನ್ನು ಹಿಂದಿನಂತೆಯೇ ಅಂಧನನ್ನಾಗಿ ಮಾಡಿ, ದುರ್ಯೋಧನನನ್ನೂ ಅವನ ಕಡೆಯವರನ್ನೂ ಮಹಾಪಾಪಿಗಳೆಂದು ಲೋಕಕ್ಕೆ ತೋರಿಸಿ ಹೊರಗೆ ನಡೆದ.

ಅನಂತಶಕ್ತಿಃ ಪುರುಷೋತ್ತಮೋಽಸೌ

ಶಕ್ತೋಽಪಿ ದುರ್ಯೋಧನಚಿತ್ತನಿಗ್ರಹೇ |

ನೈವ ವ್ಯಧಾದೇನಮಥೋಕ್ತಕಾರಿಣಂ

ನಿಪಾತಯನ್ನಂಧತಮಸ್ಯನಂತಃ ॥84॥

ಅನಂತಶಕ್ತಿಯುಳ್ಳ ಪುರುಷೋತ್ತಮ ಶ್ರೀಕೃಷ್ಣ ದುರ್ಯೋಧನನ ಪಾಪಬುದ್ಧಿಯನ್ನು ಕಳೆಯಲು ಶಕ್ತನಾಗಿದ್ದರೂ ಅವನಿಗೆ ತನ್ನ ಮಾತಿನಂತೆ ನಡೆಯಲು ಒಳಗೆ ಪ್ರೇರಣೆ ಮಾಡಲಿಲ್ಲ. ಇದು ಅವನನ್ನು ಬೇಗನೆ ಅಂಧಂತಮಸ್ಸಿನಲ್ಲಿ ಹಾಕುವುದಕ್ಕಾಗಿ.

* * * * *

ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ

ಪುನಃ ಸಭೆಯಿಂದ ಹೊರಗೆ ಹೋಗಿ ಕೃಷ್ಣನನ್ನು ಬಂಧಿಸಲು

ದುರ್ಯೋಧನನ ಮಂತ್ರಾಲೋಚನೆ. ಸಾತ್ಯಕಿಯಿಂದ ಅದು ಕೃಷ್ಣನಿಗೆ ನಿವೇದನೆ. ಅದನ್ನು ತಿಳಿದ ವಿದುರನಿಂದ ದುರ್ಯೋಧನನ ನಿಂದನೆ.

ವೈಶಂಪಾಯನಃ

ತತ್ತು ವಾಕ್ಯಮನಾದೃತ್ಯ ಸೋಽರ್ಥವನ್ಮಾತೃಭಾಷಿತಮ್ |

ಪುನಃ ಪ್ರತಸ್ಥೇ ಸಂರಂಭಾತ್ ಸಕಾಶಮಕೃತಾತ್ಮನಾಮ್ ॥1॥

ವೈಶಂಪಾಯನ ತಾಯಿಯು ಆಡಿದ ಹಿತನುಡಿಗಳನ್ನು ಧಿಕ್ಕರಿಸಿ ದುರ್ಯೋಧನನು ಪುನಃ ಕೋಪದಿಂದ ಸಭೆಯನ್ನು ಬಿಟ್ಟು ದುಷ್ಟರ ಸಮೀಪಕ್ಕೆ ಹೊರಟನು.

ತತಃ ಸಭಾಯಾ ನಿರ್ಗತ್ಯ ಮಂತ್ರಯಾಮಾಸ ಕೌರವಃ |

ಸೌಬಲೇನ ಮತಾಕ್ಷೇಣ ರಾಜ್ಞಾ ಶಕುನಿನಾ ಸಹ ॥2॥

ಆಗ ದುರ್ಯೋಧನನು ಸಭೆಯಿಂದ ಹೊರಗೆ ಹೋಗಿ ಅಕ್ಷವಿದ್ಯೆಯನ್ನು ಬಲ್ಲ ಶಕುನಿಯ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿದನು.

ದುರ್ಯೋಧನಂ ಧಾರ್ತರಾಷ್ಟ್ರಂ ಕರ್ಣಂ ದುಃಶಾಸನೋಽಬ್ರವೀತ್ ॥3॥

ನೋ ಚೇತ್ ಸಂಧಾಸ್ಯತೇ ರಾಜನ್ ಸ್ವೇನ ಕಾಮೇನ ಪಾಂಡವೈಃ |

ಬದ್ಧ್ವೈವ ತ್ವಾಂ ಪ್ರದಾಸ್ಯಂತಿ ಪಾಂಡುಪುತ್ರಾಯ ಭಾರತ ॥4॥

ವೈಕರ್ತನಂ ತ್ವಾಂ ಚ ಮಾಂ ಚ ತ್ರೀನೇತಾನ್ ಭರತರ್ಷಭ |

ಪಾಂಡವೇಭ್ಯಃ ಪ್ರದಾಸ್ಯಂತಿ ಭೀಷ್ಮದ್ರೌಣೌ ಪಿತಾ ಚ ತೇ ॥5॥

ದುಃಶಾಸನನು ದುರ್ಯೋಧನ ಮತ್ತು ಕರ್ಣನನ್ನು ಕುರಿತು, ಎಲೈ ರಾಜನೇ, ಭರತರ್ಷಭನೇ, ಭಾರತನೇ, ನೀನು ನಿನ್ನ ಸ್ವಂತ ಇಚ್ಛೆಯಿಂದ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳದಿದ್ದರೆ ಭೀಷ್ಮ-ದ್ರೋಣರು ಮತ್ತು ನಿನ್ನ ತಂದೆಯು ನನ್ನನ್ನೂ, ನಿನ್ನನ್ನೂ ಮತ್ತು ಕರ್ಣನನ್ನೂ ಬಂಧಿಸಿ ಪಾಂಡವರಿಗೆ ಕೊಡುವರು ಎಂದು ಹೇಳಿದನು.

ವೈಶಂಪಾಯನಃ

ದುಃಶಾಸನಸ್ಯ ತದ್ವಾಕ್ಯಂ ನಿಶಮ್ಯ ಭರತರ್ಷಭ |

ದುರ್ಯೋಧನೋ ಧಾರ್ತರಾಷ್ಟ್ರೋ ನಿಃಶ್ವಸ್ಯ ಪ್ರಹಸನ್ನಿವ ॥6॥

ಏಕಾಂತಮುಪಸೃತ್ಯೇಹ ಮಂತ್ರಂ ಪುನರಮಂತ್ರಯತ್ |

ಸೌಬಲೇನ ಮತಾಕ್ಷೇಣ ರಾಜ್ಞಾ ಶಕುನಿನಾ ಸಹ ॥7॥

ವೈಶಂಪಾಯನ ಎಲೈ ಭರತರ್ಷಭನಾದ ಜನಮೇಜಯನೇ, ದುಃಶಾಸನನ ಆ ಮಾತನ್ನು ಕೇಳಿ ಧೃತರಾಷ್ಟ್ರನ ಪುತ್ರನಾದ ದುರ್ಯೋಧನನು ನಿಟ್ಟುಸಿರನ್ನು ಬಿಟ್ಟು ನಗುವವನಂತೆ ಏಕಾಂತಕ್ಕೆ ಹೋಗಿ ಪುನಃ ಅಕ್ಷವಿದ್ಯೆಯನ್ನು ಬಲ್ಲ ಸೌಬಲರಾಜನಾದ ಶಕುನಿಯ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿದನು.

ದುರ್ಯೋಧನಸ್ಯ ಕರ್ಣಸ್ಯ ಶಕುನೇಃ ಸೌಬಲಸ್ಯ ಚ |

ದುಃಶಾಸನಚತುರ್ಥಾನಾಮ್ ಇದಮಾಸೀದ್ ವಿಚೇಷ್ಟಿತಮ್ ॥8॥

ದುರ್ಯೋಧನ, ಕರ್ಣ, ಸೌಬಲನಾದ ಶಕುನಿ, ನಾಲ್ಕನೆಯವನಾದ ದುಶ್ಶಾಸನ ಇವರು ಇಂತಹ ಕಾರ್ಯವನ್ನು ಮಾಡಿದರು.

ದುರ್ಯೋಧನಾದಯಃ

ಪುರಾಽಯಮಸ್ಮಾನ್ ಗೃಹ್ಣಾತಿ ಕ್ಷಿಪ್ರಕಾರೀ ಜನಾರ್ದನಃ |

ಸಹಿತೋ ಧೃತರಾಷ್ಟ್ರೇಣ ರಾಜ್ಞಾ ಶಾಂತನವೇನ ಚ ॥9॥

ವಯಮೇವ ನಿಗೃಹ್ಣೀಮ ಹೃಷೀಕೇಶಂ ಬಲಾದಿವ |

ಪ್ರಸಹ್ಯ ಪುರುಷವ್ಯಾಘ್ರಮಿಂದ್ರೋ ವೈರೋಚನಿಂ ಯಥಾ ॥10॥

ದುರ್ಯೋಧನಾದಿಗಳು ಕ್ಷಿಪ್ರಕಾರಿಯಾದ ಜನಾರ್ದನನು ರಾಜನಾದ ಧೃತರಾಷ್ಟ್ರ ಮತ್ತು ಭೀಷ್ಮರಿಂದ ಸಹಿತನಾಗಿ ನಮ್ಮನ್ನು ಹಿಡಿಯುವುದಕ್ಕಿಂತ ಮುಂಚೆಯೇ ನಾವೇ ಇಂದ್ರನು ಬಲಿಯನ್ನು ಹಿಡಿದಂತೆ ಪುರುಷವ್ಯಾಘ್ರನಾದ ಹೃಷೀಕೇಶನನ್ನು ನಮ್ಮ ಬಲದಿಂದ ವಶಮಾಡಿಕೊಂಡು ಹಿಡಿಯೋಣ.

ಶ್ರುತ್ವಾ ಗೃಹೀತಂ ವಾರ್ಷ್ಣೇಯಂ ಪಾಂಡವಾ ಹತಚೇತಸಃ |

ನಿರುತ್ಸಾಹಾ ಭವಿಷ್ಯಂತಿ ಭಗ್ನದಂಷ್ಟ್ರಾ ಇವೋರಗಾಃ ॥11॥
ಕೃಷ್ಣನು ಗೃಹೀತನಾದುದನ್ನು ಕೇಳಿ ಪಾಂಡವರು ತಮ್ಮ ಮನಸ್ಸನ್ನು ಕಳೆದುಕೊಂಡು ನಿರುತ್ಸಾಹರಾಗಿ ಹಲ್ಲು ಮುರಿದ ಸರ್ಪಗಳಂತೆ ಆಗುವರು.
ಅಯಂ ಹ್ಯೇಷಾಂ ಮಹಾಬಾಹುಃ ಸರ್ವೇಷಾಂ ಶರ್ಮ ವರ್ಮ ಚ ॥
ಅಸ್ಮಿನ್ ಗೃಹೀತೇ ವಾರ್ಷ್ಣೇಯೇ ಋಷಭೇ ಸರ್ವಸಾತ್ವತಾಮ್ ।
ನಿರುದ್ಯಮಾ ಭವಿಷ್ಯಂತಿ ಪಾಂಡವಾಃ ಸೋಮಕೈಃ ಸಹ ॥13॥
ಈ ಮಹಾಬಾಹುವಾದ ಕೃಷ್ಣನು ಅವರೆಲ್ಲರಿಗೂ ಸುಖಪ್ರದನು ಮತ್ತು ಕವಚದಂತೆ ಇರುವವನು. ಸರ್ವಸಾತ್ವತಶ್ರೇಷ್ಠನಾದ ಇವನನ್ನು ಹಿಡಿದರೆ ಪಾಂಡವರು ಸೋಮಕರ ಜೊತೆಯಲ್ಲಿ ನಿರುದ್ಯಮಿಗಳಾಗುವರು.
ತಸ್ಮಾದ್ ವಯಮಿಹೈವೈಕಂ ಕೇಶವಂ ಕ್ಷಿಪ್ರಕಾರಿಣಮ್ ।
ಕ್ರೋಶತೋ ಧೃತರಾಷ್ಟ್ರಸ್ಯ ಬದ್ಧ್ವಾ ಯೋತ್ಸ್ಯಾಮಹೇ ರಿಪೂನ್ ॥14॥
ಆದ್ದರಿಂದ ನಾವು ಧೃತರಾಷ್ಟ್ರನು ಕಿರುಚಿಕೊಳ್ಳುತ್ತಿದ್ದರೂ ಕ್ಷಿಪ್ರಕಾರಿಯಾದ ಕೇಶವನೊಬ್ಬನನ್ನು ಬಂಧಿಸಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡೋಣ.
ವೈಶಂಪಾಯನಃ
ತೇಷಾಂ ಪಾಪಮಭಿಪ್ರಾಯಂ ಪಾಪಾನಾಂ ದುಷ್ಟಚೇತಸಾಮ್ ।
ಇಂಗಿತಜ್ಞಃ ಕವಿಃ ಕ್ಷಿಪ್ರಮನ್ವಬುಧ್ಯತ ಸಾತ್ಯಕಿಃ ॥15॥
ವೈಶಂಪಾಯನ ಪಾಪಿಗಳೂ, ದುಷ್ಟಚೇತನರೂ ಆದ ಅವರ ದುರಭಿಪ್ರಾಯವನ್ನು ಇಂಗಿತಜ್ಞನೂ, ಜ್ಞಾನಿಯೂ ಆದ ಸಾತ್ಯಕಿಯು ಶೀಘ್ರವಾಗಿ ತಿಳಿದನು.
ತದರ್ಥಮಭಿನಿಷ್ಕ್ರಮ್ಯ ಹಾರ್ದಿಕ್ಯೇನ ಸಹಾಸ್ಥಿತಃ ।
ಅಬ್ರುವೀತ್ ಕೃತವರ್ಮಾಣಂ ಕ್ಷಿಪ್ರಂ ಯೋಜಯ ವಾಹಿನೀಮ್ ॥16॥
ವ್ಯೂಢಾನೀಕಃ ಸಭಾದ್ವಾರಮುಪತಿಷ್ಠಸ್ವ ದಂಸಿತಃ ।
ಯಾವದಾಖ್ಯಾಮ್ಯಹಂ ಚೈತತ್ ಕೃಷ್ಣಾಯಾಕ್ಲಿಷ್ಟಕಾರಿಣೇ ॥17॥
ಅದಕ್ಕೋಸ್ಕರವಾಗಿ ಕೃತವರ್ಮನ ಜೊತೆಯಲ್ಲಿ ಹೊರಗೆ ಹೋಗಿ ನಿಂತಿದ್ದ ಅವನು ಕೃತವರ್ಮನನ್ನು ಕುರಿತು ಬೇಗ ಸೈನ್ಯವನ್ನು ಸಿದ್ಧಗೊಳಿಸು. ಸೈನ್ಯವನ್ನು ವ್ಯೂಹವಾಗಿ ರಚಿಸಿ, ಕವಚವನ್ನು ಧರಿಸಿ, ಸಭಾದ್ವಾರದಲ್ಲಿ ಇರುವವನಾಗು. ಅಷ್ಟರಲ್ಲಿ ನಾನು ಅಕ್ಲಿಷ್ಟಕಾರಿಯಾದ ಕೃಷ್ಣನಿಗೆ ಈ ವಿಷಯವನ್ನು ತಿಳಿಸುತ್ತೇನೆ ಎಂದು ಹೇಳಿದನು.
ಸ ಪ್ರವಿಶ್ಯ ಸಭಾಂ ವೀರಃ ಸಿಂಹೋ ಗಿರಿಗುಹಾಮಿವ ।
ಆಚಷ್ಟ ತಮಭಿಪ್ರಾಯಂ ಕೇಶವಾಯ ಮಹಾತ್ಮನೇ ॥18॥
ಆ ವೀರನು ಸಿಂಹವು ಪರ್ವತದ ಗುಹೆಯನ್ನು ಪ್ರವೇಶಿಸಿದಂತೆ ಆ ಸಭೆಯನ್ನು ಪ್ರವೇಶಿಸಿ, ಮಹಾತ್ಮನಾದ ಕೇಶವನಿಗೆ ದುರ್ಯೋಧನಾದಿಗಳ ಅಭಿಪ್ರಾಯವನ್ನು ತಿಳಿಸಿದನು.
ಧೃತರಾಷ್ಟ್ರಂ ತತಶ್ಚೈವ ವಿದುರಂ ಚಾತ್ಮಭಾವಿನಮ್ ।
ತೇಷಾಮೇತಮಭಿಪ್ರಾಯಮಾಚಚಕ್ಷೇ ಸ್ಮಯನ್ನಿವ ॥19॥
ಅನಂತರ ಧೃತರಾಷ್ಟ್ರನಿಗೂ ಮತ್ತು ಭಗವದ್ಭಕ್ತನಾದ ವಿದುರನಿಗೂ ಅವರ ಈ ಅಭಿಪ್ರಾಯವನ್ನು ನಗುವವನಂತೆ ತಿಳಿಸಿದನು.
ಸಾತ್ಯಕಿಃ
ಧರ್ಮಾದರ್ಥಾಚ್ಚ ಕಾಮಾಚ್ಚ ಕರ್ಮ ಸಾಧುವಿಗರ್ಹಿತಮ್ ।
ಮಂದಾಃ ಕರ್ತುಮಿಹೇಚ್ಛಂತಿ ನ ಚಾವಾಪ್ಯಂ ಕಥಂಚನ ॥20॥
ಸಾತ್ಯಕಿ ಧರ್ಮದಿಂದಲೂ, ಅರ್ಥದಿಂದಲೂ ಮತ್ತು ಕಾಮದಿಂದಲೂ ರಹಿತವಾದ, ಸಜ್ಜನರಿಂದ ನಿಂದಿತವಾದ ಕಾರ್ಯವನ್ನು ಮಾಡಲು ಈ ಮಂದರು ಬಯಸುತ್ತಿದ್ದಾರೆ, ಅದು ಎಂದೂ ಸಾಧ್ಯವಾಗುವುದಿಲ್ಲ.
ಪುರಾ ವಿಕುರ್ವತೇ ಮೂಢಾಃ ಪಾಪಾತ್ಮಾನಃ ಸಮಾಗತಾಃ ।
ಧರ್ಷಿತಾಃ ಕಾಮಮನ್ಯುಭ್ಯಾಂ ಕ್ರೋಧಲೋಭವಶಾನುಗಾಃ ॥21॥
ಕಾಮ-ಕ್ರೋಧಗಳ ತುಳಿತಕ್ಕೆ ಸಿಲುಕಿದ, ಕ್ರೋಧ-ಲೋಭವಶರಾದ, ಪಾಪಚೇತನರಾದ, ಮೂಢರಾದ, ಇವರು ಒಟ್ಟಿಗೇ ಸೇರಿ ಮೊದಲು (ಮನೋ) ವಿಕಾರವನ್ನು ಹೊಂದುತ್ತಿದ್ದಾರೆ.
ಇಮಂ ಹಿ ಪುಂಡರೀಕಾಕ್ಷಂ ಜಿಘೃಕ್ಷಂತ್ಯಲ್ಪಚೇತಸಃ ।
ಪಟೇನಾಗ್ನಿಂ ಪ್ರಜ್ವಲಿತಂ ಯಥಾ ಬಾಲಾ ಯಥಾ ಜಡಾಃ ॥22॥
ಬಾಲಕರೂ ಮತ್ತು ಜಡರೂ (ಬುದ್ಧಿ ಇಲ್ಲದವರು) ವಸ್ತ್ರದಿಂದ ಪ್ರಜ್ವಲಿಸುವ ಅಗ್ನಿಯನ್ನು ಕಟ್ಟಿದಂತೆ ಈ ಅಲ್ಪಚೇತನರು ಪುಂಡರೀಕಾಕ್ಷನನ್ನು ಬಂಧಿಸಲು ಇಚ್ಛಿಸುತ್ತಾರೆ.
ವೈಶಂಪಾಯನಃ
ಸಾತ್ಯಕೇಸ್ತದ್ವಚಃಶ್ರುತ್ವಾ ವಿದುರೋ ದೀರ್ಘದರ್ಶಿವಾನ್ ।
ಧೃತರಾಷ್ಟ್ರಂ ಮಹಾಬಾಹುಮಬ್ರುವೀತ್ ಕುರುಸಂಸದಿ ॥23॥
ವೈಶಂಪಾಯನ ಸಾತ್ಯಕಿಯ ಆ ಮಾತುಗಳನ್ನು ಕೇಳಿ ದೀರ್ಘದರ್ಶಿಯಾದ ವಿದುರನು ಕೌರವರ ಸಭೆಯಲ್ಲಿ ಮಹಾಬಾಹುವಾದ ಧೃತರಾಷ್ಟ್ರನನ್ನು ಕುರಿತು ಮಾತನಾಡಿದನು.
ಯಥಾ ವಾರಾಣಸೀ ದಗ್ಧಾ ಸಾಶ್ವಾ ಸರಥಕುಂಜರಾ ।

ಸಾನುಬಂಧಸ್ತು ಕೃಷ್ಣೇನ ಕಾಶೀನಾಮೃಷಭೋ ಹತಃ ॥24॥
ತಥಾ ನಾಗಪುರಂ ದಗ್ಧ್ವಾ ಶಂಖಚಕ್ರಗದಾಧರಃ |
ಸ್ವಯಂ ಕಾಲೇಶ್ವರೋ ಭೂತ್ವಾ ನಾಶಯಿಷ್ಯತಿ ಕೌರವಾನ್ ॥25॥
ಹೇಗೆ ಕೃಷ್ಣನು ಅಶ್ವರಥಗಜಗಳಿಂದ ಸಹಿತವಾದ ವಾರಣಾಸಿ ಪಟ್ಟಣವನ್ನು ದಹಿಸಿ ಪರಿವಾರಸಹಿತನಾದ ಕಾಶಿರಾಜನನ್ನು ವಧೆ ಮಾಡಿದನೋ ಹಾಗೆಯೇ ಶಂಖಚಕ್ರಗದಾಧರನಾದ ಅವನು ಸ್ವತಃ ಕಾಲನಿಯಾಮಕನಾಗಿ ಹಸ್ತಿನಪುರವನ್ನು ಸುಟ್ಟು ಕೌರವರನ್ನು ನಾಶಪಡಿಸುವನು.
ಪಾರಿಜಾತಹರಂ ಹ್ಯೇನಮೇಕಂ ಯದುಸುಖಾವಹಮ್ |
ನಾಭ್ಯವರ್ತತ ಸಂರಬ್ಧೋ ವೃತ್ರಹಾ ವಸುಭಿಃ ಸಹ ॥26॥
ವಸುಗಳಿಂದ ಸಹಿತನಾದ, ಕ್ರುದ್ಧನಾದ ಇಂದ್ರನೂ ಸಹ ಯದುಗಳ ಸುಖಕ್ಕೆ ಕಾರಣನಾದ, ಪಾರಿಜಾತ ಹರನಾದ ಒಬ್ಬ ಕೃಷ್ಣನನ್ನು ಮೀರಲು ಸಾಧ್ಯವಾಗಲಿಲ್ಲ.
ಪ್ರಾಪ್ಯ ನಿರ್ಮೋಚನೇ ಪಾಶಾನ್ ಷಟ್‌ಸಹಸ್ರಾಂಸ್ತರಸ್ವಿನಃ |
ಹೃತಾಸ್ತೇ ವಾಸುದೇವೇನ ಹ್ಯುಪಸಂಕ್ರಮ್ಯ ಶೌರವಾನ್ ॥27॥
ನಿರ್ಮೋಚನ ಕ್ಷೇತ್ರವನ್ನು ತಲುಪಿ ಶೌರವ, ಪಾಶಗಳನ್ನು ಛೇದಿಸಿ ವಾಸುದೇವನು ಆರುಸಾವಿರ ಅಸುರರನ್ನು ಸಂಹರಿಸಿದನು.
ದ್ವಾರಮಾಸಾದ್ಯ ಸೌಭಸ್ಯ ವಿಧೂಯ ಗದಯಾ ಗಿರಿಮ್ |
ದ್ಯುಮತ್ಸೇನಃ ಸಹಾಮಾತ್ಯಃ ಕೃಷ್ಣೇನ ವಿನಿಪಾತಿತಃ ॥28॥
ಸೌಭದ ದ್ವಾರವನ್ನು ತಲುಪಿ ಕೃಷ್ಣನು ತನ್ನ ಗದೆಯಿಂದ ಪರ್ವತದಂತಿದ್ದ ಅದನ್ನು ಭೇದಿಸಿ ಅಮಾತ್ಯರಿಂದ ಕೂಡಿದ ದ್ಯುಮತ್ಸೇನನನ್ನು ಉರುಳಿಸಿದನು.
ಶೇಷವತತ್ತ್ವತ್ ಕುರೂಣಾಂ ಚ ಧರ್ಮಾಪೇಕ್ಷೀ ತಥಾಽಚ್ಯುತಃ |
ಕ್ಷಮತೇ ಪುಂಡರೀಕಾಕ್ಷಃ ಶಕ್ತಃ ಸನ್ ಪಾಪಕರ್ಮಣಾಮ್ ॥29॥
ಪುಂಡರೀಕಾಕ್ಷನು ಪಾಪಕರ್ಮವನ್ನು ಮಾಡುವ ಕೌರವರನ್ನು ದಮನ ಮಾಡಲು ಶಕ್ತನಾದರೂ ಕೌರವರಿಗೆ ಇನ್ನೂ ಆಯುಸ್ಸು ಉಳಿದಿರುವುದರಿಂದ ಧರ್ಮವನ್ನು ಬಯಸುವ ಅಚ್ಯುತನು ಕ್ಷಮೆಯಿಂದ ಕೂಡಿದ್ದಾನೆ.
ಏತೇ ಹಿ ಯದಿ ಗೋವಿಂದಮಿಚ್ಛಂತಿ ಸಹ ರಾಜಭಿಃ |
ಅದ್ಯೈವಾತಿಥಯಃ ಸರ್ವೇ ಭವಿಷ್ಯಂತಿ ಯಮಸ್ಯ ತೇ ॥30॥
ಈ ದುರ್ಯೋಧನಾದಿಗಳು ರಾಜರ ಸಹಾಯದಿಂದ ಗೋವಿಂದನನ್ನು ಬಂಧಿಸಲು ಬಯಸಿದರೆ ಅವರೆಲ್ಲರೂ ಈ ದಿನವೇ ಯಮನಿಗೆ ಅತಿಥಿಗಳಾಗುವರು.
ಯಥಾ ವಾಯೋಸ್ತೃಣಾಗ್ರಾಣಿ ವಶಂ ಯಾಂತಿ ಬಲೀಯಸಃ |
ತಥಾ ಚಕ್ರಭೃತಃ ಸರ್ವೇ ವಶಮೇಷ್ಯಂತಿ ಕೌರವಾಃ ॥31॥
ಪ್ರಬಲವಾದ ವಾಯುವಿಗೆ ಹೇಗೆ ಹುಲ್ಲಿನ ಚೂರು ವಶವಾಗುತ್ತದೆಯೋ ಅದರಂತೆ ಕೌರವರೆಲ್ಲರೂ ಚಕ್ರಧಾರಿಯಾದ ಕೃಷ್ಣನಿಗೆ ವಶವಾಗುವರು.
ರಾಜನ್ ಪರೀತಕಾಲಸ್ತೇ ಪುತ್ರಾಃ ಸರ್ವೇ ಪರಂತಪ |
ಅಶಕ್ಯಮಯಶಸ್ಯಂ ಚ ಕರ್ಮ ಕರ್ತುಂ ಸಮುದ್ಯತಾಃ ॥32॥
ಎಲೈ ಪರಂತಪನೇ, ರಾಜನೇ, ನಿನ್ನ ಮಕ್ಕಳಿಗೆ ಕಾಲವು ಕೂಡಿ ಬಂದಿದೆ. ಆದ್ದರಿಂದ ಅವರು ಅಶಕ್ಯವಾದ, ಅಕೀರ್ತಿಕರವಾದ ಕರ್ಮವನ್ನು ಮಾಡಲು ಉದ್ಯುಕ್ತರಾಗಿದ್ದಾರೆ.
ಇಮಂ ಹಿ ಪುಂಡರೀಕಾಕ್ಷಮಭಿಭೂಯ ಪ್ರಸಹ್ಯ ಚ |
ನಿಗೃಹೀತುಂ ಕಿಲೇಚ್ಛಂತಿ ಸಹಿತಾ ವಾಸವಾನುಜಮ್ ॥33॥
ಎಲ್ಲರೂ ಸೇರಿ ಇಂದ್ರನ ತಮ್ಮನಾದ ಈ ಪುಂಡರೀಕಾಕ್ಷನನ್ನು ಪರಾಭವಗೊಳಿಸಿ ತಮ್ಮ ಬಲದಿಂದ ಅವನನ್ನು ಬಂಧಿಸಲು ಇಚ್ಛಿಸುತ್ತಾರೆ.
ಇಮಂ ಪುರುಷಶಾರ್ದೂಲಮಪ್ರಧೃಷ್ಯಂ ದುರಾಸದಮ್ |
ಆಸಾದ್ಯ ನ ಭವಿಷ್ಯಂತಿ ಪತಂಗಾ ಇವ ಪಾವಕಮ್ ॥34॥
ಯಾರಿಗೂ ಸೋಲದ, ಯಾರೂ ಸಮೀಪಕ್ಕೆ ಸುಳಿಯಲಾರದ ಈ ಪುರುಷ ಶಾರ್ದೂಲನನ್ನು ಸಮೀಪಿಸಿ ಅಗ್ನಿಯನ್ನು ಸಮೀಪಿಸಿದ ಪತಂಗಗಳಂತೆ ನಿನ್ನ ಮಕ್ಕಳು ನಾಶವನ್ನು ಹೊಂದುವರು.
ಏತೇ ನ ಶಕ್ತಾಃ ಸರ್ವೇ ಹಿ ಸಾಹಸಾತ್ ಕರ್ತುಮುದ್ಯತಾಃ |
ಅಯಮಿಚ್ಛನ್ ಹಿ ತಾನ್ ಸರ್ವಾನ್ ಯುಧ್ಯಮಾನಾನ್ ಜನಾರ್ದನಃ॥
ಸಿಂಹೋ ಮೃಗಾನಿವ ಕ್ರುದ್ಧೋ ಗಮಯೇದ್ ಯಮಸಾದನಮ್ ॥36॥
ಇವರೆಲ್ಲರೂ ಸೇರಿ ಕೃಷ್ಣನನ್ನು ಹಿಡಿಯಲು ಶಕ್ತರಲ್ಲ. ಅವಿವೇಕದಿಂದ ಅದನ್ನು ಮಾಡಲು ಹೊರಟಿದ್ದಾರೆ. ಕೃಷ್ಣನು ಇಚ್ಛಿಸಿದರೆ ಜನಾರ್ದನನಾದ ಅವನು ಯುದ್ಧ ಮಾಡುವವರೆಲ್ಲರನ್ನೂ ಕೋಪಗೊಂಡ ಸಿಂಹವು ಜಿಂಕೆಗಳನ್ನು ಸಂಹರಿಸಿದಂತೆ ಯಮಲೋಕಕ್ಕೆ ಕಳುಹಿಸಿಯಾನು.
ನ ತ್ವಯಂ ನಿಂದಿತಂ ಕರ್ಮ ಕುರ್ಯಾತ್ ಪಾಪಂ ಕಥಂಚನ |
ನ ಚ ಧರ್ಮಾದಪಕ್ರಾಮೇದಚ್ಯುತಃ ಪುರುಷೋತ್ತಮಃ ॥37॥
ಆದರೆ ಅಚ್ಯುತನೂ, ಪುರುಷೋತ್ತಮನೂ ಆದ ಇವನು ನಿಂದಿತವಾದ ಪಾಪಕರ್ಮವನ್ನು ಎಂದೂ ಮಾಡುವುದಿಲ್ಲ. ಎಂದೂ

ಧರ್ಮದಿಂದ ಚಲಿತನಾಗುವುದಿಲ್ಲ.
ವೈಶಂಪಾಯನಃ
ವಿದುರೇಣೈವಮುಕ್ತೇ ತು ಕೇಶವೋ ವಾಕ್ಯಮಬ್ರವೀತ್ ।
ಧೃತರಾಷ್ಟ್ರಮಭಿಪ್ರೇಕ್ಷ್ಯ ಸುಹೃದಾಂ ಶೃಣ್ವತಾಂ ಮಿಥಃ ॥38॥
ವೈಶಂಪಾಯನ ವಿದುರನು ಹೀಗೆ ಮಾತನಾಡುತ್ತಿರಲು ಕೃಷ್ಣನು ಧೃತರಾಷ್ಟ್ರನನ್ನು ನೋಡುತ್ತಾ ಸುಹೃಜ್ಜನರು ಕೇಳುವಂತೆ ಮಾತನಾಡಿದನು.
ಶ್ರೀಭಗವಾನ್
ರಾಜನ್ನೇತೇ ಯದಿ ಕ್ರುದ್ಧಾ ಮಾಂ ನಿಗೃಹ್ಣೀಯುರೋಜಸಾ ।
ಏತೇ ವಾ ಮಾಮಹಂ ವೈನಾನ್ ಅನುಜಾನೀಹಿ ಪಾರ್ಥಿವ ॥39॥
ಶ್ರೀಭಗವಾನ್ ಎಲೈ ರಾಜನೇ, ಇವರು ಕ್ರುದ್ಧರಾಗಿ ತಮ್ಮ ಸಾಮರ್ಥ್ಯದಿಂದ ನನ್ನನ್ನು ಬಂಧಿಸುವುದಾದರೆ ಇವರು ನನ್ನನ್ನು ಬಂಧಿಸಲಿ ಅಥವಾ ನಾನು ಅವರನ್ನು ಬಂಧಿಸಲಿ, ನನಗೆ ಅನುಮತಿಯನ್ನು ಕೊಡು.
ಏತಾನ್ ಹಿ ಸರ್ವಾನ್ ಸಂರಬ್ಧಾನ್ ನಿಯಂತುಮಹಮುತ್ಸಹೇ ।
ನ ತ್ವಹಂ ನಿಂದಿತಂ ಕರ್ಮ ಕುರ್ಯಾಂ ಪಾಪಂ ಕಥಂಚನ ॥40॥
ಕೋಪಗೊಂಡ ಇವರೆಲ್ಲರನ್ನೂ ನಾನು ನಿಗ್ರಹಿಸಲು ಸಮರ್ಥನಾಗಿದ್ದೇನೆ. ಆದರೆ ನಾನು ನಿಂದಿತವಾದ ಪಾಪಕರ್ಮವನ್ನು ಎಂದೂ ಮಾಡುವುದಿಲ್ಲ.
ಪಾಂಡವಾರ್ಥೇ ಹಿ ಲುಭ್ಯಂತಃ ಸ್ವಾರ್ಥಾದ್ ಭ್ರಂಶ್ಯಂತಿ ತೇ ಸುತಾಃ ।
ಏತೇ ಚೇದೇವಮಿಚ್ಛಂತಿ ಕೃತಕಾರ್ಯೋ ಯುಧಿಷ್ಠಿರಃ ॥41॥
ಪಾಂಡವರ ದ್ರವ್ಯವನ್ನು ಬಯಸುವ ಈ ನಿನ್ನ ಮಕ್ಕಳು ತಮ್ಮ ದ್ರವ್ಯವನ್ನೂ ಕಳೆದುಕೊಳ್ಳುತ್ತಾರೆ. ಇವರು ಹೀಗೆ ಬಯಸಿದರೆ ಯುಧಿಷ್ಠಿರನು ಕೃತಕೃತ್ಯನಾಗುತ್ತಾನೆ.
ಅದ್ಯೈವ ಹ್ಯಹಮೇನಾಂಶ್ಚ ಯೇ ಚೈನಾನನು ಭಾರತ ।
ನಿಗೃಹ್ಯ ರಾಜ್ಯೇ ರಾಜಾನಂ ಸ್ಥಾಪಯಿಷ್ಯಾಮಿ ಪಾಂಡವಮ್ ॥42॥
ಎಲೈ ಭಾರತನೇ, ನಾನು ಈ ದಿನವೇ ಇವರನ್ನೂ ಮತ್ತು ಇವರ ಅನುಯಾಯಿಗಳನ್ನೂ ನಿಗ್ರಹಿಸಿ, ಯುಧಿಷ್ಠಿರನನ್ನು ರಾಜನನ್ನಾಗಿ ರಾಜ್ಯದಲ್ಲಿ ಸ್ಥಾಪಿಸುವೆನು.
ಏಷ ಮೇ ನಿಶ್ಚಯೋ ರಾಜನ್ ಯದ್ಯೇಷೋಽಸ್ಯ ವಿನಿಶ್ಚಯಃ ।
ನರ್ದಂತು ಸಹಿತಾಃ ಶಂಖಾಃ ಪಣವಾನಕನಿಸ್ವನೈಃ ॥43॥
ಎಲೈ ರಾಜನೇ, ಇದೇ ದುರ್ಯೋಧನನ ನಿಶ್ಚಯವಾದರೆ, ಇದು ನನ್ನ ನಿಶ್ಚಯ. ಪಣವಾನಕ ಶಬ್ದಗಳಿಂದ ಕೂಡಿದ (ರಣ) ಶಂಖಗಳು ಮೊಳಗಲಿ.
ಅನಾಯಾಸೇನ ಪಾರ್ಥಾನಾಂ ವರ್ತತಾಂ ಚ ಶಿವಂ ಮಹತ್ ।
ನಿಗೃಹ್ಯ ರಾಜನ್ ಪಾರ್ಥೇಭ್ಯೋ ದದ್ಯಾಂ ಚೇತ್ ಸುಕೃತಂ ಭವೇತ್ ॥
ಅನಾಯಾಸದಿಂದ ಪಾರ್ಥರಿಗೆ ದೊಡ್ಡ ಕಲ್ಯಾಣ ಉಂಟಾಗಲಿ. ರಾಜನೇ, ನಿನ್ನ ಮಕ್ಕಳನ್ನು ನಿಗ್ರಹಿಸಿ ನಾನು ಪಾಂಡವರಿಗೆ ಕೊಡುವುದಾದರೆ ದೊಡ್ಡ ಪುಣ್ಯವು ಉಂಟಾದೀತು.
ಇದಂ ತು ನ ಪ್ರವರ್ತೇತ ನಿಂದಿತಂ ಕರ್ಮ ಭಾರತ ।
ಸನ್ನಿಧೌ ತೇ ಮಹಾರಾಜ ಕ್ರೋಧಜಂ ಪಾಪಬುದ್ಧಿಜಮ್ ॥45॥
ಆದರೆ ಎಲೈ ಭಾರತನೇ, ಮಹಾರಾಜನೇ, ಕ್ರೋಧದಿಂದಲೂ ಮತ್ತು ಪಾಪ ಬುದ್ಧಿಯಿಂದಲೂ ಇವರು ಮಾಡಬೇಕೆಂದಿರುವ ನಿಂದಿತವಾದ ಕರ್ಮವು ನಿನ್ನ ಸನ್ನಿಧಿಯಲ್ಲಿ ನಡೆಯುವುದಿಲ್ಲ.
ಏಷ ದುರ್ಯೋಧನೋ ರಾಜನ್ ಯಥೇಚ್ಛತಿ ತಥಾಽಸ್ತು ತತ್ ।
ಅಹಂ ತು ಸರ್ವಾನ್ ಸಮಯಾನ್ ಅನುಜಾನಾಮಿ ತೇ ನೃಪ ॥46॥
ಎಲೈ ರಾಜನೇ, ಈ ದುರ್ಯೋಧನನು ಹೇಗೆ ಇಚ್ಛಿಸುತ್ತಾನೋ ಅದರಂತೆ ಆಗಲಿ. ನಾನು ನಿನಗೆ ಎಲ್ಲ ಮಾರ್ಗಗಳನ್ನೂ ಕೊಡುತ್ತೇನೆ.
ವೈಶಂಪಾಯನಃ
ಏತಚ್ಛ್ರುತ್ವಾ ತು ವಿದುರಂ ಧೃತರಾಷ್ಟ್ರೋಽಭ್ಯಭಾಷತ ॥47॥
ಕ್ಷಿಪ್ರಮಾನಯ ತಂ ಪಾಪಂ ರಾಜ್ಯಲುಬ್ಧಂ ಸುಯೋಧನಮ್ ।
ಸಹಮಿತ್ರಂ ಸಹಾಮಾತ್ಯಂ ಸಸೋದರ್ಯಂ ಸಹಾನುಗಮ್ ॥48॥
ಶಕ್ನುಯಾಂ ಯದಿ ಪಂಥಾನಮವತಾರಯಿತುಂ ಪುನಃ ॥49॥
ವೈಶಂಪಾಯನ ಇದನ್ನು ಕೇಳಿದ ಧೃತರಾಷ್ಟ್ರನು ವಿದುರನನ್ನು ಕುರಿತು, ರಾಜ್ಯಲೋಭಿಯಾದ ಸುಯೋಧನನನ್ನು, ಅವನ ಮಿತ್ರರು, ಅಮಾತ್ಯರು, ಸೋದರರು ಮತ್ತು ಅನುಯಾಯಿಗಳೊಂದಿಗೆ ಬೇಗ ಕರೆದುಕೊಂಡು ಬಾ. ಅವನನ್ನು ಸನ್ಮಾರ್ಗದಲ್ಲಿ ಸ್ಥಾಪಿಸಲು ಸಾಧ್ಯವಾಗುವುದೇ ಎಂದು ಪ್ರಯತ್ನಪಡುತ್ತೇನೆ ಎಂದು ಹೇಳಿದನು.
ತತೋ ದುರ್ಯೋಧನಂ ಕ್ಷತ್ತಾ ಪುನಃ ಪ್ರಾವೇಶಯತ್ ಸಭಾಮ್ ।
ಅಕಾಮಂ ಭ್ರಾತೃಭಿಃ ಸಾರ್ಧಂ ರಾಜಭಿಃ ಪರಿವಾರಿತಮ್ ॥50॥
ಅನಂತರ ವಿದುರನು ಸಭೆಗೆ ಪ್ರವೇಶಿಸಲು ಇಷ್ಟವಿಲ್ಲದ ದುರ್ಯೋಧನನನ್ನು ಅವನ ತಮ್ಮಂದಿರ ಮತ್ತು ರಾಜರ ಜೊತೆಯಲ್ಲಿ ಪುನಃ ಸಭೆಗೆ ಕರೆತಂದನು.

ಅಥ ದುರ್ಯೋಧನಂ ರಾಜಾ ಧೃತರಾಷ್ಟ್ರೋಽಭ್ಯಭಾಷತ |
ಕರ್ಣದುಃಶಾಸನಾಭ್ಯಾಂ ಚ ರಾಜಭಿಶ್ಚಾಪಿ ಸಂವೃತಮ್ ||51||
ಆಗ ಕರ್ಣ-ದುಃಶಾಸನರಿಂದ ಸಹಿತರಾದ, ಎಲ್ಲ ರಾಜರಿಂದ ಪರಿವೃತನಾದ ದುರ್ಯೋಧನನನ್ನು ಕುರಿತು ರಾಜನಾದ ಧೃತರಾಷ್ಟ್ರನು ಮಾತನಾಡಿದನು.
ನೃಶಂಸ ಹತಭೂಯಿಷ್ಠ ಕ್ಷುದ್ರಕರ್ಮಸಹಾಯವಾನ್ |
ಪಾಪೈಃ ಸಹಾಯೈಃ ಸಂಗತ್ಯ ನಿಗೃಹೀತುಂ ಕಿಲೇಚ್ಛಸಿ ||52||
ಎಲೈ ಕ್ರೂರಿಯೇ, ಪ್ರಾಯಃ ಹತನಾದವನೇ, ಕ್ಷುದ್ರಕರ್ಮವನ್ನು ಮಾಡುವವರ ಸಹಾಯವುಳ್ಳ ನೀನು ಆ ಪಾಪಿಗಳ ಸಹಾಯದಿಂದ ಒಟ್ಟು ಸೇರಿ ಕೃಷ್ಣನನ್ನು ಬಂಧಿಸಲು ಇಚ್ಛಿಸುತ್ತೀಯೆ.
ನಿರ್ಮೋಚನೇ ಷಟ್ಸಹಸ್ರಾಃ ಪಾಶೈರ್ಬದ್ಧ್ವಾ ಮಹಾಸುರಾಃ |
ಗ್ರಹೀತುಂ ನಾಶಕಂಶ್ಚೈನಂ ತಂ ತ್ವಂ ಪ್ರಾರ್ಥಯಸೇ ಬಲಾತ್ ||53||
ನಿರ್ಮೋಚನದಲ್ಲಿ ಮಹಾಸುರರು, ಆರು ಸಹಸ್ರ ಪಾಶಗಳಿಂದ ಬಂಧಿಸಿ ಯಾವನನ್ನು ಹಿಡಿಯುವುದಕ್ಕೆ ಸಾಧ್ಯವಾಗಲಿಲ್ಲವೋ ಅವನನ್ನು ನಿನ್ನ ಬಲದಿಂದ ಹಿಡಿಯುವುದಕ್ಕೆ ಆಶಿಸುತ್ತಿದ್ದೀಯೆ.
ಪ್ರಾಗ್ಜ್ಯೋತಿಷಗತಂ ಶೌರಿಂ ನರಕಃ ಸಹ ದಾನವೈಃ |
ಗ್ರಹೀತುಂ ನಾಶಕತ್ ತತ್ರ ತ್ವಂ ತಂ ಪ್ರಾರ್ಥಯಸೇ ಬಲಾತ್ ||54||
ಪ್ರಾಗ್ಜ್ಯೋತಿಷಪಟ್ಟಣಕ್ಕೆ ಹೋದ ಕೃಷ್ಣನನ್ನು ದಾನವರಿಂದ ಕೂಡಿದ ನರಕಾಸುರನು ಅಲ್ಲಿ ಹಿಡಿಯಲು ಸಾಧ್ಯವಾಗಲಿಲ್ಲ. ಅವನನ್ನು ನೀನು ನಿನ್ನ ಬಲದಿಂದ ಹಿಡಿಯಲು ಯೋಚಿಸುತ್ತಿದ್ದೀಯೆ.
ಅನೇನ ಹಿ ಹತಾ ಬಾಲ್ಯೇ ಪೂತನಾ ಶಿಶುನಾ ತದಾ |
ಗೋವರ್ಧನೋ ಧಾರಿತಶ್ಚ ಗವಾರ್ಥೇ ಭರತರ್ಷಭ ||55||
ಎಲೈ ಭರತರ್ಷಭನೇ, ಇವನು ಬಾಲ್ಯದಲ್ಲಿ ಶಿಶುವಾಗಿದ್ದಾಗಲೇ ಪೂತನಿಯನ್ನು ಕೊಂದನು. ಗೋವುಗಳ ಸಲುವಾಗಿ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದನು.
ಅರಿಷ್ಟೋ ಧೇನುಕಶ್ಚೈವ ಚಾಣೂರಶ್ಚ ಮಹಾತ್ಮನಾ |
ಅಶ್ವರಾಜಶ್ಚ ನಿಹತಃ ಕಂಸಶ್ಚಾರಿಷ್ಟಮಾಚರನ್ ||56||
ಅರಿಷ್ಟ, ಧೇನುಕ, ಚಾಣೂರ, ಅಶ್ವರಾಜ (ಕೇಶೀ) ಎಲ್ಲರೂ ಈ ಮಹಾತ್ಮನಿಂದ ಹತರಾದರು. ದುಷ್ಟತನದಿಂದ ನಡೆದುಕೊಳ್ಳುವ ಕಂಸನೂ ಹತನಾದನು.
ಜರಾಸಂಧೋ ದಂತವಕ್ರಃ ಶಿಶುಪಾಲಶ್ಚ ವೀರ್ಯವಾನ್ |
ಬಾಣಶ್ಚ ನಿಹತಃ ಸಂಖ್ಯೇ ರಾಜಾನಶ್ಚ ನಿಷೂದಿತಾಃ ||57||
ಜರಾಸಂಧ, ದಂತವಕ್ರ, ಪರಾಕ್ರಮಶಾಲಿಯಾದ ಶಿಶುಪಾಲ, ಬಾಣ ಇವರು ಯುದ್ಧದಲ್ಲಿ ಹತರಾದರು ಮತ್ತು ಇನ್ನೂ ಅನೇಕ ರಾಜರೂ ಹತರಾದರು.
ವರುಣೋ ನಿರ್ಜಿತೋ ರಾಜಾ ಪಾವಕಶ್ಚಾಮಿತೌಜಸಾ |
ಪಾರಿಜಾತಂ ಚ ಹರತಾ ಜಿತಃ ಸಾಕ್ಷಾಚ್ಛಚೀಪತಿಃ ||58||
ಪಾರಿಜಾತ ಅಪಹರಣ ಕಾಲದಲ್ಲಿ ಅಮಿತ ಪರಾಕ್ರಮಿಯಾದ ಇವನಿಂದ ಜಲಾಧಿಪತಿಯಾದ ವರುಣನೂ ಮತ್ತು ಅಗ್ನಿಯೂ ಮತ್ತು ಸಾಕ್ಷಾತ್ ಶಚೀಪತಿಯಾದ ದೇವೇಂದ್ರನೂ ಪರಾಜಿತರಾದರು.
ಏಕಾರ್ಣವೇ ಚ ಸ್ವಪತಾ ನಿಹತೌ ಮಧುಕೈಟಭೌ |
ಜನ್ಮಾಂತರಮುಪಾಗಮ್ಯ ಹಯಗ್ರೀವಸ್ತಥಾ ಹಯಃ ||59||
ಪ್ರಳಯಕಾಲದಲ್ಲಿ ಏಕಾರ್ಣವದಲ್ಲಿ ನಿದ್ರೆಯನ್ನು ಮಾಡುವ ಅವನಿಂದ ಮಧು-ಕೈಟಭರು ಹತರಾದರು. ಇನ್ನೊಂದು ಜನ್ಮದಲ್ಲಿ ಹಯರೂಪವನ್ನು ಧರಿಸಿದ ಹಯಗ್ರೀವಾಸುರನು ಹತನಾದನು.
ಅಯಂ ಚ ಕರ್ತಾ ನ ಕ್ರಿಯತೇ ಕಾರಣಂ ಚಾಪಿ ಪೌರುಷೇ |
ಯದ್ಯದಿಚ್ಛೇದಯಂ ಶೌರಿಃ ತತ್ತತ್ ಕುರ್ಯಾದಯತ್ನತಃ ||60||
ಇವನು ಎಲ್ಲವನ್ನೂ ಮಾಡುವವನು. ಯಾರಿಂದಲೂ ಮಾಡಲ್ಪಡುವುದಿಲ್ಲ. ಎಲ್ಲರ ಪೌರುಷಕ್ಕೆ ಕಾರಣನಾದವನು. ಈ ಕೃಷ್ಣನು ಏನೇನು ಮಾಡಬೇಕೆಂದು ಇಚ್ಛಿಸುತ್ತಾನೆಯೋ ಅದೆಲ್ಲವನ್ನೂ ಅನಾಯಾಸವಾಗಿ ಮಾಡುವನು.
ತಂ ನ ಬುಧ್ಯಸಿ ಗೋವಿಂದಂ ಘೋರವಿಕ್ರಮಮಚ್ಯುತಮ್ |
ಆಶೀವಿಷಮಿವ ಕ್ರುದ್ಧಂ ತೇಜಸಾಂ ರಾಶಿಮೂರ್ಜಿತಮ್ ||61||
ಅಂತಹ ಘೋರಪರಾಕ್ರಮವುಳ್ಳ, ತೇಜೋರಾಶಿಯಾದ, ಕ್ರುದ್ಧನಾದ, ಎಂದೂ ನಾಶವನ್ನು ಹೊಂದದ, ಕೋಪಗೊಂಡ ಸರ್ಪದಂತಿರುವ ಗೋವಿಂದನನ್ನು ನೀನು ತಿಳಿಯುತ್ತಿಲ್ಲ.
ಉದ್ಧರ್ಷಯನ್ ಮಹಾಬಾಹುಂ ಕೃಷ್ಣಮಕ್ಲಿಷ್ಟಕಾರಿಣಮ್ |
ಪತಂಗೋಽಗ್ನಿಮಿವಾಸಾದ್ಯ ಸಾಮಾತ್ಯೋ ನ ಭವಿಷ್ಯಸಿ ||62||
ಅಕ್ಲಿಷ್ಟಕಾರಿಯೂ, ಮಹಾಬಾಹುವೂ ಆದ ಕೃಷ್ಣನನ್ನು ವಿಶೇಷವಾಗಿ ಅವಮಾನ ಮಾಡುವವನಾಗಿ ನೀನು ಪತಂಗವು ಅಗ್ನಿಯನ್ನು ಸಮೀಪಿಸಿದಂತೆ ಅಮಾತ್ಯರ ಜೊತೆಯಲ್ಲಿ ನಾಶವನ್ನು ಹೊಂದುವಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನತ್ರಿಂಶೋತ್ತಶತತಮೋಽಧ್ಯಾಯಃ ||

॥ ಭಗವದ್ಯಾನಪರ್ವಣಿ ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತನೆಯ ಅಧ್ಯಾಯ
ವಿಶ್ವರೂಪವನ್ನು ತೋರಿಸಿ ಸಭೆಯಿಂದ ಕೃಷ್ಣನ ನಿರ್ಗಮನ.
ವೈಶಂಪಾಯನಃ
ವಿದುರೇಣೈವಮುಕ್ತೇ ತು ಕೇಶವಃ ಪರವೀರಹಾ |
ದುರ್ಯೋಧನಂ ಧಾರ್ತರಾಷ್ಟ್ರಮಭ್ಯಭಾಷತ ವೀರ್ಯವಾನ್ ॥1॥
ವೈಶಂಪಾಯನ ವಿದುರನು ಹೀಗೆ ಹೇಳುತ್ತಿರಲು ಪರವೀರಘಾತಕನೂ, ಪರಾಕ್ರಮಶಾಲಿಯೂ ಆದ ಕೇಶವನು ಧೃತರಾಷ್ಟ್ರ ಪುತ್ರನಾದ ದುರ್ಯೋಧನನನ್ನು ಕುರಿತು ಮಾತನಾಡಿದನು.
ಏಕೋಽಹಮಿತಿ ಯನ್ಮೋಹಾನ್ಮನ್ಯಸೇ ಮಾಂ ಸುಯೋಧನ |
ಪರಿಭೂಯ ಸುದುರ್ಬುದ್ಧೇ ಗ್ರಹೀತುಂ ಮಾಂ ಚಿಕೀರ್ಷಸಿ ॥2॥
ಎಲೈ ಸುಯೋಧನನೇ, ನೀನು ಮೋಹದಿಂದ ಇಲ್ಲಿ ನಾನೊಬ್ಬನೇ ಇದ್ದೇನೆಂದು ಭಾವಿಸುತ್ತಿದ್ದೀಯೆ. ಎಲೈ ದುರ್ಬುದ್ಧಿಯೇ, ನನ್ನನ್ನು ಸೋಲಿಸಿ ಬಂಧಿಸಲು ಯೋಚಿಸುತ್ತಿದ್ದೀಯೆ.
ಇಹೈವ ಪಾಂಡವಾಃ ಸರ್ವೇ ತಥೈವಾಂಧಕವೃಷ್ಣಯಃ |
ಇಹಾದಿತ್ಯಾಶ್ಚ ರುದ್ರಾಶ್ಚ ವಸವಶ್ಚ ಮಹರ್ಷಿಭಿಃ ॥3॥
ಏವಮುಕತ್ವ ಜಹಾಸೋಚ್ಚೈಃ ಕೇಶವಃ ಪರವೀರಹಾ ॥4॥
ಇಲ್ಲಿಯೇ ಪಾಂಡವರಿದ್ದಾರೆ, ಹಾಗೆಯೇ ಎಲ್ಲಾ ಅಂಧಕವೃಷ್ಣಿಗಳು ಇಲ್ಲಿಯೇ ಇದ್ದಾರೆ. ಮಹರ್ಷಿ-ರುದ್ರಾದಿಗಳಿಂದ ಸಹಿತರಾದ ವಸು-ರುದ್ರಾದಿತ್ಯರೂ ಇಲ್ಲಿಯೇ ಇದ್ದಾರೆ. ಹೀಗೆ ಹೇಳಿ ಪರವೀರ ಘಾತಕನಾದ ಕೇಶವನು ಗಟ್ಟಿಯಾಗಿ ನಕ್ಕನು.
ತಸ್ಯ ಸಂಸ್ಮಯತಃ ಶೌರೈರ್ವಿದ್ಯುದ್ರೂಪಾ ಮಹಾತ್ಮನಃ |
ಯುಗಪಚ್ಚ ವಿನಿಷ್ಪೇತುಃ ಸಾಕ್ಷಾತ್ ಸರ್ವಾಶ್ಚ ದೇವತಾಃ ॥5॥
ಅಂಗುಷ್ಠಮಾತ್ರಾಸ್ತ್ರಿದಶಾ ಮುಮುಚುಃ ಪಾವಕಾರ್ಚಿಷಃ ॥6॥
ಹೀಗೆ ನಗುತ್ತಿದ್ದ ಮಹಾತ್ಮನಾದ ಶೌರಿಯ ದೇಹದಿಂದ ಎಲ್ಲ ದೇವತೆಗಳೂ ಒಂದೇ ಕಾಲದಲ್ಲಿ ಅವರ ಸಾಕ್ಷಾತ್ ರೂಪದಿಂದ ಹೊರಗೆ ಬಂದರು. ಅಂಗುಷ್ಠ ಮಾತ್ರ ಪರಿಮಾಣ ಉಳ್ಳ ಆ ದೇವತೆಗಳು ಅಗ್ನಿಯ ಜ್ವಾಲೆಯಂತಿರುವ ಪ್ರಕಾಶವನ್ನು ಉಂಟು ಮಾಡಿದರು.
ತಸ್ಯ ಬ್ರಹ್ಮಾ ಲಲಾಟಸ್ಥೋ ರುದ್ರೋ ವಕ್ಷಸಿ ಚಾಭವತ್ |
ಲೋಕಪಾಲಾ ಭುಜೇಷ್ವಾಸನ್ನಗ್ನಿರಾಸ್ಯಾದಜಾಯತ ॥7॥
ಅವನ ಲಲಾಟದಲ್ಲಿ ಬ್ರಹ್ಮನೂ, ವಕ್ಷಸ್ಥಲದಲ್ಲಿ ರುದ್ರನೂ ಉಂಟಾದರು. ಲೋಕಪಾಲಕರು ಭುಜಗಳಲ್ಲಿಯೂ, ಅಗ್ನಿಯು ಮುಖದಿಂದಲೂ ಜನಿಸಿದರು.
ಆದಿತ್ಯಾಶ್ಚೈವ ಸಾಧ್ಯಾಶ್ಚ ವಸವೋಽಥಾಶ್ವಿನಾವಪಿ |
ಮರುತಶ್ಚ ಸಹೇಂದ್ರೇಣ ವಿಶ್ವೇ ದೇವಾಸ್ತಥೈವ ಚ ॥8॥
ಬಭೂವುಶ್ಚೈವ ಯಕ್ಷಾಶ್ಚ ಗಂಧರ್ವೋರಗರಾಕ್ಷಸಾಃ ॥9॥
ಆದಿತ್ಯರು, ಸಾಧ್ಯರು, ವಸುಗಳು, ಅಶ್ವಿನೀದೇವತೆಗಳು, ಇಂದ್ರನಿಂದ ಕೂಡಿದ ಮರುತ್ತುಗಳು, ವಿಶ್ವೇದೇವತೆಗಳು, ಯಕ್ಷರು, ಗಂಧರ್ವರು, ಸರ್ಪಗಳು, ರಾಕ್ಷಸರು ಎಲ್ಲರೂ ಅವನ ದೇಹದಿಂದ ಹೊರ ಬಂದರು.
ಪ್ರಾದುರಾಸ್ತಾಂ ತದಾ ದೋರ್ಭ್ಯಾಂ ಸಂಕರ್ಷಣಧನಂಜಯೌ |
ದಕ್ಷಿಣೇ ಚಾರ್ಜುನೋ ಧನ್ವೀ ಹಲೀ ರಾಮಶ್ಚ ಸವ್ಯತಃ ॥10॥
ಭೀಮೋ ಯುಧಿಷ್ಠಿರಶ್ಚೈವ ಮಾದ್ರೀಪುತ್ರೌ ಚ ಪೃಷ್ಠತಃ ॥11॥
ಅವನ ಎರಡು ಬಾಹುಗಳಿಂದ ಬಲರಾಮ ಮತ್ತು ಅರ್ಜುನರೂ ಪ್ರಾದುರ್ಭವಿಸಿದರು. ದಕ್ಷಿಣ ಬಾಹುವಿನಿಂದ ಧನುಸ್ಸನ್ನು ಹಿಡಿದ ಅರ್ಜುನನು, ಎಡಬಾಹುವಿನಿಂದ ಹಲಾಯುಧವನ್ನು ಹಿಡಿದ ಬಲರಾಮನು ಹೊರಬಂದರು. ಭೀಮ ಯುಧಿಷ್ಠಿರ ಮತ್ತು ನಕುಲ-ಸಹದೇವರು ಅವನ ಬೆನ್ನಿನಿಂದ ಹೊರಬಂದರು.
ಅಂಧಕಾ ವೃಷ್ಣಯಶ್ಚೈವ ಪ್ರದ್ಯುಮ್ನಪ್ರಮುಖಾಸ್ತತಃ |
ಅರ್ಚಿಷ್ಯಭೂವನ್ ಕೃಷ್ಣಸ್ಯ ಸಮುದ್ಯತಮಹಾಯುಧಾಃ ॥12॥
ಅಂಧಕರೂ, ಪ್ರದ್ಯುಮ್ನ ಮೊದಲಾದ ವೃಷ್ಣಿಗಳೂ ಎಲ್ಲರೂ ಎತ್ತಿದ ದೊಡ್ಡ ಆಯುಧಗಳನ್ನು ಹಿಡಿದು ಕೃಷ್ಣನ ಕಾಂತಿಯ ಜ್ವಾಲೆಗಳಲ್ಲಿ ಕಂಡುಬಂದರು.
ಶಂಖಚಕ್ರಗದಾಶಕ್ತಿಶಾರ್ಙ್ಗಲಾಂಗಲನಂದಕಾಃ |
ಅದೃಶ್ಯಂತೋದ್ಯತಾನ್ಯೇವ ಸರ್ವಪ್ರಹರಣಾನಿ ಚ ॥13॥
ನಾನಾ ಬಾಹುಷು ಕೃಷ್ಣಸ್ಯ ದೀಪ್ಯಮಾನಾನಿ ಸರ್ವಶಃ ॥14॥
ಶಂಖ, ಚಕ್ರ, ಗದಾ, ಶಕ್ತಿ, ಶಾರ್ಙ್ಗ, ಲಾಂಗಲ, ನಂದಕ ಖಡ್ಗ ಮೊದಲಾದ ಉದ್ಯತವಾದ (ಎತ್ತಿಹಿಡಿದ), ಎಲ್ಲಾ ಪ್ರಕಾಶಮಾನವಾದ ಆಯುಧಗಳೂ ಕೃಷ್ಣನ ನಾನಾ ಬಾಹುಗಳಲ್ಲಿ ಕಾಣಿಸಿಕೊಂಡವು.
ನೇತ್ರಾಭ್ಯಾಂ ನಾಸಿಕಾಭ್ಯಾಂ ಚ ಶ್ರೋತ್ರಾಭ್ಯಾಂ ಚ ಸಮಂತತಃ |

ಪ್ರಾದುರಾಸನ್ ಮಹಾರೌದ್ರಾಃ ಸಧೂಮಾಃ ಪಾವಕಾರ್ಚಿಷಃ ॥15॥
ರೋಮಕೂಪೇಷು ಚ ತಥಾ ಸೂರ್ಯಸ್ಯೇವ ಮರೀಚಯಃ ॥16॥
ಅವನ ನೇತ್ರಗಳಿಂದಲೂ, ನಾಸಿಕಗಳಿಂದಲೂ, ಶ್ರೋತ್ರಗಳಿಂದಲೂ ಮಹಾಭಯಂಕರವಾದ, ಧೂಮಸಹಿತವಾದ ಅಗ್ನಿಯ ಕಿಡಿಗಳು ಹೊರಬಂದವು. ರೋಮಕೂಪಗಳಿಂದಲೂ ಸೂರ್ಯನ ಕಿರಣಗಳಂತಿದ್ದ ಅಗ್ನಿಯ ಕಿಡಿಗಳು ಹೊರಬಂದವು.
ತೇ ದೃಷ್ಟ್ವಾ ಪರಮಾತ್ಮಾನಂ ಕೇಶವಸ್ಯ ಮಹಾತ್ಮನಃ |
ನ್ಯಮೀಲಯಂತ ನೇತ್ರಾಣಿ ರಾಜಾನಸ್ತ್ರಸ್ತಚೇತಸಃ ॥17॥
ಆ ರಾಜರು ಹೆದರಿದ ಮನಸ್ಸುಳ್ಳವರಾಗಿ ಮಹಾತ್ಮನಾದ ಕೇಶವನ ಆ ಶ್ರೇಷ್ಠ ಸ್ವರೂಪವನ್ನು ನೋಡಿ ಕಣ್ಣುಗಳನ್ನು ಮುಚ್ಚಿಕೊಂಡರು.
ಋತೇ ದ್ರೋಣಂ ಚ ಭೀಷ್ಮಂ ಚ ವಿದುರಂ ಚ ಮಹಾಮತಿಮ್ |
ಸಂಜಯಂ ಚ ಮಹಾಭಾಗಂ ಋಷೀಂಶ್ಚೈವ ತಪೋಧನಾನ್ ॥18॥
ಪ್ರಾದಾತ್ ತೇಷಾಂ ಸ ಭಗವಾನ್ ದಿವ್ಯಂ ಚಕ್ಷುರ್ಜನಾರ್ದನಃ ॥10॥
ದ್ರೋಣರು, ಭೀಷ್ಮರು, ಮಹಾಬುದ್ಧಿಯುಳ್ಳ ವಿದುರ, ಮಹಾನುಭಾವನಾದ ಸಂಜಯ, ತಪೋಧನರಾದ ಋಷಿಗಳು (ಇವರನ್ನು ಬಿಟ್ಟು ಉಳಿದವರೆಲ್ಲರೂ ಕಣ್ಣು ಮುಚ್ಚಿದರು) ಇವರಿಗೆ ಮಾತ್ರ ಭಗವಂತನಾದ ಕೃಷ್ಣನು ದಿವ್ಯದೃಷ್ಟಿಯನ್ನು ಕೊಟ್ಟನು.
ತತ್ರಾಶ್ಚರ್ಯಮಭೂದ್ ರಾಜನ್ ಧೃತರಾಷ್ಟ್ರಃ ಸ್ವಚಕ್ಷುಷೀ |
ಲಬ್ಧವಾನ್ ವಾಸುದೇವಸ್ಯ ವಿಶ್ವರೂಪದಿದೃಕ್ಷಯಾ ॥20॥
ಎಲೈ ರಾಜನೇ, ಅಲ್ಲಿ ಒಂದು ಆಶ್ಚರ್ಯಕರವಾದ ಘಟನೆಯು ನಡೆಯಿತು. ವಾಸುದೇವನ ವಿಶ್ವರೂಪವನ್ನು ನೋಡಲು ಅಪೇಕ್ಷಿಸಿದ ಧೃತರಾಷ್ಟ್ರನು ತನ್ನ ಎರಡೂ ಕಣ್ಣುಗಳಲ್ಲಿ ದೃಷ್ಟಿಯನ್ನು ಪಡೆದನು.
ಲಬ್ಧಚಕ್ಷುಷಮಾಸೀನಂ ಧೃತರಾಷ್ಟ್ರಂ ನರಾಧಿಪಾಃ |
ವಿಸ್ಮಿತಾ ಋಷಿಭಿಃ ಸಾರ್ಧಂ ತುಷ್ಟುವುರ್ಮಧುಸೂದನಮ್ ॥21॥
ದೃಷ್ಟಿಯನ್ನು ಪಡೆದ ಧೃತರಾಷ್ಟ್ರನನ್ನು ನೋಡಿ ರಾಜರು ವಿಸ್ಮಿತರಾಗಿ ಋಷಿಗಳ ಜೊತೆಯಲ್ಲಿ ಮಧುಸೂದನನನ್ನು ಸ್ತೋತ್ರ ಮಾಡಿದರು.
ತದ್ ದೃಷ್ಟ್ವಾ ಮಹದಾಶ್ಚರ್ಯಂ ಮಾಧವಸ್ಯ ಸಭಾತಳೇ |
ದೇವದುಂದುಭಯೋ ನೇದುಃ ಪುಷ್ಪವರ್ಷಂ ಪಪಾತ ಚ ॥22॥
ಕೃಷ್ಣನು ಸಭಾತಳದಲ್ಲಿ ಮಾಡಿದ ಈ ದೊಡ್ಡ ಆಶ್ಚರ್ಯವನ್ನು ನೋಡಿ ದೇವದುಂದುಭಿಗಳು ಮೊಳಗಿದವು. ಪುಷ್ಪವರ್ಷವು ಉಂಟಾಯಿತು.
ಧೃತರಾಷ್ಟ್ರಃ
ತ್ವಮೇವ ಪುಂಡರೀಕಾಕ್ಷ ಸರ್ವಸ್ಯ ಜಗತಃ ಪ್ರಭುಃ |
ತಸ್ಮಾನ್ಮೇ ಯಾದವಶ್ರೇಷ್ಠ ಪ್ರಸಾದಂ ಕರ್ತುಮರ್ಹಸಿ ॥23॥
ಧೃತರಾಷ್ಟ್ರ, ಪುಂಡರೀಕಾಕ್ಷನೇ, ನೀನೇ ಎಲ್ಲ ಜಗತ್ತಿಗೂ ಒಡೆಯನಾದವನು. ಆದ್ದರಿಂದ ಯಾದವ ಶ್ರೇಷ್ಠನೇ, ನನಗೆ ಅನುಗ್ರಹವನ್ನು ಮಾಡಬೇಕು.
ದೇವದೇವ ಮಹಾಯೋಗಿನ್ ವಾಸುದೇವ ಜನಾರ್ದನ |
ಭಗವನ್ ಮಮ ನೇತ್ರಾಭ್ಯಾಮಂತರ್ಧಾನಂ ವೃಣೇ ಪುನಃ ॥24॥
ಭವಂತಂ ದೃಷ್ಟವಾನಸ್ಮಿ ನಾನ್ಯಂ ದ್ರಷ್ಟುಮಿಹೋತ್ಸಹೇ ॥25॥
ಎಲೈ ದೇವದೇವನೇ, ಮಹಾಯೋಗಿಯೇ, ವಾಸುದೇವನೇ, ಜನಾರ್ದನನೇ, ಭಗವಂತನೇ, ನನ್ನ ದೃಷ್ಟಿಯನ್ನು ಹಿಂದಕ್ಕೆ ತೆಗೆದುಕೊ ಎಂದು ನಾನು ವರವನ್ನು ಬೇಡುತ್ತೇನೆ. ನಿನ್ನನ್ನು ನೋಡಿದ ಈ ಕಣ್ಣುಗಳಿಂದ ನಾನು ಇನ್ನೊಬ್ಬನನ್ನು ನೋಡಲು ಬಯಸುವುದಿಲ್ಲ.
ವೈಶಂಪಾಯನಃ
ತತೋಽಬ್ರವೀನ್ಮಹಾಬಾಹುರ್ಧೃತರಾಷ್ಟ್ರಂ ಜನಾರ್ದನಃ ॥26॥
ಅದೃಶ್ಯಮಾನೇ ನೇತ್ರೇ ದ್ವೇ ಭವೇತಾಂ ಕುರುನಂದನ ॥27॥
ವೈಶಂಪಾಯನ ಆಗ ಮಹಾಬಾಹುವಾದ ಜನಾರ್ದನನು ಧೃತರಾಷ್ಟ್ರನನ್ನು ಕುರಿತು ಎಲೈ ಕುರುನಂದನನೇ, ನಿನ್ನ ಎರಡೂ ಕಣ್ಣುಗಳು ಪುನಃ ಕಾಣಿಸದಂತೆ ಆಗುವವು ಎಂದು ಹೇಳಿದನು.
ವೈಶಂಪಾಯನಃ
ಚಚಾಲ ಚ ಮಹೀ ಕೃತ್ಸ್ನಾ ಸಾಗರಶ್ಚಾಪಿ ಚುಕ್ಷುಭೇ |
ವಿಸ್ಮಯಂ ಪರಮಂ ಜಗ್ಮುಃ ಪಾರ್ಥಿವಾ ಭರತರ್ಷಭ ॥28॥
ವೈಶಂಪಾಯನ ಆಗ ಭೂಕಂಪವಾಯಿತು. ಸಾಗರಗಳಲ್ಲಿ ಕ್ಷೋಭೆ ಉಂಟಾಯಿತು. ಎಲೈ ಭರತರ್ಷಭನೇ, ಎಲ್ಲ ರಾಜರೂ ಬಹಳ ವಿಸ್ಮಯವನ್ನು ಹೊಂದಿದರು.
ತತಃ ಸ ಪುರುಷವ್ಯಾಘ್ರಃ ಸಂಜಹಾರ ವಪುಃ ಸ್ವಕಮ್ |
ತಾಂ ದಿವ್ಯಾಮದ್ಭುತಾಂ ಚಿತ್ರಾಮ್ ಋದ್ಧಿಮತ್ತಾಮರಿಂದಮಃ ॥29॥
ಅನಂತರ ಪುರುಷವ್ಯಾಘ್ರನೂ, ಅರಿಂದಮನೂ ಆದ ಅವನು ಆ ತನ್ನ ದಿವ್ಯವೂ, ಅದ್ಭುತವೂ, ವಿಚಿತ್ರವೂ, ಸರ್ವಸಂಪತ್ತಿನಿಂದ ಕೂಡಿದುದೂ ಆದ ಶರೀರವನ್ನು ಹಿಂದಕ್ಕೆ ತೆಗೆದುಕೊಂಡನು (ಅಂತರ್ಧಾನವಾಗುವಂತೆ ಮಾಡಿದನು).
ತತಃ ಸಾತ್ಯಕಿಮಾದಾಯ ಪಾಣೌ ವಿದುರಮೇವ ಚ |

ಋಷಿಭಿಸ್ತೈರನುಜ್ಞಾತೋ ನಿರ್ಯಯೌ ಮಧುಸೂದನಃ ॥30॥
ಅನಂತರ ಸಾತ್ಯಕಿಯನ್ನು ಕರೆದುಕೊಂಡು ಇನ್ನೊಂದು, ಕೈಯಲ್ಲಿ ವಿದುರನನ್ನು ಹಿಡಿದು ಋಷಿಗಳ ಅಪ್ಪಣೆಯನ್ನು ಪಡೆದು ಮಧುಸೂದನನು ಸಭೆಯಿಂದ ಹೊರಗೆ ಬಂದನು.
ಋಷಯೋಽಂತರ್ಹಿತಾ ಜಗ್ಮುಃ ತತಸ್ತೇ ನಾರದಾದಯಃ।
ತಸ್ಮಿನ್ ಕೋಲಾಹಲೇ ವೃತ್ತೇ ತದದ್ಭುತಮಿವಾಭವತ್ ॥31॥
ಆ ಕೋಲಾಹಲವು ನಡೆಯುತ್ತಿರುವಾಗ ನಾರದಾದಿ ಋಷಿಗಳು ಅಂತರ್ಧಾನವನ್ನು ಹೊಂದಿ ಹೊರಟು ಹೋದರು. ಅದು ಅದ್ಭುತವಾಗಿದ್ದಿತು.
ತಂ ಪ್ರಸ್ಥಿತಮಭಿಪ್ರೇಕ್ಷ್ಯ ಕೌರವಾಃ ಸಹ ರಾಜಭಿಃ।
ಅನುಜಗ್ಮುರ್ನರವ್ಯಾಘ್ರಂ ದೇವಾ ಇವ ಶತಕ್ರತುಮ್ ॥32॥
ಸಭೆಯಿಂದ ಹೊರಟ ಕೃಷ್ಣನನ್ನು ನೋಡಿ ರಾಜರಿಂದ ಸಹಿತರಾದ ಕೌರವರು ದೇವತೆಗಳು ಇಂದ್ರನನ್ನು ಹಿಂಬಾಲಿಸುವಂತೆ ನರವ್ಯಾಘ್ರನಾದ ಅವನನ್ನು ಹಿಂಬಾಲಿಸಿದರು.
ಅಚಿಂತಯನ್ನಮೇಯಾತ್ಮಾ ಸರ್ವಂ ತದ್ರಾಜಮಂಡಲಮ್।
ನಿಶ್ಚಕ್ರಾಮ ತತಃ ಶೌರಿಃ ಸಧೂಮ ಇವ ಪಾವಕಃ ॥33॥
ಅಮೇಯಾತ್ಮನಾದ ಶೌರಿಯು ಆ ಎಲ್ಲಾ ರಾಜಮಂಡಲವನ್ನೂ ಗಣನೆಗೇ ತೆಗೆದುಕೊಳ್ಳದೆ ಧೂಮಸಹಿತವಾದ ಅಗ್ನಿಯಂತೆ ಸಭೆಯಿಂದ ಹೊರಗೆ ಬಂದನು.
ತತೋ ರಥೇನ ಶುಭ್ರೇಣ ಮಹತಾ ಕಿಂಕಿಣೀಕಿನಾ।
ಹೇಮಜಾಲವಿಚಿತ್ರೇಣ ಲಘುನಾ ಮೇಘನಾದಿನಾ ॥34॥
ಸೂಪಸ್ಕರೇಣ ಶುಭ್ರೇಣ ವೈಯಾಘ್ರೇಣ ವರೂಥಿನಾ।
ಸೈನ್ಯಸುಗ್ರೀವಯುಕ್ತೇನ ಪ್ರತ್ಯದೃಶ್ಯತ ದಾರುಕಃ ॥35॥
ಅನಂತರ ಶುಭ್ರವಾದ, ದೊಡ್ಡದಾದ, ಸಣ್ಣಗಂಟೆಗಳ ಮಾಲೆಗಳನ್ನು ಹೊಂದಿದ್ದ, ಸುವರ್ಣಮಯವಾದ ಜಾಲಗಳಿಂದ ಶೋಭಿಸುವ, ಹಗುರವಾದ ಮೇಘದಂತೆ ನಾದವನ್ನು ಮಾಡುವ, ಎಲ್ಲಾ ಸಲಕರಣೆಗಳಿಂದ ಕೂಡಿದ ವ್ಯಾಘ್ರಚರ್ಮ ರೂಪವಾದ ರಕ್ಷಣೆಯನ್ನು ಹೊಂದಿದ, ಸೈನ್ಯಸುಗ್ರೀವಯುಕ್ತವಾದ ರಥದಿಂದ ಸಹಿತನಾಗಿ ದಾರುಕನು ಕಾಣಿಸಿಕೊಂಡನು.
ತಥೈವ ರಥಮಾಸ್ಥಾಯ ಕೃತವರ್ಮಾ ಮಹಾರಥಃ।
ವೃಷ್ಣೀನಾಂ ಸಮ್ಮತೋ ವೀರೋ ಹಾರ್ದಿಕ್ಯಃ ಸಮದೃಶ್ಯತ ॥36॥
ಹಾಗೆಯೇ ವೃಷ್ಣಿಗಳಿಗೆ ಸಮ್ಮತನಾದ ವೀರನಾದ ಮಹಾರಥನಾದ ಹೃದಿಕನ ಮಗನಾದ ಕೃತವರ್ಮನೂ ಇನ್ನೊಂದು ರಥದಲ್ಲಿ ಕಾಣಿಸಿದನು.
ಉಪಸ್ಥಿತರಥಂ ಶೌರಿಂ ಪ್ರಯಾಸ್ಯಂತಮರಿಂದಮಮ್।
ಧೃತರಾಷ್ಟ್ರೋ ಮಹಾರಾಜಃ ಪುನರೇವಾಭ್ಯಭಾಷತ ॥37॥
ರಥವು ಸಮೀಪಕ್ಕೆ ಬಂದ ಮೇಲೆ ಹೊರಟಿರುವ ಅರಿಂದಮನಾದ ಕೃಷ್ಣನನ್ನು ಕುರಿತು ಮಹಾರಾಜನಾದ ಧೃತರಾಷ್ಟ್ರನು ಪುನಃ ಮಾತನಾಡಿದನು.
ಯಾವದ್ಬಲಂ ಮೇ ಪುತ್ರೇಷು ಪಶ್ಯಸ್ಯೇತಜ್ಜನಾರ್ದನ।
ಪ್ರತ್ಯಕ್ಷಂ ತೇ ನ ತೇ ಕಿಂಚಿತ್ ಪರೋಕ್ಷಂ ಶತ್ರುಸೂದನ ॥38॥
ಕುರೂಣಾಂ ಶಮಮಿಚ್ಛಂತಂ ಯತಮಾನಂ ಚ ಕೇಶವ।
ವಿದಿತ್ವೈತಾಮವಸ್ಥಾಂ ಮೇ ನಾಭಿಶಂಕಿತುಮರ್ಹಸಿ ॥39॥
ಎಲೈ ಜನಾರ್ದನನೇ, ನನ್ನ ಮಕ್ಕಳಿಗೆ ಹೇಳಿ ಕುರುಗಳಿಗೆ ಶಾಂತಿಯನ್ನುಂಟು ಮಾಡಲು ನನ್ನ ಶಕ್ತಿ ಇದ್ದಷ್ಟು ಪ್ರಯತ್ನ ಪಡುವುದನ್ನು ನೀನು ನೋಡಿದ್ದೀಯೆ. ಎಲೈ ಕೇಶವನೇ, ಶತ್ರುಸೂದನನೇ, ಎಲ್ಲವೂ ನಿನ್ನ ಎದುರಿಗೇ ನಡೆದಿದೆ. ಯಾವುದೂ ಪರೋಕ್ಷವಲ್ಲ. ಈ ನನ್ನ ಅವಸ್ಥೆಯನ್ನು ತಿಳಿದು ನೀನು ನನ್ನನ್ನು ಶಂಕಿಸಬಾರದು.
ನ ಮೇ ಪಾಪೋಽಸ್ತ್ಯಭಿಪ್ರಾಯಃ ಪಾಂಡವಾನ್ ಪ್ರತಿ ಕೇಶವ।
ಜ್ಞಾತಮೇವ ಹಿ ತೇ ವಾಕ್ಯಂ ಯನ್ಮಯೋಕ್ತಃ ಸುಯೋಧನಃ ॥40॥
ಎಲೈ ಕೇಶವನೇ, ಪಾಂಡವರ ವಿಷಯದಲ್ಲಿ ನನಗೆ ಯಾವ ಕೆಟ್ಟ ಅಭಿಪ್ರಾಯವೂ ಇಲ್ಲ. ನಾನು ಸುಯೋಧನನಿಗೆ ಏನು ಮಾತನ್ನಾಡಿದ್ದೇನೆಯೋ ಅವೆಲ್ಲವನ್ನೂ ನೀನು ತಿಳಿದೇ ಇದ್ದೀಯೆ.
ಜಾನಂತಿ ಕುರವಃ ಸರ್ವೇ ರಾಜಾನಶ್ಚೈವ ಪಾರ್ಥಿವಾಃ।
ಶಮೇ ಪ್ರಯತಮಾನಂ ಮಾಂ ಸರ್ವಯತ್ನೇನ ಮಾಧವ ॥41॥
ಎಲೈ ಮಾಧವನೇ, ನಾನು ಸಂಧಿಗಾಗಿ ಸರ್ವ ಪ್ರಯತ್ನಪಡುತ್ತಿರುವುದನ್ನು ಎಲ್ಲ ರಾಜರು ಮತ್ತು ಕುರುಗಳು ತಿಳಿದಿದ್ದಾರೆ.
ತತೋಽಬ್ರವೀನ್ಮಹಾಬಾಹುರ್ಧೃತರಾಷ್ಟ್ರಂ ಜನೇಶ್ವರಮ್।
ದ್ರೋಣಂ ಪಿತಾಮಹಂ ಭೀಷ್ಮಂ ಕ್ಷತ್ತಾರಂ ಬಾಹ್ಲಿಕಂ ಕೃಪಮ್ ॥45॥
ಪ್ರತ್ಯಕ್ಷಮೇತದ್ ಭವತಾಂ ಯದ್ ವೃತ್ತಂ ಕುರುಸಂಸದಿ।
ಯಥಾ ಚಾಶಿಷ್ಟವನ್ಮಂದೋ ರೋಷಾದಸಕೃದುತ್ಥಿತಃ ॥43॥
ವದತ್ಯನೀಶಮಾತ್ಮಾನಂ ಧೃತರಾಷ್ಟ್ರೋ ಮಹೀಪತಿಃ।
ಆಪೃಚ್ಛೇ ಭವತಃ ಸರ್ವಾನ್ ಗಮಿಷ್ಯಾಮಿ ಯುಧಿಷ್ಠಿರಮ್ ॥44॥

ಆಗ ಮಹಾಬಾಹುವಾದ ಕೃಷ್ಣನು ರಾಜನಾದ ಧೃತರಾಷ್ಟ್ರನನ್ನೂ, ದ್ರೋಣರನ್ನೂ, ಪಿತಾಮಹರಾದ ಭೀಷ್ಮರನ್ನೂ, ವಿದುರನನ್ನೂ, ಬಾಹ್ಲಿಕರಾಜನನ್ನೂ ಮತ್ತು ಕೃಪರನ್ನೂ ಉದ್ದೇಶಿಸಿ, ಕೌರವರ ಸಭೆಯಲ್ಲಿ ಏನು ನಡೆಯಿತೆಂಬುದನ್ನು ಮತ್ತು ಮಂದನಾದ ದುರ್ಯೋಧನನು ಅಶಿಕ್ಷಿತನಂತೆ ರೋಷದಿಂದ ಅನೇಕ ಬಾರಿ ಎದ್ದು ಹೊರಟುದನ್ನು ನೀವು ಪ್ರತ್ಯಕ್ಷವಾಗಿ ನೋಡಿದ್ದೀರಿ. ಧೃತರಾಷ್ಟ್ರ ರಾಜನು ತಾನು ಅಸಮರ್ಥನೆಂದು ಹೇಳುತ್ತಾನೆ. ನಿಮ್ಮೆಲ್ಲರ ಅನುಮತಿಯನ್ನು ಕೇಳುತ್ತೇನೆ. ನಾನು ಯುಧಿಷ್ಠಿರನ ಬಳಿಗೆ ಹೋಗುವೆನು ಎಂದು ಹೇಳಿದನು.
ಆಮಂತ್ರ್ಯ ಪ್ರಸ್ಥಿತಂ ಶೌರಿಂ ರಥಸ್ಥಂ ಪುರುಷರ್ಷಭ |
ಅನುಜಗ್ಮುರ್ಮಹೇಷ್ವಾಸಾಃ ಪ್ರವೀರಾ ಭರತರ್ಷಭಾಃ ॥45॥
ಎಲೈ ಪುರುಷರ್ಷಭನೇ, ಎಲ್ಲರ ಅನುಮತಿಯನ್ನು ಪಡೆದು ರಥದಲ್ಲಿ ಹೊರಟ ಕೃಷ್ಣನನ್ನು ಮಹಾವೀರರೂ, ಮಹಾಧನುರ್ಧಾರಿಗಳೂ ಆದ ಭರತರ್ಷಭರು ಹಿಂಬಾಲಿಸಿದರು.
ಭೀಷ್ಮೋ ದ್ರೋಣಃ ಕೃಪಃ ಕ್ಷತ್ತಾ ಧೃತರಾಷ್ಟ್ರೋಽಥ ಬಾಹ್ಲಿಕಃ |
ಅಶ್ವತ್ಥಾಮಾ ವಿಕರ್ಣಶ್ಚ ಯುಯುತ್ಸುಶ್ಚ ಮಹಾರಥಃ ॥46॥
ಭೀಷ್ಮ, ದ್ರೋಣ, ಕೃಪ, ವಿದುರ, ಧೃತರಾಷ್ಟ್ರ, ಬಾಹ್ಲಿಕರಾಜ, ಅಶ್ವತ್ಥಾಮ, ವಿಕರ್ಣ ಮತ್ತು ಮಹಾರಥನಾದ ಯುಯುತ್ಸು - ಇವರೂ ಹಿಂಬಾಲಿಸಿದರು.
ತತೋ ರಥೇನ ಶುಭ್ರೇಣ ಮಹತಾ ಕಿಂಕಿಣೀಕಿನಾ |
ಕುರೂಣಾಂ ಪಶ್ಯತಾಂ ದ್ರಷ್ಟುಂ ಸ್ವಸಾರಂ ಸ್ವಪಿತುರ್ಯಯೌ ॥47॥
ಅನಂತರ ಶುಭ್ರವಾದ, ದೊಡ್ಡದಾದ ಗಂಟೆಗಳ ಮಾಲೆಯನ್ನು ಹೊಂದಿದ್ದ ರಥದಿಂದ (ರಥದಲ್ಲಿ ಕುಳಿತು) ತನ್ನ ಸೋದರತ್ತೆಯನ್ನು ನೋಡಲು ಕೌರವರು ನೋಡುತ್ತಿರುವಂತೆ ಕೃಷ್ಣನು ಪ್ರಯಾಣ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ತ್ರಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಮೂವತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೊಂದನೆಯ ಅಧ್ಯಾಯ
ಕುಂತಿಗೆ ಕೃಷ್ಣನಿಂದ ಸಭಾವೃತ್ತಾಂತದ ಕಥನ ಮತ್ತು
ಯುಧಿಷ್ಠಿರನಿಗೆ ಕುಂತಿಯ ಸಂದೇಶ.
ವೈಶಂಪಾಯನಃ
ಪ್ರವಿಶ್ಯಾಥ ಗೃಹಂ ಕುಂತ್ಯಾಃ ಚರಣಾವಭಿವಾದ್ಯ ಚ |
ಆಚಖ್ಯೌ ತತ್ ಸಮಾಸೇನ ಯದ್ ವೃತ್ತಂ ಕುರುಸಂಸದಿ ॥1॥
ವೈಶಂಪಾಯನ ಕೃಷ್ಣನು ಕುಂತಿಯ ಮನೆಗೆ ಹೋಗಿ ಅವಳ ಪಾದಗಳಿಗೆ ನಮಸ್ಕರಿಸಿ, ಕೌರವರ ಸಭೆಯಲ್ಲಿ ನಡೆದ ವೃತ್ತಾಂತವನ್ನು ಸಂಕ್ಷೇಪವಾಗಿ ಹೇಳಿದನು.
ಶ್ರೀವಾಸುದೇವಃ
ಉಕ್ತಂ ಬಹುವಿಧಂ ವಾಕ್ಯಂ ಸ್ಪೃಹಣೀಯಂ ಸಹೇತುಕಮ್ |
ಋಷಿಭಿಶ್ಚೈವ ಚ ಮಯಾ ನ ಚಾಸೌ ತದ್ ಗೃಹೀತವಾನ್ ॥2॥
ಶ್ರೀವಾಸುದೇವ ನಾನೂ ಮತ್ತು ಋಷಿಗಳೂ ಹೇತುಬದ್ಧವಾದ, ಸ್ವೀಕಾರಕ್ಕೆ ಯೋಗ್ಯವಾದ ಬಹುವಿಧ ಮಾತುಗಳನ್ನು ಹೇಳಿದೆವು. ಆದರೆ ಅದನ್ನು ಅವನು ಸ್ವೀಕರಿಸಲಿಲ್ಲ.
ಕಾಲಪಕ್ವಮಿದಂ ಸರ್ವಂ ಸುಯೋಧನವಶಾನುಗಮ್ |
ಸರ್ವಕ್ಷತ್ರಂ ಕ್ಷಣೇನೈವ ದಹ್ಯತೇ ಪಾರ್ಥವಹ್ನಿನಾ ॥3॥
ಇದೆಲ್ಲವೂ ಕಾಲಪಕ್ವವಾಗಿದೆ. ದುರ್ಯೋಧನನ ವಶವರ್ತಿಗಳಾದ ಎಲ್ಲಾ ಕ್ಷತ್ರಿಯರೂ ಒಂದು ಕ್ಷಣದಲ್ಲಿ ಪಾರ್ಥವಹ್ನಿಯಿಂದ ಸುಟ್ಟು ಹೋಗುತ್ತಾರೆ.
ಆಪೃಚ್ಛೇ ಭವತೀಂ ಶೀಘ್ರಂ ಪ್ರಯಾಸ್ಯೇ ಪಾಂಡವಾನ್ ಪ್ರತಿ ॥4॥
ಕಿಂ ವಾಚ್ಯಾಃ ಪಾಂಡವೇಯಾಸ್ತೇ ಭವತ್ಯಾ ವಚನಾನ್ಮಯಾ |
ತದ್ ಬ್ರೂಹಿ ತ್ವಂ ಮಹಾಪ್ರಾಜ್ಞೇ ಶುಶ್ರೂಷೇ ವಚನಂ ತವ ॥5॥
ನಿನ್ನ ಅನುಮತಿಯನ್ನು ಕೇಳುತ್ತೇನೆ. ನಾನು ಶೀಘ್ರವಾಗಿ ಪಾಂಡವರ ಬಳಿಗೆ ಹೋಗುವೆನು. ಪಾಂಡವರಿಗೆ ನಾನು ನಿನ್ನ ಯಾವ ಸಂದೇಶವನ್ನು ತಲುಪಿಸಬೇಕು? ಮಹಾಪ್ರಾಜ್ಞೆಯೇ, ಅದನ್ನು ನನಗೆ ಹೇಳು. ನಿನ್ನ ಮಾತನ್ನು ಕೇಳಲು ಬಯಸುತ್ತೇನೆ.
ಕುಂತೀ
ಬ್ರೂಯಾಃ ಕೇಶವ ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ಭೂಯಾಂಸ್ತೇ ಹೀಯತೇ ಧರ್ಮೋ ಮಾ ಪುತ್ರಕ ವೃಥಾ ಕೃಥಾಃ ॥6॥
ಕುಂತೀ ಕೇಶವನೇ, ಧರ್ಮಿಷ್ಠನಾದ ಯುಧಿಷ್ಠಿರನಿಗೆ ಹೀಗೆ ಹೇಳು `ಎಲೈ ಪುತ್ರನೇ, ನಿನ್ನ ದೊಡ್ಡ ಧರ್ಮವು ನಾಶವನ್ನು ಹೊಂದುತ್ತಿದೆ. ವ್ಯರ್ಥವಾಗಿ ಅದನ್ನು ಕಳೆಯಬೇಡ.

ಶ್ರೋತ್ರಿಯಸ್ಯೇವ ತೇ ರಾಜನ್ ಮಂದಕಸ್ಯಾವಿಪಶ್ಚಿತಃ |
ಅನುವಾಕಹತಾ ಬುದ್ಧಿಃ ಧರ್ಮಮೇವೈಕಮೀಕ್ಷತೇ ||7||
ಮಂದನೂ, ಅವಿವೇಕಿಯೂ ಆದ ಶ್ರೋತ್ರಿಯನ ಬುದ್ಧಿಯು ಧರ್ಮಕಾಂಡದ ಕರ್ಮಗಳನ್ನು ಹೇಳುವ ಸೂಕ್ತವಾಕ್ಯಗಳಿಂದ ನಾಶ ಹೊಂದಿದಂತೆ ನಿನ್ನ ಬುದ್ಧಿಯು ಧರ್ಮ ಒಂದನ್ನೇ ನೋಡುತ್ತಿದೆ.
ಅಂಗಾವೇಕ್ಷಸ್ವ ಧರ್ಮಂ ತ್ವಂ ಯಥಾ ಸೃಷ್ಟಃ ಸ್ವಯಂಭುವಾ ||8||
ಬಾಹುಭ್ಯಾಂ ಕ್ಷತ್ರಿಯಾಃ ಸೃಷ್ಟಾ ಬಾಹುವೀರ್ಯೋಪಜೀವಿನಃ |
ಕ್ರೂರಾಯ ಕರ್ಮಣೇ ನಿತ್ಯಂ ಪ್ರಜಾನಾಂ ಪರಿಪಾಲನೇ ||9||
ಪ್ರೀತಿಪಾತ್ರನೇ, ಬ್ರಹ್ಮದೇವರು ಸೃಷ್ಟಿ ಮಾಡಿದ ಧರ್ಮಗಳನ್ನು ನೀನು ನೋಡು. ಬಾಹುಗಳಿಂದ ಸೃಷ್ಟರಾದ ಕ್ಷತ್ರಿಯರು ಬಾಹುಪರಾಕ್ರಮದಿಂದ ಜೀವಿಸುವವರು. ಅವರು ಕ್ರೂರಕರ್ಮವನ್ನು ಮಾಡುವುದಕ್ಕೂ ಮತ್ತು ಪ್ರಜೆಗಳನ್ನು ರಕ್ಷಣೆ ಮಾಡುವುದಕ್ಕೂ ಸೃಷ್ಟರಾಗಿದ್ದಾರೆ.
ಶೃಣು ಚಾತ್ರೋಪಮಾಮೇಕಾಂ ಯಾ ವೃದ್ಧೇಭ್ಯಃ ಶ್ರುತಾ ಮಯಾ ||10||
ಮುಚುಕುಂದಸ್ಯ ರಾಜರ್ಷೇರದದಾತ್ ಪೃಥಿವೀಮಿಮಾಮ್ |
ಪುರಾ ವೈಶ್ರವಣಃ ಪ್ರೀತೋ ನ ಚಾಸೌ ತದ್ ಗೃಹೀತವಾನ್ ||11||
ಬಾಹುವೀರ್ಯಾರ್ಜಿತಂ ರಾಜ್ಯಮಶ್ನೀಯಾಮಿತಿ ಕಾಮಯೇ |
ತತೋ ವೈಶ್ರವಣಃ ಪ್ರೀತೋ ವಿಸ್ಮಿತಃ ಸಮಪದ್ಯತ ||12||
ಈ ವಿಷಯದಲ್ಲಿ ಹಿರಿಯರಿಂದ ನಾನು ಕೇಳಿದ ಒಂದು ದೃಷ್ಟಾಂತವನ್ನು ಕೇಳುವವನಾಗು. ಹಿಂದೆ ಕುಬೇರನು ಸಂತೋಷಗೊಂಡು ರಾಜರ್ಷಿಯಾದ ಮುಚುಕುಂದನಿಗೆ ಈ ಭೂಮಿಯನ್ನು ಕೊಟ್ಟನು. ಮುಚುಕುಂದನು ಅದನ್ನು ಸ್ವೀಕರಿಸಲಿಲ್ಲ. ನಾನು ನನ್ನ ಬಾಹುಬಲದಿಂದ ಸಂಪಾದಿಸಿದ ರಾಜ್ಯವನ್ನು ಭೋಗಿಸಲು ಆಸೆ ಪಡುತ್ತೇನೆ ಎಂದು ಹೇಳಿದನು. ಆಗ ಕುಬೇರನು ಸಂತುಷ್ಟನೂ, ವಿಸ್ಮಿತನೂ ಆದನು.
ಮುಚುಕುಂದಸ್ತತೋ ರಾಜಾ ಸೋऽನ್ವಶಾಸದ್ ವಸುಂಧರಾಮ್ |
ಬಾಹುವೀರ್ಯಾರ್ಜಿತಾಂ ಸಮ್ಯಕ್ ಕ್ಷತ್ರಧರ್ಮಮನುವ್ರತಃ ||13||
ಆನಂತರ ಮುಚುಕುಂದನು ತನ್ನ ಬಾಹುಬಲದಿಂದಲೇ ಭೂಮಿಯನ್ನು ಸಂಪಾದಿಸಿ, ಕ್ಷತ್ರಿಯ ಧರ್ಮವನ್ನು ಚೆನ್ನಾಗಿ ಅನುಸರಿಸುತ್ತಾ ಭೂಮಿಯನ್ನು ಆಳಿದನು.
ಯಂ ಹಿ ಧರ್ಮಂ ಚರಂತೀಹ ಪ್ರಜಾ ರಾಜ್ಞಾ ಸುರಕ್ಷಿತಾಃ |
ಚತುರ್ಥಂ ತಸ್ಯ ಧರ್ಮಸ್ಯ ರಾಜಾ ವಿಂದೇತ ಭಾರತ ||14||
ಎಲೈ ಭಾರತನೇ, ರಾಜರಿಂದ ಚೆನ್ನಾಗಿ ರಕ್ಷಿತರಾದ ಪ್ರಜೆಗಳು ಇಲ್ಲಿ ಯಾವ ಧರ್ಮವನ್ನು ಆಚರಿಸುತ್ತಾರೋ ಆ ಧರ್ಮದ ನಾಲ್ಕನೆಯ ಒಂದು ಭಾಗವು ರಾಜನಿಗೆ ಸೇರುತ್ತದೆ.
ರಾಜಾ ಚರತಿ ಚೇದ್ ಧರ್ಮಂ ದೇವತ್ವಾಯೈವ ಕಲ್ಪತೇ |
ಸ ಚೇದಧರ್ಮಂ ಚರತಿ ನರಕಾಯೈವ ಗಚ್ಛತಿ ||15||
ರಾಜನು ಧರ್ಮವನ್ನು ಆಚರಿಸಿದರೆ ಅವನು ದೇವಸ್ವಭಾವವನ್ನೇ ಹೊಂದುತ್ತಾನೆ. ಇಲ್ಲದೆ ಅಧರ್ಮವನ್ನು ಆಚರಿಸಿದರೆ ನರಕಕ್ಕೇ ಹೋಗುತ್ತಾನೆ.
ದಂಡನೀತಿಃ ಸ್ವಧರ್ಮೇಣ ಚಾತುರ್ವರ್ಣ್ಯಂ ನಿಯಚ್ಛತಿ |
ಪ್ರಯುಕ್ತಾ ಸ್ವಾಮಿನಾ ಸಮ್ಯಗಧರ್ಮೇಭ್ಯೋ ನಿಯಚ್ಛತಿ ||16||
ಸ್ವಾಮಿಯಾದ ರಾಜನಿಂದ ಸರಿಯಾಗಿ ಪ್ರಯೋಗಿಸಲ್ಪಟ್ಟ ದಂಡನೀತಿಯು ಚಾತುರ್ವರ್ಣ್ಯವನ್ನು ಅದರದರ ಧರ್ಮದಲ್ಲಿ ನಿಯಂತ್ರಿಸುತ್ತದೆ ಮತ್ತು ಅಧರ್ಮದಿಂದ ಹಿಂದೆ ಸರಿಯುವಂತೆ ಮಾಡುತ್ತದೆ.
ದಂಡನೀತ್ಯಾಂ ಯದಾ ರಾಜಾ ಸಮ್ಯಕ್ ಕಾರ್ತ್ಸ್ನ್ಯೇನ ವರ್ತತೇ |
ತದಾ ಕೃತಯುಗಂ ನಾಮ ಕಾಲಃ ಶ್ರೇಷ್ಠಃ ಪ್ರವರ್ತತೇ ||17||
ಯಾವಾಗ ರಾಜನು ದಂಡನೀತಿಯನ್ನು ಪೂರ್ಣವಾಗಿ ತಿಳಿದು ಚೆನ್ನಾಗಿ ಪ್ರಯೋಗಿಸುತ್ತಾನೆಯೋ ಆಗ ಕೃತಯುಗವೆಂಬ ಶ್ರೇಷ್ಠ ಕಾಲವು ಉಂಟಾಗುತ್ತದೆ.
ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ |
ಇತಿ ತೇ ಸಂಶಯೋ ಮಾ ಭೂದ್ ರಾಜಾ ಕಾಲಸ್ಯ ಕಾರಣಮ್ ||18||
ಕಾಲಕ್ಕೆ ರಾಜನು ಕಾರಣನೋ ಅಥವಾ ರಾಜನಿಗೆ ಕಾಲವು ಕಾರಣವೋ ಎಂಬ ಸಂಶಯವು ನಿನಗೆ ಬೇಡ. ರಾಜನೇ ಕಾಲಕ್ಕೆ ಕಾರಣ.
ರಾಜಾ ಕೃತಯುಗಸ್ರಷ್ಟಾ ತ್ರೇತಾಯಾ ದ್ವಾಪರಸ್ಯ ಚ |
ಯುಗಸ್ಯ ಚ ಚತುರ್ಥಸ್ಯ ರಾಜಾ ಭವತಿ ಕಾರಣಮ್ ||19||
ರಾಜನೇ ಕೃತಯುಗವನ್ನು ಸೃಷ್ಟಿಮಾಡುವವನು. ಹಾಗೆಯೇ ತ್ರೇತಾಯುಗದ, ದ್ವಾಪರಯುಗದ ಮತ್ತು ನಾಲ್ಕನೆಯನಾದ ಕಲಿಯುಗದ ಸೃಷ್ಟಿಕರ್ತ. ಕಾಲಕ್ಕೆ ರಾಜನೇ ಕಾರಣನಾಗುತ್ತಾನೆ.
ಕೃತಸ್ಯ ಕರಣಾದ್ ರಾಜಾ ಸ್ವರ್ಗಮತ್ಯಂತಮಶ್ನುತೇ |
ತ್ರೇತಾಯಾಃ ಕರಣಾದ್ ರಾಜಾ ಸ್ವರ್ಗಂ ನಾತ್ಯಂತಮಶ್ನುತೇ ||20||
ರಾಜನು ಕೃತಯುಗವನ್ನು ಸೃಷ್ಟಿಮಾಡಿದರೆ ಶ್ರೇಷ್ಠವಾದ ಸ್ವರ್ಗವನ್ನು ಹೊಂದುತ್ತಾನೆ. ತ್ರೇತಾಯುಗವನ್ನು ಮಾಡಿದರೆ ಅಷ್ಟು ಶ್ರೇಷ್ಠವಾದ ಸ್ವರ್ಗವನ್ನು ಹೊಂದುವುದಿಲ್ಲ.

ಪ್ರವರ್ತನಾದ್ ದ್ವಾಪರಸ್ಯ ಯಥಾಭಾಗಮುಪಾಶ್ನುತೇ |
ಕಲೇಃ ಪ್ರವರ್ತನಾದ್ ರಾಜಾ ಪಾಪಮತ್ಯಂತಮಶ್ನುತೇ ॥21॥
ದ್ವಾಪರ ಯುಗವನ್ನು ಪ್ರವರ್ತನೆ ಮಾಡಿದರೆ ಸ್ವರ್ಗದ ಒಂದು ಭಾಗವನ್ನು ಮಾತ್ರ ಪಡೆಯುತ್ತಾನೆ. ಕಲಿಯುಗವನ್ನು ಪ್ರವರ್ತನೆ ಮಾಡಿದರೆ ಅತ್ಯಂತ ಪಾಪವನ್ನು ಹೊಂದುತ್ತಾನೆ.
ತತೋ ವಸತಿ ದುಷ್ಕರ್ಮಾ ನರಕೇ ಶಾಶ್ವತೀಃ ಸಮಾಃ |
ರಾಜದೋಷೇಣ ಹಿ ಜಗತ್ ಸ್ಪೃಶ್ಯತೇ ಜಗತಃ ಸ ಚ ॥22॥
ಮತ್ತು ಅದರಿಂದ ದುಷ್ಕರ್ಮವನ್ನು ಮಾಡಿ, ನರಕದಲ್ಲಿ ಅನೇಕಾನೇಕ ವರ್ಷಗಳವರೆಗೆ ವಾಸ ಮಾಡುತ್ತಾನೆ. ರಾಜನ ದೋಷದಿಂದ ಜಗತ್ತಿಗೂ ಕೇಡಾಗುತ್ತದೆ ಮತ್ತು ಜಗತ್ತಿನ ದೋಷದಿಂದ ರಾಜನಿಗೂ ಕೇಡಾಗುತ್ತದೆ.
ರಾಜಧರ್ಮಾನವೇಕ್ಷಸ್ವ ಪಿತೃಪೈತಾಮಹೋಚಿತಾನ್ |
ನೈತದ್ ರಾಜರ್ಷಿವೃತ್ತಂ ಹಿ ಯತ್ರ ತ್ವಂ ಸ್ಥಾತುಮಿಚ್ಛಸಿ ॥23॥
ಪಿತೃ-ಪಿತಾಮಹರು ಆಚರಿಸಿದ ರಾಜಧರ್ಮಗಳನ್ನು ನೋಡು. ನೀನು ಏನನ್ನು ಮಾಡಲು ಬಯಸುತ್ತಿದ್ದೀಯೋ ಅದು ರಾಜರ್ಷಿಗಳ ನಡತೆಯಲ್ಲ.
ನ ಹಿ ವೈಕ್ಲಬ್ಯಸಂಸೃಷ್ಟ ಆನೃಶಂಸ್ಯೇ ವ್ಯವಸ್ಥಿತಃ |
ಪ್ರಜಾಪಾಲನಸಂಭೂತಂ ಫಲಂ ಕಿಂಚನ ಲಬ್ಧವಾನ್ ॥24॥
ಮನೋಗ್ಲಾನಿಯನ್ನು ಮತ್ತು ದಯೆಯನ್ನು ಹೊಂದಿದ ಯಾವನೂ ಪ್ರಜೆಗಳನ್ನು ರಕ್ಷಣೆ ಮಾಡುವುದರಿಂದ ಉಂಟಾದ ಫಲಗಳನ್ನು ಪಡೆಯಲಿಲ್ಲ.
ನ ಹ್ಯೇತಾಮಾಶಿಷಂ ಪಾಂಡುರ್ನ ಚಾಹಂ ನ ಪಿತಾಮಹಃ |
ಪ್ರಯುಕ್ತವಂತಃ ಪೂರ್ವಂ ತೇ ಯಥಾ ಚರಸಿ ಮೇಧಯಾ ॥25॥
ಈಗ ನೀನು ಹೇಗೆ ನಡೆದುಕೊಳ್ಳುತ್ತಿದ್ದೀಯೋ ಅಂತಹ ಆಶೀರ್ವಾದವನ್ನು ಪಾಂಡುವಾಗಲೀ, ನಾನಾಗಲೀ, ಪಿತಾಮಹರಾದ ವ್ಯಾಸರಾಗಲೀ ನಿನಗೆ ಹಿಂದೆ ಮಾಡಲಿಲ್ಲ.
ಯಜ್ಞೋ ದಾನಂ ತಪಃ ಶೌರ್ಯಂ ಪ್ರಜ್ಞಾ ಸಂತಾನಮೇವ ಚ |
ಮಾಹಾತ್ಮ್ಯಂ ಬಲಮೋಜಶ್ಚ ನಿತ್ಯಮಾಶಂಸಿತಂ ಮಯಾ ॥26॥
ಯಜ್ಞ, ದಾನ, ತಪಸ್ಸು, ಶೌರ್ಯ, ಪ್ರಜ್ಞೆ, ಸಂತತಿ, ಮಹಿಮೆ, ಬಲ, ಸಾಮರ್ಥ್ಯ ಇವುಗಳನ್ನೇ ನಾನು ನಿನಗೆ ನಿತ್ಯವೂ ಬಯಸಿದೆ.
ನಿತ್ಯಂ ಸ್ವಾಹಾ ಸ್ವಧಾ ನಿತ್ಯಂ ದದ್ಯುರ್ಮಾನುಷದೇವತಾಃ |
ದೀರ್ಘಮಾಯುರ್ಧನಂ ಪುತ್ರಾನ್ ಸಮ್ಯಗಾರಾಧಿತಾಃ ಶುಭಾಃ ॥27॥
ನಿತ್ಯದಲ್ಲಿಯೂ ಸ್ವಾಹಾಕಾರದಿಂದ ದೇವತೆಗಳನ್ನು ಪೂಜಿಸುವುದನ್ನು ಮತ್ತು ಸ್ವಧಾಕಾರದಿಂದ ಪಿತೃಗಳನ್ನು ಪೂಜಿಸುವುದನ್ನು ಭೂಸುರರು ನಿನಗೆ ಕೊಡುವರು. ಚೆನ್ನಾಗಿ ಆರಾಧಿಸಲ್ಪಟ್ಟ ಪಿತೃಗಳು ಮತ್ತು ದೇವತೆಗಳು ನಿನಗೆ ದೀರ್ಘವಾದ ಆಯುಸ್ಸನ್ನೂ, ಧನವನ್ನೂ ಮತ್ತು ಪುತ್ರರನ್ನೂ ಕೊಡುವರು.
ಪುತ್ರೇಷ್ವಾಶಂಸತೇ ನಿತ್ಯಂ ಪಿತರೋ ದೈವತಾನಿ ಚ |
ದಾನಮಧ್ಯಯನಂ ಯಜ್ಞಃ ಪ್ರಜಾನಾಂ ಪರಿಪಾಲನಮ್ ॥28॥
ಪಿತೃಗಳು ಮತ್ತು ದೇವತೆಗಳು ಮಕ್ಕಳಲ್ಲಿ ಯಾವಾಗಲೂ ದಾನ, ಅಧ್ಯಯನ, ಯಜ್ಞ ಮತ್ತು ಪ್ರಜಾಪಾಲನೆಗಳನ್ನು ಆಶಿಸುತ್ತಾರೆ.
ಏತದ್ ಧರ್ಮಮಧರ್ಮಂ ವಾ ಜನ್ಮನೈವಾಭ್ಯಜಾಯಥಾಃ |
ತೇ ನ ವೈದ್ಯಾಃ ಕುಲೇ ಜಾತಾ ಅವೃತ್ತ್ಯಾ ತಾತ ಪೀಡಿತಾಃ ॥29॥
ಇದು ಧರ್ಮವಾಗಲಿ ಅಥವಾ ಅಧರ್ಮವಾಗಲಿ, ನೀನು ಹುಟ್ಟಿದಾಗಲೇ ಈ ಕರ್ತವ್ಯದ ಜೊತೆಯಲ್ಲಿ ಹುಟ್ಟಿದ್ದೀಯೆ. ಎಲೈ ಪ್ರೀತಿಪಾತ್ರನೇ, ಯಾರು ಒಳ್ಳೆಯ ಕುಲದಲ್ಲಿ ಹುಟ್ಟಿದರೂ ಯೋಗ್ಯವಾದ ವೃತ್ತಿಯನ್ನು ಮಾಡದೆ ಹಿಂಸೆಯನ್ನು ಹೊಂದುತ್ತಾರೋ ಅವರು ವಿದ್ವಾಂಸರಲ್ಲ.
ಯತ್ರ ದಾನಪತಿಂ ಶೂರಂ ಕ್ಷುಧಿತಾಃ ಪೃಥಿವೀಚರಾಃ |
ಪ್ರಾಪ್ಯ ತುಷ್ಟಾಃ ಪ್ರತಿಷ್ಠಂತೇ ಧರ್ಮಃ ಕೋಽಭ್ಯಧಿಕಸ್ತತಃ ॥30॥
ಎಲ್ಲಿ ಹಸಿದ ಪ್ರಜೆಗಳು ದಾನಪತಿಯೂ, ಶೂರನೂ ಆದ ರಾಜನನ್ನು ಸಮೀಪಿಸಿ ಸಂತೋಷದಿಂದ ಹಿಂದಿರುಗುತ್ತಾರೋ ಅದಕ್ಕಿಂತ ದೊಡ್ಡ ಧರ್ಮವು ಯಾವುದಿದೆ?
ದಾನೇನಾನ್ಯಂ ಬಲೇನಾನ್ಯಂ ತಥಾ ಸೂನೃತಯಾಽಪರಮ್ |
ಸರ್ವತಃ ಪ್ರತಿಗೃಹ್ಣೀಯಾದ್ ರಾಜ್ಯಂ ಪ್ರಾಪ್ಯೇಹ ಧಾರ್ಮಿಕಃ ॥31॥
ಧಾರ್ಮಿಕನಾದ ವ್ಯಕ್ತಿಯು ರಾಜ್ಯವನ್ನು ಪಡೆದು ದಾನದಿಂದ ಕೆಲವರನ್ನೂ, ಬಲದಿಂದ ಕೆಲವರನ್ನೂ, ಒಳ್ಳೆಯ ಮಾತುಗಳಿಂದ ಕೆಲವರನ್ನೂ ಎಲ್ಲ ಕಡೆಗಳಿಂದಲೂ ಸಂಘಟಿಸಬೇಕು.
ಬ್ರಾಹ್ಮಣಃ ಪ್ರಚರೇದ್ ಭೈಕ್ಷ್ಯಂ ಕ್ಷತ್ರಿಯಃ ಪರಿಪಾಲಯೇತ್ |
ವೈಶ್ಯೋ ಧನಾರ್ಜನಂ ಕುರ್ಯಾತ್ ಶೂದ್ರಃ ಪರಿಚರೇಚ್ಚ ತಾನ್ ॥32॥
ಬ್ರಾಹ್ಮಣನು ಭಿಕ್ಷೆಯನ್ನು ಬೇಡಬೇಕು. ಕ್ಷತ್ರಿಯನು ಪ್ರಜಾಪಾಲನೆಯನ್ನು ಮಾಡಬೇಕು. ವೈಶ್ಯನು ಧನಾರ್ಜನೆಯನ್ನು ಮಾಡಬೇಕು. ಶೂದ್ರನು ಆ ಮೂವರನ್ನೂ ಪರಿಚರಿಸಬೇಕು.
ಭೈಕ್ಷ್ಯಂ ವಿಪ್ರತಿಷಿದ್ಧಂ ತೇ ಕೃಷಿರ್ನೈವೋಪಪದ್ಯತೇ |
ಕ್ಷತ್ರಿಯೋಽಸಿ ಕ್ಷತಾನ್(ತ್) ತ್ರಾತಾ ಬಾಹುವೀರ್ಯೋಪಜೀವಿತಾ ॥

ನಿನಗೆ ಭೈಕ್ಷ್ಯವು ನಿಷಿದ್ಧವಾದುದು. ಕೃಷಿಯು ಉಪಪನ್ನವಾಗುವುದಿಲ್ಲ. ನೀನು ಬಾಹುಸಾಮರ್ಥ್ಯದಿಂದ ಬದುಕುವ ಪ್ರಜೆಗಳನ್ನು ಕಂಟಕಗಳಿಂದ ರಕ್ಷಿಸುವ ಕ್ಷತ್ರಿಯನಾಗಿದ್ದೀಯೆ.
ಪಿತ್ರ್ಯಮಂಶಂ ಮಹಾಬಾಹೋ ನಿಮಗ್ನಂ ಪುನರುದ್ಧರ |
ಸಾಮ್ನಾ ಭೇದೇನ ದಾನೇನ ದಂಡೇನಾಥ ನಯೇನ ವಾ ॥34॥
ಎಲೈ ಮಹಾಬಾಹುವೇ, ಕಳೆದುಹೋದ ತಂದೆಯ ಭಾಗವನ್ನು ಸಾಮದಿಂದಾಗಲೀ, ಭೇದದಿಂದಾಗಲೀ, ದಾನದಿಂದಾಗಲೀ, ದಂಡದಿಂದಾಗಲೀ ಅಥವಾ ಬೇರೆ ನೀತಿಯಿಂದಾಗಲೀ ಪುನಃ ಸಂಪಾದಿಸುವವನಾಗು.
ಇತೋ ದುಃಖತರಂ ಕಿಂ ನು ಯದಹಂ ಹೀನಬಾಂಧವಾ |
ಪರಪಿಂಡಮುದೀಕ್ಷಾಮಿ ತ್ವಾಂ ಸೂತ್ವಾಽಮಿತ್ರನಂದನಮ್ ॥35॥
ಶತ್ರುಗಳಿಗೆ ಸಂತೋಷವನ್ನು ಕೊಡುವ ನಿನ್ನನ್ನು ಪಡೆದು, ಬಾಂಧವರಿಂದ ರಹಿತಳಾಗಿ, ನಾನು ಇನ್ನೊಬ್ಬರ ಮನೆಯ ಅನ್ನವನ್ನು ನಿರೀಕ್ಷಿಸುವುದಕ್ಕಿಂತ ದುಃಖಕರವಾದುದು ಯಾವುದಿದೆ?
ಯುಧ್ಯಸ್ವ ರಾಜಧರ್ಮೇಣ ಮಾ ನಿಮಜ್ಜೀಃ ಪಿತಾಮಹಾನ್ |
ಮಾ ಗಮಃ ಕ್ಷೀಣಪುಣ್ಯಸ್ತ್ವಂ ಸಾನುಜಃ ಪಾಪಿಕಾಂ ಗತಿಮ್ ॥36॥
ರಾಜಧರ್ಮಕ್ಕೆ ಅನುಗುಣವಾಗಿ ಯುದ್ಧವನ್ನು ಮಾಡು. ಪಿತಾಮಹರನ್ನು ನರಕದಲ್ಲಿ ಮುಳುಗಿಸಬೇಡ. ನೀನಾದರೂ ಪುಣ್ಯವನ್ನು ಕಳೆದುಕೊಂಡು ತಮ್ಮಂದಿರ ಜೊತೆಯಲ್ಲಿ ಪಾಪಿಷ್ಠವಾದ ಗತಿಯನ್ನು ಹೊಂದಬಾರದು'.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕತ್ರಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೆರಡನೆಯ ಅಧ್ಯಾಯ
ಯುಧಿಷ್ಠಿರ ಬೋಧನೆಗಾಗಿ ಕುಂತಿಯಿಂದ ವಿದುಲೋಪಾಖ್ಯಾನ ಕಥನ.
ಕುಂತೀ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವಿದುಲಾಯಾಶ್ಚ ಸಂವಾದಂ ಪುತ್ರಸ್ಯ ಚ ಪರಂತಪ ॥1॥
ತತ್ರ ಶ್ರೇಯಶ್ಚ ಭೂಯಶ್ಚ ಯಥಾವದ್ ವಕ್ತುಮರ್ಹತಿ ॥2॥
ಕುಂತೀ ಎಲೈ ಪರಂತಪನಾದ ಕೃಷ್ಣನೇ, ಈ ವಿಷಯದಲ್ಲಿ ವಿದುಲೆಗೂ, ಅವಳ ಪುತ್ರರಿಗೂ ನಡೆದ ಒಂದು ಪ್ರಾಚೀನವಾದ ಇತಿಹಾಸವನ್ನು ಹೇಳುತ್ತಾರೆ. ಅದನ್ನು ಕೇಳಿ ಧರ್ಮರಾಜನಿಗೆ ಒಳ್ಳೆಯ ಶ್ರೇಯೋಮಾರ್ಗವನ್ನು ಹೇಳಬೇಕು.
ಯಶಸ್ವಿನೀ ಮನ್ಯುಮತೀ ಕುಲಜಾತಾ ವಿಭಾವಿನೀ |
ಕ್ಷತ್ರಧರ್ಮರತಾ ನಿತ್ಯಂ ವಿದುಲಾ ದೀರ್ಘದರ್ಶಿನೀ ॥3॥
ವಿಶ್ರುತಾ ರಾಜಸಂಸತ್ಸು ಶ್ರುತವಾಕ್ಯಾ ಬಹುಶ್ರುತಾ ॥4॥
ಒಳ್ಳೆಯ ಕುಲದಲ್ಲಿ ಜನಿಸಿದವಳೂ, ಕೀರ್ತಿವಂತಳೂ, ಕೆಟ್ಟ ವಿಷಯದಲ್ಲಿ ಕೋಪವುಳ್ಳವಳೂ, ಯಾವಾಗಲೂ ಕ್ಷತ್ರಿಯ ಧರ್ಮರತಳೂ, ದೀರ್ಘದರ್ಶಿನಿಯೂ, ಬಹಳ ವಿದ್ಯಾಸಂಪನ್ನಳೂ ಮತ್ತು ಬಹುಶ್ರುತಳೂ ಮತ್ತು ಬಹಳ ಉಪದೇಶಕಳೂ ಆದ, ರಾಜಸಭೆಗಳಲ್ಲಿ ಪ್ರಖ್ಯಾತಳಾದ ವಿದುಲಾ ಎಂಬ ವನಿತೆ ಇದ್ದಳು.
ವಿದುಲಾ ನಾಮ ಸಾ ಸಾಧ್ವೀ ಜಗರ್ಹೇ ಪುತ್ರಮೌರಸಮ್ |
ನಿರ್ಜಿತಂ ಸಿಂಧುರಾಜೇನ ಶಯಾನಂ ದೀನಚೇತಸಮ್ ॥5॥
ಅನಂದನಮಧರ್ಮಜ್ಞಂ ದ್ವಿಷತಾಂ ಹರ್ಷವರ್ಧನಮ್ ॥6॥
ವಿದುಲಾ ಎಂಬ ಆ ಸಾಧ್ವಿಯು, ಸಿಂಧುರಾಜನಿಂದ ಪರಾಜಿತನಾಗಿ ದೈನ್ಯದಿಂದ ಕಾಲವನ್ನು ಕಳೆಯುತ್ತಾ, ಅಧರ್ಮಶೀಲನಾಗಿ, ಸಂತೋಷರಹಿತನಾಗಿ, ಶತ್ರುಗಳಿಗೆ ಸಂತೋಷವನ್ನುಂಟು ಮಾಡುತ್ತಿದ್ದ ತನ್ನ ಔರಸಪುತ್ರನನ್ನು ನಿಂದಿಸಿದಳು.
ವಿದುಲಾ
ಕುನಂದನ ಕ್ವ ವಾ ಜಾತೋ ದ್ವಿಷತಾಂ ಹರ್ಷವರ್ಧನ |
ನ ಮಯಾ ತ್ವಂ ನ ಪಿತ್ರಾ ಚ ಜಾತಃ ಕ್ವಾಭ್ಯಾಗತೋ ಹ್ಯಸಿ ॥7॥
ವಿದುಲಾ ಎಲೈ ಕೆಟ್ಟ ಪುತ್ರನೇ, ಶತ್ರುಗಳಿಗೆ ಸಂತೋಷವನ್ನು ಹೆಚ್ಚಿಸುವವನೇ, ನೀನು ಎಲ್ಲಿಂದ ಹುಟ್ಟಿದೆ? ನೀನು ನನ್ನಿಂದಲೂ ಹುಟ್ಟಲಿಲ್ಲ, ತಂದೆಯಿಂದಲೂ ಹುಟ್ಟಲಿಲ್ಲ. ಎಲ್ಲಿಂದ ಬಂದೆ?
ನಿರ್ಮನ್ಯುಶ್ಚಾಪ್ಯಸಂಖ್ಯೇಯಃ ಪುರುಷಃ ಕ್ಲೀಬಸಾಧನಃ |
ಯಾವಜ್ಜೀವಂ ನಿರಾಶೋಽಸಿ ಕಲ್ಯಾಣಾಯ ಧುರಂ ವಹ ॥8॥
ಕೋಪವಿಲ್ಲದೆ, ಯಾವ ಗಣನೆಯೂ ಇಲ್ಲದೆ ನಪುಂಸಕನಾದ ಪುರುಷನಂತಿದ್ದೀಯೆ. ಜೀವನದಲ್ಲಿ ಯಾವ ಆಸೆಯೂ ಇಲ್ಲ.
ಒಳ್ಳೆಯದನ್ನು ಸಾಧಿಸಲು ಉದ್ಯುಕ್ತನಾಗು.
ಮಾಽಽತ್ಮಾನಮವಮನ್ಯಸ್ವ ಮೈವಮಲ್ಪೇನ ಭೀಭರಃ |
ಮನಃ ಕೃತ್ವಾ ಸುಕಲ್ಯಾಣಂ ಮಾ ಭೈಸ್ತ್ವಂ ಪ್ರತಿಸಂಹರ ॥9॥

ನಿನ್ನನ್ನು ನೀನು ಅವಮಾನ ಮಾಡಿಕೊಳ್ಳಬೇಡ. ಅಲ್ಪದರಿಂದ ತೃಪ್ತನಾಗಬೇಡ. ನೀನು ಹೆದರಬೇಡ. ಮನಸ್ಸನ್ನು ಒಳ್ಳೆಯ ವಿಷಯದಲ್ಲಿ ಗಟ್ಟಿ ಮಾಡಿ ಸಂಪಾದಿಸುವವನಾಗು.
ಉತ್ತಿಷ್ಠ ಹೇ ಕಾಪುರುಷ ಮಾ ಶೇಷ್ವೈವಂ ಪರಾಜಿತಃ |
ಅಮಿತ್ರಾನ್ ನಂದಯನ್ ಸರ್ವಾನ್ ಮಿತ್ರಾಣಾಂ ಚಾಪಿ ಶೋಕದಃ ||
ಎಲೈ ಕಾಪುರುಷನೇ, ಎದ್ದೇಳು. ಪರಾಜಿತನಾಗಿ ಎಲ್ಲಾ ಶತ್ರುಗಳನ್ನೂ ಸಂತೋಷಪಡಿಸುತ್ತಾ, ಮಿತ್ರರಿಗೆ ಶೋಕವನ್ನು ಕೊಡುತ್ತಾ ಹೀಗೆ ಮಲಗಿರಬೇಡ.
ಸುಪೂರಾ ವೈ ಕುನದಿಕಾ ಸುಪೂರೋ ಮೂಷಿಕಾಂಜಲಿಃ |
ಸುಸಂತೋಷಃ ಕಾಪುರುಷಃ ಸ್ವಲ್ಪಕೇನೈವ ತುಷ್ಯತಿ ||11||
ಒಂದು ಸಣ್ಣ ನದಿಯು ಬೇಗ ತುಂಬಿಹೋಗುತ್ತದೆ. ಒಂದು ಮೂಷಿಕದ ಅಂಜಲಿಯನ್ನು ಬೇಗ ತುಂಬಬಹುದು. ಕೆಟ್ಟ ಪುರುಷನನ್ನು ಬೇಗ ಸಂತೋಷಪಡಿಸಬಹುದು. ಅವನು ಅಲ್ಪದರಿಂದಲೇ ತೃಪ್ತನಾಗುತ್ತಾನೆ.
ಅಪ್ಯಹೇರಾರುಜನ್ ದಂಷ್ಟ್ರಾಂ ಮಾ ಚೈವ ನಿಧನಂ ವ್ರಜ |
ಅಪಿ ವಾ ಸಂಶಯಂ ಪ್ರಾಪ್ಯ ಜೀವಿತೇಽಪಿ ಪರಾಕ್ರಮೇಃ ||12||
ಸರ್ಪದ ಹಲ್ಲನ್ನು ಕೀಳಬೇಕಾದರೂ ಭಯದಿಂದ ನಿಧನ ಹೊಂದಬೇಡ. ಜೀವನದಲ್ಲಿ ಸಂಶಯವಿದ್ದರೂ ಪರಾಕ್ರಮವನ್ನು ಮಾಡಬೇಕು.
ಅಪ್ಯರೇಃ ಶ್ಯೇನವಚ್ಛಿದ್ರಂ ಪಶ್ಯೇಸ್ತ್ವಂ ವಿಪರಿಕ್ರಮಮ್ |
ವಿನದನ್ ವಾಽಥವಾ ತೂಷ್ಣೀಂ ವ್ಯೋಮ್ನಿ ವಾ ಪರಿಶಂಕಿತಃ ||13||
ಹದ್ದು ಆಕಾಶದಲ್ಲಿ ನಾದವನ್ನು ಮಾಡುತ್ತಾ ಅಥವಾ ಮೌನವಾಗಿ ಹುಡುಕುವಂತೆ ನೀನು ಶತ್ರುಗಳನ್ನು ಶಂಕಿಸಿ, ಅವರ ಛಿದ್ರಗಳನ್ನೂ ಮತ್ತು ವಿಪರಿಣಾಮಗಳನ್ನೂ ಗಮನಿಸುವವನಾಗಬೇಕು.
ತ್ವಮೇವಂ ಪ್ರೇತವಚ್ಛೇಷೇ ಕಸ್ಮಾದ್ ವಜ್ರಹತೋ ಯಥಾ |
ಉತ್ತಿಷ್ಠ ಹೇ ಕಾಪುರುಷ ಮಾ ಸ್ವಾಪ್ಸೀಃ ಶತ್ರುನಿರ್ಜಿತಃ ||14||
ನೀನು ಏಕೆ ವಜ್ರಾಯುಧದಿಂದ ಹತನಾದವನಂತೆ, ಶವದಂತೆ ಹೀಗೆ ಮಲಗಿದ್ದೀಯೆ? ಎಲೈ ಕಾಪುರುಷನೇ, ಎದ್ದೇಳು. ಶತ್ರುಗಳಿಂದ ಪರಾಜಿತನಾಗಿ ನಿದ್ರೆಯನ್ನು ಮಾಡಬೇಡ.
ಮಾಽಸ್ತಂ ಗಮಸ್ತ್ವಂ ಕೃಪಣೋ ವಿಶ್ರೂಯಸ್ವ ಸ್ವಕರ್ಮಣಾ |
ಮಾ ಮಧ್ಯೇ ಮಾ ಜಘನ್ಯೇ ತ್ವಂ ಮಾಽಧೋ ಭೂಸ್ತಿಷ್ಠ ಚೋರ್ಜಿತಃ ||
ನೀನು ಕೃಪಣನಾಗಿ ಅಸ್ತಂಗತನಾಗಬೇಡ. ನೀನು ಕರ್ಮದಿಂದ ಪ್ರಸಿದ್ಧಿಯನ್ನು ಪಡೆಯುವವನಾಗು. ಮಧ್ಯಮವಾದ, ಅಲ್ಪವಾದ ಅಥವಾ ನೀಚವಾದ ಕಾರ್ಯದಲ್ಲಿ ತೊಡಗಬೇಡ. ಉನ್ನತವಾದ ಕಾರ್ಯಗಳಲ್ಲಿ ತೊಡಗುವವನಾಗು.
ಅಲಾತಂ ತಿಂದುಕಸ್ಯೇವ ಮುಹೂರ್ತಮಪಿ ವಿಜ್ವಲ |
ಮಾ ತುಷಾಗ್ನಿರಿವಾನರ್ಚಿಃ ಧೂಮಾಯೇತ ನರಶ್ಚಿರಮ್ ||16||
ತುಂಬುರು ಮರದ ಕಟ್ಟಿಗೆಯ ಕೊಳ್ಳಿಯಂತೆ ಒಂದು ಮುಹೂರ್ತವಾದರೂ ಉರಿಯುವವನಾಗು. ಹೊಟ್ಟಿನ ಅಗ್ನಿಯಂತೆ ಜ್ವಾಲೆ ಇಲ್ಲದೆ ನಿರಂತರವಾಗಿ ಧೂಮವನ್ನು ಉಗುಳಬೇಡ.
ಮುಹೂರ್ತಂ ಜ್ವಲಿತಂ ಶ್ರೇಯೋ ನ ಚ ಧೂಮಾಯಿತಂ ಚಿರಮ್ |
ಮಾ ಹ ಸ್ಮ ಕಸ್ಯಚಿದ್ ಗೇಹೇ ಜನಿ ರಾಜ್ಞಃ ಖರೀ ಮೃದುಃ ||17||
ಒಂದು ಮುಹೂರ್ತ ಉರಿಯುವುದೂ ಶ್ರೇಷ್ಠವಾದುದು. ಬಹಳ ಕಾಲ ಧೂಮವನ್ನು ಉಗುಳುವುದಲ್ಲ. ಯಾವ ರಾಜನ ಮನೆಯಲ್ಲಿಯೂ ಕೋಪವಿಲ್ಲದ ಒಂದು ಕತ್ತೆಯು ಜನಿಸುವುದು ಬೇಡ.
ಕೃತ್ವಾ ಮಾನುಷ್ಯಕಂ ಕರ್ಮ ಧೃಷ್ಟ್ವಾತ್ಮಾ ಯಾವದುತ್ತರಮ್ |
ಧರ್ಮಸ್ಯಾನೃಣ್ಯಮಾಪ್ನೋತಿ ನ ಚಾತ್ಮಾನಂ ವಿಗರ್ಹಯೇತ್ ||18||
ಧೈರ್ಯವನ್ನು ತಂದುಕೊಂಡು, ಎಷ್ಟು ಸಾಧ್ಯವೋ ಅಷ್ಟು ಮನುಷ್ಯಯೋಗ್ಯವಾದ ಕಾರ್ಯವನ್ನು ಮಾಡಿ, ಮನುಷ್ಯನು ಧರ್ಮದ ದೃಷ್ಟಿಯಲ್ಲಿ ಋಣಮುಕ್ತನಾಗುತ್ತಾನೆ. ತನ್ನನ್ನು ತಾನು ನಿಂದಿಸಿಕೊಳ್ಳಬಾರದು.
ಅಲಬ್ಧ್ವಾ ಯದಿ ವಾ ಲಬ್ಧ್ವಾ ನಾನುಶೋಚಂತಿ ಪಂಡಿತಾಃ |
ಆನಂತರ್ಯಂ ಚಾರಭಂತೇ ನ ಪ್ರಾಣಪರಿರಕ್ಷಣಾಮ್ ||19||
ಫಲವು ಸಿಗಲಿ ಅಥವಾ ಸಿಗದಿರಲಿ, ಪಂಡಿತರು ದುಃಖಪಡುವುದಿಲ್ಲ. ಅನಂತರ ಮಾಡಬೇಕಾದ ಕಾರ್ಯದಲ್ಲಿ ತೊಡಗುವರೇ ಹೊರತು ತಮ್ಮ ಪ್ರಾಣವನ್ನು ರಕ್ಷಿಸಿಕೊಳ್ಳುವುದರಲ್ಲಿ ಆಸಕ್ತರಾಗುವುದಿಲ್ಲ.
ಉದ್ಭಾವಯಸ್ವ ವೀರ್ಯಂ ವಾ ತಾಂ ವಾ ಗಚ್ಛ ಧ್ರುವಾಂ ಗತಿಮ್ |
ಧರ್ಮಂ ಪುತ್ರಾಗ್ರತಃ ಕೃತ್ವಾ ಕಿನ್ನಿಮಿತ್ತಂ ಹಿ ಜೀವಸಿ ||20||
ಎಲೈ ಪುತ್ರನೇ, ನಿನ್ನ ಪರಾಕ್ರಮವನ್ನು ಉತ್ತೇಜನಗೊಳಿಸು. ಧರ್ಮವನ್ನು ಮುಂದೆ ಮಾಡಿಕೊಂಡು ಶ್ರೇಷ್ಠವಾದ ಗತಿಯನ್ನಾದರೂ ಹೊಂದುವವನಾಗು. ಏತಕ್ಕಾಗಿ ಬದುಕಿದ್ದೀಯೆ?
ಇಷ್ಟಾಪೂರ್ತಂ ಚ ತೇ ಕ್ಲೀಬ ಕೀರ್ತಿಶ್ಚ ಸಕಲಾ ಹತಾ |
ವಿಚ್ಛಿನ್ನಂ ಭೋಗಮೂಲಂ ತೇ ಕಿನ್ನಿಮಿತ್ತಂ ಹಿ ಜೀವಸಿ ||21||
ಎಲೈ ನಪುಂಸಕನೇ, ನಿನ್ನ ಇಷ್ಟಾಪೂರ್ತಗಳು ಮತ್ತು ಎಲ್ಲಾ ಕೀರ್ತಿಯೂ ನಾಶವನ್ನು ಹೊಂದಿವೆ. ಭೋಗಕ್ಕೆ ಮೂಲವಾದ ಸಂಪತ್ತು ನಾಶವನ್ನು ಹೊಂದಿದೆ. ಏತಕ್ಕೆ ಬದುಕಿದ್ದೀಯೆ?

ಶತ್ರುರ್ನಿಮಜ್ಜತಾ ಗ್ರಾಹ್ಯೋ ಜಂಘಾಯಾಂ ಪ್ರಪತಿಷ್ಯತಾ |
ವಿಪರಿಚ್ಛಿನ್ನಮೂಲೇನ ನ ವಿಷೀದೇತ್ ಕಥಂಚನ ॥22॥
ನೀರಿನಲ್ಲಿ ಬಿದ್ದು ಮುಳುಗುವವನು ಶತ್ರುಗಳನ್ನು ಮುಳುಗಿಸಲು ಅವನ ಮಂಡಿಯನ್ನಾದರೂ ಹಿಡಿಯಬೇಕು. ತನ್ನ ಮೂಲವನ್ನು ನಾಶಮಾಡಿದ ಶತ್ರುವಿಗಾಗಿ ವಿಷಾದವನ್ನು ಮಾಡಬಾರದು.
ಉದ್ಯಮ್ಯ ಧುರಮುತ್ಕರ್ಷೇದ್ ಆಜಾನೇಯಕೃತಂ ಸ್ಮರನ್ |
ಕುರು ಸತ್ವಂ ಚ ಮಾನಂ ಚ ವಿದ್ಧಿ ಪೌರುಷಮಾತ್ಮನಃ ॥23॥
ಉದ್ಭಾವಯ ಕುಲಂ ಮಗ್ನಂ ತ್ವತ್ಕೃತೇ ಸ್ವಯಮೇವ ಚ ॥24॥
ತನ್ನ ಹಿಂದಿನವರು ಮಾಡಿದ ಜ್ಯೇಷ್ಠಕಾರ್ಯಗಳನ್ನು ಸ್ಮರಿಸಿ ಪ್ರಯತ್ನವನ್ನು ಮಾಡಿ ತನ್ನ ಕಾರ್ಯವನ್ನು ಸಾಧಿಸಬೇಕು. ನಿನ್ನ ಸತ್ವವನ್ನೂ ಮತ್ತು ಮಾನವನ್ನೂ ಸಂಪಾದಿಸುವವನಾಗು. ನಿನ್ನ ಪೌರುಷದಲ್ಲಿ ನೀನು ನಂಬಿಕೆಯನ್ನಿಡು. ನಿನ್ನ ಸಲುವಾಗಿ ಮುಳುಗಿ ಹೋದ ಕುಲವನ್ನು ನೀನಾಗಿಯೇ ಎತ್ತುವವನಾಗು.
ಯಸ್ಯ ವೃತ್ತಂ ನ ಜಲ್ಪಂತಿ ಮಾನವಾ ಮಹದದ್ಭುತಮ್ |
ರಾಶಿವರ್ಧನಮಾತ್ರಂ ಸ ನೈವ ಸ್ತ್ರೀ ನ ಪುನಃ ಪುಮಾನ್ ॥25॥
ಯಾವನ ನಡತೆಯನ್ನು ಮನುಷ್ಯರು ಅದ್ಭುತವೆಂದು ಹೇಳುವುದಿಲ್ಲವೋ ಅಂತಹವನು ಕೇವಲ ಹೊಟ್ಟೆಯನ್ನು ತುಂಬಿಕೊಳ್ಳುವ ಅನ್ನದ ರಾಶಿಯನ್ನು ಹೆಚ್ಚಿಸುವವನು ಮಾತ್ರ. ಅವನು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ.
ದಾನೇ ತಪಸಿ ಶೌರ್ಯೇ ವಾ ಯಸ್ಯ ನ ಪ್ರಥಿತಂ ಯಶಃ |
ವಿದ್ಯಾಯಾಮರ್ಥಲಾಭೇ ತು ಮಾತುರುಚ್ಚಾರ ಏವ ಸಃ ॥26॥
ಯಾವನು ದಾನದಲ್ಲಾಗಲೀ, ತಪಸ್ಸಿನಲ್ಲಾಗಲೀ, ಶೌರ್ಯದಲ್ಲಾಗಲೀ, ವಿದ್ಯೆಯಲ್ಲಾಗಲೀ, ಧನಲಾಭದಲ್ಲಾಗಲೀ ಕೀರ್ತಿಯನ್ನು ಸಂಪಾದಿಸುವುದಿಲ್ಲವೋ ಅವನು ತಾಯಿಯ ಮೂತ್ರಕ್ಕೆ ಸಮಾನನಾದವನು.
ಶ್ರುತೇನ ತಪಸಾ ವಾಽಪಿ ಶ್ರಿಯಾ ವಾ ವಿಕ್ರಮೇಣ ವಾ |
ಜನಾನ್ ಯೋಽಭಿಭವತ್ಯನ್ಯಾನ್ ಕರ್ಮಣಾ ಹಿ ಸ ವೈ ಪುಮಾನ್ ॥
ಯಾವನು ತನ್ನ ವಿದ್ಯೆಯಿಂದ ಅಥವಾ ತಪಸ್ಸಿನಿಂದ ಅಥವಾ ಸಂಪತ್ತಿನಿಂದ ಅಥವಾ ಪರಾಕ್ರಮದಿಂದ ಅಥವಾ ಕರ್ಮದಿಂದ ಉಳಿದವರನ್ನು ಮೀರುತ್ತಾನೆಯೋ ಅವನೇ ಪುರುಷನಾದವನು.
ನ ತ್ವೇವ ಜಾಲ್ಮೀಂ ಕಾಪಾಲೀಂ ವೃತ್ತಿಮೇಷಿತುಮರ್ಹಸಿ |
ನೃಶಂಸ್ಯಾಮಯಶಸ್ಯಾಂ ಚ ದುಃಖಾಂ ಕಾಪುರುಷೋಚಿತಾಮ್ ॥28॥
ಯದೇನಮಭಿನಂದೇಯುರಮಿತ್ರಾಃ ಪುರುಷಂ ಕೃಶಮ್ |
ಲೋಕಸ್ಯ ಸಮವಜ್ಞಾತಂ ನಿಹೀನಾಶನವಾಸಸಮ್ ॥29॥
ದುಷ್ಟಪುರುಷರು ಆಶ್ರಯಿಸುವ ಕ್ರೂರವಾದ, ಅಪಕೀರ್ತಿಕರವಾದ, ದುಃಖಕರವಾದ ಕಪಟವೃತ್ತಿಯನ್ನಾಗಲೀ ಅಥವಾ ಭಿಕ್ಷಾವೃತ್ತಿಯನ್ನಾಗಲೀ ಬಯಸಬೇಡ. ಏಕೆಂದರೆ ಲೋಕದಿಂದ ಅವಮಾನಿತನಾದ, ಅಶನ-ವಸನಗಳಿಂದ ರಹಿತನಾದ ಅಂತಹ ಕೃಶನಾದ ಪುರುಷನನ್ನು ನೋಡಿ ಶತ್ರುಗಳು ಸಂತೋಷವನ್ನು ಪಡುತ್ತಾರೆ.
ಅಹೋ ಲೋಭಕರಂ ಹೀನಮ್ ಅಲ್ಪಜೀವನಮಲ್ಪಕಮ್ |
ನೇದೃಶಂ ಬಂಧುಮಾಸಾದ್ಯ ಬಾಂಧವಃ ಸುಖಮೇಧತೇ ॥30॥
ಲೋಭಿಯಾದ, ಹೀನನಾದ, ಅಲ್ಪಜೀವನನಾದ, ಸ್ವತಃ ಅಲ್ಪನಾದ ಇಂತಹ ಬಂಧುವನ್ನು ಪಡೆದ ಬಾಂಧವನು ಸುಖವನ್ನು ಹೊಂದುವುದಿಲ್ಲ.
ಅವೃತ್ತ್ಯೈವ ವಿಪತ್ಸ್ಯಾಮೋ ವಯಂ ರಾಷ್ಟ್ರಾತ್ ಪ್ರವಾಸಿತಾಃ |
ಸರ್ವಕಾಮರಸೈರ್ಹೀನಾ ಸ್ಥಾನಭ್ರಷ್ಟಾ ಅಕಿಂಚನಾಃ ॥31॥
ನಾವು ಸ್ಥಾನಭ್ರಷ್ಟರಾಗಿ, ಸರ್ವಕಾಮವಿಹೀನರಾಗಿ, ದರಿದ್ರರಾಗಿ, ರಾಷ್ಟ್ರದಿಂದ ದೂರಹೋಗಿ ಜೀವನೋಪಾಯವಿಲ್ಲದೆಯೇ ಮರಣವನ್ನು ಹೊಂದೋಣ.
ಅವರ್ಣಕಾರಿಣಂ ಸತ್ಸು ಕುಲವಂಶಸ್ಯ ನಾಶನಮ್ |
ಕಲಿಂ ಪುತ್ರಪ್ರವಾದೇನ ಸೃಂಜಯ ತ್ವಾಮಜೀಜನಮ್ ॥32॥
ಎಲೈ ಸೃಂಜಯನೇ, ಅಪಕೀರ್ತಿಕರನಾದ, ವಂಶನಾಶನನಾದ, ಕಲಿಯಾದ ನಿನ್ನನ್ನು ನಾನು ಮಗನೆಂದು ಪಡೆದೆ.
ನಿರಮರ್ಷಂ ನಿರುತ್ಸಾಹಂ ನಿರ್ವೀರ್ಯಮರಿನಂದನಮ್ ॥33॥
ಮಾ ಸ್ಮ ಸೀಮಂತಿನೀ ಕಾಚಿತ್ ಜನಯೇತ್ ಪುತ್ರಮೀದೃಶಮ್ |
ಮಾ ಧೂಮಾಯ ಜ್ವಲಾತ್ಯಂತಮಾಕ್ರಮ್ಯ ಜಹಿ ಶಾತ್ರವಾನ್ ॥34॥
ಕೋಪವನ್ನು ಹೊಂದದ, ಉತ್ಸಾಹರಹಿತನಾದ, ಪರಾಕ್ರಮರಹಿತನಾದ, ಶತ್ರು ಸಂತೋಷಕರನಾದ ಇಂತಹ ಮಗನನ್ನು ಯಾವ ಸುಮಂಗಲಿಯೂ ಪಡೆಯದಿರಲಿ. ಹೊಗೆಯಾಡಬೇಡ, ಉರಿಯುವವನಾಗು. ಶತ್ರುಗಳನ್ನು ಮೆಟ್ಟಿ ಗೆಲ್ಲುವವನಾಗು.
ಜ್ವಲ ಮೂರ್ಧನ್ಯಮಿತ್ರಾಣಾಂ ಮುಹೂರ್ತಮಪಿ ವಾ ಕ್ಷಣಮ್ |
ಏತಾವಾನೇವ ಪುರುಷೋ ಯದಮರ್ಷೀ ಯದಕ್ಷಮೀ ॥35॥
ಶತ್ರುಗಳ ತಲೆಯ ಮೇಲೆ ನಿಂತು ಒಂದು ಮುಹೂರ್ತವಾದರೂ ಅಥವಾ ಒಂದು ಕ್ಷಣವಾದರೂ ಉರಿಯುವವನಾಗು. ತಮಗೆ ಅಪಚಾರವನ್ನು ಮಾಡಿದವರ ಮೇಲೆ ಕೋಪವನ್ನು ಹೊಂದಿ ಅವರನ್ನು ಕ್ಷಮಿಸದಿರುವುದೇ ಪುರುಷನ ಲಕ್ಷಣ.
ಕ್ಷಮಾವಾನ್ ನಿರಮರ್ಷಶ್ಚ ನೈವ ಸ್ತ್ರೀ ನ ಪುನಃ ಪುಮಾನ್ |

ಸಂತೋಷೋ ವೈ ಶ್ರಿಯಂ ಹಂತಿ ತಥಾಽನುಕ್ರೋಶ ಏವ ಚ ॥36॥
ಅನುತ್ಥಾನಭಯೇ ಚೋಭೇ ನಿರೀಹೋ ನಾಶ್ನುತೇ ಮಹತ್ |
ಏಭ್ಯೋ ನಿಕೃತಿಪಾಶೇಭ್ಯಃ ಪ್ರಮುಂಚಾತ್ಮಾನಮಾತ್ಮನಾ ॥37॥
ಕ್ಷಮೆಯನ್ನು ಹೊಂದದವನೂ, ಕೋಪವಿಲ್ಲದವನೂ ಅವನು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ. ತೃಪ್ತಿಯು ಸಂತೋಷವನ್ನು ನಾಶಮಾಡುತ್ತದೆ. ಅದರಂತೆ ಮಾರ್ದವವೂ ಸಂಪತ್ತನ್ನು ಹಾಳುಮಾಡುತ್ತದೆ. ತೃಪ್ತಿ ಮತ್ತು ಮಾರ್ದವ ಇವೆರಡು ಅಭಿವೃದ್ಧಿಗೆ ವಿರುದ್ಧವಾದವುಗಳು. ಅವೇ ಭಯರೂಪವಾಗಿವೆ. ಕ್ರಿಯಾಶೀಲನಲ್ಲದವನು ಯಾವ ದೊಡ್ಡದನ್ನೂ ಸಾಧಿಸುವುದಿಲ್ಲ. ಅವಮಾನವನ್ನು ತರುವ ತೃಪ್ತಿ, ಮಾರ್ದವ ಮತ್ತು ಕ್ರಿಯಾರಾಹಿತ್ಯ ಈ ಮೂರು ಪಾಶಗಳಿಂದ ನಿನ್ನನ್ನು ನೀನೇ ಬಿಡಿಸಿಕೊ.
ಆಯಸಂ ಹೃದಯಂ ಕೃತ್ವಾ ಮೃಗಯಸ್ವ ಪುರಂ ಸ್ವಕಮ್ |
ಪುರಂ ವಿಷಹತೇ ಯಸ್ಮಾತ್ ತಸ್ಮಾತ್ ಪುರುಷ ಉಚ್ಯತೇ ॥38॥
ತಮಾಹುರ್ವ್ಯರ್ಥನಾಮಾನಂ ಸ್ತ್ರೀವದ್ ಯ ಇಹ ಜೀವತಿ ॥39॥
ಹೃದಯವನ್ನು ಕಬ್ಬಿಣದಂತೆ ಗಟ್ಟಿಮಾಡಿ ನಿನ್ನ ಪಟ್ಟಣವನ್ನು ನೀನು ಹುಡುಕು. ಪುರವನ್ನು ಸಂಪಾದಿಸುವ ಕಾರಣದಿಂದ ಪುರುಷನೆನಿಸುತ್ತಾನೆ. ಹೆಂಗಸಿನಂತೆ ಜೀವಿಸುವವನನ್ನು ವ್ಯರ್ಥವಾಗಿ ಪುರುಷನಾಮವುಳ್ಳವನು ಎಂದು ಹೇಳುತ್ತಾರೆ.
ಶೂರಸ್ಯೋರ್ಜಿತಸತ್ವಸ್ಯ ಸಿಂಹವಿಕ್ರಾಂತಚಾರಿಣಃ |
ದಿಷ್ಟಭಾವಂ ಗತಸ್ಯಾಪಿ ವಿಷಯೇ ಮೋದತೇ ಪ್ರಜಾಃ ॥40॥
ಶೂರನೂ, ಊರ್ಜಿತವಾದ ಬಲವುಳ್ಳವನೂ, ಸಿಂಹದಂತೆ ವಿಕ್ರಮಶಾಲಿಯೂ ಆದ ರಾಜನು ಮರಣವನ್ನು ಹೊಂದಿದರೂ ಅವನ ರಾಜ್ಯದಲ್ಲಿ ಪ್ರಜೆಗಳು ಸುಖದಿಂದ ಇರುತ್ತಾರೆ.
ಯ ಆತ್ಮನಃ ಪ್ರಿಯಸುಖೇ ಹಿತ್ವಾ ಮೃಗಯತೇಽಸುಖಮ್ |
ಅಮಿತ್ರಾಣಾಮಥೋ ಹರ್ಷಮಾದಧಾತ್ಯಚಿರೇಣ ಸಃ ॥41॥
ಯಾವನು ತನ್ನ ಪ್ರಿಯವನ್ನೂ, ಸುಖವನ್ನೂ ಬಿಟ್ಟು ಅಸುಖವನ್ನೇ ಹುಡುಕಿಕೊಂಡು ಹೋಗುತ್ತಾನೆಯೋ ಅವನು ಶೀಘ್ರವಾಗಿ ತನ್ನ ಶತ್ರುಗಳಿಗೆ ಸುಖವನ್ನು ಅನುಗ್ರಹಿಸುವವನಾಗುತ್ತಾನೆ.
ಸೃಂಜಯಃ
ಕಿನ್ನು ತೇ ಮಾಮಪಶ್ಯಂತ್ಯಾಃ ಪೃಥಿವ್ಯಾಽಪಿ ಚ ಸರ್ವಯಾ |
ಕಿಮಾಭರಣಕೃತ್ಯಂ ತೇ ಕಿಂ ಭೋಗೈರ್ಜೀವಿತೇನ ವಾ ॥42॥
ಸೃಂಜಯ ನಾನು ಯುದ್ಧದಲ್ಲಿ ಮರಣವನ್ನು ಹೊಂದಿದರೆ ನನ್ನನ್ನು ಕಾಣದಿರುವ ನಿನಗೆ ಎಲ್ಲಾ ಭೂಮಿಯಿಂದಲೂ ಏನು ಪ್ರಯೋಜನ? ನಿನಗೆ ಆಭರಣದಿಂದ ಏನಾಗಬೇಕು? ಭೋಗದಿಂದ ಏನಾಗಬೇಕು? ಅಥವಾ ಜೀವನದಿಂದಲೂ ಏನಾಗಬೇಕು?
ವಿದುಲಾ
ಪರೈರ್ವಿಹನ್ಯಮಾನಸ್ಯ ಜೀವಿತೇನಾಪಿ ಕಿಂ ಫಲಮ್ |
ನಿರ್ಮನ್ಯುಕಾನಾಂ ಯೇ ಲೋಕಾ ದ್ವಿಷಂತಸ್ತಾನವಾಪ್ನುಯುಃ ॥43॥
ಯೇ ವಾ ಧೃತಾತ್ಮನಾಂ ಲೋಕಾಃ ಸುಹೃದಸ್ತಾನ್ ವ್ರಜಂತು ನಃ ॥44॥
ವಿದುಲಾ ಶತ್ರುಗಳಿಂದ ಸೋಲುವ ನಿನ್ನ ಜೀವನದಿಂದಲಾದರೂ ಏನು ಪ್ರಯೋಜನ? ರೋಷವಿಲ್ಲದವರಿಗೆ ಯಾವ ಲೋಕಗಳು ಇವೆಯೋ ಅವುಗಳು ಶತ್ರುಗಳಿಗಾಗಲಿ. ಧೈರ್ಯಶಾಲಿಗಳಿಗೆ ಯಾವ ಲೋಕವಿದೆಯೋ ಅವು ನಮ್ಮ ಸುಹೃಜ್ಜನರಿಗೆ ಉಂಟಾಗಲಿ.
ಭೃತ್ಯೈರ್ವಿಹೀಯಮಾನಾನಾಂ ಪರಪಿಂಡೋಪಜೀವಿನಾಮ್ |
ಕೃಪಣಾನಾಮನಾಥಾನಾಂ ಮಾ ವೃತ್ತಿಮನುವರ್ತಿಥಾಃ ॥45॥
ಭೃತ್ಯರಿಂದ ರಹಿತರಾದ, ಇನ್ನೊಬ್ಬರ ಅನ್ನವನ್ನು ಉಪಜೀವಿಸುವಂತಹ ಕೃಪಣರ ಮತ್ತು ಅನಾಥರ ಜೀವನ ಕ್ರಮವನ್ನು ನೀನು ಅನುಸರಿಸಬೇಡ.
ಅನು ತ್ವಾಂ ತಾತ ಜೀವಂತು ಬ್ರಾಹ್ಮಣಾಃ ಸುಹೃದಸ್ತಥಾ |
ಪರ್ಜನ್ಯಮಿವ ಭೂತಾನಿ ದೇವಾ ಇವ ಶತಕ್ರತುಮ್ ॥46॥
ಎಲೈ ಪ್ರೀತಿಪಾತ್ರನೇ, ಎಲ್ಲ ಪ್ರಾಣಿಗಳೂ ಮಳೆಯನ್ನು ಉಪಜೀವಿಸುವಂತೆ, ಎಲ್ಲ ದೇವತೆಗಳೂ ಇಂದ್ರನನ್ನು ಉಪಜೀವಿಸುವಂತೆ, ಬ್ರಾಹ್ಮಣರು ಮತ್ತು ಸುಹೃಜ್ಜನರು ನಿನ್ನನ್ನು ಉಪಜೀವಿಸಿಕೊಂಡು ಬಾಳಲಿ.
ಯಮಾಜೀವಂತಿ ಪುರುಷಂ ಸರ್ವಭೂತಾನಿ ಸೃಂಜಯ |
ಪಕ್ವಂ ದ್ರುಮಮಿವಾಸಾದ್ಯ ತಸ್ಯ ಜೀವಿತಮರ್ಥವತ್ ॥47॥
ಎಲೈ ಸೃಂಜಯನೇ, ಪಕ್ವವಾದ ಹಣ್ಣಿನಿಂದ ಕೂಡಿದ ಮರದಂತೆ ಇರುವ ಯಾವನನ್ನು ಎಲ್ಲರೂ ಆಶ್ರಯಿಸಿ ಜೀವಿಸುತ್ತಾರೆಯೋ ಅವನ ಜೀವನವು ಸಾರ್ಥಕವಾದುದು.
ಯಸ್ಯ ಶೂರಸ್ಯ ವಿಕ್ರಾಂತೈರ್ವರ್ಧಂತೇ ಬಾಂಧವಾಃ ಸುಖಮ್ |
ತ್ರಿದಶಾ ಇವ ಶಕ್ರಸ್ಯ ಸಾಧು ತಸ್ಯೇಹ ಜೀವಿತಮ್ ॥48॥
ಇಂದ್ರನ ಪರಾಕ್ರಮದಿಂದ ದೇವತೆಗಳು ಸುಖವನ್ನು ಹೊಂದಿದಂತೆ, ಯಾವ ಶೂರನ ಪರಾಕ್ರಮದಿಂದ ಬಂಧುಗಳ ಸುಖವು ಹೆಚ್ಚಾಗುತ್ತದೆಯೋ ಅಂತಹವನ ಜೀವನವು ಸರಿಯಾದ ಜೀವನ.
ಸ್ವಬಾಹುಬಲಮಾಶ್ರಿತ್ಯ ಯೋ ಹಿ ಜೀವತಿ ಮಾನವಃ |
ಸ ಲೋಕೇ ಲಭತೇ ಕೀರ್ತಿಂ ಪರತ್ರ ಚ ಶುಭಾಂ ಗತಿಮ್ ॥49॥
ಯಾವ ಮನುಷ್ಯನು ತನ್ನ ಬಾಹುಬಲದಿಂದ ಜೀವಿಸುತ್ತಾನೆಯೋ ಅವನು ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ

ಶುಭಗತಿಯನ್ನೂ ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಾತ್ರಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *

ನೂರ ಮೂವತ್ಮೂರನೆಯ ಅಧ್ಯಾಯ
ಸೃಂಜಯನಿಗೆ ತಾಯಿಯಾದ ವಿದುಲೆಯ ಉಪದೇಶ
ವಿದುಲಾ
ಅಥೈತಸ್ಯಾಮವಸ್ಥಾಯಾಂ ಪೌರುಷಂ ಹಾತುಮಿಚ್ಛಸಿ |
ನಿಹೀನಸೇವಿತಂ ಮಾರ್ಗಂ ಗಮಿಷ್ಯಸ್ಯಚಿರಾದಿವ ॥1॥
ವಿದುಲಾ ಇನ್ನು ಒಂದು ಪಕ್ಷ, ಈ ಪರಿಸ್ಥಿತಿಯಲ್ಲಿ ನೀನು ಪರಾಕ್ರಮವನ್ನು ತ್ಯಜಿಸಿದರೆ ಶೀಘ್ರವಾಗಿ ನೀಚಜನರು ಸೇವಿಸಿದ ಮಾರ್ಗವನ್ನು ಹೊಂದುವಿ.
ಯೋ ಹಿ ತೇಜೋ ಯಥಾಶಕ್ತಿ ನ ದರ್ಶಯತಿ ವಿಕ್ರಮಾತ್ |
ಕ್ಷತ್ರಿಯೋ ಜೀವಿತಾಕಾಂಕ್ಷೀ ಸ್ತೇನ ಇತ್ಯೇವ ತಂ ವಿದುಃ ॥2॥
ಬದುಕಲು ಬಯಸುವ ಯಾವ ಕ್ಷತ್ರಿಯನು ಪರಾಕ್ರಮವನ್ನು ಮಾಡಿ, ಸಾಧ್ಯವಾದಷ್ಟು ತನ್ನ ಸಾಮರ್ಥ್ಯವನ್ನು ತೋರಿಸುವುದಿಲ್ಲವೋ ಅವನನ್ನು ಕಳ್ಳನೆಂದೇ ತಿಳಿಯುತ್ತಾರೆ.
ಅರ್ಥವಂತ್ಯುಪಪನ್ನಾನಿ ವಾಕ್ಯಾನಿ ಗುಣವಂತಿ ಚ |
ನೈವ ಸಂಪ್ರಾಪ್ನುವಂತಿ ತ್ವಾಂ ಮುಮೂರ್ಷುಮಿವ ಭೇಷಜಮ್ ॥3॥
ಅಂತಹ ಕ್ಷತ್ರಿಯನಿಗೆ ಅರ್ಥಪೂರ್ಣವಾದ, ಯುಕ್ತಿಯುಕ್ತವಾದ ಗುಣದಿಂದ ಕೂಡಿದ ಮಾತುಗಳು ಮರಣವು ಸಮೀಪಿಸಿದ ವ್ಯಕ್ತಿಗೆ ಔಷಧಿಗಳಂತೆ ತಲುಪುವುದೇ ಇಲ್ಲ (ತಮ್ಮ ಕಾರ್ಯವನ್ನು ಮಾಡುವುದಿಲ್ಲ).
ಸಂತಿ ವೈ ಸಿಂಧುರಾಜಸ್ಯ ಸಂತುಷ್ಟಾ ಬಹವೋ ಜನಾಃ |
ದೌರ್ಬಲ್ಯಾದಾಸತೇ ಗೂಢಾ ವ್ಯಸನೌಘಪ್ರತೀಕ್ಷಿಣಃ ॥4॥
ಸಿಂಧುರಾಜನ ಬಳಿಯಲ್ಲಿಯೂ ಅನೇಕ ಜನರಿದ್ದಾರೆ. ತಮ್ಮ ದೌರ್ಬಲ್ಯದಿಂದ ರಾಜನ ವ್ಯಸನವನ್ನು ನಿರೀಕ್ಷಿಸುತ್ತಾ ಅವರು ಗೂಢರಾಗಿದ್ದಾರೆ.
ಸಹಾಯೋಪಚಯಂ ದೃಷ್ಟ್ವಾ ಆಗಚ್ಛೇಯುಸ್ತತಸ್ತತಃ |
ಅನುತುಷ್ಯೇಯುರಪರೇ ಪಶ್ಯಂತಸ್ತವ ಪೌರುಷಮ್ ॥5॥
ನಿನಗೆ ಸಹಾಯವು ದೊರಕಿದೆ ಎಂದು ತಿಳಿದರೆ ಅವರು ಅಲ್ಲಲ್ಲಿಂದ ನಿನ್ನ ಬಳಿಗೆ ಬಂದಾರು. ಇನ್ನು ಕೆಲವರು ನಿನ್ನ ಪರಾಕ್ರಮವನ್ನು ನೋಡಿ ಸಂತೋಷಪಡುವರು.
ತೈಃ ಕೃತ್ವಾ ಸಹಸಾ ಯಾತ್ರಾಂ ಗಿರಿದುರ್ಗಾಲಯೈಶ್ಚರ |
ಕಾಲೇ ವ್ಯಸನಮಾಕಾಂಕ್ಷನ್ ನೈವಾಯಮಜರಾಮರಃ ॥6॥
ಗಿರಿ-ದುರ್ಗಗಳಲ್ಲಿ ಗೂಢವಾಗಿರುವ ಅಂತಹವರ ಜೊತೆಯಲ್ಲಿ ಸೇರಿ ನೀನು ಕಾಲಕ್ರಮದಲ್ಲಿ ಅವನ ದುರವಸ್ಥೆಯನ್ನು ಬಯಸುತ್ತಾ ದಂಡೆತ್ತಿಹೋಗುವವನಾಗು. ಸಿಂಧುರಾಜನು ಅಜರಾಮರನಲ್ಲ.
ಸೃಂಜಯೋ ನಾಮತಶ್ಚ ತ್ವಂ ನ ಚ ಪಶ್ಯಾಮ ತತ್ ತ್ವಯಿ |
ಅನ್ವರ್ಥನಾಮಾ ಭವ ಮೇ ಪುತ್ರ ಮಾ ವ್ಯರ್ಥನಾಮಕಃ ॥7॥
ನಿನಗೆ ಸೃಂಜಯ ಎಂಬ ಹೆಸರಿದೆ. ಸೃ ಎಂದರೆ ಶತ್ರುಗಳ ಸಮೀಪಕ್ಕೆ ಹೋಗಿ, ಜಯ ಎಂದರೆ ಜಯಿಸುತ್ತಾನೆ ಎಂದು ಅರ್ಥ. ಆದರೆ ಆ ಹೆಸರಿನ ಅರ್ಥವು ನಿನ್ನಲ್ಲಿ ಕಾಣುತ್ತಿಲ್ಲ. ಎಲೈ ಪುತ್ರನೇ, ಸಾರ್ಥಕವಾದ ಹೆಸರನ್ನು ಹೊಂದುವವನಾಗು. ನಿನ್ನ ಹೆಸರು ವ್ಯರ್ಥವಾಗದಿರಲಿ.
ಸಮ್ಯಗ್ದೃಷ್ಟಿರ್ಮಹಾಪ್ರಾಜ್ಞೋ ಬಾಲಂ ತ್ವಾಂ ಬ್ರಾಹ್ಮಣೋಽಬ್ರವೀತ್ |
ಅಯಂ ಪ್ರಾಪ್ಯ ಮಹತ್ ಕೃಚ್ಛ್ರಂ ಪುನರ್ವೃದ್ಧಿಂ ಗಮಿಷ್ಯತಿ ॥8॥
ಒಳ್ಳೆಯ ಭವಿಷ್ಯದೃಷ್ಟಿಯುಳ್ಳವನೂ, ಮಹಾಪ್ರಾಜ್ಞನೂ ಆದ ಒಬ್ಬ ಬ್ರಾಹ್ಮಣನು, ನೀನಿನ್ನೂ ಬಾಲಕನಿರುವಾಗ ಇವನು ದೊಡ್ಡ ಕಷ್ಟಕ್ಕೆ ಸಿಲುಕಿ ಪುನಃ ಅಭಿವೃದ್ಧಿಯನ್ನು ಹೊಂದುವವನು ಎಂದು ಹೇಳಿದನು.
ತಸ್ಯ ಸ್ಮರಂತೀ ವಚನಮಾಶಂಸೇ ವಿಜಯಂ ತವ |
ತಸ್ಮಾತ್ ತಾತ ಬ್ರವೀಮಿ ತ್ವಾಂ ವಕ್ಷ್ಯಾಮಿ ಚ ಪುನಃ ಪುನಃ ॥9॥
ಆ ಮಾತನ್ನು ಸ್ಮರಿಸಿ ನಿನ್ನ ವಿಜಯವನ್ನು ಬಯಸುತ್ತಿದ್ದೇನೆ. ಆದ್ದರಿಂದ ಪ್ರೀತಿಪಾತ್ರನೇ, ನಿನಗೆ ಹೇಳುತ್ತಿದ್ದೇನೆ. ಮುಂದೆಯೂ ಪುನಃ ಪುನಃ ಹೇಳುವೆನು.
ಯಸ್ಯ ಯುದ್ಧಾರ್ಥಮುದ್ಯುಕ್ತಾ ಭವತ್ಯವಹಿತಾ ಮತಿಃ |
ತಸ್ಯಾರ್ಥಸಿದ್ಧಿರ್ನಿಯತಾ ನಯೇಷ್ವರ್ಥಾನುಸಾರಿಣಃ ॥10॥
ಯಾವನು ಅರ್ಥಾನುಸಾರಿಯಾದ ನೀತಿಯನ್ನು ಅನುಸರಿಸಿ, ಯುದ್ಧವನ್ನು ಮಾಡಲು ಉದ್ಯುಕ್ತವಾದ ಮತ್ತು ಏಕಾಗ್ರವಾದ

ಬುದ್ಧಿಯನ್ನು ಹೊಂದಿರುತ್ತಾನೆಯೋ ಅವನಿಗೆ ನಿಶ್ಚಯವಾಗಿ ಅರ್ಥಸಿದ್ಧಿ ಉಂಟಾಗುವುದು.
ಸಮೃದ್ಧಿರಸಮೃದ್ಧಿರ್ವಾ ಪೂರ್ವೇಷಾಂ ಮಮ ಸೃಂಜಯ |
ಏವಂ ವಿದ್ವಾನ್ ಯುದ್ಧಮನಾ ಭವ ಮಾ ಪ್ರತ್ಯುಪಾಹರ ॥11॥
ಎಲೈ ಸೃಂಜಯನೇ, ನನ್ನ ಪೂರ್ವಜರಿಗೆ ಸಮೃದ್ಧಿ ಇರಲಿ ಅಥವಾ ಇಲ್ಲದಿರಲಿ ಎಂದು ತಿಳಿದು ಯುದ್ಧದಲ್ಲಿ ಉದ್ಯುಕ್ತನಾಗಬೇಕು. ಹಿಂದೆ ಸರಿಯಬೇಡ.
ನಾತಃ ಪಾಪೀಯಸೀಂ ಕಾಂಚಿದವಸ್ಥಾಂ ಶಂಬರೋಽಬ್ರವೀತ್ |
ಯಸ್ಯ ನೈವೋದ್ಯತಃ ಪ್ರಾತರ್ಭೋಜನಂ ಪ್ರತಿದೃಶ್ಯತೇ ॥12॥
ಯಾವನು ಪ್ರಾತಃಕಾಲದಲ್ಲಿ ಎದ್ದು ಈ ದಿನದ ಭೋಜನವಿಲ್ಲ ಎಂದು ಕಾಣುತ್ತಾನೆಯೋ ಅದಕ್ಕಿಂತ ದುರವಸ್ಥೆಯಿಲ್ಲ ಎಂದು ಶಂಬರನು ಹೇಳಿದ್ದಾನೆ.
ಪತಿಪುತ್ರವಧಾದೇತತ್ ಪರಮಂ ದುಃಖಮಬ್ರವೀತ್ |
ದಾರಿದ್ರ್ಯಮಿತಿ ಯತ್ ಪ್ರೋಕ್ತಂ ಪರ್ಯಾಯಮರಣಂ ಹಿ ತತ್ ॥13॥
ಪತಿ-ಪುತ್ರರ ವಧೆಗಿಂತಲೂ ಇದು ದೊಡ್ಡ ದುಃಖವೆಂದು ಹೇಳಿದ್ದಾನೆ. ದಾರಿದ್ರ್ಯವೆಂಬುದೇನಿದೆಯೋ ಅದು ಇನ್ನೊಂದು ಮರಣವೇ ಸರಿ.
ಅಹಂ ಮಹಾಕುಲೇ ಜಾತಾ ಹ್ರದಾದ್ ಹ್ರದಮಿವಾಗತಾ |
ಈಶ್ವರೀ ಸರ್ವಕಲ್ಯಾಣೀ ಭರ್ತ್ರಾ ಪರಮಪೂಜಿತಾ ॥14॥
ದೊಡ್ಡ ಕುಲದಲ್ಲಿ ಜನಿಸಿದ ನಾನು, ಒಂದು ಸರೋವರದಿಂದ ಇನ್ನೊಂದು ಸರೋವರಕ್ಕೆ ಬಂದಂತೆ ನಿನ್ನ ತಂದೆಯ ಮನೆಯನ್ನು ಸೇರಿ, ಪ್ರಭುತ್ವವನ್ನು ಹೊಂದಿ ಎಲ್ಲಾ ಶುಭಪದಾರ್ಥಗಳಿಂದ ಕೂಡಿದವಳಾಗಿ, ಪತಿಯಾದ ನಿನ್ನ ತಂದೆಯಿಂದ ಬಹಳ ಪೂಜಿತಳಾಗಿದ್ದೆ.
ಮಹಾರ್ಹಮಾಲ್ಯಾಭರಣಾಂ ಸುಮೃಷ್ಟಾಂಬರವಾಸಿನೀಮ್ |
ಪುರಾ ದೃಷ್ಟ್ವಾ ಸುಹೃದ್ವರ್ಗೋ ಮಾಮಪಶ್ಯತ್ ಸುದುಃಖಿತಾಮ್ ॥15॥
ಬಹಳ ಬೆಲೆಬಾಳುವ ಮಾಲ್ಯಾಭರಣಗಳನ್ನು ಧರಿಸಿ, ಶ್ರೇಷ್ಠವಾದ ಶುದ್ಧವಾದ ವಸ್ತ್ರಗಳನ್ನು ಉಡುತ್ತಿರುವ ನನ್ನನ್ನು ಹಿಂದೆ ನೋಡಿದ ಸುಹೃಜ್ಜನರು ಅನಂತರ ದುಃಖದಿಂದ ಕೂಡಿದ ನನ್ನನ್ನು ನೋಡಿದರು.
ಯದಾ ಮಾಂ ಚೈವ ಭಾರ್ಯಾಂ ಚ ದ್ರಷ್ಟಾಸಿ ಭೃಶದುರ್ಬಲೇ |
ನ ತದಾ ಜೀವಿತೇನಾರ್ಥೋ ಭವಿತಾ ತವ ಸೃಂಜಯ ॥16॥
ಎಲೈ ಸೃಂಜಯನೇ, ನಾನೂ ಮತ್ತು ನಿನ್ನ ಪತ್ನಿಯೂ ಬಹಳ ದುರ್ಬಲರಾಗಿರುವುದನ್ನು ನೋಡಿದರೆ ನೀನು ಬದುಕುವುದರಿಂದ ಯಾವ ಪ್ರಯೋಜನವೂ ಇಲ್ಲ.
ದಾಸಕರ್ಮಕರಾನ್ ಭೃತ್ಯಾನ್ ಆಚಾರ್ಯರ್ತ್ವಿಕ್‌ಪುರೋಹಿತಾನ್ |
ಅಭೃತ್ಯಾಽಸ್ಮಾನ್ ಪ್ರಜಹತೋ ದೃಷ್ಟ್ವಾ ಕಿಂ ಜೀವಿತೇನ ತೇ ॥17॥
ದಾಸಕರ್ಮವನ್ನು ಮಾಡುವ ಸೇವಕರನ್ನು ಮತ್ತು ಆಚಾರ್ಯ, ಋತ್ವಿಕ್, ಪುರೋಹಿತರನ್ನು ನಾವು ಪೋಷಿಸಿದೆವು. ಅವರು ನಮ್ಮನ್ನು ಬಿಡುವುದನ್ನು ನೋಡುವ ನಿನಗೆ ಜೀವನದಿಂದ ಏನು ಪ್ರಯೋಜನ?
ಯದಿ ಕೃತ್ಯಂ ನ ಪಶ್ಯಾಮಿ ತವಾದ್ಯಾಹಂ ಯಥಾ ಪುರಾ |
ಶ್ಲಾಘನೀಯಂ ಯಶಸ್ಯಂ ಚ ಕಾ ಶಾಂತಿರ್ಹೃದಯಸ್ಯ ಮೇ ॥18॥
ಹಿಂದೆ ನಿನಗೆ ಶ್ಲಾಘನೀಯವೂ, ಕೀರ್ತಿಕರವೂ ಆದ ಕರ್ತವ್ಯವಿದ್ದಂತೆ ಈ ದಿನ ನಿನಗೆ ಅಂತಹ ಕರ್ತವ್ಯವು ಕಾಣದಿದ್ದರೆ ನನ್ನ ಮನಸ್ಸಿಗೆ ಹೇಗೆ ಶಾಂತಿ ಉಂಟಾಗುತ್ತದೆ?
ನೇತಿ ಚೇದ್ ಬ್ರಾಹ್ಮಣಾನ್ ಬ್ರೂಯಾಂ ದೀರ್ಯೇತ ಹೃದಯಂ ಮಮ|
ನ ಹ್ಯಹಂ ನ ಚ ಮೇ ಭರ್ತಾ ನೇತಿ ಬ್ರಾಹ್ಮಣಮುಕ್ತವಾನ್ ॥19॥
ಬ್ರಾಹ್ಮಣರಿಗೆ ಇಲ್ಲ ಎಂದು ಹೇಳುವುದಾದರೆ ನನ್ನ ಹೃದಯವು ಬಿರಿದು ಹೋಗುತ್ತದೆ. ನಾನಾಗಲೀ, ನನ್ನ ಪತಿಯಾಗಲೀ ಎಂದೂ ಬ್ರಾಹ್ಮಣರಿಗೆ ಇಲ್ಲ ಎಂದು ಹೇಳಲಿಲ್ಲ.
ವಯಮಾಶ್ರಯಣೀಯಾಃ ಸ್ಮ ನಾಶ್ರಿತಾರಃ ಪರಸ್ಯ ಚ |
ಅನ್ಯಾನಾಶ್ರಿತ್ಯ ಜೀವಂತೀ ಪರಿತ್ಯಕ್ಷ್ಯಾಮಿ ಜೀವಿತಮ್ ॥20॥
ನಮ್ಮನ್ನು ಇನ್ನೊಬ್ಬರು ಆಶ್ರಯಿಸಬೇಕೇ ಹೊರತು ನಾವು ಇನ್ನೊಬ್ಬರನ್ನು ಆಶ್ರಯಿಸಬಾರದು. ಇನ್ನೊಬ್ಬರನ್ನು ಆಶ್ರಯಿಸಿ ಜೀವಿಸುವುದಾದರೆ ನಾನು ಪ್ರಾಣವನ್ನು ಬಿಡುವೆನು.
ಅಪಾರೇ ಭವ ನಃ ಪಾರಮ್ ಅಪ್ಲವೇ ಭವ ನಃ ಪ್ಲವಃ |
ಕುರುಷ್ವ ಸ್ಥಾನಮಸ್ಥಾನೇ ಮೃತಾನ್ ಸಂಜೀವಯಸ್ವ ನಃ ॥21॥
ಸರ್ವೇ ತೇ ಶತ್ರವಃ ಸಹ್ಯಾ ನೋ ಚೇಜ್ಜೀವಿತುಮಿಚ್ಛಸಿ ॥22॥
ದಡವೇ ಕಾಣದ ಈ ಸಂಕಟದಲ್ಲಿ ನೀನು ನಮಗೆ ದಡವಾಗು. ದೋಣಿ ಇಲ್ಲದ ನಮಗೆ ನೀನು ದೋಣಿಯಾಗು. ಆಶ್ರಯವಿಲ್ಲದಿರುವ ಕಾಲದಲ್ಲಿ ನೀನು ಆಶ್ರಯನಾಗು. ಮೃತರಾದ ನಮ್ಮನ್ನು ಬದುಕಿಸು. ನೀನು ಹೀಗೆ ಬದುಕುವ ಇಚ್ಛೆಯನ್ನು ತೊರೆದರೆ ಶತ್ರುಗಳು ನಿನಗೆ ಸಹ್ಯರಾಗುತ್ತಾರೆ (ಅಧೀನರಾಗುತ್ತಾರೆ).
ಅಥ ಚೇದೀದೃಶೀಂ ವೃತ್ತಿಂ ಕ್ಲೀಬಮಭ್ಯವಪದ್ಯಸೇ |
ನಿರ್ವಿಣ್ಣಾತ್ಮಾ ಹತಮನಾ ಮುಂಚೇಮಾಂ ಜೀವಿಕಾಂ ಪುನಃ ॥23॥

ನೀನು ಹೀಗೆ ನಪುಂಸಕರಿಗೆ ಯೋಗ್ಯವಾದ ನಡತೆಯನ್ನು ಅನುಸರಿಸುವುದಾದರೆ ಮನೋಬಲವಿಲ್ಲದೆ ನಿರ್ವಿಣ್ಣನಾಗಿ ಈ ಪ್ರಾಣವನ್ನು ಬಿಡು.
ಏಕಶತ್ರುವಧೇನೈವ ಶೂರೋ ಗಚ್ಛತಿ ವಿಶ್ರುತಿಮ್ ॥24॥
ಇಂದ್ರೋ ವೃತ್ರವಧೇನೈವ ಮಹೇಂದ್ರಃ ಸಮಪದ್ಯತ |
ಮಾಹೇಂದ್ರಂ ಚ ಗ್ರಹಂ ಲೇಭೇ ಲೋಕಾನಾಂ ಚೇಶ್ವರೋಽಭವತ್ ॥
ಒಬ್ಬ ಶತ್ರುವಿನ ವಧೆಯನ್ನು ಮಾಡಿದರೂ ಶೂರನಾದವನು ಕೀರ್ತಿಯನ್ನು ಪಡೆಯುತ್ತಾನೆ. ಇಂದ್ರನು ವೃತ್ರನೊಬ್ಬನನ್ನು ಕೊಂದುದರಿಂದಲೇ ಮಹೇಂದ್ರನಾದನು ಮತ್ತು ಯಜ್ಞಗಳಲ್ಲಿ ಯಜ್ಞಭಾಗವನ್ನೂ ಲೋಕಗಳಲ್ಲಿ ಪ್ರಭುತ್ವವನ್ನೂ ಪಡೆದನು.
ನಾಮ ವಿಶ್ರಾವ್ಯ ಸಂಖ್ಯೇ ವೈ ಶತ್ರೂನಾಹೂಯ ದಂಸಿತಾನ್ |
ಸೇನಾಗ್ರಂ ಚಾಪಿ ವಿದ್ರಾವ್ಯ ಹತ್ವಾ ಶತ್ರುಂ ಪರಂತಪಃ ॥26॥
ಯದೈವ ಲಭತೇ ವೀರಃ ಸುಯುದ್ಧೇನ ಮಹದ್ಯಶಃ |
ತದೈವ ಪ್ರವ್ಯಥಂತೇಽಸ್ಯ ಶತ್ರವೋ ವಿನಮಂತಿ ಚ ॥27॥
ಯುದ್ಧದಲ್ಲಿ ತನ್ನ ಹೆಸರನ್ನು ಘೋಷಿಸುತ್ತಾ, ಸನ್ನದ್ಧರಾದ ಶತ್ರುಗಳನ್ನು ಆಹ್ವಾನಿಸಿ, ಅವರ ಸೈನ್ಯದ ಮುಂಭಾಗವನ್ನು ಭೇದಿಸಿ, ಪರಂತಪರಾದ ಶತ್ರುಗಳನ್ನು ಸಂಹಾರ ಮಾಡಿ, ವೀರನಾಗಿ ಒಳ್ಳೆಯ ಯುದ್ಧವನ್ನು ಮಾಡಿ, ಯಾವಾಗ ಒಳ್ಳೆಯ ಯಶಸ್ಸನ್ನು ಸಂಪಾದಿಸುತ್ತಾನೆಯೋ ಆಗಲೇ ಅವನ ಶತ್ರುಗಳು ದುಃಖಿತರಾಗಿ ಅವನಿಗೆ ಬಾಗುತ್ತಾರೆ.
ತ್ಯಕ್ತ್ವಾತ್ಮಾನಂ ರಣೇ ದಕ್ಷಂ ಶೂರಂ ಪುರುಷಮಾನಿನಮ್ |
ಅವಶಾಃ ಪೂಜಯಂತಿ ಸ್ಮ ಸರ್ವಕಾಮಸಮೃದ್ಧಿಭಿಃ ॥28॥
ಯಾವನು ತನ್ನ ಪರಾಕ್ರಮದಲ್ಲಿ ನಂಬಿಕೆಯುಳ್ಳವನಾಗಿ, ಪ್ರಾಣದ ಹಂಗನ್ನು ತೊರೆದು, ಯುದ್ಧದಲ್ಲಿ ದಕ್ಷನೂ ಮತ್ತು ಶೂರನೂ ಆಗಿರುತ್ತಾನೆಯೋ ಅಂತಹವನನ್ನು ಅವಶರಾಗಿ ಸರ್ವಕಾಮಗಳಿಂದಲೂ ಮತ್ತು ಸಮೃದ್ಧಿಗಳಿಂದಲೂ ಪೂಜಿಸುತ್ತಾರೆ.
ರಾಜ್ಯಸ್ಯಾಪ್ಯಸ್ಯ ವಿಭ್ರಂಶಃ ಸಂಶಯೋ ಜೀವಿತಸ್ಯ ವಾ |
ಪ್ರಲಬ್ಧಸ್ಯ ಹಿ ಶತ್ರೋರ್ನಿರ್ವೇಶಂ ಕುರ್ವಂತಿ ಸಾಧವಃ ॥29॥
ರಾಜ್ಯದ ವಿಭ್ರಂಶವೇ ಆಗಿರಲಿ ಅಥವಾ ಜೀವನದ ಸಂಶಯವೇ ಇರಲಿ, ಸಜ್ಜನರಾದವರು ವಂಚಕನಾದ ಶತ್ರುವಿಗೆ ಅಪಕಾರವನ್ನು ಮಾಡುತ್ತಾರೆ.
ಸ್ವರ್ಗದ್ವಾರೋಪಮಂ ರಾಜ್ಯಮಥವಾಽಪ್ಯಮೃತೋಪಮಮ್ |
ಭುಂಕ್ಷ್ವ ಯುದ್ಧೇನ ತೇ ಶತ್ರೂನ್ ಜಿತ್ವಾ ತು ರಣಮೂರ್ಧನಿ ॥30॥
ಸಂಗ್ರಾಮಶಿರಸ್ಸಿನಲ್ಲಿ ಯುದ್ಧವನ್ನು ಮಾಡಿ ನಿನ್ನ ಶತ್ರುಗಳನ್ನು ಜಯಿಸಿ, ಸ್ವರ್ಗದ್ವಾರದಂತಿರುವ ಅಥವಾ ಮೋಕ್ಷದಂತೆ ಇರುವ ರಾಜ್ಯವನ್ನು ಭೋಗಿಸು.
ನಿಯಚ್ಛನ್ನಿತರಾನ್ ವರ್ಣಾನ್ ವಿನಯನ್ ಸರ್ವದುಷ್ಕೃತಾನ್ |
ರುದ್ಧಮೇಕಾಯನೇ ಮತ್ವಾ ಪತೋಲ್ಮೂಕ ಇವಾರಿಷು ॥31॥
ಇತರ ವರ್ಣಗಳನ್ನು ಅವರ ಧರ್ಮಗಳಲ್ಲಿ ನಿಯಂತ್ರಿಸುತ್ತಾ, ಅನ್ಯಾಯ ಮಾಡಿದವರನ್ನು ಶಿಕ್ಷಿಸುತ್ತಾ, ಒಬ್ಬನೇ ಹೋಗುವ ಕಾಲುದಾರಿಯಲ್ಲಿ ಸಿಕ್ಕಿಕೊಂಡವನಂತೆ ಶತ್ರುಗಳ ಮೇಲೆ ಬೆಂಕಿಯ ಕೊಳ್ಳಿಯಂತೆ ಎರಗುವವನಾಗು.
ಜಹಿ ಶತ್ರೂನ್ ರಣೇ ರಾಜನ್ ಸ್ವಧರ್ಮಮನುಪಾಲಯ |
ಮಾ ತ್ವಾ ಪಶ್ಯೇತ್ ಸುಕೃಪಣಂ ಶತ್ರುಃ ಶ್ರೀಮಾನ್ ಕದಾಚನ ॥32॥
ಎಲೈ ರಾಜನೇ, ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ನಿನ್ನ ಸ್ವಧರ್ಮವನ್ನು ಪಾಲಿಸು. ಕಾರ್ಪಣ್ಯದಲ್ಲಿರುವ ನಿನ್ನನ್ನು ಸಂಪತ್ತಿನಿಂದ ಕೂಡಿದ ನಿನ್ನ ಶತ್ರುವು ಎಂದೂ ನೋಡದಿರಲಿ.
ಅಸ್ಮದೀಯೈಶ್ಚ ಶೋಚದ್ಭಿಃ ನಂದದ್ಭಿಶ್ಚ ಪರೈರ್ಭೃಶಮ್ |
ಅಪಿ ತ್ವಾಂ ನಾನುಪಶ್ಯೇಯಂ ದೀನದೀನಮಿವ ಸ್ಥಿತಮ್ ॥33॥
ನಮ್ಮವರು ಶೋಕಪಡುತ್ತಿರುವಾಗ, ಶತ್ರುಗಳು ಬಹಳವಾಗಿ ಸಂತೋಷಪಡುತ್ತಿರುವಾಗ ದೀನದೀನನಾಗಿರುವ ನಿನ್ನನ್ನು ನಾನು ನೋಡಲಾರೆ.
ಉಷ್ಯ ಸೌವೀರಕನ್ಯಾಭಿಃ ಶ್ಲಾಘ್ಯಃ ಸ್ವಾರ್ಥೈರ್ಯಥಾ ಪುರಾ |
ಮಾ ಚ ಸೈಂಧವಕನ್ಯಾನಾಮಪಹಾಸವಶಂ ಗಮಃ ॥34॥
ಹಿಂದೆ ತಮ್ಮ ಅಭೀಷ್ಟಗಳನ್ನು ಹೊಂದಿದ ಸೌವೀರಕನ್ಯೆಯರ ಜೊತೆಯಲ್ಲಿ ವಾಸ ಮಾಡಿ, ಅವರಿಂದ ಶ್ಲಾಘನೀಯನಾಗಿ, ಈಗ ಸಿಂಧುದೇಶದ ಕನ್ಯೆಯರ ಅಪಹಾಸಕ್ಕೆ ಗುರಿಯಾಗಬೇಡ.
ಯುವಾ ರೂಪೇಣ ಸಂಪನ್ನೋ ವಿದ್ಯಯಾಽಭಿಜನೇನ ಚ |
ಕಸ್ತ್ವಾದೃಶೋ ವಿಕುರ್ವೀತ ಯಶಸ್ವೀ ಲೋಕವಿಶ್ರುತಃ ॥35॥
ವೋಢವ್ಯೇ ಧುರ್ಯನಡುವನ್ಮನ್ಯೇ ಮರಣಮೇವ ತತ್ ॥36॥
ಯುವಕನೂ, ರೂಪಸಂಪನ್ನನೂ, ವಿದ್ಯೆಯಿಂದಲೂ, ಕುಲದಿಂದಲೂ ಕೂಡಿದವನೂ, ಲೋಕವಿಶ್ರುತನೂ, ಕೀರ್ತಿವಂತನೂ ಆದ ನಿನ್ನಂತಹ ಯಾವನು ಇಂತಹ ಮನೋವಿಕಾರಕ್ಕೆ ಒಳಗಾದಾನು? ಎತ್ತಿನಂತೆ ಭಾರವನ್ನು ಹೊರಬೇಕಾದಾಗ ಅದನ್ನು ಹೊರದಿದ್ದರೆ ಅದು ಮರಣವೇ ಸರಿ.
ಯದಿ ತ್ವಾಮತ್ರ ಪಶ್ಯಾಮಿ ಪರಸ್ಯ ಪ್ರಿಯವಾದಿನಮ್ |
ಪೃಷ್ಠತೋಽನುವ್ರಜಂತಂ ವಾ ಕಾ ಶಾಂತಿರ್ಹೃದಯಸ್ಯ ಮೇ ॥37॥

ಇನ್ನೊಬ್ಬರಿಗೆ ಹಿತವನ್ನು ನುಡಿಯುತ್ತಾ, ಅವರ ಬೆನ್ನಿನ ಹಿಂದೆ ಅನುಸರಿಸುವ ನಿನ್ನನ್ನು ನೋಡಿದರೆ ನನ್ನ ಮನಸ್ಸಿಗೆ ಯಾವ ಶಾಂತಿ ಉಂಟಾದೀತು?
ನಾಸ್ಮಿನ್ ಜಾತು ಕುಲೇ ಜಾತೋ ಗಚ್ಛೇದ್ ಯೋಽನ್ಯಸ್ಯ ಪೃಷ್ಠತಃ |
ನ ತ್ವಂ ಪರಸ್ಯಾನುಚರಸ್ತಾತ ಜೀವಿತುಮರ್ಹಸಿ ॥38॥
ಈ ಕುಲದಲ್ಲಿ ಹುಟ್ಟಿದ ಯಾವನೂ ಇನ್ನೊಬ್ಬನ ಹಿಂದೆ ನಡೆದು ಹೋಗಲಿಲ್ಲ. ಪ್ರೀತಿಪಾತ್ರನೇ, ಇನ್ನೊಬ್ಬನ ಅನುಚರನಾಗಿ ನೀನು ಜೀವಿಸಬಾರದು.
ಅಹಂ ಹಿ ಕ್ಷತ್ರಹೃದಯಂ ವೇದ ಯದ್ ಭೂರಿ ಶಾಶ್ವತಮ್ |
ಪೂರ್ವೈಃ ಪೂರ್ವತರೈಃ ಪ್ರೋಕ್ತಂ ಪರೈಃ ಪರತರೈರಪಿ ॥39॥
ಶಾಶ್ವತಂ ಚಾವ್ಯಯಂ ಚೈವ ಪ್ರಜಾಪತಿವಿನಿರ್ಮಿತಮ್ ॥40॥
ನಾನು ಬ್ರಹ್ಮದೇವರಿಂದ ನಿರ್ಮಿತವಾದ, ಪೂರ್ವಜನರಿಂದಲೂ, ಅವರ ಪೂರ್ವಜರಿಂದಲೂ ಹೇಳಲ್ಪಟ್ಟ, ಮುಂದಿನವರಿಂದಲೂ ಹೇಳಲ್ಪಡುವ ಶಾಶ್ವತವಾದ, ಅವ್ಯಯವಾದ, ಶ್ರೇಷ್ಠವಾದ ಕ್ಷತ್ರಿಯ ಹೃದಯವನ್ನು ತಿಳಿದಿದ್ದೇನೆ.
ಯೋ ವೈ ಕಶ್ಚಿತ್ ಕುಲೇ ಜಾತಃ ಕ್ಷತ್ರಿಯಃ ಕ್ಷತ್ರಧರ್ಮವಿತ್ |
ಭಯಾದ್ ವೃತ್ತಿಸಮೀಕ್ಷೋ ವಾ ನ ನಮೇದಿಹ ಕಸ್ಯಚಿತ್ ॥41॥
ಕ್ಷತ್ರಿಯ ಕುಲದಲ್ಲಿ ಹುಟ್ಟಿ ಕ್ಷತ್ರಿಯ ಧರ್ಮವನ್ನು ತಿಳಿದ ಯಾವನೂ ಸಹ ಜೀವನದ ಸಲುವಾಗಿ ಭಯದಿಂದ ಇನ್ನೊಬ್ಬನಿಗೆ ಬಗ್ಗಬಾರದು.
ಉದ್ಯಚ್ಛೇದೇವ ನ ನಮೇದ್ ಉದ್ಯಮೋ ಹ್ಯೇವ ಪೌರುಷಮ್ |
ಅಪ್ಯಪರ್ವಣಿ ಭಜ್ಯೇತ ನ ನಮೇದಿಹ ಕಸ್ಯಚಿತ್ ॥42॥
ಪರಾಕ್ರಮವನ್ನು ತೋರಿಸಬೇಕೇ ಹೊರತು ಬಗ್ಗಬಾರದು. ಪರಾಕ್ರಮವೇ ಪೌರುಷದ ಲಕ್ಷಣ. ಗಂಟಿಲ್ಲದ ಕಡೆಯಲ್ಲಾದರೂ ಮುರಿದು ಹೋಗಬೇಕು, ಆದರೆ ಯಾರಿಗೂ ಬಾಗಬಾರದು.
ಮಾತಂಗೋ ಮತ್ತ ಇವ ಚ ಪರೀಯಾತ್ ಸ ಮಹಾಮನಾಃ |
ಬ್ರಾಹ್ಮಣೇಭ್ಯೋ ನಮೇನ್ನಿತ್ಯಂ ಧರ್ಮಾಯೈವ ಚ ಸೃಂಜಯ ॥43॥
ಮದಿಸಿದ ಗಜದಂತೆ ಧೈರ್ಯಶಾಲಿಯಾಗಿ ಶತ್ರುಗಳ ಮೇಲೆ ಎರಗಬೇಕು. ಸೃಂಜಯನೇ, ಬ್ರಾಹ್ಮಣರಿಗೆ ಮತ್ತು ಧರ್ಮಕ್ಕೆ ಮಾತ್ರ ನಮಸ್ಕಾರವನ್ನು ಮಾಡಬೇಕು.
ನಿಯಚ್ಛನ್ನಿತರಾನ್ ವರ್ಣಾನ್ ವಿಮರ್ಶನ್ ಸರ್ವಮುನ್ನತಃ |
ಸಸಹಾಯೋಽಸಹಾಯೋ ವಾ ಯಾವಜ್ಜೀವಂ ತಥಾ ಭವೇತ್ ॥44॥
ಎಲ್ಲ ವರ್ಣದವರನ್ನೂ ನಿಯಂತ್ರಿಸುತ್ತಾ, ಎಲ್ಲವನ್ನೂ ಶ್ರೇಷ್ಠವಾಗಿ ವಿಚಾರ ಮಾಡುತ್ತಾ, ಸಹಾಯವಿರಲಿ ಅಥವಾ ಇಲ್ಲದಿರಲಿ, ಬದುಕಿರುವವರೆಗೆ ಹಾಗೆಯೇ ಬದುಕಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಯಸ್ತ್ರಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರಮೂವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ನಾಲ್ಕನೆಯ ಅಧ್ಯಾಯ
ಕುಂತಿಯಿಂದ ವಿದುಲೋಪಾಖ್ಯಾನದ ಕಥನ.
ಸೃಂಜಯಃ
ಕೃಷ್ಣಾಯಸಸ್ಯ ಬತ ತೇ ಸಂಹತ್ಯಾ ಹೃದಯಂ ಕೃತಮ್ |
ಮಮ ಮಾತಸ್ತ್ವಕರುಣೇ ವೈರಪ್ರಜ್ಞೇಽತ್ಯಮರ್ಷಣೇ ॥1॥
ಸೃಂಜಯ ಎಲೌ ಕರುಣೆ ಇಲ್ಲದವಳೇ, ವೈರದಲ್ಲೇ ಬುದ್ಧಿಯಿದ್ದವಳೇ, ಕ್ರೋಧಶೀಲಳೇ, ತಾಯಿಯೇ, ನಿನ್ನ ಹೃದಯವು ಕಬ್ಬಿಣದ ಗಟ್ಟಿಯಿಂದ ಮಾಡಲ್ಪಟ್ಟಿದೆ.
ಅಹೋ ಕ್ಷತ್ರಸಮಾಚಾರೋ ಯತ್ರ ಮಾಮಿತರಂ ಯಥಾ |
ನಿಯೋಜಯಸಿ ಯುದ್ಧಾಯ ಪರಮಾತೇವ ಮಾಂ ತಥಾ ॥2॥
ಈದೃಶಂ ವಚನಂ ಬ್ರೂಯಾದ್ ಭವತೀ ಪುತ್ರಮೇಕಜಮ್ ॥3॥
ಅಯ್ಯೋ ಕ್ಷತ್ರಿಯರ ನಡವಳಿಕೆಯು ಹೀಗಿರುತ್ತದೆ! ಏಕೆಂದರೆ ನಾನು ಬೇರೆಯವನೋ ಎಂಬಂತೆ ಅಥವಾ ನೀನು ಇನ್ನೊಬ್ಬನ ತಾಯಿಯೋ ಎಂಬಂತೆ ನನ್ನನ್ನು ಯುದ್ಧದಲ್ಲಿ ನಿಯೋಜಿಸುತ್ತಿದ್ದೀಯೆ. ನಿನ್ನ ಏಕಮಾತ್ರ ಪುತ್ರನಾದ ನನಗೆ ನೀನು ಹೀಗೆ ಮಾತನಾಡಲು ಹೇಗೆ ಸಾಧ್ಯವಾಗುತ್ತದೆ?
ಕಿಂ ನು ತೇ ಮಾಮಪಶ್ಯಂತ್ಯಾಃ ಪೃಥಿವ್ಯಾಽಪಿ ಚ ಸರ್ವಯಾ |
ಕಿಮಾಭರಣಕೃತ್ಯೇನ ಕಿಂ ಭೋಗೈರ್ಜೀವಿತೇನ ವಾ ॥4॥
ಮಯಿ ವಾ ಸಂಗರಹತೇ ಪ್ರಿಯಪುತ್ರೇ ವಿಶೇಷತಃ ॥5॥
ನಿನ್ನ ಪ್ರಿಯಪುತ್ರನಾದ ನಾನು ಯುದ್ಧದಲ್ಲಿ ಮರಣವನ್ನು ಹೊಂದಿದರೆ ನನ್ನನ್ನು ಕಾಣದಿರುವ ನಿನಗೆ ಪೃಥಿವಿಯಿಂದಲಾದರೂ

ಏನು ಪ್ರಯೋಜನ? ಆಭರಣಗಳಿಂದ ಏನು ಪ್ರಯೋಜನ? ಭೋಗಗಳಿಂದಾಗಲೀ, ಜೀವನದಿಂದಾಗಲೀ ಏನು ಪ್ರಯೋಜನ?
ವಿದುಲಾ
ಸರ್ವಾರಂಭಾ ಹಿ ವಿದುಷಾಂ ತಾತ ಧರ್ಮಾರ್ಥಕಾರಣಾತ್ |
ತಾನೇವಾಭಿಸಮೀಕ್ಷ್ಯಾಹಂ ಸೃಂಜಯ ತ್ವಾಮಚೂಚುದಮ್ ॥6॥
ವಿದುಲಾ ಎಲೈ ಪ್ರೀತಿಪಾತ್ರನೇ, ವಿವೇಕಿಗಳ ಎಲ್ಲಾ ಪ್ರಯತ್ನಗಳು ಧರ್ಮ ಮತ್ತು ಅರ್ಥಗಳ ಉದ್ದೇಶದಿಂದಾಗಿ ಇರುತ್ತವೆ. ಎಲೈ ಸೃಂಜಯನೇ, ಅವುಗಳನ್ನೇ ಗಮನಿಸಿ ನಾನು ನಿನ್ನನ್ನು ಪ್ರಚೋದಿಸಿದೆ.
ಸುಸಂವೀಕ್ಷ್ಯಃ ಕ್ರಮೋಪೇತೋ ಮುಖ್ಯಃ ಕಾಲೋಽಯಮಾಗತಃ ॥7॥
ಅಸ್ಮಿಂಶ್ಚೇದಾಗತೇ ಕಾಲೇ ಕಾರ್ಯಂ ನ ಪ್ರತಿಪದ್ಯಸೇ |
ಅಸಂಭಾವಿತರೂಪಸ್ತ್ವಂ ಸುನೃಶಂಸಂ ಕರಿಷ್ಯಸಿ ॥8॥
ಕ್ರಮವಾಗಿ ಪ್ರಾಪ್ತವಾಗಿರುವ ಈ ಕಾಲವು ಬಹಳ ಮುಖ್ಯವಾದುದೆಂಬುದನ್ನು ನೀನು ಗಮನಿಸಬೇಕು. ಹೀಗೆ ಪ್ರಾಪ್ತವಾದ ಈ ಕಾಲದಲ್ಲಿ ನೀನು ಸರಿಯಾದ ಕಾರ್ಯವನ್ನು ಮಾಡದಿದ್ದರೆ ಯಾರಿಂದಲೂ ಸತ್ಕರಿಸಲ್ಪಡದೆ, ಎಲ್ಲರಿಂದಲೂ ಅವಮಾನಕ್ಕೆ ಗುರಿಯಾಗುವಿ.
ತಂ ತ್ವಾಮಯಶಸಾ ಸ್ಪೃಷ್ಟಂ ನ ಬ್ರೂಯಾಂ ಯದಿ ಸೃಂಜಯ |
ಪರಿವಾಕ್ ಶಲ್ಯಮಾಹುಸ್ತತ್ವಂ ನಿಃಸಾಮರ್ಥ್ಯಮಹೇತುಕಮ್ ॥9॥
ಎಲೈ ಸೃಂಜಯನೇ, ಅಂತಹ ಅಪಕೀರ್ತಿಯಿಂದ ಸ್ಪೃಷ್ಟನಾದ ನಿನಗೆ ನಾನು ಶಲ್ಯದಂತಹ ನನ್ನ ಮಾತುಗಳಿಂದ ಚುಚ್ಚದಿದ್ದರೆ ನಿನ್ನನ್ನು ಜನರು ನಿಷ್ಕಾರಣವಾಗಿ ಅಪ್ರಯೋಜಕನೆಂದು ಹೇಳುತ್ತಾರೆ.
ಸದ್ಭಿರ್ವಿಗರ್ಹಿತಂ ಮಾರ್ಗಂ ತ್ಯಜ ಮೂರ್ಖನಿಷೇವಿತಮ್ |
ಅವಿದ್ಯಾ ವೈ ಮಹತ್ಯಸ್ತಿ ಯಾಮಿಮಾಂ ಸಂಶ್ರಿತಾಃ ಪ್ರಜಾಃ ॥10॥
ಮೂರ್ಖರು ಅನುಸರಿಸುವ, ಸಜ್ಜನರಿಂದ ನಿಂದಿತವಾದ ಮಾರ್ಗವನ್ನು ಬಿಡು. ಈ ಎಲ್ಲಾ ಪ್ರಜೆಗಳು ಅನುಸರಿಸುವ ಮಾರ್ಗದಲ್ಲಿ ದೊಡ್ಡ ಅಜ್ಞಾನವಿದೆ.
ತವ ಸ್ಯಾದ್ಯದಿ ಸದ್ವೃತ್ತಂ ತೇನ ಮೇ ತ್ವಂ ಪ್ರಿಯೋ ಭವ ॥11॥
ಧರ್ಮಾರ್ಥಗುಣಯುಕ್ತೇನ ನೇತರೇಣ ಕಥಂಚನ |
ದೈವಮಾನುಷಯುಕ್ತೇನ ಸದ್ಭಿರಾಚರಿತೇನ ಚ ॥12॥
ಧರ್ಮಾರ್ಥಸಾಧಕವಾದ, ಸಜ್ಜನರಿಂದ ಆಚರಿಸಲ್ಪಡುವ, ದುರ್ಜನರಿಂದ ಆಚರಿಸಲ್ಪಡದ, ದೈವಾನುಗ್ರಹ ಮತ್ತು ಮನುಷ್ಯ ಪ್ರಯತ್ನದಿಂದ ಕೂಡಿದ ಒಳ್ಳೆಯ ನಡತೆಯನ್ನು ನೀನು ಹೊಂದಿದರೆ ಅದರಿಂದ ನನಗೆ ಪ್ರಿಯನಾಗು.
ಯೋ ಹ್ಯೇವಮವಿನೀತೇನ ರಮತೇ ಪುತ್ರ ನಪ್ತೃಣಾ |
ಅನುತ್ಥಾನವತಾ ಚಾಪಿ ದುರ್ವಿನೀತೇನ ದುರ್ಧಿಯಾ ॥13॥
ರಮತೇ ಯಸ್ತು ಪುತ್ರೇಣ ಮೋಘಂ ತಸ್ಯ ಪ್ರಜಾಫಲಮ್ ॥14॥
ಎಲೈ ಪುತ್ರನೇ, ಯಾವನು ಈ ರೀತಿಯಲ್ಲಿ ಪ್ರಯತ್ನವನ್ನು ಪಡದಿರುವ, ದುರ್ವಿನೀತನೂ, ದುರ್ಬುದ್ಧಿಯೂ ಆದ ಮೊಮ್ಮಗನ ಜೊತೆಯಲ್ಲಿ ಅಥವಾ ಮಗನ ಜೊತೆಯಲ್ಲಿ ಸಂತೋಷದಿಂದ ಇರುತ್ತಾನೆಯೋ ಅವನು ಪ್ರಜೆಗಳನ್ನು ಪಡೆದುದು ವ್ಯರ್ಥವಾಗುತ್ತದೆ.
ಅಕುರ್ವಂತೋ ಹಿ ಕರ್ಮಾಣಿ ಕುರ್ವಂತೋ ನಿಂದಿತಾನಿ ಚ |
ಸುಖಂ ನೈವೇಹ ನಾಮುತ್ರ ಲಭಂತೇ ಪುರುಷಾಧಮಾಃ ॥15॥
ಕರ್ಮವನ್ನೇ ಮಾಡದಿರುವ ಅಥವಾ ನಿಂದಿತಕರ್ಮಗಳನ್ನು ಮಾಡುವ ಪುರುಷಾಧಮರು ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಸುಖವನ್ನು ಹೊಂದುವುದಿಲ್ಲ.
ಯುದ್ಧಾಯ ಕ್ಷತ್ರಿಯಃ ಸೃಷ್ಟಃ ಸೃಂಜಯೇಹ ಜಯಾಯ ಚ |
ಕ್ರೂರಾಯ ಕರ್ಮಣೇ ನಿತ್ಯಂ ಪ್ರಜಾನಾಂ ಪರಿಪಾಲನೇ ॥16॥
ಜಯನ್ ವಾ ವಧ್ಯಮಾನೋ ವಾ ಪ್ರಾಪ್ನೋತೀಂದ್ರಸಲೋಕತಾಮ್ ॥
ಎಲೈ ಸೃಂಜಯನೇ, ಕ್ಷತ್ರಿಯನು ಯುದ್ಧ ಮಾಡಿ ಜಯವನ್ನು ಸಂಪಾದಿಸುವುದಕ್ಕೆ ಸೃಷ್ಟನಾಗಿದ್ದಾನೆ. ಕ್ರೂರಕರ್ಮವನ್ನು ಮಾಡಿ ಅವನು ಪ್ರಜೆಗಳ ಪರಿಪಾಲನೆಯನ್ನು ಮಾಡಲು ಸೃಷ್ಟನಾಗಿದ್ದಾನೆ. ಅವನು ಜಯಿಸಿದರೂ ಅಥವಾ ಮರಣವನ್ನು ಹೊಂದಿದರೂ ಇಂದ್ರಲೋಕವನ್ನು ಹೊಂದುತ್ತಾನೆ.
ನ ಶಕ್ರಭವನೇ ಪುಣ್ಯೇ ದಿವಿ ತದ್ ವಿದ್ಯತೇ ಸುಖಮ್ |
ಯದಮಿತ್ರಾನ್ ವಶೇ ಕೃತ್ವಾ ಕ್ಷತ್ರಿಯಃ ಸುಖಮಶ್ನುತೇ ॥18॥
ಭೂಮಿಯಲ್ಲಿ ಶತ್ರುಗಳನ್ನು ಗೆದ್ದು ವಶಪಡಿಸಿಕೊಂಡು, ಕ್ಷತ್ರಿಯನು ಎಂತಹ ಸುಖವನ್ನು ಪಡುತ್ತಾನೋ ಅಂತಹ ಸುಖವು ಪವಿತ್ರವಾದ ಸ್ವರ್ಗಲೋಕದಲ್ಲಿ ಇಂದ್ರನ ಮನೆಯಲ್ಲಿಯೂ ಇಲ್ಲ.
ಮನ್ಯುನಾ ದಹ್ಯಮಾನೇನ ಪುರುಷೇಣ ತಪಸ್ವಿನಾ |
ನಿಕೃತೇನೇಹ ಬಹುಶಃ ಶತ್ರೂನ್ ಪ್ರತಿಜಿಗೀಷತಾ ॥19॥
ಆತ್ಮಾನಂ ವಾ ಪರಿತ್ಯಜ್ಯ ಶತ್ರುಂ ವಾ ವಿನಿಪಾತ್ಯ ಚ |
ಅತೋಽನ್ಯೇನ ಪ್ರಕಾರೇಣ ಶಾಂತಿರಸ್ಯ ಕುತೋ ಭವೇತ್ ॥20॥
ಶತ್ರುಗಳು ತನಗೆ ಅನೇಕ ಬಾರಿ ಮಾಡಿದ ಅವಮಾನದಿಂದ ಉಂಟಾದ ಕೋಪದಿಂದ ಬೆಂದುಹೋಗುವ ಮತ್ತು ಆ ಕಾರಣಗಳಿಂದ ಶತ್ರುಗಳನ್ನು ಜಯಿಸಲು ಇಚ್ಛಿಸುವ ಪುರುಷನು ದೇಹವನ್ನಾದರೂ ತ್ಯಜಿಸಬೇಕು ಅಥವಾ ಶತ್ರುವನ್ನಾದರೂ ಸಂಹಾರ ಮಾಡಬೇಕು. ಇದನ್ನು ಬಿಟ್ಟು ಬೇರೆ ರೀತಿಯಿಂದ ಅವನಿಗೆ ಶಾಂತಿಯು ದೊರೆಯಲಾರದು.

ಇಹ ಪ್ರಾಜ್ಞೋ ಹಿ ಪುರುಷಃ ಸ್ವಲ್ಪಮಪ್ರಿಯಮಿಚ್ಛತಿ |
ಯಸ್ಯಾನಲ್ಪಂ ಪ್ರಿಯಂ ಲೋಕೇ ಧ್ರುವಂ ತಸ್ಯಾಲ್ಪಮಪ್ರಿಯಮ್ ॥21॥
ವಿವೇಕಿಯಾದ ಪುರುಷನು ಈ ಲೋಕದಲ್ಲಿ ಸ್ವಲ್ಪ ಅಪ್ರಿಯವನ್ನು ಬಯಸುತ್ತಾನೆ (ಸಹಿಸುತ್ತಾನೆ). ಯಾವನಿಗೆ ಮಹತ್ತಾದ ಪ್ರಿಯದಲ್ಲಿ ದೃಷ್ಟಿ ಇದೆಯೋ ಅವನು ಅಲ್ಪವಾದ ಅಪ್ರಿಯವನ್ನು ಹೊಂದುವುದು ಲೋಕದಲ್ಲಿ ಕಂಡಿದೆ.
ಪ್ರಿಯಾಭಾವಾಚ್ಚ ಪುರುಷೋ ನೈವ ಪ್ರಾಪ್ನೋತಿ ಶೋಭನಮ್ |
ಧ್ರುವಂ ಚಾಭಾವಮಭ್ಯೇತಿ ಗತ್ವಾ ಗಂಗೇವ ಸಾಗರಮ್ ॥22॥
ಪ್ರಿಯವಾದುದು ಸ್ವಲ್ಪವೂ ಇಲ್ಲದಿದ್ದರೆ ಮನುಷ್ಯನಿಗೆ ಯಾವ ಒಳ್ಳೆಯದೂ ಆಗುವುದಿಲ್ಲ. ಗಂಗೆಯು ಸಾಗರವನ್ನು ಸೇರಿ ನಾಶಹೊಂದಿದಂತೆ ಅವನು ನಿಶ್ಚಿತವಾಗಿ ನಾಶ ಹೊಂದುವನು.
ಪುತ್ರಃ
ನೇಯಂ ಮತಿಸ್ತ್ವಯಾ ವಾಚ್ಯಾ ಮಾತಃ ಪುತ್ರೇ ವಿಶೇಷತಃ |
ಕಾರುಣ್ಯಮೇವ ಸಂದೃಶ್ಯಂ ಭೂತ್ವೇಹ ಜಡಮೂಕವತ್ ॥23॥
ಪುತ್ರ ತಾಯಿಯೇ, ಮಗನಿಗೆ ವಿಶೇಷವಾಗಿ ಇಂತಹ ಬುದ್ಧಿಮಾತುಗಳನ್ನು ಹೇಳಬೇಕಾದ ಅಗತ್ಯವಿಲ್ಲ. ಮಾತನಾಡದ ಜಡಮೂಕರಂತೆ ಕೇವಲ ಕರುಣೆಯನ್ನೇ ತೋರಿಸಬೇಕು.
ಮಾತಾ
ಅತೋ ಮೇ ಭೂಯಸೀ ನಂದಿಃ ಯದ್ಯೇವಮನುಪಶ್ಯಸಿ |
ಚೋದ್ಯಾಂ ಮಾಂ ಚೋದಯಸ್ಯೇತದ್ ಭೃಶಂ ವೈ ಚೋದಯಾಮಿ ತೇ ॥
ಮಾತಾ ನೀನು ಹೀಗೆ ನಾನು ಅನುಕೂಲಳಾಗಿದ್ದೇನೆಂದು ತಿಳಿಯುವುದಾದರೆ ನನಗೆ ಬಹಳ ಸಂತೋಷವಾಗುತ್ತದೆ. ನನಗೆ ಹೇಳಬೇಕಾದ ಮಾತುಗಳನ್ನು ಹೇಳುವವನಾಗು. ನಾನು ನಿನಗೆ ಪ್ರಚೋದನೆಯನ್ನು ನೀಡುತ್ತೇನೆ.
ಅಥ ತ್ವಾಂ ಪೂಜಯಿಷ್ಯಾಮಿ ಹತ್ವಾ ವೈ ಸರ್ವಸೈಂಧವಾನ್ |
ಅಹಂ ಪಶ್ಯಾಮಿ ವಿಜಯಂ ಕೃತ್ಸ್ನಂ ಭಾವಿನಮೇವ ತೇ ॥25॥
ಎಲ್ಲಾ ಸೈಂಧವ ಸೈನಿಕರನ್ನು ಕೊಂದ ನಿನ್ನನ್ನು ನಾನು ಪೂಜಿಸುವೆನು. ನಾನು ಮುಂದೆ ಉಂಟಾಗಲಿರುವ ನಿನ್ನ ಸಂಪೂರ್ಣವಾದ ವಿಜಯವನ್ನು ಕಾಣುತ್ತಿದ್ದೇನೆ.
ಪುತ್ರಃ
ಅಕೋಶಸ್ಯಾಸಹಾಯಸ್ಯ ಕುತೋ ವಾ ವಿಜಯೋ ಮಮ |
ಇತ್ಯವಸ್ಥಾಂ ವಿದಿತ್ವೈನಾಮಾತ್ಮನಾಽಽತ್ಮನಿ ದಾರುಣಾಮ್ ॥26॥
ರಾಜ್ಯಾದ್ ಭಾವೋ ನಿವೃತ್ತೋ ಮೇ ತ್ರಿದಿವಾದಿವ ದುಷ್ಕೃತೇಃ ॥27॥
ಪುತ್ರ ಕೋಶವಿಲ್ಲದ, ಸಹಾಯವಿಲ್ಲದ ನನಗೆ ವಿಜಯವು ಎಲ್ಲಿಂದ ಉಂಟಾಗುತ್ತದೆ? ಹೀಗೆ ನನ್ನ ದಾರುಣವಾದ ದುರವಸ್ಥೆಯನ್ನು ತಿಳಿದು ಪಾಪಕರ್ಮವನ್ನು ಮಾಡಿದವನಿಗೆ ಸ್ವರ್ಗದ ಆಸೆಯು ನಿವೃತ್ತವಾದಂತೆ ನನಗೆ ರಾಜ್ಯದ ಆಸೆಯು ನಿವೃತ್ತವಾಗಿದೆ.
ಕೀದೃಶಂ ಭವತೀ ಕಂಚಿದ್ ಉಪಾಯಮನುಪಶ್ಯತಿ |
ತಂ ಮೇ ಪರಿಣತಪ್ರಜ್ಞೇ ಸಮ್ಯಕ್ ಪ್ರಬ್ರೂಹಿ ಪೃಚ್ಛತೇ ॥28॥
ಕರಿಷ್ಯಾಮೀಹ ತತ್ ಸರ್ವಂ ಯಥಾವದನುಶಾಸನಮ್ ॥29॥
ಪೂಜ್ಯಳಾದ ನೀನು ನನಗೆ ಯಾವ ಉಪಾಯವಿದೆ ಎಂದು ತಿಳಿಯುತ್ತಿದ್ದೀಯೆ? ಎಲೌ ಪಕ್ವವಾದ ಜ್ಞಾನವನ್ನು ಹೊಂದಿದವಳೇ, ಈ ಪ್ರಶ್ನೆಯನ್ನು ಕೇಳುತ್ತಿರುವ ನನಗೆ ಸರಿಯಾಗಿ ಉತ್ತರವನ್ನು ಕೊಡು. ನಿನ್ನ ಆದೇಶವನ್ನು ಪೂರ್ಣವಾಗಿ ಸರಿಯಾಗಿ ಮಾಡುವೆನು.
ಮಾತಾ
ಪುತ್ರ ನಾತ್ಮಾಽವಮಂತವ್ಯಃ ಪೂರ್ವಾಭಿರಸಮೃದ್ಧಿಭಿಃ |
ಅಭೂತ್ವಾ ಹಿ ಭವಂತ್ಯರ್ಥಾ ಭೂತ್ವಾ ನಶ್ಯಂತಿ ಚಾಪರೇ ॥30॥
ಮಾತಾ ಪುತ್ರನೇ, ಹಿಂದೆ ಉಂಟಾದ ಅಸಮೃದ್ಧಿಗಳಿಂದ ಯಾರೂ ತನ್ನನ್ನು ಅವಮಾನ ಮಾಡಿಕೊಳ್ಳಬಾರದು. ಇಲ್ಲದೇ ಇದ್ದ ಅರ್ಥಗಳು ಉಂಟಾಗುತ್ತವೆ, ಇರುವ ಅರ್ಥಗಳು ನಾಶವನ್ನು ಹೊಂದುತ್ತವೆ.
ಅಮರ್ಷೇಣೈವ ಚಾಪ್ಯರ್ಥಾ ಆರಬ್ಧವ್ಯಾಸ್ಸುಬಾಲಿಶೈಃ |
ಸರ್ವೇಷಾಂ ಕರ್ಮಣಾಂ ತಾತ ಫಲೇ ನಿತ್ಯಮನಿತ್ಯತಾ ॥31॥
ಬಾಲಿಶರಲ್ಲದವರು ಕೋಪದಿಂದಲೇ ಕಾರ್ಯಗಳನ್ನು ಪ್ರಾರಂಭಿಸಬೇಕು. ಪ್ರೀತಿಪಾತ್ರನೇ, ಎಲ್ಲ ಕರ್ಮಗಳೂ ಫಲದ ವಿಷಯದಲ್ಲಿ ಯಾವಾಗಲೂ ಅನಿಶ್ಚಿತವಾಗಿವೆ (ಫಲವು ದೊರೆಯಬಹುದು ಅಥವಾ ದೊರೆಯದಿರಬಹುದು).
ಅನಿತ್ಯಮಿತಿ ಜಾನಂತೋ ಭವಂತಿ ನ ಭವಂತಿ ಚ |
ಅಥ ಯೇ ನೈವ ಕುರ್ವಂತಿ ನೈವ ಜಾತು ಭವಂತಿ ತೇ ॥32॥
ಫಲವು ಅನಿತ್ಯವಾದುದರಿಂದ ಅದು ದೊರೆಯಬಹುದು ಅಥವಾ ದೊರೆಯದಿರಬಹುದು ಎಂದು ತಿಳಿದು ಯಾರು ಕರ್ಮವನ್ನೇ ಮಾಡುವುದಿಲ್ಲವೋ ಅವರು ಎಂದೂ ಅಭ್ಯುದಯವನ್ನು ಹೊಂದುವುದಿಲ್ಲ.
ಐಕಗುಣ್ಯಮನೀಹಾಯಾಮಭಾವಃ ಕರ್ಮಣಾಂ ಫಲಮ್ |
ಅಥ ದ್ವೈಗುಣ್ಯಮೀಹಾಯಾಂ ಫಲಂ ಭವತಿ ವಾ ನ ವಾ ॥33॥
ಯಾವ ಕ್ರಿಯೆಯನ್ನೂ ಮಾಡದಿದ್ದರೆ ಕರ್ಮದ ಅಭಾವ ಎಂಬುದು ಒಂದೇ ಫಲ. ಕ್ರಿಯಾಶೀಲರಾದವರಿಗೆ ಕಾರ್ಯಸಿದ್ಧಿ ಅಥವಾ ಅಸಿದ್ಧಿ ಎಂಬ ಎರಡು ಫಲವಿರುತ್ತದೆ.

ಯಸ್ಯ ಪ್ರಾಗೇವ ವಿದಿತಾ ಸರ್ವಾರ್ಥಾನಾಮನಿತ್ಯತಾ |
ವದೇದವೃದ್ಧ್ಯಸಮೃದ್ಧೀ ನ ಪ್ರತಿಕೂಲೇ ನೃಪಾತ್ಮಜ ॥34॥
ಎಲೈ ರಾಜಕುಮಾರನೇ, ಯಾವನಿಗೆ ಎಲ್ಲವೂ ಅನಿತ್ಯವೆಂದು ಮೊದಲೇ ತಿಳಿದಿದೆಯೋ ಅವನಿಗೆ ಅವನ ಪ್ರಯತ್ನಕ್ಕೆ ಪ್ರತಿಕೂಲವಾಗಿ ಅವೃದ್ಧಿಯನ್ನಾಗಲೀ ಅಥವಾ ಅಸಮೃದ್ಧಿಯನ್ನಾಗಲೀ ಹೇಳಬಾರದು. (ಅವೃದ್ಧಿ ಎಂದರೆ ಕಾರ್ಯದಿಂದ ಪ್ರಯೋಜನವೇ ಇಲ್ಲ. ಅಸಮೃದ್ಧಿ ಎಂದರೆ ಕಾರ್ಯದಿಂದ ಅಲ್ಪ ಪ್ರಯೋಜನವಿದೆ ಎಂದು ಅಭಿಪ್ರಾಯ).
ಉತ್ಥಾತವ್ಯಂ ಜಾಗೃತವ್ಯಂ ಯೋಕ್ತವ್ಯಂ ಭೂತಿಕರ್ಮಸು |
ಭವಿಷ್ಯತೀತ್ಯೇವ ಮನಃ ಕೃತ್ವಾ ಸತತಮವ್ಯಥಃ ॥35॥
ಉದ್ಯಮಶೀಲನಾಗಬೇಕು, ಎಚ್ಚರಿಕೆಯಿಂದಿರಬೇಕು, ಒಳ್ಳೆಯ ಫಲವನ್ನು ಕೊಡುವ ಕರ್ಮಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು. ಫಲವು ಉಂಟಾಗುತ್ತದೆ ಎಂದೇ ತಿಳಿದು ವ್ಯಥೆಯನ್ನು ಪಡದೆ ಸತತವಾಗಿ ಪ್ರಯತ್ನವನ್ನು ಮಾಡಬೇಕು.
ಮಂಗಲಾನಿ ಪುರಸ್ಕೃತ್ಯ ಬ್ರಾಹ್ಮಣಾಂಶ್ಚೇತರೈಃ ಸಹ |
ಪ್ರಾಜ್ಞಸ್ಯ ನೃಪತೇರಾಶು ವೃದ್ಧಿರ್ಭವತಿ ಪುತ್ರಕ ॥36॥
ಅಭಿವರ್ತತಿ ಲಕ್ಷ್ಮೀಸ್ತಂ ಪ್ರಾಚೀಮಿವ ದಿವಾಕರಃ ॥37॥
ಮಂಗಳವಸ್ತುಗಳು ಮತ್ತು ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು, ಇತರರ ಸಹಾಯದಿಂದ ಪ್ರಯತ್ನವನ್ನು ಪಡುವ ಪ್ರಾಜ್ಞನಾದ ರಾಜನಿಗೆ ವೃದ್ಧಿಯುಂಟಾಗುತ್ತದೆ. ಎಲೈ ಪುತ್ರನೇ, ಸೂರ್ಯನು ಪೂರ್ವದಿಕ್ಕಿಗೆ ಬಂದಂತೆ ಲಕ್ಷ್ಮಿಯು ಅವನ ಬಳಿಗೆ ಬರುತ್ತಾಳೆ.
ನಿದರ್ಶನಾನ್ಯುಪಾಯಾಂಶ್ಚ ಬಹೂನ್ಯುದ್ಧರ್ಷಣಾನಿ ಚ |
ಅನುದರ್ಶಿತರೂಪೋಽಸಿ ಪಶ್ಯಾಮಿ ಕುಲಪೌರುಷಮ್ ॥38॥
ಪುರುಷಾರ್ಥಮಭಿಪ್ರೇತಂ ಮಮಾಹರ್ತುಮಿಹಾರ್ಹಸಿ ॥39॥
ಅನೇಕ ದೃಷ್ಟಾಂತಗಳನ್ನೂ, ಉಪಾಯಗಳನ್ನೂ, ಉತ್ತೇಜನದ ಮಾತುಗಳನ್ನೂ ನಾನು ನಿನಗೆ ಆಡಿ ತೋರಿಸಿದ್ದೇನೆ. ನಿನ್ನಲ್ಲಿ ಕುಲಪೌರುಷವನ್ನು ಕಾಣುತ್ತೇನೆ. ನನಗೆ ಅಭೀಷ್ಟವಾದ ಪುರುಷಾರ್ಥವನ್ನು ನೀನು ಸಂಪಾದಿಸಿಕೊಡುವವನಾಗು.
ಕ್ರುದ್ಧಾನ್ ಲುಬ್ಧಾನ್ ಪರಿಕ್ಷೀಣಾನವಲಿಪ್ತಾನ್ ವಿಮಾನಿತಾನ್ |
ಸ್ಪರ್ಧಿನಶ್ಚೈವ ಯೇ ಕೇಚಿತ್ ತಾನ್ ಯುಕ್ತ ಉಪಧಾರಯ ॥40॥
(ಶತ್ರುಗಳ ಸಮೂಹದಲ್ಲಿ) ಯಾರು ಕ್ರುದ್ಧರು, ಲೋಭಿಗಳು, ಸಂಪತ್ತನ್ನು ಕಳೆದುಕೊಂಡಿರುವವರು, ಅಹಂಕಾರಿಗಳು, ಅವಮಾನಕ್ಕೆ ಒಳಗಾದವರು, ಸ್ಪರ್ಧಾಳುಗಳು ಎಂಬುದನ್ನು ಸರಿಯಾಗಿ ತಿಳಿದುಕೊ.
ಏತೇನ ತ್ವಂ ಪ್ರಕಾರೇಣ ಮಹತೋ ಭೇತ್ಸ್ಯಸೇ ಗಣಾನ್ |
ಮಹಾವೇಗ ಇವೋದ್ಧೂತೋ ಮಾತರಿಶ್ವಾ ಬಲಾಹಕಾನ್ ॥41॥
ಈ ರೀತಿಯಾಗಿ ನೀನು, ಮಹಾವೇಗದಿಂದ ಬಿರುಗಾಳಿಯು ಮೋಡಗಳನ್ನು ಭೇದಿಸುವಂತೆ ಶತ್ರುಗಳ ಸಹಾಯಕರಾದ ದೊಡ್ಡ ಸಮೂಹಗಳನ್ನು ಭೇದಿಸುವಿ.
ಯೇಷಾಮಗ್ರಪ್ರದಾಯೀ ಸ್ಯಾಃ ಕಾಲ್ಯೋತ್ಥಾಯೀ ಪ್ರಿಯಂವದಃ |
ತೇ ತ್ವಾ ಪ್ರಿಯಂ ಕರಿಷ್ಯಂತಿ ಪುರೋ ಧಾಸ್ಯಂತಿ ಚ ಧ್ರುವಮ್ ॥42॥
ಯಾರಿಗೆ ನೀನು ಶ್ರೇಷ್ಠವಾದ ವಸ್ತುಗಳನ್ನು ಕೊಡುವೆಯೋ ಮತ್ತು ಪ್ರಿಯವಾಗಿ ಮಾತನಾಡುವಿಯೋ ಮತ್ತು ಯಾರಿಗಿಂತ ಮೊದಲು ಏಳುವಿಯೋ, ಅಂತಹವರು ನಿನ್ನನ್ನು ಮುಂದೆ ಮಾಡಿಕೊಂಡು ಖಂಡಿತವಾಗಿ ನಿನಗೆ ಪ್ರಿಯವನ್ನು ಉಂಟುಮಾಡುವರು.
ಯದೈವ ಶತ್ರುರ್ಜಾನೀಯಾತ್ ಸಪತ್ನಂ ತ್ಯಕ್ತಜೀವಿತಮ್ |
ತದೈವಾಸ್ಮಾದುದ್ವಿಜತೇ ಸರ್ಪಾದ್ ವೇಶ್ಮಗತಾದಿವ ॥43॥
ಯಾವಾಗ ಶತ್ರುವು ತನ್ನ ಶತ್ರುವು ಜೀವದ ಹಂಗನ್ನು ತೊರೆದಿದ್ದಾನೆ ಎಂದು ತಿಳಿಯುತ್ತಾನೆಯೋ ಆಗಲೇ ಅವನು ಮನೆಯೊಳಗೆ ಬಂದ ಸರ್ಪಕ್ಕೆ ಹೆದರುವಂತೆ ಅವನಿಗೆ ಹೆದರುತ್ತಾನೆ.
ತಂ ವಿದಿತ್ವಾ ಪರಾಕ್ರಾಂತಂ ವಶೇ ನ ಕುರುತೇ ಯದಿ |
ನಿರ್ವಾದೈರ್ನಿರ್ವದೇದೇನಮ್ ಅಂತತಸ್ತದ್ ಭವಿಷ್ಯತಿ ॥44॥
ಪರಾಕ್ರಮವನ್ನು ಆರಂಭಿಸುವ ತನ್ನ ಶತ್ರುವನ್ನು ತಿಳಿದು ಅವನನ್ನು ವಶಪಡಿಸಿಕೊಳ್ಳದಿದ್ದರೆ ಅವನು ನಿಂದೆಯ ಮಾತುಗಳಿಂದ ನಿಂದಿಸುತ್ತಾನೆ. ಕೊನೆಗೆ ನಿಂದೆಯ ಮಾತುಗಳೇ ಫಲವಾಗುತ್ತವೆ.
ನಿರ್ವಾದಾದಾಸ್ಪದಂ ಲಬ್ಧ್ವಾ ಧನವೃದ್ಧಿರ್ಭವಿಷ್ಯತಿ |
ಧನವಂತಂ ಹಿ ಮಿತ್ರಾಣಿ ಭಜಂತೇ ಚಾಶ್ರಯಂತಿ ಚ ॥45॥
ನಿಂದೆಯ ಮಾತುಗಳನ್ನು ಕೇಳಿ ಶತ್ರುಗಳ ಮೇಲೆ ಎರಗಲು ಒಂದು ಅವಕಾಶವನ್ನು ಪಡೆದು ಶತ್ರುಗಳನ್ನು ಸೋಲಿಸಿದರೆ ಸಂಪತ್ತಿನ ವೃದ್ಧಿ ಉಂಟಾಗುವುದು. ಸಂಪತ್ತಿನಿಂದ ಕೂಡಿದವನನ್ನು ಮಿತ್ರರು ಸೇವಿಸುತ್ತಾರೆ ಮತ್ತು ಆಶ್ರಯಿಸುತ್ತಾರೆ.
ಸ್ಖಲಿತಾರ್ಥಂ ಪುನಸ್ತಾತ ಸಂತ್ಯಜಂತಿ ಚ ಬಾಂಧವಾಃ |
ನ ಹ್ಯಸ್ಮಿನ್ನಾಶ್ರಯಂತೇ ಚ ಜುಗುಪ್ಸಂತೇ ನ ತಾದೃಶಮ್ ॥46॥
ಪ್ರೀತಿಪಾತ್ರನೇ, ಸಂಪತ್ತನ್ನು ಕಳೆದುಕೊಂಡವನನ್ನು ಬಾಂಧವರು ತೊರೆಯುತ್ತಾರೆ. ಅವನನ್ನು ಯಾರೂ ಆಶ್ರಯಿಸುವುದಿಲ್ಲ ಮತ್ತು ಅವನ ರಕ್ಷಣೆಗಾಗಿ ಬರುವುದಿಲ್ಲ.
ಶತ್ರುಂ ಕೃತ್ವಾ ಯಃ ಸಹಾಯಂ ವಿಶ್ವಾಸಮುಪಗಚ್ಛತಿ |
ಸ ನ ಸಂಭಾವ್ಯಮೇವೈತದ್ ಯದ್ ರಾಜ್ಯಂ ಪ್ರಾಪ್ನುಯಾನ್ಮಹತ್ ॥47॥
ಯಾವನು ಶತ್ರುವನ್ನು ತನ್ನ ಸಹಾಯವನ್ನಾಗಿ ಮಾಡಿಕೊಂಡು ಅವನಲ್ಲಿ ವಿಶ್ವಾಸ ಮಾಡುತ್ತಾನೆಯೋ ಅವನು ದೊಡ್ಡ ರಾಜ್ಯವನ್ನು

ಸಂಪಾದಿಸುತ್ತಾನೆ ಎಂಬುದು ಅಸಂಭಾವಿತವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಚತುಸಿತ್ರಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರಮೂವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೈದನೆಯ ಅಧ್ಯಾಯ
ವಿದುಲೋಪಾಖ್ಯಾನದ ಉಪಸಂಹಾರ.
ಮಾತಾ
ನೈವ ರಾಜ್ಞಾ ದರಃ ಕಾರ್ಯೋ ಜಾತು ಕಸ್ಯಾಂಚಿದಾಪದಿ |
ಅಥ ಚೇದಪಿ ದೀರ್ಣಃ ಸ್ಯಾನ್ನೈವ ವರ್ತೇತ ದೀರ್ಣವತ್ ॥1॥
ಮಾತಾ ರಾಜನು ಯಾವ ಆಪತ್ತಿನಲ್ಲಿಯೂ ಹೆದರಬಾರದು. ಹೆದರಿಕೆಯನ್ನು ಹೊಂದಿದರೂ ಭಯವನ್ನು ಹೊಂದಿದವನಂತೆ
ಇರಬಾರದು.
ದೀರ್ಣಂ ಹಿ ದೃಷ್ಟ್ವಾ ರಾಜಾನಂ ಸರ್ವಮೇವಾನುದೀರ್ಯತೇ |
ರಾಷ್ಟ್ರಂ ಬಲಮಮಾತ್ಯಾಶ್ಚ ಪೃಥಕ್ ಕುರ್ವಂತಿ ತೇ ಮತಿಮ್ ॥2॥
ರಾಜನು ಬಹಳ ಭಯವನ್ನು ಹೊಂದಿರುವುದನ್ನು ನೋಡಿದರೆ ಎಲ್ಲವೂ ಭಯವನ್ನು ಹೊಂದುತ್ತದೆ (ರಾಜನು ಸೀಳಾಗಿರುವುದನ್ನು
ನೋಡಿದರೆ ಎಲ್ಲವೂ ಸೀಳಾಗಿ ಹೋಗುವುದು). ರಾಷ್ಟ್ರವೂ, ಸೈನ್ಯವೂ ಅಮಾತ್ಯರೂ ಬೇರೆ ರೀತಿಯ ಬುದ್ಧಿಯನ್ನು ಮಾಡುವರು.
ಶತ್ರೂನೇಕೇ ಪ್ರಪದ್ಯಂತೇ ಪ್ರಜಹತ್ಯಪರೇ ಪುನಃ |
ಅನ್ಯೇ ತು ಪ್ರಜಿಹೀರ್ಷಂತಿ ಯೇ ಪುರಸ್ತಾದ್ ವಿಮಾನಿತಾಃ ॥3॥
ಯ ಏವಾತ್ಯಂತಸುಹೃದಃ ತ ಏನಂ ಪರ್ಯುಪಾಸತೇ ॥4॥
ಕೆಲವರು ಶತ್ರುಗಳ ಜೊತೆಯಲ್ಲಿ ಸೇರುವರು. ಇನ್ನು ಕೆಲವರು ರಾಜನನ್ನು ತ್ಯಜಿಸುವರು. ಇನ್ನು ರಾಜನಿಂದ ಮೊದಲು ಅವಮಾನಕ್ಕೆ
ಒಳಗಾದ ಕೆಲವರು ರಾಜನ ಸಂಪತ್ತನ್ನು ದೋಚಲು ಬಯಸುವರು. ರಾಜನಿಗೆ ಯಾರು ಅತ್ಯಂತ ಹಿತೈಷಿಗಳೋ ಅವರು ಮಾತ್ರ ಅವನ
ಜೊತೆಯಲ್ಲಿ ಇರುವರು.
ಅಶಕ್ತಾ ಯೇ ಸ್ವಸ್ತಿಕಾಮಾ ಬದ್ಧವತ್ಸಾ ಜಲಾ ಇವ |
ಶೋಚಂತಮನುಶೋಚಂತಿ ಪ್ರಮೀತಾನಿವ ಬಾಂಧವಾನ್ ॥5॥
ರಾಜನ ಹಿತವನ್ನು ಬಯಸಿದರೂ ಕರುಗಳನ್ನು ಕಟ್ಟಿದ ಗೋವುಗಳಂತೆ ಅಶಕ್ತರಾದವರು, ಬಂಧುವು ಮೃತರಾದಾಗ
ಶೋಕಪಡುವವರನ್ನು ನೋಡಿ ಇನ್ನೊಬ್ಬರು ಶೋಕಪಡುವಂತೆ ಶೋಕಪಡುತ್ತಾರೆ.
ಅಪಿ ತೇ ಪೂಜಿತಾಃ ಪೂರ್ವಮಪಿ ತೇ ಸುಹೃದೋ ಮತಾಃ |
ಯೇ ರಾಷ್ಟ್ರಮಭಿಪದ್ಯಂತೇ ರಾಜ್ಞೋ ವ್ಯಸನಮೀಯುಷಿ ॥6॥
ಮಾ ದೀದರಸ್ತ್ವಂ ಸುಹೃದೋ ಮಾ ತ್ವಾಂ ದೀರ್ಣಂ ಪ್ರಹಾಸಿಷುಃ ॥7॥
ಯಾರು ರಾಜನು ಸಂಕಟಕ್ಕೆ ಒಳಗಾದರೂ ರಾಷ್ಟ್ರವನ್ನು ತ್ಯಜಿಸುವುದಿಲ್ಲವೋ ಅಂತಹ ಹಿತೈಷಿಗಳನ್ನು ನೀನು ಹಿಂದೆ
ಪೂಜಿಸಿದ್ದೀಯಾ? ನೀನು ಹಿತೈಷಿಗಳಿಗೆ ಭಯವನ್ನು ಉಂಟುಮಾಡಬೇಡ. ಅವರು ಸಂಕಟಕ್ಕೆ ಸಿಲುಕಿದ ನಿನ್ನನ್ನು ತ್ಯಜಿಸದಿರಲಿ.
ಪ್ರಭಾವಂ ಪೌರುಷಂ ಬುದ್ಧಿಂ ಜಿಜ್ಞಾಸಂತ್ಯಾ ಮಯಾ ತವ |
ವಿದಧತ್ಯಾ ಸಮಾಶ್ವಾಸಮುಕ್ತಂ ತೇಜೋವಿವೃದ್ಧಯೇ ॥8॥
ನಿನ್ನ ಪ್ರಭಾವವನ್ನೂ, ಸಾಮರ್ಥ್ಯವನ್ನೂ, ಬುದ್ಧಿಯನ್ನೂ ಕೇಳಲು ಅಪೇಕ್ಷಿಸಿದ ನಾನು ನಿನ್ನ ತೇಜೋಭಿವೃದ್ಧಿಗಾಗಿ
ಸಮಾಶ್ವಾಸನೆಯ ಮಾತುಗಳನ್ನು ಆಡಿದೆನು.
ಯದ್ಯೇತತ್ ಸಂವಿಜಾನಾಸಿ ಯದಿ ಸಮ್ಯಗ್ ಬ್ರವೀಮ್ಯಹಮ್ |
ಕೃತ್ವಾ ಸೌಮ್ಯಮಿವಾತ್ಮಾನಂ ಜಯಾಯೋತ್ತಿಷ್ಠ ಸೃಂಜಯ ॥9॥
ನಾನು ಸರಿಯಾಗಿ ಮಾತನಾಡುತ್ತಿದ್ದೇನೆಂದು ನೀನು ತಿಳಿಯುವುದಾದರೆ ಎಲೈ ಸೃಂಜಯನೇ, ನೀನು ನಿನ್ನನ್ನು ಸೌಮ್ಯವಾಗಿ
ತೋರಿಸಿಕೊಳ್ಳುತ್ತಾ, ಜಯದ ಸಲುವಾಗಿ ಎದ್ದೇಳು.
ಅಸ್ತಿ ನಃ ಕೋಶನಿಚಯೋ ಮಹಾನವಿದಿತಸ್ತವ |
ತದಹಂ ವೇದ ನಾನ್ಯಸ್ತಮುಪಸಂಪಾದಯಾಮಿ ತೇ ॥10॥
ನೀನು ತಿಳಿಯದಿರುವ ದೊಡ್ಡ ಕೋಶಸಂಗ್ರಹವು ನಮಗಿದೆ. ನಾನು ಅದನ್ನು ತಿಳಿದಿದ್ದೇನೆ. ಬೇರೆ ಯಾರೂ ತಿಳಿದಿಲ್ಲ. ಅದನ್ನು ನಿನಗೆ
ಒದಗಿಸುತ್ತೇನೆ.
ಸಂತಿ ನೈಕಶತಾ ಭೂಯಃ ಸುಹೃದಸ್ತವ ಸೃಂಜಯ |
ಸುಖದುಃಖಸಹಾ ವೀರ ಪ್ರಿಯಾಹಾರ್ಹಾ ಹ್ಯನಿವರ್ತಿನಃ ॥11॥
ಎಲೈ ಸೃಂಜಯನೇ, ನಿನಗೆ ಇನ್ನೂ ನೂರಾರು ಮಂದಿ ಹಿತೈಷಿಗಳು ಇದ್ದಾರೆ. ಎಲೈ ವೀರನೇ, ಅವರು ಸುಖ-ದುಃಖಗಳನ್ನು
ಸಹಿಸುವವರು, ಪ್ರಿಯವಾದ ವಸ್ತುಗಳನ್ನು ಭೋಗಿಸಲು ಅರ್ಹರಾದವರು ಮತ್ತು ಯುದ್ಧದಿಂದ ಹಿಮ್ಮೆಟ್ಟದವರು.
ತಾದೃಶಾ ಹಿ ಸಹಾಯಾಶ್ಚೇತ್ ಪುರುಷಸ್ಯ ಬುಭೂಷತಃ |

ಇಷ್ಟಂ ನ ದುಷ್ಕರಂ ಕಿಂಚಿತ್ ಸಚಿವೈಃ ಶತ್ರುಕರ್ಶನ ॥12॥
ಎಲೈ ಶತ್ರುಕರ್ಶನನೇ, ಅಭಿವೃದ್ಧಿಯನ್ನು ಹೊಂದಲು ಬಯಸುವ ರಾಜನಿಗೆ ಅಂತಹ ಮಂತ್ರಿಗಳು ಸಹಾಯಕರಾಗಿದ್ದರೆ ಯಾವ ಅಭೀಷ್ಟವನ್ನೂ ಸಂಪಾದಿಸುವುದು ಅಸಾಧ್ಯವಲ್ಲ.
ಪುತ್ರಃ
ಕಸ್ಯ ತ್ವೀದೃಶಕಂ ವಾಕ್ಯಂ ಶ್ರುತ್ವಾಽಪಿ ಸ್ವಲ್ಪಚೇತಸಃ।
ತಮೋ ನ ವ್ಯಪಹನ್ಯೇತ ವಿಚಿತ್ರಾರ್ಥಪದಾಕ್ಷರಮ್ ॥13॥
ಪುತ್ರ ಯಾವ ಅಲ್ಪಪರಾಕ್ರಮವನ್ನು ಹೊಂದಿದ ಮನುಷ್ಯನಿಗೆ, ಇಂತಹ ವಿಚಿತ್ರ ಪದಾಕ್ಷರಗಳನ್ನು ಹೊಂದಿರುವ ಮಾತುಗಳನ್ನು ಕೇಳಿದರೆ ಅಜ್ಞಾನವು ನಾಶವಾಗಲಾರದು?
ಉದಕೇ ಧೂರಿಯಂ ಧಾರ್ಯಾ ಸರ್ತವ್ಯಂ ಪ್ರವಣೇ ಮಯಾ।
ಯಸ್ಯ ಮೇ ಭವತೀ ನೇತ್ರೀ ಭವಿಷ್ಯದ್ಭೂತದರ್ಶನೀ ॥14॥
ಯಾವ ನನಗೆ ನೀನು ಅದ್ಭುತವಾದ ಜ್ಞಾನವನ್ನು ಉಂಟುಮಾಡುತ್ತಿರುವೆಯೋ ಅಂತಹ ನಾನು ನೀರಿನಲ್ಲಿ ಭಾರವನ್ನು ಎತ್ತಿದಂತೆ, ಹಳ್ಳದಲ್ಲಿ ನಡೆದಂತೆ ಸುಲಭವಾಗಿ ನಡೆಯುವೆನು (ನಿನ್ನ ಬುದ್ಧಿಯನ್ನು ಅನುಸರಿಸಿ ಅಸಾಧ್ಯವಾದುದನ್ನೂ ಸಾಧಿಸುವೆನು).
ಅಹಂ ಹಿ ವಚನಂ ತ್ವತ್ತಃ ಶುಶ್ರೂಷುರಪರಾಪರಮ್।
ಕಿಂಚಿತ್ ಕಿಂಚಿತ್ ಪ್ರತಿವದನ್ ತೂಷ್ಣೀಮಾಸಂ ಮುಹುರ್ಮುಹುಃ ॥
ಅತೃಪ್ಯನ್ನಮೃತಸ್ಯೇವ ಕೃಚ್ಛ್ರಾಲ್ಲಬ್ಧಸ್ಯ ಬಾಂಧವಾತ್।
ಉದ್ಯಚ್ಛಾಮ್ಯೇಷ ಶತ್ರೂಣಾಂ ನಿಯಮಾರ್ಥಂ ಜಯಾಯ ಚ ॥16॥
ನಾನು ಕಷ್ಟದಿಂದ ಪಡೆದ ಅಮೃತದಂತೆ ಇರುವ ನಿನ್ನ ಮಾತುಗಳಿಂದ ತೃಪ್ತಿಯನ್ನು ಪಡೆಯದೆ ಶ್ರೇಷ್ಠವಾದ ಬೇರೆ ಬೇರೆ ಮಾತುಗಳನ್ನು ಕೇಳಲು ಬಯಸಿ ಮಧ್ಯೆ ಮಧ್ಯೆ ಸ್ವಲ್ಪ ಮಾತ್ರ ಮಾತನಾಡುತ್ತಾ ಸುಮ್ಮನಿದ್ದೆನು. ಈಗ ಶತ್ರುಗಳನ್ನು ನಿಯಂತ್ರಿಸಿ ಜಯವನ್ನು ಸಂಪಾದಿಸಲು ಪ್ರಯತ್ನವನ್ನು ಮಾಡುತ್ತೇನೆ.
ಕುಂತೀ
ಇತಿ ಶ್ರುತ್ವಾ ವಚೋ ಮಾತುಃ ಸೃಂಜಯಃ ಶತ್ರುಭಿಃ ಸಹ।
ಕೃತವಾನ್ ಸಂಯುಗಂ ಕೃಷ್ಣ ಜಯಂ ಚ ಪ್ರಾಪ್ತವಾನ್ ಧ್ರುವಮ್ ॥
ಕುಂತೀ ಎಲೈ ಕೃಷ್ಣನೇ, ಸೃಂಜಯನು ಹೀಗೆ ತಾಯಿಯ ಮಾತನ್ನು ಕೇಳಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿ, ನಿಶ್ಚಿತವಾಗಿ ಜಯವನ್ನು ಸಂಪಾದಿಸಿದನು.
ಸದಶ್ವ ಇವ ಸ ಕ್ಷಿಪ್ರಂ ಪ್ರಣುನ್ನೋ ವಾಕ್ಯಸಾಯಕೈಃ।
ತಚ್ಚಕಾರ ತಥಾ ಸರ್ವಂ ಯಥಾವದನುಶಾಸನಮ್ ॥18॥
ಒಳ್ಳೆಯ ಅಶ್ವದಂತೆ ಅವನು ಮಾತುಗಳೆಂಬ ಬಾಣಗಳಿಂದ ಪ್ರಚೋದಿಸಲ್ಪಟ್ಟವನಾಗಿ ಶೀಘ್ರವಾಗಿ ತಾಯಿಯ ಅನುಶಾಸನದಂತೆ ಎಲ್ಲವನ್ನೂ ಮಾಡಿದನು.
ವೈಶಂಪಾಯನಃ
ಇದಮುದ್ಧರ್ಷಣಂ ಭೀಮಂ ತೇಜೋವರ್ಧನಮುತ್ತಮಮ್।
ರಾಜಾನಂ ಶ್ರಾವಯೇನ್ಮಂತ್ರೀ ಸೀದಂತಂ ಶತ್ರುಪೀಡಿತಮ್ ॥19॥
ವೈಶಂಪಾಯನ ಈ ಆಖ್ಯಾನವು ರಾಜರಿಗೆ ಸಂತೋಷವನ್ನು ಕೊಟ್ಟು ಅವರ ಸಾಮರ್ಥ್ಯವನ್ನು ಹೆಚ್ಚಿಸುವ ಶ್ರೇಷ್ಠವಾದ ಮತ್ತು ಶತ್ರುಗಳಿಗೆ ಭಯವನ್ನುಂಟು ಮಾಡುವ ವ್ಯಾಖ್ಯಾನ. ಇದನ್ನು ಶತ್ರುಪೀಡಿತನಾಗಿ ವಿಷಾದಕ್ಕೆ ಒಳಗಾದ ರಾಜನಿಗೆ ಮಂತ್ರಿಯು ಶ್ರವಣ ಮಾಡಿಸಬೇಕು.
ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾ।
ಮಹೀಂ ವಿಜಯತೇ ಕ್ಷಿಪ್ರಂ ಶ್ರುತ್ವಾ ಶತ್ರೂನ್ ಪ್ರಮರ್ದತಿ ॥20॥
ಈ ಇತಿಹಾಸಕ್ಕೆ ಜಯ ಎಂದು ಹೆಸರು. ಯುದ್ಧದಲ್ಲಿ ಜಯವನ್ನು ಬಯಸುವ ರಾಜನು ಇದನ್ನು ಕೇಳಬೇಕು. ಕೇಳಿದ ಅವನು ಶತ್ರುಗಳನ್ನು ಮರ್ದಿಸಿ ಶೀಘ್ರವಾಗಿ ಭೂಮಿಯನ್ನು ಜಯಿಸುವನು.
ಇದಂ ಪುಂಸವನಂ ಚೈವ ವೀರಸಂಜನನಂ ತಥಾ।
ಅಭೀಕ್ಷ್ಣಂ ಗರ್ಭಿಣೀ ಶ್ರುತ್ವಾ ಧ್ರುವಂ ವೀರಂ ಪ್ರಜಾಯತೇ ॥21॥
ಈ ಆಖ್ಯಾನವು ಗಂಡುಮಗವನ್ನು ಕೊಡುವಂತಹದು ಮತ್ತು ವೀರನಾದ ಪುತ್ರನನ್ನು ಕೊಡುವಂತಹದು. ಗರ್ಭಿಣಿಯಾದವಳು ಇದನ್ನು ಸತತವಾಗಿ ಕೇಳಿದರೆ ಖಂಡಿತವಾಗಿ ವೀರನಾದ ಪುತ್ರನನ್ನು ಪಡೆಯುವಳು.
ವಿದ್ಯಾಶೂರಂ ತಪಃಶೂರಂ ದಮಶೂರಂ ತಪಸ್ವಿನಮ್।
ಬ್ರಾಹ್ಮ್ಯಾ ಶ್ರಿಯಾ ದೀಪ್ಯಮಾನಂ ಸಾಧುವಾದೇನ ಸಮ್ಮತಮ್ ॥22॥
ಗರ್ಭಿಣಿಯಾದ ಬ್ರಾಹ್ಮಣಸ್ತ್ರೀಯು ವಿದ್ಯಾಶೂರನೂ, ತಪಃಶೂರನೂ, ಇಂದ್ರಿಯ ನಿಗ್ರಹವುಳ್ಳವನೂ, ತಪಶ್ಶೀಲನೂ, ಬ್ರಾಹ್ಮೀ ಸಂಪತ್ತಿನಿಂದ ಕೂಡಿದವನೂ, ಎಲ್ಲರಿಂದಲೂ ಸಜ್ಜನನೆಂದು ಕರೆಸಿಕೊಳ್ಳಲ್ಪಡುವನೂ ಆದ ಪುತ್ರನನ್ನು ಪಡೆಯುವಳು.
ಸ್ವರ್ಚಿಷ್ಮಂತಂ ಬಲೋಪೇತಂ ಮಹಾಭಾಗಂ ಮಹಾರಥಮ್।
ಧೃತಿಮಂತಮನಾಧೃಷ್ಯಂ ಜೇತಾರಮಪರಾಜಿತಮ್ ॥23॥
ನಿಯಂತಾರಮಸಾಧೂನಾಂ ಗೋಪ್ತಾರಂ ಧರ್ಮಚಾರಿಣಾಮ್।
ಈದೃಶಂ ಕ್ಷತ್ರಿಯಾ ಸೂತೇ ವೀರಂ ಸತ್ಯಪರಾಕ್ರಮಮ್ ॥24॥

ಕ್ಷತ್ರಿಯ ಸ್ತ್ರೀಯಾದವಳು ಕಾಂತಿಯುಕ್ತನಾದ, ಬಲದಿಂದ ಯುಕ್ತನಾದ, ಮಹಾನುಭಾವನಾದ, ಮಹಾರಥನಾದ, ಧೈರ್ಯಶಾಲಿಯಾದ, ಯಾರಿಗೂ ಸೋಲದ, ಎಲ್ಲರನ್ನೂ ಜಯಿಸುವ, ದುಷ್ಟರನ್ನು ನಿಗ್ರಹಿಸುವ, ಧರ್ಮಚಾರಿಗಳನ್ನು ರಕ್ಷಿಸುವ , ಸತ್ಯಪರಾಕ್ರಮವುಳ್ಳ ಇಂತಹ ವೀರನನ್ನು ಪ್ರಸವಿಸುವಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಪಂಚತ್ರಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಷಟ್‌ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಮೂವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತಾರನೆಯ ಅಧ್ಯಾಯ
ಕೃಷ್ಣನ ಮೂಲಕ ಅರ್ಜುನಾದಿಗಳಿಗೆ ಕುಂತಿಯ ಸಂದೇಶ.
ಕರ್ಣನ ಜೊತೆಯಲ್ಲಿ ಮಾತನಾಡಿ ಕೃಷ್ಣನ ಉಪಪ್ಲಾವ್ಯನಗರ ಗಮನ.
ಕುಂತೀ
ಅರ್ಜುನಂ ಕೇಶವಂ ಬ್ರೂಯಾಃ ತ್ವಯಿ ಜಾತೇ ಸ್ಮ ಸೂತಕೇ |
ಉಪೋಪವಿಷ್ಟಾ ನಾರೀಭಿರಾಶ್ರಮೇ ಪರಿವಾರಿತಾ ॥1॥
ಅಥಾಂತರಿಕ್ಷೇ ವಾಗಾಸೀದ್ ದಿವ್ಯರೂಪಾ ಮನೋರಮಾ ॥2॥
ಕುಂತೀ ಎಲೈ ಕೇಶವನೇ, ಅರ್ಜುನನನ್ನು ಕುರಿತು ಹೀಗೆ ಹೇಳುವವನಾಗು. ನೀನು ಜನಿಸಿದಾಗ ನಾನು ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟು ಆಶ್ರಮದಲ್ಲಿ ಕುಳಿತಿದ್ದೆ. ಆಗ ದಿವ್ಯವೂ, ಮನೋಹರವೂ ಆದ ಅಶರೀರವಾಣಿಯಾಯಿತು.
ಸಹಸ್ರಾಕ್ಷಸಮಃ ಕುಂತಿ ಭವಿಷ್ಯತ್ಯೇವ ತೇ ಸುತಃ ॥3॥
ಏಷ ಜೇಷ್ಯತಿ ಸಂಗ್ರಾಮೇ ಕುರೂನ್ ಸರ್ವಾನ್ ಸಮಾಗತಾನ್ |
ಭೀಮಸೇನದ್ವಿತೀಯಶ್ಚ ಲೋಕಮುದ್ವರ್ತಯಿಷ್ಯತಿ ॥4॥
ಪುತ್ರಸ್ತೇ ಪೃಥಿವೀಂ ಜೇತಾ ಯಶಶ್ಚಾಸ್ಯ ದಿವಂ ಸ್ಪೃಶೇತ್ ॥5॥
ಎಲೌ ಕುಂತಿಯೇ, ನಿನ್ನ ಪುತ್ರನು ಇಂದ್ರನಿಗೆ ಸಮನಾಗುವನು. ಇವನು ಯುದ್ಧದಲ್ಲಿ ಸಮಾಗತರಾದ ಎಲ್ಲ ಕೌರವರನ್ನೂ ಗೆಲ್ಲುವನು. ಭೀಮಸೇನನ ಸಹಾಯವುಳ್ಳ ಅವನು ಶತ್ರುಗಳನ್ನೆಲ್ಲಾ ನಾಶಮಾಡುವನು. ನಿನ್ನ ಮಗನು ಭೂಮಿಯನ್ನು ಜಯಿಸುವನು. ಅವನ ಕೀರ್ತಿಯು ಸ್ವರ್ಗವನ್ನು ಮುಟ್ಟುವುದು.
ಹತ್ವಾ ಕುರೂಂಶ್ಚ ಸಂಗ್ರಾಮೇ ವಾಸುದೇವಸಹಾಯವಾನ್ |
ಪಿತ್ರ್ಯಮಂಶಂ ಪುನಷ್ಟಂ ಚ ಪುನರಭ್ಯುದ್ಧರಿಷ್ಯತಿ ॥6॥
ಭ್ರಾತೃಭಿಃ ಸಹಿತಃ ಶ್ರೀಮಾಂಸ್ತ್ರೀನ್ ಮೇಧಾನಾಹರಿಷ್ಯತಿ ॥7॥
ಯುದ್ಧದಲ್ಲಿ ಕೃಷ್ಣನ ಸಹಾಯದಿಂದ ಕೌರವರನ್ನು ಸಂಹರಿಸಿ ನಷ್ಟವಾಗಿದ್ದ ತಂದೆಯ ಅಂಶವನ್ನು ಪುನಃ ಸಂಪಾದಿಸುವನು. ಕಾಂತಿಯುಕ್ತನಾದ ಇವನು ಸಹೋದರರ ಜೊತೆಯಲ್ಲಿ ಮೂರು ಅಶ್ವಮೇಧ ಯಾಗಗಳನ್ನು ಮಾಡುವನು (ಎಂದು ಅಶರೀರವಾಣಿಯಾಯಿತು).
ತಥಾ ಚರೇಸ್ತ್ವಂ ಶ್ವೇತಾಶ್ವ ಯಥಾ ವಾಗಭ್ಯಭಾಷತ |
ಸ ಸತ್ಯಸಂಧೋ ಬೀಭತ್ಸುಃ ಸವ್ಯಸಾಚೀ ಯಥಾಽಚ್ಯುತ ॥8॥
ತಥಾಽಹಮೇವಂ ಜಾನಾಮಿ ಬಲವಂತಂ ದುರಾಸದಮ್ ॥9॥
ತಥಾ ವದಸ್ವ ದಾಶಾರ್ಹ ಯಥಾ ವಾಗಭ್ಯಭಾಷತ ॥10॥
ಎಲೈ ಶ್ವೇತಾಶ್ವನೇ, ಅಶರೀರವಾಣಿಯು ನುಡಿದಂತೆ ನೀನು ನಡೆದುಕೊಳ್ಳುವವನಾಗು. ಎಲೈ ಅಚ್ಯುತನೇ, ನಾನು ತಿಳಿದಂತೆ ಬೀಭತ್ಸುವು, ಸತ್ಯಸಂಧನೂ, ಸವ್ಯಸಾಚಿಯೂ, ಬಲಿಷ್ಠನೂ ಮತ್ತು ಸೋಲಿಸಲ್ಪಡದವನೂ ಆಗಿದ್ದಾನೆ. ಎಲೈ ದಾಶಾರ್ಹನೇ, ಅಶರೀರವಾಣಿ ತಿಳಿಸಿದಂತೆ ನೀನು ಅವನಿಗೆ ತಿಳಿಸುವವನಾಗು.
ಧರ್ಮಶ್ಚೇದಸ್ತಿ ವಾರ್ಷ್ಣೇಯ ತಥಾ ಸತ್ಯಂ ಭವಿಷ್ಯತಿ |
ತ್ವಂ ಚಾಪಿ ತತ್ ತಥಾ ಕೃಷ್ಣ ಸರ್ವಂ ಸಂಪಾದಯಿಷ್ಯಸಿ ॥11॥
ನಮೋ ಧರ್ಮಾಯ ಮಹತೇ ಧರ್ಮೋ ಧಾರಯತೇ ಪ್ರಜಾಃ |
ಎಲೈ ವಾರ್ಷ್ಣೇಯನೇ, ಧರ್ಮವು ಇರುವುದಾದರೆ ಅಶರೀರವಾಣಿಯು ಸತ್ಯವಾಗುವುದು. ಎಲೈ ಕೃಷ್ಣನೇ, ನೀನೂ ಸಹ ಅವೆಲ್ಲವನ್ನೂ ಸಂಪಾದಿಸುವಿ. ಶ್ರೇಷ್ಠವಾದ ಧರ್ಮಕ್ಕೆ ನಮಸ್ಕಾರ. ಧರ್ಮವು ಪ್ರಜೆಗಳನ್ನು ರಕ್ಷಿಸುತ್ತದೆ.
ಏತದ್ ಧನಂಜಯೋ ವಾಚ್ಯೋ ನಿತ್ಯೋದ್ಯುಕ್ತೋ ವೃಕೋದರಃ ॥12॥
ಯದರ್ಥಂ ಕ್ಷತ್ರಿಯಾ ಸೂತೇ ತಸ್ಯ ಕಾಲೋಽಯಮಾಗತಃ |
ನ ಹಿ ವೈರಂ ಸಮಾಸಾದ್ಯ ಸೀದಂತಿ ಪುರುಷರ್ಷಭಾಃ ॥13॥
ಇದನ್ನು ಧನಂಜಯನಿಗೂ ಮತ್ತು ನಿತ್ಯ ಉದ್ಯುಕ್ತನಾದ ಭೀಮಸೇನನಿಗೂ ಹೇಳಬೇಕು- `ಕ್ಷತ್ರಿಯ ವನಿತೆಯು ಏತಕ್ಕಾಗಿ ಮಗನನ್ನು ಪಡೆಯುತ್ತಾಳೆಯೋ ಅದರ ಪ್ರಯೋಜನದ ಕಾಲವು ಈಗ ಪ್ರಾಪ್ತವಾಗಿದೆ. ಪುರುಷಶ್ರೇಷ್ಠರಾದವರು ವೈರವನ್ನು ಸಂಪಾದಿಸಿ ನಾಶವನ್ನು ಹೊಂದುವುದಿಲ್ಲ.
ವಿದಿತಾ ಮೇ ಸದಾ ಬುದ್ಧಿಃ ಭೀಮಸ್ಯ ನ ಹಿ ಶಾಮ್ಯತಿ ॥14॥

ಯಾವದಂತಂ ನ ಕುರುತೇ ಶತ್ರೂಣಾಂ ಶತ್ರುಕರ್ಶನಃ |
ತಾವದೇವ ಮಹಾಬಾಹುಃ ನಿಶಾಸು ನ ಸುಖಂ ಲಭೇತ್ ||15||
ನನಗೆ ಭೀಮಸೇನನ ಬುದ್ಧಿಯು ತಿಳಿದಿದೆ. ಅವನು ಎಂದೂ ಶಾಂತನಾಗುವುದಿಲ್ಲ. ಶತ್ರುನಾಶನನಾದ, ಮಹಾಬಾಹುವಾದ ಅವನು ಶತ್ರುಗಳನ್ನು ಸಂಹಾರ ಮಾಡುವವರೆಗೆ ರಾತ್ರಿಯ ಕಾಲದಲ್ಲಿ ಸುಖವಾಗಿ ಮಲಗುವುದಿಲ್ಲ.
ಸರ್ವಧರ್ಮವಿಶೇಷಜ್ಞಾಂ ಸ್ನುಷಾಂ ಪಾಂಡೋರ್ಮಹಾತ್ಮನಃ |
ಬ್ರೂಯಾ ಮಾಧವ ಕಲ್ಯಾಣೀಂ ಕೃಷ್ಣ ಕೃಷ್ಣಾಂ ಯಶಸ್ವಿನೀಮ್ ||16||
ಯುಕ್ತಮೇತನ್ಮಹಾಭಾಗೇ ಕುಲೇ ಜಾತೇ ಯಶಸ್ವಿನಿ |
ಯನ್ಮೇ ಪುತ್ರೇಷು ಸರ್ವೇಷು ಯಥಾವತ್ ತ್ವಮವರ್ತಥಾಃ ||17||
ಎಲೈ ಮಾಧವನೇ, ಸರ್ವಧರ್ಮಗಳನ್ನೂ ವಿಶೇಷವಾಗಿ ತಿಳಿದ, ಮಹಾತ್ಮನಾದ ಪಾಂಡುವಿನ ಸೊಸೆಯಾದ, ಮಂಗಳಸ್ವರೂಪಳಾದ, ಕೀರ್ತಿವಂತಳಾದ ದ್ರೌಪದಿಯನ್ನು ಕುರಿತು- `ಎಲೌ ಮಹಾನುಭಾವಳೇ, ಒಳ್ಳೆಯ ಕುಲದಲ್ಲಿ ಜನಿಸಿದ ಕೀರ್ತಿವಂತಳೇ, ನೀನು ನನ್ನ ಎಲ್ಲಾ ಮಕ್ಕಳಲ್ಲಿ ನಡೆದುಕೊಂಡ ರೀತಿಯು ಬಹಳ ಶ್ರೇಷ್ಠವಾದುದು' ಎಂದು ಹೇಳು.
ಮಾದ್ರೀಪುತ್ರೌ ಚ ವಕ್ತವ್ಯೌ ಕ್ಷತ್ರಧರ್ಮರತಾವುಭೌ |
ವಿಕ್ರಮೇಣಾರ್ಜಿತಾನ್ ಭೋಗಾನ್ ವೃಣೀತಂ ಜೀವಿತಾದಪಿ ||18||
ಕ್ಷತ್ರಿಯ ಧರ್ಮದಲ್ಲಿ ರತರಾದ ಮಾದ್ರೀಪುತ್ರರಿಬ್ಬರನ್ನೂ ಕುರಿತು ಪರಾಕ್ರಮದಿಂದ ಸಂಪಾದಿಸಿದ ಭೋಗಗಳನ್ನು ಜೀವನಕ್ಕಿಂತಲೂ ಹೆಚ್ಚೆಂದು ಸ್ವೀಕರಿಸಿ ಎಂದು ಹೇಳು.
ವಿಕ್ರಮಾಧಿಗತಾ ಹ್ಯರ್ಥಾಃ ಕ್ಷತ್ರಧರ್ಮೇಣ ಜೀವತಃ |
ಮನೋ ಮನುಷ್ಯಸ್ಯ ಸದಾ ಪ್ರೀಣಂತಿ ಪುರುಷೋತ್ತಮ ||19||
ಎಲೈ ಪುರುಷೋತ್ತಮನೇ, ಕ್ಷತ್ರಿಯಧರ್ಮದಿಂದ ಬದುಕುವವನಿಗೆ ಪರಾಕ್ರಮದಿಂದ ಸಂಪಾದಿಸಿದ ವಸ್ತುಗಳು ಯಾವಾಗಲೂ ಮನಸ್ಸಿಗೆ ಸಂತೋಷವನ್ನು ಕೊಡುತ್ತವೆ.
ಯಚ್ಚ ವಃ ಪ್ರೇಕ್ಷಮಾಣಾನಾಂ ಸರ್ವಧರ್ಮೋಪಚಾಯಿನೀ |
ಪಾಂಚಾಲೀ ಪರುಷಾಣ್ಯುಕ್ತಾ ಕೋ ನು ತತ್ ಕ್ಷಂತುಮರ್ಹತಿ ||20||
ನೀವೆಲ್ಲರೂ ನೋಡುತ್ತಿರುವಂತೆಯೇ ಸರ್ವಧರ್ಮಗಳನ್ನೂ ಸಂಪಾದಿಸುವ ದ್ರೌಪದಿಯು ಉಗ್ರವಾದ ನುಡಿಗಳನ್ನು ಕೇಳಿದಳು. ಅದನ್ನು ಯಾರು ಕ್ಷಮಿಸಲು ಸಾಧ್ಯ?
ನ ರಾಜ್ಯಹರಣಂ ದುಃಖಂ ದ್ಯೂತೇ ವಾಽಪಿ ಪರಾಜಯಃ |
ಪ್ರವ್ರಾಜನಂ ಸುತಾನಾಂ ವಾ ನ ಮೇ ತದ್ ದುಃಖಕಾರಣಮ್ ||21||
ನನಗೆ ರಾಜ್ಯನಾಶವು ದುಃಖವಲ್ಲ. ದ್ಯೂತದಲ್ಲಿ ಪರಾಜಯವು ದುಃಖವಲ್ಲ. ಮಕ್ಕಳ ವನವಾಸವು ದುಃಖ ಕಾರಣವಲ್ಲ.
ಯತ್ರ ಸಾ ಬೃಹತೀ ಶ್ಯಾಮಾ ಸಭಾಯಾಂ ರುದತೀ ತದಾ |
ಅಶ್ರೌಷೀತ್ ಪರುಷಾ ವಾಚಸ್ತನ್ಮೇ ದುಃಖತರಂ ಮಹತ್ ||22||
ಆದರೆ ಆ ಮಹಾಸ್ವಭಾವದ ಸುಂದರಿಯಾದ ದ್ರೌಪದಿಯು ಸಭೆಯಲ್ಲಿ ಅಳುತ್ತಿರುವಾಗ ಕೇಳಿದ ಕಠೋರವಾದ ಮಾತುಗಳು ನನಗೆ ಬಹಳ ದುಃಖವನ್ನು ಉಂಟುಮಾಡುತ್ತವೆ.
ಸ್ತ್ರೀಧರ್ಮಿಣೀ ವರಾರೋಹಾ ಕ್ಷತ್ರಧರ್ಮರತಾ ಸದಾ |
ನಾಧ್ಯಗಚ್ಛತ್ ತದಾ ನಾಥಂ ಕೃಷ್ಣಾ ನಾಥವತೀ ಸತೀ ||23||
ಯಾವಾಗಲೂ ಕ್ಷತ್ರಿಯಧರ್ಮದಲ್ಲಿ ರತಳಾದ, ರಜಸ್ವಲೆಯಾದ, ಆ ಸುಂದರಿಯಾದ ದ್ರೌಪದಿಯು ಐದುಪತಿಗಳನ್ನು ಹೊಂದಿದ್ದರೂ ಆಗ ರಕ್ಷಣೆ ಮಾಡುವ ಒಬ್ಬ ಪತಿಯನ್ನೂ ಹೊಂದಲಿಲ್ಲ.
ತಂ ವೈ ಬ್ರೂಹಿ ಮಹಾಬಾಹೋ ಸರ್ವಶಸ್ತ್ರಭೃತಾಂ ವರಮ್ |
ಅರ್ಜುನಂ ಪುರುಷವ್ಯಾಘ್ರಂ ದ್ರೌಪದ್ಯಾಃ ಪದವೀಂ ಚರ ||24||
ಎಲೈ ಮಹಾಬಾಹುವೇ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಪುರುಷವ್ಯಾಘ್ರನಾದ ಅರ್ಜುನನನ್ನು ಕುರಿತು ದ್ರೌಪದಿಯ ಮಾರ್ಗವನ್ನು ಅನುಸರಿಸು ಎಂದು ಹೇಳು.
ವಿದಿತೌ ಹಿ ತವಾತ್ಯಂತಂ ಕ್ರುದ್ಧಾವಿವ ಯಥಾಂತಕೌ |
ಭೀಮಾರ್ಜುನೌ ನಯೇತಾಂ ಹಿ ದೇವಾನಪಿ ಪರಾಭವಮ್ ||25||
ಕೋಪಗೊಂಡ ಭೀಮಾರ್ಜುನರು ಯಮನಂತೆ ದೇವತೆಗಳಿಗೂ ಕೂಡ ಸೋಲನ್ನು ಉಂಟುಮಾಡುವರೆಂದು ನೀನು ತಿಳಿದಿದ್ದೀಯೆ.
ತಯೋಶ್ಚೈತದವಜ್ಞಾನಂ ಯತ್ ಸಾ ಕೃಷ್ಣಾ ಸಭಾಗತಾ |
ದುಃಶಾಸನಶ್ಚ ಯದ್ ಭೀಮಂ ಕಟುಕಾನ್ಯಭ್ಯಭಾಷತ ||26||
ಪಶ್ಯತಾಂ ಕುರುವೀರಾಣಾಂ ತಚ್ಚ ಸಂಸ್ಮಾರಯೇಃ ಪುನಃ ||27||
ಕೌರವವೀರರು ನೋಡುತ್ತಿರುವಂತೆಯೇ ಸಭೆಯಲ್ಲಿ ಬಂದ ದ್ರೌಪದಿಯು ದುಶ್ಶಾಸನನಿಂದ ಯಾವ ಉಗ್ರವಾದ ಮಾತುಗಳನ್ನು ಕೇಳಿದಳೋ ಅದು ಭೀಮಾರ್ಜುನರಿಗೇ ಆದ ಅವಮಾನ. ಕೃಷ್ಣನೇ, ಅದನ್ನು ಪುನಃ ಅವರಿಗೆ ಜ್ಞಾಪಿಸುವವನಾಗು.
ಪಾಂಡವಾನ್ ಕುಶಲಂ ಪೃಚ್ಛೇಃ ಸಪುತ್ರಾನ್ ಸಹ ಕೃಷ್ಣಯಾ |
ಮಾಂ ಚ ಕುಶಲಿನೀಂ ಬ್ರೂಯಾಃ ತೇಷು ಭೂಯೋ ಜನಾರ್ದನ ||
ಅರಿಷ್ಟಂ ಗಚ್ಛ ಪಂಥಾನಂ ಪುತ್ರಾನ್ ಮೇ ಪ್ರತಿಪಾಲಯ ||29||
ಎಲೈ ಜನಾರ್ದನನೇ, ಕೃಷ್ಣೆಯಿಂದ ಕೂಡಿದ, ಪುತ್ರಸಹಿತರಾದ ಪಾಂಡವರ ಕುಶಲಪ್ರಶ್ನೆಯನ್ನು ಮಾಡು. ನಾನು

ಕ್ಷೇಮದಿಂದಿದ್ದೇನೆಂದು ಅವರಿಗೆ ಪುನಃ ಪುನಃ ಹೇಳು. ಸುಖವಾಗಿ ಹೋಗಿ ಬಾ. ನನ್ನ ಮಕ್ಕಳನ್ನು ರಕ್ಷಿಸು.
ವೈಶಂಪಾಯನಃ
ಅಭಿವಾದ್ಯಾಥ ತಾಂ ಕೃಷ್ಣಃ ಕೃತ್ವಾ ಚಾಪಿ ಪ್ರದಕ್ಷಿಣಮ್ |
ನಿಶ್ಚಕ್ರಾಮ ಮಹಾಬಾಹುಃ ಸಿಂಹಖೇಲಗತಿಸ್ತತಃ ||30||
ವೈಶಂಪಾಯನ ಮಹಾಬಾಹುವೂ, ಸಿಂಹವಿಕ್ರಾಂತಗಾಮಿಯೂ ಆದ ಕೃಷ್ಣನು ಕುಂತಿಗೆ ಪ್ರದಕ್ಷಿಣೆಯನ್ನು ಮಾಡಿ, ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟನು.
ತತೋ ವಿಸರ್ಜಯಾಮಾಸ ಭೀಷ್ಮಾದೀನ್ ಕುರುಪುಂಗವಾನ್ |
ಆರೋಪ್ಯಾಥ ರಥೇ ಕರ್ಣಂ ಪ್ರಾಯಾತ್ ಸಾತ್ಯಕಿನಾ ಸಹ ||31||
ಅನಂತರ ಕುರುಪುಂಗವರಾದ ಭೀಷ್ಮಾದಿಗಳನ್ನು ಕಳುಹಿಸಿ, ರಥದಲ್ಲಿ ಕರ್ಣನನ್ನು ಕುಳ್ಳಿರಿಸಿಕೊಂಡು ಸಾತ್ಯಕಿಯ ಜೊತೆಯಲ್ಲಿ ಹೊರಟನು.
ತತಃ ಪ್ರಯಾತೇ ದಾಶಾರ್ಹೇ ಕುರವಃ ಸಂಗತಾ ಮಿಥಃ |
ಜಜಲ್ಪುರ್ಮಹದಾಶ್ಚರ್ಯಂ ಕೇಶವೇ ಪರಮಾದ್ಭುತಮ್ ||32||
ನಂತರ ಕೃಷ್ಣನು ಹೊರಟು ಹೋದ ಮೇಲೆ ಕೌರವರು ಒಟ್ಟುಗೂಡಿ ಕೃಷ್ಣನ ಮಹದಾಶ್ಚರ್ಯಕರವಾದ ಅದ್ಭುತವಾದ ಮಹಿಮೆಗಳನ್ನು ಮಾತನಾಡಿಕೊಂಡರು.
ಪ್ರಮೂಢಾ ಪೃಥಿವೀ ಸರ್ವಾ ಮೃತ್ಯುಪಾಶವಶೀಕೃತಾ |
ದುರ್ಯೋಧನಸ್ಯ ಬಾಲಿಶ್ಯಾನ್ನೈತದಸ್ತೀತಿ ಚಾಬ್ರುವನ್ ||33||
ಮೃತ್ಯುಪಾಶಕ್ಕೆ ಸಿಲುಕಿದ ಎಲ್ಲಾ ಭೂಮಿಯೂ ಅಜ್ಞಾನದಿಂದ ಕೂಡಿದೆ. ದುರ್ಯೋಧನನ ಬಾಲಿಶಬುದ್ಧಿಯ ನಿಮಿತ್ತದಿಂದ ಈ ರಾಜ್ಯವು ಅವನಿಗೆ ಉಳಿಯುವುದಿಲ್ಲ ಎಂದು ಹೇಳಿದರು.
ತತೋ ನಿರ್ಯಾಯ ನಗರಾತ್ ಪ್ರಯಯೌ ಪುರುಷೋತ್ತಮಃ |
ಮಂತ್ರಯಾಮಾಸ ಸ ತದಾ ಕರ್ಣೇನ ಸುಚಿರಂ ಸಹ ||34||
ಅನಂತರ ನಗರದಿಂದ ಹೊರಗೆ ಬಂದ ಪುರುಷೋತ್ತಮನು ಕರ್ಣನ ಜೊತೆಯಲ್ಲಿ ಬಹಳ ಕಾಲ ಮಂತ್ರಾಲೋಚನೆಯನ್ನು ಮಾಡಿದನು.
ವಿಸರ್ಜಯಿತ್ವಾ ರಾಧೇಯಂ ಸರ್ವಯಾದವನಂದನಃ ||35||
ಅಶ್ವತ್ಥಾಮಾನಮಾಹೂಯ ಮಂತ್ರಯಿತ್ವಾ ಪುನಃ ಪುನಃ |
ತತೋ ಜವೇನ ಮಹತಾ ತೂರ್ಣಮಶ್ವಾನಚೋದಯತ್ ||36||
ಸರ್ವಯಾದವನಂದನನಾದ ಕೃಷ್ಣನು ಕರ್ಣನನ್ನು ಬೀಳ್ಕೊಟ್ಟು, ಅಶ್ವತ್ಥಾಮರನ್ನು ಕರೆದು, ಅವರ ಜೊತೆ ಪುನಃ ಪುನಃ ಮಂತ್ರಾಲೋಚನೆಯನ್ನು ಮಾಡಿ, ಅನಂತರ ಶೀಘ್ರವಾಗಿ ತನ್ನ ಅಶ್ವಗಳನ್ನು ಪ್ರಚೋದಿಸಿದನು.
ತೇ ಪಿಬಂತ ಇವಾಕಾಶಂ ದಾರುಕೇಣ ಪ್ರಚೋದಿತಾಃ |
ಹಯಾ ಜಗ್ಮುರ್ಮಹಾವೇಗಾ ಮನೋಮಾರುತರಂಹಸಃ ||37||
ದಾರುಕನಿಂದ ಪ್ರಚೋದಿತವಾದ, ಮನೋಮಾರುತವೇಗವುಳ್ಳ ಆ ಮಹಾವೇಗವುಳ್ಳ ಅಶ್ವಗಳು ಆಕಾಶವನ್ನು ಕುಡಿಯುವಂತೆ ಹೊರಟವು.
ತೇ ವ್ಯತೀತ್ಯ ಮಹಾಧ್ವಾನಂ ಕ್ಷಿಪ್ರಂ ಶ್ಯೇನಾ ಇವಾಶುಗಾಃ |
ಉಚ್ಚೈರ್ಜಗ್ಮುರುಪಪ್ಲಾವ್ಯಂ ಶಾರ್ಙ್ಗಧನ್ವಾನಮಾವಹನ್ ||38||
ಆ ಅಶ್ವಗಳು ಶೀಘ್ರಗಾಮಿಗಳಾದ ಹದ್ದುಗಳಂತೆ ಶೀಘ್ರವಾಗಿ ಆ ದೊಡ್ಡ ಮಾರ್ಗವನ್ನು ದಾಟಿ ಶಾರ್ಙ್ಗಧನುರ್ಧಾರಿಯಾದ ಕೃಷ್ಣನನ್ನು ಕರೆದುಕೊಂಡು ಉಪಪ್ಲಾವ್ಯನಗರಕ್ಕೆ ಬಂದವು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ತ್ರಿಂಶೋತ್ತರಶತತಮೋಽಧ್ಯಾಯಃ ||
|| ಭಗವದ್ಯಾನಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಮೂವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೇಳನೆಯ ಅಧ್ಯಾಯ
ಕುಂತಿಯ ವಾಕ್ಯವನ್ನು ಕೇಳಿ, ಭೀಷ್ಮ-ದ್ರೋಣರಿಂದ ದುರ್ಯೋಧನನಿಗೆ
ಸಂಧಿಯನ್ನು ಮಾಡಿಕೊಳ್ಳುವಂತೆ ಒತ್ತಾಯ.
ವೈಶಂಪಾಯನಃ
ಕುಂತ್ಯಾಸ್ತು ಭಾರತೀಂ ಶ್ರುತ್ವಾ ಭೀಷ್ಮದ್ರೋಣೌ ಮಹಾರಥೌ |
ದುರ್ಯೋಧನಮಿದಂ ವಾಕ್ಯಮೂಚತುಃ ಶಾಸನಾತಿಗಮ್ ||1||
ವೈಶಂಪಾಯನ ಕುಂತಿಯ ಮಾತನ್ನು ಕೇಳಿದ, ಮಹಾರಥರಾದ ಭೀಷ್ಮ-ದ್ರೋಣರು ದೊಡ್ಡವರ ಮಾತನ್ನು ಕೇಳದ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಆಡಿದರು.
ಶ್ರುತಂ ತೇ ಪುರುಷವ್ಯಾಘ್ರ ಕುಂತ್ಯಾಃ ಕೃಷ್ಣಸ್ಯ ಸನ್ನಿಧೌ |
ವಾಕ್ಯಮರ್ಥವದತ್ಯುಗ್ರಮುಕ್ತಂ ಧರ್ಮ್ಯಮನುತ್ತಮಮ್ ||2||

ಎಲೈ ಪುರುಷವ್ಯಾಘ್ರನೇ, ಕೃಷ್ಣನ ಸನ್ನಿಧಿಯಲ್ಲಿ ಕುಂತಿಯು ಆಡಿದ ಧರ್ಮಯುಕ್ತವಾದ, ಶ್ರೇಷ್ಠವಾದ, ಸಾರ್ಥಕವಾದ, ಅತ್ಯಂತ ಉಗ್ರವಾದ ಮಾತುಗಳನ್ನು ನೀನು ಕೇಳಿದ್ದೀಯೆ.
ತತ್ ಕರಿಷ್ಯಂತಿ ಕೌಂತೇಯಾ ವಾಸುದೇವಸ್ಯ ಸಮ್ಮತಮ್ |
ನ ಹಿ ತೇ ಜಾತು ಶಾಮ್ಯೇರನ್ ಋತೇ ರಾಜ್ಯೇನ ಕೌರವ ॥3॥
ಕೃಷ್ಣನಿಗೆ ಸಮ್ಮತರಾದ ಪಾಂಡವರು ಹಾಗೆಯೇ ಮಾಡುವರು. ಎಲೈ ಕೌರವನೇ, ರಾಜ್ಯವನ್ನು ಪಡೆಯದೆ ಅವರು ಎಂದೂ ಶಾಂತಿಯನ್ನು ಹೊಂದಲಾರರು.
ಕ್ಲೇಶಿತಾ ಹಿ ತ್ವಯಾ ಪಾರ್ಥಾ ಧರ್ಮಪಾಶಸಿತಾಸ್ತದಾ |
ಸಭಾಯಾಂ ದ್ರೌಪದೀ ಚೈವ ತೈಶ್ಚ ತನ್ಮರ್ಷಿತಂ ತವ ॥4॥
ನೀನು ಪಾಂಡವರನ್ನೂ ಮತ್ತು ಸಭೆಯಲ್ಲಿ ದ್ರೌಪದಿಯನ್ನೂ ಕ್ಲೇಶಕ್ಕೆ ಗುರಿ ಮಾಡಿದ್ದೀಯೆ. ಧರ್ಮಪಾಶಬದ್ಧರಾದ ಪಾಂಡವರು ನಿನ್ನ ಅಪರಾಧವನ್ನು ಸಹಿಸಿಕೊಂಡಿದ್ದಾರೆ.
ಕೃತಾಸ್ತ್ರಂ ಹ್ಯರ್ಜುನಂ ಪ್ರಾಪ್ಯ ಭೀಮಂ ಚ ಕೃತನಿಶ್ಚಯಮ್ |
ರೌದ್ರಮಸ್ತ್ರಂ ಚ ಗಾಂಡೀವಂ ರಥಂ ಚ ಧ್ವಜಮೇವ ಚ ॥5॥
ನಕುಲಂ ಸಹದೇವಂ ಚ ಬಲವೀರ್ಯಸಮನ್ವಿತೌ |
ಸಹಾಯಂ ವಾಸುದೇವಂ ಚ ನ ಕ್ಷಾಮ್ಯತಿ ಯುಧಿಷ್ಠಿರಃ ॥6॥
ಯುಧಿಷ್ಠಿರನು ಅಸ್ತ್ರವಿದ್ಯೆಯನ್ನು ಸಂಪಾದಿಸಿದ ಅರ್ಜುನನನ್ನೂ, ಯುದ್ಧವನ್ನು ನಿರ್ಧರಿಸುವ ಭೀಮನನ್ನೂ ಮತ್ತು ಉಗ್ರವಾದ ಗಾಂಡೀವಾಸ್ತ್ರವನ್ನೂ, ರಥ ಮತ್ತು ಧ್ವಜಗಳನ್ನೂ, ಬಲವೀರಸಂಪನ್ನರಾದ ನಕುಲ-ಸಹದೇವರನ್ನೂ ಮತ್ತು ಕೃಷ್ಣನ ಸಹಾಯವನ್ನೂ ಹೊಂದಿದವನಾಗಿ ನಿನ್ನನ್ನು ಕ್ಷಮಿಸುವುದಿಲ್ಲ.
ಪ್ರತ್ಯಕ್ಷಂ ತೇ ಮಹಾಬಾಹೋ ಯಥಾ ಪಾರ್ಥೇನ ಧೀಮತಾ |
ವಿರಾಟನಗರೇ ಪೂರ್ವಂ ಸರ್ವೇ ಸ್ಮ ಯುಧಿ ನಿರ್ಜಿತಾಃ ॥7॥
ಎಲೈ ಮಹಾಬಾಹುವೇ, ವಿರಾಟನಗರದಲ್ಲಿ ಮೇಧಾವಿಯಾದ ಅರ್ಜುನನು ಹೇಗೆ ನಮ್ಮೆಲ್ಲರನ್ನೂ ಯುದ್ಧದಲ್ಲಿ ಸೋಲಿಸಿದನು ಎಂಬುದು ನಿನಗೆ ಪ್ರತ್ಯಕ್ಷವಾದ ವಿಷಯ.
ದಾನವಾ ಘೋರಕರ್ಮಾಣೋ ನಿವಾತಕವಚಾ ಯುಧಿ |
ರೌದ್ರಮಸ್ತ್ರಂ ಸಮಾದಾಯ ದಗ್ಧಾ ವಾನರಕೇತುನಾ ॥8॥
ಕಪಿಧ್ವಜನಾದ ಅರ್ಜುನನು ಪಾಶುಪತಾಸ್ತ್ರವನ್ನು ತೆಗೆದುಕೊಂಡು ಘೋರಕರ್ಮವನ್ನು ಮಾಡುವ ನಿವಾತಕವಚ ದೈತ್ಯರನ್ನು ಯುದ್ಧದಲ್ಲಿ ಸುಟ್ಟು ಹಾಕಿದನು.
ಕರ್ಣಪ್ರಭೃತಯಶ್ಚೇಮೇ ತ್ವಂ ಚಾಪಿ ಕವಚೀ ರಥೀ |
ಮೋಕ್ಷಿತೋ ಘೋಷಯಾತ್ರಾಯಾಂ ಪರ್ಯಾಪ್ತಂ ತನ್ನಿದರ್ಶನಮ್ ॥9॥
ಈ ಕರ್ಣ ಮೊದಲಾದವರು ಮತ್ತು ಕವಚವನ್ನು ಧರಿಸಿ ರಥದಲ್ಲಿ ಕುಳಿತಿದ್ದ ನೀನೂ ಸಹ ಘೋಷಯಾತ್ರೆಯಲ್ಲಿ ಭೀಮಾರ್ಜುನರಿಂದ ಬಿಡುಗಡೆಯನ್ನು ಹೊಂದಿದೆ. ಇದೊಂದು ದೃಷ್ಟಾಂತವು ಸಾಕು.
ಪ್ರಶಾಮ್ಯ ಭರತಶ್ರೇಷ್ಠ ಭ್ರಾತೃಭಿಃ ಸಹ ಪಾಂಡವೈಃ |
ರಕ್ಷೇಮಾಂ ಪೃಥಿವೀಂ ಸರ್ವಾಂ ಮೃತ್ಯುದಂಷ್ಟ್ರಾಂತರಸ್ಥಿತಾಮ್ ॥10॥
ಎಲೈ ಭರತಶ್ರೇಷ್ಠನೇ, ಸಹೋದರರಾದ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ. ಮೃತ್ಯುವಿನ ದವಡೆಯಲ್ಲಿ ಸಿಕ್ಕಿದ ಈ ಪೃಥ್ವಿಯೊಂದಿಗೆ ಎಲ್ಲವನ್ನೂ ರಕ್ಷಿಸು.
ಜ್ಯೇಷ್ಠೋ ಭ್ರಾತಾ ಧರ್ಮಶೀಲೋ ವತ್ಸಲಃ ಶ್ಲಕ್ಷ್ಣವಾಕ್ ಶುಚಿಃ |
ತಂ ಗಚ್ಛ ಪುರುಷವ್ಯಾಘ್ರಂ ವ್ಯಪನೀಯೇಹ ಕಿಲ್ಬಿಷಮ್ ॥11॥
ಅಣ್ಣನಾದ ಧರ್ಮರಾಜನು ಧರ್ಮಶೀಲನಾದವನು, ವಾತ್ಸಲವುಳ್ಳವನು, ಮಧುರವಾದ ಮಾತನ್ನುಳ್ಳವನು ಮತ್ತು ಶುಚಿಯಾದವನು. ದೋಷವನ್ನು ಬಿಟ್ಟು ಪುರುಷವ್ಯಾಘ್ರನಾದ ಅವನ ಬಳಿಗೆ ಹೋಗು.
ದೃಷ್ಟಶ್ಚೇತ್ ತ್ವಂ ಪಾಂಡವೇನ ವ್ಯಪನೀತಶರಾಸನಃ |
ಪ್ರಸನ್ನೋ ಭ್ರಾತೃಭಿಃ ಶೀಘ್ರಂ ಕೃತಾ ಶಾಂತಿಃ ಕುಲಸ್ಯ ಚ ॥12॥
ನೀನು ಧನುರ್ಬಾಣಗಳನ್ನು ಧರಿಸದೆ, ಸಹೋದರರ ಜೊತೆಯಲ್ಲಿ ಪ್ರಸನ್ನನಾಗಿ ಹೋಗುವುದನ್ನು ಧರ್ಮರಾಜನು ನೋಡಿದರೆ ಶೀಘ್ರವಾಗಿ ಕುಲಕ್ಕೆ ಶಾಂತಿಯುಂಟಾಗುತ್ತದೆ.
ತಮಭ್ಯೇತ್ಯ ಸಹಾಮಾತ್ಯಂ ಪರಿಷ್ವಜ್ಯ ನೃಪಾತ್ಮಜಮ್ |
ಅಭಿವಾದಯ ರಾಜಾನಂ ಯಥಾಪೂರ್ವಮರಿಂದಮ ॥13॥
ಎಲೈ ಅರಿಂದಮನೇ, ಅಮಾತ್ಯರಿಂದ ಸಹಿತನಾದ, ರಾಜಕುಮಾರನಾದ ಅವನನ್ನು ಸಮೀಪಿಸಿ, ರಾಜನಾದ ಅವನಿಗೆ ಮೊದಲಿನಂತೆ ನಮಸ್ಕಾರವನ್ನು ಮಾಡು.
ಅಭಿವಾದಯಮಾನಂ ತ್ವಾಂ ಪಾಣಿಭ್ಯಾಂ ಭೀಮಪೂರ್ವಜಃ |
ಪ್ರತಿಗೃಹ್ಣಾತು ಸೌಹಾರ್ದಾತ್ ಕುಂತೀಪುತ್ರೋ ಯುಧಿಷ್ಠಿರಃ ॥14॥
ಭೀಮನ ಅಣ್ಣನಾದ, ಕುಂತೀಪುತ್ರನಾದ ಯುಧಿಷ್ಠಿರನು ನಮಸ್ಕಾರ ಮಾಡುವ ನಿನ್ನನ್ನು ತನ್ನ ಹಸ್ತಗಳಿಂದ ಪ್ರೀತಿಯಿಂದ ಎತ್ತಲಿ.
ಸಿಂಹಸ್ಕಂಧೋರುಬಾಹುಭ್ಯಾಂ ವೃತ್ತಾಯತಮಹಾಭುಜಃ |
ಪರಿಷ್ವಜತು ಬಾಹುಭ್ಯಾಂ ಭೀಮಃ ಪ್ರಹರತಾಂ ವರಃ ॥15॥

ದೀರ್ಘವಾದ ಮತ್ತು ಪುಷ್ಟವಾದ ಮಹಾಭುಜವುಳ್ಳ, ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಭೀಮನು ಸಿಂಹಸ್ಕಂಧದಂತಿರುವ ತನ್ನ ಬಾಹುಗಳಿಂದ ನಿನ್ನನ್ನು ಆಲಿಂಗಿಸಲಿ.
ಕಂಬುಗ್ರೀವೋ ಗುಡಾಕೇಶಃ ತತಸ್ತ್ವಂ ಪುಷ್ಕರೇಕ್ಷಣಃ |
ಅಭಿವಾದಯತಾಂ ಪಾರ್ಥಃ ಕುಂತೀಪುತ್ರೋ ಧನಂಜಯಃ ||16||
ಅನಂತರ ಕಂಬುಕಂಠನೂ, ಕಮಲನಯನನೂ, ಗುಡಾಕೇಶನೂ ಆದ ಕುಂತೀಪುತ್ರನಾದ ಧನಂಜಯನು ನಿನಗೆ ನಮಸ್ಕಾರವನ್ನು ಮಾಡಲಿ.
ಆಶ್ವಿನೇಯೌ ನರವ್ಯಾಘ್ರೌ ರೂಪೇಣಾಪ್ರತಿಮೌ ಭುವಿ |
ತೌ ಚ ತ್ವಾಂ ಗುರುವತ್ ಪ್ರೇಮ್ಣಾ ಪೂಜಯಾ ಪ್ರತ್ಯುದೀಯತಾಮ್ ||
ನರವ್ಯಾಘ್ರರೂ, ಭೂಮಿಯಲ್ಲಿ, ರೂಪದಲ್ಲಿ ಅಸದೃಶರಾದವರೂ ಆದ ಅಶ್ವಿನೀಕುಮಾರರಾದ ಆ ನಕುಲ-ಸಹದೇವರು ಗುರುವಿನಂತೆ ಪ್ರೀತಿಯಿಂದ ನಿನ್ನನ್ನು ಪೂಜಿಸಲು ಮುಂದೆ ಬರಲಿ.
ಮುಂಚಂತ್ವಾನಂದಜಾಶ್ರೂಣಿ ದಾಶಾರ್ಹಪ್ರಮುಖಾ ನೃಪಾಃ |
ಸಂಗಚ್ಛ ಭ್ರಾತೃಭಿಃ ಸಾರ್ಧಂ ಮಾನಂ ಸಂತ್ಯಜ್ಯ ಪಾರ್ಥಿವ ||18||
ದಾಶಾರ್ಹರೇ ಮೊದಲಾದ ರಾಜರು ಆನಂದಬಾಷ್ಪಗಳನ್ನು ಸುರಿಸಲಿ. ಎಲೈ ರಾಜನೇ, ಅಹಂಕಾರವನ್ನು ಬಿಟ್ಟು, ಸಹೋದರರ ಜೊತೆಯಲ್ಲಿ ಸಮಾಗಮವನ್ನು ಹೊಂದುವವನಾಗು.
ಪ್ರಶಾಧಿ ಪೃಥಿವೀಂ ಕೃತ್ಸ್ನಾಂ ತತಸ್ತ್ವಂ ಭ್ರಾತೃಭಿಃ ಸಹ |
ಸಮಾಲಿಂಗ್ಯ ಚ ಹರ್ಷೇಣ ನೃಪಾ ಯಾಂತು ಪರಸ್ಪರಮ್ ||19||
ಅನಂತರ ಸಹೋದರರಿಂದ ಸಹಿತನಾಗಿ ಸಮಗ್ರವಾದ ಭೂಮಿಯನ್ನು ಆಳುವವನಾಗು. ಇಲ್ಲಿಗೆ ಬಂದಿರುವ ರಾಜರು ಪರಸ್ಪರ ಆಲಿಂಗನವನ್ನು ಮಾಡಿಕೊಂಡು ತಮ್ಮ ತಮ್ಮ ದೇಶಗಳಿಗೆ ಹೋಗಲಿ.
ಅಲಂ ಯುದ್ಧೇನ ರಾಜೇಂದ್ರ ಸುಹೃದಾಂ ಶೃಣು ಭಾರತ |
ಧ್ರುವೋ ವಿನಾಶೋ ಯುದ್ಧೇ ಹಿ ಕ್ಷತ್ರಿಯಾಣಾಂ ಪ್ರದೃಶ್ಯತೇ ||20||
ಎಲೈ ರಾಜೇಂದ್ರನೇ, ಯುದ್ಧವನ್ನು ನಿಲ್ಲಿಸು. ಎಲೈ ಭಾರತನೇ, ಹಿತೈಷಿಗಳ ಮಾತನ್ನು ಕೇಳು. ಯುದ್ಧವನ್ನು ಮಾಡಿದರೆ ಕ್ಷತ್ರಿಯರ ವಿನಾಶವು ಸ್ಪಷ್ಟವಾಗಿ ಕಂಡುಬರುತ್ತಿದೆ.
ಜ್ಯೋತೀಂಷಿ ಪ್ರತಿಕೂಲಾನಿ ದಾರುಣಾ ಮೃಗಪಕ್ಷಿಣಃ |
ಉತ್ಪಾತಾ ವಿವಿಧಾ ವೀರ ದೃಶ್ಯಂತೇ ಕ್ಷತ್ರನಾಶನಾಃ ||21||
ಗ್ರಹಗಳು ಪ್ರತಿಕೂಲವಾಗಿವೆ. ಮೃಗ-ಪಕ್ಷಿಗಳು ದಾರುಣವಾಗಿವೆ. ಎಲೈ ವೀರನೇ, ಕ್ಷತ್ರಿಯರ ನಾಶವನ್ನು ಸೂಚಿಸುವ ಅನೇಕ ಅಪಶಕುನಗಳು ಕಂಡುಬರುತ್ತಿವೆ.
ವಿಶೇಷತ ಇಹಾಸ್ಮಾಕಂ ನಿಮಿತ್ತಾನಿ ನಿವೇಶನೇ |
ಉಲ್ಕಾಭಿರ್ಹಿ ಪ್ರದೀಪ್ತಾಭಿರ್ವಧ್ಯತೇ ಪೃತನಾ ತವ ||22||
ವಿಶೇಷವಾಗಿ ನಮ್ಮ ವಿನಾಶವನ್ನು ಸೂಚಿಸುವ ಶಕುನಗಳು ನಮ್ಮ ನಿವೇಶನಗಳಲ್ಲಿ ಕಂಡುಬರುತ್ತಿವೆ. ನಿನ್ನ ಸೈನ್ಯದ ಮೇಲೆ ಪ್ರದೀಪ್ತವಾದ ಉಲ್ಕೆಗಳು ಬೀಳುತ್ತಿವೆ.
ವಾಹನಾನ್ಯಪ್ರಹೃಷ್ಟಾನಿ ರುದಂತಿ ಚ ವಿಶಾಂಪತೇ |
ಗೃಧ್ರಾಶ್ಚ ಪರ್ಯುಪಾಸಂತೇ ಸೈನ್ಯಾನಿ ಚ ಸಮಂತತಃ ||23||
ಎಲೈ ರಾಜನೇ, ಅಶ್ವ-ಗಜ ಮೊದಲಾದ ವಾಹನಗಳು ಸಂತೋಷರಹಿತವಾಗಿವೆ ಮತ್ತು ಕಣ್ಣೀರನ್ನು ಸುರಿಸುತ್ತಿವೆ. ನಿನ್ನ ಸೈನ್ಯದ ಮೇಲೆ ಎಲ್ಲ ಕಡೆಗಳಿಂದಲೂ ಹದ್ದುಗಳು ಎರಗುತ್ತಿವೆ.
ನಗರಂ ನ ಯಥಾಪೂರ್ವಂ ತಥಾ ರಾಜನಿವೇಶನಮ್ |
ಶಿವಾಶ್ಚಾಶಿವನಿರ್ಘೋಷಾ ದೀಪ್ತಾಂ ಸೇವಂತಿ ವೈ ದಿಶಮ್ ||24||
ನಗರವಾಗಲೀ ಅಥವಾ ಅರಮನೆಯಾಗಲೀ ಮೊದಲಿನಂತೆ ಕಾಣುತ್ತಿಲ್ಲ. ನರಿಗಳು ದಕ್ಷಿಣದಿಕ್ಕನ್ನು ಆಶ್ರಯಿಸಿ, ಅಮಂಗಳವಾದ ರೋದನಧ್ವನಿಯನ್ನು ಮಾಡುತ್ತಿವೆ.
ಕುರು ವಾಕ್ಯಂ ಪಿತುರ್ಮಾತುರಸ್ಮಾಕಂ ಚ ಹಿತೈಷಿಣಾಮ್ |
ತ್ವಯ್ಯಾಯತ್ತೋ ಮಹಾಬಾಹೋ ಶಮೋ ವ್ಯಾಯಾಮ ಏವ ಚ ||25||
ಹಿತೈಷಿಗಳಾದ ತಂದೆಯ, ತಾಯಿಯ ಮತ್ತು ನಮ್ಮ ಮಾತುಗಳನ್ನು ಕೇಳು. ಎಲೈ ಮಹಾಬಾಹುವೇ, ಶಾಂತಿಯಾಗಲೀ ಅಥವಾ ಯುದ್ಧವಾಗಲೀ ನಿನ್ನನ್ನು ಅವಲಂಬಿಸಿದೆ.
ನ ಚೇತ್ ಕರಿಷ್ಯಸಿ ವಚಃ ಸುಹೃದಾಮರಿಸೂದನ |
ತಪ್ಸ್ಯಸೇ ವಾಹಿನೀಂ ದೃಷ್ಟ್ವಾ ಪಾರ್ಥಬಾಣಪ್ರಪೀಡಿತಾಮ್ ||26||
ಎಲೈ ಶತ್ರುಸೂದನನೇ, ನಮ್ಮ ಮಾತನ್ನು ಕೇಳದಿದ್ದರೆ ಅರ್ಜುನನ ಬಾಣಗಳಿಂದ ಪೀಡಿತವಾದ ನಿನ್ನ ಸೈನ್ಯವನ್ನು ನೋಡಿ ಪಶ್ಚಾತ್ತಾಪವನ್ನು ಪಡುವಿ.
ಭೀಮಸ್ಯ ಚ ಮಹಾನಾದಂ ನದತಃ ಶುಷ್ಮಿಣೋ ರಣೇ |
ನಿರ್ಘಾತಸದೃಶಂ ತಸ್ಯ ಗದಯಾ ಭೀಮವೇಗಯಾ ||27||
ಶ್ರುತ್ವಾ ಸ್ಮರ್ತಾಸಿ ಮೇ ವಾಕ್ಯಂ ಗಾಂಡೀವಸ್ಯ ಚ ನಿಸ್ವನಮ್ ||28||
ಯದ್ಯೇತದಪಸವ್ಯಂ ತೇ ವಚೋ ಮಮ ಭವಿಷ್ಯತಿ ||29||

ಈ ನನ್ನ ಮಾತುಗಳು ನಿನಗೆ ಹಿಡಿಸದಿದ್ದರೆ ನೀನು ಯುದ್ಧದಲ್ಲಿ ವೀರಶಾಲಿಯಾದ ಭೀಮನ ಮಹಾಅಬ್ಬರಗಳನ್ನೂ, ಭಯಂಕರವೇಗವುಳ್ಳ ಅವನ ಗದೆಯಿಂದ ಉಂಟಾಗುವ ಸಿಡಿಲಿನಂತಹ ಶಬ್ಧವನ್ನೂ, ಗಾಂಡೀವ ಧನುಸ್ಸಿನ ಶಬ್ಧವನ್ನೂ ಕೇಳಿ ನನ್ನ ಮಾತುಗಳನ್ನು ಸ್ಮರಿಸುವಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತತ್ರಿಂಶೋತ್ತರಶತತಮೋಽಧ್ಯಾಯಃ ॥

॥ ಭಗವದ್ಯಾನಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರಮೂವತ್ತೇಳನೆಯ ಅಧ್ಯಾಯ ಮುಗಿಯಿತು.

* * * * *

ನೂರ ಮೂವತ್ತೆಂಟನೆಯ ಅಧ್ಯಾಯ

ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಬೇಕಾಗಿ ಬಂದುದಕ್ಕೆ ಭೀಷ್ಮ-ದ್ರೋಣರ ಪರಿತಾಪ. ದುರ್ಯೋಧನನಿಗೆ ಸಮಾಧಾನವನ್ನು ಮಾಡಲು ಪುನಃ ಪ್ರಯತ್ನ.

ವೈಶಂಪಾಯನಃ

ಏವಮುಕ್ತಸ್ತು ವಿಮನಾಃ ತಿರ್ಯಗ್ ದೃಷ್ಟಿರಧೋಮುಖಃ |
ಸಂಹತ್ಯ ಚ ಭ್ರುವೋರ್ಮಧ್ಯಂ ನ ಕಿಂಚಿದ್ ವ್ಯಾಜಹಾರ ಹ ॥1॥

ವೈಶಂಪಾಯನ ಈ ಮಾತುಗಳನ್ನು ಹೇಳುತ್ತಿರಲು, ದುರ್ಯೋಧನನು ಮುಖವನ್ನು ಕೆಳಗೆ ತಗ್ಗಿಸಿ, ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಿ, ಅನ್ಯಮನಸ್ಕನಾಗಿ ಹುಬ್ಬುಗಳನ್ನು ಗಂಟಿಕ್ಕಿ ಏನನ್ನೂ ಮಾತನಾಡಲಿಲ್ಲ.

ತಂ ವೈ ವಿಮನಸಂ ದೃಷ್ಟ್ವಾ ಸಂಪ್ರೇಕ್ಷ್ಯಾನ್ಯೋನ್ಯಮಂತಿಕಾತ್ |
ಪುನರೇವೋಚತುರ್ವಾಕ್ಯಮುಕ್ತವಂತೌ ನರರ್ಷಭೌ ॥2॥

ತಮ್ಮ ವಾಕ್ಯವನ್ನು ಕೇಳುವ ಮನಸ್ಸಿಲ್ಲದ ಅವನನ್ನು ನೋಡಿ, ಶ್ರೇಷ್ಠವಾದ ಮಾತುಗಳನ್ನು ಹೊಂದಿದ ನರಶ್ರೇಷ್ಠರಾದ ಭೀಷ್ಮ-ದ್ರೋಣರು ಸಮೀಪದಲ್ಲಿ ಒಬ್ಬರನ್ನೊಬ್ಬರು ನೋಡಿ ಪುನಃ ಮಾತನಾಡಿದರು.

ಭೀಷ್ಮಃ

ಶುಶ್ರೂಷುಮನಸೂಯುಂ ಚ ಬ್ರಹ್ಮಣ್ಯಂ ಸತ್ಯಸಂಗರಮ್ |
ಪ್ರತಿಯೋತ್ಸ್ಯಾಮಹೇ ಪಾರ್ಥಮತೋ ದುಃಖತರಂ ನು ಕಿಮ್ ॥3॥

ಭೀಷ್ಮ ಹಿರಿಯರ ಸೇವೆಯನ್ನು ಮಾಡುವ, ಅಸೂಯೆ ಇಲ್ಲದ, ಬ್ರಾಹ್ಮಣವತ್ಸಲನಾದ, ಸತ್ಯಸಂಧನಾದ ಯುಧಿಷ್ಠಿರನ ಜೊತೆಯಲ್ಲಿ ಯುದ್ಧವನ್ನು ಮಾಡುವೆವು. ಇದಕ್ಕಿಂತಲೂ ದುಃಖತರವಾದುದು ಏನಿದೆ?

ದ್ರೋಣಃ

ಅಶ್ವತ್ಥಾಮ್ನಿ ಯಥಾ ಪುತ್ರೇ ಭೂಯೋ ಮಮ ಧನಂಜಯೇ |
ಬಹುಮಾನಃ ಪರೋ ರಾಜನ್ ಸನ್ನತಿಶ್ಚ ಕಪಿಧ್ವಜೇ ॥4॥

ದ್ರೋಣ ಎಲೈ ರಾಜನೇ, ನನಗೆ ಮಗನಾದ ಅಶ್ವತ್ಥಾಮರಲ್ಲಿ ಎಂತಹ ಪ್ರೀತಿ ಇದೆಯೋ, ಅದಕ್ಕಿಂತಲೂ ಹೆಚ್ಚಿನ ಪ್ರೀತಿಯೂ, ಬಹುಮಾನವೂ ಮತ್ತು ಮನಃಪ್ರವಣತೆಯೂ ಕಪಿಧ್ವಜನಾದ ಅರ್ಜುನನಲ್ಲಿದೆ.

ತಂ ಚೇತ್ ಪುತ್ರಾತ್ ಪ್ರಿಯತರಂ ಪ್ರತಿಯೋತ್ಸ್ಯೇ ಧನಂಜಯಮ್ |
ಕ್ಷತ್ರಧರ್ಮಮನುಷ್ಠಾಯ ಧಿಗಸ್ತು ಕ್ಷತ್ರಜೀವಿಕಾಮ್ ॥5॥

ಕ್ಷತ್ರಿಯಧರ್ಮವನ್ನು ಅನುಸರಿಸಿ ಪುತ್ರರಿಗಿಂತಲೂ ಪ್ರಿಯತರನಾದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಬೇಕಾಗಿ ಬಂದರೆ ಕ್ಷತ್ರಿಯ ಜೀವನಕ್ಕೆ ಧಿಕ್ಕಾರವಿರಲಿ.

ಯಸ್ಯ ಲೋಕೇ ಸಮೋ ನಾಸ್ತಿ ಕಶ್ಚಿದನ್ಯೋ ಧನುರ್ಧರಃ |
ಮತ್ಪ್ರಸಾದಾತ್ ಸ ಬೀಭತ್ಸುಃ ಶ್ರೇಯಾನನ್ಯೈರ್ಧನುರ್ಧರೈಃ ॥6॥

ನನ್ನ ಅನುಗ್ರಹದಿಂದ ಯಾವನಿಗೆ ಸಮಾನವಾದ ಧನುರ್ಧಾರಿಯು ಲೋಕದಲ್ಲಿ ಇಲ್ಲವೋ ಅಂತಹ ಅರ್ಜುನನು ಉಳಿದ ಧನುರ್ಧಾರಿಗಳಿಗಿಂತ ಶ್ರೇಷ್ಠನಾದವನು.

ಮಿತ್ರಧ್ರುಗ್ ದುಷ್ಟಭಾವಶ್ಚ ನಾಸ್ತಿಕೋಽಥಾನೃಜುಃ ಶಠಃ |
ನ ಸತ್ಸು ಲಭತೇ ಪೂಜಾಂ ಯಜ್ಞೇ ಮೂರ್ಖ ಇವಾಗತಃ ॥7॥

ಮಿತ್ರದ್ರೋಹಿಯೂ, ದುಷ್ಟಭಾವವುಳ್ಳವನೂ, ನಾಸ್ತಿಕನೂ, ನೇರವಾದ ನಡತೆ ಇಲ್ಲದವನೂ, ಶಠನೂ ಆದ ವ್ಯಕ್ತಿಯು ಯಜ್ಞಕ್ಕೆ ಬಂದ ಮೂರ್ಖನಂತೆ ಸಜ್ಜನರಿಂದ ಗೌರವವನ್ನು ಪಡೆಯುವುದಿಲ್ಲ.

ವಾರ್ಯಮಾಣೋಽಪಿ ಪಾಪೇಭ್ಯಃ ಪಾಪಾತ್ಮಾ ಪಾಪಮಿಚ್ಛತಿ |
ಚೋದ್ಯಮಾನೋಽಪಿ ಪಾಪೇನ ಶುಭಾತ್ಮಾ ಶುಭಮಿಚ್ಛತಿ ॥8॥

ಪಾಪಬುದ್ಧಿಯುಳ್ಳವನು ಪಾಪದಿಂದ ನಿವಾರಿಸಿದರೂ ಸಹ ಪಾಪವನ್ನೇ ಬಯಸುತ್ತಾನೆ. ಒಳ್ಳೆಯ ಮನಸ್ಸುಳ್ಳವನು ಪಾಪವನ್ನು ಮಾಡುವಂತೆ ಪ್ರಚೋದಿಸಿದರೂ ಸಹ ಒಳ್ಳೆಯದನ್ನೇ ಬಯಸುತ್ತಾನೆ.

ಮಿಥ್ಯೋಪಚರಿತಾ ಹ್ಯೇತೇ ವರ್ತಮಾನಾ ಅಪಿ ಪ್ರಿಯೇ |
ಅಹಿತತ್ವಾಯ ಕಲ್ಪಂತೇ ದೋಷಾದ್ ಭರತಸತ್ತಮ ॥9॥

ಎಲೈ ಭರತಶ್ರೇಷ್ಠನೇ, ಕಪಟದಿಂದ ನಡೆಸಿಕೊಳ್ಳಲ್ಪಟ್ಟ ಇವರು ಸುಖದಲ್ಲಿದ್ದರೂ ಸಹ (ನಮ್ಮ) ದೋಷದಿಂದ ಅಹಿತರಾಗುತ್ತಾರೆ.
ತ್ವಮುಕ್ತಃ ಕುರುವೃದ್ಧೇನ ಮಯಾ ಚ ವಿದುರೇಣ ಚ |
ವಾಸುದೇವೇನ ಚ ತಥಾ ಶ್ರೇಯೋ ನೈವಾಭಿಪದ್ಯಸೇ ॥10॥
ಕುರುವೃದ್ಧರಾದ ಭೀಷ್ಮರಿಂದಲೂ, ನನ್ನಿಂದಲೂ, ವಿದುರನಿಂದಲೂ ಮತ್ತು ಕೃಷ್ಣನಿಂದಲೂ ಹೇಳಲ್ಪಟ್ಟರೂ ಸಹ ನೀನು ಶ್ರೇಯೋಮಾರ್ಗವನ್ನು ಹಿಡಿಯುತ್ತಿಲ್ಲ.
ಅಸ್ತಿ ಮೇ ಬಲಮಿತ್ಯೇವಂ ಸಹಸಾ ತ್ವಂ ತಿತೀರ್ಷಸಿ |
ಸಗ್ರಾಹನಕ್ರಮಕರಂ ಗಂಗಾಜಲಮಿವೋಷ್ಣಗೇ ॥11॥
ನನಗೆ ಬಲವಿದೆ ಎಂದು ತಿಳಿದು ನೀನು ಉಷ್ಣಕಾಲದಲ್ಲಿ ಅನೇಕ ಮೊಸಳೆಗಳಿರುವ ಗಂಗಾಜಲವನ್ನು ದಾಟಲು ಬಯಸುತ್ತಿದ್ದೀಯೆ.
ವಾಸಸ್ಯೈವ ಯಥಾ ಹಿ ತ್ವಂ ಪ್ರಾವೃಣ್ವಾನೋಽದ್ಯ ಮನ್ಯಸೇ |
ಸ್ರಜಂ ತ್ಯಕ್ತಾಮಿವ ಪ್ರಾಪ್ಯ ಲೋಭಾದ್ ಯೌಧಿಷ್ಠಿರೀಂ ಶ್ರಿಯಮ್ ॥
ಕೇವಲ ವಸ್ತ್ರದಿಂದ ನಿನ್ನನ್ನು ನೀನು ಮುಚ್ಚಿಕೊಂಡು, ಮುಡಿದು ಬಿಸಾಡಲ್ಪಟ್ಟ ಹೂಮಾಲೆಯಂತಿರುವ ಯುಧಿಷ್ಠಿರನ ಸಂಪತ್ತನ್ನು ಲೋಭದಿಂದ ಪಡೆಯಲು ನೀನು ಬಯಸುತ್ತಿದ್ದೀಯೆ.
ದ್ರೌಪದೀಸಹಿತಂ ಪಾರ್ಥಂ ಸಾಯುಧೈರ್ಭ್ರಾತೃಭಿರ್ವೃತಮ್ |
ವನಸ್ಥಮಪಿ ರಾಜ್ಯಸ್ಥಃ ಪಾಂಡವಂ ಕೋ ವಿಜೇಷ್ಯತಿ ॥13॥
ಆಯುಧಧಾರಿಗಳಾದ ಸಹೋದರರಿಂದಲೂ ಮತ್ತು ದ್ರೌಪದಿಯಿಂದಲೂ ಸಹಿತನಾದ ಯುಧಿಷ್ಠಿರನನ್ನು ಅವನು ಕಾಡಿನಲ್ಲಿದ್ದರೂ ರಾಜ್ಯದಲ್ಲಿದ್ದ ಯಾವನು ಅವನನ್ನು ಗೆಲ್ಲುವನು?
ನಿದೇಶೇ ಯಸ್ಯ ರಾಜಾನಃ ಸರ್ವೇ ತಿಷ್ಠಂತಿ ಕಿಂಕರಾಃ |
ತಮೈಲಬಿಲಮಾಸಾದ್ಯ ಧರ್ಮರಾಜೋ ವ್ಯರಾಜತ ॥14॥
ಯಾವನ ಅಧೀನರಾಗಿ ಎಲ್ಲ ರಾಜರೂ ಕಿಂಕರರಾಗಿ (ಸೇವಕರಂತೆ) ವರ್ತಿಸುತ್ತಾರೆಯೋ ಅಂತಹ ಕುಬೇರನನ್ನು ಹೊಂದಿ ಧರ್ಮರಾಜನು ಶೋಭಿಸಿದನು.
ಕುಬೇರಸದನಂ ಪ್ರಾಪ್ಯ ತತೋ ರತ್ನಾನ್ಯವಾಪ್ಯ ಚ |
ಸ್ಫೀತಮಾಕ್ರಮ್ಯ ತೇ ರಾಷ್ಟ್ರಂ ರಾಜ್ಯಮಿಚ್ಛಂತಿ ಪಾಂಡವಾಃ ॥15॥
ಕುಬೇರನ ಸದನಕ್ಕೆ ಹೋಗಿ, ಅವನಿಂದ ರತ್ನಗಳನ್ನು ಪಡೆದು ಪಾಂಡವರು ನಿನ್ನ ನಿರ್ಮಲವಾದ ರಾಷ್ಟ್ರವನ್ನು ಪಡೆಯಲು ಬಯಸುತ್ತಾರೆ.
ಇಷ್ಟಂ ಹುತಮಧೀತಂ ಚ ಬ್ರಾಹ್ಮಣಾಸ್ತರ್ಪಿತಾ ಧನೈಃ |
ಆವಯೋರ್ಗತಮಾಯುಶ್ಚ ಕೃತಕೃತ್ಯೌ ಚ ವಿದ್ಧಿ ನೌ ॥16॥
ನಾವಿಬ್ಬರೂ ಯಾಗವನ್ನು ಮಾಡಿದ್ದೇವೆ, ಹೋಮವನ್ನು ಮಾಡಿದ್ದೇವೆ, ಬ್ರಾಹ್ಮಣರನ್ನು ಧನದಿಂದ ಸಂತೋಷಪಡಿಸಿದ್ದೇವೆ. ನಾವು ಕೃತಕೃತ್ಯರಾಗಿದ್ದೇವೆ. ನಮ್ಮ ಆಯುಸ್ಸು ಮುಗಿದಿದೆ ಎಂದು ತಿಳಿಯುವವನಾಗು.
ತ್ವಂ ತು ಹಿತ್ವಾ ಸುಖಂ ರಾಜ್ಯಂ ಮಿತ್ರಾಣಿ ಚ ಧನಾನಿ ಚ |
ವಿಗ್ರಹಂ ಪಾಂಡವೈಃ ಕೃತ್ವಾ ಮಹದ್ ವ್ಯಸನಮಾಪ್ಸ್ಯಸಿ ॥17॥
ಆದರೆ ನೀನು ಸುಖವನ್ನೂ, ರಾಜ್ಯವನ್ನೂ, ಮಿತ್ರರನ್ನೂ, ಧನವನ್ನೂ ಬಿಟ್ಟು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿ ದೊಡ್ಡ ಸಂಕಟಕ್ಕೆ ಸಿಲುಕುವಿ.
ದ್ರೌಪದೀ ಯಸ್ಯ ಚಾಶಾಸ್ತೇ ವಿಜಯಂ ಸತ್ಯವಾದಿನೀ |
ತಪೋಘೋರವ್ರತಾ ದೇವೀ ನ ತ್ವಂ ಜೇಷ್ಯಸಿ ಪಾಂಡವಮ್ ॥18॥
ಸತ್ಯವಾದಿನಿಯೂ, ಘೋರವಾದ ತಪಸ್ಸು ಮತ್ತು ವ್ರತವನ್ನು ಆಚರಿಸುವವಳೂ ಆದ ದ್ರೌಪದೀ ದೇವಿಯು ಯಾರಿಗೆ ಜಯವನ್ನು ಬಯಸುತ್ತಾಳೆಯೋ ಅಂತಹ ಧರ್ಮರಾಜನನ್ನು ನೀನು ಗೆಲ್ಲುವುದಿಲ್ಲ.
ಮಂತ್ರೀ ಜನಾರ್ದನೋ ಯಸ್ಯ ಭ್ರಾತಾ ಯಸ್ಯ ಧನಂಜಯಃ |
ಸರ್ವಧರ್ಮಭೃತಾಂ ಶ್ರೇಷ್ಠಂ ನ ತ್ವಂ ಜೇಷ್ಯಸಿ ಪಾಂಡವಮ್ ॥19॥
ಯಾವನಿಗೆ ಕೃಷ್ಣನು ಮಂತ್ರಿಯೋ, ಅರ್ಜುನನು ತಮ್ಮನೋ, ಅಂತಹ ಧರ್ಮಾಚರಣೆಯನ್ನು ಮಾಡುವ, ಎಲ್ಲರಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ನೀನು ಗೆಲ್ಲುವುದಿಲ್ಲ.
ಸಹಾಯಾ ಬ್ರಾಹ್ಮಣಾ ಯಸ್ಯ ಧೃತಿಮಂತೋ ಜಿತೇಂದ್ರಿಯಾಃ |
ತಮುಗ್ರತಪಸಂ ವೀರಂ ಕಥಂ ಜೇಷ್ಯಸಿ ಪಾಂಡವಮ್ ॥20॥
ಧೈರ್ಯಶಾಲಿಗಳೂ, ಜಿತೇಂದ್ರಿಯರೂ ಆದ ಬ್ರಾಹ್ಮಣರು ಯಾರಿಗೆ ಸಹಾಯರಾಗಿದ್ದಾರೆಯೋ ಅಂತಹ ಉಗ್ರತಪಸ್ಸನ್ನು ಆಚರಿಸುವ ವೀರನಾದ ಯುಧಿಷ್ಠಿರನನ್ನು ನೀನು ಹೇಗೆ ಗೆಲ್ಲುವಿ?
ಪುನರುಕ್ತಂ ಚ ವಕ್ಷ್ಯಾಮಿ ಯತ್ ಕಾರ್ಯಂ ಭೂತಿಮಿಚ್ಛತಾ |
ಸುಹೃದಾ ಮಜ್ಜಮಾನೇಷು ಸುಹೃತ್ಸು ವ್ಯಸನಾರ್ಣವೇ ॥21॥
ಅಲಂ ಯುದ್ಧೇನ ತೈರ್ವೀರೈಃ ಶಾಮ್ಯ ತ್ವಂ ಕುರುವೃದ್ಧಯೇ |
ಮಾ ಗಮಃ ಸಸುತಾಮಾತ್ಯಃ ಸಮಿತ್ರಶ್ಚ ಯಮಕ್ಷಯಮ್ ॥22॥
ಬಂಧುಜನರಿಂದಲೇ ಬಂಧುಜನರು ವ್ಯಸನಕ್ಕೆ ಈಡಾಗಿ ಮುಳುಗುತ್ತಿರುವಾಗ ಅವರ ಹಿತವನ್ನು ಬಯಸುವವನು ಏನನ್ನು ಹೇಳಬೇಕೋ ಅದನ್ನು ಪುನಃ ಹೇಳುತ್ತೇನೆ `ಯುದ್ಧವನ್ನು ನಿಲ್ಲಿಸು. ಆ ವೀರರ ಜೊತೆಯಲ್ಲಿ ಕೌರವರ ವೃದ್ಧಿಗೋಸ್ಕರವಾಗಿ

ಸಂಧಿಯನ್ನು ಮಾಡಿಕೊ. ಪುತ್ರ-ಅಮಾತ್ಯಮಿತ್ರರಿಂದೊಡಗೂಡಿ ಯಮಲೋಕಕ್ಕೆ ಹೋಗಬೇಡ'.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಅಷ್ಟತ್ರಿಂಶೋತ್ತರಶತತಮೋಽಧ್ಯಾಯಃ ॥
॥ ಭಗವದ್ಯಾನಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಮೂವತ್ತೆಂಟನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಭಗವದ್ಯಾನಪರ್ವ ॥
* * * * *
7. ವಿವಾದಪರ್ವ
ಮಹಾಭಾರತತಾತ್ಪರ್ಯನಿರ್ಣಯಃ ಅಧ್ಯಾಯಃ 24
ಪುನಶ್ಚ ಕುಂತೀಗೃಹಮೇತ್ಯ ಕೃಷ್ಣ-
ಸ್ತದ್ಯೋಗಂ ಧರ್ಮಸುತಸ್ಯ ಶಿಷ್ಟಮ್ ।
ಶ್ರುತ್ವಾ ಯಯೌ ಸೂರ್ಯಜಮಾತ್ಮಯಾನೇ
ನಿಧಾಯ ತಸ್ಯಾವದದಾತ್ಮಜನ್ಮ ।
ಆಯಾಹಿ ಪಾಂಡೂನಿತಿ ತದ್ವಚಃ ಸ
ನೈವಾಕರೋನ್ಮಾನಿತೋ ಧಾರ್ತರಾಷ್ಟ್ರೈಃ ॥85॥
ಶ್ರೀಕೃಷ್ಣ ಪುನಃ ಕುಂತಿಯ ಮನೆಗೆ ಬಂದು, ಅವಳು ಧರ್ಮರಾಜನಿಗೆ ಯುದ್ಧಕ್ಕೆ ತೊಡಗಲೆಂದು ಉಪದೇಶಿಸಿದುದನ್ನು ಕೇಳಿ, ಕರ್ಣನ ಬಳಿಗೆ ಹೋದ. ಅವನನ್ನು ನಗರದಿಂದ ಹೊರಗೆ ಸ್ವಲ್ಪ ದೂರಕ್ಕೆ ರಥದಲ್ಲಿ ಕರೆದುಕೊಂಡು ಹೋಗಿ ಅವನ ಜನನದ ಬಗ್ಗೆ ತಿಳಿಸಿದ. ಪಾಂಡವರ ಪಕ್ಷಕ್ಕೆ ಬಾ ಎಂದ. ಕೌರವರಿಂದ ಸಮ್ಮಾನಿತನಾಗಿದ್ದ ಆತ ಕೃಷ್ಣನ ಆ ಮಾತನ್ನು ಒಪ್ಪಲಿಲ್ಲ.
ಸಂಸ್ಥಾಪ್ಯ ತಂ ಭಗವಾನ್ ದ್ರೋಣಯೇ ಚ
ರಹೋಽವದನ್ಮಿತ್ರಭಾವಂ ಪೃಥಾಜೈಃ ।
ಯಾವತ್ ಪಿತುರ್ಮರಣಂ ಸೋಽಪಿ
ಮೈತ್ರೀಂ ವವ್ರೇ ಪಾರ್ಥೈಸ್ತಂ ಚ ವಿಸೃಜ್ಯ ಕೃಷ್ಣಃ ॥86॥
ಯಯೌ ಕುರೂನ್ ಪೂರ್ವಮೇವೋದ್ವಿಸೃಜ್ಯ
ಪೃಥಾಸುತಾನಾಂ ಸ ಸಕಾಶಮೀಶಃ ॥87॥
ಭಗವಾನ್ ಶ್ರೀಕೃಷ್ಣ ಕರ್ಣನನ್ನು ರಥದಿಂದ ಕೆಳಗೆ ಇಳಿಸಿ, ಅಶ್ವತ್ಥಾಮನಿಗೂ ಪಾಂಡವರೊಡನೆ ಮೈತ್ರಿಯಿಂದ ಇರಲು ಏಕಾಂತದಲ್ಲಿ ಹೇಳಿದ. ಅವನು ತಂದೆಯ ಮರಣಪರ್ಯಂತ ಮೈತ್ರಿಯಿಂದಿರಲು ಒಪ್ಪಿದ. ಕೃಷ್ಣ ಅವನನ್ನೂ ಹಿಂದೆ ಕಳಿಸಿದ. ಕೌರವರನ್ನು ಕರ್ಣನೊಡನೆ ಮಾತನಾಡುವ ಮೊದಲೆ ಹಿಂದಿರುಗಿಸಿದ್ದ. ಬಳಿಕ ಕೃಷ್ಣ ಪಾಂಡವರ ಬಳಿಗೆ ಬಂದ.
* * * * *
ನೂರ ಮೂವತ್ತೊಂಬತ್ತನೆಯ ಅಧ್ಯಾಯ
ವೈಶಂಪಾಯನರಿಂದ ಕೃಷ್ಣ-ಕರ್ಣರ ಸಂಭಾಷಣೆಯ ಕಥನ.
ಜನಮೇಜಯಃ
ರಾಜಪುತ್ರೈಃ ಪರಿವೃತಃ ತಥಾಽಮಾತ್ಯೈಶ್ಚ ಸತ್ತಮಃ ।
ಉಪಾರೋಪ್ಯ ರಥೇ ಕರ್ಣಂ ನಿರ್ಯಯೌ ಮಧುಸೂದನಃ ॥1॥
ಜನಮೇಜಯ ರಾಜಪುತ್ರರಿಂದಲೂ ಮತ್ತು ಅಮಾತ್ಯರಿಂದಲೂ ಪರಿವೃತನಾದ ಸಜ್ಜನರಲ್ಲಿ ಶ್ರೇಷ್ಠನಾದ ಮಧುಸೂದನನು ಕರ್ಣನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟನು.
ಕಿಮಬ್ರವೀದ್ ರಥೋಪಸ್ಥೇ ರಾಧೇಯಂ ಪರವೀರಹಾ ।
ಕಾನಿ ಸಾಂತ್ವಾನಿ ಗೋವಿಂದಃ ಸೂತಪುತ್ರೇ ಪ್ರಯುಕ್ತವಾನ್ ॥2॥
ಪರವೀರಘಾತಕನಾದ ಕೃಷ್ಣನು ರಾಧೇಯನಾದ ಕರ್ಣನನ್ನು ಕುರಿತು ರಥದ ಪೀಠದಲ್ಲಿ ಏನನ್ನು ಹೇಳಿದನು? ಗೋವಿಂದನು ಸೂತಪುತ್ರನಿಗೆ ಯಾವ ಸಮಾಧಾನದ ಮಾತುಗಳನ್ನು ಆಡಿದನು?
ಓಘಮೇಘಸ್ವನಃ ಕಾಲೇ ಯತ್ ಕೃಷ್ಣಃ ಕರ್ಣಮಬ್ರವೀತ್ ।
ಮೃದು ವಾ ಯದಿ ವಾ ತೀಕ್ಷ್ಣಂ ತನ್ಮಮಾಚಕ್ಷ್ವ ಸರ್ವಶಃ ॥3॥
ಮೇಘಗಂಭೀರ ಧ್ವನಿಯುಳ್ಳ ಕೃಷ್ಣನು ಮೃದುವಾಗಿ ಅಥವಾ ತೀಕ್ಷ್ಣವಾಗಿ ಕರ್ಣನಿಗೆ ಏನು ಹೇಳಿದನೆಂದು ಎಲ್ಲವನ್ನೂ ನನಗೆ ಹೇಳು.
ವೈಶಂಪಾಯನಃ
ಆನುಪೂರ್ವ್ಯೇಣ ವಾಕ್ಯಾನಿ ತೀಕ್ಷ್ಣಾನಿ ಚ ಮೃದೂನಿ ಚ ।
ಪ್ರಿಯಾಣಿ ಧರ್ಮಯುಕ್ತಾನಿ ಸತ್ಯಾನಿ ಚ ಹಿತಾನಿ ಚ ॥4॥
ಹೃದಯಗ್ರಹಣೀಯಾನಿ ರಾಧೇಯಂ ಮಧುಸೂದನಃ ।
ಯಾನ್ಯಬ್ರವೀದಮೇಯಾತ್ಮಾ ತಾನಿ ಮೇ ಶೃಣು ಭಾರತ ॥5॥
ವೈಶಂಪಾಯನ ಎಲೈ ಭಾರತನೇ, ಅಮೇಯಾತ್ಮನಾದ ಮಧುಸೂದನನು ಕರ್ಣನನ್ನು ಕುರಿತು ಒಂದು ಕ್ರಮದಿಂದ ಯಾವ ತೀಕ್ಷ್ಣವಾದ ಮತ್ತು ಮೃದುವಾದ, ಪ್ರಿಯವಾದ, ಧರ್ಮಯುಕ್ತವಾದ, ಸತ್ಯವಾದ, ಹಿತವಾದ, ಹೃದಯಸ್ಪರ್ಶಿಯಾದ ಮಾತುಗಳನ್ನು

ಆಡಿದನೋ ಅದನ್ನು ಹೇಳುತ್ತೇನೆ, ಕೇಳು.
ಶ್ರೀವಾಸುದೇವಃ
ಉಪಾಸಿತಾಸ್ತೇ ರಾಧೇಯ ಬ್ರಾಹ್ಮಣಾ ವೇದಪಾರಗಾಃ |
ತತತ್ವಾರ್ಥಂ ಪರಿಪೃಷ್ಟಾಶ್ಚ ನಿಯತೇನಾನಸೂಯತಾ ॥6॥
ಶ್ರೀವಾಸುದೇವ ಎಲೈ ಕರ್ಣನೇ, ನೀನು ಬ್ರಾಹ್ಮಣ ಸೇವೆಯನ್ನು ಮಾಡಿದ್ದೀಯೆ. ವೇದಪಾರಂಗತನಾಗಿದ್ದೀಯೆ. ನಿಯಮವನ್ನು ಧರಿಸಿ ಅಸೂಯೆ ಇಲ್ಲದೆ ಶಾಸ್ತ್ರಾಧ್ಯಯನವನ್ನು ಮಾಡಿದ್ದೀಯೆ.
ತ್ವಮೇವ ಕರ್ಣ ಜಾನಾಸಿ ವೇದಂ ವೇದಾಂಗಸಂಹಿತಮ್ |
ತ್ವಮೇವ ಧರ್ಮಶಾಸ್ತ್ರೇಷು ಸೂಕ್ಷ್ಮೇಷು ಪರಿನಿಷ್ಠಿತಃ ॥7॥
ಕರ್ಣನೇ, ವೇದ-ವೇದಾಂಗಗಳನ್ನು ನೀನೇ ತಿಳಿದಿದ್ದೀಯೆ. ಸೂಕ್ಷ್ಮವಾದ ಧರ್ಮಶಾಸ್ತ್ರಗಳನ್ನೂ ಸಹ ನೀನೇ ತಿಳಿದವನಾಗಿದ್ದೀಯೆ.
ಕಾನೀನಶ್ಚ ಸಹೋಢಶ್ಚ ಕನ್ಯಾಯಾಂ ಯಶ್ಚ ಜಾಯತೇ |
ವೋಢಾರಂ ಪಿತರಂ ತಸ್ಯ ಪ್ರಾಹುಃ ಶಾಸ್ತ್ರವಿದೋ ಜನಾಃ ॥8॥
ಕನ್ಯೆಯಲ್ಲಿ ಯಾವನು ಜನಿಸುತ್ತಾನೆಯೋ ಅವನು ಆ ಕನ್ಯೆಯನ್ನು ಮುಂದೆ ವಿವಾಹವನ್ನು ಮಾಡಿಕೊಳ್ಳುವ ಪುರುಷನ ಪುತ್ರನಾಗುತ್ತಾನೆ. ವಿವಾಹವನ್ನು ಮಾಡಿಕೊಳ್ಳುವವನು ಅವನ ತಂದೆಯಾಗುತ್ತಾನೆ ಎಂದು ಶಾಸ್ತ್ರವನ್ನು ತಿಳಿದ ಜನರು ಹೇಳುತ್ತಾರೆ.
ಸೋಽಸಿ ಕರ್ಣ ತಥಾ ಜಾತಃ ಪಾಂಡೋಃ ಪುತ್ರೋಽಸಿ ಧರ್ಮತಃ |
ನಿಶ್ಚಯಾದ್ ಧರ್ಮಶಾಸ್ತ್ರಾಣಾಮೇಹಿ ರಾಜಾ ಭವಿಷ್ಯಸಿ ॥9॥
ಎಲೈ ಕರ್ಣನೇ, ಹೀಗೆ ಜನಿಸಿದ ನೀನು ಧರ್ಮಶಾಸ್ತ್ರದ ನಿಶ್ಚಯದ ದೃಷ್ಟಿಯಿಂದ ಧಾರ್ಮಿಕವಾಗಿ ಪಾಂಡುವಿನ ಪುತ್ರನಾಗಿದ್ದೀಯೆ. ಬಾ, ನೀನೇ ರಾಜನಾಗುವಿ.
ಪಿತೃಪಕ್ಷೇ ಚ ತೇ ಪಾರ್ಥಾ ಮಾತೃಪಕ್ಷೇ ಚ ವೃಷ್ಣಯಃ |
ದ್ವೌ ಪಕ್ಷಾವಭಿಜಾನೀಹಿ ತ್ವಮೇತೌ ಪುರುಷರ್ಷಭ ॥10॥
ನಿನ್ನ ಪಿತೃಪಕ್ಷದಲ್ಲಿ ಪಾಂಡವರೂ, ಮಾತೃಪಕ್ಷದಲ್ಲಿ ವೃಷ್ಣಿಗಳೂ ಇದ್ದಾರೆ. ಎಲೈ ಪುರುಷರ್ಷಭನೇ, ನೀನು ಈ ಎರಡು ಪಕ್ಷಗಳನ್ನೂ ತಿಳಿಯುವವನಾಗು.
ಮಯಾ ಸಾರ್ಧಮಿತೋ ಯಾತಮದ್ಯ ತ್ವಾಂ ತಾತ ಪಾಂಡವಾಃ |
ಅಭಿಜಾನಂತು ಕೌಂತೇಯಂ ಪೂರ್ವಜಾತಂ ಯುಧಿಷ್ಠಿರಾತ್ ॥11॥
ಎಲೈ ಪ್ರೀತಿಪಾತ್ರನೇ, ನನ್ನ ಜೊತೆಯಲ್ಲಿ ಇಲ್ಲಿಂದ ಹೊರಟು ಬಂದ ನಿನ್ನನ್ನು ಎಲ್ಲ ಪಾಂಡವರೂ ಯುಧಿಷ್ಠಿರನಿಗಿಂತ ಮೊದಲು ಜನಿಸಿದ ಕುಂತೀಪುತ್ರನೆಂದು ಈ ದಿನ ತಿಳಿಯಲಿ.
ಪಾದೌ ತವ ಗ್ರಹೀಷ್ಯಂತಿ ಭ್ರಾತರಃ ಪಂಚ ಪಾಂಡವಾಃ |
ದ್ರೌಪದೇಯಾಸ್ತಥಾ ಪಂಚ ಸೌಭದ್ರಶ್ಚಾಪರಾಜಿತಃ ॥12॥
ಸಹೋದರರಾದ ಪಂಚಪಾಂಡವರೂ, ದ್ರೌಪದಿಯ ಐವರು ಪುತ್ರರೂ ಅಪರಾಜಿತನಾದ ಅಭಿಮನ್ಯುವೂ ಸಹ ನಿನ್ನ ಪಾದಗಳನ್ನು ಹಿಡಿಯುವರು (ನಮಸ್ಕಾರವನ್ನು ಮಾಡುವರು).
ರಾಜಾನೋ ರಾಜಪುತ್ರಾಶ್ಚ ಪಾಂಡವಾರ್ಥೇ ಸಮಾಗತಾಃ |
ಪಾದೌ ತವ ಗ್ರಹೀಷ್ಯಂತಿ ಸರ್ವೇ ಚಾಂಧಕವೃಷ್ಣಯಃ ॥13॥
ಪಾಂಡವರ ಸಲುವಾಗಿ ಆಗಮಿಸಿರುವ ರಾಜರೂ, ರಾಜಪುತ್ರರೂ, ವೃಷ್ಣಿಗಳೂ ಮತ್ತು ಅಂಧಕರೂ ಎಲ್ಲರೂ ನಿನ್ನ ಪಾದವನ್ನು ಹಿಡಿಯುವರು.
ಹಿರಣ್ಮಯಾಂಶ್ಚ ತೇ ಕುಂಭಾನ್ ರಾಜತಾನ್ ಪಾರ್ಥಿವಾಂಸ್ತಥಾ |
ಔಷಧ್ಯಃ ಸರ್ವರತ್ನಾನಿ ಸರ್ವಬೀಜಾನಿ ವೀರುಧಃ ॥14॥
ರಾಜಾನೋ ರಾಜಕನ್ಯಾಶ್ಚ ಹ್ಯಾನಯಂತ್ವಭಿಷೇಚನಮ್ ॥15॥
ಷಷ್ಠೇ ತ್ವಾಂ ಚ ತಥಾ ಕಾಲೇ ದ್ರೌಪದ್ಯುಪಗಮಿಷ್ಯತಿ ॥16॥
ರಾಜರೂ ಮತ್ತು ರಾಜಕನ್ಯೆಯರೂ ಸುವರ್ಣಮಯವಾದ, ರಜತಮಯವಾದ, ಮೃಣ್ಮಯವಾದ ಕುಂಭಗಳನ್ನೂ, ಓಷಧಿಗಳನ್ನೂ, ಸರ್ವಬೀಜಗಳನ್ನೂ, ಲತೆಗಳನ್ನೂ, ಎಲ್ಲ ರತ್ನಗಳನ್ನೂ ನಿನ್ನ ಅಭಿಷೇಕಕ್ಕಾಗಿ ತರುವವರಾಗಲಿ. ದಿವಸದ ಆರನೆಯ ಭಾಗದಲ್ಲಿ ದ್ರೌಪದಿಯು ನಿನ್ನ ಸೇವೆ ಮಾಡಲು ನಿನ್ನ ಸಮೀಪಕ್ಕೆ ಬರುವಳು.
ಅಗ್ನೀನ್ ಜುಹೋತು ವೈ ಧೌಮ್ಯಃ ಸಂಶಿತಾತ್ಮಾ ದ್ವಿಜೋತ್ತಮಃ |
ಪುರೋಹಿತಃ ಪಾಂಡವಾನಾಂ ಬ್ರಹ್ಮಕರ್ಮಣ್ಯವಸ್ಥಿತಃ ॥17॥
ಪಾಂಡವರ ಪುರೋಹಿತರೂ, ಬ್ರಹ್ಮಕರ್ಮಗಳಲ್ಲಿ ನಿಷ್ಣಾತರೂ, ಮನೋನಿಗ್ರಹ ಉಳ್ಳವರೂ, ದ್ವಿಜಶ್ರೇಷ್ಠರೂ ಆದ ಧೌಮ್ಯರು ಅಗ್ನಿಗಳಲ್ಲಿ ಹೋಮಗಳನ್ನು ಮಾಡಲಿ.
ಅದ್ಯ ತ್ವಾಮಭಿಷಿಂಚಂತು ವಿದ್ವಾಂಸಶ್ಚ ದ್ವಿಜಾತಯಃ |
ತಥೈವ ಭ್ರಾತರಃ ಪಂಚ ಪಾಂಡವಾಃ ಪುರುಷರ್ಷಭಾಃ ॥18॥
ಈ ದಿನ ವಿದ್ವಾಂಸರಾದ ಬ್ರಾಹ್ಮಣರೂ, ಪುರುಷರ್ಷಭರಾದ ನಿನ್ನ ಸಹೋದರರಾದ ಪಂಚಪಾಂಡವರೂ ನಿನಗೆ ಅಭಿಷೇಕವನ್ನು ಮಾಡಲಿ.
ದ್ರೌಪದೇಯಾಸ್ತಥಾ ಪಂಚ ಪಾಂಚಾಲಾಶ್ಚೇದಯಸ್ತಥಾ |
ಅಹಂ ಚಾಪ್ಯಭಿಷೇಕ್ಷ್ಯಾಮಿ ರಾಜಾನಂ ಪೃಥಿವೀಪತಿಮ್ ॥19॥

ಯುವರಾಜೋಽಸ್ತು ತೇ ರಾಜಾ ಧರ್ಮಪುತ್ರೋ ಯುಧಿಷ್ಠಿರಃ ॥20॥
ದ್ರೌಪದಿಯ ಐವರು ಮಕ್ಕಳೂ, ಪಾಂಚಾಲರೂ, ಚೇದಿಗಳೂ ಮತ್ತು ನಾನೂ ಸಹ ನಿನಗೆ ಪೃಥಿವೀಪತಿಯಾಗಿ ರಾಜನಾಗಿ ಅಭಿಷೇಕವನ್ನು ಮಾಡುವೆನು. ಧರ್ಮಪುತ್ರನಾದ ಯುಧಿಷ್ಠಿರನು ಯುವರಾಜನಾಗಲಿ.
ಗೃಹೀತ್ವಾ ವ್ಯಜನಂ ಶ್ವೇತಂ ಧರ್ಮಾತ್ಮಾ ಸಂಶಿತವ್ರತಃ |
ಉಪಾನ್ವಾರೋಹತು ರಥಂ ಕುಂತೀಪುತ್ರೋ ಯುಧಿಷ್ಠಿರಃ ॥21॥
ಕುಂತೀಪುತ್ರನೂ, ಧರ್ಮಾತ್ಮನೂ, ಒಳ್ಳೆಯ ವ್ರತನಿಷ್ಠನೂ ಆದ ಯುಧಿಷ್ಠಿರನು ಶ್ವೇತವ್ಯಜನವನ್ನು ಹಿಡಿದು ನಿನ್ನ ನಂತರ ರಥವನ್ನು ಏರಲಿ.
ಛತ್ರಂ ಚ ತೇ ಮಹಾಶ್ವೇತಂ ಭೀಮಸೇನೋ ಮಹಾಬಲಃ |
ಅಭಿಷಿಕ್ತಸ್ಯ ಕೌಂತೇಯೋ ಧಾರಯಿಷ್ಯತಿ ಮೂರ್ಧನಿ ॥22॥
ಮಹಾಬಲನಾದ ಭೀಮಸೇನನು ಅಭಿಷಿಕ್ತನಾದ ನಿನ್ನ ಶಿರಸ್ಸಿನ ಮೇಲೆ ಬಹಳ ಶ್ವೇತವಾದ ಛತ್ರವನ್ನು ಹಿಡಿಯುವನು.
ಕಿಂಕಿಣೀಶತನಿರ್ಘೋಷಂ ವೈಯಾಘ್ರಪರಿವಾರಣಮ್ |
ರಥಂ ಶ್ವೇತಹಯೈರ್ಯುಕ್ತಮರ್ಜುನೋ ವಾಹಯಿಷ್ಯತಿ ॥23॥
ಅಭಿಮನ್ಯುಶ್ಚ ತೇ ನಿತ್ಯಂ ಪ್ರತ್ಯಾಸನ್ನೋ ಭವಿಷ್ಯತಿ ॥24॥
ನೂರಾರು ಕಿಂಕಿಣಿಗಳ ಘೋಷದಿಂದ ಕೂಡಿದ, ವ್ಯಾಘ್ರಚರ್ಮಗಳಿಂದ ಸುತ್ತುವರಿಯಲ್ಪಟ್ಟ, ಶ್ವೇತಹಯಗಳಿಂದ ಕೂಡಿದ ರಥವನ್ನು ಅರ್ಜುನನು ಸಾರಥಿಯಾಗಿ ನಡೆಸುವನು. ಅಭಿಮನ್ಯುವೂ ಸಹ ಯಾವಾಗಲೂ ನಿನ್ನ ಸಮೀಪದಲ್ಲಿರುವನು.
ನಕುಲಃ ಸಹದೇವಶ್ಚ ದ್ರೌಪದೇಯಾಶ್ಚ ಪಂಚ ಯೇ |
ಪಾಂಚಾಲಾಶ್ಚಾನುಯಾಸ್ಯಂತಿ ಶಿಖಂಡೀ ಚ ಮಹಾರಥಃ ॥25॥
ನಕುಲ, ಸಹದೇವ, ದ್ರೌಪದಿಯ ಐವರು ಮಕ್ಕಳು, ಪಾಂಚಾಲರು, ಮಹಾರಥನಾದ ಶಿಖಂಡೀ ಎಲ್ಲರೂ ನಿನ್ನನ್ನು ಹಿಂಬಾಲಿಸುವರು.
ಅಹಂ ಚ ತ್ವಾಽನುಯಾಸ್ಯಾಮಿ ಸರ್ವೇ ಚಾಂಧಕವೃಷ್ಣಯಃ |
ದಾಶಾರ್ಹಾಃ ಪರಿವಾರಾಸ್ತೇ ದಾಶಾರ್ಣಾಶ್ಚ ವಿಶಾಂಪತೇ ॥26॥
ನಾನೂ ಮತ್ತು ಎಲ್ಲಾ ಅಂಧಕವೃಷ್ಣಿಗಳೂ ನಿನ್ನನ್ನು ಹಿಂಬಾಲಿಸುವೆವು. ಎಲೈ ರಾಜನೇ, ದಾಶಾರ್ಹರೂ ಮತ್ತು ದಾಶಾರ್ಣರು ನಿನಗೆ ಪರಿವಾರವಾಗುವರು.
ಭುಂಕ್ಷ್ವ ರಾಜ್ಯಂ ಮಹಾಬಾಹೋ ಭ್ರಾತೃಭಿಃ ಸಹ ಪಾಂಡವೈಃ |
ಜಪ್ಯೈರ್ಹೋಮೈಶ್ಚ ಸಂಯುಕ್ತೋ ಮಂಗಲೈಶ್ಚ ಪೃಥಗ್ವಿಧೈಃ ॥27॥
ಎಲೈ ಮಹಾಬಾಹುವೇ, ಸಹೋದರರಾದ ಪಾಂಡವರಿಂದ ಸಹಿತನಾಗಿ, ಜಪ ಹೋಮಗಳನ್ನು ಮಾಡುತ್ತಾ ಅನೇಕ ವಿಧವಾದ ಮಂಗಳಗಳಿಂದ ಕೂಡಿ ರಾಜ್ಯವನ್ನು ಭೋಗಿಸು.
ಪುರೋಗಮಾಶ್ಚ ತೇ ಸಂತು ದ್ರಮಿಡಾಃ ಸಹ ಕುಂತಲೈಃ |
ಆಂಧ್ರಾಸ್ತಾಲವರಾಶ್ಚೈವ ಚೂಚುಪಾ ವೇಣುಪಾಸ್ತಥಾ ॥28॥
ದ್ರಮಿಡರೂ, ಕುಂತಲರೂ, ಆಂಧ್ರರೂ, ತಾಲವರರೂ, ಚೂಚುಪರೂ ಮತ್ತು ವೇಣುಪರೂ ನಿನ್ನ ಮುಂದೆ ಹೋಗುವವರಾಗಲಿ.
ಸ್ತುವಂತು ತ್ವಾಂ ಚ ಬಹುಭಿಃ ಸ್ತುತಿಭಿಃ ಸೂತಮಾಗಧಾಃ |
ವಿಜಯಂ ವಸುಷೇಣಸ್ಯ ಘೋಷಯಂತು ಚ ಪಾಂಡವಾಃ ॥29॥
ಸೂತ-ಮಾಗಧರು ನಿನ್ನನ್ನು ಅನೇಕ ಸ್ತೋತ್ರಗಳಿಂದ ಸ್ತೋತ್ರ ಮಾಡಲಿ. ಪಾಂಡವರು ವಸುಷೇಣನ (ನಿನ್ನ) ವಿಜಯವನ್ನು ಘೋಷಣೆ ಮಾಡಲಿ.
ಸ ತ್ವಂ ಪರಿವೃತಃ ಪಾರ್ಥೈಃ ನಕ್ಷತ್ರೈರಿವ ಚಂದ್ರಮಾಃ |
ಪ್ರಶಾಧಿ ರಾಜ್ಯಂ ಕೌಂತೇಯ ಕುಂತೀಂ ಚ ಪ್ರತಿನಂದಯ ॥30॥
ಎಲೈ ಕುಂತೀಪುತ್ರನೇ, ನೀನು ನಕ್ಷತ್ರಗಳಿಂದ ಚಂದ್ರನು ಪರಿವೃತನಾದಂತೆ, ಪಾಂಡವರಿಂದ ಪರಿವೃತನಾಗಿ, ರಾಜ್ಯವನ್ನು ಆಳಿ ಕುಂತಿಯನ್ನು ಸಂತೋಷಪಡಿಸು.
ಮಿತ್ರಾಣಿ ತೇ ಪ್ರಹೃಷ್ಯಂತು ವ್ಯಥಂತು ರಿಪವಸ್ತಥಾ |
ಸೌಭ್ರಾತ್ರಂ ಚೈವ ತೇಽದ್ಯಾಸ್ತು ಭ್ರಾತೃಭಿಃ ಸಹ ಪಾಂಡವೈಃ ॥31॥
ನಿನ್ನ ಮಿತ್ರರು ಸಂತೋಷಪಡಲಿ. ಶತ್ರುಗಳು ವ್ಯಥೆಯನ್ನು ಹೊಂದಲಿ. ಈ ದಿನ ಸಹೋದರರಾದ ಪಾಂಡವರ ಜೊತೆಯಲ್ಲಿ ನಿನಗೆ ಸೌಭ್ರಾತೃತ್ವ ಉಂಟಾಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಮೂವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತನೆಯ ಅಧ್ಯಾಯ
ಕೃಷ್ಣನ ಮಾತುಗಳಿಗೆ ಕರ್ಣನ ಉತ್ತರ ಮತ್ತು ಕೃಷ್ಣನ ಸಲಹೆಯ ನಿರಾಕರಣೆ.
ಕರ್ಣಃ

ಅಸಂಶಯಂ ಸೌಹೃದಾನ್ಮೇ ಪ್ರಣಯಾಚ್ಚಾತ್ಥ ಕೇಶವ |
ಸಖ್ಯೇನ ಚೈವ ವಾರ್ಷ್ಣೇಯ ಶ್ರೇಯಸ್ಕಾಮತಯೈವ ಚ ॥1॥
ಕರ್ಣ ಎಲೈ ಕೇಶವನೇ, ವಾರ್ಷ್ಣೇಯನೇ, ನಿಸ್ಸಂಶಯವಾಗಿ ನನ್ನ ಮೇಲಿನ ಸ್ನೇಹದಿಂದ, ಸಖ್ಯದಿಂದ ನನ್ನ ಶ್ರೇಯಸ್ಸನ್ನು ಬಯಸಿ ನೀನು ಮಾತನಾಡಿದ್ದೀಯೆ.
ಸರ್ವಂ ಚೈವಾಭಿಜಾನಾಮಿ ಪಾಂಡೋಃ ಪುತ್ರೋಽಸ್ಮಿ ಧರ್ಮತಃ |
ನಿಶ್ಚಯಾದ್ ಧರ್ಮಶಾಸ್ತ್ರಾಣಾಂ ಯಥಾ ತ್ವಂ ಕೃಷ್ಣ ಮನ್ಯಸೇ ॥2॥
ಎಲೈ ಕೃಷ್ಣನೇ, ನಾನು ಧರ್ಮಶಾಸ್ತ್ರಕ್ಕೆ ಅನುಗುಣವಾಗಿ, ಧಾರ್ಮಿಕವಾಗಿ ಪಾಂಡುವಿನ ಪುತ್ರನಾಗಿದ್ದೇನೆ ಎಂದು ನೀನು ಹೇಳುವಂತೆಯೇ ಅಂಗೀಕರಿಸಿದ್ದೇನೆ.
ಕನ್ಯಾ ಗರ್ಭಂ ಸಮಾಧತ್ತ ಭಾಸ್ಕರಾನ್ಮಾಂ ಜನಾರ್ದನ |
ಆದಿತ್ಯವಚನಾಚ್ಚೈವ ಜಾತಂ ಮಾಂ ಸಾ ವ್ಯಸರ್ಜಯತ್ ॥3॥
ಎಲೈ ಜನಾರ್ದನನೇ, ಸೂರ್ಯನ ಮಾತಿನಂತೆ ಸೂರ್ಯನಿಂದ ಕನ್ಯೆಯಾದ ತಾಯಿಯು ಗರ್ಭವನ್ನು ಧರಿಸಿದಳು ಮತ್ತು ನಾನು ಹುಟ್ಟಿದ ಮೇಲೆ ನನ್ನನ್ನು ವಿಸರ್ಜಿಸಿದಳು.
ಸೋಽಸ್ಮಿ ಕೃಷ್ಣ ತಥಾ ಜಾತಃ ಪಾಂಡೋಃ ಪುತ್ರೋಽಸ್ಮಿ ಧರ್ಮತಃ |
ಕುಂತ್ಯಾ ತ್ವಹಮವಾಕೀರ್ಣೋ ಯಥಾ ನ ಕುಲಜಸ್ತಥಾ ॥4॥
ಎಲೈ ಕೃಷ್ಣನೇ, ನಾನು ಹಾಗೆ ಹುಟ್ಟಿದವನು. ಧರ್ಮದ ದೃಷ್ಟಿಯಿಂದ ಪಾಂಡುವಿನ ಪುತ್ರನಾಗಿದ್ದೇನೆ. ಕುಂತಿಯು ನಾನು ಕುಲೀನಪುತ್ರನಲ್ಲವೋ ಎಂಬಂತೆ ನನ್ನನ್ನು ನೀರಿನಲ್ಲಿ ತೊರೆದಳು.
ಸೂತೋ ಹಿ ಮಾಮಧಿರಥೋ ದೃಷ್ಟ್ವೈವಾಂಭಸಿ ವಾ ಪ್ಲುತಮ್ |
ರಾಧಾಯೈ ಸ ಚ ಮಾಂ ಪ್ರಾದಾತ್ ಸೌಹಾರ್ದಾನ್ಮಧುಸೂದನ ॥5॥
ಎಲೈ ಮಧುಸೂದನನೇ, ನಾನು ನೀರಿನಲ್ಲಿ ತೇಲಿಹೋಗುತ್ತಿದ್ದುದನ್ನು ನೋಡಿದ ಸೂತನಾದ ಅಧಿರಥನು ಪ್ರೀತಿಯಿಂದ ನನ್ನನ್ನು ತೆಗೆದುಕೊಂಡು ರಾಧೆಯ ಕೈಯಲ್ಲಿ ಕೊಟ್ಟನು.
ಮತ್ಸ್ನೇಹಾಚ್ಚೈವ ರಾಧಾಯಾಃ ಸದ್ಯಃ ಕ್ಷೀರಮವಾಪತತ್ |
ಸಾ ಮೇ ಮೂತ್ರಂ ಪುರೀಷಂ ಚ ಪ್ರತಿಜಗ್ರಾಹ ಕೇಶವ ॥6॥
ನನ್ನ ಮೇಲಿನ ಸ್ನೇಹದಿಂದ ರಾಧೆಗೆ ತಕ್ಷಣ ಸ್ತನಗಳಲ್ಲಿ ಕ್ಷೀರವು ಉದ್ಭವಿಸಿತು. ಎಲೈ ಕೇಶವನೇ, ಅವಳು ನನ್ನ ಮಲ-ಮೂತ್ರಗಳನ್ನು ತೆಗೆದಿದ್ದಾಳೆ.
ತಸ್ಯಾಃ ಪಿಂಡವ್ಯಪನಯಂ ಕುರ್ಯಾದಸ್ಮದ್ವಿಧಃ ಕಥಮ್ |
ಧರ್ಮವಿದ್ ಧರ್ಮಶಾಸ್ತ್ರಾಣಾಂ ಶ್ರವಣೇ ಸತತಂ ರತಃ ॥7॥
ಧರ್ಮಜ್ಞನೂ, ಸತತವಾಗಿ ಧರ್ಮಶಾಸ್ತ್ರದ ಶ್ರವಣದಲ್ಲಿ ಆಸಕ್ತನಾದವನೂ ಆದ ನನ್ನಂತಹವನು ಅವಳ ಋಣವನ್ನು ಹೇಗೆ ತೀರಿಸಬೇಕು?
ತಥಾ ಮಾಮಭಿಜಾನಾತಿ ಸೂತಶ್ಚಾಧಿರಥಃ ಸುತಮ್ |
ಪಿತರಂ ಚಾಭಿಜಾನಾಮಿ ತಮಹಂ ಸೌಹೃದಾತ್ ಸದಾ ॥8॥
ಹಾಗೆಯೇ ಸೂತನಾದ ಅಧಿರಥನು ನನ್ನನ್ನು ಮಗನೆಂದೇ ತಿಳಿದಿದ್ದಾನೆ. ಅವನ ಮೇಲಿನ ಪ್ರೀತಿಯಿಂದ ನಾನೂ ಅವನನ್ನು ಯಾವಾಗಲೂ ತಂದೆ ಎಂದೇ ತಿಳಿದಿದ್ದೇನೆ.
ಸ ಹಿ ಮೇ ಜಾತಕರ್ಮಾದಿ ಕಾರಯಾಮಾಸ ಧರ್ಮತಃ |
ಶಾಸ್ತ್ರದೃಷ್ಟೇನ ವಿಧಿನಾ ಪುತ್ರಪ್ರೀತ್ಯಾ ಜನಾರ್ದನ ॥9॥
ಎಲೈ ಜನಾರ್ದನನೇ, ಅವನು ಪುತ್ರವಾತ್ಸಲ್ಯದಿಂದ ನನಗೆ ಶಾಸ್ತ್ರವಿಹಿತವಾದ ರೀತಿಯಲ್ಲಿ ಧಾರ್ಮಿಕವಾಗಿ ಜಾತಕರ್ಮಾದಿ ಕ್ರಿಯೆಗಳನ್ನು ಮಾಡಿಸಿದನು.
ನಾಮ ವೈ ವಸುಷೇಣೇತಿ ಕಾರಯಾಮಾಸ ವೈ ದ್ವಿಜೈಃ |
ಭಾರ್ಯಾಶ್ಚೋಢಾ ಮಮ ಪ್ರಾಪ್ತೇ ಯೌವನೇ ತತ್ಪರಿಗ್ರಹಾತ್ ॥10॥
ಬ್ರಾಹ್ಮಣರಿಂದ ನನಗೆ ವಸುಷೇಣನೆಂದು ನಾಮಕರಣ ಮಾಡಿಸಿದನು. ನಾನು ಯೌವನವನ್ನು ಹೊಂದುತ್ತಿರಲು, ಅವನು ನನಗೆ ಕನ್ಯೆಯರನ್ನು ಕೊಟ್ಟು ವಿವಾಹ ಮಾಡಿಸಿದನು.
ತಾಸು ಪುತ್ರಾಶ್ಚ ಪೌತ್ರಾಶ್ಚ ಮಮ ಜಾತಾ ಜನಾರ್ದನ |
ತಾಸು ಮೇ ಹೃದಯಂ ಕೃಷ್ಣ ಸಂಜಾತಂ ಕಾಮಬಂಧನಮ್ ॥11॥
ಎಲೈ ಜನಾರ್ದನನೇ, ಅವರಲ್ಲಿ ನನಗೆ ಪುತ್ರರೂ, ಪೌತ್ರರೂ ಜನಿಸಿದ್ದಾರೆ. ಎಲೈ ಕೃಷ್ಣನೇ, ನನಗೆ ಅವರಲ್ಲಿ ಕಾಮಬಂಧನವಾದ ಪ್ರೀತಿ ಉಂಟಾಗಿದೆ.
ನ ಪೃಥಿವ್ಯಾ ಸಕಲಯಾ ನ ಸುವರ್ಣಸ್ಯ ರಾಶಿಭಿಃ |
ಹರ್ಷಾದ್ ಭಯಾದ್ ವಾ ಗೋವಿಂದ ಮಿಥ್ಯಾ ಕರ್ತುಂ ತದುತ್ಸಹೇ ॥
ಗೋವಿಂದನೇ, ಸಮಗ್ರವಾದ ಪೃಥಿವಿಗಾಗಿ ಅಥವಾ ಸುವರ್ಣದ ರಾಶಿಗಾಗಿ ಅಥವಾ ಹರ್ಷದಿಂದ ಅಥವಾ ಭಯದಿಂದ ನಾನು ಅದನ್ನು ತ್ಯಜಿಸಲು (ಸುಳ್ಳಾಗಿಸಲು) ಬಯಸುವುದಿಲ್ಲ.
ಧೃತರಾಷ್ಟ್ರಕುಲೇ ಕೃಷ್ಣ ದುರ್ಯೋಧನಸಮಾಶ್ರಯಾತ್ |
ಮಯಾ ತ್ರಯೋದಶ ಸಮಾ ಭುಕ್ತಂ ರಾಜ್ಯಮಕಂಟಕಮ್ ॥13॥

ಎಲೈ ಕೃಷ್ಣನೇ, ದುರ್ಯೋಧನನನ್ನು ಆಶ್ರಯಿಸಿ, ನಾನು ಧೃತರಾಷ್ಟ್ರನ ವಂಶದಲ್ಲಿ ಹದಿಮೂರು ವರ್ಷಗಳ ಕಾಲ ನಿಷ್ಕಂಟಕವಾದ ರಾಜ್ಯವನ್ನು ಭೋಗಿಸಿದೆ.
ಇಷ್ಟಂ ಚ ಬಹುಭಿರ್ಯಜ್ಞೈಃ ಸಹ ಪುತ್ರೈರ್ಮಯಾಽಸಕೃತ್ |
ಆವಾಹಾಶ್ಚ ವಿವಾಹಾಶ್ಚ ಸಹ ಸೂತೈರ್ಮಯಾ ಕೃತಾಃ ॥14॥
ಮಕ್ಕಳ ಜೊತೆಯಲ್ಲಿ ಅನೇಕ ಬಾರಿ ಬಹುವಿಧವಾದ ಯಜ್ಞವನ್ನು ಮಾಡಿದೆ. ಸೂತರ ಮನೆಯಿಂದ ಕನ್ಯೆಯರನ್ನು ತಂದು, ಸೂತರಿಗೆ ಕನ್ಯೆಯರನ್ನು ಕೊಟ್ಟು ಸಂಬಂಧವನ್ನೂ ಬೆಳೆಸಿದೆ.
ಮಾಂ ಚ ಕೃಷ್ಣ ಸಮಾಸಾದ್ಯ ಕೃತಃ ಶಸ್ತ್ರಸಮುದ್ಯಮಃ |
ದುರ್ಯೋಧನೇನ ವಾರ್ಷ್ಣೇಯ ವಿಗ್ರಹಶ್ಚಾಪಿ ಪಾಂಡವೈಃ ॥15॥
ಎಲೈ ಕೃಷ್ಣನೇ, ಎಲೈ ವಾರ್ಷ್ಣೇಯನೇ, ನನ್ನನ್ನು ಆಶ್ರಯಿಸಿ ದುರ್ಯೋಧನನು ಪಾಂಡವರ ಜೊತೆಯಲ್ಲಿ ವಿರೋಧವನ್ನು ಮಾಡಿ ಶಸ್ತ್ರವ್ಯಾಪಾರದಲ್ಲಿ ಉದ್ಯುಕ್ತನಾಗಿದ್ದಾನೆ.
ತಸ್ಮಾದ್ ರಣೇ ದ್ವೈರಥೇ ಮಾಂ ಪ್ರತ್ಯುದ್ಯಾತಾರಮಚ್ಯುತ |
ವೃತವಾನ್ ಪರಮಂ ಕೃಷ್ಣ ಪ್ರತೀಘಂ ಸವ್ಯಸಾಚಿನಃ ॥16॥
ಆದ್ದರಿಂದ ಎಲೈ ಕೃಷ್ಣನೇ, ಅಚ್ಯುತನೇ, ದ್ವಂದ್ವಯುದ್ಧದಲ್ಲಿ ನಾನು ಸವ್ಯಸಾಚಿಯಾದ ಅರ್ಜುನನಿಗೆ ಪ್ರತಿರೋಧಕನೆಂದೂ ಅವನಿಗೆ ಎದುರಾಗಿ ಯುದ್ಧವನ್ನು ಮಾಡುವವನೆಂದೂ ಅವನು ನನ್ನನ್ನು ವರಿಸಿದ್ದಾನೆ.
ವಧಾದ್ ಬಂಧಾದ್ ಭಯಾದ್ ವಾಽಪಿ
ಲೋಭಾದ್ ವಾಽಪಿ ಜನಾರ್ದನ |
ಅನೃತಂ ನೋತ್ಸಹೇ ಕರ್ತುಂ ಧಾರ್ತರಾಷ್ಟ್ರಸ್ಯ ಧೀಮತಃ ॥17॥
ಎಲೈ ಜನಾರ್ದನನೇ, ವಧೆಯಿಂದಾಗಲೀ, ಬಂಧದಿಂದಾಗಲೀ, ಭಯದಿಂದಾಗಲೀ, ಲೋಭದಿಂದಾಗಲೀ ಮೇಧಾವಿಯಾದ ದುರ್ಯೋಧನನಿಗೆ ನಾನು ಅನೃತವನ್ನು ಮಾಡಲಾರೆ (ಅವನ ಜೊತೆಯಲ್ಲಿ ಸುಳ್ಳು ಹೇಳಿ ವರ್ತಿಸಲಾರೆ).
ಯದಿ ಹ್ಯದ್ಯ ನ ಗಚ್ಛೇಯಂ ದ್ವೈರಥಂ ಸವ್ಯಸಾಚಿನಾ |
ಅಕೀರ್ತಿಃ ಸ್ಯಾದ್ ಹೃಷೀಕೇಶ ಮಮ ಪಾರ್ಥಸ್ಯ ಚೋಭಯೋಃ ॥18॥
ಎಲೈ ಹೃಷೀಕೇಶನೇ, ಈ ದಿನ ನಾನು ದ್ವೈರಥದಲ್ಲಿ ಸವ್ಯಸಾಚಿಯನ್ನು ಎದುರಿಸದಿದ್ದರೆ ನನಗೂ ಮತ್ತು ಅರ್ಜುನ, ಇಬ್ಬರಿಗೂ ಅಕೀರ್ತಿ ಉಂಟಾದೀತು!
ಅಸಂಶಯಂ ಹಿತಾರ್ಥಾಯ ಬ್ರೂಯಾಸ್ತ್ವಂ ಮಧುಸೂದನ |
ಸರ್ವಂ ಚ ಪಾಂಡವಾಃ ಕುರ್ಯುಃ ತ್ವದ್ವಶಾ ಹ್ಯದ್ಯ ಪಾಂಡವಾಃ ॥19॥
ಎಲೈ ಮಧುಸೂದನನೇ, ನೀನು ನಿಸ್ಸಂಶಯವಾಗಿ ನಮ್ಮ ಹಿತಕ್ಕಾಗಿಯೇ ಮಾತನಾಡಿದ್ದೀಯೆ. ಈ ದಿನ ನಿನ್ನ ವಶದಲ್ಲಿರುವ ಪಾಂಡವರು ನೀನು ಹೇಳಿದಂತೆಯೇ ಎಲ್ಲವನ್ನೂ ಮಾಡಿಯಾರು.
ಮಂತ್ರಸ್ಯ ನಿಯಮಂ ಕುರ್ಯಾಸ್ತ್ವಮತ್ರ ಮಧುಸೂದನ |
ಏತದತ್ರ ಹಿತಂ ಮನ್ಯೇ ಸರ್ವಯಾದವನಂದನ ॥20॥
ಮಧುಸೂದನನೇ, ನಮ್ಮ ಮಂತ್ರಾಲೋಚನೆಯನ್ನು ನೀನು ಇಲ್ಲಿ ರಹಸ್ಯವಾಗಿ ಇಡಬೇಕು. ಸರ್ವಯಾದವನಂದನನೇ, ಇದು ಹಿತವೆಂದು ನಾನು ಭಾವಿಸುತ್ತೇನೆ.
ಯದಿ ಜಾನಾತಿ ಮಾಂ ರಾಜಾ ಧರ್ಮಾತ್ಮಾ ಸಂಶಿತವ್ರತಃ |
ಕುಂತ್ಯಾಃ ಪ್ರಥಮಜಂ ಪುತ್ರಂ ನ ಸ ರಾಜ್ಯಂ ಗ್ರಹೀಷ್ಯತಿ ॥21॥
ಧರ್ಮಾತ್ಮನೂ, ಶ್ರೇಷ್ಠವಾದ ವ್ರತಗಳನ್ನು ಆಚರಿಸುವವನೂ ಆದ ಯುಧಿಷ್ಠಿರನು ನನ್ನನ್ನು ಕುಂತಿಯ ಪ್ರಥಮಪುತ್ರನೆಂದು ತಿಳಿದರೆ ಅವನು ರಾಜ್ಯವನ್ನು ಸ್ವೀಕರಿಸುವುದಿಲ್ಲ.
ಪ್ರಾಪ್ಯ ಚಾಪಿ ಮಹದ್ ರಾಜ್ಯಂ ತದಹಂ ಮಧುಸೂದನ |
ಸ್ಫೀತಂ ದುರ್ಯೋಧನಾಯೈವ ಸಂಪ್ರದದ್ಯಾಮರಿಂದಮ ॥22॥
ಎಲೈ ಮಧುಸೂದನನೇ, ಅಂತಹ ಪರಿಶುದ್ಧವಾದ ದೊಡ್ಡ ರಾಜ್ಯವನ್ನು ನಾನು ಪಡೆದರೂ, ಎಲೈ ಅರಿಂದಮನೇ, ನಾನು ಅದನ್ನು ದುರ್ಯೋಧನನಿಗೇ ಕೊಟ್ಟೇನು.
ಸ ಏವ ರಾಜಾ ಧರ್ಮಾತ್ಮಾ ಶಾಶ್ವತೋಽಸ್ತು ಯುಧಿಷ್ಠಿರಃ |
ನೇತಾ ಯಸ್ಯ ಹೃಷೀಕೇಶೋ ಯೋದ್ಧಾ ಯಸ್ಯ ಧನಂಜಯಃ ॥23॥
ಯಾವನಿಗೆ ಹೃಷೀಕೇಶನು ನಾಯಕನಾಗಿದ್ದಾನೆಯೋ, ಅರ್ಜುನನು ಯೋಧನಾಗಿದ್ದಾನೆಯೋ ಅಂತಹ ಧರ್ಮಾತ್ಮನಾದ ಯುಧಿಷ್ಠಿರನೇ ಶಾಶ್ವತವಾಗಿ ರಾಜನಾಗಲಿ.
ಪೃಥಿವೀ ತಸ್ಯ ರಾಷ್ಟ್ರಂ ಚ ಯಸ್ಯ ಭೀಮೋ ಮಹಾರಥಃ |
ನಕುಲಃ ಸಹದೇವಶ್ಚ ದ್ರೌಪದೇಯಾಶ್ಚ ಮಾಧವ ॥24॥
ಧೃಷ್ಟದ್ಯುಮ್ನಶ್ಚ ಪಾಂಚಾಲ್ಯಃ ಸಾತ್ಯಕಿಶ್ಚ ಮಹಾರಥಃ |
ಉತ್ತಮೌಜಾ ಯುಧಾಮನ್ಯುಃ ಸತ್ಯಧರ್ಮಾ ಚ ಸೌಮಕಿಃ ॥25॥
ಚೈದ್ಯಶ್ಚ ಚೇಕಿತಾನಶ್ಚ ಶಿಖಂಡೀ ಚಾಪರಾಜಿತಃ |
ಇಂದ್ರಗೋಪಕವರ್ಣಾಶ್ಚ ಕೇಕಯಾ ಭ್ರಾತರಸ್ತಥಾ ॥26॥
ಇಂದ್ರಾಯುಧಸವರ್ಣಾಶ್ಚ ಕುಂತಿಭೋಜೋ ಮಹಾಮನಾಃ ॥27॥

ಮಾತುಲೋ ಭೀಮಸೇನಸ್ಯ ಶ್ಯೇನಜಿಚ್ಚ ಮಹಾರಥಃ |
ಶಂಖಃ ಪುತ್ರೋ ವಿರಾಟಸ್ಯ ನಿಧಿಸ್ತ್ವಂ ಚ ಜನಾರ್ದನ ॥28॥
ಎಲೈ ಮಾಧವನೇ, ಯಾವನಿಗೆ ಭೀಮನು ಮಹಾರಥನೋ, ಯಾವನ ಬಳಿಯಲ್ಲಿ ನಕುಲ-ಸಹದೇವರೂ, ದ್ರೌಪದಿಯ ಪುತ್ರರೂ ಇದ್ದಾರೆಯೋ, ಪಾಂಚಾಲದೇಶದ ಧೃಷ್ಟದ್ಯುಮ್ನ, ಮಹಾರಥನಾದ ಸಾತ್ಯಕಿ, ಉತ್ತಮೌಜಾ, ಯುಧಾಮನ್ಯು, ಸತ್ಯಧರ್ಮಾ, ಸೋಮಕಪುತ್ರನಾದ ದ್ರುಪದ, ಚೈದ್ಯ, ಚೇಕಿತಾನ, ಅಪರಾಜಿತನಾದ ಶಿಖಂಡೀ, ಕೆಂಪಾದ ಅಶ್ವಗಳನ್ನು ಹೊಂದಿದ ಕೇಕಯದೇಶದ ಐದು ಜನ ಸಹೋದರರು, ಕಾಮನ ಬಿಲ್ಲಿನ ಬಣ್ಣದ ಅಶ್ವಗಳನ್ನು ಹೊಂದಿರುವ ಧೈರ್ಯಶಾಲಿಯಾದ ಕುಂತಿಭೋಜ, ಭೀಮಸೇನನ ಸೋದರಮಾವನಾದ ಮಹಾರಥನಾದ ಶ್ಯೇನಜಿತ್, ವಿರಾಟನ ಪುತ್ರನಾದ ಶಂಖ, ಇವರು ಇದ್ದಾರೆಯೋ ಮತ್ತು ಜನಾರ್ದನನೇ, ನೀನು ನಿಧಿಯಾಗಿದ್ದೀಯೋ ಅವನದೇ ಪೃಥಿವಿ, ಅವನದೇ ರಾಷ್ಟ್ರ.
ಮಹಾನಯಂ ಕೃಷ್ಣ ಕೃತಃ ಕ್ಷತ್ರಸ್ಯ ಸಮುದಾಗಮಃ |
ರಾಜ್ಯಂ ಪ್ರಾಪ್ತಮಿದಂ ದೀಪ್ತಂ ಪ್ರಥಿತಂ ಸರ್ವರಾಜಸು ॥29॥
ಎಲೈ ಕೃಷ್ಣನೇ, ಕ್ಷತ್ರಿಯರ ದೊಡ್ಡ ಉದ್ಯೋಗವನ್ನು ಮಾಡಿ, ಎಲ್ಲ ರಾಜರಲ್ಲಿ ಪ್ರಸಿದ್ಧವಾದ ದೀಪ್ತವಾದ ಈ ರಾಜ್ಯವನ್ನು ಅವನೇ ಹೊಂದುವನು.
ಧಾರ್ತರಾಷ್ಟ್ರಸ್ಯ ವಾರ್ಷ್ಣೇಯ ಶಸ್ತ್ರಯಜ್ಞೋ ಭವಿಷ್ಯತಿ |
ಅಸ್ಯ ಯಜ್ಞಸ್ಯ ವೇತ್ತಾ ತ್ವಂ ಭವಿಷ್ಯಸಿ ಜನಾರ್ದನ ॥30॥
ಎಲೈ ಜನಾರ್ದನನೇ, ವಾರ್ಷ್ಣೇಯನೇ, ದುರ್ಯೋಧನನ ಶಸ್ತ್ರಯಜ್ಞವು ಉಂಟಾಗುವುದು. ನೀನು ಆ ಯಜ್ಞವನ್ನು ತಿಳಿಯುವವನಾಗುವಿ.
ಆಧ್ವರ್ಯವಂ ಚ ತೇ ಕೃಷ್ಣ ಕ್ರತಾವಸ್ಮಿನ್ ಭವಿಷ್ಯತಿ |
ಹೋತಾ ಚೈವಾತ್ರ ಬೀಭತ್ಸುಃ ಸನ್ನದ್ಧಃ ಸ ಕಪಿಧ್ವಜಃ ॥31॥
ಗಾಂಡೀವಂ ಸ್ರುಕ್ ತಥಾ ಚಾಜ್ಯಂ ವೀರ್ಯಂ ಪುಂಸಾಂ ಭವಿಷ್ಯತಿ ॥
ಎಲೈ ಕೃಷ್ಣನೇ, ಈ ಯಜ್ಞದಲ್ಲಿ ನೀನೇ ಅಧ್ವರ್ಯುವಾಗುವಿ. ಕಪಿಧ್ವಜನೂ ಯುದ್ಧ ಸನ್ನದ್ಧನೂ ಆದ ಅರ್ಜುನನು ಹೋತೃವಾಗುವನು. ಗಾಂಡೀವವು ಸ್ರುಕ್, ಪುರುಷರ ವೀರ್ಯವೇ ಆಜ್ಯವಾಗುವುದು.
ಐಂದ್ರಂ ಪಾಶುಪತಂ ಬ್ರಾಹ್ಮಂ ಸ್ಥೂಣಾಕರ್ಣಂ ಚ ಮಾಧವ |
ಮಂತ್ರಾಸ್ತತ್ರ ಭವಿಷ್ಯಂತಿ ಪ್ರಯುಕ್ತಾಃ ಸವ್ಯಸಾಚಿನಾ ॥33॥
ಐಂದ್ರ, ಪಾಶುಪತ, ಬ್ರಾಹ್ಮ, ಸ್ಥೂಣಾಕರ್ಣ ಮೊದಲಾದ ಅಸ್ತ್ರಗಳು ಎಲೈ ಮಾಧವನೇ, ಸವ್ಯಸಾಚಿಯಿಂದ ಪ್ರಯೋಗಿಸಲ್ಪಡುವ ಮಂತ್ರಗಳಾಗುವವು.
ಅನುಜಾತಶ್ಚ ಪಿತರಮಧಿಕೋ ವಾ ಪರಾಕ್ರಮೇ |
ಗ್ರಾವಸ್ತೋತ್ರಂ ಸ ಸೌಭದ್ರಃ ಸಮ್ಯಕ್ ತತ್ರ ಕರಿಷ್ಯತಿ ॥34॥
ತಂದೆಯನ್ನು ಅನುಸರಿಸಿ ಜನಿಸಿದ ಅಥವಾ ಪರಾಕ್ರಮದಲ್ಲಿ ತಂದೆಗಿಂತಲೂ ಅಧಿಕನಾದ ಅಭಿಮನ್ಯುವು ಅಲ್ಲಿ ಸೋಮರಸವನ್ನು ಹಿಂಡುವ ಶಿಲೆಗಳ ಸ್ತೋತ್ರವನ್ನು ಚೆನ್ನಾಗಿ ಮಾಡುವನು.
ಉದ್ಗಾತಾಽತ್ರ ಪುನರ್ಭೀಮಃ ಪ್ರಸ್ತೋತಾ ಚ ಮಹಾಬಲಃ |
ವಿನದನ್ ಸ ನರವ್ಯಾಘ್ರೋ ನಾಗಾನೀಕಾಂತಕೃದ್ ರಣೇ ॥35॥
ಮಹಾನಾದವನ್ನು ಮಾಡುತ್ತಾ, ಯುದ್ಧದಲ್ಲಿ ಗಜಗಳ ಸಮೂಹವನ್ನು ನಾಶಮಾಡುವ ಮಹಾಬಲನಾದ, ನರವ್ಯಾಘ್ರನಾದ ಭೀಮನು ಆ ಯಜ್ಞದಲ್ಲಿ ಉದ್ಗಾತೃವೂ ಮತ್ತು ಪ್ರಸ್ತೋತೃವೂ ಆಗುವನು.
ಸ ಚೈವ ತತ್ರ ಧರ್ಮಾತ್ಮಾ ಶಶ್ವದ್ ರಾಜಾ ಯುಧಿಷ್ಠಿರಃ |
ಜಪೈರ್ಹೋಮೈಶ್ಚ ಸಂಯುಕ್ತೋ ಬ್ರಹ್ಮತ್ವಂ ಕಾರಯಿಷ್ಯತಿ ॥36॥
ಶಾಶ್ವತವಾಗಿ ಧರ್ಮಾತ್ಮನಾದ ಆ ಯುಧಿಷ್ಠಿರನೇ, ಜಪ-ಹೋಮಗಳಿಂದ ಕೂಡಿದವನಾಗಿ ಆ ಯಜ್ಞದಲ್ಲಿ ಬ್ರಹ್ಮಋತ್ವಿಜನ ಕಾರ್ಯವನ್ನು ಮಾಡುವನು.
ಶಂಖಶಬ್ದಾಃ ಸಮುರಜಾ ಭೇರ್ಯಶ್ಚ ಮಧುಸೂದನ |
ಉತ್ಕೃಷ್ಟಃ ಸಿಂಹನಾದಶ್ಚ ಸುಬ್ರಹ್ಮಣ್ಯೋ ಭವಿಷ್ಯತಿ ॥37॥
ಎಲೈ ಮಧುಸೂದನನೇ, ಶಂಖಶಬ್ದಗಳೂ, ಮುರಜ ಮತ್ತು ಭೇರಿಯ ಶಬ್ದಗಳೂ, ಉತ್ಕೃಷ್ಟವಾದ ಸಿಂಹನಾದವೂ ಸುಬ್ರಹ್ಮಣ್ಯ ಸಾಮವಾಗುತ್ತದೆ.
ನಕುಲಃ ಸಹದೇವಶ್ಚ ಮಾದ್ರೀಪುತ್ರೌ ಯಶಸ್ವಿನೌ |
ಶಾಮಿತ್ರಂ ತೌ ಮಹಾವೀರ್ಯೌ ಸಮ್ಯಕ್ ತತ್ರ ಕರಿಷ್ಯತಃ ॥38॥
ಮಾದ್ರೀಪುತ್ರರಾದ, ಕೀರ್ತಿವಂತರಾದ, ಮಹಾಪರಾಕ್ರಮಶಾಲಿಗಳಾದ ನಕುಲ- ಸಹದೇವರು ಪಶುಹಿಂಸನರೂಪವಾದ ಶಾಮಿತ್ರಕರ್ಮವನ್ನು ಮಾಡುವರು.
ಮೈತ್ರಾವರುಣ ಆಗ್ನೀಧ್ರೌ ಮಹಾವೀರ್ಯೌ ಭವಿಷ್ಯತಃ ॥39॥
ಮೈತ್ರಾವರುಣ ಕರ್ಮದಲ್ಲಿ ಮಹಾವೀರ್ಯರಾದ ಅವರಿಬ್ಬರೂ ಆಗ್ನೀಧ್ರರಾಗುವರು.
ಕಲ್ಮಾಷದಂಡಾ ಗೋವಿಂದ ವಿಮಲಾ ರಥಪಂಕ್ತಯಃ |
ಯೂಪಾಃ ಸಮುಪಕಲ್ಪಂತಾಮಸ್ಮಿನ್ ಯಜ್ಞೇ ಜನಾರ್ದನ ॥40॥
ಎಲೈ ಗೋವಿಂದನೇ, ಜನಾರ್ದನನೇ, ಕೃಷ್ಣಪಾಂಡರ ವರ್ಣದ ದಂಡಗಳನ್ನು ಹೊಂದಿರುವ ರಥಸಮೂಹಗಳೇ ಈ ಯಜ್ಞದಲ್ಲಿ

ಯೂಪಗಳಾಗಲಿ.
ಕರ್ಣಿನಾಲೀಕನಾರಾಚಾ ವತ್ಸದಂತಾಶ್ಚ ಬರ್ಹಿಣಃ |
ತೋಮರಾಃ ಸೋಮಕಲಶಾಃ ಪವಿತ್ರಾಣಿ ಧನೂಂಷಿ ಚ ॥41॥
ಕರ್ಣಿ, ನಾಲೀಕ, ನಾರಾಚ ಮೊದಲಾದ ನವಿಲುಗರಿಗಳಿಂದ ಕೂಡಿದ ಬಾಣವಿಶೇಷಗಳು ಮತ್ತು ತೋಮರಗಳು ಸೋಮಕಲಶಗಳಾಗುವವು. ಧನುಸ್ಸುಗಳೇ ಪವಿತ್ರಗಳು.
ಅಸಯೋಽತ್ರ ಕಪಾಲಾನಿ ಪುರೋಡಾಶಾಃ ಶಿರಾಂಸಿ ಚ |
ಹವಿಸ್ತು ರುಧಿರಂ ಕೃಷ್ಣ ತಸ್ಮಿನ್ ಯಜ್ಞೇ ಭವಿಷ್ಯತಿ ॥42॥
ಇಧ್ಮಾಃ ಪರಿಧಯಶ್ಚೈವ ಶಕ್ತಯೋ ವಿಮಲಾ ಗದಾಃ |
ಸದಸ್ಯಾ ದ್ರೋಣಶಿಷ್ಯಾಶ್ಚ ಕೃಪಸ್ಯ ಚ ಶರದ್ವತಃ ॥43॥
ಕಪಾಲಗಳು ಖಡ್ಗಗಳು, ತಲೆಬುರುಡೆಗಳೇ ಪುರೋಪಾಶಗಳು. ಎಲೈ ಕೃಷ್ಣನೇ, ಆ ಯಜ್ಞದಲ್ಲಿ ರಕ್ತವೇ ಹವಿಸ್ಸಾಗುವುದು. ಶಕ್ತಿ ಮತ್ತು ವಿಮಲವಾದ ಗದೆಗಳು ಅಲ್ಲಿ ಇಧ್ಮಗಳು ಮತ್ತು ಪರಿಧಿಗಳೂ ಆಗುವವು. ದ್ರೋಣರ ಶಿಷ್ಯರೂ ಮತ್ತು ಶರದ್ವತರ, ಕೃಪರ ಶಿಷ್ಯರು ಸದಸ್ಯರಾಗುವರು.
ಇಷವೋಽತ್ರ ಪರಿಸ್ತೋಮಾ ಮುಕ್ತಾ ಗಾಂಡೀವಧನ್ವನಾ |
ಮಹಾರಥಪ್ರಯುಕ್ತಾಶ್ಚ ದ್ರೋಣದ್ರೌಣಿಪ್ರಚೋದಿತಾಃ ॥44॥
ಗಾಂಡೀವ ಧನುರ್ಧಾರಿಯಾದ ಅರ್ಜುನನಿಂದ ಮತ್ತು ಮಹಾರಥರಾದ ದ್ರೋಣ, ಅಶ್ವತ್ಥಾಮರಿಂದ ಪ್ರಯೋಗಿಸಲ್ಪಟ್ಟ ಬಾಣಗಳೇ ಪರಿಸ್ತೋಮಗಳಾಗುವವು.
ಪ್ರತಿಪ್ರಾಸ್ಥಾನಿಕಂ ಕರ್ಮ ಸಾತ್ಯಕಿಃ ಸ ಕರಿಷ್ಯತಿ |
ದೀಕ್ಷಿತೋ ಧಾರ್ತರಾಷ್ಟ್ರೋಽತ್ರ ಪತ್ನೀ ಚಾಸ್ಯ ಮಹಾಚಮೂಃ ॥45॥
ಸಾತ್ಯಕಿಯು ಅಲ್ಲಿ ಪ್ರತಿಪ್ರಾಸ್ಥಾನಿಕ ಕರ್ಮವನ್ನು ಮಾಡುವನು. ದುರ್ಯೋಧನನೇ ದೀಕ್ಷೆಯನ್ನು ಹೊಂದಿದ ಯಜಮಾನ, ದೊಡ್ಡ ಸೈನ್ಯವೇ ಅವನ ಪತ್ನಿ.
ಘಟೋತ್ಕಚೋಽತ್ರ ಶಾಮಿತ್ರಂ ಕರಿಷ್ಯತಿ ಮಹಾಬಲಃ |
ಅತಿರಾತ್ರೇ ಮಹಾಬಾಹೋ ವಿತತೇ ಯಜ್ಞಕರ್ಮಣಿ ॥46॥
ಎಲೈ ಮಹಾಬಾಹುವೇ, ಈ ವಿಸ್ತಾರವಾದ ಯಜ್ಞಕರ್ಮದಲ್ಲಿ ಮಹಾಬಲನಾದ ಘಟೋತ್ಕಚನು ಅತಿರಾತ್ರನಾಮಕ ಯಜ್ಞದಲ್ಲಿ (ರಾತ್ರಿಯುದ್ಧದಲ್ಲಿ ಎಂದು ಧ್ವನಿ) ಪಶುಹಿಂಸನರೂಪವಾದ ಕರ್ಮವನ್ನು ಮಾಡುವನು.
ದಕ್ಷಿಣಾ ತ್ವಸ್ಯ ಯಜ್ಞಸ್ಯ ಧೃಷ್ಟದ್ಯುಮ್ನಃ ಪ್ರತಾಪವಾನ್ |
ವೈತಾನೇ ಕರ್ಮಣಿ ತತೋ ಜಾತೋ ಯಃ ಕೃಷ್ಣ ಪಾವಕಾತ್ ॥47॥
ಎಲೈ ಕೃಷ್ಣನೇ, ಯಜ್ಞಕರ್ಮದಲ್ಲಿ ಅಗ್ನಿಕುಂಡದಿಂದ ಉದ್ಭವಿಸಿದ ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನೇ ಈ ಯಜ್ಞದ ದಕ್ಷಿಣೆ.
ಯದಬ್ರುವಮಹಂ ಕೃಷ್ಣ ಕಟುಕಾನಿ ಸ್ಮ ಪಾಂಡವಾನ್ |
ಪ್ರಿಯಾರ್ಥಂ ಧಾರ್ತರಾಷ್ಟ್ರಸ್ಯ ತೇನ ತಪ್ಯೇಽದ್ಯ ಕರ್ಮಣಾ ॥48॥
ಎಲೈ ಕೃಷ್ಣನೇ, ದುರ್ಯೋಧನನನ್ನು ಪ್ರೀತಿಪಡಿಸುವ ಸಲುವಾಗಿ ಪಾಂಡವರಿಗೆ ನಾನು ಏನು ಉಗ್ರವಾದ ಮಾತುಗಳನ್ನು ಆಡಿದೆನೋ ಅದರಿಂದ ಈ ದಿನ ಪಶ್ಚಾತ್ತಾಪ ಪಡುತ್ತಿದ್ದೇನೆ.
ಯದಾ ದ್ರಕ್ಷ್ಯಸಿ ಮಾಂ ಕೃಷ್ಣ ನಿಹತಂ ಸವ್ಯಸಾಚಿನಾ |
ಪುನಶ್ಚಿತಿಸ್ತದಾ ಚಾಸ್ಯ ಯಜ್ಞಸ್ಯಾಥ ಭವಿಷ್ಯತಿ ॥49॥
ಕೃಷ್ಣನೇ, ಅರ್ಜುನನಿಂದ ನಿಹತನಾದ ನನ್ನನ್ನು ಯಾವಾಗ ನೀನು ನೋಡುವಿಯೋ ಆಗ ಈ ಯಜ್ಞಕ್ಕೆ ಪುನಶ್ಚಿತಿ ಎಂಬ ಅಂಗವು ಉಂಟಾಗುವುದು.
ದುಃಶಾಸನಸ್ಯ ರುಧಿರಂ ಯದಾ ಪಾಸ್ಯತಿ ಪಾಂಡವಃ |
ಆನರ್ದನ್ ನರ್ದತಃ ಸಮ್ಯಕ್ ತದಾ ಸೂತ್ಯಾ ಭವಿಷ್ಯತಿ ॥50॥
ಪಾಂಡವನಾದ ಭೀಮಸೇನನು ನರ್ದಿಸುತ್ತಾ, ನೋವಿನಿಂದ ಹೊರಳಾಡುವ ದುಃಶಾಸನನ ರಕ್ತವನ್ನು ಯಾವಾಗ ಪಾನ ಮಾಡುವನೋ ಆಗ ಆ ಯಜ್ಞದಲ್ಲಿ ಸೋಮಾಭಿಸ್ರವಣವು ಉಂಟಾಗುವುದು.
ಯದಾ ದ್ರೋಣಂ ಚ ಭೀಷ್ಮಂ ಚ ಪಾಂಚಾಲ್ಯೌ ಪಾತಯಿಷ್ಯತಃ |
ತದಾ ಯಜ್ಞಾವಸಾನಂ ತದ್ ಭವಿಷ್ಯತಿ ಜನಾರ್ದನ ॥51॥
ಎಲೈ ಜನಾರ್ದನನೇ, ಪಾಂಚಾಲದೇಶದ ಶಿಖಂಡೀ ಮತ್ತು ಧೃಷ್ಟದ್ಯುಮ್ನರು ಯಾವಾಗ ಭೀಷ್ಮರನ್ನೂ ಮತ್ತು ದ್ರೋಣರನ್ನೂ ಕೆಡವುವರೋ ಆಗ ಆ ಯಜ್ಞವು ಅವಸಾನವನ್ನು ಹೊಂದುವುದು.
ದುರ್ಯೋಧನಂ ಯದಾ ಹಂತಾ ಭೀಮಸೇನೋ ಮಹಾಬಲಃ |
ತದಾ ಸಮಾಪ್ಯತೇ ಯಜ್ಞೋ ಧಾರ್ತರಾಷ್ಟ್ರಸ್ಯ ಮಾಧವ ॥52॥
ಎಲೈ ಮಾಧವನೇ, ಮಹಾಬಲನಾದ ಭೀಮಸೇನನು ಯಾವಾಗ ದುರ್ಯೋಧನನನ್ನು ಕೊಲ್ಲುವನೋ ಆಗ ದುರ್ಯೋಧನನ ಯಜ್ಞವು ಸಮಾಪ್ತಿಯನ್ನು ಹೊಂದುವುದು.
ಸ್ನುಷಾಶ್ಚ ಪ್ರಸ್ನುಷಾಶ್ಚೈವ ಧೃತರಾಷ್ಟ್ರಸ್ಯ ಸಂಗತಾಃ |
ಹತೇಶ್ವರಾ ಹತಸುತಾ ಹತಪೌತ್ರಾಶ್ಚ ಕೇಶವ ॥53॥
ಗಾಂಧಾರ್ಯಾ ಸಹ ರೋದಂತ್ಯಾ ಶ್ವಗೃಧ್ರಶಕುನಾಕುಲೇ |

ಸ ಯಜ್ಞೇಽಸ್ಮಿನ್ನವಭೃಥೋ ಭವಿಷ್ಯತಿ ಜನಾರ್ದನ ॥54॥
ಧೃತರಾಷ್ಟ್ರನ ಸೊಸೆಯರೂ, ಅವರ ಸೊಸೆಯರೂ ಎಲ್ಲರೂ ಒಟ್ಟಿಗೆ ಸೇರಿ ಮಕ್ಕಳನ್ನೂ, ಮೊಮ್ಮಕ್ಕಳನ್ನೂ ತಮ್ಮ ಪತಿಗಳನ್ನೂ ಕಳೆದುಕೊಂಡು ನಾಯಿ , ನರಿ-ಪಕ್ಷಿಗಳಿಂದ ತುಂಬಿದ ರಣರಂಗದಲ್ಲಿ ಅಳುತ್ತಿರುವ ಗಾಂಧಾರಿಯ ಜೊತೆಯಲ್ಲಿ ಯಾವಾಗ ಅಳುತ್ತಾರೆಯೋ ಆಗ ಎಲ್ಲೈ ಕೇಶವನೇ, ಜನಾರ್ದನನೇ ಈ ಯಜ್ಞದಲ್ಲಿ ಆವಭೃಥಸ್ನಾನವಾಗುವುದು.
ವಿದ್ಯಾವೃದ್ಧಾ ವಯೋವೃದ್ಧಾ ಕ್ಷತ್ರಿಯಾಃ ಕ್ಷತ್ರಿಯರ್ಷಭ |
ವೃಥಾ ಮೃತ್ಯುಂ ನ ಕುರ್ವೀರನ್ ತ್ವತ್ಕೃತೇ ಮಧುಸೂದನ ॥55॥
ಎಲ್ಲೈ ಮಧುಸೂದನನೇ, ಕ್ಷತ್ರಿಯರ್ಷಭನೇ, ನಿನ್ನ ಅನುಗ್ರಹದಿಂದಾಗಿ ವಿದ್ಯಾವೃದ್ಧರೂ, ವಯೋವೃದ್ಧರೂ ಆದ ಕ್ಷತ್ರಿಯರು ವ್ಯರ್ಥವಾಗಿ ಮರಣವನ್ನು ಹೊಂದುವುದು ಬೇಡ.
ಶಸ್ತ್ರೇಣ ನಿಧನಂ ಗಚ್ಛೇತ್ ಸಮಗ್ರಂ ಕ್ಷತ್ರಮಂಡಲಮ್ |
ಕುರುಕ್ಷೇತ್ರೇ ಪುಣ್ಯತಮೇ ತ್ರೈಲೋಕ್ಯಸ್ಯಾಪಿ ಕೇಶವ ॥56॥
ಎಲ್ಲೈ ಕೇಶವನೇ, ಮೂರುಲೋಕಗಳಿಗೂ ಅತ್ಯಂತ ಪವಿತ್ರವಾದ ಕುರುಕ್ಷೇತ್ರದಲ್ಲಿ ಸಮಗ್ರವಾದ ಕ್ಷತ್ರಿಯ ಸಮೂಹವು ಶಸ್ತ್ರದಿಂದ ನಿಧನವನ್ನು ಹೊಂದುವುದಾಗಲಿ.
ತದತ್ರ ಪುಂಡರೀಕಾಕ್ಷ ವಿಧತ್ಸ್ವ ಯದನಂತರಮ್ |
ಯಥಾ ಕಾತ್ಸ್ನ್ಯೇನ ವಾರ್ಷ್ಣೇಯ ಕ್ಷತ್ರಂ ಸ್ವರ್ಗಮವಾಪ್ನುಯಾತ್ ॥57॥
ಯಾವತ್ ಕೀರ್ತಿಭವಃ ಶಬ್ದಃ ಶಾಶ್ವತೋಽಯಂ ಭವಿಷ್ಯತಿ ॥58॥
ಎಲ್ಲೈ ಪುಂಡರೀಕಾಕ್ಷನೇ, ಸಮಗ್ರವಾದ ಕ್ಷತ್ರಿಯಸಮೂಹವು ಸ್ವರ್ಗವನ್ನು ಹೊಂದುವಂತೆ ಮತ್ತು ಅವರ ಕೀರ್ತಿಜನ್ಯವಾದ ಸ್ತೋತ್ರರೂಪವಾದ ಶಬ್ದಗಳು ಶಾಶ್ವತವಾಗಿರುವಂತೆ ಮುಂದೆ ಏನನ್ನು ಮಾಡಬೇಕೋ ಅದನ್ನು ಮಾಡುವವನಾಗು.
ಬ್ರಾಹ್ಮಣಾ ಕಥಯಿಷ್ಯಂತಿ ಮಹಾಭಾರತಮಾಹವಮ್ |
ಸಮಾಗಮೇಷು ವಾರ್ಷ್ಣೇಯ ಕ್ಷತ್ರಿಯಾಣಾಂ ಯಶೋಧನಮ್ ॥59॥
ಎಲ್ಲೈ ವಾರ್ಷ್ಣೇಯನೇ, ಕ್ಷತ್ರಿಯರ ಯಶೋಧನವಾದ ಮಹಾಭಾರತ ಯುದ್ಧವನ್ನು ಬ್ರಾಹ್ಮಣರು ಉತ್ಸವಗಳಲ್ಲಿ ಕಥನ ಮಾಡುವರು.
ಸಮುಪಾನಯ ಕೌಂತೇಯಂ ಯುದ್ಧಾಯ ಮಮ ಕೇಶವ |
ಮಂತ್ರಸಂವರಣಂ ಕುರ್ವನ್ ನಿತ್ಯಮೇವ ಪರಂತಪ ॥60॥
ಎಲ್ಲೈ ಕೇಶವನೇ, ಪರಂತಪನೇ, ನಮ್ಮ ಈ ಸಂಭಾಷಣೆಯನ್ನು ಯಾವಾಗಲೂ ರಹಸ್ಯವಾಗಿಟ್ಟು ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಯುಧಿಷ್ಠಿರನನ್ನು ಕರೆದುಕೊಂಡು ಬಾ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೊಂದನೆಯ ಅಧ್ಯಾಯ
ಕೃಷ್ಣನಿಂದ ಕರ್ಣನನ್ನು ಕುರಿತು ಪಾಂಡವರ, ಜಯನಿರ್ಧಾರವನ್ನು ಹೇಳಿ ಭೀಷ್ಮಾದಿಗಳಿಗೆ ಯುದ್ಧಕ್ಕೆ ಸನ್ನದ್ಧವಾಗಿರುವಂತೆ ಸಂದೇಶವನ್ನು ಕೊಡಲು ಸೂಚನೆ.
ವೈಶಂಪಾಯನಃ
ಕರ್ಣಸ್ಯ ವಚನಂ ಶ್ರುತ್ವಾ ಕೇಶವಃ ಪರವೀರಹಾ |
ಉವಾಚ ಪ್ರಹಸನ್ ವಾಕ್ಯಂ ಸ್ಮಿತಪೂರ್ವಮಿದಂ ತದಾ ॥1॥
ವೈಶಂಪಾಯನ ಶತ್ರುವೀರಘಾತಕನಾದ ಕೇಶವನು ಕರ್ಣನ ಮಾತುಗಳನ್ನು ಕೇಳಿ ನಗುತ್ತಾ ಮಂದಹಾಸಪೂರ್ವಕವಾಗಿ ಈ ಮಾತುಗಳನ್ನು ಆಡಿದನು.
ಅಪಿ ತ್ವಾಂ ನ ತಪೇತ್ ಕರ್ಣ ರಾಜ್ಯಲೋಭೋಪಪಾದನಾ |
ಮಯಾ ದತ್ತಾಂ ಹಿ ಪೃಥಿವೀಂ ನ ಪ್ರಶಾಸಿತುಮಿಚ್ಛತಿ ॥2॥
ಎಲ್ಲೈ ಕರ್ಣನೇ, ರಾಜ್ಯಲೋಭದ ಮಾತುಗಳೂ ಸಹ ನಿನಗೆ ತಾಪವನ್ನು ಉಂಟುಮಾಡಲಾರವು. ನಾನು ಕೊಟ್ಟ ಭೂಮಿಯನ್ನೂ ಸಹ ಆಳಲು ನೀನು ಇಷ್ಟಪಡುವುದಿಲ್ಲ.
ಧ್ರುವಂ ಜಯಃ ಪಾಂಡವಾನಾಮಿತೀದಂ
ನ ಸಂಶಯಃ ಕಶ್ಚನ ವಿದ್ಯತೇಽತ್ರ |
ಜಯಧ್ವಜೋ ದೃಶ್ಯತೇ ಪಾಂಡವಸ್ಯ
ಸಮುಚ್ಛ್ರಿತೋ ವಾನರರಾಜ ಉಗ್ರಃ ॥3॥
ಪಾಂಡವರಿಗೆ ಜಯವು ನಿಶ್ಚಿತವಾದುದು. ಇದರಲ್ಲಿ ಯಾವ ಸಂಶಯವೂ ಇಲ್ಲ. ವಾನರನಿಂದ ಕಂಗೊಳಿಸುವ ಪಾಂಡವರ ಜಯಧ್ವಜವು ಉಗ್ರವಾಗಿ ಮತ್ತು ಉನ್ನತವಾಗಿ ಕಂಡುಬರುತ್ತಿದೆ.
ದಿವ್ಯಾ ಮಾಯಾ ವಿಹಿತಾ ಭೌಮನೇನ
ಸಮುಚ್ಛ್ರಿತಾ ಇಂದ್ರಕೇತುಪ್ರಕಾಶಾ |

ದಿವ್ಯಾನಿ ಭೂತಾನಿ ಜಯಾವಹಾನಿ
ದೃಶ್ಯಂತಿ ಚೈವಾತ್ರ ಭಯಾನಕಾನಿ ॥4॥
ಇಂದ್ರಧ್ವಜದಂತೆ ಉನ್ನತವಾಗಿ ಶೋಭಿಸುವ ಧ್ವಜದಲ್ಲಿ ವಿಶ್ವಕರ್ಮನು ದಿವ್ಯವಾದ ಮಾಯೆಗಳನ್ನು ಇಟ್ಟಿದ್ದಾನೆ. ಮತ್ತು ಆ ಧ್ವಜದಲ್ಲಿ ಜಯವನ್ನು ಸೂಚಿಸುವ ದಿವ್ಯವಾದ ಭೂತಗಳೂ ಕಂಡುಬರುತ್ತಿವೆ.
ನ ಸಜ್ಜತೇ ಶೈಲವನಸ್ಪತಿಭ್ಯ
ಊರ್ಧ್ವಂ ತಿರ್ಯಗ್ಯೋಜನಮಾತ್ರರೂಪಃ |
ಶ್ರೀಮಾನ್ ಧ್ವಜಃ ಕರ್ಣ ಧನಂಜಯಸ್ಯ
ಸಮುತ್ಥಿತಃ ಪಾವಕತುಲ್ಯರೂಪಃ ॥5॥
ಎಲೈ ಕರ್ಣನೇ, ಎತ್ತರವಾದ, ಅಗ್ನಿಯ ಸಮಾನವಾದ ಕಾಂತಿಯುಳ್ಳ ಧನಂಜಯನ ಕಾಂತಿಯುಕ್ತವಾದ ಧ್ವಜವು ಪರ್ವತಗಳಲ್ಲಾಗಲೀ, ವೃಕ್ಷಗಳಲ್ಲಾಗಲೀ, ಮೇಲ್ಭಾಗ ಮತ್ತು ಕೆಳಭಾಗಗಳಲ್ಲಾಗಲೀ ಒಂದು ಯೋಜನದವರೆಗೆ ಎಲ್ಲಿಯೂ ಸಿಲುಕಿಕೊಳ್ಳುವುದಿಲ್ಲ.
ಯದಾ ದ್ರಕ್ಷ್ಯಸಿ ಸಂಗ್ರಾಮೇ ಶ್ವೇತಾಶ್ವಂ ಕೃಷ್ಣಸಾರಥಿಮ್ |
ಐಂದ್ರಮಸ್ತ್ರಂ ಪ್ರಕುರ್ವಾಣಮುಭೌ ಚಾಪ್ಯಗ್ನಿಮಾರುತೌ ॥6॥
ಗಾಂಡೀವಸ್ಯ ಚ ನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ನ ತದಾ ಭವಿತಾ ತ್ರೇತಾ ನ ಕೃತಂ ದ್ವಾಪರಂ ನ ಚ ॥7॥
ಕೃಷ್ಣಸಾರಥಿಯಾದ, ಶ್ವೇತಾಶ್ವನಾದ ಅರ್ಜುನನು ಯುದ್ಧದಲ್ಲಿ ಐಂದ್ರಾಸ್ತ್ರವನ್ನೂ, ಆಗ್ನೇಯಾಸ್ತ್ರವನ್ನೂ, ವಾಯವ್ಯಾಸ್ತ್ರವನ್ನೂ ಪ್ರಯೋಗಿಸುವುದನ್ನೂ ಸಿಡಿಲಿನ ಆರ್ಭಟದಂತಿರುವ ಗಾಂಡೀವದ ಘೋಷವನ್ನೂ ನೀನು ನೋಡುವಾಗ ತ್ರೇತಾಯುಗವಾಗಲೀ, ಕೃತಯುಗವಾಗಲೀ, ದ್ವಾಪರಯುಗವಾಗಲೀ ಉಂಟಾಗುವುದಿಲ್ಲ (ಮೂರು ಯುಗಗಳಲ್ಲಿಯೂ ಇಂತಹ ಯುದ್ಧವು ನಡೆದಿರುವುದಿಲ್ಲ ಎಂದು ಅಭಿಪ್ರಾಯ ವಾದಿರಾಜರು).
ಯದಾ ದ್ರಕ್ಷ್ಯಸಿ ಸಂಗ್ರಾಮೇ ಕುಂತೀಪುತ್ರಂ ಯುಧಿಷ್ಠಿರಮ್ |
ಜಪಹೋಮಸಮಾಸಕ್ತಂ ರಕ್ಷಂತಂ ಚ ಮಹಾಚಮೂಮ್ ॥8॥
ಆದಿತ್ಯಮಿವ ದುರ್ಧರ್ಷಂ ತಪಂತಂ ಶತ್ರುವಾಹಿನೀಮ್ |
ನ ತದಾ ಭವಿತಾ ತ್ರೇತಾ ನ ಕೃತಂ ದ್ವಾಪರಂ ನ ಚ ॥9॥
ಯುದ್ಧದಲ್ಲಿ ಕುಂತೀಪುತ್ರನಾದ ಯುಧಿಷ್ಠಿರನು ಜಪಹೋಮಸಮಾಯುಕ್ತನಾಗಿ, ತನ್ನ ದೊಡ್ಡ ಸೈನ್ಯವನ್ನು ರಕ್ಷಿಸುತ್ತಾ, ಆದಿತ್ಯನಂತೆ ದುರ್ಧರ್ಷನಾಗಿ, ಶತ್ರುಸೈನ್ಯವನ್ನು ದಹಿಸುವುದನ್ನು ನೋಡುವಾಗ ಕೃತಯುಗವಾಗಲೀ, ತ್ರೇತಾಯುಗವಾಗಲೀ, ದ್ವಾಪರಯುಗವಾಗಲೀ ಉಂಟಾಗುವುದಿಲ್ಲ.
ಯದಾ ದ್ರಕ್ಷ್ಯಸಿ ಸಂಗ್ರಾಮೇ ಭೀಮಸೇನಂ ಮಹಾಬಲಮ್ |
ದುಃಶಾಸನಸ್ಯ ರುಧಿರಂ ಪೀತ್ವಾ ನೃತ್ಯಂತಮಾಹವೇ ॥10॥
ಪ್ರಭಿನ್ನಮಿವ ಮಾತಂಗಂ ಪ್ರತಿದ್ವಿರದಘಾತಿನಮ್ |
ನ ತದಾ ಭವಿತಾ ತ್ರೇತಾ ನ ಕೃತಂ ದ್ವಾಪರಂ ನ ಚ ॥11॥
ಯುದ್ಧದಲ್ಲಿ ಮಹಾಬಲನಾದ ಭೀಮಸೇನನು ದುಃಶಾಸನನ ರಕ್ತವನ್ನು ಪಾನಮಾಡಿ, ಪ್ರತಿಗಜವನ್ನು ಸಂಹರಿಸಿದ ಮದಗಜದಂತೆ ಯುದ್ಧದಲ್ಲಿ ನೃತ್ಯವನ್ನು ಮಾಡುವಾಗ ಕೃತಯುಗವಾಗಲೀ, ತ್ರೇತಾಯುಗವಾಗಲೀ, ದ್ವಾಪರಯುಗವಾಗಲೀ ಉಂಟಾಗುವುದಿಲ್ಲ.
ಯದಾ ದ್ರಕ್ಷ್ಯಸಿ ಸಂಗ್ರಾಮೇ ದ್ರೋಣಂ ಶಾಂತನವಂ ಕೃಪಮ್ |
ಸುಯೋಧನಂ ಚ ರಾಜಾನಂ ಸೈಂಧವಂ ಚ ಜಯದ್ರಥಮ್ ॥12॥
ಯುದ್ಧಾಯಾಪತತಸ್ತೂರ್ಣಂ ವಾರಿತಾನ್ ಸವ್ಯಸಾಚಿನಾ |
ನ ತದಾ ಭವಿತಾ ತ್ರೇತಾ ನ ಕೃತಂ ದ್ವಾಪರಂ ನ ಚ ॥13॥
ಯುದ್ಧದಲ್ಲಿ ದ್ರೋಣರೂ, ಭೀಷ್ಮರೂ, ಕೃಪರೂ, ರಾಜನಾದ ಸುಯೋಧನ, ಸಿಂಧುದೇಶದ ಜಯದ್ರಥ ಇವರೂ ಶೀಘ್ರವಾಗಿ ಯುದ್ಧದಲ್ಲಿ ಪಾಂಡವರ ಮೇಲೆ ಎರಗುವಾಗ, ಇವರನ್ನು ಅರ್ಜುನನು ತಡೆಯುವುದನ್ನು ನೋಡುವಾಗ ಕೃತಯುಗವಾಗಲೀ, ತ್ರೇತಾಯುಗವಾಗಲೀ, ದ್ವಾಪರಯುಗವಾಗಲೀ ಉಂಟಾಗುವುದಿಲ್ಲ.
ಯದಾ ದ್ರಕ್ಷ್ಯಸಿ ಸಂಗ್ರಾಮೇ ಮಾದ್ರೀಪುತ್ರೌ ಮಹಾಬಲೌ |
ವಾಹಿನೀಂ ಧಾರ್ತರಾಷ್ಟ್ರಾಣಾಂ ಕ್ಷೋಭಯಂತೌ ಗಜಾವಿವ ॥14॥
ವಿಗಾಢೇ ಶಸ್ತ್ರಸಂಬಾಧೇ ಪರವೀರರಥಾರುಜೌ |
ನ ತದಾ ಭವಿತಾ ತ್ರೇತಾ ನ ಕೃತಂ ದ್ವಾಪರಂ ನ ಚ ॥15॥
ಶತ್ರುಸೈನ್ಯದ ವೀರರನ್ನೂ ಮತ್ತು ರಥಗಳನ್ನೂ ಮರ್ದಿಸುವ ಮಹಾಬಲರಾದ ಮಾದ್ರೀಪುತ್ರರು ತೀವ್ರವಾದ ಶಸ್ತ್ರಪ್ರಯೋಗಗಳಿರುವ ಯುದ್ಧದಲ್ಲಿ ದುರ್ಯೋಧನನ ಸೈನ್ಯವನ್ನು ಗಜಗಳಂತೆ ಕ್ಷೋಭೆಗೊಳಿಸುವಾಗ ಕೃತಯುಗವಾಗಲೀ, ತ್ರೇತಾಯುಗವಾಗಲೀ, ದ್ವಾಪರಯುಗವಾಗಲೀ ಉಂಟಾಗುವುದಿಲ್ಲ.
ಬ್ರೂಯಾಃ ಕರ್ಣ ಇತೋ ಗತ್ವಾ ದ್ರೋಣಂ ಶಾಂತನವಂ ಕೃಪಮ್ |
ಸೌಮ್ಯೋಽಯಂ ವರ್ತತೇ ಮಾಸಃ ಸುಪ್ರಾಪಯವಸೇಂಧನಃ ॥16॥
ಪಕ್ವೌಷಧಿವನಸ್ಫೀತಃ ಫಲವಾನಲ್ಪಮಕ್ಷಿಕಃ |
ತಿಲಕೋ ದ್ರವಸಂಪನ್ನೋ ನಾತ್ಯುಷ್ಣಃ ಶಿಶಿರಃ ಸುಖಃ ॥17॥
ಎಲೈ ಕರ್ಣನೇ, ಇಲ್ಲಿಂದ ಹೋಗಿ ದ್ರೋಣರಿಗೂ, ಭೀಷ್ಮರಿಗೂ ಮತ್ತು ಕೃಪರಿಗೂ ಈ ಮಾಸವು ಸೌಮ್ಯವಾಗಿದೆ. ಪ್ರಾಣಿಗಳಿಗೆ ಮೇವು

ಮತ್ತು ಕಟ್ಟಿಗೆಯು ಸುಲಭವಾಗಿ ದೊರೆಯುತ್ತವೆ. ಔಷಧಿ, ವನಸ್ಪತಿಗಳು ಪಕ್ವವಾಗಿ ಶೋಭಿಸುತ್ತಿವೆ. ತಿಲಕವೃಕ್ಷವು ಫಲಭರಿತವಾಗಿ ಅಲ್ಪಮಕ್ಷಿಕಗಳಿಂದ ಕೂಡಿದೆ. ಈ ಶಿಶಿರ ಋತುವು ಜಲಸಮೃದ್ಧಿಯಿಂದ ಕೂಡಿದ್ದು ಬಹಳ ಉಷ್ಣವಾಗದೆ ಸುಖಕರವಾಗಿದೆ ಎಂದು ಹೇಳುವವನಾಗು.
ಸಪ್ತಮಾಚ್ಚಾಪಿ ದಿವಸಾದಮಾವಾಸ್ಯಾ ಭವಿಷ್ಯತಿ |
ಸಂಗ್ರಾಮೋ ಯುಜ್ಯತಾಂ ತಸ್ಯಾಂ ತಾಮಾಹುಃ ಶಕ್ರದೇವತಾಮ್ ||18||
ಇವತ್ತಿಗೆ ಏಳನೆಯ ದಿವಸದಲ್ಲಿ ಅಮಾವಾಸ್ಯೆಯಾಗುವುದು. ಅದು ಇಂದ್ರದೇವತಾಕವಾದ ತಿಥಿ ಎಂದು ಹೇಳುತ್ತಾರೆ. ಆ ತಿಥಿಯಲ್ಲಿ ಯುದ್ಧವನ್ನು ಹೂಡುವವರಾಗಿ.
ತಥಾ ರಾಜ್ಞೋ ವದೇಃ ಸರ್ವಾನ್ ಯೇ ಯುದ್ಧಾಯಾಭ್ಯುಪಾಗತಾಃ |
ಯದ್ವೋ ಮನೀಷಿತಂ ತದ್ ವೈ ಸರ್ವಂ ಸಂಪಾದಯಾಮ್ಯಹಮ್ ||
ಹಾಗೆಯೇ ಯುದ್ಧಕ್ಕಾಗಿ ಬಂದ ಎಲ್ಲಾ ರಾಜರನ್ನೂ ಕುರಿತು ನಿಮ್ಮ ಮನಸ್ಸಿನ ಆಸೆಯು ಏನಿದೆಯೋ ಅವೆಲ್ಲವನ್ನೂ ನಾನು ಸಂಪಾದಿಸುತ್ತೇನೆ ಎಂದು ಹೇಳು.
ರಾಜಾನೋ ರಾಜಪುತ್ರಾಶ್ಚ ದುರ್ಯೋಧನವಶಾನುಗಾಃ |
ಪ್ರಾಪ್ಯ ಶಸ್ತ್ರೇಣ ನಿಧನಂ ಪ್ರಾಪ್ಸ್ಯಂತಿ ಗತಿಮುತ್ತಮಾಮ್ ||20||
ದುರ್ಯೋಧನನ ವಶವರ್ತಿಗಳಾದ ರಾಜರು ಮತ್ತು ರಾಜಪುತ್ರರು ಯುದ್ಧದಲ್ಲಿ ಶಸ್ತ್ರದಿಂದ ನಿಧನವನ್ನು ಹೊಂದಿ ಶ್ರೇಷ್ಠವಾದ ಗತಿಯನ್ನು ಹೊಂದುವರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಚತ್ವಾರಿಂಶೋತ್ತರಶತತಮೋಽಧ್ಯಾಯಃ ||
|| ವಿವಾದಪರ್ವಣಿ ತೃತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೆರಡನೆಯ ಅಧ್ಯಾಯ
ಕೃಷ್ಣನಿಗೆ ಪಾಂಡವರ ಜಯದ ಮತ್ತು ಕೌರವರ ಅಪಜಯದ ಸೂಚನೆಗಳನ್ನು ಹೇಳಿ, ಕರ್ಣನ ನಿರ್ಗಮನ.
ವೈಶಂಪಾಯನಃ
ಕೇಶವಸ್ಯ ತು ತದ್ ವಾಕ್ಯಂ ಕರ್ಣಃ ಶ್ರುತ್ವಾ ಹಿತಂ ಶುಭಮ್ |
ಅಬ್ರವೀದಭಿಸಂಪೂಜ್ಯ ಕೃಷ್ಣಂ ತಂ ಮಧುಸೂದನಮ್ ||1||
ವೈಶಂಪಾಯನ ಕೇಶವನ ಹಿತವೂ, ಶುಭವೂ ಆದ ಮಾತುಗಳನ್ನು ಕೇಳಿ, ಕರ್ಣನು ಕೃಷ್ಣನನ್ನು ಪೂಜಿಸಿ, ಮಧುಸೂದನನಾದ ಅವನನ್ನು ಕುರಿತು ಮಾತನಾಡಿದನು.
ಜಾನನ್ ಮಾಂ ಕಿಂ ಮಹಾಬಾಹೋ ಸಮ್ಮೋಹಯಿತುಮಿಚ್ಛಸಿ |
ಯೋಽಯಂ ಪೃಥಿವ್ಯಾಃ ಕಾರ್ತ್ಸ್ನ್ಯೇನ ವಿನಾಶಃ ಸಮುಪಸ್ಥಿತಃ ||2||
ನಿಮಿತ್ತಂ ತತ್ರ ಶಕುನಿರಹಂ ದುಃಶಾಸನಸ್ತಥಾ |
ದುರ್ಯೋಧನಶ್ಚ ನೃಪತಿಃ ಧೃತರಾಷ್ಟ್ರಸುತೋಽಭವತ್ ||3||
ಎಲೈ ಮಹಾಬಾಹುವೇ, ಎಲ್ಲವನ್ನೂ ತಿಳಿದಿದ್ದರೂ ಸಹ ಏಕೆ ನನಗೆ ಪ್ರಲೋಭಗೊಳಿಸಲು ಬಯಸುತ್ತೀಯೆ? ಸಮಗ್ರವಾದ ಭೂಮಿಗೆ ಈ ವಿನಾಶವು ಏನು ಬಂದೊದಗಿದೆಯೋ ಅದಕ್ಕೆ ನಾನು, ಶಕುನಿ, ದುಶ್ಶಾಸನ ಮತ್ತು ಧೃತರಾಷ್ಟ್ರ ಪುತ್ರನಾದ ದುರ್ಯೋಧನನು ನಿಮಿತ್ತರಾಗಿದ್ದೇವೆ.
ಅಸಂಶಯಮಿದಂ ಕೃಷ್ಣ ಮಹದ್ ಯುದ್ಧಮುಪಸ್ಥಿತಮ್ |
ಪಾಂಡವಾನಾಂ ಕುರೂಣಾಂ ಚ ಘೋರಂ ರುಧಿರಕರ್ದಮಮ್ ||4||
ಎಲೈ ಕೃಷ್ಣನೇ, ಪಾಂಡವರಿಗೂ ಮತ್ತು ಕೌರವರಿಗೂ ಘೋರವಾದ ರಕ್ತದ ಕೆಸರುಳ್ಳ ದೊಡ್ಡ ಯುದ್ಧವು ಸನ್ನಿಹಿತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.
ರಾಜಾನೋ ರಾಜಪುತ್ರಾಶ್ಚ ದುರ್ಯೋಧನವಶಾನುಗಾಃ |
ರಣೇ ಶಸ್ತ್ರಾಗ್ನಿನಾ ದಗ್ಧಾಃ ಪ್ರಾಪ್ಸ್ಯಂತಿ ಯಮಸಾದನಮ್ ||5||
ದುರ್ಯೋಧನನ ವಶವರ್ತಿಗಳಾದ ರಾಜರು ಮತ್ತು ರಾಜಕುಮಾರರು ಶಸ್ತ್ರಾಗ್ನಿಯಿಂದ ದಗ್ಧರಾಗಿ ಯಮಲೋಕವನ್ನು ಸೇರುವರು.
ಸ್ವಪ್ನಾ ಹಿ ಬಹವೋ ಘೋರಾ ದೃಶ್ಯಂತೇ ಮಧುಸೂದನ |
ನಿಮಿತ್ತಾನಿ ಚ ಘೋರಾಣಿ ತಥೋತ್ಪಾತಾಃ ಸುದಾರುಣಾಃ ||6||
ಪರಾಜಯಂ ಧಾರ್ತರಾಷ್ಟ್ರೇ ವಿಜಯಂ ಚ ಯುಧಿಷ್ಠಿರೇ |
ಶಂಸಂತ ಇವ ವಾರ್ಷ್ಣೇಯ ವಿವಿಧಾ ರೋಮಹರ್ಷಣಾಃ ||7||
ಎಲೈ ಮಧುಸೂದನನೇ, ನಾನು ಅನೇಕ ಘೋರ ಸ್ವಪ್ನಗಳನ್ನು ನೋಡುತ್ತಿದ್ದೇನೆ. ಘೋರವಾದ ಶಕುನಗಳು ಮತ್ತು ಭಯಂಕರವಾದ ಉತ್ಪಾತಗಳು ಕಂಡುಬರುತ್ತಿವೆ. ಎಲೈ ವಾರ್ಷ್ಣೇಯನೇ, ಅನೇಕ ವಿಧವಾದ ಮತ್ತು ರೋಮಾಂಚಕಾರಿಯಾದ ಆ ಅಪಶಕುನಗಳು ದುರ್ಯೋಧನನ ಪರಾಜಯವನ್ನೂ, ಯುಧಿಷ್ಠಿರನ ವಿಜಯವನ್ನೂ ಸೂಚಿಸುವಂತಿವೆ.

ಪ್ರಾಜಾಪತ್ಯಂ ಹಿ ನಕ್ಷತ್ರಂ ಗ್ರಹಸ್ತೀಕ್ಷ್ಣೋ ಮಹಾದ್ಯುತಿಃ |
ಶನೈಶ್ಚರಃ ಪೀಡಯತಿ ಪೀಡಯನ್ ಪ್ರಾಣಿನೋಽಧಿಕಮ್ ॥8॥
ತೀಕ್ಷ್ಣವಾದ ಮಹಾಕಾಂತಿಯನ್ನು ಹೊಂದಿದ ಶನಿಗ್ರಹವು ಪ್ರಾಜಾಪತ್ಯ ದೇವತಾಕವಾದ ರೋಹಿಣಿನಕ್ಷತ್ರವನ್ನು ಪೀಡಿಸುತ್ತಾ, ಎಲ್ಲ ಪ್ರಾಣಿಗಳನ್ನು ಅತಿಶಯವಾಗಿ ಪೀಡಿಸುತ್ತಿದೆ.
ಕೃತ್ವಾ ಚಾಂಗಾರಕೋ ವಕ್ರಂ ಜ್ಯೇಷ್ಠಾಯಾಂ ಮಧುಸೂದನ |
ಅನೂ(ನು)ರಾಧಾಂ ಪ್ರಾರ್ಥಯತೇ ಮೈತ್ರಂ ಸಂಶಮಯನ್ನಿವ ॥9॥
ಎಲೈ ಮಧುಸೂದನನೇ, ಅಂಗಾರಕ ಗ್ರಹವು ಜ್ಯೇಷ್ಠಾನಕ್ಷತ್ರದಲ್ಲಿ ವಕ್ರಗತಿಯನ್ನು ಹೊಂದಿ ಅನುರಾಧಾ ನಕ್ಷತ್ರವನ್ನು ನೋಡುತ್ತಿದೆ. ಇದು ಸ್ನೇಹವನ್ನು ನಾಶಗೊಳಿಸುವ ಸೂಚನೆಯನ್ನು ನೀಡುತ್ತಿದೆ.
ನೂನಂ ಮಹದ್ಭಯಂ ಕೃಷ್ಣ ಕುರೂಣಾಂ ಸಮುಪಸ್ಥಿತಮ್ |
ವಿಶೇಷೇಣ ಹಿ ವಾರ್ಷ್ಣೇಯ ಚಿತ್ರಾಂ ಪೀಡಯತೇ ಗ್ರಹಃ ॥10॥
ಎಲೈ ಕೃಷ್ಣನೇ, ಕೌರವರಿಗೆ ಖಂಡಿತವಾಗಿ ದೊಡ್ಡ ಭಯವು ಸನ್ನಿಹಿತವಾಗಿದೆ. ಎಲೈ ವಾರ್ಷ್ಣೇಯನೇ, ಚಿತ್ರಾ ನಕ್ಷತ್ರದಲ್ಲಿ ಗ್ರಹಪೀಡೆಯು ವಿಶೇಷವಾಗಿ ಉಂಟಾಗುತ್ತಿದೆ.
ಸೋಮಸ್ಯ ಲಕ್ಷ್ಮ ವ್ಯಾವೃತ್ತಂ ರಾಹುರರ್ಕಮುಪೇಷ್ಯತಿ |
ದಿವಶ್ಚೋಲ್ಕಾ ಪತಂತ್ಯೇತಾಃ ಸನಿರ್ಘಾತಾಃ ಸಕಂಪನಾಃ ॥11॥
ಚಂದ್ರನ ಕಲೆಯು ನಾಶವನ್ನು ಹೊಂದಿದೆ. ಅಮಾವಾಸ್ಯೆ ಅಲ್ಲದ ದಿನ ರಾಹುವು ಸೂರ್ಯನನ್ನು ಹಿಡಿಯಲು ಹೋಗುತ್ತಿದ್ದಾನೆ. ಆಕಾಶದಿಂದ ಸಿಡಿಲುಗಳು ಮತ್ತು ಉಲ್ಕೆಗಳು ಭೂಕಂಪದ ಜೊತೆಗೆ ಮೇಲಿಂದ ಬೀಳುತ್ತಿವೆ.
ನಿಷ್ಟನಂತಿ ಚ ಮಾತಂಗಾ ಮುಂಚಂತ್ಯಶ್ರೂಣಿ ವಾಜಿನಃ |
ಪಾನೀಯಂ ಯವಸಂ ಚಾಪಿ ನಾಭಿನಂದಂತಿ ಮಾಧವ ॥12॥
ಎಲೈ ಮಾಧವನೇ, ಆನೆಗಳು ಗುಡುಗುತ್ತಿವೆ. ಕುದುರೆಗಳು ಕಣ್ಣೀರನ್ನು ಸುರಿಸುತ್ತಿವೆ. ಪ್ರಾಣಿಗಳು ಮೇವನ್ನಾಗಲೀ, ನೀರನ್ನಾಗಲೀ ಇಷ್ಟಪಡುತ್ತಿಲ್ಲ.
ಪ್ರಾದುರ್ಭೂತೇಷು ಚೈತೇಷು ಭಯಮಾಹುರುಪಸ್ಥಿತಮ್ |
ನಿಮಿತ್ತೇಷು ಮಹಾಬಾಹೋ ದಾರುಣಂ ಪ್ರಾಣಿನಾಶನಮ್ ॥13॥
ಎಲೈ ಮಹಾಬಾಹುವೇ, ಇಂತಹ ಘೋರವಾದ ಸೂಚನೆಗಳು ತೋರಿದಾಗ ಸದ್ಯದಲ್ಲಿಯೇ ಇರುವ ಭಯವನ್ನೂ ಮತ್ತು ಪ್ರಾಣಿನಾಶವನ್ನೂ ಸೂಚಿಸುತ್ತವೆ.
ಅಲ್ಪೇ ಭುಕ್ತೇ ಪುರೀಷಂ ಚ ಪ್ರಭೂತಮಿಹ ದೃಶ್ಯತೇ |
ವಾಜಿನಾಂ ವಾರಣಾನಾಂ ಚ ಮನುಷ್ಯಾಣಾಂ ಚ ಕೇಶವ ॥14॥
ಧಾರ್ತರಾಷ್ಟ್ರಸ್ಯ ಸೈನ್ಯೇಷು ಸರ್ವೇಷು ಮಧುಸೂದನ |
ಪರಾಭವಸ್ಯ ತಲ್ಲಿಂಗಮಿತಿ ಪ್ರಾಹುರ್ಮನೀಷಿಣಃ ॥15॥
ಎಲೈ ಮಧುಸೂದನನೇ, ದುರ್ಯೋಧನನ ಸೈನ್ಯದಲ್ಲಿ ಅಶ್ವಗಳು, ಗಜಗಳು ಮತ್ತು ಮನುಷ್ಯರು ಅಲ್ಪ ಆಹಾರವನ್ನು ಸೇವಿಸಿದರೂ ಬಹಳ ಪ್ರಮಾಣದ ಮಲವನ್ನು ವಿಸರ್ಜನೆ ಮಾಡುತ್ತಿದ್ದಾರೆ. ಎಲೈ ಕೇಶವನೇ, ಇದು ಪರಾಭವದ ಚಿಹ್ನೆ ಎಂದು ಜ್ಞಾನಿಗಳು ಹೇಳುತ್ತಾರೆ.
ಪ್ರಹೃಷ್ಟಂ ವಾಹನಂ ಕೃಷ್ಣ ಪಾಂಡವಾನಾಂ ಪ್ರಚಕ್ಷತೇ |
ಪ್ರದಕ್ಷಿಣಾ ಮೃಗಾಶ್ಚೈವ ತತ್ ತೇಷಾಂ ಜಯಲಕ್ಷಣಮ್ ॥16॥
ಎಲೈ ಕೃಷ್ಣನೇ, ಪಾಂಡವರ ವಾಹನಗಳು ಸಂತುಷ್ಟವಾಗಿವೆ ಎಂದು ಹೇಳುತ್ತಾರೆ. ಮೃಗಗಳು ಅವರ ಸೈನ್ಯಕ್ಕೆ ಪ್ರದಕ್ಷಿಣಾಕಾರಕ್ಕೆ ಹೋಗುತ್ತವೆ. ಅದು ಅವರ ಜಯದ ಲಕ್ಷಣ.
ಅಪಸವ್ಯಾ ಮೃಗಾಶ್ಚೈವ ಧಾರ್ತರಾಷ್ಟ್ರಸ್ಯ ಕೇಶವ |
ವಾಚಶ್ಚಾಪ್ಯಶರೀರಿಣ್ಯಃ ತತ್ ಪರಾಭವಲಕ್ಷಣಮ್ ॥17॥
ಎಲೈ ಕೇಶವನೇ, ದುರ್ಯೋಧನನ ಸೈನ್ಯದಲ್ಲಿ ಮೃಗಗಳು ಎಡಭಾಗದಲ್ಲಿ ಹೋಗುತ್ತವೆ. ಕೆಟ್ಟ ಅಶರೀರವಾಣಿಗಳು ಕೇಳಿಬರುತ್ತಿವೆ. ಅದು ದುರ್ಯೋಧನನ ಪರಾಭವದ ಸೂಚನೆ.
ಮಯೂರಾಃ ಪುಣ್ಯಶಕುನಾ ಹಂಸಸಾರಸಚಾತಕಾಃ |
ಜೀವಂಜೀವಕಸಂಘಾಶ್ಚಾಪ್ಯನುಗಚ್ಛಂತಿ ಪಾಂಡವಾನ್ ॥18॥
ನವಿಲುಗಳು, ಪುಣ್ಯಪಕ್ಷಿಗಳು, ಹಂಸಸಾರಸಚಾತಕಗಳು ಮತ್ತು ಚಕೋರ ಸಮೂಹಗಳು ಪಾಂಡವರನ್ನು ಹಿಂಬಾಲಿಸುತ್ತಿವೆ.
ಗೃಧ್ರಾಃ ಕಂಕಾ ಬಕಾಃ ಶ್ಯೇನಾ ಯಾತುಧಾನಾಸ್ತಥಾ ವೃಕಾಃ |
ಮಕ್ಷಿಕಾಣಾಂ ಚ ಸಂಘಾತಾ ಅನುಧಾವಂತಿ ಕೌರವಾನ್ ॥19॥
ಹದ್ದುಗಳು, ಗಿಡಗಗಳು, ಬಕಗಳು, ಕಂಕಗಳು, ರಾಕ್ಷಸರು, ತೋಳಗಳು ಮತ್ತು ನೊಣಗಳ ಸಮೂಹವು ಕೌರವರನ್ನು ಹಿಂಬಾಲಿಸುತ್ತಿದೆ.
ಧಾರ್ತರಾಷ್ಟ್ರಸ್ಯ ಸೈನ್ಯೇಷು ಭೇರೀಣಾಂ ನಾಸ್ತಿ ನಿಸ್ವನಃ |
ಅನಾಹತಾಃ ಪಾಂಡವಾನಾಂ ನದಂತಿ ಪಟಹಾಃ ಕಿಲ ॥20॥
ದುರ್ಯೋಧನನ ಸೈನ್ಯದಲ್ಲಿ ಭೇರಿಯ ನಾದವಿಲ್ಲ. ಪಾಂಡವರ ಸೈನ್ಯದಲ್ಲಿ ಹೊಡೆಯದಿದ್ದರೂ ಭೇರಿಗಳಿಂದ ನಾದವು ಕೇಳಿ ಬರುತ್ತಿದೆ.
ಉದಪಾನಾಶ್ಚ ನರ್ದಂತಿ ತಥಾ ಗೋವೃಷಭಾ ಇವ |

ಧಾರ್ತರಾಷ್ಟ್ರಸ್ಯ ಸೈನ್ಯೇಷು ತತ್ ಪರಾಭವಲಕ್ಷಣಮ್ ॥21॥
ದುರ್ಯೋಧನನ ಸೈನ್ಯದ ಸಮೀಪದಲ್ಲಿರುವ ಜಲಾಶಯಗಳಲ್ಲಿ ಗೂಳಿಗಳು ಗುಟುರು ಹಾಕುವ ಶಬ್ದವು ಕೇಳಿಬರುತ್ತಿದೆ. ಅದು ಪರಾಭವದ ಸೂಚನೆ.
ಮಾಂಸಶೋಣಿತವರ್ಷಂ ಚ ವೃಷ್ಟಂ ದೇವೇನ ಮಾಧವ |
ತಥಾ ಗಂಧರ್ವನಗರಂ ಭಾನುಮತ್ ಸಮುಪಸ್ಥಿತಮ್ ॥22॥
ಸಪ್ರಾಕಾರಂ ಸಪರಿಘಂ ಸವಪ್ರಂ ಚಾರುತೋರಣಮ್ |
ಕೃಷ್ಣಶ್ಚ ಪರಿಧಿಸ್ತತ್ರ ಭಾನುಮಾವೃತ್ಯ ತಿಷ್ಠತಿ ॥23॥
ಉದಯಾಸ್ತಮಯೇ ಸಂಧ್ಯೇ ವೇದಯಾನೇ ಮಹದ್ಭಯಮ್ ॥24॥
ಎಲೈ ಮಾಧವನೇ, ದೇವೇಂದ್ರನಿಂದ ಕೌರವರ ಸೈನ್ಯದ ಮೇಲೆ ಮಾಂಸರಕ್ತಗಳ ಮಳೆಯು ಸುರಿಸಲ್ಪಟ್ಟಿತು. ಆಕಾಶದಲ್ಲಿ ಪ್ರಕಾಶಿಸುವ ಗಂಧರ್ವನಗರವು ಕಂಡುಬರುತ್ತಿದೆ. ಹಾಗೆಯೇ ಪ್ರಾತಃಕಾಲದ ಮತ್ತು ಸಾಯಂಕಾಲದ ಸಮಯದಲ್ಲಿ ಸೂರ್ಯನ ಸುತ್ತಲೂ ಪ್ರಾಕಾರವೂ, ಕಂದುಕಗಳೂ, ಗೋಡೆಗಳೂ, ಸುಂದರವಾದ ತೋರಣಗಳೂ ಇರುವ ಕಪ್ಪಾದ ಪರಿಧಿಗಳು ಕಂಡುಬರುತ್ತಿವೆ. ಇವು ದೊಡ್ಡ ಭಯವನ್ನು ಸೂಚಿಸುತ್ತವೆ.
ಏಕಪಾದಾಕ್ಷಿಚರಣಾ ನರ್ದಂತೋ ಘೋರದರ್ಶನಾಃ |
ವಾಶ್ಯಂತೇ ಪಕ್ಷಿಣೋ ಘೋರಂ ತತ್ ಪರಾಭವಲಕ್ಷಣಮ್ ॥25॥
ಶಿವಾ ಚ ವಾಶತೇ ಘೋರಂ ತತ್ ಪರಾಭವಲಕ್ಷಣಮ್ ॥26॥
ಒಂದು ಪಾದ ಮತ್ತು ಒಂದು ಕಣ್ಣು ಇರುವ ಭಯಂಕರವಾದ ಪಕ್ಷಿಗಳು ಕೌರವರ ಸೈನ್ಯದ ಮೇಲೆ ಘೋರವಾಗಿ ಕಿರುಚಾಡುತ್ತಿವೆ. ಅದು ಪರಾಭವದ ಸೂಚನೆ. ನರಿಗಳೂ ಸಹ ಕೌರವರ ಸೈನ್ಯದ ಬಳಿ ರೋದಿಸುತ್ತಿವೆ. ಅದೂ ಪರಾಭವದ ಸೂಚನೆ.
ಕೃಷ್ಣಗ್ರೀವಾಶ್ಚ ಶಕುನಾ ರಕ್ತಪಾದಾ ಭಯಾನಕಾಃ |
ಸಂಧ್ಯಾಮಭಿಮುಖಾ ಯಾಂತಿ ತತ್ ಪರಾಭವಲಕ್ಷಣಮ್ ॥27॥
ಸಂಧ್ಯಾಕಾಲದಲ್ಲಿ ಕಪ್ಪಾದ ಕಂಠಗಳನ್ನೂ, ಕೆಂಪಾದ ಪಾದಗಳನ್ನೂ ಹೊಂದಿರುವ ಭಯಂಕರವಾದ ಪಕ್ಷಿಗಳು ಸೂರ್ಯನಿಗೆ ಅಭಿಮುಖವಾಗಿ ಹೋಗುತ್ತಿವೆ. ಅದೂ ಪರಾಭವದ ಲಕ್ಷಣ.
ಬ್ರಾಹ್ಮಣಾನ್ ಪ್ರಥಮಂ ದ್ವೇಷ್ಟಿ ಗುರೂಂಶ್ಚ ಮಧುಸೂದನ |
ಭೃತ್ಯಾನ್ ಭಕ್ತಿಮತಶ್ಚಾಪಿ ತತ್ ಪರಾಭವಲಕ್ಷಣಮ್ ॥28॥
ಬ್ರಾಹ್ಮಣರನ್ನು ಮೊದಲು ದ್ವೇಷ ಮಾಡುತ್ತಾನೆ. ಮಧುಸೂದನನೇ, ಅನಂತರ ಗುರುಗಳನ್ನು ದ್ವೇಷಮಾಡುತ್ತಾನೆ. ಅನಂತರ ನಿಷ್ಠಾವಂತರಾದ ಸೇವಕರನ್ನು ದ್ವೇಷ ಮಾಡುತ್ತಾನೆ. ಅದು ಪರಾಭವದ ಲಕ್ಷಣ.
ಪೂರ್ವಾ ದಿಗ್ ಲೋಹಿತಾಕಾರಾ ಶಸ್ತ್ರವರ್ಣಾ ಚ ದಕ್ಷಿಣಾ |
ಆಮ್ರಪತ್ರಪ್ರತೀಕಾಶಾ ಪಶ್ಚಿಮಾ ಮಧುಸೂದನ ॥29॥
ಉತ್ತರಾ ಶಂಖವರ್ಣಾಭಾ ದಿಶೋ ವರ್ಣಾ ಉದಾಹೃತಾಃ ॥30॥
ಪೂರ್ವದಿಕ್ಕು ಕೆಂಪುಬಣ್ಣದಿಂದ ಕೂಡಿದೆ. ದಕ್ಷಿಣ ದಿಕ್ಕು ಶಸ್ತ್ರವರ್ಣದಿಂದ ಕೂಡಿದೆ. ಮಧುಸೂದನನೇ, ಪಶ್ಚಿಮ ದಿಕ್ಕು ಮಾವಿನ ಎಲೆಯ ಬಣ್ಣವನ್ನು ಹೊಂದಿದೆ. ಉತ್ತರ ದಿಕ್ಕು ಶಂಖದ ಬಣ್ಣವನ್ನು ಹೊಂದಿದೆ. ದಿಕ್ಕುಗಳ ಬಣ್ಣಗಳನ್ನು ಹೇಳಿದ್ದೇನೆ.
ಪ್ರದೀಪ್ತಾಶ್ಚ ದಿಶಃ ಸರ್ವಾ ಧಾರ್ತರಾಷ್ಟ್ರಸ್ಯ ಮಾಧವ |
ಮಹದ್ಭಯಂ ವೇದಯಂತಿ ತಸ್ಮಿನ್ನುತ್ಪಾತಲಕ್ಷಣೇ ॥31॥
ಮಾಧವನೇ, ದುರ್ಯೋಧನನ ಸುತ್ತಲೂ ಇರುವ ಎಲ್ಲ ದಿಕ್ಕುಗಳೂ ಪ್ರದೀಪ್ತವಾಗಿ ಈ ಅಪಶಕುನದ ಲಕ್ಷಣದಿಂದ ದೊಡ್ಡ ಭಯವನ್ನು ಸೂಚಿಸುತ್ತಿವೆ.
ಸಹಸ್ರಪಾದಂ ಪ್ರಾಸಾದಂ ಸ್ವಪ್ನಾಂತೇ ತು ಯುಧಿಷ್ಠಿರಃ |
ಅಧಿರೋಹನ್ ಮಯಾ ದೃಷ್ಟಃ ಸಹ ಭ್ರಾತೃಭಿರಚ್ಯುತ ॥32॥
ಎಲೈ ಅಚ್ಯುತನೇ, ಸ್ವಪ್ನದಲ್ಲಿ ನಾನು, ಯುಧಿಷ್ಠಿರನು ತನ್ನ ತಮ್ಮಂದಿರ ಜೊತೆಯಲ್ಲಿ ಸಹಸ್ರ ಸ್ತಂಭಗಳಿರುವ ಒಂದು ಪ್ರಾಸಾದವನ್ನು ಹತ್ತಿಕುಳಿತಿರುವುದನ್ನು ನೋಡಿದೆನು.
ಶ್ವೇತೋಷ್ಣೀಷಾಶ್ಚ ದೃಶ್ಯಂತೇ ಸರ್ವೇ ಚ ಮಧುಸೂದನ |
ಆಸನಾನಿ ಚ ಶುಭ್ರಾಣಿ ಸರ್ವೇ ತೇ ಶುಕ್ಲವಾಸಸಃ ॥33॥
ಎಲೈ ಮಧುಸೂದನನೇ, ಪಾಂಡವರೆಲ್ಲರೂ ಬಿಳಿಯ ರುಮಾಲುಗಳನ್ನೂ, ಬಿಳಿಯ ವಸ್ತ್ರಗಳನ್ನೂ ಧರಿಸಿ, ಶುಭ್ರವಾದ ಆಸನಗಳಲ್ಲಿ ಕುಳಿತಿರುವುದನ್ನು ನೋಡಿದೆನು.
ತವ ಚಾಪಿ ಮಯಾ ಕೃಷ್ಣ ಸ್ವಪ್ನಾಂತೇ ರುಧಿರಾವಿಲಾ |
ಆಂತ್ರೇಣ ಪೃಥಿವೀ ದೃಷ್ಟಾ ಪರಿಕ್ಷಿಪ್ತಾ ಜನಾರ್ದನ ॥34॥
ಎಲೈ ಜನಾರ್ದನನೇ, ನಿನ್ನ ಪ್ರದೇಶವೂ ಕೂಡ ರಕ್ತದ ಕೆಸರಿನಿಂದ ತುಂಬಿ, ಕರುಳಿನ ಮಾಲೆಗಳಿಂದ ಸುತ್ತುವರಿಯಲ್ಪಟ್ಟಿದ್ದನ್ನು ನಾನು ಸ್ವಪ್ನದಲ್ಲಿ ನೋಡಿದೆನು.
ಅಸ್ಥಿಸಂಚಯಮಾರೂಢಃ ಚಾಮಿತೌಜಾ ಯುಧಿಷ್ಠಿರಃ |
ಸುವರ್ಣಪಾತ್ರ್ಯಾಂ ಸಂಹೃಷ್ಟೋ ಭುಕ್ತವಾನ್ ಘೃತಪಾಯಸಮ್ ॥35॥
ಅಮಿತ ಪರಾಕ್ರಮಿಯಾದ ಯುಧಿಷ್ಠಿರನು ಅಸ್ಥಿಗಳ ರಾಶಿಗಳ ಮೇಲೆ ಕುಳಿತು ಸುವರ್ಣ ಪಾತ್ರೆಯಲ್ಲಿ ಘೃತಪಾಯಸವನ್ನು ಸಂತೋಷದಿಂದ ಸೇವಿಸುತ್ತಿದ್ದನು.

ಯುಧಿಷ್ಠಿರೋ ಮಯಾ ದೃಷ್ಟೋ ಗ್ರಸಮಾನೋ ವಸುಂಧರಾಮ್ |
ತ್ವಯಾ ದತ್ತಾಮಿಮಾಂ ವ್ಯಕ್ತಂ ಭೋಕ್ಷ್ಯತೇ ಸ ವಸುಂಧರಾಮ್ ॥36॥
ನೀನು ಕೊಟ್ಟ ಭೂಮಿಯನ್ನು ಯುಧಿಷ್ಠಿರನು ನುಂಗುತ್ತಿರುವುದನ್ನು ನಾನು ನೋಡಿದೆನು. ಖಂಡಿತವಾಗಿ ಅವನು ಈ ಭೂಮಿಯನ್ನು ಭೋಗಿಸುವನು.
ಉಚ್ಚಪರ್ವತಮಾರೂಢೋ ಭೀಮಕರ್ಮಾ ವೃಕೋದರಃ |
ಗದಾಪಾಣಿರ್ನರವ್ಯಾಘ್ರೋ ವೀಕ್ಷನ್ನಿವ ಮಹೀಮಿಮಾಮ್ ॥37॥
ಕ್ಷಪಯಿಷ್ಯತಿ ನಃ ಸರ್ವಾನ್ ಸ ಸುವ್ಯಕ್ತಂ ಮಹಾರಣೇ ॥38॥
ವಿದಿತಂ ಮೇ ಹೃಷೀಕೇಶ ಯತೋ ಧರ್ಮಸ್ತತೋ ಜಯಃ ॥39॥
ಭಯಂಕರ ಕಾರ್ಯವನ್ನು ಮಾಡುವ ವೃಕೋದರನು ಎತ್ತರವಾದ ಪರ್ವತವನ್ನು ಹತ್ತಿ, ನರವ್ಯಾಘ್ರನಾದ ಅವನು ಕೈಯಲ್ಲಿ ಗದೆಯನ್ನು ಹಿಡಿದು ಈ ಭೂಮಿಯನ್ನು ನೋಡುತ್ತಿರುವವನಂತೆ ನಾನು ಸ್ವಪ್ನವನ್ನು ನೋಡಿದೆನು. ಅವನು ದೊಡ್ಡ ಯುದ್ಧದಲ್ಲಿ ನಿಶ್ಚಿತವಾಗಿ ನಮ್ಮನ್ನೆಲ್ಲಾ ನಾಶಗೊಳಿಸುವನು. ಎಲೈ ಹೃಷೀಕೇಶನೇ, ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಿದೆ ಎಂದು ನಾನು ತಿಳಿದಿದ್ದೇನೆ.
ಪಾಂಡರಂ ಗಜಮಾರೂಢೋ ಗಾಂಡೀವೀ ಸ ಧನಂಜಯಃ |
ತ್ವಯಾ ಸಾರ್ಧಂ ಹೃಷೀಕೇಶ ಶ್ರಿಯಾ ಪರಮಯಾ ಜ್ವಲನ್ ॥40॥
ಎಲೈ ಹೃಷೀಕೇಶನೇ, ಗಾಂಡೀವ ಧನುರ್ಧಾರಿಯಾದ ಅರ್ಜುನನು ಬಿಳಿಯ ಆನೆಯ ಮೇಲೆ ನಿನ್ನ ಜೊತೆಯಲ್ಲಿ ಕುಳಿತು ಪರಮಕಾಂತಿಯಿಂದ ಕಂಗೊಳಿಸುವುದನ್ನು ನಾನು ನೋಡಿದೆನು.
ಯೂಯಂ ಸರ್ವೇ ವಧಿಷ್ಯಧ್ವಂ ತತ್ರ ಮೇ ನಾಸ್ತಿ ಸಂಶಯಃ |
ಪಾರ್ಥಿವಾನ್ ಸಮರೇ ಕೃಷ್ಣ ದುರ್ಯೋಧನವಶಾನುಗಾನ್ ॥41॥
ಎಲೈ ಕೃಷ್ಣನೇ, ನೀವೆಲ್ಲರೂ ಯುದ್ಧದಲ್ಲಿ ದುರ್ಯೋಧನನ ವಶವರ್ತಿಗಳಾದ ರಾಜರನ್ನು ಕೊಲ್ಲುವಿರಿ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ನಕುಲಃ ಸಹದೇವಶ್ಚ ಸಾತ್ಯಕಿಶ್ಚ ಮಹಾರಥಃ |
ಶುದ್ಧಕೇಯೂರಕಂಠಾಸ್ತು ಶುಕ್ಲಮಾಲ್ಯಾಂಬರಾವೃತಾಃ ॥42॥
ಅಧಿರೂಢಾ ನರವ್ಯಾಘ್ರ ನರವಾಹನಮುತ್ತಮಮ್ ॥43॥
ನಕುಲ, ಸಹದೇವ ಮತ್ತು ಮಹಾರಥನಾದ ಸಾತ್ಯಕಿ ಇವರು ಕಂಠದಲ್ಲಿ ಶುದ್ಧವಾದ ಕೇಯೂರವನ್ನು ಧರಿಸಿ, ಬಿಳಿಯ ವಸ್ತ್ರ ಮತ್ತು ಮಾಲೆಗಳನ್ನು ಧರಿಸಿ, ಎಲೈ ನರವ್ಯಾಘ್ರನೇ, ಶ್ರೇಷ್ಠವಾದ ನರವಾಹನವನ್ನು ಹತ್ತಿದ್ದರು.
ತ್ರಯ ಏತೇ ಮಹಾಮಾತ್ರಾಃ ಪಾಂಡರಚ್ಛತ್ರವಾಸಸಃ |
ಶ್ವೇತೋಷ್ಣೀಷಾಶ್ಚ ದೃಶ್ಯಂತೇ ಸರ್ವೇ ಮಾಧವ ಪಾಂಡವಾಃ ॥44॥
ಎಲೈ ಮಾಧವನೇ, ಈ ಮೂವರು ಮಹಾಮಾತ್ರರು ಶ್ವೇತಚ್ಛತ್ರವನ್ನು ಮತ್ತು ಶ್ವೇತವಸ್ತ್ರಗಳನ್ನು ಹೊಂದಿದವರಾಗಿದ್ದರು. ಎಲ್ಲ ಪಾಂಡವರೂ ಬಿಳಿಯ ರುಮಾಲುಗಳನ್ನು ಧರಿಸಿರುವುದು ಸ್ವಪ್ನದಲ್ಲಿ ಕಂಡುಬರುತ್ತಿದ್ದಿತು.
ಧಾರ್ತರಾಷ್ಟ್ರೇಷು ಸೈನ್ಯೇಷು ತಾನ್ ವಿಜಾನೀಹಿ ಕೇಶವ |
ಅಶ್ವತ್ಥಾಮಾ ಕೃಪಶ್ಚೈವ ಕೃತವರ್ಮಾ ಚ ಸಾತ್ವತಃ ॥45॥
ರಕ್ತೋಷ್ಣೀಷಾಶ್ಚ ದೃಶ್ಯಂತೇ ಸರ್ವೇ ಮಾಧವ ಕೌರವಾಃ ॥46॥
ಎಲೈ ಕೇಶವನೇ, ದುರ್ಯೋಧನನ ಸೈನ್ಯದಲ್ಲಿ ಕಂಡುಬರುವುದನ್ನು ಕೇಳು. ಎಲೈ ಮಾಧವನೇ, ಅಶ್ವತ್ಥಾಮ, ಕೃಪ, ಸಾತ್ವತ ಕುಲದ ಕೃತವರ್ಮ ಮತ್ತು ಎಲ್ಲಾ ಕೌರವರೂ ಕೆಂಪುಬಣ್ಣದ ರುಮಾಲುಗಳನ್ನು ಧರಿಸಿರುವುದು ಕಂಡುಬರುತ್ತಿದ್ದಿತು.
ಉಷ್ಟ್ರಪ್ರಯುಕ್ತಮಾರೂಢೌ ಭೀಷ್ಮದ್ರೋಣೌ ಜನಾರ್ದನ ॥47॥
ಮಯಾ ಸಾರ್ಧಂ ಮಹಾಬಾಹೋ ಧಾರ್ತರಾಷ್ಟ್ರೇಣ ವೈ ವಿಭೋ |
ಅಗಸ್ತ್ಯಕಾಂತಾಂ ಚ ದಿಶಂ ಪ್ರಯಾತಾಃ ಸ್ಮ ಜನಾರ್ದನ ॥48॥
ಎಲೈ ಜನಾರ್ದನನೇ, ಮಹಾಬಾಹುವೇ, ವಿಭುವೇ, ಒಂಟೆಗಳನ್ನು ಹೂಡಿದ ರಥಗಳನ್ನು ಏರಿ, ಭೀಷ್ಮ-ದ್ರೋಣರು ನನ್ನ ಮತ್ತು ದುರ್ಯೋಧನನ ಜೊತೆಯಲ್ಲಿ ಅಗಸ್ತ್ಯರಿಗೆ ಪ್ರಿಯವಾದ ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡುತ್ತಿದ್ದರು.
ಅಚಿರೇಣೈವ ಕಾಲೇನ ಪ್ರಾಪ್ಸ್ಯಾಮೋ ಯಮಸಾದನಮ್ |
ಅಹಂ ಚಾನ್ಯೇ ಚ ರಾಜಾನೋ ಯಚ್ಚ ತತ್ ಕ್ಷತ್ರಮಂಡಲಮ್ ॥49॥
ಗಾಂಡೀವಾಗ್ನಿಂ ಪ್ರವೇಕ್ಷ್ಯಾಮ ಇತಿ ಮೇ ನಾತ್ರ ಸಂಶಯಃ ॥50॥
ನಾನು, ಉಳಿದ ರಾಜರು ಮತ್ತು ಸಮಗ್ರವಾದ ಕ್ಷತ್ರಿಯಸಮೂಹವು ಶೀಘ್ರವಾಗಿ ಯಮಲೋಕವನ್ನು ಸೇರುವೆವು. ನಾವು ಗಾಂಡೀವಾಗ್ನಿಯನ್ನು ಪ್ರವೇಶಿಸುವೆವು ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಶ್ರೀಭಗವಾನ್
ಉಪಸ್ಥಿತವಿನಾಶೇಯಂ ನೂನಮದ್ಯ ವಸುಂಧರಾ |
ಯಥಾ ಹಿ ಮೇ ವಚಃ ಕರ್ಣ ನೋಪೈತಿ ಹೃದಯಂ ತವ ॥51॥
ಶ್ರೀಭಗವಾನ್ ಈ ದಿನ ಭೂಮಿಗೆ ವಿನಾಶವು ಸನ್ನಿಹಿತವಾಗಿದೆ. ಎಲೈ ಕರ್ಣನೇ, ಏಕೆಂದರೆ ನನ್ನ ಹಿತನುಡಿಗಳು ನಿನ್ನ ಮನಸ್ಸನ್ನು ಸೇರುತ್ತಿಲ್ಲ.
ಸರ್ವೇಷಾಂ ತಾತ ಭೂತಾನಾಂ ವಿನಾಶೇ ಸಮುಪಸ್ಥಿತೇ |

ಅನಯೋ ನಯಸಂಕಾಶೋ ಹೃದಯಾನ್ನಾಪಸರ್ಪತಿ ॥52॥
ಎಲೈ ಪ್ರೀತಿಪಾತ್ರನೇ, ಎಲ್ಲ ಪ್ರಾಣಿಗಳಿಗೆ ವಿನಾಶವು ಸನ್ನಿಹಿತವಾದಾಗ ಅನೀತಿಯು ನೀತಿಯಂತೆ ತೋರುತ್ತಾ ಮನಸ್ಸನ್ನು ಬಿಟ್ಟುಹೋಗುವುದಿಲ್ಲ.
ಕರ್ಣಃ
ಅಪಿ ತ್ವಾಂ ಕೃಷ್ಣ ಪಶ್ಯಾಮೋ ಜೀವಂತೋಽಸ್ಮಾನ್ಮಹಾರಣಾತ್ |
ಸಮುತ್ತೀರ್ಣಾ ಮಹಾಬಾಹೋ ವೀರಕ್ಷಯಮಹಾಹ್ರದಾತ್ ॥53॥
ಕರ್ಣ ಎಲೈ ಕೃಷ್ಣನೇ, ಮಹಾಬಾಹುವೇ, ವೀರಕ್ಷಯವುಳ್ಳ ಮಹಾ ಮಡುವಿನಂತಿರುವ ಈ ದೊಡ್ಡ ಯುದ್ಧವನ್ನು ದಾಟಿ ನಾವು ಬದುಕಿ ಇನ್ನೊಮ್ಮೆ ನಿನ್ನನ್ನು ನೋಡುತ್ತೇವೆಯೇ?
ಅಥವಾ ಸಂಗಮಃ ಕೃಷ್ಣ ಸ್ವರ್ಗೇ ನೋ ಭವಿತಾ ಧ್ರುವಮ್ |
ತತ್ರೇದಾನೀಂ ಸಮೇಷ್ಯಾಮಃ ಪುನಃ ಸಾರ್ಧಂ ತ್ವಯಾಽನಘ ॥54॥
ಅಥವಾ ಕೃಷ್ಣನೇ, ಸ್ವರ್ಗದಲ್ಲಿ ನಿಶ್ಚಿತವಾಗಿ ನಮ್ಮ ಸಮಾಗಮವು ಉಂಟಾಗುವುದು. ಎಲೈ ಅನಘನೇ, ಅಲ್ಲಿ ಪುನಃ ನಮ್ಮ ಸಮಾಗಮವು ಉಂಟಾಗುವುದು. ಈಗ ಅನುಮತಿಯನ್ನು ಕೊಡು.
ವೈಶಂಪಾಯನಃ
ಇತ್ಯುಕ್ತ್ವಾ ಮಾಧವಂ ಕರ್ಣಃ ಪರಿಷ್ವಜ್ಯ ನಿಪೀಡ್ಯ ತಮ್ |
ವಿಸರ್ಜಿತಃ ಕೇಶವೇನ ರಥೋಪಸ್ಥಾದವಾತರತ್ ॥55॥
ವೈಶಂಪಾಯನ ಹೀಗೆ ಹೇಳಿ ಕರ್ಣನು ಮಾಧವನನ್ನು ಬಿಗಿದು ಆಲಿಂಗಿಸಿ ಅವನಿಂದ ಬೀಳ್ಕೊಡಲ್ಪಟ್ಟು ರಥದ ಪೀಠದಿಂದ ಇಳಿದನು.
ತತಃ ಸ್ವರಥಮಾಸ್ಥಾಯ ಜಾಂಬೂನದವಿಭೂಷಿತಮ್ |
ಮಹಾತ್ಮಾ ವೈ ನಿವವೃತೇ ರಾಧೇಯೋ ದೀನಮಾನಸಃ ॥56॥
ಅನಂತರ ಸುವರ್ಣಾಲಂಕೃತವಾದ ತನ್ನ ರಥವನ್ನು ಏರಿ ಮಹಾತ್ಮನಾದ ಕರ್ಣನು ದೀನಮನಸ್ಸಿನಿಂದ ಹಿಂದಿರುಗಿದನು.
ತತಃ ಶೀಘ್ರತರಂ ಪ್ರಾಯಾತ್ ಕೇಶವಃ ಸಹಸಾತ್ಯಕಿಃ |
ಪುನರುಚ್ಚಾರಯನ್ ವಾಣೀಂ ಯಾಹಿ ಯಾಹೀತಿ ಸಾತ್ಯಕಿಮ್ ॥57॥
ಅತ್ತ ಕಡೆ ಕೇಶವನು ಸಾತ್ಯಕಿಯನ್ನು ಕುರಿತು ಬೇಗ ಹೋಗು, ಬೇಗ ಹೋಗು ಎಂದು ಹೇಳುತ್ತಾ ಸಾತ್ಯಕಿಯ ಜೊತೆಯಲ್ಲಿ (ಉಪಪ್ಲಾವ್ಯನಗರಕ್ಕೆ) ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಮ್ ಉದ್ಯೋಗಪರ್ವಣಿ ದ್ವಿಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರನಲವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ಮೂರನೆಯ ಅಧ್ಯಾಯ
ಯುದ್ಧದಲ್ಲಿ ಉಂಟಾಗಲಿರುವ ವಿನಾಶವನ್ನು ಚಿಂತಿಸಿ ವಿದುರನ ಶೋಕ. ಗಂಗಾತೀರದಲ್ಲಿ ಕುಂತೀ-ಕರ್ಣರ ಸಮಾಗಮ.
ವೈಶಂಪಾಯನಃ
ಅಸಿದ್ಧಾನುನಯೇ ಕೃಷ್ಣೇ ಕುರುಭ್ಯಃ ಪಾಂಡವಾನ್ ಗತೇ |
ಅಭಿಗಮ್ಯ ಪೃಥಾಂ ಕ್ಷತ್ತಾ ಶನೈಃ ಶೋಚನ್ನಿವಾಬ್ರವೀತ್ ॥1॥
ವೈಶಂಪಾಯನ ಕೃಷ್ಣನ ಸಂಧಾನ ಪ್ರಯತ್ನವು ವಿಫಲವಾಗಿ ಅವನು ಕೌರವರನ್ನು ಬಿಟ್ಟು ಪಾಂಡವರ ಸಮೀಪಕ್ಕೆ ಹೊರಟಮೇಲೆ ವಿದುರನು ಕುಂತಿಯನ್ನು ಸಮೀಪಿಸಿ ಶೋಕಪಡುವವನಂತೆ ನಿಧಾನವಾಗಿ ಮಾತನಾಡಿದನು.
ಜಾನಾಸಿ ಮೇ ಜೀವಪುತ್ರಿ ಭಾವಂ ನಿತ್ಯಮವಿಗ್ರಹೇ |
ಕ್ರೋಶತೋ ನ ಚ ಗೃಹ್ಣಾತಿ ವಚನಂ ಮೇ ಸುಯೋಧನಃ ॥2॥
ಎಲೌ ಜೀವಪುತ್ರಿಯೇ (ಬದುಕಿರುವ ಗಂಡುಮಕ್ಕಳನ್ನು ಹೊಂದಿದವಳೇ), ಯುದ್ಧವು ನಡೆಯಬಾರದೆಂಬ ಯಾವಾಗಲೂ ಇರುವ ನನ್ನ ಅಭಿಪ್ರಾಯವನ್ನು ನೀನು ತಿಳಿದಿದ್ದೀಯೆ. ನಾನು ಕಿರುಚುತ್ತಿದ್ದರೂ ಸುಯೋಧನನು ನನ್ನ ಮಾತನ್ನು ಸ್ವೀಕರಿಸುತಿತಲ್ಲ.
ಉಪಪನ್ನೋ ಹ್ಯಸೌ ರಾಜಾ ಚೇದಿಪಾಂಚಾಲಕೇಕಯ್ಯೆಃ |
ಭೀಮಾರ್ಜುನಾಭ್ಯಾಂ ಕೃಷ್ಣೇನ ಯುಯುಧಾನಯಮ್ಯೆರಪಿ ॥3॥
ಈ ಯುಧಿಷ್ಠಿರರಾಜನು ಚೇದಿ-ಪಾಂಚಾಲ-ಕೇಕಯರಿಂದಲೂ, ಭೀಮಾರ್ಜುನರಿಂದಲೂ, ಕೃಷ್ಣನಿಂದಲೂ, ಯುಯುಧಾನನಿಂದಲೂ ಮತ್ತು ನಕುಲ-ಸಹದೇವರಿಂದಲೂ ಕೂಡಿದವನಾಗಿದ್ದಾನೆ.
ಉಪಪ್ಲಾವ್ಯೇ ನಿವಿಷ್ಟೋಽಪಿ ಧರ್ಮರಾಜೋ ಯುಧಿಷ್ಠಿರಃ |
ಕಾಂಕ್ಷತೇ ಜ್ಞಾತಿಭಿಃ ಸಂಧಿಂ ಬಲವಾನ್ ದುರ್ಬಲೋ ಯಥಾ ॥4॥
ಧರ್ಮರಾಜನಾದ ಯುಧಿಷ್ಠಿರನು ಉಪಪ್ಲಾವ್ಯನಗರದಲ್ಲಿ ವಾಸಿಸುತ್ತಿದ್ದರೂ ಬಲಿಷ್ಠನಾದ ಅವನು ದುರ್ಬಲನಂತೆ ದಾಯಾದಿಗಳ ಜೊತೆಯಲ್ಲಿ ಸಂಧಿಯನ್ನು ಬಯಸುತ್ತಾನೆ.
ರಾಜಾ ತು ಧೃತರಾಷ್ಟ್ರೋಽಯಂ ವಯೋವೃದ್ಧೋ ನ ಶಾಮ್ಯತಿ |
ಮತ್ತಃ ಪುತ್ರಮದೇನೈವ ವಿಧರ್ಮೇ ಪಥಿ ವರ್ತತೇ ॥5॥

ವಯೋವೃದ್ಧನಾದ ಈ ಧೃತರಾಷ್ಟ್ರರಾಜನು ಸಮಾಧಾನವನ್ನು ಹೊಂದುತ್ತಿಲ್ಲ. ಪುತ್ರನ ಮದದಿಂದ ಅವನೂ ಮತ್ತನಾಗಿ ಧರ್ಮವಿರುದ್ಧ ಮಾರ್ಗದಲ್ಲಿ ನಡೆಯುತ್ತಿದ್ದಾನೆ.
ಜಯದ್ರಥಸ್ಯ ಕರ್ಣಸ್ಯ ತಥಾ ದುಃಶಾಸನಸ್ಯ ಚ |
ಸೌಬಲಸ್ಯ ಚ ದುರ್ಬುದ್ಧ್ಯಾ ಮಿಥೋ ಭೇದಃ ಪ್ರವರ್ತತೇ ॥6॥
ಜಯದ್ರಥ, ಕರ್ಣ, ದುಶ್ಶಾಸನ, ಶಕುನಿ- ಇವರ ದುರ್ಬುದ್ಧಿಯಿಂದ ಜ್ಞಾತಿಗಳಲ್ಲಿ ವಿರೋಧವುಂಟಾಗುತ್ತಿದೆ.
ಅಧರ್ಮೇಣ ಹಿ ಧರ್ಮಿಷ್ಠಂ ಹ್ರಿಯತೇ ರಾಜ್ಯಮೀದೃಶಮ್ |
ಯೇಷಾಂ ತೇಷಾಮಯಂ ಧರ್ಮಃ ಸಾನುಬಂಧೋ ಭವಿಷ್ಯತಿ ॥7॥
ಯಾರ ಇಂತಹ ಧರ್ಮಿಷ್ಠವಾದ ರಾಜ್ಯವು ಅಧರ್ಮದಿಂದ ಅಪಹರಿಸಲ್ಪಡುತ್ತದೆಯೋ ಅವರಿಗೆ ಈ ಧರ್ಮವು ಸಾಂಗವಾಗಿರುತ್ತದೆ.
ಹ್ರಿಯಮಾಣೇ ಬಲಾದ್ ಧರ್ಮೇ ಕುರುಭಿಃ ಕೋ ನ ಸಂಜ್ವರೇತ್ |
ಅಸಾಮ್ನಾ ಕೇಶವೇ ಯಾತೇ ಸಮುದೇಷ್ಯಂತಿ ಪಾಂಡವಾಃ ॥8॥
ಬಲಾತ್ಕಾರದಿಂದ ಧರ್ಮವು ನಾಶಮಾಡಲ್ಪಟ್ಟರೆ ಕೌರವರ ಮೇಲೆ ಯಾವನು ಕೋಪವನ್ನು ಹೊಂದುವುದಿಲ್ಲ? ಸಂಧಿಯನ್ನು ಸಾಧಿಸದೆ ಕೃಷ್ಣನು ಹೋದಮೇಲೆ ಪಾಂಡವರು ಮೇಲೇಳುವರು.
ತತಃ ಕುರೂಣಾಮನಯೋ ಭವಿತಾ ವೀರನಾಶನಃ |
ಚಿಂತಯನ್ ನ ಲಭೇ ನಿದ್ರಾಮಹಸ್ಸು ಚ ನಿಶಾಸು ಚ ॥9॥
ಅನಂತರ ಕುರುಗಳಿಗೆ ವೀರನಾಶನವಾದ ಅನ್ಯಾಯದ ಯುದ್ಧ ಉಂಟಾಗುವುದು. ಇದನ್ನು ಯೋಚಿಸುತ್ತಾ ನಾನು ಹಗಲೂ, ರಾತ್ರಿಯೂ ನಿದ್ರೆಯನ್ನು ಮಾಡುತ್ತಿಲ್ಲ.
ವೈಶಂಪಾಯನಃ
ಶ್ರುತ್ವಾ ತು ಕುಂತೀ ತದ್ವಾಕ್ಯಮರ್ಥಕಾಮೇನ ಭಾಷಿತಮ್ |
ಸಾ ನಿಃಶ್ವಸಂತೀ ದುಃಖಾರ್ತಾ ಮನಸಾ ವಿಮಮರ್ಶ ಹ ॥10॥
ವೈಶಂಪಾಯನ ಅರ್ಥಕಾಮನಾದ ವಿದುರನಿಂದ ಹೇಳಲ್ಪಟ್ಟ ಆ ಮಾತುಗಳನ್ನು ಕೇಳಿ ಕುಂತಿಯು ದುಃಖದಿಂದ ಆರ್ತಳಾಗಿ ನಿಟ್ಟುಸಿರನ್ನು ಬಿಡುತ್ತಾ ಮನಸ್ಸಿನಲ್ಲಿಯೇ (ಹೀಗೆ) ವಿಮರ್ಶೆ ಮಾಡಿದಳು.
ಧಿಗಸ್ತ್ವರ್ಥಂ ಯತ್ಕೃತೇಽಯಂ ಸುಮಹಾನ್ ಜ್ಞಾತಿಸಂಕ್ಷಯಃ |
ವರ್ತತೇ ಸುಹೃದಾಂ ಚೈವ ಯುದ್ಧೇಽಸ್ಮಿನ್ ವೈ ಪರಾಭವಃ ॥11॥
ಯಾವ ಅರ್ಥದ ಸಲುವಾಗಿ ಈ ದೊಡ್ಡ ಜ್ಞಾತಿಸಮೂಹಕ್ಕೆ ವಿನಾಶವು ಉಂಟಾಗುತ್ತದೆಯೋ ಅಂತಹ ಅರ್ಥಕ್ಕೆ ಧಿಕ್ಕಾರವಿರಲಿ. ಈ ಯುದ್ಧದಲ್ಲಿ ಸುಹೃಜ್ಜನರೂ ಸಹ ಪರಾಭವವನ್ನು ಹೊಂದುತ್ತಾರೆ.
ಪಾಂಡವಾಶ್ಚೇದಿಪಾಂಚಾಲಾ ಯಾದವಾಶ್ಚ ಸಮಾಗತಾಃ |
ಭಾರತೈಃ ಸಹ ಯೋತ್ಸ್ಯಂತಿ ಕಿಂ ನು ದುಃಖಮತಃ ಪರಮ್ ॥12॥
ಇಲ್ಲಿಗೆ ಸಮಾಗತರಾದ ಪಾಂಡವರೂ, ಚೇದಿ-ಪಾಂಚಾಲರೂ, ಯಾದವರೂ ಭಾರತರ ಜೊತೆಯಲ್ಲಿ ಯುದ್ಧವನ್ನು ಮಾಡುವರು. ಇದಕ್ಕಿಂತ ದೊಡ್ಡ ದುಃಖವು ಯಾವುದು?
ಪಶ್ಯೇ ದೋಷಂ ಧ್ರುವಂ ಯುದ್ಧೇ ತಥಾಽಯುದ್ಧೇ ಪರಾಭವಮ್ |
ಅಧನಸ್ಯ ಮೃತಂ ಶ್ರೇಯೋ ನ ಹಿ ಜ್ಞಾತಿಕ್ಷಯೋ ಜಯಃ ॥13॥
ಇತಿ ಮೇ ಚಿಂತಯಂತ್ಯಾ ವೈ ಹೃದಿ ದುಃಖಂ ಪ್ರವರ್ತತೇ ॥14॥
ಯುದ್ಧದಲ್ಲಿ ಸ್ಪಷ್ಟವಾಗಿ ದೋಷವನ್ನು ನೋಡುತ್ತಿದ್ದೇನೆ. ಯುದ್ಧವನ್ನು ಮಾಡದಿದ್ದರೆ ಪರಾಭವವನ್ನೂ ನೋಡುತ್ತಿದ್ದೇನೆ. ದರಿದ್ರನಾದವನಿಗೆ ಮರಣವೇ ಶ್ರೇಷ್ಠವಾದುದು. ಜ್ಞಾತಿಗಳ ಕ್ಷಯವು ಜಯವಲ್ಲವಷ್ಟೆ? ಹೀಗೆ ಚಿಂತಿಸುತ್ತಾ ನನ್ನ ಮನಸ್ಸಿನಲ್ಲಿ ದುಃಖವು ಹೆಚ್ಚುತ್ತಿದೆ.
ಪಿತಾಮಹಃ ಶಾಂತನವ ಆಚಾರ್ಯಶ್ಚ ಯುಧಾಂಪತಿಃ |
ಕರ್ಣಶ್ಚ ಧಾರ್ತರಾಷ್ಟ್ರಾರ್ಥಂ ವರ್ಧಯಂತಿ ಭಯಂ ಮಮ ॥15॥
ಪಿತಾಮಹರಾದ ಭೀಷ್ಮರೂ, ಯುದ್ಧನಾಯಕರಾದ ದ್ರೋಣರೂ ಮತ್ತು ಸುಯೋಧನನ ಸಲುವಾಗಿ ಯುದ್ಧವನ್ನು ಮಾಡುವ ಕರ್ಣನೂ ನನ್ನ ಭಯವನ್ನು ಹೆಚ್ಚಿಸುತ್ತಾರೆ.
ನಾಚಾರ್ಯಃ ಕಾಮವಾನ್ ಶಿಷ್ಯೈಃ
ದ್ರೋಣೋ ಯುದ್ಧ್ಯೇತ ಜಾತುಚಿತ್ |
ಪಾಂಡವೇಷು ಕಥಂ ಹಾರ್ದಂ ಕುರ್ಯಾನ್ನ ಚ ಪಿತಾಮಹಃ ॥16॥
ಶಿಷ್ಯರಿಂದ ಅಪೇಕ್ಷಿತಫಲವನ್ನು ಪಡೆದ ದ್ರೋಣರು ಅವರ ಜೊತೆಯಲ್ಲಿ ಎಂದೂ ಯುದ್ಧವನ್ನು ಮಾಡಲಾರರು. ಪಿತಾಮಹರಾದ ಭೀಷ್ಮರಾದರೂ ಮೊಮ್ಮಕ್ಕಳಾದ ಬಾಂಧವರಲ್ಲಿ ಹೇಗೆ ಪ್ರೀತಿಯನ್ನು ಮಾಡದೆ ಇರಲು ಸಾಧ್ಯ?
ಅಥ ತ್ವೇಕೋ ವೃಥಾದೃಷ್ಟಿಃ ಧಾರ್ತರಾಷ್ಟ್ರಸ್ಯ ದುರ್ಮತೇಃ |
ಮೋಹಾನುವರ್ತೀ ಸತತಂ ಪಾಪೋ ದ್ವೇಷ್ಟಿ ಚ ಪಾಂಡವಾನ್ ॥17॥
ಮಹತ್ಯನರ್ಥೇ ನಿರ್ಬಂಧೀ ಬಲವಾಂಶ್ಚ ವಿಶೇಷತಃ |
ಕರ್ಣಃ ಸದಾ ಪಾಂಡವದ್ವಿಟ್ ತನ್ಮೇ ದಹತಿ ಸಂಪ್ರತಿ ॥18॥
ಆದರೆ ಇವನೊಬ್ಬನೇ ಮಿಥ್ಯಾದೃಷ್ಟಿಯುಳ್ಳವನಾಗಿ ದುರ್ಬುದ್ಧಿಯುಳ್ಳ ಸುಯೋಧನನ ಮೋಹವನ್ನು ಅನುಸರಿಸಿ ಸತತವಾಗಿ ಪಾಂಡವರನ್ನು ದ್ವೇಷಿಸುತ್ತಾನೆ. ಅವನು ದೊಡ್ಡ ಅನರ್ಥವನ್ನು ಉಂಟುಮಾಡುವುದರಲ್ಲಿ ಹಠವುಳ್ಳವನು ಮತ್ತು ವಿಶೇಷವಾದ

ಬಲವುಳ್ಳವನು. ಅವನೆಂದರೆ ಕರ್ಣ. ಅವನು ಯಾವಾಗಲೂ ಪಾಂಡವ ದ್ವೇಷಿ. ಅದು ಈಗ ನನ್ನ ಮನಸ್ಸನ್ನು ಸುಡುತ್ತಿದೆ.
ಆಶಂಸೇ ತ್ವದ್ಯ ಕರ್ಣಸ್ಯ ಮನೋಽಹಂ ಪಾಂಡವಾನ್ ಪ್ರತಿ |
ಪ್ರಸಾದಯಿತುಮಾಸಾದ್ಯ ದರ್ಶಯಂತೀ ಯಥಾತಥಮ್ ॥19॥
ಈ ದಿನ ನಾನು ಕರ್ಣನ ಬಳಿಗೆ ಹೋಗಿ, ಅವನಿಗೆ ಸತ್ಯಸಂಗತಿಗಳನ್ನು ಹೇಳಿ ಅವನ ಮನಸ್ಸನ್ನು ಪಾಂಡವರ ಪರವಾಗಿ ತಿರುಗಿಸಲು ಆಸೆ ಪಡುತ್ತೇನೆ.
ತೋಷಿತೋ ಭಗವಾನ್ ಯತ್ರ ದುರ್ವಾಸಾ ಮೇ ವರಂ ದದೌ |
ಆಹ್ವಾನಂ ಮಂತ್ರಸಂಯುಕ್ತಂ ವಸಂತ್ಯಾಃ ಪಿತೃವೇಶ್ಮನಿ ॥20॥
ನಾನು ತಂದೆಯ ಮನೆಯಲ್ಲಿ ವಾಸಮಾಡುತ್ತಿದ್ದಾಗ ನನ್ನಿಂದ ಸಂತೋಷಪಡಿಸಲ್ಪಟ್ಟ ದುರ್ವಾಸರು ನನಗೆ ದೇವತೆಗಳನ್ನು ಆಹ್ವಾನ ಮಾಡುವ ಮಂತ್ರಗಳ ಉಪದೇಶವನ್ನು ವರವಾಗಿ ಕೊಟ್ಟರು.
ಸಾಽಹಮಂತಃಪುರೇ ರಾಜ್ಞಃ ಕುಂತಿಭೋಜಪುರಸ್ಕೃತಾ |
ಚಿಂತಯಂತೀ ಬಹುವಿಧಂ ಹೃದಯೇನ ವಿದೂಯತಾ ॥21॥
ಬಲಾಬಲಂ ಚ ಮಂತ್ರಾಣಾಂ ಬ್ರಾಹ್ಮಣಸ್ಯ ಚ ವಾಗ್ಬಲಮ್ |
ಸ್ತ್ರೀಭಾವಾದ್ ಬಾಲಭಾವಾಚ್ಚ ಚಿಂತಯಂತೀ ಪುನಃ ಪುನಃ ॥22॥
ಧಾತ್ರ್ಯಾ ವಿಸ್ರಬ್ಧಯಾ ಗುಪ್ತಾ ಸಖೀಜನವೃತಾ ತದಾ |
ದೋಷಂ ಪರಿಹರಂತೀ ಚ ಪಿತುಶ್ಚಾರಿತ್ರರಕ್ಷಿಣೀ ॥23॥
ಕಥಂ ನು ಸುಕೃತಂ ಮೇ ಸ್ಯಾನ್ನಾಪರಾಧವತೀ ಕಥಮ್ |
ಭವೇಯಮಿತಿ ಸಂಚಿಂತ್ಯ ಬ್ರಾಹ್ಮಣಂ ತಂ ನಮಸ್ಯ ಚ ॥24॥
ಕೌತೂಹಲಾತ್ ಸುತಂ ಲಬ್ಧ್ವಾ ಬಾಲಿಶ್ಯಾದಾಚರಂ ತದಾ ॥25॥
ನಾನು ಕುಂತಿಭೋಜರಾಜನ ಅರಮನೆಯಲ್ಲಿ ವಾಸಮಾಡುತ್ತಾ, ದುಃಖಪಡುತ್ತಿರುವ ಮನಸ್ಸಿನಿಂದ ಬಹುವಿಧವಾಗಿ ಚಿಂತಿಸುತ್ತಾ, ಚಿಕ್ಕ ಕನ್ಯೆಯಾದುದರಿಂದ ಬಾಲಭಾವದಿಂದ ಮಂತ್ರಗಳ ಬಲಾಬಲವನ್ನೂ, ಬ್ರಾಹ್ಮಣನ ವಾಕ್ಸಿದ್ಧಿಯನ್ನೂ ಸ್ತ್ರೀಭಾವದಿಂದಲೂ, ಬಾಲಭಾವದಿಂದಲೂ ಪುನಃ ಪುನಃ ಚಿಂತಿಸುತ್ತಾ ವಿಶ್ವಾಸಪಾತ್ರರಾದ ದಾದಿಯಿಂದ ರಕ್ಷಿತಳಾಗಿ, ಸಖೀಜನರಿಂದ ಪರಿವೃತಳಾಗಿ, ದೋಷವನ್ನು ಪರಿಹಾರ ಮಾಡಿಕೊಳ್ಳಲು ಬಯಸಿ ಮತ್ತು ತಂದೆಯ ಚಾರಿತ್ರ್ಯವನ್ನು ರಕ್ಷಿಸುವವಳಾಗಿ ನಾನು ಏನು ಮಾಡಿದರೆ ಒಳ್ಳೆಯದಾಗುತ್ತದೆ, ಏನು ಮಾಡಿದರೆ ನನ್ನಿಂದ ಅಪರಾಧವಾಗುವುದಿಲ್ಲ ಎಂದು ಚಿಂತಿಸಿ, ಆ ಬ್ರಾಹ್ಮಣನಿಗೆ ನಮಸ್ಕರಿಸಿ ಕುತೂಹಲದಿಂದ ಮಗನನ್ನು ಪಡೆದು ಬಾಲಿಶಬುದ್ಧಿಯಿಂದ ಅಂತಹ ಕೆಲಸವನ್ನು ಮಾಡಿದೆ.
ಕನ್ಯಾ ಸತೀ ದೇವಮರ್ಕಮಾಸಾದಯಮಹಂ ತತಃ |
ಯೋಽಸೌ ಕಾನೀನಗರ್ಭೋ ಮೇ ಪುತ್ರವತ್ ಪರಿರಕ್ಷಿತಃ ॥26॥
ಕಸ್ಮಾನ್ನ ಕುರ್ಯಾದ್ ವಚನಂ ಪಥ್ಯಂ ಭ್ರಾತೃಹಿತಂ ತಥಾ ॥27॥
ನಾನು ಕನ್ಯೆಯಾಗಿರುವಾಗಲೇ ಆಗ ಸೂರ್ಯದೇವನನ್ನು ಸಮೀಪಿಸಿದೆನು. ಕನ್ಯೆಯಾದ ನನ್ನ ಗರ್ಭದಲ್ಲಿದ್ದ ಈ ಕರ್ಣನನ್ನು ಮಗನಂತೆಯೇ ರಕ್ಷಿಸಿದೆ. ಅವನು ತನ್ನ ಸಹೋದರರ ಹಿತಕ್ಕಾಗಿ (ನಾನು) ಆಡುವ ಪಥ್ಯವಾದ ಮಾತುಗಳನ್ನು ಏಕೆ ನಡೆಸಿಕೊಡಲಾರನು?
ವೈಶಂಪಾಯನಃ
ಇತಿ ಕುಂತೀ ವಿನಿಶ್ಚಿತ್ಯ ಕಾರ್ಯನಿಶ್ಚಯಮುತ್ತಮಮ್ |
ಕಾರ್ಯಾರ್ಥಮಭಿನಿರ್ಯಾಯ ಯಯೌ ಭಾಗೀರಥೀಂ ಪ್ರತಿ ॥28॥
ವೈಶಂಪಾಯನ ಹೀಗೆ ಕುಂತಿಯು ತಾನು ಮಾಡಬೇಕಾದ ಶ್ರೇಷ್ಠವಾದ ಕಾರ್ಯವನ್ನು ನಿರ್ಧರಿಸಿ, ಅದನ್ನು ಸಾಧಿಸಲು ಗಂಗಾನದಿಯ ಬಳಿಗೆ ಹೊರಟಳು.
ಆತ್ಮಜಸ್ಯ ತತಸ್ತಸ್ಯ ಘೃಣಿನಃ ಸತ್ಯಸಂಗಿನಃ |
ಗಂಗಾತೀರೇ ಪೃಥಾಽಶ್ರೌಷೀತ್ ತದಾಽಧ್ಯಯನನಿಸ್ವನಮ್ ॥29॥
ಅವಳು ಗಂಗಾತೀರವನ್ನು ತಲುಪಿ ಅಲ್ಲಿ ಸತ್ಯವಂತನೂ, ದಯಾಳುವೂ ಆದ ತನ್ನ ಪುತ್ರನ ವೇದಾಧ್ಯಯನ ಧ್ವನಿಯನ್ನು ಕೇಳಿದಳು.
ಪ್ರಾಙ್ಮುಖಸ್ಯೋರ್ಧ್ವಬಾಹೋಃ ಸಾ ಪರ್ಯತಿಷ್ಠತ ಪೃಷ್ಠತಃ |
ಜಪ್ಯಾವಸಾನೇ ಕಾರ್ಯಾರ್ಥಂ ಪ್ರತೀಕ್ಷಂತೀ ತಪಸ್ವಿನೀ ॥30॥
ಪೂರ್ವಾಭಿಮುಖವಾಗಿ ನಿಂತು, ಎರಡು ಬಾಹುಗಳನ್ನು ಎತ್ತಿ ಸೂರ್ಯನ ಉಪಸ್ಥಾನವನ್ನು ಮಾಡುತ್ತಿದ್ದ ಕರ್ಣನ ಹಿಂದೆ ಅವನ ಜಪವು ಮುಗಿದ ಮೇಲೆ ತನ್ನ ಕಾರ್ಯದ ಸಾಧನೆಯನ್ನು ನಿರೀಕ್ಷಿಸುತ್ತಾ ತಪಸ್ವಿನಿಯಾದ ಕುಂತಿಯು ನಿಂತಳು.
ಅತಿಷ್ಠತ್ ಸೂರ್ಯತಾಪಾರ್ತಾ ಕರ್ಣಸ್ಯೋತ್ತರವಾಸಸಿ |
ಕೌರವ್ಯಪತ್ನೀ ವಾರ್ಷ್ಣೇಯೀ ಪದ್ಮಮಾಲೇವ ಶುಷ್ಯತೀ ॥31॥
ಪಾಂಡುಪತ್ನಿಯೂ, ವಾರ್ಷ್ಣೇಯಿಯೂ ಆದ ಅವಳು ಸೂರ್ಯನ ತಾಪಕ್ಕೆ ಬಳಲಿ ಒಣಗುವ ಪದ್ಮಮಾಲೆಯಂತೆ ಕರ್ಣನ ಉತ್ತರಭಾಗದಲ್ಲಿ ನಿಂತಳು.
ಆಪೃಷ್ಠತಾಪಾಜ್ಜಪಿತ್ವಾಽಸೌ ಪರಿವೃತ್ಯ ಯತವ್ರತಃ |
ದೃಷ್ಟ್ವಾ ಕುಂತೀಮುಪಾತಿಷ್ಠದ್ ಅಭಿವಾದ್ಯ ಕೃತಾಂಜಲಿಃ ॥32॥
ಯಥಾನ್ಯಾಯಂ ಮಹಾತೇಜಾ ಮಾನೀ ಧರ್ಮಭೃತಾಂ ವರಃ ॥33॥
ಸೂರ್ಯನ ತಾಪದಿಂದ ಬೆನ್ನು ಕಾಯುವವರೆಗೆ ದೃಢವ್ರತನಾದ ಕರ್ಣನು ಜಪವನ್ನು ಮಾಡಿ, ಅನಂತರ ಹಿಂದುಗಡೆ ತಿರುಗಿ

ಕುಂತಿಯನ್ನು ನೋಡಿ, ಅವಳಿಗೆ ವಿಧಿಪ್ರಕಾರವಾಗಿ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿ ಮಹಾತೇಜಸ್ವಿಯೂ, ಮಾನಿಯೂ, ಧರ್ಮಿಷ್ಠರಲ್ಲಿ ಶ್ರೇಷ್ಠನೂ ಆದ ಅವನು ಕುಂತಿಯ ಬಳಿಗೆ ಬಂದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ತ್ರಿಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರನಲವತ್ಮೂರನೆಯ
ಅಧ್ಯಾಯ ಮುಗಿಯಿತು.

* * * * *

ಮಹಾಭಾರತತಾತ್ಪರ್ಯನಿರ್ಣಯಃ ಅಧ್ಯಾಯಃ 24
ಸಂಪ್ರಾರ್ಥಿತಃ ಪೃಥಯಾ ಚೈವ ಕರ್ಣಃ
ಪಾರ್ಥೈರ್ಯೋಗಂ ಯಾಹಿ ಸೂನುರ್ಮಮಾಸಿ |
ತೇನಾಪ್ಯುಕ್ತಾ ವಾಸವಿನಾ ವಿನಾಽಹಂ
ಹನ್ಯಾಂ ಸುತಾಂಸ್ತೇ ನ ಕಥಂಚನೇತಿ ॥88॥
ಕುಂತಿ ಕರ್ಣನನ್ನು ಕೇಳಿಕೊಂಡಳು. `ನೀನು ನನ್ನ ಮಗನಾಗಿರುವಿ. ಪಾಂಡವರ ಜೊತೆ ಸೇರು' ಎಂದು. ಅವನೆಂದ `ಅಮ್ಮ! ಅರ್ಜುನನನ್ನು ಹೊರತು ನಿನ್ನ ಬೇರೆ ಯಾವ ಮಕ್ಕಳನ್ನೂ ನಾನು ಸರ್ವಥಾ ಕೊಲ್ಲುವುದಿಲ್ಲ' ಎಂದು.

* * * * *

ನೂರ ನಲವತ್ನಾಲ್ಕನೆಯ ಅಧ್ಯಾಯ
ಕರ್ಣನ ಜನ್ಮವೃತ್ತಾಂತವನ್ನು ಹೇಳಿದ ಕುಂತಿಯಿಂದ
ಪಾಂಡವರನ್ನು ಸೇರುವಂತೆ ಅವನಿಗೆ ಪ್ರಚೋದನೆ.

ಕರ್ಣಃ
ರಾಧೇಯೋಽಹಮಾಧಿರಥಃ ಕರ್ಣಸ್ತ್ವಾಮಭಿವಾದಯೇ |
ಪ್ರಾಪ್ತಾ ಕಿಮರ್ಥಂ ಭವತೀ ಬ್ರೂಹಿ ಕಿಂ ಕರವಾಣಿ ತೇ ॥1॥
ಕರ್ಣ ಅಧಿರಥ ಮತ್ತು ರಾಧೆಯ ಪುತ್ರನಾದ ಕರ್ಣನಾದ ನಾನು ನಮಸ್ಕರಿಸುತ್ತಿದ್ದೇನೆ. ಪೂಜ್ಯಳಾದ ನೀನು ಏತಕ್ಕೆ ಬಂದೆ? ನಿನಗೆ ಏನು ಮಾಡಲಿ ಎಂದು ಹೇಳು.

ಕುಂತೀ
ಕೌಂತೇಯಸ್ತ್ವಂ ನ ರಾಧೇಯೋ ನ ತವಾಧಿರಥಃ ಪಿತಾ |
ನಾಸಿ ಸೂತಕುಲೇ ಜಾತಃ ಕರ್ಣ ತದ್ ವಿದ್ಧಿ ಮೇ ವಚಃ ॥2॥
ಕುಂತೀ ಎಲೈ ಕರ್ಣನೇ, ನೀನು ಕುಂತಿಯ ಪುತ್ರ, ರಾಧೆಯ ಪುತ್ರನಲ್ಲ. ಅಧಿರಥನು ನಿನ್ನ ತಂದೆಯಲ್ಲ. ನೀನು ಸೂತಕುಲದಲ್ಲಿ ಜನಿಸಿದವನಲ್ಲ. ನನ್ನ ಮಾತನ್ನು ನಂಬು.
ಕಾನೀನಸ್ತ್ವಂ ಮಯಾ ಜಾತಃ ಪೂರ್ವಜಃ ಕುಕ್ಷಿಣಾ ಧೃತಃ |
ಕುಂತಿಭೋಜಸ್ಯ ಭವನೇ ಪಾರ್ಥಸ್ತ್ವಮಸಿ ಪುತ್ರಕ ॥3॥
ನಾನು ಕನ್ಯೆಯಾಗಿದ್ದಾಗ ನೀನು ನನ್ನಲ್ಲಿ ಜನಿಸಿದವನು. ನೀನು ಯುಧಿಷ್ಠಿರಾದಿಗಳಿಗಿಂತ ಮೊದಲು ಕುಂತಿಭೋಜನ ಮನೆಯಲ್ಲಿದ್ದಾಗ ನನ್ನ ಕುಕ್ಷಿಯಲ್ಲಿ ಧರಿಸಲ್ಪಟ್ಟವನು. ಎಲೈ ಪುತ್ರನೇ, ನೀನು ಪೃಥೆಯಾದ ನನ್ನ ಮಗ.
ಪ್ರಕಾಶಕರ್ಮಾ ತಪನೋ ಯೋಽಯಂ ದೇವೋ ವಿರೋಚನಃ |
ಅಜೀಜನತ್ ತ್ವಾಂ ಮಯ್ಯೇವ ಕರ್ಣ ಶಸ್ತ್ರಭೃತಾಂ ವರಮ್ ॥4॥
ಪ್ರಕಾಶವನ್ನೂ, ಶಾಖವನ್ನೂ ಕೊಡುವ ಈ ಯಾವ ಸೂರ್ಯದೇವನು ಇದ್ದಾನೆಯೋ ಅವನು ಎಲೈ ಕರ್ಣನೇ, ನನ್ನಲ್ಲಿಯೇ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ನಿನ್ನನ್ನು ಪಡೆದನು.
ಕುಂಡಲೀ ಬದ್ಧಕವಚೋ ದೇವಗರ್ಭಃ ಶ್ರಿಯಾ ವೃತಃ |
ಜಾತಸ್ತ್ವಮಸಿ ದುರ್ಧರ್ಷ ಮಯಾ ಪುತ್ರ ಪಿತುರ್ಗೃಹೇ ॥5॥
ಎಲೈ ಪುತ್ರನೇ, ದುರ್ಧರ್ಷನೇ, ನೀನು ದೇವತೆಯ ಮಗನಾಗಿ, ಕವಚ-ಕುಂಡಲಗಳನ್ನು ಧರಿಸಿ, ಕಾಂತಿಯಿಂದ ಕೂಡಿದವನಾಗಿ ನಾನು ತಂದೆಯ ಮನೆಯಲ್ಲಿದ್ದಾಗ ನನ್ನಲ್ಲಿ ಜನಿಸಿದೆ.
ಸ ತ್ವಂ ಭ್ರಾತೄನಸಂಬುದ್ಧ್ವಾ ಮೋಹಾದ್ ಯದುಪಸೇವಸೇ |
ಧಾರ್ತರಾಷ್ಟ್ರಾನ್ ನ ತದ್ ಯುಕ್ತಂ ತ್ವಯಿ ಪುತ್ರ ವಿಶೇಷತಃ ॥6॥
ನೀನು ನಿನ್ನ ಸಹೋದರರನ್ನು ತಿಳಿಯದೆ ಮೋಹದಿಂದ ದುರ್ಯೋಧನಾದಿಗಳನ್ನು ಅನುಸರಿಸುವುದು ಸರಿಯಲ್ಲ. ಪುತ್ರನೇ, ವಿಶೇಷವಾಗಿ ನಿನಗೆ ಅದು ಯುಕ್ತವಲ್ಲ.
ಏತದ್ ಧರ್ಮಫಲಂ ಪುತ್ರ ನರಾಣಾಂ ಧರ್ಮನಿಶ್ಚಯೇ |
ಯತ್ ತುಷ್ಯಂತ್ಯಸ್ಯ ಪಿತರೋ ಮಾತಾ ಚಾಪ್ಯೇಕದರ್ಶಿನೀ ॥7॥
ಧರ್ಮನಿಶ್ಚಯವುಳ್ಳ ವಿವೇಕಿಗಳು ತಂದೆ-ತಾಯಿಗಳನ್ನು ಸಂತೋಷಪಡಿಸುವುದು ಮತ್ತು ತಾಯಿಯು ಮುಖ್ಯರಾದ ಮಕ್ಕಳನ್ನು ನೋಡಿ ಸಂತೋಷದಿಂದಿರುವುದು ಧರ್ಮದ ಫಲವೆಂದು ಹೇಳುತ್ತಾರೆ.
ಭ್ರಾತೃಭಿರ್ನಿರ್ಜಿತಾಂ ಪೂರ್ವಂ ಭೀಮಾರ್ಜುನಯಮಾದಿಭಿಃ |

ಆಚ್ಛಿದ್ಯ ಧಾರ್ತರಾಷ್ಟ್ರೇಭ್ಯೋ ಭುಂಕ್ಷ್ವ ಯೌಧಿಷ್ಠಿರೀಂ ಶ್ರಿಯಮ್ ॥8॥
ಭೀಮಾರ್ಜುನ, ನಕುಲ-ಸಹದೇವಾದಿ ಸಹೋದರರಿಂದ ಮೊದಲು ನಿರ್ಜಿತವಾದ ಭೂಮಿಯನ್ನು ದುರ್ಯೋಧನಾದಿಗಳಿಂದ ಪುನಃ ಸಂಪಾದಿಸಿಕೊಂಡು, ಧರ್ಮರಾಜನ ಸಂಪತ್ತನ್ನು ಅನುಭವಿಸುವವನಾಗು.
ಅದ್ಯ ಪಶ್ಯಂತು ಕುರವಃ ಕರ್ಣಾರ್ಜುನಸಮಾಗಮಮ್ |
ಸೌಭ್ರಾತ್ರಮೇತದಾಲಕ್ಷ್ಯ ಸನ್ನಮಂತಾಮಸಾಧವಃ ॥9॥
ಈ ದಿನ ಕೌರವರು ಕರ್ಣಾರ್ಜುನ ಸಮಾಗಮವನ್ನು ನೋಡುವವರಾಗಲಿ. ಈ ಅಣ್ಣ-ತಮ್ಮಂದಿರ ಸೌಹಾರ್ದವನ್ನು ನೋಡಿ ಅಸಜ್ಜನರು ನಮಸ್ಕರಿಸುವಂತಾಗಲಿ.
ಕರ್ಣಾರ್ಜುನೌ ವೈ ಭವತಾಂ ಯಥಾ ರಾಮಜನಾರ್ದನೌ |
ಅಸಾಧ್ಯಂ ಕಿಂ ನು ಲೋಕೇ ಸ್ಯಾದ್ ಯುವಯೋಃ ಸಂಹತಾತ್ಮಯೋಃ ॥
ಕರ್ಣಾರ್ಜುನರು ಬಲರಾಮ-ಕೃಷ್ಣರಂತಾಗಲಿ. ನೀವಿಬ್ಬರೂ ಸೇರಿದರೆ ಈ ಲೋಕದಲ್ಲಿ ಅಸಾಧ್ಯವಾದುದು ಯಾವುದಿದೆ?
ಕರ್ಣ ಶೋಭಿಷ್ಯಸೇ ನೂನಂ ಪಂಚಭಿರ್ಭ್ರಾತೃಭಿರ್ವೃತಃ |
ವೇದೈಃ ಪರಿವೃತೋ ಬ್ರಹ್ಮಾ ಯಥಾ ವೇದಾಂಗಪಂಚಮೈಃ ॥11॥
ಎಲೈ ಕರ್ಣನೇ, ಐದುಜನ ಸಹೋದರರಿಂದ ಕೂಡಿದ ನೀನು ಐದು ವೇದಾಂಗಗಳಿಂದ ಸಹಿತವಾದ ವೇದಗಳಿಂದ ಕೂಡಿದ ಬ್ರಹ್ಮನಂತೆ ಶೋಭಿಸುವಿ.
ಉಪಪನ್ನೋ ಗುಣೈಃ ಸರ್ವೈರ್ಜ್ಯೇಷ್ಠಃ ಶ್ರೇಷ್ಠೇಷು ಬಂಧುಷು |
ಸೂತಪುತ್ರೇತಿ ಮಾ ಶಬ್ದಃ ಪಾರ್ಥಸ್ತ್ವಮಸಿ ವೀರ್ಯವಾನ್ ॥12॥
ನೀನು ಎಲ್ಲ ಗುಣಗಳಿಂದಲೂ ಕೂಡಿದವನಾಗಿದ್ದು ಬಂಧುಗಳಲ್ಲಿ ಜ್ಯೇಷ್ಠನೂ ಮತ್ತು ಶ್ರೇಷ್ಠನೂ ಆಗಿದ್ದೀಯೆ. ಸೂತಪುತ್ರನೆಂಬ ಶಬ್ದವನ್ನು ಹೇಳಬೇಡ. ನೀನು ಪ್ರತಾಪಶಾಲಿಯಾದ ಕುಂತೀಪುತ್ರನಾಗಿದ್ದೀಯೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಶ್ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೈದನೆಯ ಅಧ್ಯಾಯ
ಕುಂತಿಗೆ ಕರ್ಣನ ಉತ್ತರ. ಅರ್ಜುನನನ್ನು ಬಿಟ್ಟು ಬೇರೆ ಪಾಂಡವರನ್ನು ಕೊಲ್ಲುವುದಿಲ್ಲವೆಂದು ವಾಗ್ದಾನ.
ವೈಶಂಪಾಯನಃ
ತತಃ ಸೂರ್ಯಾನ್ನಿಃಸರಂತೀಂ ಕರ್ಣಃ ಶುಶ್ರಾವ ಭಾರತೀಮ್ |
ದುರತ್ಯಯಾಂ ಪ್ರಣಯಿನೀಂ ಪಿತೃವದ್ ಗೌರವೇರಿತಾಮ್ ॥1॥
ವೈಶಂಪಾಯನ ಅನಂತರ ಸೂರ್ಯನಿಂದ ಹೊರಹೊಮ್ಮಿದ, ಮೀರಲು ಅಸಾಧ್ಯವಾದ, ಸ್ನೇಹಪೂರ್ವಕವಾದ ತಂದೆಯ ಮಾತಿನಂತೆ ಗೌರವಾನ್ವಿತನಾದ ಮಾತನ್ನು ಕರ್ಣನು ಕೇಳಿದನು.
ಸೂರ್ಯಃ
ಸತ್ಯಮಾಹ ಪೃಥಾ ವಾಕ್ಯಂ ಕರ್ಣ ಮಾತೃವಚಃ ಶೃಣು |
ಶ್ರೇಯಸ್ತೇ ಸ್ಯಾನ್ನರವ್ಯಾಘ್ರ ಸರ್ವಮಾಚರತಸ್ತಥಾ ॥2॥
ಸೂರ್ಯ ಕರ್ಣನೇ, ಕುಂತಿಯು ಸತ್ಯವನ್ನು ಹೇಳುತ್ತಿದ್ದಾಳೆ. ತಾಯಿಯ ಮಾತನ್ನು ಕೇಳು. ನರವ್ಯಾಘ್ರನೇ, ಅವಳು ಹೇಳಿದಂತೆ ಎಲ್ಲವನ್ನೂ ಮಾಡಿದರೆ ನಿನಗೆ ಶ್ರೇಯಸ್ಸಾಗುವುದು.
ವೈಶಂಪಾಯನಃ
ಏವಮುಕ್ತಸ್ಯ ಮಾತ್ರಾ ಚ ಸ್ವಯಂ ಪಿತ್ರಾ ಚ ಭಾನುನಾ |
ಚಚಾಲ ನೈವ ಕರ್ಣಸ್ಯ ಮತಿಃ ಸತ್ಯಧೃತೇಸ್ತದಾ ॥3॥
ವೈಶಂಪಾಯನ ಹೀಗೆ ತಾಯಿಯಿಂದಲೂ ಮತ್ತು ತಂದೆಯಾದ ಸೂರ್ಯನಿಂದಲೂ ಹೇಳಲ್ಪಟ್ಟರೂ ಸಹ ಕರ್ಣನ ಬುದ್ಧಿಯು ಸತ್ಯದಿಂದಲೂ ಮತ್ತು ಧೈರ್ಯದಿಂದಲೂ ಅಲುಗಾಡಲಿಲ್ಲ.
ಕರ್ಣಃ
ನ ಚೈತಚ್ಛ್ರದ್ದಧೇ ವಾಕ್ಯಂ ಕ್ಷತ್ರಿಯೇ ಭಾಷಿತಂ ತ್ವಯಾ |
ಧರ್ಮದ್ವಾರಂ ಮಮೈತತ್ ಸ್ಯಾನ್ನಿಯೋಗಕರಣಂ ತವ ॥4॥
ಕರ್ಣ ಎಲೌ ಕ್ಷತ್ರಿಯಳೇ, ನಿನ್ನ ಆದೇಶದಂತೆ ನಡೆದುಕೊಂಡರೆ ನನಗೆ ಧರ್ಮ ಉಂಟಾಗುವುದು ಎಂಬ ನೀನು ಆಡಿದ ಮಾತನ್ನು ನಾನು ನಂಬುವುದಿಲ್ಲ.
ಅಕರೋನ್ಮಯಿ ಯತ್ ಪಾಪಂ ಭವತೀ ಸುಮಹಾತ್ಯಯಮ್ |
ಅವಕೀರ್ಣೋಽಸ್ಮಿ ಯನ್ಮಾತಃ ತದ್ ಯಶಃಕೀರ್ತಿನಾಶನಮ್ ॥5॥
ನೀನು ನನ್ನ ವಿಷಯದಲ್ಲಿ ಪರಿಹರಿಸಲಾರದ ದೊಡ್ಡ ಪಾಪವನ್ನು ಎಸಗಿದ್ದೀಯೆ. ತಾಯಿಯೇ, ನೀನು ನನ್ನನ್ನು ಅಕಾಲದಲ್ಲಿ

ಪಡೆದು ತ್ಯಜಿಸಿರುವುದರಿಂದ ನನ್ನ ಯಶಸ್ಸನ್ನು ಯಾರೂ ಕೀರ್ತಿಸುವುದಿಲ್ಲ.
ಅಹಂ ಚ ಕ್ಷತ್ರಿಯೋ ಜಾತು ನ ಪ್ರಾಪ್ತಃ ಕ್ಷತ್ರಸತ್ಕ್ರಿಯಾಮ್ |
ತ್ವತ್ಕೃತೇ ಕಿಂ ನು ಪಾಪೀಯಃ ಶತ್ರುಃ ಕುರ್ಯಾನ್ಮಮಾಹಿತಮ್ ॥6॥
ನಾನು ಕ್ಷತ್ರಿಯನಾಗಿ ಜನಿಸಿ, ನಿನ್ನ ನಿಮಿತ್ತದಿಂದ ಕ್ಷತ್ರಿಯಯೋಗ್ಯ ಸಂಸ್ಕಾರವನ್ನು ಹೊಂದಲಿಲ್ಲ. ಶತ್ರುವೂ ಕೂಡ ಇದಕ್ಕಿಂತ ಹೆಚ್ಚು ಪಾಪಿಷ್ಠವಾದ ಅಹಿತವನ್ನು ಏನು ಮಾಡಿಯಾನು?
ಕ್ರಿಯಾಕಾಲೇ ತ್ವನುಕ್ರೋಶಮಕೃತ್ವಾ ತ್ವಮಿಮಂ ಮಮ |
ಸುಸಂಗೃಹೀತಸಮಯಮದ್ಯ ಮಾಂ ಸಮಚೂಚುದಃ ॥7॥
ಮಾಡಬೇಕಾದ ಕಾಲದಲ್ಲಿ ನನ್ನ ಮೇಲೆ ದಯೆಯನ್ನು ತೋರಿಸದೆ ಈಗ ನಾನು ಸ್ಥಿರವಾದ ಪ್ರತಿಜ್ಞೆಯನ್ನು ಮಾಡಿದ ಮೇಲೆ ನನ್ನ ಬಳಿಗೆ ಬಂದು ನನ್ನನ್ನು ಪ್ರಚೋದಿಸುತ್ತಿದ್ದೀಯೆ.
ನ ವೈ ಮಮ ಹಿತಂ ಪೂರ್ವಂ ಮಾತೃವಚ್ಚೇಷ್ಟಿತಂ ತ್ವಯಾ |
ಸಾ ಮಾಂ ಸಂಬೋಧಯಸ್ಯದ್ಯ ಕೇವಲಾತ್ಮಹಿತೈಷಿಣೀ ॥8॥
ನೀನು ನನ್ನ ಜೊತೆಯಲ್ಲಿ ಹಿಂದೆ ಎಂದೂ ತಾಯಿಯಂತೆ ನಡೆದುಕೊಳ್ಳಲಿಲ್ಲ. ಈ ದಿನ ಕೇವಲ ಸ್ವಾರ್ಥಿಯಾಗಿ ನನ್ನನ್ನು ಕುರಿತು ಮಾತನಾಡುತ್ತಿದ್ದೀಯೆ.
ಕೃಷ್ಣೇನ ಸಹಿತಾತ್ ಕೋ ವೈ ನ ವ್ಯಥೇತ ಧನಂಜಯಾತ್ |
ಕೋಽದ್ಯ ಭೀತಂ ನ ಮಾಂ ವಿದ್ಯಾತ್ ಪಾರ್ಥಾನಾಂ ಸಮಿತಿಂ ಗತಮ್ ॥
ಕೃಷ್ಣನಿಂದ ಸಹಿತನಾದ ಅರ್ಜುನನಿಗೆ ಯಾವನು ಹೆದರಲಾರನು? ನಾನು ಈ ದಿನ ಪಾಂಡವರ ಸಭೆಯನ್ನು ಸೇರಿದರೆ ನನ್ನನ್ನು ಭೀತನೆಂದು ಯಾವನು ತಿಳಿಯುವುದಿಲ್ಲ?
ಅಭ್ರಾತಾ ವಿದಿತಃ ಪೂರ್ವಂ ಯುದ್ಧಕಾಲೇ ಪ್ರಕಾಶಿತಃ |
ಪಾಂಡವಾನ್ ಯದಿ ಗಚ್ಛಾಮಿ ಕಿಂ ಮಾಂ ಕ್ಷತ್ರಂ ವದಿಷ್ಯತಿ ॥10॥
ನನಗೆ ಸಹೋದರರಿಲ್ಲ ಎಂದು ತಿಳಿದ ನನಗೆ ಈಗ ಯುದ್ಧಕಾಲದಲ್ಲಿ ಸಹೋದರರನ್ನು ತೋರಿಸುತ್ತಿದ್ದೀಯೆ. ನಾನು ಪಾಂಡವರ ಜೊತೆಯಲ್ಲಿ ಸೇರಿದರೆ ನನ್ನ ವಿಷಯದಲ್ಲಿ ಕ್ಷತ್ರಿಯಸಮೂಹವು ಏನನ್ನು ಹೇಳುವುದು?
ಸರ್ವಕಾಮೈಃ ಸಂವಿಭಕ್ತಃ ಪೂಜಿತಶ್ಚ ಯಥಾಸುಖಮ್ |
ಅಹಂ ವೈ ಧಾರ್ತರಾಷ್ಟ್ರಾಣಾಂ ಕುರ್ಯಾಂ ತದಫಲಂ ಕಥಮ್ ॥11॥
ನಾನು ಧೃತರಾಷ್ಟ್ರ ಪುತ್ರರಿಂದ ಎಲ್ಲ ಕಾಮಗಳನ್ನೂ ಒದಗಿಸಲ್ಪಟ್ಟು, ಅವರು ಅನುಭವಿಸುವ ಎಲ್ಲಾ ಕಾಮಗಳನ್ನೂ ಅನುಭವಿಸಿ, ಸುಖವಾಗಿ ಪೂಜಿಸಲ್ಪಟ್ಟಿದ್ದೇನೆ. ನಾನು ಅದನ್ನು ಹೇಗೆ ವ್ಯರ್ಥವನ್ನಾಗಿ ಮಾಡಲಿ?
ಉಪನಹ್ಯ ಪರೈರ್ವೈರಂ ಯೇ ಮಾಂ ನಿತ್ಯಮುಪಾಸತೇ |
ನಮಸ್ಕುರ್ವಂತಿ ಚ ಸದಾ ವಸವೋ ವಾಸವಂ ಯಥಾ ॥12॥
ಅವರು ಶತ್ರುಗಳ ಜೊತೆಯಲ್ಲಿ ವೈರವನ್ನು ಕಟ್ಟಿಕೊಂಡು ನಿತ್ಯವೂ ನನ್ನ ಉಪಾಸನೆಯನ್ನು ಮಾಡುತ್ತಾರೆ. ವಸುಗಳು ಇಂದ್ರನಿಗೆ ನಮಸ್ಕರಿಸಿದಂತೆ ಸದಾ ನನಗೆ ನಮಸ್ಕರಿಸುತ್ತಾರೆ.
ಮಮ ಪ್ರಾಣೇನ ಯೇ ಶತ್ರೂನ್ ಶಕ್ತಾಃ ಪ್ರತಿಸಮಾಸಿತುಮ್ |
ಮನ್ಯಂತೇ ತೇ ಕಥಂ ತೇಷಾಮಹಂ ಛಿಂದ್ಯಾಂ ಮನೋರಥಮ್ ॥13॥
ನನ್ನ ಪ್ರಾಣದಿಂದ ಶತ್ರುಗಳ ಎದುರಿಗೆ ನಿಲ್ಲಲು ಸಮರ್ಥರಾಗಿದ್ದೇವೆ ಎಂದು ಅವರು ತಿಳಿದಿದ್ದಾರೆ. ನಾನು ಅವರ ಮನೋರಥವನ್ನು ಹೇಗೆ ಛೇದಿಸಲಿ?
ಮಯಾ ಪ್ಲವೇನ ಸಂಗ್ರಾಮಂ ತಿತೀರ್ಷಂತಿ ದುರತ್ಯಯಮ್ |
ಅಪಾರೇ ಪಾರಕಾಮಾ ಯೇ ತ್ಯಜೇಯಂ ತಾನಹಂ ಕಥಮ್ ॥14॥
ದಾಟಲು ಅಸಾಧ್ಯವಾದ ಯುದ್ಧಸಾಗರವನ್ನು, ನನ್ನನ್ನು ನಾವೆಯನ್ನಾಗಿ ಮಾಡಿಕೊಂಡು ಅವರು ದಾಟಲು ಬಯಸುತ್ತಾರೆ. ದಡವಿಲ್ಲದ ಸ್ಥಳದಲ್ಲಿ ನನ್ನನ್ನು ದಡವೆಂದು ಭಾವಿಸುವ ಅವರನ್ನು ನಾನು ಹೇಗೆ ತ್ಯಜಿಸಲಿ?
ಅಯಂ ಹಿ ಕಾಲಃ ಸಂಪ್ರಾಪ್ತೋ ಧಾರ್ತರಾಷ್ಟ್ರೋಪಜೀವಿನಾಮ್ |
ನಿರ್ವೇಷ್ಟವ್ಯಂ ಮಯಾ ತತ್ರ ಪ್ರಾಣಾನಪರಿರಕ್ಷತಾ ॥15॥
ಸುಯೋಧನನನ್ನು ಆಶ್ರಯಿಸಿದವರಿಗೆ ಅವನ ಋಣವನ್ನು ತೀರಿಸುವ ಕಾಲವು ಬಂದೊದಗಿದೆ. ನನ್ನ ಪ್ರಾಣಗಳನ್ನು ರಕ್ಷಣೆ ಮಾಡದೆ ನಾನು ಆ ಕಾರ್ಯವನ್ನು ಮಾಡಬೇಕು.
ಕೃತಾರ್ಥಾಃ ಸುಭೃತಾ ಯೇ ಹಿ ಕೃತ್ಯಕಾಲೇ ಹ್ಯುಪಸ್ಥಿತೇ |
ಅನವೇಕ್ಷ್ಯ ಕೃತಂ ಪಾಪಾಃ ಕುರ್ವಂತಿ ಪ್ರಿಯಮಾತ್ಮನಃ ॥16॥
ಯಾರು ಸ್ವಾಮಿಯಿಂದ ಚೆನ್ನಾಗಿ ಪೋಷಿಸಲ್ಪಟ್ಟರೂ ಅವನಿಗೆ ಪ್ರಯೋಜನವನ್ನು ಉಂಟುಮಾಡುವ ಕಾಲದಲ್ಲಿ ಹಿಂದೆ ಮಾಡಿದ ಉಪಕಾರವನ್ನು ಮರೆತು, ಯಾವ ಪಾಪಿಗಳು ಸ್ವಾರ್ಥವನ್ನು ಸಾಧಿಸುತ್ತಾರೆಯೋ ಅವರು ಕೃತಾರ್ಥರು!
ರಾಜಕಿಲ್ಬಿಷಿಣಾಂ ತೇಷಾಂ ಭರ್ತೃಪಿಂಡಾಪಹಾರಿಣಾಮ್ |
ನೈವಾಯಂ ನ ಪರೋ ಲೋಕೋ ವಿದ್ಯತೇ ಪಾಪಕರ್ಮಣಾಮ್ ॥17॥
ರಾಜನಿಗೆ ಕಿಲ್ಬಿಷವನ್ನು ಮಾಡಿ, ಭರ್ತೃಪಿಂಡವನ್ನು ಅಪಹರಿಸಿದ ಆ ಪಾಪಕರ್ಮಿಗಳಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ.
ಧೃತರಾಷ್ಟ್ರಸ್ಯ ಪುತ್ರಾಣಾಮರ್ಥೇ ಯೋತ್ಸ್ಯಾಮಿ ತೇ ಸುತೈಃ |
ಬಲಂ ಚ ಶಕ್ತಿಂ ಚಾಸ್ಥಾಯ ನ ವೈ ತ್ವಯ್ಯನೃತಂ ವದೇ ॥18॥

ಧೃತರಾಷ್ಟ್ರನ ಮಕ್ಕಳ ಪರವಾಗಿ, ನಿನ್ನ ಮಕ್ಕಳ ವಿರುದ್ಧವಾಗಿ ನನ್ನ ಬಲ, ಶಕ್ತಿಗಳನ್ನು ಉಪಯೋಗಿಸಿ ಯುದ್ಧವನ್ನು ಮಾಡುವೆನು. ನಿನಗೆ ಸುಳ್ಳನ್ನು ಹೇಳುವುದಿಲ್ಲ.
ಆನೃಶಂಸ್ಯಮಥೋ ವೃತ್ತಂ ರಕ್ಷನ್ ಸತ್ಪುರುಷೋಚಿತಮ್ |
ಅತೋಽರ್ಥಕರಮಪ್ಯೇತನ್ನ ಕರೋಮ್ಯದ್ಯ ತೇ ವಚಃ ॥19॥
ಸತ್ಪುರುಷರಿಗೆ ಉಚಿತವಾದ ಮಾರ್ದವವನ್ನೂ ಮತ್ತು ನನ್ನ ನಡತೆಯನ್ನೂ ರಕ್ಷಿಸಿಕೊಳ್ಳುವವನಾಗಿ (ಯುದ್ಧವನ್ನು ಮಾಡುವೆನು). ಆದ್ದರಿಂದ ನಿನ್ನ ಮಾತುಗಳು ನನಗೆ ಪ್ರಯೋಜನಕರವಾದರೂ ಅದನ್ನು ನಾನು ನಡೆಸುವುದಿಲ್ಲ.
ನ ಚ ತೇಽಯಂ ಸಮಾರಂಭೋ ಮಯಿ ಮೋಘೋ ಭವಿಷ್ಯತಿ |
ವಧ್ಯಾನ್ ವಿಷಹ್ಯಾನ್ ಸಂಗ್ರಾಮೇ ನ ಹನಿಷ್ಯಾಮಿ ತೇ ಸುತಾನ್ ॥
ಯುಧಿಷ್ಠಿರಂ ಚ ಭೀಮಂ ಚ ಯಮೌ ತಾವರ್ಜುನಾದೃತೇ |
ಅರ್ಜುನೇನ ಸಮಂ ಯುದ್ಧಂ ಮಮ ಯೌಧಿಷ್ಠಿರೇ ಬಲೇ ॥21॥
ನೀನು ನನ್ನಲ್ಲಿ ಮಾಡಿದ ಈ ಪ್ರಯತ್ನವು ವ್ಯರ್ಥವಾಗುವುದಿಲ್ಲ. ಅರ್ಜುನನನ್ನು ಬಿಟ್ಟು ನಿನ್ನ ಮಕ್ಕಳಾದ, ನನ್ನಿಂದ ವಧ್ಯರಾದ, ನನ್ನಿಂದ ಎದುರಿಸಲ್ಪಡಬೇಕಾದ ಯುಧಿಷ್ಠಿರನನ್ನಾಗಲೀ, ಭೀಮನನ್ನಾಗಲೀ, ನಕುಲ-ಸಹದೇವರನ್ನಾಗಲೀ ಯುದ್ಧದಲ್ಲಿ ಕೊಲ್ಲುವುದಿಲ್ಲ. ಯುಧಿಷ್ಠಿರನ ಸೈನ್ಯದಲ್ಲಿ ಅರ್ಜುನನ ಜೊತೆಯಲ್ಲಿ ಮಾತ್ರ ಯುದ್ಧವನ್ನು ಮಾಡುವೆನು.
ಅರ್ಜುನಂ ವಿನಿಹತ್ಯಾಜೌ ಸಂಪ್ರಾಪ್ತಂ ಸ್ಯಾತ್ ಫಲಂ ಮಯಾ |
ಯಶಸಾ ವಾ ನ ಮುಚ್ಯೇಯಂ ನಿಹತಃ ಸವ್ಯಸಾಚಿನಾ ॥22॥
ಯುದ್ಧದಲ್ಲಿ ಅರ್ಜುನನನ್ನು ಕೊಂದು ನನಗೆ ಯೋಗ್ಯವಾದ ಫಲವನ್ನು ಪಡೆದೇನು. ಅಥವಾ ಅರ್ಜುನನಿಂದ ಹತನಾಗಿ ನನ್ನ ಕೀರ್ತಿಯನ್ನಾದರೂ ರಕ್ಷಿಸಿಕೊಂಡೇನು.
ನ ತೇ ಜಾತು ನಶಿಷ್ಯಂತಿ ಪುತ್ರಾಃ ಪಂಚ ಯಶಸ್ವಿನಿ |
ನಿರರ್ಜುನಾಃ ಸಕರ್ಣಾ ವಾ ಸಾರ್ಜುನಾ ವಾ ಹತೇ ಮಯಿ ॥23॥
ಎಲೌ ಕೀರ್ತಿವಂತಳೇ, ಅರ್ಜುನನಿಲ್ಲದೆ ಕರ್ಣನನ್ನು ಸೇರಿಸಿ ಅಥವಾ ಅರ್ಜುನನಿಂದ ನಾನು ಹತನಾದರೆ ಅರ್ಜುನನನ್ನು ಸೇರಿಸಿ ಕುಂತಿಗೆ ಐದು ಮಕ್ಕಳು ಎಂಬ ಮಾತು ಎಂದೂ ನಾಶವನ್ನು ಹೊಂದುವುದಿಲ್ಲ.
ವೈಶಂಪಾಯನಃ
ಇತಿ ಕರ್ಣವಚಃ ಶ್ರುತ್ವಾ ಕುಂತೀ ದುಃಖಾತ್ ಪ್ರವೇಪತೀ |
ಉವಾಚ ಪುತ್ರಮಾಶ್ಲಿಷ್ಯ ಕರ್ಣಂ ಧೈರ್ಯಾದಕಂಪನಮ್ ॥24॥
ವೈಶಂಪಾಯನ ಹೀಗೆ ಕರ್ಣನ ಮಾತುಗಳನ್ನು ಕೇಳಿ ಕುಂತಿಯು ದುಃಖದಿಂದ ನಡುಗುತ್ತಾ, ಧೈರ್ಯದಿಂದ ಅಲುಗಾಡದಿದ್ದ ಪುತ್ರನಾದ ಕರ್ಣನನ್ನು ಆಲಿಂಗಿಸಿ ಮಾತನಾಡಿದಳು.
ಏವಂ ವೈ ಭಾವ್ಯಮೇತೇನ ಕ್ಷಯಂ ಯಾಸ್ಯಂತಿ ಕೌರವಾಃ |
ಯಥಾ ತ್ವಂ ಭಾಷಸೇ ಕರ್ಣ ದೈವಂ ತು ಬಲವತ್ತರಮ್ ॥25॥
ಎಲೈ ಕರ್ಣನೇ, ನೀನು ಮಾತನಾಡುವಂತೆ ಹೀಗೆಯೇ ಆಗಬೇಕು. ಈ ಯುದ್ಧದಿಂದ ಕೌರವರು ಕ್ಷಯವನ್ನು ಹೊಂದುವರು. ದೈವವು ಪ್ರಬಲವಾದುದು.
ತ್ವಯಾ ಚತುರ್ಣಾಂ ಭ್ರಾತೄಣಾಮಭಯಂ ಶತ್ರುಕರ್ಶನ |
ದತ್ತಂ ತತ್ ಪ್ರತಿಜಾನೀಹಿ ಸಂಗರಪ್ರತಿಮೋಚನಮ್ ॥26॥
ಅನಾಮಯಂ ಸ್ವಸ್ತಿ ಚೇತಿ ಪೃಥಾಽಥೋ ಕರ್ಣಮಬ್ರವೀತ್ |
ತಾಂ ಕರ್ಣೋಽಭ್ಯವದತ್ ಪ್ರೀತಃ ತತಸ್ತೌ ಜಗ್ಮತುಃ ಸುಖಮ್ ॥27॥
ಎಲೈ ಶತ್ರುಕರ್ಶನನೇ, ನೀನು ನಿನ್ನ ನಾಲ್ಕುಜನ ತಮ್ಮಂದಿರಿಗೆ ಅಭಯವನ್ನು ಕೊಟ್ಟಿದ್ದೀಯೆ. ಅವರಿಗೆ ಕ್ಷೇಮವನ್ನೂ ಮತ್ತು ಅನಪಾಯವನ್ನೂ ಮತ್ತು ನಿನ್ನ ಜೊತೆಯಲ್ಲಿ ಯುದ್ಧದಿಂದ ಬಿಡುಗಡೆಯನ್ನೂ ಪ್ರತಿಜ್ಞೆಯನ್ನು ಮಾಡು ಎಂದು ಕುಂತಿಯು ಕರ್ಣನಿಗೆ ಹೇಳಿದಳು. ಕರ್ಣನು ಸಂತೋಷದಿಂದ ಹಾಗೆಯೇ ಆಗಲಿ ಎಂದು ಅವಳಿಗೆ ಹೇಳಿದನು. ಅನಂತರ ಅವರಿಬ್ಬರೂ ಸುಖವಾಗಿ ತಮ್ಮ ಸ್ಥಳಗಳಿಗೆ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತಾರನೆಯ ಅಧ್ಯಾಯ
ಕೃಷ್ಣನಿಂದ ಉಪಪ್ಲಾವ್ಯನಗರದಲ್ಲಿ ಪಾಂಡವರನ್ನು ಕುರಿತು ಕೌರವ ಸಭೆಯಲ್ಲಿ ನಡೆದ ವೃತ್ತಾಂತಗಳ ಕಥನ.
ವೈಶಂಪಾಯನಃ
ಆಗಮ್ಯ ಹಸ್ತಿನಪುರಾದುಪಪ್ಲಾವ್ಯಮರಿಂದಮಃ |
ಪಾಂಡವಾನಾಂ ಯಥಾವೃತ್ತಂ ಕೇಶವಃ ಪೂರ್ವಮುಕ್ತವಾನ್ ॥1॥

ವೈಶಂಪಾಯನ ಅರಿಂದಮನಾದ ಕೇಶವನು ಹಸ್ತಿನಪುರದಿಂದ ಉಪಪ್ಲಾವ್ಯನಗರಕ್ಕೆ ಬಂದು, ಸಭೆಯಲ್ಲಿ ನಡೆದ ವೃತ್ತಾಂತವನ್ನು ಪಾಂಡವರಿಗೆ ಮೊದಲು ಹೇಳಿದನು.
ಸಂಭಾಷ್ಯ ಸುಚಿರಂ ಕಾಲಂ ಮಂತ್ರಯಿತ್ವಾ ಪುನಃ ಪುನಃ |
ಸ್ವಮೇವ ಭವನಂ ಶೌರಿರ್ವಿಶ್ರಮಾರ್ಥಂ ಜಗಾಮ ಹ ॥2॥
ಬಹಳ ಸಮಯ ಮಾತನಾಡುತ್ತಿದ್ದು, ಪುನಃ ಪುನಃ ಮಂತ್ರಾಲೋಚನೆಯನ್ನು ಮಾಡಿ, ಕೃಷ್ಣನು ವಿಶ್ರಾಂತಿಗಾಗಿ ತನ್ನ ಭವನಕ್ಕೆ ಹೋದನು.
ವಿಸೃಜ್ಯ ಪಾರ್ಥಾನ್ ನೃಪತೀನ್ ವಿರಾಟಪ್ರಮುಖಾಂಸ್ತದಾ |
ಪಾಂಡವಾ ಭ್ರಾತರಃ ಪಂಚ ಭಾನಾವಸ್ತಂ ಗತೇ ಸತಿ ॥3॥
ಸಂಧ್ಯಾಮುಪಾಸ್ಯ ಧ್ಯಾಯನ್ತಸ್ತಮೇವ ಗತಮಾನಸಾಃ |
ಆನಾಯ್ಯ ಕೃಷ್ಣಂ ದಾಶಾರ್ಹಂ ಪುನರ್ಮಂತ್ರಮಮಂತ್ರಯನ್ ॥4॥
ಸೂರ್ಯನು ಅಸ್ತಂಗತನಾಗುತ್ತಿರಲು ಸಹೋದರರಾದ ಪಾಂಡವರು ಸಂಧ್ಯಾವಂದನೆಯನ್ನು ಮಾಡಿ, ವಿರಾಟ ಮೊದಲಾದ ರಾಜರನ್ನೆಲ್ಲಾ ಕಳುಹಿಸಿ, ಮನಸ್ಸಿನಲ್ಲಿ ಕೃಷ್ಣನನ್ನೇ ಧ್ಯಾನ ಮಾಡುತ್ತಾ, ಅವನನ್ನು ಪುನಃ ಕರೆಸಿ ಮಂತ್ರಾಲೋಚನೆಯನ್ನು ಮಾಡಿದರು.
ಯುಧಿಷ್ಠಿರಃ
ತ್ವಯಾ ನಾಗಪುರಂ ಗತ್ವಾ ಸಭಾಯಾಂ ಧೃತರಾಷ್ಟ್ರಜಃ |
ಕಿಮುಕ್ತಃ ಪುಂಡರೀಕಾಕ್ಷ ತಂ ನಃ ಶಂಸಿತುಮರ್ಹಸಿ ॥5॥
ಯುಧಿಷ್ಠಿರ ಎಲೈ ಪುಂಡರೀಕಾಕ್ಷನೇ, ನೀನು ಹಸ್ತಿನಪುರಕ್ಕೆ ಹೋಗಿ ಸಭೆಯಲ್ಲಿ ದುರ್ಯೋಧನನಿಗೆ ಏನು ಹೇಳಿದೆ ಎಂಬುದನ್ನು ನಮಗೆ ತಿಳಿಸಬೇಕು.
ಶ್ರೀಭಗವಾನ್
ಮಯಾ ನಾಗಪುರಂ ಗತ್ವಾ ಸಭಾಯಾಂ ಧೃತರಾಷ್ಟ್ರಜಃ |
ತಥ್ಯಂ ಪಥ್ಯಂ ಹಿತಂ ಚೋಕ್ತೋ ನ ಚ ಗೃಹ್ಣಾತಿ ದುರ್ಮತಿಃ ॥6॥
ಶ್ರೀಭಗವಾನ್ ನಾನು ಹಸ್ತಿನಪುರಕ್ಕೆ ಹೋಗಿ ಸಭೆಯಲ್ಲಿ ದುರ್ಯೋಧನನನ್ನು ಕುರಿತು ಸತ್ಯವಾದ, ಪಥ್ಯವಾದ, ಹಿತವಾದ ಮಾತುಗಳನ್ನು ಆಡಿದನು. ಆದರೆ ಆ ದುರ್ಮತಿಯು ಅದನ್ನು ಸ್ವೀಕರಿಸಲಿಲ್ಲ.
ಯುಧಿಷ್ಠಿರಃ
ತಸ್ಮಿನ್നುತ್ಪಥಮಾಪನ್ನೇ ಕುರುವೃದ್ಧಃ ಪಿತಾಮಹಃ |
ಕಿಮುಕ್ತವಾನ್ ಹೃಷೀಕೇಶ ದುರ್ಯೋಧನಮಮರ್ಷಣಮ್ ॥7॥
ಯುಧಿಷ್ಠಿರ ಹೃಷೀಕೇಶನೇ, ಅವನು ಮಾರ್ಗವನ್ನು ಮೀರಿ ನಡೆಯುತ್ತಿರಲು ಕುರುವೃದ್ಧನೂ, ಪಿತಾಮಹನೂ ಆದ ಭೀಷ್ಮನು ರೋಷಶೀಲನಾದ ದುರ್ಯೋಧನನನ್ನು ಕುರಿತು ಏನು ಹೇಳಿದನು?
ಆಚಾರ್ಯೋ ವಾ ಮಹಾಬಾಹೋ ಭಾರದ್ವಾಜಃ ಕಿಮಬ್ರುವೀತ್ |
ಪಿತಾ ವಾ ಧೃತರಾಷ್ಟ್ರಸ್ತಂ ಗಾಂಧಾರೀ ವಾ ಕಿಮಬ್ರುವೀತ್ ॥8॥
ಆಚಾರ್ಯರಾದ ದ್ರೋಣರಾದರೂ ಏನು ಹೇಳಿದರು? ತಂದೆಯಾದ ಧೃತರಾಷ್ಟ್ರನು ಏನು ಹೇಳಿದನು? ಗಾಂಧಾರಿಯಾದರೂ ಏನು ಹೇಳಿದಳು?
ಪಿತಾ ಯವೀಯಾನಸ್ಮಾಕಂ ಕ್ಷತ್ತಾ ಧರ್ಮವಿದಾಂ ವರಃ |
ಪುತ್ರಶೋಕಾಭಿಸಂತಪ್ತಃ ಕಿಮಾಹ ಧೃತರಾಷ್ಟ್ರಜಮ್ ॥9॥
ಧರ್ಮಜ್ಞರಲ್ಲಿ ಶ್ರೇಷ್ಠನೂ, ಪುತ್ರಶೋಕದಿಂದ ಸಂತಪ್ತನೂ ಆದ ನಮ್ಮ ಚಿಕ್ಕಪ್ಪನಾದ ವಿದುರನು ದುರ್ಯೋಧನನನ್ನು ಕುರಿತು ಏನು ಹೇಳಿದನು?
ಕಿಂಚ ಸರ್ವೇ ನೃಪತಯಃ ಸಭಾಯಾಂ ಯೇ ಸಮಾಗತಾಃ |
ಉಕ್ತವಂತೋ ಯಥಾತತ್ತ್ವಂ ತದ್ ಬ್ರೂಹಿ ತ್ವಂ ಜನಾರ್ದನ ॥10॥
ಉಕ್ತವಾನ್ ಹಿ ಭವಾನ್ ಸರ್ವಂ ವಚನಂ ಕುರುಮುಖ್ಯಯೋಃ ॥11॥
ನೀನು ಕುರುಮುಖ್ಯರಾದ ಧೃತರಾಷ್ಟ್ರ-ಭೀಷ್ಮರಿಗೆ ಎಲ್ಲವನ್ನೂ ಹೇಳಿದೆಯಷ್ಟೆ! ಎಲೈ ಜನಾರ್ದನನೇ, ಆಗ ಸಭೆಗೆ ಬಂದಿದ್ದ ಎಲ್ಲಾ ರಾಜರೂ ಏನು ಹೇಳಿದರೆಂಬುದನ್ನು ಸರಿಯಾಗಿ ಹೇಳುವವನಾಗು.
ಧಾರ್ತರಾಷ್ಟ್ರಸ್ಯ ತೇಷಾಂ ಹಿ ವಚನಂ ಕುರುಸಂಸದಿ |
ಕಾಮಲೋಭಾಭಿಭೂತಸ್ಯ ಮಂದಸ್ಯ ಪ್ರಾಜ್ಞಮಾನಿನಃ ॥12॥
ಅಪ್ರಿಯಂ ಹೃದಯೇ ತಸ್ಯ ಕಿಂ ನು ತಿಷ್ಠತಿ ಕೇಶವ ॥13॥
ಎಲೈ ಕೇಶವನೇ, ಕೌರವರ ಸಭೆಯಲ್ಲಿ ಅವರೆಲ್ಲರೂ ಆಡಿದ ದುರ್ಯೋಧನನಿಗೆ ಅಪ್ರಿಯವಾದ ಮಾತುಗಳು, ಕಾಮ-ಲೋಭಗಳಿಂದ ಕೂಡಿದವನೂ, ಮಂದನೂ, ತನ್ನನ್ನು ಪ್ರಾಜ್ಞನೆಂದು ತಿಳಿದವನೂ ಆದ ದುರ್ಯೋಧನನ ಮನಸ್ಸಿನಲ್ಲಿ ನಿಂತಿವೆಯೇ?
ತೇಷಾಂ ವಾಕ್ಯಾನಿ ಸರ್ವೇಷಾಂ ಶ್ರೋತುಮಿಚ್ಛಾಮ್ಯಹಂ ವಿಭೋ |
ಯಥಾ ಚ ನಾತಿಪದ್ಯೇತ ಕಾಲಸ್ತಾತ ತಥಾ ಕುರು ॥14॥
ಎಲೈ ವಿಭುವೇ, ಅವರೆಲ್ಲರ ಮಾತುಗಳನ್ನು ಕೇಳಲು ನಾನು ಬಯಸುತ್ತೇನೆ. ನಮಗೆ ಸಮಯವು ಮೀರಿಹೋಗದಂತೆ ನೀನು ಎಲ್ಲವನ್ನೂ ಮಾಡುವವನಾಗು.

ಭವಾನ್ ಹಿ ನೋ ಬಲಂ ಕೃಷ್ಣ ಭವಾನ್ ನಾಥೋ ಭವಾನ್ ಗತಿಃ ||
ಎಲೈ ಕೃಷ್ಣನೇ, ನೀನೇ ನಮಗೆ ಬಲ, ನಮಗೆ ಸ್ವಾಮಿ ಮತ್ತು ನಮಗೆ ಗತಿ.
ವಾಸುದೇವಃ
ಶೃಣು ರಾಜನ್ ಯಥಾ ವಾಕ್ಯಮುಕ್ತೋ ರಾಜಾ ಸುಯೋಧನಃ |
ಮಧ್ಯೇ ಕುರೂಣಾಂ ರಾಜೇಂದ್ರ ಸಭಾಯಾಂ ತನ್ನಿಬೋಧ ಮೇ ||16||
ವಾಸುದೇವ ಎಲೈ ರಾಜನೇ, ರಾಜೇಂದ್ರನೇ, ಕೌರವ ಸಭೆಯಲ್ಲಿ ಸುಯೋಧನನನ್ನು ಕುರಿತು ಹೇಗೆ ಮಾತನಾಡಿದೆನೆಂದು ಕೇಳುವವನಾಗು.
ಮಯಾ ವಿಶ್ರಾವಿತೇ ವಾಕ್ಯೇ ಜಹಾಸ ಧೃತರಾಷ್ಟ್ರಜಃ |
ಅಥ ಭೀಷ್ಮಃ ಸುಸಂಕ್ರುದ್ಧಃ ಇದಂ ವಚನಮಬ್ರವೀತ್ ||17||
ನಾನು ಸ್ಪಷ್ಟವಾಗಿ ಮಾತನಾಡಿದ ಮೇಲೆ ದುರ್ಯೋಧನನು ಗಟ್ಟಿಯಾಗಿ ನಕ್ಕನು. ಆಗ ಬಹಳ ಕೋಪಗೊಂಡ ಭೀಷ್ಮನು ಹೀಗೆ ಮಾತನಾಡಿದನು.
ದುರ್ಯೋಧನ ನಿಬೋಧೇದಂ ಕುಲಾರ್ಥೇ ಯದ್ ಬ್ರವೀಮಿ ತೇ |
ತಚ್ಛ್ರುತ್ವಾ ರಾಜಶಾರ್ದೂಲ ಸ್ವಕುಲಸ್ಯ ಹಿತಂ ಕುರು ||18||
ಎಲೈ ದುರ್ಯೋಧನನೇ, ಕುಲದ ಸಲುವಾಗಿ ನಾನು ಹೇಳುವ ಈ ಮಾತನ್ನು ಕೇಳು. ಎಲೈ ರಾಜಶಾರ್ದೂಲನೇ, ಅದನ್ನು ಕೇಳಿ ನಿನ್ನ ಕುಲಕ್ಕೆ ಹಿತವನ್ನು ಮಾಡುವವನಾಗು.
ಮಮ ತಾತ ಪಿತಾ ರಾಜನ್ ಶಂತನುರ್ಲೋಕವಿಶ್ರುತಃ |
ತಸ್ಯಾಹಮೇಕ ಏವಾಸಂ ಪುತ್ರಃ ಪುತ್ರವತಾಂ ವರ ||19||
ಎಲೈ ಪ್ರೀತಿಪಾತ್ರನಾದ ರಾಜನೇ, ಲೋಕವಿಖ್ಯಾತನಾದ ಶಂತನುವು ನನ್ನ ತಂದೆ. ಮಕ್ಕಳನ್ನು ಪಡೆದವರಲ್ಲಿ ಶ್ರೇಷ್ಠನಾದವನೇ, ನಾನು ಅವನಿಗೆ ಒಬ್ಬನೇ ಮಗನಾಗಿದ್ದೆ.
ತಸ್ಯ ಬುದ್ಧಿಃ ಸಮುತ್ಪನ್ನಾ ದ್ವಿತೀಯಃ ಸ್ಯಾತ್ ಕಥಂ ಸುತಃ |
ಏಕಂ ಪುತ್ರಮಪುತ್ರಂ ವೈ ಪ್ರವದಂತಿ ಮನೀಷಿಣಃ ||20||
ನ ಚೋಚ್ಛೇದಂ ಕುಲಂ ಯಾಯಾದ್ ವಿಸ್ತೀರ್ಯೇತ ಕಥಂ ಯಶಃ ||
ಒಬ್ಬ ಮಗನನ್ನು ಹೊಂದಿದವನನ್ನು ಜ್ಞಾನಿಗಳು ಅಪುತ್ರನೆಂದು ಹೇಳುತ್ತಾರೆ. ನಮ್ಮ ಕುಲವು ನಾಶವನ್ನು ಹೊಂದಬಾರದು. ವಿಸ್ತಾರವನ್ನು ಹೊಂದಬೇಕು ಎಂಬ ಬುದ್ಧಿಯು ಅವನಿಗೆ ಉಂಟಾಯಿತು.
ತಸ್ಯಾಹಮೀಪ್ಸಿತಂ ಬುದ್ಧ್ವಾ ಕಾಳೀಂ ಮಾತರಮಾವಹಮ್ ||22||
ಪ್ರತಿಜ್ಞಾಂ ದುಷ್ಕರಾಂ ಕೃತ್ವಾ ಪಿತುರರ್ಥೇ ಕುಲಸ್ಯ ಚ |
ಅರಾಜಾ ಚೋರ್ಧ್ವರೇತಾಶ್ಚ ಯಥಾ ಸುವಿದಿತಂ ತವ ||23||
ಅವನ ಅಭಿಪ್ರಾಯವನ್ನು ತಿಳಿದ ನಾನು ತಾಯಿಯಾದ ಕಾಳಿಯನ್ನು ಕರೆತಂದೆನು. ತಂದೆಯ ಸಲುವಾಗಿ ಮತ್ತು ಕುಲದ ಸಲುವಾಗಿ ನಾನು ರಾಜನಾಗುವುದಿಲ್ಲ, ಊರ್ಧ್ವರೇತಸ್ಕನಾಗಿರುತ್ತೇನೆ ಎಂಬ ದುಷ್ಕರವಾದ ಪ್ರತಿಜ್ಞೆಯನ್ನು ಮಾಡಿ ಅವರನ್ನು ಕರೆತಂದುದು ನಿನಗೆ ಚೆನ್ನಾಗಿ ತಿಳಿದ ವಿಷಯ.
ಪ್ರತೀತೋ ನಿವಸಾಮ್ಯೇಷ ಪ್ರತಿಜ್ಞಾಮನುಪಾಲಯನ್ ||24||
ಆ ಪ್ರತಿಜ್ಞೆಯನ್ನು ಪಾಲಿಸುತ್ತಾ ನಾನು ಸಮಾಧಾನದಿಂದ ವಾಸ ಮಾಡುತ್ತಿದ್ದೇನೆ.
ತಸ್ಯಾಂ ಜಜ್ಞೇ ಮಹಾಬಾಹುಃ ಶ್ರೀಮಾನ್ ಕುರುಕುಲೋದ್ವಹಃ |
ವಿಚಿತ್ರವೀರ್ಯೋ ಧರ್ಮಾತ್ಮಾ ಕನೀಯಾನ್ ಮಮ ಪಾರ್ಥಿವಃ ||25||
ಅವಳಲ್ಲಿ ಕುರುಕುಲವನ್ನು ಮುಂದುವರಿಸುವವನೂ, ಧರ್ಮಾತ್ಮನೂ, ಮಹಾಬಾಹುವೂ ಆದ ನನ್ನ ತಮ್ಮನಾದ ವಿಚಿತ್ರವೀರ್ಯನು ಜನಿಸಿದನು.
ಸ್ವರ್ಯಾತೇಽಹಂ ಪಿತರಿ ತಂ ಸ್ವರಾಜ್ಯೇ ಸನ್ನಿವೇಶಯಮ್ |
ವಿಚಿತ್ರವೀರ್ಯಂ ರಾಜಾನಂ ಭೃತ್ಯೋ ಭೂತ್ವಾ ಹ್ಯಧಶ್ಚರಃ ||26||
ನನ್ನ ತಂದೆಯು ಸ್ವರ್ಗಸ್ಥನಾಗುತ್ತಿರಲು ನಾನು ಅವನನ್ನು ನನ್ನ ರಾಜ್ಯದಲ್ಲಿ ಕೂಡಿಸಿದೆನು. ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿ, ನಾನು ಅವನಿಗೆ ಸೇವಕನಾಗಿದ್ದೆನು.
ತಸ್ಯಾಹಂ ಸದೃಶಾನ್ ದಾರಾನ್ ರಾಜೇಂದ್ರ ಸಮುದಾವಹಮ್ |
ಜಿತ್ವಾ ಪಾರ್ಥಿವಸಂಘಾತಮಪಿ ತೇ ಬಹುಶಃ ಶ್ರುತಮ್ ||27||
ಎಲೈ ರಾಜೇಂದ್ರನೇ, ನಾನು ರಾಜರ ಸಮೂಹಗಳನ್ನು ಗೆದ್ದು, ಅವನಿಗೆ ಯೋಗ್ಯವಾದ ಕನ್ಯೆಯರನ್ನು ತಂದು ವಿವಾಹವನ್ನು ಮಾಡಿದೆನು. ಈ ವಿಷಯವನ್ನು ನೀನು ಅನೇಕ ಬಾರಿ ಕೇಳಿದ್ದೀಯೆ.
ತತೋ ರಾಮೇಣ ಸಮರೇ ದ್ವಂದ್ವಯುದ್ಧಮುಪಾಗಮಮ್ |
ಸ ಹಿ ರಾಮಭಯಾದೇಭಿರ್ನಾಗರೈರ್ವಿಪ್ರವಾಸಿತಃ ||28||
ದಾರೇಷ್ವಪ್ಯತಿಸಕ್ತಶ್ಚ ಯಕ್ಷ್ಮಾಣಂ ಸಮಪದ್ಯತ ||29||
ಅನಂತರ ನಾನು ಪರಶುರಾಮರ ಜೊತೆಯಲ್ಲಿ ದ್ವಂದ್ವ ಯುದ್ಧವನ್ನು ಮಾಡಬೇಕಾಯಿತು. ಪ್ರಜೆಗಳು ಪರಶುರಾಮರ ಭಯದಿಂದ ವಿಚಿತ್ರವೀರ್ಯನನ್ನು ನಗರದಿಂದ ಹೊರಗೆ ಕಳುಹಿಸಿದರು. ಪತ್ನಿಯರಲ್ಲಿ ಬಹಳ ಆಸಕ್ತನಾಗಿದ್ದ ಅವನು ಕ್ಷಯರೋಗವನ್ನು ಹೊಂದಿ ಮೃತನಾದನು.

ಯದಾ ತ್ವರಾಜಕೇ ರಾಷ್ಟ್ರೇ ನ ವವರ್ಷ ಸುರೇಶ್ವರಃ |
ತದಾಽಭ್ಯಧಾವನ್ ಮಾಮೇವ ಪ್ರಜಾಃ ಕ್ಷುದ್ಭಯಪೀಡಿತಾಃ ॥30॥
ಅರಾಜಕವಾದ ರಾಷ್ಟ್ರದಲ್ಲಿ ಇಂದ್ರನು ಮಳೆಯನ್ನು ಸುರಿಸದಿರಲು ಹಸಿವಿನ ಭಯದಿಂದ ಪೀಡಿತರಾದ ಪ್ರಜೆಗಳು ನನ್ನ ಬಳಿಗೇ ಓಡಿಬಂದರು.
ಪ್ರಜಾಃ
ಉಪಕ್ಷೀಣಾಃ ಪ್ರಜಾಃ ಸರ್ವಾ ರಾಜಾ ಭವ ಭವಾಯ ನಃ |
ಈತಯೋ ನುದ ಭದ್ರಂ ತೇ ಶಂತನೋಃ ಕುಲವರ್ಧನ ॥31॥
ಪ್ರಜೆಗಳು ಎಲ್ಲಾ ಪ್ರಜೆಗಳು ವಿನಾಶವನ್ನು ಹೊಂದುತ್ತಿದ್ದಾರೆ. ನೀನು ರಾಜನಾಗಿ ನಮಗೆ ಸಂಪತ್ತನ್ನು ಉಂಟುಮಾಡುವವನಾಗು. ಎಲೈ ಶಂತನು ಕುಲವರ್ಧನನೇ, ನಿನಗೆ ಮಂಗಳವಾಗಲಿ. ನಮಗೆ ಉಂಟಾಗಿರುವ ಈತಿ-ಬಾಧೆಗಳನ್ನು ಪರಿಹರಿಸು.
ಪೀಡ್ಯಂತೇ ತೇ ಪ್ರಜಾಃ ಸರ್ವಾ ವ್ಯಾಧಿಭಿರ್ಭೃಶದಾರುಣೈಃ |
ಅಲ್ಪಾವಶಿಷ್ಟಾ ಗಾಂಗೇಯ ತಾಃ ಪರಿತ್ರಾತುಮರ್ಹಸಿ ॥32॥
ಎಲ್ಲ ಪ್ರಜೆಗಳೂ ದಾರುಣವಾದ ವ್ಯಾಧಿಗಳಿಂದ ಪೀಡಿಸಲ್ಪಡುತ್ತಿದ್ದಾರೆ. ಕೆಲವರು ಮಾತ್ರ ಉಳಿದಿದ್ದಾರೆ. ಎಲೈ ಗಾಂಗೇಯನೇ, ಅವರನ್ನು ನೀನು ರಕ್ಷಿಸಬೇಕು.
ವ್ಯಾಧೀನ್ ಪ್ರಣುದ್ಯ ವೀರ ತ್ವಂ ಪ್ರಜಾ ಧರ್ಮೇಣ ಪಾಲಯ |
ತ್ವಯಿ ಜೀವತಿ ಮಾ ರಾಷ್ಟ್ರಂ ವಿನಾಶಮುಪಗಚ್ಛತು ॥33॥
ಎಲೈ ವೀರನೇ, ವ್ಯಾಧಿಗಳನ್ನು ಪರಿಹರಿಸಿ, ನೀನು ಪ್ರಜೆಗಳನ್ನು ಧರ್ಮದಿಂದ ಪಾಲಿಸು. ನೀನು ಬದುಕಿರುವಾಗ ರಾಷ್ಟ್ರವು ವಿನಾಶವನ್ನು ಹೊಂದದಿರಲಿ.
ಭೀಷ್ಮಃ
ಪ್ರಜಾನಾಂ ಕ್ರೋಶತೀನಾಂ ವೈ ನೈವಾಕ್ಷುಭ್ಯತ ಮೇ ಮನಃ |
ಪ್ರತಿಜ್ಞಾಂ ರಕ್ಷಮಾಣಸ್ಯ ಸದ್ವೃತ್ತಂ ಸ್ಮರತಸ್ತಥಾ ॥34॥
ಭೀಷ್ಮ ಪ್ರಜೆಗಳು ಹೀಗೆ ಗೋಳಾಡುತ್ತಿದ್ದರೂ ನನ್ನ ಪ್ರತಿಜ್ಞೆಯನ್ನು ರಕ್ಷಣೆ ಮಾಡಲು ಬಯಸಿದ ಮತ್ತು ಸಜ್ಜನರ ನಡವಳಿಕೆಯನ್ನು ಸ್ಮರಿಸುವ ನನ್ನ ಮನಸ್ಸು ಅಲುಗಾಡಲಿಲ್ಲ.
ತತಃ ಪೌರಾ ಮಹಾರಾಜ ಮಾತಾ ಕಾಳೀ ಚ ಮೇ ಶುಭಾ |
ಭೃತ್ಯಾಃ ಪುರೋಹಿತಾಚಾರ್ಯಾ ಬ್ರಾಹ್ಮಣಾಶ್ಚ ಬಹುಶ್ರುತಾಃ ॥35॥
ಮಾಮೂಚುರ್ಭೃಶಸಂತಪ್ತಾ ಭವ ರಾಜೇತಿ ಸಂತತಮ್ ॥36॥
ಎಲೈ ಮಹಾರಾಜನೇ, ಅನಂತರ ಪೌರರೂ, ನನ್ನ ತಾಯಿಯಾದ ಶುಭಳಾದ ಕಾಳಿಯೂ, ಭೃತ್ಯರೂ, ಪುರೋಹಿತರೂ, ಆಚಾರ್ಯರೂ, ವಿದ್ಯಾಸಂಪನ್ನರಾದ ಬ್ರಾಹ್ಮಣರೂ ಬಹಳ ಸಂತಪ್ತರಾಗಿ ನೀನು ರಾಜನಾಗು ಎಂದು ಸಂತತವಾಗಿ ಹೇಳಿದರು.
ಪ್ರತೀಪರಕ್ಷಿತಂ ರಾಜ್ಯಂ ತ್ವಾಂ ಪ್ರಾಪ್ಯ ವಿನಶಿಷ್ಯತಿ |
ಸ ತ್ವಮಸ್ಮದ್ಧಿತಾರ್ಥಂ ವೈ ರಾಜಾ ಭವ ಮಹಾಮತೇ ॥37॥
ಪ್ರತೀಪನು ರಕ್ಷಿಸಿದ ರಾಜ್ಯವು ನಿನ್ನನ್ನು ಹೊಂದಿ ನಾಶವನ್ನು ಹೊಂದುವುದು. ಎಲೈ ಮಹಾಮತಿಯೇ, ನಮ್ಮ ಹಿತಕ್ಕಾಗಿ ನೀನು ರಾಜನಾಗು (ಎಂದು ಹೇಳಿದರು).
ಇತ್ಯುಕ್ತಃ ಪ್ರಾಂಜಲಿರ್ಭೂತ್ವಾ ದುಃಖಿತೋ ಭೃಶಮಾತುರಃ |
ತೇಭ್ಯೋ ನ್ಯವೇದಯಂ ತತ್ರ ಪ್ರತಿಜ್ಞಾಂ ಪಿತೃಗೌರವಾತ್ ॥38॥
ಊರ್ಧ್ವರೇತಾ ಹ್ಯರಾಜಾ ಚ ಕುಲಸ್ಯಾರ್ಥೇ ಪುನಃ ಪುನಃ ॥39॥
ಅವರು ಹೀಗೆ ಹೇಳಿದಾಗ ನಾನು ದುಃಖಿತನಾಗಿ ಬಹಳ ವ್ಯಥೆಯನ್ನು ಪಟ್ಟು ಅವರಿಗೆ ಕೈಗಳನ್ನು ಮುಗಿದು ನಾನು, ತಂದೆಯ ಮೇಲಿನ ಗೌರವದಿಂದ ರಾಜನಾಗುವುದಿಲ್ಲ, ಕುಲವನ್ನು ರಕ್ಷಿಸುವ ಸಲುವಾಗಿ ಊರ್ಧ್ವರೇತಸ್ಕನಾಗಿರುತ್ತೇನೆ ಎಂದು ಮಾಡಿದ ಪ್ರತಿಜ್ಞೆಯನ್ನು ಪುನಃ ಪುನಃ ಅವರಿಗೆ ನಿವೇದಿಸಿದೆನು.
ತತೋಽಹಂ ಪ್ರಾಂಜಲಿರ್ಭೂತ್ವಾ ಮಾತರಂ ಸಂಪ್ರಸಾದಯಮ್ ॥40॥
ನಾಂಬ ಶಂತನುನಾ ಜಾತಃ ಕೌರವಂ ವಂಶಮುದ್ವಹನ್ |
ಪ್ರತಿಜ್ಞಾಂ ವಿತಥಾಂ ಕುರ್ಯಾಮಿತಿ ರಾಜನ್ ಪುನಃ ಪುನಃ ॥41॥
ಅನಂತರ ತಾಯಿಗೆ ಕೈಗಳನ್ನು ಮುಗಿದು, ತಾಯಿಯೇ, ಶಂತನುವಿನ ಪುತ್ರನಾಗಿ, ಕೌರವ ವಂಶದ ಭಾರವನ್ನು ಧರಿಸಿ, ನನ್ನ ಪ್ರತಿಜ್ಞೆಯನ್ನು ವ್ಯರ್ಥವಾಗಿ ಮಾಡುವುದಿಲ್ಲ ಎಂದು ಪುನಃ ಪುನಃ ಹೇಳಿ ಅವಳನ್ನು ಸಮಾಧಾನಪಡಿಸಿದೆ.
ವಿಶೇಷತಸ್ತದರ್ಥಂ ಚ ಧುರಿ ಮಾ ಮಾಂ ನಿಯೋಜಯ |
ಅಹಂ ಪ್ರೇಷ್ಯಶ್ಚ ದಾಸಶ್ಚ ತವಾಂಬ ಸುತವತ್ಸಲೇ ॥42॥
ಎಲೈ ಪುತ್ರವತ್ಸಲೆಯಾದ ತಾಯಿಯೇ, ನಾನು ನಿನ್ನ ಸೇವಕ ಮತ್ತು ದಾಸ. ಈ ವಿಷಯದಲ್ಲಿ ಮಾತ್ರ ನನ್ನನ್ನು ನಿಯೋಜಿಸಬೇಡ (ಎಂದು ಹೇಳಿದೆ).
ಏವಂ ತಾಮನುನೀಯಾಹಂ ಮಾತರಂ ಜನಮೇವ ಚ |
ಅಹಂ ಚ ಭ್ರಾತೃದಾರೇಷು ತದಾ ವ್ಯಾಸಂ ಮಹಾಮುನಿಮ್ ॥43॥
ಸಹ ಮಾತ್ರಾ ಮಹಾರಾಜ ಪ್ರಸಾದ್ಯ ತಮೃಷಿಂ ತದಾ |
ಅಪತ್ಯಾರ್ಥಮಯಾಚಂ ವೈ ಪ್ರಸಾದಂ ಕೃತವಾಂಶ್ಚ ಸಃ ॥44॥

ಹೀಗೆ ತಾಯಿಯನ್ನು ಮತ್ತು ಪೌರರನ್ನೂ ಸಮಾಧಾನಪಡಿಸಿ, ನಾನು ಆಗ ನನ್ನ ತಮ್ಮನ ಪತ್ನಿಯರಲ್ಲಿ ಮಹಾಮುನಿಗಳಾದ ವ್ಯಾಸರನ್ನು ನಿಯೋಜಿಸಿದೆ. ಎಲೈ ಮಹಾರಾಜನೇ, ತಾಯಿಯ ಜೊತೆಯಲ್ಲಿ ಆಲೋಚನೆಯನ್ನು ಮಾಡಿ, ಆ ಋಷಿಗಳನ್ನು ಪ್ರಸನ್ನೀಕರಿಸಿಕೊಂಡು ಮಕ್ಕಳನ್ನು ಪಡೆಯುವಂತೆ ಅವರನ್ನು ಯಾಚಿಸಿದೆ. ಆ ಋಷಿಗಳು ಅನುಗ್ರಹವನ್ನು ಮಾಡಿದರು.

ತ್ರೀನ್ ಪುತ್ರಾನಜನಯದ್ ವ್ಯಾಸಸ್ತದಾ ಭರತಸತ್ತಮ ॥45॥
ಅಂಧಃ ಕರಣಹೀನತ್ವಾನ್ನ ವೈ ರಾಜಾ ಪಿತಾ ತವ |
ರಾಜಾ ತು ಪಾಂಡುರಭವನ್ಮಹಾತ್ಮಾ ಲೋಕವಿಶ್ರುತಃ ॥46॥

ಎಲೈ ಭರತಸತ್ತಮನೇ, ವ್ಯಾಸರು ಮೂರುಮಕ್ಕಳನ್ನು ಪಡೆದರು. ನಿನ್ನ ತಂದೆಯು ಅಂಧನಾಗಿ, ಕರಣಹೀನನಾದುದರಿಂದ ರಾಜನಾಗಲಿಲ್ಲ. ಮಹಾತ್ಮನೂ ಮತ್ತು ಲೋಕವಿಖ್ಯಾತನೂ ಆದ ಪಾಂಡುವು ರಾಜನಾದನು.

ಸ ರಾಜಾ ತಸ್ಯ ತೇ ಪುತ್ರಾಃ ಪಿತುರ್ದಾಯಾದ್ಯಹಾರಿಣಃ |
ಮಾ ತಾತ ಕಲಹಂ ಕಾರ್ಷೀ ರಾಜ್ಯಸ್ಯಾರ್ಧಂ ಪ್ರದೀಯತಾಮ್ ॥47॥

ಪಾಂಡುವು ರಾಜ, ಅವನ ಮಕ್ಕಳು ತಂದೆಯ ಆಸ್ತಿಗೆ ಅರ್ಹರಾದವರು. ಎಲೈ ಪ್ರೀತಿಪಾತ್ರನೇ, ಕಲಹವನ್ನು ಮಾಡಬೇಡ. ಅರ್ಧರಾಜ್ಯವನ್ನು ಕೊಡು.

ಮಯಿ ಜೀವತಿ ರಾಜ್ಯಂ ಕಃ ಸಂಪ್ರಶಾಸೇತ್ ಪುಮಾನಿಹ |
ಮಾಽವಮಂಸ್ಥಾ ವಚೋ ಮಹ್ಯಂ ಶಮಮಿಚ್ಛಾಮಿ ವಃ ಸದಾ ॥48॥

ನಾನು ಬದುಕಿರುವಾಗ ಬೇರೆ ಯಾವ ಪುರುಷನು ರಾಜ್ಯವನ್ನು ಆಳಿಯಾನು? ನನ್ನ ಮಾತನ್ನು ತಿರಸ್ಕರಿಸಬೇಡ. ನಾನು ನಿಮಗೆ ಯಾವಾಗಲೂ ಶಾಂತಿಯನ್ನು ಬಯಸುತ್ತೇನೆ.

ನ ವಿಶೇಷೋಽಸ್ತಿ ಮೇ ಪುತ್ರ ತ್ವಯಿ ತೇಷು ಚ ಪಾರ್ಥಿವ |
ಮತಮೇತತ್ ಪಿತುಸ್ತುಭ್ಯಂ ಗಾಂಧಾರ್ಯಾ ವಿದುರಸ್ಯ ಚ ॥49॥

ಎಲೈ ಪುತ್ರನೇ, ರಾಜನೇ, ನನಗೆ ನಿನ್ನಲ್ಲಿಯೂ ಮತ್ತು ಆ ಪಾಂಡವರಲ್ಲಿಯೂ ಯಾವ ವಿಶೇಷವೂ ಇಲ್ಲ. ಇದು ನಿನ್ನ ತಂದೆಯ, ಗಾಂಧಾರಿಯ ಮತ್ತು ವಿದುರನ ಅಭಿಪ್ರಾಯವೂ ಆಗಿದೆ.

ಶ್ರೋತವ್ಯಂ ಖಲು ವೃದ್ಧಾನಾಂ ಮಾ ವಿಶಂಕೀರ್ವಚೋ ಮಮ |
ನಾಶಯಿಷ್ಯನ್ನಿಮಂ ಸರ್ವಮಾತ್ಮಾನಂ ಪೃಥಿವೀಪತೇ ॥50॥

ಹಿರಿಯರ ಮಾತನ್ನು ಕೇಳಬೇಕು. ಎಲೈ ರಾಜನೇ, ಇವೆಲ್ಲವನ್ನೂ ಮತ್ತು ನಿನ್ನನ್ನೂ ನಾಶಗೊಳಿಸುವವನಾಗಿ ನನ್ನ ಮಾತಿನಲ್ಲಿ ಸಂಶಯಪಡಬೇಡ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಅಷ್ಟಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ನಲವತ್ತಾರನೆಯ ಅಧ್ಯಾಯ ಮುಗಿಯಿತು.

* * * * *

## ನೂರ ನಲವತ್ತೇಳನೆಯ ಅಧ್ಯಾಯ

ಕೃಷ್ಣನಿಂದ ದ್ರೋಣರ, ವಿದುರನ ಮತ್ತು ಗಾಂಧಾರಿಯ ಮಾತುಗಳ ಅನುವಾದ.

ಶ್ರೀಭಗವಾನ್
ಭೀಷ್ಮೇಣೋಕ್ತೇ ತತೋ ದ್ರೋಣೋ ದುರ್ಯೋಧನಮಭಾಷತ |
ಮಧ್ಯೇ ನೃಪಾಣಾಂ ಭದ್ರಂ ತೇ ವಚನಂ ವಚನಕ್ಷಮಮ್ ॥1॥

ಶ್ರೀಭಗವಾನ್ ಯುಧಿಷ್ಠಿರನೇ, ನಿನಗೆ ಮಂಗಳವಾಗಲಿ. ಭೀಷ್ಮರು ಹೀಗೆ ಹೇಳುತ್ತಿರಲು ಅನಂತರ ದ್ರೋಣರು ರಾಜರ ಮಧ್ಯದಲ್ಲಿ ದುರ್ಯೋಧನನನ್ನು ಕುರಿತು ಮಾತನಾಡಲು ಯೋಗ್ಯವಾದ ಮಾತುಗಳನ್ನು ಆಡಿದರು.

ಪ್ರಾತೀಪಃ ಶಂತನುಸ್ತಾತ ಕುಲಸ್ಯಾರ್ಥೇ ಯಥೋತ್ಥಿತಃ |
ತಥಾ ದೇವವ್ರತೋ ಭೀಷ್ಮಃ ಕುಲಸ್ಯಾರ್ಥೇ ಸ್ಥಿತೋಽಭವತ್ ॥2॥

ಎಲೈ ಪ್ರೀತಿಪಾತ್ರನೇ, ಪ್ರತೀಪನ ಮಗನಾದ ಶಂತನುವು ಕುಲದ ಅಭಿವೃದ್ಧಿಗಾಗಿ ಹೇಗೆ ಉದಯಿಸಿದನೋ ಅದರಂತೆ ದೇವವ್ರತರಾದ ಭೀಷ್ಮರು ಕುಲದ ಅಭ್ಯುದಯಕ್ಕಾಗಿ ನಿಂತವರಾಗಿದ್ದಾರೆ.

ತಥಾ ಪಾಂಡುರ್ನರಪತಿಃ ಸತ್ಯಸಂಧೋ ಜಿತೇಂದ್ರಿಯಃ |
ರಾಜಾ ಕುರೂಣಾಂ ಧರ್ಮಾತ್ಮಾ ಸುವ್ರತಃ ಸುಸಮಾಹಿತಃ ॥3॥
ಜ್ಯೇಷ್ಠಾಯ ರಾಜ್ಯಮದದಾದ್ ಧೃತರಾಷ್ಟ್ರಸ್ಯ ಧೀಮತೇ |
ಯವೀಯಸಸ್ತಥಾ ಕ್ಷತ್ತುಃ ಕುರುವಂಶವಿವರ್ಧನಃ ॥4॥

ಅದರಂತೆ ಸತ್ಯಸಂಧನೂ, ಜಿತೇಂದ್ರಿಯನೂ, ಧರ್ಮಾತ್ಮನೂ, ಸಮಾಧಾನಚಿತ್ತನೂ, ಒಳ್ಳೆಯ ವ್ರತಧಾರಿಯೂ ಆದ ಪಾಂಡುರಾಜನು ತನ್ನ ಅಣ್ಣನಾದ ಮೇಧಾವಿಯಾದ ಧೃತರಾಷ್ಟ್ರನಿಗೆ ರಾಜ್ಯವನ್ನು ಕೊಟ್ಟನು. ಹಾಗೆಯೇ ಕುರುವಂಶವಿವರ್ಧನನಾದ ಅವನು ತಮ್ಮನಾದ ವಿದುರನಿಗೂ ರಾಜ್ಯದ ಜವಾಬ್ದಾರಿಯನ್ನು ಕೊಟ್ಟನು.

ತತಃ ಸರ್ವಾಃ ಪ್ರಜಾಸ್ತಾತ ಧೃತರಾಷ್ಟ್ರಂ ಜನಾಧಿಪಮ್ |

ಅನ್ವಪದ್ಯಂತ ವಿಧಿವದ್ ಯಥಾ ಪಾಂಡುಂ ನರಾಧಿಪಮ್ ॥5॥
ಎಲೈ ಪ್ರೀತಿಪಾತ್ರನೇ, ಆಗ ಎಲ್ಲಾ ಪ್ರಜೆಗಳೂ ರಾಜನಾದ ಪಾಂಡುವಿನಲ್ಲಿ ನಡೆದುಕೊಳ್ಳುತ್ತಿದ್ದಂತೆ ವಿಧಿಪ್ರಕಾರವಾಗಿ ಧೃತರಾಷ್ಟ್ರನಲ್ಲಿ ನಡೆದುಕೊಂಡರು.
ಸಂಧಿವಿಗ್ರಹತತ್ವಜ್ಞೋ ರಾಜ್ಞೋ ವೈವಾಹಿಕಕ್ರಿಯಾಮ್ |
ಅವೈಕ್ಷತ ಮಹಾತೇಜಾ ಭೀಷ್ಮಃ ಕುರುಪಿತಾಮಹಃ ॥6॥
ಸಂಧಿ-ವಿಗ್ರಹತತ್ವಗಳನ್ನು ತಿಳಿದವರೂ, ಮಹಾತೇಜಸ್ವಿಗಳೂ, ಕುರುಕುಲ ಪಿತಾಮಹರೂ ಆದ ಭೀಷ್ಮರು ಧೃತರಾಷ್ಟ್ರಾದಿಗಳ ವೈವಾಹಿಕ ಕ್ರಿಯೆಗಳನ್ನು ನೋಡಿಕೊಂಡರು.
ಸಿಂಹಾಸನಸ್ಥೋ ನೃಪತಿರ್ಧೃತರಾಷ್ಟ್ರೋ ಮಹಾಮನಾಃ |
ಅನ್ವಾಸ್ಯಮಾನಃ ಸತತಂ ವಿದುರೇಣ ಮಹಾತ್ಮನಾ ॥7॥
ಸಿಂಹಾಸನದಲ್ಲಿ ಕುಳಿತ ಉದಾರ ಮನಸ್ಸುಳ್ಳ ಧೃತರಾಷ್ಟ್ರರಾಜನು ಮಹಾತ್ಮನಾದ ವಿದುರನಿಂದ ಯಾವಾಗಲೂ ಸೇವಿಸಲ್ಪಟ್ಟನು.
ನೀಚೈಃ ಸ್ಥಿತ್ವಾ ತು ವಿದುರ ಉಪಾಸ್ತೇ ಸ್ಮ ವಿನೀತವತ್ |
ಪ್ರೇಷ್ಯವತ್ ಪುರುಷವ್ಯಾಘ್ರೋ ಬಾಲವ್ಯಜನಮುತ್ಕ್ಷಿಪನ್ ॥8॥
ಪುರುಷವ್ಯಾಘ್ರನಾದ ವಿದುರನು ವಿನೀತನಾಗಿ ಸೇವಕನಂತೆ ಕೆಳಗೆ ನಿಂತು ಬಾಲವ್ಯಜನವನ್ನು (ಬೀಸಣಿಗೆ) ಬೀಸುತ್ತಾ ರಾಜನ ಸೇವೆಯನ್ನು ಮಾಡುತ್ತಿದ್ದನು.
ಕೋಶಸಂಯಮನೇ ದಾನೇ ಭೃತ್ಯಾನಾಮನ್ವವೇಕ್ಷಣೇ |
ಭರಣೇ ಚೈವ ಸರ್ವಸ್ಯ ವಿದುರಃ ಸತ್ಯಸಂಗರಃ ॥9॥
ಕೋಶವನ್ನು ನಿಯಂತ್ರಿಸುವುದರಲ್ಲಿ, ದಾನ ಮಾಡುವುದರಲ್ಲಿ, ಭೃತ್ಯರ ಮೇಲ್ವಿಚಾರಣೆಗಳಲ್ಲಿ ಮತ್ತು ಎಲ್ಲರ ಪೋಷಣೆಯಲ್ಲಿ ಸತ್ಯಸಂಧನಾದ ವಿದುರನು ನಿರತನಾಗಿದ್ದನು.
ವಿಸೃಜ್ಯ ಧೃತರಾಷ್ಟ್ರಾಯ ರಾಜ್ಯಂ ಸ ವಿದುರಾಯ ಚ |
ಚಚಾರ ಪೃಥಿವೀಂ ಪಾಂಡುಃ ಸರ್ವಾಂ ಪರಪುರಂಜಯಃ ॥10॥
ಪರಪುರಂಜಯನಾದ ಪಾಂಡುವು ಧೃತರಾಷ್ಟ್ರನಿಗೂ ಮತ್ತು ವಿದುರನಿಗೂ ರಾಜ್ಯವನ್ನು ಒಪ್ಪಿಸಿ ದಿಗ್ವಿಜಯಕ್ಕಾಗಿ ಭೂಮಿಯನ್ನೆಲ್ಲಾ ಸಂಚಾರ ಮಾಡಿದನು.
ತತಃ ಸಿಂಹಾಸನೇ ರಾಜಾ ಸ್ಥಾಪಯಿತ್ವೈನಮಚ್ಯುತಮ್ |
ವನಂ ಜಗಾಮ ಕೌರವ್ಯೋ ಭಾರ್ಯಾಭ್ಯಾಂ ಸಹಿತೋಽನಘ ॥11॥
ಎಲೈ ಅನಘನೇ, ಅನಂತರ ಕೌರವ್ಯನಾದ ಪಾಂಡುರಾಜನು ತನ್ನ ಗುಣಗಳಿಂದ ಚ್ಯುತನಾಗದ ಧೃತರಾಷ್ಟ್ರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಇಬ್ಬರು ಪತ್ನಿಯರ ಸಹಿತನಾಗಿ ಕಾಡಿಗೆ ಹೋದನು.
ಕಥಂ ತಸ್ಯ ಕುಲೇ ಜಾತಃ ಕುಲೇ ಭೇದಂ ಕರಿಷ್ಯತಿ |
ಸಂಭೂಯ ಭ್ರಾತೃಭಿಃ ಸಾರ್ಧಂ ಭುಂಕ್ಷ್ವ ಭೋಗಾನ್ ಜನಾಧಿಪ ॥12॥
ಅವರ ಕುಲದಲ್ಲಿ ಜನಿಸಿದ ನೀನು ಹೇಗೆ ಕುಲಭೇದವನ್ನು ಮಾಡುವಿ? ಎಲೈ ರಾಜನೇ, ಸಹೋದರರ ಜೊತೆಯಲ್ಲಿ ಒಂದುಗೂಡಿ ಭೋಗಗಳನ್ನು ಭೋಗಿಸುವವನಾಗು.
ಬ್ರವೀಮ್ಯಹಂ ನ ಕಾರ್ಪಣ್ಯಾನ್ನಾರ್ಥಹೇತೋಃ ಕಥಂಚನ |
ಭೀಷ್ಮೇಣ ದತ್ತಮಶ್ನಾಮಿ ನ ತ್ವಯಾ ರಾಜಸತ್ತಮ ॥13॥
ಎಲೈ ರಾಜಶ್ರೇಷ್ಠನೇ, ನಾನು ಕಾರ್ಪಣ್ಯದಿಂದಾಗಲೀ ಅಥವಾ ಧನಲಾಭದ ಉದ್ದೇಶದಿಂದಾಗಲೀ ಏನನ್ನೂ ಹೇಳುತ್ತಿಲ್ಲ. ಭೀಷ್ಮರು ಕೊಟ್ಟ ಅನ್ನದಿಂದ ನಾನು ಜೀವಿಸಿದ್ದೇನೆ. ನೀನು ಕೊಟ್ಟುದುದರಿಂದಲ್ಲ.
ನಾಹಂ ತ್ವತ್ತೋಽಭಿಕಾಂಕ್ಷಿಷ್ಯೇ ವೃತ್ತ್ಯುಪಾಯಂ ಜನಾಧಿಪ |
ಯತೋ ಭೀಷ್ಮಸ್ತತೋ ದ್ರೋಣೋ ಯದ್ ಭೀಷ್ಮಸ್ತ್ವಾಹ ತತ್ ಕುರು ॥
ಎಲೈ ರಾಜನೇ, ನಿನ್ನಿಂದ ನಾನು ಜೀವನೋಪಾಯವನ್ನು ಬಯಸುತ್ತಿಲ್ಲ. ಎಲ್ಲಿ ಭೀಷ್ಮರಿದ್ದಾರೋ ಅಲ್ಲಿ ದ್ರೋಣರಿದ್ದಾರೆ. ಆದ್ದರಿಂದ ಭೀಷ್ಮರು ಹೇಳಿದಂತೆ ನಡೆದುಕೋ.
ದೀಯತಾಂ ಪಾಂಡುಪುತ್ರೇಭ್ಯೋ ರಾಜ್ಯಾರ್ಧಮರಿಕರ್ಶನ |
ಸಮಮಾಚಾರ್ಯಕಂ ತಾತ ತವ ತೇಷಾಂ ಚ ಮೇ ಸದಾ ॥15॥
ಎಲೈ ಶತ್ರುಕರ್ಶನನೇ, ಪಾಂಡುಪುತ್ರರಿಗೆ ಅರ್ಧರಾಜ್ಯವನ್ನು ಕೊಡು. ಪ್ರೀತಿಪಾತ್ರನೇ, ನಾನು ನಿನಗೂ ಮತ್ತು ಅವರಿಗೂ ಸಮಾನವಾಗಿ ಗುರುವಾಗಿದ್ದೇನೆ.
ಅಶ್ವತ್ಥಾಮಾ ಯಥಾ ಮಹ್ಯಂ ತಥಾ ಶ್ವೇತಹಯೋ ಮಮ |
ಬಹುನಾ ಕಿಂ ಪ್ರಲಾಪೇನ ಯತೋ ಧರ್ಮಸ್ತತೋ ಜಯಃ ॥16॥
ಅಶ್ವತ್ಥಾಮನು ಹೇಗೆ ನನಗೆ ಪ್ರಿಯನೋ ಅದರಂತೆ ಶ್ವೇತವಾಹನನಾದ ಅರ್ಜುನನೂ ಸಹ ಪ್ರಿಯನಾದವನು. ಹೆಚ್ಚು ಮಾತನಾಡಿ ಏನು ಪ್ರಯೋಜನ? ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವುಂಟಾಗುತ್ತದೆ.
ವಾಸುದೇವಃ
ಏವಮುಕ್ತೇ ಮಹಾರಾಜ ದ್ರೋಣೇನಾಮಿತತೇಜಸಾ |
ವ್ಯಾಜಹಾರ ತತೋ ವಾಕ್ಯಂ ವಿದುರಃ ಸತ್ಯಸಂಗರಃ ॥17॥
ಪಿತುರ್ವಚನಮನ್ವೀಕ್ಷ್ಯ ಪರಿವೃತ್ಯ ಚ ಧರ್ಮವಿತ್ ॥18॥

ವಾಸುದೇವ ಎಲ್ಲೈ ಮಹಾರಾಜನೇ, ಅಮಿತಪರಾಕ್ರಮಿಗಳಾದ ದ್ರೋಣರು ಹೀಗೆ ಹೇಳಿದ ಮೇಲೆ ಸತ್ಯಸಂಧನೂ, ಧರ್ಮಜ್ಞನೂ ಆದ ವಿದುರನು, ತಂದೆಯ ಸ್ಥಾನದಲ್ಲಿರುವ ಭೀಷ್ಮರ ಕಡೆಗೆ ತಿರುಗಿ, ಅವರನ್ನು ನೋಡಿಕೊಂಡು ಮಾತುಗಳನ್ನು ಆಡಿದನು.
ದೇವವ್ರತ ನಿಬೋಧೇದಂ ವಚನಂ ಮಮ ಭಾಷತಃ |
ಪ್ರನಷ್ಟಃ ಕೌರವೋ ವಂಶಸ್ತ್ವಯಾಽಯಂ ಪುನರುದ್ಧೃತಃ |
ತ್ವಂ ಮೇ ವಿಲಪಮಾನಸ್ಯ ವಚನಂ ಸಮುಪೇಕ್ಷಸೇ ॥19॥
ದೇವವ್ರತನಾದ ಭೀಷ್ಮನೇ, ನನ್ನ ಈ ಮಾತುಗಳನ್ನು ಕೇಳು. ನಾಶವನ್ನು ಹೊಂದಿದ್ದ ಈ ಕೌರವವಂಶವನ್ನು ನೀನು ಪುನಃ ಉದ್ಧರಿಸಿದೆ. ಆದರೂ ವಿಲಾಪವನ್ನು ಮಾಡುತ್ತಿರುವ ನನ್ನ ಮಾತುಗಳನ್ನು ಉಪೇಕ್ಷೆ ಮಾಡುತ್ತಿದ್ದೀಯೆ.
ಕೋಽಯಂ ದುರ್ಯೋಧನೋ ನಾಮ ಕುಲೇಽಸ್ಮಿನ್ ಕುಲಪಾಂಸನಃ |
ಯಸ್ಯ ಲೋಭಾಭಿಭೂತಸ್ಯ ಮತಿಂ ಸಮನುವರ್ತಸೇ ॥20॥
ಅನಾರ್ಯಸ್ಯಾಕೃತಜ್ಞಸ್ಯ ಲೋಭೇನ ಹೃತಚೇತಸಃ ॥21॥
ಅತಿಕ್ರಾಮತಿ ಯಃ ಶಾಸ್ತ್ರಂ ಪಿತುರ್ಧರ್ಮಾರ್ಥದರ್ಶಿನಃ ॥22॥
ಈ ಕುಲದಲ್ಲಿ ಹುಟ್ಟಿದ ಕುಲನಾಶಕನಾದ ದುರ್ಯೋಧನನೆಂಬವನು ಯಾವನು! ಅನಾರ್ಯನೂ, ಕೃತಜ್ಞತೆ ಇಲ್ಲದವನೂ, ಲೋಭದಿಂದ ಕೂಡಿದ ಮನಸ್ಸುಳ್ಳವನೂ, ಧರ್ಮಾರ್ಥದರ್ಶಿಯಾದ ತಂದೆಯ ಮಾತನ್ನು ಮೀರುವವನೂ ಆದ ಅವನ ಬುದ್ಧಿಯನ್ನು ನೀನು ಅನುಸರಿಸುತ್ತಿದ್ದೀಯೆ.
ಏತೇ ನಶ್ಯಂತಿ ಕುರವೋ ದುರ್ಯೋಧನಕೃತೇನ ವೈ |
ಯಥಾ ತೇ ನ ಪ್ರಣಶ್ಯೇಯುರ್ಮಹಾರಾಜ ತಥಾ ಕುರು ॥23॥
ಎಲ್ಲೈ ಮಹಾರಾಜನೇ, ದುರ್ಯೋಧನನು ಮಾಡಿದ ಅಪರಾಧದಿಂದ ಈ ಕೌರವರು ನಾಶವನ್ನು ಹೊಂದುತ್ತಾರೆ. ಅವರು ನಾಶವನ್ನು ಹೊಂದದಂತೆ ನೀನು ಮಾಡುವವನಾಗು.
ಮಾ ಚೈವ ಧೃತರಾಷ್ಟ್ರಂ ಚ ಸರ್ವಾಂಶ್ಚೈವ ಮಹಾದ್ಯುತೇ |
ಚಿತ್ರಕಾರ ಇವಾಲೇಖ್ಯಂ ಕೃತ್ವಾ ರಾಜನ್ ವಿನಾಶಯ ॥24॥
ಎಲ್ಲೈ ರಾಜನೇ, ಮಹಾದ್ಯುತಿಯೇ, ಧೃತರಾಷ್ಟ್ರನನ್ನೂ ಮತ್ತು ಎಲ್ಲರನ್ನೂ ಚಿತ್ರಕಾರನು ಚಿತ್ರದಲ್ಲಿ ಬರೆಯುವಂತೆ ಮಾಡಿ ವಿನಾಶವನ್ನು ಮಾಡಬೇಡ (ನಿಧನ ಹೊಂದಿದ ರಾಜರ ಚಿತ್ರಗಳನ್ನು ಅರಮನೆಯ ಚಿತ್ರಶಾಲೆಯಲ್ಲಿ ಬರೆಸುವುದು ಪದ್ಧತಿ).
ಪ್ರಜಾಪತಿಃ ಪ್ರಜಾ ಸೃಷ್ಟ್ವಾ ಯಥಾ ಸಂಹರತೇ ಪ್ರಜಾಃ ॥25॥
ನೋಪೇಕ್ಷಸ್ವ ಮಹಾಬಾಹೋ ಪಶ್ಯಮಾನಃ ಕುಲಕ್ಷಯಮ್ ॥26॥
ಪ್ರಜಾಪತಿಗಳಾದ ಬ್ರಹ್ಮದೇವರು ಪ್ರಜೆಗಳನ್ನು ಸೃಷ್ಟಿಮಾಡಿ ನಿರ್ವಿಕಾರವಾಗಿ ಹೇಗೆ ಪ್ರಜೆಗಳನ್ನು ಸಂಹರಿಸುತ್ತಾರೆಯೋ ಅದರಂತೆ ಮಹಾಬಾಹುವೇ ಕುಲಕ್ಷಯವನ್ನು ನೋಡುತ್ತಾ ಉದಾಸೀನ ಮಾಡಬೇಡ.
ಅಥ ತೇಽದ್ಯ ಮತಿರ್ನಷ್ಟಾ ವಿನಾಶೇ ಪ್ರತ್ಯುಪಸ್ಥಿತೇ |
ವನಂ ಗಚ್ಛ ಮಯಾ ಸಾರ್ಧಂ ಧೃತರಾಷ್ಟ್ರೇಣ ಚೈವ ಹ ॥27॥
ವಿನಾಶವು ಒದಗಿದ ಈ ಕಾಲದಲ್ಲಿ ನಿನ್ನ ಬುದ್ಧಿಯು ನಷ್ಟವಾಗಿದ್ದರೆ ನನ್ನ ಮತ್ತು ಧೃತರಾಷ್ಟ್ರನ ಜೊತೆಯಲ್ಲಿ ಕಾಡಿಗೆ ಹೋಗುವವನಾಗು.
ಬದ್ಧ್ವಾ ವಾ ನಿಕೃತಿಪ್ರಜ್ಞಂ ಧಾರ್ತರಾಷ್ಟ್ರಂ ಸುದುರ್ಮತಿಮ್ |
ಶಾಧೀದಂ ರಾಜ್ಯಮದ್ಯಾಶು ಪಾಂಡವೈರಭಿರಕ್ಷಿತಮ್ ॥28॥
ಅಥವಾ ಮೋಸದ ಬುದ್ಧಿಯುಳ್ಳ, ಬಹಳ ದುರ್ಮತಿಯಾದ ಈ ದುರ್ಯೋಧನನನ್ನು ಬಂಧಿಸಿ, ಪಾಂಡವರಿಂದ ರಕ್ಷಿತವಾದ ರಾಜ್ಯವನ್ನು ಈ ದಿನ ಶೀಘ್ರವಾಗಿ ಆಳುವವನಾಗು.
ಪ್ರಸೀದ ರಾಜಶಾರ್ದೂಲ ವಿನಾಶೋ ದೃಶ್ಯತೇ ಮಹಾನ್ |
ಪಾಂಡವಾನಾಂ ಕುರೂಣಾಂ ಚ ರಾಜ್ಞಾಮಮಿತತೇಜಸಾಮ್ ॥29॥
ಎಲ್ಲೈ ರಾಜಶಾರ್ದೂಲನೇ, ಅಮಿತವಿಕ್ರಮಿಗಳಾದ ಪಾಂಡವರಿಗೂ ಮತ್ತು ಕೌರವರಿಗೂ ಮಹಾವಿನಾಶವು ಬಂದೊದಗಿರುವುದು ಕಂಡು ಬರುತ್ತಿದೆ. ನೀನು ಪ್ರಸನ್ನನಾಗು.
ವಾಸುದೇವಃ
ವಿರರಾಮೈವಮುಕ್ತ್ವಾ ತು ವಿದುರೋ ದೀನಮಾನಸಃ |
ಪ್ರಧ್ಯಾಯಮಾನಃ ಸ ತದಾ ನಿಃಶ್ವಸಂಶ್ಚ ಪುನಃ ಪುನಃ ॥30॥
ವಾಸುದೇವ ವಿದುರನು ಹೀಗೆ ಮಾತನಾಡಿ, ದೀನಮನಸ್ಸಿನಿಂದ ಚಿಂತಿಸುತ್ತಾ ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಾ ಸುಮ್ಮನಾದನು.
ತತೋಽಸ್ಯ ರಾಜ್ಞಃ ಸುಬಲಸ್ಯ ಪುತ್ರೀ
ಧರ್ಮಾರ್ಥಯುಕ್ತಂ ಕುಲನಾಶಭೀತಾ |
ದುರ್ಯೋಧನಂ ಪಾಪಮತಿಂ ನೃಶಂಸಂ
ರಾಜ್ಞಾಂ ಸಮಕ್ಷಂ ಸುತಮಾಹ ಕೋಪಾತ್ ॥31॥
ಅನಂತರ ಸುಬಲರಾಜನ ಪುತ್ರಿಯಾದ ಗಾಂಧಾರಿಯು ಕುಲನಾಶದಿಂದ ಭೀತಳಾಗಿ, ಎಲ್ಲ ರಾಜರ ಎದುರಿನಲ್ಲಿ ಪಾಪಮತಿಯೂ, ಕ್ರೂರಿಯೂ ಆದ ತನ್ನ ಮಗನಾದ ದುರ್ಯೋಧನನನ್ನು ಕುರಿತು ಕೋಪದಿಂದ ಮಾತನಾಡಿದಳು.
ಯೇ ಪಾರ್ಥಿವಾ ರಾಜಸಭಾಂ ಪ್ರವಿಷ್ಟಾ
ಬ್ರಹ್ಮರ್ಷಯೋ ಯೇ ಚ ಸಭಾಸದೋಽನ್ಯೇ |

ಶೃಣ್ವಂತು ವಕ್ಷ್ಯಾಮಿ ತಥಾऽಪರಾಧಂ
ಪಾಪಸ್ಯ ಸಾಮಾತ್ಯಪರಿಚ್ಛದಸ್ಯ ॥32॥
ರಾಜಸಭೆಯಲ್ಲಿ ಪ್ರವಿಷ್ಟರಾದ ರಾಜರೂ, ಬ್ರಹ್ಮರ್ಷಿಗಳೂ ಮತ್ತು ಉಳಿದ ಸಭಾಸದರೂ ಕೇಳುವವರಾಗಿ. ಅಮಾತ್ಯಪರಿವಾರದಿಂದ ಕೂಡಿದ ಪಾಪಿಯಾದ ದುರ್ಯೋಧನನ ಅಪರಾಧಗಳನ್ನು ನಾನು ಹೇಳುವೆನು.
ರಾಜ್ಯಂ ಕುರೂಣಾಮನುಭೂತಭೋಗ್ಯಂ
ಕ್ರಮಾಗತೋ ನಃ ಕುಲಧರ್ಮ ಏಷಃ |
ತ್ವಂ ಪಾಪಬುದ್ಧೇ ಸುನೃಶಂಸಕರ್ಮಾ
ರಾಜ್ಯಂ ಕುರೂಣಾಮನಯಾದ್ವಿ ಹಂಸಿ ॥33॥
ಅನೇಕ ಭೋಗಗಳನ್ನು ನೀಡಿದ ಈ ಕೌರವರ ರಾಜ್ಯವು ಕ್ರಮದಿಂದ ಒಬ್ಬರಿಂದೊಬ್ಬರಿಗೆ ಬಂದಿದೆ. ಇದು ನಮ್ಮ ಕುಲಧರ್ಮ. ಎಲೈ ಪಾಪಬುದ್ಧಿಯುಳ್ಳ ಮತ್ತು ಕ್ರೂರವಾದ ಕರ್ಮವನ್ನು ಎಸಗುವ ದುರ್ಯೋಧನನೇ, ನೀನು ಅನ್ಯಾಯದಿಂದ ಕೌರವರ ಈ ರಾಜ್ಯವನ್ನು ವಿನಾಶ ಮಾಡುತ್ತಿದ್ದೀಯೆ.
ರಾಜ್ಯೇ ಸ್ಥಿತೋ ಧೃತರಾಷ್ಟ್ರೋ ಮನೀಷೀ
ತಸ್ಯಾನುಜೋ ವಿದುರೋ ಧರ್ಮ(ದೀರ್ಘ)ದರ್ಶೀ |
ಏತಾವತಿಕ್ರಮ್ಯ ಕಥಂ ನೃಪತ್ವಂ
ದುರ್ಯೋಧನ ಪ್ರಾರ್ಥಯಸೇऽದ್ಯ ಮೋಹಾತ್ ॥34॥
ಮೇಧಾವಿಯಾದ ಧೃತರಾಷ್ಟ್ರನು ರಾಜ್ಯದಲ್ಲಿದ್ದಾನೆ. ಅವನ ತಮ್ಮನಾದ ವಿದುರನು ದೀರ್ಘದರ್ಶಿಯಾಗಿದ್ದಾನೆ. ಎಲೈ ದುರ್ಯೋಧನನೇ, ಅವರಿಬ್ಬರನ್ನೂ ಮೀರಿ ನಾನು ರಾಜನಾಗುತ್ತೇನೆ ಎಂದು ಹೇಗೆ ಮೋಹದಿಂದ ಬಯಸುತ್ತೀಯೆ?
ರಾಜಾ ಚ ಕ್ಷತ್ತಾ ಚ ಮಹಾನುಭಾವೌ
ಭೀಷ್ಮೇ ಸ್ಥಿತೇ ಪರವಂತೌ ಭವೇತಾಮ್ |
ಅಯಂ ತು ಧರ್ಮಜ್ಞತಯಾ ಮಹಾತ್ಮಾ
ನ ರಾಜ್ಯಕಾಮೋ ನೃವರೋ ನದೀಜಃ ॥35॥
ಮಹಾನುಭಾವರಾದ ಧೃತರಾಷ್ಟ್ರ ಮತ್ತು ವಿದುರರು ಭೀಷ್ಮರು ಇರುವಾಗ ಪರಾಧೀನರೇ ಆಗುವರು. ಈ ಮಹಾತ್ಮನೂ, ನರಶ್ರೇಷ್ಠನೂ ಆದ ನದೀಪುತ್ರನು ಧರ್ಮಜ್ಞನಾದುದರಿಂದ ರಾಜ್ಯವನ್ನು ಬಯಸುವುದಿಲ್ಲ.
ರಾಜ್ಯಂ ತು ಪಾಂಡೋರಿದಮಪ್ರಧೃಷ್ಯಂ
ತಸ್ಯಾದ್ಯ ಪುತ್ರಾಃ ಪ್ರಭವಂತಿ ನಾನ್ಯೇ |
ರಾಜ್ಯಂ ತದೇತನ್ನಿಖಿಲಂ ಪಾಂಡವಾನಾಂ
ಪೈತಾಮಹಂ ಪುತ್ರಪೌತ್ರಾನುಗಾಮಿ ॥36॥
ಇದು ಪಾಂಡುವಿನ ಅಲುಗಾಡಿಸಲು ಸಾಧ್ಯವಿಲ್ಲದ ರಾಜ್ಯ. ಇದಕ್ಕೆ ಅವನ ಪುತ್ರರೇ ಅಧಿಕಾರಿಗಳಾಗುತ್ತಾರೆ. ಈ ಎಲ್ಲ ರಾಜ್ಯವೂ ಪಾಂಡವರಿಗೇ ಸೇರಿದುದು. ಪಿತಾಮಹನ ಸಂಪತ್ತಾದ ಈ ರಾಜ್ಯವು ಪಾಂಡವರ ಪುತ್ರ-ಪೌತ್ರರಿಗೆ ಹೋಗುವುದಾಗುತ್ತದೆ.
ಯದ್ವೈ ಬ್ರೂತೇ ಕುರುಮುಖ್ಯೋ ಮಹಾತ್ಮಾ
ದೇವವ್ರತಃ ಸತ್ಯಸಂಧೋ ಮನಸ್ವೀ |
ಸರ್ವಂ ತದಸ್ಮಾಭಿರಧೀತ್ಯ ಧರ್ಮಂ
ಗ್ರಾಹ್ಯಂ ಸ್ವಧರ್ಮಾನ್ ಪರಿಪಾಲಯದ್ಭಿಃ ॥37॥
ಕುರುಶ್ರೇಷ್ಠರೂ, ಮಹಾತ್ಮರೂ, ಸತ್ಯಸಂಧರೂ, ಧೈರ್ಯಶಾಲಿಗಳೂ ಆದ ದೇವವ್ರತರಾದ ಭೀಷ್ಮರು ಏನನ್ನು ಹೇಳುತ್ತಾರೆಯೋ ಅದೆಲ್ಲವನ್ನೂ ನಾವು ಆಲೋಚಿಸಿ, ನಮ್ಮ ಧರ್ಮವನ್ನು ಪರಿಪಾಲಿಸುವ ನಾವು ಧರ್ಮವನ್ನು ಸ್ವೀಕರಿಸಬೇಕು.
ಅನುಜ್ಞಯಾ ಚಾಥ ಮಹಾವ್ರತಸ್ಯ
ಬ್ರೂಯಾನ್ನೃಪೋऽಯಂ ವಿದುರಸ್ತಥೈವ |
ಕಾರ್ಯಂ ಭವೇತ್ ತತ್ ಸುಹೃದ್ಭಿರ್ನಿಯೋಜ್ಯಂ
ಧರ್ಮಂ ಪುರಸ್ಕೃತ್ಯ ಸುದೀರ್ಘಕಾಲಮ್ ॥38॥
ಮಹಾವ್ರತರಾದ ಭೀಷ್ಮರು ಅನುಮತಿಯಿಂದ ರಾಜನಾದ ಧೃತರಾಷ್ಟ್ರನೂ ಮತ್ತು ವಿದುರನೂ ಏನು ಹೇಳುತ್ತಾನೆಯೋ ಅಂತಹ ಕುರುಜನರಿಂದ ಅನುಮೋದಿತವಾದ ಕಾರ್ಯವನ್ನು ನಾವು ಧರ್ಮವನ್ನು ಮುಂದೆ ಮಾಡಿಕೊಂಡು ದೀರ್ಘಕಾಲದಲ್ಲಿ ಮಾಡುವವರಾಗಬೇಕು.
ನ್ಯಾಯಾಗತಂ ರಾಜ್ಯಮಿದಂ ಕುರೂಣಾಂ
ಯುಧಿಷ್ಠಿರಃ ಶಾಸ್ತು ವೈ ಧರ್ಮಪುತ್ರಃ |
ಪ್ರಚೋದಿತೋ ಧೃತರಾಷ್ಟ್ರೇಣ ರಾಜ್ಞಾ
ಪುರಸ್ಕೃತಃ ಶಾಂತನವೇನ ಚೈವ ॥39॥
ನ್ಯಾಯದಿಂದ ಪ್ರಾಪ್ತವಾದ ಕೌರವರ ಈ ರಾಜ್ಯವನ್ನು ಧರ್ಮಪುತ್ರನಾದ ಯುಧಿಷ್ಠಿರನು ಧೃತರಾಷ್ಟ್ರನ ಪ್ರೇರಣೆಯಂತೆ, ಭೀಷ್ಮರನ್ನು ಮುಂದಿಟ್ಟುಕೊಂಡು ಆಳುವವನಾಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಚತ್ವಾರಿಂಶೋತ್ತರಶತತಮೋऽಧ್ಯಾಯಃ ॥

॥ ವಿವಾದಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ನಲವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೆಂಟನೆಯ ಅಧ್ಯಾಯ
ಕೃಷ್ಣನಿಂದ ಧೃತರಾಷ್ಟ್ರನ ಮಾತುಗಳ ಅನುವಾದ
ವಾಸುದೇವಃ
ಏವಮುಕ್ತೇ ತು ಗಾಂಧಾರ್ಯಾ ಧೃತರಾಷ್ಟ್ರೋ ಜನೇಶ್ವರಃ |
ದುರ್ಯೋಧನಮುವಾಚೇದಂ ರಾಜಮಧ್ಯೇ ಜನಾಧಿಪ ॥1॥
ವಾಸುದೇವ ಎಲೈ ರಾಜನೇ, ಗಾಂಧಾರಿಯ ಮಾತು ಮುಗಿಯುತ್ತಿರಲು ಜನೇಶ್ವರನಾದ ಧೃತರಾಷ್ಟ್ರನು ರಾಜರ ಮಧ್ಯದಲ್ಲಿ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದನು.
ದುರ್ಯೋಧನ ನಿಬೋಧೇದಂ ಯತ್ ತ್ವಾಂ ವಕ್ಷ್ಯಾಮಿ ಪುತ್ರಕ |
ತಥಾ ತತ್ ಕುರು ಭದ್ರಂ ತೇ ಯದ್ಯಸ್ತಿ ಪಿತೃಗೌರವಮ್ ॥2॥
ಪ್ರೀತಿಯ ಪುತ್ರನೇ, ನಾನು ಹೇಳುವ ಮಾತುಗಳನ್ನು ತಿಳಿದುಕೊ. ದುರ್ಯೋಧನನೇ, ನಿನಗೆ ಮಂಗಳವಾಗಲಿ. ತಂದೆಯ ಮೇಲೆ ಗೌರವವಿದ್ದರೆ ನಾನು ಹೇಳಿದಂತೆ ಮಾಡು.
ಸೋಮಃ ಪ್ರಜಾಪತಿಃ ಪೂರ್ವಂ ಕುರೂಣಾಂ ವಂಶವರ್ಧನಃ |
ಸೋಮಾದ್ ಬಭೂವ ಷಷ್ಠೋಽಯಂ ಯಯಾತಿರ್ನಹುಷಾತ್ಮಜಃ ॥3॥
ಪ್ರಜಾಪತಿಯಾದ ಚಂದ್ರನು ಕುರುಗಳ ವಂಶವರ್ಧನನಾಗಿದ್ದನು. ನಹುಷನ ಪುತ್ರನಾದ ಯಯಾತಿಯು ಚಂದ್ರನಿಂದ ಆರನೆಯವನಾಗಿ ಜನಿಸಿದನು.
ತಸ್ಯ ಪುತ್ರಾ ಬಭೂವುರ್ಹಿ ಪಂಚ ರಾಜರ್ಷಿಸತ್ತಮಾಃ |
ತೇಷಾಂ ಯದುರ್ಮಹಾತೇಜಾ ಜ್ಯೇಷ್ಠಃ ಸಮಭವತ್ ಪ್ರಭುಃ ॥4॥
ಅವನಿಗೆ ರಾಜರ್ಷಿ ಶ್ರೇಷ್ಠರಾದ ಐದುಮಕ್ಕಳು ಜನಿಸಿದರು. ಅವರಲ್ಲಿ ಪ್ರಭುವೂ ಮತ್ತು ಮಹಾತೇಜಸ್ವಿಯೂ ಆದ ಯದುವು ಜ್ಯೇಷ್ಠನಾಗಿದ್ದನು.
ಪೂರುರ್ಯವೀಯಾಂಶ್ಚ ತತೋ ಯೋಽಸ್ಮಾಕಂ ವಂಶವರ್ಧನಃ |
ಶರ್ಮಿಷ್ಠಯಾ ಸಂಪ್ರಸೂತೋ ದುಹಿತ್ರಾ ವೃಷಪರ್ವಣಃ ॥5॥
ಕೊನೆಯವನು ನಮ್ಮ ವಂಶವರ್ಧನನಾದ ಪೂರು. ಅವನು ವೃಷಪರ್ವನ ದೌಹಿತ್ರನಾಗಿ ಶರ್ಮಿಷ್ಠೆಯಲ್ಲಿ ಜನಿಸಿದನು.
ಯದುಸ್ತು ಭರತಶ್ರೇಷ್ಠ ದೇವಯಾನ್ಯಾಃ ಸುತೋಽಭವತ್ |
ದೌಹಿತ್ರಸ್ತಾತ ಶುಕ್ರಸ್ಯ ಕಾವ್ಯಸ್ಯಾಮಿತತೇಜಸಃ ॥6॥
ಎಲೈ ಭರತಶ್ರೇಷ್ಠನೇ, ಯದುವಾದರೂ ದೇವಯಾನಿಯ ಪುತ್ರನಾಗಿದ್ದನು. ಅವನು ಅಮಿತಪರಾಕ್ರಮಿಗಳಾದ, ಕವಿಯ ಮಕ್ಕಳಾದ ಶುಕ್ರಾಚಾರ್ಯರ ದೌಹಿತ್ರನಾಗಿದ್ದನು.
ಯಾದವಾನಾಂ ಕುಲಕರೋ ಬಲವಾನ್ ವೀರ್ಯಸಮ್ಮತಃ |
ಅವಮೇನೇ ಸ ತು ಕ್ಷತ್ರಂ ದರ್ಪಪೂರ್ಣಃ ಸುಮಂದಧೀಃ ॥7॥
ಬಲಿಷ್ಠನೂ, ವೀರ್ಯಸಮ್ಮತನೂ, ಯಾದವರ ವಂಶವರ್ಧನನೂ ಆದ ಅವನು ಮಂದಬುದ್ಧಿಯುಳ್ಳವನಾಗಿ, ದರ್ಪಪೂರ್ಣನಾಗಿ ಕ್ಷತ್ರಿಯರನ್ನು ಅವಮಾನ ಮಾಡಿದನು.
ನ ಚಾತಿಷ್ಠತ್ ಪಿತುಃ ಶಾಸ್ತ್ರೇ ಬಲದರ್ಪವಿಮೋಹಿತಃ |
ಅವಮೇನೇ ಚ ಪಿತರಂ ಭ್ರಾತೄಂಶ್ಚಾಪ್ಯಪರಾಜಿತಃ ॥8॥
ತನ್ನ ಬಲ ಮತ್ತು ದರ್ಪಗಳಿಂದ ಮೋಹಿತನಾಗಿ ಅವನು ತಂದೆಯ ಶಾಸನವನ್ನು ನಡೆಸಿಕೊಡಲಿಲ್ಲ. ಅಪರಾಜಿತನಾದ ಅವನು ತಂದೆಯನ್ನೂ ಮತ್ತು ಸಹೋದರರನ್ನೂ ಅವಮಾನ ಮಾಡಿದನು.
ಪೃಥಿವ್ಯಾಂ ಚತುರಂತಾಯಾಂ ಯದುರೇವಾಭವದ್ ಬಲೀ |
ವಶೇ ಕೃತ್ವಾ ಸ ನೃಪತೀನ್ ನ್ಯವಸನ್ನಾಗಸಾಹ್ವಯೇ ॥9॥
ನಾಲ್ಕು ಸಮುದ್ರಗಳವರೆಗೆ ಹರಡಿದ ಭೂಮಿಯಲ್ಲಿ ಯದುವೇ ಬಲಿಷ್ಠನಾಗಿದ್ದನು. ಅವನು ರಾಜರನ್ನು ವಶಪಸಿಡಿಕೊಂಡು ಹಸ್ತಿನಪುರದಲ್ಲಿ ವಾಸವಾಗಿದ್ದನು.
ತಂ ಪಿತಾ ಪರಮಕ್ರುದ್ಧೋ ಯಯಾತಿರ್ನಹುಷಾತ್ಮಜಃ |
ಶಶಾಪ ಪುತ್ರಂ ಗಾಂಧಾರೇ ರಾಜ್ಯಾಚ್ಚ ವ್ಯವರೋಪಯತ್ ॥10॥
ಎಲೈ ಗಾಂಧಾರಿ ಪುತ್ರನೇ, ಅವನ ನಡತೆಯನ್ನು ನೋಡಿ ಪರಮಕೋಪಗೊಂಡ ನಹುಷಪುತ್ರನಾದ ತಂದೆಯಾದ ಯಯಾತಿಯು ಮಗನಾದ ಅವನಿಗೆ ಶಾಪವನ್ನು ಕೊಟ್ಟು ರಾಜ್ಯದಿಂದಲೇ ಚ್ಯುತಿಗೊಳಿಸಿದನು.
ಯೇ ಚೈನಮನ್ವವರ್ತಂತ ಭ್ರಾತರೋ ಬಲದರ್ಪಿತಮ್ |
ಶಶಾಪ ತಾನಪಿ ಕ್ರುದ್ಧೋ ಯಯಾತಿಸ್ತನಯಾನಥ ॥11॥
ಬಲದರ್ಪಿತವಾದ ಅವನನ್ನು ಅನುಸರಿಸಿದ ಅವನ ತಮ್ಮಂದಿರಿಗೂ ಕೋಪದಿಂದ ಶಾಪವನ್ನು ಕೊಟ್ಟನು.
ಯವೀಯಾಂಸಂ ತತಃ ಪೂರುಂ ಪುತ್ರಂ ತಂ ವಂಶವರ್ಧನಮ್ |

ರಾಜ್ಯೇ ನಿವೇಶಯಾಮಾಸ ವಿಧೇಯಂ ನೃಪಸತ್ತಮಃ ॥12॥
ನೃಪಶ್ರೇಷ್ಠನಾದ ಅವನು ಎಲ್ಲರಿಗಿಂತ ಚಿಕ್ಕವನೂ ಮತ್ತು ವಿಧೇಯನೂ, ವಂಶವರ್ಧನನೂ ಆದ ಪೂರುವನ್ನು ರಾಜ್ಯದಲ್ಲಿ ಸ್ಥಾಪಿಸಿದನು.
ಏವಂ ಜ್ಯೇಷ್ಠೋಽಪ್ಯಥೋತ್ಸಿಕ್ತೋ ನ ರಾಜ್ಯಮಭಿಪದ್ಯತೇ |
ಯವೀಯಾಂಸಃ ಪ್ರಪದ್ಯಂತೇ ರಾಜ್ಯಂ ವೃದ್ಧೋಪಸೇವಯಾ ॥13॥
ಹೀಗೆ ಜ್ಯೇಷ್ಠನಾದರೂ ಕೂಡ ಅಹಂಕಾರಿಯಾದವನು ರಾಜ್ಯವನ್ನು ಪಡೆಯುವುದಿಲ್ಲ. ಚಿಕ್ಕವರು ದೊಡ್ಡವರ ಸೇವೆಯನ್ನು ಮಾಡಿ ರಾಜ್ಯವನ್ನು ಪಡೆಯುತ್ತಾರೆ.
ತಥೈವ ಸರ್ವಧರ್ಮಜ್ಞಃ ಪಿತುರ್ಮಮ ಪಿತಾಮಹಃ |
ಪ್ರತೀಪಃ ಪೃಥಿವೀಪಾಲಃ ತ್ರಿಷು ಲೋಕೇಷು ವಿಶ್ರುತಃ ॥14॥
ಹಾಗೆಯೇ ನನ್ನ ತಂದೆಯ ಪಿತಾಮಹನಾದ ಪ್ರತೀಪನು ಸರ್ವಧರ್ಮವನ್ನು ತಿಳಿದವನಾಗಿ, ಮೂರುಲೋಕಗಳಲ್ಲೂ ವಿಖ್ಯಾತನಾದ ರಾಜನಾಗಿದ್ದನು.
ತಸ್ಯ ಪಾರ್ಥಿವಸಿಂಹಸ್ಯ ರಾಜ್ಯಂ ಧರ್ಮೇಣ ಶಾಸತಃ |
ತ್ರಯಃ ಪ್ರಜಜ್ಞಿರೇ ಪುತ್ರಾ ದೇವಕಲ್ಪಾ ಯಶಸ್ವಿನಃ ॥15॥
ದೇವಾಪಿರಭವಜ್ಜ್ಯೇಷ್ಠೋ ಬಾಹ್ಲೀಕಸ್ತದನಂತರಮ್ |
ತೃತೀಯಃ ಶಂತನುಸ್ತಾತ ಧೃತಿಮಾನ್ ಮೇ ಪಿತಾಮಹಃ ॥16॥
ಎಲೈ ಪ್ರೀತಿಪಾತ್ರನೇ, ಧರ್ಮದಿಂದ ರಾಜ್ಯವನ್ನು ಆಳುವ ರಾಜಸಿಂಹನಾದ ಅವನಿಗೆ ದೇವತೆಗಳಿಗೆ ಸಮಾನನಾದ ಕೀರ್ತಿವಂತರಾದ ದೇವಾಪಿ ಎಂಬ ಜ್ಯೇಷ್ಠಪುತ್ರನೂ ಅನಂತರ ಬಾಹ್ಲೀಕನೂ ಮತ್ತು ನನ್ನ ಪಿತಾಮಹನಾದ ಧೈರ್ಯಶಾಲಿಯಾದ ಮೂರನೆಯವನಾದ ಶಂತನುವೂ ಜನಿಸಿದರು.
ದೇವಾಪಿಸ್ತು ಮಹಾತೇಜಾಸ್ತ್ವಗ್ದೋಷೀ ರಾಜಸತ್ತಮ |
ಧಾರ್ಮಿಕಃ ಸತ್ಯವಾದೀ ಚ ಪಿತೃಶುಶ್ರೂಷಣೇ ರತಃ ॥17॥
ಎಲೈ ರಾಜಶ್ರೇಷ್ಠನೇ, ಮಹಾತೇಜಸ್ವಿಯಾದ ದೇವಾಪಿಯು ಧಾರ್ಮಿಕನೂ, ಸತ್ಯವಾದಿಯೂ, ತಂದೆಯ ಸೇವೆಯಲ್ಲಿ ನಿರತನೂ ಮತ್ತು ಚರ್ಮದೋಷ ಉಳ್ಳವನೂ ಆಗಿದ್ದನು.
ಪೌರಜಾನಪದಾನಾಂ ಚ ಸಮ್ಮತಃ ಸಾಧುಸತ್ಕೃತಃ |
ಸರ್ವೇಷಾಂ ಬಾಲವೃದ್ಧಾನಾಂ ದೇವಾಪಿರ್ಹೃದಯಂಗಮಃ ॥18॥
ದೇವಾಪಿಯು ಎಲ್ಲ ಪೌರಜಾನಪದರಿಗೂ ಸಮ್ಮತನಾದವನು. ಸಜ್ಜನರಿಂದ ಗೌರವಿಸಲ್ಪಟ್ಟವನು. ಎಲ್ಲ ಬಾಲಕರಿಗೂ ಮತ್ತು ವೃದ್ಧರಿಗೂ ಹೃದಯಂಗಮನಾದವನೂ ಆಗಿದ್ದನು.
ಪ್ರಾಜ್ಞಶ್ಚ ಸತ್ಯಸಂಧಶ್ಚ ಸರ್ವಭೂತಹಿತೇ ರತಃ |
ವರ್ತಮಾನಃ ಪಿತುಃ ಶಾಸ್ತ್ರೇ ಬ್ರಾಹ್ಮಣಾನಾಂ ತಥೈವ ಚ ॥19॥
ಅವನು ಪ್ರಾಜ್ಞನೂ, ಸತ್ಯಸಂಧನೂ, ಸರ್ವಪ್ರಾಣಿಗಳಲ್ಲಿ ದಯೆಯುಳ್ಳವನೂ, ತಂದೆಯ ಮತ್ತು ಬ್ರಾಹ್ಮಣರ ಆದೇಶವನ್ನು ಪಾಲಿಸುವವನೂ ಆಗಿದ್ದನು.
ಬಾಹ್ಲೀಕಶ್ಚ ಪ್ರಿಯೋ ಭ್ರಾತಾ ಶಂತನೋಶ್ಚ ಮಹಾತ್ಮನಃ |
ಸೌಭ್ರಾತ್ರಂ ಚ ಪರಂ ತೇಷಾಂ ಸಹಿತಾನಾಂ ಮಹಾತ್ಮನಾಮ್ ॥20॥
ಅವನು ಬಾಹ್ಲೀಕನಿಗೂ, ಮಹಾತ್ಮನಾದ ಶಂತನುವಿಗೂ ಪ್ರಿಯನಾದ ಅಣ್ಣನಾಗಿದ್ದನು. ಮಹಾತ್ಮರಾದ ಆ ಮೂರುಜನ ಅಣ್ಣ-ತಮ್ಮಂದಿರಿಗೆ ಶ್ರೇಷ್ಠವಾದ ಸೌಭ್ರಾತ್ರವಿದ್ದಿತು.
ಅಥ ಕಾಲಸ್ಯ ಪರ್ಯಾಯೇ ವೃದ್ಧೋ ನೃಪತಿಸತ್ತಮಃ |
ಸಂಭಾರಾನಭಿಷೇಕಾರ್ಥಂ ಕಾರಯಾಮಾಸ ಚ ಪ್ರಭುಃ ॥21॥
ಮಂಗಲಾನಿ ಚ ಸರ್ವಾಣಿ ಕಾರಯಾಮಾಸ ಚಾಭಿಭೂಃ ॥22॥
ಕಾಲಕ್ರಮದಲ್ಲಿ ವೃದ್ಧನಾದ ರಾಜಶ್ರೇಷ್ಠನೂ, ಶತ್ರುಗಳನ್ನು ಸೋಲಿಸುವವನೂ, ಪ್ರಭುವೂ ಆದ ಪ್ರತೀಪನು ದೇವಾಪಿಗೆ ಅಭಿಷೇಕ ಮಾಡುವ ಸಲುವಾಗಿ ಎಲ್ಲಾ ಮಂಗಳ ಪದಾರ್ಥಗಳನ್ನೂ ಅಣಿ ಮಾಡಿದನು.
ತಂ ಬ್ರಾಹ್ಮಣಾಶ್ಚ ವೃದ್ಧಾಶ್ಚ ಪೌರಜಾನಪದೈಃ ಸಹ |
ಸರ್ವೇ ನಿವಾರಯಾಮಾಸುರ್ದೇವಾಪೇರಭಿಷೇಚನಮ್ ॥23॥
ಆಗ ಬ್ರಾಹ್ಮಣರೂ, ವೃದ್ಧರೂ ಮತ್ತು ಪೌರಜಾನಪದರೆಲ್ಲರೂ ದೇವಾಪಿಗೆ ಅಭಿಷೇಕ ಮಾಡದಂತೆ ಅವನನ್ನು ತಡೆದರು.
ಸ ತಚ್ಛ್ರುತ್ವಾ ತು ನೃಪತಿರಭಿಷೇಕನಿವಾರಣಮ್ |
ಶಾಸ್ತ್ರಕಣ್ಠೋಽಭವದ್ ರಾಜಾ ಪರ್ಯಶೋಚತ ಚಾತ್ಮಜಮ್ ॥24॥
ಪ್ರಜೆಗಳ ಈ ಅಭಿಷೇಕ ನಿವಾರಣೆಯನ್ನು ಕೇಳಿದ ರಾಜನು ಚರ್ಮದೋಷ ಉಳ್ಳವನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಬಾರದು ಎಂಬ ಶಾಸ್ತ್ರದೃಷ್ಟಿಯುಳ್ಳವನಾಗಿ ಮಗನನ್ನು ಚಿಂತಿಸಿ ಶೋಕಪಟ್ಟನು.
ಏವಂ ವದಾನ್ಯೋ ಧರ್ಮಜ್ಞಃ ಸತ್ಯಸಂಧಶ್ಚ ಸೋಽಭಿಭೂಃ |
ಪ್ರಿಯಃ ಪ್ರಜಾನಾಮಪಿ ಸನ್ ತ್ವಗ್ದೋಷೇಣ ಪ್ರದೂಷಿತಃ ॥25॥
ಹೀಗೆ ಉದಾರಿಯೂ, ಧರ್ಮಜ್ಞನೂ, ಸತ್ಯಸಂಧನೂ, ಶತ್ರುಗಳನ್ನು ಸೋಲಿಸುವವನೂ, ಪ್ರಜೆಗಳಿಗೂ ಪ್ರಿಯನಾದವನೂ ಆದರೂ ತ್ವಗ್ದೋಷದಿಂದ ಅವನು ದೂಷಿತನಾದನು.

ಹೀನಾಂಗಂ ಪೃಥಿವೀಪಾಲಂ ನಾಭಿನಂದಂತಿ ದೇವತಾಃ |
ಇತಿ ಕೃತ್ವಾ ನೃಪಶ್ರೇಷ್ಠ ಪ್ರತ್ಯಷೇಧನ್ ದ್ವಿಜರ್ಷಭಾಃ ॥26॥
ಎಲೈ ನೃಪಶ್ರೇಷ್ಠನೇ, ಹೀನಾಂಗನಾದ ರಾಜನನ್ನು ದೇವತೆಗಳು ಅಭಿನಂದಿಸುವುದಿಲ್ಲ ಎಂದು ತಿಳಿದು ಬ್ರಾಹ್ಮಣಶ್ರೇಷ್ಠರು ಪ್ರತಿಷೇಧ ಮಾಡಿದರು.
ತತಃ ಪ್ರವ್ಯಥಿತಾಂಗೋಽಸೌ ಪುತ್ರಶೋಕಸಮನ್ವಿತಃ |
ಮಮಾರ ತಂ ಮೃತಂ ದೃಷ್ಟ್ವಾ ದೇವಾಪಿಃ ಸಂಶ್ರಿತೋ ವನಮ್ ॥27॥
ಅನಂತರ ಪುತ್ರಶೋಕ ಸಮನ್ವಿತನಾಗಿ ಪ್ರತೀಪನು ದೇಹಶೈಥಿಲ್ಯವನ್ನು ಹೊಂದಿ ಮರಣಹೊಂದಿದನು. ಮೃತನಾದ ತನ್ನ ತಂದೆಯನ್ನು ನೋಡಿ ದೇವಾಪಿಯು ಕಾಡಿಗೆ ಹೋದನು.
ಬಾಹ್ಲೀಕೋ ಮಾತುಲಕುಲೇ ತ್ಯಕ್ತತ್ವ ರಾಜ್ಯಂ ಸಮಾಶ್ರಿತಃ |
ಪಿತ್ರೂನ್ ಭ್ರಾತ್ರೂನ್ ಪರಿತ್ಯಜ್ಯ ಪ್ರಾಪ್ತವಾನ್ ಪರಮಧರ್ಮವಿತ್॥28॥
ಪರಮಧರ್ಮಜ್ಞನಾದ ಬಾಹ್ಲೀಕನು ತಂದೆಯನ್ನೂ, ಸಹೋದರರನ್ನೂ ಬಿಟ್ಟು ತನ್ನ ಸೋದರಮಾವನ ಮನೆಯಲ್ಲಿ ನಿವಾಸ ಮಾಡುತ್ತಾ ಅವನ ರಾಜ್ಯವನ್ನು ಪಡೆದನು.
ಬಾಹ್ಲೀಕೇನ ತ್ವನುಜ್ಞಾತಃ ಶಂತನುರ್ಲೋಕವಿಶ್ರುತಃ |
ಪಿತರ್ಯುಪರತೇ ರಾಜನ್ ರಾಜಾ ರಾಜ್ಯಮಕಾರಯತ್ ॥29॥
ಎಲೈ ರಾಜನೇ, ತಂದೆಯು ಮರಣ ಹೊಂದಿದ ಮೇಲೆ ಲೋಕವಿಖ್ಯಾತನಾದ ಶಂತನುವು ಅಣ್ಣನಾದ ಬಾಹ್ಲೀಕನ ಅನುಮತಿಯನ್ನು ಪಡೆದು ರಾಜನಾಗಿ ರಾಜ್ಯಭಾರವನ್ನು ಮಾಡಿದನು.
ತಥೈವಾಹಂ ಮತಿಮತಾ ಪರಿಚಿಂತ್ಯೇಹ ಪಾಂಡುನಾ |
ಜ್ಯೇಷ್ಠಃ ಪ್ರಭ್ರಂಶಿತೋ ರಾಜ್ಯಾದ್ಧೀನಾಂಗ ಇತಿ ಭಾರತ ॥30॥
ಪಾಂಡುಸ್ತು ರಾಜ್ಯಂ ಸಂಪ್ರಾಪ್ತಃ ಕನೀಯಾನಪಿ ಸನ್ ನೃಪಃ ॥31॥
ಎಲೈ ಭಾರತನೇ, ಹಾಗೆಯೇ ಮೇಧಾವಿಯಾದ ಪಾಂಡುವು ಇದನ್ನು ಚಿಂತಿಸಿ ನಾನು ಹೀನಾಂಗನಾಗಿರುವುದರಿಂದ ಜ್ಯೇಷ್ಠನಾದರೂ ರಾಜ್ಯಾಧಿಕಾರವಿಲ್ಲದವನು ಎಂದು ತಿಳಿದನು. ಅವನು ನನಗಿಂತ ಚಿಕ್ಕವನಾದರೂ ಪಾಂಡುವು ರಾಜ್ಯವನ್ನು ಪಡೆದನು.
ವಿನಾಶೇ ತಸ್ಯ ಪುತ್ರಾಣಾಮಿದಂ ರಾಜ್ಯಮರಿಂದಮ |
ಮಯ್ಯಭಾಗಿನಿ ರಾಜ್ಯಾಯ ಕಥಂ ತ್ವಂ ರಾಜ್ಯಮಿಚ್ಛಸಿ ॥32॥
ಅರಾಜಪುತ್ರೋ ಹ್ಯಸ್ವಾಮೀ ಪರಸ್ವಂ ಹರ್ತುಮಿಚ್ಛಸಿ ॥33॥
ಎಲೈ ಅರಿಂದಮನೇ, ನಾನೇ ರಾಜ್ಯಕ್ಕೆ ಭಾಗಿಯಲ್ಲದಿರುವಾಗ ಪಾಂಡುವು ವಿನಾಶವನ್ನು ಹೊಂದಿದರೆ ಈ ರಾಜ್ಯವು ಅವನ ಪುತ್ರರಿಗೆ ಸೇರಿದುದು. ರಾಜಪುತ್ರನಲ್ಲದ, ಸ್ವಾಮಿಯಲ್ಲದ ನೀನು ಹೇಗೆ ರಾಜ್ಯವನ್ನು ಬಯಸುತ್ತೀಯೆ? ನೀನು ಇನ್ನೊಬ್ಬರ ಸ್ವತ್ತನ್ನು ಅಪಹರಿಸಲು ಬಯಸುತ್ತಿದ್ದೀಯೆ ಅಷ್ಟೆ!
ಯುಧಿಷ್ಠಿರೋ ರಾಜಪುತ್ರೋ ಮಹಾತ್ಮಾ
ನ್ಯಾಯಾಗತಂ ರಾಜ್ಯಮಿದಂ ಚ ತಸ್ಯ |
ಸ ಕೌರವಸ್ಯಾಸ್ಯ ಕುಲಸ್ಯ ಭರ್ತಾ
ಪ್ರಶಾಸಿತಾ ಚೈವ ಮಹಾನುಭಾವಃ ॥34॥
ಮಹಾತ್ಮನಾದ ಯುಧಿಷ್ಠಿರನು ರಾಜಪುತ್ರ. ನ್ಯಾಯದಿಂದ ಪ್ರಾಪ್ತವಾದ ಈ ರಾಜ್ಯವು ಅವನಿಗೇ ಸೇರಿದುದು. ಮಹಾನುಭಾವನಾದ ಅವನು ಈ ಕೌರವ ಕುಲದ ಪೋಷಣೆಯನ್ನು ಮಾಡಿ ರಾಜ್ಯವನ್ನು ಆಳುವನು.
ಸ ಸತ್ಯಸಂಧಃ ಸತತಾಪ್ರಮತ್ತಃ
ಶಾಸ್ತ್ರೇ ಸ್ಥಿತೋ ಬಂಧುಜನಸ್ಯ ಸಾಧುಃ |
ಪ್ರಿಯಃ ಪ್ರಜಾನಾಂ ಸುಕೃತಾನುಕಂಪೀ
ಜಿತೇಂದ್ರಿಯಃ ಸಾಧುಜನಸ್ಯ ಭರ್ತಾ ॥35॥
ಅವನು ಸತ್ಯಸಂಧ, ಯಾವಾಗಲೂ ಎಚ್ಚರಿಕೆಯಿಂದ ಇರುವವನು, ಶಾಸ್ತ್ರದಲ್ಲಿಯೇ ಇರುವವನು, ಬಂಧುಜನರ ವಿಷಯದಲ್ಲಿ ಸಾಧುವಾಗಿರುವವನು, ಪ್ರಜೆಗಳಿಗೆ ಪ್ರಿಯನಾದವನು, ಒಳ್ಳೆಯ ಕಾರ್ಯ ಮಾಡಿದವರ ಮೇಲೆ ಅನುಕಂಪ ಉಳ್ಳವನು, ಜಿತೇಂದ್ರಿಯನಾದವನು ಮತ್ತು ಸಜ್ಜನರನ್ನು ಪೋಷಿಸುವವನು.
ಕ್ಷಮಾ ತಿತಿಕ್ಷಾ ದಮ ಆರ್ಜವಂ ಚ
ಸತ್ಯವ್ರತತ್ವಂ ಶ್ರುತಮಪ್ರಮಾದಃ |
ಭೂತಾನುಕಂಪಾ ಹ್ಯನುಶಾಸನಂ ಚ
ಯುಧಿಷ್ಠಿರೇ ರಾಜಗುಣಾಃ ಸಮಸ್ತಾಃ ॥36॥
ಯುಧಿಷ್ಠಿರನಲ್ಲಿ ಕ್ಷಮೆ, ಸಹನೆ, ದಮ, ಆರ್ಜವ, ಸತ್ಯವ್ರತ, ವಿದ್ಯೆ, ಜಾಗರೂಕತೆ, ಪ್ರಾಣಿದಯೆ, ವಿಧೇಯತೆ ಮೊದಲಾದ ಎಲ್ಲ ರಾಜಗುಣಗಳೂ ಇವೆ.
ಸ ರಾಜಪುತ್ರಸ್ತ್ವಮನಾರ್ಯವೃತ್ತೋ
ಲುಬ್ಧಃ ಸದಾ ಬಂಧುಷು ಪಾಪಬುದ್ಧಿಃ |
ಕ್ರಮಾಗತಂ ರಾಜ್ಯಮಿದಂ ಪರೇಷಾಂ
ಹರ್ತುಂ ಕಥಂ ಶಕ್ಷ್ಯಸಿ ದುರ್ವಿನೀತ ॥37॥

ಅವನು ರಾಜಪುತ್ರ, ನೀನು ಅನಾರ್ಯ ನಡವಳಿಕೆಯುಳ್ಳ ಲೋಭಿ, ಬಂಧುಗಳಿಗೆ ಸದಾ ಪಾಪವನ್ನು ಎಣಿಸುವವನು. ಎಲ್ಲೈ ದುರ್ವಿನೀತನೇ, ಅವರಿಗೆ ನ್ಯಾಯಪ್ರಾಪ್ತವಾದ ಈ ರಾಜ್ಯವನ್ನು ನೀನು ಹೇಗೆ ಅಪಹರಿಸಲು ಶಕ್ತನಾಗುತ್ತೀಯೆ?

ಪ್ರಯಚ್ಚ ರಾಜ್ಯಾರ್ಧಮಪೇತಮೋಹಃ
ಸವಾಹನಂ ತ್ವಂ ಸಪರಿಚ್ಛದಂ ಚ |
ತತೋಽವಶೇಷಂ ತವ ಜೀವಿತಸ್ಯ
ಸಹಾನುಜಸ್ಯೈವ ಭವೇನ್ನರೇಂದ್ರ ॥38॥

ಯಾವ ಮೋಹವನ್ನು ಹೊಂದದೆ ವಾಹನ ಮತ್ತು ಸಲಕರಣೆಗಳಿಂದ ಸಹಿತವಾದ ಅರ್ಧರಾಜ್ಯವನ್ನು ಪಾಂಡವರಿಗೆ ಕೊಡು. ಎಲ್ಲೈ ನರೇಂದ್ರನೇ, ಉಳಿದ ಭಾಗವು ನಿನ್ನ ಮತ್ತು ನಿನ್ನ ತಮ್ಮಂದಿರ ಜೀವನಕ್ಕೆ ಸಾಕಾಗುತ್ತದೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ದಶಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *

## ನೂರ ನಲವತ್ತೊಂಬತ್ತನೆಯ ಅಧ್ಯಾಯ

ಕೃಷ್ಣನಿಂದ ಸಭಾವೃತ್ತಾಂತ ಕಥನದ ಉಪಸಂಹಾರ.

ವಾಸುದೇವಃ
ಏವಮುಕ್ತೇ ತು ಭೀಷ್ಮೇಣ ದ್ರೋಣೇನ ವಿದುರೇಣ ಚ |
ಗಾಂಧಾರ್ಯಾ ಧೃತರಾಷ್ಟ್ರೇಣ ನ ವೈ ಮಂದೋಽನ್ವಬುಧ್ಯತ ॥1॥
ಅವಧೂಯೋತ್ಥಿತೋ ಮಂದಃ ಕ್ರೋಧಸಂರಕ್ತಲೋಚನಃ ॥2॥
ಅನ್ವದ್ರವಂತ ತಂ ಪಶ್ಚಾದ್ ರಾಜಾನಸ್ತ್ಯಕ್ತಜೀವಿತಾಃ ॥3॥

ವಾಸುದೇವ ಭೀಷ್ಮರು, ದ್ರೋಣರು, ವಿದುರನು, ಗಾಂಧಾರಿಯು ಮತ್ತು ಧೃತರಾಷ್ಟ್ರನು ಹೀಗೆ ಹೇಳಿದರೂ ಮಂದನಾದ ದುರ್ಯೋಧನನು ಯಾವುದನ್ನೂ ತಿಳಿಯಲಿಲ್ಲ (ಸ್ವೀಕರಿಸಲಿಲ್ಲ). ಅವನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಎಲ್ಲರನ್ನೂ ತಿರಸ್ಕರಿಸಿ ಎದ್ದನು. ಜೀವನವನ್ನು ತೊರೆಯಲು ಸಿದ್ಧರಾದ ರಾಜರು ಅವನನ್ನು ಹಿಂಬಾಲಿಸಿದರು.

ಆಜ್ಞಾಪಯಚ್ಚ ರಾಜ್ಞಸ್ತಾನ್ ಪಾರ್ಥಿವಾನ್ ನಷ್ಟಚೇತನಃ |
ಪ್ರಯಾಂತು ವೈ ಕುರುಕ್ಷೇತ್ರಮದ್ಯೈವೇತಿ ಪುನಃ ಪುನಃ ॥4॥

ನಷ್ಟಚೇತನನಾದ ಅವನು ಆ ರಾಜರನ್ನು ಕುರಿತು ಈ ದಿನವೇ ಕುರುಕ್ಷೇತ್ರಕ್ಕೆ ಹೊರಡಿ ಎಂದು ಪುನಃ ಪುನಃ ಆಜ್ಞಾಪಿಸಿದನು.

ಅಕ್ಷೋಹಿಣ್ಯೋ ದಶೈಕಾ ಚ ಪಾರ್ಥಿವಾನಾಂ ಸಮಾಗತಾಃ |
ತಾಸಾಂ ಪ್ರಮುಖತೋ ಭೀಷ್ಮಸ್ತಾಳಕೇತುರ್ವ್ಯರೋಚತ ॥5॥
ಯದತ್ರ ಯುಕ್ತಂ ಪ್ರಾಪ್ತಂ ಚ ತದ್ ವಿಧತ್ಸ್ವ ವಿಶಾಂಪತೇ ॥6॥

ಅಲ್ಲಿಗೆ ಪ್ರಾಪ್ತರಾದ ಹನ್ನೊಂದು ಅಕ್ಷೋಹಿಣಿ ರಾಜಸೈನ್ಯದ ಮುಂಭಾಗದಲ್ಲಿ ತಾಳಕೇತುವಾದ ಭೀಷ್ಮರು ಶೋಭಿಸಿದರು. ಎಲ್ಲೈ ರಾಜನಾದ ಯುಧಿಷ್ಠಿರನೇ, ಈ ಸಮಯದಲ್ಲಿ ಯಾವುದನ್ನು ಮಾಡಲು ಯೋಗ್ಯವಾಗಿದೆಯೋ ಅದನ್ನು ಮಾಡುವವನಾಗು.

ಉಕ್ತಂ ಭೀಷ್ಮೇಣ ಯದ್ವಾಕ್ಯಂ ದ್ರೋಣೇನ ವಿದುರೇಣ ಚ |
ಗಾಂಧಾರ್ಯಾ ಧೃತರಾಷ್ಟ್ರೇಣ ಸಮಕ್ಷಂ ಮಮ ಭಾರತ ॥7॥
ಏತತ್ ತೇ ಕಥಿತಂ ರಾಜನ್ ಯದ್ವೃತ್ತಂ ಕುರುಸಂಸದಿ ॥8॥

ಎಲ್ಲೈ ಭಾರತನೇ, ಎಲ್ಲೈ ರಾಜನೇ, ಭೀಷ್ಮರೂ, ದ್ರೋಣರೂ, ವಿದುರನೂ, ಗಾಂಧಾರಿಯೂ ಮತ್ತು ಧೃತರಾಷ್ಟ್ರನೂ ಸಭೆಯಲ್ಲಿ ನನ್ನ ಎದುರಿಗೆ ಏನು ಹೇಳಿದರೋ ಮತ್ತು ಕೌರವರ ಸಭೆಯಲ್ಲಿ ಯಾವ ವೃತ್ತಾಂತವು ಜರುಗಿತೋ ಅದನ್ನು ನಿನಗೆ ಹೇಳಿದ್ದೇನೆ.

ಸಾಮ ಚಾದೌ ಪ್ರಯುಕ್ತಂ ಮೇ ರಾಜನ್ ಸೌಭ್ರಾತ್ರಮಿಚ್ಛತಾ |
ಅಭೇದಾತ್ ಕುರುವಂಶಸ್ಯ ಪ್ರಜಾನಾಂ ಚ ವಿವೃದ್ಧಯೇ ॥9॥

ಎಲ್ಲೈ ರಾಜನೇ, ನಾನು ಸಹೋದರರ ಒಳ್ಳೆಯ ಸ್ನೇಹವನ್ನು ಬಯಸಿ, ಕುರುವಂಶವು ಒಡೆಯದಿರಲಿ ಎಂದು ಉದ್ದೇಶಿಸಿ, ಪ್ರಜೆಗಳ ಅಭಿವೃದ್ಧಿಗಾಗಿ ನಾನು ಮೊದಲು ಸಾಮೋಪಾಯವನ್ನೇ ಪ್ರಯೋಗಿಸಿದೆ.

ಪುನರ್ಭೇದಶ್ಚ ಮೇ ಯುಕ್ತೋ ಯದಾ ಸಾಮ ನ ಗೃಹ್ಯತೇ |
ಕರ್ಮಾನುಕೀರ್ತನಂ ಚೈವ ದೇವಮಾನುಷಸಂಹಿತಮ್ ॥10॥

ಅವನು ಸಾಮವನ್ನು ಸ್ವೀಕರಿಸದಿದ್ದಾಗ ದೇವ-ಮಾನುಷಯೋಗ್ಯವಾದ ಕರ್ಮಗಳನ್ನು ಹೇಳಿ ಭೇದೋಪಾಯವನ್ನು ಪ್ರಯೋಗಿಸಿದೆ.

ಯದಾ ನಾದ್ರಿಯತೇ ವಾಕ್ಯಂ ಸಾಮಪೂರ್ವಂ ಸುಯೋಧನಃ |
ತದಾ ಮಯಾ ಸಮಾನೀಯ ಭೇದಿತಾಃ ಸರ್ವಪಾರ್ಥಿವಾಃ ॥11॥

ಸುಯೋಧನನು ನನ್ನ ಸಾಮಪೂರ್ವಕವಾದ ವಾಕ್ಯಗಳನ್ನು ಸ್ವೀಕರಿಸದಿದ್ದಾಗ, ಎಲ್ಲಾ ರಾಜರುಗಳನ್ನೂ ಒಟ್ಟುಗೂಡಿಸಿ ಭೇದೋಪಾಯವನ್ನು ಮಾಡಿದೆ.

ಅದ್ಭುತಾನಿ ಚ ಘೋರಾಣಿ ದಾರುಣಾನಿ ಚ ಭಾರತ |
ಅಮಾನುಷಾಣಿ ಕರ್ಮಾಣಿ ದರ್ಶಿತಾನಿ ಮಯಾ ವಿಭೋ ॥12॥

ಎಲೈ ಭಾರತನೇ, ಎಲೈ ವಿಭುವೇ, (ಅರ್ಜುನನು ಮಾಡಿದ) ಅದ್ಭುತವಾದ, ಘೋರವಾದ ಮತ್ತು ಭಯಂಕರವಾದ ಅಮಾನುಷ ಕರ್ಮಗಳನ್ನು ನಾನು ತಿಳಿಸಿದೆ.
ನಿರ್ಭರ್ತ್ಸಯಿತ್ವಾ ರಾಜ್ಞಸ್ತಾನ್ ತೃಣೀಕೃತ್ಯ ಸುಯೋಧನಮ್ |
ರಾಧೇಯಂ ಭೀಷಯಿತ್ವಾ ಚ ಸೌಬಲಂ ಚ ಪುನಃ ಪುನಃ ॥13॥
ನ್ಯೂನತಾಂ ಧಾರ್ತರಾಷ್ಟ್ರಾಣಾಂ ನಿಂದಾಂ ಕೃತ್ವಾ ಪುನಃ ಪುನಃ |
ಭೇದಯಿತ್ವಾ ನೃಪಾನ್ ಸರ್ವಾನ್ ವಾಗ್ಭಿರ್ಮಂತ್ರೇಣ ಚಾಸಕೃತ್ ॥14॥
ಪುನಃ ಸಾಮಾಭಿಸಂಯುಕ್ತಂ ಸಂಪ್ರದಾನಮಥಾಬ್ರುವಮ್ |
ಅಭೇದಾತ್ ಕುರುವಂಶಸ್ಯ ಕಾರ್ಯಯೋಗಾತ್ ತಥೈವ ಚ ॥15॥
ಆ ರಾಜರನ್ನೆಲ್ಲಾ ಗದರಿಸಿ, ದುರ್ಯೋಧನನನ್ನು ತೃಣದಂತೆ ತಾತ್ಸಾರ ಮಾಡಿ, ಕರ್ಣನನ್ನೂ ಮತ್ತು ಶಕುನಿಯನ್ನೂ ಪುನಃ ಪುನಃ ಹೆದರಿಸಿ, ದುರ್ಯೋಧನಾದಿಗಳ ನ್ಯೂನತೆಯನ್ನು ಹೇಳಿ, ಪುನಃ ಪುನಃ ನಿಂದಿಸಿ, ಮಾತುಗಳಿಂದಲೂ ಮತ್ತು ಮಂತ್ರಾಲೋಚನೆಗಳಿಂದಲೂ ಎಲ್ಲ ರಾಜರನ್ನೂ ಭೇದಿಸಿ, ಪುನಃ ಕುರುವಂಶವು ಒಂದಾಗಿರಲಿ ಎಂಬ ಉದ್ದೇಶದಿಂದಲೂ, ಈಗ ಅವಶ್ಯಕವಾಗಿ ಮಾಡಬೇಕಾದ ಕಾರ್ಯ ಎಂಬ ದೃಷ್ಟಿಯಿಂದಲೂ ನಾನು ಪುನಃ ಸಾಮೋಪಾಯ ಯುಕ್ತವಾದ ಮಾತುಗಳಿಂದ ರಾಜ್ಯವನ್ನು ಕೊಡುವ ವಿಷಯವನ್ನು ಮಾತನಾಡಿದೆನು.
ತೇ ಶೂರಾ ಧೃತರಾಷ್ಟ್ರಸ್ಯ ಭೀಷ್ಮಸ್ಯ ವಿದುರಸ್ಯ ಚ |
ತಿಷ್ಠೇಯುಃ ಪಾಂಡವಾಃ ಸರ್ವೇ ಹಿತ್ವಾ ಮಾನಮಧಶ್ಚರಾಃ ॥16॥
ಪ್ರಯಚ್ಛಂತು ಚ ತೇ ರಾಜ್ಯಮನೀಶಾಸ್ತೇ ಭವಂತು ಚ |
ಯಥಾಽಽಹ ರಾಜಾ ಗಾಂಗೇಯೋ ವಿದುರಶ್ಚ ತಥಾಽಽಸ್ತು ತೇ ॥17॥
ಆ ಶೂರರಾದ ಪಾಂಡವರು ಅಹಂಕಾರವನ್ನು ತೊರೆದು ಧೃತರಾಷ್ಟ್ರನಿಗೆ, ಭೀಷ್ಮರಿಗೆ ಮತ್ತು ವಿದುರರಿಗೆ ಭೃತ್ಯರಾಗಿ ಇರುತ್ತಾರೆ. ಅವರಿಗೆ ರಾಜ್ಯವನ್ನು ಕೊಡು. ಭೀಷ್ಮ, ವಿದುರ ಮತ್ತು ಧೃತರಾಷ್ಟ್ರರಾಜನು ಹೇಳಿದಂತೆಯೇ ಆಗಲಿ.
ಸರ್ವಂ ಭವತು ತೇ ರಾಜ್ಯಂ ಪಂಚ ಗ್ರಾಮಾನ್ ವಿಸರ್ಜಯ |
ಅವಶ್ಯಂ ಭರಣೀಯಾ ಹಿ ಪಿತುಸ್ತೇ ರಾಜಸತ್ತಮ ॥18॥
ಎಲ್ಲ ರಾಜ್ಯವೂ ನಿನಗೆ ಇರಲಿ. ಐದುಗ್ರಾಮಗಳನ್ನು ಮಾತ್ರ ಅವರಿಗೆ ಕೊಡು. ಎಲೈ ರಾಜಶ್ರೇಷ್ಠನೇ, ನಿನ್ನ ತಂದೆಯು ಅವರನ್ನು ಪೋಷಿಸಬೇಕಷ್ಟೆ!
ಏವಮುಕ್ತೋಽಪಿ ದುಷ್ಟಾತ್ಮಾ ನೈವ ಭಾಗಂ ವ್ಯಮುಂಚತ |
ದಂಡಂ ಚತುರ್ಥಂ ಪಶ್ಯಾಮಿ ತೇಷು ಪಾಪೇಷು ನಾನ್ಯಥಾ ॥19॥
ನಾನು ಹೀಗೆ ಹೇಳಿದರೂ ಆ ದುಷ್ಟಾತ್ಮನು ಯಾವ ಭಾಗವನ್ನೂ ಬಿಟ್ಟುಕೊಡಲಿಲ್ಲ. ಆ ಪಾಪಿಗಳ ವಿಷಯದಲ್ಲಿ ನಾಲ್ಕನೆಯ ಉಪಾಯವಾದ ದಂಡವನ್ನೇ ಪ್ರಯೋಗಿಸಬೇಕೆಂದು ಭಾವಿಸುತ್ತೇನೆ. ಬೇರೆಯ ಮಾರ್ಗವಿಲ್ಲ.
ನಿರ್ಯಾತಾಶ್ಚ ವಿನಾಶಾಯ ಕುರುಕ್ಷೇತ್ರಂ ನರಾಧಿಪಾಃ |
ಏತತ್ ತೇ ಕಥಿತಂ ರಾಜನ್ ಯದ್‌ವೃತ್ತಂ ಕುರುಸಂಸದಿ ॥20॥
ಎಲ್ಲ ರಾಜರೂ ತಮ್ಮ ವಿನಾಶಕ್ಕಾಗಿ ಕುರುಕ್ಷೇತ್ರಕ್ಕೆ ಹೋಗಿದ್ದಾರೆ. ಎಲೈ ರಾಜನೇ, ಕೌರವರ ಸಭೆಯಲ್ಲಿ ನಡೆದ ಈ ವೃತ್ತಾಂತವನ್ನು ನಿನಗೆ ತಿಳಿಸಿದ್ದೇನೆ.
ನ ತೇ ರಾಜ್ಯಂ ಪ್ರಯಚ್ಛಂತಿ ವಿನಾ ಯುದ್ಧೇನ ಪಾಂಡವ |
ವಿನಾಶಹೇತವಃ ಸರ್ವೇ ಪ್ರತ್ಯುಪಸ್ಥಿತಮೃತ್ಯವಃ ॥21॥
ಎಲೈ ಪಾಂಡವನೇ, ಅವರು ಯುದ್ಧವಿಲ್ಲದೆ ರಾಜ್ಯವನ್ನು ಕೊಡುವುದಿಲ್ಲ. ಎಲ್ಲ ವಿನಾಶದ ಸೂಚನೆಗಳು ಸಮೀಪದಲ್ಲಿರುವ ಮೃತ್ಯುವನ್ನು ಸೂಚಿಸುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಪಂಚಾಶೋತ್ತರಶತತಮೋಽಧ್ಯಾಯಃ ॥
॥ ವಿವಾದಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ವಿವಾದ ಪರ್ವ ॥
* * * * *

8. ಸೈನ್ಯನಿರ್ಯಾಣಪರ್ವ

ನೂರ ಐವತ್ತನೆಯ ಅಧ್ಯಾಯ

ಕೃಷ್ಣವಚನದಂತೆ ಧೃಷ್ಟದ್ಯುಮ್ನನನ್ನು ಪಾಂಡವರ ಸೇನಾಪತಿಯಾಗಿ ನಿರ್ಧರಿಸಿ, ಕುರುಕ್ಷೇತ್ರದಲ್ಲಿ ಸೇನಾನಿವೇಶ.
ವೈಶಂಪಾಯನಃ
ಜನಾರ್ದನವಚಃ ಶ್ರುತ್ವಾ ಕುಂತೀಪುತ್ರೋ ಯುಧಿಷ್ಠಿರಃ |
ಭ್ರಾತೄನುವಾಚ ಧರ್ಮಾತ್ಮಾ ಸಮಕ್ಷಂ ಕೇಶವಸ್ಯ ಹ ॥1॥
ವೈಶಂಪಾಯನ ಕೃಷ್ಣನ ಮಾತುಗಳನ್ನು ಕೇಳಿ ಕುಂತೀಪುತ್ರನೂ, ಧರ್ಮಾತ್ಮನೂ ಆದ ಯುಧಿಷ್ಠಿರನು ಕೇಶವನ ಎದುರಿನಲ್ಲಿ

ತಮ್ಮಂದಿರನ್ನು ಕುರಿತು ಹೇಳಿದನು.
ಶ್ರುತಂ ಭವದ್ಭಿರ್ಯದ್ವೃತ್ತಂ ಸಭಾಯಾಂ ಕುರುಸಂಸದಿ |
ಕೇಶವಸ್ಯಾಪಿ ಯದ್ವಾಕ್ಯಂ ತತ್ ಸರ್ವಮವಧಾರಿತಮ್ ॥2॥
ತಸ್ಮಾತ್ ಸೇನಾವಿಭಾಗಂ ಮೇ ಕುರುಧ್ವಂ ನರಸತ್ತಮಾಃ ॥3॥
ಕೌರವರ ಸಭೆಯಲ್ಲಿ ನಡೆದ ವೃತ್ತಾಂತವನ್ನು ನೀವು ಕೇಳಿದ್ದೀರಿ. ಕೃಷ್ಣನು ಸಭೆಯಲ್ಲಿ ಆಡಿದ ಮಾತುಗಳನ್ನೂ ತಿಳಿದಿದ್ದೀರಿ.
ಆದ್ದರಿಂದ ನರಶ್ರೇಷ್ಠರಾದ ನೀವು ನಮ್ಮ ಸೈನ್ಯದ ವಿಭಾಗವನ್ನು ಮಾಡಿ.
ಅಕ್ಷೋಹಿಣ್ಯಶ್ಚ ಸಪ್ತೈತಾಃ ಸಮೇತಾ ವಿಜಯಾಯ ವೈ |
ತಾಸಾಂ ಯೇ ಪತಯಃ ಸಪ್ತ ವಿಖ್ಯಾತಾಸ್ತಾನ್ ನಿಬೋಧತ ॥4॥
ನಮ್ಮ ವಿಜಯಕ್ಕಾಗಿ ಏಳು ಅಕ್ಷೋಹಿಣಿ ಸೈನ್ಯವು ಒಂದುಗೂಡಿದೆ. ಆ ಸೈನ್ಯಗಳಿಗೆ ಪ್ರಖ್ಯಾತರಾದ ಏಳು ನಾಯಕರನ್ನು ತಿಳಿಯಿರಿ.
ದ್ರುಪದಶ್ಚ ವಿರಾಟಶ್ಚ ಧೃಷ್ಟದ್ಯುಮ್ನಶಿಖಂಡಿನೌ |
ಸಾತ್ಯಕಿಶ್ಚೇಕಿತಾನಶ್ಚ ಭೀಮಸೇನಶ್ಚ ವೀರ್ಯವಾನ್ ॥5॥
ಏತೇ ಸೇನಾಪ್ರಣೇತಾರೋ ವೀರಾಃ ಸರ್ವೇ ತನುತ್ಯಜಃ ॥6॥
ದ್ರುಪದ, ವಿರಾಟ, ಧೃಷ್ಟದ್ಯುಮ್ನ, ಶಿಖಂಡಿ, ಸಾತ್ಯಕಿ, ಚೇಕಿತಾನ, ಪರಾಕ್ರಮಶಾಲಿಯಾದ ಭೀಮಸೇನ, ಇವರೆಲ್ಲರೂ ಪ್ರಾಣವನ್ನು ತ್ಯಾಗ ಮಾಡಲು ಸಿದ್ಧರಿರುವ ಸೇನಾನಾಯಕರು.
ಸರ್ವೇ ವೇದವಿದಃ ಶೂರಾಃ ಸರ್ವೇ ಸುಚರಿತವ್ರತಾಃ |
ಹ್ರೀಮಂತೋ ನೀತಿಮಂತಶ್ಚ ಸರ್ವೇ ಯುದ್ಧವಿಶಾರದಾಃ ॥7॥
ಇಷ್ವಸ್ತ್ರಕುಶಲಾಶ್ಚೈವ ತಥಾ ಸರ್ವಾಸ್ತ್ರಯೋಧಿನಃ ॥8॥
ಎಲ್ಲರೂ ವೇದಜ್ಞರು, ಶೂರರು, ವ್ರತಗಳನ್ನು ಆಚರಿಸಿದವರು, ನಾಚಿಕೆ ಉಳ್ಳವರು, ನೀತಿವಂತರು, ಯುದ್ಧವಿಶಾರದರು, ಶಸ್ತ್ರಗಳಲ್ಲಿಯೂ ಮತ್ತು ಅರ್ಥಗಳಲ್ಲಿಯೂ ಕುಶಲರಾದವರು ಮತ್ತು ಸರ್ವಾಸ್ತ್ರಗಳಿಂದ ಯುದ್ಧವನ್ನು ಮಾಡುವವರು.
ಸಪ್ತಾನಾಮಪಿ ಯೋ ನೇತಾ ಸೇನಾನಾಂ ಪ್ರವಿಭಾಗವಿತ್ |
ಯಃ ಸಹೇತ ರಣೇ ಭೀಷ್ಮಂ ಶರಾರ್ಚಿಃ ಪಾವಕೋಪಮಮ್ ॥9॥
ತಂ ತಾವತ್ ಸಹದೇವಾತ್ರ ಪ್ರಬ್ರೂಹಿ ಕುರುನಂದನ |
ಸ್ವಮತಂ ಪುರುಷವ್ಯಾಘ್ರ ಕೋ ನಃ ಸೇನಾಪತಿಃ ಕ್ಷಮಃ ॥10॥
ಎಲೈ ಕುರುನಂದನನಾದ ಸಹದೇವನೇ, ಈ ಏಳು ನಾಯಕರಿಗೂ ಯಾವನು ನಾಯಕನಾಗಿರುತ್ತಾನೆಯೋ, ಯಾವನು ಸೈನ್ಯದ ವಿಭಾಗವನ್ನು ತಿಳಿದಿರುತ್ತಾನೆಯೋ, ಯಾವನು ಬಾಣಗಳೆಂಬ ಕಿಡಿಗಳನ್ನು ಉಗುಳುವ ಅಗ್ನಿಯಂತಿರುವ ಭೀಷ್ಮರನ್ನು ಯುದ್ಧದಲ್ಲಿ ಎದುರಿಸಿ ಸಹಿಸುತ್ತಾನೆಯೋ ಅಂತಹವನು ಯಾರೆಂದು ನಿನ್ನ ಅಭಿಪ್ರಾಯವನ್ನು ಹೇಳು. ಎಲೈ ಪುರುಷವ್ಯಾಘ್ರನೇ, ಯಾವನು ನಮಗೆ ಸೇನಾಪತಿಯಾಗಲು ಅರ್ಹನಾಗುತ್ತಾನೆ?
ಸಹದೇವಃ
ಸಂಯುಕ್ತ ಏವ ಪುತ್ರೈಶ್ಚ ಕೋಶವಾಂಶ್ಚ ಮಹೀಪತಿಃ ॥11॥
ಯಂ ಸಮಾಶ್ರಿತ್ಯ ಧರ್ಮಜ್ಞಂ ಸ್ವಮಂಶಮನುಯುಂಜ್ಮಹೇ |
ಮಾತ್ಸ್ಯೋ ವಿರಾಟೋ ಬಲವಾನ್ ಕೃತಾಸ್ತ್ರೋ ಯುದ್ಧದುರ್ಮದಃ ॥12॥
ಪ್ರಸಹಿಷ್ಯತಿ ಸಂಗ್ರಾಮೇ ಭೀಷ್ಮಂ ತಾಂಶ್ಚ ಮಹಾರಥಾನ್ ॥13॥
ಸಹದೇವ ಪುತ್ರರಿಂದಲೂ, ಕೋಶಗಳಿಂದಲೂ ಕೂಡಿದ ರಾಜನಾದ ಯಾವ ಧರ್ಮಜ್ಞನಾದ ಅವನನ್ನು ಆಶ್ರಯಿಸಿ, ನಾವು ನಮ್ಮ ರಾಜ್ಯಾಂಶವನ್ನು ಪಡೆಯುತ್ತಿದ್ದೇವೆಯೋ ಅಂತಹ ಬಲಿಷ್ಠನೂ, ಅಸ್ತ್ರಪಾರಂಗತನೂ, ಯುದ್ಧದುರ್ಮದನೂ ಆದ ಮತ್ಸ್ಯರಾಜನಾದ ವಿರಾಟನು ಯುದ್ಧದಲ್ಲಿ ಭೀಷ್ಮನನ್ನೂ ಮತ್ತು ಆ ಮಹಾರಥರನ್ನೂ ಸಹಿಸುವನು.
ವೈಶಂಪಾಯನಃ
ತಥೋಕ್ತೇ ಸಹದೇವೇನ ವಾಕ್ಯೇ ವಾಕ್ಯವಿಶಾರದಃ |
ನಕುಲೋಽನಂತರಂ ತಸ್ಮಾದಿದಂ ವಚನಮಾದದೇ ॥14॥
ವೈಶಂಪಾಯನ ಸಹದೇವನು ಹಾಗೆ ಹೇಳುತ್ತಿರಲು ವಾಕ್ಯವಿಶಾರದನಾದ ನಕುಲನು ಅನಂತರ ಹೀಗೆ ಮಾತನಾಡಿದನು.
ವಯಸಾ ಶಾಸ್ತ್ರತೋ ಧೈರ್ಯಾತ್ ಕುಲೇನಾಭಿಜನೇನ ಚ |
ಹ್ರೀಮಾನ್ ಬಲಾನ್ವಿತಃ ಶ್ರೀಮಾನ್ ಸರ್ವಶಸ್ತ್ರಭೃತಾಂ ವರಃ ॥15॥
ವೇದ ಚಾಸ್ತ್ರಂ ಭರದ್ವಾಜಾದ್ ದುರ್ಧರ್ಷಃ ಸತ್ಯಸಂಗರಃ ॥16॥
ವಯಸ್ಸಿನಿಂದಲೂ, ಶಾಸ್ತ್ರದಿಂದಲೂ, ಧೈರ್ಯದಿಂದಲೂ, ಒಳ್ಳೆಯ ಕುಲದಲ್ಲಿ ಜನ್ಮದಿಂದಲೂ ಕೂಡಿರುವ, ನಾಚಿಕೆಯುಳ್ಳವನೂ, ಬಲಿಷ್ಠನೂ, ಕಾಂತಿಯುಕ್ತನೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ, ಭರದ್ವಾಜರಿಂದ ಅಸ್ತ್ರವಿದ್ಯೆಯನ್ನು ಸಂಪಾದಿಸಿದವನೂ, ಸತ್ಯಸಂಗರನೂ, ದುರ್ಧರ್ಷನೂ (ಆದ);
ಯೋ ನಿತ್ಯಂ ಸ್ಪರ್ಧತೇ ದ್ರೋಣಂ ಭೀಷ್ಮಂ ಚೈವ ಮಹಾಬಲಃ |
ಶ್ಲಾಘ್ಯಃ ಪಾರ್ಥಿವಸಂಘಸ್ಯ ಪ್ರಮುಖೋ ವಾಹಿನೀಪತಿಃ ॥17॥
ಪುತ್ರಪೌತ್ರೈಃ ಪರಿವೃತಃ ಶತಶಾಖ ಇವ ದ್ರುಮಃ |
ಯಸ್ತತಾಪ ತಪೋ ಘೋರಂ ಸದಾರಃ ಪೃಥಿವೀಪತಿಃ ॥18॥
ರೋಷಾದ್ ದ್ರೋಣವಿನಾಶಾಯ ವೀರಃ ಸಮಿತಿಶೋಭನಃ |

ಪಿತೇವಾಸ್ಮಾನ್ ಸಮಾಧತ್ತ ಯಃ ಸದಾ ಪಾರ್ಥಿವರ್ಷಭಃ ॥19॥
ಯಾವ ಮಹಾಬಲನು ನಿತ್ಯವೂ ದ್ರೋಣರ ಮತ್ತು ಭೀಷ್ಮರ ಜೊತೆಯಲ್ಲಿ ಸ್ಪರ್ಧಿಸುವವನೋ, ಯಾವನು ಸೇನಾನಾಯಕನಾಗಿ ರಾಜರ ಮುಂಭಾಗದಲ್ಲಿ ಶ್ಲಾಘನೀಯನೋ, ನೂರು ಕೊಂಬೆಗಳಿರುವ ವೃಕ್ಷದಂತೆ ಪುತ್ರ-ಪೌತ್ರರಿಂದ ಕೂಡಿದವನೋ, ಯಾವನು ರೋಷದಿಂದ ದ್ರೋಣರ ವಿನಾಶಕ್ಕಾಗಿ ಪತ್ನಿಯ ಜೊತೆಯಲ್ಲಿ ಘೋರವಾದ ತಪಸ್ಸನ್ನು ಆಚರಿಸಿದನೋ, ಯಾವನು ವೀರನೋ, ಯುದ್ಧದಲ್ಲಿ ಶೋಭಿಸುವವನೋ, ಯಾವ ರಾಜಶ್ರೇಷ್ಠನು ತಂದೆಯಂತೆ ಯಾವಾಗಲೂ ನಮಗೆ ಸಮಾಧಾನ ಮಾಡುವನೋ;
ಶ್ವಶುರೋ ದ್ರುಪದೋಽಸ್ಮಾಕಂ ಸೇನಾಮಗ್ರೇ ಪ್ರಕರ್ಷತು |
ಸ ದ್ರೋಣಭೀಷ್ಮಾವಾಯಾತೌ ಸಹೇದಿತಿ ಮತಿರ್ಮಮ ॥20॥
ಸ ಹಿ ದಿವ್ಯಾಸ್ತ್ರವಿದ್ ರಾಜಾ ಸಖಾ ಚಾಂಗಿರಸೋ ನೃಪ ॥21॥
ಅಂತಹ ನಮ್ಮ ಮಾವನಾದ ದ್ರುಪದನು ಸೇನಾನಾಯಕನಾಗಿ ಸೇನೆಯನ್ನು ನಡೆಸಲಿ. ಅವನು ದ್ರೋಣ-ಭೀಷ್ಮರು ಒಟ್ಟಿಗೆ ಬಂದರೂ ಅವರನ್ನು ಸಹಿಸಿಯಾನು ಎಂದು ನನ್ನ ಅಭಿಪ್ರಾಯ. ಎಲೈ ರಾಜನೇ, ಆ ರಾಜನು ದಿವ್ಯಾಸ್ತ್ರವನ್ನು ಬಲ್ಲವನು ಮತ್ತು ಕೃಪರಿಗೆ ಮಿತ್ರನಾದವನು.
ವೈಶಂಪಾಯನಃ
ಮಾದ್ರೀಸುತಾಭ್ಯಾಮುಕ್ತೇ ತು ಸ್ವಮತೇ ಕುರುನಂದನಃ |
ವಾಸವಿರ್ವಾಸವಸಮಃ ಸವ್ಯಸಾಚ್ಯಬ್ರವೀದಿದಮ್ ॥22॥
ವೈಶಂಪಾಯನ ಮಾದ್ರೀಪುತ್ರರಾದ ನಕುಲ-ಸಹದೇವರು ತಮ್ಮ ಅಭಿಪ್ರಾಯವನ್ನು ಹೇಳಿದ ಮೇಲೆ ಕುರುನಂದನನೂ, ಇಂದ್ರನ ಪುತ್ರನೂ, ಇಂದ್ರನಿಗೆ ಸಮಾನನಾದವನೂ ಆದ ಸವ್ಯಸಾಚಿಯಾದ ಅರ್ಜುನನು ಈ ಮಾತನ್ನು ಆಡಿದನು.
ಯೋಽಯಂ ತಪಃಪ್ರಭಾವೇಣ ಋಷಿಸಂತೋಷಣೇನ ಚ |
ದಿವ್ಯಃ ಪುರುಷ ಉತ್ಪನ್ನೋ ಜ್ವಾಲಾವರ್ಣೋ ಮಹಾಬಲಃ ॥23॥
ಧನುಷ್ಮಾನ್ ಕವಚೀ ಖಡ್ಗೀ ರಥಮಾರುಹ್ಯ ದಂಸಿತಃ |
ದಿವ್ಯೈರ್ಹಯವರೈರ್ಯುಕ್ತಮಗ್ನಿಕುಂಡಾತ್ ಸಮುತ್ಥಿತಃ ॥24॥
ಯಾವನು ದ್ರುಪದನ ತಪಸ್ಸಿನ ಪ್ರಭಾವದಿಂದಲೂ, ಋಷಿಗಳ ಅನುಗ್ರಹದಿಂದಲೂ ಮಹಾಬಲನಾಗಿ, ಅಗ್ನಿಜ್ವಾಲೆಯ ವರ್ಣಗಳಿಂದ ಕೂಡಿದವನಾಗಿ, ಧನುಸ್ಸು-ಕವಚ- ಖಡ್ಗಗಳನ್ನು ಧರಿಸಿ, ದಿವ್ಯವಾದ ಅಶ್ವಗಳಿಂದ ಹೂಡಿದ ರಥದಲ್ಲಿ ಸನ್ನದ್ಧನಾಗಿ ಕುಳಿತು ಅಗ್ನಿಕುಂಡದಿಂದ ಮೇಲೆದ್ದು ಬಂದನೋ;
ಗರ್ಜನ್ನಿವ ಮಹಾಮೇಘೋ ರಥಘೋಷೇಣ ವೀರ್ಯವಾನ್ |
ಸಿಂಹಸಂಹನನೋ ವೀರಃ ಸಿಂಹವಿಕ್ರಾಂತವಿಕ್ರಮಃ ॥25॥
ಸಿಂಹೋರಸ್ಕೋ ಮಹಾಬಾಹುಃ ಸಿಂಹವಕ್ಷಾ ಮಹಾಬಲಃ |
ಸಿಂಹವದ್ ಗರ್ಜಿತೋ ವೀರಃ ಸಿಂಹಸ್ಕಂಧೋ ಮಹಾದ್ಯುತಿಃ ॥26॥
ಯಾವ ಪರಾಕ್ರಮಶಾಲಿಯಾದ ಅವನು ರಥಘೋಷದಿಂದ ಮಹಾಮೇಘದಂತೆ ಗರ್ಜಿಸುವವನೋ, ಸಿಂಹದ ದೇಹದ ಮಾಟವನ್ನು ಹೊಂದಿರುವನೋ, ವೀರನೋ, ಸಿಂಹದ ಪರಾಕ್ರಮವನ್ನು ಹೊಂದಿರುವವನೋ, ಸಿಂಹದ ಎದೆ, ಸಿಂಹದ ಗರ್ಜನೆ, ಸಿಂಹದ ಭುಜವನ್ನು ಹೊಂದಿರುವ ಮಹಾಬಾಹುವೂ, ಮಹಾಬಲನೂ, ಮಹಾಕಾಂತಿಯುಕ್ತನೂ ಮತ್ತು ವೀರನೂ ಆಗಿದ್ದಾನೆಯೋ;
ಸುಭ್ರೂಃ ಸುದಂಷ್ಟ್ರಃ ಸುತನುಃ ಸುನಸಃ ಸುಮುಖೋಽಕೃಶಃ |
ಸುಜತ್ರುಃ ಸುವಿಶಾಲಾಕ್ಷಃ ಸುಪಾದಃ ಸುಪ್ರತಿಷ್ಠಿತಃ ॥27॥
ಅಭೇದ್ಯಃ ಸರ್ವಶಸ್ತ್ರಾಣಾಂ ಪ್ರಭಿನ್ನ ಇವ ವಾರಣಃ |
ಜಜ್ಞೇ ದ್ರೋಣವಿನಾಶಾಯ ಸತ್ಯವಾದೀ ಜಿತೇಂದ್ರಿಯಃ ॥28॥
ಧೃಷ್ಟದ್ಯುಮ್ನಮಹಂ ಮನ್ಯೇ ಸಹೇದ್ ಭೀಷ್ಮಸ್ಯ ಸಾಯಕಾನ್ ॥29॥
ಒಳ್ಳೆಯ ಹುಬ್ಬು, ಒಳ್ಳೆಯ ದಂತಗಳು, ಒಳ್ಳೆಯ ಶರೀರ, ನಾಸಿಕ, ಮುಖ, ಸ್ಥೌಲ್ಯವಿಲ್ಲದ ಶರೀರ, ಒಳ್ಳೆಯ ಪಕ್ಕೆಗಳು, ವಿಶಾಲವಾದ ನಯನಗಳು, ಒಳ್ಳೆಯ ಪಾದಗಳನ್ನು ಹೊಂದಿ ಮದಿಸಿದ ಗಜದಂತೆ ಎಲ್ಲಾ ಶಸ್ತ್ರಗಳಿಂದಲೂ ಅಭೇದ್ಯನಾಗಿ ಪ್ರತಿಷ್ಠಿತನಾಗಿದ್ದಾನೆಯೋ, ಯಾವಾತನು ದ್ರೋಣರ ವಿನಾಶಕ್ಕಾಗಿಯೇ ಅವತರಿಸಿದ್ದಾನೆಯೋ ಅಂತಹ ಸತ್ಯವಾದಿಯೂ, ಜಿತೇಂದ್ರಿಯನೂ ಆದ ಧೃಷ್ಟದ್ಯುಮ್ನನು ಭೀಷ್ಮನ ಬಾಣಗಳನ್ನು ಸಹಿಸುವನು ಎಂದು ನನ್ನ ಅಭಿಪ್ರಾಯ.
ವಜ್ರಾಶನಿಸಮಸ್ಪರ್ಶಾನ್ ದೀಪ್ತಾಸ್ಯಾನುರಗಾನಿವ |
ಯಮದೂತಸಮಾನ್ ವೇಗೇ ನಿಪಾತೇ ಪಾವಕೋಪಮಾನ್ ॥30॥
ರಾಮೇಣಾಜೌ ವಿಷಹಿತಾನ್ ವಜ್ರನಿಷ್ಪೇಷದಾರುಣಾನ್ ॥31॥
ಪುರುಷಂ ತಂ ನ ಪಶ್ಯಾಮಿ ಯಃ ಸಹೇತ ಮಹಾವ್ರತಮ್ |
ಧೃಷ್ಟದ್ಯುಮ್ನಮೃತೇ ರಾಜನ್ನಿತಿ ಮೇ ಧೀಯತೇ ಮತಿಃ ॥32॥
ವಜ್ರಾಯುಧ ಮತ್ತು ಸಿಡಿಲುಗಳಿಗೆ ಸಮಾನವಾದ ಸ್ಪರ್ಶವುಳ್ಳ, ಜ್ವಲಿಸುವ ಮುಖವುಳ್ಳ ಸರ್ಪಗಳಂತಿರುವ, ವೇಗದಲ್ಲಿ ಯಮದೂತನಿಗೆ ಸಮಾನನಾದ, ಮೇಲೆ ಎರಗುವುದರಲ್ಲಿ ಅಗ್ನಿಗೆ ಸಮಾನನಾದ, ಪರಶುರಾಮರನ್ನು ಯುದ್ಧದಲ್ಲಿ ಸಹಿಸಿದ, ವಜ್ರಪಾತದಂತೆ ಕಠೋರವಾದ ಭೀಷ್ಮರ ಬಾಣಗಳನ್ನು ಸಹಿಸುವ ಪುರುಷನು ಧೃಷ್ಟದ್ಯುಮ್ನನನ್ನು ಬಿಟ್ಟು ಬೇರೆ ಇನ್ನೊಬ್ಬರನ್ನು ನಾನು ಕಾಣುತ್ತಿಲ್ಲ ಎಂದು ಅಭಿಪ್ರಾಯ.
ಕ್ಷಿಪ್ರಹಸ್ತಃ ಕ್ಷಿಪ್ರಯೋಧೀ ಮತಃ ಸೇನಾಪತಿರ್ಮಮ |
ಅಭೇದ್ಯಕವಚಃ ಶ್ರೀಮಾನ್ ಮಾತಂಗ ಇವ ಯೂಥಪಃ ॥33॥

ಕ್ಷಿಪ್ರಹಸ್ತನೂ, ಕ್ಷಿಪ್ರವಾಗಿ ಯುದ್ಧವನ್ನು ಮಾಡುವವನೂ, ಅಭೇದ್ಯವಾದ ಕವಚವುಳ್ಳವನೂ, ಕಾಂತಿಯುಕ್ತನಾದ ಗಜದಂತೆ ಯೂಥಪತಿಯೂ ಆದ ಧೃಷ್ಟದ್ಯುಮ್ನನು ಸೇನಾಪತಿಯಾಗಲಿ ಎಂದು ನನ್ನ ಅಭಿಪ್ರಾಯ.
ವೈಶಂಪಾಯನಃ
ಅರ್ಜುನೇನೈವಮುಕ್ತೇ ತು ಭೀಮೋ ವಾಕ್ಯಂ ಸಮಾದದೇ ॥34॥
ವೈಶಂಪಾಯನ ಅರ್ಜುನನು ಹೀಗೆ ಹೇಳಿದ ಮೇಲೆ ಭೀಮನು ಮಾತನಾಡಿದನು.
ವಧಾರ್ಥಂ ಯಃ ಸಮುತ್ಪನ್ನಃ ಶಿಖಂಡೀ ದ್ರುಪದಾತ್ಮಜಃ ॥35॥
ವದಂತಿ ಸಿದ್ಧಾ ರಾಜೇಂದ್ರ ಋಷಯಶ್ಚ ಸಮಾಗತಾಃ।
ಯಸ್ಯ ಸಂಗ್ರಾಮಮಧ್ಯೇಷು ದಿವ್ಯಮಸ್ತ್ರಂ ಪ್ರಕುರ್ವತಃ ॥36॥
ರೂಪಂ ದ್ರಕ್ಷ್ಯಂತಿ ಪುರುಷಾ ರಾಮಸ್ಯೇವ ಮಹಾತ್ಮನಃ ॥37॥
ನ ತಂ ಯುದ್ಧೇ ಪ್ರಪಶ್ಯಾಮಿ ಯೋ ಯುದ್ಧ್ಯೇತ್ತು ಶಿಖಂಡಿನಾ ॥38॥
ಯಾವನು ಭೀಷ್ಮರ ವಧೆಗಾಗಿಯೇ ಶಿಖಂಡಿಯಾಗಿ ದ್ರುಪದನಿಗೆ ಜನಿಸಿದ್ದಾನೆಂದು ಸಿದ್ಧರು ಮತ್ತು ಸಮಾಗತ ಋಷಿಗಳು ಹೇಳುತ್ತಾರೆಯೋ, ಯುದ್ಧದ ಮಧ್ಯದಲ್ಲಿ ಯಾವ ಮಹಾತ್ಮನು ಪ್ರಯೋಗಿಸುವ ಅಸ್ತ್ರಗಳನ್ನು ಪ್ರತಿವೀರರು ಪರಶುರಾಮರ ಅಸ್ತ್ರಗಳಂತೆ ಕಾಣುವರೋ ಅಂತಹ ಶಿಖಂಡಿಯ ಜೊತೆಯಲ್ಲಿ ಯುದ್ಧ ಮಾಡುವವರನ್ನು ನಾನು ಬೇರೆ ಯಾರನ್ನೂ ಕಾಣುತ್ತಿಲ್ಲ.
ಶಸ್ತ್ರೇಣ ಸಮರೇ ರಾಜನ್ ಸನ್ನದ್ಧಂ ಸ್ಯಂದನೇ ಸ್ಥಿತಮ್।
ದ್ವೈರಥೇ ವಿಷಹೇತಾಸೌ ಭೀಷ್ಮಂ ರಾಜನ್ ಮಹಾವ್ರತಮ್ ॥39॥
ಶಿಖಂಡಿನಮೃತೇ ರಾಜನ್ ನ ಮೇ ಸೇನಾಪತಿರ್ಮತಃ ॥40॥
ಎಲೈ ರಾಜನೇ, ರಥದಲ್ಲಿ ಕುಳಿತು ಶಸ್ತ್ರದಿಂದ ಸನ್ನದ್ಧನಾಗಿ ಅವನು ದ್ವೈರಥ ಯುದ್ಧದಲ್ಲಿ ಮಹಾವ್ರತನಾದ ಭೀಷ್ಮನನ್ನು ಎದುರಿಸುವನು. ಎಲೈ ರಾಜನೇ, ಶಿಖಂಡಿಯನ್ನು ಬಿಟ್ಟು ನನಗೆ ಯಾರೂ ಸೇನಾಪತಿಯಾಗಿ ಸಮ್ಮತರಲ್ಲ.
ಯುಧಿಷ್ಠಿರಃ
ಸರ್ವಸ್ಯ ಜಗತಸ್ತಾತ ಸಾರಾಸಾರಂ ಬಲಾಬಲಮ್।
ಸರ್ವಂ ಜಾನಾತಿ ಧರ್ಮಾತ್ಮಾ ಗತಮೇಷ್ಯಚ್ಚ ಕೇಶವಃ ॥41॥
ಯಮಾಹ ಕೃಷ್ಣೋ ದಾಶಾರ್ಹಃ ಸೋಽಸ್ತು ಸೇನಾಪತಿರ್ಮಮ।
ಕೃತಾಸೊತ್ರೇಽಪ್ಯಕೃತಾಸೊತ್ರೇ ವಾ ವೃದ್ಧೋ ವಾ ಯದಿ ವಾ ಯುವಾ ॥42॥
ಯುಧಿಷ್ಠಿರ ಎಲೈ ಪ್ರೀತಿಪಾತ್ರನೇ, ಧರ್ಮಾತ್ಮನಾದ ಕೇಶವನು ಜಗತ್ತಿನ ಸಾರಾಸಾರಗಳನ್ನೂ, ಬಲಾಬಲಗಳನ್ನೂ, ಭೂತ-ಭವಿಷ್ಯತ್‌ಗಳನ್ನೂ ತಿಳಿದಿದ್ದಾನೆ. ದಾಶಾರ್ಹನಾದ ಕೃಷ್ಣನು ಯಾರನ್ನು ಹೇಳುತ್ತಾನೆಯೋ ಅವನು ಅಸ್ತ್ರಜ್ಞನಾಗಿರಲಿ ಅಥವಾ ಇಲ್ಲದಿರಲಿ, ವೃದ್ಧನಾಗಲಿ ಅಥವಾ ಯುವಕನಾಗಲಿ, ಅವನೇ ಸೇನಾಪತಿ ಆಗಲಿ ಎಂದು ನನ್ನ ಅಭಿಪ್ರಾಯ.
ಏಷ ಮೇ ವಿಜಯೇ ಮೂಲಮೇಷ ತಾತ ವಿಪರ್ಯಯೇ।
ಅತ್ರ ಪ್ರಾಣಾಶ್ಚ ರಾಜ್ಯಂ ಚ ಲಾಭಾಲಾಭೌ ಸುಖಾಸುಖೇ ॥43॥
ಏಷ ಧಾತಾ ವಿಧಾತಾ ಚ ಸಿದ್ಧಿರತ್ರ ಪ್ರತಿಷ್ಠಿತಾ ॥44॥
ಎಲೈ ಪ್ರೀತಿಪಾತ್ರನೇ, ಈ ಕೇಶವನೇ ನಮ್ಮ ವಿಜಯಕ್ಕೆ ಅಥವಾ ಅದಕ್ಕೆ ವಿರುದ್ಧವಾದ ಸೋಲಿಗೆ ಮೂಲಕಾರಣನಾದವನು. ನಮ್ಮ ಪ್ರಾಣವೂ, ರಾಜ್ಯವೂ, ಲಾಭಾಲಾಭಗಳೂ, ಸುಖ-ದುಃಖಗಳೂ ಎಲ್ಲವೂ ಅವನನ್ನು ಆಶ್ರಯಿಸಿವೆ. ಇವನೇ ನಮಗೆ ಧಾತಾ (ನಾರಾಯಣ), ವಿಧಾತಾ (ಬ್ರಹ್ಮ). ನಮ್ಮ ಸಿದ್ಧಿಯು ಇವನನ್ನೇ ಅವಲಂಬಿಸಿದೆ.
ಯಮಾಹ ಕೃಷ್ಣೋ ದಾಶಾರ್ಹಃ ಸ ನಃ ಸೇನಾಪತಿಃ ಕ್ಷಮಃ।
ಬ್ರವೀತು ವದತಾಂ ಶ್ರೇಷ್ಠೋ ನಿಶಾ ಸಮಭಿವರ್ತತೇ ॥45॥
ದಾಶಾರ್ಹನಾದ ಕೃಷ್ಣನು ಯಾರನ್ನು ಹೇಳುತ್ತಾನೆಯೋ ಅವನೇ ನಮಗೆ ಸಮರ್ಥನಾದ ಸೇನಾಪತಿ. ಮಾತನಾಡುವವರಲ್ಲಿ ಶ್ರೇಷ್ಠನಾದ ಕೃಷ್ಣನು ತನ್ನ ಅಭಿಪ್ರಾಯವನ್ನು ಹೇಳಲಿ. ರಾತ್ರಿಯು ಬೇಗ ಮುಂದುವರಿಯುತ್ತಿದೆ.
ತತಃ ಸೇನಾಪತಿಂ ಕೃತ್ವಾ ಕೃಷ್ಣಸ್ಯ ವಶವರ್ತಿನಃ।
ರಾತ್ರಿಶೇಷೇ ವ್ಯತಿಕ್ರಾಂತೇ ಪ್ರಯಾಸ್ಯಾಮೋ ರಣಾಜಿರಮ್ ॥46॥
ಅಧಿವಾಸಿತಶಸತ್ರಶ್ಚ ಕೃತಕೌತುಕಮಂಗಲಾಃ ॥47॥
ಅನಂತರ ಕೃಷ್ಣನಿಗೆ ವಶವರ್ತಿಯಾದವನನ್ನು ಸೇನಾಪತಿಯಾಗಿ ಮಾಡಿ, ರಾತ್ರಿಯ ಉಳಿದ ಭಾಗವು ಕಳೆದ ಮೇಲೆ, ಶಸ್ತ್ರಗಳ ಅಧಿವಾಸನವನ್ನು ಮಾಡಿ ಮಂಗಳಕಾರ್ಯಗಳನ್ನು ಆಚರಿಸಿ ನಾವು ರಣರಂಗಕ್ಕೆ ಹೋಗೋಣ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಧರ್ಮರಾಜಸ್ಯ ಧೀಮತಃ।
ಅಬ್ರವೀತ್ ಪುಂಡರೀಕಾಕ್ಷೋ ಧನಂಜಯಮವೇಕ್ಷ್ಯ ಹ ॥48॥
ವೈಶಂಪಾಯನ ಮೇಧಾವಿಯಾದ ಧರ್ಮರಾಜನ ಆ ಮಾತುಗಳನ್ನು ಕೇಳಿ ಪುಂಡರೀಕಾಕ್ಷನು ಅರ್ಜುನನನ್ನು ನೋಡುತ್ತಾ ಮಾತನಾಡಿದನು.
ಮಮಾಪ್ಯೇತೇ ಮಹಾರಾಜ ಭವದ್ಭಿರ್ಯ ಉದಾಹೃತಾಃ।
ನೇತಾರಸ್ತವ ಸೇನಾಯಾಃ ಶೂರಾ ವಿಕ್ರಾಂತಯೋಧಿನಃ ॥49॥
ಸರ್ವ ಏತೇ ಸಮರ್ಥಾ ಹಿ ತವ ಶತ್ರೂನ್ ವಿಮರ್ದಿತುಮ್ ॥50॥
ಎಲೈ ಮಹಾರಾಜನೇ, ನನ್ನ ಅಭಿಪ್ರಾಯದಲ್ಲಿಯೂ ಸಹ ಎಲ್ಲರೂ ಹೇಳಿದ ಪರಾಕ್ರಮಿಗಳಾದ, ಶೂರರಾದ ಯೋಧರೆಲ್ಲರೂ ನಿನ್ನ

ಸೇನೆಯ ನಾಯಕರಾಗಲು ಅರ್ಹರಾದವರು. ನಿನ್ನ ಶತ್ರುಗಳನ್ನು ಮರ್ದಿಸಲು ಇವರೆಲ್ಲರೂ ಸಮರ್ಥರಾಗಿದ್ದಾರೆ.
ಇಂದ್ರಸ್ಯಾಪಿ ಭಯಂ ಹ್ಯೇತೇ ಜನಯೇಯುರ್ಮಹಾಹವೇ |
ಕಿಂ ಪುನರ್ಧಾರ್ತರಾಷ್ಟ್ರಾಣಾಂ ಕ್ರುದ್ಧಾನಾಂ ಪಾಪಚೇತಸಾಮ್ ॥51॥
ಇವರು ಯುದ್ಧದಲ್ಲಿ ಇಂದ್ರನಿಗೂ ಭಯವನ್ನು ಉಂಟುಮಾಡಿಯಾರು! ಇನ್ನು ಕ್ರುದ್ಧರೂ, ಪಾಪಚೇತನರೂ ಆದ ದುರ್ಯೋಧನಾದಿಗಳ ವಿಷಯದಲ್ಲಿ ಹೇಳುವುದೇನಿದೆ?
ಮಯಾಽಪಿ ಹಿ ಮಹಾಬಾಹೋ ತ್ವತ್ಪ್ರಿಯಾರ್ಥಮರಿಂದಮ |
ಕೃತೋ ಯತ್ನೋ ಮಹಾಂಸ್ತತ್ರ ಶಮಃ ಸ್ಯಾದಿತಿ ಭಾರತ ॥52॥
ಧರ್ಮಸ್ಯ ಗತಮಾನೃಣ್ಯಂ ನ ಸ್ಮ ವಾಚ್ಯೋ ವಿವಕ್ಷತಾಮ್ ॥53॥
ಎಲೈ ಮಹಾಬಾಹುವೇ, ಎಲೈ ಅರಿಂದಮನೇ, ಭಾರತನೇ, ನಾನೂ ಸಹ ನಿನ್ನ ಹಿತದ ಸಲುವಾಗಿ ಸಂಧಿಗೋಸ್ಕರವಾಗಿ ಕೌರವಸಭೆಯಲ್ಲಿ ಮಹಾಪ್ರಯತ್ನವನ್ನು ಮಾಡಿದೆ. ಧರ್ಮದ ದೃಷ್ಟಿಯಿಂದ ನಾನು ಋಣಮುಕ್ತನಾಗಿದ್ದೇನೆ. ಯಾರೂ ನನ್ನನ್ನು ನಿಂದಿಸಲು ಸಾಧ್ಯವಿಲ್ಲ.
ಕೃತಾರ್ಥಂ ಮನ್ಯತೇ ಬಾಲಃ ಸೋತ್ಮಾನಮವಿಚಕ್ಷಣಃ |
ಧಾರ್ತರಾಷ್ಟ್ರೋ ಬಲಸ್ಥಂ ಚ ಪಶ್ಯತ್ಯಾತ್ಮಾನಮಾತುರಃ ॥54॥
ಬಾಲನೂ, ಅಕೋವಿದನೂ, ಆತುರನೂ (ರೋಗಗ್ರಸ್ತನೂ) ಆದ ದುರ್ಯೋಧನನು ತನ್ನನ್ನು ಕೃತಾರ್ಥನೆಂದು ಮತ್ತು ಸಬಲನೆಂದು ಭಾವಿಸಿದ್ದಾನೆ.
ಯುಜ್ಯತಾಂ ವಾಹಿನೀ ಸಾಧು ವಧಸಾಧ್ಯಾ ಹಿ ಮೇ ಮತಾಃ |
ನ ಧಾರ್ತರಾಷ್ಟ್ರಾಃ ಶಕ್ಷ್ಯಂತಿ ಸ್ಥಾತುಂ ದೃಷ್ಟ್ವಾ ಧನಂಜಯಮ್ ॥55॥
ಭೀಮಸೇನಂ ಚ ಸಂಕ್ರುದ್ಧಂ ಯಮೌ ಚಾಪಿ ಯಮೋಪಮೌ |
ಯುಯುಧಾನದ್ವಿತೀಯಂ ಚ ಧೃಷ್ಟದ್ಯುಮ್ನಮಮರ್ಷಣಮ್ ॥56॥
ಅಭಿಮನ್ಯುಂ ದ್ರೌಪದೇಯಾನ್ ವಿರಾಟದ್ರುಪದಾವಪಿ |
ಅಕ್ಷೋಹಿಣೀಪತೀಂಶ್ಚಾನ್ಯಾನ್ ನರೇಂದ್ರಾನ್ ದೃಢವಿಕ್ರಮಾನ್ ॥57॥
ನೀವು ಸೈನ್ಯವನ್ನು ಚೆನ್ನಾಗಿ ಹೂಡುವವರಾಗಿ. ಅವರನ್ನು ವಧೆಯಿಂದಲೇ ಬಗ್ಗಿಸಬೇಕಾಗುತ್ತದೆ. ಧನಂಜಯನನ್ನು ನೋಡಿ ಧೃತರಾಷ್ಟ್ರಪುತ್ರರು ಎದುರಿಗೆ ನಿಲ್ಲಲಾರರು. ಬಹಳ ಕೋಪಗೊಂಡ ಭೀಮಸೇನನನ್ನೂ, ಯಮನಂತಿರುವ ನಕುಲ- ಸಹದೇವರನ್ನೂ, ಅದ್ವಿತೀಯನಾದ ಯುಯುಧಾನನನ್ನೂ, ರೋಷದಿಂದಿರುವ ಧೃಷ್ಟದ್ಯುಮ್ನನನ್ನೂ, ಅಭಿಮನ್ಯುವನ್ನೂ, ದ್ರೌಪದಿಯ ಪಂಚಪುತ್ರರನ್ನೂ, ವಿರಾಟ- ದ್ರುಪದರನ್ನೂ, ಅಕ್ಷೋಹಿಣೀ ನಾಯಕರಾದ, ದೃಢಪರಾಕ್ರಮವುಳ್ಳ ಬೇರೆ ರಾಜರನ್ನೂ ನೋಡಿ (ಯುದ್ಧದಲ್ಲಿ ಅವರ ಎದುರಿಗೆ ನಿಲ್ಲಲಾರರು).
ಸಾರವದ್ ಬಲಮಸ್ಮಾಕಂ ದುಷ್ಪ್ರಧರ್ಷಂ ದುರಾಸದಮ್ |
ಧಾರ್ತರಾಷ್ಟ್ರಬಲಂ ಸಂಖ್ಯೇ ಹನಿಷ್ಯತಿ ನ ಸಂಶಯಃ ॥58॥
ಧೃಷ್ಟದ್ಯುಮ್ನಮಹಂ ಮನ್ಯೇ ಸೇನಾಪತಿಮರಿಂದಮ ॥59॥
ನಮ್ಮ ಸೈನ್ಯವು ಶ್ರೇಷ್ಠವಾದ ಬಲದಿಂದ ಕೂಡಿದೆ, ಸೋಲಿಸಲು ಅಸಾಧ್ಯವಾದುದು ಮತ್ತು ಸಮೀಪಕ್ಕೆ ಬರಲು ಅಸಾಧ್ಯವಾದುದು. ಇಂತಹ ಸೈನ್ಯವು ಯುದ್ಧದಲ್ಲಿ ದುರ್ಯೋಧನನ ಸೈನ್ಯವನ್ನು ನಾಶಮಾಡುವುದು ಎಂಬ ವಿಷಯದಲ್ಲಿ ಸಂಶಯವಿಲ್ಲ. ಎಲೈ ಅರಿಂದಮನೇ, ನಾನು ಧೃಷ್ಟದ್ಯುಮ್ನನನ್ನು ಸೇನಾಪತಿ ಎಂದು ಭಾವಿಸುತ್ತೇನೆ.
ವೈಶಂಪಾಯನಃ
ಏವಮುಕ್ತೇ ತು ಕೃಷ್ಣೇನ ಸಂಪ್ರಾಹೃಷ್ಯನ್ ನರೋತ್ತಮಾಃ ॥60॥
ವೈಶಂಪಾಯನ ಕೃಷ್ಣನು ಹೀಗೆ ಹೇಳುತ್ತಿರಲು ಎಲ್ಲ ರಾಜರೂ ಸಂತೋಷಗೊಂಡರು.
ತೇಷಾಂ ಪ್ರಹೃಷ್ಟಮನಸಾಂ ನಾದಃ ಸಮಭವನ್ ಮಹಾನ್ |
ಯೋಜಯಿತ್ವಾಽಥ ಸೈನ್ಯಾನಾಂ ತ್ವರತಾಂ ಸಂಪ್ರಧಾವತಾಮ್ ॥61॥
ಹಯವಾರಣಶಬ್ದಾಶ್ಚ ನೇಮಿಘೋಷಾಶ್ಚ ಸರ್ವಶಃ |
ಶಂಖದುಂದುಭಿಘೋಷಾಶ್ಚ ತುಮುಲಾಃ ಸರ್ವತೋಽಭವನ್ ॥62॥
ಸಂತುಷ್ಟರಾದ ಅವರಿಂದ ಮಹಾನಾದವು ಹೊರಹೊಮ್ಮಿತು. ಸೈನ್ಯವನ್ನು ಅಣಿಗೊಳಿಸಿ, ತ್ವರೆಯಿಂದ ಓಡಾಡುವ ಅವರಿಂದ ಎಲ್ಲ ಕಡೆಗಳಲ್ಲಿಯೂ ಅಶ್ವಗಳ ಮತ್ತು ಗಜಗಳ ಶಬ್ದಗಳು, ರಥದ ಶಬ್ದಗಳು, ಶಂಖ-ದುಂದುಭಿಘೋಷಗಳು ತೀವ್ರವಾಗಿ ಕೇಳಿಬಂದವು.
ಪ್ರಯಾಸ್ಯತಾಂ ಪಾಂಡವಾನಾಂ ಸಸೈನ್ಯಾನಾಂ ಸಮಂತತಃ |
ಗಂಗೇವ ಪೂರ್ಣಾ ದುರ್ಧರ್ಷಾ ಸಮದೃಶ್ಯತ ವಾಹಿನೀ ॥63॥
ಸೈನ್ಯದ ಜೊತೆಯಲ್ಲಿ ಯುದ್ಧಕ್ಕೆ ಹೊರಡುವ ಪಾಂಡವರ ಸೈನ್ಯವು ಎಲ್ಲ ಕಡೆಯಲ್ಲಿಯೂ ತುಂಬಿ ಹರಿಯುವ ಗಂಗೆಯಂತೆ ಸೋಲಿಸಲು ಅಸಾಧ್ಯವಾಗಿ ಕಂಡುಬಂದಿತು.
ಅಗ್ರಾನೀಕೇ ಭೀಮಸೇನೋ ಮಾದ್ರೀಪುತ್ರೌ ಚ ದಂಸಿತೌ |
ಸೌಭದ್ರೋ ದ್ರೌಪದೇಯಾಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥64॥
ಪ್ರಭದ್ರಕಾಶ್ಚ ಪಾಂಚಾಲಾ ಭೀಮಸೇನಮುಖಾ ಯಯುಃ ॥65॥
ಸೇನೆಯ ಮುಂಭಾಗದಲ್ಲಿ ಭೀಮಸೇನ, ಕವಚಾದಿಗಳಿಂದ ಸನ್ನದ್ಧರಾದ ಮಾದ್ರೀಪುತ್ರರು, ಅಭಿಮನ್ಯು, ದ್ರೌಪದಿಯ ಪುತ್ರರು, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಪಾಂಚಾಲದೇಶದ ಪ್ರಭದ್ರಕರು ಎಲ್ಲರೂ ಭೀಮಸೇನನನ್ನು ಮುಂದೆ ಮಾಡಿಕೊಂಡು

ನಡೆದರು.
ತತಃ ಶಬ್ದಃ ಸಮಭವತ್ ಸಮುದ್ರಸ್ಯೇವ ಪರ್ವಣಿ |
ಹೃಷ್ಟಾನಾಂ ಸಂಪ್ರಯಾತಾನಾಂ ಘೋಷೋ ದಿವಮಿವಾಸ್ಪೃಶತ್ ॥66॥
ಸಂತೋಷದಿಂದ ಹೊರಡುವ ಅವರ ಶಬ್ದವು ಪರ್ವಕಾಲದ ಸಮುದ್ರದ ಘೋಷದಂತಿದ್ದಿತು. ಆ ಘೋಷವು ಆಕಾಶವನ್ನು ಮುಟ್ಟಿತು.
ಪ್ರಹೃಷ್ಟಾ ದಂಸಿತಾ ಯೋಧಾಃ ಪರಾನೀಕವಿದಾರಣಾಃ |
ತೇಷಾಂ ಮಧ್ಯೇ ಯಯೌ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ॥67॥
ಸಂತೋಷಗೊಂಡವರೂ, ಕವಚಗಳನ್ನು ಧರಿಸಿದವರೂ, ಶತ್ರುಸೈನ್ಯವನ್ನು ಭೇದಿಸುವವರೂ ಆದ ಯೋಧರ ಮಧ್ಯದಲ್ಲಿ ರಾಜನಾದ ಕುಂತೀಪುತ್ರನಾದ ಯುಧಿಷ್ಠಿರನು ನಡೆದನು.
ಶಕಟಾಪಣವೇಶಾಶ್ಚ ಯಾನಯುಗ್ಯಂ ಚ ಸರ್ವಶಃ |
ಕೋಶಂ ಯಂತ್ರಾಯುಧಂ ಚೈವ ಯೇ ಚ ವೈದ್ಯಾಶ್ಚಿಕಿತ್ಸಕಾಃ ॥68॥
ಫಲ್ಗು ಯಚ್ಚ ಬಲಂ ಕಿಂಚಿತ್ ತಥೈವ ಕೃಶದುರ್ಬಲಮ್ |
ತತ್ ಸಂಗೃಹ್ಯ ಯಯೌ ರಾಜಾ ಯೇ ಚಾಪಿ ಪರಿಚಾರಕಾಃ ॥69॥
ಶಕಟಗಳೂ, ಅಂಗಡಿಗಳೂ, ವೇಶ್ಯೆಯರೂ, ರಥಕ್ಕೆ ಹೂಡುವ ಕುದುರೆಗಳೂ, ಕೋಶ, ಯಂತ್ರಗಳೂ, ಆಯುಧಗಳೂ, ಚಿಕಿತ್ಸೆಯನ್ನು ಮಾಡುವ ವೈದ್ಯರೂ ಮತ್ತು ಯುದ್ಧಕ್ಕೆ ಬೇಕಾಗುವ ಸಣ್ಣ ಮತ್ತು ದೊಡ್ಡ ವಸ್ತುಗಳು, ಪರಿಚಾರಕರೂ ಎಲ್ಲರನ್ನೂ ಕರೆದುಕೊಂಡು ರಾಜನು ಹೊರಟನು.
ಉಪಪ್ಲಾವ್ಯೇ ತು ಪಾಂಚಾಲೀ ದ್ರೌಪದೀ ಸತ್ಯವಾದಿನೀ |
ಸಹ ಸ್ತ್ರೀಭಿರ್ನಿವವೃತೇ ದಾಸೀದಾಸಸಮಾವೃತಾ ॥70॥
ಸತ್ಯವಾದಿನಿಯೂ, ಪಾಂಚಾಲರಾಜಕುಮಾರಿಯೂ ಆದ ದ್ರೌಪದಿಯು ದಾಸೀ-ದಾಸಪರಿವೃತಳಾಗಿ ಉಪಪ್ಲಾವ್ಯನಗರದಲ್ಲಿಯೇ ಸ್ತ್ರೀಯರ ಜೊತೆಯಲ್ಲಿ ಉಳಿದಳು.
ಕೃತ್ವಾ ಮೂಲಪ್ರತೀಕಾರಂ ಗುಲ್ಮೈಃ ಸ್ಥಾವರಜಂಗಮೈಃ |
ಸ್ಕಂಧಾವಾರೇಣ ಮಹತಾ ಪ್ರಯಯುಃ ಪಾಂಡುನಂದನಾಃ ॥71॥
ಪಾಂಡುನಂದನರು ತಮ್ಮ ಮೂಲಸ್ಥಾನವಾದ ಉಪಪ್ಲಾವ್ಯನಗರದ ರಕ್ಷಣೆಯನ್ನು ಮಾಡಿ, ಸ್ಥಾವರ-ಜಂಗಮವಾದ ಗುಲ್ಮಗಳನ್ನು (ಸೈನ್ಯದ ಭಾಗಗಳನ್ನು) ಮತ್ತು ಸೈನ್ಯದ ದೊಡ್ಡ ತುಕುಡಿಗಳನ್ನು ತೆಗೆದುಕೊಂಡು ಮುಂದೆ ನಡೆದರು (ನಲವತ್ತೈದು ಪದಾತಿಗಳು, ಇಪ್ಪತ್ತು ಅಶ್ವಗಳು, ಒಂಬತ್ತು ಗಜಗಳು ಮತ್ತು ಒಂಬತ್ತು ರಥಗಳು ಸೇರಿ ಒಂದು ಗುಲ್ಮವಾಗುತ್ತವೆ. ಸ್ಕಂಧಾವಾರವೆಂದರೆ ಸೈನ್ಯದ ಒಂದು ಸಣ್ಣ ಭಾಗ).
ದದತೋ ಗಾಂ ಹಿರಣ್ಯಂ ಚ ಬ್ರಾಹ್ಮಣೈರಭಿಸಂವೃತಾಃ |
ಸ್ತೂಯಮಾನಾ ಯಯೂ ರಾಜನ್ ರಥೈರ್ಮಣಿವಿಭೂಷಣೈಃ ॥72॥
ಎಲೈ ರಾಜನೇ, ಬ್ರಾಹ್ಮಣರಿಗೆ ಗೋದಾನವನ್ನು ಮತ್ತು ಹಿರಣ್ಯದಾನವನ್ನು ಮಾಡುತ್ತಾ, ಅಂತಹ ಬ್ರಾಹ್ಮಣರಿಂದ ಪರಿವೃತರಾಗಿ, ಅವರಿಂದ ಸ್ತೋತ್ರ ಮಾಡಲ್ಪಟ್ಟು ಮಣಿಗಳಿಂದ ಅಲಂಕೃತವಾದ ರಥಗಳಲ್ಲಿ ಸಾಗಿದರು.
ಕೇಕಯಾ ಧೃಷ್ಟಕೇತುಶ್ಚ ಪುತ್ರಃ ಕಾಶ್ಯಶ್ಚ ಚಾಭಿಭೂಃ |
ಶ್ರೇಣಿಮಾನ್ ವಸುದಾನಶ್ಚ ಶಿಖಂಡೀ ಚಾಪರಾಜಿತಃ ॥73॥
ಹೃಷ್ಟಾಸ್ತುಷ್ಟಾಃ ಕವಚಿನಃ ಸಶಸತ್ರಃ ಸಮಲಂಕೃತಾಃ |
ರಾಜಾನಮನ್ವಯುಃ ಸರ್ವೇ ಪರಿವಾರ್ಯ ಯುಧಿಷ್ಠಿರಮ್ ॥74॥
ಕೇಕಯ ಸಹೋದರರು, ಕಾಶಿರಾಜನ ಪುತ್ರನಾದ, ಶತ್ರುಗಳನ್ನು ಸೋಲಿಸುವ ಧೃಷ್ಟಕೇತು, ಶ್ರೇಣಿಮಾನ್, ವಸುದಾನ, ಅಪರಾಜಿತನಾದ ಶಿಖಂಡಿ ಎಲ್ಲರೂ ಸಂತೋಷದಿಂದ ಮತ್ತು ತೃಪ್ತಿಯಿಂದ ಕೂಡಿದವರಾಗಿ ಕವಚಗಳನ್ನೂ ಮತ್ತು ಶಸ್ತ್ರಗಳನ್ನೂ ಧರಿಸಿ, ಅಲಂಕೃತರಾಗಿ ಯುಧಿಷ್ಠಿರನನ್ನು ಸುತ್ತುವರಿದು ಅವನನ್ನು ಹಿಂಬಾಲಿಸಿದರು.
ಜಘನಾರ್ಧೇ ವಿರಾಟಶ್ಚ ಯಾಜ್ಞಸೇನಶ್ಚ ಸೌಮಕಿಃ |
ಸುಶರ್ಮಾ ಕುಂತಿಭೋಜಶ್ಚ ಧೃಷ್ಟದ್ಯುಮ್ನಸ್ಯ ಚಾತ್ಮಜಾಃ ॥75॥
ಸೈನ್ಯದ ಮಧ್ಯಭಾಗದಲ್ಲಿ ವಿರಾಟನೂ, ಸೋಮಕಪುತ್ರನಾದ ದ್ರುಪದನೂ, ಸುಶರ್ಮನೂ, ಕುಂತಿಭೋಜನೂ ಮತ್ತು ಧೃಷ್ಟದ್ಯುಮ್ನನ ಪುತ್ರರೂ ಇದ್ದರು.
ರಥಾಯುತಾನಿ ಚತ್ವಾರಿ ಹಯಾಃ ಪಂಚಗುಣಾಸ್ತಥಾ |
ಪತ್ತಿಸೈನ್ಯಂ ದಶಗುಣಂ ಸಾದಿನಾಮಯುತಾನಿ ಷಟ್ ॥76॥
ನಲವತ್ತು ಸಾವಿರ ರಥಗಳು, ಅದಕ್ಕೆ ಐದುಪಟ್ಟು ಅಶ್ವಗಳು, ಅದರ ಹತ್ತು ಪಟ್ಟು ಪದಾತಿಗಳು ಮತ್ತು ಅರವತ್ತು ಸಾವಿರ ಅಶ್ವಾರೋಹಿಗಳು ಹೊರಟರು.
ಅನಾಧೃಷ್ಟಿಶ್ಚೇಕಿತಾನೋ ಧೃಷ್ಟಕೇತುಶ್ಚ ಸಾತ್ಯಕಿಃ |
ಪರಿವಾರ್ಯ ಯಯುಃ ಸರ್ವೇ ವಾಸುದೇವಧನಂಜಯೌ ॥77॥
ಅನಾಧೃಷ್ಟಿ, ಚೇಕಿತಾನ, ಧೃಷ್ಟಕೇತು, ಸಾತ್ಯಕಿ, ಕೃಷ್ಣ ಮತ್ತು ಅರ್ಜುನ ಎಲ್ಲರೂ ರಾಜನನ್ನು ಸುತ್ತುವರಿದು ಹೊರಟರು.
ಆಸಾದ್ಯ ತು ಕುರುಕ್ಷೇತ್ರಂ ವ್ಯೂಢಾನೀಕಾಃ ಪ್ರಹಾರಿಣಃ |
ಪಾಂಡವಾಃ ಸಮದೃಶ್ಯಂತ ನರ್ದಂತೋ ವೃಷಭಾ ಇವ ॥78॥
ಕುರುಕ್ಷೇತ್ರವನ್ನು ತಲುಪಿ ಸೈನ್ಯವನ್ನು ವ್ಯೂಹವಾಗಿ ರಚಿಸಿ, ಪ್ರಹಾರವನ್ನು ಮಾಡುವ ಆ ಪಾಂಡವರು ಗರ್ಜಿಸುವ ವೃಷಭಗಳಂತೆ

ಕಂಡುಬಂದರು.
ತೇ ವಿಗಾಹ್ಯ ಕುರುಕ್ಷೇತ್ರಂ ಶಂಖಾನ್ ದಧ್ಮುರರಿಂದಮಾಃ |
ತಥೈವ ದಧ್ಮತುಃ ಶಂಖೌ ವಾಸುದೇವಧನಂಜಯೌ ||79||
ಆ ಅರಿಂದಮರು ಕುರುಕ್ಷೇತ್ರವನ್ನು ತಲುಪಿ ತಮ್ಮ ಶಂಖಗಳನ್ನು ಊದಿದರು. ಕೃಷ್ಣಾರ್ಜುನರೂ ಸಹ ಹಾಗೆಯೇ ಶಂಖಗಳನ್ನು ಊದಿದರು.
ಪಾಂಚಜನ್ಯಸ್ಯ ನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ನಿಶಮ್ಯ ಸರ್ವಸೈನ್ಯಾನಿ ಸಮಹೃಷ್ಯಂತ ಸರ್ವಶಃ ||80||
ಸಿಡಿಲಿನ ಸ್ಫೋಟದಂತಿರುವ ಪಾಂಚಜನ್ಯ ಶಂಖದ ನಿರ್ಘೋಷವನ್ನು ಕೇಳಿ ಎಲ್ಲ ಕಡೆಯಲ್ಲೂ ಇದ್ದ ಸೈನ್ಯವೆಲ್ಲ ಸಂತೋಷವನ್ನು ಹೊಂದಿತು.
ಶಂಖದುಂದುಭಿಸಂಸೃಷ್ಟಃ ಸಿಂಹನಾದಸ್ತರಸ್ವಿನಾಮ್ |
ಪೃಥಿವೀಂ ಚಾಂತರಿಕ್ಷಂ ಚ ಸಾಗರಾಂಶ್ಚಾನ್ವನಾದಯತ್ ||81||
ಶಂಖ-ದುಂದುಭಿನಾದದಿಂದ ಕೂಡಿದ, ಶೀಘ್ರಗಾಮಿಗಳಾದ ವೀರರ ಸಿಂಹನಾದವು ಭೂಮಿಯನ್ನೂ, ಅಂತರಿಕ್ಷವನ್ನೂ ಮತ್ತು ಸಾಗರಗಳನ್ನೂ ಪ್ರತಿಧ್ವನಿಸಿತು.
ತತೋ ದೇಶೇ ಸಮೇ ಸ್ನಿಗ್ಧೇ ಪ್ರಭೂತಯವಸೇಂಧನೇ |
ನಿವೇಶಯಾಮಾಸ ತತಃ ಸೇನಾಂ ರಾಜಾ ಯುಧಿಷ್ಠಿರಃ ||82||
ಅನಂತರ ಒಂದು ಸಮತಟ್ಟಾದ, ಗಟ್ಟಿಯಾದ, ಬಹಳ ಮೇವು ಮತ್ತು ಕಟ್ಟಿಗೆಗಳಿರುವ ಪ್ರದೇಶದಲ್ಲಿ ರಾಜನಾದ ಯುಧಿಷ್ಠಿರನು ತನ್ನ ಸೈನ್ಯವನ್ನು ನಿಲ್ಲಿಸಿದನು.
ಪರಿಹೃತ್ಯ ಶ್ಮಶಾನಾನಿ ದೇವತಾಯತನಾನಿ ಚ |
ಆಶ್ರಮಾಂಶ್ಚ ಮಹರ್ಷೀಣಾಂ ತೀರ್ಥಾನ್ಯಾಯತನಾನಿ ಚ ||83||
ಮಧುರೇಽನೂಷರೇ ದೇಶೇ ಶಿವೇ ಪುಣ್ಯೇ ಮಹೀಪತಿಃ |
ನಿವೇಶಂ ಕಾರಯಾಮಾಸ ಕುಂತೀಪುತ್ರೋ ಯುಧಿಷ್ಠಿರಃ ||84||
ಸ್ಮಶಾನಗಳನ್ನೂ, ದೇವಾಲಯಗಳನ್ನೂ, ಮಹರ್ಷಿಗಳ ಆಶ್ರಮಗಳನ್ನೂ, ತೀರ್ಥಗಳನ್ನೂ ದೂರದಲ್ಲಿಟ್ಟು, ಮರುಭೂಮಿಯಲ್ಲದ ಮಧುರವಾದ ಒಂದು ಮಂಗಳವಾದ, ಪುಣ್ಯಕರವಾದ ಪ್ರದೇಶದಲ್ಲಿ ಕುಂತೀಪುತ್ರನಾದ ಯುಧಿಷ್ಠಿರ ರಾಜನು ತನ್ನ ಸೈನ್ಯದ ನಿವೇಶವನ್ನು ಮಾಡಿಸಿದನು (ಬೀಡುಬಿಟ್ಟನು).
ತತಶ್ಚ ಪುನರುತ್ಥಾಯ ಸುಖೀ ವಿಶ್ರಾಂತವಾಹನಃ |
ಪ್ರಯಯೌ ಪೃಥಿವೀಪಾಲೈಃ ವೃತಃ ಶತಸಹಸ್ರಶಃ ||85||
ಅನಂತರ ವಾಹನಗಳಿಗೆ ವಿಶ್ರಾಂತಿಯನ್ನು ನೀಡಿ, ತಾನೂ ಸ್ವಲ್ಪ ಮಲಗಿ ಎದ್ದು ಸುಖದಿಂದ ಕೂಡಿದವನಾಗಿ, ನೂರಾರು ಸಾವಿರಾರು ರಾಜರಿಂದ ವೃತನಾಗಿ (ಕ್ಷೇತ್ರವನ್ನು ಪರೀಕ್ಷೆ ಮಾಡುವುದಕ್ಕೆ) ಹೊರಟನು.
ವಿದ್ರಾವ್ಯ ಶತಶೋ ಗುಲ್ಮಾನ್ ಧಾರ್ತರಾಷ್ಟ್ರಸ್ಯ ಸೈನಿಕಾನ್ |
ಪರ್ಯಕ್ರಾಮತ್ ಸಮಂತಾಚ್ಚ ಪಾರ್ಥೇನ ಸಹ ಕೇಶವಃ ||86||
ನೂರಾರು ಪೊದೆಗಳನ್ನು ಧ್ವಂಸ ಮಾಡಿ, ದುರ್ಯೋಧನನ ಸೈನಿಕರನ್ನು ಓಡಿಸಿ, ಅರ್ಜುನ ಮತ್ತು ಕೃಷ್ಣನ ಜೊತೆಯಲ್ಲಿ ಕುರುಕ್ಷೇತ್ರದ ಎಲ್ಲ ಕಡೆಯಲ್ಲಿಯೂ ತಿರುಗಾಡಿದನು.
ಶಿಬಿರಂ ಮಾಪಯಾಮಾಸ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಸಾತ್ಯಕಿಶ್ಚ ರಥೋದಾರೋ ಯುಯುಧಾನಃ ಪ್ರತಾಪವಾನ್ ||87||
ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಮತ್ತು ಶ್ರೇಷ್ಠರಥನೂ, ಪ್ರತಾಪಶಾಲಿಯೂ, ಸತ್ಯಕನ ಮಗನೂ ಆದ ಯುಯುಧಾನನೂ ಕುರುಕ್ಷೇತ್ರವನ್ನು ಅಳತೆ ಮಾಡಿದರು.
ಆಸಾದ್ಯ ಸರಿತಂ ಪುಣ್ಯಾಂ ಕುರುಕ್ಷೇತ್ರೇ ಹಿರಣ್ವತೀಮ್ |
ಸೂಪತೀರ್ಥಾಂ ಶುಚಿಜಲಾಂ ಶರ್ಕರಾಪಂಕವರ್ಜಿತಾಮ್ ||88||
ಖಾನಯಾಮಾಸ ಪರಿಖಾಂ ಕೇಶವಸ್ತತ್ರ ಭಾರತ |
ಗುಪ್ತ್ಯರ್ಥಮಪಿ ಚಾದಿಶ್ಯ ಬಲಂ ತತ್ರ ನ್ಯವೇಶಯತ್ ||89||
ಕುರುಕ್ಷೇತ್ರದಲ್ಲಿ ಪವಿತ್ರವಾದ ಹತ್ತಿರದಲ್ಲಿ ಅನೇಕ ತೀರ್ಥಗಳಿರುವ, ಶುಚಿಯಾದ ಜಲವನ್ನು ಹೊಂದಿರುವ, ಕೆಸರು ಮತ್ತು ಮರಳುಗಳಿಂದ ವರ್ಜಿತವಾದ ಹಿರಣ್ವತೀ ನದಿಯನ್ನು ಸಮೀಪಿಸಿ, ಅಲ್ಲಿ ಸೈನ್ಯದ ರಕ್ಷಣೆಗಾಗಿ ಕೇಶವನು ಕಂದಕವನ್ನು ತೋಡಿಸಿದನು. ಎಲೈ ಭಾರತನೇ, ಸೈನ್ಯದ ರಕ್ಷಣೆಗಾಗಿ ಅಲ್ಲಿ ಒಂದು ಸೈನ್ಯದ ಭಾಗವನ್ನೂ ಇಟ್ಟನು.
ವಿಧಿರ್ಯಃ ಶಿಬಿರಸ್ಯಾಸೀತ್ ಪಾಂಡವಾನಾಂ ಮಹಾತ್ಮನಾಮ್ |
ತದ್ವಿಧಾನಂ ನರೇಂದ್ರಾಣಾಂ ಕಾರಯಾಮಾಸ ಕೇಶವಃ ||90||
ಮಹಾತ್ಮರಾದ ಪಾಂಡವರ ಶಿಬಿರವನ್ನು ನಿರ್ಮಾಣ ಮಾಡಲು ಯಾವ ವಿಧಾನವನ್ನು ಅನುಸರಿಸಿದನೋ, ಕೃಷ್ಣನು ಅದೇ ವಿಧಾನವನ್ನು ಉಳಿದ ರಾಜರ ಶಿಬಿರಗಳನ್ನು ನಿರ್ಮಿಸುವಾಗಲೂ ಅನುಸರಿಸಿದನು.
ಪ್ರಭೂತಜಲಕಾಷ್ಠಾನಿ ಸುದುರ್ಧರ್ಷತರಾಣಿ ಚ |
ಭಕ್ಷ್ಯಭೋಜ್ಯಾನ್ನಪಾನಾನಿ ಶತಶೋಽಥ ಸಹಸ್ರಶಃ ||91||
ಶಿಬಿರಾಣಿ ಮಹಾರ್ಹಾಣಿ ರಾಜ್ಞಾಂ ತತ್ರ ಪೃಥಕ್ ಪೃಥಕ್ |

ವಿಮಾನಾನೀವ ರಾಜೇಂದ್ರ ನಿವಿಷ್ಟಾನಿ ಮಹೀತಳೇ ॥92॥
ಎಲೈ ರಾಜೇಂದ್ರನೇ, ಸಮೃದ್ಧವಾದ ಜಲ-ಕಾಷ್ಠಗಳಿಂದ ಕೂಡಿದ, ಭಕ್ಷ್ಯ-ಭೋಜ್ಯ ಅನ್ನ-ಪಾನಾದಿಗಳಿಂದ ಕೂಡಿದ, ಯಾರೂ ನುಗ್ಗಲಾರದ, ಬಹಳ ಬೆಲೆ ಬಾಳುವ, ನೂರಾರು ಸಾವಿರಾರು ರಾಜಶಿಬಿರಗಳು ಅಲ್ಲಲ್ಲಿ ಭೂಮಿಯಲ್ಲಿ ವಿಮಾನಗಳಂತೆ (ಉಪ್ಪರಿಗೆ ಮನೆಗಳಂತೆ) ನಿರ್ಮಿಸಲ್ಪಟ್ಟವು.
ತತ್ರಾಸನ್ ಶಿಲ್ಪಿನಃ ಪ್ರಾಜ್ಞಾ ಬಹುಶೋ ದತ್ತವೇತನಾಃ |
ಸರ್ವೋಪಕರಣೈರ್ಯುಕ್ತಾ ವೈದ್ಯಾಃ ಶಾಸ್ತ್ರವಿಶಾರದಾಃ ॥93॥
ಅಲ್ಲಿ ಬಹಳ ವೇತನವನ್ನು ಕೊಟ್ಟು ಇಟ್ಟುಕೊಂಡಿದ್ದ ನಿಪುಣರಾದ ಶಿಲ್ಪಿಗಳು, ಸರ್ವೋಪಕರಣ ಯುಕ್ತರಾದ ವೈದ್ಯರು ಮತ್ತು ಶಾಸ್ತ್ರವಿಶಾರದರೂ ಇದ್ದರು.
ಜ್ಯಾಧನುರ್ವರ್ಮಶಸ್ತ್ರಾಣಾಂ ತಥೈವ ಮಧುಸರ್ಪಿಷೋಃ |
ಸಸರ್ಜರಸಪಾಂಸೂನಾಂ ರಾಶಯಃ ಪರ್ವತೋಪಮಾಃ ॥94॥
ಹೆದೆಗಳು, ಧನುಸ್ಸುಗಳು, ಕವಚಗಳು, ಶಸ್ತ್ರಗಳು, ಹಾಗೆಯೇ ಮಧು, ಘೃತ, ಸರ್ಜರಸ, ಮಣ್ಣು- ಇವುಗಳ ರಾಶಿಯು ಪರ್ವತಕ್ಕೆ ಸದೃಶವಾಗಿದ್ದಿತು.
ಬಹೂದಕಂ ಸುಯವಸಂ ತುಷಾಂಗಾರಸಮನ್ವಿತಮ್ |
ಶಿಬಿರೇ ಶಿಬಿರೇ ರಾಜಾ ಸಂಚಕಾರ ಯುಧಿಷ್ಠಿರಃ ॥95॥
ರಾಜನಾದ ಯುಧಿಷ್ಠಿರನು ಪ್ರತಿ ಶಿಬಿರದಲ್ಲಿಯೂ ಬಹಳ ನೀರು ಮತ್ತು ಮೇವು ಇರುವಂತೆ, ಹೊಟ್ಟುಗಳು ಮತ್ತು ಅಗ್ನಿ ಇರುವಂತೆ ವ್ಯವಸ್ಥೆ ಮಾಡಿದನು.
ಮಹಾಯಂತ್ರಾಣಿ ನಾರಾಚಾಃ ತೋಮರಾಣಿ ಪರಶ್ವಧಾಃ |
ಧನೂಂಷಿ ಕವಚಾದೀನಿ ಸಂಬಭೂವುರ್ನೃಣಾಂ ತದಾ ॥96॥
ಮಹಾಯಂತ್ರಗಳೂ, ಬಾಣಗಳೂ, ತೋಮರಗಳೂ, ಪರಶ್ವಧಗಳೂ, ಧನುಸ್ಸುಗಳೂ, ಕವಚಗಳೂ ಆಗ ಎಲ್ಲ ಯೋಧರಿಗೂ ತಲುಪಿದವು.
ಗಜಾಃ ಕಂಟಕಸನ್ನಾಹಾ ಲೋಹವರ್ಮೋತ್ತರಚ್ಛದಾಃ |
ದೃಶ್ಯಂತೇ ತತ್ರ ಗಿರ್ಯಾಭಾಃ ಶತಶೋಽಥ ಸಹಸ್ರಶಃ ॥97॥
ಕಂಟಕಗಳಿಂದ ಕೂಡಿದ ಹೊದಿಕೆಗಳುಳ್ಳ ಲೋಹಮಯವಾದ ಕವಚರೂಪವಾದ ಹೊದಿಕೆಯನ್ನು ಧರಿಸಿದ ಗಜಗಳು ಪರ್ವತದಂತೆ ನೂರಾರು ಸಹಸ್ರಾರು ಸಂಖ್ಯೆಯಲ್ಲಿ ಅಲ್ಲಿ ಕಂಡುಬಂದವು.
ನಿವಿಷ್ಟಾನ್ ಪಾಂಡವಾಂಸ್ತತ್ರ ಜ್ಞಾತ್ವಾ ಮಿತ್ರಾಣಿ ಭಾರತ |
ಅಭಿಜಗ್ಮುರ್ಯಥೋದ್ದೇಶಂ ಸಬಲಾಃ ಸಪದಾನುಗಾಃ ॥98॥
ಎಲೈ ಭಾರತನೇ, ಅಲ್ಲಿ ಪಾಂಡವರು ತಲುಪಿದುದನ್ನು ತಿಳಿದ ಮಿತ್ರರು ತಮ್ಮ ಸೈನ್ಯ ಮತ್ತು ಪರಿವಾರದೊಂದಿಗೆ ಅಲ್ಲಿಗೆ ಪ್ರಾಪ್ತರಾದರು.
ಚರಿತಬ್ರಹ್ಮಚರ್ಯಾಸ್ತೇ ಸೋಮಪಾ ಭೂರಿದಕ್ಷಿಣಾಃ |
ಜಯಾಯ ಪಾಂಡುಪುತ್ರಾಣಾಂ ಸಮಾಜಗ್ಮುರ್ಮಹೀಕ್ಷಿತಃ ॥99॥
ಬ್ರಹ್ಮಚರ್ಯವ್ರತವನ್ನು ಮಾಡಿದ, ಭೂರಿದಕ್ಷಿಣೆಯನ್ನು ಕೊಟ್ಟ, ಯಜ್ಞವನ್ನು ಮಾಡಿ ಸೋಮಪಾನವನ್ನು ಮಾಡಿದ ರಾಜರು ಪಾಂಡುಪುತ್ರರ ಜಯಕ್ಕಾಗಿ ಅಲ್ಲಿ ಬಂದು ಸೇರಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಾಶೋತ್ತರಶತತಮೋಽಧ್ಯಾಯಃ ॥
॥ ಸೈನ್ಯನಿರ್ಯಾಣಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೊಂದನೆಯ ಅಧ್ಯಾಯ
ಕರ್ಣನನ್ನು ಮುಂದೆ ಮಾಡಿಕೊಂಡು ದುರ್ಯೋಧನನಿಂದ ಯುದ್ಧ ಸನ್ನಾಹ.
ಜನಮೇಜಯಃ
ಯುಧಿಷ್ಠಿರಂ ಸಹಾನೀಕಮುಪಾಯಾಂತಂ ಯುಯುತ್ಸಯಾ |
ಸನ್ನಿವಿಷ್ಟಂ ಕುರುಕ್ಷೇತ್ರೇ ವಾಸುದೇವೇನ ಪಾಲಿತಮ್ ॥1॥
ವಿರಾಟದ್ರುಪದಾಭ್ಯಾಂ ಚ ಸಪುತ್ರಾಭ್ಯಾಂ ಸಮನ್ವಿತಮ್ |
ಕೇಕಯೈರ್ವೃಷ್ಣಿಭಿಶ್ಚೈವ ಪಾರ್ಥಿವೈಃ ಶತಶೋ ವೃತಮ್ ॥2॥
ಮಹೇಂದ್ರಮಿವ ಚಾದಿತ್ಯೈರಭಿಗುಪ್ತಂ ಮಹಾರಥೈಃ |
ಶ್ರುತ್ವಾ ದುರ್ಯೋಧನೋ ರಾಜಾ ಕಿಂ ಕಾರ್ಯಂ ಪ್ರತ್ಯಪದ್ಯತ ॥3॥
ಜನಮೇಜಯ ಯುದ್ಧವನ್ನು ಮಾಡುವ ಇಚ್ಛೆಯಿಂದ ಕುರುಕ್ಷೇತ್ರಕ್ಕೆ ಬಂದು ಬೀಡುಬಿಟ್ಟ, ಕೃಷ್ಣನಿಂದ ರಕ್ಷಿತನಾದ, ಪುತ್ರಸಹಿತರಾದ ವಿರಾಟ-ದ್ರುಪದರಿಂದ ಕೂಡಿದ, ಕೇಕಯರು, ವೃಷ್ಣಿಗಳು ಮೊದಲಾದ ನೂರಾರು ರಾಜರಿಂದ ಕೂಡಿದ, ಅದಿತಿ ಪುತ್ರರಿಂದ ಮಹೇಂದ್ರನು ರಕ್ಷಿಸಲ್ಪಟ್ಟಂತೆ, ಮಹಾರಥರಿಂದ ರಕ್ಷಿತನಾದ ಯುಧಿಷ್ಠಿರನನ್ನು ತಿಳಿದು ರಾಜನಾದ ದುರ್ಯೋಧನನು ಏನು

ಕಾರ್ಯವನ್ನು ಮಾಡಿದನು?
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಮಹಾಮತೇ |
ಸಂಭ್ರಮೇ ತುಮುಲೇ ತಸ್ಮಿನ್ ಯದಾಸೀತ್ ಕುರುಜಾಂಗಲೇ ||4||
ಎಲೈ ಮಹಾಮತಿಯೇ, ಆ ತೀವ್ರವಾದ ಸಂಭ್ರಮದ ಸಮಯದಲ್ಲಿ ಕುರುಜಾಂಗಲದಲ್ಲಿ ಏನು ನಡೆಯಿತೆಂದು ವಿಸ್ತಾರವಾಗಿ ಕೇಳಲು ನಾನು ಬಯಸುತ್ತೇನೆ.
ವ್ಯಥಯೇಯುರಿಮೇ ದೇವಾನ್ ಸೇಂದ್ರಾನಪಿ ಸಮಾಗಮೇ |
ಪಾಂಡವಾ ವಾಸುದೇವಶ್ಚ ವಿರಾಟದ್ರುಪದೌ ತಥಾ ||5||
ಪಾಂಡವರು, ಕೃಷ್ಣ ಮತ್ತು ಹಾಗೆಯೇ ವಿರಾಟ-ದ್ರುಪದರು ಸಮಾಗಮದಲ್ಲಿ ಇಂದ್ರನಿಂದ ಸಹಿತರಾದ ದೇವತೆಗಳಿಗೂ ವ್ಯಥೆಯನ್ನು ಉಂಟುಮಾಡಿಯಾರು!
ಧೃಷ್ಟದ್ಯುಮ್ನಶ್ಚ ಪಾಂಚಾಲ್ಯಃ ಶಿಖಂಡೀ ಚ ಮಹಾರಥಃ |
ಯುಧಾಮನ್ಯುಶ್ಚ ವಿಕ್ರಾಂತೋ ದೇವೈರಪಿ ದುರಾಸದಃ ||6||
ಪಾಂಚಾಲದೇಶದ ಧೃಷ್ಟದ್ಯುಮ್ನನೂ, ಮಹಾರಥನಾದ ಶಿಖಂಡಿಯೂ, ಪರಾಕ್ರಮಶಾಲಿಯಾದ ಯುಧಾಮನ್ಯುವೂ ಸಹ ದೇವತೆಗಳಿಂದಲೂ ಸಮೀಪಿಸಲ್ಪಡಲು ಸಾಧ್ಯವಿಲ್ಲದವರು.
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ತಪೋಧನ |
ಕುರೂಣಾಂ ಪಾಂಡವಾನಾಂ ಚ ಯದ್ಯದಾಸೀದ್ ವಿಚೇಷ್ಟಿತಮ್ ||7||
ಎಲೈ ತಪೋಧನರೇ, ಕೌರವರು ಮತ್ತು ಪಾಂಡವರು ಆಗ ಯಾವ ಕ್ರಿಯೆಗಳನ್ನು ಮಾಡಿದರು ಎಂದು ಕೇಳಲು ನಾನು ಇಚ್ಛೆ ಪಡುತ್ತೇನೆ.
ವೈಶಂಪಾಯನಃ
ಪ್ರತಿಯಾತೇ ತು ದಾಶಾರ್ಹೇ ರಾಜಾ ದುರ್ಯೋಧನಸ್ತದಾ |
ಕರ್ಣಂ ದುಃಶಾಸನಂ ಚೈವ ಶಕುನಿಂ ಚಾಬ್ರವೀದಿದಮ್ ||8||
ವೈಶಂಪಾಯನ ದಾಶಾರ್ಹನಾದ ಕೃಷ್ಣನು ಹಿಂದಿರುಗಿದ ಮೇಲೆ ರಾಜನಾದ ದುರ್ಯೋಧನನು ಕರ್ಣನನ್ನೂ, ದುಶ್ಶಾಸನನನ್ನೂ ಮತ್ತು ಶಕುನಿಯನ್ನೂ ಕುರಿತು ಹೀಗೆ ಮಾತನಾಡಿದನು.
ಅಕೃತೇನೈವ ಕಾರ್ಯೇಣ ಗತಃ ಪಾರ್ಥಾನಧೋಕ್ಷಜಃ |
ಸ ಏನಾನ್ ಮನ್ಯುನಾಽಽವಿಷ್ಟೋ ಧ್ರುವಂ ಧಕ್ಷ್ಯತ್ಯಸಂಶಯಮ್ ||9||
ತನ್ನ ಕಾರ್ಯವು ಸಿದ್ಧಿಸದೇ ಕೃಷ್ಣನು ಪಾಂಡವರ ಬಳಿಗೆ ಹಿಂದಿರುಗಿದ್ದಾನೆ. ಕೋಪದಿಂದ ಕೂಡಿರುವ ಅವನು ನಮ್ಮ ಸಹಾಯಕ್ಕೆ ಬಂದಿರುವ ಈ ರಾಜರನ್ನು ನಿಸ್ಸಂಶಯವಾಗಿ ದಹಿಸುವನು.
ಇಷ್ಟೋ ಹಿ ವಾಸುದೇವಸ್ಯ ಪಾಂಡವೈರ್ಮಮ ವಿಗ್ರಹಃ |
ಭೀಮಸೇನಾರ್ಜುನೌ ಚೈವ ದಾಶಾರ್ಹಸ್ಯ ಮತೇ ಸ್ಥಿತೌ ||10||
ಕೃಷ್ಣನಿಗೆ, ಪಾಂಡವರಿಗೂ ಮತ್ತು ನನಗೂ ಯುದ್ಧವು ನಡೆಯುವುದು ಇಷ್ಟವಾದುದು. ಭೀಮಸೇನಾರ್ಜುನರು ಯಾವಾಗಲೂ ಕೃಷ್ಣನ ಅಭಿಪ್ರಾಯದಂತೆಯೇ ನಡೆದುಕೊಳ್ಳುವವರು.
ಅಜಾತಶತ್ರುರತ್ಯರ್ಥಂ ಭೀಮಾರ್ಜುನವಶಾನುಗಃ |
ನಿಕೃತಶ್ಚ ಮಯಾ ಪೂರ್ವಂ ಸಹ ಸರ್ವೈಃ ಸಹೋದರೈಃ ||11||
ಅಜಾತಶತ್ರುವಾದ ಯುಧಿಷ್ಠಿರನು ಬಹಳವಾಗಿ ಭೀಮಾರ್ಜುನರ ವಶವರ್ತಿಯಾಗಿದ್ದಾನೆ. ಅವನಿಗೂ ಮತ್ತು ಅವನ ಸೋದರರಿಗೂ ನಾನು ಹಿಂದೆ ಅನೇಕ ಅಪಚಾರಗಳನ್ನು ಮಾಡಿದ್ದೇನೆ.
ವಿರಾಟದ್ರುಪದೌ ಚೈವ ಕೃತವೈರೌ ಮಯಾ ಸಹ |
ತೌ ಚ ಸೇನಾಪ್ರಣೇತಾರೌ ವಾಸುದೇವವಶಾನುಗೌ ||12||
ನಾನು ಹಿಂದೆ ವಿರಾಟ-ದ್ರುಪದರ ಜೊತೆಯಲ್ಲಿಯೂ ವೈರವನ್ನು ಮಾಡಿದ್ದೇನೆ. ಕೃಷ್ಣನ ವಶವರ್ತಿಗಳಾದ ಅವರು ಪಾಂಡವರ ಸೇನಾನಾಯಕರಾಗುವರು.
ಭವಿತಾ ವಿಗ್ರಹಃ ಸೋಽಯಂ ತುಮುಲೋ ರೋಮಹರ್ಷಣಃ |
ತಸ್ಮಾತ್ ಸಾಂಗ್ರಾಮಿಕಂ ಸರ್ವಂ ಕಾರಯಧ್ವಮತಂದ್ರಿತಾಃ ||13||
ಆದ್ದರಿಂದ ತೀವ್ರವೂ, ರೋಮಾಂಚಕಾರಿಯೂ ಆದ ಈ ಯುದ್ಧವು ಸಂಭವಿಸುವುದು. ಆದ್ದರಿಂದ ಆಲಸ್ಯವನ್ನು ಮಾಡದೆ ಯುದ್ಧದ ಎಲ್ಲಾ ಸಲಕರಣೆಗಳನ್ನೂ ಸಜ್ಜುಗೊಳಿಸಿ.
ಶಿಬಿರಾಣಿ ಕುರುಕ್ಷೇತ್ರೇ ಕ್ರಿಯಂತಾಂ ವಸುಧಾಧಿಪಾಃ |
ಸುಪರ್ಯಾಪ್ತಾವಕಾಶಾನಿ ದುರಾದೇಯಾನಿ ಶತ್ರುಭಿಃ ||14||
ಆಸನ್ನಜಲಕೋಷ್ಠಾನಿ ಶತಶೋಽಥ ಸಹಸ್ರಶಃ |
ಅಚ್ಛೇದ್ಯಾಹಾರಮಾರ್ಗಾಣಿ ರತ್ನೋಚ್ಚಯಚಿತಾನಿ ಚ ||15||
ವಿವಿಧಾಯುಧಪೂರ್ಣಾನಿ ಪತಾಕಾಧ್ವಜವಂತಿ ಚ |
ಎಲೈ ರಾಜರೇ, ಕುರುಕ್ಷೇತ್ರದಲ್ಲಿ ಶತ್ರುಗಳು ಸಮೀಪಿಸಲಾರದ, ಮಧ್ಯೆ ಮಧ್ಯೆ ಒಳ್ಳೆಯ ಅವಕಾಶವಿರುವ, ಜಲಾಶಯದ ಸಮೀಪದಲ್ಲಿರುವಂತೆ ನೂರಾರು ಸಾವಿರಾರು ಶಿಬಿರಗಳನ್ನು ನಿರ್ಮಿಸಿ. ಆಹಾರಮಾರ್ಗಗಳು ಅಚ್ಛೇದ್ಯವಾಗಿರಬೇಕು. ಶಿಬಿರಗಳು ರತ್ನರಾಶಿಗಳಿಂದಲೂ, ಅನೇಕ ವಿಧವಾದ ಆಯುಧಗಳಿಂದಲೂ ಮತ್ತು ಪತಾಕೆ ಧ್ವಜಗಳಿಂದಲೂ ಪೂರ್ಣವಾಗಿರಬೇಕು.

ಸಮಾಶ್ಚ ತೇಷಾಂ ಪಂಥಾನಃ ಕ್ರಿಯಂತಾಂ ನಗರಾದ್ ಬಹಿಃ ॥16॥
ಪ್ರಯಾಣಂ ಘುಷ್ಯತಾಮದ್ಯ ಶ್ವೋಭೂತ ಇತಿ ಮಾಚಿರಮ್ ॥17॥
ಅಲ್ಲಿಗೆ ಹೋಗುವ ನಗರದ ಹೊರಗಿನ ಮಾರ್ಗವನ್ನು ಸಮತಟ್ಟಾಗಿ ಮಾಡಿ. ನಾಳೆ ಪ್ರಯಾಣವೆಂದು ಈ ದಿನವೇ ಘೋಷಣೆ ಮಾಡಿ, ತಡ ಮಾಡಬೇಡಿ.
ವೈಶಂಪಾಯನಃ
ತೇ ತಥೇತಿ ಪ್ರತಿಜ್ಞಾಯ ಶ್ವೋಭೂತೇ ಚಕ್ರಿರೇ ತಥಾ |
ಹೃಷ್ಟರೂಪಾ ಮಹಾತ್ಮಾನೋ ನಿವಾಸಾಯ ಮಹೀಕ್ಷಿತಾಮ್ ॥18॥
ವೈಶಂಪಾಯನ ಮಹಾತ್ಮರೂ, ಸಂತೋಷಗೊಂಡವರೂ ಆದ ಅವರು ಹಾಗೆಯೇ ಆಗಲಿ ಎಂದು ಪ್ರತಿಜ್ಞೆಯನ್ನು ಮಾಡಿ, ರಾಜರ ಬಿಡಾರಗಳಿಗಾಗಿ ಶಿಬಿರಗಳನ್ನು ನಿರ್ಮಿಸಿದರು.
ತತಸ್ತೇ ಪಾರ್ಥಿವಾಃ ಸರ್ವೇ ತಚ್ಛ್ರುತ್ವಾ ರಾಜಶಾಸನಮ್ |
ಆಸನೇಭ್ಯೋ ಮಹಾರ್ಹೇಭ್ಯ ಉದತಿಷ್ಠನ್ನಮರ್ಷಿತಾಃ ॥19॥
ಬಾಹೂನ್ ಪರಿಘಸಂಕಾಶಾನ್ ಸಂಸ್ಪೃಶಂತಃ ಶನೈಸ್ತತಃ |
ಕಾಂಚನಾಂಗದದೀಪ್ತಾಂಶ್ಚ ಚಂದನಾಗರುರೂಷಿತಾನ್ ॥20॥
ಉಷ್ಣೀಷಾಣಿ ನಿಯಚ್ಛಂತಃ ಪುಂಡರೀಕನಿಭೈಃ ಕರೈಃ |
ಅಂತರೀಯೋತ್ತರೀಯಾಣಿ ಭೂಷಣಾನಿ ಚ ಸರ್ವಶಃ ॥21॥
ಆಗ ಆ ರಾಜನ ಶಾಸನವನ್ನು ಕೇಳಿದ ಸಮಾಗತರಾದ ರಾಜರೆಲ್ಲರೂ ರೋಷದಿಂದ ಕೂಡಿದವರಾಗಿ ಒನಕೆಯಂತಿದ್ದ, ಸುವರ್ಣಮಯವಾದ ಅಂಗದಗಳಿಂದ ಅಲಂಕೃತವಾದ, ಚಂದನಾಗರು ಲಿಪ್ತವಾದ ತಮ್ಮ ಬಾಹುಗಳನ್ನು ನಿಧಾನವಾಗಿ ನೇವರಿಸುತ್ತಾ, ಕಮಲದಂತಹ ತಮ್ಮ ಹಸ್ತಗಳಿಂದ ರುಮಾಲುಗಳನ್ನು ಸರಿಮಾಡಿಕೊಳ್ಳುತ್ತಾ, ಒಳಗಿನ ವಸ್ತ್ರವನ್ನೂ, ಉತ್ತರೀಯವನ್ನೂ ಮತ್ತು ಆಭರಣಗಳನ್ನೂ ಸರಿ ಮಾಡಿಕೊಳ್ಳುತ್ತಾ ಬೆಲೆಬಾಳುವ ತಮ್ಮ ಆಸನಗಳಿಂದ ಮೇಲೆದ್ದರು.
ತೇ ರಥಾನ್ ರಥಿನಃ ಶ್ರೇಷ್ಠಾ ಹಯಾಂಶ್ಚ ಹಯಕೋವಿದಾಃ |
ಸಜ್ಜಯಂತಿ ಸ್ಮ ನಾಗಾಂಶ್ಚ ನಾಗಶಿಕ್ಷಾಸ್ವನುಷ್ಠಿತಾಃ ॥22॥
ರಥಿಕರಲ್ಲಿ ಶ್ರೇಷ್ಠರಾದ ಅವರು ರಥಗಳನ್ನು, ಅಶ್ವಕೋವಿದರಾದವರು ಅಶ್ವಗಳನ್ನು, ಗಜಶಿಕ್ಷೆಯಲ್ಲಿ ವಿಶಾರದರಾದವರು ಗಜಗಳನ್ನು ಸಿದ್ಧಗೊಳಿಸಿದರು.
ಅಥ ವರ್ಮಾಣಿ ಶಸತ್ರಣಿ ಕವಚಾನಿ ಬಹೂನಿ ಚ |
ವಿವಿಧಾನಿ ಚ ತೀಕ್ಷ್ಣಾನಿ ಚಕ್ರುಃ ಸಜ್ಜಾನಿ ಸರ್ವಶಃ ॥23॥
ಅನಂತರ ಅನೇಕ ವಿಧವಾದ ಕವಚಗಳನ್ನೂ, ತೀಕ್ಷ್ಣವಾದ ಶಸ್ತ್ರಗಳನ್ನೂ ಸಹ ಎಲ್ಲ ಕಡೆಗಳಲ್ಲಿಯೂ ಸಿದ್ಧಮಾಡಿದರು.
ಪದಾತಯಶ್ಚ ಪುರುಷಾಃ ಶಸತ್ರಣಿ ವಿವಿಧಾನಿ ಚ |
ಉಪಜಹ್ರುಃ ಶರೀರೇಷು ಹೇಮಚಿತ್ರಾಣ್ಯನೇಕಶಃ ॥24॥
ಪದಾತಿಗಳಾದ ಪುರುಷರು ಸುವರ್ಣದಿಂದ ಅಲಂಕೃತವಾದ ವಿವಿಧವಾದ ಆಯುಧಗಳನ್ನು ಹೊತ್ತು ತಂದರು.
ತದುತ್ಸವ ಇವೋದಗ್ರಂ ಸಂಪ್ರಹೃಷ್ಟನರಾವೃತಮ್ |
ನಗರಂ ಧಾರ್ತರಾಷ್ಟ್ರಸ್ಯ ಭಾರತಾಸೀತ್ ಸಮಾಕುಲಮ್ ॥25॥
ಎಲೈ ಭಾರತನೇ, ದುರ್ಯೋಧನನ ಆ ಪಟ್ಟಣವು ಸಂತೋಷಗೊಂಡ ಮನುಷ್ಯರಿಂದ ಆವೃತವಾಗಿ ಮನುಷ್ಯರಿಂದಲೂ, ವಾಹನಗಳಿಂದಲೂ ನಿಬಿಡವಾಗಿ ಶ್ರೇಷ್ಠವಾದ ಉತ್ಸವದಂತೆ ಕಂಡುಬರುತ್ತಿದ್ದಿತು.
ಜನೌಘಸಲಿಲಾವರ್ತೋ ರಥನಾಗಾಶ್ವಮೀನವಾನ್ |
ಶಂಖದುಂದುಭಿನಿರ್ಘೋಷಃ ಕೋಶಸಂಚಯರತ್ನವಾನ್ ॥26॥
ಚಿತ್ರಾಭರಣವರ್ಮೋರ್ಮಿಃ ಶಸ್ತ್ರನಿರ್ಮಲಫೇನವಾನ್ |
ಪ್ರಾಸಾದಮಾಲಾದ್ರಿವೃತೋ ರಥ್ಯಾಪಣಮಹಾಗ್ರಹಃ ॥27॥
ಯೋಗಚಂದ್ರೋದಯೋದ್ಧೂತಃ ಕುರುರಾಜಬಲಾರ್ಣವಃ |
ವ್ಯದೃಶ್ಯತ ತದಾ ರಾಜಂಶ್ಚಂದ್ರೋದಯ ಇವಾರ್ಣವಃ ॥28॥
ಎಲೈ ರಾಜನೇ, ಕುರುರಾಜರ ಸೈನ್ಯವೆಂಬ ಸಮುದ್ರವು ಜನಸಮೂಹವೆಂಬ ಸುಳಿಗಳಿಂದಲೂ, ರಥ-ಗಜಾಶ್ವಗಳೆಂಬ ಮೀನುಗಳಿಂದಲೂ, ಶಂಖ-ದುಂದುಭಿಗಳ ಘೋಷದಿಂದಲೂ, ಕೋಶಸಂಚಯವೆಂಬ ರತ್ನಗಳಿಂದಲೂ, ವಿಚಿತ್ರವಾದ ಆಭರಣ ಮತ್ತು ಕವಚಗಳೆಂಬ ಅಲೆಗಳಿಂದಲೂ, ನಿರ್ಮಲಶಸ್ತ್ರವೆಂಬ ನೊರೆಗಳಿಂದಲೂ, ಪ್ರಾಸಾದ ಮಾಲೆಗಳೆಂಬ ಪರ್ವತಗಳಿಂದಲೂ, ರಸ್ತೆಗಳು ಮತ್ತು ಅಂಗಡಿಗಳೆಂಬ ಮಹಾ ಮೊಸಳೆಗಳಿಂದಲೂ, ಉಪಾಯವೆಂಬ ಚಂದ್ರೋದಯದಿಂದಲೂ ಕೂಡಿದುದಾಗಿ ಚಂದ್ರೋದಯ ಕಾಲದ ಸಮುದ್ರದಂತೆ ಆಗ ಕಂಡುಬಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಪಂಚಾಶೋತ್ತರಶತತಮೋಽಧ್ಯಾಯಃ ॥
॥ ಸೈನ್ಯನಿರ್ಯಾಣಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಐವತ್ತೆರಡನೆಯ ಅಧ್ಯಾಯ
ಕರ್ತವ್ಯಮೌಢ್ಯವನ್ನು ಹೊಂದಿದ ಯುಧಿಷ್ಠಿರನಿಗೆ
ಕೃಷ್ಣಾರ್ಜುನರಿಂದ ಉದ್ಬೋಧನೆ.
ವೈಶಂಪಾಯನಃ
ವಾಸುದೇವಸ್ಯ ತದ್ವಾಕ್ಯಮನುಸ್ಮೃತ್ಯ ಯುಧಿಷ್ಠಿರಃ |
ಪುನಃ ಪಪ್ರಚ್ಛ ವಾರ್ಷ್ಣೇಯಂ ಕಥಂ ಮಂದೋಽಬ್ರವೀದಿದಮ್ ॥1॥
ವೈಶಂಪಾಯನ ಕೃಷ್ಣನ ಆ ವಾಕ್ಯವನ್ನು ಸ್ಮರಿಸಿ ಯುಧಿಷ್ಠಿರನು ಪುನಃ ಅವನನ್ನು ಕುರಿತು, ಮಂದನಾದ ದುರ್ಯೋಧನನು ಹೇಗೆ ಈ ರೀತಿಯಲ್ಲಿ ಮಾತನಾಡಿದನು ಎಂದು ಕೇಳಿದನು.
ಅಸ್ಮಿನ್ನಭ್ಯಾಗತೇ ಕಾಲೇ ಕಿಂಚ ನಃ ಕ್ಷಮಮಚ್ಯುತ |
ಕಥಂ ಚ ವರ್ತಮಾನಾ ವೈ ಸ್ವಧರ್ಮಾನ್ನ ಚ್ಯವೇಮಹಿ ॥2॥
ಎಲೈ ಅಚ್ಯುತನೇ, ಒದಗಿ ಬಂದಿರುವ ಈ ಕಾಲದಲ್ಲಿ ನಾವು ಹೇಗೆ ನಡೆದುಕೊಂಡರೆ ನಮ್ಮ ಧರ್ಮದಿಂದ ಚ್ಯುತರಾಗಲಾರೆವು?
ದುರ್ಯೋಧನಸ್ಯ ಕರ್ಣಸ್ಯ ಶಕುನೇಃ ಸೌಬಲಸ್ಯ ಚ |
ವಾಸುದೇವ ಮತಜ್ಞೋಽಸಿ ಮಮ ಸಭ್ರಾತೃಕಸ್ಯ ಚ ॥3॥
ಎಲೈ ವಾಸುದೇವನೇ, ನೀನು ದುರ್ಯೋಧನನ, ಕರ್ಣನ, ಶಕುನಿಯ ಮತ್ತು ತಮ್ಮಂದಿರೊಡಗೂಡಿದ ನನ್ನ ಅಭಿಪ್ರಾಯವನ್ನು ತಿಳಿದವನಾಗಿದ್ದೀಯೆ.
ವಿದುರಸ್ಯಾಪಿ ತದ್ವಾಕ್ಯಂ ಶ್ರುತಂ ಭೀಷ್ಮಸ್ಯ ಚೋಭಯೋಃ |
ಕುಂತ್ಯಾಶ್ಚ ವಿಪುಲಪ್ರಜ್ಞ ಪ್ರಜ್ಞಾ ಕಾರ್ತ್ಸ್ನ್ಯೇನ ತೇ ಶ್ರುತಾ ॥4॥
ವಿದುರ ಮತ್ತು ಭೀಷ್ಮರಿಬ್ಬರ ಮಾತುಗಳನ್ನೂ ನೀನು ಕೇಳಿದ್ದೀಯೆ. ಎಲೈ ವಿಪುಲಪ್ರಜ್ಞನೇ, ಕುಂತಿಯ ಪ್ರಜ್ಞಾಪೂರ್ವಕವಾದ ಮಾತುಗಳನ್ನೂ ಪೂರ್ಣವಾಗಿ ಕೇಳಿದ್ದೀಯೆ.
ಸರ್ವಮೇತದತಿಕ್ರಮ್ಯ ವಿಚಾರ್ಯ ಚ ಪುನಃ ಪುನಃ |
ಯನ್ನಃ ಕ್ಷಮಂ ಮಹಾಬಾಹೋ ತದ್ ಬ್ರವೀಹ್ಯವಿಚಾರಯನ್ ॥5॥
ಎಲೈ ಮಹಾಬಾಹುವೇ, ಇವೆಲ್ಲವನ್ನೂ ಮೀರಿ ಪುನಃ ಪುನಃ ವಿಚಾರವನ್ನು ಮಾಡಿ, ನಾವು ಏನು ಮಾಡಿದರೆ ಒಳ್ಳೆಯದೆಂದು ಸಂಕೋಚ ಪಡದೆ ಹೇಳುವವನಾಗು (ಎಂದು ಹೇಳಿದನು).
ಶ್ರುತ್ವೈತದ್ ಧರ್ಮರಾಜಸ್ಯ ಧರ್ಮಾರ್ಥಸಹಿತಂ ವಚಃ |
ಮೇಘದುಂದುಭಿನಿರ್ಘೋಷಃ ಕೃಷ್ಣೋ ವಾಕ್ಯಮಥಾಬ್ರವೀತ್ ॥6॥
ಧರ್ಮರಾಜನ ಧರ್ಮಾರ್ಥಯುಕ್ತವಾದ ಈ ಮಾತುಗಳನ್ನು ಕೇಳಿ ಮೇಘದುಂದುಭಿ ಸ್ವರದಂತೆ ಸ್ವರವುಳ್ಳ ಕೃಷ್ಣನು ಅನಂತರ ಉತ್ತರವನ್ನು ಹೇಳಿದನು.
ಉಕ್ತವಾನಸ್ಮಿ ಯದ್ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ |
ನ ತು ತನ್ನಿಕೃತಿಪ್ರಜ್ಞೇ ಕೌರವೇ ಪ್ರತಿತಿಷ್ಠತಿ ॥7॥
ನಾನು ದುರ್ಯೋಧನನಿಗೆ ಧರ್ಮಾರ್ಥಸಹಿತವಾದ, ಹಿತವಾದ ಮಾತುಗಳನ್ನು ಹೇಳಿದೆ. ಆದರೆ ಮೋಸದಲ್ಲೇ ಬುದ್ಧಿ ಇರುವ ಅವನಲ್ಲಿ ಆ ಮಾತುಗಳು ನಾಟಲಿಲ್ಲ.
ನ ಚ ಭೀಷ್ಮಸ್ಯ ದುರ್ಮೇಧಾಃ ಶೃಣೋತಿ ವಿದುರಸ್ಯ ವಾ |
ಮಮ ವಾ ಭಾಷಿತಂ ಕಿಂಚಿತ್ ಸರ್ವಮೇತನ್ನಿರರ್ಥಕಮ್ ॥8॥
ದುರ್ಬುದ್ಧಿಯುಳ್ಳ ಅವನು ಭೀಷ್ಮರ ಅಥವಾ ವಿದುರನ ಮಾತುಗಳನ್ನು ಕೇಳುವುದಿಲ್ಲ. ನಾನು ಆಡಿದ ಮಾತೆಲ್ಲವೂ ಅವನಲ್ಲಿ ವ್ಯರ್ಥವೇ ಸರಿ.
ನೈಷ ಕಾಮಯತೇ ಧರ್ಮಂ ನೈಷ ಕಾಮಯತೇ ಯಶಃ |
ಜಿತಂ ಸ ಮನ್ಯತೇ ಸರ್ವಂ ದುರಾತ್ಮಾ ಕರ್ಣಮಾಶ್ರಿತಃ ॥9॥
ಅವನಿಗೆ ಧರ್ಮದ ಆಸೆ ಇಲ್ಲ. ಕೀರ್ತಿಯ ಆಸೆಯೂ ಇಲ್ಲ. ದುರಾತ್ಮನಾದ ಅವನು ಕರ್ಣನನ್ನು ಆಶ್ರಯಿಸಿ, ನಾನು ಎಲ್ಲವನ್ನೂ ಗೆದ್ದಿದ್ದೇನೆಂದು ತಿಳಿದಿದ್ದಾನೆ.
ಬಂಧಮಾಜ್ಞಾಪಯಾಮಾಸ ಮಮ ಚಾಪಿ ಸುಯೋಧನಃ |
ನ ಚ ತಂ ಲಬ್ಧವಾನ್ ಕಾಮಂ ದುರಾತ್ಮಾ ಶಾಸನಾತಿಗಃ ॥10॥
ಸುಯೋಧನನು ನನ್ನ ಬಂಧನಕ್ಕೆ ಆದೇಶವನ್ನು ನೀಡಿದನು. ಆದರೆ ದುರಾತ್ಮನೂ, ಹಿರಿಯರ ಶಾಸನವನ್ನು ಮೀರಿದವನೂ ಆದ ಅವನ ಆ ಆಸೆಯು ಈಡೇರಲಿಲ್ಲ.
ನ ಚ ಭೀಷ್ಮೋ ನ ಚ ದ್ರೋಣೋ ಯುಕ್ತಂ ತತ್ರಾಹತುರ್ವಚಃ |
ಸರ್ವೇ ತಮನುವರ್ತಂತೇ ಋತೇ ವಿದುರಮಚ್ಯುತ ॥11॥
ಅಲ್ಲಿ ಭೀಷ್ಮರಾಗಲೀ, ದ್ರೋಣರಾಗಲೀ ಯೋಗ್ಯವಾದ ಮಾತುಗಳನ್ನು ಆಡಲಿಲ್ಲ. ಎಲೈ ಗುಣಗಳಿಂದ ಚ್ಯುತನಾಗದವನೇ, ವಿದುರನೊಬ್ಬನನ್ನು ಬಿಟ್ಟು ಎಲ್ಲರೂ ಅವನನ್ನು ಅನುಸರಿಸುತ್ತಾರೆ.
ಶಕುನಿಃ ಸೌಬಲಶ್ಚೈವ ಕರ್ಣದುಃಶಾಸನಾವಪಿ |
ತ್ವಯ್ಯಯುಕ್ತಾನ್ಯಭಾಷಂತ ಮೂಢಾಃ ಪಂಡಿತಮಾನಿನಃ ॥12॥
ಮೂಢರೂ ಮತ್ತು ತಮ್ಮನ್ನು ಪಂಡಿತರೆಂದು ತಿಳಿದವರೂ ಆದ ಶಕುನಿ, ಕರ್ಣ, ದುಶ್ಶಾಸನರು ನಿನ್ನ ವಿಷಯದಲ್ಲಿ ಅನುಚಿತವಾದ

ಮಾತುಗಳನ್ನು ಆಡಿದರು.
ಕಿಂಚೈತೇನ ಮಯೋಕ್ತೇನ ಯಾನ್ಯಭಾಷತ ಕೌರವಃ |
ಸಂಕ್ಷೇಪೇಣ ದುರಾತ್ಮಾಽಸೌ ನ ಯುಕ್ತಂ ತ್ವಯಿ ವರ್ತತೇ ॥13॥
ನಾನು ಆಡಿದ ಮಾತುಗಳಿಗೆ ಉತ್ತರವಾಗಿ ದುರಾತ್ಮನಾದ ದುರ್ಯೋಧನನು ಏನು ಮಾತನಾಡಿದನೋ ಅದರ ಸಾರವೆಂದರೆ, ಅವನು ನಿನ್ನಲ್ಲಿ ಸರಿಯಾಗಿ ನಡೆದುಕೊಳ್ಳುವುದಿಲ್ಲ ಎಂಬುದು.
ಪಾರ್ಥಿವೇಷು ಚ ಸರ್ವೇಷು ಯ ಇಮೇ ತವ ಸೈನಿಕಾಃ |
ಯತ್ಪಾಪಂ ಯನ್ನ ಕಲ್ಯಾಣಂ ಸರ್ವಂ ತಸ್ಮಿನ್ ಪ್ರತಿಷ್ಠಿತಮ್ ॥14॥
ಇಲ್ಲಿ ನೆರೆದ ಎಲ್ಲಾ ರಾಜರಲ್ಲಿಯೂ ಮತ್ತು ಎಲ್ಲಾ ಸೈನಿಕರಲ್ಲೂ ಯಾವ ಪಾಪವು ಮತ್ತು ಯಾವ ಅಶುಭವು ಇದೆಯೋ ಅವೆಲ್ಲವೂ ಅವನೊಬ್ಬನಲ್ಲಿಯೇ ಪ್ರತಿಷ್ಠಿತವಾಗಿವೆ.
ನ ಚಾಪಿ ವಯಮತ್ಯರ್ಥಂ ಪರಿತ್ಯಾಗೇನ ಕರ್ಹಿಚಿತ್ |
ಕೌರವ್ಯೈಃ ಶಮಮಿಚ್ಛಾಮಸ್ತತ್ರ ಯುದ್ಧಮನಂತರಮ್ ॥15॥
ನಾವಾದರೂ ಎಲ್ಲ ಧರ್ಮಗಳನ್ನೂ ಬಿಟ್ಟು ಕೌರವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವುದಕ್ಕೆ ಬಯಸುವುದಿಲ್ಲ. ಆದ್ದರಿಂದ ಯುದ್ಧವೇ ಈಗ ಮಾಡಬೇಕಾದ ಕಾರ್ಯ.
ವೈಶಂಪಾಯನಃ
ತಚ್ಛ್ರುತ್ವಾ ಪಾರ್ಥಿವಾಃ ಸರ್ವೇ ವಾಸುದೇವೇನ ಭಾಷಿತಮ್ |
ಅಬ್ರುವಂತೋ ಮುಖಂ ರಾಜ್ಞಃ ಸಮುದೈಕ್ಷಂತ ಭಾರತ ॥16॥
ವೈಶಂಪಾಯನ ಎಲೈ ಭಾರತನೇ, ಕೃಷ್ಣನು ಆಡಿದ ಆ ಮಾತುಗಳನ್ನು ಕೇಳಿ ಎಲ್ಲ ರಾಜರೂ ಏನನ್ನೂ ಮಾತನಾಡದೆ ರಾಜನಾದ ಯುಧಿಷ್ಠಿರನ ಮುಖವನ್ನು ನೋಡಿದರು.
ಯುಧಿಷ್ಠಿರಸ್ತ್ವಭಿಪ್ರಾಯಮಭಿಲಕ್ಷ್ಯ ಮಹೀಕ್ಷಿತಾಮ್ |
ಯೋಗಮಾಜ್ಞಾಪಯಾಮಾಸ ಭೀಮಾರ್ಜುನಯಮೈಃ ಸಹ ॥17॥
ಯುಧಿಷ್ಠಿರನಾದರೂ ರಾಜರ ಅಭಿಪ್ರಾಯವನ್ನು ಗಮನಿಸಿ, ಭೀಮಾರ್ಜುನ, ನಕುಲ-ಸಹದೇವರ ಜೊತೆಯಲ್ಲಿ ಸೈನ್ಯದ ಜಮಾವಣೆಗೆ ಆಜ್ಞೆ ಮಾಡಿದನು.
ತತಃ ಕಿಲಕಿಲಾಭೂತಮ್ ಅನೀಕಂ ಪಾಂಡವಸ್ಯ ಹ |
ಆಜ್ಞಾಪಿತೇ ತದಾ ಯೋಗೇ ಸಮಹೃಷ್ಯಂತ ಸೈನಿಕಾಃ ॥18॥
ಆಗ ಸೈನ್ಯದ ಯುದ್ಧಸಿದ್ಧತೆಯು ಆಜ್ಞಾಪಿಸಲ್ಪಡುತ್ತಿರಲು ಸೈನಿಕರು ಸಂತೋಷಪಟ್ಟರು. ಯುಧಿಷ್ಠಿರನ ಸೈನ್ಯದಲ್ಲಿ ಸಂತೋಷದ ದೊಡ್ಡ ನಾದವು ಉಂಟಾಯಿತು.
ಅವಧ್ಯಾನಾಂ ವಧಂ ಪಶ್ಯನ್ ಧರ್ಮರಾಜೋ ಯುಧಿಷ್ಠಿರಃ |
ನಿಃಶ್ವಸನ್ ಭೀಮಸೇನಂ ಚ ವಿಜಯಂ ಚೇದಮಬ್ರವೀತ್ ॥19॥
ಧರ್ಮರಾಜನಾದ ಯುಧಿಷ್ಠಿರನು ಅವಧ್ಯರಾದವರ ವಧೆಯನ್ನು ಗಮನಿಸುತ್ತಾ, ನಿಟ್ಟುಸಿರನ್ನು ಬಿಡುತ್ತಾ, ಭೀಮಾರ್ಜುನರನ್ನು ಕುರಿತು ಈ ಮಾತನ್ನಾಡಿದನು.
ಯದರ್ಥಂ ವನವಾಸಶ್ಚ ಪ್ರಾಪ್ತಂ ದುಃಖಂ ಚ ಯನ್ಮಯಾ |
ಸೋಽಯಮಸ್ಮಾನುಪೈತ್ಯೇವ ಪರೋಽನರ್ಥಃ ಪ್ರಯತ್ನತಃ ॥20॥
ನಾವು ಯಾವುದರ ಸಲುವಾಗಿ ವನವಾಸವನ್ನು ಮಾಡಿ ದುಃಖವನ್ನು ಅನುಭವಿಸಿದೆವೋ ಈಗ ಅದನ್ನು ಬಿಟ್ಟು ಇನ್ನೊಂದು ಅನರ್ಥವು ಪ್ರಯತ್ನ ಪೂರ್ವಕವಾಗಿ ನಮ್ಮ ಬಳಿಗೆ ಬರುತ್ತಿದೆ.
ಯಸ್ಮಿನ್ ಯತ್ನಃ ಕೃತೋಽಸ್ಮಾಭಿಃ ಸ ನೋ ಹೀನಃ ಪ್ರಯತ್ನತಃ |
ಕೃತೇಽಪಿ ಯತ್ನೇಽಸ್ಮಾನ್ ವೈ ಉಪಾವೃತ್ತಃ ಕಲಿರ್ಮಹಾನ್ ॥21॥
ನಾವು ಯಾವುದಕ್ಕಾಗಿ ಪ್ರಯತ್ನ ಮಾಡಿದೆವೋ ಆ ಪ್ರಯತ್ನ ನಮಗೆ ಸಿದ್ಧಿಸಲಿಲ್ಲ. ನಾವು ಪ್ರಯತ್ನ (ಸಂಧಿಗಾಗಿ) ಮಾಡಿದರೂ ನಮಗೆ ದೊಡ್ಡ ವಿರೋಧವೇ ಪ್ರಾಪ್ತವಾಯಿತು.
ಕಥಂ ಹ್ಯವಧ್ಯೈಃ ಸಂಗ್ರಾಮಃ ಕಾರ್ಯಃ ಸಹ ಭವಿಷ್ಯತಿ |
ಕಥಂ ಹತ್ವಾ ಗುರೂನ್ ವೃದ್ಧಾನ್ ವಿಜಯೋ ನೋ ಭವಿಷ್ಯತಿ ॥22॥
ಅವಧ್ಯರಾದವರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡುವುದು? ಗುರುಗಳನ್ನೂ ಮತ್ತು ಹಿರಿಯರನ್ನೂ ಕೊಂದು ನಮಗೆ ಹೇಗೆ ವಿಜಯ ಉಂಟಾಗುವುದು?
ತಚ್ಛ್ರುತ್ವಾ ಧರ್ಮರಾಜಸ್ಯ ಸವ್ಯಸಾಚೀ ಪರಂತಪಃ |
ಯದುಕ್ತಂ ವಾಸುದೇವಸ್ಯ ಶ್ರಾವಯಾಮಾಸ ತದ್ವಚಃ ॥23॥
ಅದನ್ನು ಕೇಳಿದ ಪರಂತಪನಾದ ಸವ್ಯಸಾಚಿಯು ಕೃಷ್ಣನು ಹೇಳಿದ ಮಾತುಗಳನ್ನು ಅವನ ಸ್ಮರಣೆಗೆ ತಂದುಕೊಟ್ಟನು.
ಉಕ್ತವಾನ್ ದೇವಕೀಪುತ್ರಃ ಕುಂತ್ಯಾಶ್ಚ ವಿದುರಸ್ಯ ಚ |
ವಚನಂ ತತ್ ತ್ವಯಾ ರಾಜನ್ ನಿಖಿಲೇನಾವಧಾರಿತಮ್ ॥24॥
ಎಲೈ ರಾಜನೇ, ದೇವಕೀಪುತ್ರನಾದ ಕೃಷ್ಣನು ಕುಂತಿಯೂ ಮತ್ತು ವಿದುರನೂ ಆಡಿದ ಮಾತುಗಳನ್ನು ಹೇಳಿದನು. ಅದನ್ನು ನೀನು ಸಂಪೂರ್ಣವಾಗಿ ಕೇಳಿ ತಿಳಿದಿದ್ದೀಯೆ.
ನ ಚ ತೌ ವಕ್ಷ್ಯತೋಽಧರ್ಮಮಿತಿ ಮೇ ನೈಷ್ಠಿಕೀ ಮತಿಃ |

ನಾಪಿ ಯುಕ್ತಂ ಚ ಕೌಂತೇಯ ನಿವರ್ತಿತುಮಯುದ್ಧತಃ ॥25॥
ಅವರಿಬ್ಬರೂ ಅಧರ್ಮವನ್ನು ಹೇಳುವುದಿಲ್ಲ ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ. ಕೌಂತೇಯನೇ, ಅದಲ್ಲದೇ ಯುದ್ಧವಿಲ್ಲದೆ ಹಿಂದೆ ಸರಿಯುವುದು ಯುಕ್ತವಾದುದಲ್ಲ.
ವೈಶಂಪಾಯನಃ
ತಚ್ಛ್ರುತ್ವಾ ವಾಸುದೇವೋಽಪಿ ಸವ್ಯಸಾಚಿವಚಸ್ತದಾ।
ಸ್ಮಯಮಾನೋಽಬ್ರವೀದ್ ವಾಕ್ಯಂ ಪಾರ್ಥಮೇವಮಿತಿ ಬ್ರುವನ್ ॥26॥
ವೈಶಂಪಾಯನ ಅರ್ಜುನನ ಆ ಮಾತುಗಳನ್ನು ಕೇಳಿದ ಕೃಷ್ಣನು ನಗುತ್ತಾ ಅರ್ಜುನನನ್ನು ನೋಡಿ ನೀನು ಹೇಳಿದಂತೆಯೇ ಸರಿ ಎಂದು ಹೇಳಿದನು.
ತತಸ್ತೇ ಧೃತಸಂಕಲ್ಪಾ ಯುದ್ಧಾಯ ಸಹ ಸೈನಿಕಾಃ।
ಪಾಂಡವೇಯಾ ಮಹಾರಾಜ ತಾಂ ರಾತ್ರಿಂ ಸುಖಮಾವಸನ್ ॥27॥
ಎಲೈ ಮಹಾರಾಜನೇ, ಅನಂತರ ಪಾಂಡವರು ಮತ್ತು ಸೈನಿಕರು ಯುದ್ಧಕ್ಕಾಗಿ ನಿಶ್ಚಯವಾದ ಸಂಕಲ್ಪವನ್ನು ಮಾಡಿ, ಆ ರಾತ್ರಿಯನ್ನು ಸುಖವಾಗಿ ಕಳೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿಪಂಚಾಶೋತ್ತರಶತತಮೋಽಧ್ಯಾಯಃ ॥
॥ ಸೈನ್ಯನಿರ್ಯಾಣಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಸೈನ್ಯನಿರ್ಯಾಣಪರ್ವ ॥
* * * * *

9. ಭೀಷ್ಮಾಭಿಷೇಚನಪರ್ವ
ನೂರ ಐವತ್ಮೂರನೆಯ ಅಧ್ಯಾಯ
ದುರ್ಯೋಧನನ ಸೇನಾಸಿದ್ಧತೆ ಮತ್ತು ಸೇನಾನಾಯಕರ ಆಯ್ಕೆ.
ವೈಶಂಪಾಯನಃ
ವ್ಯುಷಿತಾಯಾಂ ರಜನ್ಯಾಂ ತು ರಾಜಾ ದುರ್ಯೋಧನಸ್ತತಃ।
ವ್ಯಭಜನ್ ತಾನ್ಯನೀಕಾನಿ ದಶ ಚೈಕಂ ಚ ಭಾರತ ॥1॥
ವೈಶಂಪಾಯನ ಎಲೈ ಭಾರತನೇ, ರಾತ್ರಿಯು ಕಳೆಯುತ್ತಿರಲು ರಾಜನಾದ ದುರ್ಯೋಧನನು ತನ್ನ ಹನ್ನೊಂದು ಅಕ್ಷೋಹಿಣೀ ಸೈನ್ಯವನ್ನು ವಿಭಾಗ ಮಾಡಿದನು.
ನರಹಸ್ತಿರಥಾಶ್ವಾನಾಂ ಸಾರಂ ಮಧ್ಯಂ ಚ ಫಲ್ಗು ಚ।
ಸರ್ವೇಷ್ವೇತೇಷ್ವನೀಕೇಷು ಸಂದಿದೇಶ ನರಾಧಿಪಃ ॥2॥
ಪದಾತಿಗಳು, ಅಶ್ವಾರೋಹಿಗಳು, ಗಜಾರೋಹಿಗಳು ಮತ್ತು ರಥಗಳು, ಈ ಎಲ್ಲದರಲ್ಲಿ ಉತ್ತಮ, ಮಧ್ಯಮ ಮತ್ತು ಅಧಮವಾದುದನ್ನು ತಿಳಿದು ರಾಜನು ಸೂಕ್ತವಾಗಿ ಸಂದೇಶವನ್ನು ನೀಡಿದನು.
ಸಾನುಕರ್ಷಾಃ ಸತೂಣೀರಾಃ ಸವರೂಥಾಃ ಸಹರ್ಷ್ಟಯಃ।
ಸೋಪಾಸಂಗಾಃ ಸಶಕ್ತೀಕಾಃ ಸನಿಷಂಗಾಃ ಸಸಾಯಕಾಃ ॥3॥
ಸಧ್ವಜಾಃ ಸಪತಾಕಾಶ್ಚ ಸಶರಾಸನತೋಮರಾಃ।
ರಜ್ಜುಭಿಶ್ಚ ವಿಚಿತ್ರಾಭಿಃ ಸಪಾಶಾಃ ಸಪರಿಚ್ಛದಾಃ ॥4॥
ಸಕಚಗ್ರಹವಿಕ್ಷೇಪಾಃ ಸತೈಲಗುಡವಾಲುಕಾಃ।
ಸಾಶೀವಿಷಘಟಾಃ ಸರ್ವೇ ಸಸರ್ಜರಸಪಾಂಸವಃ ॥5॥
ಸಘಂಟಫಲಕಾಃ ಸರ್ವೇ ಸಾಯೋಗುಡಬಲೋಪಲಾಃ।
ಕಂಕಾಲಭಿಂಡಿಪಾಲಾಶ್ಚ ಸಮಧೂಚ್ಛಿಷ್ಟಮುದ್ಗರಾಃ ॥6॥
ಸಕಾಂಡದಂಡಕಾಃ ಸರ್ವೇ ಸಸೀರವಿಷತೋಮರಾಃ।
ಸಮುಷ್ಟಿಪಿಟಕಾಃ ಸರ್ವೇ ಸದಾತ್ರಾಂಕುಶತೋಮರಾಃ ॥7॥
ಸಕೀಲಕ್ರಕಚಾಃ ಸರ್ವೇ ವಾಸೀವೃಕ್ಷಾದನಾನ್ವಿತಾಃ।
ವ್ಯಾಘ್ರಚರ್ಮಪರೀವಾರಾ ವೃತಾ ಗೋಽದ್ವೀಪಿಚರ್ಮಭಿಃ ॥8॥
ಸವಸ್ತ್ರಯಃ ಸಶೃಂಗಾಶ್ಚ ಸಪ್ರಾಸವಿವಿಧಾಯುಧಾಃ।
ಸಕುಠಾರಾಃ ಸಕುದ್ದಾಲಾಃ ಸತೈಲಕ್ಷೌದ್ರಸರ್ಪಿಷಃ ॥9॥
ಆ ಯೋಧರೆಲ್ಲರಿಗೂ ದುರ್ಯೋಧನನು ಎಲ್ಲ ಆಯುಧಗಳನ್ನೂ ಮತ್ತು ಸಲಕರಣೆಗಳನ್ನು ಒದಗಿಸಿದನು. ವಿಧವಿಧವಾದ ಬತ್ತಳಿಕೆಗಳು, ಬಾಣಗಳು, ಋಷ್ಟಿಗಳು, ಧ್ವಜಗಳು, ಪತಾಕೆಗಳು, ಧನುಸ್ಸುಗಳು, ತೋಮರಗಳು, ವಿಚಿತ್ರವಾದ ಸಣ್ಣ ಹಗ್ಗಗಳಿಂದ ಕೂಡಿದ ಪಾಶಗಳು, ತೈಲ-ಗುಡಮಿಶ್ರಿತವಾದ ಮರಳುಗಳು, ಸರ್ಪದಿಂದ ಕೂಡಿದ ಘಟಗಳು, ಸರ್ಜರಸದಿಂದ ಕೂಡಿದ ಧೂಳುಗಳು, ಘಂಟಾಸಹಿತವಾದ ಹಲಗೆಗಳು, ಕಬ್ಬಿಣ ಮತ್ತು ಬೆಲ್ಲದಿಂದ ಮಿಶ್ರಿತವಾದ ಕಲ್ಲುಗಳು, ಭಿಂಡಿಪಾಲಗಳು, ಕಂಕಾಲಗಳು, ಜೇನುಮೇಣದಿಂದ ಸಹಿತವಾದ ಮುದ್ಗರಗಳು, ಕಾಂಡಸಹಿತವಾದ ದಂಡಗಳು, ನೇಗಿಲಿನಿಂದ ಸಹಿತವಾದ ವಿಷಯುಕ್ತವಾದ

ತೋಮರಗಳು, ಕುಡುಗೋಲುಗಳು, ಅಂಕುರ ತೋಮರಗಳು, ಹಲ್ಲಿನಿಂದ ಕೂಡಿದ ಗರಗಸಗಳು, ಬಾಚಿ ಮೊದಲಾದ ವೃಕ್ಷವನ್ನು ಕಡಿಯುವ ಸಾಧನಗಳು, ವ್ಯಾಘ್ರ ಚರ್ಮಗಳು, ಗೋಚರ್ಮಗಳು, ವಸ್ತಿಗಳು, ಶೃಂಗಗಳು, ಪ್ರಾಸಗಳು, ವಿವಿಧವಾದ ಆಯುಧಗಳು, ಕೊಡಲಿಗಳು, ಹಾರೆಗಳು, ತೈಲ, ಮಧು ಮತ್ತು ಘೃತ ಎಲ್ಲವನ್ನೂ ಎಲ್ಲಾ ಯೋಧರಿಗೂ ಒದಗಿಸಿದನು. (ಇಲ್ಲಿ ಎಷ್ಟೋ ಆಯುಧಗಳ ಹೆಸರುಗಳು ತಿಳಿಯುವುದಿಲ್ಲ).
(ಅನುಕರ್ಷ ಎಂದರೆ ರಥದ ಕೆಳಗಿರುವ ಮರ. ರಥದ ರಿಪೇರಿಗೆ ಉಪಯೋಗಿಸುವಂತಹದು. `ಅನುಕರ್ಷಃ ರಥಾಧಃಸ್ಥದಾರುಣಿ' ಎಂದು ಮೇದಿನೀಕೋಶ. ತೂಣೀರ ಎಂದರೆ ರಥದಲ್ಲಿ ಕಟ್ಟುವ ದೊಡ್ಡ ಬತ್ತಳಿಕೆ. ಅಶ-ೆವಗಜಗಳು ಹೊರುವ ಬತ್ತಳಿಕೆಯು ಉಪಾಸಂಗ. ಪದಾತಿಗಳು ಹೊರುವ ಬತ್ತಳಿಕೆಯು ನಿಷಂಗ ಎನಿಸುತ್ತದೆ. ಕಚಗ್ರಹವಿಕ್ಷೇಪ ಎಂದರೆ ಶತ್ರುವನ್ನು ತಲೆಯ ಕೂದಲುಗಳಲ್ಲಿ ಹಿಡಿದು ಎಳೆಯುವ ಸಾಧನ. ಕಾಯಿಸಿದ ಎಣ್ಣೆ, ನೀರಾದ ಬೆಲ್ಲ, ಮರುಳುಗಳು ಶತ್ರುಗಳ ಮೇಲೆ ಪ್ರಯೋಗಿಸಲು ಇರುವಂತಹವು. ವಿಷಸರ್ಪಗಳುಳ್ಳ ಮಡಕೆಗಳೂ ಸಮಯ ಬಂದಾಗ ಶತ್ರುಗಳ ಮೇಲೆ ಬಿಡಲು ಪ್ರಯೋಗಿಸುವಂತಹವು. ಕಾಲಯವನನ ಜೊತೆಯಲ್ಲಿ ಯುದ್ಧಮಾಡುವ ಮುಂಚೆ ಶ್ರೀಕೃಷ್ಣನು ಇದನ್ನು ಉಪಯೋಗಿಸಿದ್ದಾನೆ. ಸರ್ಜರಸ ಎಂದರೆ ರಾಳ. ಸುಲಭವಾಗಿ ಬೆಂಕಿ ಹಿಡಿಯುವಂತಹದು. ಅರಗಿನ ಮನೆಯ ನಿರ್ಮಾಣದಲ್ಲಿ ಇದರ ಉಲ್ಲೇಖವಿದೆ. ಘಂಟಾಫಲಕವೆಂದರೆ ಘಂಟೆಯಿಂದ ಕೂಡಿದ ಒಂದು ಶಸ್ತ್ರ. ಈಟಿ-ಭರ್ಜಿಗಳಿಗೆ ಘಂಟೆಯನ್ನು ಕಟ್ಟುತ್ತಿದ್ದರು. ಅಯಸ್ ಎಂದರೆ ಕಬ್ಬಿಣದ ಖಡ್ಗ, ಚಾಕು, ಚೂರಿ ಮುಂತಾದವು. ಗುಡ, ಉಪಲಗಳೆಂದರೆ ಕಾಯಿಸಿದ ಬೆಲ್ಲ ಮತ್ತು ಸಣ್ಣಕಲ್ಲುಗಳು - ಕವಣೆಯಿಂದ ಪ್ರಯೋಗಿಸುವಂತಹವು. ಕಂಕಾಲ, ಭಿಂಡಿಪಾಲಗಳು ಶಸ್ತ್ರವಿಶೇಷಗಳು. ಮಧೂಚ್ಛಿಷ್ಟವೆಂದರೆ ಜೇನುಮೇಣ. ಕಾಯಿಸಿದ ಮೇಣವು ಮುದ್ಗರ ಎಂದರೆ ಹಾರೆ, ಒನಕೆ ಇಂತಹ ಶಸ್ತ್ರದ ಜೊತೆಯಲ್ಲಿ ಉಪಯೋಗಿಸುವಂತಹದು. ಕಾಂಡದಂಡ ಎಂದರೆ ಮುಳ್ಳುಗಳಿಂದ ಕೂಡಿದ ದೀರ್ಘವಾದ ದಂಡ. ಸೀರ ಎಂದರೆ ನೇಗಿಲು. ಅಂತಹದು ಬಲರಾಮನ ಆಯುಧವೆಂದು ಪ್ರಸಿದ್ಧ. ಅದರ ಜೊತೆಯಲ್ಲಿ ಸೇರಿರುವ ವಿಷಯುಕ್ತವಾದ ತೋಮರ - ಇದು ಸಸೀರವಿಷತೋಮರ. ಖುಷ್ಪಿ ಪಿಟಕಗಳು ಕಾಯಿಸಿದ ದ್ರವದ್ರವ್ಯವನ್ನು ಎರಚುವ ಸಾಧನಗಳು -ದಾತ್ರ ಎಂದರೆ ಕುಡಗೋಲು, ಕಡಿಕತ್ತಿ ಮೊದಲಾದವು. ಇದರ ಉಲ್ಲೇಖ ಯಾಸ್ಕರ ನಿರುಕ್ತದಲ್ಲಿದೆ. ವಾಸಿ ಎಂದರೆ ಬಡಗಿಗಳು ಉಪಯೋಗಿಸುವ ಬಾಚಿ. ವೃಕ್ಷಾದನ ಎಂದರೆ ಮರಗಳನ್ನು ಕತ್ತರಿಸುವ ಸಾಧನ. ಕ್ರಕಚ ಎಂದರೆ ಗರಗಸ. ಕುಠಾರ ಎಂದರೆ ಕೊಡಲಿ ಕುದ್ದಾಲವು ಹಾರೆ. ಕ್ಷೌದ್ರ ಎಂದರೆ ಜೇನುತುಪ್ಪ ಮತ್ತು ಜೇನುಮೇಣ).
ರುಗ್ಮಜಾಲಪ್ರತಿಚ್ಛನ್ನಾ ನಾನಾಮಣಿವಿಭೂಷಿತಾಃ |
ಚಿತ್ರಾನೀಕಾ ಸುವಪುಷೋ ಜ್ವಲಿತಾ ಇವ ಪಾವಕಾಃ ॥10॥
ಎಲ್ಲ ಯೋಧರೂ ಅನೇಕ ಮಣಿಗಳಿಂದ ವಿಭೂಷಿತರೂ, ಸುವರ್ಣಮಯವಾದ ಜಾಲಗಳನ್ನು ಹೊಂದಿದವರೂ, ಒಳ್ಳೆಯ ದೇಹವನ್ನು ಹೊಂದಿದವರೂ ಆಗಿ ಉರಿಯುವ ಅಗ್ನಿಗಳಂತಿದ್ದರು.
ತಥಾ ಕವಚಿನಃ ಶೂರಾಃ ಶಸ್ತ್ರೇಷು ಕೃತನಿಶ್ರಮಾಃ |
ಕುಲೀನಾ ಹಯಯೋನಿಜ್ಞಾಃ ಸಾರಥ್ಯೇ ವಿನಿವೇಶಿತಾಃ ॥11॥
ಅದರಂತೆ ಕವಚಗಳನ್ನು ಧರಿಸಿದ ಶೂರರೂ, ಶಸ್ತ್ರದಲ್ಲಿ ಬಹಳ ಪರಿಶ್ರಮ ಉಳ್ಳವರೂ, ಒಳ್ಳೆಯ ಕುಲದಲ್ಲಿ ಜನಿಸಿದವರೂ, ಅಶ್ವಗಳ ವಿಶೇಷ ಜ್ಞಾನವುಳ್ಳವರೂ ಆದಂತಹವರು ಸಾರಥಿಗಳಾಗಿ ನೇಮಿಸಲ್ಪಟ್ಟರು.
ಬದ್ಧಾರಿಷ್ಟಾ ಬದ್ಧಕಕ್ಷ್ಯಾ ಬದ್ಧಧ್ವಜಪತಾಕಿನಃ |
ಬದ್ಧಾಭರಣನಿರ್ಯೂಹಾ ಬದ್ಧವರ್ಮಾಸಿಪಟ್ಟಸಾಃ ॥12॥
ಅವರು ಅಭೇದ್ಯವಾದ ಕವಚಗಳನ್ನು ಧರಿಸಿ, ಗಜಾಶ್ವಗಳ ಉದರಬಂಧನ ರಜ್ಜುಗಳನ್ನು ಹೊಂದಿ, ರಥಗಳಿಗೆ ಧ್ವಜಪತಾಕೆಗಳನ್ನು ಕಟ್ಟಿ, ಆಭರಣ ಸಮೂಹಗಳನ್ನೂ ಕಟ್ಟಿ, ಕವಚ ಖಡ್ಗ, ಪಟ್ಟಸ ಮೊದಲಾದ ಆಯುಧಗಳನ್ನು ರಥದಲ್ಲಿ ಆಯಾ ಸ್ಥಳದಲ್ಲಿ ಕಟ್ಟಿದರು.
ಚತುರ್ಯುಜೋ ರಥಾ ಸರ್ವೇ ಸರ್ವೇ ಚೋತ್ತಮವಾಸಸಃ |
ಸಂಹೃಷ್ಟವಾಹನಾಃ ಸರ್ವೇ ಸರ್ವೇ ಶಸ್ತ್ರಸಮಾಯುತಾಃ ॥13॥
ಎಲ್ಲರೂ ನಾಲ್ಕು ಅಶ್ವಗಳನ್ನು ಹೂಡಿದ ರಥಗಳಲ್ಲಿ ಉತ್ತಮ ವಸ್ತ್ರಗಳನ್ನು ಧರಿಸಿದವರಾಗಿದ್ದರು. ಎಲ್ಲರ ವಾಹನಗಳು ಸಂತೋಷದಿಂದ ಕೂಡಿದ್ದವು. ರಥಗಳು ಶಸ್ತ್ರಗಳಿಂದ ತುಂಬಿದ್ದವು.
ಧುರ್ಯಯೋರ್ಹಯಯೋರೇಕಃ ತಥಾऽನ್ಯೌ ಪಾರ್ಷ್ಣಿಸಾರಥೀ |
ತೌ ಚಾಪಿ ರಥಿನಾಂ ಶ್ರೇಷ್ಠೌ ರಥೀ ಚ ಹಯವಿತ್ ತಥಾ ॥14॥
ಮುಂದಿನ ಎರಡು ಕುದುರೆಗಳಿಗೆ ಒಬ್ಬ ಸಾರಥಿ, ಎರಡು ಪಾರ್ಶ್ವದ ಒಂದೊಂದು ಕುದುರೆಗೆ ಒಬ್ಬೊಬ್ಬ ಸಾರಥಿ, ಆ ಸಾರಥಿಗಳೂ ಶ್ರೇಷ್ಠರಾದ ರಥಿಕನೂ, ಆ ರಥಿಕನೂ ಶ್ರೇಷ್ಠನಾದ ಸಾರಥಿಯೂ ಆಗಿದ್ದನು.
ನಗರಾಣೀವ ಗುಪ್ತಾನಿ ದುರಾಧರ್ಷಾಣಿ ಶತ್ರುಭಿಃ |
ಆಸನ್ ರಥಸಹಸ್ರಾಣಿ ಹೇಮಮಾಲೀನಿ ಸರ್ವಶಃ ॥15॥
ಹೇಮಮಾಲೆಗಳನ್ನು ಧರಿಸಿದ ಸಹಸ್ರಾರು ರಥಗಳು ಶತ್ರುಗಳಿಂದ ಸೋಲಿಸಲು ಸಾಧ್ಯವಿಲ್ಲದ ಸುರಕ್ಷಿತವಾದ ನಗರಗಳಂತೆ ಎಲ್ಲ ಕಡೆಗಳಲ್ಲಿಯೂ ಕಂಡುಬಂದವು.
ಯಥಾ ರಥಾಸ್ತಥಾ ನಾಗಾ ಬದ್ಧಕಕ್ಷ್ಯಾಃ ಸ್ವಲಂಕೃತಾಃ |
ಬಭೂವುಃ ಸಪ್ತಪುರುಷಾ ರತ್ನವಂತ ಇವಾದ್ರಯಃ ॥16॥
ರಥಗಳಂತೆ ಗಜಗಳೂ ಸಹ ಉದರಬಂಧನರಜ್ಜುಗಳಿಂದ ಕೂಡಿ ಅಲಂಕೃತವಾಗಿದ್ದವು. ಒಂದೊಂದು ಗಜವೂ ಏಳು ಪುರುಷರಿಂದ ಕೂಡಿ ರತ್ನಸಹಿತವಾದ ಪರ್ವತಗಳಂತಿದ್ದವು.
ದ್ವಾವಂಕುಶಧರೌ ತತ್ರ ದ್ವಾವುತ್ತಮಧನುರ್ಧರೌ |

ದ್ವೌ ವರಾಸಿಧರೌ ರಾಜನ್ನೇಕಶ್ಛತ್ರಪತಾಕಧೃತ್ ॥17॥
ಅಂಕುಶವನ್ನು ಧರಿಸಿದವರು ಇಬ್ಬರು, ಧನುರ್ಧಾರಿಗಳು ಇಬ್ಬರು, ಖಡ್ಗಗಳನ್ನು ಧರಿಸಿದವರು ಇಬ್ಬರು ಮತ್ತು ಶಸ್ತ್ರ ಪತಾಕೆಗಳನ್ನು ಧರಿಸಿದವನು ಒಬ್ಬನು. ಹೀಗೆ ಪ್ರತಿಗಜಕ್ಕೂ ಏಳು ಜನರು ಇರುತ್ತಿದ್ದರು.
ಗಜೈರ್ಮತ್ತೈಃ ಸಮಾಕೀರ್ಣಂ ಸರ್ವಮಾಯುಧಕೋಶಕೈಃ |
ತದ್ ಬಭೂವ ಬಲಂ ರಾಜನ್ ಕೌರವಸ್ಯ ಸಹಸ್ರಶಃ ॥18॥
ಎಲೈ ರಾಜನೇ, ಮದಗಜಗಳಿಂದ ನಿಬಿಡವಾದ ಮತ್ತು ಆಯುಧದ ಕೋಶಗಳಿಂದ ಪೂರ್ಣವಾದ ಆ ದುರ್ಯೋಧನನ ಸೈನ್ಯವು ಸಹಸ್ರ ಸಂಖ್ಯೆಯಲ್ಲಿ ಇದ್ದಿತು.
ವಿಚಿತ್ರಕವಚೈರ್ಯುಕ್ತೈಃ ಸಪಾತಕೈಃ ಸ್ವಲಂಕೃತೈಃ |
ಸಾದಿಭಿಶ್ಚೋಪಪನ್ನಾಸ್ತು ಆಸನ್ನಯುತಶೋ ಹಯಾಃ ॥19॥
ವಿಚಿತ್ರ ಕವಚಗಳನ್ನು ಧರಿಸಿ, ಚೆನ್ನಾಗಿ ಅಲಂಕೃತರಾಗಿ ಪತಾಕೆಗಳಿಂದ ಕೂಡಿದ ಅಶ್ವಾರೋಹಿಗಳು ಹತ್ತಾರು ಸಾವಿರ ಸಂಖ್ಯೆಯಲ್ಲಿದ್ದರು.
ಸುಸಂಗ್ರಾಹಾಃ ಸುಸಂತೋಷಾ ಹೇಮಭಾಂಡಪರಿಚ್ಛದಾಃ |
ಅನೇಕಶತಸಾಹಸ್ರಾಃ ಸರ್ವೇ ಸಾದಿವಶೇ ಸ್ಥಿತಾಃ ॥20॥
ಒಳ್ಳೆಯ ಸಂಗ್ರಹದಿಂದ ಕೂಡಿ ಸಂತೋಷಗೊಂಡ` ಸುವರ್ಣಾಲಂಕಾರಗಳಿಂದ ಅಲಂಕೃತರಾದ ನೂರಾರು ಸಹಸ್ರ ಯೋಧರು (ಪದಾತಿಗಳು) ಅಶ್ವಾರೋಹಿಗಳಿಗೆ ಅಧೀನರಾಗಿದ್ದರು.
ನಾನಾರೂಪವಿಕಾರಾಶ್ಚ ನಾನಾಕವಚಶಸ್ತ್ರಿಣಃ |
ಪದಾತಿನೋ ನರಾಸ್ತತ್ರ ಬಭೂವುರ್ಹೇಮಮಾಲಿನಃ ॥21॥
ಪದಾತಿಗಳು ಅನೇಕ ವಿಶೇಷ ರೂಪವನ್ನು ಧರಿಸಿ ನಾನಾವಿಧವಾದ ಕವಚಗಳನ್ನೂ, ಶಸ್ತ್ರಗಳನ್ನೂ ಧರಿಸಿ ಸುವರ್ಣಮಾಲೆಗಳನ್ನು ಧರಿಸಿದವರಾಗಿದ್ದರು.
ರಥಸ್ಯಾಸನ್ ದಶ ಗಜಾ ಗಜಸ್ಯ ದಶ ವಾಜಿನಃ |
ನರಾ ದಶ ಹಯಸ್ಯಾಸನ್ ಪಾದರಕ್ಷಾಃ ಸಮಂತತಃ ॥22॥
ಒಂದು ರಥಕ್ಕೆ ಹತ್ತು ಗಜಗಳು, ಒಂದು ಗಜಕ್ಕೆ ಹತ್ತು ಅಶ್ವಗಳು, ಒಂದು ಅಶ್ವಕ್ಕೆ ಹತ್ತು ಪದಾತಿಗಳು ಹೀಗೆ ಅನೇಕ ಕಡೆ ಕಂಡು ಬಂದಿತು.
ರಥಸ್ಯ ನಾಗಾಃ ಪಂಚಾಶನ್ನಾಗಸ್ಯಾಸನ್ ಶತಂ ಹಯಾಃ |
ಹಯಸ್ಯ ಪುರುಷಾಃ ಸಪ್ತ ಭಿನ್ನಸಂಧಾನಕಾರಿಣಃ ॥23॥
ಒಂದು ರಥಕ್ಕೆ ಐವತ್ತು ಗಜಗಳು, ಒಂದು ಗಜಕ್ಕೆ ನೂರು ಕುದುರೆಗಳು, ಒಂದು ಕುದುರೆಗೆ ಸಪ್ತ ಯೋಧರು ಹೀಗೆ ಭಿನ್ನವಾದ ಆಯುಧ` ಕವಚಗಳನ್ನು ಸರಿ ಮಾಡುವ ಪುರುಷರೂ ಇದ್ದರು.
ಪಂಚಾಶಚ್ಚ ಶತಂಚಾಶ್ವಾ ನರಾಃ ಪಂಚಗುಣಾಸ್ತತಃ |
ಸೇನಾ ಪಂಚಶತಂ ನಾಗಾ ರಥಾಸ್ತಾವಂತ ಏವ ಚ ॥24॥
ದಶ ಸೇನಾ ಚ ಪೃತನಾ ಪೃತನಾ ದಶ ವಾಹಿನೀ ॥25॥
ನೂರೈವತ್ತು ಅಶ್ವಗಳು, ಅದರ ಐದು ಪಟ್ಟು ಪದಾತಿಗಳು, ಐದು ನೂರು ಗಜಗಳು ಮತ್ತು ಅಷ್ಟೇ ರಥಗಳು ಸೇರಿದರೆ ಒಂದು ಸೇನೆ ಎನಿಸುತ್ತದೆ. ಹತ್ತು ಸೇನೆಗೆ ಒಂದು ಪೃತನಾ. ಹತ್ತು ಪೃತನೆಗಳಿಗೆ ಒಂದು ವಾಹಿನೀ.
ಸೇನಾ ತು ವಾಹಿನೀ ಚೈವ ಪೃತನಾ ಧ್ವಜಿನೀ ಚಮೂಃ |
ಅಕ್ಷೋಹಿಣೀತಿ ಪರ್ಯಾಯೈರ್ನಿರುಕ್ತಾ ಚ ವರೂಥಿನೀ ॥26॥
ಸೇನಾ, ವಾಹಿನೀ,ಪೃತನಾ, ಧ್ವಜಿನೀ, ಚಮೂ, ಅಕ್ಷೋಹಿಣೀ, ವರೂಥಿನೀ ಈ ಶಬ್ದಗಳು ಪರ್ಯಾಯವಾಗಿಯೂ ಬಳಸಲ್ಪಡುತ್ತವೆ (ಈ ಪರ್ಯಾಯವಾದ ಅಕ್ಷೋಹಿಣಿ ಶಬ್ದವು ಏಳು, ಹನ್ನೊಂದು ಎಂದು ಉಪಯೋಗಿಸುವ ಅಕ್ಷೋಹಿಣಿ ಶಬ್ದವು ಬೇರೆ ಬೇರೆ ಅರ್ಥವುಳ್ಳದ್ದಾಗಿದೆ).
ಏವಂ ವ್ಯೂಢಾನ್ಯನೀಕಾನಿ ಕೌರವೇಯೇಣ ಧೀಮತಾ ॥27॥
ಹೀಗೆ ಮೇಧಾವಿಯಾದ ದುರ್ಯೋಧನನು ತನ್ನ ಸೈನ್ಯವನ್ನು ವ್ಯೂಹಗೊಳಿಸಿದನು.
ಅಕ್ಷೋಹಿಣ್ಯಸ್ತು ಸಪ್ತೈವ ಪಾಂಡವಾನಾಂ ಮಹದ್ ಬಲಮ್ |
ಅಕ್ಷೋಹಿಣ್ಯೋ ದಶೈಕಾ ಚ ಕೌರವಾಣಾಮಭೂದ್ ಬಲಮ್ ॥28॥
ಪಾಂಡವರ ದೊಡ್ಡ ಸೈನ್ಯವು ಏಳು ಅಕ್ಷೋಹಿಣಿಯಿಂದ ಕೂಡಿದ್ದಿತು. ಕೌರವರ ಸೈನ್ಯವು ಹನ್ನೊಂದು ಅಕ್ಷೋಹಿಣಿಯಿಂದ ಕೂಡಿದ್ದಿತು.
ನರಾಣಾಂ ಪಂಚಪಂಚಾಶದ್ ಏಷಾ ಪತ್ತಿರ್ವಿಧೀಯತೇ |
ಸೇನಾಮುಖಂ ತು ತಿಸ್ರಸ್ತಾ ಗುಲ್ಮ ಇತ್ಯಭಿಸಂಜ್ಞಿತಾಃ ॥29॥
ದಶ ಗುಲ್ಮಾ ಗಣಸ್ತತ್ವಸೀದ್ ಗಣಾಸ್ತ್ವಯುತಶೋಽಭವನ್ |
ದುರ್ಯೋಧನಸ್ಯ ಸೇನಾಸು ಯೋತ್ಸ್ಯಮಾನಾಃ ಪ್ರಹಾರಿಣಃ ॥30॥
ಐವತ್ತೈದು ಪದಾತಿಗಳಿಗೆ ಒಂದು ಪತ್ತಿ ಎಂದು ಹೆಸರು, ಮೂರು ಪತ್ತಿಗಳಿಗೆ ಒಂದು ಸೇನಾಮುಖ, ಸೇನಾಮುಖಕ್ಕೆ ಗುಲ್ಮವೆಂದೂ ಹೆಸರು. ಹತ್ತು ಗುಲ್ಮಗಳಿಗೆ ಒಂದು ಗಣ. ದುರ್ಯೋಧನನ ಸೈನ್ಯದಲ್ಲಿ ಯುದ್ಧವನ್ನು ಮಾಡಲು ಬಯಸುವ ಪ್ರಹಾರಶೀಲರಾದ ಅಂತಹ ಗಣಗಳು ಹತ್ತಾರು ಸಂಖ್ಯೆಯಲ್ಲಿ ಇದ್ದವು.

ತತ್ರ ದುರ್ಯೋಧನೋ ರಾಜಾ ಶೂರಾನ್ ಬುದ್ಧಿಮತೋ ನರಾನ್ |
ಪ್ರಸಮೀಕ್ಷ್ಯ ಮಹಾಬಾಹುಶ್ಚಕ್ರೇ ಸೇನಾಪತೀಂಸ್ತಥಾ ||31||
ಅಲ್ಲಿ ರಾಜನಾದ ದುರ್ಯೋಧನನು ಮೇಧಾವಿಗಳೂ ಮತ್ತು ಶೂರರೂ ಆದವರನ್ನು ಗಮನಿಸಿ, ಮಹಾಬಾಹುವಾದ ಅವನು ಅವರನ್ನು ಸೇನಾಪತಿಗಳನ್ನಾಗಿ ಮಾಡಿದನು.
ಪೃಥಗಕ್ಷೋಹಿಣೀನಾಂ ಚ ಪ್ರಣೇತೄನ್ ನರಸತ್ತಮಾನ್ |
ವಿಧಿವತ್ ಪೂರ್ವಮಾನೀಯ ಪಾರ್ಥಿವಾನಭ್ಯಷೇಚಯತ್ ||32||
ಹನ್ನೊಂದು ಅಕ್ಷೋಹಿಣಿಯ ಸೈನ್ಯವನ್ನು ಪ್ರತ್ಯೇಕವಾಗಿ ನಯನಮಾಡುವ (ಮುಂದಕ್ಕೊಯ್ಯುವ) ಶ್ರೇಷ್ಠರಾದ ಪುರುಷರನ್ನು ಮೊದಲು ಕರೆತಂದು ಅವರಿಗೆ ಅಭಿಷೇಕವನ್ನು ಮಾಡಿದನು.
ಕೃಪಂ ದ್ರೋಣಂ ಚ ಶಲ್ಯಂ ಚ ಸೈಂಧವಂ ಚ ಜಯದ್ರಥಮ್ |
ಸುದಕ್ಷಿಣಂ ಚ ಕಾಂಭೋಜಂ ಕೃತವರ್ಮಾಣಮೇವ ಚ ||33||
ದ್ರೋಣಪುತ್ರಂ ಚ ಕರ್ಣಂ ಚ ಭೂರಿಶ್ರವಸಮೇವ ಚ |
ಶಕುನಿಂ ಸೌಬಲಂ ಚೈವ ಬಾಹ್ಲೀಕಂ ಚ ಮಹಾರಥಮ್ ||34||
ಕೃಪ, ದ್ರೋಣ, ಶಲ್ಯ, ಸಿಂಧುರಾಜನಾದ ಜಯದ್ರಥ, ಕಾಂಭೋಜದೇಶದ ಸುದಕ್ಷಿಣ, ಯಾದವರ ಕೃತವರ್ಮ, ಅಶ್ವತ್ಥಾಮ, ಕರ್ಣ, ಭೂರಿಶ್ರವ, ಸೌಬಲನಾದ ಶಕುನಿ ಮತ್ತು ಮಹಾರಥನಾದ ಬಾಹ್ಲೀಕ (ಇವರನ್ನು ಪ್ರತ್ಯೇಕವಾಗಿ ಒಂದೊಂದು ಅಕ್ಷೋಹಿಣಿ ಸೈನ್ಯಕ್ಕೆ ನಾಯಕರನ್ನಾಗಿ ಮಾಡಿದನು).
ದಿವಸೇ ದಿವಸೇ ತೇಷಾಂ ಪ್ರತಿವೇಲಂ ಚ ಭಾರತ |
ಚಕ್ರೇ ಸ ವಿವಿಧಾಃ ಸಂಜ್ಞಾಃ ಪ್ರತ್ಯಕ್ಷಂ ಚ ಪುನಃ ಪುನಃ ||35||
ಎಲೈ ಭಾರತನೇ, ದುರ್ಯೋಧನ ಅವರಿಗೆ ಪ್ರತಿ ದಿವಸವೂ ಮತ್ತು ಒಂದು ದಿವಸದಲ್ಲಿ ಬೇರೆ ಬೇರೆ ವೇಳೆಗಳಲ್ಲಿಯೂ ಪ್ರತ್ಯಕ್ಷವಾಗಿ, ಅವರಿಗೆ ಮತ್ತೆ ಮತ್ತೆ ವಿಧವಿಧವಾದ ಆದೇಶವನ್ನು ಕೊಡುತ್ತಿದ್ದನು.
ತಥೈವ ನಿಯತಾಃ ಸರ್ವೇ ಯೇ ಚ ತೇಷಾಂ ಪದಾನುಗಾಃ |
ಬಭೂವುಃ ಸೈನಿಕಾಃ ರಾಜ್ಞಃ ಪ್ರಿಯಂ ರಾಜಂಶ್ಚಿಕೀರ್ಷವಃ ||36||
ಎಲೈ ರಾಜನೇ, ಅದರಂತೆ ಅವನ ಎಲ್ಲಾ ಸೈನಿಕರೂ ಮತ್ತು ಹಿಂಬಾಲಕರೂ ರಾಜನಿಗೆ ಪ್ರಿಯವನ್ನು ಮಾಡಲು ಬಯಸಿ, ಅವನಿಗೆ ನಿಷ್ಠೆಯನ್ನು ಹೊಂದಿದವರಾಗಿದ್ದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿಪಂಚಾಶೋತ್ತರಶತತಮೋಽಧ್ಯಾಯಃ ||
|| ಭೀಷ್ಮಾಭಿಷೇಚನಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ನಾಲ್ಕನೆಯ ಅಧ್ಯಾಯ
ದುರ್ಯೋಧನನ ಪ್ರಾರ್ಥನೆಯಂತೆ ಭೀಷ್ಮರು ಸೈನ್ಯಾಪತ್ಯವನ್ನು ಸ್ವೀಕರಿಸಿ, ಕುರುಕ್ಷೇತ್ರಕ್ಕೆ ಗಮನ.
ವೈಶಂಪಾಯನಃ
ತತಃ ಶಾಂತನವಂ ಭೀಷ್ಮಂ ಪ್ರಾಂಜಲಿರ್ಧೃತರಾಷ್ಟ್ರಜಃ |
ಸಹ ಸರ್ವೈರ್ಮಹೀಪಾಲೈರಿದಂ ವಚನಮಬ್ರವೀತ್ ||1||
ವೈಶಂಪಾಯನ ಅನಂತರ ಧೃತರಾಷ್ಟ್ರ ಪುತ್ರನಾದ ದುರ್ಯೋಧನನು ಎಲ್ಲ ರಾಜರ ಜೊತೆಯಲ್ಲಿ ಶಂತನು ಪುತ್ರರಾದ ಭೀಷ್ಮರಿಗೆ ಕೈಗಳನ್ನು ಮುಗಿದು ಈ ಮಾತನ್ನಾಡಿದನು.
ಋತೇ ಸೇನಾಪ್ರಣೇತಾರಂ ಪೃತನಾ ಸುಮಹತ್ಯಪಿ |
ದೀರ್ಯತೇ ಯುದ್ಧಮಾಸಾದ್ಯ ಪಿಪೀಲಿಕಗಣೋ ಯಥಾ ||2||
ಸೇನಾಧಿಪತಿ ಇಲ್ಲದಿದ್ದರೆ ದೊಡ್ಡ ಸೈನ್ಯವೂ ಸಹ ಯುದ್ಧದಲ್ಲಿ ಇರುವೆಗಳ ಸಮೂಹದಂತೆ ಚದುರಿ ಹೋಗುತ್ತದೆ.
ನ ಹಿ ಜಾತು ದ್ವಯೋರ್ಬುದ್ಧಿಃ ಸಮಾ ಭವತಿ ಕರ್ಹಿಚಿತ್ |
ಶೌರ್ಯಂ ಚ ಜಾಯತೇ ನೃಣಾಂ ಸ್ಪರ್ಧತೇ ಚ ಪರಸ್ಪರಮ್ ||3||
ಯಾವ ಇಬ್ಬರು ಮನುಷ್ಯರಿಗೂ ಬುದ್ಧಿಯು ಒಂದೇ ರೀತಿ ಇರುವುದಿಲ್ಲ. ಅವರಿಬ್ಬರಲ್ಲಿಯೇ ಪರಸ್ಪರ ಪರಾಕ್ರಮವೂ ಮತ್ತು ಸ್ಪರ್ಧೆಯೂ ಉಂಟಾಗುತ್ತದೆ.
ಶ್ರೂಯತೇ ಚ ಮಹಾಪ್ರಾಜ್ಞ ಹೇಹಯಾನಮಿತೌಜಸಃ |
ಅಭ್ಯಯುರ್ಬ್ರಾಹ್ಮಣಾಃ ಸರ್ವೇ ಸಮುಚ್ಛ್ರಿತಕುಶಧ್ವಜಾಃ ||4||
ತಾನನ್ವಯುಸ್ತದಾ ವೈಶ್ಯಾಃ ಶೂದ್ರಾಶ್ಚೈವ ಪಿತಾಮಹ |
ಏಕತಸ್ತು ತ್ರಯೋ ವರ್ಣಾಃ ಏಕತಃ ಕ್ಷತ್ರಿಯರ್ಷಭಾಃ ||5||
ಎಲೈ ಮಹಾಪ್ರಾಜ್ಞನೇ, ಬ್ರಾಹ್ಮಣರು ಕುಶಧ್ವಜಗಳನ್ನು ಎತ್ತಿಕೊಂಡು ಅಮಿತ ಪರಾಕ್ರಮಿಗಳಾದ ಹೇಹಯರನ್ನು ಯುದ್ಧದಲ್ಲಿ ಎದುರಿಸಿದರು. ಎಲೈ ಪಿತಾಮಹನೇ, ಆಗ ವೈಶ್ಯರೂ ಮತ್ತು ಶೂದ್ರರೂ ಸಹ ಬ್ರಾಹ್ಮಣರನ್ನು ಹಿಂಬಾಲಿಸಿದರು. ಒಂದು ಕಡೆ

ಮೂರುವರ್ಣಗಳು, ಇನ್ನೊಂದು ಪಕ್ಷದಲ್ಲಿ ಕ್ಷತ್ರಿಯ ಶ್ರೇಷ್ಠರು ಮಾತ್ರ.
ತೇ ಸ್ಮ ಯುದ್ಧೇ ಪ್ರಭಜ್ಯಂತೇ ತ್ರಯೋ ವರ್ಣಾಃ ಪುನಃ ಪುನಃ |
ಕ್ಷತ್ರಿಯಾಶ್ಚ ಜಯಂತ್ಯೇವ ಬಹುಲಂ ಚೈಕತೋ ಬಲಮ್ ॥6॥
ಆ ಮೂರು ವರ್ಣದವರು ಪುನಃ ಪುನಃ ಯುದ್ಧದಲ್ಲಿ ಸೋಲನ್ನು ಅನುಭವಿಸುತ್ತಾರೆ. ಇನ್ನೊಂದು ಕಡೆ ಕ್ಷತ್ರಿಯರು ಬಹಳವಾದ ಮೂರು ವರ್ಣದ ಸೈನ್ಯವನ್ನು ಒಬ್ಬರೇ ಗೆಲ್ಲುತ್ತಲೇ ಇರುತ್ತಾರೆ.
ತತಸ್ತೇ ಕ್ಷತ್ರಿಯಾನೇವ ಪಪ್ರಚ್ಛುರ್ದ್ವಿಜಸತ್ತಮಾಃ |
ತೇಭ್ಯಃ ಶಶಂಸುರ್ಧರ್ಮಜ್ಞಾ ಯಾಥಾತಥ್ಯಂ ಪಿತಾಮಹ ॥7॥
ಆಗ ಆ ಬ್ರಾಹ್ಮಣ್ಯಶ್ರೇಷ್ಠರು ಕ್ಷತ್ರಿಯರನ್ನೇ ಪ್ರಶ್ನೆ ಮಾಡಿದರು. ಎಲ್ಲೈ ಪಿತಾಮಹನೇ, ಧರ್ಮಜ್ಞರಾದ ಕ್ಷತ್ರಿಯರು ಆ ಬ್ರಾಹ್ಮಣರಿಗೆ ಸತ್ಯವಾದ ಸಂಗತಿಯನ್ನು ತಿಳಿಸಿದರು.
ವಯಮೇಕಸ್ಯ ಶೃಣುಮೋ ಮಹಾಬುದ್ಧಿಮತೋ ರಣೇ |
ಭವಂತಸ್ತು ಪೃಥಕ್ ಸರ್ವೇ ಸ್ವಬುದ್ಧಿವಶವರ್ತಿನಃ ॥8॥
ನಾವು ಯುದ್ಧದಲ್ಲಿ ಮಹಾಬುದ್ಧಿಯುಳ್ಳ ಒಬ್ಬನ ಮಾತನ್ನು ಕೇಳುತ್ತೇವೆ. ನಿಮ್ಮಲ್ಲಿ ಎಲ್ಲರೂ ಬೇರೆ ಬೇರೆಯಾಗಿ ಅವರವರ ಬುದ್ಧಿಗೆ ವಶವಾಗಿ ವರ್ತಿಸುತ್ತೀರಿ.
ತತಸ್ತೇ ಬ್ರಾಹ್ಮಣಾಶ್ಚಕ್ರುರೇಕಂ ಸೇನಾಪತಿಂ ದ್ವಿಜಮ್ |
ನಯೇಷು ಕುಶಲಂ ಶೂರಮಜಯನ್ ಕ್ಷತ್ರಿಯಾಂಸ್ತತಃ ॥9॥
ಅನಂತರ ಬ್ರಾಹ್ಮಣರು ನೀತಿಯಲ್ಲಿ ಕುಶಲನಾದ, ಶೂರನಾದ, ತಮ್ಮಲ್ಲಿ ಒಬ್ಬ ದ್ವಿಜನನ್ನು ಸೇನಾಪತಿಯನ್ನಾಗಿ ಮಾಡಿ ಕ್ಷತ್ರಿಯರನ್ನು ಗೆದ್ದರು.
ಏವಂ ಯೇ ಕುಶಲಂ ಶೂರಂ ಹಿತೇ ಸ್ಥಿತಮಕಲ್ಮಷಮ್ |
ಸೇನಾಪತಿಂ ಪ್ರಕುರ್ವಂತಿ ತೇ ಜಯಂತಿ ರಣೇ ರಿಪೂನ್ ॥10॥
ಹೀಗೆ ಯಾರು ಕುಶಲನೂ, ಶೂರನೂ, ಹಿತನೂ, ನಿಷ್ಕಳಂಕನೂ ಆದ ಪುರುಷನನ್ನು ಸೇನಾಪತಿಯನ್ನಾಗಿ ಮಾಡುತ್ತಾರೋ ಅವರು ಯುದ್ಧದಲ್ಲಿ ಶತ್ರುಗಳನ್ನು ಜಯಿಸುತ್ತಾರೆ.
ಭವಾನುಶನಸಾ ತುಲ್ಯೋ ಹಿತೈಷೀ ಚ ಸದಾ ಮಮ |
ಅಸಂಹಾರ್ಯಃ ಸ್ಥಿತೋ ಧರ್ಮೇ ಸ ನಃ ಸೇನಾಪತಿರ್ಭವ ॥11॥
ನೀನು ಶುಕ್ರಾಚಾರ್ಯರಿಗೆ ಸಮನಾದವನು ಮತ್ತು ಯಾವಾಗಲೂ ನನ್ನ ಹಿತೈಷಿ. ಧರ್ಮದಲ್ಲಿ ಅಲುಗಾಡದೇ ನಿಂತವನು. ಆದ್ದರಿಂದ ನಮ್ಮ ಸೇನಾಪತಿಯಾಗು.
ರಶ್ಮೀವತಾಮಿವಾದಿತ್ಯೋ ವೀರುಧಾಮಿವ ಚಂದ್ರಮಾಃ |
ಕುಬೇರ ಇವ ಯಕ್ಷಾಣಾಂ ದೇವಾನಾಮಿವ ವಾಸವಃ ॥12॥
ಪರ್ವತಾನಾಂ ಯಥಾ ಮೇರುಃ ಸುಪರ್ಣಃ ಪತತಾಮಿವ |
ಕುಮಾರ ಇವ ಭೂತಾನಾಂ ವಸೂನಾಮಿವ ಹವ್ಯವಾಟ್ ॥13॥
ಭವತಾ ಹಿ ವಯಂ ಗುಪ್ತಾಃ ಶಕ್ರೇಣೇವ ದಿವೌಕಸಃ |
ಅನಾಧೃಷ್ಯಾ ಭವಿಷ್ಯಾಮಃ ತ್ರಿದಶಾನಾಮಪಿ ಧ್ರುವಮ್ ॥14॥
ಗ್ರಹಗಳಿಗೆ ಸೂರ್ಯನಂತೆ, ಲತೆಗಳಿಗೆ ಚಂದ್ರನಂತೆ, ಯಕ್ಷರಿಗೆ ಕುಬೇರನಂತೆ, ದೇವತೆಗಳಿಗೆ ಇಂದ್ರನಂತೆ, ಪರ್ವತಗಳಿಗೆ ಮೇರುವಿನಂತೆ, ಪಕ್ಷಿಗಳಿಗೆ ಗರುಡನಂತೆ, ಭೂತಗಳಿಗೆ ಷಣ್ಮುಖನಂತೆ, ವಸುಗಳಿಗೆ ಅಗ್ನಿಯಂತೆ ನಿನ್ನನ್ನು ಮುಂದೆ ಮಾಡಿಕೊಂಡು ದೇವತೆಗಳು ಇಂದ್ರನಿಂದ ರಕ್ಷಣೆಯನ್ನು ಪಡೆದಂತೆ ರಕ್ಷಣೆಯನ್ನು ಪಡೆದ ನಾವು ಯುದ್ಧದಲ್ಲಿ ದೇವತೆಗಳಿಗೂ ಸೋಲುವವರಾಗುವುದಿಲ್ಲ.
ಪ್ರಯಾತು ನೋ ಭವಾನಗ್ರೇ ದೇವಾನಾಮಿವ ಪಾವಕಿಃ |
ವಯಂ ತ್ವಾಮನುಯಾಸ್ಯಾಮಃ ಸೌರಭೇಯಾ ಇವರ್ಷಭಮ್ ॥15॥
ದೇವತೆಗಳ ಮುಂದೆ ಷಣ್ಮುಖನು ನಡೆದಂತೆ ನೀನು ಮುಂದೆ ಹೋಗುವವನಾಗು. ವೃಷಭವನ್ನು ಗೋವುಗಳು ಅನುಸರಿಸಿದಂತೆ ನಾವು ನಿನ್ನನ್ನು ಹಿಂಬಾಲಿಸುವೆವು.
ಭೀಷ್ಮಃ
ಏವಮೇತನ್ಮಹಾಬಾಹೋ ಯಥಾ ವದಸಿ ಭಾರತ |
ಯಥೈವ ಹಿ ಭವಂತೋ ಮೇ ತಥೈವ ಮಮ ಪಾಂಡವಾಃ ॥16॥
ಭೀಷ್ಮ ಎಲ್ಲೈ ಭಾರತನೇ, ಮಹಾಬಾಹುವೇ, ನೀನು ಹೇಳುವಂತೆಯೇ ಎಲ್ಲವೂ ಸರಿ. ನನಗೆ ನೀವು ಹೇಗೋ ಪಾಂಡವರೂ ಹಾಗೆಯೇ.
ಅಪಿ ಚೈವ ಮಯಾ ಶ್ರೇಯೋ ವಾಚ್ಯಂ ತೇಷಾಂ ನರಾಧಿಪ |
ಸುಯೋದ್ಧವ್ಯಂ ತವಾರ್ಥಾಯ ಯಥಾ ಮೇ ಸಮಯಃ ಕೃತಃ ॥17॥
ಎಲ್ಲೈ ನರಾಧಿಪನೇ, ನಾನು ಅವರಿಗೂ ಸಹ ಶ್ರೇಯಸ್ಸನ್ನು ಹೇಳಬೇಕು ಮತ್ತು ನಾನು ಪ್ರತಿಜ್ಞೆ ಮಾಡಿದಂತೆ ನಿಮ್ಮ ಪರವಾಗಿ ಚೆನ್ನಾಗಿ ಯುದ್ಧವನ್ನು ಮಾಡಬೇಕು.
ನ ತು ಪಶ್ಯಾಮಿ ಯೋದ್ಧಾರಮಾತ್ಮನಃ ಸದೃಶಂ ಭುವಿ |
ಋತೇ ತಸ್ಮಾನ್ನರವ್ಯಾಘ್ರಾತ್ ಕುಂತೀಪುತ್ರಾದ್ ಧನಂಜಯಾತ್ ॥18॥
ಆದರೆ ಯುದ್ಧದಲ್ಲಿ ಕುಂತೀಪುತ್ರನಾದ, ನರವ್ಯಾಘ್ರನಾದ ಆ ಅರ್ಜುನನನ್ನು ಬಿಟ್ಟು ನನಗೆ ಸದೃಶನಾಗಿ ಪ್ರತಿಯೋಧನಾಗುವ ಯಾವನನ್ನೂ ನಾನು ಭೂಮಿಯಲ್ಲಿ ಕಾಣುತ್ತಿಲ್ಲ.

ಸ ಹಿ ವೇದ ಮಹಾಬುದ್ಧಿರ್ದಿವ್ಯಾನ್ಯಸ್ತ್ರಾಣ್ಯನೇಕಶಃ |
ನ ತು ಮಾಂ ವಿವೃತೋ ಯುದ್ಧೇ ಜಾತು ಯುಧ್ಯೇತ ಪಾಂಡವಃ ॥19॥
ಮಹಾಬುದ್ಧಿಯುಳ್ಳ ಅವನು ಅನೇಕ ದಿವ್ಯಾಸ್ತ್ರಗಳನ್ನು ತಿಳಿದಿದ್ದಾನೆ. ಆದರೆ ಯುದ್ಧದಲ್ಲಿ ಪಾಂಡವನಾದ ಅವನು ಎಲ್ಲವನ್ನೂ ಅಭಿವ್ಯಕ್ತಿಗೊಳಿಸಿ ನನ್ನ ಜೊತೆಯಲ್ಲಿ ನೇರವಾಗಿ ಯುದ್ಧವನ್ನು ಮಾಡಲಾರ.
ಅಹಂ ಸ ಚ ಕ್ಷಣೇನೈವ ನಿರ್ಮನುಷ್ಯಮಿದಂ ಜಗತ್ |
ಕುರ್ಯಾವಾಸ್ತ್ರಬಲೇನೈವ ಸಸುರಾಸುರರಾಕ್ಷಸಮ್ ॥20॥
ನಾನು ಮತ್ತು ಅವನು ಸೇರಿದರೆ ಒಂದು ಕ್ಷಣದಲ್ಲಿ ಸುರಾಸುರ-ರಾಕ್ಷಸರಿಂದ ಸಹಿತವಾದ ಈ ಪ್ರಪಂಚವನ್ನು ನಮ್ಮ ಅಸ್ತ್ರಗಳ ಬಲದಿಂದ ನಿರ್ಮನುಷ್ಯವಾಗಿ ಮಾಡೇವು!
ನ ತ್ವೇವೋತ್ಸಾದನೀಯಾ ಮೇ ಪಾಂಡೋಃ ಪುತ್ರಾ ಜನಾಧಿಪ |
ತಸ್ಮಾದ್ ಯೋಧಾನ್ ಹನಿಷ್ಯಾಮಿ ಪ್ರಯೋಗೇಣಾಯುತಂ ಸದಾ ॥
ಆದರೆ ಎಲೈ ರಾಜನೇ, ನನ್ನಿಂದ ಪಾಂಡವರು ಕೊಲ್ಲಲ್ಪಡುವವರಲ್ಲ. ಆದ್ದರಿಂದ ಅಸ್ತ್ರಪ್ರಯೋಗದಿಂದ ಪ್ರತಿದಿನವೂ ಹತ್ತು ಸಾವಿರ ಯೋಧರನ್ನು ಕೊಲ್ಲುವೆನು.
ಏವಮೇಷಾಂ ಕರಿಷ್ಯಾಮಿ ನಿಧನಂ ಕುರುನಂದನ |
ನ ಚೇತ್ ತೇ ಮಾಂ ಹನಿಷ್ಯಂತಿ ಪೂರ್ವಮೇವ ಸಮಾಗಮೇ ॥22॥
ಆ ಪಾಂಡವರು ಮೊದಲೇ ಯುದ್ಧದಲ್ಲಿ ನನ್ನನ್ನು ಕೊಲ್ಲದಿದ್ದರೆ ಎಲೈ ಕುರುನಂದನನೇ, ಈ ರೀತಿಯಲ್ಲಿ ಅವರ ಸೈನ್ಯಕ್ಕೆ ವಿನಾಶವನ್ನು ಉಂಟುಮಾಡುವೆನು.
ಸೇನಾಪತಿಸ್ತ್ವಹಂ ರಾಜನ್ ಸಮಯೇನಾಪರೇಣ ತೇ |
ಭವಿಷ್ಯಾಮಿ ಯಥಾಕಾಮಂ ತನ್ಮೇ ಶ್ರೋತುಮಿಹಾರ್ಹಸಿ ॥23॥
ಎಲೈ ರಾಜನೇ, ನಾನು ಇನ್ನೊಂದು ಷರತ್ತಿನ ಮೇಲೆ ನಿನ್ನ ಇಚ್ಛೆಯಂತೆ ಸೇನಾಪತಿಯಾಗುವೆನು. ಅದನ್ನು ನೀನು ಕೇಳಬೇಕು.
ಕರ್ಣೋ ವಾ ಯುಧ್ಯತಾಂ ಪೂರ್ವಮಹಂ ವಾ ಪೃಥಿವೀಪತೇ |
ಸ್ಪರ್ಧತೇ ಹಿ ಸದಾಽತ್ಯರ್ಥಂ ಸೂತಪುತ್ರೋ ಮಯಾ ರಣೇ ॥24॥
ಎಲೈ ರಾಜನೇ, ಮೊದಲು ಕರ್ಣನು ಯುದ್ಧವನ್ನು ಮಾಡಲಿ ಅಥವಾ ನಾನು ಯುದ್ಧವನ್ನು ಮಾಡಬೇಕು. ಏಕೆಂದರೆ ಸೂತಪುತ್ರನಾದ ಅವನು ಯುದ್ಧದಲ್ಲಿ ಯಾವಾಗಲೂ ನನ್ನ ಜೊತೆಯಲ್ಲಿ ಸ್ಪರ್ಧಿಸುತ್ತಾನೆ.
ಕರ್ಣಃ
ನಾಹಂ ಜೀವತಿ ಗಾಂಗೇಯೇ ರಾಜನ್ ಯೋತ್ಸ್ಯೇ ಕಥಂಚನ |
ಹತೇ ಭೀಷ್ಮೇ ತು ಯೋತ್ಸ್ಯಾಮಿ ಸಹ ಗಾಂಡೀವಧನ್ವನಾ ॥25॥
ಕರ್ಣ ಎಲೈ ರಾಜನೇ, ಭೀಷ್ಮರು ಬದುಕಿರುವವರೆಗೆ ನಾನು ಯುದ್ಧವನ್ನು ಮಾಡುವುದಿಲ್ಲ. ಭೀಷ್ಮರ ವಧೆಯ ನಂತರ ನಾನು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ವೈಶಂಪಾಯನಃ
ತತಃ ಸೇನಾಪತಿಂ ಚಕ್ರೇ ವಿಧಿವದ್ ಭೂರಿದಕ್ಷಿಣಮ್ |
ಧೃತರಾಷ್ಟ್ರಾತ್ಮಜೋ ಭೀಷ್ಮಂ ಸೋಽಭಿಷಿಕ್ತೋ ವ್ಯರೋಚತ ॥26॥
ವೈಶಂಪಾಯನ ಅನಂತರ ಧೃತರಾಷ್ಟ್ರಪುತ್ರನಾದ ದುರ್ಯೋಧನನು ಭೂರಿದಕ್ಷಿಣೆಯನ್ನು ಕೊಟ್ಟು ಭೀಷ್ಮರನ್ನು ಶಾಸ್ತ್ರಪ್ರಕಾರದಂತೆ ಸೇನಾಪತಿಯನ್ನಾಗಿ ಮಾಡಿದನು. ಸೇನಾಪತಿಯಾದ ಭೀಷ್ಮರು ಕಂಗೊಳಿಸಿದರು.
ತತೋ ಭೇರೀಂಶ್ಚ ಶಂಖಾಂಶ್ಚ ಶತಶಶ್ಚೈವ ಪುಷ್ಕರಾನ್ |
ವಾದಯಾಮಾಸುರವ್ಯಗ್ರಾ ವಾದಕಾ ರಾಜಶಾಸನಾತ್ ॥27॥
ಆಗ ವಾದಕರು ರಾಜಶಾಸನದಂತೆ ಭೇರಿಗಳನ್ನೂ, ಶಂಖಗಳನ್ನೂ, ನೂರಾರು ಪುಷ್ಕರಗಳನ್ನೂ ಎಚ್ಚರಿಕೆಯಿಂದ ವಾದಿಸಿದರು.
ಸಿಂಹನಾದಾಶ್ಚ ವಿವಿಧಾ ವಾಹನಾನಾಂ ಚ ನಿಸ್ವನಾಃ |
ನಿರ್ಘಾತಾಃ ಪೃಥಿವೀಕಂಪೋ ಗಜಬೃಂಹಿತನಿಸ್ವನಾಃ ॥28॥
ಆಸಂಶ್ಚ ಸರ್ವಯೋಧಾನಾಂ ಪೀಡಯಂತೋ ಮನಾಂಸ್ಯುತ ॥29॥
ಅನೇಕ ವಿಧವಾದ ಸಿಂಹನಾದಗಳು ಮತ್ತು ಗಜಾಶ್ವಗಳ ನಾದಗಳೂ ಕೇಳಿಬಂದವು. ಸಿಡಿಲುಗಳು, ಭೂಕಂಪ, ಆನೆಗಳ ಬೃಂಹಣ ನಾದಗಳು ಎಲ್ಲವೂ ಎಲ್ಲಾ ಯೋಧರ ಮನಸ್ಸಿಗೆ ಪೀಡೆಯನ್ನು ಉಂಟು ಮಾಡುತ್ತಾ ಉಂಟಾದವು.
ವಾಚಶ್ಚಾಪ್ಯಶರೀರಿಣ್ಯೋ ದಿವಶ್ಚೋಲ್ಕಾಃ ಪ್ರಪೇದಿರೇ |
ಪ್ರಾದುರಾಸೀದನಭ್ರೇ ಚ ವರ್ಷಂ ರುಧಿರಕರ್ದಮಮ್ ॥30॥
ಶಿವಾಶ್ಚ ಭಯವೇದಿನ್ಯೋ ನೇದುರ್ದೀಪ್ತತರಾ ಭೃಶಮ್ ॥31॥
ಅಶರೀರವಾಣಿಗಳು ಉಂಟಾದವು. ಆಕಾಶದಿಂದ ಉಲ್ಕೆಗಳು ಬಿದ್ದವು. ಮೋಡವಿಲ್ಲದ ಆಕಾಶದಿಂದ ರಕ್ತದ ಕೆಸರಿನಿಂದ ಕೂಡಿದ ಮಳೆಯು ಬಿದ್ದಿತು. ನರಿಗಳು ಭಯವನ್ನು ಸೂಚಿಸುತ್ತಾ ಘೋರವಾಗಿ ಕಿರುಚಿದವು.
ಸೇನಾಪತ್ಯೇ ಯದಾ ರಾಜಾ ಗಾಂಗೇಯಮಭಿಷಿಕ್ತವಾನ್ |
ತದೈತಾನ್ಯುಗ್ರರೂಪಾಣಿ ಬಭೂವುಃ ಶತಶೋ ನೃಪ ॥32॥
ಎಲೈ ರಾಜನೇ, ರಾಜನಾದ ದುರ್ಯೋಧನನು ಗಂಗಾಪುತ್ರರಾದ ಭೀಷ್ಮರನ್ನು ಸೇನಾಪತ್ಯದಲ್ಲಿ ಅಭಿಷೇಕ ಮಾಡಿದಾಗ ಈ ಘೋರವಾದ ಅಪಶಕುನಗಳು ನೂರಾರು ಸಂಖ್ಯೆಯಲ್ಲಿ ಉಂಟಾದವು.

ತತಃ ಸೇನಾಪತಿಂ ಕೃತ್ವಾ ಭೀಷ್ಮಂ ಪರಬಲಾರ್ದನಮ್ |
ವಾಚಯಿತ್ವಾ ದ್ವಿಜಶ್ರೇಷ್ಠಾನ್ ಗೋಭಿರ್ನಿಷ್ಕೈಶ್ಚ ಭೂರಿಶಃ ||33||
ಪೂಜ್ಯಮಾನೋ ಜಯಾಶೀರ್ಭಿರ್ನಿರ್ಯಯೌ ಸೈನಿಕೈರ್ವೃತಃ ||34||
ಅನಂತರ ಶತ್ರುಸೈನ್ಯವನ್ನು ಅರ್ದಿಸುವ ಭೀಷ್ಮರನ್ನು ಸೇನಾಪತಿಯನ್ನಾಗಿ ಮಾಡಿ ದ್ವಿಜಶ್ರೇಷ್ಠರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಅವರನ್ನು ಗೋವುಗಳಿಂದಲೂ, ನಿಷ್ಕಗಳಿಂದಲೂ ಪೂಜಿಸಿ, ಅವರಿಂದ ಜಯಾಶೀರ್ವಾದಗಳನ್ನು ಪಡೆದು ಸೈನಿಕರಿಂದ ಪರಿವೃತನಾಗಿ ಹೊರಟನು.
ಆಪಗೇಯಂ ಪುರಸ್ಕೃತ್ಯ ಭ್ರಾತೃಭಿಃ ಸಹಿತಸ್ತದಾ |
ಸ್ಕಂಧಾವಾರೇಣ ಮಹತಾ ಕುರುಕ್ಷೇತ್ರಂ ಜಗಾಮ ಹ ||35||
ಭೀಷ್ಮರನ್ನು ಮುಂದೆ ಮಾಡಿಕೊಂಡು ಸಹೋದರರಿಂದ ಸಹಿತನಾಗಿ ಸೈನ್ಯದ ದೊಡ್ಡ ಭಾಗವನ್ನು ತೆಗೆದುಕೊಂಡು ಕುರುಕ್ಷೇತ್ರಕ್ಕೆ ಹೋದನು.
ಪರಿಕ್ರಮ್ಯ ಕುರುಕ್ಷೇತ್ರಂ ಕರ್ಣೇನ ಸಹ ಕೌರವಃ |
ಶಿಬಿರಂ ಮಾಪಯಾಮಾಸ ಸಮೇ ದೇಶೇ ಜನಾಧಿಪಃ ||36||
ದುರ್ಯೋಧನನು ಕರ್ಣನ ಜೊತೆಯಲ್ಲಿ ಕುರುಕ್ಷೇತ್ರದಲ್ಲೆಲ್ಲಾ ಸುತ್ತಾಡಿ ಸಮತಟ್ಟಾದ ದೇಶದಲ್ಲಿ ಶಿಬಿರದ ಭೂಮಿಯನ್ನು ಅಳತೆ ಮಾಡಿಸಿದನು.
ಮಧುರಾನೂಪಕೇ ದೇಶೇ ಪ್ರಭೂತಯವಸೇಂಧನೇ |
ಯಥೈವ ಹಸ್ತಿನಪುರಂ ಶಿಬಿರಂ ತತ್ ತಥಾಽಭವತ್ ||37||
ಮಧುರವಾದ, ಮರುಭೂಮಿಯಲ್ಲದ, ಮೇವು-ಕಟ್ಟಿಗೆಗಳು ಬಹಳವಾಗಿರುವ ಒಂದು ಪ್ರದೇಶದಲ್ಲಿ ಹಸ್ತಿನಪುರದಂತೆಯೇ ಇರುವ ಶಿಬಿರವನ್ನು ನಿರ್ಮಾಣ ಮಾಡಿಸಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಃಪಂಚಾಶೋಽತ್ತರಶತತಮೋಽಧ್ಯಾಯಃ ||
|| ಭೀಷ್ಮಾಭಿಷೇಚನಪರ್ವಣಿ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೈದನೆಯ ಅಧ್ಯಾಯ
ಯುಧಿಷ್ಠಿರನಿಂದ ಧೃಷ್ಟದ್ಯುಮ್ನನನ್ನು ಸೇನಾಪತಿಯಾಗಿ ಶಾಸನ.
ಬಲರಾಮನ ತೀರ್ಥಯಾತ್ರಾಗಮನ.
ಜನಮೇಜಯಃ
ಆಪಗೇಯಂ ಮಹಾತ್ಮಾನಂ ಭೀಷ್ಮಂ ಶಸ್ತ್ರಭೃತಾಂ ವರಮ್ |
ಪಿತಾಮಹಂ ಭಾರತಾನಾಂ ಧ್ವಜಂ ಸರ್ವಮಹೀಕ್ಷಿತಾಮ್ ||1||
ಬೃಹಸ್ಪತಿಸಮಂ ಬುದ್ಧ್ಯಾ ಕ್ಷಮಯಾ ಪೃಥಿವೀಸಮಮ್ |
ಸಮುದ್ರಮಿವ ಗಾಂಭೀರ್ಯೇ ಹಿಮವಂತಮಿವಾತುಲಮ್ ||2||
ಪ್ರಜಾಪತಿಮಿವೌದಾರ್ಯೇ ತೇಜಸಾ ಭಾಸ್ಕರೋಪಮಮ್ |
ಮಹೇಂದ್ರಮಿವ ಶತ್ರೂಣಾಂ ಧ್ವಂಸನೇ ಶರವೃಷ್ಟಿಭಿಃ ||3||
ರಣಯಜ್ಞೇ ಪ್ರವಿತತೇ ಸುಭೀಮೇ ರೋಮಹರ್ಷಣೇ |
ದೀಕ್ಷಿತಂ ಚಿರರಾತ್ರಾಯ ಶ್ರುತ್ವಾ ರಾಜಾ ಯುಧಿಷ್ಠಿರಃ ||4||
ಕಿಮಬ್ರವೀನ್ಮಹಾಬಾಹುಃ ಸರ್ವಧರ್ಮವಿಶಾರದಃ |
ಭೀಮಸೇನಾರ್ಜುನೌ ವಾಽಪಿ ಕೃಷ್ಣೋ ವಾ ಪ್ರತ್ಯಪದ್ಯತ ||5||
ಜನಮೇಜಯ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ, ಭಾರತರ ಪಿತಾಮಹರಾದ, ಸರ್ವರಾಜರ ಮಧ್ಯದಲ್ಲಿ ಧ್ವಜದಂತಿರುವ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮರಾದ, ಸಹನೆಯಲ್ಲಿ ಭೂಮಿಗೆ ಸಮರಾದ, ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮರಾದ, ಹಿಮವಂತನಂತೆ ಉಪಮಾನವಿಲ್ಲದ, ಔದಾರ್ಯದಲ್ಲಿ ಬ್ರಹ್ಮನಂತಿರುವ, ತೇಜಸ್ಸಿನಲ್ಲಿ ಭಾಸ್ಕರನಂತಿರುವ, ಬಾಣಗಳ ವರ್ಷವನ್ನು ಕರೆದು ಶತ್ರುಗಳನ್ನು ಧ್ವಂಸ ಮಾಡುವುದರಲ್ಲಿ ಮಹೇಂದ್ರನಂತಿರುವ, ಗಂಗಾಪುತ್ರರಾದ ಮಹಾತ್ಮರಾದ ಭೀಷ್ಮರು ರೋಮಹರ್ಷಣವಾದ, ಭಯಂಕರವಾದ, ವಿಸ್ತಾರವಾದ ರಣರಂಗದಲ್ಲಿ ದೀಕ್ಷಿತರಾಗಿದ್ದಾರೆ ಎಂಬ ಸುದ್ದಿಯನ್ನು ಕೇಳಿದ ಮಹಾಬಾಹುವೂ, ಸರ್ವಧರ್ಮ ವಿಶಾರದನೂ ಆದ ಯುಧಿಷ್ಠಿರನು ಏನು ಹೇಳಿದನು? ಭೀಮಸೇನನಾಗಲೀ, ಅರ್ಜುನನಾಗಲೀ ಅಥವಾ ಕೃಷ್ಣನಾಗಲೀ ಏನು ಮಾಡಿದರು?
ವೈಶಂಪಾಯನಃ
ಆಪದ್ಧರ್ಮಾರ್ಥಕುಶಲೋ ಮಹಾಬುದ್ಧಿರ್ಯುಧಿಷ್ಠಿರಃ |
ಸರ್ವಾನ್ ಭ್ರಾತೄನ್ ಸಮಾನೀಯ ವಾಸುದೇವಂ ಚ ಶಾಶ್ವತಮ್ ||6||
ಉವಾಚ ವದತಾಂ ಶ್ರೇಷ್ಠಃ ಸಾಂತ್ವಪೂರ್ವಮಿದಂ ವಚಃ ||7||
ವೈಶಂಪಾಯನ ಆಪದ್ಧರ್ಮ ಮತ್ತು ಆಪದರ್ಥಗಳಲ್ಲಿ ಕುಶಲನಾದ, ಮಾತನಾಡುವವರಲ್ಲಿ ಶ್ರೇಷ್ಠನಾದ, ಮಹಾಬುದ್ಧಿಯುಳ್ಳ

ಯುಧಿಷ್ಠಿರನು ಎಲ್ಲಾ ಸಹೋದರರನ್ನೂ ಮತ್ತು ಶಾಶ್ವತನಾದ ವಾಸುದೇವನನ್ನೂ ಕರೆದು ಸಮಾಧಾನ ಪೂರ್ವಕವಾಗಿ ಈ ಮಾತನ್ನಾಡಿದನು.
ಪರ್ಯಾಕ್ರಾಮತ ಸೈನ್ಯಾನಿ ಯತ್ತಾಸ್ತಿಷ್ಠತ ದಂಸಿತಾಃ |
ಪಿತಾಮಹೇನ ವೋ ಯುದ್ಧಂ ಪೂರ್ವಮೇವ ಭವಿಷ್ಯತಿ ||8||
ತಸ್ಮಾತ್ ಸಪ್ತಸು ಸೇನಾಸು ಪ್ರಣೇತ್ರೄನ್ ಮಮ ಪಶ್ಯತ ||9||
ಸೈನ್ಯದಲ್ಲೆಲ್ಲಾ ಸುತ್ತಾಡಿ ಕವಚವನ್ನು ಧರಿಸಿ ಸಿದ್ಧರಾಗಿರಿ. ಮೊದಲೇ ಪಿತಾಮಹರಾದ ಭೀಷ್ಮರ ಜೊತೆಯಲ್ಲಿ ಯುದ್ಧವು ಉಂಟಾಗುವುದು. ಆದ್ದರಿಂದ ಏಳು ಸೈನ್ಯಗಳಲ್ಲಿಯೂ ನಮ್ಮ ಸೇನಾನಾಯಕರನ್ನು ಆರಿಸಿ.
ವಾಸುದೇವಃ
ಯಥಾऽರ್ಹತಿ ಭವಾನ್ ವಕ್ತುಮಸ್ಮಿನ್ ಕಾಲೇ ಹ್ಯುಪಸ್ಥಿತೇ |
ತದೇತದರ್ಥವದ್ ವಾಕ್ಯಮುಕ್ತಂ ತೇ ಭರತರ್ಷಭ ||10||
ರೋಚತೇ ಮೇ ಮಹಾಬಾಹೋ ಕ್ರಿಯತಾಂ ಯದನಂತರಮ್ |
ನಾಯಕಾಸ್ತವ ಸೈನ್ಯಾನಾಂ ಕ್ರಿಯಂತಾಮಿವ ಸಪ್ತ ವೈ ||11||
ವಾಸುದೇವ ಎಲೈ ಭರತರ್ಷಭನೇ, ಇಂತಹ ಕಾಲವು ಪ್ರಾಪ್ತವಾದಾಗ ನೀನು ಹೇಗೆ ಮಾತನಾಡಬೇಕೋ ಅದರಂತೆಯೇ ಅರ್ಥಪೂರ್ಣವಾದ ಮಾತನ್ನು ಆಡಿದ್ದೀಯೆ. ನಿನ್ನ ಮಾತುಗಳು ನನಗೆ ಇಷ್ಟವಾಗುತ್ತವೆ. ಎಲೈ ಮಹಾಬಾಹುವೇ, ಮುಂದೆ ಏನು ಮಾಡಬೇಕೋ ಅದನ್ನು ಮಾಡುವವನಾಗು. ನಿನ್ನ ಸೈನ್ಯಗಳಿಗೆ ಏಳು ನಾಯಕರನ್ನು ಮಾಡುವವನಾಗು.
ವೈಶಂಪಾಯನಃ
ತತೋ ದ್ರುಪದಮಾನೀಯ ವಿರಾಟಂ ಶಿನಿಪುಂಗವಮ್ |
ಧೃಷ್ಟದ್ಯುಮ್ನಂ ಚ ಪಾಂಚಾಲ್ಯಂ ಧೃಷ್ಟಕೇತುಂ ಚ ಪಾರ್ಥಿವಮ್ ||12||
ಶಿಖಂಡಿನಂ ಚ ಪಾಂಚಾಲ್ಯಂ ಸಹದೇವಂ ಚ ಮಾಗಧಮ್ |
ಏತಾನ್ ಸಪ್ತ ಮಹೇಷ್ವಾಸಾನ್ ವೀರಾನ್ ಯುದ್ಧಾಭಿನಂದಿನಃ ||13||
ಸೇನಾಪ್ರಣೇತೄನ್ ವಿಧಿವದ್ ಅಭ್ಯಷಿಂಚದ್ ಯುಧಿಷ್ಠಿರಃ ||14||
ಅನಂತರ ದ್ರುಪದ, ವಿರಾಟ, ಶೈನೇಯನಾದ ಸಾತ್ಯಕಿ, ಪಾಂಚಾಲದೇಶದ ಧೃಷ್ಟದ್ಯುಮ್ನ, ಸಹದೇವನ ಮಗನಾದ ಧೃಷ್ಟಕೇತು, ಪಾಂಚಾಲ ದೇಶದ ಶಿಖಂಡಿ, ಜರಾಸಂಧನ ಮಗನಾದ ಸಹದೇವ - ಯುದ್ಧವನ್ನು ಆಶಿಸುವ ಮಹಾಧನುರ್ಧಾರಿಗಳಾದ ಈ ಏಳು ವೀರರಿಗೆ ಯುಧಿಷ್ಠಿರನು ಸೇನಾ ನಾಯಕರಾಗಿ ವಿಧಿ ಪೂರ್ವಕವಾಗಿ ಅಭಿಷೇಕ ಮಾಡಿದನು.
ಸರ್ವಸೇನಾಪತಿಂ ಚಾತ್ರ ಧೃಷ್ಟದ್ಯುಮ್ನಮಥಾದಿಶತ್ |
ದ್ರೋಣಾಂತಹೇತುರುತ್ಪನ್ನೋ ಯ ಇಷ್ಟಾಜ್ಜಾತವೇದಸಃ ||15||
ದ್ರೋಣರ ಸಂಹಾರಕ್ಕಾಗಿಯೇ ಯಜ್ಞಕುಂಡದಲ್ಲಿ ಅಗ್ನಿಯಿಂದ ಹೊರಬಂದ ಧೃಷ್ಟದ್ಯುಮ್ನನನ್ನು ಸರ್ವಸೇನಾಪತಿಯನ್ನಾಗಿ ಮಾಡಿದನು.
ಸರ್ವೇಷಾಮೇವ ತೇಷಾಂ ತು ಸಮಸ್ತಾನಾಂ ಮಹಾತ್ಮನಾಮ್ |
ಸೇನಾಪತಿಪತಿಂ ಚಕ್ರೇ ಗುಡಾಕೇಶಂ ಧನಂಜಯಮ್ ||16||
ಆ ಮಹಾತ್ಮರಾದ ಎಲ್ಲಾ ಸೇನಾಪತಿಗಳಿಗೂ ಗುಡಾಕೇಶನಾದ ಧನಂಜಯನನ್ನು ಪತಿಯನ್ನಾಗಿ ಮಾಡಿದನು.
ಅರ್ಜುನಸ್ಯಾಪಿ ನೇತಾ ಚ ಸಂಯಂತಾ ಚೈವ ವಾಜಿನಾಮ್ |
ಸಂಕರ್ಷಣಾನುಜಃ ಶ್ರೀಮಾನ್ ಮಹಾಬುದ್ಧಿರ್ಜನಾರ್ದನಃ ||17||
ಮಹಾಬುದ್ಧಿಯುಳ್ಳ, ಸಂಪದ್ಯುಕ್ತನಾದ, ಬಲರಾಮನ ತಮ್ಮನಾದ ಜನಾರ್ದನನು ಅರ್ಜುನನಿಗೂ ನಾಯಕನಾಗಿಯೂ, ಹಯಸಾರಥಿಯಾಗಿಯೂ ಆದನು.
ತದ್ ದೃಷ್ಟ್ವೋಪಸ್ಥಿತಂ ಯುದ್ಧಂ ಸಮಾಸನ್ನಂ ಮಹಾತ್ಯಯಮ್ |
ಪ್ರಾವಿಶದ್ ಭವನಂ ರಾಜ್ಞಃ ಪಾಂಡವಸ್ಯ ಹಲಾಯುಧಃ ||18||
ಸಹಾಕ್ರೂರಪ್ರಭೃತಿಭಿಃ ಗದಸಾಂಬೋದ್ಧವಾದಿಭಿಃ |
ರೌಗ್ಮಿಣೇಯಾಹುಕಯುತೈಃ ಚಾರುದೇಷ್ಣಪುರೋಗಮೈಃ ||19||
ವೃಷ್ಣಿಮುಖ್ಯೈರುಪಗತೈಃ ವ್ಯಾಘ್ರೈರಿವ ಮದೋತ್ಕಟೈಃ |
ಅಭಿಗುಪ್ತೋ ಮಹಾಬಾಹುಃ ಮರುದ್ಭಿರಿವ ವಾಸವಃ ||20||
ನೀಲಕೌಶೇಯವಸನಃ ಕೈಲಾಸಶಿಖರೋಪಮಃ |
ಸಿಂಹಖೇಲಗತಿಃ ಶ್ರೀಮಾನ್ ಮದರಕ್ತಾಂತಲೋಚನಃ ||21||
ದೊಡ್ಡ ಅಪಚಾರರೂಪವಾದ ಯುದ್ಧವು ಪ್ರಾಪ್ತವಾದುದನ್ನು ನೋಡಿ ಬಲರಾಮನು ಅಕ್ರೂರಾದಿಗಳ ಜೊತೆಯಲ್ಲಿಯೂ, ಗದ, ಸಾಂಬ, ಉದ್ಧವರ ಜೊತೆಯಲ್ಲಿಯೂ ಪ್ರದ್ಯುಮ್ನ, ಆಹುಕನಿಂದ ಕೂಡಿದ ಚಾರುದೇಷ್ಣ, ಮೊದಲಾದವರ ಜೊತೆಯಲ್ಲಿಯೂ, ಮದೋತ್ಕಟರಾದ ವ್ಯಾಘ್ರದಂತಿರುವ ವೃಷ್ಣಿಶ್ರೇಷ್ಠರ ಜೊತೆಯಲ್ಲಿಯೂ, ಮರುತ್ತುಗಳಿಂದ ಇಂದ್ರನಂತೆ ರಕ್ಷಿತನಾಗಿ ಮಹಾಬಾಹುವೂ, ಕೈಲಾಸಶಿಖರದಂತೆ ಉನ್ನತನಾದವನೂ, ಸಿಂಹದ ಕ್ರೀಡೆಯ ಗತಿಯುಳ್ಳವನೂ, ಕಾಂತಿಯುಕ್ತನಾದವನೂ, ಮದದಿಂದ ಕೆಂಪಾದ ಕಣ್ಣುಳ್ಳವನೂ ಮತ್ತು ನೀಲಾಂಬರಧಾರಿಯೂ ಆದ ಅವನು ಯುಧಿಷ್ಠಿರನ ಗೃಹವನ್ನು ಪ್ರವೇಶಿಸಿದನು.
ತಂ ದೃಷ್ಟ್ವಾ ಧರ್ಮರಾಜಶ್ಚ ಕೇಶವಶ್ಚ ಮಹಾದ್ಯುತಿಃ |
ಉದತಿಷ್ಠತ್ ತತಃ ಪಾರ್ಥೋ ಭೀಮಕರ್ಮಾ ವೃಕೋದರಃ ||22||

ಅವನನ್ನು ನೋಡಿ ಧರ್ಮರಾಜನೂ, ಮಹಾಕಾಂತಿಯುಕ್ತನಾದ ಕೇಶವನೂ, ಭಯಂಕರ ಕರ್ಮಗಳನ್ನು ಮಾಡುವ ವೃಕೋದರನೂ ಎದ್ದು ನಿಂತರು.
ಗಾಂಡೀವಧನ್ವಾ ಯೇ ಚಾನ್ಯೇ ರಾಜಾನಸ್ತತ್ರ ಕೇಚನ |
ಪೂಜಯಾಂಚಕ್ರುರಭ್ಯೇತ್ಯ ತೇ ಸ್ಮ ಸರ್ವೇ ಹಲಾಯುಧಮ್ ॥23॥
ಗಾಂಡೀವ ಧನುರ್ಧಾರಿಯಾದ ಅರ್ಜುನ ಮತ್ತು ಅಲ್ಲಿದ್ದ ಇನ್ನು ಕೆಲವು ರಾಜರೆಲ್ಲರೂ ಬಲರಾಮನ ಬಳಿ ಬಂದು ಅವನನ್ನು ಪೂಜಿಸಿದರು.
ತತಸ್ತಂ ಪಾಂಡವೋ ರಾಜಾ ಕರೇ ಪಸ್ಪರ್ಶ ಪಾಣಿನಾ |
ವಾಸುದೇವಪುರೋಗಾಸ್ತಂ ಸರ್ವ ಏವಾಭ್ಯವಾದಯನ್ ॥24॥
ಅನಂತರ ಪಾಂಡವನಾದ ಯುಧಿಷ್ಠಿರನು ಅವನ ಹಸ್ತವನ್ನು ಹಿಡಿದುಕೊಂಡನು. ಕೃಷ್ಣ ಮೊದಲಾದವರೆಲ್ಲರೂ ಅವನಿಗೆ ನಮಸ್ಕರಿಸಿದರು.
ವಿರಾಟದ್ರುಪದೌ ವೃದ್ಧಾವಭಿವಾದ್ಯ ಹಲಾಯುಧಃ |
ಯುಧಿಷ್ಠಿರೇಣ ಸಹಿತ ಉಪಾವಿಶದರಿಂದಮಃ ॥25॥
ಅರಿಂದಮನಾದ ಹಲಾಯುಧನು ವೃದ್ಧರಾದ ವಿರಾಟ, ದ್ರುಪದರಿಗೆ ವಂದನೆಯನ್ನು ಸಲ್ಲಿಸಿ, ಯುಧಿಷ್ಠಿರನ ಜೊತೆಯಲ್ಲಿ ಕುಳಿತುಕೊಂಡನು.
ತತಸ್ತೇಷೂಪವಿಷ್ಟೇಷು ಪಾರ್ಥಿವೇಷು ಸಮಂತತಃ |
ವಾಸುದೇವಮಭಿಪ್ರೇಕ್ಷ್ಯ ರೌಹಿಣೇಯೋಽಭ್ಯಭಾಷತ ॥26॥
ಅನಂತರ ಸುತ್ತಲೂ ಎಲ್ಲ ರಾಜರೂ ಕುಳಿತುಕೊಳ್ಳುತ್ತಿರಲು ಕೃಷ್ಣನನ್ನು ನೋಡುತ್ತಾ ಬಲರಾಮನು ಮಾತನಾಡಿದನು.
ಭವಿತಾಽಯಂ ಮಹಾರೌದ್ರೋ ದಾರುಣಃ ಪುರುಷಕ್ಷಯಃ |
ದಿಷ್ಟಮೇತದ್ ಧ್ರುವಂ ಮನ್ಯೇ ನ ಶಕ್ಯಮತಿವರ್ತಿತುಮ್ ॥27॥
ಮಹಾಕ್ರೂರವಾದ, ಭಯಂಕರವಾದ ಈ ಪುರುಷ ವಿನಾಶವು ಉಂಟಾಗುವುದು. ಇದು ಖಂಡಿತವಾಗಿ ದೈವ ಸಂಕಲ್ಪವೆಂದು ನಾನು ತಿಳಿಯುತ್ತೇನೆ. ಇದನ್ನು ತಪ್ಪಿಸಲು ಸಾಧ್ಯವಿಲ್ಲ.
ತಸ್ಮಾದ್ ಯುದ್ಧಾತ್ ಸಮುತ್ತೀರ್ಣಾನ್ ಅಪಿ ವಃ ಸಸುಹೃದ್ಗಣಾನ್ |
ಅರೋಗಾನಕ್ಷತೈರ್ದೇಹೈಃ ದ್ರಷ್ಟಾಸ್ಮೀತಿ ಮತಿರ್ಮಮ ॥28॥
ಆದ್ದರಿಂದ ಯುದ್ಧವನ್ನು ಮುಗಿಸಿ, ರೋಗವಿಲ್ಲದ ಮತ್ತು ಗಾಯವಿಲ್ಲದ ದೇಹವುಳ್ಳ ನಿಮ್ಮನ್ನು ಸುಹೃದ್ವರ್ಗದ ಜೊತೆಯಲ್ಲಿ ನೋಡುವೆನು ಎಂದು ನನ್ನ ಅಭಿಪ್ರಾಯ.
ಸಮೇತಂ ಪಾರ್ಥಿವಂ ಕ್ಷತ್ರಂ ಕಾಲಪಕ್ವಮಸಂಶಯಮ್ |
ವಿಮರ್ದಃ ಸುಮಹಾನ್ ಭಾವೀ ಮಾಂಸಶೋಣಿತಕರ್ದಮಃ ॥29॥
ಒಂದುಗೂಡಿರುವ ಭೂಮಿಯ ಮೇಲಿರುವ ಕ್ಷತ್ರಿಯರೆಲ್ಲರೂ ನಿಸ್ಸಂಶಯವಾಗಿ ಕಾಲಪಕ್ವರಾಗಿದ್ದಾರೆ. ಮಾಂಸ-ಶೋಣಿತ (ರಕ್ತ) ರೂಪವಾದ ಕೆಸರುಳ್ಳ ದೊಡ್ಡ ಸಂಘರ್ಷವು ಖಂಡಿತವಾಗಿ ನಡೆಯಲಿದೆ.
ಉಕ್ತೋ ಮಯಾ ವಾಸುದೇವಃ ಪುನಃ ಪುನರುಪಹ್ವರೇ |
ಸಂಬಂಧಿಷು ಸಮಾಂ ವೃತ್ತಿಂ ವರ್ತಸ್ವ ಮಧುಸೂದನ ॥30॥
ನಾನು ಮಧುಸೂದನನಾದ ವಾಸುದೇವನಿಗೆ ಏಕಾಂತದಲ್ಲಿ ಸಂಬಂಧಿಗಳಲ್ಲಿ ಸಮಾನವಾದ ವೃತ್ತಿಯನ್ನು ಹೊಂದುವವನಾಗು ಎಂದು ಪುನಃ ಪುನಃ ಹೇಳಿದೆ.
ಪಾಂಡವಾ ಹಿ ಯಥಾಽಸ್ಮಾಕಂ ತಥಾ ದುರ್ಯೋಧನೋ ನೃಪಃ |
ತಸ್ಯಾಪಿ ಕ್ರಿಯತಾಂ ಸಾಹ್ಯಂ ಸ ಪರ್ಯೇತಿ ಪುನಃ ಪುನಃ ॥31॥
ನಮಗೆ ಪಾಂಡವರು ಹೇಗೋ ದುರ್ಯೋಧನ ರಾಜನೂ ಹಾಗೆಯೇ. ಅವನಾದರೂ ಮತ್ತೆ ಮತ್ತೆ ಬರುತ್ತಿದ್ದಾನೆ. ಅವನಿಗೂ ಸಹಾಯವನ್ನು ಮಾಡು (ಎಂದು ಹೇಳಿದೆನು).
ತಚ್ಚ ಮೇ ನಾಕರೋದ್ ವಾಕ್ಯಂ ತ್ವದರ್ಥೇ ಮಧುಸೂದನಃ |
ನಿವಿಷ್ಟಃ ಸರ್ವಭಾವೇನ ಧನಂಜಯಮವೇಕ್ಷ್ಯ ಹ ॥32॥
ಎಲೈ ಯುಧಿಷ್ಠಿರನೇ, ಅವನು ಸರ್ವಾಭಿಪ್ರಾಯದಿಂದ ಅರ್ಜುನನ ಹಿತದಲ್ಲಿ ದೃಷ್ಟಿಯುಳ್ಳವನಾಗಿ ನಿನ್ನ ನಿಮಿತ್ತದಿಂದಾಗಿ ಆ ಮಾತಿನಂತೆ ನಡೆದುಕೊಳ್ಳಲಿಲ್ಲ.
ಧ್ರುವೋ ಜಯಃ ಪಾಂಡವಾನಾಮಿತಿ ಮೇ ನಿಶ್ಚಿತಾ ಮತಿಃ |
ತಥಾ ಹ್ಯಭಿನಿವೇಶೋಽಯಂ ವಾಸುದೇವಸ್ಯ ಭಾರತ ॥33॥
ಪಾಂಡವರಿಗೆ ಜಯವು ನಿಶ್ಚಿತವಾದುದು ಎಂದು ನನ್ನ ದೃಢವಾದ ಅಭಿಪ್ರಾಯ. ಎಲೈ ಭಾರತನೇ, ಏಕೆಂದರೆ ವಾಸುದೇವನ ಹಠವು ಆ ರೀತಿಯಿದೆ.
ನ ಚಾಹಮುತ್ಸಹೇ ಕೃಷ್ಣಮ್ ಋತೇ ಲೋಕಮುದೀಕ್ಷಿತುಮ್ |
ತತೋಽಹಮನುವರ್ತಾಮಿ ಕೇಶವಸ್ಯ ಚಿಕೀರ್ಷಿತಮ್ ॥34॥
ನಾನು ಕೃಷ್ಣನಿಲ್ಲದೆ ಲೋಕವನ್ನು ನೋಡುವುದಕ್ಕೂ ಇಷ್ಟ ಪಡುವುದಿಲ್ಲ. ಆದ್ದರಿಂದ ಕೇಶವನ ಸಂಕಲ್ಪವನ್ನು ನಾನು ಅನುಸರಿಸುತ್ತೇನೆ.
ಉಭೌ ಶಿಷ್ಯೌ ಹಿ ಮೇ ವೀರೌ ಗದಾಯುದ್ಧವಿಶಾರದೌ |

ತುಲ್ಯಸ್ನೇಹೋಽಸ್ಮ್ಯತೋ ಭೀಮೇ ತಥಾ ದುರ್ಯೋಧನೇ ನೃಪೇ ॥35॥
ಗದಾಯುದ್ಧವಿಶಾರದರಾದ ವೀರರಾದ ಭೀಮದುರ್ಯೋಧನರಿಬ್ಬರೂ ನನ್ನ ಶಿಷ್ಯರು. ಆ ಕಾರಣದಿಂದ ನನಗೆ ಭೀಮನಲ್ಲಿಯೂ ಮತ್ತು ರಾಜನಾದ ದುರ್ಯೋಧನನಲ್ಲಿಯೂ ಸಮಾನವಾದ ಸ್ನೇಹವಿದೆ.
ತಸ್ಮಾದ್ ಯಾಸ್ಯಾಮಿ ತೀರ್ಥಾನಿ ಸರಸ್ವತ್ಯಾ ನಿಷೇವಿತುಮ್ |
ನ ಹಿ ಶಕ್ಷ್ಯಾಮಿ ಕೌರವ್ಯಾನ್ ನಶ್ಯಮಾನಾನವೇಕ್ಷಿತುಮ್ ॥36॥
ಆದ್ದರಿಂದ ಸರಸ್ವತೀನದಿಯ ತೀರ್ಥಗಳನ್ನು ಸೇವಿಸಲು ಹೋಗುತ್ತೇನೆ. ವಿನಾಶವನ್ನು ಹೊಂದುವ ಕೌರವರನ್ನು ನೋಡಲಾರೆ.
ವೈಶಂಪಾಯನಃ
ಏವಮುಕತ್ವ ಮಹಾಬಾಹುರನುಜ್ಞಾತಶ್ಚ ಪಾಂಡವೈಃ |
ತೀರ್ಥಯಾತ್ರಾಂ ಯಯೌ ರಾಮೋ ನಿಮಂತ್ರ್ಯ ಮಧುಸೂದನಮ್ ॥
ವೈಶಂಪಾಯನ ಮಹಾಬಾಹುವಾದ ಬಲರಾಮನು ಹೀಗೆ ಮಾತನಾಡಿ, ಪಾಂಡವರ ಅನುಜ್ಞೆಯನ್ನು ಪಡೆದು, ಮಧುಸೂದನನಿಗೂ ಹೋಗಿ ಬರುತ್ತೇನೆ ಎಂದು ಹೇಳಿ ತೀರ್ಥಯಾತ್ರೆಗೆ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಪಂಚಪಂಚಾಶೋಽತ್ತರಶತತಮೋಽಧ್ಯಾಯಃ ॥
॥ ಭೀಷ್ಮಾಭಿಷೇಚನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತಾರನೆಯ ಅಧ್ಯಾಯ
ಅರ್ಜುನ ಮತ್ತು ದುರ್ಯೋಧನನಿಂದ ದರ್ಪಿಷ್ಠನಾದ
ರುಗ್ಮರಥನ ಸಹಾಯದ ನಿರಾಕರಣೆ.
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ಭೀಷ್ಮಕಸ್ಯ ಮಹಾತ್ಮನಃ |
ಹಿರಣ್ಯರೋಮ್ಣೋ ನೃಪತೇಃ ಸಾಕ್ಷಾದಿಂದ್ರಸಖಸ್ಯ ವೈ ॥1॥
ಆಹೃತೀನಾಮಧಿಪತೇಃ ಭೋಜಸ್ಯಾತಿಯಶಸ್ವಿನಃ |
ದಾಕ್ಷಿಣಾತ್ಯಪತೇಃ ಪುತ್ರೋ ದಿಕ್ಷು ರುಗ್ಮೀತಿ ವಿಶ್ರುತಃ ॥2॥
ವೈಶಂಪಾಯನ ಇದೇ ಕಾಲದಲ್ಲಿ ದಾಕ್ಷಿಣಾತ್ಯರಾಜನಾದ, ಸಾಕ್ಷಾತ್ ಇಂದ್ರ ಸ್ನೇಹಿತನಾದ, ಸಮೃದ್ಧನಾದ, ಕೀರ್ತಿವಂತನಾದ, ಮಹಾತ್ಮನಾದ, ಅನೇಕ ಯಜ್ಞಗಳನ್ನು ಮಾಡಿದ, ಹಿರಣ್ಯರೋಮನಾದ (ಹಿರಣ್ಯರೋಮ ಎಂಬ ಹೆಸರನ್ನು ಹೊಂದಿದ) ಭೀಷ್ಮಕನ ಪುತ್ರನಾದ ರುಗ್ಮಿ ಎಂಬುವನು ಪ್ರಖ್ಯಾತನಾಗಿದ್ದನು. (ರುಗ್ಮಿಯು ಮೊದಲೇ ಬಲರಾಮನಿಂದ ಹತನಾಗಿರುವುದರಿಂದ ಇವನು ರುಗ್ಮಿಯಲ್ಲ, ರುಗ್ಮರಥನೆಂಬ ಇನ್ನೊಬ್ಬ ಭೀಷ್ಮಕ ಪುತ್ರ. ರುಗ್ಮಿ ಎಂದರೆ ರುಗ್ಮ ಎಂಬ ಪದವನ್ನು ಹೊಂದಿದ ಹೆಸರನ್ನು ಉಳ್ಳವನು ಎಂದು ಅರ್ಥ ಲಕ್ಷಾಲಂಕಾರ).
ಯಃ ಕಿಂಪುರುಷಸಿಂಹಸ್ಯ ಗಂಧಮಾದನವಾಸಿನಃ |
ಕೃತ್ಸ್ನಂ ಶಿಷ್ಯೋ ಧನುರ್ವೇದಂ ಚತುಷ್ಪಾದಮವಾಪ್ತವಾನ್ ॥3॥
ಅವನು ಗಂಧಮಾದನ ಪರ್ವತವಾಸಿಯಾದ, ಕಿಂಪುರುಷ ಶ್ರೇಷ್ಠನಾದ ದ್ರುಮನ ಶಿಷ್ಯನಾಗಿ, ನಾಲ್ಕು ಪಾದಗಳಿಂದ ಕೂಡಿದ ಸಮಗ್ರವಾದ ಧನುರ್ವೇದವನ್ನು ಪಡೆದನು.
ಯೋ ಮಾಹೇಂದ್ರಂ ಧನುರ್ಲೇಭೇ ತುಲ್ಯಂ ಗಾಂಡೀವತೇಜಸಾ |
ಶಾಙ್ರ್ಗೇಣ ಚ ಮಹಾಬಾಹುಃ ಸಮ್ಮಿತಂ ದಿವ್ಯಮಕ್ಷಯಮ್ ॥4॥
ಮಹಾಬಾಹುವಾದ ಅವನು ಗಾಂಡೀವ ಧನುಸ್ಸಿಗೆ ತೇಜಸ್ಸಿನಲ್ಲಿ ಸಮವಾದ, ಶಾಙ್ರ್ಗ ಧನುಸ್ಸಿಗೂ ಸಮಾನವಾದ, ದಿವ್ಯವಾದ, ನಾಶರಹಿತವಾದ ಮಹೇಂದ್ರ ಧನುಸ್ಸನ್ನು ಪಡೆದನು.
ತ್ರೀಣ್ಯೇವೈತಾನಿ ದಿವ್ಯಾನಿ ಧನೂಂಷಿ ದಿವಿಚಾರಿಣಾಮ್ ॥5॥
ವಾರುಣಂ ಗಾಂಡಿವಂ ತತ್ರ ಮಾಹೇಂದ್ರಂ ವಿಜಯಂ ಧನುಃ |
ಶಾಙ್ರ್ಗಂ ತು ವೈಷ್ಣವಂ ಪ್ರಾಹುಃ ದಿವ್ಯಂ ತೇಜೋಮಯಂ ಧನುಃ ॥6॥
ಸ್ವರ್ಗವಾಸಿಗಳಿಗೆ ಈ ಮೂರು ದಿವ್ಯವಾದ ಧನುಸ್ಸುಗಳು ಪ್ರಸಿದ್ಧವಾದವುಗಳು. ವರುಣನ ಗಾಂಡೀವ ಧನುಸ್ಸು, ಮಹೇಂದ್ರನ ವಿಜಯ ಧನುಸ್ಸು ಮತ್ತು ವಿಷ್ಣುವಿನ ದಿವ್ಯವೂ, ತೇಜೋಮಯವೂ ಆದ ಶಾಙ್ರ್ಗ ಧನುಸ್ಸು.
ಧಾರಯಾಮಾಸ ತತ್ ಕೃಷ್ಣಃ ಪರಸೇನಾಭಯಾವಹಮ್ |
ಗಾಂಡಿವಂ ಪಾವಕಾಲ್ಲೇಭೇ ಖಾಂಡವೇ ಪಾಕಶಾಸನಿಃ ॥7॥
ದ್ರುಮಾದ್ ರುಗ್ಮೀ ಮಹಾತೇಜಾ ವಿಜಯಂ ಪ್ರತ್ಯಪದ್ಯತ ॥8॥
ಕೃಷ್ಣನು ಪರಸೈನ್ಯಕ್ಕೆ ಭಯವನ್ನು ಉಂಟುಮಾಡುವ ಆ ಶಾಙ್ರ್ಗಧನುಸ್ಸನ್ನು ಧರಿಸಿದನು. ಇಂದ್ರನ ಮಗನಾದ ಅರ್ಜುನನು ಖಾಂಡವವನ ದಹನ ಕಾಲದಲ್ಲಿ ಅಗ್ನಿಯಿಂದ ಗಾಂಡೀವ ಧನುಸ್ಸನ್ನು ಪಡೆದನು. ಮಹಾತೇಜಸ್ವಿಯಾದ ರುಗ್ಮರಥನು ದ್ರುಮನಿಂದ ವಿಜಯ ಧನುಸ್ಸನ್ನು ಪಡೆದನು.
ಸಂಛಿದ್ಯ ಮೌರವಾನ್ ಪಾಶಾನ್ ನಿಹತ್ಯ ಮುರಮೋಜಸಾ |

ನಿರ್ಜಿತ್ಯ ನರಕಂ ಭೌಮಮಾಹೃತ್ಯ ಮಣಿಕುಂಡಲೇ ||9||
ಷೋಡಶ ಸ್ತ್ರೀಸಹಸ್ರಾಣಿ ರತ್ನಾನಿ ವಿವಿಧಾನಿ ಚ |
ಪ್ರತಿಪೇದೇ ಹೃಷೀಕೇಶಃ ಶಾರ್ಙ್ಗಂ ಚ ಧನುರುತ್ತಮಮ್ ||10||
ಪೌರವ ಪಾಶವನ್ನು ಕತ್ತರಿಸಿ, ತನ್ನ ಸಾಮರ್ಥ್ಯದಿಂದ ಮುರನನ್ನು ಸಂಹರಿಸಿ, ಭೂಮಿಪುತ್ರನಾದ ನರಕಾಸುರನನ್ನು ಕೊಂದು, ಅತಿಥಿಯ ಮಣಿಕುಂಡಲವನ್ನು ತೆಗೆದುಕೊಂಡು, ಕೃಷ್ಣನು ಷೋಡಶ ಸಹಸ್ರ ಸ್ತ್ರೀಯರನ್ನೂ, ವಿವಿಧ ರತ್ನಗಳನ್ನೂ ಮತ್ತು ಶ್ರೇಷ್ಠವಾದ ಶಾರ್ಙ್ಗ ಧನುಸ್ಸನ್ನೂ ಪಡೆದನು.
ರುಗ್ಮೀ ತು ವಿಜಯಂ ಲಬ್ಧ್ವಾ ಧನುರ್ಮೇಘನಿಭಸ್ವನಮ್ |
ವಿಭೀಷಯನ್ನಿವ ಜಗತ್ ಪಾಂಡವಾನಭ್ಯವರ್ತತ ||11||
ರುಗ್ಮಿಯು ಮೇಘ ಗರ್ಜನೆಯಂತೆ ಗರ್ಜಿಸುವ ವಿಜಯ ಧನುಸ್ಸನ್ನು ಪಡೆದು ಜಗತ್ತನ್ನೇ ಹೆದರಿಸುವವನಂತೆ ಪಾಂಡವರ ಬಳಿಗೆ ಬಂದನು.
ನಾಮೃಷ್ಯತ ಪುರಾ ಯೋಽಸೌ ಸ್ವಬಾಹುಬಲದರ್ಪಿತಃ |
ರುಗ್ಮಿಣ್ಯಾ ಹರಣಂ ವೀರೋ ವಾಸುದೇವೇನ ಧೀಮತಾ ||12||
ಕೃತ್ವಾ ಪ್ರತಿಜ್ಞಾಂ ನಾಹತ್ವಾ ನಿವರ್ತಿಷ್ಯೇ ಜನಾರ್ದನಮ್ |
ತತೋಽನ್ವಧಾವದ್ ವಾರ್ಷ್ಣೇಯಂ ಸರ್ವಶಸ್ತ್ರಭೃತಾಂ ವರಃ ||13||
ಮೇಧಾವಿಯಾದ ಕೃಷ್ಣನು ರುಗ್ಮಿಣಿಯನ್ನು ಅಪಹರಿಸಿದುದನ್ನು ಸಹಿಸದಿದ್ದ, ತನ್ನ ಬಾಹುಬಲದಿಂದಾಗಿ ದರ್ಪದಿಂದ ಕೂಡಿದ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ವೀರನಾದ ಅವನು ಕೃಷ್ಣನನ್ನು ಕೊಲ್ಲದೆ ಹಿಂದಿರುಗುವುದಿಲ್ಲ ಎಂದು ಪ್ರತಿಜ್ಞೆಯನ್ನು ಮಾಡಿ ಕೃಷ್ಣನ ಮೇಲೆ ದಂಡೆತ್ತಿ ಬಂದನು.
ಸೇನಯಾ ಚತುರಂಗಿಣ್ಯಾ ಮಹತ್ಯಾ ದೂರಪಾತಯಾ |
ವಿಚಿತ್ರಾಯುಧವರ್ಮಿಣ್ಯಾ ಗಂಗಯೇವ ಪ್ರವೃದ್ಧಯಾ ||14||
ಸ ಸಮಾಸಾದ್ಯ ವಾರ್ಷ್ಣೇಯಂ ಯೋಗಾನಾಮೀಶ್ವರಂ ಪ್ರಭುಮ್ |
ವ್ಯಂಸಿತೋ ವ್ರೀಡಿತೋ ರಾಜಾ ನಾಜಗಾಮ ಸ ಕುಂಡಿನಮ್ ||15||
ವಿಚಿತ್ರಾಯುಧ, ಕವಚವನ್ನು ಧರಿಸಿದ, ದೂರದಿಂದಲೂ ಪ್ರಹಾರ ಮಾಡುವ ಶಕ್ತಿಯುಳ್ಳ, ಗಂಗಾಪ್ರವಾಹದಂತೆ ಪೂರ್ಣವಾದ, ದೊಡ್ಡ ಚತುರಂಗ ಸೈನ್ಯದ ಜೊತೆಯಲ್ಲಿ ಅವನು ಯೋಗೀಶ್ವರನಾದ, ಪ್ರಭುವಾದ ಕೃಷ್ಣನನ್ನು ಸಮೀಪಿಸಿ ಅವನಿಂದ ಸರ್ವನಾಶವನ್ನು ಹೊಂದಿದವನಾಗಿ, ನಾಚಿಕೆಯನ್ನು ಹೊಂದಿ ಪುನಃ ಅವನು ಕುಂಡಿನ ಪುರಕ್ಕೆ ಹೋಗಲಿಲ್ಲ.
ಯತ್ರೈವ ಕೃಷ್ಣೇನ ರಣೇ ನಿರ್ಜಿತಃ ಪರವೀರಹಾ |
ತತ್ರ ಭೋಜಕಟಂ ನಾಮ ಕೃತಂ ನಗರಮುತ್ತಮಮ್ ||16||
ಪರವೀರಘಾತಕನಾದ ಅವನು ಎಲ್ಲಿ ಯುದ್ಧದಲ್ಲಿ ಕೃಷ್ಣನಿಗೆ ಸೋತನೋ ಅಲ್ಲಿಯೇ ಭೋಜಕಟವೆಂಬ ಉತ್ತಮವಾದ ಪಟ್ಟಣವನ್ನು ನಿರ್ಮಾಣ ಮಾಡಿದನು.
ಸೈನ್ಯೇನ ಮಹತಾ ತೇನ ಪ್ರಭೂತಗಜವಾಜಿನಾ |
ಪುರಂ ತದ್ ಭುವಿ ವಿಖ್ಯಾತಂ ನಾಮ್ನಾ ಭೋಜಕಟಂ ನೃಪ ||17||
ಎಲೈ ರಾಜನೇ, ಅನೇಕ ಗಜಾಶ್ವಗಳಿರುವ, ದೊಡ್ಡದಾದ ಸೈನ್ಯದಿಂದ ಕೂಡಿದ ಆ ಪಟ್ಟಣವು ಭೂಮಿಯಲ್ಲಿ ಭೋಜಕಟವೆಂದು ಪ್ರಖ್ಯಾತವಾಗಿದೆ.
ಸ ಭೋಜರಾಜಃ ಸೈನ್ಯೇನ ಮಹತಾ ಪರಿವಾರಿತಃ |
ಅಕ್ಷೋಹಿಣ್ಯಾ ಮಹಾವೀರ್ಯಃ ಪಾಂಡವಂ ಕ್ಷಿಪ್ರಮಾಗಮತ್ ||18||
ದೊಡ್ಡ ಸೈನ್ಯದಿಂದ ಪರಿವೃತನಾದ ಭೋಜರಾಜನಾದ, ಮಹಾಪರಾಕ್ರಮಿಯಾದ ಆ ರುಗ್ಮರಥನು ಒಂದು ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಕ್ಷಿಪ್ರವಾಗಿ ಯುಧಿಷ್ಠಿರನ ಬಳಿಗೆ ಬಂದನು.
ತತಃ ಸ ಕವಚೀ ಖಡ್ಗೀ ತಳೀ ಧನ್ವೀ ಶರೀ ರಥೀ |
ರಥೇನಾದಿತ್ಯವರ್ಣೇನ ಪ್ರವಿವೇಶ ಮಹಾಚಮೂಮ್ ||19||
ಅನಂತರ ಅವನು ಖಡ್ಗ-ಕವಚಗಳನ್ನೂ, ಕಳತ್ರಾಣಗಳನ್ನೂ, ಧನುಸ್ಸು-ಬಾಣಗಳನ್ನೂ ಧರಿಸಿ, ಸೂರ್ಯನಂತೆ ಹೊಳೆಯುವ ರಥದಲ್ಲಿ ಕುಳಿತು ಯುಧಿಷ್ಠಿರನ ದೊಡ್ಡ ಸೈನ್ಯವನ್ನು ಪ್ರವೇಶಿಸಿದನು.
ವಿದಿತಃ ಪಾಂಡವೇಯಾನಾಂ ವಾಸುದೇವಪ್ರಿಯೇಪ್ಸಯಾ |
ಯುಧಿಷ್ಠಿರಸ್ತು ತಂ ರಾಜಾ ಪ್ರತ್ಯುದ್ಗಮ್ಯಾಭ್ಯಪೂಜಯತ್ ||20||
ಪಾಂಡುಪುತ್ರರಿಗೆ ಅವನು ಪರಿಚಿತನಾದರೂ, ಕೃಷ್ಣನಿಗೆ ಪ್ರಿಯವನ್ನು ಮಾಡುವ ಅಭಿಪ್ರಾಯದಿಂದ ರಾಜನಾದ ಯುಧಿಷ್ಠಿರನು ಎದ್ದು ಅವನ ಕಡೆಗೆ ಹೋಗಿ ಅವನನ್ನು ಪೂಜಿಸಿದನು.
ಸ ಪೂಜಿತಃ ಪಾಂಡುಸುತೈರ್ಯಥಾನ್ಯಾಯಂ ಸುಸತ್ಕೃತಃ |
ಪ್ರತಿಪೂಜ್ಯ ಚ ತಾನ್ ಸರ್ವಾನ್ ವಿಶ್ರಾಂತಃ ಸಹಸೈನಿಕಃ ||21||
ಉವಾಚ ಮಧ್ಯೇ ವೀರಾಣಾಂ ಕುಂತೀಪುತ್ರಂ ಧನಂಜಯಮ್ ||22||
ಪಾಂಡುಪುತ್ರರಿಂದ ನ್ಯಾಯರೀತಿಯಲ್ಲಿ ಪೂಜಿಸಲ್ಪಟ್ಟು, ಸತ್ಕರಿಸಲ್ಪಟ್ಟ ಅವನು ಪಾಂಡವರನ್ನೆಲ್ಲಾ ಪ್ರತಿಯಾಗಿ ಪೂಜಿಸಿ, ವಿಶ್ರಾಂತಿಯನ್ನು ಪಡೆದು ತನ್ನ ಸೈನಿಕರ ಜೊತೆಯಲ್ಲಿ ವೀರರ ಮಧ್ಯದಲ್ಲಿ ಕುಂತೀಪುತ್ರನಾದ ಅರ್ಜುನನನ್ನು ಕುರಿತು ಮಾತನಾಡಿದನು.

ಸಾಹಾಯ್ಯೇಽಸ್ಮಿ ಸ್ಥಿತೋ ಯುದ್ಧೇ ಯದಿ ಭೀತೋಽಸಿ ಪಾಂಡವ |
ಕರಿಷ್ಯಾಮಿ ರಣೇ ಸಾಹ್ಯಮಸಹ್ಯಂ ತವ ಶತ್ರುಭಿಃ ॥23॥
ಎಲೈ ಪಾಂಡವನೇ, ನೀನು ಯುದ್ಧದಲ್ಲಿ ಭೀತನಾಗಿದ್ದರೆ ನಿನ್ನ ಸಹಾಯಕ್ಕಾಗಿ ಬಂದಿದ್ದೇನೆ. ಯುದ್ಧದಲ್ಲಿ ನಿನ್ನ ಶತ್ರುಗಳು ಸಹಿಸಲಾರದಂತಹ ಸಹಾಯವನ್ನು ಮಾಡುವೆನು.
ನ ಹಿ ಮೇ ವಿಕ್ರಮೇ ತುಲ್ಯಃ ಪುಮಾನಸ್ತೀಹ ಕಶ್ಚನ |
ಹರಿಷ್ಯಾಮಿ ರಣೇ ಭಾಗಂ ಯನ್ಮೇ ದಾಸ್ಯಸಿ ಪಾಂಡವ ॥24॥
ನನಗೆ ಸಮಾನನಾದ ಪರಾಕ್ರಮಿಯಾದ ಪುರುಷನು ಇಲ್ಲಿ ಯಾರೂ ಇಲ್ಲ. ಎಲೈ ಅರ್ಜುನನೇ, ಶತ್ರುಸೈನ್ಯದ ಒಂದು ಭಾಗವನ್ನು ನನಗೆ ಒಪ್ಪಿಸು, ಅದನ್ನು ನಾನು ಸಂಹರಿಸುವೆನು.
ಅಪಿ ದ್ರೋಣಕೃಪೌ ವೀರೌ ಭೀಷ್ಮಕರ್ಣಾವಥೋ ಪುನಃ |
ಅಥವಾ ಸರ್ವ ಏವೈತೇ ತಿಷ್ಠಂತು ವಸುಧಾಧಿಪಾಃ ॥25॥
ನಿಹತ್ಯ ಸಮರೇ ಶತ್ರೂನ್ ತವ ದಾಸ್ಯಾಮಿ ಫಲ್ಗುನ ॥26॥
ವೀರರಾದ ದ್ರೋಣ-ಕೃಪರಾಗಲೀ ಅಥವಾ ಭೀಷ್ಮ-ಕರ್ಣರಾಗಲೀ ಅಥವಾ ಈ ಎಲ್ಲ ರಾಜರೇ ಆಗಲಿ ಸುಮ್ಮನಿರಲಿ. ಎಲೈ ಅರ್ಜುನನೇ, ನಾನು ಯುದ್ಧದಲ್ಲಿ ನಿನ್ನ ಶತ್ರುಗಳನ್ನು ಗೆದ್ದು ನಿನಗೆ ರಾಜ್ಯವನ್ನು ಒಪ್ಪಿಸುವೆನು.
ಇತ್ಯುಕ್ತೋ ಧರ್ಮರಾಜಸ್ಯ ಕೇಶವಸ್ಯ ಚ ಸನ್ನಿಧೌ |
ಶೃಣ್ವತಾಂ ಪಾರ್ಥಿವೇಂದ್ರಾಣಾಮನ್ಯೇಷಾಂ ಚೈವ ಸರ್ವತಃ ॥27॥
ವಾಸುದೇವಮಭಿಪ್ರೇಕ್ಷ್ಯ ಧರ್ಮರಾಜಂ ಚ ಪಾಂಡವಮ್ |
ಉವಾಚ ಧೀಮಾನ್ ಕೌಂತೇಯಃ ಪ್ರಸಹ್ಯ ಸಖಿಪೂರ್ವಕಮ್ ॥28॥
ಯುಧಿಷ್ಠಿರ ಮತ್ತು ಕೇಶವನ ಸನ್ನಿಧಿಯಲ್ಲಿ ಮತ್ತು ಉಳಿದ ರಾಜರು ಎಲ್ಲರೂ ಕೇಳುವಂತೆ ಹೀಗೆ ಹೇಳಲ್ಪಟ್ಟ ಮೇಧಾವಿಯೂ, ಕುಂತೀಪುತ್ರನೂ ಆದ ಅರ್ಜುನನು ವಾಸುದೇವನನ್ನೂ ಮತ್ತು ಪಾಂಡುಪುತ್ರನಾದ ಧರ್ಮರಾಜನನ್ನೂ ನೋಡುತ್ತಾ ನಕ್ಕು ಸ್ನೇಹಪೂರ್ವಕವಾಗಿ ಮಾತನಾಡಿದನು.
ಅರ್ಜುನಃ
ಯುಧ್ಯಮಾನಸ್ಯ ಮೇ ವೀರ ಗಂಧರ್ವೈಃ ಸುಮಹಾಬಲೈಃ |
ಸಹಾಯೋ ಘೋಷಯಾತ್ರಾಯಾಂ ಕಸ್ತದಾಽಽಸೀತ್ ಸಖಾ ಮಮ ॥
ಅರ್ಜುನ ಎಲೈ ವೀರನೇ, ಘೋಷಯಾತ್ರೆಯ ಕಾಲದಲ್ಲಿ ಮಹಾಬಲಿಷ್ಠರಾದ ಗಂಧರ್ವರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ನನಗೆ ಸಹಾಯವನ್ನು ಮಾಡುವ ಯಾವ ಸ್ನೇಹಿತರಿದ್ದರು?
ತದಾ ಪ್ರತಿಭಯೇ ತಸ್ಮಿನ್ ದೇವದಾನವಸಂಕುಲೇ |
ಖಾಂಡವೇ ಯುಧ್ಯಮಾನಸ್ಯ ಕಃ ಸಹಾಯಸ್ತದಾಽಭವತ್ ॥30॥
ಮಹಾಭಯಂಕರವಾದ ದೇವ-ದಾನವಸಂಘರ್ಷರೂಪವಾದ ಆ ಖಾಂಡವವನದಲ್ಲಿ ಯುದ್ಧವನ್ನು ಮಾಡುವಾಗ ಯಾರು ನನಗೆ ಸಹಾಯಕ್ಕೆ ಇದ್ದರು?
ನಿವಾತಕವಚೈರ್ಯುದ್ಧೇ ಕಾಲಕೇಯೈಶ್ಚ ದಾನವೈಃ |
ತತ್ರ ಮೇ ಯುಧ್ಯಮಾನಸ್ಯ ಕಃ ಸಹಾಯಸ್ತದಾಽಭವತ್ ॥31॥
ನಿವಾತಕವಚರ ಜೊತೆಯಲ್ಲಿ ಮತ್ತು ಕಾಲಕೇಯ ದಾನವರ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವಾಗ ಯಾರು ನನಗೆ ಸಹಾಯವನ್ನು ಮಾಡಿದರು?
ತಥಾ ವಿರಾಟನಗರೇ ಕುರುಭಿಃ ಸಹ ಸಂಯುಗೇ |
ಯುಧ್ಯತೋ ಬಹುಭಿಸ್ತತ್ರ ಕಃ ಸಹಾಯಸ್ತದಾಽಭವತ್ ॥32॥
ಹಾಗೆಯೇ ವಿರಾಟ ನಗರದಲ್ಲಿ ಅನೇಕ ಕೌರವರ ಜೊತೆ ಯುದ್ಧವನ್ನು ಮಾಡುವಾಗ ಯಾರು ನನಗೆ ಸಹಾಯವನ್ನು ಮಾಡಿದರು?
ಉಪಜೀವ್ಯ ರಣೇ ರುದ್ರಂ ಶಕ್ರಂ ವೈಶ್ರವಣಂ ಯಮಮ್ |
ವರುಣಂ ಪಾವಕಂ ಚೈವ ಕೃಪಂ ಕೃಷ್ಣಂ ಚ ಮಾಧವಮ್ ॥33॥
ಧಾರಯನ್ ಗಾಂಡಿವಂ ದಿವ್ಯಂ ಧನುಸ್ತೇಜೋಮಯಂ ದೃಢಮ್ |
ಅಕ್ಷಯ್ಯಶರಸಂಯುಕ್ತೋ ದಿವ್ಯಾಸ್ತ್ರಪರಿಬೃಂಹಿತಃ ॥34॥
ಕೌರವಾಣಾಂ ಕುಲೇ ಜಾತಃ ಪಾಂಡೋಃ ಪುತ್ರೋ ವಿಶೇಷತಃ |
ದ್ರೋಣಂ ವ್ಯಪದಿಶನ್ ಶಿಷ್ಯಃ ವಾಸುದೇವಸಹಾಯವಾನ್ ॥35॥
ಕಥಮಸ್ಮದ್ವಿಧೋ ಬ್ರೂಯಾದ್ ಭೀತೋಽಸ್ಮೀತ್ಯಯಶಸ್ಕರಮ್ |
ವಚನಂ ನರ(ರಾಜ)ಶಾರ್ದೂಲ ವಜ್ರಾಯುಧಮಪಿ ಸ್ವಯಮ್ ॥36॥
ಎಲೈ ರಾಜಶಾರ್ದೂಲನೇ, ಯುದ್ಧದಲ್ಲಿ ರುದ್ರನನ್ನೂ, ಇಂದ್ರನನ್ನೂ, ಕುಬೇರನನ್ನೂ, ಯಮನನ್ನೂ, ವರುಣನನ್ನೂ, ಅಗ್ನಿಯನ್ನೂ ಉಪಜೀವಿಸಿ (ಅವರ ಅಸ್ತ್ರಗಳನ್ನು ಪಡೆದು), ಕೃಪಾಳುವಾದ, ಮಧುವಂಶದಲ್ಲಿ ಜನಿಸಿದ ಕೃಷ್ಣನನ್ನು ಉಪಜೀವಿಸಿ, ತೇಜೋಮಯವೂ ದೃಢವೂ, ದಿವ್ಯವೂ ಆದ ಗಾಂಡೀವ ಧನುಸ್ಸನ್ನು ಧರಿಸಿ, ಅಕ್ಷಯ ಬಾಣಗಳಿಂದಲೂ, ದಿವ್ಯಾಸ್ತ್ರಗಳಿಂದಲೂ ಕೂಡಿದವನಾಗಿ, ಕೌರವರ ಕುಲದಲ್ಲಿ ಜನಿಸಿ, ವಿಶೇಷವಾಗಿ ಪಾಂಡುವಿನ ಪುತ್ರನಾಗಿ, ದ್ರೋಣರನ್ನು ಗುರುವೆಂದು ಕೀರ್ತಿಸಿ, ಅವರ ಶಿಷ್ಯನಾಗಿ, ಕೃಷ್ಣ ಸಹಾಯವನ್ನು ಹೊಂದಿದ ನನ್ನಂತಹವನು ಯಾವನು ತಾನೇ ನಾನು ಹೆದರಿದ್ದೇನೆ ಎಂಬ ಅಕೀರ್ತಿಕರವಾದ ಮಾತನ್ನು, ವಜ್ರಾಯುಧವನ್ನು ಧರಿಸಿದ ಇಂದ್ರನೇ ಎದುರಿಗೆ ಬಂದರೂ ಹೇಗೆ ನುಡಿದಾನು?

ನಾಸ್ಮಿ ಭೀತೋ ಮಹಾಬಾಹೋ ಸಹಾಯಾರ್ಥಂ ಚ ನಾಸ್ತಿ ಮೇ |
ಯಥಾಕಾಮಂ ಯಥಾಯೋಗಂ ಗಚ್ಛ ವಾಽನ್ಯತ್ರೈವ ತಿಷ್ಠ ವಾ ॥37॥
ಎಲ್ಲೈ ಮಹಾಬಾಹುವೇ, ನಾನು ಭೀತನಾಗಿಲ್ಲ. ನನಗೆ ಸಹಾಯದ ಅಪೇಕ್ಷೆಯೂ ಇಲ್ಲ. ನಿನ್ನ ಇಷ್ಟ ಬಂದ ಕಡೆಗೆ ಹೋಗು ಅಥವಾ ಇಲ್ಲಿಯೇ ಇರುವವನಾಗು.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ತಸ್ಯ ವಿಜಯಸ್ಯ ಹಿ ಧೀಮತಃ ॥38॥
ವಿನಿವೃತ್ಯ ತತೋ ರುಗ್ಮೀ ಸೇನಾಂ ಸಾಗರಸನ್ನಿಭಾಮ್ |
ದುರ್ಯೋಧನಮುಪಾಗಚ್ಛತ್ ತಥೈವ ಭರತರ್ಷಭ ॥39॥
ವೈಶಂಪಾಯನ ಎಲ್ಲೈ ಭರತರ್ಷಭನೇ, ಮೇಧಾವಿಯಾದ ಅರ್ಜುನನ ಆ ಮಾತುಗಳನ್ನು ಕೇಳಿ ರುಗ್ಮಿಯು ಸಾಗರದಂತಿದ್ದ ಆ ಸೈನ್ಯದಿಂದ ಹಿಂದಿರುಗಿ ಹಾಗೆಯೇ ದುರ್ಯೋಧನನ ಸಮೀಪಕ್ಕೆ ಹೋದನು.
ತಥೈವ ಚಾಭಿಗಮ್ಯೈನಮುವಾಚ ವಸುಧಾಧಿಪಃ |
ಪ್ರತ್ಯಾಖ್ಯಾತಶ್ಚ ತೇನಾಪಿ ಸ ತದಾ ಶೂರಮಾನಿನಾ ॥40॥
ವಸುಧಾಧಿಪನಾದ ಅವನು ಹಾಗೆಯೇ ದುರ್ಯೋಧನನನ್ನು ಸಮೀಪಿಸಿ, ಹಾಗೆಯೇ ಮಾತನಾಡಿ, ತಾನೇ ಶೂರನೆಂಬ ಅಹಂಕಾರವುಳ್ಳ ದುರ್ಯೋಧನನಿಂದಲೂ ನಿರಾಕರಿಸಲ್ಪಟ್ಟನು.
ದ್ವಾವೇವ ತು ಮಹಾರಾಜ ತಸ್ಮಾದ್ ಯುದ್ಧಾದಪೇಯತುಃ |
ರೌಹಿಣೇಯಶ್ಚ ವಾರ್ಷ್ಣೇಯೋ ರುಗ್ಮೀ ಚ ಸ ನರಾಧಿಪಃ ॥41॥
ಎಲ್ಲೈ ಮಹಾರಾಜನೇ, ವೃಷ್ಣಿಕುಲದಲ್ಲಿ ಜನಿಸಿದ ಬಲರಾಮ ಮತ್ತು ರಾಜನಾದ ರುಗ್ಮಿ (ರುಗ್ಮರಥ) ಇವರಿಬ್ಬರೇ ಯುದ್ಧದಿಂದ ಹಿಂದೆ ಸರಿದವರು.
ಗತೇ ರಾಮೇ ತೀರ್ಥಯಾತ್ರಾಂ ಭೀಷ್ಮಕಸ್ಯ ಸುತೇ ತದಾ |
ಉಪಾವಿಶನ್ ಪಾಂಡವೇಯಾ ಮಂತ್ರಾಯ ಪುನರೇವ ಚ ॥42॥
ಬಲರಾಮನು ತೀರ್ಥಯಾತ್ರೆಗೆ ಹೊರಟು, ಭೀಷ್ಮಕನ ಪುತ್ರನು ಹಿಂದಿರುಗುತ್ತಿರಲು ಪಾಂಡುಪುತ್ರರು ಪುನಃ ಮಂತ್ರಾಲೋಚನೆಯನ್ನು ಮಾಡಲು ಒಟ್ಟಿಗೆ ಕುಳಿತರು.
ಸಮಿತಿರ್ಧರ್ಮರಾಜಸ್ಯ ಸಾ ಪಾರ್ಥಿವಸಮಾಕುಲಾ |
ಶುಶುಭೇ ತಾರಕಾಚಿತ್ರಾ ದ್ಯೌಃ ಸಚಂದ್ರೇವ ಭಾರತ ॥43॥
ಎಲ್ಲೈ ಭಾರತನೇ, ರಾಜರಿಂದ ಕೂಡಿದ ಧರ್ಮರಾಜನ ಆ ಸಭೆಯು ನಕ್ಷತ್ರಗಳಿಂದ ಕೂಡಿದ ಚಂದ್ರನನ್ನು ಹೊಂದಿದ ಆಕಾಶದಂತೆ ಶೋಭಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ಪಂಚಾಶೋತ್ತರಶತತಮೋಽಧ್ಯಾಯಃ ॥
॥ ಭೀಷ್ಮಾಭಿಷೇಚನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೇಳನೆಯ ಅಧ್ಯಾಯ
ಸಂಜಯ-ಧೃತರಾಷ್ಟ್ರ ಸಂವಾದ.
ಜನಮೇಜಯಃ
ತಥಾ ವ್ಯೂಢೇಷ್ವನೀಕೇಷು ಯುದ್ಧಾಯ ಬ್ರಾಹ್ಮಣರ್ಷಭ |
ಕಿಮಕುರ್ವಂತ ಕೌರವ್ಯಾಃ ಕಾಲೇನಾಭಿಪ್ರಚೋದಿತಾಃ ॥1॥
ಜನಮೇಜಯ ಎಲ್ಲೈ ಬ್ರಾಹ್ಮಣಶ್ರೇಷ್ಠರೇ, ಕುರುಕ್ಷೇತ್ರದಲ್ಲಿ ಸೈನ್ಯವು ಹಾಗೆ ಯುದ್ಧಕ್ಕಾಗಿ ಸಜ್ಜುಗೊಳ್ಳುತ್ತಿರಲು ಮೃತ್ಯುಚೋದಿತರಾದ ಕೌರವರು ಏನು ಮಾಡಿದರು?
ವೈಶಂಪಾಯನಃ
ತಥಾ ವ್ಯೂಢೇಷ್ವನೀಕೇಷು ಯತ್ತೇಷು ಭರತರ್ಷಭ |
ಧೃತರಾಷ್ಟ್ರೋ ಮಹಾರಾಜ ಸಂಜಯಂ ವಾಕ್ಯಮಬ್ರವೀತ್ ॥2॥
ವೈಶಂಪಾಯನ ಎಲ್ಲೈ ಭರತರ್ಷಭನೇ, ಮಹಾರಾಜನೇ, ಸೈನ್ಯಗಳು ವ್ಯೂಹವನ್ನು ರಚಿಸಿ ಸಜ್ಜುಗೊಳ್ಳುತ್ತಿರಲು ಧೃತರಾಷ್ಟ್ರನು ಸಂಜಯನನ್ನು ಕುರಿತು ಮಾತನಾಡಿದನು.
ಏಹಿ ಸಂಜಯ ಸರ್ವಂ ಮೇ ಆಚಕ್ಷ್ವಾನವಶೇಷತಃ |
ಸೇನಾನಿವೇಶೇ ಯದ್ ವೃತ್ತಂ ಕುರುಪಾಂಡವಸೇನಯೋಃ ॥3॥
ಸಂಜಯನೇ, ಇಲ್ಲಿ ಬಾ. ಕುರು-ಪಾಂಡವರು ಸೈನ್ಯವನ್ನು ನಿವೇಶ ಮಾಡುವಾಗ ಏನು ನಡೆಯಿತೆಂಬುದನ್ನು ನನಗೆ ಸಮಗ್ರವಾಗಿ ಹೇಳು.
ದಿಷ್ಟಮೇವ ಪರಂ ಮನ್ಯೇ ಪೌರುಷಂ ಚಾಪ್ಯನರ್ಥಕಮ್ ॥4॥
ಯದಹಂ ಜಾನಮಾನೋಽಪಿ ಯುದ್ಧದೋಷಾನ್ ಕ್ಷಯೋದಯಾನ್ ॥

ತಥಾಽಪಿ ನಿಕೃತಿಪ್ರಜ್ಞಂ ಪುತ್ರಂ ದುರ್ದ್ಯೂತದೇವಿನಮ್ |
ನ ಶಕ್ನೋಮಿ ನಿಯಂತುಂ ವಾ ಕರ್ತುಂ ವಾ ಹಿತಮಾತ್ಮನಃ ||6||
ದೈವವೇ ಪ್ರಬಲವೆಂದು ತಿಳಿಯುತ್ತೇನೆ, ಪುರುಷ ಪ್ರಯತ್ನವು ನಿರರ್ಥಕವಾದುದು. ಏಕೆಂದರೆ ವಿನಾಶವನ್ನು ಉಂಟುಮಾಡುವ ಯುದ್ಧದೋಷಗಳನ್ನು ತಿಳಿದರೂ ನಾನು ಮೋಸದ ಬುದ್ಧಿಯುಳ್ಳವನೂ ಮತ್ತು ಕೆಟ್ಟ ಜೂಜನ್ನು ಆಡಿದವನೂ ಆದ ದುರ್ಯೋಧನನನ್ನು ನಿಯಂತ್ರಿಸುವುದಕ್ಕಾಗಲೀ ಅಥವಾ ನನಗೆ ಹಿತವನ್ನು ಮಾಡಿಕೊಳ್ಳುವುದಕ್ಕಾಗಲೀ ಸಮರ್ಥನಾಗುತ್ತಿಲ್ಲ.
ಭವತ್ಯೇವ ಹಿ ಮೇ ಸೂತ ಬುದ್ಧಿರ್ದೋಷಾನುದರ್ಶಿನೀ |
ದುರ್ಯೋಧನಂ ಸಮಾಸಾದ್ಯ ಪುನಃ ಸಾ ಪರಿವರ್ತತೇ ||7||
ಎಲೈ ಸೂತನೇ, ನನ್ನ ಬುದ್ಧಿಯು ದೋಷಗಳನ್ನು ಗಮನಿಸುತ್ತಿದೆ. ಆದರೆ ದುರ್ಯೋಧನನನ್ನು ನೋಡಿದ ತಕ್ಷಣ ಆ ಬುದ್ಧಿಯು ಬದಲಾಗುತ್ತದೆ.
ಏವಂ ಗತೇ ವೈ ಯದ್ ಭಾವಿ ತದ್ ಭವಿಷ್ಯತಿ ಸಂಜಯ |
ಕ್ಷತ್ರಧರ್ಮಃ ಕಿಲ ರಣೇ ತನುತ್ಯಾಗೋ ಹಿ ಪೂಜಿತಃ ||8||
ಎಲೈ ಸಂಜಯನೇ, ಪರಿಸ್ಥಿತಿ ಹೀಗಿರುವಾಗ ಏನು ಆಗಬೇಕಾಗಿದೆಯೋ ಅದು ಆಗುವುದು. ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವುದು ಪೂಜಿತವಾದ ಕ್ಷತ್ರಧರ್ಮವಷ್ಟೆ!
ಸಂಜಯಃ
ತ್ವದ್ಯುಕ್ತೋಽಯಮನುಪ್ರಶ್ನೋ ಮಹಾರಾಜ ಯಥೇಚ್ಛಸಿ |
ನ ತು ದುರ್ಯೋಧನೇ ದೋಷಮಿಮಮಾಸಕ್ತುಮರ್ಹಸಿ ||9||
ಶೃಣುಷ್ವಾನವಶೇಷೇಣ ವದತಃ ಪಾರ್ಥಿವರ್ಷಭ ||10||
ಸಂಜಯ ಎಲೈ ಮಹಾರಾಜನೇ, ನೀನು ಬಯಸಿದಂತೆ ಪ್ರಶ್ನೆಯನ್ನು ಕೇಳುತ್ತಿದ್ದೀಯೆ. ಆದರೆ ಎಲ್ಲ ದೋಷಗಳಿಗೂ ದುರ್ಯೋಧನನನ್ನೇ ಗುರಿ ಮಾಡುವುದು ನಿನಗೆ ಸರಿಯಲ್ಲ. ಎಲೈ ರಾಜಶ್ರೇಷ್ಠನೇ, ಎಲ್ಲವನ್ನೂ ಸಮಗ್ರವಾಗಿ ಕೇಳು.
ಯ ಆತ್ಮನೋ ದುಶ್ಚರಿತಾದಶುಭಂ ಪ್ರಾಪ್ನುಯಾನ್ನರಃ |
ಏನಸಾ ನ ಸ ದೈವಂ ವಾ ಕಾಲಂ ವಾ ಗಂತುಮರ್ಹತಿ ||11||
ಯಾವ ಮನುಷ್ಯನು ತನ್ನ ದುರ್ನಡತೆಯಿಂದ ಅಶುಭವನ್ನು ಹೊಂದುತ್ತಾನೆಯೋ ಅವನು ಆ ದೋಷವನ್ನು ದೈವಕ್ಕಾಗಲೀ, ಕಾಲಕ್ಕಾಗಲೀ ಸಂಬಂಧಿಸಬಾರದು.
ಮಹಾರಾಜ ಮನುಷ್ಯೇಷು ನಿಂದ್ಯಂ ಯಃ ಸರ್ವಮಾಚರೇತ್ |
ಸ ವಧ್ಯಃ ಸರ್ವಲೋಕಸ್ಯ ನಿಂದಿತಾನಿ ಸಮಾಚರನ್ ||12||
ಎಲೈ ಮಹಾರಾಜನೇ, ಮನುಷ್ಯರಲ್ಲಿ ಯಾವನು ಎಲ್ಲಾ ನಿಂದಿತವಾದ ಕರ್ಮಗಳನ್ನೇ ಮಾಡುವನೋ ಅಂತಹ ನಿಂದಿತ ಕರ್ಮವನ್ನು ಆಚರಿಸುವ ಮನುಷ್ಯನು ಸರ್ವಲೋಕಕ್ಕೂ ವಧ್ಯನಾಗುತ್ತಾನೆ.
ನ್ಯಕ್ಕಾರಾ ಮನುಜಶ್ರೇಷ್ಠ ಪಾಂಡವೈಸ್ತ್ವತ್ಪ್ರತೀಕ್ಷಯಾ |
ಅನುಭೂತಾ ಮಹಾರಾಜ ನಿಕೃತ್ಯೈಃ ಸಹದ್ಯೈವತ್ಯೈಃ ||13||
ಎಲೈ ಮನುಜಶ್ರೇಷ್ಠನೇ, ಮಹಾರಾಜನೇ, ನಿನ್ನನ್ನು ಗಮನಿಸಿ ಪಾಂಡವರು ದೇವತೆಗಳ ಜೊತೆಯಲ್ಲಿ ತಮಗೆ ಮಾಡಿದ ಅನೇಕ ಅಪಚಾರಗಳನ್ನೂ, ಅವಮಾನಗಳನ್ನೂ ಅನುಭವಿಸಿದರು (ಆದ್ದರಿಂದ ಈ ದೋಷಕ್ಕೆ ನೀನೂ ಭಾಗಿಯಾಗುವಿ).
ಹಯಾನಾಂ ಚ ಗಜಾನಾಂ ಚ ರಾಜ್ಞಾಂ ಚಾಮಿತತೇಜಸಾಮ್ |
ವೈಶಸಂ ಸಮರೇ ವೃತ್ತಂ ಯತ್ತನ್ಮೇ ಶೃಣು ಸರ್ವಶಃ ||14||
ಹಯಗಳಿಗೆ, ಗಜಗಳಿಗೆ ಮತ್ತು ಅಮಿತತೇಜಸ್ಸುಗಳುಳ್ಳ ರಾಜರಿಗೆ ಯುದ್ಧದಲ್ಲಿ ಎಂತಹ ಹಿಂಸೆ ಉಂಟಾಯಿತೋ ಅದೆಲ್ಲವನ್ನೂ ನಾನು ಹೇಳುತ್ತೇನೆ, ಕೇಳು.
ಸ್ಥಿರೋ ಭೂತ್ವಾ ಮಹಾಪ್ರಾಜ್ಞ ಸರ್ವಲೋಕಕ್ಷಯೋದಯಮ್ |
ಯಥಾಭೂತಂ ಮಹಾಯುದ್ಧೇ ಶ್ರುತ್ವಾ ಮಾ ವಿಮನಾ ಭವ ||15||
ಎಲೈ ಮಹಾಪ್ರಾಜ್ಞನೇ, ಸರ್ವಲೋಕಕ್ಷಯವನ್ನು ಉಂಟುಮಾಡುವ ಮಹಾಯುದ್ಧದಲ್ಲಿ ಏನು ನಡೆಯಿತೆಂದು ನಾನು ಹೇಳುತ್ತೇನೆ, ಅದನ್ನು ಸ್ಥಿರವಾಗಿ ಕೇಳು ಮತ್ತು ಕೇಳಿ ವಿಷಾದವನ್ನು ಪಡಬೇಡ.
ನ ಹ್ಯೇವ ಕರ್ತಾ ಪುರುಷಃ ಕರ್ಮಣೋಃ ಶುಭಪಾಪಯೋಃ |
ಅಸ್ವತಂತ್ರೋ ಹಿ ಪುರುಷಃ ಕಾರ್ಯತೇ ದಾರುಯಂತ್ರವತ್ ||16||
ಜೀವನೊಬ್ಬನೇ ಶುಭಾಶುಭಕರ್ಮಗಳಿಗೆ ಕರ್ತೃವಲ್ಲ. ಅಸ್ವತಂತ್ರನಾದ ಅವನು ಸೂತ್ರದ ಬೊಂಬೆಯಂತೆ ಕರ್ಮಗಳನ್ನು ಮಾಡಿಸಲ್ಪಡುತ್ತಾನೆ.
ಕೇಚಿದೀಶ್ವರನಿರ್ದಿಷ್ಟಾಃ ಕೇಚಿದೇವ ಯದೃಚ್ಛಯಾ |
ಪೂರ್ವಕರ್ಮಭಿರಪ್ಯನ್ಯೇ ತ್ರೈಧಮೇತದ್ಧಿ ಭಾಷ್ಯತೇ ||17||
ಕೆಲವು ಕರ್ಮಗಳು ಈಶ್ವರ ಸಂಕಲ್ಪಕ್ಕೆ ಅನುಗುಣವಾದವು. ಕೆಲವು ಆಕಸ್ಮಿಕವಾಗಿ ನಡೆಯುತ್ತವೆ. ಇನ್ನು ಕೆಲವು ಪೂರ್ವಕರ್ಮಗಳಿಗೆ ಅನುಸಾರವಾಗಿ ನಡೆಯುತ್ತವೆ. ಹೀಗೆ ಕರ್ಮಗಳಲ್ಲಿ ಮೂರುವಿಧ ಇದೆ ಎಂದು ತಿಳಿದವರಿಂದ ಹೇಳಲ್ಪಡುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಪಂಚಾಶೋತ್ತರಶತತಮೋಽಧ್ಯಾಯಃ ||
|| ಭೀಷ್ಮಾಭಿಷೇಚನಪರ್ವಣಿ ಪಂಚಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತೇಳನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಭೀಷ್ಮಾಭಿಷೇಚನಪರ್ವ ॥
* * * * *
10. ಉಲೂಕದೂತಾಗಮನಪರ್ವ
ನೂರ ಐವತ್ತೆಂಟನೆಯ ಅಧ್ಯಾಯ
ದುರ್ಯೋಧನನಿಂದ ಉಲೂಕನ ಮೂಲಕ
ಯುಧಿಷ್ಠಿರಾದಿಗಳಿಗೆ ಯುದ್ಧಸಂದೇಶ.
ಸಂಜಯಃ
ಹಿರಣ್ವತ್ಯಾಂ ನಿವಿಷ್ಟೇಷು ಪಾಂಡವೇಷು ಮಹಾತ್ಮಸು ॥1॥
ನ್ಯವಿಶಂತ ಮಹಾರಾಜ ಕೌರವೇಯಾ ಯಥಾವಿಧಿ ॥2॥
ಸಂಜಯ ಎಲ್ಲೈ ಮಹಾರಾಜನೇ, ಮಹಾತ್ಮರಾದ ಪಾಂಡವರು ಹಿರಣ್ವತಿ ನದಿಯ ತೀರದಲ್ಲಿ ಬೀಡುಬಿಡುತ್ತಿರಲು ಕೌರವರು ವಿಧಿಗೆ ಅನುಗುಣವಾಗಿ ಕುರುಕ್ಷೇತ್ರಕ್ಕೆ ಬಂದರು.
ತತ್ರ ದುರ್ಯೋಧನೋ ರಾಜಾ ನಿವೇಶ್ಯ ಬಲಮೋಜಸಾ ।
ಸಮ್ಮಾನಯಿತ್ವಾ ನೃಪತೀನ್ ನ್ಯಸ್ಯ ಗುಲ್ಮಾಂಸ್ತಥೈವ ಚ ॥3॥
ಆರಕ್ಷಸ್ಯ ವಿಧಿಂ ಕೃತ್ವಾ ಯೋಧಾನಾಂ ತತ್ರ ಭಾರತ ।
ಕರ್ಣಂ ದುಃಶಾಸನಂ ಚೈವ ಶಕುನಿಂ ಚಾಪಿ ಸೌಬಲಮ್ ॥4॥
ಆನಾಯ್ಯ ನೃಪತೀಂಸ್ತತ್ರ ಮಂತ್ರಯಾಮಾಸ ಭಾರತ ॥5॥
ಎಲೈ ಭಾರತನೇ, ಅಲ್ಲಿ ರಾಜನಾದ ದುರ್ಯೋಧನನು ತನ್ನ ಸಾಮರ್ಥ್ಯದಿಂದ ಸೈನ್ಯವನ್ನು ನಿವೇಶ ಮಾಡಿ, ರಾಜರನ್ನು ಸನ್ಮಾನಿಸಿ, ಸೈನ್ಯದ ಗುಲ್ಮಗಳನ್ನು ಅಲ್ಲಲ್ಲಿ ನಿಲ್ಲಿಸಿ ಯೋಧರ ರಕ್ಷಣೆಯ ವಿಧಾನಗಳನ್ನು ಮಾಡಿ, ಕರ್ಣ-ದುಶ್ಶಾಸನ ಮತ್ತು ಶಕುನಿಯನ್ನೂ ಮತ್ತು ಬೇರೆ ರಾಜರನ್ನೂ ಕರೆಸಿ ಮಂತ್ರಾಲೋಚನೆಯನ್ನು ಮಾಡಿದನು.
ದುರ್ಯೋಧನೋ ಮಹಾರಾಜ ಕರ್ಣೇನ ಸಹ ಭಾರತ ॥6॥
ಸಂಭಾಷಿತ್ವಾ ಚ ಕರ್ಣೇನ ಭ್ರಾತ್ರಾ ದುಃಶಾಸನೇನ ಚ ।
ಸೌಬಲೇನ ಚ ರಾಜೇಂದ್ರ ಮಂತ್ರಯಿತ್ವಾ ನರರ್ಷಭ ॥7॥
ಆಹೂಯೋಪಹ್ವರೇ ರಾಜನ್ನುಲೂಕಮಿದಮಬ್ರವೀತ್ ॥8॥
ಎಲೈ ಮಹಾರಾಜನೇ, ಭಾರತನೇ, ರಾಜೇಂದ್ರನೇ, ದುರ್ಯೋಧನನು ಕರ್ಣನ ಜೊತೆಯಲ್ಲಿ ಮತ್ತು ತಮ್ಮನಾದ ದುಶ್ಶಾಸನನ ಜೊತೆಯಲ್ಲಿ ಮತ್ತು ಶಕುನಿಯ ಜೊತೆಯಲ್ಲಿ ಸಂಭಾಷಣೆಯನ್ನು ಮಾಡಿ, ಮಂತ್ರಾಲೋಚನೆಯನ್ನು ನಡೆಸಿ, ಏಕಾಂತದಲ್ಲಿ ಉಲೂಕನನ್ನು ಕರೆದು ಹೀಗೆ ಮಾತನಾಡಿದನು.
ಉಲೂಕ ಗಚ್ಛ ಕೈತವ್ಯ ಪಾಂಡವಾನ್ ಸಹಸೋಮಕಾನ್ ।
ಗತ್ವಾ ಮಮ ವಚೋ ಬ್ರೂಹಿ ವಾಸುದೇವಸ್ಯ ಶೃಣ್ವತಃ ॥9॥
ಎಲೈ ಉಲೂಕನೇ, ಕೈತವ್ಯನೇ, ಸೋಮಕರಿಂದ ಕೂಡಿದ ಪಾಂಡವರ ಬಳಿಗೆ ಹೋಗಿ ಕೃಷ್ಣನು ಕೇಳುವಂತೆ ನನ್ನ ಮಾತುಗಳನ್ನು ಹೇಳುವವನಾಗು.
ಇದಂ ತತ್ ಸಮನುಪ್ರಾಪ್ತಂ ವರ್ಷಪೂಗಾಭಿಚಿಂತಿತಮ್ ।
ಪಾಂಡವಾನಾಂ ಕುರೂಣಾಂ ಚ ಯುದ್ಧಂ ಲೋಕಭಯಂಕರಮ್ ॥10॥
ಅನೇಕ ವಷಗಳಿಂದ ಚಿಂತಿಸುತ್ತಿದ್ದ ಲೋಕಭಯಂಕರವಾದ ಕುರು-ಪಾಂಡವರ ಈ ಯುದ್ಧವು ಪ್ರಾಪ್ತವಾಗಿದೆ.
ಯದೇತತ್ ಕಥ್ಯತೇ ವಾಕ್ಯಂ ಸಂಜಯೋ ಮಾಂ ಯದಬ್ರವೀತ್ ॥11॥
ಮಧ್ಯೇ ಕುರೂಣಾಂ ಕೌಂತೇಯ ತಸ್ಯ ಕಾಲಃ ಸಮಾಗತಃ ।
ಯಥಾ ವಃ ಸಂಪ್ರತಿಜ್ಞಾತಂ ತತ್ಸರ್ವಂ ಕ್ರಿಯತಾಮಿತಿ ॥12॥
ಸಂಜಯನು ಕುರುಗಳ ಮಧ್ಯೆ ಯಾವ ನಿನ್ನ ಮಾತುಗಳನ್ನು ಹೇಳಿದನೋ ಎಲೈ ಕೌಂತೇಯನೇ, ಅದನ್ನು ಕ್ರಿಯೆಯಿಂದ ತೋರಿಸುವ ಕಾಲವು ಈಗ ಒದಗಿದೆ. ನೀನು ಪ್ರತಿಜ್ಞೆ ಮಾಡಿದಂತೆ ಎಲ್ಲವನ್ನೂ ನೆರವೇರಿಸು (ಎಂದು ಹೇಳು).
ಜ್ಯೇಷ್ಠಂ ತಥೈವ ಕೌಂತೇಯಂ ಬ್ರೂಯಾಸ್ತ್ವಂ ವಚನಾನ್ಮಮ ।
ಭ್ರಾತೃಭಿಃ ಸಹಿತಂ ಸರ್ವೈಃ ಸೋಮಕೈಶ್ಚ ಸಕೇಕಯೈಃ ॥13॥
ತನ್ನ ಎಲ್ಲಾ ಸಹೋದರರಿಂದಲೂ ಮತ್ತು ಸೋಮಕರಿಂದಲೂ ಕೇಕಯರಿಂದಲೂ ಕೂಡಿದ ಕುಂತೀಪುತ್ರರಲ್ಲಿ ಜ್ಯೇಷ್ಠನಾದ ಧರ್ಮರಾಜನನ್ನು ಕುರಿತು ನನ್ನ ಮಾತಿನಂತೆ ಹೀಗೆ ಹೇಳುವವನಾಗು.
ಕಥಂ ವಾ ಧಾರ್ಮಿಕೋ ಭೂತ್ವಾ ತ್ವಮಧರ್ಮೇ ಮನಃ ಕೃಥಾಃ ॥14॥
ಯದಿಚ್ಛಸಿ ಜಗತ್ಸರ್ವಂ ನಶ್ಯಮಾನಂ ನೃಶಂಸವತ್ ।
ಅಭಯಂ ಸರ್ವಭೂತೇಭ್ಯೋ ದಾತಾ ತ್ವಮಿತಿ ಮೇ ಮತಿಃ ॥15॥
ಧಾರ್ಮಿಕನಾದ ನೀನು ಅಧರ್ಮದಲ್ಲಿ ಹೇಗೆ ಮನಸ್ಸನ್ನು ಮಾಡಿದೆ? ಏಕೆಂದರೆ ಕ್ರೂರಿಯಂತೆ ಸರ್ವಜಗತ್ತಿನ ನಾಶವನ್ನು ಬಯಸುತ್ತಿದ್ದೀಯೆ. ನೀನು ಎಲ್ಲಾ ಪ್ರಾಣಿಗಳಿಗೂ ಅಭಯವನ್ನು ಕೊಡುವವನು ಎಂದು ನನ್ನ ಅಭಿಪ್ರಾಯವಿದ್ದಿತು!
ಶ್ರೂಯತೇ ಹಿ ಪುರಾ ಗೀತಃ ಶ್ಲೋಕೋಽಯಂ ಭರತರ್ಷಭ ।

ಪ್ರಹ್ಲಾದೇನಾಥ ಭದ್ರಂ ತೇ ಹೃತೇ ರಾಜ್ಯೇ ತು ದೈವತೈಃ ॥16॥
ಎಲೈ ಭರತರ್ಷಭನೇ, ನಿನಗೆ ಮಂಗಳವಾಗಲಿ. ಪ್ರಹ್ಲಾದನ ರಾಜ್ಯವು ಹಿಂದೆ ದೇವತೆಗಳಿಂದ ಅಪಹೃತವಾದಾಗ ಪ್ರಹ್ಲಾದನಿಂದ ಹಾಡಲ್ಪಟ್ಟ ಒಂದು ಶ್ಲೋಕವು ಕೇಳಿಬರುತ್ತದೆ.
ಯಸ್ಯ ಧರ್ಮಧ್ವಜೋ ನಿತ್ಯಂ ಸುರಧ್ವಜ ಇವೋಚ್ಛ್ರಿತಃ |
ಪ್ರಚ್ಛನ್ನಾನಿ ಚ ಪಾಪಾನಿ ಬೈಡಾಲಂ ನಾಮ ತದ್ ವ್ರತಮ್ ॥17॥
ಯಾವನ ಧರ್ಮಧ್ವಜವು ದೇವಧ್ವಜದಂತೆ ನಿತ್ಯವೂ ಉನ್ನತವಾಗಿದ್ದು ಪಾಪಗಳು ಪ್ರಚ್ಛನ್ನವಾಗಿರುತ್ತವೆಯೋ ಅವನ ವ್ರತವನ್ನು ಬಿಡಾಲವ್ರತವೆಂದು ಕರೆಯುತ್ತಾರೆ (ಬಿಡಾಲ= ಬೆಕ್ಕು).
ಅತ್ರ ತೇ ವರ್ತಯಿಷ್ಯಾಮಿ ಆಖ್ಯಾನಮಿದಮುತ್ತಮಮ್ |
ಕಥಿತಂ ನಾರದೇನೇಹ ಪಿತುರ್ಮಮ ನರಾಧಿಪ ॥18॥
ಎಲೈ ರಾಜನೇ, ಈ ವಿಷಯದಲ್ಲಿ ನಾರದರು ನನ್ನ ತಂದೆಗೆ ಹೇಳಿದ ಶ್ರೇಷ್ಠವಾದ ಒಂದು ಕಥೆಯನ್ನು ಹೇಳುವೆನು.
ಮಾರ್ಜಾರಃ ಕಿಲ ದುಷ್ಟಾತ್ಮಾ ನಿಶ್ಚೇಷ್ಟಃ ಸರ್ವಕರ್ಮಸು |
ಊರ್ಧ್ವಬಾಹುಃ ಸ್ಥಿತೋ ರಾಜನ್ ಗಂಗಾತೀರೇ ಕದಾಚನ ॥19॥
ಎಲೈ ರಾಜನೇ, ಒಂದು ದುಷ್ಟವಾದ ಬೆಕ್ಕು ಯಾವ ಕೆಲಸವನ್ನು ಮಾಡಲೂ ಸಾಮರ್ಥ್ಯವಿಲ್ಲದೆ ಒಮ್ಮೆ ಗಂಗಾತೀರದಲ್ಲಿ ಕೈಗಳನ್ನು ಎತ್ತಿ ನಿಂತುಕೊಂಡಿತು.
ಸ ವೈ ಕೃತ್ವಾ ಮನಃಶುದ್ಧಿಂ ಪ್ರತ್ಯಯಾರ್ಥಂ ಶರೀರಿಣಾಮ್ |
ಕರೋಮಿ ಧರ್ಮಮಿತ್ಯಾಹ ಸರ್ವಾನೇವ ಶರೀರಿಣಃ ॥20॥
ಅದು ಎಲ್ಲರನ್ನೂ ನಂಬಿಸುವುದಕ್ಕಾಗಿ ಸಮೀಪಕ್ಕೆ ಬಂದ ಎಲ್ಲಾ ದೇಹಿಗಳನ್ನು ಕುರಿತು, ನಾನು ಮನಃಶುದ್ಧಿಯನ್ನು ಮಾಡಿಕೊಂಡು ಇಲ್ಲಿ ಧರ್ಮವನ್ನು ಆಚರಿಸುತ್ತೇನೆ ಎಂದು ಹೇಳಿತು.
ತಸ್ಯ ಕಾಲೇನ ಮಹತಾ ವಿಸ್ರಂಭಂ ಜಗ್ಮುರಂಡಜಾಃ |
ಸಮೇತ್ಯ ಚ ಪ್ರಶಂಸಂತಿ ಮಾರ್ಜಾರಂ ತಂ ವಿಶಾಂಪತೇ ॥21॥
ಬಹಳ ಕಾಲವು ಕಳೆದ ಮೇಲೆ ಪಕ್ಷಿಗಳು ಆ ಬೆಕ್ಕನ್ನು ನಂಬಿದವು. ಎಲೈ ರಾಜನೇ, ಆ ಪಕ್ಷಿಗಳೆಲ್ಲವೂ ಸೇರಿ ಆ ಮಾರ್ಜಾಲವನ್ನು ಪ್ರಶಂಸಿಸಿದವು.
ಪೂಜ್ಯಮಾನಸ್ತು ತೈಃ ಸರ್ವೈಃ ಪಕ್ಷಿಭಿಃ ಪಕ್ಷಿಭೋಜನಃ |
ಆತ್ಮಕಾರ್ಯಂ ಕೃತಂ ಮೇನೇ ಚರ್ಯಾಯಾಶ್ಚ ಕೃತಂ ಫಲಮ್ ॥22॥
ಎಲ್ಲ ಪಕ್ಷಿಗಳಿಂದಲೂ ಪೂಜಿತವಾದ, ಪಕ್ಷಿಭೋಜನನಾದ ಆ ಮಾರ್ಜಾಲವು (ಬೆಕ್ಕು) ತನ್ನ ಉದ್ದೇಶವು ಫಲಿಸಿತೆಂದೂ, ತಾನು ಮಾಡಿದ ವ್ರತಕ್ಕೆ ಫಲವು ದೊರೆಯಿತೆಂದೂ ತಿಳಿಯಿತು.
ಅಥ ದೀರ್ಘಸ್ಯ ಕಾಲಸ್ಯ ತಂ ದೇಶಂ ಮೂಷಿಕಾ ಯಯುಃ |
ದದೃಶುಸ್ತಂ ಚ ತೇ ತತ್ರ ಧಾರ್ಮಿಕಂ ವ್ರತಚಾರಿಣಮ್ ॥23॥
ಅನಂತರ ಎಷ್ಟೋ ಕಾಲವು ಕಳೆದ ಮೇಲೆ ಆ ಪ್ರದೇಶಕ್ಕೆ ಇಲಿಗಳು ಬಂದವು. ಅವು ಧಾರ್ಮಿಕನಾಗಿ ವ್ರತವನ್ನು ಆಚರಿಸುತ್ತಿದ್ದ ಆ ಮಾರ್ಜಾಲವನ್ನು ನೋಡಿದವು.
ಕಾರ್ಯೇಣ ಮಹತಾ ಯುಕ್ತಂ ಡಂಭಯುಕ್ತೇನ ಭಾರತ |
ತೇಷಾಂ ಮತಿರಿಯಂ ರಾಜನ್ನಾಸೀತ್ ತತ್ರ ವಿನಿಶ್ಚಯೇ ॥24॥
ಎಲೈ ಭಾರತನೇ, ಧರ್ಮಯುಕ್ತವಾದ ದೊಡ್ಡ ಉದ್ದೇಶದಿಂದ ಕೂಡಿದ ಆ ಮಾರ್ಜಾಲವನ್ನು ನೋಡಿದವು. ಎಲೈ ರಾಜನೇ, ಆ ಇಲಿಗಳಿಗೆ ಈ ನಿಶ್ಚಿತ ಬುದ್ಧಿ ಉಂಟಾಯಿತು.
ಬಹ್ವಮಿತ್ರಾ ವಯಂ ಸರ್ವೇ ತೇಷಾಂ ನೋ ಮಾತುಲೋ ಹ್ಯಯಮ್ |
ರಕ್ಷಾಂ ಕರೋತು ಸತತಂ ವೃದ್ಧಬಾಲಸ್ಯ ಸರ್ವತಃ ॥25॥
ನಮಗೆ ಅನೇಕ ಶತ್ರುಗಳಿದ್ದಾರೆ. ಈ ಮಾರ್ಜಾಲವು ನಮಗೆ ಸೋದರಮಾವ. ಇದು ವೃದ್ಧರೂ, ಬಾಲರೂ ಆದ ಎಲ್ಲಾ ಇಲಿಗಳನ್ನು ಸತತವಾಗಿ ರಕ್ಷಿಸಲಿ.
ಉಪಗಮ್ಯ ತು ತೇ ಸರ್ವೇ ಬಿಡಾಲಮಿದಮಬ್ರುವನ್ ॥26॥
ಭವತ್ಪ್ರಸಾದಾದಿಚ್ಛಾಮಃ ಚರ್ತುಂ ಚೈವ ಯಥಾಸುಖಮ್ |
ಭವಾನ್ ನೋ ಗತಿರವ್ಯಗ್ರಾ ಭವಾನ್ ನಃ ಪರಮಃ ಸುಹೃತ್ ॥27॥
ಅವೆಲ್ಲವೂ ಮಾರ್ಜಾಲವನ್ನು ಕುರಿತು ಹೀಗೆ ಹೇಳಿದವು `ನಿನ್ನ ಅನುಗ್ರಹದಿಂದ ನಾವು ಸುಖವಾಗಿ ಸಂಚರಿಸಲು ಬಯಸುತ್ತೇವೆ. ನೀನು ನಮಗೆ ಸ್ಥಿರವಾದ ಗತಿ ಮತ್ತು ಪರಮಸ್ನೇಹಿತನಾದವನು.
ತೇ ವಯಂ ಸಹಿತಾಃ ಸರ್ವೇ ಭವಂತಂ ಶರಣಂ ಗತಾಃ |
ಭವಾನ್ ಧರ್ಮಪರೋ ನಿತ್ಯಂ ಭವಾನ್ ಧರ್ಮೇ ವ್ಯವಸ್ಥಿತಃ ॥28॥
ತದ್ ರಕ್ಷ ನೋ ಮಹಾಪ್ರಾಜ್ಞ ತ್ರಿದಶಾನಿವ ವಜ್ರಭೃತ್ ॥29॥
ನಾವೆಲ್ಲರೂ ಸೇರಿ ನಿನಗೆ ಶರಣಾಗತರಾಗಿದ್ದೇವೆ. ನೀನು ಧರ್ಮದಲ್ಲಿ ನಿಶ್ಚಿತನಾಗಿದ್ದು, ಯಾವಾಗಲೂ ಧರ್ಮಪರನಾಗಿದ್ದೀಯೆ. ಆದ್ದರಿಂದ ಎಲೈ ಮಹಾಪ್ರಾಜ್ಞನೇ, ದೇವೇಂದ್ರನು ದೇವತೆಗಳನ್ನು ರಕ್ಷಿಸಿದಂತೆ ನಮ್ಮನ್ನು ರಕ್ಷಿಸು' (ಎಂದು ಹೇಳಿದವು).
ಏವಮುಕ್ತಸ್ತು ತೈಃ ಸರ್ವೈರ್ಮೂಷಿಕೈಃ ಸ ವಿಶಾಂಪತೇ |
ಪ್ರತ್ಯುವಾಚ ತತಃ ಸರ್ವಾನ್ ಮೂಷಿಕಾನ್ ಮೂಷಿಕಾಂತಕೃತ್ ॥30॥

ಎಲೈ ರಾಜನೇ, ಹೀಗೆ ಆ ಇಲಿಗಳಿಂದ ಹೇಳಲ್ಪಟ್ಟ, ಮೂಷಿಕಭಕ್ಷಕವಾದ ಮಾರ್ಜಾಲವು ಆ ಎಲ್ಲಾ ಇಲಿಗಳನ್ನು ಕುರಿತು ಮಾತನಾಡಿತು.
ದ್ವಯೋರ್ಯೋಗಂ ನ ಪಶ್ಯಾಮಿ ತಪಸೋ ರಕ್ಷಣಸ್ಯ ಚ |
ಅವಶ್ಯಂ ತು ಮಯಾ ಕಾರ್ಯಂ ವಚನಂ ಭವತಾಂ ಹಿತಮ್ ॥31॥
ನನ್ನ ತಪಸ್ಸು ಮತ್ತು ನಿಮ್ಮ ರಕ್ಷಣೆ ಇವೆರಡನ್ನೂ ಜೊತೆಯಲ್ಲಿ ಮಾಡುವ ಉಪಾಯವನ್ನು ಕಾಣುತ್ತಿಲ್ಲ. ಆದರೆ ನಿಮಗೆ ಹಿತವಾದ ಕಾರ್ಯವನ್ನು ನಿಮ್ಮ ವಚನದಂತೆ ನಾನು ಮಾಡಲೇಬೇಕು.
ಯುಷ್ಮಾಭಿರಪಿ ಕರ್ತವ್ಯಂ ವಚನಂ ಮಮ ನಿತ್ಯಶಃ |
ತಪಸಾಽಸ್ಮಿ ಪರಿಶ್ರಾಂತೋ ದೃಢಂ ನಿಯಮಮಾಸ್ಥಿತಃ ॥32॥
ನೀವೂ ಸಹ ಯಾವಾಗಲೂ ನನ್ನ ಮಾತನ್ನು ನಡೆಸಬೇಕು. ನಾನು ಬಹಳ ನಿಯಮಗಳನ್ನು ಅನುಸರಿಸಿ ತಪಸ್ಸನ್ನು ಮಾಡಿ ಬಳಲಿದ್ದೇನೆ.
ನ ಚಾಪಿ ಗಮನೇ ಶಕ್ತಿಂ ಕಾಂಚಿತ್ ಪಶ್ಯಾಮಿ ಚಿಂತಯನ್ |
ಸೋಽಸ್ಮಿ ನೇಯಃ ಸದಾ ತ್ರಾತಾ ನದೀಕೂಲಮಿತಃ ಸುಖಮ್ ॥33॥
ನನಗೆ ಎಷ್ಟು ಯೋಚನೆ ಮಾಡಿದರೂ ಇಲ್ಲಿಂದ ನದೀತೀರಕ್ಕೆ ಹೋಗುವಷ್ಟು ಶಕ್ತಿಯೂ ಕಾಣಿಸುತ್ತಿಲ್ಲ. ಆದ್ದರಿಂದ ನಿಮ್ಮನ್ನು ರಕ್ಷಿಸುವ ನಾನು ಇಲ್ಲಿಂದ ನದೀತೀರದವರೆಗೆ ನಿಮ್ಮಿಂದ ಯಾವಾಗಲೂ ಒಯ್ಯಲ್ಪಡಬೇಕು.
ತಥೇತಿ ತತ್ ಪ್ರತಿಜ್ಞಾಯ ಮೂಷಿಕಾ ಭರತರ್ಷಭ |
ವೃದ್ಧಬಾಲಮಥೋ ಸರ್ವೇ ಮಾರ್ಜಾರಾಯ ನ್ಯವೇದಯನ್ ॥34॥
ಎಲೈ ಭರತರ್ಷಭನೇ, ಆ ಇಲಿಗಳು ಹಾಗೆಯೇ ಆಗಲಿ ಎಂದು ಪ್ರತಿಜ್ಞೆ ಮಾಡಿ ವೃದ್ಧಬಾಲರಾದಿಯಾದ ಎಲ್ಲಾ ಇಲಿಗಳನ್ನೂ ಆ ಬೆಕ್ಕಿಗೆ ನಿವೇದಿಸಿದವು.
ತತಃ ಸ ಪಾಪೋ ದುಷ್ಟಾತ್ಮಾ ಮೂಷಿಕಾನಥ ಭಕ್ಷಯನ್ |
ಪೀವರಶ್ಚ ಸುವರ್ಣಶ್ಚ ದೃಢಬಂಧೋ ವ್ಯಜಾಯತ ॥35॥
ಅನಂತರ ಆ ದುಷ್ಟಾತ್ಮನಾದ, ಪಾಪಿಯಾದ ಬೆಕ್ಕು ಇಲಿಗಳನ್ನು ತಿನ್ನುತ್ತಾ ಪುಷ್ಟವೂ, ಒಳ್ಳೆಯ ವರ್ಣದಿಂದ ಕೂಡಿದುದೂ ಮತ್ತು ದೃಢವಾದ ದೇಹವುಳ್ಳದ್ದೂ ಆಯಿತು.
ಮೂಷಿಕಾಣಾಂ ಗಣಶ್ಚಾತ್ರ ಭೃಶಂ ಸಂಕ್ಷೀಯತೇಽಥ ಸಃ |
ಮಾರ್ಜಾರೋ ವರ್ಧತೇ ಚಾಪಿ ತೇಜೋಬಲಸಮನ್ವಿತಃ ॥36॥
ಇಲಿಗಳ ಸಮೂಹವು ಬಹಳವಾಗಿ ಕ್ಷೀಣಿಸುತ್ತದೆ ಮತ್ತು ಬೆಕ್ಕು ತೇಜೋಬಲದಿಂದ ಕೂಡಿ ಬೆಳೆಯುತ್ತದೆ.
ತತಸ್ತೇ ಮೂಷಿಕಾಃ ಸರ್ವೇ ಸಮೇತ್ಯಾನ್ಯೋನ್ಯಮಬ್ರುವನ್ |
ಮಾತುಲೋ ವರ್ಧತೇ ನಿತ್ಯಂ ವಯಂ ಕ್ಷೀಯಾಮಹೇ ಭೃಶಮ್ ॥37॥
ಆಗ ಆ ಇಲಿಗಳೆಲ್ಲವೂ ಸೇರಿ ಮಾವನು ನಿತ್ಯವೂ ಅಭಿವೃದ್ಧಿಯನ್ನು ಹೊಂದುತ್ತಿದ್ದಾನೆ. ನಾವು ಕ್ಷಯವನ್ನು ಹೊಂದುತ್ತಿದ್ದೇವೆ ಎಂದು ಪರಸ್ಪರವಾಗಿ ಮಾತನಾಡಿಕೊಂಡವು.
ತತಃ ಪ್ರಾಜ್ಞತಮಃ ಕಶ್ಚಿತ್ ಡಿಂಡಿಕೋ ನಾಮ ಮೂಷಿಕಃ |
ಅಬ್ರವೀದ್ ವಚನಂ ರಾಜನ್ ಮೂಷಿಕಾಣಾಂ ಮಹಾಗಣಮ್ ॥38॥
ಅಲ್ಲಿ ಡಿಂಡಿಕನೆಂಬ ಬಹಳ ಬುದ್ಧಿವಂತನಾದ ಒಂದು ಇಲಿಯು ಎಲ್ಲಾ ಇಲಿಗಳ ಸಮೂಹವನ್ನು ಕುರಿತು ಮಾತನಾಡಿತು.
ಗಚ್ಛತಾಂ ವೋ ನದೀತೀರಂ ಸಹಿತಾನಾಂ ವಿಶೇಷತಃ |
ಪೃಷ್ಠತೋಽಹಂ ಗಮಿಷ್ಯಾಮಿ ಮಾತುಲೇನ ಸಹೈವ ತು ॥39॥
ನೀವೆಲ್ಲರೂ ಒಟ್ಟಿಗೆ ನದೀತೀರಕ್ಕೆ ಹೋಗುವಾಗ ನಾನು ಹಿಂದೆ ಈ ಮಾವನ ಜೊತೆಯಲ್ಲಿ ಬರುವೆನು (ಎಂದು ಹೇಳಿತು).
ಸಾಧು ಸಾಧ್ವಿತಿ ತೇ ಸರ್ವೇ ಪೂಜಯಾಂಚಕ್ರಿರೇ ತದಾ |
ಚಕ್ರುಶ್ಚೈವ ಯಥಾನ್ಯಾಯಂ ಡಿಂಡಿಕಸ್ಯ ವಚೋಽರ್ಥವತ್ ॥40॥
ಎಲ್ಲ ಇಲಿಗಳೂ ಸರಿ ಸರಿ ಎಂದು ಹೇಳಿ ಡಿಂಡಿಕನನ್ನು ಪೂಜಿಸಿದವು ಮತ್ತು ಡಿಂಡಿಕನು ಹೇಳಿದ ಅರ್ಥವತ್ತಾದ ಮಾತನ್ನು ಹಾಗೆಯೇ ನಡೆಸಿದವು.
ಅವಿಜ್ಞಾನಾತ್ ತತಃ ಸೋಽಥ ಡಿಂಡಿಕಂ ಹ್ಯುಪಭುಕ್ತವಾನ್ |
ತತಸ್ತೇ ಸಹಿತಾಃ ಸರ್ವೇ ಮಂತ್ರಯಾಮಾಸುರಂಜಸಾ ॥41॥
ಇದನ್ನು ತಿಳಿಯದ ಆ ಮಾರ್ಜಾಲವು ಡಿಂಡಿಕನನ್ನು ತಿಂದಿತು. ಆಗ ಎಲ್ಲಾ ಇಲಿಗಳು ಸೇರಿ ಚೆನ್ನಾಗಿ ಮಂತ್ರಾಲೋಚನೆಯನ್ನು ಮಾಡಿದವು.
ತತಃ ವೃದ್ಧತಮಃ ಕಶ್ಚಿತ್ ಕೋಲಿಕೋ ನಾಮ ಮೂಷಿಕಃ |
ಅಬ್ರವೀದ್ ವಚನಂ ರಾಜನ್ ಜ್ಞಾತಿಮಧ್ಯೇ ಯಥಾತಥಮ್ ॥42॥
ಎಲೈ ರಾಜನೇ, ಆಗ ಬಂಧುಗಳಾದ ಇಲಿಗಳ ಮಧ್ಯದಲ್ಲಿ ಕೋಲಿಕನೆಂಬ ಬಹಳ ವಯಸ್ಸಾದ ಇಲಿಯು ಸ್ಪಷ್ಟವಾಗಿ ಸತ್ಯವನ್ನು ಮಾತನಾಡಿತು.
ನ ಮಾತುಲೋ ಧರ್ಮಕಾಮಃ ಛದ್ಮಮಾತ್ರಂ ಕೃತಾ ಶಿಖಾ |
ನ ಮೂಲಫಲಭಕ್ಷಸ್ಯ ವಿಷ್ಠಾ ಭವತಿ ಲೋಮಶಾ ॥43॥
ಈ ಮಾವನು ಧರ್ಮಕಾಮಿಯಲ್ಲ. ಕೇವಲ ಮೋಸವನ್ನು ಮಾಡಲು ಶಿಖೆಯನ್ನು ಧರಿಸಿದ್ದಾನೆ. ಮೂಲ-ಫಲಗಳನ್ನು ಭಕ್ಷಿಸುವ

ಪ್ರಾಣಿಯ ಮಲವು ಎಂದೂ ರೋಮಗಳಿಂದ ಕೂಡಿರುವುದಿಲ್ಲ.
ಅಸ್ಯ ಗಾತ್ರಾಣಿ ವರ್ಧಂತೇ ಗಣಶ್ಚ ಪರಿಹೀಯತೇ |
ಅದ್ಯ ಸಪ್ತಾಷ್ಟದಿವಸಾತ್ ಡಿಂಡಿಕೋಽಪಿ ನ ದೃಶ್ಯತೇ ||44||
ಇದರ ದೇಹವು ಬೆಳೆಯುತ್ತಿದೆ. ಇಲಿಗಳ ಸಮೂಹವು ಕ್ಷೀಣಿಸುತ್ತಿದೆ. ಈಗ ಏಳೆಂಟು ದಿವಸಗಳಿಂದ ಡಿಂಡಿಕನೂ ಕಾಣುತ್ತಿಲ್ಲ.
ಏತಚ್ಛ್ರುತ್ವಾ ವಚಃ ಸರ್ವೇ ಮೂಷಿಕಾ ವಿಪ್ರದುದ್ರುವುಃ |
ಬಿಡಾಲೋಽಪಿ ಸ ದುಷ್ಟಾತ್ಮಾ ಜಗಾಮೈವ ಯಥಾಗತಮ್ ||45||
ಈ ಮಾತನ್ನು ಕೇಳಿ ಎಲ್ಲಾ ಇಲಿಗಳೂ ಓಡಿಹೋದವು. ದುಷ್ಟವಾದ ಆ ಬೆಕ್ಕೂ ಸಹ ತಾನು ಬಂದಂತೆಯೇ ಹೊರಟು ಹೋಯಿತು.
ತಥಾ ತ್ವಮಪಿ ದುಷ್ಟಾತ್ಮನ್ ಬೈಡಾಲವ್ರತಮಾಸ್ಥಿತಃ |
ಚರಸಿ ಜ್ಞಾತಿಷು ಸದಾ ಬಿಡಾಲೋ ಮೂಷಿಕೇಷ್ವಿವ ||46||
ಎಲೈ ದುಷ್ಟಾತ್ಮನೇ, ನೀನೂ ಸಹ ಹಾಗೆಯೇ ಬೈಡಾಲವ್ರತವನ್ನು ಧರಿಸಿದ್ದೀಯೆ. ಬಂಧುಗಳ ವಿಷಯದಲ್ಲಿ ಆ ಬೆಕ್ಕು ಇಲಿಗಳ ವಿಷಯದಲ್ಲಿ ನಡೆದುಕೊಂಡಂತೆ ನಡೆದುಕೊಳ್ಳುತ್ತಿದ್ದೀಯೆ.
ಅನ್ಯಥಾ ಕಿಲ ತೇ ವಾಕ್ಯಮನ್ಯಥಾ ಕರ್ಮ ದೃಶ್ಯತೇ |
ಡಂಭನಾರ್ಥಾಯ ಲೋಕಸ್ಯ ವೇದಾಶ್ಚೋಪಶಮಶ್ಚ ತೇ ||47||
ನಿನ್ನ ಮಾತು ಒಂದು ರೀತಿಯಲ್ಲಿ, ನಿನ್ನ ಕರ್ಮವು ಬೇರೆ ರೀತಿಯದಾಗಿ ಕಾಣುತ್ತಿದೆ. ಜನರಿಗೆ ಮೋಸವನ್ನು ಮಾಡಲು ನೀನು ವೇದಾಧ್ಯಯನವನ್ನು ಮತ್ತು ಉಪಶಮವನ್ನು ಮಾಡುತ್ತಿದ್ದೀಯೆ.
ತ್ಯಕ್ತ್ವಾ ಛದ್ಮ ತ್ವಿದಂ ರಾಜನ್ ಕ್ಷತ್ರಧರ್ಮಂ ಸಮಾಸ್ಥಿತಃ |
ಕುರು ಕಾರ್ಯಾಣಿ ಸರ್ವಾಣಿ ಧರ್ಮಿಷ್ಠೋಽಸಿ ನರರ್ಷಭ ||48||
ಎಲೈ ರಾಜನೇ, ನರರ್ಷಭನೇ, ಈ ಮೋಸವನ್ನು ಬಿಟ್ಟು, ಕ್ಷತ್ರಿಯಧರ್ಮವನ್ನು ಆಶ್ರಯಿಸಿ ಎಲ್ಲಾ ಕಾರ್ಯಗಳನ್ನೂ ಮಾಡು. ನೀನು ಧರ್ಮಿಷ್ಠನಾಗಿದ್ದೀಯಷ್ಟೆ?
ಬಾಹುವೀರ್ಯೇಣ ಪೃಥಿವೀಂ ಲಬ್ಧ್ವಾ ಭರತಸತ್ತಮ |
ದೇಹಿ ದಾನಂ ದ್ವಿಜಾತಿಭ್ಯಃ ಪಿತೃಭ್ಯಶ್ಚ ಯಥೋಚಿತಮ್ ||49||
ಎಲೈ ಭರತಶ್ರೇಷ್ಠನೇ, ನಿನ್ನ ಬಾಹುವೀರ್ಯದಿಂದ ಭೂಮಿಯನ್ನು ಗೆದ್ದು ಅದನ್ನು ಬ್ರಾಹ್ಮಣರಿಗೂ ಮತ್ತು ಪಿತೃಗಳಿಗೂ ಯಥೋಚಿತವಾಗಿ ದಾನವನ್ನು ಮಾಡು.
ಕ್ಲಿಷ್ಟಾಯಾ ವರ್ಷಪೂಗಾಂಶ್ಚ ಮಾತುರ್ಮಾತೃಹಿತೇ ಸ್ಥಿತಃ |
ಪ್ರಮೃಜ್ಯಾಶ್ರು ರಣೇ ಜಿತ್ವಾ ಸಮ್ಮಾನಂ ಪರಮಾವಹ ||50||
ತಾಯಿಯ ಹಿತದಲ್ಲಿ ರತನಾದ ನೀನು, ಅನೇಕ ವರ್ಷಗಳ ಕಾಲ ಕ್ಲೇಶಗಳನ್ನು ಅನುಭವಿಸಿದ ಅವಳ ಕಣ್ಣೀರನ್ನು ಒರೆಸಿ, ಅವಳಿಗೆ ಸುಖವನ್ನು ಉಂಟುಮಾಡುವವನಾಗು.
ಪಂಚಗ್ರಾಮಾ ವೃತಾ ಯತ್ನಾನ್ನಾಸ್ಮಾಭಿರಪವರ್ಜಿತಾಃ |
ಯುಧ್ಯಾಮಹೇ ಕಥಂ ಸಂಖ್ಯೇ ಕೋಪಯೇಮ ಚ ಪಾಂಡವಾನ್ ||51||
ನೀನು ಐದು ಗ್ರಾಮಗಳನ್ನು ಕೇಳಿದಿ. ನಾವು ಪ್ರಯತ್ನ ಪೂರ್ವಕವಾಗಿ ಅದನ್ನು ಕೊಡಲಿಲ್ಲ. ನಾವು ಪಾಂಡವರನ್ನು ಕೋಪಗೊಳಿಸಿ ಅವರ ಜೊತೆಯಲ್ಲಿ ಯುದ್ಧವನ್ನು ಮಾಡುವೆವು ಎಂದು ನಮ್ಮ ಅಭಿಪ್ರಾಯ.
ತ್ವತ್ಕೃತೇ ದುಷ್ಟಭಾವಸ್ಯ ಸಂತ್ಯಾಗೋ ವಿದುರಸ್ಯ ಚ |
ಜಾತುಷೇ ಚ ಗೃಹೇ ದಾಹಂ ಸ್ಮರ ತಂ ಪುರುಷೋ ಭವ ||52||
ನಿನ್ನ ಸಲುವಾಗಿ ದುಷ್ಟ ಅಭಿಪ್ರಾಯವನ್ನು ಹೊಂದಿದ್ದ ವಿದುರನನ್ನು ತ್ಯಾಗ ಮಾಡಿದೆವು. ಅರಗಿನ ದಾಹವನ್ನು ಸ್ಮರಿಸು, ಪುರುಷನಾಗು.
ಯಚ್ಚ ಕೃಷ್ಣಮವೋಚಸ್ತ್ವಮಾಯಾಂತಂ ಕುರುಸಂಸದಿ |
ಅಯಮಸ್ಮಿ ಸ್ಥಿತೋ ರಾಜನ್ ಶಮಾಯ ಸಮರಾಯ ಚ ||53||
ತಸ್ಯಾಯಮಾಗತಃ ಕಾಲಃ ಸಮರಸ್ಯ ನರಾಧಿಪ ||54||
ಕೌರವ ಸಭೆಗೆ ಬರುವ ಕೃಷ್ಣನನ್ನು ಕುರಿತು ನೀನು, ನಾನು ಸಂಧಿಗೂ ಮತ್ತು ಯುದ್ಧಕ್ಕೂ ಸಿದ್ಧನಾಗಿದ್ದೇನೆಂದು ಹೇಳಿದೆಯಷ್ಟೆ? ಎಲೈ ರಾಜನೇ, ಆ ಯುದ್ಧದ ಕಾಲವು ಈಗ ಪ್ರಾಪ್ತವಾಗಿದೆ.
ಏತದರ್ಥಂ ಮಯಾ ಸಾರ್ಧಂ ಕೃತಮೇತದ್ ಯುಧಿಷ್ಠಿರ |
ಕಿಂ ನು ಯುದ್ಧಾತ್ ಪರಂ ಲಾಭಂ ಕ್ಷತ್ರಿಯೋ ಬಹು ಮನ್ಯತೇ ||55||
ಎಲೈ ಯುಧಿಷ್ಠಿರನೇ, ಇದಕ್ಕಾಗಿ ನಾನು ತಮ್ಮಂದಿರ ಜೊತೆಯಲ್ಲಿ ಈ ಕಾರ್ಯವನ್ನು ಮಾಡಿದೆ. ಯುದ್ಧಕ್ಕಿಂತ ಕ್ಷತ್ರಿಯನು ಗೌರವಿಸುವ ದೊಡ್ಡ ಲಾಭವು ಯಾವುದು?
ಕಿಂಚ ತ್ವಂ ಕ್ಷತ್ರಿಯಕುಲೇ ಜಾತಃ ಸಂಪ್ರಥಿತೋ ಭುವಿ |
ದ್ರೋಣಾದಸ್ತ್ರಾಣಿ ಸಂಪ್ರಾಪ್ಯ ಕೃಪಾಚ್ಚ ಭರತರ್ಷಭ ||56||
ತುಲ್ಯಯೋನೌ ಸಮಬಲೇ ವಾಸುದೇವಂ ಸಮಾಶ್ರಿತಃ ||57||
ಮತ್ತು ನೀನು ಕ್ಷತ್ರಿಯ ಕುಲದಲ್ಲಿ ಜನಿಸಿ ಭೂಮಿಯಲ್ಲಿ ಪ್ರಖ್ಯಾತನಾಗಿದ್ದೀಯೆ. ಎಲೈ ಪುರುಷರ್ಷಭನೇ, ದ್ರೋಣರಿಂದಲೂ ಮತ್ತು ಕೃಪರಿಂದಲೂ ಅಸ್ತ್ರಗಳನ್ನು ಸಂಪಾದಿಸಿದ್ದೀಯೆ. ಆದರೆ ಸಮಾನ ಯೋನಿಯನ್ನು ಹೊಂದಿದ, ಸಮಾನವಾದ ಬಲವನ್ನು ಹೊಂದಿದ ಕೃಷ್ಣನನ್ನು ಆಶ್ರಯಿಸಿದ್ದೀಯೆ.

ಬ್ರೂಯಾಸ್ತ್ವಂ ವಾಸುದೇವಂ ಚ ಪಾಂಡವಾನಾಂ ಸಮೀಪತಃ |
ಆತ್ಮಾರ್ಥೇ ಪಾಂಡವಾರ್ಥಂ ಚ ಯತ್ತೋ ಮಾಂ ಪ್ರತಿಯೋಧಯ ॥
ಎಲೈ ಉಲೂಕನೇ, ನೀನು ಪಾಂಡವರ ಸಮೀಪದಲ್ಲಿರುವ ಕೃಷ್ಣನನ್ನು ಕುರಿತು, ನಿನ್ನ ಸಲುವಾಗಿ ಮತ್ತು ಪಾಂಡವರ ಸಲುವಾಗಿ ಎಚ್ಚರಿಕೆಯಿಂದ ನನ್ನ ಜೊತೆಯಲ್ಲಿ ಯುದ್ಧಮಾಡು ಎಂದು ಹೇಳುವವನಾಗು.
ಸಭಾಮಧ್ಯೇ ಚ ಯದ್ರೂಪಂ ಮಾಯಯಾ ಕೃತವಾನಸಿ |
ತತ್ ತಥೈವ ಪುನಃ ಕೃತ್ವಾ ಸಾರ್ಜುನೋ ಮಾಮಭಿದ್ರವ ॥59॥
ಸಭೆಯ ಮಧ್ಯದಲ್ಲಿ ಕಪಟದಿಂದ ಯಾವ ರೂಪವನ್ನು ತೋರಿಸಿದೆಯೋ ಅದೇ ರೂಪವನ್ನು ಧರಿಸಿ, ಅರ್ಜುನನ ಜೊತೆಯಲ್ಲಿ ನನ್ನ ಮೇಲೆ ಯುದ್ಧಕ್ಕೆ ಬರುವವನಾಗು.
ಇಂದ್ರಜಾಲಂ ನ ಮಾಯಾ ವೈ ಕುಹಕಾ ವಾ ವಿಭೀಷಣಾ |
ಆತ್ತಶಸ್ತ್ರಸ್ಯ ಸಂಗ್ರಾಮೇ ವಹಂತಿ ಪ್ರತಿಗರ್ಜನಾಃ ॥60॥
ಇಂದ್ರಜಾಲವಾಗಲೀ, ಮಾಯೆಯಾಗಲೀ, ಕಪಟಗಳಾಗಲೀ, ಬೆದರಿಕೆಯ ಮಾತುಗಳಾಗಲೀ, ಶಸ್ತ್ರವನ್ನು ಧರಿಸಿದ ಶತ್ರುವಿನ ಗರ್ಜನೆಗೆ ಪ್ರತಿಗರ್ಜನೆಯನ್ನು ಮಾಡಲಾರವು.
ವಯಮಪ್ಯುತ್ಸಹೇಮ ದ್ಯಾಂ ಖಂ ಚ ಗಚ್ಛೇಮ ಮಾಯಯಾ |
ರಸಾತಳಂ ವಿಶಾಮೋಽಪಿ ಐಂದ್ರಂ ವಾ ಪುರಮೇವ ತು ॥61॥
ದರ್ಶಯೇಮ ಚ ರೂಪಾಣಿ ಸ್ವಶರೀರೇ ಬಹೂನ್ಯಪಿ |
ನ ತು ಪರ್ಯಾಯತಃ ಸಿದ್ಧಿರ್ಬುದ್ಧಿಮಾಪ್ನೋತಿ ಮಾನುಷೀಮ್ ॥62॥
ನಾವೂ ಉತ್ಸಾಹಶಾಲಿಗಳೇ ಆಗಿದ್ದೇವೆ. ಮಾಯೆಯಿಂದ ಆಕಾಶಕ್ಕೂ ಮತ್ತು ಸ್ವರ್ಗಕ್ಕೂ ಹೋಗುತ್ತೇವೆ. ರಸಾತಳಲೋಕಕ್ಕಾಗಲೀ, ಇಂದ್ರನ ಪಟ್ಟಣಕ್ಕಾಗಲೀ ನಾವೂ ಹೋದೇವು. ನಾವೂ ನಿನ್ನಂತೆ ನಮ್ಮ ಶರೀರದಲ್ಲಿ ಅನೇಕ ರೂಪಗಳನ್ನು ತೋರಿಸಲು ಸಮರ್ಥರಾಗಿದ್ದೇವೆ. ಬೇರೆ ಬೇರೆ ರೂಪಗಳನ್ನು ತೋರಿಸುವ ಮಾತ್ರದಿಂದ ಶತ್ರುವು ಮನುಷ್ಯಸಹಜವಾದ ಭಯವನ್ನು ಹೊಂದುವುದಿಲ್ಲ.
ಮನಸೈವ ಹಿ ಭೂತಾನಿ ಧಾತೈವ ಕುರುತೇ ವಶೇ ॥63॥
ಬ್ರಹ್ಮದೇವರು ಎಲ್ಲಾ ಜೀವರನ್ನು ತಮ್ಮ ಮನಸ್ಸಿನಿಂದಲೇ ವಶಪಡಿಸಿಕೊಳ್ಳುತ್ತಾರೆ.
ಯದರ್ಥಂ ಕ್ಷತ್ರಿಯಾ ಸೂತೇ ಸರ್ವಂ ತದಿದಮಾಗತಮ್ ॥64॥
ಬಲಂ ವೀರ್ಯಂ ಚ ಶೌರ್ಯಂ ಚ ಪರಂ ಚಾಪ್ಯಸ್ತ್ರಲಾಘವಮ್ |
ಪೌರುಷಂ ದರ್ಶಯನ್ ಯುದ್ಧೇ ಕೋಪಸ್ಯ ಕುರು ನಿಷ್ಕೃತಿಮ್ ॥65॥
ಒಬ್ಬ ಕ್ಷತ್ರಿಯ ವನಿತೆಯು ಯಾವುದಕ್ಕಾಗಿ ಪುತ್ರನನ್ನು ಪಡೆಯುತ್ತಾಳೆಯೋ ಅದರ ಪ್ರಯೋಜನದ ಕಾಲವು ಈಗ ಒದಗಿದೆ. ನೀನು ಯುದ್ಧದಲ್ಲಿ ನಿನ್ನ ಬಲವನ್ನೂ, ವೀರ್ಯವನ್ನೂ, ಪರಾಕ್ರಮವನ್ನೂ, ಶ್ರೇಷ್ಠವಾದ ಅಸ್ತ್ರಲಾಘವವನ್ನೂ, ಪೌರುಷವನ್ನೂ ತೋರಿಸುವವನಾಗಿ ನಿನಗೆ ಉಂಟಾದ ಕೋಪಕ್ಕೆ ಪ್ರತೀಕಾರವನ್ನು ಮಾಡು.
ಯದ್ ಬ್ರವೀಷಿ ಚ ವಾರ್ಷ್ಣೇಯ ಧಾರ್ತರಾಷ್ಟ್ರಾನಹಂ ರಣೇ |
ಘಾತಯಿತ್ವಾ ಪ್ರದಾಸ್ಯಾಮಿ ಪಾರ್ಥೇಭ್ಯೋ ರಾಜ್ಯಮುತ್ತಮಮ್ ॥66॥
ಆಚಚಕ್ಷೇ ಚ ಮೇ ಸರ್ವಂ ಸಂಜಯಸ್ತವ ಭಾಷಿತಮ್ |
ಮದ್ದ್ವಿತೀಯೇನ ಪಾರ್ಥೇನ ಕೌರವ್ಯೋ ದ್ವೇಷ್ಯತೇ ಧ್ರುವಮ್ ॥67॥
ಸ ಸತ್ಯಸಂಗರೋ ಭೂತ್ವಾ ಪಾಂಡವಾರ್ಥೇ ಪರಾಕ್ರಮೀ |
ಯುಧ್ಯಸ್ವಾದ್ಯ ರಣೇ ಯತ್ತಃ ಪಶ್ಯಾಮಃ ಪುರುಷೋ ಭವ ॥68॥
ಎಲೈ ಕೃಷ್ಣನೇ, ದುರ್ಯೋಧನಾದಿಗಳನ್ನು ನಾನು ಯುದ್ಧದಲ್ಲಿ ಕೊಂದು ಪಾಂಡವರಿಗೆ ಶ್ರೇಷ್ಠವಾದ ರಾಜ್ಯವನ್ನು ಕೊಡುವೆನು ಎಂದು ಏನು ಹೇಳುತ್ತೀಯೋ ನನ್ನ ಸಹಾಯವುಳ್ಳ ಅರ್ಜುನನು ದುರ್ಯೋಧನನು ದ್ವೇಷಿಸಲ್ಪಡುತ್ತಾನೆ ಎಂಬ ಈ ನಿನ್ನ ಮಾತುಗಳನ್ನೆಲ್ಲಾ ಸಂಜಯನು ನನಗೆ ಹೇಳಿದ್ದಾನೆ ಅಂತಹ ನೀನು ಸತ್ಯವಚನನಾಗಿ ಪಾಂಡವರ ಸಲುವಾಗಿ ನಿನ್ನ ಪರಾಕ್ರಮವನ್ನು ತೋರಿಸಿ ಈ ದಿನ ಜಾಗರೂಕನಾಗಿ ಯುದ್ಧವನ್ನು ಮಾಡು, ನೋಡೋಣ. ನೀನು ಪುರುಷನಾಗು.
ಯಸ್ತು ಶತ್ರುಮಭಿಜ್ಞಾಯ ಶುದ್ಧಂ ಪೌರುಷಮಾಶ್ರಿತಃ |
ಕರೋತಿ ದ್ವಿಷತಾಂ ಶೋಕಂ ಸ ಜೀವತಿ ಸುಜೀವಿತಮ್ ॥69॥
ಯಾವನು ಶತ್ರುವನ್ನು ಗಮನಿಸಿ, ಯುದ್ಧಪೌರುಷವನ್ನು ಹೊಂದಿದವನಾಗಿ ಶತ್ರುಗಳಿಗೆ ಶೋಕವನ್ನು ಉಂಟುಮಾಡುತ್ತಾನೆಯೋ ಅವನು ಒಳ್ಳೆಯ ರೀತಿಯಲ್ಲಿ ಜೀವಿಸುತ್ತಾನೆ.
ಅಕಸ್ಮಾಚ್ಚೈವ ತೇ ಕೃಷ್ಣ ಖ್ಯಾತಂ ಲೋಕೇ ಮಹದ್ಯಶಃ |
ಅದ್ಯೇದಾನೀಂ ವಿಜಾನೀಮಃ ಸಂತಿ ಷಂಡಾಃ ಸಶೃಂಗಕಾಃ ॥70॥
ಎಲೈ ಕೃಷ್ಣನೇ, ನಿಷ್ಕಾರಣವಾಗಿ ನಿನಗೆ ಲೋಕದಲ್ಲಿ ಕೀರ್ತಿ ಉಂಟಾಗಿದೆ. ಈ ದಿನ ನಾವು ನಪುಂಸಕರಿಗೂ ಕೊಂಬುಗಳಿರುತ್ತವೆ ಎಂದು ಈಗ ತಿಳಿಯುತ್ತೇವೆ.
ಮದ್ವಿಧೋ ನಾಪಿ ನೃಪತಿಃ ತ್ವಯಿ ಯುಕ್ತಃ ಕಥಂಚನ |
ಸನ್ನಾಹಂ ಸಂಯುಗೇ ಕರ್ತುಂ ಕಂಸಭೃತ್ಯೇ ವಿಶೇಷತಃ ॥71॥
ನನ್ನಂತಹ ಯಾವ ರಾಜನೂ ಕಂಸಭೃತ್ಯನಾದ ನಿನ್ನ ಜೊತೆಯಲ್ಲಿ ವಿಶೇಷವಾಗಿ ಯುದ್ಧಸನ್ನಾಹವನ್ನು ಮಾಡಲು ಇದುವರೆಗೆ ಪ್ರಯತ್ನಿಸಲಿಲ್ಲ.

ತ್ವಂ ಚ ತೂಬರಕಂ ಬಾಲಂ ಬಹ್ವಾಶಿನಮವಿದ್ಯಕಮ್ |
ಉಲೂಕ ಮದ್ವಚೋ ಬ್ರೂಹಿ ಅಸಕೃದ್ ಭೀಮಸೇನಕಮ್ ॥72॥
ಎಲೈ ಉಲೂಕನೇ, ಹೋತದಂತೆ ಗಡ್ಡವನ್ನು ಹೊಂದಿದ, ಬುದ್ಧಿ ಇಲ್ಲದ, ಬಹುಭೋಜಿಯಾದ, ಅವಿದ್ಯಾಮಯನಾದ ಆ ಕೆಟ್ಟ ಭೀಮಸೇನನಿಗೆ ನಾನು ಹೇಳಿದೆನೆಂದು ಅನೇಕ ಬಾರಿ ಹೇಳುವವನಾಗು.
ವಿರಾಟನಗರೇ ಪಾರ್ಥ ತ್ವಂ ಸೂದೋ ಹ್ಯಭವಃ ಪುರಾ |
ವಲಲೋ ನಾಮ ವಿಖ್ಯಾತಃ ತನ್ಮಮೈವ ಹಿ ಪೌರುಷಮ್ ॥73॥
ಎಲೈ ಕುಂತೀಪುತ್ರನೇ, ನೀನು ವಿರಾಟನಗರದಲ್ಲಿ ವಲಲನೆಂಬ ಹೆಸರಿನಿಂದ ಖ್ಯಾತನಾಗಿ ಹಿಂದೆ ಪಾಚಕನಾಗಿದ್ದೆ. ಅದು ನನ್ನದೇ ಪರಾಕ್ರಮ.
ಪ್ರತಿಜ್ಞಾತಂ ಸಭಾಮಧ್ಯೇ ನ ತನ್ಮಿಥ್ಯಾ ತ್ವಯಾ ಪುರಾ ॥74॥
ಅಶಕ್ತೇನೈವ ಯಚ್ಚೋಕ್ತಂ ಸಭಾಮಧ್ಯೇ ವೃಕೋದರ ॥75॥
ದುಃಶಾಸನಸ್ಯ ರುಧಿರಂ ಪೀಯತಾಂ ಯದಿ ಶಕ್ಯತೇ ॥76॥
ಯದರ್ಥಂ ಕ್ಷತ್ರಿಯಾ ಸೂತೇ ಸರ್ವಂ ತದಿದಮಾಗತಮ್ ॥77॥
ನೀನು ಸಭೆಯ ಮಧ್ಯದಲ್ಲಿ ಹಿಂದೆ ಏನು ಪ್ರತಿಜ್ಞೆ ಮಾಡಿದೆಯೋ ಅದು ಸುಳ್ಳಲ್ಲವೇ? ವೃಕೋದರನೇ, ಅಶಕ್ತನಾದ ನೀನು ಸಭೆಯ ಮಧ್ಯದಲ್ಲಿ ದುಶ್ಶಾಸನನ ರಕ್ತವನ್ನು ಪಾನಮಾಡುವೆನೆಂದು ಹೇಳಿದೆಯಷ್ಟೆ? ನಿನಗೆ ಸಾಮರ್ಥ್ಯವಿದ್ದರೆ ಪಾನವನ್ನು ಮಾಡು. ಕ್ಷತ್ರಿಯ ವನಿತೆಯು ಯಾವ ಪ್ರಯೋಜನಕ್ಕಾಗಿ ಪುತ್ರನನ್ನು ಪಡೆಯುತ್ತಾಳೋ ಆ ಪ್ರಯೋಜನದ ಕಾಲವು ಈಗ ಬಂದೊದಗಿದೆ.
ಬಲಂ ವೀರ್ಯಂ ಚ ಶೌರ್ಯಂ ಚ ಪರಂ ಚಾಪ್ಯಸ್ತ್ರಲಾಘವಮ್ |
ಪೌರುಷಂ ದರ್ಶಯನ್ ಯುದ್ಧೇ ಕೋಪಸ್ಯ ಕುರು ನಿಷ್ಕೃತಿಮ್ ॥78॥
ನಿನ್ನ ಬಲವನ್ನೂ, ವೀರ್ಯವನ್ನೂ, ಪರಾಕ್ರಮವನ್ನೂ, ಶ್ರೇಷ್ಠವಾದ ಅಸ್ತ್ರಲಾಘವವನ್ನೂ ಮತ್ತು ಪೌರುಷವನ್ನೂ ಯುದ್ಧದಲ್ಲಿ ತೋರಿಸುವವನಾಗಿ ಉಂಟಾದ ಕೋಪಕ್ಕೆ ಪ್ರತೀಕಾರವನ್ನು ಮಾಡು.
ಯದ್ ಬ್ರವೀಷಿ ಚ ಕೌಂತೇಯ ಧಾರ್ತರಾಷ್ಟ್ರಾನಹಂ ರಣೇ |
ನಿಹನಿಷ್ಯಾಮಿ ತರಸಾ ತಸ್ಯ ಕಾಲೋಽಯಮಾಗತಃ ॥79॥
ಎಲೈ ಕೌಂತೇಯನೇ, ಧೃತರಾಷ್ಟ್ರಪುತ್ರರನ್ನು ಯುದ್ಧದಲ್ಲಿ ನಾನು ನನ್ನ ಸಾಮರ್ಥ್ಯದಿಂದ ಕೊಲ್ಲುವೆನು ಎಂದು ನೀನು ಏನು ಹೇಳುತ್ತೀಯೋ ಅದರ ಪರೀಕ್ಷೆಯ ಕಾಲವು ಈಗ ಬಂದೊದಗಿದೆ.
ತ್ವಂ ಹಿ ಭೋಜ್ಯೇ ಪುರಸ್ಕಾರ್ಯೋ ಭಕ್ಷ್ಯೇ ಪೇಯೇ ಚ ಭಾರತ |
ಕ್ವ ಯುದ್ಧಂ ಕ್ವ ಚ ಭೋಕ್ತವ್ಯಂ ಯುಧ್ಯಸ್ವ ಪುರುಷೋ ಭವ ॥80॥
ಎಲೈ ಭಾರತನೇ, ನೀನು ಭಕ್ಷ್ಯ-ಭೋಜ್ಯ, ಪಾನಗಳಲ್ಲಿ ಮುಂದೆ ಇರುವವನು. ಯುದ್ಧವೆಲ್ಲಿ, ನಿನ್ನ ಭಕ್ಷ್ಯಾದಿಗಳೆಲ್ಲಿ? ಯುದ್ಧವನ್ನು ಮಾಡಿ ಪುರುಷನಾಗು.
ಶಯಿಷ್ಯಸೇ ಹತೋ ಭೂಮೌ ಗದಾಮಾಲಿಂಗ್ಯ ಭಾರತ |
ತತ್ ತಥಾ ಚ ಸಭಾಮಧ್ಯೇ ವಲ್ಗಿತಂ ತೇ ವೃಕೋದರ ॥81॥
ಎಲೈ ಭಾರತನೇ, ನೀನು ನಿನ್ನ ಗದೆಯನ್ನು ಆಲಿಂಗಿಸಿ ಭೂಮಿಯ ಮೇಲೆ ಹತನಾಗಿ ಮಲಗುವಿ. ಎಲೈ ವೃಕೋದರನೇ, ಸಭಾಮಧ್ಯದಲ್ಲಿ ಅಂತಹ ಜಂಭದ ಮಾತುಗಳನ್ನು ಆಡಿದೆ.
ಉಲೂಕ ನಕುಲಂ ಬ್ರೂಹಿ ವಚನಾನ್ಮಮ ಭಾರತಮ್ |
ಯುಧ್ಯಸ್ವಾದ್ಯ ಸ್ಥಿರೋ ಭೂತ್ವಾ ಪಶ್ಯಾಮಸ್ತವ ಪೌರುಷಮ್ ॥82॥
ಎಲೈ ಉಲೂಕನೇ, ನನ್ನ ಮಾತಿನಂತೆ ಭಾರತನಾದ ನಕುಲನನ್ನು ಕುರಿತು, ಈ ದಿನ ಸ್ಥಿರವಾಗಿ ಯುದ್ಧವನ್ನು ಮಾಡು, ನಿನ್ನ ಪೌರುಷವನ್ನು ನೋಡೋಣ ಎಂದು ಹೇಳು.
ಯುಧಿಷ್ಠಿರಾನುರಾಗಂ ಚ ದ್ವೇಷಂ ಚ ಮಯಿ ಭಾರತ |
ಕೃಷ್ಣಾಯಾಶ್ಚ ಪರಿಕ್ಲೇಶಂ ಸ್ಮರೇದಾನೀಂ ಯಥಾತಥಮ್ ॥83॥
ಎಲೈ ಭಾರತನೇ, ಯುಧಿಷ್ಠಿರನಲ್ಲಿ ನಿನಗಿರುವ ಪ್ರೀತಿಯನ್ನು ಮತ್ತು ನನ್ನ ಮೇಲಿರುವ ದ್ವೇಷವನ್ನು ಮತ್ತು ದ್ರೌಪದಿಯ ಪರಿಕ್ಲೇಶವನ್ನು ಈ ದಿನ ಸರಿಯಾಗಿ ಸ್ಮರಣೆ ಮಾಡುವವನಾಗು.
ವಿರಾಟದ್ರುಪದೌ ಚೋಭೌ ಬ್ರೂಯಾಸ್ತ್ವಂ ವಚನಾನ್ಮಮ ॥84॥
ವಿರಾಟ ಮತ್ತು ದ್ರುಪದ ಇಬ್ಬರನ್ನೂ ಕುರಿತು ನನ್ನ ಮಾತುಗಳನ್ನು ಹೇಳುವವನಾಗು.
ನ ದೃಷ್ಟಪೂರ್ವಾ ಭರ್ತಾರೋ ಭೃತ್ಯೈರಪಿ ಮಹಾಗುಣೈಃ |
ತಥಾಽರ್ಥಪತಿಭಿರ್ಭೃತ್ಯಾ ಯತಃ ಸೃಷ್ಟಾಃ ಪ್ರಜಾಸ್ತತಃ ॥85॥
ನಿಮ್ಮ ಮಹಾಗುಣಗಳನ್ನು ನಿಮ್ಮ ಭೃತ್ಯರೂ ಸಹ ಹಿಂದೆ ಎಂದೂ ನೋಡಲಿಲ್ಲ. ಹಾಗೆಯೇ ಸೃಷ್ಟಿಯಾದ ಕಾಲದಿಂದಲೂ ಅರ್ಥಪತಿಗಳಾದ ರಾಜರು ಅಂತಹ ಭೃತ್ಯರನ್ನು ನೋಡಲಿಲ್ಲ (ವಿರಾಟ-ದ್ರುಪದರಾದ ನೀವು ಧರ್ಮರಾಜನಿಗೆ ಭೃತ್ಯರಾಗಿದ್ದೀರಿ ಎಂದು ಉಪಹಾಸ).
ಅಶ್ಲಾಘ್ಯೋಽಯಂ ನರಪತಿಃ ಯುವಯೋರಿತಿ ಚಾಗತಮ್ ॥86॥
ನಿಮ್ಮಿಬ್ಬರಿಂದ ಈ ನರಪತಿಯಾದ ಯುಧಿಷ್ಠಿರನು ಶ್ಲಾಘನೀಯನಲ್ಲವೆಂದು ಸಿದ್ಧವಾಯಿತು.
ತೇ ಯೂಯಂ ಸಹಿತಾ ಭೂತ್ವಾ ತದ್ ವಧಾರ್ಥಂ ಮಮಾಪಿ ಚ |
ಆತ್ಮಾರ್ಥಂ ಪಾಂಡವಾರ್ಥಂ ಚ ಪ್ರಯುಧ್ಯಧ್ವಂ ಮಯಾ ಸಹ ॥87॥

ಆದ್ದರಿಂದ ನೀವಿಬ್ಬರೂ ಸಹಿತರಾಗಿ ನಿಮ್ಮ ಸಲುವಾಗಿ ಮತ್ತು ಪಾಂಡವರ ಸಲುವಾಗಿ ನನ್ನ ವಧೆಯನ್ನು ಮಾಡಲು ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿ.
ಧೃಷ್ಟದ್ಯುಮ್ನಂ ಚ ಪಾಂಚಾಲ್ಯಂ ಬ್ರೂಯಾಸ್ತ್ವಂ ವಚನಾನ್ಮಮ |
ಏಷ ತೇ ಸಮಯೋ ಲಬ್ಧೋ ಲಬ್ಧವ್ಯಶ್ಚ ತ್ವಯಾಽಪಿ ಸಃ ॥88॥
ಪಾಂಚಾಲದೇಶದ ಧೃಷ್ಟದ್ಯುಮ್ನನನ್ನು ಕುರಿತು ನನ್ನ ಮಾತಿನಂತೆ, ನಿನಗೆ ಒದಗಬೇಕಾಗಿದ್ದ ಸಮಯವು ಈಗ ಒದಗಿದೆ ಎಂದು ಹೇಳು.
ದ್ರೋಣಮಾಸಾದ್ಯ ಸಮರೇ ಜ್ಞಾಸ್ಯಸೇ ಹಿತಮುತ್ತಮಮ್ |
ಯುಧ್ಯಸ್ವ ಸಸುಹೃದ್ವರ್ಗಃ ಕುರು ಕರ್ಮ ಸುದುಷ್ಕರಮ್ ॥89॥
ಯುದ್ಧದಲ್ಲಿ ದ್ರೋಣರನ್ನು ಸಮೀಪಿಸಿ ನಿನಗೆ ಶ್ರೇಷ್ಠವಾದ ಹಿತವು ಯಾವುದು ಎಂದು ತಿಳಿಯುವಿ. ನಿನ್ನ ಹಿತೈಷಿಗಳೊಡನೆ ದುಷ್ಕರವಾದ ಯುದ್ಧಕರ್ಮವನ್ನು ಮಾಡುವವನಾಗು.
ಶಿಖಂಡಿನಮಥೋ ಬ್ರೂಹಿ ಉಲೂಕ ವಚನಾನ್ಮಮ |
ಸ್ತ್ರೀತಿ ಮತ್ವಾ ಮಹಾಬಾಹುರ್ನ ಹನಿಷ್ಯತಿ ಕೌರವಃ ॥90॥
ಎಲೈ ಉಲೂಕನೇ, ನನ್ನ ಮಾತಿನಂತೆ ಆ ಶಿಖಂಡಿಯನ್ನು ಕುರಿತು ನೀನು ಸ್ತ್ರೀ ಎಂದು ತಿಳಿದು ಮಹಾಬಾಹುವಾದ ದುರ್ಯೋಧನನು ನಿನ್ನನ್ನು ಕೊಲ್ಲುವುದಿಲ್ಲ ಎಂದು ಹೇಳು.
ಗಾಂಗೇಯಂ ಯುದ್ಧ್ಯತಾಂ ಶ್ರೇಷ್ಠಂ ಯುಧ್ಯಸ್ವೇಹ ಸುನಿರ್ಭಯಃ |
ಕುರು ಕರ್ಮ ರಣೇ ಯತ್ತಃ ಪಶ್ಯಾಮಃ ಪೌರುಷಂ ತವ ॥91॥
ಯುದ್ಧವನ್ನು ಮಾಡುವವರಲ್ಲಿ ಶ್ರೇಷ್ಠರಾದ ಭೀಷ್ಮರ ಜೊತೆಯಲ್ಲಿ ಈಗ ನಿರ್ಭಯವಾಗಿ ಯುದ್ಧವನ್ನು ಮಾಡುವವನಾಗು. ಯುದ್ಧದಲ್ಲಿ ಅವಧಾನದಿಂದ ನೀನು ನಿನ್ನ ಕರ್ಮವನ್ನು ಮಾಡುವವನಾಗು. ನಿನ್ನ ಪೌರುಷವನ್ನು ನೋಡುತ್ತೇವೆ (ಎಂದು ಹೇಳು).
ವೈಶಂಪಾಯನಃ
ಏವಮುಕತ್ವ ತತೋ ರಾಜಾ ಪ್ರಹಸ್ಯೋಲೂಕಮಬ್ರವೀತ್ ॥92॥
ಧನಂಜಯಂ ಪುನರ್ಬ್ರೂಹಿ ವಾಸುದೇವಸ್ಯ ಶೃಣ್ವತಃ ॥93॥
ಅಸ್ಮಾನ್ ವಾಽಪಿ ಪರಾಜಿತ್ಯ ಪ್ರಶಾಧಿ ಪೃಥಿವೀಮಿಮಾಮ್ |
ಅಥವಾ ನಿರ್ಜಿತೋಽಸ್ಮಾಭೀ ರಣೇ ವೀರ ಶಯಿಷ್ಯಸಿ ॥94॥
ವೈಶಂಪಾಯನ ಹೀಗೆ ಹೇಳಿ ರಾಜನಾದ ದುರ್ಯೋಧನನು ನಕ್ಕು ಉಲೂಕನನ್ನು ಕುರಿತು ಹೇಳಿದನು ಕೃಷ್ಣನು ಕೇಳುವಂತೆ ಅರ್ಜುನನಿಗೆ ಪುನಃ ಹೇಳು. ನಮ್ಮನ್ನಾದರೂ ಸೋಲಿಸಿ ಈ ಭೂಮಿಯನ್ನು ಆಳು ಅಥವಾ ನಮಗೆ ಸೋತು ಯುದ್ಧಭೂಮಿಯಲ್ಲಿ ಮೃತನಾಗಿ ಮಲಗುವವನಾಗು (ಎಂದು ಹೇಳು).
ಅಮರ್ಷಂ ರಾಜ್ಯಹರಣಂ ವನವಾಸಂ ಚ ಪಾಂಡವ |
ಕೃಷ್ಣಾಯಾಶ್ಚ ಪರಿಕ್ಲೇಶಂ ಸಂಸ್ಮರನ್ ಪುರುಷೋ ಭವ ॥95॥
ಎಲೈ ಪಾಂಡವನೇ, ನಿನ್ನ ಕೋಪ, ನಮ್ಮಿಂದ ನಿನ್ನ ರಾಜ್ಯಹರಣ, ವನವಾಸ, ದ್ರೌಪದಿಯ ಕ್ಲೇಶ ಎಲ್ಲವನ್ನೂ ಸ್ಮರಿಸಿ ಈ ದಿನ ಗಂಡಸಾಗು.
ಪರಿಕ್ಲಿಷ್ಟಸ್ಯ ದೀನಸ್ಯ ದೀರ್ಘಕಾಲೋಷಿತಸ್ಯ ಚ |
ಹೃದಯಂ ನ ಸ್ಫುಟೇತ್ ಕಸ್ಯ ಐಶ್ವರ್ಯಾದ್ ಭ್ರಂಶಿತಸ್ಯ ಚ ॥96॥
ಪರಿಕ್ಲಿಷ್ಟನೂ, ದೀನನೂ, ಬಹುಕಾಲದವರೆಗೆ ವನವಾಸವನ್ನು ಅನುಭವಿಸಿದವನೂ, ಐಶ್ವರ್ಯಭ್ರಷ್ಟನೂ ಆದ ಯಾವನ ಹೃದಯವು ಬಿರಿದುಹೋಗುವುದಿಲ್ಲ!
ಕುಲೇ ಜಾತಸ್ಯ ಶೂರಸ್ಯ ಪರವಿತ್ತೇಷು ಗೃಧ್ಯತಃ |
ಅಚ್ಛಿನ್ನಂ ರಾಜ್ಯಮಾಕ್ರಮ್ಯ ಕೋಪಂ ಕಸ್ಯ ನ ದೀಪಯೇತ್ ॥97॥
ಒಳ್ಳೆಯ ಕುಲದಲ್ಲಿ ಜನ್ಮವನ್ನು ಹೊಂದಿ, ಅಖಂಡವಾದ ರಾಜ್ಯವನ್ನು ಆಕ್ರಮಿಸಿ, ಇನ್ನೊಬ್ಬರ ದ್ರವ್ಯವನ್ನು ಆಶಿಸುವ ಯಾವನಿಗೆ ಕೋಪವು ಉಂಟಾಗುವುದಿಲ್ಲ?
ಯತ್ತದುಕ್ತಂ ಮಹದ್ವಾಕ್ಯಂ ಕರ್ಮಣಾ ತದ್ ವಿಧೀಯತಾಮ್ |
ಅಕರ್ಮಣಾ ಕತ್ಥಿತೇನ ಸಂತಃ ಕುಪುರುಷಂ ವಿದುಃ ॥98॥
ನೀನು ಯಾವ ದೊಡ್ಡ ಮಾತನ್ನಾಡಿದೆಯೋ ಅದನ್ನು ಕಾರ್ಯರೂಪಕ್ಕೆ ತಂದು ತೋರಿಸು. ಕಾರ್ಯವನ್ನು ಮಾಡದೆ ತನ್ನನ್ನು ತಾನು ಹೊಗಳಿಕೊಳ್ಳುವವನನ್ನು ಸಜ್ಜನರು ಕೆಟ್ಟ ಮನುಷ್ಯನೆಂದು ಹೇಳುತ್ತಾರೆ.
ಅಮಿತ್ರಾಣಾಂ ವಶೇ ಸ್ಥಾನಂ ರಾಜ್ಯಂ ಚ ಪುನರುದ್ಧರ |
ದ್ವಾವರ್ಥೌ ಯುದ್ಧಕಾಮಸ್ಯ ತಸ್ಮಾತ್ ಕುರುತ ಪೌರುಷಮ್ ॥99॥
ಶತ್ರುಗಳನ್ನು ತನ್ನ ವಶದಲ್ಲಿಟ್ಟುಕೊಳ್ಳುವುದು ಮತ್ತು ಕಳೆದುಹೋದ ರಾಜ್ಯವನ್ನು ಸಂಪಾದಿಸುವುದು, ಇವೆರಡು ಯುದ್ಧವನ್ನು ಮಾಡಲು ಬಯಸುವವನ ಉದ್ದೇಶಗಳು. ಆದ್ದರಿಂದ ಪೌರುಷವನ್ನು ಮಾಡುವವನಾಗು.
ಅಸ್ಮಾನ್ ವಾ ತ್ವಮಥೋ ಜಿತ್ವಾ ಪ್ರಶಾಧಿ ಪೃಥಿವೀಮಿಮಾಮ್ |
ಅಥವಾ ನಿಹತೋಽಸ್ಮಾಭಿರ್ದೇವಲೋಕಂ ಗಮಿಷ್ಯಸಿ ॥100॥
ನಮ್ಮನ್ನಾದರೂ ನೀನು ಜಯಿಸಿ ಈ ಭೂಮಿಯನ್ನು ಆಳು ಅಥವಾ ನಮ್ಮಿಂದ ಕೊಲ್ಲಲ್ಪಟ್ಟು ದೇವಲೋಕಕ್ಕೆ ಹೋಗುವವನಾಗು.
ಪರಾಜಿತೋಽಸಿ ದ್ಯೂತೇನ ಕೃಷ್ಣಾ ಚಾನಾಯಿತಾ ಸಭಾಮ್ |

ಶಕ್ಯೋಽಮರ್ಷೋ ಮನುಷ್ಯೇಣ ಕರ್ತುಂ ಪುರುಷಮಾನಿನಾ ॥101॥
ದ್ಯೂತದಲ್ಲಿ ಪರಾಜಯವನ್ನು ಹೊಂದಿದೆ. ದ್ರೌಪದಿಯನ್ನು ಸಭೆಗೆ ಎಳೆತಂದಾಯಿತು. ತನ್ನನ್ನು ಪುರುಷನೆಂದು ತಿಳಿದುಕೊಳ್ಳುವ ಮನುಷ್ಯನು ಕೋಪವನ್ನು ಮಾಡಲು ಇವೆರಡರಿಂದ ಸಾಧ್ಯವಾಗುತ್ತದೆ (ಅಂತಹ ಕೋಪವನ್ನು ತಂದುಕೊಂಡು ಯುದ್ಧವನ್ನು ಮಾಡು).
ದ್ವಾದಶೈವ ತು ವರ್ಷಾಣಿ ವನೇ ಧಿಷ್ಣ್ಯಾದ್ ವಿವಾಸಿತಃ |
ಸಂವತ್ಸರಂ ವಿರಾಟಸ್ಯ ದಾಸ್ಯಮಾಸ್ಥಾಯ ಚೋಷಿತಃ ॥102॥
ಹನ್ನೆರಡು ವರ್ಷಗಳ ಕಾಲ ರಾಜ್ಯಭ್ರಷ್ಟನಾಗಿ ವನವಾಸವನ್ನು ಮಾಡಿದೆ. ಒಂದು ವರ್ಷದ ಕಾಲ ವಿರಾಟನ ದಾಸನಾಗಿ ಅವನ ಮನೆಯಲ್ಲಿ ವಾಸ ಮಾಡಿದೆ.
ಅಪ್ರಿಯಾಣಾಂ ತು ವಚನಂ ಸಂಸ್ಮರಂಶ್ಚ ಪುನಃ ಪುನಃ |
ಅಮರ್ಷಂ ದರ್ಶಯಸ್ವ ತ್ವಮಮರ್ಷೋ ಹ್ಯೇವ ಪೌರುಷಮ್ ॥103॥
ಪಣವನ್ನು ಇಡುವಾಗ ರಾಜ್ಯತ್ಯಾಗ ವಿಷಯದಲ್ಲಿ ನಾವು ಆಡಿದ ಅಪ್ರಿಯವಾದ ಮಾತುಗಳನ್ನು ಪುನಃ ಪುನಃ ಸ್ಮರಣೆ ಮಾಡಿ ನಿನ್ನ ಕೋಪವನ್ನು ತೋರಿಸು. ಕೋಪವೇ ಪೌರುಷವಷ್ಟೆ! (ಪೌರುಷಕ್ಕೆ ಕಾರಣವಷ್ಟೆ!)
ಕ್ರೋಧೋ ಬಲಂ ತಥಾ ವೀರ್ಯಂ ಜ್ಞಾನಯೋಗೋಽಸ್ತ್ರಲಾಘವಮ್ |
ಇಹ ತೇ ದರ್ಶ್ಯತಾಂ ಪಾರ್ಥ ಯುಧ್ಯಸ್ವ ಪುರುಷೋ ಭವ ॥104॥
ಎಲೈ ಪಾರ್ಥನೇ, ನಿನ್ನ ಕ್ರೋಧ, ಬಲ, ಪರಾಕ್ರಮ, ಜ್ಞಾನಯೋಗ, ಅಸ್ತ್ರಲಾಘವ ಇವುಗಳನ್ನು ತೋರಿಸಿ ಯುದ್ಧವನ್ನು ಮಾಡು. ಪುರುಷನಾಗು.
ಇತ್ಯುಕ್ತೋ ಧಾರ್ತರಾಷ್ಟ್ರೇಣ ಉಲೂಕೋ ದುಷ್ಟಚೇತನಃ |
ಅಭಿನಿರ್ಯಾಯ ನಗರಾತ್ ಪಾಂಡವಾನ್ ಪ್ರತಿ ಸೋಽಭ್ಯಗಾತ್ ॥
ಹೀಗೆ ದುರ್ಯೋಧನನಿಂದ ಸಂದೇಶವನ್ನು ಸ್ವೀಕರಿಸಿ, ದುಷ್ಟಚೇತನನಾದ ಉಲೂಕನು ನಗರದಿಂದ ಹೊರಟು, ಪಾಂಡವರನ್ನು ಹೋಗಿ ಸೇರಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಪಂಚಾಶೋತ್ತರಶತತಮೋಽಧ್ಯಾಯಃ ॥
॥ ಉಲೂಕದೂತಾಗಮನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *

ನೂರ ಐವತ್ತೊಂಬತ್ತನೆಯ ಅಧ್ಯಾಯ
ಪಾಂಡವರನ್ನು ಸಮೀಪಿಸಿ ಉಲೂಕನಿಂದ ಯುಧಿಷ್ಠಿರಾದಿಗಳಿಗೆ ದುರ್ಯೋಧನನ ಸಂದೇಶಹರಣ.
ಸಂಜಯಃ
ಸೇನಾನಿವೇಶಂ ಸಂಪ್ರಾಪ್ಯ ಕೈತವ್ಯಃ ಪಾರ್ಥಿವೈಃ ಸಹ |
ಸಮಾಗತಃ ಪಾಂಡವೈಶ್ಚ ಯುಧಿಷ್ಠಿರಮಭಾಷತ ॥1॥
ಅಭಿಜ್ಞೋ ದೂತವಾಕ್ಯಾನಾಂ ಯಥೋಕ್ತಂ ಬ್ರುವತೋ ಮಮ |
ದುರ್ಯೋಧನಸಮಾದೇಶಂ ಶ್ರುತ್ವಾ ನ ಕ್ರೋದ್ಧುಮರ್ಹಸಿ ॥2॥
ಸಂಜಯ ಉಲೂಕನು ರಾಜರ ಜೊತೆಯಲ್ಲಿ ಪಾಂಡವರು ಬೀಡುಬಿಟ್ಟಿದ್ದ ಸ್ಥಳಕ್ಕೆ ಬಂದು, ಯುಧಿಷ್ಠಿರನನ್ನು ಕುರಿತು, ನೀನು ಸ್ವಾಮಿಯು ಹೇಳುವಂತೆ ಹೇಳುವ ದೂತವಾಕ್ಯಗಳ ಪರಿಸ್ಥಿತಿಯನ್ನು ತಿಳಿದಿದ್ದೀಯೆ. ದುರ್ಯೋಧನನ ಸಂದೇಶವನ್ನು ಕೇಳಿ ನನ್ನ ಮೇಲೆ ಕೋಪವನ್ನು ಮಾಡಬೇಡ ಎಂದು ಹೇಳಿದನು.
ಯುಧಿಷ್ಠಿರಃ
ಉಲೂಕ ನ ಭಯಂ ತೇಽಸ್ತಿ ಬ್ರೂಹಿ ತ್ವಂ ವಿಗತಜ್ವರಃ |
ಯನ್ಮತಂ ಧಾರ್ತರಾಷ್ಟ್ರಸ್ಯ ಲುಬ್ಧಸ್ಯಾದೀರ್ಘದರ್ಶಿನಃ ॥3॥
ಯುಧಿಷ್ಠಿರ ಉಲೂಕನೇ, ನಿನಗೆ ಯಾವ ಭಯವೂ ಇಲ್ಲ. ಲೋಭಿಯೂ, ದೀರ್ಘದರ್ಶಿಯಲ್ಲದವನೂ ಆದ ಆ ದುರ್ಯೋಧನನ ಅಭಿಪ್ರಾಯವನ್ನು ನಿಶ್ಶಂಕೆಯಿಂದ ಹೇಳುವವನಾಗು.
ಸಂಜಯಃ
ತತೋ ದ್ಯುತಿಮತಾಂ ಮಧ್ಯೇ ಪಾಂಡವಾನಾಂ ಮಹಾತ್ಮನಾಮ್ |
ಸೃಂಜಯಾನಾಂ ಚ ಸರ್ವೇಷಾಂ ಕೃಷ್ಣಸ್ಯ ಚ ಯಶಸ್ವಿನಃ ॥4॥
ದ್ರುಪದಸ್ಯ ಸಪುತ್ರಸ್ಯ ವಿರಾಟಸ್ಯ ಚ ಸನ್ನಿಧೌ |
ಭೂಮಿಪಾನಾಂ ಚ ಸರ್ವೇಷಾಂ ಮಧ್ಯೇ ವಾಕ್ಯಂ ಜಗಾದ ಹ ॥5॥
ಸಂಜಯ ಅನಂತರ ಮಹಾತ್ಮರಾದ, ತೇಜಸ್ವಿಗಳಾದ ಪಾಂಡವರ ಮಧ್ಯದಲ್ಲಿ ಕೀರ್ತಿವಂತನಾದ ಕೃಷ್ಣನೂ ಮತ್ತು ಸೃಂಜಯರೂ ಮತ್ತು ಎಲ್ಲರೂ ಕೇಳುವಂತೆ, ಪುತ್ರಸಹಿತನಾದ ದ್ರುಪದನ ಮತ್ತು ವಿರಾಟನ ಸನ್ನಿಧಿಯಲ್ಲಿ, ಎಲ್ಲಾ ರಾಜರ ಮಧ್ಯದಲ್ಲಿ ಉಲೂಕನು ಮಾತನಾಡಿದನು.
ಉಲೂಕಃ

ಇದಂ ತ್ವಾಮಬ್ರವೀದ್ ರಾಜಾ ಧಾರ್ತರಾಷ್ಟ್ರೋ ಮಹಾಬಲಃ |
ಶೃಣ್ವತಾಂ ಕುರುವೀರಾಣಾಂ ತನ್ನಿಬೋಧ ನರಾಧಿಪ ॥6॥
ಉಲೂಕ ಎಲೈ ರಾಜನೇ, ಮಹಾಬಲನಾದ ದುರ್ಯೋಧನರಾಜನು ಕುರುವೀರರು ಕೇಳುತ್ತಿರುವಂತೆ ನಿನಗೆ ಈ ಸಂದೇಶವನ್ನು ಕಳುಹಿಸಿದ್ದಾನೆ. ಅದನ್ನು ಕೇಳಿ ತಿಳಿದುಕೊ.
ಪರಾಜಿತೋಽಸಿ ದ್ಯೂತೇನ ಕೃಷ್ಣಾ ಚಾನಾಯಿತಾ ಸಭಾಮ್ |
ಶಕ್ಯೋಽಮರ್ಷೋ ಮನುಷ್ಯೇಣ ಕರ್ತುಂ ಪುರುಷಮಾನಿನಾ ॥7॥
ದ್ಯೂತದಲ್ಲಿ ಪರಾಜಿತನಾದೆ. ದ್ರೌಪದಿಯನ್ನು ಸಭೆಗೆ ಎಳೆದು ತಂದದ್ದಾಯಿತು. ತನ್ನನ್ನು ಪುರುಷನೆಂದು ತಿಳಿಯುವ ಮನುಷ್ಯನು ಇದರಿಂದ ಕೋಪವನ್ನು ಹೊಂದಲು ಸಾಧ್ಯ.
ದ್ವಾದಶೈವ ಚ ವರ್ಷಾಣಿ ವನೇ ಧಿಷ್ಣ್ಯಾದ್ ನಿವಾಸಿತಾಃ |
ಸಂವತ್ಸರಂ ವಿರಾಟಸ್ಯ ದಾಸ್ಯಮಾಸ್ಥಾಯ ಚೋಷಿತಾಃ ॥8॥
ಹನ್ನೆರಡು ವರ್ಷಗಳ ಕಾಲ ರಾಜ್ಯಚ್ಯುತರಾಗಿ ವನವಾಸವನ್ನು ಮಾಡಿದಿರಿ. ಒಂದು ವರ್ಷದ ಕಾಲ ವಿರಾಟನ ದಾಸರಾಗಿ ವಾಸವನ್ನು ಮಾಡಿದಿರಿ.
ಬಹೂನಿ ತತ್ರ ಕ್ಲೇಶಾನಿ ವನವಾಸಂ ಚ ಪಾಂಡವ |
ದ್ರೌಪದ್ಯಾಶ್ಚ ಪರಿಕ್ಲೇಶಂ ಸಂಸ್ಮರನ್ ಪುರುಷೋ ಭವ ॥9॥
ಎಲೈ ಪಾಂಡವನೇ, ಮೊದಲು ಅನುಭವಿಸಿದ ಅನೇಕ ಕ್ಲೇಶಗಳನ್ನೂ, ವನವಾಸವನ್ನೂ ಮತ್ತು ದ್ರೌಪದಿಯ ಪರಿಕ್ಲೇಶವನ್ನೂ ಸ್ಮರಿಸಿ ಪುರುಷನಾಗು.
ಅಶಕ್ತೇನ ಚ ಯಚ್ಚಪ್ತಂ ಭೀಮಸೇನೇನ ಪಾಂಡವ |
ದುಃಶಾಸನಸ್ಯ ರುಧಿರಂ ಪೀಯತಾಂ ಯದಿ ಶಕ್ಯತೇ ॥10॥
ಎಲೈ ಪಾಂಡವನೇ, ಅಶಕ್ತನಾದ ಭೀಮಸೇನನು ಪ್ರತಿಜ್ಞೆಯನ್ನು ಮಾಡಿದನಷ್ಟೆ? ಸಾಧ್ಯವಿದ್ದರೆ ದುಶ್ಶಾಸನನ ರಕ್ತವನ್ನು ಪಾನ ಮಾಡಲಿ.
ಬಲಾಭಿಹಾರೋ ನಿರ್ವೃತ್ತಃ ಕುರುಕ್ಷೇತ್ರಮಕರ್ದಮಮ್ |
ಪುಷ್ಟಾಸ್ತೇಽಶ್ವಾ ಭೃತಾ ಯೋಧಾಃ ಶ್ವೋ ಯುಧ್ಯಸ್ವ ಸಕೇಶವಃ ॥11॥
ಕೆಸರಿಲ್ಲದ ಕುರುಕ್ಷೇತ್ರಕ್ಕೆ ಸೈನ್ಯವನ್ನು ತಂದಿದ್ದಾಗಿದೆ. ನಿನ್ನ ಅಶ್ವಗಳು ಪುಷ್ಟವಾಗಿವೆ. ಯೋಧರನ್ನು ಸಾಕಿದ್ದಾಗಿದೆ. ನಾಳೆ ಕೇಶವನನ್ನು ಕೂಡಿಕೊಂಡು ಯುದ್ಧವನ್ನು ಮಾಡುವವನಾಗು.
ಅಸಮಾಗಮ್ಯ ಭೀಷ್ಮೇಣ ಸಂಯುಗೇ ಕಿಂ ವಿಕತ್ಥಸೇ |
ಆರುರುಕ್ಷುರ್ಯಥಾ ಮಂದಃ ಪರ್ವತಂ ಗಂಧಮಾದನಮ್ ॥12॥
ಏವಂ ಕತ್ಥಸಿ ಕೌಂತೇಯ ನಕತ್ಥನ್ ಕುರು ಪೌರುಷಮ್ ॥13॥
ಯುದ್ಧದಲ್ಲಿ ಭೀಷ್ಮರ ಸಮಾಗಮವನ್ನು ಹೊಂದದೆ ಗಂಧಮಾದನ ಪರ್ವತವನ್ನು ಹತ್ತಲು ಬಯಸುವ ಮಂದನಂತೆ ಏಕೆ ನಿನ್ನನ್ನು ನೀನು ಹೊಗಳಿಕೊಳ್ಳುತ್ತಿದ್ದೀಯೆ? ಎಲೈ ಕೌಂತೇಯನೇ, ನೀನು ಹೀಗೆ ಕತ್ಥನವನ್ನು (ಆತ್ಮಶ್ಲಾಘನೆಯನ್ನು) ಮಾಡುತಿತದ್ದೀಯೆ. ಬಾಯಿಮುಚ್ಚಿ ಪೌರುಷವನ್ನು ತೋರಿಸು.
ಸೂತಪುತ್ರಂ ಸುದುರ್ಧರ್ಷಂ ಶಲ್ಯಂ ಚ ಬಲಿನಾಂ ವರಮ್ |
ಅಜಿತ್ವಾ ಸಂಯುಗೇ ಪಾರ್ಥ ರಾಜ್ಯಂ ಕಥಮಿಹೇಚ್ಛಸಿ ॥14॥
ಎಲೈ ಪಾರ್ಥನೇ, ಯುದ್ಧದಲ್ಲಿ ಸೋಲಿಸಲು ಅಸಾಧ್ಯನಾದ ಕರ್ಣನನ್ನಾಗಲೀ ಅಥವಾ ಬಲಿಷ್ಠರಲ್ಲಿ ಶ್ರೇಷ್ಠನಾದ ಶಲ್ಯನನ್ನಾಗಲೀ ಜಯಿಸದೆ ಹೇಗೆ ರಾಜ್ಯವನ್ನು ಬಯಸುತ್ತೀಯೆ?
ದ್ರೋಣಂ ಚ ಯುಧ್ಯತಾಂ ಶ್ರೇಷ್ಠಂ ಶಚೀಪತಿಸಮಂ ಯುಧಿ ॥15॥
ಬ್ರಾಹ್ಮೇ ಧನುಷಿ ಚಾಚಾರ್ಯಂ ವೇದಯೋರಂತಗಂ ದ್ವಯೋಃ |
ಯುಧಿ ಧುರ್ಯಮಸಂಕ್ಷೋಭ್ಯಮ್ ಅನೀಕಧರಮಚ್ಯುತಮ್ ॥16॥
ದ್ರೋಣಂ ಮಹಾದ್ಯುತಿಂ ಪಾರ್ಥ ಯಜ್ಜಿಗೀಷಸಿ ತನ್ಮೃಷಾ ॥17॥
ನ ಹಿ ಶುಶ್ರುಮ ವಾತೇನ ಮೇರುಮುನ್ಮಥಿತಂ ಗಿರಿಮ್ ॥18॥
ಯುದ್ಧ ಮಾಡುವವರಲ್ಲಿ ಶ್ರೇಷ್ಠರಾದ, ಪರಾಕ್ರಮದಲ್ಲಿ ಇಂದ್ರನಿಗೆ ಸಮಾನರಾದ, ಬ್ರಹ್ಮವಿದ್ಯೆಯಲ್ಲೂ ಧನುರ್ವಿದ್ಯೆಯಲ್ಲೂ ಗುರುಗಳಾದ, ವೇದ ಮತ್ತು ಧನುರ್ವೇದದದಲ್ಲಿ ಪಾರಂಗತರಾದ, ಯುದ್ಧದಲ್ಲಿ ಅಲುಗಾಡಿಸಲು ಸಾಧ್ಯವಿಲ್ಲದ ಮತ್ತು ಯುದ್ಧದ ಮುಂಭಾಗದಲ್ಲಿರುವ ಸೇನೆಯನ್ನು ನಿಯಂತ್ರಿಸುವ, ತಮ್ಮ ಗುಣಗಳಿಂದ ಚ್ಯುತರಾಗದ, ಮಹಾಕಾಂತಿಯುಳ್ಳ ದ್ರೋಣರನ್ನು ಜಯಿಸಲು ಏನು ಇಚ್ಛಿಸುತ್ತೀಯೋ ಎಲೈ ಪಾರ್ಥನೇ, ಅದು ಸುಳ್ಳು. ಬಿರುಗಾಳಿಯಿಂದ ಮೇರುಪರ್ವತವು ಉರುಳಿತು ಎಂಬ ವಾರ್ತೆಯನ್ನು ನಾವು ಹಿಂದೆ ಕೇಳಿಲ್ಲ, ಮುಂದೆ ಕೇಳುವುದಿಲ್ಲ.
ಅನಿಲೋ ವಾ ವಹೇನ್ಮೇರುಂ ದ್ಯೌರ್ವಾಽಪಿ ನಿಪತೇನ್ಮಹೀಮ್ |
ಯುಗಂ ವಾ ಪರಿವರ್ತೇತ ಯದ್ಯೇವಂ ಸ್ಯಾದ್ ಯದಾತ್ಥ ಮಾಮ್ ॥
ನೀನು ನನಗೆ ಹೇಳಿದಂತೆ ಆಗುವುದಾದರೆ ವಾಯುವು ಮೇರುಪರ್ವತವನ್ನು ಹಾರಿಸಿಕೊಂಡು ಹೋದೀತು. ಆಕಾಶವು ಭೂಮಿಯ ಮೇಲೆ ಬಿದ್ದೀತು. ಅಥವಾ ಯುಗವು ಪರಿವರ್ತನೆಯನ್ನು ಹೊಂದೀತು (ದ್ವಾಪರಯುಗವು ಕೃತಯುಗವಾದೀತು)
ಕೋ ಹ್ಯಸ್ತ್ರಜೀವಿತಾಕಾಂಕ್ಷೀ ತೀವ್ರಾಸ್ತ್ರಮರಿಕರ್ಶನಮ್ |
ಗಜೋ ವಾಜೀ ನರೋ ವಾಽಪಿ ಪುನಃ ಸ್ವಸ್ಥೋ ಗೃಹಾನ್ ವ್ರಜೇತ್ ॥

ಅಸ್ತ್ರದಿಂದ ಜೀವಿಸಲು ಬಯಸುವ ಯಾವ ಯೋಧನಾಗಲೀ ಅಥವಾ ಗಜವಾಗಲೀ ಅಥವಾ ಅಶ್ವವಾಗಲೀ ತೀವ್ರಾಸ್ತ್ರವನ್ನು ಹೊಂದಿದ, ಶತ್ರುಕರ್ಶನರಾದ ದ್ರೋಣರನ್ನು ಯುದ್ಧದಲ್ಲಿ ಸಮೀಪಿಸಿ, ಏನೂ ಹಾನಿ ಇಲ್ಲದೆ ಪುನಃ ಮನೆಗೆ ಹೇಗೆ ಹಿಂದಿರುಗಬಹುದು?

ಕಥಮಾಭ್ಯಾಮವಧ್ಯಾತಃ ಸಂಸ್ಪೃಷ್ಟೋ ದಾರುಣೇನ ಚ |
ರಣೇ ಜೀವನ್ ವಿಮುಚ್ಯೇತ ಪದಾ ಭೂಮಿಮುಪಸ್ಪೃಶನ್ ||21||

ತನ್ನ ಹೆಜ್ಜೆಯಿಂದ ಭೂಮಿಯ ಮೇಲೆ ನಿಂತ ಯಾವನು ನಮ್ಮಿಬ್ಬರಿಂದ (ತಾನು ಮತ್ತು ದ್ರೋಣರಿಂದ) ಅವಧ್ಯಾತನಾಗಿ, ದಾರುಣವಾದ ಯುದ್ಧದಲ್ಲಿ ನಮ್ಮನ್ನು ಎದುರಿಸುವವನಾಗಿ ಯುದ್ಧದಿಂದ ಬಿಡುಗಡೆಯನ್ನು ಹೊಂದಿಯಾನು?

ಕಿಂ ದರ್ದುರಃ ಕೂಪಶಯೋ ಯಥೇಮಾಂ
ನ ಬುಧ್ಯಸೇ ರಾಜಚಮೂಂ ಸಮೇತಾಮ್ |
ದುರಾಧರ್ಷಾಂ ದೇವಚಮೂಪ್ರಕಾಶಾಂ
ಗುಪ್ತಾಂ ನರೇಂದ್ರೈಸ್ತ್ರಿದಶೈರಿವ ದ್ಯಾಮ್ ||22||

ಕೂಪಮಂಡೂಕದಂತಿರುವ ನೀನು, ಒಂದುಗೂಡಿದ ಈ ನನ್ನ ರಾಜಸೇನೆಯು ಸೋಲಿಸಲು ಅಸಾಧ್ಯವಾದುದು, ದೇವತೆಗಳ ಸೈನ್ಯವು ಶೋಭಿಸುವಂತೆ ಹೊಡಿದಂತಹುದು, ದೇವತೆಗಳಿಂದ ಸ್ವರ್ಗಲೋಕವು ರಕ್ಷಿಸಲ್ಪಟ್ಟಂತೆ ರಾಜನಿಂದ ರಕ್ಷಿಸಲ್ಪಟ್ಟಿರುವುದು ಎಂದು ತಿಳಿಯುತ್ತಿಲ್ಲ.

ಪ್ರಾಚ್ಯೈಃ ಪ್ರತೀಚ್ಯೈರಥ ದಾಕ್ಷಿಣಾತ್ಯೈಃ
ಉದೀಚ್ಯಕಾಂಭೋಜಶಕೈಃ ಖಶೈಶ್ಚ |
ಸಾಲ್ವೈಃ ಸಮತ್ಸ್ಯೈಃ ಕುರುಮಧ್ಯದೇಶ್ಯೈಃ
ಮ್ಲೇಚ್ಛೈಃ ಪುಳಿಂದೈರ್ದ್ರವಿಡಾಂಧ್ರಕಾಶ್ಯೈಃ ||23||

ಪೂರ್ವದಿಕ್ಕಿನವರು, ಪಶ್ಚಿಮದಿಕ್ಕಿನವರು ಆದ ರಾಜರಿಂದಲೂ, ಕಾಂಭೋಜ- ಶಕರಿಂದಲೂ, ಖಶರಿಂದಲೂ, ಸಾಲ್ವರಿಂದಲೂ, ಕುರುಮಧ್ಯದೇಶದವರಿಂದಲೂ, ಮ್ಲೇಚ್ಛರಿಂದಲೂ, ಪುಳಿಂದರಿಂದಲೂ, ದ್ರಾವಿಡರಿಂದಲೂ, ಆಂಧ್ರರಿಂದಲೂ, ಕಾಶ್ಯರಿಂದಲೂ ರಕ್ಷಿಸಲ್ಪಟ್ಟಿದೆ ಎಂಬುದನ್ನು ತಿಳಿಯುತ್ತಿಲ್ಲ.

ನಾನಾಜನೌಘಂ ಯುಧಿ ಸಂಪ್ರವೃತ್ತಂ
ಗಾಂಗಂ ಯಥಾ ವೇಗಮವಾರಣೀಯಮ್ |
ಮಾಂ ಚ ಸ್ಥಿತಂ ನಾಗಬಲಸ್ಯ ಮಧ್ಯೇ
ಯುಯುತ್ಸಸೇ ಮಂದ ಕಿಮಲ್ಪಬುದ್ಧೇ ||24||

ಎಲೈ ಮಂದನೇ, ಅಲ್ಪಬುದ್ಧಿಯೇ, ಯುದ್ಧವನ್ನು ಮಾಡುವುದರಲ್ಲಿ ಉದ್ಯುಕ್ತರಾದ, ನಾನಾ ಜನರಿಂದ ಕೂಡಿದ, ಗಂಗೆಯ ವೇಗದಂತೆ ತಡೆಯಲು ಸಾಧ್ಯವಿಲ್ಲದ ಗಜಬಲದ ಮಧ್ಯೆ ನಿಂತಿರುವ ನನ್ನ ಜೊತೆಯಲ್ಲಿಯೂ ಸಹ ಯುದ್ಧವನ್ನು ಮಾಡಲು ಏಕೆ ಬಯಸುತ್ತೀಯೆ?

ಸಂಜಯಃ

ಇತ್ಯೇವಮುಕತ್ತ್ವ ರಾಜಾನಂ ಧರ್ಮಪುತ್ರಂ ಯುಧಿಷ್ಠಿರಮ್ |
ಅಭ್ಯಾವೃತ್ಯ ಪುನರ್ಜಿಷ್ಣುಮುಲೂಕಃ ಪ್ರತ್ಯಭಾಷತ ||25||

ಸಂಜಯ ರಾಜನಾದ ಧರ್ಮಪುತ್ರನಾದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡಿ, ಪುನಃ ಅರ್ಜುನನ ಕಡೆಗೆ ತಿರುಗಿ ಉಲೂಕನು ಅವನನ್ನು ಕುರಿತು ಮಾತನಾಡಿದನು.

ಅಕತ್ಥಮಾನೋ ಯುಧ್ಯಸ್ವ ಕತ್ಥಸೇಽರ್ಜುನ ಕಿಂ ಬಹು |
ಪರ್ಯಯಾತ್ ಸಿದ್ಧಿರೇತಸ್ಯ ನೈತತ್ ಸಿಧ್ಯತಿ ಕತ್ಥನಾತ್ ||26||

ಎಲೈ ಅರ್ಜುನನೇ, ಬಾಯಿಂದ ಮಾತನಾಡದೆ ಯುದ್ಧವನ್ನು ಮಾಡು, ಏತಕ್ಕೆ ಬಡಬಡಿಸುತ್ತಿದ್ದೀಯೆ? ಯುದ್ಧಭೂಮಿಯಲ್ಲಿ ಮಂಡಲಗಳಲ್ಲಿ (ಸೇನಾವ್ಯೂಹಗಳಲ್ಲಿ) ಸಂಚರಿಸುವುದರಿಂದ ಸಿದ್ಧಿ ಉಂಟಾಗುತ್ತದೆ. ನಿನ್ನನ್ನು ನೀನು ಹೊಗಳಿಕೊಳ್ಳುವುದರಿಂದಲ್ಲ.

ಯದೀದಂ ಕತ್ಥನಾಲ್ಲೋಕೇ ಸಿಧ್ಯೇತ್ ಕರ್ಮ ಧನಂಜಯ |
ಸರ್ವೇ ಭವೇಯುಃ ಸಿದ್ಧಾರ್ಥಾಃ ಕತ್ಥನೇ ಕೋ ಹಿ ದುರ್ಗತಃ ||27||

ಎಲೈ ಧನಂಜಯನೇ, ಈ ಕತ್ಥನದಿಂದ (ಆತ್ಮಶ್ಲಾಘನೆಯಿಂದ) ಲೋಕದಲ್ಲಿ ಕಾರ್ಯವು ಸಿದ್ಧಿಸುವುದಾದರೆ ಎಲ್ಲರೂ ಕಾರ್ಯಸಿದ್ಧಿಯನ್ನು ಪಡೆದಾರು. ಆತ್ಮಶ್ಲಾಘನೆ ಮಾಡಿಕೊಳ್ಳುವುದರಲ್ಲಿ ಯಾರಿಗೆ ದಾರಿದ್ರ್ಯವಿದೆ?

ಜಾನಾಮಿ ತೇ ವಾಸುದೇವಂ ಸಹಾಯಂ
ಜಾನಾಮಿ ತೇ ಗಾಂಡಿವಂ ತಾಳಮಾತ್ರಮ್ |
ಜಾನಾಮ್ಯೇತತ್ ತ್ವಾದೃಶೋ ನಾಸ್ತಿ ಯೋದ್ಧಾ
ರಾಜ್ಯಂ ಚ ತೇ ಜಾನಮಾನೋ ಹರಾಮಿ ||28||

ನಿನಗೆ ಕೃಷ್ಣನು ಸಹಾಯನಾಗಿದ್ದಾನೆ ಎಂದು ತಿಳಿದಿದ್ದೇನೆ. ನಿನ್ನ ಗಾಂಡೀವ ಧನುಸ್ಸು ತಾಳವೃಕ್ಷದಂತೆ ಎತ್ತರವಾಗಿದೆ ಎಂದು ತಿಳಿದಿದ್ದೇನೆ. ನಿನ್ನಂತಹ ಯೋಧರಿಲ್ಲವೆಂದೂ ತಿಳಿದಿದ್ದೇನೆ. ಇಷ್ಟನ್ನು ತಿಳಿದರೂ ನಿನ್ನ ರಾಜ್ಯವನ್ನು ಅಪಹರಿಸುತ್ತೇನೆ.

ನ ತು ಪರ್ಯಾಯಧರ್ಮೇಣ ಸಿದ್ಧಿಂ ಪ್ರಾಪ್ನೋತಿ ಭೂಯಸೀಮ್ |
ಮನಸೈವ ಹಿ ಭೂತಾನಿ ವಿಧಾತಾ ಕುರುತೇ ವಶೇ ||29||

ಬೇರೆ ಬೇರೆ ರೂಪಗಳನ್ನು ಧರಿಸುವುದರಿಂದ ಯಾವನೂ ದೊಡ್ಡ ಸಿದ್ಧಿಯನ್ನು ಪಡೆಯುವುದಿಲ್ಲ. ಬ್ರಹ್ಮನು ಮನಸ್ಸಿನಿಂದಲೇ ಎಲ್ಲರನ್ನೂ ವಶಪಡಿಸಿಕೊಳ್ಳುತ್ತಾನೆ.

ತ್ರಯೋದಶ ಸಮಾ ಭುಕ್ತಂ ರಾಜ್ಯಂ ವಿಲಪತಸ್ತವ |
ಭೂಯಶ್ಚೈವ ಪ್ರಶಾಸಿಷ್ಯೇ ತ್ವಾಂ ನಿಹತ್ಯ ಸಬಾಂಧವಮ್ ॥30॥
ಹದಿಮೂರು ವರ್ಷಗಳ ಕಾಲ ನೀನು ಗೋಳಾಡುತ್ತಿದ್ದರೂ ನಾನು ರಾಜ್ಯ ಭೋಗಿಸಿದೆ. ನಿನ್ನನ್ನು ಬಾಂಧವರ ಜೊತೆಯಲ್ಲಿ ಕೊಂದು ಪುನಃ ಭೋಗಿಸುವೆನು.
ಕ್ವ ತದಾ ಗಾಂಡಿವಂ ತೇಽಭೂದ್ ಯತ್ ತ್ವಂ ದಾಸಪಣೈರ್ಜಿತಃ |
ಕ್ವ ತದಾ ಭೀಮಸೇನಸ್ಯ ಬಲಮಾಸೀಚ್ಚ ಫಲ್ಗುನ ॥31॥
ಎಲೈ ಅರ್ಜುನನೇ, ನೀನು ದ್ಯೂತದಲ್ಲಿ ದಾಸ್ಯಪಣದಿಂದ ಸೋತಾಗ ನಿನ್ನ ಗಾಂಡೀವ ಧನುಸ್ಸು ಎಲ್ಲಿಗೆ ಹೋಗಿದ್ದಿತು? ಭೀಮಸೇನನ ಬಲವು ಎಲ್ಲಿದ್ದಿತು?
ಸಗದಾದ್ ಭೀಮಸೇನಾಚ್ಚ ಪಾರ್ಥಾಚ್ಚಾಪಿ ಸಗಾಂಡಿವಾತ್ |
ನ ವೈ ಮೋಕ್ಷಸ್ತದಾ ವೋಽಭೂದ್ ವಿನಾ ಕೃಷ್ಣಾಮನಿಂದಿತಾಮ್ ॥32॥
ಅನಿಂದಿತಳಾದ ದ್ರೌಪದಿ ಒಬ್ಬಳನ್ನು ಬಿಟ್ಟು ನಿಮಗೆ ಗದೆಯನ್ನು ಧರಿಸಿದ ಭೀಮಸೇನನಿಂದಾಗಲಿ, ಗಾಂಡೀವವನ್ನು ಧರಿಸಿದ ಅರ್ಜುನನಿಂದಾಗಲೀ ಆಗ ದಾಸ್ಯದಿಂದ ಬಿಡುಗಡೆಯಾಗಲಿಲ್ಲ.
ಸಾ ವೋ ದಾಸ್ಯೇ ಸಮಾಪನ್ನಾನ್ ಮೋಕ್ಷಯಾಮಾಸ ಭಾಮಿನೀ |
ಅಮಾನುಷ್ಯಸಮಾಯುಕ್ತಾನ್ ದಾಸಕರ್ಮಣ್ಯವಸ್ಥಿತಾನ್ ॥33॥
ಆ ಕೋಪಗೊಂಡ ದ್ರೌಪದಿಯು ಮನುಷ್ಯರಿಗೆ ಅಯೋಗ್ಯವಾದ ದಾಸಕರ್ಮದಲ್ಲಿ ಬಿದ್ದ ನಿಮ್ಮನ್ನು ದಾಸ್ಯಕರ್ಮದಿಂದ ವಿಮೋಚನೆ ಮಾಡಿದಳು.
ಅವೋಚಂ ಯತ್ ಷಂಡತಿಲಾನಹಂ ವಸ್ತಥ್ಯಮೇವ ತತ್ |
ಧೃತಾ ಹಿ ವೇಣೀ ಪಾರ್ಥೇನ ವಿರಾಟನಗರೇ ತದಾ ॥34॥
ನಾನು ನೀವು ಹುಳಿತುಹೋದ ಎಳ್ಳುಕಾಳುಗಳು ಎಂದು ಏನು ಹೇಳಿದೆನೋ ಅದು ಸತ್ಯವಾದ ಮಾತು. ಏಕೆಂದರೆ ವಿರಾಟನಗರದಲ್ಲಿ ಅರ್ಜುನನು ಜಡೆಯನ್ನು ಹಾಕಿಕೊಂಡು ಕಾಲ ಕಳೆದನು.
ಸೂದಕರ್ಮಣಿ ಚ ಶ್ರಾಂತಂ ವಿರಾಟಸ್ಯ ಮಹಾನಸೇ |
ಭೀಮಸೇನೇನ ಕೌಂತೇಯ ಯಚ್ಚ ತನ್ಮಮ ಪೌರುಷಮ್ ॥35॥
ಎಲೈ ಕೌಂತೇಯನೇ, ಭೀಮಸೇನನು ವಿರಾಟನ ಅಡುಗೆಮನೆಯಲ್ಲಿ ಪಾಚಕನಾಗಿ ಏನು ಶ್ರಮವನ್ನು ಅನುಭವಿಸಿದನೋ ಅದು ನನ್ನ ಪೌರುಷ.
ಏವಮೇವ ಸದಾ ದಂಡಂ ಕ್ಷತ್ರಿಯಾಃ ಕ್ಷತ್ರಿಯೇ ದಧುಃ |
ವೇಣೀಂ ಕೃತ್ವಾ ಷಂಡವೇಷಃ ಕನ್ಯಾಂ ನರ್ತಿತವಾನಸಿ ॥36॥
ಕ್ಷತ್ರಿಯರು ಹೀಗೆಯೇ ಕ್ಷತ್ರಿಯರಲ್ಲಿ ಯಾವಾಗಲೂ ದಂಡವನ್ನು ವಿಧಿಸುತ್ತಾರೆ. ನೀನು ನಪುಂಸಕ ವೇಷವನ್ನು ಹೊಂದಿ, ಜಡೆಯನ್ನು ಹಾಕಿಕೊಂಡು ಕನ್ಯೆಯರಿಗೆ ನರ್ತನವನ್ನು ಕಲಿಸಿದೆ.
ನ ಭಯಾದ್ ವಾಸುದೇವಸ್ಯ ನ ಚಾಪಿ ತವ ಫಲ್ಗುನ |
ರಾಜ್ಯಂ ಪ್ರತಿ ನ ದಾಸ್ಯಾಮಿ ಯುದ್ಧ್ಯಸ್ವ ಸಹಕೇಶವಃ ॥37॥
ಎಲೈ ಫಲ್ಗುನನೇ, ಕೃಷ್ಣನ ಭಯದಿಂದಾಗಲೀ ಅಥವಾ ನಿನ್ನ ಭಯದಿಂದಾಗಲೀ ನಿಮಗೆ ರಾಜ್ಯವನ್ನು ಹಿಂದೆ ಕೊಡುವುದಿಲ್ಲ. ಕೇಶವನ ಸಹಾಯದಿಂದ ಯುದ್ಧವನ್ನು ಮಾಡುವವನಾಗು.
ನ ಮಾಯಾ ಹೀಂದ್ರಜಾಲಂ ವಾ ಕುಹಕಾ ವಾ ವಿಭೀಷಣಾ |
ಆತ್ತಶಸ್ತ್ರಸ್ಯ ಮೇ ಯುದ್ಧೇ ಭವಂತಿ ಪ್ರತಿಗರ್ಜನಾಃ ॥38॥
ಮಾಯೆಯಾಗಲಿ, ಇಂದ್ರಜಾಲವಾಗಲೀ, ಕಪಟವಾಗಲೀ, ಬೆದರಿಕೆಯ ಮಾತುಗಳಾಗಲೀ ಯುದ್ಧದಲ್ಲಿ ಶಸ್ತ್ರವನ್ನು ಹಿಡಿದು ನಿಂತ ನನಗೆ ಪ್ರತಿಗರ್ಜನೆಯನ್ನು ಮಾಡುವುದಿಲ್ಲ.
ವಾಸುದೇವಸಹಸ್ರಂ ವಾ ಫಲ್ಗುನಾನಾಂ ಶತಾನಿ ವಾ |
ಆಸಾದ್ಯ ಮಾಮಮೋಘೇಷುಂ ದ್ರವಿಷ್ಯಂತಿ ದಿಶೋ ದಶ ॥39॥
ಸಹಸ್ರಕೃಷ್ಣರು ಮತ್ತು ನೂರುಜನ ಅರ್ಜುನರು ಅಮೋಘವಾದ ಬಾಣಪ್ರಯೋಗವುಳ್ಳ ನನ್ನನ್ನು ಸಮೀಪಿಸಿದರೂ ಅವರು ಹತ್ತುದಿಕ್ಕುಗಳಿಗೆ ಓಡಿ ಹೋಗುವರು.
ಸಂಯುಗಂ ಗಚ್ಛ ಭೀಷ್ಮೇಣ ಭಿಂಧಿ ವಾ ಶಿರಸಾ ಗಿರಿಮ್ |
ಪ್ರತರೇಮಂ ಮಹಾಗಾಧಂ ಬಾಹುಭ್ಯಾಂ ಪುರುಷೋದಧಿಮ್ ॥40॥
ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡು ಅಥವಾ ತಲೆಯಿಂದ ಪರ್ವತವನ್ನು ಒಡೆಯುವವನಾಗು ಅಥವಾ ಎಲೈ ಪುರುಷನೇ, ಬಾಹುಗಳಿಂದ ಅಗಾಧವಾದ ಈ ಸೇನಾಸಮುದ್ರವನ್ನು ದಾಟುವವನಾಗು.
ಶಾರದ್ವತಮಹಾಮೀನಂ ವಿವಿಂಶತಿಝುಷಾಕುಲಮ್ |
ಬೃಹದ್ಬಲಮಹಾವೇಲಂ ಸೌಮದತ್ತಿತಿಮಿಂಗಿಲಮ್ ॥41॥
ದುಃಶಾಸನೌಘಂ ಶಲಶಲ್ಯಮತ್ಸ್ಯಂ
ಸುಷೇಣಚಿತ್ರಾಯುಧನಾಗನಕ್ರಮ್ |
ಜಯದ್ರಥಾದ್ರಿಂ ಪುರುಮಿತ್ರಗಾಧಂ
ದುರ್ಮರ್ಷಣೋದಂ ಶಕುನಿಪ್ರಪಾತಮ್ ॥42॥

ಶಸ್ತ್ರೌಘಮಕ್ಷಯ್ಯಮತಿಪ್ರವೃದ್ಧಂ
ಯದಾಽವಗಾಹ್ಯ ಶ್ರಮನಷ್ಟಚೇತಾಃ |
ಭವಿಷ್ಯಸಿ ತ್ವಂ ಹತಸರ್ವಬಾಂಧವಃ
ತದಾ ಮನಸ್ತೇ ಪರಿತಾಪಮೇಷ್ಯತಿ ||43||
ಕೃಪಾಚಾರ್ಯರೆಂಬ ಮಹಾ ಮೀನವುಳ್ಳ, ವಿವಿಂಶತಿ ಎಂಬ ಮೊಸಳೆಯನ್ನು ಹೊಂದಿದ, ದೊಡ್ಡ ಸೈನ್ಯವೆಂಬ ಮಹಾತೀರವನ್ನು ಹೊಂದಿದ, ಸೋಮದತ್ತನ ಮಗನಾದ ಭೂರಿಶ್ರವನೆಂಬ ತಿಮಿಂಗಲವನ್ನು ಹೊಂದಿದ, ದುಶ್ಶಾಸನನೆಂಬ ಪ್ರವಾಹವನ್ನು ಹೊಂದಿದ, ಶಲ-ಶಲ್ಯರೆಂಬ ಮೀನುಗಳನ್ನು ಹೊಂದಿದ, ಸುಷೇಣ- ಚಿತ್ರಾಯುಧರೆಂಬ ಸರ್ಪ ಮತ್ತು ನಕ್ರಗಳನ್ನು ಹೊಂದಿದ, ಜಯದ್ರಥನೆಂಬ ಪರ್ವತವನ್ನು ಹೊಂದಿರುವ, ಪುರುಮಿತ್ರನೆಂಬ ಮಡುವನ್ನು ಹೊಂದಿರುವ, ದುರ್ಮರ್ಶನೆಂಬ ಉದಕನನ್ನು ಹೊಂದಿರುವ, ಶಕುನಿ ಎಂಬ ಪ್ರಪಾತವನ್ನು ಹೊಂದಿರುವ, ಶಸ್ತ್ರಗಳಿಂದ ಕೂಡಿರುವ, ಅಕ್ಷಯವಾದ, ಅತ್ಯಂತ ಪ್ರವೃದ್ಧವಾದ ನನ್ನ ಸೈನ್ಯವನ್ನು ಪ್ರವೇಶಿಸು. ಯಾವಾಗ ಎಲ್ಲ ಬಾಂಧವರನ್ನೂ ಕಳೆದುಕೊಂಡು ಶ್ರಮದಿಂದ ಪ್ರಜ್ಞೆಯನ್ನು ಕಳೆದುಕೊಳ್ಳುವಿಯೋ ಆಗ ನಿನ್ನ ಮನಸ್ಸಿಗೆ ಪಶ್ಚಾತ್ತಾಪ ಉಂಟಾಗುವುದು.
ತದಾ ಮನಸ್ತೇ ತ್ರಿದಿವಾದಿವಾಶುಚೇಃ
ನಿವರ್ತ್ಯತಾಂ ಪಾರ್ಥ ಮಹೀಪ್ರಶಾಸನಾತ್ |
ರಾಜ್ಯಂ ಪ್ರಶಾಸ್ತುಂ ಹಿ ಸುದುರ್ಲಭಂ ತ್ವಯಾ
ಬುಭೂಷತಾ ಸ್ವರ್ಗ ಇವಾಪತಸ್ವಿನಾ ||44||
ಆಗ ಅಶುಚಿಯಾದವನಿಗೆ ಸ್ವರ್ಗದ ಆಸೆಯು ನಿವೃತ್ತವಾಗುವಂತೆ ನಿನ್ನ ಮನಸ್ಸು ಭೂಮಿಯನ್ನು ಆಳುವ ಆಸೆಯಿಂದ ಹಿಂದಿರುಗುವುದು. ಎಲೈ ಪಾರ್ಥನೇ, ತಪಸ್ವಿಯಲ್ಲದವನು ಸ್ವರ್ಗವನ್ನು ಪಡೆಯುವುದು ಹೇಗೆ ದುರ್ಲಭವೋ ಅದರಂತೆ ರಾಜ್ಯವನ್ನು ಆಳುವುದು ನಿನಗೆ ಅತ್ಯಂತ ದುರ್ಲಭವಾದುದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ ||
|| ಉಲೂಕದೂತಾಗಮನಪರ್ವಣಿ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತನೆಯ ಅಧ್ಯಾಯ
ಕೃಷ್ಣ ಮತ್ತು ಪಾಂಡವರಿಂದ ದುರ್ಯೋಧನನಿಗೆ
ಉಲೂಕನ ಮೂಲಕ ಪ್ರತಿಸಂದೇಶ.
ಸಂಜಯಃ
ಉಲೂಕಸ್ತ್ವರ್ಜುನಂ ಭೂಯೋ ಯಥೋಕ್ತಂ ವಾಕ್ಯಮಬ್ರವೀತ್ |
ಆಶೀವಿಷಮಿವ ಕ್ರುದ್ಧಂ ತುದನ್ ವಾಕ್ಯಶಲಾಕಯಾ ||1||
ಸಂಜಯ ವಿಷಸರ್ಪದಂತೆ ಕ್ರುದ್ಧನಾದ ಅರ್ಜುನನನ್ನು ತನ್ನ ಮಾತುಗಳೆಂಬ ಸಲಾಕೆಯಿಂದ ತಿವಿಯುತ್ತಾ, ಉಲೂಕನು ಪುನಃ ಅರ್ಜುನನನ್ನು ಕುರಿತು ಮಾತನಾಡಿದನು.
ತಸ್ಯ ತದ್ವಚನಂ ಶ್ರುತ್ವಾ ರುಷಿತಾಃ ಪಾಂಡವಾ ಭೃಶಮ್ |
ಪ್ರಾಗೇವ ಭೃಶಸಂಕ್ರುದ್ಧಾಃ ಕೈತವ್ಯೇನಾಪಿ ಧರ್ಷಿತಾಃ ||2||
ಮೊದಲೇ ಕೋಪಗೊಂಡಿದ್ದ ಪಾಂಡವರು ಅವನ ಮಾತುಗಳನ್ನು ಕೇಳಿ ಉಲೂಕನಿಂದಲೂ ಅವಮಾನಿತರಾಗಿ ಇನ್ನೂ ಹೆಚ್ಚು ರೋಷವನ್ನು ಹೊಂದಿದರು.
ಆಸನೇಷೂದತಿಷ್ಠಂತ ಬಾಹೂಂಶ್ಚೈವ ಪ್ರಚಿಕ್ಷಿಪುಃ |
ಆಶೀವಿಷಾ ಇವ ಕ್ರುದ್ಧಾ ವೀಕ್ಷಾಂಚಕ್ರುಃ ಪರಸ್ಪರಮ್ ||3||
ತಮ್ಮ ಆಸನಗಳಿಂದ ಎದ್ದುನಿಂತು ಬಾಹುಗಳನ್ನು ಕೊಡವಿದರು. ಕೋಪಗೊಂಡ ವಿಷಸರ್ಪಗಳಂತೆ ಪರಸ್ಪರವಾಗಿ ನೋಡಿದರು.
ಅವಾಕ್ಶಿರಾ ಭೀಮಸೇನಃ ಸಮುದೈಕ್ಷತ ಕೈತವಮ್ |
ನೇತ್ರಾಭ್ಯಾಂ ಲೋಹಿತಾಂತಾಭ್ಯಾಮಾಶೀವಿಷ ಇವ ಶ್ವಸನ್ ||4||
ದಂತಾನ್ ದಂತೇಷು ನಿಷ್ಪಿಷ್ಯ ಸೃಕ್ಕಿಣೀಃ ಪರಿಲೇಲಿಹನ್ |
ತೇಷಾಮಾಕಾರಭಾವಜ್ಞಃ ಕುಂತೀಪುತ್ರೋ ವೃಕೋದರಃ |
ಉದತಿಷ್ಠತ್ ಸವೇಗೇನ ಕ್ರೋಧೇನ ಪ್ರಜ್ವಲನ್ನಿವ ||5||
ಭೀಮಸೇನನು ಸರ್ಪದಂತೆ ಉಸಿರಾಡುತ್ತಾ ಕೆಂಪಾದ ಅಂಚುಳ್ಳ ತನ್ನ ಕಣ್ಣುಗಳಿಂದ ಉಲೂಕನನ್ನು ನೋಡಿದನು. ಉಲೂಕನ ಮಾತುಗಳ ಅಭಿಪ್ರಾಯವನ್ನು ತಿಳಿದ ಕುಂತೀಪುತ್ರನಾದ ವೃಕೋದರನು ಹಲ್ಲುಗಳನ್ನು ಹಲ್ಲುಗಳಿಂದ ಕಡಿಯುತ್ತಾ, ಕಟಬಾಯಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ, ಕ್ರೋಧದಿಂದ ಉರಿಯುವವನಂತೆ ಶೀಘ್ರವಾಗಿ ಎದ್ದನು.
ಉದ್ವೃತ್ಯ ಸಹಸಾ ನೇತ್ರೇ ದಂತಾನ್ ಕಟಕಟಾಪ್ಯ ಚ |
ಹಸ್ತಾನ್ ಹಸ್ತೇಷು ನಿಷ್ಪಿಷ್ಯ ಉಲೂಕಂ ವಾಕ್ಯಮಬ್ರವೀತ್ ||6||
ಶೀಘ್ರವಾಗಿ ಕಣ್ಣುಗಳನ್ನು ಅರಳಿಸಿ, ಹಲ್ಲುಗಳನ್ನು ಕಡಿದು, ಕೈಯಿಂದ ಕೈಯನ್ನು ಹೊಸಕಿ ಉಲೂಕನನ್ನು ಕುರಿತು ಮಾತನಾಡಿದನು.

ಅಶಕ್ತಾನಾಮಿವಾಸ್ಮಾಕಂ ಪ್ರೋತ್ಸಾಹನನಿಮಿತ್ತಜಮ್ |
ಶ್ರುತಂ ತೇ ವಚನಂ ಮೂರ್ಖ ಯತ್ ತ್ವಾಂ ದುರ್ಯೋಧನೋಽಬ್ರವೀತ್ ॥7॥
ಎಲೈ ಮೂರ್ಖನೇ, ಅಶಕ್ತರಾದ ನಮ್ಮನ್ನು ಪ್ರೋತ್ಸಾಹನಗೊಳಿಸುವಂತಿರುವ ನಿನಗೆ ದುರ್ಯೋಧನನು ಹೇಳಿದ ನಿನ್ನ ಮಾತುಗಳನ್ನು ಕೇಳಿದೆನು.
ತನ್ಮೇ ಕಥಯತೋ ಮಂದ ಶೃಣು ವಾಕ್ಯಂ ದುರಾಸದಮ್ |
ಸರ್ವಕ್ಷತ್ರಸ್ಯ ಮಧ್ಯೇ ತ್ವಂ ಯದ್ ವಕ್ಷ್ಯಸಿ ಸುಯೋಧನಮ್ ॥8॥
ಶೃಣ್ವತಃ ಸೂತಪುತ್ರಸ್ಯ ಶಕುನೇಸ್ತ್ವಂ ದುರಾತ್ಮನಃ ॥9॥
ಎಲೈ ಮಂದನೇ, ಸರ್ವಕ್ಷತ್ರಿಯರ ಮಧ್ಯೆ ಸೂತಪುತ್ರನಾದ ಕರ್ಣನು ಮತ್ತು ದುರಾತ್ಮನಾದ ಶಕುನಿಯು ಕೇಳುವಂತೆ ಹೇಳಬೇಕಾದ ನನ್ನ ಅಸಾಧ್ಯವಾದ ಮಾತುಗಳನ್ನು ಕೇಳು.
ಅಸ್ಮಾಭಿಃ ಪ್ರೀತಿಕಾಮೈಸ್ತು ಭ್ರಾತುರ್ಜ್ಯೇಷ್ಠಸ್ಯ ಶಾಸನಾತ್ |
ಮರ್ಷಿತಂ ತೇ ದುರಾಚಾರ ಸ ತ್ವಂ ನ ಬಹುಮನ್ಯಸೇ ॥10॥
ಎಲೈ ದುರಾಚಾರನೇ, ಅಣ್ಣನ ಶಾಸನದಂತೆ ನಿನ್ನ ಜೊತೆಯಲ್ಲಿ ಪ್ರೀತಿಯನ್ನು ಬಯಸಿದ ನಾವು ನಿನ್ನ ದೋಷಗಳನ್ನು ಮನ್ನಿಸಿದೆವು. ಅದನ್ನು ನೀನು ಗೌರವಿಸುತ್ತಿಲ್ಲ.
ಪ್ರೇಷಿತಶ್ಚ ಹೃಷೀಕೇಶಃ ಶಮಾಕಾಂಕ್ಷೀ ಕುರೂನ್ ಪ್ರತಿ |
ಕುಲಸ್ಯ ಹಿತಕಾಮೇನ ಧರ್ಮರಾಜೇನ ಧೀಮತಾ ॥11॥
ಮೇಧಾವಿಯಾದ ಧರ್ಮರಾಜನು ಕುಲದ ಹಿತವನ್ನು ಬಯಸಿ, ಸಂಧಿಯನ್ನು ಆಕಾಂಕ್ಷಿಸುತ್ತಾ ಕೌರವರ ಬಳಿಗೆ ಹೃಷೀಕೇಶನನ್ನು ಕಳುಹಿಸಿದನು.
ತ್ವಂ ಕಾಲಚೋದಿತೋ ನೂನಂ ಗಂತುಕಾಮೋ ಯಮಕ್ಷಯಮ್ |
ಗಚ್ಛಸ್ವಾಹವಮಸ್ಮಾಭಿಸ್ತಚ್ಚ ಶ್ವೋ ಭವಿತಾ ಧ್ರುವಮ್ ॥12॥
ನೀನು ಮೃತ್ಯುಚೋದಿತನಾಗಿ ಯಮಪಟ್ಟಣಕ್ಕೆ ಹೊರಡುವವನಾಗಿದ್ದೀಯೆ. ನಮ್ಮ ಜೊತೆಯಲ್ಲಿ ಯುದ್ಧಕ್ಕೆ ಬಾ. ನಾಳೆ ನಿಶ್ಚಯವಾಗಿ ನಿನ್ನ ಆಸೆಯು ಪೂರ್ಣಗೊಳ್ಳುತ್ತದೆ.
ಮಯಾಽಪಿ ಚ ಪ್ರತಿಜ್ಞಾತೋ ವಧಃ ಸಭ್ರಾತೃಕಸ್ಯ ತೇ |
ಸ ತಥಾ ಭವಿತಾ ಪಾಪ ನಾತ್ರ ಕಾರ್ಯಾ ವಿಚಾರಣಾ ॥13॥
ನಾನೂ ಸಹ ತಮ್ಮಂದಿರಿಂದ ಕೂಡಿದ ನಿನ್ನ ವಧೆಯನ್ನು ಪ್ರತಿಜ್ಞೆ ಮಾಡಿದ್ದೇನೆ. ಎಲೈ ಪಾಪನೇ, ಅದು ಹಾಗೆಯೇ ಆಗುವುದು. ಇದರಲ್ಲಿ ಸಂಶಯವಿಲ್ಲ.
ವೇಲಾಮತಿಕ್ರಮೇತ್ ಸದ್ಯಃ ಸಾಗರೋ ವರುಣಾಲಯಃ |
ಪರ್ವತಾಶ್ಚ ವಿಶೀರ್ಯೇಯುರ್ಮಯೋಕ್ತಂ ನ ಮೃಷಾ ಭವೇತ್ ॥14॥
ವರುಣಾಲಯವಾದ ಸಾಗರವು ದಡವನ್ನು ಮೀರಿಹೋದೀತು! ಪರ್ವತಗಳು ಬಿರಿದಾವು! ಆದರೆ ನನ್ನ ಮಾತು ಸುಳ್ಳಾಗಲಾರದು.
ಸಹಾಯಸ್ತೇ ಯದಿ ಯಮಃ ಕುಬೇರೋ ರುದ್ರ ಏವ ವಾ |
ಯಥಾಪ್ರತಿಜ್ಞಂ ದುರ್ಬುದ್ಧೇ ಪ್ರಕರಿಷ್ಯಂತಿ ಪಾಂಡವಾಃ ॥15॥
ದುಃಶಾಸನಸ್ಯ ರುಧಿರಂ ಪಾತಾ ಚಾಸ್ಮಿ ಯಥೇಪ್ಸಿತಮ್ ॥16॥
ಎಲೈ ದುರ್ಬುದ್ಧಿಯೇ, ನಿನ್ನ ಸಹಾಯಕ್ಕೆ ಯಮನಾಗಲೀ, ಕುಬೇರನಾಗಲೀ, ರುದ್ರನೇ ಆಗಲೀ ಬಂದರೂ ಪಾಂಡವರು ತಮ್ಮ ಪ್ರತಿಜ್ಞೆಗೆ ಅನುಗುಣವಾಗಿ ಕಾರ್ಯವನ್ನು ನೆರವೇರಿಸುವರು. ನನಗೆ ಇಷ್ಟಬಂದಂತೆ ನಾನು ದುಶ್ಶಾಸನನ ರಕ್ತವನ್ನು ಕುಡಿಯುವೆನು.
ಯಶ್ಚೇಹ ಪ್ರತಿಸಂರೋದ್ಧುಂ ಕ್ಷತ್ರಿಯೋ ಮಾಽಭಿಯಾಸ್ಯತಿ |
ಅಪಿ ಭೀಷ್ಮಂ ಪುರಸ್ಕೃತ್ಯ ತಂ ನೇಷ್ಯಾಮಿ ಯಮಕ್ಷಯಮ್ ॥17॥
ನನ್ನನ್ನು ಪ್ರತಿರೋಧಿಸಲು ಯಾರಾದರೂ ಕ್ಷತ್ರಿಯರು ಎದುರಾದರೆ ಅವರು ಭೀಷ್ಮರನ್ನೂ ಮುಂದೆ ಮಾಡಿಕೊಂಡು ಬಂದರೂ ಸಹ ಅವರನ್ನು ಯಮಲೋಕಕ್ಕೆ ಕಳುಹಿಸುವೆನು.
ಯಚ್ಚೈತದುಕ್ತಂ ವಚನಂ ಮಯಾ ಕ್ಷತ್ರಸ್ಯ ಸಂಸದಿ |
ಯಥೈತದ್ ಭವಿತಾ ಸತ್ಯಂ ತಥೈವಾತ್ಮಾನಮಾಲಭೇ ॥18॥
ನಾನು ಕ್ಷತ್ರಿಯರ ಸಮೂಹದಲ್ಲಿ ಏನು ಮಾತನಾಡಿದ್ದೇನೋ ಅದು ಹಾಗೆಯೇ ಸತ್ಯವಾಗುತ್ತದೆ ಎಂದು ನನ್ನ ಮೇಲೆ ಆಣೆ ಮಾಡಿ ಹೇಳುತ್ತಿದ್ದೇನೆ.
ಸಂಜಯಃ
ಭೀಮಸೇನವಚಃ ಶ್ರುತ್ವಾ ಸಹದೇವೋಽತ್ಯಮರ್ಷಣಃ |
ಕ್ರೋಧಸಂರಕ್ತನಯನಸ್ತತೋ ವಾಕ್ಯಮುವಾಚ ಹ ॥19॥
ಸಂಜಯ ಭೀಮಸೇನನ ಮಾತುಗಳನ್ನು ಕೇಳಿ ಬಹಳ ಕೋಪಗೊಂಡಿದ್ದ ಸಹದೇವನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಆಗ ಮಾತನಾಡಿದನು.
ಶೃಣು ಪಾಪ ವಚೋ ಮಹ್ಯಂ ಯದ್ವಾಚ್ಯೋ ಹಿ ಪಿತಾ ತ್ವಯಾ |
ನಾಸ್ಮಾಕಂ ಭವಿತಾ ಭೇದಃ ಕದಾಚಿತ್ ಕುರುಭಿಃ ಸಹ ॥20॥
ಧೃತರಾಷ್ಟ್ರಸ್ಯ ಸಂಬಂಧೋ ಯದಿ ನ ಸ್ಯಾತ್ ತ್ವಯಾ ಸಹ ॥21॥
ತ್ವಂ ತು ಲೋಕವಿನಾಶಾಯ ಧೃತರಾಷ್ಟ್ರಕುಲಸ್ಯ ಚ |

ಉತ್ಪನ್ನೋ ವೈರಪುರುಷಃ ಸ್ವಕುಲಘ್ನಶ್ಚ ಪಾಪಕೃತ್ ॥22॥
ಎಲೈ ಪಾಪಿಯೇ, ನೀನು ದುರ್ಯೋಧನನಿಗೆ ಹೇಳಬೇಕಾದ ನನ್ನ ಮಾತುಗಳನ್ನು ಕೇಳು. ನಿನಗೆ ಧೃತರಾಷ್ಟ್ರನ ಸಂಬಂಧವಿಲ್ಲದಿದ್ದರೆ ಕುರುಗಳಿಗೂ ಮತ್ತು ನಮಗೂ ವಿರೋಧವುಂಟಾಗುತ್ತಿರಲಿಲ್ಲ. ನೀನಾದರೂ ಧೃತರಾಷ್ಟ್ರನ ಕುಲಕ್ಕೂ ಮತ್ತು ಲೋಕಕ್ಕೂ ವಿನಾಶ ಮಾಡುವುದಕ್ಕಾಗಿ ಸ್ವಕುಲಘ್ನನಾಗಿ, ಪಾಪಕಾರಿಯಾಗಿ, ವೈರಪುರುಷನಾಗಿ ಜನಿಸಿದ್ದೀಯೆ.
ಜನ್ಮಪ್ರಭೃತಿ ಚಾಸ್ಮಾಕಂ ಪಿತಾ ತೇ ಪಾಪಪೂರುಷ |
ಅಹಿತಾನಿ ನೃಶಂಸಾನಿ ನಿತ್ಯಶಃ ಕರ್ತುಮಿಚ್ಛತಿ ॥23॥
ತಸ್ಯ ವೈರಾನುಷಂಗಸ್ಯ ಗಂತಾಸ್ಮ್ಯಂತಂ ಸುದುರ್ಗಮಮ್ ॥24॥
ಎಲೈ ಪಾಪಪುರುಷನೇ, ನಾವು ಹುಟ್ಟಿದಾಗಿನಿಂದಲೂ ನಿನ್ನ ತಂದೆಯು ನಮಗೆ ಅಹಿತವಾದ ಮತ್ತು ಕ್ರೂರವಾದ ಕಾರ್ಯಗಳನ್ನು ಎಸಗಿದ್ದಾನೆ. ಈ ದಿನ ದುರ್ಗಮವಾದ ಆ ವೈರದ ಪಾರವನ್ನು (ದಡವನ್ನು) ನಾನು ತಲುಪುವೆನು.
ಅಹಮಾದೌ ನಿಹತ್ಯ ತ್ವಾಂ ಶಕುನೇಃ ಸಂಪ್ರಪಶ್ಯತಃ |
ತತೋಽಸ್ಮಿ ಶಕುನಿಂ ಹಂತಾ ಮಿಷತಾಂ ಸರ್ವಧನ್ವಿನಾಮ್ ॥25॥
ಮೊದಲು ಶಕುನಿಯ ಕಣ್ಣೆದುರಿಗೆ ನಿನ್ನನ್ನು ಕೊಂದು ಮತ್ತು ಎಲ್ಲ ಧನುರ್ಧಾರಿಗಳು ನೋಡುವಂತೆ ಶಕುನಿಯನ್ನು ಕೊಲ್ಲುವೆನು.
ಸಂಜಯಃ
ಭೀಮಸ್ಯ ವಚನಂ ಶ್ರುತ್ವಾ ಸಹದೇವಸ್ಯ ಚೋಭಯೋಃ |
ಉವಾಚ ಫಲ್ಗುನೋ ವಾಕ್ಯಂ ಭೀಮಸೇನಂ ಸ್ಮಯನ್ನಿವ ॥26॥
ಸಂಜಯ ಅರ್ಜುನನು ಭೀಮಸೇನ ಮತ್ತು ಸಹದೇವರಿಬ್ಬರ ಮಾತುಗಳನ್ನು ಕೇಳಿ ನಗುವವನಂತೆ ಭೀಮಸೇನನನ್ನು ಕುರಿತು ಮಾತನಾಡಿದನು.
ಭೀಮಸೇನ ನ ತೇ ಸಂತಿ ಯೇಷಾಂ ವೈರಂ ತ್ವಯಾ ಸಹ |
ಮಂದಾ ಗೃಹೇಷು ಸುಖಿನೋ ಮೃತ್ಯುಪಾಶವಶಂ ಗತಾಃ ॥27॥
ಎಲೈ ಭೀಮಸೇನನೇ, ನೀನು ಯಾರ ಜೊತೆಯಲ್ಲಿ ವೈರವನ್ನು ಮಾಡುತ್ತೀಯೋ ಅವರು ಭೂಮಿಯಲ್ಲಿ ಇರುವುದಿಲ್ಲ. ಮೃತ್ಯುಪಾಶವಶರಾದ ಮಂದರು ಮನೆಗಳಲ್ಲಿ ಸುಖವಾಗಿರುತ್ತಾರೆ.
ಉಲೂಕಶ್ಚ ನ ತೇ ವಾಚ್ಯಃ ಪರುಷಂ ಪುರುಷೋತ್ತಮ |
ದೂತಾಃ ಕಿಮಪರಾಧ್ಯಂತೇ ಯಥೋಕ್ತಸ್ಯಾನುಭಾಷಿಣಃ ॥28॥
ಎಲೈ ಪುರುಷಶ್ರೇಷ್ಠನೇ, ಉಲೂಕನನ್ನು ಕುರಿತು ನೀನು ಒರಟಾಗಿ ಮಾತನಾಡಬೇಡ. ದೂತರು ಸ್ವಾಮಿಯು ಹೇಳಿದಂತೆ ಮಾತನಾಡುವವರು. ದೂತರಲ್ಲಿ ಯಾವ ಅಪರಾಧವಿದೆ?
ಸಂಜಯಃ
ಆರ್ತಂ ವಾತಾತ್ಮಜಂ ದೃಷ್ಟ್ವಾ ಕ್ರೋಧೇನಾಭಿಹತಂ ಭೃಶಮ್ |
ಉತ್ಸ್ಮಯನ್ನಿವ ದಾಶಾರ್ಹಃ ಕೈತವಂ ಪ್ರತ್ಯಭಾಷತ ॥29॥
ಸಂಜಯ ವಾಯುಪುತ್ರನಾದ ಭೀಮಸೇನನು ಬಹಳ ಕ್ರೋಧದಿಂದ ಕೂಡಿ ಆರ್ತನಾಗಿರುವುದನ್ನು ನೋಡಿದ ದಾಶಾರ್ಹನಾದ ಕೃಷ್ಣನು ಮುಗುಳ್ನಗೆಯನ್ನು ಹೊಂದಿದವನಂತೆ ಮಾತನಾಡಿದನು.
ಪ್ರಯಾಹಿ ಶೀಘ್ರಂ ಕೈತವ್ಯ ಬ್ರೂಯಾಶ್ಚೈವ ಸುಯೋಧನಮ್ |
ಶ್ರುತಂ ವಾಕ್ಯಂ ಗೃಹೀತೋಽರ್ಥೋ ಮತಂ ಯತ್ ತೇ ತಥಾಽಸ್ತು ತತ್ ॥
ಎಲೈ ಕೈತವ್ಯನೇ, ಬೇಗ ಹೋಗಿ ಸುಯೋಧನನಿಗೆ ನಿನ್ನ ವಾಕ್ಯವನ್ನು ಕೇಳಿದೆವು, ಅರ್ಥವು ತಿಳಿಯಿತು, ನಿನ್ನ ಅಭಿಪ್ರಾಯದಂತೆ ಆಗಲಿ ಎಂದು ಹೇಳು.
ಮದ್ವಚಶ್ಚಾಪಿ ಭೂಯಸ್ತೇ ವಕ್ತವ್ಯಃ ಸ ಸುಯೋಧನಃ |
ಶ್ವ ಇದಾನೀಂ ಪ್ರಪಶ್ಯೇಥಾಃ ಪುರುಷೋ ಭವ ದುರ್ಮತೇ ॥31॥
ಮತ್ತು ನನ್ನ ಮಾತನ್ನೂ ಸಹ ನೀನು ಸುಯೋಧನನಿಗೆ ತಿಳಿಸಬೇಕು ನಾಳೆ ಏನಾಗುವುದೆಂದು ನೀನು ನೋಡುವಿಯಂತೆ. ಎಲೈ ದುರ್ಮತಿಯೇ, ಪುರುಷನಾಗು.
ಮನ್ಯಸೇ ಯಚ್ಚ ಮೂಢ ತ್ವಂ ನ ಯೋತ್ಸ್ಯತಿ ಜನಾರ್ದನಃ |
ಸಾರಥ್ಯೇನ ವೃತಃ ಪಾರ್ಥೈರಿತಿ ತ್ವಂ ನ ಬಿಭೇಷಿ ಚ ॥32॥
ಎಲೈ ಮೂಢನೇ, ಜನಾರ್ದನನು ಯುದ್ಧವನ್ನು ಮಾಡುವುದಿಲ್ಲ. ಏಕೆಂದರೆ ಅವನು ಅರ್ಜುನನ ಸಾರಥ್ಯವನ್ನು ವಹಿಸಿದ್ದಾನೆ ಎಂದು ತಿಳಿದು ನೀನು ಹೆದರುತ್ತಿಲ್ಲ.
ಜಘನ್ಯಕಾಲಮಪ್ಯೇತನ್ನ ಭವೇತ್ ಸರ್ವಪಾರ್ಥಿವಾನ್ |
ನಿರ್ದಹೇಯಮಹಂ ಕ್ರೋಧಾತ್ ತೃಣಾನೀವ ಹುತಾಶನಃ ॥33॥
ಆದರೆ ಅದು ಯಾವ ಕಾಲದಲ್ಲಿಯೂ ಸಾಧ್ಯವಾಗುವುದಿಲ್ಲ. ನಾನು ನನ್ನ ಕ್ರೋಧದಿಂದಲೇ ಅಗ್ನಿಯು ಹುಲ್ಲುಕಡ್ಡಿಗಳನ್ನು ಸುಡುವಂತೆ ಎಲ್ಲಾ ರಾಜರನ್ನೂ ಸುಟ್ಟೇನು.
ಯುಧಿಷ್ಠಿರನಿಯೋಗಾಚ್ಚ ಫಲ್ಗುನಸ್ಯ ಮಹಾತ್ಮನಃ |
ಕರಿಷ್ಯೇ ಯುಧ್ಯಮಾನಸ್ಯ ಸಾರಥ್ಯಂ ವಿಜಿತಾತ್ಮನಃ ॥34॥
ಯುಧಿಷ್ಠಿರನ ಆದೇಶದಂತೆ ಯುದ್ಧಮಾಡುವ ಜಿತೇಂದ್ರಿಯನಾದ ಅರ್ಜುನನ ಸಾರಥ್ಯವನ್ನು ಮಾಡುವೆನು.
ಯದ್ಯುತ್ಪತಸಿ ಲೋಕಾಂಸ್ತ್ರೀನ್ ಯದ್ಯಾವಿಶಸಿ ಭೂತಳಮ್ |

ತತ್ರ ತತ್ರಾರ್ಜುನರಥಂ ಪ್ರಭಾತೇ ದ್ರಕ್ಷ್ಯಸೇಽಗ್ರತಃ ॥35॥
ನೀನು ಹಾರಿ ಮೂರುಲೋಕಗಳಿಗಿಂತ ಮೇಲೆ ಹೋದರೂ ಅಥವಾ ಭೂಮಿಯ ಒಳಗೆ ಪ್ರವೇಶಿಸಿದರೂ ಅಲ್ಲಲ್ಲಿ ನಾಳೆಯ ಪ್ರಾತಃಕಾಲದಲ್ಲಿ ನಿನ್ನ ಮುಂದೆ ಅರ್ಜುನನ ರಥವನ್ನು ನೋಡುವಿ.
ಯಚ್ಚಾಪಿ ಭೀಮಸೇನಸ್ಯ ಮನ್ಯಸೇ ಮೋಘಗರ್ಜಿತಮ್ |
ದುಃಶಾಸನಸ್ಯ ರುಧಿರಂ ಪೀತಮಿತ್ಯವಧಾರ್ಯತಾಮ್ ॥36॥
ಭೀಮಸೇನನ ಗರ್ಜನೆಯು ವ್ಯರ್ಥವೆಂದು ತಿಳಿದಿರುವಿಯಷ್ಟೆ? ದುಶ್ಶಾಸನನ ರಕ್ತವನ್ನು ಭೀಮಸೇನನು ಕುಡಿದಿದ್ದಾನೆಂದು ತಿಳಿ.
ನ ತ್ವಾಂ ಸಮೀಕ್ಷತೇ ಪಾರ್ಥೋ ನಾಪಿ ರಾಜಾ ಯುಧಿಷ್ಠಿರಃ |
ನ ಭೀಮಸೇನೋ ನ ಯಮೌ ಪ್ರತಿಕೂಲಪ್ರಭಾಷಿಣಮ್ ॥37॥
ಪ್ರತಿಕೂಲವಾಗಿ ಮಾತನಾಡುವ ನಿನ್ನನ್ನು ಅರ್ಜುನನಾಗಲೀ, ಯುಧಿಷ್ಠಿರನಾಗಲೀ, ಭೀಮಸೇನನಾಗಲೀ, ನಕುಲ-ಸಹದೇವರಾಗಲೀ ಗಣನೆಗೇ ತಂದುಕೊಳ್ಳುವುದಿಲ್ಲ.
ಏವಮುಕತ್ವ ಮಹಾಬಾಹುಃ ಕೇಶವೋ ರಾಜಸತ್ತಮ |
ಪುನರೇವ ಮಹಾಪ್ರಾಜ್ಞಂ ಯುಧಿಷ್ಠಿರಮುದೈಕ್ಷತ ॥38॥
ಎಲೈ ರಾಜಶ್ರೇಷ್ಠನೇ, ಮಹಾಬಾಹುವಾದ ಕೇಶವನು ಹೀಗೆ ಮಾತನಾಡಿ ಪುನಃ ಯುಧಿಷ್ಠಿರನನ್ನು ನೋಡಿದನು.
ಸೃಂಜಯಾನಾಂ ಚ ಸರ್ವೇಷಾಂ ಕೃಷ್ಣಸ್ಯ ಚ ಯಶಸ್ವಿನಃ |
ದ್ರುಪದಸ್ಯ ಸಪುತ್ರಸ್ಯ ವಿರಾಟಸ್ಯ ಚ ಸನ್ನಿಧೌ ॥39॥
ಭೂಮಿಪಾನಾಂ ಚ ಸರ್ವೇಷಾಂ ಮಧ್ಯೇ ವಾಕ್ಯಂ ಜಗಾದ ಹ ॥40॥
ಎಲ್ಲ ಸೃಂಜಯರ ಮತ್ತು ಕೀರ್ತಿಶಾಲಿಯಾದ ಕೃಷ್ಣನ, ಪುತ್ರಸಹಿತನಾದ ದ್ರುಪದ ಮತ್ತು ವಿರಾಟನ ಮತ್ತು ಎಲ್ಲಾ ರಾಜರ ಸನ್ನಿಧಿಯಲ್ಲಿ ಉಲೂಕನು ಪುನಃ ಮಾತನಾಡಿದನು.
ಉಲೂಕೋಽಪ್ಯರ್ಜುನಂ ಭೂಯೋ ಯಥೋಕ್ತಂ ವಾಕ್ಯಮಬ್ರವೀತ್ |
ಆಶೀವಿಷಮಿವ ಕ್ರುದ್ಧಂ ತುದನ್ ವಾಕ್ಯಶಲಾಕಯಾ ॥41॥
ಉಲೂಕನು ಮೊದಲೇ ಕ್ರುದ್ಧನಾಗಿದ್ದ ಅರ್ಜುನನನ್ನು ಮಾತುಗಳೆಂಬ ಸಲಾಕೆಯಿಂದ ಚುಚ್ಚುತ್ತಾ ಪುನಃ ಮಾತನಾಡಿದನು.
ಕೃಷ್ಣಾದೀಂಶ್ಚೈವ ತಾನ್ ಸರ್ವಾನ್ ಯಥೋಕ್ತಂ ವಾಕ್ಯಮಬ್ರವೀತ್ ॥
ಕೃಷ್ಣ ಮೊದಲಾದ ಇವರೆಲ್ಲರನ್ನೂ ಕುರಿತು ದುರ್ಯೋಧನನು ಹೇಳಿದಂತೆ ಮಾತನಾಡಿದನು.
ಉಲೂಕಸ್ಯ ತು ತದ್ವಾಕ್ಯಂ ಪಾಪಂ ದಾರುಣಮೀರಿತಮ್ |
ಶ್ರುತ್ವಾ ವಿಚುಕ್ಷುಭೇ ಪಾರ್ಥೋ ಲಲಾಟಂ ಚಾಪ್ಯಮಾರ್ಜಯತ್ ॥
ಉಲೂಕನು ಹೇಳಿದ ಆ ದಾರುಣವಾದ ಮಾತುಗಳನ್ನು ಕೇಳಿ ಅರ್ಜುನನು ಕೋಪಗೊಂಡು ಹಣೆಯನ್ನು ಒರೆಸಿಕೊಂಡನು.
ತದವಸ್ಥಂ ತದಾ ದೃಷ್ಟ್ವಾ ಪಾರ್ಥಂ ಸಾ ಸಮಿತಿರ್ನೃಪ |
ನಾಮೃಷ್ಯಂತ ಮಹಾರಾಜ ಪಾಂಡವಾನಾಂ ಮಹಾರಥಾಃ ॥44॥
ಎಲೈ ನೃಪನೇ, ಎಲೈ ರಾಜನೇ, ಆ ಅವಸ್ಥೆಯಲ್ಲಿದ್ದ ಅರ್ಜುನನನ್ನು ನೋಡಿದ ಆ ಸಭೆಯಲ್ಲಿದ್ದ ಪಾಂಡವರ ಮಹಾರಥರು ಅದನ್ನು ಸಹಿಸಲಿಲ್ಲ.
ಅಧಿಕ್ಷೇಪೇಣ ಕೃಷ್ಣಸ್ಯ ಪಾರ್ಥಸ್ಯ ಚ ಮಹಾತ್ಮನಃ |
ಶ್ರುತ್ವಾ ತೇ ಪುರುಷವ್ಯಾಘ್ರಾಃ ಕ್ರೋಧಾಜ್ಜಜ್ವಲುರಚ್ಯುತಾಃ ॥45॥
ಮಹಾತ್ಮನಾದ ಕೃಷ್ಣನ ಮತ್ತು ಅರ್ಜುನನ ನಿಂದಾವಚನವನ್ನು ಕೇಳಿ, ತಮ್ಮ ಗುಣಗಳಿಂದ ಚ್ಯುತರಾಗದಿದ್ದ ಆ ಪುರುಷವ್ಯಾಘ್ರರು ಕ್ರೋಧದಿಂದ ಪ್ರಜ್ವಲಿಸಿದರು.
ಧೃಷ್ಟದ್ಯುಮ್ನಃ ಶಿಖಂಡೀ ಚ ಸಾತ್ಯಕಿಶ್ಚ ಮಹಾರಥಃ |
ಕೇಕಯಾ ಭ್ರಾತರಃ ಪಂಚ ರಾಕ್ಷಸಶ್ಚ ಘಟೋತ್ಕಚಃ ॥46॥
ದ್ರೌಪದೇಯಾಭಿಮನ್ಯುಶ್ಚ ಧೃಷ್ಟಕೇತುಶ್ಚ ಪಾರ್ಥಿವಃ |
ಭೀಮಸೇನಶ್ಚ ವಿಕ್ರಾಂತೋ ಯಮಜೌ ಚ ಮಹಾರಥೌ ॥47॥
ಉತ್ಪೇತುರ್ಧಾರ್ತರಾಷ್ಟ್ರಸ್ಯ ಶ್ರುತ್ವಾ ಪಾಪಸ್ಯ ಭಾಷಿತಮ್ ॥48॥
ಧೃಷ್ಟದ್ಯುಮ್ನ, ಶಿಖಂಡೀ, ಮಹಾರಥನಾದ ಸಾತ್ಯಕಿ, ಐವರು ಕೇಕಯ ಸಹೋದರರು, ರಾಕ್ಷಸನಾದ ಘಟೋತ್ಕಚ, ದ್ರೌಪದಿಯ ಐವರು ಮಕ್ಕಳು, ಅಭಿಮನ್ಯು, ಧೃಷ್ಟಕೇತು, ಪರಾಕ್ರಮಶಾಲಿಯಾದ ಭೀಮ ಮತ್ತು ಮಹಾರಥರಾದ ನಕುಲ- ಸಹದೇವರು ಪಾಪಿಯಾದ ದುರ್ಯೋಧನನ ಮಾತುಗಳನ್ನು ಕೇಳಿ ಆಸನಗಳಿಂದ ಮೇಲೆದ್ದರು.
ಅರ್ಜುನಃ
ಕುತ್ಸನಾಂ ವಾಸುದೇವಸ್ಯ ಮಮ ಚೈವ ವಿಶೇಷತಃ |
ಶ್ರುತ್ವಾ ಭವಂತಃ ಸಂರಬ್ಧಾ ಅಸ್ಮಾಕಂ ಹಿತಕಾಮ್ಯಯಾ ॥49॥
ಅರ್ಜುನ ಕೃಷ್ಣನ ಮತ್ತು ನನ್ನ ನಿಂದಾವಚನಗಳನ್ನು ಕೇಳಿ, ನಮ್ಮ ಹಿತವನ್ನು ಬಯಸಿ ನೀವೆಲ್ಲರೂ ಕೋಪಗೊಂಡಿದ್ದೀರಿ.
ಪ್ರಭಾವಾದ್ ವಾಸುದೇವಸ್ಯ ಭವತಾಂ ಚ ಪ್ರಯತ್ನತಃ |
ಸಮಸ್ತಂ ಪಾರ್ಥಿವಂ ಕ್ಷತ್ರಂ ಸರ್ವಂ ನ ಗಣಯಾಮ್ಯಹಮ್ ॥50॥
ಕೃಷ್ಣನ ಅನುಗ್ರಹದಿಂದ ಮತ್ತು ನಿಮ್ಮೆಲ್ಲರ ಸಹಾಯದಿಂದ ನಾನು ಸಮಸ್ತವಾದ ಕ್ಷತ್ರಿಯ ಸಮೂಹವನ್ನು ಗಣನೆಗೇ ತಂದುಕೊಳ್ಳುವುದಿಲ್ಲ.

ಭವದ್ಭಿಃ ಸಮನುಜ್ಞಾತೋ ವಾಕ್ಯಮಸ್ಯ ಯದುತ್ತರಮ್ |
ಉಲೂಕೇ ಪ್ರಾಪಯಿಷ್ಯಾಮಿ ಯದ್ ವಕ್ಷ್ಯಾಮಿ ಸುಯೋಧನಮ್ ||
ನಿಮ್ಮ ಅನುಮತಿಯನ್ನು ಪಡೆದು, ಅವನ ಮಾತಿಗೆ ಉತ್ತರವಾಗಿ ಸುಯೋಧನನಿಗೆ ಹೇಳಬೇಕಾದ ಮಾತುಗಳನ್ನು ಉಲೂಕನ ಮೂಲಕ ಕಳುಹಿಸುವೆನು.
ಶ್ವೋ ಭೂತೇ ಕಥಿತಸ್ಯಾಸ್ಯ ಪ್ರತಿವಾಕ್ಯಂ ಚಮೂಮುಖೇ |
ಗಾಂಡೀವೇನಾಭಿಧಾಸ್ಯಾಮಿ ಕ್ಲೀಬಾ ಹಿ ವಚನೋತ್ತರಾಃ ||52||
ನಾಳೆಯ ದಿವಸ ಸೇನಾಮುಖದಲ್ಲಿ ಗಾಂಡೀವ ಧನುಸ್ಸಿನಿಂದ ನಿನ್ನ ಮಾತುಗಳಿಗೆ ಪ್ರತ್ಯುತ್ತರವನ್ನು ಕೊಡುವೆನು. ಕೇವಲ ಮಾತನಾಡುವವರು ನಪುಂಸಕರು.
ಸಂಜಯಃ
ತತಸ್ತೇ ಪಾರ್ಥಿವಾಃ ಸರ್ವೇ ಪ್ರಶಶಂಸುರ್ಧನಂಜಯಮ್ |
ತೇನ ವಾಕ್ಯೋಪಚಾರೇಣ ವಿಸ್ಮಿತಾ ರಾಜಸತ್ತಮಾಃ ||53||
ಸಂಜಯ ಆಗ ಅರ್ಜುನನ ಆ ವಾಕ್ಯಗಳಿಂದ ವಿಸ್ಮಿತರಾದ ಆ ರಾಜಶ್ರೇಷ್ಠರೆಲ್ಲರೂ ಅವನನ್ನು ಪ್ರಶಂಸಿಸಿದರು.
ಅನುನೀಯ ಚ ತಾನ್ ಸರ್ವಾನ್ ಯಥಾಯೋಗ್ಯಂ ಯಥಾವಯಃ |
ಧರ್ಮರಾಜಂ ತದಾ ವಾಕ್ಯಂ ತತ್ ಪ್ರಾಪ್ತಂ ಪ್ರತ್ಯಭಾಷತ ||54||
ಅರ್ಜುನನು ಅವರ ಯೋಗ್ಯತೆ ಮತ್ತು ವಯಸ್ಸಿಗೆ ತಕ್ಕಂತೆ ಎಲ್ಲರನ್ನೂ ಸಮಾಧಾನಗೊಳಿಸಿ, ಧರ್ಮರಾಜನನ್ನು ಕುರಿತು ಆ ಸಮಯಕ್ಕೆ ಉಚಿತವಾದ ಮಾತನ್ನು ಆಡಿದನು.
ಅರ್ಜುನಃ
ಆತ್ಮಾನಮವಮನ್ವಾನೋ ನಹಿ ಸ್ಯಾತ್ ಪಾರ್ಥಿವೋತ್ತಮಃ |
ತತೋತ್ತರಂ ಪ್ರವಕ್ಷ್ಯಾಮಿ ತವ ಶುಶ್ರೂಷಣೇ ರತಃ ||55||
ಅರ್ಜುನ ತನ್ನನ್ನು ಅವಮಾನಕ್ಕೆ ಗುರಿಯಾಗಿಸಿಕೊಂಡವನು ಶ್ರೇಷ್ಠನಾದ ರಾಜನಾಗಲಾರನು. ನಿನ್ನ ಸೇವೆಯಲ್ಲಿ ರತನಾಗಿ ದುರ್ಯೋಧನನ ಮಾತುಗಳಿಗೆ ನಾನು ನಾಳೆ ಉತ್ತರವನ್ನು ಕೊಡುವೆನು.
ಸಂಜಯಃ
ದುರ್ಯೋಧನಸ್ಯ ತದ್ವಾಕ್ಯಂ ನಿಶಮ್ಯ ಭರತರ್ಷಭಃ |
ಅತಿಲೋಹಿತನೇತ್ರಾಭ್ಯಾಮ್ ಆಶೀವಿಷ ಇವ ಶ್ವಸನ್ ||56||
ಸ್ಮಯಮಾನ ಇವ ಕ್ರೋಧಾತ್ ಸೃಕ್ಕಿಣೀ ಪರಿಲೇಲಿಹನ್ |
ಜನಾರ್ದನಮಭಿಪ್ರೇಕ್ಷ್ಯ ಗುಡಾಕೇಶೋ ಮಹಾಯಶಾಃ ||57||
ಅಭ್ಯಭಾಷತ ಕೈತವ್ಯಂ ಪ್ರಗೃಹ್ಯ ವಿಪುಲೌ ಭುಜೌ |
ಉಲೂಕಂ ಭರತಶ್ರೇಷ್ಠ ಸಾಮಪೂರ್ವಮಥೋರ್ಜಿತಮ್ ||58||
ಸಂಜಯ ಎಲೈ ಭರತಶ್ರೇಷ್ಠನೇ, ದುರ್ಯೋಧನನ ಆ ಮಾತುಗಳನ್ನು ಕೇಳಿ ಭರತರ್ಷಭನಾದ ಅರ್ಜುನನು ಬಹಳ ಕೆಂಪಾದ ಕಣ್ಣುಗಳನ್ನು ಹೊಂದಿ, ಸರ್ಪದಂತೆ ಉಸಿರನ್ನು ಬಿಡುತ್ತಾ, ಕ್ರೋಧದಿಂದ ನಗುತ್ತಾ, ಕಟಬಾಯಿಯನ್ನು ಸವರಿಕೊಳ್ಳುತ್ತಾ, ಕೃಷ್ಣನನ್ನು ನೋಡಿ, ತನ್ನ ಎರಡು ವಿಪುಲವಾದ ಭುಜಗಳನ್ನು ಎತ್ತಿ ಮಹಾಕೀರ್ತಿವಂತನೂ, ಗುಡಾಕೇಶನೂ ಆದ ಅವನು ಉಲೂಕನನ್ನು ಕುರಿತು ಮೊದಲು ಮೃದುವಾಗಿಯೂ ಅನಂತರ ಉಗ್ರವಾಗಿಯೂ ಮಾತನಾಡಿದನು.
ಉಲೂಕ ಗಚ್ಛ ಕೈತವ್ಯ ಬ್ರೂಹಿ ತಾತ ಸುಯೋಧನಮ್ |
ಕೃತಘ್ನಂ ವೈರಪುರುಷಂ ದುರ್ಮತಿಂ ಕುಲಪಾಂಸನಮ್ ||59||
ಎಲೈ ಕೈತವ್ಯನಾದ ಉಲೂಕನೇ, ಪ್ರೀತಿಪಾತ್ರನೇ, ಕೃತಘ್ನನೂ, ವೈರಪುರುಷನೂ, ದುರ್ಮತಿಯೂ, ಕುಲಪಾಂಸನನೂ ಆದ ಸುಯೋಧನನ ಬಳಿಗೆ ಹೋಗಿ (ಇಲ್ಲಿ ನಡೆದುದನ್ನು ಹೇಳುವವನಾಗು).
ಪಾಂಡವೇಷು ಯಥಾ ಪಾಪ ನಿತ್ಯಂ ಜಿಹ್ಮಂ ಪ್ರವರ್ತಸೇ ||60||
ಸ್ವವೀರ್ಯಂ ಸಮ್ಯಗಾಶ್ರಿತ್ಯ ಯಃ ಸಮಾಹ್ವಯತೇ ಪರಾನ್ |
ಅಭೀತಃ ಪೂರಯನ್ ವಾಕ್ಯಮೇಷ ವೈ ಕ್ಷತ್ರಿಯಃ ಪುಮಾನ್ ||61||
ಎಲೈ ಪಾಪಿಯೇ, ನೀನು ಪಾಂಡವರ ವಿಷಯದಲ್ಲಿ ಯಾವಾಗಲೂ ಕಪಟದಿಂದ ವರ್ತಿಸುತ್ತಿದ್ದೀಯೆ. ಯಾವನು ತನ್ನ ಸಾಮರ್ಥ್ಯವನ್ನು ಆಶ್ರಯಿಸಿ, ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸಿ, ಭಯವಿಲ್ಲದೆ ತನ್ನ ಪ್ರತಿಜ್ಞೆಯನ್ನು ನೆರವೇರಿಸುತ್ತಾನೆಯೋ ಅವನು ಕ್ಷತ್ರಿಯನಾದ ಪುರುಷ.
ಪರವೀರ್ಯಂ ಸಮಾಶ್ರಿತ್ಯ ಯಃ ಸಮಾಹ್ವಯತೇ ಪರಾನ್ |
ಕ್ಷತ್ರಬಂಧುರಶಕ್ತತ್ವಾತ್ ಲೋಕೇ ಸ ಪುರುಷಾಧಮಃ ||62||
ಯಾವನು ತಾನು ಅಶಕ್ತನಾದುದರಿಂದ ಇನ್ನೊಬ್ಬರ ಸಾಮರ್ಥ್ಯವನ್ನು ಆಶ್ರಯಿಸಿ ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆಯೋ ಅಂತಹ ಕ್ಷತ್ರಬಂಧುವು ಲೋಕದಲ್ಲಿ ಪುರುಷಾಧಮನೆನಿಸುತ್ತಾನೆ.
ಸ ಪಾಪಃ ಕ್ಷತ್ರಿಯೋ ಭೂತ್ವಾ ಅಸ್ಮಾನಾಹೂಯ ಸಂಯುಗೇ |
ಮಾನ್ಯಾಮಾನ್ಯಾನ್ ಪುರಸ್ಕೃತ್ಯ ಯುದ್ಧಂ ಮಾऽಗಾಃ ಕುಲಾಧಮ ||63||
ಅಂತಹ ಪಾಪಿಕ್ಷತ್ರಿಯನಾದ ನೀನು ಯುದ್ಧಕ್ಕೆ ನಮ್ಮನ್ನು ಆಹ್ವಾನಿಸಿ, ಎಲೈ ಕುಲಾಧಮನೇ, ಮಾನ್ಯರನ್ನೂ, ಅಮಾನ್ಯರನ್ನೂ ಮುಂದೆ ಮಾಡಿಕೊಂಡು ಯುದ್ಧಕ್ಕೆ ಬರಬೇಡ.

ಆತ್ಮವೀರ್ಯಂ ಸಮಾಶ್ರಿತ್ಯ ಭೃತ್ಯವೀರ್ಯಂ ಚ ಕೌರವ |
ಆಹ್ವಯಸ್ವ ರಣೇ ಪಾರ್ಥಾನ್ ಸರ್ವಥಾ ಕ್ಷತ್ರಿಯೋ ಭವ ॥64॥
ಎಲೈ ಕೌರವನೇ, ನಿನ್ನ ಸಾಮರ್ಥ್ಯವನ್ನು, ನಿನ್ನ ಭೃತ್ಯರ ಸಾಮರ್ಥ್ಯವನ್ನು ಆಶ್ರಯಿಸಿ ಯುದ್ಧಕ್ಕೆ ಪಾಂಡವರನ್ನು ಆಹ್ವಾನಿಸು. ಸರ್ವಥಾ ಕ್ಷತ್ರಿಯನಾಗು.
ಪರವೀರ್ಯಂ ಸಮಾಶ್ರಿತ್ಯ ಯಃ ಸಮಾಹ್ವಯತೇ ಪರಾನ್ |
ಅಶಕ್ತಃ ಸ್ವಯಮಾದಾತುಮೇತದೇವ ನಪುಂಸಕಮ್ ॥65॥
ತಾನು ಸ್ವತಃ ಶತ್ರುಗಳನ್ನು ಎದುರಿಸಲು ಅಶಕ್ತನಾಗಿ, ಇನ್ನೊಬ್ಬರ ಸಾಮರ್ಥ್ಯವನ್ನು ಆಶ್ರಯಿಸಿ ಯಾವನು ಶತ್ರುಗಳನ್ನು ಆಹ್ವಾನಿಸುತ್ತಾನೋ ಅದನ್ನೇ ನಪುಂಸಕತ್ವವೆಂದು ಹೇಳುತ್ತಾರೆ.
ಯಸ್ತ್ವಂ ಪರೇಷಾಂ ವೀರ್ಯೇಣ ಆತ್ಮಾನಂ ಬಹುಮನ್ಯಸೇ |
ಕಥಮೇವಮಶಕ್ತಸ್ತ್ವಮಸ್ಮಾನ್ ಸಮಭಿಗರ್ಜಸಿ ॥66॥
ನೀನು ಇನ್ನೊಬ್ಬರ ಸಾಮರ್ಥ್ಯವನ್ನು ಅವಲಂಬಿಸಿ ನಿನ್ನನ್ನು ದೊಡ್ಡವನೆಂದು ತಿಳಿಯುತ್ತಿದ್ದೀಯೆ. ಹೀಗೆ ಅಶಕ್ತನಾದ ನೀನು ನಮ್ಮನ್ನು ಕುರಿತು ಏಕೆ ಗರ್ಜಿಸುತ್ತಿದ್ದೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ಉಲೂಕದೂತಾಗಮನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೊಂದನೆಯ ಅಧ್ಯಾಯ
ಅರ್ಜುನನಿಂದ ಉಲೂಕನ ಮೂಲಕ ದುರ್ಯೋಧನನಿಗೆ ಪ್ರತಿಸಂದೇಶ.
ಕರ್ಣನಿಂದ ಯುದ್ಧಸನ್ನಾಹದ ಉದ್ಘೋಷಣೆ.
ಸಂಜಯಃ
ದುರ್ಯೋಧನಸ್ಯ ತದ್ವಾಕ್ಯಂ ನಿಶಮ್ಯ ಭರತರ್ಷಭಃ |
ನೇತ್ರಾಭ್ಯಾಮತಿತಾಮ್ರಾಭ್ಯಾಂ ಕೈತವ್ಯಂ ಸಮದೃಶ್ಯತ ॥1॥
ಸಂಜಯ ದುರ್ಯೋಧನನ ಆ ಮಾತುಗಳನ್ನು ಕೇಳಿದ ಭರತಶ್ರೇಷ್ಠನಾದ ಅರ್ಜುನನು ಬಹಳ ಕೆಂಪಾದ ಕಣ್ಣುಗಳಿಂದ ಉಲೂಕನನ್ನು ನೋಡಿದನು.
ಸ ಕೇಶವಮಭಿಪ್ರೇಕ್ಷ್ಯ ಗುಡಾಕೇಶೋ ಮಹಾಯಶಾಃ |
ಅಭ್ಯಭಾಷತ ಕೈತವ್ಯಂ ಪ್ರಗೃಹ್ಯ ವಿಪುಲಂ ಭುಜಮ್ ॥2॥
ಮಹಾಕೀರ್ತಿವಂತನಾದ ಗುಡಾಕೇಶನು ಕೃಷ್ಣನನ್ನು ನೋಡುತ್ತಾ ಉಲೂಕನನ್ನು ಕುರಿತು ತನ್ನ ಎರಡು ವಿಪುಲವಾದ ಭುಜಗಳನ್ನು ಎತ್ತಿ ಮಾತನಾಡಿದನು.
ಸ್ವವೀರ್ಯಂ ಯಃ ಸಮಾಶ್ರಿತ್ಯ ಸಮಾಹ್ವಯತಿ ವೈ ಪರಾನ್ |
ಅಭೀತೋ ಯುದ್ಧ್ಯತೇ ಶತ್ರೂನ್ ಸ ವೈ ಪುರುಷ ಉಚ್ಯತೇ ॥3॥
ತನ್ನ ಸಾಮರ್ಥ್ಯವನ್ನು ಅವಲಂಬಿಸಿ ಯಾರು ಅಭೀತನಾಗಿ ಶತ್ರುಗಳನ್ನು ಯುದ್ಧಕ್ಕೆ ಕರೆಯುತ್ತಾನೆಯೋ ಅವನು ಪುರುಷನೆನಿಸುತ್ತಾನೆ.
ಪರವೀರ್ಯಂ ಸಮಾಶ್ರಿತ್ಯ ಯಃ ಸಮಾಹ್ವಯತೇ ಪರಾನ್ |
ಕ್ಷತ್ರಬಂಧುರಶಕ್ತತ್ವಾಲ್ಲೋಕೇ ಸ ಪುರುಷಾಧಮಃ ॥4॥
ತಾನು ಅಶಕ್ತನಾದುದರಿಂದ ಇನ್ನೊಬ್ಬರ ಸಾಮರ್ಥ್ಯವನ್ನು ಅವಲಂಬಿಸಿ ಯಾವನು ಶತ್ರುಗಳನ್ನು ಯುದ್ಧಕ್ಕೆ ಕರೆಯುತ್ತಾನೆಯೋ ಅಂತಹ ಕ್ಷತ್ರಬಂಧುವು ಪುರುಷಾಧಮನೆನಿಸುತ್ತಾನೆ.
ಅರ್ಜುನಃ
ಸ ತ್ವಂ ಪರೇಷಾಂ ವೀರ್ಯೇಣ ಮನ್ಯಸೇ ವೀರ್ಯಮಾತ್ಮನಃ |
ಸ್ವಯಂ ಕಾಪುರುಷೋ ಮೂಢ ಪರಾಂಶ್ಚ ಕ್ಷೇಪ್ತುಮಿಚ್ಛಸಿ ॥5॥
ಅರ್ಜುನ ಅಂತಹ ನೀನು ಇನ್ನೊಬ್ಬರ ಸಾಮರ್ಥ್ಯದಿಂದ ನೀನು ಸಮರ್ಥನೆಂದು ತಿಳಿದಿದ್ದೀಯೆ. ಎಲೈ ಮೂಢನೇ, ನೀನು ಸ್ವತಃ ತುಚ್ಛಪುರುಷ. ಇನ್ನೊಬ್ಬರನ್ನು ನಿಂದಿಸಲು ಬಯಸುತ್ತೀಯೆ.
ಯಸ್ತ್ವಂ ವೃದ್ಧಂ ಸರ್ವರಾಜ್ಞಾಂ ಹಿತಬುದ್ಧಿಂ ಜಿತೇಂದ್ರಿಯಮ್ |
ಮರಣಾಯ ಮಹಾಪ್ರಾಜ್ಞಂ ದೀಕ್ಷಯಿತ್ವಾ ವಿಕತ್ಥಸೇ ॥6॥
ಭಾವಸ್ತೇ ವಿದಿತೋಽಸ್ಮಾಭಿರ್ದುರ್ಬುದ್ಧೇ ಕುಲಪಾಂಸನ |
ನ ಹನಿಷ್ಯಂತಿ ಗಾಂಗೇಯಂ ಪಾಂಡವಾ ಘೃಣಯೇತಿ ಹ ॥7॥
ಎಲೈ ದುರ್ಬುದ್ಧಿಯೇ, ಎಲೈ ಕುಲನಾಶನನೇ, ಯಾವ ನೀನು ಎಲ್ಲ ರಾಜರಿಗಿಂತಲೂ ವೃದ್ಧನೂ, ಹಿತಬುದ್ಧಿಯುಳ್ಳವನೂ, ಜಿತೇಂದ್ರಿಯನೂ, ಮಹಾಪ್ರಾಜ್ಞನೂ ಆದ ಭೀಷ್ಮರನ್ನು ಸೇನಾಪತಿಯಾಗಿ ಮರಣಕ್ಕಾಗಿ ದೀಕ್ಷೆಗೊಳಿಸಿ ಗರ್ವದ ಮಾತುಗಳನ್ನು ಆಡುತ್ತಿದ್ದೀಯಷ್ಟೆ? ಪಾಂಡವರು ಕರುಣೆಯಿಂದ ಕೂಡಿದವರಾಗಿ ಭೀಷ್ಮರನ್ನು ಕೊಲ್ಲುವುದಿಲ್ಲ ಎಂಬ ನಿನ್ನ ಅಭಿಪ್ರಾಯವು ನಮಗೆ

ತಿಳಿದಿದೆ.
ಯಸ್ಯ ವೀರ್ಯಂ ಸಮಾಶ್ರಿತ್ಯ ಧಾರ್ತರಾಷ್ಟ್ರ ವಿಕತ್ಥಸೇ |
ಹಂತಾಸ್ಮಿ ಪ್ರಥಮಂ ಭೀಷ್ಮಂ ಮಿಷತಾಂ ಸರ್ವಧನ್ವಿನಾಮ್ ॥8॥
ಎಲೈ ಧೃತರಾಷ್ಟ್ರಪುತ್ರನೇ, ಯಾವ ಭೀಷ್ಮರ ಸಾಮರ್ಥ್ಯವನ್ನು ಅವಲಂಬಿಸಿ ಪ್ರತಾಪದ ಮಾತುಗಳನ್ನು ಆಡುತ್ತಿದ್ದೀಯೋ ಅಂತಹ ಭೀಷ್ಮರನ್ನು ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆಯೇ ನಾನು ಮೊದಲು ಕೊಲ್ಲುವೆನು.
ಕೈತವ್ಯ ಗತ್ವಾ ಭರತಾನ್ ಸಮೇತ್ಯ
ಸುಯೋಧನಂ ಧಾರ್ತರಾಷ್ಟ್ರಂ ಬ್ರುವೀಹಿ |
ತಥೇತ್ಯುವಾಚಾರ್ಜುನಃ ಸವ್ಯಸಾಚೀ
ನಿಶಾವ್ಯಪಾಯೇ ಭವಿತಾ ವಿಮರ್ದಃ ॥9॥
ಎಲೈ ಕೈತವ್ಯನೇ, ಭರತರ ಸಮೀಪಕ್ಕೆ ಹೋಗಿ ಧೃತರಾಷ್ಟ್ರಪುತ್ರನಾದ ದುರ್ಯೋಧನನನ್ನು ಕುರಿತು ರಾತ್ರಿಯು ಕಳೆದ ಮೇಲೆ ಸಂಘರ್ಷ ಉಂಟಾಗುವುದು ಎಂದು ಹೇಳುವವನಾಗು ಎಂದು ಸವ್ಯಸಾಚಿಯಾದ ಅರ್ಜುನನು ಹೇಳಿದನು.
ಯತ್ ತ್ವಾಽಬ್ರುವೀದ್ ವಾಕ್ಯಮದೀನಸತ್ತ್ವೋ
ಮಧ್ಯೇ ಕುರೂನ್ ಹರ್ಷಯನ್ ಸತ್ಯಸಂಧಃ |
ಅಹಂ ಹಂತಾ ಸೃಂಜಯಾನಾಮನೀಕಂ
ಸಾಲ್ವೇಯಕಾಂಶ್ಚೇತಿ ಮಮೈಷ ಭಾರಃ ॥10॥
ಹನ್ಯಾಮ್ಯಹಂ ದ್ರೋಣಮೃತೇಽಪಿ ಲೋಕಂ
ನ ಮೇ ಭಯಂ ವಿದ್ಯತೇ ಪಾಂಡವೇಭ್ಯಃ |
ತತೋ ಹಿ ಮೇ ಲಬ್ಧಮದಶ್ಚ ರಾಜ್ಯಮ್
ಆಪದ್ಗತಾಃ ಪಾಂಡವಾಶ್ಚೇತಿ ಭಾವಃ ॥11॥
ಸತ್ಯಸಂಧರೂ, ದೈನ್ಯವಿಲ್ಲದ ಬಲವುಳ್ಳವರೂ ಆದ ಭೀಷ್ಮರು ಕೌರವರನ್ನು ಸಂತೋಷಪಡಿಸುತ್ತಾ ಸಭಾಮಧ್ಯದಲ್ಲಿ ನಿನಗೆ `ನಾನು ಸೃಂಜಯರ ಮತ್ತು ಸಾಲ್ವೇಯರ ಯೋಧರನ್ನು ಕೊಲ್ಲುವೆನು. ಇದು ನನ್ನ ಜವಾಬ್ದಾರಿ. ದ್ರೋಣರಿಲ್ಲದಿದ್ದರೂ ನಾನು ಎಲ್ಲರನ್ನೂ ಕೊಲ್ಲುವೆನು. ನನಗೆ ಪಾಂಡವರಿಂದ ಭಯವಿಲ್ಲ' ಎಂದು ಹೇಳಿದರಷ್ಟೆ? ಆದ್ದರಿಂದ ನೀನು ನಾನು ಈ ರಾಜ್ಯವನ್ನು ಪಡೆದಿದ್ದೇನೆ. ಪಾಂಡವರು ಆಪತ್ತಿನಲ್ಲಿ ಸಿಲುಕಿದ್ದಾರೆ ಎಂಬ ಅಭಿಪ್ರಾಯವನ್ನು ಹೊಂದಿದ್ದೀಯೆ.
ಸ ದರ್ಪಪೂರ್ಣೋ ನ ಸಮೀಕ್ಷಸೇ ತ್ವಂ
ಅನರ್ಥಮಾತ್ಮನ್ಯಪಿ ವರ್ತಮಾನಮ್ ॥12॥
ದರ್ಪಪೂರ್ಣನಾದ ನೀನು ನಿನಗೆ ಒದಗಲಿರುವ ಅನರ್ಥವನ್ನು ಗಮನಿಸುತ್ತಿಲ್ಲ.
ತಸ್ಮಾದಹಂ ತೇ ಪ್ರಥಮಂ ಸಮೂಹೇ
ಹಂತಾ ಸಮಕ್ಷಂ ಕುರುವೃದ್ಧಮೇವ |
ಸೂರ್ಯೋದಯೇ ಯುಕ್ತಸೇನಃ ಪ್ರತೀಕ್ಷ
ಧ್ವಜೀ ರಥೀ ರಕ್ಷ ಚ ಸತ್ಯಸಂಧಮ್ ॥13॥
ಆದ್ದರಿಂದ ನಾನು ನಿನ್ನ ಸೈನ್ಯಸಮುದಾಯದಲ್ಲಿ ನಿನ್ನ ಎದುರಿಗೇ ಮೊದಲು ಕುರುವೃದ್ಧರಾದ ಭೀಷ್ಮರನ್ನು ಕೊಲ್ಲುವೆನು. ಸೂರ್ಯೋದಯದ ವೇಳೆಗೆ ಸೈನ್ಯವನ್ನು ಹೂಡಿ, ಧ್ವಜಯುಕ್ತವಾದ ರಥವನ್ನು ಏರಿ, ಸತ್ಯಸಂಧರಾದ ಭೀಷ್ಮರನ್ನು ರಕ್ಷಿಸು.
ಅಹಂ ಹಿ ವಃ ಪಶ್ಯತಾಂ ವೈ ಸಮಕ್ಷಂ
ಭೀಷ್ಮಂ ರಥಾತ್ ಪಾತಯಿಷ್ಯಾಮಿ ಬಾಣೈಃ ॥14॥
ನಾನಾದರೂ ನೀವೆಲ್ಲರೂ ನೋಡುವಂತೆಯೇ ಬಾಣಗಳಿಂದ ಭೀಷ್ಮರನ್ನು ರಥದಿಂದ ಕೆಡವುವೆನು.
ಶ್ವೋಭೂತೇ ಕತ್ಥನಾವಾಕ್ಯಂ ವಿಜ್ಞಾಸ್ಯಸಿ ಸುಯೋಧನ |
ಆಚಿತಂ ಶರಜಾಲೇನ ಮಯಾ ದೃಷ್ಟ್ವಾ ಪಿತಾಮಹಮ್ ॥15॥
ಎಲೈ ಸುಯೋಧನನೇ, ನಾಳೆ ದಿವಸ ನಾನು ಪ್ರಯೋಗಿಸಿದ ಶರಜಾಲಗಳಿಂದ ತುಂಬಿಹೋದ ಪಿತಾಮಹರನ್ನು ನೋಡಿ, ನಿನ್ನ ಹೊಗಳಿಕೆಯ ವಾಕ್ಯಗಳ ಬೆಲೆಯನ್ನು ನೀನು ತಿಳಿಯುವಿ.
ಯದುಕ್ತಶ್ಚ ಸಭಾಮಧ್ಯೇ ಪುರುಷೋ ಹ್ರಸ್ವದರ್ಶನಃ |
ಕ್ರುದ್ಧೇನ ಭೀಮಸೇನೇನ ಭ್ರಾತಾ ದುಃಶಾಸನಸ್ತವ ॥16॥
ಅಧರ್ಮಜ್ಞೋ ನಿತ್ಯವೈರೀ ಪಾಪಬುದ್ಧಿರ್ನೃಶಂಸಕೃತ್ |
ಸ ತಾಂ ಪ್ರತಿಜ್ಞಾಮಚಿರಾದ್ ದ್ರಕ್ಷ್ಯಸೇ ತ್ವಂ ಸುಯೋಧನ ॥17॥
ಸಭಾ ಮಧ್ಯದಲ್ಲಿ ಕ್ರುದ್ಧನಾದ ಭೀಮಸೇನನು ಅಧರ್ಮಜ್ಞನೂ, ನಿತ್ಯವೈರಿಯೂ, ಪಾಪಬುದ್ಧಿಯೂ, ಕ್ರೂರಕರ್ಮಿಯೂ, ದೀರ್ಘದರ್ಶಿಯಲ್ಲದವನೂ ಆದ ನಿನ್ನ ತಮ್ಮನಾದ ದುಶ್ಶಾಸನನನ್ನು ಕುರಿತು ಏನು ಹೇಳಿದನೋ ಎಲೈ ಸುಯೋಧನನೇ, ಅವನು ಆ ಪ್ರತಿಜ್ಞೆಯನ್ನು ನೆರವೇರಿಸುವುದನ್ನು ನೀನು ಶೀಘ್ರವಾಗಿ ನೋಡುವಿ.
ಅಭಿಮಾನಸ್ಯ ದರ್ಪಸ್ಯ ಕ್ರೋಧಪಾರುಷ್ಯಯೋಸ್ತಥಾ |
ನೈಷ್ಠುರ್ಯಸ್ಯಾವಲೇಪಸ್ಯ ಆತ್ಮಸಂಭಾವನಸ್ಯ ಚ ॥18॥
ನೃಶಂಸತಾಯಾಸ್ತೈಕ್ಷ್ಣ್ಯಸ್ಯ ಧರ್ಮವಿದ್ವೇಷಣಸ್ಯ ಚ |
ಅಧರ್ಮಸ್ಯಾಪವಾದಸ್ಯ ವೃದ್ಧಾತಿಕ್ರಮಣಸ್ಯ ಚ ॥19॥

ದರ್ಶನಸ್ಯ ಚ ವಕ್ರಸ್ಯ ಕೃತ್ಸ್ನಸ್ಯಾಪನಯಸ್ಯ ಚ |
ದ್ರಕ್ಷ್ಯಸಿ ತ್ವಂ ಫಲಂ ತೀವ್ರಮಚಿರೇಣ ಸುಯೋಧನ ॥20॥
ಎಲೈ ಸುಯೋಧನನನೇ, ಅಭಿಮಾನದ, ದರ್ಪದ, ಕ್ರೋಧ-ಪಾರುಷ್ಯಗಳ, ನಿಷ್ಠುರ ಮಾತುಗಳ, ಅಹಂಕಾರದ, ಆತ್ಮಸಂಭಾವನೆಯ, ಕ್ರೌರ್ಯದ, ತೀಕ್ಷ್ಣತೆಯ, ಧರ್ಮವಿದ್ವೇಷದ, ಅಧರ್ಮದ, ನಿಂದೆಯ, ವೃದ್ಧರ ಶಾಸನಲಂಘನದ, ವಕ್ರದೃಷ್ಟಿಯ ಮತ್ತು ಸಮಗ್ರವಾದ ಅಪಚಾರಗಳ ತೀವ್ರವಾದ ಫಲವನ್ನು ನೀನು ಶೀಘ್ರದಲ್ಲಿಯೇ ನೋಡುವಿ.
ವಾಸುದೇವದ್ವಿತೀಯೇ ಹಿ ಮಯಿ ಕ್ರುದ್ಧೇ ನರಾಧಮ |
ಆಶಾ ತೇ ಜೀವಿತೇ ಮೂಢ ರಾಜ್ಯೇ ವಾ ಕೇನ ಹೇತುನಾ ॥21॥
ಎಲೈ ನರಾಧಮನೇ, ಕೃಷ್ಣನ ಸಹಾಯವುಳ್ಳ ನಾನು ಕ್ರುದ್ಧನಾಗಿರುವಾಗ ಎಲೈ ಮೂಢನೇ, ನಿನಗೆ ರಾಜ್ಯದ ಆಸೆಯಾಗಲೀ, ಜೀವನದ ಆಸೆಯಾಗಲೀ ಯಾವ ಕಾರಣದಿಂದ ಉಂಟಾಗುತ್ತವೆ?
ಶಾಂತೇ ಭೀಷ್ಮೇ ತಥಾ ದ್ರೋಣೇ ಸೂತಪುತ್ರೇ ಚ ಪಾತಿತೇ |
ನಿರಾಶೋ ಜೀವಿತೇ ರಾಜ್ಯೇ ಪುತ್ರೇಷು ಚ ಭವಿಷ್ಯಸಿ ॥22॥
ಭೀಷ್ಮರು ಶಾಂತರಾದ ಮೇಲೆ, ದ್ರೋಣರು ಮತ್ತು ಕರ್ಣನು ಹತರಾದ ಮೇಲೆ, ನೀನು ನಿನ್ನ ಜೀವನದಲ್ಲಿಯೂ, ರಾಜ್ಯದಲ್ಲಿಯೂ ಮತ್ತು ಪುತ್ರರಲ್ಲಿಯೂ ಆಸೆಯನ್ನು ತೊರೆಯುವಿ.
ಭ್ರಾತೄಣಾಂ ನಿಧನಂ ದೃಷ್ಟ್ವಾ ಪುತ್ರಾಣಾಂ ಚ ಸುಯೋಧನ |
ಭೀಮಸೇನೇನ ನಿಹತೋ ದುಷ್ಕೃತಾನಿ ಸ್ಮರಿಷ್ಯಸಿ ॥23॥
ಎಲೈ ಸುಯೋಧನನೇ, ತಮ್ಮಂದಿರ ಮತ್ತು ಮಕ್ಕಳ ವಧೆಯನ್ನು ನೋಡಿ, ಭೀಮಸೇನನಿಂದ ಹತನಾಗಿ ನೀನು ಮಾಡಿದ ಪಾಪಕರ್ಮಗಳನ್ನು ಸ್ಮರಿಸುವಿ.
ನ ದ್ವಿತೀಯಾಂ ಪ್ರತಿಜ್ಞಾಂ ಹಿ ಪ್ರತಿಜಾನಾಮಿ ಕೈತವ |
ಸತ್ಯಂ ಬ್ರವೀಮ್ಯಹಂ ಹ್ಯೇತತ್ ಸರ್ವಂ ಸತ್ಯಂ ಭವಿಷ್ಯತಿ ॥24॥
ಎಲೈ ಮೋಸಗಾರನೇ, ನಾನು ಎರಡನೆಯ ಬಾರಿಗೆ ಪ್ರತಿಜ್ಞೆಯನ್ನು ಮಾಡುವುದಿಲ್ಲ. ನಾನು ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ. ನನ್ನ ಮಾತೆಲ್ಲವೂ ಸತ್ಯವಾಗುವುದು (ಎಂದು ಹೇಳಿದನು).
ಯುಧಿಷ್ಠಿರೋಽಪಿ ಕೈತವ್ಯಮುಲೂಕಮಿದಮಬ್ರವೀತ್ ॥25॥
ಉಲೂಕ ಮದ್ವಚೋ ಬ್ರೂಹಿ ಗತ್ವಾ ತಾತ ಸುಯೋಧನಮ್ |
ಸ್ವೇನ ವೃತ್ತೇನ ಮೇ ವೃತ್ತಂ ನಾಧಿಗಂತುಂ ತ್ವಮರ್ಹಸಿ ॥26॥
ಧರ್ಮರಾಜನೂ ಸಹ ಕೈತವ್ಯನಾದ ಉಲೂಕನನ್ನು ಕುರಿತು ಈ ಮಾತನ್ನು ಆಡಿದನು `ಪ್ರೀತಿಪಾತ್ರನಾದ ಉಲೂಕನೇ, ನಿನ್ನ ನಡತೆಯಿಂದ ನನ್ನ ನಡತೆಯನ್ನು ಅಳೆಯಬೇಡ ಎಂದು ಸುಯೋಧನನಿಗೆ ಹೋಗಿ ಹೇಳು.
ಉಭಯೋರಂತರಂ ವೇದ ಸೂನೃತಾನೃತಯೋರಪಿ |
ನ ಚಾಹಂ ಕಾಮಯೇ ಪಾಪಮಪಿ ಕೀಟಪಿಪೀಲಯೋ ಃ ॥27॥
ಕಿಂ ಪುನರ್ಜ್ಞಾತಿಷು ವಧಂ ಕಾಮಯೇಯಂ ಕಥಂಚನ ॥28॥
ಸತ್ಯ ಮತ್ತು ಅನೃತ ಇವೆರಡರ ಅಂತರವನ್ನು ನಾನು ತಿಳಿದಿದ್ದೇನೆ. ನಾನು ಇರುವೆಗಳಿಗೂ ಅಥವಾ ಕೀಟಗಳಿಗೂ ಕೇಡನ್ನು ಬಯಸುವವನಲ್ಲ. ಇನ್ನು ದಾಯಾದಿಗಳ ವಧೆಯನ್ನು ಹೇಗೆ ಬಯಸಿಯೇನು?
ಏತದರ್ಥಂ ಮಯಾ ತಾತ ಪಂಚ ಗ್ರಾಮಾ ವೃತಾಃ ಪುರಾ |
ಕಥಂ ತವ ಸುದುರ್ಬುದ್ಧೇ ನ ಪ್ರೇಕ್ಷೇ ವ್ಯಸನಂ ಮಹತ್ ॥29॥
ಎಲೈ ಪ್ರೀತಿಪಾತ್ರನೇ, ಇದಕ್ಕೋಸ್ಕರವಾಗಿ ನಾನು ಹಿಂದೆ ಐದುಗ್ರಾಮಗಳನ್ನು ಬೇಡಿದೆನು. ಎಲೈ ದುರ್ಬುದ್ಧಿಯೇ, ನಿನಗೆ ಒದಗುವ ದೊಡ್ಡ ವ್ಯಸನವನ್ನು ನಾನು ಹೇಗೆ ನೋಡದೇ ಇದ್ದೇನು?
ಸ ತ್ವಂ ಕಾಮಪರೀತಾತ್ಮಾ ಮೂಢಭಾವಾಚ್ಚ ಕತ್ಥಸೇ |
ತಥೈವ ವಾಸುದೇವಸ್ಯ ನ ಗೃಹ್ಣಾಸಿ ಹಿತಂ ವಚಃ ॥30॥
ಕಿಮಿದಾನೀಂ ಬಹೂಕ್ತೇನ ಯುಧ್ಯಸ್ವ ಸಹಬಾಂಧವಃ ॥31॥
ನೀನು ಆಸೆಯಿಂದ ಕೂಡಿದ ಮನಸ್ಸುಳ್ಳವನಾಗಿ, ಮೌಢ್ಯದಿಂದ ಕೂಡಿ, ಆತ್ಮಶ್ಲಾಘನೆಯ ಮಾತುಗಳನ್ನು ಆಡುತ್ತಿದ್ದೀಯೆ ಮತ್ತು ಹಾಗೆಯೇ ಕೃಷ್ಣನ ವಚನಗಳನ್ನೂ ಸ್ವೀಕರಿಸುತ್ತಿಲ್ಲ. ಈಗ ಹೆಚ್ಚು ಮಾತನಾಡಿ ಏನು ಪ್ರಯೋಜನ? ಬಾಂಧವರನ್ನು ಸೇರಿಸಿಕೊಂಡು ಯುದ್ಧವನ್ನು ಮಾಡುವವನಾಗು.
ಮಮ ವಿಪ್ರಿಯಕರ್ತಾರಂ ಕೈತವ್ಯ ಬ್ರೂಹಿ ಕೌರವಮ್ |
ಶ್ರುತಂ ವಾಕ್ಯಂ ಗೃಹೀತೋಽರ್ಥೋ ಮತಂ ಯತ್ ತೇ ತಥಾಽಸ್ತು ತತ್ ॥
ಎಲೈ ಉಲೂಕನೇ, ನನಗೆ ಅಪ್ರಿಯವನ್ನು ಉಂಟುಮಾಡುವ ದುರ್ಯೋಧನನನ್ನು ಕುರಿತು `ನಿನ್ನ ಮಾತನ್ನು ಕೇಳಿದೆ, ಅರ್ಥವು ಗೃಹೀತವಾಯಿತು. ನಿನ್ನ ಅಭಿಪ್ರಾಯದಂತೆಯೇ ಆಗಲಿ' ಎಂದು ಹೇಳು (ಎಂದು ಹೇಳಿದನು).
ಸಂಜಯಃ
ಭೀಮಸೇನಸ್ತತೋ ವಾಕ್ಯಂ ಭೂಯ ಆಹ ನೃಪಾತ್ಮಜಮ್ ॥33॥
ಸಂಜಯ ಭೀಮಸೇನನು ಅನಂತರ ಪುನಃ ದುರ್ಯೋಧನನಿಗೆ ತಿಳಿಸಬೇಕಾದ ಮಾತನ್ನು ಆಡಿದನು.
ಉಲೂಕ ಮದ್ವಚೋ ಬ್ರೂಹಿ ದುರ್ಮತಿಂ ಪಾಪಪೂರುಷಮ್ |
ಶಠಂ ನೈಕೃತಿಕಂ ಪಾಪಂ ದುರಾಚಾರಂ ಸುಯೋಧನಮ್ ॥34॥

ಪ್ರತಿಜ್ಞಾತಂ ಮಯಾ ಯಚ್ಚ ಸಭಾಮಧ್ಯೇ ನರಾಧಮ |
ಕರ್ತಾಽಹಂ ತದ್ವಚಃ ಸತ್ಯಂ ಸತ್ಯೇನೈವ ಶಪಾಮಿ ತೇ ॥35॥
ಎಲೈ ಉಲೂಕನೇ, ದುರ್ಮತಿಯೂ, ಪಾಪಪುರುಷನೂ, ಶಠನೂ, ಮೋಸಗಾರನೂ, ಪಾಪಿಯೂ, ದುರಾಚಾರನೂ ಆದ ಸುಯೋಧನನಿಗೆ ನನ್ನ ಮಾತಿನಂತೆ ಹೀಗೆ ಹೇಳುವವನಾಗು ಎಲೈ ನರಾಧಮನೇ, ನಾನು ಸಭಾಮಧ್ಯದಲ್ಲಿ ಏನನ್ನು ಪ್ರತಿಜ್ಞೆ ಮಾಡಿದ್ದೇನೆಯೋ ಆ ಮಾತನ್ನು ಸತ್ಯವಾಗಿ ನಡೆಸುವೆನು. ನಾನು ಪ್ರಮಾಣವನ್ನು ಮಾಡಿ ಹೇಳುತ್ತಿದ್ದೇನೆ.
ದುಃಶಾಸನಸ್ಯ ರುಧಿರಂ ಹತ್ವಾ ಪಾಸ್ಯಾಮ್ಯಹಂ ಮೃಧೇ |
ಸಕ್ಥಿನೀ ತವ ಭಂಕ್ತ್ವೈವ ಹತ್ವಾ ಹಿ ತವ ಸೋದರಾನ್ ॥36॥
ನಿನ್ನ ತೊಡೆಯನ್ನು ಮುರಿದು, ನಿನ್ನ ಸಹೋದರರನ್ನು ಕೊಂದು, ಯುದ್ಧದಲ್ಲಿ ದುಶ್ಶಾಸನನ ರಕ್ತವನ್ನು ನಾನು ಕುಡಿಯುವೆನು.
ಸರ್ವೇಷಾಂ ಧಾರ್ತರಾಷ್ಟ್ರಾಣಾಮಹಂ ಮೃತ್ಯುಃ ಸುಯೋಧನ |
ಸರ್ವೇಷಾಂ ರಾಜಪುತ್ರಾಣಾಮಭಿಮನ್ಯುರಸಂಶಯಮ್ ॥37॥
ಎಲೈ ಸುಯೋಧನನೇ, ಧೃತರಾಷ್ಟ್ರನ ಎಲ್ಲಾ ಮಕ್ಕಳಿಗೂ ನಾನು ಮೃತ್ಯು ಮತ್ತು ನಿಮ್ಮೆಲ್ಲರ ರಾಜಕುಮಾರರಿಗೂ ಅಭಿಮನ್ಯುವು ಮೃತ್ಯು. ಇದರಲ್ಲಿ ಸಂಶಯವಿಲ್ಲ.
ಕರ್ಮಣಾ ತೋಷಯಿಷ್ಯಾಮಿ ಭೂಯಶ್ಚೈವ ವಚಃ ಶೃಣು ॥38॥
ಹತ್ವಾ ಸುಯೋಧನಂ ತ್ವಾಂ ವೈ ಸಹಿತಂ ಸರ್ವಸೋದರೈಃ |
ಆಕ್ರಮಿಷ್ಯೇ ಪದಾ ಮೂರ್ಧ್ನಿ ಧರ್ಮರಾಜಸ್ಯ ಪಶ್ಯತಃ ॥39॥
ನನ್ನ ಕ್ರಿಯೆಯಿಂದ ಪಾಂಡವರೆಲ್ಲರನ್ನೂ ಸಂತೋಷಪಡಿಸುತ್ತೇನೆ. ಇನ್ನೂ ನನ್ನ ಮಾತನ್ನು ಕೇಳು. ಸುಯೋಧನನಾದ ನಿನ್ನನ್ನು ಎಲ್ಲ ತಮ್ಮಂದಿರ ಜೊತೆಯಲ್ಲಿ ಕೊಂದು, ಧರ್ಮರಾಜನು ನೋಡುತ್ತಿರುವಂತೆಯೇ ನಿನ್ನ ತಲೆಯನ್ನು ನನ್ನ ಕಾಲಿನಿಂದ ತುಳಿಯುವೆನು (ಎಂದು ಹೇಳಿದನು).
ಸಂಜಯಃ
ನಕುಲಸ್ತು ತತೋ ವಾಕ್ಯಮಿದಮಾಹ ಮಹೀಪತೇ ॥40॥
ಉಲೂಕ ಬ್ರೂಹಿ ಕೈತವ್ಯ ಧಾರ್ತರಾಷ್ಟ್ರಂ ಸುಯೋಧನಮ್ ॥41॥
ಶ್ರುತಂ ತೇ ಗದತೋ ವಾಕ್ಯಂ ಸರ್ವಮೇವ ಯಥಾತಥಮ್ |
ತಥಾ ಕರ್ತಾಸ್ಮಿ ಕೌರವ್ಯ ಯಥಾ ತ್ವಮನುಶಾಸ್ಸಿ ಮಾಮ್ ॥42॥
ಸಂಜಯ ಎಲೈ ರಾಜನೇ, ಅನಂತರ ನಕುಲನು ಈ ಮಾತನ್ನು ಆಡಿದನು. ಎಲೈ ಉಲೂಕನೇ, ಕೈತವ್ಯನೇ, ಧೃತರಾಷ್ಟ್ರ ಪುತ್ರನಾದ ಸುಯೋಧನನಿಗೆ, ನಾನು ನಿನ್ನ ಎಲ್ಲಾ ಮಾತನ್ನು ಸರಿಯಾಗಿ ಕೇಳಿದೆನು. ನೀನು ಅನುಶಾಸನ ಮಾಡಿದಂತೆಯೇ ನಾನು ಮಾಡುವೆನು ಎಂದು ಹೇಳುವವನಾಗು (ಎಂದು ಹೇಳಿದನು).
ಸಂಜಯಃ
ಸಹದೇವೋಽಪಿ ನೃಪತೇ ಇದಮಾಹ ವಚೋಽರ್ಥವತ್ ॥43॥
ಸುಯೋಧನ ಮತಿರ್ಯಾ ತೇ ವೃಥೈವೈಷಾ ಭವಿಷ್ಯತಿ |
ಶೋಚಿಷ್ಯಸೇ ಮಹಾರಾಜ ಸಪುತ್ರಜ್ಞಾತಿಬಾಂಧವಃ ॥44॥
ಇಮಂ ಚ ಕ್ಲೇಶಮಸ್ಮಾಕಂ ಹೃಷ್ಟೋ ಯತ್ ತ್ವಂ ವಿಕತ್ಥಸೇ ॥45॥
ಸಂಜಯ ಎಲೈ ರಾಜನೇ, ಸಹದೇವನೂ ಕೂಡ ಈ ಮಾತುಗಳನ್ನು ಆಡಿದನು `ಎಲೈ ಸುಯೋಧನನೇ, ನಿನ್ನ ಬುದ್ಧಿಯು ವ್ಯರ್ಥವಾದುದು. ಎಲೈ ಮಹಾರಾಜನೇ, ಪುತ್ರಜ್ಞಾತಿಬಾಂಧವರ ಸಹಿತನಾಗಿ ನೀನು ಶೋಕವನ್ನು ಪಡುವಿ. ಏಕೆಂದರೆ ನಾವು ಪಡುತ್ತಿರುವ ಕ್ಲೇಶವನ್ನು ನೋಡಿ, ಸಂತೋಷದಿಂದ ನಿನ್ನನ್ನು ನೀನು ಹೊಗಳಿಕೊಳ್ಳುತ್ತಿದ್ದೀಯೆ, (ಎಂದು ಹೇಳಿದನು).
ಸಂಜಯಃ
ವಿರಾಟದ್ರುಪದೌ ವೃದ್ಧಾವುಲೂಕಮಿದಮೂಚತುಃ ॥46॥
ದಾಸಭಾವಂ ನಿಯಚ್ಛೇವ ಸಾಧೋರಿತಿ ಮತಿಃ ಸದಾ |
ತೌ ಚ ದಾಸಾವದಾಸೌ ವಾ ಪೌರುಷಂ ಯಸ್ಯ ಯಾದೃಶಮ್ ॥47॥
ಸಂಜಯ ವೃದ್ಧರಾದ ವಿರಾಟ-ದ್ರುಪದರಿಬ್ಬರೂ ನಾವು ಸಜ್ಜನನಾದ ಧರ್ಮರಾಜನ ದಾಸಭಾವವನ್ನು ನಿವಾರಿಸುತ್ತೇವೆ ಎಂಬ ಅಭಿಪ್ರಾಯವನ್ನು ಸದಾ ಹೊಂದಿದ್ದೇವೆ. ಅವರು ದಾಸರೋ, ಅದಾಸರೋ ಆಗಿರಲಿ, ಅವರ ಪೌರುಷವು ಹೇಗಿದೆ ಎಂದು ನೋಡುವವನಾಗು (ಎಂದು ಹೇಳಿದರು).
ಸಂಜಯಃ
ಶಿಖಂಡೀ ತು ತತೋ ವಾಕ್ಯಮುಲೂಕಮಿದಮಬ್ರವೀತ್ ॥48॥
ವಕ್ತವ್ಯೋ ಭವತಾ ರಾಜಾ ಪಾಪೇಷ್ವಭಿರತಃ ಸದಾ |
ಪಶ್ಯ ತ್ವಂ ಮಾಂ ರಣೇ ರಾಜನ್ ಕುರ್ವಾಣಂ ಕರ್ಮ ದಾರುಣಮ್ ॥
ಸಂಜಯ ಅನಂತರ ಶಿಖಂಡಿಯು ಉಲೂಕನನ್ನು ಕುರಿತು ಹೀಗೆ ಮಾತನಾಡಿದನು `ನೀನು ಹೋಗಿ ಯಾವಾಗಲೂ ಪಾಪದಲ್ಲಿಯೇ ರತನಾದ ದುರ್ಯೋಧನನಿಗೆ ಎಲೈ ರಾಜನೇ, ನಾಳೆಯ ದಿನ ಯುದ್ಧದಲ್ಲಿ ದಾರುಣವಾದ ಕರ್ಮವನ್ನು ಎಸಗುವ ನನ್ನನ್ನು ನೋಡು'.
ಯಸ್ಯ ವೀರ್ಯಂ ಸಮಾಸಾದ್ಯ ಮನ್ಯಸೇ ವಿಜಯಂ ಯುಧಿ |
ತಮಹಂ ಪಾತಯಿಷ್ಯಾಮಿ ರಥಾತ್ ತವ ಪಿತಾಮಹಮ್ ॥50॥
ಯಾವ ಭೀಷ್ಮರ ಪರಾಕ್ರಮವನ್ನು ಆಶ್ರಯಿಸಿ ನೀನು ಯುದ್ಧದಲ್ಲಿ ವಿಜಯವನ್ನು ಹೊಂದುತ್ತೇನೆ ಎಂದು ಭಾವಿಸಿದ್ದೀಯೋ ಅಂತಹ

ಪಿತಾಮಹರಾದ ಭೀಷ್ಮರನ್ನು ನಾನು ರಥದಿಂದ ಉರುಳಿಸುವೆನು.
ಅಹಂ ಭೀಷ್ಮವಧೇ ಸೃಷ್ಟೋ ನೂನಂ ಧಾತ್ರಾ ಮಹಾತ್ಮನಾ |
ಸೋಽಹಂ ಭೀಷ್ಮಂ ಹನಿಷ್ಯಾಮಿ ಮಿಷತಾಂ ಸರ್ವಧನ್ವಿನಾಮ್ ॥51॥
ಮಹಾತ್ಮರಾದ ಬ್ರಹ್ಮದೇವರು ನನ್ನನ್ನು ಭೀಷ್ಮ ವಧೆಗಾಗಿ ಸೃಷ್ಟಿಸಿದ್ದಾರೆ. ಅಂತಹ ನಾನು ಎಲ್ಲಾ ಧನುರ್ಧಾರಿಗಳು ನೋಡುತ್ತಿರುವಂತೆ ಭೀಷ್ಮರನ್ನು ಕೊಲ್ಲುವೆನು'.
ಸಂಜಯಃ
ಧೃಷ್ಟದ್ಯುಮ್ನೋಽಪಿ ಕೈತವ್ಯಮುಲೂಕಮಿದಮಬ್ರವೀತ್ ॥52॥
ಸುಯೋಧನೋ ಮಮ ವಚೋ ವಕ್ತವ್ಯೋ ನೃಪತೇಃ ಸುತಃ |
ಅಹಂ ದ್ರೋಣಂ ಹನಿಷ್ಯಾಮಿ ಸಗಣಂ ಸಹಬಾಂಧವಮ್ ॥53॥
ಕರ್ತಾ ಚಾಹಂ ತಥಾ ಕರ್ಮ ಯಥಾ ನಾನ್ಯಃ ಕರಿಷ್ಯತಿ ॥54॥
ಸಂಜಯ ಧೃಷ್ಟದ್ಯುಮ್ನನೂ ಸಹ ಉಲೂಕನನ್ನು ಕುರಿತು, ರಾಜಪುತ್ರನಾದ ಸುಯೋಧನನಿಗೆ ನನ್ನ ಮಾತಿನಂತೆ ಹೀಗೆ ಹೇಳುವವನಾಗು `ನಾನು ದ್ರೋಣರನ್ನು, ಅವರ ಪರಿವಾರ ಮತ್ತು ಬಾಂಧವರೊಡನೆ ಕೊಲ್ಲುವೆನು. ಇನ್ನೊಬ್ಬರು ಮಾಡಲು ಸಾಧ್ಯವಿಲ್ಲದಂತಹ ಕರ್ಮವನ್ನು ನಾನು ಮಾಡುವೆನು' (ಎಂದು ಹೇಳಿದನು).
ಸಂಜಯಃ
ತಮಬ್ರವೀದ್ ಧರ್ಮರಾಜಃ ಕಾರುಣ್ಯಾರ್ಥಂ ವಚೋ ಮಹತ್ ॥55॥
ನಾಹಂ ಜ್ಞಾತಿವಧಂ ರಾಜನ್ ಕಾಮಯೇಯಂ ಕಥಂಚನ |
ತವೈವ ದೋಷಾದ್ ದುರ್ಬುದ್ಧೇಃ ಸರ್ವಮೇತದನಾವೃತಮ್ ॥56॥
ಸಂಜಯ ಧರ್ಮರಾಜನು ಕರುಣೆಯಿಂದ ದೊಡ್ಡ ಮಾತನ್ನು ಆಡಿದನು `ಎಲೈ ರಾಜನೇ, ನಾನು ಯಾವ ಕಾರಣದಿಂದಲೂ ಬಂಧುಗಳ ವಧೆಯನ್ನು ಬಯಸುವುದಿಲ್ಲ. ದುರ್ಬುದ್ಧಿಯಾದ ನಿನ್ನ ದೋಷದಿಂದಲೇ ಇವೆಲ್ಲವೂ ಸಂಭವಿಸಿದೆ.
ಅವಶ್ಯಂ ಚ ಮಯಾ ಕಾರ್ಯಂ ಸರ್ವೇಷಾಂ ರಕ್ಷಣಂ ಮಹತ್ ॥57॥
ಸ ಗಚ್ಛ ಮಾ ಚಿರಂ ತಾತ ಉಲೂಕ ಯದಿ ಮನ್ಯಸೇ |
ಇಹ ವಾ ತಿಷ್ಠ ಭದ್ರಂ ತೇ ವಯಂ ಹಿ ತವ ಬಾಂಧವಾಃ ॥58॥
ನಾನು ಅವಶ್ಯವಾಗಿ ಎಲ್ಲರ ದೊಡ್ಡ ರಕ್ಷಣೆಯನ್ನೂ ಮಾಡಬೇಕಾಗಿದೆ. ಎಲೈ ಉಲೂಕನೇ, ಪ್ರೀತಿಪಾತ್ರನೇ, ನೀನು ಬೇಕಾದರೆ ಹೋಗು, ಇಲ್ಲದಿದ್ದರೆ ಇಲ್ಲಿಯೇ ಇರು. ನಿನಗೆ ಮಂಗಳವಾಗಲಿ, ನಾವು ನಿನ್ನ ಬಂಧುಗಳಷ್ಟೆ' ಎಂದು ಹೇಳಿದನು.
ವೈಶಂಪಾಯನಃ
ಇತ್ಯುಕ್ತಃ ಕೈತವ್ಯೋ ವಾಕ್ಯಂ ತದ್ವಾಕ್ಯಮುಪಧಾರ್ಯ ಚ |
ಅನುಜ್ಞಾತೋ ನಿವವೃತೇ ಪುನರೇವ ಯಥಾಗತಮ್ ॥59॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಉಲೂಕನು ಆ ಮಾತುಗಳನ್ನು ಮನಸ್ಸಿನಲ್ಲಿ ಧರಿಸಿ, ಪಾಂಡವರ ಅನುಮತಿಯನ್ನು ಪಡೆದು, ಪುನಃ ಬಂದ ದಾರಿಯಲ್ಲಿಯೇ ಹಿಂದಿರುಗಿದನು.
ಉಪಾವೃತ್ಯ ತು ಕೈತವ್ಯಃ ಪಾಂಡುಭ್ಯೋ ಧೃತರಾಷ್ಟ್ರಜಮ್ |
ಗತ್ವಾ ಯಥೋಕ್ತಂ ತತ್ ಸರ್ವಮುವಾಚ ಕುರುಸಂಸದಿ ॥60॥
ಕೈತವ್ಯನು ಪಾಂಡವರ ಕಡೆಯಿಂದ ಹಿಂದಿರುಗಿ ದುರ್ಯೋಧನನ ಸಮೀಪಕ್ಕೆ ಹೋಗಿ ಪಾಂಡವರು ಹೇಳಿದುದೆಲ್ಲವನ್ನೂ ಕೌರವರ ಸಭೆಯಲ್ಲಿ ಹೇಳಿದನು.
ಕೈತವಸ್ಯ ತು ತದ್ವಾಕ್ಯಂ ನಿಶಮ್ಯ ಭರತರ್ಷಭಃ |
ದುಃಶಾಸನಂ ಚ ಕರ್ಣಂ ಚ ಶಕುನಿಂ ಚಾಭ್ಯಭಾಷತ ॥61॥
ಕೈತವ್ಯನ ಆ ಮಾತನ್ನು ಕೇಳಿ ಭರತರ್ಷಭನಾದ ದುರ್ಯೋಧನನು ದುಶ್ಶಾಸನನನ್ನೂ, ಕರ್ಣನನ್ನೂ ಮತ್ತು ಶಕುನಿಯನ್ನೂ ಕುರಿತು ಮಾತನಾಡಿದನು.
ಆಜ್ಞಾಪಯತ ರಾಜ್ಞಶ್ಚ ಬಲಂ ಮಿತ್ರಬಲಂ ತಥಾ |
ಯಥಾ ಪ್ರಾಗುದಯಾತ್ ಸರ್ವಾ ಯುಕ್ತಾ ತಿಷ್ಠತ್ಯನೀಕಿನೀ ॥62॥
ಎಲ್ಲ ರಾಜರಿಗೂ, ನಮ್ಮ ಸೈನ್ಯಕ್ಕೂ ಮತ್ತು ಮಿತ್ರರ ಸೈನ್ಯಕ್ಕೂ ನಾಳೆ ಸೂರ್ಯೋದಯಕ್ಕಿಂತ ಮೊದಲೇ ಸೈನ್ಯವು ಸನ್ನದ್ಧವಾಗಿ ನಿಂತಿರಲಿ ಎಂದು ಆಜ್ಞೆಯನ್ನು ಮಾಡಿ (ಎಂದು ಹೇಳಿದನು).
ತತಃ ಕರ್ಣಸಮಾದಿಷ್ಟಾ ದೂತಾಃ ಸಂತ್ವರಿತಾ ರಥೈಃ |
ಉಷ್ಟ್ರವಾಮೀಭಿರಪ್ಯನ್ಯೇ ಸದಶ್ವೈಶ್ಚ ಮಹಾಜವೈಃ ॥63॥
ತೂರ್ಣಂ ಪರಿಯಯುಃ ಸೇನಾಂ ಪೂರ್ಣಾಂ ಕರ್ಣಸ್ಯ ಶಾಸನಾತ್ |
ಆಜ್ಞಾಪಯಂತ ರಾಜ್ಞಸ್ತಾನ್ ಯೋಗಃ ಪ್ರಾಗುದಯಾದಿತಿ ॥ 64॥
ಅನಂತರ ಕರ್ಣನಿಂದ ಆಜ್ಞಪ್ತರಾದ ದೂತರು ಕೆಲವರು ರಥಗಳಲ್ಲಿಯೂ, ಕೆಲವರು ಒಂಟೆಗಳಲ್ಲಿಯೂ, ಕೆಲವರು ಹೇಸರಗತ್ತೆಗಳಲ್ಲಿಯೂ, ಕೆಲವರು ಒಳ್ಳೆಯ ವೇಗವುಳ್ಳ ಅಶ್ವಗಳಲ್ಲಿಯೂ ಶೀಘ್ರವಾಗಿ, ಪೂರ್ಣವಾಗಿ ಸೈನ್ಯವನ್ನು ಸುತ್ತುವರಿದು ಕರ್ಣನ ಶಾಸನದಂತೆ ಆ ರಾಜರಿಗೆ ನಾಳೆಯ ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕಿಂತ ಮೊದಲೇ ಸೈನ್ಯದ ವ್ಯೂಹವನ್ನು ಮಾಡಿ ಎಂದು ತಿಳಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ

ಏಕಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ಉಲೂಕದೂತಾಗಮನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆರಡನೆಯ ಅಧ್ಯಾಯ
ಸೇನಾ ಪ್ರಸ್ಥಾನ. ಧೃಷ್ಟದ್ಯುಮ್ನನಿಂದ ದ್ವಂದ್ವಯುದ್ಧದ ಸಮಾಯೋಜನೆ.
ಸಂಜಯಃ
ಉಲೂಕಸ್ಯ ವಚಃ ಶ್ರುತ್ವಾ ಕುಂತೀಪುತ್ರೋ ಯುಧಿಷ್ಠಿರಃ |
ಸೇನಾಂ ನಿರ್ಯಾಪಯಾಮಾಸ ಧೃಷ್ಟದ್ಯುಮ್ನಪುರೋಗಮಾಮ್ ॥1॥
ಪದಾತಿನೀಂ ನಾಗವತೀಂ ರಥಿನೀಮಶ್ವವೃಂದಿನೀಮ್ |
ಚತುರ್ವಿಧಬಲಾಂ ಭೀಮಾಮಕಂಪ್ಯಾಂ ಪೃಥಿವೀಮಿವ ॥2॥
ಭೀಮಸೇನಾದಿಭಿರ್ಗುಪ್ತಾಂ ಸಾರ್ಜುನೈಶ್ಚ ಮಹಾರಥೈಃ |
ಧೃಷ್ಟದ್ಯುಮ್ನವಶಾಂ ದುರ್ಗಾಂ ಸಾಗರಸ್ತಿಮಿತೋಪಮಾಮ್ ॥3॥
ಸಂಜಯ ಕುಂತೀಪುತ್ರನಾದ ಯುಧಿಷ್ಠಿರನು ಉಲೂಕನ ಮಾತುಗಳನ್ನು ಕೇಳಿ ಧೃಷ್ಟದ್ಯುಮ್ನನನ್ನು ಮುಂಭಾಗದಲ್ಲಿ ಹೊಂದಿದ ಪದಾತಿಗಳು, ಗಜಗಳು, ಮಹಾರಥರು ಮತ್ತು ಅಶ್ವವೃಂದರೂಪವಾದ ಚತುರ್ವಿಧ ಬಲದಿಂದ ಕೂಡಿದ, ಭಯಂಕರವಾದ, ಭೂಮಿಯಂತೆ ಅಲುಗಾಡಿಸಲು ಅಸಾಧ್ಯವಾದ, ಭೀಮಸೇನ- ಅರ್ಜುನ ಮೊದಲಾದ ಮಹಾಸೇನರಿಂದ ರಕ್ಷಿತವಾದ, ಧೃಷ್ಟದ್ಯುಮ್ನನ ವಶವಾಗಿದ್ದ, ಸಮೀಪಿಸಲು ಅಸಾಧ್ಯವಾದ ಸ್ತಂಭಿತವಾದ ಸಾಗರದಂತಿದ್ದ ತನ್ನ ಸೈನ್ಯವನ್ನು ಹೊರಡಿಸಿದನು.
ತಸ್ಯಾಸ್ತ್ವಗ್ರೇ ಮಹೇಷ್ವಾಸಃ ಪಾಂಚಾಲ್ಯೋ ಯುದ್ಧದುರ್ಮದಃ |
ದ್ರೋಣಪ್ರೇಪ್ಸುರನೀಕಾನಿ ಧೃಷ್ಟದ್ಯುಮ್ನೋ ವ್ಯಕರ್ಷತ ॥4॥
ಯಥಾಬಲಂ ಯಥೋತ್ಸಾಹಂ ರಥಿನಃ ಸಮುಪಾದಿಶತ್ ॥5॥
ಆ ಸೇನೆಯ ಮುಂಭಾಗದಲ್ಲಿ ಧನುರ್ಧಾರಿಯಾದ, ಯುದ್ಧದುರ್ಮದನಾದ, ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನು ದ್ರೋಣರ ವಧೆಯನ್ನು ಬಯಸಿ ಸೈನ್ಯಗಳನ್ನು ಮುಂದೆ ಸಾಗಿಸಿದನು. ಅವನು ಆ ಮಹಾರಥರ ಬಲಕ್ಕೆ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ಶತ್ರುಗಳನ್ನು ನಿರ್ದೇಶಿಸಿದನು.
ಅರ್ಜುನಂ ಸೂತಪುತ್ರಾಯ ಭೀಮಂ ದುರ್ಯೋಧನಾಯ ಚ |
ಧೃಷ್ಟಕೇತುಂ ಚ ಶಲ್ಯಾಯ ಗೌತಮಾಯೋತ್ತಮೌಜಸಮ್ ॥6॥
ಅಶ್ವತ್ಥಾಮ್ನೇ ಚ ನಕುಲಂ ಶೈಬ್ಯಂ ಚ ಕೃತವರ್ಮಣೇ |
ಸೈಂಧವಾಯ ಚ ವಾರ್ಷ್ಣೇಯಂ ಯುಯುಧಾನಂ ಸಮಾದಿಶತ್ ॥7॥
ಅರ್ಜುನನನ್ನು ಕರ್ಣನಿಗೂ, ಭೀಮನನ್ನು ದುರ್ಯೋಧನನಿಗೂ, ಧೃಷ್ಟಕೇತುವನ್ನು ಶಲ್ಯನಿಗೂ, ಉತ್ತಮೌಜನನ್ನು ಕೃಪರಿಗೂ, ನಕುಲನನ್ನು ಅಶ್ವತ್ಥಾಮರಿಗೂ, ಶೈಬ್ಯನನ್ನು ಕೃತವರ್ಮನಿಗೂ, ವೃಷ್ಣಿಕುಲೋತ್ಪನ್ನನಾದ ಯುಯುಧಾನನನ್ನು ಸೈಂಧವನಿಗೂ ಸಂಯೋಜನೆಯನ್ನು ಮಾಡಿದನು.
ಶಿಖಂಡಿನಂ ಚ ಭೀಷ್ಮಾಯ ಪ್ರಮುಖೇ ತಮಕಲ್ಪಯತ್ ॥8॥
ಸಹದೇವಂ ಶಕುನಯೇ ಚೇಕಿತಾನಂ ಶಲಾಯ ಚ |
ದ್ರೌಪದೇಯಾಂಸ್ತಥಾ ಪಂಚ ತ್ರಿಗರ್ತೇಭ್ಯಃ ಸಮಾದಿಶತ್ ॥9॥
ಭೀಷ್ಮರಿಗೆ ಎದುರಾಗಿ ಸಂಕಲ್ಪಿಸಿದ್ದ ಶಿಖಂಡಿಯನ್ನು ಸೈನ್ಯದ ಮುಂಭಾಗದಲ್ಲಿ ಇರಿಸಿದನು. ಸಹದೇವನನ್ನು ಶಕುನಿಗೂ, ಚೇಕಿತಾನನನ್ನು ಶಲನಿಗೂ, ದ್ರೌಪದಿಯ ಐವರು ಮಕ್ಕಳನ್ನು ತ್ರಿಗರ್ತರಿಗೂ ಯೋಜಿಸಿದನು.
ವೃಷಸೇನಾಯ ಸೌಭದ್ರಂ ಶೇಷಾಣಾಂ ಚ ಮಹೀಕ್ಷಿತಾಮ್ |
ಸಮರ್ಥಂ ತಂ ಚ ಮೇನೇ ವೈ ಪಾರ್ಥಾದಭ್ಯಧಿಕಂ ರಣೇ ॥10॥
ವೃಷಸೇನ ಮತ್ತು ಉಳಿದ ರಾಜರಿಗೆ ಅಭಿಮನ್ಯುವು ಸಮರ್ಥನಾಗಿದ್ದಾನೆಂದು, ಅವನು ಅರ್ಜುನನಿಗಿಂತಲೂ ಶ್ರೇಷ್ಠನಾಗಿದ್ದಾನೆಂದು ತಿಳಿದು ಅಭಿಮನ್ಯುವನ್ನು ಯೋಜಿಸಿದನು.
ಏವಂ ವಿಭಜ್ಯ ಯೋಧಾಂಸ್ತಾನ್ ಪೃಥಕ್ ಚ ಸಹ ಚೈವ ಹ |
ಜ್ವಾಲಾವರ್ಣೋ ಮಹೇಷ್ವಾಸೋ ದ್ರೋಣಮಂಶಮಕಲ್ಪಯತ್ ॥11॥
ಹೀಗೆ ಯೋಧರನ್ನು ಪ್ರತ್ಯೇಕವಾಗಿ ಮತ್ತು ಸಾಮೂಹಿಕವಾಗಿ ವಿಭಾಗಿಸಿ ಜ್ವಾಲಾವರ್ಣನೂ, ಮಹಾಧನುರ್ಧಾರಿಯೂ ಆದ ಅವನು ದ್ರೋಣರನ್ನು ತನ್ನ ಭಾಗವೆಂದು ಸಂಕಲ್ಪಿಸಿದನು.
ಧೃಷ್ಟದ್ಯುಮ್ನೋ ಮಹೇಶ್ವಾಸಃ ಸೇನಾಪತಿಪತಿಸ್ತತಃ |
ವಿಧಿವದ್ ವ್ಯೂಹ್ಯ ಮೇಧಾವೀ ಯುದ್ಧಾಯ ಧೃತಮಾನಸಃ ॥12॥
ಯಥೋದ್ದಿಷ್ಟಾನಿ ಸೈನ್ಯಾನಿ ಪಾಂಡವಾನಾಮಯೋಜಯತ್ |
ಜಯಾಯ ಪಾಂಡುಪುತ್ರಾಣಾಂ ಯತ್ತಸ್ತಸ್ಥೌ ರಣಾಜಿರೇ ॥13॥
ಮಹಾಧನುರ್ಧಾರಿಯೂ, ಸೇನಾಪತಿಪತಿಯೂ, ಮೇಧಾವಿಯೂ ಆದ ಧೃಷ್ಟದ್ಯುಮ್ನನು ಯುದ್ಧದಲ್ಲಿ ನೆಟ್ಟ ಮನಸ್ಸುಳ್ಳವನಾಗಿ, ಪಾಂಡವರ ಸೈನ್ಯವನ್ನು ತನ್ನ ಉದ್ದೇಶಕ್ಕೆ ತಕ್ಕಂತೆ ಶಾಸ್ತ್ರಸಮ್ಮತವಾದ ರೀತಿಯಲ್ಲಿ, ಪಾಂಡವರ ಜಯಕ್ಕಾಗಿ ವ್ಯೂಹವನ್ನು ರಚನೆ

ಮಾಡಿ ರಣರಂಗದಲ್ಲಿ ಜಾಗರೂಕನಾಗಿ ನಿಂತನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಉದ್ಯೋಗಪರ್ವಣಿ
ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ಉಲೂಕದೂತಾಗಮನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಮ್ ಉಲೂಕದೂತಾಗಮನಪರ್ವ ॥
* * * * *
11. ರಥಾತಿರಥಸಂಖ್ಯಾನಪರ್ವ
ನೂರ ಅರವತ್ಮೂರನೆಯ ಅಧ್ಯಾಯ
ಭೀಷ್ಮರಿಂದ ದುರ್ಯೋಧನನ ಸಾಂತ್ವನ ಮತ್ತು ರಥಾತಿರಥರ ಗಣನೆ.
ಧೃತರಾಷ್ಟ್ರಃ
ಪ್ರತಿಜ್ಞಾತೇ ಫಲ್ಗುನೇನ ವಧೇ ಭೀಷ್ಮಸ್ಯ ಸಂಜಯ |
ಕಿಮಕುರ್ವತ ಮೇ ಪುತ್ರಾ ಮಂದಾ ದುರ್ಯೋಧನಾದಯಃ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಅರ್ಜುನನು ಭೀಷ್ಮರ ವಧೆಯನ್ನು ಪ್ರತಿಜ್ಞೆ ಮಾಡಿದ ಮೇಲೆ ಮಂದರಾದ, ನನ್ನ ಪುತ್ರರಾದ
ದುರ್ಯೋಧನಾದಿಗಳು ಏನು ಮಾಡಿದರು?
ಹತಮೇವ ಹಿ ಪಶ್ಯಾಮಿ ಗಾಂಗೇಯಂ ಪಿತರಂ ರಣೇ |
ವಾಸುದೇವಸಹಾಯೇನ ಪಾರ್ಥೇನ ದೃಢಧನ್ವಿನಾ ॥2॥
ಕೃಷ್ಣನ ಸಹಾಯವುಳ್ಳ, ದೃಢಧನುಸ್ಸನ್ನು ಹೊಂದಿದ ಅರ್ಜುನನಿಂದ ತಂದೆಯಾದ ಗಾಂಗೇಯರು ಯುದ್ಧದಲ್ಲಿ ಹತನಾಗಿದ್ದಾರೆ
ಎಂದೇ ಕಾಣುತ್ತಿದ್ದೇನೆ.
ಸ ಚಾಪರಿಮಿತಪ್ರಜ್ಞಃ ತಚ್ಛ್ರುತ್ವಾ ಪಾರ್ಥಭಾಷಿತಮ್ |
ಕಿಮುಕ್ತವಾನ್ ಮಹೇಷ್ವಾಸೋ ಭೀಷ್ಮಃ ಪ್ರಹರತಾಂ ವರಃ ॥3॥
ಅಪರಿಮಿತ ಪ್ರಜ್ಞೆಯುಳ್ಳವರೂ, ಮಹಾ ಧನುರ್ಧಾರಿಗಳೂ, ಪ್ರಹಾರ ಮಾಡುವವರಲ್ಲಿ ಶ್ರೇಷ್ಠರೂ ಆದ ಭೀಷ್ಮರು ಅರ್ಜುನನ
ಮಾತುಗಳನ್ನು ಕೇಳಿ ಏನು ಹೇಳಿದರು?
ಸೈನಾಪತ್ಯಂ ಚ ಸಂಪ್ರಾಪ್ಯ ಕೌರವಾಣಾಂ ಧುರಂಧರಃ |
ಕಿಮಚೇಷ್ಟತ ಗಾಂಗೇಯೋ ಮಹಾಬುದ್ಧಿಪರಾಕ್ರಮಃ ॥4॥
ಮಹಾಬುದ್ಧಿ ಮತ್ತು ಪರಾಕ್ರಮವನ್ನು ಹೊಂದಿದ, ಕೌರವರ ಧುರಂಧರನಾದ ಭೀಷ್ಮರು ಸೇನಾಧಿಪತ್ಯವನ್ನು ವಹಿಸಿ ಏನು
ಮಾಡಿದರು?
ವೈಶಂಪಾಯನಃ
ತತಸ್ತತ್ ಸಂಜಯಸ್ತಸ್ಮೈ ಸರ್ವಮೇವ ನ್ಯವೇದಯತ್ |
ಯಥೋಕ್ತಂ ಕುರುವೃದ್ಧೇನ ಭೀಷ್ಮೇಣಾಮಿತತೇಜಸಾ ॥5॥
ವೈಶಂಪಾಯನ ಅಮಿತ ತೇಜಸ್ವಿಗಳಾದ, ಕುರುವೃದ್ಧರಾದ ಭೀಷ್ಮರು ಹೇಳಿದುದೆಲ್ಲವನ್ನೂ ಸಂಜಯನು ಆಗ ಧೃತರಾಷ್ಟ್ರನಿಗೆ
ನಿವೇದಿಸಿದನು.
ಸೈನಾಪತ್ಯಮನುಪ್ರಾಪ್ಯ ಭೀಷ್ಮಃ ಶಾಂತನವೋ ನೃಪ |
ದುರ್ಯೋಧನಮುವಾಚೇದಂ ವಚನಂ ಹರ್ಷಯನ್ನಿವ ॥6॥
ಎಲೈ ರಾಜನೇ, ಶಂತನುಪುತ್ರರಾದ ಭೀಷ್ಮರು ಸೇನಾಧಿಪತ್ಯವನ್ನು ಹೊಂದಿ, ದುರ್ಯೋಧನನನ್ನು ಸಂತೋಷಪಡಿಸುವವರಂತೆ
ಅವನನ್ನು ಕುರಿತು ಈ ಮಾತನ್ನು ಆಡಿದರು.
ನಮಸ್ಕೃತ್ಯ ಕುಮಾರಾಯ ಸೇನಾನ್ಯೇ ಶಕ್ತಿಪಾಣಯೇ ॥7॥
ಅಹಂ ಸೇನಾಪತಿಸ್ತೇಽದ್ಯ ಭವಿಷ್ಯಾಮಿ ನ ಸಂಶಯಃ ॥8॥
ನಾನು ಶಕ್ತಿಪಾಣಿಯಾದ, ದೇವಸೇನಾಧಿಪತಿಯಾದ ಷಣ್ಮುಖನಿಗೆ ನಮಸ್ಕಾರವನ್ನು ಮಾಡಿ ಈ ದಿನ ನಿಸ್ಸಂಶಯವಾಗಿ ನಿನಗೆ
ಸೇನಾಪತಿಯಾಗುವೆನು.
ಸೇನಾಕರ್ಮಣ್ಯಭಿಜ್ಞೋಽಸ್ಮಿ ವ್ಯೂಹೇಷು ವಿವಿಧೇಷು ಚ |
ಕರ್ಮ ಕಾರಯಿತುಂ ಚೈವ ಭೃತಾನಪ್ಯಭೃತಾಂಸ್ತಥಾ ॥9॥
ನಾನು ಸೇನಾಕರ್ಮಗಳಲ್ಲಿ ಅಭಿಜ್ಞನಾಗಿದ್ದೇನೆ. ವಿವಿಧ ವ್ಯೂಹಗಳನ್ನು ರಚಿಸಲು ಮತ್ತು ವೇತನವನ್ನು ಪಡೆಯುವ ನಮ್ಮವರಿಂದ
ಮತ್ತು ಪಡೆಯದ ಇತರ ಸೈನಿಕರಿಂದ ಕಾರ್ಯವನ್ನು ಮಾಡಿಸಲು ತಿಳಿದಿದ್ದೇನೆ.
ಯಾತ್ರಾಯಾನೇ ಚ ಯುದ್ಧೇ ಚ ಲಬ್ಧಪ್ರಶಮನೇಷು ಚ |
ಶ್ರುಂಗಂ ವೇದ ಮಹಾರಾಜ ಯಥಾ ವೇದ ಬೃಹಸ್ಪತಿಃ ॥10॥
ವ್ಯೂಹಾನಾಂ ಚ ಸಮಾರಂಭಾನ್ ದೇವಗಾಂಧರ್ವಮಾನುಷಾನ್ |
ತೈರಹಂ ಮೋಹಯಿಷ್ಯಾಮಿ ಪಾಂಡವಾನ್ ವ್ಯೇತು ತೇ ಜ್ವರಃ ॥11॥
ಎಲೈ ಮಹಾರಾಜನೇ, ಸೇನೆಯನ್ನು ಮುಂದೆ ತೆಗೆದುಕೊಂಡು ಹೋಗುವುದರಲ್ಲಿ ಮತ್ತು ಯುದ್ಧದಲ್ಲಿ ಮತ್ತು ಶತ್ರುಸೈನಿಕರನ್ನು

ಶಾಂತಗೊಳಿಸುವುದರಲ್ಲಿ ಯಾವುದು ಪ್ರಧಾನವಾದುದು ಎಂದು ಬೃಹಸ್ಪತಿಯಂತೆ ತಿಳಿದಿದ್ದೇನೆ. ದೇವ-ಗಂಧರ್ವ ಮತ್ತು ಮನುಷ್ಯರಿಗೆ ಸಂಬಂಧಿಸಿದ ವ್ಯೂಹಗಳನ್ನು ರಚಿಸುವುದನ್ನು ತಿಳಿದಿದ್ದೇನೆ. ಅಂತಹ ವ್ಯೂಹಗಳಿಂದ ಪಾಂಡವರಿಗೆ ಮೋಹವನ್ನು ಉಂಟುಮಾಡುವೆನು. ನಿನ್ನ ಮನಸ್ಸಿನ ಆತಂಕವು ನಿವಾರಣೆಯನ್ನು ಹೊಂದಲಿ.
ಸೋಽಯಂ ಯೋತ್ಸ್ಯಾಮಿ ತತ್ತ್ವೇನ ಪಾಲಯಂಸ್ತವ ವಾಹಿನೀಮ್ |
ಯಥಾವಚ್ಚಾಸ್ತ್ರತೋ ರಾಜನ್ ವ್ಯೇತು ತೇ ಮಾನಸೋ ಜ್ವರಃ ॥12॥
ಎಲೈ ರಾಜನೇ, ನಿನ್ನ ಸೈನ್ಯವನ್ನು ರಕ್ಷಣೆ ಮಾಡುತ್ತಾ, ಶಾಸ್ತ್ರಕ್ಕೆ ಅನುಗುಣವಾಗಿ ನಾನು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ನಿನ್ನ ಮನಸ್ಸಿನ ಆತಂಕವು ದೂರವಾಗಲಿ.
ದುರ್ಯೋಧನಃ
ವಿದ್ಯತೇ ಮೇ ನ ಗಾಂಗೇಯ ಭಯಂ ದೇವಾಸುರೇಷ್ವಪಿ |
ಸಮಸ್ತೇಷು ಮಹಾಬಾಹೋ ಸತ್ಯಮೇತದ್ ಬ್ರವೀಮಿ ತೇ ॥13॥
ಎಲೈ ಭೀಷ್ಮರೇ, ಮಹಾಬಾಹುಗಳೇ, ನನಗೆ ದೇವಾಸುರರು ಸಹಿತರಾಗಿ ಸಮಸ್ತವಾಗಿ ಬಂದರೂ ಭಯವಿಲ್ಲ. ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ.
ಕಿಂ ಪುನಸ್ತ್ವಯಿ ದುರ್ಧರ್ಷೇ ಸೈನಾಪತ್ಯೇ ವ್ಯವಸ್ಥಿತೇ |
ದ್ರೋಣೇ ಚ ಪುರುಷವ್ಯಾಘ್ರೇ ಸ್ಥಿತೇ ಯುದ್ಧಾಭಿನಂದಿನಿ ॥14॥
ಹೀಗಿರುವಾಗ ನೀವು ಸೇನಾಪತಿಯಾಗಿ ಮತ್ತು ಯುದ್ಧವನ್ನು ಬಯಸುವ ಪುರುಷವ್ಯಾಘ್ರರಾದ ದ್ರೋಣರು ಸೇನೆಯಲ್ಲಿ ಇರುವಾಗ ಹೆದರಿಕೆಯ ಮಾತೇನು?
ಭವದ್ಭ್ಯಾಂ ಪುರುಷಾಗ್ರ್ಯಾಭ್ಯಾಂ ಸ್ಥಿತಾಭ್ಯಾಂ ವಿಜಯೋ ಮಮ |
ನ ದುರ್ಲಭಂ ಕುರುಶ್ರೇಷ್ಠ ದೇವರಾಜ್ಯಮಪಿ ಧ್ರುವಮ್ ॥15॥
ಪುರುಷವ್ಯಾಘ್ರರಾದ ನೀವಿಬ್ಬರೂ ಇರುವಾಗ ನನಗೆ ವಿಜಯವು ನಿಶ್ಚಿತವಾಗಿದೆ. ಎಲೈ ಕುರುಶ್ರೇಷ್ಠನೇ, ದೇವರಾಜ್ಯವೂ ಸಹ ನನಗೆ ದುರ್ಲಭವಾದುದಲ್ಲ.
ರಥಸಂಖ್ಯಾಂ ತು ಕಾರ್ತ್ಸ್ನ್ಯೇನ ಪರೇಷಾಮಾತ್ಮನಸ್ತಥಾ |
ತಥೈವಾತಿರಥಾನಾಂ ಚ ವೇತ್ತುಮಿಚ್ಛಾಮಿ ಕೌರವ ॥16॥
ಎಲೈ ಕೌರವನೇ, ನಾನು ನಮ್ಮ ಮತ್ತು ಶತ್ರುಗಳ ರಥರ ಮತ್ತು ಅತಿರಥರ ಸಂಖ್ಯೆಯನ್ನು ತಿಳಿಯಲು ಬಯಸುತ್ತೇನೆ.
ಪಿತಾಮಹೋ ಹಿ ಕುಶಲಃ ಪರೇಷಾಮಾತ್ಮನಸ್ತಥಾ |
ಶ್ರೋತುಮಿಚ್ಛಾಮ್ಯಹಂ ಸರ್ವೈಃ ಸಹೈಭಿರ್ವಸುಧಾಧಿಪೈಃ ॥17॥
ಪಿತಾಮಹರಾದ ನೀವು ನಮ್ಮ ಮತ್ತು ಶತ್ರುಗಳ ಬಲದ ಜ್ಞಾನದ ವಿಷಯದಲ್ಲಿ ಕುಶಲರಾಗಿದ್ದೀರಿ. ಈ ಎಲ್ಲ ರಾಜರ ಜೊತೆಯಲ್ಲಿ ನಾನು ರಥಾತಿರಥರ ಸಂಖ್ಯೆಯನ್ನು ಕೇಳಲು ಬಯಸುತ್ತೇನೆ.
ಭೀಷ್ಮಃ
ಗಾಂಧಾರೇ ಶೃಣು ರಾಜೇಂದ್ರ ರಥಸಂಖ್ಯಾಂ ಸ್ವಕೇ ಬಲೇ |
ಯೇ ರಥಾಃ ಪೃಥಿವೀಪಾಲ ತಥೈವಾತಿರಥಾಶ್ಚ ಯೇ ॥18॥
ಭೀಷ್ಮ ಎಲೈ ಗಾಂಧಾರಿಪುತ್ರನೇ, ರಾಜೇಂದ್ರನೇ, ನಿನ್ನ ಸೈನ್ಯದಲ್ಲಿರುವ ರಥರ ಮತ್ತು ಅತಿರಥರ ಸಂಖ್ಯೆಯನ್ನು ಕೇಳುವವನಾಗು.
ಪತ್ತೀನಾಂ ತವ ಸೇನಾಯಾಂ ಪ್ರಯುತಾನ್ಯರ್ಬುದಾನಿ ಚ |
ರಥಾನಾಂ ತವ ಸೇನಾಯಾಂ ಯಥಾಮುಖ್ಯಂ ತು ಮೇ ಶೃಣು ॥19॥
ನಿನ್ನ ಸೈನ್ಯದಲ್ಲಿ ಬಹುಸಂಖ್ಯಾತರಾದ ಪದಾತಿಗಳು ಮತ್ತು ರಥರೂ ಇದ್ದಾರೆ. ಆ ರಥರಲ್ಲಿ ಮುಖ್ಯರಾದವರನ್ನು ಮಾತ್ರ ಕೇಳು.
ಭವಾನಗ್ರೇ ರಥೋದಾರಃ ಸಹ ಸರ್ವೈಃ ಸಹೋದರೈಃ |
ದುಃಶಾಸನಪ್ರಭೃತಿಭಿಃ ಭ್ರಾತೃಭಿಃ ಶತಸಮ್ಮಿತೈಃ ॥20॥
ದುಶ್ಶಾಸನ ಮೊದಲಾದ ನೂರು ಸಹೋದರರಿಂದ ಕೂಡಿದ ನೀನು ಮೊದಲನೆಯ ಶ್ರೇಷ್ಠರಥನಾದವನು.
ಸರ್ವೇ ಕೃತಪ್ರಹರಣಾಃ ಛೇದ್ಯಭೇದ್ಯವಿಶಾರದಾಃ |
ರಥೋಪಸ್ಥೇ ಗಜಸ್ಕಂಧೇ ಗದಾಯುದ್ಧೇಽಸಿಚರ್ಮಣಿ ॥21॥
ನೀನು ಮತ್ತು ಆ ಸಹೋದರರು ಎಲ್ಲಾ ಶಸ್ತ್ರಗಳನ್ನು ಬಲ್ಲವರು. ಛೇದನ- ಭೇದನಗಳಲ್ಲಿ ವಿಶಾರದರು. ರಥದಲ್ಲಿ, ಗಜಸ್ಕಂಧದಲ್ಲಿ, ಗದಾಯುದ್ಧದಲ್ಲಿ ಮತ್ತು ಖಡ್ಗಚರ್ಮಯುದ್ಧದಲ್ಲಿ ವಿಶಾರದರಾದವರು.
ಸಂಯಾತಾರಃ ಪ್ರಹರ್ತಾರಃ ಕೃತಾಸ್ತ್ರಾ ಭಾರಸಾಧನಾಃ |
ಇಷ್ವಸ್ತ್ರೇ ದ್ರೋಣಶಿಷ್ಯಾಶ್ಚ ಕೃಪಸ್ಯ ಚ ಶರದ್ವತಃ ॥22॥
ಮುಂದೆ ನುಗ್ಗುವವರು, ಹೊಡೆಯುವವರು, ಅಸ್ತ್ರವಿದ್ಯೆಯನ್ನು ಬಲ್ಲವರು, ಭಾರವನ್ನು ಸಹಿಸುವವರು, ಶಸ್ತ್ರವಿದ್ಯೆಯಲ್ಲಿ ಮತ್ತು ಅಸ್ತ್ರವಿದ್ಯೆಯಲ್ಲಿ ದ್ರೋಣಾಚಾರ್ಯರ ಮತ್ತು ಕೃಪಾಚಾರ್ಯರ ಶಿಷ್ಯರಾದವರು.
ಏತೇ ಹನಿಷ್ಯಂತಿ ರಣೇ ಪಾಂಚಾಲಾನ್ ಯುದ್ಧದುರ್ಮದಾನ್ |
ಕೃತಕಿಲ್ಬಿಷಾಃ ಪಾಂಡವೇಯೈರ್ಧಾರ್ತರಾಷ್ಟ್ರಾ ಮನಸ್ವಿನಃ ॥23॥
ಪಾಂಡುಪುತ್ರರಿಂದ ಪೀಡಿಸಲ್ಪಟ್ಟ, ಧೈರ್ಯಶಾಲಿಗಳಾದ ಇವರು ಯುದ್ಧದಲ್ಲಿ ಯುದ್ಧದುರ್ಮದರಾದ ಪಾಂಚಾಲರನ್ನು ಕೊಲ್ಲುವರು.
ಯಥಾಽಹಂ ಭರತಶ್ರೇಷ್ಠ ಸರ್ವಸೇನಾಪತಿಸ್ತವ |

ಶತ್ರೂನ್ ವಿಧ್ವಂಸಯಿಷ್ಯಾಮಿ ಕದರ್ಥೀಕೃತ್ಯ ಪಾಂಡವಾನ್ ॥24॥
ನ ತ್ವಾತ್ಮನೋ ಗುಣಾನ್ ವಕ್ತುಮರ್ಹಾಮಿ ವಿದಿತೋಽಸ್ಮಿ ತೇ ॥25॥
ಎಲೈ ಭರತಶ್ರೇಷ್ಠನೇ, ನಿನ್ನ ಸೇನಾಪತಿಯಾದ ನಾನೂ ಒಬ್ಬ ರಥ. ಪಾಂಡವರನ್ನು ತುಚ್ಛೀಕರಿಸಿ ಶತ್ರುಗಳನ್ನು ಧ್ವಂಸಗೊಳಿಸುವೆನು. ನನ್ನ ಗುಣಗಳನ್ನು ನಾನೇ ಹೇಳುವುದು ಉಚಿತವಲ್ಲ. ನಾನು ನಿನಗೆ ತಿಳಿದವನು.
ಕೃತವರ್ಮಾ ತ್ವತಿರಥೋ ಭೋಜಃ ಶಸ್ತ್ರಭೃತಾಂ ವರಃ |
ಅರ್ಥಸಿದ್ಧಿಂ ತವ ರಣೇ ಕರಿಷ್ಯತಿ ನ ಸಂಶಯಃ ॥26॥
ಭೋಜವಂಶಕ್ಕೆ ಸೇರಿದ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಕೃತವರ್ಮನು ಒಬ್ಬ ಅತಿರಥ. ಅವನು ಯುದ್ಧದಲ್ಲಿ ನಿನ್ನ ಅರ್ಥಸಿದ್ಧಿಯನ್ನು ಮಾಡುವುದರಲ್ಲಿ ಸಂಶಯವಿಲ್ಲ.
ಶಸ್ತ್ರವದ್ಭಿರನಾಧೃಷ್ಯೋ ದೂರಪಾತೀ ದೃಢಾಯುಧಃ |
ಹನಿಷ್ಯತಿ ಚಮೂಂ ತೇಷಾಂ ಮಹೇಂದ್ರೋ ದಾನವಾನಿವ ॥27॥
ಶಸ್ತ್ರಜ್ಞರಿಂದ ಸೋಲಿಸಲು ಸಾಧ್ಯವಿಲ್ಲದ, ದೂರದವರೆಗೂ ಪ್ರಹಾರ ಮಾಡುವ, ದೃಢವಾದ ಆಯುಧವುಳ್ಳ ಅವನು, ಮಹೇಂದ್ರನು ದಾನವರನ್ನು ಸಂಹರಿಸಿದಂತೆ ಪಾಂಡವರ ಸೇನೆಯನ್ನು ಸಂಹರಿಸುವನು.
ಮದ್ರರಾಜೋ ಮಹೇಷ್ವಾಸಃ ಶಲ್ಯೋ ಮೇಽತಿರಥೋ ಮತಃ |
ಸ್ಪರ್ಧತೇ ವಾಸುದೇವೇನ ನಿತ್ಯಂ ಯೋ ವೈ ರಣೇ ರಣೇ ॥28॥
ಭಾಗಿನೇಯಾನ್ ನಿಜಾಂಸ್ತ್ಯಕ್ತ್ವಾ ಶಲ್ಯಸ್ತೇಽತಿರಥೋ ಮತಃ ॥29॥
ಮದ್ರರಾಜನಾದ, ಮಹೇಷ್ವಾಸನಾದ ಶಲ್ಯನು ಒಬ್ಬ ಅತಿರಥನೆಂದು ನನ್ನ ಅಭಿಪ್ರಾಯ. ಅವನು ಪ್ರತಿಯುದ್ಧದಲ್ಲಿಯೂ ಕೃಷ್ಣನ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತಾನೆ. ತನ್ನ ತಂಗಿಯ ಮಕ್ಕಳನ್ನು ಬಿಟ್ಟು ನಿನ್ನ ಕಡೆ ಬಂದಿರುವ ಶಲ್ಯನು ಅತಿರಥನೆಂದು ನನ್ನ ಅಭಿಪ್ರಾಯ.
ಏಷ ಯೋತ್ಸ್ಯತಿ ಸಂಗ್ರಾಮೇ ಕೃಷ್ಣಂ ಚಕ್ರಗದಾಧರಮ್ |
ಸಾಗರೋರ್ಮಿಸಮೈರ್ಬಾಣೈಃ ಪ್ಲಾವಯನ್ನಿವ ಶಾತ್ರವಾನ್ ॥30॥
ಇವನು ಯುದ್ಧದಲ್ಲಿ ಸಮುದ್ರದ ಅಲೆಗಳಂತಿರುವ ತನ್ನ ಬಾಣಗಳಿಂದ ಶತ್ರುಗಳನ್ನು ಕೊಚ್ಚುತ್ತಾ, ಚಕ್ರಗದಾಧರನಾದ ಕೃಷ್ಣನ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಭೂರಿಶ್ರವಾಃ ಕೃತಾಸ್ತ್ರಶ್ಚ ತವ ಚಾಪಿ ಹಿತಃ ಸುಹೃತ್ |
ಸೌಮದತ್ತಿರ್ಮಹೇಷ್ವಾಸೋ ರಥಯೂಥಪಯೂಥಪಃ ॥31॥
ಬಲಕ್ಷಯಮಮಿತ್ರಾಣಾಂ ಸುಮಹಾಂತಂ ಕರಿಷ್ಯತಿ ॥32॥
ನಿನಗೆ ಹಿತನಾದ, ಸ್ನೇಹಿತನಾದ, ಸೋಮದತ್ತನ ಮಗನಾದ ಭೂರಿಶ್ರವನು ಮಹಾಧನುರ್ಧಾರಿ, ಅಸ್ತ್ರವಿದ್ಯೆಯನ್ನು ಬಲ್ಲವನು. ಅವನು ರಥಯೂಥಪಯೂಥಪ (ರಥದ ಸಮೂಹವನ್ನು ರಕ್ಷಿಸುವ ಸಮೂಹವನ್ನು ರಕ್ಷಿಸುವವನು). ಅವನು ಶತ್ರುಗಳ ಸೈನ್ಯಕ್ಕೆ ದೊಡ್ಡ ವಿನಾಶವನ್ನು ಉಂಟು ಮಾಡುವನು.
ಸಿಂಧುರಾಜೋ ಮಹಾರಾಜ ಮತೋ ಮೇ ದ್ವಿಗುಣೋ ರಥಃ |
ಯೋತ್ಸ್ಯತೇ ಸಮರೇ ರಾಜನ್ ವಿಕ್ರಾಂತೋ ರಥಸತ್ತಮಃ ॥33॥
ಎಲೈ ಮಹಾರಾಜನೇ, ಸಿಂಧುರಾಜನಾದ ಜಯದ್ರಥನು ಎರಡು ರಥರಿಗೆ ಸಮಾನನಾದವನೆಂದು ನನ್ನ ಅಭಿಪ್ರಾಯ. ಎಲೈ ರಾಜನೇ, ಪರಾಕ್ರಮಿಯಾದ ಆ ರಥಶ್ರೇಷ್ಠನು ಯುದ್ಧವನ್ನು ಮಾಡುವನು.
ದ್ರೌಪದೀಹರಣೇ ಪೂರ್ವಂ ಪರಿಕ್ಲಿಷ್ಟಶ್ಚ ಪಾಂಡವೈಃ |
ಸಂಸ್ಮರಂಸ್ತಂ ಪರಿಕ್ಲೇಶಂ ಯೋತ್ಸ್ಯತೇ ಪರವೀರಹಾ ॥34॥
ಹಿಂದೆ ದ್ರೌಪದೀಹರಣ ಕಾಲದಲ್ಲಿ ಪಾಂಡವರಿಂದ ಕ್ಲೇಶಕ್ಕೆ ಒಳಗಾದ, ಶತ್ರುವೀರ ಘಾತಕನಾದ ಅವನು ಆ ಪರಿಕ್ಲೇಶವನ್ನು ಸ್ಮರಿಸುತ್ತಾ ಯುದ್ಧವನ್ನು ಮಾಡುವನು.
ಏತೇನ ಹಿ ತದಾ ರಾಜನ್ ತಪ ಆಸ್ಥಾಯ ದಾರುಣಮ್ |
ಸುದುರ್ಲಭೋ ವರೋ ಲಬ್ಧಃ ಪಾಂಡವಾನ್ ಯೋದ್ಧುಮಾಹವೇ ॥
ಎಲೈ ರಾಜನೇ, ಆಗ ಇವನು ದಾರುಣವಾದ ತಪಸ್ಸನ್ನು ಮಾಡಿ, ಪಾಂಡವರ ಜೊತೆ ಯುದ್ಧವನ್ನು ಮಾಡಲು ರುದ್ರನಿಂದ ಸುದುರ್ಲಭವಾದ ವರವನ್ನು ಪಡೆದಿದ್ದಾನೆ.
ಸ ಏಷ ರಥಶಾರ್ದೂಲಃ ತದ್ವೈರಂ ಸಂಸ್ಮರನ್ ರಣೇ |
ಯೋತ್ಸ್ಯತೇ ಪಾಂಡವೈಸ್ತಾತ ಪ್ರಾಣಾಂಸ್ತ್ಯಕ್ತ್ವಾ ಸುದುಸ್ತ್ಯಜಾನ್ ॥36॥
ಎಲೈ ಪ್ರೀತಿಪಾತ್ರನೇ, ಈ ರಥಶಾರ್ದೂಲನು ಆ ವೈರವನ್ನು ಸ್ಮರಿಸಿಕೊಂಡು, ದುಸ್ತ್ಯಜವಾದ ತನ್ನ ಪ್ರಾಣವನ್ನು ತೊರೆದು, ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ರಥಾತಿರಥಸಂಖ್ಯಾನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಅರವತ್ನಾಲ್ಕನೆಯ ಅಧ್ಯಾಯ
ಭೀಷ್ಮರಿಂದ ದುರ್ಯೋಧನನ ಸೈನ್ಯದಲ್ಲಿ ಮುಂದುವರಿದ ರಥಾತಿರಥರ ಗಣನೆ.
ಭೀಷ್ಮ
ಸುದಕ್ಷಿಣಸ್ತು ಕಾಂಭೋಜೋ ರಥ ಏಕಗುಣೋ ಮತಃ |
ತವಾರ್ಥಸಿದ್ಧಿಮಾಕಾಂಕ್ಷನ್ ಯೋತ್ಸ್ಯತೇ ಸಮರೇ ಪರೈಃ ॥1॥
ಭೀಷ್ಮ ಕಾಂಭೋಜದೇಶದ ರಾಜನಾದ ಸುದಕ್ಷಿಣನು ಒಬ್ಬ ರಥನೆಂದು ನನ್ನ ಅಭಿಪ್ರಾಯ. ನಿನ್ನ ಅರ್ಥಸಿದ್ಧಿಯನ್ನು ಬಯಸಿ ಅವನು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಏತಸ್ಯ ರಥಸಿಂಹಸ್ಯ ತವಾರ್ಥೇ ರಾಜಸತ್ತಮ |
ಪರಾಕ್ರಮಂ ಯಥೇಂದ್ರಸ್ಯ ದ್ರಕ್ಷ್ಯಂತಿ ಕುರವೋ ಯುಧಿ ॥2॥
ಎಲ್ಲೈ ರಾಜಶ್ರೇಷ್ಠನೇ, ನಿನ್ನ ಸಲುವಾಗಿ ಯುದ್ಧವನ್ನು ಮಾಡುವ, ರಥಸಿಂಹನಾದ ಇವನ ಇಂದ್ರನ ಪರಾಕ್ರಮದಂತಿರುವ ಪರಾಕ್ರಮವನ್ನು ಕೌರವರು ಯುದ್ಧದಲ್ಲಿ ನೋಡುವರು.
ಏತಸ್ಯ ರಥವಂಶೇ ಹಿ ತಿಗ್ಮವೇಗಪ್ರಹಾರಿಣಃ |
ಕಾಂಭೋಜಾನಾಂ ಮಹಾರಾಜ ಶಲಭಾನಾಮಿವಾತತಿಃ ॥3॥
ಎಲ್ಲೈ ಮಹಾರಾಜನೇ, ಇವನ ರಥವಂಶದಲ್ಲಿ ಶೀಘ್ರವಾದ ವೇಗ ಮತ್ತು ಪ್ರಹಾರವನ್ನುಳ್ಳ ಕಾಂಭೋಜರು ಪತಂಗಗಳ ಸಮೂಹದಂತೆ ಇದ್ದಾರೆ.
ನೀಲೋ ಮಾಹಿಷ್ಮತೀವಾಸೀ ನೀಲವರ್ಮಾ ರಥಸ್ತವ |
ರಥವಂಶೇನ ಕದನಂ ಶತ್ರೂಣಾಂ ವೈ ಕರಿಷ್ಯತಿ ॥4॥
ಮಾಹಿಷ್ಮತೀ ಪತಿಯಾದ, ನೀಲಕವಚವನ್ನು ಧರಿಸಿದ ನೀಲನು ನಿನ್ನ ಪರವಾಗಿ ಯುದ್ಧವನ್ನು ಮಾಡುವ ಇನ್ನೊಬ್ಬ ರಥ. ಅವನು ತನ್ನ ರಥಸಮೂಹದಿಂದ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಕೃತವೈರಃ ಸದಾ ಚೈವ ಸಹದೇವೇನ ಪಾರ್ಥಿವ |
ಯೋತ್ಸ್ಯತೇ ಸತತಂ ರಾಜನ್ ತವಾರ್ಥೇ ಕುರುನಂದನ ॥5॥
ಎಲ್ಲೈ ಕುರುನಂದನನೇ, ರಾಜನೇ, ಹಿಂದೆ ಸಹದೇವನ ಜೊತೆಯಲ್ಲಿ ವೈರವನ್ನು ಸಂಪಾದಿಸಿದ ಅವನು ನಿನ್ನ ಸಲುವಾಗಿ ಸತತವಾಗಿ ಯುದ್ಧವನ್ನು ಮಾಡುವನು.
ವಿಂದಾನುವಿಂದಾವಾವಂತ್ಯೌ ಸಮೇತೌ ರಥಸತ್ತಮೌ |
ಕೃತಿನೌ ಸಮರೇ ತಾತ ದೃಢವೀರ್ಯಪರಾಕ್ರಮೌ ॥6॥
ಏತೌ ತೌ ಪುರುಷವ್ಯಾಘ್ರೌ ರಿಪುಸೈನ್ಯಂ ಪ್ರಧಕ್ಷ್ಯತಃ |
ಗದಾಪ್ರಾಸಾಸಿನಾರಾಚೈಃ ತೋಮರೈಶ್ಚ ಕರಚ್ಯುತೈಃ ॥7॥
ಯುದ್ಧಾಭಿಕಾಮೌ ಸಮರೇ ಕ್ರೀಡಂತಾವಿವ ಯೂಥಪೌ |
ಯೂಥಮಧ್ಯೇ ಮಹಾರಾಜ ವಿಚರಂತೌ ಕೃತಾಂತವತ್ ॥8॥
ಅವಂತಿದೇಶದ, ಯಾವಾಗಲೂ ಜೊತೆಯಲ್ಲಿರುವ ವಿಂದಾನುವಿಂದರು ರಥಶ್ರೇಷ್ಠರಾದವರು. ಎಲ್ಲೈ ಪ್ರೀತಿಪಾತ್ರನೇ, ಅವರು ದೃಢವಾದ ಸಾಮರ್ಥ್ಯ ಮತ್ತು ಪರಾಕ್ರಮವುಳ್ಳವರು ಮತ್ತು ಯುದ್ಧದಲ್ಲಿ ಪಳಗಿದವರು. ಈ ಇಬ್ಬರು ಪುರುಷವ್ಯಾಘ್ರರು ತಮ್ಮ ಕೈಯಿಂದ ಪ್ರಯೋಗಿಸಲ್ಪಟ್ಟ ಗದೆ, ಪ್ರಾಸ, ಖಡ್ಗ, ನಾರಾಚ, ತೋಮರಗಳಿಂದ ಶತ್ರುಸೈನ್ಯವನ್ನು ದಹಿಸುವರು. ಎಲ್ಲೈ ಮಹಾರಾಜನೇ, ಯುದ್ಧವನ್ನು ಬಯಸುವ ಅವರು ಆಟವಾಡುವ ಎರಡು ಸಲಗಗಳಂತೆ ಶತ್ರುಸೈನ್ಯದ ಮಧ್ಯದಲ್ಲಿ ಯಮನಂತೆ ಸಂಚರಿಸುವವರು.
ತ್ರಿಗರ್ತಾ ಭ್ರಾತರಃ ಪಂಚ ರಥೋದಾರಾ ಮತಾ ಮಮ |
ಕೃತವೈರಾಶ್ಚ ಪಾರ್ಥೇನ ವಿರಾಟನಗರೇ ತದಾ ॥9॥
ತ್ರಿಗರ್ತ ದೇಶದ ಐದುಜನ ಸಹೋದರರು ಶ್ರೇಷ್ಠರಾದ ರಥರು ಎಂದು ನನ್ನ ಅಭಿಪ್ರಾಯ. ಹಿಂದೆ ಗೋಗ್ರಹಣ ಕಾಲದಲ್ಲಿ ವಿರಾಟನಗರದಲ್ಲಿ ಅರ್ಜುನನ ಜೊತೆಯಲ್ಲಿ ಅವರು ವೈರವನ್ನು ಮಾಡಿಕೊಂಡಿದ್ದಾರೆ.
ಮಕರಾ ಇವ ರಾಜೇಂದ್ರ ಸಮುದ್ಧೂತತರಂಗಿಣೀಮ್ |
ಗಂಗಾಮಿವ ಕ್ಷೋಭಯಂತಿ ಪಾರ್ಥಾನಾಂ ಯುಧಿ ವಾಹಿನೀಮ್ ॥10॥
ಎಲ್ಲೈ ರಾಜೇಂದ್ರನೇ, ಎತ್ತರದ ಅಲೆಗಳುಳ್ಳ ಗಂಗೆಯನ್ನು ಮಕರಗಳು ಕ್ಷೋಭಿಸಿದಂತೆ ಪಾರ್ಥರ ಸೈನ್ಯಕ್ಕೆ ಯುದ್ಧದಲ್ಲಿ ಅವರು ಕ್ಷೋಭೆಯನ್ನು ಉಂಟುಮಾಡುವರು.
ತೇ ರಥಾಃ ಪಂಚ ರಾಜೇಂದ್ರ ತೇಷಾಂ ಸತ್ಯರಥೋ ಮುಖಮ್ |
ಏತೇ ಯೋತ್ಸ್ಯಂತಿ ಸಂಗ್ರಾಮೇ ಸಂಸ್ಮರಂತಃ ಪುರಾಕೃತಮ್ ॥11॥
ವ್ಯಲೀಕಂ ಪಾಂಡವೇಯೇನ ಭೀಮಸೇನಾನುಜೇನ ಹ ॥12॥
ದಿಶೋ ವಿಜಯತಾ ರಾಜನ್ ಶ್ವೇತವಾಹೇನ ಭಾರತ ॥13॥
ಎಲ್ಲೈ ರಾಜೇಂದ್ರನೇ, ಆ ಐದು ಜನರಲ್ಲಿ ಸತ್ಯರಥನು ಶ್ರೇಷ್ಠನಾದವನು. ಈ ಐವರು ದಿಗ್ವಿಜಯ ಕಾಲದಲ್ಲಿ ಭೀಮಸೇನನ ತಮ್ಮನಾದ, ಪಾಂಡುಪುತ್ರನಾದ ಅರ್ಜುನನಿಂದ ಹಿಂದೆ ಮಾಡಲ್ಪಟ್ಟ ಅಪಚಾರವನ್ನು ಸ್ಮರಿಸುತ್ತಾ ಯುದ್ಧವನ್ನು ಮಾಡುವರು.
ತೇ ಹನಿಷ್ಯಂತಿ ಸೇನಾಂ ತಾಂ ಸಮಾಸಾದ್ಯ ಮಹಾರಥಾನ್ |
ಪರಾನ್ ವರಾನ್ ಮಹೇಷ್ವಾಸಾನ್ ಕ್ಷತ್ರಿಯಾಣಾಂ ಧುರಂಧರಾನ್ ॥
ಅವರು ಪಾಂಡವರ ಸೇನೆಯನ್ನು ಪ್ರವೇಶಿಸಿ, ಮಹಾರಥರೂ, ಶ್ರೇಷ್ಠರೂ, ಮಹೇಷ್ವಾಸರೂ, ಕ್ಷತ್ರಿಯ ಧುರಂಧರರೂ ಆದ ಶತ್ರುಗಳನ್ನು

ಕೊಲ್ಲುವರು.
ಲಕ್ಷಣಸ್ತವ ಪುತ್ರಸ್ತು ತಥಾ ದುಃಶಾಸನಸ್ಯ ಚ |
ಉಭೌ ತೌ ಪುರುಷವ್ಯಾಘ್ರೌ ಸಮರೇಷ್ವನಿವರ್ತಿನೌ ॥15॥
ನಿನ್ನ ಪುತ್ರನಾದ ಲಕ್ಷಣ ಮತ್ತು ದುಶ್ಶಾಸನನ ಪುತ್ರ ಇವರಿಬ್ಬರೂ ಯುದ್ಧದಲ್ಲಿ ಹಿಮ್ಮೆಟ್ಟದ ಪುರುಷವ್ಯಾಘ್ರರು.
ತರುಣೌ ಸುಕುಮಾರೌ ಚ ರಾಜಪುತ್ರೌ ಯಶಸ್ವಿನೌ |
ಯುದ್ಧಾನಾಂ ಚ ವಿಶೇಷಜ್ಞೌ ಪ್ರಣೇತಾರೌ ಚ ಸರ್ವಶಃ ॥16॥
ಅವರು ತರುಣರೂ, ಸುಕುಮಾರರೂ, ಕೀರ್ತಿವಂತರಾದ ರಾಜಪುತ್ರರೂ, ಯುದ್ಧದ ವಿಶೇಷವನ್ನು ತಿಳಿದವರೂ ಮತ್ತು ಎಲ್ಲ ರೀತಿಯಿಂದಲೂ ಸೈನ್ಯವನ್ನು ನಡೆಸುವವರು.
ರಥಿನೌ ರಥಶಾರ್ದೂಲ ಮತೌ ಮೇ ರಥಸತ್ತಮೌ |
ಕ್ಷತ್ರಧರ್ಮರತೌ ವೀರೌ ಮಹತ್ ಕರ್ಮ ಕರಿಷ್ಯತಃ ॥17॥
ಎಲೈ ರಥಶಾರ್ದೂಲನೇ, ರಥಿಕರಾದ ಅವರಿಬ್ಬರೂ ಶ್ರೇಷ್ಠರಥರೆಂದು ನನ್ನ ಅಭಿಪ್ರಾಯ. ಕ್ಷತ್ರಧರ್ಮದಲ್ಲಿ ಆಸಕ್ತರಾದ ಆ ವೀರರು ಯುದ್ಧದಲ್ಲಿ ಮಹತ್ತಾದ ಕಾರ್ಯವನ್ನು ಮಾಡುವರು.
ದಂಡಧಾರೋ ಮಹಾರಾಜ ರಥ ಏಕೋ ನರರ್ಷಭಃ |
ಯೋತ್ಸ್ಯತೇ ತವ ಸಂಗ್ರಾಮೇ ಸ್ವೇನ ಸೈನ್ಯೇನ ಪಾಲಿತಃ ॥18॥
ಎಲೈ ಮಹಾರಾಜನೇ, ನರಶ್ರೇಷ್ಠನಾದ ದಂಡಧಾರನೂ ಇನ್ನೊಬ್ಬ ರಥ. ಅವನು ನಿನ್ನ ಪರವಾಗಿ ತನ್ನ ಸೈನ್ಯದಿಂದ ರಕ್ಷಿತನಾಗಿ ಯುದ್ಧವನ್ನು ಮಾಡುವವನು.
ಬೃಹದ್ಬಲಸ್ತಥಾ ರಾಜಾ ಕೌಸಲ್ಯೋ ರಥಸತ್ತಮಃ |
ರಥೋ ಮಮ ಮತಸ್ತಾತ ಮಹಾವೇಗಪರಾಕ್ರಮಃ ॥19॥
ಹಾಗೆಯೇ ಕೋಸಲದೇಶದ ರಾಜನಾದ, ರಥಶ್ರೇಷ್ಠನಾದ, ಮಹಾವೇಗ ಮತ್ತು ಪರಾಕ್ರಮವುಳ್ಳ ಬೃಹದ್ಬಲನು ಇನ್ನೊಬ್ಬ ರಥನೆಂದು ನನ್ನ ಅಭಿಪ್ರಾಯ.
ಏಷ ಯೋತ್ಸ್ಯತಿ ಸಂಗ್ರಾಮೇ ಸ್ವಾಂ ಚಮೂಂ ಸಂಪ್ರಹರ್ಷಯನ್ |
ಉಗ್ರಾಯುಧೋ ಮಹೇಷ್ವಾಸೋ ಧಾರ್ತರಾಷ್ಟ್ರಹಿತೇ ರತಃ ॥20॥
ಉಗ್ರವಾದ ಆಯುಧವುಳ್ಳವನೂ, ಮಹಾಧನುರ್ಧಾರಿಯೂ ಮತ್ತು ದುರ್ಯೋಧನನ ಹಿತದಲ್ಲಿ ರತನಾದ ಅವನು ತನ್ನ ಸೈನ್ಯವನ್ನು ಸಂತೋಷ ಪಡಿಸುತ್ತಾ ಯುದ್ಧವನ್ನು ಮಾಡುವವನು.
ಕೃಪಃ ಶಾರದ್ವತೋ ರಾಜನ್ ರಥಯೂಥಪಯೂಥಪಃ |
ಪ್ರಿಯಾನ್ ಪ್ರಾಣಾನ್ ಪರಿತ್ಯಜ್ಯ ಪ್ರಧಕ್ಷ್ಯತಿ ರಿಪೂಂಸ್ತವ ॥21॥
ಎಲೈ ರಾಜನೇ, ಶಾರದ್ವತರಾದ ಕೃಪರು ರಥಯೂಥಪಯೂಥಪರು. ತಮ್ಮ ಪ್ರಿಯವಾದ ಪ್ರಾಣವನ್ನಾದರೂ ತ್ಯಜಿಸಿ ನಿನ್ನ ಶತ್ರುಗಳನ್ನು ದಹಿಸುವರು.
ಗೌತಮಸ್ಯ ಮಹರ್ಷೇಸ್ತು ಆಚಾರ್ಯಸ್ಯ ಶರದ್ವತಃ |
ಕಾರ್ತಿಕೇಯ ಇವಾಜೇಯಃ ಶರಸ್ತಂಬಾತ್ ಸುತೋ ಬಭೌ ॥22॥
ಬಾಣಗಳನ್ನು ಧರಿಸಿದ, ಆಚಾರ್ಯರಾದ ಗೌತಮಮಹರ್ಷಿಗಳಿಂದ ಶರಸ್ತಂಬದಿಂದ ಜನಿಸಿದ ಅವರು ಷಣ್ಮುಖನಂತೆ ಅಜೇಯರಾಗಿ ಮೆರೆದರು.
ಏಷ ಸೇನಾಂ ಬಹುವಿಧಾಂ ವಿವಿಧಾಯುಧಕಾರ್ಮುಕಾಃ |
ಅಗ್ನಿವತ್ ಸಮರೇ ರಾಜನ್ ಚರಿಷ್ಯತಿ ವಿಮರ್ದಯನ್ ॥23॥
ಇವರು ವಿವಿಧವಾದ ಆಯುಧ ಮತ್ತು ಧನುಸ್ಸುಗಳನ್ನು ಧರಿಸಿದ, ಬಹುವಿಧವಾದ ಈ ಶತ್ರುಸೈನ್ಯವನ್ನು ಮರ್ದಿಸುತ್ತಾ ಅಗ್ನಿಯಂತೆ ಸಂಚರಿಸುವವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೈದನೆಯ ಅಧ್ಯಾಯ
ಭೀಷ್ಮರಿಂದ ದುರ್ಯೋಧನನ ಸೈನ್ಯದಲ್ಲಿ ರಥಾತಿರಥರ ಗಣನೆಯ ಅನುವೃತ್ತಿ.
ಭೀಷ್ಮಃ
ಶಕುನಿರ್ಮಾತುಲಸ್ತೇಽಸೌ ರಥ ಏಕೋ ನರಾಧಿಪಃ |
ಪ್ರಸಜ್ಯ ಪಾಂಡವೈಃ ಸರ್ವೈಃ ಯೋತ್ಸ್ಯತೇ ನಾತ್ರ ಸಂಶಯಃ ॥1॥
ಭೀಷ್ಮ ನಿನ್ನ ಸೋದರಮಾವನಾದ, ರಾಜನಾದ ಶಕುನಿಯು ಒಬ್ಬ ರಥ. ಅವನು ಪಾಂಡವರ ಮೇಲೆ ಎರಗಿ ಯುದ್ಧ ಮಾಡುವುದರಲ್ಲಿ ಸಂಶಯವಿಲ್ಲ.
ಏತಸ್ಯ ಸೇನಾ ದುರ್ಧರ್ಷಾ ಸಮರೇ ಪ್ರತಿಯೋಧಿನಃ |

ವಿವಿಧಾಯುಧಭೂಯಿಷ್ಠಾ ವಾಯುವೇಗಸಮಾ ಜವೇ ॥2॥
ಯುದ್ಧದಲ್ಲಿ ಪ್ರತಿಯಾಗಿ ಯುದ್ಧವನ್ನು ಮಾಡುವ ಇವನ ಸೈನ್ಯವು ಸೋಲಿಸಲು ಅಸಾಧ್ಯವಾದುದು. ಅನೇಕ ಆಯುಧಗಳಿಂದ ಕೂಡಿರುವಂತಹದು ಮತ್ತು ವೇಗದಲ್ಲಿ ವಾಯುವೇಗಕ್ಕೆ ಸಮನಾಗಿರುವುದು.
ದ್ರೋಣಪುತ್ರೋ ಮಹೇಷ್ವಾಸಃ ಸರ್ವೇಷಾಮತಿ ಧನ್ವಿನಾಮ್ |
ಸಮರೇ ಚಿತ್ರಯೋಧೀ ಚ ದೃಢಾಸ್ತ್ರಶ್ಚ ಮಹಾರಥಃ ॥3॥
ದ್ರೋಣಪುತ್ರರಾದ ಅಶ್ವತ್ಥಾಮರು ಎಲ್ಲಾ ಧನುರ್ಧಾರಿಗಳನ್ನೂ ಮೀರಿದವರು. ಅವರು ಮಹಾರಥರು, ದೃಢವಾದ ಅಸ್ತ್ರವನ್ನು ಉಳ್ಳವರು ಮತ್ತು ವಿಚಿತ್ರವಾಗಿ ಯುದ್ಧವನ್ನು ಮಾಡುವವರು.
ಏತಸ್ಯ ಹಿ ಮಹಾರಾಜ ಯಥಾ ಗಾಂಡೀವಧನ್ವನಃ |
ಶರಾಸನವಿನಿರ್ಮುಕ್ತಾಃ ಸಂಸಕ್ತಾ ಯಾಂತಿ ಸಾಯಕಾಃ ॥4॥
ನೈಷಶಕ್ಯೋ ಮವೀರಃ ಸಂಖ್ಯಾತುಂ ರಥಸತ್ತಮಃ |
ನಿರ್ದಹೇದಪಿ ಲೋಕಾಂ ಸ್ತ್ರೀನಿಚ್ಛನ್ನೇಷ ಮಹಾರಥಃ ॥5॥
ಎಲೈ ಮಹಾರಾಜನೇ, ಇವರು ಪ್ರಯೋಗಿಸಿದ ಬಾಣಗಳು ಅರ್ಜುನನ ಬಾಣಗಳಂತೆ ಒಂದಕ್ಕೊಂದು ಸೇರಿಕೊಂಡು ಹೋಗುತ್ತವೆ. ಈ ಮಹಾವೀರರಾದ ರಥಶ್ರೇಷ್ಠರನ್ನು ಗಣನೆ ಮಾಡಲೂ ಸಾಧ್ಯವಿಲ್ಲ. ಮಹಾಕೀರ್ತಿವಂತರಾದ ಇವರು ಬಯಸಿದರೆ ಮೂರು ಲೋಕಗಳನ್ನೂ ಸುಟ್ಟಾರು.
ಕ್ರೋಧಸ್ತೇಜಶ್ಚ ತಪಸಾ ಸಂಭೃತೋ ವನವಾಸಿನಾಮ್ |
ದ್ರೋಣೇನಾನುಗೃಹೀತಶ್ಚ ದಿವ್ಯೈರಸ್ತ್ರೈರುದಾರಧೀಃ ॥5॥
ಇವರು ವನವಾಸಿಗಳ ಕ್ರೋಧ, ತೇಜಸ್ಸು ಮತ್ತು ತಪಸ್ಸುಗಳಿಂದ ಪೂರ್ಣರಾಗಿದ್ದಾರೆ. ಜೊತೆಗೆ ಉದಾರ ಬುದ್ಧಿಯುಳ್ಳ ಇವರು ದ್ರೋಣರಿಂದ ದಿವ್ಯಾಸ್ತ್ರ ಸಂಪಾದನರೂಪವಾದ ಅನುಗ್ರಹವನ್ನೂ ಪಡೆದಿದ್ದಾರೆ.
ದೋಷಸ್ತಸ್ಯ ಮಹಾನೇಕೋ ಯೇನೈಷ ಭರತರ್ಷಭ |
ನ ಮೇ ರಥೋ ನಾತಿರಥೋ ಮತಃ ಪಾರ್ಥಿವಸತ್ತಮ ॥6॥
ಎಲೈ ಭರತರ್ಷಭನೇ, ಅವರಲ್ಲಿ ಒಂದೇ ಒಂದು ದೊಡ್ಡ ದೋಷವಿದೆ. ಆದ್ದರಿಂದ ಎಲೈ ರಾಜಶ್ರೇಷ್ಠನೇ, ನಾನು ಅವರನ್ನು ರಥರೆಂದಾಗಲೀ, ಅತಿರಥರೆಂದಾಗಲೀ ಎಣಿಸುವುದಿಲ್ಲ.
ಜೀವಿತಂ ಪ್ರಿಯಮತ್ಯರ್ಥಮಾಯುಷ್ಕಾಮಃ ಸದಾ ದ್ವಿಜಃ |
ನ ಹ್ಯಸ್ಯ ಸದೃಶಃ ಕಶ್ಚಿದ್ ಉಭಯೋಃ ಸೇನಯೋರಪಿ ॥8॥
ಬ್ರಾಹ್ಮಣರಾದ ಅವರಿಗೆ ತಮ್ಮ ಜೀವ ಮತ್ತು ಆಯುಸ್ಸಿನ ಮೇಲೆ ಯಾವಾಗಲೂ ಬಹಳವಾದ ಆಸೆಯಿದೆ. ಎರಡು ಸೈನ್ಯಗಳಲ್ಲಿಯೂ ಅವರಿಗೆ ಸಮಾನರಾದವರು ಯಾರೂ ಇಲ್ಲ.
ಹನ್ಯಾದೇಕರಥೇನೈವ ದೇವಾನಾಮಪಿ ವಾಹಿನೀಮ್ |
ವಪುಷ್ಮಾಂಸ್ತಳಘೋಷೇಣ ಸ್ಫೋಟಯೇದಪಿ ಪರ್ವತಾನ್ ॥9॥
ಅವರು ಒಂದೇ ರಥದಿಂದ ದೇವತೆಗಳ ಸೈನ್ಯವನ್ನೂ ವಧೆ ಮಾಡಲು ಸಮರ್ಥರು. ಸಾರವತ್ತಾದ ದೇಹವನ್ನು ಹೊಂದಿರುವ ಅವರು ತಮ್ಮ ಹಸ್ತತಳ ಪ್ರಹಾರಘೋಷದಿಂದ ಪರ್ವತಗಳನ್ನೂ ಒಡೆದಾರು.
ಅಸಂಖ್ಯೇಯಗುಣೋ ವೀರಃ ಪ್ರಹರ್ತಾ ದಾರುಣದ್ಯುತಿಃ |
ದಂಡಪಾಣಿರಿವಾಸಹ್ಯಃ ಕಾಲವತ್ ಪ್ರಚರಿಷ್ಯತಿ ॥10॥
ಅಸಂಖ್ಯೇಯ ಗುಣವುಳ್ಳವರೂ, ದಾರುಣವಾದ ಕಾಂತಿಯುಳ್ಳವರೂ, ಪ್ರಹಾರವನ್ನು ಮಾಡುವವರೂ, ವೀರರೂ ಆದ ಅವರು ದಂಡಪಾಣಿಯಾದ ಯಮನಂತೆ ಸಂಚರಿಸುವರು.
ಯುಗಾಂತಾಗ್ನಿಸಮಃ ಕ್ರೋಧಾತ್ ಸಿಂಹಗ್ರೀವೋ ಮಹಾತಪಾಃ |
ಏಷ ಭಾರತ ಯುದ್ಧಸ್ಯ ಪೃಷ್ಠಂ ಸಂಶಮಯಿಷ್ಯತಿ ॥11॥
ಕ್ರೋಧದಿಂದ ಯುಗಾಂತಕಾಲದ ಅಗ್ನಿಗೆ ಸಮರಾದ, ಸಿಂಹಗ್ರೀವವನ್ನು ಹೊಂದಿದ, ಮಹಾತಪಸ್ವಿಗಳಾದ ಇವರು ಎಲೈ ಭಾರತನೇ, ಯುದ್ಧದ ಪೃಷ್ಠಭಾಗವನ್ನು ಸಂಹರಿಸುವರು.
ಪಿತಾ ತ್ವಸ್ಯ ಮಹಾತೇಜಾ ವೃದ್ಧೋಽಪಿ ಯುವಭಿರ್ವರಃ |
ರಣೇ ಕರ್ಮ ಮಹತ್ ಕರ್ತಾ ಅತ್ರ ಮೇ ನಾಸ್ತಿ ಸಂಶಯಃ ॥12॥
ಇವರ ತಂದೆಯಾದ, ಮಹಾತೇಜಸ್ವಿಗಳಾದ ದ್ರೋಣರು ವೃದ್ಧರಾದರೂ ಯುವಕರಿಗಿಂತಲೂ ಶ್ರೇಷ್ಠರಾದವರು. ಅವರು ಯುದ್ಧದಲ್ಲಿ ಮಹತ್ತಾದ ಕಾರ್ಯವನ್ನು ಮಾಡುವುದರಲ್ಲಿ ನನಗೆ ಸಂಶಯವಿಲ್ಲ.
ಅಸ್ತ್ರವೇಗಾನಿಲೋದ್ಧೂತಃ ಸೇನಾಕಕ್ಷೇಂಧನೋತ್ಥಿತಃ |
ಪಾಂಡುಪುತ್ರಸ್ಯ ಸೈನ್ಯಾನಿ ಪ್ರಧಕ್ಷ್ಯತಿ ನ ಸಂಶಯಃ ॥13॥
ಅಸ್ತ್ರವೇಗವೆಂಬ ಅನಿಲದಿಂದ ಪ್ರವೃದ್ಧವಾದ, ಸೇನೆ ಎಂಬ ಹುಲ್ಲುಗಾವಲಿನಿಂದ ಎದ್ದ ಅಗ್ನಿಯಂತಿರುವ ಇವರು ಪಾಂಡವರ ಸೈನ್ಯಗಳನ್ನು ದಹಿಸುವರು. ಸಂಶಯವಿಲ್ಲ.
ರಥಯೂಥಪಯೂಥಾನಾಂ ಯೂಥಪೋಽಯಂ ನರರ್ಷಭಃ |
ಭರದ್ವಾಜಾತ್ಮಜಃ ಕರ್ತಾ ಕರ್ಮ ತೀವ್ರಂ ಹಿತಾಯ ವಃ ॥14॥
ಈ ನರಶ್ರೇಷ್ಠರನ್ನು ರಥ ಯೂಥಪಯೂಥಯೂಥಪ ಎಂದು ಕರೆಯಬೇಕು. ಭರದ್ವಾಜರ ಪುತ್ರರಾದ ಇವರು ನಿಮ್ಮ ಹಿತಕ್ಕಾಗಿ ಘೋರವಾದ ಕರ್ಮವನ್ನು ಮಾಡುವರು.

ಸರ್ವಮೂರ್ಧಾಭಿಷಿಕ್ತಾನಾಮಾಚಾರ್ಯಃ ಸ್ಥವಿರೋ ಗುರುಃ |
ಗಚ್ಛೇದಂತಂ ಸೃಂಜಯಾನಾಂ ಪ್ರಿಯಸ್ತ್ವಸ್ಯ ಧನಂಜಯಃ ॥15॥
ಸರ್ವಮೂರ್ಧಾಭಿಷಿಕ್ತರಾದವರಿಗೂ ಆಚಾರ್ಯರಾದ, ವೃದ್ಧರಾದ ಇವರು ಸೃಂಜಯರನ್ನು ನಾಶ ಮಾಡುವರು. ಆದರೆ ಅರ್ಜುನನು ಇವರಿಗೆ ಪ್ರಿಯನಾದವನು.
ನೈಷ ಜಾತು ಮಹೇಷ್ವಾಸಃ ಪಾರ್ಥಮಕ್ಲಿಷ್ಟಕಾರಿಣಮ್ |
ಹನ್ಯಾದಾಚಾರ್ಯಕಂ ದೀಪ್ತಂ ಸಂಸ್ಮೃತ್ಯ ಗುಣನಿರ್ಜಿತಮ್ ॥16॥
ಮಹಾಧನುರ್ಧಾರಿಗಳಾದ ಇವರು ಅರ್ಜುನನ ಶಿಷ್ಯವೃತ್ತಿಯನ್ನು ಸ್ಮರಿಸಿ, ಅವನ ಗುಣಗಳಿಂದ ನಿರ್ಜಿತರಾಗಿ, ಅಕ್ಲಿಷ್ಟಕಾರಿಯಾದ ಅರ್ಜುನನನ್ನು ಎಂದೂ ಕೊಲ್ಲಲಾರರು.
ಶ್ಲಾಘತ್ಯೇಷ ಸದಾ ವೀರಃ ಪಾರ್ಥಸ್ಯ ಗುಣವಿಸ್ತರೈಃ |
ಪುತ್ರಾದಭ್ಯಧಿಕಂ ಚೈನಂ ಭಾರದ್ವಾಜೋಽನುಪಶ್ಯತಿ ॥17॥
ವೀರರಾದ ಇವರು ಯಾವಾಗಲೂ ಅರ್ಜುನನ ಗುಣಗಳನ್ನು ಕೊಂಡಾಡುತ್ತಾರೆ. ದ್ರೋಣರು ಅರ್ಜುನನನ್ನು ತಮ್ಮ ಪುತ್ರನಿಗಿಂತಲೂ ಹೆಚ್ಚು ಪ್ರಿಯನೆಂದು ಕಾಣುತ್ತಾರೆ.
ಹನ್ಯಾದೇಕರಥೇನೈವ ದೇವಗಂಧರ್ವದಾನವಾನ್ |
ಏಕೀಭೂತಾನಪಿ ರಣೇ ದಿವ್ಯೈರಸ್ತ್ರೈಃ ಪ್ರತಾಪವಾನ್ ॥18॥
ಪ್ರತಾಪಶಾಲಿಗಳಾದ ಇವರು ದೇವ-ಗಂಧರ್ವ-ದಾನವರು ಒಂದು ರಥದಲ್ಲಿ ಒಟ್ಟಿಗೇ ಬಂದರೂ ತಮ್ಮ ದಿವ್ಯಾಸ್ತ್ರಗಳಿಂದ ಅವರನ್ನು ಕೊಂದಾರು.
ಪೌರವೋ ರಾಜಶಾರ್ದೂಲಃ ತವ ರಾಜನ್ ಮಹಾರಥಃ |
ಮತೋ ಮಮ ರಥೋದಾರಃ ಪರವೀರರಥಾರುಜಃ ॥19॥
ಎಲೈ ರಾಜನೇ, ರಾಜಶ್ರೇಷ್ಠನಾದ ಪೌರವನು ನಿನಗೆ ಇನ್ನೊಬ್ಬ ಮಹಾರಥ ಎಂದು ನನ್ನ ಅಭಿಪ್ರಾಯ. ಅವನು ಶ್ರೇಷ್ಠವಾದ ರಥವುಳ್ಳವನು ಮತ್ತು ಶತ್ರುಸೈನ್ಯದ ವೀರರಾದ ರಥರನ್ನು ಸಂಹರಿಸುವವನು.
ಸ್ವೇನ ಸೈನ್ಯೇನ ಮಹತಾ ಪ್ರತಪನ್ ಶತ್ರುವಾಹಿನೀಮ್ |
ಪ್ರಧಕ್ಷ್ಯತಿ ಸ ಪಾಂಚಾಲಾನ್ ಕಕ್ಷಂ ಕೃಷ್ಣಗತಿರ್ಯಥಾ ॥20॥
ತನ್ನ ದೊಡ್ಡ ಸೈನ್ಯದಿಂದ ಪ್ರಜ್ವಲಿಸುವ ಇವನು ಶತ್ರುಸೈನ್ಯದಲ್ಲಿರುವ ಪಾಂಚಾಲರನ್ನು ಅಗ್ನಿಯು ಹುಲ್ಲುಗಾವಲನ್ನು ಸುಡುವಂತೆ ಸುಡುವನು.
ಸತ್ಯಶ್ರವಾ ರಥಸ್ತ್ವೇಕೋ ರಾಜಪುತ್ರೋ ಮಹದ್ಬಲಃ |
ತವ ರಾಜನ್ ರಿಪುಬಲೇ ಕಾಲವತ್ ಪ್ರಚರಿಷ್ಯತಿ ॥21॥
ಮಹಾಬಲವುಳ್ಳ ರಾಜಪುತ್ರನಾದ ಸತ್ಯಶ್ರವನು ಒಂದು ರಥ. ಎಲೈ ರಾಜನೇ, ನಿನ್ನ ಪರವಾಗಿ ಶತ್ರುಸೈನ್ಯದಲ್ಲಿ ಅಂತಕನಂತೆ ಸಂಚರಿಸುವನು.
ಏತಸ್ಯ ಯೋಧಾ ರಾಜೇಂದ್ರ ವಿಚಿತ್ರಕವಚಾಯುಧಾಃ |
ವಿಚರಿಷ್ಯಂತಿ ಸಂಗ್ರಾಮೇ ನಿಘ್ನಂತಃ ಶಾತ್ರವಾನ್ ರಣೇ ॥22॥
ಎಲೈ ರಾಜೇಂದ್ರನೇ, ವಿಚಿತ್ರಕವಚಾಯುಧಗಳನ್ನು ಧರಿಸಿದ ಅವನ ಯೋಧರು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುತ್ತಾ ಸಂಚರಿಸುವರು.
ವೃಷಸೇನೋ ರಥಶ್ರೇಷ್ಠಃ ಕರ್ಣಪುತ್ರೋ ಮಹಾರಥಃ |
ಪ್ರಧಕ್ಷ್ಯತಿ ರಿಪೂಣಾಂ ತೇ ಬಲಂ ತು ಬಲಿನಾಂ ವರಃ ॥23॥
ಕರ್ಣಪುತ್ರನಾದ, ರಥಶ್ರೇಷ್ಠನಾದ ವೃಷಸೇನನು ಒಬ್ಬ ಮಹಾರಥ. ಬಲಿಷ್ಠರಲ್ಲಿ ಶ್ರೇಷ್ಠನಾದ ಅವನು ಶತ್ರುಗಳ ಸೈನ್ಯವನ್ನು ಸುಡುವನು.
ಜಲಸಂಧೋ ಮಹಾತೇಜಾ ರಾಜನ್ ರಥವರಸ್ತವ |
ತ್ಯಕ್ಷ್ಯತೇ ಸಮರೇ ಪ್ರಾಣಾನ್ ಮಾಗಧಃ ಪರವೀರಹಾ ॥24॥
ಎಲೈ ರಾಜನೇ, ಮಹಾತೇಜಸ್ವಿಯಾದ, ಮಗಧದೇಶದ ಜಲಸಂಧನು ನಿನಗೆ ಒಬ್ಬ ಶ್ರೇಷ್ಠವಾದ ರಥ. ಶತ್ರುಸೈನ್ಯದ ವೀರರನ್ನು ಸಂಹರಿಸುವ ಅವನು ಯುದ್ಧದಲ್ಲಿ ನಿನ್ನ ಸಲುವಾಗಿ ಪ್ರಾಣವನ್ನು ಬಿಡುವನು.
ಏಷ ಯೋತ್ಸ್ಯತಿ ಸಂಗ್ರಾಮೇ ಗಜಸ್ಕಂಧವಿಶಾರದಃ |
ರಥೇನ ವಾ ಮಹಾಬಾಹುಃ ಕ್ಷಪಯನ್ ಶತ್ರುವಾಹಿನೀಮ್ ॥25॥
ಮಹಾಬಾಹುವಾದ ಇವನು ಗಜಸ್ಕಂಧವಿಶಾರದನೂ ಆಗಿದ್ದು, ಗಜಸ್ಕಂಧದಲ್ಲಾಗಲೀ ಅಥವಾ ರಥದಲ್ಲಾಗಲೀ ಕುಳಿತು, ಶತ್ರುಸೈನ್ಯವನ್ನು ನಾಶ ಮಾಡುತ್ತಾ ಯುದ್ಧವನ್ನು ಮಾಡುವನು.
ರಥ ಏಷ ಮಹಾಬಾಹೋ ಮತೋ ಮಮ ನರರ್ಷಭಃ |
ತ್ವದರ್ಥೇ ತ್ಯಕ್ಷ್ಯತಿ ಪ್ರಾಣಾನ್ ಸಹಸೈನ್ಯೋ ಮಹಾರಣೇ ॥26॥
ಎಲೈ ಮಹಾಬಾಹುವೇ, ಈ ನರಶ್ರೇಷ್ಠನು ಒಂದು ರಥ ಎಂದು ನನ್ನ ಅಭಿಪ್ರಾಯ. ನಿನ್ನ ಸಲುವಾಗಿ ತನ್ನ ಸೈನ್ಯದ ಜೊತೆಯಲ್ಲಿ ದೊಡ್ಡ ಯುದ್ಧದಲ್ಲಿ ಪ್ರಾಣಗಳನ್ನು ಬಿಡುವನು.
ಏಷ ವಿಕ್ರಾಂತಯೋಧೀ ಚ ಚಿತ್ರಯೋಧೀ ಚ ಸಂಗರೇ |
ವೀತಭೀಶ್ಚಾಪಿ ತೇ ರಾಜನ್ ಶತ್ರುಭಿಃ ಸಹ ಯೋತ್ಸ್ಯತೇ ॥27॥

ಎಲೈ ರಾಜನೇ, ಪರಾಕ್ರಮದಿಂದ ಯುದ್ಧವನ್ನು ಮಾಡುವವನೂ, ವಿಚಿತ್ರವಾಗಿ ಯುದ್ಧವನ್ನು ಮಾಡುವವನೂ ಆದ ಇವನು ಯುದ್ಧದಲ್ಲಿ ಯಾವ ಭಯವೂ ಇಲ್ಲದೆ ನಿನ್ನ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಬಾಹ್ಲೀಕೋಽತಿರಥಶ್ಚೈವ ಸಮರೇ ಚಾನಿವರ್ತಿತಾ |
ಮಮ ರಾಜನ್ ಮತೋ ಯುದ್ಧೇ ಶೂರೋ ವೈವಸ್ವತೋಪಮಃ ॥28॥
ನ ಹ್ಯೇಷ ಸಮರಂ ಪ್ರಾಪ್ಯ ನಿವರ್ತೇತ ಕಥಂಚನ ॥29॥
ಎಲೈ ರಾಜನೇ, ಯಮನಂತಿರುವ, ಶೂರನಾದ, ಯುದ್ಧದಲ್ಲಿ ಹಿಂದಿರುಗದಿರುವ ಬಾಹ್ಲೀಕನು ಒಬ್ಬ ಅತಿರಥನೆಂದು ನನ್ನ ಅಭಿಪ್ರಾಯ. ಇವನು ಯುದ್ಧಭೂಮಿಗೆ ಹೋಗಿ ಎಂದೂ ಹಿಮ್ಮೆಟ್ಟುವುದಿಲ್ಲ.
ಯಥಾ ಸತತಗೋ ರಾಜನ್ ಸ ಹಿ ಹನ್ಯಾತ್ ಪರಾನ್ ರಣೇ |
ಸೇನಾಪತಿರ್ಮಹಾರಾಜ ಸತ್ಯವಾಂಸ್ತೇ ಮಹಾರಥಃ ॥30॥
ಎಲೈ ಮಹಾರಾಜನೇ, ನಿನ್ನ ಸೇನಾಪತಿಯೂ (ಹನ್ನೊಂದು ಸೇನಾಪತಿಗಳಲ್ಲಿ ಒಬ್ಬನು) ಸತ್ಯವಂತನೂ, ಮಹಾರಥನೂ ಆದ ಇವನು ಸತತವಾಗಿ ಸಂಚರಿಸುವ ವಾಯುವಿನಂತೆ ಯುದ್ಧದಲ್ಲಿ ಶತ್ರುಗಳನ್ನು ಕೊಂದಾನು.
ರಥೇಷ್ವದ್ಭುತಕರ್ಮಾ ಚ ರಥೀ ಪರರಥಾರುಜಃ |
ಏತಸ್ಯ ಸಮರಂ ದೃಷ್ಟ್ವಾ ನ ವ್ಯಥಾಽಸ್ತಿ ಕದಾಚನ ॥31॥
ಉತ್ಸ್ಮಯನ್ನುತ್ಪತತ್ಯೇಷ ಪರಾನ್ ರಥಪಥೇ ಸ್ಥಿತಾನ್ ॥32॥
ಇವನು ಯುದ್ಧದಲ್ಲಿ ಅದ್ಭುತಕರ್ಮವನ್ನು ಮಾಡುವ, ಶತ್ರುರಥವನ್ನು ನಾಶ ಮಾಡುವ ರಥಿಕನಾಗಿದ್ದಾನೆ. ಇವನ ಯುದ್ಧವನ್ನು ನೋಡಿದರೆ ಯಾವ ವ್ಯಥೆಯನ್ನೂ ಪಡುವ ಕಾರಣವಿಲ್ಲ. ಇವನು ನಗುತ್ತಲೇ ತನ್ನ ರಥಮಾರ್ಗದಲ್ಲಿ ಇರುವ ಶತ್ರುಗಳ ಮೇಲೆ ಎರಗುತ್ತಾನೆ.
ಏಷ ಚಾರಿಷು ವಿಕ್ರಾಂತಃ ಕರ್ಮ ಸತ್ಪುರುಷೋಚಿತಮ್ |
ಕರ್ತಾ ವಿಮರ್ದೇ ಸುಮಹತ್ ತ್ವದರ್ಥೇ ಪುರುಷೋತ್ತಮಃ ॥33॥
ಪುರುಷೋತ್ತಮನೂ ಮತ್ತು ವಿಕ್ರಮಶಾಲಿಯೂ ಆದ ಇವನು ನಿನ್ನ ಸಲುವಾಗಿ ದೊಡ್ಡ ಯುದ್ಧದಲ್ಲಿ, ಸತ್ಪುರುಷರಿಗೆ ಉಚಿತವಾದ ರೀತಿಯಲ್ಲಿ, ಶತ್ರುಗಳ ಮೇಲೆ ಪರಾಕ್ರಮವನ್ನು ತೋರಿಸಿ ಶ್ರೇಷ್ಠವಾದ ಕರ್ಮವನ್ನು ಮಾಡುವನು.
ಅಲಂಬುಸೋ ರಾಕ್ಷಸೇಂದ್ರಃ ಕ್ರೂರಕರ್ಮಾ ಮಹಾರಥಃ |
ಹನಿಷ್ಯತಿ ಪರಾನ್ ರಾಜನ್ ಪೂರ್ವವೈರಮನುಸ್ಮರನ್ ॥34॥
ಎಲೈ ರಾಜನೇ, ಮಹಾರಥನೂ, ಕ್ರೂರಕರ್ಮನೂ ಆದ, ರಾಕ್ಷಸೇಂದ್ರನಾದ ಅಲಂಬುಸನು ಹಿಂದಿನ ವೈರವನ್ನು ಸ್ಮರಿಸಿಕೊಂಡು ಶತ್ರುಗಳನ್ನು ಕೊಲ್ಲುವನು.
ಏಷ ರಾಕ್ಷಸಸೈನ್ಯಾನಾಂ ಸರ್ವೇಷಾಂ ರಥಸತ್ತಮಃ |
ಮಾಯಾವೀ ದೃಢವೈರಶ್ಚ ಸಮರೇ ವಿಚರಿಷ್ಯತಿ ॥35॥
ಇವನು ಎಲ್ಲಾ ರಾಕ್ಷಸಸೈನ್ಯಗಳಿಗೂ ಶ್ರೇಷ್ಠನಾದ ರಥಸತ್ತಮನು. ಮಾಯಾ ಯುದ್ಧವನ್ನು ಬಲ್ಲವನೂ, ದೃಢವೈರವುಳ್ಳವನೂ ಆದ ಇವನು ಯುದ್ಧದಲ್ಲಿ ಸಂಚರಿಸುವನು.
ಪ್ರಾಗ್ಜ್ಯೋತಿಷಾಧಿಪೋ ವೀರೋ ಭಗದತ್ತಃ ಪ್ರತಾಪವಾನ್ |
ಗಜಾಂಕುಶಧರಃ ಶ್ರೇಷ್ಠೋ ರಥೇ ಚೈವ ವಿಶಾರದಃ ॥36॥
ಪ್ರಾಗ್ಜ್ಯೋತಿಷ ಅಧಿಪತಿಯೂ, ಪ್ರತಾಪಶಾಲಿಯೂ, ವೀರನೂ ಆದ ಭಗದತ್ತನು ಶ್ರೇಷ್ಠವಾದ ಗಜಾಂಕುಶಧಾರಿಯಾದವನು. ಅವನು ರಥದಲ್ಲಿಯೂ ವಿಶಾರದನು.
ಏತೇನ ಯುದ್ಧಮಭವತ್ ಪುರಾ ಗಾಂಡೀವಧನ್ವನಃ |
ದಿವಸಾನ್ ಸುಬಹೂನ್ ರಾಜನ್ನುಭಯೋರ್ಜಯಕಾಂಕ್ಷಿಣೋಃ ॥37॥
ಎಲೈ ರಾಜನೇ, ಹಿಂದೆ ಇವನ ಜೊತೆಯಲ್ಲಿ ಅರ್ಜುನನಿಗೆ ಯುದ್ಧವು ನಡೆಯಿತು. ಜಯಾಕಾಂಕ್ಷಿಗಳಾದ ಇಬ್ಬರೂ ಅನೇಕ ದಿವಸಗಳವರೆಗೆ ಯುದ್ಧವನ್ನು ಮಾಡಿದರು.
ತೇ ಚಾಸಹಾಯಂ ಗಾಂಧಾರೇ ಮಾನಯನ್ ಪಾಕಶಾಸನಿಮ್ |
ಅಕರೋತ್ ಸಂವಿದಂ ತೇನ ಪಾಂಡವೇನ ಮಹಾತ್ಮನಾ ॥38॥
ಎಲೈ ಗಾಂಧಾರಿ ಪುತ್ರನೇ, ಸಹಾಯವಿಲ್ಲದ ಅರ್ಜುನನನ್ನು ಗೌರವಿಸುತ್ತಾ ಇವನು ಮಹಾತ್ಮನಾದ ಅರ್ಜುನನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಂಡನು.
ಏಷ ಯೋತ್ಸ್ಯತಿ ಸಂಗ್ರಾಮೇ ಗಜಸ್ಕಂಧವಿಶಾರದಃ |
ಐರಾವತಗತೋ ರಾಜಾ ದೇವಾನಾಮಿವ ವಾಸವಃ ॥39॥
ಇವನು ಯುದ್ಧದಲ್ಲಿ ಐರಾವತದಲ್ಲಿ ಕುಳಿತ ದೇವೇಂದ್ರನು ದೇವತೆಗಳ ಪರವಾಗಿ ಯುದ್ಧವನ್ನು ಮಾಡಿದಂತೆ ಗಜಸ್ಕಂಧವಿಶಾರದನಾಗಿ ಯುದ್ಧವನ್ನು ಮಾಡುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತೈದನೆಯ ಅಧ್ಯಾಯ ಮುಗಿಯಿತು.

* * * * *

नूರ ಅರವತ್ತಾರನೆಯ ಅಧ್ಯಾಯ

ಭೀಷ್ಮರು ಕರ್ಣನನ್ನು ಅರ್ಧರಥ ಎಂದು ಎಣಿಸುತ್ತಿರಲು,
ಕರ್ಣನ ಕೋಪ ಮತ್ತು ಭೀಷ್ಮರು ಇರುವವರೆಗೆ ತಾನು
ಯುದ್ಧವನ್ನು ಮಾಡುವುದಿಲ್ಲವೆಂಬ ಪ್ರತಿಜ್ಞೆ.

ಭೀಷ್ಮಃ
ಅಚಲೋ ವೃಷಕಶ್ಚೈವ ಸಹಿತೌ ಭ್ರಾತರಾವುಭೌ |
ರಥೌ ತವ ದುರಾಧರ್ಷೌ ಶತ್ರೂನ್ ವಿಧ್ವಂಸಯಿಷ್ಯತಃ ||1||
ಬಲವಂತೌ ನರವ್ಯಾಘ್ರೌ ದೃಢಕ್ರೋಧೌ ಪ್ರಹಾರಿಣೌ |
ಗಾಂಧಾರಮುಖ್ಯೌ ತರುಣೌ ದರ್ಶನೀಯೌ ಮಹಾಬಲೌ ||2||
ಭೀಷ್ಮ ಅಚಲ ಮತ್ತು ವೃಷಕ ಎಂಬ ಗಾಂಧಾರ ದೇಶದ ಇಬ್ಬರು ಸಹೋದರರು ಒಂದೊಂದು ರಥರು. ನರವ್ಯಾಘ್ರರಾದ ಅವರು ಬಲಿಷ್ಠರೂ, ತರುಣರೂ, ಸುಂದರರೂ, ದೃಢವಾದ ಕ್ರೋಧವುಳ್ಳವರೂ, ಪ್ರಹಾರವನ್ನು ಮಾಡುವವರೂ ಆಗಿದ್ದಾರೆ. ಸುಂದರರಾದ ಅವರು ಯುದ್ಧದಲ್ಲಿ ಶತ್ರುಗಳನ್ನು ನಾಶಪಡಿಸುವರು.
ಸಖಾ ತೇ ದಯಿತೋ ನಿತ್ಯಂ ಯ ಏಷ ರಣಕರ್ಕಶಃ |
ಉತ್ಸಾಹಯತಿ ರಾಜಂಸ್ತ್ವಂ ವಿಗ್ರಹೇ ಪಾಂಡವೈಃ ಸಹ ||3||
ಪರುಷಃ ಕತ್ಥನೋಽತೀವ ಕರ್ಣೋ ವೈಕರ್ತನಸ್ತವ |
ಮಂತ್ರೀ ನೇತಾ ಚ ಬಂಧುಶ್ಚ ಮಾನೀ ಚಾತ್ಯಂತಮುಚ್ಛ್ರಿತಃ ||4||
ಏಷ ನೈವ ರಥಃ ಕರ್ಣೋ ನ ಚಾಪ್ಯತಿರಥೋ ರಣೇ ||5||
ನಿನ್ನ ಸ್ನೇಹಿತನೂ, ಯಾವಾಗಲೂ ಯುದ್ಧಾಕಾಂಕ್ಷಿಯೂ ಆದ ಈ ಕರ್ಣನು ನಿನ್ನನ್ನು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಯಾವಾಗಲೂ ಪ್ರೇರಿಸುತ್ತಾನೆ. ಅವನು ಒರಟಾದ ಮಾತುಗಳನ್ನು ಆಡುವವನು, ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವವನು, ತನ್ನನ್ನು ಬಹಳ ದೊಡ್ಡವನೆಂದು ತಿಳಿದು ಅಹಂಕಾರವನ್ನು ಹೊಂದಿರುವವನು ಮತ್ತು ನಿನಗೆ ಮಂತ್ರಿಯೂ, ನಾಯಕನೂ ಆಗಿದ್ದಾನೆ. ಈ ಕರ್ಣನು ರಥನೂ ಅಲ್ಲ, ಅತಿರಥನೂ ಅಲ್ಲ.
ವಿಮುಕ್ತಃ ಕವಚೇನೈಷ ಸಹಜೇನ ವಿಚೇತನಃ |
ಕುಂಡಲಾಭ್ಯಾಂ ಚ ದಿವ್ಯಾಭ್ಯಾಂ ವಿಮುಕ್ತಃ ಸತತಂ ಘೃಣೀ ||6||
ಅಭಿಶಾಪಾಚ್ಚ ರಾಮಸ್ಯ ಬ್ರಾಹ್ಮಣ್ಯಸ್ಯ ಚ ಭಾಷಣಾತ್ |
ಕರಣಾನಾಂ ವಿಯೋಗಾಚ್ಚ ತೇನ ಮೇಽರ್ಧರಥೋ ಮತಃ ||7||
ನೈಷ ಫಲ್ಗುನಮಾಸಾದ್ಯ ಪುನರ್ಜೀವನ್ ವಿಮೋಕ್ಷ್ಯತೇ ||8||
ಯಾವಾಗಲೂ ಜಯಶೀಲನಾದ ಅವನು ತನ್ನ ಸಹಜವಾದ ದಿವ್ಯವಾದ ಕವಚಕುಂಡಲಗಳನ್ನು ಕಳೆದುಕೊಂಡಿದ್ದಾನೆ. ತಾನು ಬ್ರಾಹ್ಮಣನೆಂದು ಹೇಳಿಕೊಂಡ ಕಾರಣದಿಂದಾಗಿ ಪರಶುರಾಮರ ಶಾಪಕ್ಕೆ ಗುರಿಯಾಗಿದ್ದಾನೆ. ಹೀಗೆ ಸಾಧನಗಳಿಂದ ಹೀನನಾದ ಅವನು ನನ್ನ ದೃಷ್ಟಿಯಲ್ಲಿ ಅರ್ಧರಥ. ಇವನು ಯುದ್ಧದಲ್ಲಿ ಅರ್ಜುನನನ್ನು ಸಮೀಪಿಸಿ ಪುನಃ ಜೀವಂತನಾಗಿ ಹಿಂದೆ ಬರುವುದಿಲ್ಲ.

ಸಂಜಯಃ
ತತೋಽಬ್ರವೀತ್ ಪುನರ್ದ್ರೋಣಃ ಸರ್ವಶಸ್ತ್ರಭೃತಾಂ ವರಃ ||9||
ಏವಮೇತದ್ ಯದಾತ್ಥ ತ್ವಂ ನ ಮಿಥ್ಯಾಽಸ್ತಿ ಕಥಂಚನ |
ರಣೇ ರಣೇಽಭಿಮಾನೀ ಚ ವಿಮುಖಶ್ಚಾಪಿ ದೃಶ್ಯತೇ ||10||
ಘೃಣೀ ಕರ್ಣಃ ಪ್ರಮಾದೀ ಚ ತೇನ ಮೇಽರ್ಧರಥೋ ಮತಃ ||11||
ಸಂಜಯ ಆಗ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಪುನಃ ಮಾತನಾಡಿದರು `ಭೀಷ್ಮರೇ, ನೀವು ಹೇಳಿದಂತೆಯೇ ಸರಿ. ನಿಮ್ಮ ಮಾತುಗಳು ಸುಳ್ಳಲ್ಲ. ಪ್ರತಿಯೊಂದು ಯುದ್ಧದಲ್ಲಿಯೂ ಅಹಂಕಾರದಿಂದ ಪ್ರೇರೇಪಿಸಿ ಯುದ್ಧದಿಂದ ವಿಮುಖನಾಗುತ್ತಾನೆ. ಅವನು ದಯಾಳು ಮತ್ತು ಮರೆಯುವ ಸ್ವಭಾವವುಳ್ಳವನು. ಆದ್ದರಿಂದ ನಾನೂ ಅವನನ್ನು ಅರ್ಧರಥನೆಂದೇ ತಿಳಿಯುತ್ತೇನೆ.

ಸಂಜಯಃ
ಏತಚ್ಛ್ರುತ್ವಾ ತು ರಾಧೇಯಃ ಕ್ರೋಧಾದುದ್ವೃತ್ತಲೋಚನಃ |
ಉವಾಚ ಭೀಷ್ಮಂ ರಾಧೇಯಃ ತುದನ್ ವಾಗ್ಭಿಃ ಪ್ರತೋದವಾನ್ ||12||
ಸಂಜಯ ಈ ಮಾತುಗಳನ್ನು ಕೇಳಿದ ಕರ್ಣನು ಕೋಪದಿಂದ ಅರಳಿದ ಕಣ್ಣುಳ್ಳವನಾಗಿ ಭೀಷ್ಮರನ್ನು ತನ್ನ ಮಾತುಗಳಿಂದ ಚುಚ್ಚುತ್ತಾ ಮಾತನಾಡಿದನು.
ಪಿತಾಮಹ ಯಥೇಷ್ಟಂ ಮಾಂ ವಾಕ್ಶರೈರವಕೃಂತಸಿ |
ಅನಾಗಸಂ ಸದಾ ದ್ವೇಷಾದ್ ಏವಮೇವ ಪದೇ ಪದೇ ||13||
ಎಲೈ ಪಿತಾಮಹರೇ, ನೀವು ನಿರಪರಾಧಿಯಾದ ನನ್ನನ್ನು ನಿಮ್ಮ ಮನಸ್ಸಿಗೆ ಬಂದಂತೆ ಪುನಃ ಪುನಃ ನನ್ನ ಮೇಲಿನ ದ್ವೇಷದಿಂದ ನಿಮ್ಮ ಮಾತುಗಳೆಂಬ ಬಾಣಗಳಿಂದ ಕತ್ತರಿಸುತ್ತಿದ್ದೀರಿ.
ಮರ್ಷಯಾಮಿ ಚ ತತ್ ಸರ್ವಂ ದುರ್ಯೋಧನಕೃತೇನ ವೈ |
ತ್ವಂ ತು ಮಾಂ ಮನ್ಯಸೇಽಶಕ್ತಂ ಯಥಾ ಕಾಪುರುಷಂ ತಥಾ ||14||
ದುರ್ಯೋಧನನ ಸಲುವಾಗಿ ನಾನು ಅದೆಲ್ಲವನ್ನೂ ಸಹಿಸುತ್ತಿದ್ದೇನೆ. ನನ್ನನ್ನು ಅಶಕ್ತನಾದ ಒಬ್ಬ ಅಧಮಪುರುಷನೆಂದು ನೀವು

ತಿಳಿದಿದ್ದೀರಿ.
ಭವಾನರ್ಧರಥೋ ಮಹ್ಯಂ ಮತೋ ವೈ ನಾತ್ರ ಸಂಶಯಃ |
ಸರ್ವಸ್ಯ ಜಗತಶ್ಚೈವ ಗಾಂಗೇಯ ನ ಮೃಷಾ ವದೇ ||15||
ಕುರೂಣಾಮಹಿತೋ ನಿತ್ಯಂ ನ ಚ ರಾಜಾಽವಬುಧ್ಯತೇ ||16||
ನನ್ನ ದೃಷ್ಟಿಯಲ್ಲಿ ಮತ್ತು ಎಲ್ಲಾ ಜಗತ್ತಿನ ದೃಷ್ಟಿಯಲ್ಲಿ ನೀವೇ ಅರ್ಧರಥರು. ಭೀಷ್ಮರೇ, ನನ್ನ ಮಾತು ಸುಳ್ಳಲ್ಲ. ನೀವು ಯಾವಾಗಲೂ ಕೌರವರಿಗೆ ಅಹಿತರಾದವರು. ದುರ್ಯೋಧನನು ಇದನ್ನು ತಿಳಿಯುತ್ತಿಲ್ಲ.
ಕೋ ಹಿ ನಾಮ ಸಮಾನೇಷು ರಾಜಸೂದಾತ್ತಕರ್ಮಸು |
ತೇಜೋವಧಮಿಮಂ ಕುರ್ಯಾದ್ ಬಿಭೇದಯಿಷುರಾಹವೇ ||17||
ಯಥಾ ತ್ವಂ ಗುಣವಿದ್ವೇಷಾದಪವಾದಂ ಚಿಕೀರ್ಷಸಿ ||18||
ಎಲ್ಲರೂ ರಾಜರು ತಮ್ಮ ಉದಾರ ಕರ್ಮಗಳಲ್ಲಿ ಸಮನಾಗಿರುವಾಗ ನೀವು ಗುಣಗಳ ಮೇಲಿನ ದ್ವೇಷದಿಂದ ನಿಂದೆಯ ಮಾತುಗಳನ್ನು ಆಡಿ, ಹೀಗೆ ತೇಜೋವಧೆಯನ್ನು ಮಾಡಿ, ನಮ್ಮ ಸೈನ್ಯದಲ್ಲೇ ಭೇದವನ್ನು ಉಂಟುಮಾಡಿದಂತೆ ಬೇರೆ ಯಾವನು ಮಾಡುತ್ತಾನೆ?
ನ ಹಾಯನೈರ್ನ ಪಲಿತೈರ್ನ ವಿತ್ತೈರ್ನ ಚ ಬಂಧುಭಿಃ |
ಮಹಾರಥತ್ವಂ ಸಂಖ್ಯಾತುಂ ಶಕ್ಯಂ ಕ್ಷತ್ರಸ್ಯ ಕೌರವ ||19||
ಎಲೈ ಕೌರವರೇ, ವಯಸ್ಸಿನಿಂದಾಗಲೀ, ನರೆತ ಕೂದಲುಗಳಿಂದಾಗಲೀ, ಧನದಿಂದಾಗಲೀ, ಬಂಧುಗಳಿಂದಾಗಲೀ ಕ್ಷತ್ರಿಯರಲ್ಲಿ ಯಾರು ಮಹಾರಥರು, ಯಾರು ಅಲ್ಲ ಎಂದು ಗಣನೆ ಮಾಡಲು ಬರುವುದಿಲ್ಲ.
ಬಲಜ್ಯೇಷ್ಠಂ ಸ್ಮೃತಂ ಕ್ಷತ್ರಂ ಮಂತ್ರಜ್ಯೇಷ್ಠಾ ದ್ವಿಜಾತಯಃ |
ಧನಜ್ಯೇಷ್ಠಾಃ ಸ್ಮೃತಾ ವೈಶ್ಯಾಃ ಶೂದ್ರಾಸ್ತು ವಯಸಾಽಧಿಕಾಃ ||20||
ಕ್ಷತ್ರಿಯರಲ್ಲಿ ಯಾರಿಗೆ ಬಲವು ಅಧಿಕವೋ ಅವನು ಜ್ಯೇಷ್ಠ ಎಂದು ಹೇಳಲ್ಪಡುತ್ತದೆ. ಬ್ರಾಹ್ಮಣರಲ್ಲಿ ಮಂತ್ರಬಲದಿಂದ ಜ್ಯೇಷ್ಠತೆಯು ಉಂಟಾಗುತ್ತದೆ. ವೈಶ್ಯರಲ್ಲಿ ಧನದ ಬಲದಿಂದ ಜ್ಯೇಷ್ಠತೆಯು ಹೇಳಲ್ಪಡುತ್ತದೆ. ಶೂದ್ರರಲ್ಲಿ ಮಾತ್ರ ವಯಸ್ಸಿನ ಆಧಿಕ್ಯದಿಂದ ಜ್ಯೇಷ್ಠತೆಯು ಹೇಳಲ್ಪಡುತ್ತದೆ.
ಯಥೇಚ್ಛಕಂ ಸ್ವಯಂ ಬ್ರೂಯಾ ರಥಾನತಿರಥಾಂಸ್ತಥಾ |
ಕಾಮದ್ವೇಷಸಮಾಯುಕ್ತೋ ಮೋಹಾತ್ ತ್ವಾಕುರುತೇ ಭವಾನ್ ||21||
ನೀವು ನಿಮ್ಮ ಇಚ್ಛೆಗೆ ಬಂದಂತೆ ರಥ, ಅತಿರಥರನ್ನು ಗಣನೆ ಮಾಡುತ್ತಿದ್ದೀರಿ. ರಾಗ-ದ್ವೇಷದಿಂದ ಕೂಡಿದವರಾಗಿ, ಮೋಹದಿಂದ ಎಲ್ಲರನ್ನೂ ನೀನು ಎಂದು ಏಕವಚನದಿಂದ ಕರೆಯುತ್ತಿದ್ದೀರಿ.
ದುರ್ಯೋಧನ ಮಹಾಬಾಹೋ ಸಾಧು ಸಮ್ಯಗವೇಕ್ಷ್ಯತಾಮ್ |
ತ್ಯಜ್ಯತಾಂ ದುಷ್ಟಭಾವೋಽಯಂ ಭೀಷ್ಮಃ ಕಿಲ್ಬಿಷಕೃತ್ ತವ ||22||
ಮಹಾಬಾಹುವಾದ ದುರ್ಯೋಧನನೇ, ಎಲ್ಲವನ್ನೂ ಸರಿಯಾಗಿ ಗಮನಿಸು. ನಿನಗೆ ಯಾವಾಗಲೂ ಕೆಡುಕನ್ನು ಮಾಡುವ, ದುಷ್ಟವಾದ ಅಭಿಪ್ರಾಯವುಳ್ಳ ಈ ಭೀಷ್ಮರನ್ನು ಪರಿತ್ಯಜಿಸು.
ಭಿನ್ನಾ ಹಿ ಸೇನಾ ನೃಪತೇ ದುಃಸಂಧೇಯಾ ಭವತ್ಯುತ |
ಮೌಲಾಽಪಿ ಪುರುಷವ್ಯಾಘ್ರ ಕಿಮು ನಾನಾ ಸಮುತ್ಥಿತಾ ||23||
ಎಲೈ ರಾಜನೇ, ಸೈನ್ಯದಲ್ಲಿ ಭೇದವು ಉಂಟಾದರೆ ಅವರನ್ನು ಪುನಃ ಒಂದುಗೂಡಿಸುವುದು ಕಷ್ಟವಾಗುತ್ತದೆ. ಎಲೈ ಪುರುಷವ್ಯಾಘ್ರನೇ, ಧನದಿಂದ ಸಂಪಾದಿಸಿದ ಸೈನ್ಯವೂ ಹೀಗಾಗುತ್ತದೆ. ಇನ್ನು ತಾನಾಗಿಯೇ ಬಂದ ಸೈನ್ಯವನ್ನು ಒಂದುಗೂಡಿಸುವುದು ಹೇಗೆ?
ಏಷಾಂ ದ್ವೇಷಃ ಸಮುತ್ಪನ್ನೋ ಯೋಧಾನಾಂ ಯುಧಿ ಭಾರತ |
ತೇಜೋವಧೋ ನಃ ಕ್ರಿಯತೇ ಪ್ರತ್ಯಕ್ಷೇಣ ವಿಶೇಷತಃ ||24||
ಎಲೈ ಭಾರತನೇ, ಯಾವ ನಮ್ಮ ಯೋಧರಿಗೆ ಶತ್ರುಗಳಾದ ಪಾಂಡವರಲ್ಲಿ ದ್ವೇಷವು ಉಂಟಾಗಿದೆಯೋ ಅಂತಹ ನಮ್ಮ ಯೋಧರ ತೇಜೋವಧೆಯು ವಿಶೇಷವಾಗಿ ಮತ್ತು ಪ್ರತ್ಯಕ್ಷವಾಗಿ ಮಾಡಲ್ಪಡುತ್ತಿದೆ.
ರಥಾನಾಂ ಕ್ವ ಚ ವಿಜ್ಞಾನಂ ಕ್ವ ಚ ಭೀಷ್ಮೋಽಲ್ಪಚೇತನಃ |
ಅಹಮಾವಾರಯಿಷ್ಯಾಮಿ ಪಾಂಡವಾನಾಮನೀಕಿನೀಮ್ ||25||
ರಥಾತಿರಥರ ಜ್ಞಾನವೆಲ್ಲಿ? ಅಲ್ಪಬುದ್ಧಿಯುಳ್ಳ ಭೀಷ್ಮರೆಲ್ಲಿ? ಪಾಂಡವರ ಸೈನ್ಯವನ್ನು ನಾನು ತಡೆಗಟ್ಟುವೆನು.
ಆಸಾದ್ಯ ಮಾಮಮೋಘೇಷುಂ ಗಮಿಷ್ಯಂತಿ ದಿಶೋ ದಶ |
ಪಾಂಡವಾಃ ಸಹ ಪಾಂಚಾಲಾಃ ಶಾರ್ದೂಲಂ ವೃಷಭಾ ಇವ ||26||
ಪಾಂಡವರು ಮತ್ತು ಪಾಂಚಾಲರು ಯುದ್ಧದಲ್ಲಿ ಅಮೋಘ ಬಾಣ ಪ್ರಯೋಗವುಳ್ಳ ನನ್ನನ್ನು ಸಮೀಪಿಸಿ, ವ್ಯಾಘ್ರವನ್ನು ನೋಡಿ ವೃಷಭಗಳು ಓಡಿಹೋಗುವಂತೆ ಹತ್ತು ದಿಕ್ಕುಗಳಿಗೆ ಓಡಿಹೋಗುವರು.
ಕ್ವ ಚ ಯುದ್ಧಂ ವಿಮರ್ದೋ ವಾ ಮಂತ್ರಾಃ ಸುವ್ಯಾಹೃತಾಸ್ತಥಾ |
ಕ್ವ ಚ ಭೀಷ್ಮೋ ಗತವಯಾ ಮಂದಾತ್ಮಾ ಕಾಲಚೋದಿತಃ ||27||
ತೀವ್ರವಾದ ಸಂಘರ್ಷವಿರುವ ಯುದ್ಧವಾಗಲೀ ಮತ್ತು ಅದಕ್ಕೆ ಅನುಕೂಲವಾದ ಮಂತ್ರಾಲೋಚನೆಯಾಗಲೀ ಎಲ್ಲಿ? ಮೃತ್ಯುಗ್ರಸ್ತರೂ, ಅಲ್ಪಪ್ರಜ್ಞರೂ ಮತ್ತು ಬಹಳ ವೃದ್ಧರೂ ಆದ ಭೀಷ್ಮರು ಎಲ್ಲಿ?
ಏಕಾಕೀ ಸ್ಪರ್ಧತೇ ನಿತ್ಯಂ ಸರ್ವೇಣ ಜಗತಾ ಸಹ |
ನ ಚಾನ್ಯಂ ಪುರುಷಂ ಕಂಚಿನ್ಮನ್ಯತೇ ಮೋಘದರ್ಶನಃ ||28||
ತಾನು ಏಕಾಕಿಯಾಗಿ ಸಮಸ್ತ ಜಗತ್ತಿನ ಜೊತೆಯಲ್ಲಿ ಯುದ್ಧವನ್ನು ಮಾಡಲು ನಿತ್ಯವೂ ಬಯಸುತ್ತಾರೆ. ಮಿಥ್ಯಾಜ್ಞಾನವುಳ್ಳ ಇವರು

ಬೇರೆ ಯಾರನ್ನೂ ಪುರುಷನೆಂದೇ ಭಾವಿಸುವುದಿಲ್ಲ.
ಶ್ರೋತವ್ಯಂ ಖಲು ವೃದ್ಧಾನಾಮಿತಿ ಶಾಸ್ತ್ರನಿದರ್ಶನಮ್ |
ನ ತ್ವೇವ ಹ್ಯತಿವೃದ್ಧಾನಾಂ ಪುನರ್ಬಾಲಾ ಹಿ ತೇ ಮತಾಃ ॥29॥
ವೃದ್ಧರ ಮಾತನ್ನು ಕೇಳಬೇಕೆಂದು ಶಾಸ್ತ್ರದ ಆದೇಶವಿದೆ. ಆದರೆ ಬಹಳ ವೃದ್ಧರಾದವರ ಮಾತುಗಳನ್ನು ಕೇಳಬಾರದು. ಅವರು ಎರಡನೆಯ ಬಾರಿಗೆ ಬಾಲಕರಂತಿರುತ್ತಾರೆ ಎಂದು ನನ್ನ ಅಭಿಪ್ರಾಯ.
ಅಹಮೇಕೋ ಹನಿಷ್ಯಾಮಿ ಪಾಂಡವಾನ್ ನಾತ್ರ ಸಂಶಯಃ |
ಸುಯುದ್ಧೇ ರಾಜಶಾರ್ದೂಲ ಯಶೋ ಭೀಷ್ಮಂ ಗಮಿಷ್ಯತಿ ॥30॥
ಎಲೈ ರಾಜಶಾರ್ದೂಲನೇ, ಘೋರವಾದ ಯುದ್ಧದಲ್ಲಿ ನಾನೊಬ್ಬನೇ ಪಾಂಡವರನ್ನು ಕೊಲ್ಲುವೆನು. ಇದರಲ್ಲಿ ಸಂಶಯವಿಲ್ಲ. ಆದರೆ ಆ ಕೀರ್ತಿಯು ಭೀಷ್ಮರಿಗೆ ಸೇರುವುದು.
ಕೃತಃ ಸೇನಾಪತಿಸ್ತ್ವೇಷ ತ್ವಯಾ ಭೀಷ್ಮೋ ನರಾಧಿಪ |
ಸೇನಾಪತೌ ಯಶೋ ಗಂತಾ ನ ತು ಯೋಧಾನ್ ಕಥಂಚನ ॥31॥
ಎಲೈ ರಾಜನೇ, ನೀನು ಭೀಷ್ಮರನ್ನು ಸೇನಾಪತಿಯಾಗಿ ಮಾಡಿದ್ದೀಯೆ. ಸೈನ್ಯದಿಂದ ಉಂಟಾದ ಕೀರ್ತಿಯು ಸೇನಾಪತಿಗೆ ಸೇರುವುದೇ ಹೊರತು ಸೈನಿಕರನ್ನು ಸೇರುವುದಿಲ್ಲ.
ನಾಹಂ ಜೀವತಿ ಗಾಂಗೇಯೇ ಯೋತ್ಸ್ಯೇ ರಾಜನ್ ಕಥಂಚನ |
ಹತೇ ಭೀಷ್ಮೇ ತು ಯೋದ್ಧಾಸ್ಮಿ ಸರ್ವೈರೇವ ಮಹಾರಥೈಃ ॥32॥
ಎಲೈ ರಾಜನೇ, ಭೀಷ್ಮರು ಬದುಕಿರುವವರೆಗೆ ಯಾವ ಕಾರಣದಿಂದಲೂ ನಾನು ಯುದ್ಧವನ್ನು ಮಾಡುವುದಿಲ್ಲ. ಭೀಷ್ಮರು ಹತರಾದ ಮೇಲೆ ಎಲ್ಲಾ ಮಹಾರಥರ ಜೊತೆಯಲ್ಲೂ ನಾನು ಯುದ್ಧವನ್ನು ಮಾಡುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೇಳನೆಯ ಅಧ್ಯಾಯ
ದುರ್ಯೋಧನನಿಂದ ಭೀಷ್ಮರ ಸಾಂತ್ವನ. ಭೀಷ್ಮರಿಂದ ಪಾಂಡವರ ಪಕ್ಷದಲ್ಲಿ ರಥಾತಿರಥರ ಗಣನೆ.
ಭೀಷ್ಮಃ
ಸಮುದ್ಯತೋಽಯಂ ಭಾರೋ ಮೇ ಸುಮಹಾನ್ ಸಾಗರೋಪಮಃ |
ಧಾರ್ತರಾಷ್ಟ್ರಸ್ಯ ಸಂಗ್ರಾಮೇ ವರ್ಷಪೂಗಾಭಿಚಿಂತಿತಃ ॥2॥
ತಸ್ಮಿನ್ನಭ್ಯಾಗತೇ ಕಾಲೇ ಪ್ರತಪ್ತೇ ಲೋಮಹರ್ಷಣೇ |
ಮಿಥೋ ಭೇದೋ ನ ಮೇ ಕಾರ್ಯಸ್ತೇನ ಜೀವಸಿ ಸೂತಜ ॥2॥
ಭೀಷ್ಮ ದುರ್ಯೋಧನನು ಬಹಳ ಕಾಲದಿಂದ ಚಿಂತಿಸುತ್ತಿದ್ದ, ಯುದ್ಧರೂಪವಾದ ಸಾಗರದಂತಿರುವ ಈ ದೊಡ್ಡ ಭಾರವು ಅವನಿಗೆ ಪ್ರಾಪ್ತವಾಗಿದೆ. ಒದಗಿಬಂದಿರುವ ಇಂತಹ ಘೋರವಾದ ಮತ್ತು ರೋಮಾಂಚಕಾರಿಯಾದ ಕಾಲದಲ್ಲಿ ನಾನು ನಮ್ಮ ಸೈನ್ಯದಲ್ಲಿಯೇ ಪರಸ್ಪರ ಭೇದವನ್ನುಂಟು ಮಾಡಬಾರದು. ಎಲೈ ಕರ್ಣನೇ, ಆ ಕಾರಣದಿಂದ ನೀನು ಬದುಕಿದ್ದೀಯೆ.
ನ ಹ್ಯಹಂ ತ್ವದ್ಯ ವಿಕ್ರಮ್ಯ ಸ್ಥವಿರೋಽಪಿ ಶಿಶೋಸ್ತವ |
ಯುದ್ಧಶ್ರದ್ಧಾಂ ರಣೇ ಛಿಂದ್ಯಾಂ ಜೀವಿತಸ್ಯ ಚ ಸೂತಜ ॥3॥
ಎಲೈ ಸೂತಪುತ್ರನೇ, ವೃದ್ಧನಾದರೂ ನಾನು ಈ ದಿನ ಶಿಶುವಾದ ನಿನ್ನ ಶಿರಸ್ಸನ್ನು ಕತ್ತರಿಸಿ, ನಿನ್ನ ಯುದ್ಧಾಸಕ್ತಿಯನ್ನು ಮತ್ತು ಜೀವನವನ್ನೂ ನಾಶ ಮಾಡಲಾರೆ.
ಜಾಮದಗ್ನ್ಯೇನ ರಾಮೇಣ ಮಹಾಸ್ತ್ರಾಣಿ ಪ್ರಮುಂಚತಾ |
ನ ಮೇ ವ್ಯಥಾ ಕೃತಾ ಕಾಚಿತ್ ತ್ವಂ ತು ಮೇ ಕಿಂ ಕರಿಷ್ಯಸಿ ॥4॥
ಜಮದಗ್ನಿಗಳ ಪುತ್ರರಾದ ಪರಶುರಾಮರು ನನ್ನ ಮೇಲೆ ಮಹಾಸ್ತ್ರವನ್ನು ಪ್ರಯೋಗಿಸಿದರೂ ನನಗೆ ಯಾವ ವ್ಯಥೆಯೂ ಉಂಟಾಗಲಿಲ್ಲ. ನೀನು ನನಗೆ ಏನು ಮಾಡುವಿ?
ಕಾಮಂ ನೈತತ್ ಪ್ರಶಂಸಂತಿ ಸಂತಃ ಆತ್ಮಬಲಸ್ತವಮ್ |
ವಕ್ಷ್ಯಾಮಿ ತ್ವಾಂ ತು ಸಂತಪ್ತೋ ನಿಹೀನ ಕುಲಪಾಂಸನ ॥5॥
ತಮ್ಮ ಬಲವನ್ನು ತಾವು ಹೇಳಿಕೊಳ್ಳುವುದನ್ನು ಸಜ್ಜನರು ಪ್ರಶಂಸಿಸುವುದಿಲ್ಲ. ಆದರೆ ಎಲೈ ಅಧಮ ಪುರುಷನೇ, ಕುಲನಾಶನನೇ, ನಿನ್ನ ಮಾತುಗಳಿಂದ ಸಂತಪ್ತನಾಗಿ ನಾನು ಹೇಳುವೆನು.
ಸಮೇತಂ ಪಾರ್ಥಿವಂ ಕ್ಷತ್ರಂ ಕಾಶಿರಾಜಸ್ವಯಂವರೇ |
ನಿರ್ಜಿತ್ಯೈಕರಥೇನೈವ ಯಾಃ ಕನ್ಯಾಸ್ತರಸಾ ಹೃತಾಃ ॥6॥
ಕಾಶಿರಾಜನ ಕನ್ಯೆಯರ ಸ್ವಯಂವರದಲ್ಲಿ ಒಂದು ರಥದಲ್ಲಿ ಹೋಗಿದ್ದ ನಾನು ಅಲ್ಲಿ ಒಟ್ಟುಗೂಡಿದ ಎಲ್ಲ ಕ್ಷತ್ರಿಯರನ್ನೂ ಸೋಲಿಸಿ, ನನ್ನ ಬಲದಿಂದ ಆ ಕನ್ಯೆಯರನ್ನು ಕರೆದುಕೊಂಡು ಬಂದೆ.

ಈದೃಶಾನಾಂ ಸಹಸ್ರಾಣಿ ವಿಶಿಷ್ಟಾನಾಮಥೋ ಪುನಃ |
ಮಯ್ಯೈಕೇನ ನಿರಸ್ತಾನಿ ಸಸೈನ್ಯಾನಿ ರಣಾಜಿರೇ ॥7॥
ಇಂತಹ ಮತ್ತು ಇದಕ್ಕಿಂತಲೂ ಅಧಿಕವಾದ ಸಹಸ್ರಾರು ಸೈನ್ಯಗಳನ್ನು ಯುದ್ಧದಲ್ಲಿ ನಾನೊಬ್ಬನೇ ಸೋಲಿಸಿದ್ದೇನೆ.
ತ್ವಾಂ ಪ್ರಾಪ್ಯ ವೈ ಕಾಪುರುಷಂ ಕುರೂಣಾಮನಯೋ ಮಹಾನ್ |
ಉಪಸ್ಥಿತೋ ವಿನಾಶಾಯ ಯತಸ್ವ ಪುರುಷೋ ಭವ ॥8॥
ನಿನ್ನಂತಹ ನೀಚಪುರುಷನನ್ನು ಹೊಂದಿ, ಕೌರವರಿಗೆ ವಿನಾಶವನ್ನು ತರುವ ದೊಡ್ಡ ಅನರ್ಥವು ಪ್ರಾಪ್ತವಾಗಿದೆ. ನೀನು ಪ್ರಯತ್ನವನ್ನು ಮಾಡಿ ಪುರುಷನಾಗು.
ಯುಧ್ಯಸ್ವ ಸಮರೇ ಪಾರ್ಥಂ ಯೇನ ವಿಸ್ಪರ್ಧಸೇ ಸಹ |
ದ್ರಕ್ಷ್ಯಾಮಿ ತ್ವಾಂ ವಿನಿರ್ಮುಕ್ತಮಸ್ಮಾದ್ ಯುದ್ಧಾತ್ ಸುದುರ್ಮತೇ ॥
ಯಾವ ಅರ್ಜುನನ ಜೊತೆಯಲ್ಲಿ ಯಾವಾಗಲೂ ಸ್ಪರ್ಧಿಸುತ್ತೀಯೋ ಅಂತಹ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡು. ಬಹಳ ಕೆಟ್ಟಬುದ್ಧಿಯುಳ್ಳವನೇ, ಈ ಯುದ್ಧದಿಂದ ನೀನು ಜೀವಂತನಾಗಿ ಹೊರಗೆ ಬರುವುದನ್ನು ನಾನು ನೋಡುವೆನು.
ಸಂಜಯಃ
ತಮುವಾಚ ತತೋ ರಾಜಾ ಧಾರ್ತರಾಷ್ಟ್ರಃ ಪ್ರತಾಪವಾನ್ ॥10॥
ಮಾಂ ಸಮೀಕ್ಷಸ್ವ ಗಾಂಗೇಯ ಕಾರ್ಯಂ ಹಿ ಮಹದುದ್ಯತಮ್ ॥11॥
ಚಿಂತ್ಯತಾಮಿದಮೇಕಾಗ್ರಂ ಮಮ ನಿಶ್ರೇಯಸಂ ಪರಮ್ |
ಉಭಾವಪಿ ಭವಂತೌ ಮೇ ಮಹತ್ಕರ್ಮ ಕರಿಷ್ಯತಃ ॥12॥
ಸಂಜಯ ಆಗ ಪ್ರತಾಪಶಾಲಿಯಾದ ದುರ್ಯೋಧನರಾಜನು ಭೀಷ್ಮರನ್ನು ಕುರಿತು ಮಾತನಾಡಿದನು `ಭೀಷ್ಮರೇ, ನನ್ನನ್ನು ನೋಡಿ, ದೊಡ್ಡ ಕಾರ್ಯವು ಪ್ರಾಪ್ತವಾಗಿದೆ. ಏನು ಮಾಡಿದರೆ ನನಗೆ ಶ್ರೇಯಸ್ಸಾಗುವುದೋ ಅದನ್ನು ಏಕಾಗ್ರಚಿತ್ತದಿಂದ ಚಿಂತಿಸಿ. ನೀವಿಬ್ಬರೂ ಯುದ್ಧದಲ್ಲಿ ದೊಡ್ಡ ಕಾರ್ಯವನ್ನು ಮಾಡುವಿರಿ.
ಭೂಯಶ್ಚ ಶ್ರೋತುಮಿಚ್ಛಾಮಿ ಪರೇಷಾಂ ರಥಸತ್ತಮಾನ್ |
ಯೇ ಚೈವಾತಿರಥಾಸ್ತತ್ರ ಯೇ ಚೈವ ರಥಯೂಥಪಾಃ ॥13॥
ಮತ್ತು ನಾನು ಪಾಂಡವರ ಪಕ್ಷದಲ್ಲಿರುವ ರಥಶ್ರೇಷ್ಠರನ್ನೂ, ಅತಿರಥರನ್ನೂ ಮತ್ತು ರಥಯೂಥಪರನ್ನೂ ನಿಮ್ಮಿಂದ ಕೇಳಲು ಬಯಸುತ್ತೇನೆ.
ಬಲಾಬಲಮಮಿತ್ರಾಣಾಂ ಶ್ರೋತುಮಿಚ್ಛಾಮಿ ಕೌರವ |
ಪ್ರಭಾತಾಯಾಂ ತು ಶರ್ವರ್ಯಾಮಿದಂ ಯುದ್ಧಂ ಭವಿಷ್ಯತಿ ॥14॥
ಎಲೈ ಕೌರವರಾದ ಭೀಷ್ಮರೇ, ಶತ್ರುಗಳ ಬಲಾಬಲವನ್ನು ನಿಮ್ಮಿಂದ ಕೇಳಲು ಬಯಸುತ್ತೇನೆ. ರಾತ್ರಿಯು ಕಳೆದು ಬೆಳಗಾದ ಮೇಲೆ ಯುದ್ಧವು ನಡೆಯುವುದು.
ಭೀಷ್ಮಃ
ಏತೇ ರಥಾಸ್ತವಾಖ್ಯಾತಾಸ್ತಥೈವಾತಿರಥಾ ನೃಪ |
ಯೇ ಚಾಪ್ಯರ್ಧರಥಾ ರಾಜನ್ ಪಾಂಡವಾನಾಮತಃ ಶೃಣು ॥15॥
ಭೀಷ್ಮ ಎಲೈ ರಾಜನೇ, ನಿನ್ನ ಪಕ್ಷದಲ್ಲಿ ರಥರು, ಅತಿರಥರು ಮತ್ತು ಅರ್ಧರಥರನ್ನು ಇಂತಹವರು ಎಂದು ಹೇಳಿದ್ದೇನೆ. ಇನ್ನು ಪಾಂಡವ ಪಕ್ಷದಲ್ಲಿ ಕೇಳುವವನಾಗು.
ಯದಿ ಕೌತೂಹಲಂ ತೇಽದ್ಯ ಪಾಂಡವಾನಾಂ ನಿಬೋಧ ಮೇ |
ರಥಸಂಖ್ಯಾಂ ಶೃಣುಷ್ವ ತ್ವಂ ಸಹೈಭಿರ್ವಸುಧಾಧಿಪೈಃ ॥16॥
ಪಾಂಡವರ ಪಕ್ಷದಲ್ಲಿ ರಥಾತಿರಥರನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವಿದ್ದರೆ ನನ್ನಿಂದ ಅದನ್ನು ತಿಳಿದುಕೊ. ಈ ರಾಜರ ಜೊತೆಯಲ್ಲಿ ಸೇರಿ ರಥಾದಿಗಣನೆಯನ್ನು ಕೇಳುವವನಾಗು.
ಸ್ವಯಂ ರಾಜಾ ರಥೋದಾರಃ ಪಾಂಡವಃ ಕುಂತಿನಂದನಃ |
ಅಗ್ನಿವತ್ ಸಮರೇ ತಾತ ಚರಿಷ್ಯತಿ ನ ಸಂಶಯಃ ॥17॥
ಎಲೈ ಪ್ರೀತಿಪಾತ್ರನೇ, ಕುಂತೀ ಮತ್ತು ಪಾಂಡುವಿನ ಪುತ್ರನಾದ ಧರ್ಮರಾಜನು ಸ್ವತಃ ಒಬ್ಬ ಶ್ರೇಷ್ಠನಾದ ರಥ. ಅವನು ಅಗ್ನಿಯಂತೆ ಯುದ್ಧಭೂಮಿಯಲ್ಲಿ ಸಂಚರಿಸುವನು. ಇದರಲ್ಲಿ ಸಂಶಯವಿಲ್ಲ.
ಭೀಮಸೇನಸ್ತು ರಾಜೇಂದ್ರ ರಥೋಽಷ್ಟಗುಣಸಮ್ಮಿತಃ |
ನಾಗಾಯುತಬಲೋ ಮಾನೀ ತೇಜಸಾ ನ ಸ ಮಾನುಷಃ ॥18॥
ಎಲೈ ರಾಜೇಂದ್ರನೇ, ಭೀಮಸೇನನಾದರೂ ಎಂಟು ರಥರಿಗೆ ಸಮಾನನಾದವನು. ಅವನು ಹತ್ತು ಸಹಸ್ರ ಆನೆಗಳ ಬಲವುಳ್ಳವನು ಮತ್ತು ಮಾನವಂತನು. ಸಾಮರ್ಥ್ಯದ ದೃಷ್ಟಿಯಿಂದ ನೋಡಿದರೆ ಅವನು ಮನುಷ್ಯನೇ ಅಲ್ಲ.
ಮಾದ್ರೀಪುತ್ರೌ ತು ರಥಿನೌ ದ್ವಾವೇವ ಪುರುಷರ್ಷಭೌ |
ಅಶ್ವಿನಾವಿವ ರೂಪೇಣ ತೇಜಸಾ ಚ ಸಮನ್ವಿತೌ ॥19॥
ರೂಪದಲ್ಲಿ ಅಶ್ವಿನೀದೇವತೆಗಳಂತಿರುವ, ತೇಜಸ್ಸಿನಿಂದ ಕೂಡಿದ ಪುರುಷ ಶ್ರೇಷ್ಠರಾದ ನಕುಲ-ಸಹದೇವರಿಬ್ಬರೂ ರಥರು.
ಏತೇ ಚಮೂಮುಖಗತಾಃ ಸ್ಮರಂತಃ ಕ್ಲೇಶಮಾತ್ಮನಃ |
ರುದ್ರವತ್ ಪ್ರಚರಿಷ್ಯಂತಿ ತತ್ರ ಮೇ ನಾಸ್ತಿ ಸಂಶಯಃ ॥20॥
ಇವರೆಲ್ಲರೂ ಯುದ್ಧಭೂಮಿಯಲ್ಲಿ ನಿಂತು, ತಾವು ಹಿಂದೆ ಅನುಭವಿಸಿದ ಕ್ಲೇಶವನ್ನು ಸ್ಮರಿಸುತ್ತಾ, ರುದ್ರರಂತೆ ಸಂಚರಿಸುವುದರಲ್ಲಿ

ನನಗೆ ಸಂಶಯವಿಲ್ಲ.
ಸರ್ವ ಏವ ಮಹಾತ್ಮಾನಃ ಸಾಲಸ್ತಂಭಾ ಇವೋದ್ಗತಾಃ |
ಪ್ರಾದೇಶೇನಾಧಿಕಾಃ ಪುಂಭಿರನ್ಯೈಸ್ತೇ ಚ ಪ್ರಮಾಣತಃ ॥21॥
ಈ ಪಾಂಡವರೆಲ್ಲರೂ ಮಹಾತ್ಮರು. ಸಾಲವೃಕ್ಷದ ಬುಡದಂತೆ ಇರುವವರು. ಎತ್ತರದಲ್ಲಿ ಅವರು ಇತರ ಪುರುಷರಿಗಿಂತಲೂ ಒಂದು ಗೇಣಿನಷ್ಟು ಅಧಿಕರಾದವರು.
ಸಿಂಹಸಂಹನನಾಃ ಸರ್ವೇ ಪಾಂಡುಪುತ್ರಾ ಮಹಾಬಲಾಃ |
ಚರಿತಬ್ರಹ್ಮಚರ್ಯಾಶ್ಚ ಸರ್ವೇ ತಾತ ತಪಸ್ವಿನಃ ॥22॥
ಹ್ರೀಮಂತಃ ಪುರುಷವ್ಯಾಘ್ರಾ ವ್ಯಾಘ್ರಾ ಇವ ಬಲೋತ್ಕಟಾಃ |
ಜವೇ ಪ್ರಹಾರೇ ಸಮ್ಮರ್ದೇ ಸರ್ವ ಏವಾತಿಮಾನುಷಾಃ ॥23॥
ಸರ್ವೈರ್ಜಿತಾ ಮಹೀಪಾಲಾ ದಿಗ್ಜಯೇ ಭರತರ್ಷಭ ॥24॥
ಪಾಂಡುಪುತ್ರರೆಲ್ಲರೂ ಸಿಂಹಶರೀರದಂತಹ ಶರೀರವನ್ನು ಹೊಂದಿದ ಮಹಾಬಲರು. ಬ್ರಹ್ಮಚರ್ಯವ್ರತವನ್ನು ಆಚರಿಸಿದವರು. ಪ್ರೀತಿಪಾತ್ರನೇ, ಎಲ್ಲರೂ ತಪಸ್ವಿಗಳು. ಎಲ್ಲರೂ ನಾಚಿಕೆಗಳನ್ನು ಹೊಂದಿದ ಪುರುಷವ್ಯಾಘ್ರರು. ವ್ಯಾಘ್ರಗಳಂತೆ ಬಲದಿಂದ ಕೂಡಿದವರು. ವೇಗದಲ್ಲಿ, ಪ್ರಹಾರದಲ್ಲಿ ಮತ್ತು ಶತ್ರುಗಳ ಮೇಲೆ ಎರಗುವುದರಲ್ಲಿ ಅವರೆಲ್ಲರೂ ಮನುಷ್ಯರನ್ನು ಮೀರಿದವರು. ಎಲೈ ಭರತಶ್ರೇಷ್ಠನೇ, ಅವರಲ್ಲಿ ಪ್ರತಿಯೊಬ್ಬರೂ ದಿಗ್ವಿಜಯಕಾಲದಲ್ಲಿ ಎಲ್ಲ ರಾಜರನ್ನೂ ಎದುರಿಸಿ ಜಯಿಸಿದ್ದಾರೆ.
ನ ಚೈಷಾಂ ಪುರುಷಾಃ ಕೇಚಿದಾಯುಧಾನಿ ಗದಾಃ ಶರಾನ್ |
ವಿಷಹಂತಿ ಸದಾ ಕರ್ತುಮಧಿಜ್ಯಾನಪಿ ಕೌರವ ॥25॥
ಉದ್ಯಂತುಂ ವಾ ಗದಾ ಗುರ್ವೀಃ ಶರಾನ್ ವಾ ಕ್ಷೇಪ್ತುಮಾಹವೇ ॥26॥
ಬೇರೆ ಯಾವ ಪುರುಷರೂ ಅವರ ಆಯುಧಗಳನ್ನಾಗಲೀ, ಗದೆಯನ್ನಾಗಲೀ, ಬಾಣಗಳನ್ನಾಗಲೀ ಸಹಿಸಲಾರರು. ಎಲೈ ಕೌರವನೇ, ಬೇರೆಯವರು ಅವರ ಬಿಲ್ಲನ್ನು ಹೆದೆ ಏರಿಸುವುದಕ್ಕಾಗಲೀ, ಅವರ ಭಾರವಾದ ಗದೆಯನ್ನು ಎತ್ತುವುದಕ್ಕಾಗಲೀ, ಅವರು ಪ್ರಯೋಗ ಮಾಡಿದಂತೆ ಬಾಣಗಳನ್ನು ಪ್ರಯೋಗಿಸುವುದಕ್ಕಾಗಲೀ ಸಮರ್ಥರಲ್ಲ.
ಜವೇ ಲಕ್ಷಸ್ಯ ಹರಣೇ ಭಂಗೇ ಚಾಪಿ ವಿಕರ್ಷಣೇ |
ಬಾಲೈರಪಿ ಭವಂತಸ್ತೈಃ ಸರ್ವ ಏವ ವಿಶೇಷಿತಾಃ ॥27॥
ಅವರು ಬಾಲಕರಾಗಿದ್ದಾಗಲೂ ವೇಗದಲ್ಲಿ ಲಕ್ಷ್ಯವನ್ನು ಹಿಡಿದು ತರುವುದರಲ್ಲಿ, ಲಕ್ಷ್ಯವನ್ನು ಭೇದಿಸುವುದರಲ್ಲಿ ನಿಮ್ಮೆಲ್ಲರಿಗಿಂತಲೂ ಬಹಳ ಅಧಿಕರಾಗಿದ್ದರು.
ಏತತ್ ಸೈನ್ಯಂ ಸಮಾಸಾದ್ಯ ವ್ಯಾಘ್ರಾ ಇವ ಬಲೋತ್ಕಟಾಃ |
ವಿಧ್ವಂಸಯಿಷ್ಯಂತಿ ರಣೇ ಮಾ ಸ್ಮ ತೈಃ ಸಹ ಸಂಗಮಃ ॥28॥
ವ್ಯಾಘ್ರಗಳಂತೆ ಬಲೋತ್ಕಟರಾದ ಅವರು ನಿನ್ನ ಈ ಸೈನ್ಯವನ್ನು ಸಮೀಪಿಸಿ ಯುದ್ಧದಲ್ಲಿ ನಾಶವನ್ನು ಮಾಡುವರು. ಅವರ ಜೊತೆಯಲ್ಲಿ ಯುದ್ಧದಲ್ಲಿ ಸಮಾಗಮವನ್ನು ಹೊಂದದಿರುವುದು ಒಳ್ಳೆಯದು.
ಏಕೈಕಶಸ್ತೇ ಸಂಗ್ರಾಮೇ ಹನ್ಯುಃ ಸರ್ವಾನ್ ಮಹೀಕ್ಷಿತಃ |
ಪ್ರತ್ಯಕ್ಷಂ ತವ ರಾಜೇಂದ್ರ ರಾಜಸೂಯೇ ಯಥಾಽಭವತ್ ॥29॥
ಎಲೈ ರಾಜೇಂದ್ರನೇ, ರಾಜಸೂಯ ಯಾಗದಲ್ಲಿ ನಿನ್ನ ಕಣ್ಣೆದುರಿಗೆ ನಡೆದಂತೆ ಅವರಲ್ಲಿ ಒಬ್ಬೊಬ್ಬರೂ ಎಲ್ಲಾ ರಾಜರನ್ನೂ ಯುದ್ಧದಲ್ಲಿ ಕೊಂದಾರು.
ದ್ರೌಪದ್ಯಾಶ್ಚ ಪರಿಕ್ಲೇಶಂ ದ್ಯೂತೇ ಚ ಪರುಷಾ ಗಿರಃ |
ತೇ ಸ್ಮರಂತಶ್ಚ ಸಂಗ್ರಾಮೇ ವಿಚರಿಷ್ಯಂತಿ ರುದ್ರವತ್ ॥30॥
ದ್ರೌಪದಿಗೆ ಉಂಟಾದ ಪರಿಕ್ಲೇಶವನ್ನೂ ದ್ಯೂತಸಮಯದಲ್ಲಿ ನೀವು ಆಡಿದ ಕ್ರೂರವಾದ ಮಾತುಗಳನ್ನೂ ಸ್ಮರಿಸಿಕೊಳ್ಳುತ್ತಾ ಯುದ್ಧದಲ್ಲಿ ರುದ್ರದೇವರಂತೆ ಸಂಚರಿಸುವರು.
ಲೋಹಿತಾಕ್ಷೋ ಗುಡಾಕೇಶೋ ನಾರಾಯಣಸಹಾಯವಾನ್ |
ಉಭಯೋಃ ಸೇನಯೋರ್ವೀರೋ ರಥೋ ನಾಸ್ತೀಹ ತಾದೃಶಃ ॥31॥
ಕೆಂಪಾದ ಕಣ್ಣುಳ್ಳವನೂ ಮತ್ತು ನಾರಾಯಣನ ಸಹಾಯವುಳ್ಳವನೂ ಆದ ಗುಡಾಕೇಶನು ಎರಡು ಸೈನ್ಯಗಳಲ್ಲಿಯೂ ಅತ್ಯಂತ ಶ್ರೇಷ್ಠನಾದ ವೀರ. ಅವನಿಗೆ ಸಮಾನನಾದ ರಥರು ಇಲ್ಲಿ ಯಾರೂ ಇಲ್ಲ.
ನ ಹಿ ದೇವೇಷು ವಾ ಪೂರ್ವಂ ದಾನವೇಷೂರಗೇಷು ವಾ |
ರಾಕ್ಷಸೇಷ್ವಥ ಯಕ್ಷೇಷು ನರೇಷು ಕುತ ಏವ ತು ॥32॥
ಭೂತೋಽಥವಾ ಭವಿಷ್ಯೋ ವಾ ರಥಃ ಕಶ್ಚಿನ್ಮಯಾ ಶ್ರುತಃ |
ಸಮಾಯುಕ್ತೋ ಮಹಾರಾಜ ರಥಃ ಪಾರ್ಥಸ್ಯ ಧೀಮತಃ ॥33॥
ದೇವತೆಗಳಲ್ಲಾಗಲೀ, ದಾನವರಲ್ಲಾಗಲೀ, ಸರ್ಪಗಳಲ್ಲಾಗಲೀ, ರಾಕ್ಷಸರಲ್ಲಾಗಲೀ, ಯಕ್ಷರಲ್ಲಾಗಲೀ, ಇನ್ನು ಮನುಷ್ಯ ಎಲ್ಲಿಂದ ಬರಬೇಕು ಅವನಿಗೆ ಸಮಾನನಾದ ರಥನನ್ನು ನಾನು ಹಿಂದೆ ಕೇಳಲಿಲ್ಲ, ಮುಂದೆ ಕೇಳುವುದಿಲ್ಲ. ಎಲೈ ಮಹಾರಾಜನೇ, ಅಂತಹ ಮೇಧಾವಿಯಾದ ಅರ್ಜುನನ ರಥವು ಸರ್ವಸನ್ನದ್ಧವಾಗಿದೆ.
ವಾಸುದೇವಶ್ಚ ಸಂಯಂತಾ ರಥಶ್ಚೈವಾತ್ರ ತಾದೃಶಃ |
ಗಾಂಡೀವಂ ಚ ಧನುರ್ದಿವ್ಯಂ ತೇ ಚಾಶ್ವಾ ವಾತರಂಹಸಃ ॥34॥
ಅಭೇದ್ಯಕವಚಂ ದಿವ್ಯಮಕ್ಷಯ್ಯೌ ಚ ಮಹೇಷುಧೀ |

ಅಸ್ತ್ರಗ್ರಾಮಶ್ಚ ಮಾಹೇಂದ್ರೋ ರೌದ್ರಃ ಕೌಬೇರ ಏವ ಚ ॥35॥
ಯಾಮ್ಯಶ್ಚ ವಾರುಣಶ್ಚೈವ ಗದಾಶ್ಚೋಗ್ರಪ್ರದರ್ಶನಾಃ।
ವಜ್ರಾದೀನಿ ಚ ಮುಖ್ಯಾನಿ ನಾನಾಪ್ರಹರಣಾನಿ ವೈ ॥36॥
ಕೃಷ್ಣನು ಅವನಿಗೆ ಸಾರಥಿಯಾಗಿದ್ದಾನೆ. ರಥವಾದರೂ ಆ ರೀತಿಯಿದೆ. ಅವನ ಬಳಿ ಇರುವುದು ದಿವ್ಯವಾದ ಗಾಂಡೀವ ಧನುಸ್ಸು. ಆ ಅಶ್ವಗಳಾದರೂ ವಾಯುವೇಗವನ್ನು ಹೊಂದಿವೆ. ಅವನ ಕವಚವು ದಿವ್ಯವೂ, ಅಭೇದ್ಯವೂ ಆದುದು. ಅವನ ಬತ್ತಳಿಕೆಗಳು ಅಕ್ಷಯವಾದವುಗಳು. ಅವನ ಅಸ್ತ್ರಸಮೂಹದಲ್ಲಿ ಇಂದ್ರಾಸ್ತ್ರ, ಪಾಶುಪತಾಸ್ತ್ರ, ಕೌಬೇರಾಸ್ತ್ರ, ಯಾಮ್ಯಾಸ್ತ್ರ, ವಾರುಣಾಸ್ತ್ರಗಳೂ ಸೇರಿವೆ. ಅವನ ಗದೆಗಳು ನೋಡುವುದಕ್ಕೇ ಭಯಂಕರವಾಗಿವೆ. ಇನ್ನು ಶಸ್ತ್ರಗಳಲ್ಲಂತೂ ವಜ್ರವೇ ಮೊದಲಾದ ನಾನಾ ವಿಧವಾದ ಶಸ್ತ್ರಗಳಿವೆ.
ದಾನವಾನಾಂ ಸಹಸ್ರಾಣಿ ಹಿರಣ್ಯಪುರವಾಸಿನಾಮ್।
ಹತಾನ್ಯೇಕರಥೇನಾಜೌ ಕಸ್ತಸ್ಯ ಸದೃಶೋ ರಥಃ ॥37॥
ಹಿರಣ್ಯಪುರ ವಾಸಿಗಳಾದ ಸಹಸ್ರಾರು ದಾನವರನ್ನು ಒಂದು ರಥದಲ್ಲಿ ಕುಳಿತು ಒಬ್ಬನೇ ಕೊಂದನು. ಅವನಿಗೆ ಸದೃಶನಾದ ರಥನು ಯಾವನು?
ಏಷ ಹನ್ಯಾದ್ಧಿ ಸಂರಂಭೀ ಬಲವಾನ್ ಸತ್ಯಸಂಗರಃ।
ಭವತ್ಸೇನಾಂ ಮಹಾಬಾಹುಃ ಸ್ವಾಂ ಚೈವ ಪರಿಪಾಲಯನ್ ॥38॥
ಬಲಿಷ್ಠನೂ, ಸತ್ಯಸಂಧನೂ, ಮಹಾಬಾಹುವೂ ಆದ ಅವನು ತನ್ನ ಸೈನ್ಯವನ್ನು ರಕ್ಷಣೆ ಮಾಡಿಕೊಂಡು ಕೋಪದಿಂದ ನಿನ್ನ ಸೈನ್ಯವನ್ನು ಒಬ್ಬನೇ ಕೊಂದಾನು!
ಅಹಂ ಚೈನಂ ಪ್ರತ್ಯುದೀಯಾಮಾಚಾರ್ಯೋ ವಾ ಧನಂಜಯಮ್।
ನ ತೃತೀಯೋಽಸ್ತಿ ರಾಜೇಂದ್ರ ಸೇನಯೋರುಭಯೋರಪಿ ॥39॥
ಯ ಏನಂ ಶರವರ್ಷಾಣಿ ಮುಂಚಂತಮುದಿಯಾದ್ ರಥೀ।
ಜೀಮೂತ ಇವ ಘರ್ಮಾಂತೇ ಮಹಾವಾತಸಮೀರಿತಃ ॥40॥
ಎಲೈ ರಾಜೇಂದ್ರನೇ, ಬೇಸಿಗೆಯು ಕಳೆದ ಮೇಲೆ ವಾಯುವಿನಿಂದ ಪ್ರೇರಿತವಾದ ಮಹಾಮೋಡವು ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸುವ ಇವನಿಗೆ ಎದುರಾಗಿ ನಾನಾಗಲೀ, ಆಚಾರ್ಯರಾದ ದ್ರೋಣರಾಗಲೀ ರಥದಲ್ಲಿ ಎದುರಿಸಬಹುದು. ಆದರೆ ಎರಡು ಸೈನ್ಯಗಳನ್ನು ನೋಡಿದರೂ ಮೂರನೆಯ ವ್ಯಕ್ತಿಯು ಸಿಗುವುದಿಲ್ಲ.
ಸಮಾಯುಕ್ತಸ್ತು ಕೌಂತೇಯೋ ವಾಸುದೇವಸಹಾಯವಾನ್।
ತರುಣಶ್ಚ ಕೃತೀ ಚೈವ ಜೀರ್ಣೌ ಚಾವಾಮುಭಾವಪಿ ॥41॥
ಕುಂತೀಪುತ್ರನಾದ ಅರ್ಜುನನು ಕೃಷ್ಣನ ಸಹಾಯವುಳ್ಳವನಾಗಿದ್ದಾನೆ. ಅವನು ತರುಣ ಮತ್ತು ಸುಶಿಕ್ಷಿತನಾಗಿದ್ದಾನೆ. ನಾವಿಬ್ಬರೂ ವೃದ್ಧರಾಗಿದ್ದೇವೆ.
ಸಂಜಯಃ
ಏತಚ್ಛ್ರುತ್ವಾ ತು ಭೀಷ್ಮಸ್ಯ ರಾಜ್ಞಾಂ ದಧ್ವಂಸಿರೇ ತದಾ।
ಕಾಂಚನಾಂಗದಿನಃ ಪೀನಾ ಭುಜಾಶ್ಚಂದನರೂಷಿತಾಃ ॥42॥
ಮನೋಭಿಃ ಸಹಸಾ ವೇಗೈಃ ಸಂಸ್ಮೃತ್ಯ ಚ ಪುರಾತನಮ್।
ಸಾಮರ್ಥ್ಯಂ ಪಾಂಡವೇಯಾನಾಂ ಯಥಾ ಪ್ರತ್ಯಕ್ಷದರ್ಶನಾತ್ ॥43॥
ಸಂಜಯ ಭೀಷ್ಮರ ಮಾತುಗಳನ್ನು ಕೇಳಿ ನೆರೆದಿದ್ದ ರಾಜರು ತಮ್ಮ ಕಣ್ಣೆದುರಿಗೆ ನೋಡಿದಂತೆ, ಪಾಂಡವರ ಹಿಂದಿನ ಕಾಲದಿಂದಲೂ ಇರುವ ಸಾಮರ್ಥ್ಯವನ್ನು ಶೀಘ್ರವಾಗಿ ತಮ್ಮ ಮನಸ್ಸಿನಲ್ಲಿ ನೆನೆದು, ಸುವರ್ಣಮಯವಾದ ಅಂಗದಗಳನ್ನು ಧರಿಸಿ, ಪುಷ್ಟವಾದ ತಮ್ಮ ಭುಜಗಳನ್ನು ಚಂದನದಿಂದ ಲೇಪಿಸಿಕೊಂಡಿದ್ದ ಆ ರಾಜರೆಲ್ಲರಿಗೂ ಬಲದ ಹ್ರಾಸವುಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ ಅಧ್ಯಾಯಃ 24
ತತೋ ಯಯುಃ ಕೌರವಾಃ ಪಾಂಡವಾಶ್ಚ
ಕುರುಕ್ಷೇತ್ರಂ ಯೋದ್ಧುಕಾಮಾಃ ಸಕೃಷ್ಣಾಃ।
ಚಕ್ರುಶ್ಚ ತೇ ಶಿಬಿರಾಣ್ಯತ್ರ ಸರ್ವೇ
ಶುಭೇ ದೇಶೇ ಪಾಂಡವಾಃ ಕೃಷ್ಣಬುದ್ಧ್ಯಾ ॥89॥
ಬಳಿಕ ಪಾಂಡವರೂ ಕೌರವರೂ ಯುದ್ಧ ಮಾಡಲು ಬಯಸಿ ಕೃಷ್ಣನೊಂದಿಗೆ ಕುರುಕ್ಷೇತ್ರಕ್ಕೆ ನಡೆದರು. ಅಲ್ಲಿ ಎಲ್ಲರೂ ಶಿಬಿರಗಳನ್ನು ನಿರ್ಮಿಸಿಕೊಂಡರು. ಅದರಲ್ಲಿಯೂ ಪಾಂಡವರು ಕೃಷ್ಣನ ಆದೇಶದಿಂದ ಶುಭಕರವಾದ ಒಂದು ಸ್ಥಳದಲ್ಲಿಯೇ ಶಿಬಿರ ರಚಿಸಿಕೊಂಡರು.
* * * * *

ನೂರ ಅರವತ್ತೆಂಟನೆಯ ಅಧ್ಯಾಯ
ಪಾಂಡವರ ಪಕ್ಷದಲ್ಲಿ ಭೀಷ್ಮರ ಮುಂದುವರೆದ ರಥಗಣನೆ.
ಭೀಷ್ಮಃ
ದ್ರೌಪದೇಯಾಃ ಮಹಾರಾಜ ಸರ್ವೇ ಪಂಚ ಮಹಾರಥಾಃ |
ವೈರಾಟಿರುತ್ತರಶ್ಚೈವ ರಥೋ ಮಮ ಮಹಾನ್ ಮತಃ ||1||
ಭೀಷ್ಮ ಎಲ್ಲ ಮಹಾರಾಜನೇ, ದ್ರೌಪದಿಯ ಐದುಮಕ್ಕಳೂ ಎಲ್ಲರೂ ಮಹಾರಥರು. ವಿರಾಟನ ಮಗನಾದ ಉತ್ತರನೂ ಒಬ್ಬ ಮಹಾರಥನೆಂದು ನನ್ನ ಅಭಿಪ್ರಾಯ.
ಅಭಿಮನ್ಯುರ್ಮಹಾಬಾಹೂ ರಥಯೂಥಪಯೂಥಪಃ |
ಸಮಃ ಪಾರ್ಥೇನ ಸಮರೇ ವಾಸುದೇವೇನ ವಾ ಭವೇತ್ ||2||
ಮಹಾಬಾಹುವಾದ ಅಭಿಮನ್ಯುವು ರಥಯೂಥಪಯೂಥಪನಾದವನು. ಯುದ್ಧದಲ್ಲಿ ಅವನು ಅರ್ಜುನನಿಗೆ ಸಮ ಅಥವಾ ಕೃಷ್ಣನಿಗೂ ಸಮಾನನಾದಾನು!
ಲಘ್ವಸ್ತ್ರಶ್ಚಿತ್ರಯೋಧೀ ಚ ಮನಸ್ವೀ ದೃಢವಿಕ್ರಮಃ |
ಸಂಸ್ಮರನ್ ವೈ ಪರಿಕ್ಲೇಶಂ ಸ್ವಪಿತುರ್ವಿಕ್ರಮಿಷ್ಯತಿ ||3||
ಅವನು ಶೀಘ್ರವಾಗಿ ಅಸ್ತ್ರವನ್ನು ಪ್ರಯೋಗಿಸುವವನು. ವಿಚಿತ್ರವಾಗಿ ಯುದ್ಧವನ್ನು ಮಾಡುವವನು. ಧೈರ್ಯಶಾಲಿ ಮತ್ತು ಪರಾಕ್ರಮಶಾಲಿ. ತನ್ನ ತಂದೆಯು ಅನುಭವಿಸಿದ ಕ್ಲೇಶಗಳನ್ನು ಸ್ಮರಿಸಿಕೊಂಡು ಅವನು ತನ್ನ ಪರಾಕ್ರಮವನ್ನು ತೋರಿಸುವನು.
ಸಾತ್ಯಕಿರ್ಮಾಧವಃ ಶೂರೋ ರಥಯೂಥಪಯೂಥಪಃ |
ಏಷ ವೃಷ್ಣಿಪ್ರವೀರಾಣಾಮಮರ್ಷೀ ಜಿತಸಾಧ್ವಸಃ ||4||
ಮಧುಕುಲದಲ್ಲಿ ಜನಿಸಿದ, ಶೂರನಾದ ಸಾತ್ಯಕಿಯು ರಥಯೂಥಪ- ಯೂಥಪನಾದವನು. ವೃಷ್ಣಿವೀರರ ಮಧ್ಯದಲ್ಲಿ ಬಹಳ ಕೋಪವುಳ್ಳವನು ಮತ್ತು ನಿರ್ಭಯನಾದವನು.
ಉತ್ತಮೌಜಾಸ್ತಥಾ ರಾಜನ್ ರಥೋ ಮಮ ಮಹಾನ್ ಮತಃ |
ಯುಧಾಮನ್ಯುಶ್ಚ ವಿಕ್ರಾಂತೋ ರಥೋದಾರೋ ನರರ್ಷಭಃ ||5||
ಎಲೈ ರಾಜನೇ, ನನ್ನ ದೃಷ್ಟಿಯಲ್ಲಿ ಉತ್ತಮೌಜನು ಒಬ್ಬ ಮಹಾರಥ. ಪರಾಕ್ರಮಶಾಲಿಯೂ, ನರಶ್ರೇಷ್ಠನೂ ಆದ ಯುಧಾಮನ್ಯುವು ಇನ್ನೊಬ್ಬ ಶ್ರೇಷ್ಠನಾದ ರಥ.
ಏತೇಷಾಂ ಬಹುಸಾಹಸ್ರಾ ರಥಾ ನಾಗಾ ಹಯಾಸ್ತಥಾ |
ಯೋತ್ಸ್ಯಂತೇ ತೇ ತನುಂ ತ್ಯಕ್ತ್ವಾ ಕುಂತೀಪುತ್ರಪ್ರಿಯೇಪ್ಸಯಾ ||6||
ಪಾಂಡವೈಃ ಸಹ ರಾಜೇಂದ್ರ ತವ ಸೇನಾಸು ಭಾರತ |
ಅಗ್ನಿಮಾರುತವದ್ ರಾಜನ್ನಾಹ್ವಯಂತಃ ಪರಸ್ಪರಮ್ ||7||
ಈ ಮಹಾರಥರ ಜೊತೆಯಲ್ಲಿ ಅನೇಕ ಸಹಸ್ರ ಸಂಖ್ಯೆಯ ರಥಗಳೂ, ಗಜಗಳೂ ಮತ್ತು ಅಶ್ವಗಳೂ ಇವೆ. ಎಲೈ ರಾಜೇಂದ್ರನೇ, ಅವರು ಯುಧಿಷ್ಠಿರನ ಸೇನೆಯ ಜೊತೆಯಲ್ಲಿ ನಿನ್ನ ಸೇನೆಗೆ ವಿರುದ್ಧವಾಗಿ ಶರೀರವನ್ನು ತ್ಯಾಗ ಮಾಡುವುದನ್ನು ಲೆಕ್ಕಿಸದೇ ಅಗ್ನಿ-ವಾಯುಗಳಂತೆ ಪರಸ್ಪರವಾಗಿ ಆಹ್ವಾನವನ್ನು ಮಾಡುತ್ತಾ ಯುದ್ಧವನ್ನು ಮಾಡುವರು.
ಅಜೇಯೌ ಸಮರೇ ವೃದ್ಧೌ ವಿರಾಟದ್ರುಪದಾವುಭೌ |
ಮಹಾರಥೌ ಮಹಾವೀರ್ಯೌ ಮತೌ ಮೇ ಪುರುಷರ್ಷಭೌ ||8||
ವಿರಾಟ-ದ್ರುಪದರಿಬ್ಬರೂ ವೃದ್ಧರಾದರೂ ಯುದ್ಧದಲ್ಲಿ ಅಜೇಯರಾದವರು. ಮಹಾಸಾಮರ್ಥ್ಯೋಪೇತರಾದ ಈ ಪುರುಷಶ್ರೇಷ್ಠರಿಬ್ಬರೂ ಮಹಾರಥರೆಂದು ನನ್ನ ಎಣಿಕೆ.
ವಯೋವೃದ್ಧಾವಪಿ ಹಿ ತೌ ಕ್ಷತ್ರಧರ್ಮಪರಾಯಣೌ |
ಯತಿಷ್ಯೇತೇ ಪರಂ ಶಕ್ತ್ಯಾ ಸ್ಥಿತೌ ವೀರಗತೇ ಪಥಿ ||9||
ಕ್ಷತ್ರಿಯಧರ್ಮಪರಾಯಣರಾದ ಅವರು ವಯಸ್ಸಿನಿಂದ ವೃದ್ಧರಾದರೂ ವೀರರ ಮಾರ್ಗದಲ್ಲಿ ತಮ್ಮ ಶಕ್ತಿಯನ್ನು ಮೀರಿ ನಿಂತವರಾಗಿ, ಯುದ್ಧದಲ್ಲಿ ಪ್ರಯತ್ನವನ್ನು ಮಾಡುವರು.
ಸಂಬಂಧಕೇನ ರಾಜೇಂದ್ರ ತೌ ತು ವೀರ್ಯಬಲಾನ್ವಯಾತ್ |
ಆರ್ಯವೃತ್ತೌ ಮಹೇಷ್ವಾಸೌ ಸ್ನೇಹಪಾಶಯುತಾವುಭೌ ||10||
ಎಲೈ ರಾಜೇಂದ್ರನೇ, ಅವರು ಪಾಂಡವರ ಜೊತೆಯಲ್ಲಿ ತಮಗಿರುವ ಸಂಬಂಧದಿಂದಲೂ, ತಮ್ಮ ಸಾಮರ್ಥ್ಯ ಮತ್ತು ಬಲಗಳ ಕಾರಣದಿಂದಲೂ, ಪಾಂಡವರಲ್ಲಿ ಸ್ನೇಹಪಾಶದಿಂದ ಕಟ್ಟಲ್ಪಟ್ಟವರಾಗಿ ಮಹಾಧನುರ್ಧಾರಿಗಳೂ ಮತ್ತು ಉದಾತ್ತವಾದ ನಡತೆಯುಳ್ಳವರೂ ಆದ ಅವರು ಯುದ್ಧವನ್ನು ಮಾಡುವರು.
ಕಾರಣಂ ಪ್ರಾಪ್ಯ ತು ನರಾಃ ಸರ್ವ ಏವ ಮಹಾಭುಜಾಃ |
ಶೂರಾ ವಾ ಕಾತರಾ ವಾಽಪಿ ಭವಂತಿ ನರಪುಂಗವಾಃ ||11||
ಮಹಾಭುಜರಾದ ನರಶ್ರೇಷ್ಠರೆಲ್ಲರೂ ನಿಮಿತ್ತವು ಒದಗಿದಾಗ ಶೂರರಾಗಲೀ ಅಥವಾ ಭಯಗ್ರಸ್ತರಾಗಲೀ ಆಗುತ್ತಾರೆ.
ಏಕಾಯನಗತಾವೇತೌ ಪಾರ್ಥಿವೌ ದೃಢಧನ್ವಿನೌ |
ಪ್ರಾಣಾಂಸ್ತ್ಯಕ್ತ್ವಾ ಪರಂ ಶಕ್ತ್ಯಾ ಘಟ್ಟಿತಾರೌ ನರಾಧಿಪ ||12||
ಎಲೈ ರಾಜನೇ, ದೃಢವಾದ ಧನುಸ್ಸುಳ್ಳ ಈ ಇಬ್ಬರು ರಾಜರು ಒಂದೇ ಮಾರ್ಗದಲ್ಲಿ ಹೋಗುವವರಾಗಿ ತಮ್ಮ ಪ್ರಾಣಗಳನ್ನು ಬಿಟ್ಟಾದರೂ ತಮ್ಮ ಪೂರ್ಣಶಕ್ತಿಯಿಂದ ಶತ್ರುಗಳ ಮೇಲೆ ಬೀಳುವರು.

ಪೃಥಗಕ್ಷೋಹಿಣೀಭ್ಯಾಂ ತಾವುಭೌ ಸಂಯತಿ ದಾರುಣೌ |
ಸಂಬಂಧಿಭಾವಂ ರಕ್ಷಂತೌ ಮಹತ್ ಕರ್ಮ ಕರಿಷ್ಯತಃ ॥13॥
ಬೇರೆ ಬೇರೆ ಒಂದೊಂದು ಅಕ್ಷೋಹಿಣಿ ಸೈನ್ಯದಿಂದ ಪಾಂಡವರನ್ನು ಬಂದು ಸೇರಿರುವ ಅವರಿಬ್ಬರೂ ಯುದ್ಧದಲ್ಲಿ ಪರಮಶೂರರಾದವರು. ಪಾಂಡವರ ಜೊತೆಯಲ್ಲಿ ಇರುವ ತಮ್ಮ ಸಂಬಂಧವನ್ನು ರಕ್ಷಿಸುತ್ತಾ ದೊಡ್ಡ ಕಾರ್ಯವನ್ನು ಮಾಡುವರು.
ಲೋಕವೀರೌ ಮಹೇಷ್ವಾಸೌ ತ್ಯಕ್ತಾತ್ಮಾನೌ ಚ ಭಾರತ |
ಪ್ರತ್ಯಯಂ ಪರಿರಕ್ಷಂತೌ ಮಹತ್ಕರ್ಮ ಕರಿಷ್ಯತಃ ॥14॥
ಎಲೈ ಭಾರತನೇ, ಮಹಾಧನುರ್ಧಾರಿಗಳೂ ಮತ್ತು ಲೋಕವೀರರೂ ಆದ ಅವರು ಪಾಂಡವರು ತಮ್ಮಲ್ಲಿಟ್ಟಿರುವ ವಿಶ್ವಾಸವನ್ನು ರಕ್ಷಿಸಿಕೊಳ್ಳುತ್ತಾ, ದೇಹತ್ಯಾಗವನ್ನು ಮಾಡಿಯಾದರೂ ದೊಡ್ಡ ಕಾರ್ಯವನ್ನು ಮಾಡುವವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಷಷ್ಟ್ಯುತ್ತರಶತತಮೋऽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ಷಷ್ಠೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೊಂಬತ್ತನೆಯ ಅಧ್ಯಾಯ
ಭೀಷ್ಮರಿಂದ ಮುಂದುವರೆದ ಪಾಂಡವರ ಸೈನ್ಯದ ರಥಾತಿರಥಗಣನೆ.
ಭೀಷ್ಮಃ
ಪಾಂಚಾಲರಾಜಸ್ಯ ಸುತೋ ರಾಜನ್ ಪರಪುರಂಜಯಃ |
ಶಿಖಂಡೀ ರಥಮುಖ್ಯೋ ಮೇ ಮತಃ ಪಾರ್ಥಸ್ಯ ಸಮ್ಮತಃ ॥1॥
ಭೀಷ್ಮ ಎಲೈ ರಾಜನೇ, ಶತ್ರುಗಳ ಪಟ್ಟಣವನ್ನು ಜಯಿಸುವ ಪಾಂಚಾಲ ರಾಜನ ಪುತ್ರನಾದ ಶಿಖಂಡಿಯು ಅರ್ಜುನನಿಗೆ ಸಮ್ಮತನಾದವನು. ಅವನು ಒಬ್ಬ ಮುಖ್ಯನಾದ ರಥನೆಂದು ನನ್ನ ಭಾವನೆ.
ಏಷ ಯೋತ್ಸ್ಯತಿ ಸಂಗ್ರಾಮೇ ನಾಶಯನ್ ಪೂರ್ವಸಂಸ್ಥಿತಮ್ |
ವೈರಂ ಯೋऽಸೌ ಸಂಪ್ರಥಯನ್ ತವ ಸೇನಾಸು ಭಾರತ ॥2॥
ಎಲೈ ಭಾರತನೇ, ಅವನು ತನಗೆ ನಿಮ್ಮ ಮೇಲಿದ್ದ ಹಿಂದಿನ ವೈರವನ್ನು ಸ್ಪಷ್ಟ ಪಡಿಸುತ್ತಾ, ನಿನ್ನ ಸೈನ್ಯವನ್ನು ನಾಶ ಮಾಡುತ್ತಾ ಯುದ್ಧವನ್ನು ಮಾಡುವನು.
ಏತಸ್ಯ ಬಹುಲಾಃ ಸೇನಾಃ ಪಾಂಚಾಲಾಶ್ಚ ಪ್ರಭದ್ರಕಾಃ |
ತೇನಾऽಸೌ ರಥವಂಶೇನ ಮಹತ್ಕರ್ಮ ಕರಿಷ್ಯತಿ ॥3॥
ಇವನ ಬಳಿ ಪಾಂಚಾಲರ ಮತ್ತು ಪ್ರಭದ್ರಕರ ದೊಡ್ಡ ಸೈನ್ಯವಿದೆ. ಆ ರಥ ಸೈನ್ಯದಿಂದ ಕೂಡಿದವನಾಗಿ ಇವನು ದೊಡ್ಡ ಕಾರ್ಯವನ್ನು ಮಾಡುವನು.
ಧೃಷ್ಟದ್ಯುಮ್ನಶ್ಚ ಸೇನಾನೀಃ ಸರ್ವಸೇನಾಸು ಭಾರತ |
ಮತೋ ಮೇऽತಿರಥೋ ರಾಜನ್ ದ್ರೋಣಶಿಷ್ಯೋ ಮಹಾರಥಃ ॥4॥
ಎಲೈ ಭಾರತನೇ, ರಾಜನೇ, ದ್ರೋಣಶಿಷ್ಯನೂ, ಪಾಂಡವರ ಮಹಾರಥನೂ, ಪಾಂಡವ ಸೇನಾಪತಿಯೂ ಆದ ಧೃಷ್ಟದ್ಯುಮ್ನನು ಎಲ್ಲ ಸೈನ್ಯದಲ್ಲಿಯೂ ಶ್ರೇಷ್ಠನಾದ ಒಬ್ಬ ಅತಿರಥನೆಂದು ನನ್ನ ಭಾವನೆ.
ಏಷ ಯೋತ್ಸ್ಯತಿ ಸಂಗ್ರಾಮೇ ಸೂದಯನ್ ವೈ ಪರಾನ್ ಬಹೂನ್ |
ಭಗವಾನಿವ ಸಂಕ್ರುದ್ಧಃ ಪಿನಾಕೀ ಯುಗಸಂಕ್ಷಯೇ ॥5॥
ಇವನು ಭಗವಂತನಾದ ಪಿನಾಕಪಾಣಿಯು ಯುಗಾಂತ್ಯದಲ್ಲಿ ಕ್ರೋಧದಿಂದ ಎಲ್ಲವನ್ನೂ ಸಂಹರಿಸುವಂತೆ ಯುದ್ಧದಲ್ಲಿ ಅನೇಕ ಶತ್ರುಗಳನ್ನು ಸಂಹರಿಸಿ ಯುದ್ಧವನ್ನು ಮಾಡುವನು.
ಏತಸ್ಯ ತದ್ರಥಾನೀಕಂ ಕಥಯಂತಿ ರಣಪ್ರಿಯಾಃ |
ಬಹುತ್ವಾತ್ ಸಾಗರಪ್ರಖ್ಯಂ ದೇವಾನಾಮಿವ ಸಂಯುಗೇ ॥6॥
ರಣಪ್ರಿಯರಾದವರು ಇವನ ಬಳಿ ಇರುವ ರಥಗಳ ಸಮೂಹವನ್ನು ಅವುಗಳ ಸಂಖ್ಯಾಬಲದಿಂದ ದೇವತೆಗಳ ಯುದ್ಧದಲ್ಲಿದ್ದ ಸಾಗರಗಳನ್ನು ಹೋಲುವ ರಥಗಳು ಎಂದು ಹೇಳುತ್ತಾರೆ.
ಧೃತವರ್ಮಾ ತು ರಾಜೇಂದ್ರ ಮತೋ ಮೇऽರ್ಧರಥೋ ಮಹಾನ್ |
ಧೃಷ್ಟದ್ಯುಮ್ನಸ್ಯ ತನಯೋ ಬಾಲ್ಯಾನ್ನಾತಿಕೃತಶ್ರಮಃ ॥7॥
ಎಲೈ ರಾಜೇಂದ್ರನೇ, ಧೃಷ್ಟದ್ಯುಮ್ನನ ಮಗನಾದ ಧೃತವರ್ಮನು ಅರ್ಧರಥನೆಂದು ನನ್ನ ಭಾವನೆ. ಅವನು ಇನ್ನೂ ಬಾಲಕನಾದವನು ಮತ್ತು ಬಹಳ ಅಭ್ಯಾಸವನ್ನು ಹೊಂದದಿರುವವನು.
ಶಿಶುಪಾಲಸುತೋ ವೀರಃ ಚೇದಿರಾಜೋ ಮಹಾರಥಃ |
ಧೃಷ್ಟಕೇತುರ್ಮಹೇಷ್ವಾಸಃ ಸಂಬಂಧೀ ಪಾಂಡವಸ್ಯ ಹ ॥8॥
ಏಷ ಚೇದಿಪತಿಃ ಶೂರಃ ಸಹ ಪುತ್ರೇಣ ಭಾರತ |
ಮಹಾರಥಾನಾಂ ಸುಕರಂ ಮಹತ್ ಕರ್ಮ ಕರಿಷ್ಯತಿ ॥9॥
ಇನ್ನು ಚೇದಿರಾಜನೂ, ಶಿಶುಪಾಲನ ಪುತ್ರನೂ ಆದ ಧೃಷ್ಟಕೇತುವು ಮಹಾಧನುರ್ಧಾರಿ ಮತ್ತು ಪಾಂಡವರ ಸಂಬಂಧಿಯಾಗಿದ್ದಾನೆ.

ಅವನ ಪುತ್ರರಿಂದ ಕೂಡಿದ, ಚೇದಿಪತಿಯಾದ ಶೂರನಾದ ಅವನು ಮಹಾರಥರು ಸುಲಭವಾಗಿ ಮಾಡುವ ಮಹಾಕಾರ್ಯವನ್ನು ಮಾಡುವನು.
ಕ್ಷತ್ರಧರ್ಮರತೋ ಮಹ್ಯಂ ಮತಃ ಪರಪುರಂಜಯಃ |
ಕ್ಷತ್ರದೇವಸ್ತು ರಾಜೇಂದ್ರ ಪಾಂಡವೇಷು ರಥೋತ್ತಮಃ ॥10॥
ಎಲೈ ರಾಜೇಂದ್ರನೇ, ಕ್ಷತ್ರಧರ್ಮದಲ್ಲಿ ರತನಾದ, ಪರಪುರಂಜಯನಾದ ಕ್ಷತ್ರದೇವನು ಪಾಂಡವರ ಪಕ್ಷದಲ್ಲಿ ಒಬ್ಬ ರಥಶ್ರೇಷ್ಠನೆಂದು ನನ್ನ ಅಭಿಪ್ರಾಯ.
ಜಯಂತಶ್ಚಾಮಿತೌಜಾಶ್ಚ ಸತ್ಯಜಿಚ್ಚ ಮಹಾರಥಃ |
ಮಹಾರಥಾ ಮಹಾತ್ಮಾನಃ ಸರ್ವೇ ಪಾಂಚಾಲಸತ್ತಮಾಃ ॥11॥
ಯೋತ್ಸ್ಯಂತಿ ಸಮರೇ ತಾತ ಸಂರಬ್ಧಾ ಇವ ಕುಂಜರಾಃ ॥12॥
ಪಾಂಚಾಲ ರಾಜಕುಮಾರರಾದ ಜಯಂತ, ಅಮಿತೌಜ ಮತ್ತು ಸತ್ಯಜಿತ್ ಇವರೆಲ್ಲರೂ ಮಹಾನುಭಾವರು ಮತ್ತು ಮಹಾರಥರು. ಪ್ರೀತಿಪಾತ್ರನೇ, ಕೋಪಗೊಂಡ ಗಜಗಳಂತೆ ಇವರು ಯುದ್ಧವನ್ನು ಮಾಡುವರು.
ಅಜೋ ಭೋಜಶ್ಚ ವಿಕ್ರಾಂತೌ ಪಾಂಡವೇಷು ಮಹಾರಥೌ |
ಪಾಂಡವಾನಾಂ ಸಹಾಯಾರ್ಥೇ ಪರಂ ಶಕ್ತ್ಯಾ ಯತಿಷ್ಯತಃ ॥13॥
ಎಲೈ ರಾಜನೇ, ಪರಾಕ್ರಮಶಾಲಿಯಾದ ಅಜ ಮತ್ತು ಭೋಜ ಇಬ್ಬರು ಮಹಾರಥರು. ಪಾಂಡವರಿಗೆ ಸಹಾಯವನ್ನು ಮಾಡುವ ಸಲುವಾಗಿ ಅವರು ಶಕ್ತಿಯನ್ನು ಮೀರಿ ಪ್ರಯತ್ನವನ್ನು ಮಾಡುವರು.
ಶೀಘ್ರಾಸ್ತ್ರಶ್ಚಿತ್ರಯೋದ್ಧಾರಃ ಕೃತಿನೋ ದೃಢವಿಕ್ರಮಾಃ |
ಕೇಕಯಾಃ ಪಂಚ ರಾಜೇಂದ್ರ ಭ್ರಾತರೋ ಯುದ್ಧದುರ್ಮದಾಃ ॥14॥
ಸರ್ವೇ ಚೈವ ರಥೋದಾರಾಃ ಸರ್ವೇ ಲೋಹಿತಕಧ್ವಜಾಃ ॥15॥
ಎಲೈ ರಾಜೇಂದ್ರನೇ, ಶೀಘ್ರಾಸ್ತ್ರವುಳ್ಳವರೂ, ಚಿತ್ರಯೋಧಿಗಳೂ, ಕುಶಲರೂ, ದೃಢವಾದ ಪರಾಕ್ರಮವುಳ್ಳವರೂ ಆದ, ಕೇಕಯದೇಶದ ಸಹೋದರರಾದ ಐದು ಜನ ರಾಜರು ಯುದ್ಧದುರ್ಮದರಾದವರು. ಎಲ್ಲರೂ ಕೆಂಪುಬಣ್ಣದ ಧ್ವಜವುಳ್ಳವರೂ ಮತ್ತು ರಥಶ್ರೇಷ್ಠರೂ ಆಗಿದ್ದಾರೆ.
ಕಾಶಿಕಃ ಸುಕುಮಾರಶ್ಚ ನೀಲೋ ಯಶ್ಚಾಪರೋ ನೃಪ |
ಸೂರ್ಯದತ್ತಶ್ಚ ಶಂಖಶ್ಚ ಮದಿರಾಕ್ಷಶ್ಚ ನಾಮತಃ ॥16॥
ಸರ್ವ ಏತೇ ರಥೋದಾರಾಃ ಸರ್ವೇ ಚಾಹವಲಕ್ಷಣಾಃ |
ಸರ್ವಾಸ್ತ್ರವಿದುಷಃ ಸರ್ವೇ ಮಹಾತ್ಮಾನೋ ಮತಾ ಮಮ ॥17॥
ಎಲೈ ರಾಜನೇ, ಕಾಶಿದೇಶದ ಸುಕುಮಾರ, ನೀಲ, ಸೂರ್ಯದತ್ತ, ಶಂಖ, ಮದಿರಾಕ್ಷ ಇವರೆಲ್ಲರೂ ಯುದ್ಧದ ಅಭಿರುಚಿ ಉಳ್ಳವರು. ಎಲ್ಲಾ ಅಸ್ತ್ರಗಳನ್ನೂ ತಿಳಿದವರು, ಎಲ್ಲರೂ ಮಹಾತ್ಮರು, ಅವರೆಲ್ಲರೂ ಶ್ರೇಷ್ಠರಥರೆಂದು ನನ್ನ ಅಭಿಪ್ರಾಯ.
ವಾರ್ಧಕ್ಷೇಮಿರ್ಮಹಾರಾಜ ರಥೋ ಮಮ ಮಹಾನ್ ಮತಃ |
ಚಿತ್ರಾಯುಧಶ್ಚ ನೃಪತಿರ್ಮತೋ ಮೇ ರಥಸತ್ತಮಃ ॥18॥
ಸ ಹಿ ಸಂಗ್ರಾಮಶೋಭೀ ಚ ಭಕ್ತಶ್ಚಾಪಿ ಕಿರೀಟಿನಃ ॥19॥
ಎಲೈ ಮಹಾರಾಜನೇ, ವಾರ್ಧಕ್ಷೇಮಿಯು ಒಬ್ಬ ಮಹಾರಥ ಮತ್ತು ರಾಜನಾದ ಚಿತ್ರಾಯುಧನು ಒಬ್ಬ ರಥಶ್ರೇಷ್ಠ ಎಂದು ನನ್ನ ಅಭಿಪ್ರಾಯ. ಚಿತ್ರಾಯುಧನು ಯುದ್ಧದಲ್ಲಿ ಶೋಭಿಸುವವನು ಮತ್ತು ಅರ್ಜುನನಲ್ಲಿ ಭಕ್ತಿಯುಳ್ಳವನು.
ಚೇಕಿತಾನಃ ಸತ್ಯಧೃತಿಃ ಪಾಂಡವಾನಾಂ ಮಹಾರಥೌ |
ದ್ವಾವಿಮೌ ಪುರುಷವ್ಯಾಘ್ರೌ ರಥೋದಾರೌ ಮತೌ ಮಮ ॥20॥
ಚೇಕಿತಾನ ಮತ್ತು ಸತ್ಯಧೃತಿ ಇವರಿಬ್ಬರೂ ಪಾಂಡವರ ಪಕ್ಷದಲ್ಲಿ ಶ್ರೇಷ್ಠವಾದ ರಥವನ್ನು ಹೊಂದಿದವರು. ಪುರುಷವ್ಯಾಘ್ರರಾದ ಇವರಿಬ್ಬರೂ ಶ್ರೇಷ್ಠರಾದ ರಥರು ಎಂದು ನನ್ನ ಅಭಿಪ್ರಾಯ.
ವ್ಯಾಘ್ರದತ್ತಶ್ಚ ರಾಜೇಂದ್ರ ಚಂದ್ರಸೇನಶ್ಚ ಭಾರತ |
ಮತೌ ಮಮ ರಥೋದಾರೌ ಪಾಂಡವಾನಾಂ ನ ಸಂಶಯಃ ॥21॥
ಎಲೈ ರಾಜೇಂದ್ರನೇ, ಪಾಂಡವರ ಪಕ್ಷದಲ್ಲಿ ವ್ಯಾಘ್ರದತ್ತ ಮತ್ತು ಚಂದ್ರಸೇನ ಇವರಿಬ್ಬರೂ ಶ್ರೇಷ್ಠರಾದ ರಥರು. ಇದರಲ್ಲಿ ಸಂಶಯವಿಲ್ಲ.
ಸೇನಾಬಿಂದುಶ್ಚ ರಾಜೇಂದ್ರ ಕ್ರೋಧಹಂತಾ ಚ ನಾಮತಃ ॥22॥
ಯಃ ಸಮೋ ವಾಸುದೇವೇನ ಭೀಮಸೇನೇನ ಚಾಭಿಭೂಃ |
ಸ ಯೋತ್ಸ್ಯತಿ ಹಿ ವಿಕ್ರಮ್ಯ ಸಮರೇ ತವ ಸೈನಿಕೈಃ ॥23॥
ಎಲೈ ರಾಜೇಂದ್ರನೇ, ಸೇನಾಬಿಂದು, ಅವನಿಗೆ ಕ್ರೋಧಹಂತಾ ಎಂದೂ ಹೆಸರು. ಶತ್ರುಗಳನ್ನು ಸೋಲಿಸುವ ಈ ರಾಜನು ಯುದ್ಧದಲ್ಲಿ ಕೃಷ್ಣನಿಗೂ, ಭೀಮಸೇನನಿಗೂ ಸಮನಾದವನು. ಅವನು ತನ್ನ ವಿಕ್ರಮವನ್ನು ತೋರಿಸಿ, ನಿನ್ನ ಸೈನ್ಯದ ಎದುರಾಗಿ ಯುದ್ಧವನ್ನು ಮಾಡುವನು.
ಮಾಂ ಚ ದ್ರೋಣಂ ಕೃಪಂ ಚೈವ ಯಥಾ ಸಮ್ಮನ್ಯತೇ ಭವಾನ್ |
ತಥಾ ಸ ಸಮರಶ್ಲಾಘೀ ಮಂತವ್ಯೋ ರಥಸತ್ತಮಃ ॥24॥
ನೀನು ನನ್ನನ್ನೂ, ದ್ರೋಣರನ್ನೂ, ಕೃಪರನ್ನೂ ಹೇಗೆ ಭಾವಿಸುವೆಯೋ ಅದರಂತೆ ರಥಶ್ರೇಷ್ಠನೂ, ಯುದ್ಧಪ್ರಿಯನೂ ಆದ ಸೇನಾಬಿಂದುವನ್ನು ತಿಳಿಯಬೇಕು.

ಕಾಶ್ಯಃ ಪರಮಶೀಘ್ರಾಸ್ತ್ರಃ ಶ್ಲಾಘನೀಯೋ ರಥೋತ್ತಮಃ ॥25॥
ರಥ ಏಕಗುಣೋ ಮಹ್ಯಂ ಜ್ಞೇಯಃ ಪರಪುರಂಜಯಃ ॥26॥
ಪರಮಶೀಘ್ರಾಸ್ತ್ರನೂ, ಶ್ಲಾಘನೀಯನೂ, ರಥಶ್ರೇಷ್ಠನೂ, ಪರಪುರಂಜಯನೂ ಆದ ಕಾಶಿರಾಜನು ಒಬ್ಬ ರಥನೆಂದು ನನ್ನ ಗಣನೆ.
ಸ್ವಯಂ ಚ ಯುಧಿ ವಿಕ್ರಾಂತೋ ಮಂತವ್ಯೋಽಷ್ಟಗುಣೋ ರಥಃ |
ಸತ್ಯಜಿತ್ ಸಮರಶ್ಲಾಘೀ ದ್ರುಪದಸ್ಯಾತ್ಮಜೋ ಯುವಾ ॥27॥
ದ್ರುಪದನ ಪುತ್ರನಾದ, ಯುವಕನಾದ, ಸಮರಪ್ರಿಯನಾದ ಸತ್ಯಜಿತುವು ಸ್ವತಃ ಪರಾಕ್ರಮವನ್ನು ತೋರಿಸಿ ಯುದ್ಧವನ್ನು ಮಾಡುವವನು. ಅವನು ಎಂಟು ರಥರಿಗೆ ಸಮಾನನಾದವನು.
ಗತಃ ಸೋಽತಿರಥತ್ವಂ ಹಿ ಧೃಷ್ಟದ್ಯುಮ್ನೇನ ಸಮ್ಮಿತಃ |
ಪಾಂಡವಾನಾಂ ಯಶಸ್ಕಾಮೋ ಮಹತ್ ಕರ್ಮ ಕರಿಷ್ಯತಿ ॥28॥
ಧೃಷ್ಟದ್ಯುಮ್ನನಿಗೆ ಸದೃಶನಾದ ಅವನು ಅತಿರಥನೆಂದು ಗಣನೆಯನ್ನು ಹೊಂದುವವನು. ಪಾಂಡವರ ಕೀರ್ತಿಕಾಮನಾದ ಅವನು ಯುದ್ಧದಲ್ಲಿ ದೊಡ್ಡ ಕಾರ್ಯವನ್ನು ಮಾಡುವವನು.
ಅನುರಕ್ತಶ್ಚ ಶೂರಶ್ಚ ರಥೋಽಯಮಪರೋ ಮಹಾನ್ |
ಪಾಂಡ್ಯರಾಜೋ ಮಹಾವೀರ್ಯಃ ಪಾಂಡವಾನಾಂ ಧುರಂಧರಃ ॥29॥
ಮಹಾಪರಾಕ್ರಮಿಯೂ, ಪಾಂಡವರ ಜವಾಬ್ದಾರಿಯನ್ನು ಹೊತ್ತವನೂ, ಪಾಂಡವರಲ್ಲಿ ಅನುರಕ್ತನೂ ಆದ ಪಾಂಡ್ಯರಾಜನು ಇನ್ನೊಬ್ಬ ರಥನು.
ದೃಢಧನ್ವಾ ಮಹೇಷ್ವಾಸಃ ಪಾಂಡವಾನಾಂ ರಥೋತ್ತಮಃ |
ಶ್ರೇಣಿಮಾನ್ ಕೌರವಶ್ರೇಷ್ಠ ವಸುದಾನಶ್ಚ ಪಾರ್ಥಿವಃ ॥30॥
ಉಭಾವೇತಾವತಿರಥೌ ಮತೌ ಮಮ ಪರಂತಪೌ ॥31॥
ಎಲೈ ಕೌರವಶ್ರೇಷ್ಠನೇ, ದೃಢವಾದ ಧನುಸ್ಸುಳ್ಳವರೂ, ಮಹಾಧನುರ್ಧಾರಿಗಳೂ, ರಥಶ್ರೇಷ್ಠರೂ ಆದ ಶ್ರೇಣಿಮಾನ್ ಮತ್ತು ವಸುದಾನ ಇವರಿಬ್ಬರೂ ಪಾಂಡವರ ಪಕ್ಷದವರು. ಶತ್ರುತಾಪನರಾದ ಇವರಿಬ್ಬರೂ ಅತಿರಥರೆಂದು ನನ್ನ ಅಭಿಪ್ರಾಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಅರವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತನೆಯ ಅಧ್ಯಾಯ
ಮುಂದುವರಿದ ಭೀಷ್ಮರ ರಥಗಣನೆ ಮತ್ತು ಶಿಖಂಡಿಯ ಜೊತೆಯಲ್ಲಿ ಯುದ್ಧ ಮಾಡುವುದಿಲ್ಲವೆಂಬ ಪ್ರತಿಜ್ಞೆ.

ಭೀಷ್ಮಃ
ರೋಚಮಾನೋ ಮಹಾರಾಜ ಪಾಂಡವಾನಾಂ ಮಹಾರಥಃ |
ಯೋತ್ಸ್ಯತೇಽಮರವತ್ ಸಂಖ್ಯೇ ಪರಸೈನ್ಯೇಷು ಭಾರತ ॥1॥
ಭೀಷ್ಮ ಎಲೈ ಮಹಾರಾಜನೇ, ಭಾರತನೇ, ರೋಚಮಾನನು ಪಾಂಡವರ ಪಕ್ಷದಲ್ಲಿ ಇನ್ನೊಬ್ಬ ಮಹಾರಥ. ಅವನು ದೇವತೆಯಂತೆ ಶತ್ರುಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡುವವನು.
ಪುರುಜಿತ್ ಕುಂತಿಭೋಜಶ್ಚ ಮಹೇಷ್ವಾಸೋ ಮಹಾರಥಃ |
ಮಾತುಲೋ ಭೀಮಸೇನಸ್ಯ ಸ ಚ ಮೇಽತಿರಥೋ ಮತಃ ॥2॥
ಮಹಾರಥನೂ, ಮಹೇಷ್ವಾಸನೂ ಆದ ಪುರುಜಿತ್ ಕುಂತಿಭೋಜನು ಭೀಮಸೇನನ ಸೋದರಮಾವನಾದವನು. ಅವನು ಅತಿರಥನೆಂದು ನನ್ನ ಅಭಿಪ್ರಾಯ.
ಏಷ ವೀರೋ ಮಹೇಷ್ವಾಸಃ ಕೃತೀ ಚ ನಿಪುಣಶ್ಚ ಸಃ |
ಚಿತ್ರಯೋಧೀ ಚ ಶಕ್ತಶ್ಚ ಮತೋ ಮೇ ರಥಪುಂಗವಃ ॥3॥
ಸ ಯೋತ್ಸ್ಯತಿ ಹಿ ವಿಕ್ರಮ್ಯ ಮಘವಾನಿವ ದಾನವೈಃ |
ಯೋಧಾ ಯೇ ಚಾಸ್ಯ ವಿಖ್ಯಾತಾಃ ಸರ್ವೇ ಯುದ್ಧವಿಶಾರದಾಃ ॥4॥
ಭಾಗಿನೇಯಕೃತೇ ವೀರ ಸ ಕರಿಷ್ಯತಿ ಸಂಗರಮ್ |
ಸುಮಹತ್ ಕರ್ಮ ಪಾಂಡೂನಾಂ ಸ್ಥಿತಃ ಪ್ರಿಯಹಿತೇ ರತಃ ॥5॥
ಇವನು ವೀರನೂ, ಮಹಾಧನುರ್ಧಾರಿಯೂ, ಬಹಳ ಅಭ್ಯಾಸವನ್ನು ಮಾಡಿದವನೂ, ನಿಪುಣನೂ, ಕ್ಷಿಪ್ರಯೋಧಿಯೂ, ಶಕ್ತನೂ ಆಗಿದ್ದಾನೆ. ಅವನು ಶ್ರೇಷ್ಠನಾದ ರಥ. ಇಂದ್ರನು ದಾನವರ ಜೊತೆಯಲ್ಲಿ ಯುದ್ಧವನ್ನು ಮಾಡಿದಂತೆ ಅವನು ಪರಾಕ್ರಮದಿಂದ ಯುದ್ಧವನ್ನು ಮಾಡುವವನು. ಅವನ ಯೋಧರೆಲ್ಲರೂ ಯುದ್ಧವಿಶಾರದರು ಎಂದು ಪ್ರಖ್ಯಾತರಾದವರು. ಎಲೈ ವೀರನೇ, ತನ್ನ ಸೋದರಳಿಯನಾದ ಭೀಮಸೇನನ ಸಲುವಾಗಿ, ಪಾಂಡವರ ಪ್ರಿಯದಲ್ಲಿ ಮತ್ತು ಹಿತದಲ್ಲಿ ರತನಾದ ಅವನು ಪಾಂಡವರ ಪಕ್ಷದಲ್ಲಿದ್ದು ದೊಡ್ಡ ಯುದ್ಧವನ್ನು ಮಾಡುವವನು.
ಭೈಮಸೇನಿರ್ಮಹಾರಾಜ ಹೈಡಿಂಬೋ ರಾಕ್ಷಸೇಶ್ವರಃ |

ಮತೋ ಮೇ ಬಹುಮಾಯಾವೀ ರಥಯೂಥಪಯೂಥಪಃ ॥6॥
ಎಲೈ ಮಹಾರಾಜನೇ, ಭೀಮಸೇನಪುತ್ರನಾದ, ರಾಕ್ಷಸೇಶ್ವರನಾದ, ಬಹುಮಾಯೆಗಳನ್ನು ಬಲ್ಲ ಘಟೋತ್ಕಚನು ರಥಯೂಥಪಯೂಥಪನೆಂದು ನನ್ನ ಅಭಿಪ್ರಾಯ.
ಯೋತ್ಸ್ಯತೇ ಸಮರೇ ತಾತ ಮಾಯಾಭಿಃ ಸಮರಪ್ರಿಯಃ |
ಯೇ ಚಾಸ್ಯ ರಾಕ್ಷಸಾ ವೀರಾಃ ಸಚಿವಾ ವಶವರ್ತಿನಃ ॥7॥
ಸಮರಪ್ರಿಯನಾದ ಅವನು ಅನೇಕ ಮಾಯೆಗಳಿಂದ ಯುದ್ಧವನ್ನು ಮಾಡುವನು. ಎಲೈ ಪ್ರೀತಿಪಾತ್ರನೇ, ವೀರರಾದ ಎಲ್ಲ ರಾಕ್ಷಸರು ಅವನ ಸಹಾಯಕರೂ ಮತ್ತು ವಶವರ್ತಿಗಳೂ ಆಗಿದ್ದಾರೆ.
ಏತೇ ಚಾನ್ಯೇ ಚ ಬಹವೋ ನಾನಾಜನಪದೇಶ್ವರಾಃ |
ಸಮೇತಾಃ ಪಾಂಡವಸ್ಯಾರ್ಥೇ ವಾಸುದೇವಪುರೋಗಮಾಃ ॥8॥
ಇವರೂ ಮತ್ತು ಇನ್ನೂ ಅನೇಕ ದೇಶದ ರಾಜರೂ ಕೃಷ್ಣನನ್ನು ಮುಂದೆ ಮಾಡಿಕೊಂಡು ಒಟ್ಟಾಗಿ ಪಾಂಡವರ ಸಲುವಾಗಿ ಯುದ್ಧವನ್ನು ಮಾಡಲು ಸನ್ನದ್ಧರಾಗಿದ್ದಾರೆ.
ಏತೇ ಪ್ರಾಧಾನ್ಯತೋ ರಾಜನ್ ಪಾಂಡವಸ್ಯ ಮಹಾತ್ಮನಃ |
ರಥಾಶ್ಚಾತಿರಥಾಶ್ಚೈವ ಯೇ ಚಾನ್ಯೇಽರ್ಧರಥಾ ಮತಾಃ ॥9॥
ನೇಷ್ಯಂತಿ ಸಮರೇ ಸೇನಾಂ ಭೀಮಾಂ ಯೌಧಿಷ್ಠಿರೀಂ ನೃಪ |
ಮಹೇಂದ್ರೇಣೇವ ವೀರ್ಯೇಣ ಪಾಲ್ಯಮಾನಾಂ ಕಿರೀಟಿನಾ ॥10॥
ಎಲೈ ರಾಜನೇ, ಮಹಾತ್ಮನಾದ ಪಾಂಡುಪುತ್ರನಾದ ಯುಧಿಷ್ಠಿರನ ಪಕ್ಷದ ರಥ, ಅತಿರಥ ಮತ್ತು ಅರ್ಧರಥರಲ್ಲಿ ಪ್ರಧಾನರಾದವರನ್ನು ಹೇಳಿದ್ದೇನೆ. ತನ್ನ ಪರಾಕ್ರಮದಿಂದ ಇಂದ್ರನು ರಕ್ಷಿಸಿದಂತೆ ಅರ್ಜುನನಿಂದ ರಕ್ಷಿತವಾದ, ಭಯಂಕರವಾದ ಯುಧಿಷ್ಠಿರ ಸೈನ್ಯವನ್ನು ಇವರು ಯುದ್ಧದಲ್ಲಿ ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗುವವರು.
ತೈರಹಂ ಸಮರೇ ವೀರ ಮಾಯಾವಿದ್ಭಿರ್ಜಯೈಷಿಭಿಃ |
ಯೋತ್ಸ್ಯಾಮಿ ಜಯಮಾಕಾಂಕ್ಷನ್ನಥವಾ ನಿಧನಂ ರಣೇ ॥11॥
ಎಲೈ ವೀರನೇ, ಈ ಜಯಾಕಾಂಕ್ಷಿಗಳೂ ಮತ್ತು ಮಾಯಾವಿಗಳೂ ಆದ ರಾಕ್ಷಸರ ಜೊತೆಯಲ್ಲಿ ಜಯವನ್ನು ಅಥವಾ ನಿಧನವನ್ನು ಆಕಾಂಕ್ಷಿಸುತ್ತಾ ನಾನು ಯುದ್ಧವನ್ನು ಮಾಡುವೆನು.
ವಾಸುದೇವಂ ಚ ಪಾರ್ಥಂ ಚ ಚಕ್ರಗಾಂಡೀವಧಾರಿಣೌ |
ಸಂಧ್ಯಾಗತಾವಿವಾರ್ಕೇಂದೂ ಸಮೇಷ್ಯೇ ಪುರುಷೋತ್ತಮೌ ॥12॥
ಸಂಧ್ಯಾಕಾಲದಲ್ಲಿ ಸೂರ್ಯ-ಚಂದ್ರರು ಸೇರಿದಂತಿರುವ ಪುರುಷೋತ್ತಮರಾದ ಕೃಷ್ಣಾರ್ಜುನರನ್ನು ನಾನು ಯುದ್ಧದಲ್ಲಿ ಎದುರಿಸುವೆನು.
ಯೇ ಚೈವ ತೇ ರಥೋದಾರಾಃ ಪಾಂಡುಪುತ್ರಸ್ಯ ಸೈನಿಕಾಃ |
ಸಹಸೈನ್ಯಾನಹಂ ತಾಂಶ್ಚ ಸಮೇಷ್ಯೇ ರಥಮೂರ್ಧನಿ ॥13॥
ಇನ್ನು ಪಾಂಡುಪುತ್ರರ ಸೈನ್ಯದಲ್ಲಿ ಯುದ್ಧವನ್ನು ಮಾಡುವ ಶ್ರೇಷ್ಠರಾದ ರಥರು ಯಾರಿದ್ದಾರೆಯೋ, ಘೋರವಾದ ಸಂಗ್ರಾಮದಲ್ಲಿ ತಮ್ಮ ಸೈನ್ಯದಿಂದ ಕೂಡಿದ ಅವರನ್ನು ಎದುರಿಸಿ ನಾನು ಯುದ್ಧವನ್ನು ಮಾಡುವೆನು.
ಏತೇ ರಥಾಶ್ಚಾತಿರಥಾಶ್ಚ ತುಭ್ಯಂ
ಯಥಾಪ್ರಧಾನಂ ನೃಪ ಕೀರ್ತಿತಾ ಮಯಾ |
ತಥಾಽಪರೇ ಯೇಽರ್ಧರಥಾಶ್ಚ ಕೇಚಿತ್
ತಥೈವ ತೇಷಾಮಪಿ ಕೌರವೇಂದ್ರ ॥14॥
ಎಲೈ ಕೌರವೇಂದ್ರನೇ, ನಾನು ನಮ್ಮ ಪಕ್ಷದಲ್ಲಿಯೂ ಮತ್ತು ಪಾಂಡವರ ಪಕ್ಷದಲ್ಲಿಯೂ ಇರುವ ರಥರಲ್ಲಿ, ಅತಿರಥರಲ್ಲಿ ಮತ್ತು ಅರ್ಧರಥರಲ್ಲಿ ಪ್ರಧಾನರಾದವರನ್ನು ಹೇಳಿದ್ದೇನೆ.
ಅರ್ಜುನಂ ವಾಸುದೇವಂ ಚ ಯೇ ಚಾನ್ಯೇ ತತ್ರ ಪಾಂಡವಾಃ |
ಸರ್ವಾನಾವಾರಯಿಷ್ಯಾಮಿ ಯಾವದ್ ದ್ರಕ್ಷ್ಯೇ ಶಿಖಂಡಿನಮ್ ॥15॥
ಅರ್ಜುನ, ಕೃಷ್ಣ ಮತ್ತು ಪಾಂಡವರ ಪಕ್ಷದಲ್ಲಿರುವ ಉಳಿದ ವೀರರು ಎಲ್ಲರನ್ನೂ ಶಿಖಂಡಿಯನ್ನು ನೋಡುವವರೆಗೆ ತಡೆಯುವೆನು.
ಪಾಂಚಾಲ್ಯಂ ತು ಮಹಾಬಾಹೋ ನಾಹಂ ಹನ್ಯಾಂ ಶಿಖಂಡಿನಮ್ |
ಉದ್ಯತೇಷುಮಭಿಪ್ರೇಕ್ಷ್ಯ ಪ್ರತಿಯುಧ್ಯಂತಮಾಹವೇ ॥16॥
ಎಲೈ ಮಹಾಬಾಹುವೇ, ಪಾಂಚಾಲರಾಜನ ಮಗನಾದ, ಕೈಯಲ್ಲಿ ಬಾಣವನ್ನು ಹಿಡಿದು ಪ್ರಯೋಗಿಸಲು ಉದ್ಯುಕ್ತನಾದ, ಪ್ರತಿಯುದ್ಧವನ್ನು ಮಾಡುವ ಶಿಖಂಡಿಯನ್ನು ಮಾತ್ರ ನಾನು ಕೊಲ್ಲಲಾರೆ.
ಲೋಕಸ್ತಂ ವೇದ ಯದಹಂ ಪಿತುಃ ಪ್ರಿಯಚಿಕೀರ್ಷಯಾ |
ಪ್ರಾಪ್ತಂ ರಾಜ್ಯಂ ಪರಿತ್ಯಜ್ಯ ಬ್ರಹ್ಮಚರ್ಯೇ ಧೃತವ್ರತಃ ॥17॥
ನಾನು ನನ್ನ ತಂದೆಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ಪ್ರಾಪ್ತವಾದ ರಾಜ್ಯವನ್ನು ಪರಿತ್ಯಾಗ ಮಾಡಿ, ಬ್ರಹ್ಮಚರ್ಯವ್ರತವನ್ನು ಧರಿಸಿರುವುದನ್ನು ಲೋಕವು ತಿಳಿದಿದೆ.
ಚಿತ್ರಾಂಗದಂ ಕೌರವಾಣಾಮಾಧಿಪತ್ಯೇಽಭ್ಯಷೇಚಯಮ್ |
ವಿಚಿತ್ರವೀರ್ಯಂ ಚ ಶಿಶುಂ ಯೌವರಾಜ್ಯೇಽಭ್ಯಷೇಚಯಮ್ ॥18॥
ನಾನು ಚಿತ್ರಾಂಗದನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿ ಇನ್ನೂ ಶಿಶುವಾಗಿದ್ದ ವಿಚಿತ್ರವೀರ್ಯನನ್ನು ಯೌವರಾಜ್ಯದಲ್ಲಿ ಅಭಿಷೇಕ

ಮಾಡಿದೆನು.
ದೇವವ್ರತತ್ವಂ ವಿಖ್ಯಾತಂ ಪೃಥಿವ್ಯಾಂ ಸರ್ವರಾಜಸು |
ನೈವ ಹನ್ಯಾಂ ಸ್ತ್ರಿಯಂ ಜಾತು ನ ಸ್ತ್ರೀಪೂರ್ವಂ ಕದಾಚನ ॥19॥
ನಾನು ಮಾಡಿದ ಪ್ರತಿಜ್ಞೆಯು ಮತ್ತು ವ್ರತವು ಭೂಮಿಯಲ್ಲಿರುವ ಎಲ್ಲ ರಾಜರಲ್ಲಿಯೂ ಪ್ರಖ್ಯಾತವಾಗಿದೆ. ನಾನು ಸ್ತ್ರೀಯನ್ನಾಗಲೀ ಅಥವಾ ಹಿಂದೆ ಸ್ತ್ರೀಯಾಗಿದ್ದ ವ್ಯಕ್ತಿಯನ್ನಾಗಲೀ ಕೊಲ್ಲುವುದಿಲ್ಲ.
ಸ ಹಿ ಸ್ತ್ರೀಪೂರ್ವಕೋ ರಾಜನ್ ಶಿಖಂಡೀ ಯದಿ ತೇ ಶ್ರುತಃ |
ಕನ್ಯಾ ಭೂತ್ವಾ ಪುಮಾನ್ ಜಾತೋ ನ ಯೋತ್ಸ್ಯೇ ತೇನ ಭಾರತ ॥20॥
ಎಲೈ ರಾಜನೇ, ನೀನು ಕೇಳಿದ್ದರೆ ಈ ಶಿಖಂಡಿಯು ಸ್ತ್ರೀಪೂರ್ವಕನಾದವನು. ಎಲೈ ಭಾರತನೇ, ಅವನು ಮೊದಲು ಕನ್ಯೆಯಾಗಿದ್ದು ಅನಂತರ ಪುರುಷನಾದವನು. ಅವನ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುವುದಿಲ್ಲ.
ಸರ್ವಾಂಸ್ತ್ವನ್ಯಾನ್ ಹನಿಷ್ಯಾಮಿ ಪಾರ್ಥಿವಾನ್ ಭರತರ್ಷಭ |
ಯಾನ್ ಸಮೇಷ್ಯಾಮಿ ಸಮರೇ ನ ತು ಕುಂತೀಸುತಾನ್ ನೃಪ ॥21॥
ಎಲೈ ಭರತಶ್ರೇಷ್ಠನೇ, ಯುದ್ಧದಲ್ಲಿ ನನ್ನ ಎದುರಿಗೆ ಬರುವ ಉಳಿದ ಎಲ್ಲಾ ರಾಜರನ್ನೂ ಕೊಲ್ಲುವೆನು. ಆದರೆ ಎಲೈ ರಾಜನೇ, ಕುಂತೀಪುತ್ರರನ್ನು ಮಾತ್ರ ನಾನು ಕೊಲ್ಲುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತತ್ಯುತ್ತರಶತತಮೋಽಧ್ಯಾಯಃ ॥
॥ ರಥಾತಿರಥಸಂಖ್ಯಾನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತನೆಯ
ಅಧ್ಯಾಯ ಮುಗಿಯಿತು.
॥ಸಮಾಪ್ತಂ ರಥಾತಿರಥಸಂಖ್ಯಾನಪರ್ವ ॥
* * * * *
12. ಅಂಬೋಪಾಖ್ಯಾನಪರ್ವ
ನೂರ ಎಪ್ಪತ್ತೊಂದನೆಯ ಅಧ್ಯಾಯ
ಭೀಷ್ಮರಿಂದ ಕಾಶಿರಾಜನ ಸ್ವಯಂವರದಲ್ಲಿದ್ದ ಕನ್ಯೆಯರ ಹರಣ.
ದುರ್ಯೋಧನಃ
ಕಿಮರ್ಥಂ ಭರತಶ್ರೇಷ್ಠ ನೈವ ಹನ್ಯಾಃ ಶಿಖಂಡಿನಮ್ |
ಉದ್ಯತೇಷುಮಥೋ ದೃಷ್ಟ್ವಾ ಸಮರೇಷ್ವಾತತಾಯಿನಮ್ ॥1॥
ಪೂರ್ವಮುಕತ್ವ ಮಹಾಬಾಹೋ ಪಾಂಡವಾನ್ ಸಹ ಸೋಮಕೈಃ |
ಹನಿಷ್ಯಾಮೀತಿ ಗಾಂಗೇಯ ತನ್ಮೇ ಬ್ರೂಹಿ ಪಿತಾಮಹ ॥2॥
ದುರ್ಯೋಧನ ಎಲೈ ಮಹಾಬಾಹುವೇ, ಗಾಂಗೇಯನೇ, ಭರತಶ್ರೇಷ್ಠನೇ, ಮೊದಲು ಪಾಂಡವರನ್ನೂ ಮತ್ತು ಸೋಮಕರನ್ನೂ ಕೊಲ್ಲುವೆನು ಎಂದು ಹೇಳಿ, ಈಗ ಯುದ್ಧದಲ್ಲಿ ಆಯುಧವನ್ನು ಹಿಡಿದು, ಬಾಹುವನ್ನು ಎತ್ತಿದ (ಸೋಮಕನಾದ) ಶಿಖಂಡಿಯನ್ನು ನೋಡಿ, ನಾನು ಕೊಲ್ಲುವುದಿಲ್ಲ ಎಂದು ಏತಕ್ಕೆ ಹೇಳುತ್ತಿದ್ದೀಯೆ? ಪಿತಾಮಹನೇ, ಇದಕ್ಕೆ ಕಾರಣವನ್ನು ನನಗೆ ಹೇಳು.
ಭೀಷ್ಮಃ
ಶೃಣು ದುರ್ಯೋಧನ ಕಥಾಂ ಸಹೈಭಿರ್ವಸುಧಾಧಿಪೈಃ |
ಯದರ್ಥಂ ಯುಧಿ ಸಂಪ್ರೇಕ್ಷ್ಯ ನಾಹಂ ಹನ್ಯಾಂ ಶಿಖಂಡಿನಮ್ ॥3॥
ಭೀಷ್ಮ ಎಲೈ ದುರ್ಯೋಧನನೇ, ಯುದ್ಧದಲ್ಲಿ ಶಿಖಂಡಿಯನ್ನು ನೋಡಿ, ನಾನು ಏತಕ್ಕೆ ಅವನನ್ನು ಕೊಲ್ಲುವುದಿಲ್ಲ ಎಂಬ ಕಥೆಯನ್ನು ಈ ರಾಜರ ಜೊತೆಯಲ್ಲಿ ಕೇಳುವವನಾಗು.
ಮಹಾರಾಜೋ ಮಮ ಪಿತಾ ಶಂತನುರ್ಭರತರ್ಷಭಃ |
ದಿಷ್ಟಾಂತಮಾಪ ಧರ್ಮಾತ್ಮಾ ಸಮಯೇ ಭರತರ್ಷಭ ॥4॥
ಎಲೈ ಭರತರ್ಷಭನೇ, ಭರತರ್ಷಭನೂ, ಧರ್ಮಾತ್ಮನೂ ಆದ ನನ್ನ ತಂದೆಯಾದ ಶಂತನು ಮಹಾರಾಜನು ಒದಗಿಬಂದ ಕಾಲದಲ್ಲಿ ಮರಣವನ್ನು ಹೊಂದಿದನು.
ತತೋಽಹಂ ಭರತಶ್ರೇಷ್ಠ ಪ್ರತಿಜ್ಞಾಂ ಪರಿಪಾಲಯನ್ |
ಚಿತ್ರಾಂಗದಂ ಭ್ರಾತರಂ ವೈ ಮಹಾರಾಜ್ಯೇಽಭ್ಯಷೇಚಯಮ್ ॥5॥
ಎಲೈ ಭರತಶ್ರೇಷ್ಠನೇ, ಆಗ ನಾನು ಹಿಂದೆ ಮಾಡಿದ ಪ್ರತಿಜ್ಞೆಯನ್ನು ರಕ್ಷಿಸಿಕೊಳ್ಳುತ್ತಾ ತಮ್ಮನಾದ ಚಿತ್ರಾಂಗದನಿಗೆ ಮಹಾರಾಜನಾಗಿ ಅಭಿಷೇಕವನ್ನು ಮಾಡಿದೆನು.
ತಸ್ಮಿಂಶ್ಚ ನಿಧನಂ ಪ್ರಾಪ್ತೇ ಸತ್ಯವತ್ಯಾ ಮತೇ ಸ್ಥಿತಃ |
ವಿಚಿತ್ರವೀರ್ಯಂ ರಾಜಾನಮಭ್ಯಷಿಂಚಂ ಯಥಾವಿಧಿ ॥6॥
ಅವನೂ ನಿಧನವನ್ನು ಹೊಂದುತ್ತಿರಲು ತಾಯಿಯಾದ ಸತ್ಯವತಿಯ ಅಭಿಪ್ರಾಯದಂತೆ ವಿಚಿತ್ರವೀರ್ಯನನ್ನು ರಾಜನನ್ನಾಗಿ ಶಾಸ್ತ್ರವಿಧಿಯಂತೆ ಅಭಿಷೇಕ ಮಾಡಿದೆನು.
ಮಯಾಽಭಿಷಿಕ್ತೋ ರಾಜೇಂದ್ರ ಯವೀಯಾನಪಿ ಧರ್ಮತಃ |
ವಿಚಿತ್ರವೀರ್ಯೋ ಧರ್ಮಾತ್ಮಾ ಮಾಮೇವ ಸಮುದೈಕ್ಷತ ॥7॥

ಎಲೈ ರಾಜೇಂದ್ರನೇ, ನಾನು ಧರ್ಮದ ದೃಷ್ಟಿಯಿಂದ ಚಿಕ್ಕವನಾದ ಅವನಿಗೆ ಅಭಿಷೇಕ ಮಾಡಿದ್ದರೂ ಧರ್ಮಾತ್ಮನಾದ ವಿಚಿತ್ರವೀರ್ಯನು ಎಲ್ಲ ಕಾರ್ಯಗಳಿಗೂ ನನ್ನನ್ನೇ ನೋಡುತ್ತಿದ್ದನು.
ತಸ್ಯ ದಾರಕ್ರಿಯಾಂ ತಾತ ಚಿಕೀರ್ಷುರಹಮುದ್ಯತಃ |
ಅನುರೂಪಾದಿವ ಕುಲಾದ್ ಇತ್ಯೇವ ಚ ಮನೋ ದಧೇ ॥8॥
ಎಲೈ ಪ್ರೀತಿಪಾತ್ರನೇ, ಅವನಿಗೆ ವಿವಾಹವನ್ನು ಮಾಡಲು ಉದ್ಯುಕ್ತನಾದ ನಾನು ಅನುರೂಪವಾದ ಕುಲದಿಂದ ಕನ್ಯೆಯನ್ನು ತರಲು ಮನಸ್ಸು ಮಾಡಿದೆ.
ಅಥಾಶ್ರೌಷಂ ಮಹಾಬಾಹೋ ತಿಸ್ರಃ ಕನ್ಯಾಃ ಸ್ವಯಂವರೇ |
ರೂಪೇಣಾಪ್ರತಿಮಾಃ ಸರ್ವಾಃ ಕಾಶಿರಾಜಸುತಾಸ್ತದಾ ॥9॥
ಅಂಬಾಂ ಚೈವಾಂಬಿಕಾಂ ಚೈವ ತಥೈವಾಂಬಾಲಿಕಾಮಪಿ ॥10॥
ರಾಜಾನಶ್ಚ ಸಮಾಹೂತಾಃ ಪೃಥಿವ್ಯಾಂ ಭರತರ್ಷಭ ॥11॥
ಆಗ ಎಲೈ ಮಹಾಬಾಹುವೇ, ಕಾಶಿರಾಜನ ಮೂರು ಮಕ್ಕಳಾದ ಅಂಬಾ, ಅಂಬಿಕಾ ಮತ್ತು ಅಂಬಾಲಿಕೆಯರು ಸ್ವಯಂವರದಲ್ಲಿದ್ದಾರೆಂದೂ, ಅವರೆಲ್ಲರೂ ರೂಪದಲ್ಲಿ ಅಸದೃಶವಾಗಿರುವರೆಂದೂ ಕೇಳಿದೆನು. ಎಲೈ ಭರತರ್ಷಭನೇ, ಸ್ವಯಂವರಕ್ಕಾಗಿ ಭೂಮಿಯ ಮೇಲಿದ್ದ ರಾಜರೆಲ್ಲರು ಆಹ್ವಾನಿಸಲ್ಪಟ್ಟರು.
ಅಂಬಾ ಜ್ಯೇಷ್ಠಾಽಭವತ್ ತಾಸಾಮಂಬಿಕಾ ತ್ವಥ ಮಧ್ಯಮಾ |
ಅಂಬಾಲಿಕಾ ಚ ರಾಜೇಂದ್ರ ರಾಜಕನ್ಯಾ ಯವೀಯಸೀ ॥12॥
ಎಲೈ ರಾಜೇಂದ್ರನೇ, ಅವರಲ್ಲಿ ಅಂಬೆಯು ದೊಡ್ಡವಳು, ಅಂಬಿಕೆಯು ಮಧ್ಯದವಳು ಮತ್ತು ಅಂಬಾಲಿಕೆಯು ಕೊನೆಯ ರಾಜಕುಮಾರಿ.
ಸೋಽಹಮೇಕರಥೇನೈವ ಗತಃ ಕಾಶೀಪತೇಃ ಪುರೀಮ್ |
ಅಪಶ್ಯಂ ತಾ ಮಹಾಬಾಹೋ ತಿಸ್ರಃ ಕನ್ಯಾಃ ಸ್ವಲಂಕೃತಾಃ |
ರಾಜ್ಞಶ್ಚೈವ ಸಮಾಹೂತಾನ್ ಪಾರ್ಥಿವಾನ್ ಪೃಥಿವೀಪತೇ ॥13॥
ಎಲೈ ಮಹಾಬಾಹುವೇ, ಪೃಥಿವೀಪತಿಯೇ, ನಾನು ಒಂದೇ ರಥವನ್ನು ತೆಗೆದುಕೊಂಡು ಕಾಶೀರಾಜನ ಪಟ್ಟಣಕ್ಕೆ ಹೋಗಿ, ಅಲಂಕೃತರಾಗಿದ್ದ ಆ ಮೂರು ಕನ್ಯೆಯರನ್ನೂ ಸ್ವಯಂವರಕ್ಕಾಗಿ ಭೂಮಿಯಲ್ಲಿದ್ದ ಅನೇಕ ರಾಜರನ್ನೂ ನೋಡಿದೆನು.
ತತೋಽಹಂ ತಾನ್ ನೃಪಾನ್ ಸರ್ವಾನಾಹೂಯ ಸಮರೇ ಸ್ಥಿತಾನ್ |
ರಥಮಾರೋಪಯಾಂಚಕ್ರೇ ಕನ್ಯಾಸ್ತಾ ಭರತರ್ಷಭ ॥15॥
ಎಲೈ ಭರತರ್ಷಭನೇ, ಆಗ ನಾನು ಆ ರಾಜರೆಲ್ಲರನ್ನೂ ಯುದ್ಧಕ್ಕೆ ಆಹ್ವಾನ ಮಾಡಿ ಆ ಕನ್ಯೆಯರನ್ನು ರಥದಲ್ಲಿ ಕುಳ್ಳಿರಿಸಿಕೊಂಡೆ.
ವೀರ್ಯಶುಲ್ಕಾಶ್ಚ ತಾ ಜ್ಞಾತ್ವಾ ಸಮಾರೋಪ್ಯ ರಥಂ ತದಾ |
ಅವೋಚಂ ಪಾರ್ಥಿವಾನ್ ಸರ್ವಾನಹಂ ತತ್ರ ಸಮಾಗತಾನ್ ॥16॥
ಆ ಕನ್ಯೆಯರು ವೀರ್ಯಶುಲ್ಕರೆಂದು ತಿಳಿದು, ನನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಎಲ್ಲಾ ರಾಜರನ್ನೂ ಕುರಿತು ಹೀಗೆ ಹೇಳಿದೆ.
ಭೀಷ್ಮಃ ಶಾಂತನವಃ ಕನ್ಯಾ ಹರತೀತಿ ಪುನಃ ಪುನಃ |
ತೇ ಯತಧ್ವಂ ಪರಂ ಶಕ್ತ್ಯಾ ಸರ್ವೇ ಮೋಕ್ಷಾಯ ಪಾರ್ಥಿವಾಃ ॥17॥
ಪ್ರಸಹ್ಯ ಹಿ ಹರಾಮ್ಯೇಷ ಮಿಷತಾಂ ವೋ ನರರ್ಷಭಾಃ ॥18॥
ಶಂತನು ಪುತ್ರನಾದ ಭೀಷ್ಮನು ಕನ್ಯೆಯರನ್ನು ಹರಣ ಮಾಡುತ್ತಿದ್ದಾನೆ. ರಾಜರಾದ ನೀವೆಲ್ಲರೂ ಕನ್ಯೆಯರನ್ನು ಬಿಡಿಸಿಕೊಳ್ಳಲು ಪ್ರಯತ್ನ ಮಾಡಿ. ಎಲೈ ನರರ್ಷಭರೇ, ನೀವು ನೋಡುತ್ತಿರುವಂತೆಯೇ ನಿಮ್ಮನ್ನು ಅತಿಕ್ರಮಿಸಿ ನಾನು ಕನ್ಯೆಯರನ್ನು ಹರಣ ಮಾಡುತ್ತಿದ್ದೇನೆ.
ಯೋಗೋ ಯೋಗ ಇತಿ ಕ್ರುದ್ಧಾಃ ಸಾರಥೀಂಶ್ಚಾಪ್ಯಚೋದಯತ್ ॥19॥
ಆ ರಾಜರು ಯೋಗ ಯೋಗ (ಸೈನ್ಯವನ್ನು ವ್ಯೂಹ ಮಾಡಿ) ಎಂದು ಹೇಳಿ ಕೋಪದಿಂದ ತಮ್ಮ ಸಾರಥಿಗಳನ್ನು ಪ್ರಚೋದಿಸಿದರು.
ತೇ ರಥೈರ್ಮೇಘಸಂಕಾಶೈರ್ಗಜೈಶ್ಚ ಗಜಯೋಧಿನಃ |
ಉಷ್ಟ್ರೈಶ್ಚಾಶ್ವೈರ್ಮಹೇಷ್ವಾಸಾಃ ಸಮುತ್ಪೇತುರುದಾಯುಧಾಃ ॥20॥
ಅವರು ಮೇಘಗಳನ್ನು ಹೋಲುವ ರಥಗಳಿಂದಲೂ, ಗಜಯೋಧಿಗಳಾದವರು ಗಜಗಳಿಂದಲೂ, ಇನ್ನೂ ಕೆಲವು ಧನುರ್ಧಾರಿಗಳು ಒಂಟೆಗಳ ಮೇಲೆ ಮತ್ತು ಅಶ್ವಗಳ ಮೇಲೆ ಕುಳಿತು, ಕೈಯಲ್ಲಿ ಆಯುಧಗಳನ್ನು ಹಿಡಿದು ನನ್ನ ಮೇಲೆರಗಿದರು.
ತತಸ್ತೇ ಪೃಥಿವೀಪಾಲಾ ಸರ್ವ ಏವ ವಿಶಾಂಪತೇ |
ರಥವ್ರಾತೇನ ಮಹತಾ ಸರ್ವತಃ ಪರ್ಯವಾರಯನ್ ॥21॥
ತಾನಹಂ ಶರವರ್ಷೇಣ ಮಹತಾ ಪ್ರತ್ಯವಾರಯಮ್ ॥22॥
ಎಲೈ ರಾಜನೇ, ಆಗ ಆ ಎಲ್ಲಾ ರಾಜರು ತಮ್ಮ ದೊಡ್ಡದಾದ ರಥಸಮೂಹದಿಂದ ಎಲ್ಲ ಕಡೆಗಳಿಂದಲೂ ನನ್ನನ್ನು ತಡೆದರು. ಅವರನ್ನು ನಾನು ದೊಡ್ಡದಾದ ಬಾಣಗಳ ಮಳೆಯಿಂದ ತಡೆದೆನು.
ಸರ್ವಾನ್ ನೃಪಾಂಶ್ಚಾಪ್ಯಜಯಂ ದೇವರಾಡಿವ ದಾನವಾನ್ |
ತೇಷಾಮಾಪತತಾಂ ಚಿತ್ರಾನ್ ಧ್ವಜಾನ್ ಹೇಮಪರಿಷ್ಕೃತಾನ್ ॥23॥
ಅಪಾತಯಂ ಶರೈರ್ದೀಪ್ತೈಃ ಪ್ರಹಸನ್ ಭರತರ್ಷಭ |
ಏಕೈಕೇನ ಹಿ ಬಾಣೇನ ಭೂಮೌ ಪಾತಿತವಾನಹಮ್ ॥24॥
ದೇವೇಂದ್ರನು ದಾನವರನ್ನು ಗೆಲ್ಲುವಂತೆ ನಾನು ಎಲ್ಲಾ ರಾಜರನ್ನೂ ಗೆದ್ದೆನು. ಎಲೈ ಭರತರ್ಷಭನೇ, ಅವರು ಮೇಲೇರಿ ಬರುತ್ತಿದ್ದಾಗ

ಹೇಮದಿಂದ ಅಲಂಕೃತವಾದ ಅವರ ವಿಚಿತ್ರವಾದ ಧ್ವಜಗಳನ್ನೂ ನಾನು ಪ್ರಕಾಶಮಾನವಾದ ಬಾಣಗಳಿಂದ ಹೊಡೆದು ಉರುಳಿಸಿದೆನು. ಎಲೈ ಭರತರ್ಷಭನೇ, ನಾನು ನಗುತ್ತಲೇ ಶೀಘ್ರಗತಿಯುಳ್ಳ ನನ್ನ ಒಂದೊಂದು ಬಾಣಗಳಿಂದ ಅವುಗಳನ್ನು ಭೂಮಿಯಲ್ಲಿ ಕೆಡವಿದೆನು.
ಹಯಾಂಸ್ತೇಷಾಂ ಗಜಾಂಶ್ಚೈವ ಸಾರಥೀಂಶ್ಚಾಪ್ಯಹಂ ರಣೇ |
ಅಪಾತಯಂ ಶರೈಶ್ಚೈವ ಪ್ರಹಸನ್ ಪುರುಷರ್ಷಭ ||25||
ತೇ ನಿವೃತ್ತಾಶ್ಚ ಭಗ್ನಾಶ್ಚ ದೃಷ್ಟ್ವಾ ತಲ್ಲಾಘವಂ ಚ ಮೇ ||26||
ಎಲೈ ಪುರುಷರ್ಷಭನೇ, ನಾನು ನನ್ನ ಬಾಣಗಳಿಂದ ಅವರ ಅಶ್ವಗಳನ್ನೂ, ಗಜಗಳನ್ನೂ, ಸಾರಥಿಗಳನ್ನೂ ಹೊಡೆದು ಉರುಳಿಸಿದೆನು. ಅವರು ನನ್ನ ಕ್ಷಿಪ್ರತೆಯನ್ನು ನೋಡಿ, ಯುದ್ಧದಲ್ಲಿ ಭಗ್ನರಾಗಿ ಎಲ್ಲರೂ ಹಿಂದಿರುಗಿದರು.
ಪ್ರಣಿಪೇತುಶ್ಚ ಸರ್ವೇ ವೈ ಪ್ರಶಶಂಸುಶ್ಚ ಪಾರ್ಥಿವಾಃ |
ತತ ಆದಾಯ ತಾಃ ಕನ್ಯಾ ನೃಪತೀಂಶ್ಚ ವಿಸೃಜ್ಯ ತಾನ್ ||27||
ತತೋಽಹಂ ಹಸ್ತಿನಪುರಮಾಗಾಂ ಜಿತ್ವಾ ಮಹೀಕ್ಷಿತಃ ||28||
ಆ ರಾಜರೆಲ್ಲರೂ ನನಗೆ ನಮಸ್ಕಾರವನ್ನು ಮಾಡಿ ನನ್ನನ್ನು ಪ್ರಶಂಸಿಸಿದರು. ಅನಂತರ ಆ ಕನ್ಯೆಯರನ್ನು ಕರೆದುಕೊಂಡು ಆ ರಾಜರನ್ನು ಅಲ್ಲಿಯೇ ಬಿಟ್ಟು, ಎಲ್ಲ ರಾಜರನ್ನೂ ಗೆದ್ದು ಹಸ್ತಿನಪುರಕ್ಕೆ ಹಿಂದಿರುಗಿದೆನು.
ತತೋಽಹಂ ತಾಶ್ಚ ಕನ್ಯಾ ವೈ ಭ್ರಾತುರರ್ಥಾಯ ಭಾರತ |
ತಚ್ಚ ಕರ್ಮ ಮಹಾಬಾಹೋ ಸತ್ಯವತ್ಯೈ ನ್ಯವೇದಯಮ್ ||29||
ಎಲೈ ಭಾರತನೇ, ಮಹಾಬಾಹುವೇ, ಅನಂತರ ನಾನು ಆ ಕನ್ಯೆಯರಿಗೂ ಮತ್ತು ತಾಯಿಯಾದ ಸತ್ಯವತಿಗೂ ನಾನು ತಮ್ಮನಾದ ವಿಚಿತ್ರವೀರ್ಯನ ಸಲುವಾಗಿ ಈ ಕಾರ್ಯವನ್ನು ಮಾಡಿದೆನೆಂದು ನಿವೇದಿಸಿದೆನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಸಪ್ತತ್ಯುತ್ತರಶತತಮೋಽಧ್ಯಾಯಃ ||
|| ಅಂಬೋಪಾಖ್ಯಾನಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತೆರಡನೆಯ ಅಧ್ಯಾಯ
ವಿವಾಹ ಸಮಯದಲ್ಲಿ ಅಂಬೆಯಿಂದ ತಾನು ಸಾಲ್ವಪೂರ್ವಳೆಂದು ಕಥನ.
ಭೀಷ್ಮಃ
ತತೋಽಹಂ ಭರತಶ್ರೇಷ್ಠ ಮಾತರಂ ವೀರಮಾತರಮ್ |
ಅಭಿಗಮ್ಯೋಪಸಂಗೃಹ್ಯ ದಾಶೇಯೀಮಿದಮಬ್ರುವಮ್ ||1||
ಭೀಷ್ಮ ಎಲೈ ಭರತಶ್ರೇಷ್ಠನೇ, ಆಗ ನಾನು ವೀರಮಾತೆಯಾದ, ನನ್ನ ತಾಯಿಯಾದ, ದಾಶಕನ್ಯೆಯಾದ ಸತ್ಯವತಿಯ ಬಳಿಗೆ ಆ ಕನ್ಯೆಯರನ್ನು ಕರೆದುಕೊಂಡು ಹೋಗಿ ಈ ಮಾತನ್ನು ಆಡಿದೆನು.
ಇಮಾಃ ಕಾಶೀಪತೇಃ ಕನ್ಯಾ ಮಯಾ ನಿರ್ಜಿತ್ಯ ಪಾರ್ಥಿವಾನ್ |
ವಿಚಿತ್ರವೀರ್ಯಸ್ಯ ಕೃತೇ ವೀರ್ಯಶುಲ್ಕಾ ಉಪಾರ್ಜಿತಾಃ ||2||
ಇವರು ಕಾಶೀರಾಜನ ಮಕ್ಕಳು. ನಾನು ವೀರ್ಯಶುಲ್ಕರಾದ ಇವರನ್ನು, ಎಲ್ಲ ರಾಜರನ್ನೂ ಸೋಲಿಸಿ, ವಿಚಿತ್ರವೀರ್ಯನ ಸಲುವಾಗಿ ಸಂಪಾದಿಸಿಕೊಂಡು ಬಂದಿದ್ದೇನೆ (ಎಂದು ಹೇಳಿದೆನು).
ತತೋ ಮೂರ್ಧನ್ಯುಪಾಘ್ರಾಯ ಪರ್ಯಶ್ರುನಯನಾ ನೃಪ |
ಆಹ ಸತ್ಯವತೀ ಹೃಷ್ಟಾ ದಿಷ್ಟ್ಯಾ ಪುತ್ರ ಜಿತಂ ತ್ವಯಾ ||3||
ಎಲೈ ರಾಜನೇ, ಆಗ ಸತ್ಯವತಿಯು ಕಣ್ಣಿನಲ್ಲಿ ನೀರನ್ನು ತುಂಬಿಕೊಂಡು, ನನ್ನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ, ಸಂತೋಷದಿಂದ ನನ್ನನ್ನು ಕುರಿತು `ಪುತ್ರನೇ, ದೇವರ ದಯೆಯಿಂದ ನೀನು ರಾಜರನ್ನು ಗೆದ್ದಿದ್ದೀಯೆ' ಎಂದು ಹೇಳಿದಳು.
ಸತ್ಯವತ್ಯಾಸ್ತ್ವನುಮತೇ ವಿವಾಹೇ ಸಮುಪಸ್ಥಿತೇ |
ಉವಾಚ ವಾಕ್ಯಂ ಸವ್ರೀಡಾ ಜ್ಯೇಷ್ಠಾ ಕಾಶೀಪತೇಃ ಸುತಾ ||4||
ಸತ್ಯವತಿಯ ಅನುಮತಿಯಿಂದ ವಿವಾಹಕ್ರಿಯೆಯಲ್ಲಿ ಉದ್ಯುಕ್ತನಾಗಿರುವಾಗ ಕಾಶೀರಾಜನ ಹಿರಿಯ ಮಗಳಾದ ಅಂಬೆಯು ನಾಚಿಕೆಯಿಂದ ನನ್ನ ಬಳಿಯಲ್ಲಿ ಹೀಗೆ ಹೇಳಿದಳು.
ಭೀಷ್ಮ ತ್ವಮಸಿ ಧರ್ಮಜ್ಞಃ ಸರ್ವಶಾಸ್ತ್ರವಿಶಾರದಃ |
ಶ್ರುತ್ವಾ ಚ ವಚನಂ ಮಹ್ಯಂ ಧರ್ಮ್ಯಂ ಕರ್ತುಮಿಹಾರ್ಹಸಿ ||5||
ಎಲೈ ಭೀಷ್ಮನೇ, ನೀನು ಧರ್ಮವನ್ನು ತಿಳಿದವನೂ ಮತ್ತು ಎಲ್ಲ ಶಾಸ್ತ್ರಗಳಲ್ಲಿ ವಿಶಾರದನೂ ಆಗಿದ್ದೀಯೆ. ನನ್ನ ಮಾತನ್ನು ಕೇಳಿ ಅನಂತರ ಧರ್ಮಯುಕ್ತವಾದುದನ್ನು ಆಚರಿಸು.
ಮಯಾ ಸಾಲ್ವಪತಿಃ ಪೂರ್ವಂ ಮನಸಾಽಭಿವೃತೋ ವರಃ |
ತೇನ ಚಾಪಿ ವೃತಾ ಪೂರ್ವಂ ರಹಸ್ಯವಿದಿತೇ ಪಿತುಃ ||6||
ನಾನು ಸಾಲ್ವರಾಜನನ್ನು ಮೊದಲೇ ಮನಸ್ಸಿನಿಂದ ಪತಿಯಾಗಿ ವರಿಸಿದ್ದೇನೆ. ಅವನೂ ಸಹ ನನ್ನನ್ನು ಪತ್ನಿಯಾಗಿ ವರಿಸಿದ್ದಾನೆ. ಇದು ನನ್ನ ತಂದೆಗೆ ತಿಳಿದಿಲ್ಲ.

ಕಥಂ ಮಾಮನ್ಯಕಾಮಾಂ ತ್ವಂ ರಾಜಧರ್ಮಮತೀತ್ಯ ವೈ |
ವಾಸಯೇಥಾ ಗೃಹೇ ಭೀಷ್ಮ ಕೌರವಃ ಸನ್ ವಿಶೇಷತಃ ॥7॥
ಎಲೈ ಭೀಷ್ಮನೇ, ವಿಶೇಷವಾಗಿ ಕೌರವನಾದ ನೀನು ರಾಜಧರ್ಮವನ್ನು ಮೀರಿ, ಇನ್ನೊಬ್ಬನಲ್ಲಿ ಪ್ರೀತಿ ಇರುವ ನನ್ನನ್ನು ಹೇಗೆ ನಿನ್ನ ಮನೆಯಲ್ಲಿ ಇರಿಸಿಕೊಳ್ಳುತ್ತೀಯೆ?
ಏತದ್ ಬುದ್ಧ್ಯಾ ವಿನಿಶ್ಚಿತ್ಯ ಮನಸಾ ಚ ನರರ್ಷಭ |
ಯತ್ ಕ್ಷಮಂ ತೇ ಮಹಾಬಾಹೋ ತದಿಹಾರಬ್ಧುಮರ್ಹಸಿ ॥8॥
ಎಲೈ ನರಶ್ರೇಷ್ಠನೇ, ಮಹಾಬಾಹುವೇ, ಇದನ್ನು ನಿನ್ನ ಬುದ್ಧಿಯಿಂದಲೂ ಮತ್ತು ಮನಸ್ಸಿನಿಂದಲೂ ವಿಚಾರ ಮಾಡಿ ಯಾವುದು ಸೂಕ್ತವೋ ಅದರಂತೆ ನಡೆದುಕೊಳ್ಳುವವನಾಗು.
ಸ ಮಾಂ ಪ್ರತೀಕ್ಷತೇ ವ್ಯೋಢುಂ ಸಾಲ್ವರಾಜೋ ವಿಶಾಂಪತೇ |
ತಸ್ಮಾನ್ಮಾಂ ತ್ವಂ ಕುರುಶ್ರೇಷ್ಠ ಸಮನುಜ್ಞಾತುಮರ್ಹಸಿ ॥9॥
ಎಲೈ ರಾಜನೇ, ಸಾಲ್ವರಾಜನು ನನ್ನನ್ನು ವಿವಾಹ ಮಾಡಿಕೊಳ್ಳಲು ನಿರೀಕ್ಷಿಸುತ್ತಿದ್ದಾನೆ. ಆದ್ದರಿಂದ ಎಲೈ ಕುರುಶ್ರೇಷ್ಠನೇ, ನೀನು ನನಗೆ ಅಪ್ಪಣೆಯನ್ನು ಕೊಡಬೇಕು.
ಕೃಪಾಂ ಕುರು ಮಹಾಬಾಹೋ ಮಯಿ ಧರ್ಮಭೃತಾಂ ವರ |
ತ್ವಂ ಹಿ ಸತ್ಯವ್ರತೋ ವೀರಃ ಪೃಥಿವ್ಯಾಮಿತಿ ನಃ ಶ್ರುತಮ್ ॥10॥
ಎಲೈ ಮಹಾಬಾಹುವೇ, ಎಲೈ ಧರ್ಮಜ್ಞರಲ್ಲಿ ಶ್ರೇಷ್ಠನೇ, ನೀನು ಭೂಮಿಯಲ್ಲಿ ಸತ್ಯವ್ರತವುಳ್ಳವನು ಮತ್ತು ವೀರನು ಎಂದು ಕೇಳಿದ್ದೇವೆ. ನನ್ನ ಮೇಲೆ ದಯೆಯನ್ನು ತೋರಿಸು (ಎಂದು ಹೇಳಿದಳು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ಮೂರನೆಯ ಅಧ್ಯಾಯ
ಸಾಲ್ವನಿಂದ ತನ್ನ ಬಳಿಗೆ ಬಂದ ಅಂಬೆಯ ಪರಿತ್ಯಾಗ.
ಭೀಷ್ಮಃ
ತತೋಽಹಂ ಸಮನುಜ್ಞಾಪ್ಯ ಕಾಳೀಂ ಸತ್ಯವತೀಂ ತದಾ |
ಮಂತ್ರಿಣಶ್ಚರ್ತ್ವಿಜಶ್ಚೈವ ತಥೈವ ಚ ಪುರೋಹಿತಾನ್ ॥1॥
ಸಮನುಜ್ಞಾಸಿಷಂ ಕನ್ಯಾಮಂಬಾಂ ಜ್ಯೇಷ್ಠಾಂ ನರಾಧಿಪ ॥2॥
ಭೀಷ್ಮ ಆಗ ನಾನು ತಾಯಿಯಾದ ಸತ್ಯವತಿಯ, ಮಂತ್ರಿಗಳ, ಪುರೋಹಿತರ ಮತ್ತು ಋತ್ವಿಜರ ಅನುಮತಿಯನ್ನು ಪಡೆದು ಎಲೈ ನರಶ್ರೇಷ್ಠನೇ, ಹಿರಿಯಳಾದ ಅಂಬೆಗೆ ಅನುಮತಿಯನ್ನು ನೀಡಿದೆ.
ಅನುಜ್ಞಾತಾ ಯಯೌ ಸಾ ತು ಕನ್ಯಾ ಸಾಲ್ವಪತೇಃ ಪುರಮ್ |
ವೃದ್ಧೈರ್ದ್ವಿಜಾತಿಭಿರ್ಗುಪ್ತಾ ಧಾತ್ರ್ಯಾ ಚಾನುಗತಾ ತದಾ ॥3॥
ನನ್ನಿಂದ ಅನುಮತಿಯನ್ನು ಪಡೆದು, ವೃದ್ಧರಾದ ಬ್ರಾಹ್ಮಣರಿಂದಲೂ, ದಾದಿಯಿಂದಲೂ ಗುಪ್ತಳಾಗಿ ಮತ್ತು ಹಿಂಬಾಲಿಸಲ್ಪಟ್ಟು ಸಾಲ್ವಪತಿಯ ಪಟ್ಟಣಕ್ಕೆ ಹೋದಳು.
ಅತೀತ್ಯ ಚ ತಮಧ್ವಾನಮಾಸಸಾದ ನರಾಧಿಪಮ್ |
ಸಾ ತಮಾಸಾದ್ಯ ರಾಜಾನಂ ಸಾಲ್ವಂ ವಚನಮಬ್ರವೀತ್ ॥4॥
ಅವಳು ಮಾರ್ಗವನ್ನು ದಾಟಿ ಸಾಲ್ವರಾಜನ ಬಳಿಗೆ ಹೋಗಿ, ಅವನನ್ನು ಕುರಿತು ಹೀಗೆ ಹೇಳಿದಳು.
ಆಗತಾಽಹಂ ಮಹಾಬಾಹೋ ತ್ವಾಮುದ್ದಿಶ್ಯ ಮಹಾಮತೇ |
ಅಭಿನಂದಸ್ವ ಮಾಂ ರಾಜನ್ ಸದಾ ಪ್ರಿಯಹಿತೇ ರತಾಮ್ ॥5॥
ತ್ವಂ ಹಿ ಮೇ ಮನಸಾ ಧ್ಯಾತಸ್ತ್ವಯಾ ಚಾಪ್ಯುಪಮಂತ್ರಿತಾ ॥6॥
`ಎಲೈ ಮಹಾಬಾಹುವೇ, ಮಹಾಮತಿಯೇ, ನಾನು ನಿನ್ನ ಬಳಿಗೆ ಬಂದಿದ್ದೇನೆ. ಎಲೈ ರಾಜನೇ, ಸದಾ ನಿನ್ನ ಪ್ರಿಯದಲ್ಲಿ ಮತ್ತು ಹಿತದಲ್ಲಿ ರತಳಾದ ನನ್ನನ್ನು ನೋಡಿ ಸಂತೋಷವನ್ನು ಹೊಂದು. ನಾನು ಮನಸ್ಸಿನಲ್ಲಿಯೇ ನಿನ್ನನ್ನು ಪತಿಯಾಗಿ ಸಂಕಲ್ಪಿಸಿದ್ದೇನೆ. ನೀನೂ ಸಹ ಹಾಗೆಯೇ ಮಾಡಿದ್ದೀಯೆ' (ಎಂದು ಹೇಳಿದಳು).
ತಮಬ್ರವೀತ್ ಸಾಲ್ವಪತಿಃ ಸ್ಮಯನ್ನಿವ ವಿಶಾಂಪತೇ ॥7॥
ತ್ವಯಾಽನ್ಯಪೂರ್ವಯಾ ನಾಹಂ ಭಾರ್ಯಾರ್ಥೀ ವರವರ್ಣಿನಿ ॥8॥
ಎಲೈ ರಾಜನೇ, ಆಗ ಸಾಲ್ವಪತಿಯು ನಗುತ್ತಾ, ಅವಳನ್ನು ಕುರಿತು ಹೇಳಿದನು `ಎಲೌ ಸುಂದರಿಯೇ, ಇನ್ನೊಬ್ಬನ ಜೊತೆಯಲ್ಲಿ ಸಂಬಂಧವುಳ್ಳ ನಿನ್ನನ್ನು ನಾನು ಪತ್ನಿಯಾಗಿ ಅಪೇಕ್ಷಿಸುವುದಿಲ್ಲ'.
ಗಚ್ಛ ಭದ್ರೇ ಪುನಸ್ತತ್ರ ಸಕಾಶಂ ಭೀಷ್ಮಕಸ್ಯ ವೈ |
ನಾಹಮಿಚ್ಛಾಮಿ ಭೀಷ್ಮೇಣ ಗೃಹೀತಾಂ ತ್ವಾಂ ಪ್ರಸಹ್ಯ ವೈ ॥9॥
ಮಂಗಳಸ್ವರೂಪಳೇ, ಪುನಃ ಅಲ್ಪನಾದ ಆ ಭೀಷ್ಮನ ಬಳಿಗೇ ಹೋಗು. ಭೀಷ್ಮನು ಬಲಾತ್ಕಾರದಿಂದ ಕರೆದುಕೊಂಡು ಹೋದ

ನಿನ್ನನ್ನು ನಾನು ಬಯಸುವುದಿಲ್ಲ.
ತ್ವಂ ಹಿ ಭೀಷ್ಮೇಣ ನಿರ್ಜಿತ್ಯ ನೀತಾ ಪ್ರೀತಿಮತೀ ತದಾ |
ಪರಾಮೃಷ್ಟಾ ಮಹಾಯುದ್ಧೇ ನಿರ್ಜಿತ್ಯ ಪೃಥಿವೀಪತೀನ್ ||10||
ನಾಹಂ ತ್ವಯ್ಯನ್ಯಪೂರ್ವಾಯಾಂ ಭಾರ್ಯಾರ್ಥೀ ವರವರ್ಣಿನಿ ||11||
ಎಲೌ ಸುಂದರಿಯೇ, ಭೀಷ್ಮನಿಂದ ನಿರ್ಜಿತಳಾಗಿ ನೀನು ಸಂತೋಷದಿಂದ ಅವನ ಜೊತೆಯಲ್ಲಿ ಹೋದೆ. ಮಹಾಯುದ್ಧದಲ್ಲಿ ರಾಜರನ್ನು ಗೆದ್ದು, ಅವನು ನಿನ್ನನ್ನು ಸ್ಪರ್ಶಿಸಿದ್ದಾನೆ. ಆದ್ದರಿಂದ ಇನ್ನೊಬ್ಬನ ಸಂಬಂಧವನ್ನು ಹೊಂದಿದ ನಿನ್ನನ್ನು ನಾನು ಪತಿನಯಾಗಿ ಬಯಸುವುದಿಲ್ಲ.
ಕಥಮಸ್ಮದ್ವಿಧೋ ರಾಜಾ ಪರಪೂರ್ವಾಂ ಪ್ರವೇಶಯೇತ್ |
ನಾರೀಂ ವಿದಿತವಿಜ್ಞಾನಃ ಪರೇಷಾಂ ಧರ್ಮಮಾದಿಶನ್ ||12||
ಯಥೇಷ್ಟಂ ಗಮ್ಯತಾಂ ಭದ್ರೇ ಮಾ ತ್ವಾಂ ಕಾಲೋಽತ್ಯಗಾದಯಮ್ ||
ಇನ್ನೊಬ್ಬರಿಗೆ ಧರ್ಮವನ್ನು ಉಪದೇಶ ಮಾಡುವ, ಎಲ್ಲದರ ಜ್ಞಾನವುಳ್ಳ ನನ್ನಂತಹ ರಾಜನು ಹೇಗೆ ಇನ್ನೊಬ್ಬನ ಸಂಬಂಧವನ್ನು ಹೊಂದಿದ ವನಿತೆಯನ್ನು ತನ್ನ ಮನೆಗೆ ಪ್ರವೇಶಿಸುವಂತೆ ಮಾಡಿಯಾನು? ಆದ್ದರಿಂದ ಮಂಗಳಸ್ವರೂಪಳೇ, ನಿನ್ನ ಇಚ್ಛೆಯಂತೆ ಹೊರಟು ಹೋಗು, ನಿನಗೆ ಈ ಕಾಲವು ಮೀರಿ ಹೋಗುವುದು ಬೇಡ (ಎಂದು ಹೇಳಿದನು).
ಅಂಬಾ ತಮಬ್ರವೀದ್ ರಾಜನ್ ಅನಂಗಶರಪೀಡಿತಾ ||14||
ನೈವಂ ವದ ಮಹೀಪಾಲ ನೈತದೇವಂ ಕಥಂಚನ ||15||
ನಾಸ್ಮಿ ಪ್ರೀತಿಮತೀ ನೀತಾ ಭೀಷ್ಮೇಣಾಮಿತ್ರಕರ್ಶನ |
ಬಲಾನ್ನೀತಾಽಸ್ಮಿ ರುದತೀ ವಿದ್ರಾವ್ಯ ಪೃಥಿವೀಪತೀನ್ ||16||
ಎಲೈ ರಾಜನೇ, ಕಾಮಪೀಡಿತಳಾದ ಅಂಬೆಯು ಅವನನ್ನು ಕುರಿತು `ಮಹಾರಾಜನೇ, ಹೀಗೆ ಮಾತನಾಡಬೇಡ. ನೀನು ಹೇಳುವಂತೆ ಏನೂ ನಡೆದಿಲ್ಲ. ಎಲೈ ಶತ್ರುಕರ್ಶನನೇ, ನಾನು ಭೀಷ್ಮರ ಜೊತೆಯಲ್ಲಿ ಸಂತೋಷದಿಂದ ಹೋಗಲಿಲ್ಲ. ಭೀಷ್ಮನು ರಾಜರರೆಲ್ಲರನ್ನು ತನ್ನ ಸಾಮರ್ಥ್ಯದಿಂದ ಓಡಿಸಿ, ಅಳುತ್ತಿದ್ದ ನನ್ನನ್ನು ಬಲಾತ್ಕಾರದಿಂದ ಕರೆದುಕೊಂಡು ಹೋದನು.
ಭಜಸ್ವ ಮಾಂ ಸಾಲ್ವಪತೇ ಭಕ್ತಾಂ ಬಾಲಾಮನಾಗಸೀಮ್ |
ಭಕ್ತಾನಾಂ ಹಿ ಪರಿತ್ಯಾಗೋ ನ ಧರ್ಮೇಷು ಪ್ರಶಸ್ಯತೇ ||17||
ಬಾಲೆಯೂ, ನಿರಪರಾಧಿನಿಯೂ ಮತ್ತು ನಿನ್ನಲ್ಲಿ ಪ್ರೀತಿಯುಳ್ಳವಳೂ ಆದ ನನ್ನನ್ನು ಸ್ವೀಕರಿಸು. ಅನುರಾಗವುಳ್ಳವರ ಪರಿತ್ಯಾಗವು ಧರ್ಮಶಾಸ್ತ್ರದಲ್ಲಿ ಪ್ರಶಂಸಿಸಲ್ಪಡುವುದಿಲ್ಲ.
ಸಾಽಹಮಾಮಂತ್ರ್ಯ ಗಾಂಗೇಯಂ ಸಮರೇಷ್ವನಿವರ್ತಿನಮ್ |
ಅನುಜ್ಞಾತಾ ಚ ತೇನೈವ ತತೋಽಹಂ ಭೃಶಮಾಗತಾ ||18||
ಅಂತಹ ನಾನು ಯುದ್ಧದಲ್ಲಿ ಹಿಮ್ಮೆಟ್ಟದಿರುವ ಭೀಷ್ಮರ ಅನುಮತಿಯನ್ನು ಕೇಳಿ, ಅವರಿಂದ ಅನುಮತಿಯನ್ನು ಪಡೆದು ಶೀಘ್ರವಾಗಿ ನಿನ್ನ ಬಳಿಗೆ ಬಂದಿದ್ದೇನೆ.
ನ ಸ ಭೀಷ್ಮೋ ಮಹಾಬಾಹುರ್ಮಾಮಿಚ್ಛತಿ ವಿಶಾಂಪತೇ |
ಭ್ರಾತೃಹೇತೋಃ ಸಮಾರಂಭೋ ಭೀಷ್ಮಸ್ಯೇತಿ ಶ್ರುತಂ ಮಯಾ ||19||
ಎಲೈ ರಾಜನೇ, ಮಹಾಬಾಹುವಾದ ಭೀಷ್ಮನು ನನ್ನನ್ನು ಬಯಸುವುದಿಲ್ಲ. ನನ್ನ ತಮ್ಮನ ಸಲುವಾಗಿ ನನ್ನ ಈ ಪ್ರಯತ್ನ ಎಂಬ ಭೀಷ್ಮರ ಮಾತನ್ನು ನಾನು ಕೇಳಿದ್ದೇನೆ.
ಭಗಿನ್ಯೌ ಮಮ ಯೇ ನೀತೇ ಅಂಬಿಕಾಂಬಾಲಿಕೇ ನೃಪ |
ಪ್ರಾದಾದ್ ವಿಚಿತ್ರವೀರ್ಯಾಯ ಗಾಂಗೇಯೋ ಹಿ ಯವೀಯಸೇ ||
ಎಲೈ ರಾಜನೇ, ಭೀಷ್ಮನು ತಾನು ಕರೆದುಕೊಂಡು ಹೋಗಿದ್ದ ನನ್ನ ತಂಗಿಯರಾದ ಅಂಬಿಕೆ ಮತ್ತು ಅಂಬಾಲಿಕೆಯರನ್ನು ತಮ್ಮನಾದ ವಿಚಿತ್ರವೀರ್ಯನಿಗೆ ಕೊಟ್ಟು ವಿವಾಹ ಮಾಡಿದ್ದಾನೆ.
ಯಥಾ ಸಾಲ್ವಪತೇ ನಾನ್ಯಂ ನರಂ ಯಾಮಿ ಕಥಂಚನ |
ತ್ವಾಮೃತೇ ಪುರುಷವ್ಯಾಘ್ರಂ ತಥಾ ಮೂರ್ಧಾನಮಾಲಭೇ ||21||
ಸಾಲ್ವಪತಿಯೇ, ಪುರುಷವ್ಯಾಘ್ರನಾದ ನಿನ್ನನ್ನು ಬಿಟ್ಟು ನಾನು ಇನ್ನೊಬ್ಬರನ್ನು ಯೋಚಿಸಿಲ್ಲ ಎಂದು ನನ್ನ ಶಿರಸ್ಸಿನ ಮೇಲೆ ಪ್ರಮಾಣ ಮಾಡಿ ಹೇಳುತ್ತಿದ್ದೇನೆ.
ನ ಚಾನ್ಯಪೂರ್ವಾ ರಾಜೇಂದ್ರ ತ್ವಾಮಹಂ ಸಮುಪಸ್ಥಿತಾ |
ಸಾ ತ್ವಾ ಬ್ರವೀಮಿ ಸಾಲ್ವೈತತ್ ಸತ್ಯೇನಾತ್ಮಾನಮಾಲಭೇ ||22||
ಎಲೈ ರಾಜೇಂದ್ರನೇ, ನಾನು ಇನ್ನೊಬ್ಬರ ಸಂಬಂಧವನ್ನು ಮಾಡಿ ನಿನ್ನ ಬಳಿಗೆ ಬರುತ್ತಿಲ್ಲ. ಸಾಲ್ವನೇ, ನನ್ನ ಮೇಲೆ ಆಣೆಯನ್ನು ಮಾಡಿ, ನಾನು ಈ ಮಾತನ್ನು ಹೇಳುತ್ತಿದ್ದೇನೆ.
ಭಜಸ್ವ ಮಾಂ ವಿಶಾಲಾಕ್ಷ ಸ್ವಯಂ ಕನ್ಯಾಮುಪಸ್ಥಿತಾಮ್ |
ಅನನ್ಯಪೂರ್ವಾಂ ರಾಜೇಂದ್ರ ತ್ವತ್ಪ್ರಸಾದಾಭಿಕಾಂಕ್ಷಿಣೀಮ್ ||23||
ಎಲೈ ವಿಶಾಲಾಕ್ಷನೇ, ರಾಜೇಂದ್ರನೇ, ಇನ್ನೊಬ್ಬರ ಸಂಬಂಧವಿಲ್ಲದ, ನಿನ್ನ ಅನುಗ್ರಹವನ್ನು ಬಯಸುವ, ತಾನಾಗಿಯೇ ಬಂದ ಕನ್ಯೆಯಾದ ನನ್ನನ್ನು ಸ್ವೀಕರಿಸು' (ಎಂದು ಹೇಳಿದಳು).
ತಾಮೇವಂ ಭಾಷಮಾಣಾಂ ತು ಸಾಲ್ವಃ ಕಾಶೀಪತೇಃ ಸುತಾಮ್ |
ಅತ್ಯಜದ್ ಭರತಶ್ರೇಷ್ಠ ಜೀರ್ಣಾಂ ತ್ವಚಮಿವೋರಗಃ ||24||

ಎಲೈ ಭರತಶ್ರೇಷ್ಠನೇ, ಕಾಶೀಪತಿಯ ಮಗಳಾದ ಅವಳು ಹೀಗೆ ಹೇಳುತ್ತಿದ್ದರೂ ಸಾಲ್ವನು ಸರ್ಪವು ಜೀರ್ಣವಾದ ಚರ್ಮವನ್ನು ಬಿಡುವಂತೆ ಅವಳನ್ನು ಪರಿತ್ಯಜಿಸಿದನು.
ಏವಂ ಬಹುವಿಧೈರ್ವಾಕ್ಯೈರ್ಯಾಚ್ಯಮಾನಸ್ತಯಾऽನಘ |
ನಾಶ್ರದ್ದಧತ್ ಸಾಲ್ವಪತಿಃ ಕನ್ಯಾಯಾಂ ಭರತರ್ಷಭ ॥25॥
ಎಲೈ ಭರತರ್ಷಭನೇ, ಅನಘನೇ, ಹೀಗೆ ಬಹುವಿಧವಾದ ಮಾತುಗಳಿಂದ ಆ ಕನ್ಯೆಯು ಅವನನ್ನು ಬೇಡುತ್ತಿದ್ದರೂ ಸಾಲ್ವನು ಅವಳ ಮಾತುಗಳನ್ನು ನಂಬಲಿಲ್ಲ.
ತತಃ ಸಾ ಮನ್ಯುನಾऽऽವಿಷ್ಟಾ ಜ್ಯೇಷ್ಠಾ ಕಾಶೀಪತೇಃ ಸುತಾ |
ಅಬ್ರವೀತ್ ಸಾಶ್ರುನಯನಾ ಬಾಷ್ಪವಿಹ್ವಲಯಾ ಗಿರಾ ॥26॥
ತ್ವಯಾ ತ್ಯಕ್ತಾ ಗಮಿಷ್ಯಾಮಿ ಯತ್ರ ತತ್ರ ವಿಶಾಂಪತೇ |
ತತ್ರ ಮೇ ಸಂತು ಗತಯಃ ಸಂತಃ ಸತ್ಯಂ ಯಥಾ ಧ್ರುವಮ್ ॥27॥
ಆಗ ಕಾಶಿಪತಿಯ ಜ್ಯೇಷ್ಠ ಪುತ್ರಿಯಾದ ಅವಳು ಕೋಪದಿಂದ ಕೂಡಿದವಳಾಗಿ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ಬಾಷ್ಪದಿಂದ ಗದ್ಗದವಾದ ಕಂಠದಿಂದ `ಎಲೈ ರಾಜನೇ, ನಿನ್ನಿಂದ ತ್ಯಕ್ತಳಾಗಿ ನಾನು ಎಲ್ಲಿಗಾದರೂ ಹೋಗುವೆನು. ಅಲ್ಲಿಯೇ ನನಗೆ ಸಜ್ಜನರು ಹೇಳಿದಂತೆ ಶಾಶ್ವತವಾದ ಸತ್ಯದಂತೆ ಗತಿಯಾಗಲಿ' ಎಂದು ಹೇಳಿದಳು.
ಏವಂ ತಾಂ ಭಾಷಮಾಣಾಂ ತು ನೃಶಂಸಃ ಸಾಲ್ವರಾಟ್ ತದಾ |
ಪರಿತತ್ಯಾಜ ಕೌರವ್ಯ ಕರುಣಂ ಪರಿದೇವಿನೀಮ್ ॥28॥
ಎಲೈ ಕೌರವ್ಯನೇ, ಹೀಗೆ ಕರುಣಾಜನಕವಾಗಿ ಗೋಳಾಡುತ್ತಾ ಮಾತನಾಡುತ್ತಿದ್ದ ಅವಳನ್ನು ಕ್ರೂರಿಯಾದ ಸಾಲ್ವರಾಜನು ಆಗ ಪರಿತ್ಯಜಿಸಿದನು.
ಗಚ್ಛ ಗಚ್ಛೇತಿ ತಾಂ ಸಾಲ್ವಃ ಪುನಃ ಪುನರಭಾಷತ |
ಬಿಭೇಮಿ ಭೀಷ್ಮಾತ್ ಸುಶ್ರೋಣಿ ತ್ವಂ ಚ ಭೀಷ್ಮಪರಿಗ್ರಹಃ ॥29॥
ಎಲೌ ಸುಂದರಿಯೇ, ನೀನು ಭೀಷ್ಮನ ಪತ್ನಿ. ನಾನು ಭೀಷ್ಮರಿಗೆ ಹೆದರುತ್ತೇನೆ. ಆದ್ದರಿಂದ ಹೋಗು, ಹೋಗು ಎಂದು ಪುನಃ ಪುನಃ ಸಾಲ್ವನು ಹೇಳಿದನು.
ಏವಮುಕ್ತಾ ತು ಸಾ ತೇನ ಸಾಲ್ವೇನಾದೀರ್ಘದರ್ಶಿನಾ |
ನಿಶ್ಚಕ್ರಾಮ ಪುರಾದ್ ದೀನಾ ರುದತೀ ಕುರರೀ ಯಥಾ ॥30॥
ದೀರ್ಘದರ್ಶಿಯಲ್ಲದ ಸಾಲ್ವನಿಂದ ಹೀಗೆ ಹೇಳಲ್ಪಟ್ಟ ಅವಳು ಹೆಣ್ಣು ಜಿಂಕೆಯಂತೆ ಅಳುತ್ತಾ, ದೈನ್ಯದಿಂದ ಕೂಡಿದವಳಾಗಿ ನಗರದಿಂದ ಹೊರಬಂದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿಸಪ್ತತ್ಯುತ್ತರಶತತಮೋऽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ತೃತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ನಾಲ್ಕನೆಯ ಅಧ್ಯಾಯ
ಭೀಷ್ಮರಿಗೆ ಪ್ರತೀಕಾರವನ್ನು ಮಾಡಲು ಅಂಬೆಯಿಂದ ತಾಪಸಾಶ್ರಮಗಳಿಗೆ ಹೋಗಿ ತನ್ನ ವೃತ್ತಾಂತದ ಕಥನ.
ಭೀಷ್ಮಃ
ಸಾ ನಿಷ್ಕ್ರಮಂತೀ ನಗರಾತ್ ಚಿಂತಯಾಮಾಸ ಭಾರತ ॥1॥
ಪೃಥಿವ್ಯಾಂ ನಾಸ್ತಿ ಯುವತಿರ್ವಿಷಮಸ್ಥತರಾ ಮಯಾ |
ಬಂಧುಭಿರ್ವಿಪ್ರಹೀಣಾऽಸ್ಮಿ ಸಾಲ್ವೇನ ಚ ನಿರಾಕೃತಾ ॥2॥
ಭೀಷ್ಮ ಎಲೈ ಭಾರತನೇ, ಅವಳು ನಗರದಿಂದ ಹೊರಬರುತ್ತಾ, ಭೂಮಿಯಲ್ಲಿ ನನ್ನಷ್ಟು ಕಷ್ಟಕ್ಕೆ ಸಿಲುಕಿದ ಯುವತಿಯು ಯಾವಳೂ ಇಲ್ಲ. ನಾನು ಬಂಧುಗಳಿಂದಲೂ ರಹಿತಳಾಗಿದ್ದೇನೆ ಮತ್ತು ಸಾಲ್ವನಿಂದಲೂ ನಿರಾಕರಿಸಲ್ಪಟ್ಟಿದ್ದೇನೆ ಎಂದು ಚಿಂತಿಸಿದಳು.
ನ ಚ ಶಕ್ಯಂ ಪುನರ್ಗಂತುಂ ಮಯಾ ವಾರಣಸಾಹ್ವಯೇ |
ಅನುಜ್ಞಾತಾ ತು ಭೀಷ್ಮೇಣ ಸಾಲ್ವಮುದ್ದಿಶ್ಯ ಕಾರಣಮ್ ॥3॥
ಸಾಲ್ವನ ಹೆಸರನ್ನು ಹೇಳಿ, ಭೀಷ್ಮರಿಂದ ಅನುಮತಿಯನ್ನು ಪಡೆದು ಬಂದ ನಾನು ಇನ್ನೊಮ್ಮೆ ಹಸ್ತಿನಪುರಕ್ಕೆ ಹೋಗಲು ಸಾಧ್ಯವಿಲ್ಲ.
ಕಿಂ ನು ಗರ್ಹಾಮ್ಯಥಾತ್ಮಾನಮಥ ಭೀಷ್ಮಂ ದುರಾಸದಮ್ |
ಆಹೋಸ್ವಿತ್ ಪಿತರಂ ಮೂಢಂ ಯೋ ಮೇऽಕಾರ್ಷೀತ್ ಸ್ವಯಂವರಮ್ ॥
ನಾನು ನನ್ನನ್ನೇ ನಿಂದಿಸಿಕೊಳ್ಳಲೋ ಅಥವಾ ದುರಾತ್ಮನಾದ ಭೀಷ್ಮನನ್ನು ನಿಂದಿಸಲೋ ಅಥವಾ ಮೂಢನಾಗಿ ನನ್ನ ಸ್ವಯಂವರವನ್ನು ಏರ್ಪಡಿಸಿದ ನನ್ನ ತಂದೆಯನ್ನು ನಿಂದಿಸಲೋ?
ಮಮಾಯಂ ಸ್ವಕೃತೋ ದೋಷೋ ಯಾऽಹಂ ಭೀಷ್ಮರಥಾತ್ ತದಾ |
ಪ್ರವೃತ್ತೇ ವೈಶಸೇ ಯುದ್ಧೇ ಸಾಲ್ವಾರ್ಥಂ ನಾಪತಂ ಪುರಾ ॥5॥
ತಸ್ಯೇಯಂ ಫಲನಿರ್ವೃತ್ತಿರ್ಯದಾಪನ್ನಾऽಸ್ಮಿ ಮೂಢವತ್ ॥6॥

ನಾನು ಆ ಹಿಂಸಾತ್ಮಕ ಯುದ್ಧವು ನಡೆಯುತ್ತಿದ್ದಾಗ ಸಾಲ್ವನಿಗೋಸ್ಕರವಾಗಿ ಭೀಷ್ಮರ ರಥದಿಂದ ಇಳಿದು ಬರದಿದ್ದುದು ನನ್ನ ದೋಷ. ಅದರ ಈ ಫಲವನ್ನು ಮೂಢಳಂತೆ ಈಗ ನಾನು ಅನುಭವಿಸುತ್ತಿದ್ದೇನೆ.
ಧಿಗ್ ಭೀಷ್ಮಂ ಧಿಕ್ ಚ ಮೇ ಮಂದಂ ಪಿತರಂ ಮೂಢಚೇತಸಮ್ ।
ಯೇನಾಹಂ ವೀರ್ಯಶುಲ್ಕೇತಿ ಪಣ್ಯಸ್ತ್ರೀವತ್ ಪ್ರವೇಶಿತಾ ॥8॥
ಭೀಷ್ಮನಿಗೆ ಧಿಕ್ಕಾರವಿರಲಿ. ಏನೂ ತಿಳಿಯದ ನನ್ನ ತಂದೆಗೆ ಧಿಕ್ಕಾರವಿರಲಿ. ಏಕೆಂದರೆ ನನ್ನನ್ನು ವೀರ್ಯಶುಲ್ಕಳೆಂದು ಹೇಳಿ ಮಾರಾಟಕ್ಕಿದ್ದ ವನಿತೆಯಂತೆ ಸ್ವಯಂವರ ಸಭೆಗೆ ಪ್ರವೇಶ ಮಾಡುವಂತೆ ಮಾಡಿದನು.
ಧಿಙ್ ಮಾಂ ಧಿಕ್ ಸಾಲ್ವರಾಜಾನಂ ಧಿಗ್ ಧಾತಾರಮಥಾಪಿ ವಾ ।
ಯೇಷಾಂ ದುರ್ನೀತಭಾವೇನ ಪ್ರಾಪ್ತಾಽಸ್ಮ್ಯಾಪದಮುತ್ತಮಾಮ್ ॥9॥
ನನಗೇ ಧಿಕ್ಕಾರವಿರಲಿ. ಸಾಲ್ವರಾಜನಿಗೆ ಧಿಕ್ಕಾರವಿರಲಿ ಅಥವಾ ಇಂತಹ ದುರ್ನೀತಿಯಿಂದ ಇಂತಹ ಘೋರವಾದ ಆಪತ್ತನ್ನು ತಂದೊಡ್ಡಿದ ಆ ಬ್ರಹ್ಮನಿಗೇ ಧಿಕ್ಕಾರವಿರಲಿ.
ಸರ್ವಥಾ ಭಾಗಧೇಯಾನಿ ಸ್ವಾನಿ ಪ್ರಾಪ್ನೋತಿ ಮಾನವಃ ।
ಅನಯಸ್ಯಾಸ್ಯ ತು ಮುಖಂ ಭೀಷ್ಮಃ ಶಾಂತನವೋ ಮಮ ॥10॥
ಮನುಷ್ಯನು ತನ್ನ ಪುಣ್ಯ-ಪಾಪಗಳ ಫಲವನ್ನು ಖಂಡಿತವಾಗಿ ಅನುಭವಿಸುತ್ತಾನೆ. ನನಗೆ ಉಂಟಾದ ಈ ಆಪತ್ತಿಗೆ ಮುಖ್ಯವಾದ ಕಾರಣವೆಂದರೆ ಶಂತನುಪುತ್ರನಾದ ಭೀಷ್ಮ.
ಸಾ ಭೀಷ್ಮೇ ಪ್ರತಿಕರ್ತವ್ಯಮಹಂ ಪಶ್ಯಾಮಿ ಸಾಂಪ್ರತಮ್ ।
ತಪಸಾ ವಾ ಯುಧಾ ವಾಽಪಿ ದುಃಖಹೇತುಃ ಸ ಮೇ ಮತಃ ॥11॥
ಕೋ ನು ಭೀಷ್ಮಂ ಯುಧಾ ಜೇತುಮುತ್ಸಹೇತ ಮಹೀಪತಿಃ ॥12॥
ನನ್ನ ದುಃಖಕ್ಕೆ ಕಾರಣನಾದವನು ಭೀಷ್ಮನೆಂದು ನನ್ನ ಅಭಿಪ್ರಾಯ. ತಪಸ್ಸಿನಿಂದಾಗಲೀ ಅಥವಾ ಯುದ್ಧದಿಂದಾಗಲೀ ನಾನು ಸದ್ಯದಲ್ಲಿ ಭೀಷ್ಮನಿಗೆ ಪ್ರತೀಕಾರವನ್ನು ಮಾಡಬೇಕು. ಯಾವ ರಾಜನು ಯುದ್ಧದಲ್ಲಿ ಭೀಷ್ಮನನ್ನು ಗೆಲ್ಲಲು ಆಸಕ್ತನಾದಾನು?
ಏವಂ ಸಾ ಪರಿನಿಶ್ಚಿತ್ಯ ಜಗಾಮ ನಗರಾದ್ ಬಹಿಃ ।
ಆಶ್ರಮಂ ಪುಣ್ಯಶೀಲಾನಾಂ ತಾಪಸಾನಾಂ ಮಹಾತ್ಮನಾಮ್ ॥13॥
ಹೀಗೆ ನಿಶ್ಚಯ ಮಾಡಿ, ಅವಳು ನಗರದ ಹೊರಗೆ ಬಂದು ಪುಣ್ಯವಂತರೂ, ಮಹಾತ್ಮರೂ ಆದ ತಪಸ್ವಿಗಳ ಆಶ್ರಮವನ್ನು ಸೇರಿದಳು.
ತತಸ್ತಾಮವಸದ್ ರಾತ್ರಿಂ ತಾಪಸೈಃ ಪರಿಪಾಲಿತಾ ॥14॥
ಆಚಖ್ಯೌ ಚ ಯಥಾವೃತ್ತಂ ಸರ್ವಮಾತ್ಮನಿ ಭಾರತ ।
ವಿಸ್ತರೇಣ ಮಹಾಬಾಹೋ ನಿಖಿಲೇನ ಶುಚಿಸ್ಮಿತಾ ॥15॥
ಹರಣಂ ಚ ವಿಸರ್ಗಂ ಚ ಸಾಲ್ವೇನ ಚ ವಿಸರ್ಜನಮ್ ।
ಎಲೈ ಭಾರತನೇ, ಆ ತಾಪಸರಿಂದ ರಕ್ಷಿತಳಾಗಿ ಒಂದು ರಾತ್ರಿಯನ್ನು ಅಲ್ಲಿ ಕಳೆದಳು. ಅನಂತರ ನಡೆದ ಎಲ್ಲ ತನ್ನ ವೃತ್ತಾಂತವನ್ನು ವಿಸ್ತಾರವಾಗಿ ಏನೂ ಬಿಡದೆ , ಶುಚಿಸ್ಮಿತೆಯಾದ ಅವಳು ತಾಪಸಿಗಳಲ್ಲಿ ತಿಳಿಸಿದಳು. ಭೀಷ್ಮರಿಂದ ಹರಣ, ಭೀಷ್ಮರಿಂದ ಬಿಡುಗಡೆ, ಸಾಲ್ವನಿಂದ ಪರಿತ್ಯಾಗ ಎಲ್ಲವನ್ನೂ ಹೇಳಿದಳು.
ತತಸ್ತತ್ರ ಮಹಾನಾಸೀದ್ ಬ್ರಾಹ್ಮಣಃ ಸಂಶಿತವ್ರತಃ ॥16॥
ಶೈಖಾವತ್ಯಸ್ತಪೋವೃದ್ಧಃ ಶಾಸ್ತ್ರೇ ಚಾರಣ್ಯಕೇ ಗುರುಃ ।
ಆರ್ತಾಂ ತಾಮಾಹ ಸ ಮುನಿಃ ಶೈಖಾವತ್ಯೋ ಮಹಾತಪಾಃ ॥17॥
ನಿಃಶ್ವಸಂತೀಂ ಸ ತಾಂ ಬಾಲಾಂ ದುಃಖಶೋಕಪರಾಯಣಾಮ್ ॥18॥
ಆ ಆಶ್ರಮದಲ್ಲಿ ಶೈಖಾವತ್ಯನೆಂಬ ಒಳ್ಳೆಯ ವ್ರತಧಾರಿಯಾದ ತಪೋವೃದ್ಧನಾದ, ವೇದದಲ್ಲಿಯೂ ಮತ್ತು ಶಾಸ್ತ್ರದಲ್ಲಿಯೂ ಪರಿಣತನಾದ ಬ್ರಾಹ್ಮಣನಿದ್ದನು. ದುಃಖ-ಶೋಕಪರಾಯಣಳಾಗಿ, ಆರ್ತಳಾಗಿ, ನಿಟ್ಟುಸಿರನ್ನು ಬಿಡುತ್ತಿದ್ದ ಆ ಕನ್ಯೆಯನ್ನು ಕುರಿತು ಮಹಾತಪಸ್ವಿಯಾದ ಶೈಖಾವತ್ಯ ಮುನಿಯು ಹೇಳಿದನು.
ಏವಂ ಗತೇ ತು ಕಿಂ ಭದ್ರೇ ಶಕ್ಯಂ ಕರ್ತುಂ ತಪಸ್ವಿಭಿಃ ।
ಆಶ್ರಮಸ್ಥೈರ್ಮಹಾಭಾಗೈಃ ತಪೋಯುಕ್ತೈರ್ಮಹಾತ್ಮಭಿಃ ॥19॥
ಎಲೌ ಮಂಗಳಸ್ವರೂಪಳೇ, ಪರಿಸ್ಥಿತಿಯು ಹೀಗಿರುವಾಗ ಆಶ್ರಮದಲ್ಲಿರುವ ತಪಸ್ವಿಗಳಾದ ಮಹಾನುಭಾವರಿಂದ ಏನು ಮಾಡಲು ಸಾಧ್ಯ? (ಎಂದು ಕೇಳಿದನು).
ಸಾ ತ್ವೇನಮಬ್ರವೀದ್ ರಾಜನ್ ಕ್ರಿಯತಾಂ ಮದನುಗ್ರಹಃ ।
ಪ್ರವ್ರಾಜಿತುಮಿಹೇಚ್ಛಾಮಿ ತಪಸ್ತಪ್ಸ್ಯಾಮಿ ದುಶ್ಚರಮ್ ॥20॥
ಎಲೈ ರಾಜನೇ, ಅವಳು ಅವನನ್ನು ಕುರಿತು ನನಗೆ ಅನುಗ್ರಹವನ್ನು ಮಾಡಿ, ನಾನು ಸಂನ್ಯಾಸವನ್ನು ತೆಗೆದುಕೊಂಡು ದುಶ್ಚರವಾದ ತಪಸ್ಸನ್ನು ಮಾಡುವೆನು ಎಂದು ಹೇಳಿದಳು.
ಮಯ್ಯೈವ ತಾನಿ ಕರ್ಮಾಣಿ ಪೂರ್ವದೇಹೇಷು ಮೂಢಯಾ ।
ಕೃತಾನಿ ನೂನಂ ಪಾಪಾನಿ ತೇಷಾಮೇತತ್ ಫಲಂ ಧ್ರುವಮ್ ॥21॥
ಇದೆಲ್ಲಾ ನಾನು ಮೂಢಳಾಗಿ ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪದ ಫಲವೆಂಬುದು ನಿಶ್ಚಿತವಾದುದು.
ನೋತ್ಸಹೇಽಹಂ ಪುನರ್ಗಂತುಂ ಸ್ವಜನಂ ಪ್ರತಿ ತಾಪಸಾಃ ।
ಪ್ರತ್ಯಾಖ್ಯಾತಾ ನಿರಾನಂದಾ ಸಾಲ್ವೇನ ಚ ನಿರಾಕೃತಾ ॥22॥
ಎಲೈ ತಾಪಸರೇ, ಬಂಧುಗಳಿಂದಲೂ ಮತ್ತು ಸಾಲ್ವನಿಂದಲೂ ನಿರಾಕೃತಳಾದ ನಾನು ಯಾವ ಸಂತೋಷವೂ ಇಲ್ಲದೆ ಇನ್ನೊಮ್ಮೆ

ನನ್ನ ಜನರ ಬಳಿಗೆ ಹೋಗಲು ಇಷ್ಟಪಡುವುದಿಲ್ಲ.
ಉಪದಿಷ್ಟಮಿಹೇಚ್ಛಾಮಿ ತಪಸೇ ವೀತಕಲ್ಮಷಾಃ |
ಯುಷ್ಮಾಭಿರ್ದೇವಸಂಕಾಶೈಃ ಕೃಪಾ ಭವತು ವೋ ಮಯಿ ||23||
ದೇವತೆಗಳ ಕಾಂತಿಯನ್ನು ಹೊಂದಿದವರೂ, ದೋಷದೂರರೂ ಆದ ನೀವು ನನಗೆ ತಪಸ್ಸನ್ನು ಉಪದೇಶ ಮಾಡಬೇಕೆಂದು ನಾನು ಬಯಸುತ್ತೇನೆ. ನೀವು ನನ್ನ ಮೇಲೆ ಕೃಪೆಯನ್ನು ತೋರಿಸಿ ಎಂದು ಹೇಳಿದಳು.
ಸ ತಾಮಾಶ್ವಾಸಯತ್ ಕನ್ಯಾಂ ದೃಷ್ಟಾಂತಾಗಮಹೇತುಭಿಃ |
ಸಾಂತ್ವಯಾಮಾಸ ಕಾರ್ಯಂ ಚ ಪ್ರತಿಜಜ್ಞೇ ದ್ವಿಜೈಃ ಸಹ ||24||
ಆ ತಪಸ್ವಿಯು ಅನೇಕ ದೃಷ್ಟಾಂತಗಳನ್ನು ಮತ್ತು ಆಗಮಗಳನ್ನೂ ಹೇಳಿ, ಅವಳನ್ನು ಸಮಾಧಾನಪಡಿಸಿ, ಉಳಿದ ಬ್ರಾಹ್ಮಣರ ಜೊತೆಯಲ್ಲಿ ಅವಳಿಗೆ ಉಪಕಾರವನ್ನು ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ ||
|| ಅಂಬೋಪಾಖ್ಯಾನಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತೈದನೆಯ ಅಧ್ಯಾಯ
ತಾಪಸರ ಆಶ್ರಮಕ್ಕೆ ಅಂಬೆಯ ಮಾತಾಮಹನಾದ ಹೋತ್ರವಾಹನನ ಆಗಮನ ಮತ್ತು ಪರಶುರಾಮರಿಗೆ ಶರಣಾಗತಳಾಗುವಂತೆ ಪ್ರೇರಣೆ.
ಭೀಷ್ಮಃ
ತತಸ್ತೇ ತಾಪಸಾಃ ಸರ್ವೇ ಕಾರ್ಯವಂತೋಽಭವಂಸ್ತದಾ |
ತಾಂ ಕನ್ಯಾಂ ಚಿಂತಯಂತಸ್ತೇ ಕಿಂ ಕಾರ್ಯಮಿತಿ ಧರ್ಮಿಣಃ ||1||
ಭೀಷ್ಮ ಅನಂತರ ಆ ತಾಪಸಿಗಳೆಲ್ಲರೂ ಆ ಕನ್ಯೆಗೆ ಸಹಾಯ ಮಾಡಲು ಉದ್ಯುಕ್ತರಾದರು. ಧರ್ಮಜ್ಞರಾದ ಅವರು ಆ ಕನ್ಯೆಗೆ ಏನು ಮಾಡಬೇಕೆಂದು ಚಿಂತಿಸಿದರು.
ಕೇಚಿದಾಹುಃ ಪಿತುರ್ವೇಶ್ಮ ನೀಯತಾಮಿತಿ ತಾಪಸಾಃ |
ಕೇಚಿದಸ್ಮದುಪಾಲಂಭೇ ಮತಿಂ ಚಕ್ರುರ್ದ್ವಿಜೋತ್ತಮಾಃ ||2||
ಕೆಲವು ತಾಪಸರು ಅವಳನ್ನು ತಂದೆಯ ಮನೆಗೆ ಕಳುಹಿಸಬೇಕೆಂದು ಚಿಂತಿಸಿದರು. ಇನ್ನು ಕೆಲವು ಬ್ರಾಹ್ಮಣಶ್ರೇಷ್ಠರು ಅವಳನ್ನು ಹರಣ ಮಾಡಿದ ನನ್ನನ್ನೇ ನಿಂದಿಸಿದರು.
ಕೇಚಿತ್ ಸಾಲ್ವಪತಿಂ ಗತ್ವಾ ನಿಯೋಕ್ತ್ಯಮಿತಿ ಮೇನಿರೇ |
ನೇತಿ ಕೇಚಿದ್ ವ್ಯವಸ್ಯಂತಿ ಪ್ರತ್ಯಾಖ್ಯಾತಾ ಯಥಾ ಹಿ ಸಾ ||3||
ಇನ್ನು ಕೆಲವರು ಸಾಲ್ವರಾಜನ ಬಳಿಗೆ ಹೋಗಿ, ಅವನಿಗೆ ಒತ್ತಾಯ ಮಾಡುವುದಾಗಿ ಹೇಳಿದರು. ಇನ್ನು ಕೆಲವರು ಅವನಿಂದ ಹಾಗೆ ನಿರಾಕೃತಳಾದ್ದರಿಂದ ಹಾಗೆ ಮಾಡಬಾರದು ಎಂದು ನಿಶ್ಚಯಿಸಿದರು.
ಏವಂ ಗತೇ ತು ಕಿಂ ಶಕ್ಯಂ ಭದ್ರೇ ಕರ್ತುಂ ಮನೀಷಿಭಿಃ |
ಪುನರೂಚುಶ್ಚ ತೇ ಸರ್ವೇ ತಾಪಸಾಃ ಸಂಶಿತವ್ರತಾಃ ||4||
ಪರಿಸ್ಥಿತಿಯು ಹೀಗಿರುವಾಗ ಎಲೌ ಮಂಗಳಸ್ವರೂಪಳೇ, ವಿವೇಕಿಗಳಾದ ನಾವು ಏನು ಮಾಡಲು ಸಾಧ್ಯ ಎಂದು ಯೋಚಿಸಿ ಒಳ್ಳೆಯ ವ್ರತಧಾರಿಗಳಾದ ಆ ತಾಪಸರೆಲ್ಲರೂ ಪುನಃ ಮಾತನಾಡಿದರು.
ಅಲಂ ಪ್ರವ್ರಜಿತೇನೇಹ ಭದ್ರೇ ಶೃಣು ಹಿತಂ ವಚಃ |
ಇತೋ ಗಚ್ಛಸ್ವ ಭದ್ರಂ ತೇ ಪಿತುರೇವ ನಿವೇಶನಮ್ ||5||
ಮಂಗಳಸ್ವರೂಪಳೇ, ಸಂನ್ಯಾಸವು ಬೇಡ. ನಮ್ಮ ಹಿತವಚನವನ್ನು ಕೇಳು. ನಿನಗೆ ಮಂಗಳವಾಗಲಿ, ನಿನ್ನ ತಂದೆಯ ಮನೆಗೇ ಹೋಗುವವಳಾಗು.
ಪ್ರತಿವಕ್ಷ್ಯತಿ ರಾಜಾಽಸೌ ಪಿತಾ ತೇ ಯದನಂತರಮ್ |
ತತ್ರ ವತ್ಸ್ಯಸಿ ಕಲ್ಯಾಣಿ ಸುಖಂ ಸರ್ವಗುಣಾನ್ವಿತಾ ||6||
ಅನಂತರ ನಿನ್ನ ತಂದೆಯು ಮುಂದೆ ಮಾಡಬೇಕಾದ ಕಾರ್ಯವನ್ನು ತಿಳಿಸುವನು. ಎಲೌ ಕಲ್ಯಾಣಿಯೇ, ಎಲ್ಲ ಗುಣಗಳಿಂದ ಕೂಡಿದವಳಾಗಿ, ನೀನು ಅಲ್ಲಿ ಸುಖವಾಗಿ ವಾಸವನ್ನು ಮಾಡುವಿ.
ನ ಚ ತೇಽನ್ಯಾ ಗತಿರ್ನ್ಯಾಯ್ಯಾ ಭವೇದ್ ಭದ್ರೇ ಯಥಾ ಪಿತಾ |
ಪತಿರ್ವಾಽಪಿ ಗತಿರ್ನಾರ್ಯಾಃ ಪಿತಾ ವಾ ವರವರ್ಣಿನಿ ||7||
ಎಲೌ ಮಂಗಳಸ್ವರೂಪಳೇ, ನಿನಗೆ ತಂದೆಯಂತಹ ನ್ಯಾಯವಾದ ಬೇರೆ ಗತಿಯು ಇಲ್ಲ. ಎಲೌ ಸುಂದರಿಯೇ, ನಾರಿಗೆ ಪತಿಯಾಗಲೀ ಅಥವಾ ತಂದೆಯಾಗಲೀ ಗತಿ.
ಗತಿಃ ಪತಿಃ ಸಮಸ್ಥಾಯಾ ವಿಷಮೇ ತು ಪಿತಾ ಗತಿಃ |
ಪ್ರವ್ರಜ್ಯಾ ಹಿ ಸುದುಃಖೇಯಂ ಸುಕುಮಾರ್ಯಾ ವಿಶೇಷತಃ ||8||
ರಾಜಪುತ್ರ್ಯಾಃ ಪ್ರಕೃತ್ಯಾ ಚ ಕುಮಾರ್ಯಾಸ್ತವ ಭಾಮಿನಿ ||9||

ಅವಳು ಚೆನ್ನಾಗಿದ್ದರೆ ಪತಿಯು ಗತಿ. ಸಂಕಟಕ್ಕೆ ಸಿಲುಕಿದರೆ ತಂದೆಯು ಗತಿ. ಎಲೌ ಭಾಮಿನಿಯೇ (ಕೋಪವುಳ್ಳ ವನಿತೆಯೇ) ಸುಕುಮಾರಿಯೂ, ರಾಜಪುತ್ರಿಯೂ ಆದ ನಿನಗೆ ಸಂನ್ಯಾಸವು ಬಹಳ ದುಃಖಕರವಾದುದು.
ಭದ್ರೇ ದೋಷಾ ಹಿ ವಿದ್ಯಂತೇ ಬಹವೋ ವರವರ್ಣಿನಿ |
ಆಶ್ರಮೇ ವೈ ವಸಂತ್ಯಾಸ್ತೇ ನ ಭವೇಯುಃ ಪಿತುರ್ಗೃಹೇ ॥10॥
ಎಲೌ ಸುಂದರಿಯೇ, ಮಂಗಳಸ್ವರೂಪಳೇ, ಆಶ್ರಮದಲ್ಲಿ ವಾಸಿಸುವ ನಿನಗೆ ಬಹಳ ದೋಷಗಳು ಉಂಟಾಗುತ್ತವೆ. ತಂದೆಯ ಮನೆಯಲ್ಲಿ ಆ ದೋಷಗಳು ಇರುವುದಿಲ್ಲ.
ತತಸ್ತ್ವನ್ಯೇಽಬ್ರುವನ್ ವಾಕ್ಯಂ ತಾಪಸಾಸ್ತಾಂ ತಪಸ್ವಿನೀಮ್ ॥11॥
ತ್ವಾಮಿಹೈಕಾಕಿನೀಂ ದೃಷ್ಟ್ವಾ ನಿರ್ಜನೇ ಗಹನೇ ವನೇ |
ಪ್ರಾರ್ಥಯಿಷ್ಯಂತಿ ರಾಜಾನಸ್ತಸ್ಮಾನ್ಮೈವಂ ಮನಃ ಕೃಥಾಃ ॥12॥
ಆಗ ಇನ್ನು ಕೆಲವು ತಪಸ್ವಿಗಳು ಶೋಚನೀಯಳಾದ ಅವಳನ್ನು ಕುರಿತು, ನಿರ್ಜನವಾದ ಕಾಡಿನಲ್ಲಿ ನೀನು ಒಬ್ಬಳೇ ಇರುವುದನ್ನು ನೋಡಿ ರಾಜರು ನಿನ್ನನ್ನು ಪ್ರಾರ್ಥಿಸುವರು. ಆದ್ದರಿಂದ ಹೀಗೆ ಮನಸ್ಸನ್ನು ಮಾಡಬೇಡ ಎಂದು ಹೇಳಿದರು.
ಅಂಬಾ
ನ ಶಕ್ಯಂ ಕಾಶಿನಗರಂ ಪುನರ್ಗಂತುಂ ಪಿತುರ್ಗೃಹಾನ್ |
ಅವಜ್ಞಾತಾ ಭವಿಷ್ಯಾಮಿ ಬಾಂಧವಾನಾಂ ನ ಸಂಶಯಃ ॥13॥
ಉಷಿತಾ ಹ್ಯನ್ಯಥಾ ಬಾಲ್ಯೇ ಪಿತುರ್ವೇಶ್ಮನಿ ತಾಪಸಾಃ ॥14॥
ಅಂಬಾ ನಾನು ಕಾಶಿಗೆ ಹೋಗಿ ಪುನಃ ತಂದೆಯ ಮನೆಗೆ ಹೋಗಲು ಸಾಧ್ಯವಿಲ್ಲ. ಎಲೈ ತಾಪಸರೇ, ನಾನು ತಂದೆಯ ಮನೆಗೆ ಹೋಗಿ, ಬಾಲ್ಯದಲ್ಲಿ ಪತಿರಹಿತಳಾಗಿದ್ದರೆ ನನ್ನ ಬಾಂಧವರಿಂದ ಅಪಮಾನಕ್ಕೆ ಗುರಿಯಾಗುವುದರಲ್ಲಿ ಸಂಶಯವಿಲ್ಲ.
ನಾಹಂ ಗಮಿಷ್ಯೇ ಭದ್ರಂ ವಸ್ತತ್ರ ಯತ್ರ ಪಿತಾ ಮಮ |
ತಪಸ್ತಪ್ತುಮಭೀಪ್ಸಾಮಿ ತಾಪಸೈಃ ಪರಿಪಾಲಿತಾ ॥15॥
ಯಥಾ ಪರೇಽಪಿ ಲೋಕೇ ನ ಸ್ಯಾದೇವಂ ಮಹಾತ್ಯಯಮ್ ॥16॥
ದೌರ್ಭಾಗ್ಯಂ ಬ್ರಾಹ್ಮಣಶ್ರೇಷ್ಠಾಸ್ತಸ್ಮಾತ್ ತಪ್ಸ್ಯಾಮ್ಯಹಂ ತಪಃ ॥17॥
ಎಲೈ ತಾಪಸರೇ, ನಿಮಗೆ ಮಂಗಳವಾಗಲಿ. ನನ್ನ ತಂದೆಯ ಮನೆಗೆ ನಾನು ಹೋಗುವುದಿಲ್ಲ. ತಾಪಸರಾದ ನಿಮ್ಮಿಂದ ರಕ್ಷಿತಳಾಗಿ ತಪಸ್ಸನ್ನು ಆಚರಿಸಲು ಬಯಸುತ್ತೇನೆ. ಎಲೈ ಬ್ರಾಹ್ಮಣಶ್ರೇಷ್ಠರೇ, ಇಂತಹ ದೌರ್ಭಾಗ್ಯವು ನನಗೆ ಪರಲೋಕದಲ್ಲಾದರೂ ಆಗಬಾರದು. ಆದ್ದರಿಂದ ನಾನು ತಪಸ್ಸನ್ನು ಮಾಡುವೆನು ಎಂದು ಹೇಳಿದಳು.
ಇತ್ಯೇವಂ ತೇಷು ವಿಪ್ರೇಷು ಚಿಂತಯತ್ಸು ಯಥಾತಥಮ್ |
ರಾಜರ್ಷಿಸ್ತದ್ವನಂ ಪ್ರಾಪ್ತಸ್ತಪಸ್ವೀ ಹೋತ್ರವಾಹನಃ ॥18॥
ತಾಂ ತಥಾಭಾವಿನೀಂ ದೃಷ್ಟ್ವಾ ಶ್ರುತ್ವಾ ಚೋದ್ವಿಗ್ನಮಾನಸಃ ॥19॥
ಹೀಗೆ ಆ ಬ್ರಾಹ್ಮಣರು ಏನು ಮಾಡಬೇಕೆಂದು ಚಿಂತಿಸುತ್ತಿರುವಷ್ಟರಲ್ಲಿ ತಪಸ್ವಿಯಾದ ಹೋತ್ರವಾಹನನು ಆ ಆಶ್ರಮಕ್ಕೆ ಬಂದನು. ಅಂಬೆಯನ್ನು ನೋಡಿ, ಅವಳ ಅವಸ್ಥೆಯನ್ನು ಕೇಳಿ ಅವನು ಉದ್ವೇಗಗೊಂಡನು.
ತತಸ್ತೇ ತಾಪಸಾಃ ಸರ್ವೇ ಪೂಜಯಂತಿ ಸ್ಮ ತಂ ನೃಪಮ್ |
ಪೂಜಾಭಿಃ ಸ್ವಾಗತಾದ್ಯಾಭಿರಾಸನೇನೋದಕೇನ ಚ ॥20॥
ಆಗ ಆ ತಾಪಸರೆಲ್ಲರೂ ಸ್ವಾಗತ, ಆಸನ, ಅರ್ಘ್ಯಗಳಿಂದ ಆ ಹೋತ್ರವಾಹನ ರಾಜನನ್ನು ಪೂಜಿಸಿದರು.
ತಸ್ಯೋಪವಿಷ್ಟಸ್ಯ ಸತೋ ವಿಶ್ರಾಂತಸ್ಯೋಪಶೃಣ್ವತಃ |
ಪುನರೇವ ಕಥಾಂ ಚಕ್ರುಃ ಕನ್ಯಾಂ ಪ್ರತಿ ವನೌಕಸಃ ॥21॥
ಅವನು ವಿಶ್ರಾಂತಿಯನ್ನು ತೆಗೆದುಕೊಂಡು ಕುಳಿತುಕೊಂಡ ಮೇಲೆ ಆ ವನವಾಸಿಗಳೆಲ್ಲರೂ ಪುನಃ ಆ ಕನ್ಯೆಯ ಕಥೆಯನ್ನೆಲ್ಲಾ ಹೇಳಿದರು.
ಅಂಬಾಯಾಸ್ತಾಂ ಕಥಾಂ ಶ್ರುತ್ವಾ ಕಾಶಿರಾಜ್ಞಶ್ಚ ಭಾರತ |
ರಾಜರ್ಷಿಃ ಸ ಮಹಾತೇಜಾ ಬಭೂವೋದ್ವಿಗ್ನಮಾನಸಃ ॥22॥
ಎಲೈ ಭಾರತನೇ, ಕಾಶಿರಾಜನ ಮಗಳಾದ ಅಂಬೆಯ ಆ ಕಥೆಯನ್ನು ಕೇಳಿ ರಾಜರ್ಷಿಯೂ, ಮಹಾತೇಜಸ್ವಿಯೂ ಆದ ಅವನು ಮನಸ್ಸಿನಲ್ಲಿ ಬಹಳ ಸಂಕಟಪಟ್ಟನು.
ತಾಂ ತಥಾವಾದಿನೀಂ ಶ್ರುತ್ವಾ ದೃಷ್ಟ್ವಾ ಚ ಸ ಮಹಾತಪಾಃ |
ರಾಜರ್ಷಿಃ ಕೃಪಯಾಽಽವಿಷ್ಟೋ ಮಹಾತ್ಮಾ ಹೋತ್ರವಾಹನಃ ॥23॥
ಸ ವೇಪಮಾನ ಉತ್ಥಾಯ ಮಾತುಸ್ತಸ್ಯಾಃ ಪಿತಾ ತದಾ |
ತಾಂ ಕನ್ಯಾಮಂಕಮಾರೋಪ್ಯ ಪರ್ಯಾಶ್ವಾಸಯತ ಪ್ರಭೋ ॥24॥
ಹಾಗೆ ಮಾತನಾಡುತ್ತಿದ್ದ ಅವಳನ್ನು ನೋಡಿ ಮತ್ತು ಕೇಳಿ ಆ ಮಹಾತಪಸ್ವಿಯೂ, ಮಹಾತ್ಮನೂ, ರಾಜರ್ಷಿಯೂ ಆದ ಹೋತ್ರವಾಹನನು ಕೃಪೆಯಿಂದ ಕೂಡಿದವನಾಗಿ, ವಯೋನಿಮಿತ್ತದಿಂದ ನಡುಗುತ್ತಾ ಎದ್ದು, ಅವಳ ತಾಯಿಯ ತಂದೆಯಾದ ಅವನು ಅವಳನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಮಾಧಾನಪಡಿಸಿದನು.
ಸ ತಾಮಪೃಚ್ಛತ್ ಕಾರ್ತ್ಸ್ನ್ಯೇನ ವ್ಯಸನೋತ್ಪತ್ತಿಮಾದಿತಃ |
ಸಾ ಚ ತಸ್ಮೈ ಯಥಾವೃತ್ತಂ ವಿಸ್ತರೇಣ ನ್ಯವೇದಯತ್ ॥25॥
ಅವನು ಇನ್ನೊಮ್ಮೆ ಅವಳ ದುಃಖೋತ್ಪತ್ತಿಗೆ ಕಾರಣವನ್ನು ಸಮಗ್ರವಾಗಿ ಕೇಳಿದನು. ಅವಳಾದರೂ ಎಲ್ಲವನ್ನೂ ವಿಸ್ತಾರವಾಗಿ

ನಡೆದಂತೆಯೇ ನಿವೇದಿಸಿದಳು.
ತತಃ ಸ ರಾಜರ್ಷಿರಭೂದ್ ದುಃಖಶೋಕಸಮನ್ವಿತಃ |
ಕಾರ್ಯಂ ಚ ಪ್ರತಿಪೇದೇ ತನ್ಮನಸಾ ಸುಮಹಾತಪಾಃ ॥26॥
ಅಬ್ರುವೀದ್ ವೇಪಮಾನಶ್ಚ ಕನ್ಯಾಮಾರ್ತಾಂ ಸುದುಃಖಿತಾಮ್ ॥27॥
ಆಗ ಆ ರಾಜರ್ಷಿಯು ದುಃಖಶೋಕಸಮನ್ವಿತನಾದನು. ಆ ಮಹಾತಪಸ್ವಿಯು ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿ, ನಡುಗುತ್ತಾ ಆರ್ತಳೂ, ದುಃಖಿತಳೂ ಆದ ಆ ಕನ್ಯೆಯನ್ನು ಕುರಿತು ಹೇಳಿದನು.
ಮಾ ಗಾಃ ಪಿತೃಗೃಹಂ ಭದ್ರೇ ಮಾತುಸ್ತೇ ಜನಕೋ ಹ್ಯಹಮ್ ॥28॥
ದುಃಖಂ ಛೇತ್ಸ್ಯಾಮಿ ತೇಽಹಂ ವೈ ಮಯಿ ವರ್ತಸ್ವ ಪುತ್ರವತ್ |
ಪರ್ಯಾಪ್ತಂ ತೇ ತಪಃ ಪುತ್ರಿ ಯದೇವಂ ಪರಿಶುಷ್ಯಸಿ ॥29॥
ಮಂಗಳಸ್ವರೂಪಳೇ, ನಾನು ನಿನ್ನ ತಾಯಿಯ ತಂದೆ. ನಿನ್ನ ತಂದೆಯ ಮನೆಗೆ ಹೋಗಬೇಡ. ನಾನು ನಿನ್ನ ದುಃಖವನ್ನು ಪರಿಹರಿಸುವೆನು. ನನ್ನ ಜೊತೆಯಲ್ಲಿ ಮಗನಂತೆ ವರ್ತಿಸು. ಎಲೌ ಮಗಳೇ, ಇಷ್ಟು ಶೋಕದಿಂದ ಒಣಗಿಹೋಗುತ್ತಿರುವ ನೀನು ತಪಸ್ಸನ್ನು ಮಾಡುವುದು ಬೇಡ.
ಗಚ್ಛ ಮದ್ವಚನಾದ್ ರಾಮಂ ಜಾಮದಗ್ನ್ಯಂ ತಪಸ್ವಿನಮ್ |
ರಾಮಸ್ತೇ ಸುಮಹದ್ದುಃಖಂ ಶೋಕಂ ಚೈವಾಪನೇಷ್ಯತಿ ॥30॥
ನನ್ನ ಮಾತಿನಂತೆ ಜಮದಗ್ನಿಗಳ ಪುತ್ರನಾದ, ತಪಸ್ವಿಯಾದ ಪರಶುರಾಮನ ಬಳಿಗೆ ಹೋಗು. ಪರಶುರಾಮನು ನಿನ್ನ ದೊಡ್ಡ ದುಃಖವನ್ನೂ ಮತ್ತು ಶೋಕವನ್ನೂ ಪರಿಹರಿಸುವನು.
ಹನಿಷ್ಯತಿ ರಣೇ ಭೀಷ್ಮಂ ನ ಕರಿಷ್ಯತಿ ಚೇದ್ ವಚಃ |
ತಂ ಗಚ್ಛ ಭಾರ್ಗವಶ್ರೇಷ್ಠಂ ಕಾಲಾಗ್ನಿಸಮತೇಜಸಮ್ ॥31॥
ಪ್ರತಿಷ್ಠಾಪಯಿತಾ ಸ ತ್ವಾಂ ಧರ್ಮ್ಯೇ ಪಥಿ ನಿರಾಮಯೇ ॥32॥
ತನ್ನ ಮಾತನ್ನು ಕೇಳದಿದ್ದರೆ ಅವನು ಯುದ್ಧದಲ್ಲಿ ಭೀಷ್ಮರನ್ನು ಕೊಲ್ಲುವನು. ಆದ್ದರಿಂದ ಕಾಲಾಗ್ನಿಗೆ ಸಮನವಾದ ತೇಜಸ್ಸುಳ್ಳ, ಭಾರ್ಗವಶ್ರೇಷ್ಠನಾದ ಪರಶುರಾಮನ ಬಳಿಗೆ ಹೋಗುವವಳಾಗು. ಅವನು ನಿನ್ನನ್ನು ನಿರ್ದುಷ್ಟವಾದ ಧರ್ಮಪಥದಲ್ಲಿ ಸ್ಥಾಪಿಸುವನು (ಎಂದು ಹೇಳಿದನು).
ತತಸ್ತು ಸುಸ್ವರಂ ಬಾಷ್ಪಮುತ್ಸೃಜಂತೀ ಪುನಃ ಪುನಃ |
ಅಬ್ರುವೀತ್ ಪಿತರಂ ಮಾತುಃ ಸಾ ತದಾ ಹೋತ್ರವಾಹನಮ್ ॥33॥
ಅನಂತರ ಅವಳು ಸುಸ್ವರದಿಂದ ಅಳುತ್ತಾ, ಪುನಃ ಪುನಃ ಕಣ್ಣೀರನ್ನು ಸುರಿಸುತ್ತಾ, ತನ್ನ ಮಾತಾಮಹನಾದ ಹೋತ್ರವಾಹನನನ್ನು ಕುರಿತು ಹೇಳಿದಳು.
ಅಭಿವಾದಯಿತ್ವಾ ಶಿರಸಾ ಗಮಿಷ್ಯೇ ತವ ಶಾಸನಾತ್ |
ಅಪಿ ನಾಮಾದ್ಯ ಪಶ್ಯೇಯಮಾರ್ಯಂ ತಂ ಲೋಕವಿಶ್ರುತಮ್ ॥34॥
ನಿನಗೆ ಶಿರಸಾ ನಮಸ್ಕಾರವನ್ನು ಮಾಡಿ, ನಿನ್ನ ಶಾಸನದಂತೆ ನಾನು ಪರಶುರಾಮರ ಬಳಿಗೆ ಹೋಗುವೆನು. ಲೋಕವಿಖ್ಯಾತನಾದ ಆ ಪೂಜ್ಯನನ್ನು ನಾನು ಈ ದಿನ ಏನಾದರೂ ನೋಡುವೆನೆ?
ಕಥಂ ಚ ತೀವ್ರಂ ದುಃಖಂ ಮೇ ನಾಶಯಿಷ್ಯತಿ ಭಾರ್ಗವಃ |
ಏತದಿಚ್ಛಾಮ್ಯಹಂ ಶ್ರೋತುಂ ಯಥಾ ಯಾಸ್ಯಾಮಿ ತತ್ರ ವೈ ॥35॥
ಭಾರ್ಗವನಾದ ಅವನು ನನ್ನ ತೀವ್ರವಾದ ದುಃಖವನ್ನು ಹೇಗೆ ನಾಶಪಡಿಸುವನು? ಮತ್ತು ನಾನು ಅವನ ಆಶ್ರಮಕ್ಕಾದರೂ ಹೇಗೆ ಹೋಗಬೇಕು ಎಂದು ಕೇಳಲು ಬಯಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತಾರನೆಯ ಅಧ್ಯಾಯ
ಹೋತ್ರವಾಹನನಿಂದ ಅಕೃತವ್ರಣನಿಗೆ ತನ್ನ ಮೊಮ್ಮಗಳ ವೃತ್ತಾಂತ ಕಥನ.
ಹೋತ್ರವಾಹನಃ
ರಾಮಂ ದ್ರಕ್ಷ್ಯಸಿ ವತ್ಸೇ ತ್ವಂ ಜಾಮದಗ್ನ್ಯಂ ಮಹಾವನೇ |
ಉಗ್ರೇ ತಪಸಿ ವರ್ತಂತಂ ಸತ್ಯಸಂಧಂ ಮಹಾಬಲಮ್ ॥1॥
ಹೋತ್ರವಾಹನ ವತ್ಸೆಯೇ, ನೀನು ಉಗ್ರವಾದ ತಪಸ್ಸನ್ನು ಆಚರಿಸುತ್ತಿರುವ ಸತ್ಯಸಂಧನೂ, ಮಹಾಬಲನೂ ಆದ, ಜಮದಗ್ನಿಪುತ್ರನಾದ ಪರಶುರಾಮನನ್ನು ಮಹಾವನದಲ್ಲಿ ನೋಡುವಿ.
ಮಾಹೇಂದ್ರಂ ವೈ ಗಿರಿಶ್ರೇಷ್ಠಂ ರಾಮೋ ನಿತ್ಯಮುಪಾಸತೇ |
ಋಷಯೋ ವೇದವಿದುಷೋ ಗಂಧರ್ವಾಪ್ಸರಸಸ್ತಥಾ ॥2॥
ಪರಶುರಾಮನು ಮತ್ತು ವೇದಜ್ಞರಾದ ಋಷಿಗಳೂ, ಗಂಧರ್ವರೂ ಮತ್ತು ಅಪ್ಸರೆಯರೂ ಯಾವಾಗಲೂ ಮಾಹೇಂದ್ರ

ಪರ್ವತಶ್ರೇಷ್ಠದಲ್ಲಿ ಇರುತ್ತಾರೆ.
ತತ್ರ ಗಚ್ಛಸ್ವ ಭದ್ರಂ ತೇ ಬ್ರೂಯಾಶ್ಚೈನಂ ವಚೋ ಮಮ |
ಅಭಿವಾದ್ಯ ಚ ತಂ ಮೂರ್ಧ್ನಾ ತಪೋವೃದ್ಧಂ ದೃಢವ್ರತಮ್ ॥3॥
ಬ್ರೂಯಾಶ್ಚೈನಂ ಪುನರ್ಭದ್ರೇ ಯತ್ ತೇ ಕಾರ್ಯಂ ಮನೀಷಿತಮ್ |
ಮಯಿ ಸಂಕೀರ್ತಿತೇ ರಾಮಃ ಸರ್ವಂ ತತ್ ತೇ ಕರಿಷ್ಯತಿ ॥4॥
ನಿನಗೆ ಮಂಗಳವಾಗಲಿ, ಅಲ್ಲಿಗೆ ಹೋಗಿ ತಪೋವೃದ್ಧನೂ, ದೃಢವ್ರತನೂ ಆದ ಅವನಿಗೆ ಶಿರಸಾ ನಮಸ್ಕಾರವನ್ನು ಮಾಡಿ, ನನ್ನ ಮಾತುಗಳನ್ನು ಹೇಳು. ಎಲೌ ಮಂಗಳಸ್ವರೂಪಳೇ ಮತ್ತು ನಿನ್ನ ಮನಸ್ಸಿನಲ್ಲಿರುವ ಕಾರ್ಯವನ್ನು ಅವನಿಗೆ ಹೇಳು. ನನ್ನ ಹೆಸರನ್ನು ಹೇಳಿದರೆ ಪರಶುರಾಮನು ನಿನಗೆ ಎಲ್ಲವನ್ನೂ ಮಾಡುವನು.
ಮಮ ರಾಮಃ ಸಖಾ ವತ್ಸೇ ಪ್ರೀತಿಯುಕ್ತಃ ಸುಹೃಚ್ಚ ಮೇ |
ಜಮದಗ್ನಿಸುತೋ ವೀರಃ ಸರ್ವಶಸ್ತ್ರಭೃತಾಂ ವರಃ ॥5॥
ವತ್ಸೆಯೇ, ಜಮದಗ್ನಿಸುತನಾದ ಪರಶುರಾಮನು ವೀರನಾದವನು. ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದವನು. ನನ್ನ ಸ್ನೇಹಿತ ಮತ್ತು ಬಹಳ ಪ್ರೀತಿಯುಳ್ಳ ನನ್ನ ಹಿತೈಷಿ (ಎಂದು ಹೇಳಿದನು).
ಏವಂ ಬ್ರುವತಿ ಕನ್ಯಾಂ ತು ಪಾರ್ಥಿವೇ ಹೋತ್ರವಾಹನೇ |
ಅಕೃತವ್ರಣಃ ಪ್ರಾದುರಾಸೀದ್ ರಾಮಸ್ಯಾನುಚರಃ ಪ್ರಿಯಃ ॥6॥
ಹೋತ್ರವಾಹನ ರಾಜನು ಆ ಕನ್ಯೆಯನ್ನು ಕುರಿತು ಹೀಗೆ ಹೇಳುತ್ತಿರುವಷ್ಟರಲ್ಲಿ ಪರಶುರಾಮನ ಅನುಚರನೂ, ಪ್ರಿಯನೂ ಆದ ಅಕೃತವ್ರಣನು ಕಾಣಿಸಿಕೊಂಡನು.
ತತಸ್ತೇ ಮುನಯಃ ಸರ್ವೇ ಸಮುತ್ತಸ್ಥುಃ ಸಹಸ್ರಶಃ |
ಸ ಚ ರಾಜಾ ವಯೋವೃದ್ಧಃ ಸೃಂಜಯೋ ಹೋತ್ರವಾಹನಃ ॥7॥
ಆಗ ಸಹಸ್ರಸಂಖ್ಯೆಯಲ್ಲಿದ್ದ ಆ ಋಷಿಗಳು ಮತ್ತು ವಯೋವೃದ್ಧನಾದ ಸೃಂಜಯನಾದ ಹೋತ್ರವಾಹನರಾಜನೂ ಎದ್ದು ನಿಂತರು.
ತತಃ ಪೃಷ್ಟ್ವಾ ಯಥಾನ್ಯಾಯಮನ್ಯೋನ್ಯಂ ತೇ ವನೌಕಸಃ |
ಸಹಿತಾ ಭರತಶ್ರೇಷ್ಠ ನಿಷೇದುಃ ಪರಿವಾರ್ಯ ತಮ್ ॥8॥
ಎಲೈ ಭರತಶ್ರೇಷ್ಠನೇ, ಅನಂತರ ಆ ವನವಾಸಿಗಳು ಪರಸ್ಪರವಾಗಿ ನ್ಯಾಯದಂತೆ ಅನ್ಯೋನ್ಯ ಯೋಗಕ್ಷೇಮವನ್ನು ವಿಚಾರಿಸಿ ಎಲ್ಲರೂ ಅವನನ್ನು ಸುತ್ತುವರಿದು ಕುಳಿತರು.
ತತಸ್ತೇ ಕಥಯಾಮಾಸುಃ ಕಥಾಸ್ತಾಸ್ತಾ ಮನೋರಮಾಃ |
ಧನ್ಯಾ ದಿವ್ಯಾಶ್ಚ ರಾಜೇಂದ್ರ ಪ್ರೀತಿಹರ್ಷಮುದಾ ಯುತಾಃ ॥9॥
ಎಲೈ ರಾಜೇಂದ್ರನೇ, ಅನಂತರ ಅವರು ಹರ್ಷ-ಸಂತೋಷಗಳಿಂದ ಕೂಡಿದವರಾಗಿ ಧನ್ಯವಾದ, ದಿವ್ಯವಾದ ಮತ್ತು ಮನೋಹರವಾದ ಮಾತುಗಳನ್ನು ಆಡಿದರು.
ತತಃ ಕಥಾಂತೇ ರಾಜರ್ಷಿರ್ಮಹಾತ್ಮಾ ಹೋತ್ರವಾಹನಃ |
ರಾಮಂ ಶ್ರೇಷ್ಠಂ ಮಹರ್ಷೀಣಾಮಪೃಚ್ಛದಕೃತವ್ರಣಮ್ ॥10॥
ಕ್ವ ಸಂಪ್ರತಿ ಮಹಾಬಾಹೋ ಜಾಮದಗ್ನ್ಯಃ ಪ್ರತಾಪವಾನ್ |
ಅಕೃತವ್ರಣ ಶಕ್ಯೋ ವೈ ದ್ರಷ್ಟುಂ ವೇದವಿದಾಂ ವರಮ್ ॥11॥
ಆ ಮಾತುಗಳು ಮುಗಿದ ಮೇಲೆ ಮಹಾತ್ಮನಾದ ಹೋತ್ರವಾಹನ ರಾಜರ್ಷಿಯು ಮಹರ್ಷಿಗಳಲ್ಲಿ ಶ್ರೇಷ್ಠನಾದ ಅಕೃತವ್ರಣನನ್ನು ಕುರಿತು ಪರಶುರಾಮರ ವಿಷಯದಲ್ಲಿ ಎಲೈ ಅಕೃತವ್ರಣನೇ, ಮಹಾಬಾಹುವೇ, ಪ್ರತಾಪಶಾಲಿಯಾದ ಪರಶುರಾಮನು ಈಗ ಎಲ್ಲಿದ್ದಾನೆ? ವೇದಜ್ಞರಲ್ಲಿ ಶ್ರೇಷ್ಠನಾದ ಅವನನ್ನು ನೋಡಲು ಸಾಧ್ಯವೇ ಎಂದು ಪ್ರಶ್ನೆ ಮಾಡಿದನು.
ಅಕೃತವ್ರಣಃ
ಭವಂತಮೇವ ಸತತಂ ರಾಮಃ ಕೀರ್ತಯತಿ ಪ್ರಭೋ |
ಸೃಂಜಯೋ ಮೇ ಪ್ರಿಯಸಖೋ ರಾಜರ್ಷಿರಿತಿ ಪಾರ್ಥಿವ ॥12॥
ಅಕೃತವ್ರಣ ಎಲೈ ಪ್ರಭುವೇ, ರಾಜನೇ, ಪರಶುರಾಮನು ಯಾವಾಗಲೂ ಸೃಂಜಯನಾದ ರಾಜರ್ಷಿಯಾದ ಹೋತ್ರವಾಹನನು ನನ್ನ ಪ್ರಿಯಸ್ನೇಹಿತನೆಂದು ನಿನ್ನ ಹೆಸರನ್ನೇ ಹೇಳುತ್ತಿರುತ್ತಾನೆ.
ಇಹ ರಾಮಃ ಪ್ರಭಾತೇ ಶ್ವೋ ಭವಿತೇತಿ ಮತಿರ್ಮಮ |
ದ್ರಷ್ಟಾಸ್ಯೇನಮಿಹಾಯಾಂತಂ ತವ ದರ್ಶನಕಾಂಕ್ಷಯಾ ॥13॥
ನಾಳೆಯ ಪ್ರಾತಃಕಾಲದಲ್ಲಿ ಪರಶುರಾಮನು ಇಲ್ಲಿ ಬರುವನೆಂದು ನನ್ನ ಅಭಿಪ್ರಾಯ. ನಿನ್ನನ್ನು ನೋಡುವ ಉದ್ದೇಶದಿಂದ ಇಲ್ಲಿಗೆ ಬರುವ ಅವನನ್ನು ನೀನು ನೋಡುವಿ.
ಇಯಂ ಚ ಕನ್ಯಾ ರಾಜರ್ಷೇ ಕಿಮರ್ಥಂ ವನಮಾಗತಾ |
ಕಸ್ಯ ಚೇಯಂ ಭವತಿ ಕಾ ಭವತೇಚ್ಛಾಮಿ ವೇದಿತುಮ್ ॥14॥
ಎಲೈ ರಾಜರ್ಷಿಯೇ, ಈ ಕನ್ಯೆಯು ಏತಕ್ಕೆ ಕಾಡಿಗೆ ಬಂದಿದ್ದಾಳೆ? ಇವಳು ಯಾರ ಮಗಳೆಂದು ನಿನ್ನಿಂದ ತಿಳಿಯಲು ಬಯಸುತ್ತೇನೆ.
ಹೋತ್ರವಾಹನಃ
ದೌಹಿತ್ರೀಯಂ ಮಮ ವಿಭೋ ಕಾಶಿರಾಜಸುತಾ ಪ್ರಿಯಾ |
ಜ್ಯೇಷ್ಠಾ ಸ್ವಯಂವರೇ ತಸ್ಥೌ ಭಗಿನೀನಾಂ ತಥಾಽನಘ ॥15॥
ಹೋತ್ರವಾಹನ ಎಲೈ ಅನಘನೇ, ವಿಭುವೇ, ಇವಳು ನನ್ನ ಮಗಳ ಮಗಳು. ಕಾಶಿರಾಜನಿಗೆ ಪ್ರಿಯಳಾದ ಮಗಳು. ಕಾಶಿರಾಜನ

ಜ್ಯೇಷ್ಠಪುತ್ರಿಯಾದ ಇವಳು ತಂಗಿಯರ ಜೊತೆಯಲ್ಲಿ ಸ್ವಯಂವರದಲ್ಲಿ ನಿಂತಿದ್ದಳು.
ಇಯಮಂಬೇತಿ ವಿಖ್ಯಾತಾ ಜ್ಯೇಷ್ಠಾ ಕಾಶಿಪತೇಃ ಸುತಾ |
ಅಂಬಿಕಾಂಬಾಲಿಕೇ ತ್ವನ್ಯೇ ಕನೀಯಸ್ಯೌ ತಪೋಧನ ॥16॥
ಇವಳು ಅಂಬಾ ಎಂದು ವಿಖ್ಯಾತಳಾದ ಕಾಶಿರಾಜನ ಜ್ಯೇಷ್ಠ ಪುತ್ರಿ. ಎಲೈ ತಪೋಧನರೇ, ಅಂಬಿಕಾ ಅಂಬಾಲಿಕೆಯರು ಬೇರೆ ಮತ್ತು ಇವಳ ತಂಗಿಯರು.
ಸಮೇತಂ ಪಾರ್ಥಿವಂ ಕ್ಷತ್ರಂ ಕಾಶಿಪುರ್ಯಾಂ ತದಾಽಭವತ್ |
ಕನ್ಯಾನಿಮಿತ್ತಂ ವಿಪ್ರರ್ಷೇ ತತ್ರಾಸೀದುತ್ಸವೋ ಮಹಾನ್ ॥17॥
ಎಲೈ ವಿಪ್ರರ್ಷಿಯೇ, ಆಗ ಕಾಶಿಪಟ್ಟಣದಲ್ಲಿ ಕನ್ಯಾನಿಮಿತ್ತವಾಗಿ ಭೂಮಿಯ ಮೇಲಿದ್ದ ಎಲ್ಲಾ ರಾಜರು ಬಂದು ಸೇರಿದ್ದರು. ಅಲ್ಲಿ ದೊಡ್ಡ ಉತ್ಸವವು ನಡೆಯಿತು.
ತತಃ ಕಿಲ ಮಹಾವೀರ್ಯೋ ಭೀಷ್ಮಃ ಶಾಂತನವೋ ನೃಪಾನ್ |
ಅಧಿಕ್ಷಿಪ್ಯ ಮಹಾತೇಜಾಸ್ತಿಸ್ರಃ ಕನ್ಯಾ ಜಹಾರ ತಾಃ ॥18॥
ಆಗ ಮಹಾಪರಾಕ್ರಮಿಯೂ, ಮಹಾತೇಜಸ್ವಿಯೂ ಆದ, ಶಂತನುಪುತ್ರನಾದ ಭೀಷ್ಮನು ಎಲ್ಲ ರಾಜರನ್ನೂ ನಿಂದಿಸಿ ಆ ಮೂರು ಕನ್ಯೆಯರನ್ನೂ ಹರಣ ಮಾಡಿದನು.
ನಿರ್ಜಿತ್ಯ ಪೃಥಿವೀಪಾಲಾನಥ ಭೀಷ್ಮೋ ಗಜಾಹ್ವಯಮ್ |
ಆಜಗಾಮ ವಿಶುದ್ಧಾತ್ಮಾ ಕನ್ಯಾಭಿಃ ಸಹ ಭಾರತ ॥19॥
ಎಲೈ ಭಾರತನೇ, ವಿಶುದ್ಧಾತ್ಮನಾದ ಭೀಷ್ಮನು ಗಜಾಶ್ವಗಳಿಂದ ಕೂಡಿದ ಎಲ್ಲ ರಾಜರನ್ನೂ ಗೆದ್ದು ಕನ್ಯೆಯರ ಜೊತೆಯಲ್ಲಿ ಹಸ್ತಿನಪುರಕ್ಕೆ ಬಂದನು.
ಸತ್ಯವತ್ಯೈ ನಿವೇದ್ಯಾಥ ವಿವಾಹಾರ್ಥಮನಂತರಮ್ |
ಭ್ರಾತುರ್ವಿಚಿತ್ರವೀರ್ಯಸ್ಯ ಸಮಾಜ್ಞಾಪಯತ ಪ್ರಭುಃ ॥20॥
ಮೊದಲು ಸತ್ಯವತಿಗೆ ವಿಷಯವನ್ನು ನಿವೇದಿಸಿ, ಅನಂತರ ತಮ್ಮನಾದ ವಿಚಿತ್ರವೀರ್ಯನ ವಿವಾಹಕ್ಕಾಗಿ ಪ್ರಭುವಾದ ಅವನು ಆಜ್ಞೆ ಮಾಡಿದನು.
ತಂ ತು ವೈವಾಹಿಕಂ ದೃಷ್ಟ್ವಾ ಕನ್ಯೇಯಂ ಸಮುಪಾರ್ಜಿತಮ್ |
ಅಬ್ರವೀತ್ ತತ್ರ ಗಾಂಗೇಯಂ ಮಂತ್ರಿಮಧ್ಯೇ ದ್ವಿಜರ್ಷಭ ॥21॥
ಎಲೈ ದ್ವಿಜಶ್ರೇಷ್ಠನೇ, ಆಗ ವಿವಾಹದ ಸಿದ್ಧತೆಗಳು ನಡೆಯುತ್ತಿರುವುದನ್ನು ನೋಡಿ ಈ ಕನ್ಯೆಯು ಮಂತ್ರಿಗಳ ಮಧ್ಯದಲ್ಲಿ ಭೀಷ್ಮನನ್ನು ಕುರಿತು ಹೀಗೆ ಹೇಳಿದಳು.
ಮಯಾ ಸಾಲ್ವಪತಿರ್ವೀರ ಮನಸಾಽಭಿವೃತಃ ಪತಿಃ |
ನ ಮಾಮರ್ಹಸಿ ಧರ್ಮಜ್ಞ ದಾತುಂ ಭ್ರಾತ್ರೇಽನ್ಯಕಾಮುಕಾಮ್ ॥22॥
ಎಲೈ ವೀರನೇ, ನಾನು ಸಾಲ್ವಪತಿಯನ್ನು ಮನಸ್ಸಿನಿಂದಲೇ ಪತಿಯಾಗಿ ವರಿಸಿದ್ದೇನೆ. ಎಲೈ ಧರ್ಮಜ್ಞನೇ, ಇನ್ನೊಬ್ಬನಲ್ಲಿ ಪ್ರೀತಿ ಇರುವ ನನ್ನನ್ನು ನಿನ್ನ ತಮ್ಮನಿಗೆ ಕೊಡುವುದು ಯುಕ್ತವಲ್ಲ (ಎಂದು ಹೇಳಿದಳು).
ತಚ್ಛ್ರುತ್ವಾ ವಚನಂ ಭೀಷ್ಮಃ ಸಮ್ಮಂತ್ರ್ಯ ಸಹ ಮಂತ್ರಿಭಿಃ |
ನಿಶ್ಚಿತ್ಯ ವಿಸಸರ್ಜೇಮಾಂ ಸತ್ಯವತ್ಯಾ ಮತೇ ಸ್ಥಿತಃ ॥23॥
ಅದನ್ನು ಕೇಳಿದ ಭೀಷ್ಮನು ಮಂತ್ರಿಗಳ ಜೊತೆಯಲ್ಲಿ ಸಮಾಲೋಚನೆಯನ್ನು ಮಾಡಿ, ಏನು ಮಾಡಬೇಕೆಂದು ನಿಶ್ಚಯಿಸಿ, ಸತ್ಯವತಿಯ ಅಭಿಪ್ರಾಯವನ್ನು ಪಡೆದು ಇವಳನ್ನು ಬೀಳ್ಕೊಟ್ಟನು.
ಅನುಜ್ಞಾತಾ ತು ಭೀಷ್ಮೇಣ ಸಾಲ್ವಂ ಸೌಭಪತಿಂ ತತಃ |
ಕನ್ಯೇಯಂ ಮುದಿತಾ ತತ್ರ ಕಾಲೇ ವಚನಮಬ್ರವೀತ್ ॥24॥
ಭೀಷ್ಮನ ಅನುಮತಿಯನ್ನು ಪಡೆದ ಈ ಕನ್ಯೆಯು ಸಂತೋಷದಿಂದ ಕೂಡಿದವಳಾಗಿ, ಯೋಗ್ಯವಾದ ಕಾಲದಲ್ಲಿ ಸೌಭಪತಿಯಾದ ಸಾಲ್ವನನ್ನು ಕುರಿತು ಹೀಗೆ ಮಾತನಾಡಿದಳು.
ವಿಸರ್ಜಿತಾಽಸ್ಮಿ ಭೀಷ್ಮೇಣ ಧರ್ಮಂ ಮಾಂ ಪ್ರತಿಪಾದಯ |
ಮನಸಾಽಭಿವೃತಃ ಪೂರ್ವಂ ಮಯಾ ತ್ವಂ ಪಾರ್ಥಿವರ್ಷಭ ॥25॥
ನಾನು ಭೀಷ್ಮನಿಂದ ಕಳುಹಿಸಲ್ಪಟ್ಟಿದ್ದೇನೆ. ನನ್ನನ್ನು ಧರ್ಮಮಾರ್ಗದಲ್ಲಿ ಯೋಜಿಸುವವನಾಗು. ಎಲೈ ಪಾರ್ಥಿವಶ್ರೇಷ್ಠನೇ, ನಾನು ನಿನ್ನನ್ನು ಮೊದಲೇ ಮನಸ್ಸಿನಲ್ಲಿ ವರಿಸಿದ್ದೇನೆ (ಎಂದು ಹೇಳಿದಳು).
ಪ್ರತ್ಯಾಚಕ್ಷೌ ಚ ಸಾಲ್ವೋಽಸ್ಯಾಶ್ಚಾರಿತ್ರಸ್ಯಾಭಿಶಂಕಿತಃ |
ಸೇಯಂ ತಪೋವನಂ ಪ್ರಾಪ್ತಾ ತಪಸ್ಯಾಭಿರತಾ ಭೃಶಮ್ ॥26॥
ಆದರೆ ಸಾಲ್ವನು ಅವಳ ಶೀಲದ ಬಗ್ಗೆ ಸಂಶಯವನ್ನು ಹೊಂದಿ, ಅವಳನ್ನು ನಿರಾಕರಿಸಿದನು. ಅಂತಹ ಇವಳು ತಪಸ್ಸಿನಲ್ಲಿ ಬಹಳವಾಗಿ ಆಸಕ್ತಳಾಗಿ ತಪೋವನಕ್ಕೆ ಬಂದಿದ್ದಾಳೆ.
ಮಯಾ ಚ ಪ್ರತ್ಯಭಿಜ್ಞಾತಾ ವಂಶಸ್ಯ ಪರಿಕೀರ್ತನಾತ್ |
ಅಸ್ಯ ದುಃಖಸ್ಯ ಚೋತ್ಪತ್ತಿಂ ಭೀಷ್ಮಮೇವೇಹ ಮನ್ಯತೇ ॥ 27॥
ನನ್ನ ವಂಶದ ಹೆಸರನ್ನು ಹೇಳಿದುದರಿಂದ ನಾನು ಅವಳನ್ನು ಗುರುತಿಸಿದೆ. ಅವಳ ಈ ದುಃಖಕ್ಕೆ ಭೀಷ್ಮನೇ ಮೂಲಕಾರಣನೆಂದು ಅವಳು ಭಾವಿಸುತ್ತಾಳೆ.
ಅಂಬಾ

ಭಗವನ್ನೇವಮೇವೈತದ್ ತದಾಹ ಪೃಥಿವೀಪತಿಃ |
ಶರೀರಕರ್ತಾ ಮಾತುರ್ಮೇ ಸೃಂಜಯೋ ಹೋತ್ರವಾಹನಃ ॥28॥
ಅಂಬಾ ನನ್ನ ತಾಯಿಯ ತಂದೆಯಾದ ಹೋತ್ರವಾಹನರಾಜನು ಹೇಳಿದಂತೆಯೇ ಎಲ್ಲವೂ ಸರಿ.
ನ ಹ್ಯುತ್ಸಹೇ ಸ್ವನಗರಂ ಪ್ರತಿಯಾತುಂ ತಪೋಧನ |
ಅವಮಾನಭಯಾಚ್ಚೈವ ವ್ರೀಡಯಾ ಚ ಮಹಾಮುನೇ ॥29॥
ಎಲೈ ತಪೋಧನನೇ, ಮಹರ್ಷಿಯೇ, ಅವಮಾನದ ಭಯದಿಂದಲೂ ಮತ್ತು ನಾಚಿಕೆಯಿಂದಲೂ ನಾನು ಇನ್ನೊಮ್ಮೆ ನನ್ನ ಪಟ್ಟಣಕ್ಕೆ ಹೋಗಲು ಇಚ್ಛೆ ಪಡುವುದಿಲ್ಲ.
ಯತ್ತು ಮಾಂ ಭಗವಾನ್ ರಾಮೋ ವಕ್ಷ್ಯತಿ ದ್ವಿಜಸತ್ತಮ |
ತನ್ಮೇ ಕಾರ್ಯತಮಂ ಕಾರ್ಯಮಿತಿ ಮೇ ಭಗವನ್ ಮತಿಃ ॥30॥
ಎಲೈ ಪೂಜ್ಯನೇ, ಎಲೈ ದ್ವಿಜಶ್ರೇಷ್ಠನೇ, ಭಗವಂತನಾದ ಪರಶುರಾಮನು ನನಗೆ ಏನು ಹೇಳುವನೋ ಅದು ನಾನು ಮಾಡಬೇಕಾದ ಕಾರ್ಯವೆಂದು ನಾನು ತಿಳಿಯುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಟ್ಸಪ್ತತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಷಷ್ಠೋಽಧ್ಯಾಯಃ ॥6॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಎಪ್ಪತ್ತೇಳನೆಯ ಅಧ್ಯಾಯ

ಅಕೃತವ್ರಣನಿಂದ ಭೀಷ್ಮರಿಗೆ ಪ್ರತಿಕಾರ ಮಾಡುವಂತೆ ನಿರ್ಧಾರ.
ಭೀಷ್ಮರನ್ನು ಕೊಲ್ಲುವಂತೆ ಪರಶುರಾಮರಿಗೆ ಅಂಬೆಯ ಪ್ರಾರ್ಥನೆ.
ಅಕೃತವ್ರಣಃ
ದುಃಖಂ ದ್ವಯೋರಿದಂ ಭದ್ರೇ ಕತರಸ್ಯ ಚಿಕೀರ್ಷಸಿ |
ಪ್ರತಿಕರ್ತವ್ಯಮಬಲೇ ತತ್ ತ್ವಂ ವತ್ಸೇ ವದಸ್ವ ಮೇ ॥1॥
ಅಕೃತವ್ರಣ ವತ್ಸೆಯೇ, ನಿನ್ನ ದುಃಖವು ಇಬ್ಬರಿಂದ ಪ್ರಾಪ್ತವಾಗಿದೆ. ಎಲೌ ಅಬಲೆಯೇ, ನೀನು ಯಾರಿಗೆ ಪ್ರತೀಕಾರವನ್ನು ಮಾಡಲು ಬಯಸುತ್ತೀಯೆ ಎಂದು ನನಗೆ ಹೇಳು.
ಯದಿ ಸೌಭಪತಿರ್ಭದ್ರೇ ನಿಯೋಕ್ತವ್ಯೋ ಮತಸ್ತವ |
ನಿಯೋಕ್ಷ್ಯತಿ ಮಹಾತ್ಮಾ ಸ ರಾಮಸ್ತ್ವದ್ಧಿತಕಾಮ್ಯಯಾ ॥2॥
ಎಲೌ ಭದ್ರೆಯೇ, ನಿನಗೆ ಸೌಭಪತಿಯಾದ ಸಾಲ್ವನು ನಿಯಂತ್ರಿಸಲ್ಪಡಬೇಕು ಎಂಬ ಅಭಿಪ್ರಾಯವಿದ್ದರೆ ಮಹಾತ್ಮನಾದ ಪರಶುರಾಮನು ನಿನ್ನ ಹಿತವನ್ನು ಬಯಸಿ ಅವನನ್ನೇ ನಿಯೋಜಿಸುವನು.
ಅಥಾಪಗೇಯಂ ಭೀಷ್ಮಂ ತ್ವಂ ರಾಮೇಣೇಚ್ಛಸಿ ಧೀಮತಾ |
ರಣೇ ವಿನಿರ್ಜಿತಂ ದ್ರಷ್ಟುಂ ಕುರ್ಯಾತ್ ತದಪಿ ಭಾರ್ಗವಃ ॥3॥
ಅಥವಾ ಗಂಗಾಪುತ್ರನಾದ ಭೀಷ್ಮನು ಪರಶುರಾಮನಿಂದ ಯುದ್ಧದಲ್ಲಿ ವಿನಿರ್ಜಿತನಾಗಬೇಕೆಂದು ಬಯಸಿದರೆ ಪರಶುರಾಮನು ಅದನ್ನೂ ಮಾಡವನು.
ಸೃಂಜಯಸ್ಯ ವಚಃ ಶ್ರುತ್ವಾ ತಥೈವ ಚ ಶುಚಿಸ್ಮಿತೇ |
ಯದತ್ರಾನಂತರಂ ಕಾರ್ಯಂ ತದತ್ರೈವ ವಿಚಿಂತ್ಯತಾಮ್ ॥4॥
ಎಲೌ ಶುಚಿಸ್ಮಿತೆಯೇ, ಸೃಂಜಯನಾದ ಹೋತ್ರವಾಹನನ ಮಾತನ್ನೂ ಕೇಳಿ ಮುಂದೆ ಏನು ಮಾಡಬೇಕೆಂದು ಇಲ್ಲಿಯೇ ವಿಚಾರ ಮಾಡು.
ಅಂಬಾ
ಅಪನೀತಾಽಸ್ಮಿ ಭೀಷ್ಮೇಣ ಭಗವನ್ನವಿಜಾನತಾ |
ನ ಹಿ ಜಾನಾತಿ ಮೇ ಭೀಷ್ಮೋ ಬ್ರಹ್ಮನ್ ಸಾಲ್ವಗತಂ ಮನಃ ॥5॥
ಅಂಬಾ ಪೂಜ್ಯನೇ, ಭೀಷ್ಮನು ಅಜ್ಞಾನದಿಂದ ನನ್ನನ್ನು ಕರೆದುಕೊಂಡು ಹೋದನು. ನನ್ನ ಮನಸ್ಸು ಸಾಲ್ವನಲ್ಲಿದೆ ಎಂದು ಅವನು ತಿಳಿದಿರಲಿಲ್ಲ.
ಏತದ್ ವಿಚಾರ್ಯ ಮನಸಾ ಭಗವಾನೇತದ್ ವಿನಿಶ್ಚಯಮ್ |
ವಿಚಿನೋತು ಯಥಾನ್ಯಾಯಂ ವಿಧಾನಂ ಕ್ರಿಯತಾಂ ತಥಾ ॥6॥
ಇದನ್ನು ಮನಸ್ಸಿನಲ್ಲಿ ವಿಚಾರಿಸಿ, ನೀನೇ ಒಂದು ನಿಶ್ಚಯವನ್ನು ಮಾಡುವವನಾಗು. ಅನಂತರ ಅದಕ್ಕೆ ಅನುಗುಣವಾಗಿ ಕಾರ್ಯವು ಮಾಡಲ್ಪಡಲಿ.
ಭೀಷ್ಮೇ ವಾ ಕುರುಶಾರ್ದೂಲೇ ಸಾಲ್ವರಾಜೇಽಥವಾ ಪುನಃ |
ಉಭಯೋರೇವ ವಾ ಬ್ರಹ್ಮನ್ ಯುಕ್ತಂ ಯತ್ ತತ್ ಸಮಾಚರ ॥7॥
ಎಲೈ ಬ್ರಾಹ್ಮಣನೇ, ಕುರುಶಾರ್ದೂಲನಾದ ಭೀಷ್ಮನಿಗೆ ಅಥವಾ ಸೌಭಪತಿಯಾದ ಸಾಲ್ವನಿಗೆ ಅಥವಾ ಇಬ್ಬರಿಗೂ ಯಾವುದು ಯೋಗ್ಯವೋ ಅಂತಹದನ್ನು ಮಾಡುವವನಾಗು.

ನಿವೇದಿತಂ ಮಯಾ ಹ್ಯೇತದ್ ದುಃಖಮೂಲಂ ಯಥಾತಥಮ್ |
ವಿಧಾನಂ ತತ್ರ ಭಗವನ್ ಕರ್ತುಮರ್ಹತಿ ಯುಕ್ತಿತಃ ||8||
ನಾನು ನನ್ನ ದುಃಖದ ಮೂಲಕಾರಣವನ್ನು ಯಥಾರ್ಥವಾಗಿ ತಿಳಿಸಿದ್ದೇನೆ. ಪೂಜ್ಯನೇ, ಯೋಗ್ಯವಾದ ರೀತಿಯಲ್ಲಿ ಅದರ ಪ್ರತೀಕಾರವನ್ನು ನೀನು ಮಾಡಬೇಕು.
ಅಕೃತವ್ರಣಃ
ಉಪಪನ್ನಮಿದಂ ಭದ್ರೇ ಯದೇವಂ ವರವರ್ಣಿನಿ |
ಧರ್ಮ್ಯಂ ಪ್ರತಿವಚೋ ಬ್ರೂಯಾಃ ಶೃಣು ಚೇದಂ ವಚೋ ಮಮ ||9||
ಅಕೃತವ್ರಣ ಎಲೌ ಭದ್ರೆಯೇ, ಸುಂದರಿಯೇ, ನೀನು ಹೀಗೆ ಧರ್ಮಯುಕ್ತವಾದ ಮಾತನ್ನಾಡುತ್ತಿರುವುದು ಯೋಗ್ಯವೇ ಆಗಿದೆ. ಈ ನನ್ನ ಮಾತನ್ನು ಕೇಳು.
ಯದಿ ತ್ವಮಾಪಗೇಯೋ ವೈ ನ ನಯೇದ್ ಗಜಸಾಹ್ವಯಮ್ |
ಸಾಲ್ವಸ್ತ್ವಾಂ ಶಿರಸಾ ಭೀರು ಗೃಹ್ಣೀಯಾದ್ ರಾಮಚೋದಿತಃ ||10||
ಎಲೌ ಭೀರುವೇ, ನಿನ್ನನ್ನು ಭೀಷ್ಮನು ಹಸ್ತಿನಪುರಕ್ಕೆ ಕರೆದುಕೊಂಡು ಹೋಗದೆ ಇದ್ದರೆ ಪರಶುರಾಮನ ಮಾತನ್ನು ಶಿರಸಾ ವಹಿಸಿ ಸಾಲ್ವನು ನಿನ್ನನ್ನು ಸ್ವೀಕರಿಸಿರುತ್ತಿದ್ದನು.
ತೇನ ತ್ವಂ ನಿರ್ಜಿತಾ ಭದ್ರೇ ಯಸ್ಮಾನ್ನೀತಾಽಸಿ ಭಾಮಿನಿ |
ಸಂಶಯಃ ಸಾಲ್ವರಾಜಸ್ಯ ತೇನ ತ್ವಯಿ ಸುಮಧ್ಯಮೇ ||11||
ಎಲೌ ಭದ್ರೆಯೇ, ಭಾಮಿನಿಯೇ, ಭೀಷ್ಮನಿಂದ ನೀನು ನಿರ್ಜಿತಳಾಗಿ ಕರೆದುಕೊಂಡು ಹೋಗಲ್ಪಟ್ಟೆ. ಆ ಕಾರಣದಿಂದ ಸಾಲ್ವರಾಜನಿಗೆ ನಿನ್ನ ವಿಷಯದಲ್ಲಿ ಸಂಶಯವಿದೆ.
ಭೀಷ್ಮಃ ಪುರುಷಮಾನೀ ಚ ಜಿತಕಾಶೀ ತಥೈವ ಚ |
ತಸ್ಮಾತ್ ಪ್ರತಿಕ್ರಿಯಾ ಯುಕ್ತಾ ಭೀಷ್ಮೇ ಕಾರಯಿತುಂ ತ್ವಯಾ ||12||
ಭೀಷ್ಮನು ತನ್ನನ್ನು ಶ್ರೇಷ್ಠಪುರುಷನೆಂದು ತಿಳಿದವನು ಮತ್ತು ಜಯಾಕಾಂಕ್ಷಿಯಾಗಿದ್ದಾನೆ. ಆದ್ದರಿಂದ ಭೀಷ್ಮನಿಗೇ ಪ್ರತೀಕಾರ ಮಾಡಿಸುವುದು ಯೋಗ್ಯವಾಗಿದೆ.
ಅಂಬಾ
ಮಮಾಪ್ಯೇಷ ಸದಾ ಬ್ರಹ್ಮನ್ ಹೃದಿ ಕಾಮೋಽಭಿವರ್ತತೇ |
ಘಾತಯೇಯಂ ಯದಿ ರಣೇ ಭೀಷ್ಮಮಿತ್ಯೇವ ನಿತ್ಯದಾ ||13||
ಅಂಬಾ ಎಲೈ ಬ್ರಾಹ್ಮಣನೇ, ನನಗೂ ಸಹ ಯಾವಾಗಲೂ ಮನಸ್ಸಿನಲ್ಲಿ ಯುದ್ಧದಲ್ಲಿ ಭೀಷ್ಮನನ್ನು ಕೊಲ್ಲಿಸಬೇಕು ಎಂಬ ಆಸೆಯು ಇದೆ.
ಭೀಷ್ಮಂ ವಾ ಸಾಲ್ವರಾಜಂ ವಾ ಯಂ ವಾ ದೋಷೇಣ ಗಚ್ಛಸಿ |
ಪ್ರಶಾಧಿ ತಂ ಮಹಾಬಾಹೋ ಯತ್ಕೃತೇಽಹಂ ಸುದುಃಖಿತಾ ||14||
ಎಲೈ ಮಹಾಬಾಹುವೇ, ಯಾರು ಈ ವಿಷಯದಲ್ಲಿ ದೋಷದಿಂದ ಕೂಡಿದವರು ಎಂದು ನಿರ್ಧರಿಸುತ್ತೀಯೋ ಅವನು ಭೀಷ್ಮನಾಗಲೀ ಅಥವಾ ಸಾಲ್ವನಾಗಲೀ ಅವನಿಗೆ ಶಾಸನವನ್ನು ಮಾಡುವವನಾಗು. ಏಕೆಂದರೆ ಅವನ ನಿಮಿತ್ತದಿಂದಾಗಿ ನಾನು ಬಹಳ ದುಃಖವನ್ನು ಹೊಂದಿದ್ದೇನೆ.
ಭೀಷ್ಮಃ
ಏವಂ ಕಥಯತಾಮೇವ ತೇಷಾಂ ಸ ದಿವಸೋ ಗತಃ |
ರಾತ್ರಿಶ್ಚ ಭರತಶ್ರೇಷ್ಠ ಸುಖಶೀತೋಷ್ಣಮಾರುತಾ ||15||
ಭೀಷ್ಮ ಎಲೈ ಭರತಶ್ರೇಷ್ಠನೇ, ಹೀಗೆ ಅವರು ಮಾತನಾಡುತ್ತಿರುವಂತೆಯೇ ಹಗಲು ಕಳೆದುಹೋಯಿತು. ಹಾಗೆಯೇ ರಾತ್ರಿಯೂ ಸುಖಶೀತೋಷ್ಣಸ್ಪರ್ಶವುಳ್ಳ ವಾಯುವಿನಿಂದ ಕಳೆದು ಹೋಯಿತು.
ತತೋ ರಾಮಃ ಪ್ರಾದುರಾಸೀದ್ ಪ್ರಜ್ವಲನ್ನಿವ ತೇಜಸಾ |
ಶಿಷ್ಯೈಃ ಪರಿವೃತೋ ರಾಜನ್ ಜಟಾಚೀರಧರೋ ಮುನಿಃ ||16||
ಎಲೈ ರಾಜನೇ, ಅನಂತರ ತನ್ನ ಕಾಂತಿಯಿಂದ ಬೆಳಗುತ್ತಾ, ಜಟಾವಲ್ಕಲಗಳನ್ನು ಧರಿಸಿ ಶಿಷ್ಯರಿಂದ ಕೂಡಿದ ಪರಶುರಾಮ ಮುನಿಯು ಪ್ರತ್ಯಕ್ಷನಾದನು.
ಧನುಷ್ಪಾಣಿರದೀನಾತ್ಮಾ ಖಡ್ಗಂ ಬಿಭ್ರತ್ ಪರಶ್ವಧೀ |
ವಿರಜಾ ರಾಜಶಾರ್ದೂಲ ಸೋಽಭ್ಯಯಾತ್ ಸೃಂಜಯಂ ನೃಪಮ್ ||
ಎಲೈ ರಾಜಶಾರ್ದೂಲನೇ, ಧೈರ್ಯಶಾಲಿಯಾದ, ಪರಿಶುದ್ಧನಾದ ಅವನು (ದೈನ್ಯವಿಲ್ಲದ ಅವನು) ಕೈಯಲ್ಲಿ ಧನುಸ್ಸನ್ನೂ, ಖಡ್ಗವನ್ನೂ ಮತ್ತು ಪರಶುವನ್ನೂ ಹಿಡಿದು ಸೃಂಜಯನೃಪನ ಬಳಿಗೆ ಬಂದನು.
ತತಸ್ತಂ ತಾಪಸಾ ದೃಷ್ಟ್ವಾ ಸ ಚ ರಾಜಾ ಮಹಾತಪಾಃ |
ತಸ್ಥುಃ ಪ್ರಾಂಜಲಯೋ ರಾಜನ್ ಸಾ ಚ ಕನ್ಯಾ ತಪಸ್ವಿನೀ ||18||
ಆಗ ಅವನನ್ನು ನೋಡಿ ಮಹಾತಪಸ್ವಿಯಾದ ಸೃಂಜಯನೂ, ಉಳಿದ ತಪಸ್ವಿಗಳೂ ಮತ್ತು ತಪಸ್ವಿನಿಯಾದ ಅಂಬೆಯೂ ಸಹ ಕೈಗಳನ್ನು ಮುಗಿದು ಎದ್ದು ನಿಂತರು.
ಪೂಜಯಾಮಾಸುರವ್ಯಗ್ರಾ ಮಧುಪರ್ಕೇಣ ಭಾರ್ಗವಮ್ |
ಪೂಜಿತಶ್ಚ ಯಥಾನ್ಯಾಯಂ ನಿಷಸಾದ ಸಹೈವ ತೈಃ ||19||

ಅವರು ಶ್ರದ್ಧೆಯಿಂದ ಭಾರ್ಗವರಾಮನನ್ನು ಮಧುಪರ್ಕದಿಂದ ಪೂಜಿಸಿದರು. ವಿಧಿ ಪ್ರಕಾರದಂತೆ ಪೂಜಿಸಲ್ಪಟ್ಟ ಪರಶುರಾಮನು ಅವರ ಜೊತೆಯಲ್ಲಿ ಕುಳಿತನು.
ತತಃ ಪೂರ್ವವ್ಯತೀತಾನಿ ಕಥಯೇತೇ ಸ್ಮ ತಾವುಭೌ |
ಆಸಾತಾಂ ಜಾಮದಗ್ನ್ಯಶ್ಚ ಸೃಂಜಯಶ್ಚೈವ ಭಾರತ ॥20॥
ಎಲೈ ಭಾರತನೇ, ಅನಂತರ ಪರಶುರಾಮ ಸೃಂಜಯರಿಬ್ಬರೂ ಹಿಂದಿನ ಕಥೆಗಳನ್ನು ಹೇಳುತ್ತಾ ಕುಳಿತರು.
ತಥಾ ಕಥಾಂತೇ ರಾಜರ್ಷಿರ್ಭೃಗುಶ್ರೇಷ್ಠಂ ಮಹಾಬಲಮ್ |
ಉವಾಚ ಮಧುರಂ ಕಾಲೇ ರಾಮಂ ವಚನಮರ್ಥವತ್ ॥21॥
ಆ ಮಾತುಗಳು ಮುಗಿದ ಮೇಲೆ ರಾಜರ್ಷಿಯಾದ ಹೋತ್ರವಾಹನನು ಮಹಾಬಲನಾದ, ಭೃಗುಶ್ರೇಷ್ಠನಾದ ಪರಶುರಾಮನನ್ನು ಕುರಿತು ಅರ್ಥವತ್ತಾದ, ಮಧುರವಾದ ಮಾತುಗಳನ್ನು ಯೋಗ್ಯವಾದ ಸಮಯದಲ್ಲಿ ಆಡಿದನು.
ರಾಮೇಯಂ ಮಮ ದೌಹಿತ್ರೀ ಕಾಶಿರಾಜಸುತಾ ಪ್ರಭೋ |
ಅಸ್ಯಾಃ ಶೃಣು ಯಥಾತತ್ತ್ವಂ ಕಾರ್ಯಂ ಕಾರ್ಯವಿಶಾರದ ॥22॥
ಎಲೈ ರಾಮನೇ, ಪ್ರಭುವೇ, ಕಾಶಿರಾಜನ ಮಗಳಾದ ಇವಳು ನನ್ನ ಮಗಳ ಮಗಳು. ಎಲೈ ಕಾರ್ಯವಿಶಾರದನೇ, ಇವಳಿಗೆ ಆಗಬೇಕಾದ ಶ್ರೇಷ್ಠವಾದ ಕಾರ್ಯವನ್ನು ಸರಿಯಾಗಿ ಕೇಳು.
ಪರಮಂ ಕಥ್ಯತಾಂ ಚೇತಿ ತಾಂ ರಾಮಃ ಪ್ರತ್ಯಭಾಷತ |
ತತಃ ಸಾಽಭ್ಯವದದ್ ರಾಮಂ ಜ್ವಲಂತಮಿವ ಪಾವಕಮ್ ॥23॥
ಆಗ ಪರಶುರಾಮನು ಹೇಳು ಎಂದು ಅವರಿಗೆ ಹೇಳಿದನು. ಆಗ ಅವಳು ಜ್ವಲಿಸುವ ಅಗ್ನಿಯಂತಿರುವ ಅವನಿಗೆ ತನ್ನ ಕಥೆಯನ್ನು ಹೇಳಿದಳು.
ತತೋಽಭಿವಾದ್ಯ ಚರಣೌ ರಾಮಸ್ಯ ಶಿರಸಾ ಶುಭಾ |
ಸ್ಪೃಷ್ಟ್ವಾ ಪದ್ಮದಲಾಭಾಭ್ಯಾಂ ಪಾಣಿಭ್ಯಾಮಗ್ರತಃ ಸ್ಥಿತಾ ॥24॥
ಆಗ ಶುಭಳಾದ ಅವಳು ರಾಮನ ಪಾದಗಳಿಗೆ ಶಿರಸಾ ಪ್ರಣಾಮವನ್ನು ಮಾಡಿ ತನ್ನ ಪದ್ಮದಲಗಳಂತಿದ್ದ ಹಸ್ತಗಳಿಂದ ಅವನ ಪಾದಗಳನ್ನು ಮುಟ್ಟಿ ಎದುರಿಗೆ ನಿಂತಳು.
ಪ್ರುರುರೋದ ವರಾರೋಹಾ ಬಾಷ್ಪವ್ಯಾಕುಲಲೋಚನಾ |
ಪ್ರಪೇದೇ ಶರಣಂ ಚೈವ ಶರಣ್ಯಂ ಭೃಗುನಂದನಮ್ ॥25॥
ಸುಂದರಿಯಾದ ಅವಳು ಕಣ್ಣೀರಿನಿಂದ ತುಂಬಿದ ಕಣ್ಣುಳ್ಳವಳಾಗಿ, ಶರಣು ಹೊಂದಲು ಅತ್ಯಂತ ಅರ್ಹನಾದ ಪರಶುರಾಮನನ್ನು ಶರಣು ಹೊಂದಿದಳು.
ರಾಮಃ
ಯಥಾ ತ್ವಂ ಸೃಂಜಯಸ್ಯಾಸ್ಯ ತಥಾ ತ್ವಂ ಮೇ ನೃಪಾತ್ಮಜೇ |
ಬ್ರೂಹಿ ತತ್ ತೇ ಮನೋದುಃಖಂ ಕರಿಷ್ಯೇ ವಚನಂ ತವ ॥26॥
ರಾಮ ಎಲೌ ರಾಜಕುಮಾರಿಯೇ, ನೀನು ಸೃಂಜಯನಿಗೆ ಹೇಗೋ ನನಗೂ ಸಹ ಹಾಗೆಯೇ. ನಿನ್ನ ಮನಸ್ಸಿನ ದುಃಖವನ್ನು ಹೇಳು, ನಿನ್ನ ಮಾತನ್ನು ನಡೆಸುವೆನು.
ಅಂಬಾ
ಭಗವನ್ ಶರಣಂ ತ್ವಾಽದ್ಯ ಪ್ರಪನ್ನಾಽಸ್ಮಿ ಮಹಾವ್ರತಮ್ |
ಶೋಕಪಂಕಾರ್ಣವೇ ಮಗ್ನಾಂ ಘೋರಾದುದ್ಧರ ಮಾಂ ವಿಭೋ ॥27॥
ಅಂಬಾ ಪೂಜ್ಯನೇ, ವಿಭುವೇ, ನಾನು ಈ ದಿನ ಮಹಾವ್ರತಧಾರಿಯಾದ ನಿನಗೆ ಶರಣಾಗತಳಾಗಿದ್ದೇನೆ. ಘೋರವಾದ ದುಃಖವೆಂಬ ಕೆಸರಿನಲ್ಲಿ ಮುಳುಗುತ್ತಿರುವ ನನ್ನನ್ನು ಎತ್ತುವವನಾಗು.
ಭೀಷ್ಮಃ
ತಸ್ಯಾಶ್ಚ ದೃಷ್ಟ್ವಾ ರೂಪಂ ಸ ವಯಶ್ಚಾಭಿನವಂ ಪುನಃ |
ಸೌಕುಮಾರ್ಯಂ ಪರಂ ಚೈವ ರಾಮಶ್ಚಿಂತಾಪರೋಽಭವತ್ ॥28॥
ಭೀಷ್ಮ ಪರಶುರಾಮನು ಅವಳ ರೂಪವನ್ನೂ, ಎಳೆಯ ವಯಸ್ಸನ್ನೂ, ಸುಕುಮಾರವಾದ ಶರೀರವನ್ನೂ ನೋಡಿ ಚಿಂತಾಕ್ರಾಂತನಾದನು.
ಕಿಮಿಯಂ ವಕ್ಷ್ಯತೀತ್ಯೇವಂ ವಿಮೃಶನ್ ಭೃಗುಸತ್ತಮಃ |
ಇತಿ ದಧ್ಯೌ ಚಿರಂ ರಾಮಃ ಕೃಪಯಾಽಭಿಪರಿಪ್ಲುತಃ ॥29॥
ಭೃಗುಶ್ರೇಷ್ಠನಾದ ಪರಶುರಾಮನು ಇವಳು ಏನು ಹೇಳುವವಳು ಎಂದು ವಿಮರ್ಶೆ ಮಾಡುತ್ತಾ, ಅವಳ ಮೇಲೆ ಕೃಪೆಯಿಂದ ಪೂರ್ಣನಾಗಿ ಬಹಳ ಸಮಯದವರೆಗೆ ಧ್ಯಾನ ಮಾಡಿದನು.
ಕಥ್ಯತಾಮಿತಿ ಸಾ ಭೂಯೋ ರಾಮೇಣೋಕ್ತಾ ಶುಚಿಸ್ಮಿತಾ |
ಸರ್ವಮೇವ ಯಥಾತತ್ತ್ವಂ ಕಥಯಾಮಾಸ ಭಾರ್ಗವೇ ॥30॥
ಹೇಳು ಎಂದು ಪರಶುರಾಮನಿಂದ ಪುನಃ ಪ್ರೇರಿಸಲ್ಪಟ್ಟ, ಶುಚಿಸ್ಮಿತೆಯಾದ ಅವಳು ಎಲ್ಲವನ್ನೂ ಯಥಾರ್ಥವಾಗಿ ಅವನಿಗೆ ತಿಳಿಸಿದಳು.

ತಚ್ಛ್ರುತ್ವಾ ಜಾಮದಗ್ನ್ಯಸ್ತು ರಾಜಪುತ್ರ್ಯಾ ವಚಸ್ತದಾ |
ಉವಾಚ ತಾಂ ವರಾರೋಹಾಂ ನಿಶ್ಚಿತ್ಯಾರ್ಥವಿನಿಶ್ಚಯಮ್ ॥31॥

ರಾಜಪುತ್ರಿಯ ಆ ಮಾತುಗಳನ್ನು ಕೇಳಿದ ಪರಶುರಾಮನು ಮಾಡಬೇಕಾದ ಕಾರ್ಯವನ್ನು ಮನಸ್ಸಿನಲ್ಲಿಯೇ ನಿಶ್ಚಯಿಸಿ ಆ ಸುಂದರಿಯನ್ನು ಕುರಿತು ಹೇಳಿದನು.
ಪ್ರೇಷಯಿಷ್ಯಾಮಿ ಭೀಷ್ಮಾಯ ಕುರುಶ್ರೇಷ್ಠಾಯ ಭಾಮಿನಿ |
ಕರಿಷ್ಯತಿ ವಚೋ ಮಹ್ಯಂ ಶ್ರುತ್ವಾ ಧರ್ಮಂ ನರಾಧಿಪಃ ||32||
ಎಲೌ ಭಾಮಿನಿಯೇ, ಕುರುಶ್ರೇಷ್ಠನಾದ ಭೀಷ್ಮನಿಗೆ ನಾನು ದೂತನನ್ನು ಕಳುಹಿಸುವೆನು. ರಾಜನಾದ ಅವನು ಧರ್ಮಯುಕ್ತವಾದ ನನ್ನ ಮಾತನ್ನು ಕೇಳಿ ಅದನ್ನು ನಡೆಸಿಕೊಡುವನು.
ನ ಚೇತ್ ಕರಿಷ್ಯತಿ ವಚೋ ಮಯೋಕ್ತಂ ಜಾಹ್ನವೀಸುತಃ |
ಧಕ್ಷ್ಯಾಮ್ಯೇನಂ ರಣೇ ಭದ್ರೇ ಸಾಮಾತ್ಯಂ ಶಸ್ತ್ರತೇಜಸಾ ||33||
ಗಂಗಾಸುತನಾದ ಅವನು ನನ್ನ ಮಾತನ್ನು ಕೇಳದಿದ್ದರೆ ಎಲೌ ಭದ್ರೆಯೇ, ಅಮಾತ್ಯರಿಂದ ಕೂಡಿದ ಅವನನ್ನು ಯುದ್ಧದಲ್ಲಿ ನನ್ನ ಶಸ್ತ್ರತೇಜಸ್ಸಿನಿಂದ ಸುಟ್ಟು ಬಿಡುವೆನು.
ಅಥವಾ ತೇ ಮತಿಸ್ತತ್ರ ರಾಜಪುತ್ರಿ ನ ವರ್ತತೇ |
ಯಾವತ್ ಸಾಲ್ವಪತಿಂ ವೀರಂ ಯೋಜಯಾಮ್ಯತ್ರ ಕರ್ಮಣಿ ||34||
ಅಥವಾ ರಾಜಕುಮಾರಿಯೇ, ನಿನಗೆ ಆ ಅಭಿಪ್ರಾಯವಿಲ್ಲದಿದ್ದರೆ ವೀರನಾದ ಸಾಲ್ವಪತಿಯನ್ನಾದರೂ ನಾನು ಈ ಕಾರ್ಯದಲ್ಲಿ ಯೋಜಿಸುತ್ತೇನೆ.
ಅಂಬಾ
ವಿಸರ್ಜಿತಾಽಹಂ ಭೀಷ್ಮೇಣ ಶ್ರುತ್ವೈವ ಭೃಗುನಂದನ |
ಸಾಲ್ವರಾಜಗತಂ ಭಾವಂ ಮಮ ಪೂರ್ವಂ ಮನೀಷಿತಮ್ ||35||
ಅಂಬಾ ಎಲ್ಯೆ ಭೃಗುನಂದನನೇ, ನನ್ನ ಪ್ರೀತಿಯು ಮೊದಲೇ ಸಾಲ್ವರಾಜನಲ್ಲಿದೆ ಎಂಬ ಮಾತನ್ನು ಕೇಳಿದ ಭೀಷ್ಮನು ನನ್ನನ್ನು ಕಳುಹಿಸಿಕೊಟ್ಟನು.
ಸೌಭರಾಜಮುಪೇತ್ಯಾಹಮವೋಚಂ ದುರ್ವಚಂ ವಚಃ |
ನ ಚ ಮಾಂ ಪ್ರತ್ಯಗೃಹ್ಣಾತ್ ಸ ಚಾರಿತ್ರಪರಿಶಂಕಿತಃ ||36||
ನಾನು ಸೌಭಪತಿಯಾದ ಸಾಲ್ವನ ಬಳಿಗೆ ಬಂದು ಮಾತನಾಡಲು ಕಷ್ಟವಾದ ಮಾತುಗಳನ್ನು ಆಡಿದೆನು. ನನ್ನ ಶೀಲವನ್ನು ಶಂಕಿಸಿ ಅವನು ನನ್ನನ್ನು ಸ್ವೀಕರಿಸಲಿಲ್ಲ.
ಏತತ್ ಸರ್ವಂ ವಿನಿಶ್ಚಿತ್ಯ ಸ್ವಬುದ್ಧ್ಯಾ ಭೃಗುನಂದನ |
ಯದತ್ರೌಪಯಿಕಂ ಕಾರ್ಯಂ ತಚ್ಚಿಂತಯಿತುಮರ್ಹಸಿ ||37||
ಎಲ್ಯೆ ಭೃಗುನಂದನನೇ, ಇದೆಲ್ಲವನ್ನೂ ನಿನ್ನ ಬುದ್ಧಿಯಿಂದಲೇ ವಿಮರ್ಶೆ ಮಾಡಿ, ಇದರಲ್ಲಿ ಯಾವುದು ಸೂಕ್ತವಾದ ಕಾರ್ಯವೋ ಅದನ್ನು ನಿರ್ಧರಿಸುವವನಾಗು.
ಮಮ ತು ವ್ಯಸನಸ್ಯಾಸ್ಯ ಭೀಷ್ಮೋ ಮೂಲಂ ಮಹಾವ್ರತಃ |
ಯೇನಾಹಂ ವಶಮಾನೀತಾ ಸಮುತ್ಕ್ಷಿಪ್ಯ ಬಲಾತ್ ತದಾ ||38||
ನನ್ನ ಈ ದುಃಖಕ್ಕೆ ಮೂಲಕಾರಣನಾದವನು ಮಹಾವ್ರತನಾದ ಭೀಷ್ಮ. ಏಕೆಂದರೆ ಅವನು ನನ್ನನ್ನು ವಶಪಡಿಸಿಕೊಂಡು ಬಲಾತ್ಕಾರದಿಂದ ನನ್ನನ್ನು ಕಾಶಿಯಿಂದ ಕರೆದುಕೊಂಡು ಹೋದನು.
ಜಹಿ ಭೀಷ್ಮಂ ಮಹಾಬಾಹೋ ಯತ್ಕೃತೇ ದುಃಖಮೀದೃಶಮ್ |
ಪ್ರಾಪ್ತಾಽಹಂ ಭೃಗುಶಾರ್ದೂಲ ಚರಾಮ್ಯಪ್ರಿಯಮುತ್ತಮಮ್ ||39||
ಎಲ್ಯೆ ಭೃಗುಶಾರ್ದೂಲನೇ, ಯಾವ ಭೀಷ್ಮನ ಕಾರಣದಿಂದಾಗಿ ನಾನು ಇಂತಹ ಅಧಿಕವಾದ ದುಃಖವನ್ನು ಅನುಭವಿಸುತ್ತಿದ್ದೇನೆಯೋ ಎಲ್ಯೆ ಮಹಾಬಾಹುವೇ, ಅಂತಹ ಭೀಷ್ಮನನ್ನು ಸಂಹಾರ ಮಾಡು.
ಸ ಹಿ ಲುಬ್ಧಶ್ಚ ಮಾನೀ ಚ ಜಿತಕಾಶೀ ಚ ಭಾರ್ಗವ |
ತಸ್ಮಾತ್ ಪ್ರತಿಕ್ರಿಯಾಂ ಕರ್ತುಂ ಯುಕ್ತಂ ತಸ್ಯೈ ತ್ವಯಾಽನಘ ||40||
ಎಲ್ಯೆ ಭಾರ್ಗವನೇ, ಅವನು ಲೋಭವುಳ್ಳವನು, ಅಹಂಕಾರಿ ಮತ್ತು ಯಾವಾಗಲೂ ಜಯಾಕಾಂಕ್ಷಿ. ಎಲ್ಯೆ ಅನಘನೇ, ಆದ್ದರಿಂದ ಭೀಷ್ಮನಿಗೇ ಪ್ರತಿಕಾರವನ್ನು ಮಾಡುವುದು ಯೋಗ್ಯವಾಗುತ್ತದೆ.
ಏಷ ಮೇ ಹ್ರಿಯಮಾಣಾಯಾ ಭಾರತೇನ ತದಾ ವಿಭೋ |
ಅಭವದ್ ಹೃದಿ ಸಂಕಲ್ಪೋ ಘಾತಯೇಯಂ ಮಹಾವ್ರತಮ್ ||41||
ಎಲ್ಯೆ ವಿಭುವೇ, ನನ್ನನ್ನು ಅವನು ಕಾಶಿಯಿಂದ ರಥದಲ್ಲಿ ಕೂಡಿಸಿಕೊಂಡು ಕರೆದುಕೊಂಡು ಹೋಗುತ್ತಿರುವಾಗಲೇ ಮಹಾವ್ರತನಾದ ಇವನನ್ನು ಕೊಲ್ಲಿಸಿಯೇನು ಎಂಬ ಅಭಿಪ್ರಾಯವು ನನ್ನ ಮನಸ್ಸಿನಲ್ಲಿ ಮೂಡಿತು.
ತಸ್ಮಾತ್ ಕಾಮಂ ಮಮಾದ್ಯೇಮಂ ರಾಮ ಸಂಪಾದಯಾನಘ |
ಜಹಿ ಭೀಷ್ಮಂ ಮಹಾಬಾಹೋ ಯಥಾ ವೃತ್ರಂ ಪುರಂದರಃ ||42||
ಎಲ್ಯೆ ಅನಘನೇ, ಪರಶುರಾಮನೇ, ಈ ನನ್ನ ಮನಸ್ಸಿನ ಆಸೆಯನ್ನು ಈ ದಿನ ಈಡೇರಿಸುವವನಾಗು. ಮಹಾಬಾಹುವೇ, ಇಂದ್ರನು ವೃತ್ರನನ್ನು ಸಂಹರಿಸಿದಂತೆ ಭೀಷ್ಮನನ್ನು ಸಂಹರಿಸು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ ||
|| ಅಂಬೋಪಾಖ್ಯಾನಪರ್ವಣಿ ಸಪ್ತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೆಂಟನೆಯ ಅಧ್ಯಾಯ
ಪರಶುರಾಮರಿಂದ ಅಂಬೆಯನ್ನು ಕರೆದುಕೊಂಡು ಕುರುಕ್ಷೇತ್ರಕ್ಕೆ ಗಮನ.
ಭೀಷ್ಮಃ
ಏವಮುಕ್ತಸ್ತದಾ ರಾಮೋ ಜಹಿ ಭೀಷ್ಮಮಿತಿ ಪ್ರಭೋ |
ಉವಾಚ ರುದತೀಂ ಕನ್ಯಾಂ ಚೋದಯಂತೀಂ ಪುನಃ ಪುನಃ ॥1॥
ಭೀಷ್ಮ ಎಲೈ ಪ್ರಭುವೇ, ಹೀಗೆ ಭೀಷ್ಮನನ್ನು ಕೊಲ್ಲು ಎಂದು ಪುನಃ ಪುನಃ ಹೇಳಲ್ಪಟ್ಟ ಪರಶುರಾಮನು ಅಳುತ್ತಿದ್ದ, ಪುನಃ ಪುನಃ ಒತ್ತಾಯ ಮಾಡುತ್ತಿದ್ದ ಆ ಕನ್ಯೆಯನ್ನು ಕುರಿತು ಮಾತನಾಡಿದನು.
ಕಾಶ್ಯೇ ಕಾಮಂ ನ ಗೃಹ್ಣಾಮಿ ಶಸ್ತ್ರಂ ವೈ ವರವರ್ಣಿನಿ |
ಋತೇ ಬ್ರಹ್ಮವಿದಾಂ ಹೇತೋಃ ಕಿಮನ್ಯತ್ ಕರವಾಣಿ ತೇ ॥2॥
ಕಾಶಿರಾಜನ ಪುತ್ರಿಯಾದ ಸುಂದರಿಯೇ, ನಾನು ಬ್ರಾಹ್ಮಣರ ಸಲುವಾಗಿ ಶಸ್ತ್ರವನ್ನು ಹಿಡಿಯುವುದನ್ನು ಬಿಟ್ಟು ನನ್ನ ಇಚ್ಛೆಯಿಂದ ಶಸ್ತ್ರವನ್ನು ಹಿಡಿಯುವುದಿಲ್ಲ. ನಿನಗೆ ಬೇರೆ ಏನನ್ನು ಮಾಡಲಿ?
ವಾಚಾ ಭೀಷ್ಮಶ್ಚ ಸಾಲ್ವಶ್ಚ ಮಮ ರಾಜ್ಞಿ ವಶಾನುಗೌ |
ಭವಿಷ್ಯತೋಽನವದ್ಯಾಂಗಿ ತತ್ ಕರಿಷ್ಯಾಮಿ ಮಾ ಶುಚಃ ॥3॥
ಎಲೌ ರಾಜಕುಮಾರಿಯೇ, ನಿರ್ದುಷ್ಟ ಅವಯವವುಳ್ಳವಳೇ, ಭೀಷ್ಮ ಮತ್ತು ಸಾಲ್ವರಿಬ್ಬರೂ ನನ್ನ ಮಾತಿಗೆ ವಶವರ್ತಿಗಳಾಗುವರು. ಆದ್ದರಿಂದ ನಿನ್ನ ಆಸೆಯನ್ನು ನೆರವೇರಿಸುವೆನು, ಶೋಕಪಡಬೇಡ.
ನ ತು ಶಸ್ತ್ರಂ ಗ್ರಹೀಷ್ಯಾಮಿ ಕಥಂಚಿದಪಿ ಭಾಮಿನಿ |
ಋತೇ ನಿಯೋಗಾದ್ ವಿಪ್ರಾಣಾಮೇಷ ಮೇ ಸಮಯಃ ಕೃತಃ ॥4॥
ಆದರೆ ಎಲೌ ಕೋಪವುಳ್ಳ ವನಿತೆಯೇ, ಬ್ರಾಹ್ಮಣರ ಆದೇಶವಿಲ್ಲದೆ ನಾನು ಎಂದೂ ಶಸ್ತ್ರವನ್ನು ಹಿಡಿಯುವುದಿಲ್ಲ. ಇದು ನಾನು ಮಾಡಿರುವ ಪ್ರತಿಜ್ಞೆ.
ಅಂಬಾ
ಮಮ ದುಃಖಂ ಭಗವತಾ ವ್ಯಪನೇಯಂ ಯತಸ್ತತಃ |
ತಚ್ಚ ಭೀಷ್ಮಪ್ರಸೂತಂ ಮೇ ತಂ ಜಹೀಶ್ವರ ಮಾಚಿರಮ್ ॥5॥
ಅಂಬಾ ನನಗೆ ಯಾವ ಕಾರಣದಿಂದ ದುಃಖವುಂಟಾಗಿದೆಯೋ ಆ ಕಾರಣವನ್ನು ಪರಿಹರಿಸಬೇಕು. ನನ್ನ ದುಃಖಕ್ಕೆ ಭೀಷ್ಮನು ಕಾರಣ. ಆದ್ದರಿಂದ ಅವನನ್ನು ಶೀಘ್ರವಾಗಿ ಸಂಹರಿಸು.
ರಾಮಃ
ಕಾಶಿಕನ್ಯೇ ಪುನರ್ಬ್ರೂಹಿ ಭೀಷ್ಮಸ್ತೇ ಚರಣಾವುಭೌ |
ಶಿರಸಾ ವಂದನಾರ್ಹೋಽಪಿ ಗ್ರಹೀಷ್ಯತಿ ಗಿರಾ ಮಮ ॥6॥
ರಾಮ ಕಾಶಿಕನ್ಯೆಯೇ, ಪುನಃ ಹೇಳು. ನಮಸ್ಕಾರಕ್ಕೆ ಯೋಗ್ಯನಾದರೂ ಸಹ ಭೀಷ್ಮನು ನನ್ನ ಮಾತಿನಂತೆ ನಿನ್ನ ಪಾದಗಳಿಗೆ ನಮಸ್ಕರಿಸುವನು.
ಅಂಬಾ
ಜಹಿ ಭೀಷ್ಮಂ ರಣೇ ವೀರ ಮಮ ಚೇದಿಚ್ಛಸಿ ಪ್ರಿಯಮ್ |
ಪ್ರತಿಶ್ರುತಂ ಚ ಯದಿದಂ ತತ್ಸತ್ಯಂ ಕರ್ತುಮರ್ಹಸಿ ॥7॥
ಅಂಬಾ ಎಲೈ ವೀರನೇ, ನನಗೆ ಪ್ರಿಯವನ್ನು ಮಾಡುವುದಾದರೆ ಭೀಷ್ಮನನ್ನು ಕೊಲ್ಲು. ನೀನು ಮುಂಚೆಯೇ ಮಾಡಿದ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡಬೇಕು.
ಭೀಷ್ಮಃ
ತಯೋಃ ಸಂವದತೋರೇವಂ ರಾಜನ್ ರಾಮಾಂಬಯೋಸ್ತದಾ |
ಅಕೃತವ್ರಣೋ ಜಾಮದಗ್ನ್ಯಮಿದಂ ವಚನಮಬ್ರವೀತ್ ॥8॥
ಭೀಷ್ಮ ಎಲೈ ರಾಜನೇ, ಪರಶುರಾಮ ಮತ್ತು ಅಂಬೆಯರು ಹೀಗೆ ಮಾತನಾಡುತ್ತಿದ್ದಾಗ ಅಕೃತವ್ರಣನು ಪರಶುರಾಮನನ್ನು ಕುರಿತು ಮಾತನಾಡಿದನು.
ಶರಣಾಗತಾಂ ಮಹಾಬಾಹೋ ಕನ್ಯಾಂ ನ ತ್ಯಕ್ತುಮರ್ಹಸಿ |
ಜಹಿ ಭೀಷ್ಮಂ ರಣೇ ರಾಮ ಗರ್ಜಂತಮಸುರಂ ಯಥಾ ॥9॥
ಎಲೈ ಮಹಾಬಾಹುವೇ, ಶರಣಾಗತಳಾದ ಈ ಕನ್ಯೆಯನ್ನು ಪರಿತ್ಯಜಿಸುವುದು ಯೋಗ್ಯವಲ್ಲ. ಎಲೈ ರಾಮನೇ, ಅಸುರನಂತೆ ಗರ್ಜಿಸುತ್ತಿರುವ ಭೀಷ್ಮನನ್ನು ಯುದ್ಧದಲ್ಲಿ ಕೊಲ್ಲುವವನಾಗು.
ಯದಿ ಭೀಷ್ಮೋ ರಣೇ ರಾಮ ಸಮಾಹೂತಸ್ತ್ವಯಾ ಮೃಧೇ |
ನಿರ್ಜಿತೋಽಸ್ಮೀತಿ ವಾ ಬ್ರೂಯಾತ್ ಕುರ್ಯಾದ್ ವಾ ವಚನಂ ತವ ॥
ಕೃತಮಸ್ಯಾ ಭವೇತ್ ಕಾರ್ಯಂ ಕನ್ಯಾಯಾ ಭೃಗುನಂದನ |
ವಾಕ್ಯಂ ಸತ್ಯಂ ಚ ತೇ ವೀರ ಭವಿಷ್ಯತಿ ಕೃತಂ ವಿಭೋ ॥11॥

ಎಲೈ ರಾಮನೇ, ಯುದ್ಧಕ್ಕೆ ಆಹ್ವಾನಿಸಲ್ಪಟ್ಟ ಭೀಷ್ಮನು ನಾನು ಸೋತಿದ್ದೇನೆ ಎಂದು ಹೇಳಿದರೆ ಅಥವಾ ನಿನ್ನ ಮಾತನ್ನು ಕೇಳಿದರೆ ಈ ಕನ್ಯೆಯ ಕಾರ್ಯವು ನೆರವೇರಿದಂತಾದೀತು. ಎಲೈ ಭೃಗುನಂದನನೇ, ವೀರನೇ, ವಿಭುವೇ, ನೀನು ಆಡಿದ ಮಾತೂ ಸಹ ಸತ್ಯವಾಗುವುದು.
ಇಯಂ ಚಾಪಿ ಪ್ರತಿಜ್ಞಾ ತೇ ತದಾ ರಾಮ ಮಹಾಮುನೇ ॥12॥
ಜಿತ್ವಾ ವೈ ಕ್ಷತ್ರಿಯಾನ್ ಸರ್ವಾನ್ ಬ್ರಾಹ್ಮಣೇಷು ಪ್ರತಿಶ್ರುತಾ ॥13॥
ಎಲೈ ಮಹಾಮುನಿಯಾದ ರಾಮನೇ, ಇದೂ ಸಹ ಕ್ಷತ್ರಿಯರನ್ನು ಗೆದ್ದು ನೀನು ಎಲ್ಲಾ ಬ್ರಾಹ್ಮಣರಲ್ಲಿ ಮಾಡಿದ ಪ್ರತಿಜ್ಞೆ.
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚೈವ ರಣೇ ಯದಿ |
ಬ್ರಹ್ಮದ್ವಿಡ್ ಭವಿತಾ ತಂ ವೈ ಹನಿಷ್ಯಾಮೀತಿ ಭಾರ್ಗವ ॥14॥
ಎಲೈ ಭಾರ್ಗವನೇ, ಬ್ರಾಹ್ಮಣನಾಗಲೀ, ಕ್ಷತ್ರಿಯನಾಗಲೀ, ವೈಶ್ಯನಾಗಲೀ ಅಥವಾ ಶೂದ್ರನಾಗಲೀ ಬ್ರಾಹ್ಮಣ ದ್ವೇಷವನ್ನು ಮಾಡಿದರೆ ಯುದ್ಧದಲ್ಲಿ ಅವನನ್ನು ಕೊಲ್ಲುವೆನು ಎಂಬುದು (ನಿನ್ನ ಪ್ರತಿಜ್ಞೆ).
ಶರಣಂ ಹಿ ಪ್ರಪನ್ನಾನಾಂ ಭೀತಾನಾಂ ಜೀವಿತಾರ್ಥಿನಾಮ್ |
ನ ಶಕ್ಷ್ಯಾಮಿ ಪರಿತ್ಯಾಗಂ ಕರ್ತುಂ ಜೀವನ್ ಕಥಂಚನ ॥15॥
ಯಾರು ಭಯಗ್ರಸ್ತರಾಗಿ ಜೀವಿಸಲು ಬಯಸಿ ಶರಣಾಗತರಾಗುವರೋ ಅವರನ್ನು ನಾನು ಬದುಕಿರುವವರೆಗೆ ಯಾವ ಕಾರಣದಿಂದಲೂ ಪರಿತ್ಯಾಗ ಮಾಡುವುದಿಲ್ಲ (ಎಂಬುದೂ ನಿನ್ನ ಪ್ರತಿಜ್ಞೆ).
ಯಶ್ಚ ಕ್ಷತ್ರಂ ರಣೇ ಕೃತ್ಸ್ನಂ ವಿಜೇಷ್ಯತಿ ಸಮಾಗತಮ್ |
ದೃಪ್ತಾತ್ಮಾನಮಹಂ ತಂ ಚ ಹನಿಷ್ಯಾಮೀತಿ ಭಾರ್ಗವ ॥16॥
ಎಲೈ ಭಾರ್ಗವನೇ, ಯಾವನು ಯುದ್ಧದಲ್ಲಿ ಎದುರಾದ ಸಮಸ್ತ ಕ್ಷತ್ರಿಯರನ್ನು ಗೆದ್ದು, ದರ್ಪದಿಂದ ಕೂಡಿರುತ್ತಾನೆಯೋ ಅವನನ್ನೂ ಕೊಲ್ಲುವೆನೆಂದು (ನಿನ್ನ ಪ್ರತಿಜ್ಞೆ).
ಸ ಏಷ ವಿಜಯೀ ರಾಮ ಭೀಷ್ಮಃ ಕುರುಕುಲೋದ್ವಹಃ |
ತೇನ ಯುಧ್ಯಸ್ವ ಸಂಗ್ರಾಮೇ ಸಮೇತ್ಯ ಭೃಗುನಂದನ ॥17॥
ಎಲೈ ರಾಮನೇ, ಕುರುಕುಲೋದ್ವಹನಾದ ಈ ಭೀಷ್ಮನು ಎಲ್ಲ ಕ್ಷತ್ರಿಯರನ್ನು ಗೆದ್ದವನು. ಎಲೈ ಭೃಗುನಂದನನೇ, ಅವನ ಜೊತೆಯಲ್ಲಿ ಯುದ್ಧವನ್ನು ಮಾಡುವವನಾಗು.
ರಾಮಃ
ಸ್ಮರಾಮ್ಯಹಂ ಪೂರ್ವಕೃತಾಂ ಪ್ರತಿಜ್ಞಾಮೃಷಿಸತ್ತಮ |
ತಥೈವ ಚ ಕರಿಷ್ಯಾಮಿ ಯಥಾ ಸಾಮ್ನೈವ ಲಪ್ಸ್ಯತೇ ॥18॥
ರಾಮ ಎಲೈ ಋಷಿಶ್ರೇಷ್ಠನೇ, ನಾನು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಸ್ಮರಿಸುತ್ತಿದ್ದೇನೆ. ಸಾಮೋಪಾಯದಿಂದಲೇ ಎಲ್ಲವೂ ಲಭ್ಯವಾಗುವಂತೆ ಪ್ರಯತ್ನವನ್ನು ಮಾಡುವೆನು.
ಕಾರ್ಯಮೇತನ್ಮಹದ್ ಬ್ರಹ್ಮನ್ ಕಾಶಿಕನ್ಯಾಮನೋಗತಮ್ |
ಗಮಿಷ್ಯಾಮಿ ಸ್ವಯಂ ತತ್ರ ಕನ್ಯಾಮಾದಾಯ ಯತ್ರ ಸಃ ॥19॥
ಎಲೈ ಬ್ರಾಹ್ಮಣನೇ, ಕಾಶಿಕನ್ಯೆಯ ಮನಸ್ಸಿನಲ್ಲಿರುವ ಈ ಕಾರ್ಯವು ಬಹಳ ದೊಡ್ಡದು. ಆದ್ದರಿಂದ ಅವಳನ್ನು ಕರೆದುಕೊಂಡು ಭೀಷ್ಮನಿರುವಲ್ಲಿಗೆ ನಾನೇ ಹೋಗುವೆನು.
ಯದಿ ಭೀಷ್ಮೋ ರಣಶ್ಲಾಘೀ ನ ಕರಿಷ್ಯತಿ ಮದ್ವಚಃ |
ಹನಿಷ್ಯಾಮ್ಯಹಮುದ್ರಿಕ್ತಮಿತಿ ಮೇ ನಿಶ್ಚಿತಾ ಮತಿಃ ॥20॥
ರಣವನ್ನು ಬಯಸುವ ಭೀಷ್ಮನು ನನ್ನ ಮಾತನ್ನು ನೆರವೇರಿಸದಿದ್ದರೆ ಉದ್ರಿಕ್ತವಾದ ಅವನನ್ನು ಕೊಲ್ಲುವೆನು ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ನ ಹಿ ಬಾಣಾ ಮಯೋತ್ಸೃಷ್ಟಾಃ ಸಜ್ಜಂತೀಹ ಶರೀರಿಣಾಮ್ |
ಕಾಯೇಷು ವಿದಿತಂ ತುಭ್ಯಂ ಪುರಾ ಕ್ಷತ್ರಿಯಸಂಗರೇ ॥21॥
ನಾನು ಕ್ಷತ್ರಿಯರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಪ್ರಯೋಗಿಸುವ ಬಾಣಗಳು ಶತ್ರುಗಳ ಶರೀರದಲ್ಲಿಯೇ ಉಳಿಯುವುದಿಲ್ಲವೆಂಬುದು ನಿನಗೆ ಮೊದಲಿನಿಂದಲೂ ತಿಳಿದಿದೆ (ಬಾಣಗಳು ಶರೀರವನ್ನು ಭೇದಿಸಿಕೊಂಡು ಮುಂದೆ ಸಾಗುತ್ತವೆ ಎಂದು ಅಭಿಪ್ರಾಯ).
ಭೀಷ್ಮಃ
ಏವಮುಕತ್ವ ತತೋ ರಾಮಃ ಸಹ ತೈರ್ಬ್ರಹ್ಮವಾದಿಭಿಃ |
ಪ್ರಯಾಣಾಯ ಮತಿಂ ಕೃತ್ವಾ ಸಮುತ್ತಸ್ಥೌ ಮಹಾತಪಾಃ ॥22॥
ಭೀಷ್ಮ ಹೀಗೆ ಹೇಳಿ ಮಹಾತಪಸ್ವಿಯಾದ ಪರಶುರಾಮನು ಪ್ರಯಾಣವನ್ನು ಮಾಡಲು ನಿರ್ಧರಿಸಿ, ಆ ಬ್ರಹ್ಮವಾದಿಗಳ ಜೊತೆಯಲ್ಲಿ ಎದ್ದುನಿಂತನು.
ತತಸ್ತೇ ತಾಮುಷಿತ್ವಾ ತು ರಜನೀಂ ತತ್ರ ತಾಪಸಾಃ |
ಹುತಾಗ್ನಯೋ ಜಪ್ತಜಪ್ಯಾಃ ಪ್ರತಸ್ಥುರ್ಮಜ್ಜಿಘಾಂಸಯಾ ॥23॥
ಅನಂತರ ಆ ತಾಪಸರು ಆ ರಾತ್ರಿಯನ್ನು ಅಲ್ಲಿಯೇ ಕಳೆದು, ಪ್ರಾತಃಕಾಲದಲ್ಲಿ ಅಗ್ನಿಯಲ್ಲಿ ಹೋಮವನ್ನು ಮಾಡಿ, ಆಹ್ನಿಕವನ್ನು ಮುಗಿಸಿ, ನನ್ನನ್ನು ಕೊಲ್ಲುವ ಉದ್ದೇಶದಿಂದ ಹೊರಟರು.
ಅಭ್ಯಾಗಚ್ಛತ್ ತತೋ ರಾಮಃ ಸಹ ತೈರ್ಬ್ರಹ್ಮವಾದಿಭಿಃ |

ಕುರುಕ್ಷೇತ್ರಂ ಮಹಾರಾಜ ಕನ್ಯಯಾ ಸಹ ಭಾರ್ಗವಃ ॥24॥
ಎಲೈ ಮಹಾರಾಜನೇ, ಅನಂತರ ಭಾರ್ಗವನಾದ ಪರಶುರಾಮನು ಆ ಬ್ರಹ್ಮಾದಿಗಳ ಮತ್ತು ಆ ಕನ್ಯೆಯ ಜೊತೆಯಲ್ಲಿ ಕುರುಕ್ಷೇತ್ರಕ್ಕೆ ಬಂದನು.
ನ್ಯವಿಶಂತ ತತಃ ಸರ್ವೇ ಪರಿಗೃಹ್ಯ ಸರಸ್ವತೀಮ್ |
ತಾಪಸಾಸ್ತೇ ಮಹಾತ್ಮಾನೋ ಭೃಗುಶ್ರೇಷ್ಠಪುರಸ್ಕೃತಾಃ ॥25॥
ಭೃಗುಶ್ರೇಷ್ಠನಾದ ಪರಶುರಾಮನನ್ನು ಮುಂದೆ ಮಾಡಿಕೊಂಡ ಮಹಾತ್ಮರಾದ ಆ ತಪಸ್ವಿಗಳು ಸರಸ್ವತೀ ನದಿಯ ತೀರದಲ್ಲಿ ತಂಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ
ಭೀಷ್ಮರಿಂದ ಪರಶುರಾಮರಿಗೆ ಯುದ್ಧಾಹ್ವಾನ.
ಭೀಷ್ಮಃ
ತತಸ್ತೃತೀಯೇ ದಿವಸೇ ಸಮೇ ದೇಶೇ ವ್ಯವಸ್ಥಿತಃ |
ಪ್ರೇಷಯಾಮಾಸ ಮೇ ರಾಜನ್ ಪ್ರಾಪ್ತೋಽಸ್ಮೀತಿ ಮಹಾವ್ರತಃ ॥1॥
ಭೀಷ್ಮ ಎಲೈ ರಾಜನೇ, ಅನಂತರ ಮೂರನೆಯ ದಿವಸದಲ್ಲಿ ಒಂದು ಸಮತಟ್ಟಾದ ಪ್ರದೇಶದಲ್ಲಿ ಇರುವವನಾಗಿ ಮಹಾವ್ರತರಾದ ಪರಶುರಾಮರು, ನಾನು ಬಂದಿದ್ದೇನೆ ಎಂಬ ಸಂದೇಶವನ್ನು ನನಗೆ ಕಳುಹಿಸಿದರು.
ತಮಾಗತಮಹಂ ಶ್ರುತ್ವಾ ವಿಷಯಾಂತಂ ಮಹಾಬಲಮ್ |
ಅಭ್ಯಗಚ್ಛಂ ಜವೇನಾಶು ಪ್ರೀತ್ಯಾ ತೇಜೋನಿಧಿಂ ಪ್ರಭುಮ್ ॥2॥
ಮಹಾಬಲರಾದ ಅವರು ನನ್ನ ದೇಶದ ಕೊನೆಯ ಭಾಗದಲ್ಲಿ ಇರುವುದನ್ನು ಕೇಳಿ ನಾನು ತೇಜೋನಿಧಿಗಳೂ, ಪ್ರಭುಗಳೂ ಆದ ಅವರ ಮೇಲಿನ ಪ್ರೀತಿಯಿಂದ ಶೀಘ್ರವಾಗಿ ಅವರ ಬಳಿಗೆ ಹೋದೆನು.
ಗಾಂ ಪುರಸ್ಕೃತ್ಯ ರಾಜೇಂದ್ರ ಬ್ರಾಹ್ಮಣೈಃ ಪರಿವಾರಿತಃ |
ಋತ್ವಿಗ್ಭಿರ್ದೇವಕಲ್ಪೈಶ್ಚ ತಥೈವ ಚ ಪುರೋಹಿತೈಃ ॥3॥
ಎಲೈ ರಾಜೇಂದ್ರನೇ, ಗೋವನ್ನು ಮುಂದೆ ಮಾಡಿಕೊಂಡು, ಬ್ರಾಹ್ಮಣರಿಂದ ಪರಿವೃತನಾಗಿ, ದೇವತೆಗಳಂತಿದ್ದ ಋತ್ವಿಜರಿಂದಲೂ ಮತ್ತು ಪುರೋಹಿತರಿಂದಲೂ ಕೂಡಿದವನಾಗಿ ಅವರ ಬಳಿಗೆ ಹೋದೆನು.
ಸ ಮಾಮಭಿಗತಂ ದೃಷ್ಟ್ವಾ ಜಾಮದಗ್ನ್ಯಃ ಪ್ರತಾಪವಾನ್ |
ಪ್ರತಿಜಗ್ರಾಹ ತಾಂ ಪೂಜಾಂ ವಚನಂ ಚೇದಮಬ್ರವೀತ್ ॥4॥
ಪ್ರತಾಪಶಾಲಿಗಳಾದ, ಜಮದಗ್ನಿಪುತ್ರರಾದ ಅವರು ನಾನು ಬಂದುದನ್ನು ನೋಡಿ ಪೂಜೆಯನ್ನು ಸ್ವೀಕರಿಸಿ, ಈ ಮಾತನ್ನಾಡಿದರು.
ಭೀಷ್ಮ ಕಾಂ ಬುದ್ಧಿಮಾಸ್ಥಾಯ ಕಾಶಿರಾಜಸುತಾ ತ್ವಯಾ |
ಅಕಾಮೇಯಮಿಹಾನೀತಾ ಪುನಶ್ಚೈವ ವಿಸರ್ಜಿತಾ ॥5॥
ಭೀಷ್ಮನೇ, ಯಾವ ಅಭಿಪ್ರಾಯದಿಂದ ನೀನು ಇಷ್ಟವಿಲ್ಲದ ಈ ಕಾಶಿರಾಜಕುಮಾರಿಯನ್ನು ಕರೆದುಕೊಂಡು ಹೋಗಿ ಪುನಃ ಪರಿತ್ಯಾಗವನ್ನು ಮಾಡಿದೆ?
ವಿಭ್ರಂಶಿತಾ ತ್ವಯಾ ಹೀಯಂ ಧರ್ಮಾದಾಸ್ತೇ ಯಶಸ್ವಿನೀ |
ಪರಾಮೃಷ್ಟಾಂ ತ್ವಯಾ ಹೀಮಾಂ ಕೋ ಹಿ ಗಂತುಮಿಹಾರ್ಹತಿ ॥6॥
ಯಶಸ್ವಿನಿಯಾದ ಇವಳು ನಿನ್ನಿಂದ ಧರ್ಮಭ್ರಷ್ಟಳಾಗಿದ್ದಾಳೆ. ನೀನು ಕರೆದುಕೊಂಡು ಹೋದ ಅವಳನ್ನು ಬೇರೆ ಯಾವನು ವಿವಾಹವಾಗುತ್ತಾನೆ?
ಪ್ರತ್ಯಾಖ್ಯಾತಾ ಹಿ ಸಾಲ್ವೇನ ತ್ವಯಾ ನೀತೇತಿ ಭಾರತ |
ತಸ್ಮಾದಿಮಾಂ ಮನ್ನಿಯೋಗಾತ್ ಪ್ರತಿಗೃಹ್ಣೀಷ್ವ ಭಾರತ ॥7॥
ಎಲೈ ಭಾರತನೇ, ನೀನು ಕರೆದುಕೊಂಡು ಹೋದೆ ಎಂಬ ಕಾರಣದಿಂದ ಸಾಲ್ವನು ಅವಳನ್ನು ನಿರಾಕರಿಸಿದ್ದಾನಷ್ಟೆ! ಆದ್ದರಿಂದ ಭಾರತನೇ, ನನ್ನ ಆದೇಶದಂತೆ ಇವಳನ್ನು ಸ್ವೀಕರಿಸು.
ಸ್ವಧರ್ಮಂ ಪುರುಷವ್ಯಾಘ್ರ ರಾಜಪುತ್ರೀ ಲಭತ್ವಿಯಮ್ |
ನ ಯುಕ್ತಮವಮಾನೋಽಯಂ ರಾಜ್ಞಾ ಕರ್ತುಂ ತ್ವಯಾಽನಘ ॥8॥
ಎಲೈ ಪುರುಷವ್ಯಾಘ್ರನೇ, ಈ ರಾಜಪುತ್ರಿಯು ತನ್ನ ಧರ್ಮವನ್ನು ಹೊಂದಲಿ. ಎಲೈ ಅನಘನೇ, ರಾಜನಾದ ನೀನು ಹೀಗೆ ಅವಮಾನವನ್ನು ಮಾಡುವುದು ಸರಿಯಲ್ಲ (ಎಂದು ಹೇಳಿದರು).
ಭೀಷ್ಮಃ
ತತಸ್ತಂ ವೈ ವಿಮನಸಮುದೀಕ್ಷ್ಯಾಹಮಥಾಬ್ರುವಮ್ |
ನಾಹಮೇನಾಂ ಪುನರ್ದದ್ಯಾಂ ಬ್ರಹ್ಮನ್ ಭ್ರಾತ್ರೇ ಕಥಂಚನ ॥9॥

ಸಾಲ್ವಸ್ಯಾಹಮಿತಿ ಪ್ರಾಹ ಪುರಾ ಮಾಮೇವ ಭಾರ್ಗವ |
ಮಯಾ ಚೈವಾಭ್ಯನುಜ್ಞಾತಾ ಗತಾ ಸೌಭಪುರಂ ಪ್ರತಿ ||10||
ನ ಭಯಾನ್ನಾಪ್ಯನುಕ್ರೋಶಾನ್ನ ಲೋಭಾನ್ನಾರ್ಥಕಾಮ್ಯಯಾ |
ಕ್ಷಾತ್ರಂ ಧರ್ಮಮಹಂ ಜಹ್ಯಾಮಿತಿ ಮೇ ವ್ರತಮಾಹಿತಮ್ ||11||
ಭೀಷ್ಮ ಆಗ ನಾನು ಅಸಂತುಷ್ಟರಾಗಿದ್ದ ಅವರನ್ನು ನೋಡಿ `ಬ್ರಾಹ್ಮಣರೇ, ನಾನು ಪುನಃ ಇವಳನ್ನು ನನ್ನ ತಮ್ಮನಿಗೆ ಕೊಡುವುದಿಲ್ಲ. ಇವಳು ಹಿಂದೆ ನನ್ನ ಬಳಿಯಲ್ಲಿಯೇ ನನಗೆ ಸಾಲ್ವನಲ್ಲಿ ಪ್ರೀತಿಯಿದೆ ಎಂದು ಹೇಳಿದಳು. ನಾನು ಅನುಮತಿಯನ್ನು ನೀಡಿದ ಮೇಲೆ ತಾನಾಗಿಯೇ ಸಾಲ್ವನ ಪಟ್ಟಣಕ್ಕೆ ಹೋದಳು. ಭಯದಿಂದಲಾಗಲೀ, ದಾಕ್ಷಿಣ್ಯದಿಂದಾಗಲೀ, ಲೋಭದಿಂದಾಗಲೀ ಅಥವಾ ದ್ರವ್ಯ ಲಾಭದ ಆಸೆಯಿಂದಾಗಲೀ ನಾನು ಕ್ಷತ್ರಧರ್ಮವನ್ನು ಬಿಡಲಾರೆ. ಇದು ನನ್ನ ವ್ರತ' ಎಂದು ಹೇಳಿದೆನು.
ಅಥ ಮಾಮಬ್ರವೀದ್ ರಾಮಃ ಕ್ರೋಧಪರ್ಯಾಕುಲೇಕ್ಷಣಃ |
ನ ಕರಿಷ್ಯನಿ ಚೇದೇತದ್ ವಾಕ್ಯಂ ಮೇ ನರಪುಂಗವ ||12||
ಹನಿಷ್ಯಾಮಿ ಸಹಾಮಾತ್ಯಂ ತ್ವಾಮದ್ಯೇತಿ ಪುನಃ ಪುನಃ ||13||
ಆಗ ಪರಶುರಾಮರು ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ನನ್ನನ್ನು ಕುರಿತು `ಎಲೈ ನರಶ್ರೇಷ್ಠನೇ, ನನ್ನ ಮಾತನ್ನು ನಡೆಸದಿದ್ದರೆ ಈ ದಿನ ನಿನ್ನನ್ನು ಮತ್ತು ನಿನ್ನ ಮಂತ್ರಿಗಳನ್ನು ಕೊಲ್ಲುವೆನು' ಎಂದು ಪುನಃ ಪುನಃ ಹೇಳಿದರು.
ತಮಹಂ ಗೀರ್ಭಿರಿಷ್ಟಾಭಿಃ ಪುನಃ ಪುನರರಿಂದಮ |
ಅಯಾಚಂ ಭೃಗುಶಾರ್ದೂಲಂ ನ ಚೈವ ಪ್ರಶಶಾಮ ಸಃ ||14||
ಎಲೈ ಅರಿಂದಮನೇ, ನಾನು ಆ ಭೃಗುಶ್ರೇಷ್ಠರನ್ನು ಅವರಿಗೆ ಇಷ್ಟವಾದ ವಚನಗಳಿಂದ ಮತ್ತೆ ಮತ್ತೆ ಬೇಡಿದೆನು. ಆದರೆ ಅವರು ಶಾಂತರಾಗಲಿಲ್ಲ.
ಯದಾ ಪ್ರಯಾಚ್ಯಮಾನೋಽಪಿ ಪ್ರಸಾದಂ ನ ಕರೋತಿ ಮೇ ||15||
ಪ್ರಣಮ್ಯ ತಮಹಂ ಮೂರ್ಧ್ನಾ ಭೂಯೋ ಬ್ರಾಹ್ಮಣಸತ್ತಮಮ್ |
ಅಬ್ರುವಂ ಕಾರಣಂ ಕಿಂ ತದ್ ಯತ್ ತ್ವಂ ಯೋದ್ಧುಮಿಹೇಚ್ಛಸಿ ||16||
ಇಷ್ವಸ್ತ್ರಂ ಮಮ ಬಾಲಸ್ಯ ತ್ವಯಾ ಚೈವ ಚತುರ್ವಿಧಮ್ |
ಉಪದಿಷ್ಟಂ ಮಹಾಬಾಹೋ ಶಿಷ್ಯೋಽಸ್ಮಿ ತವ ಭಾರ್ಗವ ||17||
ಎಷ್ಟು ಬೇಡಿದರೂ ಅವರು ಪ್ರಸನ್ನರಾಗದಿದ್ದಾಗ ಆ ಬ್ರಾಹ್ಮಣಶ್ರೇಷ್ಠರಿಗೆ ನಾನು ಶಿರಸಾ ನಮಸ್ಕಾರವನ್ನು ಮಾಡಿ, ನನ್ನ ಮೇಲೆ ಯುದ್ಧವನ್ನು ಮಾಡುವುದಕ್ಕೆ ನಿಮಗೆ ಕಾರಣವೇನು? ಎಲೈ ಮಹಾಬಾಹುವೇ, ಎಲೈ ಭಾರ್ಗವರೇ, ಬಾಲ್ಯದಲ್ಲಿ ನನಗೆ ಚತುರ್ವಿಧವಾದ ಅಸ್ತ್ರವಿದ್ಯೆಯನ್ನು ಮತ್ತು ಧನುರ್ವಿದ್ಯೆಯನ್ನು ನೀವು ಉಪದೇಶ ಮಾಡಿದ್ದೀರಿ. ನಾನು ನಿಮ್ಮ ಶಿಷ್ಯನಾಗಿದ್ದೇನೆ ಎಂದು ಹೇಳಿದೆನು.
ತತೋ ಮಾಮಬ್ರವೀದ್ ರಾಮಃ ಕ್ರೋಧಸಂರಕ್ತಲೋಚನಃ ||18||
ಜಾನೀಷೇ ಮಾಂ ಗುರುಂ ಭೀಷ್ಮ ನ ಚೇಮಾಂ ಪ್ರತಿಗೃಹ್ಣಸೇ |
ಸುತಾಂ ಕಾಶ್ಯಸ್ಯ ಕೌರವ್ಯ ಮತ್ಪ್ರಿಯಾರ್ಥಂ ಮಹೀಪತೇ ||19||
ಆಗ ಪರಶುರಾಮರು ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ನನ್ನನ್ನು ಕುರಿತು `ಎಲೈ ಭೀಷ್ಮನೇ, ನನ್ನನ್ನು ಗುರು ಎಂದು ಹೇಳುತ್ತಿದ್ದೀಯೆ. ಆದರೆ ಎಲೈ ರಾಜನೇ, ಕೌರವ್ಯನೇ, ನನ್ನನ್ನು ಸಂತೋಷಪಡಿಸುವುದಕ್ಕಾಗಿ ಈ ಕಾಶಿರಾಜನ ಕನ್ಯೆಯನ್ನು ಸ್ವೀಕರಿಸುತ್ತಿಲ್ಲ.
ನ ಹಿ ಮೇ ವಿದ್ಯತೇ ಶಾಂತಿರನ್ಯಥಾ ಕುರುಸತ್ತಮ |
ಗೃಹಾಣೇಮಾಂ ಮಹಾಬಾಹೋ ರಕ್ಷಸ್ವ ಕುಲಮಾತ್ಮನಃ ||20||
ತ್ವಯಾ ವಿಭ್ರಂಶಿತಾ ಹೀಯಂ ಭರ್ತಾರಂ ನಾಧಿಗಚ್ಛತಿ ||21||
ಎಲೈ ಕುರುಶ್ರೇಷ್ಠನೇ, ಮಹಾಬಾಹುವೇ, ಇವಳನ್ನು ಸ್ವೀಕರಿಸಿ, ನಿನ್ನ ಕುಲವನ್ನು ರಕ್ಷಿಸು. ಇಲ್ಲದಿದ್ದರೆ ನನಗೆ ಸಮಾಧಾನವಾಗುವುದಿಲ್ಲ. ನಿನ್ನಿಂದ ಪರಿತ್ಯಕ್ತಳಾದ ಇವಳು ಬೇರೆ ಪತಿಯನ್ನು ಪಡೆಯುತ್ತಿಲ್ಲವಷ್ಟೇ! ಎಂದು ಹೇಳಿದರು.
ಭೀಷ್ಮಃ
ತಥಾ ಬ್ರುವಂತಂ ತಮಹಂ ರಾಮಂ ಪರಪುರಂಜಯಮ್ |
ನೈತದೇವಂ ಪುನರ್ಭಾವಿ ಬ್ರಹ್ಮರ್ಷೇ ಕಿಂ ಶ್ರಮೇಣ ತೇ ||22||
ಭೀಷ್ಮ ಹಾಗೆ ಮಾತನಾಡಿದ ಪರಪುರಂಜಯರಾದ ಪರಶುರಾಮರನ್ನು ಕುರಿತು ನಾನು ಬ್ರಹ್ಮರ್ಷಿಗಳೇ, ಹೀಗೆ ಪುನಃ ಎಂದೂ ಆಗುವುದಿಲ್ಲ. ವ್ಯರ್ಥವಾಗಿ ಏಕೆ ಶ್ರಮವನ್ನು ಪಡುತ್ತೀರಿ?
ಗುರುತ್ವಂ ತ್ವಯಿ ಸಂಪ್ರೇಕ್ಷ್ಯ ಜಾಮದಗ್ನ್ಯ ಪುರಾತನಮ್ |
ಪ್ರಸಾದಯೇ ತ್ವಾಂ ಭಗವನ್ ತ್ಯಕ್ತೈಷಾ ತು ಪುರಾ ಮಯಾ ||23||
ಎಲೈ ಪೂಜ್ಯರೇ, ಜಮದಗ್ನಿ ಪುತ್ರರೇ, ನಿಮ್ಮಲ್ಲಿ ಇರುವ ಗುರುತ್ವವನ್ನು ನೋಡಿ ನಾನು ನಿಮ್ಮನ್ನು ಪ್ರಸನ್ನರಾಗಿ ಎಂದು ಬೇಡುತ್ತಿದ್ದೇನೆ. ಇವಳನ್ನು ಮಾತ್ರ ಹಿಂದೆಯೇ ತ್ಯಜಿಸಿದ್ದೇನೆ.
ಕೋ ಜಾತು ಪರಭಾವಾಂ ಹಿ ನಾರೀಂ ವ್ಯಾಲೀಮಿವ ಸ್ಥಿತಾಮ್ |
ವಾಸಯೇತ ಗೃಹೇ ಜಾನನ್ ಸ್ತ್ರೀಣಾಂ ದೋಷಾನ್ ಮಹಾತ್ಯಯಾನ್||
ಸ್ತ್ರೀಯರ ಮಹಾದೋಷಗಳನ್ನು ತಿಳಿದ ಯಾವನು ತಾನೇ ಇನ್ನೊಬ್ಬನಲ್ಲಿ ಪ್ರೀತಿ ಇರುವ ಸ್ತ್ರೀಯನ್ನು, ಸರ್ಪವನ್ನು ಮನೆಯಲ್ಲಿ ಸಾಕಿದಂತೆ ತನ್ನ ಮನೆಯಲ್ಲಿ ಇಟ್ಟುಕೊಂಡಾನು?

ನ ಭಯಾದ್ ವಾಸವಸ್ಯಾಪಿ ಧರ್ಮಂ ಜಹ್ಯಾಂ ಮಹಾವ್ರತ |
ಪ್ರಸೀದ ಮಾ ವಾ ಯದ್ವಾ ತೇ ಕಾರ್ಯಂ ತತ್ ಕುರು ಮಾಚಿರಮ್॥
ಎಲೈ ಮಹಾವ್ರತರೇ, ಇಂದ್ರನ ಭಯದಿಂದಲೂ ನಾನು ಧರ್ಮವನ್ನು ಬಿಡಲಾರೆ. ನೀವು ಪ್ರಸನ್ನರಾಗಿ ಅಥವಾ ಬಿಡಿ. ಮುಂದೇನು ಮಾಡಬೇಕೋ ಅದನ್ನು ಶೀಘ್ರವಾಗಿ ಮಾಡಿ.
ಅಯಂ ಚಾಪಿ ವಿಶುದ್ಧಾತ್ಮನ್ ಪುರಾಣೇ ಶ್ರೂಯತೇ ವಿಭೋ |
ಮರುತ್ತೇನ ಮಹಾಯುದ್ಧೇ ಗೀತಃ ಶ್ಲೋಕೋ ಮಹಾತ್ಮನಾ ॥26॥
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ |
ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ ॥27॥
ಎಲೈ ವಿಶುದ್ಧಾತ್ಮರೇ, ವಿಭುಗಳೇ, ಗುರುವೂ ಸಹ ಕಾರ್ಯಾಕಾರ್ಯಗಳನ್ನು ತಿಳಿಯದೆ ಅಹಂಕಾರದಿಂದ ದುರ್ಮಾರ್ಗವನ್ನು ಹಿಡಿದರೆ ಅವನಿಗೂ ಶಾಸನವನ್ನು ಮಾಡಬೇಕಾಗುತ್ತದೆ ಎಂಬ ಮಹಾತ್ಮನಾದ ಮರುತ್ತನು ಮಹಾಯುದ್ಧದಲ್ಲಿ ಹಾಡಿದ ಶ್ಲೋಕವೊಂದು ಪುರಾಣದಲ್ಲಿ ಕೇಳಿಬರುತ್ತದೆ.
ಸ ತ್ವಂ ಗುರುರಿತಿ ಪ್ರೇಮ್ಣಾ ಮಯಾ ಸಮ್ಮಾನಿತೋ ಭೃಶಮ್ |
ಗುರುವೃತ್ತಿಂ ನ ಜಾನೀಷೇ ತಸ್ಮಾದ್ ಯೋತ್ಸ್ಯಾಮಿ ವೈ ತ್ವಯಾ ॥28॥
ನೀವು ಗುರುಗಳು ಎಂಬ ಪ್ರೀತಿಯಿಂದ ನಾನು ನಿಮಗೆ ಸನ್ಮಾನವನ್ನು ಮಾಡಿದೆ. ಆದರೆ ನೀವು ಗುರುಗಳ ನಡತೆಯನ್ನು ತಿಳಿದಿಲ್ಲ. ಆದ್ದರಿಂದ ನಿಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ಗುರುಂ ನ ಹನ್ಯಾಂ ಸಮರೇ ಬ್ರಾಹ್ಮಣಂ ಚ ವಿಶೇಷತಃ |
ವಿಶೇಷತಸ್ತಪೋವೃದ್ಧಮೇವಂ ಕ್ಷಾಂತಂ ಮಯಾ ತವ ॥29॥
ಯುದ್ಧದಲ್ಲಿ ಗುರುಗಳನ್ನು, ಅದರಲ್ಲೂ ವಿಶೇಷವಾಗಿ ಬ್ರಾಹ್ಮಣರನ್ನು, ಅದರಲ್ಲೂ ವಿಶೇಷವಾಗಿ ತಪೋವೃದ್ಧರನ್ನು ನಾನು ಕೊಲ್ಲುವುದಿಲ್ಲ ಎಂದು ನಿಮ್ಮನ್ನು ಕ್ಷಮಿಸಿದೆನು.
ಉದ್ಯತೇಷುಂ ರಣೇ ದೃಷ್ಟ್ವಾ ಬ್ರಾಹ್ಮಣಂ ಕ್ಷತ್ರಬಂಧುವತ್ |
ಯೋ ಹನ್ಯಾತ್ ಸಮರೇ ಕ್ರುದ್ಧಂ ಯುಧ್ಯಂತಮಪಲಾಯಿನಮ್ ॥30॥
ಬ್ರಹ್ಮಹತ್ಯಾ ನ ತಸ್ಯ ಸ್ಯಾದಿತಿ ಧರ್ಮೇಷು ನಿಶ್ಚಯಃ |
ಕ್ಷತ್ರಿಯಾಣಾಂ ಸ್ಥಿತೋ ಧರ್ಮೇ ಕ್ಷತ್ರಿಯೋಽಸ್ಮಿ ತಪೋಧನ ॥31॥
ಯಾವನು ಯುದ್ಧದಲ್ಲಿ ಕ್ಷತ್ರಿಯನಂತೆ ಬಾಣವನ್ನು ಹಿಡಿದಿರುವ ಬ್ರಾಹ್ಮಣನನ್ನು ನೋಡಿ ಯುದ್ಧದಲ್ಲಿ ಹಿಮ್ಮೆಟ್ಟದಿರುವ ಕ್ರುದ್ಧನಾದ ಅವನನ್ನು ಕೊಲ್ಲುವನೋ ಅವನಿಗೆ ಬ್ರಹ್ಮಹತ್ಯಾ ದೋಷವು ಬರುವುದಿಲ್ಲ ಎಂದು ಧರ್ಮಶಾಸ್ತ್ರಗಳ ನಿಶ್ಚಯ. ಎಲೈ ತಪೋಧನರೇ, ನಾನು ಕ್ಷತ್ರಿಯನಾದವನು. ಕ್ಷತ್ರಿಯ ಧರ್ಮದಲ್ಲಿ ಇರುವವನಾಗಿದ್ದೇನೆ.
ಯೋ ಯಥಾ ವರ್ತತೇ ಯಸ್ಮಿನ್ ತಥಾ ತಸ್ಮಿನ್ ಪ್ರವರ್ತತೇ |
ನಾಧರ್ಮಂ ಸಮವಾಪ್ನೋತಿ ನರಃ ಶ್ರೇಯಶ್ಚ ವಿಂದತಿ ॥32॥
ಯಾವನು ಹೇಗೆ ನಡೆದುಕೊಳ್ಳುತ್ತಾನೆಯೋ ಅವನ ವಿಷಯದಲ್ಲಿ ಹಾಗೆಯೇ ನಡೆದುಕೊಂಡರೆ ಅಧರ್ಮವುಂಟಾಗುವುದಿಲ್ಲ. ಮನುಷ್ಯನು ಶ್ರೇಯಸ್ಸನ್ನು ಹೊಂದುತ್ತಾನೆ.
ಅರ್ಥೇ ವಾ ಯದಿ ವಾ ಧರ್ಮೇ ಸಮರ್ಥೋ ದೇಶಕಾಲವಿತ್ |
ಅನರ್ಥೇ ಸಂಶಯಾಪನ್ನಃ ಶ್ರೇಯಾನ್ ನಿಃಸಂಶಯೋ ನರಃ ॥33॥
ದೇಶ-ಕಾಲಗಳನ್ನು ತಿಳಿದು ಸಮರ್ಥನಾದ ಯಾವನಾದರೂ ಅರ್ಥದ ವಿಷಯದಲ್ಲಾಗಲೀ ಅಥವಾ ಧರ್ಮದ ವಿಷಯದಲ್ಲಾಗಲೀ ಸಂಶಯವನ್ನು ಹೊಂದಿದರೆ ಅವನಿಗಿಂತ ಸಂಶಯವಿಲ್ಲದ ಮನುಷ್ಯನು ಶ್ರೇಷ್ಠನಾದವನು.
ತಸ್ಮಾತ್ ಸಂಶಯಿತೇಽಪ್ಯರ್ಥೇ ಯಥಾನ್ಯಾಯಂ ಪ್ರವರ್ತಯೇತ್ |
ತಸ್ಮಾದ್ ಯೋತ್ಸ್ಯಾಮಿ ಸಹಿತಸ್ತ್ವಯಾ ರಾಮ ಮಹಾಹವೇ ॥34॥
ಆದ್ದರಿಂದ ಅರ್ಥವು ಸಂಶಯಗ್ರಸ್ತವಾದಾಗ ನ್ಯಾಯಕ್ಕೆ ಅನುಗುಣವಾಗಿ ವರ್ತಿಸಬೇಕು. ಆದ್ದರಿಂದ ಎಲೈ ಪರಶುರಾಮರೇ, ನಿಮ್ಮ ಜೊತೆಯಲ್ಲಿ ದೊಡ್ಡ ಯುದ್ಧವನ್ನು ಮಾಡುವೆನು.
ಪಶ್ಯ ಮೇ ಬಾಹುವೀರ್ಯಂ ಚ ವಿಕ್ರಮಂ ಚಾತಿಮಾನುಷಮ್ |
ಏವಂ ಗತೇಽಪಿ ತು ಮಯಾ ಯಚ್ಛಕ್ಯಂ ಭೃಗುನಂದನ ॥35॥
ತತ್ ಕರಿಷ್ಯೇ ಕುರುಕ್ಷೇತ್ರೇ ಯೋತ್ಸ್ಯೇ ವಿಪ್ರ ತ್ವಯಾ ಸಹ ॥36॥
ದ್ವಂದ್ವೇ ರಾಮ ಯಥೇಷ್ಟಂ ತೇ ಸಜ್ಜೀಭವ ಮಹಾದ್ಯುತೇ ॥37॥
ನನ್ನ ಅತಿಮಾನುಷವಾದ ಪರಾಕ್ರಮವನ್ನೂ ಮತ್ತು ಬಾಹುಬಲವನ್ನೂ ನೋಡುವವರಾಗಿ. ಎಲೈ ಭೃಗುನಂದನರೇ, ಇಂತಹ ಪರಿಸ್ಥಿತಿಯಲ್ಲಿ ನಾನು ಏನು ಮಾಡಬಹುದೋ ಅದನ್ನು ಮಾಡುವೆನು. ಎಲೈ ಬ್ರಾಹ್ಮಣರೇ, ನಿಮ್ಮ ಜೊತೆಯಲ್ಲಿ ಕುರುಕ್ಷೇತ್ರದಲ್ಲಿ ದ್ವಂದ್ವಯುದ್ಧವನ್ನು ಮಾಡುವೆನು. ಮಹಾತೇಜಸ್ವಿಗಳಾದ ಪರಶುರಾಮರೇ ಸಿದ್ಧರಾಗಿ.
ತತ್ರ ತ್ವಂ ನಿಹತೋ ರಾಮ ಮಯಾ ಶರಶತಾರ್ದಿತಃ |
ಪ್ರಾಪ್ಸ್ಯಸೇ ನಿರ್ಜಿತಾನ್ ಲೋಕಾನ್ ಶಸ್ತ್ರಪೂತೋ ಮಯಾ ರಣೇ ॥
ಎಲೈ ಪರಶುರಾಮರೇ, ಅಲ್ಲಿ ನೀವು ನನ್ನ ನೂರಾರು ಬಾಣಗಳಿಂದ ಪೀಡಿತರಾಗಿ, ಯುದ್ಧದಲ್ಲಿ ಶಸ್ತ್ರದಿಂದ ಪವಿತ್ರರಾಗಿ, ಮರಣವನ್ನು ಹೊಂದಿದವರು ಪಡೆಯುವ ಲೋಕಗಳನ್ನು ಹೊಂದುವಿರಿ.
ಸಂಗಚ್ಛ ವಿನಿವರ್ತಸ್ವ ಕುರುಕ್ಷೇತ್ರಂ ರಣಪ್ರಿಯ |

ಸಮಾಹ್ವಯ ಮಹಾಬಾಹೋ ಯುದ್ಧಾಯ ತ್ವಂ ತಪೋಧನ ॥39॥
ಎಲ್ಲೈ ರಣಪ್ರಿಯರೇ, ನೀವು ಹಿಂದಿರುಗಿ ಕುರುಕ್ಷೇತ್ರಕ್ಕೆ ಹೋಗಿ ನನ್ನ ಜೊತೆಗೆ ಸಮಾಗಮವನ್ನು ಹೊಂದಿ. ಎಲ್ಲೈ ತಪೋಧನರೇ, ಮಹಾಬಾಹುಗಳೇ, ನನ್ನನ್ನು ಯುದ್ಧಕ್ಕಾಗಿ ಆಹ್ವಾನಿಸಿ.
ಅಪಿ ಯತ್ರ ತ್ವಯಾ ರಾಮ ಕೃತಂ ಶೌಚಂ ಪುರಾ ಪಿತುಃ|
ತತ್ರಾಹಮಪಿ ಹತ್ವಾ ತ್ವಾಂ ಶೌಚಂ ಕರ್ತಾಸ್ಮಿ ಭಾರ್ಗವ ॥40॥
ಎಲ್ಲೈ ಭಾರ್ಗವರಾಮರೇ, ನೀವು ಎಲ್ಲಿ ಹಿಂದೆ ನಿಮ್ಮ ತಂದೆಗೆ ಶ್ರಾದ್ಧವನ್ನು ಮಾಡಿದಿರೋ ಅಲ್ಲಿ ನಾನೂ ಸಹ ನಿಮ್ಮನ್ನು ಕೊಂದು ನಿಮಗೆ ಶ್ರಾದ್ಧವನ್ನು ಮಾಡುವೆನು.
ತತ್ರ ರಾಮ ಸ ಗಚ್ಛ ತ್ವಂ ತ್ವರಿತಂ ಯುದ್ಧದುರ್ಮದಃ|
ವ್ಯಪನೇಷ್ಯಾಮಿ ತೇ ದರ್ಪಂ ಪೌರಾಣಂ ಬ್ರಾಹ್ಮಣಬ್ರುವ ॥41॥
ಎಲ್ಲೈ ಪರಶುರಾಮರೇ, ಯುದ್ಧದುರ್ಮದರಾದ ನೀವು ಶೀಘ್ರವಾಗಿ ಅಲ್ಲಿಗೆ ಹೋಗಿ. ಬ್ರಾಹ್ಮಣರೆಂದು ಹೇಳಿಕೊಳ್ಳುವ ನಿಮ್ಮ ಪ್ರಾಚೀನವಾದ ದರ್ಪವನ್ನು ನಾನು ನಾಶಮಾಡುವೆನು.
ಯಚ್ಚಾಪಿ ಕತ್ಥಸೇ ರಾಮ ಬಹುಶಃ ಪರಿಷತ್ಸು ವೈ|
ನಿರ್ಜಿತಾಃ ಕ್ಷತ್ರಿಯಾ ಲೋಕೇ ಮಯೈಕೇನೇತಿ ತಚ್ಛೃಣು ॥42॥
ನ ತದಾ ಜಾತವಾನ್ ಭೀಷ್ಮಃ ಕ್ಷತ್ರಿಯೋಽಪಿ ಹಿ ಮದ್ವಿಧಃ|
ಪಶ್ಚಾಜ್ಜಾತಾನಿ ತೇಜಾಂಸಿ ತೃಣೇಷು ಜ್ವಲಿತಂ ಯಥಾ ॥43॥
ಎಲ್ಲೈ ಪರಶುರಾಮರೇ, ಸಭೆಗಳಲ್ಲಿ ನೀವು ಅನೇಕ ಬಾರಿ ನಾನೊಬ್ಬನೇ ಲೋಕದಲ್ಲಿ ಕ್ಷತ್ರಿಯರೆಲ್ಲರನ್ನೂ ಸೋಲಿಸಿದೆ ಎಂದು ನಿಮ್ಮನ್ನು ಹೊಗಳಿಕೊಳ್ಳುವಿರಷ್ಟೇ? ಆ ವಿಷಯದಲ್ಲಿ ನನ್ನ ಮಾತನ್ನು ಕೇಳಿ. ಆಗ ಭೀಷ್ಮನು ಜನಿಸಿರಲಿಲ್ಲ ಅಥವಾ ನನ್ನಂತಹ ಕ್ಷತ್ರಿಯನೂ ಜನಿಸಿರಲಿಲ್ಲ. ತೇಜಸ್ವಿಗಳಾದ ಕ್ಷತ್ರಿಯರು ತೃಣಗಳಲ್ಲಿ ಅಗ್ನಿ ಉಂಟಾದಂತೆ ಅನಂತರ ಜನಿಸಿದರು.
ಯಸ್ತೇ ಯುದ್ಧಗತಂ ದರ್ಪಂ ಕಾಮಂ ಚ ವ್ಯಪನಾಶಯೇತ್|
ಸೋಽಹಂ ಜಾತೋ ಮಹಾಬಾಹೋ ಭೀಷ್ಮಃ ಪರಪುರಂಜಯಃ ॥44॥
ವ್ಯಪನೇಷ್ಯಾಮಿ ತೇ ದರ್ಪಂ ಯುದ್ಧೇ ರಾಮ ನ ಸಂಶಯಃ ॥45॥
ಎಲ್ಲೈ ಮಹಾಬಾಹುಗಳೇ, ಯಾವನು ನಿಮ್ಮ ಯುದ್ಧದ ದರ್ಪವನ್ನೂ ಅಥವಾ ನಿಮ್ಮ ಆಸೆಯನ್ನೂ ನಾಶಮಾಡಿಯಾನೋ ಅಂತಹ ಪರಪುರಂಜಯನಾದ, ಭೀಷ್ಮನಾದ ನಾನು ಹುಟ್ಟಿದ್ದೇನೆ. ಎಲ್ಲೈ ಪರಶುರಾಮನೇ, ನಿಮ್ಮ ಯುದ್ಧ ದರ್ಪವನ್ನು ನಿಸ್ಸಂಶಯವಾಗಿ ನಾಶಮಾಡುವೆನು ಎಂದು ಹೇಳಿದೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನಾಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಎಂಬತ್ತನೆಯ ಅಧ್ಯಾಯ

ತಾಯಿಯ ಆಶೀರ್ವಾದವನ್ನು ಪಡೆದು ಭೀಷ್ಮರ ಕುರುಕ್ಷೇತ್ರಗಮನ. ಯುದ್ಧವನ್ನು ಮಾಡದಂತೆ ಪರಶುರಾಮರಿಗೆ ಮತ್ತು ಭೀಷ್ಮರಿಗೆ ಗಂಗೆಯ ಒತ್ತಾಯ.
ಭೀಷ್ಮಃ
ತತೋ ಮಾಮಬ್ರವೀದ್ ರಾಮಃ ಪ್ರಹಸನ್ನಿವ ಭಾರತ|
ದಿಷ್ಟ್ಯಾ ಭೀಷ್ಮ ಮಯಾ ಸಾರ್ಧಂ ಯೋದ್ಧುಮಿಚ್ಛಸಿ ಸಂಗರೇ ॥1॥
ಅಹಂ ಗಚ್ಛಾಮಿ ಕೌರವ್ಯ ಕುರುಕ್ಷೇತ್ರಂ ತ್ವಯಾ ಸಹ|
ಭಾಷಿತಂ ತೇ ಕರಿಷ್ಯಾಮಿ ತತ್ರಾಗಚ್ಛೇಃ ಪರಂತಪ ॥2॥
ಭೀಷ್ಮ ಎಲ್ಲೈ ಭಾರತನೇ, ಆಗ ಪರಶುರಾಮರು ನಗುತ್ತಾ ನನ್ನನ್ನು ಕುರಿತು ಎಲ್ಲೈ ಭೀಷ್ಮನೇ, ಅದೃಷ್ಟವಶದಿಂದ ನೀನು ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತೀಯೆ. ಎಲ್ಲೈ ಕೌರವ್ಯನೇ, ನಾನು ನಿನ್ನ ಜೊತೆಯಲ್ಲಿ ಕುರುಕ್ಷೇತ್ರಕ್ಕೆ ಬರುತೆತೇನೆ. ಎಲ್ಲೈ ಪರಂತಪನೇ, ನೀನು ಅಲ್ಲಿಗೆ ಬರುವವನಾಗು. ನಿನ್ನ ಮಾತನ್ನು ಅಲ್ಲಿ ನಡೆಸುವೆನು ಎಂದು ಹೇಳಿದರು.
ತತ್ರ ತ್ವಾಂ ನಿಹತಂ ಮಾತಾ ಮಯಾ ಶರಶತಾಚಿತಮ್|
ಜಾಹ್ನವೀ ಪಶ್ಯತಾಂ ಭೀಷ್ಮ ಗೃಧ್ರಕಂಕಬಲಾಶನಮ್ ॥3॥
ಎಲ್ಲೈ ಭೀಷ್ಮನೇ, ಈ ದಿನ ನೀನು ಅಲ್ಲಿ ನನ್ನ ನೂರಾರು ಬಾಣಗಳಿಂದ ಪೀಡಿತನಾಗಿ ಮೃತನಾಗಿ ಹದ್ದು, ಗಿಡಗ ಮೊದಲಾದ ಪಕ್ಷಿಗಳಿಗೆ ಆಹಾರವಾಗುವುದನ್ನು ನಿನ್ನ ತಾಯಿಯು ನೋಡಲಿ.
ಕೃಪಣಂ ತ್ವಾಮಭಿಪ್ರೇಕ್ಷ್ಯ ಸಿದ್ಧಚಾರಣಸೇವಿತಾ|
ಮಯಾ ವಿನಿಹತಂ ವೀರ ರುದತಾಮದ್ಯ ಪಾರ್ಥಿವ ॥4॥
ಎಲ್ಲೈ ರಾಜನೇ, ವೀರನೇ, ನನ್ನ ಮಾತನ್ನು ಕೇಳದಿರುವ ನೀನು ಹತನಾದುದನ್ನು ನೋಡಿ, ಸಿದ್ಧ-ಚಾರಣಸೇವಿತಳಾದ ಅವಳು ಈ ದಿನ ರೋದನವನ್ನು ಮಾಡಲಿ.
ಅತದರ್ಹಾ ಮಹಾಭಾಗ ಭಗೀರಥಸುತಾ ನದೀ|

ಯಾ ತ್ವಾಮಜೀಜನನ್ಮಂದಂ ಯುದ್ಧಕಾಮುಕಮಾತುರಮ್ ॥5॥
ಎಲ್ಲೈ ಮಹಾಭಾಗನೇ, ಯುದ್ಧಕಾಮುಕನಾದ, ಹಠಮಾರಿಯಾದ ನಿನ್ನಂತಹ ಮಗನನ್ನು ಪಡೆದ ಭಗೀರಥನ ಪುತ್ರಿಯಾದ ಆ ನದಿಯು ಅಂತಹ ದುಃಖಕ್ಕೆ ಅರ್ಹಳಲ್ಲ.
ಏಹಿ ಗಚ್ಛ ಮಯಾ ಭೀಷ್ಮ ಯುದ್ಧಮದ್ಯೈವ ವರ್ತತಾಮ್ ।
ಗೃಹಾಣ ಸರ್ವಂ ಕೌರವ್ಯ ರಥಾದಿ ಭರತರ್ಷಭ ॥6॥
ಎಲ್ಲೈ ಭೀಷ್ಮನೇ, ಬಾ. ಕುರುಕ್ಷೇತ್ರಕ್ಕೆ ಹೋಗು. ಈ ದಿನವೇ ಯುದ್ಧವು ನಡೆಯಲಿ. ಎಲ್ಲೈ ಕೌರವ್ಯನೇ, ಭರತರ್ಷಭನೇ, ರಥ ಮೊದಲಾದ ಎಲ್ಲಾ ಯುದ್ಧದ ಸಲಕರಣೆಗಳನ್ನು ತೆಗೆದುಕೊ (ಎಂದು ಹೇಳಿದರು).
ಭೀಷ್ಮಃ
ಇತಿ ಬ್ರುವಾಣಂ ತಮಹಂ ರಾಮಂ ಪರಪುರಂಜಯಮ್ ।
ಪ್ರಣಮ್ಯ ಶಿರಸಾ ಪಾದಾವೇವಮಸ್ತ್ವಿತ್ಯಥಾಬ್ರವಮ್ ॥7॥
ಭೀಷ್ಮ ಹೀಗೆ ಮಾತನಾಡಿದ ಪರಪುರಂಜಯರಾದ ಪರಶುರಾಮರ ಪಾದಗಳಿಗೆ ನಾನು ಶಿರಸಾ ಪ್ರಣಾಮವನ್ನು ಮಾಡಿ ಹಾಗೆಯೇ ಆಗಲಿ ಎಂದು ಹೇಳಿದೆನು.
ಏವಮುಕ್ತೋ ಯಯೌ ರಾಮಃ ಕುರುಕ್ಷೇತ್ರಂ ಯುಯುತ್ಸಯಾ ।
ಪ್ರವಿಶ್ಯ ನಗರಂ ಚಾಹಂ ಸತ್ಯವತ್ಯೈ ನ್ಯವೇದಯಮ್ ॥8॥
ಈ ಮಾತನ್ನು ಕೇಳಿದ ಅವರು ಯುದ್ಧ ಮಾಡುವ ಇಚ್ಛೆಯಿಂದ ಕುರುಕ್ಷೇತ್ರಕ್ಕೆ ಹೋದರು. ನಾನು ನಗರಕ್ಕೆ ಹೋಗಿ ಸತ್ಯವತಿಗೆ ಈ ವಿಷಯವನ್ನು ನಿವೇದಿಸಿದೆ.
ತತಃ ಕೃತಸ್ವಸ್ತ್ಯಯನೋ ಮಾತ್ರಾ ಚ ಪ್ರತಿನಂದಿತಃ ।
ದ್ವಿಜಾತೀನ್ ವಾಚ್ಯ ಪುಣ್ಯಾಹಂ ಸ್ವಸ್ತಿ ಚೈವ ಮಹಾದ್ಯುತೇ ॥9॥
ರಥಮಾಸ್ಥಾಯ ರುಚಿರಂ ರಾಜಿತಂ ಪಾಂಡರೈರ್ಹಯೈಃ ।
ಸೂಪಸ್ಕರಂ ಸ್ವಧಿಷ್ಠಾನಂ ವೈಯಾಘ್ರಪರಿವಾರಣಮ್ ॥10॥
ಉಪಪನ್ನಂ ಮಹಾಶಸ್ತ್ರೈಃ ಸರ್ವೋಪಕರಣಾನ್ವಿತಮ್ ।
ತತ್ಕುಲೀನೇನ ವೀರೇಣ ಹಯಶಾಸ್ತ್ರವಿದಾ ನೃಪ ॥11॥
ಯತ್ತಂ ಸೂತೇನ ಶಿಷ್ಟೇನ ಬಹುಶೋ ದುಷ್ಟಕರ್ಮಣಾ ॥12॥
ದಂಸಿತಃ ಪಾಂಡರೇಣಾಹಂ ಕವಚೇನ ವಪುಷ್ಮತಾ ।
ಪಾಂಡರಂ ಕಾರ್ಮುಕಂ ಗೃಹ್ಯ ಪ್ರಾಯಾಂ ಭರತಸತ್ತಮ ॥13॥
ಎಲ್ಲೈ ಮಹಾದ್ಯುತಿಯೇ, ಭರತಶ್ರೇಷ್ಠನೇ, ಆಗ ನಾನು ತಾಯಿಯಿಂದ ಆಶೀರ್ವಾದವನ್ನು ಪಡೆದು, ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನೂ ಮತ್ತು ಪುಣ್ಯಾಹವಾಚನವನ್ನು ಮಾಡಿಸಿಕೊಂಡು, ಶ್ವೇತಾಶ್ವಗಳಿಂದ ಶೋಭಿಸುವ, ಮನೋಹರವಾದ ಎಲ್ಲಾ ಸಲಕರಣೆಗಳಿಂದ ಕೂಡಿದ, ಒಳ್ಳೆಯ ಮಧ್ಯಪ್ರದೇಶವುಳ್ಳ, ವ್ಯಾಘ್ರಚರ್ಮಪರಿವೃತವಾದ, ಎಲ್ಲ ಶಸ್ತ್ರಗಳಿಂದಲೂ ಮತ್ತು ಉಪಕರಣಗಳಿಂದಲೂ ಸಂಪನ್ನವಾದ, ಹಯಶಾಸ್ತ್ರವನ್ನು ಬಲ್ಲ, ಅನೇಕ ಯುದ್ಧಗಳನ್ನು ನೋಡಿದ, ವೀರನೂ ಶಿಷ್ಟನೂ ಆದ, ಸತ್ಕುಲ ಪ್ರಸೂತನಾದ ಸೂತನನ್ನು ಸಾರಥಿಯಾಗಿ ಹೊಂದಿದ ರಥವನ್ನು ಏರಿ, ಶೋಭಿಸುವ ಬಿಳಿಯ ಬಣ್ಣದ ಕವಚವನ್ನು ಧರಿಸಿ ಶ್ವೇತವರ್ಣದ ಧನುಸ್ಸನ್ನು ಹಿಡಿದು ಕುರುಕ್ಷೇತ್ರಕ್ಕೆ ಹೋದೆನು.
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ ।
ವ್ಯಜನೈಃ ಪಾಂಡರೈಶ್ಚಾಪಿ ವೀಜ್ಯಮಾನೋ ನರಾಧಿಪ ॥14॥
ಶುಕ್ಲವಾಸಾಃ ಸಿತೋಷ್ಣೀಷಃ ಸರ್ವಶುಕ್ಲವಿಭೂಷಣಃ ॥15॥
ಸ್ತೂಯಮಾನೋ ಜಯಾಶೀರ್ಭಿರ್ನಿಷ್ಕ್ರಮ್ಯ ಗಜಸಾಹ್ವಯಾತ್ ।
ಕುರುಕ್ಷೇತ್ರಂ ರಣಕ್ಷೇತ್ರಮುಪಾಯಾಂ ಭರತರ್ಷಭ ॥16॥
ಎಲ್ಲೈ ರಾಜನೇ, ನನ್ನ ಶಿರಸ್ಸಿನ ಮೇಲೆ ಶ್ವೇತಚ್ಛತ್ರವನ್ನು ಹಿಡಿಸಿಕೊಂಡು, ಶ್ವೇತಚಾಮರಗಳಿಂದ ಬೀಸಲ್ಪಟ್ಟವನಾಗಿ, ಶುಕ್ಲವಸ್ತ್ರವನ್ನು ಧರಿಸಿ, ಶುಕ್ಲವಾದ ರುಮಾಲನ್ನು ಧರಿಸಿ, ಶುಕ್ಲವಾದ ಎಲ್ಲಾ ಆಭರಣಗಳನ್ನು ಧರಿಸಿ, ಜಯಾಶೀರ್ವಾದಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ, ಹಸ್ತಿನಪುರದಿಂದ ಹೊರಟು ಎಲ್ಲೈ ಭರತರ್ಷಭನೇ, ಯುದ್ಧ ಕ್ಷೇತ್ರವಾದ ಕುರುಕ್ಷೇತ್ರಕ್ಕೆ ಬಂದೆನು.
ತೇ ಹಯಾಶ್ಚೋದಿತಾಸ್ತೇನ ಸೂತೇನ ಪರಮಾಹವೇ ।
ಅವಹನ್ ಮಾಂ ಭೃಶಂ ರಾಜನ್ ಮನೋಮಾರುತರಂಹಸಃ ॥17॥
ಎಲ್ಲೈ ರಾಜನೇ, ಆ ಸಾರಥಿಯಿಂದ ದೊಡ್ಡ ಯುದ್ಧದಲ್ಲಿ ಪ್ರಚೋದಿತವಾದ, ಮನೋಮಾರುತವೇಗವುಳ್ಳ ಆ ಅಶ್ವಗಳು ನನ್ನನ್ನು ಶೀಘ್ರವಾಗಿ ಕರೆದುಕೊಂಡು ಹೋದವು.
ಗತ್ವಾಽಹಂ ತತ್ ಕುರುಕ್ಷೇತ್ರಂ ಸ ಚ ರಾಮಃ ಪ್ರತಾಪವಾನ್ ।
ಯುದ್ಧಾಯ ಸಹಸಾ ರಾಜನ್ ಪರಾಕ್ರಾಂತೌ ಪರಸ್ಪರಮ್ ॥18॥
ಎಲ್ಲೈ ರಾಜನೇ, ನಾನು ಮತ್ತು ಪರಶುರಾಮರು ಕುರುಕ್ಷೇತ್ರವನ್ನು ತಲುಪಿ ಪರಸ್ಪರವಾಗಿ ಯುದ್ಧವನ್ನು ಮಾಡಲು ಶೀಘ್ರವಾಗಿ ಸಿದ್ಧರಾದೆವು.
ತತಃ ಸಂದರ್ಶನೇ ತಿಷ್ಠನ್ ರಾಮಸ್ಯಾತಿತಪಸ್ವಿನಃ ।
ಪ್ರಗೃಹ್ಯ ಶಂಖಪ್ರವರಂ ತತಃ ಪ್ರಾಧಮಮುತ್ತಮಮ್ ॥19॥
ಅನಂತರ ನಾನು ಅತಿತಪಸ್ವಿಗಳಾದ ಪರಶುರಾಮರು ಕಾಣುವಷ್ಟು ದೂರದಲ್ಲಿ ನಿಂತು, ನಾನು ಶ್ರೇಷ್ಠವಾದ ಶಂಖವನ್ನು

ತೆಗೆದುಕೊಂಡು ಊದಿದೆನು.
ತತಸ್ತತ್ರ ದ್ವಿಜಾ ರಾಜನ್ ತಾಪಸಾಶ್ಚ ವನೌಕಸಃ |
ಅಪಶ್ಯಂತ ರಣಂ ದಿವ್ಯಂ ದೇವಾಃ ಸೇಂದ್ರಪುರೋಗಮಾಃ ॥20॥
ಎಲೈ ರಾಜನೇ, ಆಗ ಅಲ್ಲಿ ಬ್ರಾಹ್ಮಣರೂ, ವನವಾಸಿಗಳಾದ ತಪಸ್ವಿಗಳೂ, ಇಂದ್ರ ಮೊದಲಾದ ದೇವತೆಗಳೂ ದಿವ್ಯವಾದ ಯುದ್ಧವನ್ನು ನೋಡಿದರು.
ತತೋ ದಿವ್ಯಾನಿ ಮಾಲ್ಯಾನಿ ಪ್ರಾದುರಾಸನ್ ಮುಹುರ್ಮುಹುಃ |
ವಾದಿತ್ರಾಣಿ ಚ ದಿವ್ಯಾನಿ ಮೇಘವೃಂದಾನಿ ಚೈವ ಹ ॥21॥
ಆಗ ದಿವ್ಯವಾದ ಮಾಲೆಗಳು ಪುನಃ ಪುನಃ ಪ್ರಾದುರ್ಭವಿಸಿದವು. ದಿವ್ಯವಾದ ವಾದ್ಯಗಳೂ ಮತ್ತು ಮೇಘವೃಂದಗಳ ಶಬ್ದಗಳೂ ಕೇಳಿಬಂದವು.
ತತಸ್ತೇ ತಾಪಸಾ ಸರ್ವೇ ಭಾರ್ಗವಸ್ಯಾನುಯಾಯಿನಃ |
ಪ್ರೇಕ್ಷಕಾಃ ಸಮಪದ್ಯಂತ ಪರಿವಾರ್ಯ ರಣಾಜಿರಮ್ ॥22॥
ಆಗ ಪರಶುರಾಮರ ಅನುಯಾಯಿಗಳಾದ ತಪಸ್ವಿಗಳೆಲ್ಲರೂ ಯುದ್ಧಭೂಮಿಯಲ್ಲಿ ಸುತ್ತಲೂ ನಿಂತು ಪ್ರೇಕ್ಷಕರಾದರು.
ತತೋ ಮಾಮಬ್ರುವೀದ್ ದೇವೀ ಸರ್ವಭೂತಹಿತೈಷಿಣೀ |
ಮಾತಾ ಸ್ವರೂಪಿಣೀ ರಾಜನ್ ಕಿಮಿದಂ ತೇ ಚಿಕೀರ್ಷಿತಮ್ ॥23॥
ಆಗ ಸರ್ವಭೂತ ಹಿತೈಷಿಯಾದ, ನನ್ನ ತಾಯಿಯಾದ ಗಂಗೆಯು ದೇಹವನ್ನು ಧರಿಸಿ ನನ್ನ ಬಳಿಗೆ ಬಂದು, ಇದೇನು ಮಾಡಲು ಬಯಸುತ್ತಿದ್ದೀಯೆ ಎಂದು ಕೇಳಿದಳು.
ಗತ್ವಾಽಹಂ ಜಾಮದಗ್ನ್ಯಂ ತು ಪ್ರಯಾಚಿಷ್ಯೇ ಕುರೂದ್ವಹ |
ಭೀಷ್ಮೇಣ ಸಹ ಮಾ ಯೋತ್ಸೀಃ ಶಿಷ್ಯೇಣೇತಿ ಪುನಃ ಪುನಃ ॥24॥
ಎಲೈ ಕುರೂದ್ವಹನೇ, ನಾನು ಪರಶುರಾಮರ ಬಳಿಗೆ ಹೋಗಿ ಶಿಷ್ಯನಾದ ಭೀಷ್ಮನ ಜೊತೆಗೆ ಯುದ್ಧವನ್ನು ಮಾಡಬೇಡವೆಂದು ಪುನಃ ಪುನಃ ಬೇಡುತ್ತೇನೆ ಎಂದು ಹೇಳಿದಳು.
ಮಾ ಮೈವಂ ಪುತ್ರ ನಿರ್ಬಂಧಂ ಕುರು ವಿಪ್ರೇಣ ಪಾರ್ಥಿವ |
ಜಾಮದಗ್ನ್ಯೇನ ಸಮರೇ ಯೋದ್ಧುಮಿತ್ಯವಭರ್ತ್ಸಯತ್ ॥25॥
ಎಲೈ ಪುತ್ರನೇ, ರಾಜನೇ, ಬ್ರಾಹ್ಮಣರಾದ ಪರಶುರಾಮರ ಜೊತೆಯಲ್ಲಿ ಯುದ್ಧವನ್ನು ಮಾಡಲು ನಿರ್ಬಂಧವನ್ನು ಮಾಡಬೇಡ ಎಂದು ಹೇಳಿ, ನನ್ನನ್ನು ಗದರಿಸಿದಳು.
ಕಿಂ ನ ವೈ ಕ್ಷತ್ರಿಯಹಣೋ ಹರತುಲ್ಯಪರಾಕ್ರಮಃ |
ವಿದಿತಃ ಪುತ್ರ ರಾಮಸ್ತೇ ಯತಸ್ತ್ವಂ ಯೋದ್ಧುಮಿಚ್ಛಸಿ ॥26॥
ಎಲೈ ಪುತ್ರನೇ, ನಿನಗೆ ಪರಶುರಾಮರು ಕ್ಷತ್ರಿಯ ನಾಶಕರೆಂದೂ, ರುದ್ರದೇವರಿಗೆ ಸಮಾನವಾದ ಪರಾಕ್ರಮವುಳ್ಳವರೆಂದೂ ತಿಳಿದಿಲ್ಲವೇ? ಆದ್ದರಿಂದ ಏಕೆ ಯುದ್ಧವನ್ನು ಮಾಡಲು ಬಯಸುತ್ತಿದ್ದೀಯೆ? (ಎಂದು ಹೇಳಿದಳು).
ತತೋಽಹಮಬ್ರುವಂ ದೇವೀಮಭಿವಾದ್ಯ ಕೃತಾಂಜಲಿಃ |
ಸರ್ವಂ ತದ್ ಭರತಶ್ರೇಷ್ಠ ಯಥಾವೃತ್ತಂ ಸ್ವಯಂವರೇ ॥27॥
ಆಗ ನಾನು ಆ ದೇವಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು, ಎಲೈ ಭರತಶ್ರೇಷ್ಠನೇ, ಸ್ವಯಂವರದಲ್ಲಿ ನಡೆದುದನ್ನೆಲ್ಲಾ ಹೇಳಿದೆನು.
ಯಥಾ ಚ ರಾಮೋ ರಾಜೇಂದ್ರ ಮಯಾ ಪೂರ್ವಂ ಪ್ರಚೋದಿತಃ |
ಕಾಶಿರಾಜಸುತಾಯಾಶ್ಚ ಯಥಾ ಕಾಮಃ ಪುರಾತನಃ ॥28॥
ಎಲೈ ರಾಜೇಂದ್ರನೇ, ಪರಶುರಾಮರು ಹೇಗೆ ನನಗೆ ಯುದ್ಧಕ್ಕೆ ಪ್ರಚೋದಿಸಿದರು ಮತ್ತು ಕಾಶಿರಾಜನ ಸುತೆಯಾದ ಅಂಬೆಯ ಮೊದಲಿನ ಪ್ರೀತಿಯು ಎಲ್ಲಿದ್ದಿತು ಎಲ್ಲವನ್ನೂ ಹೇಳಿದೆನು.
ತತಃ ಸಾ ರಾಮಮಭ್ಯೇತ್ಯ ಜನನೀ ಮೇ ಮಹಾನದೀ |
ಮದರ್ಥಂ ತಮೃಷಿಂ ದೇವೀ ಕ್ಷಮಯಾಮಾಸ ಭಾರ್ಗವಮ್ ॥29॥
ಭೀಷ್ಮೇಣ ಸಹ ಮಾ ಯೋತ್ಸೀಃ ಶಿಷ್ಯೇಣೇತಿ ವಚೋಽಬ್ರುವೀತ್ ॥30॥
ಅನಂತರ ನನ್ನ ತಾಯಿಯಾದ ಮಹಾನದಿಯು ಋಷಿಗಳಾದ ಪರಶುರಾಮರ ಬಳಿಗೆ ಬಂದು, ನನ್ನ ಸಲುವಾಗಿ ಶಿಷ್ಯನಾದ ಭೀಷ್ಮನ ಜೊತೆಯಲ್ಲಿ ಯುದ್ಧವನ್ನು ಮಾಡಬೇಡಿ ಎಂದು ಕ್ಷಮೆಯನ್ನು ಯಾಚಿಸಿದಳು.
ಸ ಚ ತಾಮಾಹ ಯಾಚಂತೀಂ ಭೀಷ್ಮಮೇವ ನಿವರ್ತಯ |
ನ ಹಿ ಮೇ ಕುರುತೇ ಕರ್ಮ ಇತ್ಯುಕಶ್ತ್ವ ಮಾಮುಪಾಗಮತ್ ॥31॥
ಅವರು ಬೇಡುತ್ತಿದ್ದ ನನ್ನ ತಾಯಿಯನ್ನು ಕುರಿತು, ಭೀಷ್ಮನನ್ನೇ ಯುದ್ಧದಿಂದ ಹಿಂದೆ ಸರಿಯುವಂತೆ ಹೇಳು. ಅವನು ನನ್ನ ಮಾತನ್ನು ಕೇಳುವುದಿಲ್ಲ ಎಂದು ಹೇಳಿ ನನಗೆ ಎದುರಾದರು.
ತತೋ ಗಂಗಾ ಸುತಸ್ನೇಹಾನ್ಮಾಂ ಸಾ ಪುನರುಪಾಗಮತ್ |
ನಾಸ್ಯಾ ಅಕರವಂ ವಾಕ್ಯಂ ಕ್ರೋಧಪರ್ಯಾಕುಲೇಕ್ಷಣಃ ॥32॥
ಆಗ ಗಂಗೆಯು ಪುನಃ ಪುತ್ರಸ್ನೇಹದಿಂದ ನನ್ನ ಬಳಿಗೆ ಬಂದು ಯುದ್ಧವನ್ನು ಮಾಡಬೇಡವೆಂದು ಹೇಳಿದಳು. ಕ್ರೋಧದಿಂದ ಕೆಂಪಾದ ಕಣ್ಣುಳ್ಳ ನಾನು ಅವಳ ಮಾತನ್ನು ಕೇಳಲಿಲ್ಲ.
ಅಥಾದೃಶ್ಯತ ಧರ್ಮಾತ್ಮಾ ಭೃಗುಶ್ರೇಷ್ಠೋ ಮಹಾತಪಾಃ |

ಆಹ್ವಯಾಮಾಸ ಚ ತದಾ ಯುದ್ಧಾಯ ದ್ವಿಜಸತ್ತಮಃ ॥33॥
ಆಗ ಮಹಾತಪಸ್ವಿಗಳೂ, ದ್ವಿಜಶ್ರೇಷ್ಠರೂ, ಧರ್ಮಾತ್ಮರೂ, ಭೃಗುಶ್ರೇಷ್ಠರೂ ಆದ ಪರಶುರಾಮರು ನನ್ನ ದೃಷ್ಟಿಗೆ ಗೋಚರರಾಗಿ ಯುದ್ಧಕ್ಕೆ ಆಹ್ವಾನಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಅಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂದನೆಯ ಅಧ್ಯಾಯ
ಭೀಷ್ಮ-ಪರಶುರಾಮರ ಯುದ್ಧದ ವರ್ಣನೆ.
ಭೀಷ್ಮಃ
ತಮಹಂ ಸ್ಮಯನ್ನಿವ ರಣೇ ಪ್ರತ್ಯಭಾಷಂ ವ್ಯವಸ್ಥಿತಮ್ ।
ಭೂಮಿಷ್ಠಂ ನೋತ್ಸಹೇ ಯೋದ್ಧುಂ ಭವಂತಂ ರಥಮಾಸ್ಥಿತಃ ॥1॥
ಆರೋಹ ಸ್ಯಂದನಂ ವೀರ ಕವಚಂ ಚ ಮಹಾಭುಜ ।
ಬಧಾನ ಸಮರೇ ರಾಮ ಯದಿ ಯೋದ್ಧುಮಿಹೇಚ್ಛಸಿ ॥2॥
ಭೀಷ್ಮ ಭೂಮಿಯ ಮೇಲೆ ಯುದ್ಧಕ್ಕೆ ಸನ್ನದ್ಧರಾಗಿ ನಿಂತ ಅವರನ್ನು ನೋಡಿ ನಗುತ್ತಾ ರಥದಲ್ಲಿ ಕುಳಿತ ನಾನು ಭೂಮಿಯ ಮೇಲೆ ನಿಂತಿರುವವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುವುದಿಲ್ಲ. ಎಲೈ ವೀರರಾದ ಮಹಾಭುಜರೇ, ಯುದ್ಧವನ್ನು ಮಾಡಲು ಇಚ್ಛಿಸಿದರೆ ರಥವನ್ನು ಏರಿ, ಕವಚವನ್ನು ಧರಿಸಿ ಎಂದು ಹೇಳಿದೆನು.
ತತೋ ಮಾಮಬ್ರವೀದ್ ರಾಮಃ ಸ್ಮಯಮಾನೋ ರಣಾಜಿರೇ ॥3॥
ರಥೋ ಮೇ ಮೇದಿನೀ ವೀರ ವಾಹಾ ವೇದಾಃ ಸದಶ್ವವತ್ ।
ಸೂತಶ್ಚ ಮಾತರಿಶ್ವಾ ವೈ ಕವಚಂ ವೇದಮಾತರಃ ॥4॥
ಸುಸಂವೀತೋ ರಣೇ ತಾಭಿರ್ಯೋತ್ಸ್ಯೇಽಹಂ ಕುರುನಂದನ ॥5॥
ಆಗ ರಣರಂಗದಲ್ಲಿ ಪರಶುರಾಮರು ನಗುತ್ತಾ ನನ್ನನ್ನು ಕುರಿತು `ಎಲೈ ವೀರನೇ, ಭೂಮಿಯೇ ನನ್ನ ರಥ. ವೇದಗಳೇ ಒಳ್ಳೆಯ ಅಶ್ವದಂತಿರುವ ವಾಹನಗಳು. ವಾಯುದೇವನೇ ಸೂತ. ವೇದಮಾತೆಯರು ನನ್ನ ಕವಚ. ಎಲೈ ಕುರುನಂದನನೇ, ಇವರಿಂದ ರಕ್ಷಿಸಲ್ಪಟ್ಟು ನಾನು ಯುದ್ಧವನ್ನು ಮಾಡುವೆನು' ಎಂದು ಹೇಳಿದರು.
ಏವಂ ಬ್ರುವಾಣೋ ಗಾಂಧಾರೇ ರಾಮೋ ಮಾಂ ಸತ್ಯವಿಕ್ರಮಃ ।
ಶರವ್ರಾತೇನ ಮಹತಾ ಸರ್ವತಃ ಪ್ರತ್ಯವಾರಯತ್ ॥6॥
ಎಲೈ ಗಾಂಧಾರಿ ಪುತ್ರನೇ, ಹೀಗೆ ಹೇಳುತ್ತಾ ಸತ್ಯವಿಕ್ರಮರಾದ ಪರಶುರಾಮರು ಬಾಣಗಳ ದೊಡ್ಡ ಸಮೂಹದಿಂದ ನನ್ನನ್ನು ಎಲ್ಲ ಕಡೆಗಳಿಂದಲೂ ತಡೆದರು.
ತತೋಽಪಶ್ಯಂ ಜಾಮದಗ್ನ್ಯಂ ರಥೇ ದಿವ್ಯೇ ವ್ಯವಸ್ಥಿತಮ್ ।
ಸರ್ವಾಯುಧಧರೇ ಶ್ರೀಮತ್ಯದ್ಭುತೋಪಮದರ್ಶನೇ ॥7॥
ಮನಸಾ ವಿಹಿತೇ ಪುಣ್ಯೇ ವಿಸ್ತೀರ್ಣೇ ನಗರೋಪಮೇ ।
ದಿವ್ಯಾಶ್ವಯುಜಿ ಸನ್ನದ್ಧೇ ಕವಚೇನ ವಿಭೂಷಿತೇ ॥8॥
ಧ್ವಜೇನ ಚ ಮಹಾಬಾಹೋ ಸೋಮಾರ್ಕಕೃತಲಕ್ಷ್ಮಣಾ ।
ಧನುರ್ಧರೋ ಬದ್ಧತೂಣೋ ಬದ್ಧಗೋಧಾಂಗುಲಿತ್ರವಾನ್ ॥9॥
ಅನಂತರ ನಾನು ಸರ್ವಾಯುಧವನ್ನು ಧರಿಸಿದ, ಕಾಂತಿಯುಕ್ತವಾದ, ಅದ್ಭುತವಾದ, ಮನಸ್ಸಿನಿಂದಲೇ ಸೃಷ್ಟಿಯನ್ನು ಮಾಡಿದ, ಪವಿತ್ರವಾದ, ವಿಸ್ತಾರವಾದ ನಗರದಂತಿರುವ ದಿವ್ಯಾಶ್ವಗಳನ್ನು ಹೂಡಿದ, ಕವಚಗಳಿಂದ ಭೂಷಿತವಾದ, ಸೂರ್ಯ-ಚಂದ್ರರ ಚಿಹ್ನೆಗಳಿಂದ ಅಲಂಕೃತವಾದ ಧ್ವಜದಿಂದ ಕೂಡಿದ ದಿವ್ಯವಾದ ರಥದಲ್ಲಿ ಧನುಸ್ಸನ್ನು ಧರಿಸಿ, ಬತ್ತಳಿಕೆಯನ್ನು ಬಿಗಿದು, ಹಸ್ತಗಳಿಗೆ ಗೋದಾಂಗುಲಿ ರಕ್ಷೆಯನ್ನು ಹಾಕಿಕೊಂಡಿದ್ದ ಪರಶುರಾಮರನ್ನು ನೋಡಿದೆನು.
ಸಾರಥ್ಯಂ ಕೃತವಾಂಸ್ತತ್ರ ಯುಯುತ್ಸೋರಕೃತವ್ರಣಃ ।
ಸಖಾ ವೇದವಿದತ್ಯಂತಂ ದಯಿತೋ ಭಾರ್ಗವಸ್ಯ ಹ ॥10॥
ಯುದ್ಧವನ್ನು ಮಾಡಲು ಬಯಸಿದ ಪರಶುರಾಮರಿಗೆ ಸ್ನೇಹಿತರೂ, ವೇದವೇತ್ತರೂ ಮತ್ತು ಪರಶುರಾಮರಿಗೆ ಅತ್ಯಂತ ಪ್ರಿಯರೂ ಆದ ಅಕೃತವ್ರಣರು ಸಾರಥ್ಯವನ್ನು ಮಾಡಿದರು.
ಆಹ್ವಯಾನಃ ಸ ಮಾಂ ಯುದ್ಧೇ ಮನೋ ಹರ್ಷಯತೀವ ಮೇ ।
ಪುನಃ ಪುನರಪಿ ಕ್ರೋಶನ್ ಉಪಾಯಾನ್ಮಾಂ ಹಿ ಭಾರ್ಗವಃ ॥11॥
ಪರಶುರಾಮರು ನನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ನನ್ನ ಮನಸ್ಸಿಗೆ ಹರ್ಷವನ್ನು ಉಂಟುಮಾಡಿದರು. ಭಾರ್ಗವರಾದ ಅವರು ಪುನಃ ಪುನಃ ಗರ್ಜಿಸುತ್ತಾ ನನ್ನನ್ನು ಸಮೀಪಿಸಿದರು.
ತಮಾದಿತ್ಯಮಿವೋದ್ಯಂತಮನಾಧೃಷ್ಯಂ ಮಹಾಬಲಮ್ ।
ಕ್ಷತ್ರಿಯಾಂತಕರಂ ರಾಮಮೇಕಮೇಕಃ ಸಮಾಸದಮ್ ॥12॥

ಉದಯಿಸುವ ಸೂರ್ಯನಂತೆ ಪ್ರಕಾಶಿಸುವ, ಸೋಲಿಸಲು ಅಸಾಧ್ಯರಾದ, ಮಹಾಬಲರಾದ, ಕ್ಷತ್ರಿಯ ಕುಲನಾಶಕರಾದ, ಏಕಾಕಿಯಾದ ಪರಶುರಾಮರನ್ನು ನಾನೂ ಏಕಾಕಿಯಾಗಿ ಸಮೀಪಿಸಿದೆನು.
ತತೋಽಹಂ ಬಾಣಪಾತೇಷು ತ್ರಿಷು ವಾಹಾನ್ ನಿಗೃಹ್ಯ ವೈ ॥13॥
ಅವತೀರ್ಯ ಧನುರ್ನ್ಯಸ್ಯ ಪದಾತಿರ್ಋಷಿಸತ್ತಮಮ್ ।
ಅಭ್ಯಗಚ್ಛಂ ತದಾ ರಾಮಮರ್ಚಿಷ್ಯನ್ ದ್ವಿಜಸತ್ತಮಮ್ ॥14॥
ಅಭಿವಾದ್ಯ ಚೈನಂ ವಿಧಿವದಬ್ರುವಂ ವಾಕ್ಯಮುತ್ತಮಮ್ ॥15॥
ಆಗ ನಾನು ಮೂರು ಬಾಣಪ್ರಯೋಗಗಳಿಂದ ಅವರ ಕುದುರೆಗಳನ್ನು ಸ್ತಂಭಿಸಿ ನನ್ನ ರಥದಿಂದ ಕೆಳಗಿಳಿದು, ಧನುಸ್ಸನ್ನು ಭೂಮಿಯ ಮೇಲಿಟ್ಟು, ಋಷಿಶ್ರೇಷ್ಠರೂ, ದ್ವಿಜಶ್ರೇಷ್ಠರೂ ಆದ ಪರಶುರಾಮರನ್ನು ಪೂಜಿಸುತ್ತಾ, ಕಾಲಿನಿಂದಲೇ ನಡೆದು ಅವರ ಬಳಿಗೆ ಹೋದೆನು. ಅವರಿಗೆ ವಿಧಿಪ್ರಕಾರವಾಗಿ ನಮಸ್ಕಾರವನ್ನು ಮಾಡಿ, ಅವರನ್ನು ಕುರಿತು ಮಾತನಾಡಿದೆನು.
ಯೋತ್ಸ್ಯೇ ತ್ವಯಾ ರಣೇ ರಾಮ ವಿಶಿಷ್ಟೇನಾಧಿಕೇನ ಚ ।
ಗುರುಣಾ ಧರ್ಮಶೀಲೇನ ಜಯಮಾಶಾಸ್ವ ಮೇ ವಿಭೋ ॥16॥
ಎಲೈ ಪರಶುರಾಮರೇ, ನನಗಿಂತ ಶ್ರೇಷ್ಠರೂ ಗುಣಗಳಿಂದ ವಿಶಿಷ್ಟರೂ, ಗುರುಗಳೂ, ಧರ್ಮಶೀಲರೂ ಆದ ನಿಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ವಿಭುಗಳೇ, ನನಗೆ ಜಯವನ್ನು ಆಶಂಸಿಸಿ (ಎಂದು ಹೇಳಿದೆನು).
ರಾಮಃ
ಏವಮೇತತ್ ಕುರುಶ್ರೇಷ್ಠ ಕರ್ತವ್ಯಂ ಭೂತಿಮಿಚ್ಛತಾ ।
ಧರ್ಮೋ ಹ್ಯೇಷ ಮಹಾಬಾಹೋ ವಿಶಿಷ್ಟೈಃ ಸಹ ಯುಧ್ಯತಾಮ್ ॥
ಶಪೇಯಂ ತ್ವಾಂ ನ ಚೇದೇವಮಾಗಚ್ಛೇಥಾ ವಿಶಾಂಪತೇ ।
ಯುಧ್ಯಸ್ವ ತ್ವಂ ರಣೇ ಯತ್ತೋ ಧೈರ್ಯಮಾಲಂಬ್ಯ ಕೌರವ ॥18॥
ರಾಮ ಎಲೈ ಕುರುಶ್ರೇಷ್ಠನೇ, ಶುಭವನ್ನು ಆಕಾಂಕ್ಷಿಸುವವನು ಹೀಗೆಯೇ ಮಾಡಬೇಕು. ಎಲೈ ಮಹಾಬಾಹುವೇ, ತಮಗಿಂತ ಉತ್ತಮರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಇದು ಧರ್ಮ. ಎಲೈ ರಾಜನೇ, ನೀನು ಹೀಗೆ ನನ್ನ ಬಳಿಗೆ ಬರದಿದ್ದರೆ ನಿನಗೆ ಶಾಪವನ್ನು ಕೊಡುತ್ತಿದ್ದೆ. ಎಲೈ ಕೌರವ್ಯನೇ, ಧೈರ್ಯವನ್ನು ಆಲಂಬಿಸಿ ಜಾಗರೂಕತೆಯಿಂದ ಯುದ್ಧವನ್ನು ಮಾಡು.
ನ ತು ತೇ ಜಯಮಾಶಂಸೇ ತ್ವಾಂ ವಿಜೇತುಮಹಂ ಸ್ಥಿತಃ ।
ಗಚ್ಛ ಯುಧ್ಯಸ್ವ ಧರ್ಮೇಣ ಪ್ರೀತೋಽಸ್ಮಿ ಚರಿತೇನ ತೇ ॥19॥
ನಿನಗೆ ಜಯವನ್ನು ಆಶಂಸಿಸುವುದಿಲ್ಲ. ಏಕೆಂದರೆ ನಾನು ನಿನ್ನನ್ನು ಗೆಲ್ಲಲು ಬಂದಿದ್ದೇನೆ. ನೀನು ಹೋಗಿ ಯುದ್ಧವನ್ನು ಮಾಡು. ನಿನ್ನ ಧಾರ್ಮಿಕವಾದ ನಡತೆಯಿಂದ ನಾನು ಪ್ರಸನ್ನನಾಗಿದ್ದೇನೆ.
ಭೀಷ್ಮಃ
ತತೋಽಹಂ ತಂ ನಮಸ್ಕೃತ್ಯ ರಥಮಾರುಹ್ಯ ಸತ್ವರಃ ।
ಪ್ರಾಧ್ಮಾಪಯಂ ರಣೇ ಶಂಖಂ ಪುನರ್ಹೇಮಪರಿಷ್ಕೃತಮ್ ॥20॥
ಭೀಷ್ಮ ಆಗ ನಾನು ಅವರಿಗೆ ನಮಸ್ಕಾರವನ್ನು ಮಾಡಿ, ಹಿಂದಕ್ಕೆ ಬಂದು ಶೀಘ್ರವಾಗಿ ನನ್ನ ರಥವನ್ನು ಏರಿ, ಸುವರ್ಣಾಲಂಕೃತವಾದ ಶಂಖವನ್ನು ಗಟ್ಟಿಯಾಗಿ ಊದಿದೆನು.
ತತೋ ಯುದ್ಧಂ ಸಮಭವನ್ಮಮ ತಸ್ಯ ಚ ಭಾರತ ।
ದಿವಸಾನ್ ಸುಬಹೂನ್ ರಾಜನ್ ಪರಸ್ಪರಜಿಗೀಷಯಾ ॥21॥
ಎಲೈ ಭಾರತನೇ, ರಾಜನೇ, ಅನಂತರ ಪರಸ್ಪರ ಜಯದ ಇಚ್ಛೆಯಿಂದ ಬಹಳ ದಿವಸಗಳವರೆಗೆ ನನಗೂ ಮತ್ತು ಪರಶುರಾಮರಿಗೂ ಯುದ್ಧವು ನಡೆಯಿತು.
ಸ ಮೇ ತಸ್ಮಿನ್ ರಣೇ ಪೂರ್ವಂ ಪ್ರಾಹರತ್ ಕಂಕಪತ್ರಿಭಿಃ ।
ಷಷ್ಟ್ಯಾ ಶತೈಶ್ಚ ನವಭಿಃ ಶರಾಣಾಮಗ್ನಿವರ್ಚಸಾಮ್ ॥22॥
ಅವರು ಕಂಕಪತ್ರದಿಂದ ಕೂಡಿದ್ದ, ಬಾಗಿದ ತುದಿಯುಳ್ಳ, ಅಗ್ನಿಯ ಕಾಂತಿಯುಳ್ಳ ಒಂಬೈನೂರ ಅರವತ್ತು ಬಾಣಗಳನ್ನು ನನ್ನ ಮೇಲೆ ಮೊದಲು ಪ್ರಯೋಗಿಸಿದರು.
ಚತ್ವಾರಸ್ತೇನ ಮೇ ವಾಹಾಃ ಸೂತಶ್ಚೈವ ವಿಶಾಂಪತೇ ।
ಪ್ರತಿರುದ್ಧಾಸ್ತಥೈವಾಹಂ ಸಮರೇ ದಂಸಿತಃ ಸ್ಥಿತಃ ॥23॥
ಎಲೈ ರಾಜನೇ, ಅದರಿಂದ ನನ್ನ ನಾಲ್ಕು ಕುದುರೆಗಳೂ ಮತ್ತು ಸೂತನೂ ಸ್ತಂಭಿತರಾದರು. ನಾನು ಮಾತ್ರ ಕವಚವನ್ನು ಧರಿಸಿ ಯುದ್ಧದಲ್ಲಿ ಹಾಗೆಯೇ ಇದ್ದೆನು.
ನಮಸ್ಕೃತ್ಯ ಚ ದೇವೇಭ್ಯೋ ಬ್ರಾಹ್ಮಣೇಭ್ಯೋ ವಿಶೇಷತಃ ।
ತಮಹಂ ಸ್ಮಯನ್ನಿವ ರಣೇ ಪ್ರತ್ಯಭಾಷಂ ವ್ಯವಸ್ಥಿತಮ್ ॥24॥
ಆಗ ನಾನು ವಿಶೇಷವಾಗಿ ದೇವತೆಗಳಿಗೂ ಮತ್ತು ಬ್ರಾಹ್ಮಣರಿಗೂ ನಮಸ್ಕರಿಸಿ, ಯುದ್ಧದಲ್ಲಿ ನಗುತ್ತಾ ನಿಂತ ಅವರನ್ನು ಕುರಿತು ಮಾತನಾಡಿದೆನು.
ಆಚಾರ್ಯತಾ ಮಾನಿತಾ ಮೇ ನಿರ್ಮರ್ಯಾದೇ ಹ್ಯಪಿ ತ್ವಯಿ ।
ಭೂಯಶ್ಚ ಶೃಣು ಮೇ ಬ್ರಹ್ಮನ್ ಸಂವಾದಂ ಧರ್ಮಸಂಗ್ರಹೇ ॥25॥
ನೀವು ಎಲ್ಲೆಯನ್ನು ಮೀರಿದ್ದರೂ ನಿಮ್ಮ ಗುರುತ್ವವನ್ನು ನಾನು ಗೌರವಿಸಿದ್ದೇನೆ. ಬ್ರಾಹ್ಮಣರೇ, ಧರ್ಮದ ವಿಷಯದಲ್ಲಿ ನನ್ನ ಮಾತನ್ನು ಇನ್ನೂ ಕೇಳುವವರಾಗಿ.

ಏತೇ ವೇದಾಃ ಶರೀರಸ್ಥಾ ಬ್ರಾಹ್ಮಣ್ಯಂ ಯಚ್ಚ ತೇ ಮಹತ್ |
ತಪಶ್ಚ ಸುಮಹತ್ ತಪ್ತಂ ನ ತೇಭ್ಯಃ ಪ್ರಹರಾಮ್ಯಹಮ್ ॥26॥
ಪ್ರಹರೇ ಕ್ಷತ್ರಧರ್ಮಂ ತಂ ಯಂ ತ್ವಂ ರಾಮ ಸಮಾಶ್ರಿತಃ |
ಬ್ರಾಹ್ಮಣಃ ಕ್ಷತ್ರಿಯತ್ವಂ ಹಿ ಯಾತಿ ಶಸ್ತ್ರಸಮುದ್ಯಮಾತ್ ॥27॥
ಪಶ್ಯ ಮೇ ಧನುಷೋ ವೀರ್ಯಂ ಪಶ್ಯ ಬಾಹ್ವೋರ್ಬಲಂ ಚ ಮೇ |
ಏಷ ತೇ ಕಾರ್ಮುಕಂ ವೀರ ದ್ವಿಧಾ ಕುರ್ಯಾಂ ಸಸಾಯಕಮ್ ॥28॥
ನಿಮ್ಮ ಶರೀರದಲ್ಲಿರುವ ಈ ವೇದಗಳು, ಈ ಮಹಾಬ್ರಾಹ್ಮಣ್ಯ ಮತ್ತು ಆಚರಿಸಿದ ದೊಡ್ಡ ತಪಸ್ಸು ಇವುಗಳ ಮೇಲೆ ನಾನು ಬಾಣಪ್ರಯೋಗವನ್ನು ಮಾಡುವುದಿಲ್ಲ. ಎಲೈ ಪರಶುರಾಮರೇ, ನೀವು ಯಾವ ಕ್ಷತ್ರಧರ್ಮವನ್ನು ಆಚರಿಸಿದ್ದೀರೋ ಅದರ ಮೇಲೆ ಬಾಣಪ್ರಯೋಗವನ್ನು ಮಾಡುತ್ತೇನೆ. ಏಕೆಂದರೆ ಶಸ್ತ್ರವನ್ನು ಧರಿಸಿದ ಬ್ರಾಹ್ಮಣನು ಕ್ಷತ್ರಿಯನಾಗುತ್ತಾನೆ. ನನ್ನ ಧನುಸ್ಸಿನ ಸಾಮರ್ಥ್ಯವನ್ನು ಮತ್ತು ನನ್ನ ಬಾಹುಗಳ ಬಲವನ್ನು ನೋಡುವವರಾಗಿ. ಎಲೈ ವೀರರೇ, ನಿಮ್ಮ ಬಿಲ್ಲು ಮತ್ತು ಬಾಣಗಳನ್ನು ಎರಡು ಭಾಗವಾಗಿ ಕತ್ತರಿಸುವೆನು ಎಂದು ಹೇಳಿದೆನು.
ತಸ್ಯಾಹಂ ನಿಶಿತಂ ಭಲ್ಲಂ ಪ್ರಾಹಿಣ್ವಂ ಭರತರ್ಷಭ |
ತೇನಾಸ್ಯ ಧನುಷಃ ಕೋಟಿಃ ಛಿನ್ನಾ ಭೂಮಿಮಥಾಗಮತ್ ॥29॥
ಎಲೈ ಭರತರ್ಷಭನೇ, ಅವರ ಮೇಲೆ ನಾನು ನಿಶಿತವಾದ ಭಲ್ಲೆಯನ್ನು ಪ್ರಯೋಗಿಸಿದೆನು. ಅದರಿಂದ ಅವರ ಧನುಸ್ಸು ಮುರಿದು ಭೂಮಿಯ ಮೇಲೆ ಬಿದ್ದಿತು.
ನವ ಚಾಪಿ ಪೃಷತ್ಕಾನಾಂ ಶತಾನಿ ನತಪರ್ವಣಾಮ್ |
ಪ್ರಾಹಿಣ್ವಂ ಕಂಕಪತ್ರಾಣಾಂ ಜಾಮದಗ್ನ್ಯರಥಂ ಪ್ರತಿ ॥30॥
ಮತ್ತು ಅವರ ರಥದ ಮೇಲೆ ಬಾಗಿದ ತುದಿಯುಳ್ಳ, ಕಂಕಪತ್ರಗಳನ್ನು ಹೊಂದಿದ್ದ ಒಂಬೈನೂರು ಬಾಣಗಳನ್ನು ಪ್ರಯೋಗಿಸಿದೆನು.
ಕಾಯೇ ನಿಷಕ್ತಾಸ್ತು ತದಾ ವಾಯುನಾ ಸಮುದೀರಿತಾಃ |
ಚೇಲುಃ ಕ್ಷರಂತೋ ರುಧಿರಂ ನಾಗಾ ಇವ ವಸುಂಧರಾಮ್ ॥31॥
ಅವರ ದೇಹವನ್ನು ಸಂಧಿಸಿದ ಆ ಬಾಣಗಳು ವಾಯುವಿನಿಂದ ಉತ್ತೇಜಿತವಾಗಿ ಸರ್ಪವು ಭೂಮಿಯನ್ನು ಪ್ರವೇಶಿಸಿದಂತೆ, ಶರೀರದಿಂದ ರಕ್ತವನ್ನು ಸುರಿಸುತ್ತಾ ಶರೀರವನ್ನು ಭೇದಿಸಿ ಮುಂದೆ ಹೋದವು.
ಕ್ಷತಜೋಕ್ಷಿತಸರ್ವಾಂಗಃ ಕ್ಷರನ್ ಸ ರುಧಿರಂ ರಣೇ |
ಬಭೌ ರಾಮಸ್ತದಾ ರಾಜನ್ ಮೇರುರ್ಧಾತೂನಿವೋತ್ಸೃಜನ್ ॥32॥
ಎಲ್ಲಾ ಅವಯವಗಳಿಂದಲೂ ಯುದ್ಧದಲ್ಲಿ ರಕ್ತವನ್ನು ಸುರಿಸುತ್ತಿದ್ದ ಪರಶುರಾಮರು ಎಲೈ ರಾಜನೇ, ಧಾತುವನ್ನು ಸುರಿಸುತ್ತಿರುವ ಮೇರುಪರ್ವತದಂತೆ ಶೋಭಿಸಿದರು.
ಹೇಮಂತಾಂತೇಽಶೋಕ ಇವ ರಕ್ತಸ್ತಬಕಮಂಡಿತಃ |
ಬಭೌ ರಾಮಸ್ತದಾ ರಾಜನ್ ಕ್ವಚಿತ್ ಕಿಂಶುಕಸನ್ನಿಭಃ ॥33॥
ಎಲೈ ರಾಜನೇ, ಆಗ ಪರಶುರಾಮರು ಹೇಮಂತ ಋತುವಿನ ಕೊನೆಯಲ್ಲಿ ಕೆಂಪು ಮೊಗ್ಗುಗಳಿಂದ ಕೂಡಿದ ಅಶೋಕ ವೃಕ್ಷದಂತೆ, ಕೆಲವು ಸಲ ಕೆಂಪು ಪುಷ್ಪಗಳಿಂದ ಕೂಡಿದ ಮುತ್ತುಗದ ಮರದಂತೆ ಶೋಭಿಸಿದರು.
ತತೋಽನ್ಯದ್ ಧನುರಾದಾಯ ರಾಮಃ ಕ್ರೋಧಸಮನ್ವಿತಃ |
ಹೇಮಪುಂಖಾನ್ ಸುನಿಶಿತಾನ್ ಶರಾಂಸ್ತಾನ್ ಪ್ರವವರ್ಷ ಸಃ ॥34॥
ಅನಂತರ ಪರಶುರಾಮರು ಕೋಪದಿಂದ ಕೂಡಿದವರಾಗಿ ಇನ್ನೊಂದು ಬಿಲ್ಲನ್ನು ತೆಗೆದುಕೊಂಡು, ಹೇಮಪುಂಖಗಳಿದ್ದ ಹರಿತವಾದ ಬಾಣಗಳ ಮಳೆಯನ್ನು ನನ್ನ ಮೇಲೆ ಸುರಿಸಿದರು.
ತೇ ಸಮಾಸಾದ್ಯ ಮಾಂ ರೌದ್ರಾ ಬಹುಧಾ ಮರ್ಮಭೇದಿನಃ |
ಅಕಂಪಯನ್ ಮಹಾವೇಗಾಃ ಸರ್ಪಾನನವಿಷೋಪಮಾಃ ॥35॥
ಭಯಂಕರಗಳೂ, ಮರ್ಮಭೇದಿಗಳೂ, ಸರ್ಪಮುಖದಂತೆ ವಿಷೋಲ್ಬಣಗಳೂ, ಮಹಾವೇಗವುಳ್ಳವೂ ಆದ ಆ ಬಾಣಗಳು ನನ್ನನ್ನು ಸಂಧಿಸಿ ನನ್ನನ್ನು ಅಲುಗಾಡಿಸಿದವು.
ತಮಹಂ ಸಮವಷ್ಟಭ್ಯ ಪುನರಾತ್ಮಾನಮಾಹವೇ |
ಶತಸಂಖ್ಯೈಃ ಶರೈಃ ಕ್ರುದ್ಧಸ್ತದಾ ರಾಮಮವಾಕಿರಮ್ ॥36॥
ಆಗ ಯುದ್ಧದಲ್ಲಿ ನನ್ನನ್ನು ನಾನೇ ಸಮಾಧಾನ ಮಾಡಿಕೊಂಡು, ಕೋಪದಿಂದ ನೂರು ಬಾಣಗಳಿಂದ ಪರಶುರಾಮರ ಮೇಲೆ ಬಾಣಗಳ ಮಳೆಯನ್ನು ಸುರಿಸಿದೆನು.
ಸ ತೈರಗ್ನ್ಯರ್ಕಸಂಕಾಶೈಃ ಶರೈರಾಶೀವಿಷೋಪಮೈಃ |
ಶಿತೈರಭ್ಯರ್ದಿತೋ ರಾಮೋ ಮಂದಚೇತಾ ಇವಾಭವನ್ ॥37॥
ಅಗ್ನಿ-ಸೂರ್ಯಪ್ರಕಾಶವುಳ್ಳ, ಸರ್ಪಗಳನ್ನು ಹೋಲುವ ಹರಿತವಾದ ಆ ಬಾಣಗಳಿಂದ ಪೀಡಿತರಾದ ಪರಶುರಾಮರು ಮಂದಪ್ರಜ್ಞರಂತೆ ಆದರು.
ತತೋಽಹಂ ಕೃಪಯಾಽಽವಿಷ್ಟೋ ವಿನಿಂದ್ಯಾತ್ಮಾನಮಾತ್ಮನಾ |
ಧಿಗ್ಧಿಗಿತ್ಯಬ್ರುವಂ ಯುದ್ಧಂ ಕ್ಷತ್ರಧರ್ಮಂ ಚ ಭಾರತ ॥38॥
ಎಲೈ ಭಾರತನೇ, ಆಗ ನಾನು ಅವರ ಮೇಲೆ ಕೃಪೆಯಿಂದ ಕೂಡಿದವನಾಗಿ ನನ್ನನ್ನು ನಾನೇ ನಿಂದಿಸಿಕೊಂಡು, ಕ್ಷತ್ರಿಯಧರ್ಮಕ್ಕೆ ಧಿಕ್ಕಾರವಿರಲಿ, ಯುದ್ಧಕ್ಕೆ ಧಿಕ್ಕಾರವಿರಲಿ ಎಂದು ಪುನಃ ಪುನಃ ಹೇಳಿದೆನು.

ಅಸಕೃಚ್ಚಾಬ್ರುವಂ ರಾಜನ್ ಶೋಕವೇಗಪರಿಪ್ಲುತಃ ॥39॥
ಅಹೋ ಬತ ಕೃತಂ ಪಾಪಂ ಮಯೇದಂ ಕ್ಷತ್ರಧರ್ಮಣಾ |
ಗುರುರ್ದ್ವಿಜಾತಿರ್ಧರ್ಮಾತ್ಮಾ ಯದೇವಂ ಪೀಡಿತಃ ಶರೈಃ ॥40॥
ಎಲೈ ರಾಜನೇ, ಶೋಕವೇಗದಿಂದ ಪೂರ್ಣನಾಗಿ, ಕ್ಷತ್ರಿಯಧರ್ಮವನ್ನು ಆಚರಿಸುವ ನಾನು ಎಂತಹ ಪಾಪಕರ್ಮವನ್ನು ಮಾಡಿದೆ! ಬ್ರಾಹ್ಮಣರೂ ಧರ್ಮಾತ್ಮರೂ ಆದ ಇವರನ್ನು ನಾನು ಈ ರೀತಿಯಾಗಿ ಬಾಣಗಳಿಂದ ಪೀಡಿಸಿದೆ ಎಂದು ಅನೇಕ ಬಾರಿ ಹೇಳಿಕೊಂಡೆನು.

ತತೋಽಹಂ ಪ್ರಾಹರಂ ಭೂಯೋ ಜಾಮದಗ್ನ್ಯಾಯ ಭಾರತ ॥41॥
ಅಥಾಪತತ್ ಸ ಪೃಥಿವೀಂ ಪೂಷಾ ದಿವಸಸಂಕ್ಷಯೇ |
ಜಗಾಮಾಸ್ತಂ ಸಹಸ್ರಾಂಶುಃ ತತೋ ಯುದ್ಧಮುಪಾರಮತ್ ॥42॥
ಎಲೈ ಭಾರತನೇ, ನಾನು ಪುನಃ ಪರಶುರಾಮರ ಮೇಲೆ ಬಾಣ ಪ್ರಯೋಗವನ್ನು ಮಾಡಿದೆನು. ಆಗ ಸಾಯಂಕಾಲವಾಯಿತು. ಸೂರ್ಯನು ಅಸ್ತಂಗತನಾದನು ಮತ್ತು ಆ ದಿವಸ ಯುದ್ಧವು ಉಪರಮವನ್ನು ಹೊಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕಾಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೆರಡನೆಯ ಅಧ್ಯಾಯ
ಪರಶುರಾಮ ಮತ್ತು ಭೀಷ್ಮರ ಯುದ್ಧದ ವರ್ಣನೆ.
ಭೀಷ್ಮಃ
ಆತ್ಮನಸ್ತು ತತಃ ಸೂತೋ ಹಯಾನಾಂ ಚ ವಿಶಾಂಪತೇ |
ಮಮ ಚಾಪನಯಾಮಾಸ ಶಲ್ಯಾನ್ ಕುಶಲಸಮ್ಮತಃ ॥1॥
ಭೀಷ್ಮ ಎಲೈ ರಾಜನೇ, ಅನಂತರ ಕುಶಲನಾದ ನನ್ನ ಸೂತನು, ನನಗೂ, ಅಶ್ವಗಳಿಗೂ ಮತ್ತು ತನಗೂ ನೆಟ್ಟಿದ್ದ ಆಯುಧದ ಚೂರುಗಳನ್ನು ತೆಗೆದನು.
ಸ್ನಾತೋಪವೃತ್ತೈಸ್ತುರಗೈರ್ಲಬ್ಧತೋಯೈರವಿಹ್ವಲೈಃ |
ಪ್ರಭಾತೇ ಚೋದಿತೇ ಸೂರ್ಯೇ ತತೋ ಯುದ್ಧಮವರ್ತತ ॥2॥
ಅಶ್ವಗಳಿಗೆ ಸ್ನಾನವನ್ನು ಮಾಡಿಸಿ, ನೀರನ್ನು ಕೊಟ್ಟು, ದಣಿವಾರಿಸಿದ ಮೇಲೆ ಪ್ರಭಾತಕಾಲದಲ್ಲಿ ಸೂರ್ಯನು ಉದಯಿಸುತ್ತಿರಲು ಯುದ್ಧವು ಪ್ರಾರಂಭವಾಯಿತು.
ದೃಷ್ಟ್ವಾ ಮಾಂ ತೂರ್ಣಮಾಯಾಂತಂ ದಂಸಿತಂ ಸ್ಯಂದನೇ ಸ್ಥಿತಮ್ |
ಅಕರೋದ್ ರಥಮತ್ಯಂತಂ ರಾಮಃ ಸಜ್ಜಂ ಪ್ರತಾಪವಾನ್ ॥3॥
ನಾನು ರಥದಲ್ಲಿ ಕವಚವನ್ನು ಧರಿಸಿ, ಶೀಘ್ರವಾಗಿ ಬರುತ್ತಿರುವುದನ್ನು ನೋಡಿದ ಪ್ರತಾಪಶಾಲಿಯಾದ ಪರಶುರಾಮರು ತಮ್ಮ ರಥವನ್ನು ಬಹಳವಾಗಿ ಸಿದ್ಧಗೊಳಿಸಿದರು.
ತತೋಽಹಂ ರಾಮಮಾಯಾಂತಂ ದೃಷ್ಟ್ವಾ ಸಮರಕಾಂಕ್ಷಿಣಮ್ |
ಧನುಃಶ್ರೇಷ್ಠಂ ಸಮುತ್ಸೃಜ್ಯ ಸಹಸಾಽವತರಂ ರಥಾತ್ ॥4॥
ಆಗ ನಾನು ಯುದ್ಧಾಕಾಂಕ್ಷಿಗಳಾಗಿ ಮುಂದೆ ಬರುತ್ತಿರುವ ಪರಶುರಾಮರನ್ನು ನೋಡಿ ನನ್ನ ಶ್ರೇಷ್ಠವಾದ ಧನುಸ್ಸನ್ನು ಬಿಟ್ಟು ತಕ್ಷಣ ರಥದಿಂದ ಇಳಿದೆನು.
ಅಭಿವಾದ್ಯ ತಥೈವಾಹಂ ರಥಮಾರುಹ್ಯ ಭಾರತ |
ಯುಯುತ್ಸುರ್ಜಾಮದಗ್ನ್ಯಸ್ಯ ಪ್ರಮುಖೇ ವೀತಭೀಃ ಸ್ಥಿತಃ ॥5॥
ಎಲೈ ಭಾರತನೇ, ನಾನು ಅವರಿಗೆ ನಮಸ್ಕಾರವನ್ನು ಮಾಡಿ, ಪುನಃ ಹಾಗೆಯೇ ರಥವನ್ನು ಹತ್ತಿ, ಯುದ್ಧವನ್ನು ಮಾಡಲು ಬಯಸಿ, ಪರಶುರಾಮರ ಎದುರಿನಲ್ಲಿ ನಿರ್ಭಯವಾಗಿ ನಿಂತೆನು.
ತತೋ ಮಾಂ ಶರವರ್ಷೇಣ ಮಹತಾ ಸಮವಾಕಿರತ್ |
ಅಹಂ ಚ ಶರವರ್ಷೇಣ ವರ್ಷಂತಂ ಸಮವಾಕಿರಮ್ ॥6॥
ಅನಂತರ ಅವರು ನನ್ನ ಮೇಲೆ ದೊಡ್ಡ ಬಾಣಗಳ ಮಳೆಯನ್ನು ಸುರಿಸಿದರು. ನಾನೂ ಸಹ ಅವರ ಮೇಲೆ ಬಾಣಗಳ ಮಳೆಯನ್ನು ಸುರಿಸಿದೆ.
ಸಂಕ್ರುದ್ಧೋ ಜಾಮದಗ್ನ್ಯಸ್ತು ಪುನರೇವ ಪತತ್ರಿಣಃ |
ಪ್ರೇಷಯಾಮಾಸ ಮೇ ರಾಜನ್ ದೀಪ್ತಾಸ್ಯಾನುರಗಾನಿವ ॥7॥
ಎಲೈ ರಾಜನೆ, ಕೋಪಗೊಂಡ ಪರಶುರಾಮರು ನನ್ನ ಮೇಲೆ ಹಿಂದೆ ಗರಿಗಳನ್ನು ಕಟ್ಟಿದ, ಅಗ್ನಿಮುಖವನ್ನು ಹೊಂದಿದ, ಸರ್ಪಗಳಂತಿರುವ ಬಾಣಗಳನ್ನು ಪ್ರಯೋಗಿಸಿದರು.
ತಾನಹಂ ನಿಶಿತೈರ್ಭಲ್ಲೈಃ ಶತಶೋಽಥ ಸಹಸ್ರಶಃ |
ಅಚ್ಛಿದಂ ಸಹಸಾ ರಾಜನ್ನಂತರಿಕ್ಷೇ ಪುನಃ ಪುನಃ ॥8॥

ಎಲೈ ರಾಜನೇ, ನಾನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿದ್ದ ಆ ಬಾಣಗಳನ್ನು ಹರಿತವಾದ ಭಲ್ಲೆಗಳಿಂದ ಪುನಃ ಪುನಃ ಅಂತರಿಕ್ಷದಲ್ಲಿಯೇ ಕತ್ತರಿಸಿದೆನು.
ತತಸ್ತ್ವಸ್ತ್ರಾಣಿ ದಿವ್ಯಾನಿ ಜಾಮದಗ್ನ್ಯಃ ಪ್ರತಾಪವಾನ್ |
ಮಯಿ ಪ್ರಯೋಜಯಾಮಾಸ ತಾನ್ಯಹಂ ಪ್ರತ್ಯಷೇಧಯಮ್ ॥9॥
ಅಸ್ತ್ರೈರೇವ ಮಹಾಬಾಹೋ ಚಿಕೀರ್ಷನ್ನಧಿಕಕ್ರಿಯಾಮ್ ॥10॥
ತತೋ ದಿವಿ ಮಹಾನ್ ನಾದಃ ಪ್ರಾದುರಾಸೀತ್ ಸಮಂತತಃ ॥11॥
ಅನಂತರ ಪ್ರತಾಪಶಾಲಿಗಳಾದ ಪರಶುರಾಮರು ನನ್ನ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು. ಎಲೈ ಮಹಾಬಾಹುವೇ, ನಾನೂ ಸಹ ಅವರನ್ನು ಮೀರಿಸುವವನಾಗಿ ಅಸ್ತ್ರಗಳಿಂದಲೇ ಅವರ ಅಸ್ತ್ರಗಳನ್ನು ಪ್ರತಿಷೇಧಿಸಿದೆನು. ಆಗ ಆಕಾಶದಲ್ಲಿ ಎಲ್ಲ ಕಡೆಯಲ್ಲಿಯೂ ದೊಡ್ಡ ನಾದ ಉಂಟಾಯಿತು.
ತತೋಽಹಮಸ್ತ್ರಂ ವಾಯವ್ಯಂ ಜಾಮದಗ್ನ್ಯೇ ಪ್ರಯುಕ್ತವಾನ್ |
ಪ್ರತ್ಯಾಜಘ್ನೇ ಚ ತದ್ ರಾಮೋ ಗುಹ್ಯಕಾಸ್ತ್ರೇಣ ವೀರ್ಯವಾನ್ ॥12॥
ಅನಂತರ ನಾನು ಪರಶುರಾಮರ ಮೇಲೆ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದೆನು. ವೀರ್ಯಶಾಲಿಗಳಾದ ಪರಶುರಾಮರು ಅದನ್ನು ಗುಹ್ಯಕಾಸ್ತ್ರದಿಂದ ನಿವಾರಿಸಿದರು.
ತತೋಽಹಮಸ್ತ್ರಮಾಗ್ನೇಯಮನುಮಂತ್ರ್ಯ ಪ್ರಯುಕ್ತವಾನ್ |
ವಾರುಣೇನೈವ ತದ್ ರಾಮೋ ವಾರಯಾಮಾಸ ಮೇ ವಿಭುಃ ॥13॥
ಅನಂತರ ನಾನು ಅಭಿಮಂತ್ರಣವನ್ನು ಮಾಡಿ, ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದೆನು. ವಿಭುಗಳಾದ ಪರಶುರಾಮರು ಅದನ್ನು ವಾರುಣಾಸ್ತ್ರದಿಂದ ನಿವಾರಣೆ ಮಾಡಿದರು.
ಏವಮಸ್ತ್ರಾಣಿ ದಿವ್ಯಾನಿ ರಾಮಸ್ಯಾಹಮವಾರಯಮ್ |
ರಾಮಶ್ಚ ಮಮ ತೇಜಸ್ವೀ ದಿವ್ಯಾನ್ಯಸ್ತ್ರಾಣಿ ಸಂಯುಗೇ ॥14॥
ಹೀಗೆ ಯುದ್ಧದಲ್ಲಿ ನಾನು ಪರಶುರಾಮರ ದಿವ್ಯಾಸ್ತ್ರಗಳನ್ನೂ, ತೇಜಸ್ವಿಗಳಾದ ಪರಶುರಾಮರು ನನ್ನ ದಿವ್ಯಾಸ್ತ್ರಗಳನ್ನೂ ಪರಸ್ಪರವಾಗಿ ನಿವಾರಿಸಿದೆವು.
ತತೋ ಮಾಂ ಸವ್ಯತೋ ರಾಜನ್ ರಾಮಃ ಕುರ್ವನ್ ದ್ವಿಜೋತ್ತಮಃ |
ಉರಸ್ಯವಿಧ್ಯತ್ ಸಂರಬ್ಧೋ ಜಾಮದಗ್ನ್ಯೋ ಮಹಾಬಲಃ ॥15॥
ತತೋಽಹಂ ಭರತಶ್ರೇಷ್ಠ ಸಂನ್ಯಷೀದಂ ರಥೋತ್ತಮೇ ॥16॥
ಎಲೈ ರಾಜನೇ, ಅನಂತರ ದ್ವಿಜಶ್ರೇಷ್ಠರಾದ, ಮಹಾಬಲರಾದ ಪರಶುರಾಮರು ಕೋಪಗೊಂಡು, ನನ್ನನ್ನು ಎಡಕ್ಕೆ ಮಾಡಿಕೊಂಡು ನನ್ನ ವಕ್ಷಸ್ಸ್ಥಲಕ್ಕೆ ಹೊಡೆದರು. ಎಲೈ ಭರತಶ್ರೇಷ್ಠನೇ, ಆಗ ನಾನು ಶ್ರೇಷ್ಠವಾದ ರಥದಲ್ಲಿ ಕುಸಿದೆನು.
ತತೋ ಮಾಂ ಕಶ್ಮಲಾವಿಷ್ಟಂ ಸೂತಸ್ತೂರ್ಣಮುದಾವಹತ್ |
ಗ್ಲಾಯಂತಂ ಭರತಶ್ರೇಷ್ಠ ರಾಮಬಾಣಪ್ರಪೀಡಿತಮ್ ॥17॥
ಎಲೈ ಭರತಶ್ರೇಷ್ಠನೇ, ರಾಮಬಾಣಗಳಿಂದ ಪೀಡಿತನಾಗಿ, ಕಶ್ಮಲಾವಿಷ್ಟನಾಗಿ ಕುಸಿಯುತ್ತಿರುವ ನನ್ನನ್ನು ಸೂತನು ಶೀಘ್ರವಾಗಿ ಬೇರೆ ಕಡೆಗೆ ಕರೆದುಕೊಂಡು ಹೋದನು.
ತತೋ ಮಾಮಪಯಾತಂ ವೈ ಭೃಶಂ ವಿದ್ಧಮಚೇತಸಮ್ |
ರಾಮಸ್ಯಾನುಚರಾ ಹೃಷ್ಟಾಃ ಸರ್ವೇ ದೃಷ್ಟ್ವಾ ವಿಚುಕ್ರುಶುಃ ॥18॥
ಅಕೃತವ್ರಣಪ್ರಭೃತಯಃ ಕಾಶಿಕನ್ಯಾ ಚ ಭಾರತ ॥19॥
ಆಗ ನಾನು ರಾಮರ ಬಾಣಗಳ ಏಟಿನಿಂದ ಪ್ರಜ್ಞೆಯನ್ನು ಕಳೆದುಕೊಂಡು, ಯುದ್ಧ ಭೂಮಿಯಿಂದ ಅಪಯಾನ ಮಾಡಿದುದನ್ನು ನೋಡಿ ಅಕೃತವ್ರಣ ಮೊದಲಾದ ರಾಮರ ಅನುಚರರರೆಲ್ಲರೂ ಸಂತೋಷದಿಂದ ಕೇಕೆಯನ್ನು ಹಾಕಿದರು. ಎಲೈ ಭಾರತನೇ, ಕಾಶಿಕನ್ಯೆಯಾದ ಅಂಬೆಯೂ ಸಹ ಸಂತೋಷದಿಂದ ಕಿರುಚಿದಳು.
ತತಸ್ತು ಲಬ್ಧಸಂಜ್ಞೋಽಹಂ ಜ್ಞಾತ್ವಾ ಸೂತಮಥಾಬ್ರುವಮ್ |
ಯಾಹಿ ಸೂತ ಯತೋ ರಾಮಃ ಸಜ್ಜೋಽಹಂ ಗತವೇದನಃ ॥20॥
ಅನಂತರ ನಾನು ಪ್ರಜ್ಞೆಯನ್ನು ಮರಳಿ ಪಡೆದು ಸೂತನನ್ನು ಕುರಿತು `ಸೂತನೇ, ನನ್ನ ವೇದನೆಯು ಹೋಗಿದೆ. ನಾನು ಸಿದ್ಧನಾಗಿದ್ದೇನೆ. ಪರಶುರಾಮರಿರುವಲ್ಲಿಗೆ ರಥವನ್ನು ನಡೆಸು' ಎಂದು ಹೇಳಿದೆ.
ತತೋ ಮಾಮವಹತ್ ಸೂತೋ ಹಯೈಃ ಪರಮಶೋಭಿತೈಃ |
ನೃತ್ಯದ್ಭಿರಿವ ಕೌರವ್ಯ ಮಾರುತಪ್ರತಿಮೈರ್ಗತೌ ॥21॥
ಎಲೈ ಕೌರವ್ಯನೇ, ಆಗ ಸೂತನು ಪರಮಶೋಭಿತವಾದ, ಗತಿಯಲ್ಲಿ ವಾಯುವಿಗೆ ಸಮಾನವಾದ, ನರ್ತನವನ್ನು ಮಾಡುವಂತೆ ಕಾಣುವ ಕುದುರೆಗಳಿಂದ ಹೂಡಿದ ರಥವನ್ನು ಮುಂದೆ ತೆಗೆದುಕೊಂಡು ಹೋದನು.
ತತೋಽಹಂ ರಾಮಮಾಸಾದ್ಯ ಬಾಣಜಾಲೇನ ಕೌರವ |
ಅವಾಕಿರಂ ಸುಸಂರಬ್ಧಃ ಸಂರಬ್ಧಂ ಚ ಜಿಗೀಷಯಾ ॥22॥
ಎಲೈ ಕೌರವ್ಯನೇ, ಅನಂತರ ನಾನು ರಾಮನನ್ನು ಸಮೀಪಿಸಿ, ಬಹಳ ಕೋಪದಿಂದ ಕೂಡಿದವನಾಗಿ, ಅವರನ್ನು ಗೆಲ್ಲುವ ಆಸೆಯಿಂದ ಅವರ ಮೇಲೆ ಬಾಣಗಳ ಸಮೂಹವನ್ನು ಸುರಿಸಿದೆ.
ತಾನಾಪತತ ಏವಾಸೌ ರಾಮೋ ಬಾಣಾನಜಿಹ್ಮಗಾನ್ |
ಬಾಣೈರೇವಾಚ್ಛಿನತ್ ತೂರ್ಣಮೇಕೈಕಂ ತ್ರಿಭಿರಾಹವೇ ॥23॥

ಪರಶುರಾಮರು ಆ ಬಾಣಗಳು ತಮ್ಮ ಕಡೆಗೆ ನೇರವಾಗಿ ಬರುತ್ತಿರುವಂತೆಯೇ ತಮ್ಮ ಬಾಣಗಳಿಂದ ಒಂದೊಂದು ಬಾಣವನ್ನೂ ಮೂರು ಮೂರು ಬಾಣಗಳಿಂದ ಕತ್ತರಿಸಿದರು.
ತತಸ್ತೇ ಸೂದಿತಾಃ ಸರ್ವೇ ಮಮ ಬಾಣಾಃ ಸುಸಂಶಿತಾಃ |
ರಾಮಬಾಣೈರ್ದ್ವಿಧಾ ಚ್ಛಿನ್ನಾಃ ಶತಶೋಽಥ ಮಹಾಹವೇ ||24||
ಆಗ ಆ ಮಹಾಯುದ್ಧದಲ್ಲಿ ನನ್ನ ಹರಿತವಾದ ಬಾಣಗಳೆಲ್ಲವೂ ನೂರಾರು ಸಂಖ್ಯೆಯಲ್ಲಿ ಪರಶುರಾಮರ ಬಾಣಗಳಿಂದ ಕತ್ತರಿಸಲ್ಪಟ್ಟವು.
ತತಃ ಪುನಃ ಶರಂ ದೀಪ್ತಂ ಸುಪ್ರಭಂ ಕಾಲಸಮ್ಮಿತಮ್ |
ಅಸೃಜಂ ಜಾಮದಗ್ನ್ಯಾಯ ರಾಮಾಯಾಹಂ ಜಿಘಾಂಸಯಾ ||25||
ಆಗ ನಾನು ಪುನಃ ಮೃತ್ಯುವಿನಂತಿರುವ, ಪ್ರಕಾಶಮಾನವಾಗಿ ಬೆಳಗುವ ಒಂದು ಬಾಣವನ್ನು ಪರಶುರಾಮರ ವಧೆಯನ್ನು ಬಯಸಿ ಅವರ ಮೇಲೆ ಪ್ರಯೊಗಿಸಿದೆನು.
ತೇನ ತ್ವಭಿಹತೋ ಗಾಢಂ ಬಾಣವೇಗವಶಂ ಗತಃ |
ಮುಮೋಹ ಸಮರೇ ರಾಮೋ ಭೂಮೌ ಚ ನಿಪಪಾತ ಹ ||26||
ಆ ಬಾಣದ ವೇಗಕ್ಕೆ ವಶರಾಗಿ ಆ ಬಾಣದಿಂದ ಗಾಢವಾಗಿ ಹೊಡೆಯಲ್ಪಟ್ಟ ಪರಶುರಾಮರು ಮೂರ್ಛೆಗೆ ಒಳಗಾಗಿ ಭೂಮಿಯ ಮೇಲೆ ಬಿದ್ದರು.
ತತೋ ಹಾಹಾಕೃತಂ ಸರ್ವಂ ರಾಮೋ ಭೂತಳಮಾಶ್ರಿತೇ |
ಜಗದ್ಭಾರತ ಸಂವಿಗ್ನಂ ಯಥಾಽರ್ಕಪತನೇ ತಥಾ ||27||
ತತ ಏನಂ ಸುಸಂವಿಗ್ನಾಃ ಸರ್ವ ಏವಾಭಿದುದ್ರುವುಃ |
ತಪೋಧನಾಸ್ತೇ ಸಹಸಾ ಕಾಶ್ಯಾ ಚ ಭೃಗುನಂದನಮ್ ||28||
ಎಲೈ ಭಾರತನೇ, ಪರಶುರಾಮರು ಭೂಮಿಯಲ್ಲಿ ಬೀಳುತ್ತಿರಲು, ಸೂರ್ಯನು ಭೂಮಿಯ ಮೇಲೆ ಬಿದ್ದಂತಿರುವ ಅವರನ್ನು ನೋಡಿ, ಜಗತ್ತೆಲ್ಲವೂ ಭಯದಿಂದ ಕೂಡಿ ಹಾಹಾಕಾರವನ್ನು ಮಾಡಿತು. ಆಗ ಬಹಳ ಭಯದಿಂದ ಕೂಡಿದ ಎಲ್ಲ ತಪೋಧನರೂ ಮತ್ತು ಕಾಶಿಕನ್ಯೆಯಾದ ಅಂಬೆಯೂ ಪರಶುರಾಮರ ಕಡೆಗೆ ಧಾವಿಸಿದರು.
ತತ ಏನಂ ಪರಿಷ್ವಜ್ಯ ಶನೈರಾಶ್ವಾಸಯಂಸ್ತದಾ |
ಪಾಣಿಭಿರ್ಜಲಶೀತೈಶ್ಚ ಜಯಾಶೀರ್ಭಿಶ್ಚ ಕೌರವ ||29||
ಎಲೈ ಕೌರವ್ಯನೇ, ಅನಂತರ ಅವರು ಅವನನ್ನು ಆಲಿಂಗಿಸಿ, ತಮ್ಮ ಹಸ್ತ ತಳಗಳಿಂದಲೂ, ಶೀತಜಲಗಳಿಂದಲೂ ಜಯಾಶೀರ್ವಾದಗಳಿಂದಲೂ ನಿಧಾನವಾಗಿ ಸಮಾಧಾನಗೊಳಿಸಿದರು.
ತತಃ ಸ ವಿಹ್ವಲೋ ವಾಕ್ಯಂ ರಾಮ ಉತ್ಥಾಯ ಚಾಬ್ರವೀತ್ |
ತಿಷ್ಠ ಭೀಷ್ಮ ಹತೋಽಸೀತಿ ಬಾಣಂ ಸಂಧಾಯ ಕಾರ್ಮುಕೇ ||30||
ಆಗ ಇನ್ನೂ ವಿಹ್ವಲರಾಗಿದ್ದ ಅವರು ಎದ್ದು ನನ್ನನ್ನು ಕುರಿತು `ಭೀಷ್ಮನೇ, ನಿಲ್ಲು. ಈ ಬಾಣದಿಂದ ನೀನು ಹತನಾಗುವಿ' ಎಂದು ಹೇಳುತ್ತಾ ತಮ್ಮ ಧನುಸ್ಸಿನಲ್ಲಿ ಬಾಣವನ್ನು ಹೂಡಿದರು.
ಸ ಮುಕ್ತೋ ನ್ಯಪತತ್ ತೂರ್ಣಂ ಸವ್ಯೇ ಪಾರ್ಶ್ವೇ ಮಹಾಹವೇ |
ತೇನಾಹಂ ಭೃಶಮುದ್ವಿಗ್ನೋ ವ್ಯಾಘೂರ್ಣಿತ ಇವ ದ್ರುಮಃ ||31||
ಅವರಿಂದ ಪ್ರಯೋಗಿಸಲ್ಪಟ್ಟ ಆ ಬಾಣವು ಆ ದೊಡ್ಡ ಯುದ್ಧದಲ್ಲಿ ನನ್ನ ಎಡ ಪಕ್ಕೆಗೆ ಬಿದ್ದಿತು. ಅದರಿಂದ ನಾನು ಬುಡದಿಂದ ಅಲ್ಲಾಡಿಸಿದ ಮರದಂತೆ ಬಹಳವಾಗಿ ಉದ್ವಿಗ್ನನಾದೆ.
ಹತ್ವಾ ಹಯಾಂಸ್ತತೋ ರಾಮಃ ಶಸತ್ರಸ್ತ್ರೇಣ ಮಹಾಹವೇ |
ಅವಾಕಿರನ್ಮಾಂ ವಿಸ್ರಬ್ಧಂ ಬಾಣೈಸ್ತೈರ್ಲೋಮವಾಹಿಭಿಃ ||32||
ಅನಂತರ ಪರಶುರಾಮರು ಆ ದೊಡ್ಡ ಯುದ್ಧದಲ್ಲಿ ಶಸತ್ರಸ್ತ್ರಗಳಿಂದ ನನ್ನ ಅಶ್ವಗಳನ್ನು ಕೊಂದು, ಬಹಳ ಆತ್ಮವಿಶ್ವಾಸದಿಂದ ರೋಮವನ್ನೂ ಕತ್ತರಿಸುವ ಬಾಣಗಳನ್ನು ನನ್ನ ಮೇಲೆ ಸುರಿಸಿದರು.
ತತೋಽಹಮಪಿ ಶೀಘ್ರಾಸ್ತ್ರಂ ಸಮರಪ್ರತಿವಾರಣಮ್ |
ಅವಾಸೃಜಂ ಮಹೇಷ್ವಾಸಂ ತೇಽಂತರಾ ವಿಷ್ಠಿತಾಃ ಶರಾಃ ||33||
ರಾಮಸ್ಯ ಚ ಮಮೈವಾಶು ವ್ಯೋಮಾವೃತ್ಯ ಸಮಂತತಃ ||34||
ಆಗ ನಾನೂ ಸಹ ಅವರ ಯುದ್ಧವನ್ನು ತಡೆಯುವ ಶೀಘ್ರಾಸ್ತ್ರವನ್ನು ಪ್ರಯೋಗಿಸಿದೆನು. ನಮ್ಮಿಬ್ಬರಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಆಕಾಶದಲ್ಲೆಲ್ಲಾ ಹರಡಿ ನಿಂತವು.
ನ ಸ್ಮ ಸೂರ್ಯಃ ಪ್ರತಪತಿ ಶರಜಾಲಸಮಾವೃತಃ |
ಮಾತರಿಶ್ವಾಽಂತರೇ ತಸ್ಮಿನ್ ಮೇಘರುದ್ಧ ಇವಾನದತ್ ||35||
ಬಾಣಗಳ ಬಲೆಯಿಂದ ಆವೃತನಾದ ಸೂರ್ಯನ ಪ್ರಕಾಶವೇ ಕಾಣುತ್ತಿರಲಿಲ್ಲ. ವಾಯುವು ಆ ಬಾಣದ ಜಾಲದಲ್ಲಿ ಸಿಲುಕಿ ಮೋಡಗಳಿಗೆ ಸಿಲುಕಿದಂತೆ ಗರ್ಜಿಸುತ್ತಿದ್ದಿತು.
ತತೋ ವಾಯೋಃ ಪ್ರಕಂಪಾಚ್ಚ ಸೂರ್ಯಸ್ಯ ಚ ಗಭಸ್ತಿಭಿಃ |
ಅಭಿವಾತಪ್ರಭಾವಾಚ್ಚ ಪಾವಕಃ ಸಮಜಾಯತ ||36||
ಆಗ ವಾಯುವಿನ ಪ್ರಕಂಪನದಿಂದಲೂ, ಸೂರ್ಯನ ಕಿರಣಗಳಿಂದಲೂ ಮತ್ತು ಎದುರು ಗಾಳಿಯ ವೇಗದಿಂದಲೂ ಅಗ್ನಿಯು ಉಂಟಾಯಿತು.

ತೇ ಶರಾಃ ಸುಸಮಿದ್ಧೇನ ಪ್ರದೀಪ್ತಾಶ್ಚಿತ್ರಭಾನುನಾ |
ಭೂಮೌ ಸರ್ವೇ ತತೋ ರಾಜನ್ ಭಸ್ಮೀಭೂತಾಃ ಪ್ರಪೇದಿರೇ ||37||
ಎಲೈ ರಾಜನೇ, ಆ ಅಗ್ನಿಯು ಬಹಳವಾಗಿ ಅಭಿವೃದ್ಧಿಯನ್ನು ಹೊಂದಿ, ಅದರಿಂದ ಎಲ್ಲ ಬಾಣಗಳೂ ಭಸ್ಮವಾಗಿ ಭೂಮಿಯ ಮೇಲೆ ಬಿದ್ದವು.
ತದಾ ಶತಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಅಯುತಾನ್ಯಥ ಖರ್ವಾಣಿ ನಿಖರ್ವಾಣಿ ಚ ಕೌರವ ||38||
ರಾಮಃ ಶರಾಣಾಂ ಸಂಕ್ರುದ್ಧೋ ಮಯಿ ತೂರ್ಣಂ ನ್ಯಪಾತಯತ್ ||
ಎಲೈ ಕೌರವನೇ, ಆಗ ಪರಶುರಾಮರು ಸಂಕ್ರುದ್ಧರಾಗಿ ನೂರು, ಸಾವಿರ, ಹತ್ತುಸಾವಿರ, ಅಯುತ, ಪ್ರಯುತ, ಖರ್ವ, ನಿಖರ್ವ ಸಂಖ್ಯೆಯ ಬಾಣಗಳನ್ನು ನನ್ನ ಮೇಲೆ ಸುರಿಸಿದರು.
ತತೋಽಹಂ ತಾನಪಿ ರಣೇ ಶರೈರಾಶೀವಿಷೋಪಮೈಃ |
ಸಂಛಿದ್ಯ ಭೂಮೌ ನೃಪತೇಽಪಾತಯಂ ಪನ್ನಗಾನಿವ ||40||
ಆಗ ನಾನೂ ಸಹ ಸರ್ಪಗಳಂತಿರುವ ನನ್ನ ಬಾಣಗಳಿಂದ ಸರ್ಪದಂತಿದ್ದ ಆ ಬಾಣಗಳನ್ನು ಕತ್ತರಿಸಿ ಭೂಮಿಯ ಮೇಲೆ ಬೀಳಿಸಿದೆನು.
ಏವಂ ತದಭವದ್ ಯುದ್ಧಂ ತದಾ ಭರತಸತ್ತಮ |
ಸಂಧ್ಯಾಕಾಲೇ ವ್ಯತೀತೇ ತು ವ್ಯಪಾಯಾತ್ ಸಮರಾದ್ ಗುರುಃ ||41||
ಎಲೈ ಭರತಶ್ರೇಷ್ಠನೇ, ಹೀಗೆ ಆ ಯುದ್ಧವು ನಡೆಯಿತು. ಆಗ ಸಂಧ್ಯಾಕಾಲವು ಮೀರುತ್ತಿರಲು ಗುರುಗಳಾದ ಪರಶುರಾಮರು ಯುದ್ಧದಿಂದ ಹಿಂದೆ ಸರಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ ||
|| ಅಂಬೋಪಾಖ್ಯಾನಪರ್ವಣಿ ದ್ವಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ಮೂರನೆಯ ಅಧ್ಯಾಯ
ಪರಶುರಾಮ ಮತ್ತು ಭೀಷ್ಮರ ಯುದ್ಧದ ವರ್ಣನೆ.
ಭೀಷ್ಮಃ
ಸಮಾಗತಸ್ಯ ರಾಮೇಣ ಪುನರೇವಾತಿದಾರುಣಮ್ |
ಅನ್ಯೇದ್ಯುಸ್ತುಮುಲಂ ಯುದ್ಧಮಾಸೀದ್ ಭರತಸತ್ತಮ ||1||
ಭೀಷ್ಮ ಎಲೈ ಭರತಶ್ರೇಷ್ಠನೇ, ಮರುದಿನ ಪರಶುರಾಮರು ಹಿಂದಿರುಗಿ ಬಂದ ಮೇಲೆ ಅತಿದಾರುಣವಾದ, ಘೋರವಾದ ಯುದ್ಧವು ನಡೆಯಿತು.
ತತೋ ದಿವ್ಯಾಸ್ತ್ರವಿಚ್ಛೂರೋ ದಿವ್ಯಾನ್ಯಸ್ತ್ರಾಣ್ಯನೇಕಶಃ |
ಅಯೋಜಯತ್ ಸ ಧರ್ಮಾತ್ಮಾ ದಿವಸೇ ದಿವಸೇ ವಿಭುಃ ||2||
ಆಗ ದಿವ್ಯಾಸ್ತ್ರಗಳನ್ನು ಬಲ್ಲ ಆ ಶೂರರೂ, ಧರ್ಮಾತ್ಮರೂ ಆದ ಪರಶುರಾಮರು ಪ್ರತಿದಿವಸದಲ್ಲಿಯೂ ಅನೇಕ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು.
ತಾನ್ಯಹಂ ತತ್ಪ್ರತೀಘಾತೈರಸ್ತ್ರೈರಸ್ತ್ರಾಣಿ ಭಾರತ |
ವ್ಯಧಮಂ ತುಮುಲೇ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಸುದುಸ್ತ್ಯಜಾನ್ ||3||
ಎಲೈ ಭಾರತನೇ, ಆ ಘೋರವಾದ ಯುದ್ಧದಲ್ಲಿ ನಾನು ತ್ಯಜಿಸಲು ಬಹಳ ಕಷ್ಟವಾದ ನನ್ನ ಪ್ರಾಣಗಳ ಮೇಲಿನ ಹಂಗನ್ನು ತೊರೆದು ಆ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಅವುಗಳನ್ನು ನಾಶಮಾಡಿದೆನು.
ಅಸ್ತ್ರೈರಸ್ತ್ರೇಷು ಬಹುಧಾ ಹತೇಷ್ವೇವ ಚ ಭಾರ್ಗವಃ |
ಅಕ್ರುಧ್ಯತ ಮಹಾಬಾಹುಃ ತ್ಯಕ್ತಪ್ರಾಣಃ ಸ ಸಂಯುಗೇ ||4||
ನನ್ನ ಅಸ್ತ್ರಗಳಿಂದ ಅವರ ಅಸ್ತ್ರಗಳು ನಾಶಹೊಂದುತ್ತಿರಲು ಮಹಾಬಾಹುವೂ, ಜೀವದ ಹಂಗನ್ನು ತೊರೆದವರೂ ಆದ ಪರಶುರಾಮರು ಬಹಳ ಕೋಪಗೊಂಡರು.
ತತಃ ಶಕ್ತಿಂ ಪ್ರಾಹಿಣೋದ್ ಘೋರರೂಪಾಮ್
ಅಸ್ತ್ರೇ ರುದ್ಧೇ ಜಾಮದಗ್ನ್ಯೋ ಮಹಾತ್ಮಾ |
ಕಾಲೋತ್ಸೃಷ್ಟಾಂ ಪ್ರಜ್ವಲಿತಾಮಿವೋಲ್ಕಾಂ
ಸಂದೀಪ್ತಾಗ್ರಾಂ ತೇಜಸಾ ವ್ಯಾಪ್ಯ ಲೋಕಮ್ ||5||
ಅವರ ಅಸ್ತ್ರಗಳು ಪ್ರತಿರುದ್ಧವಾಗುತ್ತಿರಲು ಮಹಾತ್ಮರಾದ ಪರಶುರಾಮರು ಯಮನಿಂದ ಪ್ರಯೋಗಿಸಲ್ಪಟ್ಟಂತೆ ಉರಿಯುವ, ಉಲ್ಕೆಯಂತಿರುವ ತನ್ನ ತೇಜಸ್ಸಿಂದ ಲೋಕವನ್ನು ವ್ಯಾಪಿಸಿದ, ಜ್ವಾಲೆಯುಳ್ಳ ತುದಿಯುಳ್ಳ ಘೋರವಾದ ಶಕ್ತ್ಯಾಯುಧವನ್ನು ನನ್ನ ಮೇಲೆ ಪ್ರಯೋಗಿಸಿದರು.
ತತೋಽಹಂ ತಾಮಿಷುಭಿರ್ದೀಪ್ಯಮಾನೈಃ
ಸಮಾಯಾಂತೀಮಂತಕಸನ್ನಿಕಾಶಾಮ್ |

ಛಿತ್ವಾ ತ್ರೇಧಾ ಪಾತಯಾಮಾಸ ಭೂಮೌ
ತತೋ ವವೌ ಪವನಃ ಪುಣ್ಯಗಂಧೀ ॥6॥
ಆಗ ನಾನು ಯಮನಂತೆ ನನ್ನ ಬಳಿಗೆ ಬರುತ್ತಿದ್ದ ಆ ಶಕ್ತಿಯನ್ನು ಪ್ರಕಾಶಮಾನವಾದ ಮೂರು ಬಾಣಗಳನ್ನು ಪ್ರಯೋಗಿಸಿ, ಮೂರು ಭಾಗವಾಗಿ ಮಾಡಿ ಭೂಮಿಯ ಮೇಲೆ ಬೀಳಿಸಿದೆನು. ಅನಂತರ ಪುಣ್ಯಗಂಧಮಯವಾದ ವಾಯುವು ಬೀಸಿತು.
ತಸ್ಯಾಂ ಛಿನ್ನಾಯಾಂ ಕ್ರೋಧದೀಪ್ತೋಽಥ ರಾಮಃ
ಶಕ್ತೀರ್ಘೋರಾಃ ಪ್ರಾಹಿಣೋದ್ ದ್ವಾದಶಾನ್ಯಾಃ |
ತಾಸಾಂ ರೂಪಂ ಭಾರತ ನೋತ ಶಕ್ಯಂ
ತೇಜಸ್ವಿತ್ವಾಲ್ಲಾಘವಾಚ್ಚೈವ ವಕ್ತುಮ್ ॥7॥
ಆ ಶಕ್ತ್ಯಾಯುಧವು ಕತ್ತರಿಸಲ್ಪಡುತ್ತಿರಲು ಕ್ರೋಧದಿಂದ ಉರಿಯುತ್ತಿದ್ದ ಪರಶುರಾಮರು ನನ್ನ ಮೇಲೆ ಹನ್ನೆರಡು ಘೋರವಾದ ಶಕ್ತಿಗಳನ್ನು ಪ್ರಯೋಗಿಸಿದರು. ಎಲೈ ಭಾರತನೇ, ಅವುಗಳ ಸಾಮರ್ಥ್ಯ ಮತ್ತು ಕ್ಷಿಪ್ರತೆಯ ಕಾರಣದಿಂದಾಗಿ ಅವುಗಳ ರೂಪವನ್ನು ವರ್ಣಿಸಲು ಸಾಧ್ಯವಿಲ್ಲ.
ಕಿಂತ್ವೇವಾಹಂ ವಿಹ್ವಲಃ ಸಂಪ್ರದೃಶ್ಯ
ದಿಗ್ಭ್ಯಃ ಸರ್ವಾಸ್ತಾ ಮಹೋಲ್ಕಾ ಇವಾಗ್ನೇಃ |
ನಾನಾರೂಪಾಸ್ತೇಜಸೋಗ್ರೇಣ ದೀಪ್ತಾ
ಯಥಾಽಽದಿತ್ಯಾ ದ್ವಾದಶ ಲೋಕಸಂಕ್ಷಯೇ ॥8॥
ಅನೇಕ ದಿಕ್ಕುಗಳಿಂದ ಅಗ್ನಿಮಯವಾದ ಉಲ್ಕೆಗಳಂತೆ ನಾನಾ ರೂಪವನ್ನು ಧರಿಸಿ ಉಗ್ರವಾದ ತೇಜಸ್ಸಿನಿಂದ ಪ್ರಳಯಕಾಲವು ಸನ್ನಿಹಿತವಾದಾಗ ದ್ವಾದಶಾದಿತ್ಯರಂತೆ ಉರಿಯುತ್ತಿದ್ದ ಆ ಶಕ್ತಿಗಳನ್ನು ನೋಡಿ ವಿಹ್ವಲನಾದೆ.
ತತೋಽನಲಂ ಬಾಣಮಯಂ ವಿವೃತ್ಯ
ಸಂದಿಶ್ಯ ಭಿತ್ವಾ ಶರಜಾಲೇನ ರಾಮಮ್ |
ತಾನ್ ದ್ವಾದಶೇಷೂನ್ ಪ್ರಾಹಿಣವಂ ರಣೇಽಹಂ
ತತಃ ಶಕ್ತೀರ್ವ್ಯಧಮಂ ಘೋರರೂಪಾಃ ॥9॥
ಆಗ ನಾನು ಬಾಣಮಯವಾದ ಅಗ್ನಿಯನ್ನು ಪ್ರಾದುರ್ಭಾವಗೊಳಿಸಿ, ಪರಶುರಾಮರನ್ನು ಉದ್ದೇಶಿಸಿ ಹನ್ನೆರಡು ಬಾಣಗಳನ್ನು ಪ್ರಯೋಗಿಸಿದೆ ಮತ್ತು ಅದರಿಂದ ಘೋರರೂಪವನ್ನು ಹೊಂದಿದ್ದ ಆ ಶಕ್ತಿಗಳನ್ನು ನಾಶ ಮಾಡಿದೆ.
ತತೋ ರಾಜನ್ ಜಾಮದಗ್ನ್ಯೋ ಮಹಾತ್ಮಾ
ಶಕ್ತೀರ್ಘೋರಾ ಪ್ರಾಕ್ಷಿಪದ್ಧೇಮದಂಡಾಃ |
ವಿಚಿತ್ರಿತಾಃ ಕಾಂಚನಪಟ್ಟಬದ್ಧಾಃ
ಯಥಾ ಮಹೋಲ್ಕಾ ಜ್ವಲಿತಾಸ್ತಥಾ ತಾಃ ॥10॥
ಎಲೈ ರಾಜನೇ, ಅನಂತರ ಮಹಾತ್ಮರಾದ ಪರಶುರಾಮರು ಸುವರ್ಣಮಯವಾದ ದಂಡವಿದ್ದ ಘೋರಶಕ್ತಿಗಳನ್ನು ನನ್ನ ಮೇಲೆ ಎಸೆದರು. ಚಿನ್ನದ ಪಟ್ಟಿಗಳನ್ನು ಹೊಂದಿದ್ದ ವಿಚಿತ್ರವಾದ ಆ ಶಕ್ತಿಗಳು ಉರಿಯುವ ಮಹೋಲ್ಕೆಗಳಂತೆ ಇದ್ದವು.
ತಾಶ್ಚಾಪ್ಯುಗ್ರಾಶ್ಚರ್ಮಣಾ ವಾರಯಿತ್ವಾ
ಖಡ್ಗೇನಾಜೌ ಪಾತಿತಾ ಮೇ ನರೇಂದ್ರ |
ಬಾಣೈರ್ದಿವ್ಯೈರ್ಜಾಮದಗ್ನ್ಯಸ್ಯ ಸಂಖ್ಯೇ
ದಿವ್ಯಾನಶ್ವಾನಭ್ಯವರ್ಷಂ ಸಸೂತಾನ್ ॥11॥
ಎಲೈ ರಾಜೇಂದ್ರನೇ, ನಾನು ಆ ಶಕ್ತಿಗಳನ್ನೂ ಗುರಾಣಿಯಿಂದ ನಿವಾರಿಸಿ, ಖಡ್ಗದಿಂದ ಕತ್ತರಿಸಿ ಬೀಳಿಸಿದೆ ಮತ್ತು ಯುದ್ಧದಲ್ಲಿ ದಿವ್ಯಬಾಣಗಳನ್ನು ಪ್ರಯೋಗಿಸಿ ಪರಶುರಾಮರ ಸೂತ ಮತ್ತು ಅಶ್ವಗಳ ಮೇಲೆ ದಿವ್ಯವಾದ ಬಾಣಗಳ ಮಳೆಯನ್ನು ಕರೆದೆ.
ನಿರ್ಮುಕ್ತಾನಾಂ ಪನ್ನಗಾನಾಂ ಸರೂಪಾ
ದೃಷ್ಟ್ವಾ ಶಕ್ತೀರ್ಹೇಮಚಿತ್ರಾ ನಿಕೃತ್ತಾಃ |
ಪ್ರಾದುಶ್ಚಕ್ರೇ ದಿವ್ಯಮಸ್ತ್ರಂ ಮಹಾತ್ಮಾ
ಕ್ರೋಧಾವಿಷ್ಟೋ ಹೇಹಯೇಶಪ್ರಮಾಥೀ ॥12॥
ಬಂಧನದಿಂದ ಬಿಡುಗಡೆಯನ್ನು ಹೊಂದಿ ಹೊರಗೆ ಬರುತ್ತಿರುವ ಸರ್ಪಗಳನ್ನು ಹೋಲುವ, ಸುವರ್ಣಾಲಂಕೃತವಾದ ಆ ಶಕ್ತಿಗಳು ಕತ್ತರಿಸಲ್ಪಟ್ಟಿದ್ದನ್ನು ನೋಡಿ ಮಹಾತ್ಮರಾದ, ಹೇಹಯಕುಲಾಂತಕರಾದ ಪರಶುರಾಮರು ಕ್ರೋಧಾವಿಷ್ಟರಾಗಿ ದಿವ್ಯಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದರು.
ತತಃ ಶ್ರೇಣ್ಯಃ ಶಲಭಾನಾಮಿವೋಗ್ರಾಃ
ಸಮಾಪೇತುರ್ವಿಶಿಖಾನಾಂ ಪ್ರದೀಪ್ತಾಃ |
ಸಮಾಚಿನೋಚ್ಚಾಪಿ ಭೃಶಂ ಶರೀರಂ
ಹಯಾನ್ ಸೂತಂ ಸರಥಂ ಚೈವ ಮಹ್ಯಮ್ ॥13॥
ಆಗ ಪತಂಗಗಳ ಸಾಲಿನಂತೆ ಉಗ್ರವಾದ ಮತ್ತು ಜ್ವಾಲೆಯಿಂದ ಕೂಡಿದ ಬಾಣಗಳು ನನ್ನ ಮೇಲೆ ಬಿದ್ದು ನನ್ನ ಶರೀರವನ್ನೂ, ಅಶ್ವಗಳನ್ನೂ, ಸೂತನನ್ನೂ ಮತ್ತು ನನ್ನ ರಥವನ್ನೂ ಎಲ್ಲವನ್ನೂ ಮುಚ್ಚಿದವು.
ರಥಃ ಶರೈರ್ಮೇ ನಿಚಿತಃ ಸರ್ವತೋಽಭೂತ್
ತಥಾ ಹಯಾ ಸಾರಥಿಶ್ಚೈವ ರಾಜನ್ |

ಯುಗಂ ರಥೇಷಾಂ ಚ ತಥೈವ ಚಕ್ರೇ
ತಥೈವಾಕ್ಷಃ ಶರಕೃತ್ತೋಽಪಿ ಭಗ್ನಃ ॥14॥
ಆ ಬಾಣಗಳಿಂದ ನನ್ನ ರಥವೂ, ಅಶ್ವಗಳೂ, ಸಾರಥಿಯೂ ಎಲ್ಲ ಕಡೆಗಳಲ್ಲಿಯೂ ಮುಚ್ಚಲ್ಪಟ್ಟವು. ಎಲೈ ರಾಜನೇ, ಹಾಗೆಯೇ ನನ್ನ ರಥದ ನೊಗವೂ, ಮೂಕಿಯೂ, ಚಕ್ರಗಳೂ, ರಥದ ಅಕ್ಷವೂ (ತೂಗು) ಎಲ್ಲವೂ ಬಾಣಗಳಿಂದ ಕತ್ತರಿಸಲ್ಪಟ್ಟು ಭಗ್ನವಾದವು.
ತತಸ್ತಸ್ಮಿನ್ ಬಾಣವರ್ಷೇ ವ್ಯತೀತೇ
ಶರೌಘೇನ ಪ್ರತ್ಯವರ್ಷಂ ಗುರುಂ ತಮ್ ।
ಸ ವಿಕ್ಷತೋ ಮಾರ್ಗಣೈರ್ಬ್ರಹ್ಮರಾಶಿಃ
ದೇಹಾದಜಸ್ರಂ ಮುಮುಚೇ ಭೂರಿ ರಕ್ತಮ್ ॥15॥
ಅನಂತರ ಆ ಬಾಣಗಳ ಮಳೆಯು ಸ್ವಲ್ಪ ಕಡಿಮೆಯಾದ ಮೇಲೆ ನಾನೂ ಬಾಣಗಳ ಸಮೂಹದ ಮಳೆಯನ್ನು ಗುರುಗಳ ಮೇಲೆ ಕರೆದೆನು. ವೇದರಾಶಿಯಂತಿದ್ದ ಅವರು ನನ್ನ ಬಾಣಗಳಿಂದ ಗಾಯಗೊಂಡು ದೇಹದಿಂದ ಸತತವಾಗಿ ಬಹಳ ರಕ್ತವನ್ನು ಸುರಿಸಿದರು.
ಯಥಾ ರಾಮೋ ಬಾಣಜಾಲಾಭಿತಪ್ತಃ
ತಥೈವಾಹಂ ಸುಭೃಶಂ ಗಾಢವಿದ್ಧಃ ।
ತತೋ ಯುದ್ಧಂ ವ್ಯರಮಚ್ಚಾಪರಾಹ್ಣೇ
ಭಾನಾವಸ್ತಂ ಪ್ರಾರ್ಥಯಾನೇ ಮಹೀಧ್ರಮ್ ॥16॥
ಪರಶುರಾಮರೂ ಬಾಣಸಮೂಹಗಳಿಂದ ಪೀಡಿಸಲ್ಪಟ್ಟಿದ್ದರು ಮತ್ತು ಹಾಗೆಯೇ ನಾನೂ ಸಹ ಅವರ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದೆನು. ಆಗ ಸೂರ್ಯನು ಅಸ್ತಪರ್ವತದ ಕಡೆಗೆ ಹೋಗುತ್ತಿರಲು ಅಪರಾಹ್ಣಕಾಲದಲ್ಲಿ ಯುದ್ಧವು ಉಪರಮವನ್ನು ಹೊಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ನಾಲ್ಕನೆಯ ಅಧ್ಯಾಯ
ಪರಶುರಾಮರ ಪ್ರಹಾರದಿಂದ ಭೀಷ್ಮರ ಪಾತ. ಋಷಿಗಳಿಂದ ಅವರ ಸಮಾಶ್ವಾಸನೆ. ಯುದ್ಧವನ್ನು ನಿಲ್ಲಿಸುವಂತೆ ಪರಶುರಾಮರಿಗೆ ಪ್ರಾರ್ಥನೆ.
ಭೀಷ್ಮಃ
ತತಃ ಪ್ರಭಾತೇ ರಾಜೇಂದ್ರ ಸೂರ್ಯೇ ವಿಮಲ ಉದ್ಗತೇ ।
ಭಾರ್ಗವಸ್ಯ ಮಯಾ ಸಾರ್ಧಂ ಪುನರ್ಯುದ್ಧಮವರ್ತತ ॥1॥
ಭೀಷ್ಮ ಎಲೈ ರಾಜೇಂದ್ರನೇ, ಪ್ರಾತಃಕಾಲದಲ್ಲಿ ಸೂರ್ಯನು ನಿರ್ಮಲನಾಗಿ ಉದಯಿಸುತ್ತಿರಲು ಪರಶುರಾಮರಿಗೂ ಮತ್ತು ನನಗೂ ಪುನಃ ಯುದ್ಧವು ನಡೆಯಿತು.
ತತೋಽಭ್ರಾಂತೇ ರಥೇ ತಿಷ್ಠನ್ ರಾಮಃ ಪ್ರಹರತಾಂ ವರಃ ।
ವವರ್ಷ ಶರವರ್ಷಾಣಿ ಮಯಿ ಮೇಘ ಇವಾಚಲೇ ॥2॥
ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಪರಶುರಾಮರು ಮೋಡವನ್ನು ಮುಟ್ಟುವಂತಿದ್ದ ಉನ್ನತವಾದ ರಥದಲ್ಲಿ ಕುಳಿತು ಮೋಡವು ಪರ್ವತದ ಮೇಲೆ ಸುರಿಸಿದಂತೆ ನನ್ನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತತಃ ಸೂತೋ ಮಮ ಸುಹೃತ್ ಶರವರ್ಷೇಣ ತಾಡಿತಃ ।
ನಿಪಪಾತ ರಥೋಪಸ್ಥೇ ಮನೋ ಮಮ ವಿಷಾದಯನ್ ॥3॥
ಆಗ ನನ್ನ ಸ್ನೇಹಿತನಾದ ಸೂತನು ಆ ಬಾಣಗಳ ಮಳೆಯಿಂದ ತಾಡಿತನಾಗಿ, ನನ್ನ ಮನಸ್ಸಿಗೆ ದುಃಖವನ್ನುಂಟು ಮಾಡುತ್ತಾ, ರಥದಲ್ಲಿ ಮುಂದೆ ಕುಳಿತುಕೊಳ್ಳುವ ಸ್ಥಳದಲ್ಲಿ ಕುಸಿದನು.
ತತಃ ಸೂತೋ ಮಮಾತ್ಯರ್ಥಂ ಕಶ್ಮಲಂ ಪ್ರಾವಿಶನ್ಮಹತ್ ।
ಪೃಥಿವ್ಯಾಂ ಚ ಶರಾಘಾತಾನ್ನಿಪಪಾತ ಮುಮೋಹ ಚ ॥4॥
ಅನಂತರ ನನ್ನ ಸೂತನಿಗೆ ದೊಡ್ಡ ಕಶ್ಮಲ ಉಂಟಾಯಿತು. ಆ ಬಾಣದ ಹೊಡೆತದಿಂದ ಅವನು ಅಲ್ಲಿಂದ ಭೂಮಿಯ ಮೇಲೆ ಬಿದ್ದು ಮೂರ್ಛೆ ಹೋದನು.
ತತಃ ಸೂತೋಽಜಹಾತ್ ಪ್ರಾಣಾನ್ ರಾಮಬಾಣಪ್ರಪೀಡಿತಃ ।
ಮುಹೂರ್ತಾದಿವ ರಾಜೇಂದ್ರ ಮಾಂ ಚ ಭೀರಾವಿಶತ್ ತದಾ ॥5॥
ಎಲೈ ರಾಜೇಂದ್ರನೇ, ಅನಂತರ ಒಂದು ಮುಹೂರ್ತದಲ್ಲಿ ಪರಶುರಾಮರ ಬಾಣಗಳಿಂದ ಪೀಡಿತನಾದ ಸೂತನು ಪ್ರಾಣಗಳನ್ನು ತ್ಯಜಿಸಿದನು. ಆಗ ನನಗೆ ಭಯವುಂಟಾಯಿತು.
ತತಃ ಸೂತೇ ಹತೇ ತಸ್ಮಿನ್ ಕ್ಷಿಪತಸ್ತಸ್ಯ ಮೇ ಶರಾನ್ ।
ಪ್ರಮತ್ತಮನಸೋ ರಾಮಃ ಪ್ರಾಹಿಣೋನ್ಮೃತ್ಯುಸಮ್ಮಿತಮ್ ॥6॥
ಸೂತನು ಹತನಾಗುತ್ತಿರಲು ಸ್ವಲ್ಪ ಅಜಾಗರೂಕತೆಯಿಂದ ಬಾಣಗಳನ್ನು ಪ್ರಯೋಗಿಸುತ್ತಿದ್ದ ನನ್ನ ಮೇಲೆ ಪರಶುರಾಮರು

ಮೃತ್ಯುವಿಗೆ ಸದೃಶವಾದ ಒಂದು ಬಾಣವನ್ನು ಪ್ರಯೋಗಿಸಿದರು.
ತತಃ ಸೂತವ್ಯಸನಿನಂ ವಿಪ್ಲುತಂ ಮಾಂ ಸ ಭಾರ್ಗವಃ |
ಶರೇಣಾಭ್ಯಹನದ್ ಗಾಢಂ ವಿಕೃಷ್ಯ ಬಲವದ್ ಧನುಃ ॥7॥
ಸೂತನ ನಿಧನದಿಂದ ಉಂಟಾದ ವ್ಯಸನದಿಂದ ಸಂಕಟಪಡುತ್ತಿದ್ದ ನನ್ನ ಮೇಲೆ ಪರಶುರಾಮರು ತಮ್ಮ ಬಲಿಷ್ಠವಾದ ಧನುಸ್ಸನ್ನು ಎಳೆದು ಒಂದು ಬಾಣವನ್ನು ಗಾಢವಾಗಿ ಪ್ರಯೋಗಿಸಿದರು.
ಸ ಮೇ ಭುಜಾಂತರೇ ರಾಜನ್ ನಿಪತ್ಯ ರುಧಿರಾಶನಃ |
ಮಯ್ಯೆವ ಸಹ ರಾಜೇಂದ್ರ ಜಗಾಮ ವಸುಧಾತಳಮ್ ॥8॥
ಎಲೈ ರಾಜನೇ, ರಕ್ತಪಿಪಾಸುವಾದ ಆ ಬಾಣವು ನನ್ನ ಭುಜಗಳ ಮಧ್ಯದಲ್ಲಿ ಬಿದ್ದು ನನ್ನನ್ನೂ ಎಳೆದುಕೊಂಡು ಭೂಮಿಗೆ ಹೋಯಿತು.
ಮತ್ವಾ ತು ನಿಹತಂ ರಾಮಸ್ತತೋ ಮಾಂ ಭೃಗುನಂದನಃ |
ಮೇಘವದ್ ವಿನನಾದೋಚ್ಚೈರ್ಜಹೃಷೇ ಚ ಪುನಃ ಪುನಃ ॥9॥
ಭೃಗುನಂದನರಾದ ಪರಶುರಾಮರು ನಾನು ಮೃತನಾದೆನೆಂದು ತಿಳಿದು ಮೇಘದಂತೆ ಗಟ್ಟಿಯಾದ ಸಿಂಹನಾದವನ್ನು ಮಾಡಿ ಪುನಃ ಪುನಃ ಸಂತೋಷಪಟ್ಟರು.
ತಥಾ ತು ಪತಿತೇ ರಾಜನ್ ಮಯಿ ರಾಮೋ ಮುದಾ ಯುತಃ |
ಉದಕ್ರೋಶನ್ಮಹಾನಾದಂ ಸಹ ತೈರನುಯಾಯಿಭಿಃ ॥10॥
ಎಲೈ ರಾಜನೇ, ನಾನು ಹಾಗೆ ಬೀಳುತ್ತಿರಲು ಪರಶುರಾಮರು ಸಂತೋಷದಿಂದ ಕೂಡಿ, ಅವರ ಅನುಯಾಯಿಗಳ ಜೊತೆಯಲ್ಲಿ ಮಹಾನಾದಗಳನ್ನು ಗಟ್ಟಿಯಾಗಿ ಮಾಡಿದರು.
ಮಮ ತತ್ರಾಭವನ್ ಯೇ ತು ಕುರವಃ ಪಾರ್ಶ್ವತಃ ಸ್ಥಿತಾಃ |
ಆಗತಾ ಯೇ ಚ ಯುದ್ಧಂ ತತ್ ಜನಾಸ್ತತ್ರ ದಿದೃಕ್ಷವಃ ॥11॥
ಆರ್ತಿಂ ಪರಮಿಕಾಂ ಜಗ್ಮುಸ್ತೇ ತದಾ ಪಾತಿತೇ ಮಯಿ ॥12॥
ಯುದ್ಧವನ್ನು ನೋಡಲು ಬಂದ ಜನರಲ್ಲಿ ಯಾವ ಕೌರವರು ಪಾರ್ಶ್ವಗಳಲ್ಲಿ ನಿಂತಿದ್ದರೋ ಅವರು ನಾನು ಬೀಳುತ್ತಿರಲು ಬಹಳ ದುಃಖವನ್ನು ಹೊಂದಿದರು.
ತತೋಽಪಶ್ಯಂ ಪತಿತೋ ರಾಜಸಿಂಹ
ದ್ವಿಜಾನಷ್ಟೌ ಸೂರ್ಯಹುತಾಶನಾಭಾನ್ |
ತೇ ಮಾಂ ಸಮಂತಾತ್ ಪರಿವಾರ್ಯ ತಸ್ಥುಃ
ಸ್ವಬಾಹುಭಿಃ ಪರಿಗೃಹ್ಯಾಜಿಮಧ್ಯೇ ॥13॥
ಎಲೈ ರಾಜಸಿಂಹನೇ, ನಾನು ರಥದಿಂದ ಕೆಳಗೆ ಬೀಳುತ್ತಿದ್ದಾಗ ಸೂರ್ಯಾಗ್ನಿ ಸಮಾನವಾದ ಕಾಂತಿಯುಳ್ಳ ಎಂಟು ಋಷಿಗಳು ನನ್ನ ಸುತ್ತಲೂ ಇದ್ದು, ತಮ್ಮ ಬಾಹುಗಳಿಂದ ರಣರಂಗದಲ್ಲಿ ನನ್ನನ್ನು ಎತ್ತಿಹಿಡಿದಿರುವುದನ್ನು ನಾನು ನೋಡಿದೆನು.
ರಕ್ಷ್ಯಮಾಣಶ್ಚ ತೈಃ ಸರ್ವೈರ್ನಾಹಂ ಭೂಮಿಮುಪಾಸ್ಪೃಶಮ್ |
ಅಂತರಿಕ್ಷೇ ಧೃತೋ ಹ್ಯಸ್ಮಿ ತೈರ್ವಿಪ್ರೈರ್ಬಾಂಧವೈರಿವ ॥14॥
ಅವರೆಲ್ಲರಿಂದಲೂ ರಕ್ಷಿತನಾದ ನಾನು ಭೂಮಿಯನ್ನು ತಲುಪಲಿಲ್ಲ. ಬಾಂಧವರಂತಿದ್ದ ಆ ವಿಪ್ರರಿಂದ ನಾನು ಅಂತರಿಕ್ಷದಲ್ಲೇ ಹಿಡಿಯಲ್ಪಟ್ಟೆ.
ಶ್ವಸನ್ನಿವಾಂತರಿಕ್ಷೇ ಚ ಜಲಬಿಂದುಭಿರುಕ್ಷಿತಃ |
ತತಸ್ತೇ ಬ್ರಾಹ್ಮಣಾ ರಾಜನ್ನಬ್ರುವನ್ ಪರಿಗೃಹ್ಯ ಮಾಮ್ ॥15॥
ಮಾ ಭೈರಿತಿ ಸಮಂ ಸರ್ವೇ ಸ್ವಸ್ತಿ ತೇಽಸ್ತ್ವಿತಿ ಚಾಸಕೃತ್ ॥16॥
ಅಂತರಿಕ್ಷದಲ್ಲಿ ಉಸಿರಾಡುತ್ತಿದ್ದ ನನಗೆ ಅವರು ನೀರಿನ ಬಿಂದುಗಳನ್ನು ಪ್ರೋಕ್ಷಿಸಿದರು. ಮತ್ತು ಆ ಬ್ರಾಹ್ಮಣರು ನನ್ನನ್ನು ಹಿಡಿದು ಒಟ್ಟಿಗೆ ಎಲೈ ರಾಜನೇ, ಹೆದರಬೇಡ, ನಿನಗೆ ಮಂಗಳವಾಗಲಿ ಎಂದು ಎಲ್ಲರೂ ಅನೇಕ ಬಾರಿ ಹೇಳಿದರು.
ತತಸ್ತೇಷಾಮಹಂ ವಾಗ್ಭಿಸ್ತರ್ಪಿತಃ ಸಹಸೋತ್ಥಿತಃ |
ಮಾತರಂ ಸರಿತಾಂ ಶ್ರೇಷ್ಠಾಮಪಶ್ಯಂ ರಥಮಾಸ್ಥಿತಾಮ್ ॥17॥
ಅವರ ಮಾತುಗಳಿಂದ ತೃಪ್ತಿಗೊಂಡು ಇದ್ದಕ್ಕಿದ್ದಂತೆಯೇ ಎದ್ದ ನಾನು ನದಿಗಳಲ್ಲಿ ಶ್ರೇಷ್ಠಳಾದ ನನ್ನ ತಾಯಿಯು ರಥದಲ್ಲಿ ಇರುವುದನ್ನು ನೋಡಿದೆನು.
ಹಯಾಶ್ಚ ಮೇ ಸಂಗೃಹೀತಾಸ್ತಯಾಽಽಸನ್
ಮಹಾನದ್ಯಾ ಸಂಯತಿ ಕೌರವೇಂದ್ರ |
ಪಾದೌ ಜನನ್ಯಾಃ ಪ್ರತಿಗೃಹ್ಯ ಚಾಹಂ
ತಥಾ ಪಿತೄಣಾಂ ರಥಮಭ್ಯರೋಹಮ್ ॥18॥
ಎಲೈ ಕೌರವೇಂದ್ರನೇ, ನನ್ನ ತಾಯಿಯಾದ ಮಹಾನದಿಯು ಕುದುರೆಗಳ ಕಡಿವಾಣವನ್ನು ಹಿಡಿದಿದ್ದಳು. ನಾನು ತಾಯಿಯ ಪಾದಗಳಿಗೆ ನಮಸ್ಕರಿಸಿ ಹಾಗೆಯೇ ಪಿತೃಗಳ ಪಾದಗಳಿಗೂ ನಮಸ್ಕರಿಸಿ ರಥವನ್ನು ಏರಿದೆ.
ರರಕ್ಷ ಸಾ ಮಾಂ ಸರಥಂ ಹಯಾಂಶ್ಚೋಪಸ್ಕರಾಣಿ ಚ |
ತಾಮಹಂ ಪ್ರಾಂಜಲಿರ್ಭೂತ್ವಾ ಪುನರೇವ ವ್ಯಸರ್ಜಯಮ್ ॥19॥
ನನ್ನ ತಾಯಿಯು ನನ್ನನ್ನೂ, ನನ್ನ ರಥವನ್ನೂ, ರಥದ ಎಲ್ಲಾ ಸಲಕರಣೆಗಳನ್ನೂ ರಕ್ಷಿಸಿದಳು. ನಾನು ಅವಳಿಗೆ ಕೈ ಮುಗಿದು ಪುನಃ

ಕಳುಹಿಸಿಕೊಟ್ಟೆನು.
ತತೋಽಹಂ ಸ್ವಯಮುದ್ಯಮ್ಯ ಹಯಾಂಸ್ತಾನ್ ವಾತರಂಹಸಃ |
ಅಯುಧ್ಯಂ ಜಾಮದಗ್ನ್ಯೇನ ನಿವೃತ್ತೇಽಹನಿ ಭಾರತ ॥20॥
ಅನಂತರ ನಾನು ಹಗಲು ಮುಗಿಯುತ್ತಿರಲು ವಾಯುವೇಗವುಳ್ಳ ಕುದುರೆಗಳನ್ನು ನಾನೇ ನಿಯಂತ್ರಿಸುತ್ತಾ ಪರಶುರಾಮರ ಜೊತೆಯಲ್ಲಿ ಯುದ್ಧವನ್ನು ಮಾಡಿದೆನು.
ತತೋಽಹಂ ಭರತಶ್ರೇಷ್ಠ ವೇಗವಂತಂ ಮಹಾಬಲಮ್ |
ಅಮುಂಚಂ ಸಮರೇ ಬಾಣಂ ರಾಮಾಯ ಹೃದಯಚ್ಛಿದಮ್ ॥21॥
ಎಲೈ ಭರತಶ್ರೇಷ್ಠನೇ, ನಾನು ಆಗ ವೇಗವುಳ್ಳ, ಮಹಾಬಲಿಷ್ಠವಾದ, ಹೃದಯವನ್ನು ಭೇದಿಸುವ ಒಂದು ಬಾಣವನ್ನು ಪರಶುರಾಮರ ಮೇಲೆ ಪ್ರಯೋಗಿಸಿದೆನು.
ತತೋ ಜಗಾಮ ವಸುಧಾಂ ಮಮ ಬಾಣಪ್ರಪೀಡಿತಃ |
ಜಾನುಭ್ಯಾಂ ಧನುರುತ್ಸೃಜ್ಯ ರಾಮೋ ಮೋಹವಶಂ ಗತಃ ॥22॥
ನನ್ನ ಬಾಣದಿಂದ ಪೀಡಿತರಾದ ಅವರು ಧನುಸ್ಸನ್ನು ಬಿಟ್ಟು, ಮಂಡಿಗಳ ಮೇಲೆ ಭೂಮಿಯಲ್ಲಿ ಕುಸಿದು ಮೂರ್ಛಾಕ್ರಾಂತರಾದರು.
ತತಸ್ತಸ್ಮಿನ್ ನಿಪತಿತೇ ರಾಮೇ ಭೂರಿಸಹಸ್ರದೇ |
ಆವವ್ರುರ್ಜಲದಾ ವ್ಯೋಮ ಕ್ಷರಂತೋ ರುಧಿರಂ ಬಹು ॥23॥
ಬ್ರಾಹ್ಮಣರಿಗೆ ಸಹಸ್ರ ದಕ್ಷಿಣೆಗಳನ್ನು ಕೊಡುವ ಪರಶುರಾಮರು ಬೀಳುತ್ತಿರಲು ಆಕಾಶದಲ್ಲೆಲ್ಲಾ ಮೋಡಗಳು ತುಂಬಿ ರಕ್ತದ ಮಳೆಯನ್ನು ಸುರಿಸಿದವು.
ಉಲ್ಕಾಶ್ಚ ಬಹುಶಃ ಪೇತುಃ ಸನಿರ್ಘಾತಾಃ ಸಕಂಪನಾಃ |
ಅರ್ಕಂ ಚ ಬಹುಧಾ ದೀಪ್ತಂ ಸ್ವರ್ಭಾನುರಭಿಸಂವೃಣೋತ್ ॥24॥
ಆಕಾಶದಿಂದ ಅನೇಕ ಉಲ್ಕೆಗಳು ಬಿದ್ದವು. ಸಿಡಿಲುಗಳು ಉಂಟಾದವು. ಭೂಕಂಪ ಉಂಟಾಯಿತು. ಬಹಳವಾಗಿ ಪ್ರಕಾಶಿಸುತ್ತಿದ್ದ ಸೂರ್ಯನನ್ನು ರಾಹುವು ಆವರಿಸಿದನು.
ವವುಶ್ಚ ವಾತಾಃ ಪರುಷಾಶ್ಚಲಿತಾ ಚ ವಸುಂಧರಾ |
ಗೃಧ್ರಾ ಬಲಾಶ್ಚ ಕಂಕಾಶ್ಚ ಪರಿಪೇತುರ್ಮುದಾ ಯುತಾಃ ॥25॥
ವಾಯುವು ಕರ್ಕಶವಾಗಿ ಬೀಸಿತು. ಭೂಮಿಯು ನಡುಗಿತು. ಹದ್ದುಗಳು, ಗಿಡುಗಗಳು, ಕಂಕಗಳು ಮುಂತಾದ ಪಕ್ಷಿಗಳು ಸಂತೋಷದಿಂದ ಹಾರಾಡಿದವು.
ದೀಪ್ತಾಯಾಂ ದಿಶಿ ಗೋಮಾಯುರ್ದಾರುಣಂ ಮುಹುರುನ್ನದನ್ |
ಅನಾಹತಾ ದುಂದುಭಯೋ ವಿನೇದುರ್ಭೃಶನಿಸ್ವನಾಃ ॥26॥
ದೀಪ್ತವಾದ ದಕ್ಷಿಣ ದಿಕ್ಕಿನಲ್ಲಿ ನರಿಯು ದಾರುಣವಾಗಿ ರೋದನವನ್ನು ಮಾಡಿತು. ದುಂದುಭಿಗಳನ್ನು ಬಾರಿಸದಿದ್ದರೂ ಅವು ಘೋರವಾದ ಸ್ವರವನ್ನು ಮಾಡಿದವು.
ಏತದೌತ್ಪಾತಿಕಂ ಘೋರಂ ಸರ್ವಮಾಸೀದ್ ಭಯಂಕರಮ್ |
ವಿಸಂಜ್ಞಕಲ್ಪೇ ಧರಣೀಂ ಗತೇ ರಾಮೇ ಮಹಾತ್ಮನಿ ॥27॥
ಮೂರ್ಛೆ ಹೋಗುವ ಸಮೀಪದಲ್ಲಿ ಇದ್ದ ಮಹಾತ್ಮರಾದ ಪರಶುರಾಮರು ಭೂಮಿಯ ಮೇಲೆ ಬಿದ್ದಾಗ ಇಂತಹ ಭಯಂಕರವಾದ ಮತ್ತು ಉಗ್ರವಾದ ಎಲ್ಲಾ ಅಪಶಕುನಗಳೂ ಉಂಟಾದವು.
ತತೋ ವೈ ಸಹಸೋತ್ಥಾಯ ರಾಮೋ ಮಾಮಭ್ಯವರ್ತತ |
ಪುನರುತ್ಥಾಯ ಕೌರವ್ಯ ವಿಹ್ವಲಃ ಕ್ರೋಧಮೂರ್ಚ್ಛಿತಃ ॥28॥
ಎಲೈ ಕೌರವ್ಯನೇ, ಆಗ ಪರಶುರಾಮರು ವಿಹ್ವಲರೂ ಮತ್ತು ಕ್ರೋಧಮೂರ್ಛಿತರೂ ಆಗಿ ಇದ್ದಕ್ಕಿದ್ದಂತೆಯೇ ಎದ್ದು ನನ್ನೆಡೆಗೆ ಧಾವಿಸಿದರು.
ಆದದಾನೋ ಮಹಾಬಾಹುಃ ಕಾರ್ಮುಕಂ ತಾಳಸಮ್ಮಿತಮ್ |
ಶರಂ ಚ ಋಷಯೋಽಥೈನಂ ಮಾ ರಾಮೇತ್ಯಬ್ರುವನ್ ವಚಃ ॥29॥
ಮಹಾಬಾಹುಗಳಾದ ಅವರು ತಾಳವೃಕ್ಷದಷ್ಟು ಎತ್ತರವಾದ ಬಿಲ್ಲು ಮತ್ತು ಬಾಣಗಳನ್ನು ತೆಗೆದುಕೊಳ್ಳುವಷ್ಟರಲ್ಲಿ ಋಷಿಗಳು ಅವರನ್ನು ಕುರಿತು `ಪರಶುರಾಮರೇ, ಇದು ಬೇಡ' ಎಂದು ಮಾತನಾಡಿದರು.
ಮಹರ್ಷಿಮತಮಾಸ್ಥಾಯ ಕ್ರೋಧಾವಿಷ್ಟೋ ಹಿ ಭಾರ್ಗವಃ |
ಸಮಾಹರದಮೇಯಾತ್ಮಾ ಶರಂ ಕಾಲಾಂತಕೋಪಮಮ್ ॥30॥
ಮಹರ್ಷಿಗಳ ಅಭಿಪ್ರಾಯವನ್ನು ತಿಳಿದ ಕ್ರೋಧಾವಿಷ್ಟರೂ, ಅಪ್ರಮೇಯ ಸ್ವರೂಪರೂ ಆದ ಪರಶುರಾಮರು ಕಾಲಾಂತಕನಂತಿದ್ದ ಆ ಬಾಣವನ್ನು ಹಿಂದೆ ತೆಗೆದುಕೊಂಡರು.
ತತೋ ರವಿರ್ಮಂದಮರೀಚಿಮಂಡಲೋ
ಜಗಾಮಾಸ್ತಂ ಪಾಂಸುಪುಂಜಾವಗಾಢಃ |
ನಿಶಾ ವ್ಯಗಾಹತ್ ಸುಖಶೀತಮಾರುತಾ
ತತೋ ಯುದ್ಧಂ ಪ್ರತ್ಯಪಹಾರಯಾವ ॥31॥
ಆಗ ಮಂದಕಿರಣಗಳ ಮಂಡಲದಿಂದ ಕೂಡಿದ ಸೂರ್ಯನು ಧೂಳಿನ ಸಮೂಹದಿಂದ ಆವೃತನಾಗಿ ಅಸ್ತವನ್ನು ಹೊಂದಿದನು. ಸುಖಶೀತ ವಾಯುವಿನಿಂದ ಕೂಡಿದ ರಾತ್ರಿಯು ಉಂಟಾಯಿತು. ಆಗ ಇಬ್ಬರೂ ಯುದ್ಧವನ್ನು ನಿಲ್ಲಿಸಿದೆವು.

ಏವಂ ರಾಜನ್ನುಪಹಾರೋ ಬಭೂವ
ತತಃ ಪುನರ್ವಿಮಲೇಽಭೂತ್ ಸುಘೋರಮ್ ।
ಕಾಲ್ಯಂ ಕಾಲ್ಯಂ ವಿಂಶತಿರ್ವೈ ದಿನಾನಿ
ತಥೈವ ಚಾನ್ಯಾನಿ ದಿನತ್ರಯಾಣಿ ॥32॥
ಎಲೈ ರಾಜನೇ, ಹೀಗೆ ಯುದ್ಧದ ವಿರಾಮವು ಉಂಟಾಯಿತು. ಪುನಃ ಸೂರ್ಯನು ಉದಯಿಸಿದ ಮೇಲೆ ಘೋರವಾದ ಯುದ್ಧವು ನಡೆಯುತ್ತಿತ್ತು. ಹೀಗೆ ಪ್ರತಿದಿನವೂ ಉಷಃಕಾಲದಿಂದ ಪ್ರಾರಂಭಿಸಿ ಇಪ್ಪತ್ತೂರು ದಿನಗಳವರೆಗೆ ಯುದ್ಧವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಚತುರಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೈದನೆಯ ಅಧ್ಯಾಯ
ದಿವ್ಯಪುರುಷರಿಂದ ಭೀಷ್ಮರಿಗೆ ಸ್ವಪ್ನದಲ್ಲಿ ಸ್ವಾಪನಾಸ್ತ್ರದ ಸ್ಮಾರಣ.
ಭೀಷ್ಮಃ
ತತೋಽಹಂ ನಿಶಿ ರಾಜೇಂದ್ರ ಪ್ರಣಮ್ಯ ಶಿರಸಾ ತದಾ ।
ಬ್ರಾಹ್ಮಣಾನಾಂ ಪಿತೄಣಾಂ ಚ ದೇವತಾನಾಂ ಚ ಸರ್ವಶಃ ॥1॥
ನಕ್ತಂಚರಾಣಾಂ ಭೂತಾನಾಂ ರಜನ್ಯಾಶ್ಚ ವಿಶಾಂಪತೇ ।
ಶಯನಂ ಪ್ರಾಪ್ಯ ರಹಿತೇ ಮನಸಾ ಸಮಚಿಂತಯಮ್ ॥2॥
ಭೀಷ್ಮ ಎಲೈ ರಾಜೇಂದ್ರನೇ, ಆಗ ನಾನು ರಾತ್ರಿಯಲ್ಲಿ ಬ್ರಾಹ್ಮಣರಿಗೂ, ಪಿತೃಗಳಿಗೂ, ಎಲ್ಲಾ ದೇವತೆಗಳಿಗೂ, ನಕ್ತಂಚರರಾದ ಭೂತಗಳಿಗೂ, ರಾತ್ರಿದೇವತೆಗೂ ಶಿರಸಾ ನಮಸ್ಕಾರವನ್ನು ಮಾಡಿ ಏಕಾಂತ ಸ್ಥಳದಲ್ಲಿ ಮಲಗಿ ಮನಸ್ಸಿನಲ್ಲಿ ಚಿಂತಿಸಿದೆನು.
ಜಾಮದಗ್ನ್ಯೇನ ಮೇ ಯುದ್ಧಮಿದಂ ಪರಮದಾರುಣಮ್ ।
ಅಹಾನಿ ಚ ಬಹೂನ್ಯದ್ಯ ವರ್ತತೇ ಸುಮಹಾತ್ಯಯಃ ॥3॥
ಇಂದಿನವರೆಗೆ ಬಹಳ ದಿನಗಳಿಂದ ಘೋರ ಅಪಚಾರರೂಪವಾದ, ಪರಮ ದಾರುಣವಾದ ಯುದ್ಧವು ನನಗೆ ಪರಶುರಾಮರ ಜೊತೆಯಲ್ಲಿ ಉಂಟಾಗಿದೆ.
ನ ಚ ರಾಮಂ ಮಹಾವೀರ್ಯಂ ಶಕ್ನೋಮಿ ರಣಮೂರ್ಧನಿ ।
ವಿಜೇತುಂ ಸಮರೇ ವಿಪ್ರಂ ಜಾಮದಗ್ನ್ಯಂ ಮಹಾಬಲಮ್ ॥4॥
ಮಹಾಬಲರೂ, ಮಹಾಪರಾಕ್ರಮವುಳ್ಳವರೂ, ವಿಪ್ರರಾದ ಜಮದಗ್ನಿ ಪುತ್ರರೂ ಆದ ಪರಶುರಾಮರನ್ನು ಯುದ್ಧದಲ್ಲಿ ನಾನು ಗೆಲ್ಲಲು ಸಾಧ್ಯವಾಗುತ್ತಿಲ್ಲ.
ಯದಿ ಶಕ್ಯೋ ಮಯಾ ಜೇತುಂ ಜಾಮದಗ್ನ್ಯಃ ಪ್ರತಾಪವಾನ್ ।
ದೈವತಾನಿ ಪ್ರಸನ್ನಾನಿ ದರ್ಶಯಂತು ನಿಶಾಂ ಮಮ ॥5॥
ನಾನು ಒಂದು ಪಕ್ಷ ಪ್ರತಾಪಶಾಲಿಗಳಾದ ಪರಶುರಾಮರನ್ನು ಗೆಲ್ಲಲು ಶಕ್ಯನಾಗುವುದಾದರೆ ದೇವತೆಗಳು ಪ್ರಸನ್ನರಾಗಿ ಈ ರಾತ್ರಿಯಲ್ಲಿ ನನಗೆ ದರ್ಶನವನ್ನು ಕೊಡಲಿ (ಎಂದು ಚಿಂತಿಸಿದೆನು).
ತತೋ ನಿಶಿ ಚ ರಾಜೇಂದ್ರ ಪ್ರಸುಪ್ತಃ ಶರವಿಕ್ಷತಃ ।
ದಕ್ಷಿಣೇನೇಹ ಪಾರ್ಶ್ವೇಣ ಪ್ರಭಾತಸಮಯೇ ತದಾ ॥6॥
ಎಲೈ ರಾಜೇಂದ್ರನೇ, ಆ ರಾತ್ರಿಯಲ್ಲಿ ಬೆಳಗಿನ ಜಾವದ ಸಮಯದಲ್ಲಿ ಬಾಣಗಳಿಂದ ಗಾಯಗೊಂಡಿದ್ದ ನಾನು ಬಲಭಾಗಕ್ಕೆ ತಿರುಗಿ ಮಲಗಿದೆ.
ತತೋಽಹಂ ವಿಪ್ರಮುಖ್ಯೈಸ್ತೈರ್ಯೈರಸ್ಮಿ ಪತಿತೋ ರಥಾನ್ ।
ಉತ್ಥಾಪಿತೋ ಧೃತಶ್ಚೈವ ಮಾ ಭೈರಿತಿ ಚ ಸಾಂತ್ವಿತಃ ॥7॥
ತ ಏವ ಮಾಂ ಮಹಾಭಾಗ ಸ್ವಪ್ನೇ ದರ್ಶನಮೇತ್ಯ ವೈ ।
ಪರಿವಾರ್ಯಾಬ್ರುವನ್ ವಾಕ್ಯಂ ತನ್ನಿಬೋಧ ಕುರೂದ್ವಹ ॥8॥
ಆಗ ನಾನು ರಥದಿಂದ ಬೀಳುವಾಗ ಯಾವ ಬ್ರಾಹ್ಮಣಶ್ರೇಷ್ಠರಿಂದ ಎತ್ತಿ ಹಿಡಿಯಲ್ಪಟ್ಟು, ಹೆದರಬೇಡ ಎಂದು ಸಮಾಧಾನ ಪಡಿಸಲ್ಪಟ್ಟೆನೋ ಅದೇ ಬ್ರಾಹ್ಮಣರು ಸ್ವಪ್ನದಲ್ಲಿ ನನಗೆ ದರ್ಶನವನ್ನು ನೀಡಿ, ನನ್ನನ್ನು ಸುತ್ತುವರಿದು ಆಡಿದ ಮಾತನ್ನು ಮಹಾನುಭಾವನಾದ ಕೌರವನೇ, ಕೇಳುವವನಾಗು.
ಉತ್ತಿಷ್ಠ ಮಾ ಭೈರ್ಗಾಂಗೇಯ ಭಯಂ ತೇ ನಾಸ್ತಿ ಕಿಂಚನ ।
ರಕ್ಷಾಮಹೇ ನರವ್ಯಾಘ್ರ ಸ್ವಶರೀರಂ ಹಿ ನೋ ಭವಾನ್ ॥9॥
ಎಲೈ ಗಾಂಗೇಯನೇ, ಎದ್ದೇಳು. ನಿನಗೆ ಯಾವ ಭಯವೂ ಇಲ್ಲ. ನರವ್ಯಾಘ್ರನೇ, ನಿನ್ನನ್ನು ನಾವು ರಕ್ಷಿಸುತ್ತೇವೆ. ಏಕೆಂದರೆ ನೀನು ನಮ್ಮ ಶರೀರವೇ ಆಗಿದ್ದೀಯೆ.
ನ ತ್ವಾಂ ರಾಮೋ ರಣೇ ಜೇತಾ ಜಾಮದಗ್ನ್ಯಃ ಕಥಂಚನ ।
ತ್ವಮೇವ ಸಮರೇ ರಾಮಂ ವಿಜೇತಾ ಭರತರ್ಷಭ ॥10॥

ಎಲೈ ಭರತರ್ಷಭನೇ, ನಿನ್ನನ್ನು ಜಮದಗ್ನಿ ಪುತ್ರನಾದ ರಾಮನು ಯುದ್ಧದಲ್ಲಿ ಗೆಲ್ಲುವುದಿಲ್ಲ. ನೀನೇ ರಾಮನನ್ನು ಗೆಲ್ಲುವಿ.
ಇದಮಸ್ತ್ರಂ ಸುದಯಿತಂ ಪ್ರತ್ಯಭಿಜ್ಞಾಸ್ಯತೇ ಭವಾನ್ |
ಉಪಸ್ಥಾಸ್ಯತಿ ರಾಜೇಂದ್ರ ಸ್ವಯಮೇವ ತವಾನಘ ॥11॥
ಯೇನ ಶತ್ರೂನ್ ಮಹಾವೀರ್ಯಾನ್ ಪ್ರಶಾಸಿಷ್ಯತಿ ಕೌರವ ॥12॥
ನಿನಗೆ ಪ್ರಿಯವಾದ ಈ ಅಸ್ತ್ರವನ್ನು ನೀನು ಸ್ಮರಿಸಿಕೊಳ್ಳುವಿ. ಎಲೈ ಅನಘನೇ, ರಾಜೇಂದ್ರನೇ, ಕೌರವನೇ, ನಿನಗೆ ಆ ಅಸ್ತ್ರವು ತಾನಾಗಿಯೇ ಸಮೀಪಕ್ಕೆ ಬರುತ್ತದೆ. ಅದರಿಂದ ಮಹಾಪರಾಕ್ರಮಿಗಳಾದ ಶತ್ರುಗಳನ್ನು ನಿಯಂತ್ರಿಸುವಿ.
ವಿದಿತಂ ಹಿ ತವಾಪ್ಯೇತತ್ ಪೂರ್ವಸ್ಮಿನ್ ದೇಹಧಾರಣೇ |
ಪ್ರಾಜಾಪತ್ಯಂ ವಿಶ್ವಕೃತಂ ಸುಸ್ವಾಪಂ ನಾಮ ಭಾರತ ॥13॥
ನಿನ್ನ ಹಿಂದಿನ ದೇಹದಲ್ಲಿ ನಿನಗೆ ಈ ಅಸ್ತ್ರವು ತಿಳಿದಿದ್ದಿತು. ಎಲೈ ಭಾರತನೇ, ಇದು ಪ್ರಜಾಪತಿ ದೇವತಾಕವಾದ, ವಿಶ್ವಕರ್ಮ ನಿರ್ಮಿತವಾದ ಸುಸ್ವಾಪ ಎಂಬ ಅಸ್ತ್ರ.
ನ ಹೀದಂ ವೇದ ರಾಮೋಽಪಿ ಪೃಥಿವ್ಯಾಂ ವಾ ಪುಮಾನ್ ಕ್ವಚಿತ್ |
ತತ್ ಸ್ಮರಸ್ವ ಮಹಾಬಾಹೋ ಭೃಶಂ ಸಂಯೋಜಯಸ್ವ ಚ ॥14॥
ಇದನ್ನು ಪರಶುರಾಮನಾಗಲೀ ಅಥವಾ ಭೂಮಿಯಲ್ಲಿ ಬೇರೆ ಯಾವ ಪುರುಷನಾಗಲೀ ತಿಳಿದಿಲ್ಲ. ಮಹಾಬಾಹುವೇ, ಅದನ್ನು ಸ್ಮರಿಸಿ ಬಿಲ್ಲಿನಲ್ಲಿ ಚೆನ್ನಾಗಿ ಹೂಡುವವನಾಗು.
ನ ಚ ರಾಮಃ ಕ್ಷಯಂ ಗಂತಾ ತೇನಾಸ್ತ್ರೇಣ ನರಾಧಿಪ |
ಏನಸಾ ನ ತು ಸಂಯೋಗಂ ಪ್ರಾಪ್ಸ್ಯಸೇ ಜಾತು ಮಾನದ ॥15॥
ಎಲೈ ನರಾಧಿಪನೇ, ಆ ಅಸ್ತ್ರದಿಂದ ರಾಮನು ನಾಶವನ್ನು ಹೊಂದುವುದಿಲ್ಲ. ಎಲೈ ಮಾನದನೇ, ಆದ್ದರಿಂದ ನಿನಗೆ ಪಾಪದ ಸಂಯೋಗವೂ ಉಂಟಾಗುವುದಿಲ್ಲ.
ಸ್ವಪ್ಸ್ಯತೇ ಜಾಮದಗ್ನ್ಯೋಽಸೌ ತ್ವದ್ಬಾಣಬಲಪೀಡಿತಃ |
ತತೋ ಜಿತ್ವಾ ತ್ವಮೇವೈನಂ ಪುನರುತ್ಥಾಪಯಿಷ್ಯಸಿ ॥16॥
ಅಸ್ತ್ರೇಣ ದಯಿತೇನಾಜೌ ಭೀಷ್ಮ ಸಂಬೋಧನೇನ ವೈ ॥17॥
ನಿನ್ನ ಬಾಣದ ಬಲದಿಂದ ಪೀಡಿತನಾದ ಈ ಪರಶುರಾಮನು ನಿದ್ರೆಯನ್ನು ಮಾಡುವನು. ಎಲೈ ಭೀಷ್ಮನೇ, ಪುನಃ ನೀನು ನಿನಗೆ ಪ್ರಿಯವಾದ ಸಂಬೋಧನಾಸ್ತ್ರದಿಂದ ಯುದ್ಧದಲ್ಲಿ ಅವನನ್ನು ಎಬ್ಬಿಸುವಿ.
ಏವಂ ಕುರುಷ್ವ ಕೌರವ್ಯ ಪ್ರಭಾತೇ ರಥಮಾಸ್ಥಿತಃ |
ಪ್ರಸುಪ್ತಂ ವಾ ಮೃತಂ ವೇತಿ ತುಲ್ಯಂ ಮನ್ಯಾಮಹೇ ವಯಮ್ ॥18॥
ನ ಚ ರಾಮೇಣ ಮರ್ತವ್ಯಂ ಕದಾಚಿದಪಿ ಪಾರ್ಥಿವ |
ತತಃ ಸಮುತ್ಪನ್ನಮಿದಂ ಪ್ರಸ್ವಾಪಂ ಯುಜ್ಯತಾಮಿತಿ ॥19॥
ಎಲೈ ಕೌರವ್ಯನೇ, ನಾಳೆ ಪ್ರಾತಃಕಾಲದಲ್ಲಿ ರಥವನ್ನು ಏರಿ ಹೀಗೆ ಮಾಡು. ನಮ್ಮ ದೃಷ್ಟಿಯಲ್ಲಿ ನಿದ್ರೆ ಮತ್ತು ಮರಣ ಎರಡೂ ಸಮಾನವಾದುದು. ಎಲೈ ರಾಜನೇ, ಪರಶುರಾಮನು ಖಂಡಿತವಾಗಿ ಮರಣವನ್ನು ಹೊಂದಬಾರದು. ಆದ್ದರಿಂದ ನಿನ್ನ ಬಳಿಗೆ ಬರುವ ಈ ಪ್ರಸ್ವಾಪಾಸ್ತ್ರವನ್ನು ಯೋಜಿಸುವವನಾಗು.
ಇತ್ಯುಕಕ್ತ್ವಽಂತರ್ಹಿತಾ ರಾಜನ್ ಸರ್ವ ಏವ ದ್ವಿಜೋತ್ತಮಾಃ |
ಅಷ್ಟೌ ಸದೃಶರೂಪಾಸ್ತೇ ಸರ್ವೇ ಭಾಸುರಮೂರ್ತಯಃ ॥20॥
ಎಲೈ ರಾಜನೇ, ಸಮಾನರೂಪವನ್ನು ಹೊಂದಿದ್ದ, ಪ್ರಕಾಶಮಾನವಾದ ಶರೀರವನ್ನು ಹೊಂದಿದ್ದ ಆ ಎಂಟು ಜನ ದ್ವಿಜಶ್ರೇಷ್ಠರೂ ಸಹ ಹೀಗೆ ಹೇಳಿ ಅಂತರ್ಧಾನವನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚಾಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತೈದನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಎಂಬತ್ತಾರನೆಯ ಅಧ್ಯಾಯ

ಪರಶುರಾಮ ಮತ್ತು ಭೀಷ್ಮರ ಯುದ್ಧ. ಭೀಷ್ಮರಿಗೆ ಸ್ವಾಪನಾಸ್ತ್ರದ ಸ್ಮರಣೆ.

ಭೀಷ್ಮಃ
ತತೋ ರಾತ್ರ್ಯಾಂ ವ್ಯತೀತಾಯಾಂ ಪ್ರತಿಬುದ್ಧೋಽಸ್ಮಿ ಭಾರತ |
ತತಃ ಸಂಚಿಂತ್ಯ ವೈ ಸ್ವಪ್ನಮವಾಪಂ ಹರ್ಷಮುತ್ತಮಮ್ ॥1॥
ಭೀಷ್ಮ ಎಲೈ ಭಾರತನೇ, ರಾತ್ರಿಯು ಕಳೆಯುತ್ತಿರಲು ನಾನು ಎಚ್ಚರಗೊಂಡು, ಆ ಸ್ವಪ್ನವನ್ನು ಚಿಂತಿಸಿ, ಶ್ರೇಷ್ಠವಾದ ಸಂತೋಷವನ್ನು ಹೊಂದಿದೆನು.
ತತಃ ಸಮಭವದ್ ಯುದ್ಧಂ ಮಮ ತಸ್ಯ ಚ ಭಾರತ |
ತುಮುಲಂ ಸರ್ವಭೂತಾನಾಂ ಲೋಮಹರ್ಷಣಮದ್ಭುತಮ್ ॥2॥
ಎಲೈ ಭಾರತನೇ, ಆಗ ನನಗೂ ಮತ್ತು ಪರಶುರಾಮರಿಗೂ ತೀವ್ರವಾದ, ಅದ್ಭುತವಾದ ಮತ್ತು ಸರ್ವಪ್ರಾಣಿಗಳಿಗೂ

ರೋಮಾಂಚಕಾರಿಯಾದ ಯುದ್ಧವು ಜರುಗಿತು.
ತತೋ ಬಾಣಮಯಂ ವರ್ಷಂ ವವರ್ಷ ಮಯಿ ಭಾರ್ಗವಃ |
ನ್ಯವಾರಯಮಹಂ ತಚ್ಚ ಶರಜಾಲೇನ ಭಾರತ ॥3॥
ಎಲೈ ಭಾರತನೇ, ಪರಶುರಾಮರು ನನ್ನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಅದನ್ನು ನಾನು ಬಾಣಗಳ ಸಮೂಹದಿಂದ ತಡೆದೆನು.
ತತಃ ಪರಮಸಂಕ್ರುದ್ಧಃ ಪುನರೇವ ಮಹಾತಪಾಃ |
ಹ್ಯಸ್ತನೇನ ಚ ಕೋಪೇನ ಶಕ್ತಿಂ ವೈ ಪ್ರಾಹಿಣೋನ್ಮಯಿ ॥4॥
ಇಂದ್ರಾಶನಿಸಮಸ್ಪರ್ಶಾಂ ಯಮದಂಡೋಪಮಪ್ರಭಾಮ್ |
ಜ್ವಲಂತೀಮಗ್ನಿವತ್ ಸಂಖ್ಯೇ ಲೇಲಿಹಾನಾಂ ಸಮಂತತಃ ॥5॥
ಅನಂತರ ಮಹಾತಪಸ್ವಿಗಳಾದ ಅವರು ಪರಮ ಕೋಪದಿಂದ ಕೂಡಿದವರಾಗಿ ಹಿಂದಿನ ದಿನದ ಕೋಪದಿಂದ ನನ್ನ ಮೇಲೆ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಸ್ಪರ್ಶವುಳ್ಳ, ಯಮದಂಡದಂತಹ ಕಾಂತಿಯುಳ್ಳ, ಅಗ್ನಿಯಂತೆ ಜ್ವಲಿಸುವ, ಯುದ್ಧದಲ್ಲಿ ಎಲ್ಲ ಕಡೆಗಳಲ್ಲಿಯೂ ನಾಲಿಗೆಯನ್ನು ಚಾಚಿದಂತಿರುವ ಶಕ್ತ್ಯಾಯುಧವನ್ನು ಪ್ರಯೋಗಿಸಿದರು.
ತತೋ ಭರತಶಾರ್ದೂಲ ಧಿಷ್ಣ್ಯಮಾಕಾಶಗಂ ಯಥಾ |
ಸಾ ಮಾಮಭ್ಯವಧೀತ್ ತೂರ್ಣಮಂಸದೇಶೇ ಚ ಭಾರತ ॥6॥
ಎಲೈ ಭಾರತನೇ, ಭರತಶಾರ್ದೂಲನೇ, ಅದು ದೇವತಾವಿಮಾನದಂತೆ ಎತ್ತರದಲ್ಲಿದ್ದ ನನಗೆ ವಕ್ಷಪ್ರದೇಶದಲ್ಲಿ ಬಡಿಯಿತು.
ಅಥಾಸೃಗಸ್ರವದ್ ಘೋರಂ ಗಿರೇರ್ಗೈರಿಕಧಾತುವತ್ |
ರಾಮೇಣ ಸುಮಹಾಬಾಹೋ ಕ್ಷತಸ್ಯ ಕ್ಷತಜೋಕ್ಷಣಮ್ ॥7॥
ಆಗ ಪರ್ವತದಿಂದ ಗೈರಿಕಧಾತುವು ಸುರಿದಂತೆ ಎಲೈ ಮಹಾಬಾಹುವೇ, ಪರಶುರಾಮರಿಂದ ಉಂಟಾದ ನನ್ನ ವ್ರಣದಿಂದ ರಕ್ತವು ಸುರಿಯಿತು.
ತತೋऽಹಂ ಜಾಮದಗ್ನ್ಯಾಯ ಭೃಶಂ ಕ್ರೋಧಸಮನ್ವಿತಃ |
ಪ್ರೈಷಯಂ ಮೃತ್ಯುಸಂಕಾಶಂ ಬಾಣಂ ಸರ್ಪವಿಷೋಪಮಮ್ ॥8॥
ಆಗ ನಾನು ಬಹಳ ಕೋಪದಿಂದ ಕೂಡಿದವನಾಗಿ, ಸರ್ಪವಿಷದಂತಿದ್ದ ಮತ್ತು ಮೃತ್ಯುವಿನಂತಿದ್ದ ಬಾಣವನ್ನು ಅವರ ಮೇಲೆ ಪ್ರಯೋಗಿಸಿದೆನು.
ಸ ತೇನಾಭಿಹತೋ ವೀರೋ ಲಲಾಟೇ ದ್ವಿಜಸತ್ತಮಃ |
ಅಶೋಭತ ಮಹಾರಾಜ ಸಶೃಂಗ ಇವ ಪರ್ವತಃ ॥9॥
ಎಲೈ ಮಹಾರಾಜನೇ, ಆ ಬಾಣದಿಂದ ಹಣೆಯಲ್ಲಿ ಹೊಡೆಯಲ್ಪಟ್ಟ ಆ ವೀರರಾದ ಬ್ರಾಹ್ಮಣಶ್ರೇಷ್ಠರು ಶಿಖರ ಸಹಿತವಾದ ಪರ್ವತದಂತೆ ಶೋಭಿಸಿದರು.
ಸ ಸಂರಬ್ಧಃ ಸಮಾವೃತ್ಯ ಶರಂ ಕಾಲಾಂತಕೋಪಮಮ್ |
ಸಂದಧೇ ಬಲವತ್ ಕೃಷ್ಯ ಘೋರಂ ಶತ್ರುನಿಬರ್ಹಣಮ್ ॥10॥
ಅವರು ತಿರುಗಿ ಕೋಪಗೊಂಡು ಕಾಲಾಂತಕನಂತಿರುವ, ಶತ್ರುವಿನಾಶಕವಾದ ಘೋರವಾದ ಬಾಣವನ್ನು, ಬಿಲ್ಲನ್ನು ಬಲವಾಗಿ ಎಳೆದು ಬಿಲ್ಲಿನಲ್ಲಿ ಹೂಡಿದರು.
ಸ ವಕ್ಷಸಿ ಪಪಾತೋಗ್ರಃ ಶರೋ ವ್ಯಾಲ ಇವ ಶ್ವಸನ್ |
ಮಹೀಂ ರಾಜಂಸ್ತತಶ್ಚಾಹಮಗಮಂ ರುಧಿರಾವಿಲಃ ॥11॥
ಆ ಉಗ್ರವಾದ ಬಾಣವು ಭುಸುಗುಟ್ಟುವ ಸರ್ಪದಂತೆ ನನ್ನ ಎದೆಯಲ್ಲಿ ಬಿದ್ದಿತು. ರಾಜನೇ, ನಾನು ಆಗ ರಕ್ತಸಿಕ್ತನಾಗಿ ಭೂಮಿಯ ಮೇಲೆ ಬಿದ್ದೆನು.
ಸಂಪ್ರಾಪ್ಯ ತು ಪುನಃ ಸಂಜ್ಞಾಂ ಜಾಮದಗ್ನ್ಯಾಯ ಧೀಮತೇ |
ಪ್ರಾಹಿಣ್ವಂ ವಿಮಲಾಂ ಶಕ್ತಿಂ ಜ್ವಲಂತೀಮಶನೀಮಿವ ॥12॥
ಪುನಃ ಪ್ರಜ್ಞೆಯನ್ನು ಪಡೆದು, ಮೇಧಾವಿಗಳಾದ ಪರಶುರಾಮರ ಮೇಲೆ ಉರಿಯುವ ವಜ್ರದಂತಿರುವ, ನಿರ್ಮಲವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿದೆನು.
ಸಾ ತಸ್ಯ ದ್ವಿಜಮುಖ್ಯಸ್ಯ ನಿಪಪಾತ ಭುಜಾಂತರೇ |
ವಿಹ್ವಲಶ್ಚಾಭವದ್ ರಾಜನ್ ವೇಪಥುಶ್ಚೈನಮಾವಿಶತ್ ॥13॥
ಆ ಶಕ್ತಿಯು ಆ ದ್ವಿಜಶ್ರೇಷ್ಠರ ಭುಜಗಳ ಮಧ್ಯದಲ್ಲಿ ಬಿದ್ದಿತು. ಎಲೈ ರಾಜನೇ, ಅದರಿಂದ ಅವರು ಸಂಕಟಪಟ್ಟರು ಮತ್ತು ಅವರ ಶರೀರದಲ್ಲಿ ನಡುಕ ಉಂಟಾಯಿತು.
ತತ ಏನಂ ಪರಿಷ್ವಜ್ಯ ಸಖಾ ವಿಪ್ರೋ ಮಹಾತಪಾಃ |
ಅಕೃತವ್ರಣಃ ಶುಭೈರ್ವಾಕ್ಯೈರಾಶ್ವಾಸದನೇಕಧಾ ॥14॥
ಆಗ ಅವರ ಸ್ನೇಹಿತನೂ, ಬ್ರಾಹ್ಮಣನೂ, ಮಹಾತಪಸ್ವಿಯೂ ಆದ ಅಕೃತವ್ರಣನು ಅವರನ್ನು ಆಲಿಂಗಿಸಿ, ಶುಭವಾದ ವಾಕ್ಯಗಳಿಂದ ಅನೇಕ ರೀತಿಯಲ್ಲಿ ಸಮಾಧಾನ ಪಡಿಸಿದನು.
ಸಮಾಶ್ವಸ್ತಸ್ತತೋ ರಾಮಃ ಕ್ರೋಧಾಮರ್ಷಸಮನ್ವಿತಃ |
ಪ್ರಾದುಶ್ಚಕ್ರೇ ತದಾ ಬ್ರಾಹ್ಮಂ ಪರಮಾಸ್ತ್ರಂ ಮಹಾವ್ರತಃ ॥15॥
ಸುಧಾರಿಸಿಕೊಂಡ, ಮಹಾವ್ರತಧಾರಿಗಳಾದ ಪರಶುರಾಮರು ಕ್ರೋಧಾಮರ್ಷಗಳಿಂದ ಕೂಡಿದವರಾಗಿ ಶ್ರೇಷ್ಠವಾದ ಬ್ರಹ್ಮಾಸ್ತ್ರವನ್ನು

ಪ್ರಯೋಗಿಸಿದರು.
ತತಸ್ತತ್ಪ್ರತಿಘಾತಾರ್ಥಂ ಬ್ರಾಹ್ಮಮೇವಾಸ್ತ್ರಮುತ್ತಮಮ್ |
ಮಯಾ ಪ್ರಯುಕ್ತಂ ಜಜ್ವಾಲ ಯುಗಾಂತಮಿವ ದರ್ಶಯತ್ ॥16॥
ಅದನ್ನು ನಿವಾರಣೆ ಮಾಡಲು ನಾನೂ ಶ್ರೇಷ್ಠವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದೆ. ನನ್ನಿಂದ ಪ್ರಯೋಗಿಸಲ್ಪಟ್ಟ ಬ್ರಹ್ಮಾಸ್ತ್ರವು ಯುಗಾಂತವನ್ನು ತೋರಿಸುತ್ತಿದೆಯೋ ಎಂಬಂತೆ ಜ್ವಲಿಸುತ್ತಿದ್ದಿತು.
ತಯೋರ್ಬ್ರಹ್ಮಾಸ್ತ್ರಯೋರಾಸೀದ್ ಅಂತರಾ ಖೇ ಸಮಾಗಮಃ |
ಅಸಂಪ್ರಾಪ್ಯೈವ ರಾಮಂ ಚ ಮಾಂ ಚ ಭಾರತಸತ್ತಮ ॥17॥
ಎಲೈ ಭರತಶ್ರೇಷ್ಠನೇ, ಆ ಬ್ರಹ್ಮಾಸ್ತ್ರಗಳು ನನ್ನನ್ನಾಗಲೀ, ಪರಶುರಾಮರನ್ನಾಗಲೀ ತಲುಪದೇ ಆಕಾಶದ ಮಧ್ಯದಲ್ಲಿ ಅವುಗಳಿಗೆ ಪರಸ್ಪರ ಸಮಾಗಮ ಉಂಟಾಯಿತು.
ತತೋ ವ್ಯೋಮ್ನಿ ಪ್ರಾದುರಭೂತ್ ತೇಜ ಏವ ಹಿ ಕೇವಲಮ್ |
ಭೂತಾನಿ ಚೈವ ಸರ್ವಾಣಿ ಜಗ್ಮುರಾರ್ತಿಂ ವಿಶಾಂಪತೇ ॥18॥
ಆಗ ಆಕಾಶದಲ್ಲಿ ಎಲ್ಲ ಕಡೆಯಲ್ಲಿಯೂ ಕೇವಲ ತೇಜಸ್ಸೇ ಕಂಡು ಬಂದಿತು. ಎಲೈ ರಾಜನೇ, ಎಲ್ಲ ಪ್ರಾಣಿಗಳೂ ವಿಷಾದವನ್ನು ಹೊಂದಿದವು.
ಋಷಯಶ್ಚ ಸಗಂಧರ್ವಾ ದೇವತಾಶ್ಚೈವ ಭಾರತ |
ಸಂತಾಪಂ ಪರಮಂ ಜಗ್ಮುರಸ್ತ್ರತೇಜೋಭಿಪೀಡಿತಾಃ ॥19॥
ಎಲೈ ಭಾರತನೇ, ಆ ಅಸ್ತ್ರದ ಸಾಮರ್ಥ್ಯದಿಂದ ಪೀಡಿತರಾದ ಋಷಿಗಳೂ, ಗಂಧರ್ವರೂ ಮತ್ತು ದೇವತೆಗಳೂ ಬಹಳ ಸಂತಾಪವನ್ನು ಹೊಂದಿದರು.
ತತಶ್ಚಚಾಲ ಪೃಥಿವೀ ಸಪರ್ವತವನದ್ರುಮಾ |
ಸಂತಪ್ತಾನಿ ಚ ಭೂತಾನಿ ವಿಷಾದಂ ಜಗ್ಮುರುತ್ತಮಮ್ ॥20॥
ಪ್ರಜಜ್ವಾಲ ನಭೋ ರಾಜನ್ ಧೂಮಾಯಂತೇ ದಿಶೋ ದಶ |
ನ ಸ್ಥಾತುಮಂತರಿಕ್ಷೇ ನ ಶೇಕುರಾಕಾಶಗಾಸ್ತದಾ ॥21॥
ಎಲೈ ರಾಜನೇ, ಆಕಾಶವೆಲ್ಲವೂ ಉರಿಯುತ್ತಿದ್ದಿತು. ಹತ್ತು ದಿಕ್ಕುಗಳು ಧೂಮದಿಂದ ತುಂಬಿದ್ದವು. ಆಕಾಶದಲ್ಲಿ ಸಂಚರಿಸುವ ಪಕ್ಷಿಗಳು ಅಂತರಿಕ್ಷದಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ.
ತತೋ ಹಾಹಾಕೃತೇ ಲೋಕೇ ಸದೇವಾಸುರರಾಕ್ಷಸೇ |
ಇದಮಂತರಮಿತ್ಯೇವ ಮೋಕ್ತುಕಾಮೋಽಸ್ಮಿ ಭಾರತ ॥22॥
ಪ್ರಸ್ವಾಪಮಸ್ತ್ರಂ ದಯಿತಂ ವಚನಾದ್ ಬ್ರಹ್ಮವಾದಿನಾಮ್ |
ಚಿಂತಿತಂ ಚ ತದಾಽಸ್ತ್ರಂ ಮೇ ಮನಸಾ ಪ್ರತ್ಯಭಾತ್ ತದಾ ॥23॥
ಎಲೈ ಭಾರತನೇ, ಆಗ ದೇವಾಸುರ, ರಾಕ್ಷಸರ ಲೋಕಗಳಲ್ಲಿ ಹಾಹಾಕಾರ ಉಂಟಾಗುತ್ತಿರಲು ಇದೇ ಅವಕಾಶವೆಂದು ತಿಳಿದು, ನಾನು ಬ್ರಹ್ಮವಾದಿಗಳು ಹೇಳಿದ, ನನಗೆ ಪ್ರಿಯವಾದ ಪ್ರಸ್ವಾಪಾಸ್ತ್ರವನ್ನು ಪ್ರಯೋಗಿಸಲು ಬಯಸಿದೆ. ನಾನು ಚಿಂತಿಸಿದ ತಕ್ಷಣವೇ ಆ ಅಸ್ತ್ರವು ನನ್ನ ಮನಸ್ಸಿನಲ್ಲಿ ಪ್ರತಿಭಾತವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಡಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೇಳನೆಯ ಅಧ್ಯಾಯ
ನಾರದರ ವಚನದಂತೆ ಪ್ರಸ್ವಾಪಾಸ್ತ್ರವನ್ನು ಪ್ರಯೋಗಿಸದೆ ಯುದ್ಧ ವಿರಾಮ. ಪರಶುರಾಮರಿಂದ ತಮ್ಮ ಪರಾಭವದ ಅಂಗೀಕಾರ.
ಭೀಷ್ಮಃ
ತತೋ ಹಲಹಲಾಶಬ್ದೋ ದಿವಿ ರಾಜನ್ ಮಹಾನಭೂತ್ |
ಪ್ರಸ್ವಾಪನಂ ಭೀಷ್ಮ ಸ್ರಾಕ್ಷೀರಿತಿ ಕೌರವನಂದನ ॥1॥
ಭೀಷ್ಮ ಎಲೈ ರಾಜನೇ, ಆಗ ಆಕಾಶದಲ್ಲಿ, ಕೌರವನಂದನನಾದ ಭೀಷ್ಮನೇ, ಪ್ರಸ್ವಾಪಾಸ್ತ್ರವನ್ನು ಪ್ರಯೋಗಿಸು ಎಂಬ ದೊಡ್ಡ ಕೋಲಾಹಲ ಶಬ್ದವುಂಟಾಯಿತು.
ಅಯೋಜಯಮಹಂ ತತ್ರ ತದಸ್ತ್ರಂ ಭೃಗುನಂದನೇ |
ಪ್ರಸ್ವಾಪಂ ಮಾಂ ಪ್ರಯುಂಜಾನಂ ನಾರದೋ ವಾಕ್ಯಮಬ್ರವೀತ್ ॥2॥
ನಾನು ಭೃಗುನಂದನರಾದ ಪರಶುರಾಮರನ್ನು ಉದ್ದೇಶಿಸಿ ಆ ಪ್ರಸ್ವಾಪಾಸ್ತ್ರವನ್ನು ಹೂಡುವಷ್ಟರಲ್ಲಿ ನಾರದರು ಮಾತನಾಡಿದರು.
ಏತೇ ವಿಯತಿ ಕೌರವ್ಯ ದಿವಿ ದೇವಗಣಾಃ ಸ್ಥಿತಾಃ |
ತೇ ತ್ವಾಂ ನಿವಾರಯಂತ್ಯದ್ಯ ಪ್ರಸ್ವಾಪಂ ಮಾ ಪ್ರಯೂಯುಜಃ ॥3॥
ಎಲೈ ಕೌರವ್ಯನೇ, ಆಕಾಶದಲ್ಲಿ ಇರುವ ದೇವತಾಗಣಗಳು ಈ ದಿನ ನಿನ್ನನ್ನು ನಿವಾರಿಸುತ್ತಿವೆ. ಪ್ರಸ್ವಾಪಾಸ್ತ್ರವನ್ನು ಪ್ರಯೋಗಿಸಬೇಡ.
ರಾಮಸ್ತಪಸ್ವೀ ಬ್ರಹ್ಮಣ್ಯೋ ಬ್ರಾಹ್ಮಣಶ್ಚ ಗುರುಶ್ಚ ತೇ |

ತಸ್ಯಾವಮಾನಂ ಕೌರವ್ಯ ಮಾ ಸ್ಮ ಕಾರ್ಷೀಃ ಕಥಂಚನ ||4||
ಪರಶುರಾಮರು ತಪಸ್ವಿಗಳೂ, ಬ್ರಾಹ್ಮಣರ ವತ್ಸಲರೂ, ಬ್ರಾಹ್ಮಣರೂ ಮತ್ತು ನಿನ್ನ ಗುರುಗಳೂ ಆಗಿದ್ದಾರೆ. ಎಲೈ ಕೌರವ್ಯನೇ, ಅವರಿಗೆ ಯಾವ ರೀತಿಯಿಂದಲೂ ಅವಮಾನವನ್ನು ಮಾಡಬೇಡ.
ತತೋಽಪಶ್ಯಂ ದಿವಿಷ್ಠಾನ್ ವೈ ತಾನಷ್ಟೌ ಬ್ರಹ್ಮವಾದಿನಃ |
ತೇ ಮಾಂ ಸ್ಮಯಂತೋ ರಾಜೇಂದ್ರ ಶನಕೈರಿದಮಬ್ರುವನ್ ||5||
ಆಗ ನಾನು ಆಕಾಶದಲ್ಲಿ ನಿಂತ ಆ ಎಂಟು ಬ್ರಹ್ಮವಾದಿಗಳನ್ನು ನೋಡಿದೆನು. ಅವರು ನಗುತ್ತಾ ನನ್ನನ್ನು ಕುರಿತು ಹೀಗೆ ಹೇಳಿದರು.
ಯದಾಹ ಭರತಶ್ರೇಷ್ಠ ನಾರದಸ್ತತ್ ತಥಾ ಕುರು |
ಏತದ್ಧಿ ಪರಮಂ ಶ್ರೇಯೋ ಲೋಕಾನಾಂ ಭರತರ್ಷಭ ||6||
ಎಲೈ ಭರತಶ್ರೇಷ್ಠನೇ, ನಾರದರು ಹೇಳಿದಂತೆ ಮಾಡು. ಇದರಿಂದ ಲೋಕಕ್ಕೆ ಪರಮಶ್ರೇಯಸ್ಸು ಉಂಟಾಗುವುದು.
ತತೋಽಹಂ ಪ್ರತಿಸಂಹೃತ್ಯ ತದಸ್ತ್ರಂ ಸ್ವಾಪನಂ ಮೃಧೇ |
ಬ್ರಹ್ಮಾಸ್ತ್ರಂ ದೀಪಯಾಂಚಕ್ರೇ ತಸ್ಮಿನ್ ಯುಧಿ ಯಥಾವಿಧಿ ||7||
ಆಗ ನಾನು ಯುದ್ಧದಲ್ಲಿ ಸ್ವಾಪನಾಸ್ತ್ರವನ್ನು ಉಪಸಂಹಾರ ಮಾಡಿ ವಿಧಿ ಪೂರ್ವಕವಾಗಿ ಧನುಸ್ಸಿನಲ್ಲಿ ಬ್ರಹ್ಮಾಸ್ತ್ರವನ್ನು ಹೂಡಿದೆನು.

ತತೋ ರಾಮೋ ರುಷಿತೋ ರಾಜಸಿಂಹ
ದೃಷ್ಟ್ವಾ ತದಸ್ತ್ರಂ ವಿನಿವರ್ತಿತಂ ವೈ |
ಜಿತೋಽಸ್ಮಿ ಭೀಷ್ಮೇಣ ಸುಮಂದಬುದ್ಧಿಃ
ಇತ್ಯೇವ ವಾಕ್ಯಂ ಸಹಸಾ ವ್ಯಮುಂಚತ್ ||8||
ಎಲೈ ರಾಜಸಿಂಹನೇ, ಆಗ ಕೋಪಗೊಂಡ ಪರಶುರಾಮರು ನಾನು ಪ್ರಸ್ವಾಪಾಸ್ತ್ರವನ್ನು ಹಿಂದೆ ತೆಗೆದುಕೊಂಡದ್ದನ್ನು ನೋಡಿ, ಮಂದಬುದ್ಧಿಯುಳ್ಳ ನಾನು ಭೀಷ್ಮರಿಂದ ಪರಾಜಿತನಾಗಿದ್ದೇನೆ ಎಂದು ಇದ್ದಕ್ಕಿದ್ದಂತೆಯೇ ಹೇಳಿದರು.
ತತೋಽಪಶ್ಯತ್ ಪಿತರಂ ಜಾಮದಗ್ನ್ಯಃ
ಪಿತುಸ್ತಥಾ ಪಿತರಂ ಚಾಸ್ಯ ಚಾನ್ಯಾನ್ |
ತೇ ತತ್ರ ಚೈನಂ ಪರಿವಾರ್ಯ ತಸ್ಥುಃ
ಊಚುಶ್ಚೈನಂ ಸಾಂತ್ವಪೂರ್ವಂ ತದಾನೀಮ್ ||9||
ಆಗ ಪರಶುರಾಮರು ತಮ್ಮ ತಂದೆಗಳಾದ ಜಮದಗ್ನಿಗಳನ್ನೂ, ಅವರ ತಂದೆಯಾದ ಋಚೀಕರನ್ನೂ ಮತ್ತು ಬೇರೆ ಋಷಿಗಳನ್ನೂ ನೋಡಿದರು. ಅವರೆಲ್ಲರೂ ಅವರನ್ನು ಸುತ್ತುವರಿದು, ಅವರನ್ನು ಕುರಿತು ಆಗ ಸಮಾಧಾನ ಮಾಡುತ್ತಾ, ಈ ಮಾತುಗಳನ್ನು ಆಡಿದರು.

ಮಾ ಸ್ಮೈವಂ ಸಾಹಸಂ ತಾತ ಪುನಃ ಕಾರ್ಷೀಃ ಕಥಂಚನ |
ಭೀಷ್ಮೇಣ ಸಂಯುಗಂ ಗಂತುಂ ಕ್ಷತ್ರಿಯೇಣ ವಿಶೇಷತಃ ||10||
ಎಲೈ ಪ್ರೀತಿಪಾತ್ರನೇ, ವಿಶೇಷವಾಗಿ ಕ್ಷತ್ರಿಯರಾದ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡುವಂತಹ ಸಾಹಸಕಾರ್ಯವನ್ನು ಇನ್ನೊಮ್ಮೆ ಯಾವ ಕಾರಣದಿಂದಲೂ ಮಾಡಬೇಡ.
ಕ್ಷತ್ರಿಯಸ್ಯ ತು ಧರ್ಮೋಽಯಂ ಯದ್ ಯುದ್ಧಂ ಭೃಗುನಂದನ |
ಸ್ವಾಧ್ಯಾಯೋ ವ್ರತಚರ್ಯಾ ಚ ಬ್ರಾಹ್ಮಣಾನಾಂ ಪರಂ ಧನಮ್ ||11||
ಎಲೈ ಭೃಗುನಂದನನೇ, ಯುದ್ಧ ಮಾಡುವುದು ಕ್ಷತ್ರಿಯರ ಧರ್ಮ. ಸ್ವಾಧ್ಯಾಯ ಮತ್ತು ವ್ರತಾನುಷ್ಠಾನಗಳು ಬ್ರಾಹ್ಮಣರ ಶ್ರೇಷ್ಠವಾದ ಧನ.
ಇದಂ ನಿಮಿತ್ತಂ ಕಸ್ಮಿಂಶ್ಚಿದ್ ಅಸ್ಮಾಭಿರುಪಮಂತ್ರಿತಮ್ |
ಶಸ್ತ್ರಧಾರಣಮತ್ಯುಗ್ರಂ ತಚ್ಚ ಕಾರ್ಯಂ ಕೃತಂ ತ್ವಯಾ ||12||
ನಾವು ಯಾವುದೋ ಉದ್ದೇಶದಿಂದ ನೀನು ಉಗ್ರವಾದ ಶಸ್ತ್ರಧಾರಣವನ್ನು ಮಾಡಬೇಕೆಂದು ಆಲೋಚಿಸಿದ್ದೆವು. ನೀನು ಆ ಉದ್ದೇಶವನ್ನು ನೆರವೇರಿಸಿದ್ದೀಯೆ.
ವತ್ಸ ಪರ್ಯಾಪ್ತಮೇತಾವದ್ ಭೀಷ್ಮೇಣ ಸಹ ಸಂಯುಗೇ |
ವಿಮರ್ದಸ್ತೇ ಮಹಾಬಾಹೋ ವ್ಯಪಯಾಹಿ ರಣಾದಿತಃ ||13||
ಎಲೈ ವತ್ಸನೇ, ಮಹಾಬಾಹುವೇ, ಯುದ್ಧದಲ್ಲಿ ಭೀಷ್ಮರ ಜೊತೆಯಲ್ಲಿ ಮಾಡಿದ ಸಂಘರ್ಷವು ಇಷ್ಟು ಸಾಕು. ಯುದ್ಧದಿಂದ ಹಿಂದಿರುಗುವವನಾಗು.
ಪರ್ಯಾಪ್ತಮೇತದ್ ಭದ್ರಂ ತೇ ತವ ಕಾರ್ಮುಕಧಾರಣಮ್ |
ವಿಸರ್ಜಯೈತದ್ ದುರ್ಧರ್ಷ ತಪಸ್ತಪ್ಯಸ್ವ ಭಾರ್ಗವ ||14||
ಎಲೈ ದುರ್ಧರ್ಷನೇ, ನಿನಗೆ ಮಂಗಳವಾಗಲಿ. ನೀನು ಧನುಸ್ಸನ್ನು ಧಾರಣೆ ಮಾಡಿದುದು ಸಾಕು. ಭಾರ್ಗವನೇ, ಅದನ್ನು ವಿಸರ್ಜಿಸಿ ತಪಸ್ಸನ್ನು ಮಾಡುವವನಾಗು (ಎಂದು ಹೇಳಿದರು).
ಏವಂ ಭೀಷ್ಮಃ ಶಾಂತನವೋ ದೇವೈಃ ಸರ್ವೈರ್ನಿವಾರಿತಃ |
ನಿವರ್ತಸ್ವ ರಣಾದಸ್ಮಾದ್ ಇತಿ ಚೈವ ಪ್ರಚೋದಿತಃ ||15||
ಹೀಗೆಯೇ ಶಂತನುಪುತ್ರನಾದ ಭೀಷ್ಮನೂ ಸಹ ಈ ಯುದ್ಧದಿಂದ ಹಿಮ್ಮೆಟ್ಟುವವನಾಗಲಿ ಎಂದು ದೇವತೆಗಳಿಂದ ಪ್ರೇರಿಸಲ್ಪಟ್ಟು ತಡೆಯಲ್ಪಟ್ಟೆನು.

ರಾಮೇಣ ಸಹ ಮಾ ಯೋತ್ಸೀರ್ಗುರುಣೇತಿ ಪುನಃ ಪುನಃ |
ನ ಹಿ ರಾಮೋ ರಣೇ ಜೇತುಂ ತ್ವಯಾ ನ್ಯಾಯ್ಯಃ ಕುರೂದ್ವಹ ॥16॥
ಪುನಃ ಪುನಃ ಗುರುಗಳಾದ ಪರಶುರಾಮರ ಜೊತೆಯಲ್ಲಿ ಯುದ್ಧವನ್ನು ಮಾಡಬೇಡ. ಎಲೈ ಕುರೂದ್ವಹನೇ, ನೀನು ಪರಶುರಾಮರನ್ನು ಯುದ್ಧದಲ್ಲಿ ಜಯಿಸುವುದು ನ್ಯಾಯವಲ್ಲ.
ಮಾನಂ ಕುರುಷ್ವ ರಾಜೇಂದ್ರ ಬ್ರಾಹ್ಮಣಸ್ಯ ರಣಾಜಿರೇ |
ವಯಂ ತು ಗುರವಸ್ತುಭ್ಯಂ ತಸ್ಮಾತ್ ತ್ವಾಂ ವರಯಾಮಹೇ ॥17॥
ಎಲೈ ರಾಜೇಂದ್ರನೇ, ಯುದ್ಧ ಭೂಮಿಯಲ್ಲಿ ಬ್ರಾಹ್ಮಣರಾದ ಪರಶುರಾಮರಿಗೆ ಗೌರವವನ್ನು ತೋರಿಸು. ನಾವು ನಿನ್ನ ಗುರುಗಳು. ಆದ್ದರಿಂದ ನಿನ್ನನ್ನು ತಡೆಯುತ್ತಿದ್ದೇವೆ.
ಭೀಷ್ಮೋ ವಸೂನಾಮನ್ಯತಮೋ ದಿಷ್ಟ್ಯಾ ಜೀವಸಿ ಪುತ್ರಕ |
ಗಾಂಗೇಯಃ ಶಂತನೋಃ ಪುತ್ರೋ ವಸುರೇಷ ಮಹಾಯಶಾಃ ॥18॥
ಕಥಂ ತ್ವದ್ಯ ತ್ವಯಾ ಜೇತುಂ ರಾಮಃ ಶಕ್ಯೋ ನಿವರ್ತ ವೈ |
ಎಲೈ ಪುತ್ರನೇ, ಭೀಷ್ಮನಾದ ನೀನು ವಸುಗಳಲ್ಲಿ ಒಬ್ಬನು. ಆದ್ದರಿಂದ ದೇವರ ದಯದಿಂದ ಬದುಕಿದ್ದೀಯೆ. ಗಂಗಾಪುತ್ರನೂ, ಶಂತನುಪುತ್ರನೂ, ಮಹಾಯಶಸ್ವಿಯೂ ಆದ ನೀನು ವಸುವೇ ಆಗಿದ್ದೀಯೆ. ಆದ್ದರಿಂದ ನೀನು ಯುದ್ಧದಲ್ಲಿ ಪರಶುರಾಮರನ್ನು ಗೆಲ್ಲುವುದು ಹೇಗೆ ಸಾಧ್ಯ? ಹಿಂದಿರುಗು.
(ಶಿಷ್ಯನಾದ ನೀನು ಗುರುಗಳಿಗೆ ದ್ರೋಹವನ್ನು ಮಾಡಿದುದರಿಂದ ನೀನೂ ಸಹ ನಿನ್ನ ಪೌತ್ರರಿಂದ ಮರಣವನ್ನು ಹೊಂದುವಿ ಎಂಬ ಶಾಪವನ್ನು ಕೊಡುವುದರಿಂದಲೂ ಮತ್ತು ದೇವರ್ಷಿಗಳ ವಚನದಿಂದಲೂ ಭೀಷ್ಮರ ಜಯ ಮತ್ತು ಪರಶುರಾಮರ ಭೇದ ಭೇದಾದಿ ದರ್ಶನವು ಅಸುರಜನ ಮೋಹನಾರ್ಥವಾಗಿ ಎಂದು ತಿಳಿಯಬೇಕು. ಮತ್ತು ಮುಂದೆ ಬರಲಿರುವ ದುಷ್ಟವಾದ ಫಲದ ಸಾಧನೆಗಾಗಿಯೂ ಎಂದು ತಿಳಿಯಬೇಕು ಲಕ್ಷಾಲಂಕಾರ).
ಅರ್ಜುನಃ ಪಾಂಡವಶ್ರೇಷ್ಠಃ ಪುರಂದರಸುತೋ ಬಲೀ ॥19॥
ನರಃ ಪ್ರಜಾಪತಿರ್ವೀರಃ ಪೂರ್ವದೇವಃ ಸನಾತನಃ ॥20॥
ಸವ್ಯಸಾಚೀತಿ ವಿಖ್ಯಾತಃ ತ್ರಿಷು ಲೋಕೇಷು ಸತ್ಯವಾನ್ ॥21॥
ಭೀಷ್ಮಮೃತ್ಯುರ್ಯಥಾಕಾಲಂ ವಿಹಿತೋ ವೈ ಸ್ವಯಂಭುವಾ ॥22॥
ಪಾಂಡವ ಶ್ರೇಷ್ಠನಾದ ಅರ್ಜುನನು ಬಲಿಷ್ಠನಾದವನು ಮತ್ತು ಇಂದ್ರನ ಪುತ್ರ. ವೀರನಾದ ಅವನು ನರ ಎನಿಸುತ್ತಾನೆ. ಅವನು ದೇವತೆಗಳಲ್ಲಿ ಶ್ರೇಷ್ಠನಾದವನು. ಮೂರುಲೋಕಗಳಲ್ಲಿಯೂ ಸವ್ಯಸಾಚಿ ಎಂದು ಪ್ರಖ್ಯಾತನಾದ ಅವನು ಸತ್ಯಸಂಧನಾದವನು. ಬ್ರಹ್ಮದೇವರು ಉಚಿತ (ಯೋಗ್ಯ)ವಾದ ಕಾಲದಲ್ಲಿ ಅವನನ್ನು ಭೀಷ್ಮಮೃತ್ಯುವೆಂದು ವಿಧಾನ ಮಾಡಿದ್ದಾರೆ (ಎಂದು ಹೇಳಿದರು).
ಭೀಷ್ಮಃ
ಏವಮುಕ್ತಃ ಸ ಪಿತೃಭಿಃ ಪಿತೄನ್ ರಾಮೋಽಬ್ರವೀದಿದಮ್ ॥23॥
ನಾಹಂ ಯುಧಿ ನಿವರ್ತೇಯಮಿತಿ ಮೇ ವ್ರತಮಾಹಿತಮ್ |
ನ ನಿವರ್ತಿತಪೂರ್ವಶ್ಚ ಕದಾಚಿದ್ ರಣಮೂರ್ಧನಿ ॥24॥
ನಿವರ್ತ್ಯತಾಮಾಪಗೇಯಃ ಕಾಮಂ ಯುದ್ಧಾತ್ ಪಿತಾಮಹಾಃ |
ನ ತ್ವಹಂ ವಿನಿವರ್ತಿಷ್ಯೇ ಯುದ್ಧಾದಸ್ಮಾತ್ ಕಥಂಚನ ॥25॥
ಭೀಷ್ಮ ಪಿತೃಗಳಿಂದ ಹೀಗೆ ಹೇಳಲ್ಪಟ್ಟ ಪರಶುರಾಮರು ಅವರನ್ನು ಕುರಿತು, ನಾನು ಯುದ್ಧದಿಂದ ಹಿಂದಿರುಗುವುದಿಲ್ಲ. ಇದು ನಾನು ಧರಿಸಿರುವ ವ್ರತ ಮತ್ತು ಹಿಂದೆಂದೂ ನಾನು ರಣರಂಗದಿಂದ ಹಿಂದೆ ಸರಿದಿಲ್ಲ. ಆದ್ದರಿಂದ ಎಲೈ ಪಿತಾಮಹರೇ, ನೀವು ಭೀಷ್ಮನನ್ನೇ ಯುದ್ಧದಿಂದ ಹಿಂದಿರುಗುವಂತೆ ಮಾಡಿ. ನಾನು ಮಾತ್ರ ಈ ಯುದ್ಧದಿಂದ ಹಿಂದೆ ಸರಿಯುವುದಿಲ್ಲ ಎಂದು ಹೇಳಿದರು.
ತತಸ್ತೇ ಮುನಯೋ ರಾಜನ್ನೃಚೀಕಪ್ರಮುಖಾಸ್ತದಾ |
ನಾರದೇನೈವ ಸಹಿತಾಃ ಸಮಾಗಮ್ಯೇದಮಬ್ರುವನ್ ॥26॥
ನಿವರ್ತಸ್ವ ರಣಾತ್ ತಾತ ಮಾನಯಸ್ವ ದ್ವಿಜೋತ್ತಮಮ್ ॥27॥
ನೇತ್ಯವೋಚಮಹಂ ತಾಂಶ್ಚ ಕ್ಷತ್ರಧರ್ಮವ್ಯಪೇಕ್ಷಯಾ ॥28॥
ಆಗ ಎಲೈ ರಾಜನೇ, ಋಚೀಕ ಮೊದಲಾದ ಋಷಿಗಳು ನಾರದರಿಂದ ಕೂಡಿಕೊಂಡು ನನ್ನ ಬಳಿಗೆ ಬಂದು, ಪ್ರೀತಿಪಾತ್ರನೇ, ಯುದ್ಧದಿಂದ ಹಿಂದಿರುಗು. ಬ್ರಾಹ್ಮಣಶ್ರೇಷ್ಠರಾದ ಪರಶುರಾಮರನ್ನು ಗೌರವಿಸು ಎಂದು ಹೇಳಿದರು. ನಾನು ಕ್ಷತ್ರಿಯ ಧರ್ಮವನ್ನು ಗಮನಿಸಿ, ಅದು ಸಾಧ್ಯವಿಲ್ಲ ಎಂದು ಹೇಳಿದೆನು.
ಮಮ ವ್ರತಮಿದಂ ಲೋಕೇ ನಾಹಂ ಯುದ್ಧಾತ್ ಕದಾಚನ |
ವಿಮುಖೋ ವಿನಿವರ್ತೇಯಂ ಪೃಷ್ಠತೋಽಭ್ಯಾಹತಃ ಶರೈಃ ॥29॥
ಇದು ನನ್ನ ವ್ರತ. ನಾನು ಎಂದೂ ಹಿಂದಿರುಗಿ ಬೆನ್ನಿನಲ್ಲಿ ಬಾಣಗಳನ್ನು ಹೊಡೆಯಲ್ಪಡುವುದಿಲ್ಲ.
ನಾಹಂ ಲೋಭಾನ್ನ ಕಾರ್ಪಣ್ಯಾನ್ನ ಭಯಾನ್ನಾರ್ಥಕಾರಣಾತ್ |
ತ್ಯಜೇಯಂ ಶಾಶ್ವತಂ ಧರ್ಮಮಿತಿ ಮೇ ನಿಶ್ಚಿತಾ ಮತಿಃ ॥30॥
ನಾನು ಲೋಭದಿಂದಾಗಲೀ, ದೈನ್ಯದಿಂದಾಗಲೀ, ಭಯದಿಂದಾಗಲೀ, ದ್ರವ್ಯಲಾಭದ ಉದ್ದೇಶದಿಂದಾಗಲೀ ಶಾಶ್ವತವಾದ ಕ್ಷತ್ರಿಯ ಧರ್ಮವನ್ನು ಬಿಡುವುದಿಲ್ಲ ಎಂಬುದು ನನ್ನ ನಿಶ್ಚಿತವಾದ ಅಭಿಪ್ರಾಯ (ಎಂದು ಹೇಳಿದೆನು).
ತತಸ್ತೇ ಮುನಯಃ ಸರ್ವೇ ನಾರದಪ್ರಮುಖಾ ನೃಪ |
ಭಾಗೀರಥೀ ಚ ಮೇ ಮಾತಾ ರಣಮಧ್ಯಂ ಪ್ರಪೇದಿರೇ ॥31॥

ಎಲ್ಲೈ ರಾಜನೇ, ಆಗ ನಾರದರೇ ಮೊದಲಾದ ಎಲ್ಲ ಋಷಿಗಳೂ ಮತ್ತು ನನ್ನ ತಾಯಿಯಾದ ಗಂಗೆಯೂ ಯುದ್ಧದಲ್ಲಿ ನಮ್ಮಿಬ್ಬರ ಮಧ್ಯದಲ್ಲಿ ನಿಂತರು.
ತಥೈವಾತ್ತಶರೋ ಧನ್ವೀ ತಥೈವ ದೃಢವಿಕ್ರಮಃ |
ಸ್ಥಿತೋಽಹಮಾಹವೇ ಯೋದ್ಧುಂ ತತಸ್ತೇ ರಾಮಮಬ್ರುವನ್ ॥32॥
ಸಮೇತ್ಯ ಸಹಿತಾ ಭೂಯಃ ಸಮರೇ ಭೃಗುನಂದನಮ್ ॥33॥
ನಾನು ಹಾಗೆಯೇ ದೃಢವಾದ ಪರಾಕ್ರಮವುಳ್ಳವನಾಗಿ ಧನುಸ್ಸನ್ನು ಹಿಡಿದು, ಬಾಣಗಳನ್ನು ಹಿಡಿದು ಯುದ್ಧದಲ್ಲಿ ಅಲುಗಾಡದೇ ನಿಂತೆನು. ಆಗ ಅವರೆಲ್ಲರೂ ಭೃಗುನಂದನರಾದ ಪರಶುರಾಮರನ್ನು ಒಟ್ಟಿಗೆ ಸಮೀಪಿಸಿ ಪುನಃ ಮಾತನಾಡಿದರು.
ನವನೀತಂ ಹಿ ಹೃದಯಂ ವಿಪ್ರಾಣಾಂ ಶಾಮ್ಯ ಭಾರ್ಗವ |
ರಾಮ ರಾಮ ನಿವರ್ತಸ್ವ ಯುದ್ಧಾದಸ್ಮಾದ್ ದ್ವಿಜೋತ್ತಮ ॥34॥
ಅವಧ್ಯೋ ಹಿ ತ್ವಯಾ ಭೀಷ್ಮಸ್ತ್ವಂ ಚ ಭೀಷ್ಮಸ್ಯ ಭಾರ್ಗವ ॥35॥
ಎಲ್ಲೈ ಪರಶುರಾಮರೇ, ಬ್ರಾಹ್ಮಣರ ಮನಸ್ಸು ಬೆಣ್ಣೆಯಂತೆ. ಆದ್ದರಿಂದ ಶಾಂತರಾಗಿ. ಎಲ್ಲೈ ಬ್ರಾಹ್ಮಣಶ್ರೇಷ್ಠರೇ, ಯುದ್ಧದಿಂದ ನಿವೃತ್ತರಾಗಿ. ಎಲ್ಲೈ ಭಾರ್ಗವರೇ, ನಿಮ್ಮಿಂದ ಭೀಷ್ಮನೂ ವಧ್ಯನಲ್ಲ. ನೀವೂ ಸಹ ಭೀಷ್ಮರಿಂದ ವಧ್ಯರಲ್ಲ ಎಂದು ಹೇಳಿದರು.
ಏವಂ ಬ್ರುವಂತಸ್ತೇ ಸರ್ವೇ ಪ್ರತಿರುದ್ಧ್ಯ ರಣಾಜಿರಮ್ |
ವಾರಯಾಂಚಕ್ರಿರೇ ಶಸ್ತ್ರಂ ಪಿತರೋ ಭೃಗುನಂದನಮ್ ॥36॥
ಹೀಗೆ ಮಾತನಾಡುತ್ತಾ ಆ ಪಿತೃಗಳೆಲ್ಲರೂ ಯುದ್ಧಭೂಮಿಯಲ್ಲಿ ಅಡ್ಡ ನಿಂತು ಪರಶುರಾಮರನ್ನೂ ಮತ್ತು ಶಸ್ತ್ರವನ್ನೂ ನಿವಾರಿಸಿದರು.
ತತೋಽಹಂ ಪುನರೇವಾಥ ತಾನಷ್ಟೌ ಬ್ರಹ್ಮವಾದಿನಃ |
ಅದ್ರಾಕ್ಷಂ ದೀಪ್ಯಮಾನಾನ್ ವೈ ಗ್ರಹಾನಷ್ಟಾವಿವೋದಿತಾನ್ ॥37॥
ಆಗ ನಾನು ಪುನಃ ಎಂಟು ಗ್ರಹಗಳಂತೆ ಶೋಭಿಸುವ ಆ ಎಂಟು ಬ್ರಹ್ಮವಾದಿಗಳನ್ನು ನೋಡಿದೆನು.
ತೇ ಮಾಂ ಸಪ್ರಣಯಂ ವಾಕ್ಯಮಬ್ರುವನ್ ಸಮರೇ ಸ್ಥಿತಮ್ ॥38॥
ಪ್ರೈಹಿ ರಾಮಂ ಮಹಾಬಾಹೋ ಗುರುಂ ಲೋಕಹಿತಂ ಕುರು ॥39॥
ಆಗ ಅವರು ಪ್ರೀತಿಯಿಂದ ನನ್ನನ್ನು ಕುರಿತು ಮಹಾಬಾಹುವೇ, ಯುದ್ಧದಲ್ಲಿ ಎದುರಾಗಿರುವ ನಿನ್ನ ಗುರುಗಳಾದ ಪರಶುರಾಮರಿಗೆ ಶರಣಾಗತನಾಗು. ಲೋಕಹಿತವನ್ನು ಮಾಡು ಎಂದು ಹೇಳಿದರು.
ಭೀಷ್ಮಃ
ದೃಷ್ಟ್ವಾ ನಿವರ್ತಿತಂ ರಾಮಂ ಸುಹೃದ್ವಾಕ್ಯೇನ ತೇನ ವೈ |
ಲೋಕಾನಾಂ ಚ ಹಿತಂ ಕುರ್ವನ್ನಹಮಪ್ಯಾದದೇ ವಚಃ ॥40॥
ಭೀಷ್ಮ ಹಿಂದೆ ಸರಿದ ಪರಶುರಾಮರನ್ನು ನೋಡಿ ಮತ್ತು ಆ ಹಿತೈಷಿಗಳ ವಚನದಿಂದಲೂ ಪ್ರೇರಿತನಾಗಿ ಲೋಕಗಳಿಗೆ ಹಿತವನ್ನು ಮಾಡಲು ಬಯಸಿ, ಅವರ ಮಾತನ್ನು ಸ್ವೀಕರಿಸಿದೆನು.
ತತೋಽಹಂ ರಾಮಮಾಸಾದ್ಯ ವವಂದೇ ಭೃಶವಿಕ್ಷತಃ |
ರಾಮಶ್ಚಾಭ್ಯುತ್ಸ್ಮಯನ್ ಪ್ರೇಮ್ಣಾ ಮಾಮುವಾಚ ಮಹಾತಪಾಃ ॥41॥
ತ್ವತ್ಸಮೋ ನಾಸ್ತಿ ಲೋಕೇಽಸ್ಮಿನ್ ಕ್ಷತ್ರಿಯಃ ಪೃಥಿವೀಚರಃ |
ಗಮ್ಯತಾಂ ಭೀಷ್ಮ ಯುದ್ಧೇಽಸ್ಮಿಂಸ್ತೋಷಿತೋಽಹಂ ಭೃಶಂ ತ್ವಯಾ ॥42॥
ಆಗ ನಾನು ಎಲ್ಲ ಕಡೆಗಳಲ್ಲಿಯೂ ಗಾಯಗೊಂಡು ಪರಶುರಾಮರ ಬಳಿಗೆ ಹೋಗಿ ಅವರಿಗೆ ನಮಸ್ಕಾರವನ್ನು ಮಾಡಿದೆನು. ಮಹಾತಪಸ್ವಿಗಳಾದ ಪರಶುರಾಮರು ಪ್ರೀತಿಯಿಂದ ನಗುತ್ತಾ ನನ್ನನ್ನು ಕುರಿತು, ಈ ಭೂಮಿಯಲ್ಲಿ ನಿನಗೆ ಸಮಾನನಾದ ಇನ್ನೊಬ್ಬ ಕ್ಷತ್ರಿಯನಿಲ್ಲ. ಭೀಷ್ಮನೇ ಹೋಗು, ಯುದ್ಧದಲ್ಲಿ ನನ್ನನ್ನು ನೀನು ಬಹಳವಾಗಿ ಸಂತೋಷಪಡಿಸಿದ್ದೀಯೆ ಎಂದು ಹೇಳಿದರು.
ಭೀಷ್ಮಃ
ಮಮ ಚೈವ ಸಮಕ್ಷಂ ತಾಂ ಕನ್ಯಾಮಾಹೂಯ ಭಾರ್ಗವಃ |
ಉಕ್ತವಾನ್ ದೀನಯಾ ವಾಚಾ ಮಧ್ಯೇ ತೇಷಾಂ ತಪಸ್ವಿನಾಮ್ ॥43॥
ಭೀಷ್ಮ ಪರಶುರಾಮರು ನನ್ನ ಎದುರಿನಲ್ಲಿಯೇ ಆ ಕನ್ಯೆಯನ್ನು ಕರೆದು, ಆ ತಪಸ್ವಿಗಳ ಮಧ್ಯದಲ್ಲಿ ದೈನ್ಯದಿಂದ ಕೂಡಿದ ಮಾತಿನಿಂದ ಹೀಗೆ ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಖ್ಯಾನಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೆಂಟನೆಯ ಅಧ್ಯಾಯ
ಪರಶುರಾಮರ ಅಪ್ಪಣೆಯನ್ನು ಪಡೆದು ಹೊರಟ ಅಂಬೆಯಿಂದ ಪುಣ್ಯಾಶ್ರಮಗಳಲ್ಲಿ ದುಶ್ಚರ ತಪಾಚರಣ.
ರಾಮಃ
ಪ್ರತ್ಯಕ್ಷಮೇತಲ್ಲೋಕಾನಾಂ ಸರ್ವೇಷಾಮೇವ ಭಾಮಿನಿ |

ಯಥಾಶಕ್ತ್ಯಾ ಮಯಾ ಯುದ್ಧಂ ಕೃತಂ ವೈ ಪೌರುಷಂ ಮಹತ್ ॥1॥
ರಾಮ ಎಲೌ ಭಾಮಿನಿಯೇ, ನಾನು ನನ್ನ ಶಕ್ತಿಗೆ ಅನುಗುಣವಾಗಿ ಯುದ್ಧವನ್ನು ಮಾಡಿ ದೊಡ್ಡ ಪೌರುಷವನ್ನು ತೋರಿಸಿದ್ದು ಎಲ್ಲ ಲೋಕಕ್ಕೂ ತಿಳಿದ ವಿಷಯ.
ನ ಚೈವಮಪಿ ಶಕ್ತೋಽಸ್ಮಿ ಭೀಷ್ಮಂ ಶಸ್ತ್ರಭೃತಾಂ ವರಮ್ |
ವಿಶೇಷಯಿತುಮತ್ಯರ್ಥಮುತ್ತಮಾಸ್ತ್ರಾಣಿ ದರ್ಶಯನ್ ॥2॥
ಉತ್ತಮಾಸ್ತ್ರವನ್ನು ಪ್ರದರ್ಶಿಸಿ ಇಷ್ಟು ಪ್ರಯತ್ನಪಟ್ಟರೂ ಸಹ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಭೀಷ್ಮನನ್ನು ಅತಿಶಯಿಸಲು (ಮೀರಲು) ನನಗೆ ಸಾಧ್ಯವಾಗಲಿಲ್ಲ.
ಏಷಾ ಮೇ ಪರಮಾ ಶಕ್ತಿರೇತನ್ಮೇ ಪರಮಂ ಬಲಮ್ |
ಯಥೇಷ್ಟಂ ಗಮ್ಯತಾಂ ಭದ್ರೇ ಕಿಮನ್ಯದ್ವಾ ಕರೋಮಿ ತೇ ॥3॥
ಇದು ನನ್ನ ಪರಮ ಶಕ್ತಿ, ಇದು ನನ್ನ ಪರಮ ಬಲ. ಮಂಗಳಸ್ವರೂಪಳೇ, ನೀನು ಇಷ್ಟ ಬಂದಂತೆ ಹೋಗು ಅಥವಾ ನಿನಗೆ ಬೇರೆ ಏನನ್ನು ಮಾಡಲಿ?
ಭೀಷ್ಮಮೇವ ಪ್ರಪದ್ಯಸ್ವ ನ ತೇಽನ್ಯಾ ವಿದ್ಯತೇ ಗತಿಃ |
ನಿರ್ಜಿತೋ ಹ್ಯಸ್ಮಿ ಭೀಷ್ಮೇಣ ಮಹಾಸ್ತ್ರಾಣಿ ಪ್ರಮುಂಚತಾ ॥4॥
ಭೀಷ್ಮನನ್ನೇ ಶರಣು ಹೊಂದು. ನಿನಗೆ ಬೇರೆ ಗತಿ ಇಲ್ಲ. ಏಕೆಂದರೆ ನಾನು ಮಹಾಸ್ತ್ರಗಳನ್ನು ಪ್ರಯೋಗಿಸುವ ಭೀಷ್ಮನಿಂದ ಪರಾಜಿತನಾಗಿದ್ದೇನೆ.
ಏವಮುಕ್ತ್ವಾ ತತೋ ರಾಮೋ ವಿನಿಃಶ್ವಸ್ಯ ಮಹಾಮನಾಃ |
ತೂಷ್ಣೀಮಾಸೀತ್ ತತಃ ಕನ್ಯಾ ಪ್ರೋವಾಚ ಭೃಗುನಂದನಮ್ ॥5॥
ಹೀಗೆ ಹೇಳಿ, ಧೈರ್ಯಶಾಲಿಗಳಾದ ಪರಶುರಾಮರು ನಿಟ್ಟುಸಿರನ್ನು ಬಿಟ್ಟು ಸುಮ್ಮನಾದರು. ಆಗ ಆ ಕನ್ಯೆಯು ಭೃಗುನಂದರನ್ನು ಕುರಿತು ಮಾತನಾಡಿದಳು.
ಭಗವನ್ನೇವಮೇವೈತದ್ ಯಥಾಽಽಹ ಭಗವಾಂಸ್ತಥಾ |
ಅಜೇಯೋ ಯುಧಿ ಭೀಷ್ಮೋಽಯಮಪಿ ದೇವೈರುದಾರಧೀಃ ॥6॥
ಯಥಾಶಕ್ತಿ ಯಥೋತ್ಸಾಹಂ ಮಮ ಕಾರ್ಯಂ ಕೃತಂ ತ್ವಯಾ ॥7॥
ಪೂಜ್ಯರೇ, ನೀವು ಹೇಳಿದಂತೆಯೇ ಸರಿ. ಪೂಜ್ಯರೇ, ಉದಾರ ಮನಸ್ಸುಳ್ಳ ಭೀಷ್ಮನು ದೇವತೆಗಳಿಂದಲೂ ಜಯಿಸಲು ಅಸಾಧ್ಯನಾದವನು. ನೀವಾದರೂ ನಿಮ್ಮ ಶಕ್ತಿಗೆ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ನನ್ನ ಕಾರ್ಯವನ್ನು ಮಾಡಿದ್ದೀರಿ.
ಅನಿವಾರ್ಯ ರಣೇ ವೀರ್ಯಮಸ್ತ್ರಾಣಿ ವಿವಿಧಾನಿ ಚ |
ನ ಚೈವ ಶಕ್ಯತೇ ಯುದ್ಧೇ ವಿಶೇಷಯಿತುಮಂತತಃ ॥8॥
ನ ಚಾಹಮೇನಂ ಯಾಸ್ಯಾಮಿ ಪುನರ್ಭೀಷ್ಮಂ ಕಥಂಚನ ॥9॥
ನಿಮ್ಮ ಪರಾಕ್ರಮವನ್ನು ಅಥವಾ ಅಸ್ತ್ರಗಳನ್ನು ಯಾವುದನ್ನೂ ಮುಚ್ಚು ಮರೆ ಮಾಡದೆ ಯುದ್ಧವನ್ನು ಮಾಡಿದರೂ ಕೊನೆಗೆ ಭೀಷ್ಮನನ್ನು ಸೋಲಿಸಲು ಸಾಧ್ಯವಾಗಲಿಲ್ಲ. ನಾನು ಮಾತ್ರ ಪುನಃ ಆ ಭೀಷ್ಮನ ಬಳಿಗೆ ಹೋಗುವುದಿಲ್ಲ.
ಗಮಿಷ್ಯಾಮಿ ತು ತತ್ರಾಹಂ ಯತ್ರ ಭೀಷ್ಮಂ ತಪೋಧನ |
ಸಂಗರೇ ಪಾತಯಿಷ್ಯಾಮಿ ಸ್ವಯಮೇವ ಭೃಗೂದ್ವಹ ॥10॥
ಎಲೈ ತಪೋಧನರೇ, ಭೃಗೂದ್ವಹರೇ, ಎಲ್ಲಿ ಹೋದರೆ ನಾನು ಸ್ವತಃ ಭೀಷ್ಮನನ್ನು ಯುದ್ಧದಲ್ಲಿ ವಿನಾಶ ಮಾಡುವೆನೋ ಅಂತಹ ಸ್ಥಳಕ್ಕೆ ಹೋಗುವೆನು (ಎಂದು ಹೇಳಿದಳು).
ಏವಮುಕ್ತ್ವಾ ಯಯೌ ಕನ್ಯಾ ರೋಷವ್ಯಾಕುಲಲೋಚನಾ |
ತಪಸೇ ಧೃತಸಂಕಲ್ಪಾ ಸಾ ಮೇ ಚಿಂತಯತೀ ವಧಮ್ ॥11॥
ಹೀಗೆ ಹೇಳಿ ರೋಷದಿಂದ ದೂಷಿತವಾದ ಕಣ್ಣುಳ್ಳ ಆ ಕನ್ಯೆಯು ತಪಸ್ಸನ್ನು ಮಾಡುವುದರಲ್ಲಿ ದೃಢನಿಶ್ಚಯವನ್ನು ಮಾಡಿ, ನನ್ನ ವಧೆಯನ್ನು ಚಿಂತಿಸುತ್ತಾ ಅಲ್ಲಿಂದ ಹೊರಟಳು.
ತತೋ ಮಹೇಂದ್ರಸಹಿತೈರ್ಮುನಿಭಿರ್ಭೃಗುಸತ್ತಮಃ |
ಯಥಾಗತಂ ತಥಾ ಸೋಽಗಾನ್ಮಾಮುಪಾಮಂತ್ರ್ಯ ಭಾರತ ॥12॥
ಅನಂತರ ಎಲೈ ಭಾರತನೇ, ಭೃಗುಶ್ರೇಷ್ಠರಾದ ಪರಶುರಾಮರೂ ಸಹ ನನ್ನಿಂದ ಬೀಳ್ಕೊಡಲ್ಪಟ್ಟು ತಾವು ಬಂದಂತೆಯೇ ಮಹೇಂದ್ರ ಸಹಿತರಾದ ಋಷಿಗಳ ಜೊತೆಯಲ್ಲಿ ಹೊರಟು ಹೋದರು.
ತತೋ ರಥಂ ಸಮಾರುಹ್ಯ ಸ್ತೂಯಮಾನೋ ದ್ವಿಜಾತಿಭಿಃ |
ಪ್ರವಿಶ್ಯ ನಗರಂ ಮಾತ್ರೇ ಸತ್ಯವತ್ಯೈ ನ್ಯವೇದಯಮ್ ॥13॥
ಯಥಾವೃತ್ತಂ ಮಹಾರಾಜ ಸಾ ಚ ಮಾಂ ಪ್ರತ್ಯನಂದತ |
ಪುರುಷಾಂಶ್ಚಾದಿಶತ್ ಪ್ರಾಜ್ಞಾನ್ ಕನ್ಯಾವೃತ್ತಾಂತಕರ್ಮಣಿ ॥14॥
ಅನಂತರ ನಾನು ರಥವನ್ನು ಏರಿ, ಬ್ರಾಹ್ಮಣರಿಂದ ಸ್ತೋತ್ರ ಮಾಡಲ್ಪಟ್ಟವನಾಗಿ, ನಗರವನ್ನು ಪ್ರವೇಶಿಸಿ, ತಾಯಿಯಾದ ಸತ್ಯವತಿಗೆ ಎಲ್ಲವನ್ನೂ ನಡೆದಂತೆಯೇ, ನಿವೇದಿಸಿದೆನು. ಎಲೈ ಮಹಾರಾಜನೇ, ಅವಳು ನನ್ನನ್ನು ಅಭಿನಂದಿಸಿದಳು ಮತ್ತು ಪ್ರಾಜ್ಞರಾದ ಪುರುಷರನ್ನು ಕನ್ಯೆಯ ವೃತ್ತಾಂತವನ್ನು ತಿಳಿಯಲು ನಿಯೋಜಿಸಿದಳು.
ದಿವಸೇ ದಿವಸೇ ಹ್ಯಸ್ಯಾ ಗತಿಜಲ್ಪಿತಚೇಷ್ಟಿತಮ್ |
ಪ್ರತ್ಯಾಹರಂಶ್ಚ ಮೇ ಯುಕ್ತಾಃ ಸ್ಥಿತಾಃ ಪ್ರಿಯಹಿತೇ ಮಮ ॥15॥

ನನ್ನ ಪ್ರಿಯ, ಹಿತಗಳಲ್ಲಿ ಆಸಕ್ತರಾದ, ನಿಷ್ಠಾವಂತರಾದ ನನ್ನ ಗೂಢಚಾರರು ಪ್ರತಿದಿವಸದಲ್ಲಿಯೂ ಅವಳ ಗಮನ, ಮಾತು, ಕ್ರಿಯೆ ಎಲ್ಲದರ ವೃತ್ತಾಂತವನ್ನು ನನಗೆ ತಂದುಕೊಡುತ್ತಿದ್ದರು.
ಯದೈವ ಹಿ ವನಂ ಪ್ರಾಯಾತ್ ಸಾ ಕನ್ಯಾ ತಪಸೇ ಧೃತಾ |
ತಥೈವ ವ್ಯಥಿತೋ ದೀನೋ ಗತಚೇತಾ ಇವಾಭವಮ್ ॥16॥
ಯಾವಾಗ ಆ ಕನ್ಯೆಯು ತಪಸ್ಸನ್ನು ನಿಶ್ಚಯ ಮಾಡಿ ಕಾಡಿಗೆ ಹೊರಟಳೋ ಆಗಲೇ ನಾನು ವ್ಯಥೆಯಿಂದಲೂ, ದೈನ್ಯದಿಂದಲೂ ಕೂಡಿ ಮನಸ್ಸಿನ ಉತ್ಸಾಹವನ್ನು ಕಳೆದು ಕೊಂಡೆನು.
ನ ಹಿ ಮಾಂ ಕ್ಷತ್ರಿಯಃ ಕಶ್ಚಿದ್ ವೀರ್ಯೇಣ ವಿಜಯೇದ್ ಯುಧಿ |
ಋತೇ ಬ್ರಹ್ಮವಿದಸ್ತಾತ ತಾಪಸಾನ್ ಸಂಶಿತವ್ರತಾನ್ ॥17॥
ಎಲೈ ಪ್ರೀತಿಪಾತ್ರನೇ, ನಾನು ರಥಧಾರಿಗಳಾದ ತಪಸ್ವಿಗಳಾದ ಬ್ರಹ್ಮ, ಬ್ರಾಹ್ಮಣರನ್ನು ಬಿಟ್ಟು ಬೇರೆ ಯಾವ ಕ್ಷತ್ರಿಯರಿಂದಲೂ ಯುದ್ಧದಲ್ಲಿ ಸೋಲಿಸಲ್ಪಡುವುದಿಲ್ಲ.
ಅಪಿ ಚೈತನ್ಮಯಾ ರಾಜನ್ ನಾರದೇ ವಿನಿವೇದಿತಮ್ |
ವ್ಯಾಸೇ ಚೈವ ತಥಾ ಕಾರ್ಯಂ ತೌ ಚೋಭೌ ಮಾಮವೋಚತಾಮ್ ॥
ನ ವಿಷಾದಸ್ತ್ವಯಾ ಕಾರ್ಯೋ ಭೀಷ್ಮ ಕಾಶಿಸುತಾಂ ಪ್ರತಿ |
ದೈವಂ ಪುರುಷಕಾರೇಣ ಕೋ ನಿವರ್ತಿತುಮುತ್ಸಹೇತ್ ॥19॥
ಎಲೈ ರಾಜನೇ, ನಾನು ಈ ವಿಷಯವನ್ನು ನಾರದರಿಗೂ ಮತ್ತು ವ್ಯಾಸರಿಗೂ ನಿವೇದಿಸಿದೆನು. ಅವರಿಬ್ಬರೂ ನನ್ನನ್ನು ಕುರಿತು ಮುಂದಿನ ಕಾರ್ಯದ ವಿಷಯದಲ್ಲಿ `ಭೀಷ್ಮನೇ, ಕಾಶಿಸುತೆಯ ವಿಷಯದಲ್ಲಿ ವಿಷಾದವನ್ನು ಮಾಡಬೇಡ. ಪುರುಷ ಪ್ರಯತ್ನದಿಂದ ದೈವಸಂಕಲ್ಪವನ್ನು ವ್ಯತ್ಯಾಸ ಮಾಡಲು ಯಾವನು ಪ್ರಯತ್ನ ಪಡುತ್ತಾನೆ' ಎಂದು ಹೇಳಿದರು.
ಸಾ ಕನ್ಯಾ ತು ಮಹಾರಾಜ ಪ್ರವಿಶ್ಯಾಶ್ರಮಮಂಡಲಮ್ |
ಯಮುನಾತೀರಮಾಶ್ರಿತ್ಯ ತಪಸ್ತೇಪೇऽತಿಮಾನುಷಮ್ ॥20॥
ಎಲೈ ಮಹಾರಾಜನೇ, ಆ ಕನ್ಯೆಯು ಆಶ್ರಮವನ್ನು ಪ್ರವೇಶಿಸಿ, ಯಮುನಾ ತೀರದಲ್ಲಿ ನೆಲೆಸಿ, ಮನುಷ್ಯರಿಗೆ ಮೀರಿದ ತಪಸ್ಸನ್ನು ಮಾಡಿದಳು.
ನಿರಾಹಾರಾ ಕೃಶಾ ರೂಕ್ಷಾ ಜಟಿಲಾ ಮಲಪಂಕಿನೀ |
ಷಣ್ಮಾಸಾನ್ ವಾಯುಭಕ್ಷಾ ಚ ಸ್ಥಾಣುಭೂತಾ ತಪೋಧನಾ ॥21॥
ಯಮುನಾಜಲಮಾಶ್ರಿತ್ಯ ಸಂವತ್ಸರಮಥಾಪರಮ್ |
ಉದವಾಸಂ ನಿರಾಹಾರಾ ಪಾರಯಾಮಾಸ ಭಾಮಿನೀ ॥22॥
ಆಹಾರವನ್ನು ಸೇವಿಸದೆ ಕೃಶಳಾಗಿ, ಒರಟಾಗಿ, ಜಟೆಗಳನ್ನು ಧರಿಸಿ, ದೇಹದ ಮೇಲೆ ಕಶ್ಮಲವನ್ನು ಹೊಂದಿ, ಆರುತಿಂಗಳುಗಳ ಕಾಲ ವಾಯುಭಕ್ಷಳಾಗಿ ತಪೋಧನಳಾದ ಅವಳು ಮರದ ಬುಡದಂತೆ ನಿಂತಳು. ಅನಂತರ ಒಂದು ವರ್ಷದ ಕಾಲ ಕೋಪಗೊಂಡಿದ್ದ ಅವಳು ನಿರಾಹಾರಳಾಗಿ ಯಮುನಾನದಿಯ ಜಲದಲ್ಲಿ ನಿಂತು ಉದವಾಸವನ್ನು ಮಾಡಿ ತಪಸ್ಸನ್ನು ಪೂರ್ಣಗೊಳಿಸಿದಳು.
ಶೀರ್ಣಪರ್ಣೇನ ಚೈಕೇನ ಧಾರಯಾಮಾಸ ಸಾ ಪರಮ್ |
ಸಂವತ್ಸರಂ ತೀವ್ರಕೋಪಾತ್ ಪಾದಾಂಗುಷ್ಠಾಗ್ರವಿಷ್ಠಿತಾ ॥23॥
ಅವಳು ತೀವ್ರಕೋಪದಿಂದ ಪಾದಾಂಗುಷ್ಠದ ಮೇಲೆ ಭೂಮಿಯ ಮೇಲೆ ನಿಂತು ಇನ್ನೊಂದು ಸಂವತ್ಸರದ ಕಾಲ ಉದುರಿದ ಎಲೆಗಳನ್ನು ಸೇವಿಸಿ ಪ್ರಾಣವನ್ನು ಧರಿಸಿದಳು.
ಏವಂ ದ್ವಾದಶವರ್ಷಾಣಿ ತಾಪಯಾಮಾಸ ರೋದಸೀ |
ನಿವರ್ತ್ಯಮಾನಾ ಪಿತ್ರಾ ಚ ಜ್ಞಾತಿಭಿರ್ನೈವ ಶಕ್ಯತೇ ॥24॥
ಹೀಗೆ ಹನ್ನೆರಡು ವರ್ಷಗಳ ಕಾಲ ಭೂಮಿ-ಅಂತರಿಕ್ಷಗಳನ್ನು ಅವಳು ತಾಪಕ್ಕೆ ಈಡುಮಾಡಿದಳು. ತಂದೆಯೂ ಮತ್ತು ಬಂಧುಗಳೂ ಅವಳನ್ನು ಹಿಂದೆ ತಿರುಗಿಸಲು ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ.
ತತೋऽಗಮದ್ ವತ್ಸಭೂಮಿಂ ಸಿದ್ಧಚಾರಣಸೇವಿತಾಮ್ |
ಆಶ್ರಮಂ ಪುಣ್ಯಶೀಲಾನಾಂ ತಾಪಸಾನಾಂ ಮಹಾತ್ಮನಾಮ್ ॥25॥
ಅನಂತರ ಅವಳು ಸಿದ್ಧಚಾರಣ ಸೇವಿತವಾದ, ಪುಣ್ಯಶೀಲರಾದ, ಮಹಾತ್ಮರಾದ ತಾಪಸರ ಆಶ್ರಮವಿರುವ ವತ್ಸ ಎಂಬ ಋಷಿಯ ಪ್ರದೇಶಕ್ಕೆ ಹೋದಳು.
ತತ್ರ ಪುಣ್ಯೇಷು ತೀರ್ಥೇಷು ಸಾ ಪ್ಲುತಾಂಗೀ ದಿವಾನಿಶಮ್ |
ವ್ಯಚರತ್ ಕಾಶಿಕನ್ಯಾ ಸಾ ಯಥಾಕಾಮಂ ವಿಚಾರಿಣೀ ॥26॥
ಅಲ್ಲಿ ಕಾಶಿಕನ್ಯೆಯಾದ ಅವಳು ಪುಣ್ಯತೀರ್ಥಗಳಲ್ಲಿ ಸ್ನಾನವನ್ನು ಮಾಡುತ್ತಾ ಹಗಲೂ ರಾತ್ರಿಯೂ ತನ್ನ ಮನಸ್ಸಿಗೆ ಬಂದಂತೆ ಸಂಚರಿಸಿದಳು.
ನಂದಾಶ್ರಮೇ ಮಹಾರಾಜ ತಥೋಲೂಕಾಶ್ರಮೇ ಶುಭೇ |
ಚ್ಯವನಸ್ಯಾಶ್ರಮೇ ಚೈವ ಬ್ರಹ್ಮಣಃ ಸ್ಥಾನ ಏವ ಚ ॥27॥
ಪ್ರಯಾಗೇ ದೇವಯಜನೇ ದೇವಾರಣ್ಯೇಷು ಚೈವ ಹ |
ಭೋಗವತ್ಯಾಂ ಮಹಾರಾಜ ಕೌಶಿಕಸ್ಯಾಶ್ರಮೇ ತಥಾ ॥28॥
ಮಾಂಡವ್ಯಸ್ಯಾಶ್ರಮೇ ರಾಜನ್ ದಿಲೀಪಸ್ಯಾಶ್ರಮೇ ತಥಾ |
ರಾಮಾಶ್ರಮೇ ಚ ಕೌರವ್ಯ ತಥಾ ಗಾರ್ಗ್ಯಸ್ಯ ಚಾಶ್ರಮೇ ॥29॥

ಏತೇಷು ತೀರ್ಥೇಷು ತದಾ ಕಾಶಿಕನ್ಯಾ ವಿಶಾಂಪತೇ |
ಆಪ್ಲಾವಯತ ಗಾತ್ರಾಣಿ ತೀವ್ರಮಾಸ್ಥಾಯ ವೈ ತಪಃ ||30||
ಎಲೈ ಮಹಾರಾಜನೇ, ಅವಳು ನಂದಾಶ್ರಮ, ಶುಭವಾದ ಉಲೂಕಾಶ್ರಮ, ಚ್ಯವನಾಶ್ರಮ, ಬ್ರಹ್ಮಸ್ಥಾನ, ಪ್ರಯಾಗ, ದೇವಯಜನ, ದೇವಾರಣ್ಯಗಳು, ಭೋಗವತಿ, ವಿಶ್ವಾಮಿತ್ರಾಶ್ರಮ, ಮಾಂಡವ್ಯಾಶ್ರಮ, ದಿಲೀಪಾಶ್ರಮ, ರಾಮಾಶ್ರಮ, ಗಾರ್ಗ್ಯಾಶ್ರಮ ಇವುಗಳಲ್ಲಿ ಇರುವ ತೀರ್ಥಗಳಲ್ಲಿ ಸ್ನಾನವನ್ನು ಮಾಡುತ್ತಾ ತೀವ್ರವಾದ ತಪಸ್ಸನ್ನು ಮಾಡಿದಳು.
ತಾಮಬ್ರವೀಚ್ಚ ಕೌರವ್ಯ ಮಮ ಮಾತಾ ಜಲೋತ್ಥಿತಾ ||31||
ಕಿಮರ್ಥಂ ಕ್ಲಿಶ್ಯಸೇ ಭದ್ರೇ ತಥ್ಯಮೇತದ್ ವದಸ್ವ ಮೇ ||32||
ಎಲೈ ಕೌರವ್ಯನೇ, ನನ್ನ ತಾಯಿಯು ಜಲದಿಂದ ಎದ್ದು ಬಂದು, ಅವಳನ್ನು ಕುರಿತು ಭದ್ರೆಯೇ, ಏತಕ್ಕೆ ಹೀಗೆ ಕ್ಲೇಶಪಡುತ್ತಿದ್ದೀಯೆ? ನನಗೆ ನಿಜವನ್ನು ಹೇಳು ಎಂದು ಕೇಳಿದಳು.
ಭೀಷ್ಮಃ
ಸೈನಾಮಥಾಬ್ರವೀದ್ ರಾಜನ್ ಕೃತಾಂಜಲಿರನಿಂದಿತಾ ||33||
ಭೀಷ್ಮೇಣ ಸಮರೇ ರಾಮೋ ನಿರ್ಜಿತಶ್ಚಾರುಲೋಚನೇ |
ಕೋಽನ್ಯಸ್ತಮುತ್ಸಹೇಜ್ಜೇತುಮುದ್ಯತೇಷುಂ ಮಹೀಪತಿಃ ||34||
ಸಾಽಹಂ ಭೀಷ್ಮವಿನಾಶಾಯ ತಪಸ್ತಪ್ಸ್ಯೇ ಸುದಾರುಣಮ್ |
ವಿಚರಾಮಿ ಮಹೀಂ ದೇವಿ ಯಥಾ ಹನ್ಯಾಮ್ಯಹಂ ನೃಪಮ್ ||35||
ಏತದ್ವ್ರತಫಲಂ ದೇವಿ ಪರಮಸ್ಮಿನ್ ಯಥಾ ಹಿ ಮೇ ||36||
ಭೀಷ್ಮ ಎಲೈ ರಾಜನೇ, ಅನಿಂದಿತಳಾದ ಅಂಬೆಯು ಕೈಗಳನ್ನು ಮುಗಿದು, ಅವಳನ್ನು ಕುರಿತು `ಚಾರುನೇತ್ರೆಯೇ, ಭೀಷ್ಮನಿಂದ ಯುದ್ಧದಲ್ಲಿ ಪರಶುರಾಮನು ನಿರ್ಜಿತನಾದನು. ಬೇರೆ ಯಾವ ರಾಜನು ಕೈಯಲ್ಲಿ ಬಿಲ್ಲು-ಬಾಣಗಳನ್ನು ಹಿಡಿದ ಭೀಷ್ಮನನ್ನು ಗೆಲ್ಲಲು ಉತ್ಸಾಹವನ್ನು ಹೊಂದುತ್ತಾನೆ? ಎಲೌ ದೇವಿಯೇ, ನಾನು ಹೇಗೆ ಭೀಷ್ಮನನ್ನು ಕೊಂದೇನು ಎಂದು ಯೋಚಿಸುತ್ತಾ ಭೀಷ್ಮವಿನಾಶಕ್ಕಾಗಿ ಘೋರವಾದ ತಪಸ್ಸನ್ನು ಆಚರಿಸುತ್ತಿದ್ದೇನೆ. ಎಲೌ ದೇವಿಯೇ, ನನಗೆ ಈ ವ್ರತದ ಫಲವು ದೊರೆಯುವಂತೆ ಅನುಗ್ರಹವನ್ನು ಮಾಡು' (ಎಂದು ಕೇಳಿದಳು).
ಭೀಷ್ಮಃ
ತತೋಽಬ್ರವೀತ್ ಸಾಗರಗಾ ಜಿಹ್ಮಂ ಚರಸಿ ಭಾಮಿನಿ |
ನೈಷ ಕಾಮೋಽನವದ್ಯಾಂಗಿ ಶಕ್ಯಃ ಪ್ರಾಪ್ತುಂ ತ್ವಯಾಽಬಲೇ ||37||
ಭೀಷ್ಮ ಆಗ ನನ್ನ ತಾಯಿಯು ಅವಳನ್ನು ಕುರಿತು `ಭಾಮಿನಿಯೇ, ನೀನು ಕುಟಿಲವಾದ ತಪಸ್ಸನ್ನು ಮಾಡುತ್ತಿದ್ದೀಯೆ. ಎಲೌ ಅನವದ್ಯಾಂಗಿಯೇ, ಅಬಲೆಯೇ, ಈ ನಿನ್ನ ಆಸೆಯು ನೆರವೇರುವುದಿಲ್ಲ.
ವ್ರತಸ್ಥಾ ತು ಶರೀರಂ ತ್ವಂ ಯದಿ ನಾಮ ವಿಮೋಕ್ಷ್ಯಸಿ |
ನದೀ ಭವಿಷ್ಯಸಿ ಶುಭೇ ಕುಟಿಲಾ ವಾರ್ಷಿಕೋದಕಾ ||39||
ದುಸ್ತೀರ್ಥಾ ಚಾನಭಿಜ್ಞಾತಾ ವಾರ್ಷಿಕೀನಾಽಷ್ಟಮಾಸಿಕೀ |
ಭೀಷ್ಮಗ್ರಾಹವತೀ ಘೋರಾ ಸರ್ವಭೂತಭಯಂಕರೀ ||40||
ಕಾಶಿಕನ್ಯೆಯೇ, ನೀನು ಭೀಷ್ಮನ ವಿನಾಶಕ್ಕಾಗಿ ವ್ರತವನ್ನು ಮಾಡುತ್ತಾ, ದೇಹವನ್ನು ತ್ಯಾಗ ಮಾಡುವುದಾದರೆ ಶುಭಳಾದ ನೀನು ಮಳೆಗಾಲದ ಕದಡಿದ ನೀರಿರುವ ವಕ್ರವಾದ ನದಿಯಾಗುವಿ. ಒಳ್ಳೆಯ ನೀರನ್ನು ಹೊಂದದೆ, ಯಾರಿಂದಲೂ ಗುರುತಿಸಲ್ಪಡದೆ ವರ್ಷಾಕಾಲದ ಎಂಟು ಮಾಸಗಳಲ್ಲಿ ಹರಿಯುವ, ಭಯಂಕರವಾದ ಮೊಸಳೆಗಳಿಂದ ಕೂಡಿದ, ಎಲ್ಲಾ ಪ್ರಾಣಿಗಳನ್ನೂ ಹೆದರಿಸುವ ಘೋರವಾದ ನದಿಯಾಗುವಿ' (ಎಂದು ಹೇಳಿದಳು).
ಏವಮುಕತ್ವ ತತೋ ರಾಜನ್ ಕಾಶಿಕನ್ಯಾಂ ನ್ಯವರ್ತತ |
ಮಾತಾ ಮಮ ಮಹಾಭಾಗ ಸ್ಮಯಮಾನೇವ ಭಾಮಿನೀ ||41||
ಎಲೈ ರಾಜನೇ, ನನ್ನ ತಾಯಿಯಾದ, ಮಹಾನುಭಾವಳಾದ, ಭಾಮಿನಿಯಾದ ಗಂಗೆಯು ಕಾಶಿಕನ್ಯೆಯನ್ನು ಕುರಿತು ನಗುವವಳಂತೆ ಈ ಮಾತನ್ನು ಹೇಳಿ ಹೊರಟು ಹೋದಳು.
ಕದಾಚಿದಷ್ಟಮೇ ಮಾಸಿ ಕದಾಚಿದ್ದಶಮೇ ತಥಾ |
ನ ಪ್ರಾಶ್ನೀತೋದಕಮಪಿ ತೇಪೇ ಸಾ ವರವರ್ಣಿನೀ ||42||
ಅನಂತರ ಕೆಲವೊಮ್ಮೆ ಎಂಟು ತಿಂಗಳಿಗೊಮ್ಮೆಯಾದರೂ, ಕೆಲವೊಮ್ಮೆ ಹತ್ತು ತಿಂಗಳಿಗೊಮ್ಮೆಯಾದರೂ ನೀರನ್ನೂ ಕುಡಿಯದೆ ಸುಂದರಿಯಾದ ಅಂಬೆಯು ತಪಸ್ಸನ್ನು ಮಾಡಿದಳು.
ಸಾ ವತ್ಸಭೂಮಿಂ ಕೌರವ್ಯ ತೀರ್ಥಲೋಭಾತ್ ತತಸ್ತತಃ |
ಪತಿತಾ ಪರಿಧಾವಂತೀ ಪುನಃ ಕಾಶಿಪತೇಃ ಸುತಾ ||43||
ಎಲೈ ಕೌರವ್ಯನೇ, ಕಾಶಿಪತಿಯ ಮಗಳಾದ ಅವಳು ವತ್ಸಭೂಮಿಯಲ್ಲಿರುವ ತೀರ್ಥಗಳ ಮೇಲಿನ ಲೋಭದಿಂದ ಇಲ್ಲಿಂದಲ್ಲಿಗೆ ಓಡಾಡುತ್ತಾ ಕಾಲವನ್ನು ಕಳೆದಳು.
ಸಾ ನದೀ ವತ್ಸಭೂಮ್ಯಾಂ ತು ಪ್ರಥಿತಾಽಂಬೇತಿ ಭಾರತ |
ವಾರ್ಷಿಕೀ ಗ್ರಾಹಬಹುಲಾ ದುಸ್ತೀರ್ಥಾ ಕುಟಿಲಾ ತಥಾ ||44||
ಸಾ ಕನ್ಯಾ ತಪಸಾ ತೇನ ದೇಹಾರ್ಧೇನ ವ್ಯಜಾಯತ |
ನದೀ ಚ ರಾಜನ್ ವತ್ಸೇಷು ಕನ್ಯಾ ಚೈವಾಭವತ್ ತದಾ ||45||

ಎಲೈ ಭಾರತನೇ, ಆ ಕನ್ಯೆಯು ತನ್ನ ತಪಸ್ಸಿನಿಂದಲೂ ಮತ್ತು ದೇಹದ ಅರ್ಧ ಅಂಶದಿಂದಲೂ ಮಳೆಗಾಲದಲ್ಲಿ ಹರಿಯುವ ಮೊಸಳೆಗಳಿಂದ ಕೂಡಿದ ಕೆಟ್ಟ ನೀರಿರುವ ವಕ್ರಗತಿಯುಳ್ಳ ನದಿಯಾದಳು. ಎಲೈ ರಾಜನೇ, ಅವಳು ಅರ್ಧದೇಹದಿಂದ ನದಿಯೂ ಮತ್ತು ಅರ್ಧದೇಹದಿಂದ ಕನ್ಯೆಯೂ ಆದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಅಷ್ಟಾಶೀತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂಬತ್ತನೆಯ ಅಧ್ಯಾಯ
ರುದ್ರದೇವರಿಂದ ಅಂಬೆಗೆ, ಜನ್ಮಾಂತರದಲ್ಲಿ ಪುಂಸ್ತ್ವಪ್ರಾಪ್ತಿರೂಪವಾದ
ವರದಾನ ಮತ್ತು ಅಂಬೆಯ ಅಗ್ನಿಪ್ರವೇಶ.
ಭೀಷ್ಮಃ
ತತಸ್ತೇ ತಾಪಸಾಃ ಸರ್ವೇ ತಪಸೇ ಧೃತನಿಶ್ಚಯಾಮ್ |
ದೃಷ್ಟ್ವಾ ನ್ಯವರ್ತಯಂಸ್ತಾತ ಕಿಂ ಕಾರ್ಯಮಿತಿ ಚಾಸಕೃತ್ ॥1॥
ಭೀಷ್ಮ ಪ್ರೀತಿಪಾತ್ರನೇ, ಆಗ ತಪಸ್ಸು ಮಾಡುವುದರಲ್ಲಿ ದೃಢಸಂಕಲ್ಪವನ್ನು ಹೊಂದಿದ್ದ ಅವಳನ್ನು ಕುರಿತು, ಎಲ್ಲಾ ತಪಸ್ವಿಗಳೂ ಯಾವ ಪ್ರಯೋಜನಕ್ಕಾಗಿ ಮಾಡುತ್ತಿದ್ದೀಯೆ ಎಂದು ಅನೇಕ ಬಾರಿ ಕೇಳಿ, ತಪಸ್ಸನ್ನು ಅವಳನ್ನು ತಪಸ್ಸಿನಿಂದ ಹಿಂದಿರುಗಿಸಲು ಪ್ರಯತ್ನಿಸಿದರು.
ತಾನುವಾಚ ತತಃ ಕನ್ಯಾ ತಪೋವೃದ್ಧಾನೃಷೀಂಸ್ತದಾ ॥2॥
ನಿರಾಕೃತಾಽಸ್ಮಿ ಭೀಷ್ಮೇಣ ಭ್ರಂಶಿತಾ ಪತಿಧರ್ಮತಃ |
ವಧಾರ್ಥಂ ತಸ್ಯ ದೀಕ್ಷಾ ಮೇ ನ ಲೋಕಾರ್ಥಂ ತಪೋಧನಾಃ ॥3॥
ನಿಹತ್ಯ ಭೀಷ್ಮಂ ಗಚ್ಛೇಯಂ ಶಾಂತಿಮಿತ್ಯೇವ ನಿಶ್ಚಯಃ ॥4॥
ಆ ಕನ್ಯೆಯು ತಪೋವೃದ್ಧರಾದ ಋಷಿಗಳನ್ನು ಕುರಿತು, ಭೀಷ್ಮನು ನನ್ನನ್ನು ನಿರಾಕರಿಸಿದ್ದಾನೆ. ಅದರಿಂದ ನಾನು ಪತಿಧರ್ಮದಿಂದ ಚ್ಯುತಳಾಗಿದ್ದೇನೆ. ಎಲೈ ತಪೋಧನರೇ, ಭೀಷ್ಮರ ವಧೆಗಾಗಿ ನನ್ನ ದೀಕ್ಷೆ ಇದೆ. ಲೋಕಪ್ರಾಪ್ತಿಗಾಗಿ ಅಲ್ಲ. ಭೀಷ್ಮರನ್ನು ಕೊಂದು ನಾನು ಸಮಾಧಾನವನ್ನು ಹೊಂದುವದು ತನ್ನ ನಿಶ್ಚಯ ಎಂದು ಹೇಳಿದಳು.
ಯತ್ಕೃತೇ ದುಃಖವಸತಿಮಿಮಾಂ ಪ್ರಾಪ್ತಾಽಸ್ಮಿ ಶಾಶ್ವತೀಮ್ |
ಪತಿಲೋಕಾದ್ ವಿಹೀನಾ ಚ ನೈವ ಸ್ತ್ರೀ ನ ಪುಮಾನಿಹ ॥5॥
ನಾಹತ್ವಾ ಯುಧಿ ಗಾಂಗೇಯಂ ನಿವರ್ತೇಯಂ ತಪೋಧನಾಃ |
ಯಾವನ ನಿಮಿತ್ತದಿಂದ ಪತಿಲೋಕದಿಂದ ರಹಿತಳಾಗಿ ಸ್ತ್ರೀಯೂ ಅಲ್ಲದೆ ಪುರುಷನೂ ಅಲ್ಲದೆ ಇಲ್ಲಿ ಬಹಳ ದುಃಖವನ್ನು ಅನುಭವಿಸುತ್ತಿದ್ದೇನೆಯೋ ಅಂತಹ ಭೀಷ್ಮನನ್ನು ಕೊಲ್ಲದೆ ನಾನು ತಪಸ್ಸಿನಿಂದ ಹಿಂದಿರುಗುವುದಿಲ್ಲ.
ಏಷ ಮೇ ಹೃದಿ ಸಂಕಲ್ಪೋ ಯದರ್ಥಮಿದಮುದ್ಯತಮ್ ॥6॥
ಎಲೈ ತಪೋಧನರೇ, ಇದು ನನ್ನ ಮನಸ್ಸಿನಲ್ಲಿರುವ ದೃಢವಾದ ಸಂಕಲ್ಪ. ಅದಕ್ಕಾಗಿ ಈ ಪ್ರಯತ್ನವನ್ನು ಮಾಡುತ್ತಿದ್ದೇನೆ.
ಸ್ತ್ರೀಭಾವೇ ಪರಿನಿರ್ವಿಣ್ಣಾ ಪುಂಸತ್ವಾರ್ಥೇ ಕೃತನಿಶ್ಚಯಾ |
ಭೀಷ್ಮೇ ಪ್ರತಿಚಿಕೀರ್ಷಾಮಿ ನಾಸ್ಮಿ ವಾರ್ಯೇತಿ ವೈ ಪುನಃ ॥7॥
ನನಗೆ ಈ ಸ್ತ್ರೀತ್ವದಲ್ಲಿ ಬೇಸರ ಉಂಟಾಗಿದೆ. ಪುಂಸ್ತ್ವವನ್ನು ಸಂಪಾದಿಸಬೇಕೆಂದು ನಿಶ್ಚಯಿಸಿದ್ದೇನೆ. ನಾನು ಭೀಷ್ಮನಿಗೆ ಪ್ರತೀಕಾರವನ್ನು ಮಾಡಲು ಬಯಸುತ್ತೇನೆ. ನನ್ನನ್ನು ತಡೆಯಬೇಡಿ (ಎಂದು ಹೇಳಿದಳು).
ತಾಂ ದೇವೋ ದರ್ಶಯಾಮಾಸ ಶೂಲಪಾಣಿರುಮಾಪತಿಃ |
ಮಧ್ಯೇ ತೇಷಾಂ ಮಹರ್ಷೀಣಾಂ ಸ್ವೇನ ರೂಪೇಣ ಭಾಮಿನೀಮ್ ॥8॥
ಶೂಲಪಾಣಿಯಾದ, ಉಮಾಪತಿಯಾದ ಮಹಾದೇವನು ಕೋಪಗೊಂಡ ಅವಳಿಗೆ ಋಷಿಗಳ ಮಧ್ಯದಲ್ಲಿ ತನ್ನ ನಿಜರೂಪವನ್ನು ತೋರಿಸಿದನು.
ಛಂದ್ಯಮಾನಾ ವರೇಣಾಥ ಸಾ ವವ್ರೇ ಮತ್ಪರಾಜಯಮ್ |
ಹನಿಷ್ಯಸೀತಿ ತಾಂ ದೇವಃ ಪ್ರತ್ಯುವಾಚ ಮನಸ್ವಿನೀಮ್ ॥9॥
ವರವನ್ನು ಕೇಳು ಎಂದು ಹೇಳಿದಾಗ ಅವಳು, ನನ್ನ ಪರಾಜಯವನ್ನು ವರವಾಗಿ ಕೇಳಿದಳು. ಧೈರ್ಯಶಾಲಿಯಾದ ಅವಳನ್ನು ಕುರಿತು ಮಹಾದೇವನು ನೀನು ಅವನನ್ನು ಕೊಲ್ಲುವಿ ಎಂದು ಹೇಳಿದನು.
ತತಃ ಸಾ ಪುನರೇವಾಥ ಕನ್ಯಾ ರುದ್ರಮುವಾಚ ಹ ॥10॥
ಉಪಪದ್ಯೇತ್ ಕಥಂ ದೇವ ಸ್ತ್ರಿಯಾ ಯುಧಿ ಜಯೋ ಮಮ ॥11॥
ಸ್ತ್ರೀಭಾವೇನ ಚ ಮೇ ಗಾಢಂ ಮನಃ ಶಾಂತಮುಮಾಪತೇ |
ಪ್ರತಿಶ್ರುತಶ್ಚ ಭೂತೇಶ ತ್ವಯಾ ಭೀಷ್ಮಪರಾಜಯಃ ॥12॥
ಯಥಾ ಸ ಸತ್ಯೋ ಭವತಿ ತಥಾ ಕುರು ವೃಷಧ್ವಜ |
ಯಥಾ ಹನ್ಯಾಂ ಸಮಾಗಮ್ಯ ಭೀಷ್ಮಂ ಶಾಂತನವಂ ಯುಧಿ ॥13॥

ಆಗ ಅವಳು ಪುನಃ ಮಹದೇವನನ್ನು ಕುರಿತು ಹೀಗೆ ಹೇಳಿದಳು ಎಲೈ ದೇವನೇ, ಸ್ತ್ರೀಯಾದ ನನಗೆ ಯುದ್ಧದಲ್ಲಿ ಹೇಗೆ ಜಯ ಉಂಟಾದೀತು? ಎಲೈ ಉಮಾಪತಿಯೇ, ಈ ಸ್ತ್ರೀಭಾವವು ನನ್ನ ಮನಸ್ಸಿಗೆ ಸಾಕಾಗಿದೆ. ಎಲೈ ಭೂತೇಶನೇ, ನೀನು ಭೀಷ್ಮ ಪರಾಜಯವನ್ನು ಪ್ರತಿಜ್ಞೆ ಮಾಡಿದ್ದೀಯೆ. ಎಲೈ ವೃಷಧ್ವಜನೇ, ಹೇಗೆ ನಿನ್ನ ಆ ಮಾತು ಸತ್ಯವಾಗುವುದೋ, ಹೇಗೆ ನಾನು ಶಂತನುಪುತ್ರನಾದ ಭೀಷ್ಮನನ್ನು ಯುದ್ಧದಲ್ಲಿ ಕೊಲ್ಲುವೆನೋ ಹಾಗೆ ಮಾಡುವವನಾಗು.

ತಾಮುವಾಚ ಮಹಾದೇವಃ ಕನ್ಯಾಂ ಕಿಲ ವೃಷಧ್ವಜಃ ॥14॥
ನ ಮೇ ವಾಗನೃತಂ ಪ್ರಾಹ ಸತ್ಯಂ ಭದ್ರೇ ಭವಿಷ್ಯತಿ ॥15॥
ಹನಿಷ್ಯಸಿ ರಣೇ ಭೀಷ್ಮಂ ಪುರುಷತ್ವಂ ಚ ಲಪ್ಸ್ಯಸೇ ।
ಸ್ಮರಿಷ್ಯಸಿ ಚ ತತ್ ಸರ್ವಂ ದೇಹಮನ್ಯಂ ಗತಾ ಸತೀ ॥16॥
ದ್ರುಪದಸ್ಯ ಕುಲೇ ಜಾತಾ ಭವಿಷ್ಯಸಿ ಮಹಾರಥಃ ।
ಶೀಘ್ರಾಸ್ತ್ರಶ್ಚಿತ್ರಯೋಧೀ ಚ ಭವಿಷ್ಯಸಿ ಸುಸಮ್ಮತಃ ॥17॥
ಯಥೋಕ್ತಮೇವ ಕಲ್ಯಾಣಿ ಸರ್ವಮೇತದ್ ಭವಿಷ್ಯತಿ ।
ಭವಿಷ್ಯಸಿ ಪುಮಾನ್ ಪಶ್ಚಾತ್ ಕಸ್ಮಾಚ್ಚಿತ್ ಕಾಲಪರ್ಯಯಾತ್ ॥18॥

ವೃಷಧ್ವಜನಾದ ಮಹಾದೇವನು ಆ ಕನ್ಯೆಯನ್ನು ಕುರಿತು ಹೀಗೆ ಹೇಳಿದನಷ್ಟೆ `ಭದ್ರೆಯೇ, ನನ್ನ ಮಾತು ಎಂದೂ ಸುಳ್ಳಾಗುವುದಿಲ್ಲ. ಸತ್ಯವೇ ಆಗುವುದು. ನೀನು ಪುರುಷತ್ವವನ್ನು ಹೊಂದುವಿ ಮತ್ತು ಯುದ್ಧದಲ್ಲಿ ಭೀಷ್ಮನನ್ನೂ ಕೊಲ್ಲುವಿ. ಇನ್ನೊಂದು ದೇಹವನ್ನು ಪಡೆದ ನೀನು ಇವೆಲ್ಲವನ್ನೂ ಸ್ಮರಿಸುವಿ. ದ್ರುಪದನ ಕುಲದಲ್ಲಿ ಜನಿಸಿ ಮಹಾರಥನೂ, ಶೀಘ್ರಾಸ್ತ್ರನೂ, ಚಿತ್ರಯೋಧಿಯೂ, ಎಲ್ಲರಿಗೂ ಸಮ್ಮತನೂ ಆಗುವಿ. ಎಲೌ ಕಲ್ಯಾಣಿಯೇ, ನಾನು ಹೇಳಿದಂತೆಯೇ ಎಲ್ಲವೂ ಆಗುವುದು. ಸ್ವಲ್ಪ ಸಮಯದ ನಂತರ ನೀನು ಪುರುಷನಾಗುವಿ'.

ಏವಮುಕತ್ತ್ವ ಮಹಾದೇವಃ ಕಪರ್ದೀ ವೃಷಭಧ್ವಜಃ ।
ಪಶ್ಯತಾಮೇವ ವಿಪ್ರಾಣಾಂ ತತ್ರೈವಾಂತರಧೀಯತ ॥19॥

ಕಪರ್ದಿಯೂ, ವೃಷಭಧ್ವಜನೂ ಆದ ಮಹಾದೇವನು ಹೀಗೆ ಹೇಳಿ, ಬ್ರಾಹ್ಮಣರು ನೋಡುತ್ತಿರುವಂತೆಯೇ ಅಂತರ್ಧಾನವನ್ನು ಹೊಂದಿದನು.

ತತಃ ಸಾ ಪಶ್ಯತಾಂ ತೇಷಾಂ ಮಹರ್ಷೀಣಾಮನಿಂದಿತಾ ।
ಸಮಾಹೃತ್ಯ ವನಾತ್ ತಸ್ಮಾತ್ ಕಾಷ್ಠಾನಿ ವರವರ್ಣಿನೀ ॥20॥
ಚಿತಾಂ ಕೃತ್ವಾ ಸುಮಹತೀಂ ಪ್ರದಾಯ ಚ ಹುತಾಶನಮ್ ।
ಪ್ರದೀಪ್ತೇಽಗ್ನೌ ಮಹಾರಾಜ ರೋಷದೀಪ್ತೇನ ಚೇತಸಾ ॥21॥
ಉಕತ್ತ್ವ ಭೀಷ್ಮವಧಾಯೇತಿ ಪ್ರವಿವೇಶ ಹುತಾಶನಮ್ ।
ಜ್ಯೇಷ್ಠಾ ಕಾಶಿಸುತಾ ರಾಜನ್ ಯಮುನಾಮಭಿತೋ ನದೀಮ್ ॥22॥

ಅನಂತರ ಅನಿಂದಿತೆಯೂ, ಸುಂದರಿಯೂ ಆದ ಅವಳು ಆ ಮಹರ್ಷಿಗಳು ನೋಡುತ್ತಿರುವಂತೆಯೇ ಆ ಕಾಡಿನಿಂದ ಕಟ್ಟಿಗೆಗಳನ್ನು ತಂದು, ದೊಡ್ಡ ಚಿತೆಯನ್ನು ಮಾಡಿ, ಅಗ್ನಿಯನ್ನು ದೀಪ್ತಗೊಳಿಸಿ ರೋಷದಿಂದ ಉರಿಯುವ ಮನಸ್ಸಿನಿಂದ ಪ್ರದೀಪ್ತವಾದ ಅಗ್ನಿಯಲ್ಲಿ ಭೀಷ್ಮವಧೆಗಾಗಿ ಎಂದು ಹೇಳಿ ಅಗ್ನಿಪ್ರವೇಶವನ್ನು ಮಾಡಿದಳು. ಎಲೈ ಮಹಾರಾಜನೇ, ಯಮುನಾ ನದಿಯ ತೀರದಲ್ಲಿ ಕಾಶಿರಾಜನ ಜ್ಯೇಷ್ಠ ಪುತ್ರಿಯಾದ ಅವಳು (ಅಗ್ನಿಪ್ರವೇಶವನ್ನು ಮಾಡಿದಳು).

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕೋನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಏಕೋನವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

## ನೂರ ತೊಂಬತ್ತನೆಯ ಅಧ್ಯಾಯ

ದ್ರುಪದನಿಗೆ ರುದ್ರದೇವರಿಂದ ವರಪ್ರದಾನ. ಸ್ತ್ರೀಶಿಶುವಿನ ಜನನ. ಸ್ತ್ರೀತ್ವವನ್ನು ಮುಚ್ಚಿಟ್ಟು ಶಿಖಂಡಿ ಎಂದು ನಾಮಕರಣ.

ದುರ್ಯೋಧನಃ
ಕಥಂ ಶಿಖಂಡೀ ಗಾಂಗೇಯ ಕನ್ಯಾ ಭೂತ್ವಾ ಸತೀ ತದಾ ।
ಪುರುಷೋಽಭೂದ್ ಯುಧಿಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ॥1॥

ದುರ್ಯೋಧನ ಎಲೈ ಯುದ್ಧದಲ್ಲಿ ಶ್ರೇಷ್ಠನಾದ ಪಿತಾಮಹನೇ, ಗಾಂಗೇಯನೇ, ಶಿಖಂಡಿಯು ಮೊದಲು ಸ್ತ್ರೀಯಾಗಿದ್ದವಳು ಹೇಗೆ ಪುರುಷಳಾದಳು? ಅದನ್ನು ನನಗೆ ಹೇಳಿ.

ಭೀಷ್ಮಃ
ಭಾರ್ಯಾ ತು ತಸ್ಯ ರಾಜೇಂದ್ರ ದ್ರುಪದಸ್ಯ ಮಹೀಪತೇಃ ।
ಮಹಿಷೀ ದಯಿತಾ ಹ್ಯಾಸೀದಪುತ್ರಾ ಚ ವಿಶಾಂಪತೇ ॥2॥

ಭೀಷ್ಮ ಎಲೈ ರಾಜೇಂದ್ರನೇ, ದ್ರುಪದರಾಜನಿಗೆ ಪ್ರಿಯಳಾದ ಭಾರ್ಯೆ ಇದ್ದಳು. ಅವಳಿಗೆ ಮಕ್ಕಳಿರಲಿಲ್ಲ.

ಏತಸ್ಮಿನ್ನೇವ ಕಾಲೇ ತು ದ್ರುಪದೋ ವೈ ಮಹೀಪತಿಃ ।

ಅಪತ್ಯಾರ್ಥೇ ಮಹಾರಾಜ ತೋಷಯಾಮಾಸ ಶಂಕರಮ್ ॥3॥
ಎಲೈ ಮಹಾರಾಜನೇ, ಇದೇ ಕಾಲದಲ್ಲಿ ದ್ರುಪದರಾಜನು ಸಂತಾನದ ಸಲುವಾಗಿ ತಪಸ್ಸನ್ನು ಮಾಡಿ ರುದ್ರನನ್ನು ಸಂತೋಷಪಡಿಸಿದನು.
ಅಸ್ಮದ್ವಧಾರ್ಥಂ ನಿಶ್ಚಿತ್ಯ ತಪೋ ಘೋರಂ ಸಮಾಸ್ಥಿತಃ |
ಲೇಭೇ ಕನ್ಯಾಂ ಮಹಾದೇವಾತ್ ಪುರುಷೋ ಮೇ ಸ್ಯಾದಿತಿ ಬ್ರುವನ್॥
ನನ್ನ ವಧೆಯನ್ನು ಅವನು ನಿಶ್ಚಯಿಸಿ, ಘೋರ ತಪಸ್ಸನ್ನು ಆಚರಿಸಿ, ನನಗೆ ಪುರುಷ ಶಿಶುವು ಬೇಕೆಂದು ಕೇಳಿದರೂ ಮಹಾದೇವನ ಅನುಗ್ರಹದಿಂದ ಕನ್ಯೆಯನ್ನು ಪಡೆದನು.
ಭಗವನ್ ಪುತ್ರಮಿಚ್ಛಾಮಿ ಭೀಷ್ಮಪ್ರತಿಚಿಕೀರ್ಷಯಾ |
ಇತ್ಯುಕ್ತೋ ದೇವದೇವೇನ ಸ್ತ್ರೀ ಪುಮಾಂಸ್ತೇ ಭವಿಷ್ಯತಿ ॥5॥
ನಿವರ್ತಸ್ವ ಮಹೀಪಾಲ ನೈತಜ್ಜಾತ್ವನ್ಯಥಾ ಭವೇತ್ |
ಭಗವಂತನೇ, ಭೀಷ್ಮರಿಗೆ ಪ್ರತೀಕಾರವನ್ನು ಮಾಡಲು ನಾನು ಒಬ್ಬ ಮಗನನ್ನು ಬಯಸುತ್ತೇನೆ ಎಂದು ಹೇಳಿದಾಗ ಮಹಾದೇವನು ರಾಜನೇ, ನಿನಗೆ ಕನ್ಯೆಯು ಜನಿಸುವಳು. ಕಾಲಕ್ರಮದಲ್ಲಿ ಅವಳು ಪುರುಷಳಾಗುವಳು. ನೀನು ಹಿಂದಿರುಗು. ಇದು ವ್ಯತ್ಯಾಸವಾಗುವುದಿಲ್ಲ ಎಂದು ಹೇಳಿದನು.
ಸ ತು ಗತ್ವಾ ಚ ನಗರಂ ಭಾರ್ಯಾಮಿದಮುವಾಚ ಹ ॥6॥
ಕೃತೋ ಯತ್ನೋ ಮಯಾ ದೇವಿ ಪುತ್ರಾರ್ಥಂ ತಪಸಾ ಮಹಾನ್ |
ಕನ್ಯಾ ಭೂತ್ವಾ ಪುಮಾನ್ ಭಾವೀ ಇತಿ ಚೋಕ್ತೋಽಸ್ಮಿ ಶಂಭುನಾ ॥7॥
ಪುನಃ ಪುನರ್ಯಾಚ್ಯಮಾನೋ ದಿಷ್ಟಮಿತ್ಯಬ್ರವೀಚ್ಛಿವಃ |
ನ ತದನ್ಯಚ್ಚ ಭವಿತಾ ಭವಿತವ್ಯಂ ಹಿ ತತ್ ತಥಾ ॥8॥
ಅವನು ನಗರಕ್ಕೆ ಹೋಗಿ ತನ್ನ ಭಾರ್ಯೆಯನ್ನು ಕುರಿತು, ದೇವಿಯೇ, ಮಗನ ಸಲುವಾಗಿ ದೊಡ್ಡ ತಪಸ್ಸನ್ನು ಮಾಡಿ ಪ್ರಯತ್ನವನ್ನು ಮಾಡಿದೆ. ರುದ್ರದೇವರು, ಶಿಶುವು ಕನ್ಯೆಯಾಗಿ ಜನಿಸಿ ಅನಂತರ ಪುರುಷನಾಗುತ್ತಾನೆ ಎಂದು ಹೇಳಿದರು. ಮತ್ತೆ ಮತ್ತೆ ಬೇಡಿದರೂ ನಾನು ಕೊಟ್ಟಿದ್ದಾಗಿದೆ (ಇದು ದೈವೇಚ್ಛೆ) ಎಂದು ರುದ್ರದೇವರು ಹೇಳಿದರು. ಇದು ಬೇರೆ ರೀತಿಯಾಗುವುದಿಲ್ಲ. ಹೀಗೆಯೇ ಆಗಬೇಕಾಗಿದೆ ಎಂದು ಹೇಳಿದರು.
ತತಃ ಸಾ ನಿಯತಾ ಭೂತ್ವಾ ಋತುಕಾಲೇ ಮನಸ್ವಿನೀ |
ಪತ್ನೀ ದ್ರುಪದರಾಜಸ್ಯ ದ್ರುಪದಂ ಪ್ರವಿವೇಶ ಹ ॥9॥
ಅನಂತರ ಧೈರ್ಯಶಾಲಿನಿಯಾದ ಅವಳು ನಿಯಮಬದ್ಧಳಾಗಿ ಋತುಕಾಲದಲ್ಲಿ ದ್ರುಪದರಾಜನ ಸಮಾಗಮವನ್ನು ಹೊಂದಿದಳು.
ಲೇಭೇ ಗರ್ಭಂ ಯಥಾಕಾಲಂ ವಿಧಿದೃಷ್ಟೇನ ಹೇತುನಾ |
ಪಾರ್ಷತಸ್ಯ ಮಹೀಪಾಲ ಯಥಾ ಮಾಂ ನಾರದೋಽಬ್ರವೀತ್ ॥10॥
ತತೋ ದಧಾರ ಸಾ ದೇವೀ ಗರ್ಭಂ ರಾಜೀವಲೋಚನಾ ॥11॥
ಎಲೈ ರಾಜನೇ, ಅವಳು ವಿಧಿಯ ಸಂಕಲ್ಪದಂತೆ ಯೋಗ್ಯವಾದ ಕಾಲದಲ್ಲಿ ದ್ರುಪದನಿಂದ ಗರ್ಭವನ್ನು ಪಡೆದಳು ಎಂದು ನಾರದರು ನನಗೆ ಹೇಳಿದ್ದಾರೆ. ಅನಂತರ ರಾಜೀವಲೋಚನೆಯಾದ ಆ ದೇವಿಯು ಗರ್ಭವನ್ನು ಧರಿಸಿದಳು.
ತಾಂ ಸ ರಾಜಪ್ರಿಯಾಂ ಭಾರ್ಯಾಂ ದ್ರುಪದಃ ಕುರುನಂದನ |
ಪುತ್ರಸ್ನೇಹಾನ್ಮಹಾಬಾಹುಃ ಸುಖಂ ಪರ್ಯಚರತ್ ತದಾ ॥12॥
ಎಲೈ ಕುರುನಂದನನೇ, ಮಹಾಬಾಹುವಾದ ದ್ರುಪದನು ಪುತ್ರಸ್ನೇಹದಿಂದ ತನಗೆ ಪ್ರಿಯಳಾದ ಭಾರ್ಯೆಯನ್ನು ಅನೇಕ ಸುಖಸಾಧನಗಳಿಂದ ಆಗ ಉಪಚರಿಸಿದನು.
ಸರ್ವಾನಭಿಪ್ರಾಯಗತಾನ್ ಭಾರ್ಯಾಽಲಭತ ಕೌರವ |
ಅಪುತ್ರಸ್ಯ ಸತೋ ರಾಜ್ಞೋ ದ್ರುಪದಸ್ಯ ಯಶಸ್ವಿನಃ ॥13॥
ಎಲೈ ಕೌರವನೇ, ಪುತ್ರನಿಲ್ಲದ ಕೀರ್ತಿಶಾಲಿಯಾದ ದ್ರುಪದರಾಜನಿಂದ ಅವನ ಪತ್ನಿಯು ತನ್ನ ಮನಸ್ಸಿಗೆ ಇಷ್ಟವಾದುದೆಲ್ಲವನ್ನೂ ಪಡೆದಳು.
ಯಥಾಕಾಲಂ ತು ಸಾ ದೇವೀ ಮಹಿಷೀ ದ್ರುಪದಸ್ಯ ಹ |
ಕನ್ಯಾಂ ಪ್ರವರರೂಪಾಂ ತು ಪ್ರಾಜಾಯತ ನರಾಧಿಪ ॥14॥
ಎಲೈ ರಾಜನೇ, ದ್ರುಪದನ ರಾಣಿಯಾದ ಆ ದೇವಿಯು ಯೋಗ್ಯವಾದ ಕಾಲದಲ್ಲಿ ಒಂದು ಸುಂದರವಾದ ಕನ್ಯೆಯನ್ನು ಪ್ರಸವಿಸಿದಳು.
ಅಪುತ್ರಸ್ಯ ತು ರಾಜ್ಞಃ ಸಾ ದ್ರುಪದಸ್ಯ ಮನಸ್ವಿನೀ |
ಖ್ಯಾಪಯಾಮಾಸ ರಾಜೇಂದ್ರ ಪುತ್ರೋ ಹ್ಯೇಷ ಮಮೇತಿ ವೈ ॥15॥
ಧೈರ್ಯಶಾಲಿನಿಯಾದ ಆ ದ್ರುಪದ ಪತ್ನಿಯು ಪುತ್ರರಹಿತನಾದ ರಾಜನಿಗೆ ಇವನು ನನ್ನ ಪುತ್ರನೆಂದೇ ಪ್ರಸಿದ್ಧಿಪಡಿಸಿದಳು.
ತತಃ ಸ ರಾಜಾ ದ್ರುಪದಃ ಪ್ರಚ್ಛನ್ನಾಯಾ ನರಾಧಿಪ |
ಪುತ್ರವತ್ ಪುತ್ರಕಾರ್ಯಾಣಿ ಸರ್ವಾಣಿ ಸಮಕಾರಯತ್ ॥16॥
ಎಲೈ ರಾಜನೇ, ಆಗ ಹೀಗೆ ಪ್ರಚ್ಛನ್ನಳಾದ ಆ ಶಿಶುವಿಗೆ ದ್ರುಪದರಾಜನು ಪುತ್ರನಂತೆಯೇ ಎಲ್ಲಾ ಪುತ್ರಕಾರ್ಯಗಳನ್ನೂ ಮಾಡಿಸಿದನು.
ರಕ್ಷಣಂ ಚೈವ ಮಂತ್ರಸ್ಯ ಮಹಿಷೀ ದ್ರುಪದಸ್ಯ ಸಾ |
ಚಕಾರ ಸರ್ವಯತ್ನೇನ ಬ್ರುವಾಣಾ ಪುತ್ರ ಇತ್ಯುತ ॥17॥
ನ ಹಿ ತಾಂ ವೇದ ನಗರೇ ಕಶ್ಚಿದನ್ಯತ್ರ ಪಾರ್ಷತಾತ್ ॥18॥

ದ್ರುಪದನ ಪತ್ನಿಯು ಬಹಳ ಎಚ್ಚರಿಕೆಯಿಂದ ಮತ್ತು ಪ್ರಯತ್ನದಿಂದ ಪುತ್ರನೆಂದು ಹೇಳುತ್ತಲೇ ಆ ರಹಸ್ಯವನ್ನು ರಕ್ಷಿಸಿದಳು. ದ್ರುಪದನನ್ನು ಬಿಟ್ಟು ಆ ನಗರದಲ್ಲಿ ಬೇರೆ ಯಾರಿಗೂ ಅವಳು ಕನ್ಯೆ ಎಂದು ತಿಳಿದಿರಲಿಲ್ಲ.
ಶ್ರದ್ದಧಾನೋ ಹಿ ತದ್ವಾಕ್ಯಂ ದೇವಸ್ಯಾದ್ಭುತಚೇತಸಃ |
ಛಾದಯಾಮಾಸ ತಾಂ ಕನ್ಯಾಂ ಪುಮಾನಿತಿ ಚ ಸೋಽಬ್ರವೀತ್ ॥19॥
ಅದ್ಭುತ ಮನಸ್ಸುಳ್ಳ ರುದ್ರದೇವರ ಮಾತನ್ನು ನಂಬಿ, ಆ ಕನ್ಯೆಯನ್ನು ಮರೆಮಾಚಿ ರಾಜನು ತನ್ನ ಪುತ್ರನೆಂದೇ ಹೇಳಿದನು.
ಜಾತಕರ್ಮಾಣಿ ಸರ್ವಾಣಿ ಕಾರಯಾಮಾಸ ಪಾರ್ಥಿವಃ |
ಪುಂವದ್ವಿಧಾನಯುಕ್ತಾನಿ ಶಿಖಂಡೀತಿ ಚ ತಾಂ ವಿದುಃ ॥20॥
ರಾಜನು ಪುತ್ರನಂತೆಯೇ ಅವನಿಗೆ ಎಲ್ಲಾ ಜಾತಕರ್ಮಾದಿ ಕ್ರಿಯೆಗಳನ್ನು ಮಾಡಿಸಿದನು. ಅವನನ್ನು ಎಲ್ಲರೂ ಶಿಖಂಡಿ ಎಂದು ಕರೆಯುತ್ತಾರೆ.
ಅಹಮೇಕಸ್ತು ಚಾರೇಣ ವಚನಾನ್ನಾರದಸ್ಯ ಹ |
ಜ್ಞಾತವಾನ್ ದೇವವಾಕ್ಯೇನ ಅಂಬಾಯಾಸ್ತಪಸಾ ತಥಾ ॥21॥
ನಾನೊಬ್ಬನು ಮಾತ್ರ ಗೂಢಚಾರರ ಮಾತಿನಿಂದಲೂ, ನಾರದರ ಮಾತಿನಿಂದಲೂ, ದೇವವಾಕ್ಯದಿಂದಲೂ ಮತ್ತು ಅಂಬೆಯ ತಪಸ್ಸಿನಿಂದಲೂ ನಿಜವಾದ ಸ್ಥಿತಿಯನ್ನು ತಿಳಿದಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೊಂದನೆಯ ಅಧ್ಯಾಯ
ದ್ರೋಣರಿಂದ ಶಿಖಂಡಿಯ ಧನುರ್ವಿದ್ಯಾ ಪ್ರಾಪ್ತಿ. ವಿವಾಹ ಮತ್ತು
ದಶಾರ್ಣಾಧಿಪತಿಯ ಕ್ರೋಧ.
ಭೀಷ್ಮಃ
ಚಕಾರ ಯತ್ನಂ ದ್ರುಪದಃ ಸುತಾಯಾಃ ಸರ್ವಕರ್ಮಸು |
ತತೋ ಲೇಖಾದಿಷು ತಥಾ ಶಿಲ್ಪೇಷು ಚ ಪರಂತಪ ॥1॥
ಇಷ್ವಸ್ತ್ರೇಷು ಚ ರಾಜೇಂದ್ರ ದ್ರೋಣಶಿಷ್ಯೋ ಬಭೂವ ಹ ॥2॥
ಭೀಷ್ಮ ಎಲೈ ಪರಂತಪನೇ, ದ್ರುಪದನು ತನ್ನ ಮಗಳಿಗೆ ಲೇಖನಾದಿಗಳಲ್ಲಿ ಮತ್ತು ಶಿಲ್ಪಕಲೆಗಳಲ್ಲಿಯೂ ಪ್ರಯತ್ನಪೂರ್ವಕವಾಗಿ ಶಿಕ್ಷಣವನ್ನು ನೀಡಿದನು. ಎಲೈ ರಾಜೇಂದ್ರನೇ, ಶಸ್ತ್ರಾಸ್ತ್ರ ಪ್ರಯೋಗಗಳಲ್ಲಿ ಅವನು ದ್ರೋಣಶಿಷ್ಯನಾದನು.
ತಸ್ಯ ಮಾತಾ ಮಹಾರಾಜ ರಾಜಾನಂ ವರವರ್ಣಿನೀ |
ಚೋದಯಾಮಾಸ ಭಾರ್ಯಾರ್ಥಂ ಕನ್ಯಾಯಾಃ ಪುತ್ರವತ್ ತದಾ ॥3॥
ಎಲೈ ಮಹಾರಾಜನೇ, ಸುಂದರಿಯಾದ ಶಿಖಂಡಿಯ ತಾಯಿಯು ತನ್ನ ಕನ್ಯೆಗೆ, ಪುತ್ರನಂತೆ ಕನ್ಯೆಯನ್ನು ಸಂಪಾದಿಸಲು ಪತಿಗೆ ಒತ್ತಾಯವನ್ನು ಮಾಡಿದಳು.
ತತಸ್ತಾಂ ಪಾರ್ಷತೋ ದೃಷ್ಟ್ವಾ ಕನ್ಯಾಂ ಸಂಪ್ರಾಪ್ತಯೌವನಾಮ್ |
ಸ್ತ್ರಿಯಂ ಮತ್ವಾ ತತಶ್ಚಿಂತಾಂ ಪ್ರಪೇದೇ ಸಹ ಭಾರ್ಯಯಾ ॥4॥
ಆಗ ಪಾರ್ಷತನು ಯೌವನವನ್ನು ಹೊಂದಿದ ತನ್ನ ಮಗಳನ್ನು ಕನ್ಯೆ ಎಂದು ತಿಳಿದು ಭಾರ್ಯೆಯ ಜೊತೆಯಲ್ಲಿ ಚಿಂತಾಕ್ರಾಂತನಾದನು.
ಕನ್ಯಾ ಮಮೇಯಂ ಸಂಪ್ರಾಪ್ತಾ ಯೌವನಂ ಶೋಕವರ್ಧಿನೀ |
ಮಯಾ ಪ್ರಚ್ಛಾದಿತಾ ಚೈಷಾ ವಚನಾಚ್ಛೂಲಪಾಣಿನಃ ॥5॥
ನ ತನ್ಮಿಥ್ಯಾ ಮಹಾರಾಜ್ಞಿ ಭವಿಷ್ಯತಿ ಕಥಂಚನ ॥6॥
ಈ ನನ್ನ ಮಗಳು ಯೌವನವನ್ನು ಹೊಂದಿ, ನನ್ನ ಶೋಕವನ್ನು ಹೆಚ್ಚಿಸುತ್ತಿದ್ದಾಳೆ. ರುದ್ರದೇವರ ಮಾತಿನಂತೆ ನಾನು ಈ ಸಂಗತಿಯನ್ನು ಮುಚ್ಚಿಟ್ಟಿದ್ದೇನು. ಮಹಾರಾಣಿಯೇ, ರುದ್ರದೇವರ ಮಾತು ಎಂದೂ ಸುಳ್ಳಾಗುವುದಿಲ್ಲ.
ಭಾರ್ಯಾ
ತ್ರೈಲೋಕ್ಯಕರ್ತಾ ಕಸ್ಮಾದ್ಧಿ ವೃಥಾ ವಕ್ತುಮಿಹಾರ್ಹತಿ |
ಯದಿ ತೇ ರೋಚತೇ ರಾಜನ್ ವಕ್ಷ್ಯಾಮಿ ಶೃಣು ಮೇ ವಚಃ ॥7॥
ಶ್ರುತ್ವೇದಾನೀಂ ಪ್ರಪದ್ಯೇಥಾಃ ಸ್ವಾಂ ಮತಿಂ ಪೃಷತಾತ್ಮಜ ॥8॥
ಕ್ರಿಯತಾಮದ್ಯ ಯತ್ನೇನ ವಿಧಿವದ್ ದಾರಸಂಗ್ರಹಃ |
ಭವಿತಾ ತದ್ವಚಃ ಸತ್ಯಮಿತಿ ಮೇ ನಿಶ್ಚಿತಾ ಮತಿಃ ॥9॥
ಭಾರ್ಯಾ ಮೂರುಲೋಕಗಳಿಗೆ ಕಾರಣನಾದ ರುದ್ರದೇವರು ಏಕೆ ವ್ಯರ್ಥವಾಗಿ ಸುಳ್ಳನ್ನು ಹೇಳುತ್ತಾರೆ? ರಾಜನೇ, ನಿನಗೆ ಇಷ್ಟವಾಗುವುದಾದರೆ ನನ್ನ ಮಾತುಗಳನ್ನು ಕೇಳು ಮತ್ತು ಪೃಷತಪುತ್ರನೇ, ನನ್ನ ಮಾತನ್ನು ಕೇಳಿ ನೀನು ನಿನ್ನ ಅಭಿಪ್ರಾಯವನ್ನು ಹೊಂದುವವನಾಗು. ಈ ದಿನ ಪ್ರಯತ್ನಪೂರ್ವಕವಾಗಿ, ಶಾಸ್ತ್ರಕ್ಕೆ ಅನುಗುಣವಾಗಿ ಕನ್ಯಾಸಂಗ್ರಹವನ್ನು ಮಾಡುವವನಾಗು.

ರುದ್ರದೇವರ ಮಾತು ಸತ್ಯವೇ ಆಗುತ್ತದೆ ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ಭೀಷ್ಮ:
ತತಸ್ತೌ ನಿಶ್ಚಯಂ ಕೃತ್ವಾ ತಸ್ಮಿನ್ ಕಾರ್ಯೇಽಥ ದಂಪತೀ |
ವರಯಾಂಚಕ್ರತುಃ ಕನ್ಯಾಂ ದಶಾರ್ಣಾಧಿಪತೇಃ ಸುತಾಮ್ ॥10॥
ಭೀಷ್ಮ ಅನಂತರ ಆ ದಂಪತಿಗಳು ಆ ಕಾರ್ಯವನ್ನು ಮಾಡುವುದಾಗಿ ನಿಶ್ಚಯಿಸಿ ದಶಾರ್ಣಾಧಿಪತಿಯ ಮಗಳನ್ನು ಕನ್ಯೆಯಾಗಿ ವರಿಸಿದರು.
ತತೋ ರಾಜಾ ದ್ರುಪದೋ ರಾಜಸಿಂಹಃ
ಸರ್ವಾನ್ ರಾಜ್ಞಃ ಕುಲತಃ ಸನ್ನಿಶಾಮ್ಯ |
ದಾಶಾರ್ಣಕಸ್ಯ ನೃಪತೇಸ್ತನೂಜಾಂ
ಶಿಖಂಡಿನೇ ವರಯಾಮಾಸ ಕನ್ಯಾಮ್ ॥11॥
ಆಗ ರಾಜಸಿಂಹನಾದ ದ್ರುಪದನು ಎಲ್ಲ ರಾಜರ ಕುಲಗಳನ್ನು ಚೆನ್ನಾಗಿ ಗಮನಿಸಿ ದಶಾರ್ಣಾಧಿಪತಿಯ ಮಗಳನ್ನು ಶಿಖಂಡಿಗೆ ಕನ್ಯೆಯಾಗಿ ವರಿಸಿದನು.
ಹಿರಣ್ಯವರ್ಮೇತಿ ನೃಪೋ ಯೋಽಸೌ ದಾಶಾರ್ಣಕಃ ಸ್ಮೃತಃ |
ಸ ಚ ಪ್ರಾದಾನ್ಮಹೀಪಾಲಃ ಕನ್ಯಾಂ ತಸ್ಮೈ ಶಿಖಂಡಿನೇ ॥12॥
ದಶಾರ್ಣಾಧಿಪತಿಯ ಹೆಸರು ಹಿರಣ್ಯವರ್ಮನೆಂದು. ಆ ರಾಜನು ಶಿಖಂಡಿಗೆ ತನ್ನ ಮಗಳನ್ನು ಕೊಟ್ಟನು.
ಸ ಚ ರಾಜಾ ದಶಾರ್ಣೇಷು ಮಹಾನಾಸೀತ್ ಸುದುರ್ಜಯಃ |
ಹಿರಣ್ಯವರ್ಮಾ ದುರ್ಧರ್ಷೋ ಮಹಾಸೇನೋ ಮಹಾಬಲಃ ॥13॥
ಹಿರಣ್ಯವರ್ಮರಾಜನು ದಶಾರ್ಣದೇಶದಲ್ಲಿ ಗೆಲ್ಲಲು ಅಸಾಧ್ಯನಾದವನೂ, ಸೋಲಿಸಲು ಅಸಾಧ್ಯನಾದವನೂ, ದೊಡ್ಡ ಸೈನ್ಯವುಳ್ಳವನೂ ಮತ್ತು ಮಹಾಬಲವುಳ್ಳವನೂ ಆದ ದೊಡ್ಡ ರಾಜನಾಗಿದ್ದನು.
ಕೃತೇ ವಿವಾಹೇ ತು ತದಾ ಸಾ ಕನ್ಯಾ ರಾಜಸತ್ತಮ |
ಯೌವನಂ ಸಮನುಪ್ರಾಪ್ತಾ ಸಾ ಚ ಕನ್ಯಾ ಶಿಖಂಡಿನೀ ॥14॥
ಕೃತದಾರಃ ಶಿಖಂಡೀ ಚ ಕಾಂಪಿಲ್ಯಂ ಪುನರಾಗಮತ್ |
ನ ಚ ಸಾ ವೇದ ತಾಂ ಕನ್ಯಾಂ ಕಂಚಿತ್ ಕಾಲಂ ಸ್ತ್ರಿಯಂ ಕಿಲ ॥15॥
ಎಲೈ ರಾಜಶ್ರೇಷ್ಠನೇ, ವಿವಾಹವು ಮುಗಿಯುತ್ತಿರಲು ಆ ಕನ್ಯೆಯು ಮತ್ತು ಶಿಖಂಡಿಯು ಯೌವನವನ್ನು ಹೊಂದಿದರು. ಶಿಖಂಡಿಯು ವಿವಾಹವನ್ನು ಮಾಡಿಕೊಂಡು ಕಾಂಪಿಲ್ಯನಗರಕ್ಕೆ ಹಿಂದಿರುಗಿದನು. ದಶಾರ್ಣಾಧಿಪತಿಯ ಮಗಳು ಶಿಖಂಡಿಯನ್ನು ಕನ್ಯೆ ಎಂದು ಸ್ವಲ್ಪ ಕಾಲದವರೆಗೆ ತಿಳಿಯಲಿಲ್ಲ.
ಯದಾ ತ್ವೇನಮಜಾನಾತ್ ಸಾ ಸ್ತ್ರಿಯಮೇವ ನ್ಯವೇದಯತ್ ॥16॥
ಧಾತ್ರೀಣಾಂ ಚ ಸಖೀನಾಂ ಚ ವ್ರೀಡಮಾನಾ ನ್ಯವೇದಯತ್ |
ಕನ್ಯಾಂ ಪಾಂಚಾಲರಾಜಸ್ಯ ಸುತಾಂ ತಾಂ ವೈ ಶಿಖಂಡಿನೀಮ್ ॥17॥
ರಾಜಕುಮಾರಿಯಾದ ಅವಳು ಶಿಖಂಡಿಯು ಕನ್ಯೆಯೇ ಎಂದು ತಿಳಿದಾಗ ತನ್ನ ದಾಸಿಯರಿಗೂ ಮತ್ತು ಸಖಿಯರಿಗೂ ನಾಚಿಕೆಯಿಂದ, ಪಾಂಚಾಲರಾಜನ ಮಗಳಾದ ಶಿಖಂಡಿಯು ಕನ್ಯೆ ಎಂದು ತಿಳಿಸಿದಳು.
ತತಸ್ತಾ ರಾಜಶಾರ್ದೂಲ ಧಾತ್ರ್ಯೋ ದಾಶಾರ್ಣಿಕಾಸ್ತದಾ |
ಜಗ್ಮುರಾರ್ತಿಂ ಪರಾಂ ಪ್ರೇಷ್ಯಾಃ ಪ್ರೇಷಯಾಮಾಸುರೇವ ಚ ॥18॥
ಎಲೈ ರಾಜಶಾರ್ದೂಲನೇ, ಅನಂತರ ದಶಾರ್ಣದೇಶದ ಆ ದಾದಿಯರು ಬಹಳ ದುಃಖವನ್ನು ಹೊಂದಿ, ನಿಜಸಂಗತಿಯನ್ನು ತಿಳಿದುಕೊಳ್ಳಲು ಸೇವಕಿಯರನ್ನು ಕಳುಹಿಸಿದರು.
ತತೋ ದಶಾರ್ಣಾಧಿಪತೇಃ ಪ್ರೇಷ್ಯಾಃ ಸರ್ವಾ ನ್ಯವೇದಯನ್ |
ವಿಪ್ರಲಂಭಂ ಯಥಾವೃತ್ತಂ ಸ ಚ ಚುಕ್ರೋಧ ಪಾರ್ಥಿವಃ ॥19॥
ಅನಂತರ ದಶಾರ್ಣಾಧಿಪತಿಯ ಸೇವಕಿಯರೆಲ್ಲರೂ ನಡೆದಿರುವ ಮೋಸವನ್ನು ತಿಳಿಸಿದರು. ಆಗ ರಾಜನು ಕ್ರೋಧಗೊಂಡನು.
ಶಿಖಂಡ್ಯಪಿ ಮಹಾರಾಜ ಪುಂವದ್ ರಾಜಕುಲೇ ತದಾ |
ವಿಜಹಾರ ಮುದಾ ಯುಕ್ತಃ ಸ್ತ್ರೀತ್ವಂ ನೈವಾಭಿರೋಚಯನ್ ॥20॥
ಎಲೈ ಮಹಾರಾಜನೇ, ಶಿಖಂಡಿಯೂ ಸಹ ಆಗ ತನ್ನ ಸ್ತ್ರೀತ್ವವನ್ನು ಇಷ್ಟಪಡದೆ ಪುರುಷನಂತೆ ಸಂತೋಷದಿಂದ ರಾಜಕುಲದಲ್ಲಿ ವಿಹರಿಸುತ್ತಿದ್ದನು.
ತತಃ ಕತಿಪಯಾಹಸ್ಸು ತಚ್ಛ್ರುತ್ವಾ ಭರತರ್ಷಭ |
ಹಿರಣ್ಯವರ್ಮಾ ರಾಜೇಂದ್ರ ರೋಷಾದಾರ್ತಿಂ ಜಗಾಮ ಹ ॥21॥
ಎಲೈ ಭರತರ್ಷಭನೇ, ಕೆಲವು ದಿವಸಗಳಲ್ಲಿ ಹಿರಣ್ಯವರ್ಮನು ಆ ವಾರ್ತೆಯನ್ನು ಕೇಳಿ, ರೋಷದಿಂದ ಕೂಡಿದವನಾಗಿ ದುಃಖವನ್ನು ಹೊಂದಿದನು.
ತತೋ ದಾಶಾರ್ಣಕೋ ರಾಜಾ ತೀವ್ರಕೋಪಸಮನ್ವಿತಃ |
ದೂತಂ ಪ್ರಸ್ಥಾಪಯಾಮಾಸ ದ್ರುಪದಸ್ಯ ನಿವೇಶನಮ್ ॥22॥
ಅನಂತರ ದಶಾರ್ಣಾಧಿಪತಿಯಾದ ರಾಜನು ಬಹಳ ಕೋಪದಿಂದ ಕೂಡಿದವನಾಗಿ ದ್ರುಪದನ ಬಳಿಗೆ ಸಂದೇಶವಾಹಕನಾದ ತನ್ನ ದೂತನನ್ನು ಕಳುಹಿಸಿದನು.

ತತೋ ದ್ರುಪದಮಾಸಾದ್ಯ ದೂತಃ ಕಾಂಚನವರ್ಮಣಃ |
ಏಕಸ್ತ್ವೇಕಾಂತಮುತ್ಸಾರ್ಯ ರಹೋ ವಚನಮಬ್ರವೀತ್ ॥23॥
ಅನಂತರ ಹಿರಣ್ಯವರ್ಮನ ದೂತನು ದ್ರುಪದನನ್ನು ಸಮೀಪಿಸಿ, ಎಲ್ಲರನ್ನೂ ಕಳುಹಿಸಿ, ಏಕಾಂತದಲ್ಲಿ ತಾನೊಬ್ಬನೇ ಅವನೊಬ್ಬನನ್ನೇ ಕುರಿತು ರಹಸ್ಯವಾಗಿ ಮಾತನಾಡಿದನು.
ದಶಾರ್ಣರಾಜೋ ರಾಜಂಸ್ತತ್ವಮಿದಂ ವಚನಮಬ್ರವೀತ್ |
ಅಭಿಷಂಗಾತ್ ಪ್ರಕುಪಿತೋ ವಿಪ್ರಲಬ್ಧಸ್ತ್ವಯಾನಘ ॥24॥
ಎಲೈ ರಾಜನೇ, ಅನಘನೇ, ನಿನ್ನ ಮೋಸ-ವಂಚನೆಗಳಿಂದ ಬಹಳ ಕೋಪಗೊಂಡ ದಶಾರ್ಣರಾಜನು ಈ ಸಂದೇಶವನ್ನು ಕಳುಹಿಸಿದ್ದಾನೆ.
ಅವಮನ್ಯಸೇ ಮಾಂ ನೃಪತೇ ನೂನಂ ದುರ್ಮಂತ್ರಿತಂ ತವ |
ಯನ್ಮಾಂ ಕನ್ಯಾಂ ಸ್ವಕನ್ಯಾರ್ಥೇ ಮೋಹಾದ್ ಯಾಚಿತವಾನಸಿ ॥25॥
ಎಲೈ ರಾಜನೇ, ನೀನು ನನಗೆ ಅವಮಾನವನ್ನು ಮಾಡುತ್ತಿದ್ದೀಯೆ. ಖಂಡಿತವಾಗಿಯೂ ನಿನ್ನ ಯೋಚನೆಯು ದುರಾಲೋಚನೆ. ಏಕೆಂದರೆ ಮೋಹದಿಂದ ನನ್ನ ಮಗಳನ್ನು ನಿನ್ನ ಮಗಳ ಸಲುವಾಗಿ ಯಾಚನೆ ಮಾಡಿದೆ.
ತಸ್ಯಾದ್ಯ ವಿಪ್ರಲಂಭಸ್ಯ ಫಲಂ ಪ್ರಾಪ್ನುಹಿ ದುರ್ಮತೇ |
ಏಷ ತ್ವಾಂ ಸಜನಾಮಾತ್ಯಮುದ್ಧರಾಮಿ ಸ್ಥಿರೋ ಭವ ॥26॥
ಎಲೈ ದುರ್ಮತಿಯೇ, ಈ ಮೋಸದ ಫಲವನ್ನು ಅನುಭವಿಸುವವನಾಗು. ನಿನ್ನನ್ನು ನಿನ್ನ ಪರಿವಾರ ಮತ್ತು ಅಮಾತ್ಯರೊಂದಿಗೆ ವಿನಾಶಪಡಿಸುತ್ತೇನೆ. ಸ್ಥಿರವಾಗಿರು.
ಅವಮತ್ಯ ಚ ವೀರ್ಯಂ ಮೇ ಕುಲಂ ಚಾರಿತ್ರಮೇವ ಚ |
ವಿಪ್ರಲಂಭಸ್ತ್ವಯಾಪೂರ್ವೋ ಮನುಷ್ಯೇಷು ಪ್ರಕೀರ್ತಿತಃ ॥27॥
ನನ್ನ ಕುಲವನ್ನೂ, ಪರಾಕ್ರಮವನ್ನೂ, ಚಾರಿತ್ರ್ಯವನ್ನೂ ಅವಮಾನಗೊಳಿಸಿ ಮನುಷ್ಯರಲ್ಲಿ ಎಂದೂ ನಡೆಯದಿದ್ದ ಒಂದು ಮೋಸವನ್ನು ನೀನು ಮಾಡಿದ್ದೀಯೆ.
ಕುರು ಸರ್ವಾಣಿ ಕಾರ್ಯಾಣಿ ಭುಂಕ್ಷ್ವ ಭೋಗಾನನುತ್ತಮಾನ್ |
ಅಭಿಯಾಸ್ಯಾಮಿ ಶೀಘ್ರಂ ತ್ವಾಂ ಸಮುದ್ಧರ್ತುಂ ಸಬಾಂಧವಮ್ ॥28॥
ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡು. ಶ್ರೇಷ್ಠವಾದ ಭೋಗಗಳನ್ನೂ ಭೋಗಿಸು. ನಾನು ನಿನ್ನ ಬಂಧುಗಳ ಜೊತೆಯಲ್ಲಿ ನಿನ್ನನ್ನು ವಿನಾಶಗೊಳಿಸಲು ಶೀಘ್ರವಾಗಿ ಸೈನ್ಯದ ಜೊತೆಯಲ್ಲಿ ಬರುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಏಕನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *

## ನೂರ ತೊಂಬತ್ತೆರಡನೆಯ ಅಧ್ಯಾಯ

ದಾಶಾರ್ಣನಿಂದ ಪುನಃ ದೂತಪ್ರೇಷಣ. ದ್ರುಪದನಿಂದ ಪತ್ನಿಯ ಜೊತೆಯಲ್ಲಿ ಕರ್ತವ್ಯಸಮಾಲೋಚನೆ.
ಭೀಷ್ಮಃ
ಏವಮುಕ್ತಸ್ಯ ದೂತೇನ ದ್ರುಪದಸ್ಯ ತದಾ ನೃಪ |
ಚೋರಸ್ಯೇವ ಗೃಹೀತಸ್ಯ ನ ಪ್ರಾವರ್ತತ ಭಾರತೀ ॥1॥
ಭೀಷ್ಮ ಎಲೈ ರಾಜನೇ, ದೂತನು ಹೀಗೆ ಹೇಳಿದಾಗ ಸಿಕ್ಕಿಬಿದ್ದ ಕಳ್ಳನಂತೆ ದ್ರುಪದನ ಬಾಯಿಯಿಂದ ಯಾವ ಮಾತೂ ಹೊರಡಲಿಲ್ಲ.
ಸ ಯತ್ನಮಕರೋತ್ ತೀವ್ರಂ ಸಂಬಂಧಿನ್ಯನುಶಾಸನೇ |
ದೂತೈರ್ಮಧುರಸಂಭಾಷೈರ್ನ ತದಸ್ತೀತಿ ಸಂದಿಶನ್ ॥2॥
ಅವನು ತನ್ನ ಸಂಬಂಧಿಯಾದ ದಾಶಾರ್ಣರಾಜನನ್ನು ಸಮಾಧಾನಗೊಳಿಸಲು ಮಧುರವಾಗಿ ಮಾತನಾಡುವ ದೂತನನ್ನು ಕಳುಹಿಸಿ, ನೀನು ತಿಳಿದಿರುವುದು ಸರಿಯಲ್ಲ ಎಂದು ತಿಳಿಸಲು ತೀವ್ರವಾದ ಪ್ರಯತ್ನವನ್ನು ಮಾಡಿದನು.
ಸ ರಾಜಾ ಭೂಯ ಏವಾಥ ಜ್ಞಾತ್ವಾ ತತ್ವಮಥಾಗಮತ್ |
ಕನ್ಯೇತಿ ಪಾಂಚಾಲಸುತಾಂ ತ್ವರಮಾಣೋ ವಿನಿರ್ಯಯೌ ॥3॥
ಆ ದಶಾರ್ಣರಾಜನು ಪುನಃ ಬಂದು ಪಾಂಚಾಲರಾಜನ ಮಗನನ್ನು ಕನ್ಯೆ ಎಂದು ತಿಳಿದು ಶೀಘ್ರವಾಗಿ ಹೊರಟು ಹೋದನು.
ತತಃ ಸಂಪ್ರೇಷಯಾಮಾಸ ಮಿತ್ರಾಣಾಮಮಿತೌಜಸಾಮ್ |
ದುಹಿತುರ್ವಿಪ್ರಲಂಭಂ ತಂ ಧಾತ್ರೀಣಾಂ ವಚನಾತ್ ತದಾ ॥4॥
ಅನಂತರ ಅವನು ಅಮಿತಪರಾಕ್ರಮಿಗಳಾದ ತನ್ನ ಮಿತ್ರರಿಗೆ ದಾದಿಯರ ಮಾತಿನಂತೆ ತಾನು ತಿಳಿದ, ತನ್ನ ಮಗಳಿಗೆ ಆದ ಮೋಸವನ್ನು ದೂತರ ಮೂಲಕ ತಿಳಿಸಿದನು.
ತತಃ ಸಮುದಯಂ ಕೃತ್ವಾ ಬಲಾನಾಂ ರಾಜಸತ್ತಮ |
ಅಭಿಯಾನೇ ಮತಿಂ ಚಕ್ರೇ ದ್ರುಪದಂ ಪ್ರತಿ ಭಾರತ ॥5॥

ಎಲೈ ಭಾರತನೇ, ಅನಂತರ ರಾಜಶ್ರೇಷ್ಠನಾದ ಅವನು ಸೈನ್ಯದ ಸಂಗ್ರಹವನ್ನು ಮಾಡಿ, ದ್ರುಪದನ ಮೇಲೆ ದಂಡೆತ್ತಿ ಹೋಗಲು ನಿರ್ಧರಿಸಿದನು.
ತತಃ ಸಮ್ಮಂತ್ರಯಾಮಾಸ ಮಂತ್ರಿಭಿಃ ಸ ಮಹೀಪತಿಃ |
ಹಿರಣ್ಯವರ್ಮಾ ರಾಜೇಂದ್ರ ಪಾಂಚಾಲ್ಯಂ ಪಾರ್ಥಿವಂ ಪ್ರತಿ ॥6॥
ಎಲೈ ರಾಜೇಂದ್ರನೇ, ಅನಂತರ ಆ ಹಿರಣ್ಯವರ್ಮರಾಜನು ಪಾಂಚಾಲ ರಾಜನಾದ ದ್ರುಪದನನ್ನು ಕುರಿತು ಏನು ಮಾಡಬೇಕೆಂದು ಮಂತ್ರಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು.
ತತ್ರ ವೈ ನಿಶ್ಚಿತಂ ತೇಷಾಮಭೂದ್ ರಾಜ್ಞಾಂ ಮಹಾತ್ಮನಾಮ್ ॥7॥
ತಥ್ಯಂ ಭವತಿ ಚೇದೇತತ್ ಕನ್ಯಾ ರಾಜನ್ ಶಿಖಂಡಿನೀ |
ಬದ್ಧ್ವಾ ಪಾಂಚಾಲರಾಜಾನಮಾನಯಿಷ್ಯಾಮಹೇ ಗೃಹಮ್ ॥8॥
ಅನ್ಯಂ ರಾಜಾನಮಾಧಾಯ ಪಾಂಚಾಲೇಷು ನರೇಶ್ವರಮ್ |
ಅದ್ಯೈವ ಪಾತಯಿಷ್ಯಾಮೋ ದ್ರುಪದಂ ಸಶಿಖಂಡಿನಮ್ ॥9॥
ಅಲ್ಲಿ ಮಹಾತ್ಮರಾದ ಅವರು ಎಲೈ ರಾಜನೇ, ಶಿಖಂಡಿಯು ಕನ್ಯೆಯೇ ಆದರೆ ನಾವು ಪಾಂಚಾಲರಾಜನನ್ನು ಬಂಧಿಸಿ ಇಲ್ಲಿಗೆ ಕರೆದು ತರುವೆವು. ಪಾಂಚಾಲ ದೇಶದಲ್ಲಿ ಇನ್ನೊಬ್ಬನನ್ನು ರಾಜನನ್ನಾಗಿ ಮಾಡಿ, ಈ ದಿನವೇ ದ್ರುಪದನನ್ನೂ ಮತ್ತು ಶಿಖಂಡಿಯನ್ನೂ ನಾಶಗೊಳಿಸುವೆವು ಎಂದು ಹೇಳಿ ನಿಶ್ಚಯಿಸಿದರು.
ಸ ತಥಾ ದ್ರುತಮಾಜ್ಞಾಯ ಪುನಃ ಕ್ಷತ್ತಾರಮೀಶ್ವರಃ |
ಪ್ರಾಸ್ಥಾಪಯತ್ ಪಾರ್ಷತಾಯ ನಿಹನ್ಮೀತಿ ಸ್ಥಿರೋ ಭವ ॥10॥
ಆ ಹಿರಣ್ಯವರ್ಮರಾಜನು ಪುನಃ ತನ್ನ ಸಾರಥಿಯನ್ನು ಕರೆದು ಅವನಿಗೆ, ನಿನ್ನನ್ನು ಕೊಲ್ಲುತ್ತೇನೆ, ಸ್ಥಿರವಾಗಿರು ಎಂದು ಸಂದೇಶವನ್ನು ಕೊಟ್ಟು ದೂತನನ್ನಾಗಿ ದ್ರುಪದನ ಬಳಿಗೆ ಕಳುಹಿಸಿದನು.
ಸ ಹಿ ಪ್ರಕೃತ್ಯಾ ಭೀತಶ್ಚ ಕಿಲ್ಬಿಷೀ ಚ ನರಾಧಿಪಃ |
ಭಯಂ ತೀವ್ರಮನುಪ್ರಾಪ್ತೋ ದ್ರುಪದಃ ಪೃಥಿವೀಪತಿಃ ॥11॥
ಸ್ವಾಭಾವಿಕವಾಗಿಯೇ ಭಯಗ್ರಸ್ತಸ್ವಭಾವವುಳ್ಳ ದ್ರುಪದರಾಜನು ಈಗ ಅನ್ಯಾಯವನ್ನು ಮಾಡಿದ್ದರಿಂದ ತೀವ್ರವಾದ ಭಯವನ್ನು ಹೊಂದಿದನು.
ವಿಸೃಜ್ಯ ದೂತಾನ್ ದಾಶಾರ್ಣೇ ದ್ರುಪದಃ ಶೋಕಮೂರ್ಚ್ಛಿತಃ |
ಸಮೇತ್ಯ ಭಾರ್ಯಾಂ ರಹಿತೇ ವಾಕ್ಯಮಾಹ ನರಾಧಿಪಃ ॥12॥
ಭಯೇನ ಮಹತಾಽಽವಿಷ್ಟೋ ಹೃದಿ ಶೋಕೇನ ಕರ್ಶಿತಃ |
ಪಾಂಚಾಲರಾಜೋ ದಯಿತಾಂ ಮಾತರಂ ವೈ ಶಿಖಂಡಿನಃ ॥13॥
ದ್ರುಪದರಾಜನು ದಾಶಾರ್ಣನಿಗೆ ಪುನಃ ದೂತನನ್ನು ಕಳುಹಿಸಿ, ಶೋಕತಪ್ತನಾಗಿ ಪತ್ನಿಯ ಜೊತೆಯಲ್ಲಿ ಏಕಾಂತದಲ್ಲಿ ಮಾತನಾಡಿದನು. ಬಹಳ ಭಯದಿಂದ ಕೂಡಿದ ಮತ್ತು ಶೋಕದಿಂದ ಕರ್ಶಿತನಾದ ಪಾಂಚಾಲರಾಜನು ಶಿಖಂಡಿಯ ತಾಯಿಯಾದ ತನ್ನ ಪ್ರಿಯೆಯನ್ನು ಕುರಿತು ಹೀಗೆ ಮಾತನಾಡಿದನು.
ಅಭಿಯಾಸ್ಯತಿ ಮಾಂ ಕೋಪಾತ್ ಸಂಬಂಧೀ ಸುಮಹಾಬಲಃ |
ಹಿರಣ್ಯವರ್ಮಾ ನೃಪತಿಃ ಕರ್ಷಮಾಣೋ ವರೂಥಿನೀಮ್ ॥14॥
ನನ್ನ ಸಂಬಂಧಿಯೂ ಮತ್ತು ಮಹಾಬಲವುಳ್ಳವನೂ ಆದ ಹಿರಣ್ಯವರ್ಮರಾಜನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ದಂಡೆತ್ತಿ ಬರುವನು.
ಕಿಮಿದಾನೀಂ ಕರಿಷ್ಯಾವೋ ಮೂಢೌ ಕನ್ಯಾಮಿಮಾಂ ಪ್ರತಿ |
ಶಿಖಂಡೀ ಕಿಲ ಪುತ್ರಸ್ತೇ ಕನ್ಯೇತಿ ಪರಿಶಂಕಿತಃ ॥15॥
ಇತಿ ನಿಶ್ಚಿತ್ಯ ತತ್ತ್ವೇನ ಸಮಿತ್ರಃ ಸಬಲಾನುಗಃ |
ವಂಚಿತೋಽಸ್ಮೀತಿ ಮನ್ವಾನೋ ಮಾಂ ಕಿಲೋದ್ಧರ್ತುಮಿಚ್ಛತಿ ॥16॥
ಮೂಢರಾದ ನಾವು ಈ ಕನ್ಯೆಯ ವಿಷಯದಲ್ಲಿ ಈಗ ಏನು ಮಾಡೋಣ? ಶಿಖಂಡಿಯು ಕನ್ಯೆ ಎಂಬ ಸಂಶಯವನ್ನು ಹೊಂದಿದ್ದ ಅವನು ಈಗ ಕನ್ಯೆ ಎಂದು ಸರಿಯಾಗಿ ತಿಳಿದು, ತಾನು ಮೋಸಹೋಗಿದ್ದೇನೆಂದು ತಿಳಿದು, ತನ್ನ ಮಿತ್ರರಾಜರು ಮತ್ತು ಸೈನ್ಯದೊಡನೆ ನನ್ನನ್ನು ನಾಶಮಾಡಲು ಬಯಸುತ್ತಾನೆ.
ಕಿಮತ್ರ ತಥ್ಯಂ ಸುಶ್ರೋಣಿ ಕಿಂ ಮಿಥ್ಯಾ ಬ್ರೂಹಿ ಶೋಭನೇ |
ಶ್ರುತ್ವಾ ತ್ವತ್ತಃ ಶ್ರುತಂ ವಾಕ್ಯಂ ಸಂವಿಧಾಸ್ಯಾಮ್ಯಹಂ ತಥಾ ॥17॥
ಎಲೌ ಸುಂದರಿಯೇ, ಶೋಭನೆಯೇ, ಈ ವಿಷಯದಲ್ಲಿ ಯಾವುದು ನಿಜ, ಯಾವುದು ಸುಳ್ಳು ಎಂದು ಹೇಳು. ನಿನ್ನ ಮಾತನ್ನು ಕೇಳಿ ನಾನು ಅದಕ್ಕೆ ಅನುಗುಣವಾಗಿ ಕಾರ್ಯವನ್ನು ಮಾಡುವೆನು.
ಅಹಂ ಹಿ ಸಂಶಯಂ ಪ್ರಾಪ್ತೋ ಬಾಲಾ ಚೇಯಂ ಶಿಖಂಡಿನೀ |
ತ್ವಂ ಚ ರಾಜ್ಞಿ ಮಹತ್ ಕೃಚ್ಛ್ರಂ ಸಂಪ್ರಾಪ್ತಾ ವರವರ್ಣಿನೀ ॥18॥
ಈ ಶಿಖಂಡಿನಿಯು ಕನ್ಯೆ ಎಂದು ನನಗೇ ದೊಡ್ಡ ಸಂಶಯವುಂಟಾಗಿದೆ. ಎಲೌ ಸುಂದರಿಯಾದ ರಾಣಿಯೇ, ನೀನೂ ಸಹ ದೊಡ್ಡ ಕಷ್ಟಕ್ಕೆ ಸಿಲುಕಿದ್ದೀಯೆ.
ಸಾ ತ್ವಂ ಸರ್ವವಿಮೋಕ್ಷಾಯ ತತ್ತ್ವಮಾಖ್ಯಾಹಿ ಪೃಚ್ಛತಃ |
ತಥಾ ವಿದಧ್ಯಾಂ ಸುಶ್ರೋಣಿ ಕೃತ್ಯಮಾಶು ಶುಚಿಸ್ಮಿತೇ ॥19॥

ಶಿಖಂಡಿನಿ ಚ ಮಾ ಭೈಸ್ತ್ವಂ ವಿಧಾಸ್ಯೇ ತತ್ರ ತತ್ತ್ವತಃ ॥20॥
ಎಲೌ ಶುಚಿಸ್ಮಿತೆಯೇ, ಅಂತಹ ನೀನು ಯೋಚನೆ ಮಾಡುತ್ತಿರುವ ನನಗೆ ಈ ಸಂಕಟದಿಂದ ಪಾರುಮಾಡಲು ನಿಜವನ್ನು ಹೇಳು. ಎಲೌ ಸುಂದರಿಯೇ, ಅದನ್ನು ಕೇಳಿ ನಾನು ಸೂಕ್ತವಾದ ಕಾರ್ಯವನ್ನು ಮಾಡುವೆನು. ಶಿಖಂಡಿಯ ವಿಷಯದಲ್ಲಿ ನೀನು ಹೆದರಬೇಡ, ನಾನು ಸರಿಯಾದ ಕಾರ್ಯವನ್ನು ಮಾಡುವೆನು.
ಕೃಪಯಾಽಹಂ ವರಾರೋಹೇ ವಂಚಿತಃ ಪುತ್ರಧರ್ಮತಃ |
ಮಯಾ ದಾಶಾರ್ಣಕೋ ರಾಜಾ ವಂಚಿತಃ ಸ ಮಹೀಪತಿಃ ॥21॥
ತದಾಚಕ್ಷ್ವ ಮಹಾಭಾಗೇ ವಿಧಾಸ್ಯೇ ತತ್ರ ಯದ್ಧಿತಮ್ ॥22॥
ಎಲೌ ಸುಂದರಿಯೇ, ಪುತ್ರಧರ್ಮದಿಂದ ನಾನು ವಂಚಿತನಾಗಿದ್ದೇನೆ. ನಾನೂ ಸಹ ಆ ದಶಾರ್ಣರಾಜನಿಗೆ ವಂಚನೆಯನ್ನು ಮಾಡಿದ್ದೇನೆ. ಮಹಾನುಭಾವಳೇ, ನನ್ನ ಮೇಲೆ ಕೃಪೆಯಿಂದ ಸರಿಯಾಗಿ ಹೇಳು, ನಾನು ಈ ವಿಷಯದಲ್ಲಿ ಹಿತವನ್ನು ಮಾಡುವೆನು.
ಭೀಷ್ಮಃ
ಜಾನತಾ ಹಿ ನರೇಂದ್ರೇಣ ಖ್ಯಾಪನಾರ್ಥಂ ಪರಸ್ಯ ವೈ |
ಪ್ರಕಾಶಂ ಚೋದಿತಾ ದೇವೀ ಪ್ರತ್ಯುವಾಚ ಮಹೀಪತಿಮ್ ॥23॥
ಭೀಷ್ಮ ದ್ರುಪದರಾಜನು ಸತ್ಯವನ್ನು ತಿಳಿದಿದ್ದರೂ ಇನ್ನೊಬ್ಬರಿಗೆ ಪ್ರಸಿದ್ಧಿ ಪಡಿಸುವುದಕ್ಕಾಗಿ, ಎಲ್ಲರಿಗೂ ತಿಳಿಯುವಂತೆ ತನ್ನ ಭಾರ್ಯೆಯನ್ನು ಪ್ರಶ್ನಿಸಿದಾಗ ಅವಳು ರಾಜನನ್ನು ಕುರಿತು ಮಾತನಾಡಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ದ್ವಿನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ಮೂರನೆಯ ಅಧ್ಯಾಯ
ಶಿಖಂಡಿಯಿಂದ ವನಕ್ಕೆ ಹೋಗಿ ಸ್ಥೂಣಾಕರ್ಣನಲ್ಲಿ ಪುಂಸ್ತ್ವವರಣ.
ಭೀಷ್ಮಃ
ತತಃ ಶಿಖಂಡಿನೋ ಮಾತಾ ಯಥಾತತ್ತ್ವಂ ನರಾಧಿಪ |
ಆಚಚಕ್ಷೇ ಮಹಾಬಾಹೋ ಭರ್ತ್ರೇ ಕನ್ಯಾಂ ಶಿಖಂಡಿನೀಮ್ ॥1॥
ಭೀಷ್ಮ ಎಲೈ ರಾಜನೇ, ಮಹಾಬಾಹುವೇ, ಆಗ ಶಿಖಂಡಿಯ ತಾಯಿಯು ತನ್ನ ಪತಿಗೆ, ಶಿಖಂಡಿಯು ಕನ್ಯೆ ಎಂದು ಸತ್ಯವನ್ನು ಹೇಳಿದಳು.
ಅಪುತ್ರಯಾ ಮಯಾ ರಾಜನ್ ಸಪತ್ನೀನಾಂ ಭಯಾದಿಯಮ್ |
ಕನ್ಯಾ ಶಿಖಂಡಿನೀ ಜಾತೋ ಪುರುಷೋ ವೈ ನಿವೇದಿತಃ ॥2॥
ಎಲೈ ರಾಜನೇ, ಪುತ್ರರಿಲ್ಲದ ನಾನು ಸವತಿಯರಿಗೆ ಹೆದರಿ, ಶಿಖಂಡಿಯು ಕನ್ಯೆಯಾಗಿ ಜನಿಸಿದ್ದರೂ ಪುರುಷನೆಂದು ನಿವೇದಿಸಿದೆ.
ತ್ವಯಾ ಚೈವ ನರಶ್ರೇಷ್ಠ ಮಮ ಪ್ರೀತ್ಯಾಽನುಮೋದಿತಮ್ |
ಪುತ್ರಕರ್ಮ ಕೃತಂ ಚೈವ ಕನ್ಯಾಯಾಃ ಪಾರ್ಥಿವರ್ಷಭ ॥3॥
ಎಲೈ ನರಶ್ರೇಷ್ಠನೇ, ನೀನೂ ಸಹ ನನ್ನ ಮಾತನ್ನು ಅನುಮೋದಿಸಿದೆ ಮತ್ತು ಪಾರ್ಥಿವರ್ಷಭನೇ, ಕನ್ಯೆಗೆ ಪುತ್ರಸಂಸ್ಕಾರಗಳನ್ನು ಮಾಡಿದ್ದಾಯಿತು.
ಭಾರ್ಯೋಢಾ ವೈ ತ್ವಯಾ ರಾಜನ್ ದಶಾರ್ಣಾದಿಪತೇಃ ಸುತಾ |
ಮಯಾ ಚ ಪ್ರತ್ಯಭಿಹಿತಂ ದೇವಕಾರ್ಯಾರ್ಥದರ್ಶನಾತ್ ॥4॥
ಕನ್ಯಾ ಭೂತ್ವಾ ಪುಮಾನ್ ಭಾವೀತ್ಯುಕ್ತಂ ಚೈತದುಪೇಕ್ಷಿತಮ್ ॥5॥
ಎಲೈ ರಾಜನೇ, ದಶಾರ್ಣಾಧಿಪತಿಯ ಪುತ್ರಿಯನ್ನು ತಂದು ನೀನು ವಿವಾಹವನ್ನೂ ಮಾಡಿದೆ. ದೇವಕಾರ್ಯವನ್ನು ಗಮನಿಸಿ ನಾನೂ ಸಹ ಅದನ್ನು ಅನುಮೋದಿಸಿದೆ. ಕನ್ಯೆಯಾಗಿ ಹುಟ್ಟಿ ಪುರುಷನಾಗುತ್ತಾನೆ ಎಂಬ ದೇವವಚನವಿದ್ದುದರಿಂದ ಈ ದೋಷವನ್ನು ಉಪೇಕ್ಷೆ ಮಾಡಿದೆ ಎಂದು ಹೇಳಿದಳು.
ತಚ್ಛ್ರುತ್ವಾ ವೈ ದ್ರುಪದೋ ಯಾಜ್ಞಸೇನಃ
ಸರ್ವಂ ತತ್ವಂ ಮಂತ್ರವಿದ್ಭ್ಯೋ ನಿವೇದ್ಯ |
ಮಂತ್ರಂ ರಾಜಾ ಮಂತ್ರಯಾಮಾಸ ರಾಜನ್
ಯಥಾಯುಕ್ತಂ ರಕ್ಷಣೇಽಥ ಪ್ರಜಾನಾಮ್ ॥6॥
ಎಲೈ ರಾಜನೇ, ಯಜ್ಞಸೇನನ ಮಗನಾದ ದ್ರುಪದ ಮಹಾರಾಜನು ಅದನ್ನು ಕೇಳಿ, ಎಲ್ಲ ಸತ್ಯಸಂಗತಿಯನ್ನೂ ಮಂತ್ರಿಗಳಿಗೆ ತಿಳಿಸಿ, ಪ್ರಜೆಗಳ ರಕ್ಷಣೆಯನ್ನು ಹೇಗೆ ಮಾಡಲು ಸಾಧ್ಯವಾದೀತು ಎಂದು ಮಂತ್ರಾಲೋಚನೆಯನ್ನು ಮಾಡಿದನು.
ಸಂಬಂಧಕಂ ಚೈವ ಸಮರ್ಥ್ಯ ತಸ್ಮಿನ್
ದಾಶಾರ್ಣಕೇ ವೈ ನೃಪತೌ ನರೇಂದ್ರಃ |
ಸ್ವಯಂ ಕೃತ್ವಾ ವಿಪ್ರಲಂಭಂ ಯಥಾವತ್
ಮಂತ್ರೈಕಾಗ್ರೋ ನಿಶ್ಚಯಂ ವೈ ಜಗಾಮ ॥7॥

ದಾಶಾರ್ಣನ ಜೊತೆಯಲ್ಲಿ ಸಂಬಂಧವನ್ನು ತಾನೇ ಅಪೇಕ್ಷಿಸಿ ಮತ್ತು ಮೋಸವನ್ನು ಮಾಡಿ ಈ ಮಂತ್ರಾಲೋಚನೆಯನ್ನು ಮಾಡಿ, ಒಂದು ನಿಶ್ಚಯಕ್ಕೆ ಬಂದನು.
ಸ್ವಭಾವಯುಕ್ತಂ ನಗರಮಾಪತ್ಕಾಲೇ ತು ಭಾರತ |
ಗೋಪಯಾಮಾಸ ರಾಜೇಂದ್ರ ಸರ್ವತಃ ಸಮಲಂಕೃತಮ್ ॥8॥
ಎಲೈ ಭಾರತನೇ, ಸ್ವಾಭಾವಿಕ ಪರಿಸ್ಥಿತಿಯಲ್ಲಿದ್ದ ಅಲಂಕೃತವಾದ ತನ್ನ ನಗರವನ್ನು ಆಪತ್ಕಾಲದಲ್ಲಿ ಚೆನ್ನಾಗಿ ರಕ್ಷಣೆ ಮಾಡಿದನು.
ಆರ್ತಿಂ ಚ ಪರಮಾಂ ರಾಜಾ ಜಗಾಮ ಸಹ ಭಾರ್ಯಯಾ |
ದಶಾರ್ಣಪತಿನಾ ಸಾರ್ಧಂ ವಿರೋಧೇ ಭರತರ್ಷಭ ॥9॥
ಎಲೈ ಭರತರ್ಷಭನೇ, ದಶಾರ್ಣಾಧಿಪತಿಯ ಜೊತೆಯಲ್ಲಿ ವಿರೋಧವು ಉಂಟಾಗುತ್ತಿರಲು ರಾಜನು ತನ್ನ ಪತ್ನಿಯ ಜೊತೆಯಲ್ಲಿ ಬಹಳ ದುಃಖವನ್ನು ಹೊಂದಿದನು.
ಕಥಂ ಸಂಬಂಧಿನಾ ಸಾರ್ಧಂ ನ ಮೇ ಸ್ಯಾದ್ ವಿಗ್ರಹೋ ಮಹಾನ್ |
ಇತಿ ಸಂಚಿಂತ್ಯ ಮನಸಾ ದೇವತಾಮರ್ಚಯತ್ ತದಾ ॥10॥
ಸಂಬಂಧಿಯಾದ ಅವನ ಜೊತೆಯಲ್ಲಿ ನನಗೆ ಹೇಗೆ ದೊಡ್ಡ ಯುದ್ಧವು ನಡೆಯುವುದು ತಪ್ಪೀತು ಎಂದು ಮನಸ್ಸಿನಲ್ಲಿ ಯೋಚಿಸುತ್ತಾ ದೇವತೆಗಳನ್ನು ಪೂಜಿಸಿದನು.
ತಂ ತು ದೃಷ್ಟ್ವಾ ತದಾ ರಾಜನ್ ದೇವೀ ದೇವಪರಂ ತದಾ |
ಅರ್ಚಾಂ ಪ್ರಯುಂಜಾನಮಥೋ ಭಾರ್ಯಾ ವಚನಮಬ್ರವೀತ್ ॥11॥
ಎಲೈ ರಾಜನೇ, ದೇವನಿಷ್ಠನಾಗಿ ಪೂಜೆಯನ್ನು ಮಾಡುವ ರಾಜನನ್ನು ನೋಡಿ ಅವನ ಪತ್ನಿಯು ಮಾತನಾಡಿದಳು.
ದೇವಾನಾಂ ಪ್ರತಿಪತ್ತಿಶ್ಚ ಸತ್ಯಾ ಸಾಧುಮತಾ ತದಾ |
ದೈವತಾನಿ ಚ ಸರ್ವಾಣಿ ಪೂಜ್ಯಂತಾಂ ಭೂರಿದಕ್ಷಿಣೈಃ ॥12॥
ಅಗ್ನಯಶ್ಚಾಪಿ ಹೂಯಂತಾಂ ದಾಶಾರ್ಣಪ್ರತಿಷೇಧನೇ ॥13॥
ದೇವತೆಗಳ ಪೂಜೆಯು ಸತ್ಯವಾದ ಫಲವನ್ನು ಕೊಡುತ್ತದೆ ಎಂದು ಸಜ್ಜನರಿಗೆ ಅಭಿಪ್ರೇತವಾದುದು. ಆದ್ದರಿಂದ ಬಹಳ ದಕ್ಷಿಣೆಗಳನ್ನು ಕೊಟ್ಟು ಎಲ್ಲಾ ದೇವತೆಗಳನ್ನೂ ಪೂಜೆ ಮಾಡುವವನಾಗು. ದಶಾರ್ಣಾಧಿಪತಿಯು ಬರದಂತೆ ಸಂಕಲ್ಪವನ್ನು ಮಾಡಿ ಅಗ್ನಿಗಳಲ್ಲಿ ಹೋಮವನ್ನು ಮಾಡು.
ಅಯುದ್ಧೇನ ನಿವೃತ್ತಿಂ ಚ ಮನಸಾ ಚಿಂತಯ ಪ್ರಭೋ |
ದೇವತಾನಾಂ ಪ್ರಸಾದೇನ ಸರ್ವಮೇತದ್ ಭವಿಷ್ಯತಿ ॥14॥
ಎಲೈ ಪ್ರಭುವೇ, ದಶಾರ್ಣಾಧಿಪತಿಯು ಯುದ್ಧವನ್ನು ಮಾಡದೆ ಹಿಂದಿರುಗುವಂತೆ ಮನಸ್ಸಿನಲ್ಲಿ ಚಿಂತಿಸು. ದೇವತೆಗಳ ಅನುಗ್ರಹದಿಂದ ಇವೆಲ್ಲವೂ ಕೈಗೂಡುವುದು.
ಮಂತ್ರಿಭಿರ್ಮಂತ್ರಿತಂ ಸಾರ್ಧಂ ತ್ವಯಾ ಪೃಥುಲಲೋಚನ |
ಪುರಸ್ಯಾಸ್ಯಾವಿನಾಶಾಯ ಯಚ್ಚ ರಾಜಂಸ್ತಥಾ ಕುರು ॥15॥
ಎಲೈ ವಿಶಾಲಾಕ್ಷನೇ, ಈ ಪಟ್ಟಣದ ರಕ್ಷಣೆಗಾಗಿ ಮಂತ್ರಿಗಳ ಜೊತೆಯಲ್ಲಿ ಏನು ಮಂತ್ರಾಲೋಚನೆಯನ್ನು ನಡೆಸಿದೆಯೋ ಅದರಂತೆ ಎಲ್ಲವನ್ನೂ ವ್ಯವಸ್ಥೆ ಮಾಡು.
ದೈವಂ ಹಿ ಮಾನುಷೋಪೇತಂ ಭೃಶಂ ಸಿದ್ಧ್ಯತಿ ಪಾರ್ಥಿವ |
ಪರಸ್ಪರವಿರೋಧಾತ್ತು ನಾನಯೋಃ ಸಿದ್ಧಿರಸ್ತಿ ವೈ ॥16॥
ಎಲೈ ರಾಜನೇ, ದೈವಾನುಗ್ರಹದ ಜೊತೆಯಲ್ಲಿ ಮನುಷ್ಯಪ್ರಯತ್ನವೂ ಸೇರಿದರೆ ಕಾರ್ಯಗಳು ಚೆನ್ನಾಗಿ ಸಿದ್ಧಿಸುತ್ತವೆ. ಅವುಗಳಿಗೆ ವಿರೋಧವಿದ್ದರೆ ಮಾತ್ರ ಸಿದ್ಧಿಯಾಗುವುದಿಲ್ಲವಷ್ಟೆ!
ತಸ್ಮಾದ್ ವಿಧಾಯ ನಗರೇ ವಿಧಾನಂ ಸಚಿವೈಃ ಸಹ |
ಅರ್ಚಯಸ್ವ ಯಥಾಕಾಮಂ ದೈವತಾನಿ ವಿಶಾಂಪತೇ ॥17॥
ಎಲೈ ರಾಜನೇ, ಆದ್ದರಿಂದ ಸಚಿವರ ಜೊತೆಯಲ್ಲಿ ನಗರದ ರಕ್ಷಣೆಗೆ ವ್ಯವಸ್ಥೆ ಮಾಡಿ, ನಿನ್ನ ಇಚ್ಛೆಗೆ ಅನುಗುಣವಾಗಿ ದೇವತೆಗಳನ್ನು ಪೂಜಿಸು (ಎಂದು ಹೇಳಿದಳು).
ಏವಂ ಸಂಭಾಷಮಾಣೌ ತು ದೃಷ್ಟ್ವಾ ಶೋಕಪರಾಯಣೌ |
ಶಿಖಂಡಿನೀ ತದಾ ಕನ್ಯಾ ವ್ರೀಡಿತೇವ ತಪಸ್ವಿನೀ ॥18॥
ಹೀಗೆ ಶೋಕಪರಾಯಣರಾಗಿ ಮಾತನಾಡುತ್ತಿದ್ದ ಅವರನ್ನು ನೋಡಿ ಕನ್ಯೆಯೂ, ಶೋಚನೀಯಳೂ ಆದ ಶಿಖಂಡಿನಿಯು ನಾಚಿಕೆಗೊಂಡಳು.
ತತಃ ಸಾ ಚಿಂತಯಾಮಾಸ ಮತ್ಕೃತೇ ದುಃಖಿತಾವುಭೌ |
ಇಮಾವಿತಿ ತತಶ್ಚಕ್ರೇ ಮತಿಂ ಪ್ರಾಣವಿನಾಶನೇ ॥19॥
ಅವಳು ನನ್ನ ಸಲುವಾಗಿ ಇವರಿಬ್ಬರೂ ದುಃಖಪಡುತ್ತಿದ್ದಾರೆ ಎಂದು ಚಿಂತಿಸಿ ಪ್ರಾಣತ್ಯಾಗವನ್ನು ಮಾಡಲು ನಿಶ್ಚಯಿಸಿದಳು.
ಏವಂ ಸಾ ನಿಶ್ಚಯಂ ಕೃತ್ವಾ ಭೃಶಂ ಶೋಕಪರಾಯಣಾ |
ನಿರ್ಜಗಾಮ ಗೃಹಂ ತ್ಯಕ್ತ್ವಾ ಗಹನಂ ನಿರ್ಜನಂ ವನಮ್ ॥20॥
ಯಕ್ಷೇಣರ್ದ್ಧಿಮತಾ ರಾಜನ್ ಸ್ಥೂಣಾಕರ್ಣೇನ ಪಾಲಿತಮ್ ॥21॥
ಎಲೈ ರಾಜನೇ, ಶೋಕಪರಾಯಣಳಾದ ಅವಳು ಹೀಗೆ ನಿಶ್ಚಯಿಸಿ, ಮನೆಯನ್ನು ಬಿಟ್ಟು ಹೊರಟು, ಸಂಪದ್ಯುಕ್ತನಾದ ಯಕ್ಷನಾದ ಸ್ಥೂಣಾಕರ್ಣನಿಂದ ರಕ್ಷಿತವಾದ ವನಕ್ಕೆ ಬಂದಳು.

ತದ್ಭಯಾದೇವ ಚ ಜನೋ ವಿಸರ್ಜಯತಿ ತದ್ವನಮ್ ॥22॥
ತತ್ರ ಸ್ಥೂಣಾಸ್ಯಭವನಂ ಸುಧಾಮೃತ್ತಿಕಲೇಪನಮ್ |
ಲಾಜೋತ್ಲಾಪಿತಧೂಮಾಢ್ಯಮುಚ್ಚಪ್ರಾಕಾರತೋರಣಮ್ ॥23॥
ಸ್ಥೂಣಾಕರ್ಣನ ಭಯದಿಂದಲೇ ಜನರು ಆ ವನಕ್ಕೆ ಹೋಗುತ್ತಿರಲಿಲ್ಲ. ಅಲ್ಲಿ ಸುಣ್ಣ-ಮೃತ್ತಿಕೆಗಳಿಂದ ಲೇಪಿತವಾದ, ಅರಳುಗಳಿಂದ ಉಂಟಾದ ಧೂಮದಿಂದ ಕೂಡಿದ, ಒಳ್ಳೆಯ ಪ್ರಾಕಾರತೋರಣಗಳಿದ್ದ ಸ್ಥೂಣಾಕರ್ಣನ ಗೃಹವಿದ್ದಿತು.
ತತ್ ಪ್ರವಿಶ್ಯ ಶಿಖಂಡೀ ಸಾ ದ್ರುಪದಸ್ಯಾತ್ಮಜಾ ನೃಪ |
ಅನಶ್ನತೀ ಬಹುತಿಥಂ ಶರೀರಮುದಶೋಷಯತ್ ॥24॥
ಎಲೈ ರಾಜನೇ, ದ್ರುಪದನ ಮಗಳಾದ ಆ ಶಿಖಂಡಿನಿಯು ಅದನ್ನು ಪ್ರವೇಶಿಸಿ ಬಹಳ ದಿನಗಳ ಕಾಲ ಆಹಾರವನ್ನು ಸೇವಿಸದೆ ಶರೀರವನ್ನು ಒಣಗಿಸಿದಳು.
ದರ್ಶಯಾಮಾಸ ತಾಂ ಯಕ್ಷಃ ಸ್ಥೂಣೋ ಮಧ್ವಕ್ಷಸಂಯುತಃ ॥25॥
ಕಿಮರ್ಥೋಽಯಂ ತವಾರಂಭಃ ಕರಿಷ್ಯೇ ಬ್ರೂಹಿ ಮಾಚಿರಮ್ ॥26॥
ಕಂದುಬಣ್ಣದ ಕಣ್ಣುಗಳನ್ನು ಹೊಂದಿದ್ದ ಆ ಸ್ಥೂಣಾಕರ್ಣನು ಅವಳಿಗೆ ದರ್ಶನವನ್ನು ಕೊಟ್ಟು, ಏತಕ್ಕೆ ಹೀಗೆ ಮಾಡುತ್ತಿದ್ದೀಯೆ? ನಿನ್ನ ಸಂಕಲ್ಪವನ್ನು ನೆರವೇರಿಸುವೆನು, ಬೇಗ ಹೇಳು ಎಂದು ಹೇಳಿದನು.
ಅಶಕ್ಯಮಿತಿ ಸಾ ಯಕ್ಷಂ ಪುನಃ ಪುನರುವಾಚ ಹ |
ಕರಿಷ್ಯಾಮೀತಿ ವೈ ಕ್ಷಿಪ್ರಂ ಪ್ರತ್ಯುವಾಚಾಥ ಗುಹ್ಯಕಃ ॥27॥
ಅವಳು ಯಕ್ಷನನ್ನು ಕುರಿತು, ಅದು ಸಾಧ್ಯವಿಲ್ಲ ಎಂದು ಪುನಃ ಪುನಃ ಹೇಳಿದಳು. ಆ ಯಕ್ಷನಾದರೂ ನಾನು ಮಾಡುವೆನು ಎಂದು ಶೀಘ್ರವಾಗಿ ಉತ್ತರವನ್ನು ಕೊಟ್ಟನು.
ಧನೇಶ್ವರಸ್ಯಾನುಚರೋ ವರದೋಽಸ್ಮಿ ನೃಪಾತ್ಮಜೇ |
ಅದೇಯಮಪಿ ದಾಸ್ಯಾಮಿ ಬ್ರೂಹಿ ಯತ್ ತೇ ವಿವಕ್ಷಿತಮ್ ॥28॥
ಎಲೌ ರಾಜಕುಮಾರಿಯೇ, ನಾನು ಕುಬೇರನ ಅನುಚರ. ನಿನಗೆ ವರವನ್ನು ಕೊಡುತ್ತೇನೆ. ಕೊಡಲು ಸಾಧ್ಯವಿಲ್ಲದಿದ್ದರೂ ಕೊಡುವೆನು. ನಿನ್ನ ಮನಸ್ಸಿನಲ್ಲಿರುವ ಆಸೆಯನ್ನು ಹೇಳು (ಎಂದು ಕೇಳಿದನು).
ಭೀಷ್ಮಃ
ತತಃ ಶಿಖಂಡೀ ತತ್ ಸರ್ವಮಖಿಲೇನ ನ್ಯವೇದಯತ್ |
ತಸ್ಮೈ ಯಕ್ಷಪ್ರಧಾನಾಯ ಸ್ಥೂಣಾಕರ್ಣಾಯ ಭಾರತ ॥29॥
ಭೀಷ್ಮ ಎಲೈ ಭಾರತನೇ, ಆಗ ಯಕ್ಷಶ್ರೇಷ್ಠನಾದ ಆ ಸ್ಥೂಣಾಕರ್ಣನಿಗೆ ಶಿಖಂಡಿನಿಯು ನಡೆದ ಎಲ್ಲ ವೃತ್ತಾಂತವನ್ನೂ ತಿಳಿಸಿದಳು.
ಆಪನ್ನೋ ಮೇ ಪಿತಾ ಯಕ್ಷ ನಚಿರಾದ್ ವಿನಶಿಷ್ಯತಿ |
ಅಭಿಯಾಸ್ಯತಿ ಸಕ್ರೋಧೋ ದಶಾರ್ಣಾಧಿಪತಿರ್ಹಿ ತಮ್ ॥30॥
ಮನ್ನಿಮಿತ್ತಂ ಮಹಾಬಾಹೋ ಸ ಹೇಮಕವಚೋ ನೃಪಃ ॥31॥
ಎಲೈ ಯಕ್ಷನೇ, ನನ್ನ ತಂದೆಯು ಆಪತ್ತಿಗೆ ಒಳಗಾಗಿದ್ದಾನೆ. ಶೀಘ್ರವಾಗಿ ನಾಶವನ್ನು ಹೊಂದುವನು. ಎಲೈ ಮಹಾಬಾಹುವೇ, ದಶಾರ್ಣಾಧಿಪತಿಯಾದ ಹೇಮಕವಚ ರಾಜನು ನನ್ನ ನಿಮಿತ್ತದಿಂದ ಕ್ರೋಧದಿಂದ ಕೂಡಿದವನಾಗಿ ಅವನ ಮೇಲೆ ದಂಡೆತ್ತಿ ಬರುತ್ತಿದ್ದಾನೆ.
ತಸ್ಮಾದ್ ರಕ್ಷಸ್ವ ಮಾಂ ಯಕ್ಷ ಮಾತರಂ ಪಿತರಂ ಚ ಮೇ ॥32॥
ಪ್ರತಿಜ್ಞಾತೋ ಹಿ ಭವತಾ ದುಃಖಪ್ರತಿಶಮೋ ಮಮ |
ಭವೇಯಂ ಪುರುಷೋ ಯಕ್ಷ ತ್ವತ್ಪ್ರಸಾದಾದನಿಂದಿತಃ ॥33॥
ಎಲೈ ಯಕ್ಷನೇ, ಆದ್ದರಿಂದ ನನ್ನನ್ನೂ ಮತ್ತು ನನ್ನ ತಂದೆ-ತಾಯಿಯರನ್ನೂ ರಕ್ಷಿಸು. ನೀನು ನನ್ನ ದುಃಖವನ್ನು ನಾಶಮಾಡುವೆನೆಂದು ಪ್ರತಿಜ್ಞೆ ಮಾಡಿದ್ದೀಯೆ. ಆದ್ದರಿಂದ ಎಲೈ ಯಕ್ಷನೇ, ನಿನ್ನ ಅನುಗ್ರಹದಿಂದ ನಾನು ನಿರ್ದುಷ್ಟನಾದ ಪುರುಷನಾದೇನು.
ಯಾವದೇವ ಸ ರಾಜಾ ವೈ ನೋಪಯಾತಿ ಪುರಂ ಮಮ |
ತಾವದೇವ ಮಹಾಯಕ್ಷ ಪ್ರಸಾದಂ ಕುರು ಗುಹ್ಯಕ ॥34॥
ಎಲೈ ಮಹಾಯಕ್ಷನೇ, ಗುಹ್ಯಕನೇ, ಆ ರಾಜನು ನಮ್ಮ ಪಟ್ಟಣಕ್ಕೆ ಬರುವಷ್ಟರಲ್ಲಿ ನೀನು ನನಗೆ ಅನುಗ್ರಹವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ತ್ರಿನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ನಾಲ್ಕನೆಯ ಅಧ್ಯಾಯ
ಶಿಖಂಡಿಯ ಪುಂಸ್ತ್ವ ಪ್ರಾಪ್ತಿ.
ಭೀಷ್ಮಃ
ಶಿಖಂಡಿವಾಕ್ಯಂ ಶ್ರುತ್ವಾಽಥ ಸ ಯಕ್ಷೋ ಭರತರ್ಷಭ |

ಪ್ರೋವಾಚ ಮನಸಾ ಚಿಂತ್ಯ ದೈವೇನೋಪನಿಪೀಡಿತಃ ॥1॥
ಭವಿತವ್ಯಂ ಯಥಾ ತದ್ಧಿ ಮಮ ದುಃಖಾಯ ಕೌರವ ॥2॥
ಭೀಷ್ಮ ಎಲೈ ಕೌರವನೇ, ಭರತರ್ಷಭನೇ, ಶಿಖಂಡಿಯ ವಾಕ್ಯವನ್ನು ಕೇಳಿದ ಯಕ್ಷನು ಮನಸ್ಸಿನಿಂದ ಚಿಂತಿಸಿ, ದೈವಪ್ರೇರಿತನಾಗಿ ನನ್ನ ದುಃಖಕ್ಕೋಸ್ಕರವಾಗಿ ಹೀಗೆ ಆಗಬೇಕಾಗಿದೆ ಎಂದು ಹೇಳಿದನು.
ಸ್ಥೂಣಾಕರ್ಣಃ
ಭದ್ರೇ ಕಾಮಂ ಕರಿಷ್ಯಾಮಿ ಸಮಯಂ ತು ನಿಬೋಧ ಮೇ ॥3॥
ಸ್ವಂ ತೇ ಪುಂಸ್ತ್ವಂ ಪ್ರದಾಸ್ಯಾಮಿ ಸ್ತ್ರೀತ್ವಂ ಧಾರಯಿತಾಸ್ಮಿ ತೇ |
ಕಂಚಿತ್ ಕಾಲಂ ತು ತೇ ದಾಸ್ಯೇ ಪುಂಲಿಂಗಂ ಸ್ವಮಿದಂ ತವ ॥4॥
ಆಗಂತವ್ಯಂ ತ್ವಯಾ ಕಾಲೇ ಸತ್ಯಂ ಚೈವ ವದಸ್ವ ಮೇ ॥5॥
ಸ್ಥೂಣಾಕರ್ಣ ಮಂಗಳಸ್ವರೂಪಳೇ, ನಿನ್ನ ಆಸೆಯನ್ನು ನೆರವೇರಿಸುವೆನು. ನನ್ನ ನಿಬಂಧನೆಯನ್ನು ಕೇಳು. ನನ್ನ ಪುಂಸ್ತ್ವವನ್ನು ನಿನಗೆ ಕೊಟ್ಟು ನಿನ್ನ ಸ್ತ್ರೀತ್ವವನ್ನು ನಾನು ಧರಿಸುವೆನು. ಈ ನನ್ನ ಪುಂಸ್ತ್ವವನ್ನು ನಿನಗೆ ಸ್ವಲ್ಪ ಕಾಲದವರೆಗೆ ಮಾತ್ರ ಕೊಡುವೆನು. ನೀನು ಸ್ವಲ್ಪ ಕಾಲದ ಮೇಲೆ ಹಿಂದಿರುಗಬೇಕು. ನನಗೆ ವಚನವನ್ನು ಕೊಡು.
ಪ್ರಭುಃ ಸಂಕಲ್ಪಸಿದ್ಧೋಽಸ್ಮಿ ಕಾಮರೂಪೀ ವಿಹಂಗಮಃ |
ಮತ್ಪ್ರಸಾದಾತ್ ಪುರಂ ಚೈವ ತ್ರಾಹಿ ಬಂಧೂಂಶ್ಚ ಕೇವಲಮ್ ॥6॥
ನಾನು ಸಂಕಲ್ಪಸಿದ್ಧನಾದ, ಕಾಮರೂಪವನ್ನು ಧರಿಸುವ, ಆಕಾಶ ಸಂಚಾರಿಯಾದ ಪ್ರಭುವಾದವನು. ನನ್ನ ಅನುಗ್ರಹದಿಂದ ನಿನ್ನ ಪಟ್ಟಣವನ್ನೂ ಮತ್ತು ಬಂಧುಗಳನ್ನೂ ರಕ್ಷಿಸು.
ಸ್ತ್ರೀಲಿಂಗಂ ಧಾರಯಿಷ್ಯಾಮಿ ತವೇದಂ ಪಾರ್ಥಿವಾತ್ಮಜೇ |
ಸತ್ಯಂ ಮೇ ಪ್ರತಿಜಾನೀಹಿ ಕರಿಷ್ಯಾಮಿ ಪ್ರಿಯಂ ತವ ॥7॥
ಎಲೌ ರಾಜಕುಮಾರಿಯೇ, ನಿನ್ನ ಈ ಸ್ತ್ರೀಲಿಂಗವನ್ನು ನಾನು ಧರಿಸುವೆನು. ನಿನಗೆ ಪ್ರಿಯವನ್ನು ಮಾಡುವೆನು. ನನಗೆ ಸತ್ಯವಚನವನ್ನು ಪ್ರತಿಜ್ಞೆ ಮಾಡು.
ಶಿಖಂಡೀ
ಪ್ರತಿದಾಸ್ಯಾಮಿ ಭಗವನ್ ಪುಲ್ಲಿಂಗಂ ತವ ಸುವ್ರತ |
ಕಿಂಚಿತ್ಕಾಲಾಂತರಂ ಸ್ತ್ರೀತ್ವಂ ಧಾರಯಸ್ವ ನಿಶಾಚರ ॥8॥
ಶಿಖಂಡೀ ಎಲೈ ಸುವ್ರತನೇ, ಪೂಜ್ಯನೇ, ನಿನಗೆ ಪುಲ್ಲಿಂಗವನ್ನು ಸ್ವಲ್ಪ ಕಾಲದ ನಂತರ ಹಿಂದಿರುಗಿಸುವೆನು. ಎಲೈ ನಿಶಾಚರನೇ, ಸ್ತ್ರೀತ್ವವನ್ನು ಧರಿಸು.
ಪ್ರತಿಯಾತೇ ದಶಾರ್ಣೇ ತು ಪಾರ್ಥಿವೇ ಹೇಮವರ್ಮಣಿ |
ಕನ್ಯೈವ ಹಿ ಭವಿಷ್ಯಾಮಿ ಪುರುಷಸ್ತ್ವಂ ಭವಿಷ್ಯಸಿ ॥9॥
ದಶಾರ್ಣಾಧಿಪತಿಯಾದ ಹಿರಣ್ಯವರ್ಮನು ಹಿಂದಿರುಗಿದ ಮೇಲೆ ನಾನು ಕನ್ಯೆಯಾಗುವೆನು. ನೀನು ಪುರುಷನಾಗುವಿ.
ಇತ್ಯುಕತ್ವ ಸಮಯಂ ತತ್ರ ಚಕ್ರಾತೇ ತಾವುಭೌ ನೃಪ |
ಅನ್ಯೋನ್ಯಸ್ಯಾನಭಿದ್ರೋಹೇ ತೌ ಸಂಕ್ರಾಮಯತುಸ್ತದಾ ॥10॥
ಎಲೈ ರಾಜನೇ, ಹೀಗೆ ಹೇಳಿ ಅವರಿಬ್ಬರೂ ಪರಸ್ಪರ ದ್ರೋಹವನ್ನು ಮಾಡದಿರಲು ಒಪ್ಪಂದವನ್ನು ಮಾಡಿಕೊಂಡು, ಲಿಂಗಗಳನ್ನು ವ್ಯತ್ಯಾಸ ಮಾಡಿಕೊಂಡರು.
ಸ್ತ್ರೀಲಿಂಗಂ ಧಾರಯಾಮಾಸ ಸ್ಥೂಣೋ ಯಕ್ಷೋಽಥ ಭಾರತ |
ಯಕ್ಷರೂಪಂ ಚ ತದ್ದೀಪ್ತಂ ಶಿಖಂಡೀ ಪ್ರತ್ಯಪದ್ಯತ ॥11॥
ಎಲೈ ಭಾರತನೇ, ಯಕ್ಷನಾದ ಸ್ಥೂಣಾಕರ್ಣನು ಆಗ ಸ್ತ್ರೀಲಿಂಗವನ್ನು ಧರಿಸಿದನು. ಶಿಖಂಡಿಯು ಪ್ರಕಾಶಮಾನವಾದ ಯಕ್ಷರೂಪವನ್ನು ಹೊಂದಿದಳು.
ತತಃ ಶಿಖಂಡೀ ಪಾಂಚಾಲ್ಯಃ ಪುಂಸ್ತ್ವಮಾಸಾದ್ಯ ಭಾರತ |
ವಿವೇಶ ನಗರಂ ಹೃಷ್ಟಃ ಪಿತರಂ ಚ ಸಮಾಸದತ್ ॥12॥
ಎಲೈ ಭಾರತನೇ, ಅನಂತರ ಪಾಂಚಾಲಕುಮಾರಿಯಾದ ಶಿಖಂಡಿಯು ಪುಂಸ್ತ್ವವನ್ನು ಹೊಂದಿ, ಸಂತೋಷದಿಂದ ನಗರವನ್ನು ಪ್ರವೇಶಿಸಿ, ತಂದೆಯ ಬಳಿಗೆ ಬಂದನು.
ಯಥಾವೃತ್ತಂ ತು ತತ್ಸರ್ವಮಾಚಖ್ಯೌ ದ್ರುಪದಸ್ಯ ತತ್ |
ಮಾತುಶ್ಚ ರಹಿತೇ ರಾಜನ್ ಪ್ರಸಾದಂ ಯಕ್ಷಜಂ ತದಾ ॥13॥
ಎಲೈ ರಾಜನೇ, ಯಕ್ಷನು ತನಗೆ ಮಾಡಿದ ಅನುಗ್ರಹವೆಲ್ಲವನ್ನೂ ನಡೆದಂತೆಯೇ ದ್ರುಪದನಿಗೂ ಮತ್ತು ತನ್ನ ತಾಯಿಗೂ ಏಕಾಂತದಲ್ಲಿ ತಿಳಿಸಿದನು.
ದ್ರುಪದಸ್ತಸ್ಯ ತಚ್ಛ್ರುತ್ವಾ ಹರ್ಷಮಾಹಾರಯತ್ ಪರಮ್ |
ಸಭಾರ್ಯಸ್ತಚ್ಚ ಸಸ್ಮಾರ ಮಹೇಶ್ವರವಚಸ್ತದಾ ॥14॥
ಅದನ್ನು ಕೇಳಿದ ದ್ರುಪದನು ಪತ್ನಿಯ ಜೊತೆಯಲ್ಲಿ ಬಹಳ ಸಂತೋಷವನ್ನು ಹೊಂದಿ ರುದ್ರದೇವರ ಮಾತುಗಳನ್ನು ಆಗ ಸ್ಮರಿಸಿದನು.
ತತಃ ಸಂಪ್ರೇಷಯಾಮಾಸ ದಶಾರ್ಣಾಧಿಪತೇರ್ನೃಪಃ |
ಪುರುಷೋಽಯಂ ಮಮ ಸುತಃ ಶ್ರದ್ಧಧಾತು ಭವಾನಿತಿ ॥15॥

ಅನಂತರ ದ್ರುಪದರಾಜನು ನನ್ನ ಮಗನು ಪುರುಷನೇ. ನನ್ನ ಮಾತನ್ನು ನೀನು ನಂಬು ಎಂದು ಹೇಳಿ ದಶಾರ್ಣಾಧಿಪತಿಯ ಸಮೀಪಕ್ಕೆ ಒಬ್ಬ ದೂತನನ್ನು ಕಳುಹಿಸಿದನು.
ಅಥ ದಾಶಾರ್ಣಕೋ ರಾಜಾ ಸಹಸಾಽಭ್ಯಾಗಮತ್ ತದಾ |
ಪಾಂಚಾಲರಾಜಂ ದ್ರುಪದಂ ದುಃಖಶೋಕಸಮನ್ವಿತಃ ॥16॥
ಅನಂತರ ದಶಾರ್ಣರಾಜನು ದುಃಖಶೋಕ ಸಮನ್ವಿತನಾಗಿ ಇದ್ದಕ್ಕಿದ್ದಂತೆಯೇ ಪಾಂಚಾಲರಾಜನಾದ ದ್ರುಪದನ ಬಳಿಗೆ ಬಂದನು.
ತತಃ ಕಾಂಪಿಲ್ಯಮಾಸಾದ್ಯ ದಶಾರ್ಣಾಧಿಪತಿಸ್ತತಃ |
ಪ್ರೇಷಯಾಮಾಸ ಸತ್ಕೃತ್ಯ ದೂತಂ ಬ್ರಹ್ಮವಿದಾಂ ವರಮ್ ॥17॥
ದಶಾರ್ಣಾಧಿಪತಿಯು ದ್ರುಪದನ ರಾಜಧಾನಿಯಾದ ಕಾಂಪಿಲ್ಯಕ್ಕೆ ಬಂದು, ವೇದವಿದ್ವಾಂಸನಾದ ಒಬ್ಬ ಬ್ರಾಹ್ಮಣನನ್ನು ಸತ್ಕರಿಸಿ, ಅವನನ್ನು ದೂತನನ್ನಾಗಿ ದ್ರುಪದನ ಬಳಿಗೆ ಕಳುಹಿಸಿದನು.
ಬ್ರೂಹಿ ಮದ್ವಚನಾದ್ ದೂತ ಪಾಂಚಾಲ್ಯಂ ತಂ ನೃಪಾಧಮಮ್ ॥
ಯನ್ಮೇ ಕನ್ಯಾಂ ಸ್ವಕನ್ಯಾರ್ಥೇ ವೃತವಾನಸಿ ದುರ್ಮತೇ |
ಫಲಂ ತಸ್ಯಾವಲೇಪಸ್ಯ ದ್ರಕ್ಷ್ಯಸ್ಯದ್ಯ ನ ಸಂಶಯಃ ॥19॥
ಎಲೈ ದೂತನೇ, ಆ ರಾಜಾಧಮನಾದ ಪಾಂಚಲ್ಯರಾಜನನ್ನು ಕುರಿತು ಎಲೈ ದುರ್ಮತಿಯೇ, ನಿನ್ನ ಕನ್ಯೆಯ ಸಲುವಾಗಿ ನನ್ನ ಪುತ್ರಿಯನ್ನು ವರಿಸಿದೆಯಷ್ಟೆ! ಈ ದುರಹಂಕಾರದ ಫಲವನ್ನು ಈ ದಿನ ನೋಡುವಿ. ಇದರಲ್ಲಿ ಸಂಶಯವಿಲ್ಲ ಎಂದು ನಾನು ಹೇಳಿದೆನೆಂದು ಹೇಳುವವನಾಗು (ಎಂದು ಹೇಳಿದನು).
ಏವಮುಕ್ತಶ್ಚ ತೇನಾಸೌ ಬ್ರಾಹ್ಮಣೋ ರಾಜಸತ್ತಮ |
ದೂತಃ ಪ್ರಯಾತೋ ನಗರಂ ದಾಶಾರ್ಣನೃಪಚೋದಿತಃ ॥20॥
ತತ ಆಸಾದಯಾಮಾಸ ಪುರೋಧಾ ದ್ರುಪದಂ ಪುರೇ ॥21॥
ಎಲೈ ರಾಜಶ್ರೇಷ್ಠನೇ, ಹೀಗೆ ಹೇಳಲ್ಪಟ್ಟ ಆ ಬ್ರಾಹ್ಮಣನು, ದಾಶಾರ್ಣರಾಜನಿಂದ ಪ್ರೇರಿತನಾಗಿ ಶೀಘ್ರವಾಗಿ ದ್ರುಪದನ ಬಳಿಗೆ ಬಂದನು.
ತಸ್ಮಿನ್ ಪಾಂಚಾಲಕೋ ರಾಜಾ ಗಾಮರ್ಘ್ಯಂ ಚ ಸುಸತ್ಕೃತಮ್ |
ಪ್ರಾಪಯಾಮಾಸ ರಾಜೇಂದ್ರ ಸಹ ತೇನ ಶಿಖಂಡಿನಾ ॥22॥
ಎಲೈ ರಾಜೇಂದ್ರನೇ, ಪಾಂಚಾಲರಾಜನಾದ ದ್ರುಪದನು ಅವನಿಗೆ ಶಿಖಂಡಿಯ ಜೊತೆಯಲ್ಲಿ ಗೋವು, ಅರ್ಘ್ಯ, ಪಾದ್ಯಗಳನ್ನು ಕೊಟ್ಟು ಚೆನ್ನಾಗಿ ಪೂಜಿಸಿದನು.
ತಾಂ ಪೂಜಾಂ ನಾಭ್ಯನಂದತ್ ಸ ವಾಕ್ಯಂ ಚೇದಮುವಾಚ ಹ |
ಯದುಕ್ತಂ ತೇನ ವೀರೇಣ ರಾಜ್ಞಾ ಕಾಂಚನವರ್ಮಣಾ ॥23॥
ಆ ಪುರೋಹಿತನು ಆ ಪೂಜೆಗೆ ಸಂತೋಷಪಡದೆ ವೀರನಾದ ಹಿರಣ್ಯವರ್ಮನು ಹೇಳಿದ ಈ ಮಾತುಗಳನ್ನು ಹೇಳಿದನು.
ಯತ್ ತೇಽಹಮಧಮಾಚಾರ ದುಹಿತ್ರಾಽಸ್ಯಭಿವಂಚಿತಃ |
ತಸ್ಯ ಪಾಪಸ್ಯ ಕರಣಾತ್ ಫಲಂ ಪ್ರಾಪ್ನುಹಿ ದುರ್ಮತೇ ॥24॥
ಎಲೈ ಅಧಮನಡತೆಯುಳ್ಳವನೇ, ನಿನ್ನ ಮಗಳಿಂದ ನಾನು ವಂಚನೆಗೆ ಒಳಗಾಗಿದ್ದೇನೆ. ಎಲೈ ದುರ್ಮತಿಯೇ, ಆ ಪಾಪವನ್ನು ಮಾಡಿದುದರಿಂದ ಅದರ ಫಲವನ್ನು ಹೊಂದು.
ದೇಹಿ ಯುದ್ಧಂ ನರಪತೇ ಮಮಾದ್ಯ ರಣಮೂರ್ಧನಿ |
ಉದ್ಧರಿಷ್ಯಾಮಿ ಸದ್ಯಸ್ತ್ವಂ ಸಾಮಾತ್ಯಸುತಬಾಂಧವಮ್ ॥25॥
ಎಲೈ ರಾಜನೇ, ನನಗೆ ಯುದ್ಧವನ್ನು ಕೊಡು. ಈ ದಿನ ನಾನು ಘೋರವಾದ ಯುದ್ಧದಲ್ಲಿ ತಕ್ಷಣದಲ್ಲಿಯೇ ಅಮಾತ್ಯಸುತಬಾಂಧವರಿಂದ ಸಹಿತನಾದ ನಿನ್ನನ್ನು ನಿರ್ಮೂಲಗೊಳಿಸುವೆನು.
ತದುಪಾಲಂಭಸಂಯುಕ್ತಂ ಶ್ರಾವಿತಃ ಕಿಲ ಪಾರ್ಥಿವ |
ದಶಾರ್ಣಪತಿದೂತೇನ ಮಂತ್ರಿಮಧ್ಯೇ ಪುರೋಧಸಾ ॥26॥
ಅಬ್ರವೀದ್ ಭರತಶ್ರೇಷ್ಠ ದ್ರುಪದಃ ಪ್ರಣಯಾದ್ ವಚಃ ॥27॥
ಎಲೈ ಭರತಶ್ರೇಷ್ಠನೇ, ದಶಾರ್ಣಾಧಿಪತಿಯ ದೂತನಾದ ಪುರೋಹಿತನಿಂದ ಮಂತ್ರಿಗಳ ಮಧ್ಯದಲ್ಲಿ ಈ ನಿಂದಾವಚನಗಳನ್ನು ಕೇಳಿದ ದ್ರುಪದನು ಅವನನ್ನು ಕುರಿತು ಸ್ನೇಹದಿಂದ ಮಾತನಾಡಿದನು.
ಯದಾಹ ಮಾಂ ಭವಾನ್ ಬ್ರಹ್ಮನ್ ಸಂಬಂಧಿವಚನಾದ್ ವಚಃ |
ಅಸ್ಯೋತ್ತರಂ ಪ್ರತಿವಚೋ ದೂತೋ ರಾಜ್ಞೋ ವದಿಷ್ಯತಿ ॥28॥
ಎಲೈ ಬ್ರಾಹ್ಮಣನೇ, ನನ್ನ ಸಂಬಂಧಿಯ ಆದೇಶದಂತೆ ನೀನು ನನಗೆ ಯಾವ ಮಾತುಗಳನ್ನು ಆಡಿದ್ದೀಯೋ ಅದಕ್ಕೆ ಉತ್ತರವನ್ನು ನನ್ನ ದೂತನು ದಶಾರ್ಣಾಧಿಪತಿಗೆ ಕೊಡುವನು (ಎಂದು ಹೇಳಿದನು).
ಭೀಷ್ಮಃ
ತತಃ ಸಂಪ್ರೇಷಯಾಮಾಸ ದ್ರುಪದೋಽಪಿ ಮಹಾತ್ಮನೇ |
ಹಿರಣ್ಯವರ್ಮಣೇ ದೂತಂ ಬ್ರಾಹ್ಮಣಂ ವೇದಪಾರಗಮ್ ॥29॥
ಭೀಷ್ಮ ಅನಂತರ ದ್ರುಪದನು ಮಹಾತ್ಮನಾದ ಹಿರಣ್ಯವರ್ಮನಿಗೆ ವೇದಪಾರಂಗತನಾದ ಒಬ್ಬ ಬ್ರಾಹ್ಮಣನನ್ನು ದೂತನನ್ನಾಗಿ ಕಳುಹಿಸಿದನು.
ಸಮಾಗಮ್ಯ ತು ರಾಜಾಽಸೌ ದಶಾರ್ಣಾಧಿಪತಿಸ್ತದಾ |
ತದ್ವಾಕ್ಯಮಾದದೇ ರಾಜನ್ ಯದುಕ್ತಂ ದ್ರುಪದೇನ ಹ ॥30॥

ಆಗ ದಶಾರ್ಣಾಧಿಪತಿಯು ಆ ದೂತನ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ದೂತನು ಹೇಳಿದ ವಾಕ್ಯವನ್ನು ಸ್ವೀಕರಿಸಿದನು.
ಆಗಮಃ ಕ್ರಿಯತಾಂ ವ್ಯಕ್ತಂ ಕುಮಾರೋಽಯಂ ಸುತೋ ಮಮ |
ಮಿಥ್ಯೈತದುಕ್ತಂ ಕೇನಾಪಿ ತನ್ನ ಶ್ರದ್ಧೇಯಮಿತ್ಯುತ ॥31॥
ಚೆನ್ನಾಗಿ ಪರೀಕ್ಷೆ ಮಾಡಿ ನೋಡು. ನನ್ನ ಮಗನು ಕುಮಾರನೇ. ನಿನಗೆ ಯಾರೋ ಸುಳ್ಳನ್ನು ಹೇಳಿದ್ದಾರೆ. ಅದನ್ನು ನಂಬಬೇಡ (ಎಂಬ ದೂತನ ಮಾತನ್ನು ಸ್ವೀಕರಿಸಿದನು).
ಭೀಷ್ಮಃ
ತತಃ ಸ ರಾಜಾ ದ್ರುಪದಸ್ಯ ಶ್ರುತ್ವಾ
ವಿಮರ್ದನಾರ್ಥಂ ಯುವತೀರ್ವರಿಷ್ಠಾಃ |
ಸಂಪ್ರೇಷಯಾಮಾಸ ಸುಚಾರುರೂಪಾಃ
ಶಿಖಂಡಿನಂ ಸ್ತ್ರೀ ಪುಮಾನ್ ವೇತಿ ವೇತ್ತುಮ್ ॥32॥
ಭೀಷ್ಮ ಆಗ ದಶಾರ್ಣಾಧಿಪತಿಯು ದ್ರುಪದನ ಮಾತುಗಳನ್ನು ಕೇಳಿ ಶ್ರೇಷ್ಠರಾದ, ಸುಂದರಿಯರಾದ ಯುವತಿಯರನ್ನು ಶಿಖಂಡಿಯು ಕನ್ಯೆಯೋ ಅಥವಾ ಪುರುಷನೋ ಎಂದು ತಿಳಿದುಕೊಳ್ಳಲು, ಅವನ ದೇಹವನ್ನು ವಿಮರ್ದನೆ ಮಾಡುವ ಸಲುವಾಗಿ ಕಳುಹಿಸಿಕೊಟ್ಟನು.
ತಾಃ ಪ್ರೇಷಿತಾಸ್ತತ್ತ್ವಭಾವಂ ವಿದಿತ್ವಾ
ಪ್ರೀತ್ಯಾ ರಾಜ್ಞೇ ತಚ್ಛಶಂಸುರ್ಹಿ ಸರ್ವಮ್ |
ಶಿಖಂಡಿನಂ ಪುರುಷಂ ಕೌರವೇಂದ್ರ
ದಶಾರ್ಣರಾಜಾಯ ಮಹಾನುಭಾವಮ್ ॥33॥
ಆ ಯುವತಿಯರು ನಿಜಾಂಶವನ್ನು ತಿಳಿದು, ಸಂತೋಷದಿಂದ ದಶಾರ್ಣಾಧಿಪತಿಯಾದ ರಾಜನಿಗೆ ಮಹಾನುಭಾವನಾದ ಶಿಖಂಡಿಯು ಪುರುಷನೆಂದು ಹೇಳಿದರು.
ತತಃ ಕೃತ್ವಾ ತು ರಾಜಾ ಸ ಆಗಮಂ ಪ್ರೀತಿಮಾನಥ |
ಸಂಬಂಧಿನಾ ಸಮಾಗಮ್ಯ ಹೃಷ್ಟೋ ಮಾಸಮುವಾಸ ಹ ॥34॥
ಅನಂತರ ದಶಾರ್ಣರಾಜನು ಪರೀಕ್ಷೆಯಿಂದ ವಿಷಯವನ್ನು ತಿಳಿದು ಸಂತೋಷಗೊಂಡವನಾಗಿ, ದ್ರುಪದನ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಒಂದು ತಿಂಗಳಕಾಲ ಸಂತೋಷದಿಂದ ವಾಸಮಾಡಿದನು.
ಶಿಖಂಡಿನೇ ಚ ಮುದಿತಃ ಪ್ರಾದಾದ್ ವಿತ್ತಂ ಜನೇಶ್ವರಃ |
ಹಸ್ತಿನೋಽಶ್ವಾಂಶ್ಚ ಗಾಶ್ಚೈವ ದಾಸೀರ್ಬಹುಶತಾಸ್ತಥಾ ॥35॥
ಪೂಜಿತಶ್ಚ ಪ್ರತಿಯಯೌ ನಿಮಂತ್ರ್ಯ ತನಯಾಂ ಕಿಲ ॥36॥
ಆ ರಾಜನು ಸಂತೋಷದಿಂದ ಶಿಖಂಡಿಗೆ ವಿತ್ತವನ್ನೂ, ಗಜಗಳನ್ನೂ, ಅಶ್ವಗಳನ್ನೂ, ಗೋವುಗಳನ್ನೂ, ಅನೇಕ ಶತಸಂಖ್ಯೆಯ ದಾಸಿಯರನ್ನೂ ಕೊಟ್ಟನು. ದ್ರುಪದನಿಂದ ಪೂಜಿಸಲ್ಪಟ್ಟು ಮಗಳನ್ನು ಆಹ್ವಾನ ಮಾಡಿ ಅವನು ಹಿಂದಿರುಗಿದನು.
ವಿನೀತಕಿಲ್ಬಿಷೇ ಪ್ರೀತೇ ಹೇಮವರ್ಮಣಿ ಪಾರ್ಥಿವೇ |
ಪ್ರತಿಯಾತೇ ದಶಾರ್ಣೇ ತು ಹೃಷ್ಟರೂಪಾ ಶಿಖಂಡಿನೀ ॥37॥
ಹಿರಣ್ಯಕವಚರಾಜನು ಉಂಟಾಗಿದ್ದ ಕಲ್ಮಶವನ್ನು ಕಳೆದುಕೊಂಡು, ಸಂತೋಷದಿಂದ ಹಿಂದಿರುಗುತ್ತಿರಲು ಶಿಖಂಡಿನಿಯು ಸಂತೋಷಗೊಂಡಳು.
ಕಸ್ಯಚಿತ್ತ್ವಥ ಕಾಲಸ್ಯ ಕುಬೇರೋ ನರವಾಹನಃ |
ಲೋಕಯಾತ್ರಾಂ ಪ್ರಕುರ್ವಾಣಃ ಸ್ಥೂಣಸ್ಯಾಗಾನ್ನಿವೇಶನಮ್ ॥38॥
ಸ್ವಲ್ಪ ಸಮಯದ ನಂತರ ನರವಾಹನನಾದ ಕುಬೇರನು ಲೋಕಸಂಚಾರವನ್ನು ಮಾಡುತ್ತಾ ಸ್ಥೂಣಾಕರ್ಣನ ಬಿಡಾರದ ಸಮೀಪಕ್ಕೆ ಬಂದನು.
ಸ ತದ್ಗೃಹಸ್ಯೋಪರಿ ವರ್ತಮಾನ
ಆಲೋಕಯಾಮಾಸ ಧನಾಧಿಗೋಪ್ತಾ |
ಸ್ಥೂಣಸ್ಯ ಯಕ್ಷಸ್ಯ ವಿವೇಶ ವೇಶ್ಮ
ಸ್ವಲಂಕೃತಂ ಮಾಲ್ಯಗುಣೈರ್ವಿಚಿತ್ರೈಃ ॥39॥
ಲಾಜೈಶ್ಚ ಗಂಧೈಶ್ಚ ತಥಾ ವಿತಾನೈಃ
ಅಭ್ಯರ್ಚಿತಂ ಧೂಪನಧೂಪಿತಂ ಚ |
ಧ್ವಜೈಃ ಪತಾಕಾಭಿರಲಂಕೃತಂ ಚ
ಭಕ್ಷ್ಯಾನ್ನಪೇಯಾಮಿಷದತ್ತಮೋದಮ್ ॥40॥
ಧನಾಧಿಪತಿಯಾದ ಕುಬೇರನು ಅವನ ಗೃಹದ ಮೇಲ್ಭಾಗದಲ್ಲಿ ನಿಂತು, ವಿಚಿತ್ರವಾದ ಮಾಲೆಗಳಿಂದ ಚೆನ್ನಾಗಿ ಅಲಂಕೃತವಾದ ಸ್ಥೂಣಾಕರ್ಣನ ಮನೆಯನ್ನು ನೋಡಿ ಅದನ್ನು ಪ್ರವೇಶಿಸಿದನು. ಅದು ಲಾಜದಿಂದ ಉಂಟಾದ ಗಂಧದಿಂದಲೂ, ಸುವರ್ಣಗಳಿಂದಲೂ, ಧೂಪಗಳಿಂದಲೂ, ಧ್ವಜಪತಾಕೆಗಳಿಂದಲೂ ಅಲಂಕೃತವಾಗಿ ಭಕ್ಷ್ಯ, ಅನ್ನ, ಪೇಯಗಳನ್ನು ಹೊಂದಿ ಸಂತೋಷವನ್ನು ಕೊಡುವುದಾಗಿದ್ದಿತು.
ತತ್ ಸ್ಥಾನಂ ತಸ್ಯ ದೃಷ್ಟ್ವಾ ತು ಸರ್ವತಃ ಸಮಲಂಕೃತಮ್ |
ಮಣಿರತ್ನಸುವರ್ಣಾನಾಂ ಮಾಲಾಭಿಃ ಪರಿಪೂರಿತಮ್ ॥41॥

ನಾನಾಕುಸುಮಗಂಧಾಢ್ಯಂ ಸಿಕ್ತಸಮ್ಮೃಷ್ಟಶೋಭಿತಮ್ |
ಅಥಾಬ್ರವೀದ್ ಯಕ್ಷಪತಿಸ್ತಾನ್ ಯಕ್ಷಾನನುಗಾಂಸ್ತದಾ ॥42॥
ಮಣಿರತ್ನಸುವರ್ಣಗಳ ಮಾಲೆಗಳಿಂದ ತುಂಬಿದ್ದ, ಅನೇಕ ಪುಷ್ಪಗಂಧಗಳಿಂದ ಕೂಡಿದ, ತೊಳೆದು ಸಾರಿಸಿ ಶೋಭಿಸುತ್ತಿದ್ದ, ಎಲ್ಲ ಕಡೆಗಳಲ್ಲಿಯೂ ಅಲಂಕೃತವಾಗಿದ್ದ ಆ ಸ್ಥಾನವನ್ನು ನೋಡಿ ಯಕ್ಷಾಧಿಪತಿಯಾದ ಕುಬೇರನು ತನ್ನ ಅನುಚರರಾದ ಯಕ್ಷರನ್ನು ಕುರಿತು ಆಗ ಮಾತನಾಡಿದನು.
ಸ್ವಲಂಕೃತಮಿದಂ ವೇಶ್ಮ ಸ್ಥೂಣಸ್ಯಾಮಿತವಿಕ್ರಮಾಃ |
ನೋಪಸರ್ಪತಿ ಮಾಂ ಚೈವ ಕಸ್ಮಾದದ್ಯ ಸ ಮಂದಧೀಃ ॥43॥
ಎಲೈ ಅಮಿತವಿಕ್ರಮರೇ, ಸ್ಥೂಣನ ಈ ಗೃಹವು ಚೆನ್ನಾಗಿ ಅಲಂಕೃತವಾಗಿದೆ. ಆದರೆ ಆ ಮಂದಬುದ್ಧಿಯವನು ಈ ದಿನ ನನ್ನ ಬಳಿಗೆ ಏಕೆ ಬರುತ್ತಿಲ್ಲ?
ಯಸ್ಮಾಜ್ಜಾನನ್ ಸ ಮಂದಾತ್ಮಾ ಮಾಮಸೌ ನೋಪಸರ್ಪತಿ |
ತಸ್ಮಾತ್ ತಸ್ಮೈ ಮಹಾದಂಡೋ ಧಾರ್ಯಃ ಸ್ಯಾದಿತಿ ಮೇ ಮತಿಃ ॥44॥
ಮಂದಾತ್ಮನಾದ ಅವನು, ನಾನು ಇಲ್ಲಿಗೆ ಬಂದಿದ್ದೇನೆಂದು ತಿಳಿದರೂ ನನ್ನ ಸಮೀಪಕ್ಕೆ ಬರುತ್ತಿಲ್ಲ. ಆದ್ದರಿಂದ ಅವನಿಗೆ ಮಹಾದಂಡವನ್ನು ವಿಧಿಸಬೇಕೆಂದು ನನ್ನ ಅಭಿಪ್ರಾಯ.
ಯಕ್ಷಾಃ
ದ್ರುಪದಸ್ಯ ಸುತಾ ರಾಜನ್ ರಾಜ್ಞೋ ಜಾತಾ ಶಿಖಂಡಿನೀ |
ತಸ್ಯಾ ನಿಮಿತ್ತೇ ಕಸ್ಮಿಂಶ್ಚಿತ್ ಪ್ರಾದಾತ್ ಪುರುಷಲಕ್ಷಣಮ್ ॥45॥
ಯಕ್ಷಾ ಎಲೈ ರಾಜನೇ, ದ್ರುಪದರಾಜನಿಂದ ಹುಟ್ಟಿದ ಶಿಖಂಡಿನಿಯು ಕನ್ಯೆಯಾಗಿ ಹುಟ್ಟಿದ್ದಳು. ಯಾವುದೋ ಕಾರಣಕ್ಕಾಗಿ ಅವಳಿಗೆ ಅವನು ತನ್ನ ಪುರುಷಲಕ್ಷಣವನ್ನು ನೀಡಿದನು.
ಅಗ್ರಹೀಲ್ಲಕ್ಷಣಂ ಸ್ತ್ರೀಣಾಂ ಸ್ತ್ರೀಭೂತಾ ತಿಷ್ಠತೇ ಗೃಹೇ |
ನೋಪಸರ್ಪತಿ ತೇನಾಸೌ ಸವ್ರೀಡಃ ಸ್ತ್ರೀಸ್ವರೂಪವಾನ್ ॥46॥
ಅವನು ಸ್ತ್ರೀಲಕ್ಷಣವನ್ನು ಸ್ವೀಕರಿಸಿ ಸ್ತ್ರೀಯಾಗಿ ಮನೆಯಲ್ಲಿದ್ದಾನೆ. ಸ್ತ್ರೀ ಶರೀರವನ್ನು ಧರಿಸಿದ ಅವನು ನಾಚಿಕೆಯಿಂದ ನಿನ್ನ ಬಳಿಗೆ ಬರುತ್ತಿಲ್ಲ.
ಏತಸ್ಮಾತ್ ಕಾರಣಾದ್ ರಾಜನ್ ಸ್ಥೂಣೋ ನ ತ್ವಾಽದ್ಯ ಪಶ್ಯತಿ |
ಶ್ರುತ್ವಾ ಕುರು ಯಥಾ ನ್ಯಾಯ್ಯಂ ವಿಮಾನಮಿಹ ತಿಷ್ಠತಾಮ್ ॥47॥
ಎಲೈ ರಾಜನೇ, ಆ ಕಾರಣದಿಂದ ಸ್ಥೂಣನು ಈ ದಿನ ನಿನ್ನನ್ನು ನೋಡುತ್ತಿಲ್ಲ. ಈ ವಿಷಯವನ್ನು ಕೇಳಿ ನೀನು ನಿನ್ನ ನ್ಯಾಯದಂತೆ ವರ್ತಿಸು. ವಿಮಾನವು ಇಲ್ಲಿಯೇ ಇರಲಿ.
ಭೀಷ್ಮಃ
ಆನೀಯತಾಂ ಸ್ಥೂಣ ಇತಿ ತತೋ ಯಕ್ಷಾಧಿಪೋಽಬ್ರವೀತ್ |
ಕರ್ತಾಸ್ಮಿ ನಿಗ್ರಹಂ ತಸ್ಯ ಪ್ರತ್ಯುವಾಚ ಪುನಃ ಪುನಃ ॥48॥
ಭೀಷ್ಮ ಯಕ್ಷಾಧಿಪನಾದ ಕುಬೇರನು ಅವರನ್ನು ಕುರಿತು, ಸ್ಥೂಣನನ್ನು ಇಲ್ಲಿಗೆ ಕರೆತನ್ನಿ. ನಾನು ಅವನಿಗೆ ನಿಗ್ರಹವನ್ನು ಮಾಡುವೆನು ಎಂದು ಪುನಃ ಪುನಃ ಉಚ್ಚರಿಸಿದನು.
ಸೋಽಭ್ಯಗಚ್ಛತ ಯಕ್ಷೇಂದ್ರಮಾಹೂತಃ ಪೃಥಿವೀಪತೇ |
ಸ್ತ್ರೀಸ್ವರೂಪೋ ಮಹಾರಾಜ ತಸ್ಥೌ ವ್ರೀಡಾಸಮನ್ವಿತಃ ॥49॥
ತಂ ಶಶಾಪಾಥ ಸಂಕ್ರುದ್ಧೋ ಧನದಃ ಕುರುನಂದನ ॥50॥
ಏವಮೇವ ಭವತ್ವಸ್ಯ ಸ್ತ್ರೀತ್ವಂ ಪಾಪಸ್ಯ ಗುಹ್ಯಕಾಃ ॥51॥
ಎಲೈ ರಾಜನೇ, ಪೃಥಿವೀಪತಿಯೇ, ಆಹ್ವಾನ ಮಾಡಲ್ಪಟ್ಟ ಸ್ಥೂಣನು ಸ್ತ್ರೀ ರೂಪವನ್ನು ಧರಿಸಿ, ಯಕ್ಷೇಂದ್ರನಾದ ಕುಬೇರನ ಬಳಿಗೆ ಬಂದು ನಾಚಿಕೆಯಿಂದ ನಿಂತನು. ಎಲೈ ಕುರುನಂದನನೇ, ಕೋಪಗೊಂಡ ಕುಬೇರನು ಎಲೈ ಗುಹ್ಯಕರೇ, ಇವನಿಗೆ ಈ ಸ್ತ್ರೀತ್ವವು ಹೀಗೆಯೇ ಮುಂದುವರಿಯಲಿ ಎಂದು ಹೇಳಿದನು.
ತತೋಽಬ್ರವೀದ್ ಯಕ್ಷಪತಿರ್ಮಹಾತ್ಮಾ
ಯಸ್ಮಾದದಾಸ್ತ್ವವಮತ್ಯೇಹ ಯಕ್ಷಾನ್ |
ಶಿಖಂಡಿನೋ ಲಕ್ಷಣಂ ಪಾಪಬುದ್ಧೇ
ಸ್ತ್ರೀಲಕ್ಷಣಂ ಚಾಗ್ರಹೀಃ ಪಾಪಕರ್ಮನ್ ॥52॥
ಅಪ್ರವೃತ್ತಂ ಸುದುರ್ಬುದ್ಧೇ ಯಸ್ಮಾದೇತತ್ ತ್ವಯಾ ಕೃತಮ್ |
ತಸ್ಮಾದದ್ಯಪ್ರಭೃತ್ಯೇವ ಸ್ತ್ರೀ ತ್ವಂ ಸಾ ಪುರುಷಸ್ತಥಾ ॥53॥
ಮಹಾತ್ಮನಾದ ಯಕ್ಷಪತಿಯು ಅವನನ್ನು ಕುರಿತು ಎಲೈ ಪಾಪಬುದ್ಧಿಯೇ, ಪಾಪಕರ್ಮವನ್ನು ಮಾಡಿದವನೇ, ನೀನು ಎಲ್ಲ ಯಕ್ಷರಿಗೂ ಅವಮಾನವನ್ನು ಮಾಡಿ ಶಿಖಂಡಿಯ ಸ್ತ್ರೀಲಕ್ಷಣವನ್ನು ತೆಗೆದುಕೊಂಡೆಯಷ್ಟೆ! ಎಲೈ ದುರ್ಬುದ್ಧಿಯೇ, ಹಿಂದೆ ಯಾರೂ ಮಾಡದಿದ್ದ ಈ ಕಾರ್ಯವನ್ನು ನೀನು ಮಾಡಿದುದರಿಂದ ಈ ದಿನದಿಂದ ನೀನು ಸ್ತ್ರೀಯಾಗಿಯೇ ಇರುವಿ, ಶಿಖಂಡಿಯು ಪುರುಷನಾಗಿಯೇ ಇರುತ್ತಾನೆ (ಎಂದು ಹೇಳಿದನು).
ತತಃ ಪ್ರಸಾದಯಾಮಾಸುರ್ಯಕ್ಷಾ ವೈಶ್ರವಣಂ ಕಿಲ |
ಸ್ಥೂಣಸ್ಯಾರ್ಥೇ ಕುರುಷ್ವಾಂತಂ ಶಾಪಸ್ಯೇತಿ ಪುನಃ ಪುನಃ ॥54॥

ಆಗ ಯಕ್ಷರು ಸ್ಥೂಣಾಕರ್ಣನ ಸಲುವಾಗಿ ಕುಬೇರನನ್ನು ಕುರಿತು, ಈ ಶಾಪಕ್ಕೆ ವಿಮೋಚನೆಯನ್ನು ಕೊಡು ಎಂದು ಪುನಃ ಪುನಃ ಹೇಳುತ್ತಾ ಅವನನ್ನು ಪ್ರಸನ್ನಗೊಳಿಸಿದರು.
ತತೋ ಮಹಾತ್ಮಾ ಯಕ್ಷೇಂದ್ರಃ ಪ್ರತ್ಯುವಾಚಾನುಗಾಮಿನಃ |
ಸರ್ವಾನ್ ಯಕ್ಷಗಣಾಂಸ್ತಾತ ಶಾಪಸ್ಯಾಂತಚಿಕೀರ್ಷಯಾ ||55||
ಹತೇ ಶಿಖಂಡಿನಿ ರಣೇ ಸ್ವಂ ರೂಪಂ ಪ್ರತಿಪತ್ಸ್ಯತೇ |
ಸ್ಥೂಣೋ ಯಕ್ಷೋ ನಿರುದ್ವೇಗೋ ಭವತ್ವಿತಿ ಮಹಾಮನಾಃ ||56||
ಆಗ ಮಹಾತ್ಮನಾದ ಕುಬೇರನು ತನ್ನ ಅನುಚರರಾದ ಎಲ್ಲಾ ಯಕ್ಷಗಣಗಳನ್ನು ಕುರಿತು, ಶಾಪದ ಅಂತವನ್ನು ಮಾಡುವ ಉದ್ದೇಶದಿಂದ, ಶಿಖಂಡಿಯು ಯುದ್ಧದಲ್ಲಿ ಹತನಾದಾಗ ಸ್ಥೂಣಾಕರ್ಣನು ತನ್ನ ನಿಜರೂಪವನ್ನು ಪಡೆಯುವನು. ಧೈರ್ಯಶಾಲಿಯಾದ ಸ್ಥೂಣಾಕರ್ಣನು ಉದ್ವೇಗರಹಿತನಾಗಲಿ ಎಂದು ಹೇಳಿದನು.
ಇತ್ಯುಕತ್ವ ಭಗವಾನ್ ದೇವೋ ಯಕ್ಷರಾಜಃ ಸುಪೂಜಿತಃ |
ಪ್ರಯಯೌ ಸಹಿತಃ ಸರ್ವೈರ್ನಿಮೇಷಾಂತರಚಾರಿಭಿಃ ||57||
ಹೀಗೆ ಹೇಳಿ ಪೂಜ್ಯನಾದ ಯಕ್ಷರಾಜನು ಅಲ್ಲಿ ಪೂಜಿತನಾಗಿ, ಎಲ್ಲಾ ನಿಶಾಚರರ ಜೊತೆಯಲ್ಲಿ ಹೊರಟು ಹೋದನು.
ಸ್ಥೂಣಸ್ತು ಶಾಪಂ ಸಂಪ್ರಾಪ್ಯ ತತ್ರೈವ ನ್ಯವಸನ್ ತದಾ |
ಸಮಯೇ ಚಾಗಮತ್ ತೂರ್ಣಂ ಶಿಖಂಡೀ ತಂ ಕ್ಷಪಾಚರಮ್ ||58||
ಸ್ಥೂಣಾಕರ್ಣನು ಶಾಪವನ್ನು ಪಡೆದು ಅಲ್ಲಿಯೇ ವಾಸಮಾಡಿದನು. ಸೂಕ್ತವಾದ ಸಮಯದಲ್ಲಿ ಶಿಖಂಡಿಯು ನಿಶಾಚರನ ಬಳಿಗೆ ಬಂದನು.
ಸೋಽಭಿಗಮ್ಯಾಬ್ರವೀದ್ ವಾಕ್ಯಂ ಪ್ರಾಪ್ತೋಽಸ್ಮಿ ಭಗವನ್ನಿತಿ |
ತಮಬ್ರವೀತ್ ತತಃ ಸ್ಥೂಣಃ ಪ್ರೀತೋಽಸ್ಮೀತಿ ಪುನಃ ಪುನಃ ||59||
ಅವನು ಸ್ಥೂಣನ ಬಳಿಗೆ ಹೋಗಿ, ಪೂಜ್ಯನೇ ನಾನು ಬಂದಿದ್ದೇನೆ ಎಂದು ಹೇಳಿದನು. ಆಗ ಸ್ಥೂಣನು ಅವನನ್ನು ಕುರಿತು ನನಗೆ ಸಂತೋಷವಾಗಿದೆ ಎಂದು ಪುನಃ ಪುನಃ ಹೇಳಿದನು.
ಆರ್ಜವೇನಾಗತಂ ದೃಷ್ಟ್ವಾ ರಾಜಪುತ್ರಂ ಶಿಖಂಡಿನಮ್ |
ಸರ್ವಮೇವ ಯಥಾವೃತ್ತಮಾಚಚಕ್ಷೇ ಶಿಖಂಡಿನೇ ||60||
ತನ್ನ ಮಾತಿನಂತೆ ನೇರವಾಗಿ ಬಂದ, ರಾಜಪುತ್ರನಾದ ಶಿಖಂಡಿಯನ್ನು ನೋಡಿ ಅವನಿಗೆ ಸ್ಥೂಣನು ನಡೆದ ಎಲ್ಲ ವೃತ್ತಾಂತವನ್ನೂ ತಿಳಿಸಿದನು.
ಯಕ್ಷಃ
ಶಪ್ತೋ ವೈಶ್ರವಣೇನಾಹಂ ತ್ವತ್ಕೃತೇ ಪಾರ್ಥಿವಾತ್ಮಜ |
ಗಚ್ಛೇದಾನೀಂ ಯಥಾಕಾಮಂ ಚರ ಲೋಕಾನ್ ಯಥಾಸುಖಮ್ ||
ಯಕ್ಷ ಎಲೈ ರಾಜಕುಮಾರನೇ, ನಾನು ನಿನ್ನ ಸಲುವಾಗಿ ಕುಬೇರನಿಂದ ಶಾಪಕ್ಕೆ ಒಳಗಾದೆನು. ನಿನಗೆ ಇಷ್ಟವಾದಂತೆ ಹೋಗಿ ಸುಖವಾಗಿ ಲೋಕವನ್ನು ಸಂಚರಿಸು.
ದಿಷ್ಟಮೇತತ್ ಪುರಾ ಮನ್ಯೇ ನ ಶಕ್ಯಮತಿವರ್ತಿತುಮ್ |
ಗಮನಂ ತವ ಚೇತೋ ಹಿ ಪೌಲಸ್ತ್ಯಸ್ಯ ಚ ದರ್ಶನಮ್ ||62||
ಇಲ್ಲಿಂದ ನಿನ್ನ ನಿರ್ಗಮನ ಮತ್ತು ಕುಬೇರನ ದರ್ಶನ ಇವೆರಡೂ ದೈವಸಂಕಲ್ಪಿತವೆಂದು ನಾನು ತಿಳಿಯುತ್ತೇನೆ. ಇದನ್ನು ಮೀರಲು ಸಾಧ್ಯವಿಲ್ಲ.
ಭೀಷ್ಮಃ
ಏವಮುಕ್ತಃ ಶಿಖಂಡೀ ತು ಸ್ಥೂಣಯಕ್ಷೇಣ ಭಾರತ |
ಕ್ಷಿಪ್ರಂ ಜಗಾಮ ನಗರಂ ಹರ್ಷೇಣ ಮಹತಾ ವೃತಃ ||63||
ಭೀಷ್ಮ ಎಲೈ ಭಾರತನೇ, ಹೀಗೆ ಸ್ಥೂಣಾಕರ್ಣನ ಮಾತನ್ನು ಕೇಳಿದ ಶಿಖಂಡಿಯು ಬಹಳ ಹರ್ಷದಿಂದ ಕೂಡಿ ಶೀಘ್ರವಾಗಿ ನಗರಕ್ಕೆ ಹೋದನು.
ಪೂಜಯಾಮಾಸ ವಿವಿಧೈರ್ಗಂಧಮಾಲ್ಯೈರ್ಮನೋರಮೈಃ |
ದ್ವಿಜಾತೀನ್ ದೇವತಾಶ್ಚೈವ ಚೈತ್ಯಾನಥ ಚತುಷ್ಪಥಾನ್ ||64||
ಅವನು ಬ್ರಾಹ್ಮಣರನ್ನೂ, ದೇವತೆಗಳನ್ನೂ, ದೇವತಾ ಮಂದಿರಗಳನ್ನೂ ಮತ್ತು ಚತುಷ್ಪಥಗಳನ್ನೂ ಸುಂದರವಾದ ವಿವಿಧಗಂಧಮಾಲೆಗಳಿಂದ ಪೂಜಿಸಿದನು.
ದ್ರುಪದಃ ಸಹ ಪುತ್ರೇಣ ಸಿದ್ಧಾರ್ಥೇನ ಶಿಖಂಡಿನಾ |
ಮುದಂ ಚ ಪರಮಾಂ ಲೇಭೇ ಪಾಂಚಾಲ್ಯಃ ಸಹ ಬಾಂಧವೈಃ ||65||
ಪಾಂಚಾಲರಾಜನಾದ ದ್ರುಪದನು ಶಿಖಂಡಿಯು ಕೃತಕೃತ್ಯನಾದುದನ್ನು ನೋಡಿ ಅವನ ಮತ್ತು ಬಂಧುಗಳ ಜೊತೆಯಲ್ಲಿ ಬಹಳ ಸುಖವನ್ನು ಹೊಂದಿದನು.
ಶಿಷ್ಯಾರ್ಥಂ ಪ್ರದದೌ ಚಾಥ ದ್ರೋಣಾಯ ಕುರುಪುಂಗವ |
ಶಿಖಂಡಿನಂ ಮಹಾರಾಜ ಪುತ್ರಂ ಸ್ತ್ರೀಪೂರ್ವಿಣಂ ತಥಾ ||66||
ಎಲೈ ಮಹಾರಾಜನೇ, ಕುರುಪುಂಗವನೇ, ಹಿಂದೆ ಕನ್ಯೆಯಾಗಿದ್ದ ಆ ಶಿಖಂಡಿಯನ್ನು ದ್ರೋಣರಿಗೆ ಶಿಷ್ಯನನ್ನಾಗಿ ಕೊಟ್ಟನು.
ಪ್ರತಿಪೇದೇ ಚತುಷ್ಪಾದಂ ಧನುರ್ವೇದಂ ನೃಪಾತ್ಮಜಃ |

ಶಿಖಂಡೀ ಸಹ ಯುಷ್ಮಾಭಿರ್ಧೃಷ್ಟದ್ಯುಮ್ನಶ್ಚ ಪಾರ್ಷತಃ ॥67॥
ರಾಜಕುಮಾರನಾದ ಶಿಖಂಡಿಯು ನಿಮ್ಮ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನನ ಜೊತೆಯಲ್ಲಿ ನಾಲ್ಕು ಅಂಶಗಳಿಂದ ಕೂಡಿದ ಧನುರ್ವೇದವನ್ನು ಕಲಿತನು.
ಮಮ ತ್ವೇತಚ್ಚರಾಸ್ತಾತ ಯಥಾವತ್ ಪ್ರತ್ಯವೇದಯನ್ |
ಜಡಾಂಧಬಧಿರಾಕಾರಾ ಯೇ ಮುಕ್ತಾ ದ್ರುಪದೇ ಮಯಾ ॥68॥
ಎಲೈ ಪ್ರೀತಿಪಾತ್ರನೇ, ದ್ರುಪದನಲ್ಲಿ ನಾನು ನಿಯೋಜಿಸಿದ ಜಡಾಂಧಬಧಿರರಂತೆ ನಟಿಸುವ ಗೂಢಚಾರರು ನನಗೆ ಈ ಎಲ್ಲಾ ವಿಷಯವನ್ನೂ ಸರಿಯಾಗಿ ಹೇಳಿದರು.
ಏವಮೇವ ಮಹಾರಾಜ ಸ್ತ್ರೀ ಪುಮಾನ್ ದ್ರುಪದಾತ್ಮಜಃ |
ಸ ಸಂಭೂತಃ ಕುರುಶ್ರೇಷ್ಠ ಶಿಖಂಡೀ ರಥಸತ್ತಮಃ ॥69॥
ಎಲೈ ಮಹಾರಾಜನೇ, ಕುರುಶ್ರೇಷ್ಠನೇ, ಹೀಗೆ ದ್ರುಪದನ ಮಗಳಾಗಿ ಜನಿಸಿದ ಅವಳು ಪುರುಷನಾಗಿ ಶಿಖಂಡಿಯಾಗಿ ರಥಶ್ರೇಷ್ಠನಾದನು.
ಜ್ಯೇಷ್ಠಾ ಕಾಶೀಪತೇಃ ಕನ್ಯಾ ಅಂಬಾ ನಾಮೇತಿ ವಿಶ್ರುತಾ |
ದ್ರುಪದಸ್ಯ ಕುಲೇ ಜಾತಾ ಶಿಖಂಡೀ ಭರತರ್ಷಭ ॥70॥
ಎಲೈ ಭರತರ್ಷಭನೇ, ಕಾಶಿರಾಜನ ಜ್ಯೇಷ್ಠಪುತ್ರಿಯಾಗಿ ಪ್ರಸಿದ್ಧಳಾದ ಅಂಬೆಯು ದ್ರುಪದನ ವಂಶದಲ್ಲಿ ಶಿಖಂಡಿಯಾಗಿ ಜನಿಸಿದಳು.
ನಾಹಮೇನಂ ಧನುಷ್ಪಾಣಿಂ ಯುಯುತ್ಸುಂ ಸಮುಪಸ್ಥಿತಮ್ |
ಮುಹೂರ್ತಮಪಿ ಪಶ್ಯೇಯಂ ಪ್ರಹರೇಯಂ ನ ಚಾಪ್ಯುತ ॥71॥
ವ್ರತಮೇತನ್ಮಮ ಸದಾ ಪೃಥಿವ್ಯಾಮಪಿ ವಿಶ್ರುತಮ್ ॥72॥
ಅವನು ಧನುಷ್ಪಾಣಿಯಾಗಿ ಯುದ್ಧವನ್ನು ಮಾಡಲು ಬಂದರೆ ನಾನು ಒಂದು ಮುಹೂರ್ತವೂ ಅವನನ್ನು ನೋಡುವುದೂ ಇಲ್ಲ ಮತ್ತು ಅವನ ಮೇಲೆ ಪ್ರಹಾರವನ್ನೂ ಮಾಡುವುದಿಲ್ಲ. ಇದು ನಾನು ಸದಾ ಧರಿಸಿರುವ ವ್ರತ. ಇದು ಭೂಮಿಯಲ್ಲಿ ಪ್ರಖ್ಯಾತವಾಗಿದೆ.
ಸ್ತ್ರಿಯಾಂ ಸ್ತ್ರೀಪೂರ್ವಕೇ ಚಾಪಿ ಸ್ತ್ರೀನಾಮ್ನಿ ಸ್ತ್ರೀಸ್ವರೂಪಿಣಿ |
ನ ಮುಂಚೇಯಮಹಂ ಬಾಣಮಿತಿ ಕೌರವನಂದನ ॥73॥
ಎಲೈ ಕೌರವನಂದನನೇ, ಸ್ತ್ರೀಯ ಮೇಲಾಗಲೀ, ಹಿಂದೆ ಸ್ತ್ರೀಯಾಗಿದ್ದವನ ಮೇಲಾಗಲೀ, ಸ್ತ್ರೀನಾಮವನ್ನು ಧರಿಸಿದವನ ಮೇಲಾಗಲೀ ಅಥವಾ ಸ್ತ್ರೀ ದೇಹವನ್ನು ಧರಿಸಿದವನ ಮೇಲಾಗಲೀ ನಾನು ಬಾಣಗಳನ್ನು ಬಿಡುವುದಿಲ್ಲ.
ನ ಹನ್ಯಾಮಹಮೇತೇನ ಕಾರಣೇನ ಶಿಖಂಡಿನಮ್ |
ಏತತ್ ತತ್ತ್ವಮಹಂ ವೇದ ಜನ್ಮ ತಾತ ಶಿಖಂಡಿನಃ ॥74॥
ಎಲೈ ಪ್ರೀತಿಪಾತ್ರನೇ, ಈ ಕಾರಣದಿಂದ ನಾನು ಶಿಖಂಡಿಯನ್ನು ಕೊಲ್ಲಲಾರೆ. ಶಿಖಂಡಿಯ ಜನ್ಮದ ಈ ಸತ್ಯಾಂಶವನ್ನು ನಾನು ತಿಳಿದಿದ್ದೇನೆ.
ಅತೋ ನೈನಂ ಹನಿಷ್ಯಾಮಿ ಸಮರೇಷ್ವಾತತಾಯಿನಮ್ |
ಯದಿ ಭೀಷ್ಮಃ ಸ್ತ್ರಿಯಂ ಹನ್ಯಾತ್ಸಂತಃ ಕುರ್ಯುಃ ವಿಗರ್ಹಣಾಮ್ ॥
ನೈನಂ ತಸ್ಮಾದ್ಧನಿಷ್ಯಾಮಿ ದೃಷ್ಟ್ವಾಽಪಿ ಸಮರೇ ಸ್ಥಿತಮ್ ॥76॥
ಆದ್ದರಿಂದ ಯುದ್ಧದಲ್ಲಿ ಶಸ್ತ್ರಧಾರಿಯಾದ ಅವನನ್ನು ಕೊಲ್ಲುವುದಿಲ್ಲ. ಭೀಷ್ಮನು ಒಬ್ಬ ಸ್ತ್ರೀಯನ್ನು ಕೊಂದರೆ ಸಜ್ಜನರು ನಿಂದಿಸಿಯಾರು! ಆದ್ದರಿಂದ ಯುದ್ಧದಲ್ಲಿ ನಿಂತ ಶಿಖಂಡಿಯನ್ನು ನೋಡಿದರೂ ಅವನನ್ನು ಕೊಲ್ಲುವುದಿಲ್ಲ.
ಸಂಜಯಃ
ಏತಚ್ಛ್ರುತ್ವಾ ತು ಕೌರವ್ಯೋ ರಾಜಾ ದುರ್ಯೋಧನಸ್ತದಾ |
ಮುಹೂರ್ತಮಿವ ಸ ಧ್ಯಾತ್ವಾ ಭೀಷ್ಮೇ ಯುಕ್ತಮಮನ್ಯತ ॥77॥
ಸಂಜಯ ಇದನ್ನು ಕೇಳಿದ ಕೌರವರಾಜನಾದ ದುರ್ಯೋಧನನು ಒಂದು ಮುಹೂರ್ತದ ಕಾಲ ಚಿಂತಿಸಿ ಭೀಷ್ಮರು ಹೇಳುವುದು ಸರಿಯಾಗಿದೆ ಎಂದು ತಿಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಚತುರ್ನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೈದನೆಯ ಅಧ್ಯಾಯ
ದುರ್ಯೋಧನನಿಂದ ಭೀಷ್ಮಾದಿಗಳು ವಿಜಯಕ್ಕಾಗಿ ಅಪೇಕ್ಷಿಸಿದ ಕಾಲದ ಪ್ರಶ್ನೆ. ಅವರ ಉತ್ತರ.
ಸಂಜಯಃ
ಪ್ರಭಾತಾಯಾಂ ತು ಶರ್ವರ್ಯಾಂ ಪುನರೇವ ಸುತಸ್ತವ |
ಮಧ್ಯೇ ಸರ್ವಸ್ಯ ಸೈನ್ಯಸ್ಯ ಪಿತಾಮಹಮಪೃಚ್ಛತ ॥1॥
ಸಂಜಯ ರಾತ್ರಿಯು ಕಳೆದು ಪ್ರಾತಃಕಾಲವು ಬರಲು ನಿನ್ನ ಪುತ್ರನು ಎಲ್ಲಾ ಸೈನ್ಯದ ಮಧ್ಯದಲ್ಲಿ ಭೀಷ್ಮರನ್ನು ಕೇಳಿದನು.
ಪಾಂಡವೇಯಸ್ಯ ಗಾಂಗೇಯ ಯದೇತತ್ ಸೈನ್ಯಮುತ್ತಮಮ್ |
ಪ್ರಭೂತನರನಾಗಾಶ್ವಂ ಮಹಾರಥಸಮಾಕುಲಮ್ ॥2॥

ಭೀಮಾರ್ಜುನಪ್ರಭೃತಿಭಿರ್ಮಹೇಷ್ವಾಸೈರ್ಮಹಾತ್ಮಭಿಃ |
ಲೋಕಪಾಲಸಮೈರ್ಗುಪ್ತಂ ಧೃಷ್ಟದ್ಯುಮ್ನಪುರೋಗಮೈಃ ॥3॥
ಅಪ್ರಧೃಷ್ಯಮನಾವಾರ್ಯಮುದ್ಧೂತಮಿವ ಸಾಗರಮ್ |
ಸೇನಾಸಾಗರಮಕ್ಷೋಭ್ಯಮಪಿ ದೇವೈರ್ಮಹಾಹವೇ ॥4॥
ಕೇನ ಕಾಲೇನ ಗಾಂಗೇಯ ಕ್ಷಪಯೇಥಾ ಮಹಾದ್ಯುತೇ ॥5॥
ಎಲೈ ಗಾಂಗೇಯರೇ, ಮಹಾದ್ಯುತಿಯೇ, ಅಧಿಕ ಸಂಖ್ಯೆಯ ನರನಾಗಾಶ್ವವುಳ್ಳ, ಮಹಾರಥರಿಂದ ನಿಬಿಡವಾದ, ಭೀಮಾರ್ಜುನರೇ ಮೊದಲಾದ ಮಹಾಧನುರ್ಧಾರಿಗಳಾದ ಮಹಾತ್ಮರಿಂದ ರಕ್ಷಿತವಾದ, ಲೋಕಪಾಲಸಮಾನರಾದ ಧೃಷ್ಟದ್ಯುಮ್ನ ಮೊದಲಾದವರಿಂದ ರಕ್ಷಿತವಾದ, ಸೋಲಿಸಲು ಅಥವಾ ನಿವಾರಿಸಲು ಅಸಾಧ್ಯವಾದ, ಉಕ್ಕಿದ ಸಮುದ್ರದಂತಿರುವ, ದೇವತೆಗಳಿಂದಲೂ ಮಹಾಯುದ್ಧದಲ್ಲಿ ಅಲುಗಾಡಿಸಲು ಸಾಧ್ಯವಿಲ್ಲದ ಪಾಂಡವರ ಸೈನ್ಯಸಾಗರವನ್ನು ಎಷ್ಟು ಕಾಲದಲ್ಲಿ ನೀವು ವಿನಾಶ ಮಾಡುವಿರಿ?
ಆಚಾರ್ಯೋ ವಾ ಮಹೇಷ್ವಾಸಃ ಕೃಪೋ ವಾ ಸುಮಹಾಬಲಃ |
ಕರ್ಣೋ ವಾ ಸಮರಶ್ಲಾಘೀ ದ್ರೌಣಿರ್ವಾ ದ್ವಿಜಸತ್ತಮಃ ॥6॥
ದಿವ್ಯಾಸ್ತ್ರವಿದುಷಃ ಸರ್ವೇ ಭವಂತೋ ಹಿ ಬಲೇ ಮಮ ॥7॥
ಅಥವಾ ಮಹಾಧನುರ್ಧಾರಿಗಳಾದ ದ್ರೋಣರೂ, ಮಹಾಬಲಿಷ್ಠರಾದ ಕೃಪರೂ, ಯಾವಾಗಲೂ ಯುದ್ಧವನ್ನು ಬಯಸುವ ಕರ್ಣ, ಬ್ರಾಹ್ಮಣಶ್ರೇಷ್ಠರಾದ ಅಶ್ವತ್ಥಾಮರು ಹೀಗೆ ನನ್ನ ಸೈನ್ಯದಲ್ಲಿರುವ ನೀವೆಲ್ಲರೂ ದಿವ್ಯಾಸ್ತ್ರಗಳನ್ನು ತಿಳಿದವರು (ನೀವು ಎಷ್ಟು ಸಮಯವನ್ನು ತೆಗೆದುಕೊಳ್ಳುತ್ತೀರಿ?)
ಏತದಿಚ್ಛಾಮ್ಯಹಂ ಜ್ಞಾತುಂ ಪರಂ ಕೌತೂಹಲಂ ಹಿ ಮೇ |
ಹೃದಿ ನಿತ್ಯಂ ಮಹಾಬಾಹೋ ವಕ್ತುಮರ್ಹಸಿ ತನ್ಮಮ ॥8॥
ಎಲೈ ಮಹಾಬಾಹುವೇ, ಇದನ್ನು ತಿಳಿಯಲು ನಾನು ಬಯಸುತ್ತೇನೆ. ಈ ವಿಷಯದಲ್ಲಿ ಯಾವಾಗಲೂ ನನ್ನ ಮನಸ್ಸಿನಲ್ಲಿ ಕುತೂಹಲವಿದೆ. ಅದನ್ನು ನೀವು ಹೇಳಬೇಕು.
ಅನೇನಾಹಂ ವಿಧಾನೇನ ಸನ್ನದ್ಧಃ ಸತತೋತ್ಥಿತಃ |
ಕ್ಷಪಯೇಯಂ ಮಹತ್ ಸೈನ್ಯಂ ಕೇನ ಕಾಲೇನ ಭಾರತ ॥9॥
ಎಲೈ ಭಾರತರೇ, ಈ ರೀತಿಯಲ್ಲಿ ಸಜ್ಜಾಗಿರುವ, ಸತತ ಉತ್ಸಾಹಶೀಲನಾದ ನಾನು ಎಷ್ಟು ಸಮಯದಲ್ಲಿ ಪಾಂಡವರ ಸೈನ್ಯವನ್ನು ನಾಶ ಮಾಡುವೆನು?
ಭೀಷ್ಮ
ಅನುರೂಪಂ ಕುರುಶ್ರೇಷ್ಠ ತ್ವಯ್ಯೇತದ್ ಪೃಥಿವೀಪತೇ |
ಬಲಾಬಲಮಮಿತ್ರಾಣಾಂ ತೇಷಾಂ ಯದಿಹ ಪೃಚ್ಛಸಿ ॥10॥
ಭೀಷ್ಮ ಎಲೈ ಕುರುಶ್ರೇಷ್ಠನೇ, ಪೃಥಿವೀಪತಿಯೇ, ಶತ್ರುಗಳ ಬಲಾಬಲವನ್ನು ತಿಳಿದುಕೊಳ್ಳಲು ಏನು ಪ್ರಶ್ನೆ ಮಾಡುತ್ತಿದ್ದೀಯೋ ಅದು ನಿನಗೆ ಅನುಗುಣವಾಗಿದೆ.
ಶೃಣು ರಾಜನ್ ಮಮ ರಣೇ ಯಾ ಶಕ್ತಿಃ ಪರಮಾ ಭವೇತ್ |
ಶಸ್ತ್ರವೀರ್ಯಂ ರಣೇ ಯಚ್ಚ ಭುಜಯೋಶ್ಚ ಮಹಾಭುಜ ॥11॥
ಎಲೈ ರಾಜನೇ, ಮಹಾಭುಜನೇ, ಯುದ್ಧದಲ್ಲಿ ನನ್ನ ಪರಮಶಕ್ತಿಯನ್ನೂ, ಶಸ್ತ್ರವೀರ್ಯವನ್ನೂ ಮತ್ತು ಭುಜಬಲವನ್ನೂ ಕೇಳುವವನಾಗು.
ಆರ್ಜವೇನೈವ ಯುದ್ಧೇನ ಯೋದ್ಧವ್ಯ ಇತರೋ ಜನಃ |
ಮಾಯಾಯುದ್ಧೇನ ಮಾಯಾವೀ ಇತ್ಯೇತದ್ ಧರ್ಮನಿಶ್ಚಿತಮ್ ॥12॥
ನೇರವಾಗಿ ಯುದ್ಧಮಾಡುವವನ ಜೊತೆಯಲ್ಲಿ ನೇರವಾಗಿಯೇ ಯುದ್ಧವನ್ನು ಮಾಡಬೇಕು. ಮಾಯಾ ಯುದ್ಧವನ್ನು ಮಾಡುವವನ ಜೊತೆಯಲ್ಲಿ ಮಾಯಾ ಯುದ್ಧವನ್ನೇ ಮಾಡಬೇಕು ಎಂಬುದು ಧರ್ಮದ ನಿಶ್ಚಯ.
ಹನ್ಯಾಮಹಂ ಮಹಾಭಾಗ ಪಾಂಡವಾನಾಮನೀಕಿನೀಮ್ |
ದಿವಸೇ ದಿವಸೇ ಕೃತ್ವಾ ಭಾಗಾನ್ ಭಾಗಾಧಿಕಂ ಮಮ ॥13॥
ಎಲೈ ಮಹಾನುಭಾವನೇ, ಪಾಂಡವರ ಸೈನ್ಯವನ್ನು ಹತ್ತುಸಾವಿರ ಹತ್ತುಸಾವಿರದ ಭಾಗಗಳನ್ನಾಗಿ ಮಾಡಿ ಪ್ರತಿದಿವಸವೂ ಆ ಹತ್ತುಸಾವಿರ ಭಾಗಕ್ಕಿಂತಲೂ ಅಧಿಕವಾದ ಸಂಖ್ಯೆಯ ಯೋಧರನ್ನು ಕೊಲ್ಲುವೆನು.
ರಾಜ್ಞಾಂ ತು ದಶಸಾಹಸ್ರಂ ಕೃತ್ವಾ ಭಾಗಂ ಮಹಾದ್ಯುತೇ |
ಸಹಸ್ರಂ ರಥಿನಾಮೇಕಭಾಗೋ ಮತೋ ಮಮ ॥14॥
ಎಲೈ ಮಹಾದ್ಯುತಿಯೇ, ಹತ್ತುಸಹಸ್ರ ರಾಜರ ಭಾಗ ಮತ್ತು ಸಹಸ್ರ ರಥಿಗಳ ಒಂದುಭಾಗ ಇವಿಷ್ಟು ಒಂದು ದಿನದಲ್ಲಿ ನನ್ನ ಭಾಗವೆಂದು ತಿಳಿಯುತ್ತೇನೆ.
ಅನೇನಾಹಂ ವಿಧಾನೇನ ಸನ್ನದ್ಧಃ ಸತತೋತ್ಥಿತಃ |
ಕ್ಷಪಯೇಯಂ ಮಹತ್ ಸೈನ್ಯಂ ಕಾಲೇನಾನೇನ ಭಾರತ ॥15॥
ಎಲೈ ಭಾರತನೇ, ಈ ರೀತಿಯಾಗಿ ಸಜ್ಜಾಗಿ, ಸತತ ಪ್ರಯತ್ನಶೀಲನಾಗಿ ನಾನು ಆ ದೊಡ್ಡಸೈನ್ಯವನ್ನು ಅಷ್ಟು ಕಾಲದಲ್ಲಿ (ಒಂದು ದಿನಕ್ಕೆ ಇಷ್ಟರಂತೆ ಏಳು ಅಕ್ಷೋಹಿಣಿಗಳನ್ನು ವಿನಾಶ ಮಾಡಲು ಬೇಕಾದ ಕಾಲದಲ್ಲಿ) ದೊಡ್ಡ ಸೈನ್ಯವನ್ನು ನಾಶ ಮಾಡುವೆನು.
ಮುಂಚೇಯಂ ಯದಿ ಶಸತ್ರಣಿ ಮಹಾಂತಿ ಸಮರೇ ಸ್ಥಿತಃ |

ಶತಸಾಹಸ್ರಘಾತೀನಿ ಹನ್ಯಾಂ ಮಾಸೇನ ಭಾರತ ॥16॥
ಎಲೈ ಭಾರತನೇ, ನಾನು ದೊಡ್ಡ ಯುದ್ಧದಲ್ಲಿ ನೂರು ಸಹಸ್ರ ಸೈನಿಕರನ್ನು ಕೊಲ್ಲುವ ಶಸ್ತ್ರಗಳನ್ನು ಪ್ರಯೋಗಿಸಿದರೆ ಒಂದು ತಿಂಗಳಿನಲ್ಲಿ ಪಾಂಡವರ ಸೈನ್ಯದಲ್ಲಿ ಎಲ್ಲರನ್ನೂ ಕೊಲ್ಲುವೆನು.
ಸಂಜಯಃ
ಶ್ರುತ್ವಾ ಭೀಷ್ಮಸ್ಯ ತದ್ವಾಕ್ಯಂ ರಾಜಾ ದುರ್ಯೋಧನಸ್ತತಃ |
ಪರ್ಯಪೃಚ್ಛತ ರಾಜೇಂದ್ರ ದ್ರೋಣಮಂಗಿರಸಾಂ ವರಮ್ ॥17॥
ಸಂಜಯ ಭೀಷ್ಮರ ಆ ವಾಕ್ಯವನ್ನು ಕೇಳಿ ಎಲೈ ರಾಜೇಂದ್ರನೇ, ದುರ್ಯೋಧನನು ಆಂಗಿರಸ ಪ್ರವರರಾದ ದ್ರೋಣರನ್ನು ಪ್ರಶ್ನೆ ಮಾಡಿದನು.
ಆಚಾರ್ಯ ಕೇನ ಕಾಲೇನ ಪಾಂಡುಪುತ್ರಸ್ಯ ಸೈನಿಕಾನ್ |
ನಿಹನ್ಯಾ ಇತಿ ತಂ ದ್ರೋಣಃ ಪ್ರತ್ಯುವಾಚ ಹಸನ್ನಿವ ॥18॥
ಆಚಾರ್ಯರೇ, ಎಷ್ಟು ಕಾಲದಲ್ಲಿ ಪಾಂಡವರ ಸೈನ್ಯವನ್ನು ನಾಶಮಾಡುವಿರಿ? ಎಂಬ ಪ್ರಶ್ನೆಗೆ ದ್ರೋಣರು ನಗುತ್ತಾ ಉತ್ತರವನ್ನು ನೀಡಿದರು.
ಸ್ಥವಿರೋಽಸ್ಮಿ ಮಹಾಬಾಹೋ ಮಂದಪ್ರಾಣವಿಚೇಷ್ಟಿತಃ |
ಶಸ್ತ್ರಾಗ್ನಿನಾ ನಿರ್ದಹೇಯಂ ಪಾಂಡವಾನಾಮನೀಕಿನೀಮ್ ॥19॥
ಎಲೈ ಮಹಾಬಾಹುವೇ, ನಾನು ವೃದ್ಧನಾಗಿದ್ದೇನೆ. ನನ್ನ ಪ್ರಾಣಶಕ್ತಿಯು ದುರ್ಬಲವಾಗಿದೆ. ಪಾಂಡವರ ಸೈನ್ಯವನ್ನು ಶಸ್ತ್ರಾಗ್ನಿಯಿಂದ ಸುಟ್ಟೇನು!
ಯಥಾ ಭೀಷ್ಮಃ ಶಾಂತನವೋ ಮಾಸೇನೇತಿ ಮತಿರ್ಮಮ |
ಏಷಾ ಮೇ ಪರಮಾ ಶಕ್ತಿರೇತನ್ಮೇ ಪರಮಂ ಬಲಮ್ ॥20॥
ಭೀಷ್ಮರು ಹೇಳಿದಂತೆ ಒಂದು ತಿಂಗಳಿನಲ್ಲಿ ಎಂದು ನನ್ನ ಅಭಿಪ್ರಾಯ. ಇದು ನನ್ನ ಪರಮಾವಧಿಶಕ್ತಿ ಮತ್ತು ಬಲ.
ಸಂಜಯಃ
ದ್ವಾಭ್ಯಾಮೇವ ತು ಮಾಸಾಭ್ಯಾಂ ಕೃಪಃ ಶಾರದ್ವತೋಽಬ್ರವೀತ್ |
ದ್ರೌಣಿಸ್ತು ದಶರಾತ್ರೇಣ ಪ್ರತಿಜಜ್ಞೇ ಬಲಕ್ಷಯಮ್ ॥21॥
ಕರ್ಣಸ್ತು ಪಂಚರಾತ್ರೇಣ ಪ್ರತಿಜಜ್ಞೇ ಮಹಾಸ್ತ್ರವಿತ್ ॥22॥
ಸಂಜಯ ಶಾರದ್ವತರಾದ ಕೃಪರು ಎರಡು ತಿಂಗಳಿನಲ್ಲಿ ಎಂದು ಹೇಳಿದರು. ಅಶ್ವತ್ಥಾಮರು ಪಾಂಡವರ ಸೈನ್ಯವಿನಾಶವನ್ನು ಹತ್ತುದಿನದಲ್ಲಿ ಮಾಡುವೆನು ಎಂದು ಪ್ರತಿಜ್ಞೆ ಮಾಡಿದರು. ಮಹಾಸ್ತ್ರವೇತ್ತನಾದ ಕರ್ಣನು ಐದು ದಿನದಲ್ಲಿ ಎಂದು ಪ್ರತಿಜ್ಞೆ ಮಾಡಿದನು.
ತಚ್ಛ್ರುತ್ವಾ ಸೂತಪುತ್ರಸ್ಯ ವಾಕ್ಯಂ ಸಾಗರಗಾಸುತಃ |
ಜಹಾಸ ಸಸ್ವನಂ ಹಾಸಂ ವಾಕ್ಯಂ ಚೇದಮುವಾಚ ಹ ॥23॥
ಸೂತಪುತ್ರನ ಆ ಮಾತನ್ನು ಕೇಳಿದ ಗಾಂಗೇಯರಾದ ಭೀಷ್ಮರು ಗಟ್ಟಿಯಾಗಿ ನಕ್ಕು ಈ ಮಾತನ್ನು ಆಡಿದರು.
ನ ಹಿ ಯಾವದ್ ರಣೇ ಪಾರ್ಥಂ ಬಾಣಶಂಖಧನುರ್ಧರಮ್ |
ವಾಸುದೇವಸಮಾಯುಕ್ತಂ ರಥೇನೋದ್ಯಂತಮುದ್ಯತಮ್ ॥24॥
ಸಮಾಗಚ್ಛಸಿ ರಾಧೇಯ ತ್ವಂ ನೈವಮವಮನ್ಯಸೇ |
ಶಕ್ಯಮೇವಂ ಚ ಭೂಯಶ್ಚ ತ್ವಯಾ ವಕ್ತುಂ ಯಥೇಷ್ಟತಃ ॥25॥
ಎಲೈ ರಾಧೇಯನೇ, ನೀನು ಯಾವಾಗ ಯುದ್ಧದಲ್ಲಿ ಬಾಣಶಂಖಧನುರ್ಧರನಾದ ಕೃಷ್ಣನಿಂದ ಸಹಿತನಾದ, ಶ್ರೇಷ್ಠವಾದ ರಥದಿಂದ ಸನ್ನದ್ಧನಾದ ಅರ್ಜುನನ ಸಮಾಗಮವನ್ನು ಹೊಂದುತ್ತೀಯೋ ಆಗ ಹೀಗೆ ಇನ್ನೊಬ್ಬರನ್ನು ಅವಮಾನ ಮಾಡುವುದಿಲ್ಲ. ನೀನು ನಿನ್ನ ಮನಸ್ಸಿಗೆ ಬಂದಂತೆ ಹೀಗೆ ಅಥವಾ ಇದಕ್ಕಿಂತಲೂ ಹೆಚ್ಚಿನ ಪ್ರತಾಪವನ್ನು ಹೇಳಬಹುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಪಂಚನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತಾರನೆಯ ಅಧ್ಯಾಯ
ಯುಧಿಷ್ಠಿರನ ಮುಂದೆ ಅರ್ಜುನನಿಂದ ತನ್ನ ಸಾಮರ್ಥ್ಯದ ಕಥನ.
ಸಂಜಯಃ
ಏತಚ್ಛ್ರುತ್ವಾ ತು ಕೌಂತೇಯಃ ಸರ್ವಾನ್ ಭ್ರಾತೄನುಪಹ್ವರೇ |
ಆಹೂಯ ಭರತಶ್ರೇಷ್ಠ ಇದಂ ವಚನಮಬ್ರವೀತ್ ॥1॥
ಸಂಜಯ ಇದನ್ನು ಕೇಳಿದ ಭರತಶ್ರೇಷ್ಠನಾದ ಯುಧಿಷ್ಠಿರನು ತನ್ನ ಎಲ್ಲಾ ತಮ್ಮಂದಿರನ್ನು ಏಕಾಂತದಲ್ಲಿ ಕರೆದು ಈ ಮಾತನ್ನು ಆಡಿದನು.
ಯುಧಿಷ್ಠಿರಃ

ಧಾರ್ತರಾಷ್ಟ್ರಸ್ಯ ಸೈನ್ಯೇಷು ಯೇ ಚಾರಪುರುಷಾ ಮಮ |
ತೇ ಪ್ರವೃತ್ತಿಂ ಪ್ರಯಚ್ಛಂತಿ ಮಮೇಮಾಂ ವ್ಯುಷಿತಾಂ ನಿಶಾಮ್ ॥2॥
ಯುಧಿಷ್ಠಿರ ದುರ್ಯೋಧನನ ಸೈನ್ಯದಲ್ಲಿ ನಾನು ನಿಯೋಜಿಸಿರುವ ಗೂಢಚಾರರು ನಿನ್ನೆ ರಾತ್ರಿ ಅಲ್ಲಿ ನಡೆದ ವೃತ್ತಾಂತವನ್ನು ನನಗೆ ತಿಳಿಸಿದ್ದಾರೆ.
ದುರ್ಯೋಧನಃ ಕಿಲಾಪೃಚ್ಛದಾಪಗೇಯಂ ಮಹಾವ್ರತಮ್ |
ಕೇನ ಕಾಲೇನ ಪಾಂಡೂನಾಂ ಹಂತಾ ಸೇನಾಮಿತಿ ಪ್ರಭೋ ॥3॥
ದುರ್ಯೋಧನನು ಮಹಾವ್ರತರಾದ ಭೀಷ್ಮರನ್ನು ಕುರಿತು ಪ್ರಭುವೇ, ಎಷ್ಟು ಕಾಲದಲ್ಲಿ ಪಾಂಡವರ ಸೈನ್ಯವನ್ನು ನಾಶಮಾಡುವಿರಿ ಎಂದು ಕೇಳಿದನಷ್ಟೆ!
ಮಾಸೇನೇತಿ ಚ ತೇನೋಕ್ತೋ ಧಾರ್ತರಾಷ್ಟ್ರಃ ಸುದುರ್ಮತಿಃ |
ತಾವತಾ ಚಾಪಿ ಕಾಲೇನ ದ್ರೋಣೋಽಪಿ ಪ್ರತಿಜಜ್ಞಿವಾನ್ ॥4॥
ಅವರು ಸುದುರ್ಮತಿಯಾದ ದುರ್ಯೋಧನನಿಗೆ ಒಂದು ತಿಂಗಳಿನಲ್ಲಿ ಎಂದು ಹೇಳಿದರು. ದ್ರೋಣರೂ ಸಹ ಅಷ್ಟೇ ಕಾಲದಲ್ಲಿ ಎಂದು ಪ್ರತಿಜ್ಞೆಯನ್ನು ಮಾಡಿದರು.
ಗೌತಮೋ ದ್ವಿಗುಣಂ ಕಾಲಮುಕ್ತವಾನಿತಿ ನಃ ಶ್ರುತಮ್ |
ದ್ರೌಣಿಸ್ತು ದಶರಾತ್ರೇಣ ಪ್ರತಿಜಜ್ಞೇ ಮಹಾಸ್ತ್ರವಿತ್ ॥5॥
ಕೃಪಾಚಾರ್ಯರು ಅದರ ಎರಡರಷ್ಟು ಕಾಲವನ್ನು ಹೇಳಿದರು ಎಂದು ನಾನು ಕೇಳಿದ್ದೇನೆ. ಮಹಾಸ್ತ್ರವೇತ್ತರಾದ ಅಶ್ವತ್ಥಾಮರು ಹತ್ತುದಿನಗಳಲ್ಲಿ ಎಂದು ಪ್ರತಿಜ್ಞೆ ಮಾಡಿದರು.
ತಥಾ ದಿವ್ಯಾಸ್ತ್ರವಿತ್ ಕರ್ಣಃ ಸಂಪೃಷ್ಟಃ ಕುರುಸಂಸದಿ |
ಪಂಚಭಿರ್ದಿವಸೈರ್ಹಂತುಂ ಸಸೈನ್ಯಂ ಪ್ರತ್ಯಜಾನತ ॥6॥
ಹಾಗೆಯೇ ಕುರುಸಭೆಯಲ್ಲಿ ದಿವ್ಯಾಸ್ತ್ರವೇತ್ತನಾದ ಕರ್ಣನನ್ನು ಕೇಳಿದಾಗ ಐದು ದಿನಗಳಲ್ಲಿ ನಮ್ಮ ಸೈನ್ಯದ ವಿನಾಶವನ್ನು ಅವನು ಪ್ರತಿಜ್ಞೆ ಮಾಡಿದನು.
ತಸ್ಮಾದಹಮಪೀಚ್ಛಾಮಿ ಶ್ರೋತುಮರ್ಜುನ ತತ್ತ್ವತಃ |
ಕಾಲೇನ ಕಿಯತಾ ಶತ್ರೂನ್ ಕ್ಷಪಯೇರಿತಿ ಸಂಯುಗೇ ॥7॥
ಆದ್ದರಿಂದ ನಾನೂ ಸಹ ಇದನ್ನು ಸರಿಯಾಗಿ ತಿಳಿಯಲು ಬಯಸುತ್ತೇನೆ. ಎಲೈ ಅರ್ಜುನನೇ, ಎಷ್ಟು ಕಾಲದಲ್ಲಿ ಈ ಯುದ್ಧದಲ್ಲಿ ಶತ್ರುಗಳ ಸೈನ್ಯವನ್ನು ನಾಶಪಡಿಸುವಿ?
ಸಂಜಯಃ
ಏವಮುಕ್ತೋ ಗುಡಾಕೇಶಃ ಪಾರ್ಥಿವೇನ ಧನಂಜಯಃ |
ವಾಸುದೇವಂ ಸಮೀಕ್ಷ್ಯೇದಂ ವಚನಂ ಪ್ರತ್ಯಭಾಷತ ॥8॥
ಸಂಜಯ ಹೀಗೆ ಯುಧಿಷ್ಠಿರನಿಂದ ಕೇಳಲ್ಪಟ್ಟ ಧನಂಜಯನು ಕೃಷ್ಣನನ್ನು ನೋಡುತ್ತಾ ಈ ಪ್ರತ್ಯುತ್ತರವನ್ನು ಕೊಟ್ಟನು.
ಸರ್ವ ಏತೇ ಮಹಾತ್ಮಾನಃ ಕೃತಾಸ್ತ್ರಾಶ್ಚಿತ್ರಯೋಧಿನಃ |
ಅಸಂಶಯಂ ಮಹಾರಾಜ ಹನ್ಯುರೇವ ಬಲಂ ತವ ॥9॥
ಎಲೈ ಮಹಾರಾಜನೇ, ಅವರೆಲ್ಲರೂ ಮಹಾತ್ಮರು ಮತ್ತು ಅಸ್ತ್ರವಿದ್ಯೆಯನ್ನು ಬಲ್ಲವರು ಮತ್ತು ಚಿತ್ರಯೋಧಿಗಳು. ನಿಸ್ಸಂಶಯವಾಗಿ ನಿನ್ನ ಸೈನ್ಯವನ್ನು ಕೊಲ್ಲುವರು.
ಅಪೈತು ತೇ ಮನಸ್ತಾಪೋ ಯಥಾ ಸತ್ಯಂ ಬ್ರವೀಮ್ಯಹಮ್ |
ಹನ್ಯಾಮೇಕರಥೇನೈವ ವಾಸುದೇವಸಹಾಯವಾನ್ ॥10॥
ಸಾಮರಾನಪಿ ಲೋಕಾಂಸ್ತ್ರೀನ್ ಸರ್ವಾನ್ ಸ್ಥಾವರಜಂಗಮಾನ್ |
ಭೂತಂ ಭವ್ಯಂ ಭವಿಷ್ಯಚ್ಚ ನಿಮೇಷಾದಿತಿ ಮೇ ಮತಿಃ ॥11॥
ಆದರೆ ನಿನ್ನ ಮನಸ್ಸಿನ ತಾಪವು ದೂರವಾಗಲಿ. ಏಕೆಂದರೆ ನಾನು ಸತ್ಯವನ್ನು ಹೇಳುತ್ತೇನೆ. ನಾನು ಕೃಷ್ಣನ ಸಹಾಯವನ್ನು ಹೊಂದಿ, ಒಂದು ರಥದಲ್ಲಿ ಕುಳಿತು ದೇವತೆಗಳಿಂದ ಕೂಡಿದ ಮೂರುಲೋಕಗಳನ್ನೂ, ಎಲ್ಲಾ ಸ್ಥಾವರಜಂಗಮಗಳನ್ನೂ, ಭೂತಭವಿಷ್ಯತ್ವರ್ತಮಾನಗಳನ್ನೂ ಒಂದು ನಿಮಿಷದಲ್ಲಿ ಸಂಹರಿಸುವೆನೆಂದು ನನ್ನ ಅಭಿಪ್ರಾಯ.
ಯತ್ತದ್ ಘೋರಂ ಪಶುಪತಿಃ ಪ್ರಾದಾದಸ್ತ್ರಂ ಮಹನ್ಮಮ |
ಕೈರಾತೇ ದ್ವಂದ್ವಯುದ್ಧೇ ತು ತದಿದಂ ಮಯಿ ವರ್ತತೇ ॥12॥
ಕಿರಾತನ ಜೊತೆಯಲ್ಲಿ ನಡೆದ ಘೋರವಾದ ದ್ವಂದ್ವ ಯುದ್ಧದಲ್ಲಿ ಪಶುಪತಿಯು ನೀಡಿದ ಘೋರವಾದ ಈ ಪಾಶುಪತಾಸ್ತ್ರವು ನನ್ನಲ್ಲಿದೆ.
ಯದ್ ಯುಗಾಂತೇ ಪಶುಪತಿಃ ಸರ್ವಭೂತಾನಿ ಸಂಹರನ್ |
ಪ್ರಯುಂಕ್ತೇ ಪುರುಷವ್ಯಾಘ್ರ ತದಿದಂ ಮಯಿ ವರ್ತತೇ ॥13॥
ಎಲ್ಲ ಪ್ರಾಣಿಗಳನ್ನೂ ಸಂಹರಿಸುವ ಪಶುಪತಿಯು ಯುಗಾಂತದಲ್ಲಿ ಯಾವ ಪಾಶುಪತಾಸ್ತ್ರವನ್ನು ಪ್ರಯೋಗಿಸುವನೋ, ಎಲೈ ಪುರುಷವ್ಯಾಘ್ರನೇ, ಅಂತಹ ಈ ಅಸ್ತ್ರವು ನನ್ನ ಬಳಿ ಇದೆ.
ತನ್ನ ಜಾನಾತಿ ಗಾಂಗೇಯೋ ನ ದ್ರೋಣೋ ನ ಚ ಗೌತಮಃ |
ನ ತು ದ್ರೋಣಸುತೋ ರಾಜನ್ ಕುತ ಏವ ತು ಸೂತಜಃ ॥14॥
ಭೀಷ್ಮರಾಗಲೀ, ದ್ರೋಣರಾಗಲೀ, ಕೃಪರಾಗಲೀ ಅಥವಾ ಅಶ್ವತ್ಥಾಮರಾಗಲೀ ಆ ಅಸ್ತ್ರವನ್ನು ತಿಳಿದಿಲ್ಲ. ಇನ್ನು ಕರ್ಣನು ಎಲ್ಲಿಂದ

ತಿಳಿಯಬೇಕು?
ನ ತು ಯುಕ್ತಂ ರಣೇ ಜೇತುಂ ದಿವ್ಯೈರಸ್ತ್ರೈಃ ಪೃಥಗ್ಜನಮ್ |
ಆರ್ಜವೇನೈವ ಯುದ್ಧೇನ ವಿಜೇಷ್ಯಾಮೋ ವಯಂ ಪರಾನ್ ॥15॥
ಸಾಧಾರಣ ಯೋಧರ ಮೇಲೆ ಯುದ್ಧದಲ್ಲಿ ಜಯಿಸಲು ದಿವ್ಯಾಸ್ತ್ರಗಳನ್ನು ಪ್ರಯೋಗಿಸಬಾರದು. ನೇರವಾದ ಯುದ್ಧದಿಂದಲೇ ನಾವು ಶತ್ರುಗಳನ್ನು ಗೆಲ್ಲುವೆವು.
ತಥೇಮೇ ಪುರುಷವ್ಯಾಘ್ರಾಃ ಸಮಸ್ತಾಸ್ತವ ಪಾರ್ಥಿವ |
ಸರ್ವೇ ದಿವ್ಯಾಸ್ತ್ರವಿದ್ವಾಂಸಃ ಸರ್ವೇ ಯುದ್ಧಾಭಿನಂದಿನಃ ॥16॥
ವೇದಾಂತಾವಭೃಥಸ್ನಾತಾಃ ಸರ್ವ ಏತೇಽಪರಾಜಿತಾಃ |
ನಿಹನ್ಯುಃ ಸಮರೇ ಸೇನಾಂ ದೇವಾನಾಮಪಿ ಪಾಂಡವ ॥17॥
ಎಲೈ ರಾಜನೇ, ಹಾಗೆ ಇಲ್ಲಿ ನಿನ್ನ ಬಳಿಗೆ ಬಂದಿರುವ ಪುರುಷವ್ಯಾಘ್ರರೆಲ್ಲರೂ ದಿವ್ಯಾಸ್ತ್ರಗಳನ್ನು ಹೊಂದಿದವರು, ಎಲ್ಲರೂ ಯುದ್ಧಪ್ರೇಮಿಗಳು, ವೇದದಲ್ಲಿ ಹೇಳಿದ ಕರ್ಮಗಳನ್ನು ಮಾಡಿ, ಅವಭೃಥಸ್ನಾನವನ್ನು ಮಾಡಿದವರು ಮತ್ತು ಅಪರಾಜಿತರು. ಎಲೈ ಪಾಂಡವನೇ, ಇವರು ದೇವತೆಗಳ ಸೈನ್ಯವನ್ನೂ ಕೊಂದಾರು!
ಶಿಖಂಡೀ ಯುಯುಧಾನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಭೀಮಸೇನೋ ಯಮೌ ಚೋಭೌ ಯುಧಾಮನ್ಯೂತ್ತಮೌಜಸೌ ॥18॥
ವಿರಾಟದ್ರುಪದೌ ಚೋಭೌ ಭೀಷ್ಮದ್ರೋಣಸಮೌ ಯುಧಿ |
ಶಂಖಶ್ಚೈವ ಮಹಾಬಾಹುರ್ಹೈಡಿಂಬಶ್ಚ ಮಹಾಬಲಃ ॥19॥
ಶಿಖಂಡಿ, ಯುಯುಧಾನ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಭೀಮಸೇನ, ನಕುಲ-ಸಹದೇವರು, ಯುಧಾಮನ್ಯು ಮತ್ತು ಉತ್ತಮೌಜರು, ಯುದ್ಧದಲ್ಲಿ ಭೀಷ್ಮ-ದ್ರೋಣರಿಗೆ ಸಮರಾದ ವಿರಾಟ-ದ್ರುಪದರು, ಮಹಾಬಾಹುವಾದ ಶಂಖ, ಮಹಾಬಲನಾದ ಘಟೋತ್ಕಚ;
ಪುತ್ರೋಽಸ್ಯಾಂಜನಪರ್ವಾ ತು ಮಹಾಬಲಪರಾಕ್ರಮಃ |
ಶೈನೇಯಶ್ಚ ಮಹಾಬಾಹುಃ ಸಹಾಯೋ ರಣಕೋವಿದಃ ॥20॥
ಮಹಾಬಲಪರಾಕ್ರಮವುಳ್ಳ ಘಟೋತ್ಕಚಪುತ್ರನಾದ ಅಂಜನಪರ್ವ, ಮಹಾಬಾಹುವೂ, ರಣಕೋವಿದನೂ, ನಮ್ಮ ಸಹಾಯನೂ ಆದ ಸಾತ್ಯಕಿ (ಎಲ್ಲರೂ ಸಮರ್ಥರಾಗಿದ್ದಾರೆ).
ಅಭಿಮನ್ಯುಶ್ಚ ಬಲವಾನ್ ದ್ರೌಪದ್ಯಾಃ ಪಂಚ ಚಾತ್ಮಜಾಃ |
ಸ್ವಯಂ ಚಾಪಿ ಸಮರ್ಥೋಽಸಿ ತ್ರೈಲೋಕ್ಯೋತ್ಸಾದನೇಽಪಿ ಚ ॥21॥
ಬಲಿಷ್ಠನಾದ ಅಭಿಮನ್ಯು, ದ್ರೌಪದಿಯ ಐದುಮಕ್ಕಳು ಮತ್ತು ನೀನೂ ಸಹ ಮೂರುಲೋಕಗಳನ್ನೂ ಅಳಿಸಿಹಾಕುವುದಕ್ಕೆ ಸಮರ್ಥನಾಗಿದ್ದೀಯೆ.
ಕ್ರೋಧಾದ್ ಯಂ ಪುರುಷಂ ಪಶ್ಯೇಸ್ತಥಾ ಶಕ್ರಸಮದ್ಯುತೇ |
ಸ ಕ್ಷಿಪ್ರಂ ನ ಭವೇದ್ ವ್ಯಕ್ತಮಿತಿ ತ್ವಾಂ ವೇದ್ಮಿ ಕೌರವ ॥22॥
ಎಲೈ ಇಂದ್ರನಿಗೆ ಸಮಾನವಾದ ಕಾಂತಿಯುಳ್ಳ ಕೌರವನೇ, ನೀನು ಯಾವ ಪುರುಷನನ್ನು ಕ್ರೋಧದಿಂದ ನೋಡುವಿಯೋ ಅವನು ಕ್ಷಿಪ್ರವಾಗಿ ಮರಣವನ್ನು ಹೊಂದುವನು. ಈ ನಿನ್ನ ಸಾಮರ್ಥ್ಯವನ್ನು ನಾನು ತಿಳಿದಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಷಣ್ಣವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೇಳನೆಯ ಅಧ್ಯಾಯ
ದುರ್ಯೋಧನನಿಂದ ಮೂರುಭಾಗವನ್ನಾಗಿ ಮಾಡಿ ಸೇನೆಯ ಪ್ರಸ್ಥಾನ.
ಎಲ್ಲರ ಶಿಬಿರ ಪ್ರವೇಶ.
ವೈಶಂಪಾಯನಃ
ತತಃ ಪ್ರಭಾತೇ ವಿಮಲೇ ಧಾರ್ತರಾಷ್ಟ್ರೇಣ ಚೋದಿತಾಃ |
ದುರ್ಯೋಧನೇನ ರಾಜಾನಃ ಪ್ರಯಯುಃ ಪಾಂಡವಾನ್ ಪ್ರತಿ ॥1॥
ವೈಶಂಪಾಯನ ಅನಂತರ ನಿರ್ಮಲವಾದ ಪ್ರಾತಃಕಾಲದಲ್ಲಿ ಧೃತರಾಷ್ಟ್ರ ಪುತ್ರನಾದ ದುರ್ಯೋಧನನಿಂದ ಪ್ರೇರಿತರಾದ ರಾಜರು ಪಾಂಡವರಿಗೆ ಎದುರಾಗಿ ಹೋದರು.
ಆಪ್ಲಾವ್ಯ ಶುಚಯಃ ಸರ್ವೇ ಸ್ರಗ್ವಿಣಃ ಶುಕ್ಲವಾಸಸಃ |
ಗೃಹೀತಶಸ್ತ್ರಾ ಧ್ವಜಿನಃ ಸ್ವಸ್ತಿ ವಾಚ್ಯ ಹುತಾಗ್ನಯಃ ॥2॥
ಸರ್ವೇ ಬ್ರಹ್ಮವಿದಃ ಶೂರಾಃ ಸರ್ವೇ ಸುಚರಿತವ್ರತಾಃ |
ಸರ್ವೇ ಧರ್ಮಕೃತಶ್ಚೈವ ಸರ್ವೇ ಚಾಹಿತಲಕ್ಷಣಾಃ ॥3॥
ಎಲ್ಲರೂ ಸ್ನಾನವನ್ನು ಮಾಡಿ ಶುದ್ಧರಾಗಿ, ಮಾಲೆಗಳನ್ನು ಧರಿಸಿ, ಶುಕ್ಲವಸ್ತ್ರಗಳನ್ನು ಧರಿಸಿ, ಅಗ್ನಿಕಾರ್ಯವನ್ನು ಮಾಡಿ,

ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು, ಶಸ್ತ್ರಗಳನ್ನು ಮತ್ತು ಧ್ವಜಗಳನ್ನು ಹಿಡಿದು ಬ್ರಹ್ಮಜ್ಞಾನಿಗಳೂ, ಶೂರರೂ, ಒಳ್ಳೆಯ ವ್ರತವನ್ನು ಆಚರಿಸಿದವರೂ, ಧರ್ಮವನ್ನು ಆಚರಿಸಿದವರೂ, ಲಕ್ಷಣವಂತರೂ ಆದ ಎಲ್ಲರೂ (ಹೊರಟರು).
ಆಹವೇಷು ಪರಾನ್ ಲೋಕಾನ್ ಜಿಗೀಷಂತೋ ಮಹಾಬಲಾಃ।
ಏಕಾಗ್ರಮನಸಃ ಸರ್ವೇ ಶ್ರದ್ದಧಾನಾಃ ಪರಸ್ಯ ಚ ॥4॥
ವಿಂದಾನುವಿಂದಾವಾವಂತ್ಯೌ ಕೇಕಯಾ ಬಾಹ್ಲಿಕೈಃ ಸಹ।
ಪ್ರಯಯುಃ ಸರ್ವ ಏವೈತೇ ಭಾರದ್ವಾಜಪುರೋಗಮಾಃ ॥5॥
ಯುದ್ಧದಲ್ಲಿ ಪರಲೋಕವನ್ನು ಗೆಲ್ಲಲು ಆಶಿಸಿ, ಮಹಾಬಲರಾದ ಅವರೆಲ್ಲರೂ ಏಕಾಗ್ರಚಿತ್ತದಿಂದ ಒಬ್ಬರಲ್ಲೊಬ್ಬರು ವಿಶ್ವಾಸವನ್ನು ಮಾಡುತ್ತಾ (ಹೊರಟರು). ಅವಂತಿದೇಶದ ವಿಂದಾನುವಿಂದರು, ಕೇಕಯರು, ಬಾಹ್ಲಿಕರು ಇವರೆಲ್ಲರೂ ದ್ರೋಣರನ್ನು ಮುಂದೆ ಮಾಡಿಕೊಂಡು ಹೊರಟರು.
ಅಶ್ವತ್ಥಾಮಾ ಶಾಂತನವಃ ಸೈಂಧವೋಽಥ ಜಯದ್ರಥಃ।
ದಾಕ್ಷಿಣಾತ್ಯಾಃ ಪ್ರತೀಚ್ಯಾಶ್ಚ ಪಾರ್ವತೀಯಾಶ್ಚ ಯೇ ನೃಪಾಃ ॥6॥
ಗಾಂಧಾರರಾಜಃ ಶಕುನಿಃ ಪ್ರಾಚ್ಯೋದೀಚ್ಯಾಶ್ಚ ಸರ್ವಶಃ।
ಶಕಾಃ ಕಿರಾತಾ ಯವನಾಃ ಶಿಬಯೋಽಥ ವಸಾತಯಃ ॥7॥
ಸ್ವೈಃ ಸ್ವೈರನೀಕೈಃ ಸಹಿತಾಃ ಪರಿವಾರ್ಯ ಮಹಾರಥಾಃ ॥8॥
ಏತೇ ಮಹಾರಥಾಃ ಸರ್ವೇ ದ್ವಿತೀಯೇ ನಿರ್ಯಯುರ್ಬಲೇ ॥9॥
ಅಶ್ವತ್ಥಾಮರು, ಭೀಷ್ಮರು, ಸಿಂಧುರಾಜನಾದ ಜಯದ್ರಥ, ದಕ್ಷಿಣದೇಶದ ಪಶ್ಚಿಮದೇಶದ ಮತ್ತು ಪರ್ವತ ಪ್ರಾಂತದ ರಾಜರು, ಗಾಂಧಾರ ರಾಜನಾದ ಶಕುನಿ, ಪೂರ್ವ ಮತ್ತು ಉತ್ತರ ದಿಕ್ಕಿನ ಎಲ್ಲ ರಾಜರು, ಶಕರು, ಕಿರಾತರು, ಯವನರು, ಶಿಬಿಗಳು, ವಸಾತಿಗಳು ಈ ಮಹಾರಥರಾದ ಎಲ್ಲರೂ ತಮ್ಮ ತಮ್ಮ ಸೈನ್ಯದ ಗುಂಪುಗಳಿಂದ ಕೂಡಿ, ಅವರಿಂದ ಸುತ್ತುವರಿಯಲ್ಪಟ್ಟು ಸೈನ್ಯದ ಎರಡನೆಯ ಭಾಗದಲ್ಲಿ ಸಾಗಿದರು.
ಕೃತವರ್ಮಾ ಸಹಾನೀಕಃ ತ್ರಿಗರ್ತಶ್ಚ ಮಹಾರಥಃ।
ದುರ್ಯೋಧನಶ್ಚ ನೃಪತಿರ್ಭ್ರಾತೃಭಿಃ ಪರಿವಾರಿತಃ ॥10॥
ಶಲೋ ಭೂರಿಶ್ರವಾಃ ಶಲ್ಯಃ ಕೌಸಲ್ಯೋಽಥ ಬೃಹದ್ಬಲಃ।
ಏತೇ ಪಶ್ಚಾದವರ್ತಂತ ಧಾರ್ತರಾಷ್ಟ್ರಪುರೋಗಮಾಃ ॥11॥
ಸೈನ್ಯದಿಂದ ಸಹಿತನಾದ ಕೃತವರ್ಮ, ಮಹಾರಥನಾದ ತ್ರಿಗರ್ತ, ತಮ್ಮಂದಿರಿಂದ ಸಹಿತನಾದ ದುರ್ಯೋಧನ, ಶಲ, ಭೂರಿಶ್ರವ, ಶಲ್ಯ, ಕೋಸಲದೇಶದ ರಾಜನಾದ ಬೃಹದ್ಬಲ ಇವರೆಲ್ಲರೂ ದುರ್ಯೋಧನನನ್ನು ಮುಂದೆ ಮಾಡಿಕೊಂಡು ಹಿಂದಿನಿಂದ (ಮೂರನೆಯ ಭಾಗದಲ್ಲಿ) ನಡೆದರು.
ತೇ ಸಮೇತ್ಯ ಯಥಾನ್ಯಾಯಂ ಧಾರ್ತರಾಷ್ಟ್ರಾ ಮಹಾಬಲಾಃ।
ಕುರುಕ್ಷೇತ್ರಸ್ಯ ಪಶ್ಚಾರ್ಧೇ ವ್ಯವಾತಿಷ್ಠಂತ ದಂಸಿತಾಃ ॥12॥
ಮಹಾಬಲರಾದ ದುರ್ಯೋಧನಾದಿಗಳು ನ್ಯಾಯಕ್ಕೆ ಅನುಗುಣವಾಗಿ ಜೊತೆಯಲ್ಲಿ ಹೋಗಿ ಕವಚಗಳನ್ನು ಧರಿಸಿ, ಕುರುಕ್ಷೇತ್ರದ ಹಿಂದಿನ ಭಾಗದ ಅರ್ಧದಲ್ಲಿ ಎಂದರೆ ಪೂರ್ವಭಾಗದಲ್ಲಿ ನೆಲೆಸಿದರು (ವಾದಿರಾಜರು).
ದುರ್ಯೋಧನಸ್ತು ಶಿಬಿರಂ ಕಾರಯಾಮಾಸ ಭಾರತ।
ಯಥೈವ ಹಸ್ತಿನಪುರಂ ದ್ವಿತೀಯಂ ಸಮಲಂಕೃತಮ್ ॥13॥
ಎಲೈ ಭಾರತನೇ, ದುರ್ಯೋಧನನು ಅಲಂಕೃತವಾದ ಇನ್ನೊಂದು ಹಸ್ತಿನಪುರದಂತಿರುವ ಶಿಬಿರವನ್ನು ಮಾಡಿಸಿದನು.
ನ ವಿಶೇಷಂ ವಿಜಾನಂತಿ ಪುರಸ್ಯ ಶಿಬಿರಸ್ಯ ವಾ।
ಕುಶಲಾ ಅಪಿ ರಾಜೇಂದ್ರ ನರಾ ನಗರವಾಸಿನಃ ॥14॥
ಎಲೈ ರಾಜೇಂದ್ರನೇ, ಕುಶಲರಾದ ನಗರವಾಸಿಗಳಾದ ಮನುಷ್ಯರೂ ಸಹ ಪಟ್ಟಣಕ್ಕೂ ಮತ್ತು ಶಿಬಿರಕ್ಕೂ ಯಾವ ವ್ಯತ್ಯಾಸವನ್ನೂ ಕಾಣುತ್ತಿರಲಿಲ್ಲ.
ತಾದೃಶಾನ್ಯೇವ ದುರ್ಗಾಣಿ ರಾಜ್ಞಾಮಪಿ ಮಹೀಪತಿಃ।
ಕಾರಯಾಮಾಸ ಕೌರವ್ಯಃ ಶತಶೋಽಥ ಸಹಸ್ರಶಃ ॥15॥
ರಾಜನಾದ ದುರ್ಯೋಧನನು ರಾಜರಿಗೂ ಸಹ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಅಂತಹದೇ ದುರ್ಗಗಳನ್ನು ಮಾಡಿಸಿದನು.
ಪಂಚಯೋಜನವಿಸ್ತೀರ್ಣಂ ಮಂಡಲಂ ತದ್ರಣಾಜಿರಮ್।
ಸೇನಾನಿವೇಶಾಂಸ್ತೇ ರಾಜನ್ನಾವಿಶನ್ ಶತಸಂಘಶಃ ॥16॥
ಎಲೈ ರಾಜನೇ, ಐದು ಯೋಜನ ವರ್ತುಲಾಕಾರವಾಗಿ ವಿಸ್ತಾರವಾಗಿದ್ದ ಆ ರಣಭೂಮಿಯನ್ನು ಅವರು ನೂರರ ಸಮೂಹಗಳಲ್ಲಿ ಪ್ರವೇಶ ಮಾಡಿ ನೆಲೆಸಿದರು.
ತತ್ರ ತೇ ಪೃಥಿವೀಪಾಲಾ ಯಥೋತ್ಸಾಹಂ ಯಥಾಬಲಮ್।
ವಿವಿಶುಃ ಶಿಬಿರಾಣ್ಯತ್ರ ದ್ರವ್ಯವಂತಿ ಸಹಸ್ರಶಃ ॥17॥
ಅಲ್ಲಿ ಆ ರಾಜರು ತಮ್ಮ ಬಲಕ್ಕೆ, ತಮ್ಮ ಅಭಿರುಚಿಗೆ ತಕ್ಕಂತೆ ಎಲ್ಲ ಸಲಕರಣೆಗಳಿಂದ ಕೂಡಿದ ಸಹಸ್ರಾರು ಶಿಬಿರಗಳನ್ನು ಪ್ರವೇಶಿಸಿದರು.
ತೇಷಾಂ ದುರ್ಯೋಧನೋ ರಾಜಾ ಸಸೈನ್ಯಾನಾಂ ಮಹಾತ್ಮನಾಮ್।

ವ್ಯಾದಿದೇಶ ಸಬಾಹ್ಯಾನಾಂ ಭಕ್ಷ್ಯಭೋಜ್ಯಮನುತ್ತಮಮ್ ॥18॥
ದುರ್ಯೋಧನನು ಸೈನ್ಯದಿಂದ ಸಹಿತರಾದ ಆ ಮಹಾತ್ಮರಿಗೆ ಮತ್ತು ಹೊರಗಿನವರಿಗೂ ಮತ್ತು ಅಶ್ವ-ಗಜ-ಮನುಷ್ಯರಿಗೂ ಸಹ ಶ್ರೇಷ್ಠವಾದ ಭಕ್ಷ್ಯ-ಭೋಜ್ಯಗಳನ್ನು ಒದಗಿಸಿದನು.
ಸನಾಗಾಶ್ವಮನುಷ್ಯಾಣಾಂ ಯೇ ಚ ಶಿಲ್ಪೋಪಜೀವಿನಃ |
ಯೇ ಚಾನ್ಯೇಽನುಗತಾಸ್ತತ್ರ ಸೂತಮಾಗಧವಂದಿನಃ ॥19॥
ವಣಿಜೋ ಗಣಿಕಾಶ್ಚಾರಾ ಯೇ ಚೈವ ಪ್ರೇಕ್ಷಕಾ ಜನಾಃ |
ಸರ್ವಾಂಸ್ತಾನ್ ಕೌರವೋ ರಾಜಾ ವಿಧಿವತ್ ಪರ್ಯರಕ್ಷತ ॥20॥
ಯಾರು ಕುಶಲಕರ್ಮಿಗಳೋ ಮತ್ತು ಅಲ್ಲಿಗೆ ಪ್ರಾಪ್ತರಾದ ಸೂತಮಾಗಧವಂದಿಗಳೋ ಅವರಿಗೂ ವರ್ತಕರು, ವೇಶ್ಯೆಯರು, ಗೂಢಚಾರರು, ಪ್ರೇಕ್ಷಕರು ಎಲ್ಲರನ್ನೂ ವಿಧಿಗೆ ಅನುಗುಣವಾಗಿ ಕೌರವ ರಾಜನಾದ ದುರ್ಯೋಧನನು ರಕ್ಷಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ ಸಪ್ತನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೆಂಟನೆಯ ಅಧ್ಯಾಯ
ಯುಧಿಷ್ಠಿರನಿಂದಲೂ ಸೈನ್ಯವನ್ನು ಮೂರುಭಾಗವಾಗಿ ಮಾಡಿ ಕುರುಕ್ಷೇತ್ರಕ್ಕೆ ಪ್ರಸ್ಥಾನ.
ವೈಶಂಪಾಯನಃ
ತಥೈವ ರಾಜಾ ಕೌಂತೇಯೋ ಧರ್ಮಪುತ್ರೋ ಯುಧಿಷ್ಠಿರಃ |
ಧೃಷ್ಟದ್ಯುಮ್ನಮುಖಾನ್ ವೀರಾನ್ ಚೋದಯಾಮಾಸ ಭಾರತ ॥1॥
ವೈಶಂಪಾಯನ ಎಲ್ಲೈ ಭಾರತನೇ, ಹಾಗೆಯೇ ಕುಂತೀಪುತ್ರನಾದ, ಧರ್ಮಪುತ್ರನಾದ ಯುಧಿಷ್ಠಿರನು ಧೃಷ್ಟದ್ಯುಮ್ನ ಮೊದಲಾದ ತನ್ನ ವೀರರನ್ನು ಪ್ರಚೋದಿಸಿದನು.
ಚೇದಿಕಾಶಿಕರೂಶಾನಾಂ ನೇತಾರಂ ದೃಢವಿಕ್ರಮಮ್ |
ಸೇನಾಪತಿಮಮಿತ್ರಘ್ನಂ ಧೃಷ್ಟಕೇತುಮಥಾದಿಶತ್ ॥2॥
ಚೇದಿಗಳು, ಕಾಶಿ-ಕರೂಶರು ಇವರಿಗೆ ನೇತಾರನಾಗಿ ದೃಢವಿಕ್ರಮನೂ, ಶತ್ರುಸಂಹಾರಕನೂ, ಸೇನಾಪತಿಯೂ ಆದ ಧೃಷ್ಟಕೇತುವನ್ನು ನೇಮಿಸಿದನು.
ವಿರಾಟಂ ದ್ರುಪದಂ ಚೈವ ಯುಯುಧಾನಂ ಶಿಖಂಡಿನಮ್ |
ಪಾಂಚಾಲ್ಯೌ ಚ ಮಹೇಷ್ವಾಸೌ ಯುಧಾಮನ್ಯೂತ್ತಮೌಜಸೌ ॥3॥
ತೇ ಶೂರಾಶ್ಚಿತ್ರವರ್ಮಾಣಃ ತಪ್ತಕುಂಡಲಧಾರಿಣಃ |
ಆಜ್ಯಾವಸಿಕ್ತಾ ಜ್ವಲಿತಾ ಧಿಷ್ಣ್ಯೇಷ್ವಿವ ಹುತಾಶನಾಃ ॥4॥
ಅಶೋಭಂತ ಮಹೇಷ್ವಾಸಾ ಗ್ರಹಾಃ ಪ್ರಜ್ವಲಿತಾ ಇವ ॥5॥
ವಿರಾಟ-ದ್ರುಪದರೂ, ಯುಯುಧಾನ, ಶಿಖಂಡಿ, ಮಹಾಧನುರ್ಧಾರಿಗಳಾದ ಪಾಂಚಾಲ ದೇಶದ ಯುಧಾಮನ್ಯುಮತ್ತು ಉತ್ತಮೌಜರೂ ಶೂರರಾದ ಇವರೆಲ್ಲರೂ ವಿಚಿತ್ರವಾದ ಕವಚಗಳನ್ನು ಧರಿಸಿ, ತಪ್ತಕುಂಡಲಗಳನ್ನು ಧರಿಸಿ, ಕುಂಡಗಳಲ್ಲಿರುವ ಆಜ್ಯಸಿಕ್ತವಾದ ಅಗ್ನಿಗಳಂತೆ ಪ್ರಕಾಶಿಸುತ್ತಾ, ಪ್ರಜ್ವಲಿಸುವ ಗ್ರಹಗಳಂತೆ ಮಹಾಧನುರ್ಧಾರಿಗಳಾಗಿ ಅವರು ಶೋಭಿಸಿದರು.
ಅಥ ಸೈನ್ಯಂ ಯಥಾಯೋಗಂ ಪೂಜಯಿತ್ವಾ ನರರ್ಷಭಃ |
ದಿದೇಶ ತಾನ್ಯನೀಕಾನಿ ಪ್ರಯಾಣಾಯ ಮಹೀಪತಿಃ ॥6॥
ಅನಂತರ ನರಶ್ರೇಷ್ಠನಾದ ಯುಧಿಷ್ಠಿರನು ಆ ಸೈನ್ಯವನ್ನು ಯಥಾಯೋಗ್ಯವಾಗಿ ಪೂಜಿಸಿ ಪ್ರಯಾಣವನ್ನು ಮಾಡಲು ಆದೇಶಿಸಿದನು.
ಅಭಿಮನ್ಯುಂ ಬೃಹಂತಂ ಚ ದ್ರೌಪದೇಯಾಂಶ್ಚ ಸರ್ವಶಃ |
ಧೃಷ್ಟದ್ಯುಮ್ನಮುಖಾನೇತಾನ್ ಪ್ರಾಹಿಣೋತ್ ಪಾಂಡುನಂದನಃ ॥7॥
ಪಾಂಡುನಂದನನಾದ ಅವನು ಅಭಿಮನ್ಯು, ಬೃಹಂತ, ದ್ರೌಪದಿಯ ಮಕ್ಕಳು ಇವರನ್ನು ಧೃಷ್ಟದ್ಯುಮ್ನನನ್ನು ಮುಂದೆ ಮಾಡಿ ಮೊದಲು ಕಳುಹಿಸಿದನು.
ಭೀಮಂ ಚ ಯುಯುಧಾನಂ ಚ ಪಾಂಡವಂ ಚ ಧನಂಜಯಮ್ |
ದ್ವಿತೀಯಂ ಪ್ರೇಷಯಾಮಾಸ ಬಲಸ್ಕಂಧಂ ಯುಧಿಷ್ಠಿರಃ ॥8॥
ಯುಧಿಷ್ಠಿರನು ಭೀಮಸೇನ, ಯುಯುಧಾನ, ಅರ್ಜುನ ಇವರನ್ನು ಸೈನ್ಯದ ಎರಡನೆಯ ಭಾಗವಾಗಿ ಕಳುಹಿಸಿದನು.
ಭಾಂಡಂ ಸಮಾರೋಪಯತಾಂ ಚರತಾಂ ಸಂಪ್ರಧಾವತಾಮ್ |
ಹೃಷ್ಟಾನಾಂ ತತ್ರ ಯೋಧಾನಾಂ ಶಬ್ದೋ ದಿವಮಿವಾಸ್ಪೃಶತ್ ॥9॥
ಆಗ ರಥಗಳಿಗೆ ಯುದ್ಧೋಪಕರಣಗಳನ್ನು ನಿಯೋಜಿಸುವ, ಸಂಚರಿಸುವ, ಸಂತೋಷದಿಂದ ಓಡಾಡುವ ಯೋಧರ ಶಬ್ದವು ಆಕಾಶವನ್ನು ಮುಟ್ಟಿತು.
ಸ್ವಯಮೇವ ತತಃ ಪಶ್ಚಾದ್ ವಿರಾಟದ್ರುಪದಾನ್ವಿತಃ |

ಅಥಾಪರೈರ್ಮಹೀಪಾಲೈಃ ಸಹ ಪ್ರಾಯಾನ್ ಮಹಾಬಲಃ ॥10॥
ಮಹಾಬಲನಾದ ಯುಧಿಷ್ಠಿರನು ಹಿಂಭಾಗದಲ್ಲಿ ವಿರಾಟ-ದ್ರುಪದರಿಂದಲೂ ಉಳಿದ ರಾಜರಿಂದಲೂ ಸಹಿತನಾಗಿ ತಾನೇ ನಡೆದನು.
ಭೀಮಧನ್ವಾಽಽಯತೀ ಸೇನಾ ಧೃಷ್ಟದ್ಯುಮ್ನೇನ ಪಾಲಿತಾ |
ಗಂಗೇವ ಪೂರ್ಣಾ ಸ್ತಿಮಿತಾ ಸ್ಯಂದಮಾನಾ ವ್ಯದೃಶ್ಯತ ॥11॥
ಧೃಷ್ಟದ್ಯುಮ್ನನಿಂದ ಪಾಲಿತವಾದ, ಭಯಂಕರವಾದ ಮತ್ತು ವಿಸ್ತಾರವಾದ ಆ ಸೈನ್ಯವು ಪೂರ್ಣಪ್ರವಾಹದಿಂದ ಹರಿಯುವ ಗಂಗೆಯಂತೆ ಕಂಡುಬಂದಿತು.
ತತಃ ಪುನರನೀಕಾನಿ ನ್ಯಯೋಜಯತ ಬುದ್ಧಿಮಾನ್ |
ಮೋಹಯನ್ ಧೃತರಾಷ್ಟ್ರಸ್ಯ ಪುತ್ರಾಣಾಂ ಬುದ್ಧಿನಿಶ್ಚಯಮ್ ॥12॥
ಮೇಧಾವಿಯಾದ ಯುಧಿಷ್ಠಿರನು ದುರ್ಯೋಧನಾದಿಗಳ ಬುದ್ಧಿಗೆ ಮೋಹವನ್ನು ಉಂಟುಮಾಡುತ್ತಾ ಪುನಃ ತನ್ನ ಸೈನ್ಯವನ್ನು ನಿಯೋಜಿಸಿದನು.
ದ್ರೌಪದೇಯಾನ್ ಮಹೇಷ್ವಾಸಾನಭಿಮನ್ಯುಂ ಚ ಭಾರತ |
ನಕುಲಂ ಸಹದೇವಂ ಚ ಸರ್ವಾಂಶ್ಚೈವ ಪ್ರಭದ್ರಕಾನ್ ॥13॥
ದಶ ಚಾಶ್ವಸಹಸ್ರಾಣಿ ದ್ವಿಸಹಸ್ರಾಣಿ ದಂತಿನಾಮ್ |
ಅಯುತಂ ಚ ಪದಾತೀನಾಂ ರಥಾನ್ ಪಂಚಶತಂ ತಥಾ ॥14॥
ಭೀಮಸೇನಂ ಚ ದುರ್ಧರ್ಷಂ ಪ್ರಥಮಂ ಪ್ರಾದಿಶದ್ ಬಲಮ್ |
ಎಲೈ ಭಾರತನೇ, ದ್ರೌಪದಿಯ ಐದುಮಕ್ಕಳು, ಮಹಾಧನುರ್ಧಾರಿಯಾದ ಅಭಿಮನ್ಯು, ನಕುಲ-ಸಹದೇವರು, ಎಲ್ಲಾ ಪ್ರಭದ್ರಕರು, ಹತ್ತುಸಾವಿರ ಅಶ್ವಗಳು, ಎರಡುಸಾವಿರ ಗಜಗಳು, ಹತ್ತುಸಾವಿರ ಪದಾತಿಗಳು, ಐದುನೂರು ರಥಗಳು ಮತ್ತು ದುರ್ಧರ್ಷನಾದ ಭೀಮಸೇನ ಇವರನ್ನು ಸೈನ್ಯದ ಮೊದಲ ಭಾಗವಾಗಿ ಕಳುಹಿಸಿದನು.
ಮಧ್ಯಮೇ ಚ ವಿರಾಟಂ ಚ ಜಯತ್ಸೇನಂ ಚ ಮಾಗಧಮ್ ॥15॥
ಮಹಾರಥೌ ಮಹಾತ್ಮಾನೌ ಯುಧಾಮನ್ಯೂತ್ತಮೌಜಸೌ |
ವೀರ್ಯವಂತೌ ಮಹಾತ್ಮಾನೌ ಗದಾಕಾರ್ಮುಕಧಾರಿಣೌ ॥16॥
ಅನ್ವಯಾತಾಂ ತದಾ ಮಧ್ಯೇ ವಾಸುದೇವಧನಂಜಯೌ ॥17॥
ಮಧ್ಯಭಾಗದಲ್ಲಿ ವಿರಾಟ, ಮಗಧದೇಶದ ಜಯತ್ಸೇನ, ಮಹಾರಥರೂ ಮತ್ತು ಮಹಾತ್ಮರೂ ಆದ ಯುಧಾಮನ್ಯು ಮತ್ತು ಉತ್ತಮೌಜರು- ಪರಾಕ್ರಮಶಾಲಿಗಳಾದ ಅವರು ಗದಾಕಾರ್ಮುಕಧಾರಿಗಳಾಗಿದ್ದರು- ಮತ್ತು ಕೃಷ್ಣಾರ್ಜುನರು ಮಧ್ಯಭಾಗದಲ್ಲಿ ಮುಂದೆ ನಡೆದರು.
ಬಭೂವುರತಿಸಂರಬ್ಧಾಃ ಕೃತಪ್ರಹರಣಾ ನರಾಃ |
ತೇಷಾಂ ವಿಂಶತಿಸಾಹಸ್ರಾ ಹಯಾಃ ಶೂರೈರಧಿಷ್ಠಿತಾಃ ॥18॥
ಆ ಯೋಧರು ಬಹಳ ಕೋಪದಿಂದ ಕೂಡಿದವರಾಗಿ ಎಲ್ಲ ಶಸ್ತ್ರಗಳನ್ನು ಬಲ್ಲವರಾಗಿದ್ದರು. ಅವರಲ್ಲಿ ಇಪ್ಪತ್ತು ಸಾವಿರ ಶೂರರು ಅಶ್ವಾರೋಹಿಗಳಾಗಿದ್ದರು.
ಪಂಚ ನಾಗಸಹಸ್ರಾಣಿ ರಥವಂಶಾಶ್ಚ ಸರ್ವಶಃ ॥19॥
ಪದಾತಯಶ್ಚ ಯೇ ಶೂರಾಃ ಕಾರ್ಮುಕಾಸಿಗದಾಧರಾಃ |
ಸಹಸ್ರಶೋಽನ್ವಯುಃ ಪಶ್ಚಾದಗ್ರತಶ್ಚ ಸಹಸ್ರಶಃ ॥20॥
ಐದುಸಹಸ್ರ ಗಜಗಳು ಮತ್ತು ರಥಗಳ ಸಮೂಹಗಳು ಅವರಿಗೆ ಎಲ್ಲ ಕಡೆಯಲ್ಲೂ ಇದ್ದವು. ಅವರ ಮುಂಭಾಗದಲ್ಲಿ ಮತ್ತು ಹಿಂದುಗಡೆ ಧನುಸ್ಸು, ಖಡ್ಗ ಮತ್ತು ಗದೆಗಳನ್ನು ಧರಿಸಿದ, ಶೂರರಾದ ಪದಾತಿಗಳು ಸಹಸ್ರ ಸಂಖ್ಯೆಯಲ್ಲಿ ನಡೆದರು.
ಯುಧಿಷ್ಠಿರೋ ಯತ್ರ ಸೈನ್ಯೇ ಯತ್ರ ಚೈವ ಚ ಫಲ್ಗುನಃ |
ತತ್ರ ತೇ ಪೃಥಿವೀಪಾಲಾ ಭೂಯಿಷ್ಠಂ ಪರ್ಯವಸ್ಥಿತಾಃ ॥21॥
ತತ್ರ ನಾಗಸಹಸ್ರಾಣಿ ಹಯಾನಾಮಯುತಾನಿ ಚ ॥22॥
ಯಾವ ಸೈನ್ಯದ ಭಾಗದಲ್ಲಿ ಯುಧಿಷ್ಠಿರನಿದ್ದನೋ, ಅರ್ಜುನನಿದ್ದನೋ ಅಲ್ಲಿ ರಾಜರು ಅಧಿಕ ಸಂಖ್ಯೆಯಲ್ಲಿ ಇದ್ದರು. ಅಲ್ಲಿ ಸಹಸ್ರಾರು ಗಜಗಳೂ ಮತ್ತು ಹತ್ತಾರು ಸಾವಿರ ಅಶ್ವಗಳೂ ಇದ್ದವು.
ಚೇಕಿತಾನಃ ಸ್ವಸೈನ್ಯೇನ ಮಹತಾ ಪಾರ್ಥಿವರ್ಷಭಃ |
ಧೃಷ್ಟಕೇತುಶ್ಚ ಚೇದೀನಾಂ ಪ್ರಣೇತಾ ತತ್ರ ವಾಹಿನೀಮ್ ॥23॥
ಅಲ್ಲಿ ಪಾರ್ಥಿವಶ್ರೇಷ್ಠನಾದ ಚೇಕಿತಾನನು ತನ್ನ ಸೈನ್ಯಕ್ಕೂ ಮತ್ತು ಚೇದಿಯ ಅಧಿಪತಿಯಾದ ಧೃಷ್ಟಕೇತುವು ತನ್ನ ಸೈನ್ಯಕ್ಕೂ ನಾಯಕರಾಗಿದ್ದರು.
ಸಾತ್ಯಕಿಶ್ಚ ಮಹೇಷ್ವಾಸೋ ವೃಷ್ಣೀನಾಂ ಪ್ರವರೋ ರಥಃ |
ವೃತಃ ಶತಸಹಸ್ರೇಣ ರಥಾನಾಂ ಪ್ರಾಣದದ್ ಬಲೀ ॥24॥
ಮಹಾಧನುರ್ಧಾರಿಯಾದ, ವೃಷ್ಣಿಶ್ರೇಷ್ಠನಾದ, ರಥಪ್ರವರನಾದ, ಬಲಿಷ್ಠನಾದ ಸಾತ್ಯಕಿಯು ರಥಸಹಸ್ರಗಳಿಂದ ಸುತ್ತುವರಿಯಲ್ಪಟ್ಟು ಸಿಂಹನಾದವನ್ನು ಮಾಡಿದನು.
ಕ್ಷತ್ರದೇವಬ್ರಹ್ಮದೇವೌ ರಥಸ್ಥೌ ಪುರುಷರ್ಷಭೌ |
ಜಘನಂ ಪಾಲಯಂತೌ ಚ ಪೃಷ್ಠತೋಽನುಪ್ರಜಗ್ಮತುಃ ॥25॥
ಭಕ್ಷ್ಯಂ ಭೋಜ್ಯಂ ಚ ಯತ್ ಕಿಂಚಿದ್ ಯಾನಂ ಯುಗ್ಯಂ ಚ ಸರ್ವಶಃ ॥

ಪುರುಷಶ್ರೇಷ್ಠರಾದ ಕ್ಷತ್ರದೇವ ಮತ್ತು ಬ್ರಹ್ಮದೇವರು ರಥದಲ್ಲಿ ಕುಳಿತು ಸೈನ್ಯದ ಹಿಂಭಾಗವನ್ನು ರಕ್ಷಿಸುತ್ತಾ ಮೂರನೆಯ ಭಾಗದಲ್ಲಿ ಅವರನ್ನು ಹಿಂಬಾಲಿಸಿದರು. ಭಕ್ಷ್ಯ-ಭೋಜ್ಯಗಳೂ, ವಾಹನಗಳೂ, ಅಶ್ವ ಮೊದಲಾದ ನೊಗಕ್ಕೆ ಹೂಡುವ ಪ್ರಾಣಿಗಳೂ ಎಲ್ಲವೂ ಅದರ ಜೊತೆಯಲ್ಲಿ ಹೋದವು.
ತತ್ರ ನಾಗಸಹಸ್ರಾಣಿ ಹಯಾನಾಮಯುತಾನಿ ಚ |
ಫಲ್ಗು ಸರ್ವಂ ಕಲತ್ರಂ ಚ ಯತ್ ಕಿಂಚಿತ್ ಕೃಶದುರ್ಬಲಮ್ ॥27॥
ಕೋಶಸಂಚಯವಾಹಾಶ್ಚ ಕೋಷ್ಠಾಗಾರಾಸ್ತಥೈವ ಚ |
ಗಜಾನೀಕೇನ ಸಂಗೃಹ್ಯ ಶನೈಃ ಪ್ರಾಯಾದ್ ಯುಧಿಷ್ಠಿರಃ ॥28॥
ಅಲ್ಲಿ ಸಹಸ್ರಾರು ಗಜಗಳು, ಹತ್ತಾರು ಸಾವಿರ ಅಶ್ವಗಳು, ಎಲ್ಲ ಹಗುರವಾದ ಪದಾರ್ಥಗಳು, ಪತ್ನಿಯರು, ಕೃಶವೂ ದುರ್ಬಲವೂ ಆದ ಎಲ್ಲಾ ವಸ್ತುಗಳು, ಕೋಶಸಂಚಯಗಳು, ವಾಹನಗಳು, ಕೋಷ್ಠಾಗಾರಗಳು ಇವೆಲ್ಲವನ್ನೂ ಗಜಗಳ ಸಮೂಹದ ಮೇಲೆ ಹೊರಿಸಿಕೊಂಡು ಯುಧಿಷ್ಠಿರನು ಮೆಲ್ಲನೆ ನಡೆದನು.
ತಮನ್ವಯಾತ್ ಸತ್ಯಧೃತಿಃ ಸೌಚಿತ್ತಿರ್ಯುದ್ಧದುರ್ಮದಃ |
ಶ್ರೇಣಿಮಾನ್ ವಸುದಾನಶ್ಚ ಪುತ್ರಃ ಕಾಶ್ಯಸ್ಯ ವೈ ವಿಭುಃ ॥29॥
ಸತ್ಯಧೃತಿ, ಯುದ್ಧದುರ್ಮದನಾದ ಸೌಚಿತ್ತಿ, ಶ್ರೇಣಿಮಾನ್, ವಸುದಾನ ಮತ್ತು ಕಾಶಿರಾಜನ ಪುತ್ರನಾದ ವಿಭು ಎಲ್ಲರೂ ಅವನನ್ನು ಹಿಂಬಾಲಿಸಿದರು.
ರಥಾಧಿಪತಿಸಾಹಸ್ರಾ ಯೇ ತೇಷಾಮನುಯಾಯಿನಃ |
ಹಯಾನಾಂ ನವ ಕೋಟ್ಯಶ್ಚ ಮಹತಾಂ ಕಿಂಕಿಣೀಕಿನಾಮ್ ॥30॥
ಗಜಾ ವಿಂಶತಿಸಾಹಸ್ರಾ ಈಶಾದಂತಾಃ ಪ್ರಹಾರಿಣಃ |
ಕುಲೀನಾ ಭಿನ್ನಕರಟಾ ಮೇಘಾ ಇವ ವಿಸರ್ಪಿಣಃ ॥31॥
ಸಹಸ್ರ ರಥಾಧಿಪತಿಗಳು ಅವರನ್ನು ಹಿಂಬಾಲಿಸಿದರು. ಕಿಂಕಿಣಿಯ ಮಾಲೆಗಳನ್ನು ಹೊಂದಿದ್ದ ಒಂಬತ್ತುಕೋಟಿ ಅಶ್ವಗಳ ದೊಡ್ಡ ಗುಂಪು ಅವರನ್ನು ಹಿಂಬಾಲಿಸಿತು. ಬಾಣದಷ್ಟು ಉದ್ದವಾದ ದಂಡವುಳ್ಳ, ಪ್ರಹಾರಶೀಲವಾದ, ಒಳ್ಳೆಯ ಕುಲದಲ್ಲಿ ಜನಿಸಿದ, ಕುಂಭಸ್ಥಲದಿಂದ ಮದೋದಕವನ್ನು ಸುರಿಸುವ ಇಪ್ಪತ್ತು ಸಹಸ್ರ ಆನೆಗಳು ಮೋಡಗಳಂತೆ ಚಲಿಸಿದವು.
ಷಷ್ಟಿರ್ನಾಗಸಹಸ್ರಾಣಿ ದಶಾನ್ಯಾನಿ ಚ ಭಾರತ |
ಯುಧಿಷ್ಠಿರಸ್ಯ ಯಾನ್ಯಾಸನ್ ಯುಧಿ ಸೈನ್ಯೇ ಮಹಾತ್ಮನಃ ॥32॥
ಕ್ಷರಂತ ಇವ ಜೀಮೂತಾಃ ಪ್ರಭಿನ್ನಕರಟಾಮುಖಾಃ |
ರಾಜಾನಮನ್ವಯುಃ ಪಶ್ಚಾತ್ ಚಲಂತ ಇವ ಪರ್ವತಾಃ ॥33॥
ಎಲೈ ಭಾರತನೇ, ಮಹಾತ್ಮನಾದ ಯುಧಿಷ್ಠಿರನ ಸೈನ್ಯದಲ್ಲಿ ಇದ್ದ ಅರವತ್ತು ಸಹಸ್ರ ಗಜಗಳು, ಇನ್ನೂ ಹತ್ತುಸಾವಿರ ಗಜಗಳು, ಅವು ಮಳೆಯನ್ನು ಸುರಿಸುವ ಮೋಡಗಳಂತೆ ಕುಂಭಸ್ಥಲಗಳಿಂದ ಮದೋದಕವನ್ನು ಸುರಿಸುತ್ತಾ ಚಲಿಸುವ ಪರ್ವತಗಳಂತೆ ರಾಜನನ್ನು ಹಿಂಬಾಲಿಸಿದವು.
ಏವಂ ತಸ್ಯ ಬಲಂ ಭೀಷ್ಮಂ ಕುಂತೀಪುತ್ರಸ್ಯ ಧೀಮತಃ ॥34॥
ತಥಾ ರಥಸಹಸ್ರಾಣಿ ಪದಾತೀನಾಂ ಚ ಭಾರತ ॥35॥
ಯದಾಶ್ರಿತ್ಯಾಥ ಯುಯುಧೇ ಧಾರ್ತರಾಷ್ಟ್ರಂ ಸುಯೋಧನಮ್ |
ಎಲೈ ಭಾರತನೇ, ಹೀಗೆ ಮೇಧಾವಿಯಾದ ಕುಂತೀಪುತ್ರನ ಸೈನ್ಯವು ರಥಸಹಸ್ರಗಳಿಂದಲೂ, ಪದಾತಿಗಳಿಂದಲೂ ಕೂಡಿ ಭಯಂಕರವಾಗಿದ್ದಿತು. ಅಂತಹ ಸೈನ್ಯವನ್ನು ಆಶ್ರಯಿಸಿ ಅವನು ಧೃತರಾಷ್ಟ್ರನ ಪುತ್ರನಾದ ದುರ್ಯೋಧನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತತೋಽನ್ಯೇ ಶತಶಃ ಪಶ್ಚಾತ್ ಸಹಸ್ರಾಯುತಶೋ ನರಾಃ ॥36॥
ನರ್ದಂತಃ ಪ್ರಯಯುಸ್ತೇಷಾಮನೀಕಾನಿ ಸಹಸ್ರಶಃ ॥37॥
ಇದಲ್ಲದೆ ಹಿಂಭಾಗದಲ್ಲಿ ಯೋಧರು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ, ಹತ್ತುಸಾವಿರದ ಸಂಖ್ಯೆಯಲ್ಲಿ ಗರ್ಜಿಸುತ್ತಾ ತಮ್ಮ ಸೈನ್ಯದ ಜೊತೆಯಲ್ಲಿ ನಡೆದರು.
ತತ್ರ ಭೇರೀಸಹಸ್ರಾಣಿ ಶಂಖಾನಾಮಯುತಾನಿ ಚ |
ವಾದಯಂತಿ ಸ್ಮ ಸಂಹೃಷ್ಟಾಃ ಸಹಸ್ರಾಯುತಶೋ ನರಾಃ ॥38॥
ಅಲ್ಲಿ ಸಾವಿರ ಭೇರಿಗಳು ಬಾರಿಸಲ್ಪಡುತ್ತಿದ್ದವು. ಹತ್ತುಸಾವಿರ ಶಂಖಗಳು ಊದಲ್ಪಡುತ್ತಿದ್ದವು. ಸಹಸ್ರಸಂಖ್ಯೆಯಲ್ಲಿ, ಹತ್ತುಸಹಸ್ರ ಸಂಖ್ಯೆಯಲ್ಲಿ ಯೋಧರೆಲ್ಲರೂ ಸಂತೋಷದಿಂದ ಕೂಡಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಉದ್ಯೋಗಪರ್ವಣಿ
ಅಷ್ಟನವತ್ಯುತ್ತರಶತತಮೋಽಧ್ಯಾಯಃ ॥
॥ ಅಂಬೋಪಾಖ್ಯಾನಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನೂರ ತೊಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.
॥ಸಮಾಪ್ತಮ್ ಅಂಬೋಪಾಖ್ಯಾನಪರ್ವ ॥

॥ ಸಮಾಪ್ತಮ್ ಉದ್ಯೋಗಪರ್ವ ॥

॥ಶ್ರೀಮಧ್ವೇಶಾರ್ಪಣಮಸ್ತು ॥
* * * * *

ಮಹಾಭಾರತ
ಭೀಷ್ಮಪರ್ವ
1. ಜಂಬೂಖಂಡವಿನಿರ್ಮಾಣಪರ್ವ
ಒಂದನೆಯ ಅಧ್ಯಾಯ
ಕುರುಕ್ಷೇತ್ರದಲ್ಲಿ ಪಾಂಡವರ-ಕೌರವರ ಸೇನೆಗಳ ಸಮಾವೇಶ.
ಯುದ್ಧದ ನಿಬಂಧನೆಗಳು.
ಜನಮೇಜಯಃ
ಕಥಂ ಯುಯುಧಿರೇ ವೀರಾಃ ಕುರುಪಾಂಡವಸೋಮಕಾಃ |
ಪಾರ್ಥಿವಾಶ್ಚ ಮಹಾಭಾಗಾ ನಾನಾದೇಶಸಮಾಗತಾಃ ॥1॥
ಜನಮೇಜಯ ನಾನಾ ದೇಶಗಳಿಂದ ಬಂದ ಮಹಾನುಭಾವರಾದ ರಾಜರು ಮತ್ತು ವೀರರಾದ ಕುರುಪಾಂಡವಸೋಮಕರು ಹೇಗೆ ಯುದ್ಧವನ್ನು ಮಾಡಿದರು?
ಪ್ರತ್ಯಯುಧ್ಯಂತ ಸಮರೇ ಭೀಷ್ಮೇಣಾಮಿತ್ರಕರ್ಷಿಣಾ |
ಕಥಂ ವಾ ಕೌರವಾಃ ಸರ್ವೇ ಭೀಮಸೇನೇ ಚಮೂಪತೌ ॥2॥
ಭೀಮಸೇನನು ಪಾಂಡವರ ಸೇನಾನಾಯಕನಾಗಿರಲು ಎಲ್ಲ ಕೌರವರು ಶತ್ರು ಸಂಹಾರಕನಾದ ಭೀಷ್ಮರನ್ನು ಮುಂದೆ ಮಾಡಿಕೊಂಡು ಹೇಗೆ ಪ್ರತಿಯಾಗಿ ಯುದ್ಧವನ್ನು ಮಾಡಿದರು?
ವೈಶಂಪಾಯನಃ
ಯಥಾ ಯುಯುಧಿರೇ ವೀರಾ ಕುರುಪಾಂಡವಸೋಮಕಾಃ |
ಕುರುಕ್ಷೇತ್ರೇ ತಪಃಕ್ಷೇತ್ರೇ ಶೃಣು ತತ್ ಪೃಥಿವೀಪತೇ ॥3॥
ವೈಶಂಪಾಯನ ಎಲೈ ಪೃಥಿವೀಪತಿಯೇ, ತಪಸ್ಸಿನ ಕ್ಷೇತ್ರವಾದ ಕುರುಕ್ಷೇತ್ರದಲ್ಲಿ ವೀರರಾದ ಕುರುಪಾಂಡವ ಸೋಮಕರು ಹೇಗೆ ಯುದ್ಧವನ್ನು ಮಾಡಿದರು ಎಂಬುದನ್ನು ಕೇಳುವವನಾಗು.
ಅವತೀರ್ಯ ಕುರುಕ್ಷೇತ್ರಂ ಪಾಂಡವಾಃ ಸಹಸೋಮಕಾಃ |
ಕೌರವಾನಭ್ಯವರ್ತಂತ ಜಿಗೀಷಂತೋ ಮಹಾಬಲಾಃ ॥4॥
ಸೋಮಕರ ಜೊತೆಯಲ್ಲಿ ಪಾಂಡವರು ಕುರುಕ್ಷೇತ್ರವನ್ನು ತಲುಪಿ ಮಹಾಬಲಿಷ್ಠರಾದ ಅವರು ಜಯವನ್ನು ಬಯಸುತ್ತಾ ಕೌರವರನ್ನು ಎದುರಿಸಿದರು.
ವೇದಾಧ್ಯಯನಸಂಪನ್ನಾಃ ಸರ್ವೇ ಯುದ್ಧಾಭಿನಂದಿನಃ |
ಆಶಂಸಂತೋ ಜಯಂ ಯುದ್ಧೇ ವಧಂ ವಾಭಿಮುಖಾ ರಣೇ ॥5॥
ಅಭಿಯಾಯ ಚ ದುರ್ಧರ್ಷಾಂ ಧಾರ್ತರಾಷ್ಟ್ರಸ್ಯ ವಾಹಿನೀಮ್ |
ಪ್ರಾಙ್ಮುಖಾಃ ಪಶ್ಚಿಮೇ ಭಾಗೇ ನ್ಯವಿಶಂತ ಸಸೈನಿಕಾಃ ॥6॥
ವೇದಾಧ್ಯಯನ ಸಂಪನ್ನರೂ, ಯುದ್ಧವನ್ನು ಅಭಿನಂದಿಸುವವರೂ, ಯುದ್ಧದಲ್ಲಿ ಜಯವನ್ನಾಗಲೀ ಅಥವಾ ಶತ್ರುಗಳಿಗೆ ಅಭಿಮುಖವಾಗಿ ಮರಣವನ್ನಾಗಲೀ ಬಯಸುವ ಆ ಎಲ್ಲರೂ ಸೋಲಿಸಲು ಕಷ್ಟಸಾಧ್ಯವಾದ ದುರ್ಯೋಧನನ ಸೈನ್ಯವನ್ನು ಎದುರಿಸಿದರು. ಪಾಂಡವರು ತಮ್ಮ ಸೈನಿಕರೊಡನೆ ಪ್ರವೇಶಿಸಿ ಕುರುಕ್ಷೇತ್ರದ ಪಶ್ಚಿಮ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿಂತರು.
ಪೂರ್ವಭಾಗೇ ತು ಕ್ಷೇತ್ರಸ್ಯ ಸ್ಥಿತಾಃ ಪ್ರತ್ಯಙ್ಮುಖಾ ಯುಧಿ |
ಆಹವಾಯ ದುರಾಧರ್ಷ ಧಾರ್ತರಾಷ್ಟ್ರಸ್ಯ ಪಾರ್ಥಿವಾಃ ॥7॥
ಎಲೈ ಸೋಲಿಸಲು ಅಸಾಧ್ಯನಾದ ಜನಮೇಜಯನೇ, ದುರ್ಯೋಧನನ ಪಕ್ಷದ ರಾಜರು ಯುದ್ಧಕ್ಕಾಗಿ ಕುರುಕ್ಷೇತ್ರದ ಪೂರ್ವಭಾಗದಲ್ಲಿ ಪಶ್ಚಿಮಾಭಿಮುಖವಾಗಿ ನಿಂತರು.
ಸಮಂತಪಂಚಕಾದ್ ಬಾಹ್ಯಂ ಶಿಬಿರಾಣಿ ಸಹಸ್ರಶಃ |
ಕಾರಯಾಮಾಸ ವಿಧಿವತ್ ಕುಂತೀಪುತ್ರೋ ಯುಧಿಷ್ಠಿರಃ ॥8॥
ಕುಂತೀಪುತ್ರನಾದ ಯುಧಿಷ್ಠಿರನು ಸಮಂತಪಂಚಕದ ಸುತ್ತಲೂ, ಹೊರಭಾಗದಲ್ಲಿ ಸಹಸ್ರಾರು ಶಿಬಿರಗಳನ್ನು ಮಾಡಿಸಿದನು.
ಅನ್ಯೇವ ಪೃಥಿವೀ ಸರ್ವಾ ಬಾಲವೃದ್ಧಾವಶೇಷಿತಾ |
ನಿರಸ್ತಪುರುಷೇವಾಸೀತ್ ರಥಕುಂಜರವರ್ಜಿತಾ ॥9॥
ಅಶ್ವ-ರಥ-ಕುಂಜರಗಳಿಲ್ಲದೆ, ಪುರುಷರೂ ಇಲ್ಲದೆ, ಕೇವಲ ವೃದ್ಧರನ್ನು ಮತ್ತು ಬಾಲಕರನ್ನೊಳಗೊಂಡ ಉಳಿದ ಭೂಮಿಯು ಇನ್ನೊಂದು ಭೂಮಿಯಂತೆ ತೋರುತ್ತಿದ್ದಿತು.
ಯಾವತ್ ತಪತಿ ಸೂರ್ಯೋ ಹಿ ಜಂಬೂದ್ವೀಪಸ್ಯ ಮಂಡಲಮ್ |
ತಾವದೇವ ಸಮಾವೃತ್ತಂ ಬಲಂ ಪಾರ್ಥಿವಸತ್ತಮ ॥10॥
ಎಲೈ ರಾಜಶ್ರೇಷ್ಠನೇ, ಸೂರ್ಯನು ಜಂಬೂದ್ವೀಪದಲ್ಲಿ ಎಷ್ಟು ಭಾಗವನ್ನು ಬೆಳಗುತ್ತಾನೆಯೋ ಅಷ್ಟು ಭಾಗಗಳಿಂದ ಸೈನ್ಯಗಳು ಬಂದು ಸೇರಿದವು.

ಏಕಸ್ಥಾಃ ಸರ್ವವರ್ಣಾಸ್ತೇ ಮಂಡಲಂ ಬಹುಯೋಜನಮ್ |
ಪರ್ಯಾಕ್ರಾಮಂತ ದೇಶಾಂಶ್ಚ ನದೀಃ ಶೈಲಾನ್ ವನಾನಿ ಚ ॥11॥
ಎಲ್ಲ ವರ್ಣಗಳಿಗೂ ಸೇರಿದ ಒಂದು ಕಡೆ ಒಟ್ಟುಗೂಡಿದ ಆ ರಾಜರು ಅನೇಕ ಯೋಜನ ದೂರವಾದ ಮಂಡಲಗಳನ್ನೂ, ದೇಶಗಳನ್ನೂ, ನದಿಗಳನ್ನೂ, ಪರ್ವತಗಳನ್ನೂ ಮತ್ತು ವನಗಳನ್ನೂ ದಾಟಿ ಮುಂದೆ ಬಂದರು.
ತೇಷಾಂ ಯುಧಿಷ್ಠಿರೋ ರಾಜಾ ಸರ್ವೇಷಾಂ ಪುರುಷರ್ಷಭ |
ಆದಿದೇಶ ಸವಾಹಾನಾಂ ಭಕ್ಷ್ಯಭೋಜ್ಯಮನುತ್ತಮಮ್ ॥12॥
ಎಲೈ ಪುರುಷಶ್ರೇಷ್ಠನೇ, ರಾಜನಾದ ಯುಧಿಷ್ಠಿರನು ಅವರೆಲ್ಲರಿಗೂ ಮತ್ತು ಅವರ ವಾಹನಗಳಿಗೂ ಶ್ರೇಷ್ಠವಾದ ಭಕ್ಷ್ಯ-ಭೋಜ್ಯಗಳನ್ನು ಮತ್ತು ಮೇವುಗಳನ್ನು ಆದೇಶ ಮಾಡಿದನು.
ಸಂಜ್ಞಾಶ್ಚ ವಿವಿಧಾಸ್ತಾಸ್ತಾಸ್ತೇಷಾಂ ಚಕ್ರೇ ಯುಧಿಷ್ಠಿರಃ |
ಏವಂವಾದೀ ವೇದಿತವ್ಯಃ ಪಾಂಡವೇಯೋಽಯಮಿತ್ಯುತ ॥13॥
ಜಯರಾಮ, ಜಯಕೃಷ್ಣ ಮೊದಲಾದ ಸಂಕೇತ ಶಬ್ದಗಳನ್ನು ಬಳಸುತ್ತಿದ್ದವರನ್ನು ತನ್ನ ಸೈನ್ಯಕ್ಕೆ ಸೇರಿದವರೆಂದು ತಿಳಿಯಬೇಕೆಂದು ಯುಧಿಷ್ಠಿರನು ಅಪ್ಪಣೆಯನ್ನು ಮಾಡಿದನು (ಲಕ್ಷಾಲಂಕಾರ).
ಅಭಿಜ್ಞಾನಾನಿ ಸರ್ವೇಷಾಂ ಸಂಜ್ಞಾಶ್ಚಾಭರಣಾನಿ ಚ |
ಯೋಜಯಾಮಾಸ ಕೌರವ್ಯೋ ಯುದ್ಧಕಾಲ ಉಪಸ್ಥಿತೇ ॥14॥
ಯುದ್ಧಕಾಲವು ಪ್ರಾಪ್ತವಾದಾಗ ಕೌರವ ಕುಲದಲ್ಲಿ ಜನಿಸಿದ ಯುಧಿಷ್ಠಿರನು ತನ್ನ ಸೈನ್ಯಕ್ಕೆ ಸೇರಿದವರೆಲ್ಲರಿಗೂ ಗುರುತಿನ ಪದಕಗಳನ್ನೂ, ಸಂಜ್ಞೆಗಳನ್ನೂ ಮತ್ತು ಆಭರಣಗಳನ್ನೂ ನೀಡಿದನು.
ದೃಷ್ಟ್ವಾ ಧ್ವಜಾಗ್ರಂ ಪಾರ್ಥಾನಾಂ ಧಾರ್ತರಾಷ್ಟ್ರೋ ಮಹಾಮನಾಃ |
ಸಹ ಸರ್ವೈರ್ಮಹೀಪಾಲೈಃ ಪ್ರತ್ಯವ್ಯೂಹತ ಪಾಂಡವಾನ್ ॥15॥
ಪಾಂಡವರ ಸೈನ್ಯದ ಮುಂಭಾಗವನ್ನು ನೋಡಿದ ಧೈರ್ಯಶಾಲಿಯಾದ ಸುಯೋಧನನು ತನ್ನ ಪಕ್ಷಕ್ಕೆ ಸೇರಿದ ಉಳಿದ ರಾಜರ ಜೊತೆಯಲ್ಲಿ ಪಾಂಡವರ ಸೈನ್ಯದ ವ್ಯೂಹಕ್ಕೆ ಪ್ರತಿಯಾಗಿ ವ್ಯೂಹವನ್ನು ರಚಿಸಿದನು.
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ವೃತಂ ಸರ್ವೈಃ ಮಹೀಪಾಲೈಃ ಭ್ರಾತೃಭಿಃ ಪರಿವಾರಿತಾನ್ ॥16॥
ಮಧ್ಯೇ ನಾಗಸಹಸ್ರಸ್ಯ ಸ್ಥಿತಂ ಯುದ್ಧಾಭಿನಂದಿನಮ್ |
ದೃಷ್ಟ್ವಾ ದುರ್ಯೋಧನಂ ಹೃಷ್ಟಾಃ ಸರ್ವೇ ಪಾಂಡವಸೈನಿಕಾಃ |
ದಧ್ಮುಃ ಸರ್ವೇ ಮಹಾಶಂಖಾನ್ ಭೇರೀರ್ಜಘ್ನುಃ ಸಹಸ್ರಶಃ ॥17॥
ತಲೆಯ ಮೇಲೆ ಹಿಡಿದ ಶ್ವೇತಚ್ಛತ್ರಿಯಿಂದ ಶೋಭಿಸುತ್ತಾ, ಅನೇಕ ರಾಜರುಗಳಿಂದಲೂ ಮತ್ತು ತಮ್ಮಂದಿರಿಂದಲೂ ಪರಿವಾರಿತನಾಗಿ ಯುದ್ಧವನ್ನು ಬಯಸುತ್ತಾ ಸಹಸ್ರ ಗಜಗಳ ಮಧ್ಯೆ ನಿಂತ ದುರ್ಯೋಧನನನ್ನು ನೋಡಿ ಪಾಂಡವರ ಸೈನಿಕರೆಲ್ಲರೂ ಹರ್ಷಗೊಂಡರು. ಅವರೆಲ್ಲರೂ ತಮ್ಮ ದೊಡ್ಡ ಶಂಖಗಳನ್ನು ಊದಿದರು ಮತ್ತು ಸಹಸ್ರ ಸಂಖ್ಯೆಯಲ್ಲಿ ಭೇರಿಗಳನ್ನು ಬಾರಿಸಿದರು.
ತತಃ ಪ್ರಹೃಷ್ಟಾಂ ಸ್ವಾಂ ಸೇನಾಮಭಿವೀಕ್ಷ್ಯಾಥ ಪಾಂಡವಾಃ |
ಬಭೂವುರ್ಹೃಷ್ಟಮನಸೋ ವಾಸುದೇವಶ್ಚ ವೀರ್ಯವಾನ್ ॥18॥
ಆಗ ಸಂತೋಷಗೊಂಡ ತಮ್ಮ ಸೈನ್ಯವನ್ನು ಗಮನಿಸಿ ಪಾಂಡವರೂ, ಪರಾಕ್ರಮಶಾಲಿಯಾದ ವಾಸುದೇವನೂ ತಮ್ಮ ಮನಸ್ಸಿನಲ್ಲಿ ಹರ್ಷಗೊಂಡರು.
ತತೋ ಯೋಧಾನ್ ಹರ್ಷಯಂತೋ ವಾಸುದೇವಧನಂಜಯೌ |
ದಧ್ಮತುಃ ಪುರುಷವ್ಯಾಘ್ರೌ ದಿವ್ಯೌ ಶಂಖೌ ರಥೇ ಸ್ಥಿತೌ ॥19॥
ಆಗ ತಮ್ಮ ಯೋಧರನ್ನು ಸಂತೋಷಗೊಳಿಸುತ್ತಾ ಪುರುಷವ್ಯಾಘ್ರರಾದ ಕೃಷ್ಣಾರ್ಜುನರು ರಥದಲ್ಲಿ ಕುಳಿತು ತಮ್ಮ ದಿವ್ಯವಾದ ಶಂಖಗಳನ್ನು ಊದಿದರು.
ಪಾಂಚಜನ್ಯಸ್ಯ ನಿರ್ಘೋಷಂ ದೇವದತ್ತಸ್ಯ ಚೋಭಯೋಃ |
ಶ್ರುತ್ವಾ ಸವಾಹನಾ ಯೋಧಾಃ ಶಕೃನ್ಮೂತ್ರಂ ಪ್ರಸುಸ್ರುವುಃ ॥20॥
ಕೃಷ್ಣಾರ್ಜುನರ ಪಾಂಚಜನ್ಯ ಮತ್ತು ದೇವದತ್ತ ಶಂಖದ ಘೋಷವನ್ನು ಕೇಳಿ ಕೌರವರ ಸೈನಿಕರೂ ಮತ್ತು ವಾಹನಗಳೂ ಮಲ-ಮೂತ್ರಗಳನ್ನು ಸ್ರವಿಸಿದರು.
ಯಥಾ ಸಿಂಹಸ್ಯ ನದತಃ ಸ್ವನಂ ಶ್ರುತ್ವೇತರೇ ಮೃಗಾಃ |
ತ್ರಸೇಯುಸ್ತದ್ವದೇವಾಸೀದ್ ಧಾರ್ತರಾಷ್ಟ್ರಬಲಂ ತದಾ ॥21॥
ಗರ್ಜಿಸುವ ಸಿಂಹದ ನಾದವನ್ನು ಕೇಳಿ ಉಳಿದ ಮೃಗಗಳು ಹೆದರುವಂತೆ ಆಗ ದುರ್ಯೋಧನನ ಸೈನ್ಯವು ಹೆದರಿತು.
ಉದತಿಷ್ಠದ್ ರಜೋ ಭೌಮಂ ನ ಪ್ರಾಜ್ಞಾಯತ ಕಿಂಚನ |
ಅಂತರ್ಧೀಯತ ಚಾದಿತ್ಯಃ ಸೈನ್ಯೇನ ರಜಸಾವೃತಃ ॥22॥
ಭೂಮಿಯ ಧೂಳು ಮೇಲಕ್ಕೆದ್ದಿತು. ಏನೂ ಕಾಣುತ್ತಿರಲಿಲ್ಲ. ಸೈನ್ಯದಿಂದ ಎದ್ದ ಧೂಳಿನಿಂದ ಸೂರ್ಯನು ಮರೆಯಾದನು.
ವವರ್ಷ ಚಾತ್ರ ಪರ್ಜನ್ಯೋ ಮಾಂಸಶೋಣಿತವೃಷ್ಟಿಮಾನ್ |
ವ್ಯುಕ್ಷನ್ ಸರ್ವಾಣ್ಯನೀಕಾನಿ ತದದ್ಭುತಮಿವಾಭವತ್ ॥23॥
ಪರ್ಜನ್ಯನು ಮಾಂಸ, ರಕ್ತಗಳ ಮಳೆಯನ್ನು ಸುರಿಸಿ ಸೈನ್ಯಗಳನ್ನು ತೋಯಿಸಿದನು. ಆ ದೃಶ್ಯವು ಅದ್ಭುತವಾಗಿದ್ದಿತು.
ವಾಯುಸ್ತತಃ ಪ್ರಾದುರಭೂನ್ನೀಚೈಃ ಶರ್ಕರಕರ್ಷಣಃ |

ವಿನಿಘ್ನಂಸ್ತಾನ್ಯನೀಕಾನಿ ವಿಧಮಂಶ್ಚೈವ ತದ್ ರಜಃ ॥24॥
ಅನಂತರ ವಾಯುವು ನೆಲವನ್ನು ಹಿಡಿದು ಮರಳಿನ ಕಣಗಳನ್ನು ಎಬ್ಬಿಸಿ ಬೀಸುತ್ತಾ, ಆ ಮರಳುಗಳಿಂದ ಆ ಸೈನ್ಯಗಳಿಗೆ ಪ್ರಹಾರವನ್ನು ಮಾಡಿ ಘಾಸಿಗೊಳಿಸಿ ಧೂಳನ್ನು ಹಾರಿಸಿತು.
ಉಭೇ ಸೇನೇ ತದಾ ರಾಜನ್ ಯುದ್ಧಾಯ ಮುದಿತೇ ಭೃಶಮ್ |
ಕುರುಕ್ಷೇತ್ರೇ ಸ್ಥಿತೇ ಯತ್ ತೇ ಸಾಗರಕ್ಷುಭಿತೋಪಮೇ ॥25॥
ಎಲೈ ರಾಜನೇ, ಆಗ ಕುರುಕ್ಷೇತ್ರದಲ್ಲಿ ಎರಡು ಸೈನ್ಯಗಳು ಸಂತೋಷದಿಂದ ಸೇರಿ ನಿಂತವು. ಆ ಸೈನ್ಯಗಳು ಪ್ರಕ್ಷುಬ್ಧಗೊಂಡ ಎರಡು ಸಾಗರಗಳಂತಿದ್ದವು.
ತಯೋಸ್ತು ಸೇನಯೋರಾಸೀದದ್ಭುತಃ ಸ ಸಮಾಗಮಃ |
ಯುಗಾಂತೇ ಸಮನುಪ್ರಾಪ್ತೇ ದ್ವಯೋಃ ಸಾಗರಯೋರಿವ ॥26॥
ಯುಗಾಂತಕಾಲದಲ್ಲಿ ಎರಡು ಸಾಗರಗಳಿಗೆ ಆಗುವ ಸಮಾಗಮದಂತೆ ಆ ಎರಡು ಸೈನ್ಯಗಳ ಸಮಾಗಮವು ಅದ್ಭುತವಾಗಿದ್ದಿತು.
ಶೂನ್ಯಾಽಽಸೀತ್ ಪೃಥಿವೀ ಸರ್ವಾ ಬಾಲವೃದ್ಧಾವಶೇಷಿತಾ |
ತೇನ ಸೇನಾಸಮೂಹೇನ ಸಮಾನೀತೇನ ಕೌರವ್ಯೈಃ |
ಸಮಂತಾನ್ನಾಗಕಲ್ಪೇನ ಗರ್ಜಮಾನೇನ ಸರ್ವಶಃ ॥27॥
ಕೌರವರು ಎಲ್ಲಾ ಕಡೆಗಳಿಂದಲೂ ಗರ್ಜಿಸುವ ಗಜಗಳಂತಿರುವ ಸೈನ್ಯಗಳನ್ನು ತೆಗೆದುಕೊಂಡು ಬಂದುದರಿಂದ ಭೂಮಿಯೆಲ್ಲವೂ ಬಾಲ-ವೃದ್ಧರಿಂದ ಮಾತ್ರ ಕೂಡಿ ಶೂನ್ಯವಾದಂತಾಯಿತು.
ತತಸ್ತೇ ಸಮಯಂ ಚಕ್ರುಃ ಕುರುಪಾಂಡವಸೋಮಕಾಃ |
ಧರ್ಮಾಂಶ್ಚ ಸ್ಥಾಪಯಾಮಾಸುರ್ಯುದ್ಧಾನಾಂ ಭರತರ್ಷಭ ॥28॥
ಎಲೈ ಭರತಶ್ರೇಷ್ಠನೇ, ಅನಂತರ ಕುರು-ಪಾಂಡವ-ಸೋಮಕರು ಯುದ್ಧದ ನಿಬಂಧನೆಗಳನ್ನು ಮಾಡಿಕೊಂಡು ಯುದ್ಧದ ಧರ್ಮಗಳನ್ನು ಸ್ಥಾಪಿಸಿದರು (ಅವು ಈ ರೀತಿ ಇದ್ದವು).
ನಿವೃತ್ತೇ ಚೈವ ನೋ ಯುದ್ಧೇ ಪ್ರೀತಿಶ್ಚ ಸ್ಯಾತ್ ಪರಸ್ಪರಮ್ |
ಯಥಾಪುರಂ ಯಥಾಯೋಗಂ ನ ಚ ಸ್ಯಾಚ್ಛಲನಂ ಪುನಃ ॥29॥
ಯುದ್ಧವು ಮುಗಿದ ಮೇಲೆ ನಮಗೆ ಮೊದಲಿನಂತೆ ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ಪರಸ್ಪರ ಸ್ನೇಹವಿರಬೇಕು. ಇನ್ನೊಮ್ಮೆ ಯಾರೂ ಮೋಸವನ್ನು ಮಾಡಬಾರದು.
ವಾಚಾ ಯುದ್ಧೇ ಪ್ರವೃತ್ತೇ ನೋ ವಾಚೈವ ಪ್ರತಿಯೋಧನಮ್ |
ನಿಷ್ಕ್ರಾಂತಃ ಪೃತನಾಮಧ್ಯಾನ್ನ ಹಂತವ್ಯಃ ಕಥಂಚನ ॥30॥
ಮಾತಿನಿಂದ ಯುದ್ಧವು ಪ್ರವೃತ್ತವಾದಾಗ ಮಾತಿನಿಂದಲೇ ಯುದ್ಧವನ್ನು ಪ್ರತಿಯಾಗಿ ಮಾಡಬೇಕು (ಶಸ್ತ್ರಪ್ರಯೋಗವನ್ನು ಮಾಡಬಾರದು). ಸೇನೆಯ ಮಧ್ಯದಿಂದ ಹೊರಬಂದವನನ್ನು ಯಾವ ಕಾರಣದಿಂದಲೂ ವಧೆ ಮಾಡಬಾರದು.
ರಥೀ ರಥಿನಾ ಯೋದ್ಧವ್ಯೋ ಗಜೇನ ಗಜಧೂರ್ಗತಃ |
ಅಶ್ವೇನಾಶ್ವೀ ಪದಾತಿಶ್ಚ ಪದಾತೇನೈವ ಭಾರತ ॥31॥
ಎಲೈ ಭಾರತನೇ, ರಥಿಯು ರಥಿಕನ ಜೊತೆಯಲ್ಲಿಯೇ, ಗಜದ ಮೇಲೆ ಯುದ್ಧವನ್ನು ಮಾಡುವವನು ಇನ್ನೊಬ್ಬ ಗಜವಾಹನನ ಜೊತೆಯಲ್ಲಿಯೇ, ಅಶ್ವವಾಹನನಾದವನು ಅಶ್ವವಾಹನನ ಜೊತೆಯಲ್ಲಿಯೇ, ಪದಾತಿಯು ಪದಾತಿಯ ಜೊತೆಯಲ್ಲಿಯೇ ಯುದ್ಧವನ್ನು ಮಾಡಬೇಕು.
ಯಥಾಯೋಗಂ ಯಥಾವೀರ್ಯಂ ಯಥೋತ್ಸಾಹಂ ಯಥಾವಯಃ |
ಸಮಾಭಾಷ್ಯ ಪ್ರಹರ್ತವ್ಯಂ ನ ವಿಶ್ವಸ್ತೇ ನ ವಿಹ್ವಲೇ ॥32॥
ತಮ್ಮ ಪರಾಕ್ರಮಕ್ಕೆ, ತಮ್ಮ ಕೌಶಲಕ್ಕೆ, ತಮ್ಮ ಉತ್ಸಾಹಕ್ಕೆ ಮತ್ತು ತಮ್ಮ ವಯಸ್ಸಿಗನುಗುಣವಾಗಿ ಶತ್ರುವನ್ನು ಹೆಸರು ಹಿಡಿದು ಕರೆದು ಪ್ರಹಾರ ಮಾಡಬೇಕು. ತನ್ನ ಮೇಲೆ ಶಸ್ತ್ರಪ್ರಯೋಗ ಮಾಡುವುದಿಲ್ಲ ಎಂಬ ವಿಶ್ವಾಸವಿರುವವನಲ್ಲಿ ಅಥವಾ ಶಸ್ತ್ರಘಾತದಿಂದ ನರಳಾಡುವವನ ಮೇಲೆ ಶಸ್ತ್ರ ಪ್ರಯೋಗವನ್ನು ಮಾಡಬಾರದು.
ಪರೇಣ ಸಹ ಸಂಯುಕ್ತಃ ಪ್ರಮತ್ತೋ ವಿಮುಖಸ್ತಥಾ |
ಕ್ಷೀಣಶಸ್ತ್ರೋ ವಿವರ್ಮಾ ಚ ನ ಹಂತವ್ಯಃ ಕಥಂಚನ ॥33॥
ಇನ್ನೊಬ್ಬನ ಜೊತೆಯಲ್ಲಿ ಯುದ್ಧ ಮಾಡುತ್ತಿರುವವನ ಮೇಲೆ, ಪ್ರಮಾದದಿಂದ ಕೂಡಿರುವವನ ಮೇಲೆ, ಯುದ್ಧದಿಂದ ಹಿಮ್ಮೆಟ್ಟುತ್ತಿರುವವನ ಮೇಲೆ, ತನ್ನ ಶಸ್ತ್ರ ಮತ್ತು ಕವಚವನ್ನು ಕಳೆದುಕೊಂಡಿರುವವನ ಮೇಲೆ ಶಸ್ತ್ರಪ್ರಯೋಗವನ್ನು ಮಾಡಿ ಅವನನ್ನು ವಧೆ ಮಾಡಬಾರದು.
ನ ಸೂತೇಷು ನ ಧುರ್ಯೇಷು ನ ಚ ಶಸ್ತ್ರೋಪನಾಯಿಷು |
ನ ಭೇರೀಶಂಖವಾದೇಷು ಪ್ರಹರ್ತವ್ಯಂ ಕಥಂಚನ ॥34॥
ಸಾರಥಿಗಳ ಮೇಲೆ, ರಥದಲ್ಲಿ ಶಸ್ತ್ರಗಳನ್ನು ತಂದುಕೊಡುವ ಕಾರ್ಮಿಕರ ಮೇಲೆ, ಭೇರೀ-ಶಂಖ ವಾದಗಳನ್ನು ಮಾಡುವವರ ಮೇಲೆ ಪ್ರಹಾರವನ್ನು ಮಾಡಬಾರದು.
ಏವಂ ತೇ ಸಮಯಂ ಕೃತ್ವಾ ಕುರುಪಾಂಡವಸೋಮಕಾಃ |
ವಿಸ್ಮಯಂ ಪರಮಂ ಜಗ್ಮುಃ ಪ್ರೇಕ್ಷಮಾಣಾಃ ಪರಸ್ಪರಮ್ ॥35॥
ಹೀಗೆ ಕುರು-ಪಾಂಡವ-ಸೋಮಕರು ನಿಬಂಧನೆಗಳನ್ನು ಮಾಡಿಕೊಂಡು ಒಬ್ಬರನ್ನೊಬ್ಬರು ನೋಡುತ್ತಾ ಬಹಳ ವಿಸ್ಮಯಾವಿಷ್ಟರಾದರು.

ನಿವಿಶ್ಯ ಚ ಮಹಾತ್ಮಾನಸ್ತತಸ್ತೇ ಪುರುಷರ್ಷಭಾಃ |
ಹೃಷ್ಟರೂಪಾಃ ಸುಮನಸೋ ಬಭೂವುಃ ಸಹಸೈನಿಕಾಃ ||36||
ಪುರುಷಶ್ರೇಷ್ಠರಾದ ಆ ಮಹಾತ್ಮರೆಲ್ಲರೂ ತಮ್ಮ ಸೈನಿಕರ ಜೊತೆಯಲ್ಲಿ ಹೀಗೆ ಕುರುಕ್ಷೇತ್ರವನ್ನು ಪ್ರವೇಶ ಮಾಡಿ, ಒಳ್ಳೆಯ ಮನಸ್ಸಿನಿಂದ ಕೂಡಿ ಸಂತೋಷವುಳ್ಳವರಾದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪ್ರಥಮೋಽಧ್ಯಾಯಃ ||
|| ಇತಿ ಜಂಬೂಖಂಡನಿರ್ಮಾಣಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಧೃತರಾಷ್ಟ್ರನಿಂದ ದಿವ್ಯದೃಷ್ಟಿಯ ನಿರಾಕರಣೆ. ವ್ಯಾಸರಿಂದ ಸಂಜಯನಿಗೆ ದಿವ್ಯದೃಷ್ಟಿಯ ದಾನ ಮತ್ತು ಧೃತರಾಷ್ಟ್ರನನ್ನು ಕುರಿತು ಅಪಶಕುನಗಳ ಕಥನ.
ವೈಶಂಪಾಯನಃ
ತತಃ ಪೂರ್ವಾಪರೇ ಸಂಧ್ಯೇ ಸಮೀಕ್ಷ್ಯ ಭಗವಾನ್ ಋಷಿಃ |
ಸರ್ವವೇದವಿದಾಂ ಶ್ರೇಷ್ಠೋ ವ್ಯಾಸಃ ಸತ್ಯವತೀಸುತಃ ||1||
ವೈಶಂಪಾಯನ ಅನಂತರ ಸರ್ವವೇದವೇತ್ತರಲ್ಲಿ ಶ್ರೇಷ್ಠರಾದ, ಸತ್ಯವತೀ ಸುತರಾದ, ಋಷಿಗಳಾದ ಭಗವಾನ್ ವೇದವ್ಯಾಸರು ಎರಡು ಸಂಧ್ಯಾಕಾಲಗಳನ್ನು ನೋಡಿ ಮಾತನಾಡಿದರು.
ಭವಿಷ್ಯತಿ ರಣೇ ಘೋರೇ ಭರತಾನಾಂ ಪಿತಾಮಹಃ |
ಪ್ರತ್ಯಕ್ಷದರ್ಶೀ ಭಗವಾನ್ ಭೂತಭವ್ಯಭವಿಷ್ಯವಿತ್ ||2||
ವೈಚಿತ್ರವೀರ್ಯಂ ರಾಜಾನಂ ಸ ರಹಸ್ಯಂ ಬ್ರವೀದಿದಮ್ |
ಶೋಚಂತಮಾರ್ತಂ ಧ್ಯಾಯಂತಂ ಪುತ್ರಾಣಾಮನಯಂ ತದಾ ||3||
ಭರತರ ಪಿತಾಮಹರಾದ, ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವ, ಭೂತಭವಿಷ್ಯತ್ ವರ್ತಮಾನಗಳ ಜ್ಞಾನವುಳ್ಳ, ಪೂಜ್ಯರಾದ ಅವರು ಘೋರವಾದ ಯುದ್ಧವು ಸನ್ನಿಹಿತವಾಗುತ್ತಿರಲು ತನ್ನ ಮಕ್ಕಳ ಅನ್ಯಾಯಗಳನ್ನು ಕುರಿತು ಯೋಚಿಸುತ್ತಾ ಶೋಕದಿಂದ ಆರ್ತನಾಗಿದ್ದ ವಿಚಿತ್ರವೀರ್ಯಪುತ್ರನಾದ ಧೃತರಾಷ್ಟ್ರನನ್ನು ಕುರಿತು ಏಕಾಂತದಲ್ಲಿ ಈ ಮಾತುಗಳನ್ನು ಆಡಿದರು.
ಶ್ರೀವ್ಯಾಸಃ
ರಾಜನ್ ಪರೀತಕಾಲಾಸ್ತೇ ಪುತ್ರಾಶ್ಚಾನ್ಯೇ ಚ ಭೂಮಿಪಾಃ |
ತೇ ಹನಿಷ್ಯಂತಿ ಸಂಗ್ರಾಮೇ ಸಮಾಸಾದ್ಯೇತರೇತರಮ್ ||4||
ಶ್ರೀವ್ಯಾಸ ಎಲೈ ರಾಜನೇ, ನಿನ್ನ ಮಕ್ಕಳಿಗೂ ಮತ್ತು ಬೇರೆ ರಾಜರುಗಳಿಗೂ ಕಾಲವು (ಮೃತ್ಯುಕಾಲವು) ತುಂಬಿ ಬಂದಿದೆ. ಅವರು ಪರಸ್ಪರವಾಗಿ ಎದುರಿಸಿ ಯುದ್ಧದಲ್ಲಿ ಒಬ್ಬರನ್ನೊಬ್ಬರು ಕೊಲ್ಲುವರು.
ತೇಷು ಕಾಲಪರೀತೇಷು ವಿನಶ್ಯತ್ಸು ಚ ಭಾರತ |
ಕಾಲಪರ್ಯಾಯಮಾಜ್ಞಾಯ ಮಾ ಸ್ಮ ಶೋಕೇ ಮನಃ ಕೃಥಾಃ ||5||
ಎಲೈ ಭಾರತನೇ, ಕಾಲಪಕ್ವವಾಗಿ ಅವರು ವಿನಾಶವನ್ನು ಹೊಂದುತ್ತಿರಲು, ಕಾಲದ ಗತಿಯನ್ನು ತಿಳಿದು ನೀನು ಮನಸ್ಸಿನಲ್ಲಿ ಶೋಕವನ್ನು ತಂದುಕೊಳ್ಳಬಾರದು.
ಯದಿ ತ್ವಿಚ್ಛಸಿ ಸಂಗ್ರಾಮಂ ದ್ರಷ್ಟುಮೇನಂ ವಿಶಾಂಪತೇ |
ಚಕ್ಷುರ್ದದಾನಿ ತೇ ಹಂತ ಯುದ್ಧಮೇತನ್ನಿಶಾಮಯ ||6||
ಎಲೈ ರಾಜನೇ, ನೀನು ಈ ಯುದ್ಧವನ್ನು ನೋಡಲು ಬಯಸುವುದಾದರೆ ನಿನಗೆ ನಾನು ಸಂತೋಷದಿಂದ ದಿವ್ಯದೃಷ್ಟಿಯನ್ನು ಕೊಟ್ಟೇನು! ಈ ಯುದ್ಧವನ್ನು ನೀನು ನೋಡುವವನಾಗು.
ಧೃತರಾಷ್ಟ್ರಃ
ನ ರೋಚಯೇ ಜ್ಞಾತಿವಧಂ ದ್ರಷ್ಟುಂ ಬ್ರಹ್ಮರ್ಷಿಸತ್ತಮ |
ಯುದ್ಧಮೇತತ್ತ್ವಶೇಷೇಣ ಶೃಣುಯಾಂ ತವ ತೇಜಸಾ ||7||
ಧೃತರಾಷ್ಟ್ರ ಎಲೈ ಬ್ರಹ್ಮರ್ಷಿಶ್ರೇಷ್ಠರೇ, ನಾನು ಜ್ಞಾತಿಗಳ ವಧೆಯನ್ನು ನೋಡಲು ಬಯಸುವುದಿಲ್ಲ. ನಿಮ್ಮ ಅನುಗ್ರಹದಿಂದ ಈ ಯುದ್ಧದ ವಿವರವನ್ನು ಸಮಗ್ರವಾಗಿ ಕೇಳಲು ಬಯಸಿಯೇನು!
ವೈಶಂಪಾಯನಃ
ತಸ್ಮಿನ್ನನಿಚ್ಛತಿ ದ್ರಷ್ಟುಂ ಸಂಗ್ರಾಮಂ ಶ್ರೋತುಮಿಚ್ಛತಿ |
ವರಾಣಾಮೀಶ್ವರೋ ದಾತಾ ಸಂಜಯಾಯ ವರಂ ದದೌ ||8||
ವೈಶಂಪಾಯನ ಹೀಗೆ ಧೃತರಾಷ್ಟ್ರನು ಯುದ್ಧವನ್ನು ನೋಡಲು ಬಯಸದೆ, ಕೇಳಲು ಮಾತ್ರ ಬಯಸುತ್ತಿರಲು, ವರಗಳನ್ನು ಕೊಡುವವರಲ್ಲಿ ಶ್ರೇಷ್ಠರಾದ ವ್ಯಾಸರು ಸಂಜಯನಿಗೆ ವರವನ್ನು ನೀಡಿದರು.
ವ್ಯಾಸಃ
ಏಷ ತೇ ಸಂಜಯೋ ರಾಜನ್ ಯುದ್ಧಮೇತದ್ ವದಿಷ್ಯತಿ |
ಏತಸ್ಯ ಸರ್ವಂ ಸಂಗ್ರಾಮೇ ನಪರೋಕ್ಷಂ ಭವಿಷ್ಯತಿ ||9||
ವ್ಯಾಸರು ಎಲೈ ರಾಜನೇ, ಈ ಸಂಜಯನು ನಿನಗೆ ಈ ಯುದ್ಧವನ್ನು ವರ್ಣಿಸುವನು. ಈ ಯುದ್ಧದಲ್ಲಿ ಇವನಿಗೆ ಎಲ್ಲವೂ

ಪ್ರತ್ಯಕ್ಷವಾಗುವುದು.
ಚಕ್ಷುಷಾ ಸಂಜಯೋ ರಾಜನ್ ದಿವ್ಯೇನೈಷ ಸಮನ್ವಿತಃ |
ಕಥಯಿಷ್ಯತಿ ತೇ ಯುದ್ದಂ ಸರ್ವಜ್ಞಶ್ಚ ಭವಿಷ್ಯತಿ ॥10॥
ಎಲೈ ರಾಜನೇ, ಈ ಸಂಜಯನು ದಿವ್ಯದೃಷ್ಟಿಯಿಂದ ಕೂಡಿದವನಾಗಿ ಈ ಯುದ್ಧದಲ್ಲಿ ನಡೆಯುವ ಎಲ್ಲವನ್ನೂ ನಿನಗೆ ಹೇಳುವನು. ಈ ವಿಷಯದಲ್ಲಿ ಅವನು ಸರ್ವಜ್ಞನಾಗುವನು.
ಪ್ರಕಾಶಂ ವಾ ರಹಸ್ಯಂ ವಾ ರಾತ್ರೌ ವಾ ಯದಿ ವಾ ದಿವಾ |
ಮನಸಾ ಚಿಂತಿತಮಪಿ ಸರ್ವಂ ವೇತ್ಸ್ಯತಿ ಸಂಜಯಃ ॥11॥
ಪ್ರಕಾಶವಾಗಲೀ ಅಥವಾ ರಹಸ್ಯವಾಗಲೀ, ರಾತ್ರಿಯಾಗಲೀ ಅಥವಾ ಹಗಲಾಗಲೀ, ನಡೆಯುವ ವಿಷಯಗಳನ್ನು ಮತ್ತು ಮನಸ್ಸಿನಲ್ಲಿ ಚಿಂತಿಸಿದ ಎಲ್ಲ ವಿಷಯವನ್ನೂ ಸಂಜಯನು ತಿಳಿಯುವನು.
ನೈನಂ ಶಸತ್ರಣಿ ಭೇತ್ಸ್ಯಂತಿ ನೈನಂ ಬಾಧಿಷ್ಯತೇ ಶ್ರಮಃ |
ಗಾವಲ್ಗಣಿರಯಂ ಜೀವನ್ ಯುದ್ಧಾದಸ್ಮಾದ್ ವಿಮೋಕ್ಷ್ಯತೇ ॥12॥
ಇವನನ್ನು ಯಾವ ಶಸ್ತ್ರಗಳೂ ಗಾಯಗೊಳಿಸುವುದಿಲ್ಲ. ಇವನಿಗೆ ಶ್ರಮವಾಗುವುದಿಲ್ಲ. ಗವಲ್ಗಣನ ಪುತ್ರನಾದ ಇವನು ಜೀವಂತನಾಗಿ ಈ ಯುದ್ಧದಿಂದ ಹೊರಬರುವನು.
ಅಹಂ ಚ ಕೀರ್ತಿಮೇತೇಷಾಂ ಕುರೂಣಾಂ ಭರತರ್ಷಭ |
ಪಾಂಡವಾನಾಂ ಚ ಸರ್ವೇಷಾಂ ಪ್ರಥಯಿಷ್ಯಾಮಿ ಮಾ ಶುಚಃ ॥13॥
ಎಲೈ ಭರತಶ್ರೇಷ್ಠನೇ, ನಾನಾದರೂ ಈ ಕುರುಗಳ ಮತ್ತು ಎಲ್ಲ ಪಾಂಡವರ ಕೀರ್ತಿಯನ್ನು ಹರಡುವೆನು. ನೀನು ದುಃಖಪಡಬೇಡ.
ದಿಷ್ಟಮೇತತ್ ಪುರಾ ಚೈವ ನಾತ್ರ ಶೋಚಿತುಮರ್ಹಸಿ |
ನ ಚೈವ ಶಕ್ಯಂ ಸಂಯಂತುಂ ಯತೋ ಧರ್ಮಸ್ತತೋ ಜಯಃ ॥14॥
ಇದು ಹಿಂದೆಯೇ ಕ್ಲೃಪ್ತ್ತವಾಗಿದೆ. ಈ ವಿಷಯದಲ್ಲಿ ನೀನು ಶೋಕಪಡುವ ಕಾರಣವಿಲ್ಲ ಮತ್ತು ಇದನ್ನು ನಿವಾರಿಸಲೂ ಸಾಧ್ಯವಿಲ್ಲ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವುಂಟಾಗುತ್ತದೆ.
ವೈಶಂಪಾಯನಃ
ಏವಮುಕತ್ವ ಸ ಭಗವಾನ್ ಕುರೂಣಾಂ ಪ್ರಪಿತಾಮಹಃ |
ಪುನರೇವ ಮಹಾಬಾಹೋ ಧೃತರಾಷ್ಟ್ರಮುವಾಚ ಹ ॥15॥
ವೈಶಂಪಾಯನ ಹೀಗೆ ಹೇಳಿ ಕುರುಗಳ ಪ್ರಪಿತಾಮಹರಾದ ಭಗವಾನ್ ವ್ಯಾಸರು ಮಹಾಬಾಹುವಾದ ಧೃತರಾಷ್ಟ್ರನನ್ನು ಕುರಿತು ಪುನಃ ಮಾತನಾಡಿದರು.
ಇಹ ಯುದ್ಧೇ ಮಹಾರಾಜ ಭವಿಷ್ಯತಿ ಮಹಾನ್ ಕ್ಷಯಃ |
ಯಥೇಮಾನಿ ನಿಮಿತ್ತಾನಿ ಭಯಾಯಾದ್ಯೋಪಲಕ್ಷಯೇ ॥16॥
ಎಲೈ ಮಹಾರಾಜನೇ, ನಾನು ಭಯಸೂಚಕವಾದ ಈ ಶಕುನಗಳನ್ನು ಗಮನಿಸುತ್ತಿದ್ದೇನೆ. ಅದರಂತೆ ಈ ಯುದ್ಧದಲ್ಲಿ ದೊಡ್ಡ ನಾಶವು ಉಂಟಾಗಲಿದೆ.
ಶ್ಯೇನಾ ಗೃಧ್ರಾಶ್ಚ ಕಾಕಾಶ್ಚ ಕಂಕಾಶ್ಚ ಸಹಿತಾ ಬಲೈಃ |
ಸಂಪತಂತಿ ವನಾಂತೇಷು ಸಮವಾಯಾಂಶ್ಚ ಕುರ್ವತೇ ॥17॥
ಹದ್ದುಗಳು, ಗಿಡಗಗಳು, ಕಾಗೆಗಳು, ಗೃಧ್ರಗಳು ಮತ್ತು ಬಲಪಕ್ಷಿಗಳು ಕಾಡಿನ ಅಂಚಿಗೆ ಹಾರಿಬಂದು ಗುಂಪುಗೂಡುತ್ತಿವೆ.
ಅತ್ಯುಗ್ರಂ ಚ ಪ್ರಪಶ್ಯಂತಿ ಯುದ್ಧಮಾನಂದಿನೋ ದ್ವಿಜಾಃ |
ಕ್ರವ್ಯಾದಾ ಭಕ್ಷಯಿಷ್ಯಂತಿ ಮಾಂಸಾನಿ ಗಜವಾಜಿನಾಮ್ ॥18॥
ಯುದ್ಧವನ್ನು ಸವಿಯುವ ಕ್ರೂರಪಕ್ಷಿಗಳು ಬಹಳ ಉಗ್ರವಾಗಿ ನೋಡುತ್ತಿವೆ. ಮಾಂಸಾಹಾರಿ ಪ್ರಾಣಿಗಳು ಗಜಾಶ್ವಗಳ ಮಾಂಸಗಳನ್ನು ತಿನ್ನುವವು.
ಖೇಟಾ ಹಾಹೇತಿ ವಾಶಂತೋ ಭೈರವಂ ಭಯವೇದಿನಃ |
ಕಹ್ವಾಃ ಪ್ರಯಾಂತಿ ಮಧ್ಯೇನ ದಕ್ಷಿಣಾಮಭಿತೋ ದಿಶಮ್ ॥19॥
ಗ್ರಾಮಗಳು ಅಥವಾ ಕ್ರೂರಪಕ್ಷಿಗಳು ಹಾಹಾಕಾರವನ್ನು ಮಾಡುತ್ತಾ ಭೀಕರವಾದ ಭಯವನ್ನು ಸೂಚಿಸುತ್ತಿವೆ. ಬಕಪಕ್ಷಿಗಳು ಅವುಗಳ ಮಧ್ಯದಲ್ಲಿ ದಕ್ಷಿಣಾಭಿಮುಖವಾಗಿ ಹೋಗುತ್ತಿವೆ.
ಉಭೇ ಪೂರ್ವಾಪರೇ ಸಂಧ್ಯೇ ನಿತ್ಯಂ ಪಶ್ಯಾಮಿ ಭಾರತ |
ಉದಯಾಸ್ತಮಯೇ ಸೂರ್ಯಂ ಕಬಂಧೈಃ ಪರಿವಾರಿತಮ್ ॥20॥
ಎಲೈ ಭಾರತನೇ, ಪ್ರಾತಃಕಾಲದ ಮತ್ತು ಸಾಯಂಕಾಲದ ಎರಡು ಸಂಧಿಗಳಲ್ಲಿಯೂ ಸೂರ್ಯನ ಉದಯಾಸ್ತಮಯ ಸಮಯಗಳಲ್ಲಿ ಸೂರ್ಯನು ಪರಿವೇಶಗಳಿಂದ ಸುತ್ತುವರಿಯಲ್ಪಟ್ಟಿರುವುದನ್ನು ನಾನು ನೋಡುತ್ತಿದ್ದೇನೆ.
ಶ್ವೇತಲೋಹಿತಪರ್ಯಂತಾಃ ಕೃಷ್ಣಗ್ರೀವಾಃ ಸವಿದ್ಯುತಃ |
ತ್ರಿವರ್ಣಾಃ ಪರಿಘಾಃ ಸಂಧೌ ಭಾನುಮಾವಾರಯಂತ್ಯುತ ॥21॥
ಬಿಳಿ ಮತ್ತು ಕೆಂಪು ಬಣ್ಣಗಳಿಂದ ಕೂಡಿರುವ, ಮಧ್ಯದಲ್ಲಿ ಸ್ವಲ್ಪಭಾಗ ಕಪ್ಪಾದ ಮಿಂಚುಗಳಿಂದ ಕೂಡಿದ ಈ ಮೂರುವರ್ಣದ ಪರಿವೇಶಗಳು ಸಂಧ್ಯಾಕಾಲದಲ್ಲಿ ಸೂರ್ಯನನ್ನು ಸುತ್ತುವರಿಯುತ್ತಿವೆ.
ಜ್ವಲಿತಾರ್ಕೇಂದುನಕ್ಷತ್ರಂ ನಿರ್ವಿಶೇಷದಿನಕ್ಷಪಮ್ |
ಅಹೋರಾತ್ರಂ ಮಯಾ ದೃಷ್ಟಂ ತತ್ಕ್ಷಯಾಯ ಭವಿಷ್ಯತಿ ॥22॥

ಸೂರ್ಯ, ಚಂದ್ರ, ನಕ್ಷತ್ರಗಳು ಜ್ವಲಿತವಾಗಿವೆ. ಹಗಲು ಮತ್ತು ರಾತ್ರಿಗಳಲ್ಲಿ ಯಾವ ವ್ಯತ್ಯಾಸವೂ ಕಾಣುತ್ತಿಲ್ಲ. ಪ್ರತಿದಿನವೂ ನಾನು ನೋಡುತ್ತಿರುವ ಈ ಶಕುನವು ದೊಡ್ಡ ಕ್ಷಯವನ್ನು ಸೂಚಿಸುವುದು.
ಅಲಕ್ಷ್ಯಃ ಪ್ರಭಯಾ ಹೀನಃ ಪೌರ್ಣಮಾಸೀಂ ಚ ಕಾರ್ತಿಕೀಮ್ |
ಚಂದ್ರೋಽಭೂದಗ್ನಿವರ್ಣಶ್ಚ ಸಮವರ್ಣೇ ನಭಸ್ತಳೇ ॥23॥
ಇಲ್ಲಿ ಕಾರ್ತಿಕ ಪೌರ್ಣಿಮಾಸೆಯಂದು ಚಂದ್ರನು ಕಾಂತಿಹೀನನಾಗಿ ಅಗ್ನಿವರ್ಣದಿಂದ ಕೂಡಿದ ಆಕಾಶದಲ್ಲಿ ತಾನೂ ಅಗ್ನಿವರ್ಣದಿಂದ ಕೂಡಿದವನಾಗಿ ಅವನನ್ನು ಗಮನಿಸಲು ಸಾಧ್ಯವೇ ಆಗುತ್ತಿಲ್ಲ.
ಸ್ವಪ್ಸ್ಯಂತಿ ನಿಹತಾ ವೀರಾ ಭೂಮಿಮಾವೃತ್ಯ ಪಾರ್ಥಿವಾಃ |
ರಾಜಾನೋ ರಾಜಪುತ್ರಾಶ್ಚ ಶೂರಾಃ ಪರಿಘಬಾಹವಃ ॥24॥
ಭೂಮಿಯ ಮೇಲಿರುವ ಒನಕೆಯಂತಹ ಬಾಹುಗಳುಳ್ಳ, ಶೂರರಾದ ಮತ್ತು ವೀರರಾದ ರಾಜರು ಮತ್ತು ರಾಜಪುತ್ರರು ಭೂಮಿಯ ಮೇಲೆ ಸತ್ತು, ಭೂಮಿಯನ್ನು ಮುಚ್ಚಿ ಮಲಗುವರು.
ಅಂತರಿಕ್ಷೇ ವರಾಹಸ್ಯ ವೃಷದಂಶಸ್ಯ ಚೋಭಯೋಃ |
ಪ್ರಣಾದಂ ಯುಧ್ಯತೋ ರಾತ್ರೌ ರೌದ್ರಂ ನಿತ್ಯಂ ಪ್ರಲಕ್ಷಯೇ ॥25॥
ಅಂತರಿಕ್ಷದಲ್ಲಿ ರಾತ್ರಿಯ ಕಾಲದಲ್ಲಿ ವರಾಹ ಮತ್ತು ಮಾರ್ಜಾಲಗಳು ಯುದ್ಧವನ್ನು ಮಾಡುತ್ತಾ, ಭಯಂಕರವಾದ ನಾದವನ್ನು ಮಾಡುವುದನ್ನು ನಿತ್ಯವೂ ನೋಡುತ್ತಿದ್ದೇನೆ.
ದೇವತಾಪ್ರತಿಮಾಶ್ಚಾಪಿ ಕಂಪಂತಿ ಚ ಹಸಂತಿ ಚ |
ವಮಂತಿ ರುಧಿರಂ ಚಾಸ್ಯೈಃ ಸ್ವಿದ್ಯಂತಿ ಪ್ರಪತಂತಿ ಚ ॥26॥
ದೇವತಾಪ್ರತಿಮೆಗಳು ಅಲುಗಾಡುತ್ತಿವೆ ಮತ್ತು ನಗುತ್ತಿವೆ. ಬಾಯಿಂದ ರಕ್ತವನ್ನು ಸುರಿಸುತ್ತಿವೆ. ಬೆವರುತ್ತಿವೆ ಮತ್ತು ಬೀಳುತ್ತಿವೆ.
ಅನಾಹತಾ ದುಂದುಭಯಃ ಪ್ರಣದಂತಿ ವಿಶಾಂಪತೇ |
ಅಯುಕ್ತಾಶ್ಚ ಪ್ರವರ್ತಂತೇ ಕ್ಷತ್ರಿಯಾಣಾಂ ಮಹಾರಥಾಃ ॥27॥
ಎಲ್ಲೈ ರಾಜನೇ, ಬಾರಿಸದಿದ್ದರೂ ದುಂದುಭಿಗಳು ನಾದವನ್ನು ಮಾಡುತ್ತಿವೆ. ಮಹಾರಥರಾದ ಕ್ಷತ್ರಿಯರ ರಥಗಳು ಹೂಡದಿದ್ದರೂ ಮುಂದೆ ಚಲಿಸುತ್ತಿವೆ.
ಕೋಕಿಲಾಃ ಶತಪತ್ರಾಶ್ಚ ಚಾಷಾ ಭಾಸಾಃ ಶುಕಾಸ್ತಥಾ |
ಸಾರಸಾಶ್ಚ ಮಯೂರಾಶ್ಚ ವಾಚೋ ಮುಂಚಂತಿ ದಕ್ಷಿಣಾಃ ॥28॥
ಕೋಗಿಲೆಗಳು, ಶತಪತ್ರಗಳು, ಚಾಷಗಳು (ಹಂಗನ ಹಕ್ಕಿಗಳು), ಶಕುಂತ ಪಕ್ಷಿಗಳು, ಗಿಣಿಗಳು, ಸಾರಸ ಪಕ್ಷಿಗಳು ಮತ್ತು ನವಿಲುಗಳು ದಕ್ಷಿಣಾಭಿಮುಖವಾಗಿ ನಿಂತು ಕಿರುಚುತ್ತಿವೆ.
ಗೃಹೀತಶಸ್ತ್ರತ್ರವರಣಾ ವರ್ಮಿಣೋ ವಾಜಿಪೃಷ್ಠಗಾಃ |
ಅರುಣೋದಯೇಷು ದೃಶ್ಯಂತೇ ಶತಶಃ ಶಲಭವ್ರಜಾಃ ॥29॥
ಅರುಣೋದಯ ಕಾಲದಲ್ಲಿ ನೂರಾರು ಸಂಖ್ಯೆಯ ಪತಂಗಗಳ ಹಿಂಡು ಆಯುಧಗಳನ್ನು, ಆಭರಣಗಳನ್ನು, ಕವಚಗಳನ್ನು ಮತ್ತು ಅಶ್ವಗಳ ಹಿಂಭಾಗವನ್ನು ಮುತ್ತುತ್ತಿರುವುದು ಕಂಡುಬರುತ್ತಿದೆ.
ಉಭೇ ಸಂಧ್ಯೇ ಪ್ರಕಾಶೇತೇ ದಿಶಾಂ ದಾಹಸಮನ್ವಿತೇ |
ಆಸೀದ್ ರುಧಿರವರ್ಷಂ ಚ ಅಸ್ಥಿವರ್ಷಂ ಚ ಭಾರತ ॥30॥
ಎರಡು ಸಂಧ್ಯಾಕಾಲಗಳಲ್ಲಿಯೂ ದಿಕ್ಕುಗಳು ದಾಹದಿಂದ ಕೂಡಿವೆ. ಎಲ್ಲೈ ಭಾರತನೇ, ರಕ್ತದ ಮಳೆಯೂ ಮತ್ತು ಮೂಳೆಗಳ ಮಳೆಯೂ ಉಂಟಾಯಿತು.
ಯಾ ಚೈಷಾ ವಿಶ್ರುತಾ ರಾಜಂಸ್ತ್ರೈಲೋಕ್ಯೇ ಸಾಧುಸಮ್ಮತಾ |
ಅರುಂಧತೀ ತಯಾಪ್ಯೇಷ ವಸಿಷ್ಠಃ ಪೃಷ್ಠತಃ ಕೃತಃ ॥31॥
ಎಲ್ಲೈ ರಾಜನೇ, ಮೂರುಲೋಕಗಳಲ್ಲಿ ವಿಶ್ರುತವಾದ, ಸಜ್ಜನರಿಗೆ ಸಮ್ಮತವಾದ ಈ ಅರುಂಧತೀ ನಕ್ಷತ್ರವೂ ಸಹ ವಸಿಷ್ಠ ನಕ್ಷತ್ರವನ್ನು ಹಿಂದೆ ಹಾಕಿ ಮುಂದೆ ಸಾಗಿದೆ.
ರೋಹಿಣೀಂ ಪೀಡಯನ್ನೇವ ಸ್ಥಿತೋ ರಾಜನ್ ಶನೈಶ್ಚರಃ |
ವ್ಯಾವೃತ್ತಂ ಲಕ್ಷ್ಮ ಸೋಮಸ್ಯ ಭವಿಷ್ಯತಿ ಮಹದ್ ಭಯಮ್ ॥32॥
ಎಲ್ಲೈ ರಾಜನೇ, ಶನಿಯು ವೃಷಭ ರಾಶಿಯಲ್ಲಿ ರೋಹಿಣೀ ನಕ್ಷತ್ರವನ್ನು ಪೀಡಿಸುತ್ತಿದ್ದಾನೆ. ಚಂದ್ರನ ಚಿಹ್ನೆಯು ಕಂಡುಬರುತ್ತಿಲ್ಲ. ದೊಡ್ಡ ಭಯವು ಉಂಟಾಗಲಿದೆ.
ಅನಭ್ರೇ ಚ ಮಹಘೋರಸ್ತನಿಕಂ ಶ್ರೂಯತೇ ಭೃಶಮ್ |
ವಾಹನಾನಾಂ ಚ ರುದತಾಂ ನಿಪತಂತ್ಯಶ್ರುಬಿಂದವಃ ॥33॥
ಮೋಡವಿಲ್ಲದ ಆಕಾಶದಲ್ಲಿ ಸತತವಾಗಿ ಘೋರವಾದ ಗುಡುಗುಗಳು ಕೇಳಿ ಬರುತ್ತಿವೆ. ಅಳುತ್ತಿರುವ ಗಜಾಶ್ವ-ವಾಹನಗಳ ಕಣ್ಣಿನಿಂದ ನೀರು ಸುರಿಯುತ್ತಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಭೀಷ್ಮ ಪರ್ವಣಿ ದ್ವಿತೀಯೋಽಧ್ಯಾಯಃ ॥
॥ಇತಿ ಜಂಬೂಖಂಡನಿರ್ಮಾಣಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *

ಮೂರನೆಯ ಅಧ್ಯಾಯ
ವ್ಯಾಸರಿಂದ ಅಪಶಕುನಗಳ ಕಥನದ ಅನುವೃತ್ತಿ.
ವ್ಯಾಸಃ
ಖರಾ ಗೋಷು ಪ್ರಜಾಯಂತೇ ರಮಂತೇ ಮಾತೃಭಿಃ ಸುತಾಃ |
ಅನಾರ್ತವಂ ಪುಷ್ಪಫಲಂ ದರ್ಶಯಂತಿ ವನೇ ದ್ರುಮಾಃ ॥1॥
ವ್ಯಾಸರು ಗೋವುಗಳಲ್ಲಿ ಕತ್ತೆಗಳು ಜನಿಸುತ್ತವೆ. ಪುತ್ರರು ತಾಯಿಯರ ಜೊತೆಯಲ್ಲಿ ರಮಿಸುತ್ತಾರೆ. ಕಾಡಿನಲ್ಲಿ ಮರಗಳು ಆ ಋತುವಿಗೆ ಯೋಗ್ಯವಲ್ಲದ ಪುಷ್ಪ-ಫಲಗಳನ್ನು ಕೊಡುತ್ತವೆ.
ಗರ್ಭಿಣ್ಯೋ ರಾಜಪುತ್ರ್ಯಶ್ಚ ಜನಯಂತಿ ವಿಭೀಷಣಾನ್ |
ಕ್ರವ್ಯಾದಾನ್ ಪಕ್ಷಿಣಶ್ಚೈವ ಗೋಮಾಯೂನಪರಾನ್ ಮೃಗಾನ್ ॥2॥
ಗರ್ಭಿಣಿಯರಾದ ರಾಜಕುಮಾರಿಯರು ಭಯಂಕರವಾದ ಮಾಂಸಾಹಾರಿ ಪ್ರಾಣಿಗಳನ್ನೂ, ಪಕ್ಷಿಗಳನ್ನೂ, ನರಿಗಳನ್ನೂ, ಉಳಿದ ಮೃಗಗಳನ್ನೂ ಪ್ರಸವಿಸುತ್ತಾರೆ.
ತ್ರಿವಿಷಾಣಾಶ್ಚತುರ್ನೇತ್ರಾಃ ಪಂಚಪಾದಾಃ ದ್ವಿಮೇಹನಾಃ |
ದ್ವಿಶೀರ್ಷಾಶ್ಚ ದ್ವಿಪುಚ್ಛಾಶ್ಚ ದಂಷ್ಟ್ರಿಣಃ ಪಶವೋಽಶಿವಾಃ ॥3॥
ಮೂರು ಕೊಂಬುಗಳು, ನಾಲ್ಕು ಕಣ್ಣುಗಳು, ಐದು ಕಾಲುಗಳು, ಎರಡು ಮೂತ್ರದ್ವಾರಗಳು, ಎರಡು ತಲೆಗಳು, ಎರಡು ಬಾಲಗಳು ಮತ್ತು ಕೋರೆಯ ಹಲ್ಲುಗಳನ್ನು ಹೊಂದಿದ ಅಮಂಗಳವಾದ ಪಶುಗಳು ಜನಿಸುತ್ತವೆ.
ಜಾಯಂತೇ ವಿವೃತಾಸ್ಯಾಶ್ಚ ವ್ಯಾಹರಂತೋಽಶಿವಾ ಗಿರಃ |
ತ್ರಿಪದಾಃ ಶಿಖಿನಸ್ತಾರ್ಕ್ಷ್ಯಾಶ್ಚತುರ್ದಂಷ್ಟ್ರಾ ವಿಷಾಣಿನಃ ॥4॥
ಹುಟ್ಟುವಾಗಲೇ ದೊಡ್ಡದಾಗಿ ತೆರೆದ ಬಾಯಿಂದ ಅಮಂಗಳವಾದ ಮಾತುಗಳನ್ನು ಆಡುತ್ತಾರೆ. ನವಿಲುಗಳು ಮತ್ತು ಗರುಡ ಪಕ್ಷಿಗಳು ಮೂರು ಪಾದಗಳನ್ನೂ, ಕೊಂಬುಳ್ಳ ಪ್ರಾಣಿಗಳು ನಾಲ್ಕು ಕೋರೆಹಲ್ಲುಗಳನ್ನು ಹೊಂದಿರುತ್ತವೆ.
ತಥೈವಾನ್ಯಾಶ್ಚ ದೃಶ್ಯಂತೇ ಸ್ತ್ರಿಯಶ್ಚ ಬ್ರಹ್ಮವಾದಿನಾಮ್ |
ವೈನತೇಯಾನ್ ಮಯೂರಾಂಶ್ಚ ಜನಯಂತ್ಯಃ ಪುರೇ ತವ ॥5॥
ಅದರಂತೆ ಬ್ರಾಹ್ಮಣ ಸ್ತ್ರೀಯರು ಗರುಡಗಳನ್ನೂ, ನವಿಲುಗಳನ್ನೂ ಪ್ರಸವಿಸುವುದು ನಿನ್ನ ಪಟ್ಟಣದಲ್ಲಿ ಕಂಡುಬರುತ್ತದೆ.
ಗೋವತ್ಸಂ ವಡವಾ ಸೂತೇ ಶ್ವಾ ಸೃಗಾಲಂ ಮಹೀಪತೇ |
ಕೃಕರಾನ್ ಶಾರಿಕಾಶ್ಚೈವ ಶುಕಾಂಶ್ಚಾಶುಭವಾದಿನಃ ॥6॥
ಎಲೈ ರಾಜನೇ, ಕುದುರೆಯು ಗೋವತ್ಸವನ್ನೂ, ನಾಯಿಯು ನರಿಯನ್ನೂ ಪ್ರಸವಿಸುತ್ತದೆ. ಕಬ್ಬಕ್ಕಿಗಳು ಕೆಟ್ಟಮಾತುಗಳನ್ನಾಡುವ ಶುಕ, ಶಾರಿಕಗಳನ್ನು ಪ್ರಸವಿಸುತ್ತವೆ.
ಸ್ತ್ರಿಯಃ ಕಾಚಿತ್ ಪ್ರಜಾಯಂತೇ ಚತಸ್ರಃ ಪಂಚ ಕನ್ಯಕಾಃ |
ತಾ ಜಾತಮಾತ್ರಾ ನೃತ್ಯಂತಿ ಗಾಯಂತಿ ಚ ಹಸಂತಿ ಚ ॥7॥
ಸ್ತ್ರೀಯರು ಒಮ್ಮೊಮ್ಮೆ ಒಟ್ಟಿಗೆ ನಾಲ್ಕೈದು ಹೆಣ್ಣು ಮಕ್ಕಳಿಗೆ ಜನ್ಮವೀಯುತ್ತಾರೆ. ಆ ಹೆಣ್ಣು ಶಿಶುಗಳಾದರೂ ಹುಟ್ಟಿದ ತಕ್ಷಣವೇ ಕುಣಿಯುತ್ತವೆ, ನಗುತ್ತವೆ ಮತ್ತು ಹಾಡುತ್ತವೆ.
ಪೃಥಗ್ಜನಸ್ಯ ಕುಡಕಾಃ ಸ್ತನಪಾಃ ಸ್ತೇನವೇಶ್ಮನಿ |
ನೃತ್ಯಂತಿ ಪರಿಗಾಯಂತಿ ವೇದಯಂತೋ ಮಹದ್ಭಯಮ್ ॥8॥
ನೀಚಜನರ ಮನೆಯಲ್ಲಿ ಮತ್ತು ಕಳ್ಳರ ಮನೆಗಳಲ್ಲಿ ಆಗ ತಾನೇ ಹುಟ್ಟಿದ ಅಂಗವಿಕಲಗಳಾದ ಶಿಶುಗಳು ದೊಡ್ಡ ಭಯವನ್ನು ಸೂಚಿಸುತ್ತಾ ಕುಣಿಯುತ್ತಾರೆ ಮತ್ತು ಹಾಡುತ್ತಾರೆ.
ಪ್ರತಿಮಾಶ್ಚಾಲಿಖಂತ್ಯನ್ಯೇ ಸಶಸಾಶತ್ರಃ ಕಾಲಚೋದಿತಾಃ |
ಅನ್ಯೋನ್ಯಮಭಿಧಾವಂತಿ ಶಿಶವೋ ದಂಡಪಾಣಯಃ |
ಉಪರುಂಧಂತಿ ಕೃತ್ವಾ ಚ ನಗರಾಣಿ ಯುಯುತ್ಸವಃ ॥9॥
ಇನ್ನು ಕೆಲವು ಮಕ್ಕಳು ಕಾಲಚೋದಿತರಾಗಿ ಕೈಯಲ್ಲಿ ಶಸ್ತ್ರಗಳನ್ನು ಹಿಡಿದು ಪ್ರತಿಮೆಗಳನ್ನು ಬರೆಯುತ್ತಾರೆ. ಚಿಕ್ಕಮಕ್ಕಳು ಕೈಯಲ್ಲಿ ದಂಡವನ್ನು ಹಿಡಿದು ಪರಸ್ಪರವಾಗಿ ಮುನ್ನುಗ್ಗುತ್ತಾರೆ. ಆಟದ ನಗರಗಳನ್ನು ನಿರ್ಮಿಸಿ ಯುದ್ಧ ಮಾಡುವ ಇಚ್ಛೆಯಿಂದ ಅವುಗಳಿಗೆ ಮುತ್ತಿಗೆಯನ್ನು ಹಾಕುತ್ತಾರೆ.
ಪದ್ಮೋತ್ಪಲಾನಿ ವೃಕ್ಷೇಷು ಜಾಯಂತೇ ಕುಮುದಾನಿ ಚ |
ವಿಷ್ವಗ್ವಾತಾಶ್ಚ ವಾಂತ್ಯುಗ್ರಾ ರಜೋ ನ ವ್ಯುಪಶಾಮ್ಯತಿ ॥10॥
ಮರಗಳಲ್ಲಿ ಪದ್ಮ, ಉತ್ಪಲ ಮತ್ತು ಕುಮುದ ಪುಷ್ಪಗಳು ಉಂಟಾಗುತ್ತವೆ. ಭಯಂಕರವಾದ ಸುಂಟರಗಾಳಿಗಳು ಉಂಟಾಗುತ್ತವೆ. ಧೂಳು ಅಡಗುವುದಿಲ್ಲ.
ಅಭೀಕ್ಷ್ಣಂ ಕಂಪತೇ ಭೂಮಿರರ್ಕಂ ರಾಹುಸ್ತಥಾಗ್ರಸತ್ |
ಶ್ವೇತೋ ಗ್ರಹಸ್ತಥಾ ಚಿತ್ರಾಂ ಸಮತಿಕ್ರಮ್ಯ ತಿಷ್ಠತಿ ॥11॥
ಭೂಮಿಯು ಸತತವಾಗಿ ನಡುಗುತ್ತಿದೆ. ರಾಹುವು ಸೂರ್ಯನನ್ನು ಹಿಡಿದಿದ್ದಾನೆ. ಶುಕ್ರನು ಚಿತ್ತಾ ನಕ್ಷತ್ರವನ್ನು ಆಕ್ರಮಿಸಿ ಮುಂದೆ ಹೋಗಿ ನಿಂತಿದ್ದಾನೆ.
ಅಭಾವಂ ಹಿ ವಿಶೇಷೇಣ ಕುರೂಣಾಂ ಪ್ರತಿಪಶ್ಯತಿ |
ಧೂಮಕೇತುರ್ಮಹಾಘೋರಃ ಪುಷ್ಯಮಾಕ್ರಮ್ಯ ತಿಷ್ಠತಿ ॥12॥

ಪುಷ್ಯ ನಕ್ಷತ್ರವನ್ನು ಆಕ್ರಮಿಸಿಕೊಂಡಿರುವ ಮಹಾಘೋರವಾದ ಧೂಮಕೇತುವು ವಿಶೇಷವಾಗಿ ಕುರುಗಳ ನಾಶವನ್ನು ಸೂಚಿಸುತ್ತದೆ.
ಸೇನಯೋರಶಿವಂ ಘೋರಂ ಕರಿಷ್ಯತಿ ಮಹಾಗ್ರಹಃ |
ಮಘಾಸ್ವಂಗಾರಕೋ ವಕ್ರಃ ಶ್ರವಣೇ ಚ ಬೃಹಸ್ಪತಿಃ ||13||
ಮಘಾ ನಕ್ಷತ್ರದಲ್ಲಿ ವಕ್ರನಾದ ಅಂಗಾರಕನು, ಶ್ರವಣ ನಕ್ಷತ್ರದಲ್ಲಿ ವಕ್ರನಾದ ಬೃಹಸ್ಪತಿಯು ಈ ಎರಡು ಮಹಾಗ್ರಹಗಳು ಎರಡು ಸೇನೆಗಳಿಗೂ ಘೋರವಾದ ಅಮಂಗಳವನ್ನು ಮಾಡುವವು.
ಭಾಗ್ಯಂ ನಕ್ಷತ್ರಮಾಕ್ರಮ್ಯ ಸೂರ್ಯಪುತ್ರೇಣ ಪೀಡ್ಯತೇ |
ಶುಕ್ರಃ ಪ್ರೋಷ್ಠಪದೇ ಪೂರ್ವಂ ಸಮಾರುಹ್ಯ ವಿಶಾಂಪತೇ |
ಉತ್ತರೇ ತು ಸಮಾಕ್ರಮ್ಯ ಸಹಿತಃ ಪ್ರತ್ಯುದೀಕ್ಷತೇ ||14||
ಸೂರ್ಯಪುತ್ರನಾದ ಶನಿಯು ಭಗದೇವತಾಕವಾದ ನಕ್ಷತ್ರವಾದ ನಕ್ಷತ್ರವನ್ನು ಪೀಡಿಸುತ್ತಿದ್ದಾನೆ. ಶುಕ್ರನು ಭಾದ್ರಪದ ಮಾಸದಲ್ಲಿ ಪೂರ್ಣಿಮೆಯ ಮೊದಲು ಬರುವ ಪೂರ್ವಾಭಾದ್ರ ನಕ್ಷತ್ರವನ್ನು ಆಕ್ರಮಿಸಿ ಮುಂದಿನ ಉತ್ತರಾಭಾದ್ರ ನಕ್ಷತ್ರವನ್ನು ನೋಡುತ್ತಿದ್ದಾನೆ.
ಶ್ವೇತೋ ಗ್ರಹಃ ಪ್ರಜ್ವಲಿತಃ ಸಧೂಮಃ ಸಹಪಾವಕಃ |
ಐಂದ್ರಂ ತೇಜಸ್ವಿ ನಕ್ಷತ್ರಂ ಜ್ಯೇಷ್ಠಮಾಕ್ರಮ್ಯ ತಿಷ್ಠತಿ ||15||
ಚಂದ್ರನು ಪ್ರಜ್ವಲಿತನಾಗಿ ಧೂಮಾಗ್ನಿಗಳಿಂದ ಕೂಡಿದ್ದಾನೆ. ತೇಜಸ್ವಿಯಾದ ಇಂದ್ರದೇವತಾಕವಾದ ಜ್ಯೇಷ್ಠಾನಕ್ಷತ್ರವನ್ನು ಆಕ್ರಮಿಸಿ ಕುಳಿತಿದ್ದಾನೆ.
ಧ್ರುವಂ ಪ್ರಜ್ವಲಿತೋ ಘೋರಮಪಸವ್ಯಂ ಪ್ರವರ್ತತೇ |
ಚಿತ್ರಾಸ್ವಾತ್ಯಂತರೇ ಚೈವ ಧಿಷ್ಠಿತಃ ಪರುಷೋ ಗ್ರಹಃ ||16||
ಧ್ರುವ ನಕ್ಷತ್ರವು ಘೋರವಾದ ಜ್ವಾಲೆಗಳಿಂದ ಕೂಡಿದ್ದು, ಅಪ್ರದಕ್ಷಿಣಾಕಾರವಾಗಿ ಚಲಿಸುತ್ತಿದೆ. ಕ್ರೂರಗ್ರಹವಾದ ರಾಹುವು ಚಿತ್ರಾ ನಕ್ಷತ್ರಗಳಲ್ಲಿಯೂ ಮತ್ತು ಅದರ ಮುಂದಿನ ಸ್ವಾತಿ ನಕ್ಷತ್ರದಲ್ಲಿಯೂ ಅಧಿಷ್ಠಿತವಾಗಿದೆ.
ವಕ್ರಾನುವಕ್ರಂ ಕೃತ್ವಾ ಚ ಶ್ರವಣೇ ಪಾವಕಪ್ರಭಃ |
ಬ್ರಹ್ಮರಾಶಿಂ ಸಮಾವೃತ್ಯ ಲೋಹಿತಾಂಗೋ ವ್ಯವಸ್ಥಿತಃ ||17||
ಲೋಹಿತಾಂಗನಾದ ಕುಜನು ಅಗ್ನಿಯ ಕಾಂತಿಯನ್ನು ಹೊಂದಿ ಬ್ರಾಹ್ಮ ಮುಹೂರ್ತದ ಸಮಯದಲ್ಲಿ ವಕ್ರಾನುವಕ್ರ ಗತಿಯಿಂದ ಶ್ರವಣ ನಕ್ಷತ್ರದಲ್ಲಿದ್ದಾನೆ.
ಸರ್ವಸಸ್ಯಪ್ರತಿಚ್ಛನ್ನಾ ಪೃಥಿವೀ ಫಲಮಾಲಿನೀ |
ಪಂಚಶೀರ್ಷಾ ಯವಾಶ್ಚೈವ ಶತಶೀರ್ಷಾಶ್ಚ ಶಾಲಯಃ ||18||
ಭೂಮಿಯೆಲ್ಲವೂ ಎಲ್ಲ ವಿಧದ ಸಸ್ಯಗಳಿಂದ ಮತ್ತು ಫಲಗಳಿಂದ ಮುಚ್ಚಿ ಹೋಗಿದೆ. ಗೋಧಿಯ ಗಿಡದಲ್ಲಿ ಐದು ತೆನೆಗಳು, ಭತ್ತದ ಪೈರಿನಲ್ಲಿ ನೂರಾರು ತೆನೆಗಳು ಕಂಡುಬರುತ್ತಿವೆ.
ಪ್ರಧಾನಾಃ ಸರ್ವಲೋಕಸ್ಯ ಯಾಸ್ವಾಯತ್ತಮಿದಂ ಜಗತ್ |
ತಾ ಗಾವಃ ಪ್ರಸ್ರುತಾ ವತ್ಸೈಃ ಶೋಣಿತಂ ಪ್ರಕ್ಷರಂತ್ಯುತ ||19||
ಈ ಲೋಕಕ್ಕೆ ಪ್ರಧಾನವಾದ, ಸರ್ವರಿಗೂ ಆಶ್ರಯವಾದ ಗೋವುಗಳು ಕರುಗಳು ಹಾಲನ್ನು ಕುಡಿಯುವಾಗ ರಕ್ತವನ್ನು ಸುರಿಸುತ್ತಿವೆ.
ನಿಶ್ಚೇರುರಪಿಧಾನೇಭ್ಯಃ ಖಡ್ಗಾಃ ಪ್ರಜ್ವಲಿತಾ ಭೃಶಮ್ |
ವ್ಯಕ್ತಂ ಪಶ್ಯಂತಿ ಶಸ್ತ್ರಾಣಿ ಸಂಗ್ರಾಮಂ ಸಮುಪಸ್ಥಿತಮ್ ||20||
ಖಡ್ಗಗಳು ಜ್ವಾಲೆಯಿಂದ ಕೂಡಿದ್ದು ತಮ್ಮ ಒರೆಗಳಿಂದ ತಾವೇ ಹೊರಬರುತ್ತಿವೆ. ಈ ಶಸ್ತ್ರಗಳು ಸ್ಪಷ್ಟವಾಗಿ ಸನ್ನಿಹಿತವಾದ ಯುದ್ಧವನ್ನು ನೋಡುತ್ತಿವೆ.
ಅಗ್ನಿವರ್ಣಾ ಯಥಾ ಭಾಸಃ ಶಸ್ತ್ರಾಣಾಮುದಕಸ್ಯ ಚ |
ಕವಚಾನಾಂ ಧ್ವಜಾನಾಂ ಚ ಭವಿಷ್ಯತಿ ಮಹಾನ್ ಕ್ಷಯಃ ||21||
ಶಸ್ತ್ರಗಳು, ನೀರು, ಕವಚಗಳು ಮತ್ತು ಧ್ವಜಗಳು ಅಗ್ನಿವರ್ಣದಿಂದ ಕೂಡಿವೆ. ದೊಡ್ಡ ಕ್ಷಯವು ಉಂಟಾಗಲಿದೆ.
ದಿಕ್ಷು ಪ್ರಜ್ವಲಿತಾಸ್ಯಾಶ್ಚ ವ್ಯಾಹರಂತಿ ಮೃಗದ್ವಿಜಾಃ |
ಅತ್ಯಾಹಿತಂ ದರ್ಶಯಂತೋ ವೇದಯಂತಿ ಮಹದ್ಭಯಮ್ ||22||
ದಿಕ್ಕು ದಿಕ್ಕುಗಳಲ್ಲಿ ಮೃಗಗಳು ಮತ್ತು ಪಕ್ಷಿಗಳು ಜ್ವಾಲೆಯಿಂದ ಕೂಡಿದ ಮುಖವುಳ್ಳವುಗಳಾಗಿ ಕಿರುಚುತ್ತಿವೆ. ಅವು ಅತಿ ಘೋರವಾದ ಮಹಾಭಯವನ್ನು ಸೂಚಿಸುತ್ತಿವೆ.
ಏಕಪಕ್ಷಾಕ್ಷಿಚರಣಃ ಶಕುನಿಃ ಖಚರೋ ನಿಶಿ |
ರೌದ್ರಂ ವದತಿ ಸಂರಬ್ಧಃ ಶೋಣಿತಂ ಛರ್ದಯನ್ ಮುಹುಃ ||23||
ಒಂದು ರೆಕ್ಕೆ, ಒಂದು ಕಣ್ಣು ಮತ್ತು ಒಂದು ಪಾದವುಳ್ಳ, ರಾತ್ರಿಯಲ್ಲಿ ಆಕಾಶದಲ್ಲಿ ಸಂಚರಿಸುವ ಪಕ್ಷಿಯು ಸಿಟ್ಟಿನಿಂದ ರಕ್ತವನ್ನು ಮತ್ತೆ ಮತ್ತೆ ಕಾರುತ್ತಾ ಭಯಂಕರವಾಗಿ ಕಿರುಚುತ್ತಿದೆ.
ಗ್ರಹೌ ತಾಮ್ರಾರುಣಶಿಖೌ ಪ್ರಜ್ವಲಂತಾವಿವ ಸ್ಥಿತೌ |
ಸಪ್ತರ್ಷೀಣಾಮುದಾರಾಣಾಂ ಸಮವಚ್ಛಾದ್ಯ ವೈ ಪ್ರಭಾಮ್ ||24||
ತಾಮ್ರಬಣ್ಣದ ಮತ್ತು ಅರುಣವರ್ಣದ ಶಿಖೆಗಳುಳ್ಳ ಗುರು-ಶನಿಗಳು ಉರಿಯುತ್ತಿರುವಂತೆ ಕಾಣುತ್ತಿವೆ. ಅವು ಉದಾರರಾದ ಸಪ್ತರ್ಷಿಗಳ ಪ್ರಭೆಯನ್ನು ಮುಚ್ಚಿವೆ.
ಸಂವತ್ಸರಸ್ಥಾಯಿನೌ ಚ ಗ್ರಹೌ ಪ್ರಜ್ವಲಿತಾವುಭೌ |
ವಿಶಾಖಯೋಃ ಸಮೀಪಸ್ಥೌ ಬೃಹಸ್ಪತಿಶನೈಶ್ಚರೌ ||25||

ಒಂದು ರಾಶಿಯಲ್ಲಿ ವರ್ಷದ ಕಾಲ ಇರುವ ಗುರು-ಶನಿಗ್ರಹಗಳು ಎರಡು ಜ್ವಾಲೆಗಳಿಂದ ಕೂಡಿದ್ದು, ವಿಶಾಖಾ ನಕ್ಷತ್ರದಲ್ಲಿ ಪರಸ್ಪರ ಸಮೀಪದಲ್ಲಿವೆ.
ಕೃತ್ತಿಕಾಸು ಗ್ರಹಸ್ತೀವ್ರೋ ನಕ್ಷತ್ರೇ ಪ್ರಥಮೇ ಜ್ವಲನ್ |
ವಪೂಂಷ್ಯಪಹರನ್ ಭಾಸಾ ಧೂಮಕೇತುರಿವ ಸ್ಥಿತಃ ॥26॥
ತೀವ್ರಗ್ರಹವಾದ ಕೇತುವು ಕೃತ್ತಿಕಾ ನಕ್ಷತ್ರಗಳ ಮೊದಲನೆಯ ನಕ್ಷತ್ರದಲ್ಲಿ ಜ್ವಲಿಸುತ್ತಾ, ತನ್ನ ಕಾಂತಿಯಿಂದ ಉಳಿದ ನಕ್ಷತ್ರಗಳ ಕಾಂತಿಯನ್ನು ಅಪಹರಿಸುತ್ತಾ ಧೂಮಕೇತುವಿನಂತಿದೆ.
ತ್ರಿಷು ಪೂರ್ವೇಷು ಸರ್ವೇಷು ನಕ್ಷತ್ರೇಷು ವಿಶಾಂಪತೇ |
ಬುಧಃ ಸಂಪತತೇಽಭೀಕ್ಷ್ಣಂ ಜನಯನ್ ಸುಮಹದ್ಭಯಮ್ ॥27॥
ಎಲೈ ರಾಜನೇ, ಬುಧನು ದೊಡ್ಡ ಭಯವನ್ನು ಉಂಟುಮಾಡುತ್ತಾ ಸತತವಾಗಿ ತಾನು ಇರುವ ನಕ್ಷತ್ರದಿಂದ ಹಿಂದಿನ ಮೂರು ನಕ್ಷತ್ರಗಳನ್ನು ವಕ್ರಗತಿಯಿಂದ ನೋಡುತ್ತಿದ್ದಾನೆ.
ಚತುರ್ದಶೀಂ ಪಂಚದಶೀಂ ಭೂತಪೂರ್ವಾಂ ಚ ಷೋಡಶೀಮ್ |
ಇಮಾಂ ತು ನಾಭಿಜಾನೀಮಃ ಅಮಾವಾಸ್ಯಾಂ ತ್ರಯೋದಶೀಮ್ ॥
ಚಂದ್ರನು ಕಾಂತಿಹೀನನಾಗಿರುವುದರಿಂದ ಶುಕ್ಲಪಕ್ಷದ ಮತ್ತು ಕೃಷ್ಣಪಕ್ಷದ ಹದಿನಾಲ್ಕನೆಯ, ಹದಿನೈದನೆಯ, ಹದಿನಾರನೆಯ ಮತ್ತು ಹದಿಮೂರನೆಯ ದಿನಗಳಲ್ಲಿ ವ್ಯತ್ಯಾಸವೇ ತಿಳಿಯುತ್ತಿಲ್ಲ (ಲಕ್ಷ್ಯಾಲಂಕಾರ).
ಹುಣ್ಣಿಮೆಯಿಂದ ಹದಿನಾಲ್ಕನೆಯ ದಿನ, ಹದಿನೈದನೆಯ ದಿನ ಅಥವಾ ಹದಿನಾರನೆಯ ದಿನ ಅಮಾವಾಸ್ಯೆಯು ಉಂಟಾಗಿರುವುದನ್ನು ನಾವು ಹಿಂದೆ ನೋಡಿದ್ದೇವೆ. ಆದರೆ ಈಗ ಹದಿಮೂರನೆಯ ದಿನದಲ್ಲಿ ಉಂಟಾಗುತ್ತಿರುವ ಅಮಾವಾಸ್ಯೆಯನ್ನು ನಾವು ಎಂದೂ ಕಂಡಿಲ್ಲ.
ಚಂದ್ರಸೂರ್ಯಾವುಭೌ ಗ್ರಸ್ತಾವೇಕಮಾಸೇ ತ್ರಯೋದಶೀಮ್ |
ಅಪರ್ವಣಿ ಗ್ರಹಾವೇತೌ ಪ್ರಜಾಃ ಸಂಕ್ಷಪಯಿಷ್ಯತಃ ॥29॥
ಪರ್ವಕಾಲವಲ್ಲದ ತ್ರಯೋದಶಿಯಂದು ಚಂದ್ರ-ಸೂರ್ಯರಿಬ್ಬರೂ ಒಂದೇ ತಿಂಗಳಿನಲ್ಲಿ ಗ್ರಹಣವನ್ನು ಹೊಂದಿ ಪ್ರಜೆಗಳ ನಾಶವನ್ನು ಮಾಡುವವರಾಗಿದ್ದಾರೆ.
ರಜೋವೃತಾ ದಿಶಃ ಸರ್ವಾಃ ಪಾಂಸುವರ್ಷೈಃ ಸಮಂತತಃ |
ಉತ್ಪಾತಮೇಘಾ ರೌದ್ರಾಶ್ಚ ರಾತ್ರೌ ವರ್ಷಂತಿ ಶೋಣಿತಮ್ ॥30॥
ಎಲ್ಲ ದಿಕ್ಕುಗಳೂ ಧೂಳಿನಿಂದ ತುಂಬಿವೆ. ಎಲ್ಲ ಕಡೆಗಳಲ್ಲಿಯೂ ಧೂಳಿನ ಮಳೆಗಳು ಬೀಳುತ್ತಿವೆ. ರಾತ್ರಿಯ ಕಾಲದಲ್ಲಿ ಅಪಶಕುನಗಳನ್ನು ಸೂಚಿಸುವ ಮೋಡಗಳು ರಕ್ತವನ್ನು ಮಳೆಗರೆಯುತ್ತಿವೆ.
ಮಾಂಸವರ್ಷಂ ಪುನಸ್ತೀವ್ರಮಾಸೀತ್ ಕೃಷ್ಣಚತುರ್ದಶೀಮ್ |
ಅರ್ಧರಾತ್ರೇ ಮಹಾಘೋರಮತೃಪ್ಯಂಸ್ತತ್ರ ರಾಕ್ಷಸಾಃ ॥31॥
ಕೃಷ್ಣಪಕ್ಷದ ಚತುರ್ದಶಿಯಂದು ಅರ್ಧರಾತ್ರಿಯ ಸಮಯದಲ್ಲಿ ಮಹಾಘೋರವಾದ ತೀವ್ರವಾದ ಮಾಂಸದ ಮಳೆ ಉಂಟಾಯಿತು. ಅದರಲ್ಲಿ ರಾಕ್ಷಸರೆಲ್ಲರೂ ತೃಪ್ತಿ ಹೊಂದಿದರು.
ಪ್ರತಿಸ್ರೋತೋಽವಹನ್ ನದ್ಯಃ ಸರಿತಃ ಶೋಣಿತೋದಕಾಃ |
ಫೇನಾಯಮಾನಾಃ ಕೂಪಾಶ್ಚ ನರ್ದಂತಿ ವೃಷಭಾ ಇವ |
ಪತಂತ್ಯುಲ್ಕಾಃ ಸನಿರ್ಘಾತಾಃ ಶುಷ್ಕಾಶನಿವಿಮಿಶ್ರಿತಾಃ ॥32॥
ಸಣ್ಣ ಮತ್ತು ದೊಡ್ಡ ನದಿಗಳು ರಕ್ತವರ್ಣದ ನೀರಿನಿಂದ ಕೂಡಿದವುಗಳಾಗಿ ಪ್ರವಾಹಕ್ಕೆ ಅಭಿಮುಖವಾಗಿ ಹರಿಯುತ್ತಿವೆ. ಬಾವಿಗಳಲ್ಲಿ ನೊರೆಗಳು ಕಂಡುಬಂದು ಅವು ವೃಷಭಗಳಂತೆ ಗರ್ಜಿಸುತ್ತಿವೆ. ಶಬ್ದದೊಡನೆ ಉಲ್ಕಾಪಾತಗಳು ಉಂಟಾಗುತ್ತಿವೆ. ಅವು ಬರಸಿಡಿಲುಗಳ ಜೊತೆಯಲ್ಲಿ ಮಿಶ್ರಿತವಾಗಿವೆ.
ಅದ್ಯ ಚೈವ ನಿಶಾಂ ವ್ಯುಷ್ಟಾಮುದಯೇ ಭಾನುರಾಹತಃ |
ಜ್ವಲಂತೀಭಿರ್ಮಹೋಲ್ಕಾಭಿಶ್ಚತುರ್ಭಿಃ ಸರ್ವತೋ ದಿಶಮ್ ॥33॥
ಈ ದಿನವೇ ರಾತ್ರಿಯು ಕಳೆದು ಪ್ರಾತಃಕಾಲದಲ್ಲಿ ಸೂರ್ಯೋದಯವಾಗುವಾಗ ಸೂರ್ಯನ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ಜ್ವಲಿಸುವ ಉಲ್ಕೆಗಳು ಬಿದ್ದವು.
ಅನ್ಯೋನ್ಯಮುಪತಿಷ್ಠದ್ಭಿಸ್ತತ್ರ ಚೋಕ್ತಂ ಮಹರ್ಷಿಭಿಃ |
ಭೂಮಿಪಾಲಸಹಸ್ರಾಣಾಂ ಭೂಮಿಃ ಪಾಸ್ಯತಿ ಶೋಣಿತಮ್ ॥34॥
ಪರಸ್ಪರವಾಗಿ ಸಮೀಪದಲ್ಲಿರುವ ವಾಲಖಿಲ್ಯಋಷಿಗಳು ಆ ಸಮಯದಲ್ಲಿ ಭೂಮಿಯು ಸಹಸ್ರಾರು ರಾಜರ ರಕ್ತವನ್ನು ಕುಡಿಯುವುದು ಎಂದು ಹೇಳಿದರು.
ಕೈಲಾಸಮಂದರಾಭ್ಯಾಂ ತು ತಥಾ ಹಿಮವತೋ ಗಿರೇಃ |
ಸಹಸ್ರಶೋ ಮಹಾಶಬ್ದಂ ಶಿಖರಾಣಿ ಪತಂತಿ ಚ ॥35॥
ಕೈಲಾಸ, ಮಂದರ ಮತ್ತು ಹಿಮಾಲಯ ಪರ್ವತಗಳಲ್ಲಿ ಸಹಸ್ರಾರು ಬಾರಿ ಮಹಾಶಬ್ದಗಳು ಕೇಳಿಬರುತ್ತಿವೆ ಮತ್ತು ಅವುಗಳ ಶಿಖರಗಳು ಉರುಳುತ್ತಿವೆ.
ಮಹಾಭೂತಾ ಭೂಮಿಕಂಪೇ ಚತುರಃ ಸಾಗರಾನ್ ಪೃಥಕ್ |
ವೇಲಾಭೂರ್ಧಮಯಂತಿ ಸ್ಮ ಕ್ಷೋಭಯಂತಃ ಪುನಃ ಪುನಃ ॥36॥
ಪಂಚಮಹಾಭೂತಗಳು ಮತ್ತೆ ಮತ್ತೆ ಭೂಕಂಪವನ್ನು ಉಂಟುಮಾಡಿ ನಾಲ್ಕು ಸಾಗರಗಳಲ್ಲೂ ಕ್ಷೋಭೆಯನ್ನು ಉಂಟುಮಾಡುತ್ತಾ,

ನಾಲ್ಕು ಸಾಗರಗಳನ್ನೂ ಮತ್ತು ಸಾಗರಗಳ ವೇಲಾಭೂಮಿಯಾದ ತೀರಗಳನ್ನೂ ನಾಶಪಡಿಸುತ್ತಿವೆ.
ವೃಕ್ಷಾನುನ್ಮಥ್ಯ ವಾಂತ್ಯುಗ್ರಾ ವಾತಾಃ ಶರ್ಕರಕರ್ಷಿಣಃ |
ಪತಂತಿ ಚೈತ್ಯವೃಕ್ಷಾಶ್ಚ ಗ್ರಾಮೇಷು ನಗರೇಷು ಚ ॥37॥
ಉಗ್ರವಾದ ವಾಯುಗಳು ಮರಳಿನ ಕಣಗಳನ್ನು ತೆಗೆದುಕೊಂಡು ಬೀಸುತ್ತಾ, ಮರಗಳನ್ನು ಬೀಳಿಸುತ್ತಿವೆ. ಗ್ರಾಮಗಳಲ್ಲಿ ಮತ್ತು ನಗರಗಳಲ್ಲಿ ದೇವಾಲಯದ ವೃಕ್ಷಗಳು ಉರುಳುತ್ತಿವೆ.
ಪೀತಲೋಹಿತನೀಲಶ್ಚ ಜ್ವಲತ್ಯಗ್ನಿರ್ಹುತೋ ದ್ವಿಜೈಃ |
ವಾಮಾರ್ಚಿಃ ಶಾವಗಂಧೀ ಚ ಧೂಮಪ್ರಾಯಃ ಖರಸ್ವನಃ ॥38॥
ಬ್ರಾಹ್ಮಣರಿಂದ ಹೋಮ ಮಾಡಲ್ಪಟ್ಟ ಅಗ್ನಿಯು ಕಪ್ಪು, ಹಳದಿ ಮತ್ತು ಕೆಂಪು ಜ್ವಾಲೆಗಳಿಂದ ಕೂಡಿ, ಎಡಭಾಗದಲ್ಲಿ ಜ್ವಾಲೆಗಳನ್ನು ಹೊಂದಿ, ಶವಗಂಧವನ್ನು ಉಂಟುಮಾಡುತ್ತಾ, ಒರಟು ಶಬ್ದಗಳಿಂದ ಬಹಳ ಧೂಮವನ್ನು ಉಂಟುಮಾಡುತ್ತಿದೆ.
ಧೂಮಾಯಂತೇ ಧ್ವಜಾ ರಾಜ್ಞಾಂ ಕಂಪಮಾನಾ ಮುಹುರ್ಮುಹುಃ |
ಮುಂಚಂತ್ಯಂಗಾರವರ್ಷಾಣಿ ಭೇರ್ಯೋಽಥ ಪಟಹಾಸ್ತಥಾ ॥39॥
ರಾಜರ ರಥದ ಧ್ವಜಗಳು ಪುನಃ ಪುನಃ ನಡುಗುತ್ತಾ ಧೂಮವನ್ನು ಉಗುಳುತ್ತಿವೆ. ಭೇರಿಗಳು ಮತ್ತು ಪಟಹಗಳು ಕೆಂಡಗಳ ಮಳೆಯನ್ನು ಸುರಿಸುತ್ತಿವೆ.
ಪ್ರಾಸಾದಶಿಖರಾಗ್ರೇಷು ಪುರದ್ವಾರೇಷು ಚೈವ ಹಿ |
ಗೃಧ್ರಾಃ ಪರಿಪತಂತ್ಯುಗ್ರಾಃ ವಾಮಂ ಮಂಡಲಮಾಶ್ರಿತಃ ॥40॥
ಉಗ್ರವಾದ ಹದ್ದುಗಳು ಉಪ್ಪರಿಗೆಯ ಶಿಖರಗಳಲ್ಲಿಯೂ ಮತ್ತು ಕೋಟೆಯ ಬಾಗಿಲುಗಳಲ್ಲಿಯೂ ಅಪ್ರದಕ್ಷಿಣೆಯಾಗಿ ಸುತ್ತುತ್ತಾ ಮತ್ತೆ ಮತ್ತೆ ಕುಳಿತುಕೊಳ್ಳುತ್ತಿವೆ.
ಪಟಾಪಚ್ಚೇತಿ ಸುಭೃಶಂ ವಾವಾಶ್ಯಂತೇ ವಯಾಂಸಿ ಚ |
ನಿಲೀಯಂತೇ ಧ್ವಜಾಗ್ರೇಷು ಕ್ಷಯಾಯ ಪೃಥಿವೀಕ್ಷಿತಾಮ್ ॥41॥
ಎಲ್ಲ ಪಕ್ಷಿಗಳೂ ಮತ್ತೆ ಮತ್ತೆ ಅಪಶಬ್ದಗಳನ್ನು ಮಾಡುತ್ತಾ, ರಾಜರ ಕ್ಷಯವನ್ನು ಸೂಚಿಸುತ್ತಾ, ರಥಗಳ, ಧ್ವಜಗಳ ತುದಿಗಳಲ್ಲಿ ಅಡಗಿಕೊಳ್ಳುತ್ತಿವೆ.
ಧ್ಯಾಯಂತಃ ಪ್ರಕಿರಂತಶ್ಚ ಬಾಲಾನ್ ವೇಪಥುಸಂಯುತಾಃ |
ರುದಂತಿ ದೀನಾಸ್ತುರಗಾ ಮಾತಂಗಾಶ್ಚ ಸಹಸ್ರಶಃ ॥42॥
ಆನೆಗಳು ಮತ್ತು ಕುದುರೆಗಳು ಸಹಸ್ರ ಸಂಖ್ಯೆಯಲ್ಲಿ ಯೋಚನೆಯನ್ನು ಮಾಡುತ್ತಾ, ತಮ್ಮ ಬಾಲಗಳನ್ನು ಕೊಡವುತ್ತಾ, ಭಯದಿಂದ ನಡುಗುತ್ತಾ ದೈನ್ಯದಿಂದ ಅಳುತ್ತಿವೆ.
ಏತಚ್ಛ್ರುತ್ವಾ ಭವಾನತ್ರ ಪ್ರಾಪ್ತಕಾಲಂ ವ್ಯವಸ್ಯತಾಮ್ |
ಯಥಾ ಲೋಕಃ ಸಮುಚ್ಚೇದಂ ನಾಯಂ ಗಚ್ಚೇತ ಭಾರತ ॥43॥
ಎಲೈ ಭಾರತನೇ, ಇವುಗಳನ್ನು ಕೇಳಿ ಈ ಲೋಕವು ನಾಶವಾಗದಂತೆ ಈ ಕಾಲದಲ್ಲಿ ಏನನ್ನು ಮಾಡಬಹುದೋ ಅದನ್ನು ನಿರ್ಧರಿಸು.
ವೈಶಂಪಾಯನಃ
ಪಿತುರ್ವಚೋ ನಿಶಮ್ಯೈತದ್ ಧೃತರಾಷ್ಟ್ರೋಽಬ್ರವೀದಿದಮ್ |
ದಿಷ್ಟಮೇತತ್ ಪುರಾ ಮನ್ಯೇ ಭವಿಷ್ಯತಿ ನ ಸಂಶಯಃ ॥44॥
ವೈಶಂಪಾಯನ ತಂದೆಯ ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನು ಹೀಗೆ ಮಾತನಾಡಿದನು. ಇದು ಮೊದಲೇ ಕ್ಲೃಪ್ತವಾಗಿದೆ ಎಂದು ತಿಳಿಯುತ್ತೇನೆ. ಇದು ಹೀಗೆಯೇ ನಡೆಯುವುದರಲ್ಲಿ ಸಂಶಯವಿಲ್ಲ.
ಕ್ಷತ್ರಿಯಾಃ ಕ್ಷತ್ರಧರ್ಮೇಣ ವಧ್ಯಂತೇ ಯದಿ ಸಂಯುಗೇ |
ವೀರಲೋಕಂ ಸಮಾಸಾದ್ಯ ಸುಖಂ ಪ್ರಾಪ್ಸ್ಯಂತಿ ಕೇವಲಮ್ ॥45॥
ಕ್ಷತ್ರಿಯರು ಕ್ಷತ್ರಿಯ ಧರ್ಮದಂತೆ ಯುದ್ಧದಲ್ಲಿ ಮರಣವನ್ನು ಹೊಂದಿದರೆ ವೀರಲೋಕವನ್ನು ಹೊಂದಿ ಬಹಳ ಸುಖವನ್ನು ಪಡುತ್ತಾರೆ.
ಇಹ ಕೀರ್ತಿಂ ಪರೇ ಲೋಕೇ ದೀರ್ಘಕಾಲಂ ಮಹತ್ಸುಖಮ್ |
ಪ್ರಾಪ್ಸ್ಯಂತಿ ಪುರುಷವ್ಯಾಘ್ರಾಃ ಪ್ರಾಣಾಂಸ್ತ್ಯಕತ್ವ ಮಹಾಹವೇ ॥46॥
ಪುರುಷವ್ಯಾಘ್ರರಾದ ವೀರರು ದೊಡ್ಡ ಯುದ್ಧದಲ್ಲಿ ಪ್ರಾಣಗಳನ್ನು ತ್ಯಜಿಸಿ ಈ ಲೋಕದಲ್ಲಿ ಕೀರ್ತಿಯನ್ನೂ ಮತ್ತು ಪರಲೋಕದಲ್ಲಿ ದೀರ್ಘಕಾಲದವರೆಗೆ ದೊಡ್ಡ ಸುಖವನ್ನೂ ಪಡೆಯುವರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತೃತೀಯೋಽಧ್ಯಾಯಃ ॥
॥ಇತಿ ಜಂಬೂಖಂಡನಿರ್ಮಾಣಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ವ್ಯಾಸರಿಂದ ಜಯಶಾಲಿಗಳಾಗುವವರ ಲಕ್ಷಣಗಳ ಕಥನ.
ವೈಶಂಪಾಯನಃ
ಏವಮುಕ್ತೋ ಮುನಿಸ್ತತ್ವಂ ಕವೀಂದ್ರೋ ರಾಜಸತ್ತಮ |
ಪುತ್ರೇಣ ಧೃತರಾಷ್ಟ್ರೇಣ ಧ್ಯಾನಮನ್ವಗಮತ್ ಪರಮ್ ॥1॥

ವೈಶಂಪಾಯನ ಎಲೈ ರಾಜಶ್ರೇಷ್ಠನೇ, ಪುತ್ರನಾದ ಧೃತರಾಷ್ಟ್ರನಿಂದ ಹೀಗೆ ತತ್ತ್ವವನ್ನು ಹೇಳಲ್ಪಟ್ಟ ಜ್ಞಾನಿಶ್ರೇಷ್ಠರೂ ಮತ್ತು ಋಷಿಗಳೂ ಆದ ವ್ಯಾಸರು ಧ್ಯಾನವನ್ನು ತಾಳಿದರು.
ಪುನರೇವಾಬ್ರವೀದ್ ವಾಕ್ಯಂ ಕಲ್ಪವಾದೀ ಮಹಾತಪಾಃ |
ಅಸಂಶಯಂ ಪಾರ್ಥಿವೇಂದ್ರ ಕಾಲಃ ಸಂಕ್ಷಿಪ್ಯತೇ ಜಗತ್ ॥2॥
ಎಲ್ಲರ ಹಣೆಯ ಬರಹವನ್ನು ತಿಳಿದ ಮಹಾತಪಸ್ವಿಗಳಾದ ಅವರು ಪುನಃ ಧೃತರಾಷ್ಟ್ರನನ್ನು ಕುರಿತು ರಾಜೇಂದ್ರನೇ, ನಿಸ್ಸಂಶಯವಾಗಿ ಕಾಲವು ಜಗತ್ತನ್ನು ಸಂಹರಿಸುತ್ತದೆ ಎಂದು ಹೇಳಿದರು.
ಸೃಜತೇ ಚ ಪುನರ್ಲೋಕಾನ್ ನೇಹ ವಿದ್ಯತಿ ಶಾಶ್ವತಮ್ |
ಜ್ಞಾತೀನಾಂ ಚ ಕುರೂಣಾಂ ಚ ಸಂಬಂಧಿಸುಹೃದಾಂ ತಥಾ ॥3॥
ಧರ್ಮ್ಯಂ ದೇಶಯ ಪಂಥಾನಂ ಸಮರ್ಥೋಽ ಹ್ಯಸಿ ವಾರಣೇ |
ಕ್ಷುದ್ರಂ ಜ್ಞಾತಿವಧಂ ಪ್ರಾಹುರ್ಮಾ ಕುರುಷ್ವ ಮಮಾಪ್ರಿಯಮ್ ॥4॥
ಆ ಕಾಲವು ಪುನಃ ಸೃಷ್ಟಿಯನ್ನು ಮಾಡುತ್ತದೆ. ಈ ಪ್ರಪಂಚದಲ್ಲಿ ಯಾವುದೂ ಶಾಶ್ವತವಾಗಿ ಇರುವುದಿಲ್ಲ. ನೀನು ನಿನ್ನ ಬಂಧುಗಳೆಲ್ಲರಿಗೂ, ಸಂಬಂಧಿಗಳಿಗೂ, ವಿಶ್ವಾಸಪಾತ್ರರಿಗೂ ಮತ್ತು ಎಲ್ಲಾ ಕುರುಗಳಿಗೂ ಧರ್ಮದ ಮಾರ್ಗವನ್ನು ಉಪದೇಶಿಸುವವನಾಗು. ಅವರನ್ನು ಈ ಯುದ್ಧದಿಂದ ನಿವಾರಿಸಲು ನೀನು ಸಮರ್ಥನಾಗಿದ್ದೀಯೆ. ಬಂಧುಗಳ ವಧೆಯು ನೀಚವಾದುದೆಂದು ಹೇಳುತ್ತಾರೆ. ನನಗೆ ಅಪ್ರಿಯವನ್ನು ಮಾಡಬೇಡ.
ಕಾಲೋಽಯಂ ಪುತ್ರರೂಪೇಣ ತವ ಜಾತೋ ವಿಶಾಂಪತೇ |
ನ ವಧಃ ಪೂಜ್ಯತೇ ವೇದೇ ಹಿತಂ ನೈತತ್ ಕಥಂಚನ ॥5॥
ಎಲೈ ರಾಜನೇ, ಆ ಕಾಲವು ನಿನ್ನ ಪುತ್ರನ ರೂಪದಲ್ಲಿ ಜನಿಸಿದೆ. ವಧೆಯು ವೇದದಲ್ಲಿ ಪ್ರಶಂಸಿಸಲ್ಪಡುವುದಿಲ್ಲ ಮತ್ತು ಅದು ಹಿತವೂ ಅಲ್ಲ.
ಹನ್ಯಾತ್ ಸ ಏವ ಯೋ ಹನ್ಯಾತ್ ಕುಲಧರ್ಮಂ ಸ್ವಕಾಂ ತನುಮ್ |
ಕಾಲೇನೋತ್ಪಥಗಂತಾಸಿ ಶಕ್ಯೇ ಸತಿ ಯಥಾಪಥಿ ॥6॥
ಯಾವನು ತನ್ನ ಶರೀರದಂತಿರುವ ಕುಲಧರ್ಮವನ್ನು ವಧೆ ಮಾಡುತ್ತಾನೆಯೋ, ಅವನನ್ನು ಆ ಕುಲಧರ್ಮವೇ ವಧೆಯನ್ನು ಮಾಡುತ್ತದೆ. ಕ್ಷೇಮದ ಮಾರ್ಗವು ಇದ್ದರೂ ಸಹ ನೀನು ಮೃತ್ಯುವಿನಿಂದ ಪ್ರೇರಿತನಾಗಿ ದುರ್ಮಾರ್ಗದಲ್ಲಿ ನಡೆಯುವವನಾಗುವಿ.
ಕುಲಸ್ಯಾಸ್ಯ ವಿನಾಶಾಯ ತಥೈವ ಚ ಮಹೀಕ್ಷಿತಾಮ್ |
ಅನರ್ಥೋಽ ರಾಜ್ಯರೂಪೇಣ ತ್ಯಜ್ಯತಾಮಸುಖಾವಹಃ ॥7॥
ಈ ಕುಲದ ಮತ್ತು ಎಲ್ಲಾ ರಾಜರುಗಳ ವಿನಾಶಕ್ಕಾಗಿ ಉಂಟಾಗಿರುವ, ದುಃಖವನ್ನು ತಂದುಕೊಡುವ ಈ ರಾಜ್ಯರೂಪವಾದ ಅನರ್ಥವನ್ನು ಪರಿತ್ಯಾಗ ಮಾಡು.
ಲುಪ್ತಪ್ರಜ್ಞಃ ಪರೇಣಾಸಿ ಧರ್ಮಂ ದರ್ಶಯ ವೈ ಸುತಾನ್ |
ಕಿಂ ತೇ ರಾಜ್ಯೇನ ದುರ್ಧರ್ಷ ಯೇನ ಪ್ರಾಪ್ತೋಽಸಿ ಕಿಲ್ಬಿಷಮ್ ॥8॥
ಇನ್ನೊಬ್ಬರಿಗೆ ವಶನಾಗಿ ನೀನು ನಿನ್ನ ಪ್ರಜ್ಞೆಯನ್ನು ಕಳೆದುಕೊಂಡಿದ್ದೀಯೆ. ನಿನ್ನ ಪುತ್ರರಿಗೆ ಧರ್ಮದ ಮಾರ್ಗವನ್ನು ತೋರಿಸು. ಎಲೈ ಸೋಲಿಸಲು ಅಸಾಧ್ಯನಾದವನೇ, ನಿನಗೆ ಇಷ್ಟೊಂದು ದೋಷವನ್ನು ತಂದುಕೊಟ್ಟಿರುವ ರಾಜ್ಯದಿಂದ ನಿನಗೆ ಏನಾಗಬೇಕಾಗಿದೆ?
ಯಶೋ ಧರ್ಮಂ ಚ ಕೀರ್ತಿಂ ಚ ಪಾಲಯನ್ ಸ್ವರ್ಗಮಾಪ್ಸ್ಯಸಿ |
ಲಭಂತಾಂ ಪಾಂಡವಾ ರಾಜ್ಯಂ ಶಮಂ ಗಚ್ಛಂತು ಕೌರವಾಃ ॥9॥
ಯಶಸ್ಸನ್ನೂ, ಧರ್ಮವನ್ನೂ ಮತ್ತು ಕೀರ್ತಿಯನ್ನು ರಕ್ಷಿಸಿಕೊಂಡು ನೀನು ಸ್ವರ್ಗವನ್ನು ಹೊಂದುವಿ. ಪಾಂಡವರಿಗೆ ರಾಜ್ಯವು ದೊರಕಲಿ, ಕೌರವರು ಸಂಧಿಯನ್ನು ಮಾಡಿಕೊಳ್ಳಲಿ.
ಏವಂ ಬ್ರುವತಿ ವಿಪ್ರೇಂದ್ರೇ ಧೃತರಾಷ್ಟ್ರೋಽಂಬಿಕಾಸುತಃ |
ಆಕ್ಷಿಪ್ಯ ವಾಕ್ಯಂ ವಾಕ್ಯಜ್ಞೋ ವಾಕ್ಪಥೇನಾಪ್ಯಯಾತ್ ಪುನಃ ॥10॥
ಆ ಬ್ರಾಹ್ಮಣಶ್ರೇಷ್ಠರು ಹೀಗೆ ಮಾತನಾಡುತ್ತಿರಲು ಅಂಬಿಕಾಸುತನೂ, ಮಾತನಾಡಲು ತಿಳಿದವನೂ ಆದ ಧೃತರಾಷ್ಟ್ರನು ಅವರ ಮಾತನ್ನು ಆಕ್ಷೇಪಿಸಿ ತನ್ನ ವಾಕ್ಸರಣಿಯನ್ನು ಮುಂದುವರಿಸಿದನು.
ಯಥಾ ಭವಾನ್ ವೇದ ತಥಾಸ್ಮಿ ವೇತ್ತಾ
ಭಾವಾಭಾವೌ ವಿದಿತೌ ಮೇ ಯಥಾವತ್ |
ಸ್ವಾರ್ಥೇ ಹಿ ಸಮ್ಮುಹ್ಯತಿ ತಾತ ಲೋಕೋ
ಮಾಂ ಚಾಪಿ ಲೋಕಾತ್ಮಕಮೇವ ವಿದ್ಧಿ ॥11॥
ಪೂಜ್ಯರೇ, ನೀವು ಹೇಗೆ ತಿಳಿದಿದ್ದೀರೋ ಹಾಗೆಯೇ ನಾನೂ ತಿಳಿದಿದ್ದೇನೆ. ನಾನು ಅಭ್ಯುದಯ ಮತ್ತು ಅವನತಿಗಳನ್ನು ಸರಿಯಾಗಿ ತಿಳಿದಿದ್ದೇನೆ. ಪ್ರೀತಿಪಾತ್ರರೇ, ಸ್ವಾರ್ಥದ ವಿಷಯವು ಬಂದಾಗ ಎಲ್ಲ ಜನರೂ ಮೋಹಕ್ಕೆ ಒಳಗಾಗುತ್ತಾರೆ. ನನ್ನನ್ನೂ ಸಹ ಅಂತಹ ಜನರಲ್ಲಿ ಸೇರಿದವನೆಂದು ತಿಳಿಯಿರಿ.
ಪ್ರಸಾದಯೇ ತ್ವಾಮತುಲಪ್ರಭಾವಂ
ತ್ವಂ ನೋ ಗತಿರ್ದರ್ಶಯಿತಾ ಚ ಧೀರಃ |
ನ ಚಾಪಿ ತೇ ವಶಗಾ ಮೇ ಮಹರ್ಷೇ
ನಾತಿಗ್ರಹಂ ಕರ್ತುಮಿಹಾರ್ಹಸೇ ಮೇ ॥12॥
ಅಪರಿಮಿತ ಸಾಮರ್ಥ್ಯವುಳ್ಳ ತಮ್ಮನ್ನು ಪ್ರಸನ್ನರಾಗಿ ಎಂದು ಕೇಳಿಕೊಳ್ಳುತ್ತಿದ್ದೇನೆ. ಧೀರರಾದ ನೀವೇ ನಮಗೆ ಗತಿಯಾದವರು.

ಮಹರ್ಷಿಗಳೇ, ನನ್ನ ಮಕ್ಕಳು ನಿಮ್ಮ ಮಾತುಗಳನ್ನೇ ಕೇಳಲಿಲ್ಲ. ಆದ್ದರಿಂದ ಈ ವಿಷಯದಲ್ಲಿ ನನ್ನನ್ನು ಬಹಳವಾಗಿ ಒತ್ತಾಯ ಪಡಿಸುವುದು ಬೇಡ.
ತ್ವಂ ಹಿ ಧರ್ಮಃ ಪವಿತ್ರಂ ಚ ಯಶಃ ಕೀರ್ತಿರ್ಧೃತಿಃ ಸ್ಮೃತಿಃ |
ಕುರೂಣಾಂ ಪಾಂಡವಾನಾಂ ಚ ಮಾನ್ಯಶ್ಚಾಸಿ ಪಿತಾಮಹಃ ||13||
ನೀವೇ ಧರ್ಮ, ಪವಿತ್ರರಾದವರು, ಯಶಸ್ಸು ಮತ್ತು ಕೀರ್ತಿಸಂಪನ್ನರಾದವರು, ಧೈರ್ಯ ಮತ್ತು ಸ್ಮೃತಿಗೆ ನಿಯಾಮಕರಾದವರು. ಪಿತಾಮಹರಾದ ನೀವು ಕುರುಗಳಿಗೂ ಮತ್ತು ಪಾಂಡವರಿಗೂ ಮಾನ್ಯರಾಗಿದ್ದೀರಿ.
ವ್ಯಾಸಃ
ವೈಚಿತ್ರವೀರ್ಯ ನೃಪತೇ ಯತ್ ತೇ ಮನಸಿ ವರ್ತತೇ |
ಅಭಿಧತ್ಸ್ವ ಯಥಾಕಾಮಂ ಛೇತ್ತಾಸ್ಮಿ ತವ ಸಂಶಯಮ್ ||14||
ವ್ಯಾಸರು ವಿಚಿತ್ರವೀರ್ಯನ ಪುತ್ರನಾದ ಎಲೈ ರಾಜನೇ, ನಿನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಸಂಕೋಚವಿಲ್ಲದೆ ಹೇಳು. ನಾನು ನಿನ್ನ ಮನಸ್ಸಿನ ಸಂಶಯಗಳನ್ನು ಪರಿಹರಿಸುವೆನು.
ಧೃತರಾಷ್ಟ್ರಃ
ಯಾನಿ ಲಿಂಗಾನಿ ಸಂಗ್ರಾಮೇ ಭವಂತಿ ವಿಜಯಿಷ್ಯತಾಮ್ |
ತಾನಿ ಸರ್ವಾಣಿ ಭಗವನ್ ಶ್ರೋತುಮಿಚ್ಛಾಮಿ ತತ್ತ್ವತಃ ||15||
ಧೃತರಾಷ್ಟ್ರ ಪೂಜ್ಯರೇ, ಯುದ್ಧದಲ್ಲಿ ಜಯಗಳಿಸಲಿರುವವರ ಚಿಹ್ನೆಗಳು ಏನು ಇವೆಯೋ ಅವೆಲ್ಲವನ್ನೂ ನಾನು ಸರಿಯಾಗಿ ಕೇಳಲು ಬಯಸುತ್ತೇನೆ.
ವ್ಯಾಸಃ
ಪ್ರಸನ್ನಭಾಃ ಪಾವಕ ಊರ್ಧ್ವರಶ್ಮಿಃ
ಪ್ರದಕ್ಷಿಣಾವರ್ತಶಿಖೋ ವಿಧೂಮಃ |
ಪುಣ್ಯಾ ಗಂಧಾಶ್ಚಾಹುತೀನಾಂ ಪ್ರವಾಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ||16||
ವ್ಯಾಸರು ಅಗ್ನಿಯು ಪರಿಶುದ್ಧವಾದ ಕಾಂತಿಯನ್ನು ಹೊಂದಿ ಊರ್ಧ್ವಮುಖವಾದ ಜ್ವಾಲೆಗಳನ್ನು ಹೊಂದಿರುತ್ತದೆ. ಧೂಮವಿಲ್ಲದೆ ಜ್ವಾಲೆಗಳು ಪ್ರದಕ್ಷಿಣಾಕಾರವಾಗಿ ಇರುತ್ತವೆ. ಆಹುತಿಗಳ ಪವಿತ್ರವಾದ ಗಂಧವು ಎಲ್ಲ ಕಡೆಯಲ್ಲಿಯೂ ಹರಡುತ್ತದೆ. ಇದು ಮುಂದೆ ಉಂಟಾಗಲಿರುವ ಜಯದ ಸೂಚನೆ ಎಂದು ಪ್ರಾಜ್ಞರು ಹೇಳುತ್ತಾರೆ.
ಗಂಭೀರಘೋಷಾಶ್ಚ ಮಹಾಸ್ವನಾಶ್ಚ
ಶಂಖಾ ಮೃದಂಗಾಶ್ಚ ನದಂತಿ ಯತ್ರ |
ವಿಶುದ್ಧರಶ್ಮಿಸ್ತಪನಃ ಶಶೀ ಚ
ಜಯಸ್ಯೈತದ್ ಭಾವಿನೋ ರೂಪಮಾಹುಃ ||17||
ಎಲ್ಲಿ ಶಂಖಗಳು ಮತ್ತು ಮೃದಂಗಗಳು ಗಂಭೀರವಾದ ಘೋಷವನ್ನು ಹೊಂದಿ ದೊಡ್ಡ ನಾದವನ್ನು ಉಂಟುಮಾಡುತ್ತವೆಯೋ ಮತ್ತು ಸೂರ್ಯ-ಚಂದ್ರರು ಪರಿಶುದ್ಧವಾದ ಕಿರಣವನ್ನು ಹೊಂದಿರುತ್ತಾರೆಯೋ ಅದನ್ನು ಮುಂದೆ ಉಂಟಾಗಲಿರುವ ಜಯದ ಸೂಚನೆ ಎಂದು ಹೇಳುತ್ತಾರೆ.
ಇಷ್ಟಾ ವಾಚಃ ಪೃಷ್ಠತೋ ವಾಯಸಾನಾಂ
ಸಂಪ್ರಸ್ಥಿತಾನಾಂ ಚ ಗಮಿಷ್ಯತಾಂ ಚ |
ಯೇ ಪೃಷ್ಠತಸ್ತೇ ತ್ವರಯಂತಿ ರಾಜನ್
ಯೇ ತ್ವಗ್ರತಸ್ತೇ ಪ್ರತಿಷೇಧಯಂತಿ ||18||
ಯುದ್ಧಕ್ಕೆ ಹೊರಡಲು ಸಿದ್ಧತೆಯನ್ನು ಮಾಡುವಾಗ ಮತ್ತು ಹೊರಟಾಗ ಹಿಂದುಗಡೆಯಿಂದ ಕೇಳಿ ಬರುವ ಸಂತೋಷದ ಇಷ್ಟವಾದ ಮಾತುಗಳು (ಒಳ್ಳೆಯ ಸೂಚನೆ). ಎಲೈ ರಾಜನೇ, ಹಿಂದಿನಿಂದ ಕೇಳಿ ಬರುವ ಮಾತುಗಳು ಜಯಕ್ಕಾಗಿ ತ್ವರೆಮಾಡುತ್ತವೆ. ಮುಂದುಗಡೆಯಿಂದ ಕೇಳಿ ಬರುವ ಮಾತುಗಳು ಜಯವನ್ನು ಪ್ರತಿಷೇಧ ಮಾಡುತ್ತವೆ.
ಕಲ್ಯಾಣವಾಚಃ ಶಕುನಾ ರಾಜಹಂಸಾಃ
ಶುಕಾಃ ಕ್ರೌಂಚಾಃ ಶತಪತ್ರಾಶ್ಚ ಯತ್ರ |
ಪ್ರದಕ್ಷಿಣಾಶ್ಚೈವ ಭವಂತಿ ಸಂಖ್ಯೇ
ಧ್ರುವಂ ಜಯಂ ತತ್ರ ವದಂತಿ ವಿಪ್ರಾಃ ||19||
ಎಲ್ಲಿ ರಾಜಹಂಸಗಳು, ಗಿಳಿಗಳು, ಕ್ರೌಂಚಗಳು, ಶತಪತ್ರಗಳು ಮೊದಲಾದ ಪಕ್ಷಿಗಳು ಒಳ್ಳೆಯ ಮಾತುಗಳನ್ನು ಆಡುತ್ತಾ ಬಲಭಾಗದಲ್ಲಿ ಬರುತ್ತವೆಯೋ ಅಲ್ಲಿ ಯುದ್ಧದಲ್ಲಿ ಜಯವು ನಿಶ್ಚಿತವೆಂದು ಬ್ರಾಹ್ಮಣರು ಹೇಳುತ್ತಾರೆ.
ಅಲಂಕಾರೈಃ ಕವಚೈಃ ಕೇತುಭಿಶ್ಚ
ಮುಖಪ್ರಸಾದೈರ್ಹೇಮವರ್ಣೈಶ್ಚ ನೃಣಾಮ್ |
ಭ್ರಾಜಿಷ್ಮತೀ ದುಷ್ಪ್ರತಿಪ್ರೇಕ್ಷಣೀಯಾ
ಯೇಷಾಂ ಚಮೂಸ್ತೇ ವಿಜಯಂತಿ ಶತ್ರೂನ್ ||20||
ಯಾರ ಸೈನ್ಯವು ಅಲಂಕಾರಗಳಿಂದಲೂ, ಕವಚಗಳಿಂದಲೂ, ಧ್ವಜಗಳಿಂದಲೂ, ವೀರರ ಮುಖದ ಪ್ರಸನ್ನತೆಯಿಂದಲೂ ಮತ್ತು ಹೇಮವರ್ಣಗಳಿಂದಲೂ ಹೊಳೆಯುತ್ತಾ (ಶತ್ರುಗಳಿಗೆ) ನೋಡಲು ಅಸಾಧ್ಯವಾಗುತ್ತದೆಯೋ ಅಂತಹವರು ಶತ್ರುಗಳನ್ನು ಗೆಲ್ಲುತ್ತಾರೆ.

ಹೃಷ್ಟಾ ವಾಚಸ್ತಥಾ ಸತ್ತ್ವಂ ಯೋಧಾನಾಂ ಚೈವ ಭಾರತ |
ನ ಮ್ಲಾಯಂತೇ ಸ್ರಜಶ್ಚೈವ ತೇ ತರಂತಿ ರಣೇ ರಿಪೂನ್ ||21||
ಎಲ್ಲೈ ಭಾರತನೇ, ಎಲ್ಲಿ ಯೋಧರು ಸಂತೋಷದಿಂದ ಮಾತನಾಡುತ್ತಾರೆಯೋ, ಅವರ ಧೈರ್ಯವು ಕುಂದುವುದಿಲ್ಲವೋ ಮತ್ತು ಹೂಮಾಲೆಗಳು ಬಾಡುವುದಿಲ್ಲವೋ ಅಂತಹವರು ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುತ್ತಾರೆ.
ಇಷ್ಟೋ ವಾತಃ ಪ್ರವಿಷ್ಟಸ್ಯ ದಕ್ಷಿಣೋ ಪ್ರವಿವಿಕ್ಷತಃ |
ಪಶ್ಚಾತ್ ಸಂಸಾಧಯತ್ಯರ್ಥಂ ಪುರಸ್ತಾತ್ ಪ್ರತಿಷೇಧತೇ ||22||
ಯುದ್ಧಭೂಮಿಯನ್ನು ಪ್ರವೇಶಿಸುವಾಗ ಬಲಭಾಗದಲ್ಲಿ, ಪ್ರವೇಶವನ್ನು ಮಾಡಿದ ಮೇಲೆ ಹಿಂಭಾಗದಿಂದ ಎಲ್ಲಿ ಅನುಕೂಲವಾದ ಗಾಳಿಯು ಬೀಸುತ್ತದೆಯೋ ಅಲ್ಲಿ ಹಿಂದಿನಿಂದ ಬೀಸುವ ಗಾಳಿಯು ಅರ್ಥಸಿದ್ಧಿಯನ್ನು ಉಂಟುಮಾಡಿಕೊಡುತ್ತದೆ. ಎದುರಾಗಿ ಗಾಳಿಯು ಬೀಸಿದರೆ ಅರ್ಥಸಿದ್ಧಿಯನ್ನು ಪ್ರತಿಷೇಧ ಮಾಡುತ್ತದೆ.
ಶಬ್ದರೂಪರಸಸ್ಪರ್ಶಗಂಧಾಶ್ಚಾವಿಷ್ಕೃತಾಃ ಶುಭಾಃ |
ಸದಾ ಯೋಧಾಶ್ಚ ಹೃಷ್ಟಾಶ್ಚ ಯೇಷಾಂ ತೇಷಾಂ ಧ್ರುವಂ ಜಯಃ ||23||
ಎಲ್ಲಿ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಶುಭವಾಗಿರುತ್ತವೆಯೋ ಮತ್ತು ಯೋಧರು ಸಂತೋಷದಿಂದ ಇರುತ್ತಾರೆಯೋ ಅಲ್ಲಿ ಜಯವು ನಿಶ್ಚಿತವಾದುದು.
ಅನ್ವೇವ ವಾಯವೋ ವಾಂತಿ ತಥಾಭ್ರಾಣಿ ವಯಾಂಸಿ ಚ |
ಅನುಪ್ಲವಂತೇ ಮೇಘಾಶ್ಚ ತಥೈವೇಂದ್ರಧನೂಂಷಿ ಚ ||24||
ವಾಯುವು, ಬಿಳಿಯ ಮೋಡಗಳು ಮತ್ತು ಪಕ್ಷಿಗಳು ಹಿಂದಿನಿಂದಲೇ ಬೀಸುತ್ತವೆ ಮತ್ತು ಹಿಂಬಾಲಿಸುತ್ತವೆ. ಕಪ್ಪು ಮೋಡಗಳೂ ಮತ್ತು ಕಾಮನಬಿಲ್ಲೂ ಸಹ ಹಿಂದಿನಿಂದಲೇ ಹಿಂಬಾಲಿಸುತ್ತವೆ (ಅಂತಹ ಕಡೆಯಲ್ಲಿ ಜಯವು ನಿಶ್ಚಿತವಾದುದು).
ಏತಾನಿ ಜಯಮಾನಾನಾಂ ಲಕ್ಷಣಾನಿ ವಿಶಾಂಪತೇ |
ಭವಂತಿ ವಿಪರೀತಾನಿ ಮುಮುಷೂರ್ಣಾಂ ಜನಾಧಿಪ ||25||
ಅಲ್ಪಾಯಾಂ ವಾ ಮಹತ್ಯಾಂ ವಾ ಸೇನಾಯಾಮಿತಿ ನಿಶ್ಚಿತಮ್ |
ಹರ್ಷೋ ಯೋಧಗಣಸ್ಯೈಕಂ ಜಯಲಕ್ಷಣಮುಚ್ಯತೇ ||26||
ಎಲ್ಲೈ ರಾಜನೇ, ಇವು ಜಯವನ್ನು ಹೊಂದಲಿರುವವರ ಲಕ್ಷಣಗಳು. ಎಲ್ಲೈ ಜನಾಧಿಪನೇ, ಮರಣವನ್ನು ಹೊಂದುವವರಾದರೆ ಇದಕ್ಕೆ ವಿರುದ್ಧವಾದ ಲಕ್ಷಣವಿರುತ್ತವೆ. ಅಲ್ಪವಾಗಲೀ ಅಥವಾ ದೊಡ್ಡದಾಗಲೀ ಸೈನ್ಯದಲ್ಲಿ ಯೋಧರ ಸಮೂಹದ ಹರ್ಷವು ಮುಖ್ಯವಾಗಿ ಜಯಕ್ಕೆ ಕಾರಣವಾಗುತ್ತದೆ.
ಏಕೋ ದೀರ್ಣೋ ದಾರಯತಿ ಸೇನಾಂ ಸುಮಹತೀಮಪಿ |
ತಂ ದೀರ್ಣಮನುದೀರ್ಯಂತೇ ಯೋಧಾಃ ಶೂರತಮಾ ಅಪಿ ||27||
ಎಷ್ಟೇ ದೊಡ್ಡ ಸೈನ್ಯವಾದರೂ ಒಬ್ಬ ವೀರನು ಸೋತರೆ ಸಮಗ್ರ ಸೈನ್ಯವನ್ನೇ ಒಡೆಯುತ್ತಾನೆ. ಹಾಗೆಯೇ ದೀರ್ಣನಾದ ಆ ವೀರನನ್ನು ಅನುಸರಿಸಿ ಉಳಿದ ಶೂರರಾದ ಯೋಧರೂ ಸಹ ಬಿರಿದುಹೋಗುತ್ತಾರೆ.
ದುರ್ನಿವಾರತಮಾ ಚೈವ ಪ್ರಭಗ್ನಾ ಮಹತೀ ಚಮೂಃ |
ಅಪಾಮಿವ ಮಹಾವೇಗಸ್ತ್ರಸ್ತಾ ಮೃಗಗಣಾ ಇವ ||28||
ನೈವ ಶಕ್ಯಾ ಸಮಾಧಾತುಂ ಸನ್ನಿಪಾತೇ ಮಹಾಚಮೂಃ |
ಹೀಗೆ ಒಡೆದುಹೋದ ದೊಡ್ಡ ಸೈನ್ಯವನ್ನು ಕಟ್ಟೆ ಒಡೆದು ಹರಿಯುವ ನೀರಿನಂತೆ ಅಥವಾ ಹೆದರಿದ ಜಿಂಕೆಗಳ ಸಮೂಹದಂತೆ ಒಂದು ಕಡೆ ಒಟ್ಟುಗೂಡಿಸಿ ಸಮಾಧಾನಪಡಿಸಲು ಸಾಧ್ಯವಾಗುವುದಿಲ್ಲ.
ದೀರ್ಣಾ ಇತ್ಯೇವ ದೀರ್ಯಂತೇ ಯೋಧಾಃ ಶೂರತಮಾ ಅಪಿ |
ಭೀತಾನ್ ಭಗ್ನಾಂಶ್ಚ ಸಂಪ್ರೇಕ್ಷ್ಯ ಭಯಂ ಭೂಯೋ ವಿವರ್ಧತೇ ||29||
ಎಲ್ಲವೂ ಒಡೆದುಹೋಗಿದೆ ಎಂದು ತಿಳಿದು ಶೂರರಾದ ಯೋಧರೂ ಸಹ ಬಿರಿದು ಹೋಗುತ್ತಾರೆ. ಭೀತರಾದವರನ್ನು ಮತ್ತು ಭಗ್ನರಾದವರನ್ನು ನೋಡಿ ಭಯವು ಇನ್ನೂ ಹೆಚ್ಚಾಗುತ್ತದೆ.
ಪ್ರಭಗ್ನಾ ಸಹಸಾ ರಾಜನ್ ದಿಶೋ ವಿಭ್ರಾಮಿತಾ ಪರೈಃ |
ನೈವ ಸ್ಥಾಪಯಿತುಂ ಶಕ್ಯಾ ಶೂರೈರಪಿ ಮಹಾಚಮೂಃ ||30||
ಎಲ್ಲೈ ರಾಜನೇ, ಹೀಗೆ ಒಡೆದುಹೋಗಿ ಶತ್ರುಗಳಿಂದ ದಿಕ್ಕು ದಿಕ್ಕಿಗೆ ಚದುರಿಸಲ್ಪಟ್ಟ ದೊಡ್ಡ ಸೈನ್ಯವನ್ನು ಶೂರರೂ ಸಹ ನಿಲ್ಲಿಸಲು ಸಾಧ್ಯವಾಗುವುದಿಲ್ಲ.
ಸಂಭೃತ್ಯ ಮಹತೀಂ ಸೇನಾಂ ಚತುರಂಗಾಂ ಮಹೀಪತಿಃ |
ಉಪಾಯಪೂರ್ವಂ ಮೇಧಾವೀ ಯತೇತ ಸತತೋತ್ಥಿತಃ ||31||
ರಾಜನಾದವನು ದೊಡ್ಡದಾದ ಚದುರಂಗ ಸೈನ್ಯವನ್ನು ಮೊದಲು ಕಲೆಹಾಕಿ ಮೇಧಾವಿಯಾಗಿ ಸತತ ಪ್ರಯತ್ನಶೀಲನಾಗಿ ಉಪಾಯದಿಂದಲೇ ಜಯಕ್ಕಾಗಿ ಪ್ರಯತ್ನ ಪಡಬೇಕು.
ಉಪಾಯವಿಜಯಂ ಶ್ರೇಷ್ಠಮಾಹುರ್ಭೇದೇನ ಮಧ್ಯಮಮ್ |
ಜಘನ್ಯ ಏಷ ವಿಜಯೋ ಯೋ ಯುದ್ಧೇನ ವಿಶಾಂಪತೇ |
ಮಹಾದೋಷಃ ಸನ್ನಿಪಾತಸ್ತತೋ ವ್ಯಂಗಃ ಸ ಉಚ್ಯತೇ ||32||
ಉಪಾಯದಿಂದ ಸಂಪಾದಿಸಿದ ವಿಜಯವು ಶ್ರೇಷ್ಠವೆಂದು ಹೇಳುತ್ತಾರೆ. ಭೇದೋಪಾಯದಿಂದ ಸಂಪಾದಿಸಿದ ವಿಜಯವು ಮಧ್ಯಮವಾದುದು. ಎಲ್ಲೈ ರಾಜನೇ, ಯುದ್ಧ ಮಾಡಿ ಸಂಪಾದಿಸಿದ ವಿಜಯವು ಅಧಮವಾದುದು. ಎಲ್ಲೈ ರಾಜನೇ, ಪರಸ್ಪರ

ಸಂಘರ್ಷವು ಮಹಾದೋಷದಿಂದ ಕೂಡಿರುತ್ತದೆ. ಆದ್ದರಿಂದ ಅದನ್ನು ವಿಕಲಾಂಗವೆಂದು ಹೇಳುತ್ತಾರೆ.
ಪರಸ್ಪರಜ್ಞಾಃ ಸಂಹೃಷ್ಟಾ ವ್ಯವಧೂತಾಃ ಸುನಿಶ್ಚಿತಾಃ |
ಪಂಚಾಶದಪಿ ಯೇ ಶೂರಾ ಮಥ್ನಂತಿ ಮಹತೀಂ ಚಮೂಮ್ |
ಅಥವಾ ಪಂಚ ಷಟ್ ಸಪ್ತ ವಿಜಯಂತ್ಯನಿವರ್ತಿನಃ ||33||
ಪರಸ್ಪರವಾಗಿ ತಿಳುವಳಿಕೆಯುಳ್ಳ, ಸಂತೋಷಗೊಂಡ, ಸ್ಥಿರರಾದ, ಒಳ್ಳೆಯ ನಿಶ್ಚಯವನ್ನು ಹೊಂದಿದ ಐವತ್ತು ಜನ ಶೂರರೂ ಸಹ ದೊಡ್ಡ ಸೈನ್ಯವನ್ನು ಕಲಕಾಡುತ್ತಾರೆ. ಅಥವಾ ಹಿಂದಿರುಗದ ಐದಾರು, ಏಳು ಜನ ವೀರರೇ ವಿಜಯವನ್ನು ಸಂಪಾದಿಸುತ್ತಾರೆ.
ಪರಸ್ಪರೇಣಾಸಂಹೃಷ್ಟಾ ಶೂರೈರಪಿ ಮಹಾಚಮೂ |
ನೈವ ಸ್ಥಾಪಯಿತುಂ ಶಕ್ಯಾ ಪ್ರಭಗ್ನಾ ಭಯವಿಹ್ವಲಾ ||34||
ಪರಸ್ಪರವಾಗಿ ಸಂತೋಷವನ್ನು ಹೊಂದದಿದ್ದರೆ ಭಗ್ನಗೊಂಡು ಭಯಗ್ರಸ್ತವಾದ ದೊಡ್ಡ ಸೈನ್ಯವನ್ನು ಶೂರರೂ ಸಹ ನಿಲ್ಲಿಸಲಾರರು.
ನ ವೈನತೇಯೋ ಗರುಡಃ ಪ್ರಶಂಸತಿ ಮಹಾಜನಮ್ |
ದೃಷ್ಟ್ವಾ ಸುಪರ್ಣೋಽಪಚಿತಿಂ ಮಹತೀಮಪಿ ಭಾರತ ||35||*
ಎಲೈ ಭಾರತನೇ, ವಿನತಾಸುತನಾದ ಗರುಡನು ಸೈನ್ಯದ ದೊಡ್ಡ ಸಂಖ್ಯೆಯನ್ನು ಪ್ರಶಂಸಿಸುವುದಿಲ್ಲ. ಏಕೆಂದರೆ ಅವನು ದೊಡ್ಡ ಸೈನ್ಯವಾದರೂ ಅದರ ಕ್ಷಯವನ್ನು ನೋಡಿದ್ದಾನೆ.
ನ ಬಾಹುಲ್ಯೇನ ಸೇನಾಯಾ ಜಯೋ ಭವತಿ ಭಾರತ |
ಅಧ್ರುವೋ ಹಿ ಜಯೋ ನಾಮ ದೈವಂ ಚಾತ್ರ ಪರಾಯಣಮ್ |
ಜಯಂತೋ ಹ್ಯಪಿ ಸಂಗ್ರಾಮೇ ಕ್ಷಯವಂತೋ ಭವಂತ್ಯುತ ||36||
ಎಲೈ ಭಾರತನೇ, ಸೇನೆಯು ದೊಡ್ಡದಾಗಿದೆ ಎಂಬ ಕಾರಣದಿಂದ ಜಯ ಉಂಟಾಗುವುದೆಂಬ ನಿಶ್ಚಯವಿಲ್ಲ. ಜಯವು ಅನಿಶ್ಚಿತವಾದುದು. ಈ ವಿಷಯದಲ್ಲಿ ದೈವವೇ ಮುಖ್ಯಕಾರಣವಾದುದು. ಯುದ್ಧದಲ್ಲಿ ಜಯಶೀಲರಾದವರೂ ಸಹ ಬಹಳ ನಷ್ಟಗಳನ್ನು ಅನುಭವಿಸುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುರ್ಥೋಽಧ್ಯಾಯಃ ||
|| ಇತಿ ಜಂಬೂಖಂಡನಿರ್ಮಾಣಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ವ್ಯಾಸರ ಪ್ರಯಾಣ. ಸಂಜಯನಿಂದ ಭೂಮಿಯ ಗುಣಗಳ ವರ್ಣನೆ.
ವೈಶಂಪಾಯನಃ
ಏವಮುಕ್ತ್ವಾ ಯಯೌ ವ್ಯಾಸೋ ಧೃತರಾಷ್ಟ್ರಾಯ ಧೀಮತೇ |
ಧೃತರಾಷ್ಟ್ರೋಽಪಿ ತಚ್ಛ್ರುತ್ವಾ ಧ್ಯಾನಮೇವಾನ್ವಪದ್ಯತ ||1||
ವೈಶಂಪಾಯನ ವ್ಯಾಸರು ಮೇಧಾವಿಯಾದ ಧೃತರಾಷ್ಟ್ರನಿಗೆ ಹೀಗೆ ಹೇಳಿ ಹೊರಟು ಹೋದರು. ಧೃತರಾಷ್ಟ್ರನಾದರೂ ಅದನ್ನು ಕೇಳಿ ಧ್ಯಾನ ಪರವಶನಾದನು.
ಸ ಮುಹೂರ್ತಮಿವ ಧ್ಯಾತ್ವಾ ವಿನಿಃಶ್ವಸ್ಯ ಮುಹುರ್ಮುಹುಃ |
ಸಂಜಯಂ ಸಂಶಿತಾತ್ಮಾನಮಪೃಚ್ಛದ್ ಭರತರ್ಷಭ ||2||
ಎಲೈ ಭರತರ್ಷಭನೇ, ಅವನು ಒಂದು ಮುಹೂರ್ತದ ಕಾಲ ಧ್ಯಾನ ಪರವಶನಾಗಿದ್ದು, ಅನಂತರ ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತಾ ಸೂಕ್ಷ್ಮವಾದ ಬುದ್ಧಿಯುಳ್ಳ ಸಂಜಯನನ್ನು ಕುರಿತು ಪ್ರಶ್ನೆಯನ್ನು ಮಾಡಿದನು.
ಸಂಜಯೇಮೇ ಮಹೀಪಾಲಾಃ ಶೂರಾ ಯುದ್ಧಾಭಿನಂದಿನಃ |
ಅನ್ಯೋನ್ಯಮಭಿನಿಘ್ನಂತಿ ಶಸ್ತ್ರೈರುಚ್ಚಾವಚೈರಪಿ ||3||
ಎಲೈ ಸಂಜಯನೇ, ಈ ರಾಜರು ಶೂರರು ಮತ್ತು ಯುದ್ಧವನ್ನು ಅಭಿನಂದಿಸುತ್ತಿರುವವರು. ಶ್ರೇಷ್ಠವಾದ ಮತ್ತು ಕನಿಷ್ಠವಾದ ಶಸ್ತ್ರಗಳಿಂದ ಪರಸ್ಪರವಾಗಿ ಕೊಲ್ಲುತ್ತಾರೆ.
ಪಾರ್ಥಿವಾಃ ಪೃಥಿವೀಹೇತೋಃ ಸಮಭಿತ್ಯಕ್ತಜೀವಿತಾಃ |
ನ ಚ ಶಾಮ್ಯಂತಿ ನಿಘ್ನಂತೋ ವರ್ಧಯಂತೋ ಯಮಕ್ಷಯಮ್ ||4||
ರಾಜರು ಭೂಮಿಯ ಒಡೆತನದ ಸಲುವಾಗಿ ತಮ್ಮ ಜೀವಿತವನ್ನು ತ್ಯಾಗ ಮಾಡಲು ಸಿದ್ಧರಾಗಿದ್ದಾರೆ. ಪರಸ್ಪರವಾಗಿ ಹೊಡೆದಾಡುತ್ತಾ ಸಂಧಿಯನ್ನು ಮಾಡಿಕೊಳ್ಳದೆ ಅವರು ಯಮಪುರದ ಜನಸಂಖ್ಯೆಯನ್ನು ಹೆಚ್ಚಿಸುತ್ತಾರೆ.
ಭೌಮಮೈಶ್ವರ್ಯಮಿಚ್ಛಂತೋ ನ ಮೃಷ್ಯಂತೇ ಪರಸ್ಪರಮ್ |
ಮನ್ಯೇ ಬಹುಗುಣಾ ಭೂಮಿಸ್ತನ್ಮಮಾಚಕ್ಷ್ವ ಸಂಜಯ ||5||
ಭೂಮಿಯ ಮೇಲೆ ದೊರೆಯುವ ಐಶ್ವರ್ಯವನ್ನು ಬಯಸುತ್ತಾ ಅವರು ಪರಸ್ಪರವಾಗಿ ಸಹಿಸುತ್ತಿಲ್ಲ. ಎಲೈ ಸಂಜಯನೇ, ಭೂಮಿಯು ಬಹಳ ಗುಣವುಳ್ಳದ್ದೆಂದು ತಿಳಿದಿದ್ದೇನೆ. ಅದನ್ನು ನನಗೆ ಹೇಳು.
ಬಹೂನಿ ಚ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಕೋಟ್ಯಶ್ಚ ಲೋಕವೀರಾಣಾಂ ಸಮೇತಾಃ ಕುರುಜಾಂಗಲೇ ||6||
ಈ ಕುರುಜಾಂಗರದಲ್ಲಿ ಅನೇಕ ಸಹಸ್ರ, ಲಕ್ಷ, ದಶಲಕ್ಷ, ಅರ್ಬುದ ಮತ್ತು ಕೋಟಿಗಳ ಸಂಖ್ಯೆಯಲ್ಲಿ ಲೋಕವೀರರು

ಸಮಾವೇಶಗೊಂಡಿದ್ದಾರೆ.
ದೇಶಾನಾಂ ಚ ಪರೀಮಾಣಂ ನಗರಾಣಾಂ ಚ ಸಂಜಯ |
ಶ್ರೋತುಮಿಚ್ಛಾಮಿ ತತ್ತ್ವೇನ ಯತ ಏತೇ ಸಮಾಗತಾಃ ||7||
ಎಲ್ಲೈ ಸಂಜಯನೇ, ಈ ವೀರರು ಯಾವ ದೇಶದಿಂದ ಮತ್ತು ನಗರಗಳಿಂದ ಬಂದಿದ್ದಾರೆಯೋ ಆ ದೇಶಗಳ ಮತ್ತು ನಗರಗಳ ಪರಿಮಾಣವನ್ನು ನಾನು ಕೇಳಲು ಬಯಸುತ್ತೇನೆ.
ದಿವ್ಯಬುದ್ಧಿಪ್ರದೀಪೇನ ಯುಕ್ತಸ್ತ್ವಂ ಜ್ಞಾನಚಕ್ಷುಷಾ |
ಪ್ರಸಾದಾತ್ ತಸ್ಯ ವಿಪ್ರರ್ಷೇರ್ವ್ಯಾಸಸ್ಯಾಮಿತತೇಜಸಃ ||8||
ಅಮಿತ ತೇಜಸ್ವಿಗಳಾದ, ವಿಪ್ರರ್ಷಿಗಳಾದ ವೇದವ್ಯಾಸರ ಅನುಗ್ರಹದಿಂದ ನೀನು ಜ್ಞಾನಚಕ್ಷುಸ್ಸಿನಿಂದ ದಿವ್ಯವಾದ ಬುದ್ಧಿಯನ್ನು ಹೊಂದಿದ್ದೀಯೆ.
ಸಂಜಯಃ
ಯಥಾಪ್ರಜ್ಞಂ ಮಹಾಪ್ರಾಜ್ಞ ಭೌಮಾನ್ ವಕ್ಷ್ಯಾಮಿ ತೇ ಗುಣಾನ್ |
ಶಾಸ್ತ್ರಚಕ್ಷುರವೇಕ್ಷಸ್ವ ನಮಸ್ತೇ ಭರತರ್ಷಭ ||9||
ಸಂಜಯ ಎಲ್ಲೈ ಮಹಾಪ್ರಾಜ್ಞನೇ, ನಾನು ನನಗೆ ತಿಳಿದಷ್ಟು ಭೂಮಿಯ ಗುಣಗಳನ್ನು ಹೇಳುವೆನು. ಎಲ್ಲೈ ಭರತರ್ಷಭನೇ, ನಿನಗೆ ನಮಸ್ಕಾರ. ಶಾಸ್ತ್ರ ದೃಷ್ಟಿಯಿಂದ ತಿಳಿಯುವವನಾಗು.
ದ್ವಿವಿಧಾನೀಹ ಭೂತಾನಿ ತ್ರಸಾನಿ ಸ್ಥಾವರಾಣಿ ಚ |
ತ್ರಸಾನಾಂ ತ್ರಿವಿಧಾ ಯೋನಿರಂಡಸ್ವೇದಜರಾಯುಜಾಃ ||10||
ಇಲ್ಲಿ ಪ್ರಾಣಿಗಳು ಜಂಗಮ ಮತ್ತು ಸ್ಥಾವರ ಎಂಬ ಎರಡು ಬಗೆಗಳಾಗಿವೆ. ಜಂಗಮ ಎಂದರೆ ಚಲಿಸುವ ಪ್ರಾಣಿಗಳಲ್ಲಿ ಅಂಡಜ, ಸ್ವೇದಜ ಮತ್ತು ಜರಾಯುಜ (ಮೊಟ್ಟೆಯಿಂದ ಹುಟ್ಟಿಬಂದವು, ಶಾಖದಿಂದಲೇ ಹುಟ್ಟಿಬಂದವು ಮತ್ತು ಗರ್ಭಕೋಶದಲ್ಲಿ ಹುಟ್ಟಿಬಂದವು) ಎಂದು ಮೂರುವಿಧ.
ತ್ರಸಾನಾಂ ಖಲು ಸರ್ವೇಷಾಂ ಶ್ರೇಷ್ಠಾ ರಾಜನ್ ಜರಾಯುಜಾಃ |
ಜರಾಯುಜಾನಾಂ ಪ್ರವರಾ ಮಾನವಾಃ ಪಶವಶ್ಚ ಯೇ ||11||
ಎಲ್ಲೈ ರಾಜನೇ, ಎಲ್ಲಾ ಜಂಗಮ ಪ್ರಾಣಿಗಳಲ್ಲಿ ಜರಾಯುಜಗಳು ಶ್ರೇಷ್ಠವಾದವುಗಳು. ಆ ಜರಾಯುಜಗಳಲ್ಲಿಯೂ ಮನುಷ್ಯರು ಮತ್ತು ಪಶುಗಳು ಶ್ರೇಷ್ಠರಾದವರು.
ನಾನಾರೂಪಾಣಿ ಬಿಭ್ರಾಣಾಸ್ತೇಷಾಂ ಭೇದಾಶ್ಚತುರ್ದಶ |
ಅರಣ್ಯವಾಸಿನಃ ಸಪ್ತ ಸಪ್ತೈಷಾಂ ಗ್ರಾಮವಾಸಿನಃ ||12||
ಜರಾಯುಜಗಳು ನಾನಾ ವಿಧವಾದ ರೂಪಗಳನ್ನು ಹೊಂದಿ ಹದಿನಾಲ್ಕು ಬಗೆಯಾಗಿವೆ. ಅವುಗಳಲ್ಲಿ ಅರಣ್ಯದಲ್ಲಿ ವಾಸಿಸುವವು ಏಳು ಬಗೆ ಮತ್ತು ಗ್ರಾಮದಲ್ಲಿ ವಾಸಿಸುವವು ಏಳು ಬಗೆಯಾಗಿವೆ.
ಸಿಂಹವ್ಯಾಘ್ರವರಾಹಾಶ್ಚ ಮಹಿಷಾ ವಾರಣಾಸ್ತಥಾ |
ಋಕ್ಷಾಶ್ಚ ವಾನರಾಶ್ಚೈವ ಸಪ್ತಾರಣ್ಯಾಃ ಸ್ಮೃತಾ ನೃಪ ||13||
ಸಿಂಹ, ಹುಲಿ, ಹಂದಿ, ಕಾಡೆಮ್ಮೆ, ಆನೆ, ಕರಡಿ ಮತ್ತು ಕಪಿ - ಈ ಏಳು ವಿಧಗಳು ಅರಣ್ಯವಾಸಿಗಳೆಂದು ಕರೆಯಲ್ಪಡುತ್ತವೆ.
ಗೌರಜೋ ಮನುಜೋ ಮೇಷೋ ವಾಜ್ಯಶ್ವತರಗರ್ದಭಾಃ |
ಏತೇ ಗ್ರಾಮ್ಯಾಃ ಸಮಾಖ್ಯಾತಾಃ ಪಶವಃ ಸಪ್ತ ಸಾಧುಭಿಃ ||14||
ಗೋವು, ಆಡು, ಮನುಷ್ಯ, ಕುರಿ, ಕುದುರೆ, ಹೇಸರಗತ್ತೆ ಮತ್ತು ಕತ್ತೆ ಇವುಗಳು ಗ್ರಾಮದಲ್ಲಿ ವಾಸಿಸುವ ಪಶುಗಳೆಂದು ಸಜ್ಜನರು ಎಣಿಸುತ್ತಾರೆ.
ಏತೇ ವೈ ಪಶವೋ ರಾಜನ್ ಗ್ರಾಮ್ಯಾರಣ್ಯಾಶ್ಚತುರ್ದಶ |
ವೇದೋಕ್ತಾಃ ಪೃಥಿವೀಪಾಲ ಯೇಷು ಯಜ್ಞಾಃ ಪ್ರತಿಷ್ಠಿತಾಃ ||15||
ಎಲ್ಲೈ ರಾಜನೇ, ಈ ಹದಿನಾಲ್ಕು ಬಗೆಯ ಪಶುಗಳು ವೇದೋಕ್ತವಾಗಿವೆ. ಇವುಗಳಲ್ಲಿ ಯಜ್ಞಗಳು ಪ್ರತಿಷ್ಠಿತವಾಗಿವೆ.
ಗ್ರಾಮ್ಯಾಣಾಂ ಪುರುಷಃ ಶ್ರೇಷ್ಠಃ ಸಿಂಹಶ್ಚಾರಣ್ಯವಾಸಿನಾಮ್ |
ಸರ್ವೇಷಾಮೇವ ಭೂತಾನಾಮನ್ಯೋನ್ಯೇನಾಭಿಜೀವನಮ್ ||16||
ಗ್ರಾಮ್ಯ ಪ್ರಾಣಿಗಳಲ್ಲಿ ಮನುಷ್ಯನು ಶ್ರೇಷ್ಠನಾದವನು. ಅರಣ್ಯವಾಸಿ ಪ್ರಾಣಿಗಳಲ್ಲಿ ಸಿಂಹವು ಶ್ರೇಷ್ಠವಾದುದು. ಎಲ್ಲ ಪ್ರಾಣಿಗಳಿಗೂ ಒಂದರಿಂದ ಒಂದಕ್ಕೆ ಉಪಜೀವನವಾಗುತ್ತದೆ (ಒಂದು ಪ್ರಾಣಿಯ ದೇಹವು ಇನ್ನೊಂದು ಪ್ರಾಣಿಯ ದೇಹಧಾರಣೆಗೆ ಬೇಕಾದ ಆಹಾರವಾಗುತ್ತದೆ).
ಉದ್ಭಿಜಾಃ ಸ್ಥಾವರಾಃ ಪ್ರೋಕ್ತಾಸ್ತೇಷಾಂ ಪಂಚೈವ ಜಾತಯಃ |
ವೃಕ್ಷಗುಲ್ಮಲತಾವಲ್ಲ್ಯಸ್ತ್ವಕ್ಸಾರಾಸ್ತೃಣಜಾತಯಃ ||17||
ಉದ್ಭಿಜಗಳು ಎಂದರೆ ಭೂಮಿಯನ್ನು ಒಡೆದುಕೊಂಡು ಮೇಲೆ ಬರುವ ಜೀವರನ್ನು ಸ್ಥಾವರಗಳು ಎಂದು ಹೇಳುತ್ತಾರೆ. ಅವುಗಳಲ್ಲಿ ಐದೇ ಜಾತಿ ಇದೆ. ಮರಗಳು, ಪೊದೆಗಳು, ಲತಾಸಮೂಹಗಳು, ತೊಗಟೆಯಲ್ಲೇ ಸಾರವುಳ್ಳ ಬಿದಿರು ಮುಂತಾದವುಗಳು ಮತ್ತು ತೃಣಜಾತಿಗೆ ಸೇರಿದವು ಎಂದು ಐದು ವಿಧ.
ಏಷಾಂ ವಿಂಶತಿರೇಕೋನಾ ಮಹಾಭೂತೇಷು ಪಂಚಸು |
ಚತುರ್ವಿಂಶತಿರುದ್ದಿಷ್ಟಾ ಗಾಯತ್ರೀ ಲೋಕಸಮ್ಮತಾ ||18||
ಈ ಹದಿನಾಲ್ಕು ಮತ್ತು ಐದು ಜಾತಿಗಳನ್ನು ಸೇರಿಸಿದರೆ ಹತ್ತೊಂಬತ್ತು ಆಗುತ್ತದೆ. ಅದಕ್ಕೆ ಪಂಚಮಹಾಭೂತಗಳನ್ನು ಸೇರಿಸಿದರೆ

ಇಪ್ಪತ್ತನಾಲ್ಕು ಆಗುತ್ತದೆ. ಇಪ್ಪತ್ತನಾಲ್ಕು ಅಕ್ಷರಗಳ ಗಾಯತ್ರಿಯ ಸ್ಮರಣೆಯು ಹೇಗೆ ಪುಣ್ಯದಾಯಕವೋ ಹಾಗೆಯೇ ಪಂಚಮಹಾಭೂತಗಳ ಮತ್ತು ಸ್ಥಾವರ-ಜಂಗಮಗಳ ಇಪ್ಪತ್ತನಾಲ್ಕರ ಗಣಗಳನ್ನು ಸ್ಮರಿಸಿದರೂ ಪುಣ್ಯ ಉಂಟಾಗುತ್ತದೆ.
ಯ ಏತಾಂ ವೇದ ಗಾಯತ್ರೀಂ ಪುಣ್ಯಾಂ ಸರ್ವಗುಣಾನ್ವಿತಾಮ್ |
ತತ್ತ್ವೇನ ಭರತಶ್ರೇಷ್ಠ ಸ ಲೋಕಾನ್ನ ಪ್ರಣಶ್ಯತಿ ॥19॥
ಎಲೈ ಭರತಶ್ರೇಷ್ಠನೇ, ಯಾವನು ಪವಿತ್ರವಾದ ಸರ್ವಗುಣಗಳಿಂದ ಕೂಡಿದ ಈ ಗಾಯತ್ರಿಯನ್ನು ಸರಿಯಾಗಿ ತಿಳಿಯುತ್ತಾನೆಯೋ ಅವನಿಗೆ ಲೋಕಗಳು ನಾಶವನ್ನು ಹೊಂದುವುದಿಲ್ಲ.
ಭೂಮೌ ಹಿ ಜಾಯತೇ ಸರ್ವಂ ಭೂಮೌ ಸರ್ವಂ ಪ್ರಣಶ್ಯತಿ |
ಭೂಮಿಃ ಪ್ರತಿಷ್ಠಾ ಭೂತಾನಾಂ ಭೂಮಿರೇವ ಪರಾಯಣಮ್ ॥20॥
ಎಲ್ಲವೂ ಭೂಮಿಯಲ್ಲಿ ಜನಿಸುತ್ತವೆ. ಭೂಮಿಯಲ್ಲಿಯೇ ನಾಶವನ್ನು ಹೊಂದುತ್ತವೆ. ಎಲ್ಲ ಭೂತಗಳಿಗೂ ಭೂಮಿಯೇ ಆಧಾರ ಮತ್ತು ಶ್ರೇಷ್ಠವಾದ ಆಶ್ರಯವೂ ಆಗಿದೆ.
ಯಸ್ಯ ಭೂಮಿಸ್ತಸ್ಯ ಸರ್ವಂ ಜಗತ್ಸ್ಥಾವರಜಂಗಮಮ್ |
ತತ್ರಾಭಿಗೃದ್ಧಾ ರಾಜಾನೋ ವಿನಿಘ್ನಂತೀತರೇತರಮ್ ॥21॥
ಯಾವನು ಭೂಮಿಗೆ ಒಡೆಯನಾಗುತ್ತಾನೆಯೋ ಅವನು ಅಲ್ಲಿರುವ ಸ್ಥಾವರ- ಜಂಗಮಗಳಿಗೆಲ್ಲಕ್ಕೂ ಒಡೆಯನಾಗುತ್ತಾನೆ. ರಾಜರು ಅಂತಹ ಭೂಮಿಯಲ್ಲಿ ಆಸೆಯನ್ನು ಮಾಡುವವರಾಗಿ ಪರಸ್ಪರವಾಗಿ ಕೊಲ್ಲುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಮೋಽಧ್ಯಾಯಃ ॥
॥ಇತಿ ಜಂಬೂಖಂಡನಿರ್ಮಾಣಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ಸಂಜಯನಿಂದ ಧೃತರಾಷ್ಟ್ರನನ್ನು ಕುರಿತು ಸಂಕ್ಷೇಪವಾಗಿ
ಭೂಮಿಯ ಗುಣವರ್ಣನೆ.
ಧೃತರಾಷ್ಟ್ರಃ
ನದೀನಾಂ ಪರ್ವತಾನಾಂ ಚ ನಾಮಧೇಯಾನಿ ಸಂಜಯ |
ತಥಾ ಜನಪದಾನಾಂ ಚ ಯೇ ಚಾನ್ಯೇ ಭೂಮಿಮಾಶ್ರಿತಾಃ ॥1॥
ಪ್ರಮಾಣಂ ಚ ಪ್ರಮಾಣಜ್ಞ ಪೃಥಿವ್ಯಾ ಅಪಿ ಸರ್ವಶಃ |
ನಿಖಿಲೇನ ಸಮಾಚಕ್ಷ್ವ ಕಾನನಾನಿ ಚ ಸಂಜಯ ॥2॥
ಧೃತರಾಷ್ಟ್ರ ಎಲೈ ಸಂಜಯನೇ, ನದಿಗಳು, ಪರ್ವತಗಳು, ದೇಶಗಳು ಮತ್ತು ಭೂಮಿಯನ್ನು ಆಶ್ರಯಿಸಿರುವ ಇತರ ಶ್ರೇಷ್ಠವಾದ ಪದಾರ್ಥಗಳು, ಇವುಗಳ ನಾಮಧೇಯವನ್ನು (ಹೇಳುವವನಾಗು). ಎಲೈ ಎಲ್ಲದರ ಪ್ರಮಾಣಗಳನ್ನು ತಿಳಿದ ಸಂಜಯನೇ, ಪೃಥಿವಿಯ ಎಲ್ಲಾ ಪ್ರಮಾಣಗಳನ್ನೂ ಮತ್ತು ಪೃಥಿವಿಯಲ್ಲಿರುವ ಕಾನನಗಳನ್ನೂ ಸಮಗ್ರವಾಗಿ ತಿಳಿಸು.
ಸಂಜಯಃ
ಪಂಚೇಮಾನಿ ಮಹಾರಾಜ ಮಹಾಭೂತಾನಿ ಸಂಗ್ರಹಾತ್ |
ಜಗತ್ಸ್ಥಿತಾನಿ ಸರ್ವಾಣಿ ಸಮಾನ್ಯಾಹುರ್ಮನೀಷಿಣಃ ॥3॥
ಸಂಜಯ ಎಲೈ ಮಹಾರಾಜನೇ, ಸಂಕ್ಷೇಪವಾಗಿ ಈ ಮಹಾಭೂತಗಳು ಐದು. ಜಗತ್ತಿನಲ್ಲಿರುವ ಇವೆಲ್ಲವೂ ಸಮವಾಗಿರುವುವೆಂದು ಜ್ಞಾನಿಗಳು ಹೇಳುತ್ತಾರೆ. ಭೂಮಿ, ಜಲ, ವಾಯು, ಅಗ್ನಿ ಮತ್ತು ಆಕಾಶ, ಇವುಗಳಲ್ಲಿ ಒಂದಕ್ಕಿಂತ ಇನ್ನೊಂದು ಹೆಚ್ಚಿನ ಗುಣವುಳ್ಳವುಗಳು. ಅವುಗಳಲ್ಲೂ ಗುಣಗಳ ದೃಷ್ಟಿಯಿಂದ ಭೂಮಿಯು ಎಲ್ಲದಕ್ಕಿಂತಲೂ ಪ್ರಧಾನವಾದುದು.
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ |
ಭೂಮೇರೇತೇ ಗುಣಾಃ ಪ್ರೋಕ್ತಾ ಋಷಿಭಿಸ್ತತ್ತ್ವವೇದಿಭಿಃ ॥5॥
ತತ್ತ್ವ ಜ್ಞಾನಿಗಳಾದ ಋಷಿಗಳು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಐದನೆಯದಾದ ಗಂಧವನ್ನು ಭೂಮಿಯ ಗುಣಗಳೆಂದು ಹೇಳುತ್ತಾರೆ.

ಚತ್ವಾರೋಽಪ್ಸು ಗುಣಾ ರಾಜನ್ ಗಂಧಸ್ತತ್ರ ನ ವಿದ್ಯತೇ |
ಶಬ್ದಃ ಸ್ಪರ್ಶಶ್ಚ ವಾಯೋಸ್ತು ಆಕಾಶೇ ಶಬ್ದ ಏವ ಚ ॥6॥
ಎಲೈ ರಾಜನೇ, ಜಲದ ಗುಣಗಳು ನಾಲ್ಕು, ಅಲ್ಲಿ ಗಂಧವಿಲ್ಲ. ತೇಜಸ್ಸಿನ ಗುಣಗಳು ಶಬ್ದ, ಸ್ಪರ್ಶ, ರೂಪ ಎಂದು ಮೂರು. ವಾಯುವಿನ ಗುಣಗಳು ಶಬ್ದ ಮತ್ತು ಸ್ಪರ್ಶ. ಮತ್ತು ಆಕಾಶದ ಗುಣವು ಶಬ್ದ ಒಂದೇ.
ಏತೇ ಪಂಚ ಗುಣಾ ರಾಜನ್ ಮಹಾಭೂತೇಷು ಪಂಚಸು |
ವರ್ತಂತೇ ಸರ್ವಲೋಕೇಷು ಯೇಷು ಲೋಕಾಃ ಪ್ರತಿಷ್ಠಿತಾಃ ॥7॥
ಎಲೈ ರಾಜನೇ, ಈ ಐದು ಗುಣಗಳು ಪಂಚಮಹಾಭೂತಗಳಲ್ಲಿ ಎಲ್ಲ ಲೋಕಗಳಲ್ಲಿಯೂ ಇರುತ್ತವೆ. ಅಂತಹ ಲೋಕಗಳಲ್ಲಿ ಎಲ್ಲ ಪ್ರಾಣಿಗಳು ಪ್ರತಿಷ್ಠಿತವಾಗಿವೆ.
ಅನ್ಯೋನ್ಯಂ ನಾಭಿವರ್ತಂತೇ ಸಾಮ್ಯಂ ಭವತಿ ವೈ ಯದಾ |
ಯದಾ ತು ವಿಷಮೀಭಾವಮಾವಿಶಂತಿ ಪರಸ್ಪರಮ್ |
ತದಾ ದೇಹೈರ್ದೇಹವಂತೋ ವ್ಯತಿರೋಹಂತಿ ನಾನ್ಯಥಾ ॥8॥

ಸಾಮ್ಯಾವಸ್ಥೆ ಇರುವಾಗ ಈ ಪಂಚಮಹಾಭೂತಗಳು ಒಂದನ್ನೊಂದು ಮೀರುವುದಿಲ್ಲ. ಯಾವಾಗ ಇವುಗಳಲ್ಲಿ ಪರಸ್ಪರವಾಗಿ ವೈಷಮ್ಯ ಉಂಟಾಗುತ್ತದೆಯೋ ಆಗ ದೇಹಿಗಳು ದೇಹವಿಯೋಗವನ್ನು ಹೊಂದುತ್ತಾರೆ, ಇಲ್ಲದಿದ್ದರೆ ಇಲ್ಲ.
ಆನುಪೂರ್ವ್ಯಾದ್ ವಿನಶ್ಯಂತಿ ಜಾಯಂತೇ ಚಾನುಪೂರ್ವಶಃ |
ಸರ್ವಾಣ್ಯಪರಿಮೇಯಾನಿ ತದೇಷಾಂ ರೂಪಮೈಶ್ವರಮ್ ॥9॥
ಈ ಪಂಚಮಹಾಭೂತಗಳು ಕ್ರಮವಾಗಿ ಉತ್ಪನ್ನವಾಗುತ್ತವೆ ಮತ್ತು ವ್ಯುತ್ಕ್ರಮದಿಂದ (ಅದಕ್ಕೆ ವಿರುದ್ಧವಾದ ಕ್ರಮದಿಂದ) ನಾಶವನ್ನು ಹೊಂದುತ್ತವೆ. ಎಲ್ಲವೂ ಅಪರಿಮೇಯಗಳು. ಅವುಗಳ ಈ ಸ್ವಭಾವವು ಈಶ್ವರಾಧೀನವಾದುದು.
ತತ್ರ ತತ್ರ ಹಿ ದೃಶ್ಯಂತೇ ಧಾತವಃ ಪಾಂಚಭೌತಿಕಾಃ |
ತೇಷಾಂ ಮನುಷ್ಯಾಸ್ತರ್ಕೇಣ ಪ್ರಮಾಣಾನಿ ಪ್ರಚಕ್ಷತೇ ॥10॥
ಅಲ್ಲಲ್ಲಿ ಪಂಚಭೂತಗಳಿಂದ ಉಂಟಾದ ಧಾತುಗಳು ಕಂಡುಬರುತ್ತವೆ. ಅವುಗಳಿಗೆ ಮನುಷ್ಯರು ತಮ್ಮ ಊಹೆಯಿಂದ ಪ್ರಮಾಣಗಳನ್ನು ಹೇಳುತ್ತಾರೆ.
ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಸಾಧಯೇತ್ |
ಪ್ರಕೃತಿಭ್ಯಃ ಪರಂ ಯತ್ ತು ತದಚಿಂತ್ಯಸ್ಯ ಲಕ್ಷಣಮ್ ॥11॥
ಯಾವ ಪದಾರ್ಥಗಳು ಅಚಿಂತ್ಯವಾಗಿವೆಯೋ ಅವುಗಳನ್ನು ತರ್ಕದಿಂದ ಸಾಧಿಸಬಾರದು. ಪ್ರಕೃತಿಗಿಂತ ಶ್ರೇಷ್ಠವಾದ ವಸ್ತುವು ಯಾವುದು ಇದೆಯೋ ಅದು ಅಚಿಂತ್ಯವಾದುದು. ಆ ಅಚಿಂತ್ಯವಾದ ವಸ್ತುವೇ ನಾರಾಯಣ.
ಸುದರ್ಶನಂ ಪ್ರವಕ್ಷ್ಯಾಮಿ ದ್ವೀಪಂ ತೇ ಕುರುನಂದನ |
ಪರಿಮಂಡಲೋ ಮಹಾರಾಜ ದ್ವೀಪೋಽಸೌ ಚಕ್ರಸಂಸ್ಥಿತಃ ॥12॥
ಎಲೈ ಕುರುನಂದನನೇ, ನಾನು ನಿನಗೆ ಸುದರ್ಶನ ದ್ವೀಪವನ್ನು ವರ್ಣಿಸುವೆನು. ಎಲೈ ಮಹಾರಾಜನೇ, ಈ ದ್ವೀಪವು ವರ್ತುಲಾಕಾರವಾಗಿದ್ದು ಸುದರ್ಶನ ಚಕ್ರದ ಸನ್ನಿಧಾನಕ್ಕೆ ಪಾತ್ರವಾಗಿದೆ.
ನದೀಜಲಪ್ರತಿಚ್ಛನ್ನಃ ಪರ್ವತೈಶ್ಚಾಭ್ರಸನ್ನಿಭೈಃ |
ಪುರೈಶ್ಚ ವಿವಿಧಾಕಾರೈ ರಮ್ಯೈರ್ಜನಪದೈಸ್ತಥಾ ॥13॥
ಇದು ನದೀಜಲಗಳಿಂದಲೂ, ಮುಗಿಲೆತ್ತರದ ಪರ್ವತಗಳಿಂದಲೂ, ವಿವಿಧಾಕಾರದ ಪಟ್ಟಣಗಳಿಂದಲೂ ಮತ್ತು ಮನೋಹರವಾದ ದೇಶಗಳಿಂದಲೂ ತುಂಬಿ ಹೋಗಿದೆ.
ವೃಕ್ಷೈಃ ಪುಷ್ಪಫಲೋಪೇತೈಃ ಸಂಪನ್ನಧನಧಾನ್ಯವಾನ್ |
ಲಾವಣೇನ ಸಮುದ್ರೇಣ ಸಮಂತಾತ್ ಪರಿವಾರಿತಃ ॥14॥
ಪುಷ್ಪ-ಫಲಭರಿತವಾದ ವೃಕ್ಷಗಳಿಂದ ತುಂಬಿದೆ. ಸಮೃದ್ಧವಾದ ಧನ-ಧಾನ್ಯಗಳಿಂದ ಕೂಡಿದೆ. ಲವಣ ಸಮುದ್ರದಿಂದ ಎಲ್ಲ ಕಡೆಯಲ್ಲಿಯೂ ಸುತ್ತುವರಿಯಲ್ಪಟ್ಟಿದೆ.
ಯಥಾ ಚ ಪುರುಷಃ ಪಶ್ಯೇದಾದರ್ಶೇ ಮುಖಮಾತ್ಮನಃ |
ಏವಂ ಸುದರ್ಶನದ್ವೀಪೋ ದೃಶ್ಯತೇ ಚಂದ್ರಮಂಡಲೇ ॥15॥
ಹೇಗೆ ಕನ್ನಡಿಯಲ್ಲಿ ಮನುಷ್ಯನ ಮುಖದ ಪ್ರತಿಬಿಂಬವು ಕಾಣುವುದೋ, ಹಾಗೆ ಚಂದ್ರಮಂಡಲದಲ್ಲಿ ಈ ಸುದರ್ಶನ ದ್ವೀಪದ ಪ್ರತಿಬಿಂಬವು ಕಾಣುತ್ತದೆ.
ದ್ವಿರಂಶಃ ಪಿಪ್ಪಲಸ್ತತ್ರ ದ್ವಿರಂಶಶ್ಚ ಶಶೋ ಮಹಾನ್ |
ಸರ್ವೌಷಧಿಸಮಾವಾಪೈಃ ಸರ್ವತಃ ಪರಿಬೃಂಹಿತಃ |
ಆಪಸ್ತತೋಽನ್ಯಾ ವಿಜ್ಞೇಯಾ ಏಷ ಸಂಕ್ಷೇಪ ಉಚ್ಯತೇ ॥16॥
ಇದರಲ್ಲಿ ಎರಡು ಅಂಶ ಪಿಪ್ಪಲ ವೃಕ್ಷವೂ, ಎರಡು ಅಂಶಗಳಲ್ಲಿ ದೊಡ್ಡ ಮೊಲವೂ ಕಂಡು ಬರುತ್ತದೆ. ಎಲ್ಲ ವಿಧವಾದ ಓಷಧಿಗಳ ಸಸ್ಯಗಳಿಂದ ಎಲ್ಲ ಕಡೆಯಲ್ಲಿಯೂ ತುಂಬಿ ಹೋಗಿದೆ. ಜಲವು ಇದಕ್ಕಿಂತ ಭಿನ್ನವಾದ ತತ್ತ್ವ. ಇದು ಸುದರ್ಶನ ದ್ವೀಪದ ಸಂಕ್ಷೇಪ ವರ್ಣನೆಯಾಗಿದೆ.
॥ ॥ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಷ್ಠೋಽಧ್ಯಾಯಃ ॥
॥ ಇತಿ ಜಂಬೂಖಂಡನಿರ್ಮಾಣಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ಸಂಜಯನಿಂದ ಮೇರು ಪರ್ವತದ, ಭಾರತಾದಿ ವರ್ಷಗಳ
ಮತ್ತು ಸೀಮಾಪರ್ವತಗಳ ವರ್ಣನೆ.
ಧೃತರಾಷ್ಟ್ರಃ
ಉಕ್ತೋ ದ್ವೀಪಸ್ಯ ಸಂಕ್ಷೇಪೋ ವಿಸ್ತರಂ ಬ್ರೂಹಿ ಸಂಜಯ |
ಯಾವದ್ ಭೂಮ್ಯವಕಾಶೋಽಯಂ ದೃಶ್ಯತೇ ಶಶಲಕ್ಷಣೇ |
ತಸ್ಯ ಪ್ರಮಾಣಂ ಪ್ರಬ್ರೂಹಿ ತತೋ ವಕ್ಷ್ಯಸಿ ಪಿಪ್ಪಲಮ್ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ಜಂಬೂದ್ವೀಪವನ್ನು ಸಂಕ್ಷೇಪವಾಗಿ ಹೇಳಿದ್ದೀಯೆ. ಅದನ್ನು ವಿಸ್ತಾರವಾಗಿ ಹೇಳು. ಈ ಭೂಮಿಯ ಪ್ರತಿಬಿಂಬವು ಚಂದ್ರನಲ್ಲಿ ಏನು ಕಾಣುತ್ತದೆಯೋ ಅದರ ಪ್ರಮಾಣವನ್ನು ಮೊದಲು ಹೇಳು. ಅನಂತರ ಪಿಪ್ಪಲ ವೃಕ್ಷವನ್ನು ಹೇಳುವಿಯಂತೆ.

ವೈಶಂಪಾಯನಃ
ಏವಮುಕ್ತಃ ಸ ರಾಜ್ಞಾ ತು ಸಂಜಯೋ ವಾಕ್ಯಮಬ್ರವೀತ್ |
ಪ್ರಾಗಾಯತಾ ಮಹಾರಾಜ ಷಡೇತೇ ರತ್ನಪರ್ವತಾಃ |
ಅವಗಾಢಾ ಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ||2||
ವೈಶಂಪಾಯನ ಹೀಗೆ ರಾಜನಿಂದ ಹೇಳಲ್ಪಟ್ಟ ಸಂಜಯನು ಉತ್ತರವನ್ನು ನೀಡಿದನು. ಎಲೈ ಮಹಾರಾಜನೇ, ಈ ಆರು ವರ್ಷ ಪರ್ವತಗಳು ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿ ಎರಡು ಕಡೆಗಳಲ್ಲಿಯೂ ಪಶ್ಚಿಮ ಮತ್ತು ಪೂರ್ವ ಸಮುದ್ರಗಳವರೆಗೆ ಚಾಚಿಕೊಂಡಿವೆ.
ಹಿಮವಾನ್ ಹೇಮಕೂಟಶ್ಚ ನಿಷಧಶ್ಚ ನಗೋತ್ತಮಃ |
ನೀಲಶ್ಚ ವೈಡೂರ್ಯಮಯಃ ಶ್ವೇತಶ್ಚ ರಜತಪ್ರಭಃ |
ಸರ್ವಧಾತುಪಿನದ್ಧಶ್ಚ ಶೃಂಗವಾನ್ ನಾಮ ಪರ್ವತಃ ||3||
ಹಿಮಾಲಯ, ಹೇಮಕೂಟ, ಶ್ರೇಷ್ಠವಾದ ನಿಷಧ ಪರ್ವತ, ವೈಡೂರ್ಯಮಯವಾದ ನೀಲಪರ್ವತ, ಬೆಳ್ಳಿಯ ಕಾಂತಿಯುಳ್ಳ ಶ್ವೇತಪರ್ವತ ಮತ್ತು ಎಲ್ಲ ಧಾತುಗಳಿಂದ ಕೂಡಿದ ಶೃಂಗವಾನ್ ಎಂಬ ಪರ್ವತ (ಇವು ಆ ಆರು ಪರ್ವತಗಳು).
ಏತೇ ವೈ ಪರ್ವತಾ ರಾಜನ್ ಸಿದ್ಧಚಾರಣಸೇವಿತಾಃ |
ತೇಷಾಮಂತರವಿಷ್ಕಂಭೋ ಯೋಜನಾನಿ ಸಹಸ್ರಶಃ ||4||
ಎಲೈ ರಾಜನೇ, ಈ ಪರ್ವತಗಳು ಸಿದ್ಧಚಾರಣರಿಂದ ಸೇವಿತವಾಗಿವೆ. ಇವುಗಳ ಮಧ್ಯದ ವಿಸ್ತಾರವು ಸಹಸ್ರಾರು ಯೋಜನಗಳಷ್ಟಿದೆ.
ತತ್ರ ಪುಣ್ಯಾ ಜನಪದಾಸ್ತಾನಿ ವರ್ಷಾಣಿ ಭಾರತ |
ವಸಂತಿ ತೇಷು ಸತ್ತ್ವಾನಿ ನಾನಾಜಾತೀನಿ ಸರ್ವಶಃ ||5||
ಎಲೈ ಭಾರತನೇ, ಅವುಗಳ ಮಧ್ಯದಲ್ಲಿ ಪವಿತ್ರವಾದ ದೇಶಗಳಿವೆ. ಆ ದೇಶಗಳಲ್ಲಿ ಎಲ್ಲ ಕಡೆಯಲ್ಲಿಯೂ ನಾನಾ ಜಾತಿಯ ಜೀವರು ವಾಸ ಮಾಡುತ್ತಾರೆ.
ಇದಂ ತು ಭಾರತಂ ವರ್ಷಂ ತತೋ ಹೈಮವತಂ ಪರಮ್ |
ಹೇಮಕೂಟಾತ್ ಪರಂ ಚೈವ ಹರಿವರ್ಷಂ ಪ್ರಚಕ್ಷತೇ ||6||
ನಾವಿರುವುದು ಭಾರತವರ್ಷ. ಅದರ ಉತ್ತರಕ್ಕೆ ಹಿರಣ್ಮಯ ವರ್ಷ. ಅದರ ಉತ್ತರಕ್ಕೆ (ಹೇಮಕೂಟ ಪರ್ವತದ ಆಚೆಗೆ )ಇರುವುದಕ್ಕೆ ಹರಿವರ್ಷವೆಂದು ಹೇಳುತ್ತಾರೆ.
ದಕ್ಷಿಣೇನ ತು ನೀಲಸ್ಯ ನಿಷೇಧಸ್ಯೋತ್ತರೇಣ ಚ |
ಪ್ರಾಗಾಯತೋ ಮಹಾರಾಜ ಮಾಲ್ಯವಾನ್ ನಾಮ ಪರ್ವತಃ ||7||
ಎಲೈ ಮಹಾರಾಜನೇ, ನೀಲ ಪರ್ವತದ ದಕ್ಷಿಣದಲ್ಲಿ ಮತ್ತು ನಿಷಧ ಪರ್ವತದ ಉತ್ತರದಲ್ಲಿ ವಿಸ್ತಾರವಾಗಿ ಹಬ್ಬಿರುವ ಮೇರುವಿನ ಪೂರ್ವಭಾಗದಲ್ಲಿ ಮಾಲ್ಯವಾನ್ ಎಂಬ ಪರ್ವತವಿದೆ.
ತತಃ ಪರಂ ಮಾಲ್ಯವತಃ ಪರ್ವತೋ ಗಂಧಮಾದನಃ |
ಪರಿಮಂಡಲಸ್ತಯೋರ್ಮಧ್ಯೇ ಮೇರುಃ ಕನಕಪರ್ವತಃ ||8||
ಹಾಗೆಯೇ, ಮಾಲ್ಯವಾನ್ ಪರ್ವತದ ಪಶ್ಚಿಮ ಭಾಗದಲ್ಲಿ ಗಂಧಮಾದನ ಪರ್ವತವಿದೆ. ಇವುಗಳ ಮಧ್ಯದಲ್ಲಿ ವರ್ತುಲಾಕಾರವಿರುವ ಕನಕಮಯವಾದ ಮೇರುಪರ್ವತವಿದೆ.
ಆದಿತ್ಯತರುಣಾಭಾಸೋ ವಿಧೂಮ ಇವ ಪಾವಕಃ |
ಯೋಜನಾನಾಂ ಸಹಸ್ರಾಣಿ ಷೋಡಶಾಧಃ ಕಿಲ ಸ್ಮೃತಃ ||9||
ಉದಯಿಸುವ ಆದಿತ್ಯನ ಪ್ರಭೆಯನ್ನು ಹೊಂದಿರುವ, ಧೂಮವಿಲ್ಲದ ಅಗ್ನಿಯನ್ನು ಹೋಲುವ ಈ ಮೇರುಪರ್ವತವು ಭೂಮಿಯ ಕೆಳಗೆ ಹದಿನಾರು ಸಾವಿರ ಯೋಜನಗಳವರೆಗೆ ಹಬ್ಬಿದೆ.
ಉಚ್ಚೈಶ್ಚ ಚತುರಾಶೀತಿರ್ಯೋಜನಾನಾಂ ಮಹೀಪತೇ |
ಊರ್ಧ್ವಮಂತಶ್ಚ ತಿರ್ಯಕ್ಚ ಲೋಕಾನಾವೃತ್ಯ ತಿಷ್ಠತಿ ||10||
ಎಲೈ ರಾಜನೇ, ಭೂಮಿಯ ಮೇಲ್ಭಾಗದಲ್ಲಿ ಅದು ಎಂಬತ್ತನಾಲ್ಕು ಸಾವಿರ ಯೋಜನಗಳಷ್ಟು ಎತ್ತರವಿದೆ. ಅದು ಮೇಲ್ಭಾಗದಲ್ಲಿಯೂ, ತನ್ನ ಒಳಗೂ ಮತ್ತು ತನ್ನ ಸುತ್ತಮುತ್ತಲೂ ಅನೇಕ ಲೋಕಗಳನ್ನು ಆವರಿಸಿಕೊಂಡಿದೆ.
ತಸ್ಯ ಪಾರ್ಶ್ವೇ ತ್ವಿಮೇ ದ್ವೀಪಾಶ್ಚತ್ವಾರಃ ಸಂಸ್ಥಿತಾಃ ಪ್ರಭೋ |
ಭದ್ರಾಶ್ವಃ ಕೇತುಮಾಲಶ್ಚ ಜಂಬೂದ್ವೀಪಶ್ಚ ಭಾರತ |
ಉತ್ತರಾಶ್ಚೈವ ಕುರವಃ ಕೃತಪುಣ್ಯಪ್ರತಿಶ್ರಯಾಃ ||11||
ಎಲೈ ಪ್ರಭುವೇ, ಆ ಮೇರುಪರ್ವತದ ಸುತ್ತಲೂ ದ್ವೀಪಾಕಾರದಲ್ಲಿರುವ ಭದ್ರಾಶ್ವ, ಕೇತುಮಾಲ, ಜಂಬೂದ್ವೀಪ ಮತ್ತು ಪುಣ್ಯವಂತರು ವಾಸಿಸುವ ಉತ್ತರ ಕುರು ಈ ನಾಲ್ಕು ವರ್ಷಗಳಿವೆ.
ವಿಹಗಃ ಸುಮುಖೋ ಯತ್ರ ಸುಪರ್ಣಸ್ಯಾತ್ಮಜಃ ಕಿಲ |
ಸ ವೈ ವಿಚಿಂತಯಾಮಾಸ ಸೌವರ್ಣಾನ್ ಪ್ರೇಕ್ಷ್ಯ ವಾಯಸಾನ್ ||12||
ಗರುಡನ ಮಗನಾದ ಸುಮುಖನು ಆ ಮೇರು ಪರ್ವತದಲ್ಲಿರುವ ಸುವರ್ಣಮಯವಾದ ಕಾಗೆಗಳನ್ನು ನೋಡಿ ಹೀಗೆ ಚಿಂತಿಸಿದನು.
ಮೇರುರುತ್ತಮಮಧ್ಯಾನಾಮಧಮಾನಾಂ ಚ ಪಕ್ಷಿಣಾಮ್ |
ಅವಿಶೇಷಕರೋ ಯಸ್ಮಾತ್ ತಸ್ಮಾದೇನಂ ತ್ಯಜಾಮ್ಯಹಮ್ ||13||
ಈ ಮೇರು ಪರ್ವತವು ಶ್ರೇಷ್ಠವಾದ, ಕನಿಷ್ಠವಾದ ಮತ್ತು ಮಧ್ಯಮ ವರ್ಗಕ್ಕೆ ಸೇರಿದ ಎಲ್ಲ ಪಕ್ಷಿಗಳಿಗೂ ಒಂದೇ ರೀತಿಯಾಗಿ ಆಶ್ರಯವಾಗಿದೆ. ಆದ್ದರಿಂದ ನಾನು ಇದನ್ನು ತ್ಯಜಿಸುತ್ತೇನೆ.

ತಸ್ಯಾದಿತ್ಯೋಽನುಪರ್ಯೇತಿ ಸತತಂ ಜ್ಯೋತಿಷಾಂ ಪತಿಃ |
ಚಂದ್ರಮಾಶ್ಚ ಸನಕ್ಷತ್ರೋ ವಾಯುಶ್ಚೈವ ಪ್ರದಕ್ಷಿಣಮ್ ॥14॥
ಜ್ಯೋತಿಶ್ಚಕ್ರಕ್ಕೆ ಅಧಿಪತಿಯಾದ ಸೂರ್ಯನೂ, ನಕ್ಷತ್ರಗಳಿಂದ ಕೂಡಿದ ಚಂದ್ರನೂ ಮತ್ತು ವಾಯುವೂ ಈ ಮೇರುಪರ್ವತಕ್ಕೆ ಪ್ರದಕ್ಷಿಣಾಕಾರದಲ್ಲಿ ಸಂಚರಿಸುತ್ತಾರೆ.
ಸ ಪರ್ವತೋ ಮಹಾರಾಜ ದಿವ್ಯಪುಷ್ಪಫಲಾನ್ವಿತಃ |
ಭವನೈರಾವೃತಃ ಸರ್ವೈರ್ಜಾಂಬೂನದಮಯೈಃ ಶುಭೈಃ ॥15॥
ಮಹಾರಾಜನೇ, ಆ ಮೇರುಪರ್ವತವು ದಿವ್ಯಪುಷ್ಪ-ಫಲಗಳಿಂದ ಭರಿತವಾಗಿದ್ದು ಸುವರ್ಣಮಯವಾದ ಮತ್ತು ಶುಭವಾದ ಅನೇಕ ಗೃಹಗಳಿಂದ ಕೂಡಿದೆ.
ತತ್ರ ದೇವಗಣಾ ರಾಜನ್ ಗಂಧರ್ವಾಸುರರಾಕ್ಷಸಾಃ |
ಅಪ್ಸರೋಗಣಸಂಯುಕ್ತಾಃ ಶೈಲೇ ಕ್ರೀಡಂತಿ ನಿತ್ಯಶಃ ॥16॥
ಎಲೈ ರಾಜನೇ, ಆ ಪರ್ವತದಲ್ಲಿ ದೇವತೆಗಳ ಸಮೂಹಗಳು, ಗಂಧರ್ವ-ಅಸುರ ಮತ್ತು ರಾಕ್ಷಸರು, ಅಪ್ಸರೆಯರ ಗಣಗಳ ಜೊತೆಯಲ್ಲಿ ಯಾವಾಗಲೂ ವಿಹರಿಸುತ್ತಾರೆ.
ತತ್ರ ಬ್ರಹ್ಮಾ ಚ ರುದ್ರಶ್ಚ ಶಕ್ರಶ್ಚಾಪಿ ಸುರೇಶ್ವರಃ |
ಸಮೇತ್ಯ ವಿವಿಧೈರ್ಯಜ್ಞೈರ್ಯಜಂತೇಽನೇಕದಕ್ಷಿಣೈಃ ॥17॥
ಬ್ರಹ್ಮದೇವರು, ರುದ್ರದೇವರು ಮತ್ತು ದೇವತೆಗಳ ಅಧಿಪತಿಯಾದ ಇಂದ್ರ ಇವರು ಅಲ್ಲಿಗೆ ಬಂದು ಅನೇಕ ದಕ್ಷಿಣೆಗಳಿಂದ ಕೂಡಿದ ವಿಧವಿಧವಾದ ಯಾಗಗಳನ್ನು ಮಾಡಿ ಭಗವಂತನನ್ನು ಆರಾಧಿಸುತ್ತಾರೆ.
ತುಂಬುರುರ್ನಾರದಶ್ಚೈವ ವಿಶ್ವಾವಸುರ್ಹಹಾ ಹುಹೂ |
ಅಭಿಗಮ್ಯಾಮರಶ್ರೇಷ್ಠಾಃ ಸ್ತವೈಃ ಸ್ತುನ್ವಂತಿ ಚಾಭಿಭೋ ॥18॥
ಎಲೈ ಶತ್ರುಗಳನ್ನು ಪರಾಭವಗೊಳಿಸುವವನೇ, ತುಂಬುರು, ನಾರದರು, ವಿಶ್ವಾವಸು, ಹಾಹಾ-ಹೂಹೂ ಇಂತಹ ಶ್ರೇಷ್ಠ ದೇವತೆಗಳು ಅಲ್ಲಿಗೆ ಬಂದು ಅನೇಕ ಸ್ತೋತ್ರಗಳಿಂದ ದೇವರನ್ನು ಸ್ತುತಿಸುತ್ತಾರೆ.
ಸಪ್ತರ್ಷಯೋ ಮಹಾತ್ಮಾನಃ ಕಶ್ಯಪಶ್ಚ ಪ್ರಜಾಪತಿಃ |
ತತ್ರ ಗಚ್ಛಂತಿ ಭದ್ರಂ ತೇ ಸದಾ ಪರ್ವಣಿಪರ್ವಣಿ ॥19॥
ನಿನಗೆ ಮಂಗಳವಾಗಲಿ. ಮಹಾತ್ಮರಾದ ಪ್ರಜಾಪತಿಗಳಾದ ಕಶ್ಯಪರೇ ಮೊದಲಾದ ಸಪ್ತರ್ಷಿಗಳು ಅಲ್ಲಿಗೆ ಪ್ರತಿಯೊಂದು ಪರ್ವಕಾಲದಲ್ಲಿಯೂ ಬರುತ್ತಾರೆ.
ತಸ್ಯೈವ ಮೂರ್ಧನ್ಯುಶನಾಃ ಕಾವ್ಯೋ ದೈತ್ಯೈರ್ಮಹೀಯತೇ |
ತಸ್ಯ ಹೀಮಾನಿ ರತ್ನಾನಿ ತಸ್ಯೇಮೇ ರತ್ನಪರ್ವತಾಃ ॥20॥
ಆ ಮೇರುಪರ್ವತದ ಮೇಲ್ಭಾಗದಲ್ಲಿ ಕವಿಗಳ ಪುತ್ರನಾದ ಶುಕ್ರನು ದೈತ್ಯರಿಂದ ಪೂಜಿಸಲ್ಪಡುತ್ತಾನೆ. ಕಣ್ಣಿಗೆ ಕಾಣುವ ರತ್ನಗಳೂ ಮತ್ತು ರತ್ನಪರ್ವತಗಳೆಲ್ಲವೂ ಆ ಶುಕ್ರಾಚಾರ್ಯರಿಗೆ ಸೇರಿದುದು.
ತಸ್ಮಾತ್ ಕುಬೇರೋ ಭಗವಾಂಶ್ಚತುರ್ಥಂ ಭಾಗಮಶ್ನುತೇ |
ತತಃ ಕಲಾಂಶಂ ವಿತ್ತಸ್ಯ ಮನುಷ್ಯೇಭ್ಯಃ ಪ್ರಯಚ್ಛತಿ ॥21॥
ಕುಬೇರನು ಶುಕ್ರಾಚಾರ್ಯರಿಗೆ ಸೇರಿದ ಆ ಸಂಪತ್ತಿನ ನಾಲ್ಕನೆಯ ಒಂದು ಭಾಗವನ್ನು ಸ್ವೀಕರಿಸಿ ಆ ಸಂಪತ್ತಿನ ಒಂದು ಅಲ್ಪಭಾಗವನ್ನು ಮನುಷ್ಯರಿಗೆ ಕೊಡುತ್ತಾನೆ.
ಪಾರ್ಶ್ವೇ ತಸ್ಯೋತ್ತರೇ ದಿವ್ಯಂ ಸರ್ವರ್ತುಕುಸುಮಂ ಶಿವಮ್ |
ಕರ್ಣಿಕಾರವನಂ ರಮ್ಯಂ ಶಿಲಾಜಾಲಸಮುದ್ಗತಮ್ ॥22॥
ಮೇರುಪರ್ವತದ ಉತ್ತರಭಾಗದಲ್ಲಿ ಎಲ್ಲ ಋತುಗಳಲ್ಲಿಯೂ ಪುಷ್ಪಭರಿತವಾದ ಮಂಗಳವಾದ ಮತ್ತು ದಿವ್ಯವಾದ, ಮನೋಹರವಾದ ಕರ್ಣಿಕಾರ ವೃಕ್ಷಗಳ ವನವು ಆ ಶಿಲಾಸಮೂಹಗಳ ಮಧ್ಯದಲ್ಲಿ ಎದ್ದುನಿಂತಿದೆ.
ತತ್ರ ಸಾಕ್ಷಾತ್ ಪಶುಪತಿರ್ದಿವ್ಯೈರ್ಭೂತೈಃ ಸಮಾವೃತಃ |
ಉಮಾಸಹಾಯೋ ಭಗವಾನ್ ರಮತೇ ಭೂತಭಾವನಃ ॥23॥
ಅಲ್ಲಿ ಭೂತಭಾವನರಾದ, ಭಗವಂತನಾದ ರುದ್ರದೇವರು ದಿವ್ಯವಾದ ಭೂತಗಣಗಳಿಂದಲೂ ಮತ್ತು ಪಾರ್ವತಿಯಿಂದಲೂ ಸಹಿತರಾಗಿ ವಿಹರಿಸುತ್ತಾರೆ.
ಕರ್ಣಿಕಾರಮಯೀಂ ಮಾಲಾಂ ಬಿಭ್ರತ್ ಪಾದಾವಲಂಬಿನೀಮ್ |
ತ್ರಿಭಿರ್ನೇತ್ರೈಃ ಕೃತೋದ್ಯೋತಸ್ತ್ರಿಭಿಃ ಸೂರ್ಯೈರಿವೋದಿತೈಃ ॥24॥
ಪಾದದವರೆಗೂ ಲಂಬಿಸಿರುವ ಕರ್ಣಿಕಾರ ಪುಷ್ಪಗಳ ಮಾಲೆಯನ್ನು ಧರಿಸಿ, ಉದಯಿಸಿದ ಸೂರ್ಯನಂತಿರುವ ಮೂರು ಕಣ್ಣುಗಳ ಪ್ರಕಾಶದಿಂದ ಆ ದೇಶವನ್ನೆಲ್ಲಾ ಬೆಳಗುತ್ತಾರೆ.
ತಮುಗ್ರತಪಸಃ ಸಿದ್ಧಾಃ ಸುವ್ರತಾಃ ಸತ್ಯವಾದಿನಃ |
ಪಶ್ಯಂತಿ ನ ಹಿ ದುರ್ವೃತ್ತೈಃ ಶಕ್ಯೋ ದ್ರಷ್ಟುಂ ಮಹೇಶ್ವರಃ ॥25॥
ಉಗ್ರತಪಸ್ವಿಗಳೂ, ಸತ್ಯವಾದಿಗಳೂ, ಒಳ್ಳೆಯ ವ್ರತಧಾರಿಗಳೂ ಆದ ಸಿದ್ಧರು ಆ ರುದ್ರದೇವರನ್ನು ದರ್ಶನ ಮಾಡುತ್ತಾರೆ. ದುರ್ನಡತೆಯುಳ್ಳವರು ಆ ಮಹೇಶ್ವರನನ್ನು ದರ್ಶನ ಮಾಡಲು ಸಾಧ್ಯವಿಲ್ಲ.
ತಸ್ಯ ಶೈಲಸ್ಯ ಶಿಖರಾತ್ ಕ್ಷೀರಧಾರಾ ನರೇಶ್ವರ |
ತ್ರಿಂಶದ್ ಬಾಹುಪರಿಗ್ರಾಹ್ಯಾ ಭೀಮನಿರ್ಘಾತನಿಸ್ವನಾ ॥26॥

ಪುಣ್ಯಾ ಪುಣ್ಯತಮೈರ್ಜುಷ್ಟಾ ಗಂಗಾ ಭಾಗೀರಥೀ ಶುಭಾ |
ಪತತ್ಯಜಸ್ರವೇಗೇನ ಹ್ರದೇ ಚಾಂದ್ರಮಸೇ ಶುಭೇ |
ತಯಾ ಹ್ಯುತ್ಪಾದಿತಃ ಪುಣ್ಯಃ ಸ ಹ್ರದಃ ಸಾಗರೋಪಮಃ ॥27॥
ಎಲೈ ನರೇಶ್ವರನೇ, ಆ ಮೇರು ಪರ್ವತದ ಶಿಖರದಿಂದ ಕ್ಷೀರಧಾರೆಯನ್ನು ಹೋಲುವ ಮೂವತ್ತು ಮಾರಿನಷ್ಟು ಅಗಲವಾದ, ಭಯಂಕರವಾದ, ಅಪ್ಪಳಿಸುವ ಶಬ್ದದಿಂದ ಕೂಡಿದ, ಮಹಾಪುಣ್ಯವಂತರಿಂದ ಸೇವಿತವಾದ, ಪವಿತ್ರವಾದ, ಮಂಗಳವಾದ, ಭಾಗೀರಥಿಯಾದ ಗಂಗೆಯು ಸತತವಾಗಿ ಮಹಾವೇಗದಿಂದ ಪವಿತ್ರವಾದ ಚಂದ್ರಸರೋವರದಲ್ಲಿ ಬೀಳುತ್ತಾಳೆ. ಸಾಗರದಂತಿರುವ ಪವಿತ್ರವಾದ ಆ ಚಂದ್ರಸರೋವರವು ಗಂಗೆಯ ಅಧಃಪತನದ ವೇಗದಿಂದಲೇ ಉಂಟು ಮಾಡಲ್ಪಟ್ಟಿದೆ.
ತಾಂ ಧಾರಯಾಮಾಸ ಪುರಾ ದುರ್ಧರಾಂ ಪರ್ವತೈರಪಿ |
ಶತಂ ವರ್ಷಸಹಸ್ರಾಣಾಂ ಶಿರಸಾ ವೈ ಮಹೇಶ್ವರಃ ॥28॥
ಯಾವ ಪರ್ವತವೂ ಧರಿಸಲು ಸಾಧ್ಯವಾಗದ ಆ ಗಂಗೆಯನ್ನು ಮಹೇಶ್ವರನು ತನ್ನ ಶಿರಸ್ಸಿನ ಮೇಲೆ ಒಂದು ಲಕ್ಷವರ್ಷಗಳ ಕಾಲದವರೆಗೆ ಧರಿಸಿದನು.
ಮೇರೋಸ್ತು ಪಶ್ಚಿಮೇ ಪಾರ್ಶ್ವೇ ಕೇತುಮಾಲೋ ಮಹೀಯತೇ |
ಜಂಬೂಷಂಡಶ್ಚ ತತ್ರೈವ ಸುಮಹಾನ್ ನಂದನೋಪಮಃ ॥29॥
ಮೇರುಪರ್ವತದ ಪಶ್ಚಿಮಭಾಗದಲ್ಲಿ ಕೇತುಮಾಲ ಎಂಬ ವರ್ಷವು ಶೋಭಿಸುತ್ತದೆ. ಅಲ್ಲಿಯೇ ನಂದನವನದಂತಿರುವ ಬಹಳ ದೊಡ್ಡದಾದ ಜಂಬೂವೃಕ್ಷವಿದೆ.
ಆಯುರ್ದಶ ಸಹಸ್ರಾಣಿ ವರ್ಷಾಣಾಂ ತತ್ರ ಭಾರತ |
ಸುವರ್ಣವರ್ಣಾಶ್ಚ ನರಾಃ ಸ್ತ್ರಿಯಶ್ಚಾಪ್ಸರಸೋಪಮಾಃ ॥30॥
ಎಲೈ ಭಾರತನೇ, ಆ ವರ್ಷದಲ್ಲಿ ವಾಸ ಮಾಡುವವರಿಗೆ ಹತ್ತು ಸಹಸ್ರ ವರ್ಷಗಳ ಆಯುಸ್ಸು ಇರುತ್ತದೆ. ಅಲ್ಲಿ ಪುರುಷರು ಸುವರ್ಣವರ್ಣದಿಂದ ಕೂಡಿರುತ್ತಾರೆ ಮತ್ತು ಸ್ತ್ರೀಯರು ಅಪ್ಸರೆಯರನ್ನು ಹೋಲುತ್ತಾರೆ.
ಅನಾಮಯಾ ವೀತಶೋಕಾ ನಿತ್ಯಂ ಮುದಿತಮಾನಸಾಃ |
ಜಾಯಂತೇ ಮಾನವಾಸ್ತತ್ರ ನಿಷ್ಟಪ್ತಕನಕಪ್ರಭಾಃ ॥31॥
ಅಲ್ಲಿ ವಾಸಿಸುವ ಮನುಷ್ಯರು ಯಾವ ರೋಗವಾಗಲೀ, ಶೋಕವಾಗಲೀ ಇಲ್ಲದೆ ನಿತ್ಯವೂ ಸಂತೋಷಗೊಂಡ ಮನಸ್ಸುಳ್ಳವರಾಗಿರುತ್ತಾರೆ. ಎಲ್ಲರೂ ಪುಟವಿಟ್ಟ ಚಿನ್ನದ ಕಾಂತಿಯನ್ನು ಹೊಂದಿದವರಾಗಿ ಜನಿಸುತ್ತಾರೆ.
ಗಂಧಮಾದನಶೃಂಗೇಷು ಕುಬೇರಃ ಸಹ ರಾಕ್ಷಸೈಃ |
ಸಂವೃತೋಽಪ್ಸರಸಾಂ ಸ್ಸೈರ್ಮೋದತೇ ಗುಹ್ಯಕಾಧಿಪಃ ॥32॥
ಗಂಧಮಾದನ ಪರ್ವತದ ಶಿಖರಗಳಲ್ಲಿ ಗುಹ್ಯಕಾಧಿಪತಿಯಾದ ಕುಬೇರನು ರಾಕ್ಷಸರಿಂದಲೂ ಮತ್ತು ಅಪ್ಸರೆಯರ ಗಣಗಳಿಂದಲೂ ಪರಿವೃತನಾಗಿ ವಿಹರಿಸುತ್ತಾನೆ.
ಗಂಧಮಾದನಪಾದೇಷು ಪರೇ ತ್ವಪರಗಂಡಿಕಾಃ |
ಏಕಾದಶ ಸಹಸ್ರಾಣಿ ವರ್ಷಾಣಾಂ ಪರಮಾಯುಷಃ ॥33॥
ಗಂಧಮಾದನ ಪರ್ವತದ ತಪ್ಪಲಿನಲ್ಲಿ (ಪಾದ ಪ್ರದೇಶಗಳಲ್ಲಿ) ಇನ್ನೂ ಅನೇಕ ಸಣ್ಣ-ಸಣ್ಣ ಪರ್ವತಗಳಿವೆ. ಅಲ್ಲಿ ವಾಸಿಸುವವರಿಗೆ ಹನ್ನೊಂದು ಸಾವಿರ ವರ್ಷಗಳು ಪರಮಾಯುಷ್ಯವಾಗಿರುತ್ತದೆ.
ತತ್ರ ಕೃಷ್ಣಾ ನರಾ ರಾಜಂಸ್ತೇಜೋಯುಕ್ತಾ ಮಹಾಬಲಾಃ |
ಸ್ತ್ರಿಯಶ್ಚೋತ್ಪಲಪತ್ರಾಭಾಃ ಸರ್ವಾಃ ಸುಪ್ರಿಯದರ್ಶನಾಃ ॥34॥
ಎಲೈ ರಾಜನೇ, ಅಲ್ಲಿ ಪುರುಷರು ಮಹಾಬಲದಿಂದ ಕೂಡಿ, ತೇಜೋಯುಕ್ತರಾಗಿ ಕಪ್ಪುಬಣ್ಣದಿಂದ ಕೂಡಿದವರಾಗಿರುತ್ತಾರೆ. ಸ್ತ್ರೀಯರೂ ಸಹ ಎಲ್ಲರೂ ನೋಡಲು ಮನೋಹರರಾಗಿದ್ದು, ನೈದಿಲೆಯ ಕಾಂತಿಯನ್ನು ಹೊಂದಿರುತ್ತಾರೆ.
ನೀಲಾತ್ ಪರತರಂ ಶ್ವೇತಂ ಶ್ವೇತಾದ್ಧೈರಣ್ಯಕಂ ಪರಮ್ |
ವರ್ಷಮೈರಾವತಂ ನಾಮ ತತಃ ಶೃಂಗವತಃ ಪರಮ್ ॥35॥
ನೀಲಪರ್ವತದ ಆಚೆಗೆ ಶ್ವೇತಪರ್ವತವಿದೆ. ಶ್ವೇತಪರ್ವತದ ಆಚೆಗೆ ಹಿರಣ್ಯಕ ವರ್ಷ ಮತ್ತು ಅಲ್ಲಿಂದಾಚೆಗೆ ಇರುವ ಶೃಂಗವಾನ್ ಪರ್ವತದ ಆಚೆಗೆ ಐರಾವತ ವರ್ಷವೂ ಇದೆ.
ಹಿರಣ್ಮಯಂ ಚ ಶ್ವೇತಾದ್ರೇಃ ಪರಂ ವರ್ಷಂ ನರಾಧಿಪ |
ಕುರುವರ್ಷಂ ತತೋ ರಾಜನ್ ಶೃಂಗವತ್ಪರ್ವತಾತ್ ಪರಮ್ ॥36॥
ಎಲೈ ರಾಜನೇ, ಶ್ವೇತಪರ್ವತದ ಆಚೆಗೆ ಹಿರಣ್ಮಯ ವರ್ಷವೂ ಮತ್ತು ಶೃಂಗವಾನ್ ಪರ್ವತದ ಆಚೆಗೆ ಕುರುವರ್ಷವೂ ಇದೆ.
ಧನುಃಸಂಸ್ಥೇ ಮಹಾರಾಜ ದ್ವೇ ವರ್ಷೇ ದಕ್ಷಿಣೋತ್ತರೇ |
ಇಲಾವೃತಂ ಮಧ್ಯಮಂ ತು ಪಂಚ ವರ್ಷಾಣಿ ಚೈವ ಹ ॥37॥
ಎಲೈ ಮಹಾರಾಜನೇ, ಮಧ್ಯದಲ್ಲಿರುವ ಇಲಾವೃತ ಖಂಡಕ್ಕೆ ದಕ್ಷಿಣ-ಉತ್ತರದಲ್ಲಿರುವ ಎರಡು ವರ್ಷಗಳು ಮತ್ತು ಉಳಿದ ಐದು ವರ್ಷಗಳು ಎಲ್ಲವೂ ಧನುಸ್ಸಿನ ಆಕಾರದಲ್ಲಿವೆ.
ಉತ್ತರೋತ್ತರಮೇತೇಭ್ಯೋ ವರ್ಷಮುದ್ರಿಚ್ಯತೇ ಗುಣೈಃ |
ಆಯುಷ್ಪ್ರಮಾಣಮಾರೋಗ್ಯಂ ಧರ್ಮತಃ ಕಾಮತೋಽರ್ಥತಃ ॥38॥
ನಾವು ಇವುಗಳಿಂದ ಉತ್ತರಕ್ಕೆ ಹೋದಂತೆ ಈ ವರ್ಷಗಳು ಗುಣಗಳಿಂದ ಅಧಿಕವಾಗುತ್ತವೆ. ಅಲ್ಲಿರುವ ಜೀವರ ಆಯುಷ್ಪ್ರಮಾಣವೂ, ಆರೋಗ್ಯವೂ, ಧರ್ಮಾರ್ಥ- ಕಾಮಗಳೂ ಎಲ್ಲವೂ ಅಭಿವೃದ್ಧಿಯನ್ನು ಹೊಂದುತ್ತವೆ.

ಸಮನ್ವಿತಾನಿ ಭೂತಾನಿ ತೇಷು ವರ್ಷೇಷು ಭಾರತ |
ಏವಮೇಷಾ ಮಹಾರಾಜ ಪರ್ವತೈಃ ಪೃಥಿವೀ ಚಿತಾ ॥39॥
ಎಲೈ ಭಾರತನೇ, ಆ ಎಲ್ಲ ವರ್ಷಗಳಲ್ಲಿಯೂ ಅನೇಕ ವಿಧವಾದ ಜೀವರಿದ್ದಾರೆ. ಎಲೈ ಮಹಾರಾಜನೇ, ಹೀಗೆ ಈ ಭೂಮಿಯು ಪರ್ವತಗಳಿಂದ ತುಂಬಿದೆ.
ಹೇಮಕೂಟಸ್ತು ಸುಮಹಾನ್ ಕೈಲಾಸೋ ನಾಮ ಪರ್ವತಃ |
ತತ್ರ ವೈಶ್ರವಣೋ ರಾಜಾ ಗುಹ್ಯಕೈಃ ಸಹ ಮೋದತೇ ॥40॥
ಹೇಮಕೂಟ ಎಂಬುದು ದೊಡ್ಡ ಪರ್ವತ. ಅದಕ್ಕೆ ಕೈಲಾಸವೆಂದೂ ಹೆಸರಿದೆ. ಅಲ್ಲಿ ಗುಹ್ಯಕರ ಅಧಿಪತಿಯಾದ ಕುಬೇರನು ಗುಹ್ಯಕರ ಜೊತೆಯಲ್ಲಿ ವಿಹರಿಸುತ್ತಾನೆ.
ತತ್ರ ದೇವೋ ಮಹಾದೇವೋ ನಿತ್ಯಮಾಸ್ತೇ ಸಹೋಮಯಾ |
ಚಿತ್ರೇ ಶಿಲಾತಳೇ ರಮ್ಯೇ ದೇವರ್ಷಿಗಣಪೂಜಿತಃ ॥41॥
ಅಲ್ಲಿ ಮಹಾತ್ಮನಾದ, ದೇವದೇವನಾದ ಮಹಾದೇವನು ನಿತ್ಯವೂ ಪಾರ್ವತಿಯ ಜೊತೆಯಲ್ಲಿ ದೇವರ್ಷಿಗಳ ಗಣಗಳಿಂದ ಪೂಜಿತನಾಗಿ ಮನೋಹರವಾದ ಶಿಲಾತಳದಲ್ಲಿ ವಾಸಿಸುತ್ತಾನೆ.
ಅಸ್ತ್ಯುತ್ತರೇಣ ಕೈಲಾಸಂ ಮೈನಾಕಂ ಪರ್ವತಂ ಪ್ರತಿ |
ಹಿರಣ್ಯಶೃಂಗಃ ಸುಮಹಾನ್ ದಿವ್ಯೋ ಮಣಿಮಯೋ ಗಿರಿಃ ॥42॥
ಕೈಲಾಸ ಪರ್ವತದ ಉತ್ತರದಲ್ಲಿ ಮೈನಾಕ ಪರ್ವತದ ಕಡೆಗೆ ಹಿರಣ್ಯಮಯವಾದ ಶಿಖರಗಳನ್ನು ಹೊಂದಿದ, ಮಣಿಮಯವಾದ, ದಿವ್ಯವಾದ ಹಿರಣ್ಯಶೃಂಗ ಪರ್ವತವಿದೆ.
ತಸ್ಯ ಪಾರ್ಶ್ವೇ ಮಹದ್ ದಿವ್ಯಂ ಶುಭಂ ಕಾಂಚನವಾಲುಕಮ್ |
ರಮ್ಯಂ ಬಿಂದುಸರೋ ನಾಮ ಯತ್ರ ರಾಜಾ ಭಗೀರಥಃ |
ದೃಷ್ಟ್ವಾ ಭಾಗೀರಥೀಂ ಗಂಗಾಮುವಾಸ ಬಹುಲಾಃ ಸಮಾಃ ॥43॥
ಆ ಪರ್ವತದ ಪಾರ್ಶ್ವದಲ್ಲಿ ಚಿನ್ನದ ಕಣಗಳಂತಿರುವ ಮಣ್ಣುಗಳನ್ನು ಹೊಂದಿದ, ದಿವ್ಯವೂ, ಶುಭವೂ, ಮನೋಹರವೂ ಆದ ದೊಡ್ಡ ಬಿಂದು ಸರೋವರವಿದೆ. ಅಲ್ಲಿ ಭಗೀರಥ ರಾಜನು ಭಾಗೀರಥಿಯನ್ನು ನೋಡಿ (ನೋಡಲು) ಅನೇಕ ವರ್ಷಗಳವರೆಗೆ ವಾಸ ಮಾಡಿದನು (ತಪಸ್ಸನ್ನು ಆಚರಿಸುತ್ತಾ ವಾಸ ಮಾಡಿದನು).
ಯೂಪಾ ಮಣಿಮಯಾಸ್ತತ್ರ ಚೈತ್ಯಾಶ್ಚಾಪಿ ಹಿರಣ್ಮಯಾಃ |
ತತ್ರೇಷ್ಟ್ವಾ ತು ಗತಃ ಸಿದ್ಧಿಂ ಸಹಸ್ರಾಕ್ಷೋ ಮಹಾಯಶಾಃ ॥44॥
ಆ ಬಿಂದುಸರೋವರದ ಸಮೀಪದಲ್ಲಿ ಇರುವ ಯೂಪಗಳು ಮಣಿಮಯವಾದವುಗಳು. ಪೂಜ್ಯವಾದ ವೃಕ್ಷಗಳೆಲ್ಲವೂ ಹಿರಣ್ಮಯವಾದವು. ಮಹಾಕೀರ್ತಿಶಾಲಿಯಾದ ಸಹಸ್ರಾಕ್ಷನಾದ ಇಂದ್ರನು ಅಲ್ಲಿ ಯಾಗವನ್ನು ಮಾಡಿ ಸಿದ್ಧಿಯನ್ನು ಪಡೆದನು.
ಸೃಷ್ಟ್ವಾ ಭೂತಪತಿರ್ಯತ್ರ ಸರ್ವಲೋಕಾನ್ ಸನಾತನಃ |
ಉಪಾಸ್ಯತೇ ತಿಗ್ಮತೇಜಾ ವೃತೋ ಭೂತೈಃ ಸಮಾಗತೈಃ |
ನರನಾರಾಯಣೌ ಬ್ರಹ್ಮಾ ಮನುಃ ಸ್ಥಾಣುಶ್ಚ ಪಂಚಮಃ ॥45॥
ಅಲ್ಲಿ ಭೂತಭಾವನನಾದ ಶಂಕರನು ಎಲ್ಲ ಲೋಕಗಳನ್ನೂ ಸೃಷ್ಟಿ ಮಾಡಿ ಸನಾತನನೂ, ಮಹಾಸಾಮರ್ಥ್ಯವುಳ್ಳವನೂ ಆದ ಅವನು ಅಲ್ಲಿಗೆ ಬಂದ ಭೂತಗಣಗಳಿಂದ ಉಪಾಸನೆ ಮಾಡಲ್ಪಡುತ್ತಾನೆ. ಅಲ್ಲಿ ನರ-ನಾರಾಯಣರೂ, ಬ್ರಹ್ಮದೇವರೂ, ಮನುವೂ ಮತ್ತು ಐದನೆಯವರಾದ ರುದ್ರದೇವರೂ ಇರುತ್ತಾರೆ.
ತತ್ರ ತ್ರಿಪಥಗಾ ದೇವೀ ಪ್ರಥಮಂ ತು ಪ್ರತಿಷ್ಠಿತಾ |
ಬ್ರಹ್ಮಲೋಕಾದಪಕ್ರಾಂತಾ ಸಪ್ತಧಾ ಪ್ರತಿಪದ್ಯತೇ ॥46॥
ತ್ರಿಪಥಗಾಮಿನಿಯಾದ ಗಂಗೆಯು ಬ್ರಹ್ಮಲೋಕದಿಂದ ಹೊರಟು ಅಲ್ಲಿಗೆ ಬಂದು ಮೊದಲು ಪ್ರತಿಷ್ಠಿತಳಾಗಿ ಅಲ್ಲಿಂದ ಏಳು ಕವಲುಗಳಾಗಿ ಹರಿಯುತ್ತಾಳೆ.
ವಸ್ವೋಕಸಾರಾ ನಳಿನೀ ಪಾವನಾ ಚ ಸರಸ್ವತೀ |
ಜಾಂಬೂನದೀ ಚ ಸೀತಾ ಚ ಗಂಗಾ ಸಿಂಧುಶ್ಚ ಸಪ್ತಮೀ ॥47॥
ವಸ್ವೋಕಸಾರಾ, ನಳಿನೀ, ಪವಿತ್ರವಾದ ಸರಸ್ವತೀ, ಜಂಬೂನದೀ, ಸೀತಾ, ಗಂಗಾ ಮತ್ತು ಸಿಂಧು ಎಂಬುವೆ ಆ ಏಳು ಕವಲುಗಳು.
ಅಚಿಂತ್ಯಾ ದಿವ್ಯಸಂಕಲ್ಪಾ ಪ್ರಭೋರೇಷೈವ ಸಂವಿಧಿಃ |
ಉಪಾಸತೇ ಯತ್ರ ಸತ್ರಂ ಸಹಸ್ರಯುಗಪರ್ಯಯೇ ॥48॥
ಆ ಗಂಗೆಯ ಸಾಮರ್ಥ್ಯವು ಅಚಿಂತ್ಯವಾದುದು ಮತ್ತು ಅವಳ ಸಂಕಲ್ಪವು ದಿವ್ಯವಾದುದು. ಇದು ಪ್ರಭುವಾದ ನಾರಾಯಣನ ಆಜ್ಞೆ. ಸಹಸ್ರಯುಗಗಳು ಮುಗಿಯುವಾಗ ಅಲ್ಲಿ ಬ್ರಹ್ಮದೇವರು ಸತ್ರಯಾಗವನ್ನು ಮಾಡುತ್ತಾರೆ.
ದೃಶ್ಯಾದೃಶ್ಯಾ ಚ ಭವತಿ ತತ್ರ ತತ್ರ ಸರಸ್ವತೀ |
ಏತಾ ದಿವ್ಯಾಃ ಸಪ್ತ ಗಂಗಾಸ್ತ್ರಿಷು ಲೋಕೇಷು ವಿಶ್ರುತಾಃ ॥49॥
ಅವುಗಳಲ್ಲಿ ಆ ಸರಸ್ವತಿಯು ಕೆಲವೊಮ್ಮೆ ದೃಶ್ಯಳಾಗಿ, ಕೆಲವೊಮ್ಮೆ ಅದೃಶ್ಯಳಾಗಿ ಹರಿಯುತ್ತಾಳೆ. ಈ ಸಪ್ತಗಂಗೆಗಳು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿವೆ.
ರಕ್ಷಾಂಸಿ ವೈ ಹಿಮವತಿ ಹೇಮಕೂಟೇ ತು ಗುಹ್ಯಕಾಃ |
ಸರ್ಪಾ ನಾಗಾಶ್ಚ ನಿಷಧೇ ಗೋಕರ್ಣೇ ಚ ತಪೋಧನಾಃ ॥50॥
ಹಿಮಾಲಯ ಪರ್ವತದಲ್ಲಿ ರಾಕ್ಷಸರೂ, ಹೇಮಕೂಟ ಪರ್ವತದಲ್ಲಿ ಗುಹ್ಯಕರೂ, ನಿಷಧ ಪರ್ವತದಲ್ಲಿ ಸರ್ಪ ಮತ್ತು ನಾಗಗಳೂ ಮತ್ತು

ಗೋಕರ್ಣದಂತಿರುವ ಗಂಧಮಾದನ ಪರ್ವತದಲ್ಲಿ ತಪೋಧನರೂ ವಾಸಿಸುತ್ತಾರೆ.
ದೇವಾಸುರಾಣಾಂ ಚ ಗೃಹಂ ಶ್ವೇತಃ ಪರ್ವತ ಉಚ್ಯತೇ |
ಗಂಧರ್ವಾ ನಿಷಧೇ ಶೈಲೇ ನೀಲೇ ಬ್ರಹ್ಮರ್ಷಯೋ ನೃಪ |
ಶೃಂಗವಾಂಸ್ತು ಮಹಾರಾಜ ಪಿತೄಣಾಂ ಪ್ರತಿಸಂಚರಃ ॥51॥
ಶ್ವೇತಪರ್ವತವು ದೇವತೆಗಳ ಮತ್ತು ಅಸುರರ ವಾಸಸ್ಥಾನವೆಂದು ಹೇಳಲ್ಪಡುತ್ತದೆ. ಎಲೈ ರಾಜನೇ, ನಿಷಧ ಪರ್ವತದಲ್ಲಿ ಗಂಧರ್ವರೂ, ನೀಲಪರ್ವತದಲ್ಲಿ ಬ್ರಹ್ಮರ್ಷಿಗಳೂ ವಾಸಿಸುತ್ತಾರೆ. ಮಹಾರಾಜನೇ, ಶೃಂಗವಾನ್ ಪರ್ವತವಾದರೂ ಪಿತೃಗಳ ಸಂಚಾರ ಮತ್ತು ವಿಹಾರದಿಂದ ಕೂಡಿದುದಾಗಿದೆ.
ಇತ್ಯೇತಾನಿ ಮಹಾರಾಜ ಸಪ್ತ ವರ್ಷಾಣಿ ಭಾಗಶಃ |
ಭೂತಾನ್ಯುಪನಿವಿಷ್ಟಾನಿ ಗತಿಮಂತಿ ಧ್ರುವಾಣಿ ಚ ॥52॥
ಎಲೈ ಮಹಾರಾಜನೇ, ಇವು ಏಳು ವರ್ಷಗಳ ಭಾಗಗಳು. ಇವುಗಳಲ್ಲಿ ಸ್ಥಾವರ ಮತ್ತು ಜಂಗಮಾತ್ಮಕವಾದ ಅನೇಕ ಜೀವರು ತುಂಬಿದ್ದಾರೆ.
॥ ॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಮೋಽಧ್ಯಾಯಃ ॥
॥ ಜಂಬೂಖಂಡನಿರ್ಮಾಣಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ಸಂಜಯನಿಂದ ಶಶಾಕೃತಿಯ ವಿವರಣೆ. ಮೇರುವಿನ ಉತ್ತರದಲ್ಲಿರುವ ಉತ್ತರವರ್ಷದ ಮತ್ತು ಪೂರ್ವದಲ್ಲಿರುವ ಭದ್ರಾಶ್ವವರ್ಷದ ವಿವರಣೆ.
ವೈಶಂಪಾಯನಃ
ತೇಷಾಮೃದ್ಧಿರ್ಬಹುವಿಧಾ ದೃಶ್ಯತೇ ದೈವಮಾನುಷೀ |
ಅಶಕ್ಯಾ ಪರಿಸಂಖ್ಯಾತುಂ ಶ್ರದ್ಧೇಯಾ ತು ಬುಭೂಷತಾ ॥1॥
ವೈಶಂಪಾಯನ ಈ ವರ್ಷದಲ್ಲಿ ವಾಸಿಸುವವರಿಗೆ ದೈವಿಕವಾದ ಮತ್ತು ಮಾನಸಿಕವಾದ ಅನೇಕ ವಿಧವಾದ ಸಂಪತ್ತುಗಳು ಕಂಡುಬರುತ್ತವೆ. ಅವುಗಳನ್ನು ಎಣಿಸಲು ಸಾಧ್ಯವಿಲ್ಲ. ಆದರೆ ಶ್ರೇಯಸ್ಕಾಮಿಗಳಾದವರು ನಂಬಬೇಕಷ್ಟೆ!
ಯಾಂ ತು ಪೃಚ್ಛಸಿ ಮಾಂ(ಮಾ) ರಾಜನ್ ದಿವ್ಯಾಮೇತಾಂ ಶಶಾಕೃತಿಮ್ |
ಪಾರ್ಶ್ವೇ ಶಶಸ್ಯ ದ್ವೇ ವರ್ಷೇ ಉಭಯೇ ದಕ್ಷಿಣೋತ್ತರೇ |
ಕರ್ಣೌ ತು ನಾಗದ್ವೀಪಂ ಚ ಕಶ್ಯಪದ್ವೀಪಮೇವ ಚ ॥2॥
ಎಲೈ ರಾಜನೇ, ದಿವ್ಯವಾದ ಶಶಾಕೃತಿಯನ್ನು ಏನು ಕೇಳುತ್ತಿದ್ದಿಯೋ, ಅದನ್ನು ಹೇಳುತ್ತೇನೆ. ಮೇರುಪರ್ವತದ ಎರಡು ಪಕ್ಕದಲ್ಲಿರುವ ದಕ್ಷಿಣೋತ್ತರವಾಗಿ ಹರಡಿರುವ ಎರಡು ಭಾಗಗಳು ಮೊಲದ ಎರಡು ಪಾರ್ಶ್ವಗಳು. ಉನ್ನತವಾದ ನಾಗದ್ವೀಪ ಮತ್ತು ಕಶ್ಯಪದ್ವೀಪಗಳು ಮೊಲದ ಕಿವಿಗಳು.
ಜಂಬೂದ್ವೀಪಸ್ಯ ಸರ್ವಸ್ಯ ಆಕೃತಿಂ ಚಂದ್ರಮಂಡಲೇ |
ಸ ವೈ ಸುದರ್ಶನದ್ವೀಪೋ ದೃಶ್ಯತೇ ಶಶವದ್ ವಿಧೌ ॥3॥
ಸಮಗ್ರವಾದ ಜಂಬೂದ್ವೀಪದ ಆಕೃತಿಯು ಚಂದ್ರಮಂಡಲದಲ್ಲಿ ಕಂಡು ಬರುತ್ತದೆ. ಸುದರ್ಶನದ್ವೀಪವೆಂದು ಕರೆಯಲ್ಪಡುವ ಅದೇ ಜಂಬೂದ್ವೀಪವು ಚಂದ್ರನಲ್ಲಿ ಪ್ರತಿಫಲಿತವಾಗಿ ಮೊಲದಂತೆ ಕಂಡುಬರುತ್ತದೆ.
ತ್ರಿಸ್ರವರ್ಣಃ ಶಿರೋ ರಾಜನ್ ಶ್ರೀಮಾನ್ ಮಲಯಪರ್ವತಃ |
ಏತದ್ ದ್ವಿತೀಯಂ ದ್ವೀಪಸ್ಯ ದೃಶ್ಯತೇ ಶಶಸಂಸ್ಥಿತಮ್ ॥4॥
ಎಲೈ ರಾಜನೇ, ಮೂರುವರ್ಣಗಳ ಶಿಖರಗಳಿಂದ ಕೂಡಿದ, ಸಂಪದ್ಯುಕ್ತವಾದ ಮಲಯ ಪರ್ವತವು ಜಂಬೂದ್ವೀಪದಲ್ಲಿರುವ ಎರಡನೆಯ ಮೊಲದ ಆಕೃತಿ. ಇದೂ ಸಹ ಚಂದ್ರನಲ್ಲಿ ಕಾಣುತ್ತದೆ.
ಧೃತರಾಷ್ಟ್ರಃ
ಮೇರೋರಥೋತ್ತರಂ ಪಾರ್ಶ್ವಂ ಪೂರ್ವಂ ಚಾಚಕ್ಷ್ವ ಸಂಜಯ |
ನಿಖಿಲೇನ ಮಹಾಬುದ್ಧೇ ಮಾಲ್ಯವಂತಂ ಚ ಪರ್ವತಮ್ ॥5॥
ಧೃತರಾಷ್ಟ್ರ ಎಲೈ ಸಂಜಯನೇ, ಮೇರುವಿನ ಉತ್ತರಪಾರ್ಶ್ವದಲ್ಲಿರುವ ಮತ್ತು ಪೂರ್ವದಲ್ಲಿರುವ ವರ್ಷಗಳನ್ನು ಸಮಗ್ರವಾಗಿ ಹೇಳು. ಎಲೈ ಮಹಾಬುದ್ಧಿಯುಳ್ಳವನೇ, ಮಾಲ್ಯವಂತ ಪರ್ವತವನ್ನೂ ವರ್ಣಿಸು.
ಸಂಜಯಃ
ದಕ್ಷಿಣೇನ ತು ನೀಲಸ್ಯ ಮೇರೋಃ ಪಾರ್ಶ್ವೇ ತಥೋತ್ತರೇ |
ಉತ್ತರಾಃ ಕುರವೋ ರಾಜನ್ ಪುಣ್ಯಾಃ ಸಿದ್ಧನಿಷೇವಿತಾಃ ॥6॥
ಸಂಜಯ ಎಲೈ ರಾಜನೇ, ನೀಲಪರ್ವತದ ದಕ್ಷಿಣ ಭಾಗದಲ್ಲಿ ಮತ್ತು ಮೇರುವಿನ ಉತ್ತರಭಾಗದಲ್ಲಿ ಉತ್ತರಕುರು ಎಂಬ ವರ್ಷವಿದೆ. ಅದು ಪವಿತ್ರವಾದುದು ಮತ್ತು ಸಿದ್ಧರಿಂದ ಸೇವಿತವಾದುದು.
ತತ್ರ ವೃಕ್ಷಾ ಮಧುಫಲಾ ನಿತ್ಯಪುಷ್ಪಫಲೋಪಗಾಃ |
ಪುಷ್ಪಾಣಿ ಚ ಸುಗಂಧೀನಿ ರಸವಂತಿ ಫಲಾನಿ ಚ ॥7॥
ಅಲ್ಲಿ ವೃಕ್ಷಗಳು ಮಧುರವಾದ ಫಲಗಳನ್ನು ಕೊಡುತ್ತವೆ. ಯಾವಾಗಲೂ ಪುಷ್ಪ-ಫಲ ಭರಿತವಾಗಿರುತ್ತವೆ. ಪುಷ್ಪಗಳು

ಸುಗಂಧಯುಕ್ತವಾಗಿರುತ್ತವೆ ಮತ್ತು ಫಲಗಳು ಒಳ್ಳೆಯ ರಸದಿಂದ ಕೂಡಿರುತ್ತವೆ.
ಸರ್ವಕಾಮಫಲಾಸ್ತತ್ರ ಕೇಚಿದ್ ವೃಕ್ಷಾ ಜನಾಧಿಪ |
ಅಪರೇ ಕ್ಷೀರಿಣೋ ನಾಮ ವೃಕ್ಷಾಸ್ತತ್ರ ನರಾಧಿಪ ||8||
ಎಲ್ಲೈ ಜನಾಧಿಪನೇ, ಅಲ್ಲಿ ಕೆಲವು ವೃಕ್ಷಗಳು ಕೇಳಿದುದನ್ನೆಲ್ಲ ಫಲರೂಪವಾಗಿ ಕೊಡುತ್ತವೆ. ಎಲ್ಲೈ ನರಾಧಿಪನೇ, ಅಲ್ಲಿ ಕ್ಷೀರಿಗಳು ಎಂಬ ಬೇರೆ ಮರಗಳಿವೆ.
ಯೇ ಕ್ಷರಂತಿ ಸದಾ ಕ್ಷೀರಂ ಷಡ್ರಸಂ ಹ್ಯಮೃತೋಪಮಮ್ |
ವಸ್ತ್ರಾಣಿ ಚ ಪ್ರಸೂಯಂತೇ ಫಲೇಷ್ವಾಭರಣಾನಿ ಚ ||9||
ಅವು ಆರು ರಸಗಳಿಂದ ಕೂಡಿದ, ಅಮೃತಕ್ಕೆ ಸಮಾನವಾದ ಕ್ಷೀರವನ್ನು ಯಾವಾಗಲೂ ಸುರಿಸುತ್ತವೆ, ವಸ್ತ್ರಗಳನ್ನೂ ಕೊಡುತ್ತವೆ ಮತ್ತು ಆ ವೃಕ್ಷಗಳ ಫಲಗಳಲ್ಲಿ ಆಭರಣಗಳೂ ಇರುತ್ತವೆ.
ಸರ್ವಂ ಮಣಿಮಯೀ ಭೂಮಿಃ ಸೂಕ್ಷ್ಮಕಾಂಚನವಾಲುಕಾ |
ಸರ್ವತ್ರ ಸುಖಸಂಸ್ಪರ್ಶಾ ನಿಷ್ಪಂಕಾ ಚ ಜನಾಧಿಪ ||10||
ಎಲ್ಲೈ ಜನಾಧಿಪನೇ, ಅಲ್ಲಿಯ ಭೂಮಿ ಎಲ್ಲವೂ ಮಣಿಮಯವಾಗಿದ್ದು, ಚಿನ್ನದ ಕಣಗಳ ರೂಪವಾದ ಮರಳಿನಿಂದ ಕೂಡಿರುತ್ತದೆ. ಎಲ್ಲ ಕಡೆಯಲ್ಲಿಯೂ ಸುಖಸ್ಪರ್ಶವುಳ್ಳದ್ದಾಗಿರುತ್ತದೆ ಮತ್ತು ಎಲ್ಲಿಯೂ ಕಶ್ಮಲವಿರುವುದಿಲ್ಲ.
ಮಣಿರತ್ನನಿಭಂ ರಮ್ಯಂ ವಜ್ರವೈಡೂರ್ಯಸನ್ನಿಭಮ್ |
ಭೂಭಾಗೋ ದೃಶ್ಯತೇ ತತ್ರ ಪದ್ಮರಾಗಸಮಪ್ರಭಮ್ ||11||
ಅಲ್ಲಿ ಕೆಲವು ಕಡೆ ಮಣಿರತ್ನಮಯವಾದ, ಮನೋಹರವಾದ, ಕೆಲವು ಕಡೆ ವಜ್ರವೈಡೂರ್ಯ ಕಾಂತಿಯುಳ್ಳ ಅಥವಾ ಕೆಲವು ಕಡೆ ಪದ್ಮರಾಗದ ಕಾಂತಿಯುಳ್ಳ ಭೂಪ್ರದೇಶಗಳು ಕಂಡುಬರುತ್ತವೆ.
ದೇವಲೋಕಚ್ಯುತಾಃ ಸರ್ವೇ ಜಾಯಂತೇ ತತ್ರ ಮಾನವಾಃ |
ತುಲ್ಯರೂಪಗುಣೋಪೇತಾಃ ಸಮೇಷು ವಿಷಮೇಷು ಚ ||12||
ದೇವಲೋಕದಿಂದ ಚ್ಯುತರಾದ ಎಲ್ಲ ಮನುಷ್ಯರೂ ಅಲ್ಲಿ ಜನಿಸುತ್ತಾರೆ. ಸಮೃದ್ಧಿ ಇರಲಿ ಅಥವಾ ಇಲ್ಲದಿರಲಿ, ಎಲ್ಲರೂ ಸಮಾನರೂಪಗಳಿಂದ ಕೂಡಿರುತ್ತಾರೆ.
ಮಿಥುನಾನಿ ಚ ಜಾಯಂತೇ ಸ್ತ್ರಿಯಶ್ಚಾಪ್ಸರಸೋಪಮಾಃ |
ತೇಷಾಂ ತೇ ಕ್ಷೀರಿಣಾಂ ಕ್ಷೀರಂ ಪಿಬಂತ್ಯಮೃತಸನ್ನಿಭಮ್ ||13||
ಅಲ್ಲಿ ಅವಳಿ ಮಕ್ಕಳು ಜನಿಸುತ್ತವೆ. ಸ್ತ್ರೀಯರು ಅಪ್ಸರೆಯರಂತೆ ಇರುತ್ತಾರೆ. ಅವರು ಆ ಕ್ಷೀರಿ ವೃಕ್ಷಗಳ ಅಮೃತಕ್ಕೆ ಸಮಾನವಾದ ಕ್ಷೀರವನ್ನು ಪಾನ ಮಾಡುತ್ತಾರೆ.
ಮಿಥುನಂ ಜಾಯಮಾನಂ ವೈ ಸಮಂ ತಚ್ಚ ಪ್ರವರ್ಧತೇ |
ತುಲ್ಯರೂಪಗುಣೋಪೇತಂ ಸಮವೇಷಂ ತಥೈವ ಚ |
ಏಕೈಕಮನುರಕ್ತಂ ಚ ಚಕ್ರವಾಕಸಮಂ ವಿಭೋ ||14||
ಹುಟ್ಟುವ ಅವಳಿ ಮಕ್ಕಳು ಒಂದೇ ರೀತಿಯಾಗಿ ಬೆಳೆಯುತ್ತಾರೆ. ಸಮಾನವಾದ ಗುಣ-ರೂಪಗಳನ್ನೂ, ಸಮಾನವಾದ ವೇಷವನ್ನೂ ಹೊಂದಿರುತ್ತಾರೆ. ಎಲ್ಲೈ ವಿಭುವೇ, ಅವರು ಚಕ್ರವಾಕ ಪಕ್ಷಿಗಳಂತೆ ಒಬ್ಬರಲ್ಲೊಬ್ಬರು ಪ್ರೀತಿಯನ್ನು ಹೊಂದಿರುತ್ತಾರೆ.
ನಿರಾಮಯಾ ವೀತಶೋಕಾ ನಿತ್ಯಂ ಮುದಿತಮಾನಸಾಃ |
ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ |
ಜೀವಂತಿ ತೇ ಮಹಾರಾಜ ನ ಚಾನ್ಯೋನ್ಯಂ ಜಹತ್ಯುತ ||15||
ಜನರಿಗೆ ಯಾವ ರೋಗಗಳಾಗಲೀ ಅಥವಾ ಶೋಕವಾಗಲೀ ಇರುವುದಿಲ್ಲ. ನಿತ್ಯವೂ ಸಂತೋಷಗೊಂಡ ಮನಸ್ಸನ್ನು ಹೊಂದಿರುತ್ತಾರೆ. ಎಲ್ಲೈ ಮಹಾರಾಜನೇ, ಅವರು ಹನ್ನೊಂದು ಸಾವಿರ ವರ್ಷಗಳ ಕಾಲ ಜೀವಿಸುತ್ತಾರೆ ಮತ್ತು ಒಬ್ಬರನ್ನೊಬ್ಬರು ಬಿಡುವುದಿಲ್ಲ.
ಭಾರುಂಡಾ ನಾಮ ಶಕುನಾಸ್ತೀಕ್ಷ್ಣತುಂಡಾ ಮಹಾಬಲಾಃ |
ತೇ ನಿರ್ಹರಂತಿ ಹಿ ಮೃತಾನ್ ದರೀಷು ಪ್ರಕ್ಷಿಪಂತಿ ಚ ||16||
ಭಾರುಂಡ ಎಂಬ ಹೆಸರಿನ ಮಹಾಬಲಿಷ್ಠವಾದ ಮತ್ತು ತೀಕ್ಷ್ಣವಾದ ಕೊಕ್ಕುಳ್ಳ ಪಕ್ಷಿಗಳು ಅಲ್ಲಿ ಮೃತರನ್ನು ಎತ್ತಿಕೊಂಡು ಹೋಗಿ ಗುಹೆಗಳಲ್ಲಿ ಎಸೆಯುತ್ತವೆ.
ಉತ್ತರಾಃ ಕುರವೋ ರಾಜನ್ ವ್ಯಾಖ್ಯಾತಾಸ್ತೇ ಸಮಾಸತಃ |
ಮೇರೋಃ ಪಾರ್ಶ್ವಮಹಂ ಪೂರ್ವಂ ವಕ್ಷ್ಯಾಮ್ಯಥ ಯಥಾತಥಮ್ ||
ಎಲ್ಲೈ ರಾಜನೇ, ನಿನಗೆ ಉತ್ತರ ಕುರುವರ್ಷವನ್ನು ಸಂಕ್ಷೇಪವಾಗಿ ವರ್ಣಿಸಿದ್ದೇನೆ. ಮೇರುವಿನ ಪೂರ್ವದಲ್ಲಿರುವ ವರ್ಷವನ್ನೂ ಸಹ ಯಥಾರ್ಥವಾಗಿ ವರ್ಣಿಸುವೆನು.
ತಸ್ಯ ಮೂರ್ಧಾಭಿಷೇಕಸ್ತು ಭದ್ರಾಶ್ವಸ್ಯ ವಿಶಾಂಪತೇ |
ಭದ್ರಸಾಲವನಂ ಯತ್ರ ಕಾಲಾಮ್ರಶ್ಚ ಮಹಾದ್ರುಮಃ ||18||
ಎಲ್ಲೈ ರಾಜನೇ, ಆ ವರ್ಷದ ಮೂರ್ಧನ್ಯ ಪ್ರಾಯವಾದುದು ಭದ್ರಸಾಲ ಎಂಬ ಒಂದು ಉದ್ಯಾನ. ಅಲ್ಲಿ ಕಾಲಾಮ್ರ ಎಂಬ ಮಹಾವೃಕ್ಷವೂ ಇದೆ.
ಕಾಲಾಮ್ರಶ್ಚ ಮಹಾರಾಜ ನಿತ್ಯಪುಷ್ಪಫಲಃ ಶುಭಃ |
ದ್ವೀಪಶ್ಚ ಯೋಜನೋತ್ಸೇಧಃ ಸಿದ್ಧಚಾರಣಸೇವಿತಃ ||19||
ಎಲ್ಲೈ ಮಹಾರಾಜನೇ, ಕಾಲಾಮ್ರ ಎಂಬ ವೃಕ್ಷವು ಶುಭಪ್ರದವಾಗಿದ್ದು, ಯಾವಾಗಲೂ ಪುಷ್ಪ-ಫಲಯುಕ್ತವಾಗಿರುತ್ತದೆ. ಒಂದು

ಯೋಜನ ಎತ್ತರವಾದ ಈ ದ್ವೀಪವು ಸಿದ್ಧ-ಚಾರಣರಿಂದ ಸೇವಿತವಾಗಿರುತ್ತದೆ (ವರ್ಷಗಳನ್ನು ದ್ವೀಪಗಳೆಂದು ಕರೆಯುತ್ತಾರೆ).
ತತ್ರ ತೇ ಪುರುಷಾಃ ಶ್ವೇತಾಸ್ತೇಜೋಯುಕ್ತಾ ಮಹಾಬಲಾಃ |
ಸ್ತ್ರಿಯಃ ಕುಮುದವರ್ಣಾಶ್ಚ ಸುಂದರ್ಯಃ ಪ್ರಿಯದರ್ಶನಾಃ ||20||
ಅಲ್ಲಿ ಇರುವ ಪುರುಷರು ಶ್ವೇತವರ್ಣದಿಂದ ಕೂಡಿದ್ದು, ಮಹಾಬಲಿಷ್ಠರೂ ಮತ್ತು ತೇಜೋಯುಕ್ತರೂ ಆಗಿರುತ್ತಾರೆ. ಸ್ತ್ರೀಯರು ನೈದಿಲೆಯ ವರ್ಣದವರಾಗಿದ್ದು, ಸುಂದರಿಯರೂ, ನೋಡಲು ಮನೋಹರರೂ ಆಗಿರುತ್ತಾರೆ.
ಚಂದ್ರಪ್ರಭಾಶ್ಚಂದ್ರವರ್ಣಾಃ ಪೂರ್ಣಚಂದ್ರನಿಭಾನನಾಃ |
ಚಂದ್ರಶೀತಲಗಾತ್ರ್ಯಶ್ಚ ನೃತ್ತಗೀತವಿಶಾರದಾಃ ||21||
ಕೆಲವು ಸ್ತ್ರೀಯರು ಚಂದ್ರನ ಕಾಂತಿಯನ್ನು ಹೊಂದಿ, ಚಂದ್ರನ ಬಣ್ಣವನ್ನೂ ಹೊಂದಿ, ಪೂರ್ಣಚಂದ್ರನನ್ನು ಹೋಲುವ ಮುಖವುಳ್ಳವರಾಗಿರುತ್ತಾರೆ. ಅವರ ಶರೀರದ ಸ್ಪರ್ಶವು ಚಂದ್ರನಂತೆ ಶೀತಲವಾಗಿರುತ್ತದೆ. ಅವರು ನೃತ್ಯ-ಗಾನಗಳಲ್ಲಿ ವಿಶಾರದರಾಗಿರುತ್ತಾರೆ.
ದಶ ವರ್ಷಸಹಸ್ರಾಣಿ ತತ್ರಾಯುರ್ಭರತರ್ಷಭ |
ಕಾಲಾಮ್ರರಸಪೀತಾಸ್ತೇ ನಿತ್ಯಂ ಸಂಸ್ಥಿತಯೌವನಾಃ ||22||
ಎಲೈ ಭರತಶ್ರೇಷ್ಠನೇ, ಅಲ್ಲಿ ಇರುವವರಿಗೆ ಹತ್ತುಸಹಸ್ರ ವರ್ಷಗಳ ಆಯುಸ್ಸು ಇರುತ್ತದೆ. ಕಾಲಾಮ್ರವೃಕ್ಷರಸವನ್ನು ಪಾನಮಾಡಿ, ಅವರು ನಿತ್ಯವೂ ಯೌವನಭರಿತರಾಗಿರುತ್ತಾರೆ.
ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು |
ಸುದರ್ಶನೋ ನಾಮ ಮಹಾನ್ ಜಂಬೂವೃಕ್ಷಃ ಸನಾತನಃ ||23||
ನೀಲ ಪರ್ವತದ ದಕ್ಷಿಣದಲ್ಲಿ ಮತ್ತು ನಿಷಧ ಪರ್ವತದ ಉತ್ತರದಲ್ಲಿ ಸುದರ್ಶನ ಎಂಬ ಹೆಸರಿನ ಪುರಾತನವಾದ ಒಂದು ಜಂಬೂವೃಕ್ಷವಿದೆ.
ಸರ್ವಕಾಮಫಲಃ ಪುಣ್ಯಃ ಸಿದ್ಧಚಾರಣಸೇವಿತಃ |
ತಸ್ಯ ನಾಮ್ನಾ ಸಮಾಖ್ಯಾತೋ ಜಂಬೂದ್ವೀಪಃ ಸನಾತನಃ ||24||
ಆ ವೃಕ್ಷವು ಎಲ್ಲ ಕಾಮಗಳನ್ನು ಕೊಡುವಂಥದ್ದು ಫಲಭರಿತವಾಗಿದ್ದು, ಪುಣ್ಯಪ್ರದವೂ, ಸಿದ್ಧ-ಚಾರಣಸೇವಿತವೂ ಆಗಿದೆ. ಪುರಾತನವಾದ ಜಂಬೂದ್ವೀಪವು ಆ ವೃಕ್ಷದ ಹೆಸರಿನಿಂದಲೇ ಪ್ರಸಿದ್ಧಿಯನ್ನು ಪಡೆದಿದೆ.
ಯೋಜನಾನಾಂ ಸಹಸ್ರಂ ಚ ಶತಂ ಚ ಭರತರ್ಷಭ |
ಉತ್ಸೇಧೋ ವೃಕ್ಷರಾಜಸ್ಯ ದಿವಸ್ಪೃಗ್ ಮನುಜೇಶ್ವರ ||25||
ಎಲೈ ಭರತಶ್ರೇಷ್ಠನೇ, ಮನುಜೇಶ್ವರನೇ, ಆಕಾಶವನ್ನು ಮುಟ್ಟುವಂತಿರುವ ಆ ವೃಕ್ಷರಾಜವು ಹನ್ನೊಂದುನೂರು ಯೋಜನಗಳಷ್ಟು ಎತ್ತರವಿದೆ.
ಅರತ್ನೀನಾಂ ಸಹಸ್ರಂ ಚ ಶತಾನಿ ದಶ ಪಂಚ ಚ |
ಪರಿಣಾಹಸ್ತು ವೃಕ್ಷಸ್ಯ ಫಲಾನಾಂ ರಸಭೇದಿನಾಮ್ ||26||
ಆ ವೃಕ್ಷದ ರಸ ವಿಶೇಷವುಳ್ಳ ಮರಗಳ ಸುತ್ತಳತೆಯು ನೂರು ಅಥವಾ ಹತ್ತು ಅಥವಾ ಐದು (ಅಥವಾ ಹದಿನೈದು ನೂರು) ಅರತ್ನಿಗಳಷ್ಟು (ಮೊಳದ ಪರಿಮಾಣದಷ್ಟು) ಇರುತ್ತದೆ.
ಪತಮಾನಾನಿ ತಾನ್ಯುರ್ವ್ಯಾಂ ಕುರ್ವಂತಿ ವಿಪುಲಂ ಸ್ವನಮ್ |
ಮುಂಚಂತಿ ಚ ರಸಂ ರಾಜಂಸ್ತಸ್ಮಿನ್ ರಜತಸನ್ನಿಭಮ್ ||27||
ಅವು ಭೂಮಿಯ ಮೇಲೆ ಬೀಳುತ್ತಾ ದೊಡ್ಡ ಶಬ್ದವನ್ನು ಮಾಡುತ್ತವೆ. ಎಲೈ ರಾಜನೇ, ಆ ಭೂಮಿಯಲ್ಲಿ ಅವು ಬೆಳ್ಳಿಯ ಕಾಂತಿಯುಳ್ಳ ರಸವನ್ನು ಸ್ರವಿಸುತ್ತವೆ.
ತಸ್ಯಾಃ ಜಂಬ್ವಾಃ ಫಲರಸೋ ನದೀ ಭೂತ್ವಾ ಜನಾಧಿಪ |
ಮೇರುಂ ಪ್ರದಕ್ಷಿಣಂ ಕೃತ್ವಾ ಸಂಪ್ರಯಾತ್ಯುತ್ತರಾನ್ ಕುರೂನ್ ||28||
ಎಲೈ ಜನಾಧಿಪನೇ, ಆ ಜಂಬೂಫಲದ ರಸವು ನದಿಯಾಗಿ ಹರಿದು ಮೇರುವಿಗೆ ಪ್ರದಕ್ಷಿಣಾಕಾರವಾಗಿ ಬಂದು ಉತ್ತರಕುರುವರ್ಷವನ್ನು ಸೇರುತ್ತದೆ.
ಪಿಬಂತಿ ತದ್ರಸಂ ಹೃಷ್ಟಾ ಜನಾ ನಿತ್ಯಂ ಜನಾಧಿಪ |
ತಸ್ಮಿನ್ ಫಲರಸೇ ಪೀತೇ ನ ಜರಾ ಬಾಧತೇ ಚ ತಾನ್ ||29||
ಎಲೈ ಜನಾಧಿಪನೇ, ಅಲ್ಲಿಯ ಜನರು ನಿತ್ಯವೂ ಸಂತೋಷದಿಂದ ಆ ಫಲದ ರಸವನ್ನು ಪಾನ ಮಾಡುತ್ತಾರೆ. ಆ ಫಲರಸವನ್ನು ಪಾನ ಮಾಡುವುದರಿಂದ ಅವರನ್ನು ಮುಪ್ಪು ಬಾಧಿಸುವುದಿಲ್ಲ.
ತತ್ರ ಜಾಂಬೂನದಂ ನಾಮ ಕನಕಂ ದೇವಭೂಷಣಮ್ |
ತರುಣಾದಿತ್ಯವರ್ಣಾಶ್ಚ ಜಾಯಂತೇ ತತ್ರ ಮಾನವಾಃ ||30||
ಆ ಜಂಬೂ ಫಲರಸಗಳು ಅಲ್ಲಿನ ಮಣ್ಣಿನ ಜೊತೆಯಲ್ಲಿ ಸೇರಿ ದೇವತೆಗಳಿಗೆ ಅಲಂಕಾರವಾಗುವ ಕನಕವೆಂಬ ನರ್ಫರ್ಣವಿಶೇಷವಾಗುತ್ತದೆ. ಅಲ್ಲಿಯ ಮಾನವರು ಉದಯಿಸುವ ಸೂರ್ಯನ ಬಣ್ಣವನ್ನು ಹೊಂದಿ ಜನಿಸುತ್ತಾರೆ.
ತಥಾ ಮಾಲ್ಯವತಃ ಶೃಂಗೇ ದೀಪ್ಯತೇ ತತ್ರ ಹವ್ಯರಾಟ್ |
ನಾಮ್ನಾ ಸಂವರ್ತಕೋ ನಾಮ ಕಾಲಾಗ್ನಿರ್ಭರತರ್ಷಭ ||31||
ಅದರಂತೆ ಮಾಲ್ಯವಾನ್ ಪರ್ವತದ ಶಿಖರದಲ್ಲಿ ಅಗ್ನಿಯು ಯಾವಾಗಲೂ ಬೆಳಗುತ್ತಾನೆ. ಎಲೈ ಭರತರ್ಷಭನೇ, ಕಾಲಾಗ್ನಿಯಾದ ಅವನಿಗೆ ಸಂವರ್ತಕ ಎಂದು ಹೆಸರು.

ತಸ್ಯ ಮಾಲ್ಯವತಃ ಶೃಂಗೇ ಪೂರ್ವೇ ಪೂರ್ವೇ ತು ಗಂಡಕಾ |
ಯೋಜನಾನಾಂ ಸಹಸ್ರಾಣಿ ಪಂಚಾಶನ್ಮಾಲ್ಯವಾನ್ ಸ್ಥಿತಃ ॥32॥
ಮಾಲ್ಯವಾನ್ ಪರ್ವತದ ಶಿಖರದಿಂದ ಪೂರ್ವ ಪೂರ್ವಾಭಿಮುಖವಾಗಿ ಗಂಡಕಾ ಎಂಬ ನದಿಯು ಹರಿಯುತ್ತದೆ. ಮಾಲ್ಯವಾನ್ ಪರ್ವತದ ವಿಸ್ತಾರವು ಐವತ್ತು ಸಾವಿರ ಯೋಜನಗಳು.
ಮಹಾರಜತಸಂಕಾಶಾ ಜಾಯಂತೇ ತತ್ರ ಮಾನವಾಃ |
ಬ್ರಹ್ಮಲೋಕಾಚ್ಚ್ಯುತಾಃ ಸರ್ವೇ ಸರ್ವೇ ಚ ಬ್ರಹ್ಮವಾದಿನಃ ॥33॥
ಅಲ್ಲಿ ಬ್ರಹ್ಮಲೋಕದಿಂದ ಚ್ಯುತರಾದ ಮಾನವರು ಮಹಾರಜತದ ಬಣ್ಣವನ್ನು ಹೊಂದಿ ಜನಿಸುತ್ತಾರೆ. ಎಲ್ಲರೂ ಬ್ರಹ್ಮವಾದಿಗಳಾಗಿರುತ್ತಾರೆ.
ತಪಸ್ತು ತಪ್ಯಮಾನಾಸ್ತೇ ಭವಂತಿ ಹ್ಯೂರ್ಧ್ವರೇತಸಃ |
ರಕ್ಷಣಾರ್ಥಂ ತು ಭೂತಾನಾಂ ಪ್ರವಿಶಂತಿ ದಿವಾಕರಮ್ ॥34॥
ಅವರು ಊರ್ಧ್ವರೇತಸ್ಕರಾಗಿ ಸರ್ವಪ್ರಾಣಿಗಳ ಕ್ಷೇಮಕ್ಕಾಗಿ ತಪಸ್ಸನ್ನು ಆಚರಿಸುತ್ತಾರೆ. ಅನಂತರ ಸೂರ್ಯನನ್ನು ಪ್ರವೇಶಿಸುತ್ತಾರೆ.
ಷಷ್ಟಿಸ್ತಾನಿ ಸಹಸ್ರಾಣಿ ಷಷ್ಟಿರೇವ ಶತಾನಿ ಚ |
ಅರುಣಸ್ಯಾಗ್ರತೋ ಯಾಂತಿ ಪರಿವಾರ್ಯ ದಿವಾಕರಮ್ ॥35॥
ಅವರು ಅರವತ್ತಾರು ಸಾವಿರ ಸಂಖ್ಯೆಯ ವಾಲಖಿಲ್ಯರೆಂಬ ಋಷಿಗಳು. ಅವರು ಅರುಣನ ಮುಂಭಾಗದಲ್ಲಿ ಸೂರ್ಯನನ್ನು ಸುತ್ತುವರಿದು ತಿರುಗುತ್ತಾರೆ.
ಷಷ್ಟಿಂ ವರ್ಷಸಹಸ್ರಾಣಿ ಷಷ್ಟಿಮೇವ ಶತಾನಿ ಚ |
ಆದಿತ್ಯತಾಪತಪ್ತಾಸ್ತೇ ವಿಶಂತಿ ಶಶಿಮಂಡಲಮ್ ॥36॥
ಅವರು ಅರವತ್ತಾರು ಸಾವಿರ ವರ್ಷಗಳ ಕಾಲ ಸೂರ್ಯನ ತಾಪದಿಂದ ಬಳಲಿದವರಾಗಿ ಅನಂತರ ಚಂದ್ರಮಂಡಲವನ್ನು ಪ್ರವೇಶಿಸುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಮೋಽಧ್ಯಾಯಃ ॥
॥ ಇತಿ ಜಂಬೂಖಂಡನಿರ್ಮಾಣಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಮೇರುವಿನ ಉತ್ತರದಲ್ಲಿರುವ ರಮಣಕ, ಹಿರಣ್ಮಯ ಮತ್ತು
ಐರಾವತ ವರ್ಷಗಳ ವರ್ಣನೆ.
ಧೃತರಾಷ್ಟ್ರಃ
ವರ್ಷಾಣಾಂ ಚೈವ ನಾಮಾನಿ ಪರ್ವತಾನಾಂ ಚ ಸಂಜಯ |
ಆಚಕ್ಷ್ವ ಮೇ ಯಥಾತತ್ತ್ವಂ ಯೇ ಚ ಪರ್ವತವಾಸಿನಃ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ನನಗೆ ವರ್ಷಗಳ ನಾಮಗಳನ್ನೂ, ಅಲ್ಲಿರುವ ಪರ್ವತಗಳನ್ನೂ, ಆ ಪರ್ವತದಲ್ಲಿ ವಾಸಿಸುವ ಜನರನ್ನೂ ಯಥಾರ್ಥವಾಗಿ ತಿಳಿಸುವವನಾಗು.
ಸಂಜಯಃ
ದಕ್ಷಿಣೇನ ತು ಶ್ವೇತಸ್ಯ ನೀಲಸ್ಯೈವೋತ್ತರೇಣ ತು |
ವರ್ಷಂ ರಮಣಕಂ ನಾಮ ಜಾಯಂತೇ ತತ್ರ ಮಾನವಾಃ ॥2॥
ಸಂಜಯ ಶ್ವೇತಪರ್ವತ ದಕ್ಷಿಣದಲ್ಲಿ ಮತ್ತು ನೀಲಪರ್ವತದ ಉತ್ತರದಲ್ಲಿ ರಮಣಕ ಎಂಬ ವರ್ಷವಿದೆ. ಅಲ್ಲಿ ಮಾನವರು ಜನಿಸುತ್ತಾರೆ.
ಶುಕ್ಲಾಭಿಜನಸಂಪನ್ನಾಃ ಸರ್ವೇ ಸುಪ್ರಿಯದರ್ಶನಾಃ |
ರತಿಪ್ರಧಾನಾಶ್ಚ ತಥಾ ಜಾಯಂತೇ ತತ್ರ ಮಾನವಾಃ ॥3॥
ಶುದ್ಧವಾದ ಕುಲದಲ್ಲಿ ಜನ್ಮವನ್ನು ಹೊಂದಿದವರಾಗಿ ಅವರೆಲ್ಲರೂ ನೋಡಲು ಮನೋಹರರಾಗಿರುತ್ತಾರೆ. ಅಲ್ಲಿ ಜನಿಸುವ ಮಾನವರು ಸುಖಪ್ರಧಾನರಾಗಿರುತ್ತಾರೆ.
ದಶ ವರ್ಷಸಹಸ್ರಾಣಿ ಶತಾನಿ ದಶ ಪಂಚ ಚ |
ಜೀವಂತಿ ತೇ ಮಹಾರಾಜ ನಿತ್ಯಂ ಮುದಿತಮಾನಸಾಃ ॥4॥
ಎಲೈ ಮಹಾರಾಜನೇ, ಅವರು ಸಂತೋಷಗೊಂಡ ಮನಸ್ಸನ್ನು ಉಳ್ಳವರಾಗಿ, ಹನ್ನೊಂದುಸಾವಿರದ ಐದುನೂರು ವರ್ಷಗಳ ಕಾಲ ಜೀವಿಸುತ್ತಾರೆ.
ದಕ್ಷಿಣೇ ಶೃಂಗಿಣಶ್ಚೈವ ಶ್ವೇತಸ್ಯಾಥೋತ್ತರೇಣ ಚ |
ವರ್ಷಂ ಹೈರಣ್ವತಂ ನಾಮ ಯತ್ರ ಹೈರಣ್ವತೀ ನದೀ ॥5॥
ಶೃಂಗವಾನ್ ಪರ್ವತದ ದಕ್ಷಿಣದಲ್ಲಿ ಮತ್ತು ಶ್ವೇತಪರ್ವತದ ಉತ್ತರದಲ್ಲಿ ಹೈರಣ್ವತ ಎಂಬ ವರ್ಷವಿದೆ. ಅಲ್ಲಿ ಹೈರಣ್ವತೀ ಎಂಬ ನದಿ ಇದೆ.
ಯಕ್ಷಾನುಗಾ ಮಹಾರಾಜ ಧನ್ವಿನಃ ಪ್ರಿಯದರ್ಶನಾಃ |
ಮಹಾಬಲಾಸ್ತತ್ರ ಸದಾ ರಾಜನ್ ಮುದಿತಮಾನಸಾಃ ॥6॥

ಎಲೈ ಮಹಾರಾಜನೇ, ಅಲ್ಲಿ ಕುಬೇರನ ಅನುಚರರಾದ ಪ್ರಿಯದರ್ಶನವುಳ್ಳ ಮಹಾಬಲರಾದ ಧನುರ್ಧಾರಿಗಳು ಸಂತುಷ್ಟ ಮನಸ್ಸಿನಿಂದ ವಾಸಿಸುತ್ತಾರೆ.
ಏಕಾದಶ ಸಹಸ್ರಾಣಿ ವರ್ಷಾಣಾಂ ತೇ ಜನಾಧಿಪ |
ಆಯುಷ್ಪ್ರಮಾಣಂ ಜೀವಂತಿ ಶತಾನಿ ದಶ ಪಂಚ ಚ ॥7॥
ಎಲೈ ಜನಾಧಿಪನೇ, ಅಲ್ಲಿರುವ ಜನರಿಗೆ ಹನ್ನೆರಡು ಸಾವಿರದ ಐದುನೂರು ವರ್ಷಗಳು ಆಯುಷ್ಪ್ರಮಾಣವಾಗಿರುತ್ತದೆ. ಅಷ್ಟು ವರ್ಷಗಳ ಕಾಲ ಅವರು ಜೀವಿಸುತ್ತಾರೆ.
ಶೃಂಗಾಣಿ ವೈ ಶೃಂಗವತಸ್ತ್ರೀಣ್ಯೇವ ಮನುಜಾಧಿಪ |
ಏಕಂ ಮಣಿಮಯಂ ತತ್ರ ತಥೈಕಂ ರೌಗ್ಮಮದ್ಭುತಮ್ ॥8॥
ಸರ್ವರತ್ನಮಯಂ ಚೈಕಂ ಭವನೈರುಪಶೋಭಿತಮ್ |
ತತ್ರ ಸ್ವಯಂಪ್ರಭಾ ದೇವೀ ನಿತ್ಯಂ ವಸತಿ ಶಾಂಡಿಲೀ ॥9॥
ಎಲೈ ಮನುಜಾಧಿಪನೇ, ಶೃಂಗವಾನ್ ಪರ್ವತಕ್ಕೆ ಮೂರೇ ಶಿಖರಗಳಿವೆ. ಅವುಗಳಲ್ಲಿ ಒಂದು ಮಣಿಮಯವಾದುದು. ಅದ್ಭುತವಾದ ಇನ್ನೊಂದು ಸುವರ್ಣಮಯವಾದುದು. ಇನ್ನೊಂದು ಶಿಖರವು ಸರ್ವರತ್ನಮಯವಾದುದು. ಅದು ಅನೇಕ ಭವನಗಳಿಂದ ಶೋಭಿತವಾಗಿದೆ. ಅಲ್ಲಿ ಶಾಂಡಿಲ್ಯಮುನಿಗಳ ಪುತ್ರಿಯಾದ ಸ್ವಯಂಪ್ರಭಾ ದೇವಿಯು ನಿತ್ಯವೂ ವಾಸ ಮಾಡುತ್ತಾಳೆ.
ಉತ್ತರೇಣ ತು ಶೃಂಗಸ್ಯ ಸಮುದ್ರಾಂತೇ ಜನಾಧಿಪ |
ವರ್ಷಮೈರಾವತಂ ನಾಮ ತಸ್ಮಾಚ್ಛೃಂಗವತಃ ಪರಮ್ ॥10॥
ಎಲೈ ಜನಾಧಿಪನೇ, ಶೃಂಗವಾನ್ ಪರ್ವತದ ಉತ್ತರಕ್ಕೆ, ಶೃಂಗವಾನ್ ಪರ್ವತದ ಆಚೆಗೆ ಸಮುದ್ರದವರೆಗೆ ಐರಾವತ ಎಂಬ ವರ್ಷವಿದೆ.
ನ ತತ್ರ ಸೂರ್ಯಸ್ತಪತಿ ನ ತೇ ಜೀರ್ಯಂತಿ ಮಾನವಾಃ |
ಚಂದ್ರಮಾಶ್ಚ ಸನಕ್ಷತ್ರೋ ಜ್ಯೋತಿರ್ಭೂತ ಇವಾವೃತಃ ॥11॥
ಅಲ್ಲಿ ಸೂರ್ಯನು ತಾಪವನ್ನು ಉಂಟುಮಾಡುವುದಿಲ್ಲ. ಅಲ್ಲಿರುವ ಮನುಷ್ಯರು ಮುಪ್ಪನ್ನು ಹೊಂದುವುದಿಲ್ಲ. ನಕ್ಷತ್ರದಿಂದ ಕೂಡಿದ ಚಂದ್ರನು ಒಂದು ಜ್ಯೋತಿಯಂತೆ ಆವೃತನಾಗಿ ಕಾಣುತ್ತಾನೆ.
ಪದ್ಮಪ್ರಭಾಃ ಪದ್ಮವರ್ಣಾಃ ಪದ್ಮಪತ್ರನಿಭೇಕ್ಷಣಾಃ |
ಪದ್ಮಪತ್ರಸುಗಂಧಾಶ್ಚ ಜಾಯಂತೇ ತತ್ರ ಮಾನವಾಃ ॥12॥
ಅಲ್ಲಿ ಜನಿಸುವ ಮಾನವರು ಪದ್ಮದ ಕಾಂತಿಯುಳ್ಳವರು, ಪದ್ಮದ ವರ್ಣವುಳ್ಳವರು, ಪದ್ಮದಳದಂತಹ ಕಣ್ಣುಳ್ಳವರು ಮತ್ತು ಪದ್ಮದಳದಂತೆ ಸುವಾಸನೆಯನ್ನು ಹೊಂದಿದವರು.
ಅನಿಷ್ಯಂದಾಃ ಸುಗಂಧಾಶ್ಚ ನಿರಾಹಾರಾ ಜಿತೇಂದ್ರಿಯಾಃ |
ದೇವಲೋಕಚ್ಯುತಾಃ ಸರ್ವೇ ತಥಾ ವಿರಜಸೋ ನೃಪ ॥13॥
ಅವರಿಗೆ ಬೆವರು ಉಂಟಾಗುವುದಿಲ್ಲ. ಸುಗಂಧಯುಕ್ತರಾಗಿರುತ್ತಾರೆ. ಜಿತೇಂದ್ರಿಯರೂ, ನಿರಾಹಾರರೂ ಆಗಿರುತ್ತಾರೆ. ಎಲ್ಲರೂ ದೇವಲೋಕದಿಂದ ಚ್ಯುತರಾದವರು ಮತ್ತು ಯಾವ ಕಶ್ಮಲವೂ ಇಲ್ಲದವರು.
ತ್ರಯೋದಶ ಸಹಸ್ರಾಣಿ ವರ್ಷಾಣಾಂ ತೇ ಜನಾಧಿಪ |
ಆಯುಷ್ಪ್ರಮಾಣಂ ಜೀವಂತಿ ನರಾ ಭರತಸತ್ತಮ ॥14॥
ಎಲೈ ಜನಾಧಿಪನೇ, ಎಲೈ ಭರತಶ್ರೇಷ್ಠನೇ, ಅಲ್ಲಿರುವ ನರರು ಹದಿಮೂರು ಸಾವಿರ ವರ್ಷಗಳ ಕಾಲ ಆಯುಷ್ಪ್ರಮಾಣವನ್ನು ಹೊಂದಿ ಜೀವಿಸುತ್ತಾರೆ.
ಕ್ಷೀರೋದಸ್ಯ ಸಮುದ್ರಸ್ಯ ತಥೈವೋತ್ತರತಃ ಪ್ರಭುಃ |
ಹರಿರ್ವಸತಿ ವೈಕುಂಠಃ ಶಕಟೇ ಕನಕಾತ್ಮಕೇ ॥15॥
ಕ್ಷೀರಸಮುದ್ರದ ಉತ್ತರಭಾಗದಲ್ಲಿ ಪ್ರಭುವೂ, ವೈಕುಂಠನಾಮಕನೂ ಆದ ಹರಿಯು ಸ್ವರ್ಣಮಯವಾದ ರಥದಲ್ಲಿ ವಾಸಿಸುತ್ತಾನೆ.
ಅಷ್ಟಚಕ್ರಂ ಹಿ ತದ್ ಯಾನಂ ಭೂತಯುಕ್ತಂ ಮನೋಜವಮ್ |
ಅಗ್ನಿವರ್ಣಂ ಮಹಾವೇಗಂ ಜಾಂಬೂನದಪರಿಷ್ಕೃತಮ್ ॥16॥
ಆ ರಥಕ್ಕೆ ಎಂಟು ಚಕ್ರಗಳಿವೆ. ಅದು ಪಂಚಭೂತಗಳಿಂದ ಕೂಡಿ, ಅಗ್ನಿವರ್ಣದಿಂದಲೂ, ಮಹಾವೇಗದಿಂದಲೂ ಕೂಡಿ, ಸುವರ್ಣಾಲಂಕೃತವಾಗಿ ಮನೋಜವವನ್ನು ಹೊಂದಿದೆ.
ಸ ಪ್ರಭುಃ ಸರ್ವಭೂತಾನಾಂ ವಿಭುಶ್ಚ ಭರತರ್ಷಭ |
ಸಂಕ್ಷೇಪೋ ವಿಸ್ತರಶ್ಚೈವ ಕರ್ತಾ ಕಾರಯಿತಾ ಚ ಸಃ ॥17॥
ಎಲೈ ಭರತರ್ಷಭನೇ, ಅವನೇ ಎಲ್ಲ ಜೀವರಿಗೂ ಪ್ರಭುವಾದವನು, ವ್ಯಾಪ್ತನಾದವನು, ಜಗತ್ತಿನ ಸೃಷ್ಟಿ-ಸಂಹಾರಕರ್ತನಾದವನು ಮತ್ತು ಎಲ್ಲ ಕಾರ್ಯಗಳನ್ನೂ ಮಾಡಿ ಮಾಡಿಸುವವನು.
ಪೃಥಿವ್ಯಾಪಸ್ತಥಾಕಾಶಂ ವಾಯುಸ್ತೇಜಶ್ಚ ಪಾರ್ಥಿವ |
ಸ ಯಜ್ಞಃ ಸರ್ವಭೂತಾನಾಮಾಸ್ಯಂ ತಸ್ಯ ಹುತಾಶನಃ ॥18॥
ಎಲೈ ರಾಜನೇ, ಅವನು ಪೃಥಿವಿ, ಅಪ್, ಆಕಾಶ, ವಾಯು, ತೇಜಸ್ ಮೊದಲಾದ ಎಲ್ಲ ಶಬ್ದಗಳಿಂದಲೂ ವಾಚ್ಯನಾಗಿ ಅವುಗಳಲ್ಲಿ ಅಂತರ್ಯಾಮಿಯಾಗಿ ಇರುವವನು. ಅವನು ಎಲ್ಲ ಜೀವರಿಂದಲೂ ಯಜನೀಯನಾದವನು. ಅಗ್ನಿಯು ಅವನ ಮುಖ.
ವೈಶಂಪಾಯನಃ
ಏವಮುಕ್ತಃ ಸಂಜಯೇನ ಧೃತರಾಷ್ಟ್ರೋ ಮಹಾಮನಾಃ |
ಧ್ಯಾನಮನ್ವಗಮದ್ ರಾಜಾ ಪುತ್ರಾನ್ ಪ್ರತಿ ಜನಾಧಿಪ ॥19॥

ವೈಶಂಪಾಯನ ಸಂಜಯನಿಂದ ಹೀಗೆ ಹೇಳಲ್ಪಟ್ಟ ಧೈರ್ಯಶಾಲಿಯಾದ ಧೃತರಾಷ್ಟ್ರ ರಾಜನು ಎಲೈ ಮನುಜಾಧಿಪನೇ, ತನ್ನ ಮಕ್ಕಳನ್ನು ಕುರಿತು ಯೋಚಿಸುತ್ತಾ ಚಿಂತಾಪರವಶನಾದನು.
ಅಸಂಶಯಂ ಸೂತಪುತ್ರ ಕಾಲಃ ಸಂಕ್ಷಿಪತೇ ಜಗತ್ |
ಸೃಜ್ಯತೇ ಚ ಪುನಃ ಸರ್ವಂ ನೇಹ ವಿದ್ಯತಿ ಶಾಶ್ವತಮ್ ॥20॥
ಎಲೈ ಮಹಾರಾಜನೇ, ಅವನು ಸ್ವಲ್ಪ ಕಾಲ ಯೋಚಿಸಿ ಪುನಃ ಹೀಗೆ ಮಾತನಾಡಿದನು. ಎಲೈ ಸೂತಪುತ್ರನೇ, ಕಾಲವು ನಿಸ್ಸಂಶಯವಾಗಿ ಜಗತ್ತನ್ನು ನಾಶ ಮಾಡುತ್ತದೆ. ಅದೇ ಪುನಃ ಜಗತ್ತನ್ನು ಸೃಷಿಸುತ್ತದೆ. ಈ ಜಗತ್ತಿನಲ್ಲಿ ಶಾಶ್ವತವಾದುದು ಯಾವುದೂ ಇಲ್ಲ.
ನರೋ ನಾರಾಯಣಶ್ಚೈವ ಸರ್ವಜ್ಞಃ ಸರ್ವಭೂತಭೃತ್ |
ದೇವಾ ವೈಕುಂಠ ಇತ್ಯಾಹುರ್ವೇದಾ ವಿಷ್ಣುರಿತಿ ಪ್ರಭುಮ್ ॥21॥
ಅವನನ್ನು ದೇವತೆಗಳು ನರನೆಂದೂ, ನಾರಾಯಣನೆಂದೂ, ಸರ್ವಜ್ಞನೆಂದೂ, ಸರ್ವಭೂತಗಳನ್ನು ಧರಿಸಿದವನೆಂದೂ, ವೈಕುಂಠನೆಂದೂ ಕರೆಯುತ್ತಾರೆ. ವೇದಗಳು ಪ್ರಭುವಾದ ಅವನನ್ನು ವಿಷ್ಣುವೆಂದು ಕರೆಯುತ್ತವೆ.
॥ ॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ನವಮೋಽಧ್ಯಾಯಃ ॥
॥ ಇತಿ ಜಂಬೂಖಂಡನಿರ್ಮಾಣಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ಭಾರತವರ್ಷದ ನದಿಗಳ, ಪರ್ವತಗಳ ಮತ್ತು ದೇಶಗಳ ನಿರೂಪಣೆ.
ಧೃತರಾಷ್ಟ್ರಃ
ಯದಿದಂ ಭಾರತಂ ವರ್ಷಂ ಯತ್ರೇದಂ ಮೂರ್ಚ್ಛಿತಂ ಬಲಮ್ |
ಯತ್ರಾತಿಮಾತ್ರಂ ಲುಬ್ಧೋಽಯಂ ಪುತ್ರೋ ದುರ್ಯೋಧನೋ ಮಮ ॥
ಯತ್ರ ಗೃಧ್ರಾಃ ಪಾಂಡುಸುತಾ ಯತ್ರ ಮೇ ಸಜ್ಜತೇ ಮನಃ |
ಏತನ್ಮೇ ತತ್ತ್ವಮಾಚಕ್ಷ್ವ ಕುಶಲೋ ಹ್ಯಸಿ ಸಂಜಯ ॥2॥
ಧೃತರಾಷ್ಟ್ರ ಈ ಸೈನ್ಯಗಳೆಲ್ಲವೂ ಸೇರಿರುವ ಭಾರತ ವರ್ಷವು ಏನಿದೆಯೋ ಮತ್ತು ಯಾವುದರಲ್ಲಿ ನನ್ನ ಮಗ ದುರ್ಯೋಧನನು ಬಹಳವಾದ ಆಸೆಯನ್ನು ಹೊಂದಿದ್ದಾನೆಯೋ, ಯಾವುದರಲ್ಲಿ ಪಾಂಡವರೂ ಸಹ ಅಭಿಲಾಷೆಯನ್ನು ಹೊಂದಿದ್ದಾರೆಯೋ, ಎಲ್ಲಿ ನನ್ನ ಮನಸ್ಸು ಲಗ್ನವಾಗಿದೆಯೋ, ಎಲೈ ಸಂಜಯನೇ, ಅಂತಹ ಭಾರತವರ್ಷವನ್ನು ಯಥಾರ್ಥವಾಗಿ ಹೇಳು. ನೀನು ಹೇಳುವುದರಲ್ಲಿ ಕುಶಲನಾಗಿದ್ದೀಯೆ.
ಸಂಜಯಃ
ನ ತತ್ರ ಪಾಂಡವಾಃ ಗೃದ್ಧಾಃ ಶೃಣು ರಾಜನ್ ವಚೋ ಮಮ |
ಗೃದ್ಧೋ ದುರ್ಯೋಧನಸ್ತತ್ರ ಶಕುನಿಶ್ಚಾಪಿ ಸೌಬಲಃ ॥3॥
ಸಂಜಯ ಎಲೈ ರಾಜನೇ, ಪಾಂಡವರು ಅದರಲ್ಲಿ ಅಭಿಲಾಷೆಯನ್ನು ಹೊಂದಿಲ್ಲ. ನನ್ನ ಮಾತನ್ನು ಕೇಳು. ದುರ್ಯೋಧನನೂ ಮತ್ತು ಶಕುನಿಯೂ ಅದರಲ್ಲಿ ಮಹದಾಸೆಯನ್ನು ಹೊಂದಿದ್ದಾರೆ.
ಅಪರೇ ಕ್ಷತ್ರಿಯಾಶ್ಚಾಪಿ ನಾನಾಜನಪದೇಶ್ವರಾಃ |
ಯೇ ಗೃದ್ಧಾ ಭಾರತೇ ವರ್ಷೇ ನ ಮೃಷ್ಯಂತಿ ಪರಸ್ಪರಮ್ ॥4॥
ನಾನಾ ದೇಶದ ಅಧಿಪತಿಗಳಾದ ಇನ್ನೂ ಅನೇಕ ಕ್ಷತ್ರಿಯರು ಭಾರತ ವರ್ಷದ ಸಂಪಾದನೆಯಲ್ಲಿ ಆಸೆಯನ್ನು ಹೊಂದಿದ್ದಾರೆ. ಅವರು ಒಬ್ಬರನ್ನೊಬ್ಬರು ಸಹಿಸುವುದಿಲ್ಲ.
ಅತ್ರ ತೇ ವರ್ಣಯಿಷ್ಯಾಮಿ ವರ್ಷಂ ಭಾರತ ಭಾರತಮ್ |
ಪ್ರಿಯಮಿಂದ್ರಸ್ಯ ದೇವಸ್ಯ ಮನೋರ್ವೈವಸ್ವತಸ್ಯ ಚ ॥5॥
ಪೃಥೋಶ್ಚ ರಾಜನ್ ವೈನ್ಯಸ್ಯ ತಥೇಕ್ಷ್ವಾಕೋರ್ಮಹಾತ್ಮನಃ |
ಯಯಾತೇರಂಬರೀಷಸ್ಯ ಮಾಂಧಾತುರ್ನಹುಷಸ್ಯ ಚ ॥6॥
ತಥೈವ ಮುಚುಕುಂದಸ್ಯ ಶಿಬೇರೌಶೀನರಸ್ಯ ಚ |
ಋಷಭಸ್ಯ ತಥೈಲಸ್ಯ ನೃಗಸ್ಯ ನೃಪತೇಸ್ತಥಾ ॥7॥
ಎಲೈ ಭಾರತನೇ, ದೇವೇಂದ್ರನಿಗೆ, ವೈವಸ್ವತ ಮನುವಿಗೆ, ವೇನನ ಮಗನಾದ ಪೃಥುಚಕ್ರವರ್ತಿಗೆ, ಮಹಾತ್ಮನಾದ ಇಕ್ಷ್ವಾಕುವಿಗೆ, ಯಯಾತಿಗೆ, ಅಂಬರೀಷನಿಗೆ, ಮಾಂಧಾತೃವಿಗೆ, ನಹುಷನಿಗೆ, ಅದರಂತೆ ಮುಚುಕುಂದನಿಗೆ, ಔಶೀನರನಾದ ಶಿಬಿಗೆ, ಋಷಭನಿಗೆ, ಪುರೂರವನಿಗೆ, ನೃಗ ರಾಜನಿಗೆ ಪ್ರಿಯವಾದಂತಹ ಭಾರತ ವರ್ಷವನ್ನು ನಿನಗೆ ವರ್ಣಿಸುವೆನು.
ಅನ್ಯೇಷಾಂ ಚ ಮಹಾರಾಜ ಕ್ಷತ್ರಿಯಾಣಾಂ ಬಲೀಯಸಾಮ್ |
ಸರ್ವೇಷಾಮೇವ ರಾಜೇಂದ್ರ ಪ್ರಿಯಂ ಭರತ ಭಾರತಮ್ ॥8॥
ಎಲೈ ಮಹಾರಾಜನೇ, ರಾಜೇಂದ್ರನೇ, ಇನ್ನೂ ಅನೇಕ ಬಲಿಷ್ಠರಾದ ಕ್ಷತ್ರಿಯರೆಲ್ಲರಿಗೂ ಭಾರತ ವರ್ಷವು ಬಹಳ ಪ್ರಿಯವಾಗಿದೆ.
ತತ್ತೇ ವರ್ಷಂ ಪ್ರವಕ್ಷ್ಯಾಮಿ ಯಥಾಶ್ರುತಮರಿಂದಮ |
ಶೃಣು ಮೇ ಗದತೋ ರಾಜನ್ ಯನ್ಮಾಂ ತ್ವಂ ಪರಿಪೃಚ್ಛಸಿ ॥9॥
ಎಲೈ ಅರಿಂದಮನೇ, ನಾನು ಕೇಳಿದಂತೆ ನಿನಗೆ ಆ ಭಾರತ ವರ್ಷವನ್ನು ನಿರೂಪಣೆ ಮಾಡುವೆನು. ರಾಜನೇ, ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಹೇಳುವ ನನ್ನ ಮಾತುಗಳನ್ನು ಕೇಳುವವನಾಗು.

ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನ್ ಋಕ್ಷವಾನಪಿ |
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ||10||
ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷವಾನ್, ವಿಂಧ್ಯ, ಪಾರಿಯಾತ್ರ ಎಂಬ ಈ ಏಳು ಕುಲಪರ್ವತಗಳು.
ತೇಷಾಂ ಸಹಸ್ರಶೋ ರಾಜನ್ ಪರ್ವತಾಸ್ತು ಸಮೀಪತಃ |
ಅಭಿಜ್ಞಾತಾಃ ಸಾರವಂತೋ ವಿಪುಲಾಶ್ಚಿತ್ರಸಾನವಃ ||11||
ಎಲೈ ರಾಜನೇ, ಅವುಗಳ ಸಮೀಪದಲ್ಲಿ (ಬೇರೆ ಬೇರೆ) ಹೆಸರಿನಿಂದ ಪ್ರಸಿದ್ಧವಾಗಿರುವ ಬಲಿಷ್ಠವಾದ, ವಿಸ್ತಾರವಾದ, ವಿಚಿತ್ರವಾದ ಶಿಖರಗಳನ್ನು ಹೊಂದಿರುವ ಸಹಸ್ರಾರು ಪರ್ವತಗಳಿವೆ.
ಅನ್ಯೇ ತತೋಽಪರಿಜ್ಞಾತಾ ಹ್ರಸ್ವಾ ಹ್ರಸ್ವೋಪಜೀವಿನಃ |
ಆರ್ಯಾ ಮ್ಲೇಚ್ಛಾಶ್ಚ ಕೌರವ್ಯ ತೈರ್ಮಿಶ್ರಾಃ ಪುರುಷಾ ವಿಭೋ ||12||
ಇನ್ನೂ ಹೆಸರಿಲ್ಲದಿರುವ ಅನೇಕ ಪರ್ವತಗಳಿವೆ. ಅಲ್ಲಿಯ ಜನರು ಹ್ರಸ್ವಕಾಯರಾಗಿದ್ದು ಅಂತಹವರನ್ನೇ ಉಪಜೀವಿಸುತ್ತಾರೆ. ಎಲೈ ಪೌರವ್ಯನೇ, ವಿಭುವೇ, ಆರ್ಯರಿಂದ ಮತ್ತು ಮ್ಲೇಚ್ಛರಿಂದ ಮಿಶ್ರಿತರಾದ ಪುರುಷರು ಅಲ್ಲಿ ವಾಸಿಸುತ್ತಾರೆ.
ನದೀಃ ಪಿಬಂತಿ ಬಹುಲಾ ಗಂಗಾಂ ಸಿಂಧುಂ ಸರಸ್ವತೀಮ್ |
ಗೋದಾವರೀಂ ನರ್ಮದಾಂ ಚ ಬಾಹುದಾಂ ಚ ಮಹಾನದೀಮ್ ||
ಶತದ್ರುಂ ಚಂದ್ರಭಾಗಾಂ ಚ ಯಮುನಾಂ ಚ ಮಹಾನದೀಮ್ |
ದೃಷದ್ವತೀಂ ವಿಪಾಶಾಂ ಚ ವಿಪಾಪಾಂ ಸ್ಥೂಲವಾಲುಕಾಮ್ ||14||
ನದೀಂ ವೇತ್ರವತೀಂ ಚೈವ ಕೃಷ್ಣವೇಣಾಂ ಚ ನಿಮ್ನಗಾಮ್ |
ಇರಾವತೀಂ ವಿತಸ್ತಾಂ ಚ ಪಯೋಷ್ಣೀಂ ದೇವಿಕಾಮಪಿ ||15||
ಬಹಳವಾಗಿ ಮುಂದೆ ಹೇಳುವ ಈ ನದಿಗಳ ನೀರನ್ನು ಪಾನ ಮಾಡುತ್ತಾರೆ. ಗಂಗಾ, ಸಿಂಧು, ಸರಸ್ವತೀ, ಗೋದಾವರೀ, ನರ್ಮದಾ, ಬಾಹುದಾ, ಮಹಾನದೀ, ಶತದ್ರು, ಚಂದ್ರಭಾಗಾ, ಮಹಾನದಿಯಾದ ಯಮುನೆ, ದೃಷದ್ವತೀ, ವಿಪಾಶಾ, ವಿಪಾಪಾ, ಸ್ಥೂಲವಾಲುಕಾ, ವೇತ್ರವತೀ, ಕೃಷ್ಣವೇಣಾ, ಇರಾವತೀ, ವಿತಸ್ತಾ, ಪಯೋಷ್ಣೀ, ದೇವಿಕಾ;
ವೇದಸ್ಮೃತಿಂ ವೇತಸಿನೀಂ ತ್ರಿದಿವಾಮಿಕ್ಷುಮಾಲಿನೀಮ್ |
ಕರೀಷಿಣೀಂ ಚಿತ್ರವಹಾಂ ಚಿತ್ರಸೇನಾಂ ಚ ನಿಮ್ನಗಾಮ್ ||16||
ಗೋಮತೀಂ ಧೂತಪಾಪಾಂ ಚ ವಂದನಾಂ ಚ ಮಹಾನದೀಮ್ |
ಕೌಶಿಕೀಂ ತ್ರಿದಿವಾಂ ಕೃತ್ಯಾಂ ವಿಚಿತ್ರಾಂ ಲೋಹತಾರಿಣೀಮ್ ||17||
ರಥಸ್ಥಾಂ ಶತಕುಂಭಾಂ ಚ ಸರಯೂಂ ಚ ನರೇಶ್ವರ |
ಚರ್ಮಣ್ವತೀಂ ವೇತ್ರವತೀಂ ಹಸ್ತಿಸೋಮಾಂ ದಿಶಂ ತಥಾ ||18||
ವೇದಸ್ಮೃತಿ, ವೇತಸಿನೀ, ತ್ರಿದಿವಾ, ಇಕ್ಷುಮಾಲಿನೀ, ಕರೀಷಿಣೀ ಚಿತ್ರವಾಹಾ, ಚಿತ್ರಸೇನಾ, ಗೋಮತೀ, ಧೂತಪಾಪಾ, ಮಹಾನದಿಯಾದ ವಂದನಾ, ಕೌಶಿಕೀ, ತ್ರಿದಿವಾ, ಕೃತ್ಯಾ, ವಿಚಿತ್ರಾ, ಲೋಕತಾರಿಣೀ, ರಥಸ್ಥಾ, ಶತಕುಂಭಾ, ಸರಯೂ, ಚರ್ಮಣ್ವತೀ, ವೇತ್ರವತೀ, ಹಸ್ತಿಸೋಮಾ, ದಿಕ್;
ಶತಾವರೀಂ ಪಯೋಷ್ಣೀಂ ಚ ಪರಾಂ ಭೈಮರಥೀಂ ತಥಾ |
ಕಾವೇರೀಂ ಚುಲುಕಾಂ ಚಾಪಿ ವಾಪೀಂ ಶತಬಲಾಮಪಿ ||19||
ನಿಚೀರಾಂ ಮಹಿತಾಂ ಚಾಪಿ ಸುಪ್ರಯೋಗಾಂ ನರಾಧಿಪ |
ಪವಿತ್ರಾಂ ಕುಂಡಲಾಂ ಸಿಂಧುಂ ವಾಜಿನೀಂ ಪುರಮಾಲಿನೀಮ್ ||20||
ಪೂರ್ವಾಭಿರಾಮಾಂ ವೀರಾಂ ಚ ಭೀಮಾಮೋಘವತೀಂ ತಥಾ |
ಪಲಾಶಿನೀಂ ಪಾಪಹರಾಂ ಮಹೇಂದ್ರಾಂ ಪಿಪ್ಪಲಾವತೀಮ್ ||21||
ಶತಾವರೀ, ಪಯೋಷ್ಣೀ, ಭೈಮರಥೀ, ಕಾವೇರೀ, ಚುಲುಕಾ, ವಾಪೀ, ಶತಬಲಾ, ನಿಚೀರಾ, ಮಹಿತಾ, ಸುಪ್ರಯೋಗಾ, ಪವಿತ್ರಾ, ಕುಂಡಲಾ, ಸಿಂಧು, ವಾಜಿನೀ, ಪುರಮಾಲಿನೀ, ಪೂರ್ವಾಭಿಮುಖವಾಗಿ ಹರಿಯುವ ವೀರಾ, ಭೀಮಾ, ಮೋಘವತೀ, ಪಲಾಶಿನೀ, ಪಾಪಹರಾ, ಮಹೇಂದ್ರಾ, ಪಿಪ್ಪಲಾವತೀ;
ಪಾರಿಷೇಣಾಮಸಿಕ್ನೀಂ ಚ ಸರಲಾಂ ಭಾರಮರ್ದಿನೀಮ್ |
ಪುರುಹೀಂ ಪ್ರವರಾಂ ಮೇನಾಂ ಮೋಘಾಂ ಘೃತವತೀಂ ತಥಾ ||22||
ಧೂಮತ್ಯಾಮತಿಕೃಷ್ಣಾಂ ಚ ಸೂಚೀಂ ಛಾವೀಂ ಚ ಕೌರವ |
ಸದಾನೀರಾಮಧೃಷ್ಯಾಂ ಚ ಕುಶಧಾರಾಂ ಮಹಾನದೀಮ್ ||23||
ಶಶಿಕಾಂತಾಂ ಶಿವಾಂ ಚೈವ ತಥಾ ವೀರವತೀಮಪಿ |
ವಾಸ್ತುಂ ಸುವಾಸ್ತುಂ ಗೌರೀಂ ಚ ಕಂಪನಾಂ ಸಹಿರಣ್ವತೀಮ್ ||24||
ಪಾರಿಷೇಣಾ, ಅಸಿಕ್ನೀ, ಸರಲಾ, ಭಾರಮರ್ದಿನೀ, ಪುರುಹೀ, ಪ್ರವರಾ, ಮೇನಾ, ಮೋಘಾ, ಘೃತವತೀ, ಧೂಮಾತ್ಯಾ, ಅತಿಕೃಷ್ಣಾ, ಸೂಚೀ, ಛಾವೀ, ಸದಾನೀರಾ, ಅದೃಶ್ಯಾ, ಮಹಾನದಿಯಾದ ಕುಶಧಾರಾ, ಶಶಿಕಾಂತಾ, ಶಿವಾ, ವೀರವತೀ, ವಾಸ್ತು, ಸುವಾಸ್ತು, ಗೌರೀ, ಕಂಪನಾ, ಹಿರಣ್ವತೀ;
ಹಿರಣ್ವತೀಂ ಚಿತ್ರವತೀಂ ಚಿತ್ರಸೇನಾಂ ಚ ನಿಮ್ನಗಾಮ್ |
ರಥಚಿತ್ರಾಂ ಜ್ಯೋತಿರಥಾಂ ವಿಶ್ವಾಮಿತ್ರಾಂ ಕಪಿಂಜಲಾಮ್ ||25||
ಉಪೇಂದ್ರಾಂ ಬಹುಲಾಂ ಚೈವ ಕುಚರಾಮಂಬುವಾಹಿನೀಮ್ |

ವೇನಂದೀಂ ಪಿಂಜಲಾಂ ವೇಣ್ಣಾಂ ತುಂಗವೇಣಾಂ ಮಹಾನದೀಮ್ ॥
ವಿದಿಶಾಂ ಕೃಷ್ಣವೇಣ್ಣಾಂ ಚ ತಾಮ್ರಾಂ ಚ ಕಪಿಲಾಮಪಿ |
ಶಲುಂ ಸುವಾಮಾಂ ವೇದಾಶ್ವಾಂ ಹರಿಸ್ರಾವಾಂ ಮಹಾಪಗಾಮ್ ॥27॥
ಹಿರಣ್ವತೀ (ಹಿರಣ್ಮಯೀ), ಚಿತ್ರವತೀ, ಚಿತ್ರಸೇನಾ, ರಥಚಿತ್ರಾ, ಜ್ಯೋತಿರಥಾ, ವಿಶ್ವಾಮಿತ್ರಾ, ಕಪಿಂಜಲಾ, ಉಪೇಂದ್ರಾ, ಬಹುಲಾ, ಕುಚರಾ, ಅಂಬುವಾಹಿನೀ, ವೈನಂದೀ, ಪಿಂಜಲಾ, ವೇಣ್ಣಾ, ತುಂಗವೇಣಾ, ವಿದಿಶಾ, ಕೃಷ್ಣವೇಣಾ, ಕಪಿಲಾ, ಶಲು, ಸುವಾಮಾ, ವೇದಾಶ್ವಾ, ಹರಿಸ್ರಾವಾ;
ಶೀಘ್ರಾಂ ಚ ಪಿಚ್ಚಿಲಾಂ ಚೈವ ಭಾರದ್ವಾಜೀಂ ಚ ನಿಮ್ನಗಾಮ್ |
ಕೌಶಿಕೀಂ ನಿಮ್ನಗಾಂ ಶೋಣಾಂ ಬಾಹುದಾಮಥ ಚಂದನಾಮ್ ॥28॥
ದುರ್ಗಾಮಂತಃಶಿಲಾಂ ಚೈವ ಬ್ರಹ್ಮಮೇಧ್ಯಾಂ ಬೃಹದ್ವತೀಮ್ |
ಚರಕ್ಷಾಂ ಮಹಿರೋಹೀಂ ಚ ತಥಾ ಜಂಬುನದೀಮಪಿ ॥29॥
ಸುನಸಾಂ ತಮಸಾಂ ದಾಸೀಂ ತ್ರಸಾಮನ್ಯಾಂ ವರಾಣಸೀಮ್ |
ಲೋಲೋದ್ಧೃತಕರಾಂ ಚೈವ ಪೂರ್ಣಾಶಾಂ ಚ ಮಹಾನದೀಮ್ ॥
ಶೀಘ್ರಾ, ಪಿಚ್ಚಿಲಾ, ಭಾರದ್ವಾಜೀ, ಕೌಶಿಕೀ, ಶೋಣಾ, ಬಾಹುದಾ, ಚಂದನಾ, ದುರ್ಗಾ, ಅಂತಃಶಿಲಾ, ಬ್ರಹ್ಮಮೇಧ್ಯಾ, ಬೃಹದ್ವತೀ, ಚರಕ್ಷಾ, ಮಹಿರೋಹೀ, ಜಂಬುನದೀ, ಸುನಸಾ, ತಮಸಾ, ದಾಸೀ, ತ್ರಸಾ, ವರಾಣಸೀ, ಅಲೆಗಳಿಂದ ಚಂಚಲವಾದ ಪೂರ್ಣಾಶಾ;
ಮಾನವೀಂ ವೃಷಭಾಂ ಚೈವ ಮಹಾನದ್ಯೋ ಜನಾಧಿಪ |
ಸದಾನಿರಾಮಯಾಂ ವೃತ್ಯಾಂ ಮಂದಗಾಂ ಮಂದವಾಹಿನೀಮ್ ॥31॥
ಬ್ರಹ್ಮಾಣೀಂ ಚ ಮಹಾಗೌರೀಂ ದುರ್ಗಾಮಪಿ ಚ ಭಾರತ |
ಚಿತ್ರೋಪಲಾಂ ಚಿತ್ರಬರ್ಹಾಂ ಮಂಜುಂ ಮಕರವಾಹಿನೀಮ್ ॥32॥
ಮಂದಾಕಿನೀಂ ವೈತರಣೀಂ ಕೋಕಾಂ ಚೈವ ಮಹಾನದೀಮ್ |
ಶುಕ್ತಿಮತೀಮರಣ್ಯಾಂ ಚ ಪುಷ್ಪವೇಣ್ಯುತ್ಪಲಾವತೀಮ್ ॥33॥
ಮಾನವೀ, ವೃಷಭಾ, ಸದಾನಿರಾಮಯಾ, ವೃತ್ಯಾ, ಮಂದಗಾ, ಮಂದವಾಹಿನೀ, ಬ್ರಹ್ಮಾಣೀ, ಮಹಾಗೌರೀ, ದುರ್ಗಾ, ಚಿತ್ರೋಪಲಾ, ಚಿತ್ರಬರ್ಹಾ, ಮಂಜು, ಮಕರವಾಹಿನೀ, ಮಂದಾಕಿನೀ, ವೈತರಣೀ, ಮಹಾನದಿಯಾದ ಕೋಕಾ, ಶುಕ್ತಿಮತೀ, ಅರಣ್ಯಾ, ಪುಷ್ಪವೇಣೀ, ಉತ್ಪಲಾವತೀ;
ಲೋಹಿತ್ಯಾಂ ಕರತೋಯಾಂ ಚ ತಥೈವ ವೃಷಭಾಂಗಿನೀಮ್ |
ಕುಮಾರೀಮೃಷಿಕುಲ್ಯಾಂ ಚ ಬ್ರಹ್ಮಕುಲ್ಯಾಂ ಚ ಭಾರತ ॥34॥
ಸರಸ್ವತೀಃ ಸುಪುಣ್ಯಾಶ್ಚ ಸರ್ವಾ ಗಂಗಾಶ್ಚ ಮಾರಿಷ |
ವಿಶ್ವಸ್ಯ ಮಾತರಃ ಸರ್ವಾಃ ಸರ್ವಾಶ್ಚೈವ ಮಹಾಬಲಾಃ ॥35॥
ಲೋಹಿತ್ಯಾ, ಕರತೋಯಾ, ವೃಷಭಾಂಗಿನೀ, ಕುಮಾರೀ, ಋಷಿಕುಲ್ಯಾ, ಬ್ರಹ್ಮಕುಲ್ಯಾ, ಸರಸ್ವತೀ; ಎಲ್ಲೈ ಭಾರತನೇ, ಇವೇ ಮೊದಲಾದ ನದಿಗಳ ನೀರನ್ನು ಪಾನ ಮಾಡುತ್ತಾರೆ. ಎಲ್ಲೈ ವೀರನೇ, ಈ ನದಿಗಳೆಲ್ಲವೂ ಜಲಪೂರ್ಣವಾಗಿದ್ದು, ಪವಿತ್ರವೂ ಮತ್ತು ಗಂಗೆಯ ಸನ್ನಿಧಾನಕ್ಕೆ ಪಾತ್ರವೂ ಆಗಿವೆ. ಈ ಎಲ್ಲ ನದಿಗಳೂ ಜಗತ್ತಿನ ತಾಯಿಯ ಸ್ಥಾನದಲ್ಲಿದ್ದು, ಎಲ್ಲವೂ ಮಹಾಬಲದಿಂದ ಕೂಡಿವೆ.
ತಥಾ ನದ್ಯಸ್ತ್ವಪ್ರಕಾಶಾಃ ಶತಶೋಽಥ ಸಹಸ್ರಶಃ |
ಇತ್ಯೇತಾಃ ಸರಿತೋ ರಾಜನ್ ಸಮಾಖ್ಯಾತಾ ಯಥಾಸ್ಮೃತಿ ॥36॥
ಅದರಂತೆ ಪ್ರಸಿದ್ಧವಲ್ಲದ ನೂರಾರು, ಸಹಸ್ರಾರು ನದಿಗಳಿವೆ. ಎಲ್ಲೈ ರಾಜನೇ, ನನ್ನ ಸ್ಮರಣೆಗೆ ಬಂದಷ್ಟು ಈ ನದಿಗಳನ್ನು ನಿನಗೆ ಹೇಳಿದ್ದೇನೆ.
ಅಥ ಊರ್ಧ್ವಂ ಜನಪದಾನ್ನಿಬೋಧ ಗದತೋ ಮಮ |
ತತ್ರೇಮೇ ಕುರುಪಾಂಚಾಲಾಃ ಸಾಲ್ವಮಾದ್ರೇಯಜಾಂಗಲಾಃ ॥37॥
ಶೂರಸೇನಾಃ ಕಳಿಂಗಾಶ್ಚ ಬೋಧಾ ಮೌಕಾಸ್ತಥೈವ ಚ |
ಮತ್ಸ್ಯಾಃ ಸುಕುಟ್ಯಃ ಸೌಬಲ್ಯಾಃ ಕುಂತಲಾಃ ಕಾಶಿಕೋಶಲಾಃ ॥38॥
ಚೇದಿವತ್ಸಾಃ ಕರೂಷಾಶ್ಚ ಭೋಜಾಃ ಸಿಂಧುಪುಳಿಂದಕಾಃ |
ಉತ್ತಮೌಜಾ ದಶಾರ್ಣಾಶ್ಚ ಮೇಕಲಾಶ್ಚೋತ್ಕಲೈಃ ಸಹ ॥39॥
ಇನ್ನು ಮುಂದೆ ನಾನು ದೇಶಗಳನ್ನು ಹೇಳುವೆನು. ಅದನ್ನು ನನ್ನಿಂದ ಕೇಳು. ಅವುಗಳಲ್ಲಿ ಈ ಕುರುಪಾಂಚಾಲಗಳು, ಸಾಲ್ವ, ಮಾದ್ರೇಯ ಮತ್ತು ಜಾಂಗಲಗಳು, ಶೂರಸೇನ, ಕಳಿಂಗ, ಬೋಧ, ಮೌಕ, ಮತ್ಸ್ಯ, ಸುಕುಟಿ, ಸೌಬಲ್ಯ, ಕುಂತಲ, ಕಾಶಿಕೋಶಲಗಳು, ಚೇದಿ, ವತ್ಸ, ಕರೂಷ, ಭೋಜ, ಸಿಂಧು-ಪುಳಿಂದಕಗಳು, ಉತ್ತಮೌಜ, ದಶಾರ್ಣ, ಮೇಕಲ, ಉತ್ಕಲ;
ಪಾಂಚಾಲಾಃ ಕೌಶಿಜಾಶ್ಚೈವ ಏಕಪೃಷ್ಠಾ ಯುಗಂಧರಾಃ |
ಸೌಧಾ ಮದ್ರಾ ಭುಜಿಂಗಾಶ್ಚ ಕಾಶಯೋಽಪರಕಾಶಯಃ ॥40॥
ಜಠರಾಃ ಕುಕ್ಕುಶಾಶ್ಚೈವ ಸುದಾಶಾರ್ಣಾಶ್ಚ ಭಾರತ |
ಕುಂತಯೋಽವಂತಯಶ್ಚೈವ ತಥೈವಾಪರಕುಂತಯಃ ॥41॥
ಗೋವಿಂದಾ ಮಂದಕಾಃ ಷಂಡಾ ವಿದರ್ಭಾನೂಪವಾಸಿಕಾಃ |
ಅಶ್ಮಕಾಃ ಪಾಂಸುರಾಷ್ಟ್ರಾಶ್ಚ ಗೋಪರಾಷ್ಟ್ರಾಃ ಪನೀತಕಾಃ ॥42॥
ಪಾಂಚಾಲ, ಕೌಶಿಜ, ಏಕಪೃಷ್ಠ, ಯುಗಂಧರ, ಸೌಧ, ಮದ್ರ, ಭುಜಿಂಗ, ಕಾಶಿ, ಅಪರಕಾಶಿ, ಜಠರ, ಕುಕ್ಕುಶ, ಸುದಾಶಾರ್ಣ, ಕುಂತಿ,

ಅವಂತಿ, ಅಪರಕುಂತಿ, ಗೋವಿಂದ, ಮಂದಕ, ಷಂಡ, ವಿದರ್ಭ, ಅನುಪವಾಸಿ, ಅಶ್ಮಕ, ಪಾಂಸುರಾಷ್ಟ್ರ, ಗೋಪರಾಷ್ಟ್ರ, ಪನೀತಕ;
ಆದಿರಾಷ್ಟ್ರಾಃ ಸುಕುಟ್ಟಾಶ್ಚ ಬಲಿರಾಷ್ಟ್ರಂ ಚ ಕೇವಲಮ್ |
ವಾನರಾಸ್ಯಾಃ ಪ್ರವಾಹಾಶ್ಚ ವಕ್ರಾ ವಕ್ರಭಯಾಃ ಶಕಾಃ ॥43॥
ವಿದೇಹಕಾ ಮಾಗಧಾಶ್ಚ ಸುಹ್ಮಾಶ್ಚ ವಿಜಯಾಸ್ತಥಾ |
ಅಂಗಾ ವಂಗಾಃ ಕಳಿಂಗಾಶ್ಚ ಯಕೃಲ್ಲೋಮಾನ ಏವ ಚ ॥44॥
ಮಲ್ಲಾಃ ಸುದೇಷ್ಣಾಃ ಪ್ರಾಹೂತಾಸ್ತಥಾ ಮಾಹಿಷಕಾರ್ಷಿಕಾಃ |
ವಾಹೀಕಾ ವಾಟಧಾನಾಶ್ಚ ಆಭೀರಾಃ ಕಾಲತೋಯಕಾಃ ॥45॥
ಆದಿರಾಷ್ಟ್ರ, ಸುಕುಟ್ಟ, ಬಲಿರಾಷ್ಟ್ರ, ವಾನರಾಸ್ಯ, ಪ್ರವಾಹ, ವಕ್ರ, ವಕ್ರಭಯ, ಶಕ, ವಿದೇಹಕ, ಮಾಗಧ, ಸುಹ್ಮ, ವಿಜಯ, ಅಂಗ, ವಂಗ, ಕಳಿಂಗ, ಯಕೃಲ್ಲೋಮ, ಮಲ್ಲಾ, ಸುದೇಷ್ಣ, ಪ್ರಾಹೂತ, ಮಾಹಿಷಕಾರ್ಷಿಕ, ವಾಹೀಕ, ವಾಟಧಾನ, ಆಭೀರ, ಕಾಲತೋಯಕ;
ಅಪರಾಂಧ್ರಾಶ್ಚ ಶೂದ್ರಾಶ್ಚ ಪಹ್ಲವಾಶ್ಚರ್ಮಖಂಡಿಕಾಃ |
ಅಟವೀಶಾಬರಾಶ್ಚೈವ ಮರುಭೌಮಾಶ್ಚ ಮಾರಿಷ ॥46॥
ಉಪಾವೃತ್ತಾಶ್ಚಾನುಪಾವೃತ್ತಾಃ ಸುರಾಷ್ಟ್ರಾಃ ಕೇಕಯಾಸ್ತಥಾ |
ಕುಟ್ಟಾಃ ಪರಾಂತಾ ದ್ವೈಧೇಯಾಃ ಕಾಕ್ಷಾಃ ಸಾಮುದ್ರನಿಷ್ಕುಟಾಃ ॥47॥
ಆಂಧ್ರಾಶ್ಚ ಬಹವೋ ರಾಜನ್ನಂತರ್ಗಿರ್ಯಾಸ್ತಥೈವ ಚ |
ಬಾಹಿರ್ಗಿರ್ಯಾಂಗಮಲದಾ ಮಾಗಧಾ ಮಾನವರ್ಜಕಾಃ ॥48॥
ಅಪರಾಂಧ್ರ, ಶೂದ್ರ, ಪಲ್ಲವ, ಚರ್ಮಖಂಡಿಕ, ಅಟವೀಶಬರ, ಮರುಭೌಮ, ಉಪಾವೃತ್ತ, ಅನುಪಾವೃತ್ತ, ವಸುರಾಷ್ಟ್ರ, ಕೇಕಯ, ಕುಟ್ಟ, ಪರಾಂತ, ದ್ವೈಧೇಯ, ಕಾಕ್ಷ, ಸಾಮುದ್ರನಿಷ್ಕುಟ, ಆಂಧ್ರ, ಅನೇಕ ಅಂತರ್ಗಿರಿ ದೇಶಗಳು, ಬಹಿರ್ಗಿರಿ ದೇಶಗಳು, ಅಂಗ, ಮಲದ,ಮಾಗಧ, ಮಾನವರ್ಜಕ;
ಮಹ್ಯುತ್ತರಾಃ ಪ್ರಾವೃಷೇಯಾ ಭಾರ್ಗವಾಶ್ಚ ಜನಾಧಿಪ |
ಪುಂಡ್ರಾ ಭಾರ್ಗಾಃ ಕಿರಾತಾಶ್ಚ ಸುದೋಷ್ಣಾಃ ಪ್ರಮುದಾಸ್ತಥಾ ॥49॥
ಶಕಾ ನಿಷಾದಾ ನಿಷಧಾಸ್ತಥೈವಾನರ್ತನೈರ್ಋತಾಃ |
ದುಗೂಲಾಃ ಪ್ರತಿಮತ್ಸ್ಯಾಶ್ಚ ಕುಶಲಾಃ ಕುನಟಾಸ್ತಥಾ ॥50॥
ತೀರಗ್ರಾಹಾಸ್ಕರತೋಯಾ ರಾಜಿಕಾ ರಸ್ಯಕಾ ಗಣಾಃ |
ತಿಲಕಾಃ ಪಾರಸೀಕಾಶ್ಚ ಮಧುಮಂತಃ ಪ್ರಕುತ್ಸಕಾಃ ॥51॥
ಮಹ್ಯುತ್ತರ, ಪ್ರಾವೃಷೇಯ, ಭಾರ್ಗವ, ಪುಂಡ್ರ, ಭಾರ್ಗ, ಕಿರಾತ, ಸುದೋಷ್ಣ, ಪ್ರಮುದ, ಶಕ, ನಿಷಾದ, ನಿಷಧ, ಆನರ್ತ, ನೈಋತ, ದುಗೂಲ, ಪ್ರತಿಮತ್ಸ್ಯ, ಕುಶಲ, ಕುನಟ, ತೀರಗ್ರಹ, ಕರತೋಯ, ರಾಜಿಕ, ರಸ್ಯಕ, ಗಣ, ತಿಲಕ, ಪಾರಸೀಕ, ಮಧುಮಂತ, ಪ್ರಕುತ್ಸಕ;
ಕಾಶ್ಮೀರಾಃ ಸಿಂಧುಸೌವೀರಾ ಗಾಂಧಾರಾ ದರ್ಶಕಾಸ್ತಥಾ |
ಅಭೀಸಾರಾ ಕುಲೂತಾಶ್ಚ ಶೈವಲಾ ಬಾಹ್ಲಿಕಾಸ್ತಥಾ ॥52॥
ದರ್ವೀಕಾಃ ಸಕಚಾ ದರ್ವಾ ವಾತಜಾಮರಥೋರಗಾಃ |
ಬಹುವಾದ್ಯಾಶ್ಚ ಕೌರವ್ಯ ಸುದಾಮಾನಃ ಸುಮಲ್ಲಿಕಾಃ ॥53॥
ವಧ್ರಾಃ ಕರೀಷಕಾಶ್ಚಾಪಿ ಕುಳಿಂದೋಪತ್ಯಕಾಸ್ತಥಾ |
ವಾನಾಯವೋ ದಶಾಪಾರ್ಶ್ವಾ ರೋಮಾಣಃ ಕುಶಬಿಂದವಃ ॥54॥
ಕಾಶ್ಮೀರ, ಸಿಂಧುಸೌವೀರ, ಗಾಂಧಾರ, ದರ್ಶಕ, ಅಭೀಸಾರ, ಕುಲೂತ, ಶೈವಲ, ಬಾಹ್ಲಿಕ, ದರ್ವೀಕ, ಕಚ, ದರ್ವ, ವಾತಜಾಮ, ರಥೋರಗ, ಬಹುವಾದ್ಯ, ಸುದಾಮ, ಸುಮಲ್ಲಿಕ, ವಧ್ರ, ಕರೀಷಕ, ಕುಳಿಂದ, ಉಪತ್ಯಕ, ವಾನಾಯವ, ದಶಾಪಾರ್ಶ್ವ, ರೋಮ, ಕುಶಬಿಂದು;
ಕಚ್ಚಾ ಗೋಪಾಲಕಚ್ಚಾಶ್ಚ ಲಾಂಗಲಾಃ ಪರವಲ್ಲಕಾಃ |
ಕಿರಾತಾ ಬರ್ಬರಾಃ ಸಿದ್ಧಾ ವಿದೇಹಾಸ್ತಾಮ್ರಲಿಂಗಕಾಃ ॥55॥
ಓಷ್ಟ್ರಾಃ ಪುಂಡ್ರಾಃ ಸಸೈರಂಧ್ರ್ಯಾಃ ಪಾರ್ವತೀಯಾಶ್ಚ ಮಾರಿಷ |
ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ ॥56॥
ದ್ರವಿಡಾಃ ಕೇರಳಾಃ ಪ್ರಾಚ್ಯಾ ಭೂಷಿಕಾ ವನವಾಸಿನಃ |
ಉನ್ನತ್ಯಕಾ ಮಾಹಿಷಕಾ ವಿಕಲ್ಪಾ ಮೂಷಕಾಸ್ತಥಾ ॥57॥
ಕಚ್ಛ, ಗೋಪಾಲಕಚ್ಛ, ಲಾಂಗಲ, ಪರವಲ್ಲಕ, ಕಿರಾತ, ಬರ್ಬರ, ಸಿದ್ಧ, ವಿದೇಹ, ತಾಮ್ರಲಿಂಗಕ, ಓಷ್ಟ್ರ, ಪುಂಡ್ರ, ಸೈರಂಧ್ರ, ಪಾರ್ವತೀಯ; ಎಲ್ಲೈ ವೀರನಾದ ಭರತರ್ಷಭನೇ, ಇನ್ನು ಮುಂದಿನವು ದಕ್ಷಿಣ ಭಾಗದ ದೇಶಗಳು ದ್ರವಿಡ, ಕೇರಳ, ಪ್ರಾಚ್ಯ, ಭೂಷಿಕ, ವನವಾಸಿ, ಉನ್ನತ್ಯಕ, ಮಾಹಿಷಕ, ವಿಕಲ್ಪ, ಮೂಷಕ;
ಕರ್ಣಿಕಾಃ ಕುಂತಿಕಾಶ್ಚೈವ ಸೌದ್ಭಿದಾ ನಲವಾಲಕಾಃ |
ಕೌಕುಕ್ಕುಟಾಸ್ತಥಾ ಚೋಲಾಃ ಕೋಂಕಣಾ ಮಾಲವಾಣಕಾಃ ॥58॥
ಸಮಂಗಾಃ ಕೋಪನಾಶ್ಚೈವ ಕುಕುರಾಂಗದಮಾರಿಷಾಃ |
ಧ್ವಜಿನ್ಯುತ್ಸವಸಂಕೇತಾಸ್ತ್ರಿಗರ್ತಾಃ ಸರ್ವಸೇನಯಃ ॥59॥
ತ್ರ್ಯಂಗಾಃ ಕೇಕರಕಾಃ ಪ್ರೋಷ್ಠಾಃ ಪರಸಂಚರಕಾಸ್ತಥಾ |
ತಥೈವ ವಿಂಧ್ಯಪುಲಕಾಃ ಪುಲಿಂದಾಃ ಕಲ್ಕಲೈಃ ಸಹ ॥60॥

ಕರ್ಣಿಕ, ಕುಂತಿಕ, ಸೌದ್ವಿದ, ನಲಕಾಲಕ, ಕೌಕುಕ್ಕುಟಕ, ಚೋಲ, ಕೊಂಕಣ, ಮಾಲವಾಣಕ, ಸಮಂಗ, ಕೋಪನ, ಕುಕುರ, ಅಂಗದ, ಮಾರಿಷ, ಧ್ವಜಿ, ಉತ್ಸವಸಂಕೇತ, ತ್ರಿಗರ್ತ, ಸರ್ವಸೇನಿ, ತ್ರ್ಯಂಗ, ಕೇಕರಕ, ಪ್ರೋಷ್ಠ, ಪರಸಂಚರಕ, ವಿಂಧ್ಯಪುಲಕ, ಪುಲಿಂದ, ಕಲ್ಕಲ;

ಮಾಲಕಾ ಮಲ್ಲಕಾಶ್ಚೈವ ತಥೈವಾಪರವರ್ತಕಾಃ |
ಕುಲಿಂದಾಃ ಕುಲಕಾಶ್ಚೈವ ಕರಂಠಾಃ ಕುರಕಾಸ್ತಥಾ ॥61॥
ಮೂಷಕಾ ಸ್ತನಬಾಲಾಶ್ಚ ಸನೀಪಾಃ ಪತ್ತಿಪಂಜಕಾಃ |
ಆದಿದಾಯಾಃ ಸಿರಾಲಾಶ್ಚ ಸ್ತೂಬಕಾ ಸ್ತನಪಾಸ್ತಥಾ ॥62॥
ಹೃಷೀವಿದರ್ಭಾಃ ಕಾಂತೀಕಾಸ್ತಂಗಣಾಃ ಪರತಂಗಣಾಃ |
ಉತ್ತರಾಶ್ಚಾಪರೇ ಮ್ಲೇಚ್ಛಾ ಜನಾ ಭರತಸತ್ತಮ ॥63॥

ಮಾಲಕ, ಮಲ್ಲಕ, ಅಪರವರ್ತಕ, ಕುಲಿಂದ, ಕುಲಕ, ಕರಂಠ, ಕುರಕ, ಮೂಷಕ, ಸ್ತನಬಾಲ, ಸನೀಪ, ಪತ್ತಿಪಂಜಕ, ಆದಿದಾಯ, ಸಿರಾಲ, ಸ್ತೂಬಕ, ಸ್ತನಪ, ಹೃಷೀವಿದರ್ಭ, ಕಾಂತೀಕ, ತಂಗಣ, ಪರತಂಗಣ; ಎಲ್ಲೈ ಭಾರತಶ್ರೇಷ್ಠನೇ, ಇನ್ನು ಕೆಲವು ಉತ್ತರದಿಕ್ಕಿನ ಮ್ಲೇಚ್ಛ ಪ್ರದೇಶಗಳು.

ಯವನಾಶ್ಚೈವ ಸಕಾಂಬೋಜಾ ದಾರುಣಾ ಮ್ಲೇಚ್ಛಜಾತಯಃ |
ಸಕ್ಷದ್ದ್ರುಹಃ ಕುಂತಲಾಶ್ಚ ಹೂಣಾಃ ಪಾರತಕೈಃ ಸಹ ॥64॥
ತಥೈವ ಮರಧಾಶ್ಚೀನಾಸ್ತಥೈವ ದಶಮಾಲಿಕಾಃ |
ಕ್ಷತ್ರಿಯೋಪನಿವೇಶಾಶ್ಚ ವೈಶ್ಯಶೂದ್ರಕುಲಾನಿ ಚ ॥65॥
ಶೂದ್ರಾಭೀರಾಥ ದರದಾಃ ಕಾಶ್ಮೀರಾಃ ಪಶುಭಿಃ ಸಹ |
ಖಶಿಕಾಶ್ಚ ತುಖಾರಾಶ್ಚ ಪಲ್ಲವಾ ಗಿರಿಗಹ್ವರಾಃ ॥66॥

ಅವು ಯವನ, ಕಾಂಬೋಜ, ದಾರುಣ, ಸಕ್ಷದ್ದ್ರುಹ, ಕುಂತಲ, ಹೂಣ, ಪಾರತಕ ಮೊದಲಾದ ಮ್ಲೇಚ್ಛ ಪ್ರದೇಶಗಳು. ಅದರಂತೆ ಮರಧ, ಚೀನ, ದಶಮಾಲಿಕ, ಕ್ಷತ್ರಿಯರು ಮತ್ತು ವೈಶ್ಯ-ಶೂದ್ರರು ವಾಸಿಸುವ ಪ್ರದೇಶಗಳು. ಶೂದ್ರ, ಆಭೀರ, ದರದ, ಕಾಶ್ಮೀರ, ಪಶು, ಖಶಿಕ, ತುಖಾರ, ಪಲ್ಲವ, ಗಿರಿಗಹ್ವರ;

ಆತ್ರೇಯಾಃ ಸಭರದ್ವಾಜಾಸ್ತಥೈವ ಸ್ತನಯೋಷಿಕಾಃ |
ಔಪಕಾಶ್ಚ ಕಲಿಂಗಾಶ್ಚ ಕಿರಾತಾನಾಂ ಚ ಜಾತಯಃ ॥67॥
ತಾಮರಾ ಹಂಸಮಾರ್ಗಾಶ್ಚ ತಥೈವ ಕರಭಂಜಕಾಃ |
ಉದ್ದೇಶಮಾತ್ರೇಣ ಮಯಾ ದೇಶಾಃ ಸಂಕೀರ್ತಿತಾಃ ಪ್ರಭೋ ॥68॥

ಆತ್ರೇಯ, ಭರದ್ವಾಜ, ಸ್ತನಯೋಷಿಕ, ಔಪಕ, ಕಲಿಂಗ, ಕಿರಾತ, ತಾಮರ, ಹಂಸಮಾರ್ಗ, ಕರಭಂಜಕ ಮೊದಲಾದವುಗಳು. ಎಲ್ಲೈ ಪ್ರಭುವಾದ ಧೃತರಾಷ್ಟ್ರನೇ, ನಾನು ಕೇವಲ ಹೆಸರುಗಳಿಂದ ಮಾತ್ರ ನಿನಗೆ ದೇಶಗಳನ್ನು ಹೇಳಿದ್ದೇನೆ.

ಯಥಾಗುಣಬಲಂ ಚಾಪಿ ತ್ರಿವರ್ಗಸ್ಯ ಮಹಾಫಲಮ್ |
ದುಹ್ಯೇದ್ ಧೇನುಃ ಕಾಮಧುಕ್ ಚ ಭೂಮಿಃ ಸಮ್ಯಗನುಷ್ಠಿತಾ ॥69॥

ಹೇಗೆ ಧೇನುವು ಅದರ ಗುಣ ಮತ್ತು ಬಲಕ್ಕನುಗುಣವಾಗಿ ಸೇವಿಸಿದರೆ ಧರ್ಮಾರ್ಥಕಾಮರೂಪವಾದ ತ್ರಿವರ್ಗ ಫಲವನ್ನು ಕೊಡುವುದೋ, ಅದರಂತೆ ಭೂಮಿಯನ್ನು ಸರಿಯಾಗಿ ಪೋಷಿಸಿದರೆ ಕೇಳಿದ ಕಾಮವನ್ನು ಕೊಡುವುದು.

ತಸ್ಯಾಂ ಗೃಧ್ಯಂತಿ ರಾಜಾನಃ ಶೂರಾ ಧರ್ಮಾರ್ಥಕೋವಿದಾಃ |
ತೇ ತ್ಯಜಂತ್ಯಾಹವೇ ಪ್ರಾಣಾನ್ ರಸಾಗೃದ್ಧಾಸ್ತರಸ್ವಿನಃ ॥70॥

ಶೂರರೂ, ಧರ್ಮಾರ್ಥಕೋವಿದರೂ ಆದ ರಾಜರು ಆ ಭೂಮಿಯಲ್ಲಿ ಆಸೆಯುಳ್ಳವರಾಗುತ್ತಾರೆ. ಭೂಮಿಯಲ್ಲಿ ಮಹದಾಸೆಯುಳ್ಳ ವೇಗಶಾಲಿಗಳಾದ ಅವರು ಯುದ್ಧದಲ್ಲಿ ತಮ್ಮ ಪ್ರಾಣಗಳನ್ನು ತ್ಯಜಿಸುತ್ತಾರೆ.

ದೇವಮಾನುಷಕಾಯಾನಾಂ ಕಾಮಂ ಭೂಮಿಃ ಪರಾಯಣಮ್ |
ಅನ್ಯೋನ್ಯಸ್ಯಾವಲುಂಪಂತಿ ಸಾರಮೇಯಾ ಇವಾಮಿಷಮ್ ॥71॥

ದೇವತೆಗಳ ಮತ್ತು ಮನುಷ್ಯರ ಶರೀರವನ್ನು ಧರಿಸಿದವರಿಗೆ ಭೂಮಿಯು ಶ್ರೇಷ್ಠವಾದ ಆಶ್ರಯವಾದುದು. ನಾಯಿಗಳು ಮಾಂಸವನ್ನು ಎಳೆದಾಡಿದಂತೆ ಒಬ್ಬರನ್ನೊಬ್ಬರು ಘಾಸಿಗೊಳಿಸುತ್ತಾರೆ.

ರಾಜಾನೋ ಭರತಶ್ರೇಷ್ಠ ಭೋಕ್ತುಕಾಮಾ ವಸುಂಧರಾಮ್ |
ನ ಚಾಪಿ ತೃಪ್ತಿಃ ಕಾಮಾನಾಂ ವಿದ್ಯತೇ ಚೇಹ ಕಸ್ಯಚಿತ್ ॥72॥

ಎಲ್ಲೈ ಭರತಶ್ರೇಷ್ಠನೇ, ಎಲ್ಲ ರಾಜರೂ ಭೂಮಿಯನ್ನು ಭೋಗಿಸಲು ಬಯಸುತ್ತಾರೆ. ಆದರೂ ತೃಪ್ತಿಯನ್ನು ಹೊಂದುವುದಿಲ್ಲ. ಈ ಪ್ರಪಂಚದಲ್ಲಿ ಕಾಮದಿಂದ ತೃಪ್ತಿಯೇ ಇಲ್ಲವಷ್ಟೆ?

ತಸ್ಮಾತ್ ಪರಿಗ್ರಹೇ ಭೂಮಿರ್ಯತಂತೇ ಕುರುಪಾಂಡವಾಃ |
ಸಾಮ್ನಾ ದಾನೇನ ಭೇದೇನ ದಂಡೇನೈವ ಚ ಪಾರ್ಥಿವ ॥73॥

ಎಲ್ಲೈ ರಾಜನೇ, ಆದ್ದರಿಂದ ಕುರು-ಪಾಂಡವರು ಸಾಮ, ದಾನ, ಭೇದ ಮತ್ತು ದಂಡೋಪಾಯಗಳಿಂದ ಭೂಮಿಯನ್ನು ಪಡೆಯಲು ಯತ್ನಿಸುತ್ತಾರೆ.

ಪಿತಾ ಮಾತಾ ಚ ಪುತ್ರಶ್ಚ ಖಂ ದ್ಯೌಶ್ಚ ನರಪುಂಗವ |
ಭೂಮಿರ್ಭವತಿ ಭೂತಾನಾಂ ಸಮ್ಯಗಚ್ಛಿದ್ರದರ್ಶಿನಾಮ್ ॥74॥

ಭೂಮಿಯ ದೋಷವನ್ನು ಎಣಿಸದೇ ಪೂಜಿಸುವ ಎಲ್ಲ ಜೀವರಿಗೆ ಎಲ್ಲೈ ನರಶ್ರೇಷ್ಠನೇ, ಭೂಮಿಯು ತಂದೆಯೂ, ತಾಯಿಯೂ, ಪುತ್ರನೂ, ಅಂತರಿಕ್ಷವೂ, ಸ್ವರ್ಗವೂ ಆಗುತ್ತದೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದಶಮೋಽಧ್ಯಾಯಃ ॥
॥ ಇತಿ ಜಂಬೂಖಂಡನಿರ್ಮಾಣಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಚತುರ್ಯುಗದ ಪುರುಷರ ಆಯುರಾದಿ ವರ್ಣನೆ.
ಧೃತರಾಷ್ಟ್ರಃ
ಭಾರತಸ್ಯಾಸ್ಯ ವರ್ಷಸ್ಯ ತಥಾ ಹೈಮವತಸ್ಯ ಚ |
ಪ್ರಮಾಣಮಾಯುಷಃ ಸೂತ ಫಲಂ ಚಾಪಿ ಶುಭಾಶುಭಮ್ ॥1॥
ಅನಾಗತಮತಿಕ್ರಾಂತಂ ವರ್ತಮಾನಂ ಚ ಸಂಜಯ |
ಆಚಕ್ಷ್ವ ಮೇ ವಿಸ್ತರೇಣ ಹರಿವರ್ಷಂ ತಥೈವ ಚ ॥2॥
ಧೃತರಾಷ್ಟ್ರ ಎಲ್ಲೈ ಸಂಜಯನೇ, ಈ ಭಾರತವರ್ಷದ ಹಾಗೂ ಹೈಮವತ ವರ್ಷದ ಆಯುಃಪ್ರಮಾಣವನ್ನು ಹೇಳು. ಎಲ್ಲೈ ಸೂತನೇ, ಈಗಿರುವ, ಹಿಂದೆ ಉಂಟಾದ ಮತ್ತು ಮುಂದೆ ಬರಲಿರುವ ಶುಭಾಶುಭದ ಫಲಗಳನ್ನು ವಿಸ್ತಾರವಾಗಿ ಹೇಳು. ಅದರಂತೆ ಹರಿವರ್ಷದ ವಿಷಯವನ್ನೂ ನಿರೂಪಿಸು.
ಸಂಜಯಃ
ಚತ್ವಾರಿ ಭಾರತೇ ವರ್ಷೇ ಯುಗಾನಿ ಭರತರ್ಷಭ |
ಕೃತಂ ತ್ರೇತಾ ದ್ವಾಪರಂ ಚ ತಿಷ್ಯಂ ಚ ಕುರುವರ್ಧನ ॥3॥
ಸಂಜಯ ಎಲ್ಲೈ ಭರತರ್ಷಭನೇ, ಭಾರತವರ್ಷದಲ್ಲಿ ನಾಲ್ಕು ಯುಗಗಳು ಇವೆ. ಕುರುವರ್ಧನನೇ, ಅವು ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂದು.
ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾಯುಗಂ ವಿಭೋ |
ಸಂಕ್ಷೇಪಾದ್ ದ್ವಾಪರಸ್ಯಾಥ ತತಸ್ತಿಷ್ಯಂ ಪ್ರವರ್ತತೇ ॥4॥
ಮೊದಲು ಕೃತಯುಗವು ಉಂಟಾಗುತ್ತದೆ. ಎಲ್ಲೈ ವಿಭುವೇ, ಅನಂತರ ತ್ರೇತಾಯುಗ. ಅನಂತರ ಮುಗಿಯಲು ಬಂದಿರುವ ಈ ದ್ವಾಪರ ಯುಗ. ಅನಂತರ ಕಲಿಯುಗವು ಪ್ರವೃತ್ತವಾಗುತ್ತದೆ.
ಚತ್ವಾರಿ ಚ ಸಹಸ್ರಾಣಿ ವರ್ಷಾಣಾಂ ಕುರುಸತ್ತಮ |
ಆಯುಃಸಂಖ್ಯಾ ಕೃತಯುಗೇ ಸಂಖ್ಯಾತಾ ರಾಜಸತ್ತಮ ॥5॥
ಎಲ್ಲೈ ಕುರುಶ್ರೇಷ್ಠನೇ, ರಾಜಶ್ರೇಷ್ಠನೇ, ಕೃತಯುಗದಲ್ಲಿ ಮನುಷ್ಯರಿಗೆ ನಾಲ್ಕು ಸಹಸ್ರವರ್ಷಗಳು ಆಯುಃಪ್ರಮಾಣವೆಂದು ಪರಿಗಣನೆ ಮಾಡಲ್ಪಟ್ಟಿದೆ.
ತಥಾ ತ್ರೀಣಿ ಸಹಸ್ರಾಣಿ ತ್ರೇತಾಯಾಂ ಮನುಜಾಧಿಪ |
ದ್ವಿಸಹಸ್ರಂ ದ್ವಾಪರೇ ತು ಶತೇ ತಿಷ್ಠತಿ ಸಂಪ್ರತಿ ॥6॥
ಎಲ್ಲೈ ಮನುಜಾಧಿಪನೇ, ಅದರಂತೆ ತ್ರೇತಾಯುಗದಲ್ಲಿ ಮೂರುಸಹಸ್ರ ವರ್ಷಗಳು, ದ್ವಾಪರ ಯುಗದಲ್ಲಿ ಎರಡು ಸಹಸ್ರವರ್ಷಗಳು (ಅದು ಕಡಿಮೆಯಾಗಿ ಈಗ ನೂರಕ್ಕೆ ಬಂದು ನಿಂತಿದೆ).
ನ ಪ್ರಮಾಣಸ್ಥಿತಿರ್ಹ್ಯಸ್ತಿ ತಿಷ್ಯೇಽಸ್ಮಿನ್ ಭರತರ್ಷಭ |
ಗರ್ಭಸ್ಥಾಶ್ಚ ಮ್ರಿಯಂತೇಽತ್ರ ತಥಾ ಜಾತಾ ಮ್ರಿಯಂತಿ ಚ ॥7॥
ಎಲ್ಲೈ ಭರತರ್ಷಭನೇ, ಕಲಿಯುಗದಲ್ಲಿ ಇಷ್ಟೇ ಆಯುಸ್ಸು ಎಂಬ ನಿಯಮವಿಲ್ಲ. ಗರ್ಭದಲ್ಲಿದ್ದ ಶಿಶುಗಳೂ ಮೃತವಾಗುತ್ತವೆ ಮತ್ತು ಆಗ ತಾನೇ ಹುಟ್ಟಿದವುಗಳೂ ಮೃತವಾಗುತ್ತವೆ.
ಮಹಾಬಲಾ ಮಹಾಸತತ್ತ್ವಾಃ ಪ್ರಜಾ ಗುಣಸಮನ್ವಿತಾಃ |
ಅಜಾಯಂತ ಕೃತೇ ರಾಜನ್ ಮುನಯಃ ಸುತಪೋಧನಾಃ ॥8॥
ಎಲ್ಲೈ ರಾಜನೇ, ಕೃತಯುಗದಲ್ಲಿ ಮಹಾಬಲವುಳ್ಳ, ಮಹಾಧೈರ್ಯವುಳ್ಳ, ಗುಣಸಮನ್ವಿತರಾದ, ತಪೋಧನರಾದ ಋಷಿಗಳು ಜನಿಸಿದರು.

ಮಹೋತ್ಸಾಹಾ ಮಹಾತ್ಮಾನೋ ಧಾರ್ಮಿಕಾಃ ಸತ್ಯವಾದಿನಃ |
ಜಾತಾಃ ಕೃತಯುಗೇ ರಾಜನ್ ಧನಿನಃ ಪ್ರಿಯದರ್ಶನಾಃ ॥9॥
ಎಲ್ಲೈ ರಾಜನೇ, ಕೃತಯುಗದಲ್ಲಿ ಜನಿಸಿದವರು ಮಹಾಉತ್ಸಾಹಶಾಲಿಗಳೂ, ಮಹಾಪ್ರಯತ್ನಶೀಲರೂ, ಧಾರ್ಮಿಕರೂ, ಸತ್ಯವಾದಿಗಳೂ, ಶ್ರೀಮಂತರೂ ಮತ್ತು ನೋಡಲು ಸುಂದರರೂ ಆಗಿದ್ದರು.
ಆಯುಷ್ಮಂತೋ ಮಹಾವೀರಾ ಧನುರ್ಧರವರಾ ಯುಧಿ |
ಜಾಯಂತೇ ಕ್ಷತ್ರಿಯಾಃ ಶೂರಾಸ್ತ್ರೇತಾಯಾಂ ಚಕ್ರವರ್ತಿನಃ ॥10॥
ತ್ರೇತಾಯುಗದಲ್ಲಿ ದೀರ್ಘವಾದ ಆಯುಸ್ಸುಳ್ಳ ಮಹಾವೀರರೂ, ಯುದ್ಧದಲ್ಲಿ ಶ್ರೇಷ್ಠಧನುರ್ಧಾರಿಗಳೂ, ಶೂರರೂ ಆದ ಕ್ಷತ್ರಿಯ ಚಕ್ರವರ್ತಿಗಳು ಜನಿಸುತ್ತಾರೆ.
ಸರ್ವವರ್ಣಾ ಮಹಾರಾಜ ಜಾಯಂತೇ ದ್ವಾಪರೇ ಸತಿ |
ಮಹೋತ್ಸಾಹಾ ಮಹಾವೀರ್ಯಾಃ ಪರಸ್ಪರವಧೈಷಿಣಃ ॥11॥
ಮಹಾರಾಜನೇ, ದ್ವಾಪರಯುಗದಲ್ಲಿ ಎಲ್ಲ ವರ್ಣದವರೂ ಮಹಾ ಉತ್ಸಾಹ ಮತ್ತು ಮಹಾಪರಾಕ್ರಮದಿಂದ ಕೂಡಿ ಪರಸ್ಪರ

ವಧೆಯನ್ನು ಬಯಸುತ್ತಾ ಜನಿಸುತ್ತಾರೆ.
ತೇಜಸಾಽಲ್ಪೇನ ಸಂಯುಕ್ತಾಃ ಕ್ರೋಧನಾಃ ಪುರುಷಾ ನೃಪ |
ಲುಬ್ಧಾಶ್ಚಾನೃತಕಾಶ್ಚೈವ ತಿಷ್ಯೇ ಜಾಯಂತಿ ಭಾರತ ॥12॥
ಎಲೈ ಭಾರತನೇ, ಕಲಿಯುಗದಲ್ಲಿ ಜನಿಸುವವರು ಅಲ್ಪಸಾಮರ್ಥ್ಯವುಳ್ಳವರು, ಕ್ರೋಧಶೀಲರು, ಲೋಭಿಗಳು ಮತ್ತು ಸುಳ್ಳು ಹೇಳುವವರು.
ಈರ್ಷ್ಯಾ ಮಾನಸ್ತಥಾ ಕ್ರೋಧೋ ಮಾಯಾಽಸೂಯಾ ತಥೈವ ಚ |
ತಿಷ್ಯೇ ಭವಂತಿ ಮರ್ತ್ಯಾನಾಂ ರಾಗೋ ಲೋಭಶ್ಚ ಭಾರತ ॥13॥
ಎಲೈ ಭಾರತನೇ, ಮಾತ್ಸರ್ಯ, ಅಹಂಕಾರ, ಕ್ರೋಧ, ಕಪಟ, ಅಸೂಯೆ, ರಾಗ ಮತ್ತು ಲೋಭಗಳು ಕಲಿಯುಗದಲ್ಲಿ ಜನಿಸಿದ ಪುರುಷರಿಗೆ ಉಂಟಾಗುತ್ತವೆ.
ಸಂಕ್ಷೇಪೋ ವರ್ತತೇ ರಾಜನ್ ದ್ವಾಪರೇಽಸ್ಮಿನ್ ನರಾಧಿಪ |
ಗುಣೋತ್ತರಂ ಹೈಮವತಂ ಹರಿವರ್ಷಂ ತತಃ ಪರಮ್ ॥14॥
ಎಲೈ ರಾಜನೇ, ನರಾಧಿಪನೇ, ಈ ದ್ವಾಪರ ಯುಗವು ಕೊನೆಗೊಳ್ಳುತ್ತಿದೆ. ಭಾರತದ ಉತ್ತರದಲ್ಲಿರುವ ಹೈಮವತ ವರ್ಷ ಮತ್ತು ಅದರ ಉತ್ತರದಲ್ಲಿರುವ ಹರಿವರ್ಷಗಳು ಭಾರತಕ್ಕಿಂತಲೂ ಮೇಲೆ ಹೋದಂತೆ ಶ್ರೇಷ್ಠವಾದ ಗುಣಗಳನ್ನು ಹೊಂದಿವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಾದಶೋಽಧ್ಯಾಯಃ ॥
ಜಂಬೂಖಂಡನಿರ್ಮಾಣಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಜಂಬೂಖಂಡವಿನಿರ್ಮಾಣಪರ್ವ ॥
* * * * *

## 2. ಭೂಮಿಪರ್ವ

### ಹನ್ನೆರಡನೆಯ ಅಧ್ಯಾಯ

### ಶಾಕದ್ವೀಪ ವರ್ಣನೆ.

ಧೃತರಾಷ್ಟ್ರಃ
ಜಂಬೂಖಂಡಸ್ತ್ವಯಾ ಪ್ರೋಕ್ತೋ ಯಥಾವದಿಹ ಸಂಜಯ |
ವಿಷ್ಕಂಭಮಸ್ಯ ಪ್ರಬ್ರೂಹಿ ಪರಿಮಾಣಂ ಚ ತತ್ತ್ವತಃ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ನೀನು ಇಲ್ಲಿಯವರೆಗೆ ಜಂಬೂದ್ವೀಪವನ್ನು ಸರಿಯಾಗಿ ಹೇಳಿದ್ದೀಯೆ. ಜಂಬೂದ್ವೀಪದ ಗಾತ್ರವನ್ನು ಮತ್ತು ಪರಿಮಾಣವನ್ನು ಸರಿಯಾಗಿ ಹೇಳುವವನಾಗು.
ಜಂಬೂದ್ವೀಪದ ಆಯಾಮ-ವಿಸ್ತಾರಗಳು ಒಂದುಲಕ್ಷ ಯೋಜನವೆಂದು ಪ್ರಸಿದ್ಧವಾಗಿರುವುದರಿಂದ ಇಲ್ಲಿ ಅದರ ಬಗ್ಗೆ ಪ್ರಶ್ನೆಯಲ್ಲ. ಜಂಬೂದ್ವೀಪದ ಕೆಳಭಾಗದಿಂದ ಹಿಡಿದು ಮೇಲ್ಭಾಗದವರೆಗೆ ಇರುವ ಗಾತ್ರ (ಎತ್ತರವೆಷ್ಟು) ಎಂದೇ ಪ್ರಶ್ನೆ (ಲಕ್ಷ್ಯಾಲಂಕಾರ).
ಸಮುದ್ರಸ್ಯ ಪ್ರಮಾಣಂ ಚ ಸಮ್ಯಗಚ್ಛಿದ್ರದರ್ಶನ |
ಶಾಕದ್ವೀಪಂ ಚ ಮೇ ಬ್ರೂಹಿ ಕುಶದ್ವೀಪಂ ಚ ಸಂಜಯ ॥2॥
ಎಲೈ ನಿರ್ದುಷ್ಟ ಜ್ಞಾನವುಳ್ಳವನೇ, ಎಲೈ ಸಂಜಯನೇ, ಸಮುದ್ರದ ಪ್ರಮಾಣವನ್ನು ಮತ್ತು ಶಾಕದ್ವೀಪ ಮತ್ತು ಕುಶದ್ವೀಪವನ್ನು ನನಗೆ ಸರಿಯಾಗಿ ಹೇಳುವವನಾಗು.
ಶಾಲ್ಮಲಂ ಚೈವ ತತ್ತ್ವೇನ ಕ್ರೌಂಚದ್ವೀಪಂ ತಥೈವ ಚ |
ಬ್ರೂಹಿ ಗಾವಲ್ಗಣೇ ಸರ್ವಂ ರಾಹೋಃ ಸೋಮಾರ್ಕಯೋಸ್ತಥಾ ॥3॥
ಎಲೈ ಗಾವಲ್ಗಣಿಯೇ, ಹಾಗೆಯೇ ಶಾಲ್ಮಲ ದ್ವೀಪವನ್ನೂ, ಕ್ರೌಂಚದ್ವೀಪವನ್ನೂ ಮತ್ತು ರಾಹು-ಚಂದ್ರ-ಸೂರ್ಯ ಮೊದಲಾದ ಗ್ರಹಗಳ ವಿವರಗಳನ್ನೂ ನನಗೆ ಸರಿಯಾಗಿ ಹೇಳುವವನಾಗು.
ಸಂಜಯಃ
ರಾಜನ್ ಸುಬಹವೋ ದ್ವೀಪಾ ಯೈರಿದಂ ಸಂತತಂ ಜಗತ್ |
ಸಪ್ತ ತ್ವಹಂ ಪ್ರವಕ್ಷ್ಯಾಮಿ ಚಂದ್ರಾದಿತ್ಯೌ ಗ್ರಹಾಂಸ್ತಥಾ ॥4॥
ಸಂಜಯ ಎಲೈ ರಾಜನೇ, ಈ ಜಗತ್ತು ಅನೇಕ ದ್ವೀಪಗಳಿಂದ ತುಂಬಿದೆ. ಆದರೆ ನಾನು ಏಳು ದ್ವೀಪಗಳನ್ನೂ ಮತ್ತು ಸೂರ್ಯ-ಚಂದ್ರಾದಿ ಗ್ರಹಗಳನ್ನೂ ನಿನಗೆ ಹೇಳುವೆನು.
ಅಷ್ಟಾದಶ ಸಹಸ್ರಾಣಿ ಯೋಜನಾನಾಂ ವಿಶಾಂಪತೇ |
ಷಟ್‌ಶತಾನಿ ಚ ಪೂರ್ಣಾನಿ ವಿಷ್ಕಂಭೋ ಜಂಬುಪರ್ವತಃ ॥5॥
ಎಲೈ ರಾಜನೇ, ಜಂಬೂಪರ್ವತದ ಎತ್ತರವು ಸರಿಯಾಗಿ, ಪೂರ್ಣವಾಗಿ ಹದಿನೆಂಟು ಸಾವಿರದ ಆರುನೂರು ಯೋಜನಗಳಿವೆ (ಜಂಬೂದ್ವೀಪವು ಕ್ರಮವಾಗಿ ಪ್ರಸ್ಥಭೂಮಿಯಾಗಿ ಉಬ್ಬಿರುವುದರಿಂದ ಜಂಬೂದ್ವೀಪವನ್ನು ಜಂಬೂಪರ್ವತ ಎಂದೂ ಕರೆಯುತ್ತಾರೆ).
ಲಾವಣಸ್ಯ ಸಮುದ್ರಸ್ಯ ವಿಷ್ಕಂಭೋ ದ್ವಿಗುಣಃ ಸ್ಮೃತಃ |
ನಾನಾಜನಪದಾಕೀರ್ಣೋ ಮಣಿವಿದ್ರುಮಚಿತ್ರಿತಃ ॥6॥
ನೈಕಧಾತುವಿಚಿತ್ರೈಶ್ಚ ಪರ್ವತೈರುಪಶೋಭಿತಃ |
ಸಿದ್ಧಚಾರಣಸಂಕೀರ್ಣಃ ಸಾಗರಃ ಪರಿಮಂಡಲಃ ॥7॥

ಲವಣಸಮುದ್ರದ ವಿಸ್ತಾರವು ಜಂಬೂದ್ವೀಪದ ಎರಡರಷ್ಟಿದೆ. ವರ್ತುಲಾಕಾರವಾಗಿರುವ ಆ ಸಾಗರವು ಅನೇಕ ದೇಶಗಳಿಂದಲೂ, ಅನೇಕ ಮಣಿ- ಹವಳಗಳಿಂದಲೂ, ಅನೇಕ ಧಾತುಗಳಿಂದಲೂ, ಅನೇಕ ಪರ್ವತಗಳಿಂದಲೂ ಶೋಭಿತವಾಗಿ ಸಿದ್ಧ-ಚಾರಣರಿಂದ ನಿಬಿಡವಾಗಿದೆ.
ಶಾಕದ್ವೀಪಂ ಚ ವಕ್ಷ್ಯಾಮಿ ಯಥಾವದಿಹ ಪಾರ್ಥಿವ |
ಶೃಣು ಮೇ ತ್ವಂ ಯಥಾನ್ಯಾಯಂ ಬ್ರುವತಃ ಕುರುನಂದನ ||8||
ಎಲೈ ರಾಜನೇ, ಕುರುನಂದನನೇ, ನಾನು ನಿನಗೆ ಶಾಕದ್ವೀಪವನ್ನು ಸರಿಯಾಗಿ ಹೇಳುವೆನು. ನಾನು ಹೇಳಿದಂತೆ ನೀನು ಕೇಳುವವನಾಗು.

ಜಂಬೂದ್ವೀಪಪ್ರಮಾಣೇನ ದ್ವಿಗುಣಃ ಸ ನರಾಧಿಪ |
ವಿಷ್ಕಂಭೇಣ ಮಹಾರಾಜ ಸಾಗರೋಽಪಿ ವಿಭಾಗಶಃ |
ಕ್ಷೀರೋದೋ ಭರತಶ್ರೇಷ್ಠ ಯೇನ ಸಂಪರಿವಾರಿತಃ ||9||
ಎಲೈ ನರಾಧಿಪನೇ, ಮಹಾರಾಜನೇ, ಶಾಕದ್ವೀಪದ ಎತ್ತರವು ಜಂಬೂದ್ವೀಪದ ಎತ್ತರದ ಎರಡರಷ್ಟಿದೆ. ಎಲೈ ಭರತಶ್ರೇಷ್ಠನೇ, ಅದು ಕ್ಷೀರಸಮುದ್ರವನ್ನು ಸುತ್ತುವರಿದಿದೆ.
ತತ್ರ ಪುಣ್ಯಾ ಜನಪದಾ ನ ತತ್ರ ಮ್ರಿಯತೇ ಜನಃ |
ಕುತ ಏವ ಹಿ ದುರ್ಭಿಕ್ಷಂ ಕ್ಷಮಾತೇಜೋಯುತಾ ಹಿ ತೇ ||10||
ಅಲ್ಲಿ ಪುಣ್ಯದೇಶಗಳಿವೆ. ಅಲ್ಲಿಯ ಜನರು ಮರಣ ಹೊಂದುವುದಿಲ್ಲ. ಕ್ಷಮೆ ಮತ್ತು ತೇಜಸ್ಸುಳ್ಳ ಅವರಿಗೆ ಇನ್ನು ದುರ್ಭಿಕ್ಷವು ಎಲ್ಲಿಂದ ಬರಬೇಕು?
ಶಾಕದ್ವೀಪಸ್ಯ ಸಂಕ್ಷೇಪೋ ಯಥಾವದ್ ಭರತರ್ಷಭ |
ಉಕ್ತ ಏಷ ಮಹಾರಾಜ ಕಿಮನ್ಯಚ್ಛ್ರೋತುಮಿಚ್ಛಸಿ ||11||
ಎಲೈ ಭರತರ್ಷಭನೇ, ಶಾಕದ್ವೀಪವನ್ನು ಸಂಕ್ಷೇಪವಾಗಿ ಸರಿಯಾಗಿ ಹೇಳಿದ್ದೇನೆ. ಮಹಾರಾಜನೇ, ಬೇರೆ ಏನನ್ನು ಕೇಳಲು ಬಯಸುತ್ತೀಯೆ?
ಧೃತರಾಷ್ಟ್ರಃ
ಶಾಕದ್ವೀಪಸ್ಯ ಸಂಕ್ಷೇಪೋ ಯಥಾವದಿಹ ಸಂಜಯ |
ಉಕ್ತಸ್ತ್ವಯಾ ಮಹಾಭಾಗ ವಿಸ್ತರಂ ಬ್ರೂಹಿ ತತ್ತ್ವತಃ ||12||
ಧೃತರಾಷ್ಟ್ರ ಎಲೈ ಸಂಜಯನೇ, ನೀನು ಶಾಕದ್ವೀಪವನ್ನು ಸಂಕ್ಷೇಪವಾಗಿ ಸರಿಯಾಗಿ ಹೇಳಿದ್ದೀಯೆ. ಎಲೈ ಮಹಾನುಭಾವನೇ, ಅದನ್ನೇ ವಿಸ್ತಾರವಾಗಿ ಸರಿಯಾಗಿ ಹೇಳುವವನಾಗು.
ಸಂಜಯಃ
ತಥೈವ ಪರ್ವತಾ ರಾಜನ್ ಸಪ್ತಾತ್ರ ಮಣಿಭೂಷಿತಾಃ |
ರತ್ನಾಕರಾಸ್ತಥಾ ನದ್ಯಸ್ತೇಷಾಂ ನಾಮಾನಿ ಮೇ ಶೃಣು |
ಅತೀವಗುಣವತ್ಸರ್ವಂ ತತ್ರ ಪುಣ್ಯಂ ಜನಾಧಿಪ ||13||
ಸಂಜಯ ಎಲೈ ರಾಜನೇ, ಹಾಗೆಯೇ ಇಲ್ಲಿ ಮಣಿಭೂಷಿತವಾದ ಸಪ್ತ ಪರ್ವತಗಳೂ, ಸಪ್ತ ಸಾಗರಗಳೂ ಮತ್ತು ಸಪ್ತ ನದಿಗಳೂ ಇದೆ. ಎಲೈ ಜನಾಧಿಪನೇ, ಅಲ್ಲಿರುವ ಎಲ್ಲವೂ ಶ್ರೇಷ್ಠಗುಣವನ್ನು ಹೊಂದಿ ಪುಣ್ಯಪ್ರದವಾದವುಗಳು, ಅವುಗಳ ಹೆಸರನ್ನು ಕೇಳು.
ದೇವರ್ಷಿಗಂಧರ್ವಯುತಃ ಪರಮೋ ಮೇರುರುಚ್ಯತೇ |
ಪ್ರಾಗಾಯತೋ ಮಹಾರಾಜ ಮಲಯೋ ನಾಮ ಪರ್ವತಃ |
ಯತೋ ಮೇಘಾಃ ಪ್ರವರ್ತಂತೇ ಪ್ರಭವಂತಿ ಚ ಸರ್ವಶಃ ||14||*
ಎಲೈ ಮಹಾರಾಜನೇ, ದೇವರ್ಷಿ-ಗಂಧರ್ವರಿಂದ ಕೂಡಿದ ಶ್ರೇಷ್ಠವಾದ ಮೇರು ಎಂಬ ಪರ್ವತವಿದೆ (ಇದು ಇಲಾವೃತ ಖಂಡದ ಮಧ್ಯದಲ್ಲಿರುವ ಸುಮೇರುವಲ್ಲ). ಪೂರ್ವಕ್ಕೆ ಹಬ್ಬಿರುವ ಮಲಯ ಎಂಬ ಪರ್ವತವಿದೆ. ಅಲ್ಲಿಂದ ಮೇಘಗಳು ಉತ್ಪನ್ನವಾಗಿ ಎಲ್ಲ ಕಡೆಯಲ್ಲಿಯೂ ಹರಡುತ್ತದೆ.
ತತಃ ಪರೇಣ ಕೌರವ್ಯ ಜಲಧಾರೋ ಮಹಾಗಿರಿಃ |
ಯತ್ರ ನಿತ್ಯಮುಪಾದತ್ತೇ ವಾಸವಃ ಪರಮಂ ಜಲಮ್ ||
ಯತೋ ವರ್ಷಂ ಪ್ರಭವತಿ ವರ್ಷಾಕಾಲೇ ಜನೇಶ್ವರ ||15||
ಎಲೈ ಕೌರವ್ಯನೇ, ಜನೇಶ್ವರನೇ, ಅಲ್ಲಿಂದ ಉತ್ತರಕ್ಕೆ ಜಲಧಾರವೆಂಬ ಮಹಾಪರ್ವತವಿದೆ. ಅಲ್ಲಿ ಇಂದ್ರನು ಜಲವನ್ನು ತೆಗೆದುಕೊಂಡು ಮಳೆಗಾಲದಲ್ಲಿ ಮಳೆಯನ್ನಾಗಿ ಸುರಿಸುತ್ತಾನೆ.
ಉಚ್ಚೈರ್ಗಿರೀ ರೈವತಕೋ ಯತ್ರ ನಿತ್ಯಂ ಪ್ರತಿಷ್ಠಿತಾ |
ರೇವತೀ ದಿವಿ ನಕ್ಷತ್ರಂ ಪಿತಾಮಹಕೃತೋ ವಿಧಿಃ ||16||
ಎತ್ತರವಾದ ರೈವತಕವೆಂಬ ಇನ್ನೊಂದು ಪರ್ವತವಿದೆ. ಆಕಾಶದಲ್ಲಿರುವ ರೇವತೀ ನಕ್ಷತ್ರವು ಈ ಪರ್ವತದಲ್ಲಿ ನಿತ್ಯವೂ ಸನ್ನಿಹಿತವಾಗಿದೆ. ಇದು ಬ್ರಹ್ಮದೇವರ ಆದೇಶ.
ಉತ್ತರೇಣ ತು ರಾಜೇಂದ್ರ ಶ್ಯಾಮೋ ನಾಮ ಮಹಾಗಿರಿಃ |
ಯತಃ ಶ್ಯಾಮತ್ವಮಾಪನ್ನಾಃ ಪ್ರಜಾಃ ಜನಪದೇಶ್ವರ ||17||
ಎಲೈ ರಾಜೇಂದ್ರನೇ, ಜನಪದೇಶ್ವರನೇ, ಅದಕ್ಕಿಂತ ಉತ್ತರದಲ್ಲಿ ಶ್ಯಾಮ ಎಂಬ ದೊಡ್ಡ ಪರ್ವತವಿದೆ. ಆ ಪರ್ವತದಿಂದಾಗಿ ಅಲ್ಲಿನ ಪ್ರಜೆಗಳೆಲ್ಲರೂ ಶ್ಯಾಮ ವರ್ಣದವರಾಗಿದ್ದಾರೆ.

ಧೃತರಾಷ್ಟ್ರಃ
ಸುಮಹಾನ್ ಸಂಶಯೋ ಮೇಽದ್ಯ ಪ್ರೋಕ್ತಂ ಸಂಜಯ ಯತ್ ತ್ವಯಾ|
ಪ್ರಜಾಃ ಕಥಂ ಸೂತಪುತ್ರ ಸಂಪ್ರಾಪ್ತಾಃ ಶ್ಯಾಮತಾಮಿಹ ॥18॥
ಧೃತರಾಷ್ಟ್ರ ಎಲ್ಲೈ ಸಂಜಯನೇ, ನೀನು ಹೇಳಿದ ವಿಷಯದಲ್ಲಿ ನನಗೆ ಈ ದೊಡ್ಡ ಸಂಶಯವುಂಟಾಗಿದೆ. ಸೂತಪುತ್ರನೇ, ಪ್ರಜೆಗಳು ಹೇಗೆ ಶ್ಯಾಮವರ್ಣವನ್ನು ಹೊಂದುತ್ತಾರೆ?
ಸಂಜಯಃ
ಸರ್ವೇಷ್ವೇವ ಮಹಾಪ್ರಾಜ್ಞ ದ್ವೀಪೇಷು ಕುರುನಂದನ |
ಗೌರಃ ಕೃಷ್ಣಶ್ಚ ವರ್ಣೌ ದ್ವೌ ತಯೋರ್ವರ್ಣಾಂತರಂ ನೃಪ ॥19॥
ಸಂಜಯ ಎಲ್ಲೈ ಮಹಾಪ್ರಾಜ್ಞನೇ, ಕುರುನಂದನನೇ, ರಾಜನೇ, ಎಲ್ಲ ದ್ವೀಪಗಳಲ್ಲಿಯೂ ಬಿಳಿ ಮತ್ತು ಕಪ್ಪು ಎಂಬ ಎರಡೇ ಬಣ್ಣಗಳಿವೆ. ಈ ಶ್ಯಾಮವರ್ಣವು ಅದಕ್ಕಿಂತ ಭಿನ್ನವಾದುದು.
ಶ್ಯಾಮೋ ಯಸ್ಮಾತ್ ಪ್ರವೃತ್ತೋ ವೈ ತತ್ ತೇ ವಕ್ಷ್ಯಾಮಿ ಭಾರತ |
ಆಸ್ತೇಽತ್ರ ಭಗವಾನ್ ಕೃಷ್ಣಸ್ತತ್ಕಾಂತ್ಯಾ ಶ್ಯಾಮತಾಂ ಗತಃ ॥20॥
ಎಲ್ಲೈ ಭಾರತನೇ, ಈ ಶ್ಯಾಮವರ್ಣವು ಹೇಗೆ ಉಂಟಾಯಿತೆಂದು ನಾನು ನಿನಗೆ ಹೇಳುವೆನು. ಅಲ್ಲಿ ಭಗವಂತನಾದ ಕೃಷ್ಣನು ಇದ್ದಾನೆ. ಅವನ ಕಾಂತಿಯಿಂದ ಪ್ರಜೆಗಳಿಗೆ ಶ್ಯಾಮವರ್ಣವು ಉಂಟಾಯಿತು.
ತತಃ ಪರಂ ಕೌರವೇಂದ್ರ ದುರ್ಗಶೈಲೋ ಮಹೋದಯಃ |
ಕೇಸರೀ ಕೇಸರಯುತೋ ಯತೋ ವಾತಃ ಪ್ರವಾಯತಿ ॥21॥
ಎಲ್ಲೈ ಕೌರವೇಂದ್ರನೇ, ಅಲ್ಲಿಂದಾಚೆಗೆ ಮಹಾಸಂಪತ್ತಿಗೆ ಕಾರಣವಾದ, ದುರ್ಗಮವಾದ ಶಿಖರಗಳಿಂದ ಕೂಡಿದ ಕೇಸರವೆಂಬ ಪರ್ವತವಿದೆ. ಅಲ್ಲಿ ವಾಯುವು ಸಿಂಹಾಕಾರವನ್ನು ಧರಿಸಿ ಯಾವಾಗಲೂ ಬೀಸುತ್ತಾನೆ (ಲಕ್ಷ್ಯಾಲಂಕಾರ).
ತೇಷಾಂ ಯೋಜನವಿಷ್ಕಂಭೋ ದ್ವಿಗುಣಃ ಪ್ರವಿಭಾಗಶಃ |
ವರ್ಷಾಣಿ ತೇಷು ಕೌರವ್ಯಂ ಸಂಪ್ರೋಕ್ತಾನಿ ಮನೀಷಿಭಿಃ ॥22॥
ಎಲ್ಲೈ ಕೌರವ್ಯನೇ, ಅವುಗಳ ಗಾತ್ರವು ಪರಸ್ಪರವಾಗಿ ದ್ವಿಗುಣವಾಗಿದೆ. ಎಲ್ಲೈ ಕೌರವ್ಯನೇ, ಅಲ್ಲಿ ಒಂಬತ್ತು ವರ್ಷಗಳೂ ಜ್ಞಾನಿಗಳಿಂದ ಪ್ರಖ್ಯಾತವಾಗಿವೆ.
ಮಹಾಮೇರುರ್ಮಹಾಕಾಶೋ ಜಲದಃ ಕುಮುದೋತ್ತರಃ |
ಜಲಧಾರಾತ್ ಪರೋ ರಾಜನ್ ಸುಕುಮಾರ ಇತಿ ಸ್ಮೃತಃ ॥23॥
ಮಹಾಮೇರು, ಮಹಾಕಾಶ, ಜಲದ, ಕುಮುದೋತ್ತರ (ಇವು ನಾಲ್ಕು ವರ್ಷಗಳು). ಎಲ್ಲೈ ರಾಜನೇ, ಜಲಧಾರ ಪರ್ವತದ ಆಚೆಗೆ ಸುಕುಮಾರ ವರ್ಷವೆಂದು ಹೇಳಲ್ಪಡುತ್ತದೆ.
ರೈವತಸ್ಯ ತು ಕೌಮಾರಃ ಶ್ಯಾಮಸ್ಯ ತು ಮಣೀಚಕಃ |
ಕೇಸರಸ್ಯಾಥ ಮೋದಾಕೀ ಪರೇಣ ತು ಮಹಾಪುಮಾನ್ ॥24॥
ರೈವತ ಪರ್ವತದ ಆಚೆಗೆ ಕೌಮಾರ ವರ್ಷವೂ, ಶ್ಯಾಮ ಪರ್ವತದ ಆಚೆಗೆ ಮಣೀಚಕವೂ, ಕೇಸರ ಪರ್ವತದ ಆಚೆಗೆ ಮೋದಾಕೀ ವರ್ಷವೂ, ಅದರಿಂದ ಆಚೆಗೆ ಮಹಾಪುಮಾನ್ ಎಂಬ ವರ್ಷವೂ ಇದೆ.
ಪರಿವಾರ್ಯ ತು ಕೌರವ್ಯ ದೈರ್ಘ್ಯಂ ಹ್ರಸ್ವತ್ವಮೇವ ಚ |
ಜಂಬೂದ್ವೀಪೇನ ವಿಖ್ಯಾತಸ್ತಸ್ಯ ಮಧ್ಯೇ ಮಹಾದ್ರುಮಃ ॥25॥
ಶಾಕೋ ನಾಮ ಮಹಾರಾಜ ತಸ್ಯ ದ್ವೀಪಸ್ಯ ಮಧ್ಯಗಃ |
ತತ್ರ ಪುಣ್ಯಾ ಜನಪದಾಃ ಪೂಜ್ಯತೇ ತತ್ರ ಶಂಕರಃ ॥26॥
ಎಲ್ಲೈ ಮಹಾರಾಜನೇ, ಈ ವರ್ಷಗಳು ಆ ಪರ್ವತಗಳ ದೀರ್ಘತೆ ಮತ್ತು ಹ್ರಸ್ವತೆಗೆ ಅನುಗುಣವಾಗಿ ಅವುಗಳನ್ನು ಸುತ್ತಿಕೊಂಡಿವೆ. ಶಾಕದ್ವೀಪದ ಮಧ್ಯದಲ್ಲಿ ಜಂಬೂದ್ವೀಪ ಪ್ರಮಾಣವಾದ ಲಕ್ಷಯೋಜನದಷ್ಟು ವಿಸ್ತಾರವಾಗಿರುವ ಶಾಕವೆಂಬ ಮಹಾವೃಕ್ಷವಿದೆ. ಶಾಕದ್ವೀಪದಲ್ಲಿ ಪುಣ್ಯಪ್ರದವಾದ ದೇಶವಿದೆ. ಅಲ್ಲಿ ಶಂಕರನು ಪೂಜಿಸಲ್ಪಡುತ್ತಾನೆ.
ತತ್ರ ಗಚ್ಛಂತಿ ಸಿದ್ಧಾಶ್ಚ ಚಾರಣಾ ದೈವತಾನಿ ಚ |
ಧಾರ್ಮಿಕಾಶ್ಚ ಪ್ರಜಾ ರಾಜಂಶ್ಚತ್ವಾರೋಽತೀವ ಭಾರತ ॥27॥
ಎಲ್ಲೈ ಭಾರತನೇ, ಅಲ್ಲಿಗೆ ಸಿದ್ಧರೂ, ಚಾರಣರೂ ಮತ್ತು ದೇವತೆಗಳೂ ಹೋಗುತ್ತಾರೆ. ಎಲ್ಲೈ ರಾಜನೇ, ನಾಲ್ಕು ರೀತಿಯ ಪ್ರಜೆಗಳೂ ಅಲ್ಲಿ ಪರಮ ಧಾರ್ಮಿಕರಾಗಿರುತ್ತಾರೆ.
ವರ್ಣಾಃ ಸ್ವಕರ್ಮನಿರತಾ ನ ಚ ಸ್ತೇನೋಽತ್ರ ದೃಶ್ಯತೇ |
ದೀರ್ಘಾಯುಷೋ ಮಹಾರಾಜ ಜರಾಮೃತ್ಯುವಿವರ್ಜಿತಾಃ ॥28॥
ವರ್ಣಗಳು ತಮ್ಮ ತಮ್ಮ ಕರ್ಮಗಳಲ್ಲಿ ನಿರತವಾಗಿರುತ್ತವೆ. ಇಲ್ಲಿ ಚೋರರು ಇರುವುದಿಲ್ಲ. ಮಹಾರಾಜನೇ, ಪ್ರಜೆಗಳು ಜರಾಮೃತ್ಯುವಿವರ್ಜಿತರಾಗಿ ದೀರ್ಘವಾದ ಆಯುಸ್ಸನ್ನು ಹೊಂದಿರುತ್ತಾರೆ.
ಪ್ರಜಾಸ್ತತ್ರ ವಿವರ್ಧಂತೇ ವರ್ಷಾಸ್ವಿವ ಸಮುದ್ರಗಾಃ |
ನದ್ಯಃ ಪುಣ್ಯಜಲಾಸ್ತತ್ರ ಗಂಗಾ ಚ ಬಹುಧಾಗತಿಃ ॥29॥
ಅಲ್ಲಿ ಪ್ರಜೆಗಳು ಮಳೆಗಾಲದ ನದಿಗಳಂತೆ ಅಭಿವೃದ್ಧಿಯನ್ನು ಹೊಂದುತ್ತಾರೆ. ನದಿಗಳಲ್ಲಿ ಪವಿತ್ರವಾದ ಜಲವಿದೆ. ಗಂಗೆಯು ಅನೇಕ ವಿಧವಾಗಿ ಅಲ್ಲಿ ಹರಿಯುತ್ತಾಳೆ.
ಸುಕುಮಾರೀ ಕುಮಾರೀ ಚ ಸೀತಾ ಕಾವೇರಕಾ ತಥಾ |

ಮಹಾನದೀ ಚ ಕೌರವ್ಯ ತಥಾ ಮಣಿಜಲಾ ನದೀ |
ಇಕ್ಷುವರ್ಧನಿಕಾ ಚೈವ ತಥಾ ಭರತಸತ್ತಮ ॥30॥
ಎಲೈ ಭರತಸತ್ತಮನೇ, ಸುಕುಮಾರೀ, ಕುಮಾರೀ, ಸೀತಾ, ಕಾವೇರಿಕಾ, ಮಹಾನದೀ, ಮಣಿಜಲಾ, ಇಕ್ಷುವರ್ಧನಿಕಾ ಇವೆಲ್ಲವೂ ಗಂಗೆಯ ಕವಲುಗಳೇ ಆಗಿವೆ.
ತತ್ರ ಪ್ರವೃತ್ತಾಃ ಪುಣ್ಯೋದಾ ನದ್ಯಃ ಕುರುಕುಲೋದ್ವಹ |
ಸಹಸ್ರಾಣಾಂ ಶತಾನ್ಯೇವ ಯತೋ ವರ್ಷತಿ ವಾಸವಃ ॥31॥
ಎಲೈ ಕುರುಕುಲೋದ್ವಹನೇ, ಅವುಗಳಿಂದ ಪವಿತ್ರವಾದ ನೀರನ್ನು ಹೊಂದಿದ ಲಕ್ಷಾಂತರ ನದಿಗಳು ಉಂಟಾಗುತ್ತವೆ. ಇಂದ್ರನು ಅವುಗಳಿಂದ ನೀರನ್ನು ತೆಗೆದುಕೊಂಡು ಮಳೆಯನ್ನು ಸುರಿಸುತ್ತಾನೆ.
ನ ತಾಸಾಂ ನಾಮಧೇಯಾನಿ ಪರಿಮಾಣಂ ತಥೈವ ಚ |
ಶಕ್ಯತೇ ಪರಿಸಂಖ್ಯಾತುಂ ಪುಣ್ಯಾಸ್ತಾ ಹಿ ಸರಿದ್ವರಾಃ ॥32॥
ಆ ನದಿಗಳಿಗೆ ಹೆಸರನ್ನಾಗಲೀ, ಅವುಗಳ ಪರಿಮಾಣವನ್ನಾಗಲೀ ಹೇಳಲು ಸಾಧ್ಯವಾಗುವುದಿಲ್ಲ. ಅವುಗಳನ್ನು ಎಣಿಸಲೂ ಸಾಧ್ಯವಾಗುವುದಿಲ್ಲ. ಎಲ್ಲವೂ ಪವಿತ್ರವಾದ ಶ್ರೇಷ್ಠವಾದ ನದಿಗಳಷ್ಟೆ!
ತತ್ರ ಪುಣ್ಯಾ ಜನಪದಾಶ್ಚತ್ವಾರೋ ಲೋಕಸಮ್ಮತಾಃ |
ಮಗಾಶ್ಚ ಮಶಕಾಶ್ಚೈವ ಮಾನಸಾ ಮಂದಗಾಸ್ತಥಾ ॥33॥
ಅಲ್ಲಿ ಪುಣ್ಯಪ್ರದವಾದ, ಲೋಕಸಮ್ಮತವಾದ ಮಗ, ಮಶಕ, ಮಾನಸ ಮತ್ತು ಮಂದಗ ಎಂಬ ನಾಲ್ಕು ದೇಶಗಳಿವೆ.
ಮಗಾ ಬ್ರಾಹ್ಮಣಭೂಯಿಷ್ಠಾಃ ಸ್ವಕರ್ಮನಿರತಾ ನೃಪ |
ಮಶಕೇಷು ತು ರಾಜನ್ಯಾ ಧಾರ್ಮಿಕಾಃ ಸರ್ವಕಾಮದಾಃ ॥34॥
ಎಲೈ ರಾಜನೇ, ಮಗದೇಶವು ತಮ್ಮ ಕರ್ಮದಲ್ಲಿ ನಿರತರಾದ ಬ್ರಾಹ್ಮಣರಿಂದ ಬಹಳವಾಗಿ ತುಂಬಿದೆ. ಮಶಕ ದೇಶದಲ್ಲಿ ಧಾರ್ಮಿಕರೂ, ಕೇಳುವ ಎಲ್ಲವನ್ನೂ ಕೊಡುವವರೂ ಆದ ರಾಜರಿದ್ದಾರೆ.
ಮಾನಸೇಷು ಮಹಾರಾಜ ವೈಶ್ಯಾಃ ಕರ್ಮೋಪಜೀವಿನಃ |
ಸರ್ವಕಾಮಸಮಾಯುಕ್ತಾಃ ಶೂರಾ ಧರ್ಮಾರ್ಥನಿಶ್ಚಿತಾಃ |
ಶೂದ್ರಾಸ್ತು ಮಂದಗೇ ನಿತ್ಯಂ ಪುರುಷಾ ಧರ್ಮಶೀಲಿನಃ ॥35॥
ಎಲೈ ಮಹಾರಾಜನೇ, ಮಾನಸ ದೇಶದಲ್ಲಿ ಕುಶಲಕರ್ಮಗಳಿಂದ ಜೀವಿಸುವ, ಸರ್ವಸಮೃದ್ಧಿಯಿಂದ ಕೂಡಿದ, ಧರ್ಮಾರ್ಥನಿಶ್ಚಯವುಳ್ಳ ಶೂರರಾದ ವೈಶ್ಯರಿದ್ದಾರೆ. ಮಂದಗ ದೇಶದಲ್ಲಿ ನಿತ್ಯವೂ ಧರ್ಮಶೀಲರಾದ ಶೂದ್ರರು ಇರುತ್ತಾರೆ.
ನ ತತ್ರ ರಾಜಾ ರಾಜೇಂದ್ರ ನ ದಂಡೋ ನ ಚ ದಂಡಿಕಾಃ |
ಸ್ವಧರ್ಮೇಣೈವ ಧರ್ಮಂ ಚ ತೇ ರಕ್ಷ್ಯಂತಿ ಪರಸ್ಪರಮ್ ॥36॥
ಎಲೈ ರಾಜೇಂದ್ರನೇ, ಅಲ್ಲಿ ರಾಜನಾಗಲೀ, ಅಥವಾ ದಂಡವನ್ನು ವಿಧಿಸುವ ಅಧಿಕಾರಿಯಾಗಲೀ ಇರುವುದಿಲ್ಲ. ಪ್ರಜೆಗಳು ತಮ್ಮ ತಮ್ಮ ಧರ್ಮಗಳಿಂದಲೇ ಪರಸ್ಪರವಾಗಿ ರಕ್ಷಣೆಯನ್ನು ಮಾಡಿಕೊಳ್ಳುತ್ತಾರೆ.
ಏತಾವದೇವ ಶಕ್ಯಂ ತು ತಸ್ಮಿನ್ ದ್ವೀಪೇ ಪ್ರಭಾಷಿತುಮ್ |
ಏತಾವದೇವ ಶ್ರೋತವ್ಯಂ ಶಾಕದ್ವೀಪೇ ಮಹೌಜಸಿ ॥37॥
ಶಾಕದ್ವೀಪದಲ್ಲಿ ಇಷ್ಟು ಮಾತ್ರ ಹೇಳಲು ಸಾಧ್ಯ. ಮಹಾಸಾಮರ್ಥ್ಯವುಳ್ಳ ಶಾಕದ್ವೀಪದ ವಿಷಯದಲ್ಲಿ ಇಷ್ಟನ್ನು ಮಾತ್ರ ಕೇಳಲು ಸಾಧ್ಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಾದಶೋಽಧ್ಯಾಯಃ ॥
॥ ಭೂಮಿಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ಕ್ರೌಂಚಾದಿ ದ್ವೀಪ ವರ್ಣನೆ.
ಸಂಜಯಃ
ಉತ್ತರೇಷು ತು ಕೌರವ್ಯ ದ್ವೀಪೇಷು ಶ್ರೂಯತೇ ಕಥಾ |
ಯಥಾಶ್ರುತಂ ಮಹಾರಾಜ ಬ್ರುವತಸ್ತನ್ನಿಬೋಧ ಮೇ ॥1॥
ಸಂಜಯ ಎಲೈ ಕೌರವ್ಯನೇ, ಮಹಾರಾಜನೇ, ಉತ್ತರ ದ್ವೀಪಗಳಲ್ಲಿ ಅನೇಕ ಕಥೆಗಳು ಕೇಳಿ ಬರುತ್ತವೆ. ನಾನು ಕೇಳಿದಂತೆ ಹೇಳುತ್ತೇನೆ. ಅದನ್ನು ಆಲಿಸು.
ಘೃತತೋಯಃ ಸಮುದ್ರೋಽತ್ರ ದಧಿಮಂಡೋದಕೋಽಪರಃ |
ಸುರೋದಃ ಸಾಗರಶ್ಚೈವ ತಥಾನ್ಯೋ ಧರ್ಮಸಾಗರಃ ॥2॥
ಘೃತ ಸಮುದ್ರ, ದಧಿಮಂಡೋದಕ ಸಮುದ್ರ, ಸುರೋದ ಹಾಗೆಯೇ ಧರ್ಮಸಾಗರ ಈ ಸಮುದ್ರಗಳು ಇವೆ.
ಪರಸ್ಪರೇಣ ದ್ವಿಗುಣಾಃ ಸರ್ವೇ ದ್ವೀಪಾ ನರಾಧಿಪ |
ಸರ್ವತಶ್ಚ ಮಹಾರಾಜ ಪರ್ವತೈಃ ಪರಿವಾರಿತಾಃ ॥3॥
ಎಲೈ ನರಾಧಿಪನೇ, ಮಹಾರಾಜನೇ, ಈ ಎಲ್ಲ ದ್ವೀಪಗಳು ಕ್ರಮವಾಗಿ ದ್ವಿಗುಣವಾದ ವಿಸ್ತಾರವನ್ನು ಹೊಂದಿವೆ ಮತ್ತು ಎಲ್ಲ ದ್ವೀಪಗಳೂ ಪರ್ವತಗಳಿಂದ ತುಂಬಿವೆ.

ಇಕ್ಷೂದಶ್ಚ ಸುರೋದಶ್ಚ ಸರ್ಪಿಃ ಕ್ಷೀರೋದಧಿಸ್ತದಾ |
ದಧಿಮಂಡೋದಧಿಶ್ಚಾನ್ಯಃ ಶುದ್ಧೋದಧಿರಥೋ ಮಹಾನ್ ||4||
ಇಕ್ಷುರಸೋದ, ಸುರೋದ, ಘೃತೋದ, ಕ್ಷೀರೋದ, ದಧಿಮಂಡೋದ ಮತ್ತು ಶುದ್ಧೋದ ಎಂಬ ಸಮುದ್ರಗಳು ಕ್ರಮವಾಗಿ ಇವೆ (ಭಾಗವತ ತಾತ್ಪರ್ಯದಲ್ಲಿ ಹೇಳಿರುವಂತೆ ಇಲ್ಲಿ ಕ್ಷೀರೋದ ಎಂದರೆ ಸಿಹಿಯಾದ ಮೊಸರಿನ ಸಮುದ್ರ, ದಧಿ ಮಂಡೋದವೆಂದರೆ ಮೊಸರಿನಂತೆ ಗಟ್ಟಿಯಾದ ಹಾಲಿನ ಸಮುದ್ರ).
ಗೌರಸ್ತು ಮಧ್ಯಮೇ ದ್ವೀಪೇ ಗಿರಿರ್ಮಾನಃಶಿಲೋ ಮಹಾನ್ |
ಪರ್ವತಃ ಪಶ್ಚಿಮಃ ಕೃಷ್ಣೋ ನಾರಾಯಣನಿಭೋ ನೃಪ ||5||
ಈ ಸಪ್ತದ್ವೀಪಗಳ ಮಧ್ಯದಲ್ಲಿರುವ ಕ್ರೌಂಚದ್ವೀಪದಲ್ಲಿ ಪೂರ್ವಭಾಗದಲ್ಲಿ ಮಾನಃಶಿಲ ಎಂಬ ಹೆಸರಿನ ಗೌರ ವರ್ಣದ ಒಂದು ಪರ್ವತವಿದೆ. ಅದೇ ದ್ವೀಪದ ಪಶ್ಚಿಮ ಭಾಗದಲ್ಲಿ ನಾರಾಯಣನ ಕಾಂತಿಯನ್ನು ಹೊಂದಿದ ಕೃಷ್ಣ ಎಂಬ ಪರ್ವತವಿದೆ.
ತತ್ರ ರತ್ನಾನಿ ದಿವ್ಯಾನಿ ಸ್ವಯಂ ರಕ್ಷತಿ ಕೇಶವಃ |
ಪ್ರಜಾಪತಿಮುಪಾಸೀನಃ ಪ್ರಜಾನಾಂ ವಿದಧೇ ಸುಖಮ್ ||6||
ಅಲ್ಲಿ ಕೇಶವನು ಸ್ವತಃ ದಿವ್ಯವಾದ ರತ್ನಗಳನ್ನು ರಕ್ಷಿಸುತ್ತಾನೆ. ಪ್ರಜಾಪತಿಗಳ ಸಮೀಪದಲ್ಲಿ ಕುಳಿತವನಾಗಿ ಪ್ರಜೆಗಳಿಗೆ ಸುಖವನ್ನು ಉಂಟುಮಾಡುತ್ತಾನೆ.
ಕುಶದ್ವೀಪೇ ಕುಶಸ್ತಂಭೋ ಮಧ್ಯೇ ಜನಪದಸ್ಯ ಹ |
ಸಂಪೂಜ್ಯತೇ ಶಾಲ್ಮಲಿಶ್ಚ ದ್ವೀಪೇ ಶಾಲ್ಮಲಿಕೇ ನೃಪ ||7||
ಎಲೈ ರಾಜನೇ, ಕುಶದ್ವೀಪ ದೇಶದ ಮಧ್ಯದಲ್ಲಿ ಕುಶದ ಒಂದು ಪೊದೆ ಇದೆ. ಅದೂ ಮತ್ತು ಶಾಲ್ಮಲಿ ದ್ವೀಪದಲ್ಲಿ ಇರುವ ಶಾಲ್ಮಲಿ ವೃಕ್ಷವೂ ಪೂಜಿಸಲ್ಪಡುತ್ತವೆ.
ಕ್ರೌಂಚದ್ವೀಪೇ ಮಹಾಕ್ರೌಂಚೋ ಗಿರೀ ರತ್ನಚಯಾಕರಃ |
ಸಂಪೂಜ್ಯತೇ ಮಹಾರಾಜ ಚಾತುರ್ವರ್ಣ್ಯೇನ ನಿತ್ಯದಾ ||8||
ಎಲೈ ಮಹಾರಾಜನೇ, ಕ್ರೌಂಚದ್ವೀಪದಲ್ಲಿ ರತ್ನಸಮೂಹಗಳಿಗೆ ಆಶ್ರಯವಾದ ಕ್ರೌಂಚವೆಂಬ ಮಹಾಪರ್ವತವಿದೆ. ಅದು ಯಾವಾಗಲೂ ನಾಲ್ಕು ವರ್ಣದ ಪ್ರಜೆಗಳಿಂದ ಪೂಜಿಸಲ್ಪಡುತ್ತದೆ.
ಗೋಮಂದಃ ಪರ್ವತೋ ರಾಜನ್ ಸುಮಹಾನ್ ಸರ್ವಧಾತುಮಾನ್ |
ಯತ್ರ ನಿತ್ಯಂ ನಿವಸತಿ ಶ್ರೀಮಾನ್ ಕಮಲಲೋಚನಃ |
ಮೋಕ್ಷಿಭಿಃ ಸಂಸ್ತುತೋ ನಿತ್ಯಂ ಪ್ರಭುರ್ನಾರಾಯಣೋ ಹರಿಃ ||9||
ಕುಶದ್ವೀಪದಲ್ಲಿ ಗೋಮಂದನೆಂಬ ಸರ್ವಧಾತುಗಳಿಂದ ಕೂಡಿದ ಇನ್ನೊಂದು ದೊಡ್ಡ ಪರ್ವತವಿದೆ. ಅಲ್ಲಿ ನಿತ್ಯವೂ ಸಂಪದ್ಯುಕ್ತನಾದ, ಕಮಲನೇತ್ರನಾದ, ಪ್ರಭುವಾದ ನಾರಾಯಣನು ಮೋಕ್ಷಾರ್ಥಿಗಳಿಂದ ಯಾವಾಗಲೂ ಸ್ತೋತ್ರ ಮಾಡಲ್ಪಡುತ್ತಾನೆ.
ಕುಶದ್ವೀಪೇ ತು ರಾಜೇಂದ್ರ ಪರ್ವತೋ ವಿದ್ರುಮೈಶ್ಚಿತಃ |
ಸುಧಾಮಾ ನಾಮ ದುರ್ಧರ್ಷೋ ದ್ವಿತೀಯೋ ಹೇಮಪರ್ವತಃ ||10||
ಎಲೈ ರಾಜೇಂದ್ರನೇ, ಕುಶದ್ವೀಪದಲ್ಲಿ ಹವಳಗಳಿಂದ ತುಂಬಿದ ಸುಧಾಮ ಎಂಬ ಏರಲು ಅಸಾಧ್ಯವಾದ ಸುವರ್ಣಮಯವಾದ ಇನ್ನೊಂದು ಪರ್ವತವಿದೆ.
ದ್ಯುತಿಮಾನ್ನಾಮ ಕೌರವ್ಯ ತೃತೀಯಃ ಕುಮುದೋ ಗಿರಿಃ |
ಚತುರ್ಥಃ ಪುಷ್ಪವಾನ್ನಾಮ ಪಂಚಮಸ್ತು ಕುಶೇಶಯಃ ||11||
ಎಲೈ ಕೌರವ್ಯನೇ, ಅಲ್ಲಿಯೇ ದ್ಯುತಿಮಾನ್ ಎಂಬ ಮೂರನೆಯ ಪರ್ವತವಿದೆ. ಅದಕ್ಕೆ ಕುಮುದ ಎಂದೂ ಹೆಸರು. ನಾಲ್ಕನೆಯ ಪರ್ವತವು ಪುಷ್ಪವಾನ್, ಐದನೆಯ ಪರ್ವತದ ಹೆಸರು ಕುಶೇಶಯ.
ಷಷ್ಠೋ ಹರಿಗಿರಿರ್ನಾಮ ಷಡೇತೇ ಪರ್ವತೋತ್ತಮಾಃ |
ತೇಷಾಮಂತರವಿಷ್ಕಂಭೋ ದ್ವಿಗುಣಃ ಪ್ರತಿಭಾಗಶಃ ||12||
ಆರನೆಯದು ಹರಿಗಿರಿ ಎಂಬ ಪರ್ವತ. ಈ ಆರು ಪರ್ವತಗಳು ಕುಶದ್ವೀಪದಲ್ಲಿರುವ ಶ್ರೇಷ್ಠವಾದ ಪರ್ವತಗಳು. ಆ ಪರ್ವತದ ಮಧ್ಯಭಾಗದ ವಿಸ್ತಾರವು ಹಿಂದಿನ ಪರ್ವತದ ಎರಡರಷ್ಟಿದೆ.
ಔದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ವೇಣುಮಂಡಲಮ್ |
ತೃತೀಯಂ ವೈ ರಥಾಕಾರಂ ಚತುರ್ಥಂ ಪಾಲನಂ ಸ್ಮೃತಮ್ ||13||
ಧೃತಿಮತ್ ಪಂಚಕಂ ವರ್ಷಂ ಷಷ್ಠಂ ವರ್ಷಂ ಪ್ರಭಾಕರಮ್ |
ಸಪ್ತಮಂ ಕಾಪಿಲಂ ವರ್ಷಂ ಸಪ್ತೈತೇ ವರ್ಷಪುಂಜಕಾಃ ||14||
ಆ ಕುಶದ್ವೀಪದಲ್ಲಿ ಔದ್ಭಿದ ಎಂಬುದು ಮೊದಲನೆಯ ವರ್ಷ, ವೇಣುಮಂಡಲ ಎಂಬುದು ಎರಡನೆಯದು, ರಥಾಕಾರ ಎಂಬುದು ಮೂರನೆಯದು, ಪಾಲನ ಎಂಬುದು ನಾಲ್ಕನೆಯದು, ಧೃತಿಮತ್ ಎಂಬುದು ಐದನೆಯದು, ಪ್ರಭಾಕರ ಎಂಬುದು ಆರನೆಯ ವರ್ಷ, ಕಾಪಿಲ ಎಂಬುದು ಏಳನೆಯ ವರ್ಷ. ಇವು ಅಲ್ಲಿರುವ ವರ್ಷ ಸಮೂಹಗಳು.
ಏತೇಷು ದೇವಗಂಧರ್ವಾಃ ಪ್ರಜಾಶ್ಚ ಜಗತೀಶ್ವರ |
ವಿಹರಂತಿ ರಮಂತೇ ಚ ನ ತೇಷು ಮ್ರಿಯತೇ ಜನಃ ||15||
ಎಲೈ ರಾಜೇಂದ್ರನೇ, ಈ ವರ್ಷಗಳಲ್ಲಿ ದೇವ-ಗಂಧರ್ವರು ಮತ್ತು ಉಳಿದ ಪ್ರಜೆಗಳು ವಿಹಾರವನ್ನು ಮಾಡಿ ಸಂತೋಷಪಡುತ್ತಾರೆ. ಅಲ್ಲಿ ಯಾರೂ ಮರಣವನ್ನು ಹೊಂದುವುದಿಲ್ಲ.
ನ ತೇಷು ದಸ್ಯವಃ ಸಂತಿ ಮ್ಲೇಚ್ಛಜಾತ್ಯೋಽಪಿ ವಾ ನೃಪ |

ಗೌರಪ್ರಾಯೋ ಜನಃ ಸರ್ವಃ ಸುಕುಮಾರಾಶ್ಚ ಪಾರ್ಥಿವ ॥16॥
ಎಲೈ ರಾಜನೇ, ಅಲ್ಲಿ ಕಳ್ಳರು ಇರುವುದಿಲ್ಲ. ಮ್ಲೇಚ್ಛಜಾತಿಯ ಜನರೂ ಇರುವುದಿಲ್ಲ. ಎಲೈ ಪಾರ್ಥಿವನೇ, ಅಲ್ಲಿರುವ ಜನರೆಲ್ಲರೂ ಪ್ರಾಯಃ ಬಿಳಿಯ ಬಣ್ಣದವರಾಗಿದ್ದು ಕೋಮಲ ಶರೀರವುಳ್ಳವರಾಗಿರುತ್ತಾರೆ.
ಅವಶಿಷ್ಟೇಷು ವರ್ಷೇಷು ವಕ್ಷ್ಯಾಮಿ ಮನುಜೇಶ್ವರ |
ಯಥಾಶ್ರುತಂ ಮಹಾರಾಜ ತದವ್ಯಗ್ರಮನಾಃ ಶೃಣು ॥17॥
ಎಲೈ ಮನುಜೇಶ್ವರನೇ, ಉಳಿದ ದ್ವೀಪಗಳ ವಿಷಯದಲ್ಲಿ ನಾನು ಕೇಳಿದಂತೆ ಹೇಳುವೆನು. ಎಲೈ ಮಹಾರಾಜನೇ, ಸಮಾಧಾನಚಿತ್ತದಿಂದ ಕೇಳು.
ಕ್ರೌಂಚದ್ವೀಪೇ ಮಹಾರಾಜ ಕ್ರೌಂಚೋ ನಾಮ ಮಹಾಗಿರಿಃ |
ಕ್ರೌಂಚಾತ್ ಪರೋ ವಾಮನಕೋ ವಾಮನಾದಂಧಕಾರಕಃ ॥18॥
ಎಲೈ ಮಹಾರಾಜನೇ, ಕ್ರೌಂಚದ್ವೀಪದಲ್ಲಿ ಕ್ರೌಂಚ ಎಂಬ ದೊಡ್ಡ ಪರ್ವತವಿದೆ. ಕ್ರೌಂಚ ಪರ್ವತದ ನಂತರ ವಾಮನಕ ಎಂಬ ಪರ್ವತವೂ, ವಾಮನ ಎಂಬ ಪರ್ವತದ ನಂತರ ಅಂಧಕಾರಕ ಎಂಬ ಪರ್ವತವೂ ಇದೆ.
ಅಂಧಕಾರಾತ್ ಪರೋ ರಾಜನ್ ಮೈನಾಕಃ ಪರ್ವತೋತ್ತಮಃ |
ಮೈನಾಕಾತ್ ಪರತೋ ರಾಜನ್ ಗೋವಿಂದೋ ಗಿರಿರುತ್ತಮಃ ॥19॥
ಎಲೈ ಮಹಾರಾಜನೇ, ಅಂಧಕಾರಕ ಪರ್ವತದ ಆಚೆಗೆ ಶ್ರೇಷ್ಠವಾದ ಮೈನಾಕ ಪರ್ವತವಿದೆ. ಎಲೈ ರಾಜನೇ, ಮೈನಾಕ ಪರ್ವತದ ಆಚೆಗೆ ಶ್ರೇಷ್ಠವಾದ ಗೋವಿಂದ ಎಂಬ ಪರ್ವತವಿದೆ.
ಗೋವಿಂದಾತ್ ತು ಪರೋ ರಾಜನ್ ನಿಬಿಡೋ ನಾಮ ಪರ್ವತಃ |
ಪರಸ್ತು ದ್ವಿಗುಣಸ್ತೇಷಾಂ ವಿಷ್ಕಂಭೋ ವಂಶವರ್ಧನ ॥20॥
ಎಲೈ ರಾಜನೇ, ವಂಶವರ್ಧನನೇ, ಗೋವಿಂದ ಪರ್ವತದ ಆಚೆಗೆ ನಿಬಿಡವೆಂಬ ಪರ್ವತವಿದೆ. ಹಿಂದೆ ಹೇಳಿದಂತೆ ಅನಂತರ ಅನಂತರ ಪರ್ವತಗಳ ಮಧ್ಯಭಾಗದ ವಿಸ್ತಾರವು ಹಿಂದಿನ ಪರ್ವತಗಳ ಮಧ್ಯಭಾಗದ ವಿಸ್ತಾರಕ್ಕಿಂತ ಎರಡರಷ್ಟು ಇರುತ್ತದೆ.
ದೇಶಾಂಸ್ತತ್ರ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು |
ಕ್ರೌಂಚಸ್ಯ ಕುಶಲೋ ದೇಶೋ ವಾಮನಸ್ಯ ಮನೋನುಗಃ ॥21॥
ಅಲ್ಲಿರುವ ದೇಶಗಳನ್ನು ಹೇಳುವೆನು. ಅದನ್ನೂ ನನ್ನಿಂದ ಕೇಳು. ಕ್ರೌಂಚ ಪರ್ವತದ ಸಮೀಪದಲ್ಲಿ ಕುಶಲ ಎಂಬ ದೇಶ. ವಾಮನ ಪರ್ವತದ ಸಮೀಪದಲ್ಲಿ ಮನೋನುಗ ಎಂಬ ದೇಶ.
ಮನೋನುಗಾನ್ ಪರಶ್ಚೋಷ್ಣೋ ದೇಶಃ ಕುರುಕುಲೋದ್ವಹ |
ಉಷ್ಣಾತ್ ಪರಃ ಪ್ರಾವರಕಃ ಪ್ರಾವರಾದಂಧಕಾರಕಃ ॥22॥
ಮನೋನುಗ ದೇಶದ ಅನಂತರ ಉಷ್ಣದೇಶ. ಎಲೈ ಕುರುಕುಲೋದ್ವಹನೇ, ಉಷ್ಣ ದೇಶದ ಅನಂತರ ಪ್ರಾವರಕ ದೇಶ ಮತ್ತು ಪ್ರಾವರಕ ದೇಶದ ಅನಂತರ ಅಂಧಕಾರಕ ದೇಶವಿದೆ.
ಅಂಧಕಾರಕದೇಶಾತ್ ತು ಮುನಿದೇಶಃ ಪರಃ ಸ್ಮೃತಃ |
ಮುನಿದೇಶಾತ್ ಪರಶ್ಚೈವ ಪ್ರೋಚ್ಯತೇ ದುಂದುಭಿಸ್ವನಃ ॥23॥
ಅಂಧಕಾರಕ ದೇಶದ ಆಚೆಗೆ ಮುನಿದೇಶವಿದೆ ಎಂದು ಹೇಳಲ್ಪಡುತ್ತದೆ. ಮುನಿದೇಶದ ಆಚೆಗೆ ದುಂದುಭಿಸ್ವನ ದೇಶವು ಹೇಳಲ್ಪಡುತ್ತದೆ.
ಸಿದ್ಧಚಾರಣಸಂಕೀರ್ಣೋ ಗೌರಪ್ರಾಯೋ ಜನಾಧಿಪ |
ಏತೇ ದೇಶಾ ಮಹಾರಾಜ ದೇವಗಂಧರ್ವಸೇವಿತಾಃ ॥24॥
ಎಲೈ ಜನಾಧಿಪನೇ, ಈ ದೇಶಗಳು ಹೆಚ್ಚಾಗಿ ಗೌರವರ್ಣದ ಜನಗಳಿಂದ ಕೂಡಿದ್ದು, ಸಿದ್ಧ-ಚಾರಣರಿಂದ ನಿಬಿಡವಾಗಿವೆ. ಎಲೈ ಮಹಾರಾಜನೇ, ಈ ದೇಶಗಳು ದೇವ-ಗಂಧರ್ವರಿಂದಲೂ ಸೇವಿತವಾಗಿವೆ.
ಪುಷ್ಕರೇ ಪುಷ್ಕರೋ ನಾಮ ಪರ್ವತೋ ಮಣಿರತ್ನವಾನ್ |
ತತ್ರ ನಿತ್ಯಂ ನಿವಸತಿ ಸ್ವಯಂ ದೇವಃ ಪ್ರಜಾಪತಿಃ ॥25॥
ಪುಷ್ಕರ ದ್ವೀಪದಲ್ಲಿ ಪುಷ್ಕರ ಎಂಬ ಹೆಸರಿನ ಮಣಿರತ್ನಮಯವಾದ ಪರ್ವತವಿದೆ. ಅಲ್ಲಿ ಪ್ರಜಾಪತಿಯಾದ ಬ್ರಹ್ಮದೇವರು ನಿತ್ಯವೂ ವಾಸಿಸುತ್ತಾರೆ.
ತಂ ಪರ್ಯುಪಾಸತೇ ನಿತ್ಯಂ ದೇವಾಃ ಸರ್ವೇ ಮಹರ್ಷಿಭಿಃ |
ವಾಗ್ಭಿರ್ಮನೋನುಕೂಲಾಭಿಃ ಪೂಜಯಂತೋ ಜನಾಧಿಪ ॥26॥
ಎಲೈ ಜನಾಧಿಪನೇ, ಅವರನ್ನು ಎಲ್ಲ ದೇವತೆಗಳು ಮತ್ತು ಮಹರ್ಷಿಗಳು ಮನೋನುಕೂಲವಾದ ಸ್ತೋತ್ರದಿಂದ ಪೂಜಿಸುತ್ತಾ ಉಪಾಸನೆಯನ್ನು ಮಾಡುತ್ತಾರೆ.
ಜಂಬೂದ್ವೀಪಾತ್ ಪ್ರವರ್ತಂತೇ ರತ್ನಾನಿ ವಿವಿಧಾನ್ಯುತ |
ದ್ವೀಪೇಷು ತೇಷು ಸರ್ವೇಷು ಪ್ರಜಾನಾಂ ಕುರುನಂದನ ॥27॥
ಎಲೈ ಕುರುನಂದನನೇ, ಜಂಬೂದ್ವೀಪವನ್ನು ಆರಂಭಿಸಿ ಎಲ್ಲ ದ್ವೀಪಗಳಲ್ಲಿಯೂ ಪ್ರಜೆಗಳಿಗೆ ವಿವಿಧವಾದ ರತ್ನಗಳು ದೊರೆಯುತ್ತವೆ.
ವಿಪ್ರಾಣಾಂ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ |
ಆರೋಗ್ಯಾಯುಃಪ್ರಮಾಣಾಭ್ಯಾಂ ದ್ವಿಗುಣಂ ದ್ವಿಗುಣಂ ತತಃ ॥28॥
ಜಂಬೂದ್ವೀಪವನ್ನು ಆರಂಭಿಸಿ ಮುಂದೆ ಹೋದಂತೆ ಅಲ್ಲಿರುವ ಬ್ರಾಹ್ಮಣರ ಬ್ರಹ್ಮಚರ್ಯ, ಸತ್ಯ ಮತ್ತು ಇಂದ್ರಿಯನಿಗ್ರಹಗಳಿಂದ ಅವರ ಆರೋಗ್ಯ ಮತ್ತು ಆಯುಸ್ಸು ಎರಡೆರಡುಪಟ್ಟು ಹೆಚ್ಚಾಗುತ್ತಾ ಹೋಗುತ್ತವೆ.

ಏಕೋ ಜನಪದೋ ರಾಜನ್ ದ್ವೀಪೇಷ್ವೇತೇಷು ಭಾರತ |
ಉಕ್ತಾ ಜನಪದಾ ಯೇಷು ಧರ್ಮಶ್ಚೈಕಃ ಪ್ರದೃಶ್ಯತೇ ॥29॥
ಎಲೈ ರಾಜನೇ, ಭಾರತನೇ, ಈ ದ್ವೀಪದಲ್ಲಿ ಒಂದೇ ವಿಧವಾದ ದೇಶವಿದೆ. ಅನೇಕ ದೇಶಗಳಿದ್ದರೂ ಅವುಗಳಲ್ಲಿ ಒಂದೇ ವಿಧವಾದ ಧರ್ಮಾಚರಣೆಯು ಕಂಡು ಬರುತ್ತದೆ.
ಈಶ್ವರೋ ದಂಡಮುದ್ಯಮ್ಯ ಸ್ವಯಮೇವ ಪ್ರಜಾಪತಿಃ |
ದ್ವೀಪಾನೇತಾನ್ ಮಹಾರಾಜ ರಕ್ಷಂಸ್ತಿಷ್ಠತಿ ನಿತ್ಯದಾ ॥30॥
ಎಲೈ ಮಹಾರಾಜನೇ, ಪ್ರಜಾಪತಿಯಾದ ಈಶ್ವರನು ತಾನೇ ಕೈಯಲ್ಲಿ ದಂಡವನ್ನು ಹಿಡಿದು ಈ ದ್ವೀಪಗಳನ್ನು ಯಾವಾಗಲೂ ರಕ್ಷಿಸುತ್ತಾನೆ.
ಸ ರಾಜಾ ಸ ಶಿವೋ ರಾಜನ್ ಸ ಪಿತಾ ಸ ಪಿತಾಮಹಃ |
ಗೋಪಾಯತಿ ನರಶ್ರೇಷ್ಠ ಪ್ರಜಾಃ ಸಜಡಪಂಡಿತಾಃ ॥31॥
ಎಲೈ ರಾಜನೇ, ಅವನೇ ರಾಜ, ಅವನೇ ಶಿವ, ಅವನೇ ಪಿತಾ, ಅವನೇ ಪಿತಾಮಹ. ನರಶ್ರೇಷ್ಠನೇ, ಅವನು ಪಂಡಿತ-ಪಾಮರಾದಿ ಎಲ್ಲ ಪ್ರಜೆಗಳನ್ನೂ ರಕ್ಷಿಸುತ್ತಾನೆ.
ಭೋಜನಂ ಚಾತ್ರ ಕೌರವ್ಯ ಪ್ರಜಾಃ ಸ್ವಯಮುಪಸ್ಥಿತಮ್ |
ಸಿದ್ಧಮೇವ ಮಹಾರಾಜ ಭುಂಜತೇ ತತ್ರ ನಿತ್ಯದಾ ॥32॥
ಎಲೈ ಕೌರವ್ಯನೇ, ಮಹಾರಾಜನೇ, ಅಲ್ಲಿಯ ಪ್ರಜೆಗಳು ತಾನಾಗಿಯೇ ಸಿದ್ಧವಾಗಿ ಬಂದ ಭೋಜನವನ್ನು ನಿತ್ಯವೂ ಭುಂಜಿಸುತ್ತಾರೆ.
ತತಃ ಪರಂ ಸಮಾ ನಾಮ ದೃಶ್ಯತೇ ಲೋಕಸಂಸ್ಥಿತಿಃ |
ಚತುರಶ್ರಾ ಮಹಾರಾಜ ತ್ರಯಸ್ತ್ರಿಂಶತ್ತು ಮಂಡಲಮ್ ॥33॥
ಎಲೈ ಮಹಾರಾಜನೇ, ಅಲ್ಲಿಂದಾಚೆಗೆ ಸಮತಟ್ಟಾದ ಭೂಪ್ರದೇಶವಿದೆ. ಮಂಡಲಾಕಾರವಾದ ಆ ಭೂಪ್ರದೇಶದಲ್ಲಿ ಮೂವತ್ತಮೂರು ಮಂಡಲಗಳಿವೆ.
ಸುದರ್ಶನ ಚಕ್ರದ ದಳಗಳಂತೆ ಭೂಮಿಯ ಅಂಚಿನ ಪ್ರದೇಶವು ಮಂಡಲಾಕಾರವಾಗಿದೆ. ಅಲ್ಲಿ ಹೆಚ್ಚಾಗಿ ಮೂವತ್ತಮೂರು ಪ್ರಧಾನ ದೇವತೆಗಳೇ ಸಂಚಾರ ಮಾಡುತ್ತಾರೆ. ಆದ್ದರಿಂದಲೇ ಭೂಚಕ್ರವೆಂದು ಕರೆಯುವ ಪದ್ಧತಿಯಿದೆ (ಲಕ್ಷ್ಮಾಲಂಕಾರ).
ತತ್ರ ತಿಷ್ಠಂತಿ ಕೌರವ್ಯ ಚತ್ವಾರೋ ಲೋಕಸಮ್ಮತಾಃ |
ದಿಗ್ಗಜಾ ಭರತಶ್ರೇಷ್ಠ ವಾಮನೈರಾವತಾದಯಃ |
ಸುಪ್ರತೀಕಸ್ತಥಾ ರಾಜನ್ ಪ್ರಭಿನ್ನಕರಟಾಮುಖಃ ॥34॥
ಎಲೈ ಕೌರವ್ಯನೇ, ಅಲ್ಲಿ ಲೋಕಸಮ್ಮತವಾದ ನಾಲ್ಕು ದಿಗ್ಗಜಗಳು ಇರುತ್ತವೆ. ಎಲೈ ಭರತಶ್ರೇಷ್ಠನಾದ ರಾಜನೇ, ಅವು ವಾಮನ, ಐರಾವತ, ಸುಪ್ರತೀಕ ಮತ್ತು ಮದವನ್ನು ಸುರಿಸುವ (ಕುಮುದ).
ತಸ್ಯಾಹಂ ಪರಿಮಾಣಂ ತು ನ ಸಂಖ್ಯಾತುಮಿಹೋತ್ಸಹೇ |
ಅಸಂಖ್ಯಾತಃ ಸ ನಿತ್ಯಂ ಹಿ ತಿರ್ಯಗೂರ್ಧ್ವಮಧಸ್ತಥಾ ॥35॥
ಆ ದಿಗ್ಗಜಗಳ ಪರಿಮಾಣವನ್ನು ನಾನು ಹೇಳಲಾರೆ. ಅವು ಅಡ್ಡವಾಗಿ ಮೇಲ್ಭಾಗದಲ್ಲಿ ಮತ್ತು ಕೆಳಭಾಗದಲ್ಲಿ ಗಣನೆ ಇಲ್ಲದಷ್ಟು ವಿಸ್ತಾರವನ್ನು ಹೊಂದಿವೆ.
ತತ್ರ ವೈ ವಾಯವೋ ವಾಂತಿ ದಿಗ್ಭ್ಯಃ ಸರ್ವಾಭ್ಯ ಏವ ಚ |
ಅಸಂಬಾಧಾ ಮಹಾರಾಜ ತಾನ್ ನಿಗೃಹ್ಣಂತಿ ತೇ ಗಜಾಃ ॥36॥
ಆ ದಿಗ್ಗಜಗಳಿರುವ ಪ್ರದೇಶದಲ್ಲಿ ಎಲ್ಲ ದಿಕ್ಕುಗಳಿಂದಲೂ ಗಾಳಿಯು ಬೀಸುತ್ತದೆ. ಎಲೈ ಮಹಾರಾಜನೇ, ಒಂದಕ್ಕೆ ಒಂದು ತಗುಲದಂತಿರುವ ಆ ಗಜಗಳು ಆ ವಾಯುವಿನ ವೇಗವನ್ನು ನಿಗ್ರಹಿಸುತ್ತವೆ.
ಪುಷ್ಕರೈಃ ಪದ್ಮಸಂಕಾಶೈಃ ವರ್ಷ್ಮವದ್ಭಿಃ ಮಹಾಪ್ರಭೈಃ |
ತೇ ಶನೈಃ ಪುನರೇವಾಶು ವಾಯೂನ್ ಮುಂಚಂತಿ ನಿತ್ಯಶಃ ॥37॥
ತಮ್ಮ ಮಹಾಕಾಂತಿಯುಳ್ಳ ದೃಢವಾದ ಪದ್ಮದಂತಿರುವ ಸೊಂಡಿಲುಗಳಿಂದ ತಾವು ಹೀರಿದ ಆ ವಾಯುವನ್ನು ಪುನಃ ನಿಧಾನವಾಗಿ ಬಿಡುತ್ತವೆ.
ಶ್ವಸದ್ಭಿರ್ಮುಚ್ಯಮಾನಾಸ್ತು ದಿಗ್ಗಜೈರಿಹ ಮಾರುತಾಃ |
ಆಗಚ್ಛಂತಿ ಮಹಾರಾಜ ತತಸ್ತಿಷ್ಠಂತಿ ವೈ ಪ್ರಜಾಃ ॥38॥
ಎಲೈ ಮಹಾರಾಜನೇ, ಹೀಗೆ ಶ್ವಾಸೋಚ್ಛ್ವಾಸವನ್ನು ಮಾಡುವ ದಿಗ್ಗಜಗಳ ನಿಃಶ್ವಾಸದಿಂದ ಉಂಟಾದ ಮಾರುತಗಳು ನಿಧಾನವಾಗಿ ಬೀಸುತ್ತವೆ. ಅದರಿಂದ ಪ್ರಜೆಗಳು ಉಳಿಯುತ್ತಾರೆ.
ಧೃತರಾಷ್ಟ್ರಃ
ಪರೋ ವೈ ವಿಸ್ತರೋऽತ್ಯರ್ಥಂ ತ್ವಯಾ ಸಂಜಯ ಕೀರ್ತಿತಃ |
ದರ್ಶಿತಂ ದ್ವೀಪಸಂಸ್ಥಾನಮುತ್ತರಂ ಬ್ರೂಹಿ ಸಂಜಯ ॥39॥
ಧೃತರಾಷ್ಟ್ರ, ಎಲೈ ಸಂಜಯನೇ, ನೀನು ಎಲ್ಲ ದ್ವೀಪಗಳನ್ನೂ ಬಹಳ ವಿಸ್ತಾರವಾಗಿ ಹೇಳಿದ್ದೀಯೆ. ದ್ವೀಪಗಳ ಆಕೃತಿಯನ್ನು ಹೇಳಿದ್ದಾಯಿತು. ಎಲೈ ಸಂಜಯನೇ, ಮೇಲ್ಭಾಗದಲ್ಲಿರುವ ಗ್ರಹಗಳ ವಿಷಯವನ್ನು ಹೇಳು.
ಸಂಜಯಃ
ಉಕ್ತಾ ದ್ವೀಪಾ ಮಹಾರಾಜ ಗ್ರಹಾನ್ ಮೇ ಶೃಣು ತತ್ತ್ವತಃ |
ಸ್ವರ್ಭಾನುಃ ಕೌರವಶ್ರೇಷ್ಠ ಯಾವದೇಷ ಪ್ರಭಾವತಃ ॥40॥

ಸಂಜಯ ಎಲ್ಲೈ ಮಹಾರಾಜನೇ, ದ್ವೀಪಗಳನ್ನು ಹೇಳಿದ್ದಾಯಿತು. ಗ್ರಹಗಳನ್ನು ಸರಿಯಾಗಿ ನನ್ನಿಂದ ಕೇಳುವವನಾಗು. ಎಲ್ಲೈ ಕೌರವಶ್ರೇಷ್ಠನೇ, ಈ ರಾಹುವಿನ ಪ್ರಭಾವವು ಎಷ್ಟು ಎಂಬುದನ್ನು ಕೇಳು.
ಪರಿಮಂಡಲೋ ಮಹಾರಾಜ ಸ್ವರ್ಭಾನುಃ ಶ್ರೂಯತೇ ಗ್ರಹಃ |
ಯೋಜನಾನಿ ಸಹಸ್ರಾಣಿ ವಿಷ್ಕಂಭೋ ದ್ವಾದಶಾಸ್ಯ ವೈ ||41||
ಎಲ್ಲೈ ಮಹಾರಾಜನೇ, ರಾಹುವು ಮಂಡಲಾಕಾರವಾಗಿರುವ ಗ್ರಹವೆಂದು ಕೇಳಬರುತ್ತದೆ. ಅದರ ಮಧ್ಯಭಾಗದ ವಿಸ್ತಾರ ಹನ್ನೆರಡು ಸಾವಿರ ಯೋಜನಗಳು.
ಪರಿಣಾಹೇನ ಷಟ್‌ತ್ರಿಂಶದ್ ವಿಪುಲತ್ವೇನ ಚಾನಘ |
ಷಷ್ಟಿಮಾಹುಃ ಸಹಸ್ರಾಣಿ ಬುಧಾಃ ಪೌರಾಣಿಕಾಸ್ತಥಾ ||42||
ಆ ಗ್ರಹದ ಸುತ್ತಳತೆಯು ಮೂವತ್ತಾರು ಸಾವಿರ ಯೋಜನಗಳಿವೆ. ಎಲ್ಲೈ ಅನಘನೇ, ಪುರಾಣವನ್ನು ತಿಳಿದ ಜ್ಞಾನಿಗಳು ಅವನ ಪ್ರಭೆಯ ವಿಸ್ತಾರವು ಅರವತ್ತು ಸಾವಿರ ಯೋಜನಗಳು ಎಂದು ಹೇಳುತ್ತಾರೆ.
ಚಂದ್ರಮಾಸ್ತು ಸಹಸ್ರಾಣಿ ರಾಜನ್ನೇಕಾದಶ ಸ್ಮೃತಃ |
ವಿಷ್ಕಂಭೇಣ ಕುರುಶ್ರೇಷ್ಠ ತ್ರಯಸ್ತ್ರಿಂಶತ್ತು ಮಂಡಲಮ್ |
ಏಕೋನಷಷ್ಟಿವಿಸ್ತಾರಃ ಶೀತರಶ್ಮೇರ್ಮಹಾತ್ಮನಃ ||43||
ಎಲ್ಲೈ ರಾಜನೇ, ಚಂದ್ರನ ಮಧ್ಯಭಾಗದ ವಿಸ್ತಾರವು ಹನ್ನೊಂದು ಸಾವಿರ ಯೋಜನಗಳಿವೆ. ಎಲ್ಲೈ ಕುರುಶ್ರೇಷ್ಠನೇ, ಅವನ ಮಂಡಲದ ಸುತ್ತಳತೆಯು ಮೂವತ್ತಮೂರು ಸಾವಿರ ಯೋಜನಗಳು ಇವೆ. ಮಹಾತ್ಮನಾದ ಶೀತಕಿರಣನಾದ ಅವನ ಕಾಂತಿಯ ವಿಸ್ತಾರವು ಐವತ್ತೊಂಬತ್ತು ಸಹಸ್ರ ಯೋಜನಗಳಿವೆ.
ಸೂರ್ಯಸ್ತ್ವಷ್ಟೌ ಸಹಸ್ರಾಣಿ ದ್ವೇ ಚಾನ್ಯೇ ಕುರುನಂದನ |
ವಿಷ್ಕಂಭೇಣ ತತೋ ರಾಜನ್ ಮಂಡಲಂ ತ್ರಿಂಶತಂ ಸಮಮ್ ||44||
ಎಲ್ಲೈ ಕುರುನಂದನನೇ, ಸೂರ್ಯನ ಮಧ್ಯಭಾಗದ ವಿಸ್ತಾರವು ಹತ್ತು ಸಹಸ್ರ ಯೋಜನಗಳಿವೆ. ಎಲ್ಲೈ ರಾಜನೇ, ಸೂರ್ಯಮಂಡಲದ ಸುತ್ತಳತೆಯು ಮೂವತ್ತು ಸಹಸ್ರ ಯೋಜನಗಳಾಗುತ್ತವೆ.
ಅಷ್ಟಪಂಚಾಶತಂ ರಾಜನ್ ವಿಪುಲತ್ವೇನ ಚಾನಘ |
ಶ್ರೂಯತೇ ಪರಮೋದಾರಃ ಪತಂಗೋಽಸೌ ವಿಭಾವಸುಃ |
ಏತತ್ ಪ್ರಮಾಣಮರ್ಕಸ್ಯ ನಿರ್ದಿಷ್ಟಮಿಹ ಭಾರತ ||45||
ಎಲ್ಲೈ ಅನಘನೇ, ಪರಮಶ್ರೇಷ್ಠನಾದ ಈ ಸೂರ್ಯನ ಕಾಂತಿಯ ವಿಸ್ತಾರವು ಐವತ್ತೆಂಟು ಸಾವಿರ ಯೋಜನಗಳೆಂದು ಕೇಳಿ ಬರುತ್ತದೆ. ಎಲ್ಲೈ ಭಾರತನೇ, ಇವು ಸೂರ್ಯನಿಗೆ ಸಂಬಂಧಪಟ್ಟ ಪರಿಮಾಣಗಳ ವಿಸ್ತಾರವಾಗಿದೆ.
ಸ ರಾಹುಶ್ಛಾದಯತ್ಯೇತೌ ಯಥಾಕಾಲಂ ಮಹತ್ತಯಾ |
ಚಂದ್ರಾದಿತ್ಯೌ ಮಹಾರಾಜ ಸಂಕ್ಷೇಪೋಽಯಮುದಾಹೃತಃ ||46||
ಎಲ್ಲೈ ಮಹಾರಾಜನೇ, ರಾಹುವು ಸೂರ್ಯ-ಚಂದ್ರರಿಗಿಂತ ಹೆಚ್ಚಿನ ಪ್ರಭಾವಿಸ್ತಾರವನ್ನು ಹೊಂದಿರುವುದರಿಂದ ಅವನಿಗೆ ಯೋಗ್ಯವಾದ ಕಾಲದಲ್ಲಿ ಚಂದ್ರ-ಸೂರ್ಯರನ್ನು ಮುಚ್ಚುತ್ತಾನೆ. ಇದನ್ನು ಗ್ರಹಣವೆಂದು ಕರೆಯುತ್ತಾರೆ. ಮಹಾರಾಜನೇ, ಈ ಗ್ರಹಗಳ ವಿಷಯವನ್ನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ.
ಇತ್ಯೇತತ್ ತೇ ಮಹಾರಾಜ ಪೃಚ್ಛತಃ ಶಾಸ್ತ್ರಚಕ್ಷುಷಾ |
ಸರ್ವಮುಕ್ತಂ ಯಥಾತತ್ತ್ವಂ ತಸ್ಮಾತ್ ಶಮಮವಾಪ್ನುಹಿ ||47||
ಎಲ್ಲೈ ಮಹಾರಾಜನೇ, ನಿನ್ನ ಪ್ರಶ್ನೆಗಳಿಗೆ ಉತ್ತರವಾಗಿ ಶಾಸ್ತ್ರದೃಷ್ಟಿಯಿಂದ ಎಲ್ಲವನ್ನೂ ಹೇಳಿದ್ದೇನೆ. ನೀನು ಸಮಾಧಾನವನ್ನು ಹೊಂದುವವನಾಗು.
ಯಥಾದೃಷ್ಟಂ ಮಯಾ ಪ್ರೋಕ್ತಂ ಸನಿರ್ಯಾಣಮಿದಂ ಜಗತ್ |
ತಸ್ಮಾದಾಶ್ವಸ ಕೌರವ್ಯ ಪುತ್ರಂ ದುರ್ಯೋಧನಂ ಪ್ರತಿ ||48||
ಎಲ್ಲೈಕೌರವ್ಯನೇ, ನಾನು ನೋಡಿದಂತೆ ಈ ಜಗತ್ತನ್ನು ಸಂಹಾರದವರೆಗೆ ಹೇಳಿದ್ದೇನೆ. ಆದ್ದರಿಂದ ನಿನ್ನ ಪುತ್ರನಾದ ದುರ್ಯೋಧನನ ಬಗ್ಗೆ ಸಮಾಧಾನವನ್ನು ಹೊಂದು.
ಶ್ರುತ್ವೇದಂ ಭರತಶ್ರೇಷ್ಠ ಭೂಮಿಪರ್ವ ಮನೋನುಗಮ್ |
ಶ್ರೀಮಾನ್ ಭವತಿ ರಾಜನ್ಯಃ ಸಿದ್ಧಾರ್ಥಃ ಸಾಧುಸಮ್ಮತಃ |
ಆಯುರ್ಬಲಂ ಚ ವೀರ್ಯಂ ಚ ತಸ್ಯ ತೇಜಶ್ಚ ವರ್ಧತೇ ||49||
ಎಲ್ಲೈ ಭರತಶ್ರೇಷ್ಠನೇ, ಈ ಭೂಮಿಪರ್ವವನ್ನು ಮನಃಪೂರ್ವಕವಾಗಿ ಶ್ರವಣ ಮಾಡಿದ ರಾಜನು ಸಂಪದ್ಯುಕ್ತನಾಗುತ್ತಾನೆ, ತನ್ನ ಕಾರ್ಯವನ್ನು ಸಾಧಿಸುತ್ತಾನೆ ಮತ್ತು ಸಜ್ಜನರಿಗೆ ಸಮ್ಮತನಾಗುತ್ತಾನೆ. ಅವನ ಆಯುಸ್ಸು, ಬಲ, ಪರಾಕ್ರಮ ಮತ್ತು ಸಾಮರ್ಥ್ಯಗಳು ಹೆಚ್ಚುತ್ತವೆ.
ಯಃ ಶೃಣೋತಿ ಮಹೀಪಾಲ ಪರ್ವಣೀದಂ ಯತವ್ರತಃ |
ಪ್ರೀಯಂತೇ ಪಿತರಸ್ತಸ್ಯ ತಥೈವ ಚ ಪಿತಾಮಹಾಃ ||50||
ಎಲ್ಲೈ ರಾಜನೇ, ಯಾವನು ತನ್ನ ಪಿತೃಗಳ ಶ್ರಾದ್ಧಕಾಲ ಮೊದಲಾದ ಪರ್ವಕಾಲದಲ್ಲಿ ಈ ಭೂಮಿಪರ್ವವನ್ನು ಶ್ರವಣ ಮಾಡುತ್ತಾನೆಯೋ, ಅವನ ಪಿತೃಗಳು ಮತ್ತು ಪಿತಾಮಹರು ಸಂತೋಷಪಡುತ್ತಾರೆ.
ಇದಂ ತು ಭಾರತಂ ವರ್ಷಂ ಯತ್ರ ವರ್ತಾಮಹೇ ವಯಮ್ |
ಪೂರ್ವಂ ಪ್ರವರ್ತತೇ ಪುಣ್ಯಂ ತತ್ಸರ್ವಂ ಶ್ರುತವಾನಸಿ ||51||

ನಾವು ಇರುವ ಈ ವರ್ಷವು ಭಾರತವರ್ಷ. ಇಲ್ಲಿ ಪುಣ್ಯಕಾರ್ಯಗಳು ಬಹಳ ಹಿಂದಿನ ಕಾಲದಿಂದಲೂ ನಡೆದು ಬರುತ್ತಿವೆ. ಈ ಎಲ್ಲ ವಿಷಯಗಳನ್ನೂ ನೀನು ಕೇಳಿದ್ದೀಯೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಯೋದಶೋಽಧ್ಯಾಯಃ ॥
॥ ಭೂಮಿಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
॥ ಭೂಮಿಪರ್ವ ಸಮಾಪ್ತಂ ॥
* * * * *
3. ಭಗವದ್ಗೀತಾಪರ್ವ
ಹದಿನಾಲ್ಕನೆಯ ಅಧ್ಯಾಯ
ಸಂಜಯನಿಂದ ಧೃತರಾಷ್ಟ್ರನನ್ನು ಕುರಿತು ಭೀಷ್ಮಪಾತದ ಕಥನ.
ವೈಶಂಪಾಯನಃ
ಅಥ ಗಾವಲ್ಗಣಿರ್ಧೀಮಾನ್ ಸಮರಾದೇತ್ಯ ಸಂಜಯಃ |
ಪ್ರತ್ಯಕ್ಷದರ್ಶೀ ಸರ್ವಸ್ಯ ಭೂತಭವ್ಯಭವಿಷ್ಯವಿತ್ ॥1॥
ವಚನಾದ್ ಧೃತರಾಷ್ಟ್ರಸ್ಯ ಕುರುಕ್ಷೇತ್ರಂ ಜಗಾಮ ಹ |
ವ್ಯಾಸಸ್ಯ ವರದಾನೇನ ತ್ವರಮಾಣಸ್ತು ಸಂಜಯಃ |
ದೃಷ್ಟ್ವಾ ತು ಸಮರೇ ರಾಜನ್ ಕ್ಷಣೇನೈವ ಸಮಾಗತಃ ॥2॥
ವೈಶಂಪಾಯನ ಅನಂತರ ಭೂತ-ಭವಿಷ್ಯ-ವರ್ತಮಾನಗಳನ್ನು ತಿಳಿದವನೂ, ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವವನೂ ಆದ, ಮೇಧಾವಿಯಾದ, ಗವಲ್ಗಣ ಪುತ್ರನಾದ ಸಂಜಯನು ಯುದ್ಧಭೂಮಿಯಿಂದ ಹಿಂದಿರುಗಿ ಧೃತರಾಷ್ಟ್ರನ ವಚನದಂತೆ ಕುರುಕ್ಷೇತ್ರಕ್ಕೆ ಬಂದನು. ಎಲೈ ರಾಜನೇ, ವ್ಯಾಸರ ವರದಾನದಿಂದ ಅವನು ಧೃತರಾಷ್ಟ್ರನ ಮಾತಿನಂತೆ ಯುದ್ಧದಲ್ಲಿ ಎಲ್ಲವನ್ನೂ ನೋಡಿ ತ್ವರೆಯಿಂದ ಹಿಂದಿರುಗಿದನು.
ಧ್ಯಾಯತೇ ಧೃತರಾಷ್ಟ್ರಾಯ ಸಹಸೋಪೇತ್ಯ ದುಃಖಿತಃ |
ಆಚಷ್ಟ ನಿಹತಂ ಭೀಷ್ಮಂ ಭರತಾನಾಮಮದ್ಯಪಮ್ ॥
ವಿಶೇಷ ವಿಚಾರ (ಅಮದ್ಯಪ= ಸುರಾಪಾನಮಾಡದಿರುವ ಕೌರವ ಎಂದು ವಾದಿರಾಜರು ಲಕ್ಷಾಲಂಕಾರದಲ್ಲಿ ಪಾಠ ಹಿಡಿದಿದ್ದಾರೆ.)
ಚಿಂತಾಕ್ರಾಂತನಾದ ಧೃತರಾಷ್ಟ್ರನ ಬಳಿ ಇದ್ದಕ್ಕಿದ್ದಂತೆಯೇ ಬಂದು ದುಃಖಿತನಾದ ಅವನು ಭರತ ಕುಲದಲ್ಲಿ ಶ್ರೇಷ್ಠರಾದ ಮದ್ಯಪಾನ ಮಾಡದಿರುವ ಭೀಷ್ಮರ ಪಾತವನ್ನು ತಿಳಿಸಿದನು.
ಸಂಜಯೋಽಹಂ ಮಹಾರಾಜ ನಮಸ್ತೇ ಭರತರ್ಷಭ |
ಹತೋ ಭೀಷ್ಮಃ ಶಾಂತನವೋ ಭರತಾನಾಂ ಪಿತಾಮಹಃ ॥4॥
ಎಲೈ ಮಹಾರಾಜನೇ, ಭರತರ್ಷಭನೇ, ನಿನಗೆ ನಮಸ್ಕಾರ. ನಾನು ಸಂಜಯ. ಶಂತನು ಪುತ್ರರಾದ, ಭರತರ ಪಿತಾಮಹರಾದ ಭೀಷ್ಮರು ಯುದ್ಧದಲ್ಲಿ ಹತರಾದರು.
ಕಕುದಂ ಸರ್ವಯೋಧಾನಾಂ ಧಾಮ ಸರ್ವಧನುಷ್ಮತಾಮ್ |
ಶರತಲ್ಪಗತಃ ಸೋಽದ್ಯ ಶೇತೇ ಕುರುಪಿತಾಮಹಃ ॥5॥
ಎಲ್ಲ ಯೋಧರಿಗೂ ಶಿಖರಪ್ರಾಯರಾಗಿದ್ದ, ಎಲ್ಲ ಧನುರ್ಧಾರಿಗಳಿಗೂ ಪರಮಾಶ್ರಯರಾಗಿದ್ದ, ಕುರುಪಿತಾಮಹರಾದ ಭೀಷ್ಮರು ಈ ದಿನ ಶರತಲ್ಪದಲ್ಲಿ ಮಲಗಿದ್ದಾರೆ.
ಯಸ್ಯ ವೀರ್ಯಂ ಸಮಾಶ್ರಿತ್ಯ ದ್ಯೂತಂ ಪುತ್ರಸ್ತವಾಕರೋತ್ |
ಸ ಶೇತೇ ನಿಹತೋ ರಾಜನ್ ಸಂಖ್ಯೇ ಭೀಷ್ಮಃ ಶಿಖಂಡಿನಾ ॥6॥
ಎಲೈ ರಾಜನೇ, ಯಾರ ಪರಾಕ್ರಮವನ್ನು ಆಶ್ರಯಿಸಿ ನಿನ್ನ ಪುತ್ರನು ದ್ಯೂತವನ್ನು ಆಡಿದನೋ ಅಂತಹ ಭೀಷ್ಮರು ಶಿಖಂಡಿಯಿಂದ ಹತರಾಗಿ ಮಲಗಿದ್ದಾರೆ.
ಯಃ ಸರ್ವಾನ್ ಪೃಥಿವೀಪಾಲಾನ್ ಸಮವೇತಾನ್ ಮಹಾಮೃಧೇ |
ಜಿಗಾಯೈಕರಥೇನೈವ ಕಾಶಿಪುರ್ಯಾಂ ಮಹಾರಥಃ ॥7॥
ಜಾಮದಗ್ನ್ಯಂ ರಣೇ ರಾಮಮಾಯೋಧ್ಯ ವಸುಸಂಭವಃ |
ನ ಹತೋ ಜಾಮದಗ್ನ್ಯೇನ ಸ ಹತೋಽದ್ಯ ಶಿಖಂಡಿನಾ ॥8॥
ಯಾವ ಮಹಾರಥರಾದ ಭೀಷ್ಮರು ಕಾಶೀಪಟ್ಟಣದಲ್ಲಿ ಏಕರಥದಿಂದ ದೊಡ್ಡ ಯುದ್ಧದಲ್ಲಿ ಅಲ್ಲಿಗೆ ಬಂದಿದ್ದ ರಾಜರೆಲ್ಲರನ್ನೂ ಜಯಿಸಿದರೋ, ಯಾವ ವಸುಪುತ್ರರಾದ ಭೀಷ್ಮರು ಪರಶುರಾಮರ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವರಿಂದ ಹತರಾಗಲಿಲ್ಲವೋ ಅಂತಹ ಭೀಷ್ಮರು ಈ ದಿನ ಶಿಖಂಡಿಯಿಂದ ಹತರಾಗಿದ್ದಾರೆ.
ಮಹೇಂದ್ರಸದೃಶಃ ಶೌರ್ಯೇ ಸ್ಥೈರ್ಯೇ ಚ ಹಿಮವಾನಿವ |
ಸಮುದ್ರ ಇವ ಗಾಂಭೀರ್ಯೇ ಸಹಿಷ್ಣುತ್ವೇ ಧರಾಸಮಃ ॥9॥
ಶೌರ್ಯದಲ್ಲಿ ಇಂದ್ರನಿಗೆ ಸದೃಶರಾದವರು, ಸ್ಥೈರ್ಯದಲ್ಲಿ ಹಿಮಾಲಯಕ್ಕೆ ಸದೃಶರಾದವರು, ಗಾಂಭೀರ್ಯದಲ್ಲಿ ಸಮುದ್ರಕ್ಕೂ, ಸಹನಶಕ್ತಿಯಲ್ಲಿ ಭೂಮಿಗೂ ಸದೃಶರಾದವರು ಆ ಭೀಷ್ಮರು.
ಶರದಂಷ್ಟ್ರೋ ಧನುರ್ವಕ್ತ್ರಃ ಖಡ್ಗಜಿಹ್ವೋ ದುರಾಸದಃ |
ನರಸಿಂಹಃ ಪಿತಾ ತೇಽದ್ಯ ಪಾಂಚಾಲ್ಯೇನ ನಿಪಾತಿತಃ ॥10॥

ಶರಗಳೆಂಬ ದಂಷ್ಟ್ರಗಳುಳ್ಳ, ಧನುಸ್ಸೆಂಬ ವದನವುಳ್ಳ, ಖಡ್ಗವೆಂಬ ಜಿಹ್ವೆಯುಳ್ಳ, ಸಮೀಪಿಸಲೂ ಸಾಧ್ಯವಾಗದ, ಪುರುಷಸಿಂಹರಾದ ನಿನ್ನ ತಂದೆಯು ಈ ದಿನ ಪಾಂಚಾಲ ರಾಜಪುತ್ರನಾದ ಶಿಖಂಡಿಯಿಂದ ಉರುಳಿಸಲ್ಪಟ್ಟಿದ್ದಾರೆ.
ಪಾಂಡವಾನಾಂ ಮಹತ್ಸೈನ್ಯಂ ಯಂ ದೃಷ್ಟ್ವೋದ್ಯಂತಮಾಹವೇ |
ಪ್ರವೇಪತ ಭಯೋದ್ವಿಗ್ನಂ ಸಿಂಹಂ ದೃಷ್ಟ್ವೇವ ಗೋಗಣಃ ||11||
ಪರಿರಕ್ಷ್ಯ ಸ ಸೇನಾಂ ತೇ ದಶರಾತ್ರಮನೀಕಹಾ |
ಜಗಾಮಾಸ್ತಮಿವಾದಿತ್ಯಃ ಕೃತ್ವಾ ಕರ್ಮ ಸುದುಷ್ಕರಮ್ ||12||
ಪಾಂಡವರ ದೊಡ್ಡ ಸೈನ್ಯವು ಸಮರೋದ್ಯುಕ್ತರಾದ ಯಾವ ಭೀಷ್ಮರನ್ನು ನೋಡಿ, ಸಿಂಹವನ್ನು ನೋಡಿದ ಗೋವುಗಳ ಸಮೂಹದಂತೆ ಭಯದಿಂದ ನಡುಗಿತೋ, ಅಂತಹ ಶತ್ರುಸಂಹಾರಕರಾದ ಭೀಷ್ಮರು ನಿನ್ನ ಸೈನ್ಯವನ್ನು ಹತ್ತುದಿನಗಳ ಕಾಲ ರಕ್ಷಣೆಯನ್ನು ಮಾಡಿ ಅತ್ಯಂತ ದುಷ್ಕರವಾದ ಕರ್ಮವನ್ನು ಮಾಡಿ ಸೂರ್ಯನಂತೆ ಅಸ್ತಂಗತರಾಗಿದ್ದಾರೆ.
ಯಃ ಸ ಶಕ್ರ ಇವಾಕ್ಷೋಭ್ಯೋ ವರ್ಷನ್ ಬಾಣಾನ್ ಸಹಸ್ರಶಃ |
ಜಘಾನ ಯುಧಿ ಯೋಧಾನಾಮರ್ಬುದಂ ದಶಭಿರ್ದಿನೈಃ ||13||
ಸ ಶೇತೇ ನಿಷ್ಟನನ್ ಭೂಮೌ ವಾತರುಗ್ಣ ಇವ ದ್ರುಮಃ |
ತವ ದುರ್ಮಂತ್ರಿತೇ ರಾಜನ್ ಯಥಾ ನಾರ್ಹಃ ಸ ಭಾರತ ||14||
ಎಲೈ ಭಾರತನೇ, ಯಾರು ಇಂದ್ರನಂತೆ ಅಲುಗಾಡಿಸಲು ಸಾಧ್ಯವಿಲ್ಲದವರೋ, ಸಹಸ್ರಸಂಖ್ಯೆಯಲ್ಲಿ ಬಾಣಗಳ ಮಳೆಯನ್ನು ಸುರಿಸುತ್ತಿದ್ದರೋ, ಹತ್ತುದಿನಗಳ ಕಾಲ ಒಂದು ಲಕ್ಷ ಸೈನಿಕರನ್ನು ಸಂಹಾರ ಮಾಡಿದರೋ ಅಂತಹ ದುಃಖಕ್ಕೆ ಅರ್ಹರಲ್ಲದ ಭೀಷ್ಮರು ನಿನ್ನ ದುರ್ಮಂತ್ರಣದಿಂದ ಬಿರುಗಾಳಿಗೆ ಸಿಕ್ಕಿ ಗರ್ಜಿಸುತ್ತಾ ಬಿದ್ದ ಮರದಂತೆ ಭೂಮಿಯ ಮೇಲೆ ಮಲಗಿದ್ದಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುರ್ದಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ಧೃತರಾಷ್ಟ್ರನಿಂದ ಭೀಷ್ಮ ಪತನದ ಬಗ್ಗೆ ವಿಸ್ತಾರವಾದ ಪ್ರಶ್ನೆಗಳು.
ಧೃತರಾಷ್ಟ್ರಃ
ಕಥಂ ಕುರೂಣಾಮೃಷಭೋ ಹತೋ ಭೀಷ್ಮಃ ಶಿಖಂಡಿನಾ |
ಕಥಂ ರಥಾತ್ ಸ ನ್ಯಪತತ್ ಪಿತಾ ಮೇ ವಾಸವೋಪಮಃ ||1||
ಧೃತರಾಷ್ಟ್ರ ಕುರುಗಳಲ್ಲಿ ಶ್ರೇಷ್ಠರಾದ ಭೀಷ್ಮರು ಶಿಖಂಡಿಯಿಂದ ಹೇಗೆ ಹತರಾದರು? ಇಂದ್ರನಿಗೆ ಸಮಾನರಾದ ನನ್ನ ತಂದೆಯು ರಥದಿಂದ ಹೇಗೆ ಕೆಳಗೆ ಬಿದ್ದರು?
ಕಥಮಾಸಂಶ್ಚ ಮೇ ಪುತ್ರಾ ಹೀನಾ ಭೀಷ್ಮೇಣ ಸಂಜಯ |
ಬಲಿನಾ ದೇವಕಲ್ಪೇನ ಗುರ್ವರ್ಥೇ ಬ್ರಹ್ಮಚಾರಿಣಾ ||2||
ಎಲೈ ಸಂಜಯನೇ, ದೇವತೆಗಳಿಗೆ ಸಮಾನರಾದ, ಬಲಿಷ್ಠರಾದ, ತಂದೆಯ ಸಲುವಾಗಿ ಬ್ರಹ್ಮಚಾರಿಗಳಾದ ಭೀಷ್ಮರನ್ನು ಕಳೆದುಕೊಂಡು ನನ್ನ ಪುತ್ರರು ಹೇಗಿದ್ದರು?
ತಸ್ಮಿನ್ ಹತೇ ಮಹಾಸತ್ತ್ವೇ ಮಹೇಷ್ವಾಸೇ ಮಹಾಬಲೇ |
ಮಹಾರಥೇ ನರವ್ಯಾಘ್ರೇ ಕಿಮು ಆಸೀನ್ಮನಸ್ತವ ||3||
ಮಹಾಸತ್ವವುಳ್ಳವರೂ, ಮಹಾಬಲವುಳ್ಳವರೂ, ಮಹಾಧನುರ್ಧಾರಿಗಳೂ, ಮಹಾರಥರೂ, ನರವ್ಯಾಘ್ರರೂ ಆದ ಅವರು ಬಿದ್ದಾಗ ನಿನ್ನ ಮನಸ್ಸಿಗೆ ಹೇಗಾಯಿತು?
ಆರ್ತಿಃ ಪರಾ ಮಾಽಽವಿಶತಿ ಯತಃ ಶಂಸಸಿ ಮೇ ಹತಮ್ |
ಕುರೂಣಾಮೃಷಭಂ ವೀರಮಕಂಪ್ಯಂ ಪುರುಷರ್ಷಭಮ್ ||4||
ಕುರುಗಳಲ್ಲಿ ಶ್ರೇಷ್ಠರಾದ, ಅಲುಗಾಡಿಸಲು ಸಾಧ್ಯವಿಲ್ಲದ, ವೀರರಾದ, ಪುರುಷ ಶ್ರೇಷ್ಠರಾದ ಭೀಷ್ಮರು ಹತರಾದರು ಎಂದು ಕೇಳಿ ನನಗೆ ಬಹಳ ದುಃಖವಾಗುತ್ತಿದೆ.
ಕೇ ತಂ ಯಾಂತಮನುಪ್ರೇಯುಃ ಕೇ ಚಾಸ್ಯಾಸನ್ ಪುರೋಗಮಾಃ |
ಕೇಽತಿಷ್ಠನ್ ಕೇ ನ್ಯವರ್ತಂತ ಕೇಽಭ್ಯವರ್ತಂತ ಸಂಜಯ ||5||
ಅವರು ಯುದ್ಧದಲ್ಲಿ ಮುಂದೆ ಹೊರಟಾಗ ಅವರನ್ನು ಯಾರು ಹಿಂಬಾಲಿಸಿದರು? ಅವರ ಮುಂಭಾಗದಲ್ಲಿ ಯಾರಿದ್ದರು? ಅವರ ಜೊತೆಯಲ್ಲಿ ಯಾರು ಉಳಿದರು? ಯಾರು ಹಿಂದಿರುಗಿದರು? ಎಲೈ ಸಂಜಯನೇ, ಯಾರು ಮುಂದೆ ಸಾಗಿದರು?
ಕೇ ಶೂರಾ ರಥಶಾರ್ದೂಲಮಚ್ಯುತಂ ಕ್ಷತ್ರಿಯರ್ಷಭಮ್ |
ರಥಾನೀಕಂ ಗಾಹಮಾನಂ ಸಹಸಾ ಪೃಷ್ಠತೋಽನ್ವಯುಃ ||6||
ಕ್ಷತ್ರಿಯಶ್ರೇಷ್ಠರೂ, ತಮ್ಮ ಗುಣಗಳಿಂದ ಚ್ಯುತರಾಗದವರೂ, ರಥಶಾರ್ದೂಲರೂ, ಶತ್ರುಗಳ ರಥಸಮೂಹದಲ್ಲಿ ಪ್ರವೇಶಿಸುವವರೂ ಆದ ಅವರನ್ನು ಹಿಂಭಾಗದಿಂದ ಯಾವ ಶೂರರು ಅನುಸರಿಸಿ ನಡೆದರು?
ಯಸ್ತಮೋಽರ್ಕ ಇವಾಪೋಹನ್ ಪರಸೈನ್ಯಮಮಿತ್ರಹಾ |
ಸಹಸ್ರರಶ್ಮಿಪ್ರತಿಮಃ ಪರೇಷಾಂ ಭಯಮಾದಧತ್ |
ಅಕರೋದ್ ದುಷ್ಕರಂ ಕರ್ಮ ರಣೇ ಕೌರವಶಾಸನಾತ್ ||7||

ಗ್ರಸಮಾನಮನೀಕಾನಿ ಯ ಏನಂ ಪರ್ಯವಾರಯನ್ |
ಕೃತಿನಂ ತಂ ದುರಾಧರ್ಷಂ ಸಮ್ಯಗ್ ಯಾಸ್ಯಂತಮಂತಿಕೇ |
ಕಥಂ ಶಾಂತನವಂ ಯುದ್ಧೇ ಪಾಂಡವಾಃ ಪ್ರತ್ಯವಾರಯನ್ ॥8॥
ಶತ್ರುಸಂಹಾರಕರಾದ ಯಾವ ಅವರು ಸೂರ್ಯನಿಗೆ ಸಮಾನರಾಗಿ ಸೂರ್ಯನು ಕತ್ತಲೆಯನ್ನು ನಾಶ ಮಾಡಿದಂತೆ ಪರಸೈನ್ಯವನ್ನು ನಾಶಮಾಡುತ್ತಾ, ಶತ್ರುಗಳಿಗೆ ಭಯವನ್ನು ಉಂಟುಮಾಡಿ, ಯುದ್ಧದಲ್ಲಿ ದುರ್ಯೋಧನನ ಶಾಸನಕ್ಕೆ ಅನುಗುಣವಾಗಿ ದುಷ್ಕರವಾದ ಕರ್ಮವನ್ನು ಮಾಡುತ್ತಾ, ಶತ್ರುಸೈನ್ಯವನ್ನು ನುಂಗುತ್ತಿದ್ದರೋ ಅಂತಹ ಅವರನ್ನು ಯಾರು ಸುತ್ತುವರಿದರು? ಕುಶಲರೂ, ಸಮೀಪಕ್ಕೆ ಹೋಗಲು ಸಾಧ್ಯವಿಲ್ಲದವರೂ, ಚೆನ್ನಾಗಿ ಮುನ್ನುಗ್ಗುವವರೂ ಆದ ಶಂತನುಪುತ್ರರಾದ ಭೀಷ್ಮರನ್ನು ಯುದ್ಧದಲ್ಲಿ ಪಾಂಡವರು ಹೇಗೆ ಸುತ್ತುವರಿದರು?
ನಿಕೃಂತಂತಮನೀಕಾನಿ ಶರದಂಷ್ಟ್ರಂ ತರಸ್ವಿನಮ್ |
ಚಾಪವ್ಯಾತ್ತಾನನಂ ಘೋರಮಸಿಜಿಹ್ವಂ ದುರಾಸದಮ್ ॥9॥
ಅತ್ಯನ್ಯಂ ಪುರುಷವ್ಯಾಘ್ರಂ ಹ್ರೀಮಂತಮಪರಾಜಿತಮ್ |
ಪಾತಯಾಮಾಸ ಕೌಂತೇಯಃ ಕಥಂ ತಮಜಿತಂ ಯುಧಿ ॥10॥
ಶತ್ರುಗಳ ಸೈನ್ಯವನ್ನು ಕತ್ತರಿಸುತ್ತಾ, ಧೈರ್ಯಶಾಲಿಗಳಾಗಿ ಬಾಣಗಳೆಂಬ ದಂಷ್ಟ್ರಗಳನ್ನೂ, ಬಿಲ್ಲೆಂಬ ತೆರೆದ ವದನವನ್ನೂ, ಘೋರವಾದ ಕತ್ತಿ ಎಂಬ ಜಿಹ್ವೆಯನ್ನೂ ಹೊಂದಿ, ಇನ್ನೊಬ್ಬರು ಸಮೀಪಕ್ಕೆ ಸುಳಿಯಲು ಸಾಧ್ಯವಿಲ್ಲದಂತಹ, ಪುರುಷ ವ್ಯಾಘ್ರರಾದಂತಹ, ಎಲ್ಲರನ್ನೂ ಮೀರಿದಂತಹ, ಯುದ್ಧದಲ್ಲಿ ಎಂದೂ ಪರಾಜಿತರಾಗದ, ದಾಕ್ಷಿಣ್ಯಸ್ವಭಾವವುಳ್ಳ ಅಂತಹ ಭೀಷ್ಮರನ್ನು ಅರ್ಜುನನು ಹೇಗೆ ಕೆಡವಿದನು?
ಉಗ್ರಧನ್ವಾನಮುಗ್ರೇಷು ವರ್ತಮಾನಂ ರಥೋತ್ತಮೇ |
ಪರೇಷಾಮುತ್ತಮಾಂಗಾನಿ ಪ್ರಚಿನ್ವಂತಂ ಶಿತೇಷುಭಿಃ ॥11॥
ಪಾಂಡವಾನಾಂ ಮಹತ್ಸೈನ್ಯಂ ಯಂ ದೃಷ್ಟ್ವೋದ್ಯಂತಮಾಹವೇ |
ಕಾಲಾಗ್ನಿಮಿವ ದುರ್ಧರ್ಷಂ ಸಮವೇಷ್ಟತ ನಿತ್ಯಶಃ ॥12॥
ಯಾರು ಉಗ್ರವಾದ ಧನುಸ್ಸನ್ನು ಮತ್ತು ಉಗ್ರವಾದ ಬಾಣವನ್ನು ಹೊಂದಿ ಶ್ರೇಷ್ಠವಾದ ರಥದಲ್ಲಿ ಕುಳಿತು ತಮ್ಮ ಹರಿತವಾದ ಬಾಣಗಳಿಂದ ಶತ್ರುಗಳ ಶಿರಸ್ಸುಗಳನ್ನು ಕತ್ತರಿಸುತ್ತಿದ್ದರೋ, ಯಾರು ಯುದ್ಧದಲ್ಲಿ ಉದ್ಯುಕ್ತರಾಗಿರುವುದನ್ನು ನೋಡಿ ಪಾಂಡವರ ದೊಡ್ಡ ಸೈನ್ಯವು ಸೋಲಿಸಲು ಸಾಧ್ಯವಲ್ಲದ ಕಾಲಾಗ್ನಿಯನ್ನು ನೋಡಿದಂತೆ ನಿತ್ಯವೂ ಮುದುರಿಹೋಗುತ್ತಿದ್ದಿತೋ;
ಪರಿಕೃಷ್ಯ ಸ ಸೇನಾಂ ಮೇ ದಶರಾತ್ರಮನೀಕಹಾ |
ಜಗಾಮಾಸ್ತಮಿವಾದಿತ್ಯಃ ಕೃತ್ವಾ ಕರ್ಮ ಸುದುಷ್ಕರಮ್ ॥13॥
ಅಂತಹ ಶತ್ರುಸಂಹಾರಕರಾದ ಭೀಷ್ಮರು ಹತ್ತು ದಿನಗಳ ಕಾಲ ನನ್ನ ಸೈನ್ಯವನ್ನು ಮುಂದೆ ಸಾಗಿಸಿಕೊಂಡು ಹೋಗಿ ದುಷ್ಕರವಾದ ಕರ್ಮವನ್ನು ಮಾಡಿ ಸೂರ್ಯನಂತೆ ಮುಳುಗಿದ್ದಾರೆ.
ಯಃ ಸ ಶಕ್ರ ಇವಾಕ್ಷಯ್ಯಂ ವರ್ಷಂ ಶರಮಯಂ ಸೃಜನ್ |
ಜಘಾನ ಯುಧಿ ಯೋಧಾನಾಮರ್ಬುದಂ ದಶಭಿರ್ದಿನೈಃ ॥14॥
ಸ ಶೇತೇ ನಿಷ್ಟನನ್ ಭೂಮೌ ವಾತರುಗ್ಣ ಇವ ದ್ರುಮಃ |
ಮಮ ದುರ್ಮಂತ್ರಿತೇನಾಸೌ ಯಥಾ ನಾರ್ಹಃ ಸ ಭಾರತಃ ॥15॥
ಯಾರು ಇಂದ್ರನಂತೆ ಅಕ್ಷಯವಾದ ಬಾಣಗಳ ಮಳೆಯನ್ನು ಸುರಿಸುತ್ತಾ, ಹತ್ತು ದಿನಗಳಲ್ಲಿ ಒಂದು ಲಕ್ಷ ಶತ್ರುಯೋಧರನ್ನು ಸಂಹಾರ ಮಾಡಿದರೋ, ಅಂತಹ ಭೀಷ್ಮರು ನನ್ನ ದುರ್ಮಂತ್ರಣದಿಂದ ಅಂತಹ ಸೋಲಿಗೆ ಪಾತ್ರರಲ್ಲದಿದ್ದರೂ, ಬಿರುಗಾಳಿಗೆ ಸಿಕ್ಕಿ ಭೂಮಿಯ ಮೇಲೆ ಬಿದ್ದ ಮರದಂತೆ ಗರ್ಜಿಸುತ್ತಾ ಭೂಮಿಯ ಮೇಲೆ ಬಿದ್ದಿದ್ದಾರೆ.
ಕಥಂ ಶಾಂತನವಂ ದೃಷ್ಟ್ವಾ ಪಾಂಡವಾನಾಮನೀಕಿನೀ |
ಪ್ರಹರ್ತುಮಶಕತ್ ತತ್ರ ಭೀಷ್ಮಂ ಭೀಮಪರಾಕ್ರಮಮ್ ॥16॥
ಭಯಂಕರ ಪರಾಕ್ರಮವುಳ್ಳ ಶಂತನು ಪುತ್ರರಾದ ಭೀಷ್ಮರನ್ನು ನೋಡಿ ಪಾಂಡವರ ಸೈನ್ಯವು ಅವರ ಮೇಲೆ ಪ್ರಹಾರ ಮಾಡಲು ಹೇಗೆ ಸಮರ್ಥವಾಯಿತು?
ಕಥಂ ಭೀಷ್ಮೇಣ ಸಂಗ್ರಾಮಮಕುರ್ವನ್ ಪಾಂಡುನಂದನಾಃ |
ಕಥಂ ಚ ನಾಜಯದ್ ಭೀಷ್ಮೋ ದ್ರೋಣೇ ಜೀವತಿ ಸಂಜಯ ॥17॥
ಪಾಂಡುನಂದನರು ಭೀಷ್ಮರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದರು? ಎಲೈ ಸಂಜಯನೇ, ದ್ರೋಣರು ಜೀವಿಸಿರುವಾಗ ಭೀಷ್ಮರು ಹೇಗೆ ಗೆಲ್ಲಲಿಲ್ಲ?
ಕೃಪೇ ಸನ್ನಿಹಿತೇ ತತ್ರ ಭಾರದ್ವಾಜಾತ್ಮಜೇ ತಥಾ |
ಭೀಷ್ಮಃ ಪ್ರಹರತಾಂ ಶ್ರೇಷ್ಠಃ ಕಥಂ ಸ ನಿಧನಂ ಗತಃ ॥18॥
ಅಲ್ಲಿ ಕೃಪರು ಸನ್ನಿಹಿತರಾಗಿದ್ದಾಗ, ದ್ರೋಣಾಚಾರ್ಯರ ಮಕ್ಕಳಾದ ಅಶ್ವತ್ಥಾಮರು ಸನ್ನಿಹಿತರಾಗಿದ್ದಾಗ, ಪ್ರಹಾರ ಮಾಡುವುದರಲ್ಲಿ ಶ್ರೇಷ್ಠರಾದ ಭೀಷ್ಮರು ಹೇಗೆ ನಿಧನವನ್ನು ಹೊಂದಿದರು?
ಕಥಂ ಚಾತಿರಥಸ್ತೇನ ಪಾಂಚಾಲ್ಯೇನ ಶಿಖಂಡಿನಾ |
ಭೀಷ್ಮೋ ವಿನಿಹತೋ ಯುದ್ಧೇ ದೇವೈರಪಿ ದುರುತ್ಸಹಃ ॥19॥
ಯಃ ಸ್ಪರ್ಧತೇ ರಣೇ ನಿತ್ಯಂ ಜಾಮದಗ್ನ್ಯಂ ಮಹಾಬಲಮ್ |
ಅಜಿತಂ ಜಾಮದಗ್ನ್ಯೇನ ಶಕ್ರತುಲ್ಯಪರಾಕ್ರಮಮ್ ॥20॥

ಯಾವ ಭೀಷ್ಮರು ನಿತ್ಯವೂ ಮಹಾಬಲರಾದ, ಅಜಿತರಾದ, ಪರಶುರಾಮರ ಜೊತೆಯಲ್ಲಿ ಸ್ಪರ್ಧಿಸುತ್ತಾರೆಯೋ ಅಂತಹ ಪರಶುರಾಮರಿಂದಲೂ ಜಿತರಾಗದ, ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ಯುದ್ಧದಲ್ಲಿ ದೇವತೆಗಳೂ ಸ್ಪರ್ಧೆ ಮಾಡಲು ಸಾಧ್ಯವಿಲ್ಲದ, ಅತಿರಥರಾದ ಭೀಷ್ಮರು ಪಾಂಚಾಲರಾಜಕುಮಾರನಾದ ಶಿಖಂಡಿಯಿಂದ ಹೇಗೆ ಹತರಾದರು?
ತಂ ಹತಂ ಸಮರೇ ಭೀಷ್ಮಂ ಮಹಾರಥಬಲೋಚಿತಮ್ |
ಸಂಜಯಾಚಕ್ಷ್ವ ಮೇ ವೀರಂ ಯೇನ ಶರ್ಮ ನ ವಿದ್ಮಹೇ ॥21॥
ಮಹಾರಥ ಮತ್ತು ದೊಡ್ಡ ಸೈನ್ಯದ ನಾಯಕತ್ವಕ್ಕೆ ಉಚಿತರಾದ ಭೀಷ್ಮರು ಯುದ್ಧದಲ್ಲಿ ಹತರಾಗಿದ್ದಾರೆ. ಸಂಜಯನೇ, ಆ ವೀರರ ಬಗ್ಗೆ ನನಗೆ ಇನ್ನೂ ಹೇಳು. ಮನಸ್ಸಿಗೆ ನಮಗೆ ಸಮಾಧಾನವೇ ದೊರೆಯುತ್ತಿಲ್ಲ.
ಮಾಮಕಾಃ ಕೇ ಮಹೇಷ್ವಾಸಾ ನಾಜಹುಃ ಸಂಜಯಾಚ್ಯುತಮ್ |
ದುರ್ಯೋಧನಸಮಾದಿಷ್ಟಾಃ ಕೇ ವೀರಾಃ ಪರ್ಯವಾರಯನ್ ॥22॥
ತಮ್ಮ ಪರಾಕ್ರಮದಿಂದ ಚ್ಯುತರಾಗದ ಅವರನ್ನು ನನ್ನ ಯಾವ ಮಹಾಧನುರ್ಧಾರಿಗಳು ತ್ಯಜಿಸಲಿಲ್ಲ? ದುರ್ಯೋಧನನ ಆದೇಶದಂತೆ ಯಾವ ವೀರರು ಅವರನ್ನು ಸುತ್ತುವರಿದರು?
ಯಚ್ಛಿಖಂಡಿಮುಖಾಃ ಸರ್ವೇ ಪಾಂಡವಾ ಭೀಷ್ಮಮಭ್ಯಯುಃ |
ಕಚ್ಚಿನ್ನ ಕುರವೋ ಭೀತಾಸ್ತತ್ಯಜುಃ ಸಂಜಯಾಚ್ಯುತಮ್ ॥23॥
ಎಲೈ ಸಂಜಯನೇ, ಯಾವಾಗ ಶಿಖಂಡಿಯನ್ನೇ ಮುಂದೆ ಮಾಡಿಕೊಂಡ, ಎಲ್ಲ ಪಾಂಡವರೂ ಭೀಷ್ಮರ ಮೇಲೆ ಎರಗಿದರೋ, ಆಗ ಕುರುಗಳು ಭೀತರಾಗಿ ತಮ್ಮ ಗುಣಗಳಿಂದ ಚ್ಯುತರಾಗದ ಭೀಷ್ಮರನ್ನು ತ್ಯಜಿಸಲಿಲ್ಲವಷ್ಟೆ?
ಮೌರ್ವೀಘೋಷಸ್ತನಯಿತ್ನುಃ ಪೃಷತ್ಕಪೃಷತೋ ಮಹಾನ್ |
ಧನುಹ್ರಾದಮಹಾಶಬ್ದೋ ಮಹಾಮೇಘ ಇವೋನ್ನತಃ ॥24॥
ಯದಭ್ಯವರ್ಷತ್ ಕೌಂತೇಯಾನ್ ಸಪಾಂಚಾಲಾನ್ ಸಸೃಂಜಯಾನ್ |
ನಿಘ್ನನ್ ಪರರಥಾನ್ ವೀರೋ ದಾನವಾನಿವ ವಜ್ರಭೃತ್ ॥25॥
ಜ್ಯಾಘೋಷವೆಂಬ ಗುಡುಗುಗಳಿಂದ ಕೂಡಿದ, ಬಾಣಗಳೆಂಬ ದೊಡ್ಡ ಜಲಬಿಂದುಗಳಿಂದ ಕೂಡಿದ, ಧನುಸ್ಸಿನ ನಾದವೆಂಬ ಮಹಾಶಬ್ದದಿಂದ ಕೂಡಿದ, ಉನ್ನತವಾದ ಮಹಾಮೇಘದಂತಿದ್ದ ಅವರು ಪಾಂಚಾಲರು ಮತ್ತು ಸೃಂಜಯರಿಂದ ಸಹಿತರಾದ ಕೌಂತೇಯರ ಮೇಲೆ ಯಾವಾಗ ಇಂದ್ರನು ದಾನವರನ್ನು ಸಂಹರಿಸಿದಂತೆ ಶತ್ರುಗಳ ರಥಗಳನ್ನು ಸಂಹರಿಸುತ್ತಾ ಬಾಣಗಳ ಮಳೆಯನ್ನು ಸುರಿಸಿದರೋ;
ಇಷ್ವಸ್ತ್ರಸಾಗರಂ ಘೋರಂ ಬಾಣಗ್ರಾಹಂ ದುರಾಸದಮ್ |
ಕಾರ್ಮುಕೋರ್ಮಿಣಮಕ್ಷಯ್ಯಮದ್ವೀಪಂ ಸಮರೇಽಪ್ಲವಮ್ |
ಗದಾಸಿಮಕರಾವರ್ತಂ ಹಯಗ್ರಾಹಂ ಗಜಾಕುಲಮ್ ॥26॥
ಹಯಾನ್ ಗಜಾನ್ ಪದಾತಾಂಶ್ಚ ರಥಾಂಶ್ಚ ತರಸಾ ಬಹೂನ್ |
ನಿಮಜ್ಜಯಂತಂ ಸಮರೇ ಪರವೀರಾಪಹಾರಿಣಮ್ ॥27॥
ಬಾಣಗಳೆಂಬ ಮೊಸಳೆಗಳುಳ್ಳ, ಬಿಲ್ಲುಗಳೆಂಬ ಅಲೆಗಳನ್ನುಳ್ಳ, ಗದಾ-ಖಡ್ಗಗಳೆಂಬ ಮಕರಗಳ ಸುಳಿಯನ್ನು ಹೊಂದಿದ, ಅಶ್ವಗಳೆಂಬ ಮೊಸಳೆಗಳನ್ನು ಹೊಂದಿದ, ಗಜಗಳಿಂದ ನಿಬಿಡವಾದ, ದ್ವೀಪವಿಲ್ಲದ, ನೌಕೆಯಿಲ್ಲದ ಘೋರವಾದ ಬಾಣ ಮತ್ತು ಅಸ್ತ್ರಗಳ ಸಾಗರದಲ್ಲಿ ಯುದ್ಧದಲ್ಲಿ ಅನೇಕ ಅಶ್ವಗಳನ್ನೂ, ಗಜಗಳನ್ನೂ, ಪದಾತಿಗಳನ್ನೂ ಮತ್ತು ರಥಗಳನ್ನೂ ಶೀಘ್ರವಾಗಿ ಮುಳುಗಿಸುತ್ತಿದ್ದಂತಹ ಶತ್ರುವೀರರನ್ನು ಸಂಹರಿಸುವ ಅವರನ್ನು;
ವಿದಹ್ಯಮಾನಂ ಕೋಪೇನ ತೇಜಸಾ ಚ ಪರಂತಪಮ್ |
ವೇಲೇವ ಮಕರಾವಾಸಂ ಕೇ ವೀರಾಃ ಪರ್ಯವಾರಯನ್ ॥28॥
ಕೋಪದಿಂದ ಪ್ರಜ್ವಲಿಸುತ್ತಾ ತಮ್ಮ ತೇಜಸ್ಸಿನಿಂದ ಶತ್ರುಸಂತಾಪವನ್ನು ಮಾಡುತ್ತಾ, ಸಾಗರಕ್ಕೆ ತೀರದಂತಿದ್ದ ಅವರನ್ನು ಯಾವ ವೀರರು ಸುತ್ತುವರಿದರು?
ಭೀಷ್ಮೋ ಯದಕರೋತ್ ಕರ್ಮ ಸಮರೇ ಸಂಜಯಾರಿಹಾ |
ದುರ್ಯೋಧನಕೃತಾನ್ಯಹನ್ ಕೇ ತದಾಸ್ಯ ಪುರೋಽಭವನ್ ॥29॥
ಎಲೈ ಸಂಜಯನೇ, ಶತ್ರುಸಂಹಾರಕರಾದ ಭೀಷ್ಮರು ಯುದ್ಧದಲ್ಲಿ ಯಾವಾಗ ದುಷ್ಕರವಾದ ಕರ್ಮವನ್ನು ಮಾಡಿದರೋ ಆಗ ದುರ್ಯೋಧನನ ಒಟ್ಟುಗೂಡಿಸಿದ ಸೈನ್ಯವನ್ನು ಯಾರು ಸಂಹರಿಸಿದರು?ಯಾರು ಭೀಷ್ಮರ ಮುಂದೆ ಇದ್ದರು?
ಕೇಽರಕ್ಷನ್ ದಕ್ಷಿಣಂ ಚಕ್ರಂ ಭೀಷ್ಮಸ್ಯಾಮಿತತೇಜಸಃ |
ಪೃಷ್ಠತಃ ಕೇ ಪರಾನ್ ವೀರಾ ಉಪಾಸೇಧನ್ ಯತವ್ರತಾಃ ॥30॥
ಅಮಿತಪರಾಕ್ರಮಿಗಳಾದ ಭೀಷ್ಮರ ಬಲಭಾಗವನ್ನು ಯಾರು ರಕ್ಷಿಸಿದರು? ಭೀಷ್ಮರ ಹಿಂಭಾಗದಲ್ಲಿ ನಿಂತು ಯಾವ ವೀರರು ವ್ರತವನ್ನು ಧರಿಸಿದವರಂತೆ ಶತ್ರುಗಳನ್ನು ತಡೆದರು?
ಕೇ ಪುರಾಸ್ತದವರ್ತಂತ ರಕ್ಷಂತೋ ಭೀಷ್ಮಮಂತಿಕೇ |
ಕೇಽರಕ್ಷನ್ನುತ್ತರಂ ಚಕ್ರಂ ವೀರಾ ವೀರಸ್ಯ ಯುಧ್ಯತಃ ॥31॥
ಭೀಷ್ಮರನ್ನು ಸಮೀಪದಿಂದ ರಕ್ಷಿಸುತ್ತಾ, ಯಾರು ಅವರ ಮುಂದೆ ಇರುತ್ತಿದ್ದರು? ಯಾವ ವೀರರು ಯುದ್ಧಮಾಡುವ ವೀರರಾದ ಭೀಷ್ಮರ ಉತ್ತರಭಾಗದಲ್ಲಿ ಅವರನ್ನು ರಕ್ಷಿಸಿದರು?
ವಾಮೇ ಚಕ್ರೇ ವರ್ತಮಾನಾಃ ಕೇಽಘ್ನನ್ ಸಂಜಯ ಸೃಂಜಯಾನ್ |
ಸಮೇತಾಗ್ರಮನೀಕೇಷು ಕೇಽಭ್ಯರಕ್ಷನ್ ದುರಾಸದಮ್ ॥32॥

ಎಲ್ಲೈ ಸಂಜಯನೇ, ಭೀಷ್ಮರ ಎಡಭಾಗದಲ್ಲಿ ನಿಂತು ಯಾರು ಸೃಂಜಯರನ್ನು ಸಂಹರಿಸಿದರು? ನಮ್ಮ ಸೈನ್ಯದಲ್ಲಿ ಒಂದುಗೂಡಿದ, ಸಮೀಪಿಸಲು ಸಾಧ್ಯವಿಲ್ಲದ ಸೇನೆಯ ಮುಂಭಾಗವನ್ನು ಯಾರು ರಕ್ಷಿಸಿದರು?
ಪಾರ್ಶ್ವತಃ ಕೇಽಭ್ಯವರ್ತಂತ ಗಚ್ಛಂತೋ ದುರ್ಗಮಾಂ ಗತಿಮ್ |
ಸಮೂಹೇ ಕೇ ಪರಾನ್ ವೀರಾನ್ ಪ್ರತ್ಯಯುಧ್ಯಂತ ಸಂಜಯ ॥33॥
ಭೀಷ್ಮರು ಯುದ್ಧದಲ್ಲಿ ದುರ್ಗಮವಾದ ಗಮನಗಳನ್ನು ಮಾಡುತ್ತಾ ಮುಂದೆ ಸಾಗಿದಂತೆ ಅವರ ಪಾರ್ಶ್ವದಲ್ಲಿ ಯಾರು ಮುಂದೆ ಸಾಗಿದರು? ಎಲ್ಲೈ ಸಂಜಯನೇ, ಆ ವೀರರ ಸಮೂಹದಲ್ಲಿ ಯಾರು ಶತ್ರುಗಳ ವೀರರ ಜೊತೆಯಲ್ಲಿ ಯುದ್ಧವನ್ನು ಮಾಡಿದರು?
ರಕ್ಷ್ಯಮಾಣಃ ಕಥಂ ವೀರೈರ್ಗೋಪ್ಯಮಾನಾಶ್ಚ ತೇನ ತೇ |
ದುರ್ಜಯಾನಾಮನೀಕಾನಿ ನಾಜಯಂಸ್ತರಸಾ ಯುಧಿ ॥34॥
ವೀರರಿಂದ ರಕ್ಷಣೆ ಮಾಡಲ್ಪಟ್ಟು ತಾವೂ ಆ ವೀರರನ್ನು ರಕ್ಷಿಸುವ ಭೀಷ್ಮರು ಇರುವಾಗ ಆ ವೀರರು ದುರ್ಜಯರಾದ ಪಾಂಡವರ ಸೈನ್ಯವನ್ನು ಏಕೆ ಶೀಘ್ರವಾಗಿ ಜಯಿಸಲಿಲ್ಲ?
ಸರ್ವಲೋಕೇಶ್ವರಸ್ಯೇವ ಪರಮೇಷ್ಠಿಪ್ರಜಾಪತೇಃ |
ಕಥಂ ಪ್ರಹರ್ತುಮಪಿ ತೇ ಶೇಕುಃ ಸಂಜಯ ಪಾಂಡವಾಃ ॥35॥
ಎಲ್ಲೈ ಸಂಜಯನೇ, ಸರ್ವಲೋಕೇಶ್ವರನಾದ ಪರಮೇಷ್ಠಿ ಪ್ರಜಾಪತಿಯಂತಿದ್ದ ಭೀಷ್ಮರ ಮೇಲೆ ಆ ಪಾಂಡವರಿಗೆ ಪ್ರಹಾರ ಮಾಡಲೂ ಸಹ ಹೇಗೆ ಸಾಧ್ಯವಾಯಿತು?
ಯಸ್ಮಿನ್ ದ್ವೀಪೇ ಸಮಾಶ್ರಿತ್ಯ ಯುಧ್ಯಂತಿ ಕುರವಃ ಪರೈಃ |
ತಂ ನಿಮಗ್ನಂ ನರವ್ಯಾಘ್ರಂ ಭೀಷ್ಮಂ ಶಂಸಸಿ ಸಂಜಯ ॥36॥
ಎಲ್ಲೈ ಸಂಜಯನೇ, ಕೌರವರು ಯಾವ ಭೀಷ್ಮರನ್ನು ದ್ವೀಪವಾಗಿ ಆಶ್ರಯಿಸಿ ಶತ್ರುಗಳ ಜೊತೆ ಯುದ್ಧವನ್ನು ಮಾಡುತ್ತಾರೆಯೋ, ಅಂತಹ ನರವ್ಯಾಘ್ರರಾದ ಭೀಷ್ಮರು ಮುಳುಗಿಹೋದರು ಎಂದು ಹೇಳುತ್ತಿದ್ದೀಯೆ!
ಯಸ್ಯ ವೀರ್ಯೇ ಸಮಾಶ್ವಸ್ಯ ಮಮ ಪುತ್ರೋ ಬೃಹದ್ಬಲಃ |
ನ ಪಾಂಡವಾನಗಣಯತ್ ಕಥಂ ಸ ನಿಹತಃ ಪರೈಃ ॥37॥
ಯಾರ ಪರಾಕ್ರಮವನ್ನು ಅವಲಂಬಿಸಿ ಮಹಾಸೈನ್ಯವುಳ್ಳ ನನ್ನ ಪುತ್ರನು ಪಾಂಡವರನ್ನು ಗಣನೆಗೇ ತಂದುಕೊಳ್ಳಲಿಲ್ಲವೋ ಅಂತಹ ಭೀಷ್ಮರು ಶತ್ರುಗಳಿಂದ ಹೇಗೆ ನಿಹತರಾದರು?
ಯಃ ಪುರಾ ವಿಬುಧೈಃ ಸೇಂದ್ರೈಃ ಸಾಹಾಯ್ಯೇ ಯುದ್ಧದುರ್ಮದಃ |
ಕಾಂಕ್ಷಿತೋ ದಾನವಾನ್ ಘ್ನದ್ಭಿಃ ಪಿತಾ ಮಮ ಮಹಾವ್ರತಃ ॥38॥
ಯಸ್ಮಿನ್ ಜಾತೇ ಮಹಾವೀರ್ಯೇ ಶಂತನುರ್ಲೋಕಶಂಕರೇ |
ಶೋಕಂ ದುಃಖಂ ಚ ದೈನ್ಯಂ ಚ ಪ್ರಾಜಹಾತ್ ಪುತ್ರಲಕ್ಷ್ಮಣಿ ॥39॥
ಪ್ರಜ್ಞಾಪರಾಯಣಂ ಪ್ರಾಜ್ಞಂ ಸದ್ಧರ್ಮನಿರತಂ ಶುಚಿಮ್ |
ವೇದವೇದಾಂಗತತ್ತ್ವಜ್ಞಂ ಕಥಂ ಶಂಸಸಿ ಮೇ ಹತಮ್ ॥40॥
ಯುದ್ಧದುರ್ಮದರಾದ ಯಾವ ನನ್ನ ತಂದೆಯೂ, ಮಹಾವ್ರತರೂ ಆದ ಭೀಷ್ಮರು ದಾನವರನ್ನು ಸಂಹರಿಸಲು ಬಯಸಿದ ಇಂದ್ರಾದಿ ದೇವತೆಗಳಿಂದ ಸಹಾಯಕ್ಕಾಗಿ ಪ್ರಾರ್ಥಿಸಲ್ಪಟ್ಟರೋ, ಮಹಾಪರಾಕ್ರಮಶಾಲಿಗಳೂ ಮತ್ತು ಸತ್ಪುತ್ರಲಕ್ಷಣವನ್ನು ಹೊಂದಿದವರೂ, ಲೋಕಕಲ್ಯಾಣಕಾರಕರೂ ಆದ ಯಾವ ಭೀಷ್ಮರು ಜನಿಸಿದಾಗ ತಂದೆಯಾದ ಶಂತನುವು ತನ್ನ ಶೋಕವನ್ನೂ, ದುಃಖವನ್ನೂ ಮತ್ತು ದೈನ್ಯವನ್ನೂ ತೊರೆದನೋ ಅಂತಹ ಪ್ರಜ್ಞಾಪರಾಯಣರೂ, ಸ್ವತಃ ಪ್ರಾಜ್ಞರೂ, ಸದ್ಧರ್ಮನಿರತರೂ, ಶುಚಿಯೂ, ವೇದವೇದಾಂಗತತ್ತ್ವಜ್ಞರೂ ಆದ ಭೀಷ್ಮರನ್ನು ಹತರಾದರೆಂದು ಹೇಗೆ ಹೇಳುತ್ತಿದ್ದೀಯೆ?
ಸರ್ವಾಸ್ತ್ರವಿನಯೋಪೇತಂ ದಾಂತಂ ಶಾಂತಂ ಮನಸ್ವಿನಮ್ |
ಹತಂ ಶಾಂತನವಂ ಶ್ರುತ್ವಾ ಮನ್ಯೇ ಶೇಷಂ ಬಲಂ ಹತಮ್ ॥41॥
ಎಲ್ಲ ಅಸ್ತ್ರಗಳ ಪ್ರಯೋಗದಲ್ಲಿ ನಿಪುಣರಾದ, ಇಂದ್ರಿಯನಿಗ್ರಹವುಳ್ಳ, ಭಗವನ್ನಿಷ್ಠೆಯುಳ್ಳ, ಧೈರ್ಯಶಾಲಿಗಳಾದ, ಶಂತನುಪುತ್ರರಾದ ಭೀಷ್ಮರು ಹತರಾದರೆಂದು ಕೇಳಿದ ಮೇಲೆ ಉಳಿದ ಸೈನ್ಯವು ಹತವಾಗಿದೆ ಎಂದು ತಿಳಿಯುತ್ತೇನೆ.
ಧರ್ಮಾದಧರ್ಮೋ ಬಲವಾನ್ ಸಂಗ್ರಾಮ ಇತಿ ಮೇ ಮತಿಃ |
ಯತ್ರ ವೃದ್ಧಂ ಗುರುಂ ಹತ್ವಾ ರಾಜ್ಯಮಿಚ್ಛಂತಿ ಪಾಂಡವಾಃ ॥42॥
ಯಾವ ಕಾರಣದಿಂದ ಯುದ್ಧದಲ್ಲಿ ಪಾಂಡವರು ವೃದ್ಧರೂ, ಗುರುಗಳೂ ಆದ ಭೀಷ್ಮರನ್ನು ಕೊಂದು ರಾಜ್ಯವನ್ನು ಬಯಸುತ್ತಾರೆಯೋ ಆ ಕಾರಣದಿಂದ ಯುದ್ಧದಲ್ಲಿ ಧರ್ಮಕ್ಕಿಂತಲೂ ಅಧರ್ಮವೇ ಬಲಿಷ್ಠವಾದುದೆಂದು ನನ್ನ ಅಭಿಪ್ರಾಯ.
ಜಾಮದಗ್ನ್ಯಃ ಪುರಾ ರಾಮಃ ಸರ್ವಾಸ್ತ್ರವಿದನುತ್ತಮಃ |
ಅಂಬಾರ್ಥಮುದ್ಯತಃ ಸಂಖ್ಯೇ ಭೀಷ್ಮೇಣ ಯುಧಿ ನಿರ್ಜಿತಃ ॥43॥
ಹಿಂದೆ ಸರ್ವಾಸ್ತ್ರಗಳನ್ನು ಬಲ್ಲವರಲ್ಲಿ ಶ್ರೇಷ್ಠರಾದ, ಜಮದಗ್ನಿಪುತ್ರರಾದ ಪರಶುರಾಮರು ಅಂಬೆಯ ಸಲುವಾಗಿ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡಿ ಸೋತುಹೋದರು.
ತಮಿಂದ್ರಸಮಕರ್ಮಾಣಂ ಕಕುದಂ ಸರ್ವಧನ್ವಿನಾಮ್ |
ಹತಂ ಶಂಸಸಿ ಭೀಷ್ಮಂ ಮೇ ಕಿಂ ನು ದುಃಖಮತಃಪರಮ್ ॥44॥
ಇಂದ್ರನಿಗೆ ಸಮಾನವಾದ ಕರ್ಮಗಳನ್ನು ಮಾಡುವ, ಸರ್ವಧನುರ್ಧಾರಿಗಳಲ್ಲಿ ಶಿಖರಪ್ರಾಯರಾದ ಅಂತಹ ಭೀಷ್ಮರು ಹತರಾದರೆಂದು ಹೇಳುತ್ತಿದ್ದೀಯೆ! ಇದಕ್ಕಿಂತ ನನಗೆ ಯಾವ ದೊಡ್ಡ ದುಃಖವಿದೆ!
ಅಸಕೃತ್ ಕ್ಷತ್ರಿಯವ್ರಾತಾಃ ಸಂಖ್ಯೇ ಯೇನ ವಿನಿರ್ಜಿತಾಃ |

ಜಾಮದಗ್ನ್ಯಸ್ತಥಾ ರಾಮಃ ಪರವೀರನಿಘಾತಿನಾ ॥45॥
ಯಾವ ಭೀಷ್ಮರಿಂದ ಅನೇಕ ಬಾರಿ ಕ್ಷತ್ರಿಯ ಸಮೂಹಗಳು ಯುದ್ಧದಲ್ಲಿ ಸೋತು ಹೋದವೋ, ಯಾವ ಶತ್ರುವೀರ ಸಂಹಾರಕರಾದ ಭೀಷ್ಮರಿಂದ ಪರಶುರಾಮರೂ ಸೋತುಹೋದರೋ (ಅಂತಹವರನ್ನು ನೀನು ಹತರಾದರೆಂದು ಹೇಳುತ್ತಿದ್ದೀಯೆ!)
ತಸ್ಮಾನ್ನೂನಂ ಮಹಾವೀರ್ಯಾದ್ ಭಾರ್ಗವಾದ್ ಯುದ್ಧದುರ್ಮದಾತ್ |
ತೇಜೋವೀರ್ಯಬಲೈರ್ಭೂಯಾನ್ ಶಿಖಂಡೀ ದ್ರುಪದಾತ್ಮಜಃ ॥46॥
ಯಃ ಶೂರಂ ಕೃತಿನಂ ಯುದ್ಧೇ ಸರ್ವಶಾಸ್ತ್ರವಿಶಾರದಮ್ |
ಪರಮಾಸ್ತ್ರವಿದಂ ವೀರಂ ಜಘಾನ ಭರತರ್ಷಭಮ್ ॥47॥
ಯಾವ ದ್ರುಪದ ಪುತ್ರನಾದ ಶಿಖಂಡಿಯು ಶೂರರೂ, ಕುಶಲರೂ, ಯುದ್ಧದಲ್ಲಿ ಸರ್ವಶಸ್ತ್ರವಿಶಾರದರೂ, ದಿವ್ಯವಾದ ಅಸ್ತ್ರವನ್ನು ತಿಳಿದವರೂ, ವೀರರೂ, ಭರತಶ್ರೇಷ್ಠರೂ ಆದ ಭೀಷ್ಮರನ್ನು ಕೆಡವಿದನೆಂದರೆ ಮಹಾಪರಾಕ್ರಮಶಾಲಿಗಳೂ, ಯುದ್ಧದುರ್ಮದರೂ ಆದ ಪರಶುರಾಮರಿಗಿಂತಲೂ ದ್ರುಪದಪುತ್ರನಾದ ಶಿಖಂಡಿಯೇ ತೇಜೋವೀರ್ಯಬಲಗಳಲ್ಲಿ ಶ್ರೇಷ್ಠನಾದವನೆಂದು ತೋರುತ್ತದೆ.
ಕೇ ವೀರಾಸ್ತಮಮಿತ್ರಘ್ನಮನ್ವಯುಃ ಶತ್ರುಸನ್ನಿಧಿಮ್ |
ಶಂಸ ಮೇ ತದ್ ಯಥಾ ವೃತ್ತಂ ಯುದ್ಧಂ ಭೀಷ್ಮಸ್ಯ ಪಾಂಡವೈಃ ॥48॥
ಶತ್ರುಗಳನ್ನು ಅಡಗಿಸುವ ಮತ್ತು ಶತ್ರುಸಂಹಾರಕರಾದ ಆ ಭೀಷ್ಮರನ್ನು ಯಾವ ವೀರರು ಹಿಂಬಾಲಿಸಿದರು? ಭೀಷ್ಮರಿಗೂ ಮತ್ತು ಪಾಂಡವರಿಗೂ ಹೇಗೆ ಯುದ್ಧವು ನಡೆಯಿತು ಎಂಬುದನ್ನು ನನಗೆ ಹೇಳು.
ಯೋಷೇವ ಹತವೀರಾ ಮೇ ಸೇನಾ ಪುತ್ರಸ್ಯ ಸಂಜಯ |
ಅಗೋಪಮಿವ ಚೋದ್ಭ್ರಾಂತಂ ಗೋಕುಲಂ ತದ್ಬಲಂ ಮಮ ॥49॥
ಎಲೈ ಸಂಜಯನೇ, ನನ್ನ ಪುತ್ರನ ಸೇನೆಯು ವೀರಪತಿಯನ್ನು ಕಳೆದುಕೊಂಡ ಸ್ತ್ರೀಯಂತೆ, ಗೋಪಾಲಕನಿಲ್ಲದ ಗೋಸಮೂಹದಂತೆ ಸಂಭ್ರಾಂತವಾಗಿದೆ.
ಪೌರುಷಂ ಸರ್ವಲೋಕಸ್ಯ ಪರಂ ಯಸ್ಯ ಮಹಾಹವೇ |
ಪರಾಸಿಕ್ತೇ ಚ ವಸ್ತಸ್ಮಿನ್ ಕಥಮಾಸೀನ್ಮನಸ್ತದಾ ॥50॥
ಯಾರಿಗೆ ದೊಡ್ಡ ಯುದ್ಧದಲ್ಲಿ ಸರ್ವಲೋಕಪೂಜಿತವಾದ ಪೌರುಷವಿದ್ದಿತೋ ಅಂತಹ ಭೀಷ್ಮರು ಪಾಂಡವರ ಜೊತೆಯಲ್ಲಿ ಹೋರಾಡಿದಾಗ ನಿನ್ನ ಮನಸ್ಸಿಗೆ ಏನು ಎನಿಸಿತು?
ಜೀವಿತೇಽಪ್ಯದ್ಯ ಸಾಮರ್ಥ್ಯಂ ಕಿಮಿವಾಸ್ಮಾಸು ಸಂಜಯ |
ಘಾತಯಿತ್ವಾ ಮಹಾವೀರ್ಯಂ ಪಿತರಂ ಲೋಕಧಾರ್ಮಿಕಮ್ ॥51॥
ಎಲೈ ಸಂಜಯನೇ, ಲೋಕದಲ್ಲೇ ಅತ್ಯಂತ ಧಾರ್ಮಿಕರಾದ, ಮಹಾಪರಾಕ್ರಮಶಾಲಿಗಳಾದ ತಂದೆಯನ್ನು ಕೊಲ್ಲಿಸಿ ನಾವು ಬದುಕಿರುವುದರಲ್ಲಾದರೂ ಏನು ಅರ್ಥವಿದೆ?
ಅಗಾಧೇ ಸಲಿಲೇ ಮಗ್ನಾಂ ನಾವಂ ದೃಷ್ಟ್ವೇವ ಪಾರಗಾಃ |
ಭೀಷ್ಮೇ ಹತೇ ಭೃಶಂ ದುಃಖಾನ್ಮನ್ಯೇ ಶೋಚಂತಿ ಪುತ್ರಕಾಃ ॥52॥
ಅಗಾಧವಾದ ಜಲವನ್ನು ದಾಟುವವರು ತಮ್ಮ ನೌಕೆಯು ಭಗ್ನವಾದುದನ್ನು ನೋಡಿದಂತೆ ಭೀಷ್ಮರ ಪಾತವನ್ನು ನೋಡಿ ನನ್ನ ಪುತ್ರರು ಬಹಳವಾಗಿ ಶೋಕಪಡುತ್ತಾರೆ.
ಅದ್ರಿಸಾರಮಯಂ ನೂನಂ ಸುದೃಢಂ ಹೃದಯಂ ಮಮ |
ಯಚ್ಛ್ರುತ್ವಾ ಪುರುಷವ್ಯಾಘ್ರಂ ಹತಂ ಭೀಷ್ಮಂ ನ ದೀರ್ಯತೇ ॥53॥
ನನ್ನ ಹೃದಯವು ಕಲ್ಲುಗಳ ಸಾರದಿಂದ ಮಾಡಲ್ಪಟ್ಟಿದೆ. ಏಕೆಂದರೆ ಪುರುಷವ್ಯಾಘ್ರರಾದ ಭೀಷ್ಮರ ಪಾತವನ್ನು ಕೇಳಿಯೂ ಅದು ಬಿರಿದುಹೋಗುತ್ತಿಲ್ಲ.
ಯಸ್ಮಿನ್ನಸ್ತ್ರಂ ಚ ಮೇಧಾ ಚ ನೀತಿಶ್ಚ ಭರತರ್ಷಭೇ |
ಅಪ್ರಮೇಯಾಣಿ ದುರ್ಧರ್ಷೇ ಕಥಂ ಸ ನಿಹತೋ ಯುಧಿ ॥54॥
ಯಾವ ಭರತಶ್ರೇಷ್ಠರಾದ ಭೀಷ್ಮರಲ್ಲಿ ಅಸ್ತ್ರವೂ, ಮೇಧಾಶಕ್ತಿಯೂ, ರಾಜನೀತಿಯೂ ಅಗಾಧವಾಗಿದ್ದಿತೋ, ಯಾರನ್ನು ಯುದ್ಧದಲ್ಲಿ ಎಂದಿಗೂ ಸೋಲಿಸಲು ಸಾಧ್ಯವಾಗಿರಲಿಲ್ಲವೋ ಅಂತಹ ಭೀಷ್ಮರು ಹೇಗೆ ಹತರಾದರು?
ನ ಚಾಸ್ತ್ರೇಣ ನ ಶೌರ್ಯೇಣ ತಪಸಾ ಮೇಧಯಾ ನ ಚ |
ನ ಧೃತ್ಯಾ ನ ಪುನಸ್ತ್ಯಾಗಾನ್ಮೃತ್ಯೋಃ ಕಶ್ಚಿದ್ ವಿಮುಚ್ಯತೇ ॥55॥
ಅಸ್ತ್ರದಿಂದಾಗಲೀ, ಪರಾಕ್ರಮದಿಂದಾಗಲೀ, ತಪಸ್ಸಿಂದಾಗಲೀ, ಬುದ್ಧಿಶಕ್ತಿಯಿಂದಾಗಲೀ, ಧೈರ್ಯದಿಂದಾಗಲೀ ಅಥವಾ ತ್ಯಾಗದಿಂದಾಗಲೀ ಯಾರೂ ಮೃತ್ಯುವನ್ನು ಮೀರಲಾರರು.
ಕಾಲೋ ನೂನಂ ಮಹಾವೀರ್ಯಃ ಸರ್ವಲೋಕದುರತ್ಯಯಃ |
ಯತ್ರ ಶಾಂತನವಂ ಭೀಷ್ಮಂ ಹತಂ ಶಂಸಸಿ ಸಂಜಯ ॥56॥
ಎಲೈ ಸಂಜಯನೇ, ನೀನು ಶಂತನು ಪುತ್ರರಾದ ಭೀಷ್ಮರು ಹತರಾದರೆಂದು ಹೇಳುತ್ತಿರುವಾಗ ನನಗೆ ಕಾಲವೇ ಮಹಾಪರಾಕ್ರಮವುಳ್ಳದುದು ಮತ್ತು ಯಾರಿಂದಲೂ ಮೀರಲು ಸಾಧ್ಯವಿಲ್ಲದುದು ಎಂದು ತೋರುತ್ತಿದೆ.
ಪುತ್ರಶೋಕಾಭಿಸಂತಪ್ತೋ ಮಹದ್ ದುಃಖಮಚಿಂತಯನ್ |
ಆಶಂಸೇಽಹಂ ಪುರಾ ತ್ರಾಣಂ ಭೀಷ್ಮಾಚ್ಛಂತನುನಂದನಾತ್ ॥57॥
ನನ್ನ ಪುತ್ರರ ದುರ್ನಡತೆಯಿಂದ ಶೋಕಪಡುತ್ತಾ, ಆ ದೊಡ್ಡದುಃಖವನ್ನು ಎಣಿಸದೆ ಶಂತನು ಪುತ್ರರಾದ ಭೀಷ್ಮರಿಂದ ಅವರಿಗೆ ರಕ್ಷಣೆಯನ್ನು ಬಯಸುತ್ತಿದ್ದೆ.

ಯದಾದಿತ್ಯಮಿವಾಪಶ್ಯತ್ ಪತಿತಂ ಭುವಿ ಸಂಜಯ |
ದುರ್ಯೋಧನಃ ಶಾಂತನವಂ ಕಿಂ ತದಾ ಪ್ರತ್ಯಪದ್ಯತ ॥58॥
ಎಲೈ ಸಂಜಯನೇ, ಸೂರ್ಯನು ಭೂಮಿಯ ಮೇಲೆ ಬಿದ್ದಂತಿದ್ದ ಭೀಷ್ಮರನ್ನು ನೋಡಿ ದುರ್ಯೋಧನನಿಗೆ ಯಾವ ಭಾವನೆ ಉಂಟಾಯಿತು?
ನಾಹಂ ಸ್ವೇಷಾಂ ಪರೇಷಾಂ ವಾ ಬುದ್ಧ್ಯಾ ಸಂಜಯ ಚಿಂತಯನ್ |
ಶೇಷಂ ಕಿಂಚಿತ್ ಪ್ರಪಶ್ಯಾಮಿ ಪ್ರತ್ಯನೀಕೇ ಮಹೀಕ್ಷಿತಾಮ್ ॥59॥
ಎಲೈ ಸಂಜಯನೇ, ನಾನು ನನ್ನ ಬುದ್ಧಿಯಿಂದ ಅಥವಾ ಬೇರೆಯವರ ಬುದ್ಧಿಯಿಂದ ವಿಚಾರ ಮಾಡಿದರೂ ರಾಜರುಗಳ ಸೈನ್ಯಗಳಲ್ಲಿ ಯಾವುದೂ ಉಳಿಯುವುದಿಲ್ಲವೆಂದು ತಿಳಿಯುತ್ತೇನೆ.
ದಾರುಣಃ ಕ್ಷತ್ರಧರ್ಮೋಽಯಮೃಷಿಭಿಃ ಸಂಪ್ರದರ್ಶಿತಃ |
ಯತ್ರ ಶಾಂತನವಂ ಹತ್ವಾ ರಾಜ್ಯಮಿಚ್ಛಂತಿ ಪಾಂಡವಾಃ ॥60॥
ಎಲ್ಲಿ ಶಂತನುಪುತ್ರರಾದ ಭೀಷ್ಮರನ್ನು ಸಂಹರಿಸಿ ಪಾಂಡವರು ರಾಜ್ಯವನ್ನು ಬಯಸುತ್ತಾರೆಯೋ, ಅಂತಹ ಋಷಿಗಳಿಂದ ಹೇಳಲ್ಪಟ್ಟ ಈ ಕ್ಷತ್ರಿಯ ಧರ್ಮವಾದ ಯುದ್ಧವು ಭಯಂಕರವಾದುದೆಂದು ನಾನು ಭಾವಿಸುತ್ತೇನೆ.
ವಯಂ ವಾ ರಾಜ್ಯಮಿಚ್ಛಾಮೋ ಘಾತಯಿತ್ವಾ ಪಿತಾಮಹಮ್ |
ಕ್ಷತ್ರಧರ್ಮೇ ಸ್ಥಿತಾಃ ಪಾರ್ಥಾ ನಾಪರಾಧ್ಯಂತಿ ಪುತ್ರಕಾಃ ॥61॥
ಅಥವಾ ನಾವಾದರೂ ಪಾಂಡವರ ಕೈಯಲ್ಲಿ ಪಿತಾಮಹರಾದ ಭೀಷ್ಮರನ್ನು ಕೊಲ್ಲಿಸಿ ರಾಜ್ಯವನ್ನು ಬಯಸುತ್ತಿದ್ದೇವೆ. ಕ್ಷತ್ರಿಯಧರ್ಮದಲ್ಲೇ ನಿರತರಾದ ನನ್ನ ಪುತ್ರರಾದ ಪಾಂಡವರು ಅಪರಾಧಿಗಳಲ್ಲ.
ಏತದಾರ್ಯೇಣ ಕರ್ತವ್ಯಂ ಕೃಚ್ಛ್ರಾಸ್ವಾಪತ್ಸು ಸಂಜಯ |
ಪರಾಕ್ರಮಃ ಪರಂ ಶಕ್ತ್ಯಾ ತಚ್ಚ ತಸ್ಮಿನ್ ಪ್ರತಿಷ್ಠಿತಮ್ ॥62॥
ಎಲೈ ಸಂಜಯನೇ, ಆರ್ಯನಾದ ಕ್ಷತ್ರಿಯನು ಕಷ್ಟ ಒದಗಿದಾಗ ಪರಾಕ್ರಮವನ್ನು ಮಾಡಬೇಕು. ಈ ಪರಾಕ್ರಮವು ಭೀಷ್ಮರಲ್ಲಿ ಪ್ರತಿಷ್ಠಿತವಾಗಿದ್ದಿತು.
ಅನೀಕಾನಿ ವಿನಿಘ್ನಂತಂ ಹ್ರೀಮಂತಮಪರಾಜಿತಮ್ |
ಕಥಂ ಶಾಂತನವಂ ತಾತ ಪಾಂಡುಪುತ್ರಾ ನ್ಯಪಾತಯನ್ ॥63॥
ತಮ್ಮ ಸೈನ್ಯವನ್ನು ಸಂಹರಿಸುತ್ತಾ ಅಪರಾಜಿತರೂ, ದಾಕ್ಷಿಣ್ಯಸ್ವಭಾವದವರೂ ಆಗಿದ್ದ ಶಂತನು ಪುತ್ರರಾದ ಭೀಷ್ಮರನ್ನು ಎಲೈ ಪ್ರೀತಿಪಾತ್ರನೇ, ಪಾಂಡವರು ಹೇಗೆ ಕೆಡವಿದರು?
ಕಥಂ ಯುಕ್ತಾನ್ಯನೀಕಾನಿ ಕಥಂ ಯುದ್ಧಂ ಮಹಾತ್ಮಭಿಃ |
ಕಥಂ ವಾ ನಿಹತೋ ಭೀಷ್ಮಃ ಪಿತಾ ಸಂಜಯ ಮೇ ಪರೈಃ ॥64॥
ಎಲೈ ಸಂಜಯನೇ, ಸೈನ್ಯಗಳನ್ನು ಹೇಗೆ ನಿಯೋಗ ಮಾಡಿದರು? ಮಹಾತ್ಮರಾದ ಪಾಂಡವರು ಹೇಗೆ ಯುದ್ಧವನ್ನು ಮಾಡಿದರು? ನನ್ನ ತಂದೆಯಾದ ಭೀಷ್ಮರು ಪರರಾದ ಪಾಂಡವರಿಂದ ಹೇಗೆ ನಿಹತರಾದರು?
ದುರ್ಯೋಧನಶ್ಚ ಕರ್ಣಶ್ಚ ಶಕುನಿಶ್ಚಾಪಿ ಸೌಬಲಃ |
ದುಃಶಾಸನಶ್ಚ ಕಿತವೋ ಹತೇ ಭೀಷ್ಮೇ ಕಿಮಬ್ರುವನ್ ॥65॥
ದುರ್ಯೋಧನನೂ, ಕರ್ಣನೂ, ಸೌಬಲನಾದ ಶಕುನಿಯೂ, ಕಪಟಿಯಾದ ದುಶ್ಶಾಸನನೂ ಭೀಷ್ಮರು ಹತರಾದಾಗ ಏನು ಹೇಳಿದರು?
ಯಚ್ಛರೀರೈರುಪಸ್ತೀರ್ಣಾಂ ನರವಾರಣವಾಜಿನಾಮ್ |
ಶರಶಕ್ತಿಗದಾಖಡ್ಗತೋಮರಾಕ್ಷಾಂ ಭಯಾವಹಾಮ್ ॥66॥
ಪ್ರಾವಿಶನ್ ಕಿತವಾ ಮಂದಾಃ ಸಭಾಂ ಯುಧಿ ದುರಾಸದಾಮ್ |
ಪ್ರಾಣದ್ಯೂತೇ ಪ್ರತಿಭಯೇ ಕೇಽದೀವ್ಯಂತ ನರರ್ಷಭಾಃ ॥67॥
ಪದಾತಿಗಳು, ಅಶ್ವಗಳು ಮತ್ತು ಗಜಗಳೆಂಬ ಹಾಸುಗಳನ್ನು ಹಾಸಿದ ಬಾಣಗಳೂ, ಶಕ್ತ್ಯಾಯುಧಗಳು, ಖಡ್ಗಗಳು, ಗದೆಗಳು, ತೋಮರಗಳು ಎಂಬ ದಾಳಗಳುಳ್ಳ ಭಯಂಕರವಾದ ಪ್ರಾಣದ್ಯೂತವುಳ್ಳ, ಪ್ರವೇಶಿಸಲು ಅಸಾಧ್ಯವಾದ ಯುದ್ಧಸಭೆಯನ್ನು ಪಗಡೆಯಾಟವನ್ನು ಆಡುವಂತೆ ಇದ್ದ ವೀರರು ಹೇಗೆ ಪ್ರವೇಶಿಸಿದರು? ಯಾವ ನರಶ್ರೇಷ್ಠರು ಆ ಪಗಡೆಯಾಟವನ್ನು ಆಡಿದರು?
ಕೇಽಜಯನ್ ಕೇ ಜಿತಾಸ್ತತ್ರ ಹೃತಲಕ್ಷಾ ನಿಪಾತಿತಾಃ |
ಅನ್ಯೇ ಭೀಷ್ಮಾಚ್ಛಾಂತನವಾತ್ ತನ್ಮಮಾಚಕ್ಷ್ವ ಸಂಜಯ ॥68॥
ಎಲೈ ಸಂಜಯನೇ, ಆ ಪ್ರಾಣವನ್ನು ಒತ್ತೆಯಾಗಿಟ್ಟು ಆಡಿದ ಆಟದಲ್ಲಿ ಶಂತನು ಪುತ್ರರಾದ ಭೀಷ್ಮರನ್ನು ಬಿಟ್ಟು ಬೇರೆ ಯಾರು ಜಯಶೀಲರಾದರು? ಯಾರು ತಮ್ಮ ಪಣವನ್ನು ಕಳೆದುಕೊಂಡು ಪರಾಜಿತರಾಗಿ ಕೆಳಗೆ ಉರುಳಿದರು?
ನ ಹಿ ಮೇ ಶಾಂತಿರಸ್ತೀಹ ಯುಧಿ ದೇವವ್ರತಂ ಹತಮ್ |
ಪಿತರಂ ಭೀಮಕರ್ಮಾಣಂ ಶ್ರುತ್ವಾ ಮೇ ದುಃಖಮಾವಿಶತ್ ॥69॥
ದೇವವ್ರತರಾದ ಭೀಷ್ಮರು ಯುದ್ಧದಲ್ಲಿ ಹತರಾದುದನ್ನು ಕೇಳಿ ನನ್ನ ಮನಸ್ಸಿಗೆ ಶಾಂತಿಯೇ ಉಂಟಾಗುತ್ತಿಲ್ಲ. ಭಯಂಕರ ಕರ್ಮವನ್ನು ಮಾಡುವ ಸಾಮರ್ಥ್ಯವುಳ್ಳ ನನ್ನ ತಂದೆಯಾದ ಭೀಷ್ಮರ ಸುದ್ದಿಯನ್ನು ಕೇಳಿ ನನ್ನನ್ನು ದುಃಖವು ಆವರಿಸಿದೆ.
ಆರ್ತಿಂ ಮೇ ಹೃದಯೇ ರೂಢಾಂ ಮಹತೀಂ ಪುತ್ರಕಾರಿತಾಮ್ |
ತ್ವಂ ಸಿಂಚನ್ ಸರ್ಪಿಷೇವಾಗ್ನಿಮುದ್ದೀಪಯಸಿ ಸಂಜಯ ॥70॥
ಎಲೈ ಸಂಜಯನೇ, ನನ್ನ ಮಗನ ದುರ್ನಡತೆಯಿಂದ ನನ್ನ ಹೃದಯದಲ್ಲಿ ಬೇರೂರಿದ ದೊಡ್ಡ ದುಃಖವನ್ನು ಅಗ್ನಿಯನ್ನು ಆಜ್ಯದಿಂದ ಚುಮುಕಿಸಿದಂತೆ ನೀನು ಅಭಿವೃದ್ಧಿಗೊಳಿಸುತ್ತಿದ್ದೀಯೆ!

ಮಹಾಂತಂ ಭಾರಮುದ್ಯಮ್ಯ ವಿಶ್ರುತಂ ಸಾರ್ವಲೌಕಿಕಮ್ |
ದೃಷ್ಟ್ವಾ ವಿನಿಹತಂ ಭೀಷ್ಮಂ ಮನ್ಯೇ ಶೋಚಂತಿ ಪುತ್ರಕಾಃ ||71||
ಸರ್ವಲೋಕದಲ್ಲಿಯೂ ಪ್ರಖ್ಯಾತರಾದ ಭೀಷ್ಮರು ದೊಡ್ಡ ಜವಾಬ್ದಾರಿಯನ್ನು ಹೊತ್ತು ಯುದ್ಧದಲ್ಲಿ ಬಿದ್ದುದನ್ನು ನೋಡಿ ನನ್ನ ಮಕ್ಕಳು ಶೋಕಪಡುತ್ತಾರೆ ಎಂದು ತಿಳಿಯುತ್ತೇನೆ.
ಶ್ರೋಷ್ಯಾಮಿ ತಾನಿ ದುಃಖಾನಿ ದುರ್ಯೋಧನಕೃತಾನ್ಯಹಮ್ |
ತಸ್ಮಾನ್ಮೇ ಸರ್ವಮಾಚಕ್ಷ್ವ ಯದ್ವೃತ್ತಂ ತತ್ರ ಸಂಜಯ ||72||
ದುರ್ಯೋಧನನಿಂದ ಉಂಟಾದ ಇಂತಹ ದುಃಖಮಯ ವಾರ್ತೆಗಳನ್ನು ನಾನು ಇನ್ನೂ ಕೇಳುವವನಿದ್ದೇನೆ. ಆದ್ದರಿಂದ ಎಲೈ ಸಂಜಯನೇ, ಏನು ನಡೆಯಿತೆಂದು ಎಲ್ಲವನ್ನೂ ನನಗೆ ಹೇಳು.
ಸಂಗ್ರಾಮೇ ಪೃಥಿವೀಶಾನಾಂ ಮಂದಸ್ಯಾಬುದ್ಧಿಸಂಭವಮ್ |
ಅಪನೀತಂ ಸುನೀತಂ ವಾ ತನ್ಮಮಾಚಕ್ಷ್ವ ಸಂಜಯ ||73||
ಎಲೈ ಸಂಜಯನೇ, ಯುದ್ಧದಲ್ಲಿ ಪೃಥಿವೀಪಾಲರಾದ ರಾಜರೂ ಮತ್ತು ಮಂದನಾದ ನನ್ನ ಪುತ್ರನಾದ ದುರ್ಯೋಧನನೂ ಬುದ್ಧಿಯಿಲ್ಲದೆ ಮಾಡಿದ ಅನ್ಯಾಯವನ್ನಾಗಲೀ ಅಥವಾ ಸುನ್ಯಾಯವನ್ನಾಗಲೀ ನನಗೆ ಹೇಳುವವನಾಗು.
ಯತ್ಕೃತಂ ತತ್ರ ಭೀಷ್ಮೇಣ ಸಂಗ್ರಾಮೇ ಜಯಮಿಚ್ಛತಾ |
ತೇಜೋಯುಕ್ತಂ ಕೃತಾಸ್ತ್ರೇಣ ಶಂಸ ತಚ್ಚಾಪ್ಯಶೇಷತಃ ||74||
ಯುದ್ಧದಲ್ಲಿ ಜಯವನ್ನು ಬಯಸಿ ಅಸ್ತ್ರಪಾರಂಗತರಾದ ಭೀಷ್ಮರು ಪರಾಕ್ರಮದಿಂದ ಕೂಡಿದವರಾಗಿ ಏನನ್ನು ಎಸಗಿದರೋ ಅದನ್ನೂ ನನಗೆ ಪೂರ್ಣವಾಗಿ ಹೇಳುವವನಾಗು.
ಯಥಾ ತದಭವದ್ ಯುದ್ಧಂ ಕುರುಪಾಂಡವಸೇನಯೋಃ |
ಕ್ರಮೇಣ ಯೇನ ಯಸ್ಮಿಂಶ್ಚ ಕಾಲೇ ಯಚ್ಚ ಯಥಾ ಚ ತತ್ ||75||
ಕುರು-ಪಾಂಡವ ಸೇನೆಗಳಿಗೆ ಹೇಗೆ ಯುದ್ಧವು ನಡೆಯಿತು? ಯಾವ ಕ್ರಮದಿಂದ, ಯಾವ ಕಾಲದಲ್ಲಿ, ಯಾವ ಯಾವ ಘಟನೆಗಳು ನಡೆದವು? ಎಲ್ಲವನ್ನೂ ನನಗೆ ಹೇಳುವವನಾಗು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚದಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾರನೆಯ ಅಧ್ಯಾಯ
ಸಂಜಯನಿಂದ ಭೀಷ್ಮರ ರಕ್ಷಣೆಯ ವಿಷಯದಲ್ಲಿ ದುರ್ಯೋಧನನ
ಆದೇಶ ಮತ್ತು ಕುರು-ಪಾಂಡವರ ಸೇನೆಗಳ ವರ್ಣನೆ.
ಸಂಜಯಃ
ತ್ವದ್ಯುಕ್ತೋಽಯಮನುಪ್ರಶ್ನೋ ಮಹಾರಾಜ ಯಥಾರ್ಹಸಿ |
ನ ತು ದುರ್ಯೋಧನೇ ದೋಷಮಿಮಮಾಸಕ್ತುಮರ್ಹಸಿ ||1||
ಸಂಜಯ ಎಲೈ ಮಹಾರಾಜನೇ, ನೀನು ಕೇಳುವ ಈ ಪ್ರಶ್ನೆಯು ನಿನಗೆ ಯೋಗ್ಯವಾಗಿಯೇ ಇದೆ. ಆದರೆ ಈ ದೋಷವನ್ನು ದುರ್ಯೋಧನನ ಮೇಲೆಯೇ ಹೇರುವುದು ನಿನಗೆ ಉಚಿತವಲ್ಲ.
ಯ ಆತ್ಮನೋ ದುಶ್ಚರಿತಾದಶುಭಂ ಪ್ರಾಪ್ನುಯಾನ್ನರಃ |
ಏನಸಾ ತೇನ ನಾನ್ಯಂ ಸ ಉಪಾಶಂಕಿತುಮರ್ಹತಿ ||2||
ಯಾವ ಮನುಷ್ಯನು ತನ್ನ ದುರ್ನಡತೆಯಿಂದ ಉಂಟಾದ ಅಶುಭವನ್ನು ಹೊಂದುತ್ತಾನೆಯೋ ಅವನು ಆ ದುರ್ನಡತೆಯಿಂದ ಉಂಟಾದ ಪಾಪವನ್ನು ಇನ್ನೊಬ್ಬರಿಗೆ ಸಂಬಂಧಿಸಲು ಪ್ರಯತ್ನಿಸಬಾರದು.
ಮಹಾರಾಜ ಮನುಷ್ಯೇಷು ನಿಂದ್ಯಂ ಯಃ ಸರ್ವಮಾಚರೇತ್ |
ಸ ವಧ್ಯಃ ಸರ್ವಲೋಕಸ್ಯ ನಿಂದಿತಾನಿ ಸಮಾಚರನ್ ||3||
ಎಲೈ ಮಹಾರಾಜನೇ, ಯಾವ ಮನುಷ್ಯನು ಲೋಕದಲ್ಲಿ ನಿಂದಿತವಾದ ಕರ್ಮವನ್ನು ಮಾಡುತ್ತಾನೆಯೋ, ಅಂತಹವನು ಎಲ್ಲ ಲೋಕದ ದೃಷ್ಟಿಯಿಂದಲೂ ವಧ್ಯನಾಗುತ್ತಾನೆ.
ನಿಕಾರೋ ನಿಕೃತಿಪ್ರಜ್ಞೈಃ ಪಾಂಡವೈಸ್ತ್ವತ್ಪ್ರತೀಕ್ಷಯಾ |
ಅನುಭೂತಃ ಸಹಾಮಾತ್ಯೈಃ ಕ್ಷಾಂತಂ ಚ ಸುಚಿರಂ ವನೇ ||4||
ನಿನ್ನ ಮಕ್ಕಳ ಮೋಸ ಬುದ್ಧಿಯಿಂದ ಉಂಟಾದ ಅವಮಾನಗಳನ್ನು ನಿನ್ನ ಮೇಲಿನ ದೃಷ್ಟಿಯಿಂದ ಪಾಂಡವರು ತಮ್ಮ ಮಂತ್ರಿಗಳ ಜೊತೆಯಲ್ಲಿ ಬಹುಕಾಲ ಅನುಭವಿಸಿದರು ಮತ್ತು ಬಹಳ ಕಾಲ ಕಾಡಿನಲ್ಲಿ ಕ್ಷಮಿಸಿದರು.
ಹಯಾನಾಂ ಚ ಗಜಾನಾಂ ಚ ಶೂರಾಣಾಂ ಚಾಮಿತೌಜಸಾಮ್ |
ಪ್ರತ್ಯಕ್ಷಂ ಯನ್ಮಯಾ ದೃಷ್ಟಂ ದೃಷ್ಟಂ ಯೋಗಬಲೇನ ಚ ||5||
ಶೃಣು ತತ್ ಪೃಥಿವೀಪಾಲ ಮಾ ಚ ಶೋಕೇ ಮನಃ ಕೃಥಾಃ |
ದಿಷ್ಟಮೇತತ್ ಪುರಾ ನೂನಮೇವಂಭಾವಿ ನರಾಧಿಪ ||6||
ಅಮಿತಪರಾಕ್ರಮಿಗಳಾದ ಯಾವ ಶೂರರನ್ನೂ, ಅಶ್ವಗಳನ್ನೂ ಮತ್ತು ಗಜಗಳನ್ನೂ ನಾನು ಪ್ರತ್ಯಕ್ಷವಾಗಿ ಮತ್ತು ಯೋಗದೃಷ್ಟಿಯಿಂದ ಹಿಂದೆ ನೋಡಿದೆನೋ ಅದನ್ನು ಎಲೈ ರಾಜನೇ, ನಿನಗೆ ಹೇಳುತ್ತೇನೆ. ಮನಸ್ಸಿನಲ್ಲಿ ಶೋಕವನ್ನು ಪಡಬೇಡ.

ಎಲ್ಲೆ ನರಾಧಿಪನೇ, ಇದು ಹೀಗೆಯೇ ಆಗಬೇಕೆಂದು ಮೊದಲೇ ವಿಧಿಯಿಂದ ನಿಯತವಾಗಿದೆ.
ನಮಸ್ಕೃತ್ವಾ ಪಿತುಸ್ತೇಽಹಂ ಪಾರಾಶರ್ಯಾಯ ಧೀಮತೇ |
ಯಸ್ಯ ಪ್ರಸಾದಾದ್ ದಿವ್ಯಂ ಮೇ ಪ್ರಾಪ್ತಂ ಜ್ಞಾನಮನುತ್ತಮಮ್ ॥7॥
ದೃಷ್ಟಿಶ್ಚಾತೀಂದ್ರಿಯಾ ರಾಜನ್ ದೂರಾಚ್ಚ್ರವಣಮೇವ ಚ |
ಪರಚಿತ್ತಸ್ಯ ವಿಜ್ಞಾನಮತೀತಾನಾಗತಸ್ಯ ಚ ॥8॥
ವ್ಯುತ್ಥಿತೋತ್ಪತ್ತಿವಿಜ್ಞಾನಮಾಕಾಶೇ ಚ ಗತಿಃ ಸದಾ |
ಶಸ್ತ್ರೈರಸಂಗೋ ಯುದ್ಧೇಷು ವರದಾನಾನ್ಮಹಾತ್ಮನಃ ॥9॥
ಯಾವ ನಿನ್ನ ತಂದೆಯಾದ ಪರಾಶರಪುತ್ರರಾದ ವೇದವ್ಯಾಸರ ಅನುಗ್ರಹದಿಂದ ನಾನು ಈ ಶ್ರೇಷ್ಠವಾದ ದಿವ್ಯಜ್ಞಾನವನ್ನು ಪಡೆದಿದ್ದೇನೆಯೋ, ಅತೀಂದ್ರಿಯ ದೃಷ್ಟಿಯನ್ನೂ, ದೂರಶ್ರವಣ ಶಕ್ತಿಯನ್ನೂ, ಪರಚಿತ್ತಜ್ಞಾನವನ್ನೂ, ಅತೀತಾನಾಗತ ಜ್ಞಾನವನ್ನೂ ಪಡೆದಿದ್ದೇನೆಯೋ, ಯಾವ ಮಹಾತ್ಮರಾದ ಅವರ ವರದಾನದಿಂದ ಆಗಾಗ್ಗೆ ಉಂಟಾಗುವ ಎಲ್ಲ ಘಟನೆಗಳ ಜ್ಞಾನವನ್ನೂ, ಆಕಾಶದಲ್ಲಿ ಗಮನಶಕ್ತಿಯನ್ನೂ, ಯುದ್ಧದಲ್ಲಿ ಶಸ್ತ್ರದಿಂದ ಅಹತಿಯನ್ನೂ ಪಡೆದಿದ್ದೇನೆಯೋ (ಅಂತಹ ನಾನು ನಿನಗೆ ಹೇಳುವೆನು).
ಶೃಣು ಮೇ ವಿಸ್ತರೇಣೇದಂ ನಿವೃತ್ತಂ ಪರಮಾದ್ಭುತಮ್ |
ಭಾರತಾನಾಂ ಮಹದ್ ಯುದ್ಧಂ ಯಥಾಭೂಲ್ಲೋಮಹರ್ಷಣಮ್ ॥
ಈ ಹತ್ತುದಿನಗಳವರೆಗೆ ನಡೆದ ಪರಮಾದ್ಭುತವಾದ, ರೋಮಾಂಚಕಾರಿಯಾದ, ಭರತವಂಶದವರ ಈ ದೊಡ್ಡ ಯುದ್ಧವನ್ನು ವಿಸ್ತಾರವಾಗಿ ನನ್ನಿಂದ ಕೇಳುವವನಾಗು.
ತೇಷ್ವನೀಕೇಷು ಯತ್ತೇಷು ವ್ಯೂಢೇಷು ಚ ವಿಧಾನತಃ |
ದುರ್ಯೋಧನೋ ಮಹಾರಾಜ ದುಃಶಾಸನಮಥಾಬ್ರವೀತ್ ॥11॥
ಎಲ್ಲೆ ಮಹಾರಾಜನೇ, ಸನ್ನದ್ಧರಾದ ಆ ಸೈನ್ಯಗಳು ಶಾಸ್ತ್ರವಿಧಾನಕ್ಕೆ ಅನುಗುಣವಾಗಿ ವ್ಯೂಹಗೊಂಡಮೇಲೆ ದುರ್ಯೋಧನನು ದುಶ್ಶಾಸನನನ್ನು ಕುರಿತು ಹೀಗೆ ಹೇಳಿದನು.
ದುಃಶಾಸನ ರಥಾಸ್ತೂರ್ಣಂ ಯುಜ್ಯಂತಾಂ ಭೀಷ್ಮರಕ್ಷಿಣಃ |
ಅನೀಕಾನಿ ಚ ಸರ್ವಾಣಿ ಶೀಘ್ರಂ ತ್ವಮನುಚೋದಯ ॥12॥
ಎಲ್ಲೆ ದುಃಶಾಸನನೇ, ಭೀಷ್ಮರನ್ನು ರಕ್ಷಿಸಲು ರಥಗಳು ಶೀಘ್ರವಾಗಿ ಹೂಡಲ್ಪಡಲಿ. ನೀನು ಎಲ್ಲ ಸೈನ್ಯಕ್ಕೂ ಶೀಘ್ರವಾಗಿ ಪ್ರಚೋದನೆಯನ್ನು ಮಾಡು.
ಅಯಂ ಮಾ ಸಮನುಪ್ರಾಪ್ತೋ ವರ್ಷಪೂಗಾಭಿಚಿಂತಿತಃ |
ಪಾಂಡವಾನಾಂ ಸಸೈನ್ಯಾನಾಂ ಕುರೂಣಾಂ ಚ ಸಮಾಗಮಃ ॥13॥
ನಾನು ಸೈನ್ಯಸಹಿತರಾದ ಪಾಂಡವರಿಗೂ ಮತ್ತು ಕುರುಗಳಿಗೂ ಯುದ್ಧದಲ್ಲಿ ಸಮಾಗಮವನ್ನು ಅನೇಕ ವರ್ಷಗಳಿಂದ ನಿರೀಕ್ಷಿಸುತ್ತಿದ್ದೆ. ಅಂತಹ ಸಮಾಗಮವು ಈಗ ಪ್ರಾಪ್ತವಾಗಿದೆ.
ನಾತಃ ಕಾರ್ಯತಮಂ ಮನ್ಯೇ ರಣೇ ಭೀಷ್ಮಸ್ಯ ರಕ್ಷಣಾತ್ |
ಹನ್ಯಾದ್ ದೃಪ್ತೋ ಹ್ಯಸೌ ಪಾರ್ಥಾನ್ ಸೋಮಕಾಂಶ್ಚ ಸಸೃಂಜಯಾನ್ ॥
ನಾವು ಯುದ್ಧದಲ್ಲಿ ಭೀಷ್ಮರ ರಕ್ಷಣೆಗಿಂತ ಈಗ ಮಾಡಬೇಕಾದ ಶ್ರೇಷ್ಠವಾದ ಕಾರ್ಯವು ಇನ್ನೊಂದಿಲ್ಲ. ದರ್ಪದಿಂದ ಕೂಡಿದ ಭೀಷ್ಮರು ಸೃಂಜಯರಿಂದ ಸಹಿತರಾದ ಪಾಂಡವರನ್ನೂ ಮತ್ತು ಸೋಮಕರನ್ನೂ ಕೊಂದಾರು!
ಅಬ್ರವೀಚ್ಚ ವಿಶುದ್ಧಾತ್ಮಾ ನಾಹಂ ಹನ್ಯಾಂ ಶಿಖಂಡಿನಮ್ |
ಶ್ರೂಯತೇ ಸ್ತ್ರೀ ಹ್ಯಸೌ ಪೂರ್ವಂ ತಸ್ಮಾದ್ ವರ್ಜ್ಯೋ ರಣೇ ಮಮ ॥
ವಿಶುದ್ಧಾತ್ಮರಾದ ಭೀಷ್ಮರು ನಾನು ಶಿಖಂಡಿಯನ್ನು ಕೊಲ್ಲುವುದಿಲ್ಲ. ಅವನು ಮೊದಲು ಸ್ತ್ರೀಯಾಗಿದ್ದ ಎಂದು ನಾನು ಕೇಳಿದ್ದೇನೆ. ಆದ್ದರಿಂದ ಯುದ್ಧದಲ್ಲಿ ನಾನು ಅವನನ್ನು ಪರಿವರ್ಜಿಸುತ್ತೇನೆ ಎಂದು ಹೇಳಿದ್ದಾರಷ್ಟೆ!
ತಸ್ಮಾದ್ ಭೀಷ್ಮೋ ರಕ್ಷಿತವ್ಯೋ ವಿಶೇಷೇಣೇತಿ ಮೇ ಮತಿಃ |
ಶಿಖಂಡಿನೋ ವಧೇ ಯತ್ತಾಃ ಸರ್ವೇ ತಿಷ್ಠಂತು ಮಾಮಕಾಃ ॥16॥
ಆದ್ದರಿಂದ ವಿಶೇಷವಾಗಿ ಭೀಷ್ಮರನ್ನು ರಕ್ಷಿಸಬೇಕು ಎಂಬುದು ನನ್ನ ಅಭಿಪ್ರಾಯ. ನನ್ನವರೆಲ್ಲರೂ ಶಿಖಂಡಿಯನ್ನು ವಧೆ ಮಾಡಲು ಸಿದ್ಧರಾಗಿ.
ತಥಾ ಪ್ರಾಚ್ಯಾಃ ಪ್ರತೀಚ್ಯಾಶ್ಚ ದಾಕ್ಷಿಣಾತ್ಯೋತ್ತರಾಪಥಾಃ |
ಸರ್ವಶಸತ್ರಸ್ತ್ರಕುಶಲಾಸ್ತೇ ರಕ್ಷಂತು ಪಿತಾಮಹಮ್ ॥17॥
ಅದರಂತೆಯೇ ಪೂರ್ವದಿಕ್ಕಿನ, ಪಶ್ಚಿಮ ದಿಕ್ಕಿನ, ದಕ್ಷಿಣ ಮತ್ತು ಉತ್ತರ ದಿಕ್ಕಿನ ಸರ್ವಶಸತ್ರಸ್ತ್ರ ಕುಶಲರಾದ ರಾಜರು ಪಿತಾಮಹರಾದ ಭೀಷ್ಮರನ್ನು ರಕ್ಷಿಸಲಿ.
ಅರಕ್ಷ್ಯಮಾಣಂ ಹಿ ವೃಕೋ ಹನ್ಯಾತ್ ಸಿಂಹಂ ಮಹಾಬಲಮ್ |
ಮಾ ಸಿಂಹಂ ಜಂಬುಕೇನೇವ ಘಾತಯಾಮಃ ಶಿಖಂಡಿನಾ ॥18॥
ಸಿಂಹಕ್ಕೆ ರಕ್ಷಣೆಯಿಲ್ಲದಿದ್ದರೆ ಅದು ಮಹಾಬಲಿಷ್ಠವಾದರೂ ಅದನ್ನು ತೋಳವು ಕೊಂದೀತು! ಸಿಂಹದಂತಿರುವ ಭೀಷ್ಮರನ್ನು ತೋಳದಂತಿರುವ ಶಿಖಂಡಿಯಿಂದ ನಾವು ಕೊಲ್ಲಿಸಬಾರದು.
ವಾಮಂ ಚಕ್ರಂ ಯುಧಾಮನ್ಯುರುತ್ತಮೌಜಾಶ್ಚ ದಕ್ಷಿಣಮ್ |
ಗೋಪ್ತಾರೌ ಫಲ್ಗುನಸ್ಯೈತೌ ಫಲ್ಗುನೋಽಪಿ ಶಿಖಂಡಿನಃ ॥19॥
ಅರ್ಜುನನ ಎಡಭಾಗವನ್ನು ಯುಧಾಮನ್ಯುವೂ, ಬಲಭಾಗವನ್ನು ಉತ್ತಮೌಜನೂ ರಕ್ಷಿಸುವರು. ಅರ್ಜುನನಾದರೂ ಶಿಖಂಡಿಯ

ಎರಡು ಭಾಗಗಳನ್ನೂ ರಕ್ಷಿಸುವನು.
ಸಂರಕ್ಷ್ಯಮಾಣಃ ಪಾರ್ಥೇನ ಭೀಷ್ಮೇಣ ಚ ವಿವರ್ಜಿತಃ |
ಯಥಾ ನ ಹನ್ಯಾದ್ ಗಾಂಗೇಯಂ ದುಃಶಾಸನ ತಥಾ ಕುರು ॥20॥
ಎಲೈ ದುಃಶಾಸನನೇ, ಭೀಷ್ಮರಿಂದ ಪರಿತ್ಯಕ್ತನಾಗಿ ಅರ್ಜುನನಿಂದ ರಕ್ಷಿತನಾಗಿ ಶಿಖಂಡಿಯು ಗಾಂಗೇಯರಾದ ಭೀಷ್ಮರನ್ನು ಕೊಲ್ಲದಂತೆ ವ್ಯವಸ್ಥೆ ಮಾಡು.
ಸಂಜಯಃ
ತತೋ ರಜನ್ಯಾಂ ವ್ಯುಷ್ಟಾಯಾಂ ಶಬ್ದಃ ಸಮಭವನ್ಮಹಾನ್ |
ಕ್ರೋಶತಾಂ ಭೂಮಿಪಾಲಾನಾಂ ಯುಜ್ಯತಾಂ ಯುಜ್ಯತಾಮಿತಿ ॥21॥
ಸಂಜಯ ಅನಂತರ ರಾತ್ರಿಯು ಕಳೆದ ಮೇಲೆ ರಥಗಳನ್ನು ಹೂಡಿ, ಹೂಡಿ ಎಂದು ಕಿರುಚುವ ರಾಜರುಗಳಿಂದ ದೊಡ್ಡ ಶಬ್ದವುಂಟಾಯಿತು.
ಶಂಖದುಂದುಭಿನಿರ್ಘೋಷೈಃ ಸಿಂಹನಾದೈಶ್ಚ ಭಾರತ |
ಹಯಹೇಷಿತಶಬ್ದೈಶ್ಚ ರಥನೇಮಿಸ್ವನೈಸ್ತಥಾ ॥22॥
ಗಜಾನಾಂ ಬೃಂಹತಾಂ ಚೈವ ಯೋಧಾನಾಂ ಚಾಭಿಗರ್ಜತಾಮ್ |
ಕ್ಷ್ವೇಡಿತಾಸ್ಫೋಟಿತೋತ್ಕ್ರುಷ್ಟೈಸ್ತುಮುಲಂ ಸರ್ವತೋಽಭವತ್ ॥23॥
ಎಲೈ ಭಾರತನೇ, ಶಂಖ-ದುಂದುಭಿಘೋಷಗಳಿಂದಲೂ, ಸಿಂಹನಾದಗಳಿಂದಲೂ, ಕುದುರೆಗಳ ಹೇಷಾರವದಿಂದಲೂ, ರಥಚಕ್ರಗಳ ಘೋಷದಿಂದಲೂ, ಗಜಗಳ ಘೀಂಕಾರದಿಂದಲೂ, ಯೋಧರ ಗರ್ಜನೆಯಿಂದಲೂ ಮತ್ತು ಯೋಧರ ಚಪ್ಪಾಳೆಗಳು, ಸಿಂಹನಾದಗಳು ಮತ್ತು ದೊಡ್ಡ ಆಕ್ರೋಶ ಶಬ್ದಗಳಿಂದಲೂ ತೀವ್ರವಾದ ಕೋಲಾಹಲ ಉಂಟಾಯಿತು.
ಉದತಿಷ್ಠನ್ ಮಹಾರಾಜ ಸರ್ವಂ ಯುಕ್ತಮಶೇಷತಃ |
ಸೂರ್ಯೋದಯೇ ಮಹತ್ಸೈನ್ಯಂ ಕುರುಪಾಂಡವಸೇನಯೋಃ |
ತವ ರಾಜೇಂದ್ರ ಪುತ್ರಾಣಾಂ ಪಾಂಡವಾನಾಂ ತಥೈವ ಚ ॥24॥
ಎಲೈ ಮಹಾರಾಜನೇ, ರಾಜೇಂದ್ರನೇ, ಸೂರ್ಯೋದಯವಾಗುತ್ತಿರಲು ಕುರು- ಪಾಂಡವ ಸೇನೆಗೆ ಸಂಬಂಧಿಸಿದ ಎಲ್ಲ ಮಹತ್ಸೈನ್ಯವು ಪೂರ್ಣವಾಗಿ, ಸನ್ನದ್ಧವಾಗಿ ನಿಂತಿತು. ನಿನ್ನ ಮಕ್ಕಳ ಮತ್ತು ಪಾಂಡವರ ಸೈನ್ಯವು ಹಾಗೆಯೇ ಸಜ್ಜುಗೊಂಡವು.
ತತ್ರ ನಾಗಾ ರಥಾಶ್ಚೈವ ಜಾಂಬೂನದಪರಿಷ್ಕೃತಾಃ |
ವಿಭ್ರಾಜಮಾನಾ ದೃಶ್ಯಂತೇ ಮೇಘಾ ಇವ ಸವಿದ್ಯುತಃ ॥25॥
ಅಲ್ಲಿ ಸುವರ್ಣದಿಂದ ಅಲಂಕೃತವಾದ ಗಜಗಳು ಮತ್ತು ರಥಗಳು ಮಿಂಚಿನಿಂದ ಕೂಡಿದ ಮೋಡಗಳಂತೆ ಶೋಭಿಸುವುದು ಕಂಡುಬರುತ್ತಿದ್ದಿತು.
ರಥಾನೀಕಾನ್ಯದೃಶ್ಯಂತ ನಗರಾಣೀವ ಭೂರಿಶಃ |
ಅತೀವ ಶುಶುಭೇ ತತ್ರ ಪಿತಾ ತೇ ಪೂರ್ಣಚಂದ್ರವತ್ ॥26॥
ರಥಗಳ ಸಮೂಹಗಳು ಅನೇಕ ನಗರಗಳಂತೆ ಕಂಡುಬಂದವು. ಅಲ್ಲಿ ನಿನ್ನ ತಂದೆಯಾದ ಭೀಷ್ಮರು ಪೂರ್ಣಚಂದ್ರನಂತೆ ಬಹಳವಾಗಿ ಕಂಗೊಳಿಸಿದರು.
ಧನುರ್ಭಿರ್ಋಷ್ಟಿಭಿಃ ಖಡ್ಗೈರ್ಗದಾಭಿಃ ಶಕ್ತಿತೋಮರೈಃ |
ಯೋಧಾ ಪ್ರಹರಣೈಃ ಶುಭ್ರೈಃ ಸ್ವೇಷ್ವನೀಕೇಷ್ವವಸ್ಥಿತಾಃ ॥27॥
ಯೋಧರು ಶುಭ್ರವಾದ ತಮ್ಮ ಆಯುಧಗಳಾದ ಧನುಸ್ಸುಗಳು, ಋಷ್ಟಿಗಳು, ಖಡ್ಗಗಳು, ಗದೆಗಳು, ಶಕ್ತಿಗಳು ಮತ್ತು ತೋಮರಗಳನ್ನು ಹಿಡಿದು ತಮ್ಮ ಸೈನ್ಯಗಳಲ್ಲಿ ನಿಂತರು.
ಗಜಾ ರಥಾಃ ಪದಾತಾಶ್ಚ ತುರಗಾಶ್ಚ ವಿಶಾಂಪತೇ |
ವ್ಯತಿಷ್ಠದ್ ವಾಗುರಾಕಾರಾಃ ಶತಶೋಽಥ ಸಹಸ್ರಶಃ ॥28॥
ಎಲೈ ರಾಜನೇ, ಗಜಗಳು, ರಥಗಳು, ಪದಾತಿಗಳು ಮತ್ತು ಅಶ್ವಗಳು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಬಲೆಗಳಂತೆ ನಿಂತವು.
ಧ್ವಜಾ ಬಹುವಿಧಾಕಾರಾ ವ್ಯದೃಶ್ಯಂತ ಸಮುಚ್ಛ್ರಿತಾಃ |
ಸ್ವೇಷಾಂ ಚೈವ ಪರೇಷಾಂ ಚ ದ್ಯುತಿಮಂತಃ ಸಹಸ್ರಶಃ ॥29॥
ಕಾಂತಿಯುಕ್ತವಾದ ಎತ್ತರವಾಗಿದ್ದ ಬಹುವಿಧ ಆಕಾರವುಳ್ಳ ತಮ್ಮ ಮತ್ತು ಪರರ ಧ್ವಜಗಳು ಸಹಸ್ರ ಸಂಖ್ಯೆಯಲ್ಲಿ ಕಂಡುಬಂದವು.
ಕಾಂಚನಾ ಮಣಿಚಿತ್ರಾಂಗಾ ಜ್ವಲಂತ ಇವ ಪಾವಕಾಃ |
ಅರ್ಚಿಷ್ಮಂತೋ ವ್ಯರೋಚಂತ ಧ್ವಜಾ ರಾಜ್ಞಾಂ ಸಹಸ್ರಶಃ ॥30॥
ಸುವರ್ಣ ಮತ್ತು ಮಣಿಗಳಿಂದ ಅಲಂಕೃತವಾದ ಸಹಸ್ರಾರು ಸಂಖ್ಯೆಯಲ್ಲಿದ್ದ ರಾಜರ ಧ್ವಜಗಳು ತಮ್ಮ ಕಾಂತಿಯಿಂದ ಜ್ವಲಿಸುವ ಅಗ್ನಿಯಂತೆ ಕಂಗೊಳಿಸಿದವು.
ಮಹೇಂದ್ರಕೇತವಃ ಶುಭ್ರಾ ಮಹೇಂದ್ರಸದನೇಷ್ವಿವ |
ಸನ್ನದ್ಧಾಸ್ತೇಷು ತೇ ವೀರಾ ದದೃಶುರ್ಯುದ್ಧಕಾಂಕ್ಷಿಣಃ ॥31॥
ಇಂದ್ರ ಸದನದಲ್ಲಿನ ಇಂದ್ರಧ್ವಜಗಳಂತೆ ಶುಭ್ರವಾದ ಆ ಧ್ವಜಗಳು ಶೋಭಿಸಿದವು. ಅಂತಹ ಧ್ವಜಗಳುಳ್ಳ ಆ ರಥಗಳಲ್ಲಿ ಯುದ್ಧಾಕಾಂಕ್ಷಿಗಳಾದ ಆ ವೀರರು ಸನ್ನದ್ಧರಾಗಿರುವುದು ಕಂಡುಬರುತ್ತಿದ್ದಿತು.
ಉದ್ಯತೈರಾಯುಧೈಶ್ಚಿತ್ರಾಸ್ತಳಬದ್ಧಾಃ ಕಲಾಪಿನಃ |

ಖುಷಭಾಕ್ಸಾ ಮನುಷ್ಯೇಂದ್ರಾಶ್ಚಮೂಮುಖಗತಾ ಬಭುಃ ॥32॥
ಯುದ್ಧದ ಸಲಕರಣೆಗಳನ್ನು ಧರಿಸಿ ಹಸ್ತಗಳಿಗೆ ರಕ್ಷಣೆಯನ್ನು ಹಾಕಿಕೊಂಡು ಕೈಯಲ್ಲಿ ಆಯುಧವನ್ನು ಹಿಡಿದ ವಿಶಾಲವಾದ ಕಣ್ಣುಳ್ಳ ಆ ರಾಜರು ಸೇನೆಯ ಮುಂಭಾಗದಲ್ಲಿ ಶೋಭಿಸಿದರು.
ಶಕುನಿಃ ಸೌಬಲಃ ಶಲ್ಯಃ ಸೈಂಧವೋऽಥ ಜಯದ್ರಥಃ |
ವಿಂದಾನುವಿಂದಾವಾವಂತ್ಯೌ ಕಾಂಬೋಜಶ್ಚ ಸುದಕ್ಷಿಣಃ ॥33॥
ಶ್ರುತಾಯುಧಶ್ಚ ಕಾಳಿಂಗೋ ಜಯತ್ಸೇನಶ್ಚ ಪಾರ್ಥಿವಃ |
ಬೃಹದ್ಬಲಶ್ಚ ಕೌಸಲ್ಯಃ ಕೃತವರ್ಮಾ ಚ ಸಾತ್ವತಃ ॥34॥
ದಶೈತೇ ಪುರುಷವ್ಯಾಘ್ರಾಃ ಶೂರಾಃ ಪರಿಘಬಾಹವಃ |
ಅಕ್ಷೋಹಿಣೀನಾಂ ಪತಯೋ ಯಜ್ವಾನೋ ಭೂರಿದಕ್ಷಿಣಾಃ ॥35॥
ಸೌಬಲನಾದ ಶಕುನಿ, ಶಲ್ಯ, ಸಿಂಧುದೇಶದ ಜಯದ್ರಥ, ಅವಂತಿದೇಶದ ವಿಂದಾನುವಿಂದರು, ಕಾಂಬೋಜ ದೇಶದ ಸುಲಕ್ಷಣ, ಕಳಿಂಗ ದೇಶದ ಶ್ರುತಾಯುಧ, ಜಯತ್ಸೇನರಾಜ, ಕೌಸಲದೇಶದ ಬೃಹದ್ಬಲ ಮತ್ತು ಸಾತ್ವತ ಕುಲಕ್ಕೆ ಸೇರಿದ ಕೃತವರ್ಮ  ಒನಕೆಯಂತೆ ಬಾಹುಗಳುಳ್ಳ ಅನೇಕ ಭೂರಿದಕ್ಷಿಣೆಯುಳ್ಳ ಯಾಗವನ್ನು ಮಾಡಿದ ಶೂರರಾದ ಈ ಹತ್ತು ಪುರುಷವ್ಯಾಘ್ರರು ಹತ್ತು ಅಕ್ಷೋಹಿಣಿಯ ಪತಿಗಳಾರಾಗಿದ್ದರು.
ಏತೇ ಚಾನ್ಯೇ ಚ ಬಹವೋ ದುರ್ಯೋಧನವಶಾನುಗಾಃ |
ರಾಜಾನೋ ರಾಜಪುತ್ರಾಶ್ಚ ನೀತಿಮಂತೋ ಮಹಾಬಲಾಃ ॥36॥
ಇವರೂ ಮತ್ತು ಇನ್ನೂ ಅನೇಕ ದುರ್ಯೋಧನವಶವರ್ತಿಗಳಾದ ರಾಜರೂ, ರಾಜಕುಮಾರರೂ, ರಾಜನೀತಿಯನ್ನು ತಿಳಿದವರೂ, ಮಹಾಬಲಿಷ್ಠರೂ ಆದ ಶೂರರು ಸನ್ನದ್ಧರಾದರು.
ಸನ್ನದ್ಧಾಃ ಸಮದೃಶ್ಯಂತ ಸ್ವೇಷ್ವನೀಕೇಷ್ವವಸ್ಥಿತಾಃ |
ಬದ್ಧಕೃಷ್ಣಾಜಿನಾಃ ಸರ್ವೇ ಧ್ವಜಿನೋ ಮುಂಜಮಾಲಿನಃ ॥37॥
ಅವರೆಲ್ಲರೂ ಕೃಷ್ಣಾಜಿನವನ್ನು ಧರಿಸಿ, ತಮ್ಮ ಧ್ವಜಗಳನ್ನು ಎತ್ತಿ, ಮುಂಜಮಾಲೆಗಳನ್ನು ಹಾಕಿಕೊಂಡು ತಮ್ಮ ತಮ್ಮ ಸೈನ್ಯದ ಮುಂಭಾಗದಲ್ಲಿರುವುದು ಕಂಡು ಬರುತ್ತಿದ್ದಿತು.
ಸೃಷ್ಟಾ ದುರ್ಯೋಧನಸ್ಯಾರ್ಥೇ ಬ್ರಹ್ಮಲೋಕಾಯ ದೀಕ್ಷಿತಾಃ |
ಸಮೃದ್ಧಾ ದಶ ವಾಹಿನ್ಯಃ ಪರಿಗೃಹ್ಯ ವ್ಯವಸ್ಥಿತಾಃ ॥38॥
ದುರ್ಯೋಧನನ ಸಲುವಾಗಿಯೇ ಜನ್ಮವನ್ನು ಪಡೆದು, ಬ್ರಹ್ಮಲೋಕವನ್ನು ಸಂಪಾದಿಸಲು ದೀಕ್ಷೆಯನ್ನು ಹೊಂದಿ, ತಮ್ಮ ಸಮೃದ್ಧವಾದ ಹತ್ತು ಸೈನ್ಯಗಳನ್ನು ಸಂಗ್ರಹಿಸಿ ಅದರ ಮುಂಭಾಗದಲ್ಲಿ ನಿಂತರು.
ಏಕಾದಶೀ ಧಾರ್ತರಾಷ್ಟ್ರೀ ಕೌರವಾಣಾಂ ಮಹಾಚಮೂಃ |
ಅಗ್ರತಃ ಸರ್ವಸೈನ್ಯಾನಾಂ ಯತ್ರ ಶಾಂತನವೋऽಗ್ರಣೀಃ ॥39॥
ದುರ್ಯೋಧನನಿಗೆ ಸೇರಿದ ಕೌರವರ ದೊಡ್ಡಸೈನ್ಯವು ಹನ್ನೊಂದನೆಯದು. ಎಲ್ಲ ಸೈನ್ಯಗಳಿಗೂ ಮುಂದಿದ್ದ ಆ ಸೈನ್ಯದಲ್ಲಿ ಭೀಷ್ಮರು ಮುಂಭಾಗದಲ್ಲಿದ್ದರು.
ಶ್ವೇತೋಷ್ಣೀಷಂ ಶ್ವೇತಹಯಂ ಶ್ವೇತವರ್ಮಾಣಮಚ್ಯುತಮ್ |
ಅಪಶ್ಯಾಮ ಮಹಾರಾಜ ಭೀಷ್ಮಂ ಚಂದ್ರಮಿವೋದಿತಮ್ ॥40॥
ಎಲೈ ಮಹಾರಾಜನೇ, ಬಿಳಿಯ ರುಮಾಲನ್ನು ಧರಿಸಿ, ಬಿಳಿಯ ಕುದುರೆಗಳನ್ನು ಹೂಡಿದ ರಥದಲ್ಲಿ ಕುಳಿತು, ಬಿಳಿಯ ಕವಚವನ್ನು ಧರಿಸಿ ತಮ್ಮ ಗುಣಗಳಿಂದ ಚ್ಯುತರಾಗದ ಭೀಷ್ಮರನ್ನು ಉದಯಿಸಿದ ಚಂದ್ರನಂತೆ ನಾನು ನೋಡಿದೆನು.
ಹೇಮತಾಳಧ್ವಜಂ ಭೀಷ್ಮಂ ರಾಜತೇ ಸ್ಯಂದನೇ ಸ್ಥಿತಮ್ |
ಶ್ವೇತಾಭ್ರ ಇವ ತೀಕ್ಷ್ಣಾಂಶುಂ ದದೃಶುಃ ಕುರುಪಾಂಡವಾಃ ॥41॥
ರಜತಮಯವಾದ ರಥದಲ್ಲಿ ಸುವರ್ಣಮಯವಾದ ತಾಳಧ್ವಜವನ್ನು ಹೊಂದಿದ ಭೀಷ್ಮರನ್ನು ಬಿಳಿಯ ಮೋಡಗಳ ಮಧ್ಯದಲ್ಲಿರುವ ಸೂರ್ಯನಂತೆ ಕುರು-ಪಾಂಡವರು ನೋಡಿದರು.
ದೃಷ್ಟ್ವಾ ಚಮೂಮುಖೇ ಭೀಷ್ಮಂ ಸಮಕಂಪಂತ ಪಾಂಡವಾಃ |
ಸೃಂಜಯಾಶ್ಚ ಮಹೇಷ್ವಾಸಾ ಧೃಷ್ಟದ್ಯುಮ್ನಪುರೋಗಮಾಃ ॥42॥
ಸೇನೆಯ ಮುಂಭಾಗದಲ್ಲಿ ಭೀಷ್ಮರನ್ನು ನೋಡಿ ಪಾಂಡವರು, ಸೃಂಜಯರು, ಮಹಾಧನುರ್ಧಾರಿಗಳಾದ ಧೃಷ್ಟದ್ಯುಮ್ನ ಮೊದಲಾದವರು ನಡುಗಿದರು.
ಜೃಂಭಮಾಣಂ ಮಹಾಸಿಂಹಂ ದೃಷ್ಟ್ವಾ ಕ್ಷುದ್ರಮೃಗಾ ಯಥಾ |
ಧೃಷ್ಟದ್ಯುಮ್ನಮುಖಾಃ ಸರ್ವೇ ಸಮುದ್ವಿವಿಜಿರೇ ಮುಹುಃ ॥43॥
ಬಾಯಿ ತೆರೆದು ಆಕಳಿಸುವ ದೊಡ್ಡ ಸಿಂಹವನ್ನು ನೋಡಿದ ಕ್ಷುದ್ರಮೃಗಗಳಂತೆ ಧೃಷ್ಟದ್ಯುಮ್ನ ಮೊದಲಾದವರೆಲ್ಲರೂ ಪುನಃ ಪುನಃ ಉದ್ವಿಗ್ನರಾದರು.
ಏಕಾದಶೈತಾಃ ಶ್ರೀಜುಷ್ಟಾ ವಾಹಿನ್ಯಸ್ತವ ಭಾರತ |
ಪಾಂಡವಾನಾಂ ತಥಾ ಸಪ್ತ ಮಹಾಪುರುಷಪಾಲಿತಾಃ ॥44॥
ಎಲೈ ಭಾರತನೇ, ಕಾಂತಿಯುಕ್ತವಾದ ಈ ಹನ್ನೊಂದು ಅಕ್ಷೋಹಿಣಿಯು ನಿನ್ನ ಸೈನ್ಯವು. ಪಾಂಡವರ ಸೈನ್ಯವಾದರೂ ಮಹಾಪುರುಷರಿಂದ ಪಾಲಿತವಾದ ಏಳು ಅಕ್ಷೋಹಿಣಿಗಳಾಗಿದ್ದಿತು.
ಉನ್ಮತ್ತಮಕರಾವರ್ತೌ ಮಹಾಗ್ರಾಹಸಮಾಕುಲೌ |

ಯುಗಾಂತೇ ಸಮುಪೇತೌ ದ್ವೌ ದೃಶ್ಯೇತೇ ಸಾಗರಾವಿವ ॥45॥
ಉನ್ನತ್ತವಾದ ಮೊಸಳೆಗಳೆಂಬ ಸುಳಿಗಳಿಂದ ಕೂಡಿದ, ಮಹಾತಿಮಿಂಗಿಲಗಳಿಂದ ನಿಬಿಡವಾದ ಎರಡು ಸಾಗರಗಳು ಯುಗಾಂತದಲ್ಲಿ ಒಂದನ್ನೊಂದು ಸೇರಿದಂತೆ ಎರಡು ಸೈನ್ಯಗಳು ಕಂಡುಬಂದವು.
ನೈವ ನಸ್ತಾದೃಶೋ ರಾಜನ್ ದೃಷ್ಟಪೂರ್ವೋ ನ ಚ ಶ್ರುತಃ ।
ಅನೀಕಾನಾಂ ಸಮೇತಾನಾಂ ಸಮವಾಯಸ್ತಥಾವಿಧಃ ॥46॥
ಎಲೈ ರಾಜನೇ, ಅಂತಹ ಸೈನ್ಯದ ಸಮೂಹವನ್ನು ನಾವು ಹಿಂದೆ ನೋಡಿರಲಿಲ್ಲ ಅಥವಾ ಕೇಳಿರಲಿಲ್ಲ. ಎರಡು ಸೈನ್ಯದ ಸಮಾಗಮವು ಆ ರೀತಿ ಇದ್ದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷೋಡಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಸಂಜಯನಿಂದ ಯುದ್ಧಕ್ಕೆ ಹೊರಟ ಕುರುಸೇನೆಯ ವರ್ಣನೆ.
ಸಂಜಯಃ
ಯಥಾ ಸ ಭಗವಾನ್ ವ್ಯಾಸಃ ಕೃಷ್ಣದ್ವೈಪಾಯನೋಽಬ್ರವೀತ್ ।
ತಥೈವ ಸಹಿತಾಃ ಸರ್ವೇ ಸಮಾಜಗ್ಮುರ್ಮಹೀಕ್ಷಿತಃ ॥1॥
ಸಂಜಯ ಭಗವಂತನಾದ ಕೃಷ್ಣ-ದ್ವೈಪಾಯನರಾದ ವ್ಯಾಸರು ಹೇಳಿದಂತೆಯೇ ಎಲ್ಲ ರಾಜರೂ ಒಟ್ಟುಗೂಡಿ ಬಂದರು.
ಮಘಾವಿಷಯಗಃ ಸೋಮಸ್ತದ್ದಿನಂ ಪ್ರತ್ಯಪದ್ಯತ ।
ದೀಪ್ಯಮಾನಾಶ್ಚ ಸಂಪೇತುರ್ದಿವಿ ಸಪ್ತ ಮಹಾಗ್ರಹಾಃ ॥2॥
ಆ ದಿನ ಚಂದ್ರನು ಮಘಾ ನಕ್ಷತ್ರವನ್ನು ತಲುಪಿದನು. ಜ್ವಲಿಸುವ ಏಳು ಗ್ರಹಗಳು ಆಕಾಶದಲ್ಲಿ ಒಟ್ಟಿಗೆ ಸೇರಿದವು.
ದ್ವಿಧಾಭೂತ ಇವಾದಿತ್ಯ ಉದಯೇ ಪ್ರತ್ಯದೃಶ್ಯತ ।
ಜ್ವಲಂತ್ಯಾ ಶಿಖಯಾ ಭೂಯೋ ಭಾನುಮಾನುದಿತೋ ದಿವಿ ॥3॥
ಸೂರ್ಯನು ಉದಯಿಸುವಾಗ ಎರಡು ಭಾಗವುಳ್ಳವನಾಗಿ ಕಂಡನು. ಸೂರ್ಯನು ಉದಯಿಸುವಾಗ ಅವನ ಸುತ್ತಲೂ ಜ್ವಲಿಸುವ ಶಿಖೆಗಳು ಕಂಡು ಬಂದವು.
ವವಾಶಿರೇ ಚ ದೀಪ್ತಾಯಾಂ ದಿಶಿ ಗೋಮಾಯುವಾಯಸಾಃ ।
ಲಿಪ್ಸಮಾನಾಃ ಶರೀರಾಣಿ ಮಾಂಸಶೋಣಿತಭೋಜನಾಃ ॥4॥
ಜ್ವಲಿಸುವ ದಕ್ಷಿಣ ದಿಕ್ಕಿನಲ್ಲಿ ಮಾಂಸ-ಶೋಣಿತ ಭೋಜನವನ್ನು ಪಡೆಯಲು ಶರೀರಗಳನ್ನು ಬಯಸುವ ನರಿಗಳು ಮತ್ತು ಕಾಗೆಗಳು ಗೋಳಿಟ್ಟವು.
ಅಹನ್ಯಹನಿ ಪಾರ್ಥಾನಾಂ ವೃದ್ಧಃ ಕುರುಪಿತಾಮಹಃ ।
ಭರದ್ವಾಜಾತ್ಮಜಶ್ಚೈವ ಪ್ರಾತರುತ್ಥಾಯ ಸಂಯತೌ ॥5॥
ಜಯೋಽಸ್ತು ಪಾಂಡುಪುತ್ರಾಣಾಮಿತ್ಯೂಚತುರರಿಂದಮೌ ।
ಯುಯುಧಾತೇ ತವಾರ್ಥಾಯ ಯಥಾ ಸ ಸಮಯಃ ಕೃತಃ ॥6॥
ಪ್ರತಿದಿವಸವೂ ಪಾರ್ಥರ ಮತ್ತು ಕುರುಗಳ ಪಿತಾಮಹರಾದ ಕುರುವೃದ್ಧರಾದ ಭೀಷ್ಮರೂ ಮತ್ತು ಭರದ್ವಾಜರ ಪುತ್ರರಾದ ದ್ರೋಣರೂ ಸಹ ಪ್ರಾತಃಕಾಲದಲ್ಲಿ ಎದ್ದು ಮೌನವಾಗಿ ಆ ಅರಿಂದಮರು ಪಾಂಡುಪುತ್ರರಿಗೆ ಜಯವಾಗಲಿ ಎಂದು ಹೇಳುತ್ತಿದ್ದರು. ಆದರೆ ಮೊದಲು ಮಾಡಿದ ನಿಬಂಧನೆಗಾಗಿ ನಿನ್ನ ಪರವಾಗಿ ಯುದ್ಧವನ್ನು ಮಾಡುತ್ತಿದ್ದರು.
ಸರ್ವಧರ್ಮವಿಶೇಷಜ್ಞಃ ಪಿತಾ ದೇವವ್ರತಸ್ತವ ।
ಸಮಾನೀಯ ಮಹೀಪಾಲಾನಿದಂ ವಚನಮಬ್ರವೀತ್ ॥7॥
ಎಲ್ಲ ಧರ್ಮಗಳನ್ನು ವಿಶೇಷವಾಗಿ ತಿಳಿದಿದ್ದ ನಿನ್ನ ತಂದೆಯಾದ ದೇವವ್ರತರಾದ ಭೀಷ್ಮರು ಎಲ್ಲ ರಾಜರನ್ನೂ ಸಮೀಪಕ್ಕೆ ಕರೆದು ಹೀಗೆ ಮಾತನಾಡಿದರು.
ಇದಂ ವಃ ಕ್ಷತ್ರಿಯಾ ದ್ವಾರಂ ಸ್ವರ್ಗಾಯಾಪಾವೃತಂ ಮಹತ್ ।
ಗಚ್ಛಧ್ವಂ ತೇನ ಶಕ್ರಸ್ಯ ಬ್ರಹ್ಮಣಶ್ಚ ಸಲೋಕತಾಮ್ ॥8॥
ಎಲೈ ಕ್ಷತ್ರಿಯರೇ, ಇದೋ ನಿಮಗೆ ಸ್ವರ್ಗದ ಈ ದೊಡ್ಡ ದ್ವಾರವು ತೆರೆದಿದೆ. ಆ ಮಾರ್ಗವಾಗಿ ನೀವು ಇಂದ್ರನ ಮತ್ತು ಬ್ರಹ್ಮದೇವರ ಲೋಕಕ್ಕೆ ಹೋಗುವವರಾಗಿ.
ಏಷ ವಃ ಶಾಶ್ವತಃ ಪಂಥಾ ಪೂರ್ವೈಃ ಪೂರ್ವತರೈರ್ಗತಃ ।
ಸಂಭಾವಯತ ಚಾತ್ಮಾನಮವ್ಯಗ್ರಮನಸೋ ಯುಧಿ ॥9॥
ಇದು ನಿಮ್ಮ ಪೂರ್ವಜರೂ, ಅವರ ಪೂರ್ವಜರೂ ತುಳಿದ ಶಾಶ್ವತವಾದ ಮಾರ್ಗ. ಏಕಾಗ್ರವಾದ ಮನಸ್ಸಿನಿಂದ ಯುದ್ಧವನ್ನು ಮಾಡಿ ನಿಮ್ಮನ್ನು ನೀವು ಸನ್ಮಾನಿಸಿಕೊಳ್ಳಿ.
ನಾಭಾಗೋ ಹಿ ಯಯಾತಿಶ್ಚ ಮಾಂಧಾತಾ ನಹುಷೋ ನೃಗಃ ।
ಸಂಸಿದ್ಧಾಃ ಪರಮಂ ಸ್ಥಾನಂ ಗತಾಃ ಕರ್ಮಭಿರೀದೃಶೈಃ ॥10॥
ನಾಭಾಗ, ಯಯಾತಿ, ಮಾಂಧಾತಾ, ನಹುಷ, ನೃಗ ಮೊದಲಾದವರು ಇಂತಹ ಕರ್ಮಗಳನ್ನು ಮಾಡಿ ಸಿದ್ಧಿಯನ್ನು ಪಡೆದು

ಶ್ರೇಷ್ಠವಾದ ಸ್ಥಾನವನ್ನು ಹೊಂದಿದರು.
ಅಧರ್ಮಃ ಕ್ಷತ್ರಿಯಸ್ಯೈಷ ಯದ್ ವ್ಯಾಧಿಮರಣಂ ಗೃಹೇ |
ಯದಾಜೌ ನಿಧನಂ ಯಾತಿ ಸೋಽಸ್ಯ ಧರ್ಮಃ ಸನಾತನಃ ॥11॥
ಕ್ಷತ್ರಿಯನು ಮನೆಯಲ್ಲಿ ವ್ಯಾಧಿಯಿಂದ ಮರಣವನ್ನು ಹೊಂದುವುದು ಅಧರ್ಮ. ಯುದ್ಧದಲ್ಲಿ ಮರಣವನ್ನು ಹೊಂದುವುದು ಅವನಿಗೆ ಸನಾತನವಾದ ಧರ್ಮ.
ಏವಮುಕ್ತಾ ಮಹೀಪಾಲಾ ಭೀಷ್ಮೇಣ ಭರತರ್ಷಭ |
ನಿರ್ಯಯುಃ ಸ್ವಾನ್ಯನೀಕಾನಿ ಶೋಭಯಂತೋ ರಥೋತ್ತಮೈಃ ॥12॥
ಎಲೈ ಭರತರ್ಷಭನೇ, ಭೀಷ್ಮರಿಂದ ಹೀಗೆ ಹೇಳಲ್ಪಟ್ಟ ಆ ರಾಜರು ತಮ್ಮ ಶ್ರೇಷ್ಠವಾದ ರಥಗಳಿಂದ ತಮ್ಮ ತಮ್ಮ ಸೈನ್ಯಗಳಿಗೆ ಶೋಭೆಯನ್ನು ತಂದುಕೊಡುತ್ತಾ ಹೊರಟರು.
ಸ ತು ವೈಕರ್ತನಃ ಕರ್ಣಃ ಸಾಮಾತ್ಯಃ ಸಹ ಬಂಧುಭಿಃ |
ನ್ಯಾಸಿತಃ ಸಮರೇ ಶಸ್ತ್ರಂ ಭೀಷ್ಮೇಣ ಭರತರ್ಷಭ ॥13॥
ಎಲೈ ಭರತರ್ಷಭನೇ, ಆ ವೈಕರ್ತನನಾದ ಕರ್ಣನಾದರೂ ಅವನ ಅಮಾತ್ಯರ ಮತ್ತು ಬಂಧುಗಳ ಜೊತೆಯಲ್ಲಿ ಭೀಷ್ಮರಿಂದ ಶಸ್ತ್ರಸಂನ್ಯಾಸವನ್ನು ಮಾಡಿಸಲ್ಪಟ್ಟಿದ್ದನಷ್ಟೆ!
ಅಪೇತಕರ್ಣಾಃ ಪುತ್ರಾಸ್ತೇ ರಾಜಾನಶ್ಚೈವ ತಾವಕಾಃ |
ನಿರ್ಯಯುಃ ಸಿಂಹನಾದೇನ ನಾದಯಂತೋ ದಶೋ ದಿಶ ॥14॥
ಕರ್ಣನ ಜೊತೆಯಿಲ್ಲದ ನಿನ್ನ ಪುತ್ರರು ಮತ್ತು ನಿನ್ನ ಸಲುವಾಗಿ ಯುದ್ಧ ಮಾಡಲು ಬಂದ ರಾಜರು ತಮ್ಮ ಸಿಂಹನಾದದಿಂದ ಹತ್ತುದಿಕ್ಕುಗಳನ್ನು ಮೊಳಗಿಸುತ್ತಾ ಹೊರಟರು.
ಶ್ವೇತೈಶ್ಚತ್ರೈಃ ಪತಾಕಾಭಿರ್ಧ್ವಜವಾರಣವಾಜಿಭಿಃ |
ತಾನ್ಯನೀಕಾನ್ಯಶೋಭಂತ ರಥೈರಥ ಪದಾತಿಭಿಃ ॥15॥
ಶ್ವೇತಚ್ಛತ್ರಗಳಿಂದಲೂ, ಪತಾಕೆಗಳಿಂದಲೂ, ಧ್ವಜಗಳಿಂದಲೂ, ಗಜಗಳಿಂದಲೂ, ಅಶ್ವಗಳಿಂದಲೂ, ಪದಾತಿಗಳಿಂದಲೂ ಮತ್ತು ರಥಗಳಿಂದಲೂ ಆ ಸೈನ್ಯಗಳು ಬಹಳವಾಗಿ ಶೋಭಿಸಿದವು.
ಭೇರೀಪಣವಶಬ್ದೈಶ್ಚ ಪಟಹಾನಾಂ ಚ ನಿಸ್ವನೈಃ |
ರಥನೇಮಿನಿನಾದೈಶ್ಚ ಬಭೂವಾಕುಲಿತಾ ಮಹೀ ॥16॥
ಭೇರೀ, ಪಣವ ಶಬ್ದಗಳಿಂದಲೂ, ಪಟಹ ಶಬ್ದಗಳಿಂದಲೂ, ರಥದ ಗಾಲಿಗಳ ಶಬ್ದದಿಂದಲೂ ಭೂಮಿಯು ತುಂಬಿಹೋಯಿತು.
ಕಾಂಚನಾಂಗದಕೇಯೂರೈಃ ಕಾರ್ಮುಕೈಶ್ಚ ಮಹಾರಥಾಃ |
ಭ್ರಾಜಮಾನಾ ವ್ಯದೃಶ್ಯಂತ ಜಂಗಮಾಃ ಪರ್ವತಾ ಇವ ॥17॥
ಚಿನ್ನದ ಕಡಗ ಮತ್ತು ಭುಜಕೀರ್ತಿಗಳನ್ನು ಧರಿಸಿದ ಮತ್ತು ಧನುಸ್ಸುಗಳನ್ನು ಧರಿಸಿದ ಮಹಾರಥರು ಚಲಿಸುವ ಪರ್ವತಗಳಂತೆ ಕಾಂತಿಯುಕ್ತರಾಗಿ ಶೋಭಿಸಿದರು.
ತಾಳೇನ ಮಹತಾ ಭೀಷ್ಮಃ ಪಂಚತಾರೇಣ ಕೇತುನಾ |
ವಿಮಲಾದಿತ್ಯಸಂಕಾಶಸ್ತಸ್ಥೌ ಕುರುಚಮೂಪತಿಃ ॥18॥
ಕುರುಸೇನಾಪತಿಗಳಾದ ಭೀಷ್ಮರು ಐದು ನಕ್ಷತ್ರಗಳ ಚಿಹ್ನೆಯುಳ್ಳ ತಾಳಧ್ವಜದಿಂದ ಶೋಭಿತವಾದ ರಥದಲ್ಲಿ ನಿರ್ಮಲವಾದ ಆದಿತ್ಯನಿಗೆ ಸದೃಶವಾದ ಪ್ರಭೆಯಿಂದ ಶೋಭಿಸಿ ನಿಂತರು.
ಯೇ ತ್ವದೀಯಾ ಮಹೇಷ್ವಾಸಾ ರಾಜಾನೋ ಭರತರ್ಷಭ |
ಅವರ್ತಂತ ಯಥಾದೇಶಂ ರಾಜನ್ ಶಾಂತನವಸ್ಯ ತೇ ॥19॥
ಎಲೈ ರಾಜನೇ, ಭರತರ್ಷಭನೇ, ಮಹಾಧನುರ್ಧಾರಿಗಳಾದ ನಿನ್ನ ಪಕ್ಷದ ರಾಜರು ಶಂತನು ಪುತ್ರರಾದ ಭೀಷ್ಮರ ಆದೇಶದಂತೆ ಅವರವರ ಸ್ಥಳದಲ್ಲಿ ನಿಂತರು.
ಶತ್ರುಗಾವಸನಃ ಶೈಬ್ಯಃ ಸಹಿತಃ ಸರ್ವರಾಜಭಿಃ |
ಯಯೌ ಮಾತಂಗರಾಜೇನ ರಾಜಾರ್ಹೇಣ ಪತಾಕಿನಾ |
ಪದ್ಮವರ್ಣಸ್ತ್ವನೀಕಾನಾಂ ಸರ್ವೇಷಾಮಗ್ರತಃ ಸ್ಥಿತಃ ॥20॥
ಶತ್ರುಗುಹೆಯನ್ನು ಆಕ್ರಮಿಸಿ ಅಲ್ಲಿಯೇ ವಾಸ ಮಾಡುವ ಪದ್ಮವರ್ಣವುಳ್ಳ ಶೈಬ್ಯನು ಎಲ್ಲ ರಾಜರಿಂದ ಕೂಡಿಕೊಂಡು ರಾಜನಿಗೆ ಯೋಗ್ಯವಾದ ಪತಾಕೆಗಳಿಂದ ಕೂಡಿದ ಗಜರಾಜನ ಮೇಲೆ ಕುಳಿತು ಉಳಿದ ಎಲ್ಲರ ಮುಂದೆ ನಿಂತನು.
ಅಶ್ವತ್ಥಾಮಾ ಯಯೌ ತಸ್ಮಿನ್ ಸಿಂಹಲಾಂಗೂಲಕೇತನಃ |
ಶ್ರುತಾಯುಶ್ಚಿತ್ರಸೇನಶ್ಚ ಪುರುಮಿತ್ರೋ ವಿವಿಂಶತಿಃ ॥21॥
ಶಲ್ಯೋ ಭೂರಿಶ್ರವಾಶ್ಚೈವ ವಿಕರ್ಣಶ್ಚ ಮಹಾರಥಃ |
ಏತೇ ಸಪ್ತ ಮಹೇಷ್ವಾಸಾ ದ್ರೋಣಪುತ್ರಪುರೋಗಮಾಃ |
ಸ್ಯಂದನೈರ್ವರವರ್ಣಾಭೈರ್ಭೀಷ್ಮಸ್ಯಾಸನ್ ಪುರಃಸರಾಃ ॥22॥
ಸಿಂಹಲಾಂಗೂಲ ಧ್ವಜವುಳ್ಳ ಅಶ್ವತ್ಥಾಮರು ಸೇನಾಮುಖದಲ್ಲಿ ಹೊರಟರು. ಶ್ರುತಾಯು, ಚಿತ್ರಸೇನ, ಪುರುಮಿತ್ರ, ವಿವಿಂಶತಿ, ಶಲ್ಯ, ಭೂರಿಶ್ರವ ಮತ್ತು ಮಹಾರಥನಾದ ವಿಕರ್ಣ ಈ ಏಳು ಮಹಾಧನುರ್ಧಾರಿಗಳು ಅಶ್ವತ್ಥಾಮರನ್ನು ಮುಂದೆ ಮಾಡಿಕೊಂಡು ಶ್ರೇಷ್ಠವಾದ ಕಾಂತಿಯುಳ್ಳ ತಮ್ಮ ರಥಗಳಲ್ಲಿ ಭೀಷ್ಮರ ಮುಂದೆ ನಡೆದರು.
ತೇಷಾಮಪಿ ಮಹೋತ್ಸೇಧಾಃ ಶೋಭಯಂತೋ ರಥೋತ್ತಮಾನ್ |

ಭ್ರಾಜಮಾನಾ ವ್ಯದೃಶ್ಯಂತ ಜಾಂಬೂನದಮಯಾ ಧ್ವಜಾಃ ॥23॥
ಅವರ ರಥಗಳಲ್ಲಿಯೂ ಆ ಶ್ರೇಷ್ಠವಾದ ರಥಗಳಿಗೆ ಶೋಭೆಯನ್ನು ತಂದುಕೊಡುತ್ತಿದ್ದ ಸುವರ್ಣ ಅಲಂಕೃತವಾದ, ಎತ್ತರವಾದ, ಧ್ವಜಗಳು ಶೋಭಿಸುತ್ತಿದ್ದುದು ಕಂಡುಬರುತ್ತಿದ್ದವು.
ಜಾಂಬೂನದಮಯೀ ವೇದಿಃ ಕಮಂಡಲುವಿಭೂಷಿತಾ |
ಕೇತುರಾಚಾರ್ಯಮುಖ್ಯಸ್ಯ ದ್ರೋಣಸ್ಯ ಧನುಷಾ ಸಹ ॥24॥
ಸುವರ್ಣಮಯವಾದ ವೇದಿ ಮತ್ತು ಕಮಂಡಲುಗಳಿಂದ ಭೂಷಿತವಾದ ಧನುಸ್ಸಿನಿಂದಲೂ ಭೂಷಿತವಾದ ಆಚಾರ್ಯಮುಖ್ಯರಾದ ದ್ರೋಣರ ರಥದ ಧ್ವಜವು ಶೋಭಿಸಿತು.
ಅನೇಕಶತಸಾಹಸ್ರಮನೀಕಮನುಕರ್ಷತಃ |
ಮಹಾನ್ ದುರ್ಯೋಧನಸ್ಯಾಸೀನ್ನಾಗೋ ಮಣಿಮಯೋ ಧ್ವಜಃ ॥25॥
ಅನೇಕ ಲಕ್ಷ ಸೈನ್ಯವನ್ನು ಎಳೆದುಕೊಂಡು ಸಾಗುತ್ತಿದ್ದ ದುರ್ಯೋಧನನಿಗೆ ಮಣಿಮಯವಾದ ದೊಡ್ಡ ಸರ್ಪಧ್ವಜವಿದ್ದಿತು.
ತಸ್ಯ ಪೌರವಕಾಳಿಂಗೌ ಕಾಂಬೋಜಶ್ಚ ಸುದಕ್ಷಿಣಃ |
ಕ್ಷೇಮಧನ್ವಾ ಸುಮಿತ್ರಶ್ಚ ತಸ್ಥುಃ ಪ್ರಮುಖತೋ ರಥಾಃ ॥26॥
ಪೌರವ, ಕಾಳಿಂಗರಾಜರು, ಕಾಂಬೋಜರಾಜನಾದ ಸುದಕ್ಷಿಣ, ಕ್ಷೇಮಧನ್ವಾ ಮತ್ತು ಸುಮಿತ್ರ ಈ ಮಹಾರಥರು ಅವನ ಮುಂದೆ ನಿಂತರು.
ಸ್ಯಂದನೇನ ಮಹಾರ್ಹೇಣ ಕೇತುನಾ ವೃಷಭೇಣ ಚ |
ಪ್ರಕರ್ಷನ್ನೇವ ಸೇನಾಗ್ರಂ ಮಗಧಸ್ಯ ನೃಪೋ ಯಯೌ ॥27॥
ಮಗಧ ದೇಶದ ರಾಜನು ಮಹಾಬೆಲೆಬಾಳುವ ವೃಷಭಧ್ವಜದಿಂದ ಕೂಡಿದ ರಥವುಳ್ಳವನಾಗಿ ಸೇನೆಯ ಮುಂಭಾಗವನ್ನು ಎಳೆದುಕೊಂಡು ಮುಂದೆ ನಡೆದನು.
ತದಂಗಪತಿನಾ ಗುಪ್ತಂ ಕೃಪೇಣ ಚ ಮಹಾತ್ಮನಾ |
ಶಾರದಾಭ್ರಚಯಪ್ರಖ್ಯಂ ಪ್ರಾಚ್ಯಾನಾಮಭವದ್ ಬಲಮ್ ॥28॥
ಅಂಗಪತಿಯಿಂದಲೂ ಮಹಾತ್ಮರಾದ ಕೃಪರಿಂದಲೂ ರಕ್ಷಿತವಾದ ಪೂರ್ವದಿಕ್ಕಿನ ರಾಜರುಗಳ ಸೈನ್ಯವು ಶರತ್ಕಾಲದ ಮೋಡಗಳ ಕಾಂತಿಯನ್ನು ಹೊಂದಿದ್ದಿತು.
ಅನೀಕಪ್ರಮುಖೇ ತಿಷ್ಠನ್ ವರಾಹೇಣ ಮಹಾಯಶಾಃ |
ಶುಶುಭೇ ಕೇತುಮುಖ್ಯೇನ ರಾಜತೇನ ಜಯದ್ರಥಃ ॥29॥
ಸೇನೆಯ ಮುಂಭಾಗದಲ್ಲಿ ರಜತಮಯವಾದ ವರಾಹಧ್ವಜವುಳ್ಳ ಮಹಾಕೀರ್ತಿವಂತನಾದ ಜಯದ್ರಥನು ಶೋಭಿಸಿದನು.
ಶತಂ ರಥಸಹಸ್ರಾಣಾಂ ತಸ್ಯಾಸನ್ ವಶವರ್ತಿನಃ |
ಅಷ್ಟೌ ನಾಗಸಹಸ್ರಾಣಿ ಸಾದಿನಾಮಯುತಾನಿ ಷಟ್ ॥30॥
ಅವನ ವಶದಲ್ಲಿ ಒಂದು ಲಕ್ಷ ರಥಗಳು, ಎಂಟು ಸಹಸ್ರ ಗಜಗಳು ಮತ್ತು ಅರವತ್ತು ಸಾವಿರ ಅಶ್ವಾರೋಹಿಗಳು ಇದ್ದರು.
ತತ್ಸಿಂಧುಪತಿನಾ ರಾಜನ್ ಪಾಲಿತಂ ಧ್ವಜಿನೀಮುಖಮ್ |
ಅನಂತರಥನಾಗಾಶ್ವಮಶೋಭತ ಮಹದ್ ಬಲಮ್ ॥31॥
ಎಲೈ ರಾಜನೇ, ಸಿಂಧುಪತಿಯಾದ ಜಯದ್ರಥನಿಂದ ರಕ್ಷಿತವಾದ ಅನಂತರಥನಾಗಾಶ್ವವುಳ್ಳ ಆ ದೊಡ್ಡ ಸೈನ್ಯವು ಶೋಭಿಸಿತು.
ಷಷ್ಟ್ಯಾ ರಥಸಹಸ್ರೈಸ್ತು ನಾಗಾನಾಮಯುತೇನ ಚ |
ಪತಿಃ ಸರ್ವಕಳಿಂಗಾನಾಂ ಯಯೌ ಕೇತುಮತಾ ಸಹ ॥32॥
ಸರ್ವಕಳಿಂಗಾಧಿಪತಿಯು ಅರವತ್ತು ಸಾವಿರ ರಥಗಳಿಂದಲೂ, ಹತ್ತು ಸಾವಿರ ಆನೆಗಳಿಂದಲೂ ಕೂಡಿದವನಾಗಿ ಕೇತುಮಾನ್ ರಾಜನ ಜೊತೆಯಲ್ಲಿ ಹೊರಟನು.
ತಸ್ಯ ಪರ್ವತಸಂಕಾಶಾ ವ್ಯರೋಚಂತ ಮಹಾಗಜಾಃ |
ಯಂತ್ರತೋಮರತೂಣೀರೈಃ ಪತಾಕಾಭಿಶ್ಚ ಶೋಭಿತಾಃ ॥33॥
ಯಂತ್ರ, ತೋಮರ, ಬತ್ತಳಿಕೆಗಳು ಮತ್ತು ಪತಾಕೆಗಳಿಂದ ಶೋಭಿಸುವ ಪರ್ವತದಂತಿದ್ದ ಅವನ ಮಹಾಗಜಗಳು ವಿಶೇಷವಾಗಿ ಶೋಭಿಸಿದವು.
ಶುಶುಭೇ ಕೇತುಮುಖ್ಯೇನ ಪಾದಪೇನ ಕಳಿಂಗಪಃ |
ಶ್ವೇತಚ್ಛತ್ರೇಣ ನಿಷ್ಕೇಣ ಚಾಮರವ್ಯಜನೇನ ಚ ॥34॥
ಕಳಿಂಗಾಧಿಪತಿಯು ಶ್ರೇಷ್ಠವಾದ ವೃಕ್ಷಧ್ವಜದಿಂದಲೂ, ಶ್ವೇತಚ್ಛತ್ರದಿಂದಲೂ, ನಿಷ್ಕಚಾಮರ ವ್ಯಜನಗಳಿಂದಲೂ ಶೋಭಿಸಿದನು.
ಕೇತುಮಾನಪಿ ಮಾತಂಗಂ ವಿಚಿತ್ರಪರಮಾಂಕುಶಮ್ |
ಆಸ್ಥಿತಃ ಸಮರೇ ರಾಜನ್ ಮೇಘಸ್ಥ ಇವ ಭಾನುಮಾನ್ ॥35॥
ಎಲೈ ರಾಜನೇ, ಕೇತುಮಾನ್ ರಾಜನೂ ಸಹ ವಿಚಿತ್ರವೂ ಮತ್ತು ಶ್ರೇಷ್ಠವೂ ಆದ ಅಂಕುಶವನ್ನು ಹೊಂದಿದ್ದ ಗಜವನ್ನು ಏರಿ ಯುದ್ಧದಲ್ಲಿ ಮೋಡದ ಮಧ್ಯದಲ್ಲಿದ್ದ ಆದಿತ್ಯನಂತೆ ತೋರಿದನು.
ತೇಜಸಾ ದೀಪ್ಯಮಾನಸ್ತು ವಾರಣೋತ್ತಮಮಾಸ್ಥಿತಃ |
ಭಗದತ್ತೋ ಯಯೌ ರಾಜಾ ಯಥಾ ವಜ್ರಧರಸ್ತಥಾ ॥36॥
ಶ್ರೇಷ್ಠವಾದ ಗಜವನ್ನು ಏರಿ ತನ್ನ ಕಾಂತಿಯಿಂದ ಬೆಳಗುತ್ತಾ ಭಗದತ್ತ ರಾಜನು ವಜ್ರಧರನಾದ ಇಂದ್ರನಂತೆ ಯುದ್ಧಕ್ಕೆ ಹೊರಟನು.
ಗಜಸ್ಕಂಧಗತಾವಾಸ್ತಾಂ ಭಗದತ್ತೇನ ಸಮ್ಮಿತೌ |

ವಿಂದಾನುವಿಂದಾವಾವಂತ್ಯೌ ಕೇತುಮಂತಮನುವ್ರತೌ ॥37॥
ಪರಾಕ್ರಮದಲ್ಲಿ ಭಗದತ್ತನಿಗೆ ಸಮರಾದ ಅವಂತಿದೇಶದ ವಿಂದಾನುವಿಂದರು ಆನೆಯ ಸ್ಕಂಧದ ಮೇಲೆ ಕುಳಿತು ಕೇತುಮಾನ್ ರಾಜನನ್ನು ಹಿಂಬಾಲಿಸಿದರು.
ಸ ರಥಾನೀಕಾನ್ ವ್ಯೂಹೋ ಹಸ್ತ್ಯಂಗೋತ್ತಮಶೀರ್ಷವಾನ್ |
ವಾಜಿಪಕ್ಷಃ ಪತನ್ನುಗ್ರಃ ಪ್ರಾಹರತ್ ಸರ್ವತೋಮುಖಃ ॥38॥
ದ್ರೋಣೇನ ವಿಹಿತೋ ರಾಜನ್ ರಾಜ್ಞಾ ಶಾಂತನವೇನ ಚ |
ತಥೈವಾಚಾರ್ಯಪುತ್ರೇಣ ಬಾಹ್ಲೀಕೇನ ಕೃಪೇಣ ಚ ॥39॥
ಎಲೈ ರಾಜನೇ, ದ್ರೋಣರಿಂದಲೂ, ಶಂತನುಪುತ್ರರಾದ ಭೀಷ್ಮರಿಂದಲೂ, ಆಚಾರ್ಯಪುತ್ರರಾದ ಅಶ್ವತ್ಥಾಮರಿಂದಲೂ, ಬಾಹ್ಲಿಕ ಮತ್ತು ಕೃಪರಿಂದಲೂ ರಕ್ಷಿಸಲ್ಪಟ್ಟ, ರಥಸಮೂಹಗಳಿಂದ ಕೂಡಿದ, ಗಜಗಳೆಂಬ ಶ್ರೇಷ್ಠವಾದ ಶಿರಸ್ಸಿನಿಂದ ಕೂಡಿದ, ಅಶ್ವಗಳೆಂಬ ರೆಕ್ಕೆಗಳಿಂದ ಕೂಡಿದ, ಭಯಂಕರವಾದ ಪಕ್ಷಿಯು (ಪಕ್ಷಿವ್ಯೂಹವು) ಹಾರುತ್ತಾ ಎಲ್ಲ ಕಡೆಗಳಿಂದಲೂ ಪಾಂಡವರ ಸೇನೆಯ ಮೇಲೆ ಪ್ರಹಾರವನ್ನು ಮಾಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತದಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಸಂಜಯನಿಂದ ಕುರುಸೇನೆಯ ಯುದ್ಧಾರಂಭದ ವರ್ಣನೆ.
ಸಂಜಯಃ
ತತೋ ಮುಹೂರ್ತಾತ್ ತುಮುಲಃ ಶಬ್ದೋ ಹೃದಯಕಂಪನಃ |
ಅಶ್ರೂಯತ ಮಹಾರಾಜ ಯೋಧಾನಾಂ ಪ್ರಯುಯುತ್ಸತಾಮ್ ॥1॥
ಸಂಜಯ ಅನಂತರ ಒಂದು ಮುಹೂರ್ತದಲ್ಲಿ ಎದೆಯನ್ನು ನಡುಗಿಸುವ ತೀವ್ರವಾದ ಶಬ್ದವು ಉಂಟಾಯಿತು. ಎಲೈ ಮಹಾರಾಜನೇ, ಪರಸ್ಪರವಾಗಿ ಯುದ್ಧವನ್ನು ಮಾಡಲು ಬಯಸಿದ ಯೋಧರ ಮಹಾಶಬ್ದವು ಕೇಳಿಬಂದಿತು.
ಶಂಖದುಂದುಭಿನಿರ್ಘೋಷೈರ್ವಾರಸಾನಾಂ ಚ ಬೃಂಹಿತೈಃ |
ರಥಾನಾಂ ನೇಮಿಘೋಷೈಶ್ಚ ದೀರ್ಯತೀವ ವಸುಂಧರಾ ॥2॥
ಶಂಖ-ದುಂದುಭಿಗಳ ದೊಡ್ಡ ಘೋಷದಿಂದಲೂ, ಗಜಗಳ ಬೃಂಹಿತಗಳಿಂದಲೂ, ರಥಗಳ ನೇಮಿಗಳ ಘೋಷದಿಂದಲೂ ಭೂಮಿಯು ಬಿರಿದು ಹೋಗುವಂತೆ ತೋರಿತು.
ಹಯಾನಾಂ ಹೇಷಮಾಣಾನಾಂ ಯೋಧಾನಾಂ ತತ್ರ ಗರ್ಜತಾಮ್ |
ಕ್ಷಣೇನ ಖಂ ದಿಶಶ್ಚೈವ ಶಬ್ದೇನಾಪೂರಿತಂ ತದಾ ॥3॥
ಆಗ ಕುದುರೆಗಳ ಹೇಷಾರವದಿಂದಲೂ, ಯೋಧರ ಗರ್ಜನೆಗಳಿಂದಲೂ ಅಲ್ಲಿ ಒಂದು ಕ್ಷಣದಲ್ಲಿ ಆಕಾಶ ಮತ್ತು ದಿಕ್ಕುಗಳು ಶಬ್ದಗಳಿಂದ ತುಂಬಿಹೋದವು.
ಪುತ್ರಾಣಾಂ ತವ ದುರ್ಧರ್ಷ ಪಾಂಡವಾನಾಂ ತಥೈವ ಚ |
ಸಮಕಂಪಂತ ಸೈನ್ಯಾನಿ ಪರಸ್ಪರಸಮಾಗಮೇ ॥4॥
ಎಲೈ ದುರ್ಧರ್ಷನೇ, ಪರಸ್ಪರ ಸಮಾಗಮ ಉಂಟಾದಾಗ ನಿನ್ನ ಮಕ್ಕಳ ಸೈನ್ಯಗಳು ಹಾಗೆಯೇ ಪಾಂಡವರ ಸೈನ್ಯಗಳು ನಡುಗಿದವು.
ತತ್ರ ನಾಗಾ ರಥಾಶ್ಚೈವ ಜಾಂಬೂನದವಿಭೂಷಿತಾಃ |
ಭ್ರಾಜಮಾನಾ ವ್ಯದೃಶ್ಯಂತ ಮೇಘಾ ಇವ ಸವಿದ್ಯುತಃ ॥5॥
ಅಲ್ಲಿ ಸುವರ್ಣಾಲಂಕೃತವಾದ ಗಜಗಳು ಮತ್ತು ರಥಗಳು ಕಂಗೊಳಿಸುತ್ತಾ, ಮಿಂಚಿನಿಂದ ಕೂಡಿದ ಮೋಡಗಳಂತೆ ಕಂಡು ಬಂದವು.
ಧ್ವಜಾ ಬಹುವಿಧಾಕಾರಾಸ್ತಾವಕಾನಾಂ ನರಾಧಿಪ |
ಕಾಂಚನಾಂಗದಿನೋ ರೇಜುರ್ಜ್ವಲಿತಾ ಇವ ಪಾವಕಾಃ ॥6॥
ಎಲೈ ನರಾಧಿಪನೇ, ನಿನ್ನ ಸೈನ್ಯದ ಸುವರ್ಣಮಯವಾದ ಅಂಗದಾದಿಗಳಿಂದ ಅಲಂಕೃತವಾದ ಬಹುವಿಧವಾದ ಆಕಾರವುಳ್ಳ ಧ್ವಜಗಳು ಜ್ವಲಿಸುವ ಅಗ್ನಿಯಂತೆ ಪ್ರಕಾಶಿಸಿದವು.
ಸ್ವೇಷಾಂ ಚೈವ ಪರೇಷಾಂ ಚ ಸಮದೃಶ್ಯಂತ ಭಾರತ |
ಮಹೇಂದ್ರಕೇತವಃ ಶುಭ್ರಾ ಮಹೇಂದ್ರಸದನೇಷ್ವಿವ ॥7॥
ಎಲೈ ಭಾರತನೇ, ನಿನ್ನ ಮತ್ತು ಪರರ ಶುಭ್ರವಾದ ಧ್ವಜಗಳು ಮಹೇಂದ್ರಸದನದಲ್ಲಿನ ಮಹೇಂದ್ರ ಧ್ವಜಗಳಂತೆ ಕಂಡುಬಂದವು.
ಕಾಂಚನೈಃ ಕವಚೈರ್ವೀರಾ ಜ್ವಲನಾರ್ಕಸಮಪ್ರಭೈಃ |
ಸನ್ನದ್ಧಾಃ ಪ್ರತ್ಯದೃಶ್ಯಂತ ಗ್ರಹಾಃ ಪ್ರಜ್ವಲಿತಾ ಇವ ॥8॥
ಜ್ವಲಿಸುವ ಅಗ್ನಿಗೆ ಸಮಾನವಾದ ಕಾಂತಿಯುಳ್ಳ, ಸುವರ್ಣಮಯವಾದ ಕವಚಗಳನ್ನು ಧರಿಸಿದ ವೀರರು ಯುದ್ಧಸನ್ನದ್ಧರಾಗಿ ಜ್ವಲಿಸುವ ಗ್ರಹದಂತಿರುವುದು ಕಂಡುಬಂದಿತು.
ಉದ್ಯತೈರಾಯುಧೈಶ್ಚಿತ್ರೈಸ್ತಲಬದ್ಧಾಃ ಪತಾಕಿನಃ |
ಋಷಭಾಕ್ಷಾ ಮಹೇಷ್ವಾಸಾಶ್ಚಮೂಮುಖಗತಾ ಬಭುಃ ॥9॥
ಕೈಗಳಲ್ಲಿ ಆಯುಧವನ್ನು ಎತ್ತಿಹಿಡಿದು, ತಳರಕ್ಷಣೆಯನ್ನು (ಎ್ಬಟಿಫಿ) ಧರಿಸಿ, ರಥದಲ್ಲಿ ಪತಾಕೆಗಳನ್ನು ಹೊಂದಿದ ಋಷಭಾಕ್ಷರಾದ

ಮಹಾಧನುರ್ಧಾರಿಗಳು ಸೇನೆಯ ಮುಂಭಾಗದಲ್ಲಿ ಶೋಭಿಸಿದರು.
ಪೃಷ್ಠಗೋಪಾಸ್ತು ಭೀಷ್ಮಸ್ಯ ಪುತ್ರಾಸ್ತವ ನರಾಧಿಪ |
ದುಃಶಾಸನೋ ದುರ್ವಿಷಹೋ ದುರ್ಮುಖೋ ದುಃಸಹಸ್ತಥಾ ॥10॥
ವಿವಿಂಶತಿಶ್ಚಿತ್ರಸೇನೋ ವಿಕರ್ಣಶ್ಚ ಮಹಾರಥಃ |
ಸತ್ಯವ್ರತಃ ಪುರುಮಿತ್ರೋ ಜಯೋ ಭೂರಿಶ್ರವಾಃ ಶಲಃ ॥11॥
ಎಲೈ ನರಾಧಿಪನೇ, ನಿನ್ನ ಮಕ್ಕಳಾದ ದುಃಶಾಸನ, ದುರ್ವಿಷಹ, ದುರ್ಮುಖ, ದುಃಸಹ, ವಿವಿಂಶತಿ, ಚಿತ್ರಸೇನ, ಮಹಾರಥನಾದ ವಿಕರ್ಣ ಮತ್ತು ಸತ್ಯವ್ರತ, ಪುರುಮಿತ್ರ, ಜಯ, ಭೂರಿಶ್ರವ, ಶಲ ಇವರು ಭೀಷ್ಮರನ್ನು ಹಿಂಭಾಗದಿಂದ ರಕ್ಷಿಸಿದರು.
ರಥಾ ವಿಂಶತಿಸಾಹಸ್ರಾಸ್ತಥೈಷಾಮನುಯಾಯಿನಃ |
ಅಭೀಷಾಹಾಃ ಶೂರಸೇನಾಃ ಶಿಬಯೋಽಥ ವಸಾತಯಃ ॥12॥
ಸಾಲ್ವಾ ಮತ್ಸ್ಯಾಸ್ತಥಾಂಬಷ್ಠಾಸ್ತ್ರಿಗರ್ತಾಃ ಕೇಕಯಾಸ್ತಥಾ |
ಸೌವೀರಾಃ ಕಿತವಾಃ ಪ್ರಾಚ್ಯಾಃ ಪ್ರತೀಚ್ಯೋದೀಚ್ಯಮಾಲವಾಃ ॥13॥
ದ್ವಾದಶೈತೇ ಜನಪದಾಃ ಸರ್ವೇ ಶೂರಾಸ್ತನುತ್ಯಜಃ |
ಮಹತಾ ರಥವಂಶೇನ ತೇಽಭ್ಯರಕ್ಷನ್ ಪಿತಾಮಹಮ್ ॥14॥
ಇಪ್ಪತ್ತು ಸಹಸ್ರ ರಥಗಳು, ಹಾಗೆಯೇ ಆ ರಥಗಳ ಹಿಂದೆ ಹೋಗುವ ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು, ಸಾಲ್ವರು, ಮತ್ಸ್ಯರು, ಅಂಬಷ್ಠರು, ತ್ರಿಗರ್ತರು, ಕೇಕೆಯರು, ಸೌವೀರರು, ಪೂರ್ವದಿಕ್ಕಿನ ಯೋಧರು, ಪಶ್ಚಿಮ ಮತ್ತು ಉತ್ತರದಿಕ್ಕಿನ ಮಾಲವರು, ಪ್ರಾಣವನ್ನು ಬಿಡಲು ಸಿದ್ಧರಾಗಿದ್ದ ಈ ಹನ್ನೆರಡು ದೇಶಗಳ ಎಲ್ಲಾ ಶೂರರು ದೊಡ್ಡ ರಥ ಸಮೂಹದಿಂದ ಪಿತಾಮಹರಾದ ಭೀಷ್ಮರನ್ನು ರಕ್ಷಿಸಿದರು.
ಅನೀಕಂ ದಶಸಾಹಸ್ರಂ ಕುಂಜರಾಣಾಂ ತರಸ್ವಿನಾಮ್ |
ಮಾಗಧೋ ಯೇನ (ಯತ) ನೃಪತಿಸ್ತದ್ ರಥಾನೀಕಮನ್ವಯಾತ್ ॥
ವೇಗಶಾಲಿಗಳಾದ ಹತ್ತುಸಹಸ್ರ ಗಜಗಳ ಸೇನೆಯನ್ನು ಹೊಂದಿದ ಮಗಧ ದೇಶದ ರಾಜನು ಆ ರಥಗಳ ಸಮೂಹವನ್ನು ಹಿಂಬಾಲಿಸಿದನು.
ರಥಾನಾಂ ಚಕ್ರರಕ್ಷಾಶ್ಚ ಪಾದರಕ್ಷಾಶ್ಚ ದಂತಿನಾಮ್ |
ಅಭೂವನ್ ವಾಹಿನೀಮಧ್ಯೇ ಶತಾನಾಮಯುತಾನಿ ಷಟ್ ॥16॥
ರಥಗಳ ಚಕ್ರರಕ್ಷಕರೂ, ಧ್ವಜಗಳ ಪಾದರಕ್ಷಕರೂ ಆ ಸೇನೆಯ ಮಧ್ಯದಲ್ಲಿ ಅರವತ್ತು ಲಕ್ಷ ಜನರಿದ್ದರು.
ಪಾದಾತಾಶ್ಚಾಗ್ರತೋಽಗಚ್ಛನ್ ಧನುಶ್ಚರ್ಮಾಸಿಪಾಣಯಃ |
ಅನೇಕಶತಸಾಹಸ್ರಾ ನಖರಪ್ರಾಸಯೋಧಿನಃ ॥17॥
ನಖರಪ್ರಾಸಗಳಿಂದ ಯುದ್ಧವನ್ನು ಮಾಡುವ ಅನೇಕ ಲಕ್ಷ ಯೋಧರು ಧನುಸ್ಸು, ಖಡ್ಗ-ಗುರಾಣಿಗಳನ್ನು ಹಿಡಿದ ಅನೇಕ ಪದಾತಿಗಳು ಮುಂಭಾಗದಲ್ಲಿ ನಡೆದರು.
ಅಕ್ಷೋಹಿಣ್ಯೋ ದಶೈಕಾ ಚ ತವ ಪುತ್ರಸ್ಯ ಭಾರತ |
ಅದೃಶ್ಯಂತ ಮಹಾರಾಜ ಗಂಗೇವ ಯಮುನಾಂತರೇ ॥18॥
ಎಲೈ ಭಾರತನೇ, ಮಹಾರಾಜನೇ, ನಿನ್ನ ಮಗನ ಹನ್ನೊಂದು ಅಕ್ಷೋಹಿಣಿ ಸೈನ್ಯವು ಯಮುನೆಯ ಜೊತೆಯಲ್ಲಿ ಸೇರಿದ ಗಂಗೆಯಂತೆ ಕಂಡುಬಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಾದಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ
ಯುದ್ಧಕ್ಕಾಗಿ ಪಾಂಡವಸೇನೆಯು ಸಜ್ಜಾದ ರೀತಿಯ ಕಥನ.
ಧೃತರಾಷ್ಟ್ರಃ
ಅಕ್ಷೋಹಿಣ್ಯೋ ದಶೈಕಾಂ ಚ ವ್ಯೂಢಾಂ ದೃಷ್ಟ್ವಾ ಯುಧಿಷ್ಠಿರಃ |
ಕಥಮಲ್ಪೇನ ಸೈನ್ಯೇನ ಪ್ರತ್ಯವ್ಯೂಹತ ಪಾಂಡವಃ ॥1॥
ಧೃತರಾಷ್ಟ್ರ, ಪಾಂಡವನಾದ ಯುಧಿಷ್ಠಿರನು ನಮ್ಮ ಹನ್ನೊಂದು ಅಕ್ಷೋಹಿಣಿ ಸೈನ್ಯವು ವ್ಯೂಹಗೊಂಡಿದ್ದನ್ನು ನೋಡಿ ತನ್ನ ಅಲ್ಪಸೈನ್ಯದಿಂದ ಹೇಗೆ ಪ್ರತಿವ್ಯೂಹವನ್ನು ರಚಿಸಿದನು?
ಯೋ ವೇದ ಮಾನುಷಂ ವ್ಯೂಹಂ ದೈವಂ ಗಾಂಧರ್ವಮಾಸುರಮ್ |
ಕಥಂ ಭೀಷ್ಮಂ ಸ ಕೌಂತೇಯಃ ಪ್ರತ್ಯವ್ಯೂಹತ ಪಾಂಡವಃ ॥2॥
ಕುಂತೀಪುತ್ರನಾದ, ಪಾಂಡವನಾದ ಧರ್ಮರಾಜನು ಮನುಷ್ಯರ, ದೇವತೆಗಳ, ಗಂಧರ್ವರ, ಅಸುರರ ವ್ಯೂಹಗಳನ್ನು ತಿಳಿದ ಭೀಷ್ಮರಿಗೆ ಎದುರಾಗಿ ಹೇಗೆ ವ್ಯೂಹವನ್ನು ರಚಿಸಿದನು?
ಸಂಜಯಃ
ಧಾರ್ತರಾಷ್ಟ್ರಾಣ್ಯನೀಕಾನಿ ದೃಷ್ಟ್ವಾ ವ್ಯೂಢಾನಿ ಪಾಂಡವಃ |
ಅಭ್ಯಭಾಷತ ಧರ್ಮಾತ್ಮಾ ಧರ್ಮರಾಜೋ ಧನಂಜಯಮ್ ॥3॥

ಸಂಜಯ ಧರ್ಮಾತ್ಮನಾದ, ಪಾಂಡುಪುತ್ರನಾದ ಧರ್ಮರಾಜನು ದುರ್ಯೋಧನನ ಸೈನ್ಯವು ವ್ಯೂಹಗೊಂಡುದನ್ನು ನೋಡಿ ಅರ್ಜುನನನ್ನು ಕುರಿತು ಮಾತನಾಡಿದನು.
ಮಹರ್ಷೇರ್ವಚನಾತ್ ತಾತ ವೇದಯಂತಿ ಬೃಹಸ್ಪತೇಃ |
ಸಂಯತಾನ್ ಯೋಧಯೇದಲ್ಪಾನ್ ಕಾಮಂ ವಿಸ್ತಾರಯೇದ್ ಬಹೂನ್ ||
ಸೂಚೀಮುಖಮನೀಕಂ ಸ್ಯಾದಲ್ಪಾನಾಂ ಬಹುಭಿಃ ಸಹ |
ಅಸ್ಮಾಕಂ ಚ ತಥಾ ಸೈನ್ಯಮಲ್ಪೀಯಃ ಸುತರಾಂ ಪರೈಃ ||5||
ಪ್ರೀತಿಪಾತ್ರನೇ, ಮಹರ್ಷಿಗಳಾದ ಬೃಹಸ್ಪತಿಗಳ ವಚನದಂತೆ ಜ್ಞಾನಿಗಳು ಯುದ್ಧೋಪಾಯವನ್ನು ಹೀಗೆ ತಿಳಿಯುತ್ತಾರೆ. ಅಲ್ಪಸೈನ್ಯವಿರುವಾಗ ಅದನ್ನು ಒಂದುಗೂಡಿಸಿಯೇ ಯುದ್ಧವನ್ನು ಮಾಡಬೇಕು. ಬಹಳ ಸೈನಿಕರಿದ್ದಾಗ ಅದನ್ನು ಬೇಕಾದಂತೆ ವಿಸ್ತಾರಗೊಳಿಸಬಹುದು. ಅಲ್ಪರು ಬಹುಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ತಮ್ಮ ಸೈನ್ಯವನ್ನು ಸೂಚೀಮುಖ ರೀತಿಯಲ್ಲಿ ವ್ಯೂಹವನ್ನು ಮಾಡಬೇಕು. ಎಂದರೆ ಸೂಚಿಯ ತುದಿಯು ಹೇಗೆ ಅತಿ ಕ್ರೂರವಾಗಿರುತ್ತದೆಯೋ, ಅದರಂತೆ ಮುಂಭಾಗದಲ್ಲಿ ಅತಿ ಕ್ರೂರನಾದ ಒಬ್ಬ ಭಟನನ್ನು ನಿಲ್ಲಿಸಿ ಅವನ ಹಿಂದೆ ಎಲ್ಲರೂ ನಡೆಯಬೇಕು. ನಮ್ಮ ಸೈನ್ಯವಂತೂ ಶತ್ರುಸೈನ್ಯಕ್ಕಿಂತ ಬಹಳ ಅಲ್ಪವಾದುದು ಎಂಬುದು ಸ್ಪಷ್ಟವಾಗಿದೆ.
ಏತದ್ ವಚನಮಾಜ್ಞಾಯ ಮಹರ್ಷೇರ್ವ್ಯೂಹ ಪಾಂಡವ |
ತಚ್ಛ್ರುತ್ವಾ ಧರ್ಮರಾಜಸ್ಯ ಪ್ರತ್ಯಭಾಷತ ಫಲ್ಗುನಃ ||6||
ಎಲೈ ಪಾಂಡುಪುತ್ರನೇ, ಮಹರ್ಷಿಗಳಾದ ಬೃಹಸ್ಪತಿಗಳ ಈ ಮಾತನ್ನು ಅರ್ಥ ಮಾಡಿಕೊಂಡು ವ್ಯೂಹವನ್ನು ರಚಿಸು. ಧರ್ಮರಾಜನ ಈ ಮಾತನ್ನು ಕೇಳಿ ಅರ್ಜುನನು ಉತ್ತರವನ್ನು ಕೊಟ್ಟನು.
ಏಷ ವ್ಯೂಹಾಮಿ ತೇ ರಾಜನ್ ವ್ಯೂಹಂ ಪರಮದುರ್ಜಯಮ್ |
ಅಚಲಂ ನಾಮ ವಜ್ರಾಖ್ಯಂ ವಿಹಿತಂ ವಜ್ರಪಾಣಿನಾ ||7||
ಎಲೈ ರಾಜನೇ, ಇಗೋ ನಾನು ನಿನ್ನ ಸೈನ್ಯವನ್ನು ಪರಮದುರ್ಜಯವಾದ, ಅಲುಗಾಡಿಸಲು ಅಸಾಧ್ಯವಾದ, ವಜ್ರವೆಂಬ ವ್ಯೂಹದಲ್ಲಿ ಯೋಜಿಸುವೆನು. ಇದನ್ನು ಹಿಂದೆ ವಜ್ರಪಾಣಿಯಾದ ಇಂದ್ರನು ಮಾಡಿದ್ದನು.
ಯಃ ಸ ವಾತ ಇವೋದ್ಧೂತಃ ಸಮರೇ ದುಃಸಹಃ ಪರೈಃ |
ಧೃಷ್ಟದ್ಯುಮ್ನೋಽಗ್ರತೋ ಯಾತು ಪರಸೈನ್ಯಾನಿ ಭೀಷಯನ್ |
ಸ ನಃ ಪುರೋ ಯೋತ್ಸ್ಯತೇ ವೈ ಭೀಮಃ ಪ್ರಹರತಾಂ ವರಃ ||8||
ಯಾವ ಧೃಷ್ಟದ್ಯುಮ್ನನು ಬಿರುಗಾಳಿಯಂತೆ ಯುದ್ಧದಲ್ಲಿ ಶತ್ರುಗಳಿಗೆ ದುಃಸಹನೋ ಅಂತಹ ಧೃಷ್ಟದ್ಯುಮ್ನನು ಶತ್ರುಸೈನ್ಯವನ್ನು ಹೆದರಿಸುತ್ತಾ ಮುಂದೆ ಸಾಗಲಿ. ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಭೀಮನು ನಮ್ಮ ಮುಂದೆ ಯುದ್ಧವನ್ನು ಮಾಡುವನು.
ತೇಜಾಂಸಿ ಪಾರ್ಥಿವೇಂದ್ರಾಣಾಂ ಸ ಮೃದ್ನನ್ ಪುರುಷರ್ಷಭಾನ್ |
ಅಗ್ರೇಣ ಯಾಸ್ಯತಿ ಸ ನೋ ಯುದ್ಧಮಾರ್ಗವಿಚಕ್ಷಣಃ ||9||
ಯುದ್ಧ ಮಾರ್ಗಗಳನ್ನು ಬಲ್ಲ ಅವನು ಶತ್ರುಗಳ ಪುರುಷಶ್ರೇಷ್ಠರನ್ನು ಒರೆಸುತ್ತಾ, ರಾಜರ ಸಾಮರ್ಥ್ಯಗಳನ್ನು ನಾಶಮಾಡುತ್ತಾ ನಮ್ಮ ಮುಂಭಾಗದಲ್ಲಿ ಹೋಗುವನು.
ಸೇನಾಪ್ರಣೇತಾ ಯೋಽಸ್ಮಾಕಂ ದೇವಾನಾಮಿವ ಪಾವಕಿಃ |
ಯಂ ದೃಷ್ಟ್ವಾ ಪಾರ್ಥಿವಾಃ ಸರ್ವೇ ದುರ್ಯೋಧನಪುರೋಗಮಾಃ |
ವಿವರ್ತಿಷ್ಯಂತಿ ಸಂತ್ರಸ್ತಾಃ ಸಿಂಹತ್ರಸ್ತಾ ಮೃಗಾ ಇವ ||10||
ದೇವತೆಗಳಿಗೆ ಷಣ್ಮುಖನಂತೆ ನಮ್ಮ ಸೇನಾನಾಯಕನಾದ ಯಾವ ಭೀಮಸೇನನಿದ್ದಾನೆಯೋ, ಅವನನ್ನು ನೋಡಿ ದುರ್ಯೋಧನರೇ ಮೊದಲಾದ ಎಲ್ಲ ರಾಜರೂ ಸಿಂಹಕ್ಕೆ ಹೆದರಿದ ಮೃಗಗಳಂತೆ ಸಂತ್ರಸ್ತರಾಗಿ ಹೊರಳಾಡುತ್ತಾರೆ.
ಏತೇ ಸರ್ವೇ ತು ಯಾಸ್ಯಾಮ ಪ್ರಕಾಮಮಕುತೋಭಯಾಃ |
ಭೀಮಸೇನೇನ ಸಹಿತಂ ವಿಷ್ಣುನೇವ ಶತಕ್ರತುಮ್ ||11||
ನಾವೆಲ್ಲರೂ ಯಾವ ಭಯವೂ ಇಲ್ಲದೆ ನಮ್ಮ ಇಚ್ಛೆಗೆ ಅನುಗುಣವಾಗಿ ವಿಷ್ಣುವಿನಿಂದ ಒಡಗೂಡಿದ ಇಂದ್ರನಂತೆ ಭೀಮಸೇನನಿಂದ ಸಹಿತರಾಗಿ ಹೋಗೋಣ.
ನ ಹಿ ಸೋಽಸ್ತಿ ಪುಮಾನ್ ಲೋಕೇ ಯಃ ಸಂಕ್ರುದ್ಧಂ ವೃಕೋದರಮ್ |
ದೃಷ್ಟ್ವಾ ಹ್ಯತ್ಯುಗ್ರಕರ್ಮಾಣಂ ವಿಷಹೇತ ನರರ್ಷಭಮ್ ||12||
ಅತ್ಯಂತ ಉಗ್ರವಾದ ಕರ್ಮವನ್ನು ಆಚರಿಸುವವನೂ, ಸಂಕ್ರುದ್ಧನೂ, ನರಶ್ರೇಷ್ಠನೂ ಆದ ವೃಕೋದರನನ್ನು ನೋಡಿ ಲೋಕದಲ್ಲಿ ಅವನನ್ನು ಎದುರಿಸುವ ವ್ಯಕ್ತಿಯು ಯಾವನೂ ಇಲ್ಲ.
ಭೀಮಸೇನೋ ಗದಾಂ ಬಿಭ್ರದ್ ವಜ್ರಸಾರಮಯೀಂ ದೃಢಾಮ್ |
ಚರನ್ ವೇಗೇನ ಮಹತಾ ಸಮುದ್ರಮಪಿ ಶೋಷಯೇತ್ ||13||
ಭೀಮಸೇನನು ವಜ್ರಸಾರಮಯವಾದ ಉಗ್ರವಾದ ಗದೆಯನ್ನು ಹಿಡಿದು ಮಹಾವೇಗದಿಂದ ಚಲಿಸುತ್ತಾ ಸಮುದ್ರವನ್ನೂ ಒಣಗಿಸಿಯಾನು!
ಕೇಕಯಾ ಧೃಷ್ಟಕೇತುಶ್ಚ ಚೇಕಿತಾನಶ್ಚ ವೀರ್ಯವಾನ್ |
ಏತೇ ಗಚ್ಛಂತು ಸಾಮಾತ್ಯಾಃ ಪ್ರಕರ್ಷಂತೋ ನರೇಶ್ವರ ||14||
ಧೃತರಾಷ್ಟ್ರಸ್ಯ ದಾಯಾದಾನಿತಿ ಬೀಭತ್ಸುರಬ್ರವೀತ್ |
ಬ್ರುವಾಣಂ ತು ತಥಾ ಪಾರ್ಥಂ ಸರ್ವಸೈನ್ಯಾನಿ ಮಾರಿಷ |

ಅಪೂಜಯಂಸ್ತದಾ ವಾಗ್ಭಿರನುಕೂಲಾಭಿರಾಹವೇ ॥15॥
ಎಲೈ ನರೇಶ್ವರನೇ, ಕೇಕಯರು, ಧೃಷ್ಟಕೇತು, ಪರಾಕ್ರಮಶಾಲಿಯಾದ ಚೇಕಿತಾನ ಇವರು ತಮ್ಮ ಅಮಾತ್ಯರ ಜೊತೆಯಲ್ಲಿ ಧೃತರಾಷ್ಟ್ರನ ಮಕ್ಕಳ ಮೇಲೆ ಎರಗಲಿ ಎಂದು ಅರ್ಜುನನು ಹೇಳಿದನು. ಎಲೈ ವೀರನಾದ ಧೃತರಾಷ್ಟ್ರನೇ, ಹೀಗೆ ಮಾತನಾಡುವ ಅರ್ಜುನನನ್ನು ನೋಡಿ ಎಲ್ಲ ಸೈನ್ಯವೂ ಅನುಕೂಲವಾದ ವಚನಗಳಿಂದ ಯುದ್ಧದಲ್ಲಿ ಅವನನ್ನು ಪೂಜಿಸಿದವು.
ಏವಮುಕತ್ವ ಮಹಾಬಾಹುಸ್ತಥಾ ಚಕ್ರೇ ಧನಂಜಯಃ |
ವ್ಯೂಹ್ಯ ತಾನಿ ಬಲಾನ್ಯಾಶು ಪ್ರಯಯೌ ಫಲ್ಗುನಸ್ತದಾ ॥16॥
ಮಹಾಬಾಹುವಾದ ಅರ್ಜುನನು ಹೀಗೆ ಮಾತನಾಡಿ ಆ ಸೈನ್ಯವನ್ನು ಅದರಂತೆ ವ್ಯೂಹ ಮಾಡಿ ಅಲ್ಲಿಂದ ಹೊರಟನು.
ಸಂಪ್ರಯಾತಾನ್ ಕುರೂನ್ ದೃಷ್ಟ್ವಾ ಪಾಂಡವಾನಾಂ ಮಹಾಚಮೂಃ |
ಗಂಗೇವ ಪೂರ್ಣಾ ಸ್ತಿಮಿತಾ ಸ್ಯಂದಮಾನಾ ವ್ಯದೃಶ್ಯತ ॥17॥
ಯುದ್ಧಕ್ಕೆ ಹೊರಟ ಕುರುಗಳನ್ನು ನೋಡಿ ಪಾಂಡವರ ದೊಡ್ಡ ಸೈನ್ಯವು ಎರಡು ತೀರಗಳನ್ನು ತುಂಬಿಹರಿಯುವ ಗಂಗೆಯಂತೆ ಮುಂದೆ ಸಾಗಿದುದು ಕಂಡುಬರುತ್ತಿದ್ದಿತು.
ಭೀಮಸೇನೋಽಗ್ರಣೀಸ್ತೇಷಾಂ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ನಕುಲಃ ಸಹದೇವಶ್ಚ ಧೃಷ್ಟಕೇತುಶ್ಚ ವೀರ್ಯವಾನ್ ॥18॥
ಆ ಸೈನ್ಯದ ಅಗ್ರಭಾಗದಲ್ಲಿ ಭೀಮಸೇನ ಮತ್ತು ಧೃಷ್ಟದ್ಯುಮ್ನರಿದ್ದರು. ಅನಂತರ ನಕುಲ, ಸಹದೇವ ಮತ್ತು ಪರಾಕ್ರಮಶಾಲಿಯಾದ ಧೃಷ್ಟಕೇತುವೂ ಇದ್ದರು.
ಸಮುದ್ಯೋಜ್ಯ ತತಃ ಪಶ್ಚಾದ್ ರಾಜಾಪ್ಯಕ್ಷೋಹಿಣೀವೃತಃ |
ಭ್ರಾತೃಭಿಃ ಸಹ ಪುತ್ರೈಶ್ಚ ಸೋಽಭ್ಯರಕ್ಷತ ಪೃಷ್ಠತಃ ॥19॥
ಅವರ ಹಿಂದೆ ರಾಜನಾದ ಯುಧಿಷ್ಠಿರನು ಒಂದು ಅಕ್ಷೋಹಿಣಿ ಸೈನ್ಯವನ್ನು ಸಜ್ಜುಗೊಳಿಸಿ ತನ್ನ ತಮ್ಮಂದಿರಿಂದ ಮತ್ತು ಮಕ್ಕಳಿಂದ ಕೂಡಿಕೊಂಡು ಹಿಂಭಾಗದಿಂದ ಅವರಿಗೆ ರಕ್ಷಣೆಯನ್ನು ನೀಡಿದನು.
ಚಕ್ರರಕ್ಷೌ ತು ಭೀಮಸ್ಯ ಮಾದ್ರೀಪುತ್ರೌ ಮಹಾದ್ಯುತೀ |
ದ್ರೌಪದೇಯಾಃ ಸಸೌಭದ್ರಾಃ ಪೃಷ್ಠಗೋಪಾಸ್ತರಸ್ವಿನಃ ॥20॥
ಮಹಾಕಾಂತಿಯುಳ್ಳ ಮಾದ್ರೀಪುತ್ರರಾದ ನಕುಲ-ಸಹದೇವರು ಭೀಮಸೇನನ ಚಕ್ರರಕ್ಷಕರಾಗಿದ್ದರು (ಎರಡು ಪಾರ್ಶ್ವಗಳ ರಕ್ಷಕರಾಗಿದ್ದರು). ದ್ರೌಪದಿಯ ಮಕ್ಕಳು ಮತ್ತು ಅಭಿಮನ್ಯುವು ವೇಗಶಾಲಿಯಾದ ಭೀಮಸೇನನಿಗೆ ಹಿಂಭಾಗದಲ್ಲಿ ರಕ್ಷಕರಾಗಿದ್ದರು.
ಧೃಷ್ಟದ್ಯುಮ್ನಶ್ಚ ಪಾಂಚಾಲ್ಯಸ್ತೇಷಾಂ ಗೋಪ್ತಾ ಮಹಾರಥಃ |
ಸಹಿತಃ ಪೃತನಾಶೂರೈಃ ರಥಮುಖ್ಯೈಃ ಪ್ರಭದ್ರಕೈಃ ॥21॥
ಪಾಂಚಲರಾಜನ ಕುಮಾರನಾದ ಮಹಾರಥನಾದ ಧೃಷ್ಟದ್ಯುಮ್ನನು ಶೂರರಾದ ಯೋಧರಿಂದಲೂ ಮತ್ತು ಪ್ರಭದ್ರಕರ ಶ್ರೇಷ್ಠರಥರಿಂದಲೂ ಸಹಿತನಾಗಿ ಅವರಿಗೆ ರಕ್ಷಕನಾಗಿದ್ದನು.
ಶಿಖಂಡೀ ತು ತತಃ ಪಶ್ಚಾದರ್ಜುನೇನಾಭಿರಕ್ಷಿತಃ |
ಯತ್ತೋ ಭೀಷ್ಮವಿನಾಶಾಯ ಪ್ರಯಯೌ ಭರತರ್ಷಭ ॥22॥
ಎಲೈ ಭರತರ್ಷಭನೇ, ಶಿಖಂಡಿಯು ಅವರ ಹಿಂದೆ ಅರ್ಜುನನಿಂದ ಚೆನ್ನಾಗಿ ರಕ್ಷಿತನಾಗಿ ಭೀಷ್ಮವಿನಾಶಕ್ಕಾಗಿ ದೃಢವಾದ ಸಂಕಲ್ಪವನ್ನು ಮಾಡಿ ಹೊರಟನು.
ಪೃಷ್ಠಗೋಪೋಽರ್ಜುನಸ್ಯಾಪಿ ಯುಯುಧಾನೋ ಮಹಾರಥಃ |
ಚಕ್ರರಕ್ಷೌ ತು ಪಾಂಚಾಲ್ಯೌ ಯುಧಾಮನ್ಯೂತ್ತಮೋಜಸೌ ॥23॥
ಮಹಾರಥನಾದ ಯುಯುಧಾನನು ಅರ್ಜುನನಿಗೆ ಹಿಂಭಾಗದಲ್ಲಿ ರಕ್ಷಕನಾಗಿದ್ದನು. ಪಾಂಚಾಲದೇಶದ ಯುಧಾಮನ್ಯು ಮತ್ತು ಉತ್ತಮೋಜರು ಅವನಿಗೆ ಚಕ್ರ ರಕ್ಷಕರಾಗಿದ್ದರು.
ರಾಜಾ ತು ಮಧ್ಯಮಾನೀಕೇ ಕುಂತೀಪುತ್ರೋ ಯುಧಿಷ್ಠಿರಃ |
ಬೃಹದ್ಭಿಃ ಕುಂಜರೈರ್ಮತ್ತೈಶ್ಚಲದ್ಭಿರಚಲೈರಿವ ॥24॥
ಕುಂತೀಪುತ್ರನಾದ ಯುಧಿಷ್ಠಿರನು ಸೈನ್ಯದ ಮಧ್ಯಭಾಗದಲ್ಲಿ ಚಲಿಸುವ ಪರ್ವತಗಳಂತಿದ್ದ ಮಹಾಮತ್ತಗಜಗಳ ಜೊತೆಯಲ್ಲಿದ್ದನು.
ಅಕ್ಷೋಹಿಣ್ಯಾ ಚ ಪಾಂಚಾಲ್ಯೋ ಯಜ್ಞಸೇನೋ ಮಹಾಮನಾಃ |
ವಿರಾಟಮನ್ವಯಾತ್ ಪಶ್ಚಾತ್ ಪಾಂಡವಾರ್ಥೇ ಪರಾಕ್ರಮೀ ॥25॥
ಪರಾಕ್ರಮಶಾಲಿಯೂ, ಧೈರ್ಯಶಾಲಿಯೂ ಆದ ಪಾಂಚಾಲರಾಜನಾದ ಯಜ್ಞಸೇನನು (ದ್ರುಪದನು) ಒಂದು ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಪಾಂಡವರ ಸಲುವಾಗಿ ವಿರಾಟನ ಹಿಂದೆ ನಡೆದನು.
ತೇಷಾಮಾದಿತ್ಯಚಂದ್ರಾಭಾಃ ಕನಕೋತ್ತಮಭೂಷಣಾಃ |
ನಾನಾಚಿಹ್ನಧರಾ ರಾಜನ್ ರಥೇಷ್ವಾಸನ್ ಮಹಾಧ್ವಜಾಃ ॥26॥
ಎಲೈ ರಾಜನೇ, ಅವರ ರಥಗಳಲ್ಲಿ ಆದಿತ್ಯ-ಚಂದ್ರರ ಕಾಂತಿಯನ್ನು ಹೊಂದಿದ, ಶ್ರೇಷ್ಠವಾದ ಸುವರ್ಣಭೂಷಣಗಳಿಂದ ಅಲಂಕೃತವಾದ, ನಾನಾ ಚಿಹ್ನೆಗಳನ್ನು ಧರಿಸಿದ ಮಹಾಧ್ವಜಗಳು ಇದ್ದವು.
ಸಮುತ್ಸರ್ಪ್ಯ ತತಃ ಪಶ್ಚಾದ್ ಧೃಷ್ಟದ್ಯುಮ್ನೋ ಮಹಾರಥಃ |
ಭ್ರಾತೃಭಿಃ ಸಹ ಪುತ್ರೈಶ್ಚ ಸೋಽಭ್ಯರಕ್ಷದ್ ಯುಧಿಷ್ಠಿರಮ್ ॥27॥
ಮಹಾರಥನಾದ ಧೃಷ್ಟದ್ಯುಮ್ನನು ತನ್ನ ಸಹೋದರರ ಮತ್ತು ಪುತ್ರರ ಜೊತೆಯಲ್ಲಿ ನಿಧಾನವಾಗಿ ಚಲಿಸಿ ಯುಧಿಷ್ಠಿರನಿಗೆ ರಕ್ಷಕನಾಗಿದ್ದನು.

ತ್ವದೀಯಾನಾಂ ಪರೇಷಾಂ ಚ ರಥೇಷು ವಿವಿಧಾನ್ ಧ್ವಜಾನ್ |
ಅಭಿಭೂಯಾರ್ಜುನಸ್ಯೈಕೋ ಧ್ವಜಸ್ತಸ್ಥೌ ಮಹಾಕಪಿಃ ||28||
ನಿನ್ನವರ ಮತ್ತು ಶತ್ರುಗಳಾದ ಪಾಂಡವರ ಎಲ್ಲ ಧ್ವಜಗಳನ್ನು ಮೀರಿನಿಂತು ಅರ್ಜುನನ ಒಂದು ಧ್ವಜವು, ಮಹಾಕಪಿಯಿಂದ ಕೂಡಿದ ಕಾಣುತ್ತಿದ್ದಿತು.
ಪಾದಾತಾಸ್ತ್ವಗ್ರತೋಽಗಚ್ಛನ್ ಅಸಿಶಕ್ತ್ಯೃಷ್ಟಿಪಾಣಯಃ |
ಅನೇಕಶತಸಾಹಸ್ರಾ ಭೀಮಸೇನಸ್ಯ ರಕ್ಷಿಣಃ ||29||
ಅನೇಕ ಶತಸಹಸ್ರ ಪದಾತಿಗಳು ಕೈಯಲ್ಲಿ ಖಡ್ಗ, ಶಕ್ತಿ ಮತ್ತು ಋಷ್ಟಿಗಳನ್ನು ಹಿಡಿದು ಭೀಮಸೇನನಿಗೆ ರಕ್ಷಕರಾಗಿ ಮುಂದೆ ಸಾಗಿದರು.
ಧ್ವಜಾಗ್ರೇ ರುವತೋ ಭೀಮಂ ಕಪೇಸ್ತಸ್ಯ ಪುನಃಪುನಃ |
ಶ್ರೂಯತೇ ಭೀಮನಿನದೋ ನಾದಯಾನೋ ದಿಶೋ ದಶ ||30||
ಧ್ವಜದ ಮೇಲ್ಭಾಗದಲ್ಲಿ ಪುನಃ ಪುನಃ ಭಯಂಕರವಾಗಿ ಗರ್ಜಿಸುವ ಆ ಕಪಿಯ ಭಯಂಕರ ನಾದವು ಹತ್ತು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಾ ಕೇಳಿಬರುತ್ತಿದ್ದಿತು.
ದೃಷ್ಟ್ವಾ ಚ ಭೀಷಯಾಮಾಸ ವಿರಾವೈರ್ವಾನರೇಶ್ವರಃ |
ಭೂಕ್ಷೇಪೋತ್ಕ್ಷೇಪವಿಕ್ಷೇಪೈರ್ಲಾಂಗೂಲೇನ ಪುನಃ ಕಪಿಃ |
ಆಕಾಶೇ ದರ್ಶಯಾಮಾಸ ಪ್ರತಿಶಬ್ದೇ ಮಹಾಸ್ವನಮ್ ||31||
ವಾನರೇಶ್ವರನಾದ ಆ ಕಪಿಯು ತನ್ನ ದರ್ಶನದಿಂದಲೂ, ಗರ್ಜನೆಗಳಿಂದಲೂ, ಹುಬ್ಬಿನ ಚಲನೆಯಿಂದಲೂ, ಮೇಲ್ಮುಖವಾಗಿ ಮತ್ತು ಕೆಳಮುಖವಾಗಿ ಹಾರುವುದರಿಂದಲೂ, ತನ್ನ ಬಾಲದ ಚಲನೆಯಿಂದಲೂ ಕೌರವಸೈನ್ಯವನ್ನು ಹೆದರಿಸಿತು. ತನ್ನ ಗರ್ಜನೆಯಿಂದ ಆಕಾಶದಲ್ಲಿ ಉಂಟಾಗುವ ಮಹಾಸ್ವನವುಳ್ಳ ಪ್ರತಿಧ್ವನಿಯನ್ನು ಮತ್ತೆ ಮತ್ತೆ ಕೇಳುವಂತೆ ಮಾಡಿತು.
ವಾರಣಾ ದಶಸಾಹಸ್ರಾಃ ಪ್ರಭಿನ್ನಕರಟಾಮುಖಾಃ |
ಶೂರಾ ಹೇಮಮಯೈರ್ಜಾಲೈಃ ದೀಪ್ಯಮಾನಾ ಇವಾಚಲಾಃ ||32||
ಕ್ಷರಂತ ಇವ ಜೀಮೂತಾಃ ಮದಾರ್ದ್ರಾಃ ಪದ್ಮಗಂಧಿನಃ |
ರಾಜಾನಮನ್ವಯುಃ ಪಶ್ಚಾಚ್ಚಲಂತ ಇವ ಪರ್ವತಾಃ ||33||
ತಮ್ಮ ಗಂಡಸ್ಥಳಗಳಿಂದ ಮದೋದಕವನ್ನು ಸುರಿಸುವ, ಪರಾಕ್ರಮಶಾಲಿಗಳಾದ, ಸುವರ್ಣಮಯವಾದ ಹಾಸುಗಳಿಂದ ಪರ್ವತಗಳಂತೆ ಪ್ರಕಾಶಿಸುವ ಹತ್ತು ಸಹಸ್ರ ಆನೆಗಳು ಪದ್ಮಗಂಧವನ್ನು ಹೊಂದಿ ಮದೋದಕದಿಂದ ಒದ್ದೆಯಾಗಿ, ನೀರನ್ನು ಸುರಿಸುವ ಮೋಡಗಳಂತೆ, ಚಲಿಸುವ ಪರ್ವತಗಳಂತೆ ರಾಜನ ಹಿಂದೆ ನಡೆದವು.
ಭೀಮಸೇನೋ ಗದಾಂ ಭೀಮಾಂ ಪ್ರಕರ್ಷನ್ ಪರಿಘೋಪಮಾಮ್ |
ಪ್ರಚಕರ್ಷ ಮಹತ್ಸೈನ್ಯಂ ದುರಾಧರ್ಷೋ ಮಹಾಮನಾಃ ||34||
ಭೀಮಸೇನನು ಒನಕೆಯಂತಿದ್ದ ತನ್ನ ಭಯಂಕರವಾದ ಗದೆಯನ್ನು ಎಳೆಯುತ್ತಾ ಇನ್ನೊಬ್ಬರು ಹತ್ತಿರ ಸುಳಿಯಲು ಸಾಧ್ಯವಿಲ್ಲದಂತಹ ಧೈರ್ಯಶಾಲಿಯಾದ ಅವನು ಆ ದೊಡ್ಡ ಸೈನ್ಯವನ್ನು ಮುಂದೆ ನಡೆಸಿದನು.
ತಮರ್ಕಮಿವ ದುಷ್ಪ್ರೇಕ್ಷಂ ತಪಂತಂ ರಶ್ಮಿಮಾಲಿನಮ್ |
ನ ಶೇಕುಃ ಸರ್ವತೋ ಯೋಧಾಃ ಪ್ರತಿವೀಕ್ಷಿತುಮಂತಿಕೇ ||35||
ಕಿರಣಗಳ ಸಮೂಹವನ್ನು ಹೊಂದಿದ ಜ್ವಲಿಸುವ ಸೂರ್ಯನಂತೆ ನೋಡಲು ಅಸಾಧ್ಯನಾದ ಅವನನ್ನು ಸರ್ವಯೋಧರೂ ಸಹ ಸಮೀಪದಿಂದ ಪ್ರತಿಯಾಗಿ ನೋಡಲೂ ಸಾಧ್ಯವಾಗಲಿಲ್ಲ.
ವಜ್ರೋ ನಾಮ್ನೈಷ ತು ವ್ಯೂಹೋ ದುರ್ಭೇದಃ ಸರ್ವತೋಮುಖಃ |
ಚಾಪವಿದ್ಯುದ್ಧ್ವಜೋ ಘೋರೋ ಗುಪ್ತೋ ಗಾಂಡೀವಧನ್ವನಾ ||36||
ಈ ವ್ಯೂಹಕ್ಕೆ ವಜ್ರವೆಂದು ಹೆಸರು. ಅದನ್ನು ಯಾವ ಕಡೆಗಳಿಂದಲೂ ಭೇದಿಸಲು ಸಾಧ್ಯವಿಲ್ಲ. ಬಿಲ್ಲು-ಬಾಣಗಳನ್ನು ಮತ್ತು ಧ್ವಜಗಳನ್ನು ಹೊಂದಿದ್ದ ಆ ಘೋರವಾದ ವ್ಯೂಹವು ಗಾಂಡೀವಿಯಾದ ಅರ್ಜುನನಿಂದ ರಕ್ಷಿಸಲ್ಪಟ್ಟಿತು.
ಯಂ ಪ್ರತಿವ್ಯೂಹ್ಯ ತಿಷ್ಠಂತಿ ಪಾಂಡವಾಸ್ತವ ವಾಹಿನೀಮ್ |
ಅಜೇಯೋ ಮಾನುಷೇ ಲೋಕೇ ಪಾಂಡವೈರಭಿರಕ್ಷಿತಃ ||37||
ಪಾಂಡವರು ನಿನ್ನ ವ್ಯೂಹಕ್ಕೆ ಪ್ರತಿಯಾಗಿ ಯಾವ ವಜ್ರವ್ಯೂಹವನ್ನು ರಚಿಸಿದರೋ, ಪಾಂಡವರಿಂದ ಚೆನ್ನಾಗಿ ರಕ್ಷಿತವಾದ ಅದು ಮನುಷ್ಯಲೋಕದಲ್ಲಿ ಅಜೇಯವಾದುದಾಗಿದ್ದಿತು.
ಸಂಧ್ಯಾಂ ತಿಷ್ಠತ್ಸು ಸೈನ್ಯೇಷು ಸೂರ್ಯಸ್ಯೋದಯನಂ ಪ್ರತಿ |
ಪ್ರಾವಾತ್ ಸಪೃಷತೋ ವಾಯುರನಭ್ರೇ ಸ್ತನಯಿತ್ನುಮಾನ್ ||38||
ಸೈನ್ಯಗಳು ಸೂರ್ಯೋದಯ ಸಮೀಪದ ಕಾಲದಲ್ಲಿ ಸಂಧ್ಯಾವಂದನೆಯನ್ನು ಆಚರಿಸುತ್ತಿರಲು ಮೋಡವಿಲ್ಲದ ಆಕಾಶದಲ್ಲಿ ವಾಯುವು ಪ್ರಬಲವಾಗಿ ಬೀಸಿ ಗುಡುಗುಗಳು ಮತ್ತು ಮಳೆಯ ಹನಿಗಳು ಉಂಟಾದವು.
ವಿಷ್ವಗ್ವಾತಾಶ್ಚ  ವಾಂತ್ಯುಗ್ರಾ ನೀಚೈಃ ಶರ್ಕರಕರ್ಷಿಣಃ |
ರಜಶ್ಚೋದ್ಧೂಯಮಾನಂ ತು ತಮಸಾಽಽಚ್ಛಾದಯಜ್ಜಗತ್ ||39||
ಉಗ್ರವಾದ ಬಿರುಗಾಳಿಗಳು ನೆಲವನ್ನು ಹಿಡಿದು ಬೀಸಿ ಮರಳುಗಳ ಕಣಗಳನ್ನು ಎಳೆದಾಡಿದವು. ಅವುಗಳಿಂದ ಎದ್ದ ಧೂಳಿನಿಂದ ಉಂಟಾದ ಕತ್ತಲೆಯು ಜಗತ್ತನ್ನು ಆವರಿಸಿತು.
ಪಪಾತ ಮಹತೀ ಚೋಲ್ಕಾ ಪ್ರಾಙ್ಮುಖೀ ಭರತರ್ಷಭ |
ಉದ್ಯಂತಂ ಸೂರ್ಯಮಾಹತ್ಯ ವ್ಯಶೀರ್ಯತ ಮಹಾಸ್ವನಾ ||40||

ಎಲೈ ಭರತರ್ಷಭನೇ, ಸೂರ್ಯನು ಉದಯಿಸುತ್ತಿರುವಾಗ ಒಂದು ದೊಡ್ಡ ಉಲ್ಕೆಯು ಪೂರ್ವಾಭಿಮುಖವಾಗಿ ಸೂರ್ಯನ ಮೇಲೆ ಬಿದ್ದು ದೊಡ್ಡ ಶಬ್ದವನ್ನು ಮಾಡುತ್ತಾ ಪುಡಿಪುಡಿಯಾಯಿತು.
ಅಥ ಸಜ್ಜೀಯಮಾನೇಷು ಸೈನ್ಯೇಷು ಭರತರ್ಷಭ |
ನಿಷ್ಪ್ರಭೋಽಭ್ಯುದಿಯಾತ್ ಸೂರ್ಯಃ ಸಘೋಷೋ ಭೂಶ್ಚಚಾಲ ಹ |
ವ್ಯಶೀರ್ಯತ ಸನಾದಾ ಚ ಭೂಸ್ತದಾ ಭರತರ್ಷಭ ॥41॥
ಎಲೈ ಭರತರ್ಷಭನೇ, ಸೈನ್ಯಗಳು ಸಜ್ಜುಗೊಳ್ಳುತ್ತಿರಲು ಸೂರ್ಯನು ಕಾಂತಿಹೀನನಾಗಿ ಉದಯಿಸಿದನು. ಭೂಮಿಯು ನಡುಗಿತು. ಎಲೈ ಭರತಸತ್ತಮನೇ, ಶಬ್ದ ಸಹಿತವಾಗಿ ಭೂಮಿಯು ಆಗ ಬಿರಿಯಿತು.
ನಿರ್ಘಾತಾ ಬಹವೋ ರಾಜನ್ ದಿಕ್ಷು ಸರ್ವಾಸು ಚಾಭವನ್ |
ಪ್ರಾದುರಾಸೀತ್ ರಜಸ್ತೀವ್ರಂ ನ ಪ್ರಾಜ್ಞಾಯತ ಕಿಂಚನ ॥42॥
ಎಲೈರಾಜನೇ, ಹಾಗೆಯೇ ಎಲ್ಲ ದಿಕ್ಕುಗಳಲ್ಲಿಯೂ ಅನೇಕ ಅಪಶಕುನಗಳು ಉಂಟಾದವು. ತೀವ್ರವಾದ ಧೂಳು ಎಲ್ಲ ಕಡೆಯಲ್ಲಿಯೂ ಆವರಿಸಿತು. ಯಾವುದೂ ಕಣ್ಣಿಗೆ ಕಾಣಲಿಲ್ಲ.
ಧ್ವಜಾನಾಂ ಧೂಯಮಾನಾನಾಂ ಸಹಸಾ ಮಾತರಿಶ್ವನಾ |
ಕಿಂಕಿಣೀಜಾಲನದ್ಧಾನಾಂ ಕಾಂಚನಸ್ರಗ್ವತಾಂ ರವೈಃ ॥43॥
ಮಹತಾಂ ಸಪತಾಕಾನಾಮಾದಿತ್ಯಸಮತೇಜಸಾಮ್ |
ಸರ್ವಂ ಝಣಝಣೀಭೂತಮಾಸೀತ್ ತಾಳವನೇಷ್ವಿವ ॥44॥
ವಾಯುವಿನಿಂದ ಪುನಃ ಪುನಃ ಅಲುಗಾಡಿಸಲ್ಪಟ್ಟ ಧ್ವಜಗಳ ಕಿಂಕಿಣೀಜಾಲಗಳ ಮತ್ತು ಕಾಂಚನಮಯವಾದ ಮಾಲೆಗಳ ಶಬ್ದದಿಂದಲೂ ಹಾಗೆಯೇ ಆದಿತ್ಯನಿಗೆ ಸಮಾನವಾದ ಕಾಂತಿಯುಳ್ಳ ದೊಡ್ಡ ದೊಡ್ಡ ಪತಾಕೆಗಳ ಶಬ್ದದಿಂದಲೂ ತಾಳವನದಲ್ಲಿಯೋ ಎಂಬಂತೆ ಎಲ್ಲವೂ ಝಣಝಣ ಶಬ್ದದಿಂದ ಕೂಡಿದ್ದಿತು.
ಏವಂ ತೇ ಪುರುಷವ್ಯಾಘ್ರಾಃ ಪಾಂಡವಾ ಯುದ್ಧನಂದಿನಃ |
ವ್ಯವಸ್ಥಿತಾಃ ಪ್ರತಿವ್ಯೂಹ್ಯ ತವ ಪುತ್ರಸ್ಯ ವಾಹಿನೀಮ್ ॥45॥
ಹೀಗೆ ಪುರುಷವ್ಯಾಘ್ರರೂ ಯುದ್ಧಾಕಾಂಕ್ಷಿಗಳೂ ಆದ ಪಾಂಡವರು ನಿನ್ನ ಪುತ್ರರ ಸೇನೆಗೆ ಎದುರಾಗಿ ತಮ್ಮ ಸೈನ್ಯವನ್ನು ವ್ಯೂಹ ಮಾಡಿ ನಿಂತರು.
ಸ್ರಂಸಂತ ಇವ ಚಾಕ್ಷೀಣಿ ಯೋಧಾನಾಂ ಭರತರ್ಷಭ |
ದೃಷ್ಟ್ವಾಗ್ರತೋ ಭೀಮಸೇನಂ ಗದಾಪಾಣಿಮವಸ್ಥಿತಮ್ ॥46॥
ಎಲೈ ಭರತರ್ಷಭನೇ, ಸೈನ್ಯದ ಮುಂಭಾಗದಲ್ಲಿ ಗದೆಯನ್ನು ಹಿಡಿದು ನಿಂತ ಭೀಮಸೇನನನ್ನು ನೋಡಿ ಕೌರವ ಯೋಧರ ಕಣ್ಣುಗಳೇ ಬಿದ್ದುಹೋದಂತಾದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಕುರುಸೇನೆಯು ಸಜ್ಜುಗೊಂಡ ಪ್ರಕಾರದ ಕಥನ.
ಧೃತರಾಷ್ಟ್ರಃ
ಸೂರ್ಯೋದಯೇ ಸಂಜಯ ಕೇ ನು ಪೂರ್ವಂ
ಯಯುತ್ಸವೋ ಹೃಷ್ಯಮಾಣಾ ಇವಾಸನ್ |
ಮಾಮಕಾ ವಾ ಭೀಷ್ಮನೇತ್ರಾಃ ಸಮೀಕೇ
ಪಾಂಡವಾ ವಾ ಭೀಮನೇತ್ರಾಸ್ತದಾನೀಮ್ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ಸೂರ್ಯೋದಯದ ಸಮಯದಲ್ಲಿ ಯಾರು ಮೊದಲು ಹರ್ಷಗೊಂಡರು? ಯುದ್ಧದಲ್ಲಿ ಭೀಷ್ಮರನ್ನು ನಾಯಕನಾಗಿ ಉಳ್ಳ ನನ್ನ ಯೋಧರೇ? ಅಥವಾ ಭೀಮಸೇನನನ್ನು ನಾಯಕನಾಗಿ ಉಳ್ಳ ಪಾಂಡವರೇ?
ಕೇಷಾಂ ಜಘನ್ಯೌ ಸೋಮಸೂರ್ಯೌ ಸವಾಯೂ
ಕೇಷಾಂ ಸೇನಾಂ ಶ್ವಾಪದಾ ವ್ಯಾಭಷಂತ |
ಕೇಷಾಂ ಯೂನಾಂ ಮುಖವರ್ಣಾಃ ಪ್ರಸನ್ನಾಃ
ಸರ್ವಂ ತತ್ ತ್ವಂ ಬ್ರೂಹಿ ತತ್ತ್ವಂ ಯಥಾವತ್ ॥2॥
ಯಾರ ಸೈನ್ಯಕ್ಕೆ ಹಿಂಭಾಗದಲ್ಲಿ ಚಂದ್ರ-ಸೂರ್ಯ ಮತ್ತು ವಾಯುಗಳಿದ್ದರು? (ಹಿಂಭಾಗದಲ್ಲಿರುವ ಚಂದ್ರ-ಸೂರ್ಯರು ಉತ್ತೇಜನವನ್ನು ಕೊಟ್ಟು ತ್ವರೆ ಮಾಡುತ್ತಾರೆ. ಮುಂಭಾಗದಲ್ಲಿದ್ದರೆ ಪ್ರತಿಷೇಧ ಮಾಡುತ್ತಾರೆ). ಯಾರ ಸೈನ್ಯವನ್ನು ಕುರಿತು ನಾಯಿಗಳು ಬೊಗಳಿದವು? ಯಾವ ಯುವಕರ ಮುಖಗಳು ಪ್ರಸನ್ನ ವರ್ಣಗಳಿಂದ ಕೂಡಿದ್ದವು? ಈ ಎಲ್ಲ ತತ್ವವನ್ನೂ ನನಗೆ ನೀನು ಸರಿಯಾಗಿ ಹೇಳು.
ಸಂಜಯಃ
ಉಭೇ ಸೇನೇ ತುಲ್ಯಮಿವೋಪಯಾತೇ
ಉಭೇ ವ್ಯೂಹೇ ಹೃಷ್ಟರೂಪೇ ನರೇಂದ್ರ |

ಉಭೇ ಚಿತ್ರೇ ವನರಾಶಿಪ್ರಕಾಶೇ
ತಥೈವೋಭೇ ನಾಗರಥಾಶ್ವಪೂರ್ಣೇ ॥3॥
ಸಂಜಯ ಎರಡು ಸೈನ್ಯಗಳೂ ಸಮಾನವಾದಂತೆಯೇ ಯುದ್ಧಭೂಮಿಗೆ ಬಂದವು. ಎಲೈ ನರೇಂದ್ರನೇ, ಎರಡು ವ್ಯೂಹಗಳೂ ಸಂತೋಷಗೊಂಡಿದ್ದವು. ಎರಡು ಸೈನ್ಯಗಳೂ ಸಾಗರದಂತೆ ವಿಚಿತ್ರವಾಗಿ ತೋರುತ್ತಿದ್ದವು ಮತ್ತು ಎರಡು ಸೈನ್ಯಗಳೂ ಅಶ್ವ, ಗಜ, ರಥಗಳಿಂದ ಪೂರ್ಣವಾಗಿದ್ದವು.
ಉಭೇ ಸೇನೇ ಬೃಹತೀ ಭೀಮರೂಪೇ
ತಥೈವೋಭೇ ಭಾರತ ದುರ್ವಿಷಹ್ಯೇ ॥
ತಥೈವೋಭೇ ಸ್ವರ್ಗಜಯಾಯ ಸೃಷ್ಟೇ
ತಥಾ ಹ್ಯುಭೇ ಸತ್ಪುರುಷಾರ್ಥಗುಪ್ತೇ ॥4॥
ಎರಡು ಸೈನ್ಯಗಳೂ ದೊಡ್ಡದಾಗಿ ಭಯಂಕರವಾಗಿದ್ದವು. ಎಲೈ ಭಾರತನೇ, ಹಾಗೆಯೇ ಎರಡು ಸೈನ್ಯಗಳೂ ಸಹಿಸಲು ಅಸಾಧ್ಯವಾಗಿದ್ದವು. ಎರಡು ಸೈನ್ಯಗಳೂ ಸ್ವರ್ಗವನ್ನು ಜಯಿಸುವುದಕ್ಕೆ ಸೃಷ್ಟವಾಗಿದ್ದವು ಮತ್ತು ಎರಡು ಸೈನ್ಯಗಳೂ ಒಳ್ಳೆಯ ಪುರುಷಾರ್ಥದ ದೃಷ್ಟಿಯಿಂದ ರಕ್ಷಿತವಾಗಿದ್ದವು.
ಪಶ್ಚಾನ್ಮುಖಾಃ ಕುರವೋ ಧಾರ್ತರಾಷ್ಟ್ರಾಃ
ಸ್ಥಿತಾಃ ಪಾರ್ಥಾಃ ಪ್ರಾಙ್ಮುಖಾಃ ಯೋತ್ಸ್ಯಮಾನಾಃ ।
ದೈತ್ಯೇಂದ್ರಸೇನೇವ ಚ ಕೌರವಾಣಾಂ
ದೇವೇಂದ್ರಸೇನೇವ ಚ ಪಾಂಡವಾನಾಮ್ ॥5॥
ಯುದ್ಧವನ್ನು ಮಾಡಲಿರುವ ಧೃತರಾಷ್ಟ್ರಪುತ್ರರಾದ ಕುರುಗಳು ಪಶ್ಚಿಮಾಭಿಮುಖವಾಗಿಯೂ ಪಾಂಡವರು ಪೂರ್ವಾಭಿಮುಖವಾಗಿಯೂ ನಿಂತರು. ಕೌರವರ ಸೈನ್ಯವು ದೈತ್ಯೇಂದ್ರರ ಸೇನೆಯಂತೆಯೂ, ಪಾಂಡವರ ಸೈನ್ಯವು ದೇವೇಂದ್ರನ ಸೈನ್ಯದಂತೆಯೂ ತೋರುತ್ತಿದ್ದಿತು.
ಶುಕ್ರೋ ವಾಯುಃ ಪೃಷ್ಠತಃ ಪಾಂಡವಾನಾಂ
ಧಾರ್ತರಾಷ್ಟ್ರಾನ್ ಶ್ವಾಪದಾ ವ್ಯಾಭಷಂತ ।
ಗಜೇಂದ್ರಾಣಾಂ ಮದಗಂಧಾಂಶ್ಚ ತೀವ್ರಾನ್
ನ ಸೇಹಿರೇ ತವ ಪುತ್ರಸ್ಯ ನಾಗಾಃ ॥6॥
ಶುಕ್ರ ಮತ್ತು ವಾಯುಗಳು ಪಾಂಡವರ ಸೈನ್ಯದ ಹಿಂಭಾಗದಲ್ಲಿದ್ದವು. ದುರ್ಯೋಧನಾದಿಗಳನ್ನು ಕುರಿತು ನಾಯಿಗಳು ಬೊಗಳಿದವು. ಪಾಂಡವರ ಸೈನ್ಯದ ಶ್ರೇಷ್ಠ ಗಜಗಳ ಮದದ ಗಂಧವನ್ನು ನಿನ್ನ ಮಗನ ಗಜಗಳು ಸಹಿಸಲಿಲ್ಲ.
ದುರ್ಯೋಧನೋ ಹಸ್ತಿನಂ ಪದ್ಮವರ್ಣಂ
ಸುವರ್ಣಕಕ್ಷಂ ಜಾತಿಬಲಂ ಪ್ರಭಿನ್ನಮ್ ।
ಸಮಾಸ್ಥಿತೋ ಮಧ್ಯಗತಃ ಕುರೂಣಾಂ
ಸಂಸ್ತೂಯಮಾನೋ ಬಂದಿಭಿರ್ಮಾಗಧೈಶ್ಚ ॥7॥
ದುರ್ಯೋಧನನು ಚಿನ್ನದ ಸರಪಣಿಗಳಿಂದ ಕೂಡಿದ ಒಳ್ಳೆಯ ಜಾತಿಯ ಮದಿಸಿದ ಪದ್ಮವರ್ಣದ ಆನೆಯನ್ನು ಏರಿ ಕುರುಗಳ ಮಧ್ಯದಲ್ಲಿ ವಂದಿ-ಮಾಗಧರಿಂದ ಸ್ತೋತ್ರ ಮಾಡಲ್ಪಟ್ಟು ಸಿದ್ಧನಾಗಿದ್ದನು.
ಚಂದ್ರಪ್ರಭಂ ಶ್ವೇತಮಸ್ಯಾತಪತ್ರಂ
ಸೌವರ್ಣೀ ಸ್ರಗ್ ಭ್ರಾಜತೇ ಚೋತ್ತಮಾಂಗೇ ।
ತಂ ಸರ್ವತಃ ಶಕುನಿಃ ಪಾರ್ವತೀಯೈಃ
ಸಾರ್ಧಂ ಗಾಂಧಾರ್ಯೈಃ ಪಾತಿ ಗಾಂಧಾರರಾಜಃ ॥8॥
ಚಂದ್ರಕಾಂತಿಯುಳ್ಳ ಶ್ವೇತಚ್ಛತ್ರವು ಅವನ ಶಿರಸ್ಸಿನ ಮೇಲೆ ಇದ್ದಿತು. ಅವನ ತಲೆಯ ಮೇಲೆ ಸುವರ್ಣಮಯವಾದ ಮಾಲೆಯು ಹೊಳೆಯುತ್ತಿದ್ದಿತು. ಪರ್ವತ ರಾಜರುಗಳಿಂದ ಕೂಡಿದ ಗಾಂಧಾರ ರಾಜನಾದ ಶಕುನಿಯು ಗಾಂಧಾರ ಯೋಧರಿಂದ ಕೂಡಿಕೊಂಡು ಅವನನ್ನು ಎಲ್ಲ ಕಡೆಯಲ್ಲಿಯೂ ರಕ್ಷಿಸುತ್ತಿದ್ದನು.
ಭೀಷ್ಮೋಽಗ್ರತಃ ಸರ್ವಸೈನ್ಯಸ್ಯ ವೃದ್ಧಃ
ಶ್ವೇತಚ್ಛತ್ರಃ ಶ್ವೇತಧನುಃ ಸಶಂಖಃ ।
ಶ್ವೇತೋಷ್ಣೀಷಃ ಪಾಂಡರೇಣ ಧ್ವಜೇನ
ಶ್ವೇತೈರಶ್ವೈಃ ಶ್ವೇತಶೈಲಪ್ರಕಾಶಃ ॥9॥
ವೃದ್ಧರೂ, ಶ್ವೇತಚ್ಛತ್ರ ಉಳ್ಳವರೂ, ಶ್ವೇತಧನುಸ್ಸನ್ನೂ, ಶ್ವೇತವಾದ ಶಂಖವನ್ನೂ, ಶ್ವೇತವಾದ ರುಮಾಲನ್ನೂ, ಶ್ವೇತವಾದ ಧ್ವಜವನ್ನೂ, ಶ್ವೇತವಾದ ಅಶ್ವಗಳನ್ನೂ ಹೊಂದಿ ಶ್ವೇತ ಪರ್ವತದಂತಿದ್ದವರೂ ಆದ ಭೀಷ್ಮರು ಸರ್ವಸೈನ್ಯದ ಮುಂಭಾಗದಲ್ಲಿದ್ದರು.
ತಸ್ಯ ಸೈನ್ಯಂ ಧಾರ್ತರಾಷ್ಟ್ರಾಶ್ಚ ಸರ್ವೇ
ಬಾಹ್ಲೀಕಾನಾಮೇಕದೇಶಃ ಶಲಶ್ಚ ।
ಯೇ ಚಾಂಬಷ್ಠಾಃ ಕ್ಷತ್ರಿಯಾ ಯೇ ಚ ಸಿಂಧೌ
ತಥಾ ಸೌವೀರಾಃ ಪಂಚನದಾಶ್ಚ ಶೂರಾಃ ॥10॥
ಅವರ ಸೈನ್ಯವೆಂದರೆ ಎಲ್ಲಾ ಧೃತರಾಷ್ಟ್ರ ಪುತ್ರರು, ಬಾಹ್ಲೀಕ ಸೈನ್ಯದ ಒಂದು ಭಾಗ, ಶಲ, ಅಂಬಷ್ಠರು, ಸಿಂಧುದೇಶದ ಕ್ಷತ್ರಿಯರು, ಸೌವೀರರು ಮತ್ತು ಪಂಚನದದ ಶೂರರು.

ಶೋಣೈರ್ಹಯೈ ರುಗ್ಮರಥೋ ಮಹಾತ್ಮಾ
ದ್ರೋಣೋ ಮಹಾಬಾಹುರದೀನಸತ್ತ್ವಃ |
ಆಸ್ತೇ ಗುರುಃ ಪ್ರಾಯಶಃ ಸರ್ವರಾಜ್ಞಾಂ
ಪಶ್ಚಾಚ್ಚಮೂಮಿಂದ್ರ ಇವಾಭಿರಕ್ಷನ್ ॥11॥
ಮಹಾಬಾಹುಗಳಾದ, ಧೈರ್ಯಶಾಲಿಗಳಾದ, ಮಹಾತ್ಮರಾದ ದ್ರೋಣರು ಕೆಂಪುಬಣ್ಣದ ಕುದುರೆಗಳನ್ನು ಹೂಡಿದ ಸುವರ್ಣರಥದಲ್ಲಿ ಇದ್ದರು. ಎಲ್ಲ ರಾಜರುಗಳಿಗೂ ಗುರುವಾದ, ಮಹಾಕೀರ್ತಿವಂತರಾದ ಅವರು ಹಿಂದಿನಿಂದ ಸೈನ್ಯವನ್ನು ರಕ್ಷಿಸುತ್ತಾ ಇಂದ್ರನಂತೆ ಇದ್ದರು.
ವಾರ್ದ್ಧಕ್ಷತ್ರಿಃ ಸರ್ವಸೈನ್ಯಸ್ಯ ಮಧ್ಯೇ
ಭೂರಿಶ್ರವಾಃ ಪುರುಮಿತ್ರೋ ಜಯಶ್ಚ |
ಸಾಲ್ವಾ ಮಾತ್ಸ್ಯಾಃ ಕೇಕಯಾಶ್ಚಾಪಿ ಸರ್ವೇ
ಗಜಾನೀಕೈರ್ಭ್ರಾತರೋ ಯೋತ್ಸ್ಯಮಾನಾಃ ॥12॥
ಎಲ್ಲಾ ಸೈನ್ಯದ ಮಧ್ಯಭಾಗದಲ್ಲಿ ವಾರ್ದ್ಧಕ್ಷತ್ರಿ (ಜಯದ್ರಥ), ಭೂರಿಶ್ರವ, ಪುರುಮಿತ್ರ, ಜಯ, ಸಾಲ್ವರು, ಮತ್ಸ್ಯರು ಮತ್ತು ಗಜಾನೀಕಗಳಿಂದ ಹೋರಾಡಲಿರುವ ಎಲ್ಲಾ ಕೇಕಯ ಸಹೋದರರೂ ಇದ್ದರು.
ಶಾರದ್ವತಶ್ಚೋತ್ತರಧೂರ್ಮಹಾತ್ಮಾ
ಮಹೇಷ್ವಾಸೋ ಗೌತಮಶ್ಚಿತ್ರಯೋಧೀ |
ಶಕೈಃ ಕಿರಾತೈರ್ಯವನೈಃ ಪಲ್ಹವೈಶ್ಚ
ಸಾರ್ಧಂ ಚಮೂಮುತ್ತರತೋಽಭಿಪಾತಿ ॥13॥
ಮಹಾತ್ಮರೂ, ಮಹಾಧನುರ್ಧಾರಿಗಳೂ, ಚಿತ್ರಯೋಧಿಗಳೂ ಆದ ಗೌತಮ ಪುತ್ರರಾದ ಶಾರದ್ವತರಾದ ಕೃಪರು ಉತ್ತರ ಭಾಗದಲ್ಲಿ ಸೈನ್ಯದ ಭಾರವನ್ನು ಹೊತ್ತಿದ್ದರು. ಶಕರು, ಕಿರಾತರು, ಯವನರು, ಪಲ್ಲವರು ಇವರಿಂದ ಕೂಡಿ ಉತ್ತರ ಭಾಗದಲ್ಲಿ ಸೈನ್ಯದಲ್ಲಿ ಮುನ್ನಡೆಯುತ್ತಿದ್ದರು.
ಮಹಾರಥೈರಂಧಕವೃಷ್ಣಿಭೋಜೈಃ
ಸೌರಾಷ್ಟ್ರಕೈರ್ನೈರ್ಋತೈರಾತ್ತಶಸ್ತ್ರೈಃ |
ಬೃಹದ್ಬಲಃ ಕೃತವರ್ಮಾಭಿಗುಪ್ತೋ
ಬಲಂ ತ್ವದೀಯಂ ದಕ್ಷಿಣತೋಽಭಿಪಾತಿ ॥14॥
ಮಹಾರಥರಾದ ಅಂಧಕ-ವೃಷ್ಣಿ-ಭೋಜರಿಂದಲೂ ಸೌರಾಷ್ಟ್ರರಿಂದಲೂ, ಶಸ್ತ್ರಧಾರಿಗಳಾದ ರಾಕ್ಷಸರಿಂದಲೂ ಮತ್ತು ಕೃತವರ್ಮನಿಂದಲೂ ಚೆನ್ನಾಗಿ ರಕ್ಷಿತನಾದ ಬೃಹದ್ಬಲನು ನಿನ್ನ ಸೈನ್ಯದ ದಕ್ಷಿಣ ಭಾಗದಲ್ಲಿ ಮುಂದೆ ಸಾಗಿದನು.
ಸಂಶಪ್ತಕಾನಾಮಯುತಂ ರಥಾನಾಂ
ಮೃತ್ಯುರ್ಜಯೋ ವಾರ್ಜುನಸ್ಯೇತಿ ಸೃಷ್ಟಾಃ |
ಯೇನಾರ್ಜುನಸ್ತೇನ ರಾಜನ್ ಕೃತಾಸ್ತ್ರಾಃ
ಪ್ರಯಾತಾ ವೈ ತೇ ತ್ರಿಗರ್ತಾಶ್ಚ ಶೂರಾಃ ॥15॥
ಸಂಶಪ್ತಕರ ಒಂದು ಲಕ್ಷ ರಥಗಳು ಅರ್ಜುನನ ಮೇಲೆ ಜಯ ಅಥವಾ ನಮ್ಮ ಮೃತ್ಯು ಎಂಬ ಸಂಕಲ್ಪವುಳ್ಳವರಾಗಿ ಅಸ್ತ್ರಪಾರಂಗತರಾದ ಅವರು ಅರ್ಜುನನು ನಡೆದ ಮಾರ್ಗದಲ್ಲಿಯೇ ನಡೆದರು. ಎಲೈ ರಾಜನೇ, ತ್ರಿಗರ್ತ ದೇಶದ ಶೂರರು ಹಾಗೆಯೇ ಮಾಡಿದರು.
ಸಾಗ್ರಂ ಶತಸಹಸ್ರಂ ತು ನಾಗಾನಾಂ ತವ ಭಾರತ |
ನಾಗೇ ನಾಗೇ ರಥಶತಂ ಶತಂ ಚಾಶ್ವಾ ರಥೇ ರಥೇ ॥16॥
ಅಶ್ವೇಽಶ್ವೇ ದಶ ಧಾನುಷ್ಕಾ ಧಾನುಷ್ಕೇ ದಶ ಚರ್ಮಿಣಃ |
ಏವಂ ವ್ಯೂಢಾನ್ಯನೀಕಾನಿ ಭೀಷ್ಮೇಣ ತವ ಭಾರತ ॥17॥
ಎಲೈ ಭಾರತನೇ, ನಿನ್ನ ಸೈನ್ಯದಲ್ಲಿ ಒಂದು ಲಕ್ಷಕ್ಕೂ ಮೇಲ್ಪಟ್ಟು ಗಜಗಳು, ಪ್ರತಿ ಗಜಕ್ಕೂ ನೂರು ರಥಗಳು, ಪ್ರತಿ ರಥಕ್ಕೂ ನೂರು ಅಶ್ವಗಳು, ಪ್ರತಿ ಅಶ್ವಕ್ಕೂ ಹತ್ತು ಧನುರ್ಧಾರಿಗಳು, ಪ್ರತಿ ಧನುರ್ಧಾರಿಗೂ ಹತ್ತು ಚರ್ಮ (ಗುರಾಣಿ) ಧಾರಿಗಳು ಇರುವಂತೆ ಭೀಷ್ಮರು ನಿನ್ನ ಸೈನ್ಯವನ್ನು ವ್ಯೂಹ ಮಾಡಿದರು.
ಅವ್ಯೂಹನ್ ಮಾನುಷಂ ವ್ಯೂಹಂ ದೈವಂ ಗಾಂಧರ್ವಮಾಸುರಮ್ |
ದಿವಸೇ ದಿವಸೇ ಪ್ರಾಪ್ತೇ ಭೀಷ್ಮಃ ಶಾಂತನವೋಽಗ್ರಣೀಃ ॥18॥
ನಾಯಕರೂ, ಶಂತನು ಪುತ್ರರೂ ಆದ, ಮಾನುಷ-ದೈವ-ಗಾಂಧರ್ವ ಮತ್ತು ಆಸುರವ್ಯೂಹಗಳನ್ನು ತಿಳಿದ ಭೀಷ್ಮರು ಪ್ರತಿ ದಿವಸದಲ್ಲಿಯೂ ಬೇರೆ ಬೇರೆ ವ್ಯೂಹಗಳನ್ನು ರಚಿಸಿದ್ದರು.
ಮಹಾರಥೌಘವಿಪುಲಃ ಸಮುದ್ರ ಇವ ಪರ್ವಣಿ |
ಭೀಷ್ಮೇಣ ಧಾರ್ತರಾಷ್ಟ್ರಾಣಾಂ ವ್ಯೂಹಃ ಪ್ರತ್ಯಙ್ಮುಖೋ ಯುಧಿ ॥
ಪರ್ವಕಾಲದ ಸಮುದ್ರದಂತೆ ಮಹಾರಥಗಳ ಸಮುದ್ರದಿಂದ ವಿಸ್ತಾರವಾದ, ಭೀಷ್ಮರು ರಚಿಸಿದ ದುರ್ಯೋಧನಾದಿಗಳ ವ್ಯೂಹವು, ಯುದ್ಧದಲ್ಲಿ ಪಶ್ಚಿಮಾಭಿಮುಖವಾಗಿದ್ದಿತು.
ಅನಂತರೂಪಾ ಧ್ವಜಿನೀ ತ್ವದೀಯಾ
ನರೇಂದ್ರ ಭೀಮಾ ನ ತು ಪಾಂಡವಾನಾಮ್ |

ತಾಂ ತ್ವೇವ ಮನ್ಯೇ ಬೃಹತೀಂ ದುಷ್ಪ್ರಧೃಷ್ಯಾಂ
ಯಸ್ಯಾ ನೇತಾರೌ ಕೇಶವಶ್ಚಾರ್ಜುನಶ್ಚ ॥20॥
ಎಲೈ ನರೇಂದ್ರನೇ, ನಿನ್ನ ಸೈನ್ಯವು ಕೊನೆಯೇ ಕಾಣದೇ ಭಯಂಕರವಾಗಿದ್ದಿತು. ಆದರೆ ಪಾಂಡವರ ಸೈನ್ಯವು (ಚಿಕ್ಕದಾದುದರಿಂದ) ಹಾಗಿರಲಿಲ್ಲ. ಆದರೆ ನಾನು, ಯಾವ ಸೈನ್ಯಕ್ಕೆ ಕೇಶವಾರ್ಜುನರು ನಾಯಕರಾಗಿದ್ದಾರೆಯೋ ಅಂತಹ ಪಾಂಡವರ ಸೈನ್ಯವನ್ನೇ ಸೋಲಿಸಲು ಅಸಾಧ್ಯವಾದುದು ಮತ್ತು ದೊಡ್ಡದಾದುದು ಎಂದು ತಿಳಿಯುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ಕೌರವಸೇನೆಯನ್ನು ನೋಡಿ ಚಕಿತನಾದ ಯುಧಿಷ್ಠಿರನಿಗೆ
ಅರ್ಜುನನ ಸಮಾಧಾನಕರ ವಚನಗಳು.
ಸಂಜಯಃ
ಬೃಹತೀಂ ಧಾರ್ತರಾಷ್ಟ್ರಾಣಾಂ ದೃಷ್ಟ್ವಾ ಸೇನಾಂ ಸಮುದ್ಯತಾಮ್ ।
ವಿಷಾದಮಗಮದ್ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ॥1॥
ಸಂಜಯ ಕುಂತೀಪುತ್ರನಾದ ಯುಧಿಷ್ಠಿರ ರಾಜನು ದುರ್ಯೋಧನನ ಬೃಹತ್ತಾದ ಸೇನೆಯು ಉದ್ಯುಕ್ತವಾದುದನ್ನು ನೋಡಿ ವಿಷಾದವನ್ನು ಹೊಂದಿದನು.
ವ್ಯೂಹಂ ಭೀಷ್ಮೇಣ ಚಾಭೇದ್ಯಂ ಕಲ್ಪಿತಂ ಪ್ರೇಕ್ಷ್ಯ ಪಾಂಡವಃ ।
ಅಭೇದ್ಯಮಿವ ಸಂಪ್ರೇಕ್ಷ್ಯ ವಿಷಣ್ಣೋಽರ್ಜುನಮಬ್ರವೀತ್ ॥2॥
ಭೀಷ್ಮರಿಂದ ರಚಿತವಾದ ಅಭೇದ್ಯವಾದ ವ್ಯೂಹವನ್ನು ನೋಡಿ, ಅದನ್ನು ಅಭೇದ್ಯವೆಂದು ತಿಳಿದು ಅರ್ಜುನನನ್ನು ಕುರಿತು ವಿಷಾದದಿಂದ ಮಾತನಾಡಿದನು.
ಧನಂಜಯ ಕಥಂ ಶಕ್ಯಮಸ್ಮಾಭಿರ್ಯೋದ್ಧುಮಾಹವೇ ।
ಧಾರ್ತರಾಷ್ಟ್ರೈರ್ಮಹಾಬಾಹೋ ಯೇಷಾಂ ಯೋದ್ಧಾ ಪಿತಾಮಹಃ ॥
ಮಹಾಬಾಹುವಾದ ಎಲೈ ಧನಂಜಯನೇ, ಯಾವ ದುರ್ಯೋಧನಾದಿಗಳಿಗೆ ಪಿತಾಮಹರಾದ ಭೀಷ್ಮರು ಯೋಧರಾಗಿದ್ದಾರೆಯೋ, ಅಂತಹ ಸುಯೋಧನಾದಿಗಳ ಜೊತೆಯಲ್ಲಿ ನಾವು ಹೇಗೆ ಯುದ್ಧವನ್ನು ಮಾಡಲು ಸಾಧ್ಯ?
ಅಕ್ಷೋಭ್ಯೋಽಯಮಭೇದ್ಯಶ್ಚ ಭೀಷ್ಮೇಣಾಮಿತ್ರಕರ್ಶಿನಾ ।
ಕಲ್ಪಿತಃ ಶಾಸ್ತ್ರದೃಷ್ಟೇನ ವಿಧಿನಾ ಭೂರಿತೇಜಸಾ ॥4॥
ಮಹಾತೇಜಸ್ವಿಗಳಾದ, ಶತ್ರುಸಂಹಾರಕರಾದ ಭೀಷ್ಮರು ಶಾಸ್ತ್ರದೃಷ್ಟಿಯಿಂದ ರಚಿಸಿರುವ ಈ ವ್ಯೂಹವು ಅಲುಗಾಡಿಸಲು ಅಥವಾ ಭೇದಿಸಲು ಅಸಾಧ್ಯವಾದುದು.
ತೇ ವಯಂ ಸಂಶಯಂ ಪ್ರಾಪ್ತಾಃ ಸಸೈನ್ಯಾ ಶತ್ರುಕರ್ಶನ ।
ಕಥಮಸ್ಮಾತ್ ಮಹಾವ್ಯೂಹಾದುದ್ಯಾನಂ ನೋ ಭವಿಷ್ಯತಿ ॥5॥
ಎಲೈ ಶತ್ರುಕರ್ಶನನೇ, ಈ ದೊಡ್ಡ ವ್ಯೂಹದಿಂದ ನಾವು ಹೇಗೆ ಪಾರಾಗುವೆವು ಎಂದು ನಮಗೆ ಸಂಶಯವುಂಟಾಗಿದೆ.
ಸಂಜಯಃ
ಅಥಾರ್ಜುನೋಽಬ್ರವೀದ್ ಪಾರ್ಥಂ ಯುಧಿಷ್ಠಿರಮಮಿತ್ರಹಾ ।
ವಿಷಣ್ಣಮಭಿಸಂಪ್ರೇಕ್ಷ್ಯ ತವ ರಾಜನ್ನನೀಕಿನೀಮ್ ॥6॥
ಸಂಜಯ ಎಲೈ ರಾಜನೇ, ಅನಂತರ ನಿಮ್ಮ ಸೈನ್ಯವನ್ನು ನೋಡಿ ವಿಷಣ್ಣನಾದ ಯುಧಿಷ್ಠಿರನನ್ನು ಕುರಿತು ಶತ್ರುಸಂಹಾರಕನಾದ ಅರ್ಜುನನು ಮಾತನಾಡಿದನು.
ಪ್ರಜ್ಞಯಾಭ್ಯಧಿಕಾನ್ ಶೂರಾನ್ ಗುಣಯುಕ್ತಾನ್ ಬಹೂನಪಿ ।
ಜಯಂತ್ಯಲ್ಪತರಾ ಯೇನ ತನ್ನಿಬೋಧ ವಿಶಾಂಪತೇ ॥7॥
ಎಲೈ ರಾಜನೇ, ಪ್ರಜ್ಞೆಯಿಂದ ಅಧಿಕರಾದ ಶೂರರೂ, ಗುಣನಿಯುಕ್ತರೂ ಆದ ಅಲ್ಪತರ ಸೈನ್ಯವುಳ್ಳವರು ಬಹುಸೈನ್ಯವನ್ನು ಹೇಗೆ ಜಯಿಸುತ್ತಾರೆ ಎಂಬುದನ್ನು ಕೇಳು.
ತತ್ತು ತೇ ಕಾರಣಂ ರಾಜನ್ ಪ್ರವಕ್ಷ್ಯಾಮ್ಯನಸೂಯವೇ ।
ನಾರದಸ್ತಮೃಷಿರ್ವೇದ ಭೀಷ್ಮದ್ರೋಣೌ ಚ ಪಾಂಡವ ॥8॥
ಎಲೈ ರಾಜನೇ, ಅಸೂಯಾರಹಿತನಾದ ನಿನಗೆ ಅಂತಹ ಜಯಕ್ಕೆ ಕಾರಣವನ್ನು ಹೇಳುವೆನು. ಎಲೈ ಪಾಂಡವನೇ, ಅದನ್ನು ನಾರದಋಷಿಗಳೂ ಮತ್ತು ಭೀಷ್ಮ-ದ್ರೋಣರೂ ತಿಳಿದಿದ್ದಾರೆ.
ಏತಮೇವಾರ್ಥಮಾಶ್ರಿತ್ಯ ಯುದ್ಧೇ ದೇವಾಸುರೇಽಬ್ರವೀತ್ ।
ಪಿತಾಮಹಃ ಕಿಲ ಪುರಾ ಮಹೇಂದ್ರಾದೀನ್ ದಿವೌಕಸಃ ॥9॥
ಹಿಂದೆ ದೇವಾಸುರಯುದ್ಧದಲ್ಲಿ ಪಿತಾಮಹರಾದ ಬ್ರಹ್ಮದೇವರು ಇದೇ ವಿಷಯದಲ್ಲಿ ಮಹೇಂದ್ರ ಮೊದಲಾದ ದೇವತೆಗಳನ್ನು ಕುರಿತು ಮಾತನಾಡಿದರು.
ನ ತಥಾ ಬಲವೀರ್ಯಾಭ್ಯಾಂ ವಿಜಯಂತೇ ಜಿಗೀಷವಃ ।

ಯಥಾ ಸತ್ಯಾನೃಶಂಸಾಭ್ಯಾಂ ಧರ್ಮೇಣೈವೋದ್ಯಮೇನ ಚ ॥10॥
ಸತ್ಯ, ಮಾರ್ದವ, ಧರ್ಮ ಮತ್ತು ಪ್ರಯತ್ನಗಳಿಂದ ಎಂತಹ ಜಯವನ್ನು ಸಾಧಿಸಬಹುದೋ ಅಂತಹ ಜಯವನ್ನು ಹೊಂದಲು ಇಚ್ಛಿಸುವವರು ಕೇವಲ ಬಲ-ವೀರ್ಯಗಳಿಂದ ಸಾಧಿಸುವುದಿಲ್ಲ.
ತ್ಯಕ್ತ್ವಾಽಧರ್ಮಂ ಚ ಲೋಭಂ ಚ ಮೋಹಂ ಚೋದ್ಯಮಮಾಸ್ಥಿತಾಃ।
ಯುಧ್ಯಧ್ವಮನಹಂಕಾರಾ ಯತೋ ಧರ್ಮಸ್ತತೋ ಜಯಃ ॥11॥
ಅಧರ್ಮವನ್ನೂ, ಲೋಭವನ್ನೂ ತ್ಯಜಿಸಿ ಅಹಂಕಾರವನ್ನು ಬಿಟ್ಟು ಪ್ರಯತ್ನಶೀಲರಾಗಿ ಯುದ್ಧವನ್ನು ಮಾಡಿ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವು ಉಂಟಾಗುತ್ತದೆ.
ಯತ್ರ ಕೃಷ್ಣಶ್ಚ ವೇದಾತ್ಮಾ ಸರ್ವಸರ್ವೇಶ್ವರೋ ಹರಿಃ।
ಜಯಸ್ತತ್ರ ಮಹಾಬಾಹೋ ಯಥಾ ಮೇ ಪ್ರಾಹ ನಾರದಃ ॥12॥
ಎಲೈ ಮಹಾಬಾಹುವಾದ ಯುಧಿಷ್ಠಿರನೇ, ಎಲ್ಲಿ ಸಕಲ ವೇದಸ್ವಾಮಿಯಾದ, ಸರ್ವಸರ್ವೇಶ್ವರನಾದ ಹರಿಯಾದ ಕೃಷ್ಣನು ಇರುವನೋ ಅಲ್ಲಿಯೇ ಜಯವೆಂದು ನನಗೆ ನಾರದರು ಹೇಳಿದ್ದಾರೆ.
ಏವಂ ರಾಜನ್ ವಿಜಾನೀಹಿ ಧ್ರುವೋಽಸ್ಮಾಕಂ ರಣೇ ಜಯಃ।
ಯಥಾ ಮೇ ನಾರದಃ ಪ್ರಾಹ ಯತಃ ಕೃಷ್ಣಸ್ತತೋ ಜಯಃ ॥13॥
ಎಲೈ ರಾಜನೇ, ಈ ರೀತಿಯಾಗಿ ನಮಗೆ ಜಯವು ನಿಶ್ಚಿತವಾದುದೆಂದು ತಿಳಿ. ನಾರದರು ನನಗೆ ಹೇಳಿದಂತೆ ಎಲ್ಲಿ ಕೃಷ್ಣನಿದ್ದಾನೋ ಅಲ್ಲಿ ಜಯವುಂಟಾಗುತ್ತದೆ.
ಗುಣಭೂತೋ ಜಯಃ ಕೃಷ್ಣೇ ಪೃಷ್ಠತೋಽನ್ವೇತಿ ಮಾಧವಮ್।
ಆಭಿಜಾತಿಜಯಸ್ತಸ್ಯ ಸನ್ನತಿಶ್ಚಾಪರೋ ಗುಣಃ ॥14॥
ಗುಣರೂಪವಾದ ಜಯವು ಮಧುಕುಲದಲ್ಲಿ ಜನಿಸಿದ ಕೃಷ್ಣನು ಎಲ್ಲಿ ಹೋದರೆ ಅಲ್ಲಿ ಅವನನ್ನು ಹಿಂಬಾಲಿಸುತ್ತದೆ. ಜಯವು ಅವನಿಗೆ ಸ್ವಭಾವದಿಂದಲೇ ಸಿದ್ಧವಾದುದು. ಅವನ ವಿನಯವು ಇನ್ನೊಂದು ಗುಣ.
ಅನಂತತೇಜಾ ಗೋವಿಂದಃ ಶತ್ರುಪೂಗೇಷು ನಿರ್ವ್ಯಥಃ।
ಪುರುಷಃ ಸನಾತನತಮೋ ಯತಃ ಕೃಷ್ಣಸ್ತತೋ ಜಯಃ ॥15॥
ಗೋವಿಂದನು ಅನಂತ ಪರಾಕ್ರಮವುಳ್ಳವನು. ಶತ್ರುಸಮೂಹಗಳಿಂದ ಯಾವ ವ್ಯಥೆಯೂ ಇಲ್ಲದೆ ಇರುವವನು. ಅವನು ಅತ್ಯಂತ ಸನಾತನನಾದ ಪುರುಷ. ಎಲ್ಲಿ ಕೃಷ್ಣನೋ ಅಲ್ಲಿ ಜಯವುಂಟಾಗುತ್ತದೆ.
ಪುರಾ ಹ್ಯೇಷ ಹರಿರ್ಭೂತ್ವಾ ವೈಕುಂಠೋಽಕುಂಠಸಾಯಕಃ।
ಸುರಾಸುರಾನವಸ್ಫೂರ್ಜನ್ನಬ್ರವೀತ್ ಕೇ ಜಯಂತ್ವಿತಿ ॥16॥
ಹಿಂದೆ ಕುಂಠಿತವಲ್ಲದ ಬಾಣಗಳುಳ್ಳ ವೈಕುಂಠನಾದ ಹರಿಯಾದ ಇವನು ಸುರಾಸುರರನ್ನು ಉದ್ದೇಶಿಸಿ ಯಾರು ಜಯಿಸಬೇಕು ಎಂದು ಕೇಳಿದನು.
ಅನುಕೃಷ್ಣಂ ಜಯಾಮ ಇತಿ ಯೈರುಕ್ತಂ ತತ್ರ ತೈರ್ಜಿತಮ್।
ತತ್ಪ್ರಸಾದಾದ್ಧಿ ತ್ರೈಲೋಕ್ಯಂ ಪ್ರಾಪ್ತಂ ಶಕ್ರಾದಿಭಿಃ ಸುರೈಃ ॥17॥
ಕೃಷ್ಣನನ್ನು ಅನುಸರಿಸಿ ನಾವು ಗೆಲ್ಲುತ್ತೇವೆ ಎಂದು ಯಾರು ಹೇಳಿದರೋ ಅವರು ಗೆದ್ದರು. ಅವನ ಅನುಗ್ರಹದಿಂದಲೇ ಇಂದ್ರಾದಿ ದೇವತೆಗಳು ತ್ರೈಲೋಕ್ಯವನ್ನು ಪಡೆದರು.
ತಸ್ಯ ತೇ ನ ವ್ಯಥಾಂ ಕಾಂಚಿದಿಹ ಪಶ್ಯಾಮಿ ಭಾರತ।
ಯಸ್ಯ ತೇ ಜಯಮಾಶಾಸ್ತೇ ವಿಶ್ವಭುಕ್ ತ್ರಿದಶೇಶ್ವರಃ ॥18॥
ಎಲೈ ಭಾರತನೇ, ಯಾವ ನಿನಗೆ ವಿಶ್ವಸಂಹಾರಕನೂ, ದೇವತೆಗಳ ಒಡೆಯನೂ ಆದ ಕೃಷ್ಣನು ಜಯವನ್ನು ಆಶಂಸಿಸುತ್ತಾನೆಯೋ ಅಂತಹ ನಿನಗೆ ವ್ಯಥೆಯನ್ನು ಪಡುವುದಕ್ಕೆ ಯಾವ ಕಾರಣವೂ ಇಲ್ಲವೆಂದು ಭಾವಿಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಯುದ್ಧಕ್ಕಾಗಿ ಯುಧಿಷ್ಠಿರಾದಿಗಳ ನಿರ್ಗಮನ. ಸಂಜಯನಿಂದ ಉಭಯ ಸೈನ್ಯಗಳ ಅಭ್ಯುದಯಲಕ್ಷಣಗಳ ಕಥನ.
ಸಂಜಯಃ
ತತೋ ಯುಧಿಷ್ಠಿರೋ ರಾಜಾ ಸ್ವಾಂ ಸೇನಾಂ ಸಮಚೋದಯತ್।
ಪ್ರತಿವ್ಯೂಹನ್ನನೀಕಾನಿ ಭೀಷ್ಮಸ್ಯ ಭರತರ್ಷಭ ॥1॥
ಸಂಜಯ ಎಲೈ ಭರತರ್ಷಭನೇ, ಅನಂತರ ಯುಧಿಷ್ಠಿರನು ಭೀಷ್ಮರ ವ್ಯೂಹಕ್ಕೆ ಎದುರಾಗಿ ತನ್ನ ಸೈನ್ಯಗಳನ್ನು ವ್ಯೂಹ ಮಾಡಿ ಅದನ್ನು ಪ್ರಚೋದಿಸಿದನು.
ಯಥೋದ್ದಿಷ್ಟಾನ್ಯನೀಕಾನಿ ಪ್ರತ್ಯವ್ಯೂಹಂತ ಪಾಂಡವಾಃ।
ಸ್ವರ್ಗಂ ಪರಮಭೀಪ್ಸಂತಃ ಸುಯುದ್ಧೇನ ಕುರೂದ್ವಹಾಃ ॥2॥
ಕುರೂದ್ವಹರಾದ ಪಾಂಡವರು ಒಳ್ಳೆಯ ಯುದ್ಧದಿಂದ ಸ್ವರ್ಗವನ್ನು ಪಡೆಯಲು ಇಚ್ಛಿಸಿ, ಮೊದಲು ಸಂಕಲ್ಪಿಸಿದಂತೆ ಸೈನ್ಯಗಳಿಂದ ಪ್ರತಿವ್ಯೂಹವನ್ನು ರಚಿಸಿದರು.

ಮಧ್ಯೇ ಶಿಖಂಡಿನೋಽನೀಕಂ ರಕ್ಷಿತಂ ಸವ್ಯಸಾಚಿನಾ |
ಧೃಷ್ಟದ್ಯುಮ್ನಶ್ಚ ಚ ಸ್ವಯಂ ಭೀಮೇನ ಪರಿಪಾಲಿತಃ ||3||
ಮಧ್ಯದಲ್ಲಿದ್ದ ಶಿಖಂಡಿಯ ಸೈನ್ಯವು ಸವ್ಯಸಾಚಿಯಾದ ಅರ್ಜುನನಿಂದ ರಕ್ಷಿಸಲ್ಪಟ್ಟಿತು. ಧೃಷ್ಟದ್ಯುಮ್ನನನ್ನು ಸ್ವಯಂ ಭೀಮನೇ ರಕ್ಷಿಸುತ್ತಿದ್ದನು.
ಅನೀಕಂ ದಕ್ಷಿಣಂ ರಾಜನ್ ಯುಯುಧಾನೇನ ಪಾಲಿತಮ್ |
ಶ್ರೀಮತಾ ಸಾತ್ವತಾ ತೇನ ಶಕ್ರೇಣೇವ ಧನುಷ್ಮತಾ ||4||
ಎಲೈ ರಾಜನೇ, ಬಲಭಾಗದ ಸೈನ್ಯವನ್ನು ಧನುರ್ಧಾರಿಯಾದ ಸಾತ್ವತ ಪ್ರವರನಾದ ಸಂಪದ್ಯುಕ್ತನಾದ ಯುಯುಧಾನನು ಇಂದ್ರನಂತೆ ಪಾಲಿಸಿದನು.
ಮಹೇಂದ್ರಯಾನಪ್ರತಿಮಂ ರಥಂ ತು
ಸೋಪಸ್ಕರಂ ಹಾಟಕರತ್ನಚಿತ್ರಮ್ |
ಯುಧಿಷ್ಠಿರಃ ಕಾಂಚನಭಾಂಡಯೋಕ್ತ್ರಂ
ಸಮಾಸ್ಥಿತೋ ನಾಗಕುಲಸ್ಯ ಮಧ್ಯೇ ||5||
ಯುಧಿಷ್ಠಿರನು ಮಹೇಂದ್ರನ ರಥಕ್ಕೆ ಸದೃಶವಾದ ಎಲ್ಲ ಉಪಕರಣಗಳಿಂದ ಕೂಡಿದ ಸುವರ್ಣ ಮತ್ತು ರತ್ನಗಳಿಂದ ವಿಚಿತ್ರವಾಗಿದ್ದ, ಸುವರ್ಣಮಯವಾದ ಕಡಗೂಟ ಮತ್ತು ಹಗ್ಗಗಳನ್ನು ಹೊಂದಿದ್ದ ರಥವನ್ನು ಏರಿ ಗಜಸಮೂಹದ ಮಧ್ಯೆ ಇದ್ದನು.
ಸಮುಚ್ಛ್ರಿತಂ ದಾಂತಶಲಾಕಮಸ್ಯ
ಸುಪಾಂಡರಂ ಛತ್ರಮತೀವ ಭಾತಿ |
ಪ್ರದಕ್ಷಿಣಂ ಚೈನಮುಪಾಚರಂತಿ
ಮಹರ್ಷಯಃ ಸಂಸ್ತುತಿಭಿರ್ನರೇಂದ್ರಮ್ ||6||
ಗಜದಂತಮಯವಾದ ದಂಡವುಳ್ಳ ಎತ್ತರವಾದ ಅವನ ಅತ್ಯಂತ ಬಿಳಿಯದಾದ ಛತ್ರವು ಬಹಳವಾಗಿ ಶೋಭಿಸುತ್ತಿದ್ದಿತು. ನರೇಂದ್ರನಾದ ಅವನನ್ನು ಮಹರ್ಷಿಗಳು ಒಳ್ಳೆಯ ಸ್ತೋತ್ರಗಳಿಂದ ಪ್ರದಕ್ಷಿಣೆಯನ್ನು ಮಾಡಿ ಪುರಸ್ಕರಿಸಿದರು.
ಪುರೋಹಿತಾಃ ಶತ್ರುವಧಂ ವದಂತೋ
ಮಹರ್ಷಿವೃದ್ಧಾಃ ಶ್ರುತವಂತ ಏವ |
ಜಪ್ಯೈಶ್ಚ ಮಂತ್ರೈಶ್ಚ ತಥೌಷಧೀಭಿಃ
ಸಮಂತತಃ ಸ್ವಸ್ತ್ಯಯನಂ ಪ್ರಚಕ್ರುಃ ||7||
ಪುರೋಹಿತರೂ, ಮಹರ್ಷಿಗಳೂ, ವೃದ್ಧರೂ, ಜ್ಞಾನಸಂಪನ್ನರೂ ಆದ ಅವರು ಶತ್ರುವಧವನ್ನು ಹಾರೈಸುತ್ತಾ ಜಪಗಳಿಂದಲೂ, ಮಂತ್ರಗಳಿಂದಲೂ ಮತ್ತು ಔಷಧಿಗಳಿಂದಲೂ ಅವನಿಗೆ ಎಲ್ಲ ಕಡೆಯಿಂದಲೂ ಕ್ಷೇಮವನ್ನು ಉಂಟುಮಾಡಿದರು.
ತತಃ ಸ ವಸ್ತ್ರಾಣಿ ತಥೈವ ಗಾಶ್ಚ
ಫಲಾನಿ ಪುಷ್ಪಾಣಿ ತಥೈವ ನಿಷ್ಕಾನ್ |
ಕುರೂತ್ತಮೋ ಬ್ರಾಹ್ಮಣಸಾನ್ಮಹಾತ್ಮಾ
ಕುರ್ವನ್ ಯಯೌ ಶಕ್ರ ಇವಾಮರೇಭ್ಯಃ ||8||
ಅನಂತರ ಮಹಾತ್ಮನಾದ ಕುರುಶ್ರೇಷ್ಠನಾದ ಅವನು ಆ ಬ್ರಾಹ್ಮಣರಿಗೆ ವಸ್ತ್ರಗಳನ್ನೂ, ಗೋವುಗಳನ್ನೂ, ಫಲ-ಪುಷ್ಪಗಳನ್ನೂ, ಸುವರ್ಣವನ್ನೂ ದೇವತೆಗಳಿಗೆ ಇಂದ್ರನು ಕೊಟ್ಟಂತೆ ದಾನ ಮಾಡುತ್ತಾ ಮುಂದೆ ಸಾಗಿದನು.
ಸಹಸ್ರಸೂರ್ಯಃ ಶತಕಿಂಕಿಣೀಕಃ
ಪರಾರ್ಘ್ಯಜಾಂಬೂನದಹೇಮಚಿತ್ರಃ |
ರಥೋಽರ್ಜುನಸ್ಯಾಗ್ನಿರಿವಾರ್ಚಿಮಾಲೀ
ವಿಭ್ರಾಜತೇ ಶ್ವೇತಹಯಃ ಸುಚಕ್ರಃ ||9||
ಅರ್ಜುನನ ರಥವು ಸಹಸ್ರ ಸೂರ್ಯರಿಂದಲೂ, ನೂರು ಕಿಂಕಿಣಿಗಳಿಂದಲೂ, ಬಹಳ ಬೆಲೆಬಾಳುವ ಜಾಂಬೂನದ ರೂಪವಾದ ಸುವರ್ಣಗಳಿಂದಲೂ ಕೂಡಿ ಕಿರಣಗಳ ಮಾಲೆಯುಳ್ಳ ಅಗ್ನಿಯಂತೆ ಶ್ವೇತಹಯಗಳಿಂದಲೂ ಮತ್ತು ಒಳ್ಳೆಯ ಚಕ್ರಗಳಿಂದಲೂ ಶೋಭಿಸುತ್ತಿದ್ದಿತು.
ತಮಾಸ್ಥಿತಃ ಕೇಶವಸಂಗೃಹೀತಂ
ಕಪಿಧ್ವಜಂ ಗಾಂಡಿವಬಾಣಹಸ್ತಃ |
ಧನುರ್ಧರೋ ಯಸ್ಯ ಸಮಃ ಪೃಥಿವ್ಯಾಂ
ನ ವಿದ್ಯತೇ ನೋ ಭವಿತಾ ವಾ ಕದಾಚಿತ್ ||10||
ಯಾವ ಅರ್ಜುನನಿಗೆ ಸಮಾನವಾದ ಧನುರ್ಧರನು ಪೃಥಿವಿಯಲ್ಲಿ ಹಿಂದೆ ಇರಲಿಲ್ಲವೋ, ಈಗ ಇಲ್ಲವೋ ಮತ್ತು ಮುಂದೆ ಎಂದೂ ಬರುವುದಿಲ್ಲವೋ ಅಂತಹ ಅರ್ಜುನನು ಗಾಂಡೀವ ಧನುಸ್ಸು ಮತ್ತು ಶರಗಳನ್ನು ಕೈಯಲ್ಲಿ ಹಿಡಿದು ಕೃಷ್ಣನಿಂದ ಸಂಗೃಹೀತವಾದ ಕಪಿಧ್ವಜವುಳ್ಳ ರಥವನ್ನು ಏರಿದ್ದನು.
ಉದ್ವರ್ತಯಿಷ್ಯಂಸ್ತವ ಪುತ್ರಸೇನಾಮ್
ಅತೀವ ರೌದ್ರಂ ಸ ಬಿಭರ್ತಿ ರೂಪಮ್ |
ಅನಾಯುಧೋ ಯಃ ಸುಭುಜೋ ಭುಜಾಭ್ಯಾಂ
ನರಾಶ್ವನಾಗಾನ್ ಯುಧಿ ಭಸ್ಮ ಕುರ್ಯಾತ್ ||11||

ಸ ಭೀಮಸೇನಃ ಸಹಿತೋ ಯಮಾಭ್ಯಾಂ
ವೃಕೋದರೋ ವೀರರಥಸ್ಯ ಗೋಪ್ತಾ |
ಒಳ್ಳೆಯ ಭುಜಗಳುಳ್ಳ ಯಾವನು ಯಾವ ಆಯುಧವೂ ಇಲ್ಲದೆ ತನ್ನ ಭುಜಗಳಿಂದಲೇ ಯುದ್ಧದಲ್ಲಿ ಅಶ್ವ-ಗಜ-ಪದಾತಿಗಳನ್ನು ಭಸ್ಮ ಮಾಡಿಯಾನೋ, ಅಂತಹ ಭೀಮಸೇನನು ನಿನ್ನ ಪುತ್ರರ ಸೈನ್ಯವನ್ನು ಶೋಷಿಸುತ್ತಾ ಉಗ್ರವಾದ ರೂಪವನ್ನು ಹೊಂದಿದ್ದನು. ಅಂತಹ ಭೀಮಸೇನನು ನಕುಲ-ಸಹದೇವರಿಂದ ಸಹಿತನಾಗಿ ವೀರನಾದ ಅರ್ಜುನನ ರಥಕ್ಕೆ ರಕ್ಷಕನಾಗಿದ್ದನು.
ತಂ ಪ್ರೇಕ್ಷ್ಯ ಮತ್ತರ್ಷಭಸಿಂಹಖೇಲಂ
ಲೋಕೇ ಮಹೇಂದ್ರಪ್ರತಿಮಾನಕಲ್ಪಮ್ ॥12॥
ಸಮೀಕ್ಷ್ಯ ಸೇನಾಗ್ರಗತಂ ದುರಾಸದಂ
ಪ್ರವಿವ್ಯಥುಃ ಪಂಕಗತಾ ಇವೋಷ್ಟ್ರಾಃ |
ವೃಕೋದರಂ ವಾರಣರಾಜದರ್ಪಂ
ಯೋಧಾಸ್ತ್ವದೀಯಾ ಭಯವಿಗ್ನಸತತ್ತ್ವಃ ॥13॥
ಮದಿಸಿದ ಗೂಳಿಯ ಮತ್ತು ಸಿಂಹದ ಲೀಲೆಯುಳ್ಳ, ಲೋಕದಲ್ಲಿ ಮಹೇಂದ್ರನಿಗೆ ಸದೃಶವಾದ ಸಾಮರ್ಥ್ಯವನ್ನು ಹೊಂದಿದ್ದ, ಸೇನೆಯ ಮುಂಭಾಗದಲ್ಲಿ ದುರಾಸದನಾದ, ಗಜರಾಜನ ದರ್ಪವನ್ನು ಹೊಂದಿದ್ದ ವೃಕೋದರನನ್ನು ನೋಡಿ ನಿನ್ನ ಯೋಧರು ಭಯದಿಂದ ತಮ್ಮ ಧೈರ್ಯವನ್ನು ಕಳೆದುಕೊಂಡರು.
ಅನೀಕಮಧ್ಯೇ ತಿಷ್ಠಂತಂ ರಾಜಪುತ್ರಂ ದುರಾಸದಮ್ |
ಅಬ್ರವೀದ್ ಭರತಶ್ರೇಷ್ಠಂ ಗುಡಾಕೇಶಂ ಜನಾರ್ದನಃ ॥14॥
ಸೈನ್ಯದ ಮಧ್ಯದಲ್ಲಿದ್ದ ದುರಾಸದನಾದ, ಭರತಶ್ರೇಷ್ಠನಾದ, ರಾಜಪುತ್ರನಾದ ಗುಡಾಕೇಶನನ್ನು ಕುರಿತು ಕೃಷ್ಣನು ಮಾತನಾಡಿದನು.
ಯ ಏಷ ಗೋಪ್ತಾ ಪ್ರತಪನ್ ಬಲಸ್ಥೋ
ಯೋ ನಃ ಸೇನಾಂ ಸಿಂಹ ಇವೇಕ್ಷತೇ ಚ |
ಸ ಏಷ ಭೀಷ್ಮಃ ಕುರುವಂಶಕೇತುಃ
ಯೇನಾಹೃತಾಸ್ತ್ರಿಂಶತೋ ವಾಜಿಮೇಧಾಃ ॥15॥
ಯಾವ ಇವನು ಕಾಂತಿಯಿಂದ ಜ್ವಲಿಸುತ್ತಾ, ಶತ್ರುಸೈನ್ಯದಲ್ಲಿದ್ದು ರಕ್ಷಿಸುತ್ತಿರುವನೋ, ಯಾವನು ನಮ್ಮ ಸೈನ್ಯವನ್ನು ಸಿಂಹದಂತೆ ನೋಡುತ್ತಿದ್ದಾನೆಯೋ, ಅವನೇ ಕುರುವಂಶಧ್ವಜನಾದ ಭೀಷ್ಮ. ಅವನು ಮೂವತ್ತು ಅಶ್ವಮೇಧಯಾಗವನ್ನು ಮಾಡಿದವನು.
ಏತಾನ್ಯನೀಕಾನಿ ಮಹಾನುಭಾವಂ
ಗೂಹಂತಿ ಮೇಘಾ ಇವ ಘರ್ಮರಾಶಿಮ್ |
ಏತಾನಿ ಹತ್ವಾ ಪುರುಷಪ್ರವೀರ
ಕಾಂಕ್ಷಸ್ವ ಯುದ್ಧಂ ಭರತರ್ಷಭೇಣ ॥16॥
ಈ ಸೈನ್ಯಗಳು ಮೋಡಗಳು ಸೂರ್ಯನನ್ನು ಮುಚ್ಚಿದಂತೆ ಮಹಾನುಭಾವನಾದ ಅವನನ್ನು ಮರೆ ಮಾಡುತ್ತಿವೆ. ಎಲೈ ಪುರುಷಪ್ರವೀರನೇ, ಈ ಸೈನ್ಯಗಳನ್ನು ಸಂಹರಿಸಿ ಭರತಶ್ರೇಷ್ಠನಾದ ಅವನ ಜೊತೆಯಲ್ಲಿ ಯುದ್ಧವನ್ನು ಬಯಸುವವನಾಗು.
ಧೃತರಾಷ್ಟ್ರಃ
ಕೇಷಾಂ ಪ್ರಹೃಷ್ಟಾಸ್ತತ್ರಾಗ್ರೇ ಯೋಧಾ ಯುಧ್ಯಂತಿ ಸಂಜಯ |
ಉದಗ್ರಮನಸಃ ಕೇಽತ್ರ ಕೇ ವಾ ದೀನಾ ವಿಚೇತಸಃ ॥17॥
ಧೃತರಾಷ್ಟ್ರ, ಎಲೈ ಸಂಜಯನೇ, ಎರಡು ಪಕ್ಷಗಳಲ್ಲಿ ಯಾವ ಪಕ್ಷದ ಸೈನಿಕರು ಮೊದಲು ಸಂತೋಷದಿಂದ ಯುದ್ಧವನ್ನು ಮಾಡಿದರು? ಧೈರ್ಯದಿಂದ ಕೂಡಿದ ಉದಾತ್ತವಾದ ಮನಸ್ಸುಳ್ಳವರು ಯಾರು? ದೈನ್ಯದಿಂದ ಕೂಡಿ ಪ್ರಜ್ಞಾಶೂನ್ಯರಾದವರು ಯಾರು?
ಕೇ ಪೂರ್ವಂ ಪ್ರಾಹರಂಸ್ತತ್ರ ಯುದ್ಧೇ ಹೃದಯಕಂಪನೇ |
ಮಾಮಕಾಃ ಪಾಂಡವಾನಾಂ ವಾ ತನ್ಮಮಾಚಕ್ಷ್ವ ಸಂಜಯ ॥18॥
ಎಲೈ ಸಂಜಯನೇ, ಹೃದಯವನ್ನು ನಡುಗಿಸುವ ಆ ಯುದ್ಧದಲ್ಲಿ ನನ್ನವರಲ್ಲಿ ಯಾರು ಮೊದಲು ಪ್ರಹಾರವನ್ನು ಮಾಡಿದರು ಅಥವಾ ಪಾಂಡವರಲ್ಲಿ ಯಾರು ಮೊದಲು ಪ್ರಹಾರವನ್ನು ಮಾಡಿದರು? ಅದನ್ನು ನನಗೆ ಹೇಳು.
ಕಸ್ಯ ಸೇನಾಸಮುದಾಯೇ ಗಂಧಮಾಲ್ಯಸಮುದ್ಭವಃ |
ವಾಚಃ ಪ್ರದಕ್ಷಿಣಾಶ್ಚೈವ ಯೋಧಾನಾಮಭಿಗರ್ಜತಾಮ್ ॥19॥
ಯಾರ ಸೇನಾಸಮೂಹದಲ್ಲಿ ಗಂಧ-ಮಾಲ್ಯಗಳು ಉಂಟಾದವು? ಗರ್ಜಿಸುವ ಯೋಧರಿಂದ ಶುಭಕರವಾದ ಮಾತುಗಳು ಯಾರಿಂದ ಕೇಳಿ ಬಂದವು?
ಸಂಜಯಃ
ಉಭಯೋಃ ಸೇನಯೋಸ್ತತ್ರ ಯೋಧಾ ಜಹೃಷಿರೇ ಮುದಾ |
ಸ್ರಜಶ್ಚೋತ್ತಮಗಂಧಾನಾಮುಭಯತ್ರ ಸಮುದ್ಭವಃ ॥20॥
ಸಂಜಯ ಎರಡು ಸೈನ್ಯಗಳ ಯೋಧರೂ ಸಹ ಸಂತೋಷದಿಂದ ಕೂಡಿದ್ದರು. ಅವರು ಧರಿಸಿದ ಮಾಲೆಗಳಿಂದ ಶ್ರೇಷ್ಠವಾದ ಗಂಧವು ಎರಡು ಸೈನ್ಯಗಳಲ್ಲಿಯೂ ಉಂಟಾಯಿತು.
ಸಂಹತಾನಾಮನೀಕಾನಾಂ ವ್ಯೂಢಾನಾಂ ಭರತರ್ಷಭ |
ಸಂಸರ್ಪತಾಮುದೀರ್ಣಾನಾಂ ವಿಮರ್ದಃ ಸುಮಹಾನಭೂತ್ ॥21॥

ಎಲೈ ಭರತರ್ಷಭನೇ, ವ್ಯೂಹಗಳನ್ನು ರಚಿಸಿ ಸೈನ್ಯಗಳು ಒಂದನ್ನೊಂದು ಎದುರಿಸಿದಾಗ ಮುಂದೆ ಸಾಗುವ ವಿರುದ್ಧವಾದ ಆ ಸೈನ್ಯಗಳಿಗೆ ದೊಡ್ಡ ಸಂಘರ್ಷ ಉಂಟಾಯಿತು.
ವಾದಿತ್ರಶಬ್ದಸ್ತುಮುಲಃ ಶಂಖಭೇರೀವಿಮಿಶ್ರಿತಃ |
ಶೂರಾಣಾಂ ರಣಶೂರಾಣಾಂ ಗರ್ಜತಾಮಿತರೇತರಮ್ ॥22॥
ಶಂಖ-ಭೇರಿನಾದದಿಂದ ಮಿಶ್ರಿತವಾದ ವಾದಿತ್ರಗಳ ಶಬ್ದವೂ ಪರಸ್ಪರವಾಗಿ ಗರ್ಜಿಸುವ ರಣಶೂರರಾದ ಶೂರರ ಶಬ್ದವೂ ಕೋಲಾಹಲಕಾರಿಯಾಗಿದ್ದಿತು.
ಉಭಯೋಃ ಸೇನಯೋ ರಾಜನ್ ಮಹಾನ್ ವ್ಯತಿಕರೋಽಭವತ್ |
ಅನ್ಯೋನ್ಯಂ ವೀಕ್ಷಮಾಣಾನಾಂ ಯೋಧಾನಾಂ ಭರತರ್ಷಭ |
ಕುಂಜರಾಣಾಂ ಚ ನದತಾಂ ಸೈನ್ಯಾನಾಂ ಚ ಪ್ರಹೃಷ್ಯತಾಮ್ ॥23॥
ಎಲೈ ರಾಜನೇ, ಎರಡು ಸೈನ್ಯಗಳಿಗೂ ದೊಡ್ಡ ಮಿಶ್ರಣವುಂಟಾಯಿತು. ಎಲೈ ಭರತರ್ಷಭನೇ, ಪರಸ್ಪರವಾಗಿ ನೋಡುವ ಯೋಧರಿಗೂ, ಗಜಗಳಿಗೂ, ಸಂತೋಷದಿಂದ ಕೇಕೆ ಹಾಕುವ ಸೇನೆಗಳಿಗೂ ದೊಡ್ಡ ಮಿಶ್ರಣ ಉಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಾವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ 25ನೇ ಅಧ್ಯಾಯ
ತೇ ಸೇನೇ ಸಮರಾರಂಭೇ ಸಮೇತೇ ಸಾಗರೋಪಮೇ |
ಭೀಮಭೀಷ್ಮಮುಖೇ ವೀಕ್ಷ್ಯ ಪ್ರಾಹ ವಾಸವಿರಚ್ಯುತಮ್ ॥1॥
ಯುದ್ಧದ ಆರಂಭದಲ್ಲಿ ಭೀಮ ಭೀಷ್ಮರ ನಾಯಕತ್ವದಲ್ಲಿ ನಿಂತ ಸಾಗರದಂಥ ಎರಡು ಸೇನೆಗಳನ್ನು ಕಂಡು ಅರ್ಜುನ ಶ್ರೀಕೃಷ್ಣನಿಗೆ ನುಡಿದ.
ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ |
ಇತ್ಯುಕ್ತಃ ಸ ತಥಾ ಚಕ್ರೇ ಪಾರ್ಥಃ ಪಶ್ಯಂಶ್ಚ ಬಾಂಧವಾನ್ ॥2॥
`ಹೇ ಅಚ್ಯುತ, ಎರಡು ಸೈನ್ಯಗಳ ನಡುವೆ ನನ್ನ ರಥವನ್ನು ನಿಲ್ಲಿಸು' ಎಂದು ಅರ್ಜುನ ನುಡಿದಾಗ ಕೃಷ್ಣ ಹಾಗೇ ಮಾಡಿದ. ಅರ್ಜುನ ಸೈನ್ಯದಲ್ಲಿ ಬಾಂಧವರನ್ನು ಕಂಡ.
ವಿಸಸರ್ಜ ಧನುಃ ಪಾಪಾಶಂಕೀ ತತ್ರಾಽಹ ಮಾಧವಃ |
ಸ್ವಧರ್ಮೋ ದುಷ್ಟದಮನಂ ಧರ್ಮಜ್ಞಾನಾನುಪಾಲನಮ್ |
ಕ್ಷತ್ರಿಯಸ್ಯ ತಮುತ್ಸೃಜ್ಯ ನಿಂದಿತೋ ಯಾತ್ಯಧೋ ಧ್ರುವಮ್ ॥3॥
ಅರ್ಜುನ ಯುದ್ಧದಿಂದ ಪಾಪ ಬರುವುದೆಂದು ಶಂಕಿಸಿ ಬಿಲ್ಲನ್ನು ಕೆಳಗೆ ಚೆಲ್ಲಿದ. ಆಗ ಶ್ರೀಕೃಷ್ಣ ನುಡಿದ. `ದುಷ್ಟರನ್ನು ಸಂಹರಿಸುವುದು ಮತ್ತು ಆ ಮೂಲಕ ಧರ್ಮಜ್ಞಾನಗಳನ್ನು ಕಾಪಾಡುವುದು ಕ್ಷತ್ರಿಯನಿಗೆ ವಿಹಿತವಾದ ಸ್ವಧರ್ಮ. ಸ್ವಧರ್ಮವನ್ನು ಬಿಟ್ಟಿರುವವನು ನಿಂದಿತನಾಗಿ ಅಧೋಗತಿ ಹೊಂದುತ್ತಾನೆ.
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ |
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥4॥
ಈ ಜಗತ್ತಿನ ಸಕಲ ಪ್ರಾಣಿಗಳ ಪ್ರವೃತ್ತಿ ಯಾರಿಂದಾಗುವುದೋ ಯಾರಿಂದ ಈ ಎಲ್ಲ ಜಗತ್ತೂ ವ್ಯಾಪ್ತವಾಗಿದೆಯೋ ಆ ಭಗವಂತನನ್ನು ಸ್ವವಿಹಿತ ಕರ್ಮಾನುಷ್ಠಾನದಿಂದ ಚೆನ್ನಾಗಿ ಆರಾಧಿಸಿಯೆ ಮಾನವ ಸಿದ್ಧಿ ಪಡೆಯುತ್ತಾನೆ.
ನ ಚ ಶೋಕಸ್ತ್ವಯಾ ಕಾರ್ಯೋ ಬಂಧೂನಾಂ ನಿಧನೇಕ್ಷಯಾ |
ದೇಹಸ್ಯ ಸರ್ವಥಾ ನಾಶಾದನಾಶಾಚ್ಚೇತನಸ್ಯ ಚ ॥5॥
ಯುದ್ಧೇಚ್ಛೆ ಬಂಧುಗಳ ಮರಣಕ್ಕೆ ಕಾರಣವಾಗುವುದೆಂದು ನೀನು ಶೋಕ ಪಡಬಾರದು. ಏಕೆಂದರೆ ದೇಹಕ್ಕೆ ಸರ್ವಥಾ ನಾಶವಿದೆ. ಚೈತನ್ಯಕ್ಕೆ ಸರ್ವಥಾ ನಾಶವಿಲ್ಲ.
ಸೃಷ್ಟಿಸ್ಥಿತ್ಯಪ್ಯಯಾಜ್ಞಾನಬಂಧಮೋಕ್ಷಪ್ರವೃತ್ತಯಃ |
ಪ್ರಕಾಶನಿಯಮೌ ಚೈವ ಬ್ರಹ್ಮೇಶಾದಿಕ್ಷರಸ್ಯ ಚ ॥6॥
ಅಕ್ಷರಪ್ರಕೃತೇಃ ಸಂತೋ ಮತ್ತ ಏವ ನ ಚಾನ್ಯತಃ ॥7॥
ಸೃಷ್ಟಿ ಸ್ಥಿತಿ ಲಯ ಅಜ್ಞಾನ ಬಂಧ ಮೋಕ್ಷ ಪ್ರವೃತ್ತಿ ಪ್ರಕಾಶ ನಿಯಮಗಳು ಬ್ರಹ್ಮ- ರುದ್ರಾದಿ ಕ್ಷರಪುರುಷರಿಗೂ ಅಕ್ಷರ ಪುರುಷಳಾದ ಲಕ್ಷ್ಮಿಗೂ ಇರುವವುಗಳು ನನ್ನಿಂದಲೇ ಆಗುವವು. ಬೇರೆ ಯಾರಿಂದಲೂ ಅಲ್ಲ.
ನ ಮೇ ಕುತಶ್ಚಿತ್ ಸ್ವರ್ಗಾದ್ಯಾಃ ಸ್ವಾತಂತ್ರ್ಯಾದ್ ಗುಣಪೂರ್ತಿತಃ |
ಅತಃ ಸಮಾಧಿಕಾಭಾವಾನ್ಮಮ ಮದ್ವಶಮೇವ ಚ ॥8॥
ಸ್ವಾತಂತ್ರ್ಯವಿರುವುದರಿಂದಲೂ ಗುಣಪೂರ್ಣತ್ವವಿರುವುದರಿಂದಲೂ ನನಗೆ ಯಾರಿಂದಲೂ ಸೃಷ್ಟ್ಯಾದಿಗಳಿಲ್ಲ. ಅದರಿಂದ ನನಗೆ ಸಮಾನನಾಗಲಿ ಉತ್ತಮನಾಗಲಿ ಇಲ್ಲದುದರಿಂದ ಎಲ್ಲವೂ ನನ್ನ ವಶದಲ್ಲಿಯೆ ಇರುತ್ತದೆ.
ಜ್ಞಾತ್ವೈಷಾಂ ನಿಧನಾದ್ಯಂ ಚ ಜೀವಾದೇರಸ್ವತಂತ್ರತಾಮ್ |
ಅಸ್ವಾತಂತ್ರ್ಯಾನ್ನಿವೃತ್ತೌ ಚ ಮಾಮನುಸ್ಮರ ಯುಧ್ಯ ಚ ॥9॥
ಈ ಬಾಂಧವರ ಮರಣಾದಿಗಳು ನನ್ನ ವಶವೆಂದು ತಿಳಿದು ಜೀವ ಜಡಗಳಿಗೆ ಅಸ್ವಾತಂತ್ರ್ಯವನ್ನೂ ತಿಳಿದು, ಯುದ್ಧದಿಂದ

ಹಿಂತಿರುಗಲೂ ನೀನು ಅಸ್ವತಂತ್ರನಾದ್ದರಿಂದ, ಯುದ್ಧವನ್ನೇ ಮಾಡು. ಅದು ನನ್ನ ಪೂಜೆ ಎಂದು ನನ್ನನ್ನು ಸ್ಮರಿಸು.
ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ |
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥10॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ |
ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥11॥
ಯಾರು ಎಲ್ಲ ಕರ್ಮಗಳನ್ನೂ ನನ್ನಲ್ಲಿ ಪೂಜೆಯ ರೂಪದಿಂದ ಸಮರ್ಪಿಸಿ ನನ್ನನ್ನು ಅನ್ಯ ದೇವತೆಗಳಂತೆ ಕಾಣದೆ ಸರ್ವೋತ್ತಮನೆಂದು ಅನನ್ಯ ಯೋಗದಿಂದ ಧ್ಯಾನಿಸುತ್ತ ಉಪಾಸನೆ ಮಾಡುವರೋ ನನ್ನಲ್ಲಿ ನೆಟ್ಟ ಮನಸ್ಸಿನವರಾದ ಅವರಿಗೆ ನಾನು ಬೇಗನೆ ಮರಣದಿಂದ ಸಂಸಾರ ಸಾಗರದಿಂದ ಉದ್ಧಾರಕನೆನಿಸುತ್ತೇನೆ.
ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ |
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥12॥
ಅವ್ಯಕ್ತರೂಪನಾದ ನನ್ನಿಂದ ಈ ಎಲ್ಲ ಜಗತ್ತೂ ವ್ಯಾಪ್ತವಾಗಿದೆ. ಎಲ್ಲ ಚೇತನರೂ ನನ್ನನ್ನು ಆಶ್ರಯಿಸಿದ್ದಾರೆ.
ಸಂಪೂರ್ಣಸತ್ಸರ್ವಗುಣದೇಹೋऽಹಂ ಸರ್ವದಾ ಪ್ರಭುಃ |
ಅಸ್ಪೃಷ್ಟಾಖಿಲದೋಷೈಕನಿತ್ಯಸತ್ತನುರವ್ಯಯಃ ॥13॥
ಇತ್ಯುಕ್ತೋ ವಾಸವಿಃ ಪ್ರಾಹ ವ್ಯಾಪ್ತಿಂ ತೇ ದರ್ಶಯೇಶ ಮೇ ॥14॥
ಪರಿಪೂರ್ಣ ಸದ್ಗುಣಗಳೆ ಸ್ವರೂಪ ದೇಹವಾಗಿ ಉಳ್ಳವನು ನಾನು ಸದಾ ಸರ್ವಶಕ್ತ. ಎಲ್ಲ ದೋಷಗಳಿಂದ ದೂರವಾದ ನಿತ್ಯವಾದ ಉತ್ತಮ ಶರೀರ ಉಳ್ಳವನು. ನಾಶ ರಹಿತ. ಹೀಗೆ ಶ್ರೀಕೃಷ್ಣ ನುಡಿದಾಗ ಅರ್ಜುನನೆಂದ, `ಪ್ರಭು, ನೀನು ನಿನ್ನ ವ್ಯಾಪ್ತಿಯನ್ನು ತೋರಿಸು'.
ಅಥ ದಿವ್ಯದೃಶಂ ತಸ್ಯ ದತ್ವಾ ವ್ಯಾಪ್ತಂ ನಿಜಂ ವಪುಃ |
ದೇಶತಃ ಕಾಲತಶ್ಚೈವ ಪೂರ್ಣಂ ಸರ್ವಗುಣೈಃ ಸದಾ |
ದರ್ಶಯಾಮಾಸ ಭಗವಾನ್ ಯಾವತ್ಯರ್ಜುನಯೋಗ್ಯತಾ ॥15॥
ಆಗ ಭಗವಾನ್ ಶ್ರೀಕೃಷ್ಣ ಅರ್ಜುನನಿಗೆ ದಿವ್ಯ ದೃಷ್ಟಿ ನೀಡಿ ವ್ಯಾಪ್ತವಾದ, ದೇಶಕಾಲಗಳಿಂದಲೂ ಸಕಲ ಗುಣಗಳಿಂದಲೂ ಸದಾಪೂರ್ಣವೂ ಆದ ತನ್ನ ಶರೀರವನ್ನು ಅರ್ಜುನನ ಯೋಗ್ಯತೆ ಇದ್ದಷ್ಟು ತೋರಿದ.
ತತ್ಪ್ರಾರ್ಥಿತಃ ಪುನಃ ಕೃಷ್ಣಸ್ತದ್ರೂಪಂ ಲೋಕಮಾನತಃ |
ಪೂರ್ವವದ್ ದರ್ಶಯಾಮಾಸ ಪುನಶ್ಚೈನಮಶಿಕ್ಷಯತ್ ॥16॥
ಜ್ಞಾನಜ್ಞೇಯಪ್ರಕೃತ್ಯಾದಿ ಜ್ಞಾಪಯನ್ ಪುರುಷೋತ್ತಮಃ |
ತೇನಾನುಶಿಷ್ಟಃ ಪಾರ್ಥಸ್ತು ಸಶರಂ ಧನುರಾದದೇ ॥17॥
ಅರ್ಜುನನಿಂದ ಪ್ರಾರ್ಥಿತನಾದ ಪುರುಷೋತ್ತಮ ಶ್ರೀಕೃಷ್ಣ ಪುನಃ ಅವನ ರೂಪವನ್ನು ಲೋಕದೃಷ್ಟಿಗನುಸಾರ ಹಿಂದಿನಂತೆ ಮಾಡಿ ತೋರಿಸಿದ. ಪುನಃ ಅರ್ಜುನನಿಗೆ ಜ್ಞಾನಜ್ಞೇಯ ಸ್ವಭಾವ ಯೋಗ್ಯತಾದಿಗಳನ್ನು ತಿಳಿಸುತ್ತ ಯುದ್ಧ ಮಾಡೆಂದು ಉಪದೇಶಿಸಿದ. ಅವನಿಂದ ಉಪದೇಶ ಹೊಂದಿದ ಅರ್ಜುನ ಧನುರ್ಬಾಣಗಳನ್ನು ಎತ್ತಿಕೊಂಡ.
* * * * *
ಇಪ್ಪತ್ಮೂರನೆಯ ಅಧ್ಯಾಯ
ಭಗವದ್ಗೀತೆ ಅರ್ಜುನ ವಿಷಾದ ಯೋಗ
ಧೃತರಾಷ್ಟ್ರಃ
ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ |
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಲು ಬಯಸಿದ ನನ್ನವರು ಮತ್ತು ಪಾಂಡವರು ಏನು ಮಾಡಿದರು?
ಅನೇಕ ಜನರು ಒಂದು ಭೂಮಿಯಲ್ಲಿ ಒಂದೇ ಕಾಲದಲ್ಲಿ ಸಂಯುಕ್ತರಾಗುವುದನ್ನೇ ಸಮವಾಯ ಎಂದು ಹೇಳಿದ ಶ್ರೀಕೃಷ್ಣನು ಸಂಯೋಗವಿಶೇಷವೇ ಸಮವಾಯ ಹೊರತು ನ್ಯಾಯವೈಶೇಷಿಕರು ಹೇಳುವಂತೆ ಸಮವಾಯವು ಒಂದು ಪ್ರತ್ಯೇಕ ಸಂಬಂಧವಲ್ಲ ಎಂದು ಸೂಚಿಸುತ್ತಾನೆ.
ಸಂಜಯಃ
ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ |
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥2॥
ಸಂಜಯ ಆಗ ರಾಜನಾದ ದುರ್ಯೋಧನನು ಪಾಂಡವರ ಸೈನ್ಯವು ವ್ಯೂಹಗೊಂಡಿದ್ದನ್ನು ನೋಡಿ ದ್ರೋಣಾಚಾರ್ಯರ ಸಮೀಪಕ್ಕೆ ಬಂದು ಮಾತನಾಡಿದನು.
ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ |
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥3॥
ಆಚಾರ್ಯರೇ, ನಿಮ್ಮ ಶಿಷ್ಯನಾದ ದ್ರುಪದ ಪುತ್ರನಾದ ಮೇಧಾವಿಯಾದ ಧೃಷ್ಟದ್ಯುಮ್ನನಿಂದ ವ್ಯೂಹ ಮಾಡಲ್ಪಟ್ಟಿರುವ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿ.
ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ |
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥4॥

ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ |
ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥5॥
ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ |
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥6॥
ಇಲ್ಲಿ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮರಾದ, ಶೂರರಾದ ಅನೇಕ ಧನುರ್ಧಾರಿಗಳಿದ್ದಾರೆ. ಯುಯುಧಾನ, ವಿರಾಟ, ಮಹಾರಥನಾದ ದ್ರುಪದ, ಧೃಷ್ಟಕೇತು, ಚೇಕಿತಾನ, ಪರಾಕ್ರಮಶಾಲಿಯಾದ ಕಾಶಿರಾಜ, ಪುರುಜಿತ್, ಕುಂತಿಭೋಜ, ನರಶ್ರೇಷ್ಠನಾದ ಶೈಬ್ಯ, ಪರಾಕ್ರಮಶಾಲಿಯಾದ ಯುಧಾಮನ್ಯು, ವೀರ್ಯಶಾಲಿಯಾದ ಉತ್ತಮೌಜ, ಸುಭದ್ರೆಯ ಮಗನಾದ ಅಭಿಮನ್ಯು, ದ್ರೌಪದಿಯ ಮಕ್ಕಳು ಎಲ್ಲರೂ ಮಹಾರಥರು.
ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ ನಿಬೋಧ ದ್ವಿಜೋತ್ತಮ |
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥7॥
ಎಲೈ ದ್ವಿಜಶ್ರೇಷ್ಠರೇ, ನಮ್ಮ ಸೈನ್ಯದಲ್ಲಿ ವಿಶಿಷ್ಟರಾದ ನಾಯಕರನ್ನು ನಿಮ್ಮ ಗಮನಕ್ಕೆ ತರುವುದಕ್ಕಾಗಿ ಹೇಳುತ್ತಿದ್ದೇನೆ, ಅದನ್ನು ಕೇಳಿ.
ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಃ ಶಲ್ಯೋ ಜಯದ್ರಥಃ |
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥8॥
ಅನ್ಯೇ ಚ ಬಹವಃ ಶೂರಾಃ ಮದರ್ಥೇ ತ್ಯಕ್ತಜೀವಿತಾಃ |
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥9॥
ನೀವು, ಭೀಷ್ಮರು, ಕರ್ಣ, ಕೃಪರು, ಶಲ್ಯ, ಜಯದ್ರಥ, ಅಶ್ವತ್ಥಾಮ, ವಿಕರ್ಣ, ಸೋಮದತ್ತನ ಮಗನಾದ ಭೂರಿಶ್ರವ, ಅದರಂತೆ ಯುದ್ಧವಿಶಾರದರಾದ, ಎಲ್ಲರೂ ಕೈಗಳಲ್ಲಿ ಅನೇಕ ವಿಧವಾದ ಶಸ್ತ್ರಗಳನ್ನು ಹಿಡಿದಿರುವ, ನನ್ನ ಸಲುವಾಗಿ ಪ್ರಾಣವನ್ನು ತೊರೆಯಲು ಸಿದ್ಧರಿರುವ ಇನ್ನೂ ಅನೇಕ ಶೂರರು.
ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ |
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥10॥
ಭೀಷ್ಮರಿಂದ ರಕ್ಷಿತವಾದ ಈ ನಮ್ಮ ಸೈನ್ಯವು ಸಮರ್ಥವಾಗಿದೆ ಎನಿಸುವುದಿಲ್ಲ. ಭೀಮನಿಂದ ರಕ್ಷಿತವಾದ ಅವರ ಸೈನ್ಯವು ಸಮರ್ಥವಾಗಿದೆ.
ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ |
ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥11॥
ನೀವೆಲ್ಲರೂ ನಿಮ್ಮ ನಿಮ್ಮ ಭಾಗಗಳಲ್ಲಿ ನಿಂತು ಎಲ್ಲ ಯುದ್ಧ ಮಾರ್ಗಗಳಲ್ಲಿಯೂ ಭೀಷ್ಮರನ್ನೇ ರಕ್ಷಿಸಿ.
ಸಂಜಯಃ
ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ |
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥12॥
ಸಂಜಯ ಕುರುವೃದ್ಧರೂ, ಪಿತಾಮಹರೂ ಆದ ಭೀಷ್ಮರು ಅವನಿಗೆ ಸಂತೋಷವನ್ನು ಉಂಟುಮಾಡುವವರಾಗಿ ಗಟ್ಟಿಯಾದ ಸಿಂಹನಾದವನ್ನು ಮಾಡಿ ಪ್ರತಾಪಶಾಲಿಯಾದ ಅವರು ತಮ್ಮ ಶಂಖವನ್ನು ಊದಿದರು.
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ |
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥13॥
ಅನಂತರ ಶಂಖಗಳು, ಭೇರಿಗಳು, ಪಣವ, ಆನಕ ಮತ್ತು ಗೋಮುಖಗಳು ತಕ್ಷಣದಲ್ಲಿಯೇ ಊದಲ್ಪಟ್ಟವು ಮತ್ತು ಬಾರಿಸಲ್ಪಟ್ಟವು. ಆ ಶಬ್ದವು ಬಹಳ ತೀವ್ರವಾಗಿದ್ದಿತು.
ತತಃ ಶ್ವೇತಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ |
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥14॥
ಅನಂತರ ಬಿಳಿಯ ಕುದುರೆಗಳನ್ನು ಹೂಡಿದ ದೊಡ್ಡ ರಥದಲ್ಲಿ ಕುಳಿತು ಮಾಧವನಾದ ಕೃಷ್ಣನು ಮತ್ತು ಪಾಂಡುಪುತ್ರನಾದ ಅರ್ಜುನನು ತಮ್ಮ ದಿವ್ಯವಾದ ಶಂಖಗಳನ್ನು ಊದಿದರು.
ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ |
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥15॥
ಹೃಷೀಕೇಶನು ಪಾಂಚಜನ್ಯವನ್ನೂ, ಧನಂಜಯನು ದೇವದತ್ತವನ್ನೂ, ಭಯಂಕರ ಕರ್ಮಗಳನ್ನು ಮಾಡುವ ವೃಕೋದರನು ಪೌಂಡ್ರವೆಂಬ ಮಹಾಶಂಖವನ್ನೂ ಊದಿದರು.
ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥16॥
ಕುಂತೀಪುತ್ರನಾದ ಯುಧಿಷ್ಠಿರರಾಜನು ಅನಂತವಿಜಯ ಎಂಬ ಶಂಖವನ್ನೂ, ನಕುಲ-ಸಹದೇವರು ಕ್ರಮವಾಗಿ ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳನ್ನೂ ಊದಿದರು.
ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ |
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥17॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ |
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥18॥

ಎಲೈ ರಾಜನೇ, ಪರಮಧನುರ್ಧಾರಿಯಾದ ಕಾಶಿರಾಜನು, ಮಹಾರಥನಾದ ಶಿಖಂಡಿಯು, ಧೃಷ್ಟದ್ಯುಮ್ನ, ವಿರಾಟ ಮತ್ತು ಅಪರಾಜಿತನಾದ ಸಾತ್ಯಕಿಯು, ದ್ರುಪದನು, ದ್ರೌಪದಿಯ ಮಕ್ಕಳು, ಮಹಾಬಾಹುವಾದ ಅಭಿಮನ್ಯುವು ಎಲ್ಲ ಕಡೆಗಳಲ್ಲಿಯೂ ತಮ್ಮ ತಮ್ಮ ಶಂಖಗಳನ್ನು ಊದಿದರು.
ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ |
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥19॥
ಆ ಶಂಖ ಘೋಷವು ಧೃತರಾಷ್ಟ್ರ ಪುತ್ರರ ಹೃದಯವನ್ನು ಬಿರಿಯುವಂತೆ ಮಾಡಿತು. ತೀವ್ರವಾದ ಆ ನಾದವು ಭೂಮಿ ಮತ್ತು ಅಂತರಿಕ್ಷದಲ್ಲಿ ಪ್ರತಿಧ್ವನಿಸಿತು.
ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ |
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥20॥
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ |
ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥21॥
ಎಲೈ ರಾಜನೇ, ಕಪಿಧ್ವಜನಾದ, ಪಾಂಡವನಾದ ಅರ್ಜುನನು ಧೃತರಾಷ್ಟ್ರ ಪುತ್ರರು ಯುದ್ಧಕ್ಕೆ ಸನ್ನದ್ಧರಾಗಿರುವುದನ್ನು ನೋಡಿ ಶಸ್ತ್ರಘಾತಗಳು ಸನ್ನಿಹಿತವಾಗುತ್ತಿರಲು ತನ್ನ ಧನುಸ್ಸನ್ನು ಎತ್ತಿ ಹೃಷೀಕೇಶನನ್ನು ಕುರಿತು ಈ ಮಾತುಗಳನ್ನು ಆಡಿದನು. ಅಚ್ಯುತನೇ, ಎರಡು ಸೈನ್ಯಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು.
ಯಾವದೇತಾನ್ ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ |
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥22॥
ಅಷ್ಟರಲ್ಲಿ ನಾನು ಯುದ್ಧವನ್ನು ಮಾಡಲು ಬಯಸಿ ಇಲ್ಲಿ ನಿಂತಿರುವ ಈ ಶತ್ರು ಸೈನಿಕರನ್ನು ನೋಡುವೆನು. ಈ ದೊಡ್ಡ ಯುದ್ಧ ಸಮುದ್ಯಮದಲ್ಲಿ ನಾನು ಯಾರ ಜೊತೆಯಲ್ಲಿ ಯುದ್ಧವನ್ನು ಮಾಡಬೇಕು? (ಎಂದು ನೋಡುವೆನು).
ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ |
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥23॥
ದುರ್ಬುದ್ಧಿಯಾದ ದುರ್ಯೋಧನನಿಗೆ ಯುದ್ಧದಲ್ಲಿ ಪ್ರಿಯವನ್ನುಂಟುಮಾಡಲು ಇಲ್ಲಿ ಸಮಾಗತರಾಗಿ ಯುದ್ಧ ಮಾಡಲಿರುವ ಈ ಯೋಧರನ್ನು ನಾನು ನೋಡುತ್ತೇನೆ.
ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ |
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥24॥
ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ |
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥25॥
ಎಲೈ ಭಾರತನೇ, ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಹೃಷೀಕೇಶನು ಭೀಷ್ಮ- ದ್ರೋಣರ ಎದುರಿಗೆ ಮತ್ತು ಎಲ್ಲಾ ರಾಜರ ಎದುರಿಗೆ ಎರಡು ಸೈನ್ಯಗಳ ಮಧ್ಯದಲ್ಲಿ ತನ್ನ ಶ್ರೇಷ್ಠವಾದ ರಥವನ್ನು ನಿಲ್ಲಿಸಿ, ಅರ್ಜುನನೇ, ಇಲ್ಲಿ ಸೇರಿದ ಕುರುಗಳನ್ನು ನೋಡು ಎಂದು ಹೇಳಿದನು.
ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ |
ಆಚಾರ್ಯಾನ್ ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ |
ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥27॥
ಕೃಪಯಾ ಪರಯಾಽಽವಿಷ್ಟೋ ವಿಷೀದನ್ನಿದಮಬ್ರವೀತ್ |
ಅರ್ಜುನನು ಅಲ್ಲಿ ನೆರೆದ ಪಿತೃಗಳನ್ನೂ, ಪಿತಾಮಹರನ್ನೂ, ಆಚಾರ್ಯರನ್ನೂ, ಸೋದರಮಾವಂದಿರನ್ನೂ, ಸಹೋದರರನ್ನೂ, ಮಕ್ಕಳನ್ನೂ, ಮೊಮ್ಮಕ್ಕಳನ್ನೂ, ಸ್ನೇಹಿತರನ್ನೂ, ಮಾವಂದಿರನ್ನೂ, ಸುಹೃದಯರನ್ನೂ, ಎರಡು ಸೈನ್ಯಗಳಲ್ಲಿಯೂ ನೋಡಿದನು. ಕುಂತೀಪುತ್ರನಾದ ಅವನು ಸಿದ್ಧರಾಗಿ ನಿಂತಿರುವ ಆ ಎಲ್ಲ ಬಂಧುಗಳನ್ನೂ ನೋಡಿ ಬಹಳ ಕೃಪೆಯಿಂದ ಕೂಡಿದವನಾಗಿ ವಿಷಾದವನ್ನು ಪಡುತ್ತಾ ಹೀಗೆ ಮಾತನಾಡಿದನು.
ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥28॥
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ |
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥29॥
ಎಲೈ ಕೃಷ್ಣನೇ, ಯುದ್ಧವನ್ನು ಮಾಡಲು ಬಯಸಿ ಇಲ್ಲಿ ನೆರೆದಿರುವ ನನ್ನ ಈ ಸ್ವಜನರನ್ನು ನೋಡಿ ನನ್ನ ಅಂಗಾಂಗಗಳೆಲ್ಲವೂ ಕುಸಿಯುತ್ತಿವೆ. ಮುಖವು ಒಣಗುತ್ತಿದೆ. ನನ್ನ ಶರೀರದಲ್ಲಿ ನಡುಕವು ಮತ್ತು ರೋಮಾಂಚವು ಉಂಟಾಗುತ್ತಿದೆ.
ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ ಚೈವ ಪರಿದಹ್ಯತೇ |
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥30॥
ಕೈಯಿಂದ ಗಾಂಡೀವ ಧನುಸ್ಸು ಜಾರುತ್ತಿದೆ, ಚರ್ಮವು ಒಡಿಯುತ್ತಿದೆ. ನಾನು ನಿಲ್ಲಲಾರೆ. ನನ್ನ ಮನಸ್ಸಿಗೆ ಭ್ರಾಂತಿ ಉಂಟಾದಂತೆ ಇದೆ.
ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ |
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥31॥
ಎಲೈ ಕೇಶವನೇ, ನನಗೆ ಅಪಶಕುನಗಳು ಕಂಡುಬರುತ್ತಿವೆ. ಯುದ್ಧದಲ್ಲಿ ಸ್ವಜನರನ್ನು ಕೊಂದು ಯಾವ ಶ್ರೇಯಸ್ಸನ್ನೂ ನಾನು ಕಾಣುತ್ತಿಲ್ಲ.
ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ |

ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥32॥
ಎಲೈ ಕೃಷ್ಣನೇ, ನನಗೆ ಯುದ್ಧದಲ್ಲಿ ವಿಜಯವಾಗಲೀ, ರಾಜ್ಯವಾಗಲೀ, ಸುಖಗಳಾಗಲೀ ಬೇಕಾಗಿಲ್ಲ. ಎಲೈ ಗೋವಿಂದನೇ, ನಮಗೆ ರಾಜ್ಯದಿಂದಾಗಲೀ, ಭೋಗಗಳಿಂದಾಗಲೀ ಅಥವಾ ಜೀವಿತದಿಂದಾಗಲೀ ಏನು ಪ್ರಯೋಜನ?
ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ |
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥33॥
ಯಾರ ಸಲುವಾಗಿ ನಾವು ರಾಜ್ಯವನ್ನೂ, ಭೋಗಗಳನ್ನೂ ಮತ್ತು ಸುಖಗಳನ್ನೂ ಬಯಸುತ್ತೇವೆಯೋ ಅಂತಹ ಇವರೆಲ್ಲರೂ ತಮ್ಮ ಪ್ರಾಣಗಳನ್ನು, ಧನವನ್ನೂ ತ್ಯಜಿಸಿ ಯುದ್ಧ ಮಾಡಲು ಸನ್ನದ್ಧರಾಗಿದ್ದಾರೆ.
ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ |
ಮಾತುಲಾಃ ಶ್ವಶುರಾಃ ಪೌತ್ರಾಃ ಸ್ಯಾಲಾಃ ಸಂಬಂಧಿನಸ್ತಥಾ ॥34॥
ಆಚಾರ್ಯರು, ಪಿತೃಗಳು, ಪುತ್ರರು, ಹಾಗೆಯೇ ಪಿತಾಮಹರು, ಸೋದರ ಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದುನರು ಮತ್ತು ಉಳಿದ ಸಂಬಂಧಿಗಳು (ಎಲ್ಲರೂ ಸಿದ್ಧರಾಗಿದ್ದಾರೆ).
ಏತಾನ್ ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ |
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥35॥
ಎಲೈ ಮಧುಸೂದನನೇ, ಅವರು ನನ್ನನ್ನು ಸಂಹರಿಸಿದರೂ ನಾನು ಅವರನ್ನು ಕೊಲ್ಲಲು ಮೂರು ಲೋಕಗಳ ಸಲುವಾಗಿಯೂ ಬಯಸುವುದಿಲ್ಲ. ಇನ್ನು ಕೇವಲ ಭೂಮಿಯ ಸಲುವಾಗಿ ಏಕೆ ಬಯಸುತ್ತೇನೆ?
ನಿಹತ್ಯ ಧಾರ್ತರಾಷ್ಟ್ರಾನ್ ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ |
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥36॥
ಎಲೈ ಜನಾರ್ದನನೇ, ಧೃತರಾಷ್ಟ್ರ ಪುತ್ರರನ್ನು ಕೊಂದು ನಮಗೆ ಯಾವ ಸುಖ ಉಂಟಾಗುತ್ತದೆ? ಈ ಶಸ್ತ್ರಧಾರಿಗಳನ್ನು ಕೊಂದರೆ ನಮಗೆ ಪಾಪವೇ ಉಂಟಾಗುತ್ತದೆ.
ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸಬಾಂಧವಾನ್ |
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥37॥
ಎಲೈ ಮಾಧವನೇ, ಆದ್ದರಿಂದ ಬಂಧು ಸಹಿತರಾದ ಧೃತರಾಷ್ಟ್ರ ಪುತ್ರರನ್ನು ನಾವು ಕೊಲ್ಲುವುದು ಉಚಿತವಲ್ಲ. ಸ್ವಜನರನ್ನು ಕೊಂದು ನಾವು ಹೇಗೆ ಸುಖಿಗಳಾಗುತ್ತೇವೆ?
ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ |
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥38॥
ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ |
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥39॥
ಯದ್ಯಪಿ ರಾಜ್ಯಲೋಭದಿಂದ ಕೂಡಿದ ಮನಸ್ಸುಳ್ಳ ಇವರು ಕುಲಕ್ಷಯದಿಂದ ಉಂಟಾಗುವ ದೋಷವನ್ನು, ಮಿತ್ರದ್ರೋಹದಿಂದ ಉಂಟಾಗುವ ಪಾಪವನ್ನು ಗಮನಿಸುತ್ತಿಲ್ಲ. ಆದರೆ ಎಲೈ ಜನಾರ್ದನನೇ, ಕುಲಕ್ಷಯದಿಂದ ಉಂಟಾಗುವ ದೋಷವನ್ನು ಚೆನ್ನಾಗಿ ಕಾಣುತ್ತಿರುವ ನಾವು ಈ ಪಾಪಕ್ಕಾಗಿ ಮಾಡುವ ಯುದ್ಧದಿಂದ ಹಿಮ್ಮೆಟ್ಟದಿರಲು ಹೇಗೆ ಸಾಧ್ಯ?
ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ |
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥40॥
ಕುಲಕ್ಷಯ ಉಂಟಾದರೆ ಸನಾತನವಾದ ಕುಲಧರ್ಮಗಳು ನಾಶವನ್ನು ಹೊಂದುತ್ತವೆ. ಧರ್ಮವು ನಷ್ಟವಾದರೆ ಕುಲವನ್ನೆಲ್ಲಾ ಅಧರ್ಮವು ಆವರಿಸುತ್ತದೆ.
ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ |
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥41॥
ಎಲೈ ಕೃಷ್ಣನೇ, ಅಧರ್ಮವು ಕುಲವನ್ನು ಆವರಿಸಿದಾಗ ಕುಲಸ್ತ್ರೀಯರು ಕೆಡುತ್ತಾರೆ. ಎಲೈ ವೃಷ್ಣಿಕುಲಸಂಭೂತನೇ, ಸ್ತ್ರೀಯರು ದುಷ್ಟರಾದಾಗ ವರ್ಣಸಂಕರ ಉಂಟಾಗುತ್ತದೆ.
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ |
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥42॥
ವರ್ಣಸಂಕರವು ವರ್ಣಸಂಕರವನ್ನು ಮಾಡಿದವರಿಗೂ ಮತ್ತು ಆ ಕುಲಕ್ಕೂ ನರಕವನ್ನುಂಟು ಮಾಡುತ್ತದೆ. ವರ್ಣಸಂಕರವನ್ನು ಮಾಡಿದ ಇವರ ಪಿತೃಗಳು ಪಿಂಡೋದಕ ಕ್ರಿಯೆಗಳಿಲ್ಲದೆ ನರಕದಲ್ಲಿ ಬೀಳುತ್ತಾರೆ.
ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ |
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥43॥
ಕುಲವನ್ನು ನಾಶಮಾಡುವವರ ಇಂತಹ ವರ್ಣಸಂಕರವನ್ನುಂಟು ಮಾಡುವ ಈ ದೋಷಗಳಿಂದ ಶಾಶ್ವತವಾದ ಕುಲಧರ್ಮಗಳು ಮತ್ತು ಜಾತಿಧರ್ಮಗಳು ನಾಶವನ್ನು ಹೊಂದುತ್ತವೆ.
ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ |
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥44॥
ಎಲೈ ಜನಾರ್ದನನೇ, ಕುಲಧರ್ಮವನ್ನು ನಾಶ ಮಾಡಿದ ಮನುಷ್ಯರಿಗೆ ನರಕದಲ್ಲಿ ಶಾಶ್ವತವಾದ ವಾಸ ಉಂಟಾಗುತ್ತದೆ ಎಂದು ನಾವು ಕೇಳಿದ್ದೇವೆ.

ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ |
ಯದ್ ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ||45||
ಅಯ್ಯೋ! ರಾಜ್ಯ ಮತ್ತು ಸುಖಗಳ ಆಸೆಯಿಂದ ಸ್ವಜನರನ್ನೇ ಕೊಲ್ಲಲು ಉದ್ಯುಕ್ತರಾಗಿರುವ ನಾವು ಎಂತಹ ದೊಡ್ಡ ಪಾಪಕಾರ್ಯವನ್ನು ಮಾಡಲು ನಿರ್ಧರಿಸಿದ್ದೇವೆ!
ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ |
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ||46||
ಯುದ್ಧದಲ್ಲಿ ಏನೂ ಪ್ರತೀಕಾರ ಮಾಡದಿರುವ ಮತ್ತು ಕೈಯಲ್ಲಿ ಶಸ್ತ್ರವನ್ನು ಹಿಡಿಯದಿರುವ ನನ್ನನ್ನು ಶಸ್ತ್ರವನ್ನು ಹಿಡಿದ ಧೃತರಾಷ್ಟ್ರ ಪುತ್ರರು ಕೊಲ್ಲುವುದಾದರೆ ಅದು ನನಗೆ ಬಹಳ ಕ್ಷೇಮವನ್ನುಂಟು ಮಾಡೀತು!
ಸಂಜಯ
ಏವಮುಕತ್ವಾಽರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ |
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ||47||
ಸಂಜಯ ಹೀಗೆ ಹೇಳಿ ಅರ್ಜುನನು ಶೋಕದಿಂದ ಕೂಡಿದ ಮನಸ್ಸುಳ್ಳವನಾಗಿ ತನ್ನ ಬಿಲ್ಲು-ಬಾಣಗಳನ್ನು ತ್ಯಜಿಸಿ ಯುದ್ಧಭೂಮಿಯಲ್ಲಿ ರಥದ ಮಧ್ಯದಲ್ಲಿ ಕುಳಿತುಕೊಂಡನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಯೋವಿಂಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ದಶಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಕೃಷ್ಣನಿಂದ ಉಪದೇಶ ಪ್ರಾರಂಭ. ಆತ್ಮನಿತ್ಯತ್ವ ಸಮರ್ಥನೆ.
ಸಂಜಯಃ
ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ |
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ||1||
ಸಂಜಯ ಆ ರೀತಿಯಲ್ಲಿ ಬಂಧುಗಳ ಮೇಲೆ ಕೃಪೆಯಿಂದ ಕೂಡಿದವನಾಗಿ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ವಿಷಾದಿಸುತ್ತಿದ್ದ ಅರ್ಜುನನನ್ನು ಕುರಿತು ಮಧುಸೂದನನು ಹೀಗೆ ಮಾತನಾಡಿದನು.
ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ |
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ||2||
ಅರ್ಜುನನೇ, ನಿನಗೆ ಆರ್ಯರಿಂದ ಸೇವಿತವಲ್ಲದ, ಸ್ವರ್ಗಸಾಧನವಲ್ಲದ, ಅಕೀರ್ತಿಯನ್ನುಂಟು ಮಾಡುವ ಈ ಮನೋದೌರ್ಬಲ್ಯವು ಅಕಾಲದಲ್ಲಿ ಎಲ್ಲಿಂದ ಉಂಟಾಯಿತು?
ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ ತ್ವಯ್ಯುಪಪದ್ಯತೇ |
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ||3||
ಪಾರ್ಥನೇ, ಹೀಗೆ ಮನೋವಿಷಾದವನ್ನು ಹೊಂದಬೇಡ. ಇದು ನಿನಗೆ ಉಚಿತವಲ್ಲ. ಎಲೈ ಪರಂತಪನೇ, ಕ್ಷುದ್ರವಾದ ಈ ಮನೋದೌರ್ಬಲ್ಯವನ್ನು ಬಿಟ್ಟು ಎದ್ದೇಳು.
ಅರ್ಜುನಃ
ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ |
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ||4||
ಅರ್ಜುನ ಎಲೈ ಮಧುಸೂದನನೇ, ಶತ್ರುಸೂದನನೇ, ನಾನು ಪೂಜೆಗೆ ಅರ್ಹರಾದ ಭೀಷ್ಮರನ್ನು ಮತ್ತು ದ್ರೋಣರ ಜೊತೆ ಯುದ್ಧದಲ್ಲಿ ಬಾಣಗಳಿಂದ ಹೇಗೆ ಪ್ರತಿಯಾಗಿ ಯುದ್ಧವನ್ನು ಮಾಡುವೆನು?
ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ ಭೈಕ್ಷಮಪೀಹ ಲೋಕೇ |
ಹತ್ವಾಽರ್ಥಕಾಮಾಂಸ್ತು ಗುರೂನಿಹೈವ
ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ||5||
ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಲೋಕದಲ್ಲಿ ಭಿಕ್ಷೆಯಿಂದ ಜೀವಿಸುವುದು ಶ್ರೇಯಸ್ಕರವಾದುದು. ನಾವು ರಾಜ್ಯಾದಿ ರೂಪವಾದ ಅರ್ಥಕಾಮರಾದ ಗುರುಗಳನ್ನು ಕೊಂದರೆ ಇಲ್ಲಿಯೇ ಅವರ ರಕ್ತದಿಂದ ತೊಯ್ದ ಭೋಗಗಳನ್ನು ಅನುಭವಿಸಬೇಕಾದೀತು!
ನ ಚೈತದ್ ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ |
ಯಾನೇವ ಹತ್ವಾ ನ ಜಿಜೀವಿಷಾಮಃ
ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ||6||
ನಾವು ಅವರನ್ನು ಗೆಲ್ಲುವೆವೋ ಅಥವಾ ಅವರು ನಮ್ಮನ್ನು ಗೆಲ್ಲುವರೋ ಇದರಲ್ಲಿ ಯಾವುದು ಶ್ರೇಷ್ಠವಾದುದು ಎಂದು ನಮಗೆ ತಿಳಿಯುತ್ತಿಲ್ಲ. ಗುರುಗಳು, ಪಿತಾಮಹರು ಮೊದಲಾದವರನ್ನು ವಧೆ ಮಾಡುವುದು ನಮಗೆ ಅನುಚಿತ. ಮೊಮ್ಮಕ್ಕಳು, ಶಿಷ್ಯರನ್ನು ವಧೆ

ಮಾಡುವುದು ಭೀಷ್ಮ-ದ್ರೋಣಾದಿಗಳಿಗೂ ಅನುಚಿತ ಎಂದು ಭಾವ. ಯಾರನ್ನು ವಧೆ ಮಾಡಿ ನಾವು ಜೀವಿಸಲು ಬಯಸುವುದಿಲ್ಲವೋ ಅಂತಹ ಧೃತರಾಷ್ಟ್ರ ಪುತ್ರರು ಎದುರಿಗೇ ಸಿದ್ಧರಾಗಿ ನಿಂತಿದ್ದಾರೆ.

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾ ಧರ್ಮಸಮ್ಮೂಢಚೇತಾಃ |
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥7॥

ನನ್ನ ಸ್ವಭಾವವು ಈ ಕಾರ್ಪಣ್ಯದೋಷದಿಂದ ಮುಚ್ಚಿಹೋಗಿದೆ. ಧರ್ಮದ ವಿಷಯದಲ್ಲಿ ಸಂಭ್ರಾಂತಿಗೆ ಒಳಗಾದ ಮನಸ್ಸಿನಿಂದ ನಿನ್ನನ್ನು ಕೇಳುತ್ತಿದ್ದೇನೆ. ನಾನು ನಿನಗೆ ಶಿಷ್ಯನಾಗಿ ಶರಣಾಗತನಾಗಿದ್ದೇನೆ. ನನಗೆ ಯಾವುದು ಶ್ರೇಯಸ್ಸೆಂದು ನಿಶ್ಚಿತವಾಗಿ ಹೇಳುವವನಾಗು.

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್
ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ |
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥8॥

ನಾನು ಶತ್ರುರಹಿತವಾದ ಭೂಮಿಯ ರಾಜ್ಯವನ್ನಾಗಲೀ ಅಥವಾ ದೇವತೆಗಳ ರಾಜ್ಯವನ್ನೇ ಆಗಲೀ ಹೊಂದಿದರೂ ನನ್ನ ಇಂದ್ರಿಯಗಳನ್ನು ಒಣಗಿಸುತ್ತಿರುವ ಈ ಶೋಕವನ್ನು ಯಾವುದು ಕಳೆದೀತು ಎಂದು ಕಾಣುತ್ತಿಲ್ಲ.

ಸಂಜಯಃ
ಏವಮುಕತ್ತ್ವ ಹೃಷೀಕೇಶಂ ಗುಡಾಕೇಶಃ ಪರಂತಪಃ |
ನ ಯೋತ್ಸ್ಯ ಇತಿ ಗೋವಿಂದಮುಕತ್ತ್ವ ತೂಷ್ಣೀಂ ಬಭೂವ ಹ ॥9॥

ಸಂಜಯ ಶತ್ರುತಾಪನನಾದ ಗುಡಾಕೇಶನು ಸರ್ವೇಂದ್ರಿಯನಿಯಾಮಕನಾದ ಕೃಷ್ಣನಿಗೆ ಹೀಗೆ ಹೇಳಿ ಆ ಗೋವಿಂದನನ್ನು ಕುರಿತು ನಾನು ಯುದ್ಧ ಮಾಡುವುದಿಲ್ಲ ಎಂದು ಹೇಳಿ ಸುಮ್ಮನಾದನು.

ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ |
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥10॥

ಎಲೈ ಭಾರತನೇ, ಹೃಷೀಕೇಶನು ಎರಡು ಸೈನ್ಯಗಳ ಮಧ್ಯದಲ್ಲಿ ವಿಷಾದಕ್ಕೆ ಒಳಗಾಗಿ ಕುಳಿತಿದ್ದ ಅರ್ಜುನನನ್ನು ಕುರಿತು ನಗುವವನಂತೆ ಈ ಮಾತನ್ನು ಆಡಿದನು.

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ |
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥11॥

ಯಾರು ಶೋಕಕ್ಕೆ ಅರ್ಹರಲ್ಲವೋ ಅವರನ್ನು ಕುರಿತು ನೀನು ಶೋಕ ಪಡುತ್ತಿದ್ದೀಯೆ. ನಿನ್ನ ಮನಸ್ಸಿಗೆ ತೋರಿದಂತೆಯೇ ನೀನು ಮಾತನಾಡುತ್ತಿದ್ದೀಯೆ. ಪಂಡಿತರಾದವರು ಬದುಕಿರುವವರ ವಿಷಯದಲ್ಲಿ ಹೇಗೆ ಶೋಕ ಪಡುವುದಿಲ್ಲವೋ ಹಾಗೆ ಮೃತರ ವಿಷಯದಲ್ಲೂ ಶೋಕಪಡುವುದಿಲ್ಲ.

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ |
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃಪರಮ್ ॥12॥

ನಾನು ಹಿಂದೆ ಎಂದೂ ಇರಲಿಲ್ಲವೆಂದು ಇಲ್ಲ. ನೀನಾಗಲೀ, ಈ ರಾಜರಾಗಲೀ ಹಿಂದೆ ಎಂದೂ ಇರಲಿಲ್ಲವೆಂದು ಇಲ್ಲ. ನಾವೆಲ್ಲರೂ ಇನ್ನು ಮುಂದೆ ಇರುವುದಿಲ್ಲ ಎಂಬುವುದೂ ಇಲ್ಲ.

ವಿಶೇಷ ವಿಚಾರ ತನ್ನ ವಿಷಯದಲ್ಲಿ `ನ ತ್ವೇವಾಹಂ' ಎಂದು ತು ಶಬ್ದವನ್ನು ಪ್ರಯೋಗಿಸಿ, ತನ್ನ ದೇಹವೂ ನಿತ್ಯವಾದುದು ಎಂಬ ವಿಶೇಷವನ್ನು ಕೃಷ್ಣನು ಸೂಚಿಸುತ್ತಾನೆ. ಅದರಿಂದ ಜೀವರಿಗೆ ತನ್ನ ಸಾಮ್ಯವು ಇಲ್ಲ ಎಂದು ತಿಳಿಸುತ್ತಾನೆ.

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ |
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥13॥

ಪ್ರಾಕೃತದೇಹವುಳ್ಳ ಜೀವನಿಗೆ ಈ ದೇಹದಲ್ಲಿ ಹೇಗೆ ಬಾಲ್ಯ, ಯೌವ್ವನಗಳು ಬರುತ್ತವೆಯೋ ಅದರಂತೆ ಇನ್ನೊಂದು ದೇಹವೂ ಬರುತ್ತದೆ. ಧೀರನಾದವನು ಈ ವಿಷಯದಲ್ಲಿ ಮೋಹವನ್ನು ಹೊಂದುವುದಿಲ್ಲ.

ವಿಶೇಷ ವಿಚಾರ ಜೀವನ ಸ್ವರೂಪವು ನಿತ್ಯ, ದೇಹಾದಿಗಳು ಪ್ರವಾಹತಃ ನಿತ್ಯವಾದವು ಎಂದು ಹೇಳಿ, ಕೃಷ್ಣನು ಜಗತ್ತಿಗೆ ಭವಿಷ್ಯತ್ಕಾಲದಲ್ಲಿ ಬಾಧವು ಬರುತ್ತದೆ ಎಂಬ ಶಂಕೆಯನ್ನು ಪರಿಹರಿಸುತ್ತಾನೆ.

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ |
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥14॥

ಎಲೈ ಕೌಂತೇಯನೇ, ಶಬ್ದಸ್ಪರ್ಶಾದಿ ಮಾತ್ರೆಗಳ ಸ್ಪರ್ಶ ಎಂದರೆ ಅನುಭವವೇ ಶೀತೋಷ್ಣ-ಸುಖ-ದುಃಖಾದಿಗಳಿಗೆ ಕಾರಣವಾಗುತ್ತದೆ. ಎಲೈ ಭಾರತನೇ, ಈ ಮಾತ್ರಾ ಸ್ಪರ್ಶಗಳು ಬಂದು ಹೋಗುವಂತಹವುಗಳಾದ್ದರಿಂದ ಅನಿತ್ಯವಾದವುಗಳು. ಅಭಿಮಾನವನ್ನು ತ್ಯಜಿಸಿ ಅವುಗಳನ್ನು ವಿಫಲವಾಗಿ ಮಾಡಬೇಕು.

ವಿಶೇಷ ವಿಚಾರ ಅಭಿಮಾನಸಹಿತವಾದ ಮಾತ್ರಾಸ್ಪರ್ಶಗಳೇ ಸುಖ-ದುಃಖಗಳನ್ನು ಕೊಡುತ್ತವೆ. ಅಭಿಮಾನವಿಲ್ಲದಿದ್ದರೆ ಕೇವಲ ಮಾತ್ರಾಸ್ಪರ್ಶಗಳು ಸುಖ-ದುಃಖಗಳನ್ನು ಕೊಡುವುದಿಲ್ಲ ಎಂದು ಅಭಿಪ್ರಾಯ.

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ |
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥15॥

ಎಲೈ ಪುರುಷಶ್ರೇಷ್ಠನೇ, ಯಾವ ಜೀವನನ್ನು ಈ ಮಾತ್ರಾಸ್ಪರ್ಶಗಳು ವ್ಯಥೆಗೊಳಿಸುವುದಿಲ್ಲವೋ ಮತ್ತು ಯಾವನು ಸುಖ-ದುಃಖಗಳಲ್ಲಿ ಸಮನಾಗಿದ್ದು ಧೀರನಾಗಿರುತ್ತಾನೆಯೋ ಅವನು ಮೋಕ್ಷವನ್ನು ಪಡೆಯುತ್ತಾನೆ.

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ |
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥16॥

ಅಸತ್ತಿಗೆ ಭಾವವು ಇರುವುದಿಲ್ಲ. ಸತ್ಯವಾದ ಪದಾರ್ಥಕ್ಕೆ ಅಭಾವವೂ ಇರುವುದಿಲ್ಲ. ಈ ಎರಡು ತತ್ತ್ವಗಳ ನಿಶ್ಚಯವು ತತ್ತ್ವದರ್ಶಿಗಳಾದ ಜ್ಞಾನಿಗಳಿಂದ ತಿಳಿಯಲ್ಪಟ್ಟಿದೆ.

ವಿಶೇಷ ವಿಚಾರ ಇಲ್ಲಿ ಅಸತ್ ಎಂಬ ಪದದಿಂದ ಶಶಶೃಂಗಾದಿಗಳನ್ನೇ ತೆಗೆದುಕೊಳ್ಳಬೇಕು. ಏಕೆಂದರೆ ಸತ್, ಅಸತ್ ಬಿಟ್ಟು ಮೂರನೆಯ ಒಂದು ಕೋಟಿಯನ್ನು ಹೇಳಿಲ್ಲ. ಸತ್ ಪದದಿಂದ ಅಸತ್‌ಭಿನ್ನವಾದ, ಅರ್ಥಕ್ರಿಯಾಕಾರಿಯಾದ ಮತ್ತು ವಿದ್ಯಮಾನವಾದ, ಪ್ರಸ್ತುತ ದೇಹವನ್ನು ಹಿಡಿದು ಬ್ರಹ್ಮನವರೆಗೆ ಎಲ್ಲವನ್ನೂ ತೆಗೆದುಕೊಳ್ಳಬೇಕು. ಅಸತಃ=ಶಶಶೃಂಗಾದಿಗಳಿಗೆ, ಭಾವಃ= ಸತ್ವವು, ನ= ಇರುವುದಿಲ್ಲ. ಶಶಶೃಂಗಾದಿಗಳಲ್ಲಿ ಸದ್ವೈಲಕ್ಷಣ್ಯವು ಇರುತ್ತದೆ, ಆದರೆ ಅಸದ್ವೈಲಕ್ಷಣ್ಯವು ಇರುವುದಿಲ್ಲ. ಅಸತಃ= ದೇಹಾದಿಗಳಿಗೆ, ಅಭಾವಃ= ಅತ್ಯಂತಾಭಾವವು, ನ= ಇರುವುದಿಲ್ಲ. ದೇಹಾದಿಗಳಲ್ಲಿ ಅಸದ್ವೈಲಕ್ಷಣ್ಯವೇ ಇದೆ. ಆದರೆ ಸದ್ವೈಲಕ್ಷಣ್ಯ ಇಲ್ಲ ಎಂದು ಅಭಿಪ್ರಾಯ. ಅನಯೋಃ ಉಭಯೋಃ= ಹಿಂದಿನ ಶ್ಲೋಕಾರ್ಧದಲ್ಲಿ ಹೇಳಿದ ಅಸತ್ತಿನಲ್ಲಿ ಸದ್ವೈಲಕ್ಷಣ್ಯ ಮಾತ್ರ. ಸತ್ತಿನಲ್ಲಿ ಅಸದ್ವೈಲಕ್ಷಣ್ಯವು ಮಾತ್ರ ಎಂಬ ವ್ಯವಸ್ಥೆಯುಳ್ಳ ಎರಡು ಪಕ್ಷಗಳ, ಅಂತಃ= ಇದು ಹೀಗೆಯೇ ಎಂಬ ನಿಶ್ಚಯವು, ತತ್ತ್ವದರ್ಶಿಭಿಃ= ತತ್ತ್ವವಾದಿಗಳಿಂದ, ದೃಷ್ಟಃ= ಸಾಕ್ಷಿಯಿಂದ ತಿಳಿಯಲ್ಪಟ್ಟಿದೆ. ಈ ವಿಷಯವು ಸಾಕ್ಷಿಸಿದ್ಧವಾದುದರಿಂದ ಎಂದಿಗೂ ವ್ಯತ್ಯಾಸವನ್ನು ಹೊಂದುವುದಿಲ್ಲ. ಜೀವನು ನಿತ್ಯನಾದುದರಿಂದ, ದೇಹಾದಿಗಳು ಅನಿತ್ಯವಾದರೂ ಅವುಗಳ ಅತ್ಯಂತಾಭಾವ-ವಿಲ್ಲದಿರುವ ಕಾರಣ ಪುನಃ ಇನ್ನೊಂದು ದೇಹವು ಬರುವುದರಿಂದ ಜೀವನ ಸ್ವರೂಪ ವಿಷಯದಲ್ಲಿಯೂ ಮತ್ತು ದೇಹಾದಿಗಳ ವಿಷಯದಲ್ಲಿಯೂ ದುಃಖವನ್ನು ಮಾಡಬಾರದು ಎಂದು ಅಭಿಪ್ರಾಯ.

ಸತ್ ಪದದಿಂದ ಬ್ರಹ್ಮಮಾತ್ರವನ್ನು ತೆಗೆದುಕೊಂಡು ಅಂತ ಪದದಿಂದ ನಾಶ ಎಂಬ ಅರ್ಥವನ್ನು ತೆಗೆದುಕೊಂಡರೆ ಅನಯೋರುಭಯೋಃ= ಪೂರ್ವಾರ್ಧದಲ್ಲಿ ಧರ್ಮಿಗಳಾಗಿ ತೆಗೆದುಕೊಂಡ ಸದಸತ್ಪದಾರ್ಥಗಳಾದ ಬ್ರಹ್ಮ ಮತ್ತು ಶಶವಿಷಾಣಗಳಿಗೂ, ಅವುಗಳಲ್ಲಿ ಇವೆ ಎಂದು ಹೇಳಲ್ಪಟ್ಟ ಅಸದ್ವೈಲಕ್ಷಣ್ಯ ಮತ್ತು ಸದ್ವೈಲಕ್ಷಣ್ಯಗಳಿಗೂ ಯಾರ ಮತದ ರೀತಿಯಿಂದಲೂ ನಾಶರೂಪವಾದ ಅವಸಾನವೇ ಇಲ್ಲದಿರುವ ಕಾರಣ ವಾಕ್ಯಾರ್ಥವು ಉಪಪನ್ನವಾಗುವುದಿಲ್ಲ. ಈ ಸದಸತ್ಪದಾರ್ಥಗಳನ್ನು ಬಿಟ್ಟು ಉಳಿದ ಜಗತ್ತಿನಲ್ಲಿ ಈ ಎರಡರ ನಾಶ ಎಂದು ಅಂಗೀಕಾರ ಮಾಡಿದರೆ ಜಗತಿ ಎಂಬ ಪದವು ಇಲ್ಲದಿರುವುದರಿಂದ ಶ್ರುತವಾದ ಸದಸತ್ಪದಾರ್ಥಗಳನ್ನು ಬಿಡುವುದರಿಂದ ಶ್ರುತಹಾನಿ ಮತ್ತು ಇಲ್ಲದಿರುವ ಜಗತಿ ಎಂಬ ಶಬ್ದವನ್ನು ಕಲ್ಪನೆ ಮಾಡುವುದರಿಂದ ಅಶ್ರುತ ಕಲ್ಪನಾ ಎಂಬ ದೋಷವು ಬರುತ್ತದೆ. ಈ ಪಕ್ಷದಲ್ಲಿ ಜಗತ್ತಿನಲ್ಲಿಯೂ ಸದಸತ್ತುಗಳ ನಾಶವಿಲ್ಲದಿರುವುದರಿಂದ ಧರ್ಮಿನಾಶವಿಲ್ಲದಿರುವ ಕಾರಣ ಅವುಗಳಿಗೆ ಅಂಥವನ್ನು ಹೇಳಲು ಬರುವುದಿಲ್ಲ. ಧರ್ಮನಾಶದಿಂದಲೂ ಅಂಥವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಸದಸತ್ತುಗಳಲ್ಲಿರುವ ಧರ್ಮಗಳಿಗೆ ಬೇರೆ ಇನ್ನೊಂದು ಕಡೆಯಲ್ಲಿ ನಾಶವು ಅಸಂಭಾವಿತವಾದುದು. ಇವುಗಳ ಧರ್ಮಕ್ಕೆ ಸದೃಶವಾದ ಧರ್ಮಾಂತರವು ನಾಶವನ್ನು ಹೊಂದುತ್ತದೆ ಎಂದು ಅಂಗೀಕರಿಸಿದರೆ ಅನಯೋರುಭಯೋಃ ಎಂದು ಹೇಳಿ ಹಿಂದೆ ಹೇಳಿದ ಎರಡು ಪಕ್ಷಗಳನ್ನೇ ಪರಾಮರ್ಶೆ ಮಾಡಿದುದರ ವಿರೋಧವು ಬರುತ್ತದೆ. ಸತ್ಯತ್ವ ವಾದಿಗಳಾದ ನೈಯಾಯಿಕರ ಮತದಲ್ಲಿ ಜಗತ್ತಿನಲ್ಲಿ ಅವರು ಸದ್ವೈಲಕ್ಷಣ್ಯದ ಅತ್ಯಂತಾಭಾವವನ್ನು ಅಂಗೀಕಾರ ಮಾಡುವುದರಿಂದ ಮತ್ತು ಅಸದ್ವೈಲಕ್ಷಣ್ಯವನ್ನು ಅಂಗೀಕಾರ ಮಾಡುವುದರಿಂದ ಎರಡಕ್ಕೂ ನಾಶವಿಲ್ಲದಿರುವ ಕಾರಣ ವಾಕ್ಯಾರ್ಥದ ಅನುಪಪತ್ತಿಯು ಇದ್ದೇ ಇರುತ್ತದೆ. ಮಿಥ್ಯಾತ್ವವಾದಿಗಳಾದ ಅದ್ವೈತಿಗಳ ರೀತಿಯಲ್ಲಾದರೂ ಜಗತ್ತಿನಲ್ಲಿ ಸದ್ವೈಲಕ್ಷಣ್ಯ ಮತ್ತು ಅಸದ್ವೈಲಕ್ಷಣ್ಯಗಳೆರಡೂ ಇರುವುದರಿಂದ ಅವುಗಳಿಗೆ ನಾಶವು ಇಲ್ಲದಿರುವುದರಿಂದ ವಾಕ್ಯಾರ್ಥವು ಸುತರಾಂ ಅನುಪಪನ್ನವಾಗುತ್ತದೆ. ಜಗತ್ತು ಪ್ರತೀತವಾಗುವುದರಿಂದ ಅಸದ್ವಿಲಕ್ಷಣವಾದರೂ ಸ್ವಾತ್ಯಂತಾಭಾವ ಸಮಾನಾಧಿಕರಣ ರೂಪ ಮಿಥ್ಯಾತ್ವವಿದೆ ಎಂದು ಅಂಗೀಕರಿಸುವ ವಾದಿಗಳು ಪರಂಪರೆಯಿಂದ ನಿಷೇಧ್ಯವಾಗಿ ಪ್ರಸ್ತುತವಾದ ಭಾವಾಭಾವಗಳಿಗೂ ಅವಸಾನವನ್ನು ಅಂಗೀಕಾರ ಮಾಡಲು ಸಾಧ್ಯವಿಲ್ಲದಿರುವುದರಿಂದ ಶ್ಲೋಕಕ್ಕೆ ಹೀಗೂ ಅರ್ಥವನ್ನು ಹೇಳಲು ಸಾಧ್ಯವಿಲ್ಲ. ಭಾವಾಭಾವಪದಗಳಿಂದ ಸತ್ಅತ್ವಸತ್ವಗಳನ್ನು ತೆಗೆದುಕೊಂಡು `ಅಂತ' ಎಂಬ ಪದಕ್ಕೆ ಲಕ್ಷಣಾವೃತ್ತಿಯಿಂದ ಅಭಾವ ಎಂದು ಅರ್ಥವನ್ನು ಮಾಡಿದರೆ ಆಗಲೂ ಜಗತ್ತಿನಲ್ಲಿ ತ್ರೈಕಾಲಿಕನಿಷೇಧಾಪ್ರಯೋಗಿತ್ವರೂಪವಾದ ಸತ್ವದ ನಿಷೇಧವು ಅಭಾವದ ಅಭಾವವು ಭಾವವೇ ಎಂಬ ವಚನಕ್ಕೆ ಅನುಸಾರವಾಗಿ, ತ್ರೈಕಾಲಿಕನಿಷೇಧಪ್ರತಿಯೋಗಿತ್ವರೂಪವಾದ ಅಸತ್ವವನ್ನೇ ಸ್ಥಾಪಿಸುವುದರಿಂದ ಅಲ್ಲಿ ಪುನಃ ಹೇಳಲ್ಪಡುವ ಅಸತ್ವನಿಷೇಧವು ವಿರುದ್ಧವಾಗುತ್ತದೆ. ಅದರಂತೆ ತ್ರೈಕಾಲಿಕನಿಷೇಧಪ್ರತಿಯೋಗಿತ್ವರೂಪವಾದ ಅಸತ್ವದ ನಿಷೇಧವೂ ಸತ್ವ ನಿಷೇಧದ ಫಲವಾದ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ ನಿಷೇಧರೂಪವಾದ್ದರಿಂದ ಸತ್ತಾನಿಷೇಧವನ್ನು ವಿರೋಧಿಸುತ್ತದೆ. ಆದ್ದರಿಂದ ಈ ಪಕ್ಷದಲ್ಲಿ ಪರಸ್ಪರ ವ್ಯಾಹತಿ ಒಂದು ಅಧಿಕವಾಗಿ ಬರುತ್ತದೆ. ಹಾಗಲ್ಲದೆ, `ಅಸಚ್ಚೇತ್ ನ ಪ್ರತೀಯೇತ' ಎಂಬ ನಿಮ್ಮ ಪ್ರಾಚೀನರ ವಚನಕ್ಕೆ ಅನುಗುಣವಾಗಿ ಅಸತ್ವ ಎಂದರೆ ಪ್ರತ್ಯಕ್ಷ ಅಯೋಗ್ಯತ್ವ ಹೊರತು ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವಲ್ಲ ಎಂದು ಹೇಳುವುದಾದರೆ ಆಗಲೂ ಹೀಗೆ ಅಂಗೀಕರಿಸಿದ ಪ್ರತ್ಯಕ್ಷ ಅಯೋಗ್ಯತ್ವರೂಪವಾದ ಅಸತ್ವದ ನಿಷೇಧವೆಂದರೆ ಪ್ರತ್ಯಕ್ಷ ಯೋಗ್ಯತ್ವವೇ. ಆ ಪ್ರತ್ಯಕ್ಷಯೋಗ್ಯತ್ವವಾದರೂ ಸನ್ನಿಕರ್ಷ ಯೋಗ್ಯತ್ವ ರೂಪವಾದುದರಿಂದ ಅರ್ಥಸತ್ವವನ್ನೇ ಸಾಧನೆ ಮಾಡುತ್ತದೆ. ಆಗ ನಿನಗೆ ಇಷ್ಟವಾದ ಸತ್ತಾನಿಷೇಧಕ್ಕೆ ಅದು ಬಾಧಕವಾಗುತ್ತದೆ. ಸತ್ತಾನಿಷೇಧವಾದರೂ ನಿನಗೆ ಅಭಿಲಷಿತವಾದ ಪ್ರತ್ಯಕ್ಷ ಅಯೋಗ್ಯತ್ವರೂಪವಾದ ಅಸತ್ವನಿಷೇಧದ ಫಲವಾದ ಪ್ರತ್ಯಕ್ಷ ಯೋಗ್ಯತ್ವಕ್ಕೆ ಬಾಧಕವಾಗುವುದರಿಂದ ಔಷಧಿಯನ್ನು ಕುಡಿದರೂ ರೋಗವು ನಾಶವಾಗಲಿಲ್ಲ ಎಂಬ ಗಾದೆಗೆ ಸಮವಾಯಿತು ಮತ್ತು `ನ ಭಾವೋ ವಿದ್ಯತೇ ಸತಃ' ಎಂಬ ಮೂಲಕ್ಕೆ ವಿರುದ್ಧವೂ ಆಯಿತು. ಅಲ್ಲದೆ, ಈ ಪ್ರಕರಣದ ಆರಂಭದಲ್ಲಿ ಕೃಷ್ಣನೇ `ನ ಚೈವ ನ ಭವಿಷ್ಯಾಮಃ ಸರ್ವೇವಯಮತಃ ಪರಂ' ಎಂದು ವ್ಯತಿರೇಕವನ್ನು ಹೇಳುವ ಮೂಲಕ ಅನಿತ್ಯವಾದ ಜಗತ್ತಿನಲ್ಲಿ ಪ್ರವಾಹತಃ ನಿತ್ಯವಾದ, ನಿತ್ಯವಾದ ವಸ್ತುಗಳಲ್ಲಿ ಸ್ವರೂಪತಃ ನಿತ್ಯವಾದ, ಭಾವರೂಪವಾದ ಸತ್ವವನ್ನೇ ದೃಢೀಕರಿಸಿರುವುದರಿಂದ ಅವಸಾನ ರೂಪವಾದ ಅಥವಾ ನಾಶರೂಪವಾದ ಅದರ ಅಂತಕ್ಕೆ ಎಲ್ಲಿಯ ಅವಕಾಶ?

ಆದುದರಿಂದ ನಾವು ಹೇಳಿದುದೇ ಸರಿಯಾದ ಅರ್ಥವೆಂದು ತಿಳಿಯಬೇಕು (ಲಕ್ಷಾಲಂಕಾರ).
ಅವಿನಾಶಿ ತು ತದ್ ವಿದ್ಧಿ ಯೇನ ಸರ್ವಮಿದಂ ತತಮ್ |
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ॥17॥
ಯಾವ ಪರಬ್ರಹ್ಮನಿಂದ ಈ ಜಗತ್ತು ವ್ಯಾಪ್ತವಾಗಿದೆಯೋ ಆ ಪರಬ್ರಹ್ಮನನ್ನು ವಿಶೇಷವಾಗಿ ವಿನಾಶವಿಲ್ಲದವನು ಎಂದು ತಿಳಿ. ಅವನ ದೇಹಕ್ಕೂ ನಾಶವಿಲ್ಲದುದರಿಂದ ಅದು ಜೀವನಿಗಿಂತ ಪರಬ್ರಹ್ಮನ ವಿಶೇಷವೆಂದು `ತು' ಶಬ್ದವು ತಿಳಿಸುತ್ತದೆ. ಹ್ರಾಸಹೀನನಾದ ಈ ಬ್ರಹ್ಮನ ನಾಶವನ್ನು ಯಾರಿಗೂ ಮಾಡಲಾಗುವುದಿಲ್ಲ. (ಹ್ರಾಸವೇ ಇಲ್ಲದವನಿಗೆ ನಾಶವು ಎಲ್ಲಿಂದ ಬರಬೇಕು?)
ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ |
ಅನಾಶಿನೋऽಪ್ರಮೇಯಸ್ಯ ತಸ್ಮಾದ್ ಯುದ್ಧ್ಯಸ್ವ ಭಾರತ ॥18॥
ಎಲೈ ಭಾರತನೇ, ಸ್ವರೂಪತಃ ನಿತ್ಯನಾದ ಜೀವನ ಈ ಭೌತಿಕ ದೇಹಗಳು ವಿನಾಶವುಳ್ಳವುಗಳು. ನಾಶರಹಿತನಾದ, ಅಪರಿಚ್ಛಿನ್ನನಾದ ಪರಮಾತ್ಮನ ಪ್ರತಿಬಿಂಬನಾಗಿರುವುದರಿಂದ ಜೀವನ ಸ್ವರೂಪಕ್ಕೆ ನಾಶವಿಲ್ಲ. ಆದ್ದರಿಂದ ಯುದ್ಧವನ್ನು ಮಾಡು.
ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ |
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥19॥
ಯಾವನು ಜೀವನನ್ನೇ ಸ್ವತಂತ್ರನಾಗಿ ಹಂತಕನೆಂದೂ ಮತ್ತು ಯಾವನು ಜೀವನ ದೇಹವೇ ಹತವಾದರೂ ಜೀವನ ಸ್ವರೂಪವೇ ಹತವಾದುದೆಂದೂ ತಿಳಿಯುತ್ತಾನೆಯೋ, ಅವರಿಬ್ಬರೂ ತತ್ತ್ವಜ್ಞಾನವುಳ್ಳವರಲ್ಲ.
ನ ಜಾಯತೇ ಮ್ರಿಯತೇ ವಾ ಕದಾಚಿತ್
ನಾ(ಽ)ಯಂ ಭೂತ್ವಾ ಭವಿತಾ ವಾ ನ ಭೂಯಃ |
ಅಜೋ ನಿತ್ಯಃ ಶಾಶ್ವತೋऽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥20॥
ಜೀವೇಶ್ವರರಿಗೂ ಉತ್ಪತ್ತಿ-ವಿನಾಶವಿಲ್ಲ, ಈಶ್ವರನ ದೇಹಕ್ಕೂ ಉತ್ಪತ್ತಿ ಇಲ್ಲದಿರುವ ಕಾರಣ ಅವನು ಸ್ವತಂತ್ರ, ಜೀವನಿಗೆ ಸ್ವರೂಪದಿಂದ ಉತ್ಪತ್ತಿ ಇಲ್ಲದಿದ್ದರೂ ದೇಹಾದಿಗಳಿಂದ ಉತ್ಪತ್ತಿ ಇರುವುದರಿಂದ ಅವನು ಅಸ್ವತಂತ್ರ ಎಂಬ ವಿಷಯದಲ್ಲಿ ಉಪನಿಷನ್ಮಂತ್ರವನ್ನು ಪ್ರಮಾಣವಾಗಿ ಹೇಳುತ್ತಾರೆ. ಜೀವನು ಸ್ವರೂಪತಃ ಹುಟ್ಟುವುದಿಲ್ಲ. ಮೃತನೂ ಆಗುವುದಿಲ್ಲ. ಈಶ್ವರಜ್ಞಾನವು ನಿತ್ಯವಾಗಿದ್ದರೂ, ಒಂದು ವಿಶೇಷ ವಿವಕ್ಷೆಯಿಂದ ತದೈಕ್ಷತ ಇತ್ಯಾದಿ ಶ್ರುತಿಗಳು ಹೇಳುವಂತೆ ಜೀವನು ಅಲ್ಲ. ಮರಣಾನಂತರದಲ್ಲಿ ಪುನಃ ಆ ಜೀವನು ಆ ದೇಹವಿಶಿಷ್ಟನಾಗಿ ಇರುವುದಿಲ್ಲ. ಶಸ್ತ್ರಘಾತದಿಂದ, ಅಸ್ತ್ರದಿಂದ, ವಿಷಪಾನದಿಂದ, ಮಂತ್ರ-ಶಾಪಗಳಿಂದ, ಭಾವನೆಯಿಂದ ಲೋಕದಲ್ಲಿ ಮರಣವು ಕಂಡಿರುವುದರಿಂದ ಯಾವ ರೀತಿಯಲ್ಲಿಯೂ ಜೀವನ ಸ್ವರೂಪಕ್ಕೆ ಮರಣವಿಲ್ಲವೆಂದು ಸೂಚಿಸಲು ಪುನಃ ಪುನಃ ಆ ವಿಷಯವನ್ನು ಹೇಳುತ್ತಾರೆ. ಈ ಜೀವನು ಸ್ವರೂಪತಃ ಜನ್ಮವಿಲ್ಲದವನೂ, ನಿತ್ಯನೂ, ಶಾಶ್ವತನೂ, ದೇಹದಿಂದ ದೇಹಕ್ಕೆ ಹೋಗುವವನೂ ಆದ ಈ ಜೀವನು ಶರೀರವು ಶಸ್ತ್ರಘಾತಕ್ಕೆ ಒಳಗಾದರೂ ಸ್ವರೂಪತಃ ಮರಣವನ್ನು ಹೊಂದುವುದಿಲ್ಲ. (ಅಭೇದವಿಲ್ಲದಿರುವ ಕಡೆಯಲ್ಲಿ ಸಾಮಾನಾಧಿಕರಣ್ಯವು ಸಾದೃಶ್ಯವನ್ನು ಹೇಳುತ್ತದೆ ಎಂಬ ನಿಯಮವಿರುವುದರಿಂದ ಅಜನೂ, ನಿತ್ಯನೂ, ಶಾಶ್ವತನೂ ಮತ್ತು ಪುರಾಣನೂ ಆದ ಪರಮಾತ್ಮನಿಗೆ ಸದೃಶನಾಗಿರುವುದರಿಂದ ಜೀವನ ದೇಹವು ನಾಶವನ್ನು ಹೊಂದಿದರೂ ಜೀವನ ಸ್ವರೂಪವು ನಾಶವನ್ನು ಹೊಂದುವುದಿಲ್ಲ).
ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ |
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥21॥
ಎಲೈ ಪಾರ್ಥನೇ, ಯಾವನು ಈ ಜೀವನನ್ನು ಸ್ವಾಭಾವಿಕ ನಾಶರಹಿತನಾದವನು, ಉತ್ಪತ್ತಿಹೀನನಾದವನು, ಸ್ವರೂಪವಿಕಾರರಹಿತನಾದವನು ಎಂದು ತಿಳಿಯುತ್ತಾನೆಯೋ ಅಂತಹವನು ಆ ಜೀವನನ್ನು ಹೇಗೆ ಶಸ್ತ್ರಘಾತಕ್ಕೆ ಒಳಪಡಿಸುತ್ತಾನೆ? ಅಥವಾ ಹೇಗೆ ಕೊಲ್ಲುತ್ತಾನೆ? (ಅಥವಾ ಯಾವನು ಅವಿನಾಶಿಯೂ, ನಿತ್ಯನೂ, ಉತ್ಪತ್ತಿರಹಿತನೂ, ಹ್ರಾಸರಹಿತನೂ ಆದ ಪರಮಾತ್ಮನನ್ನು ಸ್ವತಂತ್ರನೆಂದು ತಿಳಿಯುತ್ತಾನೆಯೋ ಅವನು ಇನ್ನೊಬ್ಬನನ್ನು ಹೇಗೆ ಶಸ್ತ್ರಘಾತಕ್ಕಾಗಲೀ, ಮರಣಕ್ಕಾಗಲೀ, ಸ್ವತಂತ್ರವಾಗಿ ಗುರಿ ಪಡಿಸುತ್ತಾನೆ).
ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋऽಪರಾಣಿ |
ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥22॥
ಹೇಗೆ ಸವೆದುಹೋದ ಹಳೆಯ ವಸ್ತ್ರಗಳನ್ನು ತ್ಯಜಿಸಿ ಮನುಷ್ಯನು ಬೇರೆ ಹೊಸ ವಸ್ತ್ರಗಳನ್ನು ಸ್ವೀಕರಿಸುತ್ತಾನೆಯೋ, ಅದರಂತೆ ಜೀರ್ಣವಾದ ಶರೀರಗಳನ್ನು ಬಿಟ್ಟು ದೇಹಿಯಾದ ಜೀವನು ಹೊಸ ಶರೀರವನ್ನು ಸ್ವೀಕರಿಸುತ್ತಾನೆ.
ನೈನಂ ಛಿಂದಂತಿ ಶಸತ್ರಣಿ ನೈನಂ ದಹತಿ ಪಾವಕಃ |
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥23॥
ಈ ಜೀವಚೈತನ್ಯವನ್ನು ಶಸ್ತ್ರವು ಛೇದಿಸುವುದಿಲ್ಲ. ಅಗ್ನಿಯು ದಹಿಸುವುದಿಲ್ಲ. ಜಲವು ನೆನೆಸುವುದಿಲ್ಲ. ವಾಯುವು ಶೋಷಿಸುವುದಿಲ್ಲ.
ಅಚ್ಛೇದ್ಯೋऽಯಮದಾಹ್ಯೋऽಯಮಕ್ಲೇದ್ಯೋऽಶೋಷ್ಯ ಏವ ಚ |
ನಿತ್ಯಃ ಸರ್ವಗತಸ್ಥಾಣುರಚಲೋऽಯಂ ಸನಾತನಃ ॥24॥
ಈ ಜೀವನು ಅಚ್ಛೇದ್ಯನಾದವನು. ದಹಿಸಲು ಸಾಧ್ಯವಿಲ್ಲದವನು. ತೋಯಿಸಲು ಸಾಧ್ಯವಿಲ್ಲದವನು. ಒಣಗಿಸಲು ಸಾಧ್ಯವಿಲ್ಲದವನು. ಅವನು ನಿತ್ಯವೂ ಸರ್ವಗತನಾದ ಪರಮಾತ್ಮನ ಪ್ರತಿಬಿಂಬನಾದವನು. ತನ್ನ ಅಸ್ವಾತಂತ್ರ್ಯದಿಂದ ಚಲಿಸದವನು ಮತ್ತು ವಿಧಿ-ನಿಷೇಧ ಬದ್ಧನಾದವನು (ಅಥವಾ ಪರಮಾತ್ಮನು ನಿತ್ಯವೂ ಸರ್ವಗತನಾದವನು. ಯಾವಾಗಲೂ ಸ್ವಾತಂತ್ರ್ಯವಿಶಿಷ್ಟನಾದವನು. ಸಕಲ ವೇದ

ಪ್ರತಿಪಾದ್ಯನಾದವನು ಮತ್ತು ಜೀವನು ಮಾತ್ರ ಅವನ ಪ್ರತಿಬಿಂಬನಾದ ಅಣು).
ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ |
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥25॥
ಆ ಸರ್ವಗತನಾದ ಹರಿಯು ಅವ್ಯಕ್ತನಾದವನು. ಅಚಿಂತ್ಯಶಕ್ತಿ ಸಂಪನ್ನನಾದವನು. ಅವನನ್ನು ವಿಕಾರರಹಿತನಾದವನೆಂದು ಜ್ಞಾನಿಗಳು ಹೇಳುತ್ತಾರೆ. ಅವನ ಪ್ರತಿಬಿಂಬನಾದ ಜೀವನನ್ನೂ ನಿತ್ಯನಾದವನೆಂದು ತಿಳಿದು ನೀನು ಶೋಕವನ್ನು ತ್ಯಜಿಸು.
ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ |
ತಥಾಽಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥26॥
ಒಂದು ಪಕ್ಷ ಸ್ವರೂಪತಃ ನಿತ್ಯನಾದರೂ ದೇಹದಿಂದ ಜನ್ಮವನ್ನು ಪಡೆಯುವವನು, ಸ್ವರೂಪತಃ ನಿತ್ಯನಾದರೂ ದೇಹದ ದೃಷ್ಟಿಯಿಂದ ಮರಣವನ್ನು ಹೊಂದುವವನು ಎಂದು ನೀನು ತಿಳಿಯುವುದಾದರೂ, ಎಲೈ ಮಹಾಬಾಹುವೇ, ಶೋಕಪಡುವ ಕಾರಣವಿಲ್ಲ.
ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ |
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥27॥
ಜನಿಸಿದ ವ್ಯಕ್ತಿಗೆ (ವಸ್ತುವಿಗೆ) ಮರಣವು ನಿಶ್ಚಿತವಾದುದು. ಹಾಗೆಯೇ ಮೃತನಾದ ವ್ಯಕ್ತಿಗೆ ಜನನವೂ ನಿಶ್ಚಿತವಾದುದು. ಆದ್ದರಿಂದ ಯಾವುದನ್ನು ಪರಿಹಾರ ಮಾಡಲು ಸಾಧ್ಯವಿಲ್ಲವೋ ಅಂತಹ ವಿಷಯದಲ್ಲಿ ನೀನು ಶೋಕಪಡಬಾರದು.
ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ |
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥28॥
ಎಲೈ ಭಾರತನೇ, ಜೀವ ಶರೀರಗಳು ಮೂಲಪ್ರಕೃತಿಯಿಂದ ಉಂಟಾದವುಗಳು. ಜನನ-ಮರಣಗಳ ಮಧ್ಯೆ ತೇಜೋಬನ್ನಾತ್ಮಕವಾದ ಅಥವಾ ಪಂಚಮಹಾಭೂತಾತ್ಮಕವಾದ ಶರೀರಗಳನ್ನು ಧರಿಸಿ ವ್ಯಕ್ತವಾಗುತ್ತವೆ. ಪುನಃ ಮೂಲಪ್ರಕೃತಿಯಲ್ಲಿಯೇ ನಾಶವನ್ನು ಹೊಂದುತ್ತವೆ. ಈ ವಿಷಯದಲ್ಲಿ ಗೋಳಾಡುವುದು ಏಕೆ?
ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್
ಆಶ್ಚರ್ಯವದ್ ವದತಿ ತಥೈವ ಚಾನ್ಯಃ |
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ ॥29॥
ಸಾತ್ವಿಕ ಪ್ರಕೃತಿಯುಳ್ಳ ಬ್ರಹ್ಮಾದಿ ಜೀವರು ಸರ್ವಸ್ವತಂತ್ರನಾಗಿರುವ ಈ ಹರಿಯನ್ನು, ಸರ್ವಸ್ವತಂತ್ರವಾಗಿಯೇ ತಿಳಿದುಕೊಳ್ಳುತ್ತಾರೆ. `ಗಗನಂ ಗಗನಾಕಾರಂ' ಎಂದಂತೆ. ಹಾಗೆ ತಿಳಿದುಕೊಂಡು ಅವನನ್ನು ಸ್ವತಂತ್ರನೆಂದೇ ಪ್ರವಚನ ಮಾಡುತ್ತಾರೆ. ಇನ್ನೊಬ್ಬನು ಆಶ್ಚರ್ಯವಾದ ಎಂದರೆ ಸರ್ವಸ್ವತಂತ್ರನಾದ ಹರಿಯನ್ನು ಸರ್ವಸ್ವತಂತ್ರನೆಂದೇ ಪ್ರವಚನ ಮಾಡುತ್ತಾನೆ. ಇನ್ನೊಬ್ಬ ಸಾತ್ವಿಕ ಜೀವನು ಅವನನ್ನು ಆಶ್ಚರ್ಯನೆಂದೇ, ಸರ್ವಸ್ವತಂತ್ರನೆಂದೇ ಶ್ರವಣ ಮಾಡುತ್ತಾನೆ. ಇನ್ನೊಬ್ಬ ಜೀವನು ಕೇಳಿದರೂ (ನೋಡಿದರೂ) ಅವನನ್ನು ತಿಳಿಯುವುದಿಲ್ಲ. ಹರಿಯನ್ನು ಸರ್ವಸ್ವತಂತ್ರನೆಂದು ತಿಳಿಯುವವರು, ಅದರಂತೆ ಉಪದೇಶ ಮಾಡುವವರು, ಅದರಂತೆ ಶ್ರವಣ ಮಾಡುವವರು, ಅವನ ಸರಿಯಾದ ಜ್ಞಾನವನ್ನು ಪಡೆಯುವವರು ದುರ್ಲಭ ಎಂದು ಅಭಿಪ್ರಾಯ.
ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ |
ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥30॥
ಎಲೈ ಭಾರತನೇ, ಎಲ್ಲ ಜೀವರ ದೇಹದಲ್ಲಿ ಇರುವ ಈ ದೇಹಿಯಾದ ಜೀವನು ನಿತ್ಯವೂ ಅವಧ್ಯನಾಗಿದ್ದಾನೆ. ಆದ್ದರಿಂದ ಸರ್ವಜೀವರ ವಿಷಯದಲ್ಲಿ ನೀನು ಶೋಕಿಸುವ ಅಗತ್ಯವಿಲ್ಲ.
ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ |
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥31॥
ನಿನ್ನ ಧರ್ಮದ ದೃಷ್ಟಿಯಿಂದ ನೋಡಿದರೂ ನೀನು ಹೀಗೆ ವಿಚಲಿತನಾಗಬಾರದು. ಕ್ಷತ್ರಿಯನಾದವನಿಗೆ ಧರ್ಮಸಂಬಂಧಿಯಾದ ಯುದ್ಧಕ್ಕಿಂತ ಶ್ರೇಯಸ್ಕರವಾದುದು ಇನ್ನೊಂದಿಲ್ಲ.
ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ |
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥32॥
ಎಲೈ ಪಾರ್ಥನೇ, ಪುಣ್ಯವಂತರಾದ ಕ್ಷತ್ರಿಯರು ಭಗವದಿಚ್ಛೆಯಿಂದ ಪ್ರಾಪ್ತವಾದ ಸ್ವರ್ಗದ್ವಾರವೇ ತೆರೆದಿರುವ ಇಂತಹ ಯುದ್ಧದ ಅವಕಾಶವನ್ನು ಪಡೆಯುತ್ತಾರೆ.
ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ |
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥33॥
ಒಂದುಪಕ್ಷ ನೀನು ಧರ್ಮದಿಂದ ಒದಗಿ ಬಂದ ಈ ಯುದ್ಧವನ್ನು ಮಾಡದಿದ್ದರೆ ನಿನ್ನ ಧರ್ಮವನ್ನು ಮತ್ತು ಕೀರ್ತಿಯನ್ನು ಕಳೆದುಕೊಂಡು ಪಾಪವನ್ನು ಹೊಂದುವಿ.
ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ |
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥34॥
ಮನುಷ್ಯರು ನಿನ್ನ ಅಪಕೀರ್ತಿಯನ್ನು ಶಾಶ್ವತವಾಗಿ ಹೇಳುವರು. ಪೂಜಿತನಾದವನಿಗೆ ಉಂಟಾಗುವ ಅಪಕೀರ್ತಿಯು ಮರಣಕ್ಕಿಂತಲೂ ಕೇಡಾದುದು.
ಭಯಾದ್ ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ |

ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥
ಮಹಾರಥರಾದವರು ನೀನು ಭಯದಿಂದ ಹಿಂದಿರುಗಿದೆ ಎಂದು ತಿಳಿಯುವರು. ಯಾರಿಂದ ಹಿಂದೆ ನೀನು ಪೂಜಿತನಾಗಿದ್ದೆಯೋ ಅವರ ದೃಷ್ಟಿಯಲ್ಲೇ ನೀನು ಅಲ್ಪನಾಗುವಿ.
ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ |
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥36॥
ನಿನಗೆ ಅಹಿತರಾದವರು ನಿನ್ನ ಸಾಮರ್ಥ್ಯವನ್ನು ನಿಂದನೆ ಮಾಡುತ್ತಾ, ಕಿವಿಯಿಂದ ಕೇಳಬಾರದ ಅನೇಕ ಮಾತುಗಳನ್ನು ಆಡುವರು. ಅದಕ್ಕಿಂತಲೂ ದುಃಖತರವಾದುದು ಯಾವುದು?
ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ |
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥37॥
ಎಲೈ ಕೌಂತೇಯನೇ, ಮೃತನಾದರೆ ಸ್ವರ್ಗವನ್ನು ಪಡೆಯುವಿ. ಅಥವಾ ಯುದ್ಧದಲ್ಲಿ ಗೆದ್ದು ಭೂಮಿಯನ್ನು ಭೋಗಿಸುವಿ. ಆದ್ದರಿಂದ ಯುದ್ಧ ಮಾಡುವುದಾಗಿ ನಿಶ್ಚಯಿಸಿ ಎದ್ದು ನಿಲ್ಲು.
ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ |
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥38॥
ಸುಖ-ದುಃಖಗಳನ್ನೂ, ಲಾಭ-ನಷ್ಟಗಳನ್ನೂ, ಜಯಾಪಜಯಗಳನ್ನೂ ನಿರ್ವಿಕಾರ ದೃಷ್ಟಿಯಿಂದ ನೋಡಿ ಯುದ್ಧಕ್ಕೆ ಉದ್ಯುಕ್ತನಾಗು. ಆಗ ನೀನು ಪಾಪವನ್ನು ಹೊಂದುವುದಿಲ್ಲ.
ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು |
ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥
`ನತ್ವೇವಾಹಂ' ಎಂಬ ಶ್ಲೋಕದಿಂದ ಹಿಡಿದು ಇಲ್ಲಿಯವರೆಗೆ ಜೀವೇಶ್ವರ ಜ್ಞಾನವನ್ನು ಉಂಟುಮಾಡುವ ವಾಕ್ಯಗಳನ್ನು ನಿನಗೆ ಹೇಳಿದೆ. ಕರ್ಮಕೌಶಲ ಶಾಸ್ತ್ರದ ವಿಷಯದಲ್ಲಿ ಈ ಮುಂದಿನ ಉಪದೇಶವನ್ನು ಕೇಳು. ಎಲೈ ಪಾರ್ಥನೇ, ಅಂತಹ ಜ್ಞಾನವನ್ನು (ಭಗವನ್ಮಹಿಮಾ ಪ್ರತಿಪಾದಕವಾದ ಪಂಚರಾತ್ರಾದಿ ಶಾಸ್ತ್ರದಿಂದ) ಪಡೆದು ಕರ್ಮಬಂಧನದಿಂದ ಸಂಪೂರ್ಣನಾಗಿ ಮುಕ್ತನಾಗುವಿ.
ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ |
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥40॥
ಭಗವತ್ಪ್ರೀತಿಕರವಾದ ಕರ್ಮದ ಅನುಷ್ಠಾನವನ್ನು ಪ್ರಾರಂಭ ಮಾಡಿದರೂ ಅದಕ್ಕೆ ಪ್ರತ್ಯವಾಯವಿಲ್ಲ. ಅಂತಹ ಧರ್ಮವನ್ನು ಅಲ್ಪವಾಗಿ ಆಚರಣೆ ಮಾಡಿದರೂ ಅದು ದೊಡ್ಡ ಭಯದಿಂದ ರಕ್ಷಿಸುತ್ತದೆ.
ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ |
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥41॥
ಎಲೈ ಕುರುನಂದನನೇ, ಈ ಜ್ಞಾನ ಮತ್ತು ಕರ್ಮಗಳ ವಿಷಯದಲ್ಲಿ ನಿಶ್ಚಯಾತ್ಮಕವಾದ ಜ್ಞಾನವು ಒಂದೇ ರೀತಿ ಇರುತ್ತದೆ. ಅಂತಹ ನಿಶ್ಚಯವುಳ್ಳವರು ಯಜ್ಞವನ್ನು ಮಾಡುತ್ತೇನೆ, ದಾನವನ್ನು ಮಾಡುತ್ತೇನೆ, ತಪಸ್ಸನ್ನು ಮಾಡುತ್ತೇನೆ ಮುಂತಾದ ಅನಂತ ರೀತಿಗಳಲ್ಲಿ ಕರ್ಮಾನುಷ್ಠಾನ ಬುದ್ಧಿಯುಳ್ಳವರಾಗಿರುತ್ತಾರೆ. ಅಥವಾ `ಅವ್ಯವಸಾಯಿನಾಮ್' ಎಂದು ಪದಚ್ಛೇದವನ್ನು ಮಾಡಬೇಕು. ಇಂತಹ ನಿಶ್ಚಯವಿಲ್ಲದವರು ನಡೆದುಕೊಳ್ಳುವ ರೀತಿ ಅನಂತವಾಗಿರುತ್ತವೆ ಎಂದು ಅಭಿಪ್ರಾಯ.
ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ |
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥42॥
ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ |
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥43॥
ಎಲೈ ಪಾರ್ಥನೇ, ಅಜ್ಞಾನಿಗಳಾದ ಯಾರು ವೇದಗಳಲ್ಲಿ ಮೇಲೆ ತೋರುವ ಅರ್ಥಗಳಲ್ಲಿಯೇ ರತರಾಗಿ, ಪುಷ್ಪಗಳಂತೆ ಕಾಣುವ ಕಾಮ್ಯಕರ್ಮಗಳು ಮತ್ತು ಅದರಿಂದ ಉಂಟಾಗುವ ಅನಿತ್ಯ ಸುಖಗಳು ಇವೇ ಶ್ರೇಷ್ಠವಾದ ಫಲ, ಅದನ್ನು ಬಿಟ್ಟು ಮೋಕ್ಷವೆಂಬ ಮಹಾಫಲವಿಲ್ಲ ಎಂದು ಹೇಳುತ್ತಾರೆಯೋ, ಕಾಮಾತ್ಮರಾದ ಅವರು ಸ್ವರ್ಗವನ್ನೇ ಶ್ರೇಷ್ಠವೆಂದು ತಿಳಿದು ಪುನರ್ಜನ್ಮ ಮತ್ತು ಕರ್ಮಗಳ ರೂಪದ ಫಲವನ್ನು ಕೊಡುವ, ಕ್ರಿಯಾವಿಶೇಷವನ್ನು ಹೇಳುವ ಭೋಗೈಶ್ವರ್ಯ ಪ್ರಾಪ್ತಿಗಳಲ್ಲಿ ಆಸಕ್ತರಾಗಿರುತ್ತಾರೆ.
ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಮ್ |
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥44॥
ಭೋಗೈಶ್ವರ್ಯಗಳಲ್ಲಿ ಅತಿಯಾಗಿ ಆಸಕ್ತರಾಗಿ ಅವುಗಳಿಂದ ಅಪಹೃತವಾದ ಮನಸ್ಸುಳ್ಳವರಿಗೆ ತತ್ತ್ವವಿಷಯದಲ್ಲಿ ದಾರ್ಢ್ಯವನ್ನು ತಂದುಕೊಡಬೇಕಾದ ನಿಶ್ಚಯಾತ್ಮಕವಾದ ಬುದ್ಧಿಯು ಅವರಿಗೆ ಚಿತ್ತ ಸಮಾಧಾನವನ್ನು ತಂದುಕೊಡುವುದಿಲ್ಲ.
ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ |
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥45॥
ಎಲೈ ಅರ್ಜುನನೇ, ವೇದಗಳು ಆಪಾತತಃ ಸತ್ವಾದಿಗುಣಮಯವಾದ ಸ್ವರ್ಗಾದಿಗಳನ್ನು ಪ್ರತಿಪಾದನೆ ಮಾಡುತ್ತವೆ. ಆದರೆ ವಸ್ತುತಃ ಅವು ತ್ರೈಗುಣ್ಯರೂಪವಾದ ವಿಷವನ್ನು ಪರಿಹಾರ ಮಾಡುತ್ತವೆ. ಯಥಾರ್ಥ ಪ್ರತಿಪಾದಕವಾದ ವೇದದಿಂದ ಪ್ರತಿಪಾದ್ಯವಾದಗುಣವನ್ನು ನಿಷೇಧ ಮಾಡಿದರೆ ವಿರೋಧ ಬರುವುದರಿಂದ `ನಿಸ್ತ್ರೈಗುಣ್ಯಃ ಭವ' ಎಂದರೆ ತ್ರಿಗುಣಾತ್ಮಕವಾದ ಸ್ವರ್ಗಾದಿ ಫಲದಲ್ಲಿ ಆಕಾಂಕ್ಷಾರಹಿತನಾಗಿರು ಎಂದು ಅರ್ಥ. ಶೀತೋಷ್ಣಾದಿ ದ್ವಂದ್ವದಿಂದ ಉತ್ತೀರ್ಣನಾಗಿ, ನಿತ್ಯವೂ ಸದ್ಗುಣಭರಿತನಾದ ಹರಿಯ ಸ್ಮರಣೆಯನ್ನು ಹೊಂದಿದವನಾಗಿ, ಯೋಗಕ್ಷೇಮಾರ್ಥವಾಗಿ ಪ್ರಯತ್ನವನ್ನು ಪಡದೆ ಪರಮಾತ್ಮನೇ ನನಗೆ ರಕ್ಷಕನಾಗಿದ್ದಾನೆಂದು ಸ್ಮರಣೆಯನ್ನು ಹೊಂದುವವನಾಗು.

ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ |
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥46॥
ಯಾರಿಗೆ ಸಣ್ಣ ಕೂಪದಲ್ಲಿ ತನ್ನ ಬಾಯಾರಿಕೆಯನ್ನು ನಿವಾರಿಸಿಕೊಳ್ಳಲು ಎಷ್ಟು ನೀರಿನ ಅವಶ್ಯಕವಿದೆಯೋ ಅಪರೋಕ್ಷ ಜ್ಞಾನಿಯಾದ ಅವನಿಗೂ ಎಲ್ಲ ವೇದಗಳಲ್ಲಿಯೂ ಅಷ್ಟೇ ಪ್ರಯೋಜನವಿದೆ. ತನಗೆ ಎಷ್ಟು ಯೋಗ್ಯತೆ ಇದೆಯೋ ಅಷ್ಟೇ ಉಪಾಸನೆಯನ್ನು ಮಾಡಬೇಕು. ಅದಕ್ಕಿಂತ ಹೆಚ್ಚು ಮಾಡಬಾರದು ಎಂದು ಅಭಿಪ್ರಾಯ.
ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥47॥
ನಿನಗೆ ಕರ್ಮವನ್ನು ಮಾಡುವುದರಲ್ಲಿ ಮಾತ್ರ ಅಧಿಕಾರ. ಕರ್ಮದ ಫಲದಲ್ಲಿ ಎಂದೂ ಅಧಿಕಾರವಿಲ್ಲ. ನಿನ್ನ ಪ್ರವೃತ್ತಿಯನ್ನು ಕುರಿತು ಕರ್ಮದ ಫಲದ ಉದ್ದೇಶವು ಕಾರಣವಾಗಬಾರದು. ಕರ್ಮವನ್ನು ಮಾಡದೆ ಕರ್ಮತ್ಯಾಗ ಮಾಡುವುದರಲ್ಲಿ ನೀನು ಆಸಕ್ತಿಯನ್ನು ಹೊಂದಬೇಡ.
ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ |
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥48॥
ಎಲೈ ಧನಂಜಯನೇ, ಕರ್ಮಗಳಲ್ಲಿ ಆಸಕ್ತಿಯನ್ನು ಬಿಟ್ಟು ಯೋಗಸ್ಥನಾಗಿ ಕರ್ಮಗಳನ್ನು ಮಾಡು. ಕರ್ಮವು ಸಮಾಪ್ತಿಯಾದರೂ ಅಥವಾ ಆಗದಿದ್ದರೂ ಮನಸ್ಸಮಾಧಾನವನ್ನು ಹೊಂದಿರುವುದೇ ಯೋಗ.
ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ |
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥49॥
ಯಾವನ ಎಲ್ಲ ಉಪಕ್ರಮಗಳೂ ಫಲೋದ್ದೇಶ ರಹಿತವಾಗಿರುತ್ತವೆಯೋ ಜ್ಞಾನಾಗ್ನಿಯಿಂದ ತನ್ನ ಕರ್ಮಗಳನ್ನು ಭಸ್ಮ ಮಾಡಿದ ಅವನನ್ನು ಜ್ಞಾನಿಗಳು ಪಂಡಿತನೆಂದು ಕರೆಯುತ್ತಾರೆ.
ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ ಧನಂಜಯ |
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥50॥
ಎಲೈ ಧನಂಜಯನೇ, ನೀಚವಾದ ಕರ್ಮವನ್ನು ಬುದ್ಧಿಯೋಗವನ್ನು ಆಶ್ರಯಿಸಿ ದೂರದಲ್ಲಿಯೇ ಪರಿತ್ಯಾಗ ಮಾಡು. ಅಂತಹ ಬುದ್ಧಿಯೋಗವನ್ನೇ ಶರಣು ಹೊಂದು (ಅಪರೋಕ್ಷ ಜ್ಞಾನವುಂಟಾದರೂ ಹರಿಗೇ ಶರಣಾಗತನಾಗು. ಫಲದ ಆಕಾಂಕ್ಷೆಯಿಂದ ಕರ್ಮವನ್ನು ಮಾಡುವವರು ಕೃಪಣರು).
ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ |
ತಸ್ಮಾದ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥
ಅಂತಹ ಬುದ್ಧಿಯೋಗವುಳ್ಳ ಜ್ಞಾನಿಯು ಕಾಮ್ಯವಾದ ಸತ್ಕರ್ಮ ಮತ್ತು ದುಷ್ಕರ್ಮಗಳೆರಡನ್ನೂ ಇಲ್ಲಿ ತ್ಯಜಿಸುತ್ತಾನೆ. ಆದ್ದರಿಂದ ಯೋಗವನ್ನು ಆಶ್ರಯಿಸುವವನಾಗು. ಅಂತಹ ಬುದ್ಧಿಯೋಗವೇ ಕರ್ಮಗಳಲ್ಲಿ ಕೌಶಲ ಎನಿಸುತ್ತದೆ.
ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ |
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥52॥
ಅಂತಹ ಬುದ್ಧಿಯೋಗವುಳ್ಳ ಜ್ಞಾನಿಗಳು ಕರ್ಮದಿಂದ ಉಂಟಾಗುವ ಫಲದಲ್ಲಿ ಆಸಕ್ತಿಯನ್ನು ತೊರೆದು, ಜನ್ಮಬಂಧಗಳಿಂದ ಪೂರ್ಣವಾಗಿ ನಿರ್ಮುಕ್ತರಾಗಿ ನಿರ್ದುಷ್ಟವಾದ ಮೋಕ್ಷಸ್ಥಾನವನ್ನು ಹೊಂದುತ್ತಾರೆ.
ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ |
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥53॥
ಯಾವಾಗ ನಿನ್ನ ಬುದ್ಧಿಯು ಮೋಹವೆಂಬ ಕಶ್ಮಲವನ್ನು ತೊರೆಯುವುದೋ ಆಗ ಮಹಾತ್ಮರಿಂದ ಶ್ರವಣ ಮಾಡಿದುದರ ಮತ್ತು ಮುಂದೆ ಶ್ರವಣ ಮಾಡುವುದರ ಫಲವನ್ನು ಪಡೆದವನಾಗಿರುತ್ತೀಯೆ.
ಶ್ರುತಿವಿಪ್ರತಿಪನ್ನಾ ತೇ ಯಥಾ ಸ್ಥಾಸ್ಯತಿ ನಿಶ್ಚಲಾ |
ಸಮಾಧಾವಚಲಾಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥54॥
ಯಾವಾಗ ಶ್ರುತಿಗಳ ವಿಚಾರದಿಂದ ವಿಶೇಷವಾಗಿ ಉಂಟಾದ ನಿನ್ನ ಬುದ್ಧಿಯು ಸಂಶಯಾದಿಗಳನ್ನು ತೊರೆದು ಸಮಾಧಿಯಲ್ಲಿ ನಿಶ್ಚಂಚಲವಾಗಿ ನಿಲ್ಲುವುದೋ ಆಗ ನೀನು ಅಂತಹ ಬುದ್ಧಿಯೋಗವನ್ನು ಹೊಂದುವಿ.
ಅರ್ಜುನಃ
ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ |
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥55॥
ಅರ್ಜುನ ಎಲೈ ಕೇಶವನೇ, ಸಮಾಧಿಸ್ಥನಾದ ಅಪರೋಕ್ಷಜ್ಞಾನಿಯ ಲಕ್ಷಣವೇನು? ಅಂತಹ ಅಪರೋಕ್ಷಜ್ಞಾನಿಯು ಭಾಷಣ, ಆಸನ, ಗಮನ ಮೊದಲಾದ ಕ್ರಿಯೆಗಳನ್ನು ಏತಕ್ಕಾಗಿ ಮಾಡುತ್ತಾನೆ?
ಶ್ರೀಭಗವಾನ್
ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ |
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥56॥
ಶ್ರೀಭಗವಾನ್ ಎಲೈ ಪಾರ್ಥನೇ, ಮನೋಗತವಾದ ಎಲ್ಲ ಕಾಮಗಳನ್ನೂ ತೊರೆದು ಯಾವಾಗ ಪರಮಾತ್ಮನಲ್ಲಿಯೇ ಸಂತುಷ್ಟನಾಗಿರುತ್ತಾನೆಯೋ ಆಗ ಅವನನ್ನು ಸ್ಥಿತಪ್ರಜ್ಞನೆಂದು ಕರೆಯುತ್ತಾರೆ.
ದುಃಖೇಷ್ವನುದ್ವಿಗ್ನಮನಾ ಸುಖೇಷು ವಿಗತಸ್ಪೃಹಃ |

ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥57॥
ದುಃಖಗಳು ಉಂಟಾದಾಗ ಮನಸ್ಸಿನಲ್ಲಿ ಉದ್ವೇಗವನ್ನು ತಂದುಕೊಳ್ಳದೆ, ಸುಖಗಳು ಉಂಟಾದಾಗ ಅದನ್ನು ಬಯಸದೇ, ರಾಗ-ಭಯ-ಕ್ರೋಧಗಳಿಂದ ರಹಿತನಾದ ಮುನಿಯನ್ನು ಸ್ಥಿತಪ್ರಜ್ಞ ಎಂದು ಹೇಳುತ್ತಾರೆ.
ಯಃ ಸರ್ವತ್ರಾನಭಿಸ್ನೇಹಾತ್ತ್ತತ್ ಪ್ರಾಪ್ಯ ಶುಭಾಶುಭಮ್ |
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥58॥
ಯಾವನು ಎಲ್ಲ ವಿಷಯಗಳಲ್ಲೂ ಆಸಕ್ತಿಯನ್ನು ತೊರೆದಿರುವುದರಿಂದ ಶುಭವನ್ನು ಹೊಂದಿ ಸಂತೋಷಪಡುವುದಿಲ್ಲವೋ, ಅಶುಭವನ್ನು ಹೊಂದಿ ದ್ವೇಷ ಮಾಡುವುದಿಲ್ಲವೋ ಅವನ ಪ್ರಜ್ಞೆಯು ಪ್ರತಿಷ್ಠಿತವಾಗಿರುತ್ತದೆ.
ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ |
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥59॥
ಯಾವನು ಕೂರ್ಮವು ತನ್ನ ಅಂಗಗಳನ್ನು ಪೂರ್ಣವಾಗಿ ಒಳಗೆ ಎಳೆದುಕೊಂಡಂತೆ ಇಂದ್ರಿಯಗಳನ್ನು ಅವುಗಳ ವಿಷಯದಿಂದ ಪೂರ್ಣವಾಗಿ ಹಿಂತೆಗೆದುಕೊಳ್ಳುತ್ತಾನೆಯೋ ಅವನ ಪ್ರಜ್ಞೆಯು ಪ್ರತಿಷ್ಠಿತವಾದುದು.
ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ |
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥60॥
ದೇಹಿಯು ನಿರಾಹಾರವನ್ನು ಮಾಡಿದರೆ ವಿಷಯಗಳು ಅವನಿಂದ ದೂರವಾಗುತ್ತವೆ. ಆದರೆ ವಿಷಯವನ್ನು ಭೋಗಿಸುವ ಆಸೆಯು ಅವನಿಂದ ದೂರವಾಗುವುದಿಲ್ಲ. ಆ ಆಸೆಯಾದರೂ ಪರಮಾತ್ಮನನ್ನು ನೋಡಿದ ಮೇಲೆಯೇ ನಿವೃತ್ತವಾಗುತ್ತದೆ.
ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ |
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥61॥
ಎಲೈ ಕೌಂತೇಯನೇ, ಜ್ಞಾನವನ್ನು ಪಡೆದು ಮೋಕ್ಷಕ್ಕಾಗಿ ಪ್ರಯತ್ನಶೀಲನಾದ ಪುರುಷನಿಗೂ ಮನಸ್ಸನ್ನು ಕಲಕುವ ಸಾಮರ್ಥ್ಯವುಳ್ಳ ಇಂದ್ರಿಯಗಳು ತಮ್ಮ ಸಾಮರ್ಥ್ಯದಿಂದ ಮನಸ್ಸನ್ನು ಅಪಹರಿಸುತ್ತವೆ.
ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ |
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥62॥
ನನ್ನನ್ನೇ ಸರ್ವೋತ್ತಮನೆಂದು ತಿಳಿದು ಆ ಇಂದ್ರಿಯಗಳೆಲ್ಲವನ್ನೂ ನಿಯಮನವನ್ನು ಮಾಡಿ ನನ್ನ ಚಿಂತನೆಯಿಂದ ಕೂಡಿದವನಾಗಿರಬೇಕು. ಯಾವನಿಗೆ ಇಂದ್ರಿಯಗಳು ವಶವಾಗಿರುತ್ತವೆಯೋ ಅವನ ಪ್ರಜ್ಞೆಯು ಪ್ರತಿಷ್ಠಿತವಾಗಿರುತ್ತದೆ.
ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ |
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥
ಕ್ರೋಧಾದ್ ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ |
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥64॥
ಮನುಷ್ಯನು ಇಂದ್ರಿಯವಿಷಯಗಳನ್ನೇ ಧ್ಯಾನ ಮಾಡುತ್ತಿದ್ದರೆ ಅವುಗಳಲ್ಲಿ ಸ್ನೇಹ ಉಂಟಾಗುತ್ತದೆ. ಸ್ನೇಹದಿಂದ ಅವುಗಳನ್ನು ಪಡೆಯುವ ಆಸೆ ಉಂಟಾಗುತ್ತದೆ. ಆ ವಸ್ತುವು ದೊರೆಯದಿದ್ದರೆ ಅಂತಹ ಆಸೆಯಿಂದ ಕ್ರೋಧ ಉಂಟಾಗುತ್ತದೆ. ಕ್ರೋಧದಿಂದ ಅಜ್ಞಾನವೂ, ಅಜ್ಞಾನದಿಂದ ಶ್ರವಣ ಮಾಡಿದ ಶಾಸ್ತ್ರಾರ್ಥದ ಸ್ಮರಣೆಯ ನಾಶವೂ, ಅಂತಹ ಸ್ಮರಣೆಯ ನಾಶದಿಂದ ಶಾಸ್ತ್ರಜನ್ಯತತ್ವಜ್ಞಾನದ ನಾಶವೂ ಉಂಟಾಗುತ್ತದೆ. ತತ್ತ್ವಜ್ಞಾನದ ನಾಶವುಂಟಾದರೆ ಮನುಷ್ಯ ಹಾಳಾಗುತ್ತಾನೆ.
ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ |
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥65॥
ಯಾವನು ತನ್ನ ಮನಸ್ಸಿಗೆ ಅಧೀನವಾದ ಇಂದ್ರಿಯಗಳಿಂದ ರಾಗ-ದ್ವೇಷ ರಹಿತನಾಗಿ ವಿಷಯಗಳನ್ನು ಸೇವಿಸುತ್ತಾನೆಯೋ, ಅಂತಹ ಸ್ವಾಧೀನವಾದ ಮನಸ್ಸುಳ್ಳ ಜೀವನು ಪರಮಾತ್ಮನ ಪ್ರಸಾದವನ್ನು ಹೊಂದುತ್ತಾನೆ ಅಥವಾ ಪರಮಾತ್ಮನ ಅನುಗ್ರಹದಿಂದ ಮನಃಪ್ರಸಾದವನ್ನು ಹೊಂದುತ್ತಾನೆ.
ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ |
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತಿ ॥66॥
ಅಂತಹ ಭಗವದನುಗ್ರಹವೂ ಮತ್ತು ಮನಃಪ್ರಸನ್ನತೆಯೂ ಉಂಟಾದಾಗ ಅವನ ಎಲ್ಲ ದುಃಖಗಳೂ ನಾಶವನ್ನು ಹೊಂದುತ್ತವೆ. ಪ್ರಸನ್ನ ಮನಸ್ಸುಳ್ಳ ಅವನ ಬುದ್ಧಿಯು ಶೀಘ್ರವಾಗಿ ನಿಶ್ಚಲವಾಗಿ ನಿಲ್ಲುತ್ತದೆ.
ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ |
ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥67॥
ಅಂತಹ ಯೋಗವಿಲ್ಲದವನಿಗೆ ನಿಶ್ಚಿತಜ್ಞಾನವು ಇರುವುದಿಲ್ಲ. ನಿಧಿಧ್ಯಾಸನವೂ ಇರುವುದಿಲ್ಲ. ನಿಧಿಧ್ಯಾಸನವಿಲ್ಲದಿರುವವನಿಗೆ ಭಗವದೇಕನಿಷ್ಠವಾದ ಬುದ್ಧಿ ಇರುವುದಿಲ್ಲ ಎಂದರೆ ಅಪರೋಕ್ಷ ಜ್ಞಾನವಾಗುವುದಿಲ್ಲ. ಅಂತಹವನಿಗೆ ಸುಖವು ಎಲ್ಲಿಂದ ಬರಬೇಕು?
ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ |
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥68॥
ಯಾವನ ಮನಸ್ಸು ವಿಷಯಗಳ ಕಡೆಗೆ ಧಾವಿಸಿ ಹೋಗುವ ಇಂದ್ರಿಯಗಳನ್ನು ಅನುಸರಿಸಿ ಹೊರಗೆ ಚಲಿಸುತ್ತದೆಯೋ ಅಂತಹವನ ಮನಸ್ಸು ಸಮುದ್ರದಲ್ಲಿ ವಾಯುವು ನೌಕೆಯನ್ನು ಎಳೆದಂತೆ ಅವನ ಪ್ರಜ್ಞೆಯನ್ನು ನಾಶಮಾಡುತ್ತದೆ.
ತಸ್ಮಾದ್ ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ |
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥69॥

ಎಲೈ ಮಹಾಬಾಹುವೇ, ಆದ್ದರಿಂದ ಯಾವನ ಇಂದ್ರಿಯಗಳು ಅವುಗಳ ವಿಷಯಗಳಿಂದ ಸಂಪೂರ್ಣವಾಗಿ ನಿಗ್ರಹಿಸಲ್ಪಡುತ್ತವೆಯೋ ಅವನ ಪ್ರಜ್ಞೆಯು ಪ್ರತಿಷ್ಠಿತವಾಗಿರುತ್ತದೆ.
ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾಪಶ್ಯತೋ ಮುನೇಃ ॥70॥
ಸರ್ವಜನರಿಗೆ ಪರಲೋಕ ಮತ್ತು ಪರಮಾತ್ಮನ ವಿಚಾರಗಳು ರಾತ್ರಿಯಿದ್ದಂತೆ ಅಂಧಕಾರ ವಶವಾಗಿರುತ್ತವೆ. ಆ ವಿಷಯದಲ್ಲಿ ಜ್ಞಾನಿಯು ಬಹಳ ಎಚ್ಚರವಾಗಿರುತ್ತಾನೆ. ಅವನಿಗೆ ಆ ವಿಷಯದಲ್ಲಿ ಅಂಧಕಾರವಿಲ್ಲ, ಯಾವಾಗಲೂ ಪರಮಾತ್ಮನ ಮತ್ತು ಪರಲೋಕದ ಚಿಂತನೆಯಲ್ಲಿಯೇ ಇರುತ್ತಾನೆ ಎಂದು ಅರ್ಥ. ಯಾರು ಎಲ್ಲವೂ ಆಸಕ್ತವಾಗಿರುವ ಕುಟುಂಬಪೋಷಣೆ ಮೊದಲಾದ ಕಾರ್ಯಗಳಲ್ಲಿಯೇ ಎಚ್ಚರವಾಗಿರುತ್ತಾನೆಯೋ, ಅಂತಹ ಕುಟುಂಬಭರಣಾದಿ ಕ್ರಿಯೆಗಳು ಅಪರೋಕ್ಷ ಜ್ಞಾನಿಯಾದವನಿಗೆ ರಾತ್ರಿಪ್ರಾಯವಾಗಿರುತ್ತವೆ. ಅವನ ಕಣ್ಣಿಗೆ ಅಂತಹ ಕ್ರಿಯೆಗಳು ಕಾಣಿಸುವುದಿಲ್ಲ ಎಂದು ಅಭಿಪ್ರಾಯ.
ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ |
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥71॥
ಅಚಲವೂ, ಪ್ರತಿಷ್ಠಿತವೂ ಆದ ಸಮುದ್ರವನ್ನು ನದಿಯ ನೀರುಗಳು ಬಂದು ತುಂಬಿ ಹೇಗೆ ಅಲ್ಲಿಯೇ ವಿಲೀನವಾಗುತ್ತವೆಯೋ ಅದರಂತೆ ಯಾವನ ಮನಸ್ಸಿಗೆ ಬಂದ ಕಾಮಗಳು ಅಲ್ಲಿಯೇ ವಿಲೀನವಾಗುತ್ತವೆಯೋ ಅಂತಹ ಪುರುಷನು ಮೋಕ್ಷವನ್ನು ಪಡೆಯುತ್ತಾನೆ. ಕಾಮ್ಯವಸ್ತುಗಳಲ್ಲಿಯೇ ಆಸೆಯುಳ್ಳವನು ಮೋಕ್ಷವನ್ನು ಪಡೆಯುವುದಿಲ್ಲ.
ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ |
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥72॥
ಯಾವ ಪುರುಷನು ಎಲ್ಲ ಕಾಮಗಳನ್ನೂ ತೊರೆದು ಯಾವುದರಲ್ಲಿಯೂ ಆಸಕ್ತನಾಗದೆ, ಅಹಂಕಾರ-ಮಮಕಾರ ರಹಿತನಾಗಿ ಕರ್ಮಗಳನ್ನು ಮಾಡುತ್ತಾನೆಯೋ ಅವನು ಮೋಕ್ಷವನ್ನು ಪಡೆಯುತ್ತಾನೆ.
ಜಿಹ್ವೋಪಸ್ಥನಿಮಿತ್ತಂ ಹಿ ಪ್ರವೃತ್ತಿರಸಕರ್ಮಣಃ |
ತಸ್ಮಾದಪಿ ಚ ನಶ್ಯೇತ ಜಿಹ್ವೋಪಸ್ಥಾದ್ ಧನಂಜಯ ॥73॥
ಸತ್ಕರ್ಮವನ್ನು ಮಾಡದಿರುವ ಪುರುಷನಿಗೆ ಜಿಹ್ವೆ ಮತ್ತು ಉಪಸ್ಥಸುಖದ ಸಲುವಾಗಿ ಎಲ್ಲ ಪ್ರವೃತ್ತಿಯಲ್ಲಿಯೂ ಇರುತ್ತದೆ. ಎಲೈ ಧನಂಜಯನೇ, ಜಿಹ್ವೋಪಸ್ಥದ ಸುಖದ ನಿಮಿತ್ತವಾಗಿ ನಾಶವನ್ನು ಹೊಂದಬಾರದು.
ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯಸಿ |
ಸ್ಥಿತ್ವಾऽಸ್ಯಾಮಂತಕಾಲೇऽಪಿ ಬ್ರಹ್ಮ ನಿರ್ವಾಣಮೃಚ್ಛತಿ ॥74॥
ಎಲೈ ಪಾರ್ಥನೇ, ಇದು ಪರಬ್ರಹ್ಮನಲ್ಲಿ ನೆಟ್ಟಿರುವ ಮನಸ್ಸಿನ ಸ್ಥಿತಿ. ಇಂತಹ ಸ್ಥಿತಿಯನ್ನು ಪಡೆದವನು ಪುನಃ ಮೋಹಕ್ಕೆ ಒಳಗಾಗುವುದಿಲ್ಲ. ದೇಹವನ್ನು ಬಿಡುವ ಕಾಲದಲ್ಲಿ ಇಂತಹ ಸ್ಥಿತಿಯನ್ನು ಹೊಂದಿದವನು ಪರಬ್ರಹ್ಮನ ಕೃಪೆಯಿಂದ ಮೋಕ್ಷವನ್ನು ಹೊಂದುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುರ್ವಿಂಶೋऽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಏಕಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಭಗವದ್ಗೀತಾ ಕರ್ಮಯೋಗ
ಅರ್ಜುನಃ
ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ |
ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥1॥
ಅರ್ಜುನ ಎಲೈ ಜನಾರ್ದನನೇ, ನಿನಗೆ ಕರ್ಮಯೋಗಕ್ಕಿಂತಲೂ ಬುದ್ಧಿಯೋಗವೇ ಶ್ರೇಷ್ಠವೆಂದು ಅಭಿಪ್ರಾಯವಿದ್ದರೆ, ಎಲೈ ಕೇಶವನೇ, ಘೋರವಾದ ಯುದ್ಧರೂಪವಾದ ಕರ್ಮದಲ್ಲಿ ನನ್ನನ್ನು ಏಕೆ ತೊಡಗಿಸುತ್ತೀಯೆ?
ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ |
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋऽಹಮಾಪ್ನುಯಾಮ್ ॥2॥
ಕೆಲವು ಸಲ ಕರ್ಮವನ್ನು ಹೊಗಳಿ, ಕೆಲವು ಸಲ ಜ್ಞಾನವನ್ನು ಹೊಗಳಿ, ಸಂದೇಹ ಜನಕವಾದ ವಾಕ್ಯಗಳಿಂದ ನನ್ನ ಬುದ್ಧಿಗೆ ಮೋಹವನ್ನು ಉಂಟುಮಾಡುತ್ತಿದ್ದೀಯೆ! ಯಾವ ಒಂದು ಮಾರ್ಗವನ್ನು ಅನುಸರಿಸಿದರೆ ನಾನು ಶ್ರೇಯಸ್ಸನ್ನು ಪಡೆದೇನೋ ಅಂತಹ ಮಾರ್ಗವನ್ನು ನಿಶ್ಚಯಿಸಿ ಹೇಳು.
ಶ್ರೀಭಗವಾನ್
ಲೋಕೇऽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾऽನಘ |
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥
ಶ್ರೀಭಗವಾನ್ ಎಲೈ ಅನಘನೇ, ನಾನು ಹಿಂದೆ ಈ ಲೋಕದಲ್ಲಿ ಎರಡು ವಿಧವಾದ ಮುಕ್ತಿಸಾಧನ ಅಥವಾ ಸಂಸಾರನಿವೃತ್ತಿ ಸಾಧನವು ಇದೆ ಎಂದು ಹೇಳಿದ್ದೇನೆ. ಜ್ಞಾನಪ್ರಧಾನರಾದ (ಅಲ್ಪಕರ್ಮವಿರುವ) ದೇವತೆಗಳಿಗೆ ಮತ್ತು ಸನಕಾದಿ ಯೋಗಿಗಳಿಗೆ

ಜ್ಞಾನಯೋಗದಿಂದಲೂ, ಕರ್ಮಪ್ರಧಾನವಾಗಿರುವ (ಅದಕ್ಕಿಂತ ಕಡಿಮೆಯಾದ ಜ್ಞಾನವನ್ನು ಹೊಂದಿದ) ಜನಕಾದಿಗಳಿಗೆ ಕರ್ಮಯೋಗದಿಂದಲೂ ಸಿದ್ಧಿ ಉಂಟಾಗುತ್ತದೆ.
ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ |
ನ ಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥4॥
ವಿಷ್ಣುಪ್ರೀತ್ಯರ್ಥವಾದ ಕರ್ಮವನ್ನು ಆರಂಭ ಮಾಡದಿರುವುದರಿಂದ ಯಾವ ಪುರುಷನೂ ಮೋಕ್ಷವನ್ನಾಗಲೀ, ಅದಕ್ಕೆ ಯೋಗ್ಯವಾದ ಜ್ಞಾನವನ್ನಾಗಲೀ ಪಡೆಯುವುದಿಲ್ಲ. ಮತ್ತು ಕೇವಲ ಕರ್ಮಸಂನ್ಯಾಸದಿಂದ ಸಿದ್ಧಿ ಉಂಟಾಗುವುದಿಲ್ಲ.
ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ |
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥5॥
ಏಕೆಂದರೆ ಯಾವುದೇ ಪ್ರಾಣಿಯು ಕರ್ಮವನ್ನು ಮಾಡದೆ ಒಂದು ಕ್ಷಣವೂ ಇರುವುದಿಲ್ಲ. ಎಲ್ಲರೂ ವಿಷ್ಣುವಿಗೆ ವಶವಾಗಿ ಪ್ರಕೃತಿಯ ಗುಣಗಳಿಂದ ಯಾವುದಾದರೂ ಒಂದು ಕರ್ಮವನ್ನು ಮಾಡುತ್ತಲೇ ಇರುತ್ತಾರೆ.
ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ |
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥6॥
ಯಾವನು ಕರ್ಮೇಂದ್ರಿಯಗಳನ್ನು ನಿಯಂತ್ರಿಸಿ ಮನಸ್ಸಿನಿಂದ ಆ ಇಂದ್ರಿಯಗಳ ವಿಷಯಗಳನ್ನೇ ಸ್ಮರಣೆ ಮಾಡುತ್ತಾನೆಯೋ ಅಂತಹ ಮೂಢಾತ್ಮನನ್ನು ಜ್ಞಾನಿಗಳು ಮಿಥ್ಯಾಚಾರವುಳ್ಳವನು ಎಂದು ಕರೆಯುತ್ತಾರೆ.
ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ |
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥7॥
ಎಲೈ ಅರ್ಜುನನೇ, ಯಾವನು ಇಂದ್ರಿಯಗಳನ್ನು ಮನಸ್ಸಿನಿಂದ ನಿಯಂತ್ರಿಸಿ, ಫಲಾಪೇಕ್ಷಾರಹಿತನಾಗಿ, ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆರಂಭಿಸುತ್ತಾನೆಯೋ ಅವನು ಶ್ರೇಷ್ಠನಾಗುತ್ತಾನೆ.
ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ |
ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥8॥
ನೀನು ನಿನ್ನ ವರ್ಣಾಶ್ರಮಗಳಿಗೆ ಉಚಿತವಾದ ನಿಯತವಾದ ಕರ್ಮವನ್ನು ಮಾಡು. ಕರ್ಮವನ್ನು ಮಾಡದಿರುವುದಕ್ಕಿಂತ ಮಾಡುವುದು ಶ್ರೇಷ್ಠವಾದುದು. ಯಾವ ಕರ್ಮವನ್ನೂ ಮಾಡದಿದ್ದರೆ ನಿನ್ನ ದೇಹ ಯಾತ್ರೆಯೇ ನಡೆಯುವುದಿಲ್ಲ.
ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ|
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥9॥
ವಿಷ್ಣುಪ್ರೀತ್ಯರ್ಥವಾದ ಕರ್ಮವನ್ನು ಬಿಟ್ಟು ಬೇರೆ ಕರ್ಮವನ್ನು ಮಾಡಿದರೆ ಈ ಲೋಕವು ಆ ಕರ್ಮದಿಂದ ಬಂಧನಕ್ಕೆ ಒಳಗಾಗುತ್ತದೆ. ಎಲೈ ಕೌಂತೇಯನೇ, ಆದ್ದರಿಂದ ಭಗವತ್ಪೂಜಾರ್ಥವಾಗಿ ಫಲಾಪೇಕ್ಷಾರಹಿತನಾಗಿ ಕರ್ಮವನ್ನು ಮಾಡು.
ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ |
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥10॥
ಹಿಂದೆ ಪ್ರಜಾಪತಿಯು ಯಜ್ಞದ ಜೊತೆಯಲ್ಲಿ ಬ್ರಾಹ್ಮಣಾದಿ ಪ್ರಜೆಗಳನ್ನು ಸೃಷ್ಟಿಸಿ ಹೀಗೆ ಮಾತನಾಡಿದನು. ಯಜ್ಞದಿಂದ ನಿಮಗೆ ಇಷ್ಟವಾದ ಫಲಗಳನ್ನು ಪಡೆಯಿರಿ. ಈ ಯಜ್ಞವು ನಿಮಗೆ ಇಷ್ಟವಾದ ಫಲಗಳನ್ನು ಕೊಡುವುದಾಗಲಿ.
ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ |
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥11॥
ಈ ಯಜ್ಞದಿಂದ ನೀವು ದೇವತೆಗಳನ್ನು ಪೂಜಿಸಿ. ದೇವತೆಗಳು ಅದಕ್ಕೆ ಫಲವನ್ನು ಕೊಟ್ಟು ನಿಮ್ಮನ್ನು ಸಮ್ಮಾನಿಸುತ್ತಾರೆ. ಹೀಗೆ ಪರಸ್ಪರ ಸಮ್ಮಾನವನ್ನು ಮಾಡಿಕೊಂಡು ಶ್ರೇಷ್ಠವಾದ ಶ್ರೇಯಸ್ಸನ್ನು ಪಡೆಯಿರಿ.
ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ |
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥12॥
ಯಜ್ಞಗಳಿಂದ ಪೂಜಿಸಲ್ಪಟ್ಟ ದೇವತೆಗಳು ನಿಮಗೆ ಇಷ್ಟವಾದ ಭೋಗಗಳನ್ನು ಕೊಡುವರು. ಅವರು ಕೊಟ್ಟುದುದನ್ನು ಅವರಿಗೆ ಕೊಡದೆ ಯಾವನು ಭೋಗಿಸುತ್ತಾನೆಯೋ ಅವನು ಕಳ್ಳನೇ ಸರಿ.
ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ |
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥13॥
ಯಜ್ಞವನ್ನು ಮಾಡಿ ಉಳಿದುದನ್ನು ಆಹಾರವಾಗಿ ಸೇವಿಸುವ ಸಜ್ಜನರು ಎಲ್ಲ ದೋಷಗಳಿಂದಲೂ ಮುಕ್ತರಾಗುತ್ತಾರೆ. ಯಾರು ತಮ್ಮ ಸಲುವಾಗಿಯೇ ಅಡುಗೆಯನ್ನು ಮಾಡುತ್ತಾರೆಯೋ ಅಂತಹ ಪಾಪಿಗಳು ಪಾಪವನ್ನೇ ಭೋಗಿಸುತ್ತಾರೆ.
ಅನ್ನಾದ್ ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ |
ಯಜ್ಞಾದ್ ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥14॥
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ |
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥15॥
ಅನ್ನದಿಂದ ರೇತಸ್ಸಿನ ದ್ವಾರಾ ಪ್ರಾಣಿಗಳ ಉತ್ಪತ್ತಿಯಾಗುತ್ತದೆ. ಪರ್ಜನ್ಯನೆನಿಸುವ ಆದಿತ್ಯನಿಂದ ವೃಷ್ಟಿಯ ಮೂಲಕವಾಗಿ ಅನ್ನದ ಉತ್ಪತ್ತಿಯಾಗುತ್ತದೆ. ಮೇಘಚಕ್ರಾಭಿಮಾನಿಯಾದ ಪರ್ಜನ್ಯನಾಮಕ ಆದಿತ್ಯನು ಯಜ್ಞದಿಂದ ಉಪಚಯವನ್ನು ಹೊಂದುತ್ತಾನೆ. ಇಲ್ಲಿ ಯಜ್ಞ ಎಂದರೆ ಆಜ್ಯಾದಿ ರೂಪವಾದ ಹವಿಸ್ಸು ಎಂದರೆ ಹವಿರ್ಭಾಗದಿಂದ ಸಂತುಷ್ಟನಾದ ಆದಿತ್ಯನಿಂದ ಉಂಟಾದ ಮೋಡದಿಂದ ಮಳೆಯು ಉಂಟಾಗುತ್ತದೆ ಎಂದು ಅಭಿಪ್ರಾಯ. ದೇವತೋದ್ದೇಶದಿಂದ ಮಾಡುವ ದ್ರವ್ಯ ತ್ಯಾಗರೂಪವಾದ ಜ್ಯೋತಿಷ್ಟೋಮಾದಿ

ಕರ್ಮವು ಆ ಜ್ಯೋತಿಷ್ಟೋಮ ಯಾಗದ ಅಂಗಭೂತವಾದ ಕ್ರಿಯೆಗಳಿಂದ ಉಂಟಾಗುತ್ತದೆ. ಆ ಕರ್ಮವಾದರೂ ಪರಬ್ರಹ್ಮನಿಂದ ಉಂಟಾಗುತ್ತದೆ ಎಂದು ತಿಳಿ. ಪರಬ್ರಹ್ಮನಾದರೂ ಅಕ್ಷರ ಸಮುದಾಯವಾದ ವೇದಗಳಿಂದ ಪ್ರತಿಪಾದ್ಯನಾಗಿ ಅಭಿವ್ಯಕ್ತನಾಗುತ್ತಾನೆ. ಹೀಗೆ ತನ್ನನ್ನು ಪ್ರತಿಪಾದನೆ ಮಾಡುವ ವೇದಗಳಿಂದ ಯಜ್ಞವು ವಿಹಿತವಾದುದರಿಂದ ಪರಂಪರೆಯಿಂದ ಯಜ್ಞದಿಂದ ಅಭಿವ್ಯಂಗ್ಯನಾದ ಕಾರಣದಿಂದ ಬ್ರಹ್ಮನು ಯಜ್ಞದಲ್ಲಿ ಪ್ರತಿಷ್ಠಿತನಾಗಿದ್ದಾನೆ.

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ |
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥16॥

ಎಲೈ ಪಾರ್ಥನೇ, ಹೀಗೆ ಅನಾದಿಕಾಲದಿಂದ ತಿರುಗುತ್ತಿರುವ ಈ ಪುಣ್ಯಚಕ್ರವನ್ನು ಯಾವನು ಅನುಸರಿಸುವುದಿಲ್ಲವೋ ಅವನು ಇಂದ್ರಿಯಲೋಲುಪನಾಗಿ ಪಾಪವನ್ನೇ ಸಂಪಾದಿಸುವ ಆಯುಸ್ಸನ್ನು ಹೊಂದಿ ವ್ಯರ್ಥವಾಗಿ ಜೀವನವನ್ನು ಮಾಡುತ್ತಾನೆ.

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ |
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥17॥

ಯಾವ ಮಾನವನು ಪರಮಾತ್ಮನಲ್ಲಿಯೇ ರತಿಯನ್ನು ಹೊಂದಿರುತ್ತಾನೆಯೋ, ಪರಮಾತ್ಮನ ಧ್ಯಾನದಿಂದ ಬೇರೆ ವಿಷಯಗಳಲ್ಲಿ ಅಲಂಬುದ್ಧಿಯನ್ನು ಹೊಂದಿರುತ್ತಾನೆಯೋ, ಪರಮಾತ್ಮನ ದರ್ಶನದಿಂದಲೇ ಸಂತೋಷವನ್ನು ಪಡೆದಿರುತ್ತಾನೆಯೋ, ಎಂದರೆ ಅಸಂಪ್ರಜ್ಞಾತ ಸಮಾಧಿಯಲ್ಲಿ ಇರುತ್ತಾನೆಯೋ, ಅಂತಹವನು ಮಾಡಬೇಕಾದ ಬಾಹ್ಯಕಾರ್ಯವು ಇರುವುದಿಲ್ಲ.

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ |
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥18॥

ಅಸಂಪ್ರಜ್ಞಾತ ಸಮಾಧಿಸ್ಥನಾದವನು ಅಂತಹ ಸಮಾಧಿಯನ್ನು ಬಿಟ್ಟು ಮಾಡಿದ ಯಜ್ಞಾದಿ ಕರ್ಮಗಳಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಸಮಾಧ್ಯವಸ್ಥೆಯಲ್ಲಿ ಅವನು ಮಾಡದಿರುವ ನಿತ್ಯಕರ್ಮಗಳಿಂದ ಯಾವ ಪ್ರತ್ಯವಾಯವೂ ಇಲ್ಲ. ಅವನು ಸರ್ವಪ್ರಾಣಿಗಳ ವಿಷಯದಲ್ಲಿ ದರ್ಶನ-ಸಂಭಾಷಣ-ಪೂಜನಾದಿಗಳನ್ನು ಮಾಡಿ ಅದರಿಂದ ಆಗಬೇಕಾದುದೂ ಯಾವುದೂ ಇಲ್ಲ. ಗುರುವಂದನಾದಿ ವ್ಯಾಪಾರಗಳು ಪುರುಷಾರ್ಥಸಾಧನವಾದರೂ ಸಮಾಧಿಸ್ಥನಾದವನಿಗೆ ಅಂತಹ ಕರ್ಮಗಳು ಇರುವುದಿಲ್ಲ ಎಂದು ಅಭಿಪ್ರಾಯ. ಸಮಾಧಿಯ ಅವಸ್ಥೆಯನ್ನು ಬಿಟ್ಟು ಬೇರೆ ಕಾಲದಲ್ಲಿ ಅಂತಹ ಕರ್ಮಗಳನ್ನು ಮಾಡದಿದ್ದರೆ ಅನರ್ಥವು ಇದ್ದೇ ಇದೆ ಎಂದೂ ಅಭಿಪ್ರಾಯ.

ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ |
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥19॥

ಜನಕಾದಿಗಳು ಕರ್ಮಯೋಗದಿಂದಲೇ ಒಳ್ಳೆಯ ಸಿದ್ಧಿಯನ್ನು ಪಡೆದರಷ್ಟೆ! ಲೋಕಶಿಕ್ಷಣಕ್ಕಾಗಿಯಾದರೂ ನೀನು ಜ್ಞಾನಪೂರ್ವಕವಾಗಿ ಕರ್ಮವನ್ನು ಮಾಡಬೇಕು.

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ |
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥20॥

ಆದ್ದರಿಂದ ಫಲಾಪೇಕ್ಷಾರಹಿತನಾಗಿ ಕರ್ತವ್ಯವಾದ ಕರ್ಮವನ್ನು ಸತತವಾಗಿ ಮಾಡು. ಫಲಾಪೇಕ್ಷೆಯಿಲ್ಲದೆ ಕರ್ಮವನ್ನು ಮಾಡುವ ಪುರುಷನು ಪರಮಾತ್ಮನನ್ನು ಹೊಂದುತ್ತಾನೆ.

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ |
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥21॥

ಶ್ರೇಷ್ಠ ಪುರುಷನು ಏನೇನು ಮಾಡುತ್ತಾನೆಯೋ, ಇತರ ಜನರು ಅದನ್ನೇ ಮಾಡುತ್ತಾರೆ. ಅವನು ಯಾವುದನ್ನು ಪ್ರಾಮಾಣಿಕವೆಂದು ಹೇಳುತ್ತಾನೆಯೋ ಲೋಕವು ಅದನ್ನು ಅನುಸರಿಸುತ್ತದೆ.

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ |
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥22॥

ಎಲೈ ಪಾರ್ಥನೇ, ಮೂರುಲೋಕಗಳಲ್ಲಿಯೂ ನನಗೆ ಯಾವ ಕರ್ತವ್ಯವಾದ ಕರ್ಮವೂ ಇಲ್ಲ. ಇದುವರೆಗೆ ಹೊಂದದಿರುವ ಯಾವುವನ್ನೂ ನಾನು ಪ್ರಯೋಜನವ ಹೊಂದಬೇಕಾಗಿಲ್ಲ. ಆದ್ದರಿಂದ ಕರ್ತವ್ಯಕರ್ಮವೂ ಇಲ್ಲ. ಆದರೂ ನಾನು ಕರ್ಮವನ್ನು ಮಾಡುತ್ತಲೇ ಇರುತ್ತೇನೆ.

ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ |
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥23॥

ಒಂದು ಪಕ್ಷ ನಾನು ಆಲಸ್ಯವನ್ನು ತೊರೆದು ಕರ್ಮವನ್ನು ಮಾಡದಿದ್ದರೆ ಎಲೈ ಪಾರ್ಥನೇ, ಎಲ್ಲ ಮನುಷ್ಯರೂ ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ.

ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ |
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥24॥

ನಾನು ಕರ್ಮವನ್ನು ಮಾಡದಿದ್ದರೆ ಅದರಿಂದ ನಾನು ಈ ಲೋಕಗಳನ್ನು ನಾಶ ಮಾಡಿಯೇನು! ಜಾತಿಸಂಕರಕ್ಕೆ ಕಾರಣನಾದೇನು! ಈ ಪ್ರಜೆಗಳನ್ನು ವಿನಾಶಗೊಳಿಸಿಯೇನು!

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ |
ಕುರ್ಯಾದ್ ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥25॥

ಎಲೈ ಪಾರ್ಥನೇ, ಅಜ್ಞಾನಿಗಳು ಹೀಗೆ ಫಲದಲ್ಲಿ ಆಸಕ್ತರಾಗಿ ಕರ್ಮವನ್ನು ಮಾಡುತ್ತಾರೆಯೋ, ಜ್ಞಾನಿಯಾದವನು ಲೋಕಸಂಗ್ರಹವನ್ನು ಮಾಡುವುದಕ್ಕಾಗಿ ಕರ್ಮಫಲಾಪೇಕ್ಷಾರಹಿತನಾಗಿ ಹಾಗೆಯೇ ಕರ್ಮವನ್ನು ಆಚರಿಸಬೇಕು.

ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ |
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥
ಕರ್ಮದಲ್ಲೇ ಆಸಕ್ತಿಯುಳ್ಳ ಅಜ್ಞಜನರಿಗೆ ಜ್ಞಾನಿಯಾದವನು ಕರ್ಮದಿಂದ ವಿಮುಖರಾಗುವಂತೆ (ಜ್ಞಾನವನ್ನು ಹೊಗಳಿ) ಬುದ್ಧಿಭೇದವನ್ನು ಉಂಟು ಮಾಡಬಾರದು. ಜ್ಞಾನಿಯಾದವನು ಭಗವಚ್ಚಿಂತನಾಯುಕ್ತನಾಗಿ ಕರ್ಮವನ್ನು ಆಚರಿಸಿ ಅಜ್ಞಾನಿಗಳಿಗೂ ಎಲ್ಲ ಕರ್ಮಗಳಲ್ಲಿಯೂ ಪ್ರೀತಿಯುಂಟಾಗುವಂತೆ ಮಾಡಬೇಕು.
ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |
ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ॥27॥
ಪ್ರಕೃತಿಯ ಗುಣಗಳಾದ ಸತ್ವ-ರಜಸ್-ತಮಸ್ಸುಗಳಿಂದ ಮಾಡಲ್ಪಡುವ ಎಲ್ಲ ಕರ್ಮಗಳನ್ನೂ ಅಹಂಕಾರಿಯಾದ ಮೂಢಾತ್ಮನು (ಅಜ್ಞಾನಿಯು) ನಾನು ಮಾಡುತ್ತೇನೆಂದು ತಿಳಿದಿರುತ್ತಾನೆ.
ತತ್ತ್ವವಿತ್ ತು ಮಹಾಬಾಹೋ ಗುಣಕರ್ಮವಿಭಾಗಯೋಃ |
ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥28॥
ಎಲೈ ಮಹಾಬಾಹುವೇ, ಗುಣಕರ್ಮಗಳ ವಿಭಾಗವನ್ನು ತಿಳಿದ ತತ್ತ್ವಜ್ಞಾನಿಯಾದರೂ ಪ್ರಕೃತಿಯ ಗುಣಗಳಾದ ಸತ್ವ-ರಜಸ್-ತಮೋಗುಣಗಳು ತಮ್ಮ ಕಾರ್ಯವಾದ ಸಾತ್ವಿಕ-ರಾಜಸ-ತಾಮಸ ಕಾರ್ಯಗಳಲ್ಲಿ ತೊಡಗಿವೆ ಎಂದು ತಿಳಿದು ಅವುಗಳಲ್ಲಿ ಆಸಕ್ತನಾಗುವುದಿಲ್ಲ.
ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು |
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥29॥
ಪ್ರಕೃತಿನಾಮಕ ಪರಮಾತ್ಮನ ಇಚ್ಛೆಯಿಂದ ಮತ್ತು ಜಡಪ್ರಕೃತಿಯ ಸತ್ವಾದಿ ಗುಣಗಳಿಂದ ಮೋಹಕ್ಕೆ ಒಳಗಾದ ಅಜ್ಞಾನಿಗಳು ಪ್ರಕೃತಿಯ ಶಬ್ದಾದಿ ಗುಣಗಳಲ್ಲಿ ಮತ್ತು ಅವುಗಳನ್ನು ಸಂಪಾದಿಸುವ ಕರ್ಮಗಳಲ್ಲಿ ಆಸಕ್ತರಾಗುತ್ತಾರೆ. ಗುಣಕರ್ಮಗಳ ವಿಭಾಗವನ್ನು ತಿಳಿಯದಿರುವ ಆ ಮಂದರನ್ನು ಗುಣಕರ್ಮಗಳ ವಿಭಾಗವನ್ನು ತಿಳಿದ ಜ್ಞಾನಿಯು ಅವರನ್ನು ಕರ್ಮ ಮಾರ್ಗದಿಂದ ಚಲಿಸುವಂತೆ ಮಾಡಬಾರದು. ಅವರಿಗೆ ಬೋಧನೆಯನ್ನು ಮಾಡಬೇಕು ಎಂದು ಅಭಿಪ್ರಾಯ.
ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ |
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥30॥
ಶರೀರದಲ್ಲಿ ನಾನು ಇದ್ದೇನೆಂದು ತಿಳಿದು ನನ್ನ ಸ್ಮರಣೆ ಪೂರ್ವಕವಾಗಿ ಎಲ್ಲ ಕರ್ಮಗಳ ಫಲವನ್ನು ನನ್ನಲ್ಲಿ ಸಮರ್ಪಿಸಿ ಕರ್ಮದ ಫಲವನ್ನು ಆಶ್ರಯಿಸದೇ, ಮಮಕಾರವನ್ನು ಬಿಟ್ಟು, ಯಾವ ಸಂತಾಪವೂ ಇಲ್ಲದೇ ಯುದ್ಧವನ್ನು ಮಾಡು.
ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ |
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥
ಯಾವ ಮಾನವರು ಈ ನನ್ನ ಅಭಿಪ್ರಾಯವನ್ನು ತಿಳಿದು ಅದರಂತೆ ನಿತ್ಯವೂ ಅನುಷ್ಠಾನವನ್ನು ಮಾಡುತ್ತಾರೆಯೋ, ಅಂತಹ ಶ್ರದ್ಧೆಯುಳ್ಳ, ಅಸೂಯಾ ರಹಿತರಾದ ಅವರು ಎಲ್ಲ ಕರ್ಮಗಳಿಂದಲೂ ನಿರ್ಮುಕ್ತರಾಗುತ್ತಾರೆ.
ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ |
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥32॥
ಯಾರು ನನ್ನ ಈ ಉಪದೇಶದಲ್ಲಿ ಅಸೂಯೆಯನ್ನು ಪಟ್ಟು ನನ್ನ ಅಭಿಪ್ರಾಯದಂತೆ ನಡೆದುಕೊಳ್ಳುವುದಿಲ್ಲವೋ ಅವರು ಸರ್ವಜ್ಞಾನರಹಿತರಾಗಿ ವಿವೇಕವಿಲ್ಲದೇ ನಷ್ಟರಾಗುತ್ತಾರೆಂದು ತಿಳಿ.
ಸದೃಶಂ ಚೇಷ್ಟತೇ ಯಸ್ಯಾಃ ಪ್ರಕೃತೇರ್ಜ್ಞಾನವಾನಪಿ |
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥33॥
ನಿನ್ನ ಮತವನ್ನು ಅನುಷ್ಠಾನ ಮಾಡಿದರೆ ಮೋಕ್ಷ ಇಲ್ಲದಿದ್ದರೆ ನಾಶ ಉಂಟಾಗುವುದಾದರೆ ಲೋಕವು ನಿನ್ನ ಮತವನ್ನು ಏಕೆ ಅನುಸರಿಸುವುದಿಲ್ಲ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಪ್ರಕೃತಿ ಶಬ್ದಕ್ಕೆ ಪೂರ್ವಸಂಸ್ಕಾರ ಎಂದು ಅರ್ಥ. ಇಲ್ಲಿ ಅದರ ಕಾರ್ಯವಾದ ರಾಗ-ದ್ವೇಷಗಳನ್ನು ತೆಗೆದುಕೊಳ್ಳಬೇಕು. ನನ್ನ ಮತದ ಅನುಷ್ಠಾನ, ಅನುಷ್ಠಾನಗಳಿಂದ ಇಷ್ಟಾನಿಷ್ಟ ಪ್ರಾಪ್ತಿಯನ್ನು ತಿಳಿದವನೂ ಸಹ ತನ್ನ ಪೂರ್ವಸಂಸ್ಕಾರ ಕಾರ್ಯವಾದ ರಾಗ-ದ್ವೇಷಗಳಿಗೆ ಅನುಗುಣವಾಗಿಯೇ ಕರ್ಮವನ್ನು ಮಾಡುತ್ತಾನೆ. ಇನ್ನು ಅಜ್ಞನ ವಿಷಯದಲ್ಲಿ ಹೇಳುವುದೇನು? ಮನೋನಿಗ್ರಹವನ್ನು ಮಾಡಿದೆ ಸ್ವಭಾವಾನುಗುಣವಾದ ಕರ್ಮದ ಉಪರತಿಯಾಗುವುದು ಎಂಬ ಶಂಕೆಗೆ ಉತ್ತರಾರ್ಧದಿಂದ ಉತ್ತರವನ್ನು ಹೇಳುತ್ತಾರೆ. ಜೀವರು ಸ್ವಭಾವಕ್ಕೆ ಅನುಗುಣವಾಗಿಯೇ ಕರ್ಮಗಳನ್ನು ಮಾಡುತ್ತಾರೆ. ಮನೋನಿಗ್ರಹವು ಅಪ್ರಯೋಜಕವಾದುದು ಎಂದು ಅಭಿಪ್ರಾಯ.
ಅಥವಾ ಏಕೆ ಅಯೋಗ್ಯರಿಗೆ ತತೊತ್ವೋಪದೇಶವನ್ನು ಮಾಡಬಾರದು ಎಂದು ಇಲ್ಲಿ ಹೇಳುತ್ತಾರೆ. ತತೊತ್ವೋಪದೇಶದಿಂದ ಜ್ಞಾನವುಂಟಾದರೂ ಅಯೋಗ್ಯರು ಸ್ವಭಾವಕ್ಕೆ ಅನುಗುಣವಾದ ಕರ್ಮವನ್ನೇ ಮಾಡುತ್ತಾರೆ. ಉತ್ಪನ್ನವಾದ ತತ್ತ್ವಜ್ಞಾನಕ್ಕೆ ಅನುಗುಣವಾದ ಕರ್ಮವನ್ನು ಮಾಡುವುದಿಲ್ಲ. ಆದ್ದರಿಂದ ಅವರಿಗೆ ಉಪದೇಶ ಮಾಡಬಾರದು ಎಂದು ಅರ್ಥ.
ಇಂದ್ರಿಯಸ್ಯೇಂದ್ರಿಯಾರ್ಥೇಷು ರಾಗದ್ವೇಷೌ ವ್ಯವಸ್ಥಿತೌ |
ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥34॥
ಎಲ್ಲಾ ಜೀವರೂ ಸ್ವಭಾವಕ್ಕೆ ಅನುಗುಣವಾಗಿಯೇ ಕರ್ಮವನ್ನು ಮಾಡುವುದಾದರೆ `ಮಯಿ ಸರ್ವಾಣಿ ಕರ್ಮಾಣಿ' ಎಂದು ಪ್ರಕಾರ ಪೂರ್ವಕವಾದ ಕರ್ಮವಿಧಾನವೂ `ಯೇ ಮೇ ಮತಂ' ಎಂದು ಫಲವಿಧಾನವೂ ವ್ಯರ್ಥ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಇಲ್ಲಿ ರಾಗದ್ವೇಷಪದಗಳಿಂದ ಲೋಭ ಮೋಹ ಮದ ಮತ್ಸರಗಳನ್ನೂ ತೆಗೆದುಕೊಳ್ಳಬೇಕು. ಪ್ರಧಾನವಾದುದರಿಂದ ಎರಡನ್ನೇ ಹೇಳಿದ್ದಾರೆ. ಅನುಕೂಲದಲ್ಲಿ ರಾಗ. ಪ್ರತಿಕೂಲದಲ್ಲಿ ದ್ವೇಷ. ಇವುಗಳಿಗೆ ಅನುಗುಣವಾಗಿಯೇ ಜೀವರ ಕರ್ಮಗಳು. ಆದರೂ

ರಾಗ-ದ್ವೇಷಾದಿ ಷಡ್ವರ್ಗಗಳಿಗೆ ವಶವಾಗಬಾರದು. ಏಕೆಂದರೆ ಅವು ಜೀವನ ಶ್ರೇಯಸ್ಸಿಗೆ ಪ್ರತಿಬಂಧಕ ಮತ್ತು ಪಾಪಹೇತುಗಳು ಎಂದು ಅರ್ಥ. ಮನೋನಿಗ್ರಹದಿಂದ ತಕ್ಷಣದಲ್ಲಿ ಫಲವು ದೊರೆಯದಿದ್ದರೂ ಅತಿ ಪ್ರಯತ್ನವನ್ನು ಮಾಡಿದರೆ ಫಲವು ಖಂಡಿತವಾಗಿ ದೊರೆಯುತ್ತದೆ ಎಂದು ಅಭಿಪ್ರಾಯ.

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ |
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥35॥

ರಾಗ-ದ್ವೇಷೋಪೇತವಾದ ಘೋರವಾದ ಯುದ್ಧರೂಪವಾದ ಕರ್ಮವನ್ನು ಮಾಡಲೇಬಾರದು ಎಂಬ ಅರ್ಜುನನ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಸರ್ವಾಂಗ ಸಹಿತವಾಗಿ ಅನುಷ್ಠಾನ ಮಾಡಿದ ಅನ್ಯವರ್ಣಾಶ್ರಮ ಧರ್ಮಗಳಿಗಿಂತ ಅಂಗಹೀನವಾಗಿ ಮಾಡಿದ ಸ್ವವರ್ಣಾಶ್ರಮೋಚಿತ ಧರ್ಮವು ಪ್ರಶಸ್ತವಾದುದು. ಏಕೆಂದರೆ ಸ್ವಧರ್ಮವಾದ ಯುದ್ಧದಲ್ಲಿ ಮರಣವೂ ಶ್ರೇಯಸ್ಕರವಾದುದು ಪರಧರ್ಮವು ನಿಷಿದ್ಧವಾದುದರಿಂದ ಅನರ್ಥಕಾರಿ ಎಂದು ಭಾವ.

ಅರ್ಜುನಃ
ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ |
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥36॥

ಅರ್ಜುನಪಾಪಹೇತುವಾದ ಅರಿಷಡ್ವರ್ಗದಲ್ಲಿ ಮಹಾಪ್ರಯತ್ನದಿಂದ ಜಯಿಸಬೇಕಾದ ಪ್ರಬಲವಾದುದನ್ನು ಇಲ್ಲಿ ಅರ್ಜುನನು ಕೇಳುತ್ತಾನೆ. ಜೀವನು ಪಾಪಕರ್ಮವನ್ನು ಮಾಡಲು ಬಯಸದಿದ್ದರೂ ಬಲತ್ಕಾರ ಮಾಡಲ್ಪಟ್ಟವನಂತೆ ಪಾಪವನ್ನು ಮಾಡುತ್ತಾರೆ. ಪಾಪಕರ್ಮ ಪ್ರಚೋದಕವಾದ ಕಾಮಾದಿ ಷಡ್ವರ್ಗದಲ್ಲಿ ಯಾವುದು ಪ್ರಬಲವಾದುದು ಎಂದು ಅರ್ಜುನನ ಪ್ರಶ್ನೆಯ ಅಭಿಪ್ರಾಯ.

ಶ್ರೀಭಗವಾನ್
ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ |
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥37॥

ಶ್ರೀಭಗವಾನ್ ಪುರುಷನನ್ನು ಪಾಪಕರ್ಮಗಳಲ್ಲಿ ಪ್ರವರ್ತಿಸುವ ಹೇತುಗಳಲ್ಲಿ ಪ್ರಬಲವಾದುದು ಯಾವುದು ಎಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಹೇಳುತ್ತಾರೆ. ಪ್ರಬಲವಾದುದು ಕಾಮ, ಕ್ರೋಧವು ಕಾಮದಿಂದ ಜನಿಸುವುದರಿಂದ ಕಾರ್ಯಕಾರಣಗಳಿಗೆ ಅಭೇದ ದೃಷ್ಟಿಯಿಂದ ಅದನ್ನೇ ಕಾಮವೆಂದೂ ಕರೆದಿದ್ದಾನೆ. ಕಾಮ-ಕ್ರೋಧಗಳು ರಜೋಗುಣದಿಂದ ಉಂಟಾಗುತ್ತವೆ ಎಂದು ಅಭಿಪ್ರಾಯ. ಕ್ರೋಧ ಶಬ್ದದಿಂದ ಅರಿಷಡ್ವರ್ಗದಲ್ಲಿ ಉಳಿದ ನಾಲ್ಕನ್ನೂ ತೆಗೆದುಕೊಳ್ಳಬೇಕು. ಕಾಮವು ನಿವೃತ್ತವಾದರೆ ಅದರ ಕಾರ್ಯವಾದ ಉಳಿದ ಐದೂ ನಿವೃತ್ತವಾಗುತ್ತವೆ ಎಂದು ಅರ್ಥ. ಅಪೇಕ್ಷಿತವಾದ ವಿಷಯವನ್ನು ಕೊಟ್ಟು ಕಾಮವನ್ನು ಬಯಿಸಲು ಸಾಧ್ಯವಿಲ್ಲ.ಏಕೆಂದರೆ ಅದು ಮಹಾಹಸಿವನ್ನು ಹೊಂದಿ ಎಷ್ಟು ತಿಂದರೂ ತೃಪ್ತಿಯನ್ನು ಹೊಂದುವುದಿಲ್ಲ ಮತ್ತು ಬ್ರಹ್ಮಹತ್ಯಾದಿ ಮಹಾಪಾಪಗಳಿಗೆ ಕಾರಣವಾಗುತ್ತದೆ. ಐಹಿಕಾಮುಷ್ಮಿಕ ಅಶುಭ ವಿಷಯಗಳಲ್ಲಿಯೇ ಪುರುಷನನ್ನು ಯಾವಾಗಲೂ ಪ್ರವರ್ತಿಸುವುದರಿಂದ ಮೋಕ್ಷ ವಿರೋಧಿಯಾದುದರಿಂದ ಅವನ್ನು ಜೀವರ ಶತ್ರುಗಳು ಎಂದು ತಿಳಿ ಎಂದು ಕೃಷ್ಣನ ಅಭಿಪ್ರಾಯ. ಕಾಮ ಎಂದರೆ ಇಲ್ಲಿ ಅದರ ಅಭಿಮಾನಿಯಾದ ಕಾಲನೇಮಿ ಎಂದು ಅರ್ಥ.

ಏಷ ಸೂಕ್ಷ್ಮತರಃ ಕ್ಲೃಪ್ತೋ ದೇಹಿನಾಮಿಂದ್ರಿಯೈಃ ಸಹ |
ಸುಖತಂತ್ರ ಇವಾಸೀನೋ ಮೋಹಯನ್ ಪಾರ್ಥ ತಿಷ್ಠತಿ ॥38॥

ಈ ಶ್ಲೋಕವು ಪ್ರಾಚೀನ ತುಳು ಲಿಪಿಯ ಕೋಶಗಳಲ್ಲಿ ಮಾತ್ರ ಇದೆ. ಬೇರೆ ಎಲ್ಲಿಯೂ ಇಲ್ಲ. ಈ ಕಾಮವು ಅತ್ಯಂತ ಸೂಕ್ಷ್ಮವಾಗಿದ್ದು ಪುರುಷರ ಇಂದ್ರಿಯಗಳ ಜೊತೆಯಲ್ಲಿ ಸೇರಿಕೊಂಡಿದೆ. ಎಲೈ ಅರ್ಜುನನೇ, ಸುಖಕಾರಣವೆಂದು ತೋರುತ್ತಾ ಜೀವರಿಗೆ ಭ್ರಾಂತಿಯನ್ನು ಉಂಟು ಮಾಡುತ್ತಾ ಕುಳಿತಿದೆ.

ಅರ್ಜುನಃ
ಭವತ್ಯೇಷ ಕಥಂ ಕೃಷ್ಣ ಕಥಂ ಚೈವ ವಿವರ್ಧತೇ |
ಕಾಮಕ್ರೋಧಮಯೋ ಘೋರಃ ಸ್ತಂಭಹರ್ಷಸಮುದ್ಭವಃ |
ಕಿಮಾತ್ಮಕಃ ಕಿಮಾಚಾರಃ ತನ್ಮಮಾಚಕ್ಷ್ವ ಪೃಚ್ಛತಃ ॥39॥

ಅರ್ಜುನ ಈ ಶ್ಲೋಕವು ಪ್ರಾಚೀನ ತುಳುಲಿಪಿಯ ಕೋಶಗಳಲ್ಲಿ ಮಾತ್ರ ಇದೆ. ಬೇರೆ ಎಲ್ಲಿಯೂ ಇಲ್ಲ. ಎಲೈ ಕೃಷ್ಣನೇ, ಸ್ತಬ್ಧತೆ ಮತ್ತು ಹರ್ಷಗಳನ್ನು ಉಂಟು ಮಾಡುವ ಕ್ರೋಧ ಕಾಯಾತ್ಮಕವಾದ ಘೋರವಾದ ಇದು ಹೇಗೆ ಉತ್ಪನ್ನವಾಗುತ್ತದೆ? ಇದರ ಸ್ವರೂಪವೇನು? ಕಾರ್ಯವೇನು? ಕೇಳುತ್ತಿರುವ ನನಗೆ ಉತ್ತರವನ್ನು ಹೇಳು.

ಶ್ರೀಭಗವಾನ್
ಅಹಂಕಾರೋಭಿಮಾನಾತ್ಮಾ ದುಸ್ತರಃ ಪಾಪಕರ್ಮಭಿಃ |
ವರ್ಧಯತ್ಯಸ್ಯ ಹರ್ಷಂ ವೈ ಕಾಮಮಸ್ಯ ದದಾತಿ ಚ ॥40॥

ಶ್ರೀಭಗವಾನ್ ಈ ಶ್ಲೋಕವೂ ಪ್ರಾಚೀನ ತುಳುಲಿಪಿಯ ಕೋಶಗಳಲ್ಲಿ ಮಾತ್ರ ಇದೆ. ಬೇರೆ ಎಲ್ಲಿಯೂ ಇಲ್ಲ. ಅಹಂಕಾರವು ಅಭಿಮಾನ ರೂಪವಾದುದು. ಎಂದರೆ ಕೆಟ್ಟದರಲ್ಲಿ ಒಳ್ಳೆಯದು ಎಂಬ ಜ್ಞಾನರೂಪವಾದುದು. ಇದನ್ನು ಪಾಪಕರ್ಮವನ್ನು ಮಾಡುವವರು ದಾಟಲಾರರು. ಈ ಅಹಂಕಾರವು ಪುರುಷನಿಗೆ ಹರ್ಷವನ್ನು ಉಂಟುಮಾಡಿ ಅವನಿಗೆ ಕಾಮವನ್ನು ತಂದುಕೊಡುತ್ತದೆ.

ಭಯಂ ಚಾಸ್ಯ ಕರೋತ್ಯೇಷ ಮೋಹಯನ್ ವೈ ಮುಹುರ್ಮುಹುಃ |
ಸ ಏಷ ಕಲುಷಃ ಕ್ಷುದ್ರಃ ಚ್ಛಿದ್ರಾನ್ವೇಷೀ ಧನಂಜಯ |
ರಜಃ ಪ್ರವೃತ್ತೋ ಮೋಹಾತ್ಮಾ ಮನುಷ್ಯಾಣಾಮುಪದ್ರವಃ ॥41॥

ಇದು ಪುರುಷನಿಗೆ ಪುನಃ ಪುನಃ ಮೋಹವನ್ನು ಉಂಟುಮಾಡುತ್ತಾ ಅವನಿಗೆ ಭಯವನ್ನೂ ಉಂಟುಮಾಡುತ್ತದೆ. ಎಲೈ ಧನಂಜಯನೇ, ಇದು ದುಷ್ಟವಾದುದು, ಕ್ಷುದ್ರವಾದುದು, ಮತ್ತು ಯಾವಾಗಲು ಪುರುಷನ ದೌರ್ಬಲ್ಯವನ್ನು ಹುಡುಕುತ್ತಿರುತ್ತದೆ. ರಜೋಗುಣದಿಂದ

ಉಂಟಾದ ಮೋಹರೂಪವಾದ ಈ ಅಹಂಕಾರವು ಪುರುಷನಿಗೆ ಮೋಕ್ಷಸಾಧನೆಗೆ ಪ್ರತಿಬಂಧಕವಾಗುತ್ತದೆ.
ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ |
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥42॥
ಧೂಮದಿಂದ ಅಗ್ನಿಯು ಆವೃತನಾದಂತೆ, ಕನ್ನಡಿಯು ಕೊಳೆಯಿಂದ ಆವೃತವಾದಂತೆ, ಜಲಾಯುವಿನಿಂದ ಗರ್ಭವು ಆವೃತವಾದಂತೆ ಅಂತಹ ಅಹಂಕಾರದಿಂದ ಉತ್ತಮ ಜೀವನ ಜ್ಞಾನಸ್ವರೂಪವು ಆವೃತವಾಗಿದೆ.
ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ |
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥43॥
ಎಲ್ಲೈ ಕೌಂತೇಯನೇ, ಜ್ಞಾನಿಗಳಿಗೆ ನಿತ್ಯವೈರಿಯಾದ ತೃಪ್ತಿಪಡಿಸಲು ಅಸಾಧ್ಯವಾದ ಈ ಕಾಮರೂಪವಾದ ಅಗ್ನಿಯಿಂದ ಉತ್ತಮ ಜೀವರ ಜ್ಞಾನವು ಆವೃತವಾಗಿದೆ.
ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ |
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥44॥
ಇಂದ್ರಿಯಗಳೂ, ಮನಸ್ಸೂ, ಬುದ್ಧಿ ಇವುಗಳು ಕಾಮದ ಅಧಿಷ್ಠಾನವೆಂದು ಹೇಳಲ್ಪಡುತ್ತದೆ. ಈ ಕಾಮವು ಇವುಗಳಲ್ಲಿ ಇದ್ದು ಜ್ಞಾನವನ್ನು ಆವರಿಸಿ ಜೀವರಿಗೆ ಮೋಹವನ್ನುಂಟುಮಾಡುತ್ತದೆ.
ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ |
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥45॥
ಎಲ್ಲೈ ಭರತರ್ಷಭನೇ, ಆದ್ದರಿಂದ ನೀನು ಮೊದಲು ಇಂದ್ರಿಯಗಳನ್ನು ನಿಯಂತ್ರಿಸಿ ಜ್ಞಾನ-ವಿಜ್ಞಾನ ನಾಶಕವಾದ ಈ ಶತ್ರುವನ್ನು ಸಂಹರಿಸು.
ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ |
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥46॥
ಇಂದ್ರಿಯಾಭಿಮಾನಿಗಳಾದ ಬೃಹಸ್ಪತಿ, ಸೂರ್ಯ ಮೊದಲಾದ ದೇವತೆಗಳು ಇತರ ದೇವತೆಗಳಿಗಿಂತ ಶ್ರೇಷ್ಠರೆಂದು ಹೇಳುತ್ತಾರೆ. ಚಿತ್ತಾಹಂಕಾರ ರೂಪವಾದ ಮನಸ್ಸಿಗೆ ಅಭಿಮಾನಿಗಳಾದ ಬ್ರಹ್ಮಾದಿ ದೇವತೆಗಳು ಇಂದ್ರಿಯಾಭಿಮಾನಿ ದೇವತೆಗಳಿಗಿಂತಲೂ ಶ್ರೇಷ್ಠರಾದವರು. ವಿದ್ಯಾಸ್ಫೂರ್ತಿಸಮ್ಯದ್ರೂಪವಾದ ಬುದ್ಧ್ಯಭಿಮಾನಿಯಾದ ಲಕ್ಷ್ಮೀದೇವಿಯು, ಮನೋಭಿಮಾನಿಗಳಾದ ಬ್ರಹ್ಮಾದಿ ದೇವತೆಗಳಿಗಿಂತಲೂ ಶ್ರೇಷ್ಠಳಾದವಳು. ಯಾವನು ಬುದ್ಧಿಗಿಂತಲೂ ಶ್ರೇಷ್ಠನಾಗಿದ್ದಾನೆಯೋ ಅವನು ಪರಮಾತ್ಮ.
ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ |
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥47॥
ಹೀಗೆ ಪರಮಾತ್ಮನನ್ನು ಬುದ್ಧ್ಯಭಿಮಾನಿಯಾದ ಲಕ್ಷ್ಮಿಗಿಂತಲೂ ಉತ್ತಮನೆಂದು ತಿಳಿದು ಅವನ ಅನುಗ್ರಹದಿಂದ ಅಂತಃಕರಣವನ್ನು ನಿಯಂತ್ರಿಸಿ ಸಮೀಪದಲ್ಲಿ ಸುಳಿಯಲೂ ಕಷ್ಟವಾದ ಈ ಕಾಮರೂಪವಾದ ಶತ್ರುವನ್ನು ಎಲ್ಲೈ ಮಹಾಬಾಹುವೇ, ಸಂಹರಿಸುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಭಗವದ್ಗೀತಾ ಜ್ಞಾನಯೋಗ.
ಶ್ರೀಭಗವಾನ್
ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ |
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥1॥
ಶ್ರೀಭಗವಾನ್ ನಾಶರಹಿತವಾದ ಈ ಯೋಗವನ್ನು ನಾನು ವಿವಸ್ವಂತನಿಗೆ ಹೇಳಿದ್ದೇನೆ. ವಿವಸ್ವಾನ್ ನಾಮಕ ಸೂರ್ಯನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕುವಿಗೆ ಹೇಳಿದನು.
ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ |
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥2॥
ಹೀಗೆ ಪರಂಪರೆಯಿಂದ ಪ್ರಾಪ್ತವಾದ ಈ ಯೋಗವನ್ನು ರಾಜರ್ಷಿಗಳು ತಿಳಿದಿದ್ದಾರೆ. ಎಲ್ಲೈ ಪರಂತಪನೇ, ಕಾಲಕ್ರಮದಲ್ಲಿ ಆ ಯೋಗವು ನಷ್ಟವಾಯಿತು.
ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ |
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥3॥
ನೀನು ನನ್ನ ಸ್ನೇಹಿತ ಮತ್ತು ಭಕ್ತ ಎಂಬ ಕಾರಣದಿಂದ ಶ್ರೇಷ್ಠವಾದ ಮತ್ತು ರಹಸ್ಯವಾದ ಮತ್ತು ಪುರಾತನವಾದ ಅದೇ ಯೋಗವನ್ನು ನಾನು ಈ ದಿನ ನಿನಗೆ ಹೇಳಿದ್ದೇನೆ.
ಅರ್ಜುನಃ
ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ |
ಕಥಮೇತದ್ ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥4॥

ಅರ್ಜುನ ನಿನ್ನ ಜನ್ಮವು ಈಚಿನದು, ವಿವಸ್ವತನ ಜನ್ಮವು ಪ್ರಾಚೀನವಾದುದು. ನೀನು ಹಿಂದೆ ಅವನಿಗೆ ಈ ಯೋಗವನ್ನು ಹೇಳಿದ್ದೀಯೆ ಎಂದು ನಾನು ಹೇಗೆ ತಿಳಿಯಲಿ?
ಶ್ರೀಭಗವಾನ್
ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ |
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥5॥
ಶ್ರೀಭಗವಾನ್ ಎಲೈ ಅರ್ಜುನನೇ, ನನಗೂ ಮತ್ತು ನಿನಗೂ ಅನೇಕ ಜನ್ಮಗಳು ಕಳೆದುಹೋಗಿವೆ. ಎಲೈ ಪರಂತಪನೇ, ನಾನು ಅವೆಲ್ಲವನ್ನೂ ತಿಳಿದಿದ್ದೇನೆ, ನೀನು ತಿಳಿದಿಲ್ಲ.
ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ |
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥6॥
ನಾನು ಜನ್ಮರಹಿತನಾದರೂ, ಹ್ರಾಸವಿಲ್ಲದ ಸ್ವರೂಪವನ್ನು ಹೊಂದಿದ್ದರೂ, ಎಲ್ಲ ಜೀವರಿಗೆ ಒಡೆಯನಾದರೂ, ನನ್ನ ಸಚ್ಚಿದಾನಂದ ಸ್ವಭಾವವನ್ನೇ ತೆಗೆದುಕೊಂಡು ನನ್ನ ಇಚ್ಛೆಯಿಂದಲೇ ನಾನು ಜನ್ಮವನ್ನು ಪಡೆಯುತ್ತೇನೆ.
ವಿಶೇಷ ವಿಚಾರ ಮುಂದಿನ ಶ್ಲೋಕಗಳಲ್ಲಿ `ಜನ್ಮಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿತತ್ತ್ವತಃ ತ್ಯಕ್ತ್ವಾ ದೇಹಂ ಪುನರ್ಜನ್ಮನೈತಿ' (ಯಾವನು ನನ್ನ ದಿವ್ಯವಾದ ಜನ್ಮಕರ್ಮಗಳನ್ನು ಸರಿಯಾಗಿ ತಿಳಿಯುತ್ತಾನೆಯೋ, ಅವನು ದೇಹವನ್ನು ತ್ಯಜಿಸಿದ ಮೇಲೆ ಪುನರ್ಜನ್ಮವನ್ನು ಹೊಂದುವುದಿಲ್ಲ ಎಂದು ಹೇಳಿರುವುದರಿಂದ ಮಾಯಯಾ ಎಂದರೆ ಸ್ವೇಚ್ಛೆಯಿಂದಲೇ ಎಂದು ಅರ್ಥವನ್ನು ಮಾಡಬೇಕು. ಏಕೆಂದರೆ ಪುನರ್ಜನ್ಮವಿಲ್ಲ ಎಂಬ ಫಲವನ್ನೂ, ಜನ್ಮಕರಗಳಿಗೆ ಎಂಬ ದಿವ್ಯವಿಶೇಷಣವನ್ನೂ ಕೊಟ್ಟಿದ್ದಾರೆ. ಆದ್ದರಿಂದ ಹರಿಯ ಜನ್ಮವು ಉಳಿದ ಜೀವರ ಜನ್ಮದಂತೆ ಅಲ್ಲ. ಏಕೆಂದರೆ ಜನ್ಮಜ್ಞಾನದಿಂದ ಜನ್ಮವು ನಾಶವಾಗಲು ಸಾಧ್ಯವಿಲ್ಲ. ಆದ್ದರಿಂದ ಹರಿಯ ಜನ್ಮವೆಂದರೆ ಅವತಾರವೆಂದೇ ಅರ್ಥ).
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥7॥
ಎಲೈ ಭಾರತನೇ, ಯಾವಾಗ ಯಾವಾಗ ಧರ್ಮದ ಅವನತಿಯೂ ಮತ್ತು ಅಧರ್ಮದ ಅಭ್ಯುದಯವೂ ಉಂಟಾಗುತ್ತದೆಯೋ, ಆಗೆಲ್ಲಾ ನಾನು ನನ್ನನ್ನೇ ಸೃಷ್ಟಿಸಿಕೊಳ್ಳುತ್ತೇನೆ.
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ |
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥8॥
ಸಜ್ಜನರ ರಕ್ಷಣೆಗಾಗಿ, ದುಷ್ಕರ್ಮಿಗಳ ವಿನಾಶಕ್ಕಾಗಿ ಮತ್ತು ಧರ್ಮಸಂಸ್ಥಾಪನೆಯನ್ನು ಮಾಡಲು ನಾನು ಯುಗ ಯುಗಗಳಲ್ಲಿಯೂ ಅವತಾರ ಮಾಡುತ್ತೇನೆ.
ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ |
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥9॥
ಎಲೈ ಅರ್ಜುನನೇ, ಈ ರೀತಿಯಲ್ಲಿ ಇರುವ ನನ್ನ ಜನ್ಮಕರ್ಮಗಳನ್ನು ಯಾವನು ಯಥಾರ್ಥವಾಗಿ ತಿಳಿಯುತ್ತಾನೆಯೋ, ಅವನು ದೇಹವನ್ನು ತ್ಯಜಿಸಿದ ಮೇಲೆ ಪುನರ್ಜನ್ಮವನ್ನು ಹೊಂದುವುದಿಲ್ಲ. ನನ್ನನ್ನೇ ಹೊಂದುತ್ತಾನೆ.
ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ |
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥10॥
ರಾಗ-ಭಯ-ಕ್ರೋಧಗಳನ್ನು ತ್ಯಜಿಸಿ, ನನ್ನನ್ನೇ ಪ್ರಧಾನ ಎಂದರೆ ಸರ್ವೋತ್ತಮನೆಂದು ತಿಳಿದು, ನನ್ನನ್ನು ಆಶ್ರಯಿಸಿ ಜ್ಞಾನರೂಪವಾದ ತಪಸ್ಸಿನಿಂದ ಪವಿತ್ರರಾಗಿ ಅನೇಕರು ನನ್ನಲ್ಲಿ ಭಕ್ತಿಯನ್ನು ಪಡೆದಿದ್ದಾರೆ.
ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ |
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥11॥
ಯಾರು ನನ್ನನ್ನು ಹೇಗೆ ಉಪಾಸನೆ ಮಾಡುತ್ತಾರೆಯೋ ಅವರಿಗೆ ಅದೇ ರೀತಿ ಫಲವನ್ನು ಕೊಟ್ಟು ಅನುಗ್ರಹವನ್ನು ಮಾಡುತ್ತೇನೆ. ಎಲೈ ಪಾರ್ಥನೇ, ಎಲ್ಲ ಮನುಷ್ಯರೂ ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ.
ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ |
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥12॥
ಈ ಲೋಕದಲ್ಲಿ ಕರ್ಮಗಳ ಸಿದ್ಧಿಯನ್ನು ಬಯಸಿ ದೇವತೆಗಳನ್ನು ಪೂಜಿಸುತ್ತಾರೆ. ಮನುಷ್ಯಲೋಕದಲ್ಲಿ ಕ್ಷಿಪ್ರವಾಗಿ ಕರ್ಮದ ಸಿದ್ಧಿಯು ಉಂಟಾಗುತ್ತದೆ.
ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ |
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥13॥
ಸತ್ತ್ವಾದಿ ಗುಣಗಳ ಮತ್ತು ಕರ್ಮಗಳ ವಿಭಾಗವನ್ನು ಆಶ್ರಯಿಸಿ ನಾನು ನಾಲ್ಕು ವರ್ಣಗಳನ್ನು ಸೃಷ್ಟಿಸಿದ್ದೇನೆ. ಅದನ್ನು ಸೃಷ್ಟಿಸಿದ ನನಗೆ ಇನ್ನೊಬ್ಬ ಕರ್ತೃವು ಇರುವುದಿಲ್ಲ. ಅಥವಾ ಅವುಗಳನ್ನು ಸೃಷ್ಟಿಸಿದರೂ ನಾನು ಕರ್ತೃವಲ್ಲದವನಂತೆ ಕರ್ಮಲೇಪ ರಹಿತನಾಗಿರುತ್ತೇನೆ.
ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ |
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥14॥
ನನಗೆ ಶುಭಾಶುಭ ಕರ್ಮಗಳ ಲೇಪವುಂಟಾಗುವುದಿಲ್ಲ. ನನಗೆ ಕರ್ಮದಿಂದ ಉಂಟಾಗುವ ಫಲದಲ್ಲಿ ಆಸೆಯಿಲ್ಲ. ಹೀಗೆ ಯಾರು ನನ್ನನ್ನು ತಿಳಿಯುತ್ತಾರೋ ಅವರು ಕರ್ಮಗಳಿಂದ ಬಂಧನಕ್ಕೆ ಒಳಗಾಗುವುದಿಲ್ಲ.

ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ |
ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥15॥
ಪ್ರಾಚೀನರಾದ ಮುಮುಕ್ಷುಗಳು ಹೀಗೆ ತಿಳಿದು ಕರ್ಮಗಳನ್ನು ಮಾಡಿದರು. ಆದ್ದರಿಂದ ನೀನೂ ಸಹ ಪೂರ್ವಜರು ಮತ್ತು ಅವರ ಪೂರ್ವಜರು ಮಾಡಿದ ಕರ್ಮವನ್ನೇ ಮಾಡುವವನಾಗು.
ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ |
ತತ್ ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥
ತಾನು ಮಾಡಬೇಕಾದ ಕರ್ಮವು ಯಾವುದು, ತನಗೆ ಅಯೋಗ್ಯವಾದ ಕಾರಣದಿಂದ ಬಿಡಬೇಕಾದ ಪುಣ್ಯಕರ್ಮವೇ ಯಾವುದು ಎಂಬ ವಿಷಯದಲ್ಲಿ ಜ್ಞಾನಿಗಳೂ ಮೋಹಕ್ಕೆ ಒಳಗಾಗುತ್ತಾರೆ. ನಾನು ನಿನಗೆ ಆ ಕರ್ಮವನ್ನು ಹೇಳುವೆನು. ಅದನ್ನು ತಿಳಿದು ನೀನು ಅಶುಭದಿಂದ ನಿರ್ಮುಕ್ತನಾಗುವಿ.
ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ |
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥17॥
ಕರ್ಮಗಳ ಸ್ಥಿತಿಯನ್ನು ತಿಳಿಯಬೇಕು, ವಿಕರ್ಮಗಳ ಸ್ಥಿತಿಯನ್ನು ತಿಳಿಯಬೇಕು, ಅಕರ್ಮಗಳ ಸ್ಥಿತಿಯನ್ನು ತಿಳಿಯಬೇಕು. ಕರ್ಮಗಳ ಜ್ಞಾನವು ಬಹಳ ಗಹನವಾದುದು.
ವಿಶೇಷ ವಿಚಾರ ಕರ್ಮ ಎಂದರೆ ಸ್ವಸ್ವವಿಹಿತ ಕರ್ಮಗಳು ಎಂದು ಅರ್ಥ. ಅವುಗಳನ್ನು ತಿಳಿಯಬೇಕು. ವಿಕರ್ಮಗಳು ಎಂದರೆ ವಿರುದ್ಧವಾದ ಪಾಪಕರ್ಮಗಳು. ಅವುಗಳನ್ನೂ ತಿಳಿಯಬೇಕು. ಅಕರ್ಮಗಳು ಎಂದರೆ ಪುಣ್ಯಕರ್ಮವಾದರೂ ತನಗೆ ಅಯೋಗ್ಯವಾದುದರಿಂದ ಕೆಲವರಿಂದ ಮಾಡಲ್ಪಡಬಾರದವುಗಳು, ಸಂನ್ಯಾಸಿಗಳಿಗೆ ಯಜ್ಞವಿದ್ದಂತೆ. ಈ ಮೂರನ್ನೂ ತಿಳಿಯಬೇಕು ಎಂದು ಅಭಿಪ್ರಾಯ.
ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ |
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥18॥
ಕರ್ಮಗಳಲ್ಲಿ ಯಾವನು ಅಕರ್ಮವನ್ನು ಕಾಣುತ್ತಾನೆಯೋ, ಅಕರ್ಮಗಳಲ್ಲಿ ಯಾವನು ಕರ್ಮವನ್ನು ಕಾಣುತ್ತಾನೆಯೋ ಅವನು ಮನುಷ್ಯರಲ್ಲಿ ಯೋಗಯುಕ್ತನಾದವನು, ಸಮಗ್ರ ಕರ್ಮವನ್ನು ಮಾಡಿದವನು ಮತ್ತು ವಿವೇಕಿಯಾದವನು.
ವಿಶೇಷ ವಿಚಾರ ಕರ್ಮಣಿ ಎಂದರೆ ಸತ್ಯವಚನದ ಸತ್ಕರ್ಮಗಳ ವಿಷಯದಲ್ಲಿ ಅಕರ್ಮ. ಸಜ್ಜನರಿಗೆ ಅಪಾಯ ಒದಗಿದಾಗ ಸತ್ಯವಚನವನ್ನು ಆಡಬಾರದು, ಸತ್ಯವಚನವು ಅಕರ್ತವ್ಯಎಂದು ಯಾವನು ತಿಳಿಯುತ್ತಾನೆಯೋ; ಹಾಗೆಯೇ ಅಕರ್ಮಣಿ ಎಂದರೆ ವ್ರತವನ್ನು ಹಿಡಿದಿರುವ ಮನುಷ್ಯನಿಗೆ ನಿಷಿದ್ಧವಾದ ಶ್ರಾದ್ಧ ಭೋಜನಾದಿ ಕರ್ಮಗಳು, ಅದರಲ್ಲಿ ಕರ್ಮ= ಮಾಡು ಎಂದು ಗುರುವಿನ ಆಜ್ಞೆಯಾದರೆ ಇದು ನನ್ನಿಂದ ಮಾಡಲ್ಪಡಬೇಕು ಎಂದು ಯಾವನು ಕರ್ತವ್ಯತ್ವವನ್ನು ತಿಳಿಯುತ್ತಾನೆಯೋ ಅವನು ಬುದ್ಧಿವಂತನಾದವನು ಎಂದು ಅರ್ಥ. ಪೂರ್ವಶ್ಲೋಕದಲ್ಲಿ ವರ್ಣಾಶ್ರಮ ಭೇದದಿಂದ ಕರ್ಮ, ಅಕರ್ಮ, ವಿಕರ್ಮಗಳು ಹೇಳಲ್ಪಟ್ಟಿವೆ. ಈ ಶ್ಲೋಕದಲ್ಲಿ ಒಬ್ಬನೇ ವ್ಯಕ್ತಿಗೆ ಬೇರೆ ಬೇರೆ ದೃಷ್ಟಿಯಿಂದ ಅಕರ್ಮವು ಕರ್ಮವೂ; ಕರ್ಮವು ಅಕರ್ಮವೂ ಆಗುತ್ತದೆ ಎಂದು ಹೇಳಲ್ಪಟ್ಟಿದೆ. ಇಂತಹ ಕರ್ಮದ ಜ್ಞಾನವು ಅತಿಸೂಕ್ಷ್ಮ ಧರ್ಮವಾದ್ದರಿಂದ ಅದನ್ನು ತಿಳಿದವನು ಬುದ್ಧಿಮಾನ್ ಎಂದು ಅದಕ್ಕೆ ಫಲವನ್ನು ಹೇಳಿದ್ದಾರೆ.
ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ |
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥19॥
ಯಾವನ ಎಲ್ಲಾ ಪ್ರಾರಂಭಗಳು (ಉಪಕ್ರಮಗಳು) ಫಲದ ಆಸೆಯಿಂದ ರಹಿತವಾಗಿರುತ್ತವೆಯೋ ಮತ್ತು ಯಾವನು ತನ್ನ ಜ್ಞಾನಾಗ್ನಿಯಿಂದ ತನ್ನ ದುಷ್ಕರ್ಮಗಳನ್ನು ದಹಿಸುತ್ತಾನೆಯೋ ಅವನನ್ನು ಜ್ಞಾನಿಗಳು ಪಂಡಿತನೆಂದು ಕರೆಯುತ್ತಾರೆ.
ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ |
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ ಕರೋತಿ ಸಃ ॥20॥
ಕರ್ಮದ ಫಲದಲ್ಲಿ ಸ್ನೇಹವನ್ನು ತೊರೆದು ನಿತ್ಯತೃಪ್ತನೂ, ನಿರಾಶ್ರಯನೂ ಆದ ಭಗವಂತನಿಗೆ ನಾನು ಸದೃಶನಾಗಿದ್ದೇನೆ ಎಂಬ ಜ್ಞಾನವನ್ನು ಹೊಂದಿ, ಕರ್ಮದಲ್ಲಿ ಪ್ರವೃತ್ತನಾದವನು ಯಾವ ಕರ್ಮವನ್ನು ಮಾಡಿದರೂ ಅವನು ಅದನ್ನು ಮಾಡುವುದಿಲ್ಲ.
ವಿಶೇಷ ವಿಚಾರ ಹಾಗೆ ಕರ್ಮವನ್ನು ಮಾಡುವವನಿಗೆ ತನ್ನ ಪಾರತಂತ್ರ್ಯಜ್ಞಾನವು ಮತ್ತು ಹರಿಯ ಸ್ವಾತಂತ್ರ್ಯ ಜ್ಞಾನವು ಇರುವುದರಿಂದ ಅವನು ಏನು ಮಾಡಿದರೂ ಅಂತಹ ಕರ್ಮದ ಫಲದಿಂದ ಲಿಪ್ತನಾಗುವುದಿಲ್ಲ ಎಂದು ಅಭಿಪ್ರಾಯ. `ನಿತ್ಯತೃಪ್ತಃ ಅನಿರಾಶ್ರಯಃ' ಎಂದೂ ಪದಚ್ಛೇದವನ್ನು ಮಾಡಬಹುದು. ಭಗವಂತನ ಜ್ಞಾನದಿಂದ ತೃಪ್ತನಾಗಿ ಭಗವಂತನನ್ನು ಬಿಟ್ಟು ಬೇರೆ ಯಾವ ಆಶ್ರಯವನ್ನು ಅವಲಂಬಿಸದೆ ಯಾವನು ಕರ್ಮವನ್ನು ಮಾಡುತ್ತಾನೆಯೋ ಎಂದು ಆಗ ಯೋಜನೆಯನ್ನು ಮಾಡಬೇಕು.
ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |
ಶಾರೀರಂ ಕೇವಲಂ ಕರ್ಮ ಕುರ್ವನ್ ನಾಪ್ನೋತಿ ಕಿಲ್ಬಿಷಮ್ ॥21॥
ಆಸೆಗಳನ್ನು ತೊರೆದು ತನ್ನ ಚಿತ್ತವನ್ನೂ ಮತ್ತು ಪ್ರಯತ್ನವನ್ನೂ ನಿಯಂತ್ರಿಸಿ ಸರ್ವಪರಿಗ್ರಹವನ್ನು ತೊರೆದು ಶರೀರ ಯಾತ್ರೆಗೆ ಅವಶ್ಯಕವಾದಷ್ಟು ಕರ್ಮಗಳನ್ನು ಯಾವನು ಮಾಡುತ್ತಾನೆಯೋ ಅವನಿಗೆ ದೋಷವುಂಟಾಗುವುದಿಲ್ಲ.
ವಿಶೇಷ ವಿಚಾರ `ನಿರಾಶೀಃ ಯತಚಿತ್ತಾತ್ಮಾ' ಎಂಬುದರಿಂದ ಮನೋನಿಗ್ರಹದಿಂದಲೇ ಕಾಮಾದಿ ತ್ಯಾಗಗಳು ಉಂಟಾಗುತ್ತವೆ ಎಂದು ಸೂಚಿಸುತ್ತಾರೆ. `ತ್ಯಕ್ತಸರ್ವಪರಿಗ್ರಹ' ಎಂದರೆ ತನ್ನ ದೇಹೇಂದ್ರಿಯಾದಿ ಪರಿಗ್ರಹಗಳಲ್ಲಿ ಅಭಿಮಾನವನ್ನು ತ್ಯಾಗ ಮಾಡಿ ಎಂದು ಅರ್ಥ. ಅಂತಹವನು ಮಾಡುವ ಕರ್ಮವು ಅಶುಭಕ್ಕೆ ಕಾರಣವಾಗುವುದಿಲ್ಲ.
ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ |
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬದ್ಧ್ಯತೇ ॥22॥

ಅಪ್ರಯತ್ನದಿಂದ ಲಬ್ಧವಾದುದರಲ್ಲೇ ತೃಪ್ತನಾಗಿ, ಶೀತೋಷ್ಣಾದಿ ದ್ವಂದ್ವಗಳಿಂದ ಉತ್ಸೇಕ, ಅನುತ್ಸೇಕಗಳನ್ನು ಹೊಂದದೆ, ಮಾತ್ಸರ್ಯವನ್ನು ತ್ಯಜಿಸಿ, ಕರ್ಮವು ಸಮಾಪ್ತಿಯನ್ನು ಹೊಂದಿ ಸಿದ್ಧಿಸಿದರೂ ಅಥವಾ ಸಿದ್ಧಿಸದಿದ್ದರೂ ಯಾವನು ಸಮಾಧಾನವನ್ನು ಹೊಂದಿರುತ್ತಾನೆಯೋ ಅವನು ಕರ್ಮವನ್ನು ಮಾಡಿದರೂ ಅದರಿಂದ ಬಂಧನಕ್ಕೆ ಒಳಗಾಗುವುದಿಲ್ಲ.

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥23॥

ಹೀಗೆ ಎಲ್ಲದರಲ್ಲಿಯೂ ಸ್ನೇಹವನ್ನು ತ್ಯಜಿಸಿ, ದೇಹಾದಿ ಅಭಿಮಾನರಹಿತನಾಗಿ, ಜ್ಞಾನದಲ್ಲಿಯೇ ಆಸಕ್ತವಾದ ಮನಸ್ಸನ್ನು ಹೊಂದಿ, ಭಗವತ್ಪೂಜಾರ್ಥವಾಗಿಯೇ ಕರ್ಮವನ್ನು ಆಚರಿಸುವವನ ಸಮಗ್ರವಾದ ಪಾಪವು ನಾಶವನ್ನು ಹೊಂದುತ್ತದೆ.

ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ |
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥24॥

ಬ್ರಹ್ಮಾರ್ಪಣಂ ಎಂದರೆ ಕರ್ಮದಿಂದ ಉಂಟಾದ ಫಲವನ್ನು ಬ್ರಹ್ಮನಿಗೇ ಸಮರ್ಪಿಸುವುದು. ಬ್ರಹ್ಮಹವಿಃ ಎಂದರೆ ಹವಿಸ್ಸು ಬ್ರಹ್ಮನ ಸಂಬಂಧಿ, ಅವನಿಗೆ ಅಧೀನವಾದುದು ಎಂದು ಚಿಂತಿಸುವುದು. ಬ್ರಹ್ಮಾಗ್ನಿಃ= ಅಗ್ನಿಯೂ ಕೂಡ ಬ್ರಹ್ಮನ ಅಧೀನವೆಂದು ಚಿಂತಿಸುವುದು. ಬ್ರಹ್ಮಣಾ ಹುತಮ್= ಬ್ರಹ್ಮನಿಂದ ಪ್ರೇರಿತನಾಗಿ ಯಜಮಾನನಾದ ಬ್ರಾಹ್ಮಣನಿಂದ ಹೋಮಮಾಡಲ್ಪಟ್ಟುದು ಎಂದು ಅರ್ಥ. ಬ್ರಹ್ಮನಲ್ಲಿಯೇ ಅರ್ಪಣೆ ಮಾಡಬೇಕು. ಹವಿಸ್ಸಿನಲ್ಲಿಯೂ ಮತ್ತು ಅಗ್ನಿಯಲ್ಲಿಯೂ ಬ್ರಹ್ಮನ ಸನ್ನಿಧಾನವನ್ನು ಚಿಂತಿಸಬೇಕು. `ನ ಋತೇ ತ್ವತ್ಕ್ರಿಯತೇ ಕಿಂಚನ' ಅವನು ಚಲಿಸದಿದ್ದರೆ ಯಾವುದೂ ಚಲಿಸುವುದಿಲ್ಲ ಎಂಬ ಶ್ರುತಿ ಇರುವುದರಿಂದ ಬ್ರಹ್ಮಪ್ರಯತ್ನಕ್ಕೆ ಅಧೀನನಾಗಿಯೇ ನಾನು ಹೋಮವನ್ನು ಮಾಡುತ್ತಿದ್ದೇನೆ ಎಂದು ಚಿಂತಿಸುವುದು. ಈ ರೀತಿಯಲ್ಲಿ, ಬ್ರಹ್ಮಕರ್ಮಸಮಾಧಿನಾ=ಬ್ರಹ್ಮನಲ್ಲಿಯೇ ಕರ್ಮಕ್ಕೆ ಸಂಬಂಧಪಟ್ಟ ಎಲ್ಲ ವಿಷಯದಲ್ಲಿಯೂ ಚಿತ್ತಸಮಾಧಾನವುಳ್ಳವನಾದ, ತೇನ= ಆ ಯಜಮಾನನಿಂದ, ಕೊನೆಯಲ್ಲಿ ಅಂದರೆ ಮೋಕ್ಷದಲ್ಲಿ, ಬ್ರಹ್ಮೈವಗಂತವ್ಯಂ= ಬ್ರಹ್ಮನೇ ಪ್ರಾಪ್ತನಾಗುತ್ತಾನೆ ಎಂದು ಯೋಜನೆ. ಮೋಕ್ಷಾವಸ್ಥೆಯಲ್ಲಿಯೂ ಸಹ ಬ್ರಹ್ಮನು ಗಮ್ಯ, ಜೀವನು ಗಂತೃ ಎಂದು ಭೇದವನ್ನೇ ಹೇಳಿರುವುದರಿಂದ ಬ್ರಹ್ಮಣಾ ಹುತಮ್ ಎಂಬಲ್ಲಿ ಸಾಂಸಾರಿಕ ಜೀವರಿಗೂ ಮತ್ತು ಬ್ರಹ್ಮನಿಗೂ ಅಭೇದವನ್ನು ಹೇಳುವುದು ಪೂರ್ವೋತ್ತರ ವಿರುದ್ಧವಾಗುತ್ತದೆ. ಅಲ್ಲದೇ ಜಡಭೂತವಾದ ಅರ್ಪಣ ಕ್ರಿಯೆ, ಜಡವಾದ ಹವಿಸ್ಸು, ಜಡವಾದ ಅಗ್ನಿ ಇವುಗಳಿಗೆ ಬ್ರಹ್ಮನೇ ಅರ್ಪಣ, ಬ್ರಹ್ಮನೇ ಹವಿಸ್ಸು, ಬ್ರಹ್ಮನೇ ಅಗ್ನಿ ಎಂದು ಐಕ್ಯವನ್ನು ಹೇಳುವುದು ಪೂರ್ವೋತ್ತರ ವಿರುದ್ಧವೂ, ಸ್ವಮತ (ಅದ್ವೈತ) ಮತವೂ ಆಗುತ್ತದೆ.

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ |
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥25॥

ಇನ್ನು ಕೆಲವು ಯೋಗಿಗಳು ದೇವಸಂಬಂಧಿಯಜ್ಞವನ್ನೇ ಎಂದರೆ ಜ್ಞಾನರೂಪವಾದ ಯಜ್ಞವನ್ನೇ ಯಾವಾಗಲೂ ಮಾಡುತ್ತಾರೆ. ಇನ್ನು ಕೆಲವರು ಬ್ರಹ್ಮಸಂಬಂಧಿಯಾದ ಅಗ್ನಿಯಲ್ಲಿ ಯಜ್ಞನಾಮಕನಾದ ಪರಮಾತ್ಮನಿಂದ ಪ್ರೇರಿತರಾಗಿ ಕರ್ಮರೂಪ ಯಜ್ಞದಿಂದ ಯಜ್ಞನಾಮಕ ಪರಮಾತ್ಮನನ್ನೇ ಹೋಮವನ್ನು ಮಾಡಿ ಉಪಾಸನೆ ಮಾಡುತ್ತಾರೆ.

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ |
ಶಬ್ದಾದೀನ್ ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥26॥

ಇನ್ನು ಕೆಲವರು ವಿಷಯ ತೃಷ್ಣೆಯ ಸಂಯಮನ ಎಂಬ ಅಗ್ನಿಗಳಲ್ಲಿ ಶ್ರೋತ್ರಾದಿ ಇಂದ್ರಿಯಗಳನ್ನು ಹೋಮ ಮಾಡುತ್ತಾರೆ. ವಿಷಯದ ಆಸೆಯ ನಿಯಂತ್ರಣವನ್ನು ಪ್ರತಿದಿನವೂ ಮಾಡಬೇಕಾಗಿರುವುದರಿಂದ ಬಹುವಚನ. ಇನ್ನು ಕೆಲವರು ಇಂದ್ರಿಯ ನಿಯಮನ ಎಂಬ ಅಗ್ನಿಗಳಲ್ಲಿ ಶಬ್ದಾದಿ ವಿಷಯವನ್ನು ಹೋಮ ಮಾಡುತ್ತಾರೆ. ಇಂದ್ರಿಯಗಳ ನಿಯಂತ್ರಣವಿದ್ದರೆ ಶಬ್ದಾದಿ ವಿಷಯಗಳು ಹುತವಾದ ಅನ್ನದಂತೆ ಯಾವ ವಿಕಾರವನ್ನು ಉಂಟುಮಾಡುವುದಿಲ್ಲವಾದ್ದರಿಂದ ಜುಹ್ವತಿ (ಹೋಮ ಮಾಡುತ್ತಾರೆ) ಎಂದು ಹೇಳಲಾಗಿದೆ. ವಿಷಯದ ಆಸೆಯನ್ನು ತೊರೆದರೆ ಇಂದ್ರಿಯಗಳು ಬಾಧಕವಾಗುವುದಿಲ್ಲ. ಇಂದ್ರಿಯಗಳ ನಿಯಂತ್ರಣವಿದ್ದರೆ ವಿಷಯಗಳು ಬಾಧಕವಾಗುವುದಿಲ್ಲ ಎಂದು ಒಟ್ಟು ಅಭಿಪ್ರಾಯ.

ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ |
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥27॥

ಇನ್ನು ಕೆಲವರು ಎಲ್ಲ ಇಂದ್ರಿಯಗಳ ವ್ಯಾಪಾರಗಳನ್ನು ಮತ್ತು ಶ್ವಾಸೋಚ್ಛ್ವಾಸಾದಿ ವ್ಯಾಪಾರಗಳನ್ನು ಜ್ಞಾನದಿಂದ ದೀಪ್ತವಾದ ಚಿತ್ತವನ್ನು ಪರಮಾತ್ಮನಲ್ಲಿಯೇ ನಿಲ್ಲಿಸುವುದು ಎಂಬ ಆತ್ಮಸಂಯಮಯೋಗ ಎಂದರೆ ಧ್ಯಾನಯೋಗರೂಪವಾದ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾರೆ.

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ |
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥28॥

ಬಹಳ ತೀಕ್ಷ್ಣವಾದ ವ್ರತವನ್ನು ಧರಿಸಿದ ಪ್ರಯತ್ನಶೀಲರಾದ ಕೆಲವರು ದ್ರವ್ಯ ಯಜ್ಞಗಳನ್ನೂ, ಇನ್ನು ಕೆಲವರು ತಪೋಯಜ್ಞಗಳನ್ನೂ, ಇನ್ನು ಕೆಲವರು ಯೋಗ ಯಜ್ಞಗಳನ್ನೂ, ಇನ್ನು ಕೆಲವರು ಸ್ವಾಧ್ಯಾಯ ಜ್ಞಾನಯಜ್ಞಗಳನ್ನೂ ಮಾಡುತ್ತಾರೆ.

ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ |
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥29॥

ಇನ್ನು ಕೆಲವರು ಅಪಾನದ ಪ್ರಾಣವನ್ನು ಹೋಮ ಮಾಡುತ್ತಾರೆ. ಪ್ರಾಣನಲ್ಲಿ ಅಪಾನನನ್ನು ಹೋಮ ಮಾಡುತ್ತಾರೆ. ಪ್ರಾಣಾಪಾನಗಳ ಸಂಚಾರವನ್ನು ತಡೆದು ಕುಂಭಕದಲ್ಲಿ ಪರಮಾತ್ಮನನ್ನು ಧ್ಯಾನಿಸಿ ಪ್ರಾಣಾಯಾಮಪರಾಯಣರಾಗಿರುತ್ತಾರೆ. ವಿಶೇಷ ವಿಚಾರ ಪರಮಾತ್ಮನ ಧ್ಯಾನವನ್ನು ಮಾಡುವಾಗ ಅಪಾನ ವಾಯುವನ್ನೂ ಸಹ ಮೇಲ್ಮುಖವಾಗಿ ಎಳೆದುಕೊಂಡು ಶ್ವಾಸದಲ್ಲಿ ಸೇರಿಸುವುದರಿಂದ ಪ್ರಾಣನಲ್ಲಿ ಅಪಾನನನ್ನು ಹೋಮಿಸುತ್ತಾರೆ ಎಂದು ಹೇಳಿದೆ. ಎಡನಾಸಾ ಪುಟದಿಂದ ಊರ್ಧ್ವಶ್ವಾಸ

ರೂಪವಾದ ಪ್ರಾಣವಾಯುವನ್ನು ಒಳಗೆ ತೆಗೆದುಕೊಂಡಾಗ ಅದು ಕೆಳಮುಖವಾಗಿ ಹೋಗಿ ಅಪಾನವಾಯುವಿನಲ್ಲಿ ಲಯವನ್ನು ಹೊಂದುವುದರಿಂದ ಅಪಾನನಲ್ಲಿ ಪ್ರಾಣನನ್ನು ಹೋಮ ಮಾಡುತ್ತಾರೆ ಎಂದು ಹೇಳಲಾಗಿದೆ. ಮೂಲದಲ್ಲಿ ಈ ಎರಡನೇ ಹೋಮವನ್ನು ಮೊದಲು ಹೇಳಿದ್ದರೂ ಸಹ ಅಪಾನನನ್ನು ಪ್ರಾಣನಲ್ಲಿ ಹೋಮ ಮಾಡುವುದು ಪ್ರಶಸ್ತವಾದುದರಿಂದ ಹೀಗೆಯೇ ಯೋಜನೆ ಮಾಡಬೇಕು.

ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ |
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥30॥

ಇನ್ನು ಕೆಲವರು ಆಹಾರ ನಿಯಂತ್ರಣವನ್ನು ಮಾಡಿ ಶ್ರೋತ್ರಾದಿ ಇಂದ್ರಿಯಗಳನ್ನು ಶ್ವಾಸವಾಯುಗಳಲ್ಲಿ ಹೋಮ ಮಾಡುತ್ತಾರೆ. ಎಂದರೆ ಆಹಾರ ನಿಯಂತ್ರಣವನ್ನು ಮಾಡಿ ಕೇವಲ ಚರ್ಮಾಸ್ಥಿಗಳನ್ನು ಅವಯವಗಳಾಗಿ ಹೊಂದಿ ಶ್ವಾಸವನ್ನು ಮಾತ್ರ ಮಾಡುತ್ತಿರುತ್ತಾರೆ ಎಂದು ಅರ್ಥ. ಈ ಎಲ್ಲರೂ ಯಜ್ಞವನ್ನು ತಿಳಿದವರು ಮತ್ತು ಅಂತಹ ಯಜ್ಞದಿಂದ ತಮ್ಮ ಎಲ್ಲಾ ದೋಷಗಳನ್ನೂ ಕಳೆದುಕೊಂಡವರು.

ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ |
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥31॥

ಯಜ್ಞವನ್ನು ಮಾಡಿ ಅದರಿಂದ ಉಂಟಾದ ಪುಣ್ಯ, ಜ್ಞಾನ, ವೈರಾಗ್ಯಾದಿಗಳೇ ಅಮೃತದಂತೆ. ಅದನ್ನು ಭುಂಜಿಸುವವರು ವೇದಪ್ರತಿಪಾದ್ಯನಾದ ಪರಬ್ರಹ್ಮನನ್ನು ಹೊಂದುತ್ತಾರೆ. ಎಲೈ ಕುರುಶ್ರೇಷ್ಠನೇ, ಮೇಲೆ ಹೇಳಿದ ಯಜ್ಞಗಳಲ್ಲಿ ಯಾವ ಒಂದು ಯಜ್ಞವನ್ನೂ ಮಾಡದವನು ಈ ಲೋಕದಲ್ಲೇ ಬಹಳ ನಿಂದೆಗೆ ಒಳಗಾಗಿ ಈ ಲೋಕವನ್ನೂ ಕಳೆದುಕೊಳ್ಳುತ್ತಾನೆ. ಇನ್ನು ಅವನಿಗೆ ಪರಲೋಕವು ಎಲ್ಲಿಂದ ಬರಬೇಕು?

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ |
ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷಸೇ ॥32॥

ಹೀಗೆ ಅನೇಕ ವಿಧವಾದ ಯಜ್ಞಗಳು ಸರ್ವಯಜ್ಞಭೋಕ್ತೃವಾದ ಆ ಬ್ರಹ್ಮನ ಮುಖದಲ್ಲಿ ವಿಸ್ತರಿಸಲ್ಪಟ್ಟಿವೆ. ಇವೆಲ್ಲವನ್ನೂ ಕರ್ಮರೂಪವಾದವುಗಳೆಂದು ತಿಳಿ. ಹೀಗೆ ತಿಳಿದರೆ ಮುಕ್ತನಾಗುವಿ.

ಶ್ರೇಯಾನ್ ದ್ರವ್ಯಮಯಾದ್ ಯಜ್ಞಾದ್ ಜ್ಞಾನಯಜ್ಞಃ ಪರಂತಪ |
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥33॥

ಎಲೈ ಪರಂತಪನೇ, ಹವಿಸ್ಸು ಮೊದಲಾದ ದ್ರವ್ಯರೂಪವಾದ ಯಜ್ಞಗಳಿಗಿಂತಲೂ ಜ್ಞಾನಯಜ್ಞವು ವಿಶಿಷ್ಟವಾದುದು. ಎಲೈ ಪಾರ್ಥನೇ, ಮಾಡಿದ ಕರ್ಮವೆಲ್ಲವೂ ನಾಶವನ್ನು ಹೊಂದದೆ ಜ್ಞಾನದಲ್ಲಿ ಪರಿಸಮಾಪ್ತಿ ಹೊಂದುತ್ತದೆ.

ತದ್ ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ |
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥34॥

ಗುರುಗಳಿಗೆ ನಮಸ್ಕಾರವನ್ನು ಮಾಡಿ, ಯೋಗ್ಯವಾದ ಪ್ರಶ್ನೆಗಳನ್ನು ಮಾಡಿ, ಅವರ ಸೇವೆಯನ್ನು ಮಾಡಿ ಆ ಪರಮಾತ್ಮನ ಜ್ಞಾನವನ್ನು ಸಂಪಾದಿಸು. ತತ್ತ್ವದರ್ಶಿಯಾದ ಆ ಜ್ಞಾನಿಗಳು ನಿನಗೆ ಅಂತಹ ಪರಬ್ರಹ್ಮನ ಜ್ಞಾನವನ್ನು ಉಂಟು ಮಾಡುವ ವಾಕ್ಯಗಳನ್ನು ಉಪದೇಶ ಮಾಡುವರು.

ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ |
ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥35॥

ಎಲೈ ಪಾಂಡವನೇ, ಅಂತಹ ಜ್ಞಾನವನ್ನು ಸಂಪಾದನೆ ಮಾಡಿದರೆ ನೀನು ಪುನಃ ಇಂತಹ ಮೋಹಕ್ಕೆ ಒಳಗಾಗುವುದಿಲ್ಲ. ಮತ್ತು ಎಲ್ಲಾ ಜೀವಜಡಾತ್ಮಕವಾದ ಪ್ರಪಂಚವೂ ಸಹ ಸಮಗ್ರವಾಗಿ ನನ್ನನ್ನು ಆಶ್ರಯಿಸಿಕೊಂಡಿರುವುದನ್ನು ನೋಡುವಿ.

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ |
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥36॥

ನೀನು ಒಂದು ಪಕ್ಷ ಎಲ್ಲ ಪಾಪಾಚರಣೆ ಮಾಡುವವರಿಗಿಂತಲೂ ಹೆಚ್ಚು ಪಾಪವನ್ನು ಮಾಡಿದ್ದರೂ ಜ್ಞಾನವೆಂಬ ಹಡಗಿನಿಂದಲೇ ಎಲ್ಲ ಪಾಪಗಳನ್ನೂ ದಾಟುವಿ.

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ |
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥37॥

ಎಲೈ ಅರ್ಜುನನೇ, ಹೇಗೆ ದೀಪ್ತವಾದ ಅಗ್ನಿಯು ಕಟ್ಟಿಗೆಗಳನ್ನು ಭಸ್ಮವನ್ನಾಗಿ ಮಾಡುತ್ತದೆಯೋ ಹಾಗೆ ಜ್ಞಾನಾಗ್ನಿಯು ಸರ್ವಕರ್ಮಗಳನ್ನು ಭಸ್ಮ ಮಾಡುತ್ತದೆ.

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ |
ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥38॥

ಜ್ಞಾನಕ್ಕೆ ಸದೃಶವಾದ ಪವಿತ್ರವಾದ ವಸ್ತುವು ಈ ಲೋಕದಲ್ಲಿ ಇನ್ನೊಂದು ಇಲ್ಲ. ಯೋಗಸಂಸಿದ್ಧನಾದ ಮನುಷ್ಯನು ಬಹುಕಾಲದ ನಂತರ ಅಂತಹ ಜ್ಞಾನವನ್ನು ತನ್ನ ಮನಸ್ಸಿನಲ್ಲಿ ಪಡೆಯುತ್ತಾನೆ.

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ |
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥39॥

ಭಗವಂತನೇ ಸರ್ವೋತ್ತಮನೆಂದು ತಿಳಿದು ಮತ್ತು ಜ್ಞಾನದಲ್ಲಿಯೇ ಯಾವಾಗಲೂ ಆಸಕ್ತನಾಗಿ, ಇಂದ್ರಿಯನಿಯಂತ್ರಣವನ್ನು ಹೊಂದಿ ಶ್ರದ್ಧೆಯುಳ್ಳ ಮನುಷ್ಯನು ಜ್ಞಾನವನ್ನು ಪಡೆಯುತ್ತಾನೆ. ಜ್ಞಾನವನ್ನು ಪಡೆದ ಮೇಲೆ ಅಲ್ಪಕಾಲದಲ್ಲಿಯೇ ಶ್ರೇಷ್ಠ ಸುಖರೂಪವಾದ ಮೋಕ್ಷವನ್ನು ಪಡೆಯುತ್ತಾನೆ.

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ |
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥40॥
ಅಜ್ಞಾನಿಯೂ, ಶ್ರದ್ಧೆಯಿಲ್ಲದವನೂ ಮತ್ತು ಎಲ್ಲದರಲ್ಲಿಯೂ ಸಂಶಯವನ್ನು ತಾಳುವವನೂ ವಿನಾಶವನ್ನು ಹೊಂದುತ್ತಾನೆ. ಸಂಶಯಶೀಲ ಮಾನವನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ ಮತ್ತು ಸುಖವೂ ಇಲ್ಲ.
ಯೋಗಸನ್ನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ |
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥41॥
ಎಲೈ ಧನಂಜಯನೇ, ಮೇಲೆ ಹೇಳಿದ ಯೋಗಗಳಿಂದ ಕರ್ಮಫಲಗಳನ್ನು ಹರಿಯಲ್ಲಿ ಸಮರ್ಪಿಸಿ, ಜ್ಞಾನದಿಂದ ತನ್ನ ಎಲ್ಲಾ ಸಂಶಯಗಳನ್ನು ಕಳೆದುಕೊಂಡು, ಪರಮಾತ್ಮನ ಭಕ್ತನಾಗಿ ಪರಮಾತ್ಮನನ್ನು ಹೃದಯದಲ್ಲಿ ಧರಿಸಿದವನಿಗೆ ಕರ್ಮಗಳು ಬಂಧಕವಾಗುವುದಿಲ್ಲ.
ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾಽಽತ್ಮನಃ |
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥42॥
ಆದ್ದರಿಂದ ಎಲೈ ಭಾರತನೇ, ಅಜ್ಞಾನದಿಂದ ನಿನ್ನ ಹೃದಯದಲ್ಲಿ ಉಂಟಾದ ಈ ಸಂಶಯವನ್ನು ನಿನ್ನ ಜ್ಞಾನವೆಂಬ ಕತ್ತಿಯಿಂದ ಛೇದಿಸಿ ಯೋಗವನ್ನು ಆಶ್ರಯಿಸು, ಎದ್ದೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಡ್ವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ಇಪ್ಪತ್ತೇಳನೆಯ ಅಧ್ಯಾಯ
ಭಗವದ್ಗೀತಾ ಸಂನ್ಯಾಸ ಯೋಗ.
ಅರ್ಜುನಃ
ಸನ್ನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ |
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥1॥
ಅರ್ಜುನ ಎಲೈ ಕೃಷ್ಣನೇ, ನೀನು ಹಿಂದಿನ ಅಧ್ಯಾಯದಲ್ಲಿ ಯದೃಚ್ಛಾಲಾಭ ಸಂತುಷ್ಟ ಇತ್ಯಾದಿಗಳಿಂದ ಕಾಮಾದಿ ಪರಿತ್ಯಾಗರೂಪವಾದ ಸಂನ್ಯಾಸವನ್ನು, `ಕುರುಕರ್ಮೈವ ತಸ್ಮಾತ್' ಇತ್ಯಾದಿಗಳಿಂದ ವರ್ಣಾಶ್ರಯೋಚಿತವಾದ ಕರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮಯೋಗವನ್ನೂ ಪ್ರಶಂಸಿಸುತ್ತಿದ್ದೀಯೆ. ಇವೆರಡರಲ್ಲಿ ಯಾವುದು ಶ್ರೇಷ್ಠವಾದುದು ಎಂದು ನನಗೆ ನಿಶ್ಚಿತವಾಗಿ ಹೇಳು.
ಶ್ರೀಭಗವಾನ್
ಸನ್ನ್ಯಾಸಃ ಕರ್ಮಯೋಗಶ್ಚ ನಿಶ್ರೇಯಸಕರಾವುಭೌ |
ತಯೋಽಸ್ತು ಕರ್ಮಸನ್ನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥2॥
ಶ್ರೀಭಗವಾನ್ ಕಾಮಾದಿ ವರ್ಜನರೂಪವಾದ ಸಂನ್ಯಾಸ ಮತ್ತು ಈಶ್ವರಾರ್ಪಣ ಬುದ್ಧಿಯಿಂದ ಕರ್ಮಾನುಷ್ಠಾನರೂಪವಾದ ಕರ್ಮಯೋಗ ಇವೆರಡೂ ಮೋಕ್ಷಕ್ಕೆ ಸಾಧನಗಳು. ಅವೆರಡರಲ್ಲಿ ಕಾಮಾದಿವರ್ಜನರೂಪವಾದ ಸಂನ್ಯಾಸಕ್ಕಿಂತಲೂ ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮಾನುಷ್ಠಾನರೂಪವಾದ ಕರ್ಮಯೋಗವು ಶ್ರೇಷ್ಠವಾದುದು.
ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ |
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ॥
ಎಲೈ ಮಹಾಬಾಹುವೇ, ಯಾವನು ದ್ವೇಷ, ಆಕಾಂಕ್ಷೆ ಮೊದಲಾದವುಗಳಿಂದ ರಹಿತನಾಗಿ, ಕಾಮ್ಯಕರ್ಮವನ್ನು ತ್ಯಾಗ ಮಾಡುತ್ತಾನೆಯೋ ಎಂದೂ ಇಟ್ಟುಕೊಳ್ಳಬೇಕು ಅಂತಹವನನ್ನು ನಿತ್ಯಸಂನ್ಯಾಸಿ ಎಂದು ತಿಳಿಯಬೇಕು. ದ್ವಂದ್ವಗಳನ್ನು ಮೀರಿದ ಅವನು ಸುಖವಾಗಿ ಸಂಸಾರಬಂಧದಿಂದ ಮುಕ್ತನಾಗುತ್ತಾನೆ.
ಸಾಂಖ್ಯಯೋಗೌ ಪೃಥಗ್‌ಬಾಲಾಃ ಪ್ರವದಂತಿ ನ ಪಂಡಿತಾಃ |
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥4॥
ಸಾಂಖ್ಯಯೋಗಗಳು ಭಿನ್ನ-ಭಿನ್ನವಾದವುಗಳು ಎಂದರೆ ಸಾಧ್ಯ-ಸಾಧನ ಭಾವವಿಲ್ಲದವು ಎಂದು ಅವಿವೇಕಿಗಳು ಹೇಳುತ್ತಾರೆ. ಪಂಡಿತರು ಹಾಗೆ ಹೇಳುವುದಿಲ್ಲ. ಜ್ಞಾನಮಾರ್ಗ ಮತ್ತು ಕರ್ಮಮಾರ್ಗಗಳಲ್ಲಿ ಒಂದನ್ನು ಆಶ್ರಯಿಸಿದವನೂ ಎರಡರ ಫಲವನ್ನೂ ಪಡೆಯುತ್ತಾನೆ.
ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ ಯೋಗೈರಪಿ ಗಮ್ಯತೇ |
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥5॥
ವಿಶುದ್ಧ ಜ್ಞಾನವುಳ್ಳವರಿಂದ ಯಾವ ಸ್ಥಾನವು ಅಥವಾ ಭಗವತ್ಸ್ವರೂಪ ಲಕ್ಷಣವಾದ ಯಾವ ಸ್ಥಾನವು ದೊರೆಯಲ್ಪಡುತ್ತದೆಯೋ ಅದನ್ನು ಯೋಗಾನುಷ್ಠಾನ ಮಾಡುವವರೂ ಪಡೆಯುತ್ತಾರೆ. ಕರ್ಮಯೋಗವನ್ನು ಮಾಡುವವರೂ ಸಹ ಜ್ಞಾನದ್ವಾರಾ ಭಗವಂತನ ಪ್ರಾಪ್ತಿಯನ್ನು ಪಡೆಯುತ್ತಾರೆ ಎಂದು ಅರ್ಥ. ಆದ್ದರಿಂದ ಹೀಗೆ ಸಾಂಖ್ಯ ಮತ್ತು ಯೋಗಗಳಿಗೆ ಸಾಧ್ಯ-ಸಾಧನಭಾವವಿದೆ ಎಂದು ಯಾವನು ತಿಳಿಯುತ್ತಾನೆಯೋ ಅವನೇ ಜ್ಞಾನಿ.
ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ |
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥6॥

ಎಲೈ ಮಹಾಬಾಹುವೇ, ಯೋಗರಹಿತವಾದ ಸಂನ್ಯಾಸವು ಕೇವಲ ದುಃಖವನ್ನು ಹೊಂದಲು ಕಾರಣವಾಗುತ್ತದೆ. ಸುಖಪ್ರಾಪ್ತಿಗೆ ಕಾರಣವಾಗುವುದಿಲ್ಲ ಮತ್ತು ಅದು ಅಸಾಧ್ಯವಾದುದು ಎಂದೂ ಅಭಿಪ್ರಾಯ. ಯೋಗಯುಕ್ತನಾದವನು ಶೀಘ್ರವಾಗಿ ಬ್ರಹ್ಮನನ್ನು ಹೊಂದುತ್ತಾನೆ.

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ |
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥7॥

ಯೋಗಯುಕ್ತನಾಗಿ ಶುದ್ಧಾಂತಕರಣನಾಗಿ ಇಂದ್ರಿಯಜಯ ಮತ್ತು ಮನೋಜಯವನ್ನು ಹೊಂದಿ, ಸರ್ವಭೂತಗಳ ಅಂತರ್ಯಾಮಿಯಾದ ಪರಮಾತ್ಮನಲ್ಲೇ ಮನಸ್ಸನ್ನು ಇಟ್ಟವನು ಏನು ಮಾಡಿದರೂ ಅದರಿಂದ ಲೇಪಕ್ಕೆ ಒಳಗಾಗುವುದಿಲ್ಲ.

ನೈವ ಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ |
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥

ನೋಡುವುದು, ಕೇಳುವುದು, ಸ್ಪರ್ಶ ಮಾಡುವುದು, ವಾಸನೆಯನ್ನು ನೋಡುವುದು, ತಿನ್ನುವುದು, ನಡೆಯುವುದು, ಮಲಗುವುದು, ಉಸಿರಾಡುವುದು ಮುಂತಾದ ಏನನ್ನೇ ಮಾಡಿದರೂ ಜ್ಞಾನಿಯಾದವನು ನಾನೇ ಇದನ್ನು ಸ್ವತಂತ್ರವಾಗಿ ಮಾಡುತ್ತಿದ್ದೇನೆಂದು ತಿಳಿಯಬಾರದು. ಹರಿಪ್ರೇರಣೆಯಿಂದಲೇ ಎಲ್ಲವನ್ನೂ ಮಾಡುತ್ತಿದ್ದೇನೆ ಎಂದು ತಿಳಿಯಬೇಕು.

ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ ನಿಮಿಷನ್ನಪಿ |
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥9॥

ಅವನು ಮಾತನಾಡಲಿ, ವಿಸರ್ಜನೆಯನ್ನು ಮಾಡಲಿ, ಕೈಯಿಂದ ಹಿಡಿದುಕೊಳ್ಳಲಿ, ಕಣ್ಣನ್ನು ತೆರೆಯಲಿ ಅಥವಾ ಮುಚ್ಚಲಿ, ಏನೇ ಮಾಡಿದರೂ ಹರಿಯಿಂದ ಪ್ರೇರಿತವಾದ ಇಂದ್ರಿಯಗಳು ತಮ್ಮ ವಿಷಯಗಳಲ್ಲಿ ವ್ಯಾಪಾರ ಮಾಡುತ್ತಿವೆ ಎಂದು ತಿಳಿಯಬೇಕು. ವಿಶೇಷ ವಿಚಾರ ಸರ್ವವ್ಯಾಪಾರವನ್ನು ಮಾಡಿದರೂ ಹರಿಪ್ರೇರಿತವಾದ ಇಂದ್ರಿಯಗಳು ಹರಿಪ್ರೇರಿತವಾದ ಅರ್ಥಗಳಲ್ಲಿ ವ್ಯಾಪೃತವಾಗಿವೆ. ಅವನೇ ಸ್ವತಂತ್ರನಾದವನು. ನಾನು ಸ್ವತಂತ್ರವಾಗಿ ಏನನ್ನೂ ಮಾಡುವುದಿಲ್ಲ ಎಂಬ ಅನುಸಂಧಾನವೇ ದ್ವೇಷಾದಿವರ್ಜನರೂಪವಾದ ಸಂನ್ಯಾಸಕ್ಕೆ ಯೋಗರೂಪತ್ವವನ್ನು ತಂದುಕೊಡುತ್ತದೆ ಎಂದು ಎರಡು ಶ್ಲೋಕಗಳ ಒಟ್ಟು ಅಭಿಪ್ರಾಯ.

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥10॥

ತಾನು ಮಾಡುವ ಎಲ್ಲ ಕರ್ಮಗಳ ವಿಷಯದಲ್ಲಿಯೂ ಫಲಕಾಮನೆಯನ್ನು ಬಿಟ್ಟು ಹರಿಯು ನನ್ನ ಶುಭಕ್ಕಾಗಿ ತನ್ನ ಪೂಜಾತ್ಮಕವಾದ ಕರ್ಮಗಳನ್ನು ನನ್ನಿಂದ ಮಾಡಿಸುತ್ತಿದ್ದಾನೆ ಎಂದು ಅನುಸಂಧಾನ ಮಾಡಿ ಯಾವನು ಕರ್ಮವನ್ನು ಮಾಡುತ್ತಾನೋ, ಅವನು ಪದ್ಮಪತ್ರವು ನೀರಿನ ಲೇಪವನ್ನು ಹೊಂದದಂತೆ ಪಾಪದ ಲೇಪವನ್ನು ಹೊಂದುವುದಿಲ್ಲ.

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ |
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ ॥11॥

ಯೋಗಿಗಳು ಕರ್ಮಫಲದಲ್ಲಿ ಸ್ನೇಹವನ್ನು ತೊರೆದು ತಮ್ಮ ಆತ್ಮಶುದ್ಧಿಗಾಗಿ ದೇಹದಿಂದ, ಮನಸ್ಸಿನಿಂದ, ಬುದ್ಧಿಯಿಂದ ಅಥವಾ ಕೇವಲ ಇಂದ್ರಿಯಗಳಿಂದಲೂ ಕರ್ಮಗಳನ್ನು ಮಾಡುತ್ತಾರೆ.

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ |
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥12॥

ಯೋಗಯುಕ್ತನಾದವನು ಕರ್ಮಫಲದಲ್ಲಿ ಸ್ನೇಹವನ್ನು ತೊರೆದು ಶಾಶ್ವತವಾದ ಶಾಂತಿಯನ್ನು ಪಡೆಯುತ್ತಾನೆ. ಯೋಗರಹಿತನಾದವನು ತನ್ನ ಇಚ್ಛೆಗೆ ಅನುಗುಣವಾಗಿ ಫಲದಲ್ಲಿ ಆಸಕ್ತನಾಗಿ ಸಂಸಾರಬಂಧನಕ್ಕೆ ಒಳಗಾಗುತ್ತಾನೆ.

ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ |
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥13॥

ಜಿತೇಂದ್ರಿಯನೂ, ಜಿತಮನಸ್ಕನೂ ಆದ ಅವನು ಸರ್ವಕರ್ಮಗಳನ್ನು ಮನಸ್ಸಿನಲ್ಲಿಯೇ ತ್ಯಾಗವನ್ನು ಮಾಡಿ - ಮನಸ್ಸಿನಿಂದಲೇ ತ್ಯಾಗವೆಂದರೆ ಎಲ್ಲ ಕರ್ಮಗಳನ್ನು ಹರಿಯೇ ಮಾಡಿಸುತ್ತಿದ್ದಾನೆ, ನನ್ನ ಕರ್ತೃತ್ವ ಶಕ್ತಿಯು ಈಶಾಧೀನವಾದುದು ಎಂಬ ಜ್ಞಾನವನ್ನು ಹೊಂದಿ, ನವದ್ವಾರವಿರುವ ಈ ಶರೀರದಲ್ಲಿ ಯಾವುದನ್ನೂ ಸ್ವತಂತ್ರವಾಗಿ ಮಾಡುತ್ತಿದ್ದೇನೆಂದು ತಿಳಿಯದೆ ಇರುತ್ತಾನೆಯೋ ಅವನು ಸುಖವಾಗಿರುತ್ತಾನೆ.

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ |
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥14॥

ಹರಿಯು ಲೋಕಕ್ಕೆ ಸ್ವತಂತ್ರಕರ್ತೃತ್ವವನ್ನು ಸೃಷ್ಟಿ ಮಾಡುವುದಿಲ್ಲ. ಸ್ವತಂತ್ರ ಕರ್ಮಗಳನ್ನೂ ಸೃಷ್ಟಿ ಮಾಡುವುದಿಲ್ಲ. ಕರ್ಮಫಲಸಂಯೋಗವನ್ನೂ ಸ್ವತಂತ್ರವಾಗಿರಲೆಂದು ಸೃಷ್ಟಿ ಮಾಡುವುದಿಲ್ಲ. ಎಲ್ಲವೂ ಸ್ವತಂತ್ರನಾದ ಹರಿಯ ಚೇಷ್ಟೆಯಿಂದ ನಡೆಯುತ್ತದೆ.

ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ |
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥15॥

ಹರಿಯೇ ಎಲ್ಲವನ್ನು ಮಾಡಿಸಿದರೂ ಅಶುಭಕರ್ಮದಿಂದ ಉಂಟಾದ ಯಾವ ಪಾಪವನ್ನೂ ತಾನು ತೆಗೆದುಕೊಳ್ಳುವುದಿಲ್ಲ. ಶುಭಕರ್ಮದಿಂದ ಉಂಟಾದ ಪುಣ್ಯವನ್ನೂ ತಾನು ತೆಗೆದುಕೊಳ್ಳುವುದಿಲ್ಲ. ಏಕೆಂದರೆ ಅವನು ವಿಭು- ಸಮರ್ಥನಾದವನು. ಆದರೂ ಇಂತಹ ಜ್ಞಾನವು ಎಲ್ಲರಿಗೂ ಇರುವುದಿಲ್ಲ. ಏಕೆಂದರೆ ಅವರ ಜ್ಞಾನವು ಅಜ್ಞಾನದಿಂದ ಆವೃತವಾಗಿರುತ್ತದೆ. ಆದ್ದರಿಂದ ಜೀವರು ಮೋಹಕ್ಕೆ ಒಳಗಾಗುತ್ತಾರೆ.

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ |
ತೇಷಾಮಾದಿತ್ಯವಜ್ಞಾನಂ ಪ್ರಕಾಶಯತಿ ತತ್ಪರಮ್ ॥16॥
ಯಾರಿಗೆ ಆ ಅಜ್ಞಾನವು ಜ್ಞಾನದಿಂದ ನಾಶವನ್ನು ಹೊಂದುತ್ತದೆಯೋ ಅವರ ಜ್ಞಾನವು ಸೂರ್ಯನಂತೆ ವಿಷ್ಣುರೂಪವಾದ ಪರಬ್ರಹ್ಮನನ್ನು ಪ್ರಕಾಶಿಸುತ್ತದೆ.
ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ |
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥17॥
ಪುನಃ ಪುನಃ ಅವನ ಮಹಿಮೆಯನ್ನೇ ಆವೃತ್ತಿ ಮಾಡುವ ಬುದ್ಧಿಯುಳ್ಳವರಾಗಿ ಅವನೇ ತಮಗೆ ಆದಾನಾದಿಕರ್ತನಾದ ಸ್ವಾಮಿಯೆಂದು ತಿಳಿದು, ಅವನಲ್ಲಿ ಅಚಂಚಲವಾದ ಶ್ರದ್ಧೆಯನ್ನು ಹೊಂದಿ, ಅವನನ್ನೇ ಶ್ರೇಷ್ಠವಾದ ಆಶ್ರಯವೆಂದು ತಿಳಿದ ಜ್ಞಾನಿಗಳು ತಮ್ಮ ಜ್ಞಾನದಿಂದ ಎಲ್ಲ ಪಾಪಗಳನ್ನೂ ಕಳೆದುಕೊಂಡು ಪುನರಾವೃತ್ತಿ ರಹಿತವಾದ ಮೋಕ್ಷವನ್ನು ಪಡೆಯುತ್ತಾರೆ.
ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ |
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥18॥
ಜ್ಞಾನಿಗಳಾದವರು ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನಲ್ಲಿ, ಗೋವಿನಲ್ಲಿ, ಗಜದಲ್ಲಿ, ಶ್ವಾನದಲ್ಲಿ ಮತ್ತು ಶ್ವಪಾಕನಲ್ಲಿ ಇರುವ ಪರಮಾತ್ಮನ ರೂಪಗಳು ನಿತ್ಯಶುದ್ಧತ್ವ, ಸರ್ವಜ್ಞತ್ವ ಮೊದಲಾದ ಗುಣಗಳಿಂದ ಸಮಾನವಾಗಿವೆ ಎಂದು ತಿಳಿಯುತ್ತಾರೆ.
ವಿಶೇಷ ವಿಚಾರ `ನ ಸ್ಥಾನತೋಪಿಪರಸ್ಯೋ ಭಯಲಿಂಗಂ ಸರ್ವತ್ರಹಿ' ಎಂಬ ಬ್ರಹ್ಮಸೂತ್ರದಲ್ಲಿ ಸ್ಥಾನಭೇದದಿಂದ ಹರಿಯ ಮಹಿಮೆಯಲ್ಲಿ ವ್ಯತ್ಯಾಸವಿಲ್ಲವೆಂದು ಹೇಳಿದ್ದಾರೆ. `ನಿರ್ದೋಷಂ ಹಿ ಸಮಂ ಬ್ರಹ್ಮ' ಎಂಬ ಮುಂದಿನ ಶ್ಲೋಕದಲ್ಲಿ `ಸಮ' ಪದಕ್ಕೆ ಕೃಷ್ಣನೇ ವ್ಯಾಖ್ಯಾನ ಮಾಡಿದ್ದಾನೆ. ಬ್ರಾಹ್ಮಣಾದಿ ಎಲ್ಲರಲ್ಲಿಯೂ ಸಾಮ್ಯವನ್ನೇ ಕಾಣುತ್ತಾರೆ ಎಂದು ಯಾರಿಗೆ ಆಸೆ ಇದೆಯೋ ಅವರಿಗೆ ಸಮಪದವೇ ವಿಷಮವಾಗುತ್ತದೆ. ಅವರ ಅಭಿಪ್ರಾಯದಂತೆ ಸಾಮ್ಯದರ್ಶಿನಃ ಎಂದು ಇರಬೇಕಾಗಿದ್ದಿತು, ಸಮದರ್ಶಿನಃ ಎಂದು ಇದೆ. ಗೋವು, ನಾಯಿ, ಬ್ರಾಹ್ಮಣ ಎಲ್ಲರಿಗೂ ಸಾಮ್ಯದರ್ಶನವು ಅನುಭವ ವಿರುದ್ಧವೂ ಮತ್ತು ಸ್ಮೃತಿವಿರುದ್ಧವೂ ಆಗಿದೆ. ನಾಯಿಯನ್ನು ಮುಟ್ಟಿದರೆ ಸ್ನಾನವನ್ನು ವಿಧಾನ ಮಾಡುತ್ತಾರೆ. ಗೋವನ್ನು ಮುಟ್ಟಿದರೆ ಪುಣ್ಯವನ್ನು ವಿಧಾನ ಮಾಡುತ್ತಾರೆ. ಪರ್ವಕಾಲಗಳಲ್ಲಿ ಗೋದಾನವನ್ನು ವಿಧಾನ ಮಾಡಿದ್ದಾರೆ. ನಾಯಿಗಳ ದಾನವನ್ನು ವಿಧಾನ ಮಾಡಿಲ್ಲ.
ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ |
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥19॥
ಯಾರ ಮನಸ್ಸು ಉತ್ಸೇಕ, ಅನುತ್ಸೇಕಗಳಿಗೆ ಒಳಗಾಗದೆ ಸಾಮ್ಯಸ್ಥಿತಿಯಲ್ಲಿ ಇರುತ್ತದೆಯೋ ಅವರು ಇಲ್ಲಿಯೇ ಸ್ವರ್ಗವನ್ನು ಗೆದ್ದಿದ್ದಾರೆ. ನಿರ್ದೋಷನಾದ ಬ್ರಹ್ಮನೇ ಸಮನಾದವನು. ಆದ್ದರಿಂದ ಅವರ ಮನಸ್ಸು ಬ್ರಹ್ಮನಲ್ಲಿಯೇ ಇರುವುದರಿಂದ ಅವರು ಅವನಲ್ಲಿಯೇ ಇದ್ದಾರೆ.
ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ |
ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥20॥
ಪ್ರಿಯವನ್ನು ಹೊಂದಿ ಹಿಗ್ಗಬಾರದು, ಅಪ್ರಿಯವನ್ನು ಹೊಂದಿ ಕುಗ್ಗಲೂ ಬಾರದು. ಬ್ರಹ್ಮಜ್ಞಾನಿಯಾದವನು ಬ್ರಹ್ಮನಲ್ಲೇ ಮನಸ್ಸನ್ನಿಟ್ಟು ಸ್ಥಿರವಾದ ಬುದ್ಧಿಯುಳ್ಳವನಾಗಿ ಯಾವ ಮೋಹಕ್ಕೂ ಒಳಗಾಗುವುದಿಲ್ಲ.
ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ |
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥21॥
ಬಾಹ್ಯಶಬ್ದಾದಿಗಳ ಸಂಯೋಗದಿಂದ ಉಂಟಾಗುವ ಸುಖದಲ್ಲಿ ಆಸಕ್ತಿ ರಹಿತನಾದ ಮನಸ್ಸುಳ್ಳವನು ತನ್ನ ಮನಸ್ಸಿನಲ್ಲಿ ಯಾವ ಸುಖವನ್ನು ಹೊಂದುತ್ತಾನೆಯೋ ಬ್ರಹ್ಮಯೋಗದಿಂದ ಯುಕ್ತನಾದ ಮನಸ್ಸುಳ್ಳವನು ಅದಕ್ಕಿಂತ ಅಕ್ಷಯವಾದ ಸುಖವನ್ನು ಹೊಂದುತ್ತಾನೆ.
ವಿಶೇಷ ವಿಚಾರ ಕಾಮಾದಿ ತ್ಯಾಗದಿಂದ ಉಂಟಾಗುವ ಸುಖಕ್ಕಿಂತ ಸರ್ವತ್ರ ಬ್ರಹ್ಮನ ಅನುಸಂಧಾನದಿಂದ ಬ್ರಹ್ಮನಲ್ಲಿ ಸಮರ್ಪಣೆ ಮಾಡುವ ಕರ್ಮಯೋಗ ಉಳ್ಳವನು ಶ್ರೇಷ್ಠವಾದ ಸುಖವನ್ನು ಪಡೆಯುತ್ತಾನೆ ಎಂದು ಅಭಿಪ್ರಾಯ.
ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ |
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥22॥
ವಿಷಯಸಂಯೋಗದಿಂದ ಉಂಟಾಗುವ ಭೋಗಗಳು ಏನಿವೆಯೋ ಅವೆಲ್ಲವೂ ದುಃಖಕ್ಕೇ ಕಾರಣವಾದವುಗಳು. ಎಲೈ ಕೌಂತೇಯನೇ, ಅವುಗಳು ಆದಿ ಮತ್ತು ಅಂತ್ಯವನ್ನು ಹೊಂದಿದವುಗಳು. ಜ್ಞಾನಿಯಾದವನು ಅವುಗಳಲ್ಲಿ ಸಂತೋಷ ಪಡುವುದಿಲ್ಲ.
ಶಕ್ನೋತೀಹೈವ ಯಃ ಸೋಢುಂ ಪ್ರಾಕ್‌ಶರೀರವಿಮೋಕ್ಷಣಾತ್ |
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥23॥
ಯಾವ ಮನುಷ್ಯನು ಶರೀರತ್ಯಾಗಕ್ಕಿಂತಲೂ ಮೊದಲು ಇಲ್ಲಿಯೇ (ಕಾಮ ಕ್ರೋಧಗಳನ್ನು ಬಿಡಲಾಗದಿದ್ದರೂ) ಕಾಮ-ಕ್ರೋಧಗಳಿಂದ ಉಂಟಾಗುವ ವೇಗವನ್ನು ಸಹಿಸಲು (ಕಡಿಮೆ ಮಾಡಲು) ಸಮರ್ಥನಾಗುತ್ತಾನೆಯೋ ಅಂತಹ ಮನುಷ್ಯನು ಯೋಗಯುಕ್ತನಾದವನು ಮತ್ತು ಸುಖಿಯಾದವನು.
ಯೋಽಂತಃಸುಖೋಽಂತರಾರಾಮಸ್ತಥಾಽಂತರ್ಜ್ಯೋತಿರೇವ ಯಃ |
ಸ ಯೋಗೀ ಬ್ರಹ್ಮ ನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥24॥
ಯಾವನು ಹರಿಧ್ಯಾನದಿಂದ ತನ್ನ ಒಳಗೇ ಸುಖವನ್ನು ಹೊಂದಿರುತ್ತಾನೆಯೋ, ಒಳಗಿರುವ ಅಂತರ್ಯಾಮಿಯಾದ ಹರಿಯ ಚಿಂತನೆಯಿಂದಲೇ ಸಂತೋಷವನ್ನು ಪಡುತ್ತಾನೆಯೋ ಮತ್ತು ಒಳಗೆ ಅಂತರ್ಯಾಮಿಯಾಗಿರುವ ಹರಿಯ ಅಪರೋಕ್ಷ ಜ್ಞಾನವನ್ನು ಹೊಂದಿರುತ್ತಾನೆಯೋ ಅಂತಹ ಯೋಗಿಯು ಬ್ರಹ್ಮನಲ್ಲೇ ಇರುವವನಾಗಿ ಬ್ರಹ್ಮನಿಷ್ಠನಾಗಿ ಪ್ರಾಕೃತ ಶರೀರರಹಿತವಾದ

ಮೋಕ್ಷಾವಸ್ಥೆಯನ್ನು ಕೊಡುವ ಬ್ರಹ್ಮನನ್ನೇ ಹೊಂದುತ್ತಾನೆ.
ಲಭಂತೇ ಬ್ರಹ್ಮ ನಿರ್ವಾಣಮೃಷಯಃ ಕ್ಷೀಣಕಲ್ಮಷಾಃ |
ಛಿನ್ನದ್ವೈಧಾ(ಽಽ)ಯತಾತ್ಮಾನಃ ಸರ್ವಭೂತಹಿತೇ ರತಾಃ ॥25॥
ತಮ್ಮ ಪಾಪಗಳನ್ನು ಕಳೆದುಕೊಂಡು, ಸಂಶಯಗಳನ್ನೂ ಕಳೆದುಕೊಂಡು ಯಾವಾಗಲೂ ಮೋಕ್ಷಕ್ಕಾಗಿ ಪ್ರಯತ್ನಶೀಲರಾಗಿ ಸರ್ವಪ್ರಾಣಿಗಳ ಹಿತದಲ್ಲಿ ಆಸಕ್ತರಾದ ಋಷಿಗಳು ಮೋಕ್ಷಪ್ರದನಾದ ಅಥವಾ ಪ್ರಾಕೃತದೇಹ ರಹಿತನಾದ ಬ್ರಹ್ಮನನ್ನು ಹೊಂದುತ್ತಾರೆ.
ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ |
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥26॥
ಕಾಮ-ಕ್ರೋಧ ರಹಿತರಾದ, ಜಿತಮನಸ್ಕರಾದ, ಪ್ರಯತ್ನಶೀಲರಾದ, ಪರಮಾತ್ಮ ತತ್ತ್ವವನ್ನು ಚೆನ್ನಾಗಿ ತಿಳಿದ ಜ್ಞಾನಿಗಳಿಗೆ ನಿರ್ವಾಣನಾದ ಬ್ರಹ್ಮನು ಎಲ್ಲ ಕಡೆಯಲ್ಲಿಯೂ ರಕ್ಷಕನಾಗಿ ಇರುತ್ತಾನೆ.
ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ |
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥27॥
ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ |
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥28॥
ಬಾಹ್ಯವಾದ ಶಬ್ದಾದಿಗಳ ಅನುಭವವನ್ನು ದೂರ ಮಾಡಿ, ದೃಷ್ಟಿಯನ್ನು ಭ್ರೂ ಮಧ್ಯದಲ್ಲಿ ನಿಲ್ಲಿಸಿ, ನಾಸಿಕೆಯಲ್ಲಿ ಸಂಚರಿಸುವ ಪ್ರಾಣಾಪಾನಗಳನ್ನು ಸಮಾನವಾಗಿ ಮಾಡಿ ತಮ್ಮ ಇಂದ್ರಿಯ, ಮನಸ್ಸು, ಬುದ್ಧಿಗಳನ್ನು ನಿಯಂತ್ರಣದಲ್ಲಿಟ್ಟು, ಕಾಮ-ಕ್ರೋಧ ಭಯಗಳನ್ನು ತ್ಯಜಿಸಿ ಮೋಕ್ಷಪರನಾಗಿರುವ ಮುನಿಯು ಅವನು ಯಾವಾಗಲೂ ಮುಕ್ತನೇ ಆಗಿದ್ದಾನೆ.
ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ |
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥29॥
ಸರ್ವಯಜ್ಞಭೋಕ್ತೃವಾದ, ಸರ್ವತಪಸ್ಸುಗಳಿಗೆ ಉದ್ದೇಶನಾದ, ಸರ್ವಲೋಕಗಳಿಗೂ ಮಹಾಪ್ರಭುವಾದ, ಎಲ್ಲ ಜೀವರಿಗೂ ಹಿತನಾದ ನನ್ನನ್ನು ತಿಳಿದು ಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆ.
ವಿಶೇಷ ವಿಚಾರ ಹಿಂದಿನ ಎರಡು ಶ್ಲೋಕಗಳಲ್ಲಿ ಧ್ಯಾನಪ್ರಕಾರವನ್ನೂ, ಈ ಶ್ಲೋಕದಲ್ಲಿ ಧ್ಯೇಯವಾದ ವಸ್ತುವಿನ ಸ್ವರೂಪವನ್ನೂ ಹೇಳಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಭಗವದ್ಗೀತಾ ಆತ್ಮಸಂಯಮ ಯೋಗ.
ಶ್ರೀಭಗವಾನ್
ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ |
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥1॥
ಶ್ರೀಭಗವಾನ್ ಕರ್ಮಯೋಗಸಾಧ್ಯವಾದ, ಜ್ಞಾನಯೋಗ್ಯಕ್ಕೆ ಅಂತರಂಗ ಸಾಧನವಾದ, ಸಮಾಧಿ ಯೋಗವನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುತ್ತಾರೆ.
ಯಾವನು ಕರ್ಮದ ಫಲವನ್ನು ಉದ್ದೇಶಿಸದೆ ತನ್ನ ವರ್ಣಾಶ್ರಮಗಳಿಗೆ ಉಚಿತವಾದ ಕರ್ತವ್ಯವಾದ ಕರ್ಮವನ್ನು ಮಾಡುತ್ತಾನೆಯೋ ಅವನೇ ಸಂನ್ಯಾಸಿ ಮತ್ತು ಅವನೇ ಯೋಗಿ. ಅವನೇ ಧ್ಯಾನಾಧಿಕಾರಿ ಎಂದು ಅಭಿಪ್ರಾಯ. ಸಾಂಖ್ಯರು ಹೇಳುವಂತೆ ಅಗ್ನಿಹೋತ್ರಾದಿ ಕ್ರಿಯೆಗಳನ್ನು ತ್ಯಾಗ ಮಾಡಿದವನು ಮತ್ತು ನಿಸ್ಸಂಗತೆಯಿಂದ ಜೀವಿಸುವವನು ಸಂನ್ಯಾಸಿಯೂ ಅಲ್ಲ, ಯೋಗಿಯೂ ಅಲ್ಲ.
ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ |
ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥2॥
ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ |
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥3॥
ಎಲೈ ಪಾಂಡವನೇ, ಯಾವುದನ್ನು ಕರ್ಮಸಂನ್ಯಾಸವೆಂದು ಹೇಳುತ್ತಾರೆಯೋ ಅದೇ ಕರ್ಮಯೋಗ. ಯಾವನು ಫಲೋದ್ದೇಶವನ್ನು ತ್ಯಜಿಸದೆ ಫಲಕಾಮನೆಯಿಂದ ಕೂಡಿರುತ್ತಾನೆಯೋ ಅವನು ಯೋಗಿಯಾಗುವುದಿಲ್ಲ. ಯೋಗದ ತುಟ್ಟ ತುದಿಯನ್ನು ಏರಲು ಬಯಸುವ ಪರೋಕ್ಷ ಜ್ಞಾನಿಗೆ ಉತ್ತಮ-ಅಧಮ-ಮಧ್ಯಮ ಜನರ ಸೇವೆ ಎಂಬ ಕರ್ಮವು ಅಂತಹ ಯೋಗಾರೋಹಕ್ಕೆ ಕಾರಣವೆಂದು ಹೇಳಲ್ಪಡುತ್ತದೆ. ಯೋಗದ ತುಟ್ಟತುದಿಯನ್ನು ತಲುಪಿ ಅಪರೋಕ್ಷ ಜ್ಞಾನಿಯಾದವನಿಗೆ ಅಂತಹ ಕರ್ಮದ ಉಪಶಮವು ಎಂದರೆ ನಿವೃತ್ತಿಯು ಹೇಳಲ್ಪಡುತ್ತದೆ. ಧ್ಯಾನದ ಉಪಶಮವು ಹೇಳಲ್ಪಡುವುದಿಲ್ಲ. ಏಕೆಂದರೆ ಧ್ಯಾನವನ್ನು ಮಾಡಲೇಬೇಕು.
ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ |
ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥4॥
ಯಾವಾಗ ಇಂದ್ರಿಯಗಳ ವಿಷಯವಾದ ಶಬ್ದಾದಿಗಳಲ್ಲಿಯೂ ಮತ್ತು ಕರ್ಮಗಳಲ್ಲಿಯೂ ಅಪ್ರಯತ್ನದಿಂದಲೇ ಸ್ನೇಹರಹಿತನಾಗುತ್ತಾನೆಯೋ ಮತ್ತು ಸರ್ವಸಂಕಲ್ಪ ತ್ಯಾಗ ಎಂದರೆ ಮಮತಾ ತ್ಯಾಗವನ್ನು ಮಾಡುತ್ತಾನೆಯೋ, ಎಂದರೆ ಸಂಕಲ್ಪ, ಕ್ರಿಯೆ ಮೊದಲಾದವುಗಳೆಲ್ಲವೂ ಭಗವದಧೀನವೆಂದು ತಿಳಿಯುತ್ತಾನೆಯೋ ಆಗ ಅವನು ಯೋಗದ ತುದಿಯನ್ನು ತಲುಪುತ್ತಾನೆ.

ಉದ್ಧರೇದಾತ್ಮನಾऽऽತ್ಮಾನಂ ನಾತ್ಮಾನಮವಸಾದಯೇತ್ |
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥5॥
ತನ್ನನ್ನು ತನ್ನಿಂದಲೇ ಉದ್ಧಾರ ಮಾಡಿಕೊಳ್ಳಬೇಕು. ತನ್ನನ್ನು ಕ್ಲೇಶಭಾಜನನನ್ನಾಗಿ ಮಾಡಿಕೊಳ್ಳಬಾರದು. ಪುಣ್ಯವನ್ನು ಮಾಡಿದರೆ ತಾನೇ ತನಗೆ ಬಂಧು. ಪಾಪವನ್ನು ಮಾಡಿದರೆ ತಾನೇ ತನಗೆ ಶತ್ರುವಾಗುತ್ತಾನೆ ಅಥವಾ ಆತ್ಮ ಎಂದರೆ ಮನಸ್ಸು ಎಂದು ಅರ್ಥವನ್ನಿಟ್ಟುಕೊಂಡು ತನಗೆ ಮನಸ್ಸೇ ಬಂಧು ಮತ್ತು ಮನಸ್ಸೇ ಶತ್ರುವಾಗುತ್ತದೆ ಎಂದು ಅರ್ಥ.
ಬಂಧುರಾತ್ಮಾऽऽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ |
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥6॥
ಯಾವ ಜೀವನು ತನ್ನ ಬುದ್ಧಿಯಿಂದ ತನ್ನ ಮನಸ್ಸನ್ನು ವಶಪಡಿಸಿಕೊಳ್ಳುತ್ತಾನೆಯೋ, ಅವನಿಗೆ ತನ್ನ ಮನಸ್ಸೇ ಬಂಧುವಾಗುತ್ತದೆ. ಮನೋಜಯವಿಲ್ಲದವನಿಗೆ ಯಾರಿಂದಲಾದರೂ ಶತ್ರುತ್ವವು ಉಂಟಾಗುವುದಾದರೆ ತನ್ನ ಮನಸ್ಸೇ ಶತ್ರುವಿನಂತೆ ಇರುತ್ತದೆ. ಯಾರ ಜೊತೆಯಲ್ಲಾದರೂ ಕಲಹವನ್ನು ಮಾಡಬೇಕಾದರೆ ತನ್ನ ಚಿತ್ತವನ್ನು ಕುರಿತು ತಾನೇ ಶತ್ರುವಿನಂತೆ ವರ್ತಿಸಬೇಕು. ಕಲಹ ಮಾಡುವವರ ಜೊತೆಯಲ್ಲಿ ಕಲಹವನ್ನು ಮಾಡಬಾರದು. ಅದಕ್ಕೆ ಬದಲಾಗಿ ತನ್ನ ಚಿತ್ತವನ್ನೇ ಶಾಂತವನ್ನಾಗಿ ಮಾಡಿಕೊಳ್ಳಬೇಕು.
ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ |
ಮನೋಜಯವನ್ನು ಹೊಂದಿ ಭಕ್ತಿಯಿಂದ ಭಗವಂತನನ್ನು ವಶಪಡಿಸಿಕೊಂಡವನಿಗೆ ಪ್ರಶಾಂತಿ ಉಂಟಾಗುತ್ತದೆ. ಅವನ ಮನಸ್ಸು ಪರಮಾತ್ಮನಲ್ಲೇ ಕೇಂದ್ರೀಕೃತವಾಗಿ ಸಹಜವಾಗಿಯೇ ವಿಷಯದ ಕಡೆಗೆ ಹೋಗುವುದಿಲ್ಲ.
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥7॥
ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ |
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥8॥
ಶೀತೋಷ್ಣಗಳಿಂದ ಸುಖ-ದುಃಖಗಳು ಉಂಟಾದಾಗ ಹಾಗೆಯೇ ಮಾನಾಪಮಾನಗಳು ಉಂಟಾದಾಗ ಯಾವನು ಜಿತೇಂದ್ರಿಯನಾಗಿ ಜ್ಞಾನ- ವಿಜ್ಞಾನಗಳಿಂದ ತೃಪ್ತನಾಗಿ ನಿರ್ವಿಕಾರನಾಗಿರುತ್ತಾನೆಯೋ ಹಾಗೆಯೇ ಮಣ್ಣುಹೆಂಟೆ, ಕಲ್ಲು ಮತ್ತು ಸುವರ್ಣಗಳಲ್ಲಿ ಸಮಾನವಾಗಿ ಅನಾಸಕ್ತನಾಗಿರುತ್ತಾನೆಯೋ ಅಂತಹವನನ್ನು ಭಗವದ್ಯೋಗಯುಕ್ತನಾದ ಯೋಗಿ ಎಂದು ಕರೆಯುತ್ತಾರೆ. ವಿಶೇಷ ವಿಚಾರ ವೇದಾದಿಗಳಲ್ಲಿ ಎಲ್ಲ ಕಡೆಯಲ್ಲಿಯೂ ಹೇಳಲ್ಪಡುವ ವಿಷ್ಣುವಿನ ಸರ್ವೋತ್ತಮತ್ವದ ಜ್ಞಾನವು ಜ್ಞಾನವೆಂದು ಹೇಳಲ್ಪಡುತ್ತದೆ. ವೇದಗಳಲ್ಲಿ ಅಲ್ಲಲ್ಲಿ ಹೇಳಲ್ಪಡುವ ಅವನ ವಿಶೇಷ ಮಹಿಮೆಗಳು ವಿಜ್ಞಾನವೆಂದು ಹೇಳಲ್ಪಡುತ್ತದೆ.
ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು |
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥9॥
ಹಿತೈಷಿ, ಸ್ನೇಹಿತ, ಶತ್ರು, ಉದಾಸೀನ, ಮಧ್ಯಸ್ಥ, ದ್ವೇಷ ವಿಷಯನಾದವನು, ಬಂಧುಗಳು, ಸಾಧುಗಳು ಮತ್ತು ಪಾಪಿಗಳಲ್ಲಿ ಯಾವನು ತನ್ನ ರೂಪಗಳಲ್ಲಿ ಸಮನಾದ ನಾರಾಯಣನ ಅಂತರ್ಯಾಮಿತ್ವದ ಜ್ಞಾನವನ್ನು ಹೊಂದುತ್ತಾನೆಯೋ ಅವನು ವಿಶಿಷ್ಟನಾದ ಯೋಗಿಯಾಗುತ್ತಾನೆ.
ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ |
ಏಕಾಕೀ ಜಿತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥10॥
ಯೋಗಿಯಾಗುವವನು ಸತತವಾಗಿ ಏಕಾಂತದಲ್ಲಿ ಒಬ್ಬನೇ ಕುಳಿತು ತನ್ನ ಮನಸ್ಸಿನ ಆಸೆಗಳನ್ನು ತೊರೆದು, ಪರಿಗ್ರಹಗಳನ್ನು ತ್ಯಜಿಸಿ, ಮನಸ್ಸಿನ ಪ್ರಯತ್ನಗಳನ್ನೂ ತ್ಯಜಿಸಿ, ಸತತವಾಗಿ ಯೋಗವನ್ನು ಮಾಡಬೇಕು.
ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ |
ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ ॥11॥
ಶುಚಿಯಾದ ದೇಶದಲ್ಲಿ ಬಹಳ ಎತ್ತರವೂ ಅಲ್ಲದ ಮತ್ತು ತಗ್ಗೂ ಅಲ್ಲದ ಸ್ಥಳದಲ್ಲಿ ಕುಶ(ದರ್ಭೆ)ಗಳು, ಅದರ ಮೇಲೆ ಅಜಿನ (ಕೃಷ್ಣಾಜಿನ), ಅದರ ಮೇಲೆ ಚೇಲ (ಧಾವಳಿ) ಇವುಗಳಿಂದ ತನಗೆ ಸ್ಥಿರವಾದ ಆಸನವನ್ನು ಕಲ್ಪಿಸಿಕೊಳ್ಳಬೇಕು.
ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ |
ಉಪವಿಶ್ಯಾಸನೇ ಯುಂಜ್ಯಾದ್ ಯೋಗಮಾತ್ಮವಿಶುದ್ಧಯೇ ॥12॥
ಅಲ್ಲಿ ಮನಸ್ಸನ್ನು ಏಕಾಗ್ರವನ್ನಾಗಿ ಮಾಡಿ, ಚಿತ್ತದ ವ್ಯಾಪಾರಗಳನ್ನು ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ನಿಯಂತ್ರಿಸಿ, ಆಸನದಲ್ಲಿ ಕುಳಿತು ತನ್ನ ಅಂತಃಕರಣದ ಶುದ್ಧಿಗಾಗಿ ಧ್ಯಾನ ಯೋಗವನ್ನು ಅಭ್ಯಾಸ ಮಾಡಬೇಕು (ಅಂತಃಕರಣದ ಶುದ್ಧಿಗಾಗಿ ಎಂದರೆ ಅಂತಃಕರಣದಲ್ಲಿ ಉಂಟಾಗುವ ಎಲ್ಲಾ ಕಾಮಗಳ ನಾಶಕ್ಕಾಗಿ ಅಥವಾ ಸಂಸಾರದ ನಿವೃತ್ತಿಗಾಗಿ ಎಂದೂ ಅರ್ಥ).
ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ |
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥13॥
ದೇಹ, ಶಿರಸ್ಸು ಮತ್ತು ಕತ್ತು ಇವುಗಳನ್ನು ನೇರವಾಗಿ ಇಟ್ಟುಕೊಂಡು ಅಲುಗಾಡದೆ ಸ್ಥಿರವಾಗಿ ಕುಳಿತು ಆಕಾಶವನ್ನಾಗಲೀ, ದಿಕ್ಕುಗಳನ್ನಾಗಲೀ ನೋಡದೆ ತನ್ನ ನಾಸಿಕದ ತುದಿಯನ್ನು ಮಾತ್ರ ನೋಡಿಕೊಂಡು ಧ್ಯಾನವನ್ನು ಮಾಡಬೇಕು.
ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ |
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥14॥
ಪ್ರಶಾಂತವಾದ ಅಂತಃಕರಣವುಳ್ಳವನಾಗಿ ಎಲ್ಲ ಭಯಗಳನ್ನೂ ತ್ಯಜಿಸಿ, ಬ್ರಹ್ಮಚರ್ಯ ವ್ರತದಲ್ಲಿ ಇರುವವನಾಗಿ, ಮನಸ್ಸನ್ನು ನಿಯಂತ್ರಿಸಿ, ನನ್ನನ್ನೇ ಸರ್ವೋತ್ತಮನೆಂದು ತಿಳಿದು, ನನ್ನಲ್ಲೇ ಮನಸ್ಸನ್ನು ಕೇಂದ್ರೀಕರಿಸಿ ಯೋಗವನ್ನು ಮಾಡಬೇಕು.
ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ |
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥15॥

ಹೀಗೆ ಯೋಗಿಯಾದವನು ಮನಸ್ಸನ್ನು ನಿಯಂತ್ರಿಸಿ ಸತತವಾಗಿ ತನ್ನನ್ನು ಧ್ಯಾನ ಯೋಗದಲ್ಲಿ ತೊಡಗಿಸಿಕೊಳ್ಳುವವನು ಶರೀರ ತ್ಯಾಗದ ನಂತರ ನನ್ನಲ್ಲಿ ಇರುವಿಕೆಯ ರೂಪವಾದ ಶಾಂತಿಯನ್ನು ಪಡೆಯುತ್ತಾನೆ.
ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ |
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥16॥
ಎಲೈ ಅರ್ಜುನನೇ, ಬಹಳ ಊಟ ಮಾಡುವವನಿಗೆ ಯೋಗವು ಫಲಿಸುವುದಿಲ್ಲ. ನಿಯಮೇನ ಉಪವಾಸ ಮಾಡುವವನಿಗೂ, ಬಹಳ ನಿದ್ರೆಯನ್ನು ಮಾಡುವವನಿಗೂ ಮತ್ತು ಯಾವಾಗಲೂ ಎಚ್ಚರದಿಂದಲೇ ಇರುವವನಿಗೂ ಯೋಗವು ಸಿದ್ದಿಸುವುದಿಲ್ಲ.
ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು |
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥17॥
ಯೋಗ್ಯವಾದ, ಮಿತವಾದ ಆಹಾರ-ವಿಹಾರಗಳನ್ನು ಸೇವಿಸಿ, ಕರ್ಮಗಳಲ್ಲಿ ಯೋಗ್ಯವಾದ ವ್ಯಾಪಾರಗಳನ್ನು ಮಾಡಿ, ಯೋಗ್ಯವಾದಷ್ಟು ನಿದ್ರೆ ಮತ್ತು ಯೋಗ್ಯವಾದಷ್ಟು ಎಚ್ಚರಗಳನ್ನು ಹೊಂದಿದ ಪುರುಷನಿಗೆ ಯೋಗವು ದುಃಖಪರಿಹಾರಕವಾಗುತ್ತದೆ.
ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ |
ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥18॥
ಹೀಗೆ ನಿಯಂತ್ರಿತವಾದ ಚಿತ್ತವು ಎಲ್ಲ ಕಾಮಗಳನ್ನೂ ತೊರೆದು ಪರಮಾತ್ಮನಲ್ಲಿಯೇ ಸ್ಥಿರವಾಗಿ ಯಾವಾಗ ನಿಲ್ಲುತ್ತದೆಯೋ ಆಗ ಅವನನ್ನು ಯೋಗಯುಕ್ತನಾದವನು ಎಂದು ಹೇಳುತ್ತಾರೆ.
ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ |
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥19॥
ಚಿತ್ತ ನಿಯಂತ್ರಣವನ್ನು ಹೊಂದಿ ಯೋಗವನ್ನು ಮಾಡುವ ಯೋಗಿಗೆ ದೀಪವು ಒಂದು ಉಪಮಾನ. ಹೇಗೆ ಗಾಳಿ ಇಲ್ಲದ ಕಡೆಯಲ್ಲಿ ದೀಪವು ಅಲುಗಾಡುವುದಿಲ್ಲವೋ ಅದರಂತೆ ಯೋಗಿಯ ಮನಸ್ಸೂ ಅಲುಗಾಡುವುದಿಲ್ಲ.
ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ |
ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥20॥
ಯೋಗಾಭ್ಯಾಸದಿಂದ ನಿರೋಧವನ್ನು ಹೊಂದಿದ ಚಿತ್ತವು ಸಮಾಧಿಯ ಅವಸ್ಥೆಯಲ್ಲಿ ಬಾಹ್ಯ ವ್ಯಾಪಾರದಿಂದ ಪೂರ್ಣವಾಗಿ ರಹಿತವಾಗುತ್ತದೆ. ಅಂತಹ ಸಮಾಧಿಯೋಗದಲ್ಲಿ ತನ್ನ ಮನಸ್ಸಿನಿಂದಲೇ ಭಗವಂತನನ್ನು ನೋಡುತ್ತಾ, ತನ್ನ ಮನಸ್ಸಿನಲ್ಲಿಯೇ ಸಂತೋಷವನ್ನು ಹೊಂದುತ್ತಾನೆ.
ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ |
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥21॥
ಹಾಗೆ ಸಮಾಧಿಯಲ್ಲಿರುವವನು ಅನುಭವ ಮಾತ್ರ ವಿದ್ಯವಾದ, ಇಂದ್ರಿಯ ಗ್ರಾಹ್ಯವಲ್ಲದ, ಅತಿಶಯಿತವಾದ ಸುಖವನ್ನು ಅನುಭವಿಸುತ್ತಾನೆ. ಅಂತಹ ಸಮಾಧಿಯಲ್ಲಿದ್ದ ಅವನು ಭಗವದ್ರೂಪ ದರ್ಶನದಿಂದ ಬೇರೆ ಕಡೆಗೆ ಚಲಿಸುವುದಿಲ್ಲ ಅಥವಾ ಆ ಸಮಾಧಿಯ ಅವಸ್ಥೆಯಲ್ಲಿ ಆತ್ಯಂತಿಕ ಸುಖ ಎಂದರೆ ನಿರವಧಿಕ ಸುಖವಾದ ಬ್ರಹ್ಮನನ್ನು ಚೆನ್ನಾಗಿ ತಿಳಿಯುತ್ತಾನೆ.
ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ |
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥22॥
ತಂ ವಿದ್ಯಾದ್ ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ |
ಸ ನಿಶ್ಚಯೇನ ಯೋಕ್ತವ್ಯೋ ಯೋಗೋ ನಿರ್ವಿಣ್ಣಚೇತಸಾ ॥23॥
ಯಾವ ಸುಖವನ್ನು ಪಡೆದು ಅದಕ್ಕಿಂತಲೂ ಅಧಿಕ ಸುಖವಿಲ್ಲವೆಂದು ಭಾವಿಸುತ್ತಾನೆಯೋ, ಅಂತಹ ಸುಖರೂಪವಾದ ಸಮಾಧಿಯ ಸ್ಥಿತಿಯಲ್ಲಿದ್ದು, ಎಷ್ಟೇ ದೊಡ್ಡ ದುಃಖ ಬಂದರೂ ವಿಚಲಿತನಾಗುವುದಿಲ್ಲವೋ, ಅಂತಹ ದುಃಖಸಂಬಂಧಗಳ ವಿಯೋಗರೂಪವಾದ ಅವಸ್ಥೆಯನ್ನು ಯೋಗ ಎಂದು ತಿಳಿಯಬೇಕು. ವಿಷಯಗಳಲ್ಲಿ ವಿರಕ್ತನಾದ ಮನಸ್ಸುಳ್ಳವನು ಅವಶ್ಯವಾಗಿ ಅಂತಹ ಯೋಗವನ್ನು ಅನುಷ್ಠಾನ ಮಾಡಬೇಕು.
ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕತ್ವ ಸರ್ವಾನಶೇಷತಃ |
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥24॥
ಶನೈಃ ಶನೈರುಪರಮೇದ್ ಬುದ್ಧ್ಯಾ ಧೃತಿಗೃಹೀತಯಾ |
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥25॥
ಫಲೋದ್ದೇಶ ಪೂರ್ವಕವಾಗಿ ಅನುಷ್ಠಾನ ಮಾಡುವ ಕರ್ಮದಿಂದ ಉಂಟಾದ ಕಾಮ್ಯವಸ್ತುಗಳೆಲ್ಲವನ್ನೂ ಸಂಪೂರ್ಣವಾಗಿ ತ್ಯಜಿಸಿ, ಮನಸ್ಸಿನಿಂದಲೇ ಎಲ್ಲ ಇಂದ್ರಿಯಗಳನ್ನೂ ನಿಯಂತ್ರಿಸಿ, ಧೈರ್ಯವನ್ನು ಅವಲಂಬಿಸಿ, ಬುದ್ಧಿಯಿಂದ ನಿಧಾನವಾಗಿ ಕಾಮ್ಯವಿಷಯಗಳಿಂದ ಹಿಂದೆ ಸರಿಯಬೇಕು. ಮನಸ್ಸನ್ನು ಭಗವಂತನಲ್ಲಿಯೇ ಇಟ್ಟು ಬೇರೆ ಏನನ್ನೂ ಚಿಂತಿಸಬಾರದು.
ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ |
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥26॥
ಚಂಚಲವೂ ಮತ್ತು ಅಸ್ಥಿರವೂ ಆದ ಮನಸ್ಸು ಪರಮಾತ್ಮನಿಂದ ಬೇರೆ ಕಡೆಗೆ ಹೋದಂತೆ ಹೋದಂತೆ ಅದನ್ನು ಪರಮಾತ್ಮನಲ್ಲಿ ಎಳೆದು ತಂದು ತನ್ನ ವಶವನ್ನು ಮಾಡಿಕೊಳ್ಳಬೇಕು.
ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ |
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥27॥
ಇಂತಹ ಪ್ರಶಾಂತ ಮನಸ್ಕನಾದ ಯೋಗಿಯು ತನ್ನ ರಜೋಗುಣಜನ್ಯವಾದ ದೋಷಗಳನ್ನು ಕಳೆದುಕೊಂಡು, ಬ್ರಹ್ಮನ ಪ್ರಸಾದದಿಂದ

ನಿಷ್ಕಲ್ಮಷವಾದ ಶ್ರೇಷ್ಠವಾದ ಸುಖವನ್ನು ಹೊಂದುತ್ತಾನೆ.
ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ |
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥28॥
ಕಲ್ಮಷರಹಿತನಾದ ಯೋಗಿಯು ಹೀಗೆ ಯೋಗವನ್ನು ಮಾಡುತ್ತಾ, ಚಿತ್ತದಲ್ಲಿ ಯಾವಾಗಲೂ ಪರಮಾತ್ಮನನ್ನು ಇಡುವವನು ಅನಾಯಾಸವಾಗಿ ಪರಮ ಸುಖವನ್ನು ಪಡೆಯುತ್ತಾನೆ.
ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ |
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥29॥
ಅಂತಹ ಯೋಗದಿಂದ ಯುಕ್ತನಾದವನು ಸರ್ವತ್ರ ಇರುವ ಭಗವದ್ರೂಪಗಳಲ್ಲಿ ಸಾಮ್ಯವನ್ನೇ ಕಾಣುತ್ತಾ, ಎಲ್ಲ ವಸ್ತುಗಳಲ್ಲಿ ಪರಮಾತ್ಮನನ್ನು ಮತ್ತು ಪರಮಾತ್ಮನಲ್ಲಿ ಎಲ್ಲ ವಸ್ತುಗಳಿರುವುದನ್ನೂ ಕಾಣುತ್ತಾನೆ (ಆ ಪರಮಾತ್ಮನೆಂದರೆ ನಾನೇ).
ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ |
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥30॥
ಯಾವ ಯೋಗಿಯು ಸರ್ವತ್ರ ನನ್ನನ್ನು ನೋಡುತ್ತಾನೆಯೋ ಮತ್ತು ನನ್ನಲ್ಲಿ ಸರ್ವವನ್ನೂ ನೋಡುತ್ತಾನೆಯೋ ಅವನಿಗೆ ನಾನು ನಾಶವನ್ನು ಹೊಂದುವುದಿಲ್ಲ. ಎಂದರೆ ಅವನ ಯೋಗಕ್ಷೇಮವನ್ನು ಸದಾ ನೋಡಿಕೊಳ್ಳುತ್ತೇನೆ. ಅವನೂ ಸಹ ನನ್ನ ವಿಷಯದಲ್ಲಿ ನಾಶ ಹೊಂದುವುದಿಲ್ಲ. ಎಂದರೆ ಅವನಾದರೂ ಸದಾ ನನ್ನ ಭಕ್ತನಾಗಿರುತ್ತಾನೆ.
ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ |
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥31॥
ಸರ್ವಜೀವರಲ್ಲಿ ಇರುವ ನನ್ನ ರೂಪಗಳಲ್ಲಿ ಸ್ಥಾನಭೇದದಿಂದ ಭೇದವನ್ನು ಚಿಂತಿಸದೆ ಯಾವ ಯೋಗಿಯು ರೂಪಗಳಲ್ಲಿ ಅಭೇದವನ್ನು ಚಿಂತಿಸುತ್ತಾನೆಯೋ ಅವನು ಶುಭಕರ್ಮವನ್ನು ಮಾಡಿದರೂ, ಅಶುಭಕರ್ಮವನ್ನು ಮಾಡಿದರೂ ಸಹ ಮೋಕ್ಷವನ್ನು ಪಡೆದು ನನ್ನಲ್ಲಿಯೇ ಇರುತ್ತಾನೆ (ಅಶುಭಕರ್ಮವನ್ನು ಮಾಡಿದರೂ ಜ್ಞಾನಿಗೆ ಮೋಕ್ಷ ಇದ್ದೇ ಇದೆ. ಆದರೆ ಆನಂದದ ಹ್ರಾಸವಾಗುವ ಸಂಭವವಿದೆ).
ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ |
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥32॥
ಯಾವ ಯೋಗಿಯು ಸುಖವನ್ನಾಗಲೀ, ದುಃಖವನ್ನಾಗಲೀ ತನ್ನಂತೆ ಇನ್ನೊಬ್ಬನನ್ನು ನೋಡುತ್ತಾನೆಯೋ ಎಲೈ ಅರ್ಜುನನೇ, ಅವನು ಶ್ರೇಷ್ಠವಾದ ಯೋಗಿ ಎನಿಸುತ್ತಾನೆ. ತನಗೆ ದುಃಖವು ಅಸಹ್ಯವಾದಂತೆ ಇನ್ನೊಬ್ಬ ಭಗವದ್ಭಕ್ತನಿಗೂ ದುಃಖವು ಅಸಹ್ಯವಾದುದು, ತನಗೆ ಸುಖವು ಹಿತವಾದಂತೆ ಇನ್ನೊಬ್ಬ ಭಗವದ್ಭಕ್ತನಿಗೂ ಹಿತವಾದುದು ಎಂದು ತನ್ನ ದೃಷ್ಟಾಂತದಿಂದ ತಿಳಿಯುವವನು ಶ್ರೇಷ್ಠವಾದ ಯೋಗಿ ಎಂದು ಅಭಿಪ್ರಾಯ.
ಅರ್ಜುನಃ
ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ |
ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥33॥
ಅರ್ಜುನ ಎಲೈ ಮಧುಸೂದನನೇ, ಮನಸ್ಸಿನ ಸಾಮ್ಯಸ್ಥಿತಿಯನ್ನು ಹೊಂದಿ ಅನುಷ್ಠಾನ ಮಾಡುವಂತೆ ನೀನು ಹೇಳಿದ ಯೋಗವು ಏನಿದೆಯೋ ಅದು ಮನಸ್ಸು ಚಂಚಲವಾದುದರಿಂದ ಸ್ಥಿರವಾದ ಸ್ಥಿತಿಯನ್ನು ಹೊಂದದಿರುವುದರಿಂದ ಸಾಧ್ಯವಿಲ್ಲವೆಂದು ಭಾವಿಸುತ್ತೇನೆ.
ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ ದೃಢಮ್ |
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥34॥
ಎಲೈ ಕೃಷ್ಣನೇ, ಮನಸ್ಸು ಚಂಚಲವಾದುದು. ಜೀವನನ್ನು ಎಳೆಯುವಂತಹದು. ದೃಢವಾದುದು ಮತ್ತು ಬಲಿಷ್ಠವಾದುದು. ಅದರ ನಿಗ್ರಹವು ವಾಯುವಿನ ನಿಗ್ರಹದಷ್ಟೇ ಅತ್ಯಂತ ದುಷ್ಕರವಾದುದೆಂದು ನಾನು ಭಾವಿಸುತ್ತೇನೆ.
ಶ್ರೀಭಗವಾನ್
ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ |
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥35॥
ಶ್ರೀಭಗವಾನ್ ಎಲೈ ಮಹಾಬಾಹುವೇ, ಮನಸ್ಸು ಚಂಚಲವಾದುದು ಮತ್ತು ನಿಗ್ರಹಿಸಲು ಕಷ್ಟಸಾಧ್ಯವಾದುದು ಎಂಬ ವಿಷಯದಲ್ಲಿ ಸಂಶಯವಿಲ್ಲ. ಎಲೈ ಕೌಂತೇಯನೇ, ಆದರೂ ವೈರಾಗ್ಯ ಮತ್ತು ಸತತ ಪ್ರಯತ್ನದಿಂದ ನಿಗ್ರಹಿಸಲು ಸಾಧ್ಯವಾಗುತ್ತದೆ.
ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ |
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥36॥
ಮನಸ್ಸಂಯಮವಿಲ್ಲದವನಿಗೆ ಯೋಗವು ದುರ್ಲಭವೆಂದು ನನ್ನ ಅಭಿಪ್ರಾಯ. ಜಿತಮನಸ್ಕನಾದರೆ ಮಾತ್ರ ಪ್ರಯತ್ನದಿಂದ ಉಪಾಯಪೂರ್ವಕವಾಗಿ ಯೋಗವನ್ನು ಪಡೆಯಲು ಸಾಧ್ಯ.
ಅರ್ಜುನಃ
ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ |
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥37॥
ಅರ್ಜುನ ಎಲೈ ಕೃಷ್ಣನೇ, ಶ್ರದ್ಧೆಯುಳ್ಳವನು ಪ್ರಯತ್ನರಹಿತನಾಗಿ ಯೋಗದಿಂದ ಮನಸ್ಸು ಚ್ಯುತವಾದಾಗ ಯೋಗಸಂಸಿದ್ಧಿಯನ್ನು ಪಡೆಯದಿದ್ದರೆ ಅವನಿಗೆ ಯಾವ ಗತಿಯಾಗುತ್ತದೆ?

ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ |
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥38॥
ಸ್ವರ್ಗ-ಮೋಕ್ಷಾದಿ ಉಭಯರೂಪವಾದ ಫಲದಿಂದ ಭ್ರಷ್ಟನಾಗಿ ಸಣ್ಣ ಮೋಡವು ಬಿರುಗಾಳಿಗೆ ಸಿಕ್ಕಿ ನಾಶವಾದಂತೆ ನಿರಾಶ್ರಯನಾದ ಅವನು ಬ್ರಹ್ಮಪ್ರಾಪ್ತಿಯ ಉಪಾಯದಲ್ಲಿ ವಿಮೂಢನಾಗಿ ನಾಶವನ್ನು ಹೊಂದುತ್ತಾನೆಯೇ?
ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ |
ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥39॥
ಎಲೈ ಕೃಷ್ಣನೇ, ಈ ನನ್ನ ಸಂಶಯವನ್ನು ನೀನು ಸಂಪೂರ್ಣವಾಗಿ ಪರಿಹರಿಸಬೇಕು. ನಿನ್ನನ್ನು ಬಿಟ್ಟು ಈ ಸಂಶಯವನ್ನು ಪರಿಹರಿಸುವವರು ಬೇರೆ ಯಾರೂ ಇಲ್ಲ.
ಶ್ರೀಭಗವಾನ್
ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ |
ನ ಹಿ ಕಲ್ಯಾಣಕೃತ್ ಕಶ್ಚಿದ್ ದುರ್ಗತಿಂ ತಾತ ಗಚ್ಛತಿ ॥40॥
ಶ್ರೀಭಗವಾನ್ ಎಲೈ ಪಾರ್ಥನೇ, ಈ ಲೋಕದಲ್ಲಾಗಲೀ ಅಥವಾ ಪರಲೋಕದಲ್ಲಾಗಲೀ ಅಂತಹ ವ್ಯಕ್ತಿಗೆ ವಿನಾಶವಿಲ್ಲ. ಪ್ರೀತಿಪಾತ್ರನೇ, ಅಲ್ಪವಾದ ಪುಣ್ಯಕಾರ್ಯವನ್ನು ಮಾಡಿದವನೂ ಸಹ ದುರ್ಗತಿಯನ್ನು ಹೊಂದುವುದಿಲ್ಲ.
ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಃ ಸಮಾಃ |
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥41॥
ಯೋಗಭ್ರಷ್ಟನಾದವನು ಪುಣ್ಯದಿಂದ ಸಂಪಾದಿಸಿದ ಲೋಕಗಳನ್ನು ಹೊಂದಿ, ಅಲ್ಲಿ ಬಹುಕಾಲ ವಾಸ ಮಾಡಿ ಶುಚಿಯಾದವರ ಹಾಗೂ ಶ್ರೀಮಂತರಾದವರ ಕುಲದಲ್ಲಿ ಜನಿಸುತ್ತಾನೆ.
ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ |
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥42॥
ಅಥವಾ ಮೇಧಾವಿಗಳಾದ ಯೋಗಿಗಳ ಕುಲದಲ್ಲಿಯೇ ಜನಿಸುತ್ತಾನೆ. ಇಂತಹ ಜನ್ಮವು ಲೋಕದಲ್ಲಿ ಅತ್ಯಂತ ದುರ್ಲಭವಾದುದು.
ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ |
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥43॥
ಆ ಜನ್ಮದಲ್ಲಿಯೂ ಹಿಂದಿನ ಜನ್ಮದ ಬುದ್ಧಿಯನ್ನು ಪಡೆಯುತ್ತಾನೆ. ಎಲೈ ಕುರುನಂದನನೇ, ಪುನಃ ಅವನು ಯೋಗಸಿದ್ಧಿಗಾಗಿ ಪ್ರಯತ್ನ ಪಡುತ್ತಾನೆ.
ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ |
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥44॥
ಅವನ ಹಿಂದಿನ ಜನ್ಮದ ಅಭ್ಯಾಸದಿಂದ ಅವನಿಗೆ ಅರಿವಿಲ್ಲದೆಯೇ ಅವನು ಯೋಗಮಾರ್ಗದಲ್ಲಿ ಪ್ರವೃತ್ತನಾಗುತ್ತಾನೆ. ಯೋಗಾಭ್ಯಾಸ ಮತ್ತು ವೇದಾಭ್ಯಾಸವನ್ನು ಒಂದೇ ಮನಸ್ಸಿನಿಂದ ಮಾಡಲು ಅಸಾಧ್ಯವಾದುದರಿಂದ ಆಗ ವೇದಾಭ್ಯಾಸವನ್ನು ಕಡಿಮೆ ಮಾಡಿಕೊಳ್ಳುತ್ತಾನೆ. ಅಥವಾ ಶಬ್ದರೂಪವಾದ ವೇದದ ಆವೃತ್ತಿಯನ್ನು ಬಿಟ್ಟು ಅರ್ಥರೂಪನಾದ ಬ್ರಹ್ಮನನ್ನೇ ಧ್ಯಾನಿಸುತ್ತಾನೆ.
ಪ್ರಯತ್ನಾದ್ ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ |
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥45॥
ಸತತವಾಗಿ ಪ್ರಯತ್ನ ಪಡುವ ಯೋಗಿಯು ತನ್ನ ಪ್ರಯತ್ನದ ಫಲವಾಗಿ ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಅನೇಕ ಜನ್ಮಗಳ ಕೊನೆಯಲ್ಲಿ ಅಪರೋಕ್ಷ ಜ್ಞಾನವನ್ನು ಹೊಂದಿ ಮೋಕ್ಷವನ್ನು ಪಡೆಯುತ್ತಾನೆ.
ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ |
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ ಯೋಗೀ ಭವಾರ್ಜುನ ॥46॥
ಎಲೈ ಅರ್ಜುನನೇ, ತಪಸ್ವಿಗಳಿಗಿಂತಲೂ ಯೋಗಿಗಳು ಶ್ರೇಷ್ಠರಾದವರು. ಜ್ಞಾನಿಗಳಿಗಿಂತಲೂ ಯೋಗಿಗಳು ಶ್ರೇಷ್ಠರಾದವರು ಎಂದು ಹೇಳಲ್ಪಡುತ್ತಾರೆ. ಕರ್ಮಯೋಗಿಗಳಿಗಿಂತಲೂ ಧ್ಯಾನದಲ್ಲಿ ನಿರತರಾದವರು ಶ್ರೇಷ್ಠರು. ಆದ್ದರಿಂದ ನೀನು ಅಂತಹ ಯೋಗಿಯಾಗು.
ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ |
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥
ನನ್ನಲ್ಲಿಯೇ ಮನಸ್ಸನ್ನಿಟ್ಟು ಯೋಗವನ್ನು ಅನುಷ್ಠಾನ ಮಾಡುವ ಎಲ್ಲರ ಮಧ್ಯದಲ್ಲಿ ಯಾವನು ಶ್ರದ್ಧೆಯಿಂದ ಕೂಡಿದವನಾಗಿ ನನ್ನನ್ನು ಭಜಿಸುತ್ತಾನೆಯೋ ಅವನು ಯೋಗಿಗಳಲ್ಲಿ ಅತ್ಯಂತ ಶ್ರೇಷ್ಠನಾದವನು ಎಂದು ನನ್ನ ಅಭಿಪ್ರಾಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ಭಗವದ್ಗೀತಾ ಜ್ಞಾನ-ವಿಜ್ಞಾನ ಯೋಗ.
ಶ್ರೀಭಗವಾನ್
ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ |
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥1॥

ಶ್ರೀಭಗವಾನ್ ಎಲೈ ಪಾರ್ಥನೇ, ಕೃಷ್ಣನಾದ ನನ್ನಲ್ಲಿಯೇ ಅತ್ಯಂತ ಸ್ನೇಹವುಳ್ಳ ಮನಸ್ಸುಳ್ಳವನಾಗಿ, ಜ್ಞಾನಯೋಗವನ್ನು ಅನುಷ್ಠಾನ ಮಾಡುತ್ತಾ, ನಾನೇ ಎಲ್ಲದಕ್ಕೂ ಆಶ್ರಯ ಮತ್ತು ಎಲ್ಲವನ್ನೂ ಮಾಡಿಸುತ್ತೇನೆ ಎಂದು ತಿಳಿಯುವ ಜ್ಞಾನಿಯು ಸಂಶಯರಹಿತನಾಗಿ, ಸಮಗ್ರವಾಗಿ ಯಾವ ಪ್ರಕಾರದಿಂದ ಜ್ಞಾನವನ್ನು ಸಂಪಾದನೆ ಮಾಡುತ್ತಾನೆಯೋ ಅದನ್ನು ತಿಳಿಯುವಿ, ಅದನ್ನು ಕೇಳು.
ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ |
ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥2॥
ನಾನು ನಿನಗೆ ವಿಜ್ಞಾನಸಹಿತವಾದ ಈ ಜ್ಞಾನವನ್ನು ನಿನ್ನ ಯೋಗ್ಯತೆ ಇದ್ದಷ್ಟು ಸಮಗ್ರವಾಗಿ ಹೇಳುವೆನು. ಅದನ್ನು ತಿಳಿದ ಮೇಲೆ ನೀನು ಬೇರೆ ಏನನ್ನೂ ತಿಳಿಯುವ ಅವಶ್ಯಕತೆ ಇಲ್ಲ.
ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ |
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥3॥
ಸಹಸ್ರ ಮನುಷ್ಯರಲ್ಲಿ ಯಾವನೋ ಒಬ್ಬನು ಸಿದ್ಧಿಗಾಗಿ ಪ್ರಯತ್ನ ಪಡುತ್ತಾನೆ. ಪ್ರಯತ್ನ ಪಟ್ಟು ಸಿದ್ಧಿಯನ್ನು ಸಂಪಾದಿಸುವವರಲ್ಲಿಯೂ ಯಾವನೋ ಒಬ್ಬನು ನನ್ನನ್ನು ಸರಿಯಾಗಿ ತಿಳಿಯುತ್ತಾನೆ.
ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ |
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥4॥
ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ |
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥
ನನಗೆ ಅಧೀನವಾದ ಜಡಪ್ರಕೃತಿಯು ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಎಂದು ಎಂಟು ರೀತಿಯ ವಿಭಾಗವನ್ನು ಹೊಂದಿದೆ. ಎಲೈ ಮಹಾಬಾಹುವೇ, ನನಗಿಂತ ಭಿನ್ನವಾದ ಜೀವರ ದೇಹೇಂದ್ರಿಯಾದಿಗಳಿಗೆ ಕಾರಣವಾದ ಜಗತ್ತನ್ನು ಧರಿಸಿರುವ ಈ ಶ್ರೇಷ್ಠವಾದ ಪ್ರಕೃತಿಯನ್ನು ತಿಳಿಯುವವನಾಗು.
ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ |
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥6॥
ಎಲ್ಲ ಪ್ರಾಣಿಗಳೂ ಈ ಜಡಪ್ರಕೃತಿಯನ್ನೇ ಮೂಲವಾಗಿ ಹೊಂದಿವೆ ಎಂದು ತಿಳಿ (ಎಲ್ಲ ಪ್ರಾಣಿಗಳ ದೇಹೇಂದ್ರಿಯಾದಿಗಳು ಪ್ರಕೃತಿಯ ವಿಕಾರಗಳು ಎಂದು ಅಭಿಪ್ರಾಯ). ನಾನು ಸಮಗ್ರವಾದ ಜಗತ್ತಿನ ಉತ್ಪತ್ತಿ ಮತ್ತು ಸಂಹಾರಗಳಿಗೆ ಕಾರಣನಾದವನು.
ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ |
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥7॥
ಎಲೈ ಧನಂಜಯನೇ, ನನಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಈ ಜೀವ- ಜಡಾತ್ಮಕವಾದ ಜಗತ್ತು ಮಣಿಗಳ ಸಮೂಹಗಳು ಸೂತ್ರವನ್ನು ಆಶ್ರಯಿಸಿಕೊಂಡಿರುವಂತೆ ನನ್ನನ್ನು ಆಶ್ರಯಿಸಿಕೊಂಡಿವೆ.
ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ |
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥8॥
ಎಲೈ ಕೌಂತೇಯನೇ, ನಾನು ಜಲದಲ್ಲಿರುವ ರಸಕ್ಕೆ ನಿಯಾಮಕನಾದವನು. ಚಂದ್ರ, ಸೂರ್ಯರ ಕಾಂತಿಯೂ ನನ್ನಿಂದಲೇ. ಸರ್ವವೇದಗಳಲ್ಲಿ ಶ್ರೇಷ್ಠವಾದ ಪ್ರಣವವೂ, ಆಕಾಶದಲ್ಲಿ ವಿಶೇಷಗುಣವಾದ ಶಬ್ದವೂ, ಮನುಷ್ಯರ ಪೌರುಷವೂ ನನ್ನಿಂದಲೇ ನಿಯತವಾದುದು.
ವಿಶೇಷ ವಿಚಾರ `ಸೂತ್ರೇ ಮಣಿಗಣಾ ಇವ' ಎಂದು ಹೇಳಿದ ಆಧಾರಾಧೇಯಭಾವವನ್ನೇ ಇಲ್ಲಿ ವಿವರಿಸಿರುವುದರಿಂದ `ರಸೋಽಹಂ' ಇತ್ಯಾದಿಗಳು ಆಧಾರಾಧೇಯಭಾವದ ಅಭಿಪ್ರಾಯದಿಂದಲೇ ಪ್ರವೃತ್ತವಾಗುತ್ತವೆ. ಏಕೆಂದರೆ ಜಡೈಕ್ಯವನ್ನು ಯಾರೂ ಅಂಗೀಕರಿಸುವುದಿಲ್ಲ. ಅಲ್ಲದೇ, `ಬೀಜಂ ಮಾಂ ಸರ್ವಭೂತಾನಾಂ' ಎಂದು ಇಲ್ಲಿಯೇ ಮುಂದೆ ಕೃಷ್ಣನು ತಾನು ಎಲ್ಲದಕ್ಕೂ ಕಾರಣನೆಂದು ಹೇಳುತ್ತಾನೆ. ಆಯಾ ವಸ್ತುವಿನ ಸ್ವಭಾವವಾದ ಅಸಾಧಾರಣ ಗುಣಗಳಿಗೂ ತಾನೇ ನಿಯಾಮಕನೆಂದು ತಿಳಿಸುವುದಕ್ಕಾಗಿ `ರಸೋಹಮಪ್ಸು' ಮುಂತಾದ ವಾಕ್ಯಗಳಿಂದ ಇನ್ನೊಮ್ಮೆ ತನ್ನ ನಿಯಾಮಕತ್ವವನ್ನು ಹೇಳುತ್ತಾನೆ.
ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ |
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥9॥
ಪೃಥಿವಿಯಲ್ಲಿರುವ ಪವಿತ್ರವಾದ ಗಂಧವು ಮತ್ತು ಅಗ್ನಿಯ ತೇಜಸ್ಸು ನಾನೇ ಆಗಿದ್ದೇನೆ (ನನ್ನ ಅಧೀನವೇ ಆಗಿದೆ ಎಂದು ಅಭಿಪ್ರಾಯ). ಸರ್ವಪ್ರಾಣಿಗಳ ಜೀವನವೂ, ತಪಸ್ವಿಗಳ ತಪಸ್ಸೂ ಸಹ (ನನ್ನ ಅಧೀನವೇ ಆಗಿದೆ).
ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ |
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥10॥
ಎಲೈ ಪಾರ್ಥನೇ, ವೇದಪ್ರತಿಪಾದ್ಯನಾದ ನನ್ನನ್ನು ಸರ್ವಜೀವರಿಗೂ (ಜೀವರ ದೇಹಾದಿಗಳಿಗೆ) ಕಾರಣನೆಂದು ತಿಳಿ. ಮೇಧಾವಿಗಳ ಬುದ್ಧಿಶಕ್ತಿಯೂ, ಪರಾಕ್ರಮಶಾಲಿಗಳ ಪರಾಕ್ರಮವೂ ನನ್ನಿಂದಲೇ ನಿಯತವಾದುದು.
ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ |
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥11॥
ಬಲಿಷ್ಠರಲ್ಲಿರುವ ಕಾಮರಾಗವಿವರ್ಜಿತವಾದ ಬಲವೂ ನನ್ನಿಂದಲೇ ನಿಯತವಾಗಿದೆ (ನಾನು ಕಾಮರಾಗವಿವರ್ಜಿತವಾದ ಬಲರೂಪನೂ ಆಗಿದ್ದೇನೆ). ಎಲೈ ಭರತರ್ಷಭನೇ, ಜೀವರಲ್ಲಿರುವ ಧರ್ಮಕ್ಕೆ ವಿರುದ್ಧವಾದ ಕಾಮವೂ ನನ್ನಿಂದ ನಿಯತವಾಗಿದೆ (ಧರ್ಮಕ್ಕೆ ಅವಿರುದ್ಧವಾದ ಕಾಮದಲ್ಲಿ ಪರಮಾತ್ಮನ ವಿಶೇಷ ಸನ್ನಿಧಾನವಿದೆ).
ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ |

ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥12॥
ಸಾತ್ವಿಕವಾದ, ರಾಜಸವಾದ ಮತ್ತು ತಾಮಸವಾದ ಯಾವ ವಸ್ತುಗಳಿವೆಯೋ ಅದಕ್ಕೆ ಕಾರಣವಾದ ಸತ್ವಾದಿ ಗುಣಗಳು ನನ್ನಿಂದಲೇ ನಿಯತವೆಂದು ತಿಳಿ. ಆ ಗುಣಗಳನ್ನೇ ನಾನೆಂದು ತಿಳಿಯಬೇಡ. ನನಗೆ ಆ ಗುಣಗಳು ಆಧಾರವಾಗಿಲ್ಲ, ನಾನೇ ಆ ಗುಣಗಳಿಗೆ ನಿಯಾಮಕನಾಗಿ ಆಧಾರನಾಗಿದ್ದೇನೆ. ಅಥವಾ ನಾನು ಅಸಂಗನಾದುದರಿಂದ ನಾನು ಆ ಗುಣಗಳಲ್ಲಿಯೂ ಇಲ್ಲ, ಆ ಗುಣಗಳು ನನ್ನಲ್ಲಿಯೂ ಇಲ್ಲ.
ತ್ರಿಭಿರ್ಗುಣಮಯ್ಯೈರ್ಭಾವೈರೇಭಿಃ ಸರ್ವಮಿದಂ ಜಗತ್ |
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥13॥
ಮೂರುಗುಣಗಳಿಂದ ಉಂಟಾದ ವಸ್ತುಗಳಿಂದ ಮೋಹಿತವಾದ ಈ ಎಲ್ಲ ಜಗತ್ತೂ ನಾನು ಈ ಗುಣಗಳಿಗಿಂತ ವಿಲಕ್ಷಣನಾದವನು, ಉತ್ತಮನಾದವನು ಮತ್ತು ನಾಶರಹಿತನಾದವನು ಎಂದು ನನ್ನನ್ನು ತಿಳಿಯುವುದಿಲ್ಲ.
ವಿಶೇಷ ವಿಚಾರ `ರಸೋಽಹಂ' ಇತ್ಯಾದಿ ವಾಕ್ಯಗಳಿಗೆ ಕೃಷ್ಣನಿಗೆ ಅಭಿಪ್ರೇತವಾದ ಅರ್ಥವನ್ನು ತಿಳಿಯದೆ ಜಡ-ಜೀವೈಕ್ಯವನ್ನು ಹೇಳುವವರು ಮಿಥ್ಯಾಜ್ಞಾನಿಗಳು ಎಂದು ಅಭಿಪ್ರಾಯ.
ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ |
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥14॥
ನನ್ನ ಸಂಬಂಧಿಯಾದ ಮಹಾಲಕ್ಷ್ಮಿಯಿಂದ ಅಭಿಮನ್ಯಮಾನವಾದ ಈ ಗುಣಮಯವಾದ ಮಾಯೆ ಏನಿದೆಯೋ ಅದನ್ನು ದಾಟುವುದು ಕಷ್ಟ. ನನ್ನನ್ನೇ ಯಾರು ಶರಣು ಹೊಂದುತ್ತಾರೋ, ಅವರು ಮಾತ್ರ ಈ ಮಾಯೆಯನ್ನು (ಮಹಾಲಕ್ಷ್ಮಿಯಿಂದ ಅಭಿಮನ್ಯಮಾನವಾದ ಗುಣಗಳಿಂದ ಉಂಟಾಗುವ ಮೋಹವನ್ನು) ದಾಟುತ್ತಾರೆ.
ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ |
ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥15॥
ದುಷ್ಕರ್ಮವನ್ನು ಮಾಡುವ, ಮಾಯೆಯಿಂದ ಜ್ಞಾನಲೋಪವನ್ನು ಹೊಂದಿದ ಆಸುರ ಸ್ವಭಾವವುಳ್ಳ ಮೂಢರಾದ ನರಾಧಮರು ನನ್ನನ್ನು ಹೊಂದುವುದಿಲ್ಲ.
ವಿಶೇಷ ವಿಚಾರ ಶರಣಾಗತಿರೂಪವಾದ `ದಾಸೋಽಹಂ' ಭಾವವನ್ನು ಬಿಟ್ಟು `ಸೋಽಹಂ' ಭಾವವನ್ನು ಆಶ್ರಯಿಸುವ ಪುರುಷರು ಪಂಚಮಹಾಪಾತಕಿಗಳು, ಮೂಢರು, ಮನುಷ್ಯಾಧಮರು, ದುರ್ಗಾದೇವಿಯಿಂದ ತತ್ತ್ವಜ್ಞಾನ ನಾಶ ಹೊಂದಿದವರು ಮತ್ತು ಕೇವಲ ಅಸುರರು ಎಂದು ಅಭಿಪ್ರಾಯ.
ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ |
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥16॥
ಎಲೈ ಅರ್ಜುನನೇ, ನನ್ನನ್ನು ನಾಲ್ಕು ವಿಧವಾದ ಜನರು ಭಜಿಸುತ್ತಾರೆ. ಭರತರ್ಷಭನೇ, ಅವರು ಆರ್ತರು, ಜಿಜ್ಞಾಸುಗಳು, ಅರ್ಥವನ್ನು ಬಯಸುವವರು ಮತ್ತು ಜ್ಞಾನಿಗಳು.
ವಿಶೇಷ ವಿಚಾರ ಯಾರು `ಸೋಽಹಂ' ಭಾವವನ್ನು ಬಿಟ್ಟು ತನ್ನ ಸೇವೆಯಲ್ಲಿಯೇ ನಿರತರಾಗಿರುತ್ತಾರೆಯೋ, ಅವರ ಆ ಸೇವೆ ಸೌಪಾಧಿಕವಾಗಲಿ ಅಥವಾ ನಿರುಪಾಧಿಕವಾಗಲೀ ಅವರೆಲ್ಲರೂ ಪುಣ್ಯಶಾಲಿಗಳು ಎಂದು ಕೃಷ್ಣನ ಅಭಿಪ್ರಾಯ.
ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ |
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥17॥
ಆ ನಾಲ್ಕು ವಿಧವಾದ ಜನರಲ್ಲಿ ನಿತ್ಯವೂ ನನ್ನ ಯೋಗಯುಕ್ತನಾದ ನನ್ನಲ್ಲಿ ಮುಖ್ಯವಾದ ಭಕ್ತಿಯನ್ನು ಹೊಂದಿದ ಜ್ಞಾನಿಯು ಶ್ರೇಷ್ಠನಾದವನು. ನಾನು ಜ್ಞಾನಿಗೆ ಅತ್ಯಂತ ಪ್ರಿಯನಾದವನು ಮತ್ತು ಜ್ಞಾನಿಯೂ ನನಗೆ ಅತ್ಯಂತ ಪ್ರಿಯನಾದವನು.
ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ |
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥18॥
ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ |
ಅವರೆಲ್ಲರೂ ಉತ್ಕೃಷ್ಟರಾದವರೇ. ಅವರಲ್ಲಿಯೂ ಅಪರೋಕ್ಷ ಜ್ಞಾನಿಯು ನನಗೆ ವಿಶೇಷವಾಗಿ ಸಮ್ಮತನಾದವನು. ಅಥವಾ ಆ ನಾಲ್ಕು ವಿಧವಾದ ಜನರಲ್ಲಿ ಅಪರೋಕ್ಷ ಜ್ಞಾನಿಯು ಅವನೇ ನಿಜವಾದ ಜೀವ ಎಂದು ನನ್ನ ಅಭಿಪ್ರಾಯ. ಉಳಿದ ಮಿಥ್ಯಾಜ್ಞಾನಿಗಳು ನರಾಧಮರೆಂದು ಹೇಳಿರುವುದರಿಂದ ಜ್ಞಾನಿಯು ನರಶ್ರೇಷ್ಠ ಎಂದು ಅಭಿಪ್ರಾಯ. ಜ್ಞಾನಿಯು ನಾನೇ ಎಂಬುದು, ಎಂದರೆ ಜ್ಞಾನಿಗೂ ನನಗೂ ಅಭೇದವಿದೆ ಎಂಬುದು ನನಗೆ ಅಭಿಪ್ರೇತವಲ್ಲ.
ವಿಶೇಷ ವಿಚಾರ `ಮೇ ಅಮತಃ' ಎಂದು ಛೇದವನ್ನು ಮಾಡಿದರೆ ಈ ಅರ್ಥವು ದೊರೆಯುತ್ತದೆ. `ಚತುರ್ವಿಧಾ ಭಜಂತೇ ಮಾಂ' `ಏಕ ಭಕ್ತಿರ್ವಿಶಿಷ್ಯತೇ', `ಸ ಚ ಮಮ ಪ್ರಿಯಃ' ಮುಂತಾದ ಹಿಂದಿನ ವಾಕ್ಯಗಳಿಂದ ಜ್ಞಾನಿಗೂ ತನಗೂ ಭೇದವನ್ನೇ ಹೇಳಿರುವುದರಿಂದ ಮತ್ತು ಸರ್ವೈಕ್ಯವಾದಿಗಳಾದ ಅದ್ವೈತಿಗಳಿಗೆ ಜ್ಞಾನಿ ಮಾತ್ರೈಕ್ಯವು ಅಸಮ್ಮತವೂ ಆದುದರಿಂದ ಹೀಗೆಯೇ ಅರ್ಥವನ್ನು ಮಾಡಬೇಕು. ಜ್ಞಾನಿಯು ನನಗೆ ದೇಹದಂತೆ ಪ್ರಿಯನಾದವನು ಎಂದೂ ಅರ್ಥವನ್ನು ಮಾಡಬಹುದು. ಜ್ಞಾನಿಯು ನಾನೇ ಅಲ್ಲ ಎಂಬುದನ್ನು ಪುನಃ ಕೃಷ್ಣನು ಸ್ಪಷ್ಟ ಪಡಿಸುತ್ತಾನೆ. ಆ ಜ್ಞಾನಿಯು ಅತ್ಯಂತ ಶ್ರೇಷ್ಠವಾದ ಗತಿಯನ್ನು ಕೊಡುವ ನನ್ನನ್ನೇ ಆಶ್ರಯಿಸಿರುತ್ತಾನೆ. ಆಶ್ರಯಾಶ್ರಯಿಭಾವವಿರುವುದರಿಂದ ನನಗೂ ಜ್ಞಾನಿಗೂ ಭೇದವಿದೆ ಎಂದು ಅರ್ಥ. ಅನೇಕ ಜನ್ಮಗಳ ಅನಂತರ ಜ್ಞಾನಿಯಾದವನು ನನ್ನನ್ನು ಹೊಂದುತ್ತಾನೆ ಹೊರತು ನಾನೇ ಆಗುವುದಿಲ್ಲ. ಗಂತೃಗಮ್ಯಭಾವವಿರುವುದರಿಂದಲೂ ಭೇದವೇ ಮೋಕ್ಷದೆಶೆಯಲ್ಲಿಯೂ ಇದೆ. ಇನ್ನು ಸಂಸಾರದೆಶೆಯಲ್ಲಿ ಭೇದವಿದೆ ಎಂದು ಇನ್ನೊಮ್ಮೆ ಹೇಳಬೇಕಾದ ಅವಶ್ಯಕತೆ ಇಲ್ಲ.
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥19॥
ವಾಸುದೇವನು ಸರ್ವನಿಯಾಮಕನು ಅಥವಾ ಸರ್ವವ್ಯಾಪ್ತನು ಎಂದು ತಿಳಿಯುವ ಮಹಾತ್ಮನು ಅತ್ಯಂತ ದುರ್ಲಭನಾದವನು.

ವಿಶೇಷ ವಿಚಾರ `ಅಹಂ ಕೃತ್ಸ್ನಸ್ಯ ಜಗತಃ' ಎಂದು ಹೇಳಿದ ಸರ್ವಜಗತ್‌ಸ್ರಷ್ಟೃತ್ವ, `ಮತ್ತಃ ಪರತರಂ ನಾನ್ಯತ್' ಎಂದು ಹೇಳಿದ ಸರ್ವೋತ್ತಮತ್ವ, `ಮಯಿ ಸರ್ವಮಿದಂ ಪ್ರೋತಂ' ಎಂದು ಹೇಳಿದ ಸರ್ವಾಧಾರತ್ವ, `ನಮಾಂ ದುಷ್ಕೃತಿನೋ ಮೂಢಾಃ', `ಚತುರ್ವಿಧಾ ಭಜಂತೇ ಮಾಂ' ಎಂದು ಹೇಳಿದ ಜೀವವೈವಿಧ್ಯ, ಈ ಪ್ರಮೇಯವನ್ನು ಸುದುರ್ಲಭನಾದ ಮಹಾತ್ಮನಾದ ವಾಸುದೇವನು ತಿಳಿದಿದ್ದಾನೆ. ಅಥವಾ `ವಾ ಅಸುದೇವಃ' ಎಂದು ಪದಚ್ಛೇದ ಮಾಡಿ ವಾಯುದೇವರು ತಿಳಿದಿದ್ದಾರೆ. ಏಕೆಂದರೆ ವಾಸುದೇವ ಕೃಷ್ಣನು ಮೂಲಗ್ರಂಥಕರ್ತೃ, ಅಸುದೇವರಾದ ಆಚಾರ್ಯರು ಭಾಷ್ಯಕರ್ತೃಗಳು.

ಅಥವಾ ಐಕ್ಯವನ್ನು ಹೇಳುವ ಪರರೂ ಸಹ ವಾಸುದೇವಃ ಸರ್ವಮಿತಿ' ಎಂಬಲ್ಲಿ `ಯೋ ವೇದ' ಎಂದು ಅಧ್ಯಾಹಾರವನ್ನು ಮಾಡಬೇಕು. ಆಗ ಪೂರ್ವೋತ್ತರ ವಾಕ್ಯಗಳಿಂದ ವಿರೋಧ ಉಂಟಾಗುತ್ತದೆ. ಅದರ ಬದಲು `ಯೋ ನ ವೇದ' ಎಂದು ಅಧ್ಯಾಹಾರ ಮಾಡಿದರೆ ಎಲ್ಲವೂ ಸಮಂಜಸವಾಗುತ್ತದೆ. ವಾಸುದೇವನು ಸರ್ವಾಭಿನ್ನನು ಎಂದು ಯಾರು ತಿಳಿಯುವುದಿಲ್ಲವೋ ಅಂತಹ ಮಹಾತ್ಮನು ಅತ್ಯಂತ ದುರ್ಲಭನಾದವನು ಎಂಬ ಅರ್ಥವು ದೊರೆಯುತ್ತದೆ.

ಅಥವಾ `ಯೋ ವೇದ' ಎಂದು ಅಧ್ಯಾಹಾರ ಮಾಡಿದರೂ `ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ಎಂದು ಗೀತೆಯಲ್ಲಿಯೇ ಮುಂದೆ ಹೇಳುವುದರಿಂದ ಸರ್ವಂ ಎಂದರೆ ಸರ್ವವ್ಯಾಪಿಯಾದ ಬ್ರಹ್ಮ ಎಂದು ಅರ್ಥ, ವಾಸುದೇವನು ಸರ್ವವ್ಯಾಪಿ ಎಂಬ ಅರ್ಥವು ಅಬಾಧಿತವಾದುದು. ಚಿನ್ಮಾತ್ರೈಕ್ಯವನ್ನು ಹೇಳುವವರ ಮತದಲ್ಲಿ ಜೀವ-ಜಡಾತ್ಮಕ ಸಕಲ ಪ್ರಪಂಚದ ಐಕ್ಯವು ಅಯುಕ್ತವಾದುದು ಮತ್ತು ಇಲ್ಲಿ ಹೇಳಿದ ಅನೇಕ ಭೇದ ವಚನಗಳ ವಿರೋಧವು ಬರುತ್ತದೆ. ಆದ್ದರಿಂದ ನಾವು ಹೇಳಿದುದೇ ಸರಿಯಾದ ಅರ್ಥ. ಎಲ್ಲವೂ ವಾಸುದೇವನೇ ಆದರೆ ಎಲ್ಲವೂ ಸಮಾನವಾಗುವುದರಿಂದ `ಜ್ಞಾನೀ ಮಮಾತ್ಮಾ' ಎಂದು ಜ್ಞಾನಿಗೆ ಹೇಳಿದ ಮಹತ್ವವಾಗಲೀ, ನಾಯಿಯೂ ಕೂಡ ವಾಸುದೇವನಾದುದರಿಂದ ಅಂತಹವನು ಸಿಗುವುದು ದುರ್ಲಭ ಎಂದು ಹೇಳಿದ ದುರ್ಲಭತ್ವವಾಗಲೀ ಕೂಡುವುದಿಲ್ಲ. `ಸರ್ವ' ಎಂಬ ಶಬ್ದಕ್ಕೆ ತನ್ನ ಎದುರಾಗಿ ಬರುವ ವೈರಿಗಳನ್ನು ವಾರಣೆ ಮಾಡುತ್ತಾನೆ ಎಂದಾಗಲೀ ಅಥವಾ ಅನುಸರಿಸಿ ಬರುವ ಭಕ್ತರನ್ನು ಸ್ವೀಕರಿಸುತ್ತಾನೆ ಎಂದಾಗಲಿ ಲೌಕಿಕ ಅರ್ಥವನ್ನು ಮಾಡಿ ಕೃಷ್ಣನ ಮಹಿಮೆಯ ಪರವಾಗಿ ಅನ್ವಯಿಸಬಹುದು. ಆದ್ದರಿಂದ ಇಲ್ಲಿ ಯಾವ ಕ್ಷುದ್ರ ಉಪದ್ರವಕ್ಕೂ ಎಡೆಯಿಲ್ಲ. ಅಲ್ಲದೆ ಮುಂದಿನ ಶ್ಲೋಕದಲ್ಲಿ ಅನ್ಯದೇವತಾ ಭಕ್ತರನ್ನು ನಿಂದೆ ಮಾಡುವುದರಿಂದಲೂ ಎಲ್ಲರೂ ವಾಸುದೇವನೇ ಎಂಬ ಮೇಲ್ನೋಟದ ಅರ್ಥವು ಕೃಷ್ಣನಿಗೆ ಅಭಿಪ್ರೇತವಾದುದಲ್ಲ ಎಂದು ತಿಳಿಯುತ್ತದೆ.

ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ |
ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥20॥

ಆಯಾ ದೇವತೆಗಳಿಂದ ಕೊಡಲ್ಪಡುವ ಕಾಮ್ಯ ವಸ್ತುಗಳಿಂದ ನನ್ನ ಸರ್ವೋತ್ತಮತ್ವ ಜ್ಞಾನವನ್ನು ಕಳೆದುಕೊಂಡು ಆಯಾ ದೇವತೆಗಳ ಪೂಜೆಗೆ ಹೇಳಿದ ಲಿಂಗ ಭಸ್ಮ ಧಾರಣಾದಿ ನಿಯಮಗಳನ್ನು ಅನುಸರಿಸಿ ತಮ್ಮ ಆಸುರಾದಿ ಸ್ವಭಾವಕ್ಕೆ ಅನುಗುಣವಾಗಿ ಜನರು ಬೇರೆ ದೇವತೆಗಳನ್ನು ಪೂಜಿಸುತ್ತಾರೆ.

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ |
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥21॥

ಯಾವ ಯಾವ ಭಕ್ತರು ಯಾವ ಯಾವ ಬ್ರಹ್ಮ-ರುದ್ರಾದಿಗಳ ಪ್ರತಿಮೆಗಳನ್ನು ಶ್ರದ್ಧೆಯಿಂದ ಅರ್ಚಿಸಿದರೂ ಅವರಿಗೆ ಅದೇ ಶ್ರದ್ಧೆಯನ್ನು ದೃಢಪಡಿಸುತ್ತೇನೆ.

ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ |
ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್ ॥22॥

ಆ ಭಕ್ತನು ಆ ಶ್ರದ್ಧೆಯಿಂದ ಕೂಡಿ ಅದೇ ದೇವತೆಯ ಆರಾಧನೆಯನ್ನು ಮಾಡಲು ತೊಡಗುತ್ತಾನೆ. ಆ ದೇವತೆಗಳಿಂದ ಅವನು ತನ್ನ ಕಾಮ್ಯವಸ್ತುಗಳನ್ನು ಪಡೆದರೂ ಆ ಕಾಮ್ಯವಸ್ತುಗಳು ಆ ದೇವತೆಗಳ ಅಂತರ್ಯಾಮಿಯಾದ ನನ್ನಿಂದಲೇ ಕೊಡಲ್ಪಟ್ಟವುಗಳು. ವಿಶೇಷ ವಿಚಾರ ಆ ಫಲಗಳು ಆ ದೇವತೆಗಳಿಂದ ಕೊಡಲ್ಪಡುವುದಿಲ್ಲ. ಏಕೆಂದರೆ ಆ ದೇವತೆಗಳಿಗೆ ತಮ್ಮನ್ನು ಆರಾಧಿಸುವವರಿಗೆ ಫಲವನ್ನು ಕೊಡುವ ಶಕ್ತಿಯೂ ಇಲ್ಲ ಎಂದು ಅಭಿಪ್ರಾಯ.

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ |
ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥

ಅಲ್ಪಬುದ್ಧಿಯುಳ್ಳ ಅಂತಹ ಮಾನವರು ಪಡೆಯುವ ಫಲವು ಶೀಘ್ರವಾಗಿ ನಾಶವನ್ನು ಹೊಂದುತ್ತದೆ. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಹೊಂದುತ್ತಾರೆ. ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ.

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ |
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥24॥

ಬುದ್ಧಿಶೂನ್ಯರಾದ ಮಾನವರು ನನ್ನ ಶಾಶ್ವತವಾದ, ಶ್ರೇಷ್ಠವಾದ ಸರ್ವೋತ್ತಮತ್ವ ಭಾವವನ್ನು ತಿಳಿಯದೆ ಬ್ರಹ್ಮಾದಿಗಳಿಗೂ ಅದೃಶ್ಯನಾದ ನನ್ನನ್ನು ಎಲ್ಲರಿಗೂ ಕಾಣುವ ಪಾಂಚಭೌತಿಕ ದೇಹವನ್ನು ಹೊಂದಿ, ಬ್ರಹ್ಮಾದಿ ಪಿಪೀಲಿಕಾಂತ ಜೀವರೂಪನಾಗಿ ಇದ್ದಾನೆ ಎಂದು ತಿಳಿಯುತ್ತಾರೆ. ಆದ್ದರಿಂದಲೇ ಅವರು ಬುದ್ಧಿಹೀನರು. ಅವರು ಪಡೆಯುವ ಫಲವು ಅಲ್ಪವಾದುದು.

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ |
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥

ಯೋಗಮಾಯೆಯಿಂದ ಆವೃತನಾದ ನಾನು ಎಲ್ಲರಿಗೂ ನನ್ನನ್ನು ಸರಿಯಾಗಿ ತೋರಗೊಡುವುದಿಲ್ಲ. ಮೂಢರಾದ ಜನರು ನಾನು ಜನ್ಮರಹಿತನಾದವನು ಮತ್ತು ನಾಶರಹಿತನಾದವನು ಎಂದು ನನ್ನನ್ನು ತಿಳಿಯುವುದಿಲ್ಲ.

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ |
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥26॥

ಎಲೈ ಅರ್ಜುನನೇ, ನಾನು ಭೂತ-ವರ್ತಮಾನ-ಭವಿಷ್ಯಗಳೆಲ್ಲವನ್ನೂ ತಿಳಿದಿದ್ದೇನೆ. ಆದರೆ ನನ್ನನ್ನು ಯಾರೂ (ಪೂರ್ಣವಾಗಿ) ತಿಳಿದಿಲ್ಲ.
ವಿಶೇಷ ವಿಚಾರ ಜೀವರಿಗೆ ಇರುವ ಅಸರ್ವಜ್ಞತ್ವ ಮತ್ತು ಕೃಷ್ಣನಿಗೆ ಸರ್ವಜ್ಞತ್ವವು ಅವರಲ್ಲಿರುವ ಭೇದಕ್ಕೆ ಪ್ರಯೋಜಕವೆಂದು ಕೃಷ್ಣನ ಅಭಿಪ್ರಾಯ.
ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ |
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥27॥
ಎಲೈ ಭಾರತನೇ, ರಾಗ-ದ್ವೇಷಗಳಿಂದ ಉಂಟಾದ ಶೀತೋಷ್ಣಾದಿ ದ್ವಂದ್ವಗಳ ಮೋಹದಿಂದ ಎಲೈ ಪರಂತಪನೇ, ಸೃಷ್ಟಿಯಾದ ಮೇಲೆ ಎಲ್ಲ ಜೀವರೂ ಮೋಹವನ್ನು ಹೊಂದುತ್ತಾರೆ.
ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ |
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥28॥
ಯಾವ ಪುಣ್ಯಶಾಲಿಗಳಿಗೆ ಅವರು ಮಾಡಿದ ಪಾಪವು ನಾಶವನ್ನು ಹೊಂದುತ್ತದೆಯೋ ಅಂತಹವರು ಮಾತ್ರ ದ್ವಂದ್ವ ಮೋಹದಿಂದ ನಿರ್ಮುಕ್ತರಾಗಿ ದೃಢವಾದ ಶ್ರದ್ಧೆಯಿಂದ ನನ್ನನ್ನು ಭಜಿಸುತ್ತಾರೆ.
ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ |
ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥29॥
ನನ್ನನ್ನು ಆಶ್ರಯಿಸಿ ಯಾರು ಮುಪ್ಪು, ಸಾವುಗಳಿಂದ ಬಿಡುಗಡೆಯನ್ನು ಹೊಂದಲು ಪ್ರಯತ್ನವನ್ನು ಪಡುತ್ತಾರೆಯೋ ಅವರು ಆ ಬ್ರಹ್ಮನನ್ನು ತಿಳಿಯುತ್ತಾರೆ, ಅಧ್ಯಾತ್ಮವೆಲ್ಲವನ್ನೂ ತಿಳಿಯುತ್ತಾರೆ ಮತ್ತು ಎಲ್ಲ ಕರ್ಮಗಳನ್ನೂ ತಿಳಿಯುತ್ತಾರೆ.
ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ |
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥30॥
ಯಾರು ಪ್ರಯಾಣ ಕಾಲದಲ್ಲಿ ಅಧಿಭೂತ, ಅಧಿದೈವ ಮತ್ತು ಅಧಿಯಜ್ಞಗಳಿಂದ ಸಹಿತನಾದ ನನ್ನನ್ನು ತಮ್ಮ ಹೃದಯದಲ್ಲಿರುವವನೆಂದು ತಿಳಿಯುತ್ತಾರೆಯೋ, ಯೋಗಯುಕ್ತ ಮನಸ್ಸುಳ್ಳ ಅವರು ನನ್ನನ್ನು ಸರಿಯಾಗಿ ತಿಳಿಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಭಗವದ್ಗೀತಾ ಜ್ಞಾನವಿಜ್ಞಾನ ಯೋಗ.
ಅರ್ಜುನಃ
ಕಿಂ ತದ್ ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ |
ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥1॥
ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ |
ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥2॥
ಅರ್ಜುನ ಎಲೈ ಪುರುಷೋತ್ತಮನೇ, ಬ್ರಹ್ಮ ಎಂದರೆ ಯಾವುದು? ಅಧ್ಯಾತ್ಮವೆಂದರೆ ಏನು? ಕರ್ಮವೆಂದರೆ ಏನು? ನೀನು ಹೇಳಿದ ಅಧಿಭೂತ, ಅಧಿದೈವ ಎಂದರೆ ಏನು? ಎಲೈ ಮಧುಸೂದನನೇ, ಈ ದೇಹದಲ್ಲಿ ಅಧಿಯಜ್ಞನು ಯಾರು? ಅವನು ಹೇಗೆ ಅಧಿಯಜ್ಞನಾಗುತ್ತಾನೆ? ನಿಯತಚಿತ್ತವುಳ್ಳವರು ದೇಹತ್ಯಾಗ ಕಾಲದಲ್ಲಿ ನಿನ್ನನ್ನು ಹೇಗೆ ಸ್ಮರಣೆ ಮಾಡಬೇಕು?
ಶ್ರೀಭಗವಾನ್
ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ |
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥3॥
ಶ್ರೀಭಗವಾನ್ ಚತುರ್ವಿಧ ನಾಶರಹಿತನಾದ, ಪರಮಾಕ್ಷರ ಶಬ್ದವಾಚ್ಯನಾದವನು ಬ್ರಹ್ಮ (ಪ್ರಕೃತಿಯೂ ಅಕ್ಷರ ಶಬ್ದವಾಚ್ಯವಾದುದರಿಂದ `ಪರಮಂ ಅಕ್ಷರಂ' ಎಂದು ಹೇಳಲಾಗಿದೆ. ಆತ್ಮ ಎಂದರೆ ಜೀವ. ಅವನನ್ನು ಸಂಬಂಧಿಸಿ ಅವನ ಹೊರಗೆ ಇರುವ ದೇಹೇಂದ್ರಿಯಾದಿಗಳು ಅಧ್ಯಾತ್ಮ ಎಂದು ಹೇಳಲ್ಪಡುತ್ತವೆ. ಎಲ್ಲ ಜೀವರಿಗೂ ಉತ್ಪತ್ತಿಯನ್ನು ಉಂಟುಮಾಡುವ ಪರಮಾತ್ಮನ ಆದಿಕಾಲೀನವಾದ ಸೃಷ್ಟಿ ವ್ಯಾಪಾರವು ಕರ್ಮ ಎಂದು ಕರೆಯಲ್ಪಡುತ್ತದೆ.
ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ |
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥4॥
ಎಲೈ ದೇಹವನ್ನು ಧರಿಸಿದವರಲ್ಲಿ ಶ್ರೇಷ್ಠನೇ, ನಾಶವನ್ನು ಹೊಂದುವುದರಿಂದ ಕ್ಷರಶಬ್ದವಾಚ್ಯವಾದ ಜೀವರ ದೇಹವು ಅಧಿಭೂತವೆನಿಸುತ್ತದೆ. ದೇಹವು ಪಂಚ ಮಹಾಭೂತ ಸಂಬಂಧಿಯಾಗಿರುವುದರಿಂದ ಅಧಿಭೂತ ಶಬ್ದದಿಂದ ಹೇಳಲ್ಪಡುತ್ತದೆ. ದೇವತೆಗಳನ್ನು ಉದ್ದೇಶಿಸಿ ಯಜ್ಞಾದಿಗಳಿಂದ ಅವರಿಗೆ ಪ್ರೀತಿಯನ್ನು ಉಂಟು ಮಾಡುವ ದೇವಸಂಬಂಧಿಯಾದ ಜೀವನೇ ಅಧಿದೈವತ. ಸರ್ವಯಜ್ಞಭೋಕ್ತೃವಾದುದರಿಂದ ಯಜ್ಞಸಂಬಂಧಿಯಾಗಿ ಈ ದೇಹದಲ್ಲಿ ನೆಲೆಸುವುದರಿಂದ ನಾನೇ ಅಧಿಯಜ್ಞ ಶಬ್ದವಾಚ್ಯನಾದವನು.
ಅಂತಕಾಲೇ ಚ ಮಾಮೇವ ಸ್ಮರನ್ ತ್ಯಕ್ತ್ವಾ ಕಲೇವರಮ್ |
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥5॥

ಅಂತಕಾಲದಲ್ಲಿ ನನ್ನನ್ನು ಸ್ಮರಿಸುತ್ತಲೇ ಯಾವನು ದೇಹವನ್ನು ಪರಿತ್ಯಾಗ ಮಾಡುತ್ತಾನೆಯೋ ಅವನು ನನ್ನಲ್ಲಿ ಭಕ್ತಿಯನ್ನೂ ಮತ್ತು ನನ್ನ ಪ್ರಾಪ್ತಿಯನ್ನೂ, ನನ್ನ ಸಾದೃಶ್ಯವನ್ನೂ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ |
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥6॥

ಎಲೈ ಕೌಂತೇಯನೇ, ಯಾವ ಯಾವ ವಸ್ತುವನ್ನು ಸ್ಮರಿಸಿ ಕೊನೆಯಲ್ಲಿ ದೇಹವನ್ನು ತ್ಯಜಿಸುತ್ತಾನೆಯೋ ಅಂತಹದೇ ವಸ್ತುಗಳ (ಅಂತಹ ಜೀವರ) ದೇಹಗಳನ್ನು ಪಡೆಯುತ್ತಾನೆ. ಆದ್ದರಿಂದ ಯಾವಾಗಲೂ ಪರಮಾತ್ಮನ ಚಿಂತನೆಯಿಂದ ಮನಸ್ಸನ್ನು ಒಳ್ಳೆಯ ಸಂಸ್ಕಾರವುಳ್ಳದ್ದಾಗಿ ಮಾಡಬೇಕು.

ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ |
ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥7॥

ಆದ್ದರಿಂದ ಎಲ್ಲ ಕಾಲದಲ್ಲಿಯೂ ನನ್ನನ್ನು ಸ್ಮರಿಸು, ಯುದ್ಧವನ್ನು ಮಾಡು. ಮನೋಬುದ್ಧಿಗಳನ್ನು ನನ್ನಲ್ಲಿ ಅರ್ಪಿಸಿದ ನೀನು ನನ್ನನ್ನೇ ಹೊಂದುವಿ, ಇದರಲ್ಲಿ ಸಂಶಯವಿಲ್ಲ.

ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ |
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥8॥

ಎಲೈ ಪಾರ್ಥನೇ, ಅಭ್ಯಾಸರೂಪವಾದ ಉಪಾಯವನ್ನು ಹೊಂದಿದ, ಬೇರೆ ವಿಷಯಕ್ಕೆ ಹೋಗದಿರುವ ಮನಸ್ಸಿನಿಂದ ತನ್ನ ಯೋಗ್ಯತೆಗೆ ಅನುಗುಣವಾಗಿ ಚಿಂತನೆಯನ್ನು ಮಾಡುವವನು ದಿವ್ಯನಾದ ಪರಮಪುರುಷನನ್ನು ಹೊಂದುತ್ತಾನೆ.

ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ ಯಃ |
ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ ॥9॥
ಪ್ರಯಾಣಕಾಲೇ ಮನಸಾಽಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ |
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥10॥

ಸರ್ವಜ್ಞನೂ, ಅನಾದಿನಿತ್ಯನೂ, ಸರ್ವನಿಯಾಮಕನೂ, ಅಣುವಿಗಿಂತ ಅಣುವಾದವನೂ, ಎಲ್ಲವನ್ನೂ ಅನುಗ್ರಹಿಸುವವನೂ, ತರ್ಕಕ್ಕೆ ನಿಲುಕದವನೂ, ಉದಯಿಸುವ ಸೂರ್ಯನ ಬಣ್ಣವನ್ನು ಹೊಂದಿದವನೂ, ಪ್ರಕೃತಿಗಿಂತಲೂ ಶ್ರೇಷ್ಠನಾದವನೂ ಆದ ಅವನನ್ನು ದೇಹತ್ಯಾಗ ಕಾಲದಲ್ಲಿ ಯಾವನು ನಿಶ್ಚಲವಾದ ಮನಸ್ಸಿನಿಂದ ಭಕ್ತಿಯಿಂದಲೂ ಮತ್ತು ಯೋಗಬಲದಿಂದಲೂ ಕೂಡಿದವನಾಗಿ ಸ್ಮರಣೆ ಮಾಡುತ್ತಾ ಹುಬ್ಬುಗಳ ಮಧ್ಯದಲ್ಲಿ ಪ್ರಾಣವಾಯುವನ್ನು ಆಕರ್ಷಿಸಿ, ಚೆನ್ನಾಗಿ ಸ್ಥಾಪಿಸಿ (ಶ್ವಾಸ ನಿರೋಧವನ್ನು ಮಾಡಿ) ದೇಹವನ್ನು ತ್ಯಾಗ ಮಾಡುತ್ತಾನೆಯೋ ಅವನು ಆ ದಿವ್ಯನಾದ ಶ್ರೇಷ್ಠನಾದ ಪುರುಷನನ್ನು ಹೊಂದುತ್ತಾನೆ.

ಯದಕ್ಷರಂ ವೇದವಿದೋ ವದಂತಿ
ವಿಶಂತಿ ಯದ್ ಯತಯೋ ವೀತರಾಗಾಃ |
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥11॥

ವೇದವನ್ನು ತಿಳಿದವರು ಯಾವುದನ್ನು ಅಕ್ಷರ ಎಂದು ಹೇಳುತ್ತಾರೆಯೋ, ರಾಗ ರಹಿತರಾದ ಯತಿಗಳು ಯಾವುದನ್ನು ಪ್ರವೇಶ ಮಾಡುತ್ತಾರೆಯೋ, ಯಾವುದನ್ನು ಬಯಸಿ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ ಅಂತಹ ಗಮ್ಯವಾದ ವಸ್ತುವನ್ನು ನಿನಗೆ ಸಂಕ್ಷೇಪವಾಗಿ ಹೇಳುವೆನು.

ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ |
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥
ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ |
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥13॥

ಎಲ್ಲ ದ್ವಾರಗಳನ್ನೂ ವಾಯುಸಂಚಾರವಿಲ್ಲದಂತೆ ನಿಯಂತ್ರಿಸಿ, ಮನಸ್ಸನ್ನು ಸರ್ವಸಂಹಾರಕನಾದುದರಿಂದ ಹೃದ್ ನಾಮಕನಾದ ಪರಮಾತ್ಮನಲ್ಲಿ ನೆಲೆಸಿ, ತನ್ನ ಪ್ರಾಣವಾಯುವನ್ನು ಶಿರಸ್ಸಿನಲ್ಲಿ ತೆಗೆದುಕೊಂಡು ಹೋಗಿ ನಿಲ್ಲಿಸಿ, ಯೋಗಧಾರಣೆಯನ್ನು ಮಾಡಿ, ಓಂಕಾರವನ್ನು ಉಚ್ಚರಿಸುತ್ತಾ, ಓಂಕಾರ ಪ್ರತಿಪಾದ್ಯನಾದ ಬ್ರಹ್ಮನಾದ ನನ್ನನ್ನು ಸ್ಮರಣೆ ಮಾಡುತ್ತಾ, ದೇಹವನ್ನು ತ್ಯಜಿಸಿ ಯಾವನು ಪ್ರಯಾಣ ಮಾಡುತ್ತಾನೆಯೋ ಅವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.

ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ |
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥14॥

ಎಲೈ ಪಾರ್ಥನೇ, ಯಾವನು ತನ್ನ ಮನಸ್ಸಿನಲ್ಲಿ ಇನ್ನೊಂದು ವಿಷಯವನ್ನು ಚಿಂತಿಸದೆ ನಿತ್ಯವೂ ನನ್ನನ್ನೇ ಸ್ಮರಿಸುತ್ತಾನೆಯೋ ಅಂತಹ ನಿತ್ಯಯೋಗವುಳ್ಳ ಯೋಗಿಗೆ ನಾನು ಸುಲಭನಾದವನು.

ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ |
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥15॥

ಮಹಾತ್ಮರಾದವರು ಶ್ರೇಷ್ಠವಾದ ಸಿದ್ಧಿಯನ್ನು ಪಡೆದು ನನ್ನನ್ನು ಹೊಂದಿ ದುಃಖಕ್ಕೆ ಆಶ್ರಯವೂ ಮತ್ತು ಅನಿತ್ಯವೂ ಆದ ಪುನರ್ಜನ್ಮವನ್ನು ಪಡೆಯುವುದಿಲ್ಲ.

ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ |

ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥16॥
ಮಹಾಮೇರುಪರ್ವತದ ಮೇಲಿರುವ ಬ್ರಹ್ಮಸದನ ಪರ್ಯಂತವಾಗಿ ಇರುವ ಲೋಕಗಳು ಪುನರಾವರ್ತಿಯುಳ್ಳ ಸಂಸಾರಿಗಳಿಂದ ಕೂಡಿರುತ್ತವೆ. ಅಲ್ಲಿ ಮುಕ್ತರು ಇರುವುದಿಲ್ಲ. ಅದಕ್ಕಿಂತ ಮೇಲೆ ಮುಕ್ತರೂ ಸಂಚರಿಸುತ್ತಾರೆ ಮತ್ತು ಸಂಸಾರಿಗಳೂ ಇರುತ್ತಾರೆ. ತಮ್ಮ ಮುಕ್ತಲೋಕದಲ್ಲಿ ಮಾತ್ರ ಮುಕ್ತರು ಮಾತ್ರ ಇರುತ್ತಾರೆ. ಎಲ್ಲೈ ಕೌಂತೇಯನೇ, ನನ್ನನ್ನು ಹೊಂದಿದ ಮೇಲೆ ಪುನರ್ಜನ್ಮವು ಇರುವುದಿಲ್ಲ.
ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ |
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥17॥
ಅಹೋರಾತ್ರಿಗಳನ್ನು ತಿಳಿದ ಜ್ಞಾನಿ ಜನರು ಬ್ರಹ್ಮದೇವರ ಹಗಲನ್ನು ಒಂದು ಸಹಸ್ರ ಚತುರ್ಯುಗಗಳ ಪರ್ಯಂತವೆಂದು ತಿಳಿಯುತ್ತಾರೆ. ರಾತ್ರಿಯನ್ನೂ ಸಹ ಚತುರ್ಯುಗ ಸಹಸ್ರ ಪರ್ಯಂತವಾದುದು ಎಂದು ತಿಳಿಯುತ್ತಾರೆ.
ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ |
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥18॥
ಬ್ರಹ್ಮದೇವರ ಹಗಲು ಉಂಟಾದಾಗ ಎಲ್ಲ ಜೀವರು ಅವ್ಯಕ್ತವಾದ ಪ್ರಕೃತಿಯಿಂದ ಪ್ರಾಕೃತವಾದ ದೇಹವುಳ್ಳವರಾಗಿ ಜನಿಸುತ್ತಾರೆ. ರಾತ್ರಿಯು ಉಂಟಾದಾಗ ಅಲ್ಲಿಯೇ ಅವ್ಯಕ್ತ ತತ್ತ್ವದಲ್ಲಿ ಮತ್ತು ಅವ್ಯಕ್ತನಾಮಕ ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾರೆ.
ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ |
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥19॥
ಈ ಚರಾಚರ ಜೀವಸಮುದಾಯವು ಪುನಃ ಪುನಃ ಹುಟ್ಟಿ ನಾಶವನ್ನು ಹೊಂದುತ್ತದೆ. ಎಲ್ಲೈ ಪಾರ್ಥನೇ, ಹಗಲಿನಲ್ಲಿ ಜನಿಸುತ್ತದೆ ಮತ್ತು ರಾತ್ರಿಯು ಉಂಟಾದಾಗ ವಿಷ್ಣುವಶವಾಗಿ ಲಯವನ್ನು ಹೊಂದುತ್ತದೆ. (ಸೃಷ್ಟಿ-ಪ್ರಳಯಗಳ ಅವಿಚ್ಛೇದವು ಭಗವಂತನ ಮಹಾಮಹಿಮೆ ಎಂದು ತಾತ್ಪರ್ಯ).
ಪರಸ್ತಸ್ಮಾತ್ ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ |
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥20॥
ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ |
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥21॥
ಆ ಭೂತಗ್ರಾಮಕ್ಕಿಂತಲೂ ಭಿನ್ನನಾಗಿ ಉತ್ತಮನಾಗಿರುವ ಪರಮಾತ್ಮನೆಂಬ ವಸ್ತುವೇನಿದೆಯೋ ಅದು ಅವ್ಯಕ್ತತತ್ತ್ವಕ್ಕಿಂತಲೂ ಅವ್ಯಕ್ತವಾದುದು. ವೇದಪ್ರತಿಪಾದ್ಯವಾದ ಆ ತತ್ತ್ವವು ಎಲ್ಲ ಭೂತಗಳು ನಾಶವನ್ನು ಹೊಂದಿದರೂ ತಾನು ನಾಶವನ್ನು ಹೊಂದುವುದಿಲ್ಲ. ಅವನನ್ನು ಅವ್ಯಕ್ತ ಎಂದೂ, ಅಕ್ಷರ ಎಂದೂ, ಪರಮಾಗತಿ ಎಂದೂ ಕರೆಯುತ್ತಾರೆ. ಎಲ್ಲೈ ಅರ್ಜುನನೇ, ಯಾವುದನ್ನು ಹೊಂದಿ ಪುನಃ ಹಿಂದಿರುಗುವುದಿಲ್ಲವೋ ಅದು ನನ್ನ ಶ್ರೇಷ್ಠವಾದ ಭವನ.
ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ |
ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥22॥
ಎಲ್ಲೈ ಪಾರ್ಥನೇ, ಯಾವನೊಳಗೆ ಚರಾಚರ ಜೀವರ ಮತ್ತು ಜಡಗಳ ಸಮುದಾಯವಿದೆಯೋ, ಯಾವನು ಈ ಎಲ್ಲ ಜಗತ್ತನ್ನು ವ್ಯಾಪಿಸಿದ್ದಾನೆಯೋ ಅಂತಹ ಪರಮಪುರುಷನು ಅನ್ಯವಿಷಯವಲ್ಲದ ಮುಖ್ಯವಾದ ಭಕ್ತಿಯಿಂದ ಮಾತ್ರ ಹೊಂದಲ್ಪಡುವವನು.
ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ |
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥23॥
ಎಲ್ಲೈ ಭರತಶ್ರೇಷ್ಠನೇ, ಯಾವ ಕಾಲದಲ್ಲಿ ದೇಹತ್ಯಾಗವನ್ನು ಮಾಡುವ ಯೋಗಿಯು ಪುನಃ ಆವೃತ್ತಿಯನ್ನು ಅಥವಾ ಅನಾವೃತ್ತಿಯನ್ನು ಹೊಂದುತ್ತಾನೆಯೋ ಆ ಕಾಲವನ್ನು ಹೇಳುವೆನು.
ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ |
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥24॥
ಅಗ್ನಿದೇವತೆ, ಜ್ಯೋತಿಸ್ ಎಂದರೆ ಅರ್ಚಿನಾಮಕ ದೇವತೆ, ಅಹರಭಿಮಾನಿ ದೇವತೆ, ಶುಕ್ಲಪಕ್ಷಾಭಿಮಾನಿ ದೇವತೆ, ಉತ್ತರಾಯಣಾಭಿಮಾನಿ ದೇವತೆ, ಈ ಕ್ರಮದಲ್ಲಿ ಪ್ರಯಾಣ ಮಾಡಿದ ಬ್ರಹ್ಮಜ್ಞಾನಿಗಳಾದ ಜನರು ಬ್ರಹ್ಮನನ್ನೇ ಹೊಂದುತ್ತಾರೆ.
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ |
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥25॥
ಧೂಮಾಭಿಮಾನಿದೇವತೆ, ರಾತ್ರ್ಯಭಿಮಾನಿ ದೇವತೆ, ಕೃಷ್ಣಪಕ್ಷಾಭಿಮಾನಿ ದೇವತೆ, ದಕ್ಷಿಣಾಯನಾಭಿಮಾನಿ ದೇವತೆ, ಚಂದ್ರ, ಈ ಕ್ರಮದಲ್ಲಿ ಪ್ರಯಾಣ ಮಾಡಿದ ಯೋಗಿಗಳು ಚಂದ್ರನಿಂದ ಹಿಂದಿರುಗುತ್ತಾರೆ.
ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ |
ಏಕಯಾ ಯಾತ್ಯನಾವೃತ್ತಿಮನ್ಯಯಾಽಽವರ್ತತೇ ಪುನಃ ॥26॥
ಈ ಶುಕ್ಲ-ಕೃಷ್ಣ ಗತಿಗಳು ಜಗತ್ತಿಗೆ ಶಾಶ್ವತವಾದವುಗಳು ಎಂದು ಹೇಳಲ್ಪಡುತ್ತವೆ. ಒಂದು ಗತಿಯಿಂದ ಅನಾವೃತ್ತಿಯನ್ನೂ, ಇನ್ನೊಂದು ಗತಿಯಿಂದ ಪುನರಾವೃತ್ತಿಯನ್ನೂ ಜೀವರು ಹೊಂದುತ್ತಾರೆ.
ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ |
ತಸ್ಮಾತ್ ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥27॥
ಎಲ್ಲೈ ಪಾರ್ಥನೇ, ಈ ಎರಡು ಮಾರ್ಗಗಳನ್ನು ತಿಳಿದ ಯಾವ ಯೋಗಿಯೂ ಮೋಹಕ್ಕೆ ಒಳಗಾಗುವುದಿಲ್ಲ. ಆದ್ದರಿಂದ ಎಲ್ಲೈ ಅರ್ಜುನನೇ, ಎಲ್ಲ ಕಾಲಗಳಲ್ಲಿಯೂ ಯೋಗಯುಕ್ತನಾಗಿರು.

ವೇದೇಷು ಯಜ್ಞೇಷು ತಪಃಸು ಚೈವ
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ |
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ
ಪರಂ ಸ್ಥಾನಮುಪೈತಿ ಚಾದ್ಯಮ್ ||28||
ವೇದಗಳಲ್ಲಿ, ಯಜ್ಞಗಳಲ್ಲಿ, ತಪಸ್ಸುಗಳಲ್ಲಿ ಮತ್ತು ದಾನಗಳಲ್ಲಿ ಯಾವ ಪುಣ್ಯಫಲವು ಹೇಳಲ್ಪಟ್ಟಿದೆಯೋ ಯೋಗಿಯಾದವನು ತನ್ನ ಯೋಗ ಸಾಮರ್ಥ್ಯದಿಂದ, ಭಗವಂತನ ಅನುಗ್ರಹದಿಂದ ಅವೆಲ್ಲವನ್ನೂ ಮೀರಿ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಿಂಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ಸಪ್ತದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಭಗವದ್ಗೀತಾ ರಾಜಗುಹ್ಯಯೋಗ
(ಭಗವನ್ಮಹಿಮಾವರ್ಣನರೂಪವಾದ ಭಕ್ತಿಯೋಗ).
ಶ್ರೀಭಗವಾನ್
ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ |
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ||1||
ಶ್ರೀಭಗವಾನ್ ಅಸೂಯಾ ರಹಿತನಾದ ನಿನಗೆ ಅತ್ಯಂತ ರಹಸ್ಯವಾದ ವಿಜ್ಞಾನ ಸಹಿತವಾದ ಈ ಜ್ಞಾನವನ್ನು ಉಪದೇಶಿಸುವೆನು. ಅದನ್ನು ತಿಳಿದು ನೀನು ಅಶುಭಗಳಿಂದ ನಿರ್ಮುಕ್ತನಾಗುವಿ.
ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ |
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ||2||
ಇದು ವಿದ್ಯೆಗಳಲ್ಲಿ ಶ್ರೇಷ್ಠವಾದುದು, ರಹಸ್ಯಗಳಲ್ಲಿ ಶ್ರೇಷ್ಠವಾದುದು, ಪವಿತ್ರವಾದುದು, ಉತ್ತಮವಾದುದು, ಯೋಗಿಗಳಿಂದ ಪ್ರತ್ಯಕ್ಷವಾಗಿ ತಿಳಿಯಲ್ಪಡುವುದು, ಧರ್ಮಸಾಧಕವಾದುದು, ನಾಶರಹಿತವಾದುದು ಮತ್ತು ಸುಲಭವಾಗಿ ಮಾಡಬಹುದಾದುದು.
ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ |
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ||3||
ಎಲೈ ಪರಂತಪನೇ, ನಾನು ಮುಂದೆ ಹೇಳಲಿರುವ ಈ ಧರ್ಮದಲ್ಲಿ ಯಾವ ಪುರುಷರಿಗೆ ಶ್ರದ್ಧೆ ಇಲ್ಲವೋ ಅವರು ನನ್ನನ್ನು ಹೊಂದದೆ ಮೃತ್ಯುರೂಪವಾದ ಸಂಸಾರ ಮಾರ್ಗದಲ್ಲಿಯೇ ಹಿಂದಕ್ಕೆ ಬರುತ್ತಾರೆ.
ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ |
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ||4||
ಅವ್ಯಕ್ತ ಸ್ವರೂಪವುಳ್ಳ ನನ್ನಿಂದ ಈ ಜಗತ್ತು ವ್ಯಾಪ್ತವಾಗಿದೆ. ನನ್ನಲ್ಲಿ ಎಲ್ಲ ಜಗತ್ತೂ ಆಶ್ರಯಿಸಿಕೊಂಡಿದೆ. ನಾನು ಅವುಗಳನ್ನು ಆಶ್ರಯಿಸಿಲ್ಲ.
ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ |
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ||5||
ನನ್ನಲ್ಲಿ ಎಲ್ಲ ಜಗತ್ತು ಆಶ್ರಯಿಸಿಕೊಂಡಿದ್ದರೂ ನನ್ನಲ್ಲಿ ಅವು ಇಲ್ಲ (ಯಾವ ವಿಕಾರವನ್ನೂ ಮಾಡುವುದಿಲ್ಲ). ನನ್ನ ಅಸಂಗತ್ವರೂಪವಾದ ಮಹಿಮೆಯ ಸಾಮರ್ಥ್ಯವನ್ನು ನೋಡು. ನಾನು ಎಲ್ಲ ಭೂತಗಳನ್ನು ಧರಿಸಿದ್ದೇನೆ. ಆದರೂ ಭೂತಗಳಲ್ಲಿ ಇಲ್ಲ. ಚೇತನಾತ್ಮಕವಾದ ನನ್ನ ದೇಹವೂ ಸಹ ಜಗತ್ತನ್ನು ಸೃಷ್ಟಿಸುವಂತಹದು.
ಯಥಾಽಽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ |
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ||6||
ಹೇಗೆ ಮಹಾವಾಯುವು ಯಾವಾಗಲೂ ಸರ್ವತ್ರ ಆಕಾಶದಲ್ಲಿದ್ದರೂ ಯಾವ ಪದಾರ್ಥದ ಗುಣಗಳಿಂದಲೂ ಲೇಪ ಹೊಂದುವುದಿಲ್ಲವೋ, ಅದರಂತೆ ಎಲ್ಲ ಭೂತಗಳೂ ನನ್ನಲ್ಲಿ ಇವೆ ಎಂದು ತಿಳಿಯುವವನಾಗು.
ವಾಯುವಿನಲ್ಲಿರುವ ಶೈತ್ಯ, ಸೌರಭ ಮೊದಲಾದ ಗುಣಗಳು ಅದರಲ್ಲಿರುವ ಜಲ, ಪೃಥಿವಿ ಕಣಗಳದೇ ಹೊರತು ವಾಯುವಿನದಲ್ಲ. ಆದ್ದರಿಂದ ವಾಯುವು ನಿರ್ಲಿಪ್ತವಾಗಿರುತ್ತದೆ.
ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ |
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ||7||
ಎಲೈ ಕೌಂತೇಯನೇ, ಎಲ್ಲಾ ಜೀವರು ಕಲ್ಪಕ್ಷಯವಾದಾಗ ನನಗೆ ಅಧೀನವಾದ ಪ್ರಕೃತಿಯನ್ನು ಪ್ರವೇಶಿಸುತ್ತಾರೆ. ಕಲ್ಪದ ಆದಿಯಲ್ಲಿ ಪುನಃ ಆ ಜೀವರನ್ನು ನಾನು ದೇಹ ಸಂಬಂಧದಿಂದ ಸೃಷ್ಟಿ ಮಾಡುತ್ತೇನೆ.
ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ |
ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ||8||
ತ್ರಿಗುಣಾತ್ಮಕವಾದ ಪ್ರಕೃತಿಯನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ಅಸ್ವತಂತ್ರವಾದ ಈ ಸಮಸ್ತವಾದ ಚರಾಚರ ಜೀವಸಮುದಾಯವನ್ನು ನಾನು ಪುನಃ ಪುನಃ ಸೃಷ್ಟಿ ಮಾಡುತ್ತೇನೆ.
ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ |

ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥9॥
ಮಯಾಽಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ |
ಹೇತುನಾಽನೇನ ಕೌಂತೇಯ ಜಗದ್ವಿಪರಿವರ್ತತೇ ॥10॥
ಅಧ್ಯಕ್ಷನಾದ ನನ್ನಿಂದ ಪ್ರಕೃತಿಯು ಈ ಚರಾಚರ ಜಗತ್ತನ್ನು ಪ್ರಸವಿಸುತ್ತದೆ. ಅಧ್ಯಕ್ಷನಾದ ನಾನು ಮತ್ತು ಪ್ರಸವಕರ್ತ್ರಿಯಾದ ಪ್ರಕೃತಿಯು ನಿತ್ಯವಾಗಿರುವುದರಿಂದ ಎಲೈ ಕೌಂತೇಯನೇ, ಈ ಜಗತ್ತು ಅನಾದ್ಯನಂತ ಕಾಲದಲ್ಲಿಯೂ ಉಂಟಾಗುತ್ತಿರುತ್ತದೆ.
ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ |
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥11॥
ಮನುಷ್ಯರ ಶರೀರದಂತೆ ಕಾಣುವ ಶರೀರವನ್ನು ಧರಿಸಿದ ನನ್ನನ್ನು ಮೂಢರು ನನ್ನ ಸರ್ವೈಶ್ವರ್ಯಾದಿ ಶ್ರೇಷ್ಠ ಮಹಿಮೆಯನ್ನು ತಿಳಿಯದೆ ಅವಜ್ಞೆ ಮಾಡುತ್ತಾರೆ.
ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ |
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥12॥
ಅವರು ರಾಕ್ಷಸಸ್ವಭಾವ ಅಥವಾ ಆಸುರಸ್ವಭಾವವನ್ನು ಹೊಂದಿದವರಾಗಿ ವ್ಯರ್ಥವಾದ ಆಸೆ, ವ್ಯರ್ಥವಾದ ಕರ್ಮಗಳು, ವ್ಯರ್ಥವಾದ ಜ್ಞಾನವನ್ನು ಹೊಂದಿ ವ್ಯರ್ಥವಾದ ಚೇತಸ್ಸನ್ನು ಹೊಂದಿರುತ್ತಾರೆ.
ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ |
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥13॥
ಎಲೈ ಪಾರ್ಥನೇ, ಮಹಾತ್ಮರಾದರೂ ದೈವಸ್ವಭಾವವನ್ನು ಹೊಂದಿದವರಾಗಿ ನನ್ನನ್ನು ಸರ್ವಜಗತ್ಸೃಷ್ಟಿಕರ್ತನೂ ಮತ್ತು ನಾಶರಹಿತನೂ ಎಂದು ತಿಳಿದು ಅನನ್ಯವಾದ ಮನಸ್ಸಿನಿಂದ ನನ್ನನ್ನು ಭಜಿಸುತ್ತಾರೆ.
ಈ ಶ್ಲೋಕದಲ್ಲಿ ರಾಕ್ಷಸೀಂ ಪ್ರಕೃತಿಂ ಮತ್ತು ದೈವೀಂ ಪ್ರಕೃತಿಂ ಎಂದು ಹೇಳುವ ಶ್ರೀಕೃಷ್ಣನು ಜೀವರಲ್ಲಿ ಸ್ವಾಭಾವಿಕವಾಗಿಯೇ ದ್ವೈವಿಧ್ಯವಿದೆ ಎಂದು ಹೇಳುತ್ತಾನೆ.
ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ |
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥14॥
ಅಂತಹ ಮಹಾತ್ಮರು ಸತತವಾಗಿ ನನ್ನ ಕೀರ್ತನೆಯನ್ನು ಮಾಡುತ್ತಾ, ವ್ರತಗಳನ್ನು ಧರಿಸಿ, ನನ್ನ ಅನುಗ್ರಹಕ್ಕಾಗಿ ಪ್ರಯತ್ನವನ್ನು ಮಾಡುತ್ತಾ, ನನಗೆ ನಮಸ್ಕಾರವನ್ನು ಮಾಡುತ್ತಾ, ನಿತ್ಯವೂ ಭಕ್ತಿಯಿಂದ ಯುಕ್ತರಾಗಿ ನನ್ನ ಉಪಾಸನೆಯನ್ನು ಮಾಡುತ್ತಾರೆ.
ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ |
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥15॥
ಇನ್ನು ಕೆಲವರು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸುತ್ತಾ ಉಪಾಸನೆಯನ್ನು ಮಾಡುತ್ತಾರೆ. ನನ್ನ ರೂಪ-ಗುಣಕ್ರಿಯಾದಿಗಳಲ್ಲಿ ಅಭೇದವನ್ನೂ, ಜೀವಜಡಾತ್ಮಕವಾದ ಪ್ರಪಂಚದಿಂದ ಭೇದವನ್ನೂ ತಿಳಿದು ಶ್ರವಣ-ಮನನ-ನಿಧಿಧ್ಯಾಸನಗಳಿಂದ ಅನೇಕ ಪ್ರಕಾರಗಳಿಂದ ಸರ್ವತ್ರಸರ್ವಾವಯವವುಳ್ಳ ನನ್ನನ್ನು ಉಪಾಸನೆ ಮಾಡುತ್ತಾರೆ.
ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ |
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥16॥
ನಾನೇ ಕ್ರತು, ನಾನೇ ಯಜ್ಞ, ನಾನೇ ಪಿತೃನ್ನವಾದ ಸ್ವಧಾ, ನಾನೇ ಔಷಧ, ನಾನೇ ಮಂತ್ರ, ನಾನೇ ಆಜ್ಯ, ನಾನೇ ಅಗ್ನಿ, ನಾನೇ ಹುತ. (ಕ್ರತು ಮೊದಲಾದವುಗಳೆಲ್ಲವೂ ನನ್ನಿಂದ ನಿಯತವಾಗಿವೆ, ನಾನು ಅವುಗಳಲ್ಲಿ ಸನ್ನಿಹಿತವಾಗಿದ್ದೇನೆ ಎಂದು ತಾತ್ಪರ್ಯ).
ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ |
ವೇದ್ಯಂ ಪವಿತ್ರಮೋಂಕಾರ ಋಕ್‌ಸಾಮ ಯಜುರೇವ ಚ ॥17॥
ನಾನು ಈ ಜಗತ್ತಿನ ತಂದೆ, ನಾನು ತಾಯಿ, ನಾನೇ ಪೋಷಕನಾದವನು, ನಾನೇ ಪಿತಾಮಹನಂತೆ ಪೂಜ್ಯನಾದವನು. ನಾನೇ ಪವಿತ್ರವಾದ ವೇದ್ಯನಾದವನು. ನಾನೇ ಓಂಕಾರವಾಚ್ಯನಾದವನು. ಪೂಜನೀಯನಾದ್ದರಿಂದ ನಾನು ಋಕ್ ಎನಿಸಿಕೊಳ್ಳುತ್ತೇನೆ. ಎಲ್ಲ ರೂಪಗಳಲ್ಲಿಯೂ ಸಮನಾಗಿರುವುದರಿಂದ ಸಾಮ. ಯಜ್ಞಗಳಲ್ಲಿ ಪೂಜ್ಯನಾದುದರಿಂದ ಯಜುಸ್ ಎನಿಸಿಕೊಳ್ಳುತ್ತೇನೆ.
ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ |
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥18॥
ನಾನೇ ಮುಮುಕ್ಷುಗಳಿಂದ ಗಮ್ಯನಾದವನು, ನಾನೇ ಪೋಷಕನಾದವನು, ಎಲ್ಲವನ್ನೂ ನೇರವಾಗಿ ನೋಡುವವನು, ಎಲ್ಲರಿಗೂ ಆಶ್ರಯನಾದವನು, ಭಯದಿಂದ ರಕ್ಷಿಸುವವನು, ಅನಿಮಿತ್ತವಾಗಿ ಉಪಕಾರವನ್ನು ಮಾಡುವವನು, ಸೃಷ್ಟಿ-ಸಂಹಾರ- ಸ್ಥಿತಿಗಳಿಗೆ ಕಾರಣನಾದವನು, ಎಲ್ಲವನ್ನೂ ಧರಿಸಿರುವವನು, ಶಾಶ್ವತನಾದವನು ಮತ್ತು ಈ ಜಗತ್ತಿಗೆ ವ್ಯಂಜಕನಾದ ಬೀಜದಂತಿರುವವನು.
ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ |
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥19॥
ಎಲೈ ಅರ್ಜುನನೇ, ನಾನೇ ಸೂರ್ಯನಲ್ಲಿ ನಿಂತು ತಾಪವನ್ನು ಉಂಟುಮಾಡುವವನು. ನಾನು ಮೇಘಚಕ್ರದಲ್ಲಿದ್ದು ಮಳೆಯನ್ನು ಸುರಿಸುತ್ತೇನೆ ಮತ್ತು ನಿಲ್ಲಿಸುತ್ತೇನೆ. ಪ್ರಳಯಕಾಲದಲ್ಲಿ ಎಲ್ಲವನ್ನೂ ಸಂಹಾರ ಮಾಡುವುದರಿಂದ ಮೃತ್ಯು. ಭಕ್ತರಿಗೆ ಮರಣವನ್ನು ಪರಿಹಾರ ಮಾಡುವುದರಿಂದ ಅಮೃತ. ಕಾರ್ಯಸಮೂಹವೆಲ್ಲವೂ ನಾನೇ. ಕಾರಣ ಸಮೂಹವೂ ನಾನೇ. (ಕಾರ್ಯಕಾರಣ ಸಮೂಹಗಳಲ್ಲಿ ಇದ್ದು ನಿಯಂತ್ರಿಸುವವನು ನಾನೇ ಎಂದು ಅಭಿಪ್ರಾಯ).
ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ;
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ |

ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಂ
ಅಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥20॥
ಕೇವಲ ಋಕ್-ಯಜುಸ್-ಸಾಮ ವಿದ್ಯೆಗಳಲ್ಲಿ ನಿರತರಾದ ಸೋಮಪಾನವನ್ನು ಮಾಡುವವರು ಯಜ್ಞಗಳಿಂದ ನನ್ನನ್ನು ಪೂಜಿಸಿ, ಪಾಪಗಳಿಂದ ನಿರ್ಮುಕ್ತರಾಗಿ ಸ್ವರ್ಗವನ್ನು ಪ್ರಾರ್ಥಿಸುತ್ತಾರೆ. ಅವರು ಅದರಿಂದ ಉಂಟಾದ ಪುಣ್ಯವನ್ನು ಹೊಂದಿ ಇಂದ್ರಲೋಕವನ್ನು ಸೇರಿ ಸ್ವರ್ಗದಲ್ಲಿ ದಿವ್ಯವಾದ ದೇವಭೋಗಗಳನ್ನು ಭೋಗಿಸುತ್ತಾರೆ.
ತೇ ತಂ ಭುಕತ್ವ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ |
ಏವಂ ತ್ರಯೀಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ॥21॥
ವಿಶಾಲವಾದ ಸ್ವರ್ಗಲೋಕದಲ್ಲಿ ಅವರು ಸುಖಗಳನ್ನು ಅನುಭವಿಸಿ ತಮ್ಮ ಪುಣ್ಯವು ಕ್ಷಯವಾದ ಮೇಲೆ ಪುನಃ ಮನುಷ್ಯಲೋಕಕ್ಕೆ ಬರುತ್ತಾರೆ. ಹೀಗೆ ಮೂರು ವೇದಗಳಲ್ಲಿ ಮೇಲೆ ಮಾತ್ರ ತೋರುವ ಧರ್ಮಗಳನ್ನು ಮಾತ್ರ ತಿಳಿದು ಅನುಷ್ಠಾನ ಮಾಡುವವರು ಭೋಗಗಳ ಆಸೆಯಿಂದ ಇಂತಹ ಗಮನಾಗಮನವನ್ನು ಪಡೆಯುತ್ತಾರೆ.
ಯಜ್ಞಗಳನ್ನು ಮಾಡಿ ಕೊನೆಯಲ್ಲಿ ಅದನ್ನು ವಿಷ್ಣುವಿಗೆ ಅರ್ಪಣೆ ಮಾಡಿದರೂ ಅವರಿಗೆ ಭೋಗಗಳಲ್ಲಿ ಆಸಕ್ತಿ ಇರುವುದರಿಂದ ಅವರು ಪುನಃ ಜನ್ಮವನ್ನು ಪಡೆದು, ಯಜ್ಞವನ್ನು ಮಾಡಿ ಸ್ವರ್ಗ ಮತ್ತು ಮನುಷ್ಯಲೋಕಗಳಲ್ಲಿಯೇ ತಿರುಗುತ್ತಿರುತ್ತಾರೆ ಎಂದು ಅಭಿಪ್ರಾಯ.
ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ |
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥22॥
ಯಾವ ಪುರುಷರು ಬೇರೆ ಏನನ್ನೂ ಚಿಂತಿಸದೇ ನನ್ನನ್ನೇ ಚೆನ್ನಾಗಿ ಉಪಾಸನೆ ಮಾಡುತ್ತಾರೆಯೋ ಅಂತಹ ನನ್ನಲ್ಲಿ ಯೋಗಯುಕ್ತರಾದ ಅವರ ಯೋಗಕ್ಷೇಮದ ಭಾರವನ್ನು ನಿತ್ಯವೂ ನಾನು ಧರಿಸುತ್ತೇನೆ.
ಯೇऽಪ್ಯನ್ಯದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ |
ತೇऽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥23॥
ಯಾವ ಅನ್ಯದೇವತೆಗಳ ಭಕ್ತರಿದ್ದಾರೆಯೋ ಅವರು ಅನ್ಯದೇವತೆಗಳ ಮೇಲಿನ ಶ್ರದ್ಧೆಯಿಂದ ಆ ದೇವತೆಗಳನ್ನು ಪೂಜಿಸಿದರೂ ಎಲೈ ಕೌಂತೇಯನೇ, ಅವರು ನನ್ನನ್ನೇ ವಿಧಿಪೂರ್ವಕವಲ್ಲದ ರೀತಿಯಲ್ಲಿ ಪೂಜಿಸುತ್ತಾರೆ.
ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥24॥
ನಾನು ಎಲ್ಲ ಯಜ್ಞಗಳ ಭೋಕ್ತೃ ಮತ್ತು ಸ್ವಾಮಿ. ನನ್ನನ್ನು ಸರ್ವಯಜ್ಞಭೋಕ್ತೃ ಎಂದೂ ಮತ್ತು ಪ್ರಭುವೆಂದೂ ಅವರು ತಿಳಿಯುವುದಿಲ್ಲ. ಆದ್ದರಿಂದ ಅವರು ತಮ್ಮ ಸ್ಥಾನವನ್ನು ಕಳೆದುಕೊಳ್ಳುತ್ತಾರೆ (ಈ ಜ್ಞಾನಶೂನ್ಯತೆಯನ್ನೇ ಹಿಂದಿನ ಶ್ಲೋಕದಲ್ಲಿ ಅವಿಧಿಪೂರ್ವಕಂ ಎಂದು ಹೇಳಿದ್ದಾರೆ).
ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ |
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋऽಪಿ ಮಾಮ್ ॥
ದೇವತೆಗಳನ್ನು ಉದ್ದೇಶಿಸಿ ವ್ರತವನ್ನು ಮಾಡುವವರು ದೇವತೆಗಳನ್ನು ಹೊಂದುತ್ತಾರೆ. ಅದರಂತೆ ಪಿತೃವ್ರತವನ್ನು ಮಾಡುವವರು ಪಿತೃಗಳನ್ನು ಹೊಂದುತ್ತಾರೆ. ಭೂತಗಳನ್ನು ಪೂಜಿಸುವವರು ಭೂತಗಳನ್ನು ಹೊಂದುತ್ತಾರೆ. ನನ್ನನ್ನು ಪೂಜಿಸುವವರು ನನ್ನನ್ನೇ ಹೊಂದುತ್ತಾರೆ.
ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ |
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥26॥
ಯಾವನು ಜಿತಚಿತ್ತನಾಗಿ ಭಕ್ತಿಯಿಂದ ನನಗೆ ಪತ್ರ, ಪುಷ್ಪ, ಫಲ, ಜಲಗಳನ್ನು ಅರ್ಪಿಸುತ್ತಾನೆಯೋ ಅವನ ಆ ಸಮರ್ಪಣೆಯನ್ನು ನಾನು ಸ್ವೀಕರಿಸುತ್ತೇನೆ.
ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥27॥
ಎಲೈ ಕೌಂತೇಯನೇ, ನೀನು ಏನು ಮಾಡುತ್ತೀಯೋ, ಏನು ತಿನ್ನುತ್ತೀಯೋ, ಏನು ಹೋಮವನ್ನು ಮಾಡುತ್ತೀಯೋ, ಏನು ದಾನವನ್ನು ಮಾಡುತ್ತೀಯೋ, ಏನು ತಪಸ್ಸನ್ನು ಮಾಡುತ್ತೀಯೋ, ಅದೆಲ್ಲವನ್ನೂ ನನಗೆ ಅರ್ಪಿಸು.
ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ |
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥28॥
ಹೀಗೆ ಮಾಡಿದರೆ ಕರ್ಮನಿಬಂಧನಗಳಾದ (ಕರ್ಮದಿಂದ ನಿಯಮೇನ ಉಂಟಾಗುವ) ಶುಭಾಶುಭಫಲಗಳಿಂದ ನಿರ್ಮುಕ್ತನಾಗುವಿ. ಕರ್ಮಗಳನ್ನು ಹರಿಯಲ್ಲಿ ಚೆನ್ನಾಗಿ ಅರ್ಪಿಸುವ ಇಂತಹ ಸಂನ್ಯಾಸ ಯೋಗದಿಂದ ಕೂಡಿದವನಾಗಿ ನೀನು ಮುಕ್ತನಾಗಿ ನನ್ನನ್ನು ಹೊಂದುವಿ.
ಸಮೋऽಹಂ ಸರ್ವಭೂತೇಷು ನ ಮೇ ದ್ವೇಷ್ಯೋऽಸ್ತಿ ನ ಪ್ರಿಯಃ |
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥
ನಾನು ಎಲ್ಲ ಜೀವರಾಶಿಗಳಿಗೂ ಸಮನಾದವನು. ಅವರವರು ಮಾಡಿದ ಪುಣ್ಯ- ಪಾಪ ಕರ್ಮಗಳನ್ನು ಮೀರಿ ನನಗೆ ಯಾರೂ ದ್ವೇಷ ವಿಷಯರೂ ಇಲ್ಲ, ಪ್ರೀತಿ ವಿಷಯರೂ ಇಲ್ಲ. ಯಾರು ನನ್ನನ್ನು ಭಕ್ತಿಯಿಂದ ಪೂಜಿಸುತ್ತಾರೋ, ಅವರು ನನ್ನಲ್ಲಿಯೇ ಇರುತ್ತಾರೆ.

ನಾನೂ ಅವರಲ್ಲಿ ಇರುತ್ತೇನೆ (ಯಾರು ನನ್ನನ್ನು ದ್ವೇಷ ಮಾಡುತ್ತಾರೋ ನಾನು ಅವರಲ್ಲಿ ಇಲ್ಲ, ಅವರೂ ನನ್ನಲ್ಲಿ ಇಲ್ಲ. ಆದ್ದರಿಂದಲೇ ಅರ್ಜುನಾದಿಗಳ ಸ್ವೀಕಾರ, ಕಂಸಾದಿಗಳ ವಧೆ ಎಂದು ಅಭಿಪ್ರಾಯ).
ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ |
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥30॥
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ |
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥31॥
ಬಹಳ ದುರಾಚಾರವನ್ನು ಮಾಡುತ್ತಿದ್ದರೂ, ಬೇರೆ ಯಾರನ್ನೂ ಭಜಿಸದೆ ನನ್ನನ್ನೇ ಭಜಿಸಿದರೆ ಅವನನ್ನು ಸಾಧು ಎಂದೇ ತಿಳಿಯಬೇಕು. ಅವನ ಜ್ಞಾನವು ಸರಿಯಾಗಿದೆ ಎಂದು ಅರ್ಥ. ಅವನು ಶೀಘ್ರವಾಗಿ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತವಾದ ಶಾಂತಿಯನ್ನೂ ಪಡೆಯುತ್ತಾನೆ. ಕೌಂತೇಯನೇ, ನನ್ನ ಭಕ್ತನು ಎಂದೂ ನಾಶವನ್ನು ಹೊಂದುವುದಿಲ್ಲ ಎಂದು ನೀನು ಪ್ರತಿಜ್ಞೆಯನ್ನು ಮಾಡು.
ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ |
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥32॥
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ |
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥33॥
ಎಲೈ ಪಾರ್ಥನೇ, ಪಾಪಯೋನಿಗಳಲ್ಲಿ ಜನಿಸಿದ ನನ್ನನ್ನು ಆಶ್ರಯಿಸಿದ ಸ್ತ್ರೀಯರೂ, ವೈಶ್ಯರೂ, ಶೂದ್ರರೂ ಸಹ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ. ಇನ್ನು ಪುಣ್ಯಶೀಲರೂ, ಭಕ್ತರೂ ಆದ ಬ್ರಾಹ್ಮಣರು, ಭಕ್ತರು, ರಾಜರ್ಷಿಗಳು ಸದ್ಗತಿಗಳನ್ನು ಹೊಂದುವುದರಲ್ಲಿ ಏನು ಹೇಳಬೇಕು. ಅನಿತ್ಯವೂ ಮತ್ತು ದುಃಖಪೂರಿತವೂ ಆದ ಈ ಲೋಕವನ್ನು ಹೊಂದಿ ನನ್ನನ್ನು ಭಜಿಸು.
ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥34॥
ನನ್ನಲ್ಲೇ ಮನಸ್ಸನ್ನಿಡು, ನನ್ನ ಭಕ್ತನಾಗು, ನನ್ನನ್ನು ಪೂಜಿಸು, ನನಗೆ ನಮಸ್ಕಾರವನ್ನು ಮಾಡು. ಹೀಗೆ ನನ್ನಲ್ಲಿಯೇ ಪರಾಯಣನಾಗಿದ್ದು ನಿನ್ನನ್ನು ನನ್ನಲ್ಲಿ ಯೋಜಿಸಿದರೆ ನನ್ನನ್ನೇ ಹೊಂದುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕತ್ರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆರಡನೆಯ ಅಧ್ಯಾಯ
ಭಗವದ್ಗೀತಾ ವಿಭೂತಿಯೋಗ.
ಶ್ರೀಭಗವಾನ್
ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ |
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥1॥
ಶ್ರೀಭಗವಾನ್ ಎಲೈ ಮಹಾಬಾಹುವೇ, ನಿನ್ನ ಮೇಲಿನ ಪ್ರೀತಿಯಿಂದ ನಿನ್ನ ಹಿತವನ್ನು ಬಯಸಿ, ನಿನಗೆ ಹೇಳಲಿರುವ ನನ್ನ ಶ್ರೇಷ್ಠವಾದ ಮಾತುಗಳನ್ನು ಪುನಃ ಕೇಳುವವನಾಗು.
ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ |
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥2॥
ಸುರಗಗಳಾಗಲೀ ಅಥವಾ ಮಹರ್ಷಿಗಳಾಗಲೀ ನನ್ನ ಪ್ರಭಾವವನ್ನು (ಸಾಮರ್ಥ್ಯವನ್ನು) ತಿಳಿದಿಲ್ಲ. ನಾನು ಎಲ್ಲಾ ದೇವತೆಗಳಿಗೂ, ಮಹರ್ಷಿಗಳಿಗೂ ಮೊದಲಿನವನು (ಜನಕನಾದವನು).
ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ |
ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥3॥
ಮನುಷ್ಯರಲ್ಲಿ ಯಾವನು ನನ್ನನ್ನು ಜನ್ಮರಹಿತನೆಂದೂ, ಅನಾದಿ ಎಂದೂ, ಸರ್ವಲೋಕ ಮಹೇಶ್ವರನೆಂದೂ ಯಾವ ಭ್ರಾಂತಿಯೂ ಇಲ್ಲದೆ ತಿಳಿಯುತ್ತಾನೆಯೋ ಅವನು ಸರ್ವಪಾಪದಿಂದಲೂ ನಿರ್ಮುಕ್ತನಾಗುತ್ತಾನೆ.
ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ |
ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥4॥
ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ |
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥5॥
ಬುದ್ಧಿ, ಜ್ಞಾನ, ಭ್ರಾಂತಿಯ ಅಭಾವ, ಕ್ಷಮೆ, ಸತ್ಯವಚನ, ಇಂದ್ರಿಯನಿಗ್ರಹ, ಭಗವನ್ನಿಷ್ಠೆ, ಸುಖ, ದುಃಖ, ಉತ್ಪತ್ತಿ, ನಾಶ, ಭಯ, ಅಭಯ, ಅಹಿಂಸೆ, ಸಮತ್ವ, ತೃಪ್ತಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ ಈ ಬಹುವಿಧವಾದ ಭಾವಗಳೆಲ್ಲವೂ ಜೀವರಿಗೆ ನನ್ನಿಂದಲೇ ಆಗುತ್ತವೆ.
ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ |
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥
ಹಿಂದಿನ ಏಳು ಮಹರ್ಷಿಗಳು ಎಂದರೆ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಇವರು ಪೂರ್ವಮನ್ವಂತರದ ಮಹರ್ಷಿಗಳು. ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮ ಎಂಬ ನಾಲ್ಕು ಮನುಗಳು ನನ್ನಲ್ಲಿ ಭಕ್ತಿಯನ್ನು ಹೊಂದಿ ನನ್ನ

ಮನಸ್ಸಿಗೆ ಪ್ರಿಯರಾದರು. ಲೋಕದಲ್ಲಿ ಎಲ್ಲ ಪ್ರಜೆಗಳೂ ಅವರಿಂದಲೇ ಜನಿಸಿದವರುಗಳು.
ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ |
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥7॥
ನನ್ನ ಈ ವಿಭೂತಿಯನ್ನು (ವಿಶೇಷ ಸನ್ನಿಧಾನವನ್ನು) ಮತ್ತು ಯೋಗ ಎಂದರೆ ಉಪಾಯವನ್ನು (ಅಥವಾ ಸಾಮರ್ಥ್ಯವನ್ನು) ಯಾವನು ಸರಿಯಾಗಿ ತಿಳಿಯುತ್ತಾನೆಯೋ ಅವನು ನಿಶ್ಚಲವಾದ ಯೋಗವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ |
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥8॥
ನಾನು ಸರ್ವಕ್ಕೂ ಉತ್ಪಾದಕನಾದವನು. ನನ್ನಿಂದಲೇ ಎಲ್ಲವೂ ಪ್ರವೃತ್ತಿಯನ್ನು ಪಡೆಯುತ್ತವೆ ಎಂದು ತಿಳಿದು ಬುಧರು ಭಕ್ತಿಸಮನ್ವಿತರಾಗಿ ನನ್ನನ್ನು ಭಜಿಸುತ್ತಾರೆ.
ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ |
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥9॥
ತಮ್ಮ ಚಿತ್ತವನ್ನೂ ಮತ್ತು ಇಂದ್ರಿಯಗಳನ್ನೂ ನನ್ನಲ್ಲಿಯೇ ಇಟ್ಟು ಒಬ್ಬರಿಗೊಬ್ಬರು ನಿತ್ಯವೂ ನನ್ನ ಸ್ವರೂಪವನ್ನು ತಿಳಿಸುತ್ತಾ ಮತ್ತು ನನ್ನ ಮಹಿಮೆಗಳನ್ನು ಹೇಳುತ್ತಾ ಸಂತೋಷ ಪಡುತ್ತಾರೆ ಮತ್ತು ಸುಖಪಡುತ್ತಾರೆ.
ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ |
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥10॥
ಹೀಗೆ ಸತತವಾಗಿ ನನ್ನಲ್ಲಿ ಮನೋಯೋಗಯುಕ್ತರಾಗಿ ಪ್ರೀತಿಯಿಂದ ಭಜನೆ ಮಾಡುವ ಅವರಿಗೆ ನಾನು ನನ್ನನ್ನು ಹೊಂದಲು ಸಾಧ್ಯವಾಗುವಂತಹ ಬುದ್ಧಿಯೋಗವನ್ನು ಕೊಡುತ್ತೇನೆ.
ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ |
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥11॥
ಅವರ ಮೇಲಿನ ಅನುಕಂಪದಿಂದಲೇ ನಾನು ಆ ಜೀವರ ಚಿತ್ತದಲ್ಲಿ ಇದ್ದು ಪ್ರಕಾಶಿಸುವ ಜ್ಞಾನದೀಪದಿಂದ ಅಜ್ಞಾನದಿಂದ ಉಂಟಾದ ಅಂಧಕಾರ ರೂಪವಾದ ಅವರ ಸಂಶಯ, ವಿಪರೀತ ಜ್ಞಾನಗಳನ್ನು ನಾಶಮಾಡುತ್ತೇನೆ.
ಅರ್ಜುನಃ
ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ |
ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥12॥
ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ |
ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥13॥
ಅರ್ಜುನ ನೀನು ಪರಬ್ರಹ್ಮ. ಶ್ರೇಷ್ಠವಾದ ಆಶ್ರಯ. ಪರಮ ಪವಿತ್ರನಾದವನು. ಶಾಶ್ವತ ಪುರುಷನು, ದಿವ್ಯನು, ಆದಿದೇವನು, ಜನ್ಮರಹಿತನು, ವ್ಯಾಪ್ತನಾದವನು ಎಂದು ಎಲ್ಲ ಋಷಿಗಳೂ ಮತ್ತು ದೇವರ್ಷಿಗಳಾದ ನಾರದರೂ ಅಸಿತ, ದೇವಲ ಮತ್ತು ವ್ಯಾಸರೂ ಹೇಳುತ್ತಾರೆ. ಸ್ವತಃ ನೀನೂ ನನಗೆ ಹೇಳುತ್ತಿದ್ದೀಯೆ.
ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ |
ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥14॥
ಎಲೈ ಕೇಶವನೇ, ನೀನು ನನಗೆ ಹೇಳುವುದೆಲ್ಲವನ್ನೂ ಸತ್ಯವೆಂದೇ ತಿಳಿದಿದ್ದೇನೆ. ಎಲೈ ಭಗವಂತನೇ, ದೇವತೆಗಳಾಗಲೀ ಅಥವಾ ದಾನವರಾಗಲೀ ನಿನ್ನ ಅವತಾರವನ್ನು ತಿಳಿದಿಲ್ಲ.
ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ |
ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥15॥
ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ |
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥16॥
ಎಲೈ ಪುರುಷೋತ್ತಮನೇ, ನೀನು ನೀನಾಗಿಯೇ ನಿನ್ನನ್ನು ತಿಳಿದಿದ್ದೀಯೆ. ಜಗತ್ತಿನ ಉತ್ಪಾದಕನೇ, ಜಗತ್ತಿನ ಸ್ವಾಮಿಯೇ, ದೇವದೇವನೇ, ಜಗತ್ಪಾಲಕನೇ, ನಿನ್ನ ದಿವ್ಯವಾದ ವಿಭೂತಿಗಳನ್ನು ನನಗೆ ಸಮಗ್ರವಾಗಿ ಹೇಳಬೇಕು. ಯಾವ ವಿಭೂತಿ ರೂಪಗಳಿಂದ ಈ ಲೋಕಗಳನ್ನು ನೀನು ವ್ಯಾಪಿಸಿಕೊಂಡಿದ್ದೀಯೋ ಅಂತಹ ರೂಪಗಳನ್ನು ಹೇಳು.
ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ |
ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ ಮಯಾ ॥17॥
ಎಲೈ ಯೋಗಿಯೇ, ನಿನ್ನನ್ನು ಯಾವಾಗಲೂ ಚಿಂತಿಸುವ ನಾನು ನಿನ್ನನ್ನು ಹೇಗೆ ತಿಳಿದೇನು? ಎಲೈ ಭಗವಂತನೇ, ಯಾವ ಯಾವ ವಸ್ತುಗಳಲ್ಲಿ ನಿನ್ನನ್ನು ನಾನು ಚಿಂತಿಸಬೇಕು?
ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ |
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥18॥
ಎಲೈ ಜನಾರ್ದನನೇ, ನಿನ್ನ ಸಾಮರ್ಥ್ಯವನ್ನು ಮತ್ತು ವಿಭೂತಿರೂಪವನ್ನು ಇನ್ನೂ ವಿಸ್ತಾರವಾಗಿ ಹೇಳು. ಅಮೃತದಂತಹ ನಿನ್ನ ಉಪದೇಶವನ್ನು ಕೇಳುವ ನನಗೆ ಅಲಂಬುದ್ಧಿಯೇ ಉಂಟಾಗುತ್ತಿಲ್ಲ.
ಶ್ರೀಭಗವಾನ್
ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ |

ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥19॥
ಶ್ರೀಭಗವಾನ್ ಎಲೈ ಕುರುಶ್ರೇಷ್ಠನೇ, ಸಂತೋಷ. ನಾನು ಪ್ರಧಾನವಾದ ನನ್ನ ದಿವ್ಯ ವಿಭೂತಿಗಳನ್ನು ಹೇಳುವೆನು. ವಿಸ್ತಾರವಾಗಿ ಹೇಳಲು ಹೊರಟರೆ ಅದಕ್ಕೆ ಕೊನೆಯೇ ಇರುವುದಿಲ್ಲ.
ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥20॥
ಎಲೈ ಗುಡಾಕೇಶನೇ, ನಾನು ಎಲ್ಲಾ ಚೇತನಗಳ ಹೃದಯಗುಹೆಯಲ್ಲಿ ಇರುವ ಪರಮಾತ್ಮ. ಇದು ಜಡಗಳಿಗಿಂತಲೂ ಚೇತನಗಳಲ್ಲಿ ಇರುವ ವಿಶೇಷವಾದ ವಿಭೂತಿ ರೂಪ. ನಾನು ಸೃಷ್ಟಿಕರ್ತ, ಸ್ಥಿತಿಕರ್ತ ಮತ್ತು ಜೀವರ ವಿನಾಶಕರ್ತನೂ ಆಗಿದ್ದೇನೆ.
ವಿಶೇಷ ವಿಚಾರ ಮುಂದೆ ಹೇಳುವ ವಿಭೂತಿಗಳಲ್ಲಿ ವಿಷ್ಣು, ಕಪಿಲ, ವ್ಯಾಸ, ವಾಸುದೇವ, ರಾಮ ಈ ಐದು ಸ್ವರೂಪವಿಭೂತಿಗಳು. ಉಳಿದವುಗಳು ಆಯಾ ವಸ್ತುಗಳಲ್ಲಿ ವಿಶೇಷವಾಗಿ ಸನ್ನಿಹಿತವಾದ ವಿಭೂತಿಗಳು. ಸರ್ವೈಕ್ಯವಾದಿಗಳು ಆಯಾ ಗಣಶ್ರೇಷ್ಠನಾದ ಒಬ್ಬೊಬ್ಬನಿಂದ ಐಕ್ಯವನ್ನು ಹೇಳುವುದು ಅಸಂಗತವಾದ್ದರಿಂದ ಸನ್ನಿಧಾನ ವಿಶೇಷದಿಂದಲೇ ಇಂತಹ ವಿಭೂತಿರೂಪಕಥನವೆಂದು ಎಲ್ಲರೂ ಅಂಗೀಕರಿಸಬೇಕು. ಜೊತೆಗೆ `ಕೇಷು ಕೇಷು ಚ ಭಾವೇಷು' ಎಂದು ಯಾವ ಯಾವ ವಸ್ತುಗಳಲ್ಲಿ ನಿನ್ನನ್ನು ಚಿಂತಿಸಬೇಕು ಎಂದು ಅರ್ಜುನನ ಪ್ರಶ್ನರೂಪವಾದ ಉಪಕ್ರಮವಿದೆ. ಆದ್ದರಿಂದಲೂ ಆಯಾ ವಸ್ತುವಿನಲ್ಲಿರುವ ಸನ್ನಿಧಾನವನ್ನೇ ವಿಭೂತಿ ಎಂದು ಅಂಗೀಕರಿಸಬೇಕು.
ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ |
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥21॥
ಅದಿತಿಯ ಮಕ್ಕಳಲ್ಲಿ ನಾನು ವಿಷ್ಣುವಾಗಿದ್ದೇನೆ. ಜ್ಯೋತಿಸ್ಸುಗಳಲ್ಲಿ ಕಿರಣಗಳಿಂದ ಕೂಡಿದ ರವಿಯಾಗಿದ್ದೇನೆ. ಮರುತ್ತುಗಳಲ್ಲಿ ಮರೀಚಿನಾಮಕನಾದ ಶ್ರೇಷ್ಠವಾದ ಮರುತ್ತಾಗಿದ್ದೇನೆ. ನಕ್ಷತ್ರಗಳಲ್ಲಿ ಚಂದ್ರನಾಗಿದ್ದೇನೆ.
ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ |
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥22॥
ವೇದಗಳಲ್ಲಿ ಸಾಮವೇದವಾಗಿದ್ದೇನೆ. ದೇವತೆಗಳಲ್ಲಿ ಇಂದ್ರನಾಗಿದ್ದೇನೆ. ಇಂದ್ರಿಯಗಳಲ್ಲಿ ಮನಸ್ಸಾಗಿದ್ದೇನೆ. ಚೇತನರಲ್ಲಿ ಜ್ಞಾನವಾಗಿದ್ದೇನೆ.
ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ |
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥23॥
ರುದ್ರರಲ್ಲಿ ಶಂಕರನಾಗಿದ್ದೇನೆ. ಯಕ್ಷ-ರಾಕ್ಷಸರಲ್ಲಿ ಕುಬೇರನಾಗಿದ್ದೇನೆ. ವಸುಗಳಲ್ಲಿ ಅಗ್ನಿಯಾಗಿದ್ದೇನೆ. ಶಿಖರವುಳ್ಳವುಗಳಲ್ಲಿ ನಾನು ಮೇರುವಾಗಿದ್ದೇನೆ.
ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ |
ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥24॥
ಪುರೋಹಿತರಲ್ಲಿ ನಾನು ಮುಖ್ಯನಾದ ಬೃಹಸ್ಪತಿಯಾಗಿದ್ದೇನೆ. ಸೇನಾ ನಾಯಕರಲ್ಲಿ ನಾನು ಷಣ್ಮುಖನಾಗಿದ್ದೇನೆ. ಸರೋವರಗಳಲ್ಲಿ ಸಾಗರವಾಗಿದ್ದೇನೆ.
ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ |
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥25॥
ಮಹರ್ಷಿಗಳಲ್ಲಿ ಭೃಗುವಾಗಿದ್ದೇನೆ. ವಚನಗಳಲ್ಲಿ ಓಂಕಾರವಾಗಿದ್ದೇನೆ. ಯಜ್ಞಗಳಲ್ಲಿ ಜಪಯಜ್ಞವಾಗಿದ್ದೇನೆ. ಸ್ಥಿರವಾದ ಪದಾರ್ಥಗಳಲ್ಲಿ ಹಿಮಾಲಯವಾಗಿದ್ದೇನೆ.
ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ |
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥26॥
ಸರ್ವವೃಕ್ಷಗಳಲ್ಲಿ ಅಶ್ವತ್ಥನಾಗಿದ್ದೇನೆ. ದೇವರ್ಷಿಗಳಲ್ಲಿ ನಾರದನಾಗಿದ್ದೇನೆ. ಗಂಧರ್ವರಲ್ಲಿ ಚಿತ್ರರಥನಾಗಿದ್ದೇನೆ. ಸಿದ್ಧರಲ್ಲಿ ಕಪಿಲನಾಗಿದ್ದೇನೆ.
ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ |
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥27॥
ಅಶ್ವಗಳಲ್ಲಿ ನನ್ನನ್ನು ಅಮೃತ ಮಥನ ಕಾಲದಲ್ಲಿ ಉದ್ಭವಿಸಿದ ಉಚ್ಚೈಃಶ್ರವಸ್ ಎಂದು ತಿಳಿ. ಗಜೇಂದ್ರಗಳಲ್ಲಿ ಐರಾವತನಾಗಿದ್ದೇನೆ. ಮನುಷ್ಯರಲ್ಲಿ ಚಕ್ರವರ್ತಿಯಾಗಿದ್ದೇನೆ.
ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ |
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥28॥
ಆಯುಧಗಳಲ್ಲಿ ವಜ್ರವಾಗಿದ್ದೇನೆ. ಧೇನುಗಳಲ್ಲಿ ಕಾಮಧೇನುವಾಗಿದ್ದೇನೆ. ಪ್ರಜನನ ಕಾರಣಗಳಲ್ಲಿ ಮನ್ಮಥನಾಗಿದ್ದೇನೆ. ಒಂದೇ ತಲೆಯುಳ್ಳ ಸರ್ಪಗಳಲ್ಲಿ ವಾಸುಕಿಯಾಗಿದ್ದೇನೆ.
ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ |
ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥29॥
ಅನೇಕ ಶಿರಸ್ಸುಳ್ಳ ಸರ್ಪಗಳಲ್ಲಿ ಶೇಷನಾಗಿದ್ದೇನೆ. ಜಲಚರಗಳಲ್ಲಿ ನಾನು ವರುಣನಾಗಿದ್ದೇನೆ. ಪಿತೃಗಳಲ್ಲಿ ಅರ್ಯಮನಾಗಿದ್ದೇನೆ. ನಿಯಮನವನ್ನು ಮಾಡುವವರಲ್ಲಿ ನಾನು ಯಮನಾಗಿದ್ದೇನೆ.
ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ |

ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥30॥
ದೈತ್ಯರಲ್ಲಿ ಪ್ರಹ್ಲಾದನಾಗಿದ್ದೇನೆ. ಬಂಧನಾದಿಗಳನ್ನು ಮಾಡುವವರಲ್ಲಿ ನಾನು ಕಾಲನಾಗಿದ್ದೇನೆ. ಮೃಗಗಳಲ್ಲಿ ಸಿಂಹನಾಗಿದ್ದೇನೆ. ಪಕ್ಷಿಗಳಲ್ಲಿ ಗರುಡನಾಗಿದ್ದೇನೆ.
ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ |
ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥31॥
ಪವಿತ್ರೀಕರಿಸುವವರಲ್ಲಿ ಅಥವಾ ವೇಗವುಳ್ಳವರಲ್ಲಿ ನಾನು ಪವನನಾಗಿದ್ದೇನೆ. ಶಸ್ತ್ರಧಾರಿಗಳಲ್ಲಿ ನಾನು ಪರಶುರಾಮನಾಗಿದ್ದೇನೆ. ಮೀನುಗಳಲ್ಲಿ ನಾನು ಮೊಸಳೆಯಾಗಿದ್ದೇನೆ. ನದಿಗಳಲ್ಲಿ ಜಾಹ್ನವಿಯಾಗಿದ್ದೇನೆ.
ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ |
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥32॥
ಎಲೈ ಅರ್ಜುನನೇ, ನಾನು ಸೃಷ್ಟಿಸಲ್ಪಡುವ ಎಲ್ಲಾ ವಸ್ತುಗಳಿಗೂ ಆದಿಯೂ, ಅಂತವೂ ಮತ್ತು ಮಧ್ಯನೂ ಆಗಿದ್ದೇನೆ. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯಾಗಿದ್ದೇನೆ. ವಾದ, ಜಲ್ಪವಿತಂಡ ಕಥೆಗಳಲ್ಲಿ ವಾದವಾಗಿದ್ದೇನೆ.
ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ |
ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥33॥
ಅಕ್ಷರಗಳಲ್ಲಿ ಅಕಾರನಾಗಿದ್ದೇನೆ. ಸಮಾಸಗಳಲ್ಲಿ ದ್ವಂದ್ವ ಸಮಾಸವಾಗಿದ್ದೇನೆ. ನಾನೇ ಅಕ್ಷಯವಾದ ಕಾಲನಾಗಿದ್ದೇನೆ. ಸರ್ವತ್ರಸರ್ವಾವಯವಗಳುಳ್ಳ ನಾನು ಪೋಷಕನಾಗಿದ್ದೇನೆ.
ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ |
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥34॥
ನಾನು ಸರ್ವಸಂಹಾರಕನಾದ ಮೃತ್ಯುವಾಗಿದ್ದೇನೆ. ಜನಿಸಲಿರುವ ವಸ್ತುಗಳ ಉತ್ಪತ್ತಿಯಾಗಿದ್ದೇನೆ. ನಾರಿಯರಲ್ಲಿ ಶ್ರೇಷ್ಠವಾದ ಲಕ್ಷ್ಮಿಯ ರೂಪಗಳಾದ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಎಲ್ಲವೂ ಆಗಿದ್ದೇನೆ.
ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ |
ಮಾಸಾನಾಂ ಮಾರ್ಗಶೀರ್ಷೋಽಹಮ್ ಋತೂನಾಂ ಕುಸುಮಾಕರಃ ॥
ಸಾಮಗಳಲ್ಲಿ ಬೃಹತ್ಸಾಮನಾಗಿದ್ದೇನೆ. ಛಂದಸ್ಸುಗಳಲ್ಲಿ ಗಾಯತ್ರಿಯಾಗಿದ್ದೇನೆ. ಮಾಸಗಳಲ್ಲಿ ಮಾರ್ಗಶೀರ್ಷ ಮಾಸವೂ, ಋತುಗಳಲ್ಲಿ ವಸಂತ ಋತುವೂ ಆಗಿದ್ದೇನೆ.
ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ |
ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥36॥
ಕಪಟಿಗಳಲ್ಲಿ ನಾನು ದ್ಯೂತನಾಗಿದ್ದೇನೆ. ತೇಜಸ್ವಿಗಳಲ್ಲಿ ನಾನು ತೇಜಸ್ಸಾಗಿದ್ದೇನೆ. ಜಯಿಸುವವರಲ್ಲಿ ನಾನು ಜಯನೂ, ನಿಶ್ಚಿತ ಜ್ಞಾನವುಳ್ಳವರಲ್ಲಿ ನಾನು ನಿಶ್ಚಿತ ಜ್ಞಾನನೂ, ಸಾರವಾದ ಸ್ವರೂಪವುಳ್ಳವರಲ್ಲಿ ನಾನು ಅಂತಹ ಸಾರನೂ ಆಗಿದ್ದೇನೆ.
ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ |
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥37॥
ವೃಷ್ಣಿಗಳಲ್ಲಿ ವಾಸುದೇವನಾಗಿದ್ದೇನೆ. ಪಾಂಡವರಲ್ಲಿ ಅರ್ಜುನನಾಗಿದ್ದೇನೆ. ಮುನಿಗಳಲ್ಲಿ ವ್ಯಾಸನಾಗಿದ್ದೇನೆ. ಕವಿಗಳಲ್ಲಿ ಶುಕ್ರನಾಗಿದ್ದೇನೆ.
ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ |
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥38॥
ನಿಯಂತ್ರಣ ಮಾಡುವವರಲ್ಲಿ ನಾನು ದಂಡನಾಗಿದ್ದೇನೆ. ಜಯವನ್ನು ಬಯಸುವವರಲ್ಲಿ ನಾನು ಅವರ ನೀತಿಯಾಗಿದ್ದೇನೆ. ಮುಚ್ಚಿಡಬೇಕಾದ ವಸ್ತುಗಳಲ್ಲಿ ನಾನು ಮೌನವಾಗಿದ್ದೇನೆ. ಜ್ಞಾನವುಳ್ಳವರಲ್ಲಿ ನಾನು ಜ್ಞಾನನಾಗಿದ್ದೇನೆ.
ವಿಶೇಷ ವಿಚಾರ ಇಲ್ಲಿ ಚಂದ್ರಾದಿಗಳಲ್ಲಿ ವಿಜಾತೀಯ ಶ್ರೇಷ್ಠತತ್ವವಾದ ವಿಭೂತಿ ರೂಪವು ಹೇಳಲ್ಪಟ್ಟಿದೆ. ಏಕೆಂದರೆ ನಕ್ಷತ್ರಾದಿಗಳು ಚಂದ್ರಾದಿಗಳಿಗಿಂತ ವಿಜಾತೀಯ ಆದವುಗಳು. `ಸತ್ವಂ ಸತ್ವವತಾಂ' ಮೊದಲಾದವುಗಳಲ್ಲಿ ಆಯಾ ಧರ್ಮಿಗಳಲ್ಲಿ ಸತತ್ವದಿ ರೂಪ ಶ್ರೇಷ್ಠ ಧರ್ಮವನ್ನು ಕೊಡುವ ವಿಭೂತಿರೂಪವು ಹೇಳಲ್ಪಟ್ಟಿದೆ. `ರುದ್ರಾಣಾಂ ಶಂಕರಃ' ಇತ್ಯಾದಿಗಳಲ್ಲಿ ಸಜಾತೀಯರಲ್ಲಿ ಶ್ರೇಷ್ಠತ್ವವನ್ನು ಕೊಡುವ ವಿಭೂತಿರೂಪವು ಹೇಳಲ್ಪಟ್ಟಿದೆ. ವಾಸವ, ಉಶನಾ, ಧನಂಜಯ, ಯಜ್ಞ, ವಜ್ರ, ಸಾಮವೇದಗಳಲ್ಲಿ ಸಜಾತೀಯ ಏಕದೇಶಗಳಲ್ಲಿ ಆಧಿಕ್ಯವನ್ನು ತಂದುಕೊಡುವ ವಿಭೂತಿರೂಪವು ಹೇಳಲ್ಪಟ್ಟಿದೆ. ಏಕೆಂದರೆ ಅವುಗಳಲ್ಲಿ ಸಜಾತೀಯ ಸರ್ವಶ್ರೇಷ್ಠತೆಯು ಇಲ್ಲ. ದೇವತೆಗಳಲ್ಲಿ ಮತ್ತು ಕವಿತ್ವಾದಿ ಗುಣಗಳಲ್ಲಿ ಬ್ರಹ್ಮದೇವರು ಶ್ರೇಷ್ಠರಾದವರು. ಪಾರ್ಥರಲ್ಲಿ ಭೀಮನು ಶ್ರೇಷ್ಠನಾದವನು. ಯಜ್ಞಗಳಲ್ಲಿ ಜ್ಞಾನಯಜ್ಞವು ಶ್ರೇಷ್ಠವಾದುದು. ಆಯುಧಗಳಲ್ಲಿ ಸುದರ್ಶನವು ಶ್ರೇಷ್ಠವಾದುದು. ವೇದಗಳಲ್ಲಿ ಋಗ್ವೇದವು ಶ್ರೇಷ್ಠವಾದುದು. ಆದ್ದರಿಂದ ಹೀಗೆ ಬೇರೆ ಬೇರೆ ರೀತಿಯಲ್ಲಿ ವಿಭೂತಿರೂಪಗಳನ್ನು ತಿಳಿಯಬೇಕು.
ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ |
ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್ ॥39॥
ಎಲೈ ಅರ್ಜುನನೇ, ಎಲ್ಲ ವಸ್ತುಗಳಿಗೂ ಏನು ಕಾರಣವಿದೆಯೋ ಅದು ನಾನೇ ಆಗಿದ್ದೇನೆ. ನನ್ನಿಂದ ವ್ಯಾಪ್ತವಾಗದಿರುವ ಯಾವ ಚರಾಚರ ವಸ್ತುವೂ ಇಲ್ಲ.
ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ |
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥40॥
ಎಲೈ ಪರಂತಪನೇ, ನನ್ನ ದಿವ್ಯವಿಭೂತಿಗಳಿಗೆ ಕೊನೆಯೇ ಇಲ್ಲ. ವಿಸ್ತಾರವಾದ ಆ ನನ್ನ ವಿಭೂತಿಗಳನ್ನು ನಿನಗೆ ಸಂಕ್ಷೇಪವಾಗಿ

ಹೇಳಿದ್ದೇನೆ.
ಯದ್ಯದ್ ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ |
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಮ್ ॥41॥
ಯಾವ ಯಾವ ವಸ್ತುಗಳು ವಿಶೇಷವಾದ ತೇಜಸ್ಸನ್ನು, ಕಾಂತಿಯನ್ನು ಹೊಂದಿ ಶ್ರೇಷ್ಠವಾಗಿರುತ್ತವೆಯೋ, ಅವುಗಳೆಲ್ಲವನ್ನೂ ನನ್ನ ತೇಜೋಂಶದಿಂದ ಆ ಮಹಿಮೆಯನ್ನು ಪಡೆದವುಗಳು ಎಂದೇ ತಿಳಿ.
ಅಥ ವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ |
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥42॥
ಅರ್ಜುನನೇ, ಇಷ್ಟು ವಿಸ್ತಾರವಾಗಿ ತಿಳಿದು ಏನು ಪ್ರಯೋಜನ? ನಾನು ಈ ಸಮಸ್ತವಾದ ಜಗತ್ತನ್ನು ಒಂದು ಅಂಶದಿಂದ ವ್ಯಾಪಿಸಿದ್ದೇನೆ. (ನಾನು ಪೂರ್ಣವಾಗಿ ವ್ಯಾಪಿಸಲು ಎಷ್ಟು ಜಗತ್ತುಗಳು ಬಂದರೂ ಸಾಧ್ಯವಾಗುವುದಿಲ್ಲ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ಭಗವದ್ಗೀತಾ ವಿಶ್ವರೂಪದರ್ಶನ.
ಅರ್ಜುನಃ
ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ |
ಯತ್ ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥1॥
ಅರ್ಜುನ ನನ್ನನ್ನು ಅನುಗ್ರಹಿಸಲು ನೀನು ಹೇಳಿದ ಅಧ್ಯಾತ್ಮನಾಮಕವಾದ ಪರಮ ರಹಸ್ಯ ವಚನಗಳಿಂದ ನನ್ನ ಈ ಮೋಹವು ನಾಶವನ್ನು ಹೊಂದಿತು.
ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ |
ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥2॥
ಎಲೈ ಕಮಲಪತ್ರಾಕ್ಷನೇ, ನಿನ್ನಿಂದ ನಾನು ವಿಸ್ತಾರವಾಗಿ ಎಲ್ಲ ಭೂತಗಳ ಉತ್ಪತ್ತಿ, ನಾಶಗಳನ್ನೂ ಮತ್ತು ಶಾಶ್ವತವಾದ ನಿನ್ನ ಮಹಿಮೆಯನ್ನೂ ಕೇಳಿದೆನು.
ಏವಮೇತದ್ ಯಥಾಽಽತ್ಥ ತ್ವಮಾತ್ಮಾನಂ ಪರಮೇಶ್ವರ |
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥3॥
ಎಲೈ ಪರಮೇಶ್ವರನೇ, ನೀನು ನಿನ್ನ ವಿಷಯದಲ್ಲಿ ಏನು ಹೇಳಿದ್ದೀಯೋ ಅದೆಲ್ಲವೂ ಹಾಗೆಯೇ ಸರಿ. ಎಲೈ ಪುರುಷೋತ್ತಮನೇ, ನಿನ್ನ ಪರಮೈಶ್ವರ್ಯಸಹಿತವಾದ ರೂಪವನ್ನು ನಾನು ನೋಡಲು ಇಚ್ಛಿಸುತ್ತೇನೆ.
ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ |
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥4॥
ಎಲೈ ಪ್ರಭುವೇ, ಅದನ್ನು ನಾನು ನೋಡಲು ಸಾಧ್ಯ ಎಂದು ನೀನು ತಿಳಿಯುವುದಾದರೆ ಎಲೈ ಯೋಗೇಶ್ವರನೇ, ನನಗೆ ಆ ನಿನ್ನ ಶಾಶ್ವತವಾದ ರೂಪವನ್ನು ತೋರಿಸು.
ಶ್ರೀಭಗವಾನ್
ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ |
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥5॥
ಶ್ರೀಭಗವಾನ್ ಪಾರ್ಥನೇ, ನಾನಾ ವಿಧವಾದ ದಿವ್ಯಗಳಾದ ಅನೇಕ ವರ್ಣಗಳನ್ನೂ, ಅನೇಕ ಆಕೃತಿಗಳನ್ನೂ ಹೊಂದಿರುವ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಗಳಲ್ಲಿರುವ ನನ್ನ ರೂಪಗಳನ್ನು ನೋಡು.
ಪಶ್ಯಾದಿತ್ಯಾನ್ ವಸೂನ್ ರುದ್ರಾನ್ ಅಶ್ವಿನೌ ಮರುತಸ್ತಥಾ |
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥6॥
ಎಲೈ ಭಾರತನೇ, ಆದಿತ್ಯರನ್ನೂ, ವಸುಗಳನ್ನೂ, ರುದ್ರರನ್ನೂ, ಅಶ್ವಿನಿಗಳನ್ನೂ, ಹಾಗೆಯೇ ಮರುತ್ತುಗಳನ್ನೂ ನನ್ನಲ್ಲಿ ನೋಡು. ನೀನು ಹಿಂದೆ ಎಂದೂ ನೋಡದಿರುವ ಆಶ್ಚರ್ಯಕರವಾದ ಅನೇಕ ವಸ್ತುಗಳನ್ನು ನೋಡು.
ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ |
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ ದ್ರಷ್ಟುಮಿಚ್ಛಸಿ ॥7॥
ಎಲೈ ಗುಡಾಕೇಶನೇ (ನಿದ್ರೆಯನ್ನು ಗೆದ್ದವನೇ), ಈ ನನ್ನ ದೇಹದಲ್ಲಿ ಒಂದೇ ಕಡೆಯಲ್ಲಿ ಇರುವ ಸ್ಥಾವರ-ಜಂಗಮ ಸಹಿತವಾದ ಸಕಲ ಜಗತ್ತನ್ನೂ ಈ ದಿನ ನೋಡು ಮತ್ತು ಬೇರೆ ಏನನ್ನು ನೋಡಲು ಬಯಸುವಿಯೋ ಅವೆಲ್ಲವನ್ನೂ ನೋಡು.
ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ |
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥8॥
ಈ ನಿನ್ನ ಕಣ್ಣುಗಳಿಂದಲೇ ನನ್ನನ್ನು ನೋಡಲು ನಿನಗೆ ಸಾಧ್ಯವಾಗುವುದಿಲ್ಲ. ನಿನಗೆ ದಿವ್ಯದೃಷ್ಟಿಯನ್ನು ಕೊಡುತ್ತೇನೆ. ನನ್ನ ಯೋಗೈಶ್ವರ್ಯವಿಶಿಷ್ಟವಾದ ರೂಪವನ್ನು ನೋಡು.
ಸಂಜಯಃ

ಏವಮುಕತ್ವ ತತೋ ರಾಜನ್ ಮಹಾಯೋಗೇಶ್ವರೋ ಹರಿಃ |
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥9॥
ಸಂಜಯ ಎಲೈ ರಾಜನೇ, ಮಹಾಯೋಗೇಶ್ವರನಾದ ಹರಿಯು ಹೀಗೆ ಹೇಳಿ ಅರ್ಜುನನಿಗೆ ತನ್ನ ಪರಮೈಶ್ವರ್ಯ ವಿಶಿಷ್ಟವಾದ ರೂಪವನ್ನು ತೋರಿಸಿದನು.
ಅನೇಕವಕ್ತ್ರನಯನಮ್ ಅನೇಕಾದ್ಭುತದರ್ಶನಮ್ |
ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥10॥
ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ |
ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥11॥
ಅನೇಕ ಮುಖಗಳು, ಅನೇಕ ಕಣ್ಣುಗಳು, ಅನೇಕ ಅದ್ಭುತ ವಸ್ತುಗಳು, ಅನೇಕ ದಿವ್ಯಾಭರಣಗಳನ್ನು ಧರಿಸಿದ, ದಿವ್ಯವಾದ ಅನೇಕ ಆಯುಧಗಳನ್ನು ಎತ್ತಿಹಿಡಿದ, ದಿವ್ಯಮಾಲೆ ಮತ್ತು ವಸ್ತ್ರಗಳನ್ನು ಧರಿಸಿದ, ದಿವ್ಯಗಂಧಗಳಿಂದ ಅನುಲಿಪ್ತನಾದ, ಸರ್ವಾಶ್ಚರ್ಯಮಯವಾದ, ಅನಂತನಾದ, ವಿಶ್ವತೋಮುಖನಾದ, ಕ್ರೀಡಾದಿ ಗುಣವಿಶಿಷ್ಟವಾದ (ತನ್ನ ರೂಪವನ್ನು ತೋರಿಸಿದನು) ದೇವನನ್ನು ನೋಡಿದನು.
ದಿವಿ ಸೂರ್ಯಸಹಸ್ರಸ್ಯ ಭವೇದ್ ಯುಗಪದುತ್ಥಿತಾ |
ಯದಿ ಭಾಃ ಸದೃಶೀ ಸಾ ಸ್ಯಾದ್ ಭಾಸಸ್ತಸ್ಯ ಮಹಾತ್ಮನಃ ॥12॥
ಆಕಾಶದಲ್ಲಿ ಸಹಸ್ರ ಸೂರ್ಯರು ಒಂದೇ ಕಾಲದಲ್ಲಿ ಉದಯಿಸಿದರೆ ಎಂತಹ ಪ್ರಕಾಶವಿರಬಹುದೋ, ಆ ಮಹಾತ್ಮನ ಪ್ರಕಾಶವು ಅದಕ್ಕೆ ಸದೃಶವಾಗಿದ್ದಿತು.
ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ |
ಅಪಶ್ಯದ್ ದೇವದೇವಸ್ಯ ಶರೀರೇ ಪಾಂಡವಸ್ತದಾ ॥13॥
ಪಾಂಡವನಾದ ಅರ್ಜುನನು ಆ ದೇವದೇವನ ಶರೀರದಲ್ಲಿ ಒಂದೇ ಕಡೆಯಲ್ಲಿ ಅನೇಕ ಭೇದಭಿನ್ನವಾದ ಸಮಸ್ತವಾದ ಜಗತ್ತನ್ನೂ ಆಗ ನೋಡಿದನು.
ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ |
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥14॥
ಆಗ ಧನಂಜಯನು ವಿಸ್ಮಯದಿಂದ ಕೂಡಿದವನಾಗಿ ರೋಮಾಂಚವನ್ನು ಹೊಂದಿ ಆ ದೇವನಿಗೆ ಶಿರಸಾ ಪ್ರಣಾಮವನ್ನು ಮಾಡಿ ಕೈಗಳನ್ನು ಮುಗಿದು ಮಾತನಾಡಿದನು.
ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷಸಂಘಾನ್ |
ಬ್ರಹ್ಮಾಣಮೀಶಂ ಕಮಲಾಸನಸ್ಥಂ
ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥15॥
ಎಲೈ ದೇವನೇ, ನಿನ್ನ ದೇಹದಲ್ಲಿ ಎಲ್ಲಾ ಭೂತವಿಶೇಷ ಗಣಗಳನ್ನೂ, ಕಮಲಾಸನದಲ್ಲಿರುವ ಬ್ರಹ್ಮನನ್ನೂ, ರುದ್ರನನ್ನೂ, ಋಷಿಗಳನ್ನೂ, ಎಲ್ಲಾ ದಿವ್ಯವಾದ ಸರ್ಪಗಳನ್ನೂ ನೋಡುತ್ತಿದ್ದೇನೆ.
ಅನೇಕಬಾಹೂದರವಕ್ತ್ರನೇತ್ರಂ
ಪಶ್ಯಾಮಿ ತ್ವಾ ಸರ್ವತೋಽನಂತರೂಪಮ್ |
ನಾಂತಂ ನ ಮಧ್ಯಂ ನ ಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥16॥
ಅನೇಕ ಬಾಹುಗಳು, ಅನೇಕ ಉದರಗಳು, ಅನೇಕ ವದನಗಳು ಮತ್ತು ಅನೇಕ ನೇತ್ರಗಳುಳ್ಳ, ಎಲ್ಲ ದಿಕ್ಕುಗಳಲ್ಲಿಯೂ ಅನಂತವಾದ ರೂಪವುಳ್ಳ ನಿನ್ನನ್ನು ನೋಡುತ್ತಿದ್ದೇನೆ. ಎಲೈ ವಿಶ್ವೇಶ್ವರನೇ, ಎಲೈ ವಿಶ್ವರೂಪನೇ, ನಿನ್ನ ರೂಪಕ್ಕೆ ಆದಿಯನ್ನಾಗಲೀ, ಅಂತವನ್ನಾಗಲೀ, ಮಧ್ಯವನ್ನಾಗಲೀ ನಾನು ಕಾಣುತ್ತಿಲ್ಲ.
ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ |
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾದ್ ದೀಪ್ತಾನಲಾರ್ಕದ್ಯುತಿಮಪ್ರಮೇಯಮ್
॥17॥
ಕಿರೀಟವನ್ನು ಧರಿಸಿದ, ಗದೆಯನ್ನು ಚಕ್ರವನ್ನು ಧರಿಸಿದ, ಸರ್ವಕಡೆಯಲ್ಲಿಯೂ ಪ್ರಕಾಶಿಸುವ, ನೋಡಲು ಕಷ್ಟಸಾಧ್ಯವಾದ, ಎಲ್ಲ ಕಡೆಗಳಲ್ಲಿಯೂ ಜ್ವಲಿಸುವ ಅಗ್ನಿ-ಸೂರ್ಯರ ಕಾಂತಿಯನ್ನು ಹೊಂದಿರುವ, ಅಪ್ರಮೇಯವಾದ (ತಿಳಿಯಲು ಅಸಾಧ್ಯವಾದ) ತೇಜೋರಾಶಿಯಾದ ನಿನ್ನನ್ನು ನೋಡುತ್ತಿದ್ದೇನೆ.
ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ |
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥18॥
ನೀನು ಅಕ್ಷರನಾಮಕನಾದವನು. ನೀನೇ ಜ್ಞೇಯವಸ್ತುಗಳಲ್ಲಿ ಶ್ರೇಷ್ಠನಾದವನು. ನೀನೇ ಈ ವಿಶ್ವಕ್ಕೆ ಪರಮ ಧಾರಕನಾದವನು. ನೀನು ಚ್ಯುತಿರಹಿತನಾದವನು. ಶಾಶ್ವತ ಧರ್ಮರಕ್ಷಕನಾದವನು. ನೀನೇ ವೇದಪ್ರತಿಪಾದ್ಯನಾದ ಪುರುಷನೆಂದು ನನ್ನ ಅಭಿಪ್ರಾಯ.

ಅನಾದಿಮಧ್ಯಾಂತಮನಂತವೀರ್ಯಮ್
ಅನಂತಬಾಹುಂ ಶಶಿಸೂರ್ಯನೇತ್ರಮ್ |
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಮ್ ॥19॥
ಆದಿ,ಮಧ್ಯಾಂತಶೂನ್ಯವಾದ, ಅನಂತ ಸಾಮರ್ಥ್ಯವುಳ್ಳ, ಅನಂತ ಬಾಹುಗಳಿಂದ ಕೂಡಿದ, ಚಂದ್ರ-ಸೂರ್ಯರನ್ನು ಚಕ್ಷುಸ್ಸಿನಲ್ಲಿ ಹೊಂದಿದ, ಜ್ವಲಿಸುವ ಅಗ್ನಿಯನ್ನು ಮುಖದಲ್ಲಿ ಧರಿಸಿದ ನಿನ್ನ ತೇಜಸ್ಸಿನಿಂದ ಈ ವಿಶ್ವವನ್ನು ದಹಿಸುತ್ತಿರುವ ನಿನ್ನನ್ನು ನೋಡುತ್ತಿದ್ದೇನೆ.
ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ |
ದೃಷ್ಟ್ವಾದ್ಭುತಂ ರೂಪಮಿದಂ ತವೋಗ್ರಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥20॥
ಭೂಮಿ ಮತ್ತು ಅಂತರಿಕ್ಷಗಳ ನಡುವೆ ಎಷ್ಟು ಪ್ರದೇಶವಿದೆಯೋ ಅದೆಲ್ಲವನ್ನೂ ಮತ್ತು ಎಲ್ಲ ದಿಕ್ಕುಗಳನ್ನೂ ನೀನು ಈ ನಿನ್ನ ಒಂದೇ ರೂಪದಿಂದ ವ್ಯಾಪಿಸಿದ್ದೀಯೆ. ಎಲೈ ಮಹಾತ್ಮನೇ, ಈ ನಿನ್ನ ಅದ್ಭುತವಾದ ಮತ್ತು ೊರವಾದ ರೂಪವನ್ನು ನೋಡಿ ಮೂರು ಲೋಕಗಳೂ ಬಹಳ ವ್ಯಥೆಯನ್ನು ಹೊಂದಿವೆ.
ಅಮೀ ಹಿ ತ್ವಾ ಸುರಸಂಘಾ ವಿಶಂತಿ
ಕೇಚಿದ್ ಭೀತಾಃ ಪ್ರಾಂಜಲಯೋ ಗೃಣಂತಿ |
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥21॥
ಈ ದೇವತಾ ಗಣಗಳು ನಿನ್ನನ್ನು ಪ್ರವೇಶ ಮಾಡುತ್ತಿವೆ. ಕೆಲವರು ಭಯಗೊಂಡು ಕೈಗಳನ್ನು ಮುಗಿದು ಸ್ತೋತ್ರ ಮಾಡುತ್ತಿದ್ದಾರೆ. ಮಹರ್ಷಿ-ಸಿದ್ಧರ ಸಮೂಹಗಳು ಶುಭವಾಗಲಿ ಎಂದು ಹೇಳುತ್ತಾ, ಪುಷ್ಕಲವಾದ ಸ್ತೋತ್ರಗಳಿಂದ ನಿನ್ನನ್ನು ಸ್ತೋತ್ರ ಮಾಡುತ್ತಿವೆ.
ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ |
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥22॥
ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನಿಗಳು, ಮರುತ್ತುಗಳು, ಪಿತೃಗಳು, ಗಂಧರ್ವರ, ಯಕ್ಷರ, ಅಸುರರ ಮತ್ತು ಸಿದ್ಧರ ಸಮೂಹಗಳ ಎಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ.
ರೂಪಂ ಮಹತ್ ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದಮ್ |
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥23॥
ಎಲೈ ಮಹಾಬಾಹುವೇ, ಅನೇಕ ವದನ, ನೇತ್ರಗಳನ್ನು ಹೊಂದಿರುವ, ಅನೇಕ ಬಾಹುಗಳು, ತೊಡೆಗಳು ಮತ್ತು ಪಾದಗಳನ್ನು ಹೊಂದಿರುವ, ಅನೇಕ ಉದರಗಳನ್ನು ಹೊಂದಿರುವ, ಅನೇಕ ಕೋರೆದಾಡೆಗಳಿಂದ ಕರಾಳವಾಗಿರುವ ಈ ನಿನ್ನ ಬೃಹತ್ತಾದ ರೂಪವನ್ನು ನೋಡಿ ಎಲ್ಲ ಲೋಕಗಳೂ ಮತ್ತು ನಾನೂ ಬಹಳ ವ್ಯಥೆಯಿಂದ ಕೂಡಿದ್ದೇವೆ.
ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ |
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥24॥
ಎಲೈ ವಿಷ್ಣುವೇ ಆಕಾಶವನ್ನು ಮುಟ್ಟುತ್ತಿರುವ, ಜ್ವಲಿಸುತ್ತಿರುವ, ಅನೇಕ ವರ್ಣಗಳಿಂದ ಕೂಡಿರುವ, ಬಾಯಿ ತೆರೆದಿರುವ, ಜ್ವಲಿಸುವ ವಿಶಾಲವಾದ ನೇತ್ರವುಳ್ಳ ನಿನ್ನನ್ನು ನೋಡಿ ಮನಸ್ಸಿನಲ್ಲಿ ವ್ಯಥೆಯುಳ್ಳವನಾಗಿ, ನಾನು ಧೈರ್ಯವನ್ನಾಗಲೀ, ಸಮಾಧಾನವನ್ನಾಗಲೀ ಹೊಂದುತ್ತಿಲ್ಲ.
ದಂಷ್ಟ್ರಾಕರಾಲಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾನಲಸನ್ನಿಭಾನಿ |
ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ ॥
ಕೋರೆದಾಡೆಗಳಿಂದ ಕರಾಳವಾದ, ಕಾಲಾಗ್ನಿಗೆ ಸದೃಶವಾಗಿ ಹೊಳೆಯುವ ನಿನ್ನ ಮುಖಗಳನ್ನು ನೋಡಿ ನನಗೆ ದಿಕ್ಕುಗಳು ತಿಳಿಯುತ್ತಿಲ್ಲ. ಮನಸ್ಸಿಗೆ ಸುಖವೇ ಆಗುತ್ತಿಲ್ಲ. ಎಲೈ ಜಗನ್ನಿವಾಸನೇ, ದೇವೇಶನೇ, ಪ್ರಸನ್ನನಾಗು.
ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ
ಸರ್ವೇ ಸಹೈವಾವನಿಪಾಲಸಂಘೈಃ |
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಽಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥26॥
ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಲಾನಿ ಭಯಾನಕಾನಿ |

ಕೇಚಿದ್ ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥27॥
ರಾಜರ ಗಣಗಳಿಂದ ಕೂಡಿದ ಈ ಎಲ್ಲ ಧೃತರಾಷ್ಟ್ರ ಪುತ್ರರು, ಭೀಷ್ಮ-ದ್ರೋಣ, ಹಾಗೆಯೇ ಈ ಕರ್ಣ ಇವರು ನಮ್ಮ ಶ್ರೇಷ್ಠ ಯೋಧರಿಂದ ಕೂಡಿದವರಾಗಿ ತ್ವರೆಯಿಂದ ದಂಷ್ಟ್ರಾಕರಾಲವೂ, ಭಯಾನಕವೂ ಆದ ನಿನ್ನ ಮುಖಗಳನ್ನು ಪ್ರವೇಶಿಸುತ್ತಿದ್ದಾರೆ. ಇನ್ನು ಕೆಲವರು ನಿನ್ನ ಕೋರೆದಾಡೆಗಳ ಮಧ್ಯದಲ್ಲಿ ಸಿಕ್ಕಿ ಪುಡಿ ಪುಡಿಯಾದ ಶಿರಸ್ಸುಳ್ಳವರಾಗಿ ಕಾಣುತ್ತಿದ್ದಾರೆ.
ಯಥಾ ನದೀನಾಂ ಬಹವೋಽಂಬುವೇಗಾಃ
ಸಮುದ್ರಮೇವಾಭಿಮುಖಾ ದ್ರವಂತಿ |
ತಥಾ ತವಾಮೀ ನರಲೋಕವೀರಾ
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥28॥
ಹೇಗೆ ನದಿಗಳ ಅನೇಕ ಜಲಪ್ರವಾಹಗಳು ಸಮುದ್ರಾಭಿಮುಖವಾಗಿಯೇ ಶೀಘ್ರವಾಗಿ ಹರಿಯುತ್ತವೆಯೋ, ಹಾಗೆ ಈ ನರಲೋಕವೀರರು ಜ್ವಲಿಸುತ್ತಿರುವ ನಿನ್ನ ಮುಖಗಳನ್ನು ಪ್ರವೇಶಿಸುತ್ತಿದ್ದಾರೆ.
ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ |
ತಥೈವ ನಾಶಾಯ ವಿಶಂತಿ ಲೋಕಾಃ
ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥29॥
ಹೇಗೆ ಪತಂಗಗಳು ವೇಗದಿಂದ ಕೂಡಿದವುಗಳಾಗಿ ತಮ್ಮ ನಾಶಕ್ಕಾಗಿ ಜ್ವಲಿಸುವ ಅಗ್ನಿಯನ್ನು ಪ್ರವೇಶಿಸುತ್ತವೆಯೋ ಹಾಗೆಯೇ ಈ ಲೋಕಗಳು ಸಮೃದ್ಧವಾದ ವೀರರಿಂದ ಕೂಡಿದವುಗಳಾಗಿ ತಮ್ಮ ನಾಶಕ್ಕಾಗಿ ನಿನ್ನ ವದನಗಳನ್ನು ಪ್ರವೇಶಿಸುತ್ತಿವೆ.
ಲೇಲಿಹ್ಯಸೇ ಗ್ರಸಮಾನಃ ಸಮಂತಾತ್
ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ |
ತೇಜೋಭಿರಾಪೂರ್ಯ ಜಗತ್ ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥30॥
ಎಲ್ಲ ಲೋಕಗಳನ್ನೂ ನಿನ್ನ ಜ್ವಲಿಸುವ ವದನಗಳಿಂದ ಎಲ್ಲ ಕಡೆಗಳಲ್ಲಿಯೂ ನುಂಗುತ್ತಾ ನೀನು ನಾಲಿಗೆಯಿಂದ ಬಾಯಿ ತುದಿಗಳನ್ನು ಸವರಿಕೊಳ್ಳುತ್ತಿದ್ದೀಯೆ. ಎಲೈ ವಿಷ್ಣುವೇ, ಈ ನಿನ್ನ ಉಗ್ರವಾದ ತೇಜಸ್ಸು ಸಮಗ್ರವಾದ ಜಗತ್ತನ್ನು ನುಂಗಿ ಬಹಳ ತಾಪವನ್ನು ಉಂಟುಮಾಡುತ್ತಿದೆ.
ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ |
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥31॥
ಈ ಉಗ್ರರೂಪವನ್ನು ಧರಿಸಿದ ನೀನು ಯಾರೆಂದು ನನಗೆ ಹೇಳು. ಎಲೈ ದೇವಶ್ರೇಷ್ಠನೇ, ನಿನಗೆ ನಮಸ್ಕಾರ. ಪ್ರಸನ್ನನಾಗು. ಶ್ರೇಷ್ಠನಾದ ನಿನ್ನನ್ನು ನಾನು ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಈ ನಿನ್ನ ನಡವಳಿಕೆಯು ನನಗೆ ಅರ್ಥವಾಗುತ್ತಿಲ್ಲ.
ಶ್ರೀಭಗವಾನ್
ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ
ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ |
ಋತೇಽಪಿ ತ್ವಾ ನ ಭವಿಷ್ಯಂತಿ ಸರ್ವೇ
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥32॥
ಶ್ರೀಭಗವಾನ್ ನಾನು ಲೋಕಕ್ಷಯಕಾರಕನಾದ ಕಾಲರೂಪನಾಗಿ ಪ್ರವೃದ್ಧನಾಗಿದ್ದೇನೆ. ಲೋಕಗಳನ್ನು ಸಂಹರಿಸಲು ಇಲ್ಲಿ ಪ್ರವೃತ್ತನಾಗಿದ್ದೇನೆ. ಶತ್ರುಗಳ ಸೈನ್ಯದಲ್ಲಿ ಯಾವ ಯೋಧರಿದ್ದಾರೆಯೋ ಅವರೆಲ್ಲರೂ ನೀನಿಲ್ಲದಿದ್ದರೂ ಯಾರೂ ಉಳಿಯುವುದಿಲ್ಲ.
ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ |
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥33॥
ಆದ್ದರಿಂದ ನೀನು ಎದ್ದೇಳು. ಕೀರ್ತಿಯನ್ನು ಹೊಂದುವವನಾಗು. ಶತ್ರುಗಳನ್ನು ಜಯಿಸಿ ಸಮೃದ್ಧವಾದ ರಾಜ್ಯವನ್ನು ಭೋಗಿಸು. ಎಲೈ ಸವ್ಯಸಾಚಿಯೇ, ನಾನೇ ಇವರನ್ನು ಮೊದಲೇ ಕೊಂದಿದ್ದೇನೆ. ನೀನು ನಿನ್ನ ವ್ಯಾಪಾರವನ್ನು ಮಾಡಿ ಅವರ ವಧೆಯಲ್ಲಿ ಕೇವಲ ನಿಮಿತ್ತಮಾತ್ರನಾಗು.
ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾನ್ಯಾನಪಿ ಯೋಧವೀರಾನ್ |
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥34॥
ನನ್ನಿಂದ ಹತರಾದ ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಮತ್ತು ಉಳಿದ ವೀರ ಯೋಧರು ಎಲ್ಲರನ್ನೂ ನೀನು ಸಂಹರಿಸು. ವ್ಯಥೆಯನ್ನು ಪಡಬೇಡ. ಯುದ್ಧವನ್ನು ಮಾಡು. ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವಿ.

ಸಂಜಯಃ
ಏತಚ್ಛ್ರುತ್ವಾ ವಚನಂ ಕೇಶವಸ್ಯ
ಕೃತಾಂಜಲಿರ್ವೇಪಮಾನಃ ಕಿರೀಟೀ |
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ
ಸಗದ್ಗದಂ ಭೀತಭೀತಃ ಪ್ರಣಮ್ಯ ॥35॥
ಸಂಜಯ ಕೇಶವನ ಈ ಮಾತುಗಳನ್ನು ಕೇಳಿ ಅರ್ಜುನನು ಕೈಗಳನ್ನು ಮುಗಿದು ನಡುಗುತ್ತಾ ನಮಸ್ಕಾರವನ್ನು ಮಾಡಿ ಗದ್ಗದ ಕಂಠದಿಂದ, ಭೀತ ಭೀತನಾಗಿ ಪುನಃ ನಮಸ್ಕರಿಸಿ ಕೃಷ್ಣನನ್ನು ಕುರಿತು ಹೇಳಿದನು.
ಅರ್ಜುನಃ
ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ
ಜಗತ್ ಪ್ರಹೃಷ್ಯತ್ಯನುರಜ್ಯತೇ ಚ |
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥36॥
ಅರ್ಜುನ ಎಲೈ ಹೃಷೀಕೇಶನೇ (ಇಂದ್ರಿಯಾಧಿಪತಿಯೇ), ನಿನ್ನ ಕೀರ್ತನೆಯಿಂದ ಜಗತ್ತು ಸಂತೋಷಪಟ್ಟು ನಿನ್ನಲ್ಲಿ ಅನುರಕ್ತವಾಗುತ್ತದೆ ಎಂಬುದು ಬಹಳ ಯುಕ್ತವಾದುದು. ರಾಕ್ಷಸರು ಭೀತರಾಗಿ ದಿಕ್ಕು, ದಿಕ್ಕುಗಳಿಗೆ ಓಡುತ್ತಿದ್ದಾರೆ. ಸಿದ್ಧ ಸಂಘಗಳೆಲ್ಲವೂ ನಿನಗೆ ನಮಸ್ಕರಿಸುತ್ತಿವೆ.
ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ |
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್ ॥37॥
ಎಲೈ ಮಹಾತ್ಮನೇ, ಸರ್ವೋತ್ತಮನಾದ ಬ್ರಹ್ಮದೇವರಿಗೂ ಸೃಷ್ಟಿಕರ್ತನಾದ ನಿನಗೆ ಅವರು ಏಕೆ ನಮಸ್ಕಾರವನ್ನು ಮಾಡಲಾರರು? ಅನಂತನೇ, ದೇವೇಶನೇ, ಜಗದಾಶ್ರಯನೇ, ನೀನೇ ಅಕ್ಷರ, ವ್ಯಕ್ತಾವ್ಯಕ್ತ ಪ್ರಪಂಚದಲ್ಲಿ ಇರುವವನು ಮತ್ತು ಅದಕ್ಕಿಂತಲೂ ಉತ್ತಮನಾದವನು.
ತ್ವಮಾದಿದೇವಃ ಪುರುಷಃ ಪುರಾಣಃ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ |
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥38॥
ನೀನು ಆದಿದೇವ. ಪುರಾಣಪುರುಷ. ನೀನು ಈ ಜಗತ್ತಿಗೆ ಶ್ರೇಷ್ಠನಾದ ಧಾರಕನಾದವನು. ನೀನು ಸರ್ವಜ್ಞನಾದವನು. ನೀನೇ ಜ್ಞೇಯವಸ್ತುಗಳಲ್ಲಿ ಶ್ರೇಷ್ಠನಾದವನು. ನೀನೇ ಶ್ರೇಷ್ಠವಾದ ಆಶ್ರಯನಾದವನು. ಎಲೈ ಅನಂತರೂಪನೇ, ನಿನ್ನಿಂದ ವಿಶ್ವವು ವ್ಯಾಪ್ತವಾಗಿದೆ.
ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ |
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥39॥
ನೀನೇ ವಾಯು, ಯಮ, ಅಗ್ನಿ, ವರುಣ, ಶಶಾಂಕ, ಪ್ರಜಾಪತಿ, ಪ್ರಪಿತಾಮಹರಾದ ಬ್ರಹ್ಮ (ವಾಯ್ವಾದಿ ಶಬ್ದದಿಂದ ವಾಚ್ಯನಾದವನು). ನಿನಗೆ ಸಾವಿರ ಬಾರಿ ಪುನಃ ಪುನಃ ನಮಸ್ಕಾರಗಳಿರಲಿ. ಪುನಃ ಇನ್ನೂ ನಮಸ್ಕಾರಗಳನ್ನು ಮಾಡುವೆನು.
ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ |
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥40॥
ನಿನಗೆ ಮುಂದಿನಿಂದ ನಮಸ್ಕಾರ, ಹಿಂದಿನಿಂದಲೂ ನಮಸ್ಕಾರ. ಎಲೈ ಸರ್ವನೇ, ನಿನಗೆ ಎಲ್ಲ ಕಡೆಗಳಿಂದಲೂ ನಮಸ್ಕಾರ. ಅನಂತಸಾಮರ್ಥ್ಯವನ್ನು ಮತ್ತು ಅಪರಿಮಿತ ಪರಾಕ್ರಮವನ್ನು ಹೊಂದಿದ ನೀನು ಎಲ್ಲವನ್ನೂ ವ್ಯಾಪಿಸಿದ್ದೀಯೆ. ಆದ್ದರಿಂದ `ಸರ್ವ' ಎಂಬ ಶಬ್ದದಿಂದ ಕರೆಸಿಕೊಳ್ಳುತ್ತೀಯೆ.
ವಿಶೇಷ ವಿಚಾರ ತಾನೇ ಮಾಡಿದ `ಸರ್ವ' ಎಂಬ ಸಂಬೋಧನೆಗೆ ಎಲ್ಲವನ್ನೂ ವ್ಯಾಪಿಸಿರುವುದರಿಂದ ನೀನು `ಸರ್ವ' ಎಂದು ಕರೆಸಿಕೊಳ್ಳುತ್ತೀಯೆ ಎಂದು ಅರ್ಜುನನೇ ವ್ಯಾಖ್ಯಾನ ಮಾಡುತ್ತಾನೆ ಎಂಬುದು ಗಮನಿಸಬೇಕಾದ ಅಂಶ.
ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ |
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥41॥
ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು |

ಏಕೋಽಥ ವಾಽಪ್ಯಚ್ಯುತ ತತ್ ಸಮಕ್ಷಂ
ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥42॥
ನೀನು ನನ್ನ ಸ್ನೇಹಿತನೆಂದು ತಿಳಿದು ಬಹುಮಾನರಹಿತನಾಗಿ ಹೇ ಕೃಷ್ಣ, ಹೇ ಯಾದವ, ಹೇ ಮಿತ್ರ ಎಂದು ಈ ನಿನ್ನ ಮಹಿಮೆಯನ್ನು ತಿಳಿಯದೆ ನಾನು ಏನು ಹೇಳಿದ್ದೇನೆಯೋ ಅಥವಾ ಪ್ರಮಾದದಿಂದ ಅಥವಾ ಸ್ನೇಹದಿಂದ ಯಾವ ಅಪಚಾರವನ್ನು ಮಾಡಿದ್ದೇನೆಯೋ ಮತ್ತು ವಿಹಾರ, ಶಯ್ಯಾ, ಆಸನ, ಭೋಜನ ಸಮಯಗಳಲ್ಲಿ ಅಪಹಾಸ್ಯಕ್ಕಾಗಿ ಯಾವ ಅಗೌರವವನ್ನು ಏಕಾಂತದಲ್ಲಾಗಲೀ ಅಥವಾ ಅನೇಕರ ಸಮಕ್ಷಮದಲ್ಲಾಗಲೀ ತೋರಿಸಿದ್ದೇನೆಯೋ, ಎಲೈ ಅಚ್ಯುತನೇ, ಅಪ್ರಮೇಯನಾದ ನಿನ್ನನ್ನು ಅದಕ್ಕಾಗಿ ನಾನು ಕ್ಷಮೆ ಕೇಳುತ್ತಿದ್ದೇನೆ.
ಪಿತಾಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ |
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯಪ್ರತಿಮಪ್ರಭಾವ ॥43॥
ಎಲೈ ಅಸದೃಶಸಾಮರ್ಥ್ಯವುಳ್ಳವನೇ, ಈ ಚರಾಚರವಾದ ಪ್ರಪಂಚಕ್ಕೆ ನೀನು ತಂದೆಯಾಗಿದ್ದೀಯೆ. ಈ ಜಗತ್ತಿಗೆ ನೀನು ಪೂಜ್ಯನಾದವನು, ಶ್ರೇಷ್ಠನಾದ ಗುರುವು. ನಿನಗೆ ಸಮಾನರಾದವರು ಯಾರೂ ಇಲ್ಲ, ಇನ್ನು ಅಧಿಕನಾದ ಇನ್ನೊಬ್ಬನು ಲೋಕತ್ರಯದಲ್ಲೇ ಆದರೂ ಎಲ್ಲಿಂದ ಬರಬೇಕು?
ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಮ್ |
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥44॥
ಆದ್ದರಿಂದ ನಮಸ್ಕಾರವನ್ನು ಮಾಡಿ ನನ್ನ ದೇಹವನ್ನು ನಿನ್ನ ಮುಂದೆ ಸಮರ್ಪಣೆಯನ್ನು ಮಾಡಿ ಈಶನೂ, ಸ್ತುತ್ಯನೂ ಆದ ನಿನ್ನನ್ನು ಪ್ರಸನ್ನನಾಗು ಎಂದು ಬೇಡುತ್ತಿದ್ದೇನೆ. ತಂದೆಯು ಮಗನನ್ನು ಕ್ಷಮಿಸಿದಂತೆ, ಸ್ನೇಹಿತನು ಸ್ನೇಹಿತನ ತಪ್ಪುಗಳನ್ನು ಕ್ಷಮಿಸುವಂತೆ, ಪ್ರಿಯನು ಪ್ರಿಯೆಯ ಅಪರಾಧವನ್ನು ಕ್ಷಮಿಸುವಂತೆ ಎಲೈ ದೇವನೇ, ನನ್ನ ಅಪರಾಧವನ್ನು ಸಹಿಸಿ ಕ್ಷಮಿಸಬೇಕು.
ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ |
ತದೇವ ಮೇ ದರ್ಶಯ ದೇವ ರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥45॥
ಹಿಂದೆ ಎಂದೂ ನೋಡದ ಈ ರೂಪವನ್ನು ನೋಡಿ ಹರ್ಷಗೊಂಡಿದ್ದೇನೆ. ಭಯದಿಂದ ನನ್ನ ಮನಸ್ಸು ವ್ಯಥೆಗೆ ಒಳಗಾಗಿದೆ. ಎಲೈ ಜಗನ್ನಿವಾಸನೇ, ದೇವೇಶನೇ, ದೇವನೇ, ನಿನ್ನ ಮೊದಲಿನ ರೂಪವನ್ನೇ ನನಗೆ ತೋರಿಸು.
ಕಿರೀಟಿನಂ ಗದಿನಂ ಚಕ್ರಹಸ್ತಂ
ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ |
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ ॥46॥
ಕಿರೀಟ, ಗದೆಗಳನ್ನು ಧರಿಸಿದ, ಕೈಯಲ್ಲಿ ಚಕ್ರವನ್ನು ಹಿಡಿದ ನಿನ್ನ ಮೊದಲಿನ ರೂಪವನ್ನು ನಾನು ಹಾಗೆಯೇ ನೋಡಲು ಇಚ್ಛಿಸುತ್ತೇನೆ. ಎಲೈ ಸಹಸ್ರಬಾಹುವೇ, ಎಲೈ ವಿಶ್ವಮೂರ್ತಿಯೇ, ನಿನ್ನ ಮೊದಲಿನ ನಾಲ್ಕುಭುಜದ ರೂಪವನ್ನೇ ಧರಿಸುವವನಾಗು.
ಶ್ರೀಭಗವಾನ್
ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ |
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥47॥
ಶ್ರೀಭಗವಾನ್ ಎಲೈ ಅರ್ಜುನನೇ, ಪ್ರಸನ್ನನಾದ ನಾನು ನನ್ನ ಆತ್ಮ ಸಾಮರ್ಥ್ಯದಿಂದ ತೇಜೋಮಯವೂ, ಪೂರ್ಣವೂ, ಅನಂತವೂ, ಆದ್ಯವೂ ಆದ ಈ ಶ್ರೇಷ್ಠವಾದ ರೂಪವನ್ನು ನಿನಗೆ ತೋರಿಸಿದ್ದೇನೆ. ಈ ರೂಪವು ಇನ್ನೊಬ್ಬರಿಂದ ಹಿಂದೆ ನೋಡಲ್ಪಟ್ಟಿಲ್ಲ.
ವಿಶೇಷ ವಿಚಾರ ಬ್ರಹ್ಮಾದಿ ದೇವತೆಗಳು ವಿಶ್ವರೂಪವನ್ನು ನೋಡಿದ್ದರೂ, ಅರ್ಜುನನ ಯೋಗ್ಯತೆಗೆ ಸರಿಯಾದಷ್ಟು ಮಾತ್ರ ತೋರುವ ಈ ವಿಶ್ವರೂಪವನ್ನು ನೋಡಿಲ್ಲ ಎಂದು ಅಭಿಪ್ರಾಯ.
ನ ವೇದಯಜ್ಞಾಧ್ಯಯನೈರ್ನ ದಾನೈಃ
ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ |
ಏವಂರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥48॥
ಎಲೈ ಕುರುಪ್ರವೀರನೇ, ಇಂತಹ ರೂಪವುಳ್ಳ ನನ್ನನ್ನು ನಿನ್ನನ್ನು ಬಿಟ್ಟು ಬೇರೆ ಯಾವ ಮನುಷ್ಯನೇವ್ಮಾಗಲೀ, ವೇದಗಳಿಂದಲಾಗಲೀ, ಯಜ್ಞಗಳಿಂದಾಗಲೀ, ಅಧ್ಯಯನಗಳಿಂದಾಗಲೀ, ದಾನಗಳಿಂದಾಗಲೀ, ಭಿನ್ನಕರ್ಮದಿಂದಾಗಲೀ, ಉಗ್ರವಾದ ತಪಸ್ಸಿನಿಂದಾಗಲೀ ನೋಡಲು ಸಾಧ್ಯವಿಲ್ಲ.
ಮಾ ತೇ ವ್ಯಥಾ ಮಾ ಚ ವಿಮೂಢಭಾವೋ

दृष्ट्वा रूपं घोरमीदृङ्ममेदम् ।
व्यपेतभीः प्रीतमनाः पुनस्त्वं
तदेव मे रूपमिदं प्रपश्य ॥49॥
ಇಂತಹ ಈ ನನ್ನ ಘೋರ ರೂಪವನ್ನು ನೋಡಿ ವ್ಯಥೆ ಪಡಬೇಡ. ಮೋಹವನ್ನೂ ಹೊಂದಬೇಡ. ಭಯದಿಂದ ನಿರ್ಮುಕ್ತನಾಗಿ ಸಂತೋಷಗೊಂಡ ಮನಸ್ಸಿನಿಂದ ನನ್ನ ಮೊದಲಿನ ಈ ರೂಪವನ್ನೇ ಪುನಃ ನೋಡುವವನಾಗು.

ಸಂಜಯಃ

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥50॥
ಸಂಜಯ ವಾಸುದೇವನು ಹೀಗೆ ಅರ್ಜುನನಿಗೆ ಹೇಳಿ ಪುನಃ ತನ್ನ ಮೊದಲಿನ ರೂಪವನ್ನು ತೋರಿಸಿದನು. ಮಹಾತ್ಮನಾದ ಅವನು ಪುನಃ ಸೌಮ್ಯವಾದ ರೂಪವನ್ನು ಧರಿಸಿ ಭಯಗೊಂಡಿದ್ದ ಅರ್ಜುನನಿಗೆ ಸಮಾಧಾನವನ್ನು ಮಾಡಿದನು.

ಅರ್ಜುನಃ

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥51॥
ಅರ್ಜುನ ಎಲೈ ಜನಾರ್ದನನೇ, ಮನುಷ್ಯರ ರೂಪಕ್ಕೆ ಸದೃಶವಾದ ಈ ನಿನ್ನ ಸೌಮ್ಯರೂಪವನ್ನು ನೋಡಿ ಈಗ ಸಮಾಧಾನಗೊಂಡಿದ್ದೇನೆ. ನನ್ನ ಜ್ಞಾನವು ಸರಿಯಾಗಿದೆ. ನನ್ನ ಮೊದಲಿನ ಸ್ವಭಾವವು ಹಿಂದಿರುಗಿ ಬಂದಿದೆ.

ಶ್ರೀಭಗವಾನ್

ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥52॥
ಶ್ರೀಭಗವಾನ್ ನೋಡಲು ಬಹಳ ಕಷ್ಟಸಾಧ್ಯವಾದ ಈ ನನ್ನ ರೂಪವನ್ನು ನೀನು ಏನು ನೋಡಿದ್ದೀಯೋ ಆ ರೂಪವನ್ನು ನೋಡಲು ದೇವತೆಗಳು ನಿತ್ಯವೂ ಆಸೆ ಪಡುತ್ತಾರೆ.

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥53॥
ನೀನು ನನ್ನನ್ನು ಹೇಗೆ ನೋಡಿದ್ದೀಯೋ ಹಾಗೆ ನೋಡಲು ವೇದಗಳಿಂದಾಗಲೀ, ತಪಸ್ಸಿನಿಂದಾಗಲೀ, ದಾನದಿಂದಾಗಲೀ ಅಥವಾ ಪೂಜೆಯಿಂದಾಗಲೀ ಸಾಧ್ಯವಿಲ್ಲ.

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥54॥
ಎಲೈ ಅರ್ಜುನನೇ, ಪರಂತಪನೇ, ಅನನ್ಯವಾದ ಭಕ್ತಿಯಿಂದ ಮಾತ್ರ ನನ್ನನ್ನು ಹೀಗೆ ನೋಡಲು ಮತ್ತು ಯಥಾರ್ಥವಾಗಿ ತಿಳಿಯಲು ಮತ್ತು ಪ್ರವೇಶಿಸಲು ಸಾಧ್ಯವಾಗುತ್ತದೆ.

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥55॥
ಎಲೈ ಪಾಂಡವನೇ, ನನಗೆ ಪ್ರಿಯವಾದ ಕರ್ಮಗಳನ್ನು ಮಾಡಿ ನನ್ನ ಸರ್ವೋತ್ತಮತ್ವವನ್ನು ತಿಳಿದು, ನನ್ನ ಭಕ್ತನಾಗಿ, ವಿಷಯಗಳಲ್ಲಿ ಸ್ನೇಹವನ್ನು ತೊರೆದು, ಸರ್ವಭೂತಗಳಲ್ಲೂ ವೈರವನ್ನು ತೊರೆದವನು ನನ್ನನ್ನು ಹೊಂದುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ಮೂರನೆಯ ಅಧ್ಯಾಯ ಮುಗಿಯಿತು.

* * * * *

ಮೂವತ್ನಾಲ್ಕನೆಯ ಅಧ್ಯಾಯ

ಭಗವದ್ಗೀತಾ ಭಕ್ತಿಯೋಗ.

ಲಕ್ಷ್ಮಿಯ ಉಪಾಸಕನಿಗಿಂತ ಹರಿಯ ಉಪಾಸಕನ ಶ್ರೇಷ್ಠತ್ವ ಕಥನ.

ಅರ್ಜುನಃ

ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥1॥
ಅರ್ಜುನ ಹೀಗೆ ಭಕ್ತಿಯುಕ್ತರಾಗಿ ಯಾರು ನಿನ್ನನ್ನು ಸತತವಾಗಿ ಉಪಾಸನೆ ಮಾಡುತ್ತಾರೆಯೋ ಮತ್ತು ಯಾರು ಅಕ್ಷರಶಬ್ದವಾಚ್ಯಳಾದ, ಅವ್ಯಕ್ತತತ್ತ್ವಭಿಮಾನಿಯಾದ ಲಕ್ಷ್ಮಿಯನ್ನು ಉಪಾಸನೆ ಮಾಡುತ್ತಾರೆಯೋ, ಅವರಲ್ಲಿ ಶ್ರೇಷ್ಠರಾದ ಯೋಗಿಗಳು ಯಾರು?

ಶ್ರೀಭಗವಾನ್

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥2॥
ಶ್ರೀಭಗವಾನ್ ನನ್ನಲ್ಲೇ ಮನಸ್ಸನ್ನು ಇಟ್ಟು ಶ್ರೇಷ್ಠವಾದ ಶ್ರದ್ಧೆಯಿಂದ ಕೂಡಿದವರಾಗಿ ಯಾರು ನಿತ್ಯವೂ

ಕರ್ಮ-ಧ್ಯಾನ-ಯೋಗಗಳಿಂದ ಯುಕ್ತರಾಗಿ ನನ್ನನ್ನು ಉಪಾಸನೆ ಮಾಡುತ್ತಾರೆಯೋ ಅವರು ಅವರಿಬ್ಬರಲ್ಲಿ ಶ್ರೇಷ್ಠರಾದವರು ಎಂದು ನನ್ನ ಅಭಿಪ್ರಾಯ.
ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ |
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥3॥
ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ |
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥4॥
ಯಾರು ಇಂದ್ರಿಯಸಮೂಹವನ್ನೆಲ್ಲಾ ನಿಯಂತ್ರಿಸಿ ಎಲ್ಲ ಕಡೆಗಳಲ್ಲಿಯೂ ಸಮಬುದ್ಧಿಯನ್ನು ಹೊಂದಿ, ಸರ್ವತ್ರ ವ್ಯಾಪ್ತವೂ, ಅಚಿಂತ್ಯವೂ ಆದ ಅವ್ಯಕ್ತತತ್ವಕ್ಕೆ ಅಭಿಮಾನಿಯಾದ ನಿರ್ವಿಕಾರಳೂ, ಅಚಲಳೂ, ಸ್ಥಿರಳೂ ಆದ ಲಕ್ಷ್ಮಿಯನ್ನು ಉಪಾಸನೆ ಮಾಡುತ್ತಾರೆಯೋ ಸರ್ವಭೂತಹಿತದಲ್ಲಿ ಆಸಕ್ತರಾದ ಅವರು ಲಕ್ಷ್ಮಿಯ ಉಪಾಸನೆಯನ್ನು ಮಾಡಿ ಲಕ್ಷ್ಮಿಯ ದ್ವಾರಾ ನನ್ನನ್ನು ಉಪಾಸನೆ ಮಾಡಿ, ನನ್ನನ್ನೇ ಹೊಂದುತ್ತಾರೆ.
ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ |
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥5॥
ಅವ್ಯಕ್ತತತ್ವದ ಉಪಾಸನೆಯಲ್ಲಿ ಆಸಕ್ತರಾದ ಯೋಗಿಗಳಿಗೆ ಹೆಚ್ಚು ಕ್ಲೇಶವಿದೆ. ಅವ್ಯಕ್ತತತ್ವದ ದ್ವಾರಾ ಸಂಪಾದನೆ ಮಾಡಿದ ಗತಿಯು ಹೆಚ್ಚು ದುಃಖದಿಂದ ಕೂಡಿರುತ್ತದೆ. ಏಕೆಂದರೆ ಅವರು ಲಕ್ಷ್ಮಿಯ ಪ್ರೀತ್ಯರ್ಥವಾಗಿ ದೇಹದಂಡನಾದಿ ತಪಸ್ಸನ್ನು ಮಾಡಿ ಪುನಃ ನನ್ನ ಪ್ರೀತಿಗಾಗಿಯೂ ಹಾಗೆಯೇ ಮಾಡುತ್ತಾರೆ. ಹಾಗಾದರೆ ಅವರು ಏಕೆ ಹಾಗೆ ಮಾಡುತ್ತಾರೆ ಎಂದು ಪ್ರಶ್ನೆ ಮಾಡಿದರೆ, ಅವರ ಯೋಗ್ಯತೆಯೇ ಅಂತಹದು. ಅವರು ಸ್ವಲ್ಪ ಐಹಿಕಲೋಕದ ಆಶಾಪೂರ್ವಕವಾಗಿ ಪರಲೋಕದ ಆಸೆಯನ್ನು ಹೊಂದಿರುತ್ತಾರೆ. ಆದ್ದರಿಂದ ಹಾಗೆ ಮಾಡುತ್ತಾರೆ ಎಂದು ಉತ್ತರ.
ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ |
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥6॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ |
ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥7॥
ಯಾರು ನನ್ನನ್ನೇ ಸರ್ವೋತ್ತಮನೆಂದು ತಿಳಿದು ಎಲ್ಲ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ ಅನನ್ಯವಾದ ಯೋಗದಿಂದ ನನ್ನನ್ನು ಧ್ಯಾನ ಮಾಡುತ್ತಾ ಉಪಾಸನೆ ಮಾಡುತ್ತಾರೆಯೋ, ಎಲೈ ಪಾರ್ಥನೇ, ಅಂತಹ ನನ್ನಲ್ಲೇ ಆಸಕ್ತವಾದ ಚಿತ್ತವುಳ್ಳ ಭಕ್ತರನ್ನು ನಾನು ಮೃತ್ಯುರೂಪವಾದ ಸಂಸಾರಸಾಗರದಿಂದ ಬೇಗ ಮೇಲಕ್ಕೆ ಎತ್ತುತ್ತೇನೆ.
ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ |
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥8॥
ನನ್ನಲ್ಲಿಯೇ ಮನಸ್ಸನ್ನು ಇಡು. ನನ್ನಲ್ಲಿ ಬುದ್ಧಿಯನ್ನು ಇಡು. ಅಲ್ಲಿಂದ ಮುಂದಕ್ಕೆ ನನ್ನಲ್ಲಿಯೇ ವಾಸಿಸುವಿ. ಇದರಲ್ಲಿ ಸಂಶಯವಿಲ್ಲ.
ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ |
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥9॥
ಎಲೈ ಧನಂಜಯನೇ, ಒಂದು ಪಕ್ಷ ನನ್ನಲ್ಲಿ ಚಿತ್ತವನ್ನು ಸ್ಥಿರವಾಗಿ ಇಡಲು ಅಸಮರ್ಥನಾದರೆ ಮನಸ್ಸನ್ನು ವಿಷಯಗಳಿಂದ ಹಿಂದೆ ಎಳೆದುಕೊಂಡು ಪುನಃ ಭಗವಂತನಲ್ಲಿಯೇ ಇಡುವ ಅಭ್ಯಾಸ ರೂಪವಾದ ಉಪಾಯದಿಂದ ನನ್ನನ್ನು ಹೊಂದಲು ಬಯಸು.
ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ |
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥10॥
ಅಂತಹ ಅಭ್ಯಾಸವನ್ನು ಮಾಡಲು ಅಸಮರ್ಥನಾದರೆ ನನ್ನ ಪೂಜಾದಿ ಕರ್ಮವನ್ನು ಶ್ರದ್ಧೆಯಿಂದ ಮಾಡು. ನನ್ನ ಪ್ರೀತ್ಯರ್ಥವಾಗಿ ಅಂತಹ ಕರ್ಮಗಳನ್ನು ಮಾಡಿದರೂ ಸಿದ್ಧಿಯನ್ನು ಹೊಂದುವಿ.
ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ |
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥11॥
ಒಂದು ಪಕ್ಷ ನನ್ನ ಯೋಗವನ್ನು ಆಶ್ರಯಿಸಿ ಇದನ್ನೂ ಮಾಡಲು ಅಸಮರ್ಥನಾದರೆ ಚಿತ್ತವನ್ನು ನಿಯಂತ್ರಿಸಿ ಸರ್ವಕರ್ಮಗಳ ಫಲವಾದ ಸ್ವರ್ಗ-ಧನ-ಕನಕಾದಿಗಳಲ್ಲಿ ಆಸೆಯನ್ನು ಬಿಡು. (ವೈರಾಗ್ಯವನ್ನೇ ಮಾಡು ಎಂದು ಅರ್ಥ).
ಶ್ರೇಯೋ ಹಿ ಜ್ಞಾನಮಭ್ಯಾಸಾದ್ ಜ್ಞಾನಾದ್ ಧ್ಯಾನಂ ವಿಶಿಷ್ಯತೇ |
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾತ್ ಶಾಂತಿರನಂತರಮ್ ॥12॥
ಕೇವಲ ಅರ್ಥಾನುಸಂಧಾನ ರಹಿತವಾದ ವೇದಗಳ ಅಭ್ಯಾಸಕ್ಕಿಂತಲೂ ಅದರ ಅರ್ಥಜ್ಞಾನವು ಶ್ರೇಷ್ಠವಾದುದು. ಜ್ಞಾನಕ್ಕಿಂತಲೂ ಧ್ಯಾನವು ಶ್ರೇಷ್ಠವಾದುದು. ಧ್ಯಾನಕ್ಕಿಂತಲೂ ಕರ್ಮಫಲಗಳ ಪರಿತ್ಯಾಗವು ಶ್ರೇಷ್ಠವಾದುದು. ಅಂತಹ ಪರಿತ್ಯಾಗವನ್ನು ಮಾಡಿದ ಮೇಲೆ ಬುದ್ಧಿಯು ನನ್ನಲ್ಲಿಯೇ ನಿಲ್ಲುತ್ತದೆ.
ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ |
ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥13॥
ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ |
ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥14॥
ಯಾವ ಪ್ರಾಣಿಗಳಲ್ಲಿಯೂ ದ್ವೇಷವನ್ನು ಮಾಡದೆ, ಸ್ನೇಹ ಮತ್ತು ಕರುಣೆಯಿಂದ ಕೂಡಿದವನಾಗಿ, ಅಹಂಕಾರ-ಮಮಕಾರಗಳನ್ನು

ತೊರೆದು, ಸುಖ-ದುಃಖಗಳಲ್ಲಿ ಸಮಾನನಾಗಿದ್ದು, ಇನ್ನೊಬ್ಬರನ್ನು ಕ್ಷಮಿಸುವ ಸ್ವಭಾವವನ್ನು ಹೊಂದಿ, ಅಪ್ರಯತ್ನದಿಂದ ಲಭ್ಯವಾದುದರಲ್ಲಿ ತೃಪ್ತಿಯನ್ನು ಹೊಂದಿ, ತತ್ತ್ವಜ್ಞಾನದ ವಿಷಯದಲ್ಲಿ ದೃಢವಾದ ನಿಶ್ಚಯವನ್ನು ಹೊಂದಿ, ಜಿತಮನಸ್ಸುಳ್ಳ, ಸತತವಾಗಿ ನನ್ನಲ್ಲಿ ಮನೋಬುದ್ಧಿಯನ್ನು ಅರ್ಚಿಸುವ ನನ್ನ ಭಕ್ತನು ನನಗೆ ಪ್ರಿಯನಾದವನು.
ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ |
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ||
ಯಾವನನ್ನು ನೋಡಿದರೆ ಲೋಕವು ಹೆದರುವುದಿಲ್ಲವೋ, ಯಾವನು ಲೋಕಕ್ಕೆ ಹೆದರುವುದಿಲ್ಲವೋ ಮತ್ತು ಹರ್ಷ-ಕ್ರೋಧ-ಭಯ-ಉದ್ವೇಗಗಳಿಂದ ಮುಕ್ತನಾಗಿರುತ್ತಾನೆಯೋ ಅವನು ನನಗೆ ಪ್ರಿಯನಾದವನು.
ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ |
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ||16||
ಬಹಳ ವಸ್ತುಗಳನ್ನು ಅಪೇಕ್ಷಿಸದೆ ಶುಚಿಯೂ, ದಕ್ಷನೂ, ವಿಷಯಗಳಲ್ಲಿ ಆಸಕ್ತರಹಿತನೂ, ವ್ಯಥೆಯಿಲ್ಲದವನೂ, ಎಲ್ಲಾ ಕಾಮ್ಯ ಕರ್ಮಗಳನ್ನು ಪರಿತ್ಯಾಗ ಮಾಡಿದವನೂ ಆದ ನನ್ನ ಭಕ್ತನು ನನಗೆ ಪ್ರಿಯನಾದವನು.
ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ |
ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ||17||
ಯಾವನು ಸುಖ ಸಾಧನವು ಒದಗಿದಾಗ ಹರ್ಷ ಪಡುವುದಿಲ್ಲವೋ, ದುಃಖ ಸಾಧನವು ಒದಗಿದಾಗ ದ್ವೇಷ ಮಾಡುವುದಿಲ್ಲವೋ, ಶೋಕಪಡುವುದಿಲ್ಲವೋ, ಏನನ್ನೂ ಬಯಸುವುದಿಲ್ಲವೋ, ಕಾಮ್ಯವಾದ ಶುಭವನ್ನು ಮತ್ತು ಅಶುಭವನ್ನು ಸರ್ವಾತ್ಮನಾ ತ್ಯಾಗಮಾಡುತ್ತಾನೆಯೋ ಅಂತಹ ಭಕ್ತನು ನನಗೆ ಪ್ರಿಯನಾದವನು.
ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ |
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ||18||
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ |
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ||19||
ಶತ್ರು-ಮಿತ್ರರಲ್ಲಿ ಸಮನಾಗಿದ್ದು, ಹಾಗೆಯೇ ಮಾನಾಪಮಾನಗಳಲ್ಲಿಯೂ, ಶೀತೋಷ್ಣ, ಸುಖ-ದುಃಖಾದಿಗಳಲ್ಲಿಯೂ ಸಮನಾಗಿದ್ದು, ವಿಷಯದ ಭೋಗಗಳಲ್ಲಿ ಸ್ನೇಹವನ್ನು ಹೊಂದದವನಾಗಿ ನಿಂದಾಸ್ತುತಿಗಳಲ್ಲಿ ಸಮಾನನಾಗಿದ್ದು ಮೌನಿಯಾಗಿ ಅಪ್ರಯತ್ನದಿಂದ ಒದಗಿದುದರಲ್ಲಿ ತೃಪ್ತಿಯನ್ನು ಹೊಂದಿ ಪರಮಾತ್ಮನೇ ತನಗೆ ಆಶ್ರಯನೆಂದು ತಿಳಿದು ಸ್ಥಿರವಾದ ಭಕ್ತಿಯುಳ್ಳ ಮನುಷ್ಯನು ನನಗೆ ಪ್ರಿಯನಾದವನು.
ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ |
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ||20||
ಯಾರು ಭಗವತ್ಸಂಬಂಧಿಯಾದ, ಮೋಕ್ಷಸಾಧಕವಾದ, `ಅದ್ವೇಷ್ಟಾಸರ್ವ- ಭೂತಾನಾಂ' ಇತ್ಯಾದಿಗಳಲ್ಲಿ ಹೇಳಿದ ಗುಣಗಳನ್ನು ಹೊಂದಿ ಶ್ರದ್ಧೆಯಿಂದ ನನ್ನನ್ನೇ ಸರ್ವೋತ್ತಮನೆಂದು ತಿಳಿದು ಭಕ್ತರಾಗಿ ನನ್ನ ಉಪಾಸನೆಯನ್ನು ಮಾಡುತ್ತಾರೆಯೋ ಅವರು ನನಗೆ ಪ್ರಿಯರಾದವರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುಸಿತ್ರಂಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ಏಕವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ಭಗವದ್ಗೀತಾ ಕ್ಷೇತ್ರ-ಕ್ಷೇತ್ರಜ್ಞವಿಭಾಗಯೋಗ.
ಅರ್ಜುನಃ
ಪುರುಷಂ ಪ್ರಕೃತಿಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ |
ಏತದ್ ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ||1||
ಅರ್ಜುನ ಎಲೈ ಕೇಶವನೇ, ನಾನು ಪುರುಷ, ಪ್ರಕೃತಿ, ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ ಮತ್ತು ಜ್ಞೇಯ ಇವುಗಳನ್ನು ತಿಳಿದುಕೊಳ್ಳಲು ಇಚ್ಛಿಸುತ್ತೇನೆ.
ವಿಶೇಷ ವಿಚಾರ ಪ್ರಕೃತಿ ಎಂದರೆ ಮೂಲಕ್ಷೇತ್ರ. ಕ್ಷೇತ್ರವೆಂದರೆ ಲಿಂಗದೇಹರೂಪವಾಗಿ ಪ್ರಕೃತಿಯ ವಿಕಾರವಾದುದು ಮತ್ತು ಪುರುಷನಿಗೆ ಸ್ಥೂಲದೇಹ ಸಂಬಂಧರೂಪವಾದ ವಿಕಾರವನ್ನು ಉಂಟುಮಾಡುವಂತಹದು. ಪುರುಷಶಬ್ದದಿಂದ ಜೀವನನ್ನು ಪ್ರತ್ಯೇಕವಾಗಿ ಗ್ರಹಣ ಮಾಡಿರುವುದರಿಂದ ಕ್ಷೇತ್ರಜ್ಞ ಎಂದರೆ ಜೀವನ ಹೃದಯಕಮಲದಲ್ಲಿದ್ದು, ಕ್ಷೇತ್ರ ಶಬ್ದವಾಚ್ಯವಾದ ಎಲ್ಲದರ ವಿಕಾರವನ್ನು ಸಾಕ್ಷಿಯಾಗಿ ನೋಡುವ ಪರಮಾತ್ಮನ ರೂಪ. ಜ್ಞಾನ ಎಂದರೆ ಜ್ಞಾನಸಾಧನ ಮತ್ತು ಜ್ಞಾನಕಾರ್ಯ. ಜ್ಞೇಯ ಎಂದರೆ ಆ ಜ್ಞಾನಕ್ಕೆ ವಿಷಯನಾದ ಮೋಕ್ಷದಾಯಕನಾದ ಪರಮಾತ್ಮ. ಇದನ್ನು ತಿಳಿಯಲು ಇಚ್ಛಿಸುತ್ತೇನೆ ಎಂದು ಪ್ರತ್ಯೇಕವಾಗಿ ಇಟ್ಟುಕೊಳ್ಳಬೇಕು. ಮೂಲಕಾರಣವಾದ ಪ್ರಕೃತಿಯು ಮತ್ತು ಪುರುಷ ಶಬ್ದವಾಚ್ಯನಾದ ಜೀವನು ವಿಕಾರವನ್ನು ಹೊಂದುವುದರಿಂದ ವಿಕಾರಾಭಿಮಾನಿಗಳಾಗಿ ಅವರು ಕ್ಷೇತ್ರಪದದಿಂದಲೂ ಸಂಗೃಹೀತವಾಗುವುದರಿಂದ ಕ್ಷೇತ್ರ ನಿರೂಪಣವೂ ಸಹ ಪ್ರಕೃತಿ ಪುರುಷನ ನಿರೂಪಣೆ ಆದ ಕಾರಣದಿಂದಲೂ, ಪ್ರಕೃತಿ ಪುರುಷ ವಿಕಾರ ರೂಪ ಕ್ಷೇತ್ರವೇ ಮಹಾಸಂಸಾರಕ್ಕೆ ಕಾರಣವಾದುದರಿಂದಲೂ, ಜ್ಞಾನಿಗಳಿಗೆ ಅತ್ಯಂತ ಶತ್ರುವಾದುದರಿಂದಲೂ, ಅಲ್ಲಿಯೇ ವೈರಾಗ್ಯವನ್ನು ಉಂಟುಮಾಡಲು ಸಕಲ ಜಡಾಜಡಾತ್ಮಕ ಪ್ರಪಂಚವು ಕ್ಷೇತ್ರಶಬ್ದದಿಂದ ಗೃಹೀತವಾಗುತ್ತದೆ. ಪುರುಷಶಬ್ದದಿಂದ ಜೀವನನ್ನು ಬೇರೆಯಾಗಿ ಹೇಳಿರುವುದರಿಂದ ಕ್ಷೇತ್ರಜ್ಞನು ಯಾರು ಎಂಬ

ಶಂಕೆಗೆ `ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎಂದು ಮುಂದೆ ಹೇಳಲಿದ್ದಾರೆ. ತನ್ನ ಮುಖವನ್ನೂ, ತನ್ನ ಬೆನ್ನನ್ನೂ, ತನ್ನ ದೇಹದಲ್ಲಿರುವ ತನ್ನ ಸ್ಥಿತಿಯನ್ನೂ ತಿಳಿಯದ, ಕೇವಲ ತನ್ನ ಉದರವನ್ನು ಮಾತ್ರ ಕಾಣುವ ಜೀವನು ಇಲ್ಲಿ ಕ್ಷೇತ್ರಜ್ಞನಲ್ಲ. ಆದರೆ ದೇಹಿಗಳ ಹೃದಯ ಕಮಲದಲ್ಲಿದ್ದು ಒಳಗೆ ಮತ್ತು ಹೊರಗೆ ಎರಡರನ್ನೂ ಸ್ವತಂತ್ರವಾಗಿ ನೋಡುವ ಪರಮಾತ್ಮನೇ ಕ್ಷೇತ್ರಜ್ಞ. ಇಲ್ಲದಿದ್ದರೆ ಸುಷುಪ್ತಿ ದೆಶೆಯಲ್ಲಿ ಕ್ಷೇತ್ರಜ್ಞ ಇಲ್ಲದಿರುವುದರಿಂದ ದೇಹಪಾತವಾಗುವ ಪ್ರಸಂಗವಿದೆ ಮತ್ತು ಜೀವನೇ ಕ್ಷೇತ್ರಜ್ಞನಾದರೆ ಇಂದ್ರಾವತಾರವಾದ ಕಾರಣದಿಂದ ಜೀವಶ್ರೇಷ್ಠನಾದ ಅರ್ಜುನನು ಸುತರಾಂ ಕ್ಷೇತ್ರಜ್ಞನಾಗುವುದರಿಂದ ನಾನು ಇದನ್ನು ತಿಳಿಯಲು ಬಯಸುತ್ತೇನೆ ಎಂಬ ಪ್ರಶ್ನೆಯು ಉಪಪನ್ನವಾಗುವುದಿಲ್ಲ.
ಶ್ರೀಭಗವಾನ್
ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ |
ಏತದ್ ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥2॥
ಶ್ರೀಭಗವಾನ್ ಎಲೈ ಕೌಂತೇಯನೇ, ಈ ಶರೀರವನ್ನು ಕ್ಷೇತ್ರವೆಂದು ಹೇಳುತ್ತಾರೆ. ಇದನ್ನು ಯಾವನು ಸರಿಯಾಗಿ ತಿಳಿಯುತ್ತಾನೆಯೋ ಅವನನ್ನು ಜ್ಞಾನಿಗಳು ಕ್ಷೇತ್ರಜ್ಞನೆಂದು ಹೇಳುತ್ತಾರೆ.
ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ |
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ ತಜ್ಜ್ಞಾನಂ ಮತಂ ಮಮ ॥3॥
ಎಲೈ ಭಾರತನೇ, ಎಲ್ಲ ಕ್ಷೇತ್ರಗಳಲ್ಲಿ ಕ್ಷೇತ್ರಜ್ಞನಾದವನು ನಾನೇ ಎಂದು ತಿಳಿ. ಕ್ಷೇತ್ರಕ್ಷೇತ್ರಜ್ಞರ ಜ್ಞಾನವೇನಿದೆಯೋ ಅದೇ ಸರಿಯಾದ ಜ್ಞಾನವೆಂದು ನನ್ನ ಅಭಿಪ್ರಾಯ.
ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ |
ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥4॥
ಆ ಕ್ಷೇತ್ರವು ಯಾವ ಸ್ವರೂಪವುಳ್ಳದ್ದು ಎಂದರೆ ಪಾಂಚಭೌತಿಕ ಕರ-ಚರಣಾದಿ ಮಾತ್ರಗಳು ಕ್ಷೇತ್ರವೇ ಅಥವಾ ಇಂದ್ರಿಯಗಳು, ಇಂದ್ರಿಯಾರ್ಥಗಳು ಮತ್ತು ಪಂಚಭೂತಗಳಿಂದ ಸೇರಿದ ಕ್ಷೇತ್ರವು ಕ್ಷೇತ್ರವೇ ಎಂದು ತಿಳಿ. `ಯಾದೃಕ್' ಹೊರಗೆ ಹೇಗಿದೆ, ಒಳಗೆ ಹೇಗಿದೆ ಎಂದು ಕೇಳು. `ಯದ್ವಿಕಾರಿ' ಎಂತಹ ವಿಕಾರದಿಂದ ತುಂಬಿದೆ ಎಂದು ಕೇಳು. `ಯತಶ್ಚ ಯತ್' ಆ ಕ್ಷೇತ್ರದಲ್ಲಿ ಏನೇನು ಉತ್ಪನ್ನವಾಗುತ್ತದೆಯೋ ಅದು ಯಾವುದರಿಂದ ಉತ್ಪನ್ನವಾಗುತ್ತದೆ ಎಂದು ಕೇಳು. ಕ್ಷೇತ್ರಜ್ಞನಾದ ಆ ಪರಮಾತ್ಮನಾದರೂ ಸ್ಥೂಲರೂಪದಿಂದ ಯಾವನು, ಎಂತಹ ಸಾಮರ್ಥ್ಯವುಳ್ಳವನು ಎಂಬುದನ್ನು ಸಂಕ್ಷೇಪವಾಗಿ ಕೇಳು.
ವಿಶೇಷ ವಿಚಾರ ಯತ್ ಎಂಬುದಕ್ಕೆ `ಮಹಾಭೂತಾನಿ' ಎಂಬುದರಿಂದ ಹಿಡಿದು, `ಸಂಘಾತಶ್ಚೇತನಾ ಧೃತಿಃ' ಎಂಬುದರವರೆಗೆ ಹೇಳುವ ಎಲ್ಲವೂ ಉತ್ತರವಾಗಿದೆ. (`ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ | ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ | ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ| ಏತತ್ ಕ್ಷೇತ್ರಂ' ಎಂದು ಎಲ್ಲವನ್ನೂ ಕ್ಷೇತ್ರವೆಂದು ಹೇಳಿರುವುದರಿಂದ ಇಷ್ಟು ವಿಶೇಷಭರಿತವಾದ ಕ್ಷೇತ್ರವನ್ನು ಜೀವನು ಹೇಗೆ ತಿಳಿಯುತ್ತಾನೆ ಎಂದು ಅಭಿಪ್ರಾಯ. `ಯತಶ್ಚಯತ್' ಎಂಬ ಪ್ರಶ್ನೆಗೆ `ಅವ್ಯಕ್ತಂ ಮಹಾಭೂತಾನಿ' ಎಂಬುದು ಉತ್ತರ. ಅವ್ಯಕ್ತದಿಂದ ಪಂಚಮಹಾಭೂತಗಳು, ಪಂಚಮಹಾಭೂತಗಳಿಂದ ದೇಹದಲ್ಲಿರುವ ಪಾರ್ಥಿವ ಜಲಾದಿ ಅಂಶಗಳು ಎಂದು ಅರ್ಥ. `ಯಾದೃಕ್' ಎಂಬ ಪ್ರಶ್ನೆಗೆ ಅಹಂಕಾರ, ಬುದ್ಧಿ ಮತ್ತು ಒಂದು ಮನಸ್ಸು ಒಳಗೆ, ಮತ್ತು ಹತ್ತು ಇಂದ್ರಿಯಗಳು, ಐದು ಇಂದ್ರಿಯ ವಿಷಯಗಳು ಹೊರಗೆ ಎಂದು ಉತ್ತರ. `ಯದ್ವಿಕಾರಿ' ಎಂಬುದಕ್ಕೆ `ಇಚ್ಛಾದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ' ಎಂಬುದು ಉತ್ತರ. ಅಭಿಮಾನಿಯಾಗಿ ಜೀವನಿಗೆ ದೇಹದ ಸಂಬಂಧವು ಸಂಘಾತ ಎನಿಸಿಕೊಳ್ಳುತ್ತದೆ. ಚೇತನ ಎಂದರೆ ಜ್ಞಾನ. ಧೃತಿ ಎಂದರೆ ದೇಹಧಾರಣ. ಕ್ಷೇತ್ರಜ್ಞನ ಜ್ಞಾನವೇ ಮೋಕ್ಷಕ್ಕೆ ಕಾರಣವಾದುದರಿಂದ `ಸ ಚ ಯೋ ಯತ್ಪ್ರಭಾವಶ್ಚ' ಎಂಬ ಪ್ರಶ್ನೆಗೆ ಉತ್ತರವು ಜ್ಞೇಯವಾದ ವಸ್ತುವಿನ ಕಥನ ರೂಪವಾಗುವುದರಿಂದ ಅದನ್ನು ವಿಸ್ತಾರವಾಗಿ `ಅಮಾನಿತ್ವ' ಇತ್ಯಾದಿಯಾಗಿ ಹೇಳುತ್ತಾರೆ. ಜ್ಞಾನದ ಕಾರಣಗಳು ಎಷ್ಟಿವೆಯೋ ಮತ್ತು ಕಾರ್ಯವು ಎಷ್ಟಿವೆಯೋ ಅವೆಲ್ಲವೂ ಜ್ಞಾನ ಪದದಿಂದ ಗೃಹೀತವಾಗುತ್ತವೆ. ಆದ್ದರಿಂದಲೇ `ಏತತ್ ವೇದಿತುಮಿಚ್ಛಾಮಿ' ಎಂದು ಜ್ಞಾನದ ಜ್ಞಾನವಿಷಯದಲ್ಲಿಯೂ ಪ್ರಶ್ನೆ ಇದೆ.
ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ |
ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥5॥
ಈ ಕ್ಷೇತ್ರ-ಕ್ಷೇತ್ರಜ್ಞ ಸ್ವರೂಪಾದಿಗಳು ಋಷಿಗಳಿಂದ, ವೇದಮಂತ್ರಗಳಿಂದ ಬಹಳವಾಗಿ ಗಾನ ಮಾಡಲ್ಪಟ್ಟಿವೆ. ಹೇತುಯುಕ್ತವಾದ ಬ್ರಹ್ಮಸೂತ್ರ ಪದಗಳಿಂದಲೂ ನಿಶ್ಚಯ ಮಾಡಲ್ಪಟ್ಟಿವೆ (ಆದ್ದರಿಂದ ಇದು ಅತ್ಯಂತ ಪ್ರಾಮಾಣಿಕ ಎಂದು ಅಭಿಪ್ರಾಯ).
ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ |
ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥6॥
ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ |
ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥7॥
ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತತತ್ತ್ವ, ಹತ್ತು ಇಂದ್ರಿಯಗಳು, ಒಂದು ಮನಸ್ಸು, ಐದು ಇಂದ್ರಿಯ ವಿಷಯಗಳು, ಇಚ್ಛಾ, ದ್ವೇಷ, ಸುಖ, ದುಃಖ, ಜೀವರಿಗೆ ದೇಹದಲ್ಲಿನ ಅಭಿಮಾನ, ಜ್ಞಾನ, ದೇಹಧಾರಣ ಇವು ಸಂಕ್ಷೇಪವಾಗಿ ವಿಕಾರಸಹಿತವಾದ ಕ್ಷೇತ್ರಗಳೆಂದು ಹೇಳಲ್ಪಡುತ್ತವೆ.
ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ |
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥8॥
ತನ್ನ ಶ್ಲಾಘನೆ ಮಾಡಿಕೊಳ್ಳದಿರುವುದು, ತಾನು ಅಲ್ಪನೆಂದು ತಿಳಿದುಕೊಂಡರೂ ಮಹತ್ವವನ್ನು ಪ್ರದರ್ಶನ ಮಾಡದಿರುವುದು, ಅಹಿಂಸೆ, ಸಹನೆ, ಮನೋ-ವಾಕ್- ಕಾಯ ವ್ಯಾಪಾರಗಳಲ್ಲಿ ಏಕರೂಪತೆ, ಜ್ಞಾನಿಗಳ ಸೇವೆ, ಬಾಹ್ಯಾಂತರ ಶುದ್ಧಿ, ಅಪಾಯ ಬಂದರೂ

ತನ್ನ ಧರ್ಮದಿಂದ ಚ್ಯುತನಾಗದಿರುವ ಸ್ಥೈರ್ಯ, ಮನೋನಿಗ್ರಹ;
ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ |
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥9॥
ಇಂದ್ರಿಯ ವಿಷಯಗಳಲ್ಲಿ ವೈರಾಗ್ಯ, ತನ್ನಲ್ಲಿ ಇಲ್ಲದಿರುವ ಗುಣಗಳನ್ನು ತನ್ನಲ್ಲಿ ಭಾವಿಸದಿರುವಿಕೆ-ಇದಕ್ಕೆ ಅಹಂಕಾರ ಎಂದು ಹೆಸರು, ಜನನ-ಮರಣ-ಮುಪ್ಪು-ವ್ಯಾಧಿ ಇವುಗಳಲ್ಲಿರುವ ದುಃಖ ಮತ್ತು ದೋಷಗಳ ದರ್ಶನ;
ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು |
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥10॥
ಭಾರ್ಯಾ ಪುತ್ರಾದಿಗಳಲ್ಲಿ ಅತಿಪಕ್ವ ಸ್ನೇಹವಿಲ್ಲದಿರುವುದು, ಇಷ್ಟಾನಿಷ್ಟಗಳು ಉಂಟಾದಾಗ ಯಾವಾಗಲೂ ಸಮಚಿತ್ತದಿಂದಿರುವುದು;
ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ |
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥11॥
ನನ್ನಲ್ಲಿ ರಮಾ-ಬ್ರಹ್ಮಾದಿಗಳಿಗಿಂತಲೂ ಹೆಚ್ಚಿನ ಚಲಿಸದಿರುವ ಭಕ್ತಿಯನ್ನು ಮಾಡುವುದು, ಏಕಾಂತ ದೇಶದಲ್ಲಿ ವಾಸ ಮಾಡುವುದು, ಜನರ ಸಮುದಾಯವನ್ನು ಇಷ್ಟಪಡದಿರುವುದು;
ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ |
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥12॥
ಅಧ್ಯಾತ್ಮ ಜ್ಞಾನದಲ್ಲಿ ನಿಯತವಾಗಿ ಇರುವುದು, ಅಪರೋಕ್ಷ ಜ್ಞಾನಕ್ಕಾಗಿ ಶಾಸ್ತ್ರಪರ್ಯಾಲೋಚನೆ ಮಾಡುವುದು, ಇವೆಲ್ಲವೂ ಜ್ಞಾನವೆಂದು ಹೇಳಲ್ಪಡುತ್ತವೆ. ಇದಕ್ಕಿಂತ ವಿರುದ್ಧವಾದುದು ಅಜ್ಞಾನ.
ಜ್ಞೇಯಂ ಯತ್ ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ |
ಅನಾದಿಮತ್ಪರಂ ಬ್ರಹ್ಮ ನ ಸತ್ ತನ್ನಾಸದುಚ್ಯತೇ ॥13॥
ನಾನು ಇನ್ನು ನಿನಗೆ ಜ್ಞೇಯವನ್ನು ಹೇಳುವೆನು. ಅದನ್ನು ತಿಳಿದು ಮುಕ್ತನಾಗುವಿ. ಜ್ಞೇಯವಾದವನು ಪರಬ್ರಹ್ಮ. ಅವನು ಜೀವನಂತೆ ಜನ್ಯವಾದ ದೇಹೇಂದ್ರಿಯಾದಿಗಳನ್ನು ಹೊಂದಿದವನಲ್ಲ. ಅವನು ಮೂರ್ತನೂ ಅಲ್ಲ, ಅಮೂರ್ತನೂ ಅಲ್ಲ.
ಸರ್ವತಃಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ |
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥14॥
ಅವನು ಎಲ್ಲ ಕಡೆಗಳಲ್ಲಿಯೂ ಹಸ್ತ-ಪಾದಗಳನ್ನು, ಅಕ್ಷಿ-ಶಿರಸ್ಸು ಮತ್ತು ಮುಖಗಳನ್ನು ಹೊಂದಿದವನು. ಎಲ್ಲ ಕಡೆಗಳಲ್ಲಿಯೂ ಶ್ರೋತ್ರವನ್ನು ಹೊಂದಿದವನು. ಎಲ್ಲವನ್ನೂ ವ್ಯಾಪಿಸಿದ್ದಾನೆ.
ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ |
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥15॥
ಎಲ್ಲ ಇಂದ್ರಿಯಗಳನ್ನು ಮತ್ತು ಅವುಗಳ ಗುಣಗಳನ್ನು (ವಿಷಯಗಳನ್ನು) ಪ್ರಕಾಶಿಸುವವನು. ಪ್ರಾಕೃತವಾದ ಸರ್ವೇಂದ್ರಿಯ ರಹಿತನಾದವನು, ನಿರ್ಲೇಪನಾದವನು, ಸರ್ವಧಾರಕನಾದವನು, ಸತ್ವಾದಿ ಗುಣರಹಿತನಾದವನು, ಸ್ವರೂಪಭೂತವಾದ ಆನಂದಾದಿ ಗುಣಗಳನ್ನು ಅನುಭವಿಸುವವನು.
ವಿಶೇಷ ವಿಚಾರ `ಸರ್ವೇಂದ್ರಿಯ ವಿವರ್ಜಿತಮ್' ಎಂಬ ಪದಕ್ಕೆ ಎಲ್ಲ ಇಂದ್ರಿಯಗಳಿಂದಲೂ ರಹಿತನಾದವನು ಎಂದು ಅರ್ಥವನ್ನು ಮಾಡಿದರೆ `ಸರ್ವತಃ ಪಾಣಿಪಾದಂ ತತ್' ಎಂಬ ಹಿಂದಿನ ವಚನದಿಂದ ವಿರೋಧವು ಬರುತ್ತದೆ. ಆದ್ದರಿಂದ ಪ್ರಾಕೃತವಾದ ಇಂದ್ರಿಯಗಳಿಂದ ರಹಿತನಾದವನು ಎಂದು ಅರ್ಥವನ್ನು ಮಾಡಬೇಕು. `ನಿರ್ಗುಣ' ಎಂಬ ಶಬ್ದಕ್ಕೆ ಸತ್ವಾದಿ ಗುಣರಹಿತ ಮತ್ತು ಪ್ರಾಕೃತ ಗುಣರಹಿತ ಎಂದು ಅರ್ಥವನ್ನು ಮಾಡಬೇಕು. ಅವನಿಗೆ ಸರ್ವಥಾ ಗುಣವಿಲ್ಲ ಎಂಬ ಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿಯೇ `ಗುಣಭೋಕ್ತೃ' ಎಂದು ಹೇಳಿದ್ದಾರೆ. ತನ್ನ ಸ್ವರೂಪಭೂತವಾದ ಆನಂದಾದಿ ಗುಣಗಳನ್ನೂ ಜೀವನ ಕರ್ಮಜನ್ಯವಾದ ಶುಭಗುಣಗಳನ್ನೂ ಪರಮಾತ್ಮನು ಭೋಗಿಸುತ್ತಾನೆ.
ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ |
ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥16॥
ಅದು ಎಲ್ಲ ಜೀವರ ಒಳಗೂ ಮತ್ತು ಹೊರಗೂ ಇರುವ ವಸ್ತು. ವಿಕಾರವಿಲ್ಲದಿರುವುದರಿಂದ ಅಚರ ಎನಿಸುತ್ತದೆ. ಸರ್ವತ್ರ ಸಂಚಾರ ಮಾಡುವುದರಿಂದ ಚರ ಎನಿಸುತ್ತದೆ. ಬಹಳ ಸೂಕ್ಷ್ಮವಾದುದರಿಂದ ಅದು ಅವಿಜ್ಞೇಯವಾದುದು. ಅದು ಜೀವನಿಗೆ ಅತ್ಯಂತ ಸಮೀಪದಲ್ಲಿಯೂ ಮತ್ತು ಅತ್ಯಂತ ದೂರದಲ್ಲಿಯೂ ಇದೆ.
ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ |
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥17॥
ಆ ಕ್ಷೇತ್ರಜ್ಞ ವಸ್ತುವು ಬೇರೆ ಬೇರೆ ಜೀವರಲ್ಲಿದ್ದರೂ ತನ್ನಲ್ಲಿ ಭೇದರಹಿತವಾಗಿದೆ. ಜೀವರಲ್ಲಿ ಕ್ಷೇತ್ರಜ್ಞನಿದ್ದಾನೆ ಎಂದು ಆಧಾರಾಧೇಯ ಭಾವವನ್ನು ಹೇಳಿರುವುದರಿಂದ ಜೀವರಿಗೂ ಮತ್ತು ಪರಮಾತ್ಮನಿಗೂ ಭೇದವು ಇದ್ದೇ ಇದೆ. ಅಲ್ಲದೇ `ಯದಾ ಭೂತ ಪೃಥಗ್ಭಾವಂ ಏಕಸ್ಥಂ' ಎಂಬ ಮುಂದೆ ಬರುವ ಶ್ಲೋಕದಲ್ಲಿ ಏಕತ್ವಪರತ್ವಾದಿ ಯುಕ್ತ ಬ್ರಹ್ಮನಲ್ಲಿ ಜೀವ-ಭೇದವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಆದರೂ ಭೇದ ಪ್ರತಿನಿಧಿಯಾದ ವಿಶೇಷ ಬಲದಿಂದ ವಿಭಕ್ತವಾದಂತೆ ಇದೆ. ಆ ಕ್ಷೇತ್ರಜ್ಞ ವಸ್ತುವನ್ನು ಎಲ್ಲ ಜೀವರನ್ನು ಮತ್ತು ಜಡವನ್ನು ಧರಿಸಿರುವುದು, ಜಗತ್ತನ್ನು ಸಂಹಾರ ಮಾಡುವುದು ಮತ್ತು ಸೃಷ್ಟಿಯನ್ನು ಮಾಡುವುದೆಂದು ತಿಳಿಯಬೇಕು.
ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ |
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥18॥
ಅದು ಜ್ಯೋತೀರೂಪವಾದ ಸೂರ್ಯಾದಿಗಳಿಗೂ ಜ್ಯೋತಿಷ್ಟ್ವಪ್ರದವಾಗಿದೆ. ಅದು ಪ್ರಕೃತಿಗಿಂತಲೂ ಶ್ರೇಷ್ಠವಾಗಿದೆ,

ಜ್ಞಾನರೂಪವಾಗಿದೆ, ಜ್ಞೇಯವೂ ಮತ್ತು ಜ್ಞಾನಗಮ್ಯವೂ ಆಗಿದೆ. ಎಲ್ಲ ಜೀವಸಮೂಹದ ಹೃದಯದಲ್ಲಿ ಪ್ರತಿಷ್ಠಿತ ಎಂದರೆ ವಿಶೇಷವಾಗಿ ಸ್ಥಿತವಾಗಿದೆ.

ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ |
ಮದ್ಭಕ್ತ ಏತದ್ ವಿಜ್ಞಾಯ ಮದ್ಭಾವಾಯೋಪಪದ್ಯತೇ ॥19॥

ಹೀಗೆ ನಾನು ನಿನಗೆ ಕ್ಷೇತ್ರವನ್ನೂ, ಜ್ಞಾನವನ್ನೂ ಮತ್ತು ಜ್ಞೇಯವನ್ನೂ ಸಂಕ್ಷೇಪವಾಗಿ ಹೇಳಿದ್ದೇನೆ. ಇದನ್ನು ತಿಳಿದ ನನ್ನ ಭಕ್ತನು ನನ್ನಲ್ಲಿ ಭಕ್ತಿಯನ್ನು ಹೊಂದುತ್ತಾನೆ.

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ |
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥20॥

ಪ್ರಕೃತಿ ಮತ್ತು ಪುರುಷ ಇಬ್ಬರನ್ನೂ ಅನಾದಿ ಎಂದು ತಿಳಿ. ವಿಕಾರ ಮತ್ತು ಗುಣಗಳು ಎಂದರೆ ಮಹದಾದಿ ವಿಕಾರಗಳು ಮತ್ತು ಸತ್ವಾದಿ ಗುಣಗಳು ಪ್ರಕೃತಿಯಿಂದ ಉಂಟಾದವು ಎಂದು ತಿಳಿ.

ವಿಶೇಷ ವಿಚಾರ ಇಲ್ಲಿ ಪ್ರಕೃತಿ ಶಬ್ದದಿಂದ ಜಡಪ್ರಕೃತಿಯನ್ನೂ ಮತ್ತು ಚಿತ್‌ಪ್ರಕೃತಿಯಾದ ಲಕ್ಷ್ಮೀದೇವಿಯನ್ನೂ ತೆಗೆದುಕೊಳ್ಳಬೇಕು. ಪುರುಷ ಶಬ್ದದಿಂದ ಜೀವನನ್ನೂ ಮತ್ತು ಪರಮಾತ್ಮನನ್ನೂ ತೆಗೆದುಕೊಳ್ಳಬೇಕು.

ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ |
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥21॥

ಕಾರ್ಯವೆಂದರೆ ಶರೀರ. ಕಾರಣವೆಂದರೆ ಇಂದ್ರಿಯಾದಿಗಳು. ಜೀವನಿಗೆ ದೇಹೇಂದ್ರಿಯಾದಿ ಕರ್ತೃತ್ವವು ಏನಿದೆಯೋ ಅದಕ್ಕೆ ಕಾರಣಳಾದವಳು ಚಿತ್‌ಪ್ರಕೃತಿ ಎನಿಸುವ ಲಕ್ಷ್ಮೀದೇವಿ. ಸುಖ-ದುಃಖಗಳನ್ನು ಭೋಗಿಸುವ ವಿಷಯದಲ್ಲಿ, ಎಂದರೆ ಜೀವನು ಪ್ರಕೃತಿವಿಕಾರವಾದ ಸುಖ-ದುಃಖಗಳನ್ನು ತನ್ನದು ಎಂದು ಸಾಕ್ಷಾತ್ಕರಿಸುವ ಭೋಗದ ವಿಷಯದಲ್ಲಿ ಪರಮಾತ್ಮನೇ ಕಾರಣನಾದವನು. ಇಲ್ಲಿ ಪರಮಾತ್ಮನು ಸರ್ವಕಾರಣನಾದುದರಿಂದ ಜೀವನಲ್ಲಿರುವ ದೇಹೇಂದ್ರಿಯಾದಿ ಕರ್ತೃತ್ವಕ್ಕೆ ಕಾರಣನಾದರೂ ಹಾಗೆ ಲಕ್ಷ್ಮೀದೇವಿಗೆ ಕೇವಲ ಸುಖ-ದುಃಖ-ಭೋಗ-ದಾನಕ್ಕೆ ಕಾರಣತ್ವವಿದ್ದರೂ, ಸುಃಖ-ದುಃಖ-ಭೋಗ-ದಾನದಲ್ಲಿ ಲಕ್ಷ್ಮಿಯ ಪ್ರವೃತ್ತಿಯು ಅಲ್ಪವಾದುದು. ಕಾರ್ಯಕಾರಣಕರ್ತೃತ್ವದ ವಿಷಯದಲ್ಲಿ ಅದಕ್ಕಿಂತ ಅಧಿಕವಾದ ಪ್ರವೃತ್ತಿಯು ಅವಳಿಗಿದೆ. ಸುಖ-ದುಃಖ-ಭೋಗ-ದಾನ ವಿಷಯದಲ್ಲಿ ಪರಮಾತ್ಮನೇ ಅತಿಶಯವಾಗಿ ಕರ್ತೃ. ಅಲ್ಲಿ ಲಕ್ಷ್ಮಿದೇವಿಯ ಪ್ರವೃತ್ತಿಯು ಅಲ್ಪ. ಆದ್ದರಿಂದ ಸುಖ-ದುಃಖ- ಭೋಗ ವಿಷಯದಲ್ಲಿ ಪರಮಾತ್ಮನೇ ಕಾರಣ ಎಂದು ಹೇಳಲ್ಪಡುತ್ತದೆ.

ಅಥವಾ ಪುರುಷ ಎಂದರೆ ಜೀವನೇ ತನ್ನ ಸುಖ-ದುಃಖ-ಭೋಗಗಳಿಗೆ ಕಾರಣ ಎಂದೂ ಹೇಳಬಹುದು. ಜೀವನ ಪ್ರಾಕೃತ ಸುಖ-ದುಃಖಗಳ ಭೋಗವು ಪರಮಾತ್ಮನಿಗೆ ಇಲ್ಲವಾದ್ದರಿಂದ ಪುರುಷ ಶಬ್ದಕ್ಕೆ ಜೀವ ಎಂದೂ ಅರ್ಥಮಾಡಬಹುದು.

ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ |
ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥22॥

ಪುರುಷನೆನಿಸುವ ಜೀವನು ಪ್ರಾಕೃತ ದೇಹದಲ್ಲಿದ್ದು, ಪ್ರಕೃತಿಯಿಂದ ಉಂಟಾದ ಗುಣಗಳನ್ನು ಭೋಗಿಸುತ್ತಾನೆ. ಉಚ್ಚ ಮತ್ತು ನೀಚ ಯೋನಿಗಳಲ್ಲಿ ಅವನ ಜನ್ಮಕ್ಕೆ ಅವನಿಗೆ ಆ ಗುಣಗಳಲ್ಲಿರುವ ಸ್ನೇಹವು ಕಾರಣವಾದುದು.

ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ |
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥23॥

ಪರಮಪುರುಷನನ್ನು ಈ ದೇಹದಲ್ಲಿಯೇ ಇರುವ ಪರಮಾತ್ಮನೆಂದೂ ಹೇಳುತ್ತಾನೆ. ಅವನು ಎಲ್ಲರಿಗಿಂತಲೂ ಮೇಲಿದ್ದು ಜೀವನ ಸಮೀಪದಲ್ಲಿದ್ದು ಎಲ್ಲವನ್ನೂ ನೇರವಾಗಿ ನೋಡುವವನು. ಅನುಮಂತಾ= ಜೀವನಿಗೆ ಆಯಾ ಕಾರ್ಯಗಳಲ್ಲಿ ಪ್ರವೃತ್ತಿ ಮಾಡುವಂತೆ ಪ್ರೇರಿಸುವವನು. ಭರ್ತಾ= ಧಾರಕನಾದವನು, ಸರ್ವಪೋಷಕ ಎಂದು ಅಭಿಪ್ರಾಯ. ಭೋಕ್ತಾ= ಸರ್ವಕರ್ಮಫಲಸಾರವನ್ನು ಭೋಗಿಸುವವನು. ಮಹಾಶಕ್ತಿ ಉಳ್ಳವನಾದ್ದರಿಂದ ಅವನು ಮಹೇಶ್ವರ.

ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ |
ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥24॥

ಯಾವನು ಈ ರೀತಿಯಲ್ಲಿ ಪುರುಷನನ್ನು ಮತ್ತು ಗುಣಗಳಿಂದ ಕೂಡಿದ ಪ್ರಕೃತಿಯನ್ನು ತಿಳಿಯುತ್ತಾನೆಯೋ ಅಂತಹ ಜ್ಞಾನಿಯು ಯಾವ ರೀತಿಯಲ್ಲಿ ಕರ್ಮಾಚರಣೆಯನ್ನು ಮಾಡಿದರೂ (ಒಂದು ಪಕ್ಷ ಪಾಪಕರ್ಮವನ್ನು ಆಚರಿಸಿದರೂ) ಪುನಃ ಜನ್ಮವನ್ನು ಪಡೆಯುವುದಿಲ್ಲ.

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ |
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥25॥

ಕೆಲವರು ಧ್ಯಾನದಿಂದ ತಮ್ಮ ದೇಹದಲ್ಲಿಯೇ ಪರಮಾತ್ಮನನ್ನು ನೋಡುತ್ತಾರೆ. ಇನ್ನು ಕೆಲವರು ಬುದ್ಧಿಯಿಂದಲೇ ತಮ್ಮ ದೇಹದಲ್ಲಿ ಪರಮಾತ್ಮನನ್ನು ನೋಡುತ್ತಾರೆ. ಇನ್ನು ಕೆಲವರು ಜ್ಞಾನಯೋಗದಿಂದಲೂ, ಇನ್ನು ಕೆಲವರು ಕರ್ಮಯೋಗದಿಂದಲೂ ನೋಡುತ್ತಾರೆ.

ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ |
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥26॥

ಅಂತಹ ಪ್ರತಿಭಾ ಸಾಮರ್ಥ್ಯವಿಲ್ಲದ ಮನುಷ್ಯರು ದೊಡ್ಡವರಿಂದ ಶ್ರವಣವನ್ನು ಮಾಡಿ ಉಪಾಸನೆಯನ್ನು ಮಾಡುತ್ತಾರೆ. ಹೀಗೆ ಶ್ರವಣಾಧ್ಯಯನದಲ್ಲಿ ನಿರತರಾದ ಅವರೂ ಸಹ ಸಂಸಾರ ರೂಪವಾದ ಮೃತ್ಯುವನ್ನು ದಾಟಿಯೇ ದಾಟುತ್ತಾರೆ.

ಯಾವತ್ ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ |
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್‌ವಿದ್ಧಿ ಭರತರ್ಷಭ ॥27॥

ಎಲೈ ಭರತರ್ಷಭನೇ, ಸ್ಥಾವರ-ಜಂಗಮಾತ್ಮಕವಾದ ಯಾವ ಪ್ರಾಣಿಯು ಜನಿಸಿದರೂ ಅದು ಕ್ಷೇತ್ರಳಾದ ಲಕ್ಷ್ಮೀದೇವಿಯ ಮತ್ತು ಕ್ಷೇತ್ರಜ್ಞನಾದ ಪರಮಾತ್ಮನ ಸಂಯೋಗದಿಂದ ಉಂಟಾದುದೆಂದು ತಿಳಿ.
ಬೀಜದಿಂದ ಅಂಕುರವು ಜನಿಸಿದಂತೆ ರೇತಸ್ಸು ವಿಕಾರವನ್ನು ಹೊಂದಿ ಸ್ಥಾವರ- ಜಂಗಮ ಪ್ರಾಣಿಗಳು ಜನನ ಹೊಂದಿದಾಗ ಕ್ಷೇತ್ರದಂತಿರುವ ಲಕ್ಷ್ಮೀದೇವಿಯು ಕೃಷೀವಲನಂತೆ ಇರುತ್ತಾಳೆ. ಆ ರೇತಸ್ಸಿಗೆ ವಿಕಾರವನ್ನು ಉಂಟುಮಾಡಿ ದೇಹದಂತೆ ಪರಿಣಾಮವನ್ನು ಮಾಡುವವನು ಪರಮಾತ್ಮ.
ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ |
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥28॥
ಯಾವನು ಸರ್ವಭೂತಗಳಲ್ಲಿ ಇರುವ ಪರಮೇಶ್ವರನನ್ನು ತನ್ನ ಗುಣಗಳಿಂದ ನ್ಯೂನಾಧಿಕ ಭಾವವು ಇಲ್ಲದವನೆಂದು ಮತ್ತು ವಿನಾಶವನ್ನು ಹೊಂದುವ ವಸ್ತುವಿನಲ್ಲಿ ಇರುವ ಅವನು ವಿನಾಶವಿಲ್ಲದವನು ಎಂದು ತಿಳಿಯುತ್ತಾನೋ ಅವನೇ ಸರಿಯಾದ ಜ್ಞಾನವುಳ್ಳವನು.
ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ |
ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಮ್ ॥29॥
ಯಾವನು ಸರ್ವತ್ರ ಅವಸ್ಥಿತನಾದ ಈಶ್ವರನು ಸರ್ವತ್ರ ನಿರ್ದೋಷಾಶೇಷ ಗುಣಪೂರ್ಣ ಎಂದು ತಿಳಿಯುತ್ತಾನೆಯೋ ಅವನು ತನ್ನ ಬುದ್ಧಿಯಿಂದ ತನ್ನನ್ನು ನರಕಕ್ಕೆ ಈಡು ಮಾಡಿಕೊಳ್ಳುವುದಿಲ್ಲ. ಅದರಿಂದ ಅವನು ಶ್ರೇಷ್ಠವಾದ ಗತಿಯಾದ ಮೋಕ್ಷವನ್ನು ಹೊಂದುತ್ತಾನೆ.
ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ |
ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥30॥
ಜೀವರ ಸಾತ್ವಿಕ, ರಾಜಸ, ತಾಮಸ ಸ್ವಭಾವಗಳಿಂದಲೇ ಆಯಾ ಜೀವರಿಂದ ಮಾಡಲ್ಪಡುವ ಪುಣ್ಯ-ಪಾಪ ಮಿಶ್ರಕರ್ಮಗಳನ್ನು ಯಾವನು ತಿಳಿಯುತ್ತಾನೆಯೋ ಹಾಗೆಯೇ ಕರ್ಮವನ್ನು ಮಾಡುವ ಜೀವರು ಪರತಂತ್ರರಾದುದರಿಂದ ನಿಯಾಮಕನ ಅಪೇಕ್ಷೆ ಇರುವುದರಿಂದ ಅಂತಹ ಪ್ರಕೃತಿಯ ನಿಯಮನಕ್ಕಾಗಿ ಜೀವರ ಹೃದಯದಲ್ಲಿದ್ದರೂ ಆ ಕರ್ಮಗಳ ಫಲಗಳಲ್ಲಿ ರಾಗ-ದ್ವೇಷಾದಿಗಳು ಇಲ್ಲದಿರುವುದರಿಂದ ಪರಮಾತ್ಮನು ಕರ್ತೃವಾದರೂ ಕರ್ತೃವಲ್ಲ. ಹೀಗೆ ಪರಮಾತ್ಮನನ್ನು ಯಾವನು ತಿಳಿಯುತ್ತಾನೆಯೋ ಅವನೇ ಸರಿಯಾದ ಜ್ಞಾನಿ.
ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥31॥
ಯಾವಾಗ ಒಬ್ಬ ಬ್ರಹ್ಮನಲ್ಲಿ ಆಶ್ರಯಿಸಿಕೊಂಡಿರುವ ಜೀವರಲ್ಲಿ ಭೇದವನ್ನೂ, ಆ ಬ್ರಹ್ಮನಿಂದಲೇ ಜೀವ-ಜಡಾತ್ಮಕವಾದ ಪ್ರಪಂಚದ ವಿಸ್ತಾರವನ್ನು ತಿಳಿಯುತ್ತಾನೆಯೋ ಆಗ ಜೀವನು ಬ್ರಹ್ಮಪ್ರಾಪ್ತಿಯನ್ನು ಹೊಂದುತ್ತಾನೆ.
ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಯಮವ್ಯಯಃ |
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥32॥
ಅನಾದಿತ್ವಾತ್ ಎಂದರೆ ದೇಹದ ಜೊತೆಯಲ್ಲಿ ಹುಟ್ಟುವ ಜೀವನಂತೆ ಜೀವನ ದೇಹದ ಜನ್ಮ ಉಂಟಾದಾಗ ತನ್ನ ಜನ್ಮವಾಗದಿರುವುದರಿಂದ, ನಿರ್ಗುಣತ್ವಾತ್ ಎಂದರೆ ತ್ರಿವಿಧ ಜೀವರಂತೆ ಸತ್ವಾದಿಗುಣ ರಹಿತನಾದುದರಿಂದ ಪರಮಾತ್ಮನು ಕರ್ತೃವಾದರೂ, ನ ಕರೋತಿ- ಕರ್ತೃವಲ್ಲ. ಜೀವದೇಹವು ಜನಿಸಿದಾಗ ತನಗೆ ಜನ್ಮವು ಇಲ್ಲದಿರುವುದರಿಂದ ಪಾಪವನ್ನು ಮಾಡುವ ಜೀವನ ದೇಹವು ತನ್ನ ದೇಹವಲ್ಲವಾದ್ದರಿಂದ ಆ ಪಾಪಕರ್ಮವು ಪರಮಾತ್ಮನಿಗೆ ಇಲ್ಲ. ಆದ್ದರಿಂದಲೇ ಅವನು ಪಾಪದ ಲೇಪವನ್ನು ಹೊಂದುವುದಿಲ್ಲ. ಕ್ರೂರ ಪುರುಷನು ತನ್ನ ತೋಳಿನಿಂದ ಒಬ್ಬನಿಗೆ ಕೆನ್ನೆಗೆ ಹೊಡೆದರೆ ಅದರ ಫಲವು ಶಾಂತ ಪುರುಷನಿಗೆ ಬರುವುದಿಲ್ಲ. ಅಥವಾ ಶಿಷ್ಯರಿಗೆ ವಿದ್ಯೋಪದೇಶ ಮಾಡುವ ಗುರುವು ಶಿಷ್ಯರುಗಳು ವಿವಾದ ಮಾಡಿದರೆ ತಾನು ವಿವಾದ ಮಾಡಿದವನಾಗುವುದಿಲ್ಲ ಅಥವಾ ಶಿಷ್ಯರಿಗೆ ಪರಾಜಯವಾದರೆ ತಾನು ಪರಾಜಿತನಾಗುವುದಿಲ್ಲ.
ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ |
ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಪಲಿಪ್ಯತೇ ॥33॥
ಹೇಗೆ ಆಕಾಶವು ಸರ್ವಗತವಾದರೂ ಸೂಕ್ಷ್ಮವಾದುದರಿಂದ ಯಾವ ಲೇಪಕ್ಕೂ ಒಳಗಾಗುವುದಿಲ್ಲವೋ ಅದರಂತೆ ನೀಚೋಚ್ಚಾದಿ ಸರ್ವದೇಹಗಳಲ್ಲಿದ್ದರೂ ಸಹ ಪರಮಾತ್ಮನು ಪುಣ್ಯ-ಪಾಪಗಳಿಂದ ಲಿಪ್ತನಾಗುವುದಿಲ್ಲ.
ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ |
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥34॥
ಎಲೈ ಭಾರತನೇ, ಹೇಗೆ ಒಬ್ಬ ಸೂರ್ಯನು ಈ ಸಮಸ್ತವಾದ ಲೋಕವನ್ನು ಪ್ರಕಾಶಿಸುತ್ತಾನೆಯೋ ಅದರಂತೆ, ಕ್ಷೇತ್ರನಿಯಾಮಕನಾದ ಪರಮಾತ್ಮನು ಸಮಸ್ತವಾದ ಕ್ಷೇತ್ರವನ್ನು ಪ್ರಕಾಶಿಸುತ್ತಾನೆ.
ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ |
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥35॥
ಹೀಗೆ ಜ್ಞಾನದೃಷ್ಟಿಯಿಂದ ಯಾರು ಕ್ಷೇತ್ರ-ಕ್ಷೇತ್ರಜ್ಞರ ವಿಭಾಗವನ್ನು ತಿಳಿಯುತ್ತಾರೋ ಮತ್ತು ಜೀವರಿಗೆ ಪರಮಾತ್ಮನ ಅನುಗ್ರಹದಿಂದ ಜಡಪ್ರಕೃತಿಯಿಂದ ಮೋಕ್ಷವನ್ನು ತಿಳಿಯುತ್ತಾರೆಯೋ ಅವರೇ ಸರ್ವೋತ್ತಮನಾದ ನಾರಾಯಣನನ್ನು ಹೊಂದುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.

* * * * *
മൂവത്താരനെയ ಅಧ್ಯಾಯ

ಮೂವತ್ತಾರನೆಯ ಅಧ್ಯಾಯ
ಭಗವದ್ಗೀತಾ  ಗುಣತ್ರಯವಿಭಾಗಯೋಗ.
ಶ್ರೀಭಗವಾನ್
ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ |
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ      ||1||
ಶ್ರೀಭಗವಾನ್ ಯಾವ ಜ್ಞಾನವನ್ನು ಪಡೆದು ಎಲ್ಲ ಋಷಿಗಳೂ ಶ್ರೇಷ್ಠವಾದ ಸಿದ್ಧಿಯನ್ನು ಪಡೆದು ಸಂಸಾರದಿಂದ ಮುಕ್ತರಾದರೋ ಅಂತಹ ಜ್ಞಾನಗಳಲ್ಲಿ ಶ್ರೇಷ್ಠವಾದ ಜ್ಞಾನವನ್ನು ನಿನಗೆ ಪುನಃ ಉಪದೇಶಿಸುವೆನು.
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ |
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ          ||2||
ಈ ಜ್ಞಾನವನ್ನು ಆಶ್ರಯಿಸಿ ನನ್ನ ಸಾಧರ್ಮ್ಯವನ್ನು ಹೊಂದಿದವರು ಸೃಷ್ಟಿಕಾಲದಲ್ಲಿ ಜನಿಸುವುದಿಲ್ಲ, ಪ್ರಳಯಕಾಲದಲ್ಲಿ ಮರಣರೂಪವಾದ ವ್ಯಥೆಯನ್ನೂ ಹೊಂದುವುದಿಲ್ಲ.
ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ |
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ            ||3||
ಸಕಲ ವೇದಗಳಿಗೆ ಮುಖ್ಯಾಭಿಮಾನಿಯಾದ ಲಕ್ಷ್ಮೀದೇವಿಯು ನನ್ನ ಪತ್ನಿ. ಅವಳಲ್ಲಿ ನಾನು ಗರ್ಭಾಧಾನವನ್ನು ಮಾಡುತ್ತೇನೆ. ಎಲೈ ಭಾರತನೇ, ಅನಂತರ ಎಲ್ಲ ಜೀವರ ಉತ್ಪತ್ತಿಯಾಗುತ್ತದೆ.
ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ |
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ          ||4||
ಎಲೈ ಕೌಂತೇಯನೇ, ಎಲ್ಲ ಯೋನಿಗಳಲ್ಲಿಯೂ ಯಾವ ಉತ್ಪತ್ತಿಗಳು ಸಂಭವಿಸುತ್ತವೆಯೋ ಅವುಗಳಿಗೆ ನಾನು ಬೀಜಪ್ರದನಾದ ತಂದೆ, ಲಕ್ಷ್ಮೀದೇವಿಯು ದೊಡ್ಡ ತಾಯಿ.
ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ |
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್        ||5||
ಎಲೈ ಮಹಾಬಾಹುವೇ, ಪ್ರಕೃತಿಜನ್ಯವಾದ ಸತ್ವ-ರಜಸ್-ತಮ ಎಂಬ ಮೂರು ಗುಣಗಳು ಶಾಶ್ವತನಾದ ಜೀವನನ್ನು ದೇಹದಲ್ಲಿ ಬಂಧಿಸುತ್ತವೆ.
ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ |
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ     ||6||
ಎಲೈ ಅನಘನೇ, ಅವುಗಳಲ್ಲಿ ಸತ್ವವು ನಿರ್ಮಲವೂ, ಪ್ರಕಾಶಕವೂ ಮತ್ತು ದೋಷರಹಿತವೂ ಆದುದರಿಂದ ಪ್ರಾಕೃತ ಸುಖಸಂಗವನ್ನು ಮತ್ತು ಪ್ರಾಕೃತವಾದ ಜ್ಞಾನದ ಸಂಗವನ್ನು ಉಂಟುಮಾಡುತ್ತದೆ.
ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ |
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್           ||7||
ರಜೋಗುಣವು ಸ್ನೇಹಾತ್ಮಕವಾದುದು. ಅದನ್ನು ಆಸೆಯಿಂದ ಉಂಟಾದುದು ಎಂದು ತಿಳಿ. ಎಲೈ ಕೌಂತೇಯನೇ, ಅದು ಜೀವನನ್ನು ಕಾಮ್ಯಕರ್ಮವನ್ನುಂಟು ಮಾಡಿ ಬಂಧಿಸುತ್ತದೆ.
ತಮಸ್ತ್ವಜ್ಞಾನಜಂ ವಿದ್ಧಿ  ಮೋಹನಂ ಸರ್ವದೇಹಿನಾಮ್ |
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ       ||8||
ಎಲೈ ಭಾರತನೇ, ತಮೋಗುಣವು ಅಜ್ಞಾನಕ್ಕೆ ಜನಕವಾದುದು. ಅದು ಎಲ್ಲ ಜೀವರಿಗೂ ಮೋಹ ಎಂದರೆ ಪ್ರಮಾದವನ್ನುಂಟು ಮಾಡುತ್ತದೆ ಎಂದು ತಿಳಿ. ಎಲೈ ಭಾರತನೇ, ಅದು ಪ್ರಮಾದ, ಆಲಸ್ಯ ಮತ್ತು ನಿದ್ರೆಗಳಿಂದ ಜೀವರನ್ನು ಬಂಧಿಸುತ್ತದೆ.
ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ |
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ          ||9||
ಎಲೈ ಭಾರತನೇ, ಸತ್ತ್ವಗುಣವು ಜೀವನನ್ನು ಪ್ರಾಕೃತ ಸುಖದಲ್ಲಿ ಪ್ರವೃತ್ತಿ ಮಾಡುವಂತೆ ಮಾಡುತ್ತದೆ. ರಜೋಗುಣವು ಕರ್ಮಗಳಲ್ಲಿ ಪ್ರವೃತ್ತಿಯನ್ನು ಉಂಟುಮಾಡುತ್ತದೆ. ತಮೋಗುಣವು ಜೀವನ ಜ್ಞಾನವನ್ನು ಪ್ರತಿಬಂಧಿಸಿ ಪ್ರಮಾದವನ್ನೂ, ಆಲಸ್ಯಾದಿಗಳನ್ನೂ ಉಂಟುಮಾಡುತ್ತದೆ.
ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ |
ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ   ||10||
ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ |
ಜ್ಞಾನಂ ಯದಾ ತದಾ ವಿದ್ಯಾದ್ ವಿವೃದ್ಧಂ ಸತ್ತ್ವಮಿತ್ಯುತ       ||11||
ಎಲೈ ಭಾರತನೇ, ಸತ್ವಗುಣವು ಪ್ರಬಲವಾದಾಗ ರಜೋಗುಣ ಮತ್ತು ತಮೋಗುಣಗಳನ್ನು ಮೆಟ್ಟಿ ತನ್ನ ಕಾರ್ಯವನ್ನು ಮಾಡುತ್ತದೆ. ರಜೋಗುಣವು ಪ್ರಬಲವಾದಾಗ ಸತ್ವ ಮತ್ತು ತಮೋಗುಣಗಳನ್ನು ಮೆಟ್ಟಿ ತನ್ನ ಕಾರ್ಯವನ್ನು ಮಾಡುತ್ತದೆ. ತಮೋಗುಣವು ಪ್ರಬಲವಾದಾಗ ಸತ್ವ ಮತ್ತು ರಜೋಗುಣಗಳನ್ನು ಮೆಟ್ಟಿ ತನ್ನ ಕಾರ್ಯವನ್ನು ಮಾಡುತ್ತದೆ. ಸತ್ವಗುಣವು ಪ್ರಬಲವಾದಾಗ ಈ ದೇಹದಲ್ಲಿ ಚಕ್ಷುರಾದಿ ನವದ್ವಾರಗಳಲ್ಲಿ ಸ್ಪಷ್ಟವಾಗಿ ಸತ್ವವೇ ತೋರುತ್ತದೆ (ಸತ್ವಗುಣದ ಕಾರ್ಯವೇ ತೋರುತ್ತದೆ). ಇದು ಉತ್ತಮರ ಸ್ವಭಾವ. ತಮೋಗುಣವು ರಜೋಗುಣ ಮತ್ತು ಸತ್ವಗುಣಗಳನ್ನು ಪ್ರತಿಬಂಧಿಸಿ ಸರ್ವದ್ವಾರಗಳಲ್ಲಿ ಅಜ್ಞಾನಾದಿ ರೂಪವಾದ

ತಮೋಗುಣದ ಕಾರ್ಯವನ್ನೇ ತೋರಿಸುತ್ತದೆ. ಇದು ಅಧಮರ ಸ್ವಭಾವ. ಹಾಗೆಯೇ ರಜೋಗುಣವು ಸತ್ವಗುಣ ಮತ್ತು ತಮೋಗುಣಗಳನ್ನು ಮೆಟ್ಟಿ ಸ್ಪಷ್ಟವಾಗಿ ರಜೋಗುಣದ ಕಾರ್ಯಗಳನ್ನು ತೋರಿಸುತ್ತದೆ. ಇದು ಮಧ್ಯಮರ ಸ್ವಭಾವ.

ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ |
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥12॥

ಎಲೈ ಭರತಶ್ರೇಷ್ಠನೇ, ರಜೋಗುಣವು ಪ್ರಬಲವಾದಾಗ ಲೋಭ, ಕಾರ್ಯೋನ್ಮುಖತೆ, ಕಾಮ್ಯಕರ್ಮಗಳ ಪ್ರಾರಂಭ, ಅತೃಪ್ತಿ, ಆಸೆ ಇವುಗಳು ಉಂಟಾಗುತ್ತವೆ.

ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ |
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥13॥

ಎಲೈ ಕುರುನಂದನನೇ, ತಮೋಗುಣವು ಅಭಿವೃದ್ಧವಾದಾಗ ಅಜ್ಞಾನ, ಪ್ರವೃತ್ತಿ ಇಲ್ಲದಿರುವಿಕೆ (ಆಲಸ್ಯ), ಪ್ರಮಾದ (ಮಿಥ್ಯಾಜ್ಞಾನ) ಮತ್ತು ಮೋಹ (ವಿಸ್ಮೃತಿ) ಉಂಟಾಗುತ್ತವೆ.

ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ |
ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥14॥

ಸತ್ವಗುಣವು ಪ್ರವೃದ್ಧವಾದಾಗ, ದೇಹತ್ಯಾಗವನ್ನು ಮಾಡುವ ಜೀವನು ಉತ್ತಮ ಜ್ಞಾನಿಗಳು ಪಡೆಯುವ ನಿರ್ಮಲವಾದ ಲೋಕಗಳನ್ನು ಪಡೆಯುತ್ತಾನೆ.

ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ |
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥15॥

ರಜೋಗುಣವು ಪ್ರವೃದ್ಧವಾದಾಗ ದೇಹತ್ಯಾಗವನ್ನು ಮಾಡುವವನು ಕರ್ಮಸಂಗಿಗಳಲ್ಲಿ ಜನಿಸುತ್ತಾನೆ. ಅದರಂತೆ ತಮೋಗುಣವು ಪ್ರವೃದ್ಧವಾದಾಗ ದೇಹತ್ಯಾಗ ಮಾಡುವವನು ಮೂಢಯೋನಿಗಳಲ್ಲಿ ಜನಿಸುತ್ತಾನೆ.

ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ |
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥16॥

ಆಚರಿಸಿದ ಶುಭಕರ್ಮಗಳಿಗೆ ಸಾತ್ವಿಕ ಗುಣದ ನಿರ್ಮಲವಾದ ಸುಖವು ಫಲವೆಂದು ಹೇಳುತ್ತಾರೆ. ರಾಜಸಕಾರ್ಯದ ಫಲವು ದುಃಖ ಮತ್ತು ತಾಮಸ ಕರ್ಮಗಳ ಫಲವು ಅಜ್ಞಾನ.

ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ |
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥17॥

ಸತ್ವಗುಣದಿಂದ ಜ್ಞಾನವು ಉಂಟಾಗುತ್ತದೆ. ರಜೋಗುಣದಿಂದ ಲೋಭವು ಉಂಟಾಗುತ್ತದೆ. ತಮೋಗುಣದಿಂದ ಪ್ರಮಾದ, ಮೋಹ ಮತ್ತು ಅಜ್ಞಾನಗಳು ಉಂಟಾಗುತ್ತವೆ.

ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ |
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥18॥

ಸತ್ವಗುಣವುಳ್ಳವರು ಊರ್ಧ್ವಲೋಕಗಳಿಗೆ ಹೋಗುತ್ತಾರೆ. ರಾಜಸರು ಮಧ್ಯ ಲೋಕಗಳಲ್ಲಿ ಇರುತ್ತಾರೆ. ಕೊನೆಯ ಗುಣವಾದ ತಮೋಗುಣದ ಸ್ವಭಾವವುಳ್ಳವರು ಅಧೋಲೋಕಗಳಿಗೆ ಹೋಗುತ್ತಾರೆ.

ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ |
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥19॥

ಯಾವಾಗ ಜೀವನು ತನಗೆ ಉಂಟಾಗುವ ಸುಖ-ದುಃಖಗಳಿಗೆ ತಾನೇ ಕಾರಣ, ತನ್ನ ಅಪರಾಧವೇ ಕಾರಣ ಹೊರತಾಗಿ ಇದರಲ್ಲಿ ಹರಿಯ ಅಪರಾಧವು ಏನೂ ಇಲ್ಲ ಎಂದು ತಿಳಿಯುತ್ತಾನೆಯೋ ಮತ್ತು ಹರಿಯು ಗುಣಗಳನ್ನು ಮೀರಿದವನು ಎಂದು ತಿಳಿಯುತ್ತಾನೆಯೋ ಆಗ ಅವನು ನನ್ನಲ್ಲಿ ಭಕ್ತಿಯನ್ನು ಹೊಂದುತ್ತಾನೆ.

ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ |
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥20॥

ಜೀವನು ದೇಹವನ್ನು ಉಂಟುಮಾಡುವ ಈ ಮೂರುಗುಣಗಳನ್ನು ಹರಿಯ ಅನುಗ್ರಹದಿಂದಲೇ ದಾಟಿ,
ಜನನ-ಮರಣ-ಜರಾ-ದುಃಖಗಳಿಂದ ನಿರ್ಮುಕ್ತನಾಗಿ ಮೋಕ್ಷವನ್ನು ಪಡೆಯುತ್ತಾನೆ.

ಅರ್ಜುನಃ

ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ |
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥21॥

ಅರ್ಜುನ ಎಲೈ ಪ್ರಭುವೇ, ಈ ಮೂರುಗುಣಗಳನ್ನೂ ದಾಟಿದವನ ಲಕ್ಷಣಗಳೇನು? ಅವನ ಆಚಾರವು ಹೇಗಿರುತ್ತದೆ? ಅವನು ಹೇಗೆ ಈ ಮೂರು ಗುಣಗಳನ್ನು ದಾಟುತ್ತಾನೆ?

ಶ್ರೀಭಗವಾನ್

ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ |
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥22॥

ಶ್ರೀಭಗವಾನ್ ಎಲೈ ಪಾಂಡವನೇ, ಯದೃಚ್ಛೆಯಿಂದ ಪ್ರಾಪ್ತವಾದ ಅಥವಾ ನಿವೃತ್ತವಾದ ಸತ್ವಗುಣದ ಕಾರ್ಯವಾದ ಪ್ರಕಾಶವನ್ನಾಗಲೀ, ರಜೋಗುಣದ ಕಾರ್ಯವಾದ ಪ್ರವೃತ್ತಿಯನ್ನಾಗಲೀ, ತಮೋಗುಣದ ಕಾರ್ಯವಾದ ಮೋಹವನ್ನಾಗಲೀ ಅವನು ದ್ವೇಷಿಸುವುದೂ ಇಲ್ಲ ಅಥವಾ ಬಯಸುವುದೂ ಇಲ್ಲ.

ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ |
ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥23॥
ಯಾವನು ಉದಾಸೀನನಂತೆ ನಿರ್ಲಿಪ್ತನಾಗಿದ್ದು, ಗುಣಗಳಿಂದ ಕ್ಷೋಭೆಗೆ ಒಳಗಾಗುವುದಿಲ್ಲವೋ, ಗುಣಗಳು ತಮ್ಮ ಕಾರ್ಯಗಳಲ್ಲಿ ತೊಡಗಿವೆ ಎಂದು ತಿಳಿದು ನಿಶ್ಚಲನಾಗಿರುತ್ತಾನೆಯೋ ಅವನು ಗುಣಗಳನ್ನು ದಾಟುತ್ತಾನೆ.
ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ |
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥24॥
ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ |
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥25॥
ಸುಖ-ದುಃಖಗಳಲ್ಲಿ ಸಮನಾಗಿ, ಶಾಂತಚಿತ್ತನಾಗಿ, ಲೋಷ್ಟಾಶ್ಮಕಾಂಚನಗಳಲ್ಲಿ ಸಮಾನವಾದ ದೃಷ್ಟಿಯುಳ್ಳವನಾಗಿ, ಪ್ರಿಯಾಪ್ರಿಯಗಳಲ್ಲಿಯೂ, ನಿಂದಾ- ಸ್ತುತಿಗಳಲ್ಲಿಯೂ ಸಮಾನನಾಗಿದ್ದು, ಹಾಗೆಯೇ ಮಾನಾಪಮಾನಗಳಲ್ಲಿಯೂ, ಶತ್ರು- ಮಿತ್ರ ಪಕ್ಷಗಳಲ್ಲಿಯೂ ಸಮಾನನಾಗಿದ್ದು, ಯಾವ ಕಾಮ್ಯಕರ್ಮವನ್ನೂ ಆರಂಭ ಮಾಡದೆ ಇರುವವನು ಗುಣಾತೀತನೆಂದು ಹೇಳಲ್ಪಡುತ್ತಾನೆ.
ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ |
ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥26॥
ಮತ್ತು ಯಾವನು ಅವ್ಯಭಿಚರಿತವಾದ ಭಕ್ತಿಯೋಗದಿಂದ ನನ್ನನ್ನು ಉಪಾಸನೆ ಮಾಡುತ್ತಾನೆಯೋ ಅವನು ಈ ಮೂರುಗುಣಗಳನ್ನು ಮೀರಿ ತನಗೆ ಯೋಗ್ಯವಾದ ಪೂರ್ಣತ್ವವನ್ನೂ ಅಥವಾ ಪರಮಾತ್ಮನ ಸಾನ್ನಿಧ್ಯವನ್ನು ಹೊಂದಲು ಸಮರ್ಥನಾಗುತ್ತಾನೆ.
ವಿಶೇಷ ವಿಚಾರ `ಸ್ಯಾತ್ ಬ್ರಹ್ಮಭೂಯೋ ಬ್ರಹ್ಮತ್ವಂ ಬ್ರಹ್ಮಸಾಯುಜ್ಯಮಿತ್ಯಪಿ' ಎಂದು ಕೋಶವಿರುವುದರಿಂದ ಬ್ರಹ್ಮಭೂಯ ಶಬ್ದಕ್ಕೆ ಬ್ರಹ್ಮಸಾಯುಜ್ಯ ಎಂದೂ ಅರ್ಥವನ್ನು ಮಾಡಬಹುದು.
ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ |
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥27॥
ಪೂರ್ಣಸುಖರೂಪನಾದ ಮುಕ್ತನಿಗೆ ನಾನು ಆಧಾರನಾಗಿದ್ದೇನೆ. ನಾನು ಶಾಶ್ವತವಾದ ಮೋಕ್ಷಕ್ಕೂ ಆಧಾರನಾಗಿದ್ದೇನೆ. ಶಾಶ್ವತವಾದ ಧರ್ಮಕ್ಕೂ ಮತ್ತು ದುಃಖ ಅಮಿಶ್ರಿತವಾದ ಸುಖಕ್ಕೂ ನಾನು ಆಧಾರನಾಗಿದ್ದೇನೆ.
ವಿಶೇಷ ವಿಚಾರ `ಬ್ರಹ್ಮಣೋ ಹಿ ಪ್ರತಿಷ್ಠಾ' ಎಂದು ಹೇಳಿರುವುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿರುವ `ಬ್ರಹ್ಮಭೂಯ' ಶಬ್ದಕ್ಕೆ ಬ್ರಹ್ಮತ್ವ ಎಂದು ಅರ್ಥಮಾಡಿದರೂ ಅದು ಪೂರ್ಣ ಸುಖರೂಪವಾದ ಮುಕ್ತಜೀವತ್ವವೇ ಸರಿ. `ಬ್ರಹ್ಮಾಣಿ ಜೀವಾಃ ಸರ್ವೇಪಿ' ಎಂದು ಎಲ್ಲ ಜೀವರನ್ನೂ ಬ್ರಹ್ಮಶಬ್ದವಾಚ್ಯರೆಂದು ಹೇಳಿರುವುದರಿಂದ ಬ್ರಹ್ಮ ಶಬ್ದದಿಂದ ಮುಕ್ತಜೀವರನ್ನು ತೆಗೆದುಕೊಳ್ಳಲು ಯಾವ ಅನುಪಪತ್ತಿಯೂ ಇರುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೇಳನೆಯ ಅಧ್ಯಾಯ
ಭಗವದ್ಗೀತಾ ಪುರಾಣಪುರುಷೋತ್ತಮಯೋಗ.
ಶ್ರೀಭಗವಾನ್
ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ |
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥1॥
ಶ್ರೀಭಗವಾನ್ ಈ ಸಂಸಾರವೆಂಬ ವೃಕ್ಷವು ಊರ್ಧ್ವ ಎಂದರೆ ಶ್ರೇಷ್ಠವಾದ ಮಹತ್ತತ್ವಕ್ಕಿಂತಲೂ ಮೇಲಿರುವ ಸತ್ವಾದಿ ಗುಣಗಳು, ಅವುಗಳ ಅಭಿಮಾನಿಯಾದ ಲಕ್ಷ್ಮೀ ಮತ್ತು ಪರಮಾತ್ಮನನ್ನು ಮೂಲವಾಗಿ ಹೊಂದಿದೆ. ಕೊಂಬೆಯ ಸ್ಥಾನದಲ್ಲಿರುವ ದೇವರ್ಷಿ, ಮನುಷ್ಯ, ಪಶು, ಪಕ್ಷಿ, ದೈತ್ಯ-ದಾನವಾದಿಗಳು, ನಾನಾ ಯೋನಿಗಳು ಕೆಳಗೆ ಹಬ್ಬಿವೆ. ಒಂದೇ ರೀತಿ ಇರುವುದಿಲ್ಲವಾದ್ದರಿಂದ ಇವುಗಳಿಗೆ ಅಶ್ವತ್ಥ ಎಂದು ಹೆಸರು. ಈ ಅಶ್ವತ್ಥ ವೃಕ್ಷಕ್ಕೆ ವೇದಗಳೇ ಎಲೆಗಳ ಸ್ಥಾನದಲ್ಲಿವೆ.
ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣಪ್ರವೃದ್ಧಾ ವಿಷಯಪ್ರವಾಲಾಃ |
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ॥2॥
ಅದರ ಕೊಂಬೆಗಳು ಸತ್ಯಲೋಕದಿಂದ ಆರಂಭಿಸಿ ಕೆಳಗಿನ ಮನುಷ್ಯ ಲೋಕದವರೆಗೂ, ಮನುಷ್ಯಲೋಕದಿಂದ ಆರಂಭಿಸಿ ಕೆಳಗಿನ ಪಾತಾಳ ಲೋಕದವರೆಗೂ ಹಬ್ಬಿವೆ. ಆ ಕೊಂಬೆಗಳು ರೂಪ-ರಸಾದಿ ಗುಣಗಳಿಂದ ಅಭಿವೃದ್ಧಿಯನ್ನು ಹೊಂದಿ ತ್ರಕ್‌ಚಂದನಾದಿ ವಿಷಯಗಳೆಂಬ ಚಿಗುರುಗಳನ್ನು ಹೊಂದಿವೆ. ಕೆಳಭಾಗದಲ್ಲಿ ಶಾಖೆಯ ಸಂಧಿ ಸಂಧಿಯಲ್ಲಿಯೂ ಉತ್ತಮ-ಅಧಮ- ಮಧ್ಯಮ ಜೀವರ ಯೋಗ್ಯತೆಯನ್ನು ಅನುಸರಿಸಿ ಪುಣ್ಯ-ಪಾಪ ಮಿಶ್ರರೂಪವಾದ ಕರ್ಮವನ್ನು ಮಾಡಿಸುವ ಗುಣತ್ರಯರೂಪವಾದ ಮೂಲ (ಬೇರುಗಳು) ಸೇರಿಕೊಂಡಿವೆ. ಸತ್ಯಲೋಕದಿಂದ ಆರಂಭಿಸಿ ಪಾತಾಳ ಲೋಕದವರೆಗೂ ಗುಣತ್ರಯದ ಸಂಬಂಧದಿಂದಲೇ ಜೀವರ ಪ್ರವೃತ್ತಿ ಎಂದು ಅಭಿಪ್ರಾಯ.
ನ ರೂಪಮಸ್ಯೇಹ ತಥೋಪಲಭ್ಯತೇ

ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ |
ಅಶ್ವತ್ಥಮೇನಂ ಸುವಿರೂಢಮೂಲ-
ಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥3॥
ತತಃ ಪರಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ |
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥4॥
ಈ ಅಶ್ವತ್ಥ ವೃಕ್ಷಕ್ಕೆ ಇಂತಹದೇ ರೂಪವೆಂದು ತಿಳಿದು ಬರುವುದಿಲ್ಲ. ಅದಕ್ಕೆ ಅಂತವಾಗಲೀ, ಆದಿಯಾಗಲೀ, ಆಧಾರವಾಗಲೀ ಕಾಣುವುದಿಲ್ಲ. ಹೀಗೆ ದೃಢವಾಗಿ ಬೇರೂರಿದ ಈ ಅಶ್ವತ್ಥ ವೃಕ್ಷವನ್ನು ದೃಢವಾದ ಅಸಂಗ ಶಸ್ತ್ರದಿಂದ ಕತ್ತರಿಸಿ ಅನಂತರ ಎಲ್ಲಿಗೆ ಹೋದರೆ ಪುನಃ ಹಿಂದಿರುಗುವುದಿಲ್ಲವೋ ಅಂತಹ ನಾರಾಯಣಾಖ್ಯನಾದ ಪರಬ್ರಹ್ಮನನ್ನು ಹುಡುಕಬೇಕು. ಯಾವ ಕಾರಣದಿಂದ ಅನಾದಿಕಾಲದಿಂದ ಉಂಟಾದ ಎಲ್ಲ ಪ್ರವೃತ್ತಿಗಳೂ ನಾರಾಯಣನಿಂದಲೇ ಆಗುತ್ತವೆಯೋ, ಅಂತಹ ನಾರಾಯಣನನ್ನೇ ಹೊಂದುತ್ತೇನೆ ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಅನ್ವೇಷಣೆ ಮಾಡಬೇಕು.
ನಿರ್ಮಾನಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ |
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ
ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥5॥
ಅಹಂಕಾರ ಮತ್ತು ಮೋಹವನ್ನು ತ್ಯಜಿಸಿ, ಸಂಗದೋಷಗಳನ್ನು ಜಯಿಸಿ, ಕಾಮಗಳನ್ನು ನಾಶಮಾಡಿ, ಸುಖದುಃಖರೂಪವಾದ ದ್ವಂದ್ವದಿಂದ ಮುಕ್ತರಾಗಿ ಅಧ್ಯಾತ್ಮನಿಷ್ಠರಾದವರು ಶಾಶ್ವತನಾದ ಗಮ್ಯನಾದ ಅವನನ್ನು ಹೊಂದುತ್ತಾರೆ.
ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ |
ಯದ್ಗತ್ವಾ ನ ನಿವರ್ತಂತೇ ತದ್ ಧಾಮ ಪರಮಂ ಮಮ ॥6॥
ಅಲ್ಲಿ ಸೂರ್ಯನಾಗಲೀ, ಚಂದ್ರನಾಗಲೀ, ಅಗ್ನಿಯಾಗಲೀ ಪ್ರಕಾಶಿಸುವುದಿಲ್ಲ. ಎಲ್ಲಿಗೆ ಹೋದರೆ ಹಿಂದಿರುಗಿ ಬರುವುದಿಲ್ಲವೋ ಅದು ನನ್ನ ಶ್ರೇಷ್ಠವಾದ ಆವಾಸಸ್ಥಾನ.
ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ |
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥7॥
ಅನಾದಿನಿತ್ಯವಾದ ನನ್ನ ಭಿನ್ನಾಂಶವೇ ಜೀವಲೋಕದಲ್ಲಿ ಜೀವ ಎಂಬ ಹೆಸರಿನಿಂದ ಇರುತ್ತದೆ. ಆ ಜೀವನಲ್ಲಿರುವ ಭಗವದ್‌ರೂಪವು ಪ್ರಕೃತಿಯಲ್ಲಿರುವ ಮನಸ್ಸೇ ಮೊದಲಾದ ಆರು ಜ್ಞಾನೇಂದ್ರಿಯಗಳನ್ನು ಜೀವ ಶರೀರದಿಂದ ಹೊರಗೆ ಎಳೆಯುತ್ತದೆ.
ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ |
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥8॥
ಜಡಕ್ಕೆ ಪ್ರಭುವಾದ ಜೀವನು ಯಾವಾಗ ಶರೀರವನ್ನು ಹೊಂದುತ್ತಾನೆಯೋ ಮತ್ತು ಯಾವಾಗ ಶರೀರದಿಂದ ನಿರ್ಗಮಿಸುತ್ತಾನೆಯೋ, ಆಗ ವಾಯುವು ಪುಷ್ಪಗಳಿಂದ ಗಂಧವನ್ನು ತೆಗೆದುಕೊಂಡಂತೆ ಈ ಇಂದ್ರಿಯಗಳನ್ನು ತೆಗೆದುಕೊಂಡು ಹೋಗುತ್ತಾನೆ.
ವಿಶೇಷ ವಿಚಾರ ಈ ಎರಡು ಶ್ಲೋಕಗಳಲ್ಲಿ ಜೀವನವಿಷಯದಲ್ಲಿ ಅನ್ವಯವು ಸುಲಭವಾಗಿದೆ. ಪರವಾದಿಗಳ ನಿರಾಕರಣೆಗಾಗಿ ಲಕ್ಷಾಲಂಕಾರದಲ್ಲಿ ವಾದಿರಾಜರು ಪರಮಾತ್ಮನ ವಿಷಯವಾಗಿಯೂ ಯೋಜನೆಯನ್ನು ಮಾಡುತ್ತಾರೆ. ಭಾರತದಲ್ಲಿ ಎಲ್ಲ ಕಡೆಯಲ್ಲಿಯೂ ಹತ್ತು ಅರ್ಥಗಳಿವೆ ಎಂದು ಪ್ರಾಚೀನರ ಉಕ್ತಿಯಿದೆಯಷ್ಟೆ. ಯತ್= ಯಾವಾಗ, ಶರೀರಮಾಪ್ನೋತಿ= ಜೀವನ ಉತ್ಪತ್ತಿ ಸಮಯದಲ್ಲಿ ಶರೀರವನ್ನು ಹೊಂದುತ್ತಾನೆಯೋ ಆಗ, ಜೀವಭೂತಃ= ಜೀವರಲ್ಲಿ ಸನ್ನಿಹಿತನಾದ, ಮಮೈವಾಂಶಃ= ನನ್ನ ಸ್ವರೂಪಾಂಶವೇ, ಪ್ರಕೃತಿಸ್ಥಾನಿ= ಜಡಪ್ರಕೃತಿಯಲ್ಲಿರುವ, ಮನಃಷಷ್ಠಾನಿ ಇಂದ್ರಿಯಾಣಿ= ಮನಸ್ಸು ಮೊದಲಾದ ಆರು ಜ್ಞಾನೇಂದ್ರಿಯಗಳನ್ನು, ಕರ್ಷತಿ= ಜೀವ ಶರೀರದ ಕಡೆಗೆ ಎಳೆಯುತ್ತದೆ. ಆ ಇಂದ್ರಿಯಗಳನ್ನು ಪ್ರಕೃತಿಯಿಂದ ಎಳೆದು ಪರಿಣಾಮವನ್ನು ಹೊಂದುವ ಜೀವದೇಹದಲ್ಲಿ ಗರ್ಭವಾಸದ ಐದನೆಯ ತಿಂಗಳಿನಲ್ಲಿ ಚಕ್ಷುರಾದಿ ಇಂದ್ರಿಯ ಸ್ಥಾನಗಳಲ್ಲಿ ಪರಿಣಾಮಗೊಳಿಸುತ್ತದೆ. ಯಾವಾಗ ಜೀವನು ಶರೀರದಿಂದ ಉತ್ಕ್ರಾಂತಿಯನ್ನು ಹೊಂದುತ್ತಾನೆಯೋ, ಆಗಲೂ ಈಶ್ವರನು ಆಶ್ರಯಾತ್= ಪುಷ್ಪ ಮೊದಲಾದ ಆಶ್ರಯದಿಂದ, ವಾಯುಃ ಗಂಧಾನಿವ= ವಾಯುವು ಗಂಧವನ್ನು ತೆಗೆದುಕೊಳ್ಳುವಂತೆ, ಏತಾನಿ ಗೃಹಿತ್ವಾ= ಈ ಸೂಕ್ಷ್ಮರೂಪವಾದ ಇಂದ್ರಿಯಗಳನ್ನು ಲಿಂಗದೇಹದಿಂದ ತೆಗೆದುಕೊಂಡು, ಸಂಯಾತಿ= ಪ್ರಯಾಣ ಮಾಡುತ್ತಾನೆ. ಸೂಕ್ಷ್ಮ ರೂಪದಿಂದ ತೆಗೆದುಕೊಳ್ಳುತ್ತಾನೆಂದು ಸೂಚಿಸಲು ವಾಯುವು ಗಂಧವನ್ನು ತೆಗೆದುಕೊಂಡಂತೆ ಎಂದು ಹೇಳಿದ್ದಾರೆ. `ಶರೀರಸ್ಥೋಪಿ ಕೌಂತೇಯ ನ ಕರೋತಿ ನ ಲಿಪ್ಯತೇ', `ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ', `ಉದಾಸೀನವದಾಸೀನಂ', `ಅಸಕ್ತಂ ತೇಷು ಕರ್ಮಸು' ಎಂಬ ನಿರವಕಾಶ ವಚನವಿರುವುದರಿಂದ ನಾವು ಹೇಳಿದುದೇ ನಿಜವಾದ ಅರ್ಥ. ಈಶ್ವರನೇ ಜೀವನಾಗಿ ಸಂಸಾರದಲ್ಲಿ ತಿರುಗುತ್ತಾನೆ ಎಂಬ ಅರ್ಥವು ಮನಸ್ಸಿನಿಂದ ಸ್ಮರಿಸಲೂ ಯೋಗ್ಯವಲ್ಲ. ಏಕೆಂದರೆ ಸ್ಪಷ್ಟವಾಗಿ ಈಶ್ವರ ಪದದ ಪ್ರಯೋಗವಿದೆ. ಮತ್ತು ನೀರಿನ ಗುಳ್ಳೆಯ ಆಕಾರದಲ್ಲಿರುವ ಶುಕ್ಲಶೋಣಿತಗಳ ಮಿಶ್ರಣದಲ್ಲಿ ನಿಶ್ಚೇಷ್ಟವಾಗಿ ಕುಳಿತಿರುವ ಜೀವನು ಪ್ರಕೃತಿಯಲ್ಲಿರುವ ಇಂದ್ರಿಯಗಳನ್ನು ಆಕರ್ಷಣೆಯನ್ನು ಮಾಡುವ ಸಾಮರ್ಥ್ಯಹೀನನಾಗಿರುವುದರಿಂದ ಇನ್ನು ಜೀವಸನ್ನಿಹಿತನಾದ ಪರಮಾತ್ಮನ ಸೃಷ್ಟಿ-ಸಂಹಾರ ಕೌಶಲವೆಂದೇ ಅರ್ಥಮಾಡಬೇಕು.
ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ |
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥9॥
ಈ ಪರಮಾತ್ಮನು ಶ್ರೋತ್ರ, ಚಕ್ಷುಸ್, ಸ್ಪರ್ಶ, ರಸನ, ಘ್ರಾಣ ಮತ್ತು ಮನಸ್ಸು ಈ ಇಂದ್ರಿಯಗಳಲ್ಲಿ ಅಧಿಷ್ಠಿತನಾಗಿ ಜೀವನ

ವಿಷಯಭೋಗಕ್ಕಾಗಿ ಉಂಟಾಗುವ ಸುಖ ರಸವನ್ನು ಮಾತ್ರ ಭೋಗಿಸುತ್ತಾನೆ. ದುಃಖವನ್ನು ಎಂದೂ ಭೋಗಿಸುವುದಿಲ್ಲ.
ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ |
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥10॥
ತನ್ನ ಉತ್ಕ್ರಮಣ ಸಮಯದಲ್ಲಿ ಜೊತೆಯಲ್ಲೇ ಉತ್ಕ್ರಾಂತನಾಗುವ, ತಾನು ಇರುವ ಸಮಯದಲ್ಲಿ ಜೊತೆಯಲ್ಲೇ ಇರುವ, ತಾನು ಭೋಗಿಸುವ ಸಮಯದಲ್ಲಿ ಜೊತೆಯಲ್ಲಿಯೇ ಭೋಗಿಸುವ, ಆನಂದಾದಿ ಗುಣಯುತನಾದ ಪರಮಾತ್ಮನನ್ನು ವಿಮೂಢರಾದ ಜೀವರು ಕಾಣುವುದಿಲ್ಲ. ಜ್ಞಾನದೃಷ್ಟಿಯುಳ್ಳವರು ಕಾಣುತ್ತಾರೆ.
ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ |
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥11॥
ತಮ್ಮಲ್ಲಿಯೇ ಅವಸ್ಥಿತನಾದ ಈ ಪರಮಾತ್ಮನನ್ನು ಪ್ರಯತ್ನಶೀಲರಾದ ಯೋಗಿಗಳು ಕಾಣುತ್ತಾರೆ. ಮನೋನಿಗ್ರಹವಿಲ್ಲದ, ಸರಿಯಾದ ಜ್ಞಾನವಿಲ್ಲದ ಅಯೋಗಿಗಳು ಪ್ರಯತ್ನಪಟ್ಟರೂ ಇವನನ್ನು ನೋಡುವುದಿಲ್ಲ.
ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್ |
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥12॥
ಸೂರ್ಯನಲ್ಲಿ ಸಮಸ್ತವಾದ ಜಗತ್ತನ್ನು ಪ್ರಕಾಶಿಸುವ ಯಾವ ತೇಜಸ್ಸಿದೆಯೋ, ಚಂದ್ರನಲ್ಲಿ ಮತ್ತು ಅಗ್ನಿಯಲ್ಲಿ ಯಾವ ತೇಜಸ್ಸಿದೆಯೋ ಅವೆಲ್ಲವನ್ನೂ ನನ್ನ ಅಧೀನವೆಂದೇ ತಿಳಿ.
ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ |
ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥13॥
ನಾನು ಭೂಮಿಯಲ್ಲಿ ಸನ್ನಿಹಿತನಾಗಿ ನನ್ನ ಸಾಮರ್ಥ್ಯದಿಂದ ಎಲ್ಲ ಜೀವರನ್ನೂ ಧರಿಸುತ್ತೇನೆ. ರಸನಿಯಾಮಕನಾದ ಚಂದ್ರನಲ್ಲಿ ಇದ್ದು, ಎಲ್ಲಾ ಓಷಧಿಗಳನ್ನೂ ಪೋಷಿಸುತ್ತೇನೆ.
ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ |
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥14॥
ನಾನು ವೈಶ್ವಾನರ ನಾಮಕ ಅಗ್ನಿಯಲ್ಲಿ ಸನ್ನಿಹಿತನಾಗಿ ಜೀವರ ದೇಹದಲ್ಲಿದ್ದು, ಪ್ರಾಣಾಪಾನ ಸಹಿತನಾಗಿ ಚತುರ್ವಿಧವಾದ ಅನ್ನವನ್ನು ಪಚನ ಮಾಡುತ್ತೇನೆ.
ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ
ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ |
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ ವೇದವಿದೇವ ಚಾಹಮ್ ॥15॥
ನಾನು ಎಲ್ಲರ ಹೃದಯದಲ್ಲಿ ಸನ್ನಿಹಿತನಾಗಿದ್ದೇನೆ. ಜೀವರ ಸ್ಮರಣೆ, ಜ್ಞಾನ, ವಿಸ್ಮೃತಿ ಎಲ್ಲವೂ ನನ್ನಿಂದಲೇ ಆಗುತ್ತದೆ. ನಾನು ಎಲ್ಲ ವೇದದಿಂದಲೂ ಪ್ರತಿಪಾದ್ಯನಾದವನು. ನಾನು ಬ್ರಹ್ಮಸೂತ್ರವನ್ನು ರಚಿಸಿದವನು. ಆದರೆ ವೇದಗಳನ್ನು ತಿಳಿದವನು ಮಾತ್ರ (ರಚಿಸಿದವನಲ್ಲ).
ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ |
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥16॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥17॥
ಈ ಲೋಕದಲ್ಲಿ ಕ್ಷರ, ಅಕ್ಷರ ಎಂಬ ಇಬ್ಬರು ಪುರುಷರಿದ್ದಾರೆ. ಶರೀರ ನಾಶವಾಗುವ ಕಾರಣದಿಂದ ಬ್ರಹ್ಮಾದಿ ಎಲ್ಲಾ ಚೇತನರೂ ಕ್ಷರರು. ನಿರ್ವಿಕಾರಳಾದ ಲಕ್ಷ್ಮೀದೇವಿಯು ಅಕ್ಷರಳೆನಿಸುತ್ತಾಳೆ. ಅವರಿಬ್ಬರಿಗಿಂತಲೂ ಉತ್ತಮನಾದ ಪುರುಷನು ಇನ್ನೊಬ್ಬನು. ಅವನನ್ನು ಪರಮಾತ್ಮನೆಂದು ಕರೆಯುತ್ತಾರೆ. ಅವನು ಲೋಕತ್ರಯವನ್ನು ಪ್ರವೇಶಿಸಿ ಅದನ್ನು ಧರಿಸಿದ್ದಾನೆ. ಲೋಕತ್ರಯವು ನಾಶವನ್ನು ಹೊಂದಿದರೂ ಅವನು ನಾಶವನ್ನು ಹೊಂದುವುದಿಲ್ಲ. ಏಕೆಂದರೆ ಅವನಿಗೆ ಅಂತಹ ಸಾಮರ್ಥ್ಯವಿದೆ.
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ |
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥18॥
ಯಾವ ಕಾರಣದಿಂದ ನಾನು ಕ್ಷರವನ್ನು ಮೀರಿದ್ದೇನೆಯೋ, ಅಕ್ಷರಕ್ಕಿಂತಲೂ ಉತ್ತಮನಾಗಿದ್ದೇನೆಯೋ ಆ ಕಾರಣದಿಂದ ನನ್ನನ್ನು ಪೌರುಷೇಯ ಗ್ರಂಥಗಳಲ್ಲಿ ಮತ್ತು ವೇದಗಳಲ್ಲಿ ಪರಮಾತ್ಮನೆಂದು ಕರೆಯುತ್ತಾರೆ.
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ |
ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥19॥
ಎಲೈ ಭಾರತನೇ, ಈ ನನ್ನ ಪುರುಷೋತ್ತಮತ್ವವು ವ್ಯಾವಹಾರಿಕವಾದುದಲ್ಲ. ಯಾವನು ನನ್ನನ್ನು ಈ ರೀತಿಯಲ್ಲಿ ಪುರುಷೋತ್ತಮನೆಂದು ಸಂಮೋಹವಿಲ್ಲದೆ ತಿಳಿಯುತ್ತಾನೆಯೋ, ಅವನು ಎಲ್ಲವನ್ನೂ ತಿಳಿದವನಾಗಿ ನನ್ನನ್ನು ಸರ್ವಪ್ರಕಾರದಿಂದ ಭಜಿಸಿದವನಾಗುತ್ತಾನೆ.
ವಿಶೇಷ ವಿಚಾರ ವ್ಯಾವಹಾರಿಕವಾದುದು, ಮಾಯಾಮಯವಾದುದರಿಂದ ಅದು ಸಂಮೋಹವಾದುದು. ಅಸಮ್ಮೂಢ ಎಂಬ ಪದದಿಂದ ಪುರುಷೋತ್ತಮತ್ವಾದಿಗಳು ವ್ಯಾವಹಾರಿಕವಲ್ಲ ಎಂದು ಹೇಳಿದ್ದಾರೆ. ಜಡ-ದೇಹಾದಿಗಳು ನಶ್ವರವೆಂದೂ, ಕ್ಷರಾಕ್ಷರ ಚೇತನರನ್ನು ಭೃತ್ಯರೆಂದೂ, ತಾನು (ಕೃಷ್ಣನು) ಉತ್ತಮನೆಂದೂ ತಿಳಿಯುವ ಜ್ಞಾನಿಯು `ಸರ್ವವಿದ್' ಎಲ್ಲವನ್ನೂ ತಿಳಿದವನು ಎಂದು ಹೇಳಿದ್ದಾರೆ. ಮಾಯಾಮಯ ವಸ್ತುವನ್ನು ತಿಳಿದವನು ಸರ್ವಜ್ಞನಲ್ಲ. ಸರ್ವಭಾವೇನ ಎಂದರೆ ಸರ್ವಪ್ರಕಾರದಿಂದ ಅಥವಾ

ಸರ್ವಮನೋವೃತ್ತಿಗಳಿಂದ ಎಂದು ಅರ್ಥ. ಅಥವಾ ಹಿಂದೆ ಹೇಳಿದ ಪ್ರಮೇಯವನ್ನು ಅನುಸರಿಸಿ ಸರ್ವೋತ್ತಮತ್ವೇನ ಎಂದು ಅರ್ಥ. ಶಾಕಪಾರ್ಥಿವಾದಿ ಸಮಾಸದಲ್ಲಿ ಮಧ್ಯೆ ಪ್ರಿಯಶಬ್ದವನ್ನು ಅಧ್ಯಾಹಾರ ಮಾಡಿದಂತೆ `ಸರ್ವಭಾವೀನ' ಎಂಬುದಕ್ಕೆ `ಸರ್ವಗುಣ ಭಾವೇನ' ಎಂದು ಮಾಡಿ, ಸರ್ವೋತ್ತಮತ್ವ ಉಪಲಕ್ಷಿತವಾದ ಸಮಸ್ತ ಗುಣಗಳ ಇರುವಿಕೆಯಿಂದ ಎಂದು ಅರ್ಥ ಮಾಡಬೇಕು. ಸಮಸ್ತ ಗುಣಗಳು ಇವೆ ಎಂದು ಯಾವನು ಉಪಾಸನೆ ಮಾಡುತ್ತಾನೆಯೋ ಎಂದು ಅಭಿಪ್ರಾಯ. `ಭಾವಃ ಪದಾರ್ಥೇ ಸತ್ತಾಯಾಂ' ಎಂದು ಕೋಶವಿದೆ. ನನ್ನ ಸರ್ವೋತ್ತಮತ್ವ ಜ್ಞಾನವೇ ದೊಡ್ಡ ಸೇವೆ ಎಂದು ಅಭಿಪ್ರಾಯ. ಸರ್ವಭಾವೇನ ಎಂಬುದಕ್ಕೆ ನಾನೇ ಸರ್ವರೂಪವುಳ್ಳವನಾಗಿ ಎಂಬ ಅರ್ಥವು, `ಭಜತಿ' ಎಂಬಲ್ಲಿರುವ ಸೇವಾತ್ಮಕವಾದ `ಭಜ' ಧಾತುವಿಗೆ ವಿರುದ್ಧವಾದುದು. ಮತ್ತು ಪೂರ್ವಶ್ಲೋಕದಲ್ಲಿ ಹೇಳಿದ ಸರ್ವೋತ್ತಮತ್ವಕ್ಕೂ ವಿರುದ್ಧವಾದುದರಿಂದ ಅದು ಅನರ್ಥಕಾರಿಯಾದುದು.

ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ |
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥20॥
ಎಲೈ ಅನಘನೇ, ಇದು ಅತ್ಯಂತ ರಹಸ್ಯವಾದ ಶಾಸ್ತ್ರ. ಇದನ್ನು ನಾನು ನಿನಗೆ ಹೇಳಿದ್ದೇನೆ. ಎಲೈ ಭಾರತನೇ, ಇದನ್ನು ತಿಳಿದು ನೀನು ಅಪರೋಕ್ಷ ಜ್ಞಾನಿಯೂ ಮತ್ತು ಮುಕ್ತನೂ ಆಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *

ಮೂವತ್ತೆಂಟನೆಯ ಅಧ್ಯಾಯ
ಭಗವದ್ಗೀತಾ ದೈವಾಸುರಸಂಪದ್ವಿಭಾಗಯೋಗ.
ಶ್ರೀಭಗವಾನ್
ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ |
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥1॥
ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ |
ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ॥2॥
ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ |
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥3॥
ಶ್ರೀಭಗವಾನ್ ಎಲೈ ಭಾರತನೇ, ನಿರ್ಭಯತ್ವ, ಚಿತ್ತಶುದ್ಧಿ, ಜ್ಞಾನಯೋಗದಲ್ಲಿ ಸರ್ವದಾ ಸ್ಥಿತಿ, ದಾನ, ಇಂದ್ರಿಯನಿಗ್ರಹ, ಯಜ್ಞಾಚರಣೆ, ಯೋಗಾಭ್ಯಾಸ, ತಪಸ್ಸು, ಮನೋವಾಕ್ ಕಾಯಗಳಲ್ಲಿ ಋಜುತನ, ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಚಾಡಿ ಹೇಳದಿರುವಿಕೆ, ದಯೆ, ವಿಷಯಾಸಕ್ತಿರಾಹಿತ್ಯ, ಮೃದುತನ, ಕೆಟ್ಟ ಕೆಲಸವನ್ನು ಮಾಡುವುದಕ್ಕೆ ನಾಚಿಕೆ, ಅಚಾಂಚಲ್ಯ, ತೇಜಸ್ಸು, ಕ್ಷಮಾ, ಧೈರ್ಯ, ಶುಚಿತ್ವ, ದ್ರೋಹವನ್ನು ಮಾಡದಿರುವುದು, ಅಹಂಕಾರರಾಹಿತ್ಯ ಇವು ದೈವೀ ಸಂಪತ್ತಿನಲ್ಲಿ ಜನಿಸಿದ ಮನುಷ್ಯನಿಗೆ ಇರುತ್ತವೆ.
ದಂಭೋ ದರ್ಪೋಽತಿ(ಭಿ)ಮಾನಶ್ಚ ಕ್ರೋಧಃ ಪಾರುಷ್ಯಮೇವ ಚ |
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥4॥
ಎಲೈ ಪಾರ್ಥನೇ, ಡಂಭ, ದರ್ಪ, ಅಹಂಕಾರ, ಕ್ರೋಧ, ಮಾತುಗಳಲ್ಲಿ ಒರಟುತನ, ಅಜ್ಞಾನ ಇವುಗಳು ಆಸುರೀ ಸಂಪತ್ತಿನಿಂದ ಜನಿಸಿದವನ ಲಕ್ಷಣಗಳಾಗಿರುತ್ತವೆ.
ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ |
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥5॥
ಎಲೈ ಪಾಂಡವನೇ, ದೈವೀ ಸಂಪತ್ತು ಮೋಕ್ಷಕ್ಕೂ, ಆಸುರೀ ಸಂಪತ್ತು ಬಹಳ ದುಃಖ ಸಂಬಂಧರೂಪವಾದ ಅಂಧಂತಮಸ್ಸಿಗೂ ಕಾರಣವೆಂದು ತಿಳಿಯಲ್ಪಡುತ್ತದೆ. ನೀನು ವ್ಯಥೆಪಡಬೇಡ, ದೈವೀಸಂಪತ್ತಿನಲ್ಲಿ ಜನಿಸಿದ್ದೀಯೆ.
ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ |
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥6॥
ಈ ಲೋಕದಲ್ಲಿ ಜೀವರ ಸೃಷ್ಟಿ, ದೈವ ಮತ್ತು ಆಸುರ ಎಂದು ಎರಡು ವಿಧವಾದುದು. ದೈವಸೃಷ್ಟಿಯನ್ನು ವಿಸ್ತಾರವಾಗಿ ಹೇಳಿದ್ದೇನೆ. ಎಲೈ ಪಾರ್ಥನೇ, ಆಸುರ ಸೃಷ್ಟಿಯನ್ನು ಕೇಳು.
ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ |
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥7॥
ಅಸುರ ಜನರು ವಿಹಿತವಾದುದರಲ್ಲಿ ಪ್ರವೃತ್ತಿಯನ್ನೂ, ನಿಷಿದ್ಧವಾದುದರಲ್ಲಿ ನಿವೃತ್ತಿಯನ್ನೂ ತಿಳಿಯುವುದಿಲ್ಲ. ಅವರಲ್ಲಿ ಶೌಚವಾಗಲೀ, ಒಳ್ಳೆಯ ಆಚರವಾಗಲೀ ಅಥವಾ ಸತ್ಯವಾಗಲೀ ಇರುವುದಿಲ್ಲ.
ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ |
ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥8॥
ಅವರು ಜಗತ್ತು ಅಸತ್ಯ, ಎಂದರೆ ಮಿಥ್ಯಾಭೂತವಾದುದು, ಅಪ್ರತಿಷ್ಠ- ಕೊನೆಯಲ್ಲಿ ಉಳಿಯದಿರುವುದು, ಜ್ಞಾನಬಾಧ್ಯ; ಅನೀಶ್ವರ- ಸರ್ವಾಭೇದವನ್ನು ಹೇಳುವುದರಿಂದ ಈಶ್ವರರಹಿತವಾದುದು; ಅಪರಸ್ಪರ ಸಂಭೂತ- ಮಣ್ಣಿನಿಂದ ಘಟ, ನೂಲಿನಿಂದ ಪಟ ಇತ್ಯಾದಿ ರೂಪವಾಗಿ ಪರಸ್ಪರವಾಗಿ ಕಾರ್ಯಕಾರಣಭಾವರಹಿತವಾದುದು; ಮತ್ತೇನೆಂದರೆ ಕಾಮಹೇತುಕಂ- ಕಾಮ ಎಂದರೆ ತಮ್ಮ ಮನಸ್ಸಿಗೆ ಬಂದಂತೆ ಪರಿಕಲ್ಪಿತವಾದ ಅಜ್ಞಾನ, ಆ ಅಜ್ಞಾನವೇ ಕಾರಣವಾಗಿ ಉಳ್ಳಂತಹದು, ಬ್ರಹ್ಮಾಶ್ರಿತವಾದ ಅಜ್ಞಾನವೇ ಘಟ-ಪಟಾದಿ

ಜಗದ್‌ರೂಪದಿಂದ ಪರಿಣಾಮವನ್ನು ಹೊಂದುತ್ತದೆ. ಹೊರತಾಗಿ ಆಯಾ ವಸ್ತುಗಳ ಅವಯವಪರಂಪರೆಯಿಂದ ಆದಿ ಸೃಷ್ಟಿಯಲ್ಲೇ ಆಯಾ ಕಾರ್ಯಗಳು ಉಂಟಾಗುವುದಿಲ್ಲ ಎಂದು ಹೇಳುತ್ತಾರೆ. ಕಾ-ಅಮಾ ಎಂದು ಪರಚ್ಛೇದ. ಕಾ ಎಂದರೆ ಕುತ್ಸಿತವಾದ, ಅಮಾ-ಅಜ್ಞಾನವು ಯಾವುದಕ್ಕಿದೆಯೋ ಅದು ಕಾಮ ಎಂದರೆ ಶಬಲಬ್ರಹ್ಮ. ಅಂತಹ ಶಬಲಬ್ರಹ್ಮನಿಂದ ಉಂಟಾದುದು. ಅನ್ಯತ್-ಸದಸದ್ವಿಲಕ್ಷಣವಾದುದು. ಇತ್ಯಾದಿ ರೂಪದಲ್ಲಿ ಅವರು ಹೇಳುತ್ತಾರೆ.
ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ |
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥9॥
ಇಂತಹ ಜ್ಞಾನವನ್ನು ಹೊಂದಿ ದುಷ್ಟಚಿತ್ತರಾಗಿ ಅಲ್ಪಜ್ಞಾನವುಳ್ಳವರಾಗಿ, ಉಗ್ರ ಕರ್ಮವನ್ನು ಮಾಡುತ್ತಾ, ಕಲಿಯುಗಾದಿಗಳಲ್ಲಿ ಜಗತ್ತಿಗೆ ಶತ್ರುಗಳಾಗಿ ಜಗತ್ತಿನ ಅನಿಷ್ಟಕ್ಕೆ ಕಾರಣರಾಗುತ್ತಾರೆ.
ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ |
ಮೋಹಾದ್ ಗೃಹೀತ್ವಾಽಸದ್‌ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ ॥
ಪೂರೈಸಲು ಅಸಾಧ್ಯವಾದ ಕಾಮಗಳನ್ನು ಹೊಂದಿ, ದಂಭ, ಅಹಂಕಾರ ಮತ್ತು ಮದಗಳಿಂದ ಕೂಡಿ ಮಿಥ್ಯಾಜ್ಞಾನ ಸ್ವಭಾವದಿಂದ ಪೂರ್ವಾಗ್ರಹವನ್ನು ಹೊಂದಿ ಅಶುಚಿವ್ರತವನ್ನು ಮಾಡಿ ವಿತ್ತ ಭೋಗಗಳಿಗಾಗಿ ಪ್ರವೃತ್ತಿ ಮಾಡುತ್ತಾರೆ.
ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ |
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥11॥
ಪ್ರಲಯಕಾಲದವರೆಗೂ ಪರಿಮಿತಿ ಇಲ್ಲದಷ್ಟು ಚಿಂತೆಗಳನ್ನು ಹೊಂದಿ ಕಾಮೋಪಭೋಗವೇ ದೊಡ್ಡ ಪುರುಷಾರ್ಥವೆಂದು ತಿಳಿದಿರುತ್ತಾರೆ.
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ |
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥12॥
ನೂರಾರು ಆಶಾ-ಪಾಶಗಳಿಂದ ಬದ್ಧರಾಗಿ ಕಾಮ-ಕ್ರೋಧ ಪರಾಯಣರಾಗಿ ಕಾಮಭೋಗಾರ್ಥವಾಗಿ ಅನ್ಯಾಯದಿಂದ ದ್ರವ್ಯವನ್ನು ಸಂಪಾದಿಸಲು ಪ್ರಯತ್ನ ಪಡುತ್ತಾರೆ.
ವಿಶೇಷ ವಿಚಾರ ಆಶಾಪಾಶ ಬಂಧನವು ಪರಾಪರತತ್ತ್ವದ್ರೋಹ ಮೂಲವಾದುದು. ಸಾಂಸಾರಿಕ ದೋಷಗಳು ಅವರಲ್ಲಿಯೇ ಅಧಿಕವಾಗಿರುತ್ತವೆ ಎಂದು ಅಭಿಪ್ರಾಯ.
ಇದಮದ್ಯ ಮಯಾ ಲಬ್ಧಮಿದಂ ಪ್ರಾಪ್ಸ್ಯೇ ಮನೋರಥಮ್ |
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥13॥
ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ |
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥14॥
ಈ ದಿನ ಇದನ್ನು ನಾನು ಪಡೆದಿದ್ದೇನೆ, ಈ ಮನೋರಥವನ್ನು ಪೂರೈಸಿಕೊಳ್ಳುವೆ. ಇಷ್ಟು ಧನ ನನ್ನಲ್ಲಿದೆ, ನನಗೆ ಪುನಃ ಧನ ಉಂಟಾಗುತ್ತದೆ. ಈ ಶತ್ರುವನ್ನು ಕೊಂದಿದ್ದೇನೆ, ಬೇರೆ ಶತ್ರುಗಳನ್ನೂ ಕೊಲ್ಲುವೆನು. ನಾನೇ ಈಶ್ವರ, ನಾನೇ ಭೋಗಿ, ಸಿದ್ಧನಾದವನು, ಬಲಿಷ್ಠನಾದವನು, ಸುಖೀ.
ವಿಶೇಷ ವಿಚಾರ ಜಗದೀಶ್ವರನು ನನಗಿಂತ ಅಭಿನ್ನನಾದವನು. ನನಗಿಂತ ಭಿನ್ನನಾದ ಜಗದೀಶ್ವರನು ಇಲ್ಲ ಎಂದು ಪರತತ್ವವಿಷಯದಲ್ಲಿ ದ್ರೋಹವನ್ನು ಮಾಡುತ್ತಾರೆ. ಜಗತ್ತು ಮಿಥ್ಯಾ ಎಂದು ಹೇಳಿ, ಅಪರತತ್ತ್ವದ ವಿಷಯದಲ್ಲಿಯೂ ದ್ರೋಹವನ್ನು ಮಾಡುತ್ತಾರೆ ಎಂದು ಅಭಿಪ್ರಾಯ.
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ |
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥15॥
ನಾನು ಧನಾಢ್ಯನಾಗಿದ್ದೇನೆ. ಒಳ್ಳೆಯ ಕುಲದಲ್ಲಿ ಜನಿಸಿದ್ದೇನೆ. ನನ್ನಂತಹವರು ಯಾರಿದ್ದಾರೆ? ಯಾಗವನ್ನು ಮಾಡುವೆನು. ದಾನವನ್ನು ಮಾಡುವೆನು. ಅನಂತರ ಸುಖ ಪಡುವೆನು ಮುಂತಾದ ಅಜ್ಞಾನಗಳಿಂದ ಬಹಳವಾಗಿ ಮೋಹಿತರಾಗಿರುತ್ತಾರೆ.
ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ |
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥16॥
ಅನೇಕ ಚಿತ್ತಭ್ರಾಂತಿಗೆ ಒಳಗಾಗಿ, ಮೋಹಜಾಲಗಳಿಂದ ಆವೃತರಾಗಿ, ಕಾಮ ಭೋಗಗಳಲ್ಲಿಯೇ ಪ್ರವೃತ್ತರಾಗಿ, ಅಶುಚಿಯಾದ ನರಕದಲ್ಲಿ ಬೀಳುತ್ತಾರೆ.
ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ |
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥17॥
ತಮ್ಮನ್ನು ತಾವೇ ದೊಡ್ಡವರೆಂದು ತಿಳಿದು ಉತ್ತಮರ ಜೊತೆಯಲ್ಲಿ ಸರಿಯಾಗಿ ಮಾತನಾಡದೇ, ಧನ-ಅಹಂಕಾರ ಮತ್ತು ಮದಗಳಿಂದ ಕೂಡಿದವರಾಗಿ ಶಾಸ್ತ್ರ ವಿಹಿತವಲ್ಲದ ರೀತಿಯಲ್ಲಿ ದಂಭದಿಂದ ಅವರು ಯಜ್ಞಗಳನ್ನೂ ಮಾಡುತ್ತಾರೆ.
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ |
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥18॥
ಅಹಂಕಾರವನ್ನೂ, ಬಲವನ್ನೂ, ದರ್ಪವನ್ನೂ, ಕಾಮ-ಕ್ರೋಧವನ್ನೂ ಆಶ್ರಯಿಸಿ ನನ್ನನ್ನು ತಮ್ಮ ದೇಹದಲ್ಲಿಯೂ, ಪರದೇಹದಲ್ಲಿಯೂ ದ್ವೇಷ ಮಾಡುತ್ತಾ ಅಸೂಯೆಯನ್ನು ಮಾಡುತ್ತಾರೆ.
ವಿಶೇಷ ವಿಚಾರ ತನ್ನ ದೇಹದಲ್ಲಿ ಪ್ರದ್ವೇಷ ಎಂದರೆ ತಾನು ಬ್ರಹ್ಮರೂಪನಾದುದರಿಂದ ನಾನು ಅನುಭವಿಸುವ ದುಃಖವು ಹರಿಯದೇ ಎಂದು ತಮ್ಮ ದೋಷಗಳನ್ನು ಭಗವಂತನಲ್ಲಿ ಆರೋಪಿಸುವುದು. ಪರದೇಹದಲ್ಲಿ ಪ್ರದ್ವೇಷ ಎಂದರೆ ಎಲ್ಲರೂ ಬ್ರಹ್ಮರೆಂದು ತಿಳಿದು

ಅವರವರ ದೋಷಗಳನ್ನು ಬ್ರಹ್ಮನಲ್ಲಿ ಆರೋಪಿಸುವುದು.
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ |
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ||19||
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ |
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ||20|
ಅಂತಹ ಕ್ರೂರರಾದ, ನನ್ನನ್ನು ದ್ವೇಷ ಮಾಡುವ ನರಾಧಮರನ್ನು ನಾನು ಸತತವಾಗಿ ಅಶುಭವಾದ ಆಸುರ ಯೋನಿಗಳಲ್ಲಿಯೇ ಎಸೆಯುತ್ತೇನೆ. ಎಲೈ ಕೌಂತೇಯನೇ, ಆಸುರಯೋನಿಗಳನ್ನು ಹೊಂದಿದ ಆ ಮೂಢರು ಜನ್ಮಜನ್ಮಗಳಲ್ಲಿ ನನ್ನನ್ನು ಹೊಂದದೆಯೇ ಅಧೋಗತಿಯನ್ನು ಹೊಂದುತ್ತಾರೆ.
ವಿಶೇಷ ವಿಚಾರ `ಅಜಸ್ರಂಕ್ಷಿಪಾಮಿ' ಎಂದರೆ ಕ್ಷಿಪ ನಿರಸನೇ ಎಂದು ಧಾತುವಿರುವುದರಿಂದ ಅವರಿಗೆ ಜ್ಞಾನಾದಿ ಗುಣಗಳನ್ನು ನಿರಸನ ಮಾಡುತ್ತೇನೆ ಎಂದು ಅರ್ಥ. ಅಜಸ್ರಂಕ್ಷಿಪಾಮಿ ಆಸುರೀಷ್ವೇವ ಯೋನಿಷು ಮೂಢಾ ಜನ್ಮನಿ ಜನ್ಮನಿ' ಎಂಬ ಮಾತುಗಳನ್ನು ಹೇಳಿ ಆಸುರ ಸ್ವಭಾವವುಳ್ಳ ಜೀವರಿಗೆ ಸಂಸಾರಾವಸ್ಥೆಯಲ್ಲಿ ನಿಯಮೇನ ನೀಚಯೋನಿಗಳಲ್ಲಿಯೇ ಉತ್ಪತ್ತಿ ಮತ್ತು ಮಿಥ್ಯಾಜ್ಞಾನಾದಿ ದೋಷಗಳಿಗೆ ಜನ್ಮ ಜನ್ಮಗಳಲ್ಲಿ ಅಭಿವೃದ್ಧಿಯೇ ಉಂಟಾಗುತ್ತದೆ. ಆದ್ದರಿಂದ ಅವರು ತಮಸ್ಸಾಧನಗಳಲ್ಲಿಯೇ ನಿರತರಾಗಿರುತ್ತಾರೆ. ಅವರಿಗೆ ಮೋಕ್ಷ ಸಾಧನ ಪ್ರಯತ್ನವಂತೂ ಅಷ್ಟಮ ರಸದಂತಾಗುತ್ತದೆ ಎಂದು ನಿಯಮಪ್ರತಿಪಾದಕವಾದ ಈ ಮೇಲಿನ ಮೂರು ಪ್ರಯೋಗಗಳಿಂದ ಸೂಚಿಸುತ್ತಾರೆ. `ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್' ಎಂಬುದರಿಂದ ಮೋಕ್ಷಾಭಾವನಿಯಮವೂ ತಮಃ ಪ್ರಾಪ್ತಿ ನಿಯಮವೂ ಹೇಳಲ್ಪಡುತ್ತದೆ ಎಂದು ತಿಳಿಯಬೇಕು. ಆದ್ದರಿಂದ ಜೀವರ ಉತ್ತಮಾಧಮ ರೂಪವಾದ ದ್ವೈವಿಧ್ಯವು ಯಾವಾಗಲೂ ವ್ಯತ್ಯಾಸ ಹೊಂದುವುದಿಲ್ಲ ಎಂದು ಅಭಿಪ್ರಾಯ.
ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ |
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್‌ತ್ರಯಂ ತ್ಯಜೇತ್ ||21||
ಕಾಮ, ಕ್ರೋಧ ಮತ್ತು ಲೋಭಗಳು ನರಕಕ್ಕೆ ಮೂರು ವಿಧವಾದ ದ್ವಾರಗಳು ಮತ್ತು ಆತ್ಮನಾಶಕ್ಕೆ ಕಾರಣವಾದವುಗಳು. ಆದ್ದರಿಂದ ಆ ಮೂರನ್ನೂ ಬಿಡತಕ್ಕದ್ದು.
ವಿಶೇಷ ವಿಚಾರ ಕಾಮ ಎಂದರೆ ಯಾವುದೋ ಆಸೆಯಲ್ಲ. ತಮೋದ್ವಾರೈಸ್ತ್ರಿಭಿಃ ಎಂದು ಹೇಳುವುದರಿಂದ ನಾನೇ ಅಚ್ಯುತ, ನಾನೇ ಶಿವ ಎಂಬ ಮೊದಲಾದ ಭಾವಗಳಿಂದ ಜಗತ್ತಿಗೆ ತಾಯಿಯರಾದ ಅವರ ಪತ್ನಿಯರಲ್ಲಿ ಕಾಮವೇ ಕಾಮಶಬ್ದಾರ್ಥ. ಕ್ರೋಧ ಎಂದರೆ ವಿಷ್ಣು-ವೈಷ್ಣವರ ದ್ವೇಷ. ಲೋಭ ಎಂದರೆ ನಿರವಧಿಕವಾದ ಭಗವಂತನ ಆನಂದಾದಿಗುಣಗಳಲ್ಲಿ ಅದು ತಮ್ಮದಾಗಬೇಕೆಂಬ ಆಸೆ.
ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ |
ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ||22||
ಎಲೈ ಕೌಂತೇಯನೇ, ಈ ಮೂರು ತಮೋದ್ವಾರಗಳಿಂದ ವಿಮುಕ್ತನಾಗಿ ದೈವೀ ಸಂಪತ್ತಿನಲ್ಲಿ ಜನಿಸಿದವನು ಶ್ರೇಯಸ್ಸಾಧನವನ್ನು ಆಚರಿಸಿ ಅನಂತರ ಮೋಕ್ಷವನ್ನು ಪಡೆಯುತ್ತಾನೆ.
ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ||23||
ಯಾವನು ಶಾಸ್ತ್ರವಿಧಿಯನ್ನು ಉಲ್ಲಂಘಿಸಿ ತನ್ನ ಮನಸ್ಸಿಗೆ ಬಂದಂತೆ ಕರ್ಮಗಳನ್ನು ಮಾಡುತ್ತಾನೆಯೋ, ಅವನು ಯಾವ ಸಿದ್ಧಿಯನ್ನೂ ಹೊಂದುವುದಿಲ್ಲ. ಈ ಲೋಕದಲ್ಲಿ ಸುಖವನ್ನಾಗಲೀ, ಪರಲೋಕದಲ್ಲಿ ಗತಿಯನ್ನಾಗಲೀ ಹೊಂದುವುದಿಲ್ಲ.
ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ |
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ||24||
ಆದ್ದರಿಂದ ಇದು ಕರ್ತವ್ಯ, ಇದು ಅಕರ್ತವ್ಯ ಎಂಬ ವಿಷಯದಲ್ಲಿ ನಿನಗೆ ಶಾಸ್ತ್ರವೇ ಪ್ರಮಾಣವಾದುದು. ಶಾಸ್ತ್ರವು ಯಾವುದನ್ನು ವಿಧಾನ ಮಾಡಿದೆಯೋ ಅದನ್ನು ತಿಳಿದು ಅದರಂತೆ ನೀನು ಕರ್ಮವನ್ನು ಆಚರಿಸುವುದು ಯೋಗ್ಯವಾದುದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಾತ್ರಿಂಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂಬತ್ತನೆಯ ಅಧ್ಯಾಯ
ಭಗವದ್ಗೀತಾ ಶ್ರದ್ಧಾತ್ರಯವಿಭಾಗ.
ಅರ್ಜುನಃ
ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ |
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ||1||
ಅರ್ಜುನ ಎಲೈ ಕೃಷ್ಣನೇ, ಯಾರು ಶಾಸ್ತ್ರವಿಧಿಗಳನ್ನು ಮೀರಿ ಶ್ರದ್ಧೆಯಿಂದ ಕೂಡಿ ಭಗವದಾರಾಧನೆಯನ್ನು ಮಾಡುತ್ತಾರೆಯೋ, ಅವರ ಸ್ಥಿತಿ (ಸ್ವಭಾವವು) ಎಂತಹದು? ಸಾತ್ವಿಕವೋ, ರಾಜಸವೋ ಅಥವಾ ತಾಮಸವೋ?
ಶ್ರೀಭಗವಾನ್
ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ |
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ||2||
ಶ್ರೀಭಗವಾನ್ ಜೀವರಿಗೆ ಸ್ವಾಭಾವಿಕವಾದ ಶ್ರದ್ಧೆಯು ಸಾತ್ವಿಕ, ರಾಜಸ ಮತ್ತು ತಾಮಸ ಎಂದು ಮೂರು ವಿಧವಾಗಿದೆ. ಅದನ್ನು ನೀನು

ಕೇಳುವವನಾಗು.
ವಿಶೇಷ ವಿಚಾರ ಸ್ವಾಭಾವಿಕವಾಗಿಯೇ ಜೀವರು ಸಾತ್ವಿಕಾದಿ ವಿಭಾಗವುಳ್ಳವರು. ಇಲ್ಲದಿದ್ದರೆ ದೈತ್ಯರು ತಾಮಸರು, ಮನುಷ್ಯರು ರಾಜಸರು ಮತ್ತು ದೇವತೆಗಳು ಸಾತ್ವಿಕರು ಎಂಬ ನಿಯತವಾದ ವಿಭಾಗವು ಹೇಗೆ ಕೂಡುತ್ತದೆ ಎಂದು ಅಭಿಪ್ರಾಯ.
ಸತತತ್ವನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ |
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥3॥
ಎಲೈ ಭಾರತನೇ, ಉತ್ತಮ ಜೀವರಾದ ಎಲ್ಲರಿಗೂ ಶ್ರದ್ಧೆಯು, ಆ ಜೀವ ಸ್ವರೂಪಕ್ಕೆ ಅನುರೂಪವಾಗಿ ಸಾತ್ವಿಕವಾಗಿರುತ್ತದೆ. ಜೀವರು ಶ್ರದ್ಧಾಸ್ವರೂಪರೇ ಆಗಿರುತ್ತಾರೆ. ಯಾವ ಜೀವನಿಗೆ ಎಂತಹ ಶ್ರದ್ಧೆ ಇದೆಯೋ ಅವನು ಅಂತಹವನೇ ಆಗಿರುತ್ತಾನೆ.
ಯಜಂತೇ ಸಾತಿತ್ವಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ |
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥4॥
ಸಾತ್ವಿಕರು ದೇವತೆಗಳನ್ನೂ, ರಾಜಸರು ಯಕ್ಷ-ರಾಕ್ಷಸರನ್ನೂ, ಉಳಿದ ತಾಮಸ ಜನರು ಪ್ರೇತಗಳನ್ನೂ ಮತ್ತು ಭೂತಗಳನ್ನೂ ಪೂಜಿಸುತ್ತಾರೆ.
ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ |
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥5॥
ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ |
ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥6॥
ಯಾರು ಶಾಸ್ತ್ರವಿಹಿತವಲ್ಲದ ರೀತಿಯಲ್ಲಿ ಘೋರ ತಪಸ್ಸನ್ನು ಮಾಡುತ್ತಾರೋ, ಕಾಮ ಮತ್ತು ರಾಗಗಳ ಬಲದಿಂದ ಕೂಡಿದವರಾಗಿ ದಂಭ ಮತ್ತು ಅಹಂಕಾರಗಳಿಂದ ಕೂಡಿ ವ್ರತ-ಉಪವಾಸಗಳಿಂದ ದೇಹವನ್ನು ಶೋಷಿಸುತ್ತಾ, ದೇಹಗಳಲ್ಲಿರುವ ಪಂಚಮಹಾಭೂತಗಳನ್ನು ಅಥವಾ ತತತತ್ವಭಿಮಾನಿ ದೇವತೆಗಳ ಸಮೂಹವನ್ನು ಮತ್ತು ದೇಹದ ಒಳಗಿರುವ ನನ್ನನ್ನೂ ವಿಹಿತವಾದ ಪ್ರಾಣಾಗ್ನಿ ಹೋತ್ರಾದಿಗಳನ್ನು ಮಾಡದೆ ಚಿತ್ತಕ್ಷೋಭಯುಕ್ತರನ್ನಾಗಿ ಮಾಡುತ್ತಾ, ಶರೀರದಲ್ಲೇ ಇರುವ ನನ್ನನ್ನು ಅಲ್ಪಗುಣ ಉಳ್ಳವನೆಂದು ಚಿಂತನೆ ಮಾಡುತ್ತಾ, ತಪಸ್ಸನ್ನು ಮಾಡುತ್ತಾರೆಯೋ ಅಂತಹವರನ್ನು ಅಸುರರು, ತಮಃಪ್ರಾಪ್ತಿಯೋಗ್ಯರು ಎಂದು ತಿಳಿ.
ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ |
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥7॥
ಎಲ್ಲ ಜೀವರಿಗೂ ಪ್ರಿಯವಾದ ಆಹಾರವೂ, ಯಜ್ಞ-ದಾನ-ತಪಸ್ಸುಗಳೂ ಮೂರು ವಿಧವಾಗಿರುತ್ತವೆ. ಅವುಗಳ ಈ ವಿಭಾಗವನ್ನು ಕೇಳು.
ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ |
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತಿತ್ವಕಪ್ರಿಯಾಃ ॥8॥
ಆಯುಸ್ಸು, ಸಾಧುಗುಣ, ಶಕ್ತಿ, ಭೋಗಕಾಲೀನವಾದ ಸುಖ, ಇವುಗಳನ್ನು ಅಭಿವೃದ್ಧಿಪಡಿಸುವ ಮಧುರ ರಸಪ್ರಧಾನವಾದ, ಸ್ನೇಹಯುಕ್ತವಾದ, ಬಹುಕಾಲದವರೆಗೆ ಗುಣಪ್ರದವಾದ, ಮನೋಹರವಾದ ಆಹಾರಗಳು ಸಾತ್ವಿಕರಿಗೆ ಪ್ರಿಯವಾದವುಗಳು.
ಕಟ್ವಾಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ |
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥9॥
ಖಾರ, ಉಪ್ಪು, ಹುಳಿ, ಬಹಳ ಬಿಸಿ, ಉಷ್ಣತೆಯನ್ನು ಉಂಟುಮಾಡುವವು, ಶೋಷಣೆಯನ್ನು ಉಂಟುಮಾಡುವ ಆಹಾರಗಳು ರಾಜಸರಿಗೆ ಇಷ್ಟವಾದವುಗಳು. ಅವು ದುಃಖ-ಶೋಕಗಳನ್ನು, ರೋಗಗಳನ್ನು ತಂದುಕೊಡುತ್ತವೆ.
ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ |
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥10॥
ಅಡುಗೆ ಮಾಡಿ ಒಂದು ಯಾಮ ಕಳೆದ ಆಹಾರ, ರಸವನ್ನು ಕಳೆದುಕೊಂಡ ಆಹಾರ, ದುರ್ವಾಸನೆಯುಳ್ಳದ್ದು, ಹಳಸಿ ಹೋಗಿರುವುದು, ಭಾರ್ಯಾದಿಗಳ ಜೊತೆಯಲ್ಲಿ ಒಂದೇ ಪಾತ್ರೆಯಲ್ಲಿ ಊಟ ಮಾಡುವ ಉಚ್ಛಿಷ್ಠ, ಅಪವಿತ್ರವಾದ ಸೋರೆಕಾಯಿ, ಬದನೆ ಮೊದಲಾದ ಆಹಾರಗಳು ತಾಮಸರಿಗೆ ಪ್ರಿಯವಾದವುಗಳು.
ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ |
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತಿತ್ವಕಃ ॥11॥
ಯಾರು ವಿಧಿಗೆ ಅನುಗುಣವಾಗಿ ನಾವು ಯಜ್ಞವನ್ನು ಮಾಡಲೇಬೇಕೆಂದು ತಿಳಿದು ಫಲಾಪೇಕ್ಷೆಯನ್ನು ತ್ಯಜಿಸಿ ಸಮಾಧಾನವುಳ್ಳ ಮನಸ್ಸಿನಿಂದ ಯಜ್ಞವನ್ನು ಮಾಡುತ್ತಾರೋ ಆ ಯಜ್ಞವು ಸಾತ್ವಿಕವಾದುದು.
ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ |
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥12॥
ಫಲಾಪೇಕ್ಷೆಯಿಂದ ಕೂಡಿ ಅಥವಾ ದಂಭಾರ್ಥವಾಗಿ ಯಾವ ಯಜ್ಞವು ನಡೆಯುತ್ತದೆಯೋ, ಎಲೈ ಭರತಶ್ರೇಷ್ಠನೇ, ಅದನ್ನು ರಾಜಸವೆಂದು ತಿಳಿ.
ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ |
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥13॥
ವೇದದಲ್ಲಿ ವಿಹಿತವಲ್ಲದ, ಯಕ್ಷ-ರಾಕ್ಷಸಾದಿ ಪೂಜಾದಿಗಳು, ಅನ್ನದಾನವಿಲ್ಲದೆ, ಮಂತ್ರಯುಕ್ತವಾಗದೆ, ದಕ್ಷಿಣೆಯಿಲ್ಲದೆ, ಶ್ರದ್ಧೆಯಿಲ್ಲದೆ ಮಾಡುವ ಪೂಜೆಗಳು (ಯಜ್ಞವು) ತಾಮಸವೆನಿಸುತ್ತವೆ.

ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ |
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥14॥
ದೇವ-ಬ್ರಾಹ್ಮಣ, ಗುರು ಮತ್ತು ಜ್ಞಾನಿಗಳ ಪೂಜೆ, ಅಂತರ್ಬಹಿಶುಚಿತ್ವ, ಆರ್ಜವ, ಬ್ರಹ್ಮಚರ್ಯ, ಅಹಿಂಸಾ ಇವು ದೈಹಿಕವಾದ ತಪಸ್ಸು ಎನಿಸುತ್ತವೆ.
ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ |
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥15॥
ಇನ್ನೊಬ್ಬರಿಗೆ ಉದ್ವೇಗವನ್ನುಂಟು ಮಾಡದ, ಸತ್ಯವೂ, ಪ್ರಿಯವೂ, ಹಿತವೂ ಆದ ವಚನಗಳು ಮತ್ತು ವೇದಾಭ್ಯಾಸಾದಿಗಳು ವಾಙ್ಮಯವಾದ ತಪಸ್ಸು ಎನಿಸುತ್ತವೆ.
ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ |
ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥16॥
ಮನಸ್ಸಿನ ಪ್ರಸನ್ನತೆ, ಸೌಮ್ಯಭಾವ, ಮನನಶೀಲತೆ, ಪರಮಾತ್ಮನಲ್ಲಿ ಮನಸ್ಸನ್ನು ಇಡುವಿಕೆ, ಮನಸ್ಸಿನ ಆಸೆಗಳ ಶುದ್ಧಿ ಇದು ಮಾನಸ ತಪಸ್ಸು ಎನಿಸುತ್ತದೆ.
ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ ತ್ರಿವಿಧಂ ನರೈಃ |
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥17॥
ಫಲದ ಆಸೆಯನ್ನು ಮಾಡದೆ ಪರಮಾತ್ಮನನ್ನು ಚಿಂತಿಸುತ್ತಾ, ಶ್ರೇಷ್ಠವಾದ ಶ್ರದ್ಧೆಯಿಂದ ಮಾಡಿದ ಮಾನಸಿಕ, ವಾಚಿಕ ಮತ್ತು ಕಾಯಿಕ ತಪಸ್ಸುಗಳನ್ನು ಸಾತ್ವಿಕವೆಂದು ಹೇಳುತ್ತಾರೆ.
ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ |
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥18॥
ಸತ್ಕಾರ, ಸಮ್ಮಾನ ಮತ್ತು ಪೂಜೆಯನ್ನು ಪಡೆಯುವುದಕ್ಕಾಗಿ ಅಥವಾ ದಂಭದಿಂದ ಯಾವ ತಪಸ್ಸನ್ನು ಮಾಡುತ್ತಾರೆಯೋ ಅದನ್ನು ರಾಜಸವೆನ್ನುತ್ತಾರೆ. ಅದರ ಫಲವು ಅನಿತ್ಯವಾದುದು ಮತ್ತು ಚಂಚಲವಾದುದು.
ಮೂಢಗ್ರಾಹೇಣಾಽತ್ಮನೋ ಯತ್ ಪೀಡಯಾ ಕ್ರಿಯತೇ ತಪಃ |
ಪರಸ್ಯೋತ್ಸಾದನಾರ್ಥಂ ವಾ ತತ್ ತಾಮಸಮುದಾಹೃತಮ್ ॥19॥
ಪಿಶಾಚಾದಿಗಳಲ್ಲಿ ದುರಾಗ್ರಹವನ್ನು ಹೊಂದಿ, ದೇಹವನ್ನು ಪೀಡಿಸಿ ಅಥವಾ ಇನ್ನೊಬ್ಬರ ವಿನಾಶಕ್ಕಾಗಿ ಮಾಡುವ ತಪಸ್ಸು ತಾಮಸವೆನಿಸುತ್ತದೆ.
ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ |
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥20॥
ದಾನವನ್ನು ಮಾಡಲೇಬೇಕೆಂದು ತಿಳಿದು ತಮಗೆ ಉಪಕಾರವನ್ನು ಮಾಡದ ಸತ್ಪಾತ್ರನಿಗೆ, ಒಳ್ಳೆಯ ದೇಶ-ಕಾಲಗಳಲ್ಲಿ ಮಾಡುವ ದಾನವು ಸಾತ್ವಿಕವೆನಿಸುತ್ತದೆ.
ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ |
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥21॥
ದಾನ ತೆಗೆದುಕೊಳ್ಳುವವರಿಂದ ಪ್ರತ್ಯುಪಕಾರವನ್ನು ಬಯಸಿ ಅಥವಾ ಫಲವನ್ನು ಸಂಕಲ್ಪಿಸಿ, ಮನಃಕ್ಲೇಶಸಹಿತವಾಗಿ ಕೊಡುವ ದಾನವು ರಾಜಸವೆನಿಸುತ್ತದೆ.
ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ |
ಅಸತ್ಕೃತಮವಜ್ಞಾತಂ ತತ್ ತಾಮಸಮುದಾಹೃತಮ್ ॥22॥
ಅನುಚಿತ ದೇಶ-ಕಾಲಗಳಲ್ಲಿ ಅಪಾತ್ರರಲ್ಲಿ ಕೊಡುವ ದಾನವು ಮತ್ತು ಸತ್ಕಾರರಹಿತವಾಗಿ ಅಥವಾ ಅವಮಾನ ಸಹಿತವಾಗಿ ಕೊಡುವ ದಾನವು ತಾಮಸವೆನಿಸುತ್ತದೆ.
ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ |
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥23॥
ಓಂ, ತತ್, ಸತ್ ಎಂಬುದು ಬ್ರಹ್ಮನ ಮೂರು ವಿಧವಾದ ನಾಮಗಳು. ಅದರಿಂದ ಬ್ರಾಹ್ಮಣರಿಗೆ ತತ್ಪೂರ್ವಕವಾಗಿಯೇ ಉಪನಯನಾದಿ ಸಂಸ್ಕಾರಗಳು ನಡೆಯುತ್ತವೆ. ವೇದಗಳು ಮತ್ತು ಯಜ್ಞಗಳು ಪ್ರವೃತ್ತವಾಗುತ್ತವೆ. ಬ್ರಹ್ಮನು ಗುಣಪೂರ್ಣನಾದ್ದರಿಂದ ಓಂ ಎಂದೂ, ವ್ಯಾಪ್ತನಾದ್ದರಿಂದ ತತ್ ಎಂದೂ, ಸದಾ ವಿದ್ಯಮಾನನೂ, ನಿರ್ದೋಷನಾದ್ದರಿಂದ ಸತ್ ಎಂದೂ ಕರೆಯಲ್ಪಡುತ್ತಾನೆ.
ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ |
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥24॥
ಆದ್ದರಿಂದ ಓಂ ಎಂದು ಉಚ್ಚಾರ ಮಾಡಿಯೇ ಶಾಸ್ತ್ರವಿಧಾನಕ್ಕೆ ಅನುಗುಣವಾದ ಬ್ರಾಹ್ಮಣರ ಯಜ್ಞ-ದಾನ-ತಪಸ್ಸು ಮುಂತಾದ ಕ್ರಿಯೆಗಳು ಯಾವಾಗಲೂ ನಡೆಯುತ್ತವೆ.
ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ |
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥25॥
ಮೋಕ್ಷಾಕಾಂಕ್ಷಿಗಳು ಪರೋಕ್ಷನಾದ ಕಾರಣದಿಂದ ಹರಿಯನ್ನು ತತ್ ಎಂದು ಅನುಸಂಧಾನ ಮಾಡಿ, ಸ್ವರ್ಗಾದಿ ಫಲವನ್ನು ಉದ್ದೇಶಿಸದೆ ಯಜ್ಞ, ತಪಸ್ಸು ಮೊದಲಾದ ಕ್ರಿಯೆಗಳನ್ನೂ, ವಿವಿಧವಾದ ದಾನಕ್ರಿಯೆಗಳನ್ನೂ ಮಾಡುತ್ತಾರೆ.
ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ |

ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥26॥
ಯಾವಾಗಲೂ ವಿದ್ಯಮಾನವಾದ ಕಾರಣದಿಂದ ಮತ್ತು ದೋಷರಹಿತವಾದ ಕಾರಣದಿಂದ ಬ್ರಹ್ಮನಲ್ಲಿ ಸತ್ ಎಂಬ ಶಬ್ದವು ಪ್ರವೃತ್ತವಾಗುತ್ತದೆ. ಎಲೈ ಪಾರ್ಥನೇ, ಪ್ರಶಸ್ತವಾದ ಕರ್ಮವೂ ಸಹ ಸಚ್ಛಬ್ದದಿಂದ ಹೇಳಲ್ಪಡುತ್ತದೆ.
ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ |
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥27॥
ಯಜ್ಞ, ತಪಸ್ಸು ಮತ್ತು ದಾನಗಳಲ್ಲಿ ನಿಷ್ಠೆಯು ಸತ್ ಎಂದು ಕರೆಸಿಕೊಳ್ಳಲ್ಪಡುತ್ತದೆ. ಯಜ್ಞಾದಿ ಅಂಗವಾದ ಪ್ರೋಕ್ಷಣ ಅವಘಾತ ಕ್ರಿಯೆಯೂ ಸಹ ಸಚ್ಛಬ್ದದಿಂದ ಹೇಳಲ್ಪಡುತ್ತದೆ.
ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ |
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ ಪ್ರೇತ್ಯ ನೋ ಇಹ ॥28॥
ಎಲೈ ಪಾರ್ಥನೇ, ಶ್ರದ್ಧೆಯಿಲ್ಲದೆ ಮಾಡಿದ ಹೋಮ, ದಾನ, ತಪಸ್ಸು ಅಥವಾ ಯಾವುದೇ ಕರ್ಮ ಅಸತ್ ಎನಿಸಿಕೊಳ್ಳುತ್ತದೆ. ಅದರಿಂದ ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಯಾವ ಫಲವೂ ಇಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
॥ ಭಗವದ್ಗೀತಾಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಮೂವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತನೆಯ ಅಧ್ಯಾಯ
ಭಗವದ್ಗೀತಾ ಸಂನ್ಯಾಸಯೋಗ. ಅರ್ಜುನಪ್ರಬೋಧ.
ಅರ್ಜುನಃ
ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ |
ತ್ಯಾಗಸ್ಯ ಚ ಹೃಷೀಕೇಶ ಪೃಥಕ್ ಕೇಶಿನಿಷೂದನ ॥1॥
ಅರ್ಜುನ ಎಲೈ ಮಹಾಬಾಹುವೇ, ಹೃಷೀಕೇಶನೇ, ಕೇಶಿ ಸಂಹಾರಿಯೇ, ಸಂನ್ಯಾಸ ಮತ್ತು ತ್ಯಾಗಗಳ ತತ್ತ್ವವನ್ನು ನಾನು ತಿಳಿಯಲು ಇಚ್ಛಿಸುತ್ತೇನೆ.
ಶ್ರೀಭಗವಾನ್
ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ |
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥2॥
ಶ್ರೀಭಗವಾನ್ ಕಾಮ್ಯಕರ್ಮಗಳ ತ್ಯಾಗವನ್ನು ಸಂನ್ಯಾಸವೆಂದು ಜ್ಞಾನಿಗಳು ತಿಳಿಯುತ್ತಾರೆ. ಎಲ್ಲ ಕರ್ಮಗಳ ಫಲೋದ್ದೇಶ ತ್ಯಾಗವನ್ನು ಕರ್ಮತ್ಯಾಗವೆಂದು ವಿವೇಕಿಗಳು ಹೇಳುತ್ತಾರೆ.
ವಿಶೇಷ ವಿಚಾರ ವೈಕಲ್ಪಿಕ ಕಾಮ್ಯಗಳಾದ ಜ್ಯೋತಿಷ್ಟೋಮಾದಿಗಳನ್ನು ಸ್ವರ್ಗಾದಿ ಫಲದ ಇಚ್ಛೆ ಇಲ್ಲದೆ ಮಾಡುವುದು ಕರ್ಮಸಂನ್ಯಾಸ. ನಿಯತಕಾಮ್ಯಗಳಾದ ಕಾರ್ಯಗಳನ್ನು ಮಾಡದೆ ಇರುವುದೇ ಕರ್ಮತ್ಯಾಗ ಎಂದೂ ಅಭಿಪ್ರಾಯ.
ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ |
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥3॥
ಕಾಮನಾ ರೂಪವಾದ ದೋಷವಿರುವುದರಿಂದ ಯಜ್ಞದಾನತಪಃ ಕರ್ಮಗಳನ್ನು ಮಾಡಬಾರದು ಎಂದು ಕೆಲವು ಜ್ಞಾನಿಗಳು ಹೇಳುತ್ತಾರೆ. ಯಜ್ಞದಾನತಪಃ ಕರ್ಮಗಳನ್ನು ಪರಿತ್ಯಾಗ ಮಾಡಬಾರದು, ಫಲಕಾಮನೆಯನ್ನು ಮಾತ್ರ ಪರಿತ್ಯಾಗ ಮಾಡಬೇಕು ಎಂದು ಇನ್ನು ಕೆಲವು ಜ್ಞಾನಿಗಳು ಹೇಳುತ್ತಾರೆ.
ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ |
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥4॥
ಎಲೈ ಭರತಶ್ರೇಷ್ಠನೇ, ತ್ಯಾಗದ ವಿಷಯದಲ್ಲಿ ಇಂತಹ ತ್ಯಾಗವನ್ನೇ ಮಾಡಬೇಕು ಎಂಬ ನನ್ನ ನಿಶ್ಚಯವನ್ನು ಕೇಳು.
ಪುರುಷವ್ಯಾಘ್ರನೇ, ತ್ಯಾಗವು ಮೂರುವಿಧವಾದುದು ಎಂದು ಹೇಳಲ್ಪಡುತ್ತದೆ.
ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ |
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥5॥
ಯಜ್ಞ, ದಾನ ಮತ್ತು ತಪಸ್ಸುಗಳು ಜ್ಞಾನಿಗಳ ದೃಷ್ಟಿಯಲ್ಲಿ ಪವಿತ್ರವಾದವು. ಅವುಗಳನ್ನು ಪರಿತ್ಯಾಗ ಮಾಡಬಾರದು, ಮಾಡಲೇಬೇಕು.
ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ |
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥6॥
ಈ ಕರ್ಮಗಳನ್ನೂ ಸಹ ಫಲಾಪೇಕ್ಷಾರಹಿತವಾಗಿ ಫಲಗಳಲ್ಲಿ ಉದಾಸೀನನಾಗಿ ಮಾಡಲೇಬೇಕು ಎಂಬುದು ನನ್ನ ನಿಶ್ಚಿತವಾದ ಅಭಿಪ್ರಾಯ.
ವಿಶೇಷ ವಿಚಾರ ಲೋಕದ ಸಾಮಾನ್ಯಜನರ ಸಂತೋಷಕ್ಕಾಗಿ ಫಲತ್ಯಾಗವನ್ನು ಮಾಡಿ ಮನಸ್ಸಿನಲ್ಲಿ ಮಾತ್ರ ಅದನ್ನೇ ಚಿಂತಿಸಿ ಯಜ್ಞಾದಿಗಳನ್ನು ಮಾಡಬಾರದು.

ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ |
ಮೋಹಾತ್ ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥7॥
ನಿಯತವಾದ ಕರ್ಮಗಳಿಗೆ ಪರಿತ್ಯಾಗವು ಕೂಡುವುದಿಲ್ಲ. ಮೋಹದಿಂದ ಅದರ ಪರಿತ್ಯಾಗವು ತಾಮಸವೆನಿಸುತ್ತದೆ.
ವಿಶೇಷ ವಿಚಾರ ಆದ್ದರಿಂದಲೇ ಪ್ರಾಜ್ಞರಾದವರು ಮೊದಲು ಮಲಾಪಹಾರಿ ಸ್ನಾನವನ್ನು ಮಾಡಿ, ಅನಂತರ ಶುದ್ಧಸ್ನಾನವನ್ನು ಮಾಡುತ್ತಾರೆ. ಅಥವಾ ಸಂನ್ಯಾಸಿಗಳು ನಿಷ್ಕ್ರಿಯರು ಅಥವಾ ಜ್ಞಾನಿಗಳು ಎಂಬ ಭ್ರಾಂತಿಯಿಂದ ಕೆಲವು ಸಂನ್ಯಾಸಿಗಳೂ ನಿಯತವಾದ ಗಾಯತ್ರೀ ಜಪವನ್ನು ಮಾಡದಿರುವುದು ನಿಯತಸಂನ್ಯಾಸ ಎನಿಸುತ್ತದೆ. ಅಂತಹ ಸಂನ್ಯಾಸವನ್ನು ಮಾಡಬಾರದು.
ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ ತ್ಯಜೇತ್ |
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥8॥
ಈ ಕರ್ಮವು ದುಃಖಕರವಾದುದು ಎಂದು ಹೇಳಿ ದೇಹಕ್ಕೆ ಉಂಟಾಗುವ ಕ್ಲೇಶಕ್ಕೆ ಹೆದರಿ ಯಾವ ಕರ್ಮಗಳನ್ನು ತ್ಯಾಗ ಮಾಡುತ್ತಾನೆಯೋ ಅದನ್ನು ರಾಜಸ ತ್ಯಾಗವೆಂದು ಹೇಳುತ್ತಾರೆ. ಆ ತ್ಯಾಗದಿಂದ ತ್ಯಾಗದ ಫಲವು ಉಂಟಾಗುವುದಿಲ್ಲ.
ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇऽರ್ಜುನ |
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ವಿಕೋ ಮತಃ ॥9॥
ಎಲೈ ಅರ್ಜುನನೇ, ಇದು ಮಾಡಲೇಬೇಕಾದುದು ಎಂದು ತಿಳಿದು ನಿಯತವಾದ ಕರ್ಮವನ್ನು ಫಲಾಪೇಕ್ಷೆ ಇಲ್ಲದೆ, ಫಲದಲ್ಲಿ ಸ್ನೇಹವನ್ನು ತೊರೆದು ಮಾಡುವ ತ್ಯಾಗವು ಸಾತ್ವಿಕವೆನಿಸುತ್ತದೆ.
ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ |
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥10॥
ಅಕುಶಲರು ಮಾಡಿದ ಕರ್ಮವನ್ನು ದ್ವೇಷಿಸದೆ ಕುಶಲಕರ್ಮಗಳಿಂದ ಉಂಟಾದ ಪುಣ್ಯಫಲದಲ್ಲಿ ಸ್ನೇಹವನ್ನು ಮಾಡದೆ ಸತ್ವ ಸಹಿತನಾಗಿ ತ್ಯಾಗವನ್ನು ಮಾಡುವವನು ಎಲ್ಲ ಸಂಶಯಗಳನ್ನೂ ಕಳೆದುಕೊಂಡು ಮೇಧಾವಿಯಾಗುತ್ತಾನೆ.
ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ |
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥11॥
ದೇಹವನ್ನು ಧರಿಸಿದ ಯಾವನೂ ಎಲ್ಲ ಕರ್ಮಗಳನ್ನೂ ಸಂಪೂರ್ಣವಾಗಿ ಬಿಡಲು ಸಾಧ್ಯವಿಲ್ಲ. ಯಾವನು ಕರ್ಮಫಲವನ್ನು ತ್ಯಾಗ ಮಾಡುತ್ತಾನೆಯೋ ಅವನೇ ತ್ಯಾಗಿ ಎಂದು ಹೇಳಲ್ಪಡುತ್ತಾನೆ.
ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ |
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥12॥
ಕರ್ಮಗಳಿಗೆ ಇಷ್ಟ-ಅನಿಷ್ಟ ಮತ್ತು ಮಿಶ್ರವಾದ ಮೂರುವಿಧವಾದ ಫಲಗಳಿವೆ. (ಮಿಶ್ರವೆಂದರೆ ಭೂಲೋಕದಲ್ಲಿ ಅನುಭವಿಸಲ್ಪಡುವ ಸುಖ-ದುಃಖಾತ್ಮಕವಾದ ಫಲ. ತ್ಯಾಗ ಮಾಡದವರಿಗೆ ಈ ಫಲಗಳು ಮರಣಾನಂತರದಲ್ಲಿ ಉಂಟಾಗುತ್ತದೆ. ಕರ್ಮ ತ್ಯಾಗ ಮಾಡಿದವರಿಗೆ ಈ ಫಲಗಳು ಉಂಟಾಗುವುದಿಲ್ಲ. ಭಗವತ್ಪ್ರೀತಿಯೇ ಉಂಟಾಗುತ್ತದೆ).
ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ |
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥13॥
ಎಲೈ ಮಹಾಬಾಹುವೇ, ಯಾವುದೇ ಕಾರ್ಯವು ಸಿದ್ಧಿಸುವುದಕ್ಕೆ ಯಥಾರ್ಥ ಜ್ಞಾನಸಿದ್ಧಾಂತದಲ್ಲಿ ಐದು ಕಾರಣಗಳು ಹೇಳಲ್ಪಡುತ್ತವೆ. ಅವುಗಳನ್ನು ಕೇಳು.
ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ |
ವಿವಿಧಾ ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥14॥
ಅಧಿಷ್ಠಾನ= ಆಶ್ರಯವಾದ ಭೂಮಿ, ಕರ್ತಾ= ಯಜಮಾನ, ಪೃಥಗ್ವಿಧಮ್ ಕರಣಂ= ವ್ರೀಹಿಯವಾದಿಗಳು, ಚೇಷ್ಟಾ= ಮಂತ್ರ ಹೋಮಾದಿ ಚೇಷ್ಟೆಗಳು, ದೈವ= ಉದ್ದೇಶ್ಯ ದೇವತೆ ಅಥವಾ ಕರ್ಮಪ್ರಯೋಜಕನಾದ ದೇವ. ಈ ಐದು ಎಲ್ಲ ಸಿದ್ಧಿಗೂ ಕಾರಣವಾಗಿರುತ್ತವೆ.
ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ |
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥15॥
ಶರೀರದಿಂದಾಗಲೀ, ವಾಕ್‌ನಿಂದಾಗಲೀ ಅಥವಾ ಮನಸ್ಸಿನಿಂದಾಗಲೀ ಮನುಷ್ಯನು ಯಾವ ಕರ್ಮವನ್ನು ಮಾಡಿದರೂ ಅದು ಸತ್ಕರ್ಮವಾಗಲೀ ಅಥವಾ ದುಷ್ಕರ್ಮವಾಗಲೀ ಈ ಐದು ಅದಕ್ಕೆ ಕಾರಣಗಳಾಗುತ್ತವೆ.
ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ |
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥16॥
ಹೀಗಿರುವಾಗ ಯಾವನು ತನ್ನನ್ನೇ ಸ್ವತಂತ್ರ ಕರ್ತೃ ಎಂದು ತಿಳಿಯುತ್ತಾನೆಯೋ ಅವನು ಅಶಿಕ್ಷಿತಬುದ್ಧಿಯುಳ್ಳವನಾದ್ದರಿಂದ ದುರ್ಮತಿಯಾಗಿ ತತ್ತ್ವಜ್ಞಾನವನ್ನು ಹೊಂದುವುದಿಲ್ಲ.
ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ |
ಹತ್ವಾಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥17॥
ಯಾವನು ಅಹಂಕಾರ ಶೂನ್ಯನಾಗಿರುತ್ತಾನೆಯೋ, ಬುದ್ಧಿಯು ರಾಗಾದಿಗಳಿಂದ ಕಲುಷಿತವಾಗುವುದಿಲ್ಲವೋ, ಅಂತಹವನು ಮೂರುಲೋಕಗಳನ್ನು ಕೊಂದರೂ ಅವನಿಗೆ ಅದರ ದುಷ್ಫಲವಿಲ್ಲ, ಅದರಿಂದ ಬಂಧನವೂ ಇಲ್ಲ.
ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ |
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥18॥

ಕರ್ಮದ ವಿಷಯದಲ್ಲಿ ಈಶ್ವರ ಪ್ರೇರಣೆಯು ಜ್ಞಾನ-ಜ್ಞೇಯ-ಪರಿಜ್ಞಾತ ಎಂದು ಮೂರುವಿಧವಾದುದು. ಜ್ಞಾನವೆಂದರೆ ವಿಧಿವಿಷಯವಾದ ಜ್ಞಾನ. ಜ್ಞೇಯ ಎಂದರೆ ಪುರುಷಾರ್ಥರೂಪವಾದುದು ಅಥವಾ ಚೇಷ್ಟಾಪ್ರಯತ್ನರೂಪ ಪ್ರವೃತ್ತಿರೂಪವಾದುದು. ಪರಿಜ್ಞಾತಾ ಎಂದರೆ ಈಶ್ವರ ಸನ್ನಿಹಿತವಾದ ಜೀವರಾಶಿ. ಕರಣ, ಕರ್ಮ ಮತ್ತು ಕರ್ತೃ ಎಂದು ಕರ್ಮಕಾರಣಗಳ ಸಂಗ್ರಹವು ಮೂರುವಿಧ. ಕರಣ ಎಂದರೆ ದೇಹೇಂದ್ರಿಯಾದಿಗಳು, ಕರ್ಮ ಎಂದರೆ ಹಸ್ತಾದಿ ಚೇಷ್ಟಾ, ಕರ್ತಾ ಎಂದರೆ ಜೀವರಾಶಿ. ಇದು ಹಿಂದೆ ಹೇಳಿದ ಐದು ಕಾರಣಗಳಲ್ಲಿ ಈ ಕರ್ಮಕಾರಣ ಸಂಕ್ಷೇಪವು ಪ್ರಧಾನವಾದುದು ಎಂಬ ಅಭಿಪ್ರಾಯದಿಂದ. ಅಥವಾ ಜ್ಞಾನ ಎಂದರೆ ಕರ್ಮಕಾಂಡ ತತತ್ತ್ವಾರ್ಥಜ್ಞಾನ, ಜ್ಞೇಯ ಎಂದರೆ ಜ್ಯೋತಿಷ್ಟೋಮಾದಿ ಕರ್ಮ, ಪರಿಜ್ಞಾತಾ ಎಂದರೆ ಕರ್ಮಮೀಮಾಂಸಾ ಕುಶಲನಾದ ಯಜಮಾನ ಎಂದೂ ಹೇಳಬಹುದು. ಹಾಗೆಯೇ ಕರಣ ಎಂದರೆ ಕರ್ಮದ ಆಚರಣೆ, ಕರ್ಮ ಎಂದರೆ ಜ್ಯೋತಿಷ್ಟೋಮಾದಿ ಕರ್ಮ ಮತ್ತು ಕರ್ತಾ ಎಂದರೆ ಯಜಮಾನ. ಈ ಮೂರು ರೀತಿಯಾದ ಕರ್ಮ ಸಂಗ್ರಹವೆಂದೂ ಅಭಿಪ್ರಾಯ.
ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ |
ಪ್ರೋಚ್ಯತೇ ಗುಣಸಂಖ್ಯಾನೇ ಯಥಾವತ್ ಶೃಣು ತಾನ್ಯಪಿ ॥19॥
ಜ್ಞಾನ, ಕರ್ಮ, ಕರ್ತೃ - ಈ ಮೂರು ಅವುಗಳ ಗುಣಭೇದದಿಂದ ಮೂರು ವಿಧವಾದುದೆಂದು ಪಂಚರಾತ್ರಾಗಮದಲ್ಲಿ ಹೇಳಲ್ಪಡುತ್ತದೆ. ಅದನ್ನೂ ಸರಿಯಾಗಿ ಕೇಳುವವನಾಗು.
ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ |
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥20॥
ಭಿನ್ನ ಭಿನ್ನವಾದ ಸರ್ವಭೂತಗಳಲ್ಲಿ ಸ್ಥಾನಭೇದವಿದ್ದರೂ ತನ್ನಲ್ಲಿ ಭೇದರಹಿತನಾದ, ನಾಶರಹಿತನಾದ ನಾರಾಯಣರೂಪವಾದ ಪದಾರ್ಥವನ್ನು ಯಾವ ಜ್ಞಾನವು ವಿಷಯೀಕರಿಸುತ್ತದೆಯೋ ಅದನ್ನು ಸಾತ್ವಿಕ ಜ್ಞಾನವೆಂದು ತಿಳಿ.
ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ |
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥21॥
ಯಾವ ಜ್ಞಾನವು ಜೀವ-ಜಡಾದಿ ನಾನಾ ಪದಾರ್ಥಗಳನ್ನು ಪರಸ್ಪರ ಭೇದವುಳ್ಳದ್ದೆಂದು ವಿಷಯೀಕರಿಸುತ್ತದೆಯೋ ಅದರಂತೆ ಅವುಗಳಲ್ಲಿರುವ ಪರಮಾತ್ಮನ ರೂಪಗಳನ್ನು ವಿಷಯೀಕರಿಸುತ್ತದೆಯೋ ಅದು ಸದಸನ್ಮಿಶ್ರವಾದುದರಿಂದ ರಾಜಸ ಜ್ಞಾನ.
ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ |
ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥22॥
ಯಾವ ಜ್ಞಾನವು ಅಹೇತುಕಂ ಎಂದರೆ ನಿತ್ಯಮುಕ್ತವಾದ ಕಾರಣದಿಂದ ಸಂಸಾರ ಹೇತುಭೂತವಾದ ಅವಿದ್ಯಾಕಾಮಕರ್ಮಾದಿ ರಹಿತವೋ ಅಂತಹ ಪರಬ್ರಹ್ಮನನ್ನು ಯಾವ ಜ್ಞಾನವು ಕೃತ್ಸ್ನವತ್= ಅವಿದ್ಯಾ ಕಾಮಕರ್ಮಾದಿ ಸಕಲ ದೋಷಗಳಿಗೂ ಆಶ್ರಯವಾದುದು ಎಂದೂ, ಅತತ್ತ್ವಾರ್ಥವತ್= ಮಿಥ್ಯಾಭೂತವಾದ ಕರ-ಚರಣಾದಿಗಳನ್ನು ಹೊಂದಿರುವುದೂ ಎಂದೂ, ಏಕಸ್ಮಿನ್ ಕಾರ್ಯೇ= ಜಗತ್ತಿನ ಆರೋಪಾತ್ಮಕವಾದ ಕಾರ್ಯದಲ್ಲಿ, ಸಕ್ತಂ= ಆಸಕ್ತವೆಂದೂ, ಅಲ್ಪಂ= ತುಚ್ಛ ಜೀವಾಭಿನ್ನವಾದುದೆಂದೂ ವಿಷಯೀಕರಿಸುತ್ತದೆಯೋ ಆ ಜ್ಞಾನವು ತಾಮಸವೆನಿಸುತ್ತದೆ.
ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ |
ಅಫಲಪ್ರೇಪ್ಸುನಾ ಕರ್ಮ ಯತ್ ತತ್ ಸಾತ್ತ್ವಿಕಮುಚ್ಯತೇ ॥23॥
ನಿಯತವಾದ, ಫಲದಲ್ಲಿ ಸ್ನೇಹರಹಿತವಾದ, ರಾಗ-ದ್ವೇಷರಹಿತವಾದ, ಫಲಾಪೇಕ್ಷಾ ರಹಿತವಾಗಿ ಮಾಡಿದ ಕರ್ಮವು ಸಾತ್ವಿಕವೆನಿಸುತ್ತದೆ.
ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ |
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥24॥
ಯಾವ ಕರ್ಮವು ಫಲಾಪೇಕ್ಷೆಯಿಂದ ಅಥವಾ ಅಹಂಕಾರದಿಂದ ಮತ್ತು ಬಹಳ ಪ್ರಯಾಸದಿಂದ ಮಾಡಲ್ಪಡುತ್ತದೆಯೋ ಅದು ರಾಜಸವೆನಿಸುತ್ತದೆ.
ಅನುಬಂಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಮ್ |
ಮೋಹಾದಾರಭ್ಯತೇ ಕರ್ಮ ಯತ್ ತತ್ ತಾಮಸಮುಚ್ಯತೇ ॥25॥
ಕರ್ಮದ ಫಲವನ್ನೂ, ಕರ್ಮದಿಂದ ಉಂಟಾಗುವ ಕ್ಷಯವನ್ನೂ, ಹಿಂಸೆಯನ್ನೂ, ತನ್ನ ಸಾಮರ್ಥ್ಯವನ್ನೂ ಗಮನಿಸದೆ ಮೋಹದಿಂದ ಪ್ರಾರಂಭಿಸುವ ಕರ್ಮವು ತಾಮಸವೆನಿಸುತ್ತದೆ. ಸುಂದೋಪಸುಂದರು ಪರಸ್ಪರ ಸ್ನೇಹವನ್ನು ಗಮನಿಸಲಿಲ್ಲ. ಭಸ್ಮಾಸುರನು ವರವನ್ನು ಕೊಟ್ಟ ಈಶ್ವರಸ್ನೇಹವನ್ನು ಗಮನಿಸಲಿಲ್ಲ. ಹಿರಣ್ಯಾಕ್ಷನು ಲೋಕದ ಕ್ಷಯವನ್ನೂ, ಜರಾಸಂಧನು ಪ್ರಾಣಿಹಿಂಸೆಯನ್ನೂ, ದುರ್ಯೋಧನನು ತನ್ನ ಸಾಮರ್ಥ್ಯವನ್ನೂ ಗಮನಿಸದೆ ಕಾರ್ಯಗಳನ್ನು ಆರಂಭಿಸಿದರು. ಅವೆಲ್ಲವೂ ತಾಮಸ ಕರ್ಮ ಎಂದು ಅಭಿಪ್ರಾಯ.
ಮುಕ್ತಸಂಗೋऽನಹಂವಾದೀ ಧೃತ್ಯುತ್ಸಾಹಸಮನ್ವಿತಃ |
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥26॥
ಫಲಸ್ನೇಹರಹಿತನಾಗಿ ತನ್ನನ್ನು ತಾನು ಹೊಗಳಿಕೊಳ್ಳದೆ ಧೈರ್ಯ ಮತ್ತು ಉತ್ಸಾಹಗಳಿಂದ ಕೂಡಿ, ಕರ್ಮದ ಸಿದ್ಧಿ ಮತ್ತು ಅಸಿದ್ಧಿಗಳಲ್ಲಿ ನಿರ್ವಿಕಾರನಾಗಿ ಕರ್ಮವನ್ನು ಮಾಡುವವನು ಸಾತ್ವಿಕನೆನಿಸುತ್ತಾನೆ.
ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋऽಶುಚಿಃ |
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥27॥
ಕರ್ಮದ ಫಲದಲ್ಲಿ ಸ್ನೇಹವನ್ನು ಹೊಂದಿ ಆ ಫಲವನ್ನು ಬಯಸಿ, ಲೋಭವುಳ್ಳವನಾಗಿ ಹಿಂಸಾತ್ಮಕನಾಗಿ, ಅಶುಚಿಯಾಗಿ ಕರ್ಮಫಲವು ಸಿದ್ಧವಾದರೆ ಹರ್ಷವನ್ನೂ, ಸಿದ್ಧವಾಗದಿದ್ದರೆ ಶೋಕವನ್ನೂ ಹೊಂದುವ ಕರ್ತೃವು ರಾಜಸನೆನಿಸುತ್ತಾನೆ.

ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ |
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥28॥
ವಿವೇಕಿಗಳ ಜೊತೆಯಲ್ಲಿ ಸೇರದೆ ಪ್ರಕೃತಿಯಿಂದ ಬದ್ಧನಾಗಿ, ಸ್ತಬ್ಧನಾಗಿ, ಗೂಢದ್ವೇಷವನ್ನು ಹೊಂದಿ, ಕಪಟನಾಗಿ, ಆಲಸ್ಯವನ್ನು ಹೊಂದಿ, ವಿಷಾದ ಪಡುತ್ತಾ, ಇನ್ನೊಬ್ಬರ ದೋಷವನ್ನು ಬಹುಕಾಲ ಎಣಿಸುವ ಕರ್ತೃವು ತಾಮಸನೆನಿಸುತ್ತಾನೆ.
ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು |
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥29॥
ಎಲೈ ಧನಂಜಯನೇ, ಬುದ್ಧಿ ಮತ್ತು ಧೈರ್ಯದ ಭೇದಗಳನ್ನು ಅವುಗಳ ಗುಣವಿಭಾಗದಿಂದ ಬಿಡಿಬಿಡಿಯಾಗಿ ಹೇಳುತ್ತೇನೆ. ಅದನ್ನು ಪೂರ್ಣವಾಗಿ ಕೇಳು.
ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ |
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥30॥
ಎಲೈ ಪಾರ್ಥನೇ, ಮೂಲಪ್ರಕೃತಿಯನ್ನೂ, ಅದರ ವಿಕಾರ ಅಥವಾ ಜಗತ್ತನ್ನೂ, ಕಾರ್ಯ-ಅಕಾರ್ಯಗಳನ್ನೂ, ಭಯ-ಅಭಯಗಳನ್ನೂ, ಬಂಧ-ಮೋಕ್ಷಗಳನ್ನೂ ತಿಳಿಯುವ ಬುದ್ಧಿಯು ಸಾತ್ವಿಕವೆನಿಸುತ್ತದೆ.
ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ |
ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥31॥
ಯಾವ ಬುದ್ಧಿಯು ಧರ್ಮಾಧರ್ಮಗಳನ್ನೂ, ಕಾರ್ಯಾಕಾರ್ಯಗಳನ್ನೂ ಸರಿಯಾಗಿ ತಿಳಿಯುವುದಿಲ್ಲವೋ ಅಥವಾ ಸಂಸಾರಮಗ್ನವಾದ ಕಾರಣದಿಂದ ತಿಳಿಯುವ ಪ್ರಯತ್ನವನ್ನೇ ಮಾಡುವುದಿಲ್ಲವೋ, ಎಲೈ ಪಾರ್ಥನೇ, ಆ ಬುದ್ಧಿಯು ರಾಜಸವೆನಿಸುತ್ತದೆ.
ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ |
ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥32॥
ತಮೋಗುಣದಿಂದ ಆವೃತವಾಗಿ ಯಾವ ಬುದ್ಧಿಯು ಅಧರ್ಮವನ್ನು ಧರ್ಮವೆಂದೂ ಮತ್ತು ಎಲ್ಲವನ್ನೂ ವಿಪರೀತವಾಗಿ ತಿಳಿಯುತ್ತದೆಯೋ ಎಲೈ ಪಾರ್ಥನೇ, ಅದು ತಾಮಸವಾದ ಬುದ್ಧಿ.
ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ |
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥33॥
ಎಲೈ ಪಾರ್ಥನೇ, ಯಾವ ಧಾರಣೆಯು (ಧೈರ್ಯವು) ಮನಸ್ಸು, ಪ್ರಾಣೇಂದ್ರಿಯ ಕ್ರಿಯೆಗಳು ಎಲ್ಲವನ್ನೂ ಅವ್ಯಭಿಚರಿತವಾದ ಯೋಗದಿಂದ ಧರಿಸುತ್ತದೆಯೋ ಆ ಧಾರಣೆಯು ಸಾತ್ವಿಕವಾದುದು.
ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ |
ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥34॥
ಯಾವ ಧಾರಣೆಯು ಧರ್ಮಾರ್ಥಕಾಮಗಳನ್ನು ಧರಿಸುತ್ತದೆಯೋ, ಬಹಳ ಆಸೆಯಿಂದ ಫಲವನ್ನು ಬಯಸುತ್ತದೆಯೋ ಆ ಧಾರಣೆಯು ಎಲೈ ಅರ್ಜುನನೇ, ರಾಜಸವಾದುದು.
ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ |
ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥35॥
ದುರ್ಬುದ್ಧಿಯುಳ್ಳ ಯಾವನು ಯಾವ ಧಾರಣೆಯಿಂದ ಸ್ವಪ್ನ, ಭಯ, ಶೋಕ, ವಿಷಾದ, ಮದಗಳನ್ನು ಪರಿತ್ಯಾಗ ಮಾಡುವುದಿಲ್ಲವೋ ಎಲೈ ಪಾರ್ಥನೇ, ಆ ಧಾರಣೆಯು ತಾಮಸವಾದುದು.
ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ |
ಅಭ್ಯಾಸಾದ್ ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥36॥
ಎಲೈ ಭರತಶ್ರೇಷ್ಠನೇ, ಎಲ್ಲಿ ಅಭ್ಯಾಸದಿಂದ ಪುನಃ ಪುನಃ ಸಂತೋಷ ಪಡುತ್ತಾನೆಯೋ, ದುಃಖದ ಪರಿಹಾರವನ್ನು ಹೊಂದುತ್ತಾನೆಯೋ, ಅಂತಹ ಮೂರುವಿಧವಾದ ಸುಖವನ್ನು ಕೇಳುವವನಾಗು.
ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ |
ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥37॥
ಯಾವ ಸುಖವು ಮೊದಲು ವಿಷದಂತೆ ಕಹಿಯಾಗಿಯೂ, ಪರಿಣಾಮದಲ್ಲಿ ಅಮೃತದಂತೆ ಮಧುರವಾಗಿಯೂ ಇದ್ದು ವಿಷ್ಣುವಿನ ಅನುಗ್ರಹದಿಂದ ಮತ್ತು ಬುದ್ಧಿಯ ಪ್ರಸನ್ನತೆಯಿಂದ ಉಂಟಾಗಿದೆಯೋ ಆ ಸುಖವು ಸಾತ್ವಿಕವಾದುದು.
ವಿಷಯೇಂದ್ರಿಯಸಂಯೋಗಾತ್ ಯತ್ ತದಗ್ರೇಽಮೃತೋಪಮಮ್ |
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥38॥
ವಿಷಯೇಂದ್ರಿಯ ಸಂಪರ್ಕದಿಂದ ಯಾವುದು ಮೊದಲು ಮಧುರವಾಗಿ ಕಾಣುತ್ತದೆಯೋ, ಪರಿಣಾಮದಲ್ಲಿ ವಿಷದಂತೆ ಕೇಡನ್ನು ಉಂಟುಮಾಡುತ್ತದೆಯೋ ಅದು ರಾಜಸವಾದ ಸುಖ.
ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ |
ನಿದ್ರಾಲಸ್ಯಪ್ರಮಾದೋತ್ಥಂ ತತ್ ತಾಮಸಮುದಾಹೃತಮ್ ॥39॥
ಯಾವ ಸುಖವು ಅನುಭವಿಸುವಾಗಲೂ ಮತ್ತು ಪರಿಣಾಮದಲ್ಲಿಯೂ ಜೀವನಿಗೆ ಮೋಹವನ್ನು ಉಂಟುಮಾಡುತ್ತವೆಯೋ, ನಿದ್ರೆ-ಆಲಸ್ಯ-ಪ್ರಮಾದಗಳಿಂದ ಉಂಟಾಗುತ್ತವೆಯೋ ಅಂತಹ ಸುಖವು ತಾಮಸವಾದುದು.
ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ |

ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥40॥
ಭೂಮಿಯಲ್ಲಾಗಲೀ, ಸ್ವರ್ಗದಲ್ಲಾಗಲೀ, ದೇವತೆಗಳಲ್ಲಾಗಲೀ ಈ ಪ್ರಕೃತಿಯ ಮೂರು ಗುಣಗಳಿಂದ ರಹಿತವಾದ ವಸ್ತುವು ಯಾವುದೂ ಇಲ್ಲ.
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ |
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥41॥
ಎಲೈ ಪರಂತಪನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಅವರ ಸ್ವಭಾವಕ್ಕೆ ಅನುಗುಣವಾಗಿ ಕರ್ಮಗಳು ಭಿನ್ನ ಭಿನ್ನವಾಗಿವೆ.
ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ |
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥42॥
ಶಮ, ದಮ, ತಪಸ್ಸು, ಶೌಚ, ಕ್ಷಮೆ, ಆರ್ಜವ, ಜ್ಞಾನ, ವಿಜ್ಞಾನ, ಆಸ್ತಿಕ್ಯ ಇದೆಲ್ಲವೂ ಸ್ವಾಭಾವಿಕವಾದ ಬ್ರಾಹ್ಮಣ ಕರ್ಮಗಳು.
ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ |
ದಾನಮೀಶ್ವರಭಾವಶ್ಚ ಕ್ಷತ್ರಕರ್ಮ ಸ್ವಭಾವಜಮ್ ॥43॥
ಶೌರ್ಯ, ತೇಜಸ್ಸು, ಧೈರ್ಯ, ದಕ್ಷತೆ, ಯುದ್ಧದಲ್ಲಿ ಹಿಂದಿರುಗದಿರುವಿಕೆ, ದಾನ ದುಷ್ಟರನ್ನು ದಂಡಿಸುವಿಕೆ (ತಾನು ಸಮರ್ಥನೆಂಬ ಬುದ್ಧಿ) ಇದು ಕ್ಷತ್ರಿಯರಿಗೆ ಸ್ವಾಭಾವಿಕವಾದ ಕರ್ಮ.
ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ |
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥44॥
ಕೃಷಿ, ಗೋರಕ್ಷ ಮತ್ತು ವಾಣಿಜ್ಯ ಇದು ವೈಶ್ಯರಿಗೆ ಸ್ವಾಭಾವಿಕವಾದ ಕರ್ಮಗಳು. ಪರಿಚರ್ಯೆಯು ಶೂದ್ರರಿಗೆ ಸ್ವಾಭಾವಿಕವಾದ ಕರ್ಮ.
ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ |
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತತ್ ಶೃಣು ॥45॥
ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾದವರು ಒಳ್ಳೆಯ ಸಿದ್ಧಿಯನ್ನು ಪಡೆಯುತ್ತಾರೆ. ತಮ್ಮ ಕರ್ಮದಲ್ಲಿ ನಿರತನಾದವನು ಹೇಗೆ ಸಿದ್ಧಿಯನ್ನು ಪಡೆಯುತ್ತಾನೆ ಎಂದು ಕೇಳು.
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ |
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥46॥
ಯಾವ ಪರಮಾತ್ಮನಿಂದ ಎಲ್ಲ ಪ್ರಾಣಿಗಳಿಗೂ ಪ್ರವೃತ್ತಿ ಉಂಟಾಗುತ್ತದೆಯೋ, ಯಾವನು ಈ ಜಗತ್ತೆಲ್ಲವನ್ನೂ ವ್ಯಾಪಿಸಿದ್ದಾನೆಯೋ ಅಂತಹ ಪರಮಾತ್ಮನನ್ನು ತನ್ನ ಕರ್ಮದಿಂದ ಅರ್ಚಿಸುವ ಮನುಷ್ಯನು ಸಿದ್ಧಿಯನ್ನು ಪಡೆಯುತ್ತಾನೆ.
ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ |
ಸ್ವಭಾವನಿಯತಂ ಕರ್ಮ ಕುರ್ವನ್ ನಾಪ್ನೋತಿ ಕಿಲ್ಬಿಷಮ್ ॥47॥
ಅಂಗವಿಕಲವಾಗಿ ಅನುಷ್ಠಾನ ಮಾಡಿದ ಸ್ವಧರ್ಮವು ಸರ್ವಾಂಗಸಹಿತವಾಗಿ ಅನುಷ್ಠಾನ ಮಾಡಿದ ಪರಧರ್ಮಕ್ಕಿಂತ ಶ್ರೇಷ್ಠವಾದುದು. ತನ್ನ ಸ್ವಭಾವಕ್ಕೆ ನಿಯತವಾದ ಕರ್ಮವನ್ನು ಮಾಡುವವನು ಪಾಪಕ್ಕೆ ಗುರಿಯಾಗುವುದಿಲ್ಲ.
ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ |
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥48॥
ಕೌಂತೇಯನೇ, ಕರ್ಮವು ಸಹಜವಾದುದು. ಅದು ದೋಷದಿಂದ ಕೂಡಿದ್ದರೂ ಅದನ್ನು ಬಿಡಬಾರದು. ಅಗ್ನಿಯು ಧೂಮದಿಂದ ಆವೃತವಾದಂತೆ ಎಲ್ಲ ಕರ್ಮದ ಉಪಕ್ರಮಗಳು ದೋಷದಿಂದ ಕೂಡಿರುತ್ತವೆ.
ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ |
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥49॥
ಎಲ್ಲ ವಿಷಯಗಳಲ್ಲಿಯೂ ಸ್ನೇಹವನ್ನು ತೊರೆದು ಮನೋಜಯವನ್ನು ಹೊಂದಿ, ಕರ್ಮದ ಫಲದಲ್ಲಿ ಆಸೆಯನ್ನು ಮಾಡದೆ, ಕರ್ಮವನ್ನು ಹರಿಸಮರ್ಪಣೆ ಮಾಡುವುದರಿಂದ ಶ್ರೇಷ್ಠವಾದ ನೈಷ್ಕರ್ಮಸಿದ್ಧಿಯನ್ನು ಹೊಂದುತ್ತಾನೆ.
ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ |
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥50॥
ಎಲೈ ಕೌಂತೇಯನೇ, ಅಂತಹ ಸಿದ್ಧಿಯನ್ನು ಪಡೆದವನು ಹೇಗೆ ಬ್ರಹ್ಮನನ್ನು ಹೊಂದುತ್ತಾನೆ ಎಂಬುದನ್ನು ನನ್ನಿಂದ ತಿಳಿ. ಹಾಗೆಯೇ ಜ್ಞಾನದ ಪರಾಕಾಷ್ಠೆ ಎಂಬುದು ಏನು ಎಂಬುದನ್ನೂ ಸಂಕ್ಷೇಪವಾಗಿ ತಿಳಿ.
ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯ ಚ |
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥51॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ |
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥52॥
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ |
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥53॥
ವಿಶುದ್ಧವಾದ ಬುದ್ಧಿಯಿಂದ ಕೂಡಿದವನಾಗಿ, ಧೈರ್ಯದಿಂದ ಚಿತ್ತವನ್ನು ನಿಗ್ರಹಿಸಿ, ಶಬ್ದಾದಿ ವಿಷಯಗಳನ್ನು ಪರಿತ್ಯಜಿಸಿ, ರಾಗ-ದ್ವೇಷಗಳನ್ನು ದೂರಮಾಡಿ, ಏಕಾಂತ ವಾಸಿಯಾಗಿ, ಅಲ್ಪಾಹಾರಿಯಾಗಿ, ವಾಕ್-ಕಾಯ-ಮನಸ್ಸುಗಳನ್ನು ನಿಯಂತ್ರಿಸಿ, ವೈರಾಗ್ಯದಿಂದ ಕೂಡಿ ನಿತ್ಯವೂ ಧ್ಯಾನ-ಯೋಗಪರನಾಗಿ, ಅಹಂಕಾರವನ್ನೂ, ಬಲ- ದರ್ಪ-ಕಾಮ-ಕ್ರೋಧಗಳನ್ನೂ, ಪರಿವಾರದಲ್ಲಿ ಸ್ನೇಹವನ್ನೂ ಮಮಕಾರವನ್ನೂ ತೊರೆದು, ಮಮಕಾರದಲ್ಲಿ ಶಾಂತನಾದವನು ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾನೆ.

ವಿಶೇಷ ವಿಚಾರ ಬ್ರಹ್ಮಭೂಃ ಎಂದರೆ ವೈಕುಂಠ. ಯಾ ಪ್ರಾಪಣೇ ಎಂಬ ಧಾತುವಿರುವುದರಿಂದ ವೈಕುಂಠಲೋಕಕ್ಕೆ ಹೋಗಲು ಸಮರ್ಥನಾಗುತ್ತಾನೆ ಎಂದು ಅರ್ಥ.
ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ |
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥54॥
ಬ್ರಹ್ಮನಲ್ಲೇ ಮನಸ್ಸಿನಿಂದ ನೆಲೆನಿಂತ ಪ್ರಸನ್ನವಾದ ಮನಸ್ಸುಳ್ಳ ಅವನು ಶೋಕವನ್ನೂ, ಆಸೆಯನ್ನೂ ಪಡುವುದಿಲ್ಲ. ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಸಮಾನನಾಗಿರುತ್ತಾನೆ. ನನ್ನಲ್ಲಿ ಶ್ರೇಷ್ಠವಾದ ಭಕ್ತಿಯನ್ನು ಪಡೆಯುತ್ತಾನೆ.
ವಿಶೇಷ ವಿಚಾರ ಬ್ರಹ್ಮಭೂತ ಶಬ್ದಕ್ಕೆ ಬ್ರಹ್ಮಭುವಿಭೂತಃ' ಎಂದು ವಿಗ್ರಹವನ್ನು ಮಾಡಿ ವೈಕುಂಠಾದಿ ಲೋಕಗಳಲ್ಲಿ ಆಶ್ರಿತನಾದವನು ಎಂದೂ ಅರ್ಥವನ್ನು ಮಾಡಬಹುದು. ಪರಬ್ರಹ್ಮನೇ ಆಗುತ್ತಾನೆ ಎಂಬ ಅರ್ಥವು `ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮಾ ತಥಾಪ್ನೋತಿ ನಿಬೋಧಮೇ' ಎಂಬ ಉಪಕ್ರಮದಿಂದಲೂ, `ಮದ್ಭಕ್ತಿಂ ಲಭತೇ ಪರಾಮ್' ಎಂಬ ಮಧ್ಯವಾಕ್ಯದಿಂದಲೂ, `ತತೋ ಮಾಂ ತತ್ತ್ವತೋ ಜ್ಞಾತ್ವಾ' ಎಂಬ ಉಪಸಂಹಾರದಿಂದಲೂ ವಿರೋಧ ಬರುವುದರಿಂದಲೂ ಅಲ್ಲದೇ `ಇದಂ ಜ್ಞಾನ ಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ' ಎಂದು ಭಗವಂತನು ಸ್ಪಷ್ಟವಾಗಿ ತನ್ನ ಸಾಧರ್ಮ್ಯವನ್ನೇ ಹೇಳಿರುವುದರಿಂದಲೂ ಅತ್ಯಂತ ಅಯುಕ್ತವಾದುದು.
ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ |
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥55॥
ಭಕ್ತಿಯಿಂದ ಅವನು ನನ್ನ ನಿಜವಾದ ಸ್ವರೂಪವನ್ನು ತಿಳಿಯುತ್ತಾನೆ. ಅನಂತರ ಯಥಾರ್ಥ ಜ್ಞಾನವನ್ನು ಪಡೆದ ಅವನು ನನ್ನಲ್ಲಿ ಪ್ರವೇಶ ಮಾಡುತ್ತಾನೆ.
ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ |
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥56॥
ನನ್ನನ್ನು ಆಶ್ರಯಿಸಿ ಎಲ್ಲ ಕರ್ಮಗಳನ್ನೂ ಯಾವಾಗಲೂ ಮಾಡುವವನು ನನ್ನ ಅನುಗ್ರಹದಿಂದ ಶಾಶ್ವತವೂ, ಹ್ರಾಸ ರಹಿತವೂ ಆದ ಸ್ಥಾನವನ್ನು ಪಡೆಯುತ್ತಾನೆ.
ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ |
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥57॥
ನನ್ನನ್ನು ಸರ್ವೋತ್ತಮನೆಂದು ತಿಳಿದು ಎಲ್ಲ ಕರ್ಮಗಳನ್ನೂ ಮನಸ್ಸಿನಲ್ಲಿಯೇ ನನ್ನಲ್ಲಿ ಸಮರ್ಪಿಸಿ ಬುದ್ಧಿಯೋಗವನ್ನು ಆಶ್ರಯಿಸಿ ಚಿತ್ತದಲ್ಲಿ ಯಾವಾಗಲೂ ನನ್ನ ಚಿಂತನೆಯಲ್ಲಿಯೇ ಇರುವವನಾಗು.
ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ |
ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥58॥
ನನ್ನಲ್ಲಿಯೇ ಚಿತ್ತವನ್ನು ಇಡುವವನು ನನ್ನ ಅನುಗ್ರಹದಿಂದ ಎಲ್ಲ ಕಷ್ಟಗಳನ್ನೂ ದಾಟುವನು. ಅಹಂಕಾರದಿಂದ ನೀನು ನನ್ನ ಮಾತುಗಳನ್ನು ಕೇಳದಿದ್ದರೆ ವಿನಾಶವನ್ನು ಹೊಂದುವಿ.
ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ |
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥59॥
ಅಹಂಕಾರವನ್ನು ಅವಲಂಬಿಸಿ ನಾನು ಯುದ್ಧಮಾಡುವುದಿಲ್ಲ ಎಂದು ಏನು ತಿಳಿದಿದ್ದೀಯೋ ಆ ನಿನ್ನ ನಿಶ್ಚಯವು ಸುಳ್ಳಾಗುವುದು. ಈಶ್ವರೇಚ್ಛೆಯು ನಿನ್ನನ್ನು ಯುದ್ಧದಲ್ಲಿ ತೊಡಗಿಸುತ್ತದೆ.
ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ |
ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ॥60॥
ಎಲೈ ಕೌಂತೇಯನೇ, ನಿನ್ನ ಕರ್ಮದಿಂದ ಉಂಟಾದ ಸಂಸ್ಕಾರದಿಂದ ಬದ್ಧನಾಗಿ ಯಾವುದನ್ನು ಮಾಡುವುದಿಲ್ಲವೆಂದು ಮೋಹದಿಂದ ಹೇಳುತ್ತೀಯೋ ಅದನ್ನು ವಿಷ್ಣುವಶನಾಗಿ ನೀನು ಮಾಡುವಿ.
ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥61॥
ಎಲೈ ಅರ್ಜುನನೇ, ಈಶ್ವರನು ಸರ್ವಪ್ರಾಣಿಗಳ ಹೃದಯಪ್ರದೇಶದಲ್ಲಿ ಯಂತ್ರಾರೂಢ ಪ್ರತಿಮೆಗಳಂತೆ ಅವರನ್ನು ತಿರುಗಿಸುತ್ತಾ ತನ್ನ ಇಚ್ಛೆಯಿಂದಲೇ ಅವಸ್ಥಿತನಾಗಿದ್ದಾನೆ.
ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ |
ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥62॥
ಎಲೈ ಭಾರತನೇ, ಅವನಿಗೇ ಸರ್ವರೀತಿಯಲ್ಲೂ ಶರಣಾಗತನಾಗು. ಅವನ ಅನುಗ್ರಹದಿಂದ ಶ್ರೇಷ್ಠವಾದ ಸುಖವನ್ನೂ ಮತ್ತು ಶಾಶ್ವತವಾದ ಸ್ಥಾನವನ್ನೂ ಹೊಂದುವಿ.
ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ ಗುಹ್ಯತರಂ ಮಯಾ |
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥63॥
ರಹಸ್ಯಗಳಲ್ಲಿ ಅತ್ಯಂತ ರಹಸ್ಯವಾದ ಈ ಜ್ಞಾನವನ್ನು ನಾನು ನಿನಗೆ ಉಪದೇಶ ಮಾಡಿದ್ದೇನೆ. ಇದನ್ನು ಪೂರ್ಣವಾಗಿ ವಿಮರ್ಶೆ ಮಾಡಿ ನಿನಗೆ ಇಚ್ಛೆ ಬಂದಂತೆ ಮಾಡು.
ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ |
ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥64॥

ಎಲ್ಲದಕ್ಕಿಂತಲೂ ಅತ್ಯಂತ ರಹಸ್ಯವಾದ ಈ ಶ್ರೇಷ್ಠವಾದ ಮಾತುಗಳನ್ನು ಇನ್ನೊಮ್ಮೆ ಕೇಳು. ನನಗೆ ನೀನು ಬಹಳ ಪ್ರಿಯನಾದವನು ಎಂಬ ಕಾರಣದಿಂದ ನಿನಗೆ ಹಿತವನ್ನು ಹೇಳುವೆನು.
ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥65॥
ನನ್ನಲ್ಲಿಯೇ ಮನಸ್ಸನ್ನು ಇಡು, ನನ್ನನ್ನು ಪೂಜಿಸು, ನನಗೆ ನಮಸ್ಕಾರವನ್ನು ಮಾಡು. ನೀನು ನನ್ನನ್ನೇ ಹೊಂದುವಿ. ಇದನ್ನು ಸತ್ಯವಾಗಿ ನಿನಗೆ ಪ್ರತಿಜ್ಞೆ ಮಾಡುತ್ತಿದ್ದೇನೆ, ನೀನು ನನಗೆ ಪ್ರಿಯನಾದವನು.
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥66॥
ಸರ್ವಧರ್ಮಗಳನ್ನೂ ಆಚರಿಸಿ, ಫಲದ ಆಸೆಯನ್ನು ಪರಿತ್ಯಾಗ ಮಾಡಿ ನನಗೊಬ್ಬನಿಗೇ ಶರಣಾಗತನಾಗು. ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುವೆನು, ಶೋಕಪಡಬೇಡ.
ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ |
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥67॥
ಈ ದಿವ್ಯವಾದ ಜ್ಞಾನವನ್ನು ತಪಸ್ಸನ್ನು ಮಾಡದವನಿಗೆ, ಭಕ್ತನಲ್ಲದವನಿಗೆ, ಗುರು ಶುಶ್ರೂಷೆಯನ್ನು ಮಾಡದವನಿಗೆ, ನನ್ನನ್ನು ದ್ವೇಷಿಸುವವನಿಗೆ ಎಂದೂ ಹೇಳಬಾರದು.
ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ |
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥68॥
ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ |
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥69॥
ಯಾವನು ಈ ಪರಮಗುಹ್ಯವನ್ನು ನನ್ನ ಭಕ್ತರಿಗೆ ಉಪದೇಶ ಮಾಡುತ್ತಾನೆಯೋ ಅವನು ನನ್ನಲ್ಲಿ ಶ್ರೇಷ್ಠವಾದ ಭಕ್ತಿಯನ್ನು ಹೊಂದಿ ನನ್ನನ್ನೇ ಹೊಂದುವುದರಲ್ಲಿ ಸಂಶಯವಿಲ್ಲ. ನನಗೆ ಮನುಷ್ಯರಲ್ಲಿ ಅವನಿಗಿಂತ ಪ್ರಿಯತರನಾದವನು ಅಥವಾ ಹಿತವನ್ನು ಮಾಡುವವನು ಯಾವನೂ ಇರುವುದಿಲ್ಲ.
ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ |
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥70॥
ಈ ನಮ್ಮಿಬ್ಬರ ಧರ್ಮಸಂವಾದವನ್ನು ಯಾವನು ಅಧ್ಯಯನ ಮಾಡುತ್ತಾನೆಯೋ ಅವನು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸಿದ್ದಾನೆ ಎಂದು ನನ್ನ ಅಭಿಪ್ರಾಯ.
ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ |
ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್॥
ಶ್ರದ್ಧೆಯನ್ನು ಹೊಂದಿ, ಅಸೂಯೆ ಪಡದೆ ಯಾವ ಮನುಷ್ಯನು ಈ ಉಪದೇಶವನ್ನು ಶ್ರವಣ ಮಾಡುತ್ತಾನೆಯೋ ಅವನೂ ಪಾಪದಿಂದ ಮುಕ್ತನಾಗಿ ಪುಣ್ಯಕರ್ಮಿಗಳು ಪಡೆಯುವ ಶುಭಲೋಕಗಳನ್ನು ಹೊಂದಿಯಾನು.
ಕಚ್ಚಿದೇತತ್ ಶ್ರುತಂ ಪಾರ್ಥ ತ್ವಯ್ಯೆಕಾಗ್ರೇಣ ಚೇತಸಾ |
ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥72॥
ಎಲೈ ಪಾರ್ಥನೇ, ಏಕಾಗ್ರವಾದ ಮನಸ್ಸಿನಿಂದ ನಾನು ಹೇಳಿದುದನ್ನು ಕೇಳಿದೆಯಾ? ಧನಂಜಯನೇ, ಅಜ್ಞಾನದಿಂದ ಉಂಟಾದ ನಿನ್ನ ಭ್ರಾಂತಿಯು ನಾಶವನ್ನು ಹೊಂದಿತೇ?
ಅರ್ಜುನಃ
ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ |
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥73॥
ಅರ್ಜುನ ಅಚ್ಯುತನೇ, ನಿನ್ನ ಅನುಗ್ರಹದಿಂದ ನನ್ನ ಮೋಹವು ನಾಶವಾಗಿದೆ. ದಿವ್ಯಜ್ಞಾನದ ಸ್ಮರಣೆಯು ಉಂಟಾಗಿದೆ. ಸಂಶಯವನ್ನು ಕಳೆದುಕೊಂಡಿದ್ದೇನೆ. ನಿನ್ನ ಮಾತಿನಂತೆ ನಡೆದುಕೊಳ್ಳುವೆನು.
ಸಂಜಯಃ
ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ |
ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥74॥
ಸಂಜಯ ಹೀಗೆ ನಾನು ಮಹಾತ್ಮನಾದ ವಾಸುದೇವನ ಅದ್ಭುತವೂ, ರೋಮಾಂಚಕಾರಿಯೂ ಆದ ಈ ಸಂವಾದವನ್ನು ಕೇಳಿದೆನು.
ವ್ಯಾಸಪ್ರಸಾದಾತ್ ಶ್ರುತವಾನೇತದ್ ಗುಹ್ಯಮಹಂ ಪರಮ್ |
ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಮ್ ॥
ಯೋಗೇಶ್ವರನಾದ ಕೃಷ್ಣನು ಸಾಕ್ಷಾತ್ ತಾನೇ ಹೇಳುವ ರಹಸ್ಯವಾದ, ಶ್ರೇಷ್ಠವಾದ ಈ ಯೋಗಗಳನ್ನು ವೇದವ್ಯಾಸದೇವರ ಅನುಗ್ರಹದಿಂದ ನಾನು ಕೇಳಿದೆನು.
ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ |
ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥76॥
ಎಲೈ ರಾಜನೇ, ಕೇಶವಾರ್ಜುನರ ಈ ಪವಿತ್ರವಾದ ಮತ್ತು ಅದ್ಭುತವಾದ ಸಂವಾದವನ್ನು ಸ್ಮರಿಸಿ, ಸ್ಮರಿಸಿ ನಾನು ಪುನಃ ಪುನಃ ಸಂತೋಷಗೊಳ್ಳುತ್ತಿದ್ದೇನೆ.

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ |
ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ||77||
ರಾಜನೇ, ಹರಿಯ ಆ ಅದ್ಭುತವಾದ ವಿಶ್ವರೂಪವನ್ನು ಸ್ಮರಿಸಿ, ಸ್ಮರಿಸಿ ನನಗೆ ಇನ್ನೂ ಆಶ್ಚರ್ಯವಾಗುತ್ತಿದೆ ಮತ್ತು ಪುನಃ ಪುನಃ ಸಂತೋಷಗೊಳ್ಳುತ್ತಿದ್ದೇನೆ.
ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ |
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ||78||
ಎಲ್ಲಿ ಯೋಗೇಶ್ವರನಾದ ಕೃಷ್ಣನಿದ್ದಾನೋ ಮತ್ತು ಧನುರ್ಧಾರಿಯಾದ ಅರ್ಜುನನಿದ್ದಾನೋ ಅಲ್ಲಿಯೇ ಧನ-ಕನಕಾದಿ ಸಂಪತ್ತು, ಯುದ್ಧದಲ್ಲಿ ವಿಜಯ, ರಾಜೈಶ್ವರ್ಯ ಪ್ರಾಪ್ತಿ ಶಾಶ್ವತವಾಗಿ ಇರುತ್ತದೆ ಎಂದು ನನ್ನ ಅಭಿಪ್ರಾಯ.
ಸ್ನಾತಂ ಗೀತಾಮೃತಾಂಭೋಧೌ ಪೀತಂ ಜ್ಞಾನಾಮೃತಂ ಮಯಾ |
ಧೂತಂ ವಿಷಂ ಭವೋದ್ಭೂತಂ ಪೂತಂ ತೇನಾಖಿಲಂ ಕುಲಮ್ ||
ಗೀತಾಮೃತ ಸಮುದ್ರದಲ್ಲಿ ಸ್ನಾನವನ್ನು ಮಾಡಿ, ಜ್ಞಾನಾಮೃತವನ್ನು ಪಾನ ಮಾಡಿ, ಸಂಸಾರದಿಂದ ಉಂಟಾದ ವಿಷವನ್ನು ಹೋಗಲಾಡಿಸಿ ಎಲ್ಲ ಕುಲವನ್ನೂ ಪವಿತ್ರೀಕರಿಸಿದ್ದಾಯಿತು (ಲಕ್ಷಾಲಂಕಾರ).
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತ್ವಾರಿಂಶೋಽಧ್ಯಾಯಃ ||
|| ಭಗವದ್ಗೀತಾಪರ್ವಣಿ ಸಪ್ತವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.

||ಸಮಾಪ್ತಂ ಭಗವದ್ಗೀತಾಪರ್ವ ||
* * * * *
4. ಭೀಷ್ಮವಧಪರ್ವ
ಪ್ರಥಮಯುದ್ಧದಿವಸಃ
ನಲವತ್ತೊಂದನೆಯ ಅಧ್ಯಾಯ
ಭೀಷ್ಮ-ದ್ರೋಣ-ಕೃಪ-ಶಲ್ಯರಿಂದ ಅನುಮತಿಯನ್ನು ಪಡೆದು
ಯುಧಿಷ್ಠಿರನಿಂದ ಪುನಃ ತನ್ನ ರಥದಲ್ಲಿ ಸ್ಥಿತಿ.
ಸಂಜಯಃ
ತತೋ ಧನಂಜಯಂ ದೃಷ್ಟ್ವಾ ಬಾಣಗಾಂಡೀವಧಾರಿಣಮ್ |
ಪುನರೇವ ಮಹಾನಾದಂ ವ್ಯಸೃಜಂತ ಮಹಾರಥಾಃ ||1||
ಸಂಜಯ ಆಗ ಗಾಂಡೀವ ಧನುಸ್ಸು ಮತ್ತು ಬಾಣಗಳನ್ನು ಹಿಡಿದ ಧನಂಜಯನನ್ನು ನೋಡಿ ಮಹಾರಥರೆಲ್ಲರೂ ಪುನಃ ಮಹಾನಾದವನ್ನು ಮಾಡಿದರು.
ಪಾಂಡವಾಃ ಸೋಮಕಾಶ್ಚೈವ ಯೇ ಚೈಷಾಮನುಯಾಯಿನಃ |
ದಧ್ಮುಶ್ಚ ಮುದಿತಾಃ ಶಂಖಾನ್ ವೀರಾಃ ಸಾಗರಸಂಭವಾನ್ ||2||
ಪಾಂಡವರು, ಸೋಮಕರು ಮತ್ತು ಅವರ ಅನುಯಾಯಿಗಳಾದ ವೀರರು ಸಂತೋಷದಿಂದ ಸಮುದ್ರಜನ್ಯವಾದ ಶಂಖಗಳನ್ನು ಊದಿದರು.
ತತೋ ಭೇರ್ಯಶ್ಚ ಪೇಶ್ಯಶ್ಚ ಕ್ರಕಚಾ ಗೋವಿಷಾಣಿಕಾಃ |
ಸಹಸೈವಾಭ್ಯಹನ್ಯಂತ ತತಃ ಶಬ್ದೋ ಮಹಾನಭೂತ್ ||3||
ಅನಂತರ ಭೇರಿಗಳು, ಪೇಶಿಗಳು, ಕ್ರಕಚಗಳು, ಗೋವಿಷಾಣಿಕಗಳು ತಕ್ಷಣ ಬಾರಿಸಲ್ಪಟ್ಟವು. ಅದರಿಂದ ದೊಡ್ಡ ಶಬ್ದ ಉಂಟಾಯಿತು.
ಅಥ ದೇವಾಃ ಸಗಂಧರ್ವಾಃ ಪಿತರಶ್ಚ ಜನೇಶ್ವರ |
ಸಿದ್ಧಚಾರಣಸಂಘಾಶ್ಚ ಸಮೀಯುಸ್ತೇ ದಿದೃಕ್ಷಯಾ ||4||
ಆಗ ಎಲೈ ಜನೇಶ್ವರನೇ, ಗಂಧರ್ವರಿಂದ ಸಹಿತರಾದ ದೇವತೆಗಳು, ಪಿತೃಗಳು, ಸಿದ್ಧ-ಚಾರಣ ಸಮೂಹಗಳು ಯುದ್ಧವನ್ನು ನೋಡಲು ಬಯಸಿ ಬಂದರು.
ಋಷಯಶ್ಚ ಮಹಾಭಾಗಾಃ ಪುರಸ್ಕೃತ್ಯ ಶತಕ್ರತುಮ್ |
ಸಮೀಯುಸ್ತತ್ರ ಸಹಿತಾ ದ್ರಷ್ಟುಂ ತದ್‌ವೈಶಸಂ ಮಹತ್ ||5||
ಮಹಾನುಭಾವರಾದ ಋಷಿಗಳೂ ಸಹ ಇಂದ್ರನನ್ನು ಮುಂದೆ ಮಾಡಿಕೊಂಡು ಆ ದೊಡ್ಡ ಯುದ್ಧವನ್ನು ನೋಡಲು ಎಲ್ಲರೂ ಸಹಿತರಾಗಿ ಬಂದರು.
ಪ್ರಬೋಧಿತಃ ಸ ತು ತದಾ ವಿಷ್ಣುನಾ ವಿಶ್ವಮೂರ್ತಿನಾ |
ಅವಿನಾಶಿಸ್ವರೂಪಂ ಚ ದೃಷ್ಟ್ವಾ ತತ್ತ್ವೇನ ಫಲ್ಗುನಃ |
ಕೃಷ್ಣಂ ಚೇಮಂ ಜಗದ್ರೂಪಂ ಜ್ಞಾತ್ವಾ ಯುದ್ಧೋದ್ಯತೋಽಭವತ್ ||6||
ವಿಶ್ವರೂಪವನ್ನು ಧರಿಸಿದ ವಿಷ್ಣುವಿನಿಂದ ಪ್ರಬೋಧಗೊಂಡ ಅರ್ಜುನನು ಜೀವರ ಅವಿನಾಶಿ ಸ್ವರೂಪವನ್ನು ಚೆನ್ನಾಗಿ ತಿಳಿದು, ಜಗತ್ತನ್ನು ತನ್ನ ಶರೀರದಲ್ಲಿ ಧರಿಸಿದ ಕಾರಣದಿಂದ ಜಗದ್ರೂಪನಾದ ಕೃಷ್ಣನನ್ನು ತಿಳಿದು ಯುದ್ಧಕ್ಕೆ ಸನ್ನದ್ಧನಾದನು.
ತತೋ ಯುಧಿಷ್ಠಿರೋ ದೃಷ್ಟ್ವಾ ಯುದ್ಧಾಯ ಸುಸಮುದ್ಯತೇ |
ತೇ ಸೇನೇ ಸಾಗರಪ್ರಖ್ಯೇ ಮುಹುಃ ಪ್ರಚಲಿತೇ ನೃಪ ||7||

ವಿಮುಚ್ಯ ಕವಚಂ ವೀರೋ ನಿಕ್ಷಿಪ್ಯ ಚ ವರಾಯುಧಮ್ |
ಅವರುಹ್ಯ ರಥಾತ್ ತೂರ್ಣಂ ಪದ್ಭ್ಯಾಮೇವ ಕೃತಾಂಜಲಿಃ ||8||
ಪಿತಾಮಹಮಭಿಪ್ರೇಕ್ಷ್ಯ ಧರ್ಮರಾಜೋ ಯುಧಿಷ್ಠಿರಃ |
ವಾಗ್ಯತಃ ಪ್ರಯಯೌ ಯೇನ ಪ್ರಾಙ್ಮುಖೋ ರಿಪುವಾಹಿನೀಮ್ ||9||
ಎಲೈ ರಾಜನ್, ಆಗ ಯುಧಿಷ್ಠಿರನು ಯುದ್ಧಕ್ಕೆ ಸನ್ನದ್ಧನಾಗಿ ಪುನಃ ಮುಂದುವರಿಯುತ್ತಿದ್ದ ಸಾಗರ ಸದೃಶವಾದ ಆ ಎರಡು ಸೈನ್ಯಗಳನ್ನು ನೋಡಿ ವೀರನಾದ ಧರ್ಮರಾಜನಾದ ಯುಧಿಷ್ಠಿರನು ತನ್ನ ಕವಚವನ್ನು ಬಿಚ್ಚಿ, ಆಯುಧಗಳನ್ನು ಕೆಳಗಿಟ್ಟು, ರಥದಿಂದ ಇಳಿದು ಕೈಗಳನ್ನು ಮುಗಿದು, ಪಾದಗಳಿಂದಲೇ ನಡೆಯುತ್ತಾ ಪಿತಾಮಹರಾದ ಭೀಷ್ಮರನ್ನು ಉದ್ದೇಶಿಸಿ ಮೌನವಾಗಿ ಪೂರ್ವಾಭಿಮುಖವಾಗಿ ಶತ್ರುಸೈನ್ಯದ ಕಡೆಗೆ ನಡೆದನು.
ತಂ ಪ್ರಯಾಂತಮಭಿಪ್ರೇಕ್ಷ್ಯ ಕುಂತೀಪುತ್ರೋ ಧನಂಜಯಃ |
ಅವತೀರ್ಯ ರಥಾತ್ ತೂರ್ಣಂ ಭ್ರಾತೃಭಿಃ ಸಹಿತೋಽನ್ವಯಾತ್ ||
ವಾಸುದೇವಶ್ಚ ಭಗವಾನ್ ಪೃಷ್ಠತೋಽನುಜಗಾಮ ಹ |
ಯಥಾಮುಖ್ಯಾಶ್ಚ ರಾಜಾನಸ್ತಮನ್ವಾಜಗ್ಮುರುತ್ಸುಕಾಃ ||11||
ಹಾಗೆ ಹೊರಟ ಯುಧಿಷ್ಠಿರನನ್ನು ನೋಡಿ ಕುಂತೀಪುತ್ರನಾದ ಧನಂಜಯನು ಶೀಘ್ರವಾಗಿ ತನ್ನ ರಥದಿಂದ ಇಳಿದು ಸಹೋದರರ ಜೊತೆಯಲ್ಲಿ ಅವನನ್ನು ಹಿಂಬಾಲಿಸಿದನು. ಭಗವಂತನಾದ ವಾಸುದೇವನೂ ಅವನ ಹಿಂದೆ ಹೋದನು. ಪ್ರಧಾನರಾದ ರಾಜರೂ ಸಹ ಉತ್ಸುಕತೆಯಿಂದ ಅವನನ್ನು ಹಿಂಬಾಲಿಸಿದರು.
ಅರ್ಜುನಃ
ಕಿಂ ತೇ ವ್ಯವಸಿತಂ ರಾಜನ್ ಯದಸ್ಮಾನಪಹಾಯ ವೈ |
ಪದ್ಭ್ಯಾಮೇವ ಪ್ರಯಾತೋಽಸಿ ಪ್ರಾಙ್ಮುಖೋ ರಿಪುವಾಹಿನೀಮ್ ||
ಅರ್ಜುನ ರಾಜನ್, ನಿನ್ನ ಅಭಿಪ್ರಾಯವೇನು? ನಮ್ಮನ್ನು ಬಿಟ್ಟು ನಡೆದುಕೊಂಡೇ ಪೂರ್ವಾಭಿಮುಖವಾಗಿ ಶತ್ರುಸೈನ್ಯದ ಬಳಿಗೆ ಹೊರಟಿದ್ದೀಯೆ!
ಭೀಮಸೇನಃ
ಕ್ವ ಗಮಿಷ್ಯಸಿ ರಾಜೇಂದ್ರ ನಿಕ್ಷಿಪ್ತಕವಚಾಯುಧಃ |
ದಂಸಿತೇಷ್ವರಿಸೈನ್ಯೇಷು ಭ್ರಾತೄನುತ್ಸೃಜ್ಯ ಪಾರ್ಥಿವ ||13||
ಭೀಮಸೇನ ಎಲೈ ರಾಜೇಂದ್ರನೇ, ಪಾರ್ಥಿವನೇ, ಕವಚ ಮತ್ತು ಆಯುಧಗಳನ್ನು ತ್ಯಜಿಸಿ, ಸಹೋದರರನ್ನೂ ಬಿಟ್ಟು ಶತ್ರುಸೈನ್ಯಗಳು ಕವಚಾಯುಧಗಳಿಂದ ಸನ್ನದ್ಧವಾಗಿರುವಾಗ ಎಲ್ಲಿಗೆ ಹೋಗುವಿ?
ನಕುಲಃ
ಏವಂಗತೇ ತ್ವಯಿ ಜ್ಯೇಷ್ಠೇ ಮಮ ಭ್ರಾತರಿ ಭಾರತ |
ಭೀರ್ಮೇ ದುನೋತಿ ಹೃದಯಂ ಬ್ರೂಹಿ ಗಂತಾ ಭವಾನ್ ಕ್ವ ನು ||
ನಕುಲ ಎಲೈ ಭಾರತನೇ, ನನ್ನ ಹಿರಿಯಣ್ಣನಾದ ನೀನು ಹೀಗೆ ಮಾಡುತ್ತಿರಲು ನನ್ನ ಮನಸ್ಸನ್ನು ಭಯವು ಕಲಕುತ್ತಿದೆ. ನೀನು ಎಲ್ಲಿಗೆ ಹೊರಟಿರುವಿ ಎಂದು ಹೇಳು.
ಸಹದೇವಃ
ಅಸ್ಮಿನ್ ರಣಸಮೂಹೇ ವೈ ವರ್ತಮಾನೇ ಮಹಾಭಯೇ |
ಯೋದ್ಧವ್ಯೇ ಕ್ವ ನು ಗಂತಾಸಿ ಶತ್ರೂನಭಿಮುಖೋ ನೃಪ ||15||
ಸಹದೇವ ಮಹಾಭಯಂಕರವಾದ ಈ ಯುದ್ಧವು ಸನ್ನದ್ಧವಾಗಿರಲು ಯುದ್ಧವನ್ನು ಮಾಡಬೇಕಾದಾಗ ಶತ್ರುಗಳಿಗೆ ಅಭಿಮುಖವಾಗಿ ನೀನು ಎಲ್ಲಿಗೆ ಹೋಗುವಿ?
ಸಂಜಯಃ
ಏವಮಾಭಾಷ್ಯಮಾಣೋಽಪಿ ಭ್ರಾತೃಭಿಃ ಕುರುನಂದನ |
ನೋವಾಚ ವಾಗ್ಯತಃ ಕಿಂಚಿದ್ ಗಚ್ಛತ್ಯೇವ ಯುಧಿಷ್ಠಿರಃ ||16||
ಸಂಜಯ ಎಲೈ ಕುರುನಂದನನೇ, ಹೀಗೆ ಸಹೋದರರಿಂದ ಮಾತನಾಡಿಸಲ್ಪಟ್ಟರೂ ಯುಧಿಷ್ಠಿರನು ಏನನ್ನೂ ಮಾತನಾಡಲಿಲ್ಲ. ಮೌನವಾಗಿ ಮುಂದೆ ನಡೆದೇ ನಡೆದನು.
ತಾನುವಾಚ ಮಹಾಪ್ರಾಜ್ಞೋ ವಾಸುದೇವೋ ಮಹಾಮನಾಃ |
ಅಭಿಪ್ರಾಯೋಽಸ್ಯ ವಿಜ್ಞಾತೋ ಮಯೇತಿ ಪ್ರಹಸನ್ನಿವ ||17||
ಮಹಾಪ್ರಾಜ್ಞನೂ, ಧೈರ್ಯಶಾಲಿಯೂ ಆದ ಕೃಷ್ಣನು ಅವರನ್ನು ಕುರಿತು ನಗುವವನಂತೆ ಯುಧಿಷ್ಠಿರನ ಅಭಿಪ್ರಾಯವು ನನಗೆ ತಿಳಿದಿದೆ ಎಂದು ಹೇಳಿದನು.
ಏಷ ಭೀಷ್ಮಂ ತಥಾ ದ್ರೋಣಂ ಗೌತಮಂ ಶಲ್ಯಮೇವ ಚ |
ಅನುಮಾನ್ಯ ಗುರೂನ್ ಸರ್ವಾನ್ ಯೋತ್ಸ್ಯತೇ ಪಾರ್ಥಿವೋಽರಿಭಿಃ ||
ಈ ಯುಧಿಷ್ಠಿರ ರಾಜನು ಭೀಷ್ಮ-ದ್ರೋಣ-ಕೃಪ-ಶಲ್ಯ ಮತ್ತು ಎಲ್ಲಾ ಹಿರಿಯರ ಅನುಮತಿಯನ್ನು ಪಡೆದು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವನು.
ಶ್ರೂಯತೇ ಹಿ ಪುರಾಕಲ್ಪೇ ಗುರೂನನನುಮಾನ್ಯ ಯಃ |
ಯುಧ್ಯತೇ ಸ ಭವೇದ್ ವ್ಯಕ್ತಮಪಧ್ಯಾತೋ ಮಹತ್ತರೈಃ ||19||

ಯಾವನು ಗುರುಗಳ ಅನುಮತಿಯನ್ನು ಪಡೆಯದೆ ಯುದ್ಧವನ್ನು ಮಾಡುತ್ತಾನೆಯೋ ಅವನು ಮಹಾನುಭಾವರಾದ ಅವರಿಂದ ಸ್ಪಷ್ಟವಾಗಿ ಶಾಪಕ್ಕೆ ಒಳಗಾಗುತ್ತಾನೆಂದು ನಾವು ಹಿಂದಿನ ಕಾಲದ ಘಟನೆಗಳನ್ನು ಕೇಳಿದ್ದೇವೆ.
ಅನುಮಾನ್ಯ ಯಥಾಶಾಸ್ತ್ರಂ ಯಸ್ತು ಯುಧ್ಯೇನ್ಮಹತ್ತರೈಃ |
ಧ್ರುವಸ್ತಸ್ಯ ಜಯೋ ಯುದ್ಧೇ ಭವೇದಿತಿ ಮತಿರ್ಮಮ ॥20॥
ಹಿರಿಯರ ಅನುಮತಿಯನ್ನು ಶಾಸ್ತ್ರೋಕ್ತವಾಗಿ ಪಡೆದು ಆ ಮಹಾನುಭಾವರ ಜೊತೆಯಲ್ಲಿ ಯುದ್ಧವನ್ನು ಮಾಡಿದರೂ ಅವನಿಗೆ ಯುದ್ಧದಲ್ಲಿ ಖಂಡಿತವಾಗಿ ಜಯವಾಗುತ್ತದೆ ಎಂದು ನನ್ನ ಅಭಿಪ್ರಾಯ.
ಏವಂ ಬ್ರುವತಿ ಕೃಷ್ಣೇ ತು ಧಾರ್ತರಾಷ್ಟ್ರಚಮೂಂ ಪ್ರತಿ |
ಹಾಹಾಕಾರೋ ಮಹಾನಾಸೀನ್ನಿಃಶಬ್ದಾಸ್ತ್ವಪರೇಽಭವನ್ ॥21॥
ಕೃಷ್ಣನು ಹೀಗೆ ಹೇಳುತ್ತಿರಲು ದುರ್ಯೋಧನನ ಸೈನ್ಯದಲ್ಲಿ ದೊಡ್ಡ ಹಾಹಾಕಾರ ಉಂಟಾಯಿತು. ಪಾಂಡವ ಯೋಧರು ನಿಶ್ಶಬ್ದರಾದರು.
ದೃಷ್ಟ್ವಾ ಯುಧಿಷ್ಠಿರಂ ದೂರಾದ್ ಧಾರ್ತರಾಷ್ಟ್ರಸ್ಯ ಸೈನಿಕಾಃ |
ಮಿಥಃ ಸಂಕಥಯಾಂಚಕ್ರುರ್ನೈಷೋಽಸ್ತಿ ಕುಲಪಾಂಸನಃ ॥22॥
ಯುಧಿಷ್ಠಿರನನ್ನು ನೋಡಿದ ದುರ್ಯೋಧನನ ಸೈನಿಕರು ಕುಲಪಾಂಸನನಾದ ಇವನು ಅಯೋಗ್ಯನಾದವನು ಎಂದು ಪರಸ್ಪರವಾಗಿ ಮಾತನಾಡಿಕೊಂಡರು.
ವ್ಯಕ್ತಂ ಭೀತ ಇವಾಭ್ಯೇತಿ ರಾಜಾಽಸೌ ಭೀಷ್ಮಮಂತಿಕಾತ್ |
ಯುಧಿಷ್ಠಿರಃ ಸಸೋದರ್ಯಃ ಶರಣಾರ್ಥಂ ಪ್ರಯಾಚಕಃ ॥23॥
ಯುಧಿಷ್ಠಿರನು ತನ್ನ ತಮ್ಮಂದಿರೊಡನೆ ಸ್ಪಷ್ಟವಾಗಿ ಭೀತನಾಗಿ ರಕ್ಷಣೆಯನ್ನು ಬೇಡುವುದಕ್ಕಾಗಿ ಭೀಷ್ಮರ ಬಳಿಗೆ ಬರುತ್ತಿದ್ದಾನೆ.
ಧನಂಜಯೇ ಕಥಂ ನಾಥೇ ಪಾಂಡವೇ ಚ ವೃಕೋದರೇ |
ನಕುಲೇ ಸಹದೇವೇ ಚ ಭೀತೋಽಭ್ಯೇತಿ ಚ ಪಾಂಡವಃ ॥24॥
ಅರ್ಜುನನೂ ಮತ್ತು ಪಾಂಡುಪುತ್ರನಾದ ವೃಕೋದರನು ನಾಥರಾಗಿರುವಾಗ, ನಕುಲ-ಸಹದೇವರೂ ನಾಥರಾಗಿರುವಾಗ ಪಾಂಡವನಾದ ಯುಧಿಷ್ಠಿರನು ಹೇಗೆ ಭೀತನಾಗಿ ಬರುತ್ತಿದ್ದಾನೆ?
ನ ನೂನಂ ಕ್ಷತ್ರಿಯಕುಲೇ ಜಾತಃ ಸಂಪ್ರಥಿತೇ ಭುವಿ |
ಯಥಾಸ್ಯ ಹೃದಯಂ ಭೀತಮಲ್ಪಸತ್ತ್ವಸ್ಯ ಸಂಯುಗೇ ॥25॥
ಯುದ್ಧದಲ್ಲಿ ಅಲ್ಪಧೈರ್ಯವುಳ್ಳ ಇವನ ಹೃದಯವು ಭಯಗ್ರಸ್ತನಾಗಿರುವುದನ್ನು ನೋಡಿದರೆ ಇವನು ಭೂಮಿಯಲ್ಲಿ ಪ್ರಸಿದ್ಧವಾದ ಕ್ಷತ್ರಿಯ ಕುಲದಲ್ಲಿ ಜನಿಸಿಲ್ಲವೆಂದು ತೋರುತ್ತದೆ (ಎಂದು ಮಾತನಾಡಿಕೊಂಡರು).
ತತಸ್ತೇ ಕ್ಷತ್ರಿಯಾಃ ಸರ್ವೇ ಪ್ರಶಂಸಂತಿ ಸ್ಮ ಕೌರವಾನ್ |
ಹೃಷ್ಟಾಃ ಸುಮನಸೋ ಭೂತ್ವಾ ಚೈಲಾನಿ ದುಧುವುಃ ಪೃಥಕ್ ॥26॥
ಆಗ ಆ ಕ್ಷತ್ರಿಯರೆಲ್ಲರೂ ಕೌರವರನ್ನು ಹೊಗಳಿದರು. ಸಂತೋಷಗೊಂಡು ಪ್ರಸನ್ನ ಮನಸ್ಕರಾಗಿ ತಮ್ಮ ವಸ್ತ್ರಗಳನ್ನು ಬೇರೆ ಬೇರೆಯಾಗಿ ಹಾರಿಸಿದರು.
ವ್ಯನಿಂದಂತ ತತಃ ಸರ್ವೇ ಯೋಧಾಸ್ತತ್ರ ವಿಶಾಂಪತೇ |
ಯುಧಿಷ್ಠಿರಂ ಸಸೋದರ್ಯಂ ಸಹಿತಂ ಕೇಶವೇನ ಹ ॥27॥
ಆಗ ಎಲೈ ರಾಜನೇ, ಅಲ್ಲಿದ್ದ ಎಲ್ಲ ಯೋಧರೂ, ಸೋದರರಿಂದ ಮತ್ತು ಕೃಷ್ಣನಿಂದ ಸಹಿತರಾದ ಯುಧಿಷ್ಠಿರನನ್ನು ನಿಂದಿಸಿದರು.
ತತಸ್ತತ್ ಕೌರವಂ ಸೈನ್ಯಂ ಧಿಕ್ಕೃತ್ವಾ ತು ಯುಧಿಷ್ಠಿರಮ್ |
ನಿಃಶಬ್ದಮಭವತ್ ತೂರ್ಣಂ ಪುನರೇವ ವಿಶಾಂಪತೇ ॥28॥
ಎಲೈ ರಾಜನೇ, ಆಗ ಆ ಕೌರವ ಸೈನ್ಯವು ಯುಧಿಷ್ಠಿರನನ್ನು ಧಿಕ್ಕರಿಸಿ ಪುನಃ ಬೇಗ ನಿಶ್ಶಬ್ದವಾಯಿತು.
ಕಿಂ ನು ವಕ್ಷ್ಯತಿ ರಾಜಾಽಸೌ ಕಿಂ ಭೀಷ್ಮಃ ಪ್ರತಿವಕ್ಷ್ಯತಿ |
ಕಿಂ ಭೀಮಃ ಸಮರಶ್ಲಾಘೀ ಕಿಂ ನು ಕೃಷ್ಣಾರ್ಜುನಾವಿತಿ ॥29॥
ವಿವಕ್ಷಿತಂ ಕಿಮಸ್ಯೇತಿ ಸಂಶಯಃ ಸುಮಹಾನಭೂತ್ |
ಉಭಯೋಃ ಸೇನಯೋ ರಾಜನ್ ಯುಧಿಷ್ಠಿರಕೃತೇ ತದಾ ॥30॥
ಎಲೈ ರಾಜನೇ, ಈ ರಾಜನು ಏನು ಹೇಳುವನು? ಭೀಷ್ಮರು ಏನು ಉತ್ತರವನ್ನು ಕೊಡುವರು? ಸಮರಶ್ಲಾಘಿಯಾದ ಭೀಮನಾಗಲೀ, ಕೃಷ್ಣಾರ್ಜುನರಾಗಲೀ ಏನು ಮಾಡುವರು? ಇವನು ಏನು ಮಾತನಾಡುವ ಅಭಿಪ್ರಾಯವನ್ನು ಹೊಂದಿದ್ದಾನೆ ಎಂದು ಉಭಯ ಸೈನ್ಯಗಳಿಗೂ ಯುಧಿಷ್ಠಿರನ ವಿಷಯದಲ್ಲಿ ದೊಡ್ಡ ಸಂಶಯವುಂಟಾಯಿತು.
ಸ ವಿಗಾಹ್ಯ ಚಮೂಂ ಶತ್ರೋಃ ಶರಶಕ್ತಿಸಮಾಕುಲಾಮ್ |
ಭೀಷ್ಮಮೇವಾಭ್ಯಯಾತ್ ತೂರ್ಣಂ ಭ್ರಾತೃಭಿಃ ಪರಿವಾರಿತಃ ॥31॥
ಆ ಯುಧಿಷ್ಠಿರನಾದರೂ ಶಕ್ತಿ, ಬಾಣಗಳಿಂದ ತುಂಬಿದ್ದ ಶತ್ರುಸೈನ್ಯವನ್ನು ಪ್ರವೇಶಿಸಿ ಭ್ರಾತೃಗಳಿಂದ ಸಹಿತನಾಗಿ ಶೀಘ್ರವಾಗಿ ಭೀಷ್ಮರ ಕಡೆಗೇ ಬಂದನು.
ತಮುವಾಚ ತತಃ ಪಾದೌ ಕರಾಭ್ಯಾಂ ಪೀಡ್ಯ ಪಾಂಡವಃ |
ಭೀಷ್ಮಂ ಶಾಂತನವಂ ರಾಜಾ ಯುದ್ಧಾಯ ಸಮುಪಸ್ಥಿತಮ್ ॥32॥
ಯುದ್ಧಕ್ಕೆ ಸನ್ನದ್ಧರಾದ ಶಂತನು ಪುತ್ರರಾದ ಭೀಷ್ಮರ ಪಾದಗಳನ್ನು ತನ್ನ ಕೈಗಳಿಂದ ಒತ್ತಿ ಪಾಂಡವನಾದ ಧರ್ಮರಾಜನು ಅವರನ್ನು ಕುರಿತು ಮಾತನಾಡಿದನು.

ಯುಧಿಷ್ಠಿರಃ
ಆಮಂತ್ರಯೇ ತ್ವಾಂ ದುರ್ಧರ್ಷ ಯೋತ್ಸ್ಯೇ ತಾತ ತ್ವಯಾ ಸಹ |
ಅನುಜಾನೀಹಿ ಮಾಂ ತಾತ ಆಶಿಷಶ್ಚ ಪ್ರಯೋಜಯ ||33||
ಯುಧಿಷ್ಠಿರ ಎಲೈ ಸೋಲಿಸಲು ಅಸಾಧ್ಯನಾದವನೇ, ನಿನ್ನ ಅನುಮತಿಯನ್ನು ಬೇಡುತ್ತೇನೆ. ತಾತನೇ, ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ನನಗೆ ಅನುಮತಿಯನ್ನು ಕೊಡು ಮತ್ತು ಆಶೀರ್ವಾದವನ್ನು ಮಾಡು.
ಭೀಷ್ಮಃ
ಯದ್ಯೇವಂ ನಾಭಿಗಚ್ಛೇಥಾ ಯುಧಿ ಮಾಂ ಪೃಥಿವೀಪತೇ |
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಭಾರತ ||34||
ಭೀಷ್ಮ ಎಲೈ ಮಹಾರಾಜನೇ, ಭಾರತನೇ, ಯುದ್ಧದಲ್ಲಿ ಹೀಗೆ ನನ್ನ ಬಳಿಗೆ ಬರದಿದ್ದರೆ ನಿನಗೆ ಪರಾಭವ ಉಂಟಾಗಲೆಂದು ನಾನು ಶಾಪವನ್ನು ಕೊಡುತ್ತಿದ್ದೆ.
ಪ್ರೀತೋಽಸ್ಮಿ ಪುತ್ರ ಯುಧ್ಯಸ್ವ ಜಯಮಾಪ್ನುಹಿ ಪಾಂಡವ |
ಯತ್ ತೇಽಭಿಲಷಿತಂ ಚಾನ್ಯತ್ ತದವಾಪ್ನುಹಿ ಸಂಯುಗೇ ||35||
ಪುತ್ರನೇ, ನಾನು ಪ್ರಸನ್ನನಾಗಿದ್ದೇನೆ. ಪಾಂಡವನೇ, ಜಯವನ್ನು ಹೊಂದು. ಯುದ್ಧದಲ್ಲಿ ನೀನು ಬೇರೆ ಏನನ್ನು ಅಪೇಕ್ಷಿಸುತ್ತೀಯೋ ಅದನ್ನೂ ಪಡೆಯುವವನಾಗು.
ವ್ರಿಯತಾಂ ಚ ವರಃ ಪಾರ್ಥ ಕಿಮಸ್ಮತ್ತೋಽಭಿಕಾಂಕ್ಷಸಿ |
ಏವಂ ಗತೇ ಮಹಾರಾಜ ನ ತವಾಸ್ತಿ ಪರಾಜಯಃ ||36||
ಎಲೈ ಪಾರ್ಥನೇ, ನನ್ನಿಂದ ನಿನಗೆ ಅಭಿಮತವಾದ ವರವನ್ನು ಕೇಳು. ಮಹಾರಾಜನೇ, ನಿನ್ನ ನಡತೆಯು ಹೀಗಿರುವಾಗ ನಿನಗೆ ಪರಾಜಯವಿಲ್ಲ.
ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ |
ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ||37||
ಅತಸ್ತ್ವಾಂ ಕ್ಲೀಬವದ್ ವಾಕ್ಯಂ ಬ್ರವೀಮಿ ಕುರುನಂದನ |
ಹೃತೋಽಸ್ಮ್ಯರ್ಥೇನ ಕೌರವ್ಯ ಯುದ್ಧಾದನ್ಯತ್ ಕಿಮಿಚ್ಛಸಿ ||38||
ಅರ್ಥಕ್ಕೆ ಪುರುಷನು ದಾಸನಾಗುತ್ತಾನೆ. ಅರ್ಥವು ಯಾರಿಗೂ ದಾಸನಾಗುವುದಿಲ್ಲ. ಮಹಾರಾಜನೇ, ಇದು ಸತ್ಯವಾದ ಮಾತು. ನಾನು ಕೌರವರಿಂದ ಅರ್ಥದ ನಿಮಿತ್ತದಿಂದಾಗಿ ಬದ್ಧನಾಗಿದ್ದೇನೆ. ಎಲೈ ಕುರುನಂದನನೇ, ಆದ್ದರಿಂದ ನಪುಂಸಕನಂತೆ ನಿನ್ನನ್ನು ಕುರಿತು ಮಾತನಾಡುತ್ತಿದ್ದೇನೆ. ಕೌರವ್ಯನೇ, ಅರ್ಥದಿಂದ ನಾನು ಅಪಹರಿಸಲ್ಪಟ್ಟಿದ್ದೇನೆ. ಯುದ್ಧವನ್ನು ಬಿಟ್ಟು (ನಮ್ಮ ಪರವಾಗಿ ಯುದ್ಧವನ್ನು ಮಾಡು ಎಂಬ ಬೇಡಿಕೆಯನ್ನು ಬಿಟ್ಟು) ಬೇರೆ ಏನನ್ನು ಬಯಸುತ್ತೀಯೆ?
ಯುಧಿಷ್ಠಿರಃ
ಮಂತ್ರಯಸ್ವ ಮಹಾಪ್ರಾಜ್ಞ ಹಿತೈಷೀ ಮಮ ನಿತ್ಯಶಃ |
ಯುಧ್ಯಸ್ವ ಕೌರವಸ್ಯಾರ್ಥೇ ಮಮೈಷ ಸತತಂ ವರಃ ||39||
ಯುಧಿಷ್ಠಿರ ಮಹಾಪ್ರಾಜ್ಞನೇ, ನಿತ್ಯವೂ ನನಗೆ ಹಿತೈಷಿಯಾಗಿದ್ದು ನನಗೆ ಶುಭಾಶಂಸನೆಯನ್ನು ಮಾಡು, ಕೌರವರ ಸಲುವಾಗಿ ಯುದ್ಧವನ್ನು ಮಾಡು. ಇದೇ ನಾನು ಬೇಡುವ ವರ.
ಭೀಷ್ಮಃ
ರಾಜನ್ ಕಿಮತ್ರ ಸಾಹ್ಯಂ ತೇ ಕರೋಮಿ ಕುರುನಂದನ |
ಕಾಮಂ ಯೋತ್ಸ್ಯೇ ಪರಸ್ಯಾರ್ಥೇ ಬ್ರೂಹಿ ಯತ್ ತೇ ವಿವಕ್ಷಿತಮ್ ||
ಭೀಷ್ಮ ರಾಜನೇ, ಕುರುನಂದನನೇ, ನಾನು ಕೌರವರ ಸಲುವಾಗಿ ಅವಶ್ಯವಾಗಿ ಯುದ್ಧವನ್ನು ಮಾಡುವೆನು. ನಿನ್ನ ಮನಸ್ಸಿನಲ್ಲಿ ಏನಿದೆ ಎಂದು ಹೇಳು. ನಾನು ನಿನಗೆ ಯಾವ ಸಹಾಯವನ್ನು ಮಾಡಲಿ?
ಯುಧಿಷ್ಠಿರಃ
ಕಥಂ ಜಯೇಯಂ ಸಂಗ್ರಾಮೇ ಭವಂತಮಪರಾಜಿತಮ್ |
ಏತನ್ಮೇ ಮಂತ್ರಯ ಹಿತಂ ಯದಿ ಶ್ರೇಯಃ ಪ್ರಪಶ್ಯಸಿ ||41||
ಯುಧಿಷ್ಠಿರ ಎಂದೂ ಪರಾಜಯವನ್ನು ಹೊಂದದ ನಿಮ್ಮನ್ನು ನಾನು ಯುದ್ಧದಲ್ಲಿ ಹೇಗೆ ಜಯಿಸಿಯೇನು? ನನ್ನ ಶ್ರೇಯಸ್ಸನ್ನು ಬಯಸುವುದಾದರೆ ನನಗೆ ಇದನ್ನು ಹೇಳಿ.
ಭೀಷ್ಮಃ
ನ ತಂ ಪಶ್ಯಾಮಿ ಕೌಂತೇಯ ಯೋ ಮಾಂ ಯುಧ್ಯಂತಮಾಹವೇ |
ವಿಜಯೇತ ಪುಮಾನ್ ಕಶ್ಚಿದಪಿ ಸಾಕ್ಷಾಚ್ಛತಕ್ರತುಃ ||42||
ಭೀಷ್ಮ ಎಲೈ ಕೌಂತೇಯನೇ, ನಾನು ರಣರಂಗದಲ್ಲಿ ಯುದ್ಧವನ್ನು ಮಾಡುವಾಗ ಸಾಕ್ಷಾತ್ ಇಂದ್ರನೇ ಆದರೂ ನನ್ನನ್ನು ಜಯಿಸುವ ಯಾವ ಶತ್ರುವೂ ನನಗೆ ಕಾಣುವುದಿಲ್ಲ.
ಯುಧಿಷ್ಠಿರ
ಹಂತ ಪೃಚ್ಛಾಮಿ ತಸ್ಮಾತ್ ತ್ವಾಂ ಪಿತಾಮಹ ನಮೋಽಸ್ತು ತೇ |
ಜಯೋಪಾಯಂ ಬ್ರವೀಹಿ ತ್ವಮಾತ್ಮನಃ ಸಮರೇ ಪರೈಃ ||43||
ಯುಧಿಷ್ಠಿರ ಸಂತೋಷ. ಆದ್ದರಿಂದಲೇ ನಿನ್ನನ್ನು ಕೇಳುತ್ತಿದ್ದೇನೆ. ಪಿತಾಮಹರೇ, ನಿಮಗೆ ನಮಸ್ಕಾರ. ಯುದ್ಧದಲ್ಲಿ ಶತ್ರುಗಳು

ನಿಮ್ಮನ್ನು ಜಯಿಸುವ ಉಪಾಯವನ್ನು ಹೇಳಿ.
ಭೀಷ್ಮಃ
ನ ಶತ್ರುಂ ತಾತ ಪಶ್ಯಾಮಿ ಸಮರೇ ಯೋ ಜಯೇತ ಮಾಮ್ |
ನ ತಾವನ್ಮೃತ್ಯುಕಾಲೋ ಮೇ ಪುನರಾಗಮನಂ ಕುರು ॥44॥
ಭೀಷ್ಮ ಪ್ರೀತಿಪಾತ್ರನೇ, ಯುದ್ಧದಲ್ಲಿ ನನ್ನನ್ನು ಗೆಲ್ಲುವ ಯಾವ ಶತ್ರುವನ್ನೂ ನಾನು ಕಾಣುವುದಿಲ್ಲ. ಈಗಂತೂ ನನ್ನ ಮೃತ್ಯುಕಾಲವಿಲ್ಲ, ಪುನಃ ನನ್ನ ಬಳಿಗೆ ಬಾ.
ಸಂಜಯಃ
ತತೋ ಯುಧಿಷ್ಠಿರೋ ವಾಕ್ಯಂ ಭೀಷ್ಮಸ್ಯ ಕುರುನಂದನ |
ಶಿರಸಾ ಪ್ರತಿಜಗ್ರಾಹ ಭೂಯಸ್ತಮಭಿವಾದ್ಯ ಚ ॥45॥
ಪ್ರಾಯಾತ್ ಪುನರ್ಮಹಾಬಾಹುರಾಚಾರ್ಯಸ್ಯ ರಥಂ ಪ್ರತಿ |
ಪಶ್ಯತಾಂ ಸರ್ವಸೈನ್ಯಾನಾಂ ಮಧ್ಯೇನ ಭ್ರಾತೃಭಿಃ ಸಹ ॥46॥
ಸಂಜಯ ಎಲೈ ಕುರುನಂದನನೇ, ಆಗ ಯುಧಿಷ್ಠಿರನು ಭೀಷ್ಮರ ವಾಕ್ಯವನ್ನು ಶಿರಸಾ ಧರಿಸಿ ಪುನಃ ಅವರಿಗೆ ನಮಸ್ಕಾರ ಮಾಡಿ ಎಲ್ಲ ಸೈನ್ಯವು ನೋಡುತ್ತಿರುವಂತೆಯೇ ಆ ಸೈನ್ಯದ ಮಧ್ಯದಿಂದ ಸಹೋದರಸಹಿತನಾಗಿ ಮಹಾಬಾಹುವಾದ ಅವನು ಆಚಾರ್ಯರಾದ ದ್ರೋಣರ ರಥದ ಕಡೆಗೆ ನಡೆದನು.
ಸ ದ್ರೋಣಮಭಿವಾದ್ಯಾಥ ಕೃತ್ವಾ ಚೈವ ಪ್ರದಕ್ಷಿಣಮ್ |
ಉವಾಚ ವಾಚಾ ದುರ್ಧರ್ಷಮಾತ್ಮನಿಶ್ರೇಯಸಂ ವಚಃ ॥47॥
ಅವನು ದ್ರೋಣರಿಗೆ ಪ್ರದಕ್ಷಿಣೆಯನ್ನು ಮಾಡಿ, ನಮಸ್ಕಾರವನ್ನು ಮಾಡಿ, ಸೋಲಿಸಲು ಅಸಾಧ್ಯರಾದ ಅವರನ್ನು ಕುರಿತು ತನಗೆ ಶ್ರೇಯಸ್ಸುಂಟಾಗುವ ಮಾತುಗಳನ್ನು ಅವರ ಬಳಿ ಆಡಿದನು.
ಆಮಂತ್ರಯೇ ತ್ವಾಂ ಭಗವನ್ ಯೋತ್ಸ್ಯೇ ವಿಗತಕಲ್ಮಷಃ |
ಜಯೇಯಂ ಚ ರಿಪೂನ್ ಸರ್ವಾನನುಜ್ಞಾತಸ್ತ್ವಯಾ ದ್ವಿಜ ॥48॥
ಪೂಜ್ಯರೇ, ನಾನು ಯಾವ ದೋಷವೂ ಇಲ್ಲದವನಾಗಿ ನಿಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಎಲೈ ಬ್ರಾಹ್ಮಣರೇ, ನಿಮ್ಮ ಅನುಜ್ಞೆಯನ್ನು ಪಡೆದು ನಾನು ಎಲ್ಲ ಶತ್ರುಗಳನ್ನೂ ಗೆದ್ದೇನು!
ದ್ರೋಣಃ
ಯದಿ ಮಾಂ ನಾಭಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ |
ಶಪೇಯಂ ತ್ವಾಂ ಮಹಾರಾಜ ಪರಾಭವಾಯ ಸರ್ವಶಃ ॥49॥
ದ್ರೋಣ ಎಲೈ ಮಹಾರಾಜನೇ, ಯುದ್ಧವನ್ನು ನಿಶ್ಚಯಿಸಿ ನೀನು ನನ್ನ ಬಳಿಗೆ ಬರದಿದ್ದರೆ ನಿನಗೆ ಸರ್ವರೀತಿಯಲ್ಲಿಯೂ ಪರಾಭವ ಉಂಟಾಗಲೆಂದು ನಾನು ಶಾಪವನ್ನು ಕೊಡುತ್ತಿದ್ದೆ.
ತದ್ ಯುಧಿಷ್ಠಿರ ತುಷ್ಟೋಽಸ್ಮಿ ಪೂಜಿತಶ್ಚ ತ್ವಯಾನಘ |
ಅನುಜಾನಾಮಿ ಯುಧ್ಯಸ್ವ ವಿಜಯಂ ಸಮವಾಪ್ನುಹಿ ॥50॥
ಆದ್ದರಿಂದ ಯುಧಿಷ್ಠಿರನೇ, ಅನಘನೇ, ನಾನು ನಿನ್ನ ನಡತೆಯಿಂದ ಸಂತುಷ್ಟನಾಗಿದ್ದೇನೆ. ನಿನ್ನಿಂದ ಪೂಜಿತನಾಗಿದ್ದೇನೆ. ನಿನಗೆ ಅನುಮತಿಯನ್ನು ಕೊಡುತ್ತಿದ್ದೇನೆ. ಯುದ್ಧವನ್ನು ಮಾಡಿ ವಿಜಯವನ್ನು ಹೊಂದು.
ಕರವಾಣಿ ಚ ತೇ ಕಾಮಂ ಬ್ರೂಹಿ ಯತ್ ತೇಽಭಿಕಾಂಕ್ಷಿತಮ್ |
ಏವಂ ಗತೇ ಮಹಾರಾಜ ಯುದ್ಧಾದನ್ಯತ್ ಕಿಮಿಚ್ಛಸಿ ॥51॥
ನಿನ್ನ ಮನಸ್ಸಿನಲ್ಲಿ ಏನಿದೆ ಎಂದು ಹೇಳು. ನಿನ್ನ ಆಸೆಯನ್ನು ನಾನು ನೆರವೇರಿಸುವೆನು. ಮಹಾರಾಜನೇ, ಇಂತಹ ಪರಿಸ್ಥಿತಿ ಇರುವಾಗ ಯುದ್ಧವನ್ನು ಬಿಟ್ಟು ಬೇರೆ ಏನನ್ನು ಬಯಸುವಿ?
ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ |
ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥52॥
ಅತಸ್ತ್ವಾಂ ಕ್ಲೀಬವದ್ ಬ್ರೂಮೋ ಯುದ್ಧಾದನ್ಯತ್ ಕಿಮಿಚ್ಛಸಿ |
ಯೋತ್ಸ್ಯಾಮಿ ಕೌರವಸ್ಯಾರ್ಥೇ ತವಾಶಾಸ್ಯೋ ಜಯೋ ಮಯಾ ॥53॥
ಅರ್ಥಕ್ಕೆ ಪುರುಷನು ದಾಸನಾಗುತ್ತಾನೆ, ಅರ್ಥವು ಯಾರಿಗೂ ದಾಸನಾಗುವುದಿಲ್ಲ. ಮಹಾರಾಜನೇ, ಇದು ಸತ್ಯವಾದ ಮಾತು. ಅರ್ಥದ ನಿಮಿತ್ತದಿಂದಾಗಿ ಕೌರವರಿಂದ ಬದ್ಧನಾಗಿದ್ದೇನೆ. ಆದ್ದರಿಂದ ನಾವು ಯುದ್ಧವನ್ನು ಬಿಟ್ಟು ಬೇರೆ ಏನನ್ನು ಬಯಸುತ್ತೀಯೆ ಎಂದು ನಪುಂಸಕರಂತೆ ಕೇಳುತ್ತಿದ್ದೇವೆ. ನಾನು ಕೌರವರ ಸಲುವಾಗಿ ಯುದ್ಧವನ್ನು ಮಾಡುವೆನು. ನಿನಗೆ ಜಯವನ್ನು ಬಯಸುವೆನು.
ಯುಧಿಷ್ಠಿರಃ
ಜಯಮಾಶಾಸ್ಸ್ವ ಮೇ ಬ್ರಹ್ಮನ್ ಮಂತ್ರಯಸ್ವ ಚ ಮದ್ಧಿತಮ್ |
ಯುಧ್ಯಸ್ವ ಕೌರವಸ್ಯಾರ್ಥೇ ವರ ಏಷ ವೃತೋ ಮಯಾ ॥54॥
ಯುಧಿಷ್ಠಿರ ಬ್ರಾಹ್ಮಣರೇ, ನನಗೆ ಜಯದ ಆಶೀರ್ವಾದವನ್ನು ಮಾಡಿ. ನನ್ನ ಹಿತವನ್ನು ಆಲೋಚನೆ ಮಾಡುವವರಾಗಿ, ಕೌರವರ ಸಲುವಾಗಿ ಯುದ್ಧವನ್ನು ಮಾಡಿ. ಇದೇ ನಾನು ಬೇಡುವ ವರ.
ದ್ರೋಣಃ
ಧ್ರುವಸ್ತೇ ವಿಜಯೋ ರಾಜನ್ ಯಸ್ಯ ಮಂತ್ರೀ ಹರಿಸ್ತವ |
ಅಹಂ ಚ ತ್ವಾಭಿಜಾನಾಮಿ ರಣೇ ಶತ್ರೂನ್ ವಿಜೇಷ್ಯಸಿ ॥55॥

ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ |
ಯುಧ್ಯಸ್ವ ಗಚ್ಛ ಕೌಂತೇಯ ಪೃಚ್ಛ ಮಾಂ ಕಿಂ ಬ್ರವೀಮಿ ತೇ ॥56॥
ದ್ರೋಣ ರಾಜನೇ, ಯಾವ ನಿನಗೆ ಹರಿಯು ಮಂತ್ರಿಯಾಗಿದ್ದಾನೆಯೋ, ಅಂತಹ ನಿನಗೆ ಜಯವು ನಿಶ್ಚಿತವಾದುದು. ನಾನೂ ನಿನಗೆ ಅನುಮತಿಯನ್ನು ಕೊಡುತ್ತಿದ್ದೇನೆ. ನೀನು ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವಿ. ಎಲ್ಲಿ ಧರ್ಮವಿದೆಯೋ ಅಲ್ಲಿ ಕೃಷ್ಣನಿದ್ದಾನೆ. ಎಲ್ಲಿ ಕೃಷ್ಣನಿದ್ದಾನೆಯೋ ಅಲ್ಲಿ ಜಯವಿದೆ. ಕೌಂತೇಯನೇ, ಹೋಗಿ ಯುದ್ಧವನ್ನು ಮಾಡು. ಬೇರೆ ಏನಾದರೂ ಕೇಳುವುದಿದ್ದರೆ ಕೇಳು, ನಿನಗೆ ಏನು ಹೇಳಲಿ?
ಯುಧಿಷ್ಠಿರಃ
ಪೃಚ್ಛಾಮಿ ತ್ವಾಂ ದ್ವಿಜಶ್ರೇಷ್ಠ ಶೃಣು ಮೇ ಯದ್ ವಿವಕ್ಷಿತಮ್ |
ಕಥಂ ಜಯೇಯಂ ಸಂಗ್ರಾಮೇ ಭವಂತಮಪರಾಜಿತಮ್ ॥57॥
ಯುಧಿಷ್ಠಿರ ಎಲೈ ಬ್ರಾಹ್ಮಣ ಶ್ರೇಷ್ಠರೇ, ನಿಮ್ಮನ್ನು ಕೇಳುತ್ತೇನೆ, ನನ್ನ ಅಭಿಪ್ರಾಯವು ಏನಿದೆ ಎಂದು ಕೇಳಿ. ಯುದ್ಧದಲ್ಲಿ ಎಂದೂ ಪರಾಜಯವನ್ನು ಹೊಂದದ ನಿಮ್ಮನ್ನು ನಾನು ಹೇಗೆ ಗೆದ್ದೇನು?
ದ್ರೋಣಃ
ನ ತೇಽಸ್ತಿ ವಿಜಯಸ್ತಾವದ್ ಯಾವದ್ ಯುಧ್ಯಾಮ್ಯಹಂ ರಣೇ |
ಮಮಾಶು ನಿಧನೇ ರಾಜನ್ ಯತಸ್ವ ಸಹ ಸೋದರ್ಯೈಃ ॥58॥
ದ್ರೋಣ ಎಲೈ ರಾಜನೇ, ನಾನು ಯುದ್ಧ ಮಾಡುವ ತನಕ ನಿನಗೆ ಜಯ ಉಂಟಾಗುವುದಿಲ್ಲ. ನೀನು ತಮ್ಮಂದಿರ ಜೊತೆಯಲ್ಲಿ ಬೇಗ ನನ್ನನ್ನು ವಧೆಯನ್ನು ಮಾಡಲು ಪ್ರಯತ್ನವನ್ನು ಪಡು.
ಯುಧಿಷ್ಠಿರಃ
ಹಂತ ತಸ್ಮಾನ್ಮಹಾಬಾಹೋ ವಧೋಪಾಯಂ ವದಾತ್ಮನಃ |
ಆಚಾರ್ಯ ಪ್ರಣಿಪತ್ಯೈಷ ಪೃಚ್ಛಾಮಿ ತ್ವಾಂ ನಮೋಽಸ್ತು ತೇ ॥59॥
ಯುಧಿಷ್ಠಿರ ಸಂತೋಷ. ಆದ್ದರಿಂದಲೇ ಮಹಾಬಾಹುಗಳೇ, ನಿಮ್ಮ ವಧೋಪಾಯವನ್ನು ಕೇಳುತ್ತಿದ್ದೇನೆ. ಆಚಾರ್ಯರೇ, ನಿಮಗೆ ನಮಸ್ಕಾರವನ್ನು ಮಾಡಿ ಕೇಳುತ್ತಿದ್ದೇನೆ, ಪುನಃ ನಿಮಗೆ ನಮಸ್ಕಾರಗಳು.
ದ್ರೋಣಃ
ನ ಶತ್ರುಂ ತಾತ ಪಶ್ಯಾಮಿ ಯೋ ಮಾಂ ಹನ್ಯಾದ್ ರಣೇ ಸ್ಥಿತಮ್ |
ಯುಧ್ಯಮಾನಂ ಸುಸಂರಬ್ಧಂ ಶರವರ್ಷೌಘವರ್ಷಿಣಮ್ ॥60॥
ಋತೇ ಪ್ರಾಯಗತಂ ರಾಜನ್ ನ್ಯಸ್ತಶಸ್ತ್ರಮಚೇತನಮ್ |
ಹನ್ಯಾನ್ಮಾಂ ಯುಧಿ ಯೋಧಾನಾಂ ಸತ್ಯಮೇತದ್ ಬ್ರವೀಮಿ ತೇ ॥61॥
ದ್ರೋಣ ನಾನು ಸಿಟ್ಟಿನಿಂದ ಬಾಣಗಳ ಮಳೆಯನ್ನು ಸುರಿಸುತ್ತಾ ಯುದ್ಧವನ್ನು ಮಾಡುತ್ತಿರುವಾಗ ನನ್ನನ್ನು ಗೆಲ್ಲುವ ಯಾವ ಶತ್ರುವೂ ನನಗೆ ಕಾಣುವುದಿಲ್ಲ. ಎಲೈ ರಾಜನೇ, ನಾನು ಪ್ರಾಯೋಪವೇಶವನ್ನು ಮಾಡಿ ವಿಸಂಜ್ಞನಾಗಿ ಶಸ್ತ್ರಸಂನ್ಯಾಸವನ್ನು ಮಾಡಿದ ಒಂದು ಸಂದರ್ಭವನ್ನು ಬಿಟ್ಟು ಯುದ್ಧದಲ್ಲಿ ಯಾವ ಯೋಧನೂ ನನ್ನನ್ನು ಕೊಲ್ಲಲಾರ. ಈ ಮಾತನ್ನು ಸತ್ಯವಾಗಿ ಹೇಳುತ್ತಿದ್ದೇನೆ.
ಶಸ್ತ್ರಂ ಚಾಹಂ ರಣೇ ಜಹ್ಯಾಂ ಶ್ರುತ್ವಾ ಸುಮಹದಪ್ರಿಯಮ್ |
ಶ್ರದ್ಧೇಯವಾಕ್ಯಾತ್ ಪುರುಷಾದೇತತ್ ಸತ್ಯಂ ಬ್ರವೀಮಿ ತೇ ॥62॥
ಅತ್ಯಂತ ಅಪ್ರಿಯವಾದ ಮಾತನ್ನು ಕೇಳಿ, ನಾನು ಯುದ್ಧದಲ್ಲಿ ಶಸ್ತ್ರಸಂನ್ಯಾಸವನ್ನು ಮಾಡಿಯೇನು! ಅಂತಹ ಮಾತನ್ನು ಆಡುವ ಪುರುಷನ ಮಾತನ್ನು ನಾನು ನಂಬುವೆನು. ಇನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಸಂಜಯಃ
ಏತತ್ ಶ್ರುತ್ವಾ ಮಹಾರಾಜ ಭಾರದ್ವಾಜಸ್ಯ ಧೀಮತಃ |
ಅನುಮಾನ್ಯ ತಮಾಚಾರ್ಯಂ ಪ್ರಾಯಾಚ್ಛಾರದ್ವತಂ ಪ್ರತಿ ॥63॥
ಸಂಜಯ ಎಲೈ ಮಹಾರಾಜನೇ, ಮೇಧಾವಿಗಳಾದ ದ್ರೋಣರ ಈ ಮಾತುಗಳನ್ನು ಕೇಳಿ ಅವರ ಅನುಮತಿಯನ್ನು ಪಡೆದು ಯುಧಿಷ್ಠಿರನು ಕೃಪಾಚಾರ್ಯರ ಬಳಿಗೆ ಹೋದನು.
ಸೋಽಭಿವಾದ್ಯ ಕೃಪಂ ರಾಜಾ ಕೃತ್ವಾ ಚಾಪಿ ಪ್ರದಕ್ಷಿಣಮ್ |
ಉವಾಚ ದುರ್ಧರ್ಷತಮಂ ವಾಕ್ಯಂ ವಾಕ್ಯವಿಶಾರದಃ ॥64॥
ರಾಜನೂ, ವಾಕ್ಯವಿಶಾರದನೂ ಆದ ಅವನು ಕೃಪಾಚಾರ್ಯರಿಗೆ ಪ್ರದಕ್ಷಿಣೆ! ನಮಸ್ಕಾರವನ್ನು ಮಾಡಿ ಸೋಲಿಸಲು ಅತ್ಯಂತ ದುಷ್ಕರರಾದ ಅವರನ್ನು ಕುರಿತು ಮಾತನಾಡಿದನು.
ಅನುಮಾನಯೇ ತ್ವಾಂ ಯೋತ್ಸ್ಯಾಮಿ ಗುರೋ ವಿಗತಕಲ್ಮಷಃ |
ಜಯೇಯಂ ಚ ರಿಪೂನ್ ಸರ್ವಾನನುಜ್ಞಾತಸ್ತ್ವಯಾನಘ ॥65॥
ಗುರುಗಳೇ, ಯಾವ ದೋಷವೂ ಇಲ್ಲದವನಾಗಿ ನಾನು ಯುದ್ಧವನ್ನು ಮಾಡುವೆನು. ನಿಮ್ಮ ಅನುಮತಿಯನ್ನು ಬೇಡುತ್ತಿದ್ದೇನೆ. ಎಲೈ ಅನಘರೇ, ನಿಮ್ಮ ಅನುಮತಿಯನ್ನು ಪಡೆದು ನಾನು ಎಲ್ಲ ಶತ್ರುಗಳನ್ನೂ ಗೆದ್ದೇನು.
ಕೃಪಃ
ಯದಿ ಮಾಂ ನಾಭಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ |
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಸರ್ವಶಃ ॥66॥
ಕೃಪ ಮಹಾರಾಜನೇ, ಯುದ್ಧವನ್ನು ನಿಶ್ಚಯಿಸಿ ನನ್ನ ಬಳಿಗೆ ಬರದಿದ್ದರೆ ನಿನಗೆ ಸರ್ವವಿಧದಲ್ಲಿಯೂ ಪರಾಭವವುಂಟಾಗಲೆಂದು

ಶಪಿಸುತ್ತಿದ್ದೆ.
ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ |
ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥67॥
ತೇಷಾಮರ್ಥೇ ಮಹಾರಾಜ ಯೋದ್ಧವ್ಯಮಿತಿ ಮೇ ಮತಿಃ |
ಅತಸ್ತ್ವಾಂ ಕ್ಲೀಬವದ್ ಬ್ರೂಮಿ ಯುದ್ಧಾದನ್ಯತ್ ಕಿಮಿಚ್ಛಸಿ ॥68॥
ಪುರುಷನು ಅರ್ಥಕ್ಕೆ ದಾಸನಾದವನು, ಅರ್ಥವು ಯಾರಿಗೂ ದಾಸನಾಗುವುದಿಲ್ಲ. ಎಲೈ ಮಹಾರಾಜನೇ, ಈ ಮಾತು ಸತ್ಯವಾದುದು. ನಾನು ಕೌರವರಿಂದ ಅರ್ಥದ ನಿಮಿತ್ತದಿಂದ ಬದ್ಧನಾಗಿದ್ದೇನೆ. ಮಹಾರಾಜನೇ, ನಾನು ಕೌರವರ ಪರವಾಗಿ ಯುದ್ಧವನ್ನು ಮಾಡುತ್ತೇನೆ ಎಂಬ ಅಭಿಪ್ರಾಯವನ್ನು ಹೊಂದಿದ್ದೇನೆ. ಆದ್ದರಿಂದ ನಾನು ಯುದ್ಧವನ್ನು ಬಿಟ್ಟು ಬೇರೆ ಏನನ್ನು ಬಯಸುತ್ತೀಯೆ ಎಂದು ನಪುಂಸಕರಂತೆ ನಿನ್ನನ್ನು ಕೇಳುತ್ತಿದ್ದೇನೆ.
ಯುಧಿಷ್ಠಿರಃ
ಹಂತ ಪೃಚ್ಛಾಮಿ ತೇ ತಸ್ಮಾದಾಚಾರ್ಯ ಶೃಣು ಮೇ ವಚಃ ॥69॥
ಇತ್ಯುಕ್ತ್ವಾ ವ್ಯಥಿತೋ ರಾಜಾ ನೋವಾಚ ಗತಚೇತನಃ |
ಯುಧಿಷ್ಠಿರ ಆಚಾರ್ಯರೇ, ಸಂತೋಷ. ನನ್ನ ಮಾತನ್ನು ಕೇಳಿ ಎಂದು ಹೇಳಿ ರಾಜನು ವಿಸಂಜ್ಞನಾಗಿ ಏನನ್ನೂ ಮಾತನಾಡಲಿಲ್ಲ.
ಸಂಜಯಃ
ತಂ ಗೌತಮಃ ಪ್ರತ್ಯುವಾಚ ವಿಜ್ಞಾಯಾಸ್ಯ ವಿವಕ್ಷಿತಮ್ |
ಅವಧ್ಯೋಽಹಂ ಮಹೀಪಾಲ ಯುಧ್ಯಸ್ವ ಜಯಮಾಪ್ನುಹಿ ॥70॥
ಸಂಜಯ ಕೃಪಾಚಾರ್ಯರು ಅವನ ಅಭಿಪ್ರಾಯವನ್ನು ತಿಳಿದು ಅವನನ್ನು ಕುರಿತು ರಾಜನೇ, ನಾನು ಅವಧ್ಯನಾದವನು. ನೀನು ಯುದ್ಧವನ್ನು ಮಾಡಿ ಜಯವನ್ನು ಹೊಂದು.
ಪ್ರೀತಸ್ತ್ವಭಿಗಮೇನಾಹಂ ಜಯಂ ತವ ನರಾಧಿಪ |
ಆಶಾಸಿಷ್ಯೇ ಸದೋತ್ಥಾಯ ಸತ್ಯಮೇತದ್ ಬ್ರವೀಮಿ ತೇ ॥71॥
ಎಲೈ ರಾಜನೇ, ನಿನ್ನ ಆಗಮನದಿಂದ ನಾನು ಸಂತೋಷಗೊಂಡಿದ್ದೇನೆ. ನಿನಗೆ ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಎದ್ದು ಜಯವನ್ನು ಬಯಸುವೆನು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ಏತಚ್ಛ್ರುತ್ವಾ ಮಹಾರಾಜ ಗೌತಮಸ್ಯ ವಚಸ್ತದಾ |
ಅನುಮಾನ್ಯ ಕೃಪಂ ರಾಜಾ ಪ್ರಯಯೌ ಯೇನ ಮದ್ರರಾಟ್ ॥72॥
ಎಲೈ ಮಹಾರಾಜನೇ, ಗೌತಮರಾದ ಕೃಪಾಚಾರ್ಯರ ಈ ಮಾತನ್ನು ಕೇಳಿ ರಾಜನಾದ ಯುಧಿಷ್ಠಿರನು ಅವರ ಅನುಮತಿಯನ್ನು ಪಡೆದು ಶಲ್ಯನಿದ್ದಲ್ಲಿಗೆ ಹೊರಟನು.
ಸ ಶಲ್ಯಮಭಿವಾದ್ಯಾಥ ಕೃತ್ವಾ ಚಾಭಿಪ್ರದಕ್ಷಿಣಮ್ |
ಉವಾಚ ರಾಜಾ ದುರ್ಧರ್ಷಮಾತ್ಮನಿಶ್ರೇಯಸಂ ವಚಃ ॥73॥
ರಾಜನಾದ ಅವನು ಶಲ್ಯನಿಗೆ ಪ್ರದಕ್ಷಿಣೆ ನಮಸ್ಕಾರವನ್ನು ಮಾಡಿ ತನ್ನ ಶ್ರೇಯಸ್ಸನ್ನು ಸಾಧಿಸುವ ಮಾತನ್ನು ಆಡಿದನು.
ಅನುಮಾನಯೇ ತ್ವಾಂ ಯೋತ್ಸ್ಯಾಮಿ ಗುರೋ ವಿಗತಕಲ್ಮಷಃ |
ಜಯೇಯಂ ಚ ಮಹಾರಾಜ ಅನುಜ್ಞಾತಸ್ತ್ವಯಾ ರಿಪೂನ್ ॥74॥
ಎಲೈ ಗುರುವೇ (ಸೋದರಮಾವನೇ), ನಾನು ದೋಷರಹಿತನಾಗಿ ಯುದ್ಧವನ್ನು ಮಾಡುವೆನು. ನಿನ್ನ ಅನುಮತಿಯನ್ನು ಬೇಡುತ್ತಿದ್ದೇನೆ. ಮಹಾರಾಜನೇ, ನಿನ್ನ ಅನುಮತಿಯನ್ನು ಪಡೆದು ನಾನು ಶತ್ರುಗಳನ್ನು ಗೆಲ್ಲುವೆನು.
ಶಲ್ಯಃ
ಯದಿ ಮಾಂ ನಾಭಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ |
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ವೈ ರಣೇ ॥75॥
ಶಲ್ಯ ಎಲೈ ಮಹಾರಾಜನೇ, ಯುದ್ಧವನ್ನು ನಿಶ್ಚಯಿಸಿ ನನ್ನ ಬಳಿಗೆ ನೀನು ಬರದಿದ್ದರೆ ನಿನಗೆ ಯುದ್ಧದಲ್ಲಿ ಸೋಲಾಗಲೆಂದು ನಾನು ಶಾಪವನ್ನು ಕೊಡುತ್ತಿದ್ದೆ.
ತುಷ್ಟೋಽಸ್ಮಿ ಪೂಜಿತಶ್ಚಾಸ್ಮಿ ಯತ್ ಕಾಂಕ್ಷಸಿ ತದಸ್ತು ತೇ |
ಅನುಜಾನಾಮಿ ಚೈವ ತ್ವಾಂ ಯುಧ್ಯಸ್ವ ಜಯಮಾಪ್ನುಹಿ ॥76॥
ನಾನು ಸಂತುಷ್ಟನಾಗಿದ್ದೇನೆ. ನಿನ್ನಿಂದ ಗೌರವಿಸಲ್ಪಟ್ಟಿದ್ದೇನೆ. ನೀನು ಏನು ಬಯಸುವಿಯೋ ಅದು ನಿನಗೆ ಸಿದ್ಧಿಸಲಿ. ನಿನಗೆ ಅನುಮತಿಯನ್ನು ಕೊಡುತ್ತಿದ್ದೇನೆ. ಯುದ್ಧವನ್ನು ಮಾಡಿ ಜಯವನ್ನು ಹೊಂದು.
ಬ್ರೂಹಿ ಚೈವ ಪರಂ ವೀರ ಕೇನಾರ್ಥಃ ಕಿಂ ದದಾಮಿ ತೇ |
ಏವಂ ಗತೇ ಮಹಾರಾಜ ಯುದ್ಧಾದನ್ಯತ್ ಕಿಮಿಚ್ಛಸಿ ॥77॥
ಎಲೈ ವೀರನೇ, ಅದಲ್ಲದೆ ಬೇರೆ ನಿನಗೆ ಏನಾಗಬೇಕೆಂದು ಇದೆ ಎಂದು ಹೇಳು. ಅದನ್ನೂ ನಿನಗೆ ಕೊಡುವೆನು. ಮಹಾರಾಜನೇ, ಪರಿಸ್ಥಿತಿಯು ಹೀಗಿರುವಾಗ ಯುದ್ಧವನ್ನು ಬಿಟ್ಟು ಬೇರೆ ಏನನ್ನು ಬಯಸುತ್ತೀಯೆ?
ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ |
ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥78॥
ಕರಿಷ್ಯಾಮಿ ಹಿ ತೇ ಕಾಮಂ ಭಾಗಿನೇಯ ಯಥೇಪ್ಸಿತಮ್ |
ಬ್ರವೀಮ್ಯತಃ ಕ್ಲೀಬವತ್ ತ್ವಾಂ ಯುದ್ಧಾದನ್ಯತ್ ಕಿಮಿಚ್ಛಸಿ ॥79॥

ಮಹಾರಾಜನೇ, ಪುರುಷನು ಅರ್ಥಕ್ಕೆ ದಾಸನಾಗುತ್ತಾನೆ. ಅರ್ಥವು ಯಾರಿಗೂ ದಾಸನಾಗುವುದಿಲ್ಲ ಎಂಬ ಮಾತು ಸತ್ಯವಾದುದು. ಕೌರವರಿಂದ ನಾನು ಅರ್ಥದ ನಿಮಿತ್ತದಿಂದಾಗಿ ಬದ್ಧನಾಗಿದ್ದೇನೆ. ಸೋದರಳಿಯನೇ, ನಿನಗೆ ಇಷ್ಟವಾದಂತೆ ನಿನ್ನ ಆಸೆಯನ್ನು ನೆರವೇರಿಸುವೆನು. ಆದ್ದರಿಂದ ನಪುಂಸಕನಂತೆ ಯುದ್ಧವನ್ನು ಬಿಟ್ಟು (ನಿನ್ನ ಸಲುವಾಗಿ ಯುದ್ಧವನ್ನು ಮಾಡು ಎನ್ನುವುದನ್ನು ಬಿಟ್ಟು) ಬೇರೆ ಏನನ್ನು ಬಯಸುತ್ತೀಯೆ?
ಯುಧಿಷ್ಠಿರಃ
ಮಂತ್ರಯಸ್ವ ಮಹಾರಾಜ ನಿತ್ಯಂ ಮದ್ವಿತಮುತ್ತಮಮ್ |
ಕಾಮಂ ಯುಧ್ಯ ಪರಸ್ಯಾರ್ಥೇ ವರಮೇತದ್ ವೃಣೋಮ್ಯಹಮ್ ॥
ಯುಧಿಷ್ಠಿರ ಮಹಾರಾಜನೇ, ನಿತ್ಯವೂ ನನ್ನ ಹಿತವನ್ನು ಚಿಂತಿಸಿ ಕೌರವರ ಪರವಾಗಿ ಯುದ್ಧವನ್ನು ಮಾಡು. ಇದೇ ನಾನು ಬೇಡುವ ವರ.
ಶಲ್ಯಃ
ಬ್ರೂಹಿ ಕಿಮತ್ರ ಸಾಹ್ಯಂ ತೇ ಕರೋಮಿ ನೃಪಸತ್ತಮ |
ಕಾಮಂ ಯೋತ್ಸ್ಯೇ ಪರಸ್ಯಾರ್ಥೇ ವೃತೋಽಸ್ಮ್ಯರ್ಥೇನ ಕೌರವೈಃ ॥81॥
ಶಲ್ಯ ರಾಜಶ್ರೇಷ್ಠನೇ, ಈ ಯುದ್ಧದ ವಿಷಯದಲ್ಲಿ ನಾನು ನಿನಗೆ ಏನು ಸಹಾಯವನ್ನು ಮಾಡಲಿ ಎಂದು ಹೇಳು. ನಾನು ಕೌರವರ ಪರವಾಗಿ ನನ್ನ ಇಚ್ಛೆಯಿಂದಲೇ ಯುದ್ಧ ಮಾಡುವೆನು. ಅರ್ಥದಿಂದಾಗಿ ನನ್ನನ್ನು ಕೌರವರು ವರಿಸಿದ್ದಾರೆ.
ಯುಧಿಷ್ಠಿರಃ
ಸ ಏವ ಮೇ ವರಃ ಸತ್ಯ ಉದ್ಯೋಗೇ ಯಸ್ತ್ವಯಾ ಕೃತಃ |
ಸೂತಪುತ್ರಸ್ಯ ಸಂಗ್ರಾಮೇ ಕಾರ್ಯಃ ತೇಜೋವಧಸ್ತ್ವಯಾ ॥82॥
ಯುಧಿಷ್ಠಿರ ಸೇನ್ಯೋದ್ಯಮ ಕಾಲದಲ್ಲಿ ನಾನು ಏನು ಕೇಳಿದೆನೋ ಅದೇ ನಾನು ನಿನ್ನಿಂದ ಬಯಸುವ ವರ. ಯುದ್ಧದಲ್ಲಿ ನೀನು ಸೂತಪುತ್ರನಾದ ಕರ್ಣನ ತೇಜೋವಧೆಯನ್ನು ಮಾಡಬೇಕು.
ಶಲ್ಯಃ
ಸಂಪತ್ಸ್ಯತ್ಯೇಷ ತೇ ಕಾಮಃ ಕುಂತೀಪುತ್ರ ಯಥೇಪ್ಸಿತಃ |
ಗಚ್ಛ ಯುಧ್ಯಸ್ವ ವಿಸ್ರಬ್ಧಂ ಪ್ರತಿಜಾನೇ ಜಯಂ ತವ ॥83॥
ಶಲ್ಯ ಎಲೈ ಕುಂತೀಪುತ್ರನೇ, ನಿನಗೆ ಇಷ್ಟವಾದ ಈ ಆಸೆಯು ನೆರವೇರುವುದು. ಹೋಗಿ ನಿಶ್ಚಿಂತೆಯಾಗಿ ಯುದ್ಧವನ್ನು ಮಾಡು. ನಿನ್ನ ಜಯವನ್ನು ನಾನು ಪ್ರತಿಜ್ಞೆ ಮಾಡುತ್ತೇನೆ.
ಸಂಜಯಃ
ಅನುಮಾನ್ಯಾಥ ಕೌಂತೇಯೋ ಮಾತುಲಂ ಮದ್ರಕೇಶ್ವರಮ್ |
ನಿರ್ಜಗಾಮ ಮಹಾಸೈನ್ಯಾದ್ ಭ್ರಾತೃಭಿಃ ಪರಿವಾರಿತಃ ॥84॥
ಸಂಜಯ ಕೌಂತೇಯನಾದ ಯುಧಿಷ್ಠಿರನು, ಮದ್ರರಾಜನೂ, ಸೋದರ ಮಾವನೂ ಆದ ಶಲ್ಯನ ಅನುಮತಿಯನ್ನು ಪಡೆದು ಸಹೋದರರಿಂದ ಪರಿವಾರಿತನಾಗಿ ಕೌರವರ ದೊಡ್ಡ ಸೈನ್ಯದಿಂದ ಹೊರಬಂದನು.
ವಾಸುದೇವಸ್ತು ರಾಧೇಯಮಾಹವೇಽಭಿಜಗಾಮ ವೈ |
ತತ ಏನಮುವಾಚೇದಂ ಪಾಂಡವಾರ್ಥೇ ಗದಾಗ್ರಜಃ ॥85॥
ಗದಾಗ್ರಜನಾದ ಕೃಷ್ಣನಾದರೂ ಯುದ್ಧದಲ್ಲಿ ಕರ್ಣನ ಸಮೀಪಕ್ಕೆ ಹೋಗಿ ಪಾಂಡವರ ಸಲುವಾಗಿ ಕರ್ಣನನ್ನು ಕುರಿತು ಈ ಮಾತನ್ನು ಆಡಿದನು.
ಶ್ರುತಂ ಮೇ ಕರ್ಣ ಭೀಷ್ಮಸ್ಯ ದ್ವೇಷಾತ್ ಕಿಲ ನ ಯೋತ್ಸ್ಯಸಿ |
ಅಸ್ಮಾನ್ ವರಯ ರಾಧೇಯ ಯಾವದ್ ಭೀಷ್ಮೋ ನ ಹನ್ಯತೇ ॥86॥
ಕರ್ಣನೇ, ಭೀಷ್ಮರ ಮೇಲಿನ ದ್ವೇಷದಿಂದ ನೀನು ಯುದ್ಧವನ್ನು ಮಾಡುವುದಿಲ್ಲ ಎಂದು ನಾನು ಕೇಳಿದ್ದೇನೆ. ಎಲೈ ರಾಧೇಯನೇ, ಆದ್ದರಿಂದ ಭೀಷ್ಮರ ವಧೆಯಾಗುವವರೆಗೆ ನಮ್ಮ ಪರವಾಗಿ ಯುದ್ಧವನ್ನು ಮಾಡು.
ಹತೇ ತು ಭೀಷ್ಮೇ ರಾಧೇಯ ಪುನರೇಷ್ಯಸಿ ಸಂಯುಗೇ |
ಧಾರ್ತರಾಷ್ಟ್ರಸ್ಯ ಸಾಹಾಯ್ಯಂ ಯದಿ ಪಶ್ಯಸಿ ಚೇತ್ಸಮಮ್ ॥87॥
ರಾಧೇಯನೇ, ಭೀಷ್ಮರು ಹತರಾದ ಮೇಲೆ ಪುನಃ ಯುದ್ಧವನ್ನು ಮಾಡಿ ನಿನಗೆ ಸರಿ ಎಂದು ತೋರಿದರೆ ದುರ್ಯೋಧನನಿಗೆ ಸಹಾಯವನ್ನು ಮಾಡುವಿ.
ಕರ್ಣಃ
ನ ವಿಪ್ರಿಯಂ ಕರಿಷ್ಯಾಮಿ ಧಾರ್ತರಾಷ್ಟ್ರಸ್ಯ ಕೇಶವ |
ತ್ಯಕ್ತಪ್ರಾಣಂ ಹಿ ಮಾಂ ವಿದ್ಧಿ ದುರ್ಯೋಧನಹಿತೈಷಿಣಮ್ ॥88॥
ಕರ್ಣ ಎಲೈ ಕೇಶವನೇ, ನಾನು ದುರ್ಯೋಧನನಿಗೆ ಎಂದೂ ಅಪ್ರಿಯವನ್ನು ಮಾಡುವುದಿಲ್ಲ. ನಾನು ದುರ್ಯೋಧನನ ಹಿತೈಷಿ ಮತ್ತು ಅವನ ಸಲುವಾಗಿ ಪ್ರಾಣವನ್ನೂ ಬಿಡಲು ಸಿದ್ಧ ಎಂದು ತಿಳಿ.
ಸಂಜಯಃ
ತಚ್ಛ್ರುತ್ವಾ ವಚನಂ ಕೃಷ್ಣಃ ಸಂನ್ಯವರ್ತತ ಭಾರತ |
ಯುಧಿಷ್ಠಿರಪುರೋಗೈಶ್ಚ ಪಾಂಡವೈಃ ಸಹ ಸಂಗತಃ ॥89॥
ಸಂಜಯ ಎಲೈ ಭಾರತನೇ, ಅದನ್ನು ಕೇಳಿ ಹಿಂದಿರುಗಿದ ಕೃಷ್ಣನು ಯುಧಿಷ್ಠಿರನೇ ಮೊದಲಾದ ಪಾಂಡವರ ಜೊತೆಯಲ್ಲಿ

ಸೇರಿಕೊಂಡನು.
ಅಥ ಸೈನ್ಯಸ್ಯ ಮಧ್ಯೇ ತು ಪ್ರಾಕ್ರೋಶತ್ ಪಾಂಡವಾಗ್ರಜಃ |
ಯೋಽಸ್ಮಾನ್ ವೃಣೋತಿ ತದಹಂ ವರಯೇ ಸಾಹ್ಯಕಾರಣಾತ್ ॥90॥
ಅನಂತರ ಸೈನ್ಯದ ಮಧ್ಯದಲ್ಲಿ ನಿಂತು ಪಾಂಡವಾಗ್ರಜನಾದ ಯುಧಿಷ್ಠಿರನು ಯಾವನು ನಮ್ಮ ಪಕ್ಷಕ್ಕೆ ಬರುತ್ತಾನೆಯೋ ಅವನನ್ನು ಯುದ್ಧದಲ್ಲಿ ನಮಗೆ ಸಹಾಯವನ್ನು ಮಾಡಲು ಸ್ವೀಕರಿಸುತ್ತೇನೆ ಎಂದು ಗಟ್ಟಿಯಾಗಿ ಹೇಳಿದನು.
ಅಥ ತಾನ್ ಸಮಭಿಪ್ರೇಕ್ಷ್ಯ ಯುಯುತ್ಸುರಿದಮಬ್ರವೀತ್ |
ಪ್ರೀತಾತ್ಮಾ ಧರ್ಮರಾಜಾನಂ ಕುಂತೀಪುತ್ರಂ ಯುಧಿಷ್ಠಿರಮ್ ॥91॥
ಆಗ ಅವರನ್ನು ನೋಡಿ ಸಂತೋಷಗೊಂಡ ಯುಯುತ್ಸುವು ಕುಂತೀಪುತ್ರನಾದ ಯುಧಿಷ್ಠಿರನನ್ನು ಕುರಿತು ಈ ಮಾತನ್ನಾಡಿದನು.
ಅಹಂ ಯೋತ್ಸ್ಯಾಮಿ ಮಿಷತಃ ಸಂಯುಗೇ ಧಾರ್ತರಾಷ್ಟ್ರಜಾನ್ |
ಯುಷ್ಮದರ್ಥೇ ಮಹಾರಾಜ ಯದಿ ಮಾಂ ವೃಣುಷೇಽನಘ ॥92॥
ಎಲೈ ಮಹಾರಾಜನೇ, ಎಲೈ ಅನಘನೇ, ನೀನು ನನ್ನನ್ನು ಸ್ವೀಕರಿಸುವುದಾದರೆ ನಾನು ದುರ್ಯೋಧನಾದಿಗಳು ನೋಡುತ್ತಿರುವಂತೆಯೇ ನಿಮ್ಮ ಪರವಾಗಿ ಯುದ್ಧವನ್ನು ಮಾಡುವೆನು.
ಯುಧಿಷ್ಠಿರಃ
ಏಹ್ಯೇಹಿ ಸರ್ವೇ ಯೋತ್ಸ್ಯಾಮಸ್ತವ ಭ್ರಾತೄನಪಂಡಿತಾನ್ |
ಯುಯುತ್ಸೋ ವಾಸುದೇವಶ್ಚ ವಯಂ ಚ ಬ್ರೂಮ ಸರ್ವಶಃ ॥93॥
ಯುಧಿಷ್ಠಿರ ಎಲೈ ಯುಯುತ್ಸುವೇ, ಬಾ ಬಾ. ಎಲ್ಲರೂ ಸೇರಿ ಅವಿವೇಕಿಗಳಾದ ನಿನ್ನ ಸಹೋದರರ ಜೊತೆಯಲ್ಲಿ ಯುದ್ಧವನ್ನು ಮಾಡೋಣ. ಕೃಷ್ಣನೂ ಮತ್ತು ನಾವೂ ನಿನ್ನನ್ನು ಆಹ್ವಾನಿಸುತ್ತಿದ್ದೇವೆ.
ವೃಣೋಮಿ ತ್ವಾಂ ಮಹಾಬಾಹೋ ಯುಧ್ಯಸ್ವ ಮಮ ಕಾರಣಾತ್ |
ತ್ವಯಿ ಪಿಂಡಶ್ಚ ತಂತುಶ್ಚ ಧೃತರಾಷ್ಟ್ರಸ್ಯ ದೃಶ್ಯತೇ ॥94॥
ಎಲೈ ಮಹಾಬಾಹುವೇ, ನಿನ್ನನ್ನು ನಾನು ಸ್ವೀಕರಿಸುತ್ತೇನೆ. ನನ್ನ ಪರವಾಗಿ ಯುದ್ಧವನ್ನು ಮಾಡು. ಧೃತರಾಷ್ಟ್ರನ ಪಿಂಡವೂ ಮತ್ತು ಸಂತಾನವೂ ನಿನ್ನಲ್ಲಿಯೇ ಕಾಣುತ್ತಿದೆ.
ಭಜಸ್ವಾಸ್ಮಾನ್ ರಾಜಪುತ್ರ ಭಜಮಾನಾನ್ ಮಹಾದ್ಯುತೇ |
ನ ಭವಿಷ್ಯತಿ ದುರ್ಬುದ್ಧಿರ್ಧಾರ್ತರಾಷ್ಟ್ರೋಽತ್ಯಮರ್ಷಣಃ ॥95॥
ಎಲೈ ರಾಜಪುತ್ರನೇ, ಮಹಾದ್ಯುತಿಯೇ, ನಿನ್ನಲ್ಲಿ ಪ್ರೀತಿ ಇರುವ ನಮ್ಮನ್ನು ಪ್ರೀತಿಯಿಂದ ಸೇವಿಸು. ದುರ್ಬುದ್ಧಿಯೂ, ಕ್ರೋಧಶೀಲನೂ ಆದ ದುರ್ಯೋಧನನು ಭೂಮಿಯ ಮೇಲೆ ಬದುಕುವುದಿಲ್ಲ.
ಸಂಜಯಃ
ತತೋ ಯುಯುತ್ಸುಃ ಕೌರವ್ಯಃ ಪರಿತ್ಯಜ್ಯ ಸುತಾಂಸ್ತವ |
ಜಗಾಮ ಪಾಂಡುಪುತ್ರಾಣಾಂ ಸೇನಾಂ ವಿಶ್ರಾವ್ಯ ದುಂದುಭಿಮ್ ॥96॥
ಸಂಜಯ ಆಗ ಕೌರವನಾದ ಯುಯುತ್ಸುವು ನಿನ್ನ ಮಕ್ಕಳ ಪಕ್ಷವನ್ನು ತೊರೆದು ದುಂದುಭಿಯನ್ನು ಬಾರಿಸಿ ಘೋಷಿಸಿ ಪಾಂಡವರ ಸೈನ್ಯವನ್ನು ಸೇರಿದನು.
ತತೋ ಯುಧಿಷ್ಠಿರೋ ರಾಜಾ ಸಂಪ್ರಹೃಷ್ಟಃ ಸಹಾನುಜೈಃ |
ಜಗ್ರಾಹ ಕವಚಂ ಭೂಯೋ ದೀಪ್ತಿಮತ್ ಕನಕೋಜ್ಜ್ವಲಮ್ ॥97॥
ಅನಂತರ ರಾಜನಾದ ಯುಧಿಷ್ಠಿರನು ತಮ್ಮಂದಿರ ಜೊತೆಯಲ್ಲಿ ಸಂತೋಷಗೊಂಡು ಸುವರ್ಣಕಾಂತಿಯಿಂದ ಪ್ರಕಾಶಿಸುವ ತನ್ನ ಕವಚವನ್ನು ಪುನಃ ಧರಿಸಿದನು.
ಪ್ರತ್ಯಪದ್ಯಂತ ತೇ ಸರ್ವೇ ರಥಾನ್ ಸ್ವಾನ್ ಪುರುಷರ್ಷಭಾಃ |
ತತೋ ವ್ಯೂಹಂ ಯಥಾಪೂರ್ವಂ ಪ್ರತ್ಯವ್ಯೂಹಂತ ತೇ ಪುನಃ ॥98॥
ಪುರುಷರ್ಷಭರಾದ ಪಾಂಡವರೆಲ್ಲರೂ ತಮ್ಮ ತಮ್ಮ ರಥಗಳಿಗೆ ಹಿಂದಿರುಗಿದರು. ಅನಂತರ ಅವರು ಮೊದಲಿನಂತೆಯೇ ಪ್ರತಿವ್ಯೂಹವನ್ನು ರಚಿಸಿದರು.
ಅವಾದಯನ್ ದುಂದುಭೀಂಶ್ಚ ಶತಶಶ್ಚೈವ ಪುಷ್ಕರಾನ್ |
ಸಿಂಹನಾದಾಂಶ್ಚ ವಿವಿಧಾನ್ ವಿನೇದುಃ ಪುರುಷರ್ಷಭಾಃ ॥99॥
ಪುರುಷಶ್ರೇಷ್ಠರಾದ ಅವರು ದುಂದುಭಿಗಳನ್ನೂ, ನೂರಾರು ಸಂಖ್ಯೆಯಲ್ಲಿ ಪುಷ್ಕರಗಳನ್ನೂ ಮೊಳಗಿಸಿ ಅನೇಕ ವಿಧವಾದ ಸಿಂಹನಾದಗಳನ್ನು ಮಾಡಿದರು.
ರಥಸ್ಥಾನ್ ಪುರುಷವ್ಯಾಘ್ರಾನ್ ಪಾಂಡವಾನ್ ಪ್ರೇಕ್ಷ್ಯ ಪಾರ್ಥಿವಾಃ |
ಧೃಷ್ಟದ್ಯುಮ್ನಾದಯಃ ಸರ್ವೇ ಪುನರ್ಜಹೃಷಿರೇ ಮುದಾ ॥100॥
ರಥದಲ್ಲಿ ಕುಳಿತ ಪುರುಷವ್ಯಾಘ್ರರಾದ ಪಾಂಡವರನ್ನು ನೋಡಿ ಧೃಷ್ಟದ್ಯುಮ್ನ ಮೊದಲಾದ ಎಲ್ಲ ರಾಜರೂ ಪುನಃ ಸಂತೋಷಗೊಂಡರು.
ಗೌರವಂ ಪಾಂಡುಪುತ್ರಾಣಾಂ ಮಾನ್ಯಾನ್ ಮಾನಯತಾಂ ಚ ತಾನ್ |
ದೃಷ್ಟ್ವಾ ಮಹೀಕ್ಷಿತಸ್ತತ್ರ ಪೂಜಯಾಂ ಚಕ್ರಿರೇಭೃಶಮ್ ॥101॥
ಮಾನ್ಯರಾದವರನ್ನು ಪೂಜಿಸುವ ಪಾಂಡುಪುತ್ರರ ಗೌರವವನ್ನು ನೆರೆದಿದ್ದ ರಾಜರು ನೋಡಿ ಅಲ್ಲಿ ಪಾಂಡವರನ್ನು ಚೆನ್ನಾಗಿ ಪೂಜಿಸಿದರು.

ಸೌಹೃದಂ ಚ ಕೃಪಾಂ ಚೈವ ಪ್ರಾಪ್ತಕಾಲಂ ಮಹಾತ್ಮನಾಮ್ |
ದಯಾಂ ಚ ಜ್ಞಾತಿಷು ಪರಾಂ ಕಥಯಾಂಚಕ್ರಿರೇ ನೃಪಾಃ ॥102॥
ರಾಜರು ಪಾಂಡವರ ಸ್ನೇಹವನ್ನು, ಮಹಾತ್ಮರ ಕೃಪೆಯನ್ನು, ಮಹಾತ್ಮರಾದ ಅವರು ಯೋಗ್ಯಕಾಲದಲ್ಲಿ ತೋರಿಸಿದ ಶ್ರೇಷ್ಠವಾದ ಜ್ಞಾತಿಗಳಲ್ಲಿ ದಯೆಯನ್ನು ಪರಸ್ಪರವಾಗಿ ಮಾತನಾಡಿಕೊಂಡರು.
ಸಾಧು ಸಾಧ್ವಿತಿ ಸರ್ವತ್ರ ನಿಶ್ಚೇರುಃ ಸ್ತುತಿಸಂಹಿತಾಃ |
ವಾಚಃ ಪುಣ್ಯಾಃ ಕೀರ್ತಿಮತಾಂ ಮನೋಹೃದಯಹರ್ಷಿಣೀಃ ॥103॥
ಕೀರ್ತಿವಂತರಾದ ಆ ಪಾಂಡವರಿಗೆ ಎಲ್ಲ ಕಡೆಗಳಿಂದಲೂ `ಸಾಧು ಸಾಧು' ಎಂಬ ಸ್ತುತಿ ಸಹಿತವಾದ ಮನಸ್ಸು ಮತ್ತು ಹೃದಯವನ್ನು ಸಂತೋಷಪಡಿಸುವ ಪವಿತ್ರವಾದ ಮಾತುಗಳು ಹೊರಹೊಮ್ಮಿದವು.
ಮ್ಲೇಚ್ಛಾಶ್ಚಾರ್ಯಾಶ್ಚ ಯೇ ತತ್ರ ದದೃಶುಃ ಶುಶ್ರುವುಸ್ತದಾ |
ವೃತ್ತಂ ತತ್ ಪಾಂಡುಪುತ್ರಾಣಾಂ ರುರುದುಸ್ತೇ ಸಗದ್ಗದಾಃ ॥104॥
ಅಲ್ಲಿ ಸೇರಿದ್ದ ಮ್ಲೇಚ್ಛರು ಮತ್ತು ಆರ್ಯರೂ ಸಹ ಪಾಂಡುಪುತ್ರರ ನಡತೆಯನ್ನು ನೋಡಿ ಮತ್ತು ಕೇಳಿ ಗದ್ಗದವಾದ ಕಂಠದಿಂದ ರೋದಿಸಿದರು.
ತತೋ ಜಘ್ನುರ್ಮಹಾಭೇರೀಃ ಶತಶಶ್ಚೈವ ಪುಷ್ಕರಾನ್ |
ಶಂಖಾಂಶ್ಚ ಗೋಕ್ಷೀರನಿಭಾನ್ ದಧ್ಮುರ್ಹೃಷ್ಟಾ ಮನಸ್ವಿನಃ ॥105॥
ಅನಂತರ ಧೈರ್ಯಶಾಲಿಗಳಾದ ಅವರು ನೂರಾರು ಸಂಖ್ಯೆಯಲ್ಲಿ ದೊಡ್ಡ ಭೇರಿಗಳನ್ನೂ, ಪುಷ್ಕರಗಳನ್ನೂ, ಗೋಕ್ಷೀರದಂತೆ ಶ್ವೇತವರ್ಣದಿಂದ ಕೂಡಿದ ಶಂಖಗಳನ್ನೂ ಸಂತೋಷದಿಂದ ಊದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೆರಡನೆಯ ಅಧ್ಯಾಯ
ಯುದ್ಧದ ಪ್ರಾರಂಭ. ಭೀಮಸೇನನ ವಿಜೃಂಭಣೆ.
ಧೃತರಾಷ್ಟ್ರಃ
ಏವಂ ವ್ಯೂಢೇಷ್ವನೀಕೇಷು ಮಾಮಕೇಷ್ವಿತರೇಷು ಚ |
ಕೇ ಪೂರ್ವಂ ಪ್ರಾಹರಂಸ್ತತ್ರ ಕುರವಃ ಪಾಂಡವಾಸ್ತಥಾ ॥1॥
ಧೃತರಾಷ್ಟ್ರ ಹೀಗೆ ನಮ್ಮ ಮತ್ತು ಪರರ ಸೈನ್ಯಗಳು ವ್ಯೂಹಗೊಂಡ ಮೇಲೆ ಮೊದಲು ಯಾರು ಪ್ರಹಾರವನ್ನು ಮಾಡಿದರು? ಕೌರವರೋ ಅಥವಾ ಪಾಂಡವರೋ?
ಸಂಜಯಃ
ಭ್ರಾತೃಭಿಃ ಸಹಿತೋ ರಾಜನ್ ಪುತ್ರೋ ದುರ್ಯೋಧನಸ್ತವ |
ಭೀಷ್ಮಂ ಪ್ರಮುಖತಃ ಕೃತ್ವಾ ಪ್ರಯಯೌ ಸಹ ಸೇನಯಾ ॥2॥
ಸಂಜಯ ಎಲೈ ರಾಜನೇ, ನಿನ್ನ ಪುತ್ರನಾದ ದುರ್ಯೋಧನನು ತಮ್ಮಂದಿರಿಂದ ಸಹಿತನಾಗಿ ಭೀಷ್ಮರನ್ನು ಮುಂದೆ ಮಾಡಿಕೊಂಡು ಸೈನ್ಯದ ಜೊತೆಯಲ್ಲಿ ಹೊರಟನು.
ತಥೈವ ಪಾಂಡವಾಃ ಸರ್ವೇ ಭೀಮಸೇನಪುರೋಗಮಾಃ |
ಭೀಷ್ಮೇಣ ಯುದ್ಧಮಿಚ್ಛಂತಃ ಪ್ರಯಯುರ್ಹೃಷ್ಟಮಾನಸಾಃ ॥3॥
ಹಾಗೆಯೇ ಭೀಮಸೇನನನ್ನು ಮುಂದೆ ಮಾಡಿಕೊಂಡ ಎಲ್ಲ ಪಾಂಡವರು ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಬಯಸುತ್ತಾ ಸಂತೋಷಗೊಂಡ ಮನಸ್ಸಿನಿಂದ ಮುಂದೆ ಹೊರಟರು.
ಕ್ಷ್ವೇಡಾಃ ಕಿಲಕಿಲಾಶಬ್ದಾಃ ಕ್ರಕಚಾ ಗೋವಿಷಾಣಿಕಾಃ |
ಭೇರೀಮೃದಂಗಮುರಜಾ ಹಯಕುಂಜರನಿಸ್ವನಾಃ ॥4॥
ಉಭಯೋಃ ಸೇನಯೋ ರಾಜಂಸ್ತತಸ್ತೇಽಸ್ಮಾನ್ ಸಮಾದ್ರವನ್ |
ವಯಂ ಪ್ರತಿನದಂತಶ್ಚ ತದಾಸೀತ್ ತುಮುಲಂ ಮಹತ್ ॥5॥
ಭಟರ ಗರ್ಜನೆಗಳು, ಕೋಲಾಹಲ ಶಬ್ಧಗಳು, ಕ್ರಕಚ, ಗೋವಿಷಾಣ, ಭೇರೀ, ಮೃದಂಗ, ಮುರಜ ಮೊದಲಾದ ವಾದ್ಯವಿಶೇಷಗಳು, ಅಶ್ವ-ಗಜಗಳ ನಾದಗಳು ಇವು ಎರಡು ಸೈನ್ಯಗಳಲ್ಲೂ ಉಂಟಾದವು. ರಾಜನೇ, ಅನಂತರ ಅವರು ನಮ್ಮ ಮೇಲೆ ಎರಗಿದರು. ನಾವೂ ಸಹ ನಿಮಗೆ ಪ್ರತಿಯಾಗಿ ನಾವಿದ್ದೇವೆ ಎಂದು ಹೇಳುತ್ತಾ ಸಂತೋಷಪಡುತ್ತಾ ಮುಂದೆ ನಡೆದೆವು.
ಮಹಾಂತ್ಯನೀಕಾನಿ ಮಹಾಸಮುಚ್ಛ್ರಯೇ
ಸಮಾಗಮೇ ಪಾಂಡವಧಾರ್ತರಾಷ್ಟ್ರಯೋಃ |
ಚಕಂಪಿರೇ ಶಂಖಮೃದಂಗನಿಸ್ವನೈಃ
ಪ್ರಕಂಪಿತಾನೀವ ವನಾನಿ ವಾಯುನಾ ॥6॥
ಆಗ ದೊಡ್ಡ ಸಂಘರ್ಷ ಉಂಟಾಯಿತು. ಪಾಂಡವ, ಕೌರವರ ಎರಡು ದೊಡ್ಡ ಸೈನ್ಯಗಳ ಸಮಾಗಮ ಉಂಟಾದ ಶಂಖ ಮೃದಂಗಾದಿ ಶಬ್ಧಗಳಿಂದ ಎರಡು ದೊಡ್ಡ ಸೈನ್ಯಗಳೂ ಬಿರುಗಾಳಿಗೆ ಕಂಪಿಸುವ ಕಾಡುಗಳಂತೆ ಕಂಪಿಸಿದವು.
ನರೇಂದ್ರನಾಗಾಶ್ವರಥಾಕುಲಾನಾಮ್

अभ्यायतीनामशिवे मुहूर्ते |

ಅಭ್ಯಾಯತೀನಾಮಶಿವೇ ಮುಹೂರ್ತೇ |
ಬಭೂವ ಘೋಷಸ್ತುಮುಲಶ್ಚಮೂನಾಂ
ವಾತೋದ್ಧುತಾನಾಮಿವ ಸಾಗರಾಣಾಮ್ ॥7॥
ರಾಜರು, ಗಜಗಳು, ಅಶ್ವ-ರಥಗಳು ಇವುಗಳು ವಿಸ್ತಾರವಾಗಿ ಹಬ್ಬಿರುವ ಆ ಅಮಂಗಳ ಮುಹೂರ್ತದಲ್ಲಿ ಸೈನ್ಯಗಳ ತೀವ್ರವಾದ ಘೋಷಗಳು ಬಿರುಗಾಳಿಗೆ ಎದ್ದ ಸಾಗರಗಳ ಅಲೆಗಳಂತೆ ಅದ್ಭುತವಾಗಿದ್ದಿತು.
ತಸ್ಮಿನ್ ಸಮುತ್ಥಿತೇ ಶಬ್ದೇ ತುಮುಲೇ ಲೋಮಹರ್ಷಣೇ |
ಭೀಮಸೇನೋ ಮಹಾಬಾಹುಃ ಪ್ರಾಣದದ್ ಗೋವೃಷೋ ಯಥಾ ॥
ಶಂಖದುಂದುಭಿನಿರ್ಘೋಷಂ ವಾರಣಾನಾಂ ಚ ಬೃಂಹಿತಮ್ |
ಸಿಂಹನಾದಂ ಚ ಸೈನ್ಯಾನಾಂ ಭೀಮಸೇನರವೋಽಭ್ಯಭೂತ್ ॥9॥
ರೋಮಾಂಚಕಾರಿಯಾದ, ತೀವ್ರವಾದ ಆ ಕೋಲಾಹಲ ಶಬ್ಧವು ಉಂಟಾದಾಗ ಮಹಾಬಾಹುವಾದ ಭೀಮಸೇನನು ಗೂಳಿಯಂತೆ ಗರ್ಜಿಸಿದನು. ಭೀಮಸೇನನ ಗರ್ಜನೆಯು ಶಂಖ-ದುಂದುಭಿಗಳ ಘೋಷಗಳನ್ನೂ, ಆನೆಗಳ ಗರ್ಜನೆಗಳನ್ನೂ, ಸೈನಿಕರ ಸಿಂಹನಾದವನ್ನೂ ಮುಳುಗಿಸಿತು.
ಹಯಾನಾಂ ಹೇಷಮಾಣಾನಾಮನೀಕೇಷು ಸಹಸ್ರಶಃ |
ಸರ್ವಾನ್ ಪರಾಭವಚ್ಛಬ್ದಾನ್ ಭೀಮಸೇನಸ್ಯ ನಿಸ್ವನಃ ॥10॥
ಭೀಮಸೇನನ ಗರ್ಜನೆಯು ಸಹಸ್ರ ಸಂಖ್ಯೆಯಲ್ಲಿ ಸೈನ್ಯದಲ್ಲಿ ಹೇಷಾರವ ಮಾಡುತ್ತಿದ್ದ ಎಲ್ಲ ಅಶ್ವಗಳ ಧ್ವನಿಯನ್ನೂ ಮೀರಿಸಿ ಕೇಳಿ ಬರುತ್ತಿದ್ದಿತು.
ತಂ ಶ್ರುತ್ವಾ ನಿನದಂ ತಸ್ಯ ಸೈನ್ಯಾಸ್ತವ ವಿತತ್ರಸುಃ |
ಜೀಮೂತಸ್ಯೇವ ನದತಃ ಶಕ್ರಾಶನಿಸಮಸ್ವನಮ್ ॥11॥
ಮೇಘಗಳ ಗರ್ಜನೆಯಂತೆ ಕೇಳಿಬರುವ ಇಂದ್ರನ ವಜ್ರಾಯುಧದ ಘೋಷಕ್ಕೆ ಸಮವಾದ ಭೀಮಸೇನನ ಆ ನಿನಾದವನ್ನು ಕೇಳಿ ನಿನ್ನ ಸೈನ್ಯಗಳು ಹೆದರಿಹೋದವು.
ವಾಹನಾನಿ ಚ ಸರ್ವಾಣಿ ಶಕೃನ್ಮೂತ್ರಂ ಪ್ರಸುಸ್ರುವುಃ |
ಶಬ್ದೇನ ತಸ್ಯ ವೀರಸ್ಯ ಸಿಂಹಸ್ಯೇವೇತರೇ ಮೃಗಾಃ ॥12॥
ಸಿಂಹದ ಗರ್ಜನೆಗೆ ಇತರ ಮೃಗಗಳು ಹೆದರುವಂತೆ ಆ ವೀರನಾದ ಭೀಮಸೇನನ ಗರ್ಜನೆಯ ನಾದಕ್ಕೆ ಅಶ್ವ-ಗಜ ಮೊದಲಾದ ವಾಹನಗಳು ಮಲ-ಮೂತ್ರಗಳನ್ನು ವಿಸರ್ಜಿಸಿದವು.
ದರ್ಶಯನ್ ಘೋರಮಾತ್ಮಾನಂ ಮಹಾಭ್ರಮಿವ ನಾದಯನ್ |
ವಿಭೀಷಯಂಸ್ತವ ಸುತಾಂಸ್ತವ ಸೇನಾಂ ಸಮಭ್ಯಯಾತ್ ॥13॥
ಅವನು ಭಯಂಕರವಾದ ತನ್ನ ರೂಪವನ್ನು ತೋರಿಸುತ್ತಾ! ದೊಡ್ಡ ಮೇಘದಂತೆ ಗರ್ಜಿಸುತ್ತಾ! ನಿನ್ನ ಪುತ್ರರನ್ನು ಹೆದರಿಸುತ್ತಾ! ನಿನ್ನ ಸೈನ್ಯದ ಮೇಲೆ ಎರಗಿದನು.
ತಮಾಯಾಂತಂ ಮಹೇಷ್ವಾಸಂ ಸೋದರ್ಯಾಃ ಪರ್ಯವಾರಯನ್ |
ಛಾದಯಂತಃ ಶರವ್ರಾತೈರ್ಮೇಘಾ ಇವ ದಿವಾಕರಮ್ ॥14॥
ಹೀಗೆ ಮುಂದೆ ಬರುತ್ತಿರುವ ಮಹಾಧನುರ್ಧಾರಿಯಾದ ಆ ಭೀಮಸೇನನನ್ನು ಮೇಘಗಳು ಸೂರ್ಯನನ್ನು ಸುತ್ತುವರಿದಂತೆ ನಿನ್ನ ಮಕ್ಕಳು ಬಾಣಗಳ ಸಮೂಹದಿಂದ ಸುತ್ತುವರಿದರು.
ದುರ್ಯೋಧನಶ್ಚ ಪುತ್ರಸ್ತೇ ದುರ್ಮುಖೋ ದುಃಸಹಃ ಶಲಃ |
ದುಃಶಾಸನಶ್ಚಾತಿರಥಸ್ತಥಾ ದುರ್ಮರ್ಷಣೋ ನೃಪ ॥15॥
ವಿವಿಂಶತಿಶ್ಚಿತ್ರಸೇನೋ ವಿಕರ್ಣಶ್ಚ ಮಹಾರಥಃ |
ಪುರುಮಿತ್ರೋ ಜಯೋ ಭೋಜಃ ಸೌಮದತ್ತಿಶ್ಚ ವೀರ್ಯವಾನ್ ॥16॥
ಮಹಾಚಾಪಾನಿ ಧುನ್ವಂತೋ ಜಲದಾ ಇವ ವಿದ್ಯುತಃ |
ಆದದಾನಾಶ್ಚ ನಾರಾಚಾನ್ ನಿರ್ಮುಕ್ತಾಶೀವಿಷೋಪಮಾನ್ ॥17॥
ನಿನ್ನ ಪುತ್ರನಾದ ದುರ್ಯೋಧನ, ದುರ್ಮುಖ, ದುಃಸಹ, ಶಲ, ಅತಿರಥನಾದ ದುಶ್ಶಾಸನ, ಹಾಗೆಯೇ ದುರ್ಮರ್ಷಣ, ವಿವಿಂಶತಿ, ಚಿತ್ರಸೇನ, ಮಹಾರಥನಾದ ವಿಕರ್ಣ, ಪುರುಮಿತ್ರ, ಜಯ, ಭೋಜ, ಸೋಮದತ್ತನ ಮಗನಾದ ಭೂರಿಶ್ರವ ಇವರು ತಮ್ಮ ದೊಡ್ಡ ಧನುಸ್ಸುಗಳನ್ನು ಕೊಡವುತ್ತಾ, ಪೊರೆಯನ್ನು ಬಿಟ್ಟ ಸರ್ಪದಂತಿದ್ದ, ಮೇಘಗಳಿಂದ ಹೊರಟ ಮಿಂಚಿನಂತಿರುವ ಬಾಣಗಳನ್ನು ಬತ್ತಳಿಕೆಗಳಿಂದ ತೆಗೆಯುತ್ತಾ ಸುತ್ತುವರಿದರು.
ಅಥ ತಾನ್ ದ್ರೌಪದೀಪುತ್ರಾಃ ಸೌಭದ್ರಶ್ಚ ಮಹಾರಥಃ |
ನಕುಲಃ ಸಹದೇವಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥18॥
ಧಾರ್ತರಾಷ್ಟ್ರಾನ್ ಪ್ರತಿಯಯುರರ್ದಯಂತಃ ಶಿತೈಃ ಶರೈಃ |
ವಜ್ರೈರಿವ ಮಹಾವೇಗೈಃ ಶಿಖರಾಣಿ ಧರಾಭೃತಾಮ್ ॥19॥
ಆಗ ದ್ರೌಪದಿಯ ಮಕ್ಕಳು, ಮಹಾರಥನಾದ ಅಭಿಮನ್ಯು, ನಕುಲ-ಸಹದೇವರು ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನ ಇವರು ಮಹಾವೇಗವುಳ್ಳ ವಜ್ರಾಯುಧಗಳು ಪರ್ವತದ ಶಿಖರಗಳನ್ನು ಕುರಿತು ಹೊರಟಂತೆ ಹರಿತವಾದ ಬಾಣಗಳನ್ನು ತೆಗೆದುಕೊಂಡು ನಿನ್ನ ಪುತ್ರರನ್ನು ಮರ್ದಿಸುತ್ತಾ ಪ್ರತಿಯಾಗಿ ಸಾಗಿದರು.
ತಸ್ಮಿನ್ ಪ್ರಥಮಸಮ್ಮರ್ದೇ ಭೀಮಜ್ಯಾತಲನಿಸ್ವನೇ |

ತಾವಕಾನಾಂ ಪರೇಷಾಂ ಚ ನಾಸೀತ್ ಕಶ್ಚ ಪರಾಙ್ಮುಖಃ ॥20॥
ಭಯಂಕರವಾದ, ಹೆದೆಯ ಮತ್ತು ಹಸ್ತತಳಗಳ ಶಬ್ದದಿಂದ ಕೂಡಿದ ಮೊದಲಿನ ಸಂಘರ್ಷದಲ್ಲಿ ನಿನ್ನ ಸೈನ್ಯದಲ್ಲಾಗಲೀ ಅಥವಾ ಪಾಂಡವರ ಸೈನ್ಯದಲ್ಲಾಗಲೀ ಯಾರೂ ಪರಾಙ್ಮುಖರಾಗಲಿಲ್ಲ.
ಲಾಘವಂ ದ್ರೋಣಶಿಷ್ಯಾಣಾಮಪಶ್ಯಂ ಭರತರ್ಷಭ |
ನಿಮಿತ್ತವೇಧಿನಾಂ ರಾಜನ್ ಶರಾನುತ್ಸೃಜತಾಂ ಭೃಶಮ್ ॥21॥
ರಾಜನೇ, ನಾನು ಅಲ್ಲಿ ನಿಮಿತ್ತ ವೇಧಿಗಳಾಗಿ, ಸತತವಾಗಿ ಶರಗಳನ್ನು ಪ್ರಯೋಗಿಸುವ ದ್ರೋಣಶಿಷ್ಯರ ಕೌಶಲವನ್ನು ನೋಡಿದೆನು.
ನೋಪಶಾಮ್ಯತಿ ನಿರ್ಘೋಷೋ ಧನುಷಾಂ ಕೂಜತಾಂ ತಥಾ |
ವಿನಿಶ್ಚೇರುಃ ಶರಾ ದೀಪ್ತಾ ಜ್ಯೋತೀಂಷೀವ ನಭಸ್ತಳಾತ್ ॥22॥
ನಾದ ಮಾಡುವ ಧನುಸ್ಸುಗಳ ಶಬ್ದವು ನಿಲ್ಲುತ್ತಲೇ ಇರಲಿಲ್ಲ. ಆಕಾಶದಿಂದ ಜ್ಯೋತಿಗಳು ಹೊರಟಂತೆ ದೀಪ್ತವಾದ ಶರಗಳು ಧನುಸ್ಸುಗಳಿಂದ ಹೊರಹೊಮ್ಮಿದವು.
ಸರ್ವೇ ತ್ವನ್ಯೇ ಮಹೀಪಾಲಾಃ ಪ್ರೇಕ್ಷಕಾ ಇವ ಭಾರತ |
ದದೃಶುರ್ದರ್ಶನೀಯಂ ತಂ ಭೀಮಂ ಜ್ಞಾತಿಸಮಾಗಮಮ್ ॥23॥
ಎಲೈ ಭಾರತನೇ, ಉಳಿದ ರಾಜರೆಲ್ಲರೂ ನೋಡಲು ಮನೋಹರವಾಗಿದ್ದ, ಭಯಂಕರವಾದ ಆ ದಾಯಾದಿಗಳ ಸಮಾಗಮವನ್ನು ಪ್ರೇಕ್ಷಕರಂತೆ ನೋಡಿದರು.
ತತಸ್ತೇ ಜಾತಸಂರಂಭಾಃ ಪರಸ್ಪರಕೃತಾಗಸಃ |
ಅನ್ಯೋನ್ಯಸ್ಪರ್ಧಯಾ ರಾಜನ್ ವ್ಯಾಯಚ್ಛಂತ ಮಹಾರಥಾಃ ॥24॥
ರಾಜನೇ, ಅನಂತರ ಆ ಮಹಾರಥರು ಕ್ರೋಧವನ್ನು ತಂದುಕೊಂಡು ಪರಸ್ಪರವಾಗಿ ಹಿಂಸೆಯನ್ನು ಮಾಡುತ್ತಾ ಅನ್ಯೋನ್ಯ ಸ್ಪರ್ಧೆಯಿಂದ ಪ್ರಹಾರಗಳಲ್ಲಿ ತೊಡಗಿದರು.
ಕುರುಪಾಂಡವಸೇನೇ ತೇ ಹಸ್ತ್ಯಶ್ವರಥಸಂಕುಲೇ |
ಶುಶುಭಾತೇ ರಣೇಽತೀವ ಪಟೇ ಚಿತ್ರಗತೇ ಇವ ॥25॥
ಗಜ-ಅಶ್ವ-ರಥಗಳಿಂದ ನಿಬಿಡವಾದ ಆ ಕುರು-ಪಾಂಡವ ಸೈನ್ಯಗಳು ಯುದ್ಧದಲ್ಲಿ ಬಟ್ಟೆಯ ಮೇಲೆ ಬರೆದ ಚಿತ್ರಗಳಂತೆ ಶೋಭಿಸಿದವು.
ತತಸ್ತೇ ಪಾರ್ಥಿವಾಃ ಸರ್ವೇ ಪ್ರಗೃಹೀತಶರಾಸನಾಃ |
ಸಹಸೈನ್ಯಾಃ ಸಮಾಪೇತುಃ ಪುತ್ರಸ್ಯ ತವ ಶಾಸನಾತ್ ॥26॥
ಅನಂತರ ನಿನ್ನ ಮಗನ ಶಾಸನದಂತೆ ಎಲ್ಲ ರಾಜರೂ ತಮ್ಮ ಸೈನ್ಯದ ಜೊತೆಯಲ್ಲಿ ಧನುಸ್ಸುಗಳನ್ನು ಕೈಯಲ್ಲಿ ಹಿಡಿದು ಪಾಂಡವರ ಸೈನ್ಯದ ಮೇಲೆ ಎರಗಿದರು.
ಯುಧಿಷ್ಠಿರೇಣ ಚಾದಿಷ್ಟಾಃ ಪಾರ್ಥಿವಾಸ್ತೇ ಸಹಸ್ರಶಃ |
ವಿನದಂತಃ ಸಮಾಪೇತುಃ ಪುತ್ರಸ್ಯ ತವ ವಾಹಿನೀಮ್ ॥27॥
ಯುಧಿಷ್ಠಿರನಿಂದ ಆದೇಶವನ್ನು ಪಡೆದ ಸಹಸ್ರಾರು ಸಂಖ್ಯೆಯ ಆ ರಾಜರು ಸಿಂಹನಾದವನ್ನು ಮಾಡುತ್ತಾ ನಿನ್ನ ಮಗನ ಸೈನ್ಯದ ಮೇಲೆ ಎರಗಿದರು.
ಉಭಯೋಃ ಸೇನಯೋಸ್ತೀವ್ರಃ ಸೈನ್ಯಾನಾಂ ಸ ಸಮಾಗಮಃ |
ಅಂತರ್ಧೀಯತ ಚಾದಿತ್ಯಃ ಸೈನ್ಯೇನ ರಜಸಾವೃತಃ ॥28॥
ಎರಡು ಸೈನ್ಯಗಳಿಗೂ ತೀವ್ರವಾದ ಸಮಾಗಮ ಉಂಟಾಯಿತು. ಸೈನ್ಯದ ಚಲನೆಯಿಂದ ಎದ್ದ ಧೂಳಿನಿಂದ ಸೂರ್ಯನು ಅಂತರ್ಧಾನವನ್ನು ಹೊಂದಿದನು.
ಪ್ರಯುದ್ಧಾನಾಂ ಪ್ರಭಗ್ನಾನಾಂ ಪುನರಾವರ್ತತಾಮಪಿ |
ನಾತ್ರ ಸ್ವೇಷಾಂ ಪರೇಷಾಂ ವಾ ವಿಶೇಷಃ ಸಮಜಾಯತ ॥29॥
ಯುದ್ಧ ಮಾಡುವ, ಅವಯವಗಳನ್ನು ಕಳೆದುಕೊಳ್ಳುವ ಮತ್ತು ಸ್ವಲ್ಪ ಸಮಯ ಹೊರಗೆ ಹೋಗಿ ಹಿಂದಿರುಗುವ ಎರಡು ಸೈನ್ಯಗಳ ಯೋಧರಲ್ಲಿ ಯಾವ ಅತಿಶಯವೂ ಕಂಡುಬರಲಿಲ್ಲ.
ತಸ್ಮಿಂಸ್ತು ತುಮುಲೇ ಯುದ್ಧೇ ವರ್ತಮಾನೇ ಮಹಾಭಯೇ |
ಅತಿ ಸರ್ವಾಣ್ಯನೀಕಾನಿ ಪಿತಾ ತೇಽಭಿವ್ಯರೋಚತ ॥30॥
ಮಹಾಭಯಂಕರವಾದ ಅಂತಹ ತೀವ್ರ ಯುದ್ಧವು ನಡೆಯುತ್ತಿರುವಾಗ ಎಲ್ಲ ಸೈನ್ಯಗಳಿಗಿಂತಲೂ ಅಧಿಕವಾಗಿ ನಿನ್ನ ತಂದೆಯಾದ ಭೀಷ್ಮರು ಶೋಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ಮೂರನೆಯ ಅಧ್ಯಾಯ
ಪ್ರಥಮ ದಿವಸದ ಯುದ್ಧದ ವರ್ಣನೆ.
ಸಂಜಯಃ
ಪೂರ್ವಾಹ್ಣೇ ತಸ್ಯ ರೌದ್ರಸ್ಯ ಯುದ್ಧಮಹ್ನೋ ವಿಶಾಂಪತೇ |
ಪ್ರಾವರ್ತತ ಮಹಾಘೋರಂ ರಾಜ್ಞಾಂ ದೇಹಾವಕರ್ತನಮ್ ॥1॥

ಸಂಜಯ ಎಲೈ ರಾಜನೇ, ಆ ಭಯಂಕರ ದಿವಸದ ಪ್ರಾತಃಕಾಲದಲ್ಲಿ ರಾಜರ ದೇಹಗಳನ್ನು ಕತ್ತರಿಸುವಂತಹ ಬಹಳ ಘೋರವಾದ ಯುದ್ಧವು ಪ್ರಾರಂಭವಾಯಿತು.
ಕುರೂಣಾಂ ಪಾಂಡವಾನಾಂ ಚ ಸಂಗ್ರಾಮೇ ವಿಜಿಗೀಷತಾಮ್ |
ಸಿಂಹಾನಾಮಿವ ಸಂಹ್ರಾದೋ ದಿವಮುರ್ವೀಂ ಚ ನಾದಯನ್ ‖2‖
ಯುದ್ಧದಲ್ಲಿ ಜಯವನ್ನು ಪಡೆಯಲು ಬಯಸಿದ ಕುರುಗಳ ಮತ್ತು ಪಾಂಡವರ ಸಿಂಹ ಗರ್ಜನೆಗಳಂತಹ ಗರ್ಜನೆಗಳು ಭೂಮಿಯಲ್ಲಿ ಮತ್ತು ಆಕಾಶದಲ್ಲಿ ಪ್ರತಿಧ್ವನಿಸಿದವು.
ಆಸೀತ್ ಕಿಲಕಿಲಾಶಬ್ದಸ್ತಳಶಂಖರವೈಃ ಸಹ |
ಜಜ್ಞಿರೇ ಸಿಂಹನಾದಾಶ್ಚ ಶೂರಾಣಾಂ ಪ್ರತಿಗರ್ಜತಾಮ್ ‖3‖
ತಳತ್ರಾಭಿಹತಾಶ್ಚೈವ ಜ್ಯಾಶಬ್ದಾ ಭರತರ್ಷಭ |
ಪತ್ತೀನಾಂ ಪಾದಶಬ್ದಾಶ್ಚ ವಾಜಿನಾಂ ಚ ಮಹಾಸ್ವನಾಃ ‖4‖
ತೋತ್ರಾಂಕುಶನಿಪಾತಾಶ್ಚ ಆಯುಧಾನಾಂ ಚ ನಿಸ್ವನಾಃ |
ಘಂಟಾಶಬ್ದಾಶ್ಚ ನಾಗಾನಾಮನ್ಯೋನ್ಯಮಭಿಧಾವತಾಮ್ ‖5‖
ಹಸ್ತತಳಗಳ ಶಬ್ದಗಳಿಂದ, ಶಂಖ ಶಬ್ದಗಳಿಂದ ಸೇರಿದ ದೊಡ್ಡ ಕೋಲಾಹಲವು ಉಂಟಾಯಿತು. ಪ್ರತಿಯಾಗಿ ಗರ್ಜಿಸುವ ಶೂರರ ಸಿಂಹನಾದಗಳೂ ಉಂಟಾದವು. ಹಸ್ತರಕ್ಷಣೆ (ಎಟಪಿ) ಗಳನ್ನು ಹೆದೆಗಳಿಗೆ ಉಜ್ಜುವುದರಿಂದ ಉಂಟಾಗುವ ಶಬ್ದವು, ಪದಾತಿಗಳ ಪಾದ ಶಬ್ದಗಳು, ಅಶ್ವಗಳ ಮಹಾ ಹೇಷಾರವಗಳು ಉಂಟಾದವು. ಎಲೈ ಭರತಶ್ರೇಷ್ಠನೇ, ಚಾವಟಿ ಮತ್ತು ಅಂಕುಶಗಳು ಬಿದ್ದ ಶಬ್ದಗಳು, ಆಯುಧಗಳ ಶಬ್ದಗಳು, ಪರಸ್ಪರವಾಗಿ ಮುನ್ನುಗ್ಗುವ ಗಜಗಳ ಕೊರಳಿನ ಘಂಟಾಶಬ್ದವು ಉಂಟಾದವು.
ತಸ್ಮಿನ್ ಸಮುದಿತೇ ಶಬ್ದೇ ತುಮುಲೇ ಲೋಮಹರ್ಷಣೇ |
ಬಭೂವ ರಥನಿರ್ಘೋಷಃ ಪರ್ಜನ್ಯನಿನದೋಪಮಃ ‖6‖
ರೋಮಹರ್ಷಣವೂ ಮತ್ತು ತೀವ್ರವೂ ಆದ ಆ ಶಬ್ದಸಮುದಾಯದಲ್ಲಿ ಪರ್ಜನ್ಯ ಘೋಷದಂತಿದ್ದ ರಥನಿರ್ಘೋಷಗಳೂ ಉಂಟಾದವು.
ತೇ ಮನಃ ಕ್ರೂರಮಾಧಾಯ ಸಮಭಿತ್ಯಕ್ತಜೀವಿತಾಃ |
ಪಾಂಡವಾನಭ್ಯವರ್ತಂತ ಸರ್ವ ಏವೋಚ್ಛ್ರಿತಧ್ವಜಾಃ ‖7‖
ಕೌರವರ ಸೈನ್ಯದವರೆಲ್ಲರೂ ಮನಸ್ಸಿಗೆ ಕ್ರೌರ್ಯವನ್ನು ತಂದುಕೊಂಡು ಜೀವನದ ಆಸೆಯನ್ನು ತೊರೆದು ತಮ್ಮ ರಥಗಳ ಧ್ವಜಗಳನ್ನು ಮೇಲೆತ್ತಿ ಪಾಂಡವರ ಮೇಲೆ ಎರಗಿದರು.
ಸ್ವಯಂ ಶಾಂತನವೋ ರಾಜನ್ನಭ್ಯಧಾವದ್ ಧನಂಜಯಮ್ |
ಪ್ರಗೃಹ್ಯ ಕಾರ್ಮುಕಂ ಘೋರಂ ಕಾಲದಂಡೋಪಮಂ ರಣೇ ‖8‖
ಎಲೈ ರಾಜನೇ, ಭೀಷ್ಮರು ಕಾಲದಂಡದಂತಿದ್ದ ಘೋರವಾದ ಧನುಸ್ಸನ್ನು ಹಿಡಿದು ಯುದ್ಧದಲ್ಲಿ ಧನಂಜಯನ ಕಡೆಗೆ ಸ್ವತಃ ಧಾವಿಸಿದರು.
ಅರ್ಜುನೋಽಪಿ ಧನುರ್ಗೃಹ್ಯ ಗಾಂಡೀವಂ ಲೋಕವಿಶ್ರುತಮ್ |
ಅಭ್ಯಧಾವತ ತೇಜಸ್ವೀ ಗಾಂಗೇಯಂ ರಣಮೂರ್ಧನಿ ‖9‖
ಪರಾಕ್ರಮಿಯಾದ ಅರ್ಜುನನೂ ಸಹ ಆ ಶ್ರೇಷ್ಠವಾದ ಯುದ್ಧದಲ್ಲಿ ಲೋಕವಿಖ್ಯಾತವಾದ ಗಾಂಡೀವ ಧನುಸ್ಸನ್ನು ಹಿಡಿದುಕೊಂಡು ಭೀಷ್ಮರ ಕಡೆಗೆ ಧಾವಿಸಿದನು.
ತಾವುಭೌ ಕುರುಶಾರ್ದೂಲೌ ಪರಸ್ಪರವಧೈಷಿಣೌ |
ಗಾಂಗೇಯಸ್ತು ರಣೇ ಪಾರ್ಥಂ ವಿದ್ಧ್ವಾ ನಾಕಂಪಯದ್ ಬಲೀ |
ತಥೈವ ಪಾಂಡವೋ ರಾಜನ್ ಭೀಷ್ಮಂ ನಾಕಂಪಯದ್ ಯುಧಿ ‖10‖
ಪರಸ್ಪರ ವಧೆಯನ್ನು ಬಯಸಿದ ಆ ಇಬ್ಬರು ಕುರುಶ್ರೇಷ್ಠರು ಬಾಣಗಳನ್ನು ಪ್ರಯೋಗಿಸಿದರು. ಬಲಿಷ್ಠರಾದ ಭೀಷ್ಮರು ಯುದ್ಧದಲ್ಲಿ ಅರ್ಜುನನ ಮೇಲೆ ಬಾಣ ಪ್ರಯೋಗವನ್ನು ಮಾಡಿದರೂ ಅವನನ್ನು ಅಲುಗಾಡಿಸಲೂ ಸಾಧ್ಯವಾಗಲಿಲ್ಲ. ಹಾಗೆಯೇ ಪಾಂಡುಪುತ್ರನಾದ ಅರ್ಜುನನೂ ಸಹ ಯುದ್ಧದಲ್ಲಿ ಭೀಷ್ಮರನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ.
ಸಾತ್ಯಕಿಶ್ಚ ಮಹೇಷ್ವಾಸಃ ಕೃತವರ್ಮಾಣಮಭ್ಯಯಾತ್ |
ತಯೋಃ ಸಮಭವದ್ ಯುದ್ಧಂ ತುಮುಲಂ ಲೋಮಹರ್ಷಣಮ್ ‖
ಮಹಾಧನುರ್ಧಾರಿಯಾದ ಸಾತ್ಯಕಿಯು ಕೃತವರ್ಮನ ಜೊತೆಯಲ್ಲಿ ಯುದ್ಧ ಮಾಡಿದನು. ಅವರಿಬ್ಬರಿಗೂ ತೀವ್ರವೂ, ರೋಮಾಂಚಕಾರಿಯೂ ಆದ ಯುದ್ಧವು ಜರುಗಿತು.
ಸಾತ್ಯಕಿಃ ಕೃತವರ್ಮಾಣಂ ಕೃತವರ್ಮಾ ಚ ಸಾತ್ಯಕಿಮ್ |
ಆನರ್ಚ್ಛತುಃ ಶರೈರ್ಘೋರೈಸ್ತಕ್ಷಮಾಣೌ ಪರಸ್ಪರಮ್ ‖12‖
ಸಾತ್ಯಕಿಯು ಕೃತವರ್ಮನನ್ನೂ ಮತ್ತು ಕೃತವರ್ಮನು ಸಾತ್ಯಕಿಯನ್ನೂ ಪರಸ್ಪರವಾಗಿ ಘೋರವಾದ ಬಾಣಗಳನ್ನು ಪ್ರಯೋಗಿಸಿ ದೇಹಗಳಲ್ಲಿ ಗಾಯವನ್ನು ಉಂಟುಮಾಡಿದರು.
ತೌ ಶರಾಚಿತಸರ್ವಾಂಗೌ ಶುಶುಭಾತೇ ಮಹಾಬಲೌ |
ವಸಂತೇ ಪುಷ್ಪಶಬಲೌ ಪುಷ್ಪಿತಾವಿವ ಕಿಂಶುಕೌ ‖13‖
ದೇಹದಲ್ಲಿ ಎಲ್ಲಾ ಕಡೆಯಲ್ಲಿಯೂ ಬಾಣಗಳನ್ನು ನೆಟ್ಟ ಮಹಾಬಲಿಷ್ಠರಾದ ಅವರಿಬ್ಬರು ವಸಂತಕಾಲದಲ್ಲಿ ಕೆಂಪು ಪುಷ್ಪಗಳಿಂದ ಕೂಡಿದ ಮುತ್ತುಗದ ಮರಗಳಂತೆ ಶೋಭಿಸಿದರು.

ಅಭಿಮನ್ಯುರ್ಮಹೇಷ್ವಾಸೋ ಬೃಹದ್ಬಲಮಯೋಧಯತ್ |
ತತಃ ಕೋಸಲಕೋ ರಾಜಾ ಸೌಭದ್ರಸ್ಯ ವಿಶಾಂಪತೇ |
ಧ್ವಜಂ ಚಿಚ್ಛೇದ ಸಮರೇ ಸಾರಥಿಂ ಚ ನ್ಯಪಾತಯತ್ ॥14॥
ಮಹಾಧನುರ್ಧಾರಿಯಾದ ಅಭಿಮನ್ಯುವು ಕೋಸಲ ದೇಶದ ರಾಜನಾದ ಬೃಹದ್ಬಲನ ಜೊತೆಯಲ್ಲಿ ಯುದ್ಧ ಮಾಡಿದನು. ಎಲೈ ರಾಜನೇ, ಬೃಹದ್ಬಲನು ಅಭಿಮನ್ಯುವಿನ ಧ್ವಜವನ್ನು ಕತ್ತರಿಸಿ ಅವನ ರಥದ ಸಾರಥಿಯನ್ನು ಉರುಳಿಸಿದನು.
ಸೌಭದ್ರಸ್ತು ತತಃ ಕ್ರುದ್ಧಃ ಪಾತಿತೇ ರಥಸಾರಥೌ |
ಬೃಹದ್ಬಲಂ ಮಹಾರಾಜ ವಿವ್ಯಾಧ ನವಭಿಃ ಶರೈಃ ॥15॥
ಎಲೈ ಮಹಾರಾಜನೇ, ತನ್ನ ರಥದ ಸಾರಥಿಯು ಕೆಳಗೆ ಉರುಳಿಸಲ್ಪಡುತ್ತಿರಲು ಅಭಿಮನ್ಯುವು ಕ್ರುದ್ಧನಾಗಿ ಬೃಹದ್ಬಲನ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ಅಥಾಪರಾಭ್ಯಾಂ ಭಲ್ಲಾಭ್ಯಾಂ ಪೀತಾಭ್ಯಾಮರಿಮರ್ದನಃ |
ಧ್ವಜಮೇಕೇನ ಚಿಚ್ಛೇದ ಪಾರ್ಷ್ಣಿಮೇಕೇನ ಸಾರಥಿಮ್ |
ಅನ್ಯೋನ್ಯಂ ಚ ಶರೈಸ್ತೀಕ್ಷ್ಣೈಃ ಕ್ರುದ್ಧೌ ರಾಜಂಸ್ತತಕ್ಷತುಃ ॥16॥
ಶತ್ರುಮರ್ದನನಾದ ಅವನು ಹೊಳೆಯುವ ಎರಡು ಭಲ್ಲಗಳನ್ನು ತೆಗೆದುಕೊಂಡು ಒಂದರಿಂದ ಬೃಹದ್ಬಲನ ಧ್ವಜವನ್ನೂ, ಇನ್ನೊಂದರಿಂದ ಅವನ ಒಂದು ಪಕ್ಕದ ಸಾರಥಿಯನ್ನೂ ಕತ್ತರಿಸಿದನು. ರಾಜನೇ, ಅವರು ಕ್ರುದ್ಧರಾಗಿ ಪರಸ್ಪರವಾಗಿ ತೀಕ್ಷ್ಣವಾದ ಬಾಣಗಳಿಂದ ಒಬ್ಬರನ್ನೊಬ್ಬರು ಘಾಸಿಗೊಳಿಸಿದರು.
ಮಾನಿನಂ ಸಮರೇ ದೃಪ್ತಂ ಕೃತವೈರಂ ಮಹಾರಥಮ್ |
ಭೀಮಸೇನಸ್ತವ ಸುತಂ ದುರ್ಯೋಧನಮಯೋಧಯತ್ ॥17॥
ಅಹಂಕಾರಿಯೂ, ಯುದ್ಧದಲ್ಲಿ ದರ್ಪಿಷ್ಠನೂ, ಬಹಳ ವೈರವನ್ನು ಮಾಡಿದವನೂ, ಮಹಾರಥನೂ ಆದ ನಿನ್ನ ಪುತ್ರನಾದ ದುರ್ಯೋಧನನ ಜೊತೆಯಲ್ಲಿ ಭೀಮಸೇನನು ಯುದ್ಧವನ್ನು ಮಾಡಿದನು.
ತಾವುಭೌ ನರಶಾರ್ದೂಲೌ ಕುರುಮುಖ್ಯೌ ಮಹಾಬಲೌ |
ಅನ್ಯೋನ್ಯಂ ಶರವರ್ಷಾಭ್ಯಾಂ ವವೃಷಾತೇ ರಣಾಜಿರೇ ॥18॥
ನರಶ್ರೇಷ್ಠರೂ, ಕುರುಶ್ರೇಷ್ಠರೂ, ಮಹಾಬಲಿಷ್ಠರೂ ಆದ ಅವರಿಬ್ಬರೂ ಯುದ್ಧಭೂಮಿಯಲ್ಲಿ ಪರಸ್ಪರವಾಗಿ ಬಾಣಗಳ ಮಳೆಯನ್ನು ಕರೆದರು.
ತೌ ತು ವೀಕ್ಷ್ಯ ಮಹಾತ್ಮಾನೌ ಕೃತಿನೌ ಚಿತ್ರಯೋಧಿನೌ |
ವಿಸ್ಮಯಃ ಸರ್ವಭೂತಾನಾಂ ಸಮಪದ್ಯತ ಭಾರತ ॥19॥
ಎಲೈ ಭಾರತನೇ, ವಿಚಿತ್ರವಾಗಿ ಯುದ್ಧವನ್ನು ಮಾಡುವವರೂ, ಕುಶಲರೂ, ಮಹಾಪ್ರಯತ್ನಶೀಲರೂ ಆದ ಅವರಿಬ್ಬರನ್ನೂ ನೋಡಿ ಎಲ್ಲರಿಗೂ ವಿಸ್ಮಯ ಉಂಟಾಯಿತು.
ದುಃಶಾಸನಸ್ತು ನಕುಲಂ ಪ್ರತ್ಯುದ್ಯಾಯ ಮಹಾರಥಮ್ |
ಅವಿಧ್ಯನ್ ನಿಶಿತೈರ್ಬಾಣೈರ್ಬಹುಭಿರ್ಮರ್ಮಭೇದಿಭಿಃ ॥20॥
ದುಶ್ಶಾಸನನು ಮಹಾರಥನಾದ ನಕುಲನ ಜೊತೆಯಲ್ಲಿ ಯುದ್ಧವನ್ನು ಮಾಡಿ ಹರಿತವಾದ ಮರ್ಮಭೇದಿಗಳಾದ ಅನೇಕ ಬಾಣಗಳಿಂದ ಅವನನ್ನು ಘಾಸಿಗೊಳಿಸಿದನು.
ತಸ್ಯ ಮಾದ್ರೀಸುತಃ ಕೇತುಂ ಸಶರಂ ಚ ಶರಾಸನಮ್ |
ಚಿಚ್ಛೇದ ನಿಶಿತೈರ್ಬಾಣೈಃ ಪ್ರಹಸನ್ನಿವ ಭಾರತ |
ಅಥೈನಂ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮಾರ್ದಯತ್ ॥21॥
ಎಲೈ ಭಾರತನೇ, ಅದಕ್ಕೆ ಪ್ರತಿಯಾಗಿ ಮಾದ್ರೀಸುತನಾದ ನಕುಲನು ತೀಕ್ಷ್ಣವಾದ ಬಾಣಗಳಿಂದ ಅವನ ಧ್ವಜವನ್ನೂ, ಬಿಲ್ಲು-ಬಾಣಗಳನ್ನೂ ನಗುತ್ತಲೇ ಕತ್ತರಿಸಿದನು ಮತ್ತು ಇಪ್ಪತ್ತೈದು ಸಣ್ಣ ಬಾಣಗಳನ್ನು ಪ್ರಯೋಗಿಸಿ ಅವನನ್ನು ಹಿಂಸಿಸಿದನು.
ಪುತ್ರಸ್ತು ತವ ದುರ್ಧರ್ಷೋ ನಕುಲಸ್ಯ ಮಹಾಹವೇ |
ಯುಗೇಷಾಂ ಚಿಚ್ಛಿದೇ ಬಾಣೈರ್ಧ್ವಜಂ ಚೈವ ನ್ಯಪಾತಯತ್ ॥22॥
ಸೋಲಿಸಲು ಅಸಾಧ್ಯನಾದ ನಿನ್ನ ಪುತ್ರನು ಆ ದೊಡ್ಡ ಯುದ್ಧದಲ್ಲಿ ನಕುಲನ ರಥದ ನೊಗ ಮತ್ತು ಮೂಕಿಗಳನ್ನೂ ಮತ್ತು ಧ್ವಜವನ್ನೂ ಬಾಣಗಳಿಂದ ಕತ್ತರಿಸಿ ಕೆಡವಿದನು.
ದುರ್ಮುಖಃ ಸಹದೇವಂ ತು ಪ್ರತ್ಯುದ್ಯಾಯ ಮಹಾಬಲಮ್ |
ವಿವ್ಯಾಧ ಶರವರ್ಷೇಣ ಯತಮಾನಂ ಮಹಾಹವೇ ॥23॥
ದುರ್ಮುಖನು ಮಹಾಬಲನಾದ ಸಹದೇವನ ಮೇಲೆ ಎರಗಿ ಮಹಾಯುದ್ಧದಲ್ಲಿ ಬಹಳ ಪ್ರಯತ್ನಶಾಲಿಯಾಗಿದ್ದ ಅವನನ್ನು ಬಾಣಗಳ ಮಳೆಯನ್ನು ಸುರಿಸಿ ಅವನ ಜೊತೆಯಲ್ಲಿ ಯುದ್ಧ ಮಾಡಿದನು.
ಸಹದೇವಸ್ತತೋ ವೀರೋ ದುರ್ಮುಖಸ್ಯ ಮಹಾಹವೇ |
ಶರೇಣ ಭೃಶತೀಕ್ಷ್ಣೇನ ಪಾತಯಾಮಾಸ ಸಾರಥಿಮ್ ॥24॥
ವೀರನಾದ ಸಹದೇವನು ಆಗ ದೊಡ್ಡ ಯುದ್ಧದಲ್ಲಿ ತೀಕ್ಷ್ಣವಾದ ಬಾಣದಿಂದ ದುರ್ಮುಖನ ಸಾರಥಿಯನ್ನು ರಥದಿಂದ ಉರುಳಿಸಿದನು.
ತಾವನ್ಯೋನ್ಯಂ ಸಮಾಸಾದ್ಯ ಸಮರೇ ಯುದ್ಧದುರ್ಮದೌ |
ತ್ರಾಸಯೇತಾಂ ಶರೈರ್ಘೋರೈಃ ಕೃತಪ್ರತಿಕೃತೈಷಿಣೌ ॥25॥

ಯುದ್ಧ ದುರ್ಮದರೂ, ಒಬ್ಬರು ಮಾಡಿದ್ದಕ್ಕೆ ಇನ್ನೊಬ್ಬರು ಪ್ರತಿಯಾಗಿ ಮಾಡಲು ಬಯಸುವವರೂ ಆದ ಅವರಿಬ್ಬರೂ ಯುದ್ಧದಲ್ಲಿ ಪರಸ್ಪರವಾಗಿ ಸಂಧಿಸಿ ಘೋರವಾದ ಬಾಣ ಪ್ರಯೋಗಗಳಿಂದ ಪರಸ್ಪರವಾಗಿ ಹೆದರಿಸಿದರು.
ಯುಧಿಷ್ಠಿರಃ ಸ್ವಯಂ ರಾಜಾ ಮದ್ರರಾಜಾನಮಭ್ಯಯಾತ್ |
ತಸ್ಯ ಮದ್ರಾಧಿಪಶ್ಚಾಪಂ ದ್ವಿಧಾ ಚಿಚ್ಛೇದ ಮಾರಿಷ ॥26॥
ರಾಜನಾದ ಯುಧಿಷ್ಠಿರನು ತಾನೇ ಶಲ್ಯನ ಜೊತೆಯಲ್ಲಿ ಯುದ್ಧಕ್ಕೆ ಹೋದನು. ಮದ್ರರಾಜನಾದ ಶಲ್ಯನು ಯುಧಿಷ್ಠಿರನ ಬಿಲ್ಲನ್ನು ಎರಡು ಭಾಗವಾಗಿ ಕತ್ತರಿಸಿದನು.
ತದಪಾಸ್ಯ ಧನುಶ್ಛಿನ್ನಂ ಕುಂತೀಪುತ್ರೋ ಯುಧಿಷ್ಠಿರಃ |
ಅನ್ಯತ್ಕಾರ್ಮುಕಮಾದಾಯ ವೇಗವದ್ ಬಲವತ್ತರಮ್ ॥27॥
ತತೋ ಮದ್ರೇಶ್ವರಂ ರಾಜಾ ಶರೈಃ ಸನ್ನತಪರ್ವಭಿಃ |
ಛಾದಯಾಮಾಸ ಸಂಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥28॥
ಕುಂತೀಪುತ್ರನಾದ ಯುಧಿಷ್ಠಿರನು ಕತ್ತರಿಸಿ ಹೋದ ಆ ಧನುಸ್ಸನ್ನು ಬಿಟ್ಟು ಇನ್ನೊಂದು ದೃಢವಾದ ಮತ್ತು ವೇಗಶಾಲಿಯಾದ ಧನುಸ್ಸನ್ನು ತೆಗೆದುಕೊಂಡು ಯುದ್ಧ ಮಾಡಿದನು. ಆಗ ಶಲ್ಯರಾಜನನ್ನು ಬಾಗಿದ ತುದಿಯುಳ್ಳ ಬಾಣಗಳಿಂದ `ನಿಲ್ಲು, ನಿಲ್ಲು'ಎಂದು ಹೇಳುತ್ತಾ ಧರ್ಮರಾಜನು ಮುಚ್ಚಿಹಾಕಿದನು.
ಧೃಷ್ಟದ್ಯುಮ್ನಸ್ತತೋ ದ್ರೋಣಮಭ್ಯದ್ರವತ ಭಾರತ |
ತಸ್ಯ ದ್ರೋಣಃ ಸುಸಂಕ್ರುದ್ಧಃ ಪರಾಸುಕರಣಂ ದೃಢಮ್ |
ತ್ರಿಧಾ ಚಿಚ್ಛೇದ ಸಮರೇ ಯತಮಾನಸ್ಯ ಕಾರ್ಮುಕಮ್ ॥29॥
ಎಲೈ ಭಾರತನೇ, ಧೃಷ್ಟದ್ಯುಮ್ನನು ದ್ರೋಣರ ಮೇಲೆ ಎರಗಿದನು. ದ್ರೋಣರು ಬಹಳ ಕ್ರೋಧಗೊಂಡವರಾಗಿ ಯುದ್ಧದಲ್ಲಿ ಬಹಳ ಪ್ರಯತ್ನವನ್ನು ಮಾಡುತ್ತಿದ್ದ ಧೃಷ್ಟದ್ಯುಮ್ನನ ಪ್ರಾಣಾಂತಕವಾದ, ದೃಢವಾದ ಬಿಲ್ಲನ್ನು ಮೂರು ಭಾಗವಾಗಿ ಕತ್ತರಿಸಿದರು.
ಶರಂ ಚೈವ ಮಹಾಘೋರಂ ಕಾಲದಂಡಮಿವಾಪರಮ್ |
ಪ್ರೇಷಯಾಮಾಸ ಸಮರೇ ಸೋಽಸ್ಯ ಕಾಯೇ ನ್ಯಮಜ್ಜತ ॥30॥
ಮತ್ತು ಯಮದಂಡದಂತಿದ್ದ ಮಹಾಘೋರವಾದ ಇನ್ನೊಂದು ಬಾಣವನ್ನು ಅವನ ಮೇಲೆ ಪ್ರಯೋಗಿಸಿದರು. ಅದು ಧೃಷ್ಟದ್ಯುಮ್ನನ ಶರೀರದಲ್ಲಿ ನಾಟಿತು.
ಅಥಾನ್ಯದ್ ಧನುರಾದಾಯ ಸಾಯಕಾಂಶ್ಚ ಚತುರ್ದಶ |
ದ್ರೋಣಂ ದ್ರುಪದಪುತ್ರಸ್ತು ಪ್ರತಿವಿವ್ಯಾಧ ಸಂಯುಗೇ |
ತಾವನ್ಯೋನ್ಯಂ ಸುಸಂಕ್ರುದ್ಧೌ ಚಕ್ರತುಃ ಸುಭೃಶಂ ರಣಮ್ ॥31॥
ಆಗ ದ್ರುಪದ ಪುತ್ರನಾದ ಧೃಷ್ಟದ್ಯುಮ್ನನು ಇನ್ನೊಂದು ಧನುಸ್ಸನ್ನು, ಹದಿನಾಲ್ಕು ಬಾಣಗಳನ್ನು ತೆಗೆದುಕೊಂಡು ದ್ರೋಣರ ಜೊತೆಯಲ್ಲಿ ಪ್ರತಿಯಾಗಿ ಯುದ್ಧವನ್ನು ಮಾಡಿದನು. ಪರಸ್ಪರ ಸಂಕ್ರುದ್ಧರಾದ ಅವರಿಬ್ಬರೂ ತೀವ್ರವಾದ ಯುದ್ಧವನ್ನು ಮಾಡಿದರು.
ಸೌಮದತ್ತಿಂ ರಣೇ ಶಂಖೋ ರಭಸಂ ರಭಸೋ ಯುಧಿ |
ಪ್ರತ್ಯುದ್ಯಯೌ ಮಹಾರಾಜ ತಿಷ್ಠ ತಿಷ್ಠೇತಿ ಚಾಬ್ರವೀತ್ ॥32॥
ಎಲೈ ಮಹಾರಾಜನೇ, ವೇಗಶಾಲಿಯಾದ ಶಂಖರಾಜನು ವೇಗಶಾಲಿಯಾದ ಸೋಮದತ್ತನ ಪುತ್ರನಾದ ಭೂರಿಶ್ರವನ ಮೇಲೆ ಯುದ್ಧದಲ್ಲಿ ಎರಗಿ ನಿಲ್ಲು, ನಿಲ್ಲು ಎಂದು ಹೇಳಿದನು.
ತಸ್ಯ ವೈ ದಕ್ಷಿಣಂ ವೀರೋ ನಿರ್ಬಿಭೇದ ರಣೇ ಭುಜಮ್ |
ಸೌಮದತ್ತಿಸ್ತಥಾ ಶಂಖಂ ಜತ್ರುದೇಶೇ ಸಮಾಹನತ್ ॥33॥
ವೀರನಾದ ಶಂಖನು ಅವನ ಬಲಭುಜವನ್ನು ತೀವ್ರವಾಗಿ ಗಾಯಗೊಳಿಸಿದನು. ಆಗ ಭೂರಿಶ್ರವನು ಶಂಖನನ್ನು ಅವನ ಭುಜದ ಮೂಲದಲ್ಲಿ ಹೊಡೆದನು.
ತಯೋಃ ಸಮಭವದ್ ಯುದ್ಧಂ ಘೋರರೂಪಂ ವಿಶಾಂಪತೇ |
ದೃಪ್ತಯೋಃ ಸಮರೇ ತೂರ್ಣಂ ವೃತ್ರವಾಸವಯೋರಿವ ॥34॥
ಎಲೈ ರಾಜನೇ, ಸಮರದಲ್ಲಿ ದರ್ಪಶಾಲಿಗಳಾದ ಅವರಿಬ್ಬರಿಗೂ ವೃತ್ರ ಮತ್ತು ವಾಸವರಿಗೆ ನಡೆದಂತೆ ಶೀಘ್ರವಾದ ಮತ್ತು ಘೋರವಾದ ಯುದ್ಧವು ಜರುಗಿತು.
ಬಾಹ್ಲೀಕಂ ತು ರಣೇ ಕ್ರುದ್ಧಂ ಕ್ರುದ್ಧರೂಪೋ ವಿಶಾಂಪತೇ |
ಅಭ್ಯದ್ರವದಮೇಯಾತ್ಮಾ ಧೃಷ್ಟಕೇತುರ್ಮಹಾರಥಃ ॥35॥
ಎಲೈ ರಾಜನೇ, ಅಪರಿಮಿತ ಪ್ರಯತ್ನಶಾಲಿಯಾದ ಮಹಾರಥನಾದ ಧೃಷ್ಟಕೇತುವು ಕ್ರೋಧಗೊಂಡು ಯುದ್ಧದಲ್ಲಿ ಕ್ರುದ್ಧನಾದ ಬಾಹ್ಲೀಕನ ಕಡೆಗೆ ಧಾವಿಸಿದನು.
ಬಾಹ್ಲೀಕಸ್ತು ತತೋ ರಾಜನ್ ಧೃಷ್ಟಕೇತುಮಮರ್ಷಣಮ್ |
ಶರೈರ್ಬಹುಭಿರಾನರ್ಚ್ಛತ್ ಸಿಂಹನಾದಮಥಾನದತ್ ॥36॥
ಎಲೈ ರಾಜನೇ, ಆಗ ಬಾಹ್ಲೀಕನು ಕ್ರೋಧಗೊಂಡ ಧೃಷ್ಟಕೇತುವನ್ನು ಅನೇಕ ಬಾಣಗಳಿಂದ ಘಾಸಿಗೊಳಿಸಿ ಸಿಂಹನಾದವನ್ನು ಮಾಡಿದನು.
ಚೇದಿರಾಜಸ್ತು ಸಂಕ್ರುದ್ಧೋ ಬಾಹ್ಲೀಕಂ ನವಭಿಃ ಶರೈಃ |
ವಿವ್ಯಾಧ ಸಮರೇ ತೂರ್ಣಂ ಮತ್ತೋ ಮತ್ತಮಿವ ದ್ವಿಪಮ್ ॥37॥
ಚೇದಿರಾಜನಾದ ಧೃಷ್ಟಕೇತುವು ಕ್ರೋಧಗೊಂಡು ಮದಿಸಿದ ಗಜದ ಜೊತೆಯಲ್ಲಿ ಯುದ್ಧಮಾಡುವಂತೆ ಒಂಬತ್ತು ಬಾಣಗಳನ್ನು

ಶೀಘ್ರವಾಗಿ ಅವನ ಮೇಲೆ ಪ್ರಯೋಗಿಸಿದನು.
ತೌ ತತ್ರ ಸಮರೇ ಕ್ರುದ್ಧೌ ನರ್ದಂತೌ ಚ ಮುಹುರ್ಮುಹುಃ |
ಸಮೀಯತುಃ ಸುಸಂಕ್ರುದ್ಧಾವಂಗಾರಕಬುಧಾವಿವ ॥38॥
ಅವರಿಬ್ಬರೂ ಯುದ್ಧದಲ್ಲಿ ಪುನಃ ಪುನಃ ಕ್ರುದ್ಧರಾಗಿ ಗರ್ಜಿಸುತ್ತಾ ಅಂಗಾರಕ ಮತ್ತು ಬುಧರಂತೆ ಪರಸ್ಪರವಾಗಿ ಎರಗಿದರು.
ರಾಕ್ಷಸಂ ಕ್ರೂರಕರ್ಮಾಣಂ ಕ್ರೂರಕರ್ಮಾ ಘಟೋತ್ಕಚಃ |
ಅಲಂಬುಸಂ ಪ್ರತ್ಯುದಿಯಾದ್ ಬಲಂ ಶಕ್ರ ಇವಾಹವೇ ॥39॥
ಕ್ರೂರಕರ್ಮನಾದ ಘಟೋತ್ಕಚನು, ಕ್ರೂರಕರ್ಮನಾದ ಅಲಂಬುಸ ರಾಕ್ಷಸನ ಮೇಲೆ ಇಂದ್ರನು ಬಲಾಸುರನ ಮೇಲೆ ಎರಗಿದಂತೆ ಎರಗಿದನು.
ಘಟೋತ್ಕಚಸ್ತು ಸಂಕ್ರುದ್ಧೋ ರಾಕ್ಷಸಂ ತಂ ಮಹಾಬಲಮ್ |
ನವತ್ಯಾ ಸಾಯಕೈಸ್ತೀಕ್ಷ್ಣೈರ್ದಾರಯಾಮಾಸ ಭಾರತ ॥40॥
ಎಲೈ ಭಾರತನೇ, ಬಹಳ ಕೋಪಗೊಂಡ ಘಟೋತ್ಕಚನು ಆ ಮಹಾಬಲನಾದ ರಾಕ್ಷಸನನ್ನು ತೊಂಬತ್ತು ಬಾಣಗಳಿಂದ ಹರಿದು ಹಾಕಿದಂತೆ ಮಾಡಿದನು.
ಅಲಂಬುಸಸ್ತು ಸಮರೇ ಭೈಮಸೇನಿಂ ಮಹಾಬಲಮ್ |
ಬಹುಧಾ ವಾರಯಾಮಾಸ ಶರೈಃ ಸನ್ನತಪರ್ವಭಿಃ ॥41॥
ಅಲಂಬುಸನಾದರೂ ಯುದ್ಧದಲ್ಲಿ ಮಹಾಬಲನಾದ ಘಟೋತ್ಕಚನ ಮೇಲೆ ಬಾಗಿದ ತುದಿಯುಳ್ಳ ಅನೇಕ ಬಾಣಗಳನ್ನು ಪ್ರಯೋಗಿಸಿ ಅವನನ್ನು ಅನೇಕ ರೀತಿಯಲ್ಲಿ ತಡೆದನು.
ವ್ಯಭ್ರಾಜೇತಾಂ ತತಸ್ತೌ ತು ಸಂಯುಗೇ ಶರವಿಕ್ಷತೌ |
ಯಥಾ ದೇವಾಸುರೇ ಯುದ್ಧೇ ಬಲಶಕ್ರೌ ಮಹಾಬಲೌ ॥42॥
ಬಾಣಗಳಿಂದ ಗಾಯಗೊಂಡ ಅವರಿಬ್ಬರೂ ದೇವಾಸುರಯುದ್ಧದಲ್ಲಿ ಮಹಾಬಲಿಷ್ಠರಾದ ಬಲಾಸುರ ಮತ್ತು ಇಂದ್ರನಂತೆ ಶೋಭಿಸಿದರು.
ಶಿಖಂಡೀ ಸಮರೇ ರಾಜನ್ ದ್ರೌಣಿಮಭ್ಯುದ್ಯಯೌ ಬಲೀ |
ಅಶ್ವತ್ಥಾಮಾ ತತಃ ಕ್ರುದ್ಧಃ ಶಿಖಂಡಿನಮವಸ್ಥಿತಮ್ ॥43॥
ನಾರಾಚೇನ ಸುತೀಕ್ಷ್ಣೇನ ಭೃಶಂ ವಿದ್ಧ್ವಾ ವ್ಯಕಂಪಯತ್ |
ಶಿಖಂಡ್ಯಪಿ ತತೋ ರಾಜನ್ ದ್ರೋಣಪುತ್ರಮತಾಡಯತ್ ॥44॥
ಎಲೈ ರಾಜನೇ, ಬಲಿಷ್ಠನಾದ ಶಿಖಂಡಿಯು ಯುದ್ಧದಲ್ಲಿ ದ್ರೋಣಪುತ್ರರಾದ ಅಶ್ವತ್ಥಾಮರ ಮೇಲೆ ಎರಗಿದನು. ಅಶ್ವತ್ಥಾಮರು ಕ್ರೋಧಗೊಂಡು ಎದುರಿಗೆ ನಿಂತ ಶಿಖಂಡಿಯ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗ ಮಾಡಿ ಅವನನ್ನು ಚೆನ್ನಾಗಿ ಗಾಯ ಮಾಡಿ ನಡುಗಿಸಿದರು. ರಾಜನೇ, ಆಗ ಶಿಖಂಡಿಯು ದ್ರೋಣ ಪುತ್ರರ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.
ಸಾಯಕೇನ ಸುಪೀತೇನ ತೀಕ್ಷ್ಣೇನ ನಿಶಿತೇನ ಚ |
ತೌ ಜಘ್ನತುಸ್ತದಾನ್ಯೋನ್ಯಂ ಶರೈರ್ಬಹುವಿಧೈರ್ಮೃಧೇ ॥45॥
ಬಹಳ ಹಳದಿಯ ಬಣ್ಣವನ್ನು ಹೊಂದಿದ್ದ ತೀಕ್ಷ್ಣವಾದ ಬಾಣಗಳಿಂದ ಮತ್ತು ಇನ್ನೂ ಅನೇಕ ವಿಧವಾದ ಬಾಣಗಳಿಂದ ಯುದ್ಧದಲ್ಲಿ ಅವರು ಪರಸ್ಪರವಾಗಿ ಹೊಡೆದಾಡಿದರು.
ಭಗದತ್ತಂ ರಣೇ ಶೂರಂ ವಿರಾಟೋ ವಾಹಿನೀಪತಿಃ |
ಅಭ್ಯಯಾತ್ ತ್ವರಿತೋ ರಾಜನ್ ತತೋ ಯುದ್ಧಮವರ್ತತ ॥46॥
ಎಲೈ ರಾಜನೇ, ಶೂರನಾದ ಭಗದತ್ತನ ಮೇಲೆ ಅಕ್ಷೋಹಿಣಿ ಪತಿಯಾದ ವಿರಾಟನು ಶೀಘ್ರವಾಗಿ ಎರಗಿದನು. ಆನಂತರ ಅವರಿಬ್ಬರ ಯುದ್ಧವು ಪ್ರಾರಂಭವಾಯಿತು.
ವಿರಾಟೋ ಭಗದತ್ತೇನ ಶರವರ್ಷೇಣ ತಾಡಿತಃ |
ಅಭ್ಯವರ್ಷತ್ ಸುಸಂಕ್ರುದ್ಧೋ ಮೇಘೋ ವೃಷ್ಟ್ಯಾ ಇವಾಚಲಮ್ ॥
ಭಗದತ್ತನ ಬಾಣಗಳ ವರ್ಷದಿಂದ ಹೊಡೆಯಲ್ಪಟ್ಟ ವಿರಾಟನು ಬಹಳ ಕೋಪಗೊಂಡು ಮೇಘವು ಬೆಟ್ಟಗಳ ಮೇಲೆ ಸುರಿಸಿದಂತೆ ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ಭಗದತ್ತಸ್ತತಸ್ತೂರ್ಣಂ ವಿರಾಟಂ ಪೃಥಿವೀಪತಿಮ್ |
ಛಾದಯಾಮಾಸ ಸಮರೇ ಮೇಘಃ ಸೂರ್ಯಮಿವೋದಿತಮ್ ॥48॥
ಆಗ ಭಗದತ್ತನು ವಿರಾಟರಾಜನನ್ನು ಶೀಘ್ರವಾಗಿ ಮೋಡವು ಸೂರ್ಯನನ್ನು ಮುಚ್ಚುವಂತೆ ತನ್ನ ಬಾಣಗಳ ಮಳೆಯಿಂದ ಮುಚ್ಚಿಹಾಕಿದನು.
ಬೃಹತ್ಕ್ಷತ್ರಂ ತು ಕೈಕೇಯಂ ಕೃಪಃ ಶಾರದ್ವತೋ ಯಯೌ |
ತಂ ಕೃಪಃ ಶರವರ್ಷೇಣ ಛಾದಯಾಮಾಸ ಭಾರತ ॥49॥
ಕೈಕೇಯರಾಜನಾದ ಬೃಹತ್ಕ್ಷತ್ರನ ಜೊತೆಯಲ್ಲಿ ಕೃಪಾಚಾರ್ಯರು ಯುದ್ಧವನ್ನು ಮಾಡಿದರು. ಎಲೈ ಭಾರತನೇ, ಕೃಪಾಚಾರ್ಯರು ಅವನನ್ನು ಬಾಣಗಳ ಮಳೆಯಿಂದ ಮುಚ್ಚಿಹಾಕಿದರು.
ಗೌತಮಂ ಕೇಕಯಃ ಕ್ರುದ್ಧಃ ಶರವೃಷ್ಟ್ಯಾಭ್ಯಪೂರಯತ್ |
ತಾವನ್ಯೋನ್ಯಂ ಹಯಾನ್ ಹತ್ವಾ ಧನುಷೀ ವಿನಿಕೃತ್ಯ ವೈ ॥50॥
ವಿರಥಾವಸಿಯುದ್ಧಾಯ ಸಮೀಯತುರಮರ್ಷಣೌ |

ತಯೋಸ್ತದಭವದ್ ಯುದ್ಧಂ ಘೋರರೂಪಂ ಸುದಾರುಣಮ್ ॥51॥
ಕ್ರುದ್ಧನಾದ ಕೇಕಯ ರಾಜನು ಕೃಪಾಚಾರ್ಯರನ್ನು ಬಾಣದ ಮಳೆಯಿಂದ ಮುಚ್ಚಿ ಹಾಕಿದನು. ಅವರಿಬ್ಬರೂ ಪರಸ್ಪರವಾಗಿ ರಥಾಶ್ವಗಳನ್ನು ಕೊಂದು, ಧನುಸ್ಸುಗಳನ್ನು ಕತ್ತರಿಸಿ, ರಥವನ್ನು ಕಳೆದುಕೊಂಡು, ಖಡ್ಗಯುದ್ಧಕ್ಕಾಗಿ ಕೋಪಗೊಂಡು ಒಬ್ಬರನ್ನೊಬ್ಬರು ಎದುರಿಸಿದರು. ಅವರಿಬ್ಬರಿಗೂ ಘೋರವೂ, ಅತಿಭಯಂಕರವೂ ಆದ ಖಡ್ಗ ಯುದ್ಧವು ನಡೆಯಿತು.
ದ್ರುಪದಸ್ತು ತತೋ ರಾಜಾ ಸೈಂಧವಂ ವೈ ಜಯದ್ರಥಮ್ ।
ಅಭ್ಯುದ್ಯಯೌ ಸಂಪ್ರಹೃಷ್ಟೋ ಹೃಷ್ಟರೂಪಂ ಪರಂತಪ ॥52॥
ಎಲೈ ಪರಂತಪನೇ, ಆಗ ಯುದ್ಧದಲ್ಲಿ ದ್ರುಪದನು ಬಹಳ ಸಂತೋಷಗೊಂಡು ಸಿಂಧುದೇಶದ ರಾಜನಾದ, ಸಂತೋಷದಿಂದ ಕೂಡಿದ ಜಯದ್ರಥನ ಮೇಲೆ ಯುದ್ಧಕ್ಕೆ ಹೋದನು.
ತತಃ ಸೈಂಧವಕೋ ರಾಜಾ ದ್ರುಪದಂ ವಿಶಿಖೈಸ್ತ್ರಿಭಿಃ ।
ತಾಡಯಾಮಾಸ ಸಮರೇ ಸ ಚ ತಂ ಪ್ರತ್ಯವಿಧ್ಯತ ॥53॥
ಸಿಂಧುರಾಜನಾದ ಜಯದ್ರಥನು ಮೂರು ಬಾಣಗಳನ್ನು ಪ್ರಯೋಗಿಸಿ ದ್ರುಪದನನ್ನು ಹೊಡೆದನು. ದ್ರುಪದನಾದರೂ ಯುದ್ಧದಲ್ಲಿ ಪ್ರತಿಯಾಗಿ ಅವನ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.
ತಯೋಃ ಸಮಭವದ್ ಯುದ್ಧಂ ಘೋರರೂಪಂ ಸುದಾರುಣಮ್ ।
ಈಕ್ಷಿತೃಪ್ರೀತಿಜನನಂ ಶುಕ್ರಾಂಗಾರಕಯೋರಿವ ॥54॥
ಶುಕ್ರ-ಅಂಗಾರಕರಂತಿದ್ದ ಅವರಿಬ್ಬರಿಗೂ ನೋಡುವವರಿಗೆ ಸಂತೋಷವನ್ನುಂಟು ಮಾಡುವಂತೆ ಘೋರವೂ ಮತ್ತು ಅತ್ಯಂತ ದಾರುಣವೂ ಆದ ಯುದ್ಧವು ಜರುಗಿತು.
ವಿಕರ್ಣಸ್ತು ಸುತಸ್ತುಭ್ಯಂ ಸುತಸೋಮಂ ಮಹಾಬಲಮ್ ।
ಅಭ್ಯಯಾಜ್ಜವನೈರಶ್ವೈಸ್ತತೋ ಯುದ್ಧಮವರ್ತತ ॥55॥
ನಿನ್ನ ಮಗನಾದ ವಿಕರ್ಣನು ಭೀಮಸೇನನ ಮಗನಾದ, ಮಹಾಬಲನಾದ ಸುತಸೋಮನನ್ನು ಕುರಿತು ಮಹಾವೇಗಶಾಲಿಯಾದ ಅಶ್ವಗಳನ್ನು ಹೂಡಿದ ರಥದಲ್ಲಿ ಧಾವಿಸಿದನು. ಅನಂತರ ಅವರಿಬ್ಬರಿಗೂ ಯುದ್ಧವು ನಡೆಯಿತು.
ವಿಕರ್ಣಃ ಸುತಸೋಮಂ ತು ವಿದ್ಧ್ವಾ ನಾಕಂಪಯಚ್ಛರೈಃ ।
ಸುತಸೋಮೋ ವಿಕರ್ಣಂ ಚ ತದದ್ಭುತಮಿವಾಭವತ್ ॥56॥
ವಿಕರ್ಣನು ಸುತಸೋಮನ ಮೇಲೆ ಬಾಣ ಪ್ರಯೋಗವನ್ನು ಮಾಡಿ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ. ಸುತಸೋಮನೂ ವಿಕರ್ಣನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ. ಅದು ಅದ್ಭುತವಾಗಿದ್ದಿತು.
ಸುಶರ್ಮಾಣಂ ನರವ್ಯಾಘ್ರಂ ಚೇಕಿತಾನೋ ಮಹಾರಥಃ ।
ಅಭ್ಯದ್ರವತ್ ಸುಸಂಕ್ರುದ್ಧಃ ಪಾಂಡವಾರ್ಥೇ ಪರಾಕ್ರಮೀ ॥57॥
ಮಹಾರಥನೂ, ಪರಾಕ್ರಮಿಯೂ ಆದ ಚೇಕಿತಾನನು ಬಹಳ ಕೋಪಗೊಂಡು ಪಾಂಡವರ ಸಲುವಾಗಿ ನರವ್ಯಾಘ್ರನಾದ ಸುಶರ್ಮನ ಮೇಲೆ ಎರಗಿದನು.
ಸುಶರ್ಮಾ ತು ಮಹಾರಾಜ ಚೇಕಿತಾನಂ ಮಹಾರಥಮ್ ।
ಮಹತಾ ಶರವರ್ಷೇಣ ವಾರಯಾಮಾಸ ಸಂಯುಗೇ ॥58॥
ಎಲೈ ಮಹಾರಾಜನೇ, ಸುಶರ್ಮನಾದರೂ ಮಹಾರಥನಾದ ಚೇಕಿತಾನನನ್ನು ಯುದ್ಧದಲ್ಲಿ ದೊಡ್ಡ ಬಾಣಗಳ ಮಳೆಯನ್ನು ಸುರಿಸಿ ಅವನನ್ನು ತಡೆದನು.
ಚೇಕಿತಾನೋऽಪಿ ಸಂರಬ್ಧಃ ಸುಶರ್ಮಾಣಂ ಮಹಾಹವೇ ।
ಪ್ರಾಚ್ಛಾದಯತ್ ತಮ್ ಇಷುಭಿರ್ಮಹಾಮೇಘ ಇವಾಚಲಮ್ ॥59॥
ಚೇಕಿತಾನನೂ ಸಹ ಕ್ರೋಧಗೊಂಡು ಆ ದೊಡ್ಡ ಯುದ್ಧದಲ್ಲಿ ಮಹಾಮೇಘವು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಬಾಣ ಪ್ರಯೋಗವನ್ನು ಮಾಡಿ ಅವನನ್ನು ಮುಚ್ಚಿಹಾಕಿದನು.
ಶಕುನಿಃ ಪ್ರತಿವಿಂಧ್ಯಂ ತು ಪರಾಕ್ರಾಂತಂ ಪರಾಕ್ರಮೀ ।
ಅಭ್ಯದ್ರವತ ರಾಜೇಂದ್ರ ಮತ್ತೋ ಮತ್ತಮಿವ ದ್ವಿಪಮ್ ॥60॥
ಎಲೈ ರಾಜನೇ, ಪರಾಕ್ರಮಶಾಲಿಯಾದ ಶಕುನಿಯು, ಪರಾಕ್ರಮಶಾಲಿಯಾದ ಯುಧಿಷ್ಠಿರನ ಪುತ್ರನಾದ ಪ್ರತಿವಿಂಧ್ಯನ ಮೇಲೆ ಮದಗಜವು ಮದಗಜದ ಮೇಲೆ ಎರಗಿದಂತೆ ಎರಗಿದನು.
ಯೌಧಿಷ್ಠಿರಸ್ತು ಸಂಕ್ರುದ್ಧಃ ಸೌಬಲಂ ನಿಶಿತೈಃ ಶರೈಃ ।
ವ್ಯದಾರಯತ ಸಂಗ್ರಾಮೇ ಮಘವಾನಿವ ದಾನವಮ್ ॥61॥
ಯುಧಿಷ್ಠಿರನ ಮಗನಾದ ಪ್ರತಿವಿಂಧ್ಯನು ಕ್ರುದ್ಧನಾಗಿ ಯುದ್ಧದಲ್ಲಿ ಶಕುನಿಯನ್ನು ನಿಶಿತವಾದ ಬಾಣಗಳಿಂದ ಇಂದ್ರನು ದಾನವರನ್ನು ಸೀಳಿದಂತೆ ಸೀಳಿದನು.
ಶಕುನಿಃ ಪ್ರತಿವಿಂಧ್ಯಂ ತು ಪ್ರತಿವಿಧ್ಯಂತಮಾಹವೇ ।
ವ್ಯದಾರಯನ್ ಮಹಾಪ್ರಾಜ್ಞಃ ಶರೈಃ ಸನ್ನತಪರ್ವಭಿಃ ॥62॥
ಎಲೈ ಮಹಾಪ್ರಾಜ್ಞನೇ, ತನ್ನ ಎದುರಿಗೆ ಯುದ್ಧ ಮಾಡುತ್ತಿದ್ದ ಪ್ರತಿವಿಂಧ್ಯನನ್ನು ಶಕುನಿಯು ಬಾಗಿದ ತುದಿಗಳುಳ್ಳ ಬಾಣಗಳಿಂದ ಗಾಯಗೊಳಿಸಿದನು.
ಸುದಕ್ಷಿಣಂ ತು ರಾಜೇಂದ್ರ ಕಾಂಬೋಜಾನಾಂ ಮಹಾರಥಮ್ ।
ಶ್ರುತಕರ್ಮಾ ಪರಾಕ್ರಾಂತಮಭ್ಯದ್ರವತ ಸಂಯುಗೇ ॥63॥

ಎಲೈ ರಾಜೇಂದ್ರನೇ, ಕಾಂಬೋಜ ರಾಜನೂ, ಮಹಾರಥನೂ, ಪರಾಕ್ರಮಶಾಲಿಯೂ ಆದ ಸುದಕ್ಷಿಣನನ್ನು ಸಹದೇವನ ಮಗನಾದ ಶ್ರುತಕರ್ಮನನ್ನು ಎದುರಿಸಿದನು.
ಸುದಕ್ಷಿಣಸ್ತು ಸಮರೇ ಸಾಹದೇವಿಂ ಮಹಾರಥಮ್ |
ವಿದ್ಧ್ವಾ ನಾಕಂಪಯತ ವೈ ಮೈನಾಕಮಿವ ಪರ್ವತಮ್ ॥64॥
ಸುದಕ್ಷಿಣನಾದರೂ ಯುದ್ಧದಲ್ಲಿ ಮಹಾರಥನಾದ ಶ್ರುತಕರ್ಮನನ್ನು ಬಾಣಗಳಿಂದ ಹೊಡೆದರೂ ಮೈನಾಕ ಪರ್ವತದಂತೆ ಸ್ಥಿರವಾಗಿದ್ದ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ.
ಶ್ರುತಕರ್ಮಾ ತತಃ ಕ್ರುದ್ಧಃ ಕಾಂಬೋಜಾನಾಂ ಮಹಾರಥಮ್ |
ಶರೈರ್ಬಹುಭಿರಾನರ್ಚ್ಛದ್ ದಾರಯನ್ನಿವ ಸರ್ವಶಃ ॥65॥
ಆಗ ಕೋಪಗೊಂಡ ಶ್ರುತಕರ್ಮನು ಕಾಂಬೋಜರ ಮಹಾರಥನಾದ ಸುದಕ್ಷಿಣನನ್ನು ಅನೇಕ ಬಾಣಗಳಿಂದ ಸೀಳುವವನಂತೆ ಎಲ್ಲ ಕಡೆಗಳಲ್ಲಿಯೂ ಗಾಯಗೊಳಿಸಿದನು.
ಇರಾವಾನಥ ಸಂಕ್ರುದ್ಧಃ ಶ್ರುತಾಯುಷಮಮರ್ಷಣಮ್ |
ಪ್ರತ್ಯುದ್ಯಯೌ ರಣೇ ಯತ್ತೋ ಯತ್ತರೂಪಂ ಪರಂತಪಃ ॥66॥
ಅರ್ಜುನನ ಮಗನಾದ ಇರಾವಂತನು ಕೋಪಗೊಂಡು ಸನ್ನದ್ಧನಾಗಿದ್ದ ಶ್ರುತಾಯುವಿನ ಮೇಲೆ ತಾನೂ ಸನ್ನದ್ಧನಾಗಿ ಯುದ್ಧದಲ್ಲಿ ಎರಗಿದನು.
ಆರ್ಜುನಿಸ್ತಸ್ಯ ಸಮರೇ ಹಯಾನ್ ಹತ್ವಾ ಮಹಾರಥಃ |
ನನಾದ ಸುಮಹನ್ನಾದಂ ತೇ ಸೈನ್ಯಾನ್ಯಸ್ಯ ಪೂಜಯನ್ ॥67॥
ಮಹಾರಥನಾದ ಅರ್ಜುನನ ಪುತ್ರನು ಯುದ್ಧದಲ್ಲಿ ಅವನ ಕುದುರೆಗಳನ್ನು ಕೊಂದು ದೊಡ್ಡ ನಾದವನ್ನು ಮಾಡಿದನು. ನಿನ್ನ ಸೈನ್ಯವೂ ಸಹ ಇರಾವಂತನ ವೀರಕರ್ಮವನ್ನು ಪೂಜಿಸಿತು.
ಶ್ರುತಾಯುಸ್ತ್ವಥ ಸಂಕ್ರುದ್ಧಃ ಫಾಲ್ಗುನೇಃ ಸಮರೇ ಹಯಾನ್ |
ನಿಜಘಾನ ಗದಾಗ್ರೇಣ ತತೋ ಯುದ್ಧಮವರ್ತತ ॥68॥
ಆಗ ಶ್ರುತಾಯುವು ಕ್ರೋಧಗೊಂಡು ಇರಾವಂತನ ರಥದ ಕುದುರೆಗಳನ್ನು ತನ್ನ ಗದೆಯ ಅಗ್ರಭಾಗದಿಂದ ಕೊಂದನು. ಅನಂತರ ಯುದ್ಧವು ಮುಂದುವರೆಯಿತು.
ವಿಂದಾನುವಿಂದಾವಾವಂತ್ಯೌ ಕುಂತಿಭೋಜಂ ಮಹಾರಥಮ್ |
ಸಸೇನಂ ಸಸುತಂ ವೀರಂ ಸಂಸಸಜ್ಜತುರಾಹವೇ ॥69॥
ಅವಂತಿದೇಶದ ವಿಂದಾನುವಿಂದರು ಯುದ್ಧದಲ್ಲಿ ತನ್ನ ಸೇನೆ ಮತ್ತು ಮಕ್ಕಳಿಂದ ಕೂಡಿದ ಮಹಾರಥನಾದ ಕುಂತಿಭೋಜನ ಜೊತೆಯಲ್ಲಿ ಸೆಣೆಸಿದರು.
ತತ್ರಾದ್ಭುತಮಪಶ್ಯಾಮ ಆವಂತ್ಯಾನಾಂ ಪರಾಕ್ರಮಮ್ |
ಯದಯುಧ್ಯನ್ ಸ್ಥಿರಾ ಭೂತ್ವಾ ಮಹತ್ಯಾ ಸೇನಯಾ ಸಹ ॥70॥
ಅವಂತಿದೇಶದ ಸೈನಿಕರು ಸ್ಥಿರವಾಗಿ ನಿಂತು ದೊಡ್ಡ ಸೈನ್ಯದ ಜೊತೆಯಲ್ಲಿ ಯುದ್ಧ ಮಾಡಿದ ಅವರ ಅದ್ಭುತ ಪರಾಕ್ರಮವನ್ನು ಅಲ್ಲಿ ನೋಡಿದೆವು.
ಅನುವಿಂದಸ್ತು ಗದಯಾ ಕುಂತಿಭೋಜಮತಾಡಯತ್ |
ಕುಂತಿಭೋಜಸ್ತತಸ್ತೂರ್ಣಂ ಶರವ್ರಾತೈರವಾಕಿರತ್ ॥71॥
ಅನುವಿಂದನು ಕುಂತಿಭೋಜನನ್ನು ಗದೆಯಿಂದ ಹೊಡೆದನು. ಕುಂತಿಭೋಜನು ಶೀಘ್ರವಾಗಿ ಬಾಣಗಳ ಸಮೂಹವನ್ನು ಅವನ ಮೇಲೆ ಸುರಿಸಿದನು.
ಕುಂತಿಭೋಜಸುತಶ್ಚಾಪಿ ವಿಂದಂ ವಿವ್ಯಾಧ ಸಾಯಕೈಃ |
ಸ ಚ ತಂ ಪ್ರತಿವಿವ್ಯಾಧ ತದದ್ಭುತಮಿವಾಭವತ್ ॥72॥
ಕುಂತಿಭೋಜನ ಪುತ್ರನೂ ಸಹ ವಿಂದನ ಜೊತೆಯಲ್ಲಿ ಬಾಣಗಳಿಂದ ಯುದ್ಧ ಮಾಡಿದನು. ವಿಂದನೂ ಸಹ ಅದಕ್ಕೆ ಪ್ರತಿಯಾಗಿ ಬಾಣಗಳನ್ನು ಪ್ರಯೋಗಿಸಿದನು. ಅದು ಅದ್ಭುತವಾಗಿದ್ದಿತು.
ಕೇಕಯಾ ಭ್ರಾತರಃ ಪಂಚ ಗಾಂಧಾರಾನ್ ಪಂಚ ಮಾರಿಷ |
ಸಸೈನ್ಯಾಸ್ತೇ ಸಸೈನ್ಯಾಂಶ್ಚ ಯೋಧಯಾಮಾಸುರಾಹವೇ ॥73॥
ಎಲೈ ವೀರನೇ, ಕೇಕಯದೇಶದ ಐವರು ಸಹೋದರರು ತಮ್ಮ ಸೈನ್ಯಗಳಿಂದ ಕೂಡಿ, ತಮ್ಮ ಸೈನ್ಯದಿಂದ ಕೂಡಿದ ಗಾಂಧಾರದೇಶದ ಐವರು ರಾಜರೊಡನೆ ಯುದ್ಧವನ್ನು ಮಾಡಿದರು.
ವೀರಬಾಹುಶ್ಚ ತೇ ಪುತ್ರೋ ವೈರಾಟಿಂ ರಥಸತ್ತಮಮ್ |
ಉತ್ತರಂ ಯೋಧಯಾಮಾಸ ವಿವ್ಯಾಧ ನಿಶಿತೈಃ ಶರೈಃ |
ಉತ್ತರಶ್ಚಾಪಿ ತಂ ಧೀರಂ ವಿವ್ಯಾಧ ನಿಶಿತೈಃ ಶರೈಃ ॥74॥
ನಿನ್ನ ಪುತ್ರನಾದ ವೀರಬಾಹುವು ವಿರಾಟನ ಪುತ್ರನಾದ ರಥಶ್ರೇಷ್ಠನಾದ ಉತ್ತರನ ಜೊತೆಯಲ್ಲಿ ಹರಿತವಾದ ಬಾಣಗಳಿಂದ ಯುದ್ಧಮಾಡಿದನು. ಉತ್ತರನೂ ಸಹ ಅವನನ್ನು ಹರಿತವಾದ ಬಾಣಗಳಿಂದ ಘೋರವಾಗಿ ಯುದ್ಧ ಮಾಡಿ ವ್ಯಥೆ ಪಡಿಸಿದನು.
ಚೇದಿರಾಟ್ ಸಮರೇ ರಾಜನ್ನುಲೂಕಂ ಸಮಭಿದ್ರವತ್ |
ಉಲೂಕಶ್ಚಾಪಿ ತಂ ಬಾಣೈರ್ನಿಶಿತೈರ್ಲೋಮವಾಹಿಭಿಃ ॥75॥
ಎಲೈ ರಾಜನೇ, ಚೇದಿರಾಜನು ಯುದ್ಧದಲ್ಲಿ ಉಲೂಕನ ಮೇಲೆ ಧಾವಿಸಿದನು. ಉಲೂಕನೂ ಸಹ ಕೂದಲನ್ನು ಸೀಳುವಂತಹ

ಬಾಣಗಳಿಂದ ಅವನ ಜೊತೆಯಲ್ಲಿ ಯುದ್ಧ ಮಾಡಿದನು.
ತಯೋರ್ಯುದ್ಧಂ ಸಮಭವದ್ ಘೋರರೂಪಂ ವಿಶಾಂಪತೇ |
ದಾರಯೇತಾಂ ಸುಸಂಕ್ರುದ್ಧಾವನ್ಯೋನ್ಯಮಪರಾಜಿತೌ ||76||
ಎಲೈ ರಾಜನೇ, ಅವರಿಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ಅಪರಾಜಿತರಾದ ಅವರಿಬ್ಬರೂ ಬಹಳ ಕ್ರುದ್ಧರಾಗಿ ಪರಸ್ಪರವಾಗಿ ಒಬ್ಬರನ್ನೊಬ್ಬರು ಸೀಳಿ ಗಾಯಗೊಳಿಸಿದರು.
ಏವಂ ದ್ವಂದ್ವಸಹಸ್ರಾಣಿ ರಥವಾರಣವಾಜಿನಾಮ್ |
ಪದಾತೀನಾಂ ಚ ಸಮರೇ ತವ ತೇಷಾಂ ಚ ಸಂಕುಲಮ್ ||77||
ಹೀಗೆ ಯುದ್ಧದಲ್ಲಿ ಪದಾತಿಗಳಿಗೂ, ರಥಗಳಿಗೂ, ಗಜಗಳಿಗೂ ಮತ್ತು ಅಶ್ವಗಳಿಗೂ ನಿನ್ನ ಮತ್ತು ಅವರ ಸೈನ್ಯದಲ್ಲಿ ಸಹಸ್ರಾರು ಸಂಖ್ಯೆಯ ದ್ವಂದ್ವ ಯುದ್ಧವು ನಡೆಯಿತು.
ಮುಹೂರ್ತಮಿವ ತದ್ಯುದ್ಧಮಾಸೀನ್ಮಧುರದರ್ಶನಮ್ |
ತತ ಉನ್ಮತ್ತವದ್ ರಾಜನ್ ನ ಪ್ರಾಜ್ಞಾಯತ ಕಿಂಚನ ||78||
ಎಲೈ ರಾಜನೇ, ಒಂದು ಮುಹೂರ್ತದ ಕಾಲ ಆ ಯುದ್ಧವು ನೋಡಲು ಮಧುರವಾಗಿದ್ದಿತು. ಅನಂತರ ಹುಚ್ಚೆದ್ದಂತೆ ಏನೂ ತಿಳಿಯಲಿಲ್ಲ.
ಗಜೋ ಗಜೇನ ಸಮರೇ ರಥೀ ಚ ರಥಿನಂ ಯಯೌ |
ಅಶ್ವೋಽಶ್ವಂ ಸಮಭಿಪ್ರೇತ್ಯ ಪದಾತಿಶ್ಚ ಪದಾತಿನಮ್ ||79||
ಗಜವು ಗಜದ ಜೊತೆಯಲ್ಲಿಯೂ, ರಥಿಯು ರಥಿಕನ ಜೊತೆಯಲ್ಲಿಯೂ, ಅಶ್ವಾರೋಹಿಯು ಅಶ್ವಾರೋಹಿಯ ಜೊತೆಯಲ್ಲಿಯೂ, ಪದಾತಿಯು ಪದಾತಿಯ ಜೊತೆಯಲ್ಲಿಯೂ ಒಬ್ಬರನ್ನೊಬ್ಬರು ಉದ್ದೇಶಿಸಿ ಮುನ್ನುಗ್ಗಿದರು.
ತತೋ ಯುದ್ಧಂ ಸುದುರ್ಧರ್ಷಂ ವ್ಯಾಕುಲಂ ಸಮಪದ್ಯತ |
ಶೂರಾಣಾಂ ಸಮರೇ ತತ್ರ ಸಮಾಸಾದ್ಯ ಪರಸ್ಪರಮ್ ||80||
ಆಗ ಪರಸ್ಪರವಾಗಿ ಮುನ್ನುಗ್ಗಿ ಯುದ್ಧ ಮಾಡುವ ಶೂರರಿಂದ ಯುದ್ಧದಲ್ಲಿ ಎಲ್ಲವೂ ಕಲಸಿ ಹೋಯಿತು.
ತತ್ರ ದೇವರ್ಷಯಃ ಸಿದ್ಧಾಶ್ಚಾರಣಾಶ್ಚ ಸಮಾಗತಾಃ |
ಪ್ರೈಕ್ಷಂತ ತದ್ ರಣಂ ಘೋರಂ ದೇವಾಸುರರಣೋಪಮಮ್ ||81||
ತತೋ ದಂತಿಸಹಸ್ರಾಣಿ ರಥಾನಾಂ ಚಾಪಿ ಮಾರಿಷ |
ಅಶ್ವೌಘಾಃ ಪುರುಷೌಘಾಶ್ಚ ವಿಪರೀತಂ ಸಮಾಯಯುಃ ||82||
ಅಲ್ಲಿ ಸಮಾಗತರಾಗಿದ್ದ ದೇವರ್ಷಿಗಳು ಮತ್ತು ಸಿದ್ಧರು ದೇವಾಸುರ ಯುದ್ಧಕ್ಕೆ ಸದೃಶವಾದ ಆ ಘೋರವಾದ ಯುದ್ಧವನ್ನು ನೋಡಿದರು. ಅನಂತರ ಸಹಸ್ರ ಗಜಗಳು, ಸಹಸ್ರ ರಥಗಳು, ಸಹಸ್ರ ಅಶ್ವಗಳು, ಪದಾತಿಗಳು ವಿಪರೀತವಾಗಿ ಒಬ್ಬರನ್ನೊಬ್ಬರು ಎದುರಿಸಿದರು.
ವಿಶೇಷ ವಿಚಾರ ಗಜಗಳು ಗಜಗಳನ್ನು ಬಿಟ್ಟು ರಥಗಳೊಡನೆ, ರಥಗಳು ರಥಗಳನ್ನು ಬಿಟ್ಟು ಗಜಗಳೊಡನೆ ಹೀಗೆ ತಮ್ಮ ಸಮಾನರಾದವರನ್ನು ಬಿಟ್ಟು ಬೇರೆಯವರ ಜೊತೆಯಲ್ಲಿ ಯುದ್ಧವು ಪ್ರವೃತ್ತವಾಯಿತು.
ತತ್ರ ತತ್ರೈವ ದೃಶ್ಯಂತೇ ರಥವಾರಣಪತ್ತಯಃ |
ಸಾದಿನಶ್ಚ ನರವ್ಯಾಘ್ರ ಯುಧ್ಯಮಾನಾ ಮುಹುರ್ಮುಹುಃ ||83||
ಎಲೈ ನರವ್ಯಾಘ್ರನೇ, ಅಲ್ಲಲ್ಲಿ ರಥ-ಗಜ-ಪದಾತಿಗಳು, ಅಶ್ವಾರೋಹಿಗಳು ಪುನಃ ಪುನಃ ಯುದ್ಧ ಮಾಡುವುದು ಕಂಡುಬಂದಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ||
|| ಭೀಷ್ಮವಧಪರ್ವಣಿ ತೃತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ನಾಲ್ಕನೆಯ ಅಧ್ಯಾಯ
ಪ್ರಥಮ ದಿವಸದ ಯುದ್ಧದ ವರ್ಣನೆ.
ಸಂಜಯಃ
ರಾಜನ್ ಶತಸಹಸ್ರಾಣಿ ತತ್ರತತ್ರ ತದಾತದಾ |
ನಿರ್ಮರ್ಯಾದಂ ಪ್ರಯುದ್ಧಾನಿ ತತ್ತೇ ವಕ್ಷ್ಯಾಮಿ ಭಾರತ ||1||
ಸಂಜಯ ಎಲೈ ರಾಜನೇ, ಭಾರತನೇ, ಆಗ ಅಲ್ಲಲ್ಲಿ ಲಕ್ಷಾದಿ ಸಂಖ್ಯೆಯಲ್ಲಿ ಮರ್ಯಾದೆಯನ್ನು ಮೀರಿದ ಯುದ್ಧಗಳು ನಡೆದವು. ಅದನ್ನು ನಿನಗೆ ಹೇಳುವೆನು.
ನ ಪುತ್ರಃ ಪಿತರಂ ಜಜ್ಞೇ ನ ಪಿತಾ ಪುತ್ರಮೌರಸಮ್ |
ನ ಭ್ರಾತಾ ಭ್ರಾತರಂ ತತ್ರ ಸ್ವಸ್ರೀಯಂ ನ ಚ ಮಾತುಲಃ ||2||
ಅಲ್ಲಿ ಮಗನು ತಂದೆಯನ್ನು ತಿಳಿಯಲಿಲ್ಲ. ತಂದೆಯಾದರೂ ಔರಸ ಪುತ್ರನನ್ನು ತಿಳಿಯಲಿಲ್ಲ. ಸಹೋದರನು ಸಹೋದರನನ್ನು, ಸೋದರಮಾವನು ಸೋದರಳಿಯನನ್ನು ತಿಳಿಯಲಿಲ್ಲ.
ಮಾತುಲಂ ನ ಚ ಸ್ವಸ್ರೀಯೋ ನ ಸಖಾಯಂ ಸಖಾ ತಥಾ |
ಆವಿಷ್ಟಾ ಇವ ಯುಧ್ಯಂತೇ ಪಾಂಡವಾಃ ಕುರುಭಿಃ ಸಹ ||3||
ಸೋದರಳಿಯನು ಸೋದರ ಮಾವನನ್ನು, ಸ್ನೇಹಿತನು ಸ್ನೇಹಿತನನ್ನು ತಿಳಿಯಲಿಲ್ಲ. ಪಿಶಾಚಿ ಹಿಡಿದವರಂತೆ ಪಾಂಡವರು ಕೌರವರ

ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ರಥಾನೀಕಂ ನರವ್ಯಾಘ್ರಾಃ ಕೇಚಿದಭ್ಯಪತನ್ ರಥೈಃ |
ಅಭಜ್ಯಂತ ಯುಗೈರೇವ ಯುಗಾನಿ ಭರತರ್ಷಭ ॥4॥
ಕೆಲವು ನರಶ್ರೇಷ್ಠರು ರಥದ ಸಮೂಹದ ಮೇಲೆ ತಮ್ಮ ರಥಗಳಿಂದ ಎರಗಿ ಬಿದ್ದರು. ಎಲೈ ಭರತರ್ಷಭನೇ, ನೊಗಗಳು ನೊಗಗಳ ಘರ್ಷಣೆಯಿಂದಲೇ ಮುರಿದು ಹೋದವು.
ರಥೇಷಾಶ್ಚ ರಥೇಷಾಭಿಃ ಕೂಬರಾ ರಥಕೂಬರೈಃ |
ಸಂಹತಾಃ ಸಂಹತೈಃ ಕೇಚಿತ್ ಪರಸ್ಪರಜಿಘಾಂಸವಃ ॥5॥
ರಥದ ಮೂಕಿಗಳು ಮೂಕಿಗಳಿಂದಲೂ, ಈಷ್ಪಿ (ಈರಚಿ) ಮರಗಳು ಈಷ್ಪಿ ಮರಗಳಿಂದಲೂ ಘಟ್ಟಿಸಲ್ಪಟ್ಟವು.
ನ ಶೇಕುಶ್ಚಲಿತುಂ ಕೇಚಿತ್ ಸನ್ನಿಪತ್ಯ ರಥಾ ರಥೈಃ |
ಪ್ರಭಿನ್ನಾಸ್ತು ಮಹಾಕಾಯಾಃ ಸನ್ನಿಪತ್ಯ ಗಜಾ ಗಜೈಃ ॥6॥
ಪರಸ್ಪರ ಕೊಲ್ಲುವ ಇಚ್ಛೆಯುಳ್ಳ ಅವರಲ್ಲಿ ಕೆಲವರು ರಥಗಳಿಗೆ ರಥಗಳನ್ನು ಘಟ್ಟಿಸಿ ಚಲಿಸಲೂ ಸಾಧ್ಯವಾಗಲಿಲ್ಲ. ದೊಡ್ಡ ಶರೀರವುಳ್ಳ ಗಜಗಳು ಪ್ರತಿಗಜಗಳ ಜೊತೆಯಲ್ಲಿ ಸಂಘಟ್ಟಿಸಿ ಗಾಯಗೊಂಡವು.
ಬಹುಧಾ ದಾರಯನ್ ಕ್ರುದ್ಧಾ ವಿಷಾಣೈರಿತರೇತರಮ್ |
ಸತೋಮರಪತಾಕೈಶ್ಚ ವಾರಣಾಃ ಪರವಾರಣೈಃ ॥7॥
ತೋಮರ, ಪತಾಕೆಗಳಿಂದ ಕೂಡಿದ ಗಜಗಳು ಕ್ರೋಧಗೊಂಡು ಪ್ರತಿಗಜಗಳ ಜೊತೆಯಲ್ಲಿ ಎದುರಿಸಿ ದಂತಗಳಿಂದ ಅನೇಕ ರೀತಿಯಲ್ಲಿ ಗಾಯಗಳನ್ನು ಮಾಡಿದವು.
ಅಭಿಸೃತ್ಯ ಮಹಾರಾಜ ವೇಗವದ್ಭಿರ್ಮಹಾಗಜೈಃ |
ದಂತೈರಭಿಹತಾಸ್ತತ್ರ ಚುಕ್ರುಶುಃ ಪರಮಾತುರಾಃ ॥8॥
ಎಲೈ ಮಹಾರಾಜನೇ, ವೇಗದಿಂದ ಓಡಿಬಂದು ದಂತಗಳಿಂದ ತಿವಿಯಲ್ಪಟ್ಟ ಪ್ರತಿಗಜಗಳು ಬಹಳ ನೋವಿನಿಂದ ನರಳಿದವು.
ಅಭಿನೀತಾಶ್ಚ ಶಿಕ್ಷಾಭಿಸ್ತೋತ್ರಾಂಕುಶಸಮಾಹತಾಃ |
ಸುಪ್ರಭಿನ್ನಾಃ ಪ್ರಭಿನ್ನಾನಾಂ ಸಮ್ಮುಖಾಭಿಮುಖಾ ಯಯುಃ ॥9॥
ಚೆನ್ನಾಗಿ ಶಿಕ್ಷಿತವಾದ ಗಜಗಳು ಅಂಕುಶ ಮತ್ತು ಬೇರೆ ಆಯುಧಗಳಿಂದ ಹೊಡೆಯಲ್ಪಟ್ಟು ಬಹಳ ಗಾಯಗೊಂಡಿದ್ದರೂ, ಗಾಯಗೊಂಡ ಪ್ರತಿಗಜಗಳನ್ನು ಎದುರಿಸಿ ಮುಂದೆ ನಡೆದವು.
ಪ್ರಭಿನ್ನೈರಪಿ ಸಂಸಕ್ತಾಃ ಕೇಚಿತ್ ತತ್ರ ಮಹಾಗಜಾಃ |
ಕ್ರೌಂಚವನ್ನಿನದಂ ಮುಕ್ತ್ವಾ ಪ್ರಾದ್ರವಂತ ತತಸ್ತತಃ ॥10॥
ಗಾಯಗೊಂಡ ಪ್ರತಿಗಜಗಳ ಜೊತೆಯಲ್ಲಿ ಹೋರಾಡಿದ ಮಹಾಗಜಗಳು ಕ್ರೌಂಚ ಪಕ್ಷಿಯಂತೆ ನಿನಾದವನ್ನು ಮಾಡುತ್ತಾ ಅಲ್ಲಿಂದ ಓಡಿಹೋದವು.
ಸಮ್ಯಕ್ ಪ್ರಣೀತಾ ನಾಗಾಶ್ಚ ಪ್ರಭಿನ್ನಕರಟಾಮುಖಾಃ |
ಋಷ್ಟಿತೋಮರನಾರಾಚೈರ್ನಿರ್ವಿದ್ಧಾ ವರವಾರಣಾಃ ॥11॥
ವಿನೇದುರ್ಭಿನ್ನಮರ್ಮಾಣೋ ನಿಪೇತುಶ್ಚ ಗತಾಸವಃ |
ಪ್ರಾದ್ರವಂತ ದಿಶಃ ಕೇಚಿನ್ನದಂತೋ ಭೈರವಾನ್ ರವಾನ್ ॥12॥
ಚೆನ್ನಾಗಿ ಶಿಕ್ಷಿತವಾದ, ಮದೋದಕವು ಸುರಿಯುವ ಕುಂಭಸ್ಥಲವುಳ್ಳ ಶ್ರೇಷ್ಠವಾದ ಗಜಗಳು, ಋಷ್ಟಿ, ತೋಮರ ಮತ್ತು ಬಾಣಗಳಿಂದ ಚೆನ್ನಾಗಿ ಹೊಡೆಯಲ್ಪಟ್ಟವುಗಳಾಗಿ ತಮ್ಮ ಮರ್ಮಸ್ಥಾನಗಳು ಭಿನ್ನವಾಗಿ ಗರ್ಜಿಸುತ್ತಾ ಪ್ರಾಣಗಳನ್ನು ಕಳೆದುಕೊಂಡು ಬಿದ್ದವು. ಇನ್ನು ಕೆಲವು ಆನೆಗಳು ಭಯಂಕರವಾಗಿ ಗರ್ಜಿಸುತ್ತಾ ದಿಕ್ಕು ದಿಕ್ಕುಗಳಿಗೆ ಓಡಿ ಹೋದವು.
ಗಜಾನಾಂ ಪಾದರಕ್ಷಾಸ್ತು ವ್ಯೂಢೋರಸ್ಕಾಃ ಪ್ರಹಾರಿಣಃ |
ಋಷ್ಟಿಭಿಶ್ಚ ಧನುರ್ಭಿಶ್ಚ ವಿಮಲೈಶ್ಚ ಪರಶ್ವಧೈಃ ॥13॥
ಗದಾಭಿರ್ಮುಸಲೈಶ್ಚೈವ ಭಿಂಡಿಪಾಲೈಃ ಸತೋಮರೈಃ |
ಆಯಸೈಃ ಪರಿಘೈಶ್ಚೈವ ನಿಸ್ತ್ರಿಂಶೈರ್ವಿಮಲೈಃ ಶಿತೈಃ ॥14॥
ಪ್ರಗೃಹೀತೈಃ ಸುಸಂರಬ್ಧಾ ಧಾವಮಾನಾಸ್ತತಸ್ತತಃ |
ವ್ಯದೃಶ್ಯಂತ ಮಹಾರಾಜ ಪರಸ್ಪರಜಿಘಾಂಸವಃ ॥15॥
ಎಲೈ ಮಹಾರಾಜನೇ, ಗಜಗಳ ಪಾದರಕ್ಷಕರಾದ, ವಿಸ್ತಾರ ವಕ್ಷಸ್ಥಲವುಳ್ಳ ಸೈನಿಕರು ಋಷ್ಟಿಗಳನ್ನು, ಧನುಸ್ಸುಗಳನ್ನು, ವಿಮಲವಾದ ಗಂಡು ಕೊಡಲಿಗಳನ್ನು, ಗದೆಗಳನ್ನು, ಮುಸಲಗಳನ್ನು, ಭಿಂಡಿಪಾಲಗಳನ್ನು, ತೋಮರಗಳನ್ನು, ಕಬ್ಬಿಣದ ಒನಕೆಗಳನ್ನು, ವಿಮಲವಾದ ನಿಶಿತವಾದ ಖಡ್ಗಗಳನ್ನೂ ಹಿಡಿದು ಬಹಳ ಕೋಪದಿಂದ ಪರಸ್ಪರರನ್ನು ಕೊಲ್ಲುವ ಇಚ್ಛೆಯಿಂದ ಅಲ್ಲಿಂದಿಲ್ಲಿ ಓಡಾಡುವುದು ಕಂಡು ಬಂದಿತು.
ರಾಜಮಾನಾಶ್ಚ ನಿಸ್ತ್ರಿಂಶಾಃ ಸಂಸಿಕ್ತಾ ನರಶೋಣಿತೈಃ |
ಪ್ರತ್ಯದೃಶ್ಯಂತ ಶೂರಾಣಾಮನ್ಯೋನ್ಯಮಭಿಧಾವತಾಮ್ ॥16॥
ಪರಸ್ಪರವಾಗಿ ಮೇಲೆರಗುವ ಶೂರರ ಖಡ್ಗಗಳು ಮನುಷ್ಯರಕ್ತದಿಂದ ನೆನೆದು ಶೋಭಿಸುತ್ತಿದ್ದವು.
ಅವಕ್ಷಿಪ್ತಾವಧೂತಾನಾಮಸೀನಾಂ ವೀರಬಾಹುಭಿಃ |
ಸಂಜಜ್ಞೇ ತುಮುಲಃ ಶಬ್ದಃ ಪತತಾಂ ಪರಮರ್ಮಸು ॥17॥
ವೀರರ ಬಾಹುಗಳಿಂದ ಕೆಳಗೆ ಎಸೆಯಲ್ಪಟ್ಟು ಅಥವಾ ಕೊಡವಲ್ಪಟ್ಟು ಶತ್ರುಗಳ ಮರ್ಮಸ್ಥಾನಗಳಲ್ಲಿ ಬೀಳುವ ಖಡ್ಗಗಳ ಶಬ್ದವು

ತೀವ್ರವಾಗಿದ್ದಿತು.
ಗದಾಮುಸಲರುಗ್ಣಾನಾಂ ಭಿನ್ನಾನಾಂ ಚ ವರಾಸಿಭಿಃ |
ದಂತಿದಂತಾವಭಿನ್ನಾನಾಂ ಮೃದಿತಾನಾಂ ಚ ದಂತಿಭಿಃ ॥18॥
ತತ್ರತತ್ರ ನರೌಘಾಣಾಂ ಕ್ರೋಶತಾಮಿತರೇತರಮ್ |
ಶುಶ್ರುವುರ್ದಾರುಣಾ ವಾಚಃ ಪ್ರೇತಾನಾಮಿವ ಭಾರತ ॥19॥
ಎಲೈ ಭಾರತನೇ, ಗದಾ-ಮುಸಲಗಳಿಂದಲೂ, ಶ್ರೇಷ್ಠವಾದ ಕತ್ತಿಗಳಿಂದಲೂ ಕತ್ತರಿಸಲ್ಪಟ್ಟು, ಗಜಗಳ ದಂತಗಳಿಂದ ತಿವಿಯಲ್ಪಟ್ಟು, ಗದೆಗಳಿಂದ ತಿವಿಯಲ್ಪಟ್ಟ ಪರಸ್ಪರವಾಗಿ ಕಿರುಚುವ ಸೈನಿಕ ಸಮುದಾಯಗಳ ದಾರುಣವಾದ ಮಾತುಗಳು ಮರಣ ಹೊಂದಿದ ಪ್ರೇತಗಳ ಮಾತುಗಳಂತೆ ದಾರುಣವಾಗಿ ಕೇಳಿಬಂದವು.
ಹಯ್ಯೆರಪಿ ಹಯಾರೋಹಾಶ್ಚಾಮರಾಪೀಡಧಾರಿಭಿಃ |
ಹಂಸ್ಯೆರಿವ ಮಹಾವೇಗ್ಯೆರನ್ಯೋನ್ಯಮಭಿದುದ್ರುವುಃ ॥20॥
ಅಶ್ವಾರೋಹಿಗಳ ಮೇಲೆ ಚಾಮರ ಮತ್ತು ತಲೆಯ ಮೇಲೆ ಹೂಗೊಂಚಲನ್ನು ಧರಿಸಿದ ಅಶ್ವಾರೋಹಿಗಳು, ಮಹಾವೇಗವುಳ್ಳ ಹಂಸಗಳ ಜೊತೆಯಲ್ಲಿ ಹಂಸಗಳು ಸೇರಿದಂತೆ ಪರಸ್ಪರವಾಗಿ ಒಬ್ಬರ ಕಡೆಗೆ ಒಬ್ಬರು ಓಡಿದರು.
ತೈರ್ವಿಮುಕ್ತಾ ಮಹಾಪ್ರಾಸಾ ಜಾಂಬೂನದವಿಭೂಷಣಾಃ |
ಆಶುಗಾ ವಿಮಲಾಸ್ತೀಕ್ಷ್ಣಾಃ ಸಂಪೇತುರ್ಭುಜಗೋಪಮಾಃ ॥21॥
ಅವರು ಪ್ರಯೋಗಿಸಿದ ಸುವರ್ಣಾಲಂಕೃತವಾದ, ವೇಗವಾಗಿ ಸಂಚರಿಸುವ, ನಿರ್ಮಲವೂ ಮತ್ತು ನಿಶಿತವೂ ಆಗಿದ್ದು ಸರ್ಪಗಳನ್ನು ಹೋಲುವ ದೊಡ್ಡ ಪ್ರಾಸಗಳು (ಈಟಿಗಳು) ಶತ್ರು ಸೈನಿಕರ ಮೇಲೆ ಬಿದ್ದವು.
ಅಶ್ವೈರಗ್ರ್ಯಜವೈಃ ಕೇಚಿದಾಪ್ಲುತ್ಯ ಮಹತೋ ರಥಾನ್ |
ಶಿರಾಂಸ್ಯಾದದಿರೇ ವೀರಾ ರಥಿನಾಮಶ್ವಸಾದಿನಃ ॥22॥
ಕೆಲವು ಅಶ್ವಾರೋಹಿಗಳು ಶ್ರೇಷ್ಠವಾದ ವೇಗವುಳ್ಳ ಅಶ್ವಗಳಿಂದ ದೊಡ್ಡ ರಥಗಳಿಗೆ ಹಾರಿ ಆ ವೀರರು ರಥಿಕರ ಶಿರಸ್ಸುಗಳನ್ನು ಕತ್ತರಿಸಿದರು.
ಬಹೂನಪಿ ಹಯಾರೋಹಾನ್ ಭಲ್ಲೈಃ ಸನ್ನತಪರ್ವಭಿಃ |
ರಥೀ ಜಘಾನ ಸಂಪ್ರಾಪ್ಯ ಬಾಣಗೋಚರಮಾಗತಾನ್ ॥23॥
ತನ್ನ ಬಾಣದ ವ್ಯಾಪ್ತಿಗೆ ಬಂದ ಅನೇಕ ಅಶ್ವಾರೋಹಿಗಳನ್ನು ರಥಿಯು ಸಮೀಪಿಸಿ ಬಾಗಿದ ತುದಿಯುಳ್ಳ ಭಲ್ಲೆಗಳಿಂದ ಅವರನ್ನು ಕೊಂದನು.
ನಗಮೇಘಪ್ರತೀಕಾಶಾಶ್ಚಾಕ್ಷಿಪ್ಯ ತುರಗಾನ್ ಗಜಾಃ |
ಪಾದೈರೇವಾವಮೃದ್ನಂತ ಮತ್ತಾಃ ಕನಕಭೂಷಣಾಃ ॥24॥
ಕನಕಭೂಷಣವುಳ್ಳ ಪರ್ವತದಂತೆ ಮತ್ತು ಮೇಘದಂತೆ ಕಾಣುತ್ತಿದ್ದ ಮದಗಜಗಳು ಅಶ್ವಗಳನ್ನು ಎಸೆದು ತಮ್ಮ ಪಾದಗಳಿಂದ ಅವುಗಳನ್ನು ತುಳಿದವು.
ಪಾಟ್ಯಮಾನೇಷು ಕುಂಭೇಷು ಪಾರ್ಶ್ವೇಷ್ವಪಿ ಚ ವಾರಣಾಃ |
ಪ್ರಾಸೈರ್ವಿನಿಹತಾಃ ಕೇಚಿದ್ ವಿನೇದುಃ ಪರಮಾತುರಾಃ ॥25॥
ಪಕ್ಕದಲ್ಲಿದ್ದ ಗಜಗಳ ಕುಂಭಸ್ಥಲಗಳು ಸೀಳಲ್ಪಡುತ್ತಿದ್ದರೂ ಸಹ ಈಟಿಗಳಿಂದ ಹತವಾದ ಇನ್ನು ಕೆಲವು ಗಜಗಳು ಪರಮವೇದನೆಯಿಂದ ಗರ್ಜಿಸಿದವು.
ಸಾಶ್ವಾರೋಹಾನ್ ಹಯಾನ್ ಕೇಚಿದುನ್ಮಥ್ಯ ವರವಾರಣಾಃ |
ಸಹಸಾ ಚಿಕ್ಷಿಪುಸ್ತತ್ರ ಸಂಕುಲೇ ಭೈರವೇ ಸತಿ ॥26॥
ಆ ಭಯಂಕರವಾದ ಸಮಾವೇಶದಲ್ಲಿ ಕೆಲವು ಶ್ರೇಷ್ಠ ಗಜಗಳು ಅಶ್ವಾರೋಹಿಗಳಿಂದ ಕೂಡಿದ ಅಶ್ವಗಳನ್ನು ಪರಾಭವಗೊಳಿಸಿ ಹಿಡಿದು ದೂರ ಎಸೆದವು.
ಸಾಶ್ವಾರೋಹಾನ್ ವಿಷಾಣಾಗ್ರೈರುತ್ಕ್ಷಿಪ್ಯ ತುರಗಾನ್ ದ್ವಿಪಾಃ |
ರಥೌಘಾನವಮೃದ್ನಂತಃ ಸಧ್ವಜಾನ್ ಪರಿಚಕ್ರಮುಃ ॥27॥
ಗಜಗಳು, ಅಶ್ವಾರೋಹಿ ಸಹಿತವಾದ ಅಶ್ವಗಳನ್ನು ತಮ್ಮ ದಂತದ ತುದಿಗಳಿಂದ ಎಸೆದು ಧ್ವಜದಿಂದ ಕೂಡಿದ ರಥಸಮೂಹಗಳನ್ನು ಪುಡಿ ಮಾಡುತ್ತಾ ತಿರುಗಾಡಿದವು.
ಪುಂಸತ್ವದಭಿಮದತ್ವಾಚ್ಚ ಕೇಚಿದತ್ರ ಮಹಾಗಜಾಃ |
ಸಾಶ್ವಾರೋಹಾನ್ಹಯಾನ್ ಜಘ್ನುಃ ಕರೈಃ ಸಚರಣೈಸ್ತಥಾ ॥28॥
ಮದಿಸಿದ ಕೆಲವು ಮಹಾಗಜಗಳು (ಗಂಡಾನೆಗಳು) ತಮ್ಮ ಸೊಂಡಿಲುಗಳಿಂದಲೂ ಮತ್ತು ಪಾದಗಳಿಂದಲೂ ಅಶ್ವಾರೋಹಿಗಳಿಂದ ಸಹಿತವಾದ ಅಶ್ವಗಳನ್ನು ಕೊಂದವು.
ಕೇಚಿದಾಕ್ಷಿಪ್ಯ ಕರಿಣಃ ಸಾಶ್ವಾನಪಿ ರಥಾನ್ ಕರೈಃ |
ವಿಕರ್ಷಂತೋ ದಿಶಃ ಸರ್ವಾಃ ಸಮೀಯುಃ ಸರ್ವಶಬ್ದಗಾಃ ॥29॥
ಕೆಲವು ಆನೆಗಳು ಅಶ್ವ ಸಹಿತವಾಗಿ ರಥಗಳನ್ನು ತಮ್ಮ ಸೊಂಡಿಲಿನಿಂದ ಹಿಡಿದು ಎಳೆಯುತ್ತಾ ಎಲ್ಲ ಕಡೆಯಲ್ಲಿಯೂ ಶಬ್ದ ಮಾಡುತ್ತಾ, ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಿದವು.
ಆಶುಗಾ ವಿಮಲಾಸ್ತೀಕ್ಷ್ಣಾಃ ಸಂಪೇತುರ್ಭುಜಗೋಪಮಾಃ |
ನರಾಶ್ವಕಾಯಾನ್ನಿರ್ಭಿದ್ಯ ಲೌಹಾನಿ ಕವಚಾನಿ ಚ ॥30॥

ಶೀಘ್ರವಾದ ವೇಗವುಳ್ಳ, ವಿಮಲವಾದ, ತೀಕ್ಷ್ಣವಾದ, ಸರ್ಪಗಳನ್ನು ಹೋಲುವ ಬಾಣಗಳು ನರರ ಮತ್ತು ಅಶ್ವಗಳ ದೇಹವನ್ನು ಭೇದಿಸಿ, ಲೋಹಮಯವಾದ ಕವಚಗಳನ್ನೂ ಭೇದಿಸಿ ಸಾಗಿದವು.
ನಿಪೇತುರ್ವಿಮಲಾಃ ಶಕ್ತ್ಯೋ ವೀರಬಾಹುಭಿರರ್ಪಿತಾಃ |
ಮಹೋಲ್ಕಾಪ್ರತಿಮಾ ಘೋರಾಸ್ತತ್ರ ತತ್ರ ವಿಶಾಂಪತೇ ॥31॥
ಎಲೈ ರಾಜನೇ, ವೀರಬಾಹುಗಳಿಂದ ಪ್ರಯೋಗಿಸಲ್ಪಟ್ಟ ದೊಡ್ಡ ಉಲ್ಕೆಗೆ ಸದೃಶವಾದ, ಘೋರವೂ, ಸ್ವಚ್ಛವೂ ಆದ ಶಕ್ತ್ಯಾಯುಧಗಳು ಅಲ್ಲಲ್ಲಿ ಬಿದ್ದವು.
ದ್ವೀಪಿಚರ್ಮಾವನದ್ಧೈಶ್ಚ ವ್ಯಾಘ್ರಚರ್ಮಶಯ್ಯೈರಪಿ |
ವಿಕೋಶೈರ್ವಿಮಲೈಃ ಖಡ್ಗೈರಭಿಜಘ್ನುಃ ಪರಾನ್ ರಣೇ ॥32॥
ಚಿರತೆಯ ಚರ್ಮಗಳಿಂದ ಮತ್ತು ವ್ಯಾಘ್ರಚರ್ಮಗಳಿಂದ ಕೂಡಿದ ಹಿಡಿಯುಳ್ಳ, ಒರೆಯಿಂದ ಎಳೆದ ವಿಮಲವಾದ ಖಡ್ಗಗಳಿಂದ ಯೋಧರು ಶತ್ರುಗಳ ಸೈನ್ಯದಲ್ಲಿ ಸಂಹರಿಸಿದರು.
ಅಭಿಪ್ಲುತಮಭಿಕ್ರುದ್ಧಮೇಕಪಾರ್ಶ್ವಾವದಾರಿತಮ್ |
ವಿದರ್ಶಯಂತಃ ಸಂಪೇತುಃ ಖಡ್ಗಚರ್ಮಪರಶ್ವಧೈಃ ॥33॥
ಖಡ್ಗ, ಚರ್ಮ, ಪರಶ್ವಧಗಳಿಂದ ಬಹಳವಾಗಿ ಗಾಯಗೊಂಡ ಯೋಧರು ಸೀಳಿ ಹೋದ ತಮ್ಮ ಒಂದು ಪಾರ್ಶ್ವವನ್ನು ತೋರಿಸುತ್ತಾ ಕ್ರೋಧಗೊಂಡು ಮುನ್ನುಗ್ಗಿದರು.
ಶಕ್ತಿಭಿರ್ದಾರಿತಾಃ ಕೇಚಿತ್ ಸಂ(ಭಿ)ಛಿನ್ನಾಶ್ಚ ಪರಶ್ವಧೈಃ |
ಹಸ್ತಿಭಿರ್ಮೃದಿತಾಃ ಕೇಚಿತ್ ಕ್ಷುಣ್ಣಾಶ್ಚಾನ್ಯೇ ತುರಂಗಮೈಃ ॥34॥
ಕೆಲವರು ಶಕ್ತ್ಯಾಯುಧಗಳಿಂದ ಸೀಳಲ್ಪಟ್ಟರು. ಇನ್ನು ಕೆಲವರು ಪರಶ್ವಧಗಳಿಂದ ಛೇದಿಸಲ್ಪಟ್ಟರು. ಕೆಲವರು ಆನೆಗಳಿಂದ ತುಳಿಯಲ್ಪಟ್ಟರು. ಇನ್ನು ಕೆಲವರು ಅಶ್ವಗಳಿಂದ ಪುಡಿಮಾಡಲ್ಪಟ್ಟರು.
ರಥನೇಮಿನಿಕೃತ್ತಾಶ್ಚ ನಿಕೃತ್ತಾ ನಿಶಿತೈಃ ಶರೈಃ |
ವಿಕ್ರೋಶಂತಿ ನರಾ ರಾಜನ್ ತತ್ರತತ್ರ ಸ್ಮ ಬಾಂಧವಾನ್ ॥35॥
ಎಲೈ ರಾಜನೇ, ರಥಚಕ್ರದ ಗಾಲಿಗಳಿಂದ ಗಾಯಗೊಂಡ, ನಿಶಿತವಾದ ಬಾಣಗಳಿಂದ ಗಾಯಗೊಂಡ ಯೋಧರು ಸಹಾಯಕ್ಕಾಗಿ ತಮ್ಮ ಬಂಧುಗಳನ್ನು ಉದ್ದೇಶಿಸಿ ಕಿರುಚುತ್ತಿದ್ದರು.
ಪುತ್ರಾನನ್ಯೇ ಪಿತೄನನ್ಯೇ ಭ್ರಾತೄಂಶ್ಚ ಸಹ ಬಾಂಧವೈಃ |
ಮಾತುಲಾನ್ ಭಾಗಿನೇಯಾಂಶ್ಚ ಪರಾನಪಿ ಚ ಸಂಯುಗೇ ॥36॥
ಇನ್ನು ಕೆಲವರು ತಮ್ಮ ಪುತ್ರರನ್ನೂ, ಕೆಲವರು ಪಿತೃಗಳನ್ನೂ, ಕೆಲವರು ಬಾಂಧವ ಸಹಿತರಾದ ತಮ್ಮ ಸಹೋದರರನ್ನೂ, ಇನ್ನು ಕೆಲವರು ಸೋದರ ಮಾವರನ್ನೂ, ಸೋದರ ಅಳಿಯಂದಿರನ್ನೂ, ಇನ್ನು ಕೆಲವರು ಶತ್ರುಗಳನ್ನೂ ಸಹ ಸಹಾಯಕ್ಕಾಗಿ ಕರೆಯುತ್ತಿದ್ದರು.
ವಿಕೀರ್ಣಾಂತ್ರಾಃ ಸುಬಹವೋ ಭಗ್ನಸಕ್ಥಾಶ್ಚ ಭಾರತ |
ಬಾಹುಭಿಃ ಸುಭುಜಾಚ್ಛಿನ್ನೈಃ ಪಾರ್ಶ್ವೇಷು ಚ ವಿದಾರಿತಾಃ |
ಕ್ರಂದಂತಃ ಸಮದೃಶ್ಯಂತ ತೃಷಿತಾ ಜೀವಿತೇಪ್ಸವಃ ॥37॥
ಅನೇಕರು ತಮ್ಮ ಕರುಳು ಚೆಲ್ಲಾಪಿಲ್ಲಿಯಾಗಿ, ತೊಡೆಗಳು ಮುರಿದು, ಬಾಹುಗಳು ಭುಜಗಳು ಕತ್ತರಿಸಲ್ಪಟ್ಟು, ಪಕ್ಕೆಗಳಲ್ಲಿ ಸೀಳಲ್ಪಟ್ಟ ಯೋಧರು ಬಾಯಾರಿ ಬದುಕಲು ಬಯಸಿ ಗೋಳಾಡುತ್ತಿದ್ದುದು ಕಂಡುಬಂದಿತು.
ತೃಷ್ಣಾಪರಿಗತಾಃ ಕೇಚಿದಲ್ಪಸತ್ತ್ವಾ ವಿಶಾಂಪತೇ |
ಭೂಮೌ ನಿಪತಿತಾಃ ಸಂಖೇ ಜಲಮೇವ ಯಯಾಚಿರೇ ॥38॥
ಎಲೈ ರಾಜನೇ, ಅಲ್ಪ ಬಲವುಳ್ಳ ಕೆಲವರು ಯುದ್ಧದಲ್ಲಿ ಭೂಮಿಯ ಮೇಲೆ ಬಿದ್ದು ನೀರಡಿಕೆಯಿಂದ ಬಳಲಿ ನೀರನ್ನೇ ಯಾಚಿಸಿದರು.
ರುಧಿರೌಘಪರಿಕ್ಲಿನ್ನಾಃ ಕ್ಲಿಶ್ಯಮಾನಾಶ್ಚ ಭಾರತ |
ವ್ಯನಿಂದನ್ ಭೃಶಮಾತ್ಮಾನಂ ತವ ಪುತ್ರಾಂಶ್ಚ ಸಂಗತಾನ್ ॥39॥
ಎಲೈ ಭಾರತನೇ, ರಕ್ತದ ಮಡುವಿನಲ್ಲಿ ನೆನೆದು ಕ್ಲೇಶ ಪಡುತ್ತಿದ್ದ ಅವರು ತಮ್ಮನ್ನೂ, ನಿನ್ನ ಪುತ್ರರನ್ನೂ ಮತ್ತು ಯುದ್ಧಕ್ಕಾಗಿ ಬಂದ ರಾಜರನ್ನೂ ನಿಂದಿಸಿದರು.
ಅಪರೇ ಕ್ಷತ್ರಿಯಾಃ ಶೂರಾಃ ಕೃತವೈರಾಃ ಪರಸ್ಪರಮ್ |
ನೈವ ಶಸ್ತ್ರಂ ವಿಮುಂಚಂತಿ ನೈವ ಕ್ರಂದಂತಿ ಮಾರಿಷ |
ತರ್ಜಯಂತಿ ಚ ಸಂಹೃಷ್ಟಾಸ್ತತ್ರ ತತ್ರ ಪರಸ್ಪರಮ್ ॥40॥
ನಿರ್ದಶ್ಯ ದಶನೈಶ್ಚಾಪಿ ಕ್ರೋಧಾತ್ ಸ್ವದಶನಚ್ಛದಾನ್ |
ಭ್ರುಕುಟೀಕುಟಿಲೈರ್ವಕ್ತ್ರೈಃ ಪ್ರೇಕ್ಷಂತೇ ಚ ಪರಸ್ಪರಮ್ ॥41॥
ಎಲೈ ವೀರನೇ, ಇನ್ನು ಕೆಲವು ಶೂರರೂ, ಪರಸ್ಪರವಾಗಿ ವೈರವನ್ನು ಮಾಡಿದವರೂ ಆದ ಕ್ಷತ್ರಿಯರು ತಮ್ಮ ಹಸ್ತದಿಂದ ಶಸ್ತ್ರಗಳನ್ನು ಬಿಡಲಿಲ್ಲ. ಗೋಳಾಟವನ್ನೂ ಮಾಡಲಿಲ್ಲ. ಸಂತೋಷದಿಂದ ಶತ್ರುಗಳನ್ನು ಹೆದರಿಸುತ್ತಿದ್ದರು. ಕ್ರೋಧದಿಂದ ತಮ್ಮ ಹಲ್ಲುಗಳಿಂದ ತುಟಿಗಳನ್ನು ಕಚ್ಚಿ, ಹುಬ್ಬುಗಳನ್ನು ಗಂಟಿಕ್ಕಿದ ಮುಖಗಳನ್ನು ಪರಸ್ಪರವಾಗಿ ದೃಷ್ಟಿಸಿ ನೋಡಿದರು.
ಅಪರೇ ಕ್ಲಿಶ್ಯಮಾನಾಸ್ತು ವ್ರಣಾರ್ತಾಃ ಶರಪೀಡಿತಾಃ |
ನಿಷ್ಕೂಜಾಃ ಸಮಪದ್ಯಂತ ದೃಢಸತ್ತ್ವಾ ಮಹಾಬಲಾಃ ॥42॥
ಇನ್ನು ಕೆಲವು ದೃಢವಾದ ಸ್ಥೈರ್ಯವುಳ್ಳ ಮಹಾಬಲಿಷ್ಠರಾದವರು ಬಾಣಗಳಿಂದ ಪೀಡಿತರಾಗಿ ವ್ರಣಗಳ ನೋವನ್ನು

ಅನುಭವಿಸುತ್ತಿದ್ದರೂ ಮೌನವಾಗಿದ್ದರು.
ಅನ್ಯೇ ತು ವಿರಥಾಃ ಶೂರಾ ರಥಮನ್ಯಸ್ಯ ಸಂಯುಗೇ |
ಪ್ರಾರ್ಥಯಾನಾ ನಿಪತಿತಾಃ ಸಂಕ್ಷುಣ್ಣಾ ವರವಾರಣೈಃ |
ಅಶೋಭಂತ ಮಹಾರಾಜ ಪುಷ್ಪಿತಾ ಇವ ಕಿಂಶುಕಾಃ ॥43॥
ಎಲೈ ಮಹಾರಾಜನೇ, ರಥವನ್ನು ಕಳೆದುಕೊಂಡ ಕೆಲವು ಶೂರರು ಇನ್ನೊಬ್ಬರ ರಥವನ್ನು ಬೇಡುತ್ತಾ ನೆಲದ ಮೇಲೆ ಬಿದ್ದು ಶ್ರೇಷ್ಠವಾದ ಗಜಗಳ ಕಾಲಿಗೆ ಸಿಕ್ಕಿ ಗಾಯಗೊಂಡು ಹೂವರಳಿದ ಮುತ್ತುಗಗಳಂತೆ ಶೋಭಿಸಿದರು.
ಸಂಬಭೂವುರನೀಕೇಷು ಬಹವೋ ಭೈರವಸ್ವನಾಃ |
ವರ್ತಮಾನೇ ಮಹಾಭೀಮೇ ತಸ್ಮಿನ್ ವೀರವರಕ್ಷಯೇ ॥44॥
ಶ್ರೇಷ್ಠರಾದ ವೀರರ ವಿನಾಶ ಉಂಟಾಗುವ ಅಂತಹ ಭಯಂಕರವಾದ ಯುದ್ಧವು ನಡೆಯುತ್ತಿರಲು ಅನೇಕ ಸ್ಥಳಗಳಲ್ಲಿ ಅನೇಕ ಭೇರಿ ನಿನಾದಗಳು ಮೂಡಿ ಬಂದವು.
ಅಹನತ್ ತು ಪಿತಾ ಪುತ್ರಂ ಪುತ್ರಶ್ಚ ಪಿತರಂ ರಣೇ |
ಸ್ವಸ್ರೀಯೋ ಮಾತುಲಂ ಚಾಪಿ ಸ್ವಸ್ರೀಯಂ ಚಾಪಿ ಮಾತುಲಃ ॥45॥
ತಂದೆಯು ಮಗನನ್ನು ಕೊಂದನು. ಯುದ್ಧದಲ್ಲಿ ಮಗನು ತಂದೆಯನ್ನು ಕೊಂದನು. ಸೋದರಳಿಯನು ಸೋದರಮಾವನನ್ನು, ಸೋದರಮಾವನು ಸೋದರಳಿಯನನ್ನು ಕೊಂದನು.
ಸಖಾಯಂ ಚ ಸಖಾ ರಾಜನ್ ಸಂಬಂಧೀ ಬಾಂಧವಂ ತಥಾ |
ಏವಂ ಯುಧಿಷ್ಠಿರೇ ತತ್ರ ಕುರವಃ ಪಾಂಡವೈಃ ಸಹ ॥46॥
ಎಲೈ ರಾಜನೇ, ಸ್ನೇಹಿತನು ಸ್ನೇಹಿತನನ್ನು, ಬಂಧುವು ಬಂಧುವನ್ನು ಕೊಂದನು. ಹೀಗೆ ಕುರುಗಳು ಅಲ್ಲಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ವರ್ತಮಾನೇ ಭಯೇ ತಸ್ಮಿನ್ ನಿರ್ಮರ್ಯಾದೇ ಮಹಾಹವೇ |
ಭೀಷ್ಮಮಾಸಾದ್ಯ ಪಾರ್ಥಾನಾಂ ವಾಹಿನೀ ಸಮಕಂಪತ ॥47॥
ಎಲ್ಲ ಎಲ್ಲೆಗಳನ್ನೂ ಮೀರಿದ ಭಯಂಕರವಾದ ಮಹಾಯುದ್ಧವು ಅಲ್ಲಿ ನಡೆಯುತ್ತಿರಲು ಪಾಂಡವರ ಸೈನ್ಯವು ಭೀಷ್ಮರನ್ನು ಸಮೀಪಿಸಿ ನಡುಗಿತು.
ಕೇತುನಾ ಪಂಚತಾರೇಣ ತಾಳೇನ ಭರತರ್ಷಭ |
ರಾಜತೇನ ಮಹಾಬಾಹುರುಚ್ಛ್ರಿತೇನ ಮಹಾಹವೇ |
ಬಭೌ ಭೀಷ್ಮಸ್ತದಾ ರಾಜನ್ ಚಂದ್ರಮಾ ಇವ ಮೇರುಣಾ ॥48॥
ಎಲೈ ಭರತಶ್ರೇಷ್ಠನೇ, ಆಗ ಮಹಾಬಾಹುಗಳಾದ ಭೀಷ್ಮರು ಪಂಚನಕ್ಷತ್ರಗಳಿಂದ ಕೂಡಿದ ರಜತಮಯವಾದ ತಾಳಧ್ವಜವನ್ನು ಹೊಂದಿದ ಮಹಾರಥದಲ್ಲಿ ಮೇರುಪರ್ವತದ ಜೊತೆಯಲ್ಲಿರುವ ಚಂದ್ರನಂತೆ ಶೋಭಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ ಅಧ್ಯಾಯಃ 25
ಅಥ ವ್ಯೂಢೇಷ್ವನೀಕೇಷು ನದನ್ ವಾಯುಸುತೋಽಭ್ಯಯಾತ್ |
ಸಮಿತಿಂ ಧಾರ್ತರಾಷ್ಟ್ರಾಣಾಂ ತೇ ತಂ ಸರ್ವೇಽಭ್ಯವಾರಯನ್ ॥18॥
ಬಳಿಕ ಸೈನ್ಯಗಳು ಯುದ್ಧಕ್ಕೆ ತೊಡಗಿದಾಗ ಭೀಮ ಘರ್ಜಿಸುತ್ತ ಕೌರವರ ಸೈನ್ಯವನ್ನು ಆಕ್ರಮಿಸಿದ. ಅವರು ಅವನನ್ನು ಎದುರಿಸಿದರು.

ಸಸೃಜುಃ ಶರವೃಷ್ಟಿಂ ಚ ಭೀಮಸೇನಸ್ಯ ಮೂರ್ಧನಿ |
ಕ್ಷಿಪ್ರಂ ನೈವ ಪ್ರಹರ್ತವ್ಯಂ ಜ್ಞಾತಿಷು ಪ್ರಹರತ್ಸ್ವಪಿ |
ಇತ್ಯೇವಾಪ್ರಹರತ್ಯಸ್ಮಿನ್ ಶತ್ರುಭಿಃ ಶರವಿಕ್ಷತೇ ॥19॥
ಅಮುಚನ್ ಧಾರ್ತರಾಷ್ಟ್ರೇಷು ಶಸ್ತ್ರವೃಷ್ಟಿಂ ದುರಾಸದಮ್ |
ಸೌಭದ್ರಪ್ರಮುಖಾ ವೀರಾಃ ಸರ್ವೇ ಪಾಂಡುಸುತಾತ್ಮಜಾಃ ॥20॥
ಕೌರವರು ಭೀಮನ ತಲೆಯ ಮೇಲೆ ಬಾಣಗಳ ಮಳೆಗರೆದರು. ಬಂಧುಗಳು ಹೊಡೆಯುತ್ತಿದ್ದರೂ ಪ್ರತಿಯಾಗಿ ಕೂಡಲೇ ಹೊಡೆಯಬಾರದೆಂದೇ ಭೀಮ ಹೊಡೆಯದೆ ನಿಂತು ಶತ್ರುಗಳ ಬಾಣಗಳಿಂದ ಜರ್ಜರಿತನಾಗದೇ ನಿಂತ. ಆಗ ಅಭಿಮನ್ಯು ಮುಂತಾದ ವೀರರಾದ ಎಲ್ಲ ಪಾಂಡವ ಪುತ್ರರೂ ಕೌರವರ ಮೇಲೆ ಸಹಿಸಲಸಾಧ್ಯವಾದ ಬಾಣಗಳ ಮಳೆಗರೆದರು.
ಅಪೀಡಯಂಸ್ತಾನ್ ಶಸೌತ್ರ್ಯೈರ್ಧಾರ್ತರಾಷ್ಟ್ರಾಃ ಸಮಂತತಃ |
ರರಕ್ಷ ತಾನ್ ವಾಯುಸುತೋ ವಿಸೃಜನ್ ಶರಸಂಚಯಾನ್ ॥21॥
ತತ್ರ ಭೀಮಶರೈರ್ನುನ್ನಾ ಧಾರ್ತರಾಷ್ಟ್ರಾಃ ಸಮಂತತಃ |
ಭಗ್ನಾಸ್ತಾನಥ ಗಾಂಗೇಯೋ ದಿವ್ಯಾಸ್ತ್ರವಿದಧಾರಯತ್ ॥22॥
ಅಥ ದ್ವಂದ್ವಾನಿ ಯುದ್ಧಾನಿ ಬಭೂವುರ್ವಿಜಿಗೀಷತಾಮ್ |
ದ್ರೋಣಪಾರ್ಷತಯೋಶ್ಚೈವ ಶೈನೇಯಕೃತವರ್ಮಣೋಃ ॥23॥

ಅಭಿಮನ್ಯು ಮುಂತಾದವರನ್ನು ಕೌರವರು ಎಲ್ಲ ಕಡೆ ಶಸ್ತ್ರ ಸಮೂಹಗಳಿಂದ ಪೀಡಿಸಿದರು. ಅವರನ್ನು ಭೀಮನೇ ಬಾಣ ಸಮೂಹಗಳನ್ನೆಸೆಯುತ್ತ ರಕ್ಷಿಸಿದ. ಆಗ ಭೀಮನ ಬಾಣಗಳಿಂದ ಕೌರವರು ಎಲ್ಲ ಕಡೆ ಪಲಾಯನ ಮಾಡುವಂತಾಯಿತು. ಸೋತ ಅವರನ್ನು ದಿವ್ಯಾಸ್ತ್ರವೇತ್ತರಾದ ಭೀಷ್ಮರು ಸ್ಥಿರವಾಗಿ ನಿಲ್ಲಿಸಿದರು. ಬಳಿಕ ಜಯೇಚ್ಛುಗಳಾದ ವೀರರ ದ್ವಂದ್ವಯುದ್ಧಗಳು ನಡೆದವು.
ದುಃಶಾಸನೇನ ವೀರಸ್ಯ ಮಾದ್ರೇಯಸ್ಯ ಯವೀಯಸಃ |
ನಕುಲಸ್ಯ ವಿಕರ್ಣಸ್ಯ ಕಾರ್ಷ್ಣೇರ್ಯೈರ್ದುರ್ಮುಖಾದಿನಾಮ್ ॥24॥
ವೃತ್ತೇ ದ್ವಂದ್ವಮಹಾಯುದ್ಧೇ ತತ್ರ ಧರ್ಮಜಪಕ್ಷಗಾಃ |
ಜಿತಾ ವಿನೈವ ಶೈನೇಯಂ ಸೋಽಜಯದ್ ಹೃದಿಕಾತ್ಮಜಮ್ ॥25॥
ಅಥ ಭೀಷ್ಮದ್ರೋಣಮುಖ್ಯೈರ್ಭಗದತ್ತಾದಿಭಿಸ್ತಥಾ |
ವಿದ್ರಾಪ್ಯಮಾಣಂ ಸ್ವಬಲಂ ಸ್ಥಾಪಯಾಮಾಸ ಮಾರುತಿಃ ॥26॥
ದ್ರೋಣಂ ಚ ಭಗದತ್ತಂ ಚ ಕೃಪಂ ದುರ್ಯೋಧನಂ ತಥಾ |
ಕೇವಲಂ ಬಾಹುವೀರ್ಯೇಣ ವ್ಯಜಯದ್ ಭೀಮವಿಕ್ರಮಃ ॥27॥
ಹತ್ವೋತ್ತರಂ ಮದ್ರರಾಜೋ ವ್ಯದ್ರಾವಯದನೀಕಿನೀಮ್ ॥28॥
ದ್ರೋಣ ದ್ರುಪದರಿಗೂ ಸಾತ್ಯಕಿ ಕೃತವರ್ಮರಿಗೂ ದುಶ್ಶಾಸನ ಸಹದೇವರಿಗೂ ನಕುಲ ವಿಕರ್ಣರಿಗೂ, ದ್ರೌಪದೀ ಪುತ್ರರು ದುರ್ಮುಖ ಮುಂತಾದವರಿಗೂ ಮಹಾ ದ್ವಂದ್ವಯುದ್ಧ ನಡೆಯಲು ಧರ್ಮರಾಜನ ಪಕ್ಷದವರು ಸಾತ್ಯಕಿ ಹೊರತಾಗಿ ಎಲ್ಲರೂ ಪರಾಜಿತರಾದರು. ಸಾತ್ಯಕಿ ಕೃತವರ್ಮನನ್ನು ಗೆದ್ದ. ಭಯಂಕರ ಪರಾಕ್ರಮಿಯಾದ ಭೀಮ ತನ್ನ ಸೈನ್ಯವನ್ನು ಭೀಷ್ಮ-ದ್ರೋಣಾದಿಗಳೂ ಭಗದತ್ತಾದಿಗಳೂ ಓಡಿಸಿದಾಗ ತಡೆದು ನಿಲ್ಲಿಸಿದ. ದ್ರೋಣ ಭಗದತ್ತ ಕೃಪ ದುರ್ಯೋಧನರನ್ನು ಕೇವಲ ಬಾಹುಬಲದಿಂದ ಗೆದ್ದ. ಶಲ್ಯ ಉತ್ತರ ಕುಮಾರನನ್ನು ಕೊಂದು ಸೇನೆಯನ್ನು ಓಡಿಸಿದ.
* * * * *
ನಲವತ್ತೈದನೆಯ ಅಧ್ಯಾಯ
ಮೊದಲನೆಯ ದಿವಸದ ಯುದ್ಧದಲ್ಲಿ ಭೀಷ್ಮರ ಮೇಲುಗೈ,
ಪಾಂಡವರಿಂದ ಸಾಯಂಕಾಲದಲ್ಲಿ ಸೇನಾ ಅವಹಾರ.
ಸಂಜಯಃ
ಗತಪೂರ್ವಾಹ್ಣಭೂಯಿಷ್ಠೇ ತಸ್ಮಿನ್ನಹನಿ ದಾರುಣೇ |
ವರ್ತಮಾನೇ ಮಹಾರೌದ್ರೇ ಮಹಾವೀರವರಕ್ಷಯೇ ॥1॥
ದುರ್ಮುಖಃ ಕೃತವರ್ಮಾ ಚ ಕೃಪಃ ಶಲ್ಯೋ ವಿವಿಂಶತಿಃ |
ಭೀಷ್ಮಂ ಜುಗುಪುರಾಸಾದ್ಯ ತವ ಪುತ್ರೇಣ ಚೋದಿತಾಃ ॥2॥
ಸಂಜಯ ಎಲೈ ರಾಜನೇ, ಶ್ರೇಷ್ಠರಾದ ವೀರರ ವಿನಾಶಕಾರಿಯಾದ ಆ ಭಯಂಕರವೂ, ದಾರುಣವೂ ಆದ ದಿವಸದಲ್ಲಿ ಪ್ರಾತಃಕಾಲದ ಬಹುಭಾಗವು ಕಳೆಯುತ್ತಿರಲು ನಿನ್ನ ಪುತ್ರನಿಂದ ಪ್ರೇರಿತರಾದ ದುರ್ಮುಖ, ಕೃತವರ್ಮಾ, ಕೃಪ, ಶಲ್ಯ ಮತ್ತು ವಿವಿಂಶತಿ ಇವರು ಭೀಷ್ಮರ ಸಮೀಪಕ್ಕೆ ಬಂದು ಅವರನ್ನು ರಕ್ಷಿಸಿದರು.
ಏತೈರತಿರಥೈರ್ಗುಪ್ತಃ ಪಂಚಭಿರ್ಭರತರ್ಷಭ |
ಪಾಂಡವಾನಾಮನೀಕಾನಿ ವಿಜಗಾಹೇ ಮಹಾರಥಃ ॥3॥
ಎಲೈ ಭರತರ್ಷಭನೇ, ಈ ಐವರು ಅತಿರಥರಿಂದ ರಕ್ಷಿತರಾಗಿ, ಮಹಾರಥರಾದ ಭೀಷ್ಮರು ಪಾಂಡವರ ಸೈನ್ಯವನ್ನು ಪ್ರವೇಶಿಸಿದರು.
ಚೇದಿಕಾಶಿಕರೂಷೇಷು ಪಾಂಚಾಲೇಷು ಚ ಭಾರತ |
ಭೀಷ್ಮಸ್ಯ ಬಹುಧಾ ತಾಳಶ್ಚರನ್ ಕೇತುರದೃಶ್ಯತ ॥4॥
ಎಲೈ ಭಾರತನೇ, ಚೇದಿ, ಕಾಶಿ, ಕರೂಷ ಸೈನ್ಯಗಳಲ್ಲಿಯೂ, ಪಾಂಚಾಲ ಸೈನ್ಯಗಳಲ್ಲಿಯೂ ಬಹಳವಾಗಿ ಸಂಚರಿಸುವ ಭೀಷ್ಮರ ತಾಳಧ್ವಜವು ಕಂಡುಬರುತ್ತಿದ್ದಿತು.
ಶಿರಾಂಸಿ ಚ ತದಾ ಭೀಷ್ಮೋ ಬಾಹೂಂಶ್ಚಾಪಿ ಸಹಾಯುಧಾನ್ |
ನಿಚಕರ್ತ ಮಹಾವೇಗೈರ್ಭಲ್ಲೈಃ ಸನ್ನತಪರ್ವಭಿಃ ॥5॥
ಆಗ ಭೀಷ್ಮರು ಬಾಗಿದ ತುದಿಯುಳ್ಳ, ಮಹಾವೇಗವುಳ್ಳ ಭಲ್ಲಗಳಿಂದ ಯೋಧರ ಶಿರಸ್ಸುಗಳನ್ನೂ ಮತ್ತು ಆಯುಧ ಸಹಿತವಾದ ಬಾಹುಗಳನ್ನೂ ಕತ್ತರಿಸಿದರು.
ನೃತ್ಯತೋ ರಥಮಾರ್ಗೇಷು ಭೀಷ್ಮಸ್ಯ ಭರತರ್ಷಭ |
ಕೇಚಿದಾರ್ತಸ್ವರಂ ಚಕ್ರುರ್ನಾಗಾ ಮರ್ಮಣಿ ತಾಡಿತಾಃ ॥6॥
ಎಲೈ ಭರತರ್ಷಭನೇ, ರಥಮಾರ್ಗಗಳಲ್ಲಿ ನರ್ತನ ಮಾಡುವ ಭೀಷ್ಮರನ್ನು ನೋಡಿ ಅವರಿಂದ ಮರ್ಮದಲ್ಲಿ ತಾಡಿತವಾದ ಕೆಲವು ಗಜಗಳು ಆರ್ತಸ್ವರ ಮಾಡಿದವು.
ಅಭಿಮನ್ಯುಃ ಸುಸಂಕ್ರುದ್ಧಃ ಪಿಶಂಗೈಸ್ತುರಗೋತ್ತಮೈಃ |
ಸಂಯುಕ್ತಂ ರಥಮಾಸ್ಥಾಯ ಪ್ರಾಯಾದ್ ಭೀಷ್ಮರಥಂ ಪ್ರತಿ ॥7॥
ಅಭಿಮನ್ಯುವು ಬಹಳ ಕೋಪಗೊಂಡು ಕಂದುಬಣ್ಣದ ಕುದುರೆಗಳನ್ನು ಹೂಡಿದ್ದ ತನ್ನ ರಥವನ್ನು ಏರಿ ಭೀಷ್ಮರ ರಥದ ಕಡೆಗೆ ಹೊರಟನು.
ಜಾಂಬೂನದವಿಚಿತ್ರೇಣ ಕರ್ಣಿಕಾರೇಣ ಕೇತುನಾ |
ಅಭ್ಯವರ್ಷತ ಭೀಷ್ಮಂ ಚ ತಾಂಶ್ಚೈವ ರಥಸತ್ತಮಾನ್ ॥8॥

ಸುವರ್ಣಾಲಂಕೃತವಾದ, ಕರ್ಣಿಕಾರ ವೃಕ್ಷಧ್ವಜದಿಂದ ಕೂಡಿದ ರಥದಲ್ಲಿದ್ದ ಅವನು ಭೀಷ್ಮರನ್ನೂ ಮತ್ತು ಅವರ ರಕ್ಷಕರಾದ ಆ ರಥಶ್ರೇಷ್ಠರನ್ನೂ ಉದ್ದೇಶಿಸಿ ಬಾಣಗಳ ಮಳೆಯನ್ನು ಸುರಿಸಿದನು.
ಸ ತಾಳಕೇತೋಸ್ತೀಕ್ಷ್ಣೇನ ಕೇತುಮಾಹತ್ಯ ಪತ್ರಿಣಾ |
ಭೀಷ್ಮೇಣ ಯುಯುಧೇ ವೀರಸ್ತಸ್ಯ ಚಾನುಚರೈಃ ಸಹ ॥9॥
ಆ ವೀರನು ತಾಳಧ್ವಜರಾದ ಭೀಷ್ಮರ ಧ್ವಜವನ್ನು ಬಾಣದಿಂದ ಕೆಡವಿ ಭೀಷ್ಮರ ಅನುಚರರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಕೃತವರ್ಮಾಣಮೇಕೇನ ಶಲ್ಯಂ ಪಂಚಭಿರಾಯಸೈಃ |
ವಿದ್ಧ್ವಾ ನವಭಿರಾನರ್ಚ್ಛಚ್ಚಿತಾಗ್ರೈಃ ಪ್ರಪಿತಾಮಹಮ್ ॥10॥
ಕೃತವರ್ಮನನ್ನು ಒಂದು ಬಾಣದಿಂದಲೂ, ಶಲ್ಯನನ್ನು ಅಯೋಮಯವಾದ ಐದು ಬಾಣಗಳಿಂದಲೂ ಪ್ರಹಾರ ಮಾಡಿ, ತಮ್ಮ ಮುತ್ತಾತರಾದ ಭೀಷ್ಮರ ಮೇಲೆ ಹರಿತವಾದ ಅಲಗುಳ್ಳ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ಪೂರ್ಣಾಯತವಿಸೃಷ್ಟೇನ ಸಮ್ಯಕ್ ಪ್ರಣಿಹಿತೇನ ಚ |
ಧ್ವಜಮೇಕೇನ ವಿವ್ಯಾಧ ಜಾಂಬೂನದವಿಭೂಷಿತಮ್ ॥11॥
ಬಿಲ್ಲನ್ನು ಪೂರ್ಣವಾಗಿ ಎಳೆದು ಗುರಿಯಿಟ್ಟು ಪ್ರಯೋಗಿಸಿದ ಒಂದು ಬಾಣದಿಂದ ಭೀಷ್ಮರ ಸುವರ್ಣಾಲಂಕೃತವಾದ ಧ್ವಜಕ್ಕೆ ಹೊಡೆದನು.
ದುರ್ಮುಖಸ್ಯ ತು ಭಲ್ಲೇನ ಸರ್ವಾವರಣಭೇದಿನಾ |
ಜಹಾರ ಸಾರಥೇಃ ಕಾಯಾಚ್ಛಿರಃ ಸನ್ನತಪರ್ವಣಾ ॥12॥
ಬಾಗಿದ ತುದಿಯುಳ್ಳ ಸರ್ವಾವರಣಗಳನ್ನೂ ಭೇದಿಸುವ ಭಲ್ಲದಿಂದ ದುರ್ಮುಖನ ಸಾರಥಿಯ ದೇಹದಿಂದ ಅವನ ಶಿರಸ್ಸನ್ನು ಬೇರ್ಪಡಿಸಿದನು.
ಧನುಶ್ಚಿಚ್ಛೇದ ಭಲ್ಲೇನ ಕಾರ್ತಸ್ವರವಿಭೂಷಿತಮ್ |
ಕೃಪಸ್ಯ ನಿಶಿತಾಗ್ರೇಣ ತಾಂಶ್ಚ ತೀಕ್ಷ್ಣಮುಖೈಃ ಶರೈಃ ॥13॥
ಸುವರ್ಣಭೂಷಿತವಾದ ಕೃಪಾಚಾರ್ಯರ ಧನುಸ್ಸನ್ನು ಹರಿತವಾದ ತುದಿಯುಳ್ಳ ಭಲ್ಲದಿಂದ ಕತ್ತರಿಸಿ ಭೀಷ್ಮರ ರಥದ ರಕ್ಷಕರ ಮೇಲೆಯೂ ತೀಕ್ಷ್ಣ ಮುಖವುಳ್ಳ ಬಾಣಗಳನ್ನು ಪ್ರಯೋಗಿಸಿದನು.
ಜಘಾನ ಪರಮಕ್ರುದ್ಧೋ ನೃತ್ಯನ್ನಿವ ಮಹಾರಥಃ |
ತಸ್ಯ ಲಾಘವಮುದ್ವೀಕ್ಷ್ಯ ತುತುಷುರ್ದೇವತಾ ಅಪಿ ॥14॥
ಮಹಾರಥನಾದ ಅವನು ಪರಮ ಕ್ರುದ್ಧನಾಗಿ ನರ್ತನವನ್ನು ಮಾಡುವವನಂತೆ ಶತ್ರುಗಳನ್ನು ಸಂಹರಿಸಿದನು. ಅವನ ಕ್ಷಿಪ್ರತೆಯನ್ನು ನೋಡಿ ದೇವತೆಗಳೂ ಸಂತೋಷಗೊಂಡರು.
ಲಬ್ಧಲಕ್ಷ್ಯತಯಾ ಕಾರ್ಷ್ಣೇಃ ಸರ್ವೇ ಭೀಷ್ಮಮುಖಾ ರಥಾಃ |
ಸತ್ತ್ವವಂತಮಮನ್ಯಂತ ಸಾಕ್ಷಾದಿವ ಧನಂಜಯಮ್ ॥15॥
ಅರ್ಜುನನ ಮಗನಾದ ಅಭಿಮನ್ಯುವು ಲಕ್ಷ್ಯವನ್ನು ತಪ್ಪದಿರುವುದನ್ನು ನೋಡಿ ಭೀಷ್ಮರೇ ಮೊದಲಾದ ಮಹಾರಥರು ಅವನನ್ನು ಬಲವುಳ್ಳವನೆಂದೂ, ಸಾಕ್ಷಾತ್ ಅರ್ಜುನನಂತೆ ಇರುವವನೆಂದೂ ತಿಳಿದರು.
ತಸ್ಯ ಲಾಘವಮಾರ್ಗಸ್ಥಮಲಾತಸದೃಶಪ್ರಭಮ್ |
ದಿಶಃ ಪರ್ಯಪತಚ್ಚಾಪಂ ಗಾಂಡೀವಮಿವ ಘೋಷವತ್ ॥16॥
ಅಲಾತ ಚಕ್ರದ ಕಾಂತಿಯನ್ನು ಹೊಂದಿದ್ದ, ಕ್ಷಿಪ್ರವಾದ ಅವನ ಧನುಸ್ಸು ಗಾಂಡೀವ ಧನುಸ್ಸಿನಂತೆ ಘೋಷವುಳ್ಳದ್ದಾಗಿ ತನ್ನಿಂದ ಹೊರಹೊಮ್ಮಿದ ಬಾಣಗಳನ್ನು ದಿಕ್ಕು ದಿಕ್ಕುಗಳಿಗೆ ಕಳುಹಿಸಿತು.
ತಮಾಸಾದ್ಯ ಮಹಾವೇಗೈರ್ಭೀಷ್ಮೋ ನವಭಿರಾಶುಗೈಃ |
ವಿವ್ಯಾಧ ಸಮರೇ ತೂರ್ಣಮಾರ್ಜುನಿಂ ಪರವೀರಹಾ ॥17॥
ಪರಶತ್ರುಗಳನ್ನು ಸಂಹರಿಸುವ ಭೀಷ್ಮರು ಅರ್ಜುನನ ಮಗನಾದ ಅವನನ್ನು ಯುದ್ಧದಲ್ಲಿ ಸಮೀಪಿಸಿ ಶೀಘ್ರಗಾಮಿಗಳಾದ ಮಹಾವೇಗವುಳ್ಳ ಒಂಬತ್ತು ಬಾಣಗಳಿಂದ ಅವನನ್ನು ಹೊಡೆದರು.
ಧ್ವಜಂ ಚಾಸ್ಯ ತ್ರಿಭಿರ್ಭಲ್ಲೈಶ್ಚಿಚ್ಛೇದ ಪರಮೌಜಸಃ |
ಸಾರಥಿಂ ಚ ತ್ರಿಭಿರ್ಬಾಣೈರಾಜಘಾನ ಯತವ್ರತಃ ॥18॥
ದೃಢವ್ರತರಾದ ಭೀಷ್ಮರು ಮೂರು ಭಲ್ಲಗಳಿಂದ ಪರಮಶಕ್ತಿಶಾಲಿಯಾದ ಅವನ ಧ್ವಜವನ್ನೂ ಮತ್ತು ಮೂರು ಬಾಣಗಳಿಂದ ಅವನ ಸಾರಥಿಯನ್ನೂ ಹೊಡೆದು ಉರುಳಿಸಿದರು.
ತಥೈವ ಕೃತವರ್ಮಾ ಚ ಕೃಪಃ ಶಲ್ಯಶ್ಚ ಮಾರಿಷ |
ವಿದ್ಧ್ವಾ ನಾಕಂಪಯತ್ ಕಾರ್ಷ್ಣಿಂ ಮೈನಾಕಮಿವ ಪರ್ವತಮ್ ॥19॥
ಹಾಗೆಯೇ ಎಲೈ ವೀರನೇ, ಕೃತವರ್ಮನೂ, ಕೃಪರೂ ಮತ್ತು ಶಲ್ಯನೂ ಅರ್ಜುನನ ಪುತ್ರನಾದ ಅವನ ಮೇಲೆ ಬಾಣಪ್ರಯೋಗವನ್ನು ಮಾಡಿದರೂ ಮೈನಾಕ ಪರ್ವತದಂತಿದ್ದ ಅವನನ್ನು ಅಲುಗಾಡಿಸಲೂ ಸಾಧ್ಯವಾಗಲಿಲ್ಲ.
ಸ ತೈಃ ಪರಿವೃತಃ ಶೂರೋ ಧಾರ್ತರಾಷ್ಟ್ರೈರ್ಮಹಾರಥೈಃ |
ವವರ್ಷ ಶರವರ್ಷಾಣಿ ಕಾರ್ಷ್ಣಿಃ ಪಂಚರಥಾನ್ ಪ್ರತಿ ॥20॥
ಧೃತರಾಷ್ಟ್ರ ಪುತ್ರರಾದ ಐವರು ಮಹಾರಥರಿಂದ ಸುತ್ತುವರಿಯಲ್ಪಟ್ಟ ಅರ್ಜುನನ ಪುತ್ರನಾದ ಆ ಶೂರನು ಆ ಐದು ರಥಗಳ ಮೇಲೆ ಬಾಣಗಳ ಮಳೆಯನ್ನು ಕರೆದನು.
ತತಸ್ತೇಷಾಂ ಮಹಾಸ್ತ್ರಾಣಿ ಸಂವಾರ್ಯ ಶರವೃಷ್ಟಿಭಿಃ |

ನನಾದ ಬಲವಾನ್ ಕಾರ್ಷ್ಣಿರ್ಭೀಷ್ಮಾಯ ವಿಸೃಜನ್ ಶರಾನ್ ॥21॥
ಅನಂತರ ತನ್ನ ಬಾಣಗಳ ಮಳೆಯಿಂದ ಅವರ ಮಹಾಸ್ತ್ರಗಳನ್ನು ನಿವಾರಿಸಿ ಭೀಷ್ಮರ ಮೇಲೆ ಬಾಣ ಪ್ರಯೋಗವನ್ನು ಮಾಡುತ್ತಾ, ಬಲಿಷ್ಠನೂ, ಅರ್ಜುನಪುತ್ರನೂ ಆದ ಅವನು ಸಿಂಹನಾದವನ್ನು ಮಾಡಿದನು.
ತತ್ರಾಸ್ಯ ಸುಮಹದ್ ರಾಜನ್ ಬಾಹ್ವೋರ್ಬಲಮದೃಶ್ಯತ |
ಯತಮಾನಸ್ಯ ಸಮರೇ ಭೀಷ್ಮಮರ್ದಯತಃ ಶರೈಃ ॥22॥
ಯುದ್ಧದಲ್ಲಿ ಪ್ರಯತ್ನಶೀಲನಾಗಿ ಬಾಣಗಳಿಂದ ಭೀಷ್ಮರನ್ನು ಹಿಂಸಿಸುತ್ತಿದ್ದ ಅವನ ಬಾಹುಗಳ ದೊಡ್ಡ ಬಲವು ಅಲ್ಲಿ ಕಂಡುಬಂದಿತು.
ಪರಾಕ್ರಾಂತಸ್ಯ ತಸ್ಯೈವ ಭೀಷ್ಮೋಽಪಿ ಪ್ರಾಹಿಣೋಚ್ಛರಾನ್ |
ಸ ತಾಂಶ್ಚಿಚ್ಛೇದ ಸಮರೇ ಭೀಷ್ಮಚಾಪಚ್ಯುತಾನ್ ಶರಾನ್ ॥23॥
ಪರಾಕ್ರಮಶಾಲಿಯಾದ ಅವನ ಮೇಲೆ ಭೀಷ್ಮರೂ ಬಾಣಗಳನ್ನು ಪ್ರಯೋಗಿಸಿದರು. ಯುದ್ಧದಲ್ಲಿ ಭೀಷ್ಮರ ಬಿಲ್ಲಿನಿಂದ ಹೊರಹೊಮ್ಮಿದ ಆ ಬಾಣಗಳನ್ನು ಅವನು ಕತ್ತರಿಸಿ ಹಾಕಿದನು.
ತತೋ ಧ್ವಜಮಮೋಘೇಷುರ್ಭೀಷ್ಮಸ್ಯ ನವಭಿಃ ಶರೈಃ |
ಚಿಚ್ಛೇದ ಸಮರೇ ವೀರಸ್ತತ ಉಚ್ಚುಕ್ರುಶುರ್ಜನಾಃ ॥24॥
ಅನಂತರ ಅಮೋಘ ಬಾಣಗಳುಳ್ಳ ಆ ವೀರನು ಒಂಬತ್ತು ಬಾಣಗಳಿಂದ ಭೀಷ್ಮರ ರಥದ ಧ್ವಜವನ್ನು ಕತ್ತರಿಸಿದನು. ಆಗ (ಪಾಂಡವರ ಸೇನೆಯ) ಯೋಧರು ಗಟ್ಟಿಯಾಗಿ ನಾದವನ್ನು ಮಾಡಿದರು.
ಸ ರಾಜತೋ ಮಹಾಸ್ಕಂಧಸ್ತಾಲೋ ಹೇಮವಿಭೂಷಿತಃ |
ಸೌಭದ್ರವಿಶಿಖೈಶ್ಛಿನ್ನಃ ಪಪಾತ ಭುವಿ ಭಾರತ ॥25॥
ಎಲೈ ಭಾರತನೇ, ಸುವರ್ಣಭೂಷಿತವಾದ, ರಜತಮಯವಾದ, ದೊಡ್ಡ ಕೊಂಬೆಗಳಿಂದ ಕೂಡಿದ್ದ ಆ ತಾಳವೃಕ್ಷದ ಧ್ವಜವು ಅಭಿಮನ್ಯುವಿನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬಿದ್ದಿತು.
ಧ್ವಜಂ ಸೌಭದ್ರವಿಶಿಖೈಃ ಪತಿತಂ ಭರತರ್ಷಭ |
ದೃಷ್ಟ್ವಾ ಭೀಮೋಽನದದ್ ಹೃಷ್ಟಃ ಸೌಭದ್ರಮಭಿಹರ್ಷಯನ್ ॥26॥
ಎಲೈ ಭರತರ್ಷಭನೇ, ಭೀಷ್ಮರ ಧ್ವಜವು ಅಭಿಮನ್ಯುವಿನ ಬಾಣಗಳಿಂದ ನೆಲದ ಮೇಲೆ ಬಿದ್ದುದನ್ನು ನೋಡಿ ಸಂತೋಷಗೊಂಡ ಭೀಮನು ಅಭಿಮನ್ಯುವನ್ನು ಸಂತೋಷಪಡಿಸುವವನಾಗಿ ಸಂತೋಷದಿಂದ ಸಿಂಹನಾದವನ್ನು ಮಾಡಿದನು.
ಅಥ ಭೀಷ್ಮೋ ಮಹಾಸ್ತ್ರಾಣಿ ದಿವ್ಯಾನಿ ಚ ಬಹೂನಿ ಚ |
ಪ್ರಾದುಶ್ಚಕ್ರೇ ಮಹಾರೌದ್ರಃ ಕ್ಷಣೇ ತಸ್ಮಿನ್ ಮಹಾಬಲಃ ॥27॥
ಆ ಕ್ಷಣದಲ್ಲಿ ಮಹಾಬಲರೂ, ಮಹಾಭಯಂಕರರೂ ಆದ ಭೀಷ್ಮರು ದಿವ್ಯವಾದ ಅನೇಕ ಮಹಾಸ್ತ್ರಗಳನ್ನು ಪ್ರಾದುರ್ಭಾವಗೊಳಿಸಿದರು.
ತತಃ ಶತಸಹಸ್ರೇಣ ಸೌಭದ್ರಂ ಪ್ರಪಿತಾಮಹಃ |
ಅವಾಕಿರದಮೇಯಾತ್ಮಾ ಶರಾಣಾಂ ನತಪರ್ವಣಾಮ್ ॥28॥
ಮುತ್ತಜ್ಜನೂ ಮತ್ತು ಅಪಾರಶಕ್ತಿಯುಳ್ಳವರೂ ಆದ ಅವರು ಅಭಿಮನ್ಯುವಿನ ಮೇಲೆ ಬಾಗಿದ ತುದಿಯುಳ್ಳ ಒಂದುಲಕ್ಷ ಬಾಣಗಳ ಮಳೆಯನ್ನು ಸುರಿಸಿದರು.
ತತೋ ದಶ ಮಹೇಷ್ವಾಸಾಃ ಪಾಂಡವಾನಾಂ ಮಹಾರಥಾಃ |
ರಕ್ಷಾರ್ಥಮಭ್ಯಧಾವಂತ ಸೌಭದ್ರಂ ತ್ವರಿತಾ ರಥೈಃ ॥29॥
ಆಗ ಪಾಂಡವರ ಹತ್ತು ಜನ ಮಹಾರಥರು, ಮಹಾಧನುರ್ಧಾರಿಗಳಾಗಿ ಶೀಘ್ರವಾಗಿ ಅಭಿಮನ್ಯುವನ್ನು ರಕ್ಷಿಸಲು ತಮ್ಮ ರಥಗಳಿಂದ ಅವನೆಡೆಗೆ ಬಂದರು.
ವಿರಾಟಃ ಸಹ ಪುತ್ರೇಣ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಭೀಮಶ್ಚ ಕೇಕಯಾಶ್ಚೈವ ಸಾತ್ಯಕಿಶ್ಚ ವಿಶಾಂಪತೇ ॥30॥
ಎಲೈ ರಾಜನೇ, ಪುತ್ರನಿಂದ ಸಹಿತನಾದ ವಿರಾಟನು, ದ್ರುಪದನ ಮಗನಾದ ಧೃಷ್ಟದ್ಯುಮ್ನನು, ಭೀಮ, ಕೇಕಯರು ಮತ್ತು ಸಾತ್ಯಕಿಯು ಅವನೆಡೆಗೆ ಬಂದರು.
ಜವೇನಾಪತತಾಂ ತೇಷಾಂ ಭೀಷ್ಮಃ ಶಾಂತನವೋ ರಣೇ |
ಪಾಂಚಾಲ್ಯಂ ತ್ರಿಭಿರಾನರ್ಚ್ಛತ್ ಸಾತ್ಯಕಿಂ ನಿಶಿತೈಃ ಶರೈಃ ॥31॥
ಅವರು ವೇಗವಾಗಿ ಅಭಿಮನ್ಯುವಿನ ಕಡೆಗೆ ಬರುತ್ತಿದ್ದಂತೆ ಶಂತನು ಪುತ್ರರಾದ ಭೀಷ್ಮರು ಯುದ್ಧದಲ್ಲಿ ದ್ರುಪದನನ್ನು ಮತ್ತು ಸಾತ್ಯಕಿಯನ್ನು ಮೂರು ಮೂರು ಹರಿತವಾದ ಬಾಣಗಳಿಂದ ಹಿಂಸಿಸಿದರು.
ಪೂರ್ಣಾಯತವಿಸೃಷ್ಟೇನ ಕ್ಷುರೇಣ ನಿಶಿತೇನ ಚ |
ಧ್ವಜಮೇಕೇನ ಚಿಚ್ಛೇದ ಭೀಮಸೇನಸ್ಯ ಪತ್ರಿಣಾ ॥32॥
ಬಿಲ್ಲನ್ನು ಪೂರ್ಣವಾಗಿ ಎಳೆದು ಪ್ರಯೋಗಿಸಿದ ಪತ್ರಸಹಿತವಾದ ಒಂದು ನಿಶಿತವಾದ ಕ್ಷುರದಿಂದ ಭೀಮಸೇನನ ಧ್ವಜವನ್ನು ಕತ್ತರಿಸಿದರು.
ಜಾಂಬೂನದಮಯಃ ಕೇತುಃ ಕೇಸರೀ ನರಸತ್ತಮ |
ಪಪಾತ ಭೀಮಸೇನಸ್ಯ ಭೀಷ್ಮೇಣ ಮಥಿತೋ ರಥಾತ್ ॥33॥
ಎಲೈ ನರಶ್ರೇಷ್ಠನೇ, ಸುವರ್ಣಮಯವಾದ ಭೀಮಸೇನನ ಸಿಂಹಧ್ವಜವು ಭೀಷ್ಮರಿಂದ ಮಥಿತವಾಗಿ ರಥದಿಂದ ಕೆಳಗೆ ಬಿದ್ದಿತು.

ಭೀಮಸೇನಸ್ತ್ರಿಭಿರ್ವಿದ್ಧ್ವಾ ಭೀಷ್ಮಂ ಶಾಂತನವಂ ರಣೇ |
ಕೃಪಮೇಕೇನ ವಿವ್ಯಾಧ ಕೃತವರ್ಮಾಣಮಷ್ಟಭಿಃ ॥34॥
ಭೀಮಸೇನನು ಮೂರು ಬಾಣಗಳನ್ನು ಪ್ರಯೋಗಿಸಿ ಯುದ್ಧದಲ್ಲಿ ಭೀಷ್ಮರನ್ನು ಹೊಡೆದು, ಒಂದು ಬಾಣದಿಂದ ಕೃಪರನ್ನೂ ಮತ್ತು ಎಂಟು ಬಾಣಗಳಿಂದ ಕೃತವರ್ಮನನ್ನೂ ಹೊಡೆದನು.
ಪ್ರಗೃಹೀತಾಗ್ರಹಸ್ತೇನ ವೈರಾಟಿರಪಿ ದಂತಿನಾ |
ಅಭ್ಯದ್ರವತ ರಾಜಾನಂ ಮದ್ರಾಧಿಪತಿಮುತ್ತರಃ ॥35॥
ವಿರಾಟ ಪುತ್ರನಾದ ಉತ್ತರನು ತನ್ನ ಸೊಂಡಿಲಿನ ಮುಂಭಾಗವನ್ನು ಎತ್ತಿದ ಆನೆಯ ಮೇಲೆ ಕುಳಿತು ಮದ್ರರಾಜನಾದ ಶಲ್ಯನ ಕಡೆಗೆ ಧಾವಿಸಿದನು.
ತಸ್ಯ ವಾರಣರಾಜಸ್ಯ ಜವೇನಾಪತತೋ ರಥೀ |
ಶಲ್ಯೋ ನಿವಾರಯಾಮಾಸ ವೇಗಮಪ್ರತಿಮಂ ರಣೇ ॥36॥
ರಥಿಯಾದ ಶಲ್ಯನು ವೇಗದಿಂದ ತನ್ನ ಮೇಲೆ ಎರಗುತ್ತಿರುವ ಆ ಗಜರಾಜನ ಅಸದೃಶ ವೇಗವನ್ನು ತಡೆದನು.
ತಸ್ಯ ಕ್ರುದ್ಧಃ ಸ ನಾಗೇಂದ್ರೋ ಬೃಹತಃ ಸಾಧುವಾಹಿನಃ |
ಪದಾ ಯುಗಮಧಿಷ್ಠಾಯ ಜಘಾನ ಚತುರೋ ಹಯಾನ್ ॥37॥
ಅದರಿಂದ ಅವನ ಮೇಲೆ ಸಿಟ್ಟುಗೊಂಡ ಆ ಶ್ರೇಷ್ಠ ಗಜವು ದೃಢವೂ, ಚೆನ್ನಾಗಿ ರಥವನ್ನು ಎಳೆಯುವವೂ ಆದ ಅವನ ರಥದ ನಾಲ್ಕು ಕುದುರೆಗಳನ್ನು ನೊಗದ ಮೇಲೆ ತನ್ನ ಪಾದಗಳನ್ನಿಟ್ಟು ಕೊಂದಿತು.
ಸ ಹತಾಶ್ವೇ ರಥೇ ತಿಷ್ಠನ್ ಮದ್ರಾಧಿಪತಿರಾಯಸೀಮ್ |
ಉತ್ತರಾಂತಕರೀಂ ಶಕ್ತಿಂ ಚಿಕ್ಷೇಪ ಭುಜಗೋಪಮಾಮ್ ॥38॥
ಹತಾಶ್ವನಾದ ಮದ್ರರಾಜನು ರಥದಲ್ಲಿ ಕುಳಿತು ಉತ್ತರನನ್ನು ವಿನಾಶ ಮಾಡುವ ಸರ್ಪದಂತಿದ್ದ ಅಯೋಮಯವಾದ ಶಕ್ತಿಯನ್ನು ಉತ್ತರನ ಮೇಲೆ ಪ್ರಯೋಗಿಸಿದನು.
ತಯಾ ಭಿನ್ನತನುತ್ರಾಣಃ ಪ್ರವಿಶ್ಯ ವಿಪುಲಂ ತಮಃ |
ಸ ಪಪಾತ ಗಜಸ್ಕಂಧಾತ್ ಪ್ರಮುಕ್ತಾಂಕುಶತೋಮರಃ ॥39॥
ಅದರಿಂದ ತನ್ನ ಕವಚವು ಸೀಳಿ ಹಸ್ತದಲ್ಲಿದ್ದ ಅಂಕುಶ, ತೋಮರಗಳನ್ನು ನೆಲಕ್ಕೆ ಹಾಕಿ ಗಜದ ಕೊರಳಿನಿಂದ ಕೆಳಗೆ ಬಿದ್ದು ಉತ್ತರನು ಅತ್ಯಂತ ಮೂರ್ಛೆ ಹೊಂದಿದನು.
ಸಮಾದಾಯ ಚ ಶಲ್ಯೋಽಸಿಮವಪ್ಲುತ್ಯ ರಥೋತ್ತಮಾತ್ |
ವಾರಣೇಂದ್ರಸ್ಯ ವಿಕ್ರಮ್ಯ ಚಿಚ್ಛೇದಾಥ ಮಹಾಕರಮ್ ॥40॥
ಭಿನ್ನಮರ್ಮಾ ಶರವ್ರಾತೈಶ್ಛಿನ್ನಹಸ್ತಃ ಸ ವಾರಣಃ |
ಭೀಮಮಾರ್ತಸ್ವರಂ ಕೃತ್ವಾ ಪಪಾತ ಚ ಮಮಾರ ಚ ॥41॥
ಶಲ್ಯನು ತನ್ನ ಶ್ರೇಷ್ಠ ರಥದಿಂದ ಕೆಳಗೆ ಹಾರಿ, ಕೈಯಲ್ಲಿ ಖಡ್ಗವನ್ನು ತೆಗೆದುಕೊಂಡು ತನ್ನ ಪರಾಕ್ರಮದಿಂದ ಆ ಗಜೇಂದ್ರನ ದೊಡ್ಡ ಸೊಂಡಿಲನ್ನು ಕತ್ತರಿಸಿದನು. ಬಾಣಗಳ ಸಮೂಹದಿಂದ ಮರ್ಮಸ್ಥಲಗಳಲ್ಲಿ ಗಾಯಗೊಂಡಿದ್ದ ಆ ಗಜವು ಈಗ ಸೊಂಡಿಲು ಕತ್ತರಿಸಲ್ಪಡುತ್ತಿರಲು ಭಯಂಕರವಾದ ಆರ್ತನಾದವನ್ನು ಮಾಡಿ ಬಿದ್ದು ಮರಣ ಹೊಂದಿತು.
ಏತದೀದೃಶಕಂ ಕೃತ್ವಾ ಮದ್ರರಾಜೋ ಮಹಾರಥಃ |
ಆರುರೋಹ ರಥಂ ತೂರ್ಣಂ ಭಾಸ್ವರಂ ಕೃತವರ್ಮಣಃ ॥42॥
ಮಹಾರಥನಾದ ಮದ್ರರಾಜನು ಇಂತಹ ಈ ಕಾರ್ಯವನ್ನು ಮಾಡಿ ಶೀಘ್ರವಾಗಿ ಕೃತವರ್ಮನ ಪ್ರಕಾಶಮಾನವಾದ ರಥವನ್ನು ಏರಿದನು.
ಉತ್ತರಂ ನಿಹತಂ ದೃಷ್ಟ್ವಾ ವೈರಾಟಿರ್ಭ್ರಾತರಂ ಶುಭಮ್ |
ಕೃತವರ್ಮಣಾ ಚ ಸಹಿತಂ ದೃಷ್ಟ್ವಾ ಶಲ್ಯಮವಸ್ಥಿತಮ್ |
ಶಂಖಃ ಕ್ರೋಧಾತ್ ಪ್ರಜಜ್ವಾಲ ಹವಿಷಾ ಹವ್ಯವಾಡಿವ ॥43॥
ತನ್ನ ಶುಭ ಸಹೋದರನಾದ ಉತ್ತರನು ಹತನಾದುದನ್ನು ನೋಡಿ, ಶಲ್ಯನು ಕೃತವರ್ಮನ ಜೊತೆಯಲ್ಲಿ ಇರುವುದನ್ನು ನೋಡಿ ವಿರಾಟನ ಮಗನಾದ ಶಂಖನು ಹವಿಸ್ಸಿನಿಂದ ಉರಿಯುವ ಅಗ್ನಿಯಂತೆ ಕ್ರೋಧದಿಂದ ಜ್ವಲಿಸಿದನು.
ಸ ವಿಸ್ಫಾರ್ಯ ಮಹಚ್ಚಾಪಂ ಕಾರ್ತಸ್ವರವಿಭೂಷಿತಮ್ |
ಅಭ್ಯಧಾವಜ್ಜಿಘಾಂಸನ್ ವೈ ಶಲ್ಯಂ ಮದ್ರಾಧಿಪಂ ಬಲೀ ॥44॥
ಬಲಿಷ್ಠನಾದ ಅವನು ಸುವರ್ಣವಿಭೂಷಿತವಾದ ತನ್ನ ದೊಡ್ಡ ಚಾಪವನ್ನು ಎಳೆದು ಮದ್ರರಾಜನಾದ ಶಲ್ಯನನ್ನು ಕೊಲ್ಲುವ ಇಚ್ಛೆಯಿಂದ ಅವನ ಕಡೆಗೆ ಧಾವಿಸಿದನು.
ಮಹತಾ ರಥವಂಶೇನ ಸಮಂತಾತ್ ಪರಿವಾರಿತಃ |
ಸೃಜನ್ ಬಾಣಮಯಂ ವರ್ಷಂ ಪ್ರಾಯಾತ್ ಶಲ್ಯರಥಂ ಪ್ರತಿ ॥45॥
ಅನೇಕ ರಥಸಮೂಹಗಳಿಂದ ಸುತ್ತಲೂ ಪರಿವಾರಿತನಾಗಿ, ಬಾಣಗಳ ಮಳೆಯನ್ನು ಸುರಿಸುತ್ತಾ ಅವನು ಶಲ್ಯನ ರಥದ ಕಡೆಗೆ ಧಾವಿಸಿದನು.
ತಮಾಪತಂತಂ ಸಂಪ್ರೇಕ್ಷ್ಯ ಮತ್ತವಾರಣವಿಕ್ರಮಮ್ |
ತಾವಕಾನಾಂ ರಥಾಃ ಸಪ್ತ ಸಮಂತಾತ್ ಪರ್ಯವಾರಯನ್ |
ಮದ್ರರಾಜಂ ಪರೀಪ್ಸಂತೋ ಮೃತ್ಯೋರ್ದಂಷ್ಟ್ರಾಂತರಂ ಗತಮ್ ॥46॥

ಮದಗಜದಂತೆ ಪರಾಕ್ರಮವುಳ್ಳ ಅವನು ಹಾಗೆ ಮೇಲೆರಗುತ್ತಿರುವುದನ್ನು ನೋಡಿ, ಮೃತ್ಯುವಿನ ದವಡೆಗೆ ಸಿಕ್ಕಿದ ಮದ್ರರಾಜನನ್ನು ರಕ್ಷಿಸಲು ಬಯಸಿ, ನಿನ್ನ ಸಪ್ತರಥರು ಅವನನ್ನು ಎಲ್ಲ ಕಡೆಯಿಂದಲೂ ಸುತ್ತುವರಿದರು.
ತತೋ ಭೀಷ್ಮೋ ಮಹಾಬಾಹುರ್ವಿನದ್ಯ ಜಲದೋ ಯಥಾ |
ತಾಳಮಾತ್ರಂ ಧನುರ್ಗೃಹ್ಯ ಶಂಖಮಭ್ಯದ್ರವದ್ ರಣೇ ॥47॥
ಆಗ ಮಹಾಬಾಹುಗಳಾದ ಭೀಷ್ಮರು ಮೇಘದಂತೆ ಗರ್ಜಿಸುತ್ತಾ, ತಾಳ ಪ್ರಮಾಣದ ಧನುಸ್ಸನ್ನು ಹಿಡಿದುಕೊಂಡು ಯುದ್ಧದಲ್ಲಿ ಶಂಖನ ಕಡೆಗೆ ಧಾವಿಸಿದರು.
ತಮುದ್ಯತಮುದೀಕ್ಷ್ಯಾಥ ಮಹೇಷ್ವಾಸಂ ಮಹಾಬಲಮ್ |
ಸಂತ್ರಸ್ತಾ ಪಾಂಡವೀ ಸೇನಾ ವಾತವೇಗಹತೇವ ನೌಃ ॥48॥
ಮಹಾಬಲಿಷ್ಠರೂ, ಮಹಾಧನುರ್ಧಾರಿಗಳೂ ಮತ್ತು ಪ್ರಯತ್ನಶೀಲರೂ ಆದ ಅವರನ್ನು ನೋಡಿ ಪಾಂಡವ ಸೇನೆಯು ಬಿರುಗಾಳಿಯ ವೇಗಕ್ಕೆ ಸಿಕ್ಕಿದ ನಾವೆಯಂತೆ ಹೆದರಿತು.
ತತ್ರಾರ್ಜುನಃ ಸಂತ್ವರಿತಃ ಶಂಖಸ್ಯಾಸೀತ್ ಪುರಃಸರಃ |
ಭೀಷ್ಮಾದ್ ರಕ್ಷ್ಯೋಽಯಮದ್ಯೇತಿ ತತೋ ಯುದ್ಧಮವರ್ತತ ॥49॥
ಅಲ್ಲಿ ಅರ್ಜುನನು ಶಂಖನನ್ನು ಭೀಷ್ಮರಿಂದ ರಕ್ಷಿಸಬೇಕೆಂದು ತಿಳಿದು ಶೀಘ್ರವಾಗಿ ಶಂಖನ ಮುಂದೆ ಬಂದನು. ಅನಂತರ ಯುದ್ಧವು ನಡೆಯಿತು.
ಹಾಹಾಕಾರೋ ಮಹಾನಾಸೀದ್ ಯೋಧಾನಾಂ ಯುಧಿ ಯುಧ್ಯತಾಮ್ |
ತೇಜಸ್ತೇಜಸಿ ಸಂಪೃಕ್ತಮಿತ್ಯೇವಂ ವಿಸ್ಮಯಂ ಯಯುಃ ॥50॥
ಆಗ ಆ ಯುದ್ಧದಲ್ಲಿ ಯುದ್ಧ ಮಾಡುವ ಯೋಧರಿಗೆ ದೊಡ್ಡ ಹಾಹಾಕಾರ (ಶಲ್ಯನ ಎದುರಿಗೆ ಅರ್ಜುನನು ಬಂದದ್ದನ್ನು ನೋಡಿ) ಉಂಟಾಯಿತು. ತೇಜಸ್ಸು, ತೇಜಸ್ಸಿನ ಜೊತೆಯಲ್ಲಿ ಸೇರಿದಂತಾಯಿತು ಎನ್ನುತ್ತಾ ವಿಸ್ಮಯವನ್ನು ಹೊಂದಿದರು.
ಅಥ ಶಲ್ಯೋ ಗದಾಪಾಣಿರವತೀರ್ಯ ಮಹಾರಥಾತ್ |
ಶಂಖಸ್ಯ ಚತುರೋ ವಾಹಾನಹನದ್ ಭರತರ್ಷಭ ॥51॥
ಎಲೈ ಭರತಶ್ರೇಷ್ಠನೇ, ಅನಂತರ ಶಲ್ಯನು ಕೈಯಲ್ಲಿ ಗದೆಯನ್ನು ಹಿಡಿದು ತನ್ನ ದೊಡ್ಡ ರಥದಿಂದ ಇಳಿದು ಶಂಖನ ನಾಲ್ಕು ಕುದುರೆಗಳನ್ನು ಕೊಂದನು.
ಸ ಹತಾಶ್ವಾದ್ ರಥಾತ್ ತೂರ್ಣಂ ಖಡ್ಗಮಾದಾಯ ವಿದ್ರುತಃ |
ಬೀಭತ್ಸೋಃ ಸ್ಯಂದನಂ ಪ್ರಾಪ್ಯ ತತಃ ಶಾಂತಿಮವಿಂದತ ॥52॥
ಕುದುರೆಗಳು ಕೊಲ್ಲಲ್ಪಡುತ್ತಿರಲು ಶಂಖನು ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಇಳಿದು ಖಡ್ಗವನ್ನು ಹಿಡಿದು ಓಡಿ ಅರ್ಜುನನ ರಥವನ್ನು ಸೇರಿ ಶಾಂತಿಯನ್ನು ಹೊಂದಿದನು.
ತತೋ ಭೀಷ್ಮರಥಾತ್ ತೂರ್ಣಮುತ್ಪತಂತಿ ಪತತ್ರಿಣಃ |
ಯೈರಂತರಿಕ್ಷಂ ಭೂಮಿಶ್ಚ ಸರ್ವತಃ ಸಮವಸ್ತೃತಮ್ ॥53॥
ಅನಂತರ ಭೀಷ್ಮ ರಥದಿಂದ ಶೀಘ್ರವಾಗಿ ಬಾಣಗಳು ಬರಲು ಪ್ರಾರಂಭಿಸಿದವು. ಅವು ಅಂತರಿಕ್ಷವನ್ನು ಮತ್ತು ಭೂಮಿಯನ್ನು ಎಲ್ಲ ಕಡೆಗಳಲ್ಲಿಯೂ ಮುಚ್ಚಿ ಹಾಕಿದವು.
ಪಾಂಚಾಲಾನಥ ಮತ್ಸ್ಯಾಂಶ್ಚ ಕೇಕಯಾಂಶ್ಚ ಪ್ರಭದ್ರಕಾನ್ |
ಭೀಷ್ಮಃ ಪ್ರಹರತಾಂ ಶ್ರೇಷ್ಠಃ ಪಾತಯಾಮಾಸ ಮಾರ್ಗಣೈಃ ॥54॥
ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಭೀಷ್ಮರು ತಮ್ಮ ಬಾಣಗಳಿಂದ ಪಾಂಚಾಲರನ್ನೂ, ಮತ್ಸ್ಯರನ್ನೂ, ಕೇಕಯರನ್ನೂ, ಪ್ರಭದ್ರಕರನ್ನೂ ಹೊಡೆದು ಉರುಳಿಸಿದರು.
ಉತ್ಸೃಜ್ಯ ಸಮರೇ ತೂರ್ಣಂ ಪಾಂಡವಂ ಸವ್ಯಸಾಚಿನಮ್ |
ಅಭ್ಯದ್ರವತ ಪಾಂಚಾಲ್ಯಂ ದ್ರುಪದಂ ಸೇನಯಾ ವೃತಮ್ |
ಪ್ರಿಯಂ ಸಂಬಂಧಿನಂ ರಾಜನ್ ಶರಾನವಕಿರನ್ ಬಹೂನ್ ॥55॥
ಎಲೈ ರಾಜನೇ, ಭೀಷ್ಮರು ಸವ್ಯಸಾಚಿಯಾದ ಪಾಂಡವ ಅರ್ಜುನನನ್ನು ಯುದ್ಧದಲ್ಲಿ ಶೀಘ್ರವಾಗಿ ಬಿಟ್ಟು, ಸೇನೆಯಿಂದ ಪರಿವೃತನಾದ ಪಾಂಚಾಲನಾದ ದ್ರುಪದನ ಕಡೆಗೆ ಧಾವಿಸಿದರು. ಪ್ರಿಯನೂ, ಸಂಬಂಧಿಯೂ ಆದ ಅವನ ಮೇಲೆ ಅನೇಕ ಬಾಣಗಳ ಮಳೆಯನ್ನು ಕರೆದರು.
ಅಗ್ನಿನೇವ ಪ್ರದಗ್ಧಾನಿ ವನಾನಿ ಶಿಶಿರಾತ್ಯಯೇ |
ಶರದಗ್ಧಾನ್ಯದೃಶ್ಯಂತ ಸೈನ್ಯಾನಿ ದ್ರುಪದಸ್ಯ ಹ |
ಅತಿಷ್ಠತ ರಣೇ ಭೀಷ್ಮೋ ವಿಧೂಮ ಇವ ಪಾವಕಃ ॥56॥
ಶಿಶಿರ ಋತುವು ಮುಗಿದ ಮೇಲೆ ಅಗ್ನಿಯಿಂದ ಸುಟ್ಟ ವನದಂತೆ ದ್ರುಪದನ ಸೈನ್ಯವು ಭೀಷ್ಮರ ಶರಗಳಿಂದ ದಗ್ಧವಾದುದು ಕಂಡುಬಂದಿತು. ಭೀಷ್ಮರು ಧೂಮವಿಲ್ಲದ ಅಗ್ನಿಯಂತೆ ರಣರಂಗದಲ್ಲಿ ನಿಂತರು.
ಮಧ್ಯಂದಿನೇ ಯಥಾದಿತ್ಯಂ ತಪಂತಮಿವ ತೇಜಸಾ |
ನ ಶೇಕುಃ ಪಾಂಡವೇಯಸ್ಯ ಯೋಧಾ ಭೀಷ್ಮಂ ನಿರೀಕ್ಷಿತುಮ್ ॥57॥
ಮಧ್ಯಾಹ್ನ ಕಾಲದಲ್ಲಿ ತನ್ನ ತೇಜಸ್ಸಿನಿಂದ ಸುಡುತ್ತಿರುವ ಸೂರ್ಯನನ್ನು ಹೇಗೆ ನೋಡಲು ಸಾಧ್ಯವಿಲ್ಲವೋ, ಹಾಗೆ ಪಾಂಡವರ ಸೇನೆಯ ಯೋಧರು ಭೀಷ್ಮರನ್ನು ನೋಡುವುದಕ್ಕೂ ಸಾಧ್ಯವಾಗಲಿಲ್ಲ.
ವೀಕ್ಷಾಂಚಕ್ರುಃ ಸಮಂತಾತ್ ತೇ ಪಾಂಡವಾ ಭಯಪೀಡಿತಾಃ |

ತ್ರಾತಾರಂ ನಾಧ್ಯಗಚ್ಛಂತ ಗಾವಃ ಶೀತಾರ್ದಿತಾ ಇವ ॥58॥
ಭಯಪೀಡಿತರಾದ ಪಾಂಡವರು ಎಲ್ಲ ಕಡೆಯಲ್ಲಿಯೂ ನೋಡಿದರು. ಹಿಮ ಬಾಧೆಗೆ ಒಳಗಾದ ಗೋವುಗಳಂತೆ ಅವರು ಯಾವ ರಕ್ಷಕರನ್ನೂ ಕಾಣಲಿಲ್ಲ.
ಹತವಿಪ್ರದ್ರುತೇ ಸೈನ್ಯೇ ನಿರುತ್ಸಾಹೇ ವಿಮರ್ದಿತೇ।
ಹಾಹಾಕಾರೋ ಮಹಾನಾಸೀತ್ ಪಾಂಡುಸೈನ್ಯೇಷು ಭಾರತ ॥59॥
ಎಲೈ ಭಾರತನೇ, ಸೈನ್ಯವು ವಿಮರ್ದನಕ್ಕೆ ಒಳಗಾಗಿ, ಸ್ವಲ್ಪ ಭಾಗವು ಹತವಾಗಿ, ಸ್ವಲ್ಪ ಭಾಗವು ನಿರುತ್ಸಾಹದಿಂದ ಓಡಿ ಹೋಗುತ್ತಿರಲು ಪಾಂಡವರ ಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು.
ತತೋ ಭೀಷ್ಮಃ ಶಾಂತನವೋ ನಿತ್ಯಂ ಮಂಡಲಕಾರ್ಮುಕಃ।
ಮುಮೋಚ ಬಾಣಾನ್ ದೀಪ್ತಾಗ್ರಾನಹೀನಾಶೀವಿಷಾನಿವ ॥60॥
ಆಗ ಶಂತನು ಪುತ್ರರಾದ ಭೀಷ್ಮರು ಯಾವಾಗಲೂ ಮಂಡಲಾಕಾರದ ಧನುಸ್ಸನ್ನು ಹೊಂದಿದವರಾಗಿ ದೀಪ್ತವಾದ ತುದಿಯುಳ್ಳ ವಿಷ ಸರ್ಪಗಳಂತಿದ್ದ ಬಾಣಗಳನ್ನು ಪಾಂಡವರ ಸೈನ್ಯದ ಮೇಲೆ ಪ್ರಯೋಗಿಸಿದರು.
ಶರೈರೇಕಾಯನೀಕುರ್ವನ್ ದಿಶಃ ಸರ್ವಾ ಯತವ್ರತಃ।
ಜಘಾನ ಪಾಂಡವರಥಾನಾದಿಶ್ಯಾದಿಶ್ಯ ಭಾರತ ॥61॥
ಎಲೈ ಭಾರತನೇ, ನಿಯತವ್ರತರಾದ ಭೀಷ್ಮರು ಎಲ್ಲ ದಿಕ್ಕುಗಳನ್ನೂ ತಮ್ಮ ಬಾಣಗಳಿಂದ ಒಂದೇ ಆಶ್ರಯವನ್ನಾಗಿ ಮಾಡುತ್ತಾ ಪಾಂಡವರ ರಥರನ್ನು ಹೇಳಿ ಹೇಳಿ ಹೊಡೆದರು.
ತತಃ ಸೈನ್ಯೇಷು ಭಗ್ನೇಷು ಮಥಿತೇಷು ಚ ಸರ್ವಶಃ।
ಪ್ರಾಪ್ತೇ ಚಾಸ್ತಂ ದಿನಕರೇ ನ ಪ್ರಾಜ್ಞಾಯತ ಕಿಂಚನ ॥62॥
ಆಗ ಎಲ್ಲ ಕಡೆಯಲ್ಲಿಯೂ ಪಾಂಡವರ ಸೈನ್ಯವು ಕಲಕಲ್ಪಟ್ಟು ಭಗ್ನವಾಗಿ ಸೂರ್ಯನು ಮುಳುಗುವ ಸಮಯವು ಬರುತ್ತಿರಲು ಯಾವುದೂ ಕಾಣಲಿಲ್ಲ.
ಭೀಷ್ಮಂ ಚ ಸಮುದೀರ್ಯಂತಂ ದೃಷ್ಟ್ವಾ ಪಾರ್ಥಾ ಮಹಾಹವೇ।
ಅವಹಾರಮಕುರ್ವಂತ ಸೈನ್ಯಾನಾಂ ಭರತರ್ಷಭ ॥63॥
ಎಲೈ ಭರತರ್ಷಭನೇ, ಆ ದೊಡ್ಡ ಯುದ್ಧದಲ್ಲಿ ವಿಜೃಂಭಿಸುತ್ತಿರುವ ಭೀಷ್ಮರನ್ನು ನೋಡಿ ಪಾಂಡವರು ತಮ್ಮ ಸೈನ್ಯವನ್ನು ಅವಹಾರ ಮಾಡಿದರು (ಹಿಂದಕ್ಕೆ ತೆಗೆದುಕೊಂಡರು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತಾರನೆಯ ಅಧ್ಯಾಯ
ಕೃಷ್ಣನಿಂದ ಯುಧಿಷ್ಠಿರನ ಸಮಾಶ್ವಾಸನೆ. ದ್ವಿತೀಯ ದಿವಸ
ಯುದ್ಧಕ್ಕಾಗಿ ಪಾಂಡವರ ಉದ್ಯಮ.
ಸಂಜಯಃ
ಕೃತೇಽವಹಾರೇ ಸೈನ್ಯಾನಾಂ ಪ್ರಥಮೇ ಭರತರ್ಷಭ।
ಭೀಷ್ಮೇ ಚ ಯುಧಿ ಸಂರಬ್ಧೇ ಹೃಷ್ಟೇ ದುರ್ಯೋಧನೇ ತಥಾ ॥1॥
ಧರ್ಮರಾಜಸ್ತತಸ್ತೂರ್ಣಮಭಿಗಮ್ಯ ಜನಾರ್ದನಮ್।
ಭ್ರಾತೃಭಿಃ ಸಹಿತಃ ಸರ್ವೈಃ ಸರ್ವೈಶ್ಚೈವ ಜನೇಶ್ವರೈಃ ॥2॥
ಶುಚಾ ಪರಮಯಾ ಯುಕ್ತಶ್ಚಿಂತಯಾನಃ ಪರಾಜಯಮ್।
ವಾರ್ಷ್ಣೇಯಮಬ್ರವೀದ್ ರಾಜನ್ ದೃಷ್ಟ್ವಾ ಭೀಷ್ಮಸ್ಯ ವಿಕ್ರಮಮ್ ॥3॥
ಸಂಜಯ ಎಲೈ ಭರತರ್ಷಭನೇ, ಭೀಷ್ಮರು ಯುದ್ಧದಲ್ಲಿ ಸಂಕ್ರುದ್ಧರಾಗಿ ದುರ್ಯೋಧನನು ಸಂತೋಷದಿಂದ ಕೂಡಿದವನಾಗಿ ಪ್ರಥಮ ದಿವಸದಲ್ಲಿ ಪಾಂಡವರು ತಮ್ಮ ಸೈನ್ಯವನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಿರಲು ಧರ್ಮರಾಜನು ಶೀಘ್ರವಾಗಿ ಎಲ್ಲಾ ಸಹೋದರರ ಜೊತೆಯಲ್ಲಿ ಮತ್ತು ಎಲ್ಲಾ ರಾಜರ ಜೊತೆಯಲ್ಲಿ ಕೃಷ್ಣನನ್ನು ಸಂಧಿಸಿ ಭೀಷ್ಮವಿಕ್ರಮವನ್ನು ನೋಡಿ, ತಮ್ಮ ಪರಾಜಯವನ್ನು ಚಿಂತಿಸುತ್ತಾ, ಪರಮಶೋಕದಿಂದ ಕೂಡಿದವನಾಗಿ ಕೃಷ್ಣನನ್ನು ಕುರಿತು ಮಾತನಾಡಿದನು.
ಕೃಷ್ಣ ಪಶ್ಯ ಮಹೇಷ್ವಾಸಂ ಭೀಷ್ಮಂ ಭೀಮಪರಾಕ್ರಮಮ್।
ಶರೈರ್ದಹಂತಂ ಸೈನ್ಯಂ ಮೇ ಗ್ರೀಷ್ಮೇ ಕಕ್ಷಮಿವಾನಲಮ್ ॥4॥
ಭಯಂಕರ ಪರಾಕ್ರಮವುಳ್ಳ ಮಹಾಧನುರ್ಧಾರಿಗಳಾದ ಭೀಷ್ಮರು ಗ್ರೀಷ್ಮ ಋತುವಿನಲ್ಲಿ ಅಗ್ನಿಯು ಹುಲ್ಲುಗಾವಲನ್ನು ಸುಟ್ಟಂತೆ ತಮ್ಮ ಬಾಣಗಳಿಂದ ನನ್ನ ಸೈನ್ಯವನ್ನು ಸುಡುವುದನ್ನು ನೋಡು.
ಕಥಮೇನಂ ಮಹಾತ್ಮಾನಂ ಶಕ್ಷ್ಯಾಮಃ ಪ್ರತಿವೀಕ್ಷಿತುಮ್।
ಲೇಲಿಹ್ಯಮಾನಂ ಸೈನ್ಯಂ ಮೇ ಹವಿಷ್ಮಂತಮಿವಾನಲಮ್ ॥5॥
ಹವಿಸ್ಸನ್ನು ಹಾಕಿದ ಅಗ್ನಿಯಂತೆ ನನ್ನ ಸೈನ್ಯವನ್ನು ನುಂಗುತ್ತಿರುವ ಈ ಮಹಾನುಭಾವರನ್ನು ನಾವು ಪ್ರತಿಯಾಗಿ ನೋಡಲು ಹೇಗೆ ಶಕ್ಯವಾದೀತು?
ಏತಂ ಹಿ ಪುರುಷವ್ಯಾಘ್ರಂ ಧನುಷ್ಮಂತಂ ಮಹಾಬಲಮ್।

ದೃಷ್ಟ್ವಾ ವಿಪ್ರದ್ರುತಂ ಸೈನ್ಯಂ ಮದೀಯಂ ಮಾರ್ಗಣಾಹತಮ್ ॥6॥
ಅವರ ಬಾಣಗಳಿಂದ ಚೆನ್ನಾಗಿ ಪ್ರಹರಿಸಲ್ಪಟ್ಟ ನನ್ನ ಸೈನ್ಯವು ಮಹಾಬಲಿಷ್ಠರೂ, ಪುರುಷವ್ಯಾಘ್ರರೂ ಧನುರ್ಧಾರಿಗಳೂ ಆದ ಇವರನ್ನು ನೋಡಿ ಓಡಿಹೋಯಿತು.
ಶಕ್ಯೋ ಜೇತುಂ ಯಮಃ ಕ್ರುದ್ಧೋ ವಜ್ರಪಾಣಿಶ್ಚ ಸಂಯುಗೇ |
ವರುಣಃ ಪಾಶಭೃಚ್ಚಾಪಿ ಕುಬೇರೋ ವಾ ಗದಾಧರಃ ॥7॥
ನ ತು ಭೀಷ್ಮೋ ಮಹಾತೇಜಾಃ ಶಕ್ಯೋ ಜೇತುಂ ಮಹಾಬಲಃ |
ಸೋಽಹಮೇವಂ ಗತೇ ಮಗ್ನೋ ಭೀಷ್ಮಾಗಾಧಜಲೇಽಪ್ಲವಃ ॥8॥
ಕೋಪಗೊಂಡ ಯಮನನ್ನು ಜಯಿಸುವುದು ಸಾಧ್ಯ. ಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನನ್ನೂ ಗೆಲ್ಲಬಹುದು. ಪಾಶಧಾರಿಯಾದ ವರುಣನನ್ನಾಗಲೀ, ಗದಾಧಾರಿಯಾದ ಕುಬೇರನನ್ನಾಗಲೀ ಗೆಲ್ಲಬಹುದು. ಆದರೆ ಮಹಾಬಲರೂ, ಮಹಾ ತೇಜಸ್ವಿಗಳೂ ಆದ ಭೀಷ್ಮರನ್ನು ಗೆಲ್ಲಲು ಸಾಧ್ಯವಿಲ್ಲ. ಪರಿಸ್ಥಿತಿಯು ಹೀಗಿರುವಾಗ ನಾನು ಭೀಷ್ಮರೆಂಬ ಅಗಾಧವಾದ ಜಲದಲ್ಲಿ ದೋಣಿ ಇಲ್ಲದೆ ಮುಳುಗಿ ಹೋಗಿದ್ದೇನೆ.
ಆತ್ಮನೋ ಬುದ್ಧಿದೌರ್ಬಲ್ಯಾದ್ ಭೀಷ್ಮಮಾಸಾದ್ಯ ಕೇಶವ |
ವನಂ ಯಾಸ್ಯಾಮಿ ಗೋವಿಂದ ಶ್ರೇಯೋ ಮೇ ತತ್ರ ಜೀವಿತುಮ್ ॥9॥
ಎಲೈ ಕೇಶವನೇ, ಭೀಷ್ಮರನ್ನು ಸಮೀಪಿಸಿದರೆ ನನ್ನ ಬುದ್ಧಿಯೇ ದುರ್ಬಲವಾಗುವುದರಿಂದ ಎಲೈ ಗೋವಿಂದನೇ, ನಾನು ಕಾಡಿಗೆ ಹೋಗುವೆನು. ನಾನು ಅಲ್ಲಿ ಜೀವಿಸುವುದು ಒಳ್ಳೆಯದು.
ನ ತ್ವಿಮಾನ್ ಪೃಥಿವೀಪಾಲಾನ್ ದಾತುಂ ಭೀಷ್ಮಾಯ ಮೃತ್ಯವೇ |
ಕ್ಷಪಯಿಷ್ಯತಿ ಸೇನಾಂ ಮೇ ಕೃಷ್ಣ ಭೀಷ್ಮೋ ಮಹಾಸ್ತ್ರವಿತ್ ॥10॥
ಆದರೆ ಈ ರಾಜರನ್ನು ಭೀಷ್ಮರೆಂಬ ಮೃತ್ಯುವಿಗೆ ಕೊಡಲಾರೆ. ಎಲೈ ಕೃಷ್ಣನೇ, ಮಹಾಸ್ತ್ರವೇತ್ತರಾದ ಭೀಷ್ಮರು ನನ್ನ ಸೈನ್ಯವನ್ನು ನಾಶಮಾಡುವರು.
ಯಥಾಽನಲಂ ಪ್ರಜ್ವಲಿತಂ ಪತಂಗಾಃ ಸಮಭಿದ್ರುತಾಃ |
ವಿನಾಶಾಯೈವ ಗಚ್ಛಂತಿ ತಥಾ ಮೇ ಸೈನಿಕೋ ಜನಃ ॥11॥
ದೀಪ್ತವಾದ ಅಗ್ನಿಯನ್ನು ಹೇಗೆ ಪತಂಗಗಳು ತಮ್ಮ ವಿನಾಶಕ್ಕಾಗಿಯೇ ವೇಗದಿಂದ ಪ್ರವೇಶಿಸುತ್ತವೆಯೋ ಹಾಗೆ ನನ್ನ ಸೈನಿಕ ಜನರೂ ಹೋಗುತ್ತಾರೆ.
ಕ್ಷಯಂ ನೀತೋಽಸ್ಮಿ ವಾರ್ಷ್ಣೇಯ ರಾಜ್ಯಹೇತೋಃ ಪರಾಕ್ರಮೀ |
ಭ್ರಾತರಶ್ಚೈವ ಮೇ ವೀರಾಃ ಕರ್ಶಿತಾಃ ಶರಪೀಡಿತಾಃ ॥12॥
ಎಲೈ ವಾರ್ಷ್ಣೇಯನೇ, ಪರಾಕ್ರಮಿಯಾದ ನಾನು ರಾಜ್ಯದ ಕಾರಣದಿಂದಾಗಿ ವಿನಾಶವನ್ನು ಹೊಂದಿದ್ದೇನೆ. ಕಷ್ಟಕ್ಕೆ ಒಳಗಾದ, ಬಾಣಪೀಡಿತರಾದ, ವೀರರಾದ ನನ್ನ ತಮ್ಮಂದಿರೂ ಸಹ ಹಾಗೆಯೇ ಸರಿ.
ಮತ್ಕೃತೇ ಭ್ರಾತೃಸೌಹಾರ್ದಾದ್ ರಾಜ್ಯಾದ್ ಭ್ರಷ್ಟಾಸ್ತಥಾ ಸುಖಾತ್ |
ಜೀವಿತಂ ಬಹು ಮನ್ಯೇಽಹಂ ಜೀವಿತಂ ಹ್ಯದ್ಯ ದುರ್ಲಭಮ್ ॥13॥
ಅವರು ಅಣ್ಣನಾದ ನನ್ನ ಮೇಲಿನ ಸ್ನೇಹದಿಂದ ನನ್ನ ಸಲುವಾಗಿ ರಾಜ್ಯದಿಂದಲೂ ಮತ್ತು ಸುಖದಿಂದಲೂ ಭ್ರಷ್ಟರಾಗಿದ್ದಾರೆ. ನಾನು ಜೀವನವು ಶ್ರೇಷ್ಠವೆಂದು ತಿಳಿಯುತ್ತೇನೆ. ಆದರೆ ಈ ದಿನ ಜೀವನವೇ ದುರ್ಲಭವಾಗಿದೆ.
ಜೀವಿತಸ್ಯ ಹಿ ಶೇಷೇಣ ತಪಸ್ತಪ್ಸ್ಯಾಮಿ ದುಶ್ಚರಮ್ |
ನ ಘಾತಯಿಷ್ಯಾಮಿ ರಣೇ ಮಿತ್ರಾಣೀಮಾನಿ ಕೇಶವ ॥14॥
ಶೇಷಾಯುಷ್ಯದಿಂದ ನಾನು ದುಶ್ಚರವಾದ ತಪಸ್ಸನ್ನು ಮಾಡುವೆನು. ಎಲೈ ಕೇಶವನೇ, ನನ್ನ ಮಿತ್ರರಾದ ಈ ರಾಜರನ್ನು ಯುದ್ಧದಲ್ಲಿ ಕೊಲ್ಲಿಸಲಾರೆ.
ರಥಾನ್ ಮೇ ಬಹುಸಾಹಸ್ರಾನ್ ದಿವ್ಯೈರಸ್ತ್ರೈರ್ಮಹಾಬಲಃ |
ಘಾತಯತ್ಯನಿಶಂ ಭೀಷ್ಮಃ ಪ್ರವರಾಣಾಂ ಪ್ರಹಾರಿಣಾಮ್ ॥15॥
ಮಹಾಬಲರಾದ, ಅನೇಕ ಸಹಸ್ರ ರಥಗಳನ್ನು ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಭೀಷ್ಮರು ತಮ್ಮ ದಿವ್ಯಾಸ್ತ್ರಗಳಿಂದ ನನ್ನ ಅನೇಕ ಸಹಸ್ರ ಯೋಧರನ್ನು ಸತತವಾಗಿ ಸಂಹರಿಸುತ್ತಿದ್ದಾರೆ.
ಕಿಂ ನು ಕೃತ್ವಾ ಕೃತಂ ಮೇ ಸ್ಯಾದ್ ಬ್ರೂಹಿ ಮಾಧವ ಮಾಚಿರಮ್ |
ಮಧ್ಯಸ್ಥಮಿವ ಪಶ್ಯಾಮಿ ಸಮರೇ ಸವ್ಯಸಾಚಿನಮ್ ॥16॥
ಎಲೈ ಮಾಧವನೇ, ಏನು ಮಾಡಿದರೆ ನನಗೆ ಕ್ಷೇಮವಾಗುತ್ತದೆ ಎಂದು ಶೀಘ್ರವಾಗಿ ಹೇಳು. ಸವ್ಯಸಾಚಿಯಾದ ಅರ್ಜುನನು ಯುದ್ಧದಲ್ಲಿ ತಟಸ್ಥನಾಗಿರುವಂತೆ ತೋರುತ್ತದೆ.
ಏಕೋ ಭೀಮಃ ಪರಂ ಶಕ್ತ್ಯಾ ಯುಧ್ಯತ್ಯೇಷ ಮಹಾಭುಜಃ |
ಕೇವಲಂ ಬಾಹುವೀರ್ಯೇಣ ಕ್ಷತ್ರಧರ್ಮಮನುಸ್ಮರನ್ ॥17॥
ಮಹಾಭುಜನಾದ ಭೀಮನೊಬ್ಬನೇ ಕ್ಷತ್ರಿಯ ಧರ್ಮವನ್ನು ಸ್ಮರಿಸಿ ಕೇವಲ ತನ್ನ ಬಾಹುವೀರ್ಯದಿಂದ ಶಕ್ತಿಯನ್ನು ಮೀರಿ ಯುದ್ಧವನ್ನು ಮಾಡುತ್ತಿದ್ದಾನೆ.
ಗದಯಾ ವೀರಘಾತಿನ್ಯಾ ಯಥೋತ್ಸಾಹಂ ಮಹಾಮನಾಃ |
ಕರೋತ್ಯಸುಕರಂ ಕರ್ಮ ಗಜಾಶ್ವರಥಪತ್ತಿಷು ॥18॥
ಮಹಾಧೈರ್ಯಶಾಲಿಯಾದ ಅವನು ವೀರರನ್ನು ಕೊಲ್ಲುವ ತನ್ನ ಗದೆಯಿಂದ ತನ್ನ ಉತ್ಸಾಹಕ್ಕೆ ಅನುಗುಣವಾಗಿ ಗಜಾಶ್ವರಥ

ಪದಾತಿಗಳ ವಿಷಯದಲ್ಲಿ ದುಷ್ಕರವಾದ ಕಾರ್ಯವನ್ನು ಮಾಡುತ್ತಿದ್ದಾನೆ.
ನಾಲಮೇಷ ಕ್ಷಯಂ ಕರ್ತುಂ ಪರಸೈನ್ಯಸ್ಯ ಮಾರಿಷ |
ಆರ್ಜವೇನೈವ ಯುದ್ಧೇನ ವೀರ ವರ್ಷಶತೈರಪಿ ॥19॥
ಆದರೆ ಎಲೈ ವೀರನೇ, ಭೀಮಸೇನನು ಋಜುಮಾರ್ಗದಿಂದ ನೂರು ವರ್ಷಗಳ ಕಾಲ ಯುದ್ಧವನ್ನು ಮಾಡಿದರೂ ಪರಸೈನ್ಯವನ್ನು ನಾಶ ಮಾಡಲು ಸಾಧ್ಯವಾಗುವುದಿಲ್ಲ.
ಏಕೋಽಸ್ತ್ರವಿತ್ ಸಖಾ ತೇಽಯಂ ಸೋಽಪ್ಯಸ್ಮಾನ್ ಸಮುಪೇಕ್ಷತೇ |
ನಿರ್ದಹ್ಯಮಾನಾನ್ ಭೀಷ್ಮೇಣ ದ್ರೋಣೇನ ಚ ಮಹಾತ್ಮನಾ ॥20॥
ಅಸ್ತ್ರವನ್ನು ತಿಳಿದವನು ಒಬ್ಬನೇ, ಅವನು ನಿನ್ನ ಸ್ನೇಹಿತ. ಮಹಾತ್ಮರಾದ ಭೀಷ್ಮರಿಂದಲೂ, ದ್ರೋಣರಿಂದಲೂ, ದಹಿಸಲ್ಪಡುವ ನಮ್ಮನ್ನು ನೋಡಿ ಅವನು ಉದಾಸೀನನಾಗಿದ್ದಾನೆ.
ದಿವ್ಯಾನ್ಯಸ್ತ್ರಾಣಿ ಭೀಷ್ಮಸ್ಯ ದ್ರೋಣಸ್ಯ ಚ ಮಹಾತ್ಮನಃ |
ಧಕ್ಷ್ಯಂತಿ ಕ್ಷತ್ರಿಯಾನ್ ಸರ್ವಾನ್ ಪ್ರಯುಕ್ತಾನಿ ಪುನಃ ಪುನಃ ॥21॥
ಪುನಃ ಪುನಃ ಪ್ರಯೋಗಿಸುವ ಮಹಾನುಭಾವರಾದ ಭೀಷ್ಮರ ಮತ್ತು ದ್ರೋಣರ ದಿವ್ಯಾಸ್ತ್ರಗಳು ಎಲ್ಲಾ ಕ್ಷತ್ರಿಯರನ್ನು ಸುಟ್ಟು ಹಾಕುವುವು.
ಕೃಷ್ಣ ಭೀಷ್ಮಃ ಸುಸಂರಬ್ಧಃ ಸಹಿತಃ ಸರ್ವಪಾರ್ಥಿವೈಃ |
ಕ್ಷಪಯಿಷ್ಯತಿ ನೋ ನೂನಂ ಯಾದೃಶೋಽಸ್ಯ ಪರಾಕ್ರಮಃ ॥22॥
ಎಲೈ ಕೃಷ್ಣನೇ, ಭೀಷ್ಮರ ಪರಾಕ್ರಮವು ಹೇಗಿದೆ ಎಂದು ನೋಡಿದರೆ, ಸಿಟ್ಟುಗೊಂಡ ಅವರು ಎಲ್ಲಾ ರಾಜರ ಜೊತೆಯಲ್ಲಿ ಕೂಡಿ ನಮ್ಮನ್ನು ವಿನಾಶ ಮಾಡುವರು ಎಂದು ನಿಶ್ಚಿತವಾಗಿ ತೋರುತ್ತಿದೆ.
ಸ ತ್ವಂ ಪಶ್ಯ ಮಹೇಷ್ವಾಸಂ ಯೋಗೀಶ್ವರ ಮಹಾರಥಮ್ |
ಯೋ ಭೀಷ್ಮಂ ಶಮಯೇತ್ ಸಂಖ್ಯೇ ದಾವಾಗ್ನಿಂ ಜಲದೋ ಯಥಾ ॥
ಎಲೈ ಯೋಗೀಶ್ವರನೇ, ಮಹಾರಥರೂ, ಮಹೇಷ್ವಾಸರೂ ಆದ ಭೀಷ್ಮರನ್ನು ದಾವಾಗ್ನಿಯನ್ನು ಮೋಡವು ಶಾಂತಗೊಳಿಸಿದಂತೆ ಯುದ್ಧದಲ್ಲಿ ಶಾಂತಗೊಳಿಸುವವರು ಯಾರಾದರೂ ಇದ್ದಾರೆಯೇ ಎಂದು ಆಲೋಚಿಸು.
ತವ ಪ್ರಸಾದಾದ್ಗೋವಿಂದ ಪಾಂಡವಾ ನಿಹತದ್ವಿಷಃ |
ಸ್ವರಾಜ್ಯಮನುಸಂಪ್ರಾಪ್ತಾ ಮೋದಿಷ್ಯಂತಿ ಸಬಾಂಧವಾಃ ॥24॥
ಏವಮುಕ್ತ್ವಾ ತತಃ ಪಾರ್ಥೋ ಧ್ಯಾಯನ್ನಾಸ್ತೇ ಮಹಾಮನಾಃ |
ಚಿರಮಂತರ್ಮನಾ ಭೂತ್ವಾ ಶೋಕೋಪಹತಚೇತನಃ ॥25॥
ಎಲೈ ಗೋವಿಂದನೇ, ನಿನ್ನ ಅನುಗ್ರಹದಿಂದ ಪಾಂಡವರು ಶತ್ರುಗಳನ್ನು ಕೊಂದು, ತಮ್ಮ ರಾಜ್ಯವನ್ನು ಹೊಂದಿ, ಬಾಂಧವರ ಜೊತೆಯಲ್ಲಿ ಸಂತೋಷ ಪಡುವರು. ಹೀಗೆ ಹೇಳಿ ಮಹಾಧೈರ್ಯಶಾಲಿಯಾದ ಯುಧಿಷ್ಠಿರನು ದುಃಖದಿಂದ ಕೂಡಿದ ಮನಸ್ಸುಳ್ಳವನಾಗಿ ಅಂತರ್ಮುಖಿಯಾಗಿ ಯೋಚನೆ ಮಾಡುತ್ತಾ ಬಹಳ ಕಾಲ ಕುಳಿತನು.
ಶೋಕಾರ್ತಂ ಪಾಂಡವಂ ಜ್ಞಾತ್ವಾ ದುಃಖೇನ ಹತಚೇತಸಮ್ |
ಅಬ್ರವೀತ್ ತತ್ರ ಗೋವಿಂದೋ ಹರ್ಷಯನ್ ಸರ್ವಪಾಂಡವಾನ್ ॥
ಶೋಕಾರ್ತನಾದ ಯುಧಿಷ್ಠಿರನು ದುಃಖದಿಂದ ಕೂಡಿದ ಮನಸ್ಸುಳ್ಳವನಾಗಿದ್ದಾನೆಂದು ತಿಳಿದು ಗೋವಿಂದನು ಅಲ್ಲಿ ಎಲ್ಲ ಪಾಂಡವರಿಗೂ ಸಂತೋಷವನ್ನುಂಟು ಮಾಡುತ್ತಾ ಮಾತನಾಡಿದನು.
ಮಾ ಶುಚೋ ಭರತಶ್ರೇಷ್ಠ ನ ತ್ವಂ ಶೋಚಿತುಮರ್ಹಸಿ |
ಯಸ್ಯ ತೇ ಭ್ರಾತರಃ ಶೂರಾಃ ಸರ್ವಲೋಕಸ್ಯ ಧನ್ವಿನಃ ॥27॥
ಅಹಂ ಚ ಪ್ರಿಯಕೃದ್ ರಾಜನ್ ಸಾತ್ಯಕಿಶ್ಚ ಮಹಾರಥಃ |
ವಿರಾಟದ್ರುಪದೌ ವೃದ್ಧೌ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥28॥
ಎಲೈ ಭರತಶ್ರೇಷ್ಠನೇ, ದುಃಖ ಪಡಬೇಡ. ಯಾವ ನಿನ್ನ ತಮ್ಮಂದಿರು ಸರ್ವಲೋಕದ ಶ್ರೇಷ್ಠ ಧನುರ್ಧಾರಿಗಳೋ ಶೂರರೋ, ಅಂತಹ ನೀನು ದುಃಖಪಡಲು ಅರ್ಹನಲ್ಲ. ಎಲೈ ರಾಜನೇ, ಮತ್ತು ನಾನೂ, ಮಹಾರಥನಾದ ಸಾತ್ಯಕಿಯೂ, ವೃದ್ಧರಾದ ವಿರಾಟದ್ರುಪದರೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಸಹ ನಿನಗೆ ಪ್ರಿಯವನ್ನು ಉಂಟುಮಾಡುತ್ತೇವೆ.
ತಥೈವ ಸಬಲಾಃ ಸರ್ವೇ ರಾಜಾನೋ ರಾಜಸತ್ತಮ |
ತ್ವತ್ಪ್ರಸಾದಂ ಪ್ರತೀಕ್ಷಂತೇ ತ್ವದ್ಭಕ್ತಾಶ್ಚ ವಿಶಾಂಪತೇ ॥29॥
ಎಲೈ ರಾಜಶ್ರೇಷ್ಠನೇ, ಪ್ರಜೆಗಳ ಒಡೆಯನೇ, ಹಾಗೆಯೇ ತಮ್ಮ ತಮ್ಮ ಸೈನ್ಯಗಳಿಂದ ಕೂಡಿದ ಎಲ್ಲಾ ರಾಜರು ನಿನ್ನಲ್ಲಿ ನಿಷ್ಠೆಯುಳ್ಳವರಾಗಿ ನಿನ್ನ ಅನುಗ್ರಹವನ್ನೇ ನಿರೀಕ್ಷಿಸುತ್ತಿದ್ದಾರೆ.
ಏಷ ತೇ ಪಾರ್ಷತೋ ನಿತ್ಯಂ ಹಿತಕಾಮಃ ಪ್ರಿಯೇ ರತಃ |
ಸೇನಾಪತ್ಯಮನುಪ್ರಾಪ್ತೋ ಧೃಷ್ಟದ್ಯುಮ್ನೋ ಮಹಾಬಲಃ |
ಶಿಖಂಡೀ ಚ ಮಹಾಬಾಹೋ ಭೀಷ್ಮಸ್ಯ ನಿಧನಂ ಕಿಲ ॥30॥
ಮಹಾಬಲನಾದ, ದ್ರುಪದನ ಮಗನಾದ ಈ ಧೃಷ್ಟದ್ಯುಮ್ನನು ಯಾವಾಗಲೂ ನಿನ್ನ ಹಿತವನ್ನು ಬಯಸಿ, ನಿನ್ನ ಪ್ರಿಯದಲ್ಲೇ ರತನಾಗಿ ನಿನ್ನ ಸೇನಾಪತ್ಯವನ್ನು ಸ್ವೀಕರಿಸಿದ್ದಾನೆ. ಎಲೈ ಮಹಾಬಾಹುವೇ, ಶಿಖಂಡಿಯು ಭೀಷ್ಮರ ಮೃತ್ಯುವಷ್ಟೆ!
ಏತಚ್ಛ್ರುತ್ವಾ ತತೋ ರಾಜಾ ಧೃಷ್ಟದ್ಯುಮ್ನಂ ಮಹಾರಥಮ್ |
ಅಬ್ರವೀತ್ ಸಮಿತೌ ತಸ್ಯಾಂ ವಾಸುದೇವಸ್ಯ ಶೃಣ್ವತಃ ॥31॥

ಈ ಮಾತನ್ನು ಕೇಳಿದ ರಾಜನು ಮಹಾರಥನಾದ ಧೃಷ್ಟದ್ಯುಮ್ನನನ್ನು ಕುರಿತು ಆ ಸಭೆಯಲ್ಲಿ ಕೃಷ್ಣನು ಕೇಳುವಂತೆ ಮಾತನಾಡಿದನು.

ಧೃಷ್ಟದ್ಯುಮ್ನ ನಿಬೋಧೇದಂ ಯತ್ತತ್ತ್ವ ವಕ್ಷ್ಯಾಮಿ ಮಾರಿಷ |
ನಾತಿಕ್ರಮ್ಯಂ ಭವೇತ್ ತಚ್ಚ ವಚನಂ ಮಮ ಭಾಷಿತಮ್ |
ಭವಾನ್ ಸೇನಾಪತಿರ್ಮಹ್ಯಂ ವಾಸುದೇವೇನ ಸಮ್ಮತಃ ॥32॥
ವೀರನಾದ ಧೃಷ್ಟದ್ಯುಮ್ನನೇ, ನಾನು ನಿನಗೆ ಹೇಳುವ ಮಾತನ್ನು ಗಮನಿಸು. ನನ್ನ ಮಾತನ್ನು ನೀನು ಮೀರಬಾರದು. ನೀನು ಕೃಷ್ಣನಿಗೆ ಸಮ್ಮತನಾದ ನನ್ನ ಸೇನಾಪತಿ.
ಕಾರ್ತ್ತಿಕೇಯೋ ಯಥಾ ನಿತ್ಯಂ ದೇವಾನಾಮಭವತ್ ಪುರಾ |
ತಥಾ ತ್ವಮಪಿ ಪಾಂಡೂನಾಂ ಸೇನಾನೀಃ ಪುರುಷರ್ಷಭ ॥33॥
ಎಲೈ ಪುರುಷರ್ಷಭನೇ, ಹಿಂದೆ ಷಣ್ಮುಖನು ದೇವತೆಗಳಿಗೆ ಯಾವಾಗಲೂ ಹೇಗೆ ಸೇನಾಪತಿಯಾಗಿದ್ದನೋ, ಹಾಗೆ ನೀನು ಪಾಂಡವರಿಗೆ ಸೇನಾಪತಿಯಾಗಿದ್ದೀಯೆ.
ಸ ತ್ವಂ ಪುರುಷಶಾರ್ದೂಲ ವಿಕ್ರಮ್ಯ ಜಹಿ ಕೌರವಾನ್ |
ಅಹಂ ಚ ತ್ವಾನುಯಾಸ್ಯಾಮಿ ಭೀಮಃ ಕೃಷ್ಣಶ್ಚ ಮಾರಿಷ ॥34॥
ಮಾದ್ರೀಪುತ್ರೌ ಚ ಸಹಿತೌ ದ್ರೌಪದೇಯಾಶ್ಚ ದಂಸಿತಾಃ |
ಯೇ ಚಾನ್ಯೇ ಪೃಥಿವೀಪಾಲಾಃ ಪ್ರಧಾನಾಃ ಪುರುಷರ್ಷಭ ॥35॥
ಎಲೈ ಪುರುಷಶಾರ್ದೂಲನೇ, ಅಂತಹ ನೀನು ಪರಾಕ್ರಮವನ್ನು ತೋರಿ ಕೌರವರನ್ನು ಸಂಹರಿಸು. ಎಲೈ ಮಾನ್ಯನೇ, ನಾನು ನಿನ್ನನ್ನು ಹಿಂಬಾಲಿಸುವೆನು. ಭೀಮ ಮತ್ತು ಕೃಷ್ಣರು ಹಿಂಬಾಲಿಸುವರು. ಮಾದ್ರೀಪುತ್ರರಾದ ನಕುಲ-ಸಹದೇವರು, ದ್ರೌಪದಿಯ ಐದು ಮಕ್ಕಳು ಮತ್ತು ಉಳಿದ ಯಾವ ಪ್ರಧಾನರಾದ ರಾಜರಿದ್ದರೋ ಅವರೂ ಸಹ ಎಲೈ ಪುರುಷಶ್ರೇಷ್ಠನೇ, ಶಸ್ತ್ರಕವಚಧಾರಿಗಳಾಗಿ ನಿನ್ನನ್ನು ಹಿಂಬಾಲಿಸುವರು.
ತತ ಉದ್ಧರ್ಷಯನ್ ಸರ್ವಾನ್ ಧೃಷ್ಟದ್ಯುಮ್ನೋಽಭ್ಯಭಾಷತ ॥36॥
ಆಗ ಎಲ್ಲರನ್ನೂ ಹುರಿದುಂಬಿಸುತ್ತಾ ಧೃಷ್ಟದ್ಯುಮ್ನನು ಮಾತನಾಡಿದನು.
ಅಹಂ ದ್ರೋಣಾಂತಕಃ ಪಾರ್ಥ ವಿಹಿತಃ ಶಂಭುನಾ ಪುರಾ |
ರಣೇ ಭೀಷ್ಮಂ ತಥಾ ದ್ರೋಣಂ ಕೃಪಂ ಶಲ್ಯಂ ಜಯದ್ರಥಮ್ |
ಸರ್ವಾನದ್ಯ ರಣೇ ದೃಪ್ತಾನ್ ಪ್ರತಿಯೋತ್ಸ್ಯಾಮಿ ಪಾರ್ಥಿವ ॥37॥
ಎಲೈ ರಾಜನೇ, ನಾನು ಈ ದಿನ ರಣದರ್ಪವನ್ನು ಹೊಂದಿರುವ ಭೀಷ್ಮರು, ದ್ರೋಣರು, ಕೃಪರು, ಶಲ್ಯ, ಜಯದ್ರಥ ಮತ್ತು ಎಲ್ಲರನ್ನೂ ಎದುರಿಸಿ ಯುದ್ಧವನ್ನು ಮಾಡುವೆನು.
ಅಥೋತ್ಕ್ರುಷ್ಟಂ ಮಹೇಷ್ವಾಸೈಃ ಪಾಂಡವೈರ್ಯುದ್ಧದುರ್ಮದೈಃ |
ಸಮುದ್ಯತೇ ಪಾರ್ಥಿವೇಂದ್ರೇ ಪಾರ್ಷತೇ ಶತ್ರುಸೂದನೇ ॥38॥
ಎಲೈ ರಾಜಶ್ರೇಷ್ಠನೇ, ಶತ್ರುಸಂಹಾರಕನಾದ ಧೃಷ್ಟದ್ಯುಮ್ನನು ಹೀಗೆ ಘೋಷಿಸುತ್ತಿರಲು ಯುದ್ಧದುರ್ಮದರಾದ ಮಹಾಧನುರ್ಧಾರಿಗಳಾದ ಪಾಂಡವರೆಲ್ಲರೂ ಸಂತೋಷದ ಘೋಷವನ್ನು ಮಾಡಿದರು.
ತಮಬ್ರುವೀತ್ ತತಃ ಪಾರ್ಥಃ ಪಾರ್ಷತಂ ಪೃತನಾಪತಿಮ್ |
ವ್ಯೂಹಃ ಕ್ರೌಂಚಾರುಣೋ ನಾಮ ಸರ್ವಶತ್ರುನಿಬರ್ಹಣಃ ॥39॥
ಯಂ ಬೃಹಸ್ಪತಿರಿಂದ್ರಾಯ ತದಾ ದೇವಾಸುರೇಽಬ್ರುವೀತ್ |
ತಂ ಯಥಾವತ್ ಪ್ರತಿವ್ಯೂಹ ಪರಾನೀಕವಿನಾಶನಮ್ |
ಅದೃಷ್ಟಪೂರ್ವಂ ರಾಜಾನಃ ಪಶ್ಯಂತು ಕುರುಭಿಃ ಸಹ ॥40॥
ಆಗ ಯುಧಿಷ್ಠಿರನು ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಕುರಿತು ಹೀಗೆ ಮಾತನಾಡಿದನು. ದೇವಾಸುರ ಯುದ್ಧದಲ್ಲಿ ಬೃಹಸ್ಪತಿಗಳು ಇಂದ್ರನಿಗೆ ಹೇಳಿದ ಸರ್ವಶತ್ರು ನಿವಾರಕವಾದ ಕ್ರೌಂಚಾರುಣ ಎಂಬ ಪಕ್ಷಿವ್ಯೂಹವಿದೆ. ಶತ್ರುಸೈನ್ಯ ವಿನಾಶಕವಾದ ಅದನ್ನು ಅವರ ವ್ಯೂಹಕ್ಕೆ ಪ್ರತಿಯಾಗಿ ನೀನು ಸರಿಯಾಗಿ ಹೂಡುವವನಾಗು. ಹಿಂದೆ ಎಂದೂ ನೋಡದ ಆ ವ್ಯೂಹವನ್ನು ಕುರುಗಳ ಜೊತೆಯಲ್ಲಿ ರಾಜರು ನೋಡಲಿ.
ತಥೋಕ್ತಃ ಸ ನೃದೇವೇನ ವಿಷ್ಣುರ್ವಜ್ರಭೃತಾ ಇವ |
ಪ್ರಭಾತೇ ಸರ್ವಸೈನ್ಯಾನಾಮಗ್ರೇ ಚಕ್ರೇ ಧನಂಜಯಮ್ ॥41॥
ರಾಜನಾದ ಯುಧಿಷ್ಠಿರನಿಂದ ಇಂದ್ರನಿಂದ ವಿಷ್ಣುವು ಹೇಳಲ್ಪಟ್ಟಂತೆ ಆ ರೀತಿ ಹೇಳಲ್ಪಟ್ಟ ಧೃಷ್ಟದ್ಯುಮ್ನನು ಪ್ರಾತಃಕಾಲದಲ್ಲಿ ಸರ್ವಸೇನೆಗಳ ಮುಂಭಾಗದಲ್ಲಿ ಅರ್ಜುನನನ್ನು ನಿಲ್ಲಿಸಿದನು.
ಆದಿತ್ಯಪಥಗಃ ಕೇತುಸ್ತಸ್ಯಾದ್ಭುತಮನೋರಮಃ |
ಶಾಸನಾತ್ ಪುರುಹೂತಸ್ಯ ನಿರ್ಮಿತೋ ವಿಶ್ವಕರ್ಮಣಾ ॥42॥
ಇಂದ್ರನ ಅಪ್ಪಣೆಯಂತೆ ವಿಶ್ವಕರ್ಮನಿಂದ ನಿರ್ಮಿತವಾದ ಆದಿತ್ಯಪಥಗಾಮಿಯಾದ ಅರ್ಜುನನ ರಥದ ಧ್ವಜವು ಅದ್ಭುತವೂ, ಮನೋರಮವೂ ಆಗಿದ್ದಿತು.
ಇಂದ್ರಾಯುಧಸವರ್ಣಾಭಿಃ ಪತಾಕಾಭಿರಲಂಕೃತಃ |
ಆಕಾಶಗ ಇವಾಕಾಶೇ ಗಂಧರ್ವನಗರೋಪಮಃ |
ನೃತ್ಯಮಾನ ಇವಾಭಾತಿ ರಥಚರ್ಯಾಸು ಮಾರಿಷ ॥43॥

ಎಲೈ ವೀರನೇ, ಕಾಮನಬಿಲ್ಲಿನ ಬಣ್ಣಗಳಿಂದ ಕೂಡಿದ ಪತಾಕೆಗಳಿಂದ ಅಲಂಕೃತವಾದ, ಆಕಾಶದಲ್ಲಿ ಹೋಗುವ ವಿಮಾನವನ್ನು ಹೋಲುವ, ಗಂಧರ್ವ ನಗರದಂತಿದ್ದ ಅವನ ರಥವು ರಥಮಾರ್ಗಗಳಲ್ಲಿ ನರ್ತಿಸುವಂತೆ ಕಾಣುತ್ತಿದ್ದಿತು.
ತೇನ ರತ್ನವತಾ ಪಾರ್ಥಃ ಸ ಚ ಗಾಂಡೀವಧನ್ವನಾ |
ಬಭೂವ ಪರಮೋಪೇತಃ ಸ್ವಯಂಭೂರಿವ ಭಾನುನಾ ॥44॥
ರತ್ನಾಲಂಕೃತವಾದ ಆ ರಥದಿಂದ, ಅರ್ಜುನನು ಗಾಂಡೀವ ಧನುರ್ಧಾರಿಯಾದ ಅರ್ಜುನನಿಂದ, ಆ ರಥವು ಕಿರಣಗಳಿಂದ ಕೂಡಿದ ಸೂರ್ಯನಂತೆ ಪರಮ ಕಾಂತಿಯುಕ್ತವಾಗಿ ಶೋಭಿಸಿತು.
ಶಿರೋಽಭೂದ್ ದ್ರುಪದೋ ರಾಜಾ ಮಹತ್ಯಾ ಸೇನಯಾ ವೃತಃ |
ಕುಂತಿಭೋಜಶ್ಚ ಚೈದ್ಯಶ್ಚ ಚಕ್ಷುಷ್ಯಾಸ್ತಾಂ ಜನೇಶ್ವರ ॥45॥
ಆ ಪಕ್ಷಿವ್ಯೂಹದ ಶಿರೋಭಾಗದಲ್ಲಿ ದೊಡ್ಡ ಸೈನ್ಯದಿಂದ ಕೂಡಿದ್ದ ದ್ರುಪದ ರಾಜನಿದ್ದನು. ಎಲೈ ಜನೇಶ್ವರನೇ, ಕುಂತಿಭೋಜ ಮತ್ತು ಧೃಷ್ಟಕೇತು ಇವರು ಚಕ್ಷುಸ್ಸಿನ ಸ್ಥಾನದಲ್ಲಿದ್ದರು.
ದಾಶಾರ್ಣಕಾಃ ಪ್ರಯಾಗಾಶ್ಚ ದಾಶೇರಕಗಣೈಃ ಸಹ |
ಅನೂಪಗಾಃ ಕಿರಾತಾಶ್ಚ ಗ್ರೀವಾಯಾಂ ಭರತರ್ಷಭ ॥46॥
ಎಲೈ ಭರತಶ್ರೇಷ್ಠನೇ, ದಶಾರ್ಣದೇಶದ ಯೋಧರು, ಪ್ರಯಾಗ ದೇಶದವರು, ದಾಶೇರಕರು, ಅನೂಪಗರು, ಕಿರಾತರು ಈ ಯೋಧರೆಲ್ಲರೂ ಪಕ್ಷಿಯ ಕತ್ತಿನ ಭಾಗದಲ್ಲಿದ್ದರು.
ಪಟಚ್ಚರೈಶ್ಚ ಹುಂಡೈಶ್ಚ ರಾಜನ್ ಪೌರವಕೈಸ್ತಥಾ |
ನಿಷಾದೈಃ ಸಹಿತಶ್ಚಾಪಿ ಪೃಷ್ಠಮಾಸೀದ್ ಯುಧಿಷ್ಠಿರಃ ॥47॥
ಎಲೈ ರಾಜನೇ, ಪಟಚ್ಚರರು, ಹುಂಡರು, ಪೌರವಕರು (ಇವರು ಇನ್ನೊಂದು ದೇಶವಿಶೇಷದವರು), ನಿಷಾದರು, ಇವರ ಜೊತೆಯಲ್ಲಿ ಯುಧಿಷ್ಠಿರನು ಪೃಷ್ಠಭಾಗದಲ್ಲಿದ್ದನು.
ಪಕ್ಷೌ ತು ಭೀಮಸೇನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ದ್ರೌಪದೇಯಾಭಿಮನ್ಯುಶ್ಚ ಸಾತ್ಯಕಿಶ್ಚ ಮಹಾರಥಃ ॥48॥
ಅದರ ರೆಕ್ಕೆಗಳ ಸ್ಥಾನದಲ್ಲಿ ಭೀಮಸೇನ, ದ್ರುಪದಪುತ್ರನಾದ ಧೃಷ್ಟದ್ಯುಮ್ನ, ದ್ರೌಪದಿಯ ಮಕ್ಕಳು, ಅಭಿಮನ್ಯು ಮತ್ತು ಮಹಾರಥನಾದ ಸಾತ್ಯಕಿಯು ಇದ್ದರು.
ಪಿಶಾಚಾ ದರದಾಶ್ಚೈವ ಪುಂಡ್ರಾಃ ಕುಂಡೀವಿಷೈಃ ಸಹ |
ಮಡಕಾ ಕಡಕಾಶ್ಚೈವ ತಂಗಣಾಃ ಪರತಂಗಣಾಃ ॥49॥
ಬಾಹ್ಲಿಕಾಸ್ತಿತ್ತಿರಾಶ್ಚೈವ ಚೋಲಾಃ ಪಾಂಡ್ಯಾಶ್ಚ ಭಾರತ |
ಏತೇ ಜನಪದಾ ರಾಜನ್ ದಕ್ಷಿಣಂ ಪಕ್ಷಮಾಶ್ರಿತಾಃ ॥50॥
ಪಿಶಾಚರು, ದರದರು, ಪುಂಡ್ರರು, ಕುಂಡೀವಿಷರು, ಮಡಕರು, ಕಡಕರು, ತಂಗಣರು, ಪರತಂಗಣರು, ಬಾಹ್ಲಿಕರು, ತಿತ್ತಿರರು, ಚೋಲರು, ಪಾಂಡ್ಯರು, ಎಲೈ ಭಾರತನೇ, ರಾಜನೇ, ಈ ದೇಶದವರೆಲ್ಲರೂ ಬಲಭಾಗದ ರೆಕ್ಕೆಯ ಸ್ಥಾನದಲ್ಲಿದ್ದರು.
ಅಗ್ನಿವೇಶ್ಯಾ ಜಗತ್ತುಂಡಾಃ ಪಲದಾಶಾಶ್ಚ ಭಾರತ |
ಶಬರಾಸ್ತುಂಬುಪಾಶ್ಚೈವ ವತ್ಸಾಶ್ಚ ಸಹ ನಾಕುಲೈಃ |
ನಕುಲಃ ಸಹದೇವಶ್ಚ ವಾಮಂ ಪಾರ್ಶ್ವಂ ಸಮಾಶ್ರಿತಾಃ ॥51॥
ಎಲೈ ಭಾರತನೇ, ಅಗ್ನಿವೇಶ್ಯರು, ಜಗತ್ತುಂಡರು, ಪಲದಾಶರು, ಶಬರರು, ತುಂಬುಪರು, ವತ್ಸರು, ನಾಕುಲರು ಮತ್ತು ನಕುಲ-ಸಹದೇವರು ಪಕ್ಷಿಯ ಎಡಭಾಗದ ರೆಕ್ಕೆಯನ್ನು ಆಶ್ರಯಿಸಿದ್ದರು.
ರಥಾನಾಮಯುತಂ ಪಕ್ಷೌ ಶಿರಶ್ಚ ನಿಯುತಂ ತಥಾ |
ಪೃಷ್ಠಮರ್ಬುದಮೇವಾಸೀತ್ ಸಹಸ್ರಾಣಿ ಚ ವಿಂಶತಿಃ |
ಗ್ರೀವಾಯಾಂ ನಿಯುತಂ ಚಾಪಿ ಸಹಸ್ರಾಣಿ ಚ ಸಪ್ತತಿಃ ॥52॥
ಪಕ್ಷಿಯ ರೆಕ್ಕೆಗಳ ಸ್ಥಾನದಲ್ಲಿ ಹತ್ತುಸಹಸ್ರ ರಥಗಳು, ಶಿರಃಸ್ಥಾನದಲ್ಲಿ ಇಪ್ಪತ್ತು ಸಹಸ್ರ ರಥಗಳು, ಪೃಷ್ಠಭಾಗದಲ್ಲಿ ಒಂದು ಲಕ್ಷದ ಇಪ್ಪತ್ತು ಸಹಸ್ರ ರಥಗಳು, ಕತ್ತಿನ ಸ್ಥಾನದಲ್ಲಿ ಇಪ್ಪತ್ತು ಸಹಸ್ರ ಮತ್ತು ಎಪ್ಪತ್ತು ಸಹಸ್ರ ರಥಗಳು ಇದ್ದವು (ಲಕ್ಷಾಲಂಕಾರ).
ಪಕ್ಷಕೋಟಿಪ್ರಪಕ್ಷೇಷು ಪಕ್ಷಾಂತೇಷು ಚ ವಾರಣಾಃ |
ಜಗ್ಮುಃ ಪರಿವೃತಾ ರಾಜನ್ ಚಲಂತ ಇವ ಪರ್ವತಾಃ ॥53॥
ಎಲೈ ರಾಜನೇ, ಪಕ್ಷ (ರೆಕ್ಕೆ) ಗಳ ಸಂಧಿಗಳಲ್ಲಿ ಮತ್ತು ಪಕ್ಷಗಳ ಕೊನೆಯಲ್ಲಿ ಚಲಿಸುವ ಪರ್ವತಗಳಂತೆ ಗಜಗಳು ಹೊರಟವು.
ಜಘನಂ ಪಾಲಯಾಮಾಸ ವಿರಾಟಃ ಸಹ ಕೇಕಯೈಃ |
ಕಾಶಿರಾಜಶ್ಚ ಶೈಬ್ಯಶ್ಚ ರಥಾನಾಮಯುತೈಸ್ತ್ರಿಭಿಃ ॥54॥
ವಿರಾಟನು ಕೇಕಯರ ಜೊತೆಯಲ್ಲಿ ಪಕ್ಷಿಯ ಕಟಿ ಪ್ರದೇಶವನ್ನು ರಕ್ಷಿಸಿದನು. ಕಾಶಿರಾಜನೂ, ಶೈಬ್ಯನೂ ಮೂವತ್ತು ಸಾವಿರ ರಥಗಳಿಂದ ಕಟಿ ಪ್ರದೇಶವನ್ನು ರಕ್ಷಿಸಿದರು.
ಏವಮೇತಂ ಮಹಾವ್ಯೂಹಂ ವ್ಯೂಹ್ಯ ಭಾರತ ಪಾಂಡವಾಃ |
ಸೂರ್ಯೋದಯನಮಿಚ್ಛಂತಃ ಸ್ಥಿತಾ ಯುದ್ಧಾಯ ದಂಸಿತಾಃ ॥55॥
ಎಲೈ ಭಾರತನೇ, ಹೀಗೆ ಪಾಂಡವರು ಮಹಾವ್ಯೂಹವನ್ನು ರಚಿಸಿ ಯುದ್ಧಕ್ಕೆ ಸನ್ನದ್ಧರಾಗಿ ಸೂರ್ಯೋದಯವನ್ನು ನಿರೀಕ್ಷಿಸುತ್ತಾ ನಿಂತರು.
ತೇಷಾಮಾದಿತ್ಯವರ್ಣಾನಿ ವಿಮಲಾನಿ ಮಹಾಂತಿ ಚ |

ಶ್ವೇತಚ್ಛತ್ರಾಣ್ಯಶೋಭಂತ ವಾರಣೇಷು ರಥೇಷು ಚ ॥56॥
ಗಜಗಳಲ್ಲಿಯೂ ಮತ್ತು ರಥಗಳಲ್ಲಿಯೂ ಅವರ ಸೂರ್ಯನ ವರ್ಣದಿಂದ ಕೂಡಿದ ಶುದ್ಧವಾದ ಮತ್ತು ದೊಡ್ಡದಾದ ಶ್ವೇತಚ್ಛತ್ರಗಳು ಶೋಭಿಸಿದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಟ್ಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೇಳನೆಯ ಅಧ್ಯಾಯ
ದ್ವಿತೀಯ ದಿವಸದ ಯುದ್ಧಕ್ಕಾಗಿ ಕೌರವರ ಸಮಾಗಮ.
ಸಂಜಯಃ
ಕ್ರೌಂಚಂ ತತೋ ಮಹಾವ್ಯೂಹಮಭೇದ್ಯಂ ತನಯಸ್ತವ |
ವ್ಯೂಢಂ ದೃಷ್ಟ್ವಾ ಮಹಾಘೋರಂ ಪಾರ್ಥೇನಾಮಿತತೇಜಸಾ ॥1॥
ಆಚಾರ್ಯಮುಪಸಂಗಮ್ಯ ಕೃಪಂ ಶಲ್ಯಂ ಚ ಮಾರಿಷ |
ಸೌಮದತ್ತಿಂ ವಿಕರ್ಣಂ ಚ ಅಶ್ವತ್ಥಾಮಾನಮೇವ ಚ ॥2॥
ದುಃಶಾಸನಾದೀನ್ ಭ್ರಾತೄಂಶ್ಚ ಸ ಸರ್ವಾನೇವ ಭಾರತ |
ಅನ್ಯಾಂಶ್ಚ ಸುಬಹೂನ್ ಶೂರಾನ್ ಯುದ್ಧಾಯ ಸಮುಪಾಗತಾನ್ ॥3॥
ಪ್ರಾಹೇದಂ ವಚನಂ ಕಾಲೇ ಹರ್ಷಯನ್ ತನಯಸ್ತವ |
ಸಂಜಯ ಎಲೈ ಪೂಜ್ಯನೇ, ನಿನ್ನ ಪುತ್ರನು ಅಮಿತಪರಾಕ್ರಮಿಯಾದ ಯುಧಿಷ್ಠಿರನು ರಚಿಸಿದ ಅಭೇದ್ಯವೂ, ಮಹಾಘೋರವೂ ಆದ ಕ್ರೌಂಚವ್ಯೂಹವನ್ನು ನೋಡಿ ದ್ರೋಣಾಚಾರ್ಯರನ್ನೂ, ಕೃಪಾಚಾರ್ಯನನ್ನೂ, ಸೌಮದತ್ತಿ, ವಿಕರ್ಣ, ಅಶ್ವತ್ಥಾಮರು, ದುಶ್ಶಾಸನಾದಿ ಸಹೋದರರನ್ನೂ, ಯುದ್ಧಕ್ಕಾಗಿ ಬಂದಿದ್ದ ಇನ್ನೂ ಉಳಿದ ಅನೇಕ ಶೂರರನ್ನೂ ಸಮೀಪಿಸಿ, ಅವರನ್ನು ಸಂತೋಷಪಡಿಸುತ್ತಾ ಯೋಗ್ಯವಾದ ಕಾಲದಲ್ಲಿ ಈ ಮಾತನ್ನು ಆಡಿದನು.
ನಾನಾಶಸ್ತ್ರಪ್ರಹರಣಾಃ ಸರ್ವೇ ಶಸ್ತ್ರಾಸ್ತ್ರವೇದಿನಃ ॥4॥
ಏಕೈಕಶಃ ಸಮರ್ಥಾ ಹಿ ಯೂಯಂ ಸರ್ವೇ ಮಹಾರಥಾಃ |
ಪಾಂಡುಪುತ್ರಾನ್ ರಣೇ ಹಂತುಂ ಸಸೈನ್ಯಾನ್ ಕಿಮು ಸಂಹತಾಃ ॥5॥
ಮಹಾರಥರಾದ ನೀವೆಲ್ಲರೂ ಶಸ್ತ್ರಾಸ್ತ್ರಗಳನ್ನು ತಿಳಿದವರು. ನಾನಾ ವಿಧವಾದ ಶಸ್ತ್ರಗಳನ್ನು ಹೊಂದಿರುವವರು. ನಿಮ್ಮಲ್ಲಿ ಒಬ್ಬೊಬ್ಬರೂ ಸೈನ್ಯಸಹಿತರಾದ ಪಾಂಡವರನ್ನು ಯುದ್ಧದಲ್ಲಿ ಕೊಲ್ಲಲು ಸಮರ್ಥರಾಗಿದ್ದೀರಿ. ಇನ್ನು ಎಲ್ಲರೂ ಒಟ್ಟುಗೂಡಿದ ಮೇಲೆ ಹೇಳುವುದೇನಿದೆ?
ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ |
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಪಾರ್ಥಿವಸತ್ತಮಾಃ ॥6॥
ಎಲೈ ರಾಜಶ್ರೇಷ್ಠರೇ, ಭೀಷ್ಮರಿಂದ ರಕ್ಷಿತವಾದ ಈ ನಮ್ಮ ಸೈನ್ಯವು ಅಸಮರ್ಥವೆನಿಸುತ್ತದೆ. ಈ ಪಾಂಡವರ ಸೈನ್ಯವು ಸಮರ್ಥವಾಗಿದೆ.

ಸಂಸ್ಥಾನಾಃ ಶೂರಸೇನಾಶ್ಚ ವೇಣಿಕಾಃ ಕುಕುರಾಸ್ತಥಾ |
ಆರೇವಕಾಸ್ತ್ರಿಗರ್ತಾಶ್ಚ ಮದ್ರಕಾ ಯವನಾಸ್ತಥಾ ॥7॥
ಶತ್ರುಂಜಯೇನ ಸಹಿತಾಸ್ತಥಾ ದುಃಶಾಸನೇನ ಚ |
ವಿಕರ್ಣೇನ ಚ ವೀರೇಣ ತಥಾ ನಂದೋಪನಂದಕೈಃ ॥8॥
ಚಿತ್ರಸೇನೇನ ಸಹಿತಾಃ ಸಹಿತಾಃ ಪಾಣಿಭದ್ರಕೈಃ |
ಭೀಷ್ಮಮೇವಾಭಿರಕ್ಷಂತು ಸಹ ಸೈನ್ಯಪುರಸ್ಕೃತಾಃ ॥9॥
ಸಂಸ್ಥಾನರೂ, ಶೂರಸೇನರೂ, ವೇಣಿಕರೂ, ಕುಕುರರೂ, ಆರೇವಕರೂ, ತ್ರಿಗರ್ತರೂ, ಮದ್ರಕರೂ, ಯವನರೂ ಇವರು ಶತ್ರುಗಳನ್ನು ಗೆಲ್ಲುವ ದುಶ್ಶಾಸನನಿಂದಲೂ, ವೀರನಾದ ವಿಕರ್ಣನಿಂದಲೂ ಹಾಗೆಯೇ ನಂದೋಪನಂದರಿಂದಲೂ, ಚಿತ್ರಸೇನನಿಂದಲೂ, ಪಾಣಿಭದ್ರಕರಿಂದಲೂ ತಮ್ಮ ತಮ್ಮ ಸೈನ್ಯಗಳಿಂದಲೂ ಸಹಿತರಾಗಿ ಭೀಷ್ಮರನ್ನೇ ರಕ್ಷಿಸಿ.
ತತೋ ದ್ರೋಣಶ್ಚ ಭೀಷ್ಮಶ್ಚ ತವ ಪುತ್ರಶ್ಚ ಮಾರಿಷ |
ಅವ್ಯೂಹಂತ ಮಹಾವ್ಯೂಹಂ ಪಾಂಡೂನಾಂ ಪ್ರತಿಬಾಧನೇ ॥10॥
ಎಲೈ ಪೂಜ್ಯನೇ, ಅನಂತರ ದ್ರೋಣರು, ಭೀಷ್ಮರು ಮತ್ತು ನಿನ್ನ ಪುತ್ರನು ಸೇರಿ ಪಾಂಡವರ ವ್ಯೂಹವನ್ನು ಪ್ರತಿಯಾಗಿ ಬಾಧಿಸಲು ಇನ್ನೊಂದು ಮಹಾವ್ಯೂಹವನ್ನು ರಚಿಸಿದರು.
ಭೀಷ್ಮಃ ಸೈನ್ಯೇನ ಮಹತಾ ಸಮಂತಾತ್ ಪರಿವಾರಿತಃ |
ಯಯೌ ಪ್ರಕರ್ಷನ್ ಮಹತೀಂ ವಾಹಿನೀಂ ಸುರರಾಡಿವ ॥11॥
ಭೀಷ್ಮರು ದೊಡ್ಡ ಸೈನ್ಯದಿಂದ ಪರಿವೃತರಾಗಿ ದೇವೇಂದ್ರನಂತೆ ಆ ದೊಡ್ಡ ಸೈನ್ಯವನ್ನು ನಡೆಸುತ್ತಾ ಹೊರಟರು.
ತಮನ್ವಯಾನ್ಮಹೇಷ್ವಾಸೋ ಭಾರದ್ವಾಜಃ ಪ್ರತಾಪವಾನ್ |
ಕುಂತಲೈಶ್ಚ ದಶಾರ್ಣೈಶ್ಚ ಮಾಗಧೈಶ್ಚ ವಿಶಾಂಪತೇ ॥12॥
ವಿದರ್ಭೈರ್ಮೇಕಲೈಶ್ಚೈವ ಕರ್ಣಪ್ರಾವರಣೈರಪಿ |

ಸಹಿತಾಃ ಸರ್ವಸೈನ್ಯೇನ ಭೀಷ್ಮಮಾಹವಶೋಭಿನಮ್ ॥13॥
ಗಾಂಧಾರಾಃ ಸಿಂಧುಸೌವೀರಾಃ ಶಿಬಯೋಽಥ ವಸಾತಯಃ।
ಶಕುನಿಶ್ಚ ಸ್ವಸೈನ್ಯೇನ ಭಾರದ್ವಾಜಮಪಾಲಯತ್ ॥14॥
ಎಲೈ ರಾಜನೇ, ಮಹಾಧನುರ್ಧಾರಿಯಾದ, ಪ್ರತಾಪಶಾಲಿಯಾದ ದ್ರೋಣರು ಕುಂತಲರಿಂದಲೂ, ದಶಾರ್ಣರಿಂದಲೂ, ಮಾಗಧರಿಂದಲೂ, ವಿದರ್ಭರಿಂದಲೂ, ಮೇಕಲರಿಂದಲೂ, ಕರ್ಣಪ್ರಾವರಣರಿಂದಲೂ ಸಹಿತರಾಗಿ ಯುದ್ಧದಲ್ಲಿ ಶೋಭಿಸುವ ಭೀಷ್ಮರನ್ನು ಹಿಂಬಾಲಿಸಿದರು. ಗಾಂಧಾರರು, ಸಿಂಧುಸೌವೀರರೂ, ಶಿಬಿಗಳೂ, ವಸಾತಿಗಳೂ ಮತ್ತು ತನ್ನ ಸೈನ್ಯದಿಂದ ಕೂಡಿದ ಶಕುನಿಯೂ ದ್ರೋಣರನ್ನು ರಕ್ಷಿಸಿದರು.
ತತೋ ದುರ್ಯೋಧನೋ ರಾಜಾ ಸಹಿತಃ ಸರ್ವಸೋದರೈಃ।
ಅಶ್ವಾತಕೈರ್ವಿಕರ್ಣೈಶ್ಚ ತಥಾ ಶರ್ಮಿಲಕೋಸಲೈಃ ॥15॥
ದರದೈಶ್ಚೂಚುಪೈಶ್ಚೈವ ತಥಾ ಕ್ಷುದ್ರಕಮಾಲವೈಃ।
ಅಭ್ಯರಕ್ಷತ ಸಂಹೃಷ್ಟಃ ಸೌಬಲೇಯಸ್ಯ ವಾಹಿನೀಮ್ ॥16॥
ಆಗ ರಾಜನಾದ ದುರ್ಯೋಧನನು ಎಲ್ಲ ಸಹೋದರರಿಂದಲೂ, ಅಶ್ವಾತಕರಿಂದಲೂ, ವಿಕರ್ಣರಿಂದಲೂ, ಶರ್ಮಿಲರಿಂದಲೂ, ಕೋಸಲರಿಂದಲೂ, ದರದರಿಂದಲೂ, ಚೂಚುಪರಿಂದಲೂ, ಕ್ಷುದ್ರಕಮಾಲವರಿಂದಲೂ ಸಹಿತನಾಗಿ ಸಂತೋಷದಿಂದ ಶಕುನಿಯ ಸೈನ್ಯವನ್ನು ರಕ್ಷಿಸಿದನು.
ಭೂರಿಶ್ರವಾಃ ಶಲಃ ಶಲ್ಯೋ ಭಗದತ್ತಶ್ಚ ಮಾರಿಷ।
ವಿಂದಾನುವಿಂದಾವಾವಂತ್ಯೌ ವಾಮಂ ಪಾರ್ಶ್ವಮಪಾಲಯನ್ ॥17॥
ಎಲೈ ಮಾನ್ಯನೇ, ಭೂರಿಶ್ರವ, ಶಲ, ಶಲ್ಯ, ಭಗದತ್ತ ಮತ್ತು ಅವಂತಿ ದೇಶದ ವಿಂದಾನುವಿಂದರು ಸೈನ್ಯದ ಎಡಪಾರ್ಶ್ವವನ್ನು ರಕ್ಷಿಸಿದರು.
ಸೌಮದತ್ತಿಃ ಸುಶರ್ಮಾ ಚ ಕಾಂಬೋಜಶ್ಚ ಸುದಕ್ಷಿಣಃ।
ಶತಾಯುಶ್ಚ ಶ್ರುತಾಯುಶ್ಚ ದಕ್ಷಿಣಂ ಪಾರ್ಶ್ವಮಾಸ್ಥಿತಾಃ ॥18॥
ಸೌಮದತ್ತಿ (ಭೂರಿಶ್ರವ), ಸುಶರ್ಮಾ, ಕಾಂಬೋಜ ದೇಶದ ಸುದಕ್ಷಿಣ, ಶತಾಯು, ಶ್ರುತಾಯು ಇವರು ಸೈನ್ಯದ ದಕ್ಷಿಣ ಭಾಗದಲ್ಲಿ ಅವಸ್ಥಿತರಾದರು.
ಅಶ್ವತ್ಥಾಮಾ ಕೃಪಶ್ಚೈವ ಕೃತವರ್ಮಾ ಚ ಸಾತ್ವತಃ।
ಮಹತ್ಯಾ ಸೇನಯಾ ಸಾರ್ಧಂ ಸೇನಾಪೃಷ್ಠೇ ವ್ಯವಸ್ಥಿತಾಃ ॥19॥
ಅಶ್ವತ್ಥಾಮರು, ಕೃಪರು, ಸಾತ್ವತ ಕುಲದ ಕೃತವರ್ಮ ಇವರು ದೊಡ್ಡ ಸೈನ್ಯದ ಜೊತೆಯಲ್ಲಿ ಸೈನ್ಯದ ಹಿಂಭಾಗದಲ್ಲಿ ಅವಸ್ಥಿತರಾದರು.

ಪೃಷ್ಠಗೋಪಾಸ್ತು ತಸ್ಯಾಸನ್ನಾನಾದೇಶ್ಯಾ ಜನೇಶ್ವರಾಃ।
ಕೇತುಮಾನ್ ವಸುದಾನಶ್ಚ ಪುತ್ರಃ ಕಾಶ್ಯಸ್ಯ ಚಾಭಿಭೂಃ ॥20॥
ಆ ಸೈನ್ಯಕ್ಕೆ ಕೇತುಮಾನ್, ವಸುದಾನ, ಶತ್ರುಗಳನ್ನು ಸೋಲಿಸುವ ಕಾಶಿರಾಜನ ಪುತ್ರ, ಇನ್ನೂ ಅನೇಕ ದೇಶದ ರಾಜರು ಹಿಂಭಾಗದಿಂದ ರಕ್ಷಕರಾದರು.
ತತಸ್ತೇ ತಾವಕಾಃ ಸರ್ವೇ ಹೃಷ್ಟಾ ಯುದ್ಧಾಯ ಭಾರತ।
ದಧ್ಮುಃ ಶಂಖಾನ್ ಮುದಾ ಯುಕ್ತಾಃ ಸಿಂಹನಾದಾಂಶ್ಚ ನಾದಯನ್ ॥
ಎಲೈ ಭಾರತನೇ, ಅನಂತರ ನಿನ್ನವರೆಲ್ಲರೂ ಸಂತೋಷಗೊಂಡು ಯುದ್ಧಕ್ಕಾಗಿ ತಮ್ಮ ಶಂಖಗಳನ್ನು ಊದಿ ಸಿಂಹನಾದಗಳನ್ನು ಮಾಡಿದರು.
ತೇಷಾಂ ಶ್ರುತ್ವಾ ತು ಹೃಷ್ಟಾನಾಂ ಕುರುವೃದ್ಧಃ ಪಿತಾಮಹಃ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥22॥
ಕುರುವೃದ್ಧರೂ, ಪಿತಾಮಹರೂ ಆದ ಭೀಷ್ಮರು ಸಂತೋಷಗೊಂಡ ಅವರ ಶಂಖಧ್ವನಿಗಳನ್ನು ಕೇಳಿ ತಾವೂ ಸಿಂಹನಾದವನ್ನು ಮಾಡಿ ಪ್ರತಾಪಶಾಲಿಗಳಾದ ಅವರು ತಮ್ಮ ಶಂಖವನ್ನು ಊದಿದರು.
ತತಃ ಶಂಖಾಶ್ಚ ಭೇರ್ಯಶ್ಚ ಪೇಶ್ಯಶ್ಚ ವಿವಿಧಾಃ ಪರೈಃ।
ಆನಕಾಶ್ಚಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥23॥
ಅನಂತರ ಪಾಂಡವರ ಪಕ್ಷದಲ್ಲಿ ಶಂಖಗಳು, ಭೇರಿಗಳು, ವಿವಿಧವಾದ ಪೇಶಿಗಳು, ಆನಕಗಳು ಊದಲ್ಪಟ್ಟವು ಮತ್ತು ಬಾರಿಸಲ್ಪಟ್ಟವು. ಆ ಶಬ್ದವು ಬಹಳ ತೀವ್ರವಾಗಿದ್ದಿತು.
ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ।
ಪ್ರದಧ್ಮತುಃ ಶಂಖವರೌ ಹೇಮರತ್ನಪರಿಷ್ಕೃತೌ ॥24॥
ಅನಂತರ ಶ್ವೇತಾಶ್ವಗಳನ್ನು ಹೂಡಿದ ದೊಡ್ಡ ರಥದಲ್ಲಿ ಕುಳಿತು ಕೃಷ್ಣಾರ್ಜುನರು ಹೇಮರತ್ನಾಲಂಕೃತವಾದ ತಮ್ಮ ಶ್ರೇಷ್ಠ ಶಂಖಗಳನ್ನು ಊದಿದರು.
ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥25॥
ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ।
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥26॥

ಹೃಷೀಕೇಶನು ಪಾಂಚಜನ್ಯವನ್ನೂ, ಧನಂಜಯನು ದೇವದತ್ತವನ್ನೂ, ಭಯಂಕರ ಕಾರ್ಯವನ್ನು ಮಾಡುವ ಭೀಮಸೇನನು ಪೌಂಡ್ರವೆಂಬ ಮಹಾಶಂಖವನ್ನೂ ಊದಿದರು. ಕುಂತೀಪುತ್ರನಾದ ಯುಧಿಷ್ಠಿರರಾಜನು ಅನಂತವಿಜಯವೆಂಬ ಶಂಖವನ್ನೂ, ನಕುಲ-ಸಹದೇವರು ಕ್ರಮವಾಗಿ ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳನ್ನೂ ಊದಿದರು.
ಕಾಶಿರಾಜಶ್ಚ ಶೈಬ್ಯಶ್ಚ ಶಿಖಂಡೀ ಚ ಮಹಾರಥಃ |
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚ ಮಹಾಯಶಾಃ ॥27॥
ಪಾಂಚಾಲ್ಯಶ್ಚ ಮಹೇಷ್ವಾಸೋ ದ್ರೌಪದ್ಯಾಃ ಪಂಚ ಚಾತ್ಮಜಾಃ |
ಸರ್ವೇ ದಧ್ಮುರ್ಮಹಾಶಂಖಾನ್ ಸಿಂಹನಾದಾಂಶ್ಚ ನೇದಿರೇ ॥28॥
ಕಾಶಿರಾಜ, ಶೈಬ್ಯ, ಮಹಾರಥನಾದ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಕೀರ್ತಿವಂತನಾದ ಸಾತ್ಯಕಿ, ಮಹಾಧನುರ್ಧಾರಿಯಾದ ದ್ರುಪದ, ದ್ರೌಪದಿಯ ಐವರು ಮಕ್ಕಳು ಎಲ್ಲರೂ ತಮ್ಮ ದೊಡ್ಡ ಶಂಖಗಳನ್ನು ಊದಿ ಸಿಂಹನಾದಗಳನ್ನು ಮಾಡಿದರು.
ಸ ಘೋಷಃ ಸುಮಹಾಂಸ್ತತ್ರ ವೀರೈಸ್ತೈಃ ಸಮುದೀರಿತಃ |
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯತ್ ॥29॥
ಆ ವೀರರು ಉಂಟುಮಾಡಿದ ಆ ತೀವ್ರವಾದ ಘೋಷವು ಭೂಮಿ ಮತ್ತು ಆಕಾಶದಲ್ಲಿ ಪ್ರತಿಧ್ವನಿಸಿತು.
ಏವಮೇತೇ ಮಹಾರಾಜ ಪ್ರಹೃಷ್ಟಾಃ ಕುರುಪಾಂಡವಾಃ |
ಪುನರ್ಯುದ್ಧಾಯ ಸಂಜಗ್ಮುಸ್ತಾಪಯಾನಾಃ ಪರಸ್ಪರಮ್ ॥30॥
ಎಲೈ ಮಹಾರಾಜನೇ, ಹೀಗೆ ಈ ಕುರು-ಪಾಂಡವರು ಸಂತೋಷದಿಂದ ಒಬ್ಬರನ್ನೊಬ್ಬರು ಸಂತಾಪಗೊಳಿಸುತ್ತಾ, ಪುನಃ ಯುದ್ಧಕ್ಕಾಗಿ ಸೇರಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೆಂಟನೆಯ ಅಧ್ಯಾಯ
ದ್ವಿತೀಯದಿವಸದ ಯುದ್ಧ. ಭೀಷ್ಮಾರ್ಜುನರ ಪರಾಕ್ರಮ.
ಧೃತರಾಷ್ಟ್ರಃ
ಏವಂ ವ್ಯೂಢೇಷ್ವನೀಕೇಷು ಮಾಮಕೇಷ್ವಿತರೇಷು ಚ |
ಕಥಂ ಪ್ರಹರತಾಂ ಶ್ರೇಷ್ಠಾಃ ಸಂಪ್ರಹಾರಂ ಪ್ರಚಕ್ರಿರೇ ॥1॥
ಧೃತರಾಷ್ಟ್ರ ನನ್ನವರು ಮತ್ತು ಇತರರು ಹೀಗೆ ಸೈನ್ಯಗಳನ್ನು ವ್ಯೂಹವನ್ನು ಮಾಡಿದ ಮೇಲೆ ಯುದ್ಧ ಮಾಡುವವರಲ್ಲಿ ಶ್ರೇಷ್ಠರಾದ ಯೋಧರು ಹೇಗೆ ಯುದ್ಧವನ್ನು ಮಾಡಿದರು?
ಸಂಜಯಃ
ಸಮಂ ವ್ಯೂಢೇಷ್ವನೀಕೇಷು ಸಂನದ್ಧಾ ರುಚಿರಧ್ವಜಾಃ |
ಅಪಾರಮಿವ ಸಂದೃಶ್ಯ ಸಾಗರಪ್ರತಿಮಂ ಬಲಮ್ ॥2॥
ತೇಷಾಂ ಮಧ್ಯೇ ಸ್ಥಿತೋ ರಾಜಾ ಪುತ್ರೋ ದುರ್ಯೋಧನಸ್ತವ |
ಅಬ್ರವೀತ್ ತಾವಕಾನ್ ಸರ್ವಾನ್ ಯುಧ್ಯಧ್ವಮಿತಿ ದಂಸಿತಾಃ ॥3॥
ಸಂಜಯ ಹೀಗೆ ಸೈನ್ಯಗಳು ಸನ್ನದ್ಧವಾಗಿ, ಮನೋಹರವಾದ ಧ್ವಜಗಳಿಂದ ಕೂಡಿ ವ್ಯೂಹಗೊಂಡ ಮೇಲೆ ಅಪಾರವಾದ ಸಾಗರದಂತಿದ್ದ ಆ ಸೈನ್ಯವನ್ನು ನೋಡಿ ನಿನ್ನ ಪುತ್ರನಾದ ದುರ್ಯೋಧನನು ಆ ಸೈನ್ಯದ ಮಧ್ಯದಲ್ಲಿ ನಿಂತು ನಿನ್ನವರೆಲ್ಲರನ್ನೂ ಕುರಿತು ಸನ್ನದ್ಧರಾಗಿ ಯುದ್ಧವನ್ನು ಮಾಡಿ ಎಂದು ಹೇಳಿದನು.
ತೇ ಮನಃ ಕ್ರೂರಮಾಸ್ಥಾಯ ಸಮಭಿತ್ಯಕ್ತಜೀವಿತಾಃ |
ಪಾಂಡವಾನಭ್ಯವರ್ತಂತ ಸರ್ವ ಏವೋಚ್ಛ್ರಿತಧ್ವಜಾಃ ॥4॥
ಅವರೆಲ್ಲರೂ ತಮ್ಮ ಧ್ವಜಗಳನ್ನು ಏರಿಸಿ, ಜೀವದ ಮೇಲಿನ ಆಸೆಯನ್ನು ತೊರೆದು, ಮನಸ್ಸನ್ನು ಕ್ರೂರಗೊಳಿಸಿ ಪಾಂಡವರ ಕಡೆಗೆ ಧಾವಿಸಿದರು.
ತತೋ ಯುದ್ಧಂ ಸಮಭವತ್ ತುಮುಲಂ ಲೋಮಹರ್ಷಣಮ್ |
ತಾವಕಾನಾಂ ಪರೇಷಾಂ ಚ ವ್ಯತಿಷಕ್ತರಥದ್ವಿಪಮ್ ॥5॥
ಅನಂತರ ನಿನ್ನವರಿಗೂ ಮತ್ತು ಪರರಿಗೂ ರಥ-ಗಜಗಳು ಪರಸ್ಪರ ಮಿಶ್ರಿತವಾಗಿ ತೀವ್ರವೂ, ರೋಮಾಂಚಕಾರಿಯೂ ಆದ ಯುದ್ಧವು ನಡೆಯಿತು.
ಮುಕ್ತಾಸ್ತು ರಥಿಭಿರ್ಬಾಣಾ ರುಗ್ಮಪುಂಖಾಃ ಸುತೇಜನಾಃ |
ಸನ್ನಿಪೇತುರಕುಂಠಾಗ್ರಾ ನಾಗೇಷು ಚ ಹಯೇಷು ಚ ॥6॥
ರಥಿಕರು ಪ್ರಯೋಗಿಸಿದ, ಸುವರ್ಣಪುಂಖಗಳಿದ್ದ, ವೇಗಶಾಲಿಗಳಾದ ಹರಿತವಾದ ತುದಿಗಳುಳ್ಳ ಬಾಣಗಳು ಗಜಗಳಲ್ಲಿ ಮತ್ತು ಹಯಗಳಲ್ಲಿ ನಾಟಿದವು.
ತಥಾ ಪ್ರವೃತ್ತೇ ಸಂಗ್ರಾಮೇ ಧನುರುದ್ಯಮ್ಯ ದಂಸಿತಃ |
ಅಭಿಮನ್ಯುರ್ಮಹಾಬಾಹುರ್ಭೀಷ್ಮೋ ಭೀಮಪರಾಕ್ರಮಃ ॥7॥
ಸೌಭದ್ರೇ ಭೀಮಸೇನೇ ಚ ಶೈನೇಯೇ ಚ ಮಹಾರಥೇ |

ಕೇಕಯೇ ಚ ವಿರಾಟೇ ಚ ಧೃಷ್ಟದ್ಯುಮ್ನೇ ಚ ಪಾರ್ಷತೇ ॥8॥
ಏತೇಷು ನರವೀರೇಷು ಚೇದಿಮತ್ಸ್ಯೇಷು ಚಾಭಿತಃ |
ವವರ್ಷ ಶರವರ್ಷಾಣಿ ವೃದ್ಧಃ ಕುರುಪಿತಾಮಹಃ ॥9॥
ಯುದ್ಧವು ಹಾಗೆ ಪ್ರವೃತ್ತವಾಗುತ್ತಿರಲು ಕವಚವನ್ನು ಧರಿಸಿ ಸನ್ನದ್ಧರಾದ, ಮಹಾಕೋಪದಿಂದ ಕೂಡಿದ, ಭಯಂಕರ ಪರಾಕ್ರಮವುಳ್ಳ ಮಹಾಬಾಹುಗಳಾದ ಭೀಷ್ಮರು ಅಭಿಮನ್ಯು, ಭೀಮಸೇನ, ಮಹಾರಥನಾದ ಸಾತ್ಯಕಿ, ಕೇಕಯ ರಾಜ, ವಿರಾಟ, ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನ ಈ ವೀರರ ಮೇಲೆಯೂ, ಚೇದಿಗಳ ಮತ್ತು ಮತ್ಸ್ಯರ ಸೇನೆಯ ಮೇಲೆಯೂ, ವೃದ್ಧರೂ-ಕುರು ಪಿತಾಮಹರೂ ಆದ ಅವರು ಬಾಣಗಳ ಮಳೆಯನ್ನು ಕರೆದರು.
ಪ್ರಾಕಂಪತ ಮಹಾವ್ಯೂಹಸ್ತಸ್ಮಿನ್ ವೀರಸಮಾಗಮೇ |
ಸರ್ವೇಷಾಮೇವ ಸೈನ್ಯಾನಾಮಾಸೀದ್ ವ್ಯತಿಕರೋ ಮಹಾನ್ ॥10॥
ಹಾಗೆ ವೀರಸಮಾಗಮ ಉಂಟಾದಾಗ ಆ ಮಹಾವ್ಯೂಹವು ನಡುಗಿತು. ಎಲ್ಲ ಸೈನ್ಯಗಳಿಗೂ ಪರಸ್ಪರ ಮಿಶ್ರಣವುಂಟಾಯಿತು.
ಸಾದಿತಧ್ವಜನಾಗಾಶ್ಚ ಹತಪ್ರವರವಾಜಿನಃ |
ವಿಪ್ರಯಾತರಥಾನೀಕಾಃ ಸಮಪದ್ಯಂತ ಪಾಂಡವಾಃ ॥11॥
ಪಾಂಡವರ ಧ್ವಜಸಹಿತವಾದ ಗಜಗಳು ನಾಶಹೊಂದಿದವು. ಶ್ರೇಷ್ಠವಾದ ಅಶ್ವಗಳು ನಾಶ ಹೊಂದಿದವು. ರಥ ಸಮೂಹಗಳು ದೂರ ಓಡಿದವು.
ಅರ್ಜುನಸ್ತು ನರವ್ಯಾಘ್ರೋ ದೃಷ್ಟ್ವಾ ಭೀಷ್ಮಂ ಮಹಾರಥಮ್ |
ವಾರ್ಷ್ಣೇಯಮಬ್ರವೀತ್ ಕ್ರುದ್ಧೋ ಯಾಹಿ ಯತ್ರ ಪಿತಾಮಹಃ ॥12॥
ನರವ್ಯಾಘ್ರನಾದ ಅರ್ಜುನನಾದರೂ ಮಹಾರಥರಾದ ಭೀಷ್ಮರನ್ನು ನೋಡಿ ಕೋಪಗೊಂಡು ಕೃಷ್ಣನನ್ನು ಕುರಿತು, ಭೀಷ್ಮರು ಇರುವಲ್ಲಿಗೆ ರಥವನ್ನು ನಡೆಸು ಎಂದು ಹೇಳಿದನು.
ಏಷ ಭೀಷ್ಮಃ ಸುಸಂಕ್ರುದ್ಧೋ ವಾರ್ಷ್ಣೇಯ ಮಮ ವಾಹಿನೀಮ್ |
ನಾಶಯಿಷ್ಯತಿ ಸುವ್ಯಕ್ತಂ ದುರ್ಯೋಧನಹಿತೇ ರತಃ ॥13॥
ಎಲೈ ಕೃಷ್ಣನೇ, ದುರ್ಯೋಧನನ ಹಿತದಲ್ಲಿ ಆಸಕ್ತರಾದ ಈ ಭೀಷ್ಮರು ಸ್ಪಷ್ಟವಾಗಿ ನನ್ನ ಸೈನ್ಯವನ್ನು ನಾಶಗೊಳಿಸುತ್ತಿದ್ದಾರೆ.
ಏಷ ದ್ರೋಣಃ ಕೃಪಃ ಶಲ್ಯೋ ವಿಕರ್ಣಶ್ಚ ಜನಾರ್ದನ |
ಧಾರ್ತರಾಷ್ಟ್ರಾಶ್ಚ ಸಹಿತಾ ದುರ್ಯೋಧನಪುರೋಗಮಾಃ ॥14॥
ಪಾಂಚಾಲಾನ್ ನಿಹನಿಷ್ಯಂತಿ ರಕ್ಷಿತಾ ದೃಢಧನ್ವನಾ |
ಸೋಽಹಂ ಭೀಷ್ಮಂ ಗಮಿಷ್ಯಾಮಿ ಸೈನ್ಯಹೇತೋರ್ಜನಾರ್ದನ ॥15॥
ಎಲೈ ಜನಾರ್ದನನೇ, ಈ ದ್ರೋಣ, ಕೃಪ, ಶಲ್ಯ, ವಿಕರ್ಣ, ದುರ್ಯೋಧನ ಮೊದಲಾದ ಧೃತರಾಷ್ಟ್ರ ಪುತ್ರರು ಎಲ್ಲರೂ ದೃಢವಾದ ಧನುಸ್ಸುಳ್ಳ ಭೀಷ್ಮರಿಂದ ರಕ್ಷಿತರಾಗಿ ಪಾಂಚಾಲರನ್ನು ಸಂಹರಿಸುತ್ತಿದ್ದಾರೆ. ಎಲೈ ಜನಾರ್ದನನೇ, ನಾನು ನನ್ನ ಸೈನ್ಯವನ್ನು ರಕ್ಷಿಸುವ ಸಲುವಾಗಿ ಭೀಷ್ಮರ ಬಳಿಗೆ ಹೋಗುವೆನು.
ತಮಬ್ರವೀದ್ ವಾಸುದೇವೋ ಯತ್ತೋ ಭವ ಧನಂಜಯ |
ಏಷ ತ್ವಾ ಪ್ರಾಪಯೇ ವೀರ ಪಿತಾಮಹರಥಂ ಪ್ರತಿ ॥16॥
ವಾಸುದೇವನು ಅವನನ್ನು ಕುರಿತು ಧನಂಜಯನೇ, ಎಚ್ಚರಿಕೆಯಿಂದಿರು. ವೀರನೇ, ಪಿತಾಮಹರ ರಥದ ಕಡೆಗೆ ಇದೋ ನಿನ್ನನ್ನು ಕರೆದೊಯ್ಯುತ್ತಿದ್ದೇನೆ ಎಂದು ಹೇಳಿದನು.
ಏವಮುಕತ್ವ ತತಃ ಶೌರೀ ರಥಂ ತಂ ಲೋಕವಿಶ್ರುತಮ್ |
ಪ್ರಾಪಯಾಮಾಸ ಭೀಷ್ಮಸ್ಯ ರಥಂ ಪ್ರತಿ ಜನೇಶ್ವರ ॥17॥
ಎಲೈ ಜನೇಶ್ವರನೇ, ಹೀಗೆ ಹೇಳಿ ಶೌರಿಯಾದ ಕೃಷ್ಣನು ಲೋಕವಿಖ್ಯಾತವಾದ ಆ ರಥವನ್ನು ಭೀಷ್ಮರ ರಥದ ಕಡೆಗೆ ನಡೆಸಿದನು.
ಚಂಚದ್ ಬಹುಪತಾಕೇನ ಬಲಾಕಾವರ್ಣವಾಜಿನಾ |
ಸಮುಚ್ಛ್ರಿತಮಹಾಭೀಮನದದ್‌ವಾನರಕೇತುನಾ |
ಮಹತಾ ಮೇಘನಾದೇನ ರಥೇನಾದಿತ್ಯವರ್ಚಸಾ ॥18॥
ವಿನಿಘ್ನನ್ ಕೌರವಾನೀಕಂ ಶೂರಸೇನಾಂಶ್ಚ ಪಾಂಡವಃ |
ಆಯಾಚ್ಛರಾನ್ ನುದನ್ ಶೀಘ್ರಂ ಸುಹೃಚ್ಛೋಕವಿನಾಶನಃ ॥19॥
ಅರ್ಜುನನು ಚಲಿಸುವ ಅನೇಕ ಪತಾಕೆಗಳಿಂದ ಕೂಡಿದ, ಬಲಾಕಪಕ್ಷಿಗಳಂತೆ ಶ್ವೇತವರ್ಣಗಳಿಂದ ಕೂಡಿದ ಅಶ್ವಗಳನ್ನು ಹೂಡಿದ, ಎತ್ತರವಾದ ಧ್ವಜದಲ್ಲಿ ಗರ್ಜಿಸುವ ಕಪಿಯಿಂದ ಕೂಡಿದ, ಸೂರ್ಯನ ಕಾಂತಿಯುಳ್ಳ, ಮೇಘಗಳ ಮಹಾನಾದದಂತೆ ನಾದವನ್ನು ಹೊಂದಿದ, ರಥದಲ್ಲಿ ಕುಳಿತು ಕೌರವರ ಸೈನ್ಯವನ್ನೂ, ಶೂರಸೇನರನ್ನೂ ಸಂಹರಿಸುತ್ತಾ, ಸುಹೃದರ ಶೋಕವಿನಾಶಕನಾದ ಅವನು ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸುತ್ತಾ ಭೀಷ್ಮರ ಕಡೆಗೆ ಬಂದನು.
ತಮಾಪತಂತಂ ವೇಗೇನ ಪ್ರಭಿನ್ನಮಿವ ವಾರಣಮ್ |
ತ್ರಾಸಯಾನಂ ರಣೇ ಶೂರಾನ್ ಪಾತಯಂತಂ ಚ ಸಾಯಕೈಃ ॥20॥
ಸೈಂಧವಪ್ರಮುಖೈರ್ಗುಪ್ತಃ ಪ್ರಾಚ್ಯಸೌವೀರಕೇಕಯೈಃ |
ಸಹಸಾ ಪ್ರತ್ಯುದೀಯಾಯ ಭೀಷ್ಮಃ ಶಾಂತನವೋಽರ್ಜುನಮ್ ॥21॥
ಮದಿಸಿದ ಗಜದಂತೆ ವೇಗದಿಂದ ಧಾವಿಸಿ ಬರುತ್ತಿದ್ದಂತಹ ,ಯುದ್ಧದಲ್ಲಿ ಶೂರರನ್ನು ಭಯಗೊಳಿಸಿ ಬಾಣಗಳನ್ನು ಬೀಳಿಸುತ್ತಿದ್ದಂತಹ, ಅರ್ಜುನನನ್ನು ನೋಡಿ ಸೈಂಧವ ಮೊದಲಾದವರಿಂದಲೂ, ಪೂರ್ವದಿಕ್ಕಿನ ರಾಜರಿಂದಲೂ, ಸೌವೀರ-ಕೇಕಯ ರಾಜರಿಂದಲೂ

ರಕ್ಷಿತರಾದ ಶಂತನು ಪುತ್ರರಾದ ಭೀಷ್ಮರು ವೇಗವಾಗಿ ಅವನ ಕಡೆಗೆ ಧಾವಿಸಿದರು.
ಕೋ ಹಿ ಗಾಂಡೀವಧನ್ವಾನಮನ್ಯಃ ಕುರುಪಿತಾಮಹಾತ್ |
ದ್ರೋಣವೈಕರ್ತನಾಭ್ಯಾಂ ವಾ ರಥಃ ಸಂಯಾತುಮರ್ಹತಿ ॥22॥
ಕುರುಪಿತಾಮಹರಾದ ಭೀಷ್ಮರನ್ನು ಬಿಟ್ಟು ಅಥವಾ ದ್ರೋಣ-ಕರ್ಣರನ್ನು ಬಿಟ್ಟು ಇನ್ನು ಯಾವ ರಥಿಯು ಗಾಂಡೀವ ಧನುರ್ಧಾರಿಯಾದ ಅರ್ಜುನನ ಕಡೆಗೆ ಹೋಗಲು ಸಮರ್ಥನಾಗುತ್ತಾನೆ?
ತತೋ ಭೀಷ್ಮೋ ಮಹಾರಾಜ ಕೌರವಾಣಾಂ ಪಿತಾಮಹಃ |
ಅರ್ಜುನಂ ಸಪ್ತಸಪ್ತತ್ಯಾ ನಾರಾಚಾನಾಂ ಸಮಾವೃಣೋತ್ ॥23॥
ದ್ರೋಣಶ್ಚ ಪಂಚವಿಂಶತ್ಯಾ ಕೃಪಃ ಪಂಚಾಶತಾ ಶರೈಃ |
ದುರ್ಯೋಧನಶ್ಚತುಃಷಷ್ಟ್ಯಾ ಶಲ್ಯಶ್ಚ ನವಭಿಃ ಶರೈಃ ॥24॥
ಸೈಂಧವೋ ನವಭಿಶ್ಚಾಪಿ ಶಕುನಿಶ್ಚಾಪಿ ಪಂಚಭಿಃ |
ಆರ್ತಾಯನಿಸ್ತ್ರಿಭಿರ್ಭಲ್ಲೈ ರಾಜನ್ ವಿವ್ಯಾಧ ಪಾಂಡವಮ್ ॥25॥
ಎಲೈ ಮಹಾರಾಜನೇ, ಆಗ ಕೌರವರ ಪಿತಾಮಹರಾದ ಭೀಷ್ಮರು ಅರ್ಜುನನನ್ನು ಎಪ್ಪತ್ತೇಳು ನಾರಾಚಗಳಿಂದ ಮುಚ್ಚಿಹಾಕಿದರು. ದ್ರೋಣರು ಇಪ್ಪತ್ತೈದು ಬಾಣಗಳಿಂದಲೂ, ಕೃಪರು ಐವತ್ತು ಬಾಣಗಳಿಂದಲೂ, ದುರ್ಯೋಧನನು ಅರವತ್ನಾಲ್ಕು ಬಾಣಗಳಿಂದಲೂ, ಶಲ್ಯನು ಒಂಬತ್ತು ಬಾಣಗಳಿಂದಲೂ, ಸೈಂಧವನು ಒಂಬತ್ತು ಬಾಣಗಳಿಂದಲೂ, ಶಕುನಿಯು ಐದು ಬಾಣಗಳಿಂದಲೂ, ಋತಾಯನ ಪುತ್ರನಾದ ಶಲ್ಯನು ಮೂರು ಭಲ್ಲಗಳಿಂದಲೂ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಸ ತೈರ್ವಿದ್ಧೋ ಮಹೇಷ್ವಾಸಃ ಸಮಂತಾನ್ನಿಶಿತೈಃ ಶರೈಃ |
ನ ವಿವ್ಯಥೇ ಮಹಾಬಾಹುರ್ಭಿದ್ಯಮಾನ ಇವಾಚಲಃ ॥26॥
ಮಹಾಧನುರ್ಧಾರಿಯಾದ ಅರ್ಜುನನು ಎಲ್ಲ ಕಡೆಗಳಿಂದಲೂ ಹರಿತವಾದ ಬಾಣಗಳಿಂದ ಅವರಿಂದ ಗಾಯಗೊಳಿಸಲ್ಪಟ್ಟರೂ, ಮಹಾಬಾಹುವಾದ ಅವನು ತನ್ನ ಮೇಲೆ ಬಾಣಗಳನ್ನು ಪ್ರಯೋಗಿಸಿದ ಪರ್ವತದಂತೆ ವ್ಯಥೆಯಿಲ್ಲದೆ ನಿಂತನು.
ಸ ಭೀಷ್ಮಂ ಪಂಚವಿಂಶತ್ಯಾ ಕೃಪಂ ಚ ನವಭಿಃ ಶರೈಃ |
ದ್ರೋಣಂ ಷಷ್ಟ್ಯಾ ನರವ್ಯಾಘ್ರೋ ವಿಕರ್ಣಂ ಚ ತ್ರಿಭಿಃ ಶರೈಃ ॥27॥
ಆರ್ತಾಯನಿಂ ತ್ರಿಭಿರ್ಬಾಣೈ ರಾಜಾನಂ ಚಾಪಿ ಪಂಚಭಿಃ |
ಪ್ರತ್ಯವಿಧ್ಯದಮೇಯಾತ್ಮಾ ಕಿರೀಟೀ ಭರತರ್ಷಭ ॥28॥
ಎಲೈ ಭರತಶ್ರೇಷ್ಠನೇ, ನರವ್ಯಾಘ್ರನೂ, ಮಹಾಪ್ರಯತ್ನಶಾಲಿಯೂ ಆದ ಕಿರೀಟಿಯು ಭೀಷ್ಮರನ್ನು ಇಪ್ಪತ್ತೈದು ಬಾಣಗಳಿಂದಲೂ, ಕೃಪರನ್ನು ಒಂಬತ್ತು ಬಾಣಗಳಿಂದಲೂ, ದ್ರೋಣರನ್ನು ಅರವತ್ತು ಬಾಣಗಳಿಂದಲೂ, ವಿಕರ್ಣನನ್ನು ಮೂರು ಬಾಣಗಳಿಂದಲೂ, ಶಲ್ಯನನ್ನು ಮೂರು ಬಾಣಗಳಿಂದಲೂ, ದುರ್ಯೋಧನನನ್ನು ಐದು ಬಾಣಗಳಿಂದಲೂ ಪ್ರತಿಯಾಗಿ ಹಿಂಸಿಸಿದನು.
ತಂ ಸಾತ್ಯಕಿರ್ವಿರಾಟಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ದ್ರೌಪದೇಯಾಭಿಮನ್ಯುಶ್ಚ ಪರಿವವ್ರುರ್ಧನಂಜಯಮ್ ॥29॥
ಸಾತ್ಯಕಿ, ವಿರಾಟ, ಪಾರ್ಷತನಾದ ಧೃಷ್ಟದ್ಯುಮ್ನ, ದ್ರೌಪದಿಯ ಐದು ಮಕ್ಕಳು ಮತ್ತು ಅಭಿಮನ್ಯುವೂ ಸಹ ಅರ್ಜುನನನ್ನು ರಕ್ಷಿಸಲು ಅವನನ್ನು ಸುತ್ತುವರಿದರು.
ತತೋ ದ್ರೋಣಂ ಮಹೇಷ್ವಾಸಂ ಗಾಂಗೇಯಸ್ಯ ಪ್ರಿಯೇ ರತಮ್ |
ಅಭ್ಯವರ್ಷತ ಪಾಂಚಾಲ್ಯಃ ಸಂಯುಕ್ತಃ ಸಹ ಸೋಮಕೈಃ ॥30॥
ಅನಂತರ ಸೋಮಕರಿಂದ ಸಹಿತನಾದ ಧೃಷ್ಟದ್ಯುಮ್ನನು ಭೀಷ್ಮರ ಪ್ರಿಯದಲ್ಲಿಯೇ ಆಸಕ್ತರಾದ ಮಹಾಧನುರ್ಧಾರಿಗಳಾದ ದ್ರೋಣರ ಮೇಲೆ ಬಾಣಗಳ ಮಳೆಯನ್ನು ಕರೆದನು.
ಭೀಷ್ಮಸ್ತು ರಥಿನಾಂ ಶ್ರೇಷ್ಠಸ್ತೂರ್ಣಂ ವಿವ್ಯಾಧ ಪಾಂಡವಮ್ |
ಅಶೀತ್ಯಾ ನಿಶಿತೈರ್ಬಾಣೈಸ್ತತೋಽಕ್ರೋಶಂತ ತಾವಕಾಃ ॥31॥
ರಥಿಕರಲ್ಲಿ ಶ್ರೇಷ್ಠರಾದ ಭೀಷ್ಮರಾದರೂ ಶೀಘ್ರವಾಗಿ ತೀಕ್ಷ್ಣವಾದ ಎಂಬತ್ತು ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದರು. ಆಗ ನಿನ್ನವರೆಲ್ಲರೂ ಹರ್ಷೋದ್ಗಾರವನ್ನು ಮಾಡಿದರು.
ತೇಷಾಂ ತು ನಿನದಂ ಶ್ರುತ್ವಾ ಪ್ರಹೃಷ್ಟಾನಾಂ ಪ್ರಹೃಷ್ಟವತ್ |
ಪ್ರವಿವೇಶ ತತೋ ಮಧ್ಯಂ ರಥಸಿಂಹಃ ಪ್ರತಾಪವಾನ್ ॥32॥
ಸಂತೋಷದಿಂದ ಕೂಡಿದ ಅವರ ಹರ್ಷ ಶಬ್ದವನ್ನು ಕೇಳಿ ರಥಸಿಂಹನೂ ಮತ್ತು ಪ್ರತಾಪಶಾಲಿಯೂ ಆದ ಅರ್ಜುನನು ಅವರ ಮಧ್ಯವನ್ನು ಪ್ರವೇಶಿಸಿದನು.
ತೇಷಾಂ ತು ರಥಸಿಂಹಾನಾಂ ಮಧ್ಯಂ ಪ್ರಾಪ್ಯ ಧನಂಜಯಃ |
ಚಿಕ್ರೀಡ ಧನುಷಾ ರಾಜನ್ ಲಕ್ಷ್ಯಂ ಕೃತ್ವಾ ಮಹಾರಥಾನ್ ॥33॥
ಎಲೈ ರಾಜನೇ, ಧನಂಜಯನು ಆ ರಥಸಿಂಹರ ಮಧ್ಯವನ್ನು ಪ್ರವೇಶಿಸಿ, ಆ ಮಹಾರಥರನ್ನು ಲಕ್ಷ್ಯವಾಗಿ ಮಾಡಿ ತನ್ನ ಧನುಸ್ಸಿನಿಂದ ಆಟವಾಡಿದನು.
ತತೋ ದುರ್ಯೋಧನೋ ರಾಜಾ ಭೀಷ್ಮಮಾಹ ಜನೇಶ್ವರಃ |
ಪೀಡ್ಯಮಾನಂ ಸ್ವಕಂ ಸೈನ್ಯಂ ದೃಷ್ಟ್ವಾ ಪಾರ್ಥೇನ ಸಂಯುಗೇ ॥34॥
ಎಲೈ ಜನೇಶ್ವರನೇ, ಆಗ ರಾಜನಾದ ದುರ್ಯೋಧನನು ತನ್ನ ಸೈನ್ಯವು ಯುದ್ಧದಲ್ಲಿ ಅರ್ಜುನನಿಂದ ಪೀಡಿಸಲ್ಪಡುವುದನ್ನು ನೋಡಿ ಭೀಷ್ಮರನ್ನು ಕುರಿತು ಹೇಳಿದನು.

ಏಷ ಪಾಂಡುಸುತಸ್ತಾತ ಕೃಷ್ಣೇನ ಸಹಿತೋ ಬಲೀ |
ಯತತಾಂ ಸರ್ವಸೈನ್ಯಾನಾಂ ಮೂಲಂ ನಃ ಪರಿಕೃಂತತಿ |
ತ್ವಯಿ ಜೀವತಿ ಗಾಂಗೇಯೇ ದ್ರೋಣೇ ಚ ರಥಿನಾಂ ವರೇ ॥35॥
ಎಲೈ ತಾತನೇ, ಗಂಗಾಪುತ್ರರಾದ ನೀವು ಬದುಕಿರುವಾಗ, ರಥಿಶ್ರೇಷ್ಠರಾದ ದ್ರೋಣರು ಬದುಕಿರುವಾಗ ನನ್ನ ಸರ್ವಸೈನ್ಯವೂ ಪ್ರಯತ್ನಪಡುತ್ತಿದ್ದರೂ ಕೃಷ್ಣನಿಂದ ಸಹಿತನಾದ, ಬಲಿಷ್ಠನಾದ, ಪಾಂಡುಪುತ್ರನಾದ ಅರ್ಜುನನು ನಮ್ಮ ಸೈನ್ಯದ ಮೂಲವನ್ನೇ ಕತ್ತರಿಸುತ್ತಿದ್ದಾನೆ.
ತ್ವತ್ಕೃತೇ ಹ್ಯೇಷ ಕರ್ಣೋऽಪಿ ನ್ಯಸ್ತಶಸ್ತ್ರೋ ಮಹಾರಥಃ |
ನ ಯುಧ್ಯತಿ ರಣೇ ಪಾರ್ಥಂ ಹಿತಕಾಮಃ ಸದಾ ಮಮ ॥36॥
ಯಾವಾಗಲೂ ನನ್ನ ಹಿತದಲ್ಲಿಯೇ ರಥನಾದ, ಮಹಾರಥನಾದ ಈ ಕರ್ಣನೂ ಕೂಡ ನಿಮ್ಮ ಕಾರಣದಿಂದಾಗಿ ಶಸ್ತ್ರಸಂನ್ಯಾಸವನ್ನು ಮಾಡಿ ಯುದ್ಧವನ್ನು ಮಾಡುತ್ತಿಲ್ಲ.
ಸ ತಥಾ ಕುರು ಗಾಂಗೇಯ ಯಥಾ ಹನ್ಯೇತ ಫಲ್ಗುನಃ |
ಏವಮುಕ್ತಸ್ತತೋ ರಾಜನ್ಪಿತಾ ದೇವವ್ರತಸ್ತವ |
ಧಿಕ್ ಕ್ಷತ್ರಧರ್ಮಮಿತ್ಯುಕ್ತ್ವಾ ಯಯೌ ಪಾರ್ಥರಥಂ ಪ್ರತಿ ॥37॥
ಎಲೈ ಗಂಗಾಪುತ್ರರೇ, ಅರ್ಜುನನ ವಧೆಯಾಗುವಂತೆ ಹೇಗಾದರೂ ಮಾಡಿ. ಎಲೈ ರಾಜನೇ, ದುರ್ಯೋಧನನಿಂದ ಹೀಗೆ ಹೇಳಲ್ಪಟ್ಟ ದೇವವ್ರತರಾದ ನಿನ್ನ ತಂದೆಯು ಕ್ಷತ್ರಧರ್ಮಕ್ಕೆ ಧಿಕ್ಕಾರವಿರಲಿ ಎಂದು ಹೇಳುತ್ತಾ, ಅರ್ಜುನನ ರಥದ ಕಡೆಗೆ ಹೊರಟರು.
ಉಭೌ ಶ್ವೇತಹಯೌ ರಾಜನ್ ಸಂಸಕ್ತೌ ದೃಶ್ಯ ಪಾರ್ಥಿವಾಃ |
ಸಿಂಹನಾದಾನ್ ಭೃಶಂ ಚಕ್ರುಃ ಶಂಖಶಬ್ದಾಂಶ್ಚ ಭಾರತ ॥38॥
ಎಲೈ ರಾಜನೇ, ಶ್ವೇತಹಯಗಳಿಂದ ಕೂಡಿದ ರಥದಲ್ಲಿ ಕುಳಿತ ಅವರಿಬ್ಬರೂ ಪರಸ್ಪರ ಸಂಸಕ್ತರಾದುದನ್ನು ನೋಡಿ ಎಲೈ ಭಾರತನೇ, ರಾಜರು ಗಟ್ಟಿಯಾಗಿ ಸಿಂಹನಾದವನ್ನು ಮಾಡಿ ಶಂಖ ಶಬ್ದವನ್ನೂ ಮಾಡಿದರು.
ದ್ರೌಣಿರ್ದುರ್ಯೋಧನಶ್ಚೈವ ವಿಕರ್ಣಶ್ಚ ತವಾತ್ಮಜಃ |
ಪರಿವಾರ್ಯ ರಣೇ ಭೀಷ್ಮಂ ಸ್ಥಿತಾ ಯುದ್ಧಾಯ ಮಾರಿಷ ॥39॥
ಅಶ್ವತ್ಥಾಮ, ದುರ್ಯೋಧನ, ನಿನ್ನ ಪುತ್ರನಾದ ವಿಕರ್ಣ ಇವರು ಎಲೈ ಪೂಜ್ಯನೇ, ಭೀಷ್ಮರನ್ನು ಸುತ್ತುವರಿದು ಯುದ್ಧಕ್ಕಾಗಿ ನಿಂತರು.
ತಥೈವ ಪಾಂಡವಾಃ ಸರ್ವೇ ಪರಿವಾರ್ಯ ಧನಂಜಯಮ್ |
ಸ್ಥಿತಾ ಯುದ್ಧಾಯ ಮಹತೇ ತತೋ ಯುದ್ಧಮವರ್ತತ ॥40॥
ಹಾಗೆಯೇ, ಪಾಂಡವರೆಲ್ಲರೂ ಅರ್ಜುನನನ್ನು ಸುತ್ತುವರಿದು ಯುದ್ಧಕ್ಕೆ ಸಿದ್ಧರಾಗಿ ನಿಂತರು. ಆನಂತರ ಯುದ್ಧವು ಪ್ರವೃತ್ತವಾಯಿತು.
ಗಾಂಗೇಯಸ್ತು ರಣೇ ಪಾರ್ಥಮಾನರ್ಚ್ಛತ್ ನವಭಿಃ ಶರೈಃ |
ತಮರ್ಜುನಃ ಪ್ರತ್ಯವಿಧ್ಯದ್ ದಶಭಿರ್ಮರ್ಮವೇಧಿಭಿಃ ॥41॥
ಭೀಷ್ಮರು ಅರ್ಜುನನ ಮೇಲೆ ಒಂಭತ್ತು ಬಾಣಗಳನ್ನು ಪ್ರಯೋಗಿಸಿದರು. ಅದಕ್ಕೆ ಪ್ರತಿಯಾಗಿ ಅರ್ಜುನನು ಮರ್ಮಭೇದಿಗಳಾದ ಹತ್ತು ಬಾಣಗಳನ್ನು ಅವರ ಮೇಲೆ ಪ್ರಯೋಗಿಸಿದನು.
ತತಃ ಶರಸಹಸ್ರೇಣ ಸುಪ್ರಯುಕ್ತೇನ ಪಾಂಡವಃ |
ಅರ್ಜುನಃ ಸಮರಶ್ಲಾಘೀ ಭೀಷ್ಮಸ್ಯಾವಾರಯದ್ ದಿಶಃ ॥42॥
ಅನಂತರ ಪಾಂಡುಪುತ್ರನಾದ ಯುದ್ಧಶ್ಲಾಘಿಯಾದ ಅರ್ಜುನನು ಸಹಸ್ರ ಬಾಣಗಳನ್ನು ಪ್ರಯೋಗಿಸಿ ಭೀಷ್ಮರನ್ನು ಎಲ್ಲಾ ದಿಕ್ಕುಗಳಿಂದಲೂ ಮುಚ್ಚಿದನು.
ಶರಜಾಲಂ ತತಸ್ತತ್ತು ಶರಜಾಲೇನ ಕೌರವ |
ವಾರಯಾಮಾಸ ಪಾರ್ಥಸ್ಯ ಭೀಷ್ಮಃ ಶಾಂತನವಸ್ತಥಾ ॥43॥
ಎಲೈ ಕೌರವನೇ, ಶಂತನು ಪುತ್ರರಾದ ಭೀಷ್ಮರು ಆಗ ಅರ್ಜುನನು ಹೆಣೆದ ಬಾಣಗಳ ಬಲೆಯನ್ನು ತಮ್ಮ ಬಾಣಗಳ ಬಲೆಯಿಂದಲೇ ನಿವಾರಿಸಿದರು.
ಉಭೌ ಪರಮಸಂಹೃಷ್ಟಾವುಭೌ ಯುದ್ಧಾಭಿನಂದಿನೌ |
ನಿರ್ವಿಶೇಷಮಯುಧ್ಯೇತಾಂ ಕೃತಪ್ರತಿಕೃತೈಷಿಣೌ ॥44॥
ಇಬ್ಬರೂ ಪರಮ ಸಂತೋಷದಿಂದ ಕೂಡಿದವರಾಗಿ ಯುದ್ಧವನ್ನು ಆಸ್ವಾದಿಸುತ್ತಾ ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತೀಕಾರ ಮಾಡುತ್ತಾ, ಒಬ್ಬರನ್ನೊಬ್ಬರು ಮೀರದೇಯುದ್ಧವನ್ನು ಮಾಡಿದರು.
ಭೀಷ್ಮಚಾಪವಿಮುಕ್ತಾನಿ ಶರಜಾಲಾನಿ ಸಂಘಶಃ |
ಶೀರ್ಯಮಾಣಾನ್ಯದೃಶ್ಯಂತ ಭಿನ್ನಾನ್ಯರ್ಜುನಸಾಯಕೈಃ ॥45॥
ಭೀಷ್ಮರು ಪ್ರಯೋಗ ಮಾಡಿದ ಬಾಣಗಳ ಸಮೂಹಗಳು ಅರ್ಜುನನ ಬಾಣಗಳಿಂದ ಸಮೂಹ ಸಮೂಹವಾಗಿ ನಾಶ ಹೊಂದುವುದು ಕಂಡುಬಂದಿತು.
ತಥೈವಾರ್ಜುನಮುಕ್ತಾನಿ ಶರಜಾಲಾನಿ ಭಾಗಶಃ |
ಗಾಂಗೇಯಶರನುನ್ನಾನಿ ನ್ಯಪತಂತ ಮಹೀತಳೇ ॥46॥
ಹಾಗೆಯೇ, ಅರ್ಜುನನು ಪ್ರಯೋಗಿಸಿದ ಬಾಣಗಳ ಸಮೂಹಗಳೂ ಸಹ ಭೀಷ್ಮರ ಬಾಣಗಳಿಂದ ಕತ್ತರಿಸಲ್ಪಟ್ಟು ತುಂಡು ತುಂಡಾಗಿ ಭೂಮಿಯ ಮೇಲೆ ಬಿದ್ದವು.
ಅರ್ಜುನಃ ಪಂಚವಿಂಶತ್ಯಾ ಭೀಷ್ಮಮಾರ್ಚ್ಛಚ್ಛಿತೈಃ ಶರೈಃ |

ಭೀಷ್ಮೋಽಪಿ ಸಮರೇ ಪಾರ್ಥಂ ವಿವ್ಯಾಧ ತ್ರಿಂಶತಾ ಶರೈಃ ॥47॥
ಅರ್ಜುನನು ಹರಿತವಾದ ಇಪ್ಪತ್ತೈದು ಬಾಣಗಳಿಂದ ಭೀಷ್ಮರನ್ನು ಹಿಂಸಿಸಿದನು. ಭೀಷ್ಮರೂ ಸಹ ಯುದ್ಧದಲ್ಲಿ ಮೂವತ್ತು ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದರು.
ಅನ್ಯೋನ್ಯಸ್ಯ ಹಯಾನ್ ವಿದ್ಧ್ವಾ ಧ್ವಜೌ ಚ ಸುಮಹಾಬಲೌ |
ರಥೇಷಾಂ ರಥಚಕ್ರೇ ಚ ಚಿಕ್ರೀಡತುರರಿಂದಮೌ ॥48॥
ಅರಿಂದಮರೂ, ಮಹಾಬಲಶಾಲಿಗಳೂ ಆದ ಅವರಿಬ್ಬರೂ ಪರಸ್ಪರವಾಗಿ ರಥಾಶ್ವಗಳನ್ನು ಕೊಂದು ಧ್ವಜಗಳನ್ನೂ, ರಥದ ಚಕ್ರಗಳನ್ನೂ ಮತ್ತು ರಥದ ಮೂಕಿಗಳನ್ನೂ ಕತ್ತರಿಸಿ ಆಟವಾಡಿದರು.
ತತಃ ಕ್ರುದ್ಧೋ ಮಹಾರಾಜ ಭೀಷ್ಮಃ ಪ್ರಹರತಾಂ ವರಃ |
ವಾಸುದೇವಂ ತ್ರಿಭಿರ್ಬಾಣೈರಾಜಘಾನ ಸ್ತನಾಂತರೇ ॥49॥
ಎಲೈ ಮಹಾರಾಜನೇ, ಆಗ ಯುದ್ಧ ಮಾಡುವವರಲ್ಲಿ ಶ್ರೇಷ್ಠರಾದ ಭೀಷ್ಮರು ಕೋಪಗೊಂಡು ಕೃಷ್ಣನನ್ನು ಮೂರು ಬಾಣಗಳಿಂದ ಸ್ತನಗಳ ಮಧ್ಯದಲ್ಲಿ ಹೊಡೆದರು.
ಭೀಷ್ಮಚಾಪಚ್ಯುತೈರ್ಬಾಣೈರ್ನಿರ್ವಿದ್ಧೋ ಮಧುಸೂದನಃ |
ವಿರರಾಜ ರಣೇ ರಾಜನ್ ಸಪುಷ್ಪ ಇವ ಕಿಂಶುಕಃ ॥50॥
ಎಲೈ ರಾಜನೇ, ಭೀಷ್ಮರ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳಿಂದ ತಾಡಿತನಾದ ಮಧುಸೂದನನು ಪುಷ್ಪಿತವಾದ ಕಿಂಶುಕವೃಕ್ಷದಂತೆ ಶೋಭಿಸಿದನು.
ತತೋಽರ್ಜುನೋ ಭೃಶಂ ಕ್ರುದ್ಧೋ ನಿರ್ವಿದ್ಧಂ ಪ್ರೇಕ್ಷ್ಯ ಮಾಧವಮ್ |
ಗಾಂಗೇಯಸಾರಥಿಂ ಸಂಖ್ಯೇ ನಿರ್ಬಿಭೇದ ತ್ರಿಭಿಃ ಶರೈಃ ॥51॥
ಆಗ ಅರ್ಜುನನು ಕೃಷ್ಣನು ಬಾಣಪ್ರಯೋಗಕ್ಕೆ ಗುರಿಯಾದುದನ್ನು ನೋಡಿ ಕೋಪಗೊಂಡು ಭೀಷ್ಮರ ಸಾರಥಿಯನ್ನು ಮೂರು ಬಾಣಗಳಿಂದ ಗಾಯಗೊಳಿಸಿದನು.
ಯತಮಾನೌ ತು ತೌ ವೀರಾವನ್ಯೋನ್ಯಸ್ಯ ವಧಂ ಪ್ರತಿ |
ನಾಶಕ್ನುತಾಂ ತದಾನ್ಯೋನ್ಯಮಭಿಸಂಧಾತುಮಾಹವೇ ॥52॥
ಅವರಿಬ್ಬರೂ ಪರಸ್ಪರ ವಧೆಗಾಗಿ ಪ್ರಯತ್ನಪಟ್ಟರೂ ಯುದ್ಧದಲ್ಲಿ ಅದನ್ನು ಪರಸ್ಪರವಾಗಿ ಸಾಧಿಸಲು ಸಾಧ್ಯವಾಗಲಿಲ್ಲ.
ಮಂಡಲಾನಿ ವಿಚಿತ್ರಾಣಿ ಗತಪ್ರತ್ಯಾಗತಾನಿ ಚ |
ಅದರ್ಶಯೇತಾಂ ಬಹುಧಾ ಸೂತಸಾಮರ್ಥ್ಯಲಾಘವಾತ್ ॥53॥
ಸೂತರ ಸಾಮರ್ಥ್ಯ ಮತ್ತು ಕ್ಷಿಪ್ರತೆಯಿಂದ ಅವರಿಬ್ಬರೂ ವಿಚಿತ್ರವಾದ ಅನೇಕ ಯುದ್ಧ ಮಾರ್ಗಗಳನ್ನೂ ಮುಂದೆ ಹೋಗಿ ಹಿಂದೆ ಬರುವ ರೀತಿಗಳನ್ನೂ ಅನೇಕ ರೀತಿಯಲ್ಲಿ ತೋರಿಸಿದರು.
ಅಂತರಂ ಚ ಪ್ರಹಾರೇಷು ತರ್ಕಯಂತೌ ಮಹಾರಥೌ |
ರಾಜನ್ನಂತರಮಾರ್ಗಸ್ಥೌ ಸ್ಥಿತಾವಾಸ್ತಾಂ ಮುಹುರ್ಮುಹುಃ ॥54॥
ಎಲೈ ರಾಜನೇ, ಮಹಾರಥರಾದ ಅವರಿಬ್ಬರೂ ಇನ್ನೊಬ್ಬರ ಪ್ರಹಾರದ ಮಧ್ಯದಲ್ಲಿ ಒಂದು ದೋಷವನ್ನು ಹುಡುಕುತ್ತಾ ಪುನಃ ಪುನಃ ಮಂಡಲ ಮಾರ್ಗಮಧ್ಯದಲ್ಲಿಯೇ ನಿಲ್ಲುತ್ತಿದ್ದರು.
ಉಭೌ ಸಿಂಹರವೋನ್ಮಿಶ್ರಂ ಶಂಖಶಬ್ದಂ ಪ್ರಚಕ್ರತುಃ |
ತಥೈವ ಚಾಪನಿರ್ಘೋಷಂ ಚಕ್ರತುಸ್ತೌ ಮಹಾರಥೌ ॥55॥
ಇಬ್ಬರೂ ಸಿಂಹನಾದ ಮಿಶ್ರಿತವಾದ ಶಂಖಶಬ್ದವನ್ನು ಮಾಡಿದರು. ಹಾಗೆಯೇ ಮಹಾರಥರಾದ ಅವರಿಬ್ಬರೂ ಧನುಸ್ಸಿನ ಘೋಷವನ್ನೂ ಉಂಟುಮಾಡಿದರು.
ತಯೋಃ ಶಂಖಪ್ರಣಾದೇನ ರಥನೇಮಿಸ್ವನೇನ ಚ |
ದಾರಿತಾ ಸಹಸಾ ಭೂಮಿಶ್ಚಕಂಪ ಚ ನನಾದ ಚ ॥56॥
ಅವರಿಬ್ಬರ ಶಂಖನಾದದಿಂದಲೂ ಮತ್ತು ರಥಘೋಷದಿಂದಲೂ ಭೂಮಿಯು ಬಿರಿದು ನಡುಗಿ ಗುಡುಗಿತು.
ನ ತಯೋರಂತರಂ ಕಶ್ಚಿದ್ ದದೃಶೇ ಭರತರ್ಷಭ |
ಬಲಿನೌ ಸಮರೇ ಶೂರಾವನ್ಯೋನ್ಯಸದೃಶಾವುಭೌ ॥57॥
ಎಲೈ ಭರತಶ್ರೇಷ್ಠನೇ, ಬಲಿಷ್ಠರೂ, ಯುದ್ಧದಲ್ಲಿ ಶೂರರೂ ಪರಸ್ಪರ ಸದೃಶರೂ ಆದ ಅವರಿಬ್ಬರ ಮಧ್ಯದಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ.
ಚಿಹ್ನಮಾತ್ರೇಣ ಭೀಷ್ಮಂ ತು ಪ್ರಜಜ್ಞುಸ್ತತ್ರ ಕೌರವಾಃ |
ತಥಾ ಪಾಂಡುಸುತಾಃ ಪಾರ್ಥಂ ಚಿಹ್ನಮಾತ್ರೇಣ ಜಜ್ಞಿರೇ ॥58॥
ಕೌರವರು ಭೀಷ್ಮರನ್ನು ಕೇವಲ ಅವರ ಚಿಹ್ನೆಯಿಂದ ತಿಳಿಯುತ್ತಿದ್ದರು. ಹಾಗೆಯೇ ಪಾಂಡವರು ಕೇವಲ ಅರ್ಜುನನ ಚಿಹ್ನೆಗಳಿಂದ ಅರ್ಜುನನನ್ನು ತಿಳಿಯುತ್ತಿದ್ದರು.
ತಯೋರ್ನೃವರಯೋ ರಾಜನ್ ದೃಶ್ಯ ತಾದೃಕ್ಪರಾಕ್ರಮಮ್ |
ವಿಸ್ಮಯಂ ಸರ್ವಭೂತಾನಿ ಜಗ್ಮುರ್ಭಾರತ ಸಂಯುಗೇ ॥59॥
ಎಲೈ ರಾಜನೇ, ಭಾರತನೇ, ನರಶ್ರೇಷ್ಠರಾದ ಅವರಿಬ್ಬರ ಅಂತಹ ಪರಾಕ್ರಮವನ್ನು ನೋಡಿ ಆ ಯುದ್ಧಭೂಮಿಯಲ್ಲಿ ಎಲ್ಲರೂ ವಿಸ್ಮಯವನ್ನು ಹೊಂದಿದರು.
ನ ತಯೋರ್ವಿವರಂ ಕಶ್ಚಿದ್ ರಣೇ ಪಶ್ಯತಿ ಭಾರತ |

ಧರ್ಮೇ ಸ್ಥಿತಸ್ಯ ಹಿ ಯಥಾ ನ ಕಶ್ಚಿದ್ ವೃಜಿನಂ ಕ್ವಚಿತ್ ॥60॥
ಎಲೈ ಭಾರತನೇ, ಧರ್ಮಿಷ್ಠನಾದ ಪುರುಷನಲ್ಲಿ ಹೇಗೆ ಪಾಪವು ಕಂಡುಬರುವುದಿಲ್ಲವೋ, ಅದರಂತೆ ಅವರಿಬ್ಬರ ಯುದ್ಧದಲ್ಲಿ ಯಾವ ಛಿದ್ರವೂ ಕಂಡುಬರಲಿಲ್ಲ.
ಉಭೌ ಹಿ ಶರಜಾಲೇನ ತಾವದೃಶ್ಯೌ ಬಭೂವತುಃ |
ಪ್ರಕಾಶೌ ಚ ಪುನಸ್ತೂರ್ಣಂ ಬಭೂವತುರುಭೌ ರಣೇ ॥61॥
ಅವರಿಬ್ಬರೂ ಬಾಣಗಳ ಸಮೂಹದಿಂದ ಅದೃಶ್ಯರಾಗುತ್ತಿದ್ದರು. ಪುನಃ ಯುದ್ಧಭೂಮಿಯಲ್ಲಿ (ಆ ಬಾಣಗಳನ್ನು ಸಂಹರಿಸಿ) ಎಲ್ಲರ ಕಣ್ಣಿಗೆ ಕಾಣುತ್ತಿದ್ದರು.
ತತ್ರ ದೇವಾಃ ಸಗಂಧರ್ವಾಶ್ಚಾರಣಾಶ್ಚ ಸಹರ್ಷಿಭಿಃ |
ಅನ್ಯೋನ್ಯಂ ಪ್ರತ್ಯಭಾಷಂತ ತಯೋರ್ದೃಷ್ಟ್ವಾ ಪರಾಕ್ರಮಮ್ ॥62॥
ಅಲ್ಲಿ ಅವರ ಪರಾಕ್ರಮವನ್ನು ನೋಡಿ ಗಂಧರ್ವರಿಂದ, ಚಾರಣರಿಂದ ಮತ್ತು ಋಷಿಗಳಿಂದ ಸಹಿತರಾದ ದೇವತೆಗಳು ಪರಸ್ಪರವಾಗಿ ಮಾತನಾಡಿಕೊಂಡರು.
ನ ಶಕ್ಯೌ ಯುಧಿ ಸಂರಬ್ಧೌ ಜೇತುಮೇತೌ ಮಹಾರಥೌ |
ಸದೇವಾಸುರಗಂಧರ್ವೈರ್ಲೋಕೈರಪಿ ಕಥಂಚನ ॥63॥
ದೇವಾಸುರಗಂಧರ್ವ ಸಹಿತವಾದ ಎಲ್ಲ ಲೋಕಗಳಿಂದಲೂ ಮಹಾರಥರೂ ಮತ್ತು ಕೋಪಗೊಂಡವರೂ ಆದ ಇವರಿಬ್ಬರು ಯುದ್ಧದಲ್ಲಿ ಸೋಲಿಸಲ್ಪಡಲು ಸಾಧ್ಯವಿಲ್ಲ.
ಆಶ್ಚರ್ಯಭೂತಂ ಲೋಕೇಷು ಯುದ್ಧಮೇತನ್ಮಹಾದ್ಭುತಮ್ |
ನೈತಾದೃಶಾನಿ ಯುದ್ಧಾನಿ ಭವಿಷ್ಯಂತಿ ಕಥಂಚನ ॥64॥
ಇವರಿಬ್ಬರ ಈ ಯುದ್ಧವು ಬಹಳ ಅದ್ಭುತವಾದುದು. ಮೂರುಲೋಕದಲ್ಲಿ ಆಶ್ಚರ್ಯಕರವಾದುದು. ಇಂತಹ ಯುದ್ಧವು ಎಂದೂ ನಡೆಯುವುದಿಲ್ಲ.
ನಾಪಿ ಶಕ್ಯೋ ರಣೇ ಜೇತುಂ ಭೀಷ್ಮಃ ಪಾರ್ಥೇನ ಧೀಮತಾ |
ಸಧನುಶ್ಚ ರಥಸ್ಥಶ್ಚ ಪ್ರವಪನ್ ಸಾಯಕಾನ್ ರಣೇ ॥65॥
ರಥದಲ್ಲಿ ಕುಳಿತು, ಧನುಸ್ಸನ್ನು ಹಿಡಿದು, ಬಾಣಗಳ ಮಳೆಯನ್ನು ಸುರಿಸುವ ಭೀಷ್ಮರು ಮೇಧಾವಿಯಾದ ಅರ್ಜುನನಿಂದ ಯುದ್ಧದಲ್ಲಿ ಸೋಲಿಸಲ್ಪಡಲು ಸಾಧ್ಯವಿಲ್ಲ.
ತಥೈವ ಪಾಂಡವಂ ಯುದ್ಧೇ ದೇವೈರಪಿ ದುರಾಸದಮ್ |
ನ ವಿಜೇತುಂ ರಣೇ ಭೀಷ್ಮ ಉತ್ಸಹೇತ ಧನುರ್ಧರಮ್ ॥66॥
ಹಾಗೆಯೇ, ದೇವತೆಗಳೂ ಹತ್ತಿರ ಸುಳಿಯಲಾರದ ಧನುರ್ಧಾರಿಯಾದ ಪಾಂಡುಪುತ್ರನಾದ ಅರ್ಜುನನನ್ನು ಭೀಷ್ಮರೂ ಯುದ್ಧದಲ್ಲಿ ಜಯಿಸಲಾರರು.
ಇತಿ ಸ್ಮ ವಾಚಃ ಶ್ರೂಯಂತೇ ಪ್ರೋಚ್ಚರಂತ್ಯಸ್ತತಸ್ತತಃ |
ಗಾಂಗೇಯಾರ್ಜುನಯೋಃ ಸಂಖ್ಯೇ ಸ್ತವಯುಕ್ತಾ ವಿಶಾಂಪತೇ ॥67॥
ಎಲೈ ರಾಜನೇ, ಭೀಷ್ಮಾರ್ಜುನರ ಯುದ್ಧವು ನಡೆಯುತ್ತಿದ್ದಾಗ ಅವರ ಪ್ರಶಂಸಾ ರೂಪವಾದ ಇಂತಹ ಮಾತುಗಳು ಅಲ್ಲಲ್ಲಿ ಕೇಳಿಬಂದವು.
ತ್ವದೀಯಾಸ್ತು ತತೋ ಯೋಧಾಃ ಪಾಂಡವೇಯಾಶ್ಚ ಭಾರತ |
ಅನ್ಯೋನ್ಯಂ ಸಮರೇ ಜಘ್ನುಸ್ತಯೋಸ್ತತ್ರ ಪರಾಕ್ರಮೇ ॥68॥
ಎಲೈ ಭಾರತನೇ, ಭೀಷ್ಮಾರ್ಜುನರು ಹಾಗೆ ಪರಾಕ್ರಮವನ್ನು ತೋರಿಸುತ್ತಿದ್ದಾಗ, ನಿನ್ನ ಮತ್ತು ಪಾಂಡವರ ಸೈನಿಕರು ಯುದ್ಧದಲ್ಲಿ ಪರಸ್ಪರವಾಗಿ ಪ್ರಹಾರ ಮಾಡಿದರು.
ಶಿತಧಾರೈಸ್ತಥಾ ಖಡ್ಗೈರ್ವಿಮಲೈಶ್ಚ ಪರಶ್ವಧೈಃ |
ಶರೈರನ್ಯೈಶ್ಚ ಬಹುಭಿಃ ಶಸ್ತ್ರೈರ್ನಾನಾವಿಧೈರ್ಯುಧಿ |
ಉಭಯೋಃ ಸೇನಯೋರ್ವೀರಾ ನ್ಯಕೃಂತಂತ ಪರಸ್ಪರಮ್ ॥69॥
ಹರಿತವಾದ ಅಲುಗುಳ್ಳ ಖಡ್ಗಗಳಿಂದಲೂ, ವಿಮಲವಾದ ಪರಶ್ವಧಗಳಿಂದಲೂ, ಅನೇಕ ಬಾಣಗಳಿಂದಲೂ, ನಾನಾವಿಧವಾದ ಶಸ್ತ್ರಗಳಿಂದಲೂ, ಎರಡೂ ಸೈನ್ಯದ ವೀರರು ಯುದ್ಧದಲ್ಲಿ ಒಬ್ಬರನ್ನೊಬ್ಬರು ಕತ್ತರಿಸಿದರು.
ವರ್ತಮಾನೇ ತಥಾ ಘೋರೇ ತಸ್ಮಿನ್ ಯುದ್ಧೇ ಸುದಾರುಣೇ |
ದ್ರೋಣಪಾಂಚಾಲ್ಯಯೋ ರಾಜನ್ ಮಹಾನಾಸೀತ್ ಸಮಾಗಮಃ ॥
ಎಲೈ ರಾಜನೇ, ಅಂತಹ ಘೋರವೂ ಮತ್ತು ಅತ್ಯಂತ ದಾರುಣವೂ ಆದ ಯುದ್ಧವು ನಡೆಯುತ್ತಿರಲು ದ್ರೋಣ ಮತ್ತು ಧೃಷ್ಟದ್ಯುಮ್ನರಿಗೆ ದೊಡ್ಡ ಸಮಾಗಮ ಉಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂಬತ್ತನೆಯ ಅಧ್ಯಾಯ
ದ್ರೋಣ-ಧೃಷ್ಟದ್ಯುಮ್ನರ ಯುದ್ಧ.

ಧೃತರಾಷ್ಟ್ರಃ
ಕಥಂ ದ್ರೋಣೋ ಮಹೇಷ್ವಾಸಃ ಪಾಂಚಾಲ್ಯಶ್ಚಾಪಿ ಪಾರ್ಷತಃ |
ರಣೇ ಸಮೀಯತುರ್ಯತ್ತೌ ತನ್ಮಮಾಚಕ್ಷ್ವ ಸಂಜಯ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಮಹಾಧನುರ್ಧಾರಿಗಳಾದ ದ್ರೋಣರು ಮತ್ತು ಪಾಂಚಾಲ ದೇಶದ ಧೃಷ್ಟದ್ಯುಮ್ನನು ಯುದ್ಧದಲ್ಲಿ ಒಬ್ಬರನ್ನೊಬ್ಬರು ಹೇಗೆ ಎದುರಿಸಿದರು ಎಂದು ನನಗೆ ಹೇಳು.
ದಿಷ್ಟಮೇವ ಪರಂ ಮನ್ಯೇ ಪೌರುಷಾದಪಿ ಸಂಜಯ |
ಯತ್ರ ಶಾಂತನವೋ ಭೀಷ್ಮೋ ನಾತರದ್ ಯುಧಿ ಪಾಂಡವಮ್ ॥2॥
ಎಲೈ ಸಂಜಯನೇ, ಶಂತನು ಪುತ್ರರಾದ ಭೀಷ್ಮರು ಯುದ್ಧದಲ್ಲಿ ಅರ್ಜುನನನ್ನು ಸೋಲಿಸಲು ಸಾಧ್ಯವಾಗಲಿಲ್ಲವೆಂದ ಮೇಲೆ ನಾನು ಪುರುಷ ಪ್ರಯತ್ನಕ್ಕಿಂತಲೂ ವಿಧಿಯೇ ಬಲಿಷ್ಠವೆಂದು ತಿಳಿಯುತ್ತೇನೆ.
ಭೀಷ್ಮೋ ಹಿ ಸಮರೇ ಕ್ರುದ್ಧೋ ಹನ್ಯಾಲ್ಲೋಕಾಂಶ್ಚರಾಚರಾನ್ |
ಸ ಕಥಂ ಪಾಂಡವಂ ಯುದ್ಧೇ ನಾತರತ್ಸಂಜಯೌಜಸಾ ॥3॥
ಕ್ರುದ್ಧರಾದ ಭೀಷ್ಮರು ಯುದ್ಧದಲ್ಲಿ ಸ್ಥಾವರ-ಜಂಗಮ ಸಹಿತವಾದ ಲೋಕಗಳನ್ನೆಲ್ಲಾ ಕೊಂದಾರು! ಅಂತಹವರು ಯುದ್ಧದಲ್ಲಿ ತಮ್ಮ ಪರಾಕ್ರಮದಿಂದ ಪಾಂಡವನಾದ ಅರ್ಜುನನನ್ನು ಏಕೆ ಮೀರಲಿಲ್ಲ?
ಸಂಜಯಃ
ಶೃಣು ರಾಜನ್ ಸ್ಥಿರೋ ಭೂತ್ವಾ ಯುದ್ಧಮೇತತ್ ಸುದಾರುಣಮ್ |
ನ ಶಕ್ಯಃ ಪಾಂಡವೋ ಜೇತುಂ ದೇವೈರಪಿ ಸವಾಸವೈಃ ॥4॥
ಸಂಜಯ ರಾಜನೇ, ಸ್ಥಿರವಾಗಿ ಕುಳಿತು ಬಹಳ ದಾರುಣವಾದ ಈ ಯುದ್ಧವನ್ನು ಕೇಳು. ಇಂದ್ರನಿಂದ ಸಹಿತರಾದ ದೇವತೆಗಳೂ ಸಹ ಅರ್ಜುನನನ್ನು ಗೆಲ್ಲಲಾರರು.
ದ್ರೋಣಸ್ತು ನಿಶಿತೈರ್ಬಾಣೈರ್ಧೃಷ್ಟದ್ಯುಮ್ನಮಯೋಧಯತ್ |
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾತಯತ್ ॥5॥
ದ್ರೋಣರು ಹರಿತವಾದ ಬಾಣಗಳಿಂದ ಧೃಷ್ಟದ್ಯುಮ್ನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ರಥದ ಮುಂಭಾಗದಲ್ಲಿ ಕುಳಿತಿದ್ದ ಅವನ ಸಾರಥಿಯನ್ನು ಭಲ್ಲದಿಂದ ಕೆಳಗೆ ಕೆಡವಿದರು.
ತಸ್ಯಾಥ ಚತುರೋ ವಾಹಾಂಶ್ಚತುರ್ಭಿಃ ಸಾಯಕೋತ್ತಮೈಃ |
ಪೀಡಯಾಮಾಸ ಸಂಕ್ರುದ್ಧೋ ಧೃಷ್ಟದ್ಯುಮ್ನಸ್ಯ ಮಾರಿಷ ॥6॥
ಎಲೈ ಪೂಜ್ಯನೇ, ಬಹಳ ಕೋಪಗೊಂಡ ಅವರು ಧೃಷ್ಟದ್ಯುಮ್ನನ ನಾಲ್ಕು ಕುದುರೆಗಳನ್ನು ಗುರಿ ಮಾಡಿ ಶ್ರೇಷ್ಠವಾದ ನಾಲ್ಕು ಬಾಣಗಳನ್ನು ಪ್ರಯೋಗಿಸಿದರು.
ಧೃಷ್ಟದ್ಯುಮ್ನಸ್ತತೋ ದ್ರೋಣಂ ನವತ್ಯಾ ನಿಶಿತೈಃ ಶರೈಃ |
ವಿವ್ಯಾಧ ಪ್ರಹಸನ್ ವೀರಸ್ತಿಷ್ಠತಿಷ್ಠೇತಿ ಚಾಬ್ರವೀತ್ ॥7॥
ಆಗ ವೀರನಾದ ಧೃಷ್ಟದ್ಯುಮ್ನನು ತೊಂಬತ್ತು ಬಾಣಗಳನ್ನು ದ್ರೋಣರ ಮೇಲೆ ಪ್ರಯೋಗಿಸಿ ನಗುತ್ತಾ ನಿಲ್ಲು ನಿಲ್ಲು ಎಂದು ಹೇಳಿದನು.
ತತಃ ಪುನರಮೇಯಾತ್ಮಾ ಭಾರದ್ವಾಜಃ ಪ್ರತಾಪವಾನ್ |
ಶರೈಃ ಪ್ರಚ್ಛಾದಯಾಮಾಸ ಧೃಷ್ಟದ್ಯುಮ್ನಮಮರ್ಷಣಮ್ ॥8॥
ಆಗ ತಿಳಿಯಲು ಅಸಾಧ್ಯವಾದ ಮಹಿಮೆಯುಳ್ಳವರೂ, ಪ್ರತಾಪಶಾಲಿಗಳೂ ಆದ ದ್ರೋಣರು ಕೋಪಗೊಂಡು ಧೃಷ್ಟದ್ಯುಮ್ನನನ್ನು ಬಾಣಗಳಿಂದ ಮುಚ್ಚಿಹಾಕಿದರು.
ಆದದೇ ಚ ಶರಂ ಘೋರಂ ಪಾರ್ಷತಸ್ಯ ವಧಂ ಪ್ರತಿ |
ಶಕ್ರಾಶನಿಸಮಸ್ಪರ್ಶಂ ಮೃತ್ಯುದಂಡಮಿವಾಪರಮ್ ॥9॥
ಮತ್ತು ಇಂದ್ರನ ವಜ್ರಾಯುಧಕ್ಕೆ ಸಮನಾದ ಮೃತ್ಯುದಂಡದಂತಿದ್ದ ಇನ್ನೊಂದು ಘೋರವಾದ ಬಾಣವನ್ನು ಧೃಷ್ಟದ್ಯುಮ್ನನ ವಧೆಗಾಗಿ ಕೈಯಲ್ಲಿ ತೆಗೆದುಕೊಂಡರು.
ಹಾಹಾಕಾರೋ ಮಹಾನಾಸೀತ್ ಸರ್ವಸೈನ್ಯಸ್ಯ ಭಾರತ |
ತಮಿಷುಂ ಸಂಧಿತಂ ದೃಷ್ಟ್ವಾ ಭಾರದ್ವಾಜೇನ ಸಂಯುಗೇ ॥10॥
ಯುದ್ಧದಲ್ಲಿ ದ್ರೋಣರು ಆ ಬಾಣವನ್ನು ಬಿಲ್ಲಿಗೆ ಹೂಡಿದುದನ್ನು ನೋಡಿ ಎಲೈ ಭಾರತನೇ, ಎಲ್ಲ ಸೈನ್ಯದಲ್ಲಿಯೂ ದೊಡ್ಡ ಹಾಹಾಕಾರ ಉಂಟಾಯಿತು.
ತತ್ರಾದ್ಭುತಮಪಶ್ಯಾಮ ಧೃಷ್ಟದ್ಯುಮ್ನಸ್ಯ ಪೌರುಷಮ್ |
ಯದೇಕಃ ಸಮರೇ ವೀರಸ್ತಸ್ಥೌ ಗಿರಿರಿವಾಚಲಃ ॥11॥
ವೀರನಾದ ಧೃಷ್ಟದ್ಯುಮ್ನನು ಒಬ್ಬನೇ ಯುದ್ಧದಲ್ಲಿ ಪರ್ವತದಂತೆ ಅಲುಗಾಡದೆ ನಿಂತ ಅವನ ಅದ್ಭುತವಾದ ಪೌರುಷವನ್ನು ಅಲ್ಲಿ ನಾವು ನೋಡಿದೆವು.
ತಂ ಚ ದೀಪ್ತಂ ಶರಂ ಘೋರಮಾಯಾಂತಂ ಮೃತ್ಯುಮಾತ್ಮನಃ |
ಚಿಚ್ಛೇದ ಶರವೃಷ್ಟಿಂ ಚ ಭಾರದ್ವಾಜೇ ಮುಮೋಚ ಹ ॥12॥
ಮೃತ್ಯುವಿನಂತೆ ತನ್ನ ಕಡೆಗೆ ಬರುತ್ತಿದ್ದ ಆ ಘೋರವೂ, ದೀಪ್ತವೂ ಆದ ಬಾಣವನ್ನು ಕತ್ತರಿಸಿ ಅವನು ದ್ರೋಣರ ಮೇಲೆ ಬಾಣಗಳ ಮಳೆಯನ್ನು ಕರೆದನು.

ತತ ಉಚ್ಚುಕ್ರುಶುಃ ಸರ್ವೇ ಪಾಂಚಾಲಾಃ ಪಾಂಡವೈಃ ಸಹ |
ಧೃಷ್ಟದ್ಯುಮ್ನೇನ ತತ್ಕರ್ಮ ಕೃತಂ ದೃಷ್ಟ್ವಾ ಸುದುಷ್ಕರಮ್ ॥13॥
ಧೃಷ್ಟದ್ಯುಮ್ನನು ಅಂತಹ ದುಷ್ಕರವಾದ ಕಾರ್ಯವನ್ನು ಮಾಡಿದುದನ್ನು ನೋಡಿ ಪಾಂಡವರ ಜೊತೆಯಲ್ಲಿ ಸೇರಿದ ಎಲ್ಲಾ ಪಾಂಚಾಲರೂ ಹರ್ಷೋದ್ಗಾರವನ್ನು ಮಾಡಿದರು.
ತತಃ ಶಕ್ತಿಂ ಮಹಾವೇಗಾಂ ಸ್ವರ್ಣವೈಡೂರ್ಯಭೂಷಿತಾಮ್ |
ದ್ರೋಣಸ್ಯ ನಿಧನಾಕಾಂಕ್ಷೀ ಚಿಕ್ಷೇಪ ಸ ಪರಾಕ್ರಮೀ ॥14॥
ಅನಂತರ ಪರಾಕ್ರಮಶಾಲಿಯಾದ ಅವನು ದ್ರೋಣರ ವಧೆಯನ್ನು ಉದ್ದೇಶಿಸಿ ಸ್ವರ್ಣ-ವೈಡೂರ್ಯಗಳಿಂದ ಅಲಂಕೃತವಾದ ಮಹಾವೇಗವುಳ್ಳ ಶಕ್ತ್ಯಾಯುಧನ್ನು ತೆಗೆದುಕೊಂಡನು.
ತಾಮಾಪತಂತೀಂ ಸಹಸಾ ಶಕ್ತಿಂ ಕನಕಭೂಷಣಾಮ್ |
ತ್ರಿಧಾ ಚಿಕ್ಷೇಪ ಸಮರೇ ಭಾರದ್ವಾಜೋ ಹಸನ್ನಿವ ॥15॥
ಸುವರ್ಣಭೂಷಿತವಾದ ತಮ್ಮ ಕಡೆಗೆ ಬರುತ್ತಿದ್ದ ಆ ಶಕ್ತ್ಯಾಯುಧವನ್ನು ದ್ರೋಣರು ನಗುವವರಂತೆ ಮೂರುಭಾಗಗಳಾಗಿ ಕತ್ತರಿಸಿದರು.
ಶಕ್ತಿಂ ವಿನಿಹತಾಂ ದೃಷ್ಟ್ವಾ ಧೃಷ್ಟದ್ಯುಮ್ನಃ ಪ್ರತಾಪವಾನ್ |
ವವರ್ಷ ಶರವರ್ಷಾಣಿ ದ್ರೋಣಂ ಪ್ರತಿ ಜನೇಶ್ವರ ॥16॥
ಎಲೈ ರಾಜನೇ, ಶಕ್ತಿಯು ಹತವಾದುದನ್ನು ನೋಡಿ ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನು ದ್ರೋಣರ ಮೇಲೆ ಬಾಣಗಳ ಮಳೆಯನ್ನು ಕರೆದನು.
ಶರವರ್ಷಂ ತತಸ್ತಂ ತು ಸನ್ನಿವಾರ್ಯ ಮಹಾಯಶಾಃ |
ದ್ರೋಣೋ ದ್ರುಪದಪುತ್ರಸ್ಯ ಮಧ್ಯೇ ಚಿಚ್ಛೇದ ಕಾರ್ಮುಕಮ್ ॥17॥
ಮಹಾಕೀರ್ತಿವಂತರಾದ ದ್ರೋಣರು ಆಗ ಆ ಬಾಣಗಳ ಮಳೆಯನ್ನು ತಡೆದು ದ್ರುಪದ ಪುತ್ರನಾದ ಧೃಷ್ಟದ್ಯುಮ್ನನ ಧನುಸ್ಸನ್ನು ಮಧ್ಯದಲ್ಲಿ ಕತ್ತರಿಸಿದರು.
ಸ ಛಿನ್ನಧನ್ವಾ ಸಮರೇ ಗದಾಂ ಗುರ್ವೀಂ ಮಹಾಯಶಾಃ |
ದ್ರೋಣಾಯ ಪ್ರೇಷಯಾಮಾಸ ಗಿರಿಸಾರಮಯೀಂ ಬಲೀ ॥18॥
ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಮಹಾಕೀರ್ತಿವಂತನಾದ, ಬಲಿಷ್ಠನಾದ ಧೃಷ್ಟದ್ಯುಮ್ನನು ಪರ್ವತದ ಸಾರದಂತಿದ್ದ ದೊಡ್ಡ ಗದೆಯನ್ನು ತೆಗೆದುಕೊಂಡು ದ್ರೋಣರ ಮೇಲೆ ಎಸೆದನು.
ಸಾ ಗದಾ ವೇಗವನ್ಮುಕ್ತಾ ಪ್ರಾಯಾದ್ ದ್ರೋಣಜಿಘಾಂಸಯಾ |
ತತ್ರಾದ್ಭುತಮಪಶ್ಯಾಮ ಭಾರದ್ವಾಜಸ್ಯ ವಿಕ್ರಮಮ್ ॥19॥
ದ್ರೋಣರನ್ನು ಕೊಲ್ಲುವ ಉದ್ದೇಶದಿಂದ ವೇಗವಾಗಿ ಪ್ರಯೋಗಿಸಲ್ಪಟ್ಟ ಆ ಗದೆಯು ದ್ರೋಣರ ಬಳಿಗೆ ಸಾಗಿತು. ಆಗ ದ್ರೋಣರ ಅದ್ಭುತವಾದ ಪರಾಕ್ರಮವನ್ನು ನೋಡಿದೆವು.
ಲಾಘವಾದ್ ವ್ಯಂಸಯಾಮಾಸ ಗದಾಂ ಹೇಮವಿಭೂಷಿತಾಮ್ |
ವ್ಯಂಸಯಿತ್ವಾ ಗದಾಂ ತಾಂ ಚ ಪ್ರೇಷಯಾಮಾಸ ಪಾರ್ಷತೇ ॥20॥
ಭಲ್ಲಾನ್ ಸುನಿಶಿತಾನ್ ಪೀತಾನ್ ಸ್ವರ್ಣಪುಂಖಾನ್ ಶಿಲಾಶಿತಾನ್ |
ತೇ ತಸ್ಯ ಕವಚಂ ಭಿತ್ತ್ವಾ ಪಪುಃ ಶೋಣಿತಮಾಹವೇ ॥21॥
ದ್ರೋಣರು ತಮ್ಮ ಚುರುಕುತನದಿಂದ ಸುವರ್ಣಭೂಷಿತವಾದ ಆ ಗದೆಯನ್ನು ತಪ್ಪಿಸಿದರು. ಆ ಗದೆಯಿಂದ ತಪ್ಪಿಸಿಕೊಂಡು ಧೃಷ್ಟದ್ಯುಮ್ನನ ಮೇಲೆ ಬಹಳ ಹರಿತವಾದ, ಹಳದಿ ಬಣ್ಣದಿಂದ ಕೂಡಿದ, ಸ್ವರ್ಣಪುಂಖವಿರುವ, ಕಲ್ಲಿನಲ್ಲಿ ಸಾಣೆ ಹಿಡಿದ ಭಲ್ಲಗಳನ್ನು ಪ್ರಯೋಗಿಸಿದರು. ಆ ಭಲ್ಲಗಳು ಯುದ್ಧದಲ್ಲಿ ಧೃಷ್ಟದ್ಯುಮ್ನನ ಕವಚವನ್ನು ಭೇದಿಸಿ ಅವನ ರಕ್ತವನ್ನು ಕುಡಿದವು.
ಅಥಾನ್ಯದ್ಧನುರಾದಾಯ ಧೃಷ್ಟದ್ಯುಮ್ನೋ ಮಹಾಮನಾಃ |
ದ್ರೋಣಂ ಯುಧಿ ಪರಾಕ್ರಮ್ಯ ಶರೈರ್ವಿವ್ಯಾಧ ಪಂಚಭಿಃ ॥22॥
ಆಗ ಧೈರ್ಯಶಾಲಿಯಾದ ಧೃಷ್ಟದ್ಯುಮ್ನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತನ್ನ ಪರಾಕ್ರಮದಿಂದ ದ್ರೋಣರ ಮೇಲೆ ಐದು ಬಾಣಗಳನ್ನು ಪ್ರಯೋಗಿಸಿದನು.
ರುಧಿರಾಕ್ತೌ ತತಸ್ತೌ ತು ಶುಶುಭಾತೇ ನರರ್ಷಭೌ |
ವಸಂತಸಮಯೇ ರಾಜನ್ ಪುಷ್ಪಿತಾವಿವ ಕಿಂಶುಕೌ ॥23॥
ಎಲೈ ರಾಜನೇ, ಆಗ ರಕ್ತದಿಂದ ಕೊಯ್ದ ಆ ಇಬ್ಬರು ನರಶ್ರೇಷ್ಠರೂ ವಸಂತ ಕಾಲದಲ್ಲಿ ಹೂವರಳಿದ ಮುತ್ತುಗದ ಮರದಂತೆ ಶೋಭಿಸಿದರು.
ಅಮರ್ಷಿತಸ್ತತೋ ರಾಜನ್ ಪರಾಕ್ರಮ್ಯ ಚಮೂಮುಖೇ |
ದ್ರೋಣೋ ದ್ರುಪದಪುತ್ರಸ್ಯ ಪುನಶ್ಚಿಚ್ಛೇದ ಕಾರ್ಮುಕಮ್ ॥24॥
ಎಲೈ ರಾಜನೇ, ಯುದ್ಧಮುಖದಲ್ಲಿ ಕೋಪಗೊಂಡ ದ್ರೋಣರು ಪುನಃ ದ್ರುಪದ ಪುತ್ರನಾದ ಧೃಷ್ಟದ್ಯುಮ್ನನ ಬಿಲ್ಲನ್ನು ಕತ್ತರಿಸಿದರು.
ಅಥೈನಂ ಛಿನ್ನಧನ್ವಾನಂ ಶರೈಃ ಸನ್ನತಪರ್ವಭಿಃ |
ಅವಾಕಿರದಮೇಯಾತ್ಮಾ ವೃಷ್ಟ್ಯಾ ಮೇಘ ಇವಾಚಲಮ್ ॥25॥
ಮಹಾಮಹಿಮರಾದ ದ್ರೋಣರು ಕತ್ತರಿಸಿದ ಧನುಸ್ಸುಳ್ಳ ಧೃಷ್ಟದ್ಯುಮ್ನನ ಮೇಲೆ ಮೋಡವು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಬಾಗಿದ ತುದಿಗಳುಳ್ಳ ಬಾಣದಿಂದ ಅವನನ್ನು ಬಾಣಗಳ ವರ್ಷಕ್ಕೆ ಗುರಿಮಾಡಿದರು.

ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾತಯತ್ |
ಅಥಾಸ್ಯ ಚತುರೋ ವಾಹಾಂಶ್ಚತುರ್ಭಿರ್ನಿಶಿತೈಃ ಶರೈಃ ॥26॥
ಪಾತಯಾಮಾಸ ಸಮರೇ ಸಿಂಹನಾದಂ ನನಾದ ಚ |
ತತೋಽಪರೇಣ ಭಲ್ಲೇನ ಹಸ್ತಾಚ್ಚಾಪಮಥಾಚ್ಛಿನತ್ ॥27॥
ಅವನ ಸಾರಥಿಯನ್ನು ಭಲ್ಲದಿಂದ ರಥದ ಮುಂಭಾಗದಿಂದ ಕೆಡವಿದರು. ಅನಂತರ ಅವನ ನಾಲ್ಕು ಕುದುರೆಗಳನ್ನು ನಾಲ್ಕು ಹರಿತವಾದ ಬಾಣಗಳಿಂದ ಕೆಡವಿ ಯುದ್ಧದಲ್ಲಿ ಸಿಂಹನಾದವನ್ನು ಮಾಡಿದರು. ಅನಂತರ ಇನ್ನೊಂದು ಭಲ್ಲವನ್ನು ತೆಗೆದುಕೊಂಡು ಅವನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದರು.
ಸ ಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಗದಾಪಾಣಿರವಾರೋಹತ್ ಖ್ಯಾಪಯನ್ ಪೌರುಷಂ ಮಹತ್ ॥28॥
ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ರಥವನ್ನೂ, ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಕಳೆದುಕೊಂಡ ಅವನು ತನ್ನ ದೊಡ್ಡ ಪೌರುಷವನ್ನು ತೋರಿಸುತ್ತಾ ಗದೆಯನ್ನು ಹಿಡಿದುಕೊಂಡು ರಥದಿಂದ ಇಳಿದನು.
ತಾಮಸ್ಯ ವಿಶಿಖೈಸ್ತೂರ್ಣಂ ಪಾತಯಾಮಾಸ ಭಾರತ |
ರಥಾದನವರೂಢಸ್ಯ ತದದ್ಭುತಮಿವಾಭವತ್ ॥29॥
ಎಲೈ ಭಾರತನೇ, ಅವನು ರಥದಿಂದ ಇಳಿಯುತ್ತಿರುವಂತೆಯೇ ಅವನ ಕೈಯಲ್ಲಿದ್ದ ಗದೆಯನ್ನು ದ್ರೋಣರು ತಮ್ಮ ಬಾಣಗಳಿಂದ ಶೀಘ್ರವಾಗಿ ಕೆಡವಿದರು. ಆ ದೃಶ್ಯವು ಅದ್ಭುತವಾಗಿದ್ದಿತು.
ತತಃ ಸ ವಿಪುಲಂ ಚರ್ಮ ಶತಚಂದ್ರಂ ಚ ಭಾನುಮತ್ |
ಖಡ್ಗಂ ಚ ವಿಪುಲಂ ದಿವ್ಯಂ ಪ್ರಗೃಹ್ಯ ಸುಭುಜೋ ಬಲೀ ॥30॥
ಅಭಿದುದ್ರಾವ ವೇಗೇನ ದ್ರೋಣಸ್ಯ ವಧಕಾಂಕ್ಷಯಾ |
ಆಮಿಷಾರ್ಥೀ ಯಥಾ ಸಿಂಹೋ ವನೇ ಮತ್ತಮಿವ ದ್ವಿಪಮ್ ॥31॥
ಅನಂತರ ಒಳ್ಳೆಯ ಭುಜವುಳ್ಳವನೂ ಮತ್ತು ಬಲಿಷ್ಠನೂ ಆದ ಧೃಷ್ಟದ್ಯುಮ್ನನು ಶತಚಂದ್ರ ಚಿಹ್ನೆಗಳಿಂದ ಕೂಡಿದ ಪ್ರಕಾಶಮಾನವಾದ, ವಿಸ್ತಾರವಾದ ಗುರಾಣಿಯನ್ನು ಮತ್ತು ದಿವ್ಯವಾದ ಅಗಲವಾದ ಖಡ್ಗವನ್ನು ತೆಗೆದುಕೊಂಡು ದ್ರೋಣರ ವಧೆಯನ್ನು ಆಶಿಸಿ ಕಾಡಿನಲ್ಲಿ ಮಾಂಸವನ್ನು ಬಯಸುವ ಸಿಂಹವು ಮದಗಜದ ಕಡೆಗೆ ಹೋಗುವಂತೆ ವೇಗವಾಗಿ ಅವರ ಕಡೆಗೆ ಧಾವಿಸಿದನು.
ತತ್ರಾದ್ಭುತಮಪಶ್ಯಾಮ ಭಾರದ್ವಾಜಸ್ಯ ಪೌರುಷಮ್ |
ಲಾಘವಂ ಚಾಸ್ತ್ರಯೋಗಂ ಚ ಬಲಂ ಬಾಹ್ವೋಶ್ಚ ಭಾರತ ॥32॥
ಯದೇನಂ ಶರವರ್ಷೇಣ ವಾರಯಾಮಾಸ ಪಾರ್ಷತಮ್ |
ನ ಶಶಾಕ ತತೋ ಗಂತುಂ ಬಲವಾನಪಿ ಸಂಯುಗೇ ॥33॥
ಎಲೈ ಭಾರತನೇ, ಆಗ ದ್ರೋಣರು ತಮ್ಮ ಬಾಣಗಳ ಮಳೆಯಿಂದ ಧೃಷ್ಟದ್ಯುಮ್ನನನ್ನು ತಡೆದ ದ್ರೋಣರ ಅದ್ಭುತವಾದ ಪೌರುಷವನ್ನೂ, ಚುರುಕುತನವನ್ನೂ, ಅಸ್ತ್ರಕೌಶಲವನ್ನೂ ಮತ್ತು ಬಾಹುಬಲವನ್ನೂ ನೋಡಿದೆವು.
ತತ್ರ ಸ್ಥಿತಮಪಶ್ಯಾಮ ಧೃಷ್ಟದ್ಯುಮ್ನಂ ಮಹಾರಥಮ್ |
ವಾರಯಾಣಂ ಶರೌಘಾಂಶ್ಚ ಚರ್ಮಣಾ ಕೃತಹಸ್ತವತ್ ॥34॥
ಮಹಾರಥನಾದ ಧೃಷ್ಟದ್ಯುಮ್ನನಾದರೂ ಅಲ್ಲಿಯೇ ನಿಂತು ಪಳಗಿದ ಹಸ್ತವುಳ್ಳವನಂತೆ ತನ್ನ ಗುರಾಣಿಯಿಂದ ದ್ರೋಣರ ಬಾಣಗಳ ಸಮೂಹವನ್ನು ನಿವಾರಿಸುವುದನ್ನು ನೋಡಿದೆವು. ಧೃಷ್ಟದ್ಯುಮ್ನನು ಬಲಿಷ್ಠನಾದರೂ ಯುದ್ಧದಲ್ಲಿ ಮುಂದೆ ಬರಲು ಸಾಧ್ಯವಾಗಲಿಲ್ಲ.
ತತೋ ಭೀಮೋ ಮಹಾಬಾಹುಃ ಸಹಸಾಭ್ಯಪತದ್ ಬಲೀ |
ಸಾಹಾಯ್ಯಕಾರೀ ಸಮರೇ ಪಾರ್ಷತಸ್ಯ ಮಹಾತ್ಮನಃ ॥35॥
ಆಗ ಮಹಾಬಾಹುವೂ, ಬಲಿಷ್ಠನೂ ಆದ ಭೀಮಸೇನನು ಯುದ್ಧದಲ್ಲಿ ಮಹಾತ್ಮನಾದ ಧೃಷ್ಟದ್ಯುಮ್ನನಿಗೆ ಸಹಾಯವನ್ನು ಮಾಡಲು ತಕ್ಷಣ ಅಲ್ಲಿಗೆ ಧಾವಿಸಿ ಬಂದನು.
ಸ ದ್ರೋಣಂ ನಿಶಿತೈರ್ಬಾಣೈ ರಾಜನ್ ವಿವ್ಯಾಧ ಸಪ್ತಭಿಃ |
ಪಾರ್ಷತಂ ಚ ತದಾ ತೂರ್ಣಮನ್ಯಮಾರೋಪಯದ್ ರಥಮ್ ॥36॥
ಎಲೈ ರಾಜನೇ, ಅವನು ದ್ರೋಣರ ಮೇಲೆ ಏಳು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಶೀಘ್ರವಾಗಿ ಧೃಷ್ಟದ್ಯುಮ್ನನನ್ನು ಆಗ ಇನ್ನೊಂದು ರಥಕ್ಕೆ ಹತ್ತಿಸಿದನು.
ತತೋ ದುರ್ಯೋಧನೋ ರಾಜಾ ಕಳಿಂಗಂ ಸಮಚೋದಯತ್ |
ಸೈನ್ಯೇನ ಮಹತಾ ಯುಕ್ತಂ ಭಾರದ್ವಾಜಸ್ಯ ರಕ್ಷಣೇ ॥37॥
ಆಗ ರಾಜನಾದ ದುರ್ಯೋಧನನು ತನ್ನ ದೊಡ್ಡ ಸೈನ್ಯದಿಂದ ಕೂಡಿದ ಕಳಿಂಗ ರಾಜನನ್ನು ದ್ರೋಣರ ರಕ್ಷಣೆಗಾಗಿ ಆದೇಶಿಸಿದನು.
ತತಃ ಸಾ ಮಹತೀ ಸೇನಾ ಕಳಿಂಗಾನಾಂ ಜನೇಶ್ವರ |
ಭೀಮಮಭ್ಯುದ್ಯಯೌ ತೂರ್ಣಂ ತವ ಪುತ್ರಸ್ಯ ಶಾಸನಾತ್ ॥38॥
ಎಲೈ ರಾಜನೇ, ಆಗ ನಿನ್ನ ಪುತ್ರನ ಆಜ್ಞೆಯಂತೆ ಕಳಿಂಗರ ದೊಡ್ಡ ಸೈನ್ಯವು ಶೀಘ್ರವಾಗಿ ಭೀಮನ ಕಡೆಗೆ ಧಾವಿಸಿತು.
ಪಾಂಚಾಲ್ಯಮಭಿಸಂತ್ಯಜ್ಯ ದ್ರೋಣೋಽಪಿ ರಥಿನಾಂ ವರಃ |
ವಿರಾಟದ್ರುಪದೌ ವೃದ್ಧೌ ಯೋಧಯಾಮಾಸ ಸಂಗತೌ |

ಧೃಷ್ಟದ್ಯುಮ್ನೋಽಪಿ ಸಮರೇ ಧರ್ಮರಾಜಂ ಸಮಭ್ಯಯಾತ್ ॥39॥
ರಥಿಶ್ರೇಷ್ಠರಾದ ದ್ರೋಣರೂ ಸಹ ಧೃಷ್ಟದ್ಯುಮ್ನನನ್ನು ಬಿಟ್ಟು ಜೊತೆಯಲ್ಲಿ ಯುದ್ಧ ಮಾಡುತ್ತಿದ್ದ ವೃದ್ಧರಾದ ವಿರಾಟ-ದ್ರುಪದರ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಧೃಷ್ಟದ್ಯುಮ್ನನೂ ಸಹ ಯುದ್ಧದಲ್ಲಿ ಯುಧಿಷ್ಠಿರನು ಇದ್ದ ಕಡೆಗೆ ಹೋದನು.
ತತಃ ಪ್ರವವೃತೇ ಯುದ್ಧಂ ತುಮುಲಂ ಲೋಮಹರ್ಷಣಮ್ |
ಕಳಿಂಗಾನಾಂ ಚ ಸಮರೇ ಭೀಮಸ್ಯ ಚ ಮಹಾತ್ಮನಃ |
ಜಗತಃ ಪ್ರಕ್ಷಯಕರಂ ಘೋರರೂಪಂ ಭಯಾನಕಮ್ ॥40॥
ಅನಂತರ ಕಳಿಂಗರ ಸೈನ್ಯಕ್ಕೂ ಮಹಾತ್ಮನಾದ ಭೀಮಸೇನನಿಗೂ ಜಗತ್ತಿಗೆ ನಾಶಕರವೂ, ಘೋರವೂ, ಭಯಂಕರವೂ, ತೀವ್ರವೂ ಮತ್ತು ರೋಮಾಂಚಕಾರಿಯೂ ಆದ ಯುದ್ಧವು ಜರುಗಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತನೆಯ ಅಧ್ಯಾಯ
ಕಳಿಂಗರ ಜೊತೆಯಲ್ಲಿ ಯುದ್ಧವನ್ನು ಮಾಡುವ
ಭೀಮಸೇನನ ಖಡ್ಗಯುದ್ಧಕೌಶಲ.
ಧೃತರಾಷ್ಟ್ರಃ
ತಥಾ ಪ್ರತಿಸಮಾದಿಷ್ಟಃ ಕಳಿಂಗೋ ವಾಹಿನೀಪತಿಃ |
ಕಥಮದ್ಭುತಕರ್ಮಾಣಂ ಭೀಮಸೇನಂ ಮಹಾಬಲಮ್ ॥1॥
ಚರಂತಂ ಗದಯಾ ವೀರಂ ದಂಡಪಾಣಿಮಿವಾಂತಕಮ್ |
ಯೋಧಯಾಮಾಸ ಸಮರೇ ಕಳಿಂಗಃ ಸಹ ಸೇನಯಾ ॥2॥
ಧೃತರಾಷ್ಟ್ರ ಹೀಗೆ ದುರ್ಯೋಧನನಿಂದ ಆಜ್ಞಾಪಿಸಲ್ಪಟ್ಟ ಸೇನಾಪತಿಯಾದ ಕಳಿಂಗನು ಅದ್ಭುತ ಕಾರ್ಯವನ್ನು ಮಾಡುವವನೂ, ಮಹಾಬಲನೂ, ವೀರನೂ, ದಂಡಹಸ್ತನಾದ ಯಮನಂತೆ ಇರುವವನೂ, ಗದೆಯನ್ನು ಹಿಡಿದು ತಿರುಗುವವನೂ ಆದ ಭೀಮಸೇನನ ಜೊತೆಯಲ್ಲಿ ತನ್ನ ಸೈನ್ಯದಿಂದೊಡಗೂಡಿ ಹೇಗೆ ಯುದ್ಧವನ್ನು ಮಾಡಿದನು?
ಸಂಜಯಃ
ಪುತ್ರೇಣ ತವ ರಾಜೇಂದ್ರ ಸ ತಥೋಕ್ತೋ ಮಹಾಬಲಃ |
ಮಹತ್ಯಾ ಸೇನಯಾ ಗುಪ್ತಃ ಪ್ರಾಯಾದ್ ಭೀಮರಥಂ ಪ್ರತಿ ॥3॥
ಸಂಜಯ ಎಲೈ ರಾಜೇಂದ್ರನೇ, ನಿನ್ನ ಪುತ್ರನಿಂದ ಹಾಗೆ ಹೇಳಲ್ಪಟ್ಟ ಮಹಾಬಲನಾದ ಕಳಿಂಗ ರಾಜನು ದೊಡ್ಡ ಸೈನ್ಯದಿಂದ ರಕ್ಷಿತನಾಗಿ ಭೀಮಸೇನನ ರಥದ ಕಡೆಗೆ ಹೊರಟನು.
ತಾಮಾಪತಂತೀಂ ಸಹಸಾ ಕಳಿಂಗಾನಾಂ ಮಹಾಚಮೂಮ್ |
ರಥನಾಗಾಶ್ವಕಲಿಲಾಂ ಪ್ರಗೃಹೀತಮಹಾಯುಧಾಮ್ ॥4॥
ಭೀಮಸೇನಃ ಕಳಿಂಗಾನಾಮಾರ್ಚ್ಛದ್ ಭಾರತ ವಾಹಿನೀಮ್ |
ಕೇತುಮಂತಂ ಚ ನೈಷಾದಿಮಾಯಾಂತಂ ಸಹ ಚೇದಿಭಿಃ ॥5॥
ರಥ-ಗಜ-ಅಶ್ವಗಳಿಂದ ನಿಬಿಡವಾದ, ಮಹಾಯುಧಗಳನ್ನು ಧರಿಸಿದ ಕಳಿಂಗರ ದೊಡ್ಡ ಸೈನ್ಯವು ತಕ್ಷಣ ಬರುತ್ತಿರುವುದನ್ನು ನೋಡಿ, ಹಾಗೆಯೇ ನಿಷಾದಾಧಿಪತಿಯಾದ ಕೇತುಮಂತನೂ ಚೇದಿಗಳ ಸೈನ್ಯದ ಜೊತೆಯಲ್ಲಿ ಬರುತ್ತಿರುವುದನ್ನು ನೋಡಿ ಎಲೈ ಭಾರತನೇ, ಭೀಮಸೇನನು ಕಳಿಂಗರ ಸೈನ್ಯದ ಮೇಲೆ ಎರಗಿದನು.
ತತಃ ಶ್ರುತಾಯುಃ ಸಂಕ್ರುದ್ಧೋ ರಾಜ್ಞಾ ಕೇತುಮತಾ ಸಹ |
ಆಸಸಾದ ರಣೇ ಭೀಮಂ ವ್ಯೂಢಾನೀಕೇಷು ಚೇದಿಷು ॥6॥
ಆಗ ಚೇದಿಗಳ ಸೈನ್ಯವು ವ್ಯೂಹಗೊಂಡಿರಲು ಕೋಪಗೊಂಡ ಶ್ರುತಾಯು ರಾಜನು ಕೇತುಮಾನ್ ರಾಜನ ಜೊತೆಯಲ್ಲಿ ಯುದ್ಧದಲ್ಲಿ ಭೀಮನನ್ನು ಸಮೀಪಿಸಿದನು.
ರಥೈರನೇಕಸಾಹಸ್ರೈಃ ಕಳಿಂಗಾನಾಂ ಜನಾಧಿಪಃ |
ಅಯುತೇನ ಗಜಾನಾಂ ಚ ನಿಷಾದೈಃ ಸಹ ಕೇತುಮಾನ್ |
ಭೀಮಸೇನಂ ರಣೇ ರಾಜನ್ ಸಮಂತಾತ್ ಪರ್ಯವಾರಯತ್ ॥7॥
ಎಲೈ ರಾಜನೇ, ಕಳಿಂಗ ದೇಶಾಧಿಪತಿಯಾದ ಶ್ರುತಾಯುವು ಅನೇಕ ಸಹಸ್ರ ರಥಗಳಿಂದಲೂ, ನಿಷಾದಾಧಿಪತಿಯಾದ ಕೇತುಮಂತನು ಹತ್ತುಸಹಸ್ರ ಗಜಗಳಿಂದಲೂ ರಣರಂಗದಲ್ಲಿ ಭೀಮಸೇನನನ್ನು ಎಲ್ಲ ಕಡೆಯಿಂದಲೂ ಸುತ್ತುವರಿದರು.
ಚೇದಿಮತ್ಸ್ಯಕರೂಷಾಶ್ಚ ಭೀಮಸೇನಪುರೋಗಮಾಃ |
ಅಭ್ಯವರ್ತಂತ ಸಹಸಾ ನಿಷಾದಾನ್ ಸಹ ರಾಜಭಿಃ ॥8॥
ಚೇದಿ, ಮತ್ಸ್ಯ, ಕರೂಷ ಸೈನ್ಯಗಳು ಭೀಮಸೇನನನ್ನು ಮುಂದೆ ಮಾಡಿಕೊಂಡು ರಾಜರಿಂದ ಕೂಡಿದ ನಿಷಾದರ ಸೈನ್ಯದ ಕಡೆಗೆ ತಕ್ಷಣ ಧಾವಿಸಿದವು.
ತತಃ ಪ್ರವವೃತೇ ಯುದ್ಧಂ ಘೋರರೂಪಂ ಭಯಾನಕಮ್ |
ಪ್ರಜಾನನ್ನ ಚ ಯೋಧಾನ್ ಸ್ವಾನ್ ಪರಸ್ಪರಜಿಘಾಂಸಯಾ ॥9॥

ಅನಂತರ ಭಯಂಕರವೂ ಮತ್ತು ಘೋರವೂ ಆದ ಯುದ್ಧವು ಪ್ರಾರಂಭವಾಯಿತು. ಪರಸ್ಪರ ಕೊಲ್ಲುವ ಆಸೆಯನ್ನು ಹೊಂದಿದ್ದ ಸೈನಿಕರು ತಮ್ಮ ಯೋಧರನ್ನೂ ತಿಳಿಯಲಿಲ್ಲ.
ಘೋರಮಾಸೀತ್ ತತೋ ಯುದ್ಧಂ ಭೀಮಸ್ಯ ಸಹಸಾ ಪರೈಃ |
ಯಥೇಂದ್ರಸ್ಯ ಮಹಾರಾಜ ಮಹತ್ಯಾ ದೈತ್ಯಸೇನಯಾ ॥10॥
ಎಲೈ ಮಹಾರಾಜನೇ, ದೊಡ್ಡ ದೈತ್ಯಸೈನ್ಯದ ಜೊತೆಯಲ್ಲಿ ಇಂದ್ರನಿಗೆ ಯುದ್ಧವಾದಂತೆ ಭೀಮಸೇನನಿಗೆ ಶತ್ರುಗಳ ಜೊತೆಯಲ್ಲಿ ತಕ್ಷಣದಲ್ಲಿಯೇ ಘೋರವಾದ ಯುದ್ಧವು ಉಂಟಾಯಿತು.
ತಸ್ಯ ಸೈನ್ಯಸ್ಯ ಸಂಗ್ರಾಮೇ ಯುಧ್ಯಮಾನಸ್ಯ ಭಾರತ |
ಬಭೂವ ಸುಮಹಾನ್ ಶಬ್ದಃ ಸಾಗರಸ್ಯೇವ ಗರ್ಜತಃ ॥11॥
ಎಲೈ ಭಾರತನೇ, ಆ ಸೈನ್ಯದ ಜೊತೆಯಲ್ಲಿ ಯುದ್ಧ ಮಾಡುತ್ತಿದ್ದ ಭೀಮನ ಬಹಳ ದೊಡ್ಡದಾದ ನಾದವು ಸಾಗರದ ಗರ್ಜನೆಯಂತಿದ್ದಿತು.
ಅನ್ಯೋನ್ಯಸ್ಯ ತದಾ ಯೋಧಾ ನಿಕೃಂತಂತೋ ವಿಶಾಂಪತೇ |
ಮಹೀಂ ಚಕ್ರುಶ್ಚಿತಾಂ ಸರ್ವಾಂ ಶಶಶೋಣಿತಸನ್ನಿಭಾಮ್ ॥12॥
ಎಲೈ ರಾಜನೇ, ಯೋಧರು ಪರಸ್ಪರವಾಗಿ ಕತ್ತರಿಸುತ್ತಾ ಭೂಮಿಯ ಮೇಲೆ ಮೊಲದ ರಕ್ತದಂತೆ ಕೆಂಪಾದ ಶರೀರಗಳನ್ನು ರಾಶಿ ಮಾಡಿದರು.
ಯೋಧಾಂಶ್ಚ ಸ್ವಾನ್ ಪರಾನ್ ವಾಪಿ ನಾಭ್ಯಜಾನನ್ ಜಿಘಾಂಸಯಾ |
ಸ್ವಾನಪ್ಯಾದದತೇ ಸ್ವಾಶ್ಚ ಶೂರಾಃ ಸಮರದುರ್ಜಯಾಃ ॥13॥
ಯೋಧರು ಪರಸ್ಪರವಾಗಿ ಕೊಲ್ಲುವ ಇಚ್ಛೆಯುಳ್ಳವರಾಗಿ ತಮ್ಮವರನ್ನೂ ಅಥವಾ ಶತ್ರುಗಳನ್ನೂ ಗುರುತಿಸಲಿಲ್ಲ.
ಸಮರದುರ್ಜಯರಾದ ಶೂರರು ತಮ್ಮ ಸೈನ್ಯದ ಯೋಧರನ್ನೇ ಎದುರಿಸಿ ಯುದ್ಧವನ್ನು ಮಾಡಿದರು.
ವಿಮರ್ದಃ ಸುಮಹಾನಾಸೀದಲ್ಪಾನಾಂ ಬಹುಭಿಃ ಸಹ |
ಕಳಿಂಗೈಃ ಸಹ ಚೇದೀನಾಂ ನಿಷಾದೈಶ್ಚ ವಿಶಾಂಪತೇ ॥14॥
ಎಲೈ ರಾಜನೇ, ಬಹುಸೈನ್ಯವುಳ್ಳ ಕಳಿಂಗರು ಮತ್ತು ನಿಷಾದರ ಜೊತೆಯಲ್ಲಿ ಅಲ್ಪಸೈನ್ಯವುಳ್ಳ ಭೀಮನ ಚೇದಿ ಯೋಧರಿಗೆ ಬಹಳ ದೊಡ್ಡ ಸಂಘರ್ಷವು ಉಂಟಾಯಿತು.
ಕೃತ್ವಾ ಪುರುಷಕಾರಂ ತು ಯಥಾಶಕ್ತಿ ಮಹಾಬಲಾಃ |
ಭೀಮಸೇನಂ ಪರಿತ್ಯಜ್ಯ ಸನ್ನ್ಯವರ್ತಂತ ಚೇದಯಃ ॥15॥
ಮಹಾಬಲರಾದ ಚೇದಿಗಳು ತಮ್ಮ ಶಕ್ತಿಯಿದ್ದಷ್ಟು ಪ್ರಯತ್ನವನ್ನು ಮಾಡಿ ಅನಂತರ ಭೀಮಸೇನನನ್ನು ಬಿಟ್ಟು ಹಿಂದಿರುಗಿದರು.
ಸರ್ವೈಃ ಕಳಿಂಗೈರಾಸನ್ನಃ ಸನ್ನಿವೃತ್ತೇಷು ಚೇದಿಷು |
ಸ್ವಬಾಹುಬಲಮಾಸ್ಥಾಯ ನ ನ್ಯವರ್ತತ ಪಾಂಡವಃ ॥16॥
ಚೇದಿಗಳು ಹಿಂದಿರುಗಿದ ಮೇಲೆ ಎಲ್ಲ ಕಳಿಂಗ ಸೈನ್ಯದಿಂದ ಆವೃತನಾದ ಭೀಮಸೇನನು ತನ್ನ ಬಾಹುಬಲವನ್ನು ಆಶ್ರಯಿಸಿ ಹಿಂದಿರುಗಲಿಲ್ಲ.
ನ ಚಚಾಲ ರಥೋಪಸ್ಥಾದ್ ಭೀಮಸೇನೋ ಮಹಾಬಲಃ |
ಶಿತೈರವಾಕಿರನ್ ಬಾಣೈಃ ಕಳಿಂಗಾನಾಂ ವರೂಥಿನೀಮ್ ॥17॥
ಮಹಾಬಲನಾದ ಭೀಮಸೇನನು ತನ್ನ ರಥದ ಮುಂಭಾಗದಿಂದ ಅಲುಗಾಡಲಿಲ್ಲ. ಕಳಿಂಗರ ಸೈನ್ಯದ ಮೇಲೆ ಹರಿತವಾದ ಬಾಣಗಳನ್ನು ಸುರಿಸಿದನು.
ಕಳಿಂಗಸ್ತು ಮಹೇಷ್ವಾಸಃ ಪುತ್ರಶ್ಚಾಸ್ಯ ಮಹಾರಥಃ |
ಶಕ್ರದೇವ ಇತಿ ಖ್ಯಾತೋ ಜಘ್ನತುಃ ಪಾಂಡವಂ ಶರೈಃ ॥18॥
ಮಹಾಧನುರ್ಧಾರಿಯಾದ ಕಳಿಂಗನೂ ಮತ್ತು ಅವನ ಪುತ್ರನಾದ ಮಹಾರಥನಾದ ಶಕ್ರದೇವನೂ ಸಹ ಭೀಮಸೇನನ ಮೇಲೆ ಬಾಣಗಳನ್ನು ಪ್ರಯೋಗಿಸಿದರು.
ತತೋ ಭೀಮೋ ಮಹಾಬಾಹುರ್ವಿಧುನ್ವನ್ ರುಚಿರಂ ಧನುಃ |
ಯೋಧಯಾಮಾಸ ಕಾಳಿಂಗಾನ್ ಸ್ವಬಾಹುಬಲಮಾಶ್ರಿತಃ ॥19॥
ಆಗ ಮಹಾಬಾಹುವಾದ ಭೀಮಸೇನನು ತನ್ನ ಬಾಹುಬಲವನ್ನೇ ಆಶ್ರಯಿಸಿ ತನ್ನ ಮನೋಹರವಾದ ಧನುಸ್ಸನ್ನು ಕಂಪಿಸುತ್ತಾ ಕಾಳಿಂಗರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಶಕ್ರದೇವಸ್ತು ಸಮರೇ ವಿಸೃಜನ್ಸಾಯಕಾನ್ಬಹೂನ್ |
ಅಶ್ವಾನ್ ಜಘಾನ ಸಮರೇ ಭೀಮಸೇನಸ್ಯ ಸಾಯಕೈಃ |
ವವರ್ಷ ಶರವರ್ಷಾಣಿ ತಪಾಂತೇ ಜಲದೋ ಯಥಾ ॥20॥
ಶಕ್ರದೇವನು ಯುದ್ಧದಲ್ಲಿ ಅನೇಕ ಬಾಣಗಳನ್ನು ಪ್ರಯೋಗಿಸುತ್ತಾ ತನ್ನ ಬಾಣಗಳಿಂದ ಭೀಮಸೇನನ ರಥದ ಅಶ್ವಗಳನ್ನು ಕೊಂದು, ಬೇಸಿಗೆಯು ಕಳೆದ ಮೇಲೆ ಮೋಡಗಳು ಮಳೆಯನ್ನು ಸುರಿಸುವಂತೆ ಭೀಮಸೇನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಂ ದೃಷ್ಟ್ವಾ ವಿರಥಂ ತತ್ರ ಭೀಮಸೇನಮರಿಂದಮಮ್ |
ಶಕ್ರದೇವೋಽಭಿದುದ್ರಾವ ಶಿತೈರವಾಕಿರನ್ ಶರೈಃ |
ಭೀಮಸ್ಯೋಪರಿ ರಾಜೇಂದ್ರ ಶಕ್ರದೇವೋ ಮಹಾಬಲಃ ॥21॥
ಅರಿಂದಮನಾದ ಭೀಮಸೇನನು ರಥವನ್ನು ಕಳೆದುಕೊಂಡುದನ್ನು ನೋಡಿ ಎಲೈ ರಾಜೇಂದ್ರನೇ, ಮಹಾಬಲನಾದ ಶಕ್ರದೇವನು

ಭೀಮಸೇನನ ಕಡೆಗೆ ಸಾಗಿ ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ಹತಾಶ್ವೇ ತು ರಥೇ ತಿಷ್ಠನ್ ಭೀಮಸೇನೋ ಮಹಾಬಲಃ |
ಶಕ್ರದೇವಾಯ ಚಿಕ್ಷೇಪ ಸರ್ವಶೈಕ್ಯಾಯಸೀಂ ಗದಾಮ್ ॥22॥
ಮಹಾಬಲನಾದ ಭೀಮಸೇನನು ಅಶ್ವಗಳಿಲ್ಲದ ರಥದಲ್ಲಿಯೇ ನಿಂತು ಶಕ್ರದೇವನ ಮೇಲೆ ಯಾವಾಗಲೂ ನೆಲುವಿನಲ್ಲಿಯೇ ಇರುತ್ತಿದ್ದ ಕಬ್ಬಿಣದ ಗದೆಯನ್ನು ಎಸೆದನು.
ಸ ತಯಾ ನಿಹತೋ ರಾಜನ್ ಕಳಿಂಗಸ್ಯ ಸುತೋ ರಥಾತ್ |
ಸಧ್ವಜಃ ಸಹ ಸೂತೇನ ಜಗಾಮ ಧರಣೀತಳಮ್ ॥23॥
ಎಲೈ ರಾಜನೇ, ಆ ಗದೆಯಿಂದ ಹೊಡೆಯಲ್ಪಟ್ಟ ಕಳಿಂಗರಾಜನ ಮಗನು ರಥದ ಧ್ವಜ ಮತ್ತು ಸೂತರ ಜೊತೆಯಲ್ಲಿ ರಥದಿಂದ ಕೆಳಗೆ ಭೂಮಿಯ ಮೇಲೆ ಉರುಳಿದನು.
ಹತಮಾತ್ಮಸುತಂ ದೃಷ್ಟ್ವಾ ಕಳಿಂಗಾನಾಂ ಜನಾಧಿಪಃ |
ರಥೈರನೇಕಸಾಹಸ್ರೈರ್ಭೀಮಸ್ಯಾವಾರಯದ್ ದಿಶಃ ॥24॥
ಎಲೈ ಜನಾಧಿಪತಿಯೇ, ತನ್ನ ಪುತ್ರನು ಹತನಾದುದನ್ನು ನೋಡಿ ಕಳಿಂಗರಾಜನು ಅನೇಕ ಸಹಸ್ರ ರಥಗಳಿಂದ ಭೀಮಸೇನನನ್ನು ಎಲ್ಲ ದಿಕ್ಕುಗಳಲ್ಲಿಯೂ ಮುಚ್ಚಿದನು.
ತತೋ ಭೀಮೋ ಮಹಾಬಾಹುರ್ಗುರ್ವೀಂ ತ್ಯಕ್ತ್ವಾ ಮಹಾಗದಾಮ್ |
ಉದ್ಬಬರ್ಹಾಥ ನಿಸ್ತ್ರಿಂಶಂ ಚಿಕೀರ್ಷುಃ ಕರ್ಮ ದಾರುಣಮ್ ॥25॥
ಚರ್ಮ ಚಾಪ್ರತಿಮಂ ರಾಜನ್ನಾರ್ಷಭಂ ಪುರುಷರ್ಷಭ |
ನಕ್ಷತ್ರೈರರ್ಧಚಂದ್ರೈಶ್ಚ ಶಾತಕುಂಭಮಯೈಶ್ಚಿತಮ್ ॥26॥
ಆಗ ಮಹಾಬಾಹುವಾದ ಭೀಮಸೇನನು ತನ್ನ ದೊಡ್ಡ ಗದೆಯನ್ನು ಬಿಟ್ಟು ದಾರುಣವಾದ ಕರ್ಮವನ್ನು ಮಾಡಲು ಬಯಸಿ ಒರೆಯಿಂದ ಖಡ್ಗವನ್ನು ಎಳೆದನು. ಎಲೈ ಪುರುಷಶ್ರೇಷ್ಠನೇ, ಹಾಗೆಯೇ ಸುವರ್ಣಮಯವಾದ ನಕ್ಷತ್ರದಿಂದಲೂ ಮತ್ತು ಅರ್ಧಚಂದ್ರದಿಂದಲೂ ಅಲಂಕೃತವಾದ ಎತ್ತಿನ ಚರ್ಮದ ಹಿಡಿಯುಳ್ಳ ಗುರಾಣಿಯನ್ನೂ ಕೈಯಲ್ಲಿ ತೆಗೆದುಕೊಂಡನು.
ಕಳಿಂಗಸ್ತು ತತಃ ಕ್ರುದ್ಧೋ ಧನುರ್ಜ್ಯಾಮವಮೃಜ್ಯ ಹ |
ಪ್ರಗೃಹ್ಯ ಚ ಶರಂ ಘೋರಮೇಕಂ ಸರ್ಪವಿಷೋಪಮಮ್ |
ಪ್ರಾಹಿಣೋದ್ ಭೀಮಸೇನಾಯ ವಧಾಕಾಂಕ್ಷೀ ಜನೇಶ್ವರಃ ॥27॥
ಎಲೈ ಜನೇಶ್ವರನೇ, ಕಳಿಂಗನಾದರೂ ಆಗ ಕೋಪಗೊಂಡು ತನ್ನ ಧನುಸ್ಸಿನ ಹೆದೆಯನ್ನು ನೇವರಿಸಿ ಸರ್ಪವಿಷದಂತಿದ್ದ ಒಂದು ಘೋರವಾದ ಬಾಣವನ್ನು ತೆಗೆದುಕೊಂಡು ಭೀಮಸೇನನ ವಧೆ ಮಾಡಲು ಬಯಸಿ ಆ ಬಾಣವನ್ನು ಭೀಮಸೇನನ ಮೇಲೆ ಪ್ರಯೋಗಿಸಿದನು.
ತಮಾಪತಂತಂ ವೇಗೇನ ಪ್ರೇರಿತಂ ನಿಶಿತಂ ಶರಮ್ |
ಭೀಮಸೇನೋ ದ್ವಿಧಾ ರಾಜನ್ ಚಿಚ್ಛೇದ ವಿಪುಲಾಸಿನಾ |
ಉದಕ್ರೋಶಚ್ಚ ಸಂಹೃಷ್ಟಸ್ತ್ರಾಸಯಾನೋ ವರೂಥಿನೀಮ್ ॥28॥
ಎಲೈ ರಾಜನೇ, ತನ್ನ ಕಡೆಗೆ ವೇಗವಾಗಿ ಬರುತ್ತಿದ್ದ ಆ ಹರಿತವಾದ ಬಾಣವನ್ನು ಭೀಮಸೇನನು ತನ್ನ ವಿಸ್ತಾರವಾದ ಖಡ್ಗದಿಂದ ಎರಡು ಭಾಗವಾಗಿ ಕತ್ತರಿಸಿದನು ಮತ್ತು ಶತ್ರುಸೈನ್ಯವನ್ನು ಭಯಗೊಳಿಸುತ್ತಾ ಸಂತೋಷದಿಂದ ಕೇಕೆ ಹಾಕಿದನು.
ಕಳಿಂಗಸ್ತು ತತಃ ಕ್ರುದ್ಧೋ ಭೀಮಸೇನಾಯ ಸಂಯುಗೇ |
ತೋಮರಾನ್ ಪ್ರಾಹಿಣೋಚ್ಚೀಘ್ರಂ ಚತುರ್ದಶ ಶಿಲಾಶಿತಾನ್ ॥29॥
ಆಗ ಕಳಿಂಗನು ಯುದ್ಧದಲ್ಲಿ ಕೋಪಗೊಂಡು ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಹದಿನಾಲ್ಕು ತೋಮರಗಳನ್ನು ಶೀಘ್ರವಾಗಿ ಭೀಮಸೇನನ ಮೇಲೆ ಪ್ರಯೋಗಿಸಿದನು.
ತಾನಪ್ರಾಪ್ತಾನ್ ಮಹಾಬಾಹುಃ ಖಗತಾನೇವ ಪಾಂಡವಃ |
ಚಿಚ್ಛೇದ ಸಹಸಾ ರಾಜನ್ನಸಂಭ್ರಾಂತೋ ವರಾಸಿನಾ ॥30॥
ಎಲೈ ರಾಜನೇ, ಆ ತೋಮರಗಳು ತನ್ನ ಬಳಿಗೆ ಬರುವುದಕ್ಕಿಂತ ಮೊದಲೇ ಮಹಾಬಾಹುವಾದ ಭೀಮಸೇನನು ಯಾವ ಗಾಬರಿಯೂ ಇಲ್ಲದೆ ತನ್ನ ಶ್ರೇಷ್ಠವಾದ ಖಡ್ಗದಿಂದ ಅವುಗಳನ್ನು ಕತ್ತರಿಸಿದನು.
ನಿಕೃತ್ಯ ತು ರಣೇ ಭೀಮಸ್ತೋಮರಾನ್ ವೈ ಚತುರ್ದಶ |
ಭಾನುಮಂತಮಭಿದ್ರುತ್ಯ ಪ್ರಾದ್ರವತ್ ಪುರುಷರ್ಷಭಃ ॥31॥
ಭೀಮಸೇನನು ಆ ಹದಿನಾಲ್ಕು ತೋಮರಗಳನ್ನು ನಿವಾರಿಸಿ ಭಾನುಮಂತನನ್ನು ಉದ್ದೇಶಿಸಿ ಪುರುಷಶ್ರೇಷ್ಠನಾದ ಅವನು ಅವನ ಕಡೆಗೆ ಓಡಿದನು (ಕಳಿಂಗ ರಾಜನಿಗೇ ಭಾನುಮಾನ್ ಎಂಬ ಇನ್ನೊಂದು ಹೆಸರು ಇದೆ).
ಭಾನುಮಾಂಸ್ತು ತತೋ ಭೀಮಂ ಶರವರ್ಷೇಣ ಛಾದಯನ್ |
ನನಾದ ಬಲವನ್ನಾದಂ ನಾದಯಾನೋ ನಭಸ್ತಳಮ್ ॥32॥
ಭಾನುಮಂತನಾದರೂ ಭೀಮಸೇನನನ್ನು ಬಾಣಗಳ ಮಳೆಯಿಂದ ಮುಚ್ಚಿಹಾಕುತ್ತಾ ಆಕಾಶವು ಪ್ರತಿಧ್ವನಿಸುವಂತಹ ಬಲಿಷ್ಠವಾದ ನಾದವನ್ನು ಮಾಡಿದನು.
ನ ತಂ ಸ ಮಮೃಷೇ ಭೀಮಃ ಸಿಂಹನಾದಂ ಮಹಾರಣೇ |
ತತಃ ಸ್ವರೇಣ ಮಹತಾ ವಿನನಾದ ಮಹಾಸ್ವನಮ್ ॥33॥
ಆ ಭೀಮಸೇನನು ಮಹಾಯುದ್ಧದಲ್ಲಿ ಆ ಸಿಂಹನಾದವನ್ನು ಸಹಿಸಲಿಲ್ಲ. ತಾನೂ ಸಹ ದೊಡ್ಡ ಸ್ವರದಿಂದ ದೊಡ್ಡ ಗರ್ಜನೆಯನ್ನು

ಮಾಡಿದನು.
ತೇನ ಶಬ್ದೇನ ವಿತ್ರಸ್ತಾ ಕಳಿಂಗಾನಾಂ ವರೂಥಿನೀ |
ನ ಭೀಮಂ ಸಮರೇ ಮೇನೇ ಮಾನುಷಂ ಭರತರ್ಷಭ ॥34॥
ಎಲೈ ಭರತಶ್ರೇಷ್ಠನೇ, ಆ ಗರ್ಜನೆಯಿಂದ ಹೆದರಿಹೋದ ಕಳಿಂಗರ ಸೇನೆಯು ಭೀಮನನ್ನು ಮನುಷ್ಯನೆಂದು ತಿಳಿಯಲಿಲ್ಲ.
ತತೋ ಭೀಮೋ ಮಹಾರಾಜ ನದಿತ್ವಾ ವಿಪುಲಂ ಸ್ವನಮ್ |
ಸಾಸಿರ್ವೇಗಾದವಪ್ಲುತ್ಯ ದಂತಾಭ್ಯಾಂ ವಾರಣೋತ್ತಮಮ್ ॥35॥
ಆರುರೋಹ ತತೋ ಮಧ್ಯಂ ನಾಗರಾಜಸ್ಯ ಮಾರಿಷ |
ಖಡ್ಗೇನ ಪೃಥುನಾ ಮಧ್ಯೇ ಭಾನುಮಂತಮಥಾಚ್ಛಿನತ್ ॥36॥
ಎಲೈ ಮಹಾರಾಜನೇ, ಭೀಮಸೇನನು ಹಾಗೆ ಮಹಾಗರ್ಜನೆಯನ್ನು ಮಾಡಿ, ಕೈಯಲ್ಲಿ ಕತ್ತಿಯನ್ನು ಹಿಡಿದು ಶೀಘ್ರವಾಗಿ ರಥದಿಂದ ಧುಮುಕಿ ಭಾನುಮಂತನು ಕುಳಿತಿದ್ದ ಆನೆಯ ದಂತಗಳ ಮೇಲಿಂದ ಆನೆಯನ್ನು ಏರಿ, ತನ್ನ ವಿಪುಲವಾದ ಖಡ್ಗದಿಂದ ಭಾನುಮಂತನನ್ನು ಮಧ್ಯದಲ್ಲಿ ಕತ್ತರಿಸಿದನು.
ಸೋಽಂತರಾಯುಧಿನಂ ಹತ್ವಾ ರಾಜಪುತ್ರಮರಿಂದಮಃ |
ಗುರುಭಾರಸಹಸ್ಕಂಧೇ ನಾಗಸ್ಯಾಸಿಮಪಾತಯತ್ ॥37॥
ಎಲೈ ಪೂಜ್ಯನೇ, ಅರಿಂದಮನಾದ ಅವನು ಆಯುಧಧಾರಿಯಾಗಿದ್ದ ರಾಜಪುತ್ರನಾದ ಭಾನುಮಂತನನ್ನು ಕೊಂದು ದೊಡ್ಡ ಭಾರವನ್ನು ಹೊರಲು ಸಮರ್ಥವಾದ ಗಜದ ಭುಜದಲ್ಲಿ ಆ ಖಡ್ಗವನ್ನು ಪ್ರಯೋಗಿಸಿದನು.
ಛಿನ್ನಸ್ಕಂಧಃ ಸ ವಿನದನ್ ಪಪಾತ ಗಜಯೂಥಪಃ |
ಆರುಗ್ಣಃ ಸಿಂಧುವೇಗೇನ ಸಾನುಮಾನಿವ ಪರ್ವತಃ ॥38॥
ಗಜಯೂಥಪತಿಯಾದ ಆ ಗಜವು ಭುಜವು ಕತ್ತರಿಸಲ್ಪಡುತ್ತಿರಲು ಘೀಳಿಡುತ್ತಾ ಸಿಂಧುನದಿಯ ವೇಗದಿಂದ ಶಿಖರ ಸಹಿತವಾದ ಪರ್ವತವು ಕೊಚ್ಚಿ ಹೋಗುವಂತೆ ನೆಲದ ಮೇಲೆ ಉರುಳಿತು.
ತತಸ್ತಸ್ಮಾದವಪ್ಲುತ್ಯ ಗಜಾದ್ ಭಾರತ ಭಾರತಃ |
ಖಡ್ಗಪಾಣಿರದೀನಾತ್ಮಾ ಅತಿಷ್ಠದ್ ಭುವಿ ದಂಸಿತಃ ॥39॥
ಎಲೈ ಭಾರತನೇ, ಅನಂತರ ಭರತವಂಶದಲ್ಲಿ ಜನಿಸಿದ ಭೀಮಸೇನನು ಆ ಗಜದಿಂದ ಕೆಳಗೆ ಹಾರಿ, ಕೈಯಲ್ಲಿ ಕತ್ತಿಯನ್ನು ಹಿಡಿದು ಯುದ್ಧ ಮಾಡಲು ಸಿದ್ಧನಾಗಿ ಧೈರ್ಯದಿಂದ ಭೂಮಿಯ ಮೇಲೆ ನಿಂತನು.
ಸ ಚಚಾರ ಬಹೂನ್ ಮಾರ್ಗಾನಭೀತಃ ಪಾತಯನ್ ಗಜಾನ್ |
ಅಗ್ನಿಚಕ್ರಮಿವಾವಿದ್ಧಂ ಸರ್ವತಃ ಪ್ರತ್ಯದೃಶ್ಯತ ॥40॥
ಅವನು ನಿರ್ಭಯನಾಗಿ ಗಜಗಳನ್ನು ಉರುಳಿಸುತ್ತಾ ಅನೇಕ ಖಡ್ಗಮಾರ್ಗಗಳಲ್ಲಿ ಸಂಚರಿಸಿದನು. ತಿರುಗಿಸುತ್ತಿರುವ ಅಗ್ನಿಚಕ್ರದಂತೆ (ಅಲಾತ ಚಕ್ರದಂತೆ) ಎಲ್ಲ ಕಡೆಯಲ್ಲಿಯೂ ಕಂಡುಬಂದನು.
ಅಶ್ವವೃಂದೇಷು ನಾಗೇಷು ರಥಾನೀಕೇಷು ಚಾಭಿಭೂಃ |
ಪದಾತೀನಾಂ ಚ ಸಂಘೇಷು ವಿನಿಘ್ನನ್ ಶೋಣಿತೋಕ್ಷಿತಃ |
ಶ್ಯೇನವದ್ ವ್ಯಚರದ್ ಭೀಮೋ ರಣೇ ರಿಪುಬಲೋತ್ಕಟಃ ॥41॥
ಅಶ್ವಸಮೂಹಗಳಲ್ಲಿ, ಗಜಸಮೂಹಗಳಲ್ಲಿ, ರಥಸಮೂಹಗಳಲ್ಲಿ, ಪದಾತಿಗಳ ಸಮೂಹಗಳಲ್ಲಿ ಶತ್ರುಸಂಹಾರಕನೂ, ರಕ್ತಸಿಕ್ತನೂ ಆದ ಭೀಮಸೇನನು ಯುದ್ಧದಲ್ಲಿ ಉತ್ಕಟವಾದ ಬಲವನ್ನು ಹೊಂದಿದವನಾಗಿ ಗಿಡುಗನಂತೆ ಸಂಚರಿಸಿದನು.
ಛಿಂದಂಸ್ತೇಷಾಂ ಶರೀರಾಣಿ ಶಿರಾಂಸಿ ಚ ಮಹಾಜವಃ |
ಖಡ್ಗೇನ ಶಿತಧಾರೇಣ ಸಂಯುಗೇ ಗಜಯೋಧಿನಾಮ್ ॥42॥
ಪದಾತಿರೇಕಃ ಸಂಕ್ರುದ್ಧಃ ಶತ್ರೂಣಾಂ ಭಯವರ್ಧನಃ |
ಮೋಹಯಾಮಾಸ ಚ ತದಾ ಕಾಲಾಂತಕಯಮೋಪಮಃ ॥43॥
ಮಹಾವೇಗವುಳ್ಳ, ಶತ್ರುಗಳಿಗೆ ಭಯವನ್ನು ಹೆಚ್ಚಿಸುವ ಅವನು ಶತ್ರುಸೈನಿಕರ ಶಿರಸ್ಸುಗಳನ್ನೂ ಮತ್ತು ಶರೀರಗಳನ್ನು ಹರಿತವಾದ ಅಲುಗುಳ್ಳ ಖಡ್ಗದಿಂದ ಕತ್ತರಿಸುತ್ತಾ ಕೋಪದಿಂದ ಪದಾತಿಯಾಗಿ ಒಬ್ಬನೇ ಸಂಚರಿಸುತ್ತಾ ಕಾಲಾಂತಕನಾದ ಯಮನಂತೆ ಶತ್ರುಗಳನ್ನು ಮೋಹಗೊಳಿಸಿದನು.
ಮೂಢಾಶ್ಚ ತೇ ತಮೇವಾಜೌ ವಿನದಂತಃ ಸಮಾದ್ರವನ್ |
ಸಾಸಿಮುತ್ತಮವೇಗೇನ ವಿಚರಂತಂ ಮಹಾರಣೇ ॥44॥
ಮೋಹಕ್ಕೆ ಒಳಗಾದ ಶತ್ರುಗಳು ಗರ್ಜಿಸುತ್ತಾ, ಕೈಯಲ್ಲಿ ಖಡ್ಗವನ್ನು ಹಿಡಿದು ಮಹಾರಣರಂಗದಲ್ಲಿ ಸಂಚರಿಸುತ್ತಿದ್ದ ಭೀಮಸೇನನ ಕಡೆಗೇ ಓಡಿ ಬಂದರು.
ನಿಕೃತ್ಯ ರಥಿನಾಮಾಜೌ ರಥೇಷಾಶ್ಚ ಯುಗಾನಿ ಚ |
ಜಘಾನ ರಥಿನಶ್ಚಾಪಿ ಬಲವಾನರಿಮರ್ದನಃ ॥45॥
ಬಲಿಷ್ಠನೂ, ಅರಿಮರ್ದನನೂ ಆದ ಭೀಮಸೇನನು ಯುದ್ಧದಲ್ಲಿ ರಥಿಕರ ರಥದ ಮೂಕಿಗಳನ್ನೂ ಮತ್ತು ನೊಗಗಳನ್ನೂ ಕತ್ತರಿಸಿ ಅನಂತರ ರಥಿಕರನ್ನೂ ಕತ್ತರಿಸಿದನು.
ಭೀಮಸೇನಶ್ಚರನ್ ಮಾರ್ಗಾನ್ ಸುಬಹೂನ್ ಪ್ರತ್ಯದೃಶ್ಯತ |
ಭ್ರಾಂತಮುದ್ಭ್ರಾಂತಮಾವಿದ್ಧಮಾಪ್ಲವಂ ಪ್ರಸೃತಂ ಪ್ಲವಮ್ |
ಸಂಯತಂ ಸಮುದೀಯಂ ಚ ದರ್ಶಯಾಮಾಸ ಪಾಂಡವಃ ॥46॥

ಭೀಮಸೇನನು ಯುದ್ಧಮಾಡುತ್ತಾ ಅನೇಕ ಮಾರ್ಗಗಳನ್ನು ಪ್ರದರ್ಶಿಸಿದನು. ನೆಲದ ಮೇಲೆ ತಿರುಗುವುದು, ಅಂತರಿಕ್ಷದಲ್ಲಿ ತಿರುಗುವುದು, ಖಡ್ಗವನ್ನು ಹಿಡಿದು ಶತ್ರುಗಳಿಗೆ ಅಭಿಮುಖವಾಗಿ ಹೋಗುವುದು, ಹಿಂದಿರುಗಿ ಹಾರಿ ಬರುವುದು, ಹಾರಿ ಶತ್ರುಗಳ ಕಡೆಗೆ ಹೋಗುವುದು, ಬಲ-ಎಡ ಭಾಗಗಳಲ್ಲಿ ಸಮಾನವಾಗಿ ಸಂಚರಿಸುವುದು, ತನ್ನ ಶರೀರವನ್ನು ಗುರಾಣಿಯಿಂದ ರಕ್ಷಿಸಿಕೊಳ್ಳುವುದು, ಹಾರಿ ಮೇಲಕ್ಕೆ ಹೋಗುವುದು ಮೊದಲಾದ ಖಡ್ಗಾಭ್ಯಾಸ ಕೌಶಲವನ್ನು ಭೀಮಸೇನನು ತೋರಿಸಿದನು.

ಕೇಚಿದಗ್ರಾಸಿನಾ ಛಿನ್ನಾಃ ಪಾಂಡವೇನ ಮಹಾತ್ಮನಾ |
ವಿನೇದುರ್ಭಿನ್ನಮರ್ಮಾಣೋ ನಿಪೇತುಶ್ಚ ಗತಾಸವಃ ॥47॥

ಪಾಂಡುಪುತ್ರನೂ, ಮಹಾತ್ಮನೂ ಆದ ಭೀಮಸೇನನ ಕತ್ತಿಯ ತುದಿಯಿಂದ ಕತ್ತರಿಸಲ್ಪಟ್ಟ ಶತ್ರುಯೋಧರು ಮರ್ಮಗಳಲ್ಲಿ ಹತರಾಗಿ ಕಿರುಚಿ ಪ್ರಾಣವನ್ನು ಕಳೆದುಕೊಂಡು ಬಿದ್ದರು.

ಛಿನ್ನದಂತಾಗ್ರಹಸ್ತಾಶ್ಚ ಭಿನ್ನಕುಂಭಾಸ್ತಥಾಪರೇ |
ವಿಯೋಧಾಃ ಸ್ವಾನ್ಯನೀಕಾನಿ ಜಘ್ನುರ್ಭಾರತ ವಾರಣಾಃ |
ನಿಪೇತುರುರ್ವ್ಯಾಂ ಚ ತಥಾ ವಿನದಂತೋ ಮಹಾರವಾನ್ ॥48॥

ಎಲೈ ಭಾರತನೇ, ಗಜಗಳು ತಮ್ಮ ದಂತಗಳನ್ನೂ ಮತ್ತು ಸೊಂಡಿಲನ್ನೂ ಕತ್ತರಿಸಿ ಕಳೆದುಕೊಂಡು, ಇನ್ನು ಕೆಲವು ಗಜಗಳು ಕುಂಭಸ್ಥಲಗಳಲ್ಲಿ ಹೊಡೆಯಲ್ಪಟ್ಟು ಯೋಧರಿಲ್ಲದೆ ಮಹಾಗರ್ಜನೆಯನ್ನು ಮಾಡಿ ಭೂಮಿಯ ಮೇಲೆ ಬೀಳುತ್ತಾ ತಮ್ಮ ಸೈನಿಕರನ್ನೇ ಕೊಂದವು.

ಛಿನ್ನಾಂಶ್ಚ ತೋಮರಾಂಶ್ಚಾಪಾನ್ ಮಹಾಮಾತ್ರಶಿರಾಂಸಿ ಚ |
ಪ್ರದಿಶೋ ವಾತಿಚಿತ್ರಾಸ್ತಾಃ ಕಕ್ಷ್ಯಾಶ್ಚ ಕನಕೋಜ್ಜ್ವಲಾಃ ॥49॥
ಗ್ರೈವೇಯಾಣ್ಯಥ ಶಕ್ತೀಶ್ಚ ಪತಾಕಾಃ ಕಣಪಾಸ್ತಥಾ |
ತೂಣೀರಾಣ್ಯಥ ಯಂತ್ರಾಣಿ ವಿಚಿತ್ರಾಣಿ ಧನೂಂಷಿ ಚ ॥50॥
ಅಗ್ನಿಕುಂಡಾನಿ ಶುಭ್ರಾಣಿ ತೋತ್ರಾಂಶ್ಚೈವಾಂಕುಶೈಃ ಸಹ |
ಘಂಟಾಶ್ಚ ವಿವಿಧಾ ರಾಜನ್ ಹೇಮಗರ್ಭಾನ್ತ್ಸರೂನಪಿ |
ಪತತಃ ಪತಿತಾಂಶ್ಚೈವ ಪಶ್ಯಾಮಃ ಸಹ ಸಾದಿಭಿಃ ॥51॥

ಕತ್ತರಿಸಿದ ತೋಮರಗಳು, ಧನುಸ್ಸುಗಳು, ಮಹಾಮಾತ್ರರ ಶಿರಸ್ಸುಗಳು, ಗಜರಕ್ಷಕರು, ಸುವರ್ಣಮಯವಾದ ವಿಚಿತ್ರವಾದ ಸರಪಣಿಗಳು, ಕಂಠಗಳ ಆಭರಣಗಳು, ಶಕ್ತ್ಯಾಯುಧಗಳು, ಗಜದ ಮೇಲೆ ಹೊದಿಸುವ ಕಂಬಳಿಗಳು, ಬತ್ತಳಿಕೆಗಳು, ವಿಚಿತ್ರವಾದ ಯಂತ್ರಗಳು, ಧನುಸ್ಸುಗಳು, ಶುಭ್ರವಾದ ಅಗ್ನಿಕುಂಡಗಳು, ಚಾವಟಿಗಳು, ಅಂಕುಶಗಳು, ವಿವಿಧವಾದ ಘಂಟೆಗಳು, ಸುವರ್ಣಾಲಂಕೃತವಾದ ಹಿಡಿಗಳು ಇವು ನೆಲದ ಮೇಲೆ ಬಿದ್ದಿರುವುದನ್ನೂ, ಅಶ್ವಾರೋಹಿಗಳ ಜೊತೆಯಲ್ಲಿ ಬೀಳುತ್ತಿರುವುದನ್ನೂ ನಾವು ನೋಡಿದೆವು.

ಛಿನ್ನಗಾತ್ರಾವರಕರೈರ್ನಿಹತೈಶ್ಚಾಪಿ ವಾರಣೈಃ |
ಆಸೀತ್ ತಸ್ಮಿನ್ ಸಮಾಸ್ತೀರ್ಣಾ ಪತಿತೈರ್ಭೂರ್ನಗೈರಿವ ॥52॥

ತಮ್ಮ ಬೆನ್ನಿನ ಮೇಲೆ ಹೊದಿಸುವ ಕಂಬಳಿಗಳನ್ನೂ ಮತ್ತು ಸೊಂಡಿಲುಗಳನ್ನು ಕತ್ತರಿಸಿಕೊಂಡ ಗಜಗಳ ಶರೀರದಿಂದ ಯುದ್ಧಭೂಮಿಯು ಪರ್ವತಗಳಿಂದ ಹರಡಿದಂತಾಯಿತು.

ವಿಮೃದ್ಯೈವಂ ಮಹಾನಾಗಾನ್ ಮಮರ್ದಾಶ್ವಾನ್ ನರರ್ಷಭಃ |
ಅಶ್ವಾರೋಹವರಾಂಶ್ಚಾಪಿ ಪಾತಯಾಮಾಸ ಭಾರತ |
ತದ್ಘೋರಮಭವದ್ ಯುದ್ಧಂ ತಸ್ಯ ತೇಷಾಂ ಚ ಭಾರತ ॥53॥

ಎಲೈ ಭಾರತನೇ, ನರಶ್ರೇಷ್ಠನಾದ ಭೀಮಸೇನನು ಹೀಗೆ ಮಹಾಗಜಗಳನ್ನು ನಾಶಮಾಡಿ ಶ್ರೇಷ್ಠರಾದ ಅಶ್ವಾರೋಹಿಗಳನ್ನೂ ನೆಲಕ್ಕೆ ಉರುಳಿಸಿದನು. ಎಲೈ ಭಾರತನೇ, ಅವನಿಗೂ ಮತ್ತು ಶತ್ರುಗಳಿಗೂ ಘೋರವಾದ ಯುದ್ಧವು ಉಂಟಾಯಿತು.

ಖಲೀನಾನಿ ವಿಚಿತ್ರಾಣಿ ಕಶಾಶ್ಚ ಕನಕೋಜ್ಜ್ವಲಾಃ |
ಪರಿಸ್ತೋಮಾಶ್ಚ ಪ್ರಾಸಾಶ್ಚ ಋಷ್ಟಯಶ್ಚ ಮಹಾಧನಾಃ ॥54॥
ಕವಚಾನ್ಯಥ ಚರ್ಮಾಣಿ ಚಿತ್ರಾಣ್ಯಾಸ್ತರಣಾನಿ ಚ |
ತತ್ರ ತತ್ರಾಪವಿದ್ಧಾನಿ ವ್ಯದೃಶ್ಯಂತ ಮಹಾಹವೇ ॥55॥

ವಿಚಿತ್ರವಾದ ಧ್ವಜ ಪತಾಕೆಗಳು, ಸುವರ್ಣಮಯವಾದ ಚಾವಟಿಗಳು, ವಾಹನಗಳ ಮೇಲೆ ಹಾಸುವ ಕಂಬಳಿಗಳು, ಈಟಿಗಳು, ಬೆಲೆಬಾಳುವ ಋಷ್ಟಿಗಳು, ಕವಚಗಳು, ಗುರಾಣಿಗಳು, ವಿಚಿತ್ರವಾದ ಹಾಸುಗಳು ಇವುಗಳು ರಣಭೂಮಿಯಲ್ಲಿ ಅಲ್ಲಲ್ಲಿ ಎಸೆಯಲ್ಪಟ್ಟಿರುವುದು ಕಂಡುಬಂದಿತು.

ಪ್ರೋಥಯಂತ್ರೈರ್ವಿಚಿತ್ರೈಶ್ಚ ಶಸ್ತ್ರೈಶ್ಚ ವಿಮಲೈಸ್ತಥಾ |
ಸ ಚಕ್ರೇ ವಸುಧಾಂ ಕೀರ್ಣಾಂ ಶಬಲೈಃ ಕುಸುಮೈರಿವ ॥56॥

ವಿಚಿತ್ರವಾದ ಗಜ-ಯಂತ್ರಗಳನ್ನು, ವಿಮಲವಾದ ಶಸ್ತ್ರಗಳನ್ನು ಭೂಮಿಯ ಮೇಲೆ ಹರಡಿ ಭೀಮಸೇನನು ಭೂಮಿಯನ್ನು ಅನೇಕ ವರ್ಣದ ಪುಷ್ಪಗಳಿಂದ ಹರಡಿದಂತೆ ಮಾಡಿದನು.

ಆಪ್ಲುತ್ಯ ರಥಿನಃ ಕಾಂಶ್ಚಿತ್ ಪರಾಮೃಶ್ಯ ಮಹಾಬಲಃ |
ಪಾತಯಾಮಾಸ ಖಡ್ಗೇನ ಸಧ್ವಜಾನಪಿ ಪಾಂಡವಃ ॥57॥

ಮಹಾಬಲನಾದ ಪಾಂಡುಪುತ್ರನಾದ ಅವನು ರಥಕ್ಕೆ ಹಾರಿ ರಥಿಕರನ್ನು ಹಿಡಿದುಕೊಂಡು ತನ್ನ ಖಡ್ಗದಿಂದ ಧ್ವಜವನ್ನೂ ಮತ್ತು ಆ ರಥಿಕರನ್ನೂ ಕತ್ತರಿಸಿ ಉರುಳಿಸಿದನು.

ಮುಹುರುತ್ಪತತೋ ದಿಕ್ಷು ಧಾವತಶ್ಚ ಯಶಸ್ವಿನಃ |
ಮಾರ್ಗಾಂಶ್ಚ ಚರತಶ್ಚಿತ್ರಾನ್ ವ್ಯಸ್ಮಯಂತ ರಣೇ ಜನಾಃ ॥58॥
ಕೀರ್ತಿಶಾಲಿಯಾದ ಅವನು ಯುದ್ಧದಲ್ಲಿ ಮೇಲಕ್ಕೆ ಹಾರುವುದು, ದಿಕ್ಕುದಿಕ್ಕುಗಳಲ್ಲಿ ಓಡುವುದು, ಅನೇಕ ವಿಚಿತ್ರವಾದ ಮಾರ್ಗಗಳಲ್ಲಿ ಸಂಚರಿಸುವುದು ಇವುಗಳನ್ನು ನೋಡಿ ಜನರು ವಿಸ್ಮಯಗೊಂಡರು.
ನಿಜಘಾನ ಪದಾ ಕಾಂಶ್ಚಿದಾಕ್ಷಿಪ್ಯಾನ್ಯಾನಪೋಥಯತ್ |
ಖಡ್ಗೇನಾನ್ಯಾಂಶ್ಚ ಚಿಚ್ಛೇದ ನಾದೇನಾನ್ಯಾಂಶ್ಚ ಭೀಷಯನ್ ॥59॥
ಊರುವೇಗೇನ ಚಾಪ್ಯನ್ಯಾನ್ ಪಾತಯಾಮಾಸ ಭೂತಲೇ |
ಅಪರೇ ಚೈನಮಾಲೋಕ್ಯ ಭಯಾತ್ ಪಂಚತ್ವಮಾಗತಾಃ ॥60॥
ಆ ಭೀಮಸೇನನು ಪಾದದಿಂದ ಕೆಲವರನ್ನು ಸಂಹರಿಸಿದನು. ಇನ್ನು ಕೆಲವರನ್ನು ಮೇಲಕ್ಕೆಸೆದು ಮರ್ದಿಸಿದನು. ಇನ್ನು ಕೆಲವರನ್ನು ಖಡ್ಗದಿಂದ ಕತ್ತರಿಸಿದನು. ಇನ್ನು ಕೆಲವರನ್ನು ತನ್ನ ಗರ್ಜನೆಯಿಂದಲೇ ಹೆದರಿಸಿ ಸಂಹರಿಸಿದನು. ಇನ್ನು ಕೆಲವರನ್ನು ತನ್ನ ತೊಡೆಗಳ ವೇಗದಿಂದಲೇ ಭೂಮಿಯ ಮೇಲೆ ಕೆಡವಿದನು. ಇನ್ನು ಕೆಲವರು ಅವನನ್ನು ನೋಡುತ್ತಲೇ ಭಯದಿಂದ ಪ್ರಾಣತ್ಯಾಗವನ್ನು ಮಾಡಿದರು.
ಏವಂ ಸಾ ಬಹುಲಾ ಸೇನಾ ಕಳಿಂಗಾನಾಂ ತರಸ್ವಿನಾಮ್ |
ಪರಿವಾರ್ಯ ರಣೇ ಭೀಷ್ಮಂ ಭೀಮಸೇನಮುಪಾದ್ರವತ್ ॥61॥
ಹೀಗೆ ಕಳಿಂಗರ ಬಹಳ ದೊಡ್ಡದಾದ ಮತ್ತು ವೇಗಶಾಲಿಯಾದ ಆ ಸೈನ್ಯವು ಭೀಷ್ಮರನ್ನು ರಕ್ಷಿಸಿಕೊಂಡು ರಣರಂಗದಲ್ಲಿ ಭೀಮಸೇನನ ಕಡೆಗೆ ಬಂದಿತು.
ತತಃ ಕಲಿಂಗಸೈನ್ಯಾನಾಂ ಪ್ರಮುಖೇ ಭರತರ್ಷಭ |
ಶ್ರುತಾಯುಷಮಭಿಪ್ರೇಕ್ಷ್ಯ ಭೀಮಸೇನಃ ಸಮಭ್ಯಯಾತ್ ॥62॥
ಎಲೈ ಭರತಶ್ರೇಷ್ಠನೇ, ಆಗ ಭೀಮಸೇನನು ಕಳಿಂಗರ ಸೈನ್ಯದ ಮುಂಭಾಗದಲ್ಲಿ ಶ್ರುತಾಯುವನ್ನು ನೋಡಿ ಅವನ ಕಡೆಗೆ ಧಾವಿಸಿದನು.
ತಮಾಯಾಂತಮಭಿಪ್ರೇಕ್ಷ್ಯ ಕಳಿಂಗೋ ನವಭಿಃ ಶರೈಃ |
ಭೀಮಸೇನಮಮೇಯಾತ್ಮಾ ಪ್ರತ್ಯವಿಧ್ಯತ್ ಸ್ತನಾಂತರೇ ॥63॥
ತನ್ನ ಕಡೆಗೆ ಬರುತ್ತಿರುವ ಭೀಮಸೇನನನ್ನು ನೋಡಿ ಮಹಾಬಲಶಾಲಿಯಾದ ಕಳಿಂಗನು ಒಂಬತ್ತು ಬಾಣಗಳಿಂದ ಭೀಮಸೇನನಿಗೆ ಸ್ತನಗಳ ಮಧ್ಯದಲ್ಲಿ ಹೊಡೆದನು.
ಕಳಿಂಗಬಾಣಾಭಿಹತಸ್ತೋತ್ತತ್ರಾರ್ದಿತ ಇವ ದ್ವಿಪಃ |
ಭೀಮಸೇನಃ ಪ್ರಜಜ್ವಾಲ ಕ್ರೋಧೇನಾಗ್ನಿರಿವೇಂಧನೈಃ ॥64॥
ಕಳಿಂಗನ ಬಾಣಗಳಿಂದ ಹೊಡೆಯಲ್ಪಟ್ಟ ಭೀಮಸೇನನು ಅಂಕುಶದಿಂದ ಹಿಂಸಿಸಿದ ಆನೆಯಂತೆ, ಕಟ್ಟಿಗೆಯನ್ನು ಹಾಕಿದ ಅಗ್ನಿಯಂತೆ ಕ್ರೋಧದಿಂದ ಉರಿದನು.
ಅಥಾಶೋಕಃ ಸಮಾದಾಯ ರಥಂ ಹೇಮಪರಿಷ್ಕೃತಮ್ |
ಭೀಮಂ ಸಂಪಾದಯಾಮಾಸ ರಥೇನ ರಥಸಾರಥಿಃ ॥65॥
ಅನಂತರ ಭೀಮನ ರಥಸಾರಥಿಯಾದ ವಿಶೋಕನು ಸುವರ್ಣಾಲಂಕೃತವಾದ ರಥವನ್ನು ತಂದು ಭೀಮನಿಗೆ ಒದಗಿಸಿದನು.
ತಮಾರುಹ್ಯ ರಥಂ ತೂರ್ಣಂ ಕೌಂತೇಯಃ ಶತ್ರುಸೂದನಃ |
ಕಳಿಂಗಮಭಿದುದ್ರಾವ ತಿಷ್ಠ ತಿಷ್ಠೇತಿ ಚಾಬ್ರುವೀತ್ ॥66॥
ಕುಂತೀಪುತ್ರನೂ, ಶತ್ರುಸೂದನನೂ ಆದ ಭೀಮನು ಶೀಘ್ರವಾಗಿ ಆ ರಥವನ್ನೇರಿ ಕಳಿಂಗನ ಬಳಿಗೆ ಸಾಗಿ ನಿಲ್ಲು, ನಿಲ್ಲು ಎಂದು ಹೇಳಿದನು.
ತತಃ ಶ್ರುತಾಯುರ್ಬಲವಾನ್ ಭೀಮಾಯ ನಿಶಿತಾನ್ ಶರಾನ್ |
ಪ್ರೇಷಯಾಮಾಸ ಸಂಕ್ರುದ್ಧೋ ದರ್ಶಯನ್ ಪಾಣಿಲಾಘವಮ್ ॥67॥
ಆಗ ಬಲಿಷ್ಠನಾದ ಶ್ರುತಾಯುವು ಕೋಪಗೊಂಡು ತನ್ನ ಹಸ್ತಕೌಶಲವನ್ನು ತೋರಿಸುತ್ತಾ ಭೀಮನ ಮೇಲೆ ಹರಿತವಾದ ಬಾಣಗಳನ್ನು ಪ್ರಯೋಗಿಸಿದನು.
ಸ ಕಾರ್ಮುಕವರೋತ್ಸೃಷ್ಟೈರ್ನವಭಿರ್ನಿಶಿತೈಃ ಶರೈಃ |
ಸಮಾಹತೋ ಭೃಶಂ ರಾಜನ್ ಕಳಿಂಗೇನ ಮಹಾಯಶಾಃ |
ಸಂಚುಕ್ರುಧೇ ಭೃಶಂ ಭೀಮೋ ದಂಡಾಹತ ಇವೋರಗಃ ॥68॥
ಶ್ರೇಷ್ಠವಾದ ಧನುಸ್ಸಿನಿಂದ ಹೊರಹೊಮ್ಮಿದ ಕಳಿಂಗನ ಆ ಒಂಬತ್ತು ಬಾಣಗಳಿಂದ ಬಲವಾಗಿ ಹೊಡೆಯಲ್ಪಟ್ಟ ಮಹಾಕೀರ್ತಿವಂತನಾದ ಭೀಮಸೇನನು ಎಲೈ ರಾಜನೇ, ಕೋಲಿನಿಂದ ಹೊಡೆದ ಸರ್ಪದಂತೆ ಬಹಳ ಕೋಪಗೊಂಡನು.
ಕ್ರುದ್ಧಶ್ಚ ಚಾಪಮಾಯಮ್ಯ ಬಲವದ್ ಬಲಿನಾಂ ವರಃ |
ಕಳಿಂಗಮವಧೀತ್ ಪಾರ್ಥೋ ಭೀಮಃ ಸಪ್ತಭಿರಾಯಸೈಃ ॥69॥
ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನು ಕೋಪಗೊಂಡು ತನ್ನ ಧನುಸ್ಸನ್ನು ಬಲವಾಗಿ ಬಗ್ಗಿಸಿ ಕಳಿಂಗನ ಮೇಲೆ ಏಳು ಅಯೋಮಯವಾದ ಬಾಣಗಳನ್ನು ಪ್ರಯೋಗಿಸಿದನು.
ಕ್ಷುರಾಭ್ಯಾಂ ಚಕ್ರರಕ್ಷೌ ಚ ಕಳಿಂಗಸ್ಯ ಮಹಾಬಲೌ |
ಸತ್ಯದೇವಂ ಚ ಸತ್ಯಂ ಚ ಪ್ರಾಹಿಣೋದ್ ಯಮಸಾದನಮ್ ॥70॥
ಕಳಿಂಗನ ರಥದ ಚಕ್ರರಕ್ಷಕರಾದ, ಮಹಾಬಲಿಷ್ಠರಾದ ಸತ್ಯದೇವ ಮತ್ತು ಸತ್ಯ ಎಂಬ ಇಬ್ಬರನ್ನೂ ಕ್ಷುರಗಳಿಂದ (ಸಣ್ಣ ಕತ್ತಿಗಳಿಂದ)

ಯಮಪಟ್ಟಣಕ್ಕೆ ಕಳುಹಿಸಿದನು.
ತತಃ ಪುನರಮೇಯಾತ್ಮಾ ನಾರಾಚೈರ್ನಿಶಿತೈಸ್ತ್ರಿಭಿಃ |
ಕೇತುಮಂತಂ ರಣೇ ಭೀಮೋಽಗಮಯದ್ ಯಮಸಾದನಮ್ ||71||
ಅನಂತರ ಅಪರಿಮಿತ ಪರಾಕ್ರಮಿಯಾದ ಭೀಮಸೇನನು ಮೂರು ಹರಿತವಾದ ನಾರಾಚಗಳಿಂದ ರಣರಂಗದಲ್ಲಿ ಕೇತುಮಂತನನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ತತಃ ಕಳಿಂಗಾಃ ಸಂಕ್ರುದ್ಧಾ ಭೀಮಸೇನಮಮರ್ಷಣಮ್ |
ಅನೀಕೈರ್ಬಹುಸಾಹಸ್ರೈಃ ಕ್ಷತ್ರಿಯಾಃ ಸಮವಾರಯನ್ ||72||
ಆಗ ಕಳಿಂಗ ದೇಶದ ಅನೇಕ ಸಹಸ್ರ ಕ್ಷತ್ರಿಯರು ಕೋಪಗೊಂಡಿದ್ದ ಭೀಮಸೇನನನ್ನು ತಾವೂ ಕೋಪಗೊಂಡು ಸುತ್ತುವರಿದರು.
ತತಃ ಶಕ್ತಿಗದಾಖಡ್ಗತೋಮರರ್ಷ್ಟಿಪರಶ್ವಧೈಃ |
ಕಳಿಂಗಾಶ್ಚ ತತೋ ರಾಜನ್ ಭೀಮಸೇನಮವಾಕಿರನ್ ||73||
ಎಲೈ ರಾಜನೇ, ಅನಂತರ ಕಳಿಂಗರು ಭೀಮಸೇನನ ಮೇಲೆ ಶಕ್ತಿ, ಗದೆ, ಖಡ್ಗ, ತೋಮರ, ಋಷ್ಟಿ, ಪರಶ್ವಧ ಈ ಆಯುಧಗಳ ಮಳೆಯನ್ನು ಸುರಿಸಿದರು.
ಸನ್ನಿವಾರ್ಯ ಸ ತಾಂ ಘೋರಾಂ ಶರವೃಷ್ಟಿಂ ಸಮುತ್ಥಿತಾಮ್ |
ಗದಾಮಾದಾಯ ತರಸಾ ಪರಿಪ್ಲುತ್ಯ ಮಹಾಬಲಃ |
ಭೀಮಃ ಸಪ್ತಶತಾನ್ ವೀರಾನನಯದ್ ಯಮಸಾದನಮ್ ||74||
ಆ ಸೈನಿಕರಿಂದ ಉಂಟಾದ ಘೋರವಾದ ಆ ಬಾಣಗಳ ಮಳೆಯನ್ನು ನಿವಾರಿಸಿ ಮಹಾಬಲನಾದ ಭೀಮಸೇನನು ಗದೆಯನ್ನು ತೆಗೆದುಕೊಂಡು ಎಲ್ಲ ಕಡೆಯಲ್ಲಿಯೂ ಹಾರಿ ಕಳಿಂಗರ ಏಳು ನೂರು ವೀರರನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ಪುನಶ್ಚೈವ ದ್ವಿಸಾಹಸ್ರಾನ್ ಕಳಿಂಗಾನರಿಮರ್ದನಃ |
ಪ್ರಾಹಿಣೋನ್ಮೃತ್ಯುಲೋಕಾಯ ತದದ್ಭುತಮಿವಾಭವತ್ ||75||
ಶತ್ರುಮರ್ದನನಾದ ಅವನು ಪುನಃ ಎರಡು ಸಹಸ್ರ ಕಾಳಿಂಗರನ್ನು ಮೃತ್ಯುಲೋಕಕ್ಕೆ ಕಳುಹಿಸಿದನು. ಅದು ಅದ್ಭುತವಾಗಿದ್ದಿತು.
ಏವಂ ಸ ತಾನ್ಯನೀಕಾನಿ ಕಳಿಂಗಾನಾಂ ಪುನಃ ಪುನಃ |
ಬಿಭೇದ ಸಮರೇ ವೀರಃ ಪ್ರೇಕ್ಷ್ಯ ಭೀಷ್ಮಂ ಮಹಾವ್ರತಮ್ ||76||
ಹೀಗೆ ವೀರನಾದ ಆ ಭೀಮನು ಮಹಾರಥರಾದ ಭೀಷ್ಮರನ್ನು ನೋಡುತ್ತಾ ಪುನಃ ಪುನಃ ಕಳಿಂಗರ ಸೈನ್ಯಗಳನ್ನು ಭೇದಿಸಿದನು.
ಹತಾರೋಹಾಶ್ಚ ಮಾತಂಗಾಃ ಪಾಂಡವೇನ ಮಹಾತ್ಮನಾ |
ವಿಪ್ರಜಗ್ಮುರನೀಕೇಷು ಮೇಘಾ ವಾತಹತಾ ಇವ |
ಮೃದ್ನಂತಃ ಸ್ವಾನ್ಯನೀಕಾನಿ ವಿನದಂತಃ ಶರಾತುರಾಃ ||77||
ಮಹಾತ್ಮನಾದ ಪಾಂಡುಪುತ್ರನಾದ ಭೀಮಸೇನನಿಂದ ಗಜಾರೋಹಿಗಳು ಹತರಾಗುತ್ತಿರಲು ಆ ಗಜಗಳು ಗಾಳಿಗೆ ಸಿಕ್ಕಿದ ಮೋಡದಂತೆ ತಮ್ಮ ಸೈನ್ಯಗಳಲ್ಲಿಯೇ ಓಡುತ್ತಾ ಬಾಣಗಳಿಂದ ಉಂಟಾದ ನೋವುಗಳಿಂದ ಗರ್ಜಿಸುತ್ತಾ ತಮ್ಮ ಸೈನ್ಯವನ್ನೇ ತುಳಿದು ನಾಶಮಾಡಿದವು.
ತತೋ ಭೀಮೋ ಮಹಾಬಾಹುಃ ಶಂಖಂ ಪ್ರಾಧ್ಮಾಪಯದ್ ಬಲೀ |
ಸರ್ವಕಾಳಿಂಗಸೈನ್ಯಾನಾಂ ಮನಾಂಸಿ ಸಮಕಂಪಯತ್ ||78||
ಅನಂತರ ಬಲಿಷ್ಠನೂ, ಮಹಾಬಾಹುವೂ ಆದ ಭೀಮಸೇನನು ಶಂಖವನ್ನು ಊದಿದನು ಮತ್ತು ಅದರಿಂದ ಕಳಿಂಗ ಸೈನ್ಯದ ಎಲ್ಲ ಯೋಧರ ಮನಸ್ಸನ್ನೂ ನಡುಗಿಸಿದನು.
ಮೋಹಶ್ಚಾಪಿ ಕಳಿಂಗಾನಾಮಾವಿವೇಶ ಪರಂತಪ |
ಪ್ರಾಕಂಪಂತ ಚ ಸೈನ್ಯಾನಿ ವಾಹನಾನಿ ಚ ಸರ್ವಶಃ ||79||
ಎಲೈ ಪರಂತಪನೇ, ಕಳಿಂಗ ಯೋಧರಿಗೆ ಮೋಹವುಂಟಾಯಿತು. ಸೈನ್ಯಗಳು ಮತ್ತು ಎಲ್ಲಾ ವಾಹನಗಳು ನಡುಗಿದವು.
ಭೀಮೇನ ಸಮರೇ ರಾಜನ್ ಗಜೇಂದ್ರೇಣೇವ ಸರ್ವತಃ |
ಮಾರ್ಗಾನ್ ಬಹೂನ್ ವಿಚರತಾ ಧಾವತಾ ಚ ತತಸ್ತತಃ |
ಮುಹುರುತ್ಪತತಾ ಚೈವ ಸಮ್ಮೋಹಃ ಸಮಜಾಯತ ||80||
ಎಲೈ ರಾಜನೇ, ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ವಿವಿಧವಾದ ಅನೇಕ ಮಾರ್ಗಗಳಲ್ಲಿ ಸಂಚರಿಸಿ ಅಲ್ಲಿಂದಿಲ್ಲಿಗೆ ಓಡುತ್ತಾ ಪುನಃ ಪುನಃ ಮೇಲೆ ಹಾರುವ ಭೀಮಸೇನನನ್ನು ನೋಡಿ ಶತ್ರುಗಳಿಗೆ ಮೋಹವುಂಟಾಯಿತು.
ಭೀಮಸೇನಭಯತ್ರಸ್ತಂ ಸೈನ್ಯಂ ಚ ಸಮಕಂಪತ |
ಕ್ಷೋಭ್ಯಮಾಣಮಸಂಬಾಧಂ ಗ್ರಾಹೇಣೇವ ಮಹತ್ಸರಃ ||81||
ದೊಡ್ಡ ಮೊಸಳೆಯಿಂದ ಕಲಕಲ್ಪಟ್ಟ ದೊಡ್ಡ ಸರೋವರದಂತೆ ಭೀಮಸೇನನ ಭಯದಿಂದ ಶತ್ರುಸೈನ್ಯವು ಕ್ಷೋಭೆಗೊಂಡಿತು.
ತ್ರಾಸಿತೇಷು ಚ ವೀರೇಷು ಭೀಮೇನಾದ್ಭುತಕರ್ಮಣಾ |
ಪುನರಾವರ್ತಮಾನೇಷು ವಿದ್ರವತ್ಸು ಚ ಸಂಘಶಃ ||82||
ಸರ್ವಕಾಳಿಂಗಯೋಧೇಷು ಪಾಂಡೂನಾಂ ಧ್ವಜಿನೀಪತಿಃ |
ಅಬ್ರವೀತ್ ಸ್ವಾನ್ಯನೀಕಾನಿ ಯುಧ್ಯಧ್ವಮಿತಿ ಪಾರ್ಷತಃ ||83||
ಅದ್ಭುತಕಾರ್ಯವನ್ನು ಮಾಡುವ ಭೀಮಸೇನನಿಂದ ಪರವೀರರು ಭಯಗೊಳಿಸಲ್ಪಡುತ್ತಿರಲು, ಅದರಲ್ಲಿ ಕೆಲವರು ಹಿಂದೆ ಬರುತ್ತಿರಲು, ಇನ್ನು ಕೆಲವು ಯೋಧರು ಗುಂಪು ಗುಂಪಾಗಿ ಓಡಿಹೋಗುತ್ತಿರಲು ಪಾಂಡವರ ಸೇನಾಪತಿಯಾದ ಧೃಷ್ಟದ್ಯುಮ್ನನು ತನ್ನ

ಸೈನ್ಯವನ್ನು ಕುರಿತು ಯುದ್ಧವನ್ನು ಮುಂದುವರಿಸಿ ಎಂದು ಹೇಳಿದನು.
ಸೇನಾಪತಿವಚಃ ಶ್ರುತ್ವಾ ಶಿಖಂಡಿಪ್ರಮುಖಾ ಗಣಾಃ ।
ಭೀಮಮೇವಾಭ್ಯವರ್ತಂತ ರಥಾನೀಕೈಃ ಪ್ರಹಾರಿಭಿಃ ॥84॥
ಸೇನಾಪತಿಯ ಮಾತುಗಳನ್ನು ಕೇಳಿ ಶಿಖಂಡಿಯೇ ಮೊದಲಾದ ಗುಂಪುಗಳು ಪ್ರಹಾರವನ್ನು ಮಾಡುವ ರಥಗಳ ಸಮೂಹದಿಂದ ಕೂಡಿ ಭೀಮನ ಕಡೆಗೆ ಬಂದವು.
ಧರ್ಮರಾಜಶ್ಚ ತಾನ್ ಸರ್ವಾನುಪಜಗ್ರಾಹ ಪಾಂಡವಃ ।
ಮಹತಾ ಮೇಘವರ್ಣೇನ ನಾಗಾನೀಕೇನ ಪೃಷ್ಠತಃ ॥85॥
ಪಾಂಡುಪುತ್ರನಾದ ಧರ್ಮರಾಜನು ಮೋಡದ ಬಣ್ಣವನ್ನು ಹೊಂದಿದ್ದ ಗಜಗಳ ದೊಡ್ಡ ಸಮೂಹದಿಂದ ಹಿಂದೆ ನಿಂತು ಅವರಿಗೆ ಬೆಂಬಲನಾದನು.
ಏವಂ ಸಂಚೋದ್ಯ ಸರ್ವಾಣಿ ಸ್ವಾನ್ಯನೀಕಾನಿ ಪಾರ್ಷತಃ ।
ಭೀಮಸೇನಸ್ಯ ಜಗ್ರಾಹ ಪಾರ್ಷ್ಣಿಂ ಸತ್ಪುರುಷೋಚಿತಾಮ್ ॥86॥
ಹೀಗೆ ಧೃಷ್ಟದ್ಯುಮ್ನನು ತನ್ನ ಎಲ್ಲಾ ಸೈನ್ಯಗಳನ್ನೂ ಪ್ರಚೋದಿಸಿ ಸತ್ಪುರುಷರಿಗೆ ಯೋಗ್ಯವಾದ ಭೀಮಸೇನನ ಪಾರ್ಶ್ವವನ್ನು ಹೊಂದಿದನು.
ನ ಹಿ ಪಾಂಚಾಲರಾಜಸ್ಯ ಲೋಕೇ ಕಶ್ಚನ ವಿದ್ಯತೇ ।
ಭೀಮಸಾತ್ಯಕಯೋರನ್ಯಃ ಪ್ರಾಣೇಭ್ಯಃ ಪ್ರಿಯಕೃತ್ತಮಃ ॥87॥
ಪಾಂಚಾಲರಾಜನಾದ ಧೃಷ್ಟದ್ಯುಮ್ನನಿಗೆ ಭೀಮ ಮತ್ತು ಸಾತ್ಯಕಿಯನ್ನು ಬಿಟ್ಟು ಪ್ರಾಣಗಳಿಗಿಂತಲೂ ಪ್ರಿಯಕಾರಿಯಾದ ಇನ್ನೊಬ್ಬರು ಯಾರೂ ಇಲ್ಲ.
ಸೋಽಪಶ್ಯತ್ ತಂ ಕಳಿಂಗೇಷು ಚರಂತಮರಿಸೂದನಮ್ ।
ಭೀಮಸೇನಂ ಮಹಾಬಾಹುಂ ಪಾರ್ಷತಃ ಪರವೀರಹಾ ॥88॥
ಪರವೀರಘಾತಕನಾದ ಧೃಷ್ಟದ್ಯುಮ್ನನು ಮಹಾಬಾಹುವೂ, ಶತ್ರುಸೂದನನೂ ಆದ ಭೀಮಸೇನನು ಕಳಿಂಗರ ಸೈನ್ಯದಲ್ಲಿ ಸಂಚರಿಸುತ್ತಿರುವುದನ್ನು ನೋಡಿದನು.
ನನರ್ದ ಬಹುಧಾ ರಾಜನ್ ಹೃಷ್ಟಶ್ಚಾಸೀತ್ ಪರಂತಪಃ ।
ಶಂಖಂ ದಧ್ಮೌ ಚ ಸಮರೇ ಸಿಂಹನಾದಂ ನನಾದ ಚ ॥89॥
ಎಲೈ ರಾಜನೇ, ಪರಂತಪನಾದ ಅವನು ಸಂತೋಷಗೊಂಡು ಅನೇಕ ರೀತಿಯಲ್ಲಿ ಗರ್ಜಿಸಿದನು. ಯುದ್ಧಭೂಮಿಯಲ್ಲಿ ಶಂಖವನ್ನು ಊದಿ ಸಿಂಹನಾದವನ್ನು ಮಾಡಿದನು.
ಸ ಚ ಪಾರಾವತಾಶ್ವಸ್ಯ ರಥೇ ಹೇಮಪರಿಷ್ಕೃತೇ ।
ಕೋವಿದಾರಧ್ವಜಂ ದೃಷ್ಟ್ವಾ ಭೀಮಸೇನಃ ಸಮಾಶ್ವಸತ್ ॥90॥
ಪಾರಾವತಾಶ್ವ (ಪಾರಿವಾಳದ ಬಣ್ಣದ ಅಶ್ವ)ಗಳುಳ್ಳ, ಸುವರ್ಣಾಲಂಕೃತವುಳ್ಳ, ಕೋವಿದಾರಧ್ವಜವನ್ನು ಹೊಂದಿದ ರಥದಲ್ಲಿ ಧೃಷ್ಟದ್ಯುಮ್ನನನ್ನು ನೋಡಿ ಭೀಮಸೇನನು ಸಮಾಧಾನವನ್ನು ಹೊಂದಿದನು.
ಧೃಷ್ಟದ್ಯುಮ್ನಸ್ತು ತಂ ದೃಷ್ಟ್ವಾ ಕಳಿಂಗೈಃ ಸಮಭಿದ್ರುತಮ್ ।
ಭೀಮಸೇನಮಮೇಯಾತ್ಮಾ ತ್ರಾಣಾಯಾಜೌ ಸಮಭ್ಯಯಾತ್ ॥91॥
ಕಳಿಂಗರಿಂದ ಸುತ್ತುವರಿಯಲ್ಪಟ್ಟ ಭೀಮಸೇನನನ್ನು ನೋಡಿ ಅಪರಿಮಿತ ಪರಾಕ್ರಮಿಯಾದ ಧೃಷ್ಟದ್ಯುಮ್ನನು ಭೀಮಸೇನನನ್ನು ರಕ್ಷಿಸಲು ರಣರಂಗದಲ್ಲಿ ಅವನ ಸಮೀಪಕ್ಕೆ ಬಂದನು.
ತೌ ದೂರಾತ್ ಸಾತ್ಯಕಿರ್ದೃಷ್ಟ್ವಾ ಧೃಷ್ಟದ್ಯುಮ್ನವೃಕೋದರೌ ।
ಕಳಿಂಗಾನ್ ಸಮರೇ ವೀರೌ ಯೋಧಯಂತೌ ಮನಸ್ವಿನೌ ॥92॥
ಸ ತತ್ರ ಗತ್ವಾ ಶೈನೇಯೋ ಜವೇನ ಜಯತಾಂ ವರಃ ।
ಪಾರ್ಥಪಾರ್ಷತಯೋಃ ಪಾರ್ಷ್ಣಿಂ ಜಗ್ರಾಹ ಪುರುಷರ್ಷಭಃ ॥93॥
ಧೃಷ್ಟದ್ಯುಮ್ನ ಮತ್ತು ಭೀಮಸೇನರು ಜೊತೆಯಲ್ಲಿರುವುದನ್ನು ಮತ್ತು ವೀರರೂ, ಧೈರ್ಯಶಾಲಿಗಳೂ ಆದ ಅವರು ಕಳಿಂಗರ ಜೊತೆಯಲ್ಲಿ ಯುದ್ಧವನ್ನು ಮಾಡುವುದನ್ನೂ ದೂರದಿಂದಲೇ ನೋಡಿದ ಜಯಿಸುವವರಲ್ಲಿ ಶ್ರೇಷ್ಠನಾದವನೂ, ಪುರುಷ ಶ್ರೇಷ್ಠನೂ ಆದ ಸಾತ್ಯಕಿಯು ಅಲ್ಲಿಗೆ ಶೀಘ್ರವಾಗಿ ಹೋಗಿ ಭೀಮಸೇನ ಮತ್ತು ಧೃಷ್ಟದ್ಯುಮ್ನರ ಪಾರ್ಶ್ವವನ್ನು ತಲುಪಿದನು.
ಸ ಕೃತ್ವಾ ಕದನಂ ತತ್ರ ಪ್ರಗೃಹೀತಶರಾಸನಃ ।
ಆಸ್ಥಿತೋ ರೌದ್ರಮಾತ್ಮಾನಂ ಜಘಾನ ಸಮರೇ ಪರಾನ್ ॥94॥
ಕೈಯಲ್ಲಿ ಧನುಸ್ಸನ್ನು ಹಿಡಿದ ಅವನು ಭಯಂಕರವಾದ ಶರೀರವನ್ನು ಧರಿಸಿ, ಘೋರವಾದ ಯುದ್ಧವನ್ನು ಮಾಡಿ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿದನು.
ಕಳಿಂಗಪ್ರಭವಾಂ ಚೈವ ಮಾಂಸಶೋಣಿತಕರ್ದಮಾಮ್ ।
ರುಧಿರಸ್ಯಂದಿನೀಂ ತತ್ರ ಭೀಮಃ ಪ್ರಾವರ್ತಯನ್ ನದೀಮ್ ॥95॥
ಅಂತರೇಣ ಕಳಿಂಗಾನಾಂ ಪಾಂಡವಾನಾಂ ಚ ವಾಹಿನೀಮ್ ।
ಕಳಿಂಗ ಯೋಧರಿಂದ ಹೊರಹೊಮ್ಮಿದ ಮಾಂಸ ಮತ್ತು ಶೋಣಿತಗಳ ಕೆಸರುಳ್ಳ ರಕ್ತಮಯವಾದ ನದಿಯನ್ನು ಅಲ್ಲಿ ಭೀಮಸೇನನು ಕಳಿಂಗರ ಮತ್ತು ಪಾಂಡವರ ಸೈನ್ಯದ ಮಧ್ಯದಲ್ಲಿ ಹರಿಸಿದನು.
ಸಂತತಾರ ಸುದುಸ್ತಾರಾಂ ಭೀಮಸೇನೋ ಮಹಾಬಲಃ ॥96॥

ಮಹಾಬಲನಾದ ಭೀಮಸೇನನು ದಾಟಲು ಅಸಾಧ್ಯವಾದ ಕಳಿಂಗರ ಸೇನೆಯನ್ನು ದಾಟಿದನು.
ಭೀಮಸೇನಂ ತಥಾ ದೃಷ್ಟ್ವಾ ಪ್ರಾಕ್ರೋಶಂಸ್ತಾವಕಾ ನೃಪ |
ಕಾಲೋಽಯಂ ಭೀಮರೂಪೇಣ ಕಳಿಂಗೈಃ ಸಹ ಯುಧ್ಯತೇ ॥97॥
ಹಾಗಿದ್ದ ಭೀಮಸೇನನನ್ನು ನೋಡಿ ಎಲ್ಲೈ ರಾಜನೇ, ನಿನ್ನವರು ಮೃತ್ಯುವೇ ಭೀಮನ ರೂಪದಿಂದ ಕಳಿಂಗರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದೆ ಎಂದು ಕಿರುಚಿದರು.
ತತಃ ಶಾಂತನವೋ ಭೀಷ್ಮಃ ಶ್ರುತ್ವಾ ತಂ ನಿನದಂ ರಣೇ |
ಅಭ್ಯಯಾತ್ ತ್ವರಿತೋ ಭೀಮಂ ವ್ಯೂಢಾನೀಕಃ ಸಮಂತತಃ ॥98॥
ಆಗ ಶಂತನು ಪುತ್ರರಾದ ಭೀಷ್ಮರು ರಣರಂಗದಲ್ಲಿ ಆ ನಿನಾದವನ್ನು ಕೇಳಿ ಎಲ್ಲ ಕಡೆಯಲ್ಲಿಯೂ ಸೈನ್ಯದಿಂದ ವ್ಯೂಹಗೊಂಡಿದ್ದ ಭೀಮನ ಕಡೆಗೆ ಶೀಘ್ರವಾಗಿ ಬಂದರು.
ತಂ ಸಾತ್ಯಕಿರ್ಭೀಮಸೇನೋ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಅಭ್ಯದ್ರವಂತ ಭೀಷ್ಮಸ್ಯ ರಥಂ ಹೇಮಪರಿಷ್ಕೃತಮ್ ॥99॥
ಸಾತ್ಯಕಿ, ಭೀಮಸೇನ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನ ಈ ಮೂವರು ಸುವರ್ಣಾಲಂಕೃತವಾದ ಭೀಷ್ಮರ ರಥದ ಕಡೆಗೆ ಮುನ್ನುಗ್ಗಿದರು.
ಪರಿವಾರ್ಯ ಚ ತೇ ಸರ್ವೇ ಗಾಂಗೇಯಂ ರಭಸಂ ರಣೇ |
ತ್ರಿಭಿಸ್ತ್ರಿಭಿಃ ಶರೈರ್ಘೋರೈರ್ಭೀಷ್ಮಮಾನರ್ಚ್ಛುರಂಜಸಾ ॥100॥
ಅವರೆಲ್ಲರೂ ವೇಗಶಾಲಿಯಾದ ಭೀಷ್ಮರನ್ನು ಯುದ್ಧಭೂಮಿಯಲ್ಲಿ ಸುತ್ತುವರಿದು ಮೂರು ಮೂರು ಘೋರವಾದ ಬಾಣಗಳಿಂದ ಭೀಷ್ಮರನ್ನು ಚೆನ್ನಾಗಿ ಹಿಂಸಿಸಿದರು.
ಪ್ರತ್ಯವಿಧ್ಯತ ತಾನ್ ಸರ್ವಾನ್ ಪಿತಾ ದೇವವ್ರತಸ್ತವ |
ಯತಮಾನಾನ್ ಮಹೇಷ್ವಾಸಾನ್ ತ್ರಿಭಿಸ್ತ್ರಿಭಿರಜಿಹ್ಮಗೈಃ ॥101॥
ನಿನ್ನ ತಂದೆಯಾದ ದೇವವ್ರತರು ತಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡಲು ಪ್ರಯತ್ನಪಡುತ್ತಿದ್ದ ಆ ಮೂವರು ಧನುರ್ಧಾರಿಗಳ ಮೇಲೆಯೂ ನೇರವಾಗಿ ಸಾಗುವ ಮೂರುಮೂರು ಬಾಣಗಳನ್ನು ಪ್ರಯೋಗಿಸಿ ಅವರನ್ನು ವೇಧಿಸಿದರು.
ತತಃ ಶರಸಹಸ್ರೇಣ ಸನ್ನಿವಾರ್ಯ ಮಹಾರಥಾನ್ |
ಹಯಾನ್ ಕಾಂಚನಸನ್ನಾಹಾನ್ ಭೀಮಸ್ಯ ನ್ಯಹನಚ್ಛರೈಃ ॥102॥
ಅನಂತರ ಮಹಾರಥರಾದ ಅವರನ್ನು ಒಂದು ಸಹಸ್ರ ಬಾಣಗಳಿಂದ ತಡೆದು ಸುವರ್ಣಾಲಂಕೃತವಾಗಿದ್ದ ಭೀಮಸೇನನ ರಥದ ಕುದುರೆಗಳನ್ನು ಬಾಣಗಳಿಂದ ಕೊಂದರು.
ಹತಾಶ್ವೇ ತು ರಥೇ ತಿಷ್ಠನ್ ಭೀಮಸೇನಃ ಪ್ರತಾಪವಾನ್ |
ಶಕ್ತಿಂ ಚಿಕ್ಷೇಪ ತರಸಾ ಗಾಂಗೇಯಸ್ಯ ರಥಂ ಪ್ರತಿ ॥103॥
ಪ್ರತಾಪಶಾಲಿಯಾದ ಭೀಮಸೇನನು ಅಶ್ವಗಳನ್ನು ಕಳೆದುಕೊಂಡು ರಥದಲ್ಲಿಯೇ ನಿಂತು ಭೀಷ್ಮರ ರಥದ ಮೇಲೆ ವೇಗವಾಗಿ ಶಕ್ತ್ಯಾಯುಧವನ್ನು ಎಸೆದನು.
ಅಪ್ರಾಪ್ತಾಮೇವ ತಾಂ ಶಕ್ತಿಂ ಪಿತಾ ದೇವವ್ರತಸ್ತವ |
ತ್ರಿಧಾ ಚಿಚ್ಛೇದ ಸಮರೇ ಸಾ ಪೃಥಿವ್ಯಾಮಶೀರ್ಯತ ॥104॥
ನಿನ್ನ ತಂದೆಯಾದ ದೇವವ್ರತರು ತಮ್ಮ ಬಳಿಗೆ ಬರುವುದಕ್ಕಿಂತ ಮೊದಲೇ ಆ ಶಕ್ತಿಯನ್ನು ಮೂರುಭಾಗವಾಗಿ ಕತ್ತರಿಸಿದರು. ಅದು ಭೂಮಿಯ ಮೇಲೆ ಬಿದ್ದು ನಾಶವನ್ನು ಹೊಂದಿತು.
ತತಃ ಶೈಕ್ಯಾಯಸೀಂ ಗುರ್ವೀಂ ಪ್ರಗೃಹ್ಯ ಬಲವದ್ ಗದಾಮ್ |
ಭೀಮಸೇನೋ ರಥಾತ್ ತೂರ್ಣಂ ಪುಪ್ಲುವೇ ಮನುಜರ್ಷಭ ॥105॥
ಎಲೈ ಮನುಜಶ್ರೇಷ್ಠನೇ, ಅನಂತರ ಭೀಮಸೇನನು ನೆಲುವಿನಲ್ಲಿಟ್ಟಿದ್ದ ಭಾರವಾದ ಕಬ್ಬಿಣದ ಗದೆಯನ್ನು ಹಿಡಿದು ತನ್ನ ರಥದಿಂದ ಶೀಘ್ರವಾಗಿ ಹಾರಿದನು.
ಸಾತ್ಯಕೋಽಪಿ ತತಸ್ತೂರ್ಣಂ ಭೀಮಸ್ಯ ಪ್ರಿಯಕಾಮ್ಯಯಾ |
ಸಾರಥಿಂ ಕುರುವೃದ್ಧಸ್ಯ ಪಾತಯಾಮಾಸ ಸಾಯಕೈಃ ॥106॥
ಸಾತ್ಯಕಿಯೂ ಸಹ ಭೀಮನಿಗೆ ಹಿತವನ್ನು ಮಾಡಲು ಬಯಸಿ ಶೀಘ್ರವಾಗಿ ಕುರುವೃದ್ಧರಾದ ಭೀಷ್ಮರ ಸಾರಥಿಯನ್ನು ಬಾಣಗಳಿಂದ ಹೊಡೆದುರುಳಿಸಿದನು.
ಭೀಷ್ಮಸ್ತು ನಿಹತೇ ತಸ್ಮಿನ್ ಸಾರಥೌ ರಥಿನಾಂ ವರಃ |
ವಾತಾಯಮಾನೈಸ್ತೈರಶ್ವೈರಪನೀತೋ ರಣಾಜಿರಾತ್ ॥107॥
ರಥಿಶ್ರೇಷ್ಠರಾದ ಭೀಷ್ಮರ ಸಾರಥಿಯು ಹಾಗೆ ಕೊಲ್ಲಲ್ಪಡುತ್ತಿರಲು ವಾಯುವೇಗವುಳ್ಳ ಭೀಷ್ಮರ ಕುದುರೆಗಳು ಭೀಷ್ಮರನ್ನು ಯುದ್ಧಭೂಮಿಯಿಂದ ಹೊರಗೆ ಕರೆದುಕೊಂಡು ಹೋದವು.
ಭೀಮಸೇನಸ್ತತೋ ರಾಜನ್ನಪನೀತೇ ಮಹಾವ್ರತೇ |
ಪ್ರಜಜ್ವಾಲ ಯಥಾ ವಹ್ನಿರ್ದಹನ್ ಕಕ್ಷಮಿವೈಧಿತಃ ॥108॥
ಎಲೈ ರಾಜನೇ, ಮಹಾವ್ರತರಾದ ಭೀಷ್ಮರು ರಣರಂಗದಿಂದ ಅಪಯಾನವನ್ನು ಮಾಡಿದಾಗ ಪ್ರವೃದ್ಧವಾದ ಅಗ್ನಿಯು ಹುಲ್ಲಿನ ರಾಶಿಯನ್ನು ಸುಡುವಂತೆ ಭೀಮಸೇನನು ಕೋಪದಿಂದ ಉರಿದನು.
ಸ ಹತ್ವಾ ಸರ್ವಕಾಳಿಂಗಾನ್ ಸೇನಾಮಧ್ಯೇ ವ್ಯತಿಷ್ಠತ |

ನೈನಮಭ್ಯುತ್ಸಹನ್ ಕೇಚಿತ್ ತಾವಕಾ ಭರತರ್ಷಭ ॥109॥
ಎಲೈ ಭರತಶ್ರೇಷ್ಠನೇ, ಅವನು ಎಲ್ಲ ಕಾಳಿಂಗರನ್ನೂ ಸಂಹರಿಸಿ ಸೇನೆಯ ಮಧ್ಯದಲ್ಲಿ ನಿಂತನು. ನಿನ್ನವರು ಯಾರೂ ಅವನ ಬಳಿಗೆ ಹೋಗಲು ಧೈರ್ಯವನ್ನು ಹೊಂದಿರಲಿಲ್ಲ.
ಧೃಷ್ಟದ್ಯುಮ್ನಸ್ತಮಾರೋಪ್ಯ ಸ್ವರಥೇ ರಥಿನಾಂ ವರಃ।
ಪಶ್ಯತಾಂ ಸರ್ವಸೈನ್ಯಾನಾಮಪೋವಾಹ ಯಶಸ್ವಿನಮ್ ॥110॥
ರಥಿಕರಲ್ಲಿ ಶ್ರೇಷ್ಠನಾದ ಧೃಷ್ಟದ್ಯುಮ್ನನು ಕೀರ್ತಿವಂತನಾದ ಭೀಮಸೇನನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಎಲ್ಲ ಸೈನ್ಯವು ನೋಡುತ್ತಿರುವಂತೆಯೇ ದೂರ ಹೋದನು.
ಸಂಪೂಜ್ಯಮಾನಃ ಪಾಂಚಾಲ್ಯೈರ್ಮತ್ಸ್ಯೈಶ್ಚ ಭರತರ್ಷಭ।
ಧೃಷ್ಟದ್ಯುಮ್ನಂ ಪರಿಷ್ವಜ್ಯ ಸಮೇಯಾದಥ ಸಾತ್ಯಕಿಮ್ ॥111॥
ಎಲೈ ಭರತಶ್ರೇಷ್ಠನೇ, ಭೀಮಸೇನನು ಪಾಂಚಾಲರಿಂದಲೂ ಮತ್ತು ಮತ್ಸ್ಯರಿಂದಲೂ ಪೂಜಿತನಾಗಿ ಧೃಷ್ಟದ್ಯುಮ್ನನನ್ನು ಆಲಿಂಗಿಸಿ ಸಾತ್ಯಕಿಯ ಜೊತೆಯಲ್ಲಿ ಸೇರಿದನು.
ಅಥಾಬ್ರವೀದ್ ಭೀಮಸೇನಂ ಸಾತ್ಯಕಿಃ ಸತ್ಯವಿಕ್ರಮಃ।
ಪ್ರಹರ್ಷಯನ್ ಯದುವ್ಯಾಘ್ರೋ ಧೃಷ್ಟದ್ಯುಮ್ನಸ್ಯ ಪಶ್ಯತಃ ॥112॥
ಆಗ ಸತ್ಯಪರಾಕ್ರಮಿಯಾದ, ಯದುಶ್ರೇಷ್ಠನಾದ ಸಾತ್ಯಕಿಯು ಧೃಷ್ಟದ್ಯುಮ್ನನು ನೋಡುತ್ತಿರುವಂತೆಯೇ ಭೀಮಸೇನನಿಗೆ ಸಂತೋಷವನ್ನುಂಟು ಮಾಡುತ್ತಾ ಮಾತನಾಡಿದನು.
ದಿಷ್ಟ್ಯಾ ಕಳಿಂಗರಾಜಶ್ಚ ರಾಜಪುತ್ರಶ್ಚ ಕೇತುಮಾನ್।
ಶಕ್ರದೇವಶ್ಚ ಕಾಳಿಂಗಃ ಕಳಿಂಗಾಶ್ಚ ಮೃಧೇ ಹತಾಃ ॥113॥
ದೇವರ ದಯೆಯಿಂದ ಕಳಿಂಗರಾಜನೂ, ರಾಜಪುತ್ರನಾದ ಕೇತುಮಂತನೂ, ಶಕ್ರದೇವನೂ ಮತ್ತು ಕಳಿಂಗರೆಲ್ಲರೂ ಯುದ್ಧದಲ್ಲಿ ಹತರಾದರು.
ಸ್ವಬಾಹುಬಲವೀರ್ಯೇಣ ನಾಗಾಶ್ವರಥಸಂಕುಲಃ।
ಮಹಾವ್ಯೂಹಃ ಕಳಿಂಗಾನಾಮೇಕೇನ ಮೃದಿತಸ್ತ್ವಯಾ ॥114॥
ನೀನು ನಿನ್ನ ಬಾಹುಬಲ ಮತ್ತು ಪರಾಕ್ರಮವನ್ನೇ ಆಶ್ರಯಿಸಿ, ಗಜಾಶ್ವರಥಗಳಿಂದ ನಿಬಿಡವಾದ ಮಹಾವ್ಯೂಹರೂಪವಾದ ಕಳಿಂಗರ ಸೈನ್ಯವನ್ನು ಒಬ್ಬನೇ ನಾಶಗೊಳಿಸಿದೆ.
ಏವಮುಕತ್ವ ಶಿನೇರ್ನಪ್ತಾ ದೀರ್ಘಬಾಹುರರಿಂದಮಃ।
ರಥಾದ್ ರಥಮಭಿದ್ರುತ್ಯ ಪರ್ಯಷ್ವಜತ ಪಾಂಡವಮ್ ॥115॥
ಹೀಗೆ ಹೇಳಿ ಶಿನಿಯ ಪುತ್ರನೂ, ದೀರ್ಘಬಾಹುವೂ, ಅರಿಂದಮನೂ ಆದ ಸಾತ್ಯಕಿಯು ತನ್ನ ರಥದಿಂದ ಧೃಷ್ಟದ್ಯುಮ್ನನ ರಥಕ್ಕೆ ಹಾರಿ ಭೀಮಸೇನನನ್ನು ಆಲಿಂಗಿಸಿದನು.
ತತಃ ಸ್ವರಥಮಾರುಹ್ಯ ಪುನರೇವ ಮಹಾರಥಃ।
ತಾವಕಾನವಧೀತ್ ಕ್ರುದ್ಧೋ ಭೀಮಸ್ಯ ಬಲಮಾದಧತ್ ॥116॥
ಅನಂತರ ಮಹಾರಥನಾದ ಸಾತ್ಯಕಿಯು ಪುನಃ ತನ್ನ ರಥವನ್ನು ಏರಿ ಕ್ರುದ್ಧನಾಗಿ ಭೀಮನಿಗೆ ಬಲವನ್ನುಂಟು ಮಾಡುತ್ತಾ ನಿನ್ನ ಸೈನಿಕರನ್ನು ಸಂಹರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂದನೆಯ ಅಧ್ಯಾಯ
ಅಭಿಮನ್ಯು ಮತ್ತು ಅರ್ಜುನರ ಪರಾಕ್ರಮ. ಭೀಷ್ಮರಿಂದ ಸೈನ್ಯಾವಹಾರ.
ಸಂಜಯಃ
ಗತಾಪರಾಹ್ಣಭೂಯಿಷ್ಠೇ ತಸ್ಮಿನ್ನಹನಿ ಭಾರತ।
ರಥನಾಗಾಶ್ವಪತ್ತೀನಾಂ ಸಾದಿನಾಂ ಚ ಮಹಾಕ್ಷಯೇ ॥1॥
ದ್ರೋಣಪುತ್ರೇಣ ಶಲ್ಯೇನ ಕೃಪೇಣ ಚ ಮಹಾತ್ಮನಾ।
ಸಮಸಜ್ಜತ ಪಾಂಚಾಲ್ಯಸ್ತ್ರಿಭಿರೇತೈರ್ಮಹಾರಥೈಃ ॥2॥
ಸಂಜಯ ಎಲೈ ಭಾರತನೇ, ಆ ದಿವಸದ ಮಧ್ಯಾಹ್ನದಲ್ಲಿ ಬಹುಭಾಗವು ಕಳೆದಿರಲು ರಥಗಳು, ಗಜಗಳು, ಅಶ್ವಗಳು, ಅಶ್ವಾರೋಹಿಗಳು ಮತ್ತು ಪದಾತಿಗಳು ಬಹಳ ವಿನಾಶವನ್ನು ಹೊಂದುತ್ತಿರಲು ಧೃಷ್ಟದ್ಯುಮ್ನನು ಮಹಾರಥರಾದ ಅಶ್ವತ್ಥಾಮರನ್ನು, ಶಲ್ಯನನ್ನು, ಮಹಾತ್ಮರಾದ ಕೃಪರನ್ನು ಎದುರಿಸಿ ಯುದ್ಧವನ್ನು ಮಾಡಿದನು.
ಸ ಲೋಕವಿದಿತಾನಶ್ವಾನ್ ನಿಜಘಾನ ಮಹಾಬಲಃ।
ದ್ರೌಣೇಃ ಪಾಂಚಾಲದಾಯಾದಃ ಶಿತೈರ್ದಶಭಿರಾಶುಗೈಃ ॥3॥
ಪಾಂಚಾಲದೇಶದ ರಾಜಕುಮಾರನಾದ, ಮಹಾಬಲನಾದ ಅವನು ಶೀಘ್ರಗಾಮಿಗಳಾದ ಹರಿತವಾದ ಹತ್ತುಬಾಣಗಳಿಂದ ಅಶ್ವತ್ಥಾಮರ ಲೋಕವಿಖ್ಯಾತವಾದ ಅಶ್ವಗಳನ್ನು ಸಂಹರಿಸಿದನು.
ತತಃ ಶಲ್ಯರಥಂ ತೂರ್ಣಮಾಸ್ಥಾಯ ಹತವಾಹನಃ।

ದ್ರೌಣಿಃ ಪಾಂಚಾಲದಾಯಾದಮಭ್ಯವರ್ಷದಥೇಷುಭಿಃ ॥4॥
ತನ್ನ ರಥದ ವಾಹನಗಳು ನಾಶವನ್ನು ಹೊಂದುತ್ತಿರಲು ಅಶ್ವತ್ಥಾಮರು ಶೀಘ್ರವಾಗಿ ಶಲ್ಯನ ರಥವನ್ನು ಏರಿ ಧೃಷ್ಟದ್ಯುಮ್ನನ ಮೇಲೆ ಬಾಣಗಳ ಮಳೆಯನ್ನು ಕರೆದರು.
ಧೃಷ್ಟದ್ಯುಮ್ನಂ ತು ಸಂಸಕ್ತಂ ದ್ರೌಣಿನಾ ದೃಶ್ಯ ಭಾರತ |
ಸೌಭದ್ರೋಽಭ್ಯಪತತ್ ತೂರ್ಣಂ ವಿಕಿರನ್ ನಿಶಿತಾನ್ ಶರಾನ್ ॥5॥
ಎಲೈ ಭಾರತನೇ, ಧೃಷ್ಟದ್ಯುಮ್ನನು ಅಶ್ವತ್ಥಾಮರ ಜೊತೆಯಲ್ಲಿ ಸೆಣೆಸುತ್ತಿರುವುದನ್ನು ನೋಡಿ ಅಭಿಮನ್ಯುವು ಶೀಘ್ರವಾಗಿ ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಅಲ್ಲಿಗೆ ಧಾವಿಸಿದನು.
ಸ ಶಲ್ಯಂ ಪಂಚವಿಂಶತ್ಯಾ ಕೃಪಂ ಚ ನವಭಿಃ ಶರೈಃ |
ಅಶ್ವತ್ಥಾಮಾನಮಷ್ಟಾಭಿರ್ವಿವ್ಯಾಧ ಪುರುಷರ್ಷಭ ॥6॥
ಎಲೈ ಪುರುಷಶ್ರೇಷ್ಠನೇ, ಅವನು ಶಲ್ಯನನ್ನು ಇಪ್ಪತ್ತೈದು ಬಾಣಗಳಿಂದಲೂ, ಕೃಪರನ್ನು ಒಂಭತ್ತು ಬಾಣಗಳಿಂದಲೂ, ಅಶ್ವತ್ಥಾಮರನ್ನು ಎಂಟು ಬಾಣಗಳಿಂದಲೂ ಘಾಸಿಗೊಳಿಸಿದನು.
ಆರ್ಜುನಿಂ ತು ತತಸ್ತೂರ್ಣಂ ದ್ರೌಣಿರ್ವಿವ್ಯಾಧ ಪತ್ರಿಣಾ |
ಶಲ್ಯೋ ದ್ವಾದಶಭಿಶ್ಚೈವ ಕೃಪಶ್ಚ ನಿಶಿತೈಸ್ತ್ರಿಭಿಃ ॥7॥
ಆಗ ಅಶ್ವತ್ಥಾಮಾಚಾರ್ಯರು ಶೀಘ್ರವಾಗಿ ಅಭಿಮನ್ಯುವಿನ ಮೇಲೆ ಬಾಣಗಳ ಪ್ರಯೋಗವನ್ನು ಮಾಡಿದರು. ಶಲ್ಯನು ಹನ್ನೆರಡು ಬಾಣಗಳಿಂದಲೂ, ಕೃಪರು ಹರಿತವಾದ ಮೂರು ಬಾಣಗಳಿಂದಲೂ ಅವನನ್ನು ಘಾಸಿಗೊಳಿಸಿದರು.
ಲಕ್ಷಣಸ್ತವ ಪೌತ್ರಸ್ತು ತವ ಪೌತ್ರಮವಸ್ಥಿತಮ್ |
ಅಭ್ಯವರ್ತತ ಸಂಹೃಷ್ಟಸ್ತತೋ ಯುದ್ಧಮವರ್ತತ ॥8॥
ನಿನ್ನ ಪೌತ್ರನಾದ ಲಕ್ಷಣನು ಯುದ್ಧದಲ್ಲಿ ನಿಂತ ಇನ್ನೊಬ್ಬ ಪೌತ್ರನಾದ ಅಭಿಮನ್ಯುವಿನ ಕಡೆಗೆ ಸಂತೋಷದಿಂದ ಸಾಗಿದನು. ಅನಂತರ ಯುದ್ಧವು ನಡೆಯಿತು.
ದೌರ್ಯೋಧನಿಸ್ತು ಸಂಕ್ರುದ್ಧಃ ಸೌಭದ್ರಂ ನವಭಿಃ ಶರೈಃ |
ವಿವ್ಯಾಧ ಸಮರೇ ರಾಜನ್ ತದದ್ಭುತಮಿವಾಭವತ್ ॥9॥
ದುರ್ಯೋಧನನ ಪುತ್ರನಾದ ಲಕ್ಷಣನು ಕೋಪಗೊಂಡು ಅಭಿಮನ್ಯುವನ್ನು ಒಂಬತ್ತು ಬಾಣಗಳಿಂದ ಪೀಡಿಸಿದನು. ರಾಜನೇ, ರಣರಂಗದಲ್ಲಿ ಅದು ಅದ್ಭುತವಾದಂತೆ ಇದ್ದಿತು.
ಅಭಿಮನ್ಯುಸ್ತು ಸಂಕ್ರುದ್ಧೋ ಭ್ರಾತರಂ ಭರತರ್ಷಭ |
ಶರೈಃ ಪಂಚಾಶತಾ ರಾಜನ್ ಕ್ಷಿಪ್ರಹಸ್ತೋಽಭ್ಯವಿಧ್ಯತ ॥10॥
ಎಲೈ ರಾಜನೇ, ಭರತಶ್ರೇಷ್ಠನೇ, ಅಭಿಮನ್ಯುವಾದರೂ ಬಹಳ ಕೋಪಗೊಂಡು ಕ್ಷಿಪ್ರಹಸ್ತವುಳ್ಳ ಅವನು ತನ್ನ ಸಹೋದರನನ್ನು ಐವತ್ತು ಬಾಣಗಳಿಂದ ಘಾಸಿಗೊಳಿಸಿದನು.
ಲಕ್ಷಣೋಽಪಿ ತತಸ್ತಸ್ಯ ಧನುಶ್ಚಿಚ್ಛೇದ ಪತ್ರಿಣಾ |
ಮುಷ್ಟಿದೇಶೇ ಮಹಾರಾಜ ತತ ಉಚ್ಚುಕ್ರುಶುರ್ಜನಾಃ ॥11॥
ಅನಂತರ ಲಕ್ಷ್ಮಣನೂ ಸಹ ಪತ್ರಿಯಿಂದ ಅವನ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು. ಎಲೈ ಮಹಾರಾಜನೇ, ಆಗ ಜನರು ಹರ್ಷೋದ್ಗಾರವನ್ನು ಮಾಡಿದರು.
ತದ್ವಿಹಾಯ ಧನುಶ್ಛಿನ್ನಂ ಸೌಭದ್ರಃ ಪರವೀರಹಾ |
ಅನ್ಯದಾದತ್ತವಾಂಶ್ಚಿತ್ರಂ ಕಾರ್ಮುಕಂ ವೇಗವತ್ತರಮ್ ॥12॥
ವೀರಶತ್ರುಘಾತಕನಾದ ಅಭಿಮನ್ಯುವು ಕತ್ತರಿಸಲ್ಪಟ್ಟ ಧನುಸ್ಸನ್ನು ಬಿಟ್ಟು ಬಹಳ ವೇಗವುಳ್ಳ ಇನ್ನೊಂದು ವಿಚಿತ್ರವಾದ ಧನುಸ್ಸನ್ನು ತೆಗೆದುಕೊಂಡನು.
ತೌ ತತ್ರ ಸಮರೇ ಹೃಷ್ಟೌ ಕೃತಪ್ರತಿಕೃತೈಷಿಣೌ |
ಅನ್ಯೋನ್ಯಂ ವಿಶಿಖೈಸ್ತೀಕ್ಷ್ಣೈರ್ಜಘ್ನತುಃ ಪುರುಷರ್ಷಭೌ ॥13॥
ಪುರುಷಶ್ರೇಷ್ಠರಾದ ಅವರಿಬ್ಬರೂ ಸಂತೋಷದಿಂದ ಕೂಡಿದವರಾಗಿ ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತೀಕಾರವನ್ನು ಮಾಡುತ್ತಾ ರಣರಂಗದಲ್ಲಿ ತೀಕ್ಷ್ಣವಾದ ಬಾಣಗಳಿಂದ ಹೊಡೆದರು.
ತತೋ ದುರ್ಯೋಧನೋ ರಾಜಾ ದೃಷ್ಟ್ವಾ ಪುತ್ರಂ ಮಹಾರಥಮ್ |
ಪೀಡಿತಂ ತವ ಪೌತ್ರೇಣ ಪ್ರಾಯಾತ್ ತತ್ರ ಜನೇಶ್ವರಃ ॥14॥
ಅನಂತರ ಜನೇಶ್ವರನಾದ ದುರ್ಯೋಧನರಾಜನು ಮಹಾರಥನಾದ ತನ್ನ ಪುತ್ರನು ನಿನ್ನ ಪೌತ್ರನಿಂದ ಪೀಡಿಸಲ್ಪಡುವುದನ್ನು ನೋಡಿ ಅಲ್ಲಿಗೆ ಹೋದನು.
ಸಂನಿವೃತ್ತೇ ತವ ಸುತೇ ಸರ್ವ ಏವ ಜನಾಧಿಪಾಃ |
ಆರ್ಜುನಿಂ ರಥವಂಶೇನ ಸಮಂತಾತ್ ಪರ್ಯವಾರಯನ್ ॥15॥
ನಿನ್ನ ಪುತ್ರನು ಅಲ್ಲಿಗೆ ಬಂದಮೇಲೆ ಎಲ್ಲ ರಾಜರೂ ತಮ್ಮ ರಥಸಮೂಹಗಳಿಂದ ಅಭಿಮನ್ಯುವನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಸ ತೈಃ ಪರಿವೃತಃ ಶೂರೈಃ ಶೂರೋ ಯುಧಿ ಸುದುರ್ಜಯೈಃ |
ನ ಸ್ಮ ವಿವ್ಯಥತೇ ರಾಜನ್ ಕೃಷ್ಣತುಲ್ಯಪರಾಕ್ರಮಃ ॥16॥
ಎಲೈ ರಾಜನೇ, ಯುದ್ಧದಲ್ಲಿ ದುರ್ಜಯರಾದ ಅನೇಕ ಶೂರರಿಂದ ಸುತ್ತುವರಿಯಲ್ಪಟ್ಟರೂ ಸಹ ಕೃಷ್ಣನಿಗೆ ಸಮಾನವಾದ

ಪರಾಕ್ರಮವುಳ್ಳ ಅಭಿಮನ್ಯುವು ವ್ಯಥೆ ಪಡಲಿಲ್ಲ.
ಸೌಭದ್ರಮಥ ಸಂಸಕ್ತಂ ತತ್ರ ದೃಷ್ಟ್ವಾ ಧನಂಜಯಃ |
ಅಭಿದುದ್ರಾವ ಸಂಕ್ರುದ್ಧಸ್ತ್ರಾತುಕಾಮಃ ಸ್ವಮಾತ್ಮಜಮ್ ||17||
ಅಭಿಮನ್ಯುವು ಆ ಮಹಾರಥರ ಎದುರಿನಲ್ಲಿರುವುದನ್ನು ನೋಡಿದ ಧನಂಜಯನು ತನ್ನ ಪುತ್ರನನ್ನು ರಕ್ಷಿಸುವ ಉದ್ದೇಶದಿಂದ ಕೋಪಗೊಂಡು ಅಲ್ಲಿಗೆ ಧಾವಿಸಿದನು.
ತತಃ ಸರಥನಾಗಾಶ್ವಾ ಭೀಷ್ಮದ್ರೋಣಪುರೋಗಮಾಃ |
ಅಭ್ಯವರ್ತಂತ ರಾಜಾನಃ ಸಹಿತಾಃ ಸವ್ಯಸಾಚಿನಮ್ ||18||
ಆಗ ಭೀಷ್ಮ-ದ್ರೋಣರೇ ಮೊದಲಾದ ಎಲ್ಲ ರಥನಾಗಾಶ್ವಗಳು ಮತ್ತು ರಾಜರು ಒಟ್ಟಾಗಿ ಅರ್ಜುನನ ಮೇಲೆ ಎರಗಿದರು.
ಉದ್ಧೂತಂ ಸಹಸಾ ಭೌಮಂ ನಾಗಾಶ್ವರಥಸಾದಿಭಿಃ |
ದಿವಾಕರಪಥಂ ಪ್ರಾಪ್ಯ ರಜಸ್ತೀವ್ರಮದೃಶ್ಯತ ||19||
ಗಜಾಶ್ವರಥಗಳಿಂದ ಮತ್ತು ಅಶ್ವಾರೋಹಿಗಳಿಂದ ಮೇಲೆದ್ದ ಭೂಮಿಯ ಧೂಳು ಸೂರ್ಯನ ಮಾರ್ಗವನ್ನು ತಲುಪಿ ತೀವ್ರವಾಗಿರುವುದು ಕಂಡುಬಂದಿತು.
ತಾನಿ ನಾಗಸಹಸ್ರಾಣಿ ಭೂಮಿಪಾಲಶತಾನಿ ಚ |
ತಸ್ಯ ಬಾಣಪಥಂ ಪ್ರಾಪ್ಯ ನಾಭ್ಯವರ್ತಂತ ಸರ್ವಶಃ ||20||
ಅರ್ಜುನನ ಬಾಣಪಥಕ್ಕೆ ಸಿಲುಕಿದ ಸಹಸ್ರ ಗಜಗಳಾಗಲೀ, ನೂರು ರಾಜರಾಗಲೀ ಯಾವ ಕಡೆಯಿಂದಲೂ ಅವನ ಬಳಿಗೆ ಮುಂದುವರಿಯಲು ಸಾಧ್ಯವಾಗಲಿಲ್ಲ.
ಪ್ರಣೇದುಃ ಸರ್ವಭೂತಾನಿ ಬಭೂವುಸ್ತಿಮಿರಾ ದಿಶಃ |
ಕುರೂಣಾಮನಯಸ್ತೀವ್ರಃ ಸಮದೃಶ್ಯತ ದಾರುಣಃ ||21||
ಎಲ್ಲ ಪ್ರಾಣಿಗಳೂ ಗಟ್ಟಿಯಾದ ನಾದವನ್ನು ಮಾಡಿದವು. ದಿಕ್ಕುಗಳು ಕತ್ತಲೆಯಿಂದ ತುಂಬಿದವು. ಕುರುಸೈನ್ಯದಲ್ಲಿ ದಾರುಣವಾದ ಮತ್ತು ತೀವ್ರವಾದ ಕ್ಷಯವು ಕಂಡುಬಂದಿತು.
ನಾಪ್ಯಂತರಿಕ್ಷಂ ನ ದಿಶೋ ನ ಭೂಮಿರ್ನ ಚ ಭಾಸ್ಕರಃ |
ಪ್ರಜಜ್ಞೇ ಭರತಶ್ರೇಷ್ಠ ಶರಸಂಘೈಃ ಕಿರೀಟಿನಃ ||22||
ಎಲೈ ಭರತಶ್ರೇಷ್ಠನೇ, ಅರ್ಜುನನ ಬಾಣಗಳ ಸಮೂಹದಿಂದಾಗಿ ಅಂತರಿಕ್ಷವಾಗಲೀ, ದಿಕ್ಕುಗಳಾಗಲೀ, ಭೂಮಿಯಾಗಲೀ, ಸೂರ್ಯನಾಗಲೀ ಕಾಣಲಿಲ್ಲ.
ಸಾದಿತಧ್ವಜನಾಗಾಸ್ತು ಹತಾಶ್ವಾ ರಥಿನೋ ಭೃಶಮ್ |
ವಿಪ್ರದ್ರುತರಥಾಃ ಕೇಚಿದ್ ದೃಶ್ಯಂತೇ ರಥಯೂಥಪಾಃ ||23||
ಗಜಗಳು ತಮ್ಮ ಧ್ವಜಗಳನ್ನು ಕಳೆದುಕೊಂಡವು. ರಥಿಕರು ತಮ್ಮ ಅಶ್ವಗಳನ್ನು ಕಳೆದುಕೊಂಡರು. ಇನ್ನು ಕೆಲವು ರಥಯೂಥಪರು ದಿಕ್ಕಾಪಾಲಾಗಿ ಓಡಿದರು.
ವಿರಥಾ ರಥಿನಶ್ಚಾನ್ಯೇ ಧಾವಮಾನಾಃ ಸಮಂತತಃ |
ತತ್ರ ತತ್ರೈವ ದೃಶ್ಯಂತೇ ಸಾಯುಧಾಃ ಸಾಂಗದೈರ್ಭುಜೈಃ ||24||
ರಥವನ್ನು ಕಳೆದುಕೊಂಡ ಇನ್ನು ಕೆಲವು ರಥಿಕರು ಎಲ್ಲ ಕಡೆಯಲ್ಲಿಯೂ ಓಡುತ್ತಾ ಅಲ್ಲಲ್ಲಿ ಆಯುಧಗಳಿಂದಲೂ, ಅಂಗದಗಳಿಂದಲೂ ಸಹಿತವಾದ ಅವರ ಭುಜಗಳು ಕಂಡುಬಂದವು.
ಹಯಾರೋಹಾ ಹಯಾಂಸ್ತ್ಯಕ್ತ್ವಾ ಗಜಾರೋಹಾಶ್ಚ ದಂತಿನಃ |
ಅರ್ಜುನಸ್ಯ ಭಯಾದ್ ರಾಜನ್ ಸಮಂತಾದ್ ವಿಪ್ರದುದ್ರುವುಃ ||25||
ಎಲೈ ರಾಜನೇ, ಅಶ್ವಾರೋಹಿಗಳು ಅಶ್ವವನ್ನು ಬಿಟ್ಟು, ಗಜಾರೋಹಿಗಳು ಗಜಗಳನ್ನು ಬಿಟ್ಟು ಅರ್ಜುನನ ಭಯದಿಂದ ಎಲ್ಲ ಕಡೆಗಳಲ್ಲಿಯೂ ಓಡಿ ಹೋದರು.
ರಥೇಭ್ಯಶ್ಚ ಗಜೇಭ್ಯಶ್ಚ ಹಯೇಭ್ಯಶ್ಚ ನರಾಧಿಪಾಃ |
ಪತಿತಾಃ ಪಾತ್ಯಮಾನಾಶ್ಚ ದೃಶ್ಯಂತೇಽರ್ಜುನತಾಡಿತಾಃ ||26||
ಅರ್ಜುನನ ಬಾಣಗಳಿಂದ ಪೀಡಿತರಾಗಿ ರಥಗಳಿಂದಲೂ, ಗಜಗಳಿಂದಲೂ, ಅಶ್ವಗಳಿಂದಲೂ ಕೆಳಗೆ ಬಿದ್ದಿರುವ ಮತ್ತು ಕೆಳಗೆ ಬೀಳುತ್ತಿರುವ ರಾಜರು ಕಂಡುಬಂದರು.
ಸಗದಾನುದ್ಯತಾನ್ ಬಾಹೂನ್ ಸಖಡ್ಗಾಂಶ್ಚ ವಿಶಾಂಪತೇ |
ಸಪ್ರಾಸಾಂಶ್ಚ ಸತೂಣೀರಾನ್ ಸಶರಾನ್ ಸಶರಾಸನಾನ್ ||27||
ಸಾಂಕುಶಾನ್ ಸಪತಾಕಾಂಶ್ಚ ತತ್ರತತ್ರಾರ್ಜುನೋ ನೃಣಾಮ್ |
ನಿಚಕರ್ತ ಶರೈರುಗ್ರೈ ರೌದ್ರಂ ಬಿಭ್ರದ್ ವಪುಸ್ತದಾ ||28||
ಅರ್ಜುನನು ಭಯಂಕರವಾದ ರೂಪವನ್ನು ಧರಿಸಿ ಶತ್ರುಯೋಧರ ಗದೆಯನ್ನು ಎತ್ತಿದ ಬಾಹುಗಳನ್ನೂ, ಖಡ್ಗ ಸಹಿತವಾದ ಬಾಹುಗಳನ್ನೂ ಪ್ರಾಸಗಳಿಂದ, ತೂಣೀರಗಳಿಂದ, ಬಾಣಗಳಿಂದ, ಬಿಲ್ಲುಗಳಿಂದ, ಅಂಕುಶಗಳಿಂದ ಮತ್ತು ಪತಾಕೆಗಳಿಂದ ಸಹಿತವಾದ ಬಾಹುಗಳನ್ನೂ ತನ್ನ ಉಗ್ರವಾದ ಬಾಣಗಳಿಂದ ಅಲ್ಲಲ್ಲಿ ಕತ್ತರಿಸಿದನು.
ಪರಿಘಾಣಾಂ ಪ್ರವೃದ್ಧಾನಾಂ ಮುದ್ಗರಾಣಾಂ ಚ ಮಾರಿಷ |
ಪ್ರಾಸಾನಾಂ ಭಿಂಡಿಪಾಲಾನಾಂ ನಿಸ್ತ್ರಿಂಶಾನಾಂ ಚ ಸಂಯುಗೇ ||29||
ಪರಶ್ವಧಾನಾಂ ತೀಕ್ಷ್ಣಾನಾಂ ತೋಮರಾಣಾಂ ಚ ಭಾರತ |

ವರ್ಮಣಾಂ ಚಾಪವಿದ್ಧಾನಾಂ ಕವಚಾನಾಂ ಚ ಭೂತಳೇ ॥30॥
ಧ್ವಜಾನಾಂ ಚರ್ಮಣಾಂ ಚೈವ ವ್ಯಜನಾನಾಂ ಚ ಸರ್ವಶಃ |
ಛತ್ರಾಣಾಂ ಹೇಮದಂಡಾನಾಂ ಚಾಮರಾಣಾಂ ಚ ಭಾರತ ॥31॥
ಪ್ರತೋದಾನಾಂ ಕಶಾನಾಂ ಚ ಯೋಕ್ತ್ರಾಣಾಂ ಚೈವ ಮಾರಿಷ |
ರಾಶಯಶ್ಚಾತ್ರ ದೃಶ್ಯಂತೇ ವಿನಿಕೀರ್ಣಾ ರಣಕ್ಷಿತೌ ॥32॥
ಎಲೈ ಭಾರತನೇ, ಪೂಜ್ಯನೇ, ಪರಿಘಗಳ, ಮುದ್ಗರಗಳ, ಪ್ರಾಸಗಳ, ಭಿಂಡಿಪಾಲಗಳ, ಖಡ್ಗಗಳ, ತೀಕ್ಷ್ಣವಾದ ಪರಶ್ವಧಗಳ, ತೋಮರಗಳ, ತ್ಯಜಿಸಿದ ಕವಚಗಳ, ಧ್ವಜಗಳ, ಗುರಾಣಿಗಳ, ವ್ಯಜನಗಳ, ಹೇಮದಂಡಗಳುಳ್ಳ ಛತ್ರಗಳ, ಚಾಮರಗಳ, ಚಾವಟಿಗಳ, ಅಂಕುಶಗಳ, ಕಡಗೂಟಗಳ ರಾಶಿಗಳು ರಣರಂಗದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುದು ಕಂಡುಬಂದಿತು.
ನಾಸೀತ್ ತತ್ರ ಪುಮಾನ್ ಕಶ್ಚಿತ್ ತವ ಸೈನ್ಯಸ್ಯ ಭಾರತ |
ಯೋಽರ್ಜುನಂ ಸಮರೇ ಶೂರಂ ಪ್ರತ್ಯುದ್ಯಾಯಾತ್ ಕಥಂಚನ ॥33॥
ಎಲೈ ಭಾರತನೇ, ನಿನ್ನ ಸೈನ್ಯದಲ್ಲಿ ಶೂರನಾದ ಅರ್ಜುನನನ್ನು ಯುದ್ಧದಲ್ಲಿ ಎದುರಿಸಬಹುದಾದ ಒಬ್ಬ ಪುರುಷನೂ ಇರಲಿಲ್ಲ.
ಯೋ ಯೋ ಹಿ ಸಮರೇ ಪಾರ್ಥಂ ಪ್ರತ್ಯುದ್ಯಾತಿ ವಿಶಾಂ ಪತೇ |
ಸಸ ವೈ ವಿಶಿಖೈಸ್ತೀಕ್ಷ್ಣೈಃ ಪರಲೋಕಾಯ ನೀಯತೇ ॥34॥
ಎಲೈ ರಾಜನೇ, ಯಾವ ಯಾವನು ಅರ್ಜುನನನ್ನು ಎದುರಿಸಿ ಅವನ ಮುಂದೆ ಹೋದನೋ, ಅವನು ಅರ್ಜುನನಿಂದ ತೀಕ್ಷ್ಣವಾದ ಬಾಣಗಳಿಂದ ಪರಲೋಕಕ್ಕೆ ಕಳುಸಲ್ಪಟ್ಟನು.
ತೇಷು ವಿದ್ರುವಮಾಣೇಷು ತವ ಯೋಧೇಷು ಸರ್ವಶಃ |
ಅರ್ಜುನೋ ವಾಸುದೇವಶ್ಚ ದಧ್ಮತುರ್ವಾರಿಜೋತ್ತಮೌ ॥35॥
ನಿನ್ನ ಯೋಧರು ಎಲ್ಲ ಕಡೆಗಳಲ್ಲಿಯೂ ಓಡಿಹೋಗುತ್ತಿರಲು ಅರ್ಜುನನೂ ಮತ್ತು ಕೃಷ್ಣನೂ ತಮ್ಮ ಶ್ರೇಷ್ಠವಾದ ಶಂಖಗಳನ್ನು ಊದಿದರು.
ತತ್ ಪ್ರಭಗ್ನಂ ಬಲಂ ದೃಷ್ಟ್ವಾ ಪಿತಾ ದೇವವ್ರತಸ್ತವ |
ಅಬ್ರವೀತ್ ಸಮರೇ ಶೂರಂ ಭಾರದ್ವಾಜಂ ಸ್ಮಯನ್ನಿವ ॥36॥
ತನ್ನ ಸೈನ್ಯವು ಭಗ್ನವಾದುದನ್ನು ನೋಡಿ ನಿನ್ನ ತಂದೆಯಾದ ದೇವವ್ರತನು ರಣರಂಗದಲ್ಲಿ ದ್ರೋಣರನ್ನು ಕುರಿತು ನಗುವವನಂತೆ ಮಾತನಾಡಿದನು.
ಏಷ ಪಾಂಡುಸುತೋ ವೀರಃ ಕೃಷ್ಣೇನ ಸಹಿತೋ ಬಲೀ |
ತಥಾ ಕರೋತಿ ಸೈನ್ಯಾನಿ ಯಥಾ ಕುರ್ಯಾದ್ ಧನಂಜಯಃ ॥37॥
ಕೃಷ್ಣನಿಂದ ಸಹಿತನಾದ, ಬಲಿಷ್ಠನಾದ, ಪಾಂಡುಸುತನಾದ, ವೀರನಾದ ಅರ್ಜುನನು ಅಗ್ನಿಯಂತೆ ನಮ್ಮ ಸೈನ್ಯವನ್ನು ನಾಶಗೊಳಿಸುತ್ತಿದ್ದಾನೆ (ಸುಡುತ್ತಿದ್ದಾನೆ).
ನ ಹ್ಯೇಷ ಸಮರೇ ಶಕ್ಯೋ ಜೇತುಮದ್ಯ ಕಥಂಚನ |
ಯಥಾಸ್ಯ ದೃಶ್ಯತೇ ರೂಪಂ ಕಾಲಾಂತಕಯಮೋಪಮಮ್ ॥38॥
ಕಾಲಾಂತಕನಾದ ಯಮನಂತಿರುವ ಅವನ ಈ ರೂಪವನ್ನು ನೋಡಿದರೆ ಈ ದಿನ ಯಾರೂ ಅವನನ್ನು ಜಯಿಸಲು ಸಾಧ್ಯವಿಲ್ಲ.
ನ ನಿವರ್ತಯಿತುಂ ಚಾಪಿ ಶಕ್ಯೇಯಂ ಮಹತೀ ಚಮೂಃ |
ಅನ್ಯೋನ್ಯಪ್ರೇಕ್ಷಯಾ ಪಶ್ಯ ದ್ರವತೀಯಂ ವರೂಥಿನೀ ॥39॥
ಈ ದೊಡ್ಡ ಸೈನ್ಯವನ್ನು ಹಿಂದಿರುಗಿಸಲೂ ಸಾಧ್ಯವಿಲ್ಲ. ಈ ಸೈನ್ಯವು ಪರಸ್ಪರವಾಗಿ ನೋಡುತ್ತಾ ಮುಂದೆ ಸಾಗುತ್ತಿದೆ.
ಏಷ ಚಾಸ್ತಂ ಗಿರಿಶ್ರೇಷ್ಠಂ ಭಾನುಮಾನ್ ಪ್ರತಿಪದ್ಯತೇ |
ವಪೂಂಷಿ ಸರ್ವಲೋಕಸ್ಯ ಸಂಹರನ್ನಿವ ಸರ್ವಥಾ ॥40॥
ಸೂರ್ಯನು ಎಲ್ಲ ಲೋಕಗಳ ವ್ಯಾಪಾರವನ್ನು ಸಂಹಾರ ಮಾಡುತ್ತಾ ಅಸ್ತಗಿರಿಯನ್ನು ತಲುಪಿದ್ದಾನೆ.
ತತ್ರಾವಹಾರಂ ಸಂಪ್ರಾಪ್ತಂ ಮನ್ಯೇಽಹಂ ಪುರುಷರ್ಷಭ |
ಶ್ರಾಂತಾ ಭೀತಾಶ್ಚ ನೋ ಯೋಧಾ ನ ಯೋತ್ಸ್ಯಂತಿ ಕಥಂಚನ ॥41॥
ಎಲೈ ಪುರುಷಶ್ರೇಷ್ಠರೇ, ಸೈನ್ಯವನ್ನು ಹಿಂದೆ ತೆಗೆದುಕೊಳ್ಳುವುದು ಉಚಿತವೆಂದು ನಾನು ಭಾವಿಸುತ್ತೇನೆ. ಹೆದರಿ ಬಳಲಿದ ನಮ್ಮ ಯೋಧರು ಯಾವ ಕಾರಣದಿಂದಲೂ ಯುದ್ಧವನ್ನು ಮಾಡುವುದಿಲ್ಲ.
ಏವಮುಕ್ತ್ವಾ ತತೋ ಭೀಷ್ಮೋ ದ್ರೋಣಮಾಚಾರ್ಯಸತ್ತಮಮ್ |
ಅವಹಾರಮಥೋ ಚಕ್ರೇ ತಾವಕಾನಾಂ ಮಹಾರಥಃ ॥42॥
ಆಚಾರ್ಯಶ್ರೇಷ್ಠರಾದ ದ್ರೋಣರನ್ನು ಕುರಿತು ಹೀಗೆ ಹೇಳಿ ಮಹಾರಥರಾದ ಭೀಷ್ಮರು ನಿನ್ನ ಸೈನ್ಯದ ಅವಹಾರವನ್ನು ಮಾಡಿದರು.
ತತೋಽವಹಾರಃ ಸೈನ್ಯಾನಾಂ ತವ ತೇಷಾಂ ಚ ಭಾರತ |
ಅಸ್ತಂ ಗಚ್ಛತಿ ಸೂರ್ಯೇಽಭೂತ್ ಸಂಧ್ಯಾಕಾಲೇ ಚ ವರ್ತತಿ ॥43॥
ಎಲೈ ಭಾರತನೇ, ಸೂರ್ಯಾಸ್ತನಾಗಿ ಸಂಧ್ಯಾಕಾಲವು ಉಂಟಾಗುತ್ತಿರಲು ನಿನ್ನ ಮತ್ತು ಅವರ ಸೈನ್ಯಗಳು ಅವಹಾರವನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.

ಭೀಷ್ಮರ ಸೈನಾಪತ್ಯದಲ್ಲಿ ಎರಡನೆಯ ದಿನದ ಯುದ್ಧವು ಮುಗಿಯಿತು.
* * * * *
ಐವತ್ತೆರಡನೆಯ ಅಧ್ಯಾಯ
ಮೂರನೆಯ ದಿವಸ ಯುದ್ಧದ ಪ್ರಾರಂಭ. ಭೀಷ್ಮರಿಂದ ಗರುಡವ್ಯೂಹದ ಮತ್ತು ಅರ್ಜುನನಿಂದ ಅರ್ಧಚಂದ್ರವ್ಯೂಹದ ರಚನೆ.
ಸಂಜಯಃ
ಪ್ರಭಾತಾಯಾಂ ತು ಶರ್ವರ್ಯಾಂ ಭೀಷ್ಮಃ ಶಾಂತನವಸ್ತತಃ |
ಅನೀಕಾನ್ಯನುಸಂಯಾನೇ ವ್ಯಾದಿದೇಶಾಥ ಭಾರತ ||1||
ಸಂಜಯ ಎಲೈ ಭಾರತನೇ, ರಾತ್ರಿಯು ಕಳೆದು ಪ್ರಾತಃಕಾಲವಾಗುತ್ತಿರಲು ಶಂತನು ಪುತ್ರರಾದ ಭೀಷ್ಮರು ತಮ್ಮ ಸೈನ್ಯವನ್ನು ಯುದ್ಧರಂಗಕ್ಕೆ ಹೊರಡಲು ಆದೇಶಿಸಿದರು.
ಗಾರುಡಂ ಚ ಮಹಾವ್ಯೂಹಂ ಚಕ್ರೇ ಶಾಂತನವಸ್ತದಾ |
ಪುತ್ರಾಣಾಂ ತೇ ಜಯಾಕಾಂಕ್ಷೀ ಭೀಷ್ಮಃ ಕುರುಪಿತಾಮಹಃ ||2||
ನಿನ್ನ ಪುತ್ರನ ಜಯಾಕಾಂಕ್ಷಿಗಳಾದ ಕುರುಕುಲಪಿತಾಮಹರಾದ ಶಂತನು ಪುತ್ರರಾದ ಭೀಷ್ಮರು ಆಗ ಗಾರುಡ ವ್ಯೂಹವೆಂಬ ದೊಡ್ಡ ವ್ಯೂಹವನ್ನು ರಚಿಸಿದರು.
ಗರುಡಸ್ಯ ಸ್ವಯಂ ತುಂಡೇ ಪಿತಾ ದೇವವ್ರತಸ್ತವ |
ಚಕ್ಷುಷೀ ಚ ಭರದ್ವಾಜಃ ಕೃತವರ್ಮಾ ಚ ಸಾತ್ವತಃ ||3||
ಗರುಡನ ಕೊಕ್ಕಿನ ಸ್ಥಾನದಲ್ಲಿ ನಿಮ್ಮ ತಂದೆಯಾದ ದೇವವ್ರತರು ಸ್ವತಃ ಇದ್ದರು. ಕಣ್ಣುಗಳ ಸ್ಥಾನದಲ್ಲಿ ದ್ರೋಣರು ಮತ್ತು ಸಾತ್ವತನಾದ ಕೃತವರ್ಮರು ಇದ್ದರು.
ಅಶ್ವತ್ಥಾಮಾ ಕೃಪಶ್ಚೈವ ಶೀರ್ಷಮಾಸ್ತಾಂ ಯಶಸ್ವಿನೌ |
ತ್ರಿಗರ್ತೈರ್ಮತ್ಸ್ಯಕೈಕೇಯೈರ್ವಾಟಧಾನೈಶ್ಚ ಸಂಯುತೌ ||4||
ಭೂರಿಶ್ರವಾಃ ಶಲಃ ಶಲ್ಯೋ ಭಗದತ್ತಶ್ಚ ಮಾರಿಷ |
ಮದ್ರಕಾಃ ಸಿಂಧುಸೌವೀರಾಸ್ತಥಾ ಪಂಚನದಾಶ್ಚ ಯೇ ||5||
ಜಯದ್ರಥೇನ ಸಹಿತಾ ಗ್ರೀವಾಯಾಂ ಸನ್ನಿವೇಶಿತಾಃ |
ಪೃಷ್ಠೇ ದುರ್ಯೋಧನೋ ರಾಜಾ ಸೋದರ್ಯೈಃ ಸಾನುಗೈರ್ವೃತಃ ||6||
ಕೀರ್ತಿಶಾಲಿಗಳಾದ ಅಶ್ವತ್ಥಾಮ ಮತ್ತು ಕೃಪರು ತ್ರಿಗರ್ತರಿಂದಲೂ, ಮತ್ಸ್ಯ- ಕೈಕೇಯ ವಾಟಧಾನರಿಂದಲೂ ಕೂಡಿಕೊಂಡು ಶಿರಸ್ಸಿನ ಸ್ಥಾನದಲ್ಲಿದ್ದರು. ಜಯದ್ರಥನಿಂದ ಸಹಿತರಾದ ಭೂರಿಶ್ರವ, ಶಲ, ಶಲ್ಯ, ಭಗದತ್ತ, ಮದ್ರಕರು, ಸಿಂಧು-ಸೌವೀರರು ಮತ್ತು ಪಂಚನದರು ಕತ್ತಿನ ಸ್ಥಾನದಲ್ಲಿ ಇದ್ದರು. ಎಲೈ ಪೂಜ್ಯನೇ, ದುರ್ಯೋಧನ ರಾಜನು ತನ್ನ ತಮ್ಮಂದಿರಿಂದಲೂ ಮತ್ತು ಅನುಯಾಯಿಗಳಿಂದಲೂ ಸಹಿತನಾಗಿ ಹಿಂಭಾಗದಲ್ಲಿದ್ದನು.
ವಿಂದಾನುವಿಂದಾವಾವಂತ್ಯೌ ಕಾಂಬೋಜಶ್ಚ ಶಕೈಃ ಸಹ |
ಪುಚ್ಛಮಾಸನ್ ಮಹಾರಾಜ ಶೂರಸೇನಾಶ್ಚ ಸರ್ವಶಃ ||7||
ಅವಂತಿದೇಶದ ವಿಂದಾನುವಿಂದರು, ಶಕರಿಂದ ಕೂಡಿದ ಕಾಂಬೋಜ ರಾಜ ಮತ್ತು ಎಲ್ಲಾ ಶೂರಸೇನರು ಎಲೈ ಮಹಾರಾಜನೇ, ಪಕ್ಷಿಯ ಪುಚ್ಛ ಸ್ಥಾನದಲ್ಲಿದ್ದರು.
ಮಾಗಧಾಶ್ಚ ಕಳಿಂಗಾಶ್ಚ ದಾಶೇರಕಗಣೈಃ ಸಹ |
ದಕ್ಷಿಣಂ ಪಕ್ಷಮಾಸಾದ್ಯ ಸ್ಥಿತಾ ವ್ಯೂಹಸ್ಯ ದಂಸಿತಾಃ ||8||
ದಾಶೇಯರ ಸಮೂಹದಿಂದ ಸಹಿತರಾದ ಕಳಿಂಗರು ಮತ್ತು ಮಾಗಧರು, ಶಸ್ತ್ರ-ಕವಚ ಧಾರಿಗಳಾಗಿ ಪಕ್ಷಿಯ ಬಲಭಾಗದ ರೆಕ್ಕೆಯ ವ್ಯೂಹದಲ್ಲಿ ನಿಂತರು.
ಕಾನನಾಶ್ಚ ವಿಕುಂಜಾಶ್ಚ ಮುಕ್ತಾಃ ಪುಂಡ್ರಾವಿಷಸ್ತಥಾ |
ಬೃಹದ್ಬಲೇನ ಸಹಿತಾ ವಾಮಂ ಪಕ್ಷಮುಪಾಶ್ರಿತಾಃ ||9||
ಬೃಹದ್ಬಲನಿಂದ ಸಹಿತನಾದ ಕಾನನರು, ವಿಕುಂಜರು, ಮುಕ್ತರು, ಪುಂಡ್ರರು ಮತ್ತು ವಿಷರು ವ್ಯೂಹದ ಎಡಭಾಗವನ್ನು ಆಶ್ರಯಿಸಿದರು.
ವ್ಯೂಢಂ ದೃಷ್ಟ್ವಾ ತು ತತ್ಸೈನ್ಯಂ ಸವ್ಯಸಾಚೀ ಪರಂತಪಃ |
ಧೃಷ್ಟದ್ಯುಮ್ನೇನ ಸಹಿತಃ ಪ್ರತ್ಯವ್ಯೂಹತ ಸಂಯುಗೇ |
ಅರ್ಧಚಂದ್ರೇಣ ವ್ಯೂಹೇನ ವ್ಯೂಹಂ ತಮತಿದಾರುಣಮ್ ||10||
ಪರಂತಪನಾದ ಅರ್ಜುನನು ಭೀಷ್ಮರು ರಚಿಸಿದ ಆ ಸೈನ್ಯದ ವ್ಯೂಹವನ್ನು ನೋಡಿ ಧೃಷ್ಟದ್ಯುಮ್ನನಿಂದ ಸಹಿತನಾಗಿ ರಣರಂಗದಲ್ಲಿ ಬಹಳ ದಾರುಣವಾದ ಅರ್ಧಚಂದ್ರ ವ್ಯೂಹವನ್ನು ಪ್ರತಿವ್ಯೂಹವಾಗಿ ರಚಿಸಿದನು.
ದಕ್ಷಿಣಂ ಶೃಂಗಮಾಸ್ಥಾಯ ಭೀಮಸೇನೋ ವ್ಯರೋಚತ |
ನಾನಾಶಸ್ತ್ರೌಘಸಂಪನ್ನೈರ್ನಾನಾದೇಶ್ಯೈರ್ನೃಪೈರ್ವೃತಃ ||11||
ನಾನಾ ಶಸ್ತ್ರಗಳಿಂದ ಸಂಪನ್ನರಾದ, ನಾನಾ ದೇಶಗಳ ರಾಜರಿಂದ ಪರಿವೃತನಾದ ಭೀಮಸೇನನು ಆ ವ್ಯೂಹದ ಬಲಭಾಗದ ಶೃಂಗವನ್ನು ಆಶ್ರಯಿಸಿ ಶೋಭಿಸಿದನು.
ತದನ್ವೇವ ವಿರಾಟಶ್ಚ ದ್ರುಪದಶ್ಚ ಮಹಾರಥಃ |
ತದನಂತರಮೇವಾಸೀನ್ನೀಲೋ ನೀಲಾಯುಧೈಃ ಸಹ ||12||

ಅವನ ನಂತರದಲ್ಲಿಯೇ ಮಹಾರಥರಾದ ವಿರಾಟ ಮತ್ತು ದ್ರುಪದರು, ಅವರ ನಂತರ ಲೀಲಾಯುಧರಿಂದ ಕೂಡಿದ ನೀಲರಾಜನು ಇದ್ದರು.
ನೀಲಾದನಂತರಂ ಚೈವ ಧೃಷ್ಟಕೇತುರ್ಮಹಾರಥಃ |
ಚೇದಿಕಾಶಿಕರೂಷೈಶ್ಚ ಪೌರವೈಶ್ಚಾಭಿಸಂವೃತಃ ॥13॥
ನೀಲನ ಅನಂತರದಲ್ಲಿ ಮಹಾರಥನಾದ ಧೃಷ್ಟಕೇತುವು, ಚೇದಿಗಳು, ಕಾಶಿ-ಕರೂಷಿಕರಿಂದ ಮತ್ತು ಪೌರವರಿಂದ ಸುತ್ತುವರಿಯಲ್ಪಟ್ಟು ನಿಂತನು.
ಧೃಷ್ಟದ್ಯುಮ್ನಃ ಶಿಖಂಡೀ ಚ ಪಾಂಚಾಲಾಶ್ಚ ಪ್ರಭದ್ರಕಾಃ |
ಮಧ್ಯೇ ಸೈನ್ಯಸ್ಯ ಮಹತಃ ಸ್ಥಿತಾ ಯುದ್ಧಾಯ ಭಾರತ ॥14॥
ಎಲೈ ಭಾರತನೇ, ಧೃಷ್ಟದ್ಯುಮ್ನ, ಶಿಖಂಡೀ, ಪಾಂಚಾಲ ಮತ್ತು ಪ್ರಭದ್ರಕ ಯೋಧರು ಆ ದೊಡ್ಡ ಸೈನ್ಯದ ಮಧ್ಯದಲ್ಲಿ ಅರ್ಧಚಂದ್ರ ವ್ಯೂಹದ ಮಧ್ಯಭಾಗದಲ್ಲಿ ಯುದ್ಧಕ್ಕಾಗಿ ನಿಂತರು.
ತಥೈವ ಧರ್ಮರಾಜೋಽಪಿ ಗಜಾನೀಕೇನ ಸಂವೃತಃ |
ತತಸ್ತು ಸಾತ್ಯಕೀ ರಾಜನ್ ದ್ರೌಪದ್ಯಾಃ ಪಂಚ ಚಾತ್ಮಜಾಃ ॥15॥
ಎಲೈ ರಾಜನೇ, ಹಾಗೆಯೇ ಗಜಸೈನ್ಯದಿಂದ ಕೂಡಿದ ಧರ್ಮರಾಜನೂ ಅವನ ಹಿಂದೆ ಸಾತ್ಯಕಿಯೂ ಮತ್ತು ದ್ರೌಪದಿಯ ಐದು ಮಕ್ಕಳೂ ಇದ್ದರು.
ಅಭಿಮನ್ಯುಸ್ತತಸ್ತೂರ್ಣಮಿರಾವಾಂಶ್ಚ ತತಃ ಪರಮ್ |
ಭೈಮಸೇನಿಸ್ತತೋ ರಾಜನ್ ಕೇಕಯಾಶ್ಚ ಮಹಾರಥಾಃ ॥16॥
ಎಲೈ ರಾಜನೇ, ಅವನ ಅನಂತರದಲ್ಲಿ ಅಭಿಮನ್ಯುವೂ ಅನಂತರ ಶೀಘ್ರಕಾರಿಯಾದ ಇರಾವಂತನೂ, ಅನಂತರ ಘಟೋತ್ಕಚನೂ ಮತ್ತು ಮಹಾರಥರಾದ ಕೇಕಯ ಸಹೋದರರೂ ಇದ್ದರು.
ತತೋಽಭೂದ್ ದ್ವಿಪದಾಂ ಶ್ರೇಷ್ಠೋ ವಾಮಂ ಪಾರ್ಶ್ವಮುಪಾಶ್ರಿತಃ |
ಸರ್ವಸ್ಯ ಜಗತೋ ಗೋಪ್ತಾ ಗೋಪ್ತಾ ಯಸ್ಯ ಜನಾರ್ದನಃ ॥17॥
ಅನಂತರ ದ್ವಿಪದರಲ್ಲಿ ಶ್ರೇಷ್ಠರಾದ ಸರ್ವಜಗದ್ರಕ್ಷಕನಾದ, ಹಾಗೆಯೇ ವ್ಯೂಹ ರಕ್ಷಕನಾದ ಜನಾರ್ದನನನ್ನು ಸಾರಥಿಯಾಗಿ ಹೊಂದಿ ಅರ್ಜುನನು ವಾಮ ಪಾರ್ಶ್ವದಲ್ಲಿ ಇದ್ದನು.
ಏವಮೇತನ್ಮಹಾವ್ಯೂಹಂ ಪ್ರತ್ಯವ್ಯೂಹಂತ ಪಾಂಡವಾಃ |
ವಧಾರ್ಥಂ ತವ ಪುತ್ರಾಣಾಂ ತತ್ಪಕ್ಷಂ ಯೇ ಚ ಸಂಗತಾಃ ॥18॥
ತತಃ ಪ್ರವವೃತೇ ಯುದ್ಧಂ ವ್ಯತಿಷಕ್ತರಥದ್ವಿಪಮ್ ॥19॥
ಹೀಗೆ ನಿನ್ನ ಮಕ್ಕಳು ಮತ್ತು ಅವರ ಅನುಯಾಯಿಗಳ ವಧೆಗಾಗಿ ಪಾಂಡವರು ಈ ಮಹಾವ್ಯೂಹವನ್ನು ಭೀಷ್ಮರ ವ್ಯೂಹಕ್ಕೆ ಪ್ರತಿಯಾಗಿ ಹೂಡಿದರು. ಅನಂತರ ರಥ ಗಜಗಳು ಪರಸ್ಪರ ಮಿಶ್ರಿತವಾಗಿ ಯುದ್ಧವು ಆರಂಭವಾಯಿತು.
ಹಯೌಘಾಶ್ಚ ರಥೌಘಾಶ್ಚ ತತ್ರ ತತ್ರ ವಿಶಾಂಪತೇ |
ಸಂಪತಂತಃ ಸ್ಮ ದೃಶ್ಯಂತೇ ನಿಘ್ನಮಾನಾಃ ಪರಸ್ಪರಮ್ ॥20॥
ಎಲೈ ರಾಜನೇ, ಪರಸ್ಪರವಾಗಿ ಹೊಡೆಯಲ್ಪಟ್ಟು ಅಲ್ಲಲ್ಲಿ ಬೀಳುತ್ತಿರುವ ಅಶ್ವಗಳ ಸಮೂಹಗಳು ಮತ್ತು ರಥಗಳ ಸಮೂಹಗಳು ಕಂಡುಬಂದವು.
ಧಾವತಾಂ ಚ ರಥೌಘಾನಾಂ ನಿಘ್ನತಾಂ ಚ ಪೃಥಕ್ ಪೃಥಕ್ |
ಬಭೂವ ತುಮುಲಃ ಶಬ್ದೋ ವಿಮಿಶ್ರೋ ದುಂದುಭಿಸ್ವನೈಃ ॥21॥
ದಿವಸ್ಪೃಙ್ ನರವೀರಾಣಾಂ ನಿಘ್ನತಾಮಿತರೇತರಮ್ |
ಸಂಪ್ರಹಾರೇ ಸುತುಮುಲೇ ತವ ತೇಷಾಂ ಚ ಭಾರತ ॥22॥
ಓಡುವ ರಥಗಳಿಂದ ಉಂಟಾದ ಮತ್ತು ಪರಸ್ಪರ ಪ್ರಹಾರದಿಂದ ಉಂಟಾದ ಶಬ್ದಗಳು ದುಂದುಭಿ ನಾದಗಳಿಂದ ಮಿಶ್ರಿತವಾಗಿ ತೀವ್ರವಾಗಿದ್ದವು. ಎಲೈ ಭಾರತನೇ, ನರವೀರರು ಪರಸ್ಪರವಾಗಿ ಒಬ್ಬರನ್ನೊಬ್ಬರು ಸಂಹರಿಸುವಾಗ ಆ ಪ್ರಹಾರದಲ್ಲಿ ಉಂಟಾದ ತೀವ್ರವಾದ ಶಬ್ದವು ಆಕಾಶವನ್ನು ಮುಟ್ಟುತ್ತಿದ್ದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಿಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಐವತ್ಮೂರನೆಯ ಅಧ್ಯಾಯ
ತೃತೀಯ ದಿವಸದ ಮುಂದುವರಿದ ಯುದ್ಧ
ಸಂಜಯಃ
ತತೋ ವ್ಯೂಢೇಷ್ವನೀಕೇಷು ತಾವಕೇಷ್ವಿತರೇಷು ಚ |
ಧನಂಜಯೋ ರಥಾನೀಕಮವಧೀತ್ ತವ ಭಾರತ |
ಶರೈರತಿರಥೋ ಯುದ್ಧೇ ಪಾತಯನ್ ರಥಯೂಥಪಾನ್ ॥1॥
ಸಂಜಯ ಎಲೈ ಭಾರತನೇ, ಅನಂತರ ನಿನ್ನವರು ಮತ್ತು ಪರರು ಸೈನ್ಯ ವ್ಯೂಹವನ್ನು ರಚಿಸಿದ ಮೇಲೆ ಅತಿರಥನಾದ ಧನಂಜಯನು ಯುದ್ಧದಲ್ಲಿ ರಥಶ್ರೇಷ್ಠರನ್ನು ಬಾಣಗಳಿಂದ ಕೆಡವುತ್ತಾ ರಥಸಮೂಹವನ್ನು ವಧಿಸಿದನು.

ತೇ ವಧ್ಯಮಾನಾಃ ಪಾರ್ಥೇನ ಕಾಲೇನೇವ ಯುಗಕ್ಷಯೇ |
ಧಾರ್ತರಾಷ್ಟ್ರಾ ರಣೇ ಯತ್ತಾಃ ಪಾಂಡವಾನ್ ಪ್ರತ್ಯಯೋಧಯನ್ |
ಪ್ರಾರ್ಥಯಾನಾ ಯಶೋ ದೀಪ್ತಂ ಮೃತ್ಯುಂ ಕೃತ್ವಾಽನಿವರ್ತನಮ್ ||2||
ಯುಗಾಂತ ಕಾಲದಲ್ಲಿ ಮೃತ್ಯುವಿನಿಂದ ಹತರಾಗುವ ಪ್ರಜೆಗಳಂತೆ ಅರ್ಜುನನಿಂದ ಪ್ರಹರಿಸಲ್ಪಟ್ಟ ಧೃತರಾಷ್ಟ್ರ ಪುತ್ರರು ಪ್ರಕಾಶಮಾನವಾದ ಕೀರ್ತಿಯನ್ನು ಆಶಿಸುತ್ತಾ, ಮನಸ್ಸಿನಲ್ಲಿ ನಿವೃತ್ತಿಯಿಲ್ಲದ ಮೃತ್ಯುವನ್ನು ಚಿಂತಿಸಿ, ಎಚ್ಚರಿಕೆಯಿಂದ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಏಕಾಗ್ರಮನಸೋ ಭೂತ್ವಾ ಪಾಂಡವಾನಾಂ ವರೂಥಿನೀಮ್ |
ಬಭಂಜುರ್ಬಹುಶೋ ರಾಜಂಸ್ತೇ ಚಾಭಜ್ಯಂತ ಸಂಯುಗೇ ||3||
ಎಲೈ ರಾಜನೇ, ಒಂದೇ ಮನಸ್ಸುಳ್ಳವರಾಗಿ ಅವರು ಪಾಂಡವರ ಸೈನ್ಯವನ್ನು ಅನೇಕ ಬಾರಿ ಭಗ್ನಗೊಳಿಸಿದರು ಮತ್ತು ಪಾಂಡವರಿಂದ ಯುದ್ಧದಲ್ಲಿ ತಾವೂ ಭಂಗವನ್ನು ಹೊಂದಿದರು.
ದ್ರವದ್ಭಿರಥ ಭಗ್ನೈಶ್ಚ ಪರಿವರ್ತದ್ಭಿರೇವ ಚ |
ಪಾಂಡವೈಃ ಕೌರವೈಶ್ಚೈವ ನ ಪ್ರಾಜ್ಞಾಯತ ಕಿಂಚನ ||4||
ಪಾಂಡವರಿಂದ ಕೌರವರು ಓಡುತ್ತಿರಲು, ಭಗ್ನರಾಗುತ್ತಿರಲು ಮತ್ತು ಹಿಂದಿರುಗುತ್ತಿರಲು ಏನೂ ತಿಳಿಯಲಿಲ್ಲ.
ಉದತಿಷ್ಠದ್ ರಜೋ ಭೌಮಂ ಛಾದಯಾನಂ ದಿವಾಕರಮ್ |
ದಿಶಃ ಪ್ರತಿದಿಶೋ ವಾಪಿ ತನ್ನ ಜಜ್ಞುಃ ಕಥಂಚನ ||5||
ಭೂಮಿಯ ಧೂಳು ಸೂರ್ಯನನ್ನು ಮುಚ್ಚಿತು. ದಿಕ್ಕುಗಳಾಗಲೀ, ವಿದಿಕ್ಕುಗಳಾಗಲೀ ಯಾರಿಗೂ ತಿಳಿಯಲಿಲ್ಲ.
ಅನುಮಾನೇನ ಸಂಜ್ಞಾಭಿರ್ನಾಮಗೋತ್ರೈಶ್ಚ ಸಂಯುಗೇ |
ವರ್ತತೇ ಸ್ಮ ತದಾ ಯುದ್ಧಂ ತತ್ರತತ್ರ ವಿಶಾಂಪತೇ ||6||
ಎಲೈ ರಾಜನೇ, ಆಗ ಊಹೆಯಿಂದಲೂ, ಸಂಜ್ಞೆಗಳಿಂದಲೂ, ನಾಮ-ಗೋತ್ರಗಳಿಂದಲೂ ಅಲ್ಲಲ್ಲಿ ಯುದ್ಧವು ಜರುಗಿತು.
ನ ವ್ಯೂಹೋ ಭಿದ್ಯತೇ ತತ್ರ ಕೌರವಾಣಾಂ ಕಥಂಚನ |
ರಕ್ಷಿತಃ ಸತ್ಯಸಂಧೇನ ಭಾರದ್ವಾಜೇನ ಧೀಮತಾ ||7||
ಸತ್ಯಸಂಧರಾದ ಮತ್ತು ಮೇಧಾವಿಗಳಾದ ದ್ರೋಣರಿಂದ ರಕ್ಷಿಸಲ್ಪಟ್ಟ ಕೌರವರ ವ್ಯೂಹವು ಯಾವ ರೀತಿಯಿಂದಲೂ ಭಗ್ನವಾಗಲಿಲ್ಲ.
ತಥೈವ ಪಾಂಡವೇಯಾನಾಂ ರಕ್ಷಿತಃ ಸವ್ಯಸಾಚಿನಾ |
ನಾಭಿದ್ಯತ ಮಹಾವ್ಯೂಹೋ ಭೀಮೇನ ಚ ಸುರಕ್ಷಿತಃ ||8||
ಹಾಗೆಯೇ ಸವ್ಯಸಾಚಿಯಾದ ಅರ್ಜುನನಿಂದಲೂ ಮತ್ತು ಭೀಮನಿಂದಲೂ ಚೆನ್ನಾಗಿ ರಕ್ಷಿಸಲ್ಪಟ್ಟ ಪಾಂಡವರ ಮಹಾವ್ಯೂಹವೂ ಸಹ ಭಗ್ನವಾಗಲಿಲ್ಲ.
ಸೇನಾಗ್ರಾದಭಿನಿಷ್ಪತ್ಯ ಪ್ರಾಯುಧ್ಯಂಸ್ತತ್ರ ಮಾನವಾಃ |
ಉಭಯೋಃ ಸೇನಯೋ ರಾಜನ್ ವ್ಯತಿಷಕ್ತರಥದ್ವಿಪಾಃ ||9||
ಎಲೈ ರಾಜನೇ, ಎರಡು ಸೇನೆಗಳ ಯೋಧರು ಸೇನೆಯ ಮುಂಭಾಗದಿಂದ ಹೊರಬಂದು ರಥ-ಗಜಗಳನ್ನು ಪರಸ್ಪರವಾಗಿ ಘಟ್ಟಿಸಿ ಯುದ್ಧವನ್ನು ಮಾಡಿದರು.
ಹಯಾರೋಹೈರ್ಹಯಾರೋಹಾಃ ಪಾತ್ಯಂತೇ ಸ್ಮ ಮಹಾಹವೇ |
ಋಷ್ಟಿಭಿರ್ವಿಮಲಾಗ್ರಾಭಿಃ ಪ್ರಾಸೈರಪಿ ಚ ಸಂಯುಗೇ ||10||
ಆ ಮಹಾಯುದ್ಧದಲ್ಲಿ ಅಶ್ವಾರೋಹಿಗಳು ವಿಮಲವಾದ ತುದಿಯುಳ್ಳ ಋಷ್ಟಿಗಳಿಂದಲೂ, ಪ್ರಾಸಗಳಿಂದಲೂ ಉರುಳಿಸಲ್ಪಟ್ಟರು.
ರಥೀ ರಥಿನಮಾಸಾದ್ಯ ಶರೈಃ ಕನಕಭೂಷಣೈಃ |
ಪಾತಯಾಮಾಸ ಸಮರೇ ತಸ್ಮಿನ್ನತಿಭಯಂಕರೇ ||11||
ಆ ಅತಿಭಯಂಕರವಾದ ಯುದ್ಧದಲ್ಲಿ ರಥಿಯು ಇನ್ನೊಬ್ಬ ರಥಿಯನ್ನು ಸಮೀಪಿಸಿ ಚೀಲದಿಂದ ಅಲಂಕೃತವಾಗಿದ್ದ ಬಾಣದಿಂದ ಅವನನ್ನು ನೆಲಕ್ಕೆ ಕೆಡವಿದನು.
ಗಜಾರೋಹಾ ಗಜಾರೋಹಾನ್ ನಾರಾಚಶರತೋಮರೈಃ |
ಸಂಸಕ್ತಾಃ ಪಾತಯಾಮಾಸುಸ್ತವ ತೇಷಾಂ ಚ ಸಂಘಶಃ ||12||
ನಿನ್ನ ಮತ್ತು ಅವರ ಗಜಾರೋಹಿಗಳು ಗಜಾರೋಹಿಗಳ ಜೊತೆಯಲ್ಲಿ ಸಂಘರ್ಷವನ್ನು ಹೊಂದಿ ನಾರಾಚಶರತೋಮರಗಳಿಂದ ಗುಂಪುಗುಂಪುಗಳಲ್ಲಿ ಒಬ್ಬರನ್ನೊಬ್ಬರು ಬೀಳಿಸಿದರು.
ಕಶ್ಚಿದುತ್ಪತ್ಯ ಸಮರೇ ವರವಾರಣಮಾಸ್ಥಿತಃ |
ಕೇಶಪಕ್ಷೇ ಪರಾಮೃಶ್ಯ ಜಹಾರ ಸಮರೇ ಶಿರಃ ||13||
ಶ್ರೇಷ್ಠವಾದ ಗಜವನ್ನು ಏರಿದ ಒಬ್ಬ ಯೋಧನು ಯುದ್ಧದಲ್ಲಿ ಹಾರಿ ಇನ್ನೊಬ್ಬ ಗಜಾರೋಹಿಯನ್ನು ಕೇಶಪಕ್ಷಗಳಲ್ಲಿ ಹಿಡಿದು ಅವನ ಶಿರಸ್ಸನ್ನು ಕತ್ತರಿಸಿದನು.
ಅನ್ಯೇ ದ್ವಿರದದಂತಾಗ್ರನಿರ್ಭಿನ್ನಹೃದಯಾ ರಣೇ |
ವೇಮುಶ್ಚ ರುಧಿರಂ ವೀರಾ ನಿಃಶ್ವಸಂತಃ ಸಮಂತತಃ ||14||
ಇನ್ನು ಕೆಲವರು ಆನೆಗಳ ದಂತದ ಅಗ್ರಭಾಗದಿಂದ ತಮ್ಮ ಹೃದಯವು ಒಡೆದು ನಿಟ್ಟುಸಿರನ್ನು ಬಿಡುತ್ತಾ ಎಲ್ಲ ಕಡೆಗಳಲ್ಲಿಯೂ ರಕ್ತವನ್ನು ಕಾರುತ್ತಿದ್ದರು.
ಕಶ್ಚಿತ್ ಕರಿವಿಷಾಣಸ್ಥೋ ವೀರೋ ರಣವಿಶಾರದಃ |

ಪ್ರಾವೇಪಚ್ಛಕ್ತಿನಿರ್ಭಿನ್ನೋ ಗಜಶಿಕ್ಷಾಸ್ತ್ರವೇದಿನಾ ॥15॥
ಆನೆಯ ದಂತದ ಮೇಲೆ ಕುಳಿತಿದ್ದ ಒಬ್ಬ ರಣವಿಶಾರದನು ಗಜಶಿಕ್ಷೆ ಮತ್ತು ಅಸ್ತ್ರಗಳನ್ನು ತಿಳಿದ ಪ್ರತಿವೀರನು ಪ್ರಯೋಗಿಸಿದ ಶಕ್ತಿಯಿಂದ ನಿರ್ಭಿನ್ನನಾಗಿ ಅಲ್ಲಿಯೇ ಕಂಪಿಸಿದನು.
ಪತ್ತಿಸಂಘಾ ರಣೇ ಪತ್ತೀನ್ ಭಿಂಡಿಪಾಲಪರಶ್ವಧೈಃ।
ನ್ಯಪಾತಯಂತ ಸಂಹೃಷ್ಟಾಃ ಪರಸ್ಪರಕೃತಾಗಸಃ ॥16॥
ಪದಾತಿಗಳ ಸಮೂಹವು ಕಬ್ಬಿಣದಿಂದ ಮಾಡಿದ ಭಿಂಡಿಪಾಲ ಮತ್ತು ಪರಶ್ವಧಗಳಿಂದ ಸಂತೋಷದಿಂದ ಕೂಡಿ ಪರಸ್ಪರವಾಗಿ ಒಬ್ಬರನ್ನೊಬ್ಬರು ಕೆಡವಿದರು.
ರಥೀ ಚ ಸಮರೇ ರಾಜನ್ನಾಸಾದ್ಯ ಗಜಯೋಧಿನಮ್।
ಸಗಜಂ ಪಾತಯಾಮಾಸ ಗಜೀ ಚ ರಥಿನಂ ರಥಾತ್ ॥17॥
ಎಲೈ ರಾಜನೇ, ರಥಿಕನು ಗಜಾರೋಹಿಯನ್ನು ಸಮೀಪಿಸಿ ಗಜದ ಜೊತೆಯಲ್ಲಿ ಅವನನ್ನು ನೆಲಕ್ಕೆ ಉರುಳಿಸಿದನು. ಗಜಾರೋಹಿಯೂ ಸಹ ರಥಿಕನನ್ನು ರಥದಿಂದ ಉರುಳಿಸಿದನು.
ರಥಿನಂ ಚ ಹಯಾರೋಹಃ ಪ್ರಾಸೇನ ಭರತರ್ಷಭ।
ಪಾತಯಾಮಾಸ ಸಮರೇ ರಥೀ ಚ ಹಯಸಾದಿನಮ್ ॥18॥
ಎಲೈ ಭರತಶ್ರೇಷ್ಠನೇ, ಅಶ್ವಾರೋಹಿಯಾದವನು ಪ್ರಾಸದಿಂದ ರಣರಂಗದಲ್ಲಿ ರಥಿಕನನ್ನು ರಥದಿಂದ ಉರುಳಿಸಿದನು. ರಥಿಕನೂ ಸಹ ಅಶ್ವಾರೋಹಿಯನ್ನು ಉರುಳಿಸಿದನು.
ಪದಾತೀ ರಥಿನಂ ಸಂಖ್ಯೇ ರಥೀ ಚಾಪಿ ಪದಾತಿನಮ್।
ನ್ಯಪಾತಯತ್ ಶಿತೈಃ ಶಸ್ತ್ರೈಃ ಸೇನಯೋರುಭಯೋರಪಿ ॥19॥
ಆ ಯುದ್ಧದಲ್ಲಿ ಎರಡು ಸೈನ್ಯಗಳಲ್ಲಿಯೂ ನಿಶಿತವಾದ ಶಸ್ತ್ರಗಳಿಂದ ಪದಾತಿಯು ರಥಿಕನನ್ನೂ, ರಥಿಕನು ಪದಾತಿಯನ್ನೂ ಬೀಳಿಸಿದರು.
ಗಜಾರೋಹಾ ಹಯಾರೋಹಾನ್ ಪಾತಯಾಂಚಕ್ರಿರೇ ತದಾ।
ಹಯಾರೋಹಾ ಗಜಸ್ಥಾಂಶ್ಚ ತದದ್ಭುತಮಿವಾಭವತ್ ॥20॥
ಗಜಾರೋಹಿಗಳು ಅಶ್ವಾರೋಹಿಗಳನ್ನು ಕೆಡವಿದರು. ಆಗ ಅಶ್ವಾರೋಹಿಗಳೂ ಗಜಾರೋಹಿಗಳನ್ನು ಕೆಡವಿದರು. ಅದು ಅದ್ಭುತವಾಗಿದ್ದಿತು.
ಗಜಾರೋಹವರೈಶ್ಚಾಪಿ ತತ್ರತತ್ರ ಪದಾತಯಃ।
ಪಾತ್ಯಮಾನಾ ವ್ಯದೃಶ್ಯಂತ ತೈಶ್ಚಾಪಿ ಗಜಯೋಧಿನಃ ॥21॥
ಶ್ರೇಷ್ಠರಾದ ಗಜಾರೋಹಿಗಳು ಅಲ್ಲಲ್ಲಿ ಪದಾತಿಗಳನ್ನು ಕೆಡವುತ್ತಿರುವುದು ಕಂಡುಬಂದಿತು. ಆ ಪದಾತಿಗಳಿಂದ ಗಜಯೋಧಿಗಳು ನೆಲಕ್ಕೆ ಉರುಳಿದರು.
ಪತ್ತಿಸಂಘಾ ಹಯಾರೋಹೈಃ ಸಾದಿಸಂಘಾಶ್ಚ ಪತ್ತಿಭಿಃ।
ಪಾತ್ಯಮಾನಾ ವ್ಯದೃಶ್ಯಂತ ಶತಶೋಽಥ ಸಹಸ್ರಶಃ ॥22॥
ಪದಾತಿಗಳ ಸಮೂಹವು ಅಶ್ವಾರೋಹಿಗಳಿಂದಲೂ, ಅಶ್ವಾರೋಹಿಗಳ ಸಮೂಹವು ಪದಾತಿಗಳಿಂದಲೂ ಉರುಳಿ ಬೀಳುವುದು ಶತಸಂಖ್ಯೆಯಲ್ಲಿ, ಸಹಸ್ರ ಸಂಖ್ಯೆಯಲ್ಲಿ ಕಂಡುಬಂದಿತು.
ಧ್ವಜೈಸ್ತತ್ರಾಪವಿದ್ಧೈಶ್ಚ ಕಾರ್ಮುಕೈಸ್ತೋಮರೈಸ್ತಥಾ।
ಪ್ರಾಸೈಸ್ತಥಾ ಗದಾಭಿಶ್ಚ ಪರಿಘೈಃ ಕಂಪನೈಸ್ತಥಾ ॥23॥
ಶಕ್ತಿಭಿಃ ಕವಚೈಶ್ಚಿತ್ರೈಃ ಕಣಪೈರಂಕುಶೈರಪಿ।
ನಿಶಿತ್ರಂಶೈರ್ವಿಮಲೈಶ್ಚಾಪಿ ಸ್ವರ್ಣಪುಂಖೈಃ ಶರೈಸ್ತಥಾ ॥24॥
ಪರಿಸ್ತೋಮೈಃ ಕುಥಾಭಿಶ್ಚ ಕಂಬಲೈಶ್ಚ ಮಹಾಧನೈಃ।
ಭೂರ್ಭಾತಿ ಭರತಶ್ರೇಷ್ಠ ಸ್ರಗ್ದಾಮೈರಿವ ಚಿತ್ರಿತಾ ॥25॥
ಅಲ್ಲಲ್ಲಿ ಎಸೆದ ಧ್ವಜಗಳು, ಕಾರ್ಮುಕಗಳು, ತೋಮರಗಳು, ಪ್ರಾಸಗಳು, ಗದೆಗಳು, ಪರಿಘಗಳು, ಕಂಪನಗಳು, ಶಕ್ತಿಗಳು, ವಿಚಿತ್ರವಾದ ಕವಚಗಳು, ಹಾಸುಗಳು, ಅಂಕುಶಗಳು, ಸ್ವಚ್ಛವಾದ ಖಡ್ಗಗಳು, ಸುವರ್ಣಪುಂಖವುಳ್ಳ ಶರಗಳು, ಪರಿಸ್ತೋಮಗಳು, ಆನೆಯ ಮೇಲೆ ಹಾಸುವ ರತ್ನಕಂಬಳಿಗಳು, ಬೆಲೆಬಾಳುವ ಕಂಬಳಿಗಳು ಇವುಗಳಿಂದ ಎಲೈ ಭರತಶ್ರೇಷ್ಠನೇ, ರಣಭೂಮಿಯು ಪುಷ್ಪಮಾಲೆಗಳಿಂದ ಕೂಡಿರುವಂತೆ ವಿಚಿತ್ರವಾಗಿ ಕಾಣುತ್ತಿದ್ದಿತು.
ನರಾಶ್ವಕಾಯೈಃ ಪತಿತೈರ್ದಂತಿಭಿಶ್ಚ ಮಹಾಹವೇ।
ಅಗಮ್ಯರೂಪಾ ಪೃಥಿವೀ ಮಾಂಸಶೋಣಿತಕರ್ದಮಾ ॥26॥
ಆ ಮಹಾಯುದ್ಧದಲ್ಲಿ ನೆಲದ ಮೇಲೆ ಬಿದ್ದ ಯೋಧರ ಮತ್ತು ಅಶ್ವಗಳ ಶರೀರದಿಂದಲೂ, ಗಜಗಳ ಶರೀರದಿಂದಲೂ, ಮಾಂಸರಕ್ತರೂಪವಾದ ಕೆಸರನ್ನುಳ್ಳ ಆ ರಣಭೂಮಿಯು ನಡೆಯಲು ಅಸಾಧ್ಯವಾಗಿದ್ದಿತು.
ಪ್ರಶಶಾಮ ರಜೋ ಭೌಮಂ ವ್ಯುಕ್ಷಿತಂ ರಣಶೋಣಿತೈಃ।
ದಿಶಶ್ಚ ವಿಮಲಾಃ ಸರ್ವಾಃ ಸಂಬಭೂವುರ್ಜನೇಶ್ವರ ॥27॥
ಎಲೈ ಜನೇಶ್ವರನೇ, ಭೂಮಿಯ ಧೂಳು ಯುದ್ಧದ ರಕ್ತದಿಂದ ನೆನೆದು ಅಡಗಿತು. ಎಲ್ಲ ದಿಕ್ಕುಗಳೂ ಧೂಳನ್ನು ಕಳೆದುಕೊಂಡು ಸ್ವಚ್ಛವಾದವು.
ಉತ್ಥಿತಾನ್ಯಗಣೇಯಾನಿ ಕಬಂಧಾನಿ ಸಮಂತತಃ।

ಚಿಹ್ನಭೂತಾನಿ ಜಗತೋ ವಿನಾಶಾರ್ಥಾಯ ಭಾರತ ॥28॥
ಎಲೈ ಭಾರತನೇ, ಜಗತ್ತಿನ ವಿನಾಶಕ್ಕೆ ಚಿಹ್ನೆಯಂತೆ ರುಂಡಗಳು ಎಲ್ಲ ಕಡೆಗಳಲ್ಲಿಯೂ ಅಸಂಖ್ಯವಾಗಿ ಮೇಲೆದ್ದವು.
ತಸ್ಮಿನ್ ಯುದ್ಧೇ ಮಹಾರೌದ್ರೇ ವರ್ತಮಾನೇ ಸುದಾರುಣೇ |
ಪ್ರತ್ಯದೃಶ್ಯಂತ ರಥಿನೋ ಧಾವಮಾನಾಃ ಸಮಂತತಃ ॥29॥
ಮಹಾಭಯಂಕರವೂ, ಅತ್ಯಂತ ದಾರುಣವೂ ಆದ ಆ ಯುದ್ಧವು ನಡೆಯುತ್ತಿರಲು ರಥಿಕರು ಎಲ್ಲ ಕಡೆಗಳಲ್ಲಿಯೂ ಓಡುತ್ತಿರುವುದು ಕಂಡುಬಂದಿತು.
ತತೋ ದ್ರೋಣಶ್ಚ ಭೀಷ್ಮಶ್ಚ ಸೈಂಧವಶ್ಚ ಜಯದ್ರಥಃ |
ಪುರುಮಿತ್ರೋ ವಿಕರ್ಣಶ್ಚ ಶಕುನಿಶ್ಚಾಪಿ ಸೌಬಲಃ ॥30॥
ಏತೇ ಸಮರದುರ್ಧರ್ಷಾಃ ಸಿಂಹತುಲ್ಯಪರಾಕ್ರಮಾಃ |
ಪಾಂಡವಾನಾಮನೀಕಾನಿ ಬಭಂಜುಃ ಸ್ಮ ಪುನಃ ಪುನಃ ॥31॥
ಅನಂತರ ದ್ರೋಣರು, ಭೀಷ್ಮರು, ಸಿಂಧುದೇಶದ ಜಯದ್ರಥ, ಪುರುಮಿತ್ರ, ವಿಕರ್ಣ, ಸೌಬಲನಾದ ಶಕುನಿ-ಸಿಂಹಪರಾಕ್ರಮವುಳ್ಳವರೂ ಯುದ್ಧದಲ್ಲಿ ಸೋಲಿಸಲು ಅಸಾಧ್ಯರೂ ಆದ ಇವರು ಪಾಂಡವರ ಸೈನ್ಯವನ್ನು ಪುನಃ ಪುನಃ ಭಗ್ನಗೊಳಿಸಿದರು.
ತಥೈವ ಭೀಮಸೇನೋಽಪಿ ರಾಕ್ಷಸಶ್ಚ ಘಟೋತ್ಕಚಃ |
ಸಾತ್ಯಕಿಶ್ಚೇಕಿತಾನಶ್ಚ ದ್ರೌಪದೇಯಾಶ್ಚ ಭಾರತ ॥32॥
ತಾವಕಾಂಸ್ತವ ಪುತ್ರಾಂಶ್ಚ ಸಹಿತಾನ್ ಸರ್ವರಾಜಭಿಃ |
ದ್ರಾವಯಾಮಾಸುರಾಜೌ ತೇ ತ್ರಿದಶಾ ದಾನವಾನಿವ ॥33॥
ಎಲೈ ಭಾರತನೇ, ಹಾಗೆಯೇ ಭೀಮಸೇನ, ರಾಕ್ಷಸನಾದ ಘಟೋತ್ಕಚ, ಸಾತ್ಯಕಿ, ಚೇಕಿತಾನ, ದ್ರೌಪದಿಯ ಐವರು ಮಕ್ಕಳು ಇವರು ಎಲ್ಲಾ ರಾಜರಿಂದಲೂ ಸಹಿತರಾದ ನಿನ್ನ ಪುತ್ರರನ್ನು ದೇವತೆಗಳು ದಾನವರನ್ನು ಓಡಿಸಿದಂತೆ ರಣರಂಗದಿಂದ ಓಡಿಸಿದರು.
ತಥಾ ತೇ ಸಮರೇಽನ್ಯೋನ್ಯಂ ನಿಘ್ನಂತಃ ಕ್ಷತ್ರಿಯರ್ಷಭಾಃ |
ರಕ್ತೋಕ್ಷಿತಾ ಘೋರರೂಪಾ ವಿರೇಜುರ್ದಾನವಾ ಇವ ॥34॥
ಹಾಗೆಯೇ ಆ ಕ್ಷತ್ರಿಯಶ್ರೇಷ್ಠರು ಪರಸ್ಪರವಾಗಿ ಪ್ರಹಾರವನ್ನು ಮಾಡುತ್ತಾ ರಕ್ತದಿಂದ ತೋಯಿಸಲ್ಪಟ್ಟು ಘೋರರೂಪವನ್ನು ಧರಿಸಿ ದಾನವರಂತೆ ವಿರಾಜಿಸಿದರು.
ವಿನಿರ್ಜಿತ್ಯ ರಿಪೂನ್ ವೀರಾಃ ಸೇನಯೋರುಭಯೋರಪಿ |
ವ್ಯದೃಶ್ಯಂತ ಮಹಾಮಾತ್ರಾ ಗ್ರಹಾ ಇವ ನಭಸ್ತಳೇ ॥35॥
ಗಜಾರೋಹಿಗಳಾದ, ವೀರರಾದ ಪ್ರಧಾನರು ಎರಡು ಸೈನ್ಯಗಳಲ್ಲಿಯೂ ತಮ್ಮ ಶತ್ರುಗಳನ್ನು ಸೋಲಿಸಿ ಆಕಾಶದಲ್ಲಿರುವ ಗ್ರಹಗಳಂತೆ ಕಂಡುಬಂದರು.
ತತೋ ರಥಸಹಸ್ರೇಣ ಪುತ್ರೋ ದುರ್ಯೋಧನಸ್ತವ |
ಅಭ್ಯಯಾತ್ ಪಾಂಡವಾನ್ ಯುದ್ಧೇ ರಾಕ್ಷಸಂ ಚ ಘಟೋತ್ಕಚಮ್ ॥
ಆಗ ನಿನ್ನ ಪುತ್ರನಾದ ದುರ್ಯೋಧನನು ಯುದ್ಧದಲ್ಲಿ ಒಂದು ಸಹಸ್ರ ರಥಗಳ ಜೊತೆಯಲ್ಲಿ ಪಾಂಡವರ ಮತ್ತು ರಾಕ್ಷಸನಾದ ಘಟೋತ್ಕಚನ ಮೇಲೆ ಎರಗಿದನು.
ತಥೈವ ಪಾಂಡವಾಃ ಸರ್ವೇ ಮಹತ್ಯಾ ಸೇನಯಾ ಸಹ |
ದ್ರೋಣಭೀಷ್ಮೌ ರಣೇ ಶೂರೌ ಪ್ರತ್ಯುದ್ಯಯುರರಿಂದಮೌ ॥37॥
ಹಾಗೆಯೇ, ಎಲ್ಲ ಪಾಂಡವರೂ ಸಹ ದೊಡ್ಡ ಸೈನ್ಯದಿಂದ ಕೂಡಿದವರಾಗಿ ಅರಿಂದಮರೂ ಮತ್ತು ಶೂರರೂ ಆದ ದ್ರೋಣ-ಭೀಷ್ಮರನ್ನು ಕುರಿತು ರಣರಂಗದಲ್ಲಿ ಧಾವಿಸಿದರು.
ಕಿರೀಟೀ ತು ಯಯೌ ಕ್ರುದ್ಧಃ ಸಮರ್ಥಾನ್ ಪಾರ್ಥಿವೋತ್ತಮಾನ್ |
ಆರ್ಜುನಿಃ ಸಾತ್ಯಕಿಶ್ಚೈವ ಯಯತುಃ ಸೌಬಲಂ ಬಲಮ್ ॥38॥
ಅರ್ಜುನನು ಕ್ರುದ್ಧನಾಗಿ ಸಮರ್ಥರಾದ ಶ್ರೇಷ್ಠರಾಜರ ಮೇಲೆ ಹೋದನು. ಅಭಿಮನ್ಯು ಮತ್ತು ಸಾತ್ಯಕಿ ಇವರು ಶಕುನಿಯ ಸೈನ್ಯದ ಮೇಲೆ ಪ್ರಹಾರ ಮಾಡಲು ಹೊರಟರು.
ತತಃ ಪ್ರವವೃತೇ ಭೂಯಃ ಸಂಗ್ರಾಮೋ ಲೋಮಹರ್ಷಣಃ |
ತಾವಕಾನಾಂ ಪರೇಷಾಂ ಚ ಸಮರೇ ವಿಜಿಗೀಷತಾಮ್ ॥39॥
ಅನಂತರ ಯುದ್ಧದಲ್ಲಿ ಜಯವನ್ನು ಬಯಸಿದ ನಿನ್ನವರಿಗೂ ಮತ್ತು ಪರರಿಗೂ ರೋಮಾಂಚಕಾರಿಯಾದ ಯುದ್ಧವು ಪುನಃ ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಅಥ ಭೀಷ್ಮಮುದೀರ್ಣಾಸ್ತ್ರಂ ದ್ರಾವಯಂತಂ ವರೂಥಿನೀಮ್ |
ಸಸೌಮದತ್ತಿಂ ಸೌಭದ್ರಸಹಾಯೋಽರ್ಜುನ ಆಸದತ್ ॥29॥
ಸೌಭದ್ರಂ ತತ್ರ ವಿಕ್ರಾಂತಮತೀತ್ಯ ದ್ಯುಸರಿತ್ಸುತಃ |

ದ್ರಾವಯಾಮಾಸ ಪಾಂಚಾಲಾನ್ ಪಶ್ಯತಃ ಸವ್ಯಸಾಚಿನಃ ॥30॥
ಬಳಿಕ ಮಹಾ ಅಸ್ತ್ರಗಳನ್ನು ಪ್ರಯೋಗಿಸಿ ಸೈನ್ಯವನ್ನು ಅಟ್ಟುತ್ತಿದ್ದ ಭೀಷ್ಮರನ್ನೂ ಸೌಮದತ್ತಿಯನ್ನೂ ಅಭಿಮನ್ಯು ಸಮೇತನಾದ ಅರ್ಜುನನು ಸಮೀಪಿಸಿದನು. ಪರಾಕ್ರಮ ತೋರುತ್ತಿದ್ದ ಅಭಿಮನ್ಯುವನ್ನು ಬಿಟ್ಟು ಭೀಷ್ಮರು ಅರ್ಜುನನು ನೋಡುತ್ತಿದ್ದಂತೆಯೇ ಪಾಂಚಾಲರನ್ನು ಓಡಿಸಿದರು.
ತಸ್ಯ ವಿಕ್ರಮಮಾಲಕ್ಷ್ಯ ಪಾರ್ಥಂ ತದ್ಗೌರವಾನುಗಮ್ ।
ದೃಷ್ಟ್ವಾ ಯುಧಿಷ್ಠಿರೋ ರಾಜಾ ಕ್ರುದ್ಧಃ ಸೇನಾಮಪಾಹರತ್ ॥31॥
ರಾಜನಾದ ಯುಧಿಷ್ಠಿರನು ಭೀಷ್ಮರ ಪರಾಕ್ರಮವನ್ನೂ ಅರ್ಜುನನು ಭೀಷ್ಮರ ಬಗ್ಗೆ ಗೌರವ ಭಾವನೆಯನ್ನು ಅನುಸರಿಸಿದುದನ್ನೂ ಕಂಡು ಕುಪಿತನಾಗಿ ಸೈನ್ಯವನ್ನು ಹಿಂದೆ ಕರೆಸಿಕೊಂಡನು.
ರಾತ್ರೌ ಯುಧಿಷ್ಠಿರಶ್ಚಿಂತಾಮಾಪ್ಯ ಪಾರ್ಥಂ ವ್ಯಗರ್ಹಯತ್ ।
ಸ ಕೃಷ್ಣಾದ್ಯೈಃ ಸಾಂತ್ವಿತಶ್ಚ ಪುನರ್ಯುದ್ಧಾಯ ನಿರ್ಯಯೌ ॥32॥
ರಾತ್ರಿಯಲ್ಲಿ ಯುಧಿಷ್ಠಿರನು ಚಿಂತೆಗೊಳಗಾಗಿ ಅರ್ಜುನನನ್ನು ತೆಗಳಿದನು. ಕೃಷ್ಣ ಮುಂತಾದವರು ಸಮಾಧಾನ ಮಾಡಿದ ಬಳಿಕ ಪುನಃ ಯುದ್ಧಕ್ಕೆ ಹೊರಟನು.
ಏವಂ ಭೀಷ್ಮೋ ದಶಾಹಾನಿ ಸೇನಾಪತ್ಯಂ ಚಕಾರ ಹ ।
ಕೃತ್ವಾಽಪಿ ಪಾಂಡವೈರ್ಯುದ್ಧಂ ತತ್ ಕರ್ತುಮಕೃತೋಪಮಮ್ ॥33॥
ಕರ್ಣೋಽರ್ಧರಥ ಇತ್ಯುಕತ್ವ ಯಾವದ್ ಯುದ್ಧಾತ್ ಪ್ರಯಾಪಿತಃ ।
ತಾವತ್ ತ್ವಂ ಯೋತ್ಸ್ಯಸೇ ತಾವನ್ನ ಯೋತ್ಸ್ಯಾಮೀತಿ ನಿರ್ಗತೇ ॥34॥
ಕರ್ಣೇಽಯುತರಥಾನಾಂ ಸ ನಿತ್ಯಶೋ ವಧಮಾಹವೇ ।
ಪ್ರತಿಜಜ್ಞೇಽಕರೋತ್ ತಚ್ಚ ಪುನಶ್ಚಾಸ್ತ್ರವಿದಾಂ ವರಃ ॥35॥
ಹೀಗೆ ಭೀಷ್ಮರು ಹತ್ತು ದಿನವೂ ಸೇನಾಧಿಪತ್ಯ ನಿರ್ವಹಿಸಿದ ತಾವು ಪಾಂಡವರೊಡನೆ ಯುದ್ಧ ಮಾಡಿ ಅದನ್ನು ಅನುಪಮವಾಗಿಸುವುದಕ್ಕಾಗಿ ಕರ್ಣನನ್ನು ಅರ್ಧರಥನೆಂದು ನಿಂದಿಸಿ ರಣರಂಗದಿಂದ ಹೊರಗೆ ಮಾಡಿದ್ದರು. ನೀವು ಯುದ್ಧ ಮಾಡುವಷ್ಟು ಕಾಲ ನಾನು ಯುದ್ಧ ಮಾಡೆನೆನ್ನುತ್ತಾ ಕರ್ಣನು ಹೊರಟುಹೋದಾಗ ಭೀಷ್ಮರು ತಾನು ಪ್ರತಿದಿನ ಹತ್ತು ಸಾವಿರ ರಥಿಕರನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದರು. ಅದನ್ನು ನಡೆಸಿಯೂ ಕೊಟ್ಟರು. ಮಾತ್ರವಲ್ಲದೆ ಅಸ್ತ್ರವೇತ್ತರಲ್ಲಿ ಅಗ್ರಗಣ್ಯರಾದ ಭೀಷ್ಮರು ಇನ್ನೂ ಹೆಚ್ಚು ಯೋಧರನ್ನು ವಧಿಸಿದರು.
ಸುಸಮರ್ಥಾವಪಿ ವಧೇ ತಸ್ಯ ಭೀಮಸೇನಧನಂಜಯೌ ।
ಸ್ನೇಹೇನ ಯಂತ್ರಿತೌ ತಸ್ಯ ಗೌರವಾಚ್ಚಾನ್ವವರ್ತತಾಮ್ ॥36॥
ಭೀಮಾರ್ಜುನರು ಭೀಷ್ಮರ ವಧೆಗೆ ಬಹಳಸಮರ್ಥರೇ ಆದರೂ ಅವರ ಮೇಲಿನ ಪ್ರೀತಿಯಿಂದ ಬದ್ಧರಾದುದರಿಂದಲೂ ಪಿತಾಮಹರೆಂಬ ಗೌರವ ಭಾವನೆ ಇದ್ದುದರಿಂದಲೂ ಅವರಿಗೆ ಅನುಕೂಲರಾಗಿಯೇ ವರ್ತಿಸಿದರು.
ಬಭೂವುಸ್ತತ್ರ ಯುದ್ಧಾನಿ ಚಿತ್ರಾಣಿ ಸುಬಹೂನಿ ಚ ।
ತಾನ್ಯಂಬರೇ ವಿಮಾನಸ್ಥಾ ಬ್ರಹ್ಮರುದ್ರಪುರಸ್ಸರಾಃ ॥37॥
ಅಪಶ್ಯನ್ ದೇವತಾಃ ಸರ್ವಾಃ ಗಂಧರ್ವಾಪ್ಸರಸೋಽಸುರಾಃ ॥38॥
ಆಗ ಆಶ್ಚರ್ಯಕರವಾದ ಬಹಳ ಯುದ್ಧಗಳು ನಡೆದುವು. ಅವುಗಳನ್ನು ಆಕಾಶದಲ್ಲಿ ವಿಮಾನಗಳಲ್ಲಿ ಕುಳಿತು ಬ್ರಹ್ಮರುದ್ರಾದಿ ದೇವತೆಗಳೂ ಗಂಧರ್ವರೂ ಅಪ್ಸರೆಯರೂ ಅಸುರರೂ ಎಲ್ಲರೂ ನೋಡಿದರು.
ಧೃಷ್ಟದ್ಯುಮ್ನೋ ಮಹೇಷ್ವಾಸಃ ಪ್ರತಿವ್ಯೂಹ್ಯಾಽಪಗಾಸುತಮ್ ।
ಚಕ್ರೇ ಯುದ್ಧಾನಿ ಸುಬಹೂನ್ಯಜೇಯಃ ಶತ್ರುಭೀ ರಣೇ ॥39॥
ಯುದ್ಧದಲ್ಲಿ ಶತ್ರುಗಳಿಂದ ಅಜೇಯನಾದ ಮಹಾಧನುರ್ಧಾರಿಯಾದ ಧೃಷ್ಟದ್ಯುಮ್ನನು ಭೀಷ್ಮರನ್ನು ಎದುರಿಸಿ ಬಹಳ ಯುದ್ಧಗಳನ್ನು ಮಾಡಿದನು.
ತತೋऽದ್ವಧಾರ ಕೃಷ್ಣೋಽಪಿ ಫಲ್ಗುನಂ ಮೃದುಯೋಧಿನಮ್ ।
ದೃಷ್ಟ್ವಾ ಚಕ್ರಂ ತಥೋದ್ಯಮ್ಯ ಬಾಹುಂ ಭೀಷ್ಮಾಯ ಜಗ್ಮಿವಾನ್ ॥40॥
ಮರುದಿನ ಅರ್ಜುನನು ಮೃದುವಾಗಿ ಯುದ್ಧ ಮಾಡುತ್ತಿದ್ದುದನ್ನು ಕಂಡು ಕೃಷ್ಣನು ಚಕ್ರವನ್ನೆತ್ತಿದನು. ತೋಳೆತ್ತಿ ಭೀಷ್ಮನ ಕಡೆಗೆ ನಡೆದನು.
ತೇನ ಸ್ತುತೋ ಗೃಹೀತಶ್ಚ ಫಲ್ಗುನೇನ ಪ್ರಣಮ್ಯ ಚ ।
ಪ್ರಾರ್ಥಿತೋ ರಥಮಾರೂಢಃ ಪುನಃ ಶಂಖಮಪೂರಯತ್ ॥41॥
ಭೀಷ್ಮರು ಸ್ತೋತ್ರ ಮಾಡಿದಾಗ ಅರ್ಜುನನೂ ನಮಿಸಿ ಕೈಹಿಡಿದು ಬೇಡಿಕೊಂಡಾಗ ತಿರುಗಿ ರಥವನ್ನೇರಿ ಶಂಖನಾದ ಮಾಡಿದನು.
ತತೋ ಭೀಷ್ಮೋಽರ್ಜುನಶ್ಚೈವ ಶಸತ್ರಸ್ತ್ರೈರಭ್ಯವರ್ಷತಾಮ್ ।
ಅಯತ್ನೇನ ಜಿತಶ್ಚೈವ ಫಲ್ಗುನೇನಾऽಪಗಾಸುತಃ ॥42॥
ಅಯುತಾನಿ ಸುಬಹೂನ್ಯಾಜೌ ರಥಾನಾಂ ನಿಜಘಾನ ಚ ॥43॥
ಬಳಿಕ ಭೀಷ್ಮರೂ ಅರ್ಜುನನೂ ಪರಸ್ಪರ ಶಸತ್ರಸ್ತ್ರಗಳ ಮಳೆಯನ್ನು ಸುರಿಸಿದರು. ಅರ್ಜುನನಿಂದ ಭೀಷ್ಮರು ಅಯತ್ನವಾಗಿ ಪರಾಜಿತರಾದರೂ ಅನೇಕ ಹತ್ತು ಸಾವಿರ ರಥಿಕರನ್ನು ಯುದ್ಧದಲ್ಲಿ ಸಂಹರಿಸಿದರು.
* * * * *
ಐವತ್ನಾಲ್ಕನೆಯ ಅಧ್ಯಾಯ

ಭೀಮಸೇನ, ಘಟೋತ್ಕಚ ಮತ್ತು ಅರ್ಜುನರ ಪರಾಕ್ರಮ. ಭೀಷ್ಮರನ್ನು ಕುರಿತು ದುರ್ಯೋಧನನ ಕ್ರೂರ ವಚನಗಳು ಮತ್ತು ಭೀಷ್ಮರ ಪ್ರತಿಜ್ಞೆ.

ಸಂಜಯಃ

ತತಸ್ತೇ ಪಾರ್ಥಿವಾಃ ಕ್ರುದ್ಧಾಃ ಫಲ್ಗುನಂ ವೀಕ್ಷ್ಯ ಸಂಯುಗೇ |
ರಥೈರನೇಕಸಾಹಸ್ರೈಃ ಸಮಂತಾತ್ ಪರ್ಯವಾರಯನ್ ||1||

ಸಂಜಯ ಅನಂತರ ಆ ರಾಜರು ಯುದ್ಧಭೂಮಿಯಲ್ಲಿ ಅರ್ಜುನನನ್ನು ನೋಡಿ ಕೋಪಗೊಂಡು ಅನೇಕ ಸಹಸ್ರ ರಥಗಳಿಂದ ಎಲ್ಲ ಕಡೆಗಳಿಂದಲೂ ಅರ್ಜುನನನ್ನು ಸುತ್ತುವರಿದರು.

ಅಥೈನಂ ರಥವೃಂದೇನ ಕೋಷ್ಟಕೀಕೃತ್ಯ ಭಾರತ |
ಶರೈಃ ಸುಬಹುಸಾಹಸ್ರೈಃ ಸಮಂತಾದಭ್ಯವಾರಯನ್ ||2||

ಎಲೈ ಭಾರತನೇ, ಅನಂತರ ತಮ್ಮ ರಥಸಮೂಹದಿಂದ ಅರ್ಜುನನನ್ನು ಒಳಗೆ ಕೂಡಿಹಾಕಿಕೊಂಡು ಅನೇಕ ಸಹಸ್ರ ಬಾಣಗಳಿಂದ ಎಲ್ಲ ಕಡೆಗಳಿಂದಲೂ ಅವನನ್ನು ತಡೆದರು.

ಶಕ್ತೀಶ್ಚ ವಿಮಲಾಸ್ತೀಕ್ಷ್ಣಾ ಗದಾಶ್ಚ ಪರಿಘೈಃ ಸಹ |
ಪ್ರಾಸಾನ್ ಪರಶ್ವಧಾಂಶ್ಚೈವ ಮುದ್ಗರಾನ್ ಮುಸಲಾನಪಿ |
ಚಿಕ್ಷಿಪುಃ ಸಮರೇ ಕ್ರುದ್ಧಾಃ ಫಲ್ಗುನಸ್ಯ ರಥಂ ಪ್ರತಿ ||3||

ವಿಮಲವಾದ ಮತ್ತು ತೀಕ್ಷ್ಣವಾದ ಶಕ್ತ್ಯಾಯುಧಗಳನ್ನು, ಪರಿಘಗಳಿಂದ ಕೂಡಿದ ಗದೆಗಳನ್ನು, ಪ್ರಾಸಗಳನ್ನು, ಪರಶ್ವಧಗಳನ್ನು, ಮುದ್ಗರಗಳನ್ನು, ಮುಸಲಗಳನ್ನು ಕೋಪದಿಂದ ಅರ್ಜುನನ ರಥದ ಮೇಲೆ ರಣರಂಗದಲ್ಲಿ ಪ್ರಯೋಗಿಸಿದರು.

ಶಸ್ತ್ರಾಣಾಮಥ ತಾಂ ವೃಷ್ಟಿಂ ಶಲಭಾನಾಮಿವಾಯತಿಮ್ |
ರುರೋಧ ಸರ್ವತಃ ಪಾರ್ಥಃ ಶರೈಃ ಕನಕಭೂಷಣೈಃ ||4||

ಪತಂಗಗಳಂತೆ ಬರುತ್ತಿರುವ ಆ ವಿಸ್ತಾರವಾದ ಬಾಣಗಳ ವೃಷ್ಟಿಯನ್ನು ಕನಕಭೂಷಿತವಾದ ತನ್ನ ಬಾಣಗಳಿಂದ ಅರ್ಜುನನು ಎಲ್ಲ ಕಡೆಗಳಲ್ಲಿಯೂ ತಡೆದನು.

ತತ್ರ ತಲ್ಲಾಘವಂ ದೃಷ್ಟ್ವಾ ಬೀಭತ್ಸೋರತಿಮಾನುಷಮ್ |
ದೇವದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ |
ಸಾಧು ಸಾಧ್ವಿತಿ ರಾಜೇಂದ್ರ ಫಲ್ಗುನಂ ಪ್ರತ್ಯಪೂಜಯನ್ ||5||

ಎಲೈ ರಾಜೇಂದ್ರನೇ, ಅರ್ಜುನನ ಮನುಷ್ಯರನ್ನು ಮೀರಿದ ಆ ಶೀಘ್ರಕಾರಿತ್ವವನ್ನು ನೋಡಿ ದೇವದಾನವಗಂಧರ್ವರು, ಪಿಶಾಚೋರಗರಾಕ್ಷಸರು ಸಾಧು ಸಾಧು ಎಂದು ಹೇಳುತ್ತಾ ಅರ್ಜುನನನ್ನು ಗೌರವಿಸಿದರು.

ಸಾತ್ಯಕಿಂ ಚಾಭಿಮನ್ಯುಂ ಚ ಮಹತ್ಯಾ ಸೇನಯಾ ಸಹ |
ಗಾಂಧಾರಾಃ ಸಮರೇ ಶೂರಾ ರುರುಧುಃ ಸಹಸೌಬಲಾಃ ||6||

ಗಾಂಧಾರ ದೇಶದ ಶೂರರು ಸೌಬಲರಿಂದ ಸಹಿತರಾಗಿ ದೊಡ್ಡ ಸೈನ್ಯದಿಂದ ಕೂಡಿ ಸಾತ್ಯಕಿಯನ್ನೂ ಮತ್ತು ಅಭಿಮನ್ಯುವನ್ನೂ ತಡೆದರು.

ತತ್ರ ಸೌಬಲಕಾಃ ಕ್ರುದ್ಧಾ ವಾರ್ಷ್ಣೇಯಸ್ಯ ರಥೋತ್ತಮಮ್ |
ತಿಲಶಶ್ಚಿಚ್ಛಿದುಃ ಕ್ರೋಧಾಚ್ಛಸ್ತ್ರೈರ್ನಾನಾವಿಧೈರ್ಯುಧಿ ||7||

ಅಲ್ಲಿ ಸೌಬಲ ಯೋಧರು ರಣರಂಗದಲ್ಲಿ ನಾನಾವಿಧವಾದ ಶಸ್ತ್ರಗಳನ್ನು ಪ್ರಯೋಗಿಸಿ ಸಾತ್ಯಕಿಯ ಶ್ರೇಷ್ಠವಾದ ರಥವನ್ನು ಎಳ್ಳಿನಷ್ಟು ಸಣ್ಣ ಚೂರುಗಳಾಗಿ ಪುಡಿಮಾಡಿದರು.

ಸಾತ್ಯಕಿಸ್ತು ರಥಂ ತ್ಯಕ್ತ್ವಾ ವರ್ತಮಾನೇ ಮಹಾಭಯೇ |
ಅಭಿಮನ್ಯೋ ರಥಂ ತೂರ್ಣಮಾರುರೋಹ ಪರಂತಪಃ ||8||

ಪರಂತಪನಾದ ಸಾತ್ಯಕಿಯಾದರೂ ಅಂತಹ ದೊಡ್ಡ ಭಯವುಂಟಾಗುತ್ತಿರಲು ತನ್ನ ರಥವನ್ನು ಬಿಟ್ಟು ಶೀಘ್ರವಾಗಿ ಅಭಿಮನ್ಯುವಿನ ರಥವನ್ನು ಏರಿದನು.

ತಾವೇಕರಥಸಂಯುಕ್ತೌ ಸೌಬಲೇಯಸ್ಯ ವಾಹಿನೀಮ್ |
ವ್ಯಧಮೇತಾಂ ಶಿತೈಸ್ತೂರ್ಣಂ ಶರೈಃ ಸನ್ನತಪರ್ವಭಿಃ ||9||

ಅವರಿಬ್ಬರೂ ಜೊತೆಯಾಗಿ ಒಂದು ರಥವನ್ನು ಏರಿ ಬಾಗಿದ ತುದಿಯುಳ್ಳ, ಹರಿತವಾದ ಬಾಣಗಳಿಂದ ಶೀಘ್ರವಾಗಿ ಶಕುನಿಯ ಸೈನ್ಯವನ್ನು ನಾಶಗೊಳಿಸಿದರು.

ದ್ರೋಣಭೀಷ್ಮೌ ರಣೇ ಯತ್ತೌ ಧರ್ಮರಾಜಸ್ಯ ವಾಹಿನೀಮ್ |
ನಾಶಯೇತಾಂ ಶರೈಸ್ತೀಕ್ಷ್ಣೈಃ ಕಂಕಪತ್ರಪರಿಚ್ಛದೈಃ ||10||

ದ್ರೋಣ-ಭೀಷ್ಮರು ಎಚ್ಚರಿಕೆಯಿಂದ ಕಂಕಪತ್ರಗಳಿಂದ ಆವೃತವಾದ ತೀಕ್ಷ್ಣವಾದ ಬಾಣಗಳಿಂದ ರಣರಂಗದಲ್ಲಿ ಧರ್ಮರಾಜನ ಸೈನ್ಯವನ್ನು ನಾಶಮಾಡಿದರು.

ತತೋ ಧರ್ಮಸುತೋ ರಾಜಾ ಮಾದ್ರೀಪುತ್ರೌ ಚ ಪಾಂಡವೌ |
ಮಿಷತಾಂ ಸರ್ವಸೈನ್ಯಾನಾಂ ದ್ರೋಣಾನೀಕಮುಪಾದ್ರವನ್ ||11||

ಆಗ ಧರ್ಮಸುತನಾದ ಯುಧಿಷ್ಠಿರನೂ, ಮಾದ್ರೀ ಮಕ್ಕಳಾದ ಪಾಂಡವರೂ ಎಲ್ಲ ಸೈನ್ಯಗಳು ನೋಡುತ್ತಿರುವಂತೆಯೇ ದ್ರೋಣರ ಸೈನ್ಯದ ಮೇಲೆ ಧಾವಿಸಿದರು.

ತತ್ರಾಸೀತ್ ಸುಮಹದ್ ಯುದ್ಧಂ ತುಮುಲಂ ಲೋಮಹರ್ಷಣಮ್ |

ಯಥಾ ದೇವಾಸುರಂ ಯುದ್ಧಂ ಪೂರ್ವಮಾಸೀತ್ ಸುದಾರುಣಮ್ ॥
ಹಿಂದೆ ದೇವಾಸುರರಿಗೆ ನಡೆದ ದಾರುಣವಾದ ಯುದ್ಧದಂತೆ ಅಲ್ಲಿ ರೋಮಾಂಚಕಾರಿಯೂ ಮತ್ತು ತೀವ್ರವೂ ಆದ ದೊಡ್ಡ ಯುದ್ಧವು ಸಂಭವಿಸಿತು.
ಕುರ್ವಾಣೌ ತು ಮಹತ್ಕರ್ಮ ಭೀಮಸೇನಘಟೋತ್ಕಚೌ |
ದುರ್ಯೋಧನಸ್ತತೋಽಭ್ಯೇತ್ಯ ತಾವುಭಾವಭ್ಯವಾರಯತ್ ॥13॥
ತತ್ರಾದ್ಭುತಮಪಶ್ಯಾಮ ಹೈಡಿಂಬಸ್ಯ ಪರಾಕ್ರಮಮ್ |
ಅತೀತ್ಯ ಪಿತರಂ ಯುದ್ಧೇ ಯದಯುಧ್ಯತ ಭಾರತ ॥14॥
ಮಹತ್ಕಾರ್ಯಗಳನ್ನು ಮಾಡುತ್ತಿದ್ದ ಭೀಮಸೇನ, ಘಟೋತ್ಕಚರನ್ನು ದುರ್ಯೋಧನನು ಸಮೀಪಿಸಿ ಅವರಿಬ್ಬರನ್ನೂ ತಡೆದನು. ಎಲೈ ಭಾರತನೇ, ಅಲ್ಲಿ ಯುದ್ಧದಲ್ಲಿ ತಂದೆಯಾದ ಭೀಮನನ್ನು ಮೀರಿಸಿದ ಘಟೋತ್ಕಚನ ಅದ್ಭುತವಾದ ಪರಾಕ್ರಮವನ್ನು ನೋಡಿದೆವು.
ಭೀಮಸೇನಸ್ತು ಸಂಕ್ರುದ್ಧೋ ದುರ್ಯೋಧನಮಮರ್ಷಣಮ್ |
ಹೃದ್ಯವಿಧ್ಯತ್ ಪೃಷತ್ಕೇನ ಪ್ರಹಸನ್ನಿವ ಪಾಂಡವಃ ॥15॥
ಭೀಮಸೇನನಾದರೂ ಬಹಳ ಕೋಪಗೊಂಡು ನಗುವವನಂತೆ ಕ್ರೋಧಶೀಲನಾದ ದುರ್ಯೋಧನನಿಗೆ ತನ್ನ ಬಾಣದಿಂದ ಹೃದಯದಲ್ಲಿ ಹೊಡೆದನು.
ತತೋ ದುರ್ಯೋಧನೋ ರಾಜಾ ಪ್ರಹಾರವರಮೋಹಿತಃ |
ನಿಷಸಾದ ರಥೋಪಸ್ಥೇ ಕಶ್ಮಲಂ ಚ ಜಗಾಮ ಹ ॥16॥
ಆಗ ಆ ಶ್ರೇಷ್ಠವಾದ ಪ್ರಹಾರದಿಂದ ಮೋಹಕ್ಕೆ ಒಳಗಾದ ದುರ್ಯೋಧನ ರಾಜನು ರಥದ ಮಧ್ಯಭಾಗದಲ್ಲಿ ಕುಸಿದು ಮೂರ್ಛೆ ಹೋದನು.
ತಂ ವಿಸಂಜ್ಞಮಥೋ ಜ್ಞಾತ್ವಾ ತ್ವರಮಾಣೋಽಸ್ಯ ಸಾರಥಿಃ |
ಅಪೋವಾಹ ರಣಾದ್ ರಾಜನ್ ತತಃ ಸೈನ್ಯಮಭಿದ್ಯತ ॥17॥
ಅವನು ಮೂರ್ಛೆ ಹೋದುದನ್ನು ತಿಳಿದ ಅವನ ಸಾರಥಿಯು ಎಲೈ ರಾಜನೇ, ಅವನನ್ನು ಬೇಗ ರಣರಂಗದಿಂದ ಹೊರಗೆ ಕರೆದುಕೊಂಡು ಹೋದನು. ಅನಂತರ ಕೌರವ ಸೈನ್ಯವು ಭಗ್ನವಾಯಿತು.
ತತಸ್ತಾಂ ಕೌರವೀಂ ಸೇನಾಂ ದ್ರವಮಾಣಾಂ ಸಮಂತತಃ |
ನಿಘ್ನನ್ಭೀಮಃ ಶರೈಸ್ತೀಕ್ಷ್ಣೈರನುವವ್ರಾಜ ಪೃಷ್ಠತಃ ॥18॥
ಆಗ ಎಲ್ಲ ಕಡೆಗಳಲ್ಲಿಯೂ ಓಡುತ್ತಿದ್ದ ಆ ಕೌರವಸೈನ್ಯವನ್ನು ಹಿಂಬಾಲಿಸಿ, ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಭೀಮಸೇನನು ಅದರ ಹಿಂದೆ ನಡೆದನು.
ಪಾರ್ಷತಶ್ಚ ರಥಶ್ರೇಷ್ಠೋ ಧರ್ಮಪುತ್ರಶ್ಚ ಪಾಂಡವಃ |
ದ್ರೋಣಸ್ಯ ಪಶ್ಯತಃ ಸೈನ್ಯಂ ಗಾಂಗೇಯಸ್ಯ ಚ ಪಶ್ಯತಃ |
ಜಘ್ನತುರ್ವಿಶಿಖೈಸ್ತೀಕ್ಷ್ಣೈಃ ಪರಾನೀಕವಿಶಾತನೈಃ ॥19॥
ರಥಶ್ರೇಷ್ಠನಾದ ಧೃಷ್ಟದ್ಯುಮ್ನನೂ ಮತ್ತು ಪಾಂಡುಪುತ್ರನಾದ ಧರ್ಮರಾಜನೂ ದ್ರೋಣರು ಮತ್ತು ಭೀಷ್ಮರು ನೋಡುತ್ತಿರುವಂತೆಯೇ ಕೌರವರ ಸೈನ್ಯವನ್ನು ಶತ್ರುಸೈನ್ಯವನ್ನು ನಾಶಮಾಡುವ ತೀಕ್ಷ್ಣವಾದ ಬಾಣಗಳಿಂದ ಘಾಸಿಗೊಳಿಸಿದರು.
ದ್ರವಮಾಣಂ ತು ತತ್ಸೈನ್ಯಂ ತವ ಪುತ್ರಸ್ಯ ಸಂಯುಗೇ |
ನಾಶಕ್ನುತಾಂ ವಾರಯಿತುಂ ಭೀಷ್ಮದ್ರೋಣೌ ಮಹಾರಥೌ ॥20॥
ಯುದ್ಧಭೂಮಿಯಿಂದ ಓಡುತ್ತಿದ್ದ ನಿನ್ನ ಪುತ್ರನ ಸೈನ್ಯವನ್ನು ಮಹಾರಥರಾದ ಭೀಷ್ಮ- ದ್ರೋಣರು ತಡೆಯಲು ಸಾಧ್ಯವಾಗಲಿಲ್ಲ.
ವಾರ್ಯಮಾಣಂ ಹಿ ಭೀಷ್ಮೇಣ ದ್ರೋಣೇನ ಚ ವಿಶಾಂಪತೇ |
ವಿದ್ರವತ್ಯೇವ ತತ್ಸೈನ್ಯಂ ಪಶ್ಯತೋರ್ದ್ರೋಣಭೀಷ್ಮಯೋಃ ॥21॥
ಎಲೈ ರಾಜನೇ, ಭೀಷ್ಮರು ಮತ್ತು ದ್ರೋಣರು ನಿಷೇಧ ಮಾಡುತ್ತಿದ್ದರೂ ಆ ಸೈನ್ಯವು ಅವರಿಬ್ಬರ ಎದುರಿಗೇ ಓಡುತ್ತಿದ್ದಿತು.
ತತೋ ರಥಸಹಸ್ರೇಷು ವಿದ್ರವತ್ಸು ತತಸ್ತತಃ |
ತಾವಾಸ್ಥಿತಾವೇಕರಥಂ ಸೌಭದ್ರಶಿನಿಪುಂಗವೌ |
ಸೌಬಲೀಂ ಸಮರೇ ಸೇನಾಂ ಶಾತಯೇತಾಂ ಸಮಂತತಃ ॥22॥
ಹೀಗೆ ಸಹಸ್ರ ರಥಗಳು ಅಲ್ಲಲ್ಲಿ ಓಡಿ ಹೋದಮೇಲೆ ಒಂದೇ ರಥದಲ್ಲಿದ್ದ ಅಭಿಮನ್ಯು ಮತ್ತು ಸಾತ್ಯಕಿಯರು ಶಕುನಿಯ ಸೈನ್ಯದ ಮೇಲೆ ದಾಳಿ ಮಾಡಿ ಎಲ್ಲ ಕಡೆಗಳಿಂದಲೂ ನಾಶಗೊಳಿಸಿದರು.
ಶುಶುಭಾತೇ ತದಾ ತೌ ತು ಶೈನೇಯಕುರುಪುಂಗವೌ |
ಅಮಾವಾಸ್ಯಾಂ ಗತೌ ಯದ್ವತ್ ಸೋಮಸೂರ್ಯೌ ನಭಸ್ತಳೇ ॥23॥
ಆಗ ಸಾತ್ಯಕಿ ಮತ್ತು ಕುರುಶ್ರೇಷ್ಠನಾದ ಅಭಿಮನ್ಯುವು ಅಮಾವಾಸ್ಯೆಯ ದಿವಸ ಚಂದ್ರ-ಸೂರ್ಯರು ಒಟ್ಟಿಗೆ ಆಕಾಶದಲ್ಲಿ ಬಂದಂತೆ ಶೋಭಿಸಿದರು.
ಅರ್ಜುನಸ್ತು ತತಃ ಕ್ರುದ್ಧಸ್ತವ ಸೈನ್ಯಂ ವಿಶಾಂಪತೇ |
ವವರ್ಷ ಶರವರ್ಷೇಣ ಧಾರಾಭಿರಿವ ತೋಯದಃ ॥24॥
ಎಲೈ ರಾಜನೇ, ಆಗ ಅರ್ಜುನನು ಕ್ರೋಧದಿಂದ ಕೂಡಿದವನಾಗಿ ಮೋಡವು ಮಳೆಯನ್ನು ಸುರಿಸಿದಂತೆ ನಿನ್ನ ಸೈನ್ಯದ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ವಧ್ಯಮಾನಂ ತತಸ್ತತ್ತು ಶರೈಃ ಪಾರ್ಥಸ್ಯ ಸಂಯುಗೇ |

ದುದ್ರಾವ ಕೌರವಂ ಸೈನ್ಯಂ ವಿಷಾದಭಯಕಂಪಿತಮ್ ॥25॥
ರಣರಂಗದಲ್ಲಿ ಅರ್ಜುನನ ಪ್ರಹಾರಕ್ಕೆ ಒಳಗಾದ ಆ ಕೌರವ ಸೈನ್ಯವು ವಿಷಾದ ಮತ್ತು ಭಯಗಳಿಂದ ನಡುಗುತ್ತಾ ಓಡಿಹೋಯಿತು.
ದ್ರವತಸ್ತಾನ್ ಸಮಾಲೋಕ್ಯ ಭೀಷ್ಮದ್ರೋಣೌ ಮಹಾರಥೌ |
ನ್ಯವಾರಯೇತಾಂ ಸಂರಬ್ಧೌ ದುರ್ಯೋಧನಹಿತೈಷಿಣೌ ॥26॥
ಓಡಿಹೋಗುತ್ತಿರುವ ಆ ಸೈನ್ಯವನ್ನು ನೋಡಿ ಕೋಪಗೊಂಡವರೂ ಮತ್ತು ದುರ್ಯೋಧನನ ಹಿತೈಷಿಗಳೂ ಆದ ಮಹಾರಥರಾದ ಭೀಷ್ಮ-ದ್ರೋಣರು ಅವರನ್ನು ನಿಷೇಧಿಸಿದರು.
ತತೋ ದುರ್ಯೋಧನೋ ರಾಜಾ ಸಮಾಶ್ವಸ್ಯ ವಿಶಾಂಪತೇ |
ನ್ಯವರ್ತಯತ ತತ್ಸೈನ್ಯಂ ದ್ರವಮಾಣಂ ಸಮಂತತಃ ॥27॥
ಎಲೈ ರಾಜನೇ, ಆ ವೇಳೆಗೆ ದುರ್ಯೋಧನನು ಸುಧಾರಿಸಿಕೊಂಡು ಪುನಃ ಸಂಜ್ಞೆಯನ್ನು ಪಡೆದು ಎಲ್ಲ ಕಡೆಗಳಲ್ಲಿಯೂ ಓಡುತ್ತಿದ್ದ ಆ ಸೈನ್ಯವನ್ನು ಹಿಂದಿರುಗಿಸಿದನು.
ಯತ್ರಯತ್ರ ಸುತಂ ತುಭ್ಯಂ ಯೋಯಃ ಪಶ್ಯತಿ ಭಾರತ |
ತತ್ರತತ್ರ ನ್ಯವರ್ತಂತ ಕ್ಷತ್ರಿಯಾಣಾಂ ಮಹಾರಥಾಃ ॥28॥
ಎಲೈ ಭಾರತನೇ, ನಿನ್ನ ಪುತ್ರನು ಎಲ್ಲೆಲ್ಲಿ ದೃಷ್ಟಿಯನ್ನು ಹಾಯಿಸಿದನೋ ಅಲ್ಲಲ್ಲಿಂದ ಮಹಾರಥರಾದ ಕ್ಷತ್ರಿಯರು ಹಿಂದಿರುಗಿದರು.
ತಾನ್ ನಿವೃತ್ತಾನ್ ಸಮೀಕ್ಷ್ಯೈವ ತತೋಽನ್ಯೇಽಪೀತರೇ ಜನಾಃ |
ಅನ್ಯೋನ್ಯಸ್ಪರ್ಧಯಾ ರಾಜನ್ ಲಜ್ಜಯಾನ್ಯೇಽವತಸ್ಥಿರೇ ॥29॥
ಎಲೈ ರಾಜನೇ, ಹಿಂದಿರುಗಿದ ಆ ರಾಜರನ್ನು ನೋಡಿ ಉಳಿದ ರಾಜರೂ ಮತ್ತು ಸಾಧಾರಣ ಯೋಧರೂ ಪರಸ್ಪರ ಸ್ಪರ್ಧೆಯಿಂದಲೂ, ಇನ್ನು ಕೆಲವರು ಲಜ್ಜೆಯಿಂದಲೂ ಅಲ್ಲಿಯೇ ನಿಂತರು.
ಪುನರಾವರ್ತತಾಂ ತೇಷಾಂ ವೇಗ ಆಸೀದ್ ವಿಶಾಂಪತೇ |
ಪೂರ್ಯತಃ ಸಾಗರಸ್ಯೇವ ಚಂದ್ರಸ್ಯೋದಯನಂ ಪ್ರತಿ ॥30॥
ಎಲೈ ರಾಜನೇ, ಅಲ್ಲಿಂದ ರಣಭೂಮಿಗೆ ಹಿಂದಿರುಗುವ ಅವರ ವೇಗವು ಚಂದ್ರೋದಯದಲ್ಲಿ ತುಂಬಿ ಉಕ್ಕುವ ಸಾಗರದ ವೇಗದಂತೆ ಇದ್ದಿತು.
ಸಂನಿವೃತ್ತಾಂಸ್ತತಸ್ತಾಂಸ್ತು ದೃಷ್ಟ್ವಾ ರಾಜಾ ಸುಯೋಧನಃ |
ಅಬ್ರವೀತ್ ತ್ವರಿತೋ ಗತ್ವಾ ಭೀಷ್ಮಂ ಶಾಂತನವಂ ವಚಃ ॥31॥
ಹಿಂದಿರುಗಿದ ಅವರನ್ನು ನೋಡಿ ರಾಜನಾದ ಸುಯೋಧನನು ಶೀಘ್ರವಾಗಿ ಶಂತನು ಪುತ್ರರಾದ ಭೀಷ್ಮರ ಬಳಿಗೆ ಹೋಗಿ ಮಾತನಾಡಿದನು.
ಪಿತಾಮಹ ನಿಬೋಧೇದಂ ಯತ್ತತ್ತ್ವ ವಕ್ಷ್ಯಾಮಿ ಭಾರತ |
ನಾನುರೂಪಮಹಂ ಮನ್ಯೇ ತ್ವಯಿ ಜೀವತಿ ಕೌರವ ॥32॥
ಪಿತಾಮಹರೇ, ಭಾರತರೇ, ನಾನು ಹೇಳುವ ಈ ಮಾತುಗಳನ್ನು ಗಮನಿಸಿ ತಿಳಿಯಿರಿ. ಎಲೈ ಕೌರವರೇ, ನೀವು ಬದುಕಿರುವಾಗ ಇದು ಯೋಗ್ಯವಲ್ಲವೆಂದು ಭಾವಿಸುತ್ತೇನೆ.
ದ್ರೋಣೇ ಚಾಸ್ತ್ರವಿದಾಂ ಶ್ರೇಷ್ಠೇ ಸಪುತ್ರೇ ಸಸುಹೃಜ್ಜನೇ |
ಕೃಪೇ ಚೈವ ಮಹೇಷ್ವಾಸೇ ದ್ರವತೀಯಂ ವರೂಥಿನೀ ॥33॥
ಪುತ್ರರಿಂದ ಮತ್ತು ಸುಹೃಜ್ಜನರಿಂದ ಕೂಡಿದ ಅಸ್ತ್ರವೇತ್ತರಲ್ಲಿ ಶ್ರೇಷ್ಠರಾದ ದ್ರೋಣರು ಇರುವಾಗ, ಮಹಾಧನುರ್ಧಾರಿಗಳಾದ ಕೃಪರೂ ಇರುವಾಗ ಈ ಸೈನ್ಯವು ಓಡಿಹೋಗುತ್ತಿದೆ.
ನ ಪಾಂಡವಾಃ ಪ್ರತಿಬಲಾಸ್ತವ ಮನ್ಯೇ ಕಥಂಚನ |
ತಥಾ ದ್ರೋಣಸ್ಯ ಸಂಗ್ರಾಮೇ ದ್ರೌಣೇಶ್ಚೈವ ಕೃಪಸ್ಯ ಚ ॥34॥
ಪಾಂಡವರು ನಿಮಗಾಗಲೀ ಅಥವಾ ದ್ರೋಣರಿಗಾಗಲೀ, ಅಶ್ವತ್ಥಾಮರಿಗಾಗಲೀ ಅಥವಾ ಕೃಪರಿಗಾಗಲೀ ಯುದ್ಧದಲ್ಲಿ ಸರಿಸಾಟಿಯಲ್ಲವೆಂದು ನಾನು ತಿಳಿಯುತ್ತೇನೆ.
ಅನುಗ್ರಾಹ್ಯಾಃ ಪಾಂಡುಸುತಾ ನೂನಂ ತವ ಪಿತಾಮಹ |
ಯಥೇಮಾಂ ಕ್ಷಮಸೇ ವೀರ ವಧ್ಯಮಾನಾಂ ವರೂಥಿನೀಮ್ ॥35॥
ಎಲೈ ಪಿತಾಮಹರೇ, ವೀರರೇ, ನೀವು ಈ ನನ್ನ ಸೈನ್ಯವು ನಾಶ ಹೊಂದುತ್ತಿರುವುದನ್ನು ನೋಡಿ ಕ್ಷಮೆಯನ್ನು ತಳೆದಿರುವಾಗ ನಿಮಗೆ ಪಾಂಡವರ ಮೇಲೆ ಅನುಗ್ರಹ ಬುದ್ಧಿಯಿದೆ ಎಂದು ಭಾವಿಸುತ್ತೇನೆ.
ಸೋಽಸ್ಮಿ ವಾಚ್ಯಸ್ತ್ವಯಾ ರಾಜನ್ ಪೂರ್ವಮೇವ ಸಮಾಗಮೇ |
ನ ಯೋತ್ಸ್ಯೇ ಪಾಂಡವಾನ್ ಸಂಖ್ಯೇ ನಾಪಿ ಪಾರ್ಷತಸಾತ್ಯಕೀ ॥36॥
ಎಲೈ ರಾಜರೇ, ನಾನು ನಿಮ್ಮನ್ನು ಭೇಟಿ ಮಾಡಿದಾಗ ಮೊದಲೇ ನಾನು ಪಾಂಡವರ ಜೊತೆಯಲ್ಲಾಗಲೀ, ಧೃಷ್ಟದ್ಯುಮ್ನ ಅಥವಾ ಸಾತ್ಯಕಿಯ ಜೊತೆಯಾಗಲೀ ಯುದ್ಧವನ್ನು ಮಾಡುವುದಿಲ್ಲ ಎಂದು ನೀವು ಹೇಳಬೇಕಾಗಿದ್ದಿತು.
ಶ್ರುತ್ವಾ ತು ವಚನಂ ತುಭ್ಯಮಾಚಾರ್ಯಸ್ಯ ಕೃಪಸ್ಯ ಚ |
ಕರ್ಣೇನ ಸಹಿತಃ ಕೃತ್ಯಂ ಚಿಂತಯಾನಸ್ತದೈವ ಹಿ ॥37॥
ಆಗ ನಿಮ್ಮ ಮಾತನ್ನು ಕೇಳಿ, ಹಾಗೆಯೇ ದ್ರೋಣಾಚಾರ್ಯರ ಹಾಗೂ ಕೃಪರ ಮಾತನ್ನು ಕೇಳಿ ಕರ್ಣನ ಜೊತೆಯಲ್ಲಿ ಮುಂದೆ ಮಾಡಬೇಕಾದ ಕಾರ್ಯದ ಮಂತ್ರಾಲೋಚನೆಯನ್ನು ಮಾಡುತ್ತಿದ್ದೆ.
ಯದಿ ನಾಹಂ ಪರಿತ್ಯಾಜ್ಯೋ ಯುವಾಭ್ಯಾಮಿಹ ಸಂಯುಗೇ |

ವಿಕ್ರಮೇಣಾನುರೂಪೇಣ ಯುಧ್ಯೇತಾಂ ಪುರುಷರ್ಷಭೌ ॥38॥
ಈ ಯುದ್ಧದಲ್ಲಿ ನಾನು ನಿಮ್ಮಿಂದ ಪರಿತ್ಯಾಜ್ಯನಲ್ಲದಿದ್ದರೆ ಪುರುಷಶ್ರೇಷ್ಠರಾದ ನೀವಿಬ್ಬರೂ ನಿಮಗೆ ಯೋಗ್ಯವಾದ ಪರಾಕ್ರಮವನ್ನು ತೋರಿ ಯುದ್ಧವನ್ನು ಮಾಡಿ.
ಏತಚ್ಛ್ರುತ್ವಾ ವಚೋ ಭೀಷ್ಮಃ ಪ್ರಹಸನ್ ವೈ ಮುಹುರ್ಮುಹುಃ |
ಅಬ್ರವೀತ್ ತನಯಂ ತುಭ್ಯಂ ಕ್ರೋಧಾದುದ್ವೃತ್ಯ ಚಕ್ಷುಷೀ ॥39॥
ಈ ಮಾತುಗಳನ್ನು ಕೇಳಿ ಭೀಷ್ಮರು ಮತ್ತೆ ಮತ್ತೆ ನಗುತ್ತಾ ಕೋಪದಿಂದ ಕಣ್ಣುಗಳನ್ನು ಅರಳಿಸಿ ನಿನ್ನ ಪುತ್ರನನ್ನು ಕುರಿತು ಮಾತನಾಡಿದರು.
ಬಹುಶೋ ಹಿ ಮಯಾ ರಾಜಂಸ್ತಥ್ಯಮುಕ್ತಂ ಹಿತಂ ವಚಃ |
ಅಜೇಯಾಃ ಪಾಂಡವಾ ಯುದ್ಧೇ ದೇವೈರಪಿ ಸವಾಸವೈಃ ॥40॥
ಎಲೈ ರಾಜನೇ, ನಾನು ನಿನಗೆ ಅನೇಕ ಬಾರಿ ಪಾಂಡವರು ಯುದ್ಧದಲ್ಲಿ ಇಂದ್ರ ಸಹಿತರಾದ ದೇವತೆಗಳಿಂದಲೂ ಅಜೇಯರಾದವರು ಎಂಬ ಹಿತವಚನವನ್ನು ಹೇಳಿದ್ದೇನೆ.
ಯತ್ತು ಶಕ್ಯಂ ಮಯಾ ಕರ್ತುಂ ವೃದ್ಧೇನಾದ್ಯ ನೃಪೋತ್ತಮ |
ಕರಿಷ್ಯಾಮಿ ಯಥಾಶಕ್ತಿ ಪ್ರೇಕ್ಷೇದಾನೀಂ ಸಬಾಂಧವಃ ॥41॥
ಎಲೈ ರಾಜಶ್ರೇಷ್ಠನೇ, ವೃದ್ಧನಾದ ನಾನು ಏನು ಮಾಡಲು ಸಾಧ್ಯವೋ ಅಷ್ಟನ್ನು ಮಾತ್ರ ನನ್ನ ಶಕ್ತಿಗೆ ಅನುಗುಣವಾಗಿ ಮಾಡುವೆನು. ಅದನ್ನು ನೀನು ನಿನ್ನ ಬಂಧುಗಳ ಜೊತೆಯಲ್ಲಿ ನೋಡುವವನಾಗು.
ಅದ್ಯ ಪಾಂಡುಸುತಾನ್ ಸರ್ವಾನ್ ಸಸೈನ್ಯಾನ್ ಸಹ ಬಂಧುಭಿಃ |
ಮಿಷತೋ ವಾರಯಿಷ್ಯಾಮಿ ಸರ್ವಲೋಕಸ್ಯ ಪಶ್ಯತಃ ॥42॥
ಈ ದಿನ ನೀನು ನೋಡುವಂತೆ ಮತ್ತು ಎಲ್ಲ ಲೋಕಗಳು ನೋಡುತ್ತಿರುವಂತೆ ನಾನು ಸೈನ್ಯದಿಂದ ಮತ್ತು ಬಂಧುಗಳಿಂದ ಕೂಡಿದ ಎಲ್ಲಾ ಪಾಂಡುಪುತ್ರರನ್ನೂ ತಡೆಯುವೆನು.
ಏವಮುಕ್ತೇ ತು ಭೀಷ್ಮೇಣ ಪುತ್ರಾಸ್ತವ ಜನೇಶ್ವರ |
ದಧ್ಮುಃ ಶಂಖಾನ್ ಮುದಾ ಯುಕ್ತಾ ಭೇರೀಶ್ಚ ಜಘ್ನಿರೇ ಭೃಶಮ್ ॥43॥
ಎಲೈ ಜನೇಶ್ವರನೇ, ಭೀಷ್ಮರು ಹೀಗೆ ಹೇಳುತ್ತಿರಲು ನಿನ್ನ ಪುತ್ರರು ಸಂತೋಷದಿಂದ ಕೂಡಿದವರಾಗಿ ಶಂಖಗಳನ್ನು ಊದಿದರು, ಭೇರಿಗಳನ್ನೂ ತೀವ್ರವಾಗಿ ಬಾರಿಸಿದರು.
ಪಾಂಡವಾಽಪಿ ತತೋ ರಾಜನ್ ಶ್ರುತ್ವಾ ತಂ ನಿನದಂ ಮಹತ್ |
ದಧ್ಮುಃ ಶಂಖಾಂಶ್ಚ ಭೇರೀಶ್ಚ ಮುರಜಾಂಶ್ಚ ವ್ಯನಾದಯನ್ ॥44॥
ಎಲೈ ರಾಜನೇ, ಪಾಂಡವರೂ ಸಹ ಆ ದೊಡ್ಡ ಶಬ್ದವನ್ನು ಕೇಳಿ ತಮ್ಮ ಶಂಖಗಳನ್ನು ಊದಿದರು. ಭೇರಿಗಳನ್ನು ಮತ್ತು ಮುರಜಗಳನ್ನು ಬಾರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುಃಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೈದನೆಯ ಅಧ್ಯಾಯ
ಯುದ್ಧದಲ್ಲಿ ಭೀಷ್ಮರ ಪರಾಕ್ರಮ. ಕೃಷ್ಣನಿಂದ ಚಕ್ರಧಾರಣ.
ಪರಾಜಿತರಾದ ಭೀಷ್ಮರಿಂದ ಸೈನ್ಯಾವಹಾರ.
ಧೃತರಾಷ್ಟ್ರಃ
ಪ್ರತಿಜ್ಞಾತೇ ತು ಭೀಷ್ಮೇಣ ತಸ್ಮಿನ್ ಯುದ್ಧೇ ಸುದಾರುಣೇ |
ಕ್ರೋಧಿತೋ ಮಮ ಪುತ್ರೇಣ ದುಃಖಿತೇನ ವಿಶೇಷತಃ ॥1॥
ಭೀಷ್ಮಃ ಕಿಮಕರೋತ್ ತತ್ರ ಪಾಂಡವೇಯೇಷು ಸಂಜಯ |
ಪಿತಾಮಹೇ ವಾ ಪಾಂಚಾಲಾಸ್ತನ್ಮಮಾಚಕ್ಷ್ವ ಸಂಜಯ ॥2॥
ಧೃತರಾಷ್ಟ್ರ ಆ ದಾರುಣವಾದ ಯುದ್ಧದಲ್ಲಿ ಭೀಷ್ಮರು ಪ್ರತಿಜ್ಞೆಯನ್ನು ಮಾಡಿದ ಮೇಲೆ ದುಃಖಿತನಾದ ನನ್ನ ಪುತ್ರನ ಮಾತುಗಳಿಂದ ವಿಶೇಷವಾಗಿ ಕ್ರೋಧವನ್ನು ತಳೆದ ಭೀಷ್ಮರು ಪಾಂಡವರ ಸೈನ್ಯದಲ್ಲಿ ಏನು ಮಾಡಿದರು? ಎಲೈ ಸಂಜಯನೇ, ಪಾಂಚಾಲರಾದರೂ ಭೀಷ್ಮನಿಗೆ ಏನು ಮಾಡಿದರು ಎಂಬುದನ್ನು ನನಗೆ ಹೇಳು.
ಸಂಜಯಃ
ಗತಪೂರ್ವಾಹ್ಣಭೂಯಿಷ್ಠೇ ತಸ್ಮಿನ್ನಹನಿ ಭಾರತ |
ಜಯಂ ಪ್ರಾಪ್ತೇಷು ಹೃಷ್ಟೇಷು ಪಾಂಡವೇಷು ಮಹಾತ್ಮಸು ॥3॥
ಸರ್ವಧರ್ಮವಿಶೇಷಜ್ಞಃ ಪಿತಾ ದೇವವ್ರತಸ್ತವ |
ಅಭ್ಯಯಾಜ್ಜವನೈರಶ್ವೈಃ ಪಾಂಡವಾನಾಮನೀಕಿನೀಮ್ |
ಮಹತ್ಯಾ ಸೇನಯಾ ಗುಪ್ತಸ್ತವ ಪುತ್ರೈಶ್ಚ ಸರ್ವಶಃ ॥4॥
ಸಂಜಯ ಎಲೈ ಭಾರತನೇ, ಆ ದಿನದ ಪ್ರಾತಃಕಾಲವು ಸಾಕಷ್ಟು ಕಳೆಯುತ್ತಿರಲು ಮಹಾತ್ಮರಾದ ಪಾಂಡವರು ಜಯವನ್ನು ಹೊಂದಿ, ಸಂತೋಷದಿಂದಿರಲು ಎಲ್ಲಾ ಧರ್ಮವಿಶೇಷಗಳನ್ನು ತಿಳಿದ ನಿನ್ನ ತಂದೆಯಾದ ದೇವವ್ರತನು ದೊಡ್ಡ ಸೈನ್ಯದಿಂದಲೂ ಮತ್ತು ನಿನ್ನ

ಪುತ್ರರಿಂದಲೂ ಎಲ್ಲ ಕಡೆಗಳಲ್ಲಿಯೂ ರಕ್ಷಿತನಾಗಿ ವೇಗವಾದ ಅಶ್ವಗಳಿಂದ ಪಾಂಡವರ ಸೈನ್ಯವನ್ನು ಪ್ರವೇಶಿಸಿದನು.
ಪ್ರಾವರ್ತತ ತತೋ ಯುದ್ಧಂ ತುಮುಲಂ ಲೋಮಹರ್ಷಣಮ್ |
ಅಸ್ಮಾಕಂ ಪಾಂಡವೈಃ ಸಾರ್ಧಮನಯಾತ್ ತವ ಭಾರತ ॥5॥
ಎಲೈ ಭಾರತನೇ, ಪಾಂಡವರಿಗೆ ಮತ್ತು ನಮಗೂ ನಿನ್ನ ದುರ್ನೀತಿಯಿಂದಾಗಿ ರೋಮಾಂಚಕಾರಿಯಾದ, ತೀವ್ರವಾದ ಯುದ್ಧವು ಜರುಗಿತು.
ಧನುಷಾಂ ಕೂಜತಾಂ ತತ್ರ ತಳಾನಾಂ ಚಾಭಿಹನ್ಯತಾಮ್ |
ಮಹಾನ್ ಸಮಭವಚ್ಛಬ್ದೋ ಗಿರೀಣಾಮಿವ ದೀರ್ಯತಾಮ್ ॥6॥
ಅಲ್ಲಿ ಧನುಸ್ಸಿನ ಶಬ್ದಗಳು ಮತ್ತು ಚಪ್ಪಾಳೆಯ ಶಬ್ದಗಳು ಪರ್ವತಗಳು ಬಿರಿದಂತೆ ದೊಡ್ಡದಾಗಿ ಕೇಳಿಬರುತ್ತಿದ್ದವು.
ತಿಷ್ಠ ಸ್ಥಿತೋಽಸ್ಮಿ ವಿದ್ಧ್ಯೇನಂ ನಿವರ್ತಸ್ವ ಸ್ಥಿರೋ ಭವ |
ಸ್ಥಿತೋಽಸ್ಮಿ ಪ್ರಹರಸ್ವೇತಿ ಶಬ್ದಾಃ ಶ್ರೂಯಂತ ಸರ್ವಶಃ ॥7॥
ನಿಲ್ಲು, ನಿಂತಿದ್ದೇನೆ, ಇವನಿಗೆ ಹೊಡೆ, ಹಿಂತಿರುಗು, ಸ್ಥಿರವಾಗಿರು, ಸ್ಥಿರವಾಗಿದ್ದೇನೆ, ಪ್ರಹಾರವನ್ನು ಮಾಡು ಮೊದಲಾದ ಶಬ್ದಗಳು ಎಲ್ಲ ಕಡೆಗಳಿಂದಲೂ ಕೇಳಿ ಬಂದವು.
ಕಾಂಚನೇಷು ತನುತ್ರೇಷು ಕಿರೀಟೇಷು ಧ್ವಜೇಷು ಚ |
ಶಿಲಾನಾಮಿವ ಶೈಲೇಷು ಪತಿತಾನಾಮಭೂತ್ ಸ್ವನಃ ॥8॥
ಸುವರ್ಣಮಯವಾದ ಕವಚಗಳ ಮೇಲೆ, ಕಿರೀಟಗಳ ಮೇಲೆ ಮತ್ತು ಧ್ವಜಗಳ ಮೇಲೆ ಬಿದ್ದ ಶಸ್ತ್ರಗಳ ಶಬ್ದವು ಪರ್ವತದ ಮೇಲೆ ಬಿದ್ದ ಶಿಲೆಗಳ ಶಬ್ದದಂತೆ ಇದ್ದಿತು.
ಪತಿತಾನ್ಯುತ್ತಮಾಂಗಾನಿ ಬಾಹವಶ್ಚ ವಿಭೂಷಿತಾಃ |
ವ್ಯಚೇಷ್ಟಂತ ಮಹೀಂ ಪ್ರಾಪ್ಯ ಶತಶೋಽಥ ಸಹಸ್ರಶಃ ॥9॥
ಕತ್ತರಿಸಲ್ಪಟ್ಟ ಶಿರಸ್ಸುಗಳು ಮತ್ತು ಅಲಂಕೃತವಾದ ಬಾಹುಗಳು ಭೂಮಿಯ ಮೇಲೆ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಉರುಳಾಡಿದವು.
ಹೃತೋತ್ತಮಾಂಗಾಃ ಕೇಚಿತ್ತು ತಥೈವೋದ್ಯತಕಾರ್ಮುಕಾಃ |
ಪ್ರಗೃಹೀತಾಯುಧಾಶ್ಚಾಪಿ ತಸ್ಥುಃ ಪುರುಷಸತ್ತಮಾಃ ॥10॥
ಕೆಲವು ಪುರುಷಶ್ರೇಷ್ಠರು ಶಿರಸ್ಸು ಕತ್ತರಿಸಿ ಹೋಗಿದ್ದರೂ ಕೈಯಲ್ಲಿ ಎತ್ತಿದ ಧನುಸ್ಸನ್ನು ಹಿಡಿದು ಮತ್ತು ಆಯುಧಗಳನ್ನು ಹಿಡಿದು ಹಾಗೆಯೇ ನಿಂತಿದ್ದರು.
ಪ್ರಾವರ್ತತ ಮಹಾವೇಗಾ ನದೀ ರುಧಿರವಾಹಿನೀ |
ಮಾತಂಗಾಂಗಶಿಲಾ ರೌದ್ರಾ ಮಾಂಸಶೋಣಿತಕರ್ದಮಾ ॥11॥
ವರಾಶ್ವನರನಾಗಾನಾಂ ಶರೀರಪ್ರಭವಾ ತದಾ |
ಪರಲೋಕಾರ್ಣವಮುಖೀ ಗೃಧ್ರಗೋಮಾಯುಮೋದಿನೀ ॥12॥
ಗಜಗಳ ಅಂಗಗಳೆಂಬ ಶಿಲೆಗಳುಳ್ಳ, ಮಾಂಸ-ರಕ್ತವೆಂಬ ಕೆಸರುಳ್ಳ, ಶ್ರೇಷ್ಠವಾದ, ಅಶ್ವ-ಗಜ-ಮನುಷ್ಯರ ಶರೀರದಿಂದ ಉಂಟಾದ, ಪರಲೋಕವೆಂಬ ಸಮುದ್ರಕ್ಕೆ ಅಭಿಮುಖವಾದ, ಹದ್ದು-ನರಿಗಳಿಗೆ ಸಂತೋಷವನ್ನು ಕೊಡುವ ಭಯಂಕರವಾದ ರಕ್ತವಾಹಿನಿಯಾದ ನದಿಯು ಮಹಾವೇಗದಿಂದ ಹರಿಯಿತು.
ನ ದೃಷ್ಟಂ ನ ಶ್ರುತಂ ಚಾಪಿ ಯುದ್ಧಮೇತಾದೃಶಂ ನೃಪ |
ಯಥಾ ತವ ಸುತಾನಾಂ ಚ ಪಾಂಡವಾನಾಂ ಚ ಭಾರತ ॥13॥
ಎಲೈ ಭಾರತನೇ, ರಾಜನೇ, ನಿನ್ನ ಮಕ್ಕಳಿಗೂ ಮತ್ತು ಪಾಂಡವರಿಗೂ ನಡೆದ ಇಂತಹ ಯುದ್ಧಕ್ಕೆ ಸದೃಶವಾದ ಯುದ್ಧವನ್ನು ಹಿಂದೆ ಯಾರೂ ನೋಡಿರಲಿಲ್ಲ ಅಥವಾ ಕೇಳಿರಲಿಲ್ಲ.
ನಾಸೀದ್ ರಥಪಥಸ್ತತ್ರ ಯೋಧೈರ್ಯುಧಿ ನಿಪಾತಿತೈಃ |
ಗಜೈಶ್ಚ ಪತಿತೈರ್ನೀಲೈರ್ಗಿರಿಶೃಂಗೈರಿವಾವೃತಮ್ ॥14॥
ನೆಲದ ಮೇಲೆ ಉರುಳಿದ ಯೋಧರ ಶರೀರದಿಂದಲೂ, ನೀಲ ಪರ್ವತಗಳ ಶಿಖರದಂತಿದ್ದ ಗಜ-ಶರೀರಗಳಿಂದಲೂ ಆವೃತವಾದ ರಣಭೂಮಿಯಲ್ಲಿ ಅಲ್ಲಿ ರಥಮಾರ್ಗವೇ ಇರಲಿಲ್ಲ.
ವಿಕೀರ್ಣೈಃ ಕವಚೈಶ್ಚಿತ್ರೈರ್ಧ್ವಜೈಶ್ಛತ್ರೈಶ್ಚ ಮಾರಿಷ |
ಶುಶುಭೇ ತದ್ರಣಸ್ಥಾನಂ ಶರದೀವ ನಭಸ್ತಳಮ್ ॥15॥
ಎಲೈಪೂಜ್ಯನೇ, ಚೆಲ್ಲಾಡಿದ ಕವಚಗಳಿಂದಲೂ, ವಿಚಿತ್ರ ಧ್ವಜ-ಛತ್ರಗಳಿಂದಲೂ ಕೂಡಿದ ಆ ರಣರಂಗವು ಶರತ್ಕಾಲದ ಆಕಾಶದಂತೆ ಶೋಭಿಸಿತು.
ವಿನಿರ್ಭಿನ್ನಾಃ ಶರೈಃ ಕೇಚಿದಂತ್ರಪೀಡಾವಿಕರ್ಷಿಣಃ |
ಅಭೀತಾಃ ಸಮರೇ ಶತ್ರೂನಭ್ಯಧಾವಂತ ದಂಸಿತಾಃ ॥16॥
ಕೆಲವರು ಶತ್ರುಗಳ ಬಾಣದಿಂದ ಗಾಯಗೊಂಡು ಕತ್ತರಿಸಿದ ತಲೆಗಳನ್ನು ಕರುಳಿನ ಮಾಲೆಗಳಿಂದ ಎಳೆದು ಹಾಕುತ್ತಾ ಶಸ್ತ್ರಕವಚಯುಕ್ತರಾಗಿ ನಿರ್ಭಯರಾಗಿ ಶತ್ರುಗಳ ಮೇಲೆ ಎರಗುತ್ತಿದ್ದರು.
ತಾತ ಭ್ರಾತಃ ಸಖೇ ಬಂಧೋ ವಯಸ್ಯ ಮಮ ಮಾತುಲ |
ಮಾ ಮಾಂ ಪರಿತ್ಯಜೇತ್ಯನ್ಯೇ ಚುಕ್ರುಶುಃ ಪತಿತಾ ರಣೇ ॥17॥
ತಂದೆಯೇ, ಸಹೋದರನೇ, ಸ್ನೇಹಿತನೇ, ಬಂಧುವೇ, ಮಿತ್ರನೇ, ನನ್ನ ಸೋದರ ಮಾವನೇ, ನನ್ನನ್ನು ಪರಿತ್ಯಜಿಸಬೇಡ ಎಂದು

ರಣರಂಗದಲ್ಲಿ ಕೆಳಗೆ ಬಿದ್ದವರು ಕಿರುಚುತ್ತಿದ್ದರು.
ಆಧಾವಾಭ್ಯೇಹಿ ಮಾ ಗಚ್ಛ ಕಿಂ ಭೀತೋಽಸಿ ಕ್ವ ಯಾಸ್ಯಸಿ |
ಸ್ಥಿತೋಽಹಂ ಸಮರೇ ಮಾ ಭೈರಿತಿ ಚಾನ್ಯೇ ವಿಚುಕ್ರುಶುಃ ॥18॥
ಇನ್ನು ಕೆಲವರು ಓಡಿ ಬಾ, ಸಮೀಪಕ್ಕೆ ಬಾ, ಹೋಗಬೇಡ, ಹೆದರಿದ್ದೀಯಾ? ಎಲ್ಲಿಗೆ ಹೋಗುವಿ? ನಾನು ರಣರಂಗದಲ್ಲಿ ಸ್ಥಿರವಾಗಿದ್ದೇನೆ, ಹೆದರಬೇಡ ಎಂದು ಕಿರುಚುತ್ತಿದ್ದರು.
ತತ್ರ ಭೀಷ್ಮಃ ಶಾಂತನವೋ ನಿತ್ಯಂ ಮಂಡಲಕಾರ್ಮುಕಃ |
ಮುಮೋಚ ಬಾಣಾನ್ ದೀಪ್ತಾಗ್ರಾನಹೀನಾಶೀವಿಷಾನಿವ ॥19॥
ಆ ರಣರಂಗದಲ್ಲಿ ಶಂತನು ಪುತ್ರರಾದ ಭೀಷ್ಮರು ತಮ್ಮ ಧನುಸ್ಸನ್ನು ಯಾವಾಗಲೂ ಮಂಡಲಾಕಾರವಾಗಿ ಬಗ್ಗಿಸಿ ದೃಷ್ಟಿವಿಷವುಳ್ಳ ಸರ್ಪದಂತಿದ್ದ ಪ್ರಕಾಶಮಾನವಾದ ಬಾಣಗಳನ್ನು ಪ್ರಯೋಗಿಸಿದರು.
ಶರೈರೇಕಾಯನೀಕುರ್ವನ್ ದಿಶಃ ಸರ್ವಾ ಯತವ್ರತಃ |
ಜಘಾನ ಪಾಂಡವರಥಾನಾದಿಶ್ಯಾದಿಶ್ಯ ಭಾರತ ॥20॥
ಎಲೈ ಭಾರತನೇ, ನಿಯತವ್ರತವುಳ್ಳ ಅವರು ಎಲ್ಲ ದಿಕ್ಕುಗಳನ್ನೂ ತಮ್ಮ ಬಾಣಗಳಿಂದ ಒಂದುಗೂಡಿಸುತ್ತಾ (ಒಂದೇ ರೀತಿಯಾಗಿ ಮಾಡುತ್ತಾ) ಪಾಂಡವರ ರಥರನ್ನು ಹೇಳಿ, ಹೇಳಿ ಕೊಂದರು.
ಸ ನೃತ್ಯನ್ ವೈ ರಥೋಪಸ್ಥೇ ದರ್ಶಯನ್ ಪಾಣಿಲಾಘವಮ್ |
ಅಲಾತಚಕ್ರವದ್ ರಾಜನ್ ತತ್ರತತ್ರ ಸ್ಮ ದೃಶ್ಯತೇ ॥21॥
ಎಲೈ ರಾಜನೇ, ಅವರು ರಥದ ಮುಂಭಾಗದಲ್ಲಿ ನೃತ್ಯವನ್ನು ಮಾಡುತ್ತಾ, ತಮ್ಮ ಹಸ್ತಲಾಘವವನ್ನು ತೋರಿಸುತ್ತಾ, ಅಲಾತಚಕ್ರದಂತೆ (ಕೊಳ್ಳಿಯ ಚಕ್ರದಂತೆ) ಎಲ್ಲ ಕಡೆಯಲ್ಲಿಯೂ ಕಂಡುಬಂದರು.
ತಮೇಕಂ ಸಮರೇ ಶೂರಂ ಪಾಂಡವಾಃ ಸೃಂಜಯಾಸ್ತಥಾ |
ಅನೇಕಶತಸಾಹಸ್ರಂ ಸಮಪಶ್ಯಂತ ಲಾಘವಾತ್ ॥22॥
ಆ ಒಬ್ಬರು ಶೂರರಾದ ಭೀಷ್ಮರನ್ನೇ ಪಾಂಡವರು ಮತ್ತು ಸೃಂಜಯರು ಅವರ ವೇಗದಿಂದ (ಲಾಘವದಿಂದ) ಅನೇಕಶತಸಹಸ್ರರೆಂದು ತಿಳಿದರು.
ಮಾಯಾಕೃತಾತ್ಮಾನಮಿವ ಭೀಷ್ಮಂ ತತ್ರ ಸ್ಮ ಮೇನಿರೇ |
ಪೂರ್ವಸ್ಯಾಂ ದಿಶಿ ತಂ ದೃಷ್ಟ್ವಾ ಪ್ರತೀಚ್ಯಾಂ ದದೃಶುರ್ಜನಾಃ ॥23॥
ಉದೀಚ್ಯಾಂ ಚೈನಮಾಲೋಕ್ಯ ದಕ್ಷಿಣಸ್ಯಾಂ ಪುನಃ ಪ್ರಭೋ |
ಏವಂ ಸ ಸಮರೇ ವೀರೋ ಗಾಂಗೇಯಃ ಪ್ರತ್ಯದೃಶ್ಯತ ॥24॥
ಮಾಯೆಯಿಂದ ಭೀಷ್ಮರು ತಮ್ಮನ್ನು ಬಹುವಾಗಿ ಮಾಡಿಕೊಂಡಿದ್ದಾರೆ ಎಂದು ತಿಳಿದರು. ಪೂರ್ವದಿಕ್ಕಿನಲ್ಲಿ ಅವರನ್ನು ನೋಡಿದ ಜನರು ಪುನಃ ಪಶ್ಚಿಮ ದಿಕ್ಕಿನಲ್ಲಿಯೂ ನೋಡಿದರು. ಎಲೈ ಪ್ರಭುವೇ, ಉತ್ತರದಿಕ್ಕಿನಲ್ಲಿ ಅವರನ್ನು ನೋಡಿ ಪುನಃ ದಕ್ಷಿಣ ದಿಕ್ಕಿನಲ್ಲಿಯೂ ನೋಡಿದರು. ವೀರರಾದ ಭೀಷ್ಮರು ರಣರಂಗದಲ್ಲಿ ಹೀಗೆ ತೋರಿದರು.
ನ ಚೈನಂ ಪಾಂಡವೇಯಾನಾಂ ಕಶ್ಚಿಚ್ಛಕ್ನೋತಿ ವೀಕ್ಷಿತುಮ್ |
ವಿಶಿಖಾನೇವ ಪಶ್ಯಂತಿ ಭೀಷ್ಮಚಾಪಚ್ಯುತಾನ್ ಬಹೂನ್ ॥25॥
ಪಾಂಡವರ ಸೈನ್ಯದಲ್ಲಿ ಯಾವೊಬ್ಬನೂ ಭೀಷ್ಮರನ್ನು ನೋಡಲು ಸಾಧ್ಯವಾಗಲಿಲ್ಲ. ಭೀಷ್ಮರ ಧನುಸ್ಸಿನಿಂದ ಹೊರಹೊಮ್ಮಿದ ಅನೇಕ ಬಾಣಗಳು ಮಾತ್ರ ಕಾಣುತ್ತಿದ್ದವು.
ಕುರ್ವಾಣಂ ಸಮರೇ ಕರ್ಮ ಸೂದಯಾನಂ ಚ ವಾಹಿನೀಮ್ |
ವ್ಯಾಕ್ರೋಶಂತ ರಣೇ ತತ್ರ ವೀರಾ ಬಹುವಿಧಂ ಬಹು |
ಅಮಾನುಷೇಣ ರೂಪೇಣ ಚರಂತಂ ಪಿತರಂ ತವ ॥26॥
ಯುದ್ಧದಲ್ಲಿ ಅದ್ಭುತ ಕರ್ಮವನ್ನು ಮಾಡಿ ಶತ್ರುಸೈನ್ಯವನ್ನು ನಾಶಮಾಡುತ್ತಾ ಅಮಾನುಷ ರೂಪದಿಂದ ಸಂಚರಿಸುತ್ತಿದ್ದ ನಿನ್ನ ತಂದೆಯನ್ನು ನೋಡಿ ರಣರಂಗದಲ್ಲಿ ವೀರರು ಬಹುವಿಧವಾಗಿ ಅನೇಕ ಬಾರಿ ಕಿರುಚಿದರು.
ಶಲಭಾ ಇವ ರಾಜಾನಃ ಪತಂತಿ ವಿಧಿಚೋದಿತಾಃ |
ಭೀಷ್ಮಾಗ್ನಿಮಭಿ ಸಂಕ್ರುದ್ಧಂ ವಿನಾಶಾಯ ಸಹಸ್ರಶಃ ॥27॥
ಪತಂಗಗಳಂತೆ ವಿಧಿಚೋದಿತರಾದ ರಾಜರು ಕೋಪಗೊಂಡ ಭೀಷ್ಮರೆಂಬ ಅಗ್ನಿಯ ಮುಖದಲ್ಲಿ ಸಹಸ್ರ ಸಂಖ್ಯೆಯಲ್ಲಿ ತಮ್ಮ ವಿನಾಶಕ್ಕಾಗಿ ಬಿದ್ದರು.
ನ ಹಿ ಮೋಘಃ ಶರಃ ಕಶ್ಚಿದಾಸೀದ್ ಭೀಷ್ಮಸ್ಯ ಸಂಯುಗೇ |
ನರನಾಗಾಶ್ವಕಾಯೇಷು ಬಹುತ್ವಾಲ್ಲಘುವೇಧಿನಃ ॥28॥
ಗಜ, ಮನುಷ್ಯ ಮತ್ತು ಅಶ್ವಗಳ ಶರೀರಗಳನ್ನು ಉದ್ದೇಶಿಸಿ ಭೀಷ್ಮರು ಪ್ರಯೋಗಿಸಿದ ಬಹುಬಾಣಗಳಲ್ಲಿ ಕ್ಷಿಪ್ರವಾಗಿ ಪ್ರಯೋಗಿಸುವ ಅವರ ಯಾವ ಬಾಣವೂ ವ್ಯರ್ಥವಾಗಲಿಲ್ಲ.
ಭಿನತ್ತ್ಯೇಕೇನ ಬಾಣೇನ ಸುಮುಕ್ತೇನ ಪತತ್ರಿಣಾ |
ಗಜಕಂಕಟಸನ್ನಾಹಂ ವಜ್ರೇಣೇವಾಚಲೋತ್ತಮಮ್ ॥29॥
ರೆಕ್ಕೆಗಳಿರುವ ಒಂದೇ ಬಾಣವನ್ನು ಚೆನ್ನಾಗಿ ಪ್ರಯೋಗಿಸಿ ವಜ್ರಾಯುಧದಿಂದ ಶ್ರೇಷ್ಠವಾದ ಪರ್ವತವನ್ನು ಸೀಳಿದಂತೆ ಗಜಗಳ ಸಮೂಹವನ್ನು ಅವರು ಸೀಳಿದರು.
ದ್ವೌ ತ್ರೀನಪಿ ಗಜಾರೋಹಾನ್ ಪಿಂಡಿತಾನ್ ವರ್ಮಿತಾನಪಿ |

ನಾರಾಚೇನ ಸುತೀಕ್ಷ್ಣೇನ ನಿಜಘಾನ ಪಿತಾ ತವ ॥30॥
ಇಬ್ಬರು ಅಥವಾ ಮೂವರು ಗಜಾರೋಹಿಗಳು ಕವಚಗಳನ್ನು ಧರಿಸಿ ಒಟ್ಟಿಗೇ ಬಂದರೂ ತೀಕ್ಷ್ಣವಾದ ಒಂದೇ ನಾರಾಚದಿಂದ ನಿನ್ನ ತಂದೆಯು ಅವರನ್ನು ಸಂಹರಿಸಿದರು.
ಯೋ ಯೋ ಭೀಷ್ಮಂ ನರವ್ಯಾಘ್ರಮಭ್ಯೇತಿ ಯುಧಿ ಕಶ್ಚನ |
ಮುಹೂರ್ತದೃಷ್ಟಃ ಸ ಮಯಾ ಪಾತಿತೋ ಭುವಿ ದೃಶ್ಯತೇ ॥31॥
ಯಾರು ಯಾರು ನರವ್ಯಾಘ್ರರಾದ ಭೀಷ್ಮರ ಜೊತೆಯಲ್ಲಿ ಯುದ್ಧ ಮಾಡಲು ರಣರಂಗದಲ್ಲಿ ಅವರ ಸಮೀಪಕ್ಕೆ ಬರುತ್ತಾರೆಯೋ ಅವರನ್ನು ನಾನು ಒಂದು ಮುಹೂರ್ತ ನೋಡುವಷ್ಟರಲ್ಲಿ ಅವರು ಭೂಮಿಯ ಮೇಲೆ ಬಿದ್ದಿರುವುದು ಕಂಡು ಬರುತ್ತಿದ್ದಿತು.
ಏವಂ ಸಾ ಧರ್ಮರಾಜಸ್ಯ ವಧ್ಯಮಾನಾ ಮಹಾಚಮೂಃ |
ಭೀಷ್ಮೇಣಾತುಲವೀರ್ಯೇಣ ವ್ಯಶೀರ್ಯತ ಸಹಸ್ರಧಾ ॥32॥
ಹೀಗೆ ಅತುಲ ಪರಾಕ್ರಮಿಗಳಾದ ಭೀಷ್ಮರಿಂದ ವಧಿಸಲ್ಪಟ್ಟ ಧರ್ಮರಾಜನ ದೊಡ್ಡ ಸೈನ್ಯವು ಸಾವಿರ ಪಾಲಾಗಿ ಒಡೆದು ಹೋಯಿತು.
ಪ್ರಕೀರ್ಯತ ಮಹಾಸೇನಾ ಶರವರ್ಷಾಭಿತಾಪಿತಾ |
ಪಶ್ಯತೋ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ॥33॥
ಭೀಷ್ಮರ ಬಾಣದ ಮಳೆಗೆ ತತ್ತರಿಸಿದ ಆ ಮಹಾಸೈನ್ಯವು ಮಹಾತ್ಮರಾದ ಕೃಷ್ಣಾರ್ಜುನರು ನೋಡುತ್ತಿರುವಂತೆಯೇ ಚದುರಿ ಹೋಯಿತು.
ಯತಮಾನಾಪಿ ತೇ ವೀರಾ ದ್ರವಮಾಣಾನ್ ಮಹಾರಥಾನ್ |
ನಾಶಕ್ನುವನ್ ವಾರಯಿತುಂ ಭೀಷ್ಮಬಾಣಪ್ರಪೀಡಿತಾನ್ ॥34॥
ಆ ವೀರರು ಓಡಿ ಹೋಗುತ್ತಿದ್ದ ಮಹಾರಥರನ್ನು ನಿಲ್ಲಿಸಲು ಪ್ರಯತ್ನಪಟ್ಟರೂ ಭೀಷ್ಮರ ಬಾಣಗಳಿಂದ ಚೆನ್ನಾಗಿ ಪೀಡಿತರಾದ ಅವರನ್ನು ನಿಲ್ಲಿಸಲು ಸಾಧ್ಯವಾಗಲಿಲ್ಲ.
ಮಹೇಂದ್ರಸಮವೀರ್ಯೇಣ ವಧ್ಯಮಾನಾ ಮಹಾಚಮೂಃ |
ಅಭಜ್ಯತ ಮಹಾರಾಜ ನ ಚ ದ್ವೌ ಸಹ ಧಾವತಃ ॥35॥
ಎಲೈ ಮಹಾರಾಜನೇ, ಮಹೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಭೀಷ್ಮರಿಂದ ವಧಿಸಲ್ಪಟ್ಟ ಆ ದೊಡ್ಡ ಸೈನ್ಯವು ಒಡೆದು ಹೋಯಿತು. ಯಾರಿಬ್ಬರೂ ಜೊತೆಯಲ್ಲಿ ಓಡುತ್ತಿರಲಿಲ್ಲ.
ಆವಿದ್ಧನರನಾಗಾಶ್ವಂ ಪತಿತಧ್ವಜಕೂಬರಮ್ |
ಅನೀಕಂ ಪಾಂಡುಪುತ್ರಾಣಾಂ ಹಾಹಾಭೂತಮಚೇತನಮ್ ॥36॥
ಬಹಳವಾಗಿ ಪ್ರಹಾರವನ್ನು ಹೊಂದಿದ ನರನಾಗಾಶ್ವವನ್ನುಳ್ಳ ಧ್ವಜಗಳಿಂದ ಮತ್ತು ನೆಲಕ್ಕುರುಳಿದ ಕೂಬರಗಳಿಂದ ಕೂಡ ಪಾಂಡುಪುತ್ರರ ಸೈನ್ಯವು ಸಂಜ್ಞೆಯನ್ನು ಕಳೆದುಕೊಂಡು ಹಾಹಾಕಾರವನ್ನು ಮಾಡಿತು.
ಜಘಾನಾತ್ರ ಪಿತಾ ಪುತ್ರಂ ಪುತ್ರಶ್ಚ ಪಿತರಂ ತಥಾ |
ಪ್ರಿಯಂ ಸಖಾಯಂ ಚಾಕ್ರಂದೇ ಸಖಾ ದೈವಬಲಾತ್ಕೃತಃ ॥37॥
ಆ ರಣರಂಗದಲ್ಲಿ ತಂದೆಯು ಮಗನನ್ನು ಸಂಹರಿಸಿದನು, ಹಾಗೆಯೇ ಪುತ್ರನು ತಂದೆಯನ್ನು ಸಂಹರಿಸಿದನು. ಎಲ್ಲರೂ ನೋವಿನಿಂದ ಕಿರುಚುತ್ತಿದ್ದ ಆ ರಣರಂಗದಲ್ಲಿ ವಿಧಿವಶನಾಗಿ ಸ್ನೇಹಿತನು ತನ್ನ ಪ್ರಿಯಮಿತ್ರನನ್ನೇ ಕೊಂದನು.
ವಿಮುಚ್ಯ ಕವಚಾನನ್ಯೇ ಪಾಂಡುಪುತ್ರಸ್ಯ ಸೈನಿಕಾಃ |
ಪ್ರಕೀರ್ಯ ಕೇಶಾನ್ ಧಾವಂತಃ ಪ್ರತ್ಯದೃಶ್ಯಂತ ಭಾರತ ॥38॥
ಎಲೈ ಭಾರತನೇ, ಪಾಂಡುಪುತ್ರನ ಇನ್ನು ಕೆಲವು ಸೈನಿಕರು ಕವಚಗಳನ್ನು ಬಿಚ್ಚಿ ತಲೆಕೂದಲುಗಳನ್ನು ಕೆದರಿಕೊಂಡು ಓಡುತ್ತಿರುವುದು ಕಂಡುಬಂದಿತು.
ತದ್ಗೋಕುಲಮಿವೋದ್ಭ್ರಾಂತಮುದ್ಭ್ರಾಂತರಥಯೂಥಪಮ್ |
ದದೃಶೇ ಪಾಂಡುಪುತ್ರಸ್ಯ ಸೈನ್ಯಮಾರ್ತಸ್ವರಂ ತದಾ ॥39॥
ಗಾಬರಿಗೊಳಗಾದ ಗೋ-ಸಮೂಹದಂತೆ ಬಹಳವಾಗಿ ಗಾಬರಿಗೊಂಡ ರಥಯೂಥಪರನ್ನು ಹೊಂದಿದ ಪಾಂಡುಪುತ್ರರ ಸೈನ್ಯವು ಆರ್ತಸ್ವರವನ್ನು ಮಾಡುತ್ತಿರುವುದು ಆಗ ಕಂಡುಬಂದಿತು.
ಪ್ರಭಜ್ಯಮಾನಂ ತತ್ಸೈನ್ಯಂ ದೃಷ್ಟ್ವಾ ದೇವಕಿನಂದನಃ |
ಉವಾಚ ಪಾರ್ಥಂ ಬೀಭತ್ಸುಂ ನಿಗೃಹ್ಯ ರಥಮುತ್ತಮಮ್ ॥40॥
ಆ ಸೈನ್ಯವು ಹೀಗೆ ಭಗ್ನವಾಗುತ್ತಿರುವುದನ್ನು ನೋಡಿದ ದೇವಕಿನಂದನನಾದ ಕೃಷ್ಣನು ತನ್ನ ಶ್ರೇಷ್ಠವಾದ ರಥವನ್ನು ನಿಲ್ಲಿಸಿ ಅರ್ಜುನನನ್ನು ಕುರಿತು ಮಾತನಾಡಿದನು.
ಅಯಂ ಸ ಕಾಲಃ ಸಂಪ್ರಾಪ್ತಃ ಪಾರ್ಥ ಯಃ ಕಾಂಕ್ಷಿತಸ್ತ್ವಯಾ |
ಪ್ರಹರಾಸ್ಮೈ ನರವ್ಯಾಘ್ರ ನ ಚೇನ್ಮೋಹಾದ್ ವಿಮುಹ್ಯಸೇ ॥41॥
ಎಲೈ ಪಾರ್ಥನೇ, ನೀನು ಬಯಸುತ್ತಿದ್ದ ಕಾಲವು ಈಗ ಪ್ರಾಪ್ತವಾಗಿದೆ. ನರವ್ಯಾಘ್ರನೇ, ನೀನು ಮೋಹಕ್ಕೆ ಒಳಗಾಗದಿದ್ದರೆ ಈ ಭೀಷ್ಮರ ಮೇಲೆ ಪ್ರಹಾರವನ್ನು ಮಾಡು.
ಯತ್ ತ್ವಯಾ ಕಥಿತಂ ವೀರ ಪುರಾ ರಾಜ್ಞಾಂ ಸಮಾಗಮೇ |
ಭೀಷ್ಮದ್ರೋಣಮುಖಾನ್ ಸರ್ವಾನ್ ಧಾರ್ತರಾಷ್ಟ್ರಸ್ಯ ಸೈನಿಕಾನ್ ॥42॥
ಸಾನುಬಂಧಾನ್ ಹನಿಷ್ಯಾಮಿ ಯೇ ಮಾಂ ಯೋತ್ಸ್ಯಂತಿ ಸಂಯುಗೇ |
ಇತಿ ತತ್ಕುರು ಕೌಂತೇಯ ಸತ್ಯಂ ವಾಕ್ಯಮರಿಂದಮ ॥43॥

ಎಲೈ ವೀರನೇ, ನೀನು ಹಿಂದೆ ರಾಜರ ಸಮುದಾಯದಲ್ಲಿ ನನ್ನ ಜೊತೆಯಲ್ಲಿ ಯುದ್ಧ ಮಾಡುವ ಭೀಷ್ಮ-ದ್ರೋಣರೇ ಮೊದಲಾದ ದುರ್ಯೋಧನನ ಸೈನಿಕರೆಲ್ಲರನ್ನೂ ಅವರ ಪರಿವಾರದೊಡನೆ ಕೊಲ್ಲುವೆನು ಎಂದು ಹೇಳಿದ್ದೆಯಷ್ಟೆ? ಎಲೈ ಕೌಂತೇಯನೆ, ಅರಿಂದಮನೇ, ಆ ಮಾತನ್ನು ಈಗ ಸತ್ಯವನ್ನಾಗಿ ಮಾಡು.
ಬೀಭತ್ಸೋ ಪಶ್ಯ ಸೈನ್ಯಂ ಸ್ವಂ ಭಜ್ಯಮಾನಂ ಸಮಂತತಃ |
ದ್ರವತಶ್ಚ ಮಹೀಪಾಲಾನ್ ಸರ್ವಾನ್ ಯೌಧಿಷ್ಠಿರೇ ಬಲೇ ॥44॥
ಎಲೈ ಬೀಭತ್ಸುವೇ, ನಿನ್ನ ಸೈನ್ಯವು ಎಲ್ಲ ಕಡೆಗಳಲ್ಲಿಯೂ ಭಗ್ನವಾಗುತ್ತಿರುವುದನ್ನು ನೋಡು. ಧರ್ಮರಾಜನ ಸೈನ್ಯದಲ್ಲಿ ಎಲ್ಲ ರಾಜರೂ ಓಡುತ್ತಿರುವುದನ್ನೂ ನೋಡು.
ದೃಷ್ಟ್ವಾ ಹಿ ಸಮರೇ ಭೀಷ್ಮಂ ವ್ಯಾತ್ತಾನನಮಿವಾಂತಕಮ್ |
ಭಯಾರ್ತಾಃ ಸಂಪ್ರಣಶ್ಯಂತಿ ಸಿಂಹಂ ಕ್ಷುದ್ರಮೃಗಾ ಇವ ॥45॥
ಬಾಯನ್ನು ತೆರೆದ ಅಂತಕನಂತಿರುವ ಭೀಷ್ಮರನ್ನು ಯುದ್ಧದಲ್ಲಿ ನೋಡಿ ಭಯದಿಂದ ಕೂಡಿದ ಯೋಧರು ಸಿಂಹವನ್ನು ನೋಡಿದ ಕ್ಷುದ್ರಮೃಗಗಳಂತೆ ನಾಶವನ್ನು ಹೊಂದುತ್ತಿದ್ದಾರೆ.
ಏವಮುಕ್ತಃ ಪ್ರತ್ಯುವಾಚ ವಾಸುದೇವಂ ಧನಂಜಯಃ |
ಚೋದಯಾಶ್ವಾನ್ ಯತೋ ಭೀಷ್ಮೋ ವಿಗಾಹ್ಯೈತದ್ ಬಲಾರ್ಣವಮ್ ॥
ಹೀಗೆ ವಾಸುದೇವನಿಂದ ಹೇಳಲ್ಪಟ್ಟ ಧನಂಜಯನು, ಅವನನ್ನು ಕುರಿತು ಭೀಷ್ಮರು ಎಲ್ಲಿದ್ದಾರೆಯೋ ಅಲ್ಲಿಗೆ ಈ ಸೈನ್ಯವೆಂಬ ಸಾಗರವನ್ನು ಪ್ರವೇಶಿಸಿ ನನ್ನ ಅಶ್ವಗಳನ್ನು ಕೊಂಡೊಯ್ಯುವವನಾಗು ಎಂದು ಹೇಳಿದನು.
ತತೋಽಶ್ವಾನ್ ರಜತಪ್ರಖ್ಯಾಂಶ್ಚೋದಯಾಮಾಸ ಮಾಧವಃ |
ಯತೋ ಭೀಷ್ಮರಥೋ ರಾಜನ್ ದುಷ್ಪ್ರೇಕ್ಷ್ಯೋ ರಶ್ಮಿಮಾನಿವ ॥47॥
ಎಲೈ ರಾಜನೇ, ಆಗ ಮಾಧವನು ಸೂರ್ಯನಂತೆ ನೋಡಲು ಅಸಾಧ್ಯವಾಗಿದ್ದ ಭೀಷ್ಮರಥವಿದ್ದ ಕಡೆಗೆ ಅರ್ಜುನನ ಬೆಳ್ಳಿ ಬಣ್ಣದ ಕುದುರೆಗಳನ್ನು ಪ್ರಚೋದಿಸಿದನು.
ತತಸ್ತತ್ಪುನರಾವೃತ್ತಂ ಯುಧಿಷ್ಠಿರಬಲಂ ಮಹತ್ |
ದೃಷ್ಟ್ವಾ ಪಾರ್ಥಂ ಮಹಾಬಾಹುಂ ಭೀಷ್ಮಾಯೋದ್ಯಂತಮಾಹವೇ ॥48॥
ಮಹಾಬಾಹುವಾದ ಅರ್ಜುನನು ಯುದ್ಧದಲ್ಲಿ ಭೀಷ್ಮರ ಕಡೆಗೆ ಧಾವಿಸುವುದನ್ನು ನೋಡಿ ಆ ಯುಧಿಷ್ಠಿರನ ದೊಡ್ಡ ಸೈನ್ಯವು ಹಿಂದಿರುಗಿತು.
ತತೋ ಭೀಷ್ಮಃ ಕುರುಶ್ರೇಷ್ಠಃ ಸಿಂಹವದ್ ವಿನದನ್ ಮುಹುಃ |
ಧನಂಜಯರಥಂ ತೂರ್ಣಂ ಶರವರ್ಷೈರವಾಕಿರತ್ ॥49॥
ಆಗ ಕುರುಶ್ರೇಷ್ಠರಾದ ಭೀಷ್ಮರು ಸಿಂಹದಂತೆ ಪುನಃ ಪುನಃ ಗರ್ಜಿಸುತ್ತಾ ಅರ್ಜುನನ ರಥದ ಮೇಲೆ ಶೀಘ್ರವಾಗಿ ಬಾಣಗಳ ಮಳೆಯನ್ನು ಕರೆದರು.
ಕ್ಷಣೇನ ಸ ರಥಸ್ತಸ್ಯ ಸಹಯಃ ಸಹಸಾರಥಿಃ |
ಶರವರ್ಷೇಣ ಮಹತಾ ಸಂಛನ್ನೋ ನ ಪ್ರಕಾಶತೇ ॥50॥
ಅಶ್ವ ಮತ್ತು ಸಾರಥಿಯಿಂದ ಕೂಡಿದ ಆ ರಥವು ಭೀಷ್ಮರು ಪ್ರಯೋಗಿಸಿದ ಬಾಣಗಳ ಮಳೆಯಿಂದ ಒಂದು ಕ್ಷಣದಲ್ಲಿ ಆವೃತವಾಗಿ ಕಾಣದಾಯಿತು.
ವಾಸುದೇವಸ್ತ್ವಸಂಭ್ರಾಂತೋ ಧೈರ್ಯಮಾಸ್ಥಾಯ ಸತ್ತ್ವವಾನ್ |
ಚೋದಯಾಮಾಸ ತಾನಶ್ವಾನ್ ವಿತುನ್ನಾನ್ ಭೀಷ್ಮಸಾಯಕೈಃ ॥51॥
ಧೈರ್ಯಶಾಲಿಯಾದ ವಾಸುದೇವನು ಧೈರ್ಯವನ್ನು ಅವಲಂಬಿಸಿ ಗಾಬರಿಗೊಳ್ಳದೆ ಭೀಷ್ಮರ ಬಾಣದಿಂದ ಪೀಡಿತವಾದ ಅರ್ಜುನನ ಆ ಅಶ್ವಗಳನ್ನು ಮುಂದೆ ನಡೆಸಿದನು.
ತತಃ ಪಾರ್ಥೋ ಧನುರ್ಗೃಹ್ಯ ದಿವ್ಯಂ ಜಲದನಿಸ್ವನಮ್ |
ಪಾತಯಾಮಾಸ ಭೀಷ್ಮಸ್ಯ ಧನುಶ್ಛಿತ್ತ್ವಾ ತ್ರಿಭಿಃ ಶರೈಃ ॥52॥
ಆಗ ಮೋಡದಂತೆ ಗರ್ಜಿಸುವ ತನ್ನ ದಿವ್ಯವಾದ ಧನುಸ್ಸನ್ನು ತೆಗೆದುಕೊಂಡು ಅರ್ಜುನನು ಮೂರುಬಾಣಗಳನ್ನು ಪ್ರಯೋಗಿಸಿ ಭೀಷ್ಮರ ಧನುಸ್ಸನ್ನು ಕತ್ತರಿಸಿ ನೆಲಕ್ಕೆ ಬೀಳಿಸಿದನು.
ಸ ಚ್ಛಿನ್ನಧನ್ವಾ ಕೌರವ್ಯಃ ಪುನರನ್ಯನ್ಮಹದ್ಧನುಃ |
ನಿಮೇಷಾಂತರಮಾತ್ರೇಣ ಸಜ್ಯಂ ಚಕ್ರೇ ಪಿತಾ ತವ ॥53॥
ನಿನ್ನ ತಂದೆಯಾದ ಭೀಷ್ಮರು ತಮ್ಮ ಧನುಸ್ಸು ಕತ್ತರಿಸಲ್ಪಡಲು ಇನ್ನೊಂದು ದೊಡ್ಡ ಧನುಸ್ಸನ್ನು ತೆಗೆದುಕೊಂಡು ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ಅದಕ್ಕೆ ಹೆದೆ ಏರಿಸಿದರು.
ವಿಚಕರ್ಷ ತತೋ ದೋರ್ಭ್ಯಾಂ ಧನುರ್ಜಲದನಿಸ್ವನಮ್ |
ಅಥಾಸ್ಯ ತದಪಿ ಕ್ರುದ್ಧಶ್ಚಿಚ್ಛೇದ ಧನುರರ್ಜುನಃ ॥54॥
ಮೇಘಗರ್ಜನೆಯನ್ನು ಹೊಂದಿದ್ದ ಆ ಧನುಸ್ಸನ್ನು ಎರಡು ತೋಳುಗಳಿಂದಲೂ ಎಳೆದರು. ಕೋಪಗೊಂಡ ಅರ್ಜುನನು ಆ ಧನುಸ್ಸನ್ನೂ ಕತ್ತರಿಸಿದನು.
ತಸ್ಯ ತತ್ ಪೂಜಯಾಮಾಸ ಲಾಘವಂ ಶಂತನೋಃ ಸುತಃ |
ಸಾಧು ಪಾರ್ಥ ಮಹಾಬಾಹೋ ಸಾಧು ಭೋ ಪಾಂಡುನಂದನ ॥55॥
ಅರ್ಜುನನ ಆ ಚುರುಕುತನವನ್ನು ಶಂತನು ಪುತ್ರರಾದ ಭೀಷ್ಮರು ಗೌರವಿಸಿದರು. ಮಹಾಬಾಹುವಾದ ಅರ್ಜುನನೇ, ಸಾಧು. ಎಲೈ

ಪಾಂಡುನಂದನನೇ, ಸಾಧು.
ತ್ವಯ್ಯೇವೈತದ್ ಯುಕ್ತರೂಪಂ ಮಹತ್ ಕರ್ಮ ಧನಂಜಯ |
ಪ್ರೀತೋಽಸ್ಮಿ ಸುದೃಢಂ ಪುತ್ರ ಕುರು ಯುದ್ಧಂ ಮಯಾ ಸಹ ॥56॥
ಧನಂಜಯನೇ, ಇಂತಹ ಮಹತ್ಕಾರ್ಯವು ನಿನಗೇ ಯೋಗ್ಯವಾಗಿದೆ. ಪುತ್ರನೇ, ನಾನು ಬಹಳವಾಗಿ ಸಂತೋಷಗೊಂಡಿದ್ದೇನೆ. ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡು.
ಇತಿ ಪಾರ್ಥಂ ಪ್ರಶಸ್ಯಾಥ ಪ್ರಗೃಹ್ಯಾನ್ಯನ್ಮಹದ್ಧನುಃ |
ಮುಮೋಚ ಸಮರೇ ವೀರಃ ಶರಾನ್ ಪಾರ್ಥರಥಂ ಪ್ರತಿ ॥57॥
ಹೀಗೆ ಅರ್ಜುನನನ್ನು ಪ್ರಶಂಸಿಸಿ, ಇನ್ನೊಂದು ದೊಡ್ಡದಾದ ಧನುಸ್ಸನ್ನು ತೆಗೆದುಕೊಂಡು ವೀರರಾದ ಅವರು ಅರ್ಜುನನ ರಥದ ಮೇಲೆ ಬಾಣಗಳನ್ನು ಪ್ರಯೋಗಿಸಿದರು.
ಅದರ್ಶಯದ್ ವಾಸುದೇವೋ ಹಯಯಾನೇ ಪರಂ ಬಲಮ್ |
ಮೋಘಾನ್ ಕುರ್ವನ್ ಶರಾಂಸ್ತಸ್ಯ ಮಂಡಲಾನ್ಯಚರಲ್ಲಘು ॥58॥
ಕೃಷ್ಣನು ಕ್ಷಿಪ್ರವಾಗಿ ಮಂಡಲಗಳಲ್ಲಿ ಸಂಚರಿಸಿ ಭೀಷ್ಮರ ಬಾಣಗಳನ್ನು ವ್ಯರ್ಥವನ್ನಾಗಿ ಮಾಡಿ ಸಾರಥ್ಯದಲ್ಲಿ ತನ್ನ ನಿಸ್ಸೀಮ ಕೌಶಲವನ್ನು ತೋರಿಸಿದನು.
ತಥಾಪಿ ಭೀಷ್ಮಃ ಸುದೃಢಂ ವಾಸುದೇವಧನಂಜಯೌ |
ವಿವ್ಯಾಧ ನಿಶಿತೈರ್ಬಾಣೈಃ ಸರ್ವಗಾತ್ರೇಷು ಮಾರಿಷ ॥59॥
ಎಲೈ ಪೂಜ್ಯನೇ, ಆದರೂ ಭೀಷ್ಮರು ಹರಿತವಾದ ಬಾಣಗಳಿಂದ ವಾಸುದೇವಾರ್ಜುನರನ್ನು ಶರೀರದಲ್ಲೆಲ್ಲಾ ಘಾಸಿಗೊಳಿಸಿದರು.
ಶುಶುಭಾತೇ ನರವ್ಯಾಘ್ರೌ ತೌ ಭೀಷ್ಮಶರವಿಕ್ಷತೌ |
ಗೋವೃಷಾವಿವ ನರ್ದಂತೌ ವಿಷಾಣೋಲ್ಲಿಖಿತಾಂಕಿತೌ ॥60॥
ಭೀಷ್ಮರ ಬಾಣಗಳಿಂದ ಗಾಯಗೊಂಡ ಆ ಇಬ್ಬರು ನರಶ್ರೇಷ್ಠರು ಕೊಂಬುಗಳಿಂದ ಗಾಯಗೊಂಡು ಗರ್ಜಿಸುವ ಎರಡು ಗೂಳಿಗಳಂತೆ ಶೋಭಿಸಿದರು.
ಪುನಶ್ಚಾಪಿ ಸುಸಂಕ್ರುದ್ಧಃ ಶರೈಃ ಸನ್ನತಪರ್ವಭಿಃ |
ಕೃಷ್ಣಯೋರ್ಯುಧಿ ಸಂರಬ್ಧೋ ಭೀಷ್ಮೋ ವ್ಯಾವಾರಯದ್ ದಿಶಃ ॥61॥
ಭೀಷ್ಮರು ಪುನಃ ಬಹಳ ಕ್ರುದ್ಧರಾಗಿ ಬಾಗಿದ ತುದಿಯುಳ್ಳ ಬಾಣಗಳಿಂದ ರಣರಂಗದಲ್ಲಿ ಕೃಷ್ಣಾರ್ಜುನರ ಎಲ್ಲ ದಿಕ್ಕುಗಳನ್ನೂ ಮುಚ್ಚಿಹಾಕಿದರು.
ವಾರ್ಷ್ಣೇಯಂ ಚ ಶರೈಸ್ತೀಕ್ಷ್ಣೈಃ ಕಂಪಯಾಮಾಸ ರೋಷಿತಃ |
ಮುಹುರಭ್ಯುತ್ಸ್ಮಯನ್ ಭೀಷ್ಮಃ ಪ್ರಹಸ್ಯ ಸ್ವನವತ್ ತದಾ ॥62॥
ಭೀಷ್ಮರು ಮುಗುಳ್ನಗೆಯನ್ನು ನಕ್ಕು, ಅನಂತರ ಗಟ್ಟಿಯಾಗಿ ನಕ್ಕು ರೋಷದಿಂದ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಕೃಷ್ಣನನ್ನು ಅಲುಗಾಡಿಸಿದರು.
ತತಃ ಕೃಷ್ಣಸ್ತು ಸಮರೇ ದೃಷ್ಟ್ವಾ ಭೀಷ್ಮಪರಾಕ್ರಮಮ್ |
ಸಂಪ್ರೇಕ್ಷ್ಯ ಚ ಮಹಾಬಾಹುಃ ಪಾರ್ಥಸ್ಯ ಮೃದುಯುದ್ಧತಾಮ್ ॥63॥
ಭೀಷ್ಮಂ ಚ ಶರವರ್ಷಾಣಿ ಸೃಜಂತಮನಿಶಂ ಯುಧಿ |
ಪ್ರತಪಂತಮಿವಾದಿತ್ಯಂ ಮಧ್ಯಮಾಸಾದ್ಯ ಸೇನಯೋಃ ॥64॥
ವರಾನ್ವರಾನ್ ವಿನಿಘ್ನಂತಂ ಪಾಂಡುಪುತ್ರಸ್ಯ ಸೈನಿಕಾನ್ |
ಯುಗಾಂತಮಿವ ಕುರ್ವಾಣಂ ಭೀಷ್ಮಂ ಯೌಧಿಷ್ಠಿರೇ ಬಲೇ ॥65॥
ಅಮೃಷ್ಯಮಾಣೋ ಭಗವಾನ್ ಕೇಶವಃ ಪರವೀರಹಾ |
ಅಚಿಂತಯದಮೇಯಾತ್ಮಾ ನಾಸ್ತಿ ಯೌಧಿಷ್ಠಿರಂ ಬಲಮ್ ॥66॥
ಆಗ ಮಹಾಬಾಹುವಾದ ಕೃಷ್ಣನು ಭೀಷ್ಮರ ಪರಾಕ್ರಮವನ್ನೂ, ಅರ್ಜುನನ ಮೃದು ಯುದ್ಧವನ್ನೂ, ಭೀಷ್ಮರು ಸತತವಾಗಿ ಬಾಣ ಪ್ರಯೋಗವನ್ನು ಮಾಡಿ ಜ್ವಲಿಸುವ ಸೂರ್ಯನಂತೆ ಸೈನ್ಯವನ್ನು ಕಲಕುತ್ತಿರುವುದನ್ನೂ, ಪಾಂಡವರ ಸೈನಿಕರಲ್ಲಿ ಶ್ರೇಷ್ಠನಾದವನನ್ನು ಆರಿಸಿ ಆರಿಸಿ ಸಂಹರಿಸುತ್ತಿರುವುದನ್ನೂ, ಯುಧಿಷ್ಠಿರನ ಸೈನ್ಯದಲ್ಲಿ ಯುಗಾಂತವನ್ನು ತಂದುಕೊಡುವವನಂತೆ ಇರುವ ಭೀಷ್ಮರನ್ನು ನೋಡಿ ಸಹಿಸದೆ ಪರವೀರಘಾತಕನೂ, ಭಗವಂತನೂ, ಕೇಶವನೂ, ಅಚಿಂತ್ಯ ಮಹಿಮೆಯುಳ್ಳವನು ಆದ ಅವನು ಯುಧಿಷ್ಠಿರನ ಸೈನ್ಯವು ಇಲ್ಲವೆಂದು ತಿಳಿದನು.
ಏಕಾಹ್ನಾ ಹಿ ರಣೇ ಭೀಷ್ಮೋ ನಾಶಯೇದ್ ದೇವದಾನವಾನ್ |
ಕಿಮು ಪಾಂಡುಸುತಾನ್ ಯುದ್ಧೇ ಸಬಲಾನ್ ಸಪದಾನುಗಾನ್ ॥67॥
ಭೀಷ್ಮರು ಒಂದು ದಿನದಲ್ಲಿ ದೇವದಾನವರನ್ನು ನಾಶಮಾಡಿಯಾರು! ಹೀಗಿರುವಾಗ ರಣರಂಗದಲ್ಲಿ ಸೈನ್ಯ ಮತ್ತು ಪದಾತಿಗಳಿಂದ ಸಹಿತರಾದ ಪಾಂಡುಸುತರನ್ನು ನಾಶ ಮಾಡುವುದು ಯಾವ ದೊಡ್ಡ ವಿಷಯ?
ದ್ರುವತೇ ಚ ಮಹತ್ ಸೈನ್ಯಂ ಪಾಂಡವಸ್ಯ ಮಹಾತ್ಮನಃ |
ಏತೇ ಚ ಕೌರವಾಸ್ತೂರ್ಣಂ ಪ್ರಭಗ್ನಾನ್ ದೃಶ್ಯ ಸೋಮಕಾನ್ |
ಆದ್ರವಂತಿ ರಣೇ ಹೃಷ್ಟಾ ಹರ್ಷಯಂತಃ ಪಿತಾಮಹಮ್ ॥68॥
ಮಹಾತ್ಮನಾದ ಯುಧಿಷ್ಠಿರನ ದೊಡ್ಡ ಸೈನ್ಯವು ಓಡಿ ಹೋಗುತ್ತಿದೆ. ಈ ಕೌರವರಾದರೂ ಶೀಘ್ರವಾಗಿ ಭಗ್ನರಾದ ಸೋಮಕರನ್ನು ನೋಡಿ ಪಿತಾಮಹರಾದ ಭೀಷ್ಮರಿಗೆ ಸಂತೋಷವನ್ನುಂಟು ಮಾಡುತ್ತಾ ತಾವು ಸಂತೋಷದಿಂದ ಕೂಡಿದವರಾಗಿ ರಣರಂಗದಲ್ಲಿ

ಅವರನ್ನು ಅಟ್ಟಿಸಿಕೊಂಡು ಓಡುತ್ತಿದ್ದಾರೆ.
ಸೋಽಹಂ ಭೀಷ್ಮಂ ನಿಹನ್ಯಾದ್ಯ ಪಾಂಡವಾರ್ಥಾಯ ದಂಸಿತಃ |
ಭಾರಮೇತಂ ವಿನೇಷ್ಯಾಮಿ ಪಾಂಡವಾನಾಂ ಮಹಾತ್ಮನಾಮ್ ॥69॥
ಆದ್ದರಿಂದ ಈ ದಿನ ನಾನು ಶಸ್ತ್ರವನ್ನು ಧರಿಸಿ, ಈ ದಿನ ಪಾಂಡವರ ಸಲುವಾಗಿ ಭೀಷ್ಮರನ್ನು ಕೊಲ್ಲುತ್ತೇನೆ. ಮಹಾತ್ಮರಾದ ಪಾಂಡವರ ಈ ದೊಡ್ಡ ಭಾರವನ್ನು ಇಳಿಸುವೆನು.
ಅರ್ಜುನೋಽಪಿ ಶರೈಸ್ತೀಕ್ಷ್ಣೈರ್ವಧ್ಯಮಾನೋ ಹಿ ಸಂಯುಗೇ |
ಕರ್ತವ್ಯಂ ನಾಭಿಜಾನಾತಿ ರಣೇ ಭೀಷ್ಮಸ್ಯ ಗೌರವಾತ್ ॥70॥
ಅರ್ಜುನನೂ ಸಹ ತೀಕ್ಷ್ಣವಾದ ಬಾಣದಿಂದ ಹೊಡೆಯಲ್ಪಟ್ಟು ಭೀಷ್ಮರ ಮೇಲಿನ ಗೌರವದಿಂದ ರಣರಂಗದಲ್ಲಿ ಏನು ಮಾಡಬೇಕೆಂದು ತಿಳಿಯುತ್ತಿಲ್ಲ (ಎಂದು ಚಿಂತಿಸಿದನು).
ತಥಾ ಚಿಂತಯತಸ್ತಸ್ಯ ಭೂಯ ಏವ ಪಿತಾಮಹಃ |
ಪ್ರೇಷಯಾಮಾಸ ಸಂಕ್ರುದ್ಧಃ ಶರಾನ್ ಪಾರ್ಥರಥಂ ಪ್ರತಿ ॥71॥
ಕೃಷ್ಣನು ಹಾಗೆ ಚಿಂತಿಸುತ್ತಿರುವಂತೆಯೇ ಪಿತಾಮಹರಾದ ಭೀಷ್ಮರು ಬಹಳ ಕೋಪಗೊಂಡು ಅರ್ಜುನನ ರಥದ ಮೇಲೆ ಬಾಣಗಳನ್ನು ಪ್ರಯೋಗಿಸಿದರು.
ತೇಷಾಂ ಬಹುತ್ವಾದ್ಧಿ ಭೃಶಂ ಶರಾಣಾಂ
ದಿಶೋಽಥ ಸರ್ವಾಃ ಪಿಹಿತಾ ಬಭೂವುಃ |
ನ ಚಾಂತರಿಕ್ಷಂ ನ ದಿಶೋ ನ ಭೂಮಿ-
ರ್ನ ಭಾಸ್ಕರೋಽದೃಶ್ಯತ ರಶ್ಮಿಮಾಲೀ |
ವವುಶ್ಚ ವಾತಾಸ್ತುಮುಲಾಃ ಸಧೂಮಾ
ದಿಶಶ್ಚ ಸರ್ವಾಃ ಕ್ಷುಭಿತಾ ಬಭೂವುಃ ॥72॥
ಆ ಬಾಣಗಳ ಸಂಖ್ಯೆಯು ಬಹಳವಾಗಿ ಇದ್ದುದರಿಂದ ಎಲ್ಲ ದಿಕ್ಕುಗಳೂ ಅವುಗಳಿಂದ ಮುಚ್ಚಿಹೋದವು. ಅಂತರಿಕ್ಷವಾಗಲೀ, ದಿಕ್ಕುಗಳಾಗಲೀ, ಭೂಮಿಯಾಗಲೀ, ಕಿರಣಗಳ ಮಾಲೆಯನ್ನು ಧರಿಸಿದ ಸೂರ್ಯನಾಗಲೀ ಕಾಣಲಿಲ್ಲ. ಧೂಮಸಹಿತವಾದ, ತೀವ್ರವಾದ ಎಲ್ಲ ದಿಕ್ಕುಗಳೂ ಕ್ಷೋಭೆಗೊಂಡವು.
ದ್ರೋಣೋ ವಿಕರ್ಣೋಽಥ ಜಯದ್ರಥಶ್ಚ
ಭೂರಿಶ್ರವಾಃ ಕೃತವರ್ಮಾ ಕೃಪಶ್ಚ |
ಶ್ರುತಾಯುರಂಬಷ್ಠಪತಿಶ್ಚ ರಾಜಾ
ವಿಂದಾನುವಿಂದೌ ಚ ಸುದಕ್ಷಿಣಶ್ಚ ॥73॥
ಪ್ರಾಚ್ಯಾಶ್ಚ ಸೌವೀರಗಣಾಶ್ಚ ಸರ್ವೇ
ವಸಾತಯಃ ಕ್ಷುದ್ರಕಮಾಲವಾಶ್ಚ |
ಕಿರೀಟಿನಂ ತ್ವರಮಾಣಾಭಿಸಸ್ರು-
ರ್ನಿದೇಶಗಾಃ ಶಾಂತನವಸ್ಯ ರಾಜ್ಞಃ ॥74॥
ಭೀಷ್ಮರ ಆದೇಶದಂತೆ ದ್ರೋಣರು, ವಿಕರ್ಣ, ಜಯದ್ರಥ, ಭೂರಿಶ್ರವ, ಕೃತವರ್ಮ, ಕೃಪರು, ಅಂಬಷ್ಠಪತಿಯಾದ ಶ್ರುತಾಯು, ವಿಂದಾನುವಿಂದರು, ಸುದಕ್ಷಿಣ, ಪೂರ್ವದಿಕ್ಕಿನ ರಾಜರು, ಸೌವೀರ ದೇಶದ ಯೋಧರು, ವಸಾತಿಗಳು, ಕ್ಷುದ್ರಕರು, ಮಾಲವರು ಎಲ್ಲರೂ ಶೀಘ್ರವಾಗಿ ಅರ್ಜುನನ ಮೇಲೆ ಎರಗಿದರು.
ತಂ ವಾಜಿಪಾದಾತರಥೌಘಜಾಲೈ-
ರನೇಕಸಾಹಸ್ರಶತೈರ್ದದರ್ಶ |
ಕಿರೀಟಿನಂ ಸಂಪರಿವಾರ್ಯಮಾಣಂ
ಶಿನೇರ್ನಪ್ತಾ ವಾರಣಯೂಥಪೈಶ್ಚ ॥75॥
ಅನೇಕ ಸಹಸ್ರಶತ ಸಂಖ್ಯೆಗಳಲ್ಲಿದ್ದ ಅಶ್ವ-ಪದಾತಿ-ರಥಗಳ ಸಮೂಹದಿಂದ ಮತ್ತು ಗಜ ಯೂಥಪಗಳಿಂದ ಎಲ್ಲ ಕಡೆಯಲ್ಲಿಯೂ ಸುತ್ತುವರಿಯಲ್ಪಟ್ಟ ಅರ್ಜುನನನ್ನು ಸಾತ್ಯಕಿಯು ನೋಡಿದನು.
ತತಸ್ತು ದೃಷ್ಟ್ವಾರ್ಜುನವಾಸುದೇವೌ
ಪದಾತಿನಾಗಾಶ್ವರಥೈಃ ಸಮಂತಾತ್ |
ಅಭಿದ್ರುತೌ ಶಸ್ತ್ರಭೃತಾಂ ವರಿಷ್ಠೌ
ಶಿನಿಪ್ರವೀರೋಽಭಿಸಸಾರ ತೂರ್ಣಮ್ ॥76॥
ಅನಂತರ ಕೃಷ್ಣಾರ್ಜುನರ ಕಡೆಗೆ ಎಲ್ಲ ಕಡೆಗಳಿಂದಲೂ ಪದಾತಿ-ಗಜಾಶ್ವ- ರಥಗಳು ವೇಗವಾಗಿ ಬರುತ್ತಿರುವುದನ್ನು ನೋಡಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಶಿನಿಪ್ರವೀರನಾದ ಸಾತ್ಯಕಿಯು ಶೀಘ್ರವಾಗಿ ಅಲ್ಲಿಗೆ ಬಂದನು.
ಸ ತಾನ್ಯನೀಕಾನಿ ಮಹಾಧನುಷ್ಮಾನ್
ಶಿನಿಪ್ರವೀರಃ ಸಹಸಾಭಿಪತ್ಯ |
ಚಕಾರ ಸಾಹಾಯ್ಯಮಥಾರ್ಜುನಸ್ಯ
ವಿಷ್ಣುರ್ಯಥಾ ವೃತ್ರನಿಷೂದನಸ್ಯ ॥77॥
ಮಹಾಧನುರ್ಧಾರಿಯಾದ ಶಿನಿಪ್ರವೀರನಾದ ಸಾತ್ಯಕಿಯು ಶೀಘ್ರವಾಗಿ ಆ ಸೈನ್ಯದ ಸಮೀಪಕ್ಕೆ ಬಂದು ವಿಷ್ಣುವು ವೃತ್ರ

ಸಂಹಾರಕನಾದ ಇಂದ್ರನಿಗೆ ಸಹಾಯ ಮಾಡಿದಂತೆ ಅರ್ಜುನನಿಗೆ ಸಹಾಯವನ್ನು ಮಾಡಿದನು.
ವಿಶೀರ್ಣನಾಗಾಶ್ವರಥಧ್ವಜೌಘಂ
ಭೀಷ್ಮೇಣ ವಿತ್ರಾಸಿತಸರ್ವಯೋಧಮ್ |
ಯುಧಿಷ್ಠಿರಾನೀಕಮಭಿದ್ರವಂತಂ
ಪ್ರೋವಾಚ ಸಂದೃಶ್ಯ ಶಿನಿಪ್ರವೀರಃ ॥78॥
ಗಜಾಶ್ವ-ರಥ-ಧ್ವಜಗಳು ನಾಶ ಹೊಂದುತ್ತಿದ್ದ, ಭೀಷ್ಮರಿಂದ ಹೆದರಿ ಹೋದ, ಎಲ್ಲ ಯೋಧರು ಓಡಿಹೋಗುತ್ತಿದ್ದ, ಯುಧಿಷ್ಠಿರನ ಸೈನ್ಯವನ್ನು ನೋಡಿ ಶಿನಿಪ್ರವೀರನು ಮಾತನಾಡಿದನು.
ಕ್ವ ಕ್ಷತ್ರಿಯಾ ಯಾಸ್ಯಥ ನೈಷ ಧರ್ಮಃ
ಸತಾಂ ಪುರಸ್ತಾತ್ಕಥಿತಃ ಪುರಾಣೈಃ |
ಮಾ ಸ್ವಾಂ ಪ್ರತಿಜ್ಞಾಂ ಜಹತ ಪ್ರವೀರಾಃ
ಸ್ವಂ ವೀರಧರ್ಮಂ ಪರಿಪಾಲಯಧ್ವಮ್ ॥79॥
ಎಲೈ ಕ್ಷತ್ರಿಯರೇ, ಎಲ್ಲಿಗೆ ಹೋಗುತ್ತಿದ್ದೀರಿ? ಇದು ಸಜ್ಜನರ ಧರ್ಮವಲ್ಲವೆಂದು ಪುರಾಣದಲ್ಲಿ ಹಿಂದೆಯೇ ಹೇಳಲ್ಪಟ್ಟಿದೆ. ಶ್ರೇಷ್ಠರಾದ ವೀರರೇ, ನಿಮ್ಮ ಪ್ರತಿಜ್ಞೆಯನ್ನು ಬಿಡಬೇಡಿ. ನಿಮ್ಮ ವೀರಧರ್ಮವನ್ನು ರಕ್ಷಿಸಿ.
ತಾನ್ ವಾಸವಾನಂತರಜೋ ನಿಶಮ್ಯ
ನರೇಂದ್ರಮುಖ್ಯಾನ್ ದ್ರವತಃ ಸಮಂತಾತ್ |
ಪಾರ್ಥಸ್ಯ ದೃಷ್ಟ್ವಾ ಮೃದುಯುದ್ಧತಾಂ ಚ
ಭೀಷ್ಮಂ ಚ ಸಂಖ್ಯೇ ಸಮುದೀರ್ಯಮಾಣಮ್ ॥80॥
ಅಮೃಷ್ಯಮಾಣಃ ಸ ತತೋ ಮಹಾತ್ಮಾ
ಯಶಸ್ವಿನಂ ಸರ್ವದಶಾರ್ಹಭರ್ತಾ |
ಉವಾಚ ಶೈನೇಯಮಭಿಪ್ರಶಂಸನ್
ದೃಷ್ಟ್ವಾ ಕುರೂನಾಪತತಃ ಸಮಂತಾತ್ ॥81॥
ಇಂದ್ರನ ತಮ್ಮನಾದ ಕೃಷ್ಣನು ಅಂತಹ ಯುಧಿಷ್ಠಿರನ ಯೋಧರನ್ನು ನೋಡಿ ಅರ್ಜುನನು ಮೃದುವಾಗಿ ಯುದ್ಧಮಾಡುವುದನ್ನೂ, ಭೀಷ್ಮರು ರಣರಂಗದಲ್ಲಿ ವಿಜೃಂಭಿಸುತ್ತಿರುವುದನ್ನೂ ನೋಡಿ ಸಹಿಸದೆ ಮಹಾತ್ಮನೂ, ಎಲ್ಲ ದಾಶಾರ್ಹರಿಗೆ ಒಡೆಯನೂ ಆದ ಅವನು ಕೀರ್ತಿಶಾಲಿಯಾದ ಸಾತ್ಯಕಿಯನ್ನು ನೋಡಿ ಕುರುಗಳು ಎಲ್ಲ ಕಡೆಯಿಂದಲೂ ಪಾಂಡವರ ಮೇಲೆ ಎರಗುತ್ತಿರುವುದನ್ನು ನೋಡಿ ಮಾತನಾಡಿದನು.
ಯೇ ಯಾಂತಿ ಯಾಂತ್ವೇವ ಶಿನಿಪ್ರವೀರ
ಯೇಽಪಿ ಸ್ಥಿತಾಃ ಸಾತ್ವತ ತೇಽಪಿ ಯಾಂತು |
ಭೀಷ್ಮಂ ರಥಾತ್ ಪಶ್ಯ ನಿಪಾತ್ಯಮಾನಂ
ದ್ರೋಣಂ ಚ ಸಂಖ್ಯೇ ಸಗಣಂ ಮಯಾದ್ಯ ॥82॥
ಎಲೈ ಶಿನಿಪ್ರವೀರನಾದ ಸಾತ್ಯಕಿಯೇ, ಯಾರು ಹೋಗುತ್ತಿದ್ದಾರೋ ಅವರು ಹೊರಟೇ ಹೋಗಲಿ. ಎಲೈ ಸಾತ್ವತನೇ, ಯಾರು ರಣರಂಗದಲ್ಲಿ ಇನ್ನೂ ಇದ್ದಾರೆಯೋ ಅವರೂ ಹೊರಟು ಹೋಗಲಿ. ಈ ದಿನ ಯುದ್ಧದಲ್ಲಿ ತಮ್ಮ ಪರಿವಾರ ಸಹಿತರಾಗಿ ಭೀಷ್ಮರು ಮತ್ತು ದ್ರೋಣರು ನನ್ನಿಂದ ರಥದಿಂದ ಬೀಳಿಸಲ್ಪಡುವುದನ್ನು ನೋಡು.
ನಾಸೌ ರಥಃ ಸಾತ್ವತ ಕೌರವಾಣಾಂ
ಕ್ರುದ್ಧಸ್ಯ ಮುಚ್ಯೇತ ರಣೇಽದ್ಯ ಕಶ್ಚಿತ್ |
ತಸ್ಮಾದಹಂ ಗೃಹ್ಯ ರಥಾಂಗಮುಗ್ರಂ
ಪ್ರಾಣಂ ಹರಿಷ್ಯಾಮಿ ಮಹಾವ್ರತಸ್ಯ ॥83॥
ಎಲೈ ಸಾತ್ವತನೇ, ಕೌರವರ ಮಹಾರಥರಲ್ಲಿ ಯಾವನೂ ಈ ದಿವಸ ರಣರಂಗದಲ್ಲಿ ಕ್ರುದ್ಧನಾದ ನನ್ನಿಂದ ಪಾರಾಗುವುದಿಲ್ಲ. ಆದ್ದರಿಂದ ಈ ದಿನ ನಾನು ಘೋರವಾದ ಚಕ್ರವನ್ನು ಧರಿಸಿ ಮಹಾವ್ರತರಾದ ಭೀಷ್ಮರ ಪ್ರಾಣವನ್ನು ಸಂಹರಿಸುವೆನು.
ನಿಹತ್ಯ ಭೀಷ್ಮಂ ಸಗಣಂ ತಥಾಜೌ
ದ್ರೋಣಂ ಚ ಶೈನೇಯ ರಥಪ್ರವೀರಮ್ |
ಪ್ರೀತಿಂ ಕರಿಷ್ಯಾಮಿ ಧನಂಜಯಸ್ಯ
ರಾಜ್ಞಶ್ಚ ಭೀಮಸ್ಯ ತಥಾಶ್ವಿನೋಶ್ಚ ॥84॥
ಎಲೈ ಶೈನೇಯನೇ, ನಾನು ಯುದ್ಧದಲ್ಲಿ ಪರಿವಾರ ಸಹಿತರಾದ ಭೀಷ್ಮರನ್ನು ಮತ್ತು ರಥಶ್ರೇಷ್ಠರಾದ ದ್ರೋಣರನ್ನು ಕೊಂದು ಅರ್ಜುನನಿಗೂ, ರಾಜನಾದ ಯುಧಿಷ್ಠಿರನಿಗೂ, ಭೀಮನಿಗೂ ಮತ್ತು ಅಶ್ವಿನಿಪುತ್ರರಾದ ನಕುಲ-ಸಹದೇವರಿಗೂ ಸಂತೋಷವನ್ನು ಉಂಟುಮಾಡುವೆನು.
ನಿಹತ್ಯ ಸರ್ವಾನ್ ಧೃತರಾಷ್ಟ್ರಪುತ್ರಾನ್
ತತ್ಪಕ್ಷಿಣೋ ಯೇ ಚ ನರೇಂದ್ರಮುಖ್ಯಾಃ |
ರಾಜ್ಯೇನ ರಾಜಾನಮಜಾತಶತ್ರುಂ
ಸಂಪಾದಯಿಷ್ಯಾಮ್ಯಹಮದ್ಯ ಹೃಷ್ಟಃ ॥85॥
ಧೃತರಾಷ್ಟ್ರನ ಎಲ್ಲ ಪುತ್ರರನ್ನು ಮತ್ತು ಅವರ ಪಕ್ಷಕ್ಕೆ ಸೇರಿದ ಎಲ್ಲ ಶ್ರೇಷ್ಠರಾಜರನ್ನು ಸಂಹರಿಸಿ, ಈ ದಿನ ಅಜಾತಶತ್ರುವನ್ನು

ಸಂತೋಷದಿಂದ ರಾಜ್ಯದಲ್ಲಿ ಸ್ಥಾಪಿಸುವೆನು (ಎಂದು ಹೇಳಿದನು).
ತತಃ ಸುನಾಭಂ ವಸುದೇವಪುತ್ರಃ
ಸೂರ್ಯಪ್ರಭಂ ವಜ್ರಸಮಪ್ರಭಾವಮ್ |
ಕ್ಷುರಾಂತಮುದ್ಯಮ್ಯ ಭುಜೇನ ಚಕ್ರಂ
ರಥಾದವಪ್ಲುತ್ಯ ವಿಸೃಜ್ಯ ವಾಹಾನ್ ॥86॥
ಸಂಕಂಪಯನ್ ಗಾಂ ಚರಣೈರ್ಮಹಾತ್ಮಾ
ವೇಗೇನ ಕೃಷ್ಣಃ ಪ್ರಸಸಾರ ಭೀಷ್ಮಮ್ |
ಮದಾಂಧಮಾಜೌ ಸಮುದೀರ್ಣದರ್ಪಃ
ಸಿಂಹೋ ಜಿಘಾಂಸನ್ನಿವ ವಾರಣೇಂದ್ರಮ್ ॥87॥
ಅನಂತರ ವಸುದೇವ ಪುತ್ರನಾದ ಮಹಾತ್ಮನಾದ ಆ ಕೃಷ್ಣನು, ವಜ್ರಾಯುಧಕ್ಕೆ ಸಮಾನವಾದ ಸಾಮರ್ಥ್ಯವುಳ್ಳ, ಸೂರ್ಯನ ಕಾಂತಿಯನ್ನು ಹೊಂದಿದ ಕತ್ತಿಯ ಅಲುಗುಗಳನ್ನುಳ್ಳ ತನ್ನ ಸುದರ್ಶನ ಚಕ್ರವನ್ನು ಭುಜದಿಂದ ಎತ್ತಿ ಹಿಡಿದು ಕುದುರೆಗಳನ್ನು ಬಿಟ್ಟು ರಥದಿಂದ ಕೆಳಗೆ ಹಾರಿ ತನ್ನ ಪಾದನ್ಯಾಸಗಳಿಂದ ಭೂಮಿಯನ್ನು ನಡುಗಿಸುತ್ತಾ, ಉನ್ನತವಾದ ದರ್ಪವನ್ನು ಹೊಂದಿರುವ ಸಿಂಹವು ಮದಾಂಧವಾದ ಗಜವನ್ನು ಕೊಲ್ಲುವ ಸಂಕಲ್ಪದಿಂದ ಅದರ ಕಡೆಗೆ ಬಂದಂತೆ ರಣರಂಗದಲ್ಲಿ ಭೀಷ್ಮರ ಸಮೀಪಕ್ಕೆ ವೇಗವಾಗಿ ಧಾವಿಸಿದನು.
ಸೋಽಭ್ಯದ್ರವದ್ ಭೀಷ್ಮಮನೀಕಮಧ್ಯೇ
ಕ್ರುದ್ಧೋ ಮಹೇಂದ್ರಾವರಜಃ ಪ್ರಮಾಥೀ |
ವ್ಯಾಲಂಬಿಪೀತಾಂತಪಟಶ್ಚಕಾಶೇ
ಘನೋ ಯಥಾ ಖೇಽಚಿರಭಾಪಿನದ್ಧಃ ॥88॥
ಕ್ರುದ್ಧನಾದ, ಇಂದ್ರಾನುಜನಾದ, ಶತ್ರುನಾಶಕನಾದ ಕೃಷ್ಣನು ಸೈನ್ಯದ ಮಧ್ಯದಲ್ಲಿ ಭೀಷ್ಮರ ಕಡೆಗೆ ಧಾವಿಸಿದನು. ಇಳಿ ಬಿದ್ದಿದ್ದ ಅವನ ಪೀತಾಂಬರವು ಆಕಾಶದಲ್ಲಿ ಕಾಂತಿಯಿಂದ ಕೂಡಿದ ಮೋಡದಂತೆ ಕಂಗೊಳಿಸುತ್ತಿದ್ದಿತು.
ಸುದರ್ಶನಂ ಚಾಸ್ಯ ರರಾಜ ಶೌರೇಃ
ತಚ್ಚಕ್ರಪದ್ಮಂ ಸುಭುಜೋರುನಾಲಮ್ |
ಯಥಾದಿಪದ್ಮಂ ತರುಣಾರ್ಕವರ್ಣಂ
ರರಾಜ ನಾರಾಯಣನಾಭಿಜಾತಮ್ ॥89॥
ಶೌರಿಯಾದ ಕೃಷ್ಣನ ಕೈಯಲ್ಲಿದ್ದ ಪದ್ಮದಂತಿದ್ದ ಸುಂದರವಾದ ಭುಜವನ್ನೂ, ದೊಡ್ಡದಾದ ನಾಳವನ್ನೂ ಹೊಂದಿದ್ದ ಆ ಸುದರ್ಶನ ಚಕ್ರವು ಉದಯಿಸುವ ಸೂರ್ಯನ ಬಣ್ಣದಿಂದ ಕೂಡಿದುದಾಗಿ ನಾರಾಯಣನ ನಾಭಿಯಿಂದ ಉತ್ಪನ್ನವಾದ ಆದಿಪದ್ಮದಂತೆ ಶೋಭಿಸಿತು.
ತತ್ಕೃಷ್ಣಕೋಪೋದಯಸೂರ್ಯಬುದ್ಧಂ
ಕ್ಷುರಾಂತತೀಕ್ಷ್ಣಾಗ್ರಸುಜಾತಪತ್ರಮ್ |
ತಸ್ಯೈವ ದೇಹೋರುಸರಃಪ್ರರೂಢಂ
ರರಾಜ ನಾರಾಯಣಬಾಹುನಾಳಮ್ ॥90॥
ಕೃಷ್ಣನ ಕೋಪವೆಂಬ ಉದಿಸುವ ಸೂರ್ಯನಿಂದ ಅರಳಿದ, ಕತ್ತಿಯ ಅಲುಬಿನಂತೆ ತೀಕ್ಷ್ಣವಾದ ಚೆನ್ನಾಗಿ ಬೆಳೆದ ದಳಗಳನ್ನು ಹೊಂದಿದ, ಅವನ ಶರೀರವೆಂಬ ಸರೋವರದಲ್ಲಿ ಬೆಳೆದ, ನಾರಾಯಣನಾದ ಅವನ ಬಾಹುವೆಂಬ ನಾಳವನ್ನು ಹೊಂದಿದ ಆ ಸುದರ್ಶನ ಚಕ್ರವು ಶೋಭಿಸಿತು.
ತಮಾತ್ತಚಕ್ರಂ ಪ್ರಣದಂತಮುಚ್ಚೈಃ
ಕ್ರುದ್ಧಂ ಮಹೇಂದ್ರಾವರಜಂ ಸಮೀಕ್ಷ್ಯ |
ಸರ್ವಾಣಿ ಭೂತಾನಿ ಭೃಶಂ ವಿನೇದುಃ
ಕ್ಷಯಂ ಕುರೂಣಾಮಿತಿ ಚಿಂತಯಿತ್ವಾ ॥91॥
ಕೈಯಲ್ಲಿ ಚಕ್ರವನ್ನು ಹಿಡಿದು ಗಟ್ಟಿಯಾಗಿ ಗರ್ಜಿಸುತ್ತಾ ಕೋಪಗೊಂಡಿದ್ದ ಇಂದ್ರಾನುಜನಾದ ಕೃಷ್ಣನನ್ನು ನೋಡಿ ಕುರುಗಳಿಗೆ ವಿನಾಶವುಂಟಾಗುತ್ತದೆ ಎಂದು ಚಿಂತಿಸಿ ಎಲ್ಲ ಯೋಧರೂ ಸಂತೋಷದಿಂದ ಬಹಳವಾಗಿ ಗರ್ಜಿಸಿದರು.
ಸ ವಾಸುದೇವಃ ಪ್ರಗೃಹೀತಚಕ್ರಃ
ಸಂವರ್ತಯಿಷ್ಯನ್ನಿವ ಜೀವಲೋಕಮ್ |
ಅಭ್ಯುತ್ಪತನ್ ಲೋಕಗುರುರ್ಬಭಾಸೇ
ಭೂತಾನಿ ಧಕ್ಷ್ಯನ್ನಿವ ಕಾಲವಹ್ನಿಃ ॥92॥
ಕೈಯಲ್ಲಿ ಚಕ್ರವನ್ನು ಹಿಡಿದ ಲೋಕಗುರುವಾದ ವಾಸುದೇವನು ಜೀವ ಲೋಕವನ್ನೇ ತಿರುಗಿಸುವವನಂತೆ ಹಾರಿ ವೇಗದಿಂದ ಸಾಗುತ್ತಾ ಎಲ್ಲ ಪ್ರಾಣಿಗಳನ್ನು ದಹಿಸುವ ಕಾಲಾಗ್ನಿಯಂತೆ ಕಂಡುಬಂದನು.
ತಮಾಪತಂತಂ ಪ್ರಗೃಹೀತಚಕ್ರಂ
ಸಮೀಕ್ಷ್ಯ ದೇವಂ ದ್ವಿಪದಾಂ ವರಿಷ್ಠಮ್ |
ಅಸಂಭ್ರಮಾತ್ ಕಾರ್ಮುಕಬಾಣಪಾಣೀ
ರಥೇ ಸ್ಥಿತಃ ಶಾಂತನವೋಽಭ್ಯುವಾಚ ॥93॥

ಕೈಯಲ್ಲಿ ಚಕ್ರವನ್ನು ಹಿಡಿದು ತನ್ನೆಡೆಗೆ ಬರುತ್ತಿದ್ದ ದ್ವಿಪದ ಶ್ರೇಷ್ಠನಾದ ದೇವನಾದ ಕೃಷ್ಣನನ್ನು ನೋಡಿ ಬಿಲ್ಲುಬಾಣಗಳನ್ನು ಹಿಡಿದ ಭೀಷ್ಮರು ಗಾಬರಿಗೊಳ್ಳದೆ ರಥದಲ್ಲಿಯೇ ನಿಂತು ಮಾತನಾಡಿದರು.
ಏಹ್ಯೇಹಿ ದೇವೇಶ ಜಗನ್ನಿವಾಸ
ನಮೋಽಸ್ತು ತೇ ಶಾಂರ್ಗರಥಾಂಗಪಾಣೇ |
ಪ್ರಸಹ್ಯ ಮಾಂ ಪಾತಯ ಲೋಕನಾಥ
ರಥೋತ್ತಮಾದ್ ಭೂತಶರಣ್ಯ ಸಂಖ್ಯೇ ||94||
ದೇವೇಶನೇ, ಜಗನ್ನಿವಾಸನೇ, ಬಾ, ಬಾ. ಸಾರಂಗಪಾಣಿಯೇ, ಚಕ್ರಪಾಣಿಯೇ, ನಿನಗೆ ನಮಸ್ಕಾರ. ಲೋಕನಾಥನೇ, ಎಲ್ಲ ಜೀವರಿಗೆ ಶರಣ್ಯನಾದವನೇ, ನಿನ್ನ ಬಲದಿಂದ ನನ್ನನ್ನು ರಣರಂಗದಿಂದ ಶ್ರೇಷ್ಠವಾದ ರಥದಿಂದ ಕೆಡವು.
ತ್ವಯಾ ಹತಸ್ಯೇಹ ಮಮಾದ್ಯ ಕೃಷ್ಣ
ಶ್ರೇಯಃ ಪರಸ್ಮಿನ್ನಿಹ ಚೈವ ಲೋಕೇ |
ಸಂಭಾವಿತೋಽಸ್ಮ್ಯಂಧಕವೃಷ್ಣಿನಾಥ
ಲೋಕೈಸ್ತ್ರಿಭಿರ್ವೀರ ತವಾಭಿಯಾನಾತ್ ||95||
ಕೃಷ್ಣನೇ, ನಿನ್ನಿಂದ ಹತನಾದ ನನಗೆ ಈ ದಿನ ಈ ಲೋಕದಲ್ಲಿ ಕೀರ್ತಿಯೂ, ಪರಲೋಕದಲ್ಲಿ ಶ್ರೇಯಸ್ಸೂ ಉಂಟಾಗುತ್ತದೆ. ಎಲೈ ಅಂಧಕವೃಷ್ಣಿಪ್ರಭುವೇ, ವೀರನೇ, ಈ ದಿನ ನೀನು ಚಕ್ರವನ್ನು ಹಿಡಿದು ನನ್ನ ಕಡೆಗೆ ಬರುತ್ತಿರುವುದರಿಂದ ನಾನು ಮೂರು ಲೋಕಗಳಿಂದಲೂ ಗೌರವಿಸಲ್ಪಟ್ಟಿದ್ದೇನೆ (ಎಂದು ಹೇಳಿದರು).
ರಥಾದವಪ್ಲುತ್ಯ ತತಸ್ತ್ವರಾವಾನ್
ಪಾರ್ಥೋಽಪ್ಯನುದ್ರುತ್ಯ ಯದುಪ್ರವೀರಮ್ |
ಜಗ್ರಾಹ ಪೀನೋತ್ತಮಲಂಬಬಾಹುಂ
ಬಾಹ್ವೋರ್ಹರಿಂ ವ್ಯಾಯತಪೀನಬಾಹುಃ ||96||
ಆಗ ಅರ್ಜುನನು ತ್ವರೆಯಿಂದ ರಥದಿಂದ ಧುಮುಕಿ, ಯದುಪ್ರವೀರನಾದ ಕೃಷ್ಣನ ಹಿಂದೆ ಓಡಿ ವಿಸ್ತಾರವಾದ ಮತ್ತು ಪುಷ್ಟಬಾಹುವುಳ್ಳ ಅವನು, ಪುಷ್ಟವಾದ ಮತ್ತು ದೀರ್ಘವಾದ ಬಾಹುವುಳ್ಳ ಕೃಷ್ಣನನ್ನು ಅವನ ಬಾಹುಗಳಲ್ಲಿ ಹಿಡಿದನು.
ನಿಗೃಹ್ಯಮಾಣಶ್ಚ ತದಾದಿದೇವೋ
ಭೃಶಂ ಸರೋಷಃ ಕಿಲ ನಾಮ ಯೋಗೀ |
ಆದಾಯ ವೇಗೇನ ಜಗಾಮ ವಿಷ್ಣು-
ರ್ಜಿಷ್ಣುಂ ಮಹಾವಾತ ಇವೈಕವೃಕ್ಷಮ್ ||97||
ಅರ್ಜುನನ ನಾಮಕ್ಕೆ ಸಮಾನವಾದ ಕೃಷ್ಣನೆಂಬ ನಾಮವನ್ನು ಧರಿಸಿದವನೂ ಅಥವಾ ಅರ್ಜುನನಿಂದ ಎಳೆಯಲ್ಪಡುವುದರಿಂದ ಕೃಷ್ಣ ಎಂಬ ನಾಮವುಳ್ಳವನೂ ಆದ ಆದಿದೇವನು ರೋಷದಿಂದ ಕೂಡಿದವನಾಗಿ ಮಹಾವಾತವು ಒಂಟಿಯಾದ ವೃಕ್ಷವನ್ನು ಎಳೆದುಕೊಂಡು ಹೋಗುವಂತೆ ಅರ್ಜುನನನ್ನು ಎಳೆದುಕೊಂಡು ಮುಂದೆ ಸಾಗಿದನು.
ಪಾರ್ಥಸ್ತು ವಿಷ್ಟಭ್ಯ ಬಲೇನ ಪಾದೌ
ಭೀಷ್ಮಾಂತಿಕಂ ತೂರ್ಣಮಭಿದ್ರವಂತಮ್ |
ಬಲಾನ್ನಿಜಗ್ರಾಹ ಕಿರೀಟಮಾಲೀ
ಪದೇಽಥ ರಾಜನ್ದಶಮೇ ಕಥಂಚಿತ್ ||98||
ಎಲೈ ರಾಜನೇ, ಕಿರೀಟಮಾಲಿಯಾದ ಅರ್ಜುನನಾದರೂ ತನ್ನ ಪಾದಗಳನ್ನು ಗಟ್ಟಿಯಾಗಿ ಊರಿ ಭೀಷ್ಮರ ಸಮೀಪಕ್ಕೆ ಶೀಘ್ರವಾಗಿ ಓಡಿಹೋಗುತ್ತಿದ್ದ ಕೃಷ್ಣನನ್ನು ತನ್ನ ಸಾಮರ್ಥ್ಯದಿಂದ ಹತ್ತನೆಯ ಹೆಜ್ಜೆಯಲ್ಲಿ ನಿಲ್ಲಿಸಿದನು.
ಅವಸ್ಥಿತಂ ಚ ಪ್ರಣಿಪತ್ಯ ಕೃಷ್ಣಂ
ಪ್ರೀತೋಽರ್ಜುನಃ ಕಾಂಚನಚಿತ್ರಮಾಲೀ |
ಉವಾಚ ಕೋಪಂ ಪ್ರತಿಸಂಹರೇತಿ
ಗತಿರ್ಭವಾನ್ಕೇಶವ ಪಾಂಡವಾನಾಮ್ ||99||
ನಿಂತ ಕೃಷ್ಣನಿಗೆ ನಮಸ್ಕಾರವನ್ನು ಮಾಡಿ ಸಂತೋಷಗೊಂಡ ವಿಚಿತ್ರವಾದ ಸುವರ್ಣಮಾಲೆಯನ್ನು ಧರಿಸಿದ ಅರ್ಜುನನು ಕೇಶವನೇ, ನೀನು ಪಾಡವರಿಗೆ ಗತಿಯಾದವನು, ಕೋಪವನ್ನು ಉಪಶಮನ ಮಾಡು ಎಂದು ಹೇಳಿದನು.
ನ ಹಾಸ್ಯತೇ ಕರ್ಮ ಯಥಾಪ್ರತಿಜ್ಞಂ
ಪುತ್ರೈಃ ಶಪೇ ಕೇಶವ ಸೋದರೈಶ್ಚ |
ಅಂತಂ ಕರಿಷ್ಯಾಮಿ ಯಥಾ ಕುರೂಣಾಂ
ತ್ವಯಾಹಮಿಂದ್ರಾನುಜ ಸಂಪ್ರಯುಕ್ತಃ ||100||
ನಾನು ನನ್ನ ಪ್ರತಿಜ್ಞೆಗೆ ಅನುಗುಣವಾಗಿ ಕಾರ್ಯವನ್ನು ಮಾಡುವುದನ್ನು ಬಿಡುವುದಿಲ್ಲ. ಕೇಶವನೇ, ನನ್ನ ಪುತ್ರರ ಮೇಲೆ ಮತ್ತು ಸಹೋದರರ ಮೇಲೆ ಆಣೆಯನ್ನು ಮಾಡಿ ಹೇಳುತ್ತಿದ್ದೇನೆ (ಇದು ನಾನು ಶಸ್ತ್ರವನ್ನು ಹಿಡಿಯುವುದಿಲ್ಲ ಎಂಬ ನಿನ್ನ ಪ್ರತಿಜ್ಞೆಗೆ ಅನುಗುಣವಾಗಿಲ್ಲ). ಎಲೈ ಇಂದ್ರಾನುಜನೇ, ನಿನ್ನಿಂದ ಕೂಡಿಕೊಂಡ ನಾನು ಈ ದಿನ ಕೌರವರ ವಿನಾಶವನ್ನು ಮಾಡುವೆನು.
ತತಃ ಪ್ರತಿಜ್ಞಾಂ ಸಮಯಂ ಚ ತಸ್ಯ
ಜನಾರ್ದನಃ ಪ್ರೀತಮನಾ ನಿಶಮ್ಯ |
ಸ್ಥಿತಃ ಪ್ರಿಯೇ ಕೌರವಸತ್ತಮಸ್ಯ

ರಥಂ ಸಚಕ್ರಃ ಪುನರಾರುರೋಹ ॥101॥
ಅರ್ಜುನನ ಪ್ರತಿಜ್ಞೆಯನ್ನೂ ಮತ್ತು ಅವನ ನಿಬಂಧನೆಯನ್ನು ಕೇಳಿ ಜನಾರ್ದನನು ಅವನ ಮೇಲೆ ಪ್ರಸನ್ನನಾದನು. ಕೌರವಶ್ರೇಷ್ಠನಾದ ಅವನಿಗೆ ಪ್ರಿಯವನ್ನು ಉಂಟುಮಾಡುವುದಕ್ಕಾಗಿ ಪುನಃ ಕೈಯಲ್ಲಿ ಚಕ್ರವನ್ನು ಹಿಡಿದು ಅರ್ಜುನನ ರಥವನ್ನು ಏರಿದನು.

ತತಃ ಪ್ರತಿಜ್ಞಾಂ ಸಮವಾಪ್ಯ ಭೀಷ್ಮಃ
ಕೃತಾಂಜಲಿಂ ಸ್ತುತ್ಯಮಥಾಕರೋದ್ ವೈ |
ತ್ರೈವಿಕ್ರಮೇ ಯಸ್ಯ ವಪುರ್ಬಭಾಸೇ
ತಥೈವ ದೃಷ್ಟ್ವಾ ಸಮುಜ್ಜ್ವಲಂತಮ್ ॥102॥
ಆಗ ಭೀಷ್ಮರು ತಮ್ಮ ಪ್ರತಿಜ್ಞೆಯು ನೆರವೇರುತ್ತಿರಲು ಕೈಗಳನ್ನು ಮುಗಿದು ಸ್ತೋತ್ರವನ್ನು ಮಾಡಿದರು. ತ್ರಿವಿಕ್ರಮಾವತಾರದಲ್ಲಿ ತೋರಿಸಿದ ಉಜ್ಜ್ವಲ ರೂಪದಂತೆ ಕೃಷ್ಣನ ರೂಪವು ಅವರಿಗೆ ಕಂಗೊಳಿಸಿತು.

ಸ ತಾನಭೀಷೂನ್ ಪುನರಾದದಾನಃ
ಪ್ರಗೃಹ್ಯ ಶಂಖಂ ದ್ವಿಷತಾಂ ನಿಹಂತಾ |
ವಿನಾದಯಾಮಾಸ ತತೋ ದಿಶಶ್ಚ
ಸ ಪಾಂಚಜನ್ಯಸ್ಯ ರವೇಣ ಶೌರಿಃ ॥103॥
ಶತ್ರುಘಾತಕನಾದ ಕೃಷ್ಣನು ಪುನಃ ಕೈಗಳಲ್ಲಿ ಕಡಿವಾಣಗಳನ್ನು ಹಿಡಿದು ಪಾಂಚಜನ್ಯ ಶಂಖವನ್ನು ತೆಗೆದುಕೊಂಡು ಶೌರಿಯಾದ ಅವನು ಅದರ ನಾದದಿಂದ ದಿಕ್ಕುಗಳು ಪ್ರತಿಧ್ವನಿಸುವಂತೆ ಶಂಖವನ್ನು ಊದಿದನು.

ವ್ಯಾವಿದ್ಧನಿಷ್ಕಾಂಗದಕುಂಡಲಂ ತಂ
ರಜೋವಿಕೀರ್ಣಾಂಚಿತಪಕ್ಷ್ಮನೇತ್ರಮ್ |
ವಿಶುದ್ಧದಂಷ್ಟ್ರಂ ಪ್ರಗೃಹೀತಶಂಖಂ
ವಿಚುಕ್ರುಶುಃ ಪ್ರೇಕ್ಷ್ಯ ಕುರುಪ್ರವೀರಾಃ ॥104॥
ತನ್ನ ನಿಷ್ಕಾಂಗದ ಕುಂಡಲಗಳು ಅಸ್ತವ್ಯಸ್ತವಾಗಿದ್ದ ಹುಬ್ಬು ಮತ್ತು ಕಣ್ಣುಗಳ ಮೇಲೆ ಧೂಳನ್ನು ಹೊಂದಿದ್ದ, ವಿಶುದ್ಧ ದಂತಗಳನ್ನುಳ್ಳ, ಕೈಯಲ್ಲಿ ಶಂಖವನ್ನು ಹಿಡಿದ ಆ ಕೃಷ್ಣನನ್ನು ನೋಡಿ ಕುರುಪ್ರವೀರರು ಕಿರುಚಾಡಿದರು.

ಮೃದಂಗಭೇರೀಪಟಹಪ್ರಣಾದಾ
ನೇಮಿಸ್ವನಾ ದುಂದುಭಿನಿಸ್ವನಾಶ್ಚ |
ಸಸಿಂಹನಾದಾಶ್ಚ ಬಭೂವುರುಗ್ರಾಃ
ಸರ್ವೇಷ್ವನೀಕೇಷು ತತಃ ಕುರೂಣಾಮ್ ॥105॥
ಆಗ ಕುರುಗಳ ಎಲ್ಲ ಸೈನ್ಯದಲ್ಲಿ ಮೃದಂಗಭೇರಿ ಪಟ ಶಬ್ದಗಳೂ, ರಥದ ಚಕ್ರದ ಶಬ್ದಗಳೂ, ದುಂದುಭಿ ಘೋಷಗಳೂ, ಉಗ್ರವಾದ ಸಿಂಹನಾದಗಳೂ ಉಂಟಾದವು.

ಗಾಂಡೀವಘೋಷಃ ಸ್ತನಯಿತ್ನುಕಲ್ಪೋ
ಜಗಾಮ ಪಾರ್ಥಸ್ಯ ನಭೋ ದಿಶಶ್ಚ |
ಜಗ್ಮುಶ್ಚ ಬಾಣಾ ವಿಮಲಾಃ ಪ್ರಸನ್ನಾಃ
ಸರ್ವಾ ದಿಶಃ ಪಾಂಡವಚಾಪಮುಕ್ತಾಃ ॥106॥
ಸಿಡಿಲಿಗೆ ಸಮಾನವಾದ ಅರ್ಜುನನ ಗಾಂಡೀವ ಘೋಷವು ಆಕಾಶ ಮತ್ತು ದಿಕ್ಕು ದಿಕ್ಕುಗಳನ್ನು ತಲುಪಿತು. ಅರ್ಜುನನ ಬಿಲ್ಲಿನಿಂದ ಹೊರಹೊಮ್ಮಿದ ವಿಮಲವಾದ ಬಾಣಗಳು ಎಲ್ಲ ದಿಕ್ಕುಗಳನ್ನು ತಲುಪಿದವು.

ತಂ ಕೌರವಾಣಾಮಧಿಪೋ ಬಲೇನ
ಭೀಷ್ಮೇಣ ಭೂರಿಶ್ರವಸಾ ಚ ಸಾರ್ಧಮ್ |
ಅಭ್ಯುದ್ಯಯಾವುದ್ಯತಬಾಣಪಾಣಿಃ
ಕಕ್ಷಂ ದಿಧಕ್ಷನ್ನಿವ ಧೂಮಕೇತುಃ ॥107॥
ಕೌರವರ ಅಧಿಪತಿಯಾದ ದುರ್ಯೋಧನನು ತನ್ನ ಸೈನ್ಯದಿಂದಲೂ, ಭೀಷ್ಮರಿಂದಲೂ, ಭೂರಿಶ್ರವಸ್ಸಿನಿಂದಲೂ ಕೂಡಿಕೊಂಡು ಎತ್ತಿದ ಕೈಗಳಿಂದ ಬಾಣಗಳನ್ನು ಹಿಡಿದವನಾಗಿ ಹುಲ್ಲುಗಾವಲನ್ನು ದಹಿಸುವ ಅಗ್ನಿಯಂತೆ ಪಾಂಡವರ ಕಡೆಗೆ ಸಾಗಿಬಂದನು.

ಅಥಾರ್ಜುನಾಯ ಪ್ರಜಹಾರ ಭಲ್ಲಾನ್
ಭೂರಿಶ್ರವಾಃ ಸಪ್ತ ಸುವರ್ಣಪುಂಖಾನ್ |
ದುರ್ಯೋಧನಸ್ತೋಮರಮುಗ್ರವೇಗಂ
ಶಲ್ಯೋ ಗದಾಂ ಶಾಂತನವಶ್ಚ ಶಕ್ತಿಮ್ ॥108॥
ಅನಂತರ ಭೂರಿಶ್ರವನು ಸುವರ್ಣಪುಂಖಗಳಿದ್ದ ಏಳು ಭಲ್ಲಗಳನ್ನು ಅರ್ಜುನನ ಮೇಲೆ ಪ್ರಹಾರ ಮಾಡಿದನು. ದುರ್ಯೋಧನನು ಭಯಂಕರವಾದ ವೇಗವುಳ್ಳ ತೋಮರವನ್ನೂ, ಶಲ್ಯನು ಗದೆಯನ್ನೂ ಮತ್ತು ಭೀಷ್ಮರು ಶಕ್ತಿಯನ್ನೂ ಪ್ರಯೋಗಿಸಿದರು.

ಸ ಸಪ್ತಭಿಃ ಸಪ್ತ ಶರಪ್ರವೇಕಾನ್
ಸಂವಾರ್ಯ ಭೂರಿಶ್ರವಸಾ ವಿಸೃಷ್ಟಾನ್ |
ಶಿತೇನ ದುರ್ಯೋಧನಬಾಹುಮುಕ್ತಂ
ಕ್ಷುರೇಣ ತತ್ತೋಮರಮುನ್ಮಮಾಥ ॥109॥

ಅರ್ಜುನನು ಭೂರಿಶ್ರವನು ಪ್ರಯೋಗಿಸಿದ ಏಳು ಶ್ರೇಷ್ಠವಾದ ಬಾಣಗಳನ್ನು ಏಳು ಬಾಣಗಳಿಂದ ನಿವಾರಿಸಿ, ಹರಿತವಾದ ಕತ್ತಿಯಂತಹ ಬಾಣದಿಂದ ದುರ್ಯೋಧನನು ಪ್ರಯೋಗಿಸಿದ ತೋಮರವನ್ನು ನಾಶಪಡಿಸಿದನು.

ತತಃ ಶುಭಾಮಾಪತತೀಂ ಸ ಶಕ್ತಿಂ
ವಿದ್ಯುತ್ಪ್ರಭಾಂ ಶಾಂತನವೇನ ಮುಕ್ತಾಮ್ ।
ಗದಾಂ ಚ ಮದ್ರಾಧಿಪಬಾಹುಮುಕ್ತಾಂ
ದ್ವಾಭ್ಯಾಂ ಶರಾಭ್ಯಾಂ ನಿಚಕರ್ತ ವೀರಃ ॥110॥

ಅನಂತರ ವೀರನಾದ ಅವನು ಮಿಂಚಿನ ಕಾಂತಿಯನ್ನು ಹೊಂದಿ ತನ್ನೆಡೆಗೆ ಬರುತ್ತಿದ್ದ ಭೀಷ್ಮರು ಪ್ರಯೋಗಿಸಿದ ಶುಭವಾದ ಶಕ್ತ್ಯಾಯುಧವನ್ನೂ ಮತ್ತು ಮದ್ರಾಧಿಪತಿಯಾದ ಶಲ್ಯನ ಬಾಹುವಿನಿಂದ ಪ್ರಯೋಗಿಸಲ್ಪಟ್ಟ ಗದೆಯನ್ನೂ ಎರಡು ಬಾಣಗಳಿಂದ ಕತ್ತರಿಸಿದನು.

ತತೋ ಭುಜಾಭ್ಯಾಂ ಬಲವದ್ ವಿಕೃಷ್ಯ
ಚಿತ್ರಂ ಧನುರ್ಗಾಂಡಿವಮಪ್ರಮೇಯಮ್ ।
ಮಾಹೇಂದ್ರಮಸ್ತ್ರಂ ವಿಧಿವತ್ ಸುಘೋರಂ
ಪ್ರಾದುಶ್ಚಕಾರಾದ್ಭುತಮಂತರಿಕ್ಷೇ ॥111॥

ಅನಂತರ ತನ್ನ ಎರಡು ಭುಜಗಳಿಂದಲೂ ಅಸಾಧಾರಣ ಸಾಮರ್ಥ್ಯವುಳ್ಳ ವಿಚಿತ್ರವಾದ ಗಾಂಡೀವ ಧನುಸ್ಸನ್ನು ಬಲವಾಗಿ ಎಳೆದು ಅತ್ಯಂತ ಘೋರವೂ, ಅದ್ಭುತವೂ ಆದ ಮಹೇಂದ್ರಾಸ್ತ್ರವನ್ನು ಅಂತರಿಕ್ಷದಲ್ಲಿ ಪ್ರಾದುರ್ಭಾವಗೊಳಿಸಿದನು.

ತೇನೋತ್ತಮಾಸ್ತ್ರೇಣ ತತೋ ಮಹಾತ್ಮಾ
ಸರ್ವಾಣ್ಯನೀಕಾನಿ ಮಹಾಧನುಷ್ಮಾನ್ ।
ಶರೌಘಜಾಲೈರ್ವಿಮಲಾಗ್ನಿವರ್ಣೈಃ
ನಿವಾರಯಾಮಾಸ ಕಿರೀಟಮಾಲೀ ॥112॥

ಮಹಾತ್ಮನೂ, ಕಿರೀಟಮಾಲಿಯೂ, ಮಹಾಧನುರ್ಧಾರಿಯೂ ಆದ ಅರ್ಜುನನು ಆ ಶ್ರೇಷ್ಠವಾದ ಅಸ್ತ್ರದಿಂದ ಹೊರಹೊಮ್ಮಿದ ವಿಮಲವಾದ ಅಗ್ನಿಯ ವರ್ಣದಿಂದ ಕೂಡಿದ ಬಾಣಗಳ ಸಮೂಹದ ಬಲದಿಂದ ಎಲ್ಲ ಸೈನ್ಯವನ್ನೂ ನಿವಾರಿಸಿದನು.

ಶಿಲೀಮುಖಾಃ ಪಾರ್ಥಧನುಃಪ್ರಮುಕ್ತಾ
ರಥಾನ್ ಧ್ವಜಾಗ್ರಾಣಿ ಧನೂಂಷಿ ಬಾಹೂನ್ ।
ನಿಕೃತ್ಯ ದೇಹಾನ್ ವಿವಿಶುಃ ಪರೇಷಾಂ
ನರೇಂದ್ರನಾಗೇಂದ್ರತುರಂಗಮಾಣಾಮ್ ॥113॥

ಅರ್ಜುನನ ಧನುಸ್ಸಿನಿಂದ ಹೊರಹೊಮ್ಮಿದ ಹರಿತವಾದ ಬಾಣಗಳು ಶತ್ರುಗಳ ರಥಗಳನ್ನೂ, ಧ್ವಜದ ಮೇಲ್ಭಾಗಗಳನ್ನೂ, ಧನುಸ್ಸುಗಳನ್ನೂ, ಬಾಹುಗಳನ್ನೂ ಕತ್ತರಿಸಿ ರಾಜರ, ಗಜಗಳ, ಅಶ್ವಗಳ ಶರೀರಗಳಲ್ಲಿ ನಾಟಿದವು.

ತತೋ ದಿಶಶ್ಚಾನುದಿಶಶ್ಚ ಪಾರ್ಥಃ
ಶರೈಃ ಸುಧಾರೈರ್ನಿಶಿತೈರ್ವಿತತ್ಯ ।
ಗಾಂಡೀವಶಬ್ದೇನ ಮನಾಂಸಿ ತೇಷಾಂ
ಕಿರೀಟಮಾಲೀ ವ್ಯಥಯಾಂಚಕಾರ ॥114॥

ಅನಂತರ ಕಿರೀಟಮಾಲಿಯಾದ ಪಾರ್ಥನು ದಿಕ್ಕು-ವಿದಿಕ್ಕುಗಳಲ್ಲಿ ಒಳ್ಳೆಯ ಅಲುಬುಳ್ಳ ನಿಶಿತವಾದ ಬಾಣಗಳನ್ನು ಹರಡಿ, ಗಾಂಡೀವ ಧನುಸ್ಸಿನ ಶಬ್ದದಿಂದ ಶತ್ರುಗಳ ಮನಸ್ಸಿಗೆ ವ್ಯಥೆಯನ್ನು ಉಂಟುಮಾಡಿದನು.

ತಸ್ಮಿಂಸ್ತಥಾ ಘೋರತಮೇ ಪ್ರವೃತ್ತೇ
ಶಂಖಸ್ವನಾ ದುಂದುಭಿನಿಸ್ವನಾಶ್ಚ ।
ಅಂತರ್ಹಿತಾ ಗಾಂಡಿವನಿಸ್ವನೇನ
ಬಭೂವುರುಗ್ರಾಶ್ಚ ರಣಪ್ರಣಾದಾಃ ॥115॥

ಅರ್ಜುನನು ಹಾಗೆ ಅತ್ಯಂತ ಘೋರವಾಗಿ ಯುದ್ಧಮಾಡುತ್ತಿರಲು ಗಾಂಡೀವ ಧನುಸ್ಸಿನ ಘೋಷದಿಂದ ಶಂಖಧ್ವನಿಗಳು ಮತ್ತು ದುಂದುಭಿನಾದಗಳು ಅಡಗಿ ಹೋದವು. ಉಗ್ರವಾದ ಯುದ್ಧಪ್ರನಾದಗಳು ಉಂಟಾದವು.

ಗಾಂಡೀವಶಬ್ದಂ ತಮಥೋ ವಿದಿತ್ವಾ
ವಿರಾಟರಾಜಪ್ರಮುಖಾ ನೃವೀರಾಃ ।
ಪಾಂಚಾಲರಾಜೋ ದ್ರುಪದಶ್ಚ ವೀರಃ
ತಂ ದೇಶಮಾಜಗ್ಮುರದೀನಸತ್ತ್ವಾಃ ॥116॥

ಆ ಗಾಂಡೀವ ಧನುಸ್ಸಿನ ಶಬ್ದವನ್ನು ತಿಳಿದ ವಿರಾಟರಾಜನೇ ಮೊದಲಾದ ಎಲ್ಲ ವೀರರೂ, ವೀರನಾದ ಪಾಂಚಾಲನಾದ ದ್ರುಪದನೂ ಧೈರ್ಯದಿಂದ ಕೂಡಿದ ಮನಸ್ಸುಳ್ಳವರಾಗಿ ಆ ಪ್ರದೇಶಕ್ಕೆ ಬಂದರು.

ಸರ್ವಾಣಿ ಸೈನ್ಯಾನಿ ತು ತಾವಕಾನಿ
ಯತೋಯತೋ ಗಾಂಡಿವಜಃ ಪ್ರಣಾದಃ ।
ತತಸ್ತತಃ ಸನ್ನತಿಮೇವ ಜಗ್ಮುಃ
ನ ತಂ ಪ್ರತೀಪೋಽಭಿಸಸಾರ ಕಶ್ಚಿತ್ ॥117॥

ನಿನ್ನ ಸೈನ್ಯದವರೆಲ್ಲರೂ ಎಲ್ಲೆಲ್ಲಿ ಗಾಂಡೀವ ಧನುಸ್ಸಿನ ಘೋಷವು ಕೇಳಿ ಬರುತ್ತದೆಯೋ ಅಲ್ಲೆಲ್ಲ ಸನ್ನತಿಯನ್ನೇ ಹೊಂದಿದರು.

ಅರ್ಜುನನಿಗೆ ಪ್ರತೀಕಾರ ಮಾಡಲು ಯಾವನೂ ಮುಂದೆ ಬರಲಿಲ್ಲ.
ತಸ್ಮಿನ್ ಸುಘೋರೇ ನೃಪಸಂಪ್ರಹಾರೇ
ಹತಾಃ ಪ್ರವೀರಾಃ ಸರಥಾಃ ಸಸೂತಾಃ |
ಗಜಾಶ್ಚ ನಾರಾಚನಿಪಾತತಪ್ತಾ
ಮಹಾಪತಾಕಾಃ ಶುಭರುಗ್ಮಕಕ್ಷ್ಯಾಃ ॥118॥
ರಾಜರ ಸಂಹಾರಯುಕ್ತವಾದ ಆ ಘೋರವಾದ ಯುದ್ಧವು ಹಾಗೆ ನಡೆಯುತ್ತಿರಲು ರಥ ಮತ್ತು ಸೂತರಿಂದ ಕೂಡಿದ ಶ್ರೇಷ್ಠರಾದ ವೀರರು ಹತರಾದರು. ಮಹಾಪತಾಕೆಗಳನ್ನೂ, ಮನೋಹರವಾದ ಸುವರ್ಣಮಾಲೆಗಳನ್ನೂ ಧರಿಸಿದ ಗಜಗಳು ಬಾಣಗಳ ಹೊಡೆತಕ್ಕೆ ತತ್ತರಿಸಿ ಹೋದವು.
ಪರೀತಸತ್ತ್ವಾಃ ಸಹಸಾ ನಿಪೇತುಃ
ಕಿರೀಟಿನಾ ಭಿನ್ನತನುತ್ರಕಾಯಾಃ |
ದೃಢಾಹತಾಃ ಪತ್ರಿಭಿರುಗ್ರವೇಗೈಃ
ಪಾರ್ಥೇನ ಭಲ್ಲೈರ್ನಿಶಿತೈಃ ಶಿತಾಗ್ರೈಃ ॥119॥
ಧೈರ್ಯವನ್ನು ಕಳೆದುಕೊಂಡ ಯೋಧರು ಅರ್ಜುನನ ಬಾಣಗಳಿಂದ ತಮ್ಮ ಕವಚ ಮತ್ತು ಶರೀರಗಳು ಭೇದಿಸಲ್ಪಡುತ್ತಿರಲು ತಕ್ಷಣದಲ್ಲಿಯೇ ಕೆಳಗೆ ಬಿದ್ದರು. ಅರ್ಜುನನಿಂದ ಹರಿತವಾದ ತುದಿಯುಳ್ಳ ಪತ್ರಗಳಿಂದ ಕೂಡಿದ ಉಗ್ರವೇಗವುಳ್ಳ ಭಲ್ಲಗಳಿಂದ ಬಲವಾಗಿ ತಾಡಿತರಾದ ಶತ್ರುಗಳೆಲ್ಲರೂ ನೆಲಕ್ಕೆ ಉರುಳಿದರು.
ನಿಕೃತ್ತಯಂತ್ರಾ ನಿಹತೇಂದ್ರಕೀಲಾ
ಧ್ವಜಾ ಮಹಾಂತೋ ಧ್ವಜಿನೀಮುಖೇಷು |
ಪದಾತಿಸಂಘಾಶ್ಚ ರಥಾಶ್ಚ ಸಂಖ್ಯೇ
ಹಯಾಶ್ಚ ನಾಗಾಶ್ಚ ಧನಂಜಯೇನ ॥120॥
ಬಾಣಾಹತಾಸ್ತೂರ್ಣಮಪೇತಸತ್ತ್ವ
ವಿಷ್ಟಭ್ಯ ಗಾತ್ರಾಣಿ ನಿಪೇತುರುರ್ವ್ಯಾಮ್ |
ಐಂದ್ರೇಣ ತೇನಾಸ್ತ್ರವರೇಣ ರಾಜನ್
ಮಹಾಹವೇ ಭಿನ್ನತನುತ್ರದೇಹಾಃ ॥121॥
ಗಜದ ಮೇಲೆ ಏರಿಸಿದ ಯಂತ್ರಗಳು ಕತ್ತರಿಸಲ್ಪಟ್ಟವು. ಮಾಯಾ ಮಂತ್ರಾದಿಗಳು ನಾಶವನ್ನು ಹೊಂದಿದವು. ಸೈನ್ಯದ ಮುಂಭಾಗದಲ್ಲಿದ್ದ ದೊಡ್ಡ ಧ್ವಜಗಳು, ಪದಾತಿ ಸಮೂಹಗಳು, ರಥಗಳು, ಅಶ್ವಗಳು, ಗಜಗಳು ಅರ್ಜುನನ ಬಾಣಗಳಿಂದ ಹತವಾಗಿ ಶೀಘ್ರವಾಗಿ ತಮ್ಮ ಪ್ರಾಣವನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದವು. ಎಲೈ ರಾಜನೇ, ಆ ಅಸ್ತ್ರಶ್ರೇಷ್ಠವಾದ ಇಂದ್ರಾಸ್ತ್ರದಿಂದ ಆ ದೊಡ್ಡ ಯುದ್ಧದಲ್ಲಿ ಕವಚಗಳು ಮತ್ತು ದೇಹಗಳು ಕತ್ತರಿಸಲ್ಪಟ್ಟು ನೆಲದ ಮೇಲೆ ಉರುಳಿದವು.
ತತಃ ಶರೌಘೈರ್ನಿಶಿತೈಃ ಕಿರೀಟಿನಾ
ನೃದೇಹಶಸ್ತ್ರಕ್ಷತಲೋಹಿತೋದಾ |
ನದೀ ಸುಘೋರಾ ನರದೇಹಫೇನಾ
ಪ್ರವರ್ತಿತಾ ತತ್ರ ರಣಾಜಿರೇ ವೈ ॥122॥
ಆಗ ಅರ್ಜುನನಿಂದ ರಣರಂಗದಲ್ಲಿ ಬಾಣಗಳ ಸಮೂಹದಿಂದ ಹೊಡೆಯಲ್ಪಟ್ಟ ಯೋಧರ ದೇಹಗಳಿಂದ ಉಂಟಾದ ರಕ್ತವೆಂಬ ನೀರನ್ನು ಹೊಂದಿದ್ದ ಅತ್ಯಂತ ಘೋರವಾದ ಯೋಧರ ದೇಹವೆಂಬ ನೊರೆಯನ್ನು ಹೊಂದಿದ್ದ ನದಿಯು ಹರಿಯಿತು.
ವೇಗೇನ ಸಾತೀವ ಪೃಥುಪ್ರವಾಹಾ
ಪ್ರಸುಸ್ರುತಾ ಭೈರವಾರಾವರೂಪಾ |
ಪರೇತನಾಗಾಶ್ವಶರೀರರೋಧಾ
ನರಾಂತ್ರಮಜ್ಜಾಭೃತಮಾಂಸಪಂಕಾ ॥123॥
ಪ್ರಭೂತರಕ್ಷೋಗಣಭೂತಸೇವಿತಾ
ಶಿರಃಕಪಾಲಾಕುಲಕೇಶಶಾದ್ವಲಾ |
ಶರೀರಸಂಘಾತಸಹಸ್ರವಾಹಿನೀ
ವಿಶೀರ್ಣನಾನಾಕವಚೋರ್ಮಿಸಂಕುಲಾ ॥124॥
ನರಾಶ್ವನಾಗಾಸ್ಥಿನಿಕೃತ್ತಶರ್ಕರಾ
ವಿನಾಶಪಾಲಾಲವತೀ ಭಯಾವಹಾ |
ವಿಸ್ತಾರವಾದ ಪ್ರವಾಹವುಳ್ಳ, ಭಯಂಕರವಾದ ಶಬ್ದಗಳಿಂದ ಕೂಡಿದ, ಮೃತವಾದ ಗಜಾಶ್ವ ಶರೀರಗಳ ತೀರವನ್ನು ಹೊಂದಿದ, ಯೋಧರ ಕರುಳು, ಮಜ್ಜ ಮತ್ತು ಮಾಂಸವೆಂಬ ಕೆಸರನ್ನು ಹೊಂದಿದ, ಅನೇಕ ಸಂಖ್ಯೆಯ ರಾಕ್ಷಸ ಗಣದಿಂದಲೂ ಮತ್ತು ಭೂತಗಳಿಂದಲೂ ಸೇವಿತವಾದ, ಶಿರಃಕಪಾಲದಿಂದ ಕೂಡಿದ, ಕೆದರಿದ ಕೇಶಗಳೆಂಬ ಮೃದುಪ್ರದೇಶಗಳುಳ್ಳ, ಸಹಸ್ರಾರು ಶರೀರಗಳ ಸಮೂಹವನ್ನು ತೆಗೆದುಕೊಂಡು ಹರಿಯುವ, ಹರಿದುಹೋದ ಅನೇಕ ವಿಧವಾದ ಕವಚಗಳೆಂಬ ತರಂಗಗಳಿಂದ ನಿಬಿಡವಾದ, ಚೂರ್ಣೀಕೃತವಾದ ನರಾಶ್ವಗಜಗಳ ಅಸ್ಥಿಗಳೆಂಬ ಮರಳುಗಳನ್ನುಳ್ಳ, ಯುದ್ಧದಲ್ಲಿ ವಿನಾಶವುಂಟಾದ ಮಾಂಸಗಳ ಸಮೂಹವುಳ್ಳ, ನದಿಯು ಹರಿಯಿತು.
ತಾಂ ಕಂಕಮಾಲಾವೃತಗೃಧ್ರಕಹ್ವೈಃ

ಕ್ರವ್ಯಾದಸಂಘೈಶ್ಚ ತರಕ್ಷುಭಿಶ್ಚ ॥125॥
ಉಪೇತಕೂಲಾಂ ದದೃಶುಃ ಸಮಂತಾತ್
ಕ್ರೂರಾಂ ಮಹಾವೈತರಣೀಪ್ರಕಾಶಾಮ್ |
ಪ್ರವರ್ತಿತಾಮರ್ಜುನಬಾಣಸಂಘೈಃ
ಮೇದೋವಸಾಸೃಕ್ಪ್ರವಹಾಂ ಸುಭೀಮಾಮ್ ॥126॥
ಕಂಕಪಕ್ಷಿಗಳ ಸಮೂಹಗಳು ಹದ್ದುಗಳು ಮತ್ತು ಕಹ್ವಪಕ್ಷಿಗಳು ಮಾಂಸಾಹಾರಿ ಪ್ರಾಣಿಗಳ ಸಮೂಹಗಳು ಮತ್ತು ಚಿರತೆಗಳಿಂದ ತುಂಬಿದ ತೀರಗಳುಳ್ಳ, ಕ್ರೂರವಾದ, ಮಹಾವೈತರಣಿಯಂತಹ ಅರ್ಜುನನ ಬಾಣಸಮೂಹಗಳಿಂದ ಉಂಟಾದ ಮೇಧಸ್ಸು, ವಸಾ ಮತ್ತು ರಕ್ತಪ್ರವಾಹವುಳ್ಳ ಆ ಭಯಂಕರವಾದ ನದಿಯನ್ನು ಎಲ್ಲರೂ ನೋಡಿದರು.
ತೇ ಚೇದಿಪಾಂಚಾಲಕರೂಶಮತ್ಸ್ಯಾಃ
ಪಾರ್ಥಾಶ್ಚ ಸರ್ವೇ ಸಹಿತಾಃ ಪ್ರಣೇದುಃ |
ಜಯಪ್ರಗಲ್ಭಾಃ ಪುರುಷಪ್ರವೀರಾಃ
ಸಂತಾಪಯಂತಃ ಕುರುಯೋಧವೀರಾನ್ ॥127॥
ಪುರುಷಪ್ರವೀರರಾದ, ಜಯದ ಸಂತೋಷವುಳ್ಳ ಆ ಚೇದಿ, ಪಾಂಚಾಲ, ಕರೂಶ, ಮತ್ಸ್ಯರು ಮತ್ತು ಎಲ್ಲ ಪಾಂಡವರು ಜೊತೆಯಾಗಿ ಶ್ರೇಷ್ಠರಾದ ಕುರುಯೋಧರನ್ನು ಸಂತಾಪಗೊಳಿಸುತ್ತಾ ಸಿಂಹನಾದವನ್ನು ಮಾಡಿದರು.
ವಿತ್ರಾಸ್ಯ ಸೇನಾಂ ಧ್ವಜಿನೀಪತೀನಾಂ
ಸಿಂಹೋ ಮೃಗಾಣಾಮಿವ ಯೂಥಸಂಘಾನ್ |
ಹತಪ್ರವೀರಾಣಿ ಬಲಾನಿ ದೃಷ್ಟ್ವಾ
ಕಿರೀಟಿನಾ ಶತ್ರುಭಯಾವಹೇನ |
ವಿನೇದತುಸ್ತಾವತಿಹರ್ಷಯುಕ್ತೌ
ಗಾಂಡೀವಧನ್ವಾ ಚ ಜನಾರ್ದನಶ್ಚ ॥128॥
ಸೇನಾಪತಿಗಳ ಸೈನ್ಯವನ್ನು ಸಿಂಹವು ಮೃಗಗಳ ಸಮೂಹವನ್ನು ನಾಶಗೊಳಿಸುವಂತೆ ನಾಶಗೊಳಿಸಿ, ಶತ್ರುಭಯಂಕರನಾದ ಅರ್ಜುನನಿಂದ ಹತರಾದ ವೀರರನ್ನುಳ್ಳ ಸೈನ್ಯಗಳನ್ನು ನೋಡಿ, ಅತ್ಯಂತ ಸಂತೋಷದಿಂದ ಕೂಡಿದ ಕೃಷ್ಣಾರ್ಜುನರು ಸಿಂಹನಾದವನ್ನು ಮಾಡಿದರು.
ತತೋ ರವಿಂ ಸಂಹೃತರಶ್ಮಿಜಾಲಂ
ದೃಷ್ಟ್ವಾ ಭೃಶಂ ಶಸ್ತ್ರಪರಿಕ್ಷತಾಂಗಾಃ |
ತದೈಂದ್ರಮಸ್ತ್ರಂ ವಿತತಂ ಸುಘೋರ-
ಮಸಹ್ಯಮುದ್ವೀಕ್ಷ್ಯ ಯುಗಾಂತಕಲ್ಪಮ್ ॥129॥
ಅಥಾಪಯಾನಂ ಕುರವಃ ಸಭೀಷ್ಮಾಃ
ಸದ್ರೋಣದುರ್ಯೋಧನಬಾಹ್ಲಿಕಾಶ್ಚ |
ಚಕ್ರುರ್ನಿಶಾಂ ಸಂಧಿಗತಾಂ ಸಮೀಕ್ಷ್ಯ
ವಿಭಾವಸೋರ್ಲೋಹಿತರಾಜಿಯುಕ್ತಾಮ್ ॥130॥
ಅನಂತರ ಸೂರ್ಯನು ತನ್ನ ರಶ್ಮಿಗಳನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಿರುವುದನ್ನು ನೋಡಿ, ಘೋರವಾದ ಇಂದ್ರಾಸ್ತ್ರವು ಸಹಿಸಲು ಅಸಾಧ್ಯವಾಗಿ ಯುಗಾಂತದಂತೆ ವ್ಯಾಪ್ತವಾಗಿರುವುದನ್ನು ನೋಡಿ, ಶಸ್ತ್ರಗಳಿಂದ ಬಹಳವಾಗಿ ಗಾಯಗೊಂಡ ಶರೀರವುಳ್ಳ ಕುರುಗಳು, ಭೀಷ್ಮರು, ದ್ರೋಣರು, ದುರ್ಯೋಧನ, ಬಾಹ್ಲಿಕರು ಸೂರ್ಯನ ಸಂಧ್ಯಾಕಾಲದ ಅರುಣಕಿರಣಗಳನ್ನು ಗಮನಿಸಿ, ರಾತ್ರಿಯ ಆಗಮನವನ್ನು ಗಮನಿಸಿ ಯುದ್ಧದಿಂದ ಅಪಯಾನವನ್ನು ಮಾಡಿದರು.
ಅವಾಪ್ಯ ಕೀರ್ತಿಂ ಚ ಯಶಶ್ಚ ಲೋಕೇ
ವಿಜಿತ್ಯ ಶತ್ರೂಂಶ್ಚ ಧನಂಜಯೋಽಪಿ |
ಯಯೌ ನರೇಂದ್ರೈಃ ಸಹ ಸೋದರೈಶ್ಚ
ಸಮಾಪ್ತಕರ್ಮಾ ಶಿಬಿರಂ ನಿಶಾಯಾಮ್ |
ತತಃ ಪ್ರಜಜ್ಞೇ ತುಮುಲಃ ಕುರೂಣಾಂ
ನಿಶಾಮುಖೇ ಘೋರತರಃ ಪ್ರಣಾದಃ ॥131॥
ಅರ್ಜುನನಾದರೂ ಶತ್ರುಗಳನ್ನು ಗೆದ್ದು ಲೋಕದಲ್ಲಿ ಕೀರ್ತಿಯನ್ನೂ, ಯಶಸ್ಸನ್ನೂ ಗಳಿಸಿ ತನ್ನ ಆ ದಿನದ ಕಾರ್ಯವನ್ನು ಮುಗಿಸಿ ರಾಜರ ಮತ್ತು ಸಹೋದರರ ಜೊತೆಯಲ್ಲಿ ತನ್ನ ಶಿಬಿರಕ್ಕೆ ಹೋದನು. ಅನಂತರ ಆ ರಾತ್ರಿಯ ಮೊದಲ ಭಾಗದಲ್ಲಿ ಕುರುಗಳ ಶಿಬಿರದಲ್ಲಿ ಘೋರತರವಾದ, ತೀವ್ರವಾದ ನಾದವು ಉಂಟಾಯಿತು.
ರಣೇ ರಥಾನಾಮಯುತಂ ನಿಹತ್ಯ
ಹತಾ ಗಜಾಃ ಸಪ್ತಶತಾರ್ಜುನೇನ |
ಪ್ರಾಚ್ಯಾಶ್ಚ ಸೌವೀರಗಣಾಶ್ಚ ಸರ್ವೇ
ನಿಪಾತಿತಾಃ ಕ್ಷುದ್ರಕಮಾಲವಾಶ್ಚ |
ಮಹತ್ಕೃತಂ ಕರ್ಮ ಧನಂಜಯೇನ
ಕರ್ತುಂ ಯಥಾ ನಾರ್ಹತಿ ಕಶ್ಚಿದನ್ಯಃ ॥132॥

ಅರ್ಜುನನು ಹತ್ತುಸಾವಿರ ರಥಗಳನ್ನು ಯುದ್ಧದಲ್ಲಿ ಸಂಹರಿಸಿ, ಏಳುನೂರು ಗಜಗಳನ್ನು ಸಂಹರಿಸಿದ್ದನು. ಪ್ರಾಚ್ಯದೇಶದ ರಾಜರು, ಸೌವೀರ ಗಣಗಳು, ಕ್ಷುದ್ರಕ ಮಾಲವ ಯೋಧರೆಲ್ಲರೂ ಅರ್ಜುನನಿಂದ ಹತರಾಗಿದ್ದರು. ಇನ್ನೊಬ್ಬರು ಮಾಡಲು ಸಾಧ್ಯವಿಲ್ಲದಂತಹ ಮಹತ್ಕಾರ್ಯವನ್ನು ಅರ್ಜುನನು ಮಾಡಿದ್ದನು.

ಶ್ರುತಾಯುರಂಬಷ್ಠಪತಿಶ್ಚ ರಾಜಾ
ತಥೈವ ದುರ್ಮರ್ಷಣಚಿತ್ರಸೇನೌ |
ದ್ರೋಣಃ ಕೃಪಃ ಸೈಂಧವಬಾಹ್ಲಿಕೌ ಚ
ಭೂರಿಶ್ರವಾಃ ಶಲ್ಯಶಲೌ ಚ ರಾಜನ್ ॥133॥
ಅನ್ಯೇ ಚ ಯೋಧಾಃ ಶತಶಃ ಸಮೇತಾಃ
ಕ್ರುದ್ಧೇನ ಪಾರ್ಥೇನ ರಣಸ್ಯ ಮಧ್ಯೇ |
ಸ್ವಬಾಹುವೀರ್ಯೇಣ ಜಿತಾಃ ಸಭೀಷ್ಮಾಃ
ಕಿರೀಟಿನಾ ಲೋಕಮಹಾರಥೇನ ॥134॥

ಅಂಬಷ್ಠಪತಿಯಾದ ಶ್ರುತಾಯು ರಾಜ, ಹಾಗೆಯೇ ದುರ್ಮರ್ಷಣ- ಚಿತ್ರಸೇನರು, ದ್ರೋಣರು-ಕೃಪರು, ಸೈಂಧವ-ಬಾಹ್ಲಿಕರು, ಭೂರಿಶ್ರವ, ಶಲ್ಯ, ಶಲ ಮತ್ತು ಒಟ್ಟಿಗೆ ಸೇರಿದ ನೂರಾರು ಯೋಧರು ಎಲ್ಲರೂ ಕೋಪಗೊಂಡ ಅರ್ಜುನನಿಂದ ರಣರಂಗದ ಮಧ್ಯದಲ್ಲಿ ತನ್ನ ಬಾಹುಸಾಮರ್ಥ್ಯದಿಂದಲೇ ಅರ್ಜುನನಿಂದ ಪರಾಜಿತರಾದರು. ಲೋಕಮಹಾರಥನಾದ ಅರ್ಜುನನಿಂದ ಭೀಷ್ಮ ಸಹಿತರಾದ ಎಲ್ಲರೂ ಪರಾಜಿತರಾದರು.

ಇತಿ ಬ್ರುವಂತಃ ಶಿಬಿರಾಣಿ ಜಗ್ಮುಃ
ಸರ್ವೇ ಗಣಾ ಭಾರತ ಯೇ ತ್ವದೀಯಾಃ |
ಉಲ್ಕಾಸಹಸ್ರೈಶ್ಚ ಸುಸಂಪ್ರದೀಪ್ತೈಃ
ವಿಭ್ರಾಜಮಾನೈಶ್ಚ ತಥಾ ಪ್ರದೀಪ್ತೈಃ |
ಕಿರೀಟಿವಿತ್ರಾಸಿತಸರ್ವಯೋಧಾ
ಚಕ್ರೇ ನಿವೇಶಂ ಧ್ವಜಿನೀ ಕುರೂಣಾಮ್ ॥135॥

ಎಲೈ ಭಾರತನೇ, ಹೀಗೆ ಹೇಳುತ್ತಾ ನಿನ್ನ ಉಳಿದ ಯೋಧರು ತಮ್ಮ ತಮ್ಮ ಶಿಬಿರಕ್ಕೆ ಹೋದರು. ದೀಪ್ತವಾದ ಸಹಸ್ರಾರು ಪಂಜುಗಳಿಂದಲೂ, ಶೋಭಿಸುವ ಅನೇಕ ದೀಪಗಳಿಂದಲೂ ಕೂಡಿದ ಕೌರವರ ಸೈನ್ಯವು ಅರ್ಜುನನ ಬಾಣಗಳಿಂದ ಹೆದರಿದ ಸರ್ವಯೋಧರನ್ನು ಹೊಂದಿ ಆ ರಾತ್ರಿಯಲ್ಲಿ ವಿಶ್ರಾಂತಿಯನ್ನು ಪಡೆಯಿತು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
ಭೀಷ್ಮಸೇನಾಪತ್ಯದಲ್ಲಿ ಮೂರನೆಯ ದಿನದ ಯುದ್ಧವು ಮುಗಿಯಿತು.

* * * * *

ಐವತ್ತಾರನೆಯ ಅಧ್ಯಾಯ

ನಾಲ್ಕನೆಯ ದಿವಸದ ಯುದ್ಧದ ಪ್ರಾರಂಭ. ಭೀಷ್ಮಾರ್ಜುನರ ಪ್ರತಾಪ.

ಸಂಜಯಃ
ವ್ಯುಷ್ಟಾಂ ನಿಶಾಂ ಭಾರತ ಭಾರತಾನಾಮ್
ಅನೀಕಿನೀನಾಂ ಪ್ರಮುಖೇ ಮಹಾತ್ಮಾ |
ಯಯೌ ಸಪತ್ನಾನ್ ಪ್ರತಿ ಜಾತಕೋಪೋ
ವೃತಃ ಸಮಗ್ರೇಣ ಬಲೇನ ಭೀಷ್ಮಃ ॥1॥

ಸಂಜಯ ಎಲೈ ಭಾರತನೇ, ರಾತ್ರಿಯು ಕಳೆಯುತ್ತಿರಲು ಮಹಾತ್ಮರಾದ ಭೀಷ್ಮರು ಶತ್ರುಗಳ ಮೇಲೆ ಕೋಪವನ್ನು ಹೊಂದಿದವರಾಗಿ ಸಮಗ್ರವಾದ ಸೈನ್ಯದಿಂದ ಸಹಿತರಾಗಿ ಕೌರವರ ಸೈನ್ಯದ ಮುಂಭಾಗದಲ್ಲಿ ನಡೆದರು.

ತಂ ದ್ರೋಣದುರ್ಯೋಧನಬಾಹ್ಲಿಕಾಶ್ಚ
ತಥೈವ ದುರ್ಮರ್ಷಣಚಿತ್ರಸೇನೌ |
ಜಯದ್ರಥಶ್ಚಾತಿಬಲೋ ಬಲೌಘೈಃ
ನೃಪಾಸ್ತಥಾಽನ್ಯೇಽನುಯಯುಃ ಸಮಂತಾತ್ ॥2॥

ದ್ರೋಣ-ದುರ್ಯೋಧನ-ಬಾಹ್ಲಿಕರೂ, ಹಾಗೆಯೇ ದುರ್ಮರ್ಷಣ- ಚಿತ್ರಸೇನರೂ, ಅತಿ ಬಲಿಷ್ಠನಾದ ಜಯದ್ರಥ ಮತ್ತು ಉಳಿದ ರಾಜರೂ ಎಲ್ಲ ಕಡೆಗಳಿಂದಲೂ ತಮ್ಮ ಸೈನ್ಯದ ಜೊತೆಯಲ್ಲಿ ಭೀಷ್ಮರನ್ನು ಹಿಂಬಾಲಿಸಿದರು.

ಸ ತೈರ್ಮಹದ್ಭಿಶ್ಚ ಮಹಾರಥೈಶ್ಚ
ತೇಜಸ್ವಿಭಿರ್ವೀರ್ಯವದ್ಭಿಶ್ಚ ರಾಜನ್ |
ರರಾಜ ರಾಜೋತ್ತಮ ರಾಜಮುಖ್ಯೈಃ
ವೃತಃ ಸ ದೇವೈರಿವ ವಜ್ರಪಾಣಿಃ ॥3॥

ಮಹಾತ್ಮರೂ, ಮಹಾರಥರೂ, ಕಾಂತಿಮಂತರೂ, ಪರಾಕ್ರಮಶಾಲಿಗಳೂ ಆದ ರಾಜಶ್ರೇಷ್ಠರಿಂದ ಮತ್ತು ಪ್ರಧಾನ ರಾಜರಿಂದ ಪರಿವೃತರಾದ ಭೀಷ್ಮರು ಎಲೈ ರಾಜನೇ, ದೇವತೆಗಳಿಂದ ಸುತ್ತುವರಿಯಲ್ಪಟ್ಟ ವಜ್ರಪಾಣಿಯಾದ ಇಂದ್ರನಂತೆ ಶೋಭಿಸಿದರು.

ತಸ್ಮಿನ್ನನೀಕಪ್ರಮುಖೇ ವಿಷಕ್ತಾ
ದೋಧೂಯಮಾನಾಶ್ಚ ಮಹಾಪತಾಕಾಃ |
ಸುರಕ್ತಪೀತಾಸಿತಪಾಂಡುರಾಭಾ
ಮಹಾಗಜಸ್ಕಂಧಗತಾ ವಿರೇಜುಃ ||4||
ಆ ಸೈನ್ಯದ ಮುಂಭಾಗದಲ್ಲಿ ದೊಡ್ಡ ಆನೆಗಳ ಭುಜದ ಮೇಲೆ ನಿಲ್ಲಿಸಿದ ಕೆಂಪು, ಹಳದಿ, ಬಿಳಿ, ಕಪ್ಪು ಬಣ್ಣಗಳ ಮಹಾಪತಾಕೆಗಳು ಗಾಳಿಗೆ ಕಂಪಿಸುತ್ತಾ ವಿರಾಜಿಸಿದವು.
ಸಾ ವಾಹಿನೀ ಶಾಂತನವೇನ ರಾಜ್ಞಾ
ಮಹಾರಥೈರ್ವಾರಣವಾಜಿಭಿಶ್ಚ |
ಬಭೌ ಸವಿದ್ಯುತ್ಸ್ತನಯಿತ್ನುಕಲ್ಪಾ
ಜಲಾಗಮೇ ದ್ಯೌರಿವ ಜಾತಮೇಘಾ ||5||
ಶಂತನುಪುತ್ರರಾದ ರಾಜರಾದ ಭೀಷ್ಮರಿಂದಲೂ, ಮಹಾರಥರಿಂದಲೂ, ಅಶ್ವ-ಗಜಗಳಿಂದಲೂ ಕೂಡಿದ ಆ ಸೈನ್ಯವು ಗುಡುಗು, ಮಿಂಚುಗಳಿಂದ ಕೂಡಿದ ಮೇಘಗಳನ್ನು ಹೊಂದಿದ ಮಳೆಗಾಲದ ಆಕಾಶದಂತೆ ಶೋಭಿಸಿತು.
ತತೋ ರಣಾಯಾಭಿಮುಖೀ ಪ್ರಯಾತಾ
ಪ್ರತ್ಯರ್ಜುನಂ ಶಾಂತನವಾಭಿಗುಪ್ತಾ |
ಸೇನಾ ಮಹೋಗ್ರಾ ಸಹಸಾ ಕುರೂಣಾಂ
ವೇಗೋ ಯಥಾ ಭೀಮ ಇವಾಪಗಾಯಾಃ ||6||
ಅನಂತರ ಭೀಷ್ಮರಿಂದ ರಕ್ಷಿತವಾದ ಕುರುಗಳ ಮಹಾಸೈನ್ಯವು ತಕ್ಷಣದಲ್ಲಿ ಯುದ್ಧಕ್ಕೆ ಸಿದ್ಧವಾಗಿ ಅರ್ಜುನನ ಕಡೆಗೆ ಅಭಿಮುಖವಾಗಿ ಗಂಗಾನದಿಯ ಭಯಂಕರವಾದ ವೇಗದಂತೆ ಸಾಗಿತು.
ತಂ ವ್ಯಾಲನಾನಾವಿಧಗೂಢಸಾರಂ
ಗಜಾಶ್ವಪಾದಾತರಥೌಘಪಕ್ಷಮ್ |
ವ್ಯೂಹಂ ಮಹಾಮೇಘಸಮಂ ಮಹಾತ್ಮಾ
ದದರ್ಶ ದೂರಾತ್ ಕಪಿರಾಜಕೇತುಃ ||7||
ಕಪಿರಾಜಧ್ವಜನಾದ ಮಹಾತ್ಮನಾದ ಅರ್ಜುನನು ವ್ಯಾಲ ಮೊದಲಾದ ನಾನಾ ವಿಧವಾದ ಗೂಢಸತ್ವವನ್ನು ಹೊಂದಿದ್ದ, ಗಜಾಶ್ವರಥಪದಾತಿಗಳಿಂದ ತುಂಬಿದ, ಮಹಾಮೇಘ ಸದೃಶವಾದ ವ್ಯೂಹವನ್ನು ದೂರದಿಂದಲೇ ನೋಡಿದನು.
ಸ ನಿರ್ಯಯೌ ಕೇತುಮತಾ ರಥೇನ
ನರರ್ಷಭಃ ಶ್ವೇತಹಯೇನ ವೀರಃ |
ವರೂಥಿನಾ ಸೈನ್ಯಮುಖೇ ಮಹಾತ್ಮಾ
ವಧೇ ಧೃತಃ ಸರ್ವಸಪತ್ನಯೂನಾಮ್ ||8||
ನರಶ್ರೇಷ್ಠನೂ, ವೀರನೂ ಆದ ಅವನು ಶ್ವೇತಾಶ್ವಗಳನ್ನು ಹೂಡಿದ ಧ್ವಜಯುಕ್ತವಾದ ರಥದಿಂದ ಹೊರಟು ಬಂದನು. ಮಹಾತ್ಮನಾದ ಅವನು ಸೈನ್ಯದ ಮುಂಭಾಗದಲ್ಲಿ ಸುರಕ್ಷಿತವಾದ ರಥದಲ್ಲಿ ಶತ್ರುಸೇನೆಯ ಸರ್ವಯುವಕರ ವಧೆಯನ್ನು ನಿಶ್ಚಯಿಸಿ ಬಂದನು.
ಸೂಪಸ್ಕರಂ ಸೋತ್ತರಬಂಧುರೇಷಂ
ಯತ್ತಂ ಯದೂನಾಮೃಷಭೇಣ ಸಂಖ್ಯೇ |
ಕಪಿಧ್ವಜಂ ಪ್ರೇಕ್ಷ್ಯ ವಿಷೇದುರಾಜೌ
ಸಹೈವ ಪುತ್ರೈಸ್ತವ ಕೌರವೇಯಾಃ ||9||
ಒಳ್ಳೆಯ ಸಲಕರಣೆಗಳಿಂದ ಕೂಡಿದ್ದ ಮತ್ತು ಒಳ್ಳೆಯ ಮತ್ತು ಸುಂದರವಾದ ರಥಾಂಗಗಳಿಂದ ಕೂಡಿದ್ದ, ಯದುಶ್ರೇಷ್ಠನಾದ ಕೃಷ್ಣನಿಂದ ನಿಯಂತ್ರಿಸಲ್ಪಟ್ಟ, ಕಪಿಧ್ವಜವುಳ್ಳ ರಥವನ್ನು ರಣರಂಗದಲ್ಲಿ ನೋಡಿ ನಿನ್ನ ಪುತ್ರರ ಜೊತೆಯಲ್ಲಿ ಎಲ್ಲ ಕೌರವರೂ ವಿಷಾದವನ್ನು ಹೊಂದಿದರು.
ಪ್ರಕರ್ಷತಾ ಗುಪ್ತಮುದಾಯುಧೇನ
ಕಿರೀಟಿನಾ ಲೋಕಮಹಾರಥೇನ |
ತಂ ವ್ಯೂಹರಾಜಂ ದದೃಶುಸ್ತ್ವದೀಯಾಃ
ಚತುಶ್ಚತುರ್ವ್ಯಾಲಸಹಸ್ರಕೀರ್ಣಮ್ ||10||
ಲೋಕಮಹಾರಥನಾದ, ಆಯುಧವನ್ನು ಎತ್ತಿಹಿಡಿದ, ಅರ್ಜುನನಿಂದ ನಡೆಸಲ್ಪಟ್ಟ ಪಾಂಡವರ ನಾಲ್ಕು-ನಾಲ್ಕು ಆನೆಗಳ ಸಹಸ್ರದಿಂದ ತುಂಬಿದ ಆ ಶ್ರೇಷ್ಠವಾದ ವ್ಯೂಹವನ್ನು ನಿನ್ನವರು ನೋಡಿದರು.
ಯಥಾ ಹಿ ಪೂರ್ವೇಽಹನಿ ಧರ್ಮರಾಜ್ಞಾ
ವ್ಯೂಹಃ ಕೃತಃ ಕೌರವನಂದನೇನ |
ತಥಾ ತಥೋದ್ದೇಶಮುಪೇತ್ಯ ತಸ್ಥುಃ
ಪಾಂಚಾಲಮುಖ್ಯೈಃ ಸಹ ಚೇದಿಮುಖ್ಯಾಃ ||11||
ಹಿಂದಿನ ದಿನ ಕೌರವನಂದನನಾದ ಧರ್ಮರಾಜನು ಹೇಗೆ ವ್ಯೂಹವನ್ನು ರಚಿಸಿದ್ದನೋ, ಅದರಂತೆ ಪಾಂಚಾಲ ಶ್ರೇಷ್ಠರು ಮತ್ತು ಚೇದಿಶ್ರೇಷ್ಠರು ಆಯಾ ಸ್ಥಳಗಳಲ್ಲಿ ಹೋಗಿ ನಿಂತರು.
ತತೋ ಮಹಾವೇಗಸಮಾಹತಾನಿ

ಭೇರೀಸಹಸ್ರಾಣಿ ವಿನೇದುರಾಜೌ |
ಶಂಖಸ್ವನಾ ದುಂದುಭಿನಿಸ್ವನಾಶ್ಚ
ಸರ್ವೇಷ್ವನೀಕೇಷು ಸಸಿಂಹನಾದಾಃ ॥12॥
ಅನಂತರ ಮಹಾವೇಗದಿಂದ ಬಾರಿಸಲ್ಪಟ್ಟ ಸಹಸ್ರ ಭೇರಿಗಳು ರಣರಂಗದಲ್ಲಿ ಮೊಳಗಿದವು. ಎಲ್ಲ ಸೈನ್ಯಗಳಲ್ಲಿಯೂ ಶಂಖನಾದಗಳು, ದುಂದುಭಿ ಘೋಷಗಳು ಮತ್ತು ಸಿಂಹನಾದಗಳು ಉಂಟಾದವು.
ತತಃ ಸಬಾಣಾನಿ ಮಹಾಸ್ವನಾನಿ
ವಿಸ್ಫಾರ್ಯಮಾಣಾನಿ ಧನೂಂಷಿ ವೀರೈಃ |
ಕ್ಷಣೇನ ಭೇರೀಪಣವಪ್ರಣಾದಾನ್
ಅಂತರ್ದಧುಃ ಶಂಖಮಹಾಸ್ವನಾಶ್ಚ ॥13॥
ಅನಂತರ ಒಂದು ಕ್ಷಣದಲ್ಲಿ ವೀರರಿಂದ ಎಳೆಯಲ್ಪಡುವ ಧನುಸ್ಸುಗಳ ಮತ್ತು ಬಾಣಗಳ ಶಬ್ದಗಳು ಭೇರೀ-ಪಣವ ಮೊದಲಾದವುಗಳಿಂದ ಉಂಟಾದ ಶಬ್ದವನ್ನು ಒಂದು ಕ್ಷಣದಲ್ಲಿ ಅಡಗಿಸಿದವು. ಶಂಖದ ಮಹಾನಾದವು ಕೇಳಿ ಬರುತ್ತಿತ್ತು.
ತಚ್ಛಂಖಶಬ್ದಾವೃತಮಂತರಿಕ್ಷಮ್
ಉದ್ಧೂತಭೌಮದ್ರುತರೇಣುಜಾಲಮ್ |
ಮಹಾವಿತಾನಾವತತಪ್ರಕಾಶಮ್
ಆಲೋಕ್ಯ ವೀರಾಃ ಸಹಸಾಭಿಪೇತುಃ ॥14॥
ಅಂತರಿಕ್ಷವು ಶಂಖಗಳ ಮಹಾಶಬ್ದದಿಂದ ತುಂಬಿ ಭೂಮಿಯಿಂದ ಎದ್ದ ಧೂಳಿನಿಂದ ಆವೃತವಾಗಿ ಪ್ರಕಾಶವು ತಡೆಯಲ್ಪಟ್ಟಿರುವುದನ್ನು ನೋಡಿದ ವೀರರು ತಕ್ಷಣ ಒಬ್ಬರ ಮೇಲೆ ಒಬ್ಬರು ಎರಗಿದರು.
ರಥೀ ರಥೇನಾಭಿಹತಃ ಸಸೂತಃ
ಪಪಾತ ಸಾಶ್ವಃ ಸರಥಃ ಸಕೇತುಃ |
ಗಜೋ ಗಜೇನಾಭಿಹತಃ ಪಪಾತ
ಪದಾತಿನಾ ಚಾಭಿಹತಃ ಪದಾತಿಃ ॥15॥
ರಥಿಕನಿಂದ ಹೊಡೆಯಲ್ಪಟ್ಟ ಇನ್ನೊಬ್ಬ ರಥಿಕನು ತನ್ನ ಸೂತ, ಅಶ್ವಗಳು ಮತ್ತು ಧ್ವಜಯುಕ್ತವಾದ ರಥದ ಜೊತೆಯಲ್ಲಿ ಕೆಳಗೆ ಬಿದ್ದನು. ಗಜದಿಂದ ಅಭಿಹತವಾದ ಗಜವು ಬಿದ್ದಿತು. ಪದಾತಿಯಿಂದ ಅಭಿಹತನಾದ ಪದಾತಿಯು ಬಿದ್ದನು.
ಆವರ್ತಮಾನಾನ್ಯಭಿವರ್ತಮಾನೈಃ
ಬಾಣೈಃ ಕ್ಷತಾನ್ಯದ್ಭುತದರ್ಶನಾನಿ |
ಪ್ರಾಸೈಶ್ಚ ಖಡ್ಗೈಶ್ಚ ಸಮಾಹತಾನಿ
ಸದಶ್ವವೃಂದಾನಿ ಸದಶ್ವವೃಂದೈಃ ॥16॥
ಗುರಿಗಳಿಗೆ ಅಭಿಮುಖವಾಗಿ ಹೋಗುವ ಮತ್ತು ತಿರುಗಿಕೊಂಡು ಹೋಗುವ ಬಾಣಗಳಿಂದ ಉಂಟಾದ ಗಾಯಗಳು ನೋಡಲು ಅದ್ಭುತವಾಗಿದ್ದವು. ಒಳ್ಳೆಯ ಅಶ್ವ ಸಮೂಹಗಳಿಂದ ಪ್ರಾಸಗಳಿಂದಲೂ, ಖಡ್ಗಗಳಿಂದಲೂ ಪ್ರಹಾರ ಮಾಡಲ್ಪಟ್ಟವು.
ಸುವರ್ಣತಾರಾಗಣಭೂಷಿತಾನಿ
ಶರಾವರಾಣಿ ಪ್ರಹಿತಾನಿ ವೀರೈಃ |
ವಿದಾರ್ಯಮಾಣಾನಿ ಪರಶ್ವಧೈಶ್ಚ
ಪ್ರಾಸೈಶ್ಚ ಖಡ್ಗೈಶ್ಚ ನಿಪೇತುರುರ್ವ್ಯಾಮ್ ॥17॥
ವೀರರಿಂದ ಪ್ರಯೋಗಿಸಲ್ಪಟ್ಟ ಸುವರ್ಣಮಯವಾದ ನಕ್ಷತ್ರಗಳಿಂದ ಭೂಷಿತವಾದ ಬತ್ತಳಿಕೆಗಳು ಪರಶ್ವಧಗಳಿಂದಲೂ, ಪ್ರಾಸಗಳಿಂದಲೂ, ಖಡ್ಗಗಳಿಂದಲೂ ಹೊಡೆಯಲ್ಪಟ್ಟು ಭೂಮಿಯ ಮೇಲೆ ಬಿದ್ದವು.
ಗಜೈರ್ವಿಷಾಣೈರ್ವರಹಸ್ತರುಗ್ಣಾಃ
ಕೇಚಿತ್ ಸಸೂತಾ ರಥಿನಃ ಪ್ರಪೇತುಃ |
ಗಜರ್ಷಭಾಶ್ಚಾಪಿ ರಥರ್ಷಭೇಣ
ನಿಪೇತಿರೇ ಬಾಣಹತಾಃ ಪೃಥಿವ್ಯಾಮ್ ॥18॥
ಗಜಗಳ ವಿಷಾಣಗಳಿಂದಲೂ, ಸೊಂಡಿಲುಗಳಿಂದಲೂ ಗಾಯಗೊಂಡ ಕೆಲವು ರಥಿಕರು ಸೂತರೊಡನೆ ನೆಲಕ್ಕೆ ಉರುಳಿದರು. ಶ್ರೇಷ್ಠವಾದ ಗಜಗಳೂ ಸಹ ಶ್ರೇಷ್ಠವಾದ ರಥರಿಂದ ಬಾಣಗಳಿಂದ ಹತವಾಗಿ ಭೂಮಿಯ ಮೇಲೆ ಬಿದ್ದವು.
ಗಜೌಘವೇಗೋದ್ಧತಸಾದಿತಾನಾಂ
ಶ್ರುತ್ವಾ ನಿಷೇದುರ್ವಸುಧಾಂ ಮನುಷ್ಯಾಃ |
ಆರ್ತಸ್ವರಂ ಸಾದಿಪದಾತಿಯೂನಾಂ
ವಿಷಾಣಗಾತ್ರಾವರತಾಡಿತಾನಾಮ್ ॥19॥
ಗಜಸಮೂಹಗಳ ಉನ್ನತವೇಗದಿಂದ ಗಾಯಗೊಂಡ, ಗಜಗಳ ದಂತಗಳಿಂದಲೂ ಮತ್ತು ಶ್ರೇಷ್ಠವಾದ ಶರೀರಗಳಿಂದಲೂ ತಾಡಿತರಾದ ಅಶ್ವಾರೋಹಿಗಳೂ ಮತ್ತು ಪದಾತಿಗಳೂ ಆದ ಯುವಕರ ಆರ್ತಸ್ವರವನ್ನು ಕೇಳಿದ ಮನುಷ್ಯರು ಭೂಮಿಯ ಮೇಲೆ ಕುಸಿದರು.
ಸಂಭ್ರಾಂತನಾಗಾಶ್ವರಥೇ ಪ್ರಸೂತೇ
ಮಹಾಭಯೇ ಸಾದಿಪದಾತಿಯೂನಾಮ್ |
ಮಹಾರಥೈಃ ಸಂಪರಿವಾರ್ಯಮಾಣಂ

ದದರ್ಶ ಭೀಷ್ಮಃ ಕಪಿರಾಜಕೇತುಮ್ ॥20॥
ರಣರಂಗದಲ್ಲಿ ಚೆನ್ನಾಗಿ ತಿರುಗುತ್ತಿದ್ದ ಗಜಾಶ್ವರಥಗಳಿಂದ ಅಶ್ವಾರೋಹಿಗಳಾದ ಮತ್ತು ಪದಾತಿಗಳಾದ ಯುವಕರಿಗೆ ಮಹಾಭಯವು ಉಂಟಾಗುತ್ತಿರಲು ಭೀಷ್ಮರು ಮಹಾರಥರಿಂದ ಸುತ್ತುವರಿಯಲ್ಪಟ್ಟ ಕಪಿರಾಜಧ್ವಜನಾದ ಅರ್ಜುನನನ್ನು ನೋಡಿದರು.
ತಂ ಪಂಚತಾಳೋಚ್ಛ್ರಿತತಾಳಕೇತುಃ
ಸದಶ್ವವೇಗೋದ್ಧತವೀರ್ಯಯಾತಃ |
ಮಹಾಸ್ತ್ರಬಾಣಾಶನಿದೀಪ್ತಮಾರ್ಗಂ
ಕಿರೀಟಿನಂ ಶಾಂತನವೋಽಭ್ಯಧಾವತ್ ॥21॥
ಐದು ತಾಳೆಯ ಮರದಷ್ಟು ಎತ್ತರವಾದ ಧ್ವಜವನ್ನು ಹೊಂದಿದ, ಸದಶ್ವಗಳ ವೇಗದಿಂದ ಉದ್ಧತವಾದ, ಪರಾಕ್ರಮವನ್ನು ಹೊಂದಿದ, ಶಂತನು ಪುತ್ರರಾದ ಭೀಷ್ಮರು ಮಹಾಸ್ತ್ರ ಬಾಣಗಳೆಂಬ ಸಿಡಿಲುಗಳಿಂದ ಪ್ರಕಾಶಿತವಾದ ಮಾರ್ಗದಲ್ಲಿದ್ದ ಅರ್ಜುನನ ಕಡೆಗೆ ಧಾವಿಸಿದರು.
ತಥೈವ ಶಕ್ರಪ್ರತಿಮಾನಕಲ್ಪಮ್
ಇಂದ್ರಾತ್ಮಜಂ ದ್ರೋಣಮುಖಾಭಿಸಸ್ರುಃ |
ಕೃಪಶ್ಚ ಶಲ್ಯಶ್ಚ ವಿವಿಂಶತಿಶ್ಚ
ದುರ್ಯೋಧನಃ ಸೌಮದತ್ತಿಶ್ಚ ರಾಜನ್ ॥22॥
ಎಲೈ ರಾಜನೇ, ಹಾಗೆಯೇ ಇಂದ್ರನಿಗೆ ಸಮಾನವಾದ ಸಾಮರ್ಥ್ಯವುಳ್ಳ, ಇಂದ್ರಾತ್ಮಜನಾದ ಅರ್ಜುನನನ್ನು ದ್ರೋಣರು, ಕೃಪರು, ಶಲ್ಯ, ವಿವಿಂಶತಿ, ದುರ್ಯೋಧನ ಮತ್ತು ಸೌಮದತ್ತಿ ಇವರೂ ಸಮೀಪಿಸಿದರು.
ತತೋ ರಥಾನೀಕಮುಖಾದುಪೇತ್ಯ
ಸರ್ವಾಸ್ತ್ರವಿತ್ ಕಾಂಚನಚಿತ್ರವರ್ಮಾ |
ಜವೇನ ಶೂರೋಽಭಿಸಸಾರ ಸರ್ವಾನ್
ತಥಾಽರ್ಜುನಸ್ಯಾತ್ರ ಸುತೋಽಭಿಮನ್ಯುಃ ॥23॥
ಅನಂತರ ರಥಗಳ ಸಮೂಹಗಳ ಮುಂಭಾಗಕ್ಕೆ ಬಂದು ಸರ್ವಾಸ್ತ್ರವೇತ್ತನೂ, ವಿಚಿತ್ರವಾದ ಸುವರ್ಣಮಯವಾದ ಕವಚವನ್ನು ಧರಿಸಿದವನೂ, ಅರ್ಜುನನ ಪುತ್ರನೂ, ಶೂರನೂ ಆದ ಅಭಿಮನ್ಯುವು ವೇಗವಾಗಿ ಎಲ್ಲ ಶತ್ರುಗಳನ್ನೂ ಸಮೀಪಿಸಿದನು.
ತೇಷಾಂ ಮಹಾಸತ್ರಣಿ ಮಹಾರಥಾನಾಮ್
ಅಸಕ್ತಕರ್ಮಾ ವಿನಿಹತ್ಯ ಕಾರ್ಷ್ಣಿಃ |
ಬಭೌ ಮಹಾಮಂತ್ರಹುತಾರ್ಚಿಮಾಲೀ
ಸದೋಗತಃ ಸನ್ ಭಗವಾನಿವಾಗ್ನಿಃ ॥24॥
ಎಲ್ಲಿಯೂ ಸಿಕ್ಕಿಹಾಕಿಕೊಳ್ಳದೆ ಕಾರ್ಯವನ್ನು ಮಾಡುವ ಅಭಿಮನ್ಯುವು ಆ ಮಹಾರಥರ ಮಹಾಸ್ತ್ರಗಳನ್ನು ನಾಶಪಡಿಸಿ ಮಹಾಮಂತ್ರಗಳಿಂದ ಹುತವಾದ ಜ್ವಾಲಾಮಾಲೆಗಳನ್ನು ಹೊಂದಿದ, ವೇದಿಯಲ್ಲಿರುವ ಪೂಜ್ಯನಾದ ಅಗ್ನಿಯಂತೆ ಕಂಗೊಳಿಸಿದನು.
ತತಃ ಸ ತೂರ್ಣಂ ರುಧಿರೋದಫೇನಾಂ
ಕೃತ್ವಾ ನದೀಂ ವೈಶಸನೇ ರಿಪೂಣಾಮ್ |
ಜಗಾಮ ಸೌಭದ್ರಮತೀತ್ಯ ಭೀಷ್ಮೋ
ಮಹಾರಥಂ ಪಾರ್ಥಮದೀನಸತ್ತ್ವಃ ॥25॥
ಅನಂತರ ಧೈರ್ಯಶಾಲಿಗಳಾದ ಭೀಷ್ಮರು ಯುದ್ಧದಲ್ಲಿ ಶೀಘ್ರವಾಗಿ ಶತ್ರುಗಳ ರಕ್ತದ ಉದಕ ಮತ್ತು ನೊರೆಗಳಿಂದ ಕೂಡಿದ ನದಿಯನ್ನು ಹರಿಸಿ ಅಭಿಮನ್ಯುವನ್ನು ದಾಟಿ ಮಹಾರಥನಾದ ಪಾರ್ಥನನ್ನು ಸಮೀಪಿಸಿದರು.
ತತಃ ಪ್ರಹಸ್ಯಾದ್ಭುತದರ್ಶನೇನ
ಗಾಂಡೀವನಿರ್ಹ್ರಾದಮಹಾಸ್ವನೇನ |
ವಿಪಾಠಜಾಲೇನ ಮಹಾಸ್ತ್ರಜಾಲಂ
ವಿನಾಶಯಾಮಾಸ ಕಿರೀಟಮಾಲೀ ॥26॥
ಆಗ ಕಿರೀಟಮಾಲಿಯಾದ ಅರ್ಜುನನು ನಕ್ಕು ಗಾಂಡೀವಧನುಸ್ಸಿನ ಮಹಾಘೋಷದಿಂದಲೂ, ಅದ್ಭುತವಾಗಿ ಕಾಣುತ್ತಿದ್ದ ವಿಪಾಠರೂಪವಾದ ಶರಗಳ ಸಮೂಹದಿಂದಲೂ, ಭೀಷ್ಮರು ಪ್ರಯೋಗಿಸಿದ ಮಹಾಸ್ತ್ರ ಸಮೂಹಗಳನ್ನು ನಾಶಗೊಳಿಸಿದನು.
ತಮುತ್ತಮಂ ಸರ್ವಧನುರ್ಧರಾಣಾಮ್
ಅಸಕ್ತಕರ್ಮಾ ಕಪಿರಾಜಕೇತುಃ |
ಭೀಷ್ಮಂ ಮಹಾತ್ಮಾಭಿವವರ್ಷ ತೂರ್ಣಂ
ಶರೌಘಜಾಲೈರ್ವಿಮಲೈಶ್ಚ ಭಲ್ಲೈಃ ॥27॥
ಕಪಿರಾಜಧ್ವಜನೂ, ಅಸಕ್ತಕರ್ಮವುಳ್ಳವನೂ ಆದ ಮಹಾತ್ಮನಾದ ಅರ್ಜುನನು ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಭೀಷ್ಮರ ಮೇಲೆ ಶೀಘ್ರವಾಗಿ ಬಾಣಗಳ ಸಮೂಹಗಳಿಂದಲೂ ಮತ್ತು ವಿಮಲವಾದ ಭಲ್ಲಗಳಿಂದಲೂ ಮಳೆಗರೆದನು.
ತಥೈವ ಭೀಷ್ಮಾಹತಮಂತರಿಕ್ಷೇ
ಮಹಾಸ್ತ್ರಜಾಲಂ ಕಪಿರಾಜಕೇತೋಃ |
ವಿಶೀರ್ಯಮಾಣಂ ದದೃಶುಸ್ತ್ವದೀಯಾ
ದಿವಾಕರೇಣೇವ ತಮೋಭಿಭೂತಮ್ ॥28॥

ಹಾಗೆಯೇ, ಕಪಿರಾಜಕೇತುವಾದ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಮಹಾಸ್ತ್ರಜಾಲಗಳು ಭೀಷ್ಮರಿಂದ ಹೊಡೆಯಲ್ಪಟ್ಟು ಅಂತರಿಕ್ಷದಲ್ಲಿ ಸೂರ್ಯನ ಪ್ರಭಾವಕ್ಕೆ ಸಿಕ್ಕಿದ ಕತ್ತಲೆಯಂತೆ ನಾಶವನ್ನು ಹೊಂದುವುದನ್ನು ನಿನ್ನವರು ನೋಡಿದರು.
ಏವಂವಿಧಂ ಕಾರ್ಮುಕಭೀಮನಾದಮ್
ಅದೀನವತ್ ಸತ್ಪುರುಷೋತ್ತಮಾಭ್ಯಾಮ್ |
ದದರ್ಶ ಲೋಕಃ ಕುರುಸೃಂಜಯಾಶ್ಚ
ತದ್ ದ್ವೈರಥಂ ಭೀಷ್ಮಧನಂಜಯಾಭ್ಯಾಮ್ ||29||
ಸತ್ಪುರುಷರಲ್ಲಿ ಶ್ರೇಷ್ಠರಾದ ಭೀಷ್ಮಾರ್ಜುನರಿಗೆ ದೈನ್ಯರಹಿತವಾಗಿ ನಡೆದ ಧನುಸ್ಸುಗಳ ಭಯಂಕರ ನಾದವನ್ನು ಹೊಂದಿದ್ದ ಇಂತಹ ದ್ವಂದ್ವ ಯುದ್ಧವನ್ನು ಎಲ್ಲ ಜನರು ಮತ್ತು ಕುರುಸೃಂಜಯರು ನೋಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಟ್‌ಪಂಚಾಶೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಷೋಡಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೇಳನೆಯ ಅಧ್ಯಾಯ
ಧೃಷ್ಟದ್ಯುಮ್ನನಿಂದ ಯುದ್ಧದಲ್ಲಿ ಸಾಂಯಮನಿ ಪುತ್ರನ ವಧೆ.
ಸಂಜಯಃ
ದ್ರೌಣಿರ್ಭೂರಿಶ್ರವಾಃ ಶಲ್ಯಶ್ಚಿತ್ರಸೇನಶ್ಚ ಮಾರಿಷ |
ಪುತ್ರಃ ಸಾಂಯಮನೇಶ್ಚೈವ ಸೌಭದ್ರಂ ಸಮಯೋಧಯನ್ ||1||
ಸಂಜಯ ಎಲೈ ಪೂಜ್ಯನೇ, ಅಶ್ವತ್ಥಾಮರು, ಭೂರಿಶ್ರವ, ಶಲ್ಯ, ಚಿತ್ರಸೇನ ಮತ್ತು ಸಂಯಮನ ರಾಜನ ಪುತ್ರ ಈ ಐವರು ಅಭಿಮನ್ಯುವಿನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಸಂಸಕ್ತಮತಿತೇಜೋಭಿಸ್ತಮೇಕಂ ದದೃಶುರ್ಜನಾಃ |
ಪಂಚಭಿರ್ಮನುಜವ್ಯಾಘ್ರೈರ್ಗಜೈಃ ಸಿಂಹಶಿಶುಂ ಯಥಾ ||2||
ಗಜಗಳಿಂದ ಸಿಂಹದ ಮರಿಯು ಸುತ್ತುವರಿಯಲ್ಪಟ್ಟಂತೆ ಐದು ಜನ ಅತಿ ತೇಜಸ್ವಿಗಳಾದ ಮನುಜವ್ಯಾಘ್ರರಿಂದ ಸುತ್ತುವರಿಯಲ್ಪಟ್ಟ ಅಭಿಮನ್ಯುವನ್ನು ಜನರು ನೋಡಿದರು.
ನಾಭಿಲಕ್ಷ್ಯತಯಾ ಕಶ್ಚಿನ್ನ ಶೌರ್ಯೇ ನ ಪರಾಕ್ರಮೇ |
ಬಭೂವ ಸದೃಶಃ ಕಾರ್ಷ್ಣೇರ್ನಾಸ್ತ್ರೇ ನಾಪಿ ಚ ಲಾಘವೇ ||3||
ಶೌರ್ಯದಲ್ಲಾಗಲೀ, ಪರಾಕ್ರಮದಲ್ಲಾಗಲೀ, ಅಸ್ತ್ರವಿದ್ಯೆಯಲ್ಲಾಗಲೀ ಅಥವಾ ಕ್ಷಿಪ್ರತೆಯಲ್ಲಾಗಲೀ ಅಭಿಮನ್ಯುವಿನ ಜೊತೆಯಲ್ಲಿ ಹೋಲಿಸಿ ಎಣಿಸಬಹುದಾದವರು ಯಾರೂ ಇರಲಿಲ್ಲ.
ತಥಾ ತಮಾತ್ಮಜಂ ಯುದ್ಧೇ ವಿಕ್ರಮಂತಮರಿಂದಮಮ್ |
ದೃಷ್ಟ್ವಾ ಪಾರ್ಥೋ ರಣೇ ಯತ್ತಃ ಸಿಂಹನಾದಮಥೋಽನದತ್ ||4||
ಆ ರೀತಿಯಲ್ಲಿ ಅರಿಂದಮನಾದ ತನ್ನ ಪುತ್ರನು ಯುದ್ಧದಲ್ಲಿ ಪರಾಕ್ರಮವನ್ನು ತೋರಿಸುವುದನ್ನು ನೋಡಿ ಅರ್ಜುನನು ಜಾಗರೂಕನಾಗಿ ಸಿಂಹನಾದವನ್ನು ಮಾಡಿದನು.
ಪೀಡಯಾನಂ ಚ ತತ್‌ಸೈನ್ಯಂ ಪೌತ್ರಂ ತವ ವಿಶಾಂಪತೇ |
ದೃಷ್ಟ್ವಾ ತ್ವದೀಯಾ ರಾಜೇಂದ್ರ ಸಮಂತಾತ್ ಪರ್ಯವಾರಯನ್ ||5||
ಎಲೈ ರಾಜನೇ, ಪೀಡಿಸಲ್ಪಡುತ್ತಿರುವ ಕೌರವ ಸೈನ್ಯವನ್ನೂ ಮತ್ತು ನಿನ್ನ ಪೌತ್ರನನ್ನೂ ನೋಡಿದ ನಿನ್ನವರೆಲ್ಲರೂ ಅಭಿಮನ್ಯುವನ್ನು ಎಲ್ಲ ಕಡೆಯಲ್ಲೂ ಸುತ್ತುವರಿದರು.
ಧ್ವಜಿನೀಂ ಧಾರ್ತರಾಷ್ಟ್ರಾಣಾಂ ದೀನಶತ್ರುರದೀನವತ್ |
ಪ್ರತ್ಯುದ್ಯಯೌ ಸ ಸೌಭದ್ರಸ್ತೇಜಸಾ ಚ ಬಲೇನ ಚ ||6||
ತಾನು ದೀನನಾಗದೆ ಶತ್ರುಗಳಿಗೆ ದೈನ್ಯವನ್ನು ಉಂಟುಮಾಡುವ ಅಭಿಮನ್ಯುವು ತನ್ನ ತೇಜಸ್ಸು ಮತ್ತು ಬಲಗಳಿಂದ ಆ ಕೌರವ ಸೈನ್ಯದ ಮೇಲೆ ಎರಗಿದನು.
ತಸ್ಯ ಲಾಘವಮಾರ್ಗಸ್ಥಮಾದಿತ್ಯಸದೃಶಪ್ರಭಮ್ |
ವ್ಯದೃಶ್ಯತ ಮಹಚ್ಚಾಪಂ ಸಮರೇ ಯುಧ್ಯತಃ ಪರೈಃ ||7||
ಯುದ್ಧದಲ್ಲಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವ ಅವನ ದೊಡ್ಡ ಧನುಸ್ಸು ಯುದ್ಧದ ಲಾಘವ ಮಾರ್ಗದಲ್ಲಿ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳದ್ದಾಗಿ ಕಂಡುಬಂದಿತು.
ಸ ದ್ರೌಣಿಮಿಷುಣೈಕೇನ ವಿದ್ಧ್ವಾ ಶಲ್ಯಂ ಚ ಪಂಚಭಿಃ |
ಧ್ವಜಂ ಸಾಂಯಮನೇಶ್ಚಾಪಿ ಸೋಽಷ್ಟಾಭಿರಪವರ್ಜಯತ್ ||8||
ಅವನು ಅಶ್ವತ್ಥಾಮರನ್ನು ಒಂದು ಬಾಣದಿಂದಲೂ, ಶಲ್ಯನನ್ನು ಐದು ಬಾಣಗಳಿಂದಲೂ ಹೊಡೆದು ಸಂಯಮನ ರಾಜಕುಮಾರನ ರಥದ ಧ್ವಜವನ್ನು ಎಂಟು ಬಾಣಗಳಿಂದ ಕತ್ತರಿಸಿದನು.
ರುಗ್ಮದಂಡಾಂ ಮಹಾಶಕ್ತಿಂ ಪ್ರೇಷಿತಾಂ ಸೌಮದತ್ತಿನಾ |
ಶಿತೇನೋರಗಸಂಕಾಶಾಂ ಪತ್ರಿಣಾ ವಿಜಹಾರ ತಾಮ್ ||9||
ಭೂರಿಶ್ರವನಿಂದ ಪ್ರಯೋಗಿಸಲ್ಪಟ್ಟ ಚಿನ್ನದ ಹಿಡಿಯಿರುವ ಸರ್ಪದಂತಿದ್ದ ಮಹಾಶಕ್ತ್ಯಾಯುಧವನ್ನು ಪತ್ರವುಳ್ಳ ಹರಿತವಾದ

ಬಾಣದಿಂದ ಹಾರಿಸಿದನು.
ಶಲ್ಯಸ್ಯ ಚ ಮಹಾಘೋರಾನಸ್ಯತಃ ಶತಶಃ ಶರಾನ್ |
ನಿವಾರ್ಯಾರ್ಜುನದಾಯಾದೋ ಜಘಾನ ಸಮರೇ ಹಯಾನ್ ॥10॥
ಶಲ್ಯನು ಮಹಾಘೋರವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದರೂ ಅರ್ಜುನ ಪುತ್ರನು ಅದನ್ನು ತಪ್ಪಿಸಿಕೊಂಡು ಅವನ ರಥದ ಅಶ್ವಗಳನ್ನು ಸಂಹರಿಸಿದನು.
ಭೂರಿಶ್ರವಾಶ್ಚ ಶಲ್ಯಶ್ಚ ದ್ರೌಣಿಃ ಸಾಂಯಮನಿಃ ಶಲಃ |
ನಾಭ್ಯವರ್ತಂತ ಸಂರಬ್ಧಾಃ ಕಾರ್ಷ್ಣೇರ್ಬಾಹುಬಲಾಶ್ರಯಾತ್ ॥11॥
ಭೂರಿಶ್ರವ, ಶಲ್ಯ, ಅಶ್ವತ್ಥಾಮರು, ಸಂಯಮನ ಪುತ್ರ ಮತ್ತು ಶಲ ಇವರು ಕೋಪಗೊಂಡಿದ್ದರೂ ಸಹ ಅರ್ಜುನನ ಪುತ್ರನ ಬಾಹುಬಲದಿಂದಾಗಿ ಮುಂದುವರಿಯಲು ಸಾಧ್ಯವಾಗಲಿಲ್ಲ.
ತತಸ್ತ್ರಿಗರ್ತಾ ರಾಜೇಂದ್ರ ಮದ್ರಾಶ್ಚ ಸಹ ಕೇಕಯೈಃ |
ಪಂಚತ್ರಿಂಶತಿಸಾಹಸ್ರಾಸ್ತವ ಪುತ್ರೇಣ ಚೋದಿತಾಃ ॥12॥
ಧನುರ್ವೇದವಿದೋ ಮುಖ್ಯಾ ಅಜೇಯಾಃ ಶತ್ರುಭಿರ್ಯುಧಿ |
ಸಹಪುತ್ರಂ ಜಿಘಾಂಸಂತಂ ಪರಿವವ್ರುಃ ಕಿರೀಟಿನಮ್ ॥13॥
ಅನಂತರ ಎಲೈ ರಾಜೇಂದ್ರನೇ, ತ್ರಿಗರ್ತರು, ಮದ್ರರು ಮತ್ತು ಕೇಕಯರು ಸೇರಿ ಧನುರ್ವೇದ ಪಾರಂಗತರಾದ, ಶ್ರೇಷ್ಠರಾದ, ಶತ್ರುಗಳು ಯುದ್ಧದಲ್ಲಿ ಜಯಿಸಲು ಅಸಾಧ್ಯರಾದ ಮೂವತ್ತೈದು ಸಹಸ್ರ ಯೋಧರು ದುರ್ಯೋಧನನಿಂದ ಪ್ರೇರಿತರಾಗಿ ಎಲ್ಲರನ್ನೂ ಸಂಹರಿಸುತ್ತಿದ್ದ ಅರ್ಜುನನನ್ನು ಮತ್ತು ಅವನ ಪುತ್ರನನ್ನು ಸುತ್ತುವರಿದರು.
ತೌ ತು ತತ್ರ ಪಿತಾಪುತ್ರೌ ಪರಿಕ್ಷಿಪ್ತೌ ರಥರ್ಷಭೌ |
ದದರ್ಶ ರಾಜನ್ ಪಾಂಚಾಲ್ಯಃ ಸೇನಾಪತಿರಮಿತ್ರಜಿತ್ ॥14॥
ಎಲೈ ರಾಜನೇ, ಈ ರಥಶ್ರೇಷ್ಠರಾದ ತಂದೆ-ಮಕ್ಕಳು ಎಲ್ಲ ಸೈನ್ಯದಿಂದ ಸುತ್ತುವರಿದಿದ್ದನ್ನು ಶತ್ರುಸಂಹಾರಕನೂ, ಸೇನಾಪತಿಯೂ ಆದ ಧೃಷ್ಟದ್ಯುಮ್ನನು ನೋಡಿದನು.
ಸ ವಾರಣರಥೌಘಾನಾಂ ಸಹಸ್ರೈರ್ಬಹುಭಿರ್ವೃತಃ |
ವಾಜಿಭಿಃ ಪತ್ತಿಭಿಶ್ಚೈವ ವೃತಃ ಶತಸಹಸ್ರಶಃ ॥15॥
ಧನುರ್ವಿಸ್ಫಾರ್ಯ ಸಂಕ್ರುದ್ಧಶ್ಚೋದಯಿತ್ವಾ ವರೂಥಿನೀಮ್ |
ಯಯೌ ತನ್ಮದ್ರಕಾನೀಕಂ ಕೇಕಯಾಂಶ್ಚ ಪರಂತಪಃ ॥16॥
ಪರಂತಪನಾದ ಆ ಧೃಷ್ಟದ್ಯುಮ್ನನಾದರೂ ಅನೇಕ ಸಹಸ್ರ ಗಜ ಮತ್ತು ರಥಗಳ ಸಮೂಹದಿಂದಲೂ, ಶತಸಹಸ್ರ ಸಂಖ್ಯೆಯ ಅಶ್ವಾರೋಹಿಗಳು ಮತ್ತು ಪದಾತಿಗಳಿಂದಲೂಮ ಸಹಿತನಾಗಿ ತನ್ನ ಧನುಸ್ಸನ್ನು ಎಳೆಯುತ್ತಾ ಕೋಪಗೊಂಡು ಆ ಸೈನ್ಯವನ್ನು ಪ್ರೇರಿಸಿ ಮದ್ರಕರ ಮತ್ತು ಕೇಕಯರ ಸೈನ್ಯದ ಕಡೆಗೆ ಧಾವಿಸಿದನು.
ತೇನ ಕೀರ್ತಿಮತಾ ಗುಪ್ತಮನೀಕಂ ದೃಢಧನ್ವನಾ |
ಪ್ರಯುಕ್ತರಥನಾಗಾಶ್ವಂ ಯೋತ್ಸ್ಯಮಾನಮಶೋಭತ ॥17॥
ಕೀರ್ತಿಶಾಲಿಯೂ, ದೃಢವಾದ ಧನುಸ್ಸನ್ನು ಉಳ್ಳವನೂ ಆದ ಅವನಿಂದ ರಕ್ಷಿತವಾದ ರಥನಾಗಾಶ್ವಗಳಿಂದ ಪ್ರಯೋಜಿತವಾದ ಆ ಸೈನ್ಯವು ಯುದ್ಧ ಮಾಡುತ್ತಾ ಶೋಭಿಸಿತು.
ಸೋಽರ್ಜುನಂ ಪ್ರಮುಖೇ ಯಾಂತಂ ಪಾಂಚಾಲ್ಯಃ ಕುರುನಂದನ |
ತ್ರಿಭಿಃ ಶಾರದ್ವತಂ ಬಾಣೈರ್ಜತ್ರುದೇಶೇ ಸಮರ್ಪಯತ್ ॥18॥
ಎಲೈ ಕುರುನಂದನನೇ, ಧೃಷ್ಟದ್ಯುಮ್ನನನು ಅರ್ಜುನನ ಮುಂಭಾಗದಲ್ಲಿ ಹೋಗುತ್ತಿದ್ದ ಕೃಪರನ್ನು ಉದ್ದೇಶಿಸಿ ಮೂರು ಬಾಣಗಳಿಂದ ಅವರ ಭುಜಸಂಧಿ ದೇಶದಲ್ಲಿ ಹೊಡೆದನು.
ತತಃ ಸ ಮದ್ರಕಾನ್ ಹತ್ವಾ ದಶಭಿರ್ದಶಭಿಃ ಶರೈಃ |
ಹೃಷ್ಟ ಏಕೋ ಜಘಾನಾಶ್ವಂ ಭಲ್ಲೇನ ಕೃತವರ್ಮಣಃ ॥19॥
ಅನಂತರ ಅವನು ಹತ್ತು-ಹತ್ತು ಬಾಣಗಳಿಂದ ಮದ್ರಕರನ್ನು ಕೊಂದು ಸಂತೋಷಗೊಂಡು ಒಬ್ಬನೇ ಕೃತವರ್ಮನ ರಥಾಶ್ವಗಳನ್ನು ಭಲ್ಲದಿಂದ ಸಂಹರಿಸಿದನು.
ದಮನಂ ಚಾಪಿ ದಾಯಾದಂ ಪೌರವಸ್ಯ ಮಹಾತ್ಮನಃ |
ಜಘಾನ ವಿಪುಲಾಗ್ರೇಣ ನಾರಾಚೇನ ಪರಂತಪಃ ॥20॥
ಪರಂತಪನಾದ ಅವನು ಮಹಾತ್ಮನಾದ ಪೌರವನ ಪುತ್ರನಾದ ದಮನನನ್ನು ವಿಸ್ತಾರವಾದ ಅಲುಬುಳ್ಳ ನಾರಾಚದಿಂದ ಕೊಂದನು.
ತತಃ ಸಾಂಯಮನೇಃ ಪುತ್ರಃ ಪಾಂಚಾಲ್ಯಂ ಯುದ್ಧದುರ್ಮದಮ್ |
ಅವಿಧ್ಯತ್ ತ್ರಿಂಶತಾ ಬಾಣೈರ್ದಶಭಿಶ್ಚಾಸ್ಯ ಸಾರಥಿಮ್ ॥21॥
ಅನಂತರ ಸಂಯಮನ ರಾಜನ ಪುತ್ರನು ಯುದ್ಧದುರ್ಮದನಾದ ಧೃಷ್ಟದ್ಯುಮ್ನನ ಮೇಲೆ ಮೂವತ್ತು ಬಾಣಗಳನ್ನು ಪ್ರಯೋಗಿಸಿ ಹತ್ತು ಬಾಣಗಳಿಂದ ಅವನ ರಥದ ಸಾರಥಿಯನ್ನು ಕೊಂದನು.
ಸೋಽತಿವಿದ್ಧೋ ಮಹೇಷ್ವಾಸಃ ಸೃಕ್ಕಿಣೀ ಪರಿಸಂಲಿಹನ್ |
ಭಲ್ಲೇನ ಭೃಶತೀಕ್ಷ್ಣೇನ ನಿಚಕರ್ತಾಸ್ಯ ಕಾರ್ಮುಕಮ್ ॥22॥
ಬಹಳ ಪ್ರಹಾರಕ್ಕೆ ಸಿಕ್ಕಿದ ಮಹಾಧನುರ್ಧಾರಿಯಾದ ಧೃಷ್ಟದ್ಯುಮ್ನನು ಕಟಬಾಯಿಯನ್ನು ಸವರಿಕೊಳ್ಳುತ್ತಾ ಬಹಳ ತೀಕ್ಷ್ಣವಾದ ಭಲ್ಲದಿಂದ ಅವನ ಧನುಸ್ಸನ್ನು ಕತ್ತರಿಸಿದನು.

ಅಥೈನಂ ಪಂಚವಿಂಶತ್ಯಾ ಕ್ಷಿಪ್ರಮೇವ ಸಮರ್ಪಯತ್ |
ಅಶ್ವಾಂಶ್ಚಾಸ್ಯಾವಧೀದ್ ರಾಜನ್ನುಭೌ ತೌ ಪಾರ್ಷ್ಣಿಸಾರಥೀ ॥23॥
ರಾಜನೇ, ತಕ್ಷಣದಲ್ಲಿಯೇ ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿ ಅವನ ಅಶ್ವಗಳನ್ನು ಮತ್ತು ಪಾರ್ಶ್ವದ ಸಾರಥಿಗಳನ್ನು ಕೊಂದನು.
ಸ ಹತಾಶ್ವೇ ರಥೇ ತಿಷ್ಠನ್ ದದರ್ಶ ಭರತರ್ಷಭ |
ಪುತ್ರಃ ಸಾಂಯಮನೇಃ ಪುತ್ರಂ ಪಾಂಚಾಲ್ಯಸ್ಯ ಮಹಾತ್ಮನಃ ॥24॥
ಎಲೈ ಭರತರ್ಷಭನೇ, ಸಂಯಮನ ರಾಜಕುಮಾರನು ಅಶ್ವಗಳನ್ನು ಕಳೆದುಕೊಂಡು ರಥದಲ್ಲಿ ಕುಳಿತು ಮಹಾತ್ಮನಾದ ದ್ರುಪದನ ಪುತ್ರನಾದ ಧೃಷ್ಟದ್ಯುಮ್ನನನ್ನು ನೋಡಿದನು.
ಸ ಸಂಗೃಹ್ಯ ಮಹಾಘೋರಂ ನಿಸ್ತ್ರಿಂಶವರಮಾಯಸಮ್ |
ಪದಾತಿಸ್ತೂರ್ಣಮಭ್ಯರ್ಚ್ಛದ್ ರಥಸ್ಥಂ ದ್ರುಪದಾತ್ಮಜಮ್ ॥25॥
ಅವನು ತಕ್ಷಣ ಮಹಾಘೋರವಾದ, ಕಬ್ಬಿಣದಿಂದ ಮಾಡಿದ ಖಡ್ಗವನ್ನು ಹಿಡಿದುಕೊಂಡು ಪದಾತಿಯಾಗಿ ನಡೆದುಬಂದು ರಥದಲ್ಲಿದ್ದ ದ್ರುಪದ ಪುತ್ರನ ಮೇಲೆ ಅದನ್ನು ಬೀಸಿ ಎಸೆದನು.
ತಂ ಮಹೌಘಮಿವಾಯಾಂತಂ ಖಾತ್ ಪತಂತಮಿವೋರಗಮ್ |
ಭ್ರಾಂತಾವರಣನಿಸ್ತ್ರಿಂಶಂ ಕಾಲೋತ್ಸೃಷ್ಟಮಿವಾಂತಕಮ್ ॥26॥
ದೀಪ್ಯಂತಮಿವ ಶಸ್ತ್ರಾರ್ಚ್ಯಾ ಮತ್ತವಾರಣವಿಕ್ರಮಮ್ |
ಅಪಶ್ಯನ್ ಪಾಂಡವಾಸ್ತತ್ರ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥27॥
ಮಹಾಪ್ರವಾಹದಂತೆ ಬರುತ್ತಿದ್ದ, ಆಕಾಶದಿಂದ ಬಿದ್ದ ಸರ್ಪದಂತೆ ತೋರುತ್ತಿದ್ದ, ಕಾಲಪ್ರವರ್ತಕನಾದ ಯಮನಂತೆ ತೋರುತ್ತಿದ್ದ, ಶಸ್ತ್ರಜ್ವಾಲೆಯಿಂದ ಬೆಳಗುತ್ತಿದ್ದ, ಮದಿಸಿದ ಆನೆಯ ಪರಾಕ್ರಮವನ್ನು ಹೋಲುತ್ತಿದ್ದ, ಆವರಣರಹಿತವಾದ ಆ ಖಡ್ಗವನ್ನು ಪಾಂಡವರೂ ಮತ್ತು ಧೃಷ್ಟದ್ಯುಮ್ನನೂ ನೋಡಿದರು.
ತಸ್ಯ ಪಾಂಚಾಲಪುತ್ರಸ್ತು ಪ್ರತೀಪಮಭಿಧಾವತಃ |
ಶಿತನಿಸ್ತ್ರಿಂಶಹಸ್ತಸ್ಯ ಶರಾವರಣಧಾರಿಣಃ ॥28॥
ಬಾಣವೇಗಮತೀತಸ್ಯ ರಥಾಭ್ಯಾಶಮುಪೇಯುಷಃ |
ತ್ವರನ್ ಸೇನಾಪತಿಃ ಕ್ರುದ್ಧೋ ಬಿಭೇದ ಗದಯಾ ಶಿರಃ ॥29॥
ಪಾಂಚಾಲ ರಾಜಕುಮಾರನಾದ ಧೃಷ್ಟದ್ಯುಮ್ನನಾದರೂ ತನಗೆ ಪ್ರತೀಕಾರವನ್ನು ಮಾಡಲು ಕೈಯಲ್ಲಿ ಹರಿತವಾದ ಖಡ್ಗವನ್ನು ಮತ್ತು ಗುರಾಣಿಯನ್ನು ಹಿಡಿದು ಬಾಣವೇಗವನ್ನು ಮೀರಿದವೇಗದಿಂದ ತನ್ನ ರಥದ ಬಳಿಗೆ ಬರುತ್ತಿದ್ದ ಅವನನ್ನು ನೋಡಿ ಕ್ರುದ್ಧನಾದ ಸೇನಾಪತಿಯಾದ ಅವನು ಜಾಗ್ರತೆಯಾಗಿ ತನ್ನ ಗದೆಯಿಂದ ಅವನ ಶಿರಸ್ಸನ್ನು ಒಡೆದನು.
ತಸ್ಯ ರಾಜನ್ ಸನಿಸ್ತ್ರಿಂಶಂ ಸುಪ್ರಭಂ ಚ ಶರಾವರಮ್ |
ಹತಸ್ಯ ಪತತೋ ಹಸ್ತಾದ್ ವೇಗೇನ ನ್ಯಪತದ್ ಭುವಿ ॥30॥
ಎಲೈ ರಾಜನೇ, ಶಿರಸ್ಸು ಭಗ್ನವಾಗಿ ಅವನು ಧರೆಗೆ ಬೀಳುತ್ತಿರುವಂತೆ ಅವನ ಕಾಂತಿಯುಕ್ತವಾದ ಖಡ್ಗವು ಮತ್ತು ಗುರಾಣಿಯು ವೇಗವಾಗಿ ಭೂಮಿಯ ಮೇಲೆ ಬಿದ್ದಿತು.
ತಂ ನಿಹತ್ಯ ಗದಾಗ್ರೇಣ ಲೇಭೇ ಸ ಪರಮಂ ಯಶಃ |
ಪುತ್ರಃ ಪಾಂಚಾಲರಾಜಸ್ಯ ಮಹಾತ್ಮಾ ಭೀಮವಿಕ್ರಮಃ ॥31॥
ಮಹಾತ್ಮನೂ, ಭಯಂಕರ ಪರಾಕ್ರಮವುಳ್ಳವನೂ, ಪಾಂಚಾಲ ರಾಜನ ಪುತ್ರನೂ ಆದ ಧೃಷ್ಟದ್ಯುಮ್ನನು ಸಾಂಯಮನಿ ರಾಜಪುತ್ರನನ್ನು ತನ್ನ ಶ್ರೇಷ್ಠವಾದ ಗದೆಯಿಂದ ಕೊಂದು ಅಪಾರ ಕೀರ್ತಿಯನ್ನು ಪಡೆದನು.
ತಸ್ಮಿನ್ ಹತೇ ಮಹೇಷ್ವಾಸೇ ರಾಜಪುತ್ರೇ ಮಹಾರಥೇ |
ಹಾಹಾಕಾರೋ ಮಹಾನಾಸೀತ್ ತವ ಸೈನ್ಯಸ್ಯ ಮಾರಿಷ ॥32॥
ಎಲೈ ಪೂಜ್ಯನೇ, ಮಹಾರಥನೂ, ಮಹಾಧನುರ್ಧಾರಿಯೂ ಆದ ಆ ರಾಜಪುತ್ರನು ಹೀಗೆ ಕೊಲ್ಲಲ್ಪಡುತ್ತಿರಲು ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರ ಉಂಟಾಯಿತು.
ತತಃ ಸಾಂಯಮನಿಃ ಕ್ರುದ್ಧೋ ದೃಷ್ಟ್ವಾ ನಿಹತಮಾತ್ಮಜಮ್ |
ಅಭಿದುದ್ರಾವ ವೇಗೇನ ಪಾಂಚಾಲ್ಯಂ ಯುದ್ಧದುರ್ಮದಮ್ ॥33॥
ಆಗ ಸ್ವಯಂ ಸಾಂಯಮನಿ ರಾಜನು ತನ್ನ ಪುತ್ರನು ಹತನಾದುದನ್ನು ನೋಡಿ ಕೋಪಗೊಂಡು ವೇಗದಿಂದ ಯುದ್ಧದುರ್ಮದನಾದ ಧೃಷ್ಟದ್ಯುಮ್ನನ ಕಡೆಗೆ ಓಡಿಬಂದನು.
ತೌ ತತ್ರ ಸಮರೇ ವೀರೌ ಸಮೇತೌ ರಥಿನಾಂ ವರೌ |
ದದೃಶುಃ ಸರ್ವರಾಜಾನಃ ಕುರವಃ ಪಾಂಡವಾಸ್ತಥಾ ॥34॥
ರಥಿಶ್ರೇಷ್ಠರಾದ ಆ ಇಬ್ಬರು ವೀರರು ಯುದ್ಧದಲ್ಲಿ ಒಬ್ಬರನ್ನೊಬ್ಬರು ಎದುರಿಸುತ್ತಿರುವುದನ್ನು ಎಲ್ಲಾ ರಾಜರೂ, ಕುರುಗಳೂ ಮತ್ತು ಪಾಂಡವರೂ ನೋಡಿದರು.
ತತಃ ಸಾಂಯಮನಿಃ ಕ್ರುದ್ಧಃ ಪಾರ್ಷತಂ ಪರವೀರಹಾ |
ಆಜಘಾನ ತ್ರಿಭಿರ್ಬಾಣೈಸ್ತೋತ್ತ್ರೈರಿವ ಮಹಾದ್ವಿಪಮ್ ॥35॥
ಆಗ ಶತ್ರುಘಾತಕನಾದ ಸಾಂಯಮನಿಯು ಕ್ರುದ್ಧನಾಗಿ ಆನೆಯನ್ನು ಅಂಕುಶದಿಂದ ಹೊಡೆದಂತೆ ಮೂರುಬಾಣದಿಂದ ಧೃಷ್ಟದ್ಯುಮ್ನನನ್ನು ಹೊಡೆದನು.
ತಥೈವ ಪಾರ್ಷತಂ ಶೂರಂ ಶಲ್ಯಃ ಸಮಿತಿಶೋಭನಃ |

ಆಜಘಾನೋರಸಿ ಕ್ರುದ್ಧಸ್ತತೋ ಯುದ್ಧಮವರ್ತತ ॥36॥
ಹಾಗೆಯೇ ಯುದ್ಧದಲ್ಲಿ ಶೋಭಿಸುವ ಶಲ್ಯನೂ ಸಹ ಕ್ರುದ್ಧನಾಗಿ ಶೂರನಾದ ಧೃಷ್ಟದ್ಯುಮ್ನನ ವಕ್ಷಸ್ಸ್ಥಲದಲ್ಲಿ ಬಾಣಪ್ರಯೋಗವನ್ನು ಮಾಡಿದನು. ಅನಂತರ ಯುದ್ಧವು ಮುಂದುವರಿಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಪಂಚಾಶೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ 25ನೇ ಅಧ್ಯಾಯ
ಜಿತಾಃ ಸೇನಾಪಹಾರಂ ಚ ಚಕ್ರುರ್ಭೀಷ್ಮಮುಖಾಸ್ತತಃ ।
ಕದಾಚಿದಗ್ರಗೋ ಭೀಮೋ ಭೀಷ್ಮದ್ರೋಣೌ ವಿಸಾರಥೀ ।
ಕೃತ್ವಾ ವಿದ್ರಾಪ್ಯ ತಾನಶ್ವಾನ್ ಭಿತ್ವಾ ವ್ಯೂಹಂ ವಿವೇಶ ಹ ॥44॥
ಬಳಿಕ ಭೀಷ್ಮಾದಿಗಳು ಸೋತು ಸೈನ್ಯವನ್ನು ಶಿಬಿರಕ್ಕೆ ಕರೆಸಿಕೊಂಡರು. ಒಮ್ಮೆ ಭೀಮಸೇನನು ಯುದ್ಧದಲ್ಲಿ ಮುಂದೆ ಬಂದು ಭೀಷ್ಮ-ದ್ರೋಣರನ್ನು ಸಾರಥಿರಹಿತರನ್ನಾಗಿ ಮಾಡಿ ಕುದುರೆಗಳನ್ನು ಓಡಿಸಿ ವ್ಯೂಹವನ್ನು ಭೇದಿಸಿ ಒಳಗೆ ಪ್ರವೇಶಿಸಿದನು.
ಪುನಃ ಸಂಸ್ಥಾಪಿತರಥೌ ವಿಜಿತ್ಯಾಯತ್ನತೋ ಬಲೀ ।
ಯತಮಾನೌ ಮಹೇಷ್ವಾಸೌ ಧಾರ್ತರಾಷ್ಟ್ರಾನ್ ಜಘಾನ ಹ ॥45॥
ಮಹಾಧನುರ್ಧಾರಿಗಳಾದ ಭೀಷ್ಮ-ದ್ರೋಣರು ಪುನಃ ರಥಗಳನ್ನು ನಿಲ್ಲಿಸಿಕೊಂಡು ಯತ್ನಿಸಿದರೂ ಭೀಮನು ಅವರನ್ನು ಅನಾಯಾಸವಾಗಿ ಪರಾಭವಗೊಳಿಸಿ, ಕೌರವರನ್ನು ಕೊಲ್ಲತೊಡಗಿದನು.
ಪಂಚವಿಂಶದ್ಧತಾಸ್ತತ್ರ ಧಾರ್ತರಾಷ್ಟ್ರಾ ಮಹಾಬಲಾಃ ।
ಭಗದತ್ತದ್ರೌಣಿಕೃಪಶಲ್ಯದುರ್ಯೋಧನಾದಯಃ ॥46॥
ಸರ್ವೇ ಜಿತಾ ದ್ರಾವಿತಾಶ್ಚ ಸೇನಾ ಚ ಬಹುಲಾ ಹತಾ ।
ವಿರಥೋ ವ್ಯಾಯುಧಶ್ಚೈವ ದೃಢವೇಧವಿಮೂರ್ಚ್ಛಿತಃ ॥47॥
ಕೃತೋ ದುರ್ಯೋಧನಃ ಸರ್ವರಾಜ್ಞಾಂ ಭೀಮೇನ ಪಶ್ಯತಾಮ್ ।
ತತೋಽಪ(ವ)ಹಾರಂ ಸೈನ್ಯಸ್ಯ ಜಿತಾಶ್ಚಕ್ರುಶ್ಚ ಕೌರವಾಃ ॥48॥
ಆಗ ಎಲ್ಲ ರಾಜರೂ ನೋಡುತ್ತಿದ್ದಂತೆಯೇ ಇಪ್ಪತ್ತೈದು ಮಂದಿ ಮಹಾಬಲಿಷ್ಠರಾದ ಧೃತರಾಷ್ಟ್ರಪುತ್ರರು ಭೀಮನಿಂದ ಹತರಾದರು. ಭಗದತ್ತ ಅಶ್ವತ್ಥಾಮ ಕೃಪ ಶಲ್ಯ ದುರ್ಯೋಧನ ಮುಂತಾದವರೆಲ್ಲರೂ ಪರಾಜಿತರಾಗಿ ಪಲಾಯನಗೊಳಿಸಲ್ಪಟ್ಟರು. ಬಹಳ ಸೈನ್ಯವೂ ಹತವಾಯಿತು. ದುರ್ಯೋಧನನೂ ರಥ ಆಯುಧರಹಿತನಾಗಿ ತೀವ್ರ ಗಾಯಗಳಿಂದ ಮೂರ್ಛೆಗೊಳಿಸಲ್ಪಟ್ಟ ಬಳಿಕ ಸೋತ ಕೌರವರು ಸೈನ್ಯವನ್ನು ಹಿಂದೆ ಕರೆಸಿಕೊಂಡರು.
ದುರ್ಯೋಧನೋ ನಿಶಾಯಾಂ ಚ ಯಯೌ ಯತ್ರ ನದೀಸುತಃ ।
ಪೀಡಿತೋ ಭೀಮಬಾಣೈಶ್ಚ ಕ್ಷರದ್‌ಗಾತ್ರೋ ನನಾಮ ತಮ್ ।
ಉವಾಚ ಹೇತುನಾ ಕೇನ ವಯಂ ಕ್ಷೀಯಾಮ ಸರ್ವದಾ ॥49॥
ದುರ್ಯೋಧನನು ಭೀಮನ ಬಾಣಗಳಿಂದ ಗಾಯಗೊಂಡು ಮೈನೆತ್ತರು ಸುರಿಸುತ್ತ ರಾತ್ರಿಯಲ್ಲಿ ಭೀಷ್ಮನಿದ್ದಲ್ಲಿಗೆ ಹೋಗಿ ಅವರನ್ನು ನಮಿಸಿ ಕೇಳಿದ, `ನಾವು ಸದಾ ಏಕೆ ಸೋಲುತ್ತಿದ್ದೇವೆ?'
ಪಾಂಡವಾಶ್ಚ ಜಯಂ ನಿತ್ಯಂ ಲಬ್ಧ್ವಾ ಹರ್ಷಮವಾಪ್ನುವನ್ ।
ತಮಾಹ ಭೀಷ್ಮಸ್ತೇಽಜೇಯಾ ದೇವಾಸ್ತೇ ಧರಣೀಂ ಗತಾಃ ।
ವಿಶೇಷತಃ ಕೇಶವೇನ ಪಾಲಿತಾಸ್ತತ್ಪ್ರಿಯಾಃ ಸದಾ ॥50॥
`ಪಾಂಡವರು ನಿತ್ಯವೂ ಜಯಹೊಂದಿ ಹರ್ಷಪಟ್ಟಿದ್ದಾರೆ!' ಹೀಗೆ ದುರ್ಯೋಧನನು ಹೇಳಿದಾಗ ಭೀಷ್ಮರೆಂದರು, `ಪಾಂಡವರು ಅಜೇಯರು. ಏಕೆಂದರೆ ಅವರು ಭೂಮಿಯಲ್ಲಿ ಅವತರಿಸಿದ ದೇವತೆಗಳು, ವಿಶೇಷವಾಗಿ ಶ್ರೀಕೃಷ್ಣನಿಂದ ರಕ್ಷಿತರಾಗಿರುವವರು. ಸದಾ ಅವನಿಗೆ ಪ್ರಿಯರು'
ಮಾನಸೋತ್ತರಶೈಲೇ ಹಿ ಪುರಾ ಬ್ರಹ್ಮಪುರಸ್ಸರಾಃ ।
ಸ್ಥಿತಾ ದೇವಾಸ್ತದಾಽಪಶ್ಯದ್ ಬ್ರಹ್ಮೈಕೋ ಹರಿಮಂಬರೇ ॥51॥
ಹಿಂದೆ ಮಾನಸೋತ್ತರ ಪರ್ವತದಲ್ಲಿ ಬ್ರಹ್ಮಾದಿ ದೇವತೆಗಳು ಇದ್ದರು. ಆಗ ಬ್ರಹ್ಮದೇವರೊಬ್ಬರೇ ಆಕಾಶದಲ್ಲಿ ಹರಿಯನ್ನು ಕಂಡರು.
ಸ್ತುತ್ವಾ ಸಂಪೂಜ್ಯ ಭೂಮೇಃ ಸ ಭಾರಾವತರಣಾಯ ತಮ್ ।
ಪ್ರಾರ್ಥಯಾಮಾಸ ತೇನೋಕ್ತಂ ದೇವಾನಾಮವದದ್ ವಿಭುಃ ॥52॥
ಬ್ರಹ್ಮದೇವರು ಶ್ರೀಹರಿಯನ್ನು ಸ್ತೋತ್ರ ಮಾಡಿ ಪೂಜಿಸಿ, ಭೂಭಾರಹರಣ ಮಾಡಲು ಪ್ರಾರ್ಥಿಸಿದರು. ಆಗ ಶ್ರೀಹರಿಯು ಹೇಳಿದುದನ್ನು ದೇವತೆಗಳಿಗೆ ತಿಳಿಸಿದರು.
ಅಯಂ ನಾರಾಯಣೋ ದೇವಃ ಪೂರ್ಣಾನಂತಗುಣಾರ್ಣವಃ ।
ಆಜ್ಞಾಪಯತಿ ವಃ ಸರ್ವಾನ್ ಪ್ರಾದುರ್ಭಾವಾಯ ಭೂತಳೇ ॥53॥
ಸ್ವಯಂ ಚ ದೇವಕೀಪುತ್ರೋ ಭವಿಷ್ಯತಿ ಜಗತ್ಪತಿಃ ॥54॥
`ಪೂರ್ಣ ಅನಂತ ಗುಣಸಾಗರನಾದ ಈ ನಾರಾಯಣ ದೇವನು ನಿಮ್ಮೆಲ್ಲರನ್ನೂ ಭೂತಳದಲ್ಲಿ ಅವತರಿಸಲು ಆಜ್ಞಾಪಿಸುತ್ತಿದ್ದಾನೆ. ಜಗದೊಡೆಯನು ಸ್ವತಃ ದೇವಕೀಪುತ್ರನಾಗಿ ಅವತರಿಸುವನು`.

ಏವಂ ತೇನ ಸಮಾದಿಷ್ಟಾ ಧರ್ಮವಾಯ್ವಾದಯೋಽಖಿಲಾಃ |
ಅಭವನ್ ಪಾಂಡವಾದ್ಯಾಸ್ತೇ ಸೇಂದ್ರಾಃ ಸಹಮರುದ್ಗಣಾಃ ॥55॥
ಹೀಗೆ ಶ್ರೀಹರಿಯಿಂದ ಆಜ್ಞಪ್ತರಾದ ಯಮಧರ್ಮ, ವಾಯು ಮುಂತಾದವರೆಲ್ಲರೂ ಇಂದ್ರ ಮತ್ತು ಮರುದ್ಗಣಸಮೇತರಾಗಿ ಪಾಂಡವರು ಮುಂತಾದವರಾಗಿ ಅವತರಿಸಿದರು.
ಸ ಚ ನಾರಾಯಣೋ ದೇವೋ ದೇವಕೀನಂದನೋಽಭವತ್ |
ತೇನೈತೇ ಪಾಲಿತಾಃ ಪಾರ್ಥಾ ಅಜೇಯಾ ದೇವಸರ್ಗಿಣಃ |
ತಸ್ಮಾತ್ ತೈಃ ಸಂಧಿಮನ್ವಿಚ್ಛ ಯದೀಚ್ಛಸ್ಯಪರಾಭವಮ್ ॥56॥
ಆ ನಾರಾಯಣದೇವನು ದೇವಕೀಪುತ್ರನಾಗಿ ಅವತರಿಸಿದ್ದಾನೆ. ಅವನಿಂದ ರಕ್ಷಿತರಾದ ದೇವಾಂಶಸಂಭೂತರಾದ ಪಾಂಡವರು ಅಜೇಯರಾಗಿದ್ದಾರೆ. ಅವರಿಂದ ಸೋಲಾಗದಿರಲು ಬಯಸುವಿಯಾದರೆ ಅವರೊಡನೆ ಸಂಧಿಗೆ ಒಪ್ಪಿಕೊಳ್ಳುವವನಾಗು.
ಇತ್ಯುಕ್ತೋ ಡಂಭಬುದ್ಧ್ಯೈವ ನತ್ವಾ ವಿಷ್ಣುಂ ತತೋ ಯಯೌ |
ಪ್ರಾತರ್ನಿರ್ಯಾತಯಾಮಾಸ ಸೇನಾಂ ಯುದ್ಧಾಯ ದುರ್ಮತಿಃ |
ದಿವ್ಯೌಷಧೇನ ಭೀಷ್ಮಸ್ಯ ಭೂತ್ವಾ ಚ ನಿರುಜಸ್ತತಃ ॥58॥
ಭೀಷ್ಮರು ಹೀಗೆ ಹೇಳಿದಾಗ ದುರ್ಬುದ್ಧಿಯವನಾದ ದುರ್ಯೋಧನನು ಡಾಂಭಿಕ ಭಾವನೆಯಿಂದಲೇ ಹರಿಯನ್ನು ನಮಿಸಿ ಅಲ್ಲಿಂದ ಹೊರಟು ಹೋದ. ಭೀಷ್ಮರ ದಿವ್ಯೌಷಧ ಪ್ರಭಾವದಿಂದ ದುರ್ಯೋಧನ ನೋವಿಲ್ಲದವನಾಗಿ ಬೆಳಿಗ್ಗೆ ಯುದ್ಧಕ್ಕೆ ಸೇನೆಯನ್ನು ಹೊರಡಿಸಿದನು.
* * * * *

ಐವತ್ತೆಂಟನೆಯ ಅಧ್ಯಾಯ

ಭೀಮಸೇನನಿಂದ ಗದೆಯಿಂದ ಶತ್ರುಗಳ ಗಜಗಳ ವಧೆ.

ಧೃತರಾಷ್ಟ್ರಃ
ದೈವಮೇವ ಪರಂ ಮನ್ಯೇ ಪೌರುಷಾದಪಿ ಸಂಜಯ |
ಯತ್ ಸೈನ್ಯಂ ಮಮ ಪುತ್ರಸ್ಯ ಪಾಂಡುಸೈನ್ಯೇನ ವಧ್ಯತೇ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ನನ್ನ ಪುತ್ರನ ಸೈನ್ಯವು ಪಾಂಡವರ ಸೈನ್ಯದಿಂದ ಹತವಾಗುವುದನ್ನು ನೋಡಿದರೆ ಪುರುಷ ಪ್ರಯತ್ನಕ್ಕಿಂತಲೂ ದೈವಸಂಕಲ್ಪವೇ ಶ್ರೇಷ್ಠವೆಂದು ತೋರುತ್ತದೆ.
ನಿತ್ಯಂ ಹಿ ಮಾಮಕಾಂಸ್ತಾತ ಹತಾನೇವ ಹಿ ಶಂಸಸಿ |
ಅವ್ಯಗ್ರಾಂಶ್ಚ ಪ್ರಹೃಷ್ಟಾಂಶ್ಚ ನಿತ್ಯಂ ಶಂಸಸಿ ಪಾಂಡವಾನ್ ॥2॥
ಎಲೈ ಪ್ರೀತಿಪಾತ್ರನೇ, ನೀನು ನಿತ್ಯವೂ ನನ್ನವರು ಹತರಾಗುತ್ತಿದ್ದಾರೆಂದೂ ಮತ್ತು ಪಾಂಡವರು ಏನೂ ತೊಂದರೆಯಿಲ್ಲದೆ ಸಂತೋಷದಿಂದ ಇದ್ದಾರೆಂದೂ ನನಗೆ ಹೇಳುತ್ತಿದ್ದೀಯೆ.
ಹೀನಾನ್ ಪುರುಷಕಾರೇಣ ಮಾಮಕಾನದ್ಯ ಸಂಜಯ |
ಪತಿತಾನ್ ಪಾತ್ಯಮಾನಾಂಶ್ಚ ಹತಾನೇವ ಚ ಶಂಸಸಿ ॥3॥
ಯುಧ್ಯಮಾನಾನ್ ಯಥಾಶಕ್ತಿ ಘಟಮಾನಾಂಜಯಂ ಪ್ರತಿ |
ನನ್ನ ಪುತ್ರರು ಜಯವನ್ನು ಉದ್ದೇಶಿಸಿ ಯಥಾಶಕ್ತಿ ಯುದ್ಧವನ್ನು ಮಾಡುತ್ತಿದ್ದರೂ ಎಲೈ ಸಂಜಯನೇ, ನನ್ನ ಮಕ್ಕಳ ಪ್ರಯತ್ನವು ದುರ್ಬಲವೆಂದೂ ಮತ್ತು ಅವರು ಯುದ್ಧದಲ್ಲಿ ಬಿದ್ದಿದ್ದಾರೆ ಮತ್ತು ಬೀಳುತ್ತಿದ್ದಾರೆ ಮತ್ತು ಕೊಲ್ಲಲ್ಪಡುತ್ತಿದ್ದಾರೆ ಎಂದೂ ಹೇಳುತ್ತಿದ್ದೀಯೆ.
ಪಾಂಡವಾ ವಿಜಯಂತ್ಯೇವ ಜೀಯಂತೇ ಚೈವ ಮಾಮಕಾಃ ॥4॥
ಸೋಽಹಂ ತೀವ್ರಾಣಿ ದುಃಖಾನಿ ದುರ್ಯೋಧನಕೃತಾನಿ ಚ |
ಅಶ್ರೌಷಂ ಸತತಂ ತಾತ ದುಃಸಹಾನಿ ಬಹೂನಿ ಚ ॥5॥
ನನ್ನ ಮಕ್ಕಳು ಸೋಲುತ್ತಿದ್ದಾರೆ, ಪಾಂಡವರು ಗೆಲ್ಲುತ್ತಲೇ ಇದ್ದಾರೆ. ಪ್ರೀತಿಪಾತ್ರನೇ, ನಾನು ದುರ್ಯೋಧನನ ನಿಮಿತ್ತದಿಂದ ಉಂಟಾದ ದುಸ್ಸಹವಾದ, ತೀವ್ರವಾದ ಅನೇಕ ದುಃಖಗಳನ್ನು ಸತತವಾಗಿ ಕೇಳುತ್ತಿದ್ದೇನೆ.
ತಮುಪಾಯಂ ನ ಪಶ್ಯಾಮಿ ಜೀಯೇರನ್ ಯೇನ ಪಾಂಡವಾಃ |
ಮಾಮಕಾ ವಾ ಜಯಂ ಯುದ್ಧೇ ಪ್ರಾಪ್ನುಯುರ್ಯೇನ ಸಂಜಯ ॥6॥
ಎಲೈ ಸಂಜಯನೇ, ಪಾಂಡವರನ್ನು ಯುದ್ಧದಲ್ಲಿ ಗೆಲ್ಲುವ, ನನ್ನ ಮಕ್ಕಳು ಯುದ್ಧದಲ್ಲಿ ಜಯವನ್ನು ಗಳಿಸುವ ಯಾವ ಉಪಾಯವನ್ನೂ ನಾನು ಕಾಣುತ್ತಿಲ್ಲ.
ಸಂಜಯಃ
ಕ್ಷಯಂ ಮನುಷ್ಯದೇಹಾನಾಂ ಗಜವಾಜಿರಥಕ್ಷಯಮ್ |
ಶೃಣು ರಾಜನ್ ಸ್ಥಿರೋ ಭೂತ್ವಾ ತವೈವಾಪನಯೋ ಮಹಾನ್ ॥7॥
ಸಂಜಯ ರಾಜನೇ, ಮನುಷ್ಯದೇಹಗಳ ಮತ್ತು ಗಜಾಶ್ವರಥಗಳ ವಿನಾಶವನ್ನು ಸ್ಥಿರವಾಗಿ ಕುಳಿತು ಕೇಳುವವನಾಗು. ಇದಕ್ಕೆ ನಿನ್ನ ದುರ್ನೀತಿಯೇ ದೊಡ್ಡ ಕಾರಣ.
ಧೃಷ್ಟದ್ಯುಮ್ನಸ್ತು ಶಲ್ಯೇನ ಪೀಡಿತೋ ನವಭಿಃ ಶರೈಃ |
ಪೀಡಯಾಮಾಸ ಸಂಕ್ರುದ್ಧೋ ಮದ್ರಾಧಿಪತಿಮಾಯಸೈಃ ॥8॥
ಶಲ್ಯನಿಂದ ಒಂಬತ್ತು ಬಾಣಗಳಿಂದ ಪೀಡಿತನಾದ ಧೃಷ್ಟದ್ಯುಮ್ನನಾದರೂ ಬಹಳ ಕೋಪಗೊಂಡು ಮದ್ರಾಧಿಪತಿಯನ್ನು

ಅಯಸ್ಮಯವಾದ (ಕಬ್ಬಿಣದಿಂದ ಮಾಡಿದ) ಬಾಣದಿಂದ ಪೀಡಿಸಿದನು.
ತತ್ರಾದ್ಭುತಮಪಶ್ಯಾಮ ಪಾರ್ಷತಸ್ಯ ಪರಾಕ್ರಮಮ್ |
ನ್ಯವಾರಯತ ಯತ್ ತೂರ್ಣಂ ಶಲ್ಯಂ ಸಮಿತಿಶೋಭನಮ್ ॥9॥
ಯುದ್ಧದಲ್ಲಿ ಶೋಭಿಸುವ ಶಲ್ಯನನ್ನು ಶೀಘ್ರವಾಗಿ ಹಿಂದಿರುಗಿಸಿದ ಧೃಷ್ಟದ್ಯುಮ್ನನ ಪರಾಕ್ರಮವನ್ನು ನಾವು ಅಲ್ಲಿ ನೋಡಿದೆವು.
ನಾಂತರಂ ದದೃಶೇ ಕಶ್ಚಿತ್ ತಯೋಃ ಸಂರಬ್ಧಯೋ ರಣೇ |
ಮುಹೂರ್ತಮಿವ ತದ್ಯುದ್ಧಂ ತಯೋಃ ಸಮಮಿವಾಭವತ್ ॥10॥
ಸಿಟ್ಟಿನಿಂದ ಯುದ್ಧಮಾಡುವ ಅವರಿಬ್ಬರಲ್ಲಿ ಒಂದು ಮುಹೂರ್ತದವರೆಗೆ ಯಾವ ವ್ಯತ್ಯಾಸವೂ ಕಾಣಲಿಲ್ಲ. ಯುದ್ಧವು ಸಮವಾಗಿಯೇ ನಡೆಯಿತು.
ತತಃ ಶಲ್ಯೋ ಮಹಾರಾಜ ಧೃಷ್ಟದ್ಯುಮ್ನಸ್ಯ ಸಂಯುಗೇ |
ಧನುಶ್ಚಿಚ್ಛೇದ ಭಲ್ಲೇನ ಪೀತೇನ ನಿಶಿತೇನ ಚ ॥11॥
ಎಲೈ ಮಹಾರಾಜನೇ, ಅನಂತರ ಶಲ್ಯನು ಯುದ್ಧದಲ್ಲಿ ನೀರನ್ನು ಕುಡಿಸಿ ಹದಮಾಡಿ ಹರಿತವಾದ ಭಲ್ಲದಿಂದ ಧೃಷ್ಟದ್ಯುಮ್ನನ ಧನುಸ್ಸನ್ನು ಕತ್ತರಿಸಿದನು.
ಅಥೈನಂ ಶರವರ್ಷೇಣ ಛಾದಯಾಮಾಸ ಭಾರತ |
ಗಿರಿಂ ಜಲಾಗಮೇ ಯದ್ವದ್ ಜಲದಾ ಜಲಧಾರಿಣಃ ॥12॥
ಅನಂತರ ಎಲೈ ಭಾರತನೇ, ಅವನು ಮಳೆಗಾಲದಲ್ಲಿ ಮೋಡಗಳು ಪರ್ವತವನ್ನು ಮುಚ್ಚುವಂತೆ ಧೃಷ್ಟದ್ಯುಮ್ನನನ್ನು ಬಾಣಗಳ ಮಳೆಯಿಂದ ಮುಚ್ಚಿದನು.
ಅಭಿಮನ್ಯುಸ್ತು ಸಂಕ್ರುದ್ಧೋ ಧೃಷ್ಟದ್ಯುಮ್ನೇ ನಿಪೀಡಿತೇ |
ಅಭಿದುದ್ರಾವ ವೇಗೇನ ಮದ್ರರಾಜರಥಂ ಪ್ರತಿ ॥13॥
ಧೃಷ್ಟದ್ಯುಮ್ನನು ಪೀಡಿತನಾಗುತ್ತಿರಲು ಅಭಿಮನ್ಯುವಾದರೂ ಬಹಳ ಕೋಪಗೊಂಡವನಾಗಿ ವೇಗವಾಗಿ ಮದ್ರರಾಜನಾದ ಶಲ್ಯನ ರಥದ ಕಡೆಗೆ ಓಡಿ ಬಂದನು.
ತತೋ ಮದ್ರಾಧಿಪರಥಂ ಕಾರ್ಷ್ಣಿಃ ಪ್ರಾಪ್ಯಾತಿಕೋಪನಃ |
ಆರ್ತಾಯನಿಮಮೇಯಾತ್ಮಾ ವಿವ್ಯಾಧ ವಿಶಿಖೈಸ್ತ್ರಿಭಿಃ ॥14॥
ಅಪಾರವಾದ ಸಾಹಸವುಳ್ಳವನೂ, ಅತಿ ಕೋಪವನ್ನು ಉಳ್ಳವನೂ ಆದ ಅಭಿಮನ್ಯುವು ಋತಾಯನ ಪುತ್ರನಾದ ಶಲ್ಯನ ರಥದ ಬಳಿಗೆ ಬಂದು ಅವನನ್ನು ಮೂರು ಬಾಣಗಳಿಂದ ಪೀಡಿಸಿದನು.
ತತಸ್ತು ತಾವಕಾ ರಾಜನ್ ಪರೀಪ್ಸಂತೋಽಽರ್ಜುನಿಂ ರಣೇ |
ಮದ್ರರಾಜರಥಂ ತೂರ್ಣಂ ಪರಿವಾರ್ಯಾವತಸ್ಥಿರೇ ॥15॥
ಎಲೈ ರಾಜನೇ, ಅನಂತರ ನಿನ್ನವರು ಅಭಿಮನ್ಯುವಿನಿಂದ ಶಲ್ಯನನ್ನು ರಕ್ಷಿಸಲು ಬಯಸಿ ಶೀಘ್ರವಾಗಿ ಶಲ್ಯನ ರಥವನ್ನು ಸುತ್ತುವರಿದು ನಿಂತರು.
ದುರ್ಯೋಧನೋ ವಿಕರ್ಣಶ್ಚ ದುಃಶಾಸನವಿವಿಂಶತೀ |
ದುರ್ಮರ್ಷಣೋ ದುಃಸಹಶ್ಚ ಚಿತ್ರಸೇನಶ್ಚ ದುರ್ಮುಖಃ ॥16॥
ಸತ್ಯವ್ರತಶ್ಚ ಭದ್ರಂ ತೇ ಪುರುಮಿತ್ರಶ್ಚ ಭಾರತ |
ಏತೇ ಮದ್ರಾಧಿಪರಥಂ ಪಾಲಯಂತಃ ಸ್ಥಿತಾ ರಣೇ ॥17॥
ದುರ್ಯೋಧನ, ವಿಕರ್ಣ, ದುಶ್ಶಾಸನ, ವಿವಿಂಶತಿ, ದುರ್ಮರ್ಷಣ, ದುಃಸಹ, ಚಿತ್ರಸೇನ, ದುರ್ಮುಖ, ಸತ್ಯವ್ರತ, ಭದ್ರ, ಪುರುಮಿತ್ರ ಎಲೈ ಭಾರತನೇ, ನಿನಗೆ ಮಂಗಳವಾಗಲಿ ಇವರು ಶಲ್ಯನ ರಥವನ್ನು ರಕ್ಷಿಸುತ್ತಾ ರಣರಂಗದಲ್ಲಿ ನಿಂತರು.
ತಾನ್ ಭೀಮಸೇನಃ ಸಂಕ್ರುದ್ಧೋ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ದ್ರೌಪದೇಯಾಭಿಮನ್ಯುಶ್ಚ ಮಾದ್ರೀಪುತ್ರೌ ಚ ಪಾಂಡವೌ |
ಧಾರ್ತರಾಷ್ಟ್ರಾನ್ ದಶ ರಥಾನ್ ದಶೈವ ಪ್ರತ್ಯವಾರಯನ್ ॥18॥
ಬಹಳ ಕೋಪಗೊಂಡ ಭೀಮಸೇನ, ಧೃಷ್ಟದ್ಯುಮ್ನ, ದ್ರೌಪದಿಯ ಐದು ಮಕ್ಕಳು, ಅಭಿಮನ್ಯು, ಪಾಂಡುಪುತ್ರರಾದ ನಕುಲ-ಸಹದೇವರು ಈ ಹತ್ತು ವೀರರು ಕೌರವರನ್ನು ತಡೆಗಟ್ಟಿದರು.
ನಾನಾರೂಪಾಣಿ ಶಸ್ತ್ರಾಣಿ ವಿಸೃಜಂತೋ ವಿಶಾಂಪತೇ |
ಅಭ್ಯವರ್ತಂತ ಸಂಹೃಷ್ಟಾಃ ಪರಸ್ಪರವಧೈಷಿಣಃ |
ತೇ ವೈ ಸಮೀಯುಃ ಸಂಗ್ರಾಮೇ ರಾಜನ್ ದುರ್ಮಂತ್ರಿತೇ ತವ ॥19॥
ಎಲೈ ರಾಜನೇ, ನಾನಾ ವಿಧವಾದ ಶಸ್ತ್ರಗಳನ್ನು ಪ್ರಯೋಗಿಸುತ್ತಾ, ಪರಸ್ಪರ ವಧೆಯನ್ನು ಆಕಾಂಕ್ಷಿಸುತ್ತಾ, ಸಂತೋಷದಿಂದ ಒಡಗೂಡಿ ರಣರಂಗದಲ್ಲಿ ನಿನ್ನ ದುರ್ನೀತಿಯಿಂದಾಗಿ ಅವರು ಒಬ್ಬರನ್ನೊಬ್ಬರು ಎದುರಿಸಿದರು.
ತಸ್ಮಿನ್ ದಾಶರಥೇ ಯುದ್ಧೇ ವರ್ತಮಾನೇ ಭಯಾವಹೇ |
ತಾವಕಾನಾಂ ಪರೇಷಾಂ ಚ ಪ್ರೇಕ್ಷಕಾ ರಥಿನೋಽಭವನ್ ॥20॥
ನಿನ್ನವರಿಗೆ ಮತ್ತು ಪರರಿಗೆ ಹತ್ತು ರಥಗಳಿಂದ ಕೂಡಿದ ಭಯಂಕರವಾದ ಯುದ್ಧವು ನಡೆಯುತ್ತಿರಲು ಉಳಿದ ರಥಿಕರು ಪ್ರೇಕ್ಷಕರಾದರು.
ಶಸ್ತ್ರಾಣ್ಯನೇಕರೂಪಾಣಿ ವಿಸೃಜಂತೋ ಮಹಾರಥಾಃ |
ಅನ್ಯೋನ್ಯಮಭಿನರ್ದಂತಃ ಸಂಪ್ರಹಾರಂ ಪ್ರಚಕ್ರಿರೇ ॥21॥

ಮಹಾರಥರಾದ ಅವರು ಅನೇಕ ಆಕಾರದ ಶಸ್ತ್ರಗಳನ್ನು ಪ್ರಯೋಗಿಸುತ್ತಾ, ಪರಸ್ಪರವಾಗಿ ಗರ್ಜಿಸುತ್ತಾ ಸಂಪ್ರಹಾರವನ್ನು ಮಾಡಿದರು.
ತೇ ಯತ್ತಾ ಜಾತಸಂರಂಭಾಃ ಸರ್ವೇಽನ್ಯೋನ್ಯಂ ಜಿಘಾಂಸವಃ |
ಅನ್ಯೋನ್ಯಮಭಿನರ್ದಂತಃ ಸ್ಪರ್ಧಮಾನಾಃ ಪರಸ್ಪರಮ್ ॥22॥
ಆನ್ಯೋನ್ಯಸ್ಪರ್ಧಯಾ ರಾಜನ್ ಜ್ಞಾತಯಃ ಸಂಗತಾ ಮಿಥಃ |
ಮಹಾಸಾಣಿತ್ರಣಿ ವಿಮುಂಚಂತಃ ಸಮಾಪೇತುರಮರ್ಷಣಾಃ ॥23॥
ಎಲೈ ರಾಜನೇ, ಪರಸ್ಪರವಾಗಿ ಸಹಿಸದ ಅವರು ಜಾಗರೂಕರಾಗಿ, ಪರಸ್ಪರವಾಗಿ ಕೊಲ್ಲುವ ಆಸೆಯುಳ್ಳವರಾಗಿ, ಸಿಟ್ಟನ್ನು ಹೊಂದಿದವರಾಗಿ, ಪರಸ್ಪರವಾಗಿ ಗರ್ಜಿಸುತ್ತಾ ಸ್ಪರ್ಧೆಯಿಂದ ಕೂಡಿದವರಾಗಿ, ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾ ಒಬ್ಬರ ಮೇಲೆ ಇನ್ನೊಬ್ಬರು ಎರಗಿದರು.
ದುರ್ಯೋಧನಸ್ತು ಸಂಕ್ರುದ್ಧೋ ಧೃಷ್ಟದ್ಯುಮ್ನಂ ಮಹಾರಣೇ |
ವಿವ್ಯಾಧ ನಿಶಿತೈರ್ಬಾಣೈಶ್ಚತುರ್ಭಿಸ್ತ್ವರಿತೋ ಭೃಶಮ್ ॥24॥
ಆ ಮಹಾಯುದ್ಧದಲ್ಲಿ ದುರ್ಯೋಧನನಾದರೂ ಬಹಳ ಸಿಟ್ಟುಗೊಂಡವನಾಗಿ ಧೃಷ್ಟದ್ಯುಮ್ನನ ಮೇಲೆ ಶೀಘ್ರವಾಗಿ ಹರಿತವಾದ ನಾಲ್ಕು ಬಾಣಗಳನ್ನು ಪ್ರಯೋಗಿಸಿದನು.
ದುರ್ಮರ್ಷಣಶ್ಚ ವಿಂಶತ್ಯಾ ಚಿತ್ರಸೇನಶ್ಚ ಪಂಚಭಿಃ |
ದುರ್ಮುಖೋ ನವಭಿರ್ಬಾಣೈರ್ದುಃಸಹಶ್ಚಾಪಿ ಸಪ್ತಭಿಃ |
ವಿವಿಂಶತಿಃ ಪಂಚಭಿಶ್ಚ ತ್ರಿಭಿರ್ದುಃಶಾಸನಸ್ತಥಾ ॥25॥
ದುರ್ಮರ್ಷಣನು ಇಪ್ಪತ್ತು ಬಾಣಗಳಿಂದಲೂ, ಚಿತ್ರಸೇನನು ಐದು ಬಾಣಗಳಿಂದಲೂ, ದುರ್ಮುಖನು ಒಂಬತ್ತು ಬಾಣಗಳಿಂದಲೂ, ದುಃಸಹನು ಏಳು ಬಾಣಗಳಿಂದಲೂ, ವಿವಿಂಶತಿಯು ಐದು ಬಾಣಗಳಿಂದಲೂ, ದುಶ್ಶಾಸನನು ಮೂರು ಬಾಣಗಳಿಂದಲೂ (ಧೃಷ್ಟದ್ಯುಮ್ನನನ್ನು ಪೀಡಿಸಿದರು).
ತಾನ್ ಪ್ರತ್ಯವಿಧ್ಯದ್ ರಾಜೇಂದ್ರ ಪಾರ್ಷತಃ ಶತ್ರುತಾಪನಃ |
ಏಕೈಕಂ ಪಂಚವಿಂಶತ್ಯಾ ದರ್ಶಯನ್ ಪಾಣಿಲಾಘವಮ್ ॥26॥
ಎಲೈ ರಾಜೇಂದ್ರನೇ, ಶತ್ರುತಾಪಕನಾದ ಧೃಷ್ಟದ್ಯುಮ್ನನು ತನ್ನ ಹಸ್ತದ ಕ್ಷಿಪ್ರತನವನ್ನು ತೋರಿಸುತ್ತಾ ಅವರಲ್ಲಿ ಒಬ್ಬೊಬ್ಬರ ಮೇಲೆಯೂ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು.
ಸತ್ಯವ್ರತಂ ತು ಸಮರೇ ಪುರುಮಿತ್ರಂ ಚ ಭಾರತ |
ಅಭಿಮನ್ಯುರವಿಧ್ಯತ್ ತೌ ದಶಭಿರ್ದಶಭಿಃ ಶರೈಃ ॥27॥
ಎಲೈ ಭಾರತನೇ, ಅಭಿಮನ್ಯುವು ರಣರಂಗದಲ್ಲಿ ಸತ್ಯವ್ರತನನ್ನು ಮತ್ತು ಪುರುಮಿತ್ರನನ್ನು ಹತ್ತು ಹತ್ತು ಬಾಣಗಳಿಂದ ಪೀಡಿಸಿದನು.
ಮಾದ್ರೀಪುತ್ರೌ ತು ಸಮರೇ ಮಾತುಲಂ ಮಾತೃನಂದನೌ |
ಛಾದಯೇತಾಂ ಶರವ್ರಾತೈಸ್ತದದ್ಭುತಮಿವಾಭವತ್ ॥28॥
ತಾಯಿಗೆ ಸಂತೋಷವನ್ನು ಕೊಡುವ ಮಾದ್ರೀಪುತ್ರರಾದ ನಕುಲ-ಸಹದೇವರು ಸೋದರಮಾವನಾದ ಶಲ್ಯನನ್ನು ಯುದ್ಧದಲ್ಲಿ ಬಾಣಗಳ ಸಮೂಹದಿಂದ ಮುಚ್ಚಿದರು. ಅದು ಅದ್ಭುತವಾಗಿದ್ದಿತು.
ತತಃ ಶಲ್ಯೋ ಮಹಾರಾಜ ಸ್ವಸ್ರೀಯೌ ರಥಿನಾಂ ವರೌ |
ಶರೈರ್ಬಹುಭಿರಾನರ್ಚ್ಛತ್ ಕೃತಪ್ರತಿಕೃತೈಷಿಣೌ |
ಛಾದ್ಯಮಾನೌ ತತಸ್ತೌ ತು ಮಾದ್ರೀಪುತ್ರೌ ನ ಚೇಲತುಃ ॥29॥
ಎಲೈ ಮಹಾರಾಜನೇ, ತಾನು ಮಾಡಿದುದಕ್ಕೆ ಪ್ರತೀಕಾರವನ್ನು ಮಾಡುತ್ತಿದ್ದಂತಹ ರಥಿಶ್ರೇಷ್ಠರಾದ ಆ ಇಬ್ಬರು ಸೋದರಳಿಯಂದಿರನ್ನು ಶಲ್ಯನು ಅನೇಕ ಬಾಣಗಳನ್ನು ಪ್ರಯೋಗಿಸಿ ಹಿಂಸಿಸಿದನು. ಬಾಣಗಳಿಂದ ಮುಚ್ಚಲ್ಪಟ್ಟರೂ ಆ ಮಾದ್ರೀಪುತ್ರರು ಅಲುಗಾಡಲಿಲ್ಲ.
ಅಥ ದುರ್ಯೋಧನಂ ದೃಷ್ಟ್ವಾ ಭೀಮಸೇನೋ ಮಹಾಬಲಃ |
ವಿಧಿತ್ಸುಃ ಕಲಹಸ್ಯಾಂತಂ ಗದಾಂ ಜಗ್ರಾಹ ಪಾಂಡವಃ ॥30॥
ಆಗ ಮಹಾಬಲನಾದ ಭೀಮಸೇನನು ದುರ್ಯೋಧನನನ್ನು ನೋಡಿ ಯುದ್ಧದ ಅಂತ್ಯವನ್ನು ಮಾಡಲು ಯೋಚಿಸಿ ಕೈಯಲ್ಲಿ ಗದೆಯನ್ನು ತೆಗೆದುಕೊಂಡನು.
ತಮುದ್ಯತಗದಂ ದೃಷ್ಟ್ವಾ ಕೈಲಾಸಮಿವ ಶೃಂಗಿಣಮ್ |
ಭೀಮಸೇನಂ ಮಹಾಬಾಹುಂ ಪುತ್ರಾಸ್ತೇ ಪ್ರಾದ್ರವನ್ ಭಯಾತ್ ॥31॥
ಶಿಖರಸಹಿತವಾದ ಕೈಲಾಸಪರ್ವತದಂತಿರುವ ಎತ್ತಿದ ಗದೆಯುಳ್ಳ ಮಹಾಬಾಹುವಾದ ಭೀಮಸೇನನನ್ನು ನೋಡಿ ನಿನ್ನ ಮಕ್ಕಳು ಭಯದಿಂದ ಓಡಿ ಹೋದರು.
ದುರ್ಯೋಧನಸ್ತು ಸಂಕ್ರುದ್ಧೋ ಮಾಗಧಂ ಸಮಚೋದಯತ್ |
ಅನೀಕಂ ದಶಸಾಹಸ್ರಂ ಕುಂಜರಾಣಾಂ ತರಸ್ವಿನಾಮ್ ॥32॥
ಗಜಾನೀಕೇನ ಸಹಿತಸ್ತೇನ ರಾಜಾ ಸುಯೋಧನಃ |
ಮಾಗಧಂ ಪುರತಃ ಕೃತ್ವಾ ಭೀಮಸೇನಂ ಸಮಭ್ಯಯಾತ್ ॥33॥
ಬಹಳ ಕೋಪಗೊಂಡ ದುರ್ಯೋಧನನಾದರೂ ಹತ್ತು ಸಹಸ್ರ ಗಜಗಳ ಸೇನೆಯುಳ್ಳ ಮಗಧರಾಜನನ್ನು ಪ್ರಚೋದಿಸಿದನು. ದುರ್ಯೋಧನನು ವೇಗಶಾಲಿಗಳಾದ ಆ ಆನೆಗಳನ್ನು ತೆಗೆದುಕೊಂಡು ಮಗಧರಾಜನನ್ನು ಮುಂದೆ ಮಾಡಿಕೊಂಡು ಭೀಮಸೇನನ

ಕಡೆಗೆ ಧಾವಿಸಿದನು.
ಆಪತಂತಂ ಚ ತಂ ದೃಷ್ಟ್ವಾ ಗಜಾನೀಕಂ ವೃಕೋದರಃ |
ಗದಾಪಾಣಿರವಾರೋಹದ್ ರಥಾತ್ ಸಿಂಹ ಇವೋನ್ನದನ್ ||34||
ತನ್ನೆಡೆಗೆ ಬರುತ್ತಿದ್ದ ಆ ಗಜಸೇನೆಯನ್ನು ನೋಡಿ ವೃಕೋದರನು ಸಿಂಹದಂತೆ ಗರ್ಜಿಸುತ್ತಾ ಕೈಯಲ್ಲಿ ಗದೆಯನ್ನು ಹಿಡಿದು ರಥದಿಂದ ಇಳಿದನು.
ಅದ್ರಿಸಾರಮಯೀಂ ಗುರ್ವೀಂ ಪ್ರಗೃಹ್ಯ ಮಹತೀಂ ಗದಾಮ್ |
ಅಭ್ಯಧಾವದ್ ಗಜಾನೀಕಂ ವ್ಯಾದಿತಾಸ್ಯ ಇವಾಂತಕಃ ||35||
ಬಾಯ್ತೆರೆದ ಮೃತ್ಯುವಿನಂತೆ ಇದ್ದ ಅವನು ಭಾರವಾದ, ಪರ್ವತದ ಸಾರದಿಂದ ಮಾಡಿದಂತಿದ್ದ ಆ ದೊಡ್ಡ ಗದೆಯನ್ನು ಎತ್ತಿ ಹಿಡಿದು ಗಜಸೇನೆಯ ಕಡೆಗೆ ಧಾವಿಸಿದನು.
ಸ ಗಜಾನ್ ಗದಯಾ ನಿಘ್ನನ್ ವ್ಯಚರತ್ ಸಮರೇ ಬಲೀ |
ಭೀಮಸೇನೋ ಮಹಾಬಾಹುಃ ಸವಜ್ರ ಇವ ವಾಸವಃ ||36||
ಬಲಿಷ್ಠನಾದ, ಮಹಾಬಾಹುವಾದ ಆ ಭೀಮಸೇನನು ವಜ್ರವನ್ನು ಹಿಡಿದ ಇಂದ್ರನಂತೆ ಗದೆಯನ್ನು ಹಿಡಿದು ಗಜಗಳನ್ನು ಕೊಲ್ಲುತ್ತಾ ರಣರಂಗದಲ್ಲಿ ತಿರುಗಾಡಿದನು.
ತಸ್ಯ ನಾದೇನ ಮಹತಾ ಮನೋಹೃದಯಕಂಪಿನಾ |
ವ್ಯತ್ಯಚೇಷ್ಟಂತ ಸಂಹತ್ಯ ಗಜಾ ಭೀಮಸ್ಯ ನರ್ದತಃ ||37||
ಭೀಮನು ಮಾಡುತ್ತಿದ್ದಂತಹ ಮನಸ್ಸನ್ನು ಮತ್ತು ಹೃದಯವನ್ನು ನಡುಗಿಸುವ ಆ ಭಯಂಕರವಾದ ಗರ್ಜನೆಗೆ ಆನೆಗಳೆಲ್ಲವೂ ಒಟ್ಟುಗೂಡಿ ವಿಪರೀತ ಚೇಷ್ಟೆಗಳನ್ನು ಮಾಡಿದವು.
ತತಸ್ತು ದ್ರೌಪದೀಪುತ್ರಾಃ ಸೌಭದ್ರಶ್ಚ ಮಹಾರಥಃ |
ನಕುಲಃ ಸಹದೇವಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ||38||
ಪೃಷ್ಠಂ ಭೀಮಸ್ಯ ರಕ್ಷಂತಃ ಶರವರ್ಷೇಣ ವಾರಣಾನ್ |
ಅಭ್ಯಧಾವಂತ ವರ್ಷಂತೋ ಮೇಘಾ ಇವ ಗಿರೀನ್ ಯಥಾ ||39||
ಆಗ ದ್ರೌಪದಿಯ ಮಕ್ಕಳೂ, ಮಹಾರಥನಾದ ಅಭಿಮನ್ಯುವೂ, ನಕುಲ- ಸಹದೇವರೂ, ಪಾರ್ಷತನಾದ ಧೃಷ್ಟದ್ಯುಮ್ನನೂ ಭೀಮನನ್ನು ಹಿಂದುಗಡೆಯಿಂದ ರಕ್ಷಿಸುತ್ತಾ ಮೋಡಗಳು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಗಜಗಳ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಓಡಾಡಿದರು.
ಕ್ಷುರೈಃ ಕ್ಷುರಪ್ರೈರ್ಭಲ್ಲೈಶ್ಚ ಪೀತೈರಂಜಲಿಕೈರಪಿ |
ಪಾತಯಂತೋತ್ತಮಾಂಗಾನಿ ಪಾಂಡವಾ ಗಜಯೋಧಿನಾಮ್ ||40||
ಪಾಂಡವರು ಕ್ಷುರಗಳಿಂದಲೂ, ಕ್ಷುರಪ್ರಗಳಿಂದಲೂ, ಭಲ್ಲಗಳಿಂದಲೂ, ಅಂಜಲಿಗಳಿಂದಲೂ ಗಜಾರೋಹಿಗಳ ಶಿರಸ್ಸನ್ನು ಕೆಡವುತ್ತಾ (ಓಡಾಡಿದರು).
ಶಿರೋಭಿಃ ಪ್ರಪತದ್ಭಿಶ್ಚ ಬಾಹುಭಿಶ್ಚ ವಿಭೂಷಿತೈಃ |
ಅಶ್ಮವೃಷ್ಟಿರಿವಾಭಾತಿ ಪಾಣಿಭಿಶ್ಚ ಸಹಾಂಕುಶೈಃ ||41||
ಕೆಳಗೆ ಬೀಳುತ್ತಿದ್ದ ಶಿರಸ್ಸುಗಳಿಂದಲೂ, ಅಲಂಕೃತವಾದ ಬಾಹುಗಳಿಂದಲೂ, ಅಂಕುಶಸಹಿತವಾದ ಹಸ್ತಗಳಿಂದಲೂ ಆ ಭೂಮಿಯು ಕಲ್ಲಿನ ಮಳೆಯನ್ನು ಹೊಂದುತ್ತಿರುವಂತೆ ತೋರಿತು.
ಹೃತೋತ್ತಮಾಂಗಾಃ ಸ್ಕಂಧೇಷು ಗಜಾನಾಂ ಗಜಯೋಧಿನಃ |
ಅದೃಶ್ಯಂತಾಚಲಾಗ್ರೇಷು ದ್ರುಮಾ ಭಗ್ನಶಿಖಾ ಇವ ||42||
ಗಜಾರೋಹಿಗಳಾದ ಯೋಧರು ಆನೆಗಳ ಭುಜದ ಮೇಲೆ ಕುಳಿತು ಶಿರಸ್ಸುಗಳನ್ನು ಕಳೆದುಕೊಂಡು ಮೇಲ್ಭಾಗವು ಕಡಿದ ಮರಗಳಂತೆ ಕಂಡುಬಂದರು.
ಧೃಷ್ಟದ್ಯುಮ್ನಹತಾನನ್ಯಾನಪಶ್ಯಾಮ ಮಹಾಗಜಾನ್ |
ಪತಿತಾನ್ ಪಾತ್ಯಮಾನಾಂಶ್ಚ ಪಾರ್ಷತೇನ ಮಹಾತ್ಮನಾ ||43||
ಮಹಾತ್ಮನಾದ ಪಾರ್ಷತನಾದ ಧೃಷ್ಟದ್ಯುಮ್ನನಿಂದ ಹತವಾಗಿ ಬಿದ್ದಂತಹ ಮತ್ತು ಬೀಳುತ್ತಿದ್ದಂತಹ ಮಹಾಗಜಗಳನ್ನು ನೋಡಿದೆವು.

ಮಾಗಧೋಽಥ ಮಹೀಪಾಲೋ ಗಜಮೈರಾವಣೋ(ತೋ)ಪಮಮ್ |
ಪ್ರೇಷಯಾಮಾಸ ಸಮರೇ ಸೌಭದ್ರಸ್ಯ ರಥಂ ಪ್ರತಿ ||44||
ಮಾಗಧ ರಾಜನೂ ಸಹ ಐರಾವಣನಂತಹ ದೊಡ್ಡ ಗಜವನ್ನು ಏರಿ ಯುದ್ಧದಲ್ಲಿ ಅಭಿಮನ್ಯುವಿನ ರಥದ ಮೇಲೆ ಅದನ್ನು ಬಿಟ್ಟನು.
ತಮಾಪತಂತಂ ಸಂಪ್ರೇಕ್ಷ್ಯ ಮಾಗಧಸ್ಯ ಗಜೋತ್ತಮಮ್ |
ಜಘಾನೈಕೇಷುಣಾ ವೀರಃ ಸೌಭದ್ರಃ ಪರವೀರಹಾ ||45||
ಮಗಧರಾಜನ ಆ ಶ್ರೇಷ್ಠವಾದ ಗಜವು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಶತ್ರುಸಂಹಾರಕನಾದ ಮತ್ತು ವೀರನಾದ ಅಭಿಮನ್ಯುವು ಒಂದು ಬಾಣದಿಂದ ಅದನ್ನು ಕೊಂದನು.
ತಸ್ಯಾವರ್ಜಿತನಾಗಸ್ಯ ಕಾರ್ಷ್ಣಿಃ ಪರಪುರಂಜಯಃ |
ರಾಜ್ಞೋ ರಜತಪುಂಖೇನ ಭಲ್ಲೇನಾಪಹರಚ್ಛಿರಃ ||46||
ಪರಪುರಂಜಯನಾದ ಅಭಿಮನ್ಯುವು ಅವನ ಗಜವನ್ನು ಕೊಂದು ರಜತದ ಪುಂಖದಿಂದ ಅಲಂಕೃತವಾಗಿದ್ದ ಭಲ್ಲದಿಂದ ಅವನ

ಶಿರಸ್ಸನ್ನು ಕತ್ತರಿಸಿದನು.
ವಿಗಾಹ್ಯ ತದ್ ಗಜಾನೀಕಂ ಭೀಮಸೇನೋಽಪಿ ಪಾಂಡವಃ |
ವ್ಯಚರತ್ ಸಮರೇ ಮೃದ್ನನ್ ಗಜಾನಿಂದ್ರೋ ಗಿರೀನಿವ ॥47॥
ಪಾಂಡುಪುತ್ರನಾದ ಭೀಮಸೇನನು ಆ ಗಜಸೇನೆಯನ್ನು ಪ್ರವೇಶಿಸಿ ಇಂದ್ರನು ಪರ್ವತಗಳನ್ನು ಮರ್ದಿಸಿದಂತೆ ಆ ಗಜಗಳನ್ನು ಮರ್ದಿಸುತ್ತಾ ರಣರಂಗದಲ್ಲಿ ತಿರುಗಾಡಿದನು.
ಏಕಪ್ರಹಾರಾಭಿಹತಾನ್ ಭೀಮಸೇನೇನ ಕುಂಜರಾನ್ |
ಅಪಶ್ಯಾಮ ರಣೇ ತಸ್ಮಿನ್ ಗಿರೀನ್ ವಜ್ರಹತಾನಿವ ॥48॥
ವಜ್ರದಿಂದ ಹತವಾದ ಪರ್ವತಗಳಂತೆ ಭೀಮಸೇನನಿಂದ ಒಂದೇ ಗದಾ ಪ್ರಹಾರದಿಂದ ಹತವಾದ ಗಜಗಳನ್ನು ನಾವು ರಣರಂಗದಲ್ಲಿ ನೋಡಿದೆವು.
ಭಗ್ನದಂತಾನ್ ಭಗ್ನಕಟೀನ್ ಭಗ್ನಸಕ್ಥೀಂಶ್ಚ ವಾರಣಾನ್ |
ಭಗ್ನಪೃಷ್ಠಾನ್ ಭಗ್ನಕುಂಭಾನ್ ನಿಹತಾನ್ ಪರ್ವತೋಪಮಾನ್ ॥49॥
ದಂತಗಳು ಮುರಿದ, ಕಟಿಗಳು ಮುರಿದ, ತೊಡೆಯ ಸಂಧಿಗಳು ಮುರಿದ, ಬೆನ್ನು ಮುರಿದ, ಕುಂಭಸ್ಥಲವು ಒಡೆದ ಪರ್ವತದಂತಿದ್ದ ಗಜಗಳು ಹತವಾದುದನ್ನು ನಾವು ನೋಡಿದೆವು.
ನದತಃ ಸೀದತಶ್ಚಾನ್ಯಾನ್ ವಿಮುಖಾನ್ ಸಮರೇ ಗಜಾನ್ |
ವಿಮೂತ್ರಾನ್ ಭಗ್ನಸಂವಿಗ್ನಾಂಸ್ತಥಾ ವಿಶಕೃತೋಽಪರಾನ್ ॥50॥
ಇನ್ನು ಕೆಲವು ಗಜಗಳು ಗರ್ಜಿಸುತ್ತಾ ನೆಲದಲ್ಲಿ ಬಿದ್ದು ಹೊರಳಾಡುತ್ತಾ ಯುದ್ಧಕ್ಕೆ ವಿಮುಖವಾಗಿ ವಿಶೇಷವಾಗಿ ಮಲಮೂತ್ರಗಳನ್ನು ಸ್ರವಿಸುತ್ತಾ ಭಗ್ನಗೊಂಡು ವೇದನೆಯಿಂದ ಕೂಡಿದ ಗಜಗಳನ್ನು ನೋಡಿದೆವು.
ಭೀಮಸೇನಸ್ಯ ಮಾರ್ಗೇಷು ಗತಾಸೂನ್ ಪರ್ವತೋಪಮಾನ್ |
ಅಪಶ್ಯಾಮ ಹತಾನ್ ನಾಗಾನ್ ನಿಷ್ಟನಂತಸ್ತಥಾಪರೇ ॥51॥
ಭೀಮಸೇನನ ಸಂಚಾರ ಮಾರ್ಗದಲ್ಲಿ ಮರಣ ಹೊಂದಿದ್ದ ಇನ್ನು ಕೆಲವು ಬಿದ್ದು ನೋವಿನಿಂದ ಗರ್ಜಿಸುತ್ತಿದ್ದಂತಹ ಪರ್ವತದಂತಿದ್ದ ಗಜಗಳನ್ನು ನೋಡಿದೆವು.
ವಮಂತೋ ರುಧಿರಂ ಚಾನ್ಯೇ ಭಿನ್ನಕುಂಭಾ ಮಹಾಗಜಾಃ |
ವಿಹ್ವಲಂತೋ ಗತಾ ಭೂಮಿಂ ಶೈಲಾ ಇವ ಧರಾತಳೇ ॥52॥
ಇನ್ನು ಕೆಲವು ಮಹಾಗಜಗಳು ಕುಂಭಗಳು ಒಡೆದು ರಕ್ತವನ್ನು ಕಾರುತ್ತಾ ಸಂಕಟದಿಂದ ಕೂಡಿ ಭೂಮಿಯ ಮೇಲೆ ಪರ್ವತವು ಉರುಳಿದಂತೆ ಉರುಳುತ್ತಿರುವುದು ಕಂಡುಬಂದಿತು.
ಮೇದೋರುಧಿರದಿಗ್ಧಾಂಗೋ ವಸಾಮಜ್ಜಾಸಮುಕ್ಷಿತಃ |
ವ್ಯಚರತ್ಸಮರೇ ಭೀಮೋ ದಂಡಪಾಣಿರಿವಾಂತಕಃ ॥53॥
ಗಜಗಳ ಮೇದಸ್ಸು ಮತ್ತು ರಕ್ತಗಳಿಂದ ಲೇಪಿತವಾದ ಶರೀರವುಳ್ಳವನಾಗಿ, ಮೊಸಳ ಮತ್ತು ಮಜ್ಜಗಳಿಂದ ಚುಮುಕಿಸಲ್ಪಟ್ಟವನಂತೆ ಇದ್ದ ಭೀಮನು ಕೈಯಲ್ಲಿ ದಂಡವನ್ನು ಹಿಡಿದ ಯಮನಂತೆ ರಣರಂಗದಲ್ಲಿ ಸಂಚರಿಸಿದನು.
ಗಜಾನಾಂ ರುಧಿರಾಕ್ತಾಂ ತಾಂ ಗದಾಂ ಬಿಭ್ರದ್ ವೃಕೋದರಃ |
ಘೋರಃ ಪ್ರತಿಭಯಶ್ಚಾಸೀತ್ ಪಿನಾಕೀವ ಪಿನಾಕಧೃಕ್ ॥54॥
ಗಜಗಳ ರಕ್ತದಿಂದ ಲೇಪಿತವಾದ ಆ ಗದೆಯನ್ನು ಹಿಡಿದ ವೃಕೋದರನು ಪಿನಾಕವನ್ನು ಧರಿಸಿದ ರುದ್ರನಂತೆ ನೋಡುವುದಕ್ಕೆ ಘೋರನೂ, ಭಯಂಕರನೂ ಆಗಿದ್ದನು.
ನಿರ್ಮಥ್ಯಮಾನಾಃ ಕ್ರುದ್ಧೇನ ಭೀಮಸೇನೇನ ದಂತಿನಃ |
ಸಹಸಾ ಪ್ರಾದ್ರವನ್ ಶಿಷ್ಟಾ ಮೃದ್ನಂತಸ್ತವ ವಾಹಿನೀಮ್ ॥55॥
ಕೋಪಗೊಂಡ ಭೀಮಸೇನನಿಂದ ಗಜಗಳು ಹಿಂಸೆಗೆ ಒಳಗಾಗುತ್ತಿರಲು, ಉಳಿದ ಗಜಗಳು ಇದ್ದಕ್ಕಿದ್ದಂತೆಯೇ ನಿನ್ನ ಸೈನ್ಯವನ್ನೇ ತುಳಿಯುತ್ತಾ ಓಡಿಹೋದವು.
ತಂ ಹಿ ವೀರಂ ಮಹೇಷ್ವಾಸಾಃ ಸೌಭದ್ರಪ್ರಮುಖಾ ರಥಾಃ |
ಪರ್ಯರಕ್ಷಂತ ಯುಧ್ಯಂತಂ ವಜ್ರಾಯುಧಮಿವಾಮರಾಃ ॥56॥
ದೇವತೆಗಳು ವಜ್ರಾಯುಧವನ್ನು ಹಿಡಿದ ಇಂದ್ರನನ್ನು ಎಲ್ಲ ಕಡೆಯಿಂದಲೂ ರಕ್ಷಿಸಿದಂತೆ ಅಭಿಮನ್ಯು ಮೊದಲಾದ ಮಹಾಧನುರ್ಧಾರಿಗಳು ಮತ್ತು ಮಹಾರಥರು ಯುದ್ಧವನ್ನು ಮಾಡುವ ವೀರನಾದ ಭೀಮಸೇನನನ್ನು ಎಲ್ಲ ಕಡೆಯಿಂದಲೂ ರಕ್ಷಿಸಿದರು.
ಶೋಣಿತಾಕ್ತಾಂ ಗದಾಂ ಬಿಭ್ರದುಕ್ಷಿತೋ ಗಜಶೋಣಿತೈಃ |
ಕೃತಾಂತ ಇವ ರೌದ್ರಾತ್ಮಾ ಭೀಮಸೇನೋ ವ್ಯದೃಶ್ಯತ ॥57॥
ರಕ್ತದಿಂದ ಲೇಪಿತವಾದ ಗದೆಯನ್ನು ಹಿಡಿದು ಗಜಗಳ ರಕ್ತದಿಂದ ಚುಮುಕಿಸಲ್ಪಟ್ಟಂತಿದ್ದ ಭೀಮಸೇನನು ಭಯಂಕರವಾದ ರೂಪವುಳ್ಳ ಯಮನಂತೆ ಕಂಡುಬಂದನು.
ವ್ಯಾಯಚ್ಛಮಾನಂ ಗದಯಾ ದಿಕ್ಷು ಸರ್ವಾಸು ಭಾರತ |
ನೃತ್ಯಮಾನಮಪಶ್ಯಾಮ ನೃತ್ಯಂತಮಿವ ಶಂಕರಮ್ ॥58॥
ಎಲೈ ಭಾರತನೇ, ಎಲ್ಲ ದಿಕ್ಕುಗಳಲ್ಲಿಯೂ ಗದೆಯನ್ನು ಬೀಸುತ್ತಿದ್ದ ಅವನು ತಾಂಡವ ನೃತ್ಯವನ್ನು ಮಾಡುವ ಶಂಕರನಂತೆ ನೃತ್ಯವನ್ನು ಮಾಡುವುದನ್ನು ನಾವು ನೋಡಿದೆವು.

ಯಮದಂಡೋಪಮಾಂ ಗುರ್ವೀಮಿಂದ್ರಾಶನಿಸಮಸ್ವನಾಮ್ |
ಅಪಶ್ಯಾಮ ಮಹಾರಾಜ ರೌದ್ರಾಂ ವಿಶಸನೀಂ ಗದಾಮ್ ||59||
ವಿಮಿಶ್ರಾಂ ಕೇಶಮಜ್ಜಾಭಿಃ ಪ್ರದಿಗ್ಧಾಂ ರುಧಿರೇಣ ಚ |
ಪಿನಾಕಮಿವ ರುದ್ರಸ್ಯ ಕ್ರುದ್ಧಸ್ಯಾಭಿಘ್ನತಃ ಪಶೂನ್ ||60||
ಎಲೈ ಮಹಾರಾಜನೇ, ಶತ್ರುಗಳನ್ನು ಪುಡಿ-ಪುಡಿ ಮಾಡುವ, ಭಯಂಕರವಾದ ಯಮದಂಡದಂತಿದ್ದ, ಭಾರವಾದ, ಇಂದ್ರನ ವಜ್ರಾಯುಧಕ್ಕೆ ಸಮನಾದ ಘೋಷವುಳ್ಳ, ಕೇಶಮಜ್ಜಗಳು ಅಂಟಿಕೊಂಡಿರುವ, ರಕ್ತದಿಂದ ತೋಯ್ದಿರುವ, ಕ್ರೋಧದಿಂದ ಪಶುಗಳನ್ನು ಸಂಹರಿಸುವ ರುದ್ರನ ಪಿನಾಕದಂತಿರುವ, ಭೀಮಸೇನನ ಗದೆಯನ್ನು ನೋಡಿದೆವು.
ಯಥಾ ಪಶೂನಾಂ ಸಂಘಾತಂ ಯಷ್ಟ್ಯಾ ಪಾಲಃ ಪ್ರಕಾಲಯೇತ್ |
ತಥಾ ಭೀಮೋ ಗಜಾನೀಕಂ ಗದಯಾ ಪರ್ಯಕಾಲಯತ್ ||61||
ಹೇಗೆ ಪಶುಪಾಲಕನು ಕೈಯಲ್ಲಿ ಕೋಲನ್ನು ಹಿಡಿದು ಪಶುಸಮೂಹವನ್ನು ತಡಕಾಡುತ್ತಾನೆಯೋ ಅದರಂತೆ ಭೀಮನು ಕೈಯಲ್ಲಿ ಗದೆಯನ್ನು ಹಿಡಿದು ಗಜ ಸಮೂಹವನ್ನು ತಡಕಾಡಿದನು.
ಗದಯಾ ವಧ್ಯಮಾನಾಸ್ತೇ ಮಾರ್ಗಣೈಶ್ಚ ಸಮಂತತಃ |
ಸ್ವಾನ್ಯನೀಕಾನಿ ಮೃದ್ನಂತಃ ಪ್ರಾದ್ರವನ್ ಕುಂಜರಾಸ್ತವ ||62||
ಗದೆಯಿಂದ ಹೊಡೆಯಲ್ಪಟ್ಟು ಎಲ್ಲ ಕಡೆಗಳಿಂದಲೂ ಬಾಣಗಳಿಗೆ ಗುರಿಯಾಗುತ್ತಿದ್ದ ನಿನ್ನ ಗಜಗಳು ತಮ್ಮ ಸೈನ್ಯವನ್ನೇ ತುಳಿಯುತ್ತಾ ಓಡಿಹೋದವು.
ಮಹಾವಾತ ಇವಾಭ್ರಾಣಿ ವಿಧಮಿತ್ವಾ ಸ ವಾರಣಾನ್ |
ಅತಿಷ್ಠತ್ ತುಮುಲೇ ಭೀಮಃ ಶ್ಮಶಾನ ಇವ ಶೂಲಭೃತ್ ||63||
ಬಿರುಗಾಳಿಯು ಮೋಡಗಳನ್ನು ಚದುರಿಸಿದಂತೆ ಭೀಮಸೇನನು ತನ್ನ ಗದೆಯಿಂದ ಗಜಗಳನ್ನು ವಿನಾಶಗೊಳಿಸಿ ಸ್ಮಶಾನದಲ್ಲಿ ರುದ್ರದೇವರು ನಿಂತಂತೆ ತೀವ್ರವಾದ ಯುದ್ಧದಲ್ಲಿ ನಿಂತನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಪಂಚಾಶೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಅಷ್ಟಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂಬತ್ತನೆಯ ಅಧ್ಯಾಯ
ಭೀಮಸೇನನ ಪರಾಕ್ರಮ. ಧೃಷ್ಟದ್ಯುಮ್ನನ ಪ್ರತಾಪವನ್ನು
ನೋಡಿ ಭೂರಿಶ್ರವನ ಆಗಮನ.
ಸಂಜಯಃ
ತಸ್ಮಿನ್ ಹತೇ ಗಜಾನೀಕೇ ಪುತ್ರೋ ದುರ್ಯೋಧನಸ್ತವ |
ಭೀಮಸೇನಂ ಘ್ನತೇತ್ಯೇವಂ ಸರ್ವಸೈನ್ಯಾನ್ಯಚೋದಯತ್ ||1||
ಸಂಜಯ ಭೀಮಸೇನನಿಂದ ಆ ಗಜಸೇನೆಯು ಕೊಲ್ಲಲ್ಪಡುತ್ತಿರಲು ನಿನ್ನ ಪುತ್ರನಾದ ದುರ್ಯೋಧನನು ಭೀಮಸೇನನನ್ನು ಕೊಲ್ಲಿ ಎಂದು ಎಲ್ಲಾ ಸೈನ್ಯಕ್ಕೂ ಪ್ರೇರಣೆಯನ್ನು ಮಾಡಿದನು.
ತತಃ ಸರ್ವಾಣ್ಯನೀಕಾನಿ ತವ ಪುತ್ರಸ್ಯ ಶಾಸನಾತ್ |
ಅಭ್ಯದ್ರವನ್ ಭೀಮಸೇನಂ ನದಂತಂ ಭೈರವಾನ್ ರವಾನ್ ||2||
ನಿನ್ನ ಪುತ್ರನ ಶಾಸನದಂತೆ ಎಲ್ಲ ಸೈನ್ಯಗಳೂ ಭೈರವನಾದಗಳನ್ನು ಗರ್ಜಿಸುತ್ತಿದ್ದಂತಹ ಭೀಮಸೇನನ ಕಡೆಗೆ ಓಡಿ ಬಂದವು.
ತಂ ಬಲೌಘಮಪರ್ಯಂತಂ ದೇವೈರಪಿ ದುರುತ್ಸಹಮ್ |
ಆಪತಂತಂ ಸುದುಷ್ಪಾರಂ ಸಮುದ್ರಮಿವ ಪರ್ವಣಿ ||3||
ರಥನಾಗಾಶ್ವಕಲಿಲಂ ಶಂಖದುಂದುಭಿನಾದಿತಮ್ |
ಅಥಾನಂತಮಪಾರಂ ಚ ನರೇಂದ್ರಸ್ತಿಮಿತಹ್ರದಮ್ ||4||
ತಂ ಭೀಮಸೇನಃ ಸಮರೇ ಮಹೋದಧಿಮಿವಾಪರಮ್ |
ಸೇನಾಸಾಗರಮಕ್ಷೋಭ್ಯಂ ವೇಲೇವ ಸಮವಾರಯತ್ ||5||
ದೇವತೆಗಳಿಂದಲೂ ಸೋಲಿಸಲು ಕಷ್ಟವಾದ, ಪರ್ವಕಾಲದ ಸಮುದ್ರದಂತೆ ದಾಟಲು ಅಸಾಧ್ಯವಾದ, ರಥ-ಗಜಾಶ್ವಗಳಿಂದ ತುಂಬಿದ, ಶಂಖ-ದುಂದುಭಿ ನಾದಗಳಿಂದ ಕೂಡಿದ, ಅನಂತವಾದ, ಅಪಾರವಾದ ರಾಜರುಗಳಿಂದ ನಿಶ್ಚಲವಾದ ಸರೋವರಗಳಿಂದ ಕೂಡಿದ, ಇನ್ನೊಂದು ದೊಡ್ಡ ಸಮುದ್ರದಂತೆ ತನ್ನ ಕಡೆಗೆ ಬರುತ್ತಿದ್ದ, ಅಲುಗಾಡಿಸಲು ಅಸಾಧ್ಯವಾದ ಆ ಸೈನ್ಯವನ್ನು ಸಾಗರವನ್ನು ತೀರವು ತಡೆದಂತೆ ಭೀಮಸೇನನು ಯುದ್ಧದಲ್ಲಿ ತಡೆದನು.
ತದಾಶ್ಚರ್ಯಮಪಶ್ಯಾಮ ಶ್ರದ್ಧೇಯಮಪಿ ಚಾದ್ಭುತಮ್ |
ಭೀಮಸೇನಸ್ಯ ಸಮರೇ ರಾಜನ್ ಕರ್ಮಾತಿಮಾನುಷಮ್ ||6||
ಎಲೈ ರಾಜನೇ, ಭೀಮಸೇನನು ಯುದ್ಧದಲ್ಲಿ ಮಾಡಿದ ಅತಿಮಾನುಷವಾದ ಅದ್ಭುತವಾದ ಕರ್ಮವಾದರೂ ನಂಬಲೇಬೇಕಾದ ಆ ಆಶ್ಚರ್ಯವನ್ನು ನಾವು ನೋಡಿದೆವು.
ಉದೀರ್ಣಾಂ ಪೃಥಿವೀಂ ಸರ್ವಾಂ ಸಾಶ್ವಾಂ ಸರಥಕುಂಜರಾಮ್ |
ಅಸಂಭ್ರಮಂ ಭೀಮಸೇನೋ ಗದಯಾ ಸಮತಾಡಯತ್ ||7||

ಅಶ್ವ-ಗಜ-ರಥಗಳಿಂದ ತುಂಬಿದ ಸಮಗ್ರವಾದ ಭೂಮಿಯ ಸೈನ್ಯವನ್ನು ಭೀಮಸೇನನು ಯಾವ ಗಾಬರಿಯೂ ಇಲ್ಲದೆ ಗದೆಯಿಂದ ಹೊಡೆದನು.
ಸ ಸಂವಾರ್ಯ ಬಲೌಘಾಂಸ್ತಾನ್ ಗದಯಾ ರಥಿನಾಂ ವರಃ |
ಅತಿಷ್ಠತ್ ತುಮುಲೇ ಭೀಮೋ ಗಿರಿರ್ಮೇರುರಿವಾಚಲಃ ॥8॥
ರಥಿಕರಲ್ಲಿ ಶ್ರೇಷ್ಠನಾದ ಅವನು ತನ್ನ ಗದೆಯಿಂದ ಆ ಸೈನ್ಯ ಸಮೂಹವನ್ನು ನಿವಾರಿಸಿ ಮೇರು ಪರ್ವತದಂತೆ ಸ್ಥಿರವಾಗಿ ರಣರಂಗದಲ್ಲಿ ನಿಂತನು.
ತಸ್ಮಿನ್ ಸುತುಮುಲೇ ಘೋರೇ ಕಾಲೇ ಪರಮದಾರುಣೇ |
ಭ್ರಾತರಶ್ಚೈವ ಪುತ್ರಾಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥9॥
ದ್ರೌಪದೇಯಾಭಿಮನ್ಯುಶ್ಚ ಶಿಖಂಡೀ ಚ ಮಹಾರಥಃ |
ನ ಪ್ರಾಜಹನ್ ಭೀಮಸೇನಂ ಭಯೇ ಜಾತೇ ಮಹಾಬಲಮ್ ॥10॥
ಅಂತಹ ತೀವ್ರವಾದ, ಘೋರವಾದ, ಪರಮದಾರುಣವಾದ ಕಾಲದಲ್ಲಿ ಅವನ ಸಹೋದರರರೂ, ಪುತ್ರರೂ, ಧೃಷ್ಟದ್ಯುಮ್ನನೂ, ದ್ರೌಪದಿಯ ಐವರು ಮಕ್ಕಳೂ, ಅಭಿಮನ್ಯುವೂ, ಮಹಾರಥನಾದ ಶಿಖಂಡಿಯೂ ಮಹಾಬಲನಾದ ಭೀಮಸೇನನ ಪಾರ್ಶ್ವವನ್ನು ತ್ಯಜಿಸಲಿಲ್ಲ.
ತತಃ ಶೈಕ್ಯಾಯಸೀಂ ಗುರ್ವೀಂ ಪ್ರಗೃಹ್ಯ ಮಹತೀಂ ಗದಾಮ್ |
ಅವಧೀತ್ ತಾವಕಾನ್ ಯೋಧಾನ್ ದಂಡಪಾಣಿರಿವಾಂತಕಃ |
ಪೋಥಯನ್ ರಥವೃಂದಾನಿ ವಾಜಿವೃಂದಾನಿ ಚಾಭಿಭೂಃ ॥11॥
ಅನಂತರ ಯಾವಾಗಲೂ ನೆಲುವಿನ ಮೇಲೆ ಇರುತ್ತಿದ್ದ ಕಬ್ಬಿಣದ ದೊಡ್ಡ ಗದೆಯನ್ನು ಕೈಯಲ್ಲಿ ಹಿಡಿದು, ಕೈಯಲ್ಲಿ ದಂಡವನ್ನು ಹಿಡಿದ ಯಮನಂತೆ ರಥ ಸಮೂಹಗಳನ್ನು, ಗಜ ಸಮೂಹಗಳನ್ನು ಮರ್ದನ ಮಾಡುತ್ತಾ, ಎಲ್ಲರನ್ನೂ ಸೋಲಿಸುವ ಅವನು ನಿನ್ನ ಯೋಧರನ್ನು ಸಂಹರಿಸಿದನು.
ವ್ಯಚರತ್ಸಮರೇ ಭೀಮೋ ಯುಗಾಂತೇ ಪಾವಕೋ ಯಥಾ |
ವಿನಿಘ್ನನ್ ಸಮರೇ ಸರ್ವಾನ್ ಯುಗಾಂತೇ ಕಾಲವದ್ ವಿಭುಃ ॥12॥
ಯುಗಾಂತಕಾಲದ ಅಗ್ನಿಯಂತೆ ಅಥವಾ ಯುಗಾಂತಕಾಲದ ಮೃತ್ಯುವಿನಂತೆ ಸರ್ವಸಮರ್ಥನಾದ ಆ ಭೀಮನು ಯುದ್ಧದಲ್ಲಿ ಎಲ್ಲರನ್ನೂ ಸಂಹರಿಸುತ್ತಾ ತಿರುಗಾಡಿದನು.
ಊರುವೇಗೇನ ಸಂಕರ್ಷನ್ ರಥಜಾಲಾನಿ ಪಾಂಡವಃ |
ಪ್ರಮರ್ದಯನ್ ಗಜಾನ್ ಸರ್ವಾನ್ ನಡ್ವಲಾನೀವ ಕುಂಜರಃ ॥13॥
ಮೃದ್ನನ್ ರಥೇಭ್ಯೋ ರಥಿನೋ ಗಜೇಭ್ಯೋ ಗಜಯೋಧಿನಃ |
ಸಾದಿನಶ್ಚಾಶ್ವಪೃಷ್ಠೇಭ್ಯೋ ಭೂಮೌ ಚೈವ ಪದಾತಿನಃ ॥14॥
ತನ್ನ ತೊಡೆಗಳ ವೇಗದಿಂದ ರಥಸಮೂಹಗಳನ್ನು ಎಳೆಯುತ್ತಾ, ಎಲ್ಲಾ ಗಜಗಳನ್ನು ಆನೆಯು ಬಳ್ಳಿಗಳನ್ನು ವಿನಾಶ ಮಾಡಿದಂತೆ ನಾಶಮಾಡುತ್ತಾ, ರಥದಲ್ಲಿದ್ದ ರಥಿಕರನ್ನು, ಗಜದ ಮೇಲಿದ್ದ ಗಜಯೋಧರನ್ನು, ಅಶ್ವದ ಮೇಲಿದ್ದ ಅಶ್ವಾರೋಹಿಗಳನ್ನು, ಭೂಮಿಯ ಮೇಲಿದ್ದ ಪದಾತಿಗಳನ್ನು ಸಂಹರಿಸುತ್ತಾ ಭೀಮಸೇನನು ಸಂಚರಿಸಿದನು.
ತತ್ರತತ್ರ ಹತೈಶ್ಚಾಪಿ ಮನುಷ್ಯಗಜವಾಜಿಭಿಃ |
ರಣಾಂಗಣಂ ತದಭವನ್ಮೃತ್ಯೋರಾಘಾತಸನ್ನಿಭಮ್ ॥15॥
ಅಲ್ಲಲ್ಲಿ ಹತರಾಗಿ ಬಿದ್ದ ಮನುಷ್ಯ ಗಜಾಶ್ವಗಳಿಂದ ಕೂಡಿದ ಆ ರಣಭೂಮಿಯು ಮೃತ್ಯುವಿನ ವಧ್ಯಸ್ಥಾನದಂತೆ ತೋರಿತು.
ಪಿನಾಕಮಿವ ರುದ್ರಸ್ಯ ಕ್ರುದ್ಧಸ್ಯಾಭಿಘ್ನತಃ ಪಶೂನ್ |
ಯಮದಂಡೋಪಮಾಮುಗ್ರಾಮಿಂದ್ರಾಶನಿಸಮಸ್ವನಾಮ್ |
ದದೃಶುರ್ಭೀಮಸೇನಸ್ಯ ರೌದ್ರಾಂ ವಿಶಸನೀಂ ಗದಾಮ್ ॥16॥
ಪಶುಗಳನ್ನು ಸಂಹಾರ ಮಾಡುವ ರುದ್ರದೇವರ ಪಿನಾಕದಂತೆ, ಯಮದೇವರ ದಂಡದಂತೆ, ಇಂದ್ರನ ವಜ್ರಾಯುಧದಂತೆ ಇದ್ದ ಶತ್ರುಸೈನ್ಯವನ್ನು ಸಂಹಾರ ಮಾಡುವ ಭೀಮಸೇನನ ಭಯಂಕರವಾದ ಗದೆಯನ್ನು ಎಲ್ಲರೂ ನೋಡಿದರು.
ಆವಿಧ್ಯತೋ ಗದಾಂ ತಸ್ಯ ಕೌಂತೇಯಸ್ಯ ಮಹಾತ್ಮನಃ |
ಬಭೌ ರೂಪಂ ಮಹಾಘೋರಂ ಕಾಲಸ್ಯೇವ ಯುಗಕ್ಷಯೇ ॥17॥
ಗದೆಯಿಂದ ಪರಸೈನ್ಯದ ಮೇಲೆ ಪ್ರಹಾರ ಮಾಡುವ ಮಹಾತ್ಮನಾದ ಕೌಂತೇಯನಾದ ಆ ಭೀಮಸೇನನ ರೂಪವು ಯುಗಾಂತಕಾಲದ ಮೃತ್ಯುವಿನ ರೂಪದಂತೆ ಮಹಾಭಯಂಕರವಾಗಿ ತೋರಿತು.
ತಂ ತಥಾ ಮಹತೀಂ ಸೇನಾಂ ದ್ರಾವಯಂತಂ ಪುನಃ ಪುನಃ |
ದೃಷ್ಟ್ವಾ ಮೃತ್ಯುಮಿವಾಯಾಂತಂ ಸರ್ವೇ ವಿಮನಸೋऽಭವನ್ ॥18॥
ತಮ್ಮ ದೊಡ್ಡ ಸೈನ್ಯವನ್ನು ಪುನಃ ಪುನಃ ಹೊಡೆದೋಡಿಸುತ್ತಾ ಮೃತ್ಯುವಿನಂತೆ ಮೇಲೆ ಬರುತ್ತಿದ್ದ ಭೀಮಸೇನನನ್ನು ನೋಡಿ ಕೌರವಯೋಧರೆಲ್ಲರೂ ಯುದ್ಧದಲ್ಲಿ ವಿಮುಖರಾದರು.
ಯತೋಯತಃ ಪ್ರೇಕ್ಷತೇ ಸ್ಮ ಗದಾಮುದ್ಯಮ್ಯ ಪಾಂಡವಃ |
ತೇನತೇನ ಸ್ಮ ದೀರ್ಯಂತೇ ಸರ್ವಸೈನ್ಯಾನಿ ಭಾರತ ॥19॥
ಎಲೈ ಭಾರತನೇ, ಪಾಂಡವನಾದ ಭೀಮಸೇನನು ಗದೆಯನ್ನು ಎತ್ತಿ ಯಾವ ಯಾವ ದಿಕ್ಕಿನಲ್ಲಿ ನೋಡುತ್ತಾನೆಯೋ, ಆಯಾ ದಿಕ್ಕಿನಲ್ಲಿ ಸರ್ವಸೈನ್ಯಗಳೂ ನಾಶವನ್ನು ಹೊಂದಿದವು.

ಪ್ರದಾರಯಂತಂ ಸೈನ್ಯಾನಿ ಬಲೌಘೇನಾಪರಾಜಿತಮ್ |
ಗ್ರಸಮಾನಮನೀಕಾನಿ ವ್ಯಾದಿತಾಸ್ಯಮಿವಾಂತಕಮ್ ॥20॥
ತಂ ತಥಾ ಭೀಮಕರ್ಮಾಣಂ ಪ್ರಗೃಹೀತಮಹಾಗದಮ್ |
ದೃಷ್ಟ್ವಾ ವೃಕೋದರಂ ಭೀಷ್ಮಃ ಸಹಸೈವ ಸಮಭ್ಯಯಾತ್ ॥21॥
ಮಹತಾ ಮೇಘಘೋಷೇಣ ರಥೇನಾದಿತ್ಯವರ್ಚಸಾ |
ಛಾದಯನ್ ಶರವರ್ಷೇಣ ಪರ್ಜನ್ಯ ಇವ ವೃಷ್ಟಿಮಾನ್ ॥22॥
ತನ್ನ ಅಪರಿಮಿತವಾದ ಬಲದಿಂದ ಎಲ್ಲ ಸೈನ್ಯವನ್ನೂ ಸೀಳಿಹಾಕುವ, ಅಪರಾಜಿತನಾದ, ಬಾಯಿಯನ್ನು ತೆರೆದ ಮೃತ್ಯುವಿನಂತೆ ಶತ್ರುಸೈನ್ಯವನ್ನು ನುಂಗುವ, ಕೈಯಲ್ಲಿ ದೊಡ್ಡ ಗದೆಯನ್ನು ಹಿಡಿದು ಭಯಂಕರ ಕಾರ್ಯವನ್ನು ಎಸಗುವ ಭೀಮಸೇನನನ್ನು ನೋಡಿ ದೊಡ್ಡ ಮೇಘ ಘೋಷವುಳ್ಳ, ಸೂರ್ಯನ ಪ್ರಭೆಯನ್ನು ಹೊಂದಿದ, ರಥದಲ್ಲಿ ಕುಳಿತು ಮಳೆಯನ್ನು ಸುರಿಸುವ ಪರ್ಜನ್ಯನಂತೆ ಭೀಮಸೇನನ ಮೇಲೆ ಬಾಣಗಳ ಮಳೆಯನ್ನು ಕರೆಯುತ್ತಾ ಭೀಷ್ಮರು ತಕ್ಷಣ ಅವನಿಗೆ ಅಭಿಮುಖರಾಗಿ ಬಂದರು.
ತಮಾಯಾಂತಂ ತಥಾ ದೃಷ್ಟ್ವಾ ವ್ಯಾತ್ತಾನನಮಿವಾಂತಕಮ್ |
ಭೀಷ್ಮಂ ಭೀಮೋ ಮಹಾಬಾಹುಃ ಪ್ರತ್ಯುದೀಯಾದಮರ್ಷಣಃ ॥23॥
ಬಾಯಿಯನ್ನು ತೆರೆದ ಮೃತ್ಯುವಿನಂತೆ ತನ್ನ ಕಡೆಗೆ ಬರುತ್ತಿದ್ದ ಭೀಷ್ಮರನ್ನು ನೋಡಿ ಮಹಾಬಾಹುವಾದ ಭೀಮನು ಅದನ್ನು ಸಹಿಸದೆ ಅವರ ಕಡೆಗೆ ಧಾವಿಸಿದನು.
ತಸ್ಮಿನ್ ಕ್ಷಣೇ ಸಾತ್ಯಕಿಃ ಸತ್ಯಸಂಧಃ
ಶಿನಿಪ್ರವೀರೋಽಭ್ಯಪತತ್ ಪಿತಾಮಹಮ್ |
ನಿಘ್ನನ್ನಮಿತ್ರಾನ್ ಧನುಷಾ ದೃಢೇನ
ಸ ಕಂಪಯಂಸ್ತವ ಪುತ್ರಸ್ಯ ಸೇನಾಮ್ ॥24॥
ಆ ಸಮಯದಲ್ಲಿ ಸತ್ಯಸಂಧನೂ, ಶಿನಿಪ್ರವೀರನೂ ಆದ ಸಾತ್ಯಕಿಯು ತನ್ನ ದೃಢವಾದ ಧನುಸ್ಸಿನಿಂದ ಶತ್ರುಗಳನ್ನು ಸಂಹರಿಸುತ್ತಾ ನಿನ್ನ ಪುತ್ರನ ಸೈನ್ಯವನ್ನು ನಡುಗಿಸುತ್ತಾ ಪಿತಾಮಹರಾದ ಭೀಷ್ಮರ ಬಳಿಗೆ ಸಾಗಿ ಬಂದನು.
ತಂ ಯಾಂತಮಶ್ವೈ ರಜತಪ್ರಕಾಶೈಃ
ಶರಾನ್ ಧಮಂತಂ ಧನುಷಾ ದೃಢೇನ |
ನಾಶಕ್ನುವನ್ ವಾರಯಿತುಂ ತದಾನೀಂ
ಸರ್ವೇ ಗಣಾ ಭಾರತ ಯೇ ತ್ವದೀಯಾಃ ॥25॥
ಬೆಳ್ಳಿಯ ಬಣ್ಣದಿಂದ ಕೂಡಿದ ಅಶ್ವಗಳನ್ನು ಹೂಡಿದ ರಥದಲ್ಲಿ ಬರುತ್ತಿದ್ದಂತಹ, ತನ್ನ ದೃಢವಾದ ಧನುಸ್ಸಿನಿಂದ ಬಾಣವನ್ನು ಚೆಲ್ಲುತ್ತಿದ್ದಂತಹ ಅವನನ್ನು ಆಗ ತಡೆಯಲು ಎಲೈ ಭಾರತನೇ, ನಿನ್ನ ಯೋಧರೆಲ್ಲರೂ ಸೇರಿಯೂ ಸಮರ್ಥರಾಗಲಿಲ್ಲ.
ಅವಿಧ್ಯದೇನಂ ನಿಶಿತೈಃ ಶರಾಗ್ರೈಃ
ಅಲಂಬುಸೋ ರಾಜವರಾರ್ಶ್ಯಶೃಂಗಿಃ |
ತಂ ವೈ ಚತುರ್ಭಿಃ ಪ್ರತಿವಿಧ್ಯ ವೀರೋ
ನಪ್ತಾ ಶಿನೇರಭ್ಯಪತದ್ ರಥೇನ ॥26॥
ಋಶ್ಯಶೃಂಗರ ಪುತ್ರನಾದ ಅಲಂಬುಸನು ತೀಕ್ಷ್ಣವಾದ ಶರಗಳಿಂದ ಅವನನ್ನು ಹೊಡೆದನು. ವೀರನಾದ ಸಾತ್ಯಕಿಯಾದರೂ ನಾಲ್ಕು ಬಾಣಗಳಿಂದ ಅವನನ್ನು ಪ್ರತಿಯಾಗಿ ಹೊಡೆದು ತನ್ನ ರಥದಿಂದ ಮುಂದೆ ಸಾಗಿದನು.
ಅನ್ವಾಗತಂ ವೃಷ್ಣಿವರಂ ನಿಶಮ್ಯ
ಮಧ್ಯೇ ರಿಪೂಣಾಂ ಪರಿವರ್ತಮಾನಮ್ |
ಪ್ರಾವರ್ತಯಂತಂ ಕುರುಪುಂಗವಾಂಶ್ಚ
ಪುನಃ ಪುನಶ್ಚ ಪ್ರಣದಂತಮಾಜೌ ॥27॥
ಯೋಧಾಸ್ತ್ವದೀಯಾಃ ಶರವರ್ಷೈರವರ್ಷನ್
ಮೇಘಾ ಯಥಾ ಭೂಧರಮಂಬುವೇಗೈಃ |
ಭೀಮಸೇನನನ್ನು ಅನುಸರಿಸಿಕೊಂಡು ಬಂದ, ಶತ್ರುಗಳ ಸೈನ್ಯದ ಮಧ್ಯದಲ್ಲಿ ತಿರುಗಾಡುತ್ತಿರುವ, ಕುರುಶ್ರೇಷ್ಠರನ್ನು ಯುದ್ಧಕ್ಕೆ ಉದ್ಯುಕ್ತರಾಗುವಂತೆ ಮಾಡಿ ರಣರಂಗದಲ್ಲಿ ಪುನಃ ಪುನಃ ಸಿಂಹನಾದವನ್ನು ಮಾಡುತ್ತಿದ್ದ, ಅವನನ್ನು ನೋಡಿ ನಿನ್ನ ಯೋಧರು ಮೇಘಗಳು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸಿದರು.
ನಾಶಕ್ನುವನ್ ವಾರಯಿತುಂ ವರಿಷ್ಠಂ
ಮಧ್ಯಂದಿನೇ ಸೂರ್ಯಮಿವಾತಪಂತಮ್ |
ನ ತತ್ರ ಕಶ್ಚಿನ್ನವಿಷಣ್ಣ ಆಸೀದ್
ಋತೇ ರಾಜನ್ ಸೋಮದತ್ತಸ್ಯ ಪುತ್ರಾತ್ ॥28॥
ಮಧ್ಯಾಹ್ನದಲ್ಲಿ ಪ್ರಖರವಾದ ತಾಪವನ್ನು ಕೊಡುವ ಸೂರ್ಯನನ್ನು ನಿವಾರಿಸಲು ಸಾಧ್ಯವಿಲ್ಲದಂತೆ ಶ್ರೇಷ್ಠನಾದ ಸಾತ್ಯಕಿಯನ್ನು ನಿವಾರಿಸಲು ಯಾರೂ ಸಮರ್ಥರಾಗಲಿಲ್ಲ. ಎಲೈ ರಾಜನೇ, ಆ ರಣರಂಗದಲ್ಲಿ ಸೋಮದತ್ತನ ಪುತ್ರನಾದ ಭೂರಿಶ್ರವನೊಬ್ಬನನ್ನು ಬಿಟ್ಟು ಯುದ್ಧದಲ್ಲಿ ವಿಷಾದ ಹೊಂದದವರು ಯಾರೂ ಇರಲಿಲ್ಲ.
ಸ ಹ್ಯಾದದಾನೋ ಧನುರುಗ್ರವೇಗಂ
ಭೂರಿಶ್ರವಾ ಭಾರತ ಸೌಮದತ್ತಿಃ |

ದೃಷ್ಟ್ವಾ ರಥಾನ್ ಸ್ವಾನ್ ವ್ಯಪನೀಯಮಾನಾನ್
ಪ್ರತ್ಯುದ್ಯಯೌ ಸಾತ್ಯಕಿಂ ಯೋದ್ಧುಮಿಚ್ಛನ್ ॥29॥
ಎಲೈ ಭಾರತನೇ, ಸೋಮದತ್ತನ ಪುತ್ರನಾದ ಭೂರಿಶ್ರವನು ತಮ್ಮ ರಥಗಳು ದೂರ ಸರಿಯುತ್ತಿರುವುದನ್ನು ನೋಡಿ ಭಯಂಕರ ವೇಗವುಳ್ಳ ಧನುಸ್ಸನ್ನು ತೆಗೆದುಕೊಂಡು ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡಲು ಅವನಿಗೆ ಎದುರಾಗಿ ಬಂದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತನೆಯ ಅಧ್ಯಾಯ
ಭೀಮಸೇನನಿಂದ ದುರ್ಯೋಧನನ ತಮ್ಮಂದಿರ ವಧೆ.
ಭೀಷ್ಮರಿಂದ ಸೈನ್ಯಾವಹಾರ.
ಸಂಜಯಃ
ತತೋ ಭೂರಿಶ್ರವಾ ರಾಜನ್ ಸಾತ್ಯಕಿಂ ನವಭಿಃ ಶರೈಃ |
ಅವಿಧ್ಯದ್ ಭೃಶಂಕ್ರುದ್ಧಸ್ತೋತ್ತ್ರೈರಿವ ಮಹಾದ್ವಿಪಮ್ ॥1॥
ಸಂಜಯ ಎಲೈ ರಾಜನೇ, ಅನಂತರ ಭೂರಿಶ್ರವನು ಬಹಳ ಕೋಪಗೊಂಡವನಾಗಿ ಅಂಕುಶದಿಂದ ಮಹಾಗಜವನ್ನು ಹೊಡೆದಂತೆ ಒಂಬತ್ತು ಬಾಣಗಳಿಂದ ಸಾತ್ಯಕಿಯನ್ನು ಪೀಡಿಸಿದನು.
ಕೌರವಂ ಸಾತ್ಯಕಿಶ್ಚೈವ ಶರೈಃ ಸನ್ನತಪರ್ವಭಿಃ |
ಅವಾಕಿರದಮೇಯಾತ್ಮಾ ಸರ್ವಲೋಕಸ್ಯ ಪಶ್ಯತಃ ॥2॥
ಅಚಿಂತ್ಯ ಮಹಿಮೆಯುಳ್ಳ ಸಾತ್ಯಕಿಯೂ ಸಹ ಎಲ್ಲ ಜನರೂ ನೋಡುತ್ತಿರುವಂತೆ ಕೌರವ ವಂಶದ ಭೂರಿಶ್ರವನ ಮೇಲೆ ಬಾಗಿದ ತುದಿಯುಳ್ಳ ಬಾಣಗಳ ಮಳೆಯನ್ನು ಸುರಿಸಿದನು.
ತತೋ ದುರ್ಯೋಧನೋ ರಾಜಾ ಸೋದರ್ಯೈಃ ಪರಿವಾರಿತಃ |
ಸೌಮದತ್ತಿಂ ರಣೇ ಯತ್ತಃ ಸಮಂತಾತ್ ಪರ್ಯವಾರಯತ್ ॥3॥
ಆಗ ರಾಜನಾದ ದುರ್ಯೋಧನನು ತನ್ನ ತಮ್ಮಂದಿರಿಂದ ಪರಿವೃತನಾಗಿ ರಣರಂಗದಲ್ಲಿ ಭೂರಿಶ್ರವನನ್ನು ಎಚ್ಚರಿಕೆಯಿಂದ ಎಲ್ಲ ಕಡೆಯಿಂದಲೂ ರಕ್ಷಿಸಿದನು.
ತಥೈವ ಪಾಂಡವಾಃ ಸರ್ವೇ ಸಾತ್ಯಕಿಂ ರಭಸಂ ರಣೇ |
ಪರಿವಾರ್ಯ ಸ್ಥಿತಾಃ ಸಂಖ್ಯೇ ಸಮಂತಾತ್ ಸುಮಹೌಜಸಃ ॥4॥
ಹಾಗೆಯೇ ಮಹಾಸಾಮರ್ಥ್ಯಶಾಲಿಗಳಾದ ಎಲ್ಲ ಪಾಂಡವರೂ ರಣರಂಗದಲ್ಲಿ ವೇಗಶಾಲಿಯಾದ ಸಾತ್ಯಕಿಯನ್ನು ಸುತ್ತುವರಿದು ನಿಂತರು.
ಭೀಮಸೇನಸ್ತು ಸಂಕ್ರುದ್ಧೋ ಗದಾಮುದ್ಯಮ್ಯ ಭಾರತ |
ದುರ್ಯೋಧನಮುಖಾನ್ ಸರ್ವಾನ್ ಪುತ್ರಾಂಸ್ತೇ ಪರ್ಯವಾರಯತ್॥
ಎಲೈ ಭಾರತನೇ, ಭೀಮಸೇನನಾದರೂ ಕೋಪಗೊಂಡು ಗದೆಯನ್ನು ಎತ್ತಿಹಿಡಿದು ದುರ್ಯೋಧನ ಮೊದಲಾದ ನಿನ್ನ ಎಲ್ಲ ಪುತ್ರರನ್ನೂ ನಿವಾರಿಸಿದನು.
ರಥೈರನೇಕಸಾಹಸ್ರೈಃ ಕ್ರೋಧಾಮರ್ಷಸಮನ್ವಿತಃ |
ನಂದಕಸ್ತವ ಪುತ್ರಸ್ತು ಭೀಮಸೇನಂ ಮಹಾಬಲಮ್ |
ವಿವ್ಯಾಧ ನಿಶಿತೈಃ ಷಡ್ಭಿಃ ಕಂಕಪತ್ರೈಃ ಶಿಲಾಶಿತೈಃ ॥6॥
ನಿನ್ನ ಪುತ್ರನಾದ ನಂದಕನು ಸಿಟ್ಟಿನಿಂದ ಕೂಡಿದವನಾಗಿ ಅನೇಕ ಸಹಸ್ರ ರಥಗಳ ಜೊತೆಯಲ್ಲಿ ಮತ್ತು ಮಹಾಬಲನಾದ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವನ ಮೇಲೆ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಕಂಕಪತ್ರಗಳಿಂದ ಕೂಡಿದ ಆರು ಬಾಣಗಳನ್ನು ಪ್ರಯೋಗಿಸಿದನು.
ದುರ್ಯೋಧನಸ್ತು ಸಮರೇ ಭೀಮಸೇನಂ ಮಹಾಬಲಮ್ |
ಆಜಘಾನೋರಸಿ ಕ್ರುದ್ಧೋ ಮಾರ್ಗಣೈರ್ನಿಶಿತೈಸ್ತ್ರಿಭಿಃ ॥7॥
ದುರ್ಯೋಧನನಾದರೂ ಕ್ರೋಧಗೊಂಡು ಮೂರು ಹರಿತವಾದ ಬಾಣಗಳಿಂದ ಮಹಾಬಲನಾದ ಭೀಮಸೇನನಿಗೆ ಅವನ ವಕ್ಷಸ್ಸ್ಥಲದಲ್ಲಿ ಹೊಡೆದನು.
ತತೋ ಭೀಮೋ ಮಹಾಬಾಹುಃ ಸ್ವರಥಂ ಸುಮಹಾಬಲಃ |
ಆರುರೋಹ ರಥಶ್ರೇಷ್ಠಂ ವಿಶೋಕಂ ಚೇದಮಬ್ರವೀತ್ ॥8॥
ಆಗ ಮಹಾಬಲಶಾಲಿಯಾದ, ಮಹಾಬಾಹುವಾದ ಭೀಮಸೇನನು ಪುನಃ ತನ್ನ ಶ್ರೇಷ್ಠವಾದ ರಥವನ್ನು ಏರಿ ಸಾರಥಿಯಾದ ವಿಶೋಕನನ್ನು ಕುರಿತು ಹೀಗೆ ಮಾತನಾಡಿದನು.
ಏತೇ ಮಹಾರಥಾಃ ಶೂರಾ ಧಾರ್ತರಾಷ್ಟ್ರಾ ಮಹಾಬಲಾಃ |
ಮಾಮೇವ ಭೃಶಸಂಕ್ರುದ್ಧಾ ಹಂತುಮಭ್ಯುದ್ಯತಾ ಯುಧಿ ॥9॥
ಈ ಮಹಾಬಲಿಷ್ಠರಾದ, ಶೂರರಾದ, ಮಹಾರಥರಾದ ಧೃತರಾಷ್ಟ್ರ ಪುತ್ರರು ಬಹಳ ಸಿಟ್ಟಿನಿಂದ ಕೂಡಿದವರಾಗಿ ರಣರಂಗದಲ್ಲಿ ನನ್ನನ್ನೇ ಕೊಲ್ಲಲು ಉದ್ಯುಕ್ತರಾಗಿದ್ದಾರೆ.

ಮನೋರಥದ್ರುಮೋಽಸ್ಮಾಕಂ ಚಿಂತಿತೋ ಬಹುವಾರ್ಷಿಕಃ |
ಸಫಲಃ ಸೂತ ಚಾದ್ಯೇಹ ಯೋಽಹಂ ಪಶ್ಯಾಮಿ ಸೋದರಾನ್ ॥10॥
ಯತ್ರಾಶೋಕ ಸಮುತ್ಕ್ಷಿಪ್ತಾ ರೇಣವೋ ರಥನೇಮಿಭಿಃ |
ನ ಪ್ರಯಾಸ್ಯಂತರಿಕ್ಷಂ ಹಿ ಶರವೃಂದೈರ್ದಿಗಂತರೇ ॥11॥
ತತ್ರ ತಿಷ್ಠತಿ ಸನ್ನದ್ಧಃ ಸ್ವಯಂ ರಾಜಾ ಸುಯೋಧನಃ |
ಭ್ರಾತರಶ್ಚಾಸ್ಯ ಸನ್ನದ್ಧಾ ಕುಲಪುತ್ರಾ ಮದೋತ್ಕಟಾಃ ॥12॥
ನಾವು ಅನೇಕ ವರ್ಷಗಳಿಂದ ಮನಸ್ಸಿನಲ್ಲಿಯೇ ಯೋಚಿಸಿದ ನಮ್ಮ ಮನೋರಥವು ಈ ದಿನ ಫಲಿಸಿದೆ. ಏಕೆಂದರೆ ನಾನು ಇಲ್ಲಿ ಸಹೋದರರನಿಂದ ಸಹಿತನಾದ ದುರ್ಯೋಧನನನ್ನು ನೋಡುತ್ತಿದ್ದೇನೆ. ಎಲೈ ವಿಶೋಕನೇ, ಈ ಬೇರೆ ದಿಕ್ಕಿನಲ್ಲಿ ಎಲ್ಲಿ ರಥದ ಚಕ್ರಗಳಿಂದ ಮೇಲೆದ್ದ ಭೂಮಿಯ ಧೂಳು ಅಂತರಿಕ್ಷವನ್ನು ತಲುಪುತ್ತಿದೆಯೋ ಅಲ್ಲಿ ರಾಜನಾದ ದುರ್ಯೋಧನನೂ, ಕುಲಪುತ್ರರೂ, ಬಲೋತ್ಕಟರೂ ಆದ ಅವನ ತಮ್ಮಂದಿರೂ ಯುದ್ಧಕ್ಕೆ ಸನ್ನದ್ಧರಾಗಿ ಇದ್ದಾರೆ.
ಏತಾನದ್ಯ ಹನಿಷ್ಯಾಮಿ ಪಶ್ಯತಸ್ತೇ ನ ಸಂಶಯಃ |
ತಸ್ಮಾನ್ಮಮಾಶ್ವಾನ್ ಸಂಗ್ರಾಮೇ ಯತ್ತಃ ಸಂಯಚ್ಛ ಸಾರಥೇ ॥13॥
ನಿನ್ನ ಕಣ್ಣೆದುರಿಗೆ ನಾನು ಈ ದಿನ ಅವರನ್ನು ಕೊಲ್ಲುವೆನು. ಇದರಲ್ಲಿ ಸಂಶಯವಿಲ್ಲ. ಎಲೈ ಸಾರಥಿಯೇ, ಆದ್ದರಿಂದ ನನ್ನ ಕುದುರೆಗಳನ್ನು ಜಾಗರೂಕತೆಯಿಂದ ನಿಯಂತ್ರಿಸು.
ಏವಮುಕತ್ವ ತತಃ ಪಾರ್ಥಃ ಪುತ್ರಂ ದುರ್ಯೋಧನಂ ತವ |
ವಿವ್ಯಾಧ ದಶಭಿಸ್ತೀಕ್ಷ್ಣೈಃ ಶರೈಃ ಕನಕಭೂಷಣೈಃ |
ನಂದಕಂ ಚ ತ್ರಿಭಿರ್ಬಾಣೈಃ ಪ್ರತ್ಯವಿಧ್ಯತ್ ಸ್ತನಾಂತರೇ ॥14॥
ಭೀಮಸೇನನು ಹೀಗೆ ಹೇಳಿ ಅನಂತರ ನಿನ್ನ ಪುತ್ರನಾದ ದುರ್ಯೋಧನನ ಮೇಲೆ ಸುವರ್ಣಭೂಷಿತವಾದ, ತೀಕ್ಷ್ಣವಾದ ಹತ್ತು ಬಾಣಗಳನ್ನು ಪ್ರಯೋಗಿಸಿದನು. ನಂದಕನಿಗೂ ಸಹ ಸ್ತನಗಳ ಮಧ್ಯದಲ್ಲಿ ತೀಕ್ಷ್ಣವಾದ ಮೂರು ಬಾಣಗಳಿಂದ ಹೊಡೆದನು.
ತಂ ತು ದುರ್ಯೋಧನಃ ಷಷ್ಟ್ಯಾ ವಿದ್ಧ್ವಾ ಭೀಮಂ ಮಹಾಬಲಮ್ |
ತ್ರಿಭಿರನ್ಯೈಃ ಸುನಿಶಿತೈರ್ವಿಶೋಕಂ ಪ್ರತ್ಯವಿಧ್ಯತ ॥15॥
ದುರ್ಯೋಧನನಾದರೂ ಮಹಾಬಲಿಷ್ಠನಾದ ಭೀಮಸೇನನ ಮೇಲೆ ಅತ್ಯಂತ ಹರಿತವಾದ ಅರವತ್ತು ಬಾಣಗಳನ್ನು ಪ್ರಯೋಗಿಸಿ, ಪುನಃ ಹರಿತವಾದ ಮೂರು ಬೇರೆ ಬಾಣಗಳಿಂದ ಅವನ ಸಾರಥಿಯಾದ ವಿಶೋಕನನ್ನು ಹೊಡೆದನು.
ಭೀಮಸ್ಯ ಚ ರಣೇ ರಾಜನ್ ಧನುಶ್ಚಿಚ್ಛೇದ ಭಾಸ್ವರಮ್ |
ಮುಷ್ಟಿದೇಶೇ ಶರೈಸ್ತೀಕ್ಷ್ಣೈಸ್ತ್ರಿಭೀ ರಾಜಾ ಹಸನ್ನಿವ ॥16॥
ಎಲೈ ರಾಜನೇ, ರಾಜನಾದ ದುರ್ಯೋಧನನು ನಗುವವನಂತೆ ರಣರಂಗದಲ್ಲಿ ಭೀಮಸೇನನ ಪ್ರಕಾಶಮಾನವಾದ ಧನುಸ್ಸನ್ನು ಮೂರು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಮುಷ್ಟಿದೇಶದಲ್ಲಿ ಕತ್ತರಿಸಿದನು.
ಭೀಮಸ್ತು ಪ್ರೇಕ್ಷ್ಯ ಯಂತಾರಂ ವಿಶೋಕಂ ಸಂಯುಗೇ ತದಾ |
ಪೀಡಿತಂ ವಿಶಿಖೈಸ್ತೀಕ್ಷ್ಣೈಸ್ತವ ಪುತ್ರೇಣ ಧನ್ವಿನಾ ॥17॥
ಅಮೃಷ್ಯಮಾಣಃ ಸಂಕ್ರುದ್ಧೋ ಧನುರ್ದಿವ್ಯಂ ಪರಾಮೃಶತ್ |
ಪುತ್ರಸ್ಯ ತೇ ಮಹಾರಾಜ ವಧಾರ್ಥಂ ಭರತರ್ಷಭ ॥18॥
ಎಲೈ ಮಹಾರಾಜನೇ, ಭರತಶ್ರೇಷ್ಠನೇ, ಭೀಮಸೇನನಾದರೂ ತನ್ನ ಸಾರಥಿಯಾದ ವಿಶೋಕನು ಧನುರ್ಧಾರಿಯಾದ ನಿನ್ನ ಪುತ್ರನಿಂದ ತೀಕ್ಷ್ಣವಾದ ಬಾಣಗಳಿಂದ ಪೀಡಿತನಾದುದನ್ನು ನೋಡಿ ಅದನ್ನು ಸಹಿಸದೆ ಬಹಳ ಕೋಪಗೊಂಡು ನಿನ್ನ ಪುತ್ರನ ವಧೆಗಾಗಿ ದಿವ್ಯವಾದ ಇನ್ನೊಂದು ಧನುಸ್ಸನ್ನು ಕೈಯಲ್ಲಿ ಹಿಡಿದನು.
ಸಮಾದತ್ತ ಚ ಸಂರಬ್ಧಃ ಕ್ಷುರಪ್ರಂ ಲೋಮವಾಹಿನಮ್ |
ತೇನ ಚಿಚ್ಛೇದ ನೃಪತೇರ್ಭೀಮಃ ಕಾರ್ಮುಕಮುತ್ತಮಮ್ ॥19॥
ಕೋಪಗೊಂಡ ಭೀಮಸೇನನು ಕೂದಲನ್ನೂ ಸೀಳುವಂತಹ ಹರಿತವಾದ ಕ್ಷುರಪ್ರವನ್ನು ತೆಗೆದುಕೊಂಡು ಅದರಿಂದ ದುರ್ಯೋಧನನ ಶ್ರೇಷ್ಠವಾದ ಧನುಸ್ಸನ್ನು ಕತ್ತರಿಸಿದನು.
ಸೋಽಪವಿಧ್ಯ ಧನುಶ್ಛಿನ್ನಂ ಕ್ರೋಧೇನ ಪ್ರಜ್ವಲನ್ನಿವ |
ಅನ್ಯತ್ ಕಾರ್ಮುಕಮಾದತ್ತ ಸತ್ವರಂ ವೇಗವತ್ತರಮ್ ॥20॥
ಸಂಧತ್ತ ವಿಶಿಖಂ ಘೋರಂ ಕಾಲಮೃತ್ಯುಸಮಪ್ರಭಮ್ |
ತೇನಾಜಘಾನ ಸಂಕ್ರುದ್ಧೋ ಭೀಮಸೇನಂ ಸ್ತನಾಂತರೇ ॥21॥
ದುರ್ಯೋಧನನು ಕತ್ತರಿಸಲ್ಪಟ್ಟ ಧನುಸ್ಸನ್ನು ಬಿಟ್ಟು ಕ್ರೋಧದಿಂದ ಉರಿಯುವವನಂತೆ ಇನ್ನೊಂದು ವೇಗಶಾಲಿಯಾದ ಧನುಸ್ಸನ್ನು ತೆಗೆದುಕೊಂಡು ಅದರಲ್ಲಿ ಕಾಲಮೃತ್ಯುವಿಗೆ ಸಮಾನವಾದ ಕಾಂತಿಯುಳ್ಳ ಘೋರವಾದ ಬಾಣವನ್ನು ಹೂಡಿ ಕೋಪದಿಂದ ಭೀಮಸೇನನನ್ನು ಅದರಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ಸ ಗಾಢವಿದ್ಧೋ ವ್ಯಥಿತಃ ಸ್ಯಂದನೋಪಸ್ಥ ಆವಿಶತ್ |
ಸ ನಿಷಣ್ಣೋ ರಥೋಪಸ್ಥೇ ಮೂರ್ಚ್ಛಾಮಭಿಜಗಾಮ ಹ ॥22॥
ಗಾಢವಾಗಿ ಹೊಡೆಯಲ್ಪಟ್ಟ ಭೀಮಸೇನನು ವ್ಯಥೆಯಿಂದ ಕೂಡಿ ರಥದ ಮಧ್ಯಪ್ರದೇಶದಲ್ಲಿ ಕುಸಿದನು. ರಥೋಪಸ್ಥದಲ್ಲಿ ಕುಳಿತ ಅವನು ಮೂರ್ಛೆಯನ್ನು ಹೊಂದಿದನು.
ತಂ ದೃಷ್ಟ್ವಾ ವ್ಯಥಿತಂ ಭೀಮಮಭಿಮನ್ಯುಪುರೋಗಮಾಃ |

ನಾಮೃಷ್ಯಂತ ಮಹೇಷ್ವಾಸಾಃ ಪಾಂಡವಾನಾಂ ಮಹಾರಥಾಃ ॥23॥
ಭೀಮಸೇನನನು ಹೀಗೆ ವ್ಯಥೆಗೆ ಒಳಗಾದುದನ್ನು ನೋಡಿ ಪಾಂಡವರ ಮಹಾರಥರೂ, ಮಹಾಧನುರ್ಧಾರಿಗಳೂ ಆದ ಅಭಿಮನ್ಯು ಮೊದಲಾದವರು ಅದನ್ನು ಸಹಿಸಲಿಲ್ಲ.
ತತಸ್ತು ತುಮುಲಾಂ ವೃಷ್ಟಿಂ ಶಸ್ತ್ರಾಣಾಂ ತಿಗ್ಮತೇಜಸಾಮ್ |
ಪಾತಯಾಮಾಸುರವ್ಯಗ್ರಾಃ ಪುತ್ರಸ್ಯ ತವ ಮೂರ್ಧನಿ ॥24॥
ಅನಂತರ ಮಹಾಸಾಮರ್ಥ್ಯವುಳ್ಳ ಶಸ್ತ್ರಗಳ ತೀವ್ರವಾದ ಮಳೆಯನ್ನು ನಿನ್ನ ಪುತ್ರನ ತಲೆಯ ಮೇಲೆ ಅವರು ಎಚ್ಚರಿಕೆಯಿಂದ ಬೀಳಿಸಿದರು.
ಪ್ರತಿಲಭ್ಯ ತತಃ ಸಂಜ್ಞಾಂ ಭೀಮಸೇನೋ ಮಹಾಬಲಃ |
ದುರ್ಯೋಧನಂ ತ್ರಿಭಿರ್ವಿದ್ಧ್ವಾ ಪುನರ್ವಿವ್ಯಾಧ ಪಂಚಭಿಃ ॥25॥
ಆ ವೇಳೆಗೆ ಮಹಾಬಲನಾದ ಭೀಮಸೇನನನು ಸಂಜ್ಞೆಯನ್ನು ಮರಳಿ ಪಡೆದು ದುರ್ಯೋಧನನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿ ಪುನಃ ಐದು ಬಾಣಗಳನ್ನು ಪ್ರಯೋಗಿಸಿದನು.
ಶಲ್ಯಂ ಚ ಪಂಚವಿಂಶತ್ಯಾ ಶರೈರ್ವಿವ್ಯಾಧ ಪಾಂಡವಃ |
ರುಗ್ಮಪುಂಖೈರ್ಮಹೇಷ್ವಾಸಃ ಸ ವಿದ್ಧೋ ವ್ಯಪಯಾದ್ ರಣಾತ್ ॥26॥
ಮಹಾಧನುರ್ಧಾರಿಯಾದ ಪಾಂಡುಪುತ್ರನಾದ ಭೀಮಸೇನನು ಶಲ್ಯನನ್ನು ಚಿನ್ನದ ಪುಂಖಗಳನ್ನು ಹೊಂದಿದ ಇಪ್ಪತ್ತೈದು ಬಾಣಗಳಿಂದ ಹೊಡೆದನು. ಗಾಯಗೊಂಡ ಶಲ್ಯನು ರಣರಂಗವನ್ನು ಬಿಟ್ಟು ಹೊರಟು ಹೋದನು.
ಪ್ರತ್ಯುದ್ಯಯುಸ್ತತೋ ಭೀಮಂ ತವ ಪುತ್ರಾಶ್ಚತುರ್ದಶ |
ಸೇನಾಪತಿಃ ಸುಷೇಣಶ್ಚ ಜಲಸಂಧಃ ಸುಲೋಚನಃ ॥27॥
ಉಗ್ರೋ ಭೀಮರಥೋ ಭೀಮೋ ಭೀಮಬಾಹುರಲೋಲುಪಃ |
ದುರ್ಮುಖೋ ದುಷ್ಪ್ರಧರ್ಷಶ್ಚ ವಿವಿತ್ಸುರ್ವಿಕಟಃ ಸಮಃ ॥28॥
ವಿಸೃಜಂತೋ ಬಹೂನ್ ಬಾಣಾನ್ ಕ್ರೋಧಸಂರಕ್ತಲೋಚನಾಃ |
ಭೀಮಸೇನಮಭಿದ್ರುತ್ಯ ವಿವ್ಯಧುಃ ಸಹಿತಾ ಭೃಶಮ್ ॥29॥
ಆಗ ನಿನ್ನ ಮಕ್ಕಳಾದ ಸೇನಾಪತಿ, ಸುಷೇಣ, ಜಲಸಂಧ, ಸುಲೋಚನ, ಉಗ್ರ, ಭೀಮರಥ, ಭೀಮ, ಭೀಮಬಾಹು, ಅಲೋಲುಪ, ದುರ್ಮುಖ, ದುಷ್ಪ್ರಧರ್ಷ, ವಿವಿತ್ಸು, ವಿಕಟ, ಸಮ ಈ ಹದಿನಾಲ್ಕು ಜನರು ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ಭೀಮಸೇನನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾ ಭೀಮಸೇನನ ಬಳಿಗೆ ಬಂದು ಎಲ್ಲರೂ ಜೊತೆಯಾಗಿ ಯುದ್ಧವನ್ನು ಮಾಡಿದರು.
ಪುತ್ರಾಂಸ್ತು ತವ ಸಂಪ್ರೇಕ್ಷ್ಯ ಭೀಮಸೇನೋ ಮಹಾಬಲಃ |
ಸೃಕ್ಕಿಣೀ ವಿಲಿಹನ್ ವೀರಃ ಪಶುಮಧ್ಯೇ ವೃಕೋ ಯಥಾ ॥30॥
ಅಭಿಪತ್ಯ ಮಹಾಬಾಹುರ್ಗರುತ್ಮಾನಿವ ವೇಗಿತಃ |
ಸೇನಾಪತೇಃ ಕ್ಷುರಪ್ರೇಣ ಶಿರಶ್ಚಿಚ್ಛೇದ ಪಾಂಡವಃ ॥31॥
ಮಹಾಬಲನಾದ ಭೀಮಸೇನನು ನಿನ್ನ ಮಕ್ಕಳನ್ನು ನೋಡಿ ವೀರನಾದ ಅವನು ಪಶುಗಳ ಮಧ್ಯದಲ್ಲಿರುವ ತೋಳದಂತೆ ಕಟಬಾಯಿಯನ್ನು ಸವರಿಕೊಳ್ಳುತ್ತಾ ಮಹಾಬಾಹುವಾದ ಅವನು ಗರುಡನಂತೆ ವೇಗದಿಂದ ಸೇನಾಪತಿಯ ಮೇಲೆ ಎರಗಿ ಕ್ಷುರಪ್ರದಿಂದ ಅವನ ಶಿರಸ್ಸನ್ನು ಕತ್ತರಿಸಿದನು.
ಸಂಪ್ರಹಸ್ಯ ಚ ಹೃಷ್ಟಾತ್ಮಾ ತ್ರಿಭಿರ್ಬಾಣೈರ್ಮಹಾಭುಜಃ |
ಜಲಸಂಧಂ ವಿನಿರ್ಭಿದ್ಯ ಸೋಽನಯದ್ ಯಮಸಾದನಮ್ |
ಸುಷೇಣಂ ಚ ತತೋ ಹತ್ವಾ ಪ್ರೇಷಯಾಮಾಸ ಮೃತ್ಯವೇ ॥32॥
ಮಹಾಭುಜನೂ, ಸಂತಸಗೊಂಡ ಮನಸ್ಸುಳ್ಳವನೂ ಆದ ಭೀಮನು ನಕ್ಕು ಜಲಸಂಧನನ್ನು ಮೂರು ಬಾಣಗಳನ್ನು ಭೇದಿಸಿ ಯಮಪಟ್ಟಣಕ್ಕೆ ಕಳುಹಿಸಿದನು. ಅನಂತರ ಸುಷೇಣನನ್ನು ಕೊಂದು ಮೃತ್ಯುಲೋಕಕ್ಕೆ ಕಳುಹಿಸಿದನು.
ಉಗ್ರಸ್ಯ ಸಶಿರಸ್ತ್ರಾಣಂ ಶಿರಶ್ಚಂದ್ರೋಪಮಂ ಭುವಿ |
ಪಾತಯಾಮಾಸ ಭಲ್ಲೇನ ಕುಂಡಲಾಭ್ಯಾಂ ವಿಭೂಷಿತಮ್ ॥33॥
ಉಗ್ರನ ಶಿರಸ್ತ್ರಾಣಸಹಿತವಾದ ಕುಂಡಲದಿಂದ ಅಲಂಕೃತವಾದ ಚಂದ್ರನಂತಿದ್ದ ಶಿರಸ್ಸನ್ನು ಭಲ್ಲದಿಂದ ತಿವಿದು ಭೂಮಿಯ ಮೇಲೆ ಕೆಡವಿದನು.
ಭೀಮಬಾಹುಂ ಚ ಸಪ್ತತ್ಯಾ ಸಾಶ್ವಕೇತುಂ ಸಸಾರಥಿಮ್ |
ನಿನಾಯ ಸಮರೇ ಭೀಮಃ ಪರಲೋಕಾಯ ಮಾರಿಷ ॥34॥
ಎಲೈ ಪೂಜ್ಯನೇ, ಅಶ್ವಧ್ವಜದಿಂದ ಮತ್ತು ಸಾರಥಿಯಿಂದ ಸಹಿತನಾದ ಭೀಮಬಾಹುವನ್ನು ರಣರಂಗದಲ್ಲಿ ಭೀಮನು ಎಪ್ಪತ್ತು ಬಾಣಗಳನ್ನು ಪ್ರಯೋಗಿಸಿ ಪರಲೋಕಕ್ಕೆ ಕಳುಹಿಸಿದನು.
ಭೀಮಂ ಭೀಮರಥಂ ಚೋಭೌ ಭೀಮಸೇನೋ ಹಸನ್ನಿವ |
ಭ್ರಾತರೌ ರಭಸೌ ರಾಜನ್ನನಯದ್ ಯಮಸಾದನಮ್ ॥35॥
ಎಲೈ ರಾಜನೇ, ಭೀಮಸೇನನು ನಗುತ್ತಾ ಸಹೋದರರೂ, ವೇಗಶಾಲಿಗಳೂ ಆದ ಭೀಮ ಮತ್ತು ಭೀಮರಥರಿಬ್ಬರನ್ನೂ ನಗುವವನಂತೆ ಯಮಪಟ್ಟಣಕ್ಕೆ ಕಳುಹಿಸಿದನು.
ತತಃ ಸುಲೋಚನಂ ಭೀಮಃ ಕ್ಷುರಪ್ರೇಣ ಮಹಾಮೃಧೇ |
ಮಿಷತಾಂ ಸರ್ವಸೈನ್ಯಾನಾಮನಯದ್ ಯಮಸಾದನಮ್ ॥36॥

ಅನಂತರ ಮಹಾಯುದ್ಧದಲ್ಲಿ ಭೀಮಸೇನನು ಸುಲೋಚನನೆಂಬ ನಿನ್ನ ಪುತ್ರನನ್ನು ಎಲ್ಲ ಸೈನ್ಯವೂ ನೋಡುತ್ತಿರುವಂತೆ ಕ್ಷುರಪ್ರದಿಂದ ಯಮಪಟ್ಟಣಕ್ಕೆ ಕಳುಹಿಸಿದನು.

ಪುತ್ರಾಸ್ತು ತವ ತಂ ದೃಷ್ಟ್ವಾ ಭೀಮಸೇನಪರಾಕ್ರಮಮ್ |
ಶೇಷಾ ಯೇಽನ್ಯೇಽಭವಂಸ್ತತ್ರ ತೇ ಭೀಮಸ್ಯ ಭಯಾರ್ದಿತಾಃ |
ವಿಪ್ರದ್ರುತಾ ದಿಶೋ ರಾಜನ್ ವಧ್ಯಮಾನಾ ಮಹಾತ್ಮನಾ ||37||

ಎಲೈ ರಾಜನೇ, ನಿನ್ನ ಉಳಿದ ಮಕ್ಕಳು ಭೀಮಸೇನನ ಆ ಪರಾಕ್ರಮವನ್ನು ನೋಡಿ ಭೀಮನ ಭಯದಿಂದ ನಡುಗುತ್ತಾ, ಮಹಾತ್ಮನಾದ ಭೀಮಸೇನನಿಂದ ಬಾಣ ಪ್ರಯೋಗದಿಂದ ಹೊಡೆಯಲ್ಪಡುವವರಾಗಿ ದಿಕ್ಕು ದಿಕ್ಕುಗಳಿಗೆ ಓಡಿಹೋದರು.

ತತೋಽಬ್ರವೀಚ್ಛಾಂತನವಃ ಸರ್ವಾನೇವ ಮಹಾರಥಾನ್ |
ಏಷ ಭೀಮೋ ರಣೇ ಕ್ರುದ್ಧೋ ಧಾರ್ತರಾಷ್ಟ್ರಾನ್ ಮಹಾರಥಾನ್ ||
ಯಥಾಪ್ರಾಗ್ರ್ಯಾನ್ ಯಥಾಜ್ಯೇಷ್ಠಾನ್ ಯಥಾಶೂರಾಂಶ್ಚ ಸಂಗತಾನ್ |
ನಿಪಾತಯತ್ಯುಗ್ರಧನ್ವಾ ತಂ ಪ್ರಮಥ್ನೀತ ಪಾರ್ಥಿವಾಃ ||39||

ಆಗ ಶಂತನುಪುತ್ರರಾದ ಭೀಷ್ಮರು ಎಲ್ಲ ಮಹಾರಥರನ್ನು ಕುರಿತು, ಈ ಭೀಮಸೇನನು ಪರಾಕ್ರಮದಿಂದ ಶ್ರೇಷ್ಠರಾದ ಮತ್ತು ವಯಸ್ಸಿನಿಂದ ಜ್ಯೇಷ್ಠರಾದ ಇಲ್ಲಿ ಸೇರಿದ ನಮ್ಮ ಸೈನ್ಯದ ಶೂರರನ್ನು ಕೈಯಲ್ಲಿ ಉಗ್ರವಾದ ಧನುಸ್ಸನ್ನು ಹಿಡಿದು ಕೆಡವುತ್ತಿದ್ದಾನೆ. ರಾಜರೇ, ಅವನನ್ನು ಮರ್ದಿಸಿ ಎಂದು ಹೇಳಿದರು.

ಏವಮುಕ್ತಾಸ್ತತಃ ಸರ್ವೇ ಧಾರ್ತರಾಷ್ಟ್ರಸ್ಯ ಸೈನಿಕಾಃ |
ಅಭ್ಯದ್ರವಂತ ಸಂಕ್ರುದ್ಧಾ ಭೀಮಸೇನಂ ಮಹಾಬಲಮ್ ||40||

ಹೀಗೆ ಹೇಳಲ್ಪಟ್ಟ ದುರ್ಯೋಧನನ ಸೈನಿಕರೆಲ್ಲರೂ ಬಹಳ ಕೋಪಗೊಂಡು ಮಹಾಬಲನಾದ ಭೀಮಸೇನನ ಕಡೆಗೆ ಓಡಿಹೋದರು.

ಭಗದತ್ತಃ ಪ್ರಭಿನ್ನೇನ ಕುಂಜರೇಣ ವಿಶಾಂಪತೇ |
ಅಪತತ್ ಸಹಸಾ ತತ್ರ ಯತ್ರ ಭೀಮೋ ವ್ಯವಸ್ಥಿತಃ ||41||

ಎಲೈ ರಾಜನೇ, ಭಗದತ್ತನು ತನ್ನ ಮದಿಸಿದ ಆನೆಯ ಜೊತೆಯಲ್ಲಿ ಭೀಮಸೇನನು ಇದ್ದ ಕಡೆಗೆ ತಕ್ಷಣ ಬಂದನು.

ಆಪತನ್ನೇವ ಚ ರಣೇ ಭೀಮಸೇನಂ ಶಿಲಾಶಿತೈಃ |
ಅದೃಶ್ಯಂ ಸಮರೇ ಚಕ್ರೇ ಜೀಮೂತ ಇವ ಭಾಸ್ಕರಮ್ ||42||

ಅವನು ಭೀಮಸೇನನ ಸಮೀಪಕ್ಕೆ ಬರುತ್ತಿರುವಾಗಲೇ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳಿಂದ ಮೋಡಗಳು ಸೂರ್ಯನನ್ನು ಮುಚ್ಚುವಂತೆ ಭೀಮಸೇನನನ್ನು ಕಾಣದಂತೆ ಮಾಡಿದನು.

ಅಭಿಮನ್ಯುಮುಖಾಸ್ತತ್ರ ನಾಮೃಷ್ಯಂತ ಮಹಾರಥಾಃ |
ಭೀಮಸ್ಯಾಚ್ಛಾದನಂ ಸಂಖ್ಯೇ ಸ್ವಬಾಹುಬಲಮಾಶ್ರಿತಾಃ ||43||

ತಮ್ಮ ಬಾಹುಬಲವನ್ನು ಆಶ್ರಯಿಸಿದ ಅಭಿಮನ್ಯು ಮೊದಲಾದ ಮಹಾರಥರು ಭೀಮಸೇನನು ಯುದ್ಧದಲ್ಲಿ ಬಾಣಗಳಿಂದ ಮುಚ್ಚಲ್ಪಡುವುದನ್ನು ಸಹಿಸಲಿಲ್ಲ.

ತ ಏನಂ ಶರವರ್ಷೇಣ ಸಮಂತಾತ್ ಪರ್ಯವಾರಯನ್ |
ಗಜಂ ಚ ಶರವೃಷ್ಟ್ಯಾ ತಂ ಬಿಭಿದುಸ್ತೇ ಸಮಂತತಃ ||44||

ಅವರು ಈ ಭಗದತ್ತನನ್ನು ಬಾಣಗಳ ಮಳೆಯನ್ನು ಸುರಿಸಿ ಎಲ್ಲ ಕಡೆಗಳಿಂದಲೂ ತಡೆದರು ಮತ್ತು ಬಾಣಗಳ ಮಳೆಯಿಂದ ಎಲ್ಲ ಕಡೆಗಳಿಂದಲೂ ಅವನ ಗಜವಾದ ಸುಪ್ರತೀಕವನ್ನು ಗಾಯಗೊಳಿಸಿದರು.

ಸ ಶಸ್ತ್ರವೃಷ್ಟ್ಯಾಭಿಹತಃ ಪ್ರಾದ್ರವದ್ ದ್ವಿಗುಣಂ ಪದಮ್ |
ಪ್ರಾಗ್ಜ್ಯೋತಿಷಗಜೋ ರಾಜನ್ ನಾನಾಲಿಂಗೈಃ ಸುತೇಜನೈಃ ||45||

ಎಲೈ ರಾಜನೇ, ನಾನಾ ವಿಧವಾದ, ಅತ್ಯಂತ ತೀಕ್ಷ್ಣವಾದ ಶಸ್ತ್ರಗಳ ಮಳೆಗೆ ಸಿಲುಕಿದ ಪ್ರಾಗ್ಜ್ಯೋತಿಷ ಅಧಿಪತಿಯ ಸುಪ್ರತೀಕ ಗಜವು ಎರಡರಷ್ಟು ದೂರ ಓಡಿಹೋಯಿತು.

ಸಂಜಾತರುಧಿರೋತ್ಪೀಡಃ ಪ್ರೇಕ್ಷಣೀಯೋಽಭವದ್ ರಣೇ |
ಗಭಸ್ತಿಭಿರಿವಾರ್ಕಸ್ಯ ಸಂಸ್ಯೂತೋ ಜಲದೋ ಮಹಾನ್ ||46||

ಗಾಯಗೊಂಡ ಶಿರಸ್ಸಿನಿಂದ ರಕ್ತವು ಸುರಿಯುತ್ತಿರಲು ಸೂರ್ಯಕಿರಣಗಳು ನಾಟಿದ ಮೇಘದಂತೆ ರಣರಂಗದಲ್ಲಿ ಆ ಗಜವು ಸುಂದರವಾಗಿ ಕಾಣುತ್ತಿದ್ದಿತು.

ಸ ಚೋದಿತೋ ಮದಸ್ರಾವೀ ಭಗದತ್ತೇನ ವಾರಣಃ |
ಅಭ್ಯಧಾವತ ತಾನ್ ಸರ್ವಾನ್ ಕಾಲೋತ್ಸೃಷ್ಟ ಇವಾಂತಕಃ |
ದ್ವಿಗುಣಂ ಜವಮಾಸ್ಥಾಯ ಕಂಪಯಂಶ್ಚರಣೈರ್ಮಹೀಮ್ ||47||

ಭಗದತ್ತನಿಂದ ಪ್ರಚೋದಿಸಲ್ಪಟ್ಟ ಮದವನ್ನು ಸುರಿಸುವ ಆ ಗಜವು ಮೊದಲಿಗಿಂತ ಎರಡರಷ್ಟು ವೇಗವನ್ನು ಹೊಂದಿ ತನ್ನ ಪಾದನ್ಯಾಸದಿಂದ ಭೂಮಿಯನ್ನು ನಡುಗಿಸುತ್ತಾ ಕಾಲಪ್ರೇರಿತನಾದ ಯಮನಂತೆ ಆ ಎಲ್ಲರ ಮೇಲೆ ಧಾವಿಸಿತು.

ತಸ್ಯ ತತ್ಸುಮಹದ್ರೂಪಂ ದೃಷ್ಟ್ವಾ ಸರ್ವೇ ಮಹಾರಥಾಃ |
ಅಸಹ್ಯಂ ಮನ್ಯಮಾನಾಸ್ತೇ ನಾತಿಪ್ರಮನಸೋಽಭವನ್ ||48||

ಆ ಗಜದ ಅತ್ಯಂತ ದೊಡ್ಡ ಆಕಾರವನ್ನು ನೋಡಿ ಪಾಂಡವರ ಎಲ್ಲ ಮಹಾರಥರೂ ಇದನ್ನು ಎದುರಿಸಲು ಸಾಧ್ಯವಿಲ್ಲವೆಂದು ತಿಳಿದು ಮನಸ್ಸಿನಲ್ಲಿ ಬೇಸರಗೊಂಡರು.

ತತಸ್ತು ನೃಪತಿಃ ಕ್ರುದ್ಧೋ ಭೀಮಸೇನಂ ಸ್ತನಾಂತರೇ |

ಆಜಘಾನ ನರವ್ಯಾಘ್ರ ಶರೇಣ ನತಪರ್ವಣಾ ॥49॥
ಎಲೈ ನರವ್ಯಾಘ್ರನೇ, ಆಗ ಕೋಪಗೊಂಡ ರಾಜನಾದ ಭಗದತ್ತನು ಬಾಗಿದ ತುದಿಯುಳ್ಳ ಬಾಣದಿಂದ ಭೀಮಸೇನನನ್ನು ಸ್ತನಗಳ ಮಧ್ಯದಲ್ಲಿ ಹೊಡೆದನು.
ಸೋಽತಿವಿದ್ಧೋ ಮಹೇಷ್ವಾಸಸ್ತೇನ ರಾಜ್ಞಾ ಮಹಾರಥಃ |
ಮೂರ್ಚ್ಛಯಾಭಿಪರೀತಾಂಗೋ ಧ್ವಜಯಷ್ಟಿಮುಪಾಶ್ರಿತಃ ॥50॥
ಮಹಾರಥನೂ, ಮಹಾಧನುರ್ಧಾರಿಯೂ ಆದ ಭೀಮಸೇನನು ಭಗದತ್ತ ರಾಜನಿಂದ ಗಾಢವಾಗಿ ಹೊಡೆಯಲ್ಪಟ್ಟು ಮೂರ್ಛೆಯನ್ನು ಹೊಂದುತ್ತಾ ಧ್ವಜದ ದಂಡವನ್ನು ಹಿಡಿದು ನಿಂತನು.
ತಾಂಸ್ತು ಭೀತಾನ್ ಸಮಾಲಕ್ಷ್ಯ ಭೀಮಸೇನಂ ಚ ಮೂರ್ಚ್ಛಿತಮ್ |
ನನಾದ ಬಲವನ್ನಾದಂ ಭಗದತ್ತಃ ಪ್ರತಾಪವಾನ್ ॥51॥
ಶತ್ರುಸೈನ್ಯದವರೆಲ್ಲರೂ ಭೀತರಾಗಿರುವುದನ್ನೂ, ಭೀಮಸೇನನು ಮೂರ್ಛೆ ಹೊಂದಿರುವುದನ್ನೂ ಗಮನಿಸಿದ ಪ್ರತಾಪಶಾಲಿಯಾದ ಭಗದತ್ತನು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು.
ತತೋ ಘಟೋತ್ಕಚೋ ರಾಜನ್ ಪ್ರೇಕ್ಷ್ಯ ಭೀಮಂ ತಥಾಗತಮ್ |
ಸಂಕ್ರುದ್ಧೋ ರಾಕ್ಷಸೋ ಘೋರಸ್ತತ್ರೈವಾಂತರಧೀಯತ ॥52॥
ರಾಜನೇ, ಭೀಮಸೇನನು ಆ ಅವಸ್ಥೆಗೆ ಹೋಗಿರುವುದನ್ನು ನೋಡಿ ಆಗ ರಾಕ್ಷಸನೂ, ಘೋರರೂಪನೂ ಆದ ಘಟೋತ್ಕಚನು ಬಹಳ ಕೋಪಗೊಂಡು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಸ ಕೃತ್ವಾ ದಾರುಣಾಂ ಮಾಯಾಂ ಭೀರೂಣಾಂ ಭಯವರ್ಧಿನೀಮ್ |
ಅದೃಶ್ಯತ ನಿಮೇಷಾರ್ಧಾದ್ ಘೋರರೂಪಂ ಸಮಾಶ್ರಿತಃ ॥53॥
ಅವನು ಅರ್ಧನಿಮಿಷದಲ್ಲಿ ಭೀರುಗಳಿಗೆ ಭಯವನ್ನು ಹೆಚ್ಚಿಸುವ ದಾರುಣವಾದ ಘೋರವಾದ ಮಾಯಾರೂಪವನ್ನು ತೆಗೆದುಕೊಂಡು ಪುನಃ ಕಾಣಿಸಿಕೊಂಡನು.
ಐರಾವತಂ ಸಮಾರುಹ್ಯ ಸ್ವಯಂ ಮಾಯಾಮಯಂ ಕೃತಮ್ |
ತಸ್ಯ ಚಾನ್ಯೇಽಪಿ ದಿಙ್ನಾಗಾ ಬಭೂವುರನುಯಾಯಿನಃ ॥54॥
ತನ್ನ ಮಾಯೆಯಿಂದ ನಿರ್ಮಿಸಿದ ಐರಾವತ ಗಜವನ್ನು ಏರಿ ಬಂದನು. ಅದಕ್ಕೆ ಉಳಿದ ದಿಗ್ಗಜಗಳು ಅನುಯಾಯಿಗಳಾಗಿದ್ದವು.
ಅಂಜನೋ ವಾಮನಶ್ಚೈವ ಮಹಾಪದ್ಮಶ್ಚ ಸುಪ್ರಭಃ |
ತ್ರಯ ಏತೇ ಮಹಾನಾಗಾ ರಾಕ್ಷಸೈಃ ಸಮಧಿಷ್ಠಿತಾಃ ॥55॥
ಮಹಾಕಾಯಾಸ್ತ್ರಿಧಾ ರಾಜನ್ ಪ್ರಸ್ರುವಂತೋ ಮದಂ ಬಹು |
ತೇಜೋವೀರ್ಯಬಲೋಪೇತಾ ಮಹಾಬಲಪರಾಕ್ರಮಾಃ ॥56॥
ಅಂಜನ, ವಾಮನ, ಒಳ್ಳೆಯ ಕಾಂತಿಯುಳ್ಳ ಮಹಾಪದ್ಮ ಈ ಮೂರು ಗಜಗಳು ರಾಕ್ಷಸರಿಂದ ಅಧಿಷ್ಠಿತವಾಗಿ ದೊಡ್ಡ ಶರೀರವನ್ನು ಧರಿಸಿ ಬಹಳವಾದ ಮದೋದಕವನ್ನು ಸುರಿಸುತ್ತಾ, ತೇಜೋವೀರ್ಯಬಲಗಳಿಂದ ಕೂಡಿ ಮಹಾಬಲವನ್ನು, ಪರಾಕ್ರಮವನ್ನು ಹೊಂದಿದವುಗಳಾಗಿ (ಘಟೋತ್ಕಚನನ್ನು ಅನುಸರಿಸಿ ಬಂದವು).
ಘಟೋತ್ಕಚಸ್ತು ಸ್ವಂ ನಾಗಂ ಚೋದಯಾಮಾಸ ತಂ ತತಃ |
ಸಗಜಂ ಭಗದತ್ತಂ ತು ಹಂತುಕಾಮಃ ಪರಂತಪಃ ॥57॥
ಪರಂತಪನಾದ ಘಟೋತ್ಕಚನಾದರೂ ಗಜದಿಂದ ಸಹಿತನಾಗಿ ಭಗದತ್ತನನ್ನು ಕೊಲ್ಲಲು ಬಯಸಿ ತನ್ನ ಗಜವನ್ನು ಅವನ ಕಡೆಗೆ ಪ್ರೇರಿಸಿದನು.
ತೇ ಚಾನ್ಯೇ ಚೋದಿತಾ ನಾಗಾ ರಾಕ್ಷಸೈಸ್ತೈರ್ಮಹಾಬಲೈಃ |
ಪರಿಪೇತುಃ ಸುಸಂರಬ್ಧಾಶ್ಚತುರ್ದಂಷ್ಟ್ರಾಶ್ಚತುರ್ದಿಶಮ್ |
ಭಗದತ್ತಸ್ಯ ತಂ ನಾಗಂ ವಿಷಾಣೈಸ್ತೇಽಭ್ಯಪೀಡಯನ್ ॥58॥
ಮಹಾಬಲವುಳ್ಳ ರಾಕ್ಷಸರಿಂದ ಪ್ರಚೋದಿತವಾದ, ಬಹಳ ಸಿಟ್ಟಿನಿಂದ ಕೂಡಿದ, ನಾಲ್ಕುದಂತಗಳುಳ್ಳ ಉಳಿದ ಗಜಗಳೂ ಸಹ ಶತ್ರುಸೈನ್ಯದ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ಬಿದ್ದು ಭಗದತ್ತನ ಸುಪ್ರತೀಕ ಗಜವನ್ನು ತಮ್ಮ ದಂತಗಳಿಂದ ತಿವಿದವು.
ಸಂಪೀಡ್ಯಮಾನಸ್ತೈರ್ನಾಗೈರ್ವೇದನಾರ್ತಃ ಶರಾತುರಃ |
ಸೋಽನದತ್ ಸುಮಹಾನಾದಮಿಂದ್ರಾಶನಿಸಮಸ್ವನಮ್ ॥59॥
ಆ ಗಜಗಳಿಂದ ಹೀಗೆ ಪೀಡಿಸಲ್ಪಟ್ಟು ಬಾಣಗಳ ಏಟಿಗೆ ಸಿಲುಕಿ ನೋವನ್ನು ಅನುಭವಿಸುತ್ತಿದ್ದ ಸುಪ್ರತೀಕವು ಇಂದ್ರನ ವಜ್ರಾಯುಧದ ಘೋಷಕ್ಕೆ ಸಮಾನವಾದ ನಾದದಿಂದ ಮಹಾನಾದವನ್ನು ಮಾಡಿತು.
ತಸ್ಯ ತಂ ನದತೋ ನಾದಂ ಸುಘೋರಂ ಭೀಮನಿಸ್ವನಮ್ |
ಶ್ರುತ್ವಾ ಭೀಷ್ಮೋಽಬ್ರವೀದ್ ದ್ರೋಣಂ ರಾಜಾನಂ ಚ ಸುಯೋಧನಮ್ ॥
ಅದರ ಅತ್ಯಂತ ಘೋರವೂ ಮತ್ತು ಭಯಂಕರವೂ ಆದ ಆ ನಾದವನ್ನು ಕೇಳಿದ ಭೀಷ್ಮರು ದ್ರೋಣರನ್ನು ಮತ್ತು ರಾಜನಾದ ದುರ್ಯೋಧನನನ್ನು ಕುರಿತು ಹೀಗೆ ಮಾತನಾಡಿದರು.
ಏಷ ಯುಧ್ಯತಿ ಸಂಗ್ರಾಮೇ ಹೈಡಿಂಬೇನ ದುರಾತ್ಮನಾ |
ಭಗದತ್ತೋ ಮಹೇಷ್ವಾಸಃ ಕೃಚ್ಛ್ರೇಣ ಪರಿವರ್ತತೇ ॥61॥
ದುಷ್ಟನಾದ ಘಟೋತ್ಕಚನ ಜೊತೆಯಲ್ಲಿ ಯುದ್ಧ ಮಾಡುತ್ತಿರುವ ಮಹಾಧನುರ್ಧಾರಿಯಾದ ಈ ಭಗದತ್ತನು ಕಷ್ಟಕ್ಕೆ ಸಿಲುಕಿದ್ದಾನೆ.
ರಾಕ್ಷಸಶ್ಚ ಮಹಾಮಾಯಃ ಸ ಚ ರಾಜಾತಿಕೋಪನಃ |

ತೌ ಸಮೇತೌ ಮಹಾವೀರ್ಯೌ ಕಾಲಮೃತ್ಯುಸಮಾವುಭೌ ॥62॥
ರಾಕ್ಷಸನಾದ ಘಟೋತ್ಕಚನು ಮಹಾಮಾಯೆಯಿಂದ ಕೂಡಿದವನು ಮತ್ತು ಭಗದತ್ತನು ಬಹಳ ಕೋಪದಿಂದ ಕೂಡಿದವನು. ಮಹಾಪರಾಕ್ರಮಶಾಲಿಗಳಾದ ಕಾಲಮೃತ್ಯುವಿಗೆ ಸಮರಾದ ಅವರಿಬ್ಬರೂ ಪರಸ್ಪರವಾಗಿ ಯುದ್ಧವನ್ನು ಮಾಡುತ್ತಿದ್ದಾರೆ.
ಶ್ರೂಯತೇ ಹ್ರೇಷ ಹೃಷ್ಟಾನಾಂ ಪಾಂಡವಾನಾಂ ಮಹಾಸ್ವನಃ |
ಹಸ್ತಿನಶ್ಚೈವ ಸುಮಹಾನ್ ಭೀತಸ್ಯ ರುವತೋ ಧ್ವನಿಃ ॥63॥
ಸಂತೋಷಗೊಂಡ ಪಾಂಡವರ ಈ ಮಹಾನಾದವೂ, ಹೆದರಿ ಗೋಳಿಡುತ್ತಿರುವ ಸುಪ್ರತೀಕ ಗಜದ ಮಹಾನಾದವೂ ಕೇಳಿಬರುತ್ತಿದೆ.
ತತ್ರ ಗಚ್ಛಾಮ ಭದ್ರಂ ವೋ ರಾಜಾನಂ ಪರಿರಕ್ಷಿತುಮ್ |
ಅರಕ್ಷ್ಯಮಾಣಃ ಸಮರೇ ಕ್ಷಿಪ್ರಂ ಪ್ರಾಣಾನ್ ವಿಮೋಕ್ಷ್ಯತೇ ॥64॥
ನಿಮಗೆ ಮಂಗಳವಾಗಲಿ. ರಾಜನನ್ನು ರಕ್ಷಿಸಲು ನಾವು ಅಲ್ಲಿಗೆ ಹೋಗೋಣ. ರಕ್ಷಿಸದಿದ್ದರೆ ಅವನು ಶೀಘ್ರವಾಗಿ ಪ್ರಾಣವನ್ನು ಕಳೆದುಕೊಳ್ಳುವನು.
ತೇ ತ್ವರಧ್ವಂ ಮಹಾವೀರ್ಯಾಃ ಕಿಂ ಚಿರೇಣ ಪ್ರಯಾಮಹೇ |
ಮಹಾನ್ ಹಿ ವರ್ತತೇ ರೌದ್ರಃ ಸಂಗ್ರಾಮೋ ಲೋಮಹರ್ಷಣಃ ॥65॥
ಎಲೈ ಮಹಾಪರಾಕ್ರಮಿಗಳೇ, ಬೇಗ ಹೊರಡಿ. ನಾವು ಏಕೆ ಅಲ್ಲಿಗೆ ನಿಧಾನವಾಗಿ ಹೋಗಬೇಕು? ಭಯಂಕರವೂ, ರೋಮಾಂಚಕಾರಿಯೂ ಆದ ದೊಡ್ಡ ಯುದ್ಧವು ನಡೆಯುತ್ತಿದೆ.
ಭಕ್ತಶ್ಚ ಕುಲಪುತ್ರಶ್ಚ ಶೂರಶ್ಚ ಪೃತನಾಪತಿಃ |
ಯುಕ್ತಂ ತಸ್ಯ ಪರಿತ್ರಾಣಂ ಕರ್ತುಮಸ್ಮಾಭಿರಚ್ಯುತಾಃ ॥66॥
ಎಲೈ ಪರಾಕ್ರಮದಿಂದ ಚ್ಯುತರಾಗದ ರಾಜರೇ, ಭಗದತ್ತನಾದರೂ ನಮ್ಮಲ್ಲಿ ನಿಷ್ಠೆಯುಳ್ಳವನು, ಕುಲಪುತ್ರನಾದವನು, ಶೂರನು ಮತ್ತು ಸೇನಾಪತಿಯಾದವನು. ನಾವು ಅವನನ್ನು ರಕ್ಷಣೆ ಮಾಡುವುದು ಅತ್ಯಂತ ಯೋಗ್ಯವಾಗಿರುತ್ತದೆ.
ಭೀಷ್ಮಸ್ಯ ತದ್ವಚಃ ಶ್ರುತ್ವಾ ಭಾರದ್ವಾಜಪುರೋಗಮಾಃ |
ಸಹಿತಾಃ ಸರ್ವರಾಜಾನೋ ಭಗದತ್ತಪರೀಪ್ಸಯಾ |
ಉತ್ತಮಂ ಜವಮಾಸ್ಥಾಯ ಪ್ರಯಯುರ್ಯತ್ರ ಸೋಽಭವತ್ ॥67॥
ಭೀಷ್ಮರ ಆ ಮಾತುಗಳನ್ನು ಕೇಳಿ ದ್ರೋಣರನ್ನು ಮುಂದೆ ಮಾಡಿಕೊಂಡು ಎಲ್ಲ ರಾಜರೂ ಭಗದತ್ತನನ್ನು ರಕ್ಷಿಸಲು ಬಯಸಿ ಶ್ರೇಷ್ಠವಾದ ವೇಗವನ್ನು ಹೊಂದಿ ಅವನು ಇದ್ದ ಕಡೆಗೆ ಧಾವಿಸಿದರು.
ತಾನ್ ಪ್ರಯಾತಾನ್ ಸಮಾಲೋಕ್ಯ ಯುಧಿಷ್ಠಿರಪುರೋಗಮಾಃ |
ಪಾಂಚಾಲಾಃ ಪಾಂಡವೈಃ ಸಾರ್ಧಂ ಪೃಷ್ಠತೋಽನುಯಯುಃ ಪರಾನ್ ॥
ತಾನ್ಯನೀಕಾನ್ಯಥಾಲೋಕ್ಯ ರಾಕ್ಷಸೇಂದ್ರಃ ಪ್ರತಾಪವಾನ್ |
ನನಾದ ಸುಮಹಾನಾದಂ ವಿಸ್ಫೋಟಮಶನೇರಿವ ॥69॥
ಅವರು ತಮ್ಮ ಸನ್ನಿಧಿಯಿಂದ ಹೊರಟು ಹೋದುದನ್ನು ನೋಡಿ ಯುಧಿಷ್ಠಿರನೇ ಮೊದಲಾದ ಪಾಂಚಾಲರೂ ಮತ್ತು ಪಾಂಡವರೂ ಮತ್ತು ಪ್ರತಾಪಶಾಲಿಯಾದ ರಾಕ್ಷಸೇಂದ್ರನಾದ ಘಟೋತ್ಕಚನೂ (ಹರ್ಷಗೊಂಡರು). ಆ ಸೈನ್ಯವನ್ನು ನೋಡಿದ ಪ್ರತಾಪಶಾಲಿಯಾದ ರಾಕ್ಷಸೇಂದ್ರನಾದ ಘಟೋತ್ಕಚನು ಸಿಡಿಲಿನ ಸ್ಫೋಟದಂತಿದ್ದ ದೊಡ್ಡ ನಾದವನ್ನು ಮಾಡಿದನು.
ತಸ್ಯ ತಂ ನಿನದಂ ಶ್ರುತ್ವಾ ದೃಷ್ಟ್ವಾ ನಾಗಾಂಶ್ಚ ಯುಧ್ಯತಃ |
ಭೀಷ್ಮಃ ಶಾಂತನವೋ ಭೂಯೋ ಭಾರದ್ವಾಜಮಭಾಷತ ॥70॥
ಗಜಗಳ ಜೊತೆಯಲ್ಲಿ ಯುದ್ಧವನ್ನು ಮಾಡುವ ಅವನ ಆ ನಾದವನ್ನು ಕೇಳಿದ ಶಂತನು ಪುತ್ರರಾದ ಭೀಷ್ಮರು ಪುನಃ ದ್ರೋಣರ ಜೊತೆಯಲ್ಲಿ ಮಾತನಾಡಿದರು.
ನ ರೋಚತೇ ಮೇ ಸಂಗ್ರಾಮೋ ಹೈಡಿಂಬೇನ ದುರಾತ್ಮನಾ |
ಬಲವೀರ್ಯಸಮಾವಿಷ್ಟಃ ಸಸಹಾಯಶ್ಚ ಸಾಂಪ್ರತಮ್ ॥71॥
ದುಷ್ಟನಾದ ಘಟೋತ್ಕಚನ ಜೊತೆಯಲ್ಲಿ ಯುದ್ಧವನ್ನು ಮುಂದುವರಿಸುವುದು ನನಗೆ ಇಷ್ಟವಿಲ್ಲ. ಬಲವೀರ್ಯದಿಂದ ತುಂಬಿದ ಅವನು ಈಗ ಉಳಿದವರ ಸಹಾಯವನ್ನೂ ಹೊಂದಿದ್ದಾನೆ.
ನೈಷ ಶಕ್ಯೋ ಯುಧಾ ಜೇತುಮಪಿ ವಜ್ರಭೃತಾ ಸ್ವಯಮ್ |
ಲಬ್ಧಲಕ್ಷ್ಯಃ ಪ್ರಹಾರೀ ಚ ವಯಂ ಚ ಶ್ರಾಂತವಾಹನಾಃ |
ಪಾಂಚಾಲೈಃ ಪಾಂಡವೇಯೈಶ್ಚ ದಿವಸಂ ಕ್ಷತವಿಕ್ಷತಾಃ ॥72॥
ವಜ್ರಾಯುಧವನ್ನು ಧರಿಸಿದ ಇಂದ್ರನೂ ಸಹ ಅವನನ್ನು ಯುದ್ಧದಲ್ಲಿ ಗೆಲ್ಲಲಾರ. ಘಟೋತ್ಕಚನಾದರೂ ಗುರಿಯನ್ನು ತಪ್ಪದೆ ಪ್ರಹಾರ ಮಾಡುತ್ತಿದ್ದಾನೆ. ಪಾಂಚಾಲರಿಂದ ಮತ್ತು ಪಾಂಡವರಿಂದ ಬೆಳಗಿನಿಂದ ಬಹಳವಾಗಿ ಗಾಯಗೊಂಡು ನಮ್ಮ ವಾಹನಗಳು ಬಳಲಿವೆ.
ಇದಾನೀಂ ಯುಧಿ ನಿರ್ಜೇತುಂ ನ ಶಕ್ಯೋಽಸೌ ಸ ರಾಕ್ಷಸಃ |
ಅಸ್ತಮಭ್ಯೇತಿ ಸವಿತಾ ರಾತ್ರೌ ಯೋದ್ಧುಂ ನ ಶಕ್ಯತೇ ॥73॥
ತನ್ನ ಮೇ ರೋಚತೇ ಯುದ್ಧಂ ಪಾಂಡವೈರ್ಜಿತಕಾಶಿಭಿಃ |
ಘುಷ್ಯತಾಮವಹಾರೋಽದ್ಯ ಶ್ವೋ ಯೋತ್ಸ್ಯಾಮಃ ಪರೈಃ ಸಹ ॥74॥
ಈಗ ರಾಕ್ಷಸನನ್ನು ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ. ಸೂರ್ಯನು ಅಸ್ತಂಗತನಾಗುತ್ತಿದ್ದಾನೆ. ರಾತ್ರಿಯಲ್ಲಿ ಯುದ್ಧ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಜಯವನ್ನು ಹೊಂದಿದ ಉತ್ಸಾಹದಿಂದ ಇರುವ ಮನಸ್ಸುಳ್ಳ ಪಾಂಡವರ ಜೊತೆಯಲ್ಲಿ ಯುದ್ಧವು ನನಗೆ

ಇಷ್ಟವಾಗುವುದಿಲ್ಲ. ಸೈನ್ಯವನ್ನು ಹಿಂದಕ್ಕೆ ತೆಗೆದುಕೊಳ್ಳೋಣ. ಶತ್ರುಗಳ ಜೊತೆಯಲ್ಲಿ ನಾಳೆ ಯುದ್ಧವನ್ನು ಮಾಡುವೆವು.
ಪಿತಾಮಹವಚಃ ಶ್ರುತ್ವಾ ತಥಾ ಚಕ್ರುಃ ಸ್ಮ ಕೌರವಾಃ |
ಉಪಾಯೇನಾಪಯಾನಂ ತೇ ಘಟೋತ್ಕಚಭಯಾರ್ದಿತಾಃ ||75||
ಪಿತಾಮಹರಾದ ಭೀಷ್ಮರ ಮಾತನ್ನು ಕೇಳಿದ ಕೌರವರು ಘಟೋತ್ಕಚನ ಭಯದಿಂದ ಪೀಡಿತರಾಗಿ ಹೀಗೆ ಉಪಾಯದಿಂದ ರಣರಂಗದಿಂದ ಅಪಯಾನವನ್ನು ಮಾಡಿದರು.
ಕೌರವೇಷು ನಿವೃತ್ತೇಷು ಪಾಂಡವಾ ಜಿತಕಾಶಿನಃ |
ಸಿಂಹನಾದಮಕುರ್ವಂತ ಶಂಖವೇಣುಸ್ವನೈಃ ಸಹ ||76||
ಕೌರವರು ಹೊರಟು ಹೋದ ಮೇಲೆ ಜಯದಿಂದ ಸಂತುಷ್ಟರಾದ ಮನಸ್ಸುಳ್ಳ ಪಾಂಡವರು ಶಂಖ-ವೇಣು ನಾದಗಳ ಜೊತೆಯಲ್ಲಿ ಸಿಂಹನಾದವನ್ನು ಮಾಡಿದರು.
ಏವಂ ತದಭವದ್ ಯುದ್ಧಂ ದಿವಸಂ ಭರತರ್ಷಭ |
ಪಾಂಡವಾನಾಂ ಕುರೂಣಾಂ ಚ ಪುರಸ್ಕೃತ್ಯ ಘಟೋತ್ಕಚಮ್ ||77||
ಎಲೈ ಭರತಶ್ರೇಷ್ಠನೇ, ಹೀಗೆ ಘಟೋತ್ಕಚನನ್ನು ಮುಂದೆ ಮಾಡಿಕೊಂಡ ಪಾಂಡವರಿಗೂ ಮತ್ತು ಕೌರವರಿಗೂ ಆ ದಿವಸವೆಲ್ಲಾ ಯುದ್ಧವು ನಡೆಯಿತು.
ಕೌರವಾಸ್ತು ತತೋ ರಾಜನ್ ಪ್ರಯಯುಃ ಶಿಬಿರಂ ಸ್ವಕಮ್ |
ವ್ರೀಡಮಾನಾ ನಿಶಾಕಾಲೇ ಪಾಂಡವೇಯೈಃ ಪರಾಜಿತಾಃ ||78||
ಎಲೈ ರಾಜನೇ, ಅನಂತರ ರಾತ್ರಿಯು ಬರುತ್ತಿರಲು ಪಾಂಡವರಿಂದ ಪರಾಜಿತರಾದ ಕೌರವರಾದರೂ ನಾಚಿಕೆ ಪಡುತ್ತಾ ತಮ್ಮ ಶಿಬಿರಕ್ಕೆ ಹೋದರು.
ಶರವಿಕ್ಷತಗಾತ್ರಾಶ್ಚ ಪಾಂಡುಪುತ್ರಾ ಮಹಾರಥಾಃ |
ಯುದ್ಧೇ ಸುಮನಸೋ ಭೂತ್ವಾ ಶಿಬಿರಾಯೈವ ಜಗ್ಮಿರೇ ||79||
ಮಹಾರಥರಾದ ಪಾಂಡವರು ಬಾಣಗಳ ಏಟಿನಿಂದ ಶರೀರದಲ್ಲಿ ಗಾಯಗೊಂಡಿದ್ದರೂ ಯುದ್ಧದ ವಿಷಯದಲ್ಲಿ ಉತ್ಸಾಹವುಳ್ಳವರಾಗಿ ತಮ್ಮ ಶಿಬಿರಗಳಿಗೆ ಹೋದರು.
ಪುರಸ್ಕೃತ್ಯ ಮಹಾರಾಜ ಭೀಮಸೇನಘಟೋತ್ಕಚೌ |
ಪೂಜಯಂತಸ್ತದಾನ್ಯೋನ್ಯಂ ಮುದಾ ಪರಮಯಾ ಯುತಾಃ ||80||
ನದಂತೋ ವಿವಿಧಾನ್ ನಾದಾಂಸ್ತೂರ್ಯಸ್ವನವಿಮಿಶ್ರಿತಾನ್ |
ಸಿಂಹನಾದಾಂಶ್ಚ ಕುರ್ವಾಣಾ ವಿಮಿಶ್ರಾನ್ ಶಂಖನಿಸ್ವನೈಃ ||81||
ವಿನದಂತೋ ಮಹಾತ್ಮಾನಃ ಕಂಪಯಂತಶ್ಚ ಮೇದಿನೀಮ್ |
ಘಟ್ಟಯಂತಶ್ಚ ಮರ್ಮಾಣಿ ತವ ಪುತ್ರಸ್ಯ ಮಾರಿಷ |
ಪ್ರಯಾತಾಃ ಶಿಬಿರಾಯೈವ ನಿಶಾಕಾಲೇ ಪರಂತಪಾಃ ||82||
ಎಲೈ ಮಹಾರಾಜನೇ, ಭೀಮಸೇನ-ಘಟೋತ್ಕಚರನ್ನು ಮುಂದೆ ಮಾಡಿಕೊಂಡು ಪರಸ್ಪರವಾಗಿ ಪೂಜಿಸುತ್ತಾ, ಬಹಳ ಸಂತೋಷದಿಂದ ಕೂಡಿದವರಾಗಿ ತೂರ್ಯಾದಿ ನಾದ ಮಿಶ್ರಿತವಾದ ವಿವಿಧವಾದ ನಾದಗಳನ್ನು ಮಾಡುತ್ತಾ, ಶಂಖಧ್ವನಿಗಳಿಂದ ಕೂಡಿದ ಸಿಂಹನಾದಗಳನ್ನು ಮಾಡುತ್ತಾ ಮಹಾತ್ಮರೂ, ಪರಂತಪರೂ ಆದ ಅವರು ಭೂಮಿಯನ್ನು ನಡುಗಿಸುತ್ತಾ ಎಲೈ ಪೂಜ್ಯನೇ, ನಿನ್ನ ಪುತ್ರನಾದ ದುರ್ಯೋಧನನ ಮರ್ಮಗಳನ್ನು ಭೇದಿಸುತ್ತಾ ರಾತ್ರಿಯು ಸಮೀಪಿಸುತ್ತಿರಲು ತಮ್ಮ ಶಿಬಿರಗಳಿಗೆ ಹೋದರು.
ದುರ್ಯೋಧನಸ್ತು ನೃಪತಿರ್ದೀನೋ ಭ್ರಾತೃವಧೇನ ಚ |
ಮುಹೂರ್ತಂ ಚಿಂತಯಾಮಾಸ ಬಾಷ್ಪಶೋಕಸಮಾಕುಲಃ ||83||
ರಾಜನಾದ ದುರ್ಯೋಧನನಾದರೂ ತಮ್ಮಂದಿರ ವಧೆಯಿಂದ ದೈನ್ಯವನ್ನು ಹೊಂದಿ, ಬಾಷ್ಪಶೋಕಗಳಿಂದ ಕೂಡಿದವನಾಗಿ ಒಂದು ಮುಹೂರ್ತದ ಕಾಲ ಚಿಂತಿಸಿದನು.
ತತಃ ಕೃತ್ವಾ ವಿಧಿಂ ಸರ್ವಂ ಶಿಬಿರಸ್ಯ ಯಥಾವಿಧಿ |
ಪ್ರದಧ್ಯೌ ಶೋಕಸಂತಪ್ತೋ ಭ್ರಾತೃವ್ಯಸನಕರ್ಶಿತಃ ||84||
ಅನಂತರ ಶಿಬಿರದಲ್ಲಿ ಮಾಡಬೇಕಾದ ಎಲ್ಲ ವ್ಯವಸ್ಥೆಯನ್ನೂ ಮಾಡಿ ತಮ್ಮಂದಿರ ವಧೆಯ ವ್ಯಸನದಿಂದ ಕರ್ಶಿತನಾಗಿ ಶೋಕಸಂತಪ್ತನಾಗಿ ಚಿಂತಾಕ್ರಾಂತನಾದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಷ್ಟಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತ - ಭೀಷ್ಮಪರ್ವ
ಅರವತ್ತೊಂದನೆಯ ಅಧ್ಯಾಯ
ಪಾಂಡವರ ಜಯವನ್ನು ಕುರಿತು ಕಾರಣವನ್ನು ಕೇಳುವ ಧೃತರಾಷ್ಟ್ರನಿಗೆ ಸಂಜಯನಿಂದ ಉತ್ತರ ದಾನ. ಬ್ರಹ್ಮದೇವರಿಂದ ಹರಿಯ ಪ್ರಾರ್ಥನೆ.
ಧೃತರಾಷ್ಟ್ರಃ
ಭಯಂ ಮೇ ಸುಮಹಜ್ಜಾತಂ ವಿಸ್ಮಯಶ್ಚೈವ ಸಂಜಯ |

ಶ್ರುತ್ವಾ ಪಾಂಡುಕುಮಾರಾಣಾಂ ಕರ್ಮ ದೇವೈಃ ಸುದುಷ್ಕರಮ್ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ದೇವತೆಗಳಿಂದಲೂ ಸಾಧ್ಯವಾಗದಂತಹ ಪಾಂಡುಕುಮಾರರ ದುಷ್ಕರಕರ್ಮವನ್ನು ಕೇಳಿ ನನಗೆ ದೊಡ್ಡ ಭಯವೂ ಮತ್ತು ಆಶ್ಚರ್ಯವೂ ಉಂಟಾಗಿದೆ.
ಪುತ್ರಾಣಾಂ ಚ ಪರಾಭಾವಂ ಶ್ರುತ್ವಾ ಸಂಜಯ ಸರ್ವಶಃ |
ಚಿಂತಾ ಮೇ ಮಹತೀ ಸೂತ ಭವಿಷ್ಯತಿ ಕಥಂ ತ್ವಿತಿ ॥2॥
ಎಲೈ ಸಂಜಯನೇ, ನನ್ನ ಪುತ್ರರ ಸರ್ವಪ್ರಕಾರವಾದ ಪರಾಭವವನ್ನು ಕೇಳಿ ಎಲೈ ಸೂತನೇ, ನನಗೆ ಮುಂದೆ ಏನಾಗುವುದು ಎಂಬ ದೊಡ್ಡ ಚಿಂತೆ ಉಂಟಾಗಿದೆ.
ಧ್ರುವಂ ವಿದುರವಾಕ್ಯಾನಿ ಧಕ್ಷ್ಯಂತಿ ಹೃದಯಂ ಮಮ |
ಯಥಾ ಹಿ ದೃಶ್ಯತೇ ಸರ್ವಂ ದೈವಯೋಗೇನ ಸಂಜಯ ॥3॥
ಎಲೈ ಸಂಜಯನೇ, ದೈವಯೋಗದಿಂದ ನಡೆಯುತ್ತಿರುವುದೆಲ್ಲವನ್ನೂ ನೋಡಿದರೆ ವಿದುರನು ಆಡಿದ ಮಾತುಗಳು ನನ್ನ ಹೃದಯವನ್ನು ನಿಶ್ಚಯವಾಗಿ ಸುಡುವವು.
ಯತ್ರ ಭೀಷ್ಮಮುಖಾನ್ ಶೂರಾನಸ್ತ್ರಜ್ಞಾನ್ ಯೋಧಸತ್ತಮಾನ್ |
ಪಾಂಡವಾನಾಮನೀಕಾನಿ ಯೋಧಯಂತಿ ಪ್ರಹಾರಿಣಃ ॥4॥
ಕೇನಾವಧ್ಯಾ ಮಹಾತ್ಮಾನಃ ಪಾಂಡುಪುತ್ರಾ ಮಹಾಬಲಾಃ |
ಕೇನ ದತ್ತವರಾಸ್ತಾತ ಕಿಂವಾ ಜ್ಞಾನಂ ವಿದಂತಿ ತೇ |
ಯೇನ ಕ್ಷಯಂ ನ ಗಚ್ಛಂತಿ ದಿವಿ ತಾರಾಗಣಾ ಇವ ॥5॥
ಎಲ್ಲಿ ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಭೀಷ್ಮರೇ ಮೊದಲಾದ ಶೂರರು, ಅಸ್ತ್ರಜ್ಞರು ಮತ್ತು ಯೋಧಶ್ರೇಷ್ಠರು ಪಾಂಡವರನ್ನು ಮತ್ತು ಪಾಂಡವರ ಸೈನ್ಯಗಳನ್ನು ಶೂರರು ಪ್ರಹಾರ ಮಾಡುತ್ತಿದ್ದಾರೆಯೋ ಅದರಲ್ಲಿ ಮಹಾಬಲರೂ, ಮಹಾತ್ಮರೂ ಆದ ಪಾಂಡುಪುತ್ರರು ಯಾವ ಕಾರಣದಿಂದ ಅವಧ್ಯರಾಗಿದ್ದಾರೆ? ಪ್ರೀತಿಪಾತ್ರನೇ, ಅವರಿಗೆ ಯಾರು ವರವನ್ನು ನೀಡಿದ್ದಾರೆ ಅಥವಾ ಆಕಾಶದಲ್ಲಿರುವ ತಾರಾಗಣದಂತೆ ನಾಶವನ್ನು ಹೊಂದಿಸಲಾರದಂತಹ ಯಾವ ಜ್ಞಾನವನ್ನು ಅವರು ಸಂಪಾದಿಸಿದ್ದಾರೆ?
ಪುನಃಪುನರ್ನ ಮೃಷ್ಯಾಮಿ ಹತಂ ಸೈನ್ಯಂ ಸ್ಮ ಪಾಂಡವೈಃ |
ಮಯ್ಯೇವ ದಂಡಃ ಪತತಿ ದೈವಾತ್ ಪರಮದಾರುಣಃ ॥6॥
ಪಾಂಡವರಿಂದ ಪುನಃ ಪುನಃ ನನ್ನ ಸೈನ್ಯವು ಹತವಾಗುವುದನ್ನು ಕೇಳಿ ನಾನು ಸಹಿಸಲಾರೆ. ದೈವವು ನನ್ನ ಮೇಲೆಯೇ ಪರಮಘೋರವಾದ ದಂಡವನ್ನು ಪ್ರಯೋಗಿಸುತ್ತಿದೆ.
ಯಥಾವಧ್ಯಾಃ ಪಾಂಡುಸುತಾ ಯಥಾ ವಧ್ಯಾಶ್ಚ ಮೇ ಸುತಾಃ |
ಏತನ್ಮೇ ಸರ್ವಮಾಚಕ್ಷ್ವ ಯಥಾತತ್ತ್ವೇನ ಸಂಜಯ ॥7॥
ಎಲೈ ಸಂಜಯನೇ, ಪಾಂಡವರು ಏಕೆ ಅವಧ್ಯರಾಗಿದ್ದಾರೆ? ನನ್ನ ಪುತ್ರರು ಏಕೆ ವಧ್ಯರಾಗಿದ್ದಾರೆ? ಇದರ ಸತ್ಯಾಂಶವನ್ನು ಕೇಳುತ್ತಿರುವ ನನಗೆ ನೀನು ಎಲ್ಲವನ್ನೂ ಹೇಳು.
ನ ಹಿ ಪಾರಂ ಪ್ರಪಶ್ಯಾಮಿ ದುಃಖಸ್ಯಾಸ್ಯ ಕಥಂಚನ |
ಸಮುದ್ರಸ್ಯೇವ ಮಹತೋ ಭುಜಾಭ್ಯಾಂ ಪ್ರತರನ್ ನರಃ ॥8॥
ದೊಡ್ಡ ಸಮುದ್ರವನ್ನು ಭುಜಗಳಿಂದಲೇ ದಾಟಲು ಹೊರಡುವ ಮನುಷ್ಯನಂತೆ ನಾನು ಈ ನನ್ನ ದುಃಖಕ್ಕೆ ಒಂದು ಕೊನೆಯನ್ನೇ ಕಾಣುತ್ತಿಲ್ಲ.
ಪುತ್ರಾಣಾಂ ವ್ಯಸನಂ ಮನ್ಯೇ ಧ್ರುವಂ ಪ್ರಾಪ್ತಂ ಸುದಾರುಣಮ್ |
ಘಾತಯಿಷ್ಯತಿ ಮೇ ಪುತ್ರಾನ್ ಸರ್ವಾನ್ ಭೀಮೋ ನ ಸಂಶಯಃ ॥9॥
ನನ್ನ ಮಕ್ಕಳಿಗೆ ಘೋರವಾದ ವ್ಯಸನವು ನಿಶ್ಚಿತವಾಗಿ ಬಂದಿದೆಯೆಂದು ನಾನು ತಿಳಿಯುತ್ತೇನೆ. ಭೀಮನು ನನ್ನ ಎಲ್ಲಾ ಪುತ್ರರನ್ನೂ ಸಂಹರಿಸುವನು. ಇದರಲ್ಲಿ ಸಂಶಯವಿಲ್ಲ.
ನ ಹಿ ಪಶ್ಯಾಮಿ ತಂ ವೀರಂ ಯೋ ಮೇ ರಕ್ಷೇತ್ ಸುತಾನ್ ರಣೇ |
ಧ್ರುವಂ ವಿನಾಶಃ ಸಮರೇ ಪುತ್ರಾಣಾಂ ಮಮ ಸಂಜಯ ॥10॥
ಯುದ್ಧದಲ್ಲಿ ನನ್ನ ಪುತ್ರರನ್ನು ಭೀಮನಿಂದ ರಕ್ಷಿಸಬಹುದಾದ ಯಾವ ವೀರನನ್ನೂ ನಾನು ಕಾಣುತ್ತಿಲ್ಲ. ಎಲೈ ಸಂಜಯನೇ, ಯುದ್ಧದಲ್ಲಿ ನನ್ನ ಪುತ್ರರ ವಿನಾಶವು ನಿಶ್ಚಿತವಾದುದು.
ತಸ್ಮಾನ್ಮೇ ಕಾರಣಂ ಸೂತ ಯುಕ್ತಿಂ ಚೈವ ವಿಶೇಷತಃ |
ಪೃಚ್ಛತೋಽದ್ಯ ಯಥಾತತ್ತ್ವಂ ಸರ್ವಮಾಖ್ಯಾತುಮರ್ಹಸಿ ॥11॥
ಆದ್ದರಿಂದಲೇ ಎಲೈ ಸೂತನೇ, ಈ ವಿಷಯದಲ್ಲಿ ಕಾರಣವನ್ನೂ ಮತ್ತು ವಿಶೇಷವಾಗಿ ಯುಕ್ತಿಯನ್ನು ಕೇಳುತ್ತಿರುವ ನನಗೆ ಈ ದಿನ ಎಲ್ಲಾ ಸತ್ಯಸಂಗತಿಯನ್ನೂ ಹೇಳುವವನಾಗು.
ದುರ್ಯೋಧನೋಽಪಿ ಯಚ್ಚಕ್ರೇ ದೃಷ್ಟ್ವಾ ಸ್ವಾನ್ ವಿಮುಖಾನ್ ರಣೇ |
ಭೀಷ್ಮದ್ರೋಣೌ ಕೃಪಶ್ಚೈವ ಸೌಬಲೇಯೋ ಜಯದ್ರಥಃ |
ದ್ರೌಣಿರ್ವಾಪಿ ಮಹೇಷ್ವಾಸೋ ವಿಕರ್ಣೋ ವಾ ಮಹಾಬಲಃ ॥12॥
ತನ್ನವರು ಯುದ್ಧವಿಮುಖರಾದುದನ್ನು ನೋಡಿ ದುರ್ಯೋಧನನು ಏನು ಮಾಡಿದನು? ಭೀಷ್ಮ-ದ್ರೋಣರು, ಕೃಪರು, ಶಕುನಿ, ಜಯದ್ರಥ, ಮಹಾಧನುರ್ಧಾರಿಗಳಾದ ಅಶ್ವತ್ಥಾಮರು ಅಥವಾ ಮಹಾಬಲನಾದ ವಿಕರ್ಣನಾಗಲೀ ಏನು ಮಾಡಿದರು?
ನಿಶ್ಚಯೋ ವಾಪಿ ಕಸ್ತೇಷಾಂ ತದಾ ಹ್ಯಾಸೀನ್ಮಹಾತ್ಮನಾಮ್ |

ವಿಮುಖೇಷು ಮಹಾಪ್ರಾಜ್ಞ ಮಮ ಪುತ್ರೇಷು ಸಂಜಯ ॥13॥
ಎಲ್ಲೈ ಸಂಜಯನೇ, ಮಹಾಪ್ರಾಜ್ಞನೇ, ನನ್ನ ಪುತ್ರರು ಯುದ್ಧದಿಂದ ವಿಮುಖರಾದಾಗ ಮಹಾತ್ಮರಾದ ಅವರ (ಭೀಷ್ಮಾದಿಗಳ) ನಿರ್ಧಾರವಾದರೂ ಏನಾಗಿದ್ದಿತು?
ಸಂಜಯಃ
ಶೃಣು ರಾಜನ್ನವಹಿತಃ ಶ್ರುತ್ವಾ ಚೈವಾವಧಾರಯ |
ನೈವ ಮಂತ್ರಕೃತಂ ಕಿಂಚಿನ್ನೈವ ಮಾಯಾಂ ತಥಾವಿಧಾಮ್ |
ನ ವೈ ವಿಭೀಷಿಕಾಂ ಕಾಂಚಿದ್ ರಾಜನ್ ಕುರ್ವಂತಿ ಪಾಂಡವಾಃ ॥14॥
ಸಂಜಯ ರಾಜನೇ, ಸಾವಧಾನ ಮನಸ್ಸಿನಿಂದ ಕೇಳು ಮತ್ತು ಕೇಳಿದುದನ್ನು ಮನಸ್ಸಿನಲ್ಲಿ ಗಟ್ಟಿಯಾಗಿ ಧರಿಸು. ಎಲ್ಲೈ ರಾಜನೇ, ಪಾಂಡವರು ಯಾವ ಮಂತ್ರವನ್ನಾಗಲೀ ಅಥವಾ ಅಂತಹ ಯಾವ ಮಾಯೆಯನ್ನಾಗಲೀ ಅಥವಾ ಹೆದರಿಸುವ ಯಾವುದಾದರೂ ಉಪಾಯವನ್ನಾಗಲೀ ಮಾಡುವುದಿಲ್ಲ.
ಯುಧ್ಯಂತಿ ತೇ ಯಥಾನ್ಯಾಯಂ ಶಕ್ತಿಮಂತಶ್ಚ ಸಂಯುಗೇ |
ಧರ್ಮೇಣ ಸರ್ವಕಾರ್ಯಾಣಿ ಕೀರ್ತಿತಾನೀತಿ ಭಾರತ |
ಆರಭಂತೇ ಸದಾ ಪಾರ್ಥಾಃ ಪ್ರಾರ್ಥಯಾನಾ ಮಹದ್ಯಶಃ ॥15॥
ನ್ಯಾಯಪೂರ್ವಕವಾಗಿ ಅವರು ಯುದ್ಧವನ್ನು ಮಾಡುತ್ತಾರೆ. ಅವರಿಗೆ ಯುದ್ಧವನ್ನು ಮಾಡುವ ಸಾಮರ್ಥ್ಯವಿದೆ. ಕ್ಷತ್ರಿಯರಿಗೆ ಹೇಳಲ್ಪಟ್ಟ ಎಲ್ಲ ಕಾರ್ಯಗಳನ್ನೂ ಎಲ್ಲೈ ಭಾರತನೇ, ಆ ಪಾಂಡವರು ಮಹಾಕೀರ್ತಿಯನ್ನು ಆಶಿಸುತ್ತಾ ಯಾವಾಗಲೂ ಧರ್ಮದಿಂದಲೇ ಆರಂಭಿಸುತ್ತಾರೆ.
ನ ತೇ ಯುದ್ಧಾನ್ನಿವರ್ತಂತೇ ಧರ್ಮೋಪೇತಾ ಮಹಾಬಲಾಃ |
ಶ್ರಿಯಾ ಪರಮಯಾ ಯುಕ್ತಾ ಯತೋ ಧರ್ಮಸ್ತತೋ ಜಯಃ |
ತೇನಾವಧ್ಯಾ ರಣೇ ಪಾರ್ಥಾ ಜಯಯುಕ್ತಾಶ್ಚ ಪಾರ್ಥಿವ ॥16॥
ಮಹಾಬಲರೂ, ಧರ್ಮನಿಷ್ಠರೂ ಆದ ಅವರು ಯುದ್ಧದಿಂದ ಹಿಂದಿರುಗುವುದಿಲ್ಲ. ಅವರು ಬಹಳ ಕಾಂತಿಯಿಂದ ಕೂಡಿದ್ದಾರೆ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಾಗುತ್ತದೆ. ಎಲ್ಲೈ ರಾಜನೇ, ಆದ್ದರಿಂದ ಯುದ್ಧದಲ್ಲಿ ಪಾಂಡವರು ಅವಧ್ಯರಾಗಿದ್ದಾರೆ ಮತ್ತು ಜಯದಿಂದ ಕೂಡಿದ್ದಾರೆ.
ತವ ಪುತ್ರಾ ದುರಾತ್ಮಾನಃ ಪಾಪೇಷ್ವಭಿರತಾಃ ಸದಾ |
ನಿಷ್ಠುರಾ ಹೀನಕರ್ಮಾಣಸ್ತೇನ ಹೀಯಂತಿ ಸಂಯುಗೇ ॥17॥
ನಿನ್ನ ಮಕ್ಕಳಾದರೂ ಯಾವಾಗಲೂ ದುರಾತ್ಮರು, ಪಾಪಕರ್ಮಗಳಲ್ಲಿ ಆಸಕ್ತರಾದವರು, ನಿಷ್ಠುರವಾದಿಗಳು, ನೀಚಕರ್ಮವನ್ನು ಎಸಗುವವರು. ಆ ಕಾರಣದಿಂದ ಯುದ್ಧದಲ್ಲಿ ನಾಶವನ್ನು ಹೊಂದುತ್ತಿದ್ದಾರೆ.
ಸುಬಹೂನಿ ನೃಶಂಸಾನಿ ಪುತ್ರೈಸ್ತವ ಜನೇಶ್ವರ |
ನಿಕೃತಾನೀಹ ಪಾಂಡೂನಾಂ ನೀಚೈರಿವ ಯಥಾ ನರೈಃ ॥18॥
ಎಲ್ಲೈ ರಾಜನೇ, ನಿನ್ನ ಮಕ್ಕಳು ಪಾಂಡುಪುತ್ರರಿಗೆ ನೀಚಜನರಿಗೆ ಯೋಗ್ಯವಾದ ರೀತಿಯಲ್ಲಿ ಅನೇಕ ಅನ್ಯಾಯಗಳನ್ನು ಮತ್ತು ಮೋಸಗಳನ್ನು ಮಾಡಿದ್ದಾರೆ.
ಸರ್ವಂ ಚ ತದನಾದೃತ್ಯ ಪುತ್ರಾಣಾಂ ತವ ಕಿಲ್ಬಿಷಮ್ |
ಸಾಪಹ್ನವಾಃ ಸದೈವಾಸನ್ ಪಾಂಡವಾಃ ಪಾಂಡುಪೂರ್ವಜ |
ನ ಚೈನಾನ್ ಬಹು ಮನ್ಯಂತೇ ಪುತ್ರಾಸ್ತವ ವಿಶಾಂಪತೇ ॥19॥
ಎಲ್ಲೈ ಪಾಂಡುವಿನ ಅಣ್ಣನೇ, ಪಾಂಡವರಾದರೂ ನಿನ್ನ ಮಕ್ಕಳ ಎಲ್ಲ ಅಪಚಾರಗಳನ್ನೂ ಗಣನೆಗೆ ತಂದುಕೊಳ್ಳದೆ ಅವನ್ನು ಯಾವಾಗಲೂ ಮನಸ್ಸಿನಲ್ಲಿ ನಿರಾಕರಿಸಿದ್ದಾರೆ. ರಾಜನೇ, ಅಂತಹ ಪಾಂಡವರನ್ನು ನಿನ್ನ ಪುತ್ರರು ಗೌರವಿಸುವುದಿಲ್ಲ.
ತಸ್ಯ ಪಾಪಸ್ಯ ಸತತಂ ಕ್ರಿಯಮಾಣಸ್ಯ ಕರ್ಮಣಃ |
ಸಂಪ್ರಾಪ್ತಂ ಸುಮಹದ್ ಘೋರಂ ಫಲಂ ಕಿಂಪಾಕಸನ್ನಿಭಮ್ |
ಸ ತದ್ ಭುಂಕ್ಷ್ವ ಮಹಾರಾಜ ಸಪುತ್ರಃ ಸಸುಹೃಜ್ಜನಃ ॥20॥
ಸತತವಾಗಿ ಮಾಡಿದ ಆ ಪಾಪಕರ್ಮಗಳ ಮಹಾಘೋರವಾದ ಫಲವು ಈಗ ಪ್ರಾಪ್ತವಾಗಿದೆ. ತಿನ್ನುವಾಗ ರುಚಿಕರವೂ, ಪರಿಣಾಮದಲ್ಲಿ ಬುದ್ಧಿನಾಶಕವೂ ಆದ ತೊಂಡೆಯ ಹಣ್ಣಿನಂತಿರುವ ಅವರ ದುಷ್ಕರ್ಮದ ಘೋರವಾದ ಫಲಗಳನ್ನು ಎಲ್ಲೈ ಮಹಾರಾಜನೇ, ನೀನು ಪುತ್ರ ಮತ್ತು ಸುಹೃಜ್ಜನರೊಡನೆ ಅನುಭವಿಸುವವನಾಗು.
ನಾವಬುಧ್ಯಸಿ ಯದ್ ರಾಜನ್ ವಾರ್ಯಮಾಣಃ ಸುಹೃಜ್ಜನೈಃ |
ವಿದುರೇಣಾಥ ಭೀಷ್ಮೇಣ ದ್ರೋಣೇನ ಚ ಮಹಾತ್ಮನಾ ॥21॥
ಎಲ್ಲೈ ರಾಜನೇ, ಸುಹೃಜ್ಜನರು, ವಿದುರನು, ಭೀಷ್ಮರು, ಮಹಾತ್ಮರಾದ ದ್ರೋಣರು ಹೇಳುತ್ತಿದ್ದರೂ ನೀನು ಅದನ್ನು ತಿಳಿಯುತ್ತಿಲ್ಲ.
ತಥಾ ಮಯಾ ಚಾಪ್ಯಸಕೃದ್ ವಾರ್ಯಮಾಣೋ ನ ಗೃಹ್ಣಸಿ |
ವಾಕ್ಯಂ ಹಿತಂ ಚ ಪಥ್ಯಂ ಚ ಮರ್ತ್ಯಃ ಪಥ್ಯಮಿವೌಷಧಮ್ |
ಪುತ್ರಾಣಾಂ ಮತಮಾಸ್ಥಾಯ ಜಿತಾನ್ ಮನ್ಯಸಿ ಪಾಂಡವಾನ್ ॥22॥
ಹಾಗೆಯೇ ನಾನೂ ಸಹ ಅನೇಕ ಬಾರಿ ಎಚ್ಚರಿಸಿದರೂ, ಮನುಷ್ಯನು ಪಥ್ಯವಾದ ಔಷಧಿಯನ್ನು ನಿರಾಕರಿಸುವಂತೆ ನನ್ನ ಹಿತವೂ ಮತ್ತು ಪಥ್ಯವೂ ಆದ ಮಾತುಗಳನ್ನು ನೀನು ಸ್ವೀಕರಿಸುತ್ತಿಲ್ಲ. ನಿನ್ನ ಪುತ್ರರ ಅಭಿಪ್ರಾಯವನ್ನು ನಂಬಿ ಪಾಂಡವರು ಸೋಲುತ್ತಾರೆ ಎಂದು ತಿಳಿದಿದ್ದೀಯೆ.

ಶೃಣು ಭೂಯೋ ಯಥಾತತ್ತ್ವಂ ಯನ್ಮಾಂ ತ್ವಂ ಪರಿಪೃಚ್ಛಸಿ |
ಕಾರಣಂ ಭರತಶ್ರೇಷ್ಠ ಪಾಂಡವಾನಾಂ ಜಯಂ ಪ್ರತಿ |
ತತ್ ತೇಽಹಂ ಕಥಯಿಷ್ಯಾಮಿ ಯಥಾಶ್ರುತಮರಿಂದಮ ॥23॥
ಎಲೈ ಭರತಶ್ರೇಷ್ಠನೇ, ಪಾಂಡವರ ಜಯವನ್ನು ಕುರಿತು ಕಾರಣವನ್ನು ನೀನು ನನ್ನನ್ನು ಕೇಳುತ್ತಿದ್ದೀಯಷ್ಟೆ! ಎಲೈ ಅರಿಂದಮನೇ, ನಾನು ಕೇಳಿದಂತೆ ಅದನ್ನು ನಿನಗೆ ಹೇಳುವೆನು. ಅದನ್ನು ಕೇಳುವವನಾಗು.
ದುರ್ಯೋಧನೇನ ಸಂಪೃಷ್ಟ ಏತಮರ್ಥಂ ಪಿತಾಮಹಃ |
ದೃಷ್ಟ್ವಾ ಭ್ರಾತೄನ್ ರಣೇ ಸರ್ವಾನ್ ನಿರ್ಜಿತಾನ್ ಸುಮಹಾರಥಾನ್॥
ಅತ್ಯಂತ ಶ್ರೇಷ್ಠ ಮಹಾರಥರಾದ ತನ್ನ ತಮ್ಮಂದಿರು ಯುದ್ಧದಲ್ಲಿ ಪರಾಭವಗೊಂಡುದನ್ನು ನೋಡಿ ಇದೇ ಪ್ರಶ್ನೆಯನ್ನು ಭೀಷ್ಮರನ್ನು ಕುರಿತು ದುರ್ಯೋಧನನು ಮಾಡಿದನು.
ಶೋಕಸಮ್ಮೂಢಹೃದಯೋ ನಿಶಾಕಾಲೇ ಸ್ಮ ಕೌರವಃ |
ಪಿತಾಮಹಂ ಮಹಾಪ್ರಾಜ್ಞಂ ವಿನಯೇನೋಪಗಮ್ಯ ಹ |
ಯದಬ್ರವೀತ್ ಸುತಸ್ತೇಽಸೌ ತನ್ಮೇ ಶೃಣು ಜನೇಶ್ವರ ॥25॥
ಎಲೈ ಜನೇಶ್ವರನೇ, ತಮ್ಮಂದಿರ ವಧೆಯಿಂದ ಉಂಟಾದ ಶೋಕದಿಂದ ತುಂಬಿದ ಹೃದಯವುಳ್ಳವನಾಗಿ ರಾತ್ರಿಯ ಸಮಯದಲ್ಲಿ ಕೌರವನಾದ ದುರ್ಯೋಧನನು ಪಿತಾಮಹರೂ, ಮಹಾಪ್ರಾಜ್ಞರೂ ಆದ ಭೀಷ್ಮರನ್ನು ಸಮೀಪಿಸಿ ವಿನಯದಿಂದ ಏನನ್ನು ಹೇಳಿದನೋ ಅದನ್ನು ನಾನು ಹೇಳುವೆನು, ಕೇಳು.
ದುರ್ಯೋಧನಃ
ತ್ವಂ ಚ ದ್ರೋಣಶ್ಚ ಶಲ್ಯಶ್ಚ ಕೃಪೋ ದ್ರೌಣಿಸ್ತಥೈವ ಚ |
ಕೃತವರ್ಮಾ ಚ ಹಾರ್ದಿಕ್ಯಃ ಕಾಂಬೋಜಶ್ಚ ಸುದಕ್ಷಿಣಃ ॥26॥
ಭೂರಿಶ್ರವಾ ವಿಕರ್ಣಶ್ಚ ಭಗದತ್ತಶ್ಚ ವೀರ್ಯವಾನ್ |
ಮಹಾರಥಾಃ ಸಮಾಖ್ಯಾತಾಃ ಕುಲಪುತ್ರಾಸ್ತನುತ್ಯಜಃ ॥27॥
ತ್ರಯಾಣಾಮಪಿ ಲೋಕಾನಾಂ ಪರ್ಯಾಪ್ತಾ ಇತಿ ಮೇ ಮತಿಃ |
ಪಾಂಡವಾನಾಂ ಸಮಸ್ತಾಶ್ಚ ನ ತಿಷ್ಠಂತಿ ಪರಾಕ್ರಮೇ ॥28॥
ದುರ್ಯೋಧನ ನೀವು, ದ್ರೋಣರು, ಶಲ್ಯ, ಕೃಪರು, ಹಾಗೆಯೇ ಅಶ್ವತ್ಥಾಮರು, ಹಾರ್ದಿಕ್ಯನಾದ ಕೃತವರ್ಮ, ಕಾಂಬೋಜ ದೇಶದ ಸುದಕ್ಷಿಣ, ಭೂರಿಶ್ರವ, ವಿಕರ್ಣ, ಪರಾಕ್ರಮಶಾಲಿಯಾದ ಭಗದತ್ತ ಇವರೆಲ್ಲರೂ ಕುಲಪುತ್ರರು, ಶರೀರತ್ಯಾಗವನ್ನು ಮಾಡಲು ಹಿಂಜರಿಯದವರು, ಪ್ರಸಿದ್ಧರಾದ ಮಹಾರಥರು, ಇವರು ಮೂರು ಲೋಕಗಳನ್ನು ಗೆಲ್ಲಲು ಸಮರ್ಥರಾದವರು ಎಂದು ನನ್ನ ಅಭಿಪ್ರಾಯ. ಆದರೆ ಎಲ್ಲರೂ ಸೇರಿದರೂ ಪಾಂಡವರ ಪರಾಕ್ರಮದ ಮುಂದೆ ನಿಲ್ಲುತ್ತಿಲ್ಲ.
ತತ್ರ ಮೇ ಸಂಶಯೋ ಜಾತಸ್ತನ್ಮಮಾಚಕ್ಷ್ವ ಪೃಚ್ಛತಃ |
ಯಂ ಸಮಾಶ್ರಿತ್ಯ ಕೌಂತೇಯಾ ಜಯಂತ್ಯಸ್ಮಾನ್ ಪದೇಪದೇ ॥29॥
ನನಗೆ ಅದರಲ್ಲಿ ಸಂಶಯವುಂಟಾಗಿದೆ. ಅದನ್ನು ಕೇಳುತ್ತಿರುವ ನನಗೆ ಉತ್ತರವನ್ನು ಹೇಳಿ. ಎಲೈ ಕೌಂತೇಯರಾದ ಭೀಷ್ಮರೇ, ಯಾವ ಬಲವನ್ನು ಅವಲಂಬಿಸಿ ಪಾಂಡವರು ಪುನಃ ಪುನಃ ನಮ್ಮನ್ನು ಜಯಿಸುತ್ತಿದ್ದಾರೆ?
ಭೀಷ್ಮಃ
ಶೃಣು ರಾಜನ್ ವಚೋ ಮಹ್ಯಂ ಯತಃತತ್ವಂ ವಕ್ಷ್ಯಾಮಿ ಕೌರವ |
ಬಹುಶಶ್ಚ ಮಮೋಕ್ತೋಽಸಿ ನ ಚ ಮೇ ತತ್ ತ್ವಯಾ ಕೃತಮ್ ॥30॥
ಭೀಷ್ಮ ಎಲೈ ರಾಜನೇ, ಕೌರವನೇ, ನಾನು ಆಡುವ ಮಾತುಗಳನ್ನು ನೀನು ಕೇಳು. ನಾನು ಅನೇಕ ಬಾರಿ ನಿನಗೆ ಹೇಳಿದ್ದೇನೆ. ಆದರೆ ನೀನು ನನ್ನ ಮಾತುಗಳನ್ನು ನಡೆಸಿಕೊಡಲಿಲ್ಲ.
ಕ್ರಿಯತಾಂ ಪಾಂಡವೈಃ ಸಾರ್ಧಂ ಶಮೋ ಭರತಸತ್ತಮ |
ಏತತ್ ಕ್ಷಮಮಹಂ ಮನ್ಯೇ ಪೃಥಿವ್ಯಾಸ್ತವ ಚಾಭಿಭೋ ॥31॥
ಎಲೈ ಭರತಶ್ರೇಷ್ಠನೇ, ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೋ. ಇದನ್ನು ಮಾಡಲು ಸಾಧ್ಯ. ಎಲೈ ಶತ್ರುಸಂಹಾರಕನೇ, ಇದು ನಿನಗೂ ಮತ್ತು ಎಲ್ಲ ಭೂಮಿಗೂ ಹಿತವೆಂದು ನಾನು ಭಾವಿಸುತ್ತೇನೆ.
ಭುಂಜೇಮಾಂ ಪೃಥಿವೀಂ ರಾಜನ್ ಭ್ರಾತೃಭಿಃ ಸಹಿತಃ ಸುಖೀ |
ದುರ್ಹೃದಸ್ತಾಪಯನ್ ಸರ್ವಾನ್ ನಂದಯಂಶ್ಚಾಪಿ ಬಾಂಧವಾನ್ ॥
ಎಲೈ ರಾಜನೇ, ಶತ್ರುಗಳ ಮನಸ್ಸಿಗೆ ತಾಪವನ್ನು ಉಂಟುಮಾಡುತ್ತಾ, ಬಂಧುಗಳಿಗೆ ಸಂತೋಷವನ್ನು ಉಂಟುಮಾಡುತ್ತಾ, ಸಹೋದರರಿಂದ ಸಹಿತನಾಗಿ ಸುಖದಿಂದ ಈ ಭೂಮಿಯನ್ನು ಅನುಭವಿಸುವವನಾಗು.
ನ ಚ ಮೇ ಕ್ರೋಶತಸ್ತಾತ ಶ್ರುತವಾನಸಿ ವೈ ಪುರಾ |
ತದಿದಂ ಸಮನುಪ್ರಾಪ್ತಂ ಯತ್ ಪಾಂಡೂನವಮನ್ಯಸೇ ॥33॥
ಎಲೈ ಪ್ರೀತಿಪಾತ್ರನೇ, ನಾನು ಹಿಂದೆ ಎಷ್ಟು ಕಿರುಚಿದರೂ ನೀನು ನನ್ನ ಮಾತನ್ನು ಕೇಳಲಿಲ್ಲ.ನೀನು ಪಾಂಡವರಿಗೆ ಮಾಡಿದ ಅವಮಾನದ ಈ ಫಲವು ಈಗ ಪ್ರಾಪ್ತವಾಗಿದೆ.
ಯಶ್ಚ ಹೇತುರವಧ್ಯತ್ವೇ ತೇಷಾಮಕ್ಲಿಷ್ಟಕರ್ಮಣಾಮ್ |
ತಂ ಶೃಣುಷ್ವ ಮಹಾರಾಜ ಮಮ ಕೀರ್ತಯತಃ ಪ್ರಭೋ ॥34॥
ಎಲೈ ಮಹಾರಾಜನೇ, ಎಲೈ ಪ್ರಭುವೇ, ಅನಾಯಾಸವಾಗಿ ಕಾರ್ಯವನ್ನು ಮಾಡುವ ಅವರ ಅವಧ್ಯತ್ವವನ್ನು ಕುರಿತು ಕಾರಣವನ್ನು

ಕೇಳುತ್ತಿದ್ದೀಯಷ್ಟೇ! ಅದನ್ನು ಹೇಳುವೆನು, ಕೇಳು.
ನಾಸ್ತಿ ಲೋಕೇಷು ತದ್ ಭೂತಂ ಭವಿತಾ ನೋ ಭವಿಷ್ಯತಿ |
ಯೋ ಜಯೇತ್ ಪಾಂಡವಾನ್ ಸಂಖ್ಯೇ ಪಾಲಿತಾನ್ ಶಾರ್ಙ್ಗಧನ್ವನಾ ||
ಶಾರ್ಙ್ಗಧನುರ್ಧಾರಿಯಾದ ಕೃಷ್ಣನಿಂದ ರಕ್ಷಿತರಾದ ಪಾಂಡವರನ್ನು ಯುದ್ಧದಲ್ಲಿ ಜಯಿಸಬಲ್ಲ ಯಾವ ವ್ಯಕ್ತಿಯೂ ಲೋಕದಲ್ಲಿ ಹಿಂದೆ ಇರಲಿಲ್ಲ, ಈಗ ಇಲ್ಲ ಮತ್ತು ಮುಂದೆ ಬರುವುದಿಲ್ಲ.
ಯತ್ ತು ಮೇ ಕಥಿತಂ ತಾತ ಮುನಿಭಿರ್ಭಾವಿತಾತ್ಮಭಿಃ |
ಪುರಾಣಗೀತಂ ಧರ್ಮಜ್ಞ ತಚ್ಛೃಣುಷ್ವ ಯಥಾತಥಮ್ ||36||
ಎಲೈ ಪ್ರೀತಿಪಾತ್ರನೇ, ಪರಿಶುದ್ಧ ಮನಸ್ಸುಳ್ಳ ಋಷಿಗಳು ನನಗೆ ಹೇಳಿದ ಪ್ರಾಚೀನವಾದ, ಸತ್ಯವಾದ ಗೀತೆಯೊಂದನ್ನು ಎಲೈ ಧರ್ಮಜ್ಞನೇ ಕೇಳುವವನಾಗು.
ಪುರಾ ಕಿಲ ಸುರಾಃ ಸರ್ವೇ ಋಷಯಶ್ಚ ಸಮಾಗತಾಃ |
ಪಿತಾಮಹಮುಪಾಸೇದುಃ ಪರ್ವತೇ ಗಂಧಮಾದನೇ ||37||
ಹಿಂದೆ ಎಲ್ಲ ದೇವತೆಗಳು ಮತ್ತು ಋಷಿಗಳು ಸೇರಿ ಗಂಧಮಾದನ ಪರ್ವತದಲ್ಲಿ ಪಿತಾಮಹರಾದ ಬ್ರಹ್ಮದೇವರ ಬಳಿಗೆ ಹೋದರಷ್ಟೇ!
ಮಧ್ಯೇ ತೇಷಾಂ ಸಮಾಸೀನಃ ಪ್ರಜಾಪತಿರಪಶ್ಯತ |
ವಿಮಾನಂ ಜಾಜ್ವಲದ್ ಭಾಸಾ ಸ್ಥಿತಂ ಪ್ರವರಮಂಬರೇ ||38||
ಅವರ ಮಧ್ಯದಲ್ಲಿ ಕುಳಿತಿದ್ದ ಪ್ರಜಾಪತಿಗಳಾದ ಬ್ರಹ್ಮದೇವರು ತನ್ನ ಕಾಂತಿಯಿಂದ ಬೆಳಗುತ್ತಿದ್ದ ಒಂದು ವಿಮಾನವು ಆಕಾಶದಲ್ಲಿ ನಿಂತಿರುವುದನ್ನು ನೋಡಿದರು.
ಧ್ಯಾನೇನಾವೇದ್ಯ ತಂ ಬ್ರಹ್ಮಾ ಕೃತ್ವಾ ಚ ನಿಯತೋಽಂಜಲಿಮ್ |
ನಮಶ್ಚಕಾರ ಹೃಷ್ಟಾತ್ಮಾ ಪರಮಂ ಪರಮೇಶ್ವರಮ್ ||39||
ಬ್ರಹ್ಮದೇವರು ತಮ್ಮ ಧ್ಯಾನದಿಂದ ವಿಮಾನದಲ್ಲಿರುವವರು ಯಾರೆಂದು ತಿಳಿದು ವಾಙ್ನಿಯಮವುಳ್ಳವರಾಗಿ ಸಂತೋಷಗೊಂಡು ವಿಮಾನದಲ್ಲಿದ್ದ ಸರ್ವೇಶ್ವರನಾದ ಹರಿಗೆ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿದರು.
ಋಷಯಸ್ತ್ವಥ ದೇವಾಶ್ಚ ದೃಷ್ಟ್ವಾ ಬ್ರಹ್ಮಾಣಮುತ್ಥಿತಮ್ |
ಸ್ಥಿತಾಃ ಪ್ರಾಂಜಲಯಃ ಸರ್ವೇ ಪಶ್ಯಂತೋ ಮಹದದ್ಭುತಮ್ ||40||
ಋಷಿಗಳೂ ಮತ್ತು ದೇವತೆಗಳೂ ಆಗ ಬ್ರಹ್ಮದೇವರು ಎದ್ದುನಿಂತುದನ್ನು ನೋಡಿ ತಾವೆಲ್ಲರೂ ಎದ್ದುನಿಂತು, ಕೈಗಳನ್ನು ಮುಗಿದು ಆ ದೊಡ್ಡ ಅದ್ಭುತವನ್ನು ನೋಡುತ್ತಾ ನಿಂತರು.
ಯಥಾವಚ್ಚ ತಮಭ್ಯರ್ಚ್ಯ ಬ್ರಹ್ಮಾ ಬ್ರಹ್ಮವಿದಾಂ ವರಃ |
ಜಗಾದ ಜಗತಃ ಸ್ರಷ್ಟಾ ಪರಂ ಪರಮಧರ್ಮವಿತ್ ||41||
ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ, ಪರಮಧರ್ಮಜ್ಞರಾದ, ಜಗತ್ಸೃಷ್ಟಿಕರ್ತರಾದ ಬ್ರಹ್ಮದೇವರು ಯಥಾಯೋಗ್ಯವಾಗಿ ಅವರನ್ನು ಪೂಜಿಸಿ ಮಾತನಾಡಿದರು.
ವಿಶ್ವಾವಸುರ್ವಿಶ್ವಮೂರ್ತಿರ್ವಿಶ್ವೇಶೋ
ವಿಷ್ವಕ್ಸೇನೋ ವಿಶ್ವಕರ್ಮಾ ವಶೀ ಚ |
ವಿಶ್ವೇಶ್ವರೋ ವಾಸುದೇವೋಽಸಿ ತಸ್ಮಾದ್
ಯೋಗಾತ್ಮಾನಂ ದೈವತಂ ತ್ವಾಮುಪೈಮಿ ||42||
ನೀನು ವಿಶ್ವಕ್ಕೆ ಆವಾಸಸ್ಥಾನನಾದವನು, ವಿಶ್ವವನ್ನೇ ಪ್ರತಿಮೆಯಾಗಿ ಉಳ್ಳವನು, ವಿಶ್ವಕ್ಕೆ ಪತಿಯಾದವನು, ಎಲ್ಲ ಕಡೆಯಲ್ಲಿಯೂ ನಿನ್ನ ಭಕ್ತರ ಸೈನ್ಯವನ್ನು ಹೊಂದಿದವನು, ಎಲ್ಲ ಕಾರ್ಯಗಳನ್ನೂ ಮಾಡುವವನು ಮತ್ತು ಸರ್ವವಶಿ. ನೀನೇ ವಿಶ್ವೇಶ್ವರನಾದ ವಾಸುದೇವನಾಗಿದ್ದೀಯೆ. ಐಶ್ವರ್ಯಾತ್ಮಕವಾದ ಶರೀರವುಳ್ಳ ಪರಮದೇವತೆಯಾದ ನಿನಗೆ ನಾನು ಶರಣಾಗತನಾಗಿದ್ದೇನೆ.
ಜಯ ವಿಶ್ವ ಮಹಾದೇವ ಜಯ ಲೋಕಹಿತೇ ರತ |
ಜಯ ಯೋಗೀಶ್ವರ ವಿಭೋ ಜಯ ಯೋಗಪರಾವರ ||43||
ವಿಶ್ವನಾಮಕ ಪರಮಾತ್ಮನೇ, ಮಹಾದೇವನೇ, ನಿನಗೆ ಜಯವಾಗಲಿ. ಲೋಕಹಿತದಲ್ಲಿ ಆಸಕ್ತನಾದವನೇ ನಿನಗೆ ಜಯವಾಗಲಿ. ವಿಭುವೇ, ಯೋಗೀಶ್ವರನೇ, ನಿನಗೆ ಜಯವಾಗಲಿ. ಯೋಗಗಳ ಉಚ್ಚನೀಚಗಳನ್ನು ತಿಳಿದವನೇ, ನಿನಗೆ ಜಯವಾಗಲಿ.
ಪದ್ಮಗರ್ಭ ವಿಶಾಲಾಕ್ಷ ಜಯ ಲೋಕೇಶ್ವರೇಶ್ವರ |
ಭೂತಭವ್ಯಭವನ್ನಾಥ ಜಯ ಸೌಮ್ಯಾತ್ಮಜಾತ್ಮಜ ||44||
ಪದ್ಮದಳದಂತೆ ವಿಶಾಲವಾದ ನೇತ್ರವುಳ್ಳವನೇ, ಲೋಕೇಶ್ವರರಾದ ದೇವತೆಗಳಿಗೆ ಈಶ್ವರನಾದವನೇ ನಿನಗೆ ಜಯವಾಗಲಿ. ಭೂತ-ವರ್ತಮಾನ-ಭವಿಷ್ಯದ್ ಜಗತ್ತುಗಳಿಗೆ ಒಡೆಯನಾದವನೇ, ಚಂದ್ರವಂಶದಲ್ಲಿ ಜನಿಸಿದ ವಸುದೇವನಿಂದ ಅಭಿವ್ಯಕ್ತನಾದವನೇ ನಿನಗೆ ಜಯವಾಗಲಿ.
ಅಸಂಖ್ಯೇಯಗುಣಾಜೇಯ ಜಯ ಸರ್ವಪರಾಯಣ |
ನಾರಾಯಣ ಸುದುಷ್ಪಾರ ಜಯ ಶಾರ್ಙ್ಗಧನುರ್ಧರ ||45||
ಅಸಂಖ್ಯೇಯವಾದ ಗುಣವುಳ್ಳವನೇ, ಯಾರಿಂದಲೂ ಜಯಿಸಲ್ಪಡದವನೇ, ಸರ್ವರಿಗೂ ಪರಮಾಶ್ರಯನಾದವನೇ ನಿನಗೆ ಜಯವಾಗಲಿ. ಯಾರಿಂದಲೂ ಮೀರಲು ಸಾಧ್ಯವಾಗದ ನಾರಾಯಣನೇ ಶಾರ್ಙ್ಗಧನುರ್ಧಾರಿಯೇ ನಿನಗೆ ಜಯವಾಗಲಿ.
ಸರ್ವಗುಹ್ಯಗುಣೋಪೇತ ವಿಶ್ವಮೂರ್ತೇ ನಿರಾಮಯ |
ವಿಶ್ವೇಶ್ವರ ಮಹಾಬಾಹೋ ಜಯ ಲೋಕಾರ್ಥತತ್ಪರ ||46||

ಸರ್ವರಿಗೂ ಅವ್ಯಕ್ತವಾದ ಗುಣಗಳಿಂದ ಕೂಡಿದವನೇ, ವಿಶ್ವಮೂರ್ತಿಯೇ, ದೋಷದೂರನೇ, ವಿಶ್ವೇಶ್ವರನೇ, ಮಹಾಬಾಹುವೇ, ಲೋಕಕ್ಕೆ ಹಿತವನ್ನು ಮಾಡುವ ಆಸಕ್ತಿಯುಳ್ಳವನೇ ನಿನಗೆ ಜಯವಾಗಲಿ.
ಮಹೋರಗ ವರಾಹಾದ್ಯ ಹರಿಕೇಶ ವಿಭೋ ಜಯ |
ಹರಿವಾಸ ವಿಶಾಮೀಶ ವಿಶ್ವಾವಾಸಾಮಿತಾವ್ಯಯ ॥47॥
ಮಹೋರಗ ಶ್ರೇಷ್ಠವಾದ ಶೇಷನಿಂದ ಅಯನಾದವನೇ (ಎಂದರೆ ಶೇಷಶಾಯಿಯೇ), ಪಾಪಸಂಹಾರಕವಾದ ಕೇಶವಾದಿ ಅವಯವವುಳ್ಳವನೇ, ವ್ಯಾಪ್ತನಾದವನೇ, ಹರಿವಾಸನೇ, ಪ್ರಜೆಗಳಿಗೆ ಒಡೆಯನೇ, ಜಗತ್ತನ್ನು ಧರಿಸಿದವನೇ, ಅಪರಿಮಿತನೇ, ನಾಶರಹಿತನೇ, ನಿನಗೆ ಜಯವಾಗಲಿ.
ವ್ಯಕ್ತಾವ್ಯಕ್ತಾಮಿತಸ್ಥಾನ ನಿಯತೇಂದ್ರಿಯ ಸೇಂದ್ರಿಯ |
ಅಸಂಖ್ಯೇಯಾತ್ಮಭಾವಜ್ಞ ಜಯ ಗಂಭೀರ ಕಾಮದ ॥48॥
ಯಾವಾಗಲೂ ಅವ್ಯಕ್ತ ಸ್ವಭಾವದವನಾದರೂ ನಿನ್ನ ಇಚ್ಛೆಯಿಂದಲೇ ವ್ಯಕ್ತನಾಗುವವನೇ, ಅನಂತಾನಂತ ಅಧಿಷ್ಠಾನ ಸ್ಥಾನವುಳ್ಳವನೇ, ಇಂದ್ರಿಯಗಳನ್ನು ಹೊಂದಿದವನೇ, ಎಲ್ಲ ಇಂದ್ರಿಯಗಳನ್ನು ಜಯಿಸಿದವನೇ, ಸಂಖ್ಯೆ ಇಲ್ಲದ ಜೀವರ ಪ್ರತಿಯೊಬ್ಬರ ಅಭಿಪ್ರಾಯವನ್ನು ತಿಳಿದವನೇ, ಮನಸ್ಸಿನಲ್ಲಿರುವ ಇನ್ನೊಬ್ಬರಿಗೆ ಗೊತ್ತಾಗದ ಕಾಮಗಳನ್ನು ಪೂರೈಸುವವನೇ ನಿನಗೆ ಜಯವಾಗಲಿ.
ಅನಂತ ವಿದಿತಪ್ರಜ್ಞ ನಿತ್ಯಂ ಭೂತವಿಭಾವನ |
ಕೃತಕಾರ್ಯ ಕೃತಪ್ರಜ್ಞ ಧರ್ಮಜ್ಞ ವಿಜಯಾಜಯ ॥49॥
ಅನಂತನಾದವನೇ, ಪ್ರಖ್ಯಾತವಾದ ಪ್ರಜ್ಞೆಯುಳ್ಳವನೇ, ಯಾವಾಗಲೂ ಜೀವ ಜಡರನ್ನು ಸೃಷ್ಟಿಸುವವನೇ, ಸಂಕಲ್ಪಿಸಿದ ಕಾರ್ಯವನ್ನು ಪೂರ್ಣವಾಗಿ ಮಾಡುವವನೇ, ಕುಶಲವಾದ ಪ್ರಜ್ಞೆಯುಳ್ಳವನೇ, ಧರ್ಮಜ್ಞನೇ, ಯಾವಾಗಲೂ ಜಯಶೀಲನಾದವನೇ, ಯಾರಿಗೂ ಸೋಲದವನೇ ನಿನಗೆ ಜಯವಾಗಲಿ.
ಗುಹ್ಯಾತ್ಮನ್ ಸರ್ವಭೂತಾತ್ಮನ್ ಸ್ಫುಟಸಂಭೂತಸಂಭವ |
ಭೂತಾರ್ಥತತ್ತ್ವ ಲೋಕೇಶ ಜಯ ಭೂತವಿಭಾವನ ॥50॥
ಅವ್ಯಕ್ತ ಸ್ವಭಾವದವನೇ, ಸರ್ವಜೀವಾಂತರ್ಯಾಮಿಯೇ, ಸ್ಪಷ್ಟವಾದ ಜನ್ಮವುಳ್ಳವರಿಗೆ ಎಲ್ಲರಿಗೂ ಕಾರಣನಾದವನೇ, ಶ್ರೇಷ್ಠವಾದ ಪ್ರಮೇಯನಾದವನೇ, ಲೋಕೇಶನಾದವನೇ, ಸೃಷ್ಟಿಕರ್ತನಾದವನೇ ನಿನಗೆ ಜಯವಾಗಲಿ.
ಆತ್ಮಯೋನೇ ಮಹಾಭಾಗ ಕಲ್ಪಸಂಕ್ಷೇಪತತ್ಪರ |
ಉದ್ಭಾವನ ಮನೋದ್ಭಾವ ಜಯ ಬ್ರಹ್ಮಜನಪ್ರಿಯ ॥51॥
ನಿನ್ನ ಇಚ್ಛೆಯಿಂದಲೇ ನಿನ್ನಿಂದಲೇ ಜನಿಸುವವನೇ, ಮಹಾನುಭಾವನೇ, ಕಲ್ಪಾಂತದಲ್ಲಿ ಲೋಕವನ್ನು ಸಂಹಾರ ಮಾಡುವುದರಲ್ಲಿ ಆಸಕ್ತನಾದವನೇ, ಪುನಃ ಜಗತ್ತನ್ನು ಸೃಷ್ಟಿಸುವವನೇ, ಮನಸ್ಸಿಗೆ ಹರ್ಷವನ್ನು ಕೊಡುವವನೇ, ಭಗವದ್ಭಕ್ತರಿಗೆ ಪ್ರಿಯನಾದವನೇ ನಿನಗೆ ಜಯವಾಗಲಿ.
ನಿಸರ್ಗಸರ್ಗಾಭಿರತ ಕಾಮೇಶ ಪರಮೇಶ್ವರ |
ಅಮೃತೋದ್ಭವ ಸದ್ಭಾವ ಯುಗಾಗ್ನೇ ವಿಜಯಪ್ರದ ॥52॥
ಬ್ರಹ್ಮಾಂಡದ ಒಳಗಿನ ಮತ್ತು ಹೊರಗಿನ ಸೃಷ್ಟಿಯಲ್ಲಿ ನಿರತನಾದವನೇ, ಎಲ್ಲ ಆಸೆಗಳನ್ನು ಪೂರೈಸುವವನೇ, ಪರಮೇಶ್ವರನೇ, ಅಮೃತೋತ್ಪತ್ತಿಗೆ ಕಾರಣನಾದವನೇ, ಯುಗದ ಆದಿಯಲ್ಲಿ ಎಲ್ಲ ವಸ್ತುಗಳ ಉತ್ಪಾದಕನಾದವನೇ, ವಿಜಯಪ್ರದನಾದವನೇ ನಿನಗೆ ಜಯವಾಗಲಿ.
ಪ್ರಜಾಪತಿಪತೇ ದೇವ ಪದ್ಮನಾಭ ಮಹಾಬಲ |
ಆತ್ಮಭೂತ ಮಹಾಭೂತ ಕರ್ಮಾತ್ಮನ್ ಜಯ ಕರ್ಮದ ॥53॥
ಪ್ರಜಾಪತಿಗಳಿಗೆ ಪತಿಯಾದವನೇ, ದೇವನೇ, ಪದ್ಮನಾಭನೇ, ಮಹಾಬಲನೇ, ಸ್ವತಂತ್ರನೇ, ಮಹಾಭೂತನೇ, ಕರ್ಮಸ್ವಾಮಿಯೇ, ಕರ್ಮಗಳ ಫಲದಾಯಕನೇ ನಿನಗೆ ಜಯವಾಗಲಿ.
ಪಾದೌ ತವ ಧರಾ ದೇವೀ ದಿಶೋ ಬಾಹುರ್ದಿವಂ ಶಿರಃ |
ಮೂರ್ತಿಸ್ತೇಽಹಂ ಸುರಾಃ ಕಾಯಶ್ಚಂದ್ರಾದಿತ್ಯೌ ಚ ಚಕ್ಷುಷೀ ॥54॥
ಭೂದೇವಿಯೇ ನಿನ್ನ ಪಾದಗಳು; ದಿಕ್ಕುಗಳು ನಿನ್ನ ಬಾಹುಗಳು; ದ್ಯುಲೋಕವು ನಿನ್ನ ಶಿರಸ್ಸು, ನಾನು ನಿನ್ನ ಪ್ರತಿಮೆ, ದೇವತೆಗಳು ನಿನ್ನ ಕಾಯದಿಂದ ಜನಿಸಿದವರು, ಸೂರ್ಯ-ಚಂದ್ರರು ನಿನ್ನ ಕಣ್ಣುಗಳು.
ಬಲಂ ತಪಶ್ಚ ಸತ್ಯಂ ಚ ಧರ್ಮಕಾಮಾತ್ಮಜಂ ತವ |
ತೇಜೋಽಗ್ನಿಃ ಪವನಃ ಶ್ವಾಸ ಆಪಸ್ತೇ ಸ್ವೇದಸಂಭವಾಃ ॥55॥
ಬಲ, ತಪಸ್ಸು, ಸತ್ಯ, ಧರ್ಮ, ಕಾಮಗಳು ನಿನ್ನ ಶರೀರದಿಂದ ಜನಿಸಿದವುಗಳು. ಅಗ್ನಿಯು ನಿನ್ನ ತೇಜಸ್ಸು, ವಾಯುವು ನಿನ್ನ ಶ್ವಾಸ, ಜಲವು ನಿನ್ನ ಬೆವರಿನಿಂದ ಉಂಟಾದುದು.
ಅಶ್ವಿನೌ ಶ್ರವಣೌ ನಿತ್ಯಂ ದೇವೀ ಜಿಹ್ವಾ ಸರಸ್ವತೀ |
ವೇದಾಃ ಸಂಸ್ಕಾರನಿಷ್ಠಾ ಹಿ ತ್ವಯೀದಂ ಜಗದಾಶ್ರಿತಮ್ ॥56॥
ಅಶ್ವಿನೀದೇವತೆಗಳು ನಿನ್ನ ಶ್ರೋತ್ರವನ್ನು ಯಾವಾಗಲೂ ಆಶ್ರಯಿಸಿದ್ದಾರೆ. ಸರಸ್ವತೀ ದೇವಿಯು ನಿನ್ನ ಜಿಹ್ವೆ. ವೇದಗಳು ನಿನ್ನ ಮನಸ್ಸಿನ ಸಂಸ್ಕಾರದಲ್ಲಿವೆ. ಈ ಜಗತ್ತೆಲ್ಲವೂ ನಿನ್ನನ್ನು ಆಶ್ರಯಿಸಿದೆ.
ನ ಸಂಖ್ಯಾಂ ನ ಪರೀಮಾಣಂ ನ ತೇಜೋ ನ ಪರಾಕ್ರಮಮ್ |
ನ ಬಲಂ ಯೋಗಯೋಗೀಶ ಜಾನೀಮಸ್ತೇ ನ ಸಂಭವಮ್ ॥57॥
ನಿನ್ನ ರೂಪಗಳ ಸಂಖ್ಯೆಯಾಗಲೀ, ಪರಿಮಾಣವಾಗಲೀ, ಸಾಮರ್ಥ್ಯ- ಪರಾಕ್ರಮವಾಗಲೀ, ಬಲವಾಗಲೀ, ನಿನ್ನ ಉತ್ಪತ್ತಿಯಾಗಲೀ,

ಯೋಗೀಶನೇ ನಾವು ಯಾರೂ ತಿಳಿದಿಲ್ಲ.
ತ್ವದ್ಭಕ್ತಿನಿರತಾ ದೇವ ನಿಯಮೈಸ್ತತ್ವ ಸಮಾಹಿತಾಃ |
ಅರ್ಚಯಾಮಃ ಸದಾ ವಿಷ್ಣೋ ಪರಮೇಶಂ ಮಹೇಶ್ವರಮ್ ॥58॥
ಎಲೈ ದೇವನೇ, ನಿನ್ನ ಭಕ್ತಿಯಲ್ಲಿಯೇ ನಿರತರಾಗಿ, ಒಳ್ಳೆಯ ನಿಯಮಗಳನ್ನು ಹೊಂದಿದವರಾಗಿ ಎಲೈ ವಿಷ್ಣುವೇ, ಪರಮೇಶ್ವರನೂ, ಮಹೇಶ್ವರನೂ ಆದ ನಿನ್ನನ್ನು ನಾವು ಯಾವಾಗಲೂ ಪೂಜಿಸುತ್ತೇವೆ.
ಋಷಯೋ ದೇವಗಂಧರ್ವಾ ಯಕ್ಷರಾಕ್ಷಸಪನ್ನಗಾಃ |
ಪಿಶಾಚಾ ಮಾನುಷಾಶ್ಚೈವ ಮೃಗಪಕ್ಷಿಸರೀಸೃಪಾಃ ॥59॥
ಏವಮಾದಿ ಮಯಾ ಸೃಷ್ಟಂ ಪೃಥಿವ್ಯಾಂ ತ್ವತ್ಪ್ರಸಾದಜಮ್ |
ಪದ್ಮನಾಭ ವಿಶಾಲಾಕ್ಷ ಕೃಷ್ಣ ದುಃಸ್ವಪ್ನನಾಶನ ॥60॥
ಎಲೈ ಪದ್ಮನಾಭನೇ, ವಿಶಾಲಾಕ್ಷನೇ, ಕೃಷ್ಣನೇ, ದುಃಸ್ವಪ್ನವಿನಾಶನನೇ, ನಿನ್ನ ಅನುಗ್ರಹದಿಂದ ನಾನು ಭೂಮಿಯಲ್ಲಿ ಋಷಿಗಳು, ದೇವತೆಗಳು, ಗಂಧರ್ವರು, ಯಕ್ಷ-ರಾಕ್ಷಸ-ಪನ್ನಗಗಳು, ಪಿಶಾಚಿಗಳು, ಮನುಷ್ಯರು, ಮೃಗಪಕ್ಷಿಗಳು, ಸರೀಸೃಪಗಳು ಇವೇ ಮೊದಲಾದ ಅನೇಕ ಪ್ರಾಣಿಗಳನ್ನು ಸೃಷ್ಟಿಸಿದ್ದೇನೆ.
ತ್ವಂ ಗತಿಃ ಸರ್ವಭೂತಾನಾಂ ತ್ವಂ ನೇತಾ ತ್ವಂ ಜಗನ್ಮುಖಮ್ |
ತ್ವತ್ಪ್ರಸಾದೇನ ದೇವೇಶ ಸುಖಿನೋ ವಿಬುಧಾಃ ಸದಾ ॥61॥
ಎಲ್ಲ ಭೂತಗಳಿಗೂ ನೀನೇ ಗತಿಯಾದವನು. ನೀನೇ ನಾಯಕನಾದವನು. ನೀನೇ ಜಗತ್ತಿನಲ್ಲಿ ಪ್ರಧಾನನಾದವನು. ಎಲೈ ದೇವೇಶನೇ, ನಿನ್ನ ಅನುಗ್ರಹದಿಂದ ದೇವತೆಗಳಾದ ನಾವು ಯಾವಾಗಲೂ ಸಂತೋಷದಿಂದಿದ್ದೇವೆ.
ಪೃಥಿವೀ ನಿರ್ಭಯಾ ದೇವ ತ್ವತ್ಪ್ರಸಾದಾದ್ ಸದಾಭವತ್ |
ತಸ್ಮಾದ್ ಭವ ವಿಶಾಲಾಕ್ಷ ಯದುವಂಶವಿವರ್ಧನಃ ॥62॥
ಧರ್ಮಸಂಸ್ಥಾಪನಾರ್ಥಾಯ ದೈತೇಯಾನಾಂ ವಧಾಯ ಚ |
ಜಗತೋ ಧಾರಣಾರ್ಥಾಯ ವಿಜ್ಞಾಪ್ಯಂ ಕುರು ಮೇ ಪ್ರಭೋ ॥63॥
ಎಲೈ ದೇವನೇ, ನಿನ್ನ ಅನುಗ್ರಹದಿಂದ ಭೂಮಿಯು ಯಾವಾಗಲೂ ನಿರ್ಭಯವಾಗಿದೆ. ದೇವನೇ, ವಿಶಾಲಾಕ್ಷನೇ, ಯದುವಂಶವಿವರ್ಧನನೇ, ಆದ್ದರಿಂದ ಧರ್ಮಸಂಸ್ಥಾಪನೆಯನ್ನು ಮಾಡಲು ದೈತ್ಯರ ವಧೆಯನ್ನು ಮಾಡಿ ಜಗತ್ತನ್ನು ರಕ್ಷಿಸಲು ಪ್ರಭುವೇ ನನ್ನ ಈ ವಿಜ್ಞಾಪನೆಯನ್ನು ಆಲಿಸು.
ಯದೇತತ್ ಪರಮಂ ಗುಹ್ಯಂ ತ್ವತ್ಪ್ರಸಾದಮಯಂ ವಿಭೋ |
ವಾಸುದೇವ ತದೇತತ್ ತೇ ಮಯೋದ್ಗೀತಂ ಯಥಾತಥಮ್ ॥64॥
ಯಾವ ಈ ಅತ್ಯಂತ ಅವ್ಯಕ್ತವಾದ ಮತ್ತು ಶ್ರೇಷ್ಠವಾದ ನಿನ್ನ ಅನುಗ್ರಹದಿಂದಲೇ ಜನಿಸಿದ ವಾಸುದೇವರೂಪವಿದೆಯೋ ಅದನ್ನು ನಾನು ಯಥಾರ್ಥವಾಗಿ ಪ್ರಶಂಸಿಸಿ ಗಾನವನ್ನು ಮಾಡಿದ್ದೇನೆ.
ಸೃಷ್ಟ್ವಾತ್ವ ಸಂಕರ್ಷಣಂ ದೇವಂ ಸ್ವಯಮಾತ್ಮಾನಮಾತ್ಮನಾ |
ಕೃಷ್ಣ ತ್ವಮಾತ್ಮನಾಸ್ರಾಕ್ಷೀಃ ಪ್ರದ್ಯುಮ್ನಂ ಚಾತ್ಮಸಂಭವಮ್ ॥65॥
ಎಲೈ ಕೃಷ್ಣನೇ, ನೀನು ಸ್ವತಃ ಆ ವಾಸುದೇವರೂಪದಿಂದ ಸಂಕರ್ಷಣ ರೂಪವನ್ನು ಸೃಷ್ಟಿ ಮಾಡಿ ಅನಂತರ ಹಿಂದಿನಿಂದಲೇ ಜನಿಸಿದ್ದ ಸಂಕರ್ಷಣ ರೂಪದಿಂದ ಪ್ರದ್ಯುಮ್ನನ ರೂಪವನ್ನು ಸೃಷ್ಟಿಸಿದ್ದೀಯೆ.
ಪ್ರದ್ಯುಮ್ನಾಚ್ಚಾನಿರುದ್ಧಂ ತ್ವಂ ಯಂ ವಿದುರ್ವಿಷ್ಣುಮವ್ಯಯಮ್ |
ಅನಿರುದ್ಧೋಽಸೃಜನ್ಮಾಂ ವೈ ಬ್ರಹ್ಮಾಣಂ ಲೋಕಧಾರಿಣಮ್ ॥66॥
ಪ್ರದ್ಯುಮ್ನರೂಪದಿಂದ ಅನಿರುದ್ಧ ರೂಪವನ್ನು ಸೃಷ್ಟಿಸಿದ್ದೀಯೆ. ಆ ಅನಿರುದ್ಧ ರೂಪವನ್ನು ಶಾಶ್ವತವಾದ ವಿಷ್ಣುರೂಪವೆಂದು ಜ್ಞಾನಿಗಳು ತಿಳಿದಿದ್ದಾರೆ. ಲೋಕಧಾರಕನಾದ ಬ್ರಹ್ಮನಾದ ನನ್ನನ್ನು ನೀನು ಅನಿರುದ್ಧ ರೂಪದಿಂದ ಸೃಷ್ಟಿಸಿದ್ದೀಯೆ.
ವಾಸುದೇವಮಯಃ ಸೋಽಹಂ ತ್ವಯೈವಾಸ್ಮಿ ವಿನಿರ್ಮಿತಃ |
ವಿಭಜ್ಯ ಭಾಗಶೋಽಽತ್ಮಾನಂ ವ್ರಜ ಮಾನುಷತಾಂ ವಿಭೋ ॥67॥
ವಾಸುದೇವ ಪ್ರಧಾನನಾದ (ವಾಸುದೇವನ ಪ್ರಧಾನ ಉಪಾಸಕನಾದ) ನಾನು ನಿನ್ನಿಂದಲೇ ಸೃಷ್ಟಿಸಲ್ಪಟ್ಟಿದ್ದೇನೆ. ಎಲೈ ವಿಭುವೇ, ನಿನ್ನನ್ನು ನೀನು ಅಂಶರೂಪವಾಗಿ ವಿಭಾಗಿಸಿ ಮನುಷ್ಯಲೋಕಕ್ಕೆ ಹೋಗುವವನಾಗು.
ತತ್ರಾಸುರವಧಂ ಕೃತ್ವಾ ಸರ್ವಲೋಕಸುಖಾಯ ವೈ |
ಧರ್ಮಂ ಸ್ಥಾಪ್ಯ ಯಶಃ ಪ್ರಾಪ್ಯ ಯೋಗಂ ಪ್ರಾಪ್ಸ್ಯಸಿ ತತ್ತ್ವತಃ ॥68॥
ಅಲ್ಲಿ ಸರ್ವಲೋಕದ ಸುಖಕ್ಕಾಗಿ ಅಸುರವಧೆಯನ್ನು ಮಾಡಿ, ಧರ್ಮ ಸಂಸ್ಥಾಪನೆಯನ್ನು ಮಾಡಿ, ಅಪಾರವಾದ ಕೀರ್ತಿಯನ್ನು ಪಡೆದು ಮೂಲರೂಪದ ಸಮಾಗಮವನ್ನು ಸತ್ಯವಾಗಿ ಹೊಂದುವಿ.
ತ್ವಾಂ ಹಿ ಬ್ರಹ್ಮರ್ಷಯೋ ಲೋಕೇ ದೇವಾಶ್ಚಾಮಿತವಿಕ್ರಮ |
ತೈಸ್ತೈಶ್ಚ ನಾಮಭಿರ್ಭಕ್ತಾ ಗಾಯಂತಿ ಪರಮಾತ್ಮಕಮ್ ॥69॥
ಎಲೈ ಅಮಿತವಿಕ್ರಮನೇ, ಲೋಕದಲ್ಲಿ ನಿನ್ನ ಭಕ್ತರಾದ ಬ್ರಹ್ಮರ್ಷಿಗಳು ಮತ್ತು ದೇವತೆಗಳು ಪರಮಾತ್ಮನಾದ ನಿನ್ನನ್ನು ಅನೇಕ ನಾಮಗಳಿಂದ ಗಾನವನ್ನು ಮಾಡುತ್ತಾರೆ.
ಸ್ಥಿತಾಶ್ಚ ಸರ್ವೇ ತ್ವಯಿ ಭೂತಸಂಘಾಃ
ಕೃತ್ವಾಽಽಶ್ರಯಂ ತ್ವಾಂ ವರದಂ ಸುಬಾಹೋ |
ಅನಾದಿಮಧ್ಯಾಂತಮಪಾರಯೋಗಂ

ಲೋಕಸ್ಯ ಸೇತುಂ ಪ್ರವದಂತಿ ವಿಪ್ರಾಃ ॥70॥
ಎಲೈ ಸುಬಾಹುವೇ, ವರಪ್ರದನಾದ ನಿನ್ನನ್ನು ಆಶ್ರಯಿಸಿ ಎಲ್ಲ ಪ್ರಾಣಿಸಮೂಹಗಳು ನಿನ್ನಲ್ಲಿಯೇ ನೆಲೆಸಿವೆ.
ಆದಿಮಧ್ಯಾಂತಶೂನ್ಯನೂ ಪಾರವಿಲ್ಲದ ಯೋಗಶಕ್ತಿಯುಳ್ಳವನೂ ಆದ ನಿನ್ನನ್ನು ಬ್ರಾಹ್ಮಣರು ಲೋಕವನ್ನು ಧರಿಸುವ ಸೇತುವೆಂದು ಹೇಳುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ಬ್ರಹ್ಮದೇವರಿಗೆ ಹರಿಯಿಂದ ಅನುಗ್ರಹ ವಚನ. ದೇವತೆಗಳಿಗೆ
ಬ್ರಹ್ಮದೇವರಿಂದ ತಮ್ಮ ಮತ್ತು ಹರಿಯ ಸಂವಾದದ ವಿವರಣೆ.
ಭೀಷ್ಮರಿಂದ ದುರ್ಯೋಧನನಿಗೆ ಅದರ ಉಪದೇಶ.
ಭೀಷ್ಮಃ
ತತಃ ಸ ಭಗವಾನ್ ದೇವೋ ಲೋಕಾನಾಂ ಪರಮೇಶ್ವರಃ |
ಬ್ರಹ್ಮಾಣಂ ಪ್ರತ್ಯುವಾಚೇದಂ ಸ್ನಿಗ್ಧಗಂಭೀರಯಾ ಗಿರಾ ॥1॥
ಭೀಷ್ಮ ಅನಂತರ ಲೋಕಗಳಿಗೆ ಒಡೆಯನಾದ ದೇವದೇವನಾದ ಭಗವಂತನು ತನ್ನ ಮೇಘ ಗಂಭೀರವಾಣಿಯಿಂದ ಬ್ರಹ್ಮದೇವರನ್ನು ಕುರಿತು ಹೀಗೆ ಮಾತನಾಡಿದನು.
ವಿದಿತಂ ತಾತ ಯೋಗಾನ್ಮೇ ಸರ್ವಮೇತತ್ ತವೇಪ್ಸಿತಮ್ |
ತಥಾ ತದ್ ಭವಿತೇತ್ಯುಕ್ತ್ವಾ ತತ್ರೈವಾಂತರಧೀಯತ ॥2॥
ಪ್ರೀತಿಪಾತ್ರನೇ, ನನ್ನ ಯೋಗಶಕ್ತಿಯಿಂದ ನಾನು ಎಲ್ಲವನ್ನೂ ತಿಳಿದಿದ್ದೇನೆ. ನಿನ್ನ ಅಭೀಷ್ಟವೆಲ್ಲವೂ ನೀನು ನೆನೆಸಿದಂತೆಯೇ ಆಗುವುದು ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು.
ತತೋ ದೇವರ್ಷಿಗಂಧರ್ವಾ ವಿಸ್ಮಯಂ ಪರಮಂ ಗತಾಃ |
ಕೌತೂಹಲಪರಾಃ ಸರ್ವೇ ಪಿತಾಮಹಮಥಾಬ್ರುವನ್ ॥3॥
ಆಗ ದೇವರ್ಷಿ-ಗಂಧರ್ವರೆಲ್ಲರೂ ಬಹಳ ವಿಸ್ಮಯವನ್ನು ಹೊಂದಿದರು. ಎಲ್ಲರೂ ಕುತೂಹಲದಿಂದ ಕೂಡಿದವರಾಗಿ ಪಿತಾಮಹರಾದ ಬ್ರಹ್ಮದೇವರನ್ನು ಕುರಿತು ಹೀಗೆ ಕೇಳಿದರು.
ಕೋ ನ್ವಯಂ ಯೋ ಭಗವತಾ ಪ್ರಣಮ್ಯ ವಿನಯಾದ್ ವಿಭೋ |
ವಾಗ್ಭಿಃ ಸ್ತುತೋ ವರಿಷ್ಠಾಭಿಃ ಶ್ರೋತುಮಿಚ್ಛಾಮ ತಂ ವಯಮ್ ॥4॥
ಪ್ರಭುಗಳೇ, ಪೂಜ್ಯರಾದ ನೀವು ವಿನಯದಿಂದ ನಮಸ್ಕರಿಸಿ ಶ್ರೇಷ್ಠವಾದ ವಾಣಿಯಿಂದ ಸ್ತುತಿಸಿದ ವ್ಯಕ್ತಿಯು ಯಾರು? ನಾವು ಅವನನ್ನು ಕೇಳಿ ತಿಳಿದುಕೊಳ್ಳಲು ಬಯಸುತ್ತೇವೆ.
ಏವಮುಕ್ತಸ್ತು ಭಗವಾನ್ ಪ್ರತ್ಯುವಾಚ ಪಿತಾಮಹಃ |
ದೇವಬ್ರಹ್ಮರ್ಷಿಗಂಧರ್ವಾನ್ ಸರ್ವಾನ್ ಮಧುರಯಾ ಗಿರಾ ॥5॥
ಹೀಗೆ ಕೇಳಲ್ಪಟ್ಟ ಪೂಜ್ಯರಾದ ಬ್ರಹ್ಮದೇವರು ಮಧುರವಾದ ತಮ್ಮ ವಾಣಿಯಿಂದ ದೇವರ್ಷಿ-ಗಂಧರ್ವರೆಲ್ಲರಿಗೂ ಉತ್ತರವನ್ನು ನೀಡಿದರು.
ಯತ್ತತ್ಪರಂ ಭವಿಷ್ಯಂ ಚ ಭವಿತವ್ಯಂ ಚ ಯತ್ಪರಮ್ |
ಭೂತಾತ್ಮಾ ಯಃ ಪ್ರಭುಶ್ಚೈವ ಬ್ರಹ್ಮ ಯಚ್ಚ ಪರಂ ಪದಮ್ ॥6॥
ತೇನಾಸ್ಮಿ ಕೃತಸಂವಾದಃ ಪ್ರಸನ್ನೇನ ಸುರರ್ಷಭಾಃ |
ಜಗತೋಽನುಗ್ರಹಾರ್ಥಾಯ ಯಾಚಿತೋ ಮೇ ಜಗತ್ಪತಿಃ ॥7॥
ಮಾನುಷಂ ಲೋಕಮಾತಿಷ್ಠ ವಾಸುದೇವ ಇತಿ ಶ್ರುತಃ |
ಅಸುರಾಣಾಂ ವಧಾರ್ಥಾಯ ಸಂಭವಸ್ವ ಮಹೀತಳೇ ॥8॥
ಯಾವುದು ಭವಿಷ್ಯಕಾಲದ ಶ್ರೇಷ್ಠ ವಸ್ತುವೋ, ಯಾವುದು ವರ್ತಮಾನ ಕಾಲದಲ್ಲಿ ಸರ್ವಶ್ರೇಷ್ಠವೋ, ಯಾವುದು ಭೂತಕಾಲದಲ್ಲಿ ಸರ್ವಶ್ರೇಷ್ಠವೋ ಅಂತಹ ಯಾವನನ್ನು ಪ್ರಭುವೆಂದೂ, ಬ್ರಹ್ಮನೆಂದೂ, ಪರಮಪದವೆಂದೂ ಕರೆಯುತ್ತಾರೆಯೋ ಅಂತಹ ಪ್ರಸನ್ನನಾದ ಭಗವಂತನಾದ ವಿಷ್ಣುವಿನ ಜೊತೆಯಲ್ಲಿ ನಾನು ಸಂವಾದವನ್ನು ಮಾಡಿದೆ. ಎಲೈ ಸುರಶ್ರೇಷ್ಠರೇ, ಜಗತ್ಪತಿಯಾದ ಅವನನ್ನು ನಾನು ಜಗತ್ತಿಗೆ ಅನುಗ್ರಹವನ್ನು ಮಾಡಬೇಕೆಂದು ಪ್ರಾರ್ಥಿಸಿದೆ. ಅಸುರರ ವಧೆಗಾಗಿ ವಾಸುದೇವ ಎಂಬ ಹೆಸರಿನಿಂದ ಮನುಷ್ಯಲೋಕದಲ್ಲಿ ಮನುಷ್ಯನ ಶರೀರವನ್ನು ಹೊಂದಿದವನಂತೆ ಭೂತಳದಲ್ಲಿ ಅವತರಿಸು ಎಂದು ನಾನು ಪ್ರಾರ್ಥಿಸಿದೆ.
ಸಂಗ್ರಾಮೇ ನಿಹತಾ ಯೇ ತೇ ದೈತ್ಯದಾನವರಾಕ್ಷಸಾಃ |
ತ ಇಮೇ ನೃಷು ಸಂಭೂತಾ ಘೋರರೂಪಾ ಮಹಾಬಲಾಃ ॥9॥
ತೇಷಾಂ ವಧಾರ್ಥಂ ಭಗವಾನ್ ನರೇಣ ಸಹಿತೋ ವಶೀ |
ಮಾನುಷೀಂ ಯೋನಿಮಾಸ್ಥಾಯ ಚರಿಷ್ಯತಿ ಮಹೀತಳೇ ॥10॥
ಅವನ ಜೊತೆಯಲ್ಲಿ ಯುದ್ಧದಲ್ಲಿ ಹತರಾದ ಈ ದೈತ್ಯ-ದಾನವ- ರಾಕ್ಷಸರೆಲ್ಲರೂ ಭೂಮಿಯಲ್ಲಿ ಘೋರರೂಪವುಳ್ಳವರೂ, ಮಹಾಬಲಿಷ್ಠರೂ ಆದ ಮನುಷ್ಯರಾಗಿ ಜನಿಸಿದ್ದಾರೆ. ಅವರ ವಧೆಯನ್ನು ಮಾಡುವ ಸಲುವಾಗಿ ಭಗವಂತನೂ, ಸ್ವತಂತ್ರನೂ ಆದ

ಅವನು ನರನ ಜೊತೆಯಲ್ಲಿ ಮನುಷ್ಯಯೋನಿಯಲ್ಲಿ ಅವತರಿಸಿ ಭೂತಳದಲ್ಲಿ ಸಂಚರಿಸುವನು.
ನರನಾರಾಯಣೌ ಯೌ ತೌ ಪುರಾಣಾವೃಷಿಸತ್ತಮೌ |
ಸಹಿತೌ ಮಾನುಷೇ ಲೋಕೇ ಸಂಭೂತಾವಮಿತದ್ಯುತೀ ||11||
ಪ್ರಾಚೀನರಾದ ಋಷಿಶ್ರೇಷ್ಠರಾದ ಯಾವ ನರ-ನಾರಾಯಣರಿದ್ದಾರೆಯೋ ಅಮಿತಪರಾಕ್ರಮಿಗಳಾದ ಅವರೇ ಮನುಷ್ಯಲೋಕದಲ್ಲಿ ಒಟ್ಟಿಗೆ ಜನಿಸಿದ್ದಾರೆ.
ಅಜೇಯೌ ಸಮರೇ ಯತ್ತೌ ಸಹಿತಾವಮರೈರಪಿ |
ಮೂಢಾಸ್ತ್ವೇತೌ ನ ಜಾನಂತಿ ನರನಾರಾಯಣಾವೃಷೀ ||12||
ಪ್ರಯತ್ನಶೀಲರಾದ ಅವರು ಜೊತೆಯಲ್ಲಿರುವಾಗ ಯುದ್ಧದಲ್ಲಿ ದೇವತೆಗಳಿಂದಲೂ ಅವರನ್ನು ಜಯಿಸಲು ಸಾಧ್ಯವಿಲ್ಲ. ಮೂಢರಾದ ಮನುಷ್ಯಾದಿಗಳು ಅವರನ್ನು ನರ-ನಾರಾಯಣ ಋಷಿಗಳು ಎಂದು ತಿಳಿಯುವುದಿಲ್ಲ.
ತಸ್ಯಾಹಮಾತ್ಮಜೋ ಬ್ರಹ್ಮಾ ಸರ್ವಸ್ಯ ಜಗತಃ ಪತಿಃ |
ವಾಸುದೇವೋಽರ್ಚನೀಯೋ ವಃ ಸರ್ವಲೋಕಮಹೇಶ್ವರಃ ||13||
ಸರ್ವಜಗತ್ತಿಗೆ ಒಡೆಯನಾದ ಬ್ರಹ್ಮನಾದ ನಾನು ವಾಸುದೇವನ ಪುತ್ರನಾಗಿದ್ದೇನೆ. ಅಂತಹ ಸರ್ವಲೋಕ ಮಹೇಶ್ವರನಾದ ವಾಸುದೇವನು ನಿಮ್ಮಿಂದ ಪೂಜಿಸಲ್ಪಡಬೇಕು.
ತಥಾ ಮನುಷ್ಯೋಽಯಮಿತಿ ಕದಾಚಿತ್ ಸುರಸತ್ತಮಾಃ |
ನಾವಜ್ಞೇಯೋ ಮಹಾವೀರ್ಯಃ ಶಂಖಚಕ್ರಗದಾಧರಃ ||14||
ಎಲೈ ದೇವತೆಗಳಲ್ಲಿ ಶ್ರೇಷ್ಠರೇ, ಮಹಾಪರಾಕ್ರಮಿಯೂ, ಶಂಖ-ಚಕ್ರ- ಗದಾಧಾರಿಯೂ ಆದ ಅವನನ್ನು ಮನುಷ್ಯನೆಂದು ತಿಳಿದು ಎಂದೂ ಅವಮಾನ ಮಾಡಬಾರದು.
ಏತತ್ಪರಮಕಂ ಗುಹ್ಯಮೇತತ್ಪರಮಕಂ ಪದಮ್ |
ಏತತ್ಪರಮಕಂ ಬ್ರಹ್ಮ ಏತತ್ಪರಮಕಂ ಯಶಃ ||15||
ಅವನೇ ಪರಮಾವ್ಯಕ್ತನಾದವನು; ಅವನೇ ಪರಮಪ್ರಾಪ್ಯನಾದವನು; ಅವನೇ ಪರಬ್ರಹ್ಮನಾದವನು; ಅವನೇ ಸರ್ವೋತ್ತಮ ಮಹಿಮೆಯುಳ್ಳವನು.
ಏತದಕ್ಷರಮವ್ಯಕ್ತಮೇತತ್ತಚ್ಛಾಶ್ವತಂ ಮಹತ್ |
ಏತತ್ಪುರುಷಸಂಜ್ಞಂ ವೈ ಗೀಯತೇ ಜ್ಞಾಯತೇ ನ ಚ ||16||
ಅವನೇ ಅಕ್ಷರನಾದವನು (ನಾಶವಿಲ್ಲದವನು); ಅವ್ಯಕ್ತನಾದವನು; ಶಾಶ್ವತನಾದವನು; ದೊಡ್ಡ ವಸ್ತುವಾದವನು; ಅವನನ್ನು ಪುರುಷನೆಂದು ಕರೆಯುತ್ತಾರೆ; ಅವನ ಮಹಿಮೆಯನ್ನು ಜ್ಞಾನಿಗಳು ಹಾಡುತ್ತಾರೆ; ಯಾರೂ ಅವನನ್ನು ಪೂರ್ಣವಾಗಿ ತಿಳಿಯುವುದಿಲ್ಲ.
ಏತತ್ಪರಮಕಂ ತೇಜ ಏತತ್ಪರಮಕಂ ಸುಖಮ್ |
ಏತತ್ಪರಮಕಂ ಸತ್ಯಂ ಕೀರ್ತಿತಂ ವಿಶ್ವಕರ್ಮಣಾ ||17||
ಅವನೇ ಪರಮ ತೇಜೋರೂಪನಾದವನು; ಅವನೇ ನಿರವಧಿಕ ಸುಖರೂಪನಾದವನು; ಅವನೇ ಪರಮಸತ್ಯನಾದವನು ಎಂದು ವಿಶ್ವಕರ್ಮನಿಂದ ಸ್ತೋತ್ರ ಮಾಡಲ್ಪಟ್ಟಿದ್ದಾನೆ (ವಿಶ್ವಕರ್ಮಸೂಕ್ತದಲ್ಲಿ ಸ್ತೋತ್ರ ಮಾಡಲ್ಪಟ್ಟಿದ್ದಾನೆ).
ತಸ್ಮಾತ್ಸರ್ವೈಃ ಸುರೈಃ ಸೇಂದ್ರೈರ್ಲೋಕೈಶ್ಚಾಮಿತವಿಕ್ರಮಃ |
ನಾವಜ್ಞೇಯೋ ವಾಸುದೇವೋ ಮಾನುಷೋಽಯಮಿತಿ ಪ್ರಭುಃ ||18||
ಆದ್ದರಿಂದ ಪ್ರಭುವಾದ ಅವನನ್ನು ಮನುಷ್ಯನೆಂದು ತಿಳಿದು ಇಂದ್ರನಿಂದ ಸಹಿತರಾದ ಯಾವ ದೇವತೆಗಳಾಗಲೀ ಅಥವಾ ಉಳಿದ ಜನರಾಗಲೀ ಅಮಿತವಿಕ್ರಮನಾದ ಆ ವಾಸುದೇವನನ್ನು ಅವಮಾನ ಮಾಡಬಾರದು.
ಯಶ್ಚ ಮಾನುಷಮಾತ್ರೋಽಯಮಿತಿ ಬ್ರೂಯಾತ್ ಸುಮಂದಧೀಃ |
ಹೃಷೀಕೇಶಮವಜ್ಞಾನಾತ್ ತಮಾಹುಃ ಪುರುಷಾಧಮಮ್ ||19||
ಅತ್ಯಂತ ಮಂದಬುದ್ಧಿಯುಳ್ಳ ಯಾವನು ಕೃಷ್ಣನನ್ನು ಕೇವಲ ಮನುಷ್ಯನೆಂದು ಹೇಳುತ್ತಾನೆಯೋ, ಕೃಷ್ಣನನ್ನು ಅವಮಾನ ಮಾಡುವ ಅವನನ್ನು ಜ್ಞಾನಿಗಳು ಪುರುಷಾಧಮನೆಂದು ಕರೆಯುತ್ತಾರೆ.
ಯೋಗಿನಂ ತಂ ಮಹಾತ್ಮಾನಂ ಪ್ರವಿಷ್ಟಂ ಮಾನುಷೀಂ ತನುಮ್ |
ಅವಮನ್ಯೇದ್ ವಾಸುದೇವಂ ತಮಾಹುಸ್ತಾಮಸಂ ಜನಾಃ ||20||
ಯಾವನು ಮನುಷ್ಯಶರೀರವನ್ನು ಪ್ರವೇಶಿಸಿದ ಮಹಾತ್ಮನಾದ ಯೋಗಿಯಾದ ವಾಸುದೇವನನ್ನು ಅವಮಾನ ಮಾಡುತ್ತಾನೆಯೋ ಅವನನ್ನು ಜ್ಞಾನಿಜನರು ತಾಮಸನೆಂದು ಕರೆಯುತ್ತಾರೆ.
ದೇವಂ ಚರಾಚರಾತ್ಮಾನಂ ಶ್ರೀವತ್ಸಾಂಕಂ ಸುವರ್ಚಸಮ್ |
ಪದ್ಮನಾಭಂ ನ ಜಾನಾತಿ ತಮಾಹುಸ್ತಾಮಸಂ ಜನಾಃ ||21||
ಯಾವನು ಚರಾಚರಗಳಲ್ಲಿ ವ್ಯಾಪ್ತನಾದ, ಒಳ್ಳೆಯ ಕಾಂತಿಯನ್ನು ಹೊಂದಿದ ಶ್ರೀವತ್ಸಾಂಕನಾದ ಪದ್ಮನಾಭ ದೇವನನ್ನು ತಿಳಿಯುವುದಿಲ್ಲವೋ ಅವನನ್ನು ಜ್ಞಾನಿಗಳು ತಾಮಸನೆಂದು ಹೇಳುತ್ತಾರೆ.
ಕಿರೀಟಕೌಸ್ತುಭಧರಂ ಮಿತ್ರಾಣಾಮಭಯಂಕರಮ್ |
ಅವಜಾನನ್ ಮಹಾತ್ಮಾನಂ ಘೋರೇ ತಮಸಿ ಮಜ್ಜತಿ ||22||
ಕಿರೀಟಕೌಸ್ತುಭಧಾರಿಯಾದ, ಭಕ್ತರಿಗೆ ಅಭಯಂಕರನಾದ ಮಹಾತ್ಮನಾದ ಅವನನ್ನು ಅವಮಾನ ಮಾಡುವವನು ಘೋರವಾದ ತಮಸ್ಸಿನಲ್ಲಿ ಮುಳುಗುತ್ತಾನೆ.

ಏವಂ ವಿದಿತ್ವಾ ತತ್ತತ್ತ್ವಾರ್ಥಂ ಲೋಕಾನಾಮೀಶ್ವರೇಶ್ವರಃ |
ವಾಸುದೇವೋ ನಮಸ್ಕಾರ್ಯಃ ಸರ್ವಲೋಕೈಃ ಸುರೋತ್ತಮಾಃ ॥23॥
ಎಲೈ ಸುರಶ್ರೇಷ್ಠರೇ, ಹೀಗೆ ತತ್ತ್ವವನ್ನು ತಿಳಿದು ಸರ್ವಲೋಕೇಶ್ವರೇಶ್ವರನಾದ ವಾಸುದೇವನನ್ನು ಎಲ್ಲ ಜೀವರೂ ನಮಸ್ಕರಿಸಬೇಕು.
ಏವಮುಕ್ತತ್ವ ಸ ಭಗವಾನ್ ಸರ್ವಾನ್ ದೇವಗಣಾನ್ ಪುರಾ |
ವಿಸೃಜ್ಯ ಸರ್ವಲೋಕಾತ್ಮಾ ಜಗಾಮ ಭವನಂ ಸ್ವಕಮ್ ॥24॥
ಸರ್ವಲೋಕಪ್ರಭುವಾದ, ಪೂಜ್ಯರಾದ ಆ ಬ್ರಹ್ಮದೇವರು ಎಲ್ಲ ದೇವ ಸಮೂಹವನ್ನು ಕುರಿತು ಈ ರೀತಿಯಾಗಿ ಹೇಳಿ ಅವರನ್ನು ಕಳುಹಿಸಿಕೊಟ್ಟು ತಮ್ಮ ಮನೆಗೆ ಹೋದರು.
ತತೋ ದೇವಾಃ ಸಗಂಧರ್ವಾ ಮುನಯೋಽಪ್ಸರಸೋಽಪಿ ಚ |
ಕಥಾಂ ತಾಂ ಬ್ರಹ್ಮಣಾ ಗೀತಾಂ ಶ್ರುತ್ವಾ ಪ್ರೀತಾ ದಿವಂ ಯಯುಃ ॥25॥
ಆಗ ಗಂಧರ್ವರಿಂದ ಸಹಿತರಾದ ದೇವತೆಗಳು, ಋಷಿಗಳು, ಅಪ್ಸರೆಯರೆಲ್ಲರೂ ಬ್ರಹ್ಮದೇವರು ಹೇಳಿದ ಆ ಕಥೆಯನ್ನು ಕೇಳಿ ಸಂತೋಷಗೊಂಡು ಸ್ವರ್ಗಕ್ಕೆ ಹೋದರು.
ಏತಚ್ಛ್ರುತಂ ಮಯಾ ತಾತ ಋಷೀಣಾಂ ಭಾವಿತಾತ್ಮನಾಮ್ |
ವಾಸುದೇವಂ ಕಥಯತಾಂ ಸಮವಾಯೇ ಪುರಾತನಮ್ ॥26॥
ಎಲೈ ಪ್ರೀತಿಪಾತ್ರನೇ, ಪರಿಶುದ್ಧ ಮನಸ್ಸುಳ್ಳ ವಾಸುದೇವನ ಮಹಿಮೆಯನ್ನು ಹೇಳುವ ಋಷಿಗಳ ಗುಂಪಿನಲ್ಲಿ ನಾನು ಈ ಪುರಾತನವಾದ ವಾಸುದೇವನ ಮಹಿಮೆಯನ್ನು ಕೇಳಿದ್ದೇನೆ.
ಜಾಮದಗ್ನ್ಯಸ್ಯ ರಾಮಸ್ಯ ಮಾರ್ಕಂಡೇಯಸ್ಯ ಧೀಮತಃ |
ವ್ಯಾಸನಾರದಯೋಶ್ಚಾಪಿ ಶ್ರುತಂ ಶ್ರುತವಿಶಾರದ ॥27॥
ಎಲೈ ಶ್ರವಣ ಮಾಡುವುದರಲ್ಲಿ ವಿಶಾರದನಾದವನೇ, ನಾನು ಇದನ್ನು ಜಮದಗ್ನಿ ಪುತ್ರರಾದ ಪರಶುರಾಮರಿಂದಲೂ, ಮೇಧಾವಿಗಳಾದ ಮಾರ್ಕಂಡೇಯರಿಂದಲೂ, ವ್ಯಾಸ-ನಾರದರಿಂದಲೂ ಸಹ ಕೇಳಿದ್ದೇನೆ.
ಏತಮರ್ಥಂ ಚ ವಿಜ್ಞಾಯ ಶ್ರುತ್ವಾ ಚ ಪ್ರಭುಮವ್ಯಯಮ್ |
ವಾಸುದೇವಂ ಮಹಾತ್ಮಾನಂ ಲೋಕಾನಾಮೀಶ್ವರೇಶ್ವರಮ್ ॥28॥
ಯಸ್ಯಾಸಾವಾತ್ಮಜೋ ಬ್ರಹ್ಮಾ ಸರ್ವಸ್ಯ ಜಗತಃ ಪಿತಾ |
ಕಥಂ ನ ವಾಸುದೇವೋಽಯಮರ್ಚ್ಯಶ್ಚೇಜ್ಯಶ್ಚ ಮಾನವೈಃ ॥29॥
ಈ ಕಥೆಯನ್ನು ಕೇಳಿದ ಮೇಲೆ ಸರ್ವಜಗತ್ಪ್ರಭುವಾದ ಬ್ರಹ್ಮದೇವರು ಯಾವನ ಪುತ್ರನೋ ಅಂತಹ ಪ್ರಭುವೂ, ಶಾಶ್ವತನೂ, ಮಹಾತ್ಮನೂ, ಲೋಕಗಳ ಒಡೆಯರಿಗೆ ಒಡೆಯನಾದವನೂ ಆದ ವಾಸುದೇವನನ್ನು ತಿಳಿದು ಯಾವ ಮನುಷ್ಯನು ತಾನೇ ಅವನನ್ನು ಅರ್ಚಿಸಲಾರ ಮತ್ತು ಪೂಜಿಸಲಾರ?
ವಾರಿತೋಽಸಿ ಪುರಾ ತಾತ ಮುನಿಭಿರ್ವೇದಪಾರಗೈಃ |
ಮಾ ಗಚ್ಛ ಸಂಯುಗಂ ತೇನ ವಾಸುದೇವೇನ ಧೀಮತಾ |
ಮಾ ಪಾಂಡವೈಃ ಸಾರ್ಧಮಿತಿ ತಚ್ಚ ಮೋಹಾನ್ನ ಬುಧ್ಯಸೇ ॥30॥
ಎಲೈ ಪ್ರೀತಿಪಾತ್ರನೇ, ವೇದಪಾರಂಗತರಾದ ಋಷಿಗಳು ನಿನ್ನನ್ನು ಹಿಂದೆಯೇ, ಮೇಧಾವಿಯಾದ ವಾಸುದೇವನ ಜೊತೆಯಲ್ಲಿ ಯುದ್ಧವನ್ನು ಮಾಡಬೇಡ, ಪಾಂಡವರ ಜೊತೆಯಲ್ಲಿಯೂ ಯುದ್ಧವನ್ನು ಮಾಡಬೇಡ ಎಂದು ತಡೆದಿದ್ದಾರೆ. ಆದರೆ ಮೋಹದಿಂದ ನೀನು ಅವರ ಮಾತುಗಳನ್ನು ತಿಳಿಯುತ್ತಿಲ್ಲ.
ಮನ್ಯೇ ತ್ವಾಂ ರಾಕ್ಷಸಂ ಕ್ರೂರಂ ತಥಾ ಚಾಸಿ ತಮೋವೃತಃ |
ಯಸ್ಮಾದ್ ದ್ವಿಷಸಿ ಗೋವಿಂದಂ ಪಾಂಡವಂ ಚ ಧನಂಜಯಮ್ |
ನರನಾರಾಯಣೌ ದೇವೌ ನಾನ್ಯೋ ದ್ವಿಷ್ಯಾದ್ಧಿ ಮಾನವಃ ॥31॥
ನರ-ನಾರಾಯಣರಾದ ದೇವತೆಗಳಾದ ಗೋವಿಂದನನ್ನು ಮತ್ತು ಪಾಂಡವನಾದ ಅರ್ಜುನನನ್ನು ದ್ವೇಷ ಮಾಡುವುದರಿಂದ ನೀನು ತಮೋಗುಣದಿಂದ ಆವೃತನಾದ ಕ್ರೂರನಾದ ರಾಕ್ಷಸನೆಂದು ನಾನು ಭಾವಿಸುತ್ತೇನೆ. ಯಾವ ಮನುಷ್ಯನೂ ಅವರಿಬ್ಬರನ್ನು ದ್ವೇಷ ಮಾಡಲಾರ.
ತಸ್ಮಾದ್ ಬ್ರವೀಮಿ ತೇ ರಾಜನ್ನೇಷ ವೈ ಶಾಶ್ವತೋಽವ್ಯಯಃ |
ಸರ್ವಲೋಕಮಯೋ ನಿತ್ಯಃ ಶಾಸ್ತಾ ಧಾತಾ ಧರೋ ಧ್ರುವಃ ॥32॥
ರಾಜನೇ, ಆದ್ದರಿಂದ ನಿನಗೆ ಹೇಳುತ್ತಿದ್ದೇನೆ. ಈ ಕೃಷ್ಣನು ಶಾಶ್ವತನಾದವನು; ಸರ್ವವಿಧವಾದ ನಾಶರಹಿತನಾದವನು; ಸುರಲೋಕಪ್ರಧಾನನಾದವನು; ನಿತ್ಯನಾದವನು; ಸರ್ವಲೋಕವನ್ನು ಶಾಸನ ಮಾಡುವವನು; ಎಲ್ಲ ಲೋಕಗಳಿಗೂ ಕಲ್ಯಾಣ ಮಾಡುವವನು; ಸರ್ವಾಧಾರನಾದವನು ಮತ್ತು ಧ್ರುವನಾದವನು.
ಲೋಕಾನ್ ಧಾರಯತೇ ಯಸ್ತ್ರೀಂಶ್ಚರಾಚರಗುರುಃ ಪ್ರಭುಃ |
ಯೋದ್ಧಾ ಜಯಶ್ಚ ಜೇತಾ ಚ ಸರ್ವಪ್ರಕೃತಿರೀಶ್ವರಃ ॥33॥
ಅವನು ಮೂರುಲೋಕಗಳನ್ನೂ ಧರಿಸಿದವನು; ಚರಾಚರ ಗುರುವಾದವನು; ಪ್ರಭುವಾದವನು; ಯುದ್ಧವನ್ನು ಮಾಡುವವನು ಜಯ ಮತ್ತು ಜಯಶೀಲನಾದವನು ಎಲ್ಲವೂ ಅವನ ಅಧೀನವಾದವುಗಳು; ಅವನು ಎಲ್ಲರಿಗೂ ಮೂಲಕಾರಣನಾದವನು. ಅವನು ಈಶ್ವರನಾದವನು.
ರಾಜನ್ ಸತ್ತ್ವಮಯೋ ಹ್ಯೇಷ ತಮೋರಾಗವಿವರ್ಜಿತಃ |
ಯತಃ ಕೃಷ್ಣಸ್ತತೋ ಧರ್ಮೋ ಯತೋ ಧರ್ಮಸ್ತತೋ ಜಯಃ ॥34॥

ಎಲೈ ರಾಜನೇ, ಅವನು ನಿರ್ದೋಷ ಗುಣಪರಿಪೂರ್ಣನಾದವನು; ತಮಸ್ಸು ಮತ್ತು ರಾಗಾದಿಗಳಿಂದ ವರ್ಜಿತನಾದವನು. ಎಲ್ಲಿ ಕೃಷ್ಣನಿದ್ದಾನೆಯೋ ಅಲ್ಲಿ ಧರ್ಮವಿದೆ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಿದೆ.
ತಸ್ಯ ಮಾಹಾತ್ಮ್ಯಯೋಗೇನ ಯೋಗೇನಾತ್ಮನ ಏವ ಚ |
ಧೃತಾಃ ಪಾಂಡುಸುತಾ ರಾಜನ್ ಜಯಶ್ಚೈಷಾಂ ಭವಿಷ್ಯತಿ ॥35॥
ಎಲೈ ರಾಜನೇ, ಕೃಷ್ಣನ ಮಹಿಮೆಯ ಸಾಮರ್ಥ್ಯದಿಂದ ಮತ್ತು ತಮ್ಮ ಯೋಗಬಲದಿಂದಲೂ ಪಾಂಡುಸುತರು ಬದುಕಿದ್ದಾರೆ. ಅವರಿಗೆ ಜಯವುಂಟಾಗುವುದು.
ಶ್ರೇಯೋಯುಕ್ತಾಂ ಸದಾ ಬುದ್ಧಿಂ ಪಾಂಡವಾನಾಂ ದಧಾತಿ ಯಃ |
ಬಲಂ ಚೈವ ರಣೇ ನಿತ್ಯಂ ಭಯೇಭ್ಯಶ್ಚೈವ ರಕ್ಷತಿ ॥36॥
ಸ ಏಷ ಶಾಶ್ವತೋ ದೇವಃ ಸರ್ವಗುಹ್ಯಮಯಃ ಶಿವಃ |
ವಾಸುದೇವ ಇತಿ ಜ್ಞೇಯೋ ಯನ್ಮಾಂ ಪೃಚ್ಛಸಿ ಭಾರತ ॥37॥
ಎಲೈ ಭಾರತನೇ, ಯಾವನು ಪಾಂಡವರಿಗೆ ಯಾವಾಗಲೂ ಶ್ರೇಯಸ್ಸಿಗೆ ಅನುಸಾರಿಯಾದ ಬುದ್ಧಿಯನ್ನು ಕೊಡುತ್ತಾನೆಯೋ, ಯುದ್ಧದಲ್ಲಿ ಬಲವನ್ನು ಕೊಡುತ್ತಾನೆಯೋ ಮತ್ತು ಯಾವಾಗಲೂ ಎಲ್ಲ ಭಯಗಳಿಂದಲೂ ರಕ್ಷಿಸುತ್ತಾನೆಯೋ ಅವನೇ ಈ ಮಂಗಳಪ್ರದನಾದ, ಸರ್ವರಹಸ್ಯಮಯನಾದ, ಶಾಶ್ವತನಾದ, ದೇವನಾದ ವಾಸುದೇವನೆಂದು ತಿಳಿ ಎಂದು ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತಿದ್ದೇನೆ.
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ |
ಸೇವ್ಯತೇಽಭ್ಯರ್ಚ್ಯತೇ ಚೈವ ನಿತ್ಯಯುಕ್ತೈಃ ಸ್ವಕರ್ಮಭಿಃ ॥38॥
ಅವನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಂದಲೂ, ಚಕ್ರ-ಶಂಖಾದಿಗಳನ್ನು ಧರಿಸಿದ ಶೂದ್ರರಿಂದಲೂ ತಮ್ಮ ಸ್ವಕರ್ಮದಿಂದ ನಿತ್ಯವೂ ಧ್ಯಾನಿಸಿ ಸೇವಿಸಲ್ಪಡುತ್ತಾನೆ ಮತ್ತು ಪೂಜಿಸಲ್ಪಡುತ್ತಾನೆ.
ದ್ವಾಪರಸ್ಯ ಯುಗಸ್ಯಾಂತೇ ಆದೌ ಕಲಿಯುಗಸ್ಯ ಚ |
ಸಾತ್ವತಂ ವಿಧಿಮಾಸ್ಥಾಯ ಗೀತಃ ಸಂಕರ್ಷಣೇನ ಯಃ ॥39॥
ದ್ವಾಪರಯುಗದ ಅಂತ್ಯದಲ್ಲಿ ಮತ್ತು ಕಲಿಯುಗದ ಆದಿಯಲ್ಲಿ ಶೇಷದೇವರು ಸಾತ್ವತವಿಧಿಯಂತೆ ಪಂಚರಾತ್ರಾಗಮವನ್ನು ರಚಿಸಿ ಅವನ ಮಹಿಮೆಯನ್ನು ಕೊಂಡಾಡಿದ್ದಾರೆ.
ಸ ಏಷ ಸರ್ವಾಸುರಮರ್ತ್ಯಲೋಕಂ
ಸಮುದ್ರಕಕ್ಷ್ಯಾಂತರಿತಾಃ ಪುರೀಶ್ಚ |
ಯುಗೇ ಯುಗೇ ಮಾನುಷಂ ಚೈವ ವಾಸಂ
ಪುನಃ ಪುನಃ ಸೃಜತೇ ವಾಸುದೇವಃ ॥40॥
ಅಂತಹ ಈ ವಾಸುದೇವನೇ ಪ್ರತಿಯುಗಗಳಲ್ಲಿಯೂ ಎಲ್ಲಾ ರಾಕ್ಷಸ-ಮರ್ತ್ಯರನ್ನು ಸಮುದ್ರದ ಮಜಲುಗಳಿಂದ ಅಂತರಿತವಾದ ಪಟ್ಟಣಿಗಳನ್ನು ಮನುಷ್ಯ ನಿವಾಸ ಸ್ಥಾನಗಳನ್ನು ಪುನಃ ಪುನಃ ಸೃಷ್ಟಿ ಮಾಡುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ಮೂರನೆಯ ಅಧ್ಯಾಯ
ಭೀಷ್ಮರಿಂದ ದುರ್ಯೋಧನನನ್ನು ಕುರಿತು ಕೃಷ್ಣನ ಮಹಿಮೆಯ ಉಪದೇಶ.
ದುರ್ಯೋಧನಃ
ವಾಸುದೇವೋ ಮಹದ್ಭೂತಂ ಸರ್ವಲೋಕೇಷು ಕಥ್ಯತೇ |
ತಸ್ಯಾಗಮಂ ಪ್ರತಿಷ್ಠಾಂ ಚ ಜ್ಞಾತುಮಿಚ್ಛೇ ಪಿತಾಮಹ ॥1॥
ದುರ್ಯೋಧನ ವಾಸುದೇವನು ದೊಡ್ಡವಸ್ತುವೆಂದು ಎಲ್ಲ ಲೋಕಗಳಲ್ಲಿಯೂ ಹೇಳಲ್ಪಡುತ್ತದೆ. ಪಿತಾಮಹರೇ, ಅವನ ಆಗಮನ ಕ್ರಮವನ್ನು ಮತ್ತು ಸ್ಥಿತಿಯನ್ನು ನಾನು ಕೇಳಲು ಬಯಸುತ್ತೇನೆ.
ಭೀಷ್ಮಃ
ವಾಸುದೇವೋ ಮಹದ್ಭೂತಂ ಸಂಭೂತಂ ಸಹ ದೈವತೈಃ |
ನ ಪರಂ ಪುಂಡರೀಕಾಕ್ಷಾದ್ ದೃಶ್ಯತೇ ಭರತರ್ಷಭ |
ಮಾರ್ಕಂಡೇಯಶ್ಚ ಗೋವಿಂದಂ ಕಥಯತ್ಯದ್ಭುತಂ ಮಹತ್ ॥2॥
ಭೀಷ್ಮ ವಾಸುದೇವನು ಶ್ರೇಷ್ಠವಾದ ವಸ್ತು. ದೇವತೆಗಳ ಜೊತೆಯಲ್ಲಿ ಅವತರಿಸಿದ್ದಾನೆ. ಎಲೈ ಭರತಶ್ರೇಷ್ಠನೇ, ಪುಂಡರೀಕಾಕ್ಷನಿಗಿಂತ ಶ್ರೇಷ್ಠವಾದ ವಸ್ತುವು ಯಾವುದೂ ಕಾಣುವುದಿಲ್ಲ. ಮಾರ್ಕಂಡೇಯರೂ ಸಹ ಆ ಗೋವಿಂದನನ್ನು ಅದ್ಭುತವಾದ ಮಹಾವಸ್ತುವೆಂದು ಹೇಳುತ್ತಾರೆ.
ಸರ್ವಭೂತಾನಿ ಭೂತಾತ್ಮಾ ಮಹಾತ್ಮಾ ಪುರುಷೋತ್ತಮಃ |
ಆಪೋ ವಾಯುಶ್ಚ ತೇಜಶ್ಚ ತ್ರಯಮೇತದಕಲ್ಪಯತ್ ॥3॥
ಸರ್ವಜೀವಾಂತರ್ಯಾಮಿಯೂ, ಮಹಾತ್ಮನೂ ಆದ ಪುರುಷೋತ್ತಮನು ಎಲ್ಲ ಜೀವರನ್ನೂ, ಜಲ-ವಾಯು-ಅಗ್ನಿ ಈ ಮೂರನ್ನೂ ಸೃಷ್ಟಿಸಿದನು.

ಸ ಸೃಷ್ಟ್ವಾ ಪೃಥಿವೀಂ ದೇವಃ ಸರ್ವಲೋಕೇಶ್ವರಃ ಪ್ರಭುಃ |
ಅಪ್ಸು ವೈ ಶಯನಂ ಚಕ್ರೇ ಮಹಾತ್ಮಾ ಪುರುಷೋತ್ತಮಃ |
ಸರ್ವತೋಯಮಯೋ ದೇವೋ ಯೋಗಾತ್ ಸುಷ್ವಾಪ ತತ್ರ ಹ ॥4॥
ಸರ್ವಲೋಕೇಶ್ವರನಾದ ಪ್ರಭುವಾದ ಆ ದೇವನು ಪೃಥಿವಿಯನ್ನು ಸೃಷ್ಟಿಸಿ ಅಲ್ಲಿ ಮಹಾತ್ಮನಾದ ಪುರುಷೋತ್ತಮನಾದ ಅವನು ನೀರಿನಲ್ಲಿ ಶಯನವನ್ನು ಮಾಡಿದನು. ಎಲ್ಲ ಜಲಗಳಿಗಿಂತಲೂ ಪ್ರಧಾನನಾದ ಆ ದೇವನು ಜಲದಲ್ಲಿ ಯೋಗನಿದ್ರೆಯನ್ನು ಮಾಡಿದನು.
ಮುಖತಃ ಸೋಽಗ್ನಿಮಸೃಜತ್ ಪ್ರಾಣಾದ್ ವಾಯುಮಥಾಪಿ ಚ |
ಸರಸ್ವತೀಂ ಚ ವೇದಾಂಶ್ಚ ಮನಸಃ ಸಸೃಜೇಽಚ್ಯುತಃ ॥5॥
ಅವನು ಮುಖದಿಂದ ಅಗ್ನಿಯನ್ನು ಮತ್ತು ಪ್ರಾಣದಿಂದ ವಾಯುವನ್ನು ಸೃಷ್ಟಿಸಿದನು. ಅಚ್ಯುತನಾದ ಅವನು ತನ್ನ ಮನಸ್ಸಿನಿಂದಲೇ ಸರಸ್ವತಿಯನ್ನು ಮತ್ತು ವೇದಗಳನ್ನು ಸೃಷ್ಟಿಸಿದನು.
ಏಷ ಲೋಕಾನ್ ಸಸರ್ಜಾದೌ ದೇವಾಂಶ್ಚರ್ಷಿಗಣೈಃ ಸಹ |
ಅಮೃತಂ ಚೈವ ಮೃತ್ಯುಂ ಚ ಪ್ರಜಾನಾಂ ಪ್ರಭವೋಽವ್ಯಯಃ ॥6॥
ಇವನೇ ಮೊದಲು ದೇವರ್ಷಿಗಣಗಳ ಸಹಿತವಾಗಿ ಲೋಕಗಳನ್ನು ಸೃಷ್ಟಿಸಿದನು. ಎಲ್ಲ ಜೀವರ ಜನಕನಾದ ಅವ್ಯಯನಾದ ಇವನೇ ಅಮೃತವನ್ನು ಮತ್ತು ಮೃತ್ಯುವನ್ನು ಎಂದರೆ ಮೋಕ್ಷಸಾಧನವನ್ನು ಮತ್ತು ನರಕಸಾಧನವನ್ನು ಸೃಷ್ಟಿಸಿದನು.
ಏಷ ಧರ್ಮಶ್ಚ ಧರ್ಮಜ್ಞೋ ವರದಃ ಸರ್ವಕಾಮದಃ |
ಏಷ ಕರ್ತಾ ಚ ಕಾರ್ಯಂ ಚ ಪೂರ್ವದೇವಃ ಸ್ವಯಂಪ್ರಭುಃ ॥7॥
ಲೋಕಧಾರಕನಾದುದರಿಂದ ಇವನೇ ಧರ್ಮನೆನಿಸುವನು. ಇವನು ಧರ್ಮವನ್ನು ತಿಳಿದವನು, ವರಗಳನ್ನು ಕೊಡುವವನು ಮತ್ತು ಸರ್ವಾಭೀಷ್ಟಪ್ರದನಾದವನು. ಇವನು ಸ್ವತಂತ್ರನಾಗಿ ಎಲ್ಲವನ್ನೂ ಮಾಡುವವನು, ಕಾರ್ಯಗಳಲ್ಲಿಯೂ ಇರುವವನು. ಪ್ರಭುವಾದ ಇವನು ಎಲ್ಲ ದೇವತೆಗಳಿಗಿಂತಲೂ ಮೊದಲು ಸ್ವತಃ ಇರುವವನು.
ಭೂತಂ ಭವ್ಯಂ ಭವಿಷ್ಯಚ್ಚ ಪೂರ್ವಮೇತದಕಲ್ಪಯತ್ |
ಉಭೇ ಸಂಧ್ಯೇ ದಿಶಃ ಖಂ ಚ ನಿಯಮಂ ಚ ಜನಾರ್ದನಃ ॥8॥
ಇವನು ಭೂತ, ಭವಿಷ್ಯತ್, ವರ್ತಮಾನಕಾಲಗಳ ಅಭಿಮಾನಿದೇವತೆಗಳನ್ನು ಮೊದಲು ಸೃಷ್ಟಿಸಿದನು. ಜನಾರ್ದನನಾದ ಇವನು ಎರಡು ಸಂಧ್ಯಾಕಾಲಗಳನ್ನೂ, ದಿಕ್ಕುಗಳನ್ನೂ, ಅಂತರಿಕ್ಷವನ್ನೂ ಮತ್ತು ನಿಯಮವನ್ನೂ ಸೃಷ್ಟಿಸಿದನು.
ಋಷೀಂಶ್ಚೈವ ಹಿ ಗೋವಿಂದಸ್ತಪಶ್ಚೈವಾನುಕಲ್ಪಯತ್ |
ಸ್ರಷ್ಟಾರಂ ಜಗತಶ್ಚಾಪಿ ಮಹಾತ್ಮಾ ಪ್ರಭುರವ್ಯಯಃ ॥9॥
ಮಹಾತ್ಮನೂ, ಅವ್ಯಯನೂ, ಪ್ರಭುವೂ ಆದ ಗೋವಿಂದನು ಋಷಿಗಳನ್ನೂ ಮತ್ತು ಅನಂತ ತಪಸ್ಸುಗಳನ್ನೂ ಸೃಷ್ಟಿಸಿದನು. ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮನನ್ನೂ ಸೃಷ್ಟಿಸಿದನು.
ಅಗ್ರಜಂ ಸರ್ವಭೂತಾನಾಂ ಸಂಕರ್ಷಣಮಕಲ್ಪಯತ್ |
ಶೇಷಂ ಚಾಕಲ್ಪಯದ್ ದೇವಮನಂತಮಿತಿ ಯಂ ವಿದುಃ ॥10॥
ಯೋ ಧಾರಯತಿ ಭೂತಾನಿ ಧರಾಂ ಚೇಮಾಂ ಸಪರ್ವತಾಮ್ |
ಧ್ಯಾನಯೋಗೇನ ವಿಪ್ರಾಶ್ಚ ತಂ ವದಂತಿ ಮಹೌಜಸಮ್ ॥11॥
ಯಾವ ಶೇಷನು ಪರ್ವತಸಹಿತವಾದ ಈ ಭೂಮಿಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿದ್ದಾನೆಯೋ, ಯಾವನನ್ನು ವಿಪ್ರರು ಧ್ಯಾನಯೋಗದಿಂದ ನೋಡಿ ಮಹಾಸಾಮರ್ಥ್ಯವುಳ್ಳವನೆಂದು ಹೇಳುತ್ತಾರೆಯೋ, ಯಾವ ದೇವನನ್ನು ಅನಂತ ಎಂದು ಕರೆಯುತ್ತಾರೆಯೋ ಅಂತಹ ಶೇಷನನ್ನು ಸಂಕರ್ಷಣನನ್ನಾಗಿ ತನ್ನ ಅಣ್ಣನನ್ನಾಗಿ ಸೃಷ್ಟಿಸಿದನು.
ಕರ್ಣಸ್ರೋತೋದ್ಭವಂ ಚಾಪಿ ಮಧುಂ ನಾಮ ಮಹಾಸುರಮ್ |
ತಮುಗ್ರಮುಗ್ರಕರ್ಮಾಣಮುಗ್ರಾಂ ಬುದ್ಧಿಂ ಸಮಾಸ್ಥಿತಮ್ |
ಬ್ರಹ್ಮಣೋಽಪಚಿತಿಂ ಕುರ್ವನ್ ಜಘಾನ ಪುರುಷೋತ್ತಮಃ ॥12॥
ಉಗ್ರಬುದ್ಧಿಯನ್ನು ಆಶ್ರಯಿಸಿ, ಉಗ್ರವಾದ ಕರ್ಮವನ್ನು ಮಾಡುವ ತನ್ನ ಕರ್ಣಗಳಿಂದ ಉತ್ಪನ್ನನಾದ ಮಧು ಎಂಬ ಹೆಸರಿನ ಮಹಾರಾಕ್ಷಸನನ್ನು ಪುರುಷೋತ್ತಮನಾದ ಅವನು ಬ್ರಹ್ಮದೇವರ ಮಾತನ್ನು ಗೌರವಿಸುತ್ತಾ ಸಂಹರಿಸಿದನು.
ತಸ್ಯ ತಾತ ವಧಾದೇವ ದೇವದಾನವಮಾನವಾಃ |
ಮಧುಸೂದನಮಿತ್ಯಾಹುರೃಷಯಶ್ಚ ಜನಾರ್ದನಮ್ |
ವರಾಹಶ್ಚೈವ ಸಿಂಹಶ್ಚ ತ್ರಿವಿಕ್ರಮಗತಿಃ ಪ್ರಭುಃ ॥13॥
ಎಲೈ ಪ್ರೀತಿಪಾತ್ರನೇ, ಆ ಮಧುವನ್ನು ಸಂಹರಿಸಿದ ಕಾರಣದಿಂದಲೇ ದೇವ- ದಾನವ-ಮಾನವರು ಮತ್ತು ಋಷಿಗಳು ಜನಾರ್ದನನನ್ನು ಮಧುಸೂದನನೆಂದು ಕರೆಯುತ್ತಾರೆ. ಪ್ರಭುವಾದ ಅವನು ವರಾಹಾವತಾರವನ್ನು, ನರಸಿಂಹಾವತಾರವನ್ನು ಮತ್ತು ತ್ರಿವಿಕ್ರಮ ಅವತಾರವನ್ನು ತಾಳಿದನು.
ಏಷ ಮಾತಾ ಪಿತಾ ಚೈವ ಸರ್ವೇಷಾಂ ಪ್ರಾಣಿನಾಂ ಹರಿಃ |
ಪರಂ ಹಿ ಪುಂಡರೀಕಾಕ್ಷಾನ್ನ ಭೂತಂ ನ ಭವಿಷ್ಯತಿ ॥14॥
ಹರಿಯಾದ ಇವನು ಎಲ್ಲ ಪ್ರಾಣಿಗಳಿಗೂ ತಂದೆಯೂ ಮತ್ತು ತಾಯಿಯೂ ಆಗಿದ್ದಾನೆ. ಪುಂಡರೀಕಾಕ್ಷನಿಗಿಂತ ಶ್ರೇಷ್ಠವಾದ ವಸ್ತುವು ಹಿಂದೆ ಇರಲಿಲ್ಲ ಮತ್ತು ಮುಂದೆ ಉಂಟಾಗುವುದಿಲ್ಲ.
ಮುಖತೋಽಸೃಜದ್ ಬ್ರಾಹ್ಮಣಾನ್ ಬಾಹುಭ್ಯಾಂ ಕ್ಷತ್ರಿಯಾಂಸ್ತಥಾ |

ವೈಶ್ಯಾಂಶ್ಚಾಪ್ಯೂರುತೋ ರಾಜನ್ ಶೂದ್ರಾನ್ ಪದ್ಭ್ಯಾಂ ತಥೈವ ಚ |
ತಪಸಾ ನಿಯತೋ ದೇವೋ ನಿಧಾನಂ ಸರ್ವದೇಹಿನಾಮ್ ॥15॥
ಎಲೈ ರಾಜನೇ, ಅವನು ಮುಖದಿಂದ ಬ್ರಾಹ್ಮಣರನ್ನು, ಬಾಹುಗಳಿಂದ ಕ್ಷತ್ರಿಯರನ್ನು, ತೊಡೆಗಳಿಂದ ವೈಶ್ಯರನ್ನು, ಹಾಗೆಯೇ ಪಾದದಿಂದ ಶೂದ್ರರನ್ನು ಸೃಷ್ಟಿಸಿದನು. ಜ್ಞಾನಾತ್ಮಕವಾದ ತಪಸ್ಸಿನಿಂದ ಯಾವಾಗಲೂ ಕೂಡಿದ ದೇವನು ಹಾಗೆ ಸೃಷ್ಟಿಯನ್ನು ಮಾಡಿ ಎಲ್ಲ ಜೀವರಿಗೂ ಆಶ್ರಯನಾದನು.
ಬ್ರಹ್ಮಭೂತಮಮಾವಾಸ್ಯಾಂ ಪೌರ್ಣಮಾಸ್ಯಾಂ ತಥೈವ ಚ |
ಯೋಗಭೂತಂ ಪರಿಚರನ್ ಕೇಶವಂ ಮಹದಾಪ್ನುಯಾತ್ ॥16॥
ಅಮಾವಾಸ್ಯೆಯಂದು ಅವನು ಬ್ರಾಹ್ಮಣರಿಂದ ಆರಾಧ್ಯನಾದವನು. ಪೌರ್ಣಮಾಸ್ಯದಂದು ಕೇಶವನನ್ನು ಆರಾಧಿಸುವ ಯೋಗಿಗಳು ದೊಡ್ಡ ಶುಭಫಲವನ್ನು ಹೊಂದುತ್ತಾರೆ (ಲಕ್ಷಾಲಂಕಾರ).
ಕೇಶವಃ ಪರಮಂ ತೇಜಃ ಸರ್ವಲೋಕಪಿತಾಮಹಃ |
ಏವಮಾಹುರ್ಹೃಷೀಕೇಶಂ ಮುನಯೋ ವೈ ನರಾಧಿಪ ॥17॥
ಕೇಶವನು ಪರಮತೇಜೋರೂಪನಾದವನು. ಸರ್ವಲೋಕಕ್ಕೆ ಪಿತಾಮಹನಾದವನು. ಎಲೈ ರಾಜನೇ, ಋಷಿಗಳು ಹೃಷೀಕೇಶನನ್ನು ಈ ರೀತಿಯಾಗಿ ಹೇಳುತ್ತಾರೆ.
ಏವಮೇನಂ ವಿಜಾನೀಹಿ ಆಚಾರ್ಯಂ ಪಿತರಂ ಗುರುಮ್ |
ಕೃಷ್ಣೋ ಯಸ್ಯ ಪ್ರಸೀದೇತ ಲೋಕಾಸ್ತೇನಾಕ್ಷಯಾ ಜಿತಾಃ ॥18॥
ಆದ್ದರಿಂದ ನೀನೂ ಸಹ ಇವನನ್ನು ಆಚಾರ್ಯನೆಂದೂ, ತಂದೆ ಎಂದೂ, ಗುರುವೆಂದೂ ತಿಳಿ. ಯಾವನಿಗೆ ಕೃಷ್ಣನು ಪ್ರಸನ್ನನಾಗುತ್ತಾನೆಯೋ ಅವನು ಅಕ್ಷಯಲೋಕವನ್ನು ಗಳಿಸುತ್ತಾನೆ.
ಯಶ್ಚೈವೈನಂ ಭಯಸ್ಥಾನೇ ಕೇಶವಂ ಶರಣಂ ವ್ರಜೇತ್ |
ಸದಾ ನರಃ ಪಠಂಶ್ಚೇದಂ ಸ್ವಸ್ತಿಮಾನ್ ಸ ಸುಖೀ ಭವೇತ್ ॥19॥
ಯಾವ ಮನುಷ್ಯನು ತನಗೆ ಭಯವುಂಟಾದಾಗ ಕೇಶವನಿಗೆ ಶರಣಾಗುವನೋ ಮತ್ತು ಯಾವನು ನಾನು ಹೇಳುತ್ತಿರುವ ಈ ಮಹಿಮೆಯ ಸ್ತೋತ್ರವನ್ನು ಪಠಿಸುತ್ತಾನೆಯೋ ಅವನು ಸುಖವನ್ನು ಹೊಂದುವನು.
ಯೇ ಚ ಕೃಷ್ಣಂ ಪ್ರಪದ್ಯಂತೇ ತೇ ನ ಮುಹ್ಯಂತಿ ಮಾನವಾಃ |
ಭಯೇ ಮಹತಿ ಯೇ ಮಗ್ನಾಃ ಪಾತಿ ನಿತ್ಯಂ ಜನಾರ್ದನಃ ॥20॥
ಯಾವ ಮಾನವರು ಕೃಷ್ಣನಿಗೆ ಶರಣಾಗತರಾಗುತ್ತಾರೆಯೋ ಅವರು ಮೋಹಕ್ಕೆ ಒಳಗಾಗುವುದಿಲ್ಲ. ಯಾರು ದೊಡ್ಡ ಭಯದಲ್ಲಿ ಮುಳುಗಿದ್ದಾರೆಯೋ ಅವರನ್ನೂ ಜನಾರ್ದನನು ಯಾವಾಗಲೂ ರಕ್ಷಿಸುತ್ತಾನೆ.
ಏತದ್ ಯುಧಿಷ್ಠಿರೋ ಜ್ಞಾತ್ವಾ ಯಾಥಾತಥ್ಯೇನ ಭಾರತ |
ಸರ್ವಾತ್ಮನಾ ಮಹಾತ್ಮಾನಂ ಕೇಶವಂ ಜಗದೀಶ್ವರಮ್ |
ಪ್ರಪನ್ನಃ ಶರಣಂ ರಾಜನ್ ಯೋಗಾನಾಮೀಶ್ವರಂ ಪ್ರಭುಮ್ ॥21॥
ಎಲೈ ಭಾರತನೇ, ರಾಜನೇ, ಈ ಸತ್ಯಾಂಶವನ್ನು ಯುಧಿಷ್ಠಿರನು ಚೆನ್ನಾಗಿ ತಿಳಿದು ಮಹಾತ್ಮನೂ, ಜಗದೀಶ್ವರನೂ, ಯೋಗೀಶ್ವರನೂ, ಪ್ರಭುವೂ ಆದ ಕೇಶವನನ್ನು ಸರ್ವಪ್ರಕಾರಗಳಿಂದಲೂ ಶರಣು ಹೊಂದಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ನಾಲ್ಕನೆಯ ಅಧ್ಯಾಯ
ಭೀಷ್ಮರಿಂದ ಕೃಷ್ಣನ ಮಹಿಮೆಯನ್ನು ವರ್ಣಿಸಿ, ಪಾಂಡವರ ಜೊತೆಯಲ್ಲಿ ಸಂಧಾನ ಮಾಡಿಕೊಳ್ಳುವಂತೆ ದುರ್ಯೋಧನನಿಗೆ ಒತ್ತಾಯ.
ಭೀಷ್ಮಃ
ಸ್ತವಂ ವೈ ಬ್ರಹ್ಮಸಂಯುಕ್ತಂ ಶೃಣು ಕೃಷ್ಣಸ್ಯ ಭಾರತ |
ಶೃಣು ಚೇದಂ ಮಹಾರಾಜ ಬ್ರಹ್ಮಭೂತಸ್ತವಂ ಮಮ |
ಬ್ರಹ್ಮರ್ಷಿಭಿಶ್ಚ ದೇವೈಶ್ಚ ಯಃ ಪುರಾ ಕಥಿತೋ ಭುವಿ ॥1॥
ಭೀಷ್ಮ ಎಲೈ ಭಾರತನೇ, ಮಹಾರಾಜನೇ, ಬ್ರಹ್ಮದೇವರು ಮಾಡಿದಂತಹ ಕೃಷ್ಣನ ಈ ಸ್ತೋತ್ರವನ್ನು ಕೇಳುವವನಾಗು. ಇದು ಹಿಂದೆ ಭೂಮಿಯಲ್ಲಿ ಬ್ರಹ್ಮರ್ಷಿಗಳಿಂದಲೂ ಮತ್ತು ದೇವರ್ಷಿಗಳಿಂದಲೂ ಹೇಳಲ್ಪಟ್ಟಿದೆ.
ಸಾಧ್ಯಾನಾಮಪಿ ದೇವಾನಾಂ ದೇವದೇವೇಶ್ವರಃ ಪ್ರಭುಃ |
ಲೋಕಭಾವನಭಾವಜ್ಞ ಇತಿ ತ್ವಾಂ ನಾರದೋಽಬ್ರವೀತ್ |
ಭೂತಂ ಭವ್ಯಂ ಭವಿಷ್ಯಂ ಚ ಮಾರ್ಕಂಡೇಯೋಽಭ್ಯುವಾಚ ಹ ॥2॥
ಸಾಧ್ಯಗಣದ ದೇವತೆಗಳಿಗೂ ಇವನು ದೇವದೇವೇಶ್ವರನಾದ ಪ್ರಭು, ಲೋಕವನ್ನು ಉತ್ಪತ್ತಿ ಮಾಡುವವನು ಮತ್ತು ಸರ್ವಜೀವರ ಅಭಿಪ್ರಾಯವನ್ನು ತಿಳಿದವನು ಎಂದು ನಾರದರು ಹೇಳಿದರು (ಎಂದು ಬ್ರಹ್ಮದೇವರು ದೇವರನ್ನು ಸ್ತೋತ್ರ ಮಾಡಿದರು ಎಂದು ಸರ್ವತ್ರ ಇಟ್ಟುಕೊಳ್ಳಬೇಕು). ಭೂತ-ವರ್ತಮಾನ-ಭವಿಷ್ಯವೆಲ್ಲವೂ ನಿನ್ನ ಅಧೀನವೆಂದು ಮಾರ್ಕಂಡೇಯರು ಹೇಳಿದರಷ್ಟೆ!
ಯಜ್ಞಾನಾಂ ಚೈವ ಯಜ್ಞಂ ತ್ವಾಂ ತಪಶ್ಚ ತಪಸಾಮಪಿ |

ದೇವಾನಾಮಪಿ ದೇವಂ ಚ ತ್ವಾಮಾಹ ಭಗವಾನ್ ಭೃಗುಃ |
ಪುರಾಣೇ ಭೈರವಂ ರೂಪಂ ವಿಷ್ಣೋ ಭೂತಪತೇತಿ ವೈ ||3||
ವಾಸುದೇವೋ ವಸೂನಾಂ ತ್ವಂ ಶಕ್ರಂ ಸ್ಥಾಪಯಿತಾ ತಥಾ |
ದೇವದೇವೋಽಸಿ ದೇವಾನಾಮಿತಿ ದ್ವೈಪಾಯನೋಽಬ್ರವೀತ್ ||4||
ನೀನು ಯಜ್ಞಗಳಲ್ಲಿ ಯಜ್ಞನೆಂದೂ, ತಪಸ್ಸುಗಳಲ್ಲಿ ತಪಸ್ಸೆಂದೂ, ದೇವತೆಗಳಲ್ಲಿ ದೇವನೆಂದೂ ಪೂಜ್ಯರಾದ ಭೃಗುಗಳು ಹೇಳಿದರು. ಎಲೈ ವಿಷ್ಣುವೇ, ದ್ವೈಪಾಯನರು ಪುರಾಣಗಳಲ್ಲಿ ಭಯಂಕರವಾದ ರೂಪವನ್ನು ಧರಿಸುವವನೆಂದೂ, ಭೂತಪತಿ ಎಂದೂ, ವಸುಗಳನ್ನು ಮತ್ತು ಇಂದ್ರನನ್ನು ತಮ್ಮ ತಮ್ಮ ಸ್ಥಾನಗಳಲ್ಲಿ ಸ್ಥಾಪಿಸಿದ ವಾಸುದೇವನೆಂದೂ, ದೇವತೆಗಳಿಗೂ ದೇವದೇವನೆಂದೂ ಹೇಳಿದರು.
ಪೂರ್ವೇ ಪ್ರಜಾನಿಸರ್ಗೇಷು ದಕ್ಷಮಾಹುಃ ಪ್ರಜಾಪತಿಮ್ |
ಸ್ರಷ್ಟಾರಂ ಸರ್ವಭೂತಾನಾಮಂಗಿರಾಸ್ತ್ವಂ ತತೋಽಬ್ರವೀತ್ ||5||
ಪೂರ್ವಕಾಲದಲ್ಲಿ ಪ್ರಜಾ ಸೃಷ್ಟಿ ಸಂದರ್ಭದಲ್ಲಿ ಎಲ್ಲ ಪ್ರಜೆಗಳನ್ನು ಸೃಷ್ಟಿ ಮಾಡಿದ ಪ್ರಜಾಪತಿಯಾದ ದಕ್ಷನೆಂದು ಅಂಗಿರಸರು ನನಗೆ ಹೇಳಿದರು (ದಕ್ಷನಲ್ಲಿದ್ದು ದಕ್ಷನಾಮಕನಾಗಿ ಪ್ರಜೆಗಳನ್ನು ಸೃಷ್ಟಿ ಮಾಡುವವನು ಎಂದು ಅಭಿಪ್ರಾಯ).
ಅವ್ಯಕ್ತಂ ತೇ ಶರೀರೋತ್ಥಂ ವ್ಯಕ್ತಂ ತೇ ಮನಸಿ ಸ್ಥಿತಮ್ |
ದೇವಾ ವಾಕ್ಸಂಭವಾಶ್ಚೇತಿ ದೇವಲಸ್ತ್ವಸಿತೋಽಬ್ರವೀತ್ ||6||
ಅವ್ಯಕ್ತವಾದ ಸ್ವರ್ಗಾದಿಗಳು ನಿನ್ನ ಶರೀರದಿಂದ ಜನ್ಯವಾದವುಗಳು. ವ್ಯಕ್ತವಾದ ಜ್ಞಾನವು ನಿನ್ನ ಮನಸ್ಸನ್ನು ಆಶ್ರಯಿಸಿದೆ. ದೇವತೆಗಳೆಲ್ಲರೂ ನಿನ್ನ ವಾಗಿಂದ್ರಿಯದಿಂದ ಜನಿಸಿದವರು ಎಂದು ದೇವಲರು ಮತ್ತು ಅಸಿತರು ಹೇಳಿದರು.
ಶಿರಸಾ ತೇ ದಿವಂ ವ್ಯಾಪ್ತಂ ಬಾಹುಭ್ಯಾಂ ಪೃಥಿವೀ ಧೃತಾ |
ಜಠರಂ ತೇ ತ್ರಯೋ ಲೋಕಾಃ ಪುರುಷೋಽಸಿ ಸನಾತನಃ ||7||
ದ್ಯುಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ನಿನ್ನ ಬಾಹುಗಳಿಂದ ಭೂಲೋಕವು ಧರಿಸಲ್ಪಟ್ಟಿದೆ. ನಿನ್ನ ಜಠರವು ಮೂರುಲೋಕಗಳಿಗೂ ಆಶ್ರಯವಾಗಿದೆ. ನೀನು ಷಡ್ಗುಣಸಂಪನ್ನನಾದ ವೇದಪ್ರತಿಪಾದ್ಯನಾದ ಪುರುಷನಾಗಿದ್ದೀಯೆ.
ಏವಂ ತ್ವಾಮಭಿಜಾನಂತಿ ತಪಸಾ ಭಾವಿತಾ ನರಾಃ |
ಆತ್ಮದರ್ಶನತೃಪ್ತಾನಾಮೃಷೀಣಾಂ ಚಾಪಿ ಸತ್ತಮಃ ||8||
ಹೀಗೆ ತಪಸ್ಸಿನಿಂದ ಪರಿಶುದ್ಧರಾದ ಮಾನವರು ನಿನ್ನನ್ನು ತಿಳಿಯುತ್ತಾರೆ. ಅಂತರ್ಯಾಮಿಯ ದರ್ಶನದಿಂದ ತೃಪ್ತರಾದ ಋಷಿಗಳ ದೃಷ್ಟಿಯಲ್ಲಿ ನೀನು ಸರ್ವಶ್ರೇಷ್ಠನಾದವನು.
ರಾಜರ್ಷೀಣಾಮುದಾರಾಣಾಮಾಹವೇಷ್ವನಿವರ್ತಿನಾಮ್ |
ಸರ್ವಧರ್ಮಪ್ರಧಾನಾನಾಂ ತ್ವಂ ಗತಿರ್ಮಧುಸೂದನ ||9||
ಎಲೈ ಮಧುಸೂದನನೇ, ಯುದ್ಧದಲ್ಲಿ ಹಿಂದಿರುಗದಿರುವ, ಸರ್ವಧರ್ಮಗಳನ್ನು ಪ್ರಧಾನವಾಗಿ ಆಚರಿಸುವ ಉದಾರವಾದ ರಾಜರ್ಷಿಗಳಿಗೆ ನೀನೇ ಗತಿಯಾದವನು.
ಇತಿ ನಿತ್ಯಂ ಯೋಗವಿದ್ಭಿರ್ಭಗವಾನ್ ಪುರುಷೋತ್ತಮಃ |
ಸನತ್ಕುಮಾರಪ್ರಮುಖೈಃ ಸ್ತೂಯತೇಽಭ್ಯರ್ಚ್ಯತೇ ಹರಿಃ ||10||
ಎಲೈ ದುರ್ಯೋಧನನೇ, ಹೀಗೆ ಭಗವಂತನಾದ ಪುರುಷೋತ್ತಮನು, ಯೋಗಾರೂಢರಾದ ಸನತ್ಕುಮಾರ ಮೊದಲಾದ ಯೋಗಿಗಳಿಂದ ಹರಿಯು ಯಾವಾಗಲೂ ಸ್ತೋತ್ರ ಮಾಡಲ್ಪಡುತ್ತಾನೆ ಮತ್ತು ಪೂಜಿಸಲ್ಪಡುತ್ತಾನೆ.
ಏಷ ತೇ ವಿಸ್ತರಸ್ತಾತ ಸಂಕ್ಷೇಪಶ್ಚ ಪ್ರಕೀರ್ತಿತಃ |
ಕೇಶವಸ್ಯ ಯಥಾತತ್ತ್ವಂ ಸುಪ್ರೀತೋ ಭವ ಕೇಶವೇ ||11||
ಪ್ರೀತಿಪಾತ್ರನೇ, ಕೇಶವನ ಯಥಾರ್ಥವಾದ ಮಹಿಮೆಯನ್ನು ಸಂಕ್ಷೇಪವಾಗಿಯೂ ಮತ್ತು ವಿಸ್ತಾರವಾಗಿಯೂ ಹೇಳಿದ್ದೇನೆ. ಅವನ ವಿಷಯದಲ್ಲಿ ಪ್ರಸನ್ನವಾದ ಮನಸ್ಸನ್ನು ಉಳ್ಳವನಾಗು.
ಸಂಜಯಃ
ಪುಣ್ಯಂ ಶ್ರುತ್ವೈತದಾಖ್ಯಾನಂ ಮಹಾರಾಜ ಸುತಸ್ತವ |
ಕೇಶವಂ ಬಹು ಮೇನೇ ಸ ಪಾಂಡವಾಂಶ್ಚ ಮಹಾರಥಾನ್ ||12||
ಸಂಜಯ ಎಲೈ ಮಹಾರಾಜನೇ, ಈ ಪವಿತ್ರವಾದ ಸಂವಾದವನ್ನು ಕೇಳಿ ನಿನ್ನ ಪುತ್ರನು ಕೇಶವನಲ್ಲಿ ಬಹುಮಾನವನ್ನು ಹೊಂದಿ ಮಹಾರಥರಾದ ಪಾಂಡವರಲ್ಲಿಯೂ ಬಹುಮಾನವನ್ನು (ಗೌರವ) ಹೊಂದಿದನು.
ತಮಬ್ರವೀನ್ಮಹಾರಾಜ ಭೀಷ್ಮಃ ಶಾಂತನವಃ ಪುನಃ |
ಮಾಹಾತ್ಮ್ಯಂ ತೇ ಶ್ರುತಂ ರಾಜನ್ಕೇಶವಸ್ಯ ಮಹಾತ್ಮನಃ ||13||
ನರಸ್ಯ ಚ ಯಥಾತತ್ತ್ವಂ ಯನ್ಮಾಂ ತ್ವಂ ಪರಿಪೃಚ್ಛಸಿ |
ಯದರ್ಥಂ ನೃಷು ಸಂಭೂತೌ ನರನಾರಾಯಣಾವುಭೌ ||14||
ಅವಧ್ಯೌ ಚ ಯಥಾ ವೀರೌ ಸಂಯುಗೇಷ್ವಪರಾಜಿತೌ |
ಯಥಾ ಚ ಪಾಂಡವಾ ರಾಜನ್ನಗಮ್ಯಾ ಯುಧಿ ಕಸ್ಯಚಿತ್ ||15||
ಪ್ರೀತಿಮಾನ್ ಹಿ ದೃಢಂ ಕೃಷ್ಣಃ ಪಾಂಡವೇಷು ಯಶಸ್ವಿಷು |
ತಸ್ಮಾದ್ ಬ್ರವೀಮಿ ರಾಜೇಂದ್ರ ಶಮೋ ಭವತು ಪಾಂಡವೈಃ ||16||
ಎಲೈ ಮಹಾರಾಜನೇ, ಶಂತನು ಪುತ್ರರಾದ ಭೀಷ್ಮರು ಅವನನ್ನು ಕುರಿತು ಪುನಃ ರಾಜನೇ, ಮಹಾತ್ಮನಾದ ಕೇಶವನ ಮಹಿಮೆಯನ್ನು

ನೀನು ಕೇಳಿದ್ದೀಯೆ. ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ನರನ ಸತ್ಯವಾದ ಮಹಿಮೆಯನ್ನು ಹೇಳಿದ್ದೇನೆ. ನರ-ನಾರಾಯಣರಾದ ಅವರಿಬ್ಬರೂ ಭೂಲೋಕದಲ್ಲಿ ಯಾವ ಉದ್ದೇಶದಿಂದ ಅವತರಿಸಿದರೆಂದೂ, ಯುದ್ಧದಲ್ಲಿ ಅಪರಾಜಿತರಾದ ಅವರು ಹೇಗೆ ಯುದ್ಧದಲ್ಲಿ ಅವಧ್ಯರಾಗಿದ್ದಾರೆಂಬುದನ್ನೂ ಮತ್ತು ಪಾಂಡವರು ಯುದ್ಧದಲ್ಲಿ ಯಾರಿಂದಲೂ ಹೇಗೆ ಸಮೀಪಿಸಲ್ಪಡುವುದಿಲ್ಲ ಎಂಬ ವಿಷಯವನ್ನೂ ಮತ್ತು ಕೃಷ್ಣನು ಕೀರ್ತಿಶಾಲಿಗಳಾದ ಪಾಂಡವರಲ್ಲಿ ಎಂತಹ ದೃಢವಾದ ಪ್ರೀತಿಯುಳ್ಳವನಾಗಿದ್ದಾನೆಂದೂ ಹೇಳಿದ್ದೇನೆ. ಆದ್ದರಿಂದ ರಾಜನೇ, ಇನ್ನೊಮ್ಮೆ ಹೇಳುತ್ತಿದ್ದೇನೆ. ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೋ.

ಪೃಥಿವೀಂ ಭುಂಕ್ಷ್ವ ಸಹಿತೋ ಭ್ರಾತೃಭಿರ್ಬಲಿಭಿರ್ವಶೀ |
ನರನಾರಾಯಣೌ ದೇವಾವವಜ್ಞಾಯ ನಶಿಷ್ಯಸಿ ॥17॥

ಬಲಿಷ್ಠರಾದ ಸಹೋದರರಿಂದ ಕೂಡಿ ಅವರನ್ನು ವಶಮಾಡಿಕೊಂಡು ಪೃಥಿವಿಯನ್ನು ಭೋಗಿಸು. ದೇವತೆಗಳಾದ ನರ-ನಾರಾಯಣರನ್ನು ಅವಮಾನ ಮಾಡಿದರೆ ನೀನು ನಾಶವನ್ನು ಹೊಂದುವಿ.

ಏವಮುಕತ್ತ್ವ ತವ ಪಿತಾ ತೂಷ್ಣೀಮಾಸೀದ್ ವಿಶಾಂಪತೇ |
ವ್ಯಸರ್ಜಯಚ್ಚ ರಾಜಾನಂ ಶಯನಂ ಚ ವಿವೇಶ ಹ ॥18॥

ಎಲೈ ರಾಜನೇ, ಹೀಗೆ ಮಾತನಾಡಿ ನಿನ್ನ ತಂದೆಯು ಮೌನವಹಿಸಿದನು. ರಾಜನನ್ನು ಕಳುಹಿಸಿಕೊಟ್ಟು ತನ್ನ ಶಯನವನ್ನು ಪ್ರವೇಶಿಸಿದನು.

ರಾಜಾಽಪಿ ಶಿಬಿರಂ ಪ್ರಾಯಾತ್ ಪ್ರಣಿಪತ್ಯ ಮಹಾತ್ಮನೇ |
ಶಿಶ್ಯೇ ಚ ಶಯನೇ ಶುಭ್ರೇ ತಾಂ ರಾತ್ರಿಂ ಭರತರ್ಷಭ ॥19॥

ಎಲೈ ಭರತಶ್ರೇಷ್ಠನೇ, ರಾಜನೂ ಸಹ ಮಹಾತ್ಮನಾದ ಕೃಷ್ಣನಿಗೆ ನಮಸ್ಕಾರವನ್ನು ಮಾಡಿ ತನ್ನ ಶಿಬಿರಕ್ಕೆ ಹೋಗಿ ತನ್ನ ಶುಭ್ರವಾದ ಶಯನದಲ್ಲಿ ಆ ರಾತ್ರಿಯನ್ನು ಕಳೆದನು (ಡಂಭದಿಂದ ಕೃಷ್ಣನಿಗೆ ನಮಸ್ಕಾರ ಮಾಡಿದನೆಂದು ಆಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ).

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುರ್ವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *

ಅರವತ್ತೈದನೆಯ ಅಧ್ಯಾಯ

ಐದನೆಯ ದಿವಸದ ಯುದ್ಧ ಪ್ರಾರಂಭ.

ಸಂಜಯಃ

ವ್ಯುಷಿತಾಯಾಂ ಚ ಶರ್ವರ್ಯಾಮುದಿತೇ ಚ ದಿವಾಕರೇ |
ಉಭೇ ಸೇನೇ ಮಹಾರಾಜ ಯುದ್ಧಾಯೈವ ಸಮೀಯತುಃ ॥1॥

ಸಂಜಯ ಎಲೈ ಮಹಾರಾಜನೇ, ಆ ರಾತ್ರಿಯು ಕಳೆದು ಸೂರ್ಯೋದಯ- ವಾಗುತ್ತಿರಲು ಎರಡು ಸೈನ್ಯಗಳೂ ಯುದ್ಧಕ್ಕೇ ಸನ್ನದ್ಧವಾದವು.

ಅಭ್ಯಧಾವಂಶ್ಚ ಸಂಕ್ರುದ್ಧಾಃ ಪರಸ್ಪರಜಿಗೀಷವಃ |
ತೇ ಸರ್ವೇ ಸಹಿತಾ ಯುದ್ಧೇ ಸಮಾಲೋಕ್ಯ ಪರಸ್ಪರಮ್ ॥2॥

ಅವರೆಲ್ಲರೂ ಯುದ್ಧದಲ್ಲಿ ಸಮಾಗತರಾಗಿ ಒಬ್ಬರನ್ನೊಬ್ಬರು ನೋಡಿ ಪರಸ್ಪರವಾಗಿ ಗೆಲ್ಲುವ ಆಸೆಯನ್ನು ಹೊಂದಿ ಕ್ರೋಧದಿಂದ ಓಡಾಡಿದರು.

ಪಾಂಡವಾ ಧಾರ್ತರಾಷ್ಟ್ರಾಶ್ಚ ರಾಜನ್ ದುರ್ಮಂತ್ರಿತೇ ತವ |
ವ್ಯೂಹೌ ಚ ವ್ಯೂಹ್ಯ ಸಂರಬ್ಧಾಃ ಸಂಪ್ರಯುದ್ಧಾಃ ಪ್ರಹಾರಿಣಃ ॥3॥

ಎಲೈ ರಾಜನೇ, ನಿನ್ನ ದುರ್ಮಂತ್ರದ ಕಾರಣದಿಂದಾಗಿ ಪಾಂಡವರು ಮತ್ತು ದುರ್ಯೋಧನಾದಿಗಳು ವ್ಯೂಹಗಳನ್ನು ರಚಿಸಿ ಕೋಪದಿಂದ ಒಬ್ಬರನ್ನೊಬ್ಬರು ಪ್ರಹಾರ ಮಾಡುತ್ತಾ ಯುದ್ಧವನ್ನು ಮಾಡಿದರು.

ಅರಕ್ಷನ್ ಮಕರವ್ಯೂಹಂ ಭೀಷ್ಮೋ ರಾಜನ್ ಸಮಂತತಃ |
ಅಜಾತಶತ್ರುಃ ಶತ್ರೂಣಾಂ ಮನಾಂಸಿ ಸಮಕಂಪಯತ್ |
ಶ್ಯೇನವದ್ ವ್ಯೂಹ್ಯ ತಂ ವ್ಯೂಹಂ ಧೌಮ್ಯಸ್ಯ ವಚನಾತ್ ಸ್ವಯಮ್ ॥

ಎಲೈ ರಾಜನೇ, ಭೀಷ್ಮರು ಮಕರವ್ಯೂಹವನ್ನು ರಚಿಸಿ ಅದನ್ನು ಎಲ್ಲ ಕಡೆಗಳಿಂದಲೂ ರಕ್ಷಿಸಿದರು. ಅಜಾತಶತ್ರುವಾದರೂ ಧೌಮ್ಯರ ವಚನದಂತೆ ಸ್ವತಃ ಶ್ಯೇನ ವ್ಯೂಹವನ್ನು ರಚಿಸಿ ಶತ್ರುಗಳ ಮನಸ್ಸನ್ನು ಅಲುಗಾಡಿಸಿದನು.

ಸ ಹಿ ತಸ್ಯ ಸುವಿಜ್ಞಾತ ಅಗ್ನಿಚಿತ್ಯೇಷು ಭಾರತ |
ಮಕರಸ್ತು ಮಹಾವ್ಯೂಹಸ್ತವ ಪುತ್ರಸ್ಯ ಧೀಮತಃ ॥5॥

ಎಲೈ ಭಾರತನೇ, ಅಗ್ನಿಚಯನ ಸಂದರ್ಭದಲ್ಲಿ ರಚಿಸಲ್ಪಡುವ ಶ್ಯೇನಾಕಾರವು ಅವನಿಗೆ ಬಹಳ ಪರಿಚಿತವಾಗಿದ್ದಿತು. ಮೇಧಾವಿಯಾದ ನಿನ್ನ ಮಗನ ವ್ಯೂಹವು ದೊಡ್ಡ ಮಕರವ್ಯೂಹವಾಗಿದ್ದಿತು.

ಸ್ವಯಂ ಸರ್ವೇಣ ಸೈನ್ಯೇನ ದ್ರೋಣೇನಾನುಮತಸ್ತದಾ |
ಯಥಾವ್ಯೂಹಂ ಶಾಂತನವಃ ಸೋಽನ್ವವರ್ತತ ತತ್ಪುನಃ ॥6॥

ದ್ರೋಣರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಭೀಷ್ಮರು ಸರ್ವಸೈನ್ಯದಿಂದ ಆ ವ್ಯೂಹವನ್ನು ರಚಿಸಿ ವ್ಯೂಹದ ಸರಿಯಾದ ಸ್ಥಾನದಲ್ಲಿ ಅವರು ನಿಂತರು.

ಸ ನಿರ್ಯಯೌ ರಥಾನೀಕಂ ಪಿತಾ ದೇವವ್ರತಸ್ತವ |
ಮಹತಾ ರಥವಂಶೇನ ಸಂವೃತೋ ರಥಿನಾಂ ವರಃ ||7||
ನಿನ್ನ ತಂದೆಯಾದ, ರಥಿಕರಲ್ಲಿ ಶ್ರೇಷ್ಠರಾದ ದೇವವ್ರತರು ದೊಡ್ಡ ರಥ ಸಮೂಹದಿಂದ ಕೂಡಿದವರಾಗಿ ಪಾಂಡವರ ರಥ ಸಮೂಹದ ಮೇಲೆ ಎರಗಿದರು.
ಇತರೇತರಮನ್ವೀಯುರ್ಯಥಾಭಾಗಮವಸ್ಥಿತಾಃ |
ರಥಿನಃ ಪತ್ತಯಶ್ಚೈವ ದಂತಿನಃ ಸಾದಿನಸ್ತಥಾ ||8||
ರಥಿಕರು, ಪದಾತಿಗಳು, ಗಜಾರೋಹಿಗಳು ಮತ್ತು ಅಶ್ವಾರೋಹಿಗಳು ವ್ಯೂಹಗಳ ತಮ್ಮ ತಮ್ಮ ಭಾಗಗಳಲ್ಲಿ ನಿಂತು ಶತ್ರುಗಳ ಮೇಲೆ ಪರಸ್ಪರವಾಗಿ ಎರಗಿದರು.
ತಾನ್ ದೃಷ್ಟ್ವಾ ಪ್ರೋದ್ಯತಾನ್ ಸಂಖ್ಯೇ ಪಾಂಡವಾಶ್ಚ ಯಶಸ್ವಿನಃ |
ಶ್ಯೇನೇನ ವ್ಯೂಹರಾಜೇನ ತೇನಾಜಯ್ಯೇನ ಸಂಯುಗೇ ||9||
ಅಶೋಭತ ಮುಖೇ ತಸ್ಯ ಭೀಮಸೇನೋ ಮಹಾಬಲಃ |
ನೇತ್ರೇ ಶಿಖಂಡೀ ದುರ್ಧರ್ಷೋ ಧೃಷ್ಟದ್ಯುಮ್ನಶ್ಚ ಪಾರ್ಷತಃ ||10||
ಶೀರ್ಷಂ ತಸ್ಯಾಭವದ್ ವೀರಃ ಸಾತ್ಯಕಿಃ ಸತ್ಯವಿಕ್ರಮಃ |
ವಿಧುನ್ವನ್ ಗಾಂಡಿವಂ ಪಾರ್ಥೋ ಗ್ರೀವಾಯಾಮಭವತ್ ತದಾ ||11||
ಅವರು ಯುದ್ಧದಲ್ಲಿ ಉದ್ಯುಕ್ತರಾದುದನ್ನು ನೋಡಿ ಯಶಸ್ವಿಗಳಾದ ಪಾಂಡವರೂ ಸಹ ಜಯಿಸಲು ಅಸಾಧ್ಯವಾದ ಶ್ರೇಷ್ಠವಾದ ಶ್ಯೇನವ್ಯೂಹವನ್ನು ರಚಿಸಿ ಯುದ್ಧಕ್ಕೆ ನಿಂತರು. ಮಹಾಬಲನಾದ ಭೀಮಸೇನನು ಅದರ ಮುಖಭಾಗದಲ್ಲಿ ಶೋಭಿಸಿದನು. ಸೋಲಿಸಲು ಅಸಾಧ್ಯನಾದ ಶಿಖಂಡಿಯೂ ಮತ್ತು ಧೃಷ್ಟದ್ಯುಮ್ನನೂ ಶ್ಯೇನದ ಕಣ್ಣುಗಳಾಗಿದ್ದರು. ಸತ್ಯವಿಕ್ರಮನೂ, ವೀರನೂ ಆದ ಸಾತ್ಯಕಿಯು ಆ ವ್ಯೂಹದ ಶಿರಸ್ಸಿನ ಸ್ಥಾನದಲ್ಲಿದ್ದನು. ಅರ್ಜುನನು ತನ್ನ ಗಾಂಡೀವ ಧನುಸ್ಸನ್ನು ಕಂಪಿಸುತ್ತಾ ಕತ್ತಿನ ಭಾಗದಲ್ಲಿ ಇದ್ದನು.
ಅಕ್ಷೋಹಿಣ್ಯಾ ಸಮಗ್ರಾ ಯಾ ವಾಮಪಕ್ಷೋಽಭವತ್ ತದಾ |
ಮಹಾತ್ಮಾ ದ್ರುಪದಃ ಶ್ರೀಮಾನ್ ಸಹ ಪುತ್ರೇಣ ಸಂಯುಗೇ ||12||
ದಕ್ಷಿಣಶ್ಚಾಭವತ್ ಪಕ್ಷಃ ಕೈಕೇಯೋಽಕ್ಷೋಹಿಣೀಪತಿಃ |
ಪೃಷ್ಠತೋ ದ್ರೌಪದೇಯಾಶ್ಚ ಸೌಭದ್ರಶ್ಚಾಪಿ ವೀರ್ಯವಾನ್ ||13||
ಮಹಾತ್ಮನೂ, ಸಂಪದ್ಯುಕ್ತನೂ ಆದ ದ್ರುಪದನು ತನ್ನ ಪುತ್ರನಾದ ಧೃಷ್ಟದ್ಯುಮ್ನನಿಂದ ಕೂಡಿಕೊಂಡು ಒಂದು ಅಕ್ಷೋಹಿಣಿ ಸೈನ್ಯದ ಜೊತೆಯಲ್ಲಿ ಶ್ಯೇನದ ವಾಮಪಕ್ಷದ ಸ್ಥಾನದಲ್ಲಿದ್ದನು. ಒಂದು ಅಕ್ಷೋಹಿಣಿ ಸೈನ್ಯದ ಜೊತೆಯಲ್ಲಿ ಕೇಕಯ ರಾಜನು ವ್ಯೂಹದ ದಕ್ಷಿಣ ಪಕ್ಷವಾಗಿದ್ದನು. ಶ್ಯೇನದ ಹಿಂಭಾಗದಲ್ಲಿ ದ್ರೌಪದಿಯ ಐವರು ಪುತ್ರರು ಮತ್ತು ಪರಾಕ್ರಮಶಾಲಿಯಾದ ಅಭಿಮನ್ಯುವು ಇದ್ದರು.
ಪುಚ್ಛೇ ಸಮಭವತ್ ಶ್ರೀಮಾನ್ ಸ್ವಯಂ ರಾಜಾ ಯುಧಿಷ್ಠಿರಃ |
ಭ್ರಾತೃಭ್ಯಾಂ ಸಹಿತೋ ಧೀಮಾನ್ ಯಮಾಭ್ಯಾಂ ಚಾರುವಿಕ್ರಮಃ ||14||
ಸಂಪದ್ಯುಕ್ತನೂ, ಮೇಧಾವಿಯೂ, ಒಳ್ಳೆಯ ಪರಾಕ್ರಮಶಾಲಿಯೂ ಆದ ರಾಜನಾದ ಯುಧಿಷ್ಠಿರನು ನಕುಲ-ಸಹದೇವರಿಂದ ಸಹಿತನಾಗಿ ಶ್ಯೇನದ ಪುಚ್ಛ ಭಾಗದಲ್ಲಿದ್ದನು.
ಪ್ರವಿಶ್ಯ ತು ರಣೇ ಭೀಮೋ ಮಕರಂ ಮುಖತಸ್ತದಾ |
ಭೀಷ್ಮಮಾಸಾದ್ಯ ಸಂಗ್ರಾಮೇ ಛಾದಯಾಮಾಸ ಸಾಯಕೈಃ ||15||
ಭೀಮಸೇನನು ಮಕರವ್ಯೂಹವನ್ನು ಅದರ ಮುಖದಿಂದ ಪ್ರವೇಶಿಸಿ ರಣರಂಗದಲ್ಲಿ ಭೀಷ್ಮರನ್ನು ಸಮೀಪಿಸಿ ಬಾಣಗಳಿಂದ ಅವರನ್ನು ಮುಚ್ಚಿದನು.
ತತೋ ಭೀಷ್ಮೋ ಮಹಾಸ್ತ್ರಾಣಿ ಪಾತಯಾಮಾಸ ಭಾರತ |
ಮೋಹಯನ್ ಪಾಂಡುಪುತ್ರಾಣಾಂ ವ್ಯೂಢಂ ಸೈನ್ಯಂ ಮಹಾಹವೇ ||
ಎಲೈ ಭಾರತನೇ, ಆಗ ಭೀಷ್ಮರು ದೊಡ್ಡ ಯುದ್ಧದಲ್ಲಿ ವ್ಯೂಹಗೊಂಡ ಪಾಂಡವರ ಸೈನ್ಯವನ್ನು ಮರುಳುಗೊಳಿಸುತ್ತಾ ಅದರ ಮೇಲೆ ಮಹಾಸ್ತ್ರಗಳನ್ನು ಪ್ರಯೋಗಿಸಿದರು.
ಸಮ್ಮುಹ್ಯತಿ ತದಾ ಸೈನ್ಯೇ ತ್ವರಮಾಣೋ ಧನಂಜಯಃ |
ಭೀಷ್ಮಂ ಶರಸಹಸ್ರೇಣ ವಿವ್ಯಾಧ ರಣಮೂರ್ಧನಿ ||17||
ಪರಿಸಂವಾರ್ಯ ಚಾಸ್ತ್ರಾಣಿ ಭೀಷ್ಮಮುಕ್ತಾನಿ ಸಂಯುಗೇ |
ಸ್ವೇನಾನೀಕೇನ ಹೃಷ್ಟೇನ ಯುದ್ಧಾಯ ಸಮವಸ್ಥಿತಃ ||18||
ತನ್ನ ಸೈನ್ಯವು ಸಮ್ಮೋಹಕ್ಕೆ ಒಳಗಾಗುತ್ತಿರಲು ಅರ್ಜುನನು ಶೀಘ್ರವಾಗಿ ಭೀಷ್ಮರನ್ನು ಶ್ರೇಷ್ಠವಾದ ರಣದಲ್ಲಿ ಒಂದು ಸಹಸ್ರ ಬಾಣಗಳಿಂದ ಪೀಡಿಸಿದನು. ಭೀಷ್ಮರು ಪ್ರಯೋಗಿಸಿದ ಅಸ್ತ್ರಗಳನ್ನು ನಿವಾರಿಸಿ ಸಂತೋಷಗೊಂಡ ತಮ್ಮ ಸೈನ್ಯದ ಜೊತೆಯಲ್ಲಿ ಯುದ್ಧಕ್ಕೆ ನಿಂತನು.
ತತೋ ದುರ್ಯೋಧನೋ ರಾಜಾ ಭಾರದ್ವಾಜಮಭಾಷತ |
ಪೂರ್ವಂ ದೃಷ್ಟ್ವಾ ವಧಂ ಘೋರಂ ಬಲಸ್ಯ ಬಲಿನಾಂ ವರಃ |
ಭ್ರಾತೃಣಾಂ ಚ ವಧಂ ಯುದ್ಧೇ ಸ್ಮರಮಾಣೋ ಮಹಾರಥಃ ||19||
ಆಗ ಹಿಂದಿನ ದಿವಸ ಉಂಟಾದ ತನ್ನ ಸೈನ್ಯದ ಮತ್ತು ತಮ್ಮಂದಿರ ಘೋರವಾದ ವಧೆಯನ್ನು ಸ್ಮರಿಸಿಕೊಳ್ಳುತ್ತಾ ಬಲಿಷ್ಠರಲ್ಲಿ ಶ್ರೇಷ್ಠನೂ, ಮಹಾರಥನೂ ಆದ ದುರ್ಯೋಧನ ರಾಜನು ದ್ರೋಣರ ಜೊತೆಯಲ್ಲಿ ಮಾತನಾಡಿದನು.

ಆಚಾರ್ಯ ಸತತಂ ತ್ವಂ ಹಿ ಹಿತಕಾಮೋ ಮಮಾನಘ |
ವಯಂ ಹಿ ತ್ವಾಂ ಸಮಾಶ್ರಿತ್ಯ ಭೀಷ್ಮಂ ಚೈವ ಪಿತಾಮಹಮ್ ||20||
ದೇವಾನಪಿ ರಣೇ ಜೇತುಂ ಪ್ರಾರ್ಥಯಾಮೋ ನ ಸಂಶಯಃ |
ಕಿಮು ಪಾಂಡುಸುತಾನ್ ಯುದ್ಧೇ ಹೀನವೀರ್ಯಪರಾಕ್ರಮಾನ್ |
ಸ ತಥಾ ಕುರು ಭದ್ರಂ ತೇ ಯಥಾ ವಧ್ಯಂತಿ ಪಾಂಡವಾಃ ||21||
ದೋಷದೂರರಾದ ಆಚಾರ್ಯರೇ, ನೀವು ಯಾವಾಗಲೂ ನನ್ನ ಹಿತದಲ್ಲಿಯೇ ಆಸಕ್ತರಾಗಿದ್ದೀರಿ. ನಾವಾದರೂ ನಿಮ್ಮನ್ನು ಮತ್ತು ಪಿತಾಮಹರಾದ ಭೀಷ್ಮರನ್ನು ಆಶ್ರಯಿಸಿ ದೇವತೆಗಳನ್ನೂ ಯುದ್ಧದಲ್ಲಿ ಜಯಿಸಲು ಬಯಸುತ್ತೇವೆ. ಇದರಲ್ಲಿ ಸಂಶಯವಿಲ್ಲ. ಹೀಗಿರುವಾಗ ದುರ್ಬಲರೂ, ಪರಾಕ್ರಮಹೀನರೂ ಆದ ಪಾಂಡವರನ್ನು ಗೆಲ್ಲುವುದು ಯಾವ ದೊಡ್ಡ ವಿಷಯ? ನಿಮಗೆ ಮಂಗಳವಾಗಲಿ. ಪಾಂಡವರು ವಧಿಸಲ್ಪಡುವಂತೆ ಯುದ್ಧವನ್ನು ಮಾಡಿ.
ಏವಮುಕ್ತಸ್ತತೋ ದ್ರೋಣಸ್ತವ ಪುತ್ರೇಣ ಮಾರಿಷ |
ಅಭಿನತ್ ಪಾಂಡವಾನೀಕಂ ಪ್ರೇಕ್ಷಮಾಣಸ್ಯ ಸಾತ್ಯಕೇಃ ||22||
ಎಲೈ ಪೂಜ್ಯನೇ, ನಿನ್ನ ಪುತ್ರನಿಂದ ಹೀಗೆ ಹೇಳಲ್ಪಟ್ಟ ದ್ರೋಣರು ಸಾತ್ಯಕಿಯು ನೋಡುತ್ತಿರುವಂತೆಯೇ ಪಾಂಡವರ ಸೈನ್ಯವನ್ನು ಭೇದಿಸಿದರು.
ಸಾತ್ಯಕಿಸ್ತು ತದಾ ದ್ರೋಣಂ ವಾರಯಾಮಾಸ ಭಾರತ |
ತತಃ ಪ್ರವವೃತೇ ಯುದ್ಧಂ ತುಮುಲಂ ಲೋಮಹರ್ಷಣಮ್ ||23||
ಎಲೈ ಭಾರತನೇ, ಆಗ ಸಾತ್ಯಕಿಯಾದರೂ ದ್ರೋಣರನ್ನು ತಡೆದನು. ಅನಂತರ ಅವರಿಗೆ ರೋಮಾಂಚಕಾರಿಯಾದ, ತೀವ್ರವಾದ ಯುದ್ಧವು ಜರುಗಿತು.
ಶೈನೇಯಂ ತು ರಣೇ ಕ್ರುದ್ಧೋ ಭಾರದ್ವಾಜಃ ಪ್ರತಾಪವಾನ್ |
ಅವಿಧ್ಯನ್ನಿಶಿತೈರ್ಬಾಣೈರ್ಜತ್ರುದೇಶೇ ಹಸನ್ನಿವ ||24||
ಪ್ರತಾಪಶಾಲಿಗಳಾದ ದ್ರೋಣರು ಯುದ್ಧದಲ್ಲಿ ಕ್ರುದ್ಧರಾಗಿ ನಗುವವರಂತೆ ಅನಾಯಾಸವಾಗಿ ಸಾತ್ಯಕಿಯನ್ನು ಭುಜಸಂಧಿದೇಶದಲ್ಲಿ ಹರಿತವಾದ ಬಾಣಗಳಿಂದ ಹೊಡೆದರು.
ಭೀಮಸೇನಸ್ತತಃ ಕ್ರುದ್ಧೋ ಭಾರದ್ವಾಜಮವಿಧ್ಯತ |
ಸಂರಕ್ಷನ್ ಸಾತ್ಯಕಿಂ ರಾಜನ್ ದ್ರೋಣಾಚ್ಛಸ್ತ್ರಭೃತಾಂ ವರಾತ್ ||25||
ಎಲೈ ರಾಜನೇ, ಆಗ ಭೀಮಸೇನನು ಬಹಳ ಕೋಪಗೊಂಡು ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರಿಂದ ಸಾತ್ಯಕಿಯನ್ನು ರಕ್ಷಿಸುವವನಾಗಿ ದ್ರೋಣರ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.
ತತೋ ದ್ರೋಣಶ್ಚ ಭೀಷ್ಮಶ್ಚ ತಥಾ ಶಲ್ಯಶ್ಚ ಮಾರಿಷ |
ಭೀಮಸೇನಂ ರಣೇ ಕ್ರುದ್ಧಾಃ ಛಾದಯಾಂಚಕ್ರಿರೇ ಶರೈಃ ||26||
ಎಲೈ ಪೂಜ್ಯನೇ, ಆಗ ದ್ರೋಣರು, ಭೀಷ್ಮರು ಮತ್ತು ಶಲ್ಯನು ಯುದ್ಧದಲ್ಲಿ ಕ್ರುದ್ಧರಾಗಿ ಭೀಮಸೇನನನ್ನು ತಾವು ಪ್ರಯೋಗಿಸಿದ ಬಾಣಗಳಿಂದ ಮುಚ್ಚಿದರು.
ತತ್ರಾಭಿಮನ್ಯುಃ ಸಂಕ್ರುದ್ಧೋ ದ್ರೌಪದೇಯಾಶ್ಚ ಮಾರಿಷ |
ವಿವ್ಯಧುರ್ನಿಶಿತೈರ್ಬಾಣೈಃ ಸರ್ವಾಂಸ್ತಾನುದ್ಯತಾಯುಧಾನ್ ||27||
ಎಲೈ ಪೂಜ್ಯನೇ, ಆಗ ಬಹಳ ಕೋಪಗೊಂಡ ಅಭಿಮನ್ಯುವು ಮತ್ತು ದ್ರೌಪದಿಯ ಪುತ್ರರು ಹರಿತವಾದ ಬಾಣಗಳಿಂದ ಆಯುಧವನ್ನು ಎತ್ತಿಹಿಡಿದ ಅವರೆಲ್ಲರನ್ನೂ ಪೀಡಿಸಿದರು.
ಭೀಷ್ಮದ್ರೋಣೌ ಚ ಸಂಕ್ರುದ್ಧಾವಾಪತಂತೌ ಮಹಾಬಲೌ |
ಪ್ರತ್ಯುದ್ಯಯೌ ಶಿಖಂಡೀ ತು ಮಹೇಷ್ವಾಸೋ ಮಹಾಹವೇ ||28||
ಕೋಪಗೊಂಡು ಮೇಲೆರಗುತ್ತಿದ್ದ ಮಹಾಬಲಿಷ್ಠರಾದ ಭೀಷ್ಮ-ದ್ರೋಣರನ್ನು ಕುರಿತು ಮಹಾಧನುರ್ಧಾರಿಯಾದ ಶಿಖಂಡಿಯು ಆ ದೊಡ್ಡ ಯುದ್ಧದಲ್ಲಿ ಅಭಿಮುಖವಾಗಿ ಎರಗಿದನು.
ಪ್ರಗೃಹ್ಯ ಬಲವದ್ ವೀರೋ ಧನುರ್ಜಲದನಿಸ್ವನಮ್ |
ಅಭ್ಯವರ್ಷಚ್ಛರೈಸ್ತೂರ್ಣಂ ಛಾದಯಾನೋ ದಿವಾಕರಮ್ ||29||
ವೀರನಾದ ಅವನು ಮೇಘಘೋಷದಂತೆ ಘೋಷವನ್ನು ಮಾಡುತ್ತಿದ್ದ ದೃಢವಾದ ಧನುಸ್ಸನ್ನು ತೆಗೆದುಕೊಂಡು ಶೀಘ್ರವಾಗಿ ತನ್ನ ಬಾಣ ಪ್ರಯೋಗಗಳಿಂದ ಸೂರ್ಯ ಪ್ರಕಾಶವನ್ನೇ ಮುಚ್ಚಿದನು.
ಶಿಖಂಡಿನಂ ಸಮಾಸಾದ್ಯ ಭರತಾನಾಂ ಪಿತಾಮಹಃ |
ಅವರ್ಜಯತ ಸಂಗ್ರಾಮೇ ಸ್ತ್ರೀತ್ವಂ ತಸ್ಯಾನುಸಂಸ್ಮರನ್ ||30||
ಶಿಖಂಡಿಯು ಸಮೀಪಿಸುತ್ತಿರಲು ಭರತರ ಪಿತಾಮಹರಾದ ಭೀಷ್ಮರು ಅವನು ಮೊದಲು ಸ್ತ್ರೀಯಾಗಿದ್ದವನು ಎಂದು ಸ್ಮರಿಸಿ ಅವನನ್ನು ತ್ಯಜಿಸಿದರು.
ತತೋ ದ್ರೋಣೋ ಮಹಾರಾಜ ಅಭ್ಯದ್ರವತ ತಂ ರಣೇ |
ರಕ್ಷಮಾಣಸ್ತತೋ ಭೀಷ್ಮಂ ತವ ಪುತ್ರೇಣ ಚೋದಿತಃ ||31||
ಎಲೈ ಮಹಾರಾಜನೇ, ಆಗ ದ್ರೋಣರು ರಣರಂಗದಲ್ಲಿ ನಿನ್ನ ಪುತ್ರನಿಂದ ಪ್ರೇರಿತರಾಗಿ ಭೀಷ್ಮರನ್ನು ರಕ್ಷಿಸುತ್ತಾ ಅವನ ಮೇಲೆ ಎರಗಿದರು.
ಶಿಖಂಡೀ ತು ಸಮಾಸಾದ್ಯ ದ್ರೋಣಂ ಶಸ್ತ್ರಭೃತಾಂ ವರಮ್ |

ಅವರ್ಜಯತ ಸಂಗ್ರಾಮೇ ಯುಗಾಂತಾಗ್ನಿಮಿವೋಲ್ಬಣಮ್ ॥32॥
ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ತನ್ನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿರಲು ಉಲ್ಬಣವಾದ ಯುಗಾಂತಾಗ್ನಿಯನ್ನು ಪರಿತ್ಯಜಿಸಿದಂತೆ ಶಿಖಂಡಿಯು ಅವರನ್ನು ಪರಿತ್ಯಜಿಸಿದನು.
ತತೋ ಬಲೇನ ಮಹತಾ ಪುತ್ರಸ್ತವ ವಿಶಾಂಪತೇ |
ಜುಗೋಪ ಭೀಷ್ಮಮಾಸಾದ್ಯ ಪ್ರಾರ್ಥಯಾನೋ ಮಹದ್ಯಶಃ ॥33॥
ಎಲೈ ರಾಜನೇ, ಶಿಖಂಡಿಯು ದೂರಸರಿದ ಮೇಲೆ ದೊಡ್ಡ ಸೈನ್ಯದಿಂದ ಕೂಡಿದವನಾಗಿ ನಿನ್ನ ಪುತ್ರನು ದೊಡ್ಡ ಕೀರ್ತಿಯನ್ನು ಪಡೆಯಲು ಬಯಸುತ್ತಾ ಭೀಷ್ಮರ ಸಮೀಪಕ್ಕೆ ಬಂದು ಅವರನ್ನು ರಕ್ಷಿಸಿದನು.
ತಥೈವ ಪಾಂಡವಾ ರಾಜನ್ ಪುರಸ್ಕೃತ್ಯ ಧನಂಜಯಮ್ |
ಭೀಷ್ಮಮೇವಾಭ್ಯವರ್ತಂತ ಜಯೇ ಕೃತ್ವಾ ದೃಢಾಂ ಮತಿಮ್ ॥34॥
ಎಲೈ ರಾಜನೇ, ಹಾಗೆಯೇ ಪಾಂಡವರು ಅರ್ಜುನನನ್ನು ಮುಂದೆ ಮಾಡಿಕೊಂಡು ಜಯವನ್ನು ಸಂಪಾದಿಸುವ ದೃಢ ನಿಶ್ಚಯವನ್ನು ಹೊಂದಿ ಭೀಷ್ಮರ ಮೇಲೆಯೇ ಎರಗಿದರು.
ತದ್ಯುದ್ಧಮಭವದ್ ಘೋರಂ ದೇವಾನಾಂ ದಾನವೈರಿವ |
ಜಯಂ ಚ ಕಾಂಕ್ಷತಾಂ ನಿತ್ಯಂ ಯಶಶ್ಚ ಪರಮಾದ್ಭುತಮ್ ॥35॥
ಯಾವಾಗಲೂ ಜಯವನ್ನು ಮತ್ತು ಪರಮಾದ್ಭುತವಾದ ಕೀರ್ತಿಯನ್ನು ಬಯಸುವ ಅವರಿಬ್ಬರಿಗೆ ದೇವ-ದಾನವರಿಗೆ ನಡೆದಂತೆ ಘೋರವಾದ ಯುದ್ಧವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಭೀಷ್ಮಮಗ್ರೇ ನಿಧಾಯ್ಯೆವ ಯಯೌ ಯುದ್ಧಾಯ ದಂಸಿತಃ |
ತತ್ರಾಽಸೀದ್ ಯುದ್ಧಮತುಲಂ ಭೀಮಭೀಷ್ಮಾನುಯಾಯಿನಾಮ್ |
ಪಾಂಡವಾನಾಂ ಕುರೂಣಾಂ ಚ ಶೂರಾಣಾಮನಿವರ್ತಿನಾಮ್ ॥59॥
ಭೀಷ್ಮರನ್ನೇ ಮುಂದಿಟ್ಟುಕೊಂಡು ಕವಚಗಳನ್ನು ಧರಿಸಿ ದುರ್ಯೋಧನನು ಯುದ್ಧಕ್ಕೆ ಹೊರಟನು. ಆಗ ಭೀಮ-ಭೀಷ್ಮರ ಅನುಯಾಯಿಗಳಾದ ಯುದ್ಧಕ್ಕೆ ಬೆನ್ನು ಹಾಕದ ಶೂರರಾದ ಪಾಂಡವರಿಗೂ ಕೌರವರಿಗೂ ಬಲು ದೊಡ್ಡ ಕಾಳಗ ನಡೆಯಿತು.
* * * * *
ಅರವತ್ತಾರನೆಯ ಅಧ್ಯಾಯ
ಐದನೆಯ ದಿವಸದ ಯುದ್ಧದ ಅನುವೃತ್ತಿ
ಸಂಜಯಃ
ಅಕರೋತ್ ತುಮುಲಂ ಯುದ್ಧಂ ಭೀಷ್ಮಃ ಶಾಂತನವಸ್ತದಾ |
ಭೀಮಸೇನಭಯಾದಿಚ್ಛನ್ ಪುತ್ರಾಂಸ್ತಾರಯಿತುಂ ತವ ॥1॥
ಸಂಜಯ ಶಂತನುಪುತ್ರರಾದ ಭೀಷ್ಮರು ನಿನ್ನ ಪುತ್ರರನ್ನು ಭೀಮಸೇನನ ಭಯದಿಂದ ರಕ್ಷಿಸಲು ಇಚ್ಛಿಸಿ ತೀವ್ರವಾದ ಯುದ್ಧವನ್ನು ಮಾಡಿದರು.
ಪೂರ್ವಾಹ್ಣೇ ತನ್ಮಹಾರೌದ್ರಂ ರಾಜ್ಞಾಂ ಯುದ್ಧಮವರ್ತತ |
ಕುರೂಣಾಂ ಪಾಂಡವಾನಾಂ ಚ ಮುಖ್ಯಶೂರವಿನಾಶನಮ್ ॥2॥
ಕೌರವರ ಮತ್ತು ಪಾಂಡವರ ಮುಖ್ಯರಾದ ಶೂರರನ್ನು ವಿನಾಶ ಮಾಡುವ ಆ ಅತಿಭಯಂಕರವಾದ ರಾಜರ ಯುದ್ಧವು ಪ್ರಾತಃಕಾಲದಲ್ಲಿ ನಡೆಯಿತು.
ತಸ್ಮಿನ್ನಾಕುಲಸಂಗ್ರಾಮೇ ವರ್ತಮಾನೇ ಮಹಾಭಯೇ |
ಅಭವತ್ ತುಮುಲಃ ಶಬ್ದಃ ಸಂಸ್ಪೃಶನ್ ಗಗನಂ ಮಹತ್ ॥3॥
ಆ ತೀವ್ರವೂ ಮತ್ತು ಮಹಾಭಯಂಕರವೂ ಆದ ಯುದ್ಧದಲ್ಲಿ ತೀವ್ರವಾದ ಶಬ್ದ ಉಂಟಾಗಿ ಆ ದೊಡ್ಡ ಶಬ್ದವು ಆಕಾಶವನ್ನು ಮುಟ್ಟುತ್ತಿದ್ದಿತು.
ನದದ್ಭಿಶ್ಚ ಮಹಾನಾಗೈರ್ಹೇಷಮಾಣೈಶ್ಚ ವಾಜಿಭಿಃ |
ಭೇರೀಶಂಖನಿನಾದೈಶ್ಚ ತುಮುಲಃ ಸಮಪದ್ಯತ ॥4॥
ಗರ್ಜಿಸುತ್ತಿದ್ದ ಮಹಾಗಜಗಳಿಂದಲೂ, ಹೇಷಾರವವನ್ನು ಮಾಡುತ್ತಿದ್ದ ಅಶ್ವಗಳಿಂದಲೂ, ಭೇರೀ-ಶಂಖನಿನಾದಗಳಿಂದಲೂ ಆ ತೀವ್ರವಾದ ಶಬ್ದವು ಉಂಟಾಯಿತು.
ಯುಯುತ್ಸವಸ್ತೇ ವಿಕ್ರಾಂತಾ ವಿಜಯಾಯ ಮಹಾಬಲಾಃ |
ಅನ್ಯೋನ್ಯಮಭಿಗರ್ಜಂತೋ ಗೋಷ್ಠೇಷ್ವಿವ ಮಹರ್ಷಭಾಃ ॥5॥
ಮಹಾಬಲಿಷ್ಠರೂ, ವಿಜಯವನ್ನು ಸಂಪಾದಿಸಲು ಪರಾಕ್ರಮವನ್ನು ತೋರಿಸುತ್ತಿದ್ದವರೂ ಆದ ಉಭಯ ಸೈನ್ಯದ ಯೋಧರು ಕೊಟ್ಟಿಗೆಯಲ್ಲಿರುವ ಗೂಳಿಗಳಂತೆ ಪರಸ್ಪರವಾಗಿ ಗರ್ಜಿಸುತ್ತಾ ಯುದ್ಧ ಮಾಡಲು ಬಯಸಿದರು.
ಶಿರಸಾಂ ಪಾತ್ಯಮಾನಾನಾಂ ಸಮರೇ ನಿಶಿತೈಃ ಶರೈಃ |

ಅಶ್ಮವೃಷ್ಟಿರಿವಾಕಾಶೇ ಬಭೂವ ಭರತರ್ಷಭ ॥6॥
ಎಲೈ ಭರತಶ್ರೇಷ್ಠನೇ, ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಗೆ ಬೀಳುವ ಶಿರಸ್ಸುಗಳು ಆಕಾಶದಿಂದ ಬೀಳುವ ಕಲ್ಲಿನ ಮಳೆಯಂತೆ ತೋರುತ್ತಿದ್ದವು.
ಕುಂಡಲೋಷ್ಣೀಷಧಾರೀಣಿ ಜಾತರೂಪೋಜ್ಜ್ವಲಾನಿ ಚ |
ಪತಿತಾನಿ ಸ್ಮ ದೃಶ್ಯಂತೇ ಶಿರಾಂಸಿ ಭರತರ್ಷಭ ॥7॥
ಎಲೈ ಭರತಶ್ರೇಷ್ಠನೇ, ಕರ್ಣ-ಕುಂಡಲಗಳನ್ನು ಮತ್ತು ರುಮಾಲುಗಳನ್ನು ಧರಿಸಿದ, ಸುವರ್ಣಾಲಂಕೃತವಾದ ಶಿರಸ್ಸುಗಳು ಅಲ್ಲಲ್ಲಿ ಬಿದ್ದಿರುವುದು ಕಂಡುಬರುತ್ತಿದ್ದಿತು.
ವಿಶಿಖೋನ್ಮಥಿತೈರ್ಗಾತ್ರೈರ್ಬಾಹುಭಿಶ್ಚ ಸಕಾರ್ಮುಕೈಃ |
ಸಹಸ್ತಾಭರಣೈಶ್ಚಾನ್ಯೈರಭವಚ್ಛಾದಿತಾ ಮಹೀ ॥8॥
ಬಾಣಗಳಿಂದ ಕತ್ತರಿಸಲ್ಪಟ್ಟ ಶರೀರಗಳಿಂದಲೂ, ಧನುಸ್ಸನ್ನು ಹಿಡಿದ ಬಾಹುಗಳಿಂದಲೂ, ಹಸ್ತಾಭರಣಗಳಿಂದ ಕೂಡಿದ ಹಸ್ತಗಳಿಂದಲೂ ಮತ್ತು ಉಳಿದ ಕತ್ತರಿಸಲ್ಪಟ್ಟ ಅವಯವಗಳಿಂದಲೂ ಭೂಮಿಯು ತುಂಬಿಹೋಯಿತು.
ಕವಚೋಪಹಿತೈರ್ಗಾತ್ರೈರ್ಹಸ್ತೈಶ್ಚ ಸಮಲಂಕೃತೈಃ |
ಮುಖೈಶ್ಚ ಚಂದ್ರಸಂಕಾಶೈ ರಕ್ತಾಂತನಯನೈಃ ಶುಭೈಃ ॥9॥
ಗಜವಾಜಿಮನುಷ್ಯಾಣಾಂ ಸರ್ವಗಾತ್ರೈಶ್ಚ ಭೂಪತೇ |
ಆಸೀತ್ಸರ್ವಾ ಸಮಾಕೀರ್ಣಾ ಮುಹೂರ್ತೇನ ವಸುಂಧರಾ ॥10॥
ಕವಚವನ್ನು ಧರಿಸಿದ ಮಧ್ಯಶರೀರಗಳಿಂದಲೂ, ಚೆನ್ನಾಗಿ ಅಲಂಕೃತವಾದ ಹಸ್ತಗಳಿಂದಲೂ, ರಕ್ತಾಂತವಾದ ಕಣ್ಣುಗಳುಳ್ಳ ಚಂದ್ರನಂತಿರುವ ಶುಭವಾದ ಮುಖಗಳಿಂದಲೂ, ಗಜಾಶ್ವಮನುಷ್ಯರ ಸರ್ವದೇಹಗಳಿಂದಲೂ ಒಂದು ಮುಹೂರ್ತದಲ್ಲಿ ಭೂಮಿಯು ಎಲ್ಲಾ ಕಡೆಗಳಲ್ಲಿಯೂ ತುಂಬಿಹೋಯಿತು.
ರಜೋಮೇಘೈಶ್ಚ ತುಮುಲೈಃ ಶಸ್ತ್ರವಿದ್ಯುತ್ಪ್ರಕಾಶಿತೈಃ |
ಆಯುಧಾನಾಂ ಚ ನಿರ್ಘೋಷಃ ಸ್ತನಯಿತ್ನುಸಮೋಽಭವತ್ ॥11॥
ಧೂಳುಗಳಿಂದ ಉಂಟಾದ ತೀವ್ರವಾದ ಮೋಡಗಳಿಂದ ಕೂಡಿದ ಶಸ್ತ್ರದ ಹೊಳಪು ಎಂಬ ಮಿಂಚುಗಳಿಂದ ಕೂಡಿದ ಪ್ರಯೋಗಿಸಲ್ಪಡುವ ಆಯುಧಗಳ ಘೋಷವು ಸಿಡಿಲಿನ ನಾದಕ್ಕೆ ಸಮಾನವಾಗಿದ್ದಿತು.
ಸ ಸಂಪ್ರಹಾರಸ್ತುಮುಲಃ ಕಟುಕಃ ಶೋಣಿತೋದಕಃ |
ಪ್ರಾವರ್ತತ ಕುರೂಣಾಂ ಚ ಪಾಂಡವಾನಾಂ ಚ ಭಾರತ ॥12॥
ಎಲೈ ಭಾರತನೇ, ಕೌರವರಿಗೂ ಮತ್ತು ಪಾಂಡವರಿಗೂ ರಕ್ತೋದಕದಿಂದ ಕೂಡಿದ ಬಹಳ ಕಟುವೂ ಮತ್ತು ತೀವ್ರವೂ ಆದ ಆ ಹೊಡೆದಾಟವು ಜರುಗಿತು.
ತಸ್ಮಿನ್ ಮಹಾಭಯೇ ಘೋರೇ ತುಮುಲೇ ಲೋಮಹರ್ಷಣೇ |
ವವರ್ಷುಃ ಶರವರ್ಷಾಣಿ ಕ್ಷತ್ರಿಯಾ ಯುದ್ಧದುರ್ಮದಾಃ ॥13॥
ರೋಮಾಂಚಕಾರಿಯೂ, ತೀವ್ರವೂ, ಘೋರವೂ ಮತ್ತು ಮಹಾಭಯಂಕರವೂ ಆದ ಯುದ್ಧವು ನಡೆಯುತ್ತಿರಲು ಯುದ್ಧ ದುರ್ಮದರಾದ ಕ್ಷತ್ರಿಯರು ಪರಸ್ಪರವಾಗಿ ಬಾಣಗಳ ಮಳೆಯನ್ನು ಸುರಿಸಿದರು.
ಕ್ರೋಶಂತಿ ಕುಂಜರಾಸ್ತತ್ರ ಶರವರ್ಷಪ್ರತಾಪಿತಾಃ |
ತಾವಕಾನಾಂ ಪರೇಷಾಂ ಚ ಸಂಯುಗೇ ಭರತೋತ್ತಮ ॥14॥
ಎಲೈ ಭರತಶ್ರೇಷ್ಠನೇ, ಬಾಣಗಳ ಹೊಡೆತಕ್ಕೆ ಸಿಲುಕಿದ ನಿನ್ನವರ ಮತ್ತು ಶತ್ರುಗಳಾದ ಪಾಂಡವರ ಗಜಗಳು ಯುದ್ಧದಲ್ಲಿ ನೋವಿನ ಗರ್ಜನೆಯನ್ನು ಮಾಡುತ್ತಿದ್ದವು.
ಸಂರಬ್ಧಾನಾಂ ಚ ವೀರಾಣಾಂ ಧೀರಾಣಾಮಮಿತೌಜಸಾಮ್ |
ಧನುರ್ಜ್ಯಾತಳಶಬ್ದೇನ ನ ಪ್ರಾಜ್ಞಾಯತ ಕಿಂಚನ ॥15॥
ಅಮಿತಪರಾಕ್ರಮಿಗಳಾದ, ಕೋಪಗೊಂಡ ವೀರರ ಧನುಸ್ಸಿನ ಹೆದೆಯ ಘೋಷಗಳಿಂದಲೂ, ಅಸ್ತ್ರಗಳ ಶಬ್ದಗಳಿಂದಲೂ ಕೂಡಿದ ಆ ರಣರಂಗದಲ್ಲಿ ಏನೂ ತಿಳಿಯುತ್ತಿರಲಿಲ್ಲ.
ಉತ್ಥಿತೇಷು ಕಬಂಧೇಷು ಸರ್ವತಃ ಶೋಣಿತೋದಕೇ |
ಸಮರೇ ಪರ್ಯಧಾವಂತ ನೃಪಾ ರಿಪುವಧೋದ್ಯತಾಃ ॥16॥
ಶರಶಕ್ತಿಗದಾಭಿಸ್ತೇ ಖಡ್ಗೈಶ್ಚಾಮಿತತೇಜಸಃ |
ನಿಜಘ್ನುಃ ಸಮರೇ ಶೂರಾಸ್ತೇಽನ್ಯೋನ್ಯಂ ಚ ಪರಂತಪ ॥17॥
ರಕ್ತಮಯವಾದ ಉದಕವನ್ನು ಹೊಂದಿದ ಆ ರಣರಂಗದಲ್ಲಿ ಶಿರಸ್ಸಿಲ್ಲದ ದೇಹಗಳು ಎಲ್ಲ ಕಡೆಗಳಲ್ಲಿಯೂ ಏಳುತ್ತಿರಲು, ಶತ್ರುವಧೆಯಲ್ಲಿಯೇ ನಿರತರಾದ ಅಮಿತ ಪರಾಕ್ರಮಿಗಳಾದ ರಾಜರು ಕೈಯಲ್ಲಿ ಶರಶಕ್ತಿಗದೆಗಳನ್ನು, ಖಡ್ಗಗಳನ್ನು ಹಿಡಿದು ಒಬ್ಬರ ಮೇಲೊಬ್ಬರು ಧಾವಿಸಿದರು. ಎಲೈ ಪರಂತಪನೇ, ಶೂರರಾದ ಅವರು ಯುದ್ಧದಲ್ಲಿ ಪರಸ್ಪರವಾಗಿ ಸಂಹಾರವನ್ನು ಮಾಡಿದರು.
ಬಭ್ರಮುಃ ಕುಂಜರಾಶ್ಚಾತ್ರ ಶರೈರ್ವಿದ್ಧಾ ನಿರಂಕುಶಾಃ |
ಅಶ್ವಾಶ್ಚ ಪರ್ಯಧಾವಂತ ಹತಾರೋಹಾ ದಿಶೋ ದಶ ॥18॥
ಗಜಾರೋಹಿಗಳನ್ನು ಕಳೆದುಕೊಂಡು ನಿರಂಕುಶಗಳಾದ ಗಜಗಳು ಬಾಣಗಳಿಂದ ಪೀಡಿತವಾಗಿ ಅಲ್ಲಲ್ಲಿ ತಿರುಗಾಡಿದವು. ಅಶ್ವಗಳಾದರೂ ಅಶ್ವಾರೋಹಿಗಳನ್ನು ಕಳೆದುಕೊಂಡು ಎಲ್ಲ ದಿಕ್ಕುಗಳಲ್ಲಿಯೂ ಓಡಿದವು.
ಉತ್ಪತ್ಯ ನಿಪತಂತ್ಯನ್ಯೇ ಶರಘಾತಪ್ರಪೀಡಿತಾಃ |

ತಾವಕಾನಾಂ ಪರೇಷಾಂ ಚ ಯೋಧಾನಾಂ ಭರತರ್ಷಭ ॥19॥
ಬಾಹೂನಾಮುತ್ತಮಾಂಗಾನಾಂ ಕಾರ್ಮುಕಾಣಾಂ ತಥೈವ ಚ |
ಗದಾನಾಂ ಪರಿಘಾಣಾಂ ಚ ಹಸ್ತಾನಾಂ ಚೋರುಭಿಃ ಸಹ ॥20॥
ಪಾದಾನಾಂ ಭೂಷಣಾನಾಂ ಚ ಕೇಯೂರಾಣಾಂ ಚ ಸಂಘಶಃ |
ರಾಶಯಃ ಸ್ಮ ಪ್ರದೃಶ್ಯಂತೇ ಭೀಷ್ಮಭೀಮಪರಾಕ್ರಮೇ ॥21॥
ಇನ್ನು ಕೆಲವು ಯೋಧರು ಬಾಣಪ್ರಯೋಗಗಳಿಂದ ಚೆನ್ನಾಗಿ ಪೀಡಿತರಾಗಿ ಮೇಲೆ ಹಾರಿ ಕೆಳಗೆ ಬೀಳುತ್ತಿದ್ದರು. ಎಲೈ ಭರತಶ್ರೇಷ್ಠನೇ, ಭೀಷ್ಮರ ಮತ್ತು ಭೀಮನ ಪರಾಕ್ರಮದಿಂದ ಕೂಡಿದ ಆ ಯುದ್ದದಲ್ಲಿ ನಿನ್ನ ಮತ್ತು ಶತ್ರುಯೋಧರ ಕತ್ತರಿಸಲ್ಪಟ್ಟ ಬಾಹುಗಳ, ಶಿರಸ್ಸುಗಳ, ಧನುಸ್ಸುಗಳ, ಗದೆಗಳ, ಪರಿಘಗಳ, ಹಸ್ತಗಳ, ತೊಡೆಗಳ, ಪಾದಗಳ, ಭೂಷಣಗಳ, ಕೇಯೂರಗಳ ಸಮೂಹಗಳ ರಾಶಿಗಳು ಅಲ್ಲಲ್ಲಿ ಕಂಡುಬರುತ್ತಿದ್ದವು.
ಅಶ್ವಾನಾಂ ಕುಂಜರಾಣಾಂ ಚ ರಥಾನಾಂ ಚಾತಿವರ್ತತಾಮ್ |
ಸಂಘಾತಾಃ ಸ್ಮ ಪ್ರದೃಶ್ಯಂತೇ ತತ್ರ ತತ್ರ ವಿಶಾಂಪತೇ ॥22॥
ಎಲೈ ರಾಜನೇ, ಮೃತವಾದ ಅಶ್ವಗಳ, ಗಜಗಳ, ಹಿಂದಿರುಗದಿರುವ ರಥಗಳ ಸಮೂಹಗಳು ಅಲ್ಲಲ್ಲಿ ಕಂಡುಬರುತ್ತಿದ್ದವು.
ಗದಾಭಿರಸಿಭಿಃ ಪ್ರಾಸೈರ್ಬಾಣೈಶ್ಚ ನತಪರ್ವಭಿಃ |
ಜಘ್ನುಃ ಪರಸ್ಪರಂ ತತ್ರ ಕ್ಷತ್ರಿಯಾಃ ಕಾಲಚೋದಿತಾಃ ॥23॥
ಕಾಲಪ್ರೇರಿತರಾದ ಕ್ಷತ್ರಿಯರು ಅಲ್ಲಿ ಗದೆಗಳಿಂದಲೂ, ಖಡ್ಗಗಳಿಂದಲೂ, ಪ್ರಾಸಗಳಿಂದಲೂ, ಬಾಗಿದ ತುದಿಯುಳ್ಳ ಬಾಣಗಳಿಂದಲೂ ಪರಸ್ಪರವಾಗಿ ಹೊಡೆದಾಡಿದರು.
ಅಪರೇ ಬಾಹುಭಿರ್ವೀರಾ ನಿಯುದ್ಧಕುಶಲಾ ಯುಧಿ |
ಬಹುಧಾ ಸಮಸಜ್ಜಂತ ಆಯಸೈಃ ಪರಿಘೈರಿವ ॥24॥
ಬಾಹುಯುದ್ಧ ಕುಶಲರಾದ ಬೇರೆ ವೀರರು ರಣರಂಗದಲ್ಲಿ ಕಬ್ಬಿಣದ ಒನಕೆಗೆ ಸದೃಶವಾದ ತಮ್ಮ ಬಾಹುಗಳಿಂದ ಪರಸ್ಪರವಾಗಿ ಬಾಹುಯುದ್ಧದಲ್ಲಿ ಅನೇಕ ರೀತಿಯಲ್ಲಿ ತೊಡಗಿದರು.
ಮುಷ್ಟಿಭಿರ್ಜಾನುಭಿಶ್ಚೈವ ತಳೈಶ್ಚೈವ ವಿಶಾಂಪತೇ |
ಅನ್ಯೋನ್ಯಂ ಜಘ್ನಿರೇ ವೀರಾಸ್ತಾವಕಾಃ ಪಾಂಡವೈಃ ಸಹ ॥25॥
ಎಲೈ ರಾಜನೇ, ನಿನ್ನವರು ಮತ್ತು ಪಾಂಡವರು ಮುಷ್ಟಿಗಳಿಂದಲೂ, ಮಂಡಿಗಳಿಂದಲೂ, ಅಂಗೈಗಳಿಂದಲೂ ಪರಸ್ಪರವಾಗಿ ಹೊಡೆದಾಡಿದರು.
ಪತಿತೈಃ ಪಾತ್ಯಮಾನೈಶ್ಚ ವಿಚೇಷ್ಟದ್ಭಿಶ್ಚ ಭೂತಳೇ |
ಘೋರಮಾಯೋಧನಂ ಜಜ್ಞೇ ತತ್ರತತ್ರ ಜನೇಶ್ವರ ॥26॥
ನೆಲದ ಮೇಲೆ ಬಿದ್ದಿದ್ದ ಮತ್ತು ಬಿದ್ದು ಹೊರಳಾಡುತ್ತಿದ್ದ ಯೋಧರಿಂದ ಎಲೈ ರಾಜನೇ, ಆ ರಣರಂಗವು ಘೋರವಾಗಿ ಕಾಣುತ್ತಿದ್ದಿತು.
ವಿರಥಾ ರಥಿನಶ್ಚಾತ್ರ ನಿಸ್ತ್ರಿಂಶವರಧಾರಿಣಃ |
ಅನ್ಯೋನ್ಯಮಭಿಧಾವಂತ ಪರಸ್ಪರವಧೈಷಿಣಃ ॥27॥
ರಥಿಕರು ರಥಗಳನ್ನು ಕಳೆದುಕೊಂಡು ಶ್ರೇಷ್ಠವಾದ ಖಡ್ಗಗಳನ್ನು ಹಿಡಿದು ಪರಸ್ಪರ ವಧೆಯನ್ನು ಬಯಸಿ, ಪರಸ್ಪರವಾಗಿ ಎರಗುತ್ತಿದ್ದರು.
ತತೋ ದುರ್ಯೋಧನೋ ರಾಜಾ ಕಳಿಂಗೈರ್ಬಹುಭಿರ್ವೃತಃ |
ಪುರಸ್ಕೃತ್ಯ ರಣೇ ಭೀಷ್ಮಂ ಪಾಂಡವಾನಭ್ಯವರ್ತತ ॥28॥
ಆಗ ರಾಜನಾದ ದುರ್ಯೋಧನನು ಅನೇಕ ಕಳಿಂಗ ಯೋಧರಿಂದ ಪರಿವೃತನಾಗಿ ಭೀಷ್ಮರನ್ನು ಮುಂದೆ ಮಾಡಿಕೊಂಡು ಪಾಂಡವರ ಕಡೆಗೆ ಸಾಗಿದನು.
ತಥೈವ ಪಾಂಡವಾಃ ಸರ್ವೇ ಪರಿವಾರ್ಯ ವೃಕೋದರಮ್ |
ಭೀಷ್ಮಮಭ್ಯದ್ರವನ್ ಕ್ರುದ್ಧಾ ರಣೇ ರಭಸವಾಹನಾಃ ॥29॥
ಹಾಗೆಯೇ, ವೇಗಶಾಲಿಯಾದ ವಾಹನಗಳುಳ್ಳ ಪಾಂಡವರು ಭೀಮಸೇನನನ್ನು ಸುತ್ತುವರಿದು ಕ್ರುದ್ಧರಾಗಿ ಭೀಷ್ಮರ ಕಡೆಗೆ ಸಾಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಟ್ಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೇಳನೆಯ ಅಧ್ಯಾಯ
ಐದನೆಯ ದಿವಸದ ಯುದ್ಧದ ಅನುವೃತ್ತಿ.
ಸಂಜಯಃ
ದೃಷ್ಟ್ವಾ ಭೀಷ್ಮೇಣ ಸಂಸಕ್ತಾನ್ ಭ್ರಾತೄನನ್ಯಾಂಶ್ಚ ಪಾರ್ಥಿವಾನ್ |
ತಮಭ್ಯಧಾವದ್ ಗಾಂಗೇಯಮುದ್ಯತಾಸ್ತ್ರೋ ಧನಂಜಯಃ ॥1॥
ಸಂಜಯ ತನ್ನ ಸಹೋದರರು ಮತ್ತು ಉಳಿದ ರಾಜರು ಭೀಷ್ಮರ ಜೊತೆಯಲ್ಲಿ ಸೆಣೆಸುತ್ತಿರುವುದನ್ನು ನೋಡಿದ ಅರ್ಜುನನು ಕೈಯಲ್ಲಿ ಅಸ್ತ್ರವನ್ನು ಎತ್ತಿಹಿಡಿದು ಭೀಷ್ಮರ ಕಡೆಗೆ ಓಡಿದನು.
ಪಾಂಚಜನ್ಯಸ್ಯ ನಿರ್ಘೋಷಂ ಧನುಷೋ ಗಾಂಡಿವಸ್ಯ ಚ |

ಧ್ವಜಂ ಚ ದೃಷ್ಟ್ವಾ ಪಾರ್ಥಸ್ಯ ಸರ್ವಾನ್ನೋ ಭಯಮಾವಿಶತ್ ॥2॥
ಪಾಂಚಜನ್ಯ ಶಂಖ ಘೋಷವನ್ನೂ, ಗಾಂಡೀವ ಧನುಸ್ಸಿನ ಘೋಷವನ್ನೂ ಮತ್ತು ಅರ್ಜುನನ ಧ್ವಜವನ್ನೂ ನೋಡಿದ ನಮ್ಮೆಲ್ಲರಿಗೂ ಭಯವುಂಟಾಯಿತು.
ಅಸಜ್ಜಮಾನಂ ವೃಕ್ಷೇಷು ಧೂಮಕೇತುಮಿವೋತ್ಥಿತಮ್ |
ಬಹುವರ್ಣಂ ಚ ಚಿತ್ರಂ ಚ ದಿವ್ಯಂ ವಾನರಲಕ್ಷಣಮ್ |
ಅಪಶ್ಯಾಮ ಮಹಾರಾಜ ಧ್ವಜಂ ಗಾಂಡಿವಧನ್ವನಃ ॥3॥
ಎಲೈ ಮಹಾರಾಜನೇ, ಮರಗಳಲ್ಲಿ ಎಲ್ಲೂ ಸಿಲುಕಿ ಹಾಕಿಕೊಳ್ಳದ ಧೂಮಕೇತುವಿನಂತೆ ಮೇಲೆದ್ದ ಅನೇಕ ವರ್ಣಗಳಿಂದ ಕೂಡಿದ ವಿಚಿತ್ರವೂ, ದಿವ್ಯವೂ ಆದ, ವಾನರಲಕ್ಷಣದಿಂದ ಕೂಡಿದ ಅರ್ಜುನನ ಧ್ವಜವನ್ನು ನಾವು ನೋಡಿದೆವು.
ವಿದ್ಯುತಂ ಮೇಘಮಧ್ಯಸ್ಥಾಂ ಭ್ರಾಜಮಾನಾಮಿವಾಂಬರೇ |
ದದೃಶುರ್ಗಾಂಡಿವಂ ಯೋಧಾ ರುಗ್ಮಪೃಷ್ಠಂ ಮಹಾರಥೇ ॥4॥
ಅವನ ದೊಡ್ಡ ರಥದಲ್ಲಿ ಸುವರ್ಣಮಯವಾದ ಹಿಂಭಾಗವಿದ್ದ ಆ ಗಾಂಡೀವ ಧನುಸ್ಸು ಆಕಾಶದಲ್ಲಿ ಮೇಘಗಳ ಮಧ್ಯದಲ್ಲಿರುವ ಮಿಂಚಿನಂತೆ ಹೊಳೆಯುವುದನ್ನು ಯೋಧರು ನೋಡಿದರು.
ಅಶುಶ್ರುಮ ಭೃಶಂ ಚಾಸ್ಯ ಶಕ್ರಸ್ಯೇವಾಭಿಗರ್ಜತಃ |
ಸುಘೋರಂ ತಳಯೋಃ ಶಬ್ದಂ ನಿಘ್ನತಸ್ತವ ವಾಹಿನೀಮ್ ॥5॥
ನಿನ್ನ ಸೈನ್ಯವನ್ನು ಸಂಹರಿಸುವ ಅವನ ಘೋರವಾದ ಹಸ್ತತಳ ಘೋಷವು ಇಂದ್ರನ ಗರ್ಜನೆಯಂತಿದ್ದುದನ್ನು ನಾವು ಚೆನ್ನಾಗಿ ಕೇಳಿದೆವು.
ಚಂಡವಾತೋ ಯಥಾ ಮೇಘಃ ಸವಿದ್ಯುತ್ಸ್ತನಯಿತ್ನುಮಾನ್ |
ದಿಶಃ ಸಂಪ್ಲಾವಯನ್ ಸರ್ವಾಃ ಶರವರ್ಷೈಃ ಸಮಂತತಃ ॥6॥
ಅಭ್ಯಧಾವತ ಗಾಂಗೇಯಂ ಭೈರವಾಸೋಽತ್ರ ಧನಂಜಯಃ |
ದಿಶಂ ಪ್ರಾಚೀಂ ಪ್ರತೀಚೀಂ ಚ ನ ಜಾನೀಮೋಽಸ್ತ್ರಮೋಹಿತಾಃ ॥7॥
ಮಿಂಚು ಮತ್ತು ಸಿಡಿಲುಗಳಿಂದ ಕೂಡಿದ, ಚಂಡವಾತ ಪ್ರೇರಿತವಾದ ಮೇಘವು ಎಲ್ಲ ದಿಕ್ಕುಗಳನ್ನೂ ಮಳೆಯಿಂದ ಕೊಚ್ಚಿ ಹಾಕಿದಂತೆ ಭಯಂಕರವಾದ ಅಸ್ತ್ರವುಳ್ಳ ಅರ್ಜುನನು ಭೀಷ್ಮರ ಕಡೆಗೆ ಧಾವಿಸಿದನು. ಅರ್ಜುನನ ಅಸ್ತ್ರದಿಂದ ಮೋಹಿತರಾದ ನಾವು ಪೂರ್ವದಿಕ್ಕನ್ನಾಗಲೀ, ಪಶ್ಚಿಮದಿಕ್ಕನ್ನಾಗಲೀ ತಿಳಿಯಲಿಲ್ಲ.
ಕಾಂದಿಗ್ಭೂತಾಃ ಶ್ರಾಂತಪತ್ರಾ ಹತಾಸಾಹತ್ರ ಹತಚೇತಸಃ |
ಅನ್ಯೋನ್ಯಮಭಿಸಂಶ್ಲಿಷ್ಯ ಯೋಧಾಸ್ತೇ ಭರತರ್ಷಭ ॥8॥
ಭೀಷ್ಮಮೇವಾಭಿಲೀಯಂತ ಸಹ ಸರ್ವೈಸ್ತವಾತ್ಮಜೈಃ |
ತೇಷಾಮಾರ್ತಾಯನಮಭೂದ್ ಭೀಷ್ಮಃ ಶಂತನವೋ ರಣೇ ॥9॥
ಎಲೈ ಭರತರ್ಷಭನೇ, ಆ ಯೋಧರೆಲ್ಲರೂ ಇದು ಯಾವ ದಿಕ್ಕೆಂದು ತಿಳಿಯದೆ ಭ್ರಾಂತರಾಗಿ ತಮ್ಮ ಅಸ್ತ್ರಗಳನ್ನು ಕಳೆದುಕೊಂಡು, ತಮ್ಮ ಧೈರ್ಯವನ್ನೂ ಕಳೆದುಕೊಂಡು ಪರಸ್ಪರವಾಗಿ ಆಲಿಂಗಿಸಿ ನಿನ್ನ ಪುತ್ರರ ಜೊತೆಯಲ್ಲಿ ಭೀಷ್ಮರ ಬಳಿಯಲ್ಲಿಯೇ ಅಡಗಿಕೊಂಡರು. ಆರ್ತರಾದ ಅವರಿಗೆ ಶಂತನು ಪುತ್ರರಾದ ಭೀಷ್ಮರು ರಣರಂಗದಲ್ಲಿ ಆಶ್ರಯರಾದರು.
ಸಮುತ್ಪತಂತ ವಿತ್ರಸ್ತಾ ರಥೇಭ್ಯೋ ರಥಿನಸ್ತದಾ |
ಸಾದಿನಶ್ಚಾಶ್ವಪೃಷ್ಠೇಭ್ಯೋ ಭೂಮೌ ಚಾಪಿ ಪದಾತಯಃ ॥10॥
ಹೆದರಿದ ರಥಿಕರು ರಥಗಳಿಂದಲೂ, ಅಶ್ವಾರೋಹಿಗಳು ಅಶ್ವಗಳಿಂದಲೂ, ಪದಾತಿಗಳು ಭೂಮಿಯಲ್ಲಿಯೂ ಹಾರಿ ಕೆಳಗೆ ಬಿದ್ದರು.
ಶ್ರುತ್ವಾ ಗಾಂಡೀವನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ಸರ್ವಸೈನ್ಯಾನಿ ಭೀತಾನಿ ವ್ಯವಲೀಯಂತ ಭಾರತ ॥11॥
ಎಲೈ ಭಾರತನೇ, ಸಿಡಿಲಿನ ಆರ್ಭಟದಂತಿದ್ದ ಗಾಂಡೀವ ಧನುಸ್ಸಿನ ಘೋಷವನ್ನು ಕೇಳಿ ನಿನ್ನ ಎಲ್ಲಾ ಸೈನ್ಯಗಳು ಭಯದಿಂದ ಅಡಗಿಕೊಂಡವು.
ಅಥ ಕಾಂಬೋಜಮುಖ್ಯೈಸ್ತು ಬೃಹದ್ಭಿಃ ಶೀಘ್ರಗಾಮಿಭಿಃ |
ಗೋಪಾನಾಂ ಬಹುಸಾಹಸ್ರೈರ್ಬಲೈರ್ಗೋವಾಸನೋ ವೃತಃ ॥12॥
ಆಗ ಶೀಘ್ರಗಾಮಿಗಳಾದ ಕಾಂಬೋಜ ದೇಶದ ಅಶ್ವಗಳಿಂದಲೂ, ಅನೇಕ ಸಹಸ್ರ ಗೋಪರ ಬಲದಿಂದಲೂ ಗೋವಾಸನ ರಾಜನು ಪರಿವೃತನಾದನು.
ಮದ್ರಸೌವೀರಗಾಂಧಾರೈಸ್ತ್ರಿಗರ್ತೈಶ್ಚ ವಿಶಾಂಪತೇ |
ಸರ್ವಕಾಳಿಂಗಮುಖ್ಯೈಶ್ಚ ಕಳಿಂಗಾಧಿಪತಿರ್ವೃತಃ ॥13॥
ಎಲೈ ರಾಜನೇ, ಕಳಿಂಗರಾಜನು ಮದ್ರ-ಸೌವೀರ-ಗಾಂಧಾರ-ತ್ರಿಗರ್ತ ಸೈನ್ಯಗಳಿಂದಲೂ, ಕಳಿಂಗ ದೇಶದ ಮುಖ್ಯಯೋಧರಿಂದಲೂ ಪರಿವೃತನಾದನು.
ನಾಗಾ ನರಗಣೌಘಾಶ್ಚ ದುಃಶಾಸನಪುರಃಸರಾಃ |
ಜಯದ್ರಥಶ್ಚ ನೃಪತಿಃ ಸಹಿತಃ ಸರ್ವರಾಜಭಿಃ ॥14॥
ಹಯಾರೋಹವರಾಶ್ಚೈವ ತವ ಪುತ್ರೇಣ ಚೋದಿತಾಃ |
ಚತುರ್ದಶಸಹಸ್ರಾಣಿ ಸೌಬಲಂ ಪರ್ಯವಾರಯನ್ ॥15॥
ಗಜಗಳು, ಯೋಧಸಮೂಹಗಳು, ಅನೇಕ ರಾಜರಿಂದ ಸಹಿತನಾದ ಜಯದ್ರಥ ರಾಜ ಇವರು ದುಶ್ಶಾಸನನ ಮುಂಭಾಗದಲ್ಲಿದ್ದರು. ನಿನ್ನ

ಪುತ್ರನಿಂದ ಪ್ರೇರಿತರಾದ ಹದಿನಾಲ್ಕು ಸಾವಿರ ಅಶ್ವಾರೋಹಿಗಳು ಶಕುನಿಯನ್ನು ಸುತ್ತುವರಿದಿದ್ದರು.
ತತಸ್ತೇ ಸಹಿತಾಃ ಸರ್ವೇ ವಿಭಕ್ತರಥವಾಹನಾಃ |
ಪಾಂಡವಾನ್ ಸಮರೇ ಜಗ್ಮುಸ್ತಾವಕಾ ಭರತರ್ಷಭ ||16||
ಎಲೈ ಭರತಶ್ರೇಷ್ಠನೇ, ಆಗ ನಿನ್ನವರಾದ ಅವರು ತಮ್ಮ ರಥವಾಹನಗಳನ್ನು ವಿಭಾಗಿಸಿಕೊಂಡು ಎಲ್ಲರೂ ಪಾಂಡವರ ಮೇಲೆ ಯುದ್ಧಕ್ಕೆ ಸಾಗಿದರು.
ಚೇದಿಕಾಶಿಪದಾತೈಶ್ಚ ರಥೈಃ ಪಾಂಚಾಲಸೃಂಜಯೈಃ |
ಪಾಂಡವಾಃ ಸಹಿತಾ ಸರ್ವೇ ಧೃಷ್ಟದ್ಯುಮ್ನಪುರೋಗಮಾಃ |
ತಾವಕಾನ್ ಸಮರೇ ಜಗ್ಮುರ್ಧರ್ಮಪುತ್ರೇಣ ಚೋದಿತಾಃ ||17||
ಧೃಷ್ಟದ್ಯುಮ್ನನನ್ನು ಮುಂದೆ ಮಾಡಿಕೊಂಡ ಎಲ್ಲ ಪಾಂಡವರು ಚೇದಿ-ಕಾಶಿ ಪದಾತಿಗಳಿಂದಲೂ, ಪಾಂಚಾಲ-ಸೃಂಜಯರ ರಥಿಕರಿಂದಲೂ ಸೇರಿ ಯುಧಿಷ್ಠಿರನಿಂದ ಪ್ರೇರಿತರಾಗಿ ಯುದ್ಧದಲ್ಲಿ ನಿನ್ನವರ ಮೇಲೆ ಎರಗಿದರು.
ರಥಿಭಿರ್ವಾರಣೈರಶ್ವೈಃ ಪದಾತೈಶ್ಚ ಸಮೀರಿತಮ್ |
ಘೋರಮಾಯೋಧನಂ ಜಜ್ಞೇ ಮಹಾಭ್ರಸದೃಶಂ ರಜಃ ||18||
ರಥಿಕರಿಂದ, ಗಜಗಳಿಂದ, ಅಶ್ವಗಳಿಂದ ಮತ್ತು ಪದಾತಿಗಳಿಂದ ತುಳಿಯಲ್ಪಟ್ಟು ಮೇಲೆದ್ದ ಧೂಳು ದೊಡ್ಡ ಮೋಡದಂತೆ ಆಯಿತು. ರಥಿಕರು ಮೊದಲಾದವರಿಂದ ರಣರಂಗವೂ ಘೋರವಾಯಿತು.
ತೋಮರಪ್ರಾಸನಾರಾಚಗಜಾಶ್ವರಥಯೋಧಿನಾಮ್ |
ಬಲೇನ ಮಹತಾ ಭೀಷ್ಮಃ ಸಮಸಜ್ಜತ್ ಕಿರೀಟಿನಾ ||19||
ಆವಂತ್ಯಃ ಕಾಶಿರಾಜೇನ ಭೀಮಸೇನೇನ ಸೈಂಧವಃ |
ಅಜಾತಶತ್ರುರ್ಮದ್ರಾಣಾಮೃಷಭೇಣ ಯಶಸ್ವಿನಾ |
ಸಹಪುತ್ರಃ ಸಹಾಮಾತ್ಯಃ ಶಲ್ಯೇನ ಸಮಸಜ್ಜತ ||20||
ತೋಮರ, ಪ್ರಾಸ, ನಾರಾಚಗಳಿಂದಲೂ, ಗಜಾಶ್ವರಥ ಯೋಧರಿಂದಲೂ ಕೂಡಿದ ದೊಡ್ಡ ಬಲದಿಂದ ಸಹಿತರಾಗಿ ಭೀಷ್ಮರು ಅರ್ಜುನನ ಜೊತೆಯಲ್ಲಿ ಹೋರಾಡಿದರು. ಅವಂತಿ ದೇಶದ ರಾಜನು ಕಾಶಿರಾಜನ ಜೊತೆಯಲ್ಲಿಯೂ; ಭೀಮಸೇನನು ಸೈಂಧವನ ಜೊತೆಯಲ್ಲಿಯೂ; ಯುಧಿಷ್ಠಿರನು ಕೀರ್ತಿಶಾಲಿಯೂ ಪುತ್ರಸಹಿತನೂ, ಮದ್ರಾಧಿಪತಿಯೂ, ಅಮಾತ್ಯರಿಂದ ಕೂಡಿದವನೂ ಆದ ಶಲ್ಯನ ಜೊತೆಯಲ್ಲಿಯೂ ಯುದ್ಧವನ್ನು ಮಾಡಿದನು.
ವಿಕರ್ಣಃ ಸಹದೇವೇನ ಚಿತ್ರಸೇನಃ ಶಿಖಂಡಿನಾ |
ಮತ್ಸ್ಯಾ ದುರ್ಯೋಧನಂ ಜಗ್ಮುಃ ಶಕುನಿಂ ಚ ವಿಶಾಂಪತೇ ||21||
ದ್ರುಪದಶ್ಚೇಕಿತಾನಶ್ಚ ಸಾತ್ಯಕಿಶ್ಚ ಮಹಾರಥಃ |
ದ್ರೋಣೇನ ಸಮಸಜ್ಜಂತ ಸಪುತ್ರೇಣ ಮಹಾತ್ಮನಾ |
ಕೃಪಶ್ಚ ಕೃತವರ್ಮಾ ಚ ಧೃಷ್ಟಕೇತುಮಭಿದ್ರುತೌ ||22||
ವಿಕರ್ಣನು ಸಹದೇವನ ಜೊತೆಯಲ್ಲಿಯೂ; ಚಿತ್ರಸೇನನು ಶಿಖಂಡಿಯ ಜೊತೆಯಲ್ಲಿಯೂ ಯುದ್ಧವನ್ನು ಮಾಡಿದರು. ಎಲೈ ರಾಜನೇ, ಮತ್ಸ್ಯಯೋಧರು ದುರ್ಯೋಧನನ ಮತ್ತು ಶಕುನಿಯ ಮೇಲೆ ಯುದ್ಧಕ್ಕೆ ಸಾಗಿದರು. ದ್ರುಪದ, ಚೇಕಿತಾನ ಮತ್ತು ಮಹಾರಥನಾದ ಸಾತ್ಯಕಿ ಇವರು ಮಹಾತ್ಮರಾದ, ಪುತ್ರನಿಂದ ಸಹಿತರಾದ ದ್ರೋಣರ ಮೇಲೆ ಎರಗಿದರು. ಕೃಪ ಮತ್ತು ಕೃತವರ್ಮರು ಧೃಷ್ಟಕೇತುವಿನ ಕಡೆಗೆ ಸಾಗಿದರು.
ಏವಂ ಪ್ರಜವಿತಾಶ್ವಾನಿ ಭ್ರಾಂತನಾಗರಥಾನಿ ಚ |
ಸೈನ್ಯಾನಿ ಸಮಸಜ್ಜಂತ ಪ್ರಯುದ್ಧಾನಿ ಸಮಂತತಃ ||23||
ಹೀಗೆ ವೇಗವನ್ನು ಕೂಡಿದ ಅಶ್ವಗಳಿಂದಲೂ, ಶೀಘ್ರವಾಗಿ ಸಂಚರಿಸುವ ಗಜ, ರಥಗಳಿಂದಲೂ ಕೂಡಿದ ಸೈನ್ಯಗಳು ಎಲ್ಲ ಕಡೆಗಳಲ್ಲಿಯೂ ದೊಡ್ಡ ಯುದ್ಧದಲ್ಲಿ ನಿರತವಾದವು.
ನಿರಭ್ರೇ ವಿದ್ಯುತಸ್ತೀವ್ರಾ ದಿಶಶ್ಚ ರಜಸಾವೃತಾಃ |
ಪ್ರಾದುರಾಸನ್ಮಹೋಲ್ಕಾಶ್ಚ ಸನಿರ್ಘಾತಾ ವಿಶಾಂಪತೇ ||24||
ಎಲೈ ರಾಜನೇ, ನಿರಭ್ರವಾದ ಆಕಾಶದಲ್ಲಿ ತೀವ್ರವಾದ ಮಿಂಚುಗಳು ಉಂಟಾದವು. ದಿಕ್ಕುಗಳು ಧೂಳಿನಿಂದ ಮುಚ್ಚಿಹೋದವು. ಸಿಡಿಲಿನಿಂದ ಕೂಡಿದ ಮಹೋಲ್ಕೆಗಳು ಆಕಾಶದಲ್ಲಿ ಕಂಡುಬಂದವು.
ಪ್ರವವೌ ಚ ಮಹಾವಾತಃ ಪಾಂಸುವರ್ಷಂ ಪಪಾತ ಚ |
ನಭಸ್ಯಂತರ್ದಧೇ ಸೂರ್ಯಃ ಸೈನ್ಯೇನ ರಜಸಾವೃತಃ ||25||
ಬಿರುಗಾಳಿಯು ಬೀಸಿತು; ಧೂಳಿನ ಮಳೆಯು ಸುರಿಯಿತು; ಸೈನ್ಯದಿಂದ ಎದ್ದ ಧೂಳಿನಿಂದ ಆವೃತನಾಗಿ ಸೂರ್ಯನು ಆಕಾಶದಲ್ಲಿ ಅಂತರ್ಧಾನವನ್ನು ಹೊಂದಿದನು.
ಪ್ರಮೋಹಃ ಸರ್ವಸತ್ತ್ವಾನಾಮತೀವ ಸಮಪದ್ಯತ |
ರಜಸಾ ಚಾಭಿಭೂತಾನಾಮಸ್ತ್ರಜಾಲೈಶ್ಚ ತುದ್ಯತಾಮ್ ||26||
ಧೂಳುಗಳಿಂದ ಮುಚ್ಚಿಹೋಗಿ ಅಸ್ತ್ರಸಮೂಹಗಳಿಂದ ಪೀಡಿತರಾದ ಎಲ್ಲ ಪ್ರಾಣಿಗಳಿಗೂ ದೊಡ್ಡ ಭ್ರಾಂತಿಯುಂಟಾಯಿತು.
ವೀರಬಾಹುವಿಸೃಷ್ಟಾನಾಂ ಸರ್ವಾವರಣಭೇದಿನಾಮ್ |
ಸಂಘಾತಃ ಶರಜಾಲಾನಾಂ ತುಮುಲಃ ಸಮಪದ್ಯತ ||27||
ವೀರರ ಬಾಹುಗಳಿಂದ ಪ್ರಯೋಗಿಸಲ್ಪಟ್ಟ, ಸರ್ವಕವಚಗಳನ್ನು ಭೇದಿಸುವ ಬಾಣ ಸಮೂಹಗಳಿಂದ ಉಂಟಾದ ಶಬ್ದವು

ತೀವ್ರವಾಗಿದ್ದಿತು.
ಪ್ರಕಾಶಂ ಚಕ್ರುರಾಕಾಶಮುದ್ಯತಾನಿ ಭುಜೋತ್ತಮೈಃ |
ನಕ್ಷತ್ರವಿಮಲಾಭಾನಿ ಶಸಾಣತ್ರಣಿ ಭರತರ್ಷಭ ॥28॥
ಎಲೈ ಭರತಶ್ರೇಷ್ಠನೇ, ಭುಜಗಳಿಂದ ಎತ್ತಿಹಿಡಿದ ನಕ್ಷತ್ರದಂತೆ ಸ್ವಚ್ಛವಾದ ಪ್ರಕಾಶವುಳ್ಳ ಆಯುಧಗಳು ಆಕಾಶವನ್ನು ಬೆಳಗಿದವು.
ಆರ್ಷಭಾಣಿ ವಿಚಿತ್ರಾಣಿ ರುಗ್ಮಜಾಲಾವೃತಾನಿ ಚ |
ಸಂಪೇತುರ್ದಿಕ್ಷು ಸರ್ವಾಸು ಚರ್ಮಾಣಿ ಭರತರ್ಷಭ ॥29॥
ಎಲೈ ಭರತಶ್ರೇಷ್ಠನೇ, ವೃಷಭ ಚರ್ಮದಿಂದ ಮಾಡಿದ, ಸುವರ್ಣಾಲಂಕೃತವಾದ ವಿಚಿತ್ರವಾದ ಗುರಾಣಿಗಳು ಎಲ್ಲ ದಿಕ್ಕುಗಳಲ್ಲಿಯೂ ನೆಲದ ಮೇಲೆ ಬಿದ್ದವು.
ಸೂರ್ಯವರ್ಣೈಶ್ಚ ನಿಶಿತ್ರಂಶೈಃ ಪಾತ್ಯಮಾನಾನಿ ಸರ್ವಶಃ |
ದಿಕ್ಷು ಸರ್ವಾಸ್ವದೃಶ್ಯಂತ ಶರೀರಾಣಿ ಶಿರಾಂಸಿ ಚ ॥30॥
ಸೂರ್ಯನ ಪ್ರಕಾಶದಂತೆ ಪ್ರಕಾಶಿಸುವ ಖಡ್ಗಗಳಿಂದ ಕತ್ತರಿಸಿ ಬೀಳಿಸಲ್ಪಡುವ ಶರೀರಗಳು ಮತ್ತು ಶಿರಸ್ಸುಗಳು ಎಲ್ಲ ದಿಕ್ಕುಗಳಲ್ಲಿಯೂ ಕಂಡುಬಂದವು.
ಭಗ್ನಚಕ್ರಾಕ್ಷನೀಡಾಶ್ಚ ನಿಪಾತಿತಮಹಾಧ್ವಜಾಃ |
ಹತಾಶ್ವಾಃ ಪೃಥಿವೀಂ ಜಗ್ಮುಸ್ತತ್ರತತ್ರ ಮಹಾರಥಾಃ ॥31॥
ಮಹಾರಥರು ತಮ್ಮ ರಥದ ಚಕ್ರ, ಅಕ್ಷ ಮತ್ತು ನೀಡಗಳು ಮುರಿಯುತ್ತಿರಲು, ದೊಡ್ಡ ಧ್ವಜಗಳು ಕೆಳಗೆ ಬೀಳುತ್ತಿರಲು, ತಮ್ಮ ಅಶ್ವಗಳು ವಧಿಸಲ್ಪಡುತ್ತಿರಲು ಭೂಮಿಯ ಮೇಲೆ ಬಿದ್ದರು.
ಪರಿಪೇತುರ್ಹಯಾಶ್ಚಾತ್ರ ಕೇಚಿಚ್ಛಸ್ತ್ರಕೃತವ್ರಣಾಃ |
ರಥಾನ್ ವಿಪರಿಕರ್ಷಂತೋ ಹತೇಷು ರಥಯೋಧಿಷು ॥32॥
ಶತ್ರುಗಳ ಶಸ್ತ್ರದಿಂದ ಗಾಯಗೊಂಡ ಅಶ್ವಗಳು ರಥಯೋಧಿಗಳು ಹತರಾದ ಮೇಲೆ ರಥವನ್ನು ಎಳೆಯುತ್ತಾ ನೆಲದ ಮೇಲೆ ಬಿದ್ದವು.
ಶರಾಹತಾ ಭಿನ್ನದೇಹಾ ಬದ್ಧಯೋಕಾತ್ರ ಹಯೋತ್ತಮಾಃ |
ಯುಗಾನಿ ಪರ್ಯಕರ್ಷಂತ ತತ್ರತತ್ರ ಸ್ಮ ಭಾರತ ॥33॥
ಎಲೈ ಭಾರತನೇ, ಬಾಣಗಳಿಂದ ಗಾಯಗೊಂಡು ಶರೀರದಲ್ಲಿ ವ್ರಣವುಳ್ಳವಾಗಿ, ಕಡಗೂಟಗಳಿಂದ ಸಹಿತವಾದ ನೊಗವನ್ನು ಹೊತ್ತ ಶ್ರೇಷ್ಠವಾದ ಅಶ್ವಗಳು ನೊಗವನ್ನು ಎಳೆಯುತ್ತಿರುವುದು ಅಲ್ಲಲ್ಲಿ ಕಂಡುಬರುತ್ತಿದ್ದಿತು.
ಅದೃಶ್ಯಂತ ಸಸೂತಾಶ್ಚ ಸಾಶ್ವಾಃ ಸರಥಯೋಧಿನಃ |
ಏಕೇನ ಬಲಿನಾ ರಾಜನ್ ವಾರಣೇನ ಹತಾ ರಥಾಃ ॥34॥
ಸಾರಥಿಯಿಂದಲೂ, ಅಶ್ವಗಳಿಂದಲೂ ಸಹಿತರಾದ ರಥಯೋಧಿಗಳು ಎಲೈ ರಾಜನೇ, ಬಲಿಷ್ಠವಾದ ಒಂದೇ ಗಜದಿಂದ ಕೊಲ್ಲಲ್ಪಡುವುದು ಕಂಡುಬರುತ್ತಿದ್ದಿತು.
ಗಂಧಂಹಸ್ತಿಮದಸ್ರಾವಮಾಘ್ರಾಯ ಬಹವೋ ರಣೇ |
ಸನ್ನಿಪಾತೇ ಬಲೌಘಾನಾಂ ವಾತಮಾದದಿರೇ ಜನಾಃ ॥35॥
ಆ ಸೈನ್ಯಸಮೂಹಗಳು ಪರಸ್ಪರ ಯುದ್ಧವನ್ನು ಮಾಡುವಾಗ ಜನರು ಗಜಗಳ ಗಂಧಯುಕ್ತವಾದ ಮದೋದಕದ ಸುಗಂಧವನ್ನು ಆಘ್ರಾಣಿಸಿದರು.
ಸತೋಮರಮಹಾಮಾತ್ರೈರ್ನಿಪತದ್ಭಿರ್ಗತಾಸುಭಿಃ |
ಬಭೂವಾಯೋಧನಂ ಛನ್ನಂ ನಾರಾಚಾಭಿಹತೈರ್ಗಜೈಃ ॥36॥
ನಾರಾಚಗಳಿಂದ ಕೊಲ್ಲಲ್ಪಟ್ಟ ಗಜಗಳಿಂದಲೂ ಮತ್ತು ಕೈಯಲ್ಲಿ ತೋಮರವನ್ನು ಹಿಡಿದು ಬಾಣದ ಹೊಡೆತಕ್ಕೆ ಸಿಲುಕಿ ಮರಣವನ್ನು ಹೊಂದಿ ಕೆಳಗೆ ಉರುಳುತ್ತಿದ್ದ ಮಹಾಮಾತ್ರರಿಂದಲೂ (ಗಜಾರೋಹಿಗಳಿಂದಲು) ರಣರಂಗವು ಮುಚ್ಚಿಹೋಯಿತು.
ಸನ್ನಿಪಾತೇ ಬಲೌಘಾನಾಂ ಪ್ರೇಷಿತೈರ್ವರವಾರಣೈಃ |
ನಿಪೇತುರ್ಯುಧಿ ಸಂಭಗ್ನಾಃ ಸಯೋಧಾಃ ಸಧ್ವಜಾ ರಥಾಃ ॥37॥
ಸೈನ್ಯ ಸಮೂಹಗಳು ಸೆಣೆಸುವಾಗ ಮಹಾಮಾತ್ರರಿಂದ ಪ್ರೇರಿತವಾದ ಗಜಗಳಿಂದ, ಯೋಧರಿಂದ ಮತ್ತು ಧ್ವಜಗಳಿಂದ ಸಹಿತವಾದ ರಥಿಕರು ತುಳಿಯಲ್ಪಟ್ಟು ಭೂಮಿಯ ಮೇಲೆ ಉರುಳಿದರು.
ನಾಗರಾಜೋಪಮೈರ್ಹಸ್ತೈರ್ನಾಗೈರಾಕ್ಷಿಪ್ಯ ಸಂಯುಗೇ |
ವ್ಯದೃಶ್ಯಂತ ಮಹಾರಾಜ ಸಂಭಗ್ನಾ ರಥಕೂಬರಾಃ ॥38॥
ಎಲೈ ಮಹಾರಾಜನೇ, ಸರ್ಪದಂತಿರುವ ತಮ್ಮ ಸೊಂಡಿಲುಗಳಿಂದ ರಥಕೂಬರಗಳನ್ನು ಎಳೆದು ರಣರಂಗದಲ್ಲಿ ಅದನ್ನು ತುಳಿದು ಪುಡಿಮಾಡುವ ದೃಶ್ಯಗಳು ಕಂಡುಬರುತ್ತಿದ್ದವು.
ವಿಶೀರ್ಣರಥಜಾಲಾಶ್ಚ ಕೇಶೇಷ್ವಾಕ್ಷಿಪ್ಯ ದಂತಿಭಿಃ |
ದ್ರುಮಶಾಖಾ ಇವಾವಿಧ್ಯ ನಿಷ್ಪಿಷ್ಟಾ ರಥಿನೋ ರಣೇ ॥39॥
ರಥವನ್ನು ಕಳೆದುಕೊಂಡ ರಥಿಕರು ಗಜಗಳಿಂದ ತಲೆಕೂದಲುಗಳಲ್ಲಿ ಹಿಡಿದು ಮರದ ಕೊಂಬೆಗಳಂತೆ ಕೆಳಗೆಳೆದು ಕಾಲಿನಿಂದ ತುಳಿದು ಪುಡಿ ಮಾಡುವುದು ಕಂಡುಬರುತ್ತಿದ್ದಿತು.
ರಥೇಷು ಚ ರಥಾನ್ ಯುದ್ಧೇ ಸಂಸಕ್ತಾನ್ ನರವಾರಣಾಃ |
ವಿಕರ್ಷಂತೋ ದಿಶಃ ಸರ್ವಾಃ ಸಂಪೇತುಃ ಸರ್ವಶಬ್ದಗಾಃ ॥40॥
ರಥಿಕರ ಜೊತೆಯಲ್ಲಿ ಸೆಣೆಸಾಡುತ್ತಿದ್ದ ರಥಿಕರನ್ನು ಮಹಾಗಜಗಳು ಅವುಗಳಲ್ಲಿ ಒಂದು ರಥವನ್ನು ಎಳೆಯುತ್ತಾ ಎಲ್ಲ ರೀತಿಯ

ಶಬ್ದವನ್ನು ಮಾಡುತ್ತಾ ದಿಕ್ಕು ದಿಕ್ಕುಗಳಿಗೆ ಹೋದವು.
ತೇಷಾಂ ತಥಾ ಕರ್ಷತಾಂ ಚ ಗಜಾನಾಂ ರೂಪಮಾಬಭೌ |
ಸರಃಸು ನಳಿನೀಜಾಲಂ ವಿಷಕ್ತಮಿವ ಕರ್ಷತಾಮ್ ||41||
ಹಾಗೆ ರಥಗಳನ್ನು ಎಳೆದುಕೊಂಡು ಹೋಗುವ ಆ ಮಹಾಗಜಗಳ ಆಕೃತಿಯು ಸರೋವರದಲ್ಲಿ ಕಾಲಿಗೆ ಸಿಕ್ಕಿದ ಕಮಲ ಸಸ್ಯಗಳ ಜಾಲವನ್ನು ಎಳೆದುಕೊಂಡು ಹೋಗುವ ಗಜಗಳಂತೆ ತೋರುತ್ತಿದ್ದಿತು.
ಏವಂ ಸಂಛಾದಿತಂ ತತ್ರ ಬಭೂವಾಯೋಧನಂ ಮಹತ್ |
ಸಾದಿಭಿಶ್ಚ ಪದಾತ್ಯೈಶ್ಚ ಸಧ್ವಜೈಶ್ಚ ಮಹಾರಥೈಃ ||42||
ಹೀಗೆ ಅಲ್ಲಿ ಆ ರಣರಂಗವು ಅಶ್ವಾರೋಹಿಗಳಿಂದಲೂ, ಪದಾತಿಗಳಿಂದಲೂ, ಧ್ವಜ ಸಹಿತವಾದ ರಥಗಳಿಂದ ಕೂಡಿದ ಮಹಾರಥರಿಂದಲೂ ಮುಚ್ಚಿಹೋಯಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಸಪ್ತವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆಂಟನೆಯ ಅಧ್ಯಾಯ
ಯುದ್ಧದ ಅನುವೃತ್ತಿ. ಭೀಷ್ಮಾದಿಗಳ ಪ್ರತಾಪ.
ಸಂಜಯಃ
ಶಿಖಂಡೀ ಸಹ ಮತ್ಸ್ಯೇನ ವಿರಾಟೇನ ವಿಶಾಂಪತೇ |
ಭೀಷ್ಮಮಾಶು ಮಹೇಷ್ವಾಸಮಾಸಸಾದ ಸುದುರ್ಜಯಮ್ ||1||
ಸಂಜಯ ಎಲೈ ರಾಜನೇ, ಶಿಖಂಡಿಯು ಮತ್ಸ್ಯರಾಜನಾದ ವಿರಾಟನ ಜೊತೆಯಲ್ಲಿ ಮಹಾಧನುರ್ಧಾರಿಗಳೂ ಮತ್ತು ಜಯಿಸಲು ಅತ್ಯಂತ ಅಸಾಧ್ಯರಾದವರೂ ಆದ ಭೀಷ್ಮರನ್ನು ಸಮೀಪಿಸಿದನು.
ದ್ರೋಣಂ ಕೃಪಂ ವಿಕರ್ಣಂ ಚ ಮಹೇಷ್ವಾಸಾನ್ ಮಹಾಬಲಾನ್ |
ರಾಜ್ಞಶ್ಚಾನ್ಯಾನ್ ರಣೇ ಶೂರಾನ್ ಬಹೂನಾರ್ಚ್ಛದ್ ಧನಂಜಯಃ ||2||
ಅರ್ಜುನನಾದರೂ ದ್ರೋಣರು, ಕೃಪರು, ವಿಕರ್ಣ ಈ ಮಹಾಧನುರ್ಧಾರಿಗಳನ್ನು, ಮಹಾಬಲರನ್ನು ಮತ್ತು ಯುದ್ಧದಲ್ಲಿ ಶೂರರಾದ ಇನ್ನೂ ಅನೇಕ ರಾಜರುಗಳನ್ನು ತನ್ನ ಬಾಣಪ್ರಯೋಗದಿಂದ ಪೀಡಿಸಿದನು.
ಸೈಂಧವಂ ಚ ಮಹೇಷ್ವಾಸಂ ಸಾಮಾತ್ಯಂ ಸಹ ಬಂಧುಭಿಃ |
ಪ್ರಾಚ್ಯಾಂಶ್ಚ ದಾಕ್ಷಿಣಾತ್ಯಾಂಶ್ಚ ಭೂಮಿಪಾನ್ ಭೂಮಿಪರ್ಷಭ ||3||
ಪುತ್ರಂ ಚ ತೇ ಮಹೇಷ್ವಾಸಂ ದುರ್ಯೋಧನಮಮರ್ಷಣಮ್ |
ದುಃಸಹಂ ಚೈವ ಸಮರೇ ಭೀಮಸೇನೋಽಭ್ಯವರ್ತತ ||4||
ಎಲೈ ರಾಜಶ್ರೇಷ್ಠನೇ, ಬಂಧುಗಳಿಂದ ಮತ್ತು ಅಮಾತ್ಯರಿಂದ ಕೂಡಿದ ಮಹಾಧನುರ್ಧಾರಿಯಾದ ಜಯದ್ರಥನನ್ನು, ಪೂರ್ವದಿಕ್ಕಿನ ಮತ್ತು ದಕ್ಷಿಣ ದಿಕ್ಕಿನ ರಾಜರನ್ನು, ಕ್ರೋಧಶೀಲನಾದ ನಿನ್ನ ಪುತ್ರನಾದ ದುರ್ಯೋಧನನನ್ನು ಮತ್ತು ದುಃಸಹನನ್ನು ಯುದ್ಧದಲ್ಲಿ ಭೀಮಸೇನನು ಸಮೀಪಿಸಿದನು.
ಸಹದೇವಸ್ತು ಶಕುನಿಮುಲೂಕಂ ಚ ಮಹಾರಥಮ್ |
ಪಿತಾಪುತ್ರೌ ಮಹೇಷ್ವಾಸಾವಭ್ಯವರ್ತತ ದುರ್ಜಯೌ ||5||
ಸಹದೇವನಾದರೂ ಜಯಿಸಲು ಕಷ್ಟಸಾಧ್ಯರಾದ, ಮಹಾರಥರಾದ, ಮಹಾಧನುರ್ಧಾರಿಗಳಾದ ಶಕುನಿಯನ್ನೂ, ಅವನ ಪುತ್ರನಾದ ಉಲೂಕನನ್ನೂ ಉದ್ದೇಶಿಸಿ ಅವರ ಕಡೆಗೆ ಸಾಗಿದನು.
ಯುಧಿಷ್ಠಿರೋ ಮಹಾರಾಜ ಗಜಾನೀಕಂ ಮಹಾರಥಃ |
ಸಮವರ್ತತ ಸಂಗ್ರಾಮೇ ಪುತ್ರೇಣ ನಿಕೃತಸ್ತವ ||6||
ಎಲೈ ಮಹಾರಾಜನೇ, ನಿನ್ನ ಪುತ್ರರಿಂದ ಮೋಸಗೊಳಿಸಲ್ಪಟ್ಟ ಮಹಾರಥನಾದ ಯುಧಿಷ್ಠಿರನು ಯುದ್ಧದಲ್ಲಿ ಗಜಸೇನೆಯನ್ನು ನಡೆಸಿದನು.
ಮಾದ್ರೀಪುತ್ರಸ್ತು ನಕುಲಃ ಶೂರಃ ಸಂಕ್ರಂದನೋ ಯುಧಿ |
ತ್ರಿಗರ್ತಾನಾಂ ರಥೋದಾರೈಃ ಸಮಸಜ್ಜತ ಪಾಂಡವಃ ||7||
ಶತ್ರುಗಳನ್ನು ರೋದಿಸುವಂತೆ ಮಾಡುವ ಅಥವಾ ಇಂದ್ರನಿಗೆ ಸಮಾನವಾದ ಪೌರುಷವುಳ್ಳ ಮಾದ್ರೀಪುತ್ರನಾದ ನಕುಲನು ಯುದ್ಧದಲ್ಲಿ ರಥಶ್ರೇಷ್ಠರಾದ ತ್ರಿಗರ್ತರ ಜೊತೆಯಲ್ಲಿ ಸೆಣಸಿದನು.
ಅಭ್ಯವರ್ತಂತ ದುರ್ಧರ್ಷಾಃ ಸಮರೇ ಸಾಲ್ವಕೇಕಯಾನ್ |
ಸಾತ್ಯಕಿಶ್ಚೇಕಿತಾನಶ್ಚ ಸೌಭದ್ರಶ್ಚ ಮಹಾರಥಃ ||8||
ಸೋಲಿಸಲು ಅಸಾಧ್ಯರಾದ, ಮಹಾರಥರಾದ ಸಾತ್ಯಕಿ, ಚೇಕಿತಾನ ಮತ್ತು ಅಭಿಮನ್ಯು ಇವರು ಯುದ್ಧದಲ್ಲಿ ಸಾಲ್ವರ ಮತ್ತು ಕೇಕಯರ ಮೇಲೆ ಎರಗಿದರು.
ಧೃಷ್ಟಕೇತುಶ್ಚ ಸಮರೇ ರಾಕ್ಷಸಶ್ಚ ಘಟೋತ್ಕಚಃ |
ಪುತ್ರಾಣಾಂ ತೇ ರಥಾನೀಕಂ ಪ್ರತ್ಯುದ್ಯಾತಾಃ ಸುದುರ್ಜಯಾಃ ||9||
ಜಯಿಸಲು ಅತ್ಯಂತ ಕಷ್ಟಸಾಧ್ಯರಾದ ಧೃಷ್ಟಕೇತುವೂ ಮತ್ತು ರಾಕ್ಷಸನಾದ ಘಟೋತ್ಕಚನೂ ನಿನ್ನ ಪುತ್ರರ ರಥಸಮೂಹದ ಮೇಲೆ

ಎರಗಿದರು.
ಸೇನಾಪತಿರಮೇಯಾತ್ಮಾ ಧೃಷ್ಟದ್ಯುಮ್ನೋ ಮಹಾಬಲಃ |
ದ್ರೋಣೇನ ಸಮರೇ ರಾಜನ್ ಸಮಿಯಾಯೇಂದ್ರಕರ್ಮಣಾ ॥10॥
ಸೇನಾಪತಿಯೂ, ಅಪಾರವಾದ ಪ್ರಯತ್ನದಿಂದ ಕೂಡಿದವನೂ, ಮಹಾಬಲನೂ ಆದ ಧೃಷ್ಟದ್ಯುಮ್ನನು ಎಲೈ ರಾಜನೇ, ಯುದ್ಧದಲ್ಲಿ ಶ್ರೇಷ್ಠ ಕರ್ಮವನ್ನು ಮಾಡುವ ದ್ರೋಣರ ಜೊತೆಯಲ್ಲಿ ಅವರಿಗೆ ಅಭಿಮುಖವಾಗಿ ಹೋದನು.
ಏವಮೇತೇ ಮಹೇಷ್ವಾಸಾಸ್ತಾವಕಾಃ ಪಾಂಡವೈಃ ಸಹ |
ಸಮೇತ್ಯ ಸಮರೇ ಶೂರಾಃ ಸಂಪ್ರಹಾರಂ ಪ್ರಚಕ್ರಿರೇ ॥11॥
ಮಹಾಧನುರ್ಧಾರಿಗಳೂ, ಶೂರರೂ ಆದ ನಿನ್ನವರು ಹೀಗೆ ಪಾಂಡವರ ಜೊತೆಯಲ್ಲಿ ಸಂಧಿಸಿ ಯುದ್ಧದಲ್ಲಿ ಪರಸ್ಪರ ಪ್ರಹಾರವನ್ನು ಮಾಡಿದರು.
ಮಧ್ಯಂದಿನಗತೇ ಸೂರ್ಯೇ ನಭಸ್ಯಾಕುಲತಾಂ ಗತೇ |
ಕುರವಃ ಪಾಂಡವೇಯಾಶ್ಚ ನಿಜಘ್ನುರಿತರೇತರಮ್ ॥12॥
ಸೂರ್ಯನು ದಿನದ ಮಧ್ಯದಲ್ಲಿ ಇರುತ್ತಿರಲು ಆಕಾಶವೆಲ್ಲವೂ ಆಕುಲವಾಗಿರಲು ಕೌರವರು ಮತ್ತು ಪಾಂಡವರು ಪರಸ್ಪರವಾಗಿ ಹೊಡೆದಾಡಿದರು.
ಧ್ವಜಿನೋ ಹೇಮಚಿತ್ರಾಂಗಾ ವಿಚರಂತೋ ರಣಾಜಿರೇ |
ಸಪತಾಕಾ ರಥಾ ರೇಜುರ್ವೈಯಾಘ್ರಪರಿವಾರಣಾಃ ॥13॥
ಧ್ವಜದಿಂದ ಕೂಡಿದ, ಸುವರ್ಣದಿಂದ ಅಲಂಕೃತವಾದ ಭಾಗಗಳನ್ನುಳ್ಳ, ಪತಾಕೆಗಳಿಂದ ಕೂಡಿದ, ವ್ಯಾಘ್ರಚರ್ಮದಿಂದ ಸುತ್ತಲೂ ಅಲಂಕಾರ ಮಾಡಲ್ಪಟ್ಟ ರಥಗಳು ರಣರಂಗದಲ್ಲಿ ಸಂಚರಿಸುತ್ತಾ ರಾರಾಜಿಸಿದವು.
ಸಮೇತಾನಾಂ ಚ ಸಮರೇ ಜಿಗೀಷೂಣಾಂ ಪರಸ್ಪರಮ್ |
ಬಭೂವ ತುಮುಲಃ ಶಬ್ದಃ ಸಿಂಹಾನಾಮಿವ ನರ್ದತಾಮ್ ॥14॥
ರಣರಂಗದಲ್ಲಿ ಒಟ್ಟಿಗೆ ಸೇರಿ ಪರಸ್ಪರವಾಗಿ ಗೆಲ್ಲುವ ಆಸೆಯುಳ್ಳ ಆ ಸೈನ್ಯಗಳಿಂದ ಸಿಂಹಗಳ ಗರ್ಜನೆಯಂತಿರುವ ತೀವ್ರವಾದ ಶಬ್ದವು ಉಂಟಾಯಿತು.
ತತ್ರಾದ್ಭುತಮಪಶ್ಯಾಮ ಸಂಪ್ರಹಾರಂ ಸುದಾರುಣಮ್ |
ಯಮಕುರ್ವನ್ ರಣೇ ವೀರಾಃ ಸೃಂಜಯಾಃ ಕುರುಭಿಃ ಸಹ ॥15॥
ವೀರರಾದ ಸೃಂಜಯರು ಮತ್ತು ಕುರುಗಳು ಸಹ ರಣರಂಗದಲ್ಲಿ ಮಾಡಿದ ಅತ್ಯಂತ ದಾರುಣವಾದ ಮತ್ತು ಅದ್ಭುತವಾದ ಪ್ರಹಾರಗಳನ್ನು ನಾವು ನೋಡಿದೆವು.
ನೈವ ಖಂ ನ ದಿಶೋ ರಾಜನ್ನ ಸೂರ್ಯಂ ಶತ್ರುತಾಪನ |
ವಿದಿಶೋ ವಾಪ್ಯಪಶ್ಯಾಮ ಶರೈರ್ಮುಕ್ತೈಃ ಸಮಂತತಃ ॥16॥
ಎಲೈ ರಾಜನೇ, ಎಲೈ ಶತ್ರುತಾಪನನೇ, ಎಲ್ಲ ಕಡೆಗಳಲ್ಲಿಯೂ ಪ್ರಯೋಗಿಸಲ್ಪಟ್ಟ ಬಾಣಗಳ ನಿಮಿತ್ತದಿಂದಾಗಿ ನಾವು ಆಕಾಶವನ್ನಾಗಲೀ, ದಿಕ್ಕುಗಳನ್ನಾಗಲೀ, ಸೂರ್ಯನನ್ನಾಗಲೀ, ವಿದಿಕ್ಕುಗಳನ್ನಾಗಲೀ ಕಾಣಲಿಲ್ಲ.
ಶಕ್ತೀನಾಂ ವಿಮಲಾಗ್ರಾಣಾಂ ತೋಮರಾಣಾಂ ತಥಾಸ್ಯತಾಮ್ |
ನಿಸ್ತ್ರಿಂಶಾನಾಂ ಚ ಪೀತಾನಾಂ ನೀಲೋತ್ಪಲನಿಭಾಃ ಪ್ರಭಾಃ ॥17॥
ಕವಚಾನಾಂ ವಿಚಿತ್ರಾಣಾಂ ಭೂಷಣಾನಾಂ ಪ್ರಭಾಸ್ತಥಾ |
ಖಂ ದಿಶಃ ಪ್ರದಿಶಶ್ಚೈವ ಭಾಸಯಾಮಾಸುರೋಜಸಾ |
ವಿರರಾಜ ತದಾ ರಾಜಂಸ್ತತ್ರತತ್ರ ರಣಾಂಗಣಮ್ ॥18॥
ಸ್ವಚ್ಛವಾದ ಅಲಬುಳ್ಳ ಶಕ್ತ್ಯಾಯುಧಗಳ, ಪ್ರಯೋಗಿಸಲ್ಪಡುವ ತೋಮರಗಳ, ನೀರು ಕುಡಿಸಿ ಹದಮಾಡಿದ ಖಡ್ಗಗಳಿಂದ ಹೊರಟ ನೀಲೋತ್ಪಲ ಸದೃಶವಾದ ಕಾಂತಿಗಳು; ಹಾಗೆಯೇ ವಿಚಿತ್ರವಾದ ಕವಚಗಳ ಮತ್ತು ಭೂಷಣಗಳ ಕಾಂತಿಗಳು ತಮ್ಮ ಸಾಮರ್ಥ್ಯದಿಂದ ಆಕಾಶವನ್ನೂ ದಿಕ್ಕು-ವಿದಿಕ್ಕುಗಳನ್ನೂ ಬೆಳಗಿದವು. ಎಲೈ ರಾಜನೇ, ಆಗ ರಣಾಂಗಣವು ಅಲ್ಲಲ್ಲಿ ಶೋಭಿಸಿತು.
ರಥಸಿಂಹಾಸನವ್ಯಾಘ್ರಾಃ ಸಮಾಯಾಂತಶ್ಚ ಸಂಯುಗೇ |
ವಿರೇಜುಃ ಸಮರೇ ರಾಜನ್ ಗ್ರಹಾ ಇವ ನಭಸ್ತಲೇ ॥19॥
ಎಲೈ ರಾಜನೇ, ಯುದ್ಧದಲ್ಲಿ ರಥಗಳು ಚಲಿಸುವಾಗ ಮುಂದೆ ಬರುವ ರಥಗಳು, ರಥಗಳ ಸಿಂಹಾಸನಗಳು ಮತ್ತು ವ್ಯಾಘ್ರಗಳು ಆಕಾಶದಲ್ಲಿರುವ ಗ್ರಹಗಳಂತೆ ವಿರಾಜಿಸಿದವು.
ಭೀಷ್ಮಸ್ತು ರಥಿನಾಂ ಶ್ರೇಷ್ಠೋ ಭೀಮಸೇನಂ ಮಹಾಬಲಮ್ |
ಅವಾರಯತ ಸಂಕ್ರುದ್ಧಃ ಸರ್ವಸೈನ್ಯಸ್ಯ ಪಶ್ಯತಃ ॥20॥
ರಥಿಕರಲ್ಲಿ ಶ್ರೇಷ್ಠರಾದ ಭೀಷ್ಮರಾದರೋ ಬಹಳ ಕೋಪಗೊಂಡು ಎಲ್ಲ ಸೈನ್ಯವೂ ನೋಡುತ್ತಿರುವಂತೆ ಮಹಾಬಲನಾದ ಭೀಮಸೇನನನ್ನು ನಿವಾರಿಸಿದರು.
ತತೋ ಭೀಷ್ಮವಿನಿರ್ಮುಕ್ತಾ ರುಗ್ಮಪುಂಖಾಃ ಶಿಲಾಶಿತಾಃ |
ಅಭ್ಯಘ್ನನ್ ಸಮರೇ ಭೀಮಂ ತೈಲಧೌತಾಃ ಸುತೇಜನಾಃ ॥21॥
ಆಗ ಭೀಷ್ಮರಿಂದ ಪ್ರಯೋಗಿಸಲ್ಪಟ್ಟ ಸುವರ್ಣಮಯವಾದ ಪುಂಖವುಳ್ಳ, ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ, ಎಣ್ಣೆಯಿಂದ ಮಸೆದು ಹೊಳಪನ್ನು ಹೊಂದಿದ, ಅತ್ಯಂತ ತೀಕ್ಷ್ಣವಾದ ಬಾಣಗಳು ರಣರಂಗದಲ್ಲಿ ಭೀಮನನ್ನು ಹೊಡೆದವು.
ತಸ್ಯ ಶಕ್ತಿಂ ಮಹಾವೇಗಾಂ ಭೀಮಸೇನೋ ಮಹಾಬಲಃ |

ಕ್ರುದ್ಧಾಶೀವಿಷಸಂಕಾಶಾಂ ಪ್ರೇಷಯಾಮಾಸ ಭಾರತ ॥22॥
ಎಲ್ಲೈ ಭಾರತನೇ, ಮಹಾಬಲನಾದ ಭೀಮಸೇನನು ಮಹಾವೇಗವುಳ್ಳ ಕೋಪಗೊಂಡ ಸರ್ಪದಂತಿರುವ ಶಕ್ತ್ಯಾಯುಧವನ್ನು ಭೀಷ್ಮರ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ರುಗ್ಮದಂಡಾಂ ದುರಾಸದಾಮ್ ।
ಚಿಚ್ಛೇದ ಸಮರೇ ಭೀಷ್ಮಃ ಶರೈಃ ಸನ್ನತಪರ್ವಭಿಃ ॥23॥
ತನ್ನ ಕಡೆಗೆ ಬರುತ್ತಿದ್ದ ಸುವರ್ಣಮಯವಾದ ಹಿಡಿಯನ್ನು ಹೊಂದಿದ, ಸಮೀಪ ಸುಳಿಯಲು ಅಸಾಧ್ಯವಾದ ಆ ಶಕ್ತ್ಯಾಯುಧವನ್ನು ಭೀಷ್ಮರು ಬಾಗಿದ ತುದಿಯುಳ್ಳ ಬಾಣಗಳಿಂದ ರಣಾಂಗಣದಲ್ಲಿ ಕತ್ತರಿಸಿದರು.
ತತೋಽಪರೇಣ ಭಲ್ಲೇನ ಪೀತೇನ ನಿಶಿತೇನ ಚ ।
ಕಾರ್ಮುಕಂ ಭೀಮಸೇನಸ್ಯ ದ್ವಿಧಾ ಚಿಚ್ಛೇದ ಭಾರತ ॥24॥
ಎಲ್ಲೈ ಭಾರತನೇ, ಅನಂತರ ನೀರನ್ನು ಕುಡಿಸಿ ಹದಮಾಡಿದ ತೀಕ್ಷ್ಣವಾದ ಇನ್ನೊಂದು ಭಲ್ಲದಿಂದ ಭೀಮಸೇನನ ಧನುಸ್ಸನ್ನು ಎರಡು ಭಾಗವಾಗಿ ಕತ್ತರಿಸಿದರು.
ಸಾತ್ಯಕಿಸ್ತು ತತಸ್ತೂರ್ಣಂ ಭೀಷ್ಮಮಾಸಾದ್ಯ ಸಂಯುಗೇ ।
ಶರೈರ್ಬಹುಭಿರಾನರ್ಚ್ಛತ್ ಪಿತರಂ ತೇ ಜನೇಶ್ವರ ॥25॥
ಎಲ್ಲೈ ಜನೇಶ್ವರನೇ, ಸಾತ್ಯಕಿಯಾದರೋ ರಣರಂಗದಲ್ಲಿ ಶೀಘ್ರವಾಗಿ ಭೀಷ್ಮರನ್ನು ಸಮೀಪಿಸಿ, ಅನೇಕ ಬಾಣಗಳಿಂದ ನಿನ್ನ ತಂದೆಯಾದ ಅವರನ್ನು ಪೀಡಿಸಿದನು.
ತತಃ ಸಂಧಾಯ ವೈ ತೀಕ್ಷ್ಣಂ ಶರಂ ಪರಮದಾರುಣಮ್ ।
ವಾರ್ಷ್ಣೇಯಸ್ಯ ರಥಾದ್ ಭೀಷ್ಮಃ ಪಾತಯಾಮಾಸ ಸಾರಥಿಮ್ ॥26॥
ಅನಂತರ ಭೀಷ್ಮರು ಪರಮದಾರುಣವಾದ, ತೀಕ್ಷ್ಣವಾದ ಒಂದು ಬಾಣವನ್ನು ಬಿಲ್ಲಿನಲ್ಲಿ ಹೂಡಿ ಸಾತ್ಯಕಿಯ ರಥದ ಸಾರಥಿಯನ್ನು ರಥದಿಂದ ಕೆಡವಿದರು.
ತಸ್ಯಾಶ್ವಾಃ ಪ್ರದ್ರುತಾ ರಾಜನ್ ನಿಹತೇ ರಥಸಾರಥೌ ।
ತೇನತೇನೈವ ಧಾವಂತಿ ಮನೋಮಾರುತರಂಹಸಃ ॥27॥
ಎಲ್ಲೈ ರಾಜನೇ, ರಥದ ಸಾರಥಿಯು ಕೊಲ್ಲಲ್ಪಡುತ್ತಿರಲು ಮನೋಮಾರುತ ವೇಗವುಳ್ಳ ಆ ರಥದ ಅಶ್ವಗಳು ಮನಸ್ಸಿಗೆ ಬಂದಂತೆ ಓಡಿಹೋದವು.
ತತಃ ಸರ್ವಸ್ಯ ಸೈನ್ಯಸ್ಯ ನಿಸ್ವನಸ್ತುಮುಲೋಽಭವತ್ ।
ಹಾಹಾಕಾರಶ್ಚ ಸಂಜಜ್ಞೇ ಪಾಂಡವಾನಾಂ ಮಹಾತ್ಮನಾಮ್ ॥28॥
ಆಗ ಮಹಾತ್ಮರಾದ ಪಾಂಡವರ ಎಲ್ಲ ಸೈನ್ಯದಲ್ಲಿ ತೀವ್ರವಾದ ನಾದವೂ, ಹಾಹಾಕಾರವೂ ಉಂಟಾಯಿತು.
ಅಭಿದ್ರವತ ಗೃಹ್ಣೀತ ಹಯಾನ್ ಯಚ್ಛತ ಧಾವತ ।
ಇತ್ಯಾಸೀತ್ ತುಮುಲಃ ಶಬ್ದೋ ಯುಯುಧಾನರಥಂ ಪ್ರತಿ ॥29॥
ಮುಂದೆ ನುಗ್ಗಿ, ಹಿಡಿಯಿರಿ, ಅಶ್ವಗಳನ್ನು ನಿಲ್ಲಿಸಿ, ಮುಂದೆ ಓಡಿ, ಇಂತಹ ತೀವ್ರವಾದ ಶಬ್ದಗಳು ಸಾತ್ಯಕಿಯ ರಥದ ಸುತ್ತಲೂ ಕೇಳಿಬರುತ್ತಿದ್ದವು.
ಏತಸ್ಮಿನ್ನೇವ ಕಾಲೇ ತು ಭೀಷ್ಮಃ ಶಾಂತನವಃ ಪುನಃ ।
ವ್ಯಹನತ್ ಪಾಂಡವೀಂ ಸೇನಾಮಾಸುರೀಮಿವ ವೃತ್ರಹಾ ॥30॥
ಈ ಕಾಲದಲ್ಲಿಯೇ ಶಂತನುಪುತ್ರರಾದ ಭೀಷ್ಮರು ಪುನಃ, ಇಂದ್ರನು ದಾನವ ಸೇನೆಯನ್ನು ಸಂಹರಿಸಿದಂತೆ ಪಾಂಡವರ ಸೈನ್ಯವನ್ನು ಸಂಹರಿಸಿದರು.
ತೇ ವಧ್ಯಮಾನಾ ಭೀಷ್ಮೇಣ ಪಾಂಚಾಲಾಃ ಸೋಮಕೈಃ ಸಹ ।
ಆರ್ಯಾಂ ಯುದ್ಧೇ ಮತಿಂ ಕೃತ್ವಾ ಭೀಷ್ಮಮೇವಾಭಿದುದ್ರುವುಃ ॥31॥
ಭೀಷ್ಮರಿಂದ ವಧಿಸಲ್ಪಡುತ್ತಿದ್ದರೂ ಸೋಮಕರಿಂದ ಕೂಡಿದ ಪಾಂಚಾಲರು ಯುದ್ಧದ ವಿಷಯದಲ್ಲಿ ಉದಾತ್ತವಾದ ಬುದ್ಧಿಯನ್ನು ಹೊಂದಿ ಭೀಷ್ಮರ ಮೇಲೆಯೇ ಎರಗುತ್ತಿದ್ದರು.
ಧೃಷ್ಟದ್ಯುಮ್ನಮುಖಾಶ್ಚಾಪಿ ಪಾರ್ಥಾಃ ಶಾಂತನವಂ ರಣೇ ।
ಅಭ್ಯಧಾವನ್ ಜಿಗೀಷಂತಸ್ತವ ಪುತ್ರಸ್ಯ ವಾಹಿನೀಮ್ ॥32॥
ಧೃಷ್ಟದ್ಯುಮ್ನನೇ ಮೊದಲಾದ ಎಲ್ಲ ಪಾಂಡವರೂ ನಿನ್ನ ಪುತ್ರನ ಸೈನ್ಯವನ್ನು ಜಯಿಸಲು ಬಯಸಿ ಯುದ್ಧದಲ್ಲಿ ಭೀಷ್ಮರ ಕಡೆಗೆ ಓಡಿದರು.
ತಥೈವ ತಾವಕಾ ರಾಜನ್ ಭೀಷ್ಮದ್ರೋಣಮುಖಾಃ ಪರಾನ್ ।
ಅಭ್ಯಧಾವಂತ ವೇಗೇನ ತತೋ ಯುದ್ಧಮವರ್ತತ ॥33॥
ಎಲ್ಲೈ ರಾಜನೇ, ಹಾಗೆಯೇ ನಿನ್ನವರಾದ ಭೀಷ್ಮ-ದ್ರೋಣ ಮೊದಲಾದವರು ವೇಗದಿಂದ ಪಾಂಡವರ ಕಡೆಗೆ ಓಡಿದರು. ಅನಂತರ ಯುದ್ಧವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *

ಅರವತ್ತೊಂಬತ್ತನೆಯ ಅಧ್ಯಾಯ
ಭೀಮ-ಅಶ್ವತ್ಥಾಮಾದಿಗಳ ಯುದ್ಧ.
ಸಂಜಯಃ
ವಿರಾಟೋಽಥ ತ್ರಿಭಿರ್ಬಾಣೈರ್ಭೀಷ್ಮಮಾರ್ಚ್ಛನ್ಮಹಾರಥಮ್ |
ವಿವ್ಯಾಧ ತುರಗಾಂಶ್ಚಾಸ್ಯ ತ್ರಿಭಿರ್ಬಾಣೈರ್ಮಹಾರಥಃ ||1||
ಸಂಜಯ ಅನಂತರ ವಿರಾಟನು ಮಹಾರಥರಾದ ಭೀಷ್ಮರ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದನು. ಮಹಾರಥನಾದ ವಿರಾಟನು ಮೂರು ಬಾಣಗಳಿಂದ ಭೀಷ್ಮರ ರಥದ ಕುದುರೆಗಳನ್ನು ಪೀಡಿಸಿದನು.
ತಂ ಪ್ರತ್ಯವಿಧ್ಯದ್ ದಶಭಿರ್ಭೀಷ್ಮಃ ಶಾಂತನವಃ ಶರೈಃ |
ರುಗ್ಮಪುಂಖೈರ್ಮಹೇಷ್ವಾಸಃ ಕೃತಹಸ್ತೋ ಮಹಾಬಲಃ ||2||
ಪಳಗಿದ ಹಸ್ತವುಳ್ಳವರೂ, ಮಹಾಬಲರೂ, ಮಹಾಧನುರ್ಧಾರಿಗಳೂ, ಶಂತನು ಪುತ್ರರೂ ಆದ ಭೀಷ್ಮರು ಅದಕ್ಕೆ ಪ್ರತಿಯಾಗಿ ವಿರಾಟನ ಮೇಲೆ ಚಿನ್ನದ ಪುಂಖವನ್ನು ಹೊಂದಿದ ಹತ್ತು ಬಾಣಗಳನ್ನು ಪ್ರಯೋಗಿಸಿದರು.
ದ್ರೌಣಿರ್ಗಾಂಡೀವಧನ್ವಾನಂ ಭೀಮಧನ್ವಾ ಮಹಾರಥಃ |
ಅವಿಧ್ಯದಿಷುಭಿಃ ಷಡ್ಭಿರ್ದೃಢಹಸ್ತಃ ಸ್ತನಾಂತರೇ ||3||
ಮಹಾರಥರೂ, ದೃಢವಾದ ಹಸ್ತವುಳ್ಳವರೂ, ಭಯಂಕರವಾದ ಧನುಸ್ಸುಳ್ಳವರೂ ಆದ ಅಶ್ವತ್ಥಾಮರು ಗಾಂಡೀವ ಧನುರ್ಧಾರಿಯಾದ ಅರ್ಜುನನಿಗೆ ಅವನ ಸ್ತನಗಳ ಮಧ್ಯದಲ್ಲಿ ಆರು ಬಾಣಗಳಿಂದ ಹೊಡೆದರು.
ಕಾರ್ಮುಕಂ ತಸ್ಯ ಚಿಚ್ಛೇದ ಫಲ್ಗುನಃ ಪರವೀರಹಾ |
ಅವಿಧ್ಯಚ್ಚ ಭೃಶಂ ತೀಕ್ಷ್ಣೈಃ ಪತ್ರಿಭಿಃ ಶತ್ರುಕರ್ಶನಃ ||4||
ಪರವೀರಘಾತಕನಾದ ಅರ್ಜುನನು ಅವರ ಧನುಸ್ಸನ್ನು ಕತ್ತರಿಸಿದನು. ಶತ್ರು ಕರ್ಶನನಾದ ಅವನು ಪತ್ರಗಳನ್ನು ಹೊಂದಿದ್ದ ತೀಕ್ಷ್ಣವಾದ ಬಾಣಗಳಿಂದ ಅಶ್ವತ್ಥಾಮರನ್ನು ಚೆನ್ನಾಗಿ ಪೀಡಿಸಿದನು.
ಸೋಽನ್ಯತ್ಕಾರ್ಮುಕಮಾದಾಯ ವೇಗವತ್ ಕ್ರೋಧಮೂರ್ಚ್ಛಿತಃ |
ಅಮೃಷ್ಯಮಾಣಃ ಪಾರ್ಥೇನ ಕಾರ್ಮುಕಚ್ಛೇದಮಾಹವೇ ||5||
ಅವಿಧ್ಯತ್ ಫಲ್ಗುನಂ ರಾಜನ್ ನವತ್ಯಾ ನಿಶಿತೈಃ ಶರೈಃ |
ವಾಸುದೇವಂ ಚ ಸಪ್ತತ್ಯಾ ವಿವ್ಯಾಧ ಪರಮೇಷುಭಿಃ ||6||
ಅರ್ಜುನನಿಂದ ರಣರಂಗದಲ್ಲಿ ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಕ್ರೋಧ ಮೂರ್ಛಿತರಾದ ಅಶ್ವತ್ಥಾಮರು ಅದನ್ನು ಸಹಿಸದೆ ವೇಗಶಾಲಿಯಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತೊಂಬತ್ತು ತೀಕ್ಷ್ಣವಾದ ಬಾಣಗಳಿಂದ ಅರ್ಜುನನನ್ನು ಹೊಡೆದರು. ಎಲೈ ರಾಜನೇ, ಅರ್ಜುನ ಸಾರಥಿಯಾದ ಕೃಷ್ಣನನ್ನೂ ಸಹ ಶ್ರೇಷ್ಠವಾದ ಎಪ್ಪತ್ತು ಬಾಣಗಳಿಂದ ಹೊಡೆದರು.
ತತಃ ಕ್ರೋಧಾಭಿತಾಮ್ರಾಕ್ಷಃ ಸಹ ಕೃಷ್ಣೇನ ಫಲ್ಗುನಃ |
ದೀರ್ಘಮುಷ್ಣಂ ಚ ನಿಃಶ್ವಸ್ಯ ಚಿಂತಯಿತ್ವಾ ಮುಹುರ್ಮುಹುಃ ||7||
ಧನುಃ ಪ್ರಪೀಡ್ಯ ವಾಮೇನ ಕರೇಣಾಮಿತ್ರಕರ್ಶನಃ |
ಗಾಂಡೀವಧನ್ವಾ ಸಂಕ್ರುದ್ಧಃ ಶಿತಾನ್ ಸನ್ನತಪರ್ವಣಃ |
ಜೀವಿತಾಂತಕರಾನ್ ಘೋರಾನ್ ಸಮಾದತ್ತ ಶಿಲೀಮುಖಾನ್ ||8||
ಆಗ ಕೃಷ್ಣನ ಜೊತೆಯಲ್ಲಿಯೇ ಕೋಪದಿಂದ ಕೆಂಪಾದ ಕಣ್ಣುಳ್ಳ ಅರ್ಜುನನು ದೀರ್ಘವೂ, ಉಷ್ಣವೂ ಆದ ಶ್ವಾಸವನ್ನು ಬಿಟ್ಟು ಪುನಃ ಪುನಃ ಆಲೋಚಿಸಿ, ಶತ್ರು ಕರ್ಶನನಾದ ಅವನು ಎಡಗೈಯಿಂದ ಧನುಸ್ಸನ್ನು ಚೆನ್ನಾಗಿ ಎಳೆದು ಬಾಗಿದ ತುದಿಯುಳ್ಳ, ತೀಕ್ಷ್ಣವಾದ, ಪ್ರಾಣಾಂತಕವಾದ, ಘೋರವಾದ ಬಾಣಗಳನ್ನು ಕೈಯಲ್ಲಿ ತೆಗೆದುಕೊಂಡನು.
ತೈಸ್ತೂರ್ಣಂ ಸಮರೇಽವಿಧ್ಯದ್ ದ್ರೌಣಿಂ ಬಲವತಾಂ ವರಮ್ |
ತಸ್ಯ ತೇ ಕವಚಂ ಭಿತ್ತ್ವಾ ಪಪುಃ ಶೋಣಿತಮಾಹವೇ ||9||
ಆ ಬಾಣಗಳಿಂದ ಅವನು ರಣರಂಗದಲ್ಲಿ ಬಲಿಷ್ಠರಲ್ಲಿ ಶ್ರೇಷ್ಠರಾದ ಅಶ್ವತ್ಥಾಮರನ್ನು ಹೊಡೆದನು. ಆ ಬಾಣಗಳು ಅಶ್ವತ್ಥಾಮರ ಕವಚವನ್ನು ಭೇದಿಸಿ ಅವರ ಶರೀರದಲ್ಲಿ ನಾಟಿ ರಕ್ತವನ್ನು ಕುಡಿದವು.
ನ ವಿವ್ಯಥೇ ಚ ನಿರ್ಭಿನ್ನೋ ದ್ರೌಣಿರ್ಗಾಂಡೀವಧನ್ವನಾ |
ತಥೈವ ಶರವರ್ಷಾಣಿ ಪ್ರತಿಮುಂಚನ್ನವಿಹ್ವಲಃ |
ತಸ್ಥೌ ಸ ಸಮರೇ ರಾಜಂಸ್ತ್ರಾತುಮಿಚ್ಛನ್ ಮಹಾವ್ರತಮ್ ||10||
ಎಲೈ ರಾಜನೇ, ಗಾಂಡೀವಧನುರ್ಧಾರಿಯಾದ ಅರ್ಜುನನಿಂದ ತೀವ್ರವಾಗಿ ಗಾಯಗೊಳಿಸಲ್ಪಟ್ಟ ಅಶ್ವತ್ಥಾಮರು ವ್ಯಥೆ ಪಡಲಿಲ್ಲ. ಯಾವ ಸಂಕಟವನ್ನೂ ಹೊಂದದೆ ಮೊದಲಿನಂತೆಯೇ ಬಾಣಗಳ ಮಳೆಯನ್ನು ಸುರಿಸುತ್ತಾ ಮಹಾವ್ರತರಾದ ಭೀಷ್ಮರನ್ನು ರಕ್ಷಿಸಲು ಇಚ್ಛಿಸಿ ಯುದ್ಧದಲ್ಲಿ ನಿಂತರು.
ತಸ್ಯ ತತ್ ಸುಮಹತ್ಕರ್ಮ ಶಶಂಸುಃ ಪುರುಷರ್ಷಭಾಃ |
ಯತ್ ಕೃಷ್ಣಾಭ್ಯಾಂ ಸಮೇತಾಭ್ಯಾಂ ನಾಪತ್ರಪತ ಸಂಯುಗೇ ||11||
ಕೃಷ್ಣಾರ್ಜುನರ ಜೊತೆಯಲ್ಲಿ ಸೆಣೆಸಿದರೂ ಯುದ್ಧದಲ್ಲಿ ಹಿಂಜರಿಯದ ಅವರ ಆ ಮಹಾಕಾರ್ಯವನ್ನು ಪುರುಷಶ್ರೇಷ್ಠರು ಪ್ರಶಂಸಿಸಿದರು.
ಸ ಹಿ ನಿತ್ಯಮನೀಕೇಷು ಯುಧ್ಯತೇಽಭಯಮಾಸ್ಥಿತಃ |
ಅಸ್ತ್ರಗ್ರಾಮಂ ಸ ಸಂಹಾರಂ ದ್ರೋಣಾತ್ ಪ್ರಾಪ್ಯ ಸುದುರ್ಲಭಮ್ ||

ಅತ್ಯಂತ ದುರ್ಲಭವಾದ ಅಸ್ತ್ರಸಮೂಹಗಳನ್ನು ಮತ್ತು ಅವುಗಳ ಸಂಹಾರವನ್ನು ದ್ರೋಣರಿಂದ ಪಡೆದ ಅಶ್ವತ್ಥಾಮರು ಸೈನ್ಯದ ಮಧ್ಯದಲ್ಲಿ ಯಾವಾಗಲೂ ನಿರ್ಭಯರಾಗಿ ನಿಂತು ಯುದ್ಧವನ್ನು ಮಾಡುತ್ತಾರೆ.
ಮಮಾಯಮಾಚಾರ್ಯಸುತೋ ದ್ರೋಣಸ್ಯಾತಿಪ್ರಿಯಃ ಸುತಃ |
ಬ್ರಾಹ್ಮಣಶ್ಚ ವಿಶೇಷೇಣ ಮಾನನೀಯೋ ಮಮೇತಿ ಚ ॥13॥
ಸಮಾಸ್ಥಾಯ ಮತಿಂ ವೀರೋ ಬೀಭತ್ಸುಃ ಶತ್ರುತಾಪನಃ |
ಕೃಪಾಂ ಚಕ್ರೇ ರಥಶ್ರೇಷ್ಠೋ ಭಾರದ್ವಾಜಸುತಂ ಪ್ರತಿ ॥14॥
ಇವರು ನನ್ನ ಗುರುಗಳಾದ ದ್ರೋಣರ ಪುತ್ರರು. ದ್ರೋಣರಿಗೆ ಅತ್ಯಂತ ಪ್ರಿಯರಾದವರು. ವಿಶೇಷವಾಗಿ ಬ್ರಾಹ್ಮಣರು. ನನ್ನಿಂದ ಗೌರವಿಸಲ್ಪಡಬೇಕಾದವರು ಎನ್ನುವ ಬುದ್ಧಿಯನ್ನು ತಳೆದು ವೀರನೂ, ಶತ್ರುತಾಪಕನೂ, ಶ್ರೇಷ್ಠ ಮಹಾರಥನೂ ಆದ ಅರ್ಜುನನು ದ್ರೋಣಪುತ್ರರಾದ ಅಶ್ವತ್ಥಾಮರ ಮೇಲೆ ಕೃಪೆಯನ್ನು ತೋರಿಸಿದನು.
ದ್ರೌಣಿಂ ತ್ಯಕ್ತ್ವಾ ತತೋ ಯುದ್ಧೇ ಕೌಂತೇಯಃ ಶತ್ರುತಾಪನಃ |
ಯುಯುಧೇ ತಾವಕಾನ್ ನಿಘ್ನನ್ ತ್ವರಮಾಣಃ ಪರಾಕ್ರಮೀ ॥15॥
ಆಗ ಶತ್ರುತಾಪನನೂ, ಪರಾಕ್ರಮಶಾಲಿಯೂ, ಕುಂತೀಪುತ್ರನೂ ಆದ ಅರ್ಜುನನು ರಣರಂಗದಲ್ಲಿ ಅಶ್ವತ್ಥಾಮರನ್ನು ಬಿಟ್ಟು ಶೀಘ್ರವಾಗಿ ನಿನ್ನ ಮಕ್ಕಳ ಮೇಲೆ ಬಾಣ ಪ್ರಯೋಗವನ್ನು ಮಾಡುತ್ತಾ ಯುದ್ಧವನ್ನು ಮಾಡಿದನು.
ದುರ್ಯೋಧನಸ್ತು ದಶಭಿರ್ಗಾರ್ಧ್ರಪತ್ರೈಃ ಶಿಲಾಶಿತೈಃ |
ಭೀಮಸೇನಂ ಮಹೇಷ್ವಾಸಂ ರುಗ್ಮಪುಂಖೈಃ ಸಮರ್ಪಯತ್ ॥16॥
ದುರ್ಯೋಧನನಾದರೋ ಗೃಧ್ರಪುಚ್ಛದ ಪತ್ರಗಳನ್ನು ಹೊಂದಿದ್ದ, ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ, ಚಿನ್ನದ ಹಿಂಭಾಗವುಳ್ಳ ಹತ್ತು ಬಾಣಗಳನ್ನು ಮಹಾಧನುರ್ಧಾರಿಯಾದ ಭೀಮಸೇನನ ಮೇಲೆ ಪ್ರಯೋಗಿಸಿದನು.
ಭೀಮಸೇನಸ್ತು ಸಂಕ್ರುದ್ಧಃ ಪರಾಸುಕರಣಂ ದೃಢಮ್ |
ಚಿತ್ರಂ ಕಾರ್ಮುಕಮಾದತ್ತ ಶರಾಂಶ್ಚ ನಿಶಿತಾನ್ದಶ ॥17॥
ಆಕರ್ಣಪ್ರಹಿತೈಸ್ತೀಕ್ಷ್ಣೈರ್ನಿಶಿತೈಸ್ತಿಗ್ಮತೇಜಿತೈಃ |
ಅವಿಧ್ಯತ್ ತೂರ್ಣಮವ್ಯಗ್ರಃ ಕುರುರಾಜಂ ಮಹೋರಸಿ ॥18॥
ಭೀಮಸೇನನಾದರೋ ಕೋಪಗೊಂಡು ಪರಪ್ರಾಣಾಪಹಾರಕವಾದ ದೃಢವೂ, ವಿಚಿತ್ರವೂ ಆದ ಬಿಲ್ಲನ್ನು ತೆಗೆದುಕೊಂಡು ಅದಕ್ಕೆ ಹತ್ತು ತೀಕ್ಷ್ಣವಾದ ಬಾಣಗಳನ್ನು ಹೂಡಿ ಹೆದೆಯನ್ನು ಕಿವಿಯವರೆಗೂ ಎಳೆದು ಅತ್ಯಂತ ಹರಿತವಾದ ಆ ಬಾಣಗಳಿಂದ ಕುರುರಾಜನಾದ ದುರ್ಯೋಧನನಿಗೆ ಅವನ ವಕ್ಷಸ್ಸ್ಥಲದಲ್ಲಿ ಶೀಘ್ರವಾಗಿ ಗುರಿಯ ಯಾವ ವ್ಯತ್ಯಾಸವೂ ಇಲ್ಲದೆ ಹೊಡೆದನು.
ತಸ್ಯ ಕಾಂಚನಸೂತ್ರಸ್ತು ಶರೈಃ ಪರಿವೃತೋ ಮಣಿಃ |
ರರಾಜೋರಸಿ ವೈ ಸೂರ್ಯೋ ಗ್ರಹೈರಿವ ಸಮಾವೃತಃ ॥19॥
ಅವನ ವಕ್ಷಸ್ಸ್ಥಲದಲ್ಲಿ ಧರಿಸಿದ್ದ ಸುವರ್ಣಮಯವಾದ ಸೂತ್ರದಿಂದ ಪೋಣಿಸಿದ ಸಣ್ಣ ಶರಗಳಿಂದ ಪರಿವೃತವಾದ ಮಣಿಯು ಗ್ರಹಗಳಿಂದ ಕೂಡಿದ ಸೂರ್ಯನಂತೆ ಶೋಭಿಸುತ್ತಿದ್ದಿತು.
ಪುತ್ರಸ್ತು ತವ ತೇಜಸ್ವೀ ಭೀಮಸೇನೇನ ತಾಡಿತಃ |
ನಾಮೃಷ್ಯತ ಯಥಾ ನಾಗಸ್ತಳಶಬ್ದಂ ಸಮೀರಿತಮ್ ॥20॥
ತೇಜಸ್ವಿಯಾದ ನಿನ್ನ ಪುತ್ರನಾದರೋ ಹೀಗೆ ಭೀಮಸೇನನಿಂದ ಹೊಡೆಯಲ್ಪಟ್ಟು ಹಸ್ತತಳಶಬ್ದವನ್ನು ಸಹಿಸದ ಗಜದಂತೆ ಆ ಪ್ರಹಾರವನ್ನು ಸಹಿಸಲಿಲ್ಲ.
ತತಃ ಶರೈರ್ಮಹಾರಾಜ ರುಗ್ಮಪುಂಖೈಃ ಶಿಲಾಶಿತೈಃ |
ಭೀಮಂ ವಿವ್ಯಾಧ ಸಂಕ್ರುದ್ಧಸ್ತ್ರಾಸಯಾನೋ ವರೂಥಿನೀಮ್ ॥21॥
ಎಲೈ ಮಹಾರಾಜನೇ, ಆಗ ಅವನು ಸುವರ್ಣಮಯವಾದ ಪುಂಖಗಳಿಂದ ಕೂಡಿದ್ದ, ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ ಬಾಣಗಳಿಂದ ಪಾಂಡವ ಸೈನ್ಯವನ್ನು ಹೆದರಿಸುತ್ತಾ ಕೋಪದಿಂದ ಭೀಮನ ಮೇಲೆ ಪ್ರಯೋಗಿಸಿದನು.
ತೌ ಯುಧ್ಯಮಾನೌ ಸಮರೇ ಭೃಶಮನ್ಯೋನ್ಯವಿಕ್ಷತೌ |
ಪುತ್ರೌ ತೇ ದೇವಸಂಕಾಶೌ ವ್ಯರೋಚೇತಾಂ ಮಹಾಬಲೌ ॥22॥
ರಣಾಂಗಣದಲ್ಲಿ ಯುದ್ಧವನ್ನು ಮಾಡುತ್ತಾ ಪರಸ್ಪರ ಪ್ರಹಾರದಿಂದ ಗಾಯಗೊಂಡ ಮಹಾಬಲರಾದ ನಿನ್ನ ಆ ಇಬ್ಬರು ಪುತ್ರರು ದೇವತೆಗಳಂತೆ ಕಂಗೊಳಿಸಿದರು.
ಚಿತ್ರಸೇನಂ ನರವ್ಯಾಘ್ರಂ ಸೌಭದ್ರಃ ಪರವೀರಹಾ |
ಅವಿಧ್ಯದ್ ದಶಭಿರ್ಬಾಣೈಃ ಪುರುಮಿತ್ರಂ ಚ ಸಪ್ತಭಿಃ ॥23॥
ಸತ್ಯವ್ರತಂ ಚ ಸಪ್ತತ್ಯಾ ವಿದ್ಧ್ವಾ ಶಕ್ರಸಮೋ ಯುಧಿ |
ನೃತ್ಯನ್ನಿವ ರಣೇ ವೀರ ಆರ್ತಿಂ ನಃ ಸಮಜೀಜನತ್ ॥24॥
ಸುಭದ್ರಾಪುತ್ರನಾದ ಮತ್ತು ಪರವೀರಘಾತಕನಾದ ಅಭಿಮನ್ಯುವು ನರವ್ಯಾಘ್ರನಾದ ಚಿತ್ರಸೇನನ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿ, ಪುರುಮಿತ್ರನ ಮೇಲೆ ಏಳು ಬಾಣಗಳನ್ನು ಪ್ರಯೋಗಿಸಿದನು. ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಅವನು ಯುದ್ಧದಲ್ಲಿ ಸತ್ಯವ್ರತನನ್ನು ಎಪ್ಪತ್ತು ಬಾಣಗಳಿಂದ ಪೀಡಿಸಿದನು. ಆ ವೀರನು ನರ್ತನವನ್ನು ಮಾಡುವವನಂತೆ ರಣಭೂಮಿಯಲ್ಲಿ ಸಂಚರಿಸಿ ನಮಗೆಲ್ಲರಿಗೂ ದುಃಖವನ್ನು ಉಂಟುಮಾಡಿದನು.
ತಂ ಪ್ರತ್ಯವಿಧ್ಯದ್ ದಶಭಿಶ್ಚಿತ್ರಸೇನಃ ಶಿಲೀಮುಖೈಃ |
ಸತ್ಯವ್ರತಶ್ಚ ನವಭಿಃ ಪುರುಮಿತ್ರಶ್ಚ ಸಪ್ತಭಿಃ ॥25॥

ಅದಕ್ಕೆ ಪ್ರತಿಯಾಗಿ ಅವನನ್ನು ಚಿತ್ರಸೇನನು ಶಿಲಾಮುಖವುಳ್ಳ ಹತ್ತು ಬಾಣಗಳಿಂದಲೂ, ಸತ್ಯವ್ರತನು ಒಂಬತ್ತು ಬಾಣಗಳಿಂದಲೂ, ಪುರುಮಿತ್ರನು ಏಳು ಬಾಣಗಳಿಂದಲೂ ಹೊಡೆದರು.
ಸಂವಿದ್ಧೋಽರಃಕ್ಷರನ್ ರಕ್ತಂ ಶತ್ರುಸಂವಾರಣಂ ಮಹತ್ |
ಚಿಚ್ಛೇದ ಚಿತ್ರಸೇನಸ್ಯ ಚಿತ್ರಂ ಕಾರ್ಮುಕಮಾರ್ಜುನಿಃ |
ಭಿತ್ತ್ವಾ ಚಾಸ್ಯ ತನುತ್ರಾಣಂ ಶರೇಣೋರಸ್ಯತಾಡಯತ್ ॥26॥
ಗಾಯಗೊಂಡ ವಕ್ಷಸ್ಸ್ಥಲದಿಂದ ರಕ್ತವು ಸುರಿಯುತ್ತಿದ್ದರೂ ಅರ್ಜುನ ಪುತ್ರನಾದ ಅಭಿಮನ್ಯುವು ಶತ್ರುಸಂಹಾರಕವೂ, ವಿಚಿತ್ರವೂ, ದೊಡ್ಡದೂ ಆದ ಚಿತ್ರಸೇನನ ಬಿಲ್ಲನ್ನು ಕತ್ತರಿಸಿದನು. ಬಾಣಗಳಿಂದ ಅವನ ಕವಚವನ್ನು ಕತ್ತರಿಸಿ, ಅವನ ವಕ್ಷಸ್ಸ್ಥಲಕ್ಕೆ ಹೊಡೆದನು.
ತತಸ್ತೇ ತಾವಕಾ ವೀರಾ ರಾಜಪುತ್ರಾ ಮಹಾರಥಾಃ |
ಸಮೇತ್ಯ ಯುಧಿ ಸಂರಬ್ಧಾ ವಿವ್ಯಧುರ್ನಿಶಿತೈಃ ಶರೈಃ |
ತಾಂಶ್ಚ ಸರ್ವಾನ್ ಶರೈಸ್ತೀಕ್ಷ್ಣೈರ್ಜಘಾನ ಪರಮಾಸ್ತ್ರವಿತ್ ॥27॥
ಆಗ ಮಹಾರಥರೂ, ವೀರರೂ, ನಿನ್ನ ಸೈನ್ಯಕ್ಕೆ ಸೇರಿದವರೂ ಆದ ರಾಜಪುತ್ರರು ರಣರಂಗದಲ್ಲಿ ಒಟ್ಟಾಗಿ ಕೋಪಗೊಂಡು, ತೀಕ್ಷ್ಣವಾದ ಬಾಣಗಳಿಂದ ಅವನನ್ನು ಹಿಂಸಿಸಿದರು. ಪರಮಾಸ್ತ್ರವೇತ್ತನಾದ ಅಭಿಮನ್ಯುವು ಅವರೆಲ್ಲರನ್ನೂ ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿದನು.
ತಸ್ಯ ದೃಷ್ಟ್ವಾ ತು ತತ್ಕರ್ಮ ಪರಿವವ್ರುಃ ಸುತಾಸ್ತವ |
ದಹಂತಂ ಸಮರೇ ಸೈನ್ಯಂ ತವ ಕಕ್ಷಂ ಯಥೋಲ್ಬಣಮ್ ॥28॥
ಅಪೇತಶಿಶಿರೇ ಕಾಲೇ ಸಮಿದ್ಧಮಿವ ಪಾವಕಃ |
ಅತ್ಯರೋಚತ ಸೌಭದ್ರಸ್ತವ ಸೈನ್ಯಾನಿ ಶಾತಯನ್ ॥29॥
ಬೇಸಿಗೆಯ ಕಾಲದಲ್ಲಿ ವನವನ್ನು ಸುಡುವ ಅಗ್ನಿಯಂತೆ ನಿನ್ನ ಸೈನ್ಯವನ್ನು ಸುಡುತ್ತಿದ್ದ ಅಭಿಮನ್ಯುವಿನ ಆ ಮಹತ್ಕರ್ಮವನ್ನು ನೋಡಿ ಆಗ ನಿನ್ನ ಪುತ್ರರು ಅವನನ್ನು ಸುತ್ತುವರಿದರು. ಸುಭದ್ರೆಯ ಪುತ್ರನಾದ ಅಭಿಮನ್ಯುವು ನಿನ್ನ ಸೈನ್ಯಗಳನ್ನು ನಾಶಪಡಿಸುತ್ತಾ ಬಹಳವಾಗಿ ಶೋಭಿಸಿದನು.
ತತ್ ತಸ್ಯ ಚರಿತಂ ದೃಷ್ಟ್ವಾ ಪೌತ್ರಸ್ತವ ವಿಶಾಂಪತೇ |
ಲಕ್ಷ್ಮಣೋಽಭ್ಯಪತತ್ ತೂರ್ಣಂ ಸಾತ್ವತೀಪುತ್ರಮಾಹವೇ ॥30॥
ಎಲೈ ರಾಜನೇ, ಅಭಿಮನ್ಯುವಿನ ಆ ಕರ್ಮವನ್ನು ನೋಡಿ ನಿನ್ನ ಪೌತ್ರನಾದ ಲಕ್ಷ್ಮಣನು ಶೀಘ್ರವಾಗಿ ರಣರಂಗದಲ್ಲಿ ಸುಭದ್ರಾ ಪುತ್ರನ ಮೇಲೆ ಎರಗಿದನು.
ಅಭಿಮನ್ಯುಸ್ತು ಸಂಕ್ರುದ್ಧೋ ಲಕ್ಷ್ಮಣಂ ಶುಭಲಕ್ಷಣಮ್ |
ವಿವ್ಯಾಧ ವಿಶಿಖೈಃ ಷಡ್ಭಿಃ ಸಾರಥಿಂ ಚ ತ್ರಿಭಿಃ ಶರೈಃ ॥31॥
ಕೋಪಗೊಂಡ ಅಭಿಮನ್ಯುವಾದರೋ ಶುಭಲಕ್ಷಣಗಳಿಂದ ಕೂಡಿದ ಲಕ್ಷ್ಮಣನ ಮೇಲೆ ಆರು ಬಾಣಗಳನ್ನು ಪ್ರಯೋಗಿಸಿ ಅವನ ಸಾರಥಿಯ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದನು.
ತಥೈವ ಲಕ್ಷ್ಮಣೋ ರಾಜನ್ ಸೌಭದ್ರಂ ನಿಶಿತೈಃ ಶರೈಃ |
ಅವಿಧ್ಯತ ಮಹಾರಾಜ ತದದ್ಭುತಮಿವಾಭವತ್ ॥32॥
ಎಲೈ ರಾಜನೇ, ಹಾಗೆಯೇ ಲಕ್ಷ್ಮಣನೂ ಸಹ ಅಭಿಮನ್ಯುವನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದನು. ಎಲೈ ಮಹಾರಾಜನೇ, ಆ ದೃಶ್ಯವು ಅದ್ಭುತವಾಗಿದ್ದಿತು.
ತಸ್ಯಾಶ್ವಾಂಶ್ಚತುರೋ ಹತ್ವಾ ಸಾರಥಿಂ ಚ ಮಹಾಬಲಃ |
ಅಭ್ಯದ್ರವತ ಸೌಭದ್ರೋ ಲಕ್ಷ್ಮಣಂ ನಿಶಿತೈಃ ಶರೈಃ ॥33॥
ಮಹಾಬಲನಾದ ಅಭಿಮನ್ಯುವು ಲಕ್ಷ್ಮಣನ ರಥದ ನಾಲ್ಕು ಅಶ್ವಗಳನ್ನು ಮತ್ತು ಸಾರಥಿಯನ್ನು ಕೊಂದು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಅವನ ಕಡೆಗೆ ಧಾವಿಸಿದನು.
ಹತಾಶ್ವೇ ತು ರಥೇ ತಿಷ್ಠನ್ ಲಕ್ಷ್ಮಣಃ ಪರವೀರಹಾ |
ಶಕ್ತಿಂ ಚಿಕ್ಷೇಪ ಸಂಕ್ರುದ್ಧಃ ಸೌಭದ್ರಸ್ಯ ರಥಂ ಪ್ರತಿ ॥34॥
ಅಶ್ವಗಳು ಹತವಾದ ರಥದಲ್ಲಿ ನಿಂತ ಪರವೀರಘಾತಕನಾದ ಲಕ್ಷ್ಮಣನು ಬಹಳ ಕೋಪಗೊಂಡು ಅಭಿಮನ್ಯುವಿನ ರಥದ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು.
ತಾಮಾಪತಂತೀಂ ಸಹಸಾ ಘೋರರೂಪಾಂ ದುರಾಸದಾಮ್ |
ಅಭಿಮನ್ಯುಃ ಶರೈಸ್ತೀಕ್ಷ್ಣೈಶ್ಚಿಚ್ಛೇದ ಭುಜಗೋಪಮಾಮ್ ॥35॥
ತನ್ನ ಕಡೆಗೆ ಸರ್ಪದಂತೆ ಬರುತ್ತಿದ್ದಂತಹ ಸಮೀಪದಲ್ಲಿ ಸುಳಿಯಲೂ ಅಸಾಧ್ಯವಾದ ಘೋರವಾದ ಆ ಶಕ್ತ್ಯಾಯುಧವನ್ನು ಅಭಿಮನ್ಯುವು ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿದನು.
ತತಃ ಸ್ವರಥಮಾರೋಪ್ಯ ಲಕ್ಷ್ಮಣಂ ಗೌತಮಸ್ತದಾ |
ಅಪೋವಾಹ ರಥೇನಾಜೌ ಸರ್ವಸೈನ್ಯಸ್ಯ ಪಶ್ಯತಃ ॥36॥
ಆಗ ಕೃಪಾಚಾರ್ಯರು ಲಕ್ಷ್ಮಣನನ್ನು ತಮ್ಮ ರಥದಲ್ಲಿ ಏರಿಸಿಕೊಂಡು ಸರ್ವ ಸೈನ್ಯವು ನೋಡುತ್ತಿರುವಂತೆಯೇ ಅವನನ್ನು ರಣರಂಗದಲ್ಲಿ ಬೇರೆ ಕಡೆಗೆ ಕರೆದುಕೊಂಡು ಹೋದರು.
ತತಃ ಸಮಾಕುಲೇ ತಸ್ಮಿನ್ ವರ್ತಮಾನೇ ಮಹಾಭಯೇ |

ಅಭ್ಯದ್ರುವನ್ ಜಿಘಾಂಸಂತಃ ಪರಸ್ಪರವಧೈಷಿಣಃ ॥37॥
ತಾವಕಾಶ್ಚ ಮಹೇಷ್ವಾಸಾಃ ಪಾಂಡವಾಶ್ಚ ಮಹಾರಥಾಃ |
ಜುಹ್ವಂತಃ ಸಮರೇ ಪ್ರಾಣಾನ್ ನಿಜಘ್ನುರಿತರೇತರಮ್ ॥38॥
ಆಗ ಮಹಾಭಯಂಕರವಾದ ಯುದ್ಧವು ತೀವ್ರಗೊಳ್ಳುತ್ತಿರಲು ಮಹಾಧನುರ್ಧಾರಿಗಳೂ, ಮಹಾರಥರೂ ಆದ ನಿನ್ನವರು ಮತ್ತು ಪಾಂಡವರು ಒಬ್ಬರನ್ನೊಬ್ಬರು ವಧೆ ಮಾಡಲು ಬಯಸಿ ಯುದ್ಧದಲ್ಲಿ ತಮ್ಮ ಪ್ರಾಣಗಳನ್ನು ಹೋಮ ಮಾಡುತ್ತಾ ಪರಸ್ಪರವಾಗಿ ಹೊಡೆದಾಡಿದರು.
ಮುಕ್ತಕೇಶಾ ವಿಕವಚಾ ವಿರಥಾಶ್ಚಿನ್ನಕಾರ್ಮುಕಾಃ |
ಬಾಹುಭಿಃ ಸಮಯುಧ್ಯಂತ ಸೃಂಜಯಾಃ ಕುರುಭಿಃ ಸಹ ॥39॥
ಕವಚಗಳನ್ನು ಕಳೆದುಕೊಂಡು, ರಥಗಳನ್ನೂ ಕಳೆದುಕೊಂಡು, ಬಿಲ್ಲುಗಳು ಕತ್ತರಿಸಲ್ಪಡುತ್ತಿರಲು ಸೃಂಜಯರು ಮತ್ತು ಕುರುಗಳು ಮುಕ್ತಕೇಶರಾಗಿ ಬಾಹುಗಳಿಂದ ಯುದ್ಧವನ್ನು ಮಾಡಿದರು.
ತತೋ ಭೀಷ್ಮೋ ಮಹಾಬಾಹುಃ ಪಾಂಡವಾನಾಂ ಮಹಾತ್ಮನಾಮ್ |
ಸೇನಾಂ ಜಘಾನ ಸಂಕ್ರುದ್ಧೋ ದಿವ್ಯೈರಸ್ತ್ರೈರ್ಮಹಾಬಲಃ ॥40॥
ಆಗ ಮಹಾಬಾಹುವೂ ಮತ್ತು ಮಹಾಬಲರೂ ಆದ ಭೀಷ್ಮರು ಮಹಾತ್ಮರಾದ ಪಾಂಡವರ ಸೈನ್ಯವನ್ನು ಬಹಳ ಕೋಪಗೊಂಡು ತಮ್ಮ ದಿವ್ಯಾಸ್ತ್ರಗಳಿಂದ ಹೊಡೆದರು.
ಹತೈರಶ್ವೈರ್ಗಜೈಸ್ತತ್ರ ನರೈರಶ್ವೈಶ್ಚ ಪಾತಿತೈಃ |
ರಥಿಭಿಃ ಸಾದಿಭಿಶ್ಚೈವ ಸಮಾಸ್ತೀರ್ಯತ ಮೇದಿನೀ ॥41॥
ಆ ರಣಭೂಮಿಯು ಹತವಾದ ಅಶ್ವಗಳಿಂದಲೂ, ಗಜಗಳಿಂದಲೂ, ಕೆಳಗೆ ಉರುಳಿದ ಯೋಧರಿಂದಲೂ, ರಥಿಕರಿಂದಲೂ, ಅಶ್ವಾರೋಹಿಗಳಿಂದಲೂ ಹರಡಲ್ಪಟ್ಟಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕೋನತ್ರಿಂಶತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಅರವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತನೆಯ ಅಧ್ಯಾಯ
ಭೂರಿಶ್ರವನಿಂದ ಸಾತ್ಯಕಿಯ ಹತ್ತು ಪುತ್ರರ ವಧೆ. ಭೀಷ್ಮರಿಂದ ಸೈನ್ಯಾವಹಾರ.
ಸಂಜಯಃ
ಅಥ ರಾಜನ್ ಮಹಾಬಾಹುಃ ಸಾತ್ಯಕಿರ್ಯುದ್ಧದುರ್ಮದಃ |
ವಿಕೃಷ್ಯ ಚಾಪಂ ಸಮರೇ ಭಾರಸಾಧನಮುತ್ತಮಮ್ ॥1॥
ಪ್ರಾಮುಂಚತ್ ಪುಂಖಸಂಯುಕ್ತಾನ್ ಶರಾನಾಶೀವಿಷೋಪಮಾನ್ |
ಪ್ರಕಾಶಂ ಲಘು ಚಿತ್ರಂ ಚ ದರ್ಶಯನ್ನಸ್ತ್ರಲಾಘವಮ್ ॥2॥
ಸಂಜಯ ಎಲೈ ರಾಜನೇ, ಅನಂತರ ಯುದ್ಧದುರ್ಮದನೂ, ಮಹಾಬಾಹುವೂ ಆದ ಸಾತ್ಯಕಿಯು ರಣರಂಗದಲ್ಲಿ ಶ್ರೇಷ್ಠವಾದ ಮತ್ತು ಮಹತ್ಕಾರ್ಯ ಸಾಧಕವಾದ ತನ್ನ ಬಿಲ್ಲನ್ನು ಬಲವಾಗಿ ಎಳೆದು ತನ್ನ ಅಸ್ತ್ರಕೌಶಲವನ್ನು ತೋರಿಸುತ್ತಾ ಕ್ಷಿಪ್ರವಾಗಿ, ವಿಚಿತ್ರವಾಗಿ ಮತ್ತು ಗಾಢವಾಗಿ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ತಸ್ಯ ವಿಕ್ಷಿಪತಶ್ಚಾಪಂ ಶರಾನನ್ಯಾಂಶ್ಚ ಮುಂಚತಃ |
ಆದದಾನಸ್ಯ ಭೂಯಶ್ಚ ಸಂದಧಾನಸ್ಯ ಚಾಪರಾನ್ ॥3॥
ಕ್ಷಿಪತಶ್ಚ ಶರಾನಸ್ಯ ರಣೇ ಶತ್ರೂನ್ ವಿನಿಘ್ನತಃ |
ದದೃಶೇ ರೂಪಮತ್ಯರ್ಥಂ ಮೇಘಸ್ಯೇವ ಪ್ರವರ್ಷತಃ ॥4॥
ಧನುಸ್ಸನ್ನು ಎಳೆಯುವ, ಬಾಣಗಳನ್ನು ಪ್ರಯೋಗಿಸುವ, ಪುನಃ ಬಾಣಗಳನ್ನು ಭತ್ತಳಿಕೆಯಿಂದ ತೆಗೆದುಕೊಳ್ಳುವ, ಆ ಬಾಣಗಳನ್ನು ಧನುಸ್ಸಿನಲ್ಲಿ ಹೂಡುವ ಮತ್ತು ಆ ಬಾಣಗಳನ್ನು ರಣರಂಗದಲ್ಲಿ ಪ್ರಯೋಗಿಸಿ ಶತ್ರುಗಳನ್ನು ಕೊಲ್ಲುವ ಅವನ ರೂಪವು ಮಳೆಯನ್ನು ಸುರಿಸುವ ಮೇಘದ ರೂಪದಂತೆ ಇದ್ದಿತು.
ತಮುದೀರ್ಯಂತಮಾಲೋಕ್ಯ ರಾಜಾ ದುರ್ಯೋಧನಸ್ತತಃ |
ರಥಾನಾಮಯುತಂ ತಸ್ಯ ಪ್ರೇಷಯಾಮಾಸ ಭಾರತ ॥5॥
ಎಲೈ ಭಾರತನೇ, ಯುದ್ಧದಲ್ಲಿ ವಿಜೃಂಭಿಸುವ ಅವನನ್ನು ನೋಡಿ ನಿನ್ನ ಪುತ್ರನಾದ ದುರ್ಯೋಧನನು ಅವನನ್ನು ಎದುರಿಸಲು ಹತ್ತು ಸಾವಿರ ರಥಗಳನ್ನು ಅವನ ಕಡೆಗೆ ಕಳುಹಿಸಿದನು.
ತಾಂಸ್ತು ಸರ್ವಾನ್ ಮಹೇಷ್ವಾಸಾನ್ ಸಾತ್ಯಕಿಃ ಸತ್ಯವಿಕ್ರಮಃ |
ಜಘಾನ ಪರಮೇಷ್ವಾಸೋ ದಿವ್ಯೇನಾಸ್ತ್ರೇಣ ವೀರ್ಯವಾನ್ ॥6॥
ಮಹಾಪರಾಕ್ರಮಶಾಲಿಯಾದ, ಮಹಾವೀರನಾದ, ಶ್ರೇಷ್ಠ ಧನುಸ್ಸನ್ನು ಧರಿಸಿದ ಸಾತ್ಯಕಿಯು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಅವರೆಲ್ಲರನ್ನೂ ವಧೆ ಮಾಡಿದನು.
ಸ ಕೃತ್ವಾ ದಾರುಣಂ ಕರ್ಮ ಪ್ರಗೃಹೀತಶರಾಸನಃ |
ಆಸಸಾದ ತತೋ ವೀರೋ ಭೂರಿಶ್ರವಸಮಾಹವೇ ॥7॥

ವೀರನಾದ ಅವನು ಇಂತಹ ಘೋರವಾದ ಕಾರ್ಯವನ್ನು ಮಾಡಿ ಕೈಯಲ್ಲಿ ಧನುಸ್ಸನ್ನು ಹಿಡಿದು ರಣರಂಗದಲ್ಲಿ ಭೂರಿಶ್ರವನನ್ನು ಸಮೀಪಿಸಿದನು.
ಸ ಹಿ ಸಂದೃಶ್ಯ ಸೇನಾಂ ತಾಂ ಯುಯುಧಾನೇನ ಪಾತಿತಾಮ್ |
ಅಭ್ಯಧಾವತ ಸಂಕ್ರುದ್ಧಃ ಕುರೂಣಾಂ ಕೀರ್ತಿವರ್ಧನಃ ||8||
ಕುರುವಂಶದ ಕೀರ್ತಿವರ್ಧನನಾದ ಭೂರಿಶ್ರವನು ಸಾತ್ಯಕಿಯಿಂದ ಹತವಾದ ಆ ಸೈನ್ಯವನ್ನು ನೋಡಿ ಸಾತ್ಯಕಿಯ ಕಡೆಗೆ ಕ್ರೋಧದಿಂದ ವೇಗವಾಗಿ ಸಾಗಿದನು.
ಇಂದ್ರಾಯುಧಸವರ್ಣಂ ತತ್ ಸ ವಿಸ್ಫಾರ್ಯ ಮಹದ್ಧನುಃ |
ವ್ಯಸೃಜದ್ ವಜ್ರಸಂಕಾಶಾನ್ ಶರಾನಾಶೀವಿಷೋಪಮಾನ್ |
ಸಹಸ್ರಶೋ ಮಹಾರಾಜ ದರ್ಶಯನ್ ಪಾಣಿಲಾಘವಮ್ ||9||
ಎಲೈ ಮಹಾರಾಜನೇ, ಭೂರಿಶ್ರವನು ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಾಂತಿಯನ್ನು ಹೊಂದಿದ ದೊಡ್ಡ ಧನುಸ್ಸನ್ನು ಎಳೆಯುತ್ತಾ ತನ್ನ ಹಸ್ತಲಾಘವವನ್ನು ತೋರಿಸುತ್ತಾ ವಜ್ರಾಯುಧದಂತಿದ್ದ, ಸರ್ಪಗಳಂತಿದ್ದ ಸಹಸ್ರಾರು ಸಂಖ್ಯೆಯ ಬಾಣಗಳನ್ನು ಪ್ರಯೋಗಿಸಿದನು.
ಶರಾಂಸ್ತಾನ್ ಮೃತ್ಯುಸಂಸ್ಪರ್ಶಾನ್ ಸಾತ್ಯಕೇಸ್ತು ಪದಾನುಗಾಃ |
ನ ವಿಷೇಹುಸ್ತದಾ ರಾಜನ್ ದುದ್ರುವುಸ್ತೇ ಸಮಂತತಃ |
ವಿಹಾಯ ಸಮರೇ ರಾಜನ್ ಸಾತ್ಯಕಿಂ ಯುದ್ಧದುರ್ಮದಮ್ ||10||
ಎಲೈ ರಾಜನೇ, ಮೃತ್ಯುವಿನಂತಿದ್ದ ಆ ಬಾಣಗಳನ್ನು ಸಾತ್ಯಕಿಯ ಅನುಯಾಯಿಗಳು ಸಹಿಸಲು ಸಾಧ್ಯವಾಗಲಿಲ್ಲ. ರಾಜನೇ, ಅವರು ರಣರಂಗದಲ್ಲಿ ಯುದ್ಧ ದುರ್ಮದನಾದ ಸಾತ್ಯಕಿಯನ್ನು ಬಿಟ್ಟು ಎಲ್ಲ ದಿಕ್ಕುಗಳಲ್ಲಿಯೂ ಓಡಿಹೋದರು.
ತಂ ದೃಷ್ಟ್ವಾ ಯುಯುಧಾನಸ್ಯ ಸುತಾ ದಶ ಮಹಾಬಲಾಃ |
ಮಹಾರಥಾಃ ಸಮಾಖ್ಯಾತಾಶ್ಚಿತ್ರವರ್ಮಾಯುಧಧ್ವಜಾಃ ||11||
ಸಮಾಸಾದ್ಯ ಮಹೇಷ್ವಾಸಂ ಭೂರಿಶ್ರವಸಮಾಹವೇ |
ಊಚುಃ ಸರ್ವೇ ಸುಸಂರಬ್ಧಾ ಯೂಪಕೇತುಂ ಮಹಾರಣೇ ||12||
ಅದನ್ನು ನೋಡಿ ಮಹಾಬಲರೂ, ಮಹಾರಥರೆಂದು ಪ್ರಸಿದ್ಧರಾದವರೂ, ವಿಚಿತ್ರವಾದ ಕವಚ, ಆಯುಧ ಮತ್ತು ಧ್ವಜಗಳನ್ನು ಹೊಂದಿದವರೂ ಆದ ಸಾತ್ಯಕಿಯ ಹತ್ತು ಪುತ್ರರು ಆ ಮಹಾಯುದ್ಧದಲ್ಲಿ ಮಹಾಧನುರ್ಧಾರಿಯಾದ ಯೂಪಧ್ವಜನಾದ ಭೂರಿಶ್ರವನನ್ನು ಸಮೀಪಿಸಿ ಎಲ್ಲರೂ ಕೋಪಗೊಂಡು ಅವನನ್ನು ಕುರಿತು ಹೇಳಿದರು.
ಭೋ ಭೋ ಕೌರವದಾಯಾದ ಸಹಾಸ್ಮಾಭಿರ್ಮಹಾಬಲ |
ಏಹಿ ಯುಧ್ಯಸ್ವ ಸಂಗ್ರಾಮೇ ಸಮಸ್ತೈಃ ಪೃಥಗೇವ ವಾ ||13||
ಎಲೈ ಕೌರವ ದಾಯಾದನೇ, ಮಹಾಬಲನೇ, ನಮ್ಮ ಜೊತೆಯಲ್ಲಿ ಯುದ್ಧಕ್ಕೆ ಬಾ. ನಮ್ಮಲ್ಲಿ ಒಬ್ಬೊಬ್ಬರ ಜೊತೆಯಲ್ಲಿ ಅಥವಾ ಎಲ್ಲರ ಜೊತೆಯಲ್ಲಿ ಒಟ್ಟಿಗೆ ಯುದ್ಧವನ್ನು ಮಾಡುವವನಾಗು.
ಅಸ್ಮಾನ್ ವಾ ತ್ವಂ ಪರಾಜಿತ್ಯ ಯಶಃ ಪ್ರಾಪ್ನುಹಿ ಸಂಯುಗೇ |
ವಯಂ ವಾ ತ್ವಾಂ ಪರಾಜಿತ್ಯ ಪ್ರೀತಿಂ ದಾಸ್ಯಾಮಹೇ ಪಿತುಃ ||14||
ಯುದ್ಧದಲ್ಲಿ ನಮ್ಮನ್ನಾದರೂ ಸೋಲಿಸಿ ನೀನು ಕೀರ್ತಿಯನ್ನು ಪಡೆಯುವವನಾಗು ಅಥವಾ ನಾವಾದರೂ ನಿನ್ನನ್ನು ಸೋಲಿಸಿ ನಮ್ಮ ತಂದೆಗೆ ಸಂತೋಷವನ್ನು ಉಂಟುಮಾಡುವೆವು.
ಏವಮುಕ್ತಸ್ತದಾ ಶೂರೈಸ್ತಾನುವಾಚ ಮಹಾಬಲಃ |
ವೀರ್ಯಶ್ಲಾಘೀ ನರಶ್ರೇಷ್ಠಸ್ತಾನ್ ದೃಷ್ಟ್ವಾ ಸಮುಪಸ್ಥಿತಾನ್ ||15||
ಹೀಗೆ ಆ ಶೂರರಿಂದ ಹೇಳಲ್ಪಟ್ಟ ಮಹಾಬಲನೂ, ಪರಾಕ್ರಮವನ್ನು ಪ್ರಶಂಸಿಸುವವನೂ, ನರಶ್ರೇಷ್ಠನೂ ಆದ ಭೂರಿಶ್ರವನು ಸಾತ್ಯಕಿಯ ಪುತ್ರರು ತನ್ನನ್ನು ಸಮೀಪಿಸಿರುವುದನ್ನು ನೋಡಿ ಅವರಿಗೆ ಹೇಳಿದನು.
ಸಾಧ್ವಿದಂ ಕಥ್ಯತೇ ವೀರಾ ಯದೇವಂ ಮತಿರದ್ಯ ವಃ |
ಯುಧ್ಯಧ್ವಂ ಸಹಿತಾ ಯತ್ತಾ ನಿಹನಿಷ್ಯಾಮಿ ವೋ ರಣೇ ||16||
ಎಲೈ ವೀರರೇ, ಇಂತಹ ಒಳ್ಳೆಯ ಮಾತುಗಳನ್ನು ಆಡುತ್ತಿರುವುದರಿಂದ ಈ ದಿನ ನಿಮ್ಮ ಬುದ್ಧಿಯು ಸರಿಯಾಗಿದೆ. ಎಲ್ಲರೂ ಎಚ್ಚರಿಕೆಯಿಂದ ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿ. ಯುದ್ಧದಲ್ಲಿ ನಾನು ನಿಮ್ಮನ್ನು ಕೊಲ್ಲುವೆನು.
ಏವಮುಕ್ತಾ ಮಹೇಷ್ವಾಸಾಸ್ತೇ ವೀರಾಃ ಕ್ಷಿಪ್ರಕಾರಿಣಃ |
ಮಹತಾ ಶರವರ್ಷೇಣ ಅಭ್ಯವರ್ಷನ್ನರಿಂದಮಮ್ ||17||
ಹೀಗೆ ಹೇಳಲ್ಪಟ್ಟ ಮಹಾಧನುರ್ಧಾರಿಗಳೂ, ವೀರರೂ, ಕ್ಷಿಪ್ರಹಸ್ತರೂ ಆದ ಸಾತ್ಯಕಿಯ ಪುತ್ರರು ಅರಿಂದಮನಾದ ಭೂರಿಶ್ರವನ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಸುರಿಸಿದರು.
ಅಪರಾಹ್ಣೇ ಮಹಾರಾಜ ಸಂಗ್ರಾಮಸ್ತುಮುಲೋಽಭವತ್ |
ಏಕಸ್ಯ ಚ ಬಹೂನಾಂ ಚ ಸಮೇತಾನಾಂ ರಣಾಜಿರೇ ||18||
ಎಲೈ ಮಹಾರಾಜನೇ, ರಣರಂಗದಲ್ಲಿ ಒಬ್ಬನಿಗೂ ಮತ್ತು ಅನೇಕರಿಗೂ ಪರಸ್ಪರವಾಗಿ ಎದುರಿಸಿ ನಡೆದ ಯುದ್ಧವು ಮಧ್ಯಾಹ್ನ ಕಾಲದಲ್ಲಿ ತೀವ್ರಗೊಂಡಿತು.
ತಮೇಕಂ ರಥಿನಾಂ ಶ್ರೇಷ್ಠಂ ಶರವರ್ಷೈರವಾಕಿರನ್ |
ಪ್ರಾವೃಷೀವ ಮಹಾಶೈಲಂ ಸಿಷಿಚುರ್ಜಲದಾ ನೃಪ ||19||

ಎಲೈ ರಾಜನೇ, ಮಳೆಗಾಲದಲ್ಲಿ ಮೋಡಗಳು ದೊಡ್ಡ ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ರಥಿಶ್ರೇಷ್ಠನಾದ ಭೂರಿಶ್ರವನೊಬ್ಬನ ಮೇಲೆ ಸಾತ್ಯಕಿಯ ಪುತ್ರರು ಬಾಣಗಳ ಮಳೆಯನ್ನು ಸುರಿಸಿದರು.
ತೈಸ್ತು ಮುಕ್ತಾನ್ ಶರೌಘಾಂಸ್ತಾನ್ ಯಮದಂಡಾಶನಿಪ್ರಭಾನ್ |
ಅಸಂಪ್ರಾಪ್ತಾನಸಂಪ್ರಾಪ್ತಾಂಶ್ಚಿಚ್ಚೇದಾಶು ಮಹಾರಥಃ ॥20॥
ಮಹಾರಥನಾದ ಭೂರಿಶ್ರವನು ಅವರು ಪ್ರಯೋಗಿಸಿದ ಯಮದಂಡವನ್ನು ಮತ್ತು ಇಂದ್ರನ ವಜ್ರಾಯುಧವನ್ನು ಹೋಲುವ ಆ ಬಾಣಗಳ ಸಮೂಹಗಳನ್ನು ತನ್ನ ಸಮೀಪಕ್ಕೆ ಬರುವುದಕ್ಕಿಂತ ಮೊದಲೇ ಶೀಘ್ರವಾಗಿ ಕತ್ತರಿಸಿದನು.
ತತ್ರಾದ್ಭುತಮಪಶ್ಯಾಮ ಸೌಮದತ್ತೇಃ ಪರಾಕ್ರಮಮ್ |
ಯದೇಕೋ ಬಹುಭಿರ್ಯುದ್ಧೇ ಸಮಸಜ್ಜದಭೀತವತ್ ॥21॥
ಒಬ್ಬನೇ ರಣರಂಗದಲ್ಲಿ ನಿರ್ಭಯನಾಗಿ ಅನೇಕರ ಜೊತೆಯಲ್ಲಿ ಸೆಣಸಾಡಿದ ಭೂರಿಶ್ರವನ ಅದ್ಭುತವಾದ ಪರಾಕ್ರಮವನ್ನು ನಾವು ಅಲ್ಲಿ ನೋಡಿದೆವು.
ವಿಸೃಜ್ಯ ಶರವೃಷ್ಟಿಂ ತಾಂ ದಶ ರಾಜನ್ ಮಹಾರಥಾಃ |
ಪರಿವಾರ್ಯ ಮಹಾಬಾಹುಂ ನಿಹಂತುಮುಪಚಕ್ರಮುಃ ॥22॥
ಎಲೈ ರಾಜನೇ, ಮಹಾರಥರಾದ ಆ ಹತ್ತು ಸಾತ್ಯಕಿಯ ಪುತ್ರರು ಮಹಾಬಾಹುವಾದ ಭೂರಿಶ್ರವನನ್ನು ಸುತ್ತುವರಿದು ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಅವನನ್ನು ಕೊಲ್ಲಲು ಉದ್ಯುಕ್ತರಾದರು.
ಸೌಮದತ್ತಿಸ್ತತಃ ಕ್ರುದ್ಧಸ್ತೇಷಾಂ ಚಾಪಾನಿ ಭಾರತ |
ಚಿಚ್ಛೇದ ದಶಭಿರ್ಬಾಣೈರ್ನಿಮೇಷೇಣ ಮಹಾರಥಃ ॥23॥
ಎಲೈ ಭಾರತನೇ, ಆಗ ಸೋಮದತ್ತನ ಮಗನಾದ ಮಹಾರಥನಾದ ಭೂರಿಶ್ರವನು ಕೋಪಗೊಂಡು ಹತ್ತುಬಾಣಗಳನ್ನು ಪ್ರಯೋಗಿಸಿ ಅವರ ಧನುಸ್ಸುಗಳನ್ನು ಕತ್ತರಿಸಿದನು.
ಅಥೈಷಾಂ ಛಿನ್ನಧನುಷಾಂ ಭಲ್ಲೈಃ ಸನ್ನತಪರ್ವಭಿಃ |
ಚಿಚ್ಛೇದ ಸಮರೇ ರಾಜನ್ ಶಿರಾಂಸಿ ನಿಶಿತೈಃ ಶರೈಃ |
ತೇ ಹತಾ ನ್ಯಪತನ್ ಭೂಮೌ ವಜ್ರಭಗ್ನಾ ಇವ ದ್ರುಮಾಃ ॥24॥
ಅನಂತರ ಅವನು ಬಾಗಿದ ತುದಿಯುಳ್ಳ ಭಲ್ಲಗಳನ್ನು ತೆಗೆದುಕೊಂಡು ಎಲೈ ರಾಜನೇ, ತಮ್ಮ ಧನುಸ್ಸುಗಳು ಕತ್ತರಿಸಲ್ಪಟ್ಟಿದ್ದ ಅವರ ಶಿರಸ್ಸನ್ನು ಕತ್ತರಿಸಿದನು. ಎಲೈ ರಾಜನೇ, ಹರಿತವಾದ ಬಾಣಗಳಿಂದ ಹೊಡೆಯಲ್ಪಟ್ಟ ಅವರು ಸಿಡಿಲು ಎರಗಿದ ವೃಕ್ಷಗಳಂತೆ ಭೂಮಿಯ ಮೇಲೆ ಸತ್ತುಬಿದ್ದರು.
ತಾನ್ ದೃಷ್ಟ್ವಾ ನಿಹತಾನ್ ವೀರಾನ್ ರಣೇ ಪುತ್ರಾನ್ ಮಹಾಬಲಾನ್|
ವಾರ್ಷ್ಣೇಯೋ ವಿನದನ್ ರಾಜನ್ ಭೂರಿಶ್ರವಸಮಭ್ಯಯಾತ್ ॥25॥
ವೀರರೂ, ಮಹಾಬಲರೂ ಆದ ತನ್ನ ಪುತ್ರರು ಯುದ್ಧದಲ್ಲಿ ಹತರಾದುದನ್ನು ನೋಡಿ ಎಲೈ ರಾಜನೇ, ಸಾತ್ಯಕಿಯು ಸಿಂಹನಾದವನ್ನು ಮಾಡುತ್ತ ಭೂರಿಶ್ರವನ ಮೇಲೆ ಎರಗಿದನು.
ರಥಂ ರಥೇನ ಸಮರೇ ಪೀಡಯಿತ್ವಾ ಮಹಾಬಲೌ |
ತಾವನ್ಯೋನ್ಯಸ್ಯ ಸಮರೇ ನಿಹತ್ಯ ರಥವಾಜಿನಃ |
ವಿರಥಾವಭಿವಲ್ಗಂತೌ ಸಮೇಯಾತಾಂ ಮಹಾರಥೌ ॥26॥
ಮಹಾಬಲರಾದ ಅವರಿಬ್ಬರು ರಥಗಳನ್ನು ಪರಸ್ಪರವಾಗಿ ಪೀಡಿಸಿ, ರಥದ ಕುದುರೆಗಳನ್ನು ಪರಸ್ಪರವಾಗಿ ಕೊಂದು, ಮಹಾರಥರಾದ ಅವರಿಬ್ಬರೂ ರಥವಿಲ್ಲದೆ ರಥಗಳಿಂದ ಹಾರಿ ಆರ್ಭಟಿಸುತ್ತಾ ಒಬ್ಬರನ್ನೊಬ್ಬರು ಎದುರಿಸಿದರು.
ಪ್ರಗೃಹೀತಮಹಾಖಡ್ಗೌ ತೌ ಚರ್ಮವರಧಾರಿಣೌ |
ಶುಶುಭಾತೇ ನರವ್ಯಾಘ್ರೌ ಯುದ್ಧಾಯ ಸಮವಸ್ಥಿತೌ ॥27॥
ನರಶ್ರೇಷ್ಠರಾದ ಅವರಿಬ್ಬರು ಕೈಯಲ್ಲಿ ದೊಡ್ಡ ಖಡ್ಗವನ್ನು ಮತ್ತು ಶ್ರೇಷ್ಠವಾದ ಗುರಾಣಿಯನ್ನು ಹಿಡಿದು ಯುದ್ಧಕ್ಕೆ ಉದ್ಯುಕ್ತರಾಗಿ ಶೋಭಿಸಿದರು.
ತತಃ ಸಾತ್ಯಕಿಮಭ್ಯೇತ್ಯ ನಿಸ್ತ್ರಿಂಶವರಧಾರಿಣಮ್ |
ಭೀಮಸೇನಸ್ತ್ವರನ್ ರಾಜನ್ ರಥಮಾರೋಪಯತ್ ತದಾ ॥28॥
ಎಲೈ ರಾಜನೇ, ಆಗ ಶ್ರೇಷ್ಠವಾದ ಖಡ್ಗವನ್ನು ಹಿಡಿದ ಸಾತ್ಯಕಿಯ ಕಡೆಗೆ ಭೀಮಸೇನನು ಜಾಗ್ರತೆಯಾಗಿ ಬಂದು ಅವನನ್ನು ತನ್ನ ರಥಕ್ಕೆ ಏರಿಸಿದನು.
ತವಾಪಿ ತನಯೋ ರಾಜನ್ ಭೂರಿಶ್ರವಸಮಾಹವೇ |
ಆರೋಪಯದ್ ರಥಂ ತೂರ್ಣಂ ಪಶ್ಯತಾಂ ಸರ್ವಧನ್ವಿನಾಮ್ ॥29॥
ಎಲೈ ರಾಜನೇ, ನಿನ್ನ ಪುತ್ರನಾದ ದುರ್ಯೋಧನನೂ ಸಹ ರಣರಂಗದಲ್ಲಿ ಭೂರಿಶ್ರವನನ್ನು ತನ್ನ ರಥದಲ್ಲಿ ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆಯೇ ಶೀಘ್ರವಾಗಿ ಏರಿಸಿಕೊಂಡನು.
ತಸ್ಮಿಂಸ್ತಥಾ ವರ್ತಮಾನೇ ರಣೇ ಭೀಷ್ಮಂ ಮಹಾರಥಮ್ |
ಅಯೋಧಯಂತ ಸಂರಬ್ಧಾಃ ಪಾಂಡವಾ ಭರತರ್ಷಭ ॥30॥
ಎಲೈ ಭರತಶ್ರೇಷ್ಠನೇ, ಯುದ್ಧವು ಹಾಗೆ ನಡೆಯುತ್ತಿರಲು ಇತ್ತ ಕಡೆ ಮಹಾರಥರಾದ ಭೀಷ್ಮರ ಜೊತೆಯಲ್ಲಿ ಪಾಂಡವರೆಲ್ಲರೂ ಕೋಪಗೊಂಡು ಯುದ್ಧವನ್ನು ಮಾಡಿದರು.
ಲೋಹಿತಾಯತಿ ಚಾದಿತ್ಯೇ ತ್ವರಮಾಣೋ ಧನಂಜಯಃ |

ಪಂಚವಿಂಶತಿಸಾಹಸ್ರಾನ್ ನಿಜಘಾನ ಮಹಾರಥಾನ್ ॥31॥
ಸೂರ್ಯನು ಕೆಂಪು ಬಣ್ಣಕ್ಕೆ ತಿರುಗುತ್ತಿರಲು ಅರ್ಜುನನು ಜಾಗ್ರತೆಯಾಗಿ ಇಪ್ಪತ್ತೈದು ಸಹಸ್ರ ಮಹಾರಥರನ್ನು ಕೊಂದನು.
ತೇ ಹಿ ದುರ್ಯೋಧನಾದಿಷ್ಟಾಸ್ತದಾ ಪಾರ್ಥನಿಬರ್ಹಣೇ |
ಸಂಪ್ರಾಪ್ಯೈವ ಗತಾ ನಾಶಂ ಶಲಭಾ ಇವ ಪಾವಕಮ್ ॥32॥
ದುರ್ಯೋಧನನ ಆದೇಶದಂತೆ ಅರ್ಜುನನನ್ನು ನಾಶಮಾಡಲು ಅವನ ಬಳಿಗೆ ಬಂದ ಆ ಮಹಾರಥರೆಲ್ಲರೂ ಅಗ್ನಿಯನ್ನು ಸಮೀಪಿಸಿದ ಶಲಭಗಳಂತೆ ಅರ್ಜುನನನ್ನು ಸಮೀಪಿಸಿ ನಾಶವನ್ನು ಹೊಂದಿದರು.
ತತೋ ಮತ್ಸ್ಯಾಃ ಕೇಕಯಾಶ್ಚ ಧನುರ್ವೇದವಿಶಾರದಾಃ |
ಪರಿವವ್ರುಸ್ತದಾ ಪಾರ್ಥಂ ಸಹಪುತ್ರಂ ಮಹಾರಥಮ್ ॥33॥
ಆಗ ಧನುರ್ವೇದ ವಿಶಾರದರಾದ ಮತ್ಸ್ಯರು ಮತ್ತು ಕೇಕಯರು ಅರ್ಜುನನ ರಕ್ಷಣೆಗಾಗಿ ಬಂದು ಪುತ್ರ ಸಹಿತರಾದ ಮಹಾರಥನಾದ ಅವನನ್ನು ಸುತ್ತುವರಿದರು.
ಏತಸ್ಮಿನ್ನೇವ ಕಾಲೇ ತು ಸೂರ್ಯೇಽಸ್ತಮುಪಗಚ್ಛತಿ |
ಸರ್ವೇಷಾಮೇವ ಸೈನ್ಯಾನಾಂ ಪ್ರಮೋಹಃ ಸಮಜಾಯತ ॥34॥
ಇದೇ ಕಾಲದಲ್ಲಿ ಸೂರ್ಯನು ಅಸ್ತಂಗತನಾಗುತ್ತಿರಲು ಎಲ್ಲ ಸೈನ್ಯಗಳಿಗೂ ಏನೂ ತಿಳಿಯದಂತಾಯಿತು.
ಅವಹಾರಂ ತತಶ್ಚಕ್ರೇ ಪಿತಾ ದೇವವ್ರತಸ್ತವ |
ಸಂಧ್ಯಾಕಾಲೇ ಮಹಾರಾಜ ಸೈನ್ಯಾನಾಂ ಶ್ರಾಂತವಾಹನಃ ॥35॥
ಎಲೈ ಮಹಾರಾಜನೇ, ಆ ಸಂಧ್ಯಾಕಾಲದಲ್ಲಿ ಅಶ್ವಗಜಾದಿ ವಾಹನಗಳೆಲ್ಲವೂ ದಣಿದಿರಲು ನಿನ್ನ ತಂದೆಯಾದ ದೇವವ್ರತನು ಸೈನ್ಯಗಳ ಅವಹಾರವನ್ನು ಮಾಡಿದನು.
ಪಾಂಡವಾನಾಂ ಕುರೂಣಾಂ ಚ ಪರಸ್ಪರಸಮಾಗಮೇ |
ತೇ ಸೇನೇ ಭೃಶಸಂವಿಗ್ನೇ ಯಯತುಃ ಸ್ವಂ ನಿವೇಶನಮ್ ॥36॥
ಪಾಂಡವರ ಮತ್ತು ಕೌರವರ ಪರಸ್ಪರ ಸಮಾಗಮವನ್ನು ಹೊಂದಿದ ಆ ಸೈನ್ಯಗಳು ಬಹಳವಾಗಿ ವೇದನೆಗೊಂಡು ತಮ್ಮ ಶಿಬಿರಗಳಿಗೆ ಹಿಂದಿರುಗಿದವು.
ತತಃ ಸ್ವಶಿಬಿರಂ ಗತ್ವಾ ನ್ಯವಿಶಂಸ್ತತ್ರ ಭಾರತ |
ಪಾಂಡವಾಃ ಸೃಂಜಯೈಃ ಸಾರ್ಧಂ ಕುರವಶ್ಚ ಯಥಾವಿಧಿ ॥37॥
ಎಲೈ ಭಾರತನೇ, ಅನಂತರ ಪಾಂಡವರು, ಸೃಂಜಯರು, ಕೌರವರು ಎಲ್ಲರೂ ತಮ್ಮ ಶಿಬಿರಗಳಿಗೆ ಹೋಗಿ ಶಾಸೋತ್ರೋಕ್ತ ರೀತಿಯಲ್ಲಿ ವಿಶ್ರಾಂತಿಯನ್ನು ಪಡೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
ಭೀಷ್ಮರ ಸೇನಾಪತ್ಯದಲ್ಲಿ ಐದನೆಯ ದಿನದ ಯುದ್ಧವು ಮುಗಿಯಿತು.
* * * * *
ಎಪ್ಪತ್ತೊಂದನೆಯ ಅಧ್ಯಾಯ
ಆರನೆಯ ದಿವಸದ ಯುದ್ಧದ ಪ್ರಾರಂಭ. ಧೃಷ್ಟದ್ಯುಮ್ನನಿಂದ ಮಕರವ್ಯೂಹದ ಮತ್ತು ಭೀಷ್ಮರಿಂದ ಕೌಂಚವ್ಯೂಹದ ರಚನೆ. ದ್ರೋಣರ ಪರಾಕ್ರಮ.
ಸಂಜಯಃ
ವಿಹೃತ್ಯ ಚ ತತೋ ರಾಜನ್ ಸಹಿತಾಃ ಕುರುಪಾಂಡವಾಃ |
ವ್ಯತೀತಾಯಾಂ ತು ಶರ್ವರ್ಯಾಂ ಪುನರ್ಯುದ್ಧಾಯ ನಿರ್ಯಯುಃ ॥
ಸಂಜಯ ಎಲೈ ರಾಜನೇ, ಕುರು-ಪಾಂಡವರು ಆ ರಾತ್ರಿಯಲ್ಲಿ ಜೊತೆಯಾಗಿ ವಿಹರಿಸಿ ಆ ರಾತ್ರಿಯು ಕಳೆದ ಮೇಲೆ ಪುನಃ ಯುದ್ಧಕ್ಕೆ ಹೊರಟರು.
ತತ್ರ ಶಬ್ದೋ ಮಹಾನಾಸೀತ್ ತವ ತೇಷಾಂ ಚ ಭಾರತ |
ಯುಜ್ಯತಾಂ ರಥಮುಖ್ಯಾನಾಂ ಕಲ್ಪ್ಯತಾಂ ಚೈವ ದಂತಿನಾಮ್ ॥2॥
ಸನ್ನಹ್ಯತಾಂ ಪದಾತೀನಾಂ ಹಯಾನಾಂ ಚೈವ ಭಾರತ |
ಶಂಖದುಂದುಭಿನಾದಶ್ಚ ತುಮುಲಃ ಸರ್ವತೋಽಭವತ್ ॥3॥
ಎಲೈ ಭಾರತನೇ, ಆಗ ಹೂಡಲ್ಪಡುವ ರಥಗಳಿಂದ, ಅಣಿಗೊಳಿಸಲ್ಪಡುವ ಗಜಗಳಿಂದ, ಕವಚವನ್ನು ಧರಿಸುವ ಪದಾತಿಗಳಿಂದ ಮತ್ತು ಅಶ್ವಗಳಿಂದ ಹಾಗೂ ಶಂಖ-ದುಂದುಭಿ ನಾದಗಳಿಂದ ಎಲ್ಲ ಕಡೆಯಲ್ಲಿಯೂ ನಿನ್ನ ಮತ್ತು ಅವರ ಸೈನ್ಯದಲ್ಲಿ ತೀವ್ರವಾದ ದೊಡ್ಡ ಶಬ್ದ ಉಂಟಾಯಿತು.
ತತೋ ಯುಧಿಷ್ಠಿರೋ ರಾಜಾ ಧೃಷ್ಟದ್ಯುಮ್ನಮಭಾಷತ |
ವ್ಯೂಹಂ ವ್ಯೂಹ ಮಹಾಬಾಹೋ ಮಕರಂ ಶತ್ರುತಾಪನಮ್ ॥4॥
ಆಗ ಯುಧಿಷ್ಠಿರ ರಾಜನು ಧೃಷ್ಟದ್ಯುಮ್ನನನ್ನು ಕುರಿತು ಮಹಾಬಾಹುವೇ, ಶತ್ರುಸಂತಾಪಕಾರಿಯಾದ ಮಕರವ್ಯೂಹವನ್ನು ರಚಿಸು ಎಂದು ಹೇಳಿದನು.
ಏವಮುಕ್ತಸ್ತು ಪಾರ್ಥೇನ ಧೃಷ್ಟದ್ಯುಮ್ನೋ ಮಹಾರಥಃ |

ವ್ಯಾದಿದೇಶ ಮಹಾರಾಜ ರಥಿನೋ ರಥಿನಾಂ ವರಃ ॥5॥
ಎಲೈ ಮಹಾರಾಜನೇ, ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ರಥಿಕರಲ್ಲಿ ಶ್ರೇಷ್ಠನಾದ ಮಹಾರಥನಾದ ಧೃಷ್ಟದ್ಯುಮ್ನನು ಉಳಿದ ರಥಿಕರನ್ನು ಕುರಿತು ಆದೇಶವನ್ನು ನೀಡಿದನು.
ಶಿರೋಽಭೂದ್ ದ್ರುಪದಸ್ತಸ್ಯ ಪಾಂಡವಶ್ಚ ಧನಂಜಯಃ|
ಚಕ್ಷುಷೀ ಸಹದೇವಶ್ಚ ನಕುಲಶ್ಚ ಮಹಾರಥಃ|
ತುಂಡಮಾಸೀನ್ಮಹಾರಾಜ ಭೀಮಸೇನೋ ಮಹಾಬಲಃ ॥6॥
ದ್ರುಪದನು ಮತ್ತು ಪಾಂಡುಪುತ್ರನಾದ ಧನಂಜಯನು ಆ ಮಕರದ ಶಿರಸ್ಸಿನ ಸ್ಥಾನದಲ್ಲಿದ್ದರು. ಮಹಾರಥರಾದ ನಕುಲ ಮತ್ತು ಸಹದೇವರು ಆ ಮಕರದ ಕಣ್ಣುಗಳ ಸ್ಥಾನದಲ್ಲಿದ್ದರು. ಎಲೈ ಮಹಾರಾಜನೇ, ಮಹಾಬಲನಾದ ಭೀಮಸೇನನು ವದನದ ಸ್ಥಾನದಲ್ಲಿದ್ದನು.
ಸೌಭದ್ರೋ ದ್ರೌಪದೇಯಾಶ್ಚ ರಾಕ್ಷಸಶ್ಚ ಘಟೋತ್ಕಚಃ|
ಸಾತ್ಯಕಿರ್ಧರ್ಮರಾಜಶ್ಚ ವ್ಯೂಹಗ್ರೀವಾಂ ಸಮಾಸ್ಥಿತಾಃ ॥7॥
ಅಭಿಮನ್ಯು, ದ್ರೌಪದಿಯ ಐದು ಮಕ್ಕಳು ಮತ್ತು ರಾಕ್ಷಸನಾದ ಘಟೋತ್ಕಚ, ಸಾತ್ಯಕಿ ಮತ್ತು ಧರ್ಮರಾಜ ಇವರು ಆ ವ್ಯೂಹದ ಕತ್ತಿನ ಸ್ಥಾನದಲ್ಲಿ ನಿಂತರು.
ಪೃಷ್ಠಮಾಸೀನ್ಮಹಾರಾಜ ವಿರಾಟೋ ವಾಹಿನೀಪತಿಃ|
ಧೃಷ್ಟದ್ಯುಮ್ನೇನ ಸಹಿತೋ ಮಹತ್ಯಾ ಸೇನಯಾ ವೃತಃ ॥8॥
ಎಲೈ ಮಹಾರಾಜನೇ, ಸೇನಾಪತಿಯಾದ ವಿರಾಟನು ಧೃಷ್ಟದ್ಯುಮ್ನನಿಂದ ಸಹಿತನಾಗಿ ದೊಡ್ಡ ಸೈನ್ಯದಿಂದ ಪರಿವೃತನಾಗಿ ಪೃಷ್ಠಭಾಗದಲ್ಲಿದ್ದನು.
ಕೇಕಯಾ ಭ್ರಾತರಃ ಪಂಚ ವಾಮಂ ಪಾರ್ಶ್ವಂ ಸಮಾಶ್ರಿತಾಃ|
ಧೃಷ್ಟಕೇತುರ್ನರವ್ಯಾಘ್ರಃ ಚೇಕಿತಾನಶ್ಚ ವೀರ್ಯವಾನ್|
ದಕ್ಷಿಣಂ ಪಕ್ಷಮಾಶ್ರಿತ್ಯ ಸ್ಥಿತಾ ವ್ಯೂಹಸ್ಯ ರಕ್ಷಣೇ ॥9॥
ಕೇಕಯ ದೇಶದ ಐವರು ಸಹೋದರರು ಎಡಪಾರ್ಶ್ವವನ್ನು ಆಶ್ರಯಿಸಿದರು. ನರವ್ಯಾಘ್ರನಾದ ಧೃಷ್ಟಕೇತು ಮತ್ತು ಪರಾಕ್ರಮಶಾಲಿಯಾದ ಚೇಕಿತಾನ ಇವರಿಬ್ಬರು ಮಕರದ ದಕ್ಷಿಣ ಪಾರ್ಶ್ವವನ್ನು ಆಶ್ರಯಿಸಿ ವ್ಯೂಹದ ರಕ್ಷಣೆಗಾಗಿ ನಿಂತರು.
ಪಾದಯೋಸ್ತು ಮಹಾರಾಜ ಸ್ಥಿತಃ ಶ್ರೀಮಾನ್ಮಹಾರಥಃ|
ಕುಂತಿಭೋಜಃ ಶತಾನೀಕೋ ಮಹತ್ಯಾ ಸೇನಯಾ ವೃತಃ ॥10॥
ಎಲೈ ಮಹಾರಾಜನೇ, ಪಾದಗಳ ಸ್ಥಾನದಲ್ಲಿ ಮಹಾರಥನಾದ ಕುಂತಿಭೋಜ ಮತ್ತು ಶತಾನೀಕರು ದೊಡ್ಡ ಸೈನ್ಯದಿಂದ ಸಹಿತರಾಗಿ ನಿಂತರು.
ಶಿಖಂಡೀ ತು ಮಹೇಷ್ವಾಸಃ ಸೋಮಕೈಃ ಸಂವೃತೋ ಬಲೀ|
ಇರಾವಾಂಶ್ಚ ತತಃ ಪುಚ್ಛೇ ಮಕರಸ್ಯ ವ್ಯವಸ್ಥಿತೌ ॥11॥
ಸೋಮಕ ಸೈನ್ಯದಿಂದ ಪರಿವೃತನಾದ ಬಲಿಷ್ಠನೂ ಮತ್ತು ಮಹಾಧನುರ್ಧಾರಿಯೂ ಆದ ಶಿಖಂಡಿಯೂ ಮತ್ತು ಇರಾವಂತನೂ ಮಕರದ ಬಾಲದ ಭಾಗದಲ್ಲಿ ನಿಂತರು.
ಏವಮೇತನ್ಮಹಾವ್ಯೂಹಂ ವ್ಯೂಹ್ಯ ಭಾರತ ಪಾಂಡವಾಃ|
ಸೂರ್ಯೋದಯೇ ಮಹಾರಾಜ ಪುನರ್ಯುದ್ಧಾಯ ದಂಸಿತಾಃ ॥12॥
ಎಲೈ ಮಹಾರಾಜನೇ, ಭಾರತನೇ, ಪಾಂಡವರು ಈ ರೀತಿಯಲ್ಲಿ ಮಹಾವ್ಯೂಹವನ್ನು ರಚಿಸಿ ಸೂರ್ಯೋದಯ ಕಾಲಕ್ಕೆ ಪುನಃ ಯುದ್ಧಕ್ಕೆ ಸನ್ನದ್ಧರಾದರು.
ಕೌರವಾನಭ್ಯಯುಸ್ತೂರ್ಣಂ ಹಸ್ತ್ಯಶ್ವರಥಪತ್ತಿಭಿಃ|
ಸಮುಚ್ಛ್ರಿತೈರ್ಧ್ವಜೈಶ್ಚಿತ್ರೈಃ ಶಸ್ತ್ರೈಶ್ಚ ವಿಮಲೈಃ ಶಿತೈಃ ॥13॥
ಅವರು ಗಜಾಶ್ವರಥಪದಾತಿಗಳಿಂದಲೂ, ಎತ್ತರವಾಗಿದ್ದ, ವಿಚಿತ್ರವಾದ ಧ್ವಜಗಳಿಂದಲೂ, ವಿಮಲವಾದ ಸಾಣೆಯನ್ನು ಹಿಡಿದ ಶಸ್ತ್ರಗಳಿಂದಲೂ ಕೂಡಿದವರಾಗಿ ಶೀಘ್ರವಾಗಿ ಕೌರವರ ಮೇಲೆ ಎರಗಿದರು.
ವ್ಯೂಹಂ ದೃಷ್ಟ್ವಾ ತು ತತ್ಸೈನ್ಯಂ ಪಿತಾ ದೇವವ್ರತಸ್ತವ|
ಕ್ರೌಂಚೇನ ಮಹತಾ ರಾಜನ್ ಪ್ರತ್ಯವ್ಯೂಹತ ವಾಹಿನೀಮ್ ॥14॥
ಎಲೈ ರಾಜನೇ, ನಿನ್ನ ತಂದೆಯಾದ ಭೀಷ್ಮರು ಪಾಂಡವರು ರಚಿಸಿದ ಆ ವ್ಯೂಹವನ್ನು ನೋಡಿ ಅದಕ್ಕೆ ಪ್ರತಿಯಾಗಿ ನಿನ್ನ ಸೈನ್ಯವನ್ನು ದೊಡ್ಡ ಕ್ರೌಂಚ ವ್ಯೂಹವನ್ನಾಗಿ ರಚಿಸಿದರು.
ತಸ್ಯ ತುಂಡೇ ಮಹೇಷ್ವಾಸೋ ಭಾರದ್ವಾಜೋ ವ್ಯರೋಚತ|
ಅಶ್ವತ್ಥಾಮಾ ಕೃಪಶ್ಚೈವ ಚಕ್ಷುರಾಸ್ತಾಂ ನರೇಶ್ವರ ॥15॥
ಎಲೈ ರಾಜನೇ, ಆ ಕ್ರೌಂಚವ್ಯೂಹದ ಕೊಕ್ಕಿನ ಸ್ಥಾನದಲ್ಲಿ ದ್ರೋಣರು ಶೋಭಿಸಿದರು. ಅಶ್ವತ್ಥಾಮರು ಮತ್ತು ಕೃಪರು ಅದರ ಕಣ್ಣುಗಳ ಸ್ಥಾನದಲ್ಲಿದ್ದರು.
ಕೃತವರ್ಮಾ ತು ಸಹಿತಃ ಕಾಂಬೋಜಾರಟ್ಟಬಾಹ್ಲಿಕೈಃ|
ಶಿರಸ್ಯಾಸೀನ್ನರಶ್ರೇಷ್ಠಃ ಶ್ರೇಷ್ಠಃ ಸರ್ವಧನುಷ್ಮತಾಮ್ ॥16॥
ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠನಾದ, ನರಶ್ರೇಷ್ಠನಾದ ಕೃತವರ್ಮನು ಕಾಂಬೋಜರಿಂದಲೂ, ಅರಟ್ಟರಿಂದಲೂ ಮತ್ತು ಬಾಹ್ಲಿಕರಿಂದಲೂ ಸಹಿತನಾಗಿ ಕ್ರೌಂಚದ ಶಿರಸ್ಸಿನ ಸ್ಥಾನದಲ್ಲಿದ್ದನು.

ಗ್ರೀವಾಯಾಂ ಶೂರಸೇನಸ್ತು ತವ ಪುತ್ರಶ್ಚ ಮಾರಿಷ |
ದುರ್ಯೋಧನೋ ಮಹಾರಾಜ ರಾಜಭಿರ್ಬಹುಭಿರ್ವೃತಃ ॥17॥
ಎಲೈ ಪೂಜ್ಯನೇ, ಮಹಾರಾಜನೇ, ಅದರ ಕತ್ತಿನ ಸ್ಥಾನದಲ್ಲಿ ಅನೇಕ ರಾಜರಿಂದ ಪರಿವೃತನಾದ ನಿನ್ನ ಪುತ್ರನಾದ ದುರ್ಯೋಧನನು ಮತ್ತು ಶೂರಸೇನನು ಇದ್ದರು.
ಪ್ರಾಗ್ಜ್ಯೋತಿಷಸ್ತು ಸಹಿತಃ ಮದ್ರಸೌವೀರಕೇಕಯೈಃ |
ಉರಸ್ಯಭೂನ್ನರಶ್ರೇಷ್ಠ ಮಹತ್ಯಾ ಸೇನಯಾ ವೃತಃ |
ಪೃಷ್ಠೇ ಚಾಸ್ತಾಂ ಮಹೇಷ್ವಾಸಾವಾವಂತ್ಯೌ ಸಪದಾನುಗೌ ॥18॥
ಎಲೈ ನರಶ್ರೇಷ್ಠನೇ, ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು ದೊಡ್ಡ ಸೈನ್ಯದಿಂದ ಕೂಡಿಕೊಂಡು ಮದ್ರರಿಂದಲೂ, ಸೌವೀರರಿಂದಲೂ ಮತ್ತು ಕೇಕಯರಿಂದಲೂ ಸಹಿತನಾಗಿ ಆ ಪಕ್ಷಿಯ ಎದೆಯ ಭಾಗದಲ್ಲಿದ್ದನು. ಆ ಸೈನ್ಯದ ಹಿಂಭಾಗದಲ್ಲಿ ಪದಾತಿಗಳಿಂದ ಸಹಿತರಾದ ಮಹಾಧನುರ್ಧಾರಿಗಳಾದ ಅವಂತಿದೇಶದ ಸಹೋದರರಿದ್ದರು.
ಸ್ವಸೇನಯಾ ಚ ಸಹಿತಃ ಸುಶರ್ಮಾ ಪ್ರಸ್ಥಲಾಧಿಪಃ |
ವಾಮಂ ಪಕ್ಷಂ ಸಮಾಶ್ರಿತ್ಯ ದಂಸಿತಃ ಸಮವಸ್ಥಿತಃ ॥19॥
ಪ್ರಸ್ಥಲಾಧಿಪತಿಯಾದ ಸುಶರ್ಮನು ಸನ್ನದ್ಧನಾಗಿ ತನ್ನ ಸೈನ್ಯದಿಂದ ಸಹಿತನಾಗಿ ಎಡಭಾಗವನ್ನು ಆಶ್ರಯಿಸಿ ನಿಂತನು.
ತುಷಾರಾ ಯವನಾಶ್ಚೈವ ಶಕಾಶ್ಚ ಸಹ ಚೂಚುಪೈಃ |
ದಕ್ಷಿಣಂ ಪಕ್ಷಮಾಶ್ರಿತ್ಯ ಸ್ಥಿತಾ ವ್ಯೂಹಸ್ಯ ಭಾರತ ॥20॥
ಎಲೈ ಭಾರತನೇ, ತುಷಾರರು, ಯವನರು, ಶಕರು ಮತ್ತು ಚೂಚುಪರು ವ್ಯೂಹದ ಬಲಭಾಗವನ್ನು ಆಶ್ರಯಿಸಿ ನಿಂತರು.
ಶ್ರುತಾಯುಶ್ಚ ಶತಾಯುಶ್ಚ ಸೌಮದತ್ತಿಶ್ಚ ಮಾರಿಷ |
ವ್ಯೂಹಸ್ಯ ಜಘನೇ ತಸ್ಥೂ ರಕ್ಷಮಾಣಾಃ ಪರಸ್ಪರಮ್ ॥21॥
ಎಲೈ ಪೂಜ್ಯನೇ, ಶ್ರುತಾಯು, ಶತಾಯು ಮತ್ತು ಭೂರಿಶ್ರವ ಇವರು ಪರಸ್ಪರವಾಗಿ ರಕ್ಷಣೆಯನ್ನು ಮಾಡುತ್ತ ವ್ಯೂಹದ ಹಿಂಭಾಗದಲ್ಲಿದ್ದರು.
ತತೋ ಯುದ್ಧಾಯ ಸಂಜಗ್ಮುಃ ಪಾಂಡವಾಃ ಕೌರವೈಃ ಸಹ |
ಸೂರ್ಯೋದಯೇ ಮಹಾರಾಜ ತತೋ ಯುದ್ಧಮಭೂನ್ಮಹತ್ ॥22॥
ಎಲೈ ಮಹಾರಾಜನೇ, ಸೂರ್ಯೋದಯವಾಗುತ್ತಿರಲು ಪಾಂಡವರು ಮತ್ತು ಕೌರವರು ಯುದ್ಧಕ್ಕಾಗಿ ಮುನ್ನುಗ್ಗಿದರು. ಅನಂತರ ದೊಡ್ಡಯುದ್ಧವು ನಡೆಯಿತು.
ಪ್ರತೀಯೂ ರಥಿನೋ ನಾಗಾನ್ ನಾಗಾಶ್ಚ ರಥಿನೋ ಯಯುಃ |
ಹಯಾರೋಹಾ ಹಯಾರೋಹಾನ್ ರಥಿನಶ್ಚಾಪಿ ಸಾದಿನಃ ॥23॥
ರಥಿಕರು ಗಜಗಳ ಮೇಲೆಯೂ, ಗಜಗಳು ರಥಿಕರ ಮೇಲೆಯೂ ಎರಗಿದವು. ಅಶ್ವಾರೋಹಿಗಳು ಅಶ್ವಾರೋಹಿಗಳನ್ನೂ, ರಥಿಕರು ಅಶ್ವಾರೋಹಿಗಳನ್ನೂ ಎದುರಿಸಿದರು.
ಸಾರಥಿಂ ಚ ರಥೀ ರಾಜನ್ ಕುಂಜರಾಂಶ್ಚ ಮಹಾರಣೇ |
ಹಸ್ತ್ಯಾರೋಹಾ ರಥಾರೋಹಾನ್ ರಥಿನಶ್ಚಾಪಿ ಸಾದಿನಃ ॥24॥
ಎಲೈ ರಾಜನೇ, ರಥಿಕರು ಸಾರಥಿಯನ್ನು ಮತ್ತು ಗಜಗಳನ್ನು ಆ ಮಹಾಯುದ್ಧದಲ್ಲಿ ರಕ್ಷಿಸಿದರು. ಗಜಾರೋಹಿಗಳು ರಥಾರೋಹಿಗಳನ್ನು, ರಥಾರೋಹಿಗಳಾದವರು ಅಶ್ವಾರೋಹಿಗಳನ್ನು ಎದುರಿಸಿದರು.
ರಥಿನಃ ಪತ್ತಿಭಿಃ ಸಾರ್ಧಂ ಸಾದಿನಶ್ಚಾಪಿ ಪತ್ತಿಭಿಃ |
ಅನ್ಯೋನ್ಯಂ ಸಮರೇ ರಾಜನ್ ಪ್ರತ್ಯಧಾವನ್ನಮರ್ಷಿತಾಃ ॥25॥
ಎಲೈ ರಾಜನೇ, ರಥಿಕರು ಪದಾತಿಗಳ ಮೇಲೆಯೂ, ಅಶ್ವಾರೋಹಿಗಳು ಪದಾತಿಗಳ ಮೇಲೆಯೂ ಕೋಪದಿಂದ ಕೂಡಿದವರಾಗಿ ರಣರಂಗದಲ್ಲಿ ಪರಸ್ಪರವಾಗಿ ಎರಗಿದರು.
ಭೀಮಸೇನಾರ್ಜುನಯಮೈರ್ಗುಪ್ತಾ ಚಾನ್ಯೈರ್ಮಹಾರಥೈಃ |
ಶುಶುಭೇ ಪಾಂಡವೀ ಸೇನಾ ನಕ್ಷತ್ರೈರಿವ ಶರ್ವರೀ ॥26॥
ಭೀಮಸೇನ, ಅರ್ಜುನ, ನಕುಲ-ಸಹದೇವರಿಂದಲೂ ಮತ್ತು ಬೇರೆ ಮಹಾರಥರಿಂದಲೂ ಸುರಕ್ಷಿತವಾದ ಪಾಂಡವ ಸೇನೆಯು ನಕ್ಷತ್ರದಿಂದ ಕೂಡಿದ ರಾತ್ರಿಯಂತೆ ಮೆರೆಯಿತು.
ತಥಾ ಭೀಷ್ಮಕೃಪದ್ರೋಣಶಲ್ಯದುರ್ಯೋಧನಾದಿಭಿಃ |
ತವಾಪಿ ವಿಬಭೌ ಸೇನಾ ಗ್ರಹೈರ್ದ್ಯೌರಿವ ಸಂವೃತಾ ॥27॥
ಅದರಂತೆ ಭೀಷ್ಮ, ಕೃಪ, ದ್ರೋಣ, ಶಲ್ಯ ಮತ್ತು ದುರ್ಯೋಧನಾದಿಗಳಿಂದ ರಕ್ಷಿತವಾದ ನಿನ್ನ ಸೈನ್ಯವೂ ಸಹ ಗ್ರಹಗಳಿಂದ ಕೂಡಿದ ಆಕಾಶದಂತೆ ಶೋಭಿಸಿತು.
ಭೀಮಸೇನಸ್ತು ಕೌಂತೇಯೋ ದ್ರೋಣಂ ದೃಷ್ಟ್ವಾ ಪರಾಕ್ರಮೀ |
ಅಭ್ಯಯಾಜ್ಜವನೈರಶ್ವೈರ್ಭಾರದ್ವಾಜಸ್ಯ ವಾಹಿನೀಮ್ ॥28॥
ಪರಾಕ್ರಮಶಾಲಿಯಾದ ಕುಂತೀಪುತ್ರನಾದ ಭೀಮಸೇನನಾದರೋ ದ್ರೋಣರನ್ನು ನೋಡಿ ವೇಗಶಾಲಿಗಳಾದ ಅಶ್ವಗಳಿಂದ ಅವರ ಸೈನ್ಯದ ಕಡೆಗೆ ಹೋದನು.
ದ್ರೋಣಸ್ತು ಸಮರೇ ಕ್ರುದ್ಧೋ ಭೀಮಂ ನವಭಿರಾಯಸೈಃ |
ವಿವ್ಯಾಧ ಸಮರೇ ರಾಜನ್ ಮರ್ಮಾಣ್ಯುದ್ದಿಶ್ಯ ವೀರ್ಯವಾನ್ ॥29॥

ಎಲೈ ರಾಜನೇ, ಪರಾಕ್ರಮಶಾಲಿಗಳಾದ ದ್ರೋಣರು ರಣರಂಗದಲ್ಲಿ ಕ್ರುದ್ಧರಾಗಿ ಕಬ್ಬಿಣದ ಒಂಭತ್ತು ಬಾಣಗಳಿಂದ ಭೀಮನನ್ನು ಹೊಡೆದರು.
ದೃಢಾಹತಸ್ತತೋ ಭೀಮೋ ಭಾರದ್ವಾಜಸ್ಯ ಸಂಯುಗೇ |
ಸಾರಥಿಂ ಪ್ರೇಷಯಾಮಾಸ ಯಮಸ್ಯ ಸದನಂ ಪ್ರತಿ ॥30॥
ಹೀಗೆ ಯುದ್ಧದಲ್ಲಿ ದ್ರೋಣರಿಂದ ಗಟ್ಟಿಯಾಗಿ ಹೊಡೆಯಲ್ಪಟ್ಟ ಭೀಮನು ಅವರ ರಥದ ಸಾರಥಿಯನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ಸ ಸಂಗೃಹ್ಯ ಸ್ವಯಂ ವಾಹಾನ್ ಭಾರದ್ವಾಜಃ ಪ್ರತಾಪವಾನ್ |
ವ್ಯಧಮತ್ ಪಾಂಡವೀಂ ಸೇನಾಂ ತೂಲರಾಶಿಮಿವಾನಲಃ ॥31॥
ಎಲೈ ರಾಜನೇ,ಪ್ರತಾಪಶಾಲಿಗಳಾದ ದ್ರೋಣರು ತಾವೇ ಅಶ್ವಗಳನ್ನು ನಿಯಂತ್ರಿಸುತ್ತಾ, ಅಗ್ನಿಯು ತೂಲರಾಶಿಯನ್ನು ಸುಡುವಂತೆ ಪಾಂಡವ ಸೈನ್ಯವನ್ನು ಘಾಸಿಗೊಳಿಸಿದರು.
ತೇ ವಧ್ಯಮಾನಾ ದ್ರೋಣೇನ ಭೀಷ್ಮೇಣ ಚ ನರೋತ್ತಮ |
ಸೃಂಜಯಾಃ ಕೇಕಯೈಃ ಸಾರ್ಧಂ ಪಲಾಯನಪರಾಭವನ್ ॥32॥
ಎಲೈ ನರಶ್ರೇಷ್ಠನೇ, ದ್ರೋಣ ಮತ್ತು ಭೀಷ್ಮರಿಂದ ಪ್ರಹಾರಕ್ಕೆ ಒಳಗಾದ ಸೃಂಜಯರು, ಕೇಕಯರ ಜೊತೆಯಲ್ಲಿ ಪಲಾಯನ ಪರರಾದರು.
ತಥೈವ ತಾವಕಂ ಸೈನ್ಯಂ ಭೀಮಾರ್ಜುನಪರಿಕ್ಷತಮ್ |
ಮುಹ್ಯತೇ ತತ್ರ ತತ್ರೈವ ಸಮದೇವ ವರಾಂಗನಾ ॥33॥
ಹಾಗೆಯೇ ಭೀಮಾರ್ಜುನರ ಹೊಡೆತಕ್ಕೆ ಗಾಯಗೊಂಡ ನಿನ್ನ ಸೈನ್ಯವು ಮದಿಸಿದ ವರಾಂಗನೆಯಂತೆ ಅಲ್ಲಲ್ಲಿಯೇ ಮೋಹಕ್ಕೆ ಒಳಗಾಯಿತು (ಏನು ಮಾಡಬೇಕೆಂದು ತಿಳಿಯದಾಯಿತು).
ಅಭಿದ್ಯೇತಾಂ ತತೋ ವ್ಯೂಹೌ ತಸ್ಮಿನ್ ವೀರವರಕ್ಷಯೇ |
ಆಸೀದ್ ವ್ಯತಿಕರೋ ಘೋರಸ್ತವ ತೇಷಾಂ ಚ ಭಾರತ ॥34॥
ವೀರಶ್ರೇಷ್ಠರು ಹಾಗೆ ಕ್ಷಯವನ್ನು ಹೊಂದುತ್ತಿರಲು ಎರಡು ವ್ಯೂಹಗಳೂ ಒಡೆದು ಹೋದವು. ಎಲೈ ಭಾರತನೇ, ನಿನ್ನ ಮತ್ತು ಅವರ ಸೈನ್ಯದ ಅತಿಭಯಂಕರವಾದ ಮಿಶ್ರಣವು ಉಂಟಾಯಿತು.
ತದದ್ಭುತಮಪಶ್ಯಾಮ ತಾವಕಾನಾಂ ಪರೈಃ ಸಹ |
ಏಕಾಯನಗತಾಃ ಸರ್ವೇ ಯದಯುಧ್ಯಂತ ಭಾರತ ॥35॥
ಎಲೈ ಭಾರತನೇ, ನಿನ್ನವರು ಶತ್ರುಗಳ ಜೊತೆಯಲ್ಲಿ ಸೇರಿ ಒಂದೇ ಆಶ್ರಯದಲ್ಲಿ ನಿಂತು ಪರಸ್ಪರವಾಗಿ ಹೊಡೆದಾಡಿದ ಆ ಅದ್ಭುತವನ್ನು ನಾವು ನೋಡಿದೆವು.
ಪ್ರತಿಸಂವಾರ್ಯ ಚಾಸ್ತ್ರಾಣಿ ತೇಽನ್ಯೋನ್ಯಸ್ಯ ವಿಶಾಂಪತೇ |
ಯುಯುಧುಃ ಪಾಂಡವಾಶ್ಚೈವ ಕೌರವಾಶ್ಚ ಮಹಾರಥಾಃ ॥36॥
ಎಲೈ ರಾಜನೇ, ಪರಸ್ಪರವಾಗಿ ತಮ್ಮ ಮೇಲೆ ಪ್ರಯೋಗಿಸಿದ ಅಸ್ತ್ರವನ್ನು ನಿವಾರಿಸಿಕೊಂಡು ಮಹಾರಥರಾದ ಕೌರವರು ಮತ್ತು ಪಾಂಡವರು ಪರಸ್ಪರವಾಗಿ ಯುದ್ಧವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆರಡನೆಯ ಅಧ್ಯಾಯ
ತನ್ನ ಸೈನ್ಯದ ನಾಶವನ್ನು ಕೇಳಿ ಧೃತರಾಷ್ಟ್ರನ ಗೋಳಾಟ.
ಧೃತರಾಷ್ಟ್ರಃ
ಏವಂ ಬಹುಗುಣಂ ಸೈನ್ಯಮೇವಂ ಬಹುವಿಧಂ ಪರಮ್ |
ವ್ಯೂಢಮೇವಂ ಯಥಾಶಾಸ್ತ್ರಮಮೋಘಂ ಚೈವ ಸಂಜಯ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ಹೀಗೆ ನಮ್ಮ ಸೈನ್ಯವು ಬಹುಗುಣಗಳಿಂದ ಕೂಡಿ, ಬಹುವಿಧವಾಗಿದ್ದು, ಉತ್ಕೃಷ್ಟವಾಗಿದೆ. ಶಾಸ್ತ್ರಕ್ಕೆ ಅನುಗುಣವಾಗಿ ವ್ಯೂಹಗೊಂಡ ಈ ಸೈನ್ಯವು ವ್ಯರ್ಥವ್ಯಾಪಾರವುಳ್ಳದ್ದಲ್ಲ.
ಪುಷ್ಟಮಸ್ಮಾಕಮತ್ಯಂತಮಭಿಕಾಮಂ ಚ ನಃ ಸದಾ |
ಪ್ರಹ್ವಮವ್ಯಸನೋಪೇತಂ ಪುರಸ್ತಾದ್ ದೃಷ್ಟವಿಕ್ರಮಮ್ ॥2॥
ಸೈನ್ಯವನ್ನು ಚೆನ್ನಾಗಿ ಪೋಷಿಸಿದ್ದಾಗಿದೆ. ನಮ್ಮ ಆಸೆಯನ್ನು ನೆರವೇರಿಸುವುದರಲ್ಲಿಯೇ ಸೈನ್ಯವು ಆಸಕ್ತವಾಗಿದೆ. ವಿನಯದಿಂದ ಕೂಡಿ ಯಾವ ಚಟಗಳೂ ಇಲ್ಲದುದಾಗಿದೆ. ಯಾರ ಪರಾಕ್ರಮವು ಮೊದಲು ದೃಷ್ಟವಾಗಿದೆಯೋ ಅಂತಹ ಯೋಧರಿಂದ ಕೂಡಿದುದಾಗಿದೆ.
ನಾತಿವೃದ್ಧಮಬಾಲಂ ಚ ನ ಕೃಶಂ ನ ಚ ಪೀವರಮ್ |
ಲಘುವೃತ್ತಾಯತಪ್ರಾಯಂ ಸಾರಗಾತ್ರಮನಾಮಯಮ್ ॥3॥
ನಮ್ಮ ಸೈನ್ಯದಲ್ಲಿ ಬಹಳ ವೃದ್ಧರಾದವರಾಗಲೀ, ಬಾಲರಾಗಲೀ, ಕೃಶರಾದವರಾಗಲೀ ಅಥವಾ ಬಹಳ ಸ್ಥೂಲರಾದವರಾಗಲೀ ಯಾರೂ ಇಲ್ಲ. ಕ್ಷಿಪ್ರಕಾರಿಯಾದ ದೊಡ್ಡದಾದ ಎತ್ತರವಾದ, ಶಕ್ತಿಯುತವಾದ ಮತ್ತು ರೋಗರಹಿತವಾದ ದೇಹಗಳುಳ್ಳ ಯೋಧರಿಂದ ಈ ಸೈನ್ಯವು ಯೋಜಿಸಲ್ಪಟ್ಟಿದೆ.

ಆತ್ತಸನ್ನಾಹಶಸ್ತ್ರಂ ಚ ಬಹುಶಸ್ತ್ರಪರಿಗ್ರಹಮ್ |
ಅಸಿಯುದ್ಧೇ ನಿಯುದ್ಧೇ ಚ ಗದಾಯುದ್ಧೇ ಚ ಕೋವಿದಮ್ ॥4॥
ಸೈನ್ಯವು ಕವಚಾದಿ ಸಲಕರಣೆಗಳಿಂದಲೂ ಮತ್ತು ಶಸ್ತ್ರಗಳಿಂದಲೂ ಪೂರ್ಣವಾಗಿದೆ. ಅನೇಕ ವಿಧವಾದ ಶಸ್ತ್ರಗಳಿಂದ ಕೂಡಿದುದಾಗಿದೆ. ಖಡ್ಗಯುದ್ಧದಲ್ಲಿಯೂ, ಬಾಹುಯುದ್ಧದಲ್ಲಿಯೂ, ಗದಾಯುದ್ಧದಲ್ಲಿಯೂ ಸಹ ಪರಿಣತವಾಗಿದೆ.
ಪ್ರಾಸರ್ಷ್ಟಿತೋಮರೇಷ್ವಾಜೌ ಪರಿಘೇಷ್ವಾಯಸೇಷು ಚ |
ಭಿಂಡಿಪಾಲೇಷು ಶಕ್ತೀಷು ಮುಸಲೇಷು ಚ ಸರ್ವಶಃ ॥5॥
ಕಂಪನೇಷು ಚ ಚಾಪೇಷು ಕಣಪೇಷು ಚ ಸರ್ವಶಃ |
ಕ್ಷೇಪಣೀಷು ಚ ಚಿತ್ರಾಸು ಮುಷ್ಟಿಯುದ್ಧೇಷು ಕೋವಿದಮ್ ॥6॥
ಪ್ರಾಸಗಳು, ವೃಷ್ಟಿಗಳು, ತೋಮರಗಳು, ಕಬ್ಬಿಣದ ಪರಿಘಗಳು, ಭಿಂಡಿಪಾಲಗಳು, ಶಕ್ತಿಗಳು, ಮುಸಲಗಳು (ಒನಕೆಗಳು), ಕಂಪನಗಳು, ಬಿಲ್ಲುಗಳು, ಕಣಪಗಳು, ವಿಚಿತ್ರವಾದ ಕ್ಷಿಪಣಿಗಳು ಮತ್ತು ಮುಷ್ಟಿಯುದ್ಧಗಳು ಇವೆಲ್ಲದರಲ್ಲಿಯೂ ಪರಿಣತವಾಗಿದೆ.
ಅಪರೋಕ್ಷಂ ಚ ವಿದ್ಯಾಸು ವ್ಯಾಯಾಮೇಷು ಕೃತಶ್ರಮಮ್ |
ಶಸ್ತ್ರಗ್ರಹಣವಿದ್ಯಾಸು ಸರ್ವಾಸು ಪರಿನಿಷ್ಠಿತಮ್ ॥7॥
ಎಲ್ಲರ ಕಣ್ಣೆದುರಿಗೆ ವಿದ್ಯೆಗಳನ್ನು ಅಭ್ಯಾಸ ಮಾಡಿರುವ ಮತ್ತು ವ್ಯಾಯಾಮಗಳನ್ನು ಮಾಡಿರುವ ಪರಿಶ್ರಮವನ್ನು ಹೊಂದಿದೆ. ಎಲ್ಲಾ ವಿಧವಾದ ಶಸ್ತ್ರಗ್ರಹಣ ವಿದ್ಯೆಗಳಲ್ಲಿ ಪಾರಂಗತವಾಗಿದೆ.
ಆರೋಹೇ ಪರ್ಯವಸ್ಕಂದೇ ಸರಣೇ ಸಾಂತರಪ್ಲುತೇ |
ಸಮ್ಯಕ್ ಪ್ರಹರಣೇ ಯಾನೇ ವ್ಯಪಯಾನೇ ಚ ಕೋವಿದಮ್ ॥8॥
ವಾಹನಗಳನ್ನು ಹತ್ತುವುದರಲ್ಲಿ, ವಾಹನಗಳಿಂದ ಇಳಿಯುವುದರಲ್ಲಿ, ವಾಹನಗಳ ಮೇಲೆ ಮುಂದೆ ಹೋಗುವುದರಲ್ಲಿ, ಮಧ್ಯದ ಭಾಗವನ್ನು ಹಾರಿ ಮುಂದಕ್ಕೆ ಹೋಗುವುದರಲ್ಲಿ, ಶತ್ರುಗಳ ಮೇಲೆ ಚೆನ್ನಾಗಿ ಪ್ರಹಾರ ಮಾಡುವುದರಲ್ಲಿ, ಶತ್ರುಗಳ ಬಳಿಗೆ ಹೋಗುವುದರಲ್ಲಿ ಮತ್ತು ಶತ್ರುಗಳಿಂದ ಹಿಂದೆ ಸರಿಯುವುದರಲ್ಲಿಯೂ ಪಾರಂಗತವಾಗಿದೆ.
ನಾಗಾಶ್ವರಥಯಾನೇಷು ಬಹುಶಃ ಸುಪರೀಕ್ಷಿತಮ್ |
ಪರೀಕ್ಷ್ಯ ಚ ಯಥಾನ್ಯಾಯಂ ವೇತನೇನೋಪಪಾದಿತಮ್ ॥9॥
ಗಜಾಶ್ವರಥ ವಾಹನಗಳಲ್ಲಿ ಬಹಳವಾಗಿ ಪರೀಕ್ಷಿಸಲ್ಪಟ್ಟಿದೆ. ಶಾಸೊತ್ರೀಕ್ತ ರೀತಿಯಿಂದ ಪರೀಕ್ಷೆಯನ್ನು ಮಾಡಿ ಒಳ್ಳೆಯ ವೇತನವನ್ನು ನೀಡಿ ಸಂಪಾದಿಸಲಾಗಿದೆ.
ನ ಗೋಷ್ಠ್ಯಾ ನೋಪಚಾರೇಣ ನ ಚ ಬಂಧುನಿಮಿತ್ತತಃ |
ನ ಸೌಹೃದಬಲೈಶ್ಚಾಪಿ ನಾಕುಲೀನಪರಿಗ್ರಹೈಃ ॥10॥
ಹಾಳುಹರಟೆಯಿಂದಲಾಗಲೀ ಅಥವಾ ಇನ್ನೊಬ್ಬರ ಉಪಕಾರವನ್ನು ಸ್ವೀಕರಿಸುವುದರಿಂದಾಗಲೀ ಅಥವಾ ಶತ್ರುಪಕ್ಷದಲ್ಲಿ ತಮ್ಮ ಬಂಧುವು ಇರುವ ನಿಮಿತ್ತದಿಂದಾಗಲೀ, ವೈಯಕ್ತಿಕ ಸ್ನೇಹದಿಂದಾಗಲೀ, ಅಶಿಕ್ಷಿತ ಮತ್ತು ಅಸಂಸ್ಕೃತರ ಸ್ವೀಕಾರದಿಂದಾಗಲೀ ಎಂದೂ ಸೈನ್ಯದ ನಡತೆಯು ಕಂದಿಹೋಗಿಲ್ಲ.
ಸಮೃದ್ಧಜನಮಾರ್ಯಂ ಚ ತುಷ್ಟಸತ್ಕೃತಬಾಂಧವಮ್ |
ಕೃತೋಪಕಾರಭೂಯಿಷ್ಠಂ ಯಶಸ್ವಿ ಚ ಮನಸ್ವಿ ಚ ॥11॥
ಸಂಪದ್ಯುಕ್ತರಾದ ಯೋಧರಿಂದ ಕೂಡಿದೆ. ಉದಾತ್ತವಾದ ಗುಣವನ್ನು ಹೊಂದಿದೆ. ಸಂತುಷ್ಟರಾದ ಮತ್ತು ಸಂಸ್ಕೃತರಾದ ಬಾಂಧವರನ್ನು ಹೊಂದಿದ ಯೋಧರಿಂದ ಕೂಡಿದುದಾಗಿದೆ. ನಮ್ಮಿಂದ ಬಹಳ ಉಪಕಾರವನ್ನು ಪಡೆದುದಾಗಿದೆ. ಕೀರ್ತಿಶಾಲಿಯೂ, ಧೈರ್ಯಶಾಲಿಯೂ ಆಗಿದೆ.
ಸಜಯ್ಯೈಶ್ಚ ನರೈರ್ಮುಖ್ಯೈರ್ಬಹುಶೋ ದೃಷ್ಟಕರ್ಮಭಿಃ |
ಲೋಕಪಾಲೋಪಮೈಸ್ತಾತ ಪಾಲಿತಂ ಲೋಕವಿಶ್ರುತೈಃ ॥12॥
ಎಲೈ ಪ್ರೀತಿಪಾತ್ರನೇ, ಅನೇಕ ಬಾರಿ ಜಯವನ್ನು ಸಂಪಾದಿಸಿದ ಶ್ರೇಷ್ಠರಾದ ಯೋಧರಿಂದಲೂ, ಯಾರ ವೀರಕರ್ಮವನ್ನು ನೋಡಿದ್ದೇವೆಯೋ ಅಂತಹ ಲೋಕವಿಖ್ಯಾತರೂ, ಲೋಕಪಾಲಕರಿಗೆ ಸದೃಶವಾದ ಪರಾಕ್ರಮವುಳ್ಳವರೂ ಆದವರಿಂದ ರಕ್ಷಿತವಾಗಿದೆ.
ಬಹುಭಿಃ ಕ್ಷತ್ರಿಯೈರ್ಗುಪ್ತಂ ಪೃಥಿವ್ಯಾಂ ಲೋಕಸಮ್ಮತೈಃ |
ಅಸ್ಮಾನಭಿಗತೈಃ ಕಾಮಾತ್ ಸಬಲೈಃ ಸಪದಾನುಗೈಃ ॥13॥
ಮಹೋದಧಿಮಿವಾಪೂರ್ಣಮಾಪಗಾಭಿಃ ಸಮಂತತಃ |
ಅಪಕ್ಷೈಃ ಪಕ್ಷಸಂಕಾಶೈ ರಥೈರ್ನಾಗೈಶ್ಚ ಸಂವೃತಮ್ ॥14॥
ತಮ್ಮ ಇಚ್ಛೆಯಿಂದಲೇ ನಮ್ಮ ಬಳಿಗೆ ಸೈನ್ಯ ಮತ್ತು ಪದಾತಿಗಳ ಜೊತೆಯಲ್ಲಿ ಬಂದ, ಭೂಮಿಯಲ್ಲಿ ಲೋಕಸಮ್ಮತರಾದ ಅನೇಕ ಕ್ಷತ್ರಿಯರಿಂದ ರಕ್ಷಿತವಾಗಿದೆ. ಎಲ್ಲ ಕಡೆಗಳಿಂದಲೂ ನದಿಗಳಿಂದ ತುಂಬಿದ ಮಹಾಸಮುದ್ರದಂತೆ ಇರುವಂತಹದು. ಈ ಸೈನ್ಯವು ರೆಕ್ಕೆಗಳಿಲ್ಲದಿದ್ದರೂ ಪಕ್ಷಿಗಳಂತೆ ಹಾರಬಲ್ಲ ರಥಗಳಿಂದಲೂ, ಗಜಗಳಿಂದಲೂ ತುಂಬಿರುವಂತಹದು.
ನಾನಾಯೋಧಜಲಂ ಭೀಮಂ ವಾಹನೋರ್ಮಿತರಂಗಿಣಮ್ |
ಕ್ಷೇಪಣ್ಯಸಿಗದಾಶಕ್ತಿಶರಪ್ರಾಸಸಮಾಕುಲಮ್ ॥15॥
ಧ್ವಜಭೂಷಣಸಂಬಾಧಂ ರತ್ನಪಟ್ಟೇನ ಸಂಚಿತಮ್ |
ವಾಹನೈಃ ಪರಿಸರ್ಪದ್ಭಿರ್ವಾಯುವೇಗವಿಕಂಪಿತಮ್ ॥16॥
ಅಪಾರಮಿವ ಗರ್ಜಂತಂ ಸಾಗರಪ್ರತಿಮಂ ಮಹತ್ |

ದ್ರೋಣಭೀಷ್ಮಾಭಿಸಂಗುಪ್ತಂ ಗುಪ್ತಂ ಚ ಕೃತವರ್ಮಣಾ ॥17॥
ಕೃಪದುಃಶಾಸನಾಭ್ಯಾಂ ಚ ಜಯದ್ರಥಮುಖೈಸ್ತಥಾ |
ಭಗದತ್ತವಿಕರ್ಣಾಭ್ಯಾಂ ದ್ರೌಣಿಸೌಬಲಬಾಹ್ಲಿಕೈಃ ॥18॥
ಗುಪ್ತಂ ಪ್ರವೀರೈರ್ಲೋಕಸ್ಯ ಸಾರವದ್ಭಿರ್ಮಹಾತ್ಮಭಿಃ |
ಯದಹನ್ಯತ ಸೈನ್ಯಂ ಮೇ ದಿಷ್ಟಮೇತತ್ಪುರಾತನಮ್ ॥19॥
ನಾನಾ ಯೋಧರೆಂಬ ಜಲವುಳ್ಳ, ಭಯಂಕರವಾದ ವಾಹನಗಳೆಂಬ ಅಲೆಗಳನ್ನುಳ್ಳ, ಕ್ಷೇಪಣಿ, ಖಡ್ಗ, ಗದೆ, ಶಕ್ತಿ, ಬಾಣ, ಪ್ರಾಸ ಮೊದಲಾದವುಗಳಿಂದ ನಿಬಿಡವಾದ ಧ್ವಜಗಳಿಂದಲೂ ಮತ್ತು ಭೂಷಣಗಳಿಂದಲೂ ನಿಬಿಡವಾದ, ಚಲಿಸುವ ರತ್ನಪಟ್ಟಿಗಳಿಂದ ಅಲಂಕೃತವಾದ ವಾಹನಗಳಿಂದ ಉಂಟಾದ ವಾಯುವೇಗದಿಂದ ಅಲುಗಾಡುವ ಸಮುದ್ರದಂತೆ ಗರ್ಜಿಸುವ, ಪಾರವಿಲ್ಲದ ಸಮುದ್ರಕ್ಕೆ ಸದೃಶವಾದ, ದ್ರೋಣ-ಭೀಷ್ಮಾದಿಗಳಿಂದ ರಕ್ಷಿತವಾದ, ಕೃತವರ್ಮನಿಂದಲೂ ರಕ್ಷಿತವಾದ, ಕೃಪ- ದುಶ್ಶಾಸನರಿಂದಲೂ, ಜಯದ್ರಥ ಮೊದಲಾದವರಿಂದಲೂ, ಭಗದತ್ತ- ವಿಕರ್ಣರಿಂದಲೂ ಅಶ್ವತ್ಥಾಮ, ಸೌಬಲ ಮತ್ತು ಬಾಹ್ಲಿಕರಿಂದಲೂ ರಕ್ಷಿತವಾಗಿ ಶಕ್ತಿವಂತರೂ, ಮಹಾತ್ಮರೂ, ಲೋಕವೀರರೂ ಆದ ಈ ವೀರರಿಂದ ರಕ್ಷಿತವಾದರೂ ವಧೆಗೆ ಒಳಗಾಗುತ್ತಿರುವುದು ನಮ್ಮ ಪ್ರಾಚೀನ ಅದೃಷ್ಟವೇ ಸರಿ!
ನೈತಾದೃಶಂ ಸಮುದ್ಯೋಗಂ ದೃಷ್ಟವಂತೋ ಹಿ ಮಾನುಷಾಃ |
ಋಷಯೋ ವಾ ಮಹಾಭಾಗಾಃ ಪುರಾಣಾ ಭುವಿ ಸಂಜಯ ॥20॥
ಎಲೈ ಸಂಜಯನೇ, ಸೈನ್ಯಗಳ ಇಂತಹ ಪರಸ್ಪರ ವಿಕ್ರಮವನ್ನು ಮನುಷ್ಯರಾಗಲೀ, ಮಹಾನುಭಾವರಾದ ಪುರಾಣಕಾಲದ ಋಷಿಗಳಾಗಲೀ ಭೂಮಿಯಲ್ಲಿ ಯಾರೂ ನೋಡಿಲ್ಲ.
ಈದೃಶೋಽಪಿ ಬಲೌಘಸ್ತು ಯುಕ್ತಃ ಶಸತ್ರಸ್ತ್ರಸಂಪದಾ |
ವಧ್ಯತೇ ಯತ್ರ ಸಂಗ್ರಾಮೇ ಕಿಮನ್ಯದ್ ಭಾಗಧೇಯತಃ ॥21॥
ಶಸತ್ರಸ್ತ್ರ ಸಂಪತ್ತಿನಿಂದ ಕೂಡಿದ ಇಂತಹ ಸೈನ್ಯಸಮುದಾಯವೂ ಯುದ್ಧದಲ್ಲಿ ಕೊಲ್ಲಲ್ಪಡುತ್ತದೆ ಎಂದರೆ ಅದೃಷ್ಟವನ್ನು ಬಿಟ್ಟು ಬೇರೆ ಏನು ಕಾರಣವಿದೆ?
ವಿಪರೀತಮಿದಂ ಸರ್ವಂ ಪ್ರತಿಭಾತಿ ಸ್ಮ ಸಂಜಯ |
ಯತ್ರೇದೃಶಂ ಬಲಂ ಘೋರಂ ನಾತರದ್ ಯುಧಿ ಪಾಂಡವಾನ್ ॥22॥
ಎಲೈ ಸಂಜಯನೇ, ಇಂತಹ ಘೋರವಾದ ಸೈನ್ಯವು ಯುದ್ಧದಲ್ಲಿ ಪಾಂಡವರನ್ನು ಮೀರಲಾಗಲಿಲ್ಲ ಎಂಬ ಕಾರಣದಿಂದ ನನಗೆ ಎಲ್ಲವೂ ವಿಪರೀತವಾಗಿ (ತಲೆ ಕೆಳಗಾಗಿ) ತೋರುತ್ತಿದೆ.
ಅಥವಾ ಪಾಂಡವಾರ್ಥಾಯ ದೇವಾಸ್ತತ್ರ ಸಮಾಗತಾಃ |
ಯುಧ್ಯಂತೇ ಮಾಮಕಂ ಸೈನ್ಯಂ ಯದವಧ್ಯಂತ ಸಂಜಯ ॥23॥
ಅಥವಾ ಸಂಜಯನೇ, ಪಾಂಡವರಿಗೋಸ್ಕರವಾಗಿ ದೇವತೆಗಳು ಬಂದು ಯುದ್ಧವನ್ನು ಮಾಡುತ್ತಿದ್ದಾರೆ. ಆದ್ದರಿಂದ ನನ್ನ ಸೈನ್ಯವು ವಧಿಸಲ್ಪಡುತ್ತಿದೆ.
ಉಕ್ತೋಽಪಿ ವಿದುರೇಣೇಹ ಹಿತಂ ಪಥ್ಯಂ ಚ ನಿತ್ಯಶಃ |
ನ ಚ ಗೃಹ್ಣಾತಿ ತನ್ಮಂದಃ ಪುತ್ರೋ ದುರ್ಯೋಧನೋ ಮಮ ॥24॥
ವಿದುರನು ಈ ವಿಷಯದಲ್ಲಿ ಹಿತವಾದ ಮತ್ತು ಪಥ್ಯವಾದ ವಚನವನ್ನು ಹೇಳಿದರೂ ಮಂದಬುದ್ಧಿಯುಳ್ಳ ನನ್ನ ಪುತ್ರನಾದ ದುರ್ಯೋಧನನು ಅದನ್ನು ಸ್ವೀಕರಿಸುತ್ತಿಲ್ಲ.
ತಸ್ಯ ಮನ್ಯೇ ಮತಿಃ ಪೂರ್ವಂ ಸರ್ವಜ್ಞಸ್ಯ ಮಹಾತ್ಮನಃ |
ಆಸೀದ್ ಯಥಾಗತಂ ತಾತ ಯೇನ ದೃಷ್ಟಮಿದಂ ಪುರಾ ॥25॥
ಎಲೈ ಪ್ರೀತಿಪಾತ್ರನೇ, ಯಾವ ವಿದುರನು ಮೊದಲೇ ಇದನ್ನು ನೋಡಿ ನುಡಿದನೋ ಆ ಮಹಾತ್ಮನಾದ ಸರ್ವಜ್ಞನಾದ ವಿದುರನ ಬುದ್ಧಿಯು ಯಥಾರ್ಥವಾಗಿದೆ ಎಂದು ಭಾವಿಸುತ್ತೇನೆ.
ಅಥವಾ ಭಾವ್ಯಮೇವಂ ಹಿ ಸಂಜಯೈತೇನ ಸರ್ವಥಾ |
ಪುರಾ ಧಾತ್ರಾ ಯಥಾ ಸೃಷ್ಟಂ ತತ್ತಥಾ ನ ತದನ್ಯಥಾ ॥26॥
ಅಥವಾ ಸಂಜಯನೇ, ಇದೆಲ್ಲವೂ ಸರ್ವಥಾ ಹೀಗೆಯೇ ನಡೆಯಬೇಕಾಗಿದ್ದಿತು. ವಿಧಿಯು ಹೇಗೆ ಸಂಕಲ್ಪಿಸಿದೆಯೋ ಅದರಂತೆ ಎಲ್ಲವೂ ನಡೆಯುತ್ತದೆ. ಯಾವುದೂ ವ್ಯತ್ಯಾಸವನ್ನು ಹೊಂದುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಾಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ಮೂರನೆಯ ಅಧ್ಯಾಯ
ಭೀಮಸೇನನ ಪರಾಕ್ರಮ ಮತ್ತು ದ್ರೋಣರ ಪ್ರತಿಕ್ರಿಯೆ.
ಸಂಜಯಃ
ಆತ್ಮದೋಷಾತ್ ತ್ವಯಾ ರಾಜನ್ ಪ್ರಾಪ್ತಂ ವ್ಯಸನಮೀದೃಶಮ್ |
ನ ಹಿ ದುರ್ಯೋಧನಸ್ತಾನಿ ಪಶ್ಯತೇ ಭರತರ್ಷಭ |
ಯಾನಿ ತ್ವಂ ದೃಷ್ಟವಾನ್ ರಾಜನ್ ಧರ್ಮಸಂಕರಕಾರಿತೇ ॥1॥
ಸಂಜಯ ಎಲೈ ರಾಜನೇ, ನಿನ್ನ ದೋಷದಿಂದಲೇ ನೀನು ಇಂತಹ ವ್ಯಸನವನ್ನು ತಂದುಕೊಂಡಿದ್ದೀಯೆ. ಎಲೈ ಭರತಶ್ರೇಷ್ಠನೇ,

ಧರ್ಮಸಂಕರದಿಂದ ಉಂಟಾಗುವ ಯಾವ ದೋಷಗಳನ್ನು ನೀನು ನೋಡಿದ್ದೀಯೋ ಅದನ್ನು ದುರ್ಯೋಧನನು ನೋಡುವುದಿಲ್ಲ.
ತವ ದೋಷಾತ್ ಪುರಾ ವೃತ್ತಂ ದ್ಯೂತಮೇತದ್ ವಿಶಾಂಪತೇ |
ತವ ದೋಷೇಣ ಯುದ್ಧಂ ಚ ಪ್ರವೃತ್ತಂ ಸಹ ಪಾಂಡವೈಃ |
ತ್ವಮೇವಾದ್ಯ ಫಲಂ ಭುಂಕ್ಷ್ವ ಕೃತ್ವಾ ಕಿಲ್ಬಿಷಮಾತ್ಮನಾ ॥2॥
ಎಲೈ ರಾಜನೇ, ನಿನ್ನ ದೋಷದಿಂದ ಹಿಂದೆ ಈ ದ್ಯೂತವು ನಡೆಯಿತು. ನಿನ್ನ ದೋಷದಿಂದಲೇ ಪಾಂಡವರ ಜೊತೆಯಲ್ಲಿ ಯುದ್ಧವು ಪ್ರಸಕ್ತವಾಯಿತು. ನೀನು ಮಾಡಿದ ಅಪರಾಧಕ್ಕಾಗಿ ಈ ದಿನ ಅದರ ಫಲವನ್ನು ಅನುಭವಿಸು.
ಆತ್ಮನಾ ಹಿ ಕೃತಂ ಕರ್ಮ ಆತ್ಮನೈವೋಪಭುಜ್ಯತೇ |
ಇಹ ವಾ ಪ್ರೇತ್ಯ ವಾ ರಾಜನ್ ತ್ವಯಾ ಪ್ರಾಪ್ತಂ ಯಥಾತಥಮ್ ॥3॥
ಎಲೈ ರಾಜನೇ, ತಾನು ಮಾಡಿದ ಪಾಪದ ಫಲವನ್ನು ತಾನೇ ಈ ಲೋಕದಲ್ಲಾಗಲೀ ಅಥವಾ ಪರಲೋಕದಲ್ಲಾಗಲೀ ಅನುಭವಿಸಬೇಕು. ನಿನಗೆ ಒದಗಿ ಬಂದಿರುವ ದುಃಖವು ಯುಕ್ತವಾಗಿಯೇ ಇದೆ.
ತಸ್ಮಾದ್ ರಾಜನ್ ಸ್ಥಿರೋ ಭೂತ್ವಾ ಪ್ರಾಪ್ಯೇದಂ ವ್ಯಸನಂ ಮಹತ್ |
ಶೃಣು ಯುದ್ಧಂ ಯಥಾವೃತ್ತಂ ಶಂಸತೋ ಮಮ ಮಾರಿಷ ॥4॥
ಆದ್ದರಿಂದ ಎಲೈ ರಾಜನೇ, ಪೂಜ್ಯನೇ, ಇಂತಹ ದೊಡ್ಡ ವ್ಯಸನವನ್ನು ಹೊಂದಿ, ಮನಸ್ಸನ್ನು ಸ್ಥಿರ ಮಾಡಿಕೊಂಡು ನಾನು ಹೇಳುವಂತೆ ಯುದ್ಧದ ಯಥಾರ್ಥವಾದ ಘಟನೆಯನ್ನು ಕೇಳು.
ಭೀಮಸೇನಸ್ತು ನಿಶಿತೈರ್ಬಾಣೈರ್ಭಿತ್ತ್ವಾ ಮಹಾಚಮೂಮ್ |
ಆಸಸಾದ ತತೋ ವೀರಃ ಸರ್ವಾನ್ ದುರ್ಯೋಧನಾನುಜಾನ್ ॥5॥
ಭೀಮಸೇನನಾದರೋ ತೀಕ್ಷ್ಣವಾದ ಬಾಣಗಳಿಂದ ಕೌರವ ಸೈನ್ಯವನ್ನು ಭೇದಿಸಿ ವೀರನಾದ ಅವನು ದುರ್ಯೋಧನನ ಎಲ್ಲಾ ತಮ್ಮಂದಿರನ್ನೂ ಸಮೀಪಿಸಿದನು.
ದುಃಶಾಸನಂ ದುರ್ವಿಷಹಂ ದುಃಸಹಂ ದುರ್ಮದಂ ಜಯಮ್ |
ಜಯತ್ಸೇನಂ ವಿಕರ್ಣಂ ಚ ಚಿತ್ರಸೇನಂ ಸುದರ್ಶನಮ್ ॥6॥
ಚಾರುಚಿತ್ರಂ ಸುವರ್ಮಾಣಂ ದುಷ್ಕರ್ಣಂ ಕರ್ಣಮೇವ ಚ |
ಏತಾನನ್ಯಾಂಶ್ಚ ಸುಬಹೂನ್ ಸಮೀಪಸ್ಥಾನ್ ಮಹಾರಥಾನ್ ॥7॥
ಧಾರ್ತರಾಷ್ಟ್ರಾನ್ ಸುಸಂಕ್ರುದ್ಧಾನ್ ದೃಷ್ಟ್ವಾ ಭೀಮೋ ಮಹಾಬಲಃ |
ಭೀಷ್ಮೇಣ ಸಮರೇ ಗುಪ್ತಾಂ ಪ್ರವಿವೇಶ ಮಹಾಚಮೂಮ್ ॥8॥
ದುಶ್ಶಾಸನ, ದುರ್ವಿಷಹ, ದುಃಸಹ, ದುರ್ಮದ, ಜಯ, ಜಯತ್ಸೇನ, ವಿಕರ್ಣ, ಚಿತ್ರಸೇನ, ಸುದರ್ಶನ, ಚಾರುಚಿತ್ರ, ಸುವರ್ಮ, ದುಷ್ಕರ್ಣ, ಕರ್ಣ ಇವರೇ ಮೊದಲಾದ ಸಮೀಪದಲ್ಲಿದ್ದ ಮಹಾರಥರಾದ ಇನ್ನೂ ಅನೇಕ ಧೃತರಾಷ್ಟ್ರ ಪುತ್ರರನ್ನು ನೋಡಿ, ಮಹಾಬಲನಾದ ಕೋಪಗೊಂಡ ಭೀಮನು ರಣರಂಗದಲ್ಲಿ ಭೀಷ್ಮರಿಂದ ರಕ್ಷಿತವಾದ ಆ ದೊಡ್ಡ ಸೈನ್ಯವನ್ನು ಪ್ರವೇಶಿಸಿದನು.
ಅಥಾಹ್ವಯಂತ ತೇಽನ್ಯೋನ್ಯಮಯಂ ಪ್ರಾಪ್ತೋ ವೃಕೋದರಃ |
ಜೀವಗ್ರಾಹಂ ನಿಗೃಹ್ಣೀಮೋ ವಯಮೇನಂ ನರಾಧಿಪಾಃ ॥9॥
ಆಗ ಆ ಮಹಾರಥರು ಎಲೈ ರಾಜರೇ, ಈ ವೃಕೋದರನು ಬಂದಿದ್ದಾನೆ. ಅವನನ್ನು ನಾವು ಜೀವಸಹಿತವಾಗಿ ಹಿಡಿಯೋಣ ಎಂದು ಪರಸ್ಪರವಾಗಿ ಮಾತನಾಡಿಕೊಂಡರು.
ಸ ತೈಃ ಪರಿವೃತಃ ಪಾರ್ಥೋ ಭ್ರಾತೃಭಿಃ ಕೃತನಿಶ್ಚಯೈಃ |
ಪ್ರಜಾಸಂಹರಣೇ ಸೂರ್ಯಃ ಕ್ರೂರೈರಿವ ಮಹಾಗ್ರಹೈಃ ॥10॥
ಪ್ರಜೆಗಳ ವಿನಾಶಕಾಲದಲ್ಲಿ ಸೂರ್ಯನು ಕ್ರೂರವಾದ ಮಹಾಗ್ರಹಗಳಿಂದ ಸುತ್ತುವರಿಯಲ್ಪಟ್ಟಂತೆ ಭೀಮಸೇನನು ಪೂರ್ವನಿಶ್ಚಯವುಳ್ಳ ತನ್ನ ಆ ಸಹೋದರರಿಂದ ಸುತ್ತುವರಿಯಲ್ಪಟ್ಟನು.
ಸಂಪ್ರಾಪ್ಯ ಮಧ್ಯಂ ವ್ಯೂಹಸ್ಯ ನ ಭೀಃ ಪಾಂಡವಮಾವಿಶತ್ |
ಯಥಾ ದೇವಾಸುರೇ ಯುದ್ಧೇ ಮಹೇಂದ್ರಃ ಪ್ರಾಪ್ಯ ದಾನವಾನ್ ॥11॥
ದೇವಾಸುರರ ಯುದ್ಧದಲ್ಲಿ ದಾನವರನ್ನು ಸಮೀಪಿಸಿದ ಇಂದ್ರನಿಗೆ ಹೇಗೆ ಭಯವುಂಟಾಗಲಿಲ್ಲವೋ, ಅದರಂತೆ ಕೌರವರ ವ್ಯೂಹದ ಮಧ್ಯವನ್ನು ಪ್ರವೇಶಿಸಿದ ಪಾಂಡವನಾದ ಭೀಮಸೇನನಿಗೂ ಭಯವುಂಟಾಗಲಿಲ್ಲ.
ತತಃ ಶತಸಹಸ್ರಾಣಿ ರಥಿನಾಂ ಸರ್ವಶಃ ಪ್ರಭೋ |
ಉದ್ಯತಾನಿ ಶರೈರ್ಘೋರೈಸ್ತಮೇಕಮನುವವ್ರಿರೇ ॥12॥
ಎಲೈ ಪ್ರಭುವೇ, ಅನಂತರ ನೂರಾರು ಸಹಸ್ರಾರು ರಥಿಕರು ಭೀಮಸೇನನೊಬ್ಬನನ್ನು ಹಿಡಿಯಲು ಘೋರವಾದ ಶರಗಳನ್ನು ಪ್ರಯೋಗಿಸಿ, ಎಲ್ಲ ಕಡೆಗಳಿಂದಲೂ ಬಂಧಿಸಲು ಉದ್ಯುಕ್ತರಾದರು.
ಸ ತೇಷಾಂ ಪ್ರವರಾನ್ ಯೋಧಾನ್ ಹಸ್ತ್ಯಶ್ವರಥಸಾದಿನಃ |
ಜಘಾನ ಸಮರೇ ಶೂರೋ ಧಾರ್ತರಾಷ್ಟ್ರಾನಚಿಂತಯನ್ ॥13॥
ಭೀಮಸೇನನಾದರೋ ಧೃತರಾಷ್ಟ್ರ ಪುತ್ರರನ್ನು ಲೆಕ್ಕಿಸದೆ, ಶೂರನಾದ ಅವನು ಯುದ್ಧದಲ್ಲಿ ಶತ್ರುಸೈನ್ಯದಲ್ಲಿ ಶ್ರೇಷ್ಠರಾದ ಯೋಧರನ್ನು ಮತ್ತು ಗಜಾಶ್ವರಥ ಪದಾತಿಗಳನ್ನು ಸಂಹರಿಸಿದನು.
ತೇಷಾಂ ವ್ಯವಸಿತಂ ಜ್ಞಾತ್ವಾ ಭೀಮಸೇನೋ ಜಿಘೃಕ್ಷತಾಮ್ |
ಸಮಸ್ತಾನಾಂ ವಧೇ ರಾಜನ್ಮತಿಂ ಚಕ್ರೇ ಮಹಾಮನಾಃ ॥14॥
ಎಲೈ ರಾಜನೇ, ತನ್ನನ್ನು ಹಿಡಿಯಲು ಆಶಿಸುತ್ತಿರುವ ಅವರ ಅಭಿಪ್ರಾಯವನ್ನು ತಿಳಿದು ಧೈರ್ಯಶಾಲಿಯಾದ ಅವನು

ಅವರೆಲ್ಲರನ್ನೂ ಕೊಲ್ಲಲು ನಿರ್ಧರಿಸಿದನು.
ತತೋ ರಥಂ ಸಮುತ್ಸೃಜ್ಯ ಗದಾಮಾದಾಯ ಪಾಂಡವಃ |
ಉವಾಚ ಸಾರಥಿಂ ಭೀಮಃ ಸ್ಥೀಯತಾಮಿತಿ ಭಾರತ |
ಯಾವದೇತಾನ್ ಹನಿಷ್ಯಾಮಿ ಧಾರ್ತರಾಷ್ಟ್ರಾನ್ ಸಹಾನುಗಾನ್ ||15||
ಎಲೈ ಭಾರತನೇ, ಆಗ ಪಾಂಡುಪುತ್ರನಾದ ಭೀಮಸೇನನು ಗದೆಯನ್ನು ತೆಗೆದುಕೊಂಡು ರಥವನ್ನು ಪರಿತ್ಯಜಿಸಿ, ಸಾರಥಿಯನ್ನು ಕುರಿತು, ನಾನು ಧೃತರಾಷ್ಟ್ರ ಪುತ್ರರನ್ನು ಮತ್ತು ಅವರ ಅನುಯಾಯಿಗಳನ್ನು ಕೊಲ್ಲುವವರೆಗೆ ನೀನು ಇಲ್ಲಿಯೇ ಇರು ಎಂದು ಹೇಳಿದನು.
ಇತ್ಯುಕತ್ವ ಭೀಮಸೇನಸ್ತು ಪ್ರವಿಶ್ಯ ಮಹತೀಂ ಚಮೂಮ್ |
ಗದಯಾ ಭೀಮಸೇನೇನ ತಾಡಿತಾ ವಾರಣೋತ್ತಮಾಃ ||17||
ಭಿನ್ನಕುಂಭಾ ಮಹಾಕಾಯಾ ಭಿನ್ನಪೃಷ್ಠಾಸ್ತಥೈವ ಚ |
ಭಿನ್ನಗಾತ್ರಾಃ ಸಹಾರೋಹಾಃ ಶೇರತೇ ಪರ್ವತಾ ಇವ ||18||
ಹೀಗೆ ಹೇಳಿ ಭೀಮಸೇನನು ದೊಡ್ಡ ಶತ್ರುಸೈನ್ಯವನ್ನು ಪ್ರವೇಶಿಸಿ, ಗದೆಯನ್ನು ಬೀಸಿದನು. ಭೀಮಸೇನನ ಗದೆಯಿಂದ ಹೊಡೆಯಲ್ಪಟ್ಟ ಮಹಾಕಾಯವುಳ್ಳ ಶ್ರೇಷ್ಠವಾದ ಗಜಗಳು ತಮ್ಮ ಕುಂಭಸ್ಥಲವನ್ನು, ಬೆನ್ನನ್ನು ಮುರಿದುಕೊಂಡು, ದೇಹವು ಭಗ್ನವಾಗಿ ಗಜಾರೋಹಿಗಳ ಜೊತೆಯಲ್ಲಿ ಪರ್ವತಗಳಂತೆ ಭೂಮಿಯ ಮೇಲೆ ಬಿದ್ದವು.
ರಥಾಶ್ಚ ಭಗ್ನಾಸ್ತಿಲಶಃ ಸಯೋಧಾಃ ಶತಶೋ ರಣೇ |
ಅಶ್ವಾಶ್ಚ ಸಾದಿನಶ್ಚೈವ ಪಾದಾತ್ಯೈಃ ಸಹ ಭಾರತ ||19||
ಯೋಧರಿಂದ ಕೂಡಿದ ರಥಗಳು ಯುದ್ಧದಲ್ಲಿ ನೂರರ ಸಂಖ್ಯೆಯಲ್ಲಿ ಎಳ್ಳಿನಷ್ಟು ಸಣ್ಣದಾಗಿ ಭಗ್ನವಾದವು. ಎಲೈ ಭಾರತನೇ, ಅಶ್ವಗಳು, ಅಶ್ವಾರೋಹಿಗಳು ಪದಾತಿಗಳ ಜೊತೆಯಲ್ಲಿ ಭಗ್ನರಾದರು.
ತತ್ರಾದ್ಭುತಮಪಶ್ಯಾಮ ಭೀಮಸೇನಸ್ಯ ವಿಕ್ರಮಮ್ |
ಯದೇಕಃ ಸಮರೇ ರಾಜನ್ ಬಹುಭಿಃ ಸಮಯೋಧಯತ್ |
ಅಂತಕಾಲೇ ಪ್ರಜಾಃ ಸರ್ವಾ ದಂಡಪಾಣಿರಿವಾಂತಕಃ ||20||
ಎಲೈ ರಾಜನೇ, ಭೀಮಸೇನನೊಬ್ಬನೇ ಯಮನು ದಂಡವನ್ನು ಹಿಡಿದು ಎಲ್ಲಾ ಪ್ರಜೆಗಳನ್ನು ಅಂತ್ಯಕಾಲದಲ್ಲಿ ಸಂಹರಿಸುವಂತೆ ಭೀಮನೊಬ್ಬನೇ ಅನೇಕರ ಜೊತೆಯಲ್ಲಿ ಯುದ್ಧವನ್ನು ಮಾಡಿದ ಅವನ ಅದ್ಭುತ ಪರಾಕ್ರಮವನ್ನು ನಾವು ನೋಡಿದೆವು.
ಜಘಾನ ಧಾರ್ತರಾಷ್ಟ್ರಾಣಾಂ ತಂ ಬಲೌಘಮಹಾರ್ಣವಮ್ ||21||
ಭೀಮಸೇನನು ಗದೆಯನ್ನು ತೆಗೆದುಕೊಂಡು ಮಹಾಸಮುದ್ರದಂತಿದ್ದ ಧೃತರಾಷ್ಟ್ರ ಪುತ್ರರ ಸೈನ್ಯವನ್ನು ಸಂಹರಿಸಿದನು.
ಭೀಮಸೇನೇ ಪ್ರವಿಷ್ಟೇ ತು ಧೃಷ್ಟದ್ಯುಮ್ನೋಽಪಿ ಪಾರ್ಷತಃ |
ದ್ರೋಣಮುತ್ಸೃಜ್ಯ ತರಸಾ ಪ್ರಯಯೌ ಯತ್ರ ವೃಕೋದರಃ ||22||
ಭೀಮಸೇನನು ಕೌರವರ ಸೈನ್ಯವನ್ನು ಪ್ರವೇಶಿಸುತ್ತಿರಲು ಪಾರ್ಷತನಾದ ಧೃಷ್ಟದ್ಯುಮ್ನನೂ ಸಹ ದ್ರೋಣರನ್ನು ಬಿಟ್ಟು ವೃಕೋದರನ ಕಡೆಗೆ ಶೀಘ್ರವಾಗಿ ಹೋದನು.
ವಿದಾರ್ಯ ಮಹತೀಂ ಸೇನಾಂ ತಾವಕಾನಾಂ ನರರ್ಷಭಃ |
ಆಸಸಾದ ರಥಂ ಶೂನ್ಯಂ ಭೀಮಸೇನಸ್ಯ ಸಂಯುಗೇ ||23||
ನರಶ್ರೇಷ್ಠನಾದ ಅವನು ನಿನ್ನವರ ದೊಡ್ಡ ಸೈನ್ಯವನ್ನು ಸೀಳಿಕೊಂಡು ಯುದ್ಧದಲ್ಲಿ ಭೀಮಸೇನನಿಲ್ಲದ ಅವನ ಶೂನ್ಯವಾದ ರಥವನ್ನು ತಲುಪಿದನು.
ದೃಷ್ಟ್ವಾ ವಿಶೋಕಂ ಸಮರೇ ಭೀಮಸೇನಸ್ಯ ಸಾರಥಿಮ್ |
ಧೃಷ್ಟದ್ಯುಮ್ನೋ ಮಹಾರಾಜ ದುರ್ಮನಾ ಗತಚೇತನಃ ||24||
ಅಪೃಚ್ಛದ್ ಬಾಷ್ಪಸಂರುದ್ಧೋ ನಿಸ್ವನಾಂ ವಾಚಮೀರಯನ್ |
ಮಮ ಪ್ರಾಣೈಃ ಪ್ರಿಯತಮಃ ಕ್ವ ಭೀಮ ಇತಿ ದುಃಖಿತಃ ||25||
ಎಲೈ ಮಹಾರಾಜನೇ, ಧೃಷ್ಟದ್ಯುಮ್ನನು ಭೀಮಸೇನನ ಸಾರಥಿಯಾದ ವಿಶೋಕನನ್ನು ರಣರಂಗದಲ್ಲಿ ನೋಡಿ ಖೇದಗೊಂಡು ಪ್ರಜ್ಞೆಯನ್ನೇ ಕಳೆದುಕೊಂಡವನಂತೆ ಬಾಷ್ಪಭರಿತ ನೇತ್ರಗಳಲ್ಲಿ, ಸಣ್ಣ ಸ್ವರದಲ್ಲಿ ಅವನನ್ನು ಕುರಿತು ದುಃಖದಿಂದ, ನನಗೆ ಪ್ರಾಣಗಳಿಗಿಂತಲೂ ಪ್ರಿಯನಾದ ಭೀಮಸೇನನು ಎಲ್ಲಿ ಎಂದು ಕೇಳಿದನು.
ವಿಶೋಕಸ್ತಮುವಾಚೇದಂ ಧೃಷ್ಟದ್ಯುಮ್ನಂ ಕೃತಾಂಜಲಿಃ |
ಸಂಸ್ಥಾಪ್ಯ ಮಾಮಿಹ ಬಲೀ ಪಾಂಡವೇಯಃ ಪ್ರತಾಪವಾನ್ ||26||
ಪ್ರವಿಷ್ಟೋ ಧಾರ್ತರಾಷ್ಟ್ರಾಣಾಮೇತದ್ ಬಲಮಹಾರ್ಣವಮ್ |
ಮಾಮುಕತ್ವ ಪುರುಷವ್ಯಾಘ್ರ ಪ್ರೀತಿಯುಕ್ತಮಿದಂ ವಚಃ ||27||
ಪ್ರತಿಪಾಲಯ ಮಾಂ ಸೂತ ನಿಯಮ್ಯಾಶ್ವಾನ್ ಮುಹೂರ್ತಕಮ್ |
ಯಾವದೇತಾನ್ನಿಹನ್ಮ್ಯಾಶು ಯ ಇಮೇ ಮದ್ವಧೋದ್ಯತಾಃ ||28||
ವಿಶೋಕನು ಧೃಷ್ಟದ್ಯುಮ್ನನನಿಗೆ ಕೈಮುಗಿದು ಈ ಮಾತುಗಳನ್ನು ಆಡಿದನು. ಬಲಿಷ್ಠನೂ, ಪ್ರತಾಪಶಾಲಿಯೂ ಆದ ಪಾಂಡುಪುತ್ರನಾದ ಭೀಮಸೇನನು ನನ್ನನ್ನು ಇಲ್ಲಿ ನಿಲ್ಲಿಸಿ, ಧೃತರಾಷ್ಟ್ರ ಪುತ್ರರ ಈ ಸೈನ್ಯಸಮುದ್ರವನ್ನು ಪ್ರವೇಶಿಸಿದನು. ಎಲೈ ಪುರುಷವ್ಯಾಘ್ರನೇ, ನನ್ನನ್ನು ಕುರಿತು ಪ್ರೀತಿಪೂರ್ವಕವಾಗಿ ಸೂತನೇ, ಒಂದು ಮುಹೂರ್ತದ ಕಾಲ ಅಶ್ವಗಳನ್ನು ನಿಯಂತ್ರಿಸು, ಅಷ್ಟರಲ್ಲಿ ನಾನು ನನ್ನನ್ನು ಕೊಲ್ಲಲು ಉದ್ಯುಕ್ತರಾದ ಈ ಧೃತರಾಷ್ಟ್ರ ಪುತ್ರರನ್ನು ಶೀಘ್ರವಾಗಿ ಸಂಹರಿಸುತ್ತೇನೆ ಎಂದು ಹೇಳಿ (ಸೈನ್ಯವನ್ನು ಪ್ರವೇಶಿಸಿದನು).

ತತೋ ದೃಷ್ಟ್ವಾ ಗದಾಹಸ್ತಂ ಪ್ರಧಾವಂತಂ ಮಹಾಬಲಮ್ |
ಸರ್ವೇಷಾಮೇವ ಸೈನ್ಯಾನಾಂ ಸಂಘರ್ಷಃ ಸಮಜಾಯತ ॥29॥
ತಸ್ಮಿಂಸ್ತು ತುಮುಲೇ ಯುದ್ಧೇ ವರ್ತಮಾನೇ ಭಯಾನಕೇ |
ಭಿತ್ತ್ವಾ ರಾಜನ್ ಮಹಾವ್ಯೂಹಂ ಪ್ರವಿವೇಶ ಸಖಾ ತವ ॥30॥
ಆಗ ಕೈಯಲ್ಲಿ ಗದೆಯನ್ನು ಹಿಡಿದು ಓಡುತ್ತಿರುವ ಮಹಾಬಲನಾದ ಭೀಮಸೇನನನ್ನು ನೋಡಿ ಎಲ್ಲ ಸೈನ್ಯಗಳಿಗೂ ದೊಡ್ಡ ಕದನವು ಉಂಟಾಯಿತು. ಅಂತಹ ಭಯಂಕರವಾದ, ತೀವ್ರವಾದ ಯುದ್ಧವು ನಡೆಯುತ್ತಿರಲು ಎಲೈ ರಾಜನೇ, ನಿನ್ನ ಸ್ನೇಹಿತನು ಮಹಾವ್ಯೂಹವನ್ನು ಭೇದಿಸಿ ಅದರೊಳಗೆ ಪ್ರವೇಶಿಸಿದನು (ಎಂದು ಹೇಳಿದನು).
ವಿಶೋಕಸ್ಯ ವಚಃ ಶ್ರುತ್ವಾ ಧೃಷ್ಟದ್ಯುಮ್ನೋಽಪಿ ಪಾರ್ಷತಃ |
ಪ್ರತ್ಯುವಾಚ ತತಃ ಸೂತಂ ರಣಮಧ್ಯೇ ಮಹಾಬಲಃ ॥31॥
ವಿಶೋಕನ ಮಾತುಗಳನ್ನು ಕೇಳಿ ಮಹಾಬಲನಾದ ಪಾರ್ಷತನಾದ ಧೃಷ್ಟದ್ಯುಮ್ನನೂ ಸಹ ಸೂತನಾದ ವಿಶೋಕನನ್ನು ಕುರಿತು ರಣರಂಗದ ಮಧ್ಯದಲ್ಲಿ ಮಾತನಾಡಿದನು.
ನ ಹಿ ಮೇ ವಿದ್ಯತೇ ಸೂತ ಜೀವಿತೇಽದ್ಯ ಪ್ರಯೋಜನಮ್ |
ಭೀಮಸೇನಂ ರಣೇ ಹಿತ್ವಾ ಸ್ನೇಹಮುತ್ಸೃಜ್ಯ ಪಾಂಡವೈಃ ॥32॥
ಎಲೈ ಸೂತನೇ, ಪಾಂಡವರ ಜೊತೆಯಲ್ಲಿ ಸ್ನೇಹವನ್ನು ಪರಿತ್ಯಜಿಸಿ ಭೀಮಸೇನನನ್ನು ರಣಭೂಮಿಯಲ್ಲಿ ಬಿಟ್ಟು ನಾನು ಬದುಕುವುದರಿಂದ ನನಗೆ ಆಗಬೇಕಾದ ಪ್ರಯೋಜನವು ಯಾವುದೂ ಇಲ್ಲ.
ಯದಿ ಯಾಮಿ ವಿನಾ ಭೀಮಂ ಕಿಂ ಮಾಂ ಕ್ಷತ್ರಂ ವದಿಷ್ಯತಿ |
ಏಕಾಯನಗತೇ ಭೀಮೇ ಮಯಿ ಚಾವಸ್ಥಿತೇ ಯುಧಿ |
ಧಿಕ್ಕೃತಸ್ಯ ಚ ಕ್ಷತ್ರೇಣ ನಿರರ್ಥಂ ಜೀವಿತಂ ಭವೇತ್ ॥33॥
ಒಂದೇ ಯಾನದಲ್ಲಿ ಸುಮ್ಮನೆ ಕುಳಿತು ಭೀಮಸೇನನನ್ನು ರಕ್ಷಿಸಲಾಗದೆ ನಾನು ಹಿಂದಿರುಗಿದರೆ ಶತ್ರುಗಳು ನನ್ನ ವಿಷಯದಲ್ಲಿ ಏನು ಹೇಳುವರು?
ಅಸ್ವಸ್ತಿ ತಸ್ಯ ಕುರ್ವಂತಿ ದೇವಾಃ ಸಾಗ್ನಿಪುರೋಗಮಾಃ |
ಯಃ ಸಹಾಯಾನ್ ಪರಿತ್ಯಜ್ಯ ಸ್ವಸ್ತಿಮಾನಾವ್ರಜೇದ್ ಗೃಹಮ್ ॥33॥
ಯಾವನು ತನ್ನ ಸಹಾಯಕರನ್ನು ಪರಿತ್ಯಜಿಸಿ ಒಬ್ಬನೇ ತನ್ನ ಮನೆಗೆ ಹಿಂದಿರುಗುತ್ತಾನೆಯೋ, ಅವನಿಗೆ ಅಗ್ನಿ ಮೊದಲಾದ ದೇವತೆಗಳು ಅಶುಭವನ್ನು ಮಾಡುತ್ತಾರೆ.
ಮಮ ಭೀಮಃ ಸಖಾ ಚೈವ ಸಂಬಂಧೀ ಚ ಮಹಾಬಲಃ |
ಭಕ್ತೋಽಸ್ಮಾನ್ ಭಕ್ತಿಮಾಂಶ್ಚಾಹಂ ತಮಪ್ಯರಿನಿಷೂದನಮ್ ॥34॥
ಮಹಾಬಲನಾದ ಭೀಮಸೇನನು ನನ್ನ ಸ್ನೇಹಿತ ಮತ್ತು ಬಂಧು. ನಮ್ಮಲ್ಲಿ ವಿಶೇಷವಾದ ಪ್ರೀತಿಯುಳ್ಳವನು. ನಾನೂ ಸಹ ಶತ್ರುಸೂದನನಾದ ಅವನಲ್ಲಿ ಬಹಳ ಪ್ರೀತಿಯನ್ನು ಹೊಂದಿದ್ದೇನೆ.
ಸೋಽಹಂ ತತ್ರ ಗಮಿಷ್ಯಾಮಿ ಯತ್ರ ಯಾತೋ ವೃಕೋದರಃ |
ನಿಘ್ನಂತಂ ಮಾಮರೀನ್ ಪಶ್ಯ ದಾನವಾನಿವ ವಾಸವಮ್ ॥35॥
ಅಂತಹ ನಾನು ಎಲ್ಲಿ ವೃಕೋದರ ಹೋಗಿದ್ದಾನೆಯೋ ಅಲ್ಲಿಗೆ ಹೋಗುವೆನು. ಇಂದ್ರನು ದಾನವರನ್ನು ಸಂಹರಿಸಿದಂತೆ ಶತ್ರುಗಳನ್ನು ಸಂಹರಿಸುವ ನನ್ನನ್ನು ನೀನು ನೋಡು.
ಏವಮುಕತ್ವಾ ತತೋ ವೀರೋ ಯಯೌ ಮಧ್ಯೇನ ವಾಹಿನೀಮ್ |
ಭೀಮಸೇನಸ್ಯ ಮಾರ್ಗೇಷು ಗದಾಪ್ರಮಥಿತೈರ್ಗಜೈಃ ॥36॥
ಹೀಗೆ ಹೇಳಿ ವೀರನಾದ ಅವನು ಭೀಮಸೇನನು ನಡೆದ ಮಾರ್ಗದಲ್ಲಿ ಬಿದ್ದಿದ್ದ ಅವನ ಗದಾಭಗ್ನವಾದ ಗಜಗಳಿಂದ ತೋರಿಸಲ್ಪಟ್ಟ ಮಾರ್ಗದಲ್ಲಿ ಸೈನ್ಯದ ಮಧ್ಯದಲ್ಲಿ ಮುಂದೆ ಸಾಗಿದನು.
ಸ ದದರ್ಶ ತತೋ ಭೀಮಂ ದಹಂತಂ ರಿಪುವಾಹಿನೀಮ್ |
ವಾತಂ ವೃಕ್ಷಾನಿವ ಬಲಾತ್ ಪ್ರಭಂಜಂತಂ ರಣೇ ನೃಪಾನ್ ॥37॥
ಅವನು ಬಿರುಗಾಳಿಯು ತನ್ನ ಬಲದಿಂದ ವೃಕ್ಷಗಳನ್ನು ಬೀಳಿಸಿದಂತೆ ಯುದ್ಧದಲ್ಲಿ ರಾಜರನ್ನು ಭಗ್ನಗೊಳಿಸುತ್ತಾ ರಿಪು ಸೈನ್ಯವನ್ನು ದಹಿಸುತ್ತಿದ್ದ ಭೀಮನನ್ನು ನೋಡಿದನು.
ತೇ ಹನ್ಯಮಾನಾಃ ಸಮರೇ ರಥಿನಃ ಸಾದಿನಸ್ತಥಾ |
ಪಾದಾತಾ ದಂತಿನಶ್ಚೈವ ಚಕ್ರುರಾರ್ತಸ್ವರಂ ಮಹತ್ ॥38॥
ಭೀಮನ ಹೊಡೆತಕ್ಕೆ ಸಿಕ್ಕಿದ ರಥಿಕರು, ಅಶ್ವಾರೋಹಿಗಳು, ಪದಾತಿಗಳು ಮತ್ತು ಗಜಗಳು ರಣರಂಗದಲ್ಲಿ ದೊಡ್ಡ ಆರ್ತಸ್ವರವನ್ನು ಮಾಡಿದವು.
ಹಾಹಾಕಾರಶ್ಚ ಸಂಜಜ್ಞೇ ತವ ಸೈನ್ಯಸ್ಯ ಮಾರಿಷ |
ವಧ್ಯತೋ ಭೀಮಸೇನೇನ ಕೃತಿನಾ ಚಿತ್ರಯೋಧಿನಾ ॥39॥
ಎಲೈ ಪೂಜ್ಯನೇ, ವಿಚಿತ್ರವಾಗಿ ಯುದ್ಧವನ್ನು ಮಾಡುವ ಕುಶಲನಾದ ಭೀಮಸೇನನಿಂದ ವಧಿಸಲ್ಪಡುವ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು.
ತತಃ ಕೃತಾಸತ್ರಸ್ತೇ ಸರ್ವೇ ಪರಿವಾರ್ಯ ವೃಕೋದರಮ್ |
ಅಭೀತಾಃ ಸಮವರ್ತಂತ ಶಸ್ತ್ರವೃಷ್ಟ್ಯಾ ಸಮಂತತಃ ॥40॥

ಅನಂತರ ಅಸ್ತ್ರವಿದ್ಯೆಯನ್ನು ಬಲ್ಲ ಅವರೆಲ್ಲರೂ ವೃಕೋದರನನ್ನು ಸುತ್ತುವರಿದು ಶಸ್ತ್ರಗಳ ಮಳೆಯನ್ನು ಎಲ್ಲ ಕಡೆಗಳಿಂದಲೂ ಸುರಿಸುತ್ತ ನಿರ್ಭಯರಾಗಿ ಮುಂದೆ ಬಂದರು.

ಅಭಿದ್ರುತಂ ಶಸ್ತ್ರಭೃತಾಂ ವರಿಷ್ಠಂ
ಸಮಂತತಃ ಪಾಂಡವಂ ಲೋಕವೀರೈಃ |
ಸೈನ್ಯೇನ ಘೋರೇಣ ಸುಸಂಗತೇನ
ದೃಷ್ಟ್ವಾ ಬಲೀ ಪಾರ್ಷತೋ ಭೀಮಸೇನಮ್ ॥41॥
ಅಥೋಪಗಚ್ಛಚ್ಛರವಿಕ್ಷತಾಂಗಂ
ಪದಾತಿನಂ ಕ್ರೋಧವಿಷಂ ವಮಂತಮ್ |
ಆಶ್ವಾಸಯನ್ ಪಾರ್ಷತೋ ಭೀಮಸೇನಂ
ಗದಾಹಸ್ತಂ ಕಾಲಮಿವಾಂತಕಾಲೇ ॥42॥

ಬಲಿಷ್ಠನಾದ ಧೃಷ್ಟದ್ಯುಮ್ನನು ಸುಸಂಗತವಾದ ಘೋರವಾದ ಸೈನ್ಯದಿಂದ ಕೂಡಿದ, ಲೋಕವೀರರಿಂದ ಓಡಿಬಂದು ಸುತ್ತುವರಿಯಲ್ಪಟ್ಟ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಕ್ರೋಧವಿಷವನ್ನು ಕಾರುತ್ತಿದ್ದ, ಕೈಯಲ್ಲಿ ಗದೆಯನ್ನು ಹಿಡಿದು ಅಂತಕಾಲದ ಯಮನಂತಿದ್ದ, ಗದಪ್ರಹಾರದಿಂದ ಗಾಯಗೊಂಡ ಶರೀರವನ್ನು ಹೊಂದಿದ್ದ, ಪದಾತಿಯಾಗಿದ್ದ ಪಾಂಡುಪುತ್ರನಾದ ಭೀಮಸೇನನನ್ನು ಸಮಾಧಾನ ಪಡಿಸುತ್ತಾ ಅವನ ಸಮೀಪಕ್ಕೆ ಹೋದನು.

ನಿಃಶಲ್ಯಮೇನಂ ಚ ಚಕಾರ ತೂರ್ಣಮ್
ಆರೋಪಯಚ್ಚಾತ್ಮರಥಂ ಮಹಾತ್ಮಾ |
ಭೃಶಂ ಪರಿಷ್ವಜ್ಯ ಚ ಭೀಮಸೇನಮ್
ಆಶ್ವಾಸಯಾಮಾಸ ಚ ಶತ್ರುಮಧ್ಯೇ ॥43॥

ಮಹಾತ್ಮನಾದ ಅವನು ಶೀಘ್ರವಾಗಿ ಭೀಮಸೇನನ ಶರೀರಕ್ಕೆ ನಾಟಿದ ಶಲ್ಯಗಳನ್ನು ತೆಗೆದು, ಭೀಮಸೇನನನ್ನು ದೃಢವಾಗಿ ಆಲಿಂಗಿಸಿ ತನ್ನ ರಥಕ್ಕೆ ಏರಿಸಿ ಶತ್ರುಗಳ ಮಧ್ಯದಲ್ಲಿ ಸಮಾಧಾನ ಪಡಿಸಿದನು.

ತಥಾ ತಸ್ಮಿನ್ ವರ್ತಮಾನೇಽತಿವೇಗಂ
ಭ್ರಾತೄನಥೋಪೇತ್ಯ ತವಾಪಿ ಪುತ್ರಃ |
ತಸ್ಮಿನ್ ವಿಮರ್ದೇ ಮಹತಿ ಪ್ರವೃತ್ತೇ
ದೃಷ್ಟ್ವಾ ರಣೇ ವಾಕ್ಯಮಿದಂ ಬಭಾಷೇ ॥44॥

ಆ ಘಟನೆಯು ಹಾಗೆ ನಡೆಯುತ್ತಿರಲು ನಿನ್ನ ಪುತ್ರನು ಶೀಘ್ರವಾಗಿ ತನ್ನ ಸಹೋದರರ ಬಳಿಗೆ ಬಂದು ಆ ದೊಡ್ಡ ಯುದ್ಧವು ಪ್ರವೃತ್ತವಾಗುತ್ತಿರಲು ಧೃಷ್ಟದ್ಯುಮ್ನನನ್ನು ನೋಡಿ ರಣರಂಗದಲ್ಲಿ ಈ ಮಾತನ್ನು ಆಡಿದನು.

ಅಯಂ ದುರಾತ್ಮಾ ದ್ರುಪದಸ್ಯ ಪುತ್ರಃ
ಸಮಾಗತೋ ಭೀಮಸೇನೇನ ಸಾರ್ಧಮ್ |
ತಂ ಯಾತ ಸರ್ವೇ ಸಹಿತಾ ನಿಹಂತುಂ
ಮಾ ವೋ ರಿಪುಃ ಪ್ರಾರ್ಥಯತಾಮನೀಕಮ್ ॥45॥

ಈ ದುಷ್ಟನಾದ, ದ್ರುಪದಪುತ್ರನಾದ ಧೃಷ್ಟದ್ಯುಮ್ನನು ಭೀಮಸೇನನ ಜೊತೆಯಲ್ಲಿ ಬರುತ್ತಿದ್ದಾನೆ. ಎಲ್ಲರೂ ಜೊತೆಯಾಗಿ ಮುಂದುವರಿದು ಅವನನ್ನು ಕೊಲ್ಲಿ. ಶತ್ರುವು ವಧೆಗಾಗಿ ನಿಮ್ಮ ಸೈನ್ಯವನ್ನು ಅಪೇಕ್ಷಿಸುವುದು ಬೇಡ.

ಶ್ರುತ್ವಾ ತು ವಾಕ್ಯಂ ತಮಮೃಷ್ಯಮಾಣಾ
ಜ್ಯೇಷ್ಠಾಜ್ಞಯಾ ಚೋದಿತಾ ಧಾರ್ತರಾಷ್ಟ್ರಾಃ |
ವಧಾಯ ನಿಷ್ಪೇತುರುದಾಯುಧಾಸ್ತೇ
ಯುಗಕ್ಷಯೇ ಕೇತವೋ ಯದ್ವದುಗ್ರಾಃ ॥46॥

ದುರ್ಯೋಧನನ ಮಾತುಗಳನ್ನು ಕೇಳಿ ಹಿರಿಯಣ್ಣನಾದ ಅವನ ಆದೇಶದಿಂದ ಪ್ರೇರಿತರಾದ ಧೃತರಾಷ್ಟ್ರಪುತ್ರರು ಧೃಷ್ಟದ್ಯುಮ್ನನನ್ನು ನೋಡಿ ಸಹಿಸದೆ, ಕೈಯಲ್ಲಿ ಆಯುಧಗಳನ್ನು ಹಿಡಿದು, ಯುಗಾಂತಕಾಲದ ಧೂಮಕೇತುವಿಗಳಂತೆ ಉಗ್ರರಾಗಿ ಧೃಷ್ಟದ್ಯುಮ್ನನನ್ನು ಕೊಲ್ಲಲು ಮುಂದೆ ಸಾಗಿದರು.

ಪ್ರಗೃಹ್ಯ ಚಿತ್ರಾಣಿ ಧನೂಂಷಿ ವೀರಾ
ಜ್ಯಾನೇಮಿಘೋಷೈಃ ಪ್ರವಿಕಂಪಯಂತಃ |
ಶರೈರವರ್ಷನ್‌ದ್ರುಪದಸ್ಯ ಪುತ್ರಂ
ಯಥಾಂಬುದಾ ಭೂಧರಂ ವಾರಿಜಾಲೈಃ |
ನಿಹತ್ಯ ತಾಂಶ್ಚಾಪಿ ಶರೈಃ ಸುತೀಕ್ಷ್ಣೈಃ
ನ ವಿವ್ಯಥೇ ಸಮರೇ ಚಿತ್ರಯೋಧೀ ॥47॥

ವೀರರಾದ ಅವರು ವಿಚಿತ್ರವಾದ ಧನುಸ್ಸುಗಳನ್ನು ಹಿಡಿದುಕೊಂಡು ಹೆದೆಯ ಘೋಷದಿಂದಲೂ, ರಥದ ಘೋಷದಿಂದಲೂ ಭೂಮಿಯನ್ನು ನಡುಗಿಸುತ್ತಾ ಮೋಡಗಳು ಪರ್ವತದ ಮೇಲೆ ಜಲಸಮೂಹವನ್ನು ಸುರಿಸಿದಂತೆ ದ್ರುಪದ ಪುತ್ರನಾದ ಧೃಷ್ಟದ್ಯುಮ್ನನ ಮೇಲೆ ಬಾಣಗಳ ಮಳೆಯನ್ನು ಕರೆದರು. ವಿಚಿತ್ರವಾಗಿ ಯುದ್ಧವನ್ನು ಮಾಡುವ ಧೃಷ್ಟದ್ಯುಮ್ನನು ಅವರನ್ನು ಅತ್ಯಂತ ತೀಕ್ಷ್ಣವಾದ ಬಾಣಗಳಿಂದ ಕೊಂದನು ಮತ್ತು ರಣರಂಗದಲ್ಲಿ ಯಾವ ವ್ಯಥೆಯನ್ನೂ ಹೊಂದಲಿಲ್ಲ.

ಸಮಭ್ಯುದೀರ್ಣಾಂಶ್ಚ ತವಾತ್ಮಜಾಂಸ್ತಥಾ

निशाम्य वीरानभितः स्थितान् रणे ।
जिघांसुरुग्रं द्रुपदात्मजो युवा
प्रमोहनास्त्रं युयुजे महारथः ।
क्रुद्धो भृशं तव पुत्रेषु राजन्
दैत्येषु यद्वत् समरे महेन्द्रः ॥48॥
ವೀರರಾದ ನಿನ್ನ ಪುತ್ರರು ಬಲದಿಂದ ಪ್ರವೃದ್ಧರಾಗಿ ರಣರಂಗದಲ್ಲಿ ಸುತ್ತಲೂ ನಿಂತಿರುವುದನ್ನು ನೋಡಿ ಮಹಾರಥನೂ, ಯುವಕನೂ ಆದ, ದ್ರುಪದನ ಪುತ್ರನಾದ ಧೃಷ್ಟದ್ಯುಮ್ನನು ಅವರನ್ನು ಕೊಲ್ಲಲು ಬಯಸಿ ಎಲೈ ರಾಜನೇ, ಇಂದ್ರನು ಯುದ್ಧದಲ್ಲಿ ದೈತ್ಯರ ಮೇಲೆ ಕ್ರೋಧಗೊಂಡಂತೆ ಬಹಳ ಕ್ರೋಧಗೊಂಡು ನಿನ್ನ ಪುತ್ರರ ಮೇಲೆ ಸಂಮೋಹನಾಸ್ತ್ರವನ್ನು ಪ್ರಯೋಗಿಸಿದನು.
स वै ततोऽस्त्रं सुमहाप्रभावं
प्रमोहनं द्रोणदत्तं महात्मा ।
प्रयोजयामास उदारकर्मा
तस्मिन् रणे तव सैन्यस्य राजन् ॥49॥
ಎಲೈ ರಾಜನೇ, ಉದಾರಕರ್ಮನೂ, ಮಹಾತ್ಮನೂ ಆದ ಧೃಷ್ಟದ್ಯುಮ್ನನು ದ್ರೋಣರು ಕೊಟ್ಟ ಮಹಾಪ್ರಭಾವಶಾಲಿಯಾದ ಸಮ್ಮೋಹನಾಸ್ತ್ರವನ್ನು ರಣರಂಗದಲ್ಲಿ ನಿನ್ನ ಸೈನ್ಯದ ಮೇಲೆ ಪ್ರಯೋಗಿಸಿದನು.
ततो व्यमुह्यन्त रणे नृवीराः
प्रमोहनास्त्राहतबुद्धिसत्त्वाः ।
प्रदुद्रुवुः कुरवश्चैव सर्वे
सवाजिनागाः सरथाः समन्तात् ।
परीतकालानिव नष्टसंज्ञान्
मोहोपेतांस्तव पुत्रान् निशम्य ॥50॥
ಆಗ ವೀರರಾದ ಅವರು ಸಂಮೋಹನಾಸ್ತ್ರದ ಪ್ರಭಾವದಿಂದಾಗಿ ಬುದ್ಧಿಯನ್ನು ಮತ್ತು ಧೈರ್ಯವನ್ನು ಕಳೆದುಕೊಂಡು ರಣರಂಗದಲ್ಲಿ ವಿಮೋಹಿತರಾದರು. ಮರಣವನ್ನು ಸಮೀಪಿಸಿದವರಂತೆ ಪ್ರಜ್ಞೆಯನ್ನು ಕಳೆದುಕೊಂಡು ವಿಮೋಹಿತರಾಗಿದ್ದ ನಿನ್ನ ಪುತ್ರರನ್ನು ನೋಡಿ ಉಳಿದ ಕುರುಗಳೆಲ್ಲರೂ ತಮ್ಮ ಗಜಾಶ್ವರಥಗಳ ಜೊತೆಯಲ್ಲಿ ಎಲ್ಲ ಕಡೆಯಲ್ಲಿಯೂ ಓಡಿಹೋದರು.
एतस्मिन्नेव काले तु भीमः प्रहरतां वरः ।
विश्रम्य च तदा राजन् पीत्वाऽमृतरसं जलम् ॥51॥
पुनः सन्नह्य सहसा योधयामास संयुगे ।
धृष्टद्युम्नेन संक्रुद्धो कालयामास भारत ॥52॥
ಎಲೈ ರಾಜನೇ, ಈ ಸಮಯದಲ್ಲಿ ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಭೀಮನು ಅಮೃತದ ರಸದಂತಿದ್ದ ಜಲವನ್ನು ಪಾನಮಾಡಿ ವಿಶ್ರಾಂತಿಯನ್ನು ಪಡೆದು ಪುನಃ ಕವಚಾದಿಗಳನ್ನು ಧರಿಸಿ ತಕ್ಷಣದಲ್ಲಿಯೇ ಧೃಷ್ಟದ್ಯುಮ್ನನ ಜೊತೆಯಲ್ಲಿ ಯುದ್ಧವನ್ನು ಮಾಡಿ ಕೌರವ ಸೈನ್ಯವನ್ನು ಕಲಕಾಡಿದನು.
एतस्मिन्नेव काले तु द्रोणः शस्त्रभृतां वरः ।
द्रुपदं त्रिभिरासाद्य शरैर्विव्याध दारुणैः ॥53॥
ಈ ಕಾಲದಲ್ಲಿಯೇ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ದ್ರುಪದನನ್ನು ಸಮೀಪಿಸಿ ಘೋರವಾದ ಮೂರುಬಾಣಗಳಿಂದ ಅವನನ್ನು ಹೊಡೆದರು.
सोऽतिविद्धस्तदा राजन् रणे द्रोणेन पार्थिवः ।
अपायाद् द्रुपदो राजन् पूर्ववैरमनुस्मरन् ॥54॥
ಎಲೈ ರಾಜನೇ, ದ್ರೋಣರಿಂದ ಬಹಳವಾಗಿ ಗಾಯಗೊಂಡ ಆ ದ್ರುಪದ ರಾಜನು ಹಿಂದಿನ ವೈರವನ್ನು ಸ್ಮರಿಸಿಕೊಳ್ಳುತ್ತಾ ಅಲ್ಲಿಂದ ದೂರ ಹೋದನು.
जित्वा तु द्रुपदं द्रोणः शंखं दध्मौ प्रतापवान् ।
तस्य शंखस्वनं श्रुत्वा वित्रेसुः सर्वसोमकाः ॥55॥
ಪ್ರತಾಪಶಾಲಿಗಳಾದ ದ್ರೋಣರು ದ್ರುಪದನನ್ನು ಗೆದ್ದು ಶಂಖವನ್ನು ಊದಿದರು. ಆ ಶಂಖಧ್ವನಿಯನ್ನು ಕೇಳಿ ಎಲ್ಲ ಸೋಮಕರೂ ಬಹಳವಾಗಿ ಹೆದರಿದರು.
अथ शुश्राव तेजस्वी द्रोणः शस्त्रभृतां वरः ।
प्रमोहनास्त्रेण रणे मोहितानात्मजांस्तव ॥56॥
ಅನಂತರ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ, ತೇಜಸ್ವಿಗಳೂ ಆದ ದ್ರೋಣರು ನಿನ್ನ ಪುತ್ರರು ಪ್ರಮೋಹನಾಸ್ತ್ರದಿಂದ ಮೋಹಿತರಾಗಿದ್ದಾರೆಂಬ ವಾರ್ತೆಯನ್ನು ಕೇಳಿದರು.
ततो द्रोणो राजगृद्धी त्वरितोऽभिययौ रणात् ।
तत्रापश्यन्महेष्वासो भारद्वाजः प्रतापवान् ।
धृष्टद्युम्नं च भीमं च विचरन्तौ महारणे ॥57॥
मोहाविष्टांश्च ते पुत्रानपश्यत् स महारथः ।

ತತಃ ಪ್ರಜ್ಞಾಸ್ತ್ರಮಾದಾಯ ಮೋಹನಾಸ್ತ್ರಂ ವ್ಯಶಾತಯತ್ ॥58॥
ರಾಜರ ಹಿತವನ್ನು ಬಯಸುವ ದ್ರೋಣರು ತಕ್ಷಣದಲ್ಲಿ ಆ ಯುದ್ಧ ಭೂಮಿಯಿಂದ ಹಿಂದೆ ಸರಿದು ಪ್ರತಾಪಶಾಲಿಗಳೂ, ಮಹಾಧನುರ್ಧಾರಿಗಳೂ ಆದ ಅವರು ಧೃಷ್ಟದ್ಯುಮ್ನ ಮತ್ತು ಭೀಮಸೇನರು ಮಹಾಯುದ್ಧದಲ್ಲಿ ಓಡಾಡುತ್ತಿರುವುದನ್ನು ನೋಡಿದರು. ಆ ಮಹಾರಥರು, ನಿನ್ನ ಪುತ್ರರು ಮೋಹಪರವಶರಾಗಿರುವುದನ್ನು ನೋಡಿದರು. ಆಗ ಪ್ರಜ್ಞಾನಾಸ್ತ್ರವನ್ನು ಪ್ರಯೋಗಿಸಿ ಮೋಹನಾಸ್ತ್ರವನ್ನು ನಾಶಗೊಳಿಸಿದರು.
ಅಥ ಪ್ರತ್ಯಾಗತಪ್ರಾಣಾಸ್ತವ ಪುತ್ರಾ ಮಹಾರಥಾಃ |
ಪುನರ್ಯುದ್ಧಾಯ ಸಮರೇ ಪ್ರಯಯುರ್ಭೀಮಪಾರ್ಷತೌ ॥59॥
ಆಗ ಮಹಾರಥರಾದ ನಿನ್ನ ಪುತ್ರರು ತಮ್ಮ ಪ್ರಾಣ (ಪ್ರಜ್ಞೆ)ವನ್ನು ಮರಳಿ ಪಡೆದು ಯುದ್ಧದಲ್ಲಿ ಪುನಃ ಭೀಮ-ಧೃಷ್ಟದ್ಯುಮ್ನರ ಕಡೆಗೆ ಸಾಗಿದರು.
ತತೋ ಯುಧಿಷ್ಠಿರಃ ಪ್ರಾಹ ಸಮಾಹೂಯ ಸ್ವಸೈನಿಕಾನ್ |
ಗಚ್ಛಂತು ಪದವೀಂ ಶಕ್ತ್ಯಾ ಭೀಮಪಾರ್ಷತಯೋರ್ಯುಧಿ ॥60॥
ಸೌಭದ್ರಪ್ರಮುಖಾ ವೀರಾ ರಥಾ ದ್ವಾದಶ ದಂಸಿತಾಃ |
ಪ್ರವೃತ್ತಿಮಧಿಗಚ್ಛಂತು ನ ಹಿ ಶುಧ್ಯತಿ ಮೇ ಮನಃ ॥61॥
ಪ್ರವೃತ್ತಿಂ ಭೀಮಸೇನಸ್ಯ ಪಾರ್ಷತಸ್ಯ ಚ ಸಂಯುಗೇ |
ವಿಜ್ಞಾಯ ಸಮರೇ ಶೀಘ್ರಂ ಪ್ರವಿಶಧ್ವಂ ರಥಾರ್ಣವಮ್ |
ಗಚ್ಛಂತು ಪರಯಾ ಶಕ್ತ್ಯಾ ಭವಂತ ಇತಿ ಮೇ ಮತಿಃ ॥62॥
ಆಗ ಯುಧಿಷ್ಠಿರನು ತನ್ನ ಸೈನಿಕರನ್ನು ಕರೆದು ರಣರಂಗದಲ್ಲಿ ಭೀಮ ಧೃಷ್ಟದ್ಯುಮ್ನರು ಹೋಗಿರುವ ಮಾರ್ಗವನ್ನು ಅನುಸರಿಸಿ ಹೋಗಿ, ಅಭಿಮನ್ಯು ಮೊದಲಾದ ಹನ್ನೆರಡು ರಥರು ಶಸ್ತ್ರಕವಚದಿಂದ ಸನ್ನದ್ಧರಾಗಿ ಭೀಮಸೇನನ ವಾರ್ತೆಯನ್ನು ತಿಳಿದುಕೊಳ್ಳಿ. ನನ್ನ ಮನಸ್ಸಿಗೆ ಏಕೋ ಸಮಾಧಾನವಿಲ್ಲ. ರಣರಂಗದಲ್ಲಿ ಭೀಮಸೇನ ಮತ್ತು ಧೃಷ್ಟದ್ಯುಮ್ನರ ಪ್ರವೃತ್ತಿಯನ್ನು ತಿಳಿದು ಶೀಘ್ರವಾಗಿ ರಥಸಮೂಹವನ್ನು ಪ್ರವೇಶಿಸಿ. ನೀವೆಲ್ಲರೂ ಶಕ್ತಿ ಇದ್ದಷ್ಟು ಶೀಘ್ರವಾಗಿ ಹೋಗಬೇಕು ಎಂದು ನನ್ನ ಅಭಿಪ್ರಾಯ ಎಂದು ಹೇಳಿದನು.
ತ ಏವಂ ಸಮನುಜ್ಞಾತಾಃ ಶೂರಾ ವಿಕ್ರಾಂತಯೋಧಿನಃ |
ಬಾಢಮಿತ್ಯೇವಮುಕ್ತ್ವಾ ತು ಸರ್ವೇ ಪುರುಷಮಾನಿನಃ |
ಮಧ್ಯಂದಿನಗತೇ ಸೂರ್ಯೇ ಪ್ರಯಯುಃ ಸರ್ವ ಏವ ಹಿ ॥63॥
ಕೇಕಯಾ ದ್ರೌಪದೇಯಾಶ್ಚ ಧೃಷ್ಟಕೇತುಶ್ಚ ವೀರ್ಯವಾನ್ |
ಅಭಿಮನ್ಯುಂ ಪುರಸ್ಕೃತ್ಯ ಮಹತ್ಯಾ ಸೇನಯಾ ವೃತಾಃ ॥64॥
ಶೂರರೂ ಪರಾಕ್ರಮವುಳ್ಳ ಯೋಧರೂ ತಮ್ಮ ಪರಾಕ್ರಮದಲ್ಲಿ ವಿಶ್ವಾಸವುಳ್ಳವರೂ ಆದ ಅವರೆಲ್ಲರೂ ಹೀಗೆ ಆಜ್ಞಪ್ತರಾಗಿ ಹಾಗೆಯೇ ಆಗಲಿ ಎಂದು ಹೇಳಿ ಸೂರ್ಯನು ಆಕಾಶಮಧ್ಯಗತನಾಗಿರುವಾಗಿ ಕೇಕಯರು, ದ್ರೌಪದಿಯ ಮಕ್ಕಳು, ಪರಾಕ್ರಮಶಾಲಿಯಾದ ಧೃಷ್ಟಕೇತು ಇವರೆಲ್ಲರೂ ಅಭಿಮನ್ಯುವನ್ನು ಮುಂದೆ ಮಾಡಿಕೊಂಡು ದೊಡ್ಡ ಸೇನೆಯಿಂದ ಪರಿವೃತರಾಗಿ ಅಲ್ಲಿಂದ ಹೊರಟರು.
ತೇ ಕೃತ್ವಾ ಸಮರೇ ವ್ಯೂಹಂ ಸೂಚೀಮುಖಮರಿಂದಮಾಃ |
ಬಿಭಿದುರ್ಧಾರ್ತರಾಷ್ಟ್ರಾಣಾಂ ತದ್ರಥಾನೀಕಮಾಹವೇ ॥65॥
ಅರಿಂದಮರಾದ ಅವರು ರಣರಂಗದಲ್ಲಿ ಒಂದು ಸೂಚೀಮುಖ ವ್ಯೂಹವನ್ನು ಮಾಡಿ ಧೃತರಾಷ್ಟ್ರನ ಪುತ್ರರ ರಥಸಮೂಹವನ್ನು ಭೇದಿಸಿದರು.
ತಾನ್ ಪ್ರಯಾತಾನ್ ಮಹೇಷ್ವಾಸಾನಭಿಮನ್ಯುಪುರೋಗಮಾನ್ |
ಭೀಮಸೇನಭಯಾವಿಷ್ಟಾ ಧೃಷ್ಟದ್ಯುಮ್ನವಿಮೋಹಿತಾ ॥66॥
ನ ಸಂಧಾರಯಿತುಂ ಶಕ್ತಾ ತವ ಸೇನಾ ಜನಾಧಿಪ |
ಮದಮೂರ್ಛಾನ್ವಿತಾತ್ಮಾನಂ ಪ್ರಮದೇವಾಧ್ವನಿ ಸ್ಥಿತಾ ॥67॥
ಎಲೈ ರಾಜನೇ, ಭೀಮಸೇನನ ಭಯದಿಂದ ಕೂಡಿದ ಧೃಷ್ಟದ್ಯುಮ್ನನ ಅಸ್ತ್ರದಿಂದ ವಿಮೋಹಿತವಾದ ನಿನ್ನ ಸೇನೆಯು ಮದ ಮತ್ತು ಮೂರ್ಛೆಗೆ ಒಳಗಾಗಿ ದಾರಿಯಲ್ಲಿ ನಿಂತ ವನಿತೆಯಂತೆ ಮೇಲೆರಗಿ ಬರುತ್ತಿದ್ದ ಅಭಿಮನ್ಯು ಮೊದಲಾದ ಮಹಾಧನುರ್ಧಾರಿಗಳನ್ನು ಎದುರಿಸಲು ಸಾಧ್ಯವಾಗಲಿಲ್ಲ.
ತೇಽಭಿಯಾತಾ ಮಹೇಷ್ವಾಸಾಃ ಸುವರ್ಣವಿಕೃತಧ್ವಜಾಃ |
ಪರೀಪ್ಸಂತೋಽಭ್ಯಧಾವಂತ ಧೃಷ್ಟದ್ಯುಮ್ನವೃಕೋದರೌ ॥68॥
ಮಹಾಧನುರ್ಧಾರಿಗಳೂ, ಸುವರ್ಣಾಲಂಕೃತ ಧ್ವಜವುಳ್ಳವರೂ ಆದ ಅವರು (ಅಭಿಮನ್ಯು ಮೊದಲಾದವರು) ಧೃಷ್ಟದ್ಯುಮ್ನ ಮತ್ತು ಭೀಮಸೇನರನ್ನು ರಕ್ಷಿಸಲು ಬಯಸಿ ವೇಗವಾಗಿ ಅವರ ಕಡೆಗೆ ಓಡಿದರು.
ತೌ ಚ ದೃಷ್ಟ್ವಾ ಮಹೇಷ್ವಾಸಾನಭಿಮನ್ಯುಪುರೋಗಮಾನ್ |
ಬಭೂವತುರ್ಮುದಾ ಯುಕ್ತೌ ನಿಘ್ನಂತೌ ತವ ವಾಹಿನೀಮ್ ॥69॥
ನಿನ್ನ ಸೈನ್ಯವನ್ನು ಸಂಹರಿಸುತ್ತಿದ್ದ ಧೃಷ್ಟದ್ಯುಮ್ನ ಮತ್ತು ಭೀಮಸೇನರು ಮಹಾಧನುರ್ಧಾರಿಗಳಾದ ಅಭಿಮನ್ಯು ಮೊದಲಾದವರನ್ನು ನೋಡಿ ಸಂತೋಷವನ್ನು ಹೊಂದಿದರು.
ದೃಷ್ಟ್ವಾ ಚ ಸಹಸಾಯಾಂತಂ ಪಾಂಚಾಲ್ಯೋ ಗುರುಮಾತ್ಮನಃ |
ನಾಶಂಸತ ವಧಂ ವೀರಃ ಪುತ್ರಾಣಾಂ ತವ ಪಾರ್ಷತಃ ॥70॥
ಇತ್ತ ಕಡೆ ತನ್ನ ಗುರುಗಳಾದ ದ್ರೋಣರು ಇದ್ದಕ್ಕಿದ್ದಂತೆಯೇ ಬಂದುದನ್ನು ನೋಡಿ ವೀರನಾದ ಧೃಷ್ಟದ್ಯುಮ್ನನು ನಿನ್ನ ಪುತ್ರರ

ವಧೆಯ ಅಭಿಪ್ರಾಯವನ್ನು ತೊರೆದನು.
ತತೋ ರಥಂ ಸಮಾರೋಪ್ಯ ಕೇಕಯಸ್ಯ ವೃಕೋದರಮ್ |
ಅಭ್ಯಧಾವತ್ ಸುಸಂಕ್ರುದ್ಧೋ ದ್ರೋಣಮಿಷ್ವಸ್ತ್ರಪಾರಗಮ್ ॥71॥
ಆಗ ಭೀಮಸೇನನನ್ನು ಕೇಕಯರಾಜನ ರಥದಲ್ಲಿ ಧೃಷ್ಟದ್ಯುಮ್ನನನ್ನು ಏರಿಸಿಕೊಂಡು ಬಹಳ ಕೋಪದಿಂದ ಕೂಡಿದವನಾಗಿ ಸರ್ವವಿದ್ಯಾಪಾರಂಗತನಾದ ದ್ರೋಣರ ಮೇಲೆ ಎರಗಿದನು.
ತಸ್ಯಾಭಿಪತತಸ್ತೂರ್ಣಂ ಭಾರದ್ವಾಜಃ ಪ್ರತಾಪವಾನ್ |
ಕ್ರುದ್ಧಶ್ಚಿಚ್ಛೇದ ಭಲ್ಲೇನ ಧನುಃ ಶತ್ರುನಿಷೂದನಃ ॥72॥
ತನ್ನ ಮೇಲೆ ಎರಗಿ ಬರುತ್ತಿದ್ದ ಅವನನ್ನು ನೋಡಿ ಪ್ರತಾಪಶಾಲಿಗಳೂ, ಶಸ್ತ್ರ ಸಂಹಾರಕರು ಆದ ದ್ರೋಣರು ಕೋಪಗೊಂಡು ಭಲ್ಲದಿಂದ ಅವನ ಧನುಸ್ಸನ್ನು ಕತ್ತರಿಸಿದರು.
ಅನ್ಯಾಂಶ್ಚ ಶತಶೋ ಬಾಣಾನ್ ಪ್ರೇಷಯಾಮಾಸ ಪಾರ್ಷತೇ |
ದುರ್ಯೋಧನಹಿತಾರ್ಥಾಯ ಭರ್ತೃಪಿಂಡಮನುಸ್ಮರನ್ ॥73॥
ಭರ್ತೃಪಿಂಡವನ್ನು ಸ್ಮರಿಸಿ ದುರ್ಯೋಧನನಿಗೆ ಹಿತವನ್ನು ಮಾಡಲು ಧೃಷ್ಟದ್ಯುಮ್ನನ ಮೇಲೆ ಇನ್ನೂ ನೂರಾರು ಬಾಣಗಳನ್ನು ಪ್ರಯೋಗಿಸಿದನು.
ಅಥಾನ್ಯದ್ ಧನುರಾದಾಯ ಪಾರ್ಷತಃ ಪರವೀರಹಾ |
ದ್ರೋಣಂ ವಿವ್ಯಾಧ ಸಪ್ತತ್ಯಾ ರುಗ್ಮಪುಂಖೈಃ ಶಿಲಾಶಿತೈಃ ॥74॥
ಆಗ ಪರವೀರಘಾತಕನಾದ ಧೃಷ್ಟದ್ಯುಮ್ನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಸುವರ್ಣಮಯವಾದ ಪುಂಖಗಳನ್ನು ಹೊಂದಿದ, ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ ಎಪ್ಪತ್ತು ಬಾಣಗಳಿಂದ ದ್ರೋಣರನ್ನು ಹೊಡೆದನು.
ತಸ್ಯ ದ್ರೋಣಃ ಪುನಶ್ಚಾಪಂ ಚಿಚ್ಛೇದಾಮಿತ್ರಕರ್ಶನಃ |
ಹಯಾಂಶ್ಚ ಚತುರಸ್ತೂರ್ಣಂ ಚತುರ್ಭಿಃ ಸಾಯಕೋತ್ತಮೈಃ ॥75॥
ವೈವಸ್ವತಕ್ಷಯಂ ಘೋರಂ ಪ್ರೇಷಯಾಮಾಸ ವೀರ್ಯವಾನ್ |
ಸಾರಥಿಂ ಚಾಸ್ಯ ಭಲ್ಲೇನ ಪ್ರೇಷಯಾಮಾಸ ಮೃತ್ಯವೇ ॥76॥
ಶತ್ರುಕರ್ಶನರಾದ ದ್ರೋಣರು ಪುನಃ ಅವನ ಧನುಸ್ಸನ್ನು ಕತ್ತರಿಸಿದರು. ವೀರ್ಯಶಾಲಿಗಳಾದ ಅವರು ನಾಲ್ಕು ಶ್ರೇಷ್ಠವಾದ ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನು ಘೋರವಾದ ಯಮಪಟ್ಟಣಕ್ಕೆ ಕಳುಹಿಸಿದರು. ಅವನ ಸಾರಥಿಯನ್ನೂ ಸಹ ಭಲ್ಲದಿಂದ ಸಂಹರಿಸಿ ಮೃತ್ಯುಲೋಕಕ್ಕೆ ಕಳುಹಿಸಿದರು.
ಹತಾಶ್ವಾತ್ ಸರಥಾತ್ ತೂರ್ಣಮವಪ್ಲುತ್ಯ ಮಹಾರಥಃ |
ಆರುರೋಹ ಮಹಾಬಾಹುರಭಿಮನ್ಯೋರ್ಮಹಾರಥಮ್ ॥77॥
ಮಹಾರಥನೂ, ಮಹಾಬಾಹುವೂ ಆದ ಧೃಷ್ಟದ್ಯುಮ್ನನು ಕುದುರೆಯು ಮೃತವಾದ ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ ಅಭಿಮನ್ಯುವಿನ ದೊಡ್ಡ ರಥವನ್ನು ಏರಿದನು.
ತತಃ ಸರಥನಾಗಾಶ್ವಾ ಸಮಕಂಪತ ವಾಹಿನೀ |
ಪಶ್ಯತೋ ಭೀಮಸೇನಸ್ಯ ಪಾರ್ಷತಸ್ಯ ಚ ಪಶ್ಯತಃ ॥78॥
ಆಗ ಭೀಮಸೇನ ಮತ್ತು ಧೃಷ್ಟದ್ಯುಮ್ನರು ನೋಡುತ್ತಿರುವಂತೆಯೇ ರಥ ಗಜಾಶ್ವಗಳಿಂದ ಕೂಡಿದ ಪಾಂಡವರ ಸೇನೆಯು ನಡುಗಿತು.
ತತ್ಪ್ರಭಗ್ನಂ ಬಲಂ ದೃಷ್ಟ್ವಾ ದ್ರೋಣೇನಾಮಿತತೇಜಸಾ |
ನಾಶಕ್ನುವನ್ ವಾರಯಿತುಂ ಸಮಸ್ತಾಸ್ತೇ ಮಹಾರಥಾಃ ॥79॥
ಅಮಿತ ಪರಾಕ್ರಮಿಗಳಾದ ದ್ರೋಣರಿಂದ ಭಗ್ನವಾದ ತಮ್ಮ ಸೈನ್ಯವನ್ನು ನೋಡಿ ಮಹಾರಥರಾದ ಅವರೆಲ್ಲರೂ ಅದನ್ನು ತಡೆಯಲು ಸಾಧ್ಯವಾಗಲಿಲ್ಲ.
ವಧ್ಯಮಾನಂ ತು ತತ್ಸೈನ್ಯಂ ದ್ರೋಣೇನ ನಿಶಿತೈಃ ಶರೈಃ |
ವ್ಯಭ್ರಮತ್ ತತ್ರ ತತ್ರೈವ ಕ್ಷೋಭ್ಯಮಾಣ ಇವಾರ್ಣವಃ ॥80॥
ತೀಕ್ಷ್ಣವಾದ ಬಾಣಗಳಿಂದ ದ್ರೋಣರಿಂದ ಹೊಡೆಯಲ್ಪಡುತ್ತಿದ್ದ ಆ ಸೈನ್ಯವು ಕ್ಷೋಭೆಗೊಂಡ ಸಮುದ್ರದಂತೆ ಅಲ್ಲಲ್ಲಿಯೇ ತಿರುಗಾಡಿತು.
ತಥಾ ದೃಷ್ಟ್ವಾ ಚ ತತ್ಸೈನ್ಯಂ ಜಹೃಷೇ ಚ ಬಲಂ ತವ |
ದೃಷ್ಟ್ವಾಚಾರ್ಯಂ ಚ ಸಂಕ್ರುದ್ಧಂ ದಹಂತಂ ರಿಪುವಾಹಿನೀಮ್ |
ಚುಕ್ರುಶುಃ ಸರ್ವತೋ ಯೋಧಾಃ ಸಾಧು ಸಾಧ್ವಿತಿ ಭಾರತ ॥81॥
ಪಾಂಡವರ ಸೈನ್ಯವು ಅಂತಹ ಸ್ಥಿತಿಯಲ್ಲಿರುವುದನ್ನು ನೋಡಿದ ನಿನ್ನ ಸೈನ್ಯವು ಸಂತೋಷಗೊಂಡಿತು. ಆಚಾರ್ಯರಾದ ದ್ರೋಣರು ಬಹಳ ಕೋಪಗೊಂಡು ಶತ್ರುಸೈನ್ಯವನ್ನು ದಹಿಸುತ್ತಿರುವುದನ್ನು ನೋಡಿ ಎಲ್ಲೈ ಭಾರತನೇ, ಎಲ್ಲ ಯೋಧರೂ ಸಾಧು, ಸಾಧು ಎಂದು ಹೇಳುತ್ತಾ ಜಯಘೋಷವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ನಾಲ್ಕನೆಯ ಅಧ್ಯಾಯ

ಭೀಮಸೇನನ ಪರಾಕ್ರಮ.
ಸಂಜಯಃ
ತತೋ ದುರ್ಯೋಧನೋ ರಾಜಾ ಮೋಹಾತ್ ಪ್ರತ್ಯಾಗತಸ್ತದಾ |
ಶರವರ್ಷೈಃ ಪುನರ್ಭೀಮಂ ಪ್ರತ್ಯವಾರಯದಚ್ಯುತಮ್ ॥1॥
ಸಂಜಯ ಅನಂತರ ರಾಜನಾದ ದುರ್ಯೋಧನನು ಮೂರ್ಛೆಯಿಂದ ಎದ್ದು ಪುನಃ ಪ್ರಜ್ಞೆಯನ್ನು ಪಡೆದು ತನ್ನ ಶೌರ್ಯಾದಿ ಗುಣಗಳಿಂದ ಚ್ಯುತನಾಗದ ಭೀಮಸೇನನನ್ನು ಬಾಣಗಳ ಮಳೆಯಿಂದ ಪುನಃ ತಡೆದನು.
ಏಕೀಭೂತಾಃ ಪುನಶ್ಚೈವ ತವ ಪುತ್ರಾ ಮಹಾರಥಾಃ |
ಸಮೇತ್ಯ ಸಮರೇ ಭೀಮಂ ಯೋಧಯಾಮಾಸುರುದ್ಯತಾಃ ॥2॥
ಮಹಾರಥರಾದ ನಿನ್ನ ಪುತ್ರರು ಪುನಃ ಒಂದುಗೂಡಿ ಯುದ್ಧದಲ್ಲಿ ಎಲ್ಲರೂ ಸಹಿತರಾಗಿ ಪ್ರಯತ್ನಪೂರ್ವಕವಾಗಿ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಭೀಮಸೇನೋಽಪಿ ಸಮರೇ ಸಂಪ್ರಾಪ್ಯ ಸ್ವರಥಂ ಪುನಃ |
ಸಮಾರುಹ್ಯ ಮಹಾಬಾಹುರ್ಯಯೌ ಯೇನ ತವಾತ್ಮಜಃ ॥3॥
ಮಹಾಬಾಹುವಾದ ಭೀಮಸೇನನಾದರೂ ಪುನಃ ತನ್ನ ರಥದ ಬಳಿಗೆ ಹೋಗಿ ರಥವನ್ನು ಏರಿ ನಿನ್ನ ಪುತ್ರರು ಇದ್ದ ಕಡೆಗೆ ಹೊರಟನು.
ಪ್ರಗೃಹ್ಯ ಚ ಮಹಾವೇಗಂ ಪರಾಸುಕರಣಂ ದೃಢಮ್ |
ಚಿತ್ರಂ ಶರಾಸನಂ ಸಂಖ್ಯೇ ಶರೈರ್ವಿವ್ಯಾಧ ತೇ ಸುತಾನ್ ॥4॥
ಮಹಾವೇಗಶಾಲಿಯಾದ, ಶತ್ರುಸಂಹಾರಕವಾದ, ದೃಢವಾದ, ವಿಚಿತ್ರವಾದ ಧನುಸ್ಸನ್ನು ತೆಗೆದುಕೊಂಡು ಯುದ್ಧದಲ್ಲಿ ಬಾಣಗಳಿಂದ ನಿನ್ನ ಪುತ್ರರನ್ನು ಹೊಡೆದನು.
ತತೋ ದುರ್ಯೋಧನೋ ರಾಜಾ ಭೀಮಸೇನಂ ಮಹಾಬಲಮ್ |
ನಾರಾಚೇನ ಸುತೀಕ್ಷ್ಣೇನ ಭೃಶಂ ಮರ್ಮಣ್ಯತಾಡಯತ್ ॥5॥
ಆಗ ರಾಜನಾದ ದುರ್ಯೋಧನನು ಮಹಾಬಲನಾದ ಭೀಮಸೇನನನ್ನು ಬಹಳ ತೀಕ್ಷ್ಣವಾದ ನಾರಾಚದಿಂದ ಮರ್ಮಸ್ಥಾನಗಳಲ್ಲಿ ಗಟ್ಟಿಯಾಗಿ ಹೊಡೆದನು.
ಸೋಽತಿವಿದ್ಧೋ ಮಹೇಷ್ವಾಸಸ್ತವ ಪುತ್ರೇಣ ಧನ್ವಿನಾ |
ಕ್ರೋಧಸಂರಕ್ತನಯನೋ ವೇಗೇನೋತ್ಕ್ಷಿಪ್ಯ ಕಾರ್ಮುಕಮ್ ॥6॥
ದುರ್ಯೋಧನಂ ತ್ರಿಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ |
ಸ ತಥಾಭಿಹತೋ ರಾಜಾ ನಾಚಲದ್ ಗಿರಿರಾಡಿವ ॥7॥
ಧನುರ್ಧಾರಿಯಾದ ನಿನ್ನ ಪುತ್ರನಿಂದ ಗಾಢವಾಗಿ ಹೊಡೆಯಲ್ಪಟ್ಟ ಮಹಾಧನುರ್ಧಾರಿಯಾದ ಭೀಮನು ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ವೇಗದಿಂದ ಧನುಸ್ಸನ್ನು ಮೇಲಕ್ಕೆ ಎತ್ತಿ ಮೂರುಬಾಣಗಳನ್ನು ಪ್ರಯೋಗಿಸಿ ದುರ್ಯೋಧನನಿಗೆ ಬಾಹುಗಳಲ್ಲಿಯೂ ಮತ್ತು ವಕ್ಷಸ್ಥಲದಲ್ಲಿಯೂ ಹೊಡೆದನು. ಹೀಗೆ ಹೊಡೆಯಲ್ಪಟ್ಟ ರಾಜನಾದ ದುರ್ಯೋಧನನು ಶ್ರೇಷ್ಠವಾದ ಪರ್ವತದಂತೆ ಅಲುಗಾಡಲಿಲ್ಲ.
ತೌ ದೃಷ್ಟ್ವಾ ಸಮರೇ ಕ್ರುದ್ಧೌ ವಿನಿಘ್ನಂತೌ ಪರಸ್ಪರಮ್ |
ದುರ್ಯೋಧನಾನುಜಾಃ ಸರ್ವೇ ಶೂರಾಃ ಸಂತ್ಯಕ್ತಜೀವಿತಾಃ ॥8॥
ಸಂಸ್ಮೃತ್ಯ ಮಂತ್ರಿತಂ ಪೂರ್ವಂ ನಿಗ್ರಹೇ ಭೀಮಕರ್ಮಣಃ |
ನಿಶ್ಚಯಂ ಮನಸಾ ಕೃತ್ವಾ ನಿಗ್ರಹೀತುಂ ಪ್ರಚಕ್ರಮುಃ ॥9॥
ಅವರಿಬ್ಬರೂ ಕ್ರುದ್ಧರಾಗಿ ಪರಸ್ಪರವಾಗಿ ಹೊಡೆದಾಡುತ್ತಿರುವುದನ್ನು ನೋಡಿ ಶೂರರಾದ ದುರ್ಯೋಧನನ ಎಲ್ಲಾ ತಮ್ಮಂದಿರೂ ಜೀವನದ ಆಸೆಯನ್ನು ತೊರೆದು ಭೀಮಸೇನನನ್ನು ಜೀವಸಹಿತವಾಗಿ ಹಿಡಿಯಲು ಮೊದಲು ಮಾಡಿದ ಮಂತ್ರಾಲೋಚನೆಯನ್ನು ಸ್ಮರಿಸಿ, ಹಾಗೆಯೇ ಮಾಡುವುದೆಂದು ಮನಸ್ಸಿನಲ್ಲಿ ನಿರ್ಧರಿಸಿ ಅವನನ್ನು ಹಿಡಿಯಲು ಉದ್ಯುಕ್ತರಾದರು.
ತಾನಾಪತತ ಏವಾಜೌ ಭೀಮಸೇನೋ ಮಹಾಬಲಃ |
ಪ್ರತ್ಯುದ್ಯಯೌ ಮಹಾರಾಜ ಗಜಃ ಪ್ರತಿಗಜಾನಿವ ॥10॥
ಅವರು ತನ್ನ ಬಳಿಗೆ ಬರುತ್ತಿರುವಂತೆಯೇ ಎಲೈ ಮಹಾರಾಜನೇ, ಮಹಾಬಲನಾದ ಭೀಮಸೇನನು ಗಜವು ಪ್ರತಿಗಜಗಳ ಮೇಲೆ ಎರಗಿದಂತೆ ಅವರ ಮೇಲೆ ಎರಗಿದನು.
ಭೃಶಂ ಕ್ರುದ್ಧಶ್ಚ ತೇಜಸ್ವೀ ನಾರಾಚೇನ ಸಮರ್ಪಯತ್ |
ಚಿತ್ರಸೇನಂ ಮಹಾರಾಜ ತವ ಪುತ್ರಂ ಮಹಾಯಶಾಃ ॥11॥
ಎಲೈ ಮಹಾರಾಜನೇ, ಬಹಳ ಕೋಪಗೊಂಡವನೂ, ತೇಜಸ್ವಿಯೂ, ಕೀರ್ತಿಶಾಲಿಯೂ ಆದ ಅವನು ನಿನ್ನ ಪುತ್ರನಾದ ಚಿತ್ರಸೇನನನ್ನು ನಾರಾಚದಿಂದ ಹೊಡೆದನು.
ತಥೇತರಾಂಸ್ತವ ಸುತಾಂಸ್ತಾಡಯಾಮಾಸ ಭಾರತ |
ಶರೈರ್ಬಹುವಿಧೈಃ ಸಂಖ್ಯೇ ರುಗ್ಮಪುಂಖೈಃ ಸುವೇಗಿತೈಃ ॥12॥
ಎಲೈ ಭಾರತನೇ, ಹಾಗೆಯೇ ನಿನ್ನ ಉಳಿದ ಪುತ್ರರನ್ನೂ ಸಹ ವೇಗಶಾಲಿಗಳಾದ ಸುವರ್ಣಮಯವಾದ ಪುಂಖವುಳ್ಳ ಅನೇಕ ವಿಧವಾದ ಬಾಣಗಳಿಂದ ರಣರಂಗದಲ್ಲಿ ಹೊಡೆದನು.
ತತಃ ಸಂಸ್ಥಾಪ್ಯ ಸಮರೇ ಸ್ವಾನ್ಯನೀಕಾನಿ ಸರ್ವಶಃ |
ಅಭಿಮನ್ಯುಪ್ರಭೃತಯಸ್ತೇ ದ್ವಾದಶ ಮಹಾರಥಾಃ ॥13॥

ಪ್ರೇಷಿತಾ ಧರ್ಮರಾಜೇನ ಭೀಮಸೇನಪದಾನುಗಾಃ|
ಪ್ರತ್ಯುದ್ಯಯುರ್ಮಹಾರಾಜ ತವ ಪುತ್ರಾನ್ ಮಹಾಬಲಾನ್ ॥14॥
ಎಲೈ ಮಹಾರಾಜನೇ, ಆ ವೇಳೆಗೆ ಅಭಿಮನ್ಯು ಮೊದಲಾದ ಹನ್ನೆರಡು ಮಹಾರಥರು ತಮ್ಮ ತಮ್ಮ ಸೈನ್ಯಗಳನ್ನು ಯುದ್ಧದಲ್ಲಿ ಅಲ್ಲಲ್ಲಿ ನಿಲ್ಲಿಸಿ ಭೀಮಸೇನನನ್ನು ಹುಡುಕಲು ಯುಧಿಷ್ಠಿರನಿಂದ ಕಳುಹಿಸಿಕೊಡಲ್ಪಟ್ಟವರಾಗಿ ಮಹಾಬಲರಾದ ನಿನ್ನ ಪುತ್ರರನ್ನು ಸಮೀಪಿಸಿದರು.
ದೃಷ್ಟ್ವಾ ರಥಸ್ಥಾಂಸ್ತಾನ್ ಶೂರಾನ್ ಸೂರ್ಯಾಗ್ನಿಸಮತೇಜಸಃ|
ಸರ್ವಾನೇವ ಮಹೇಷ್ವಾಸಾನ್ ಭ್ರಾಜಮಾನಾನ್ ಶ್ರಿಯಾ ವೃತಾನ್ ॥
ಮಹಾಹವೇ ದೀಪ್ಯಮಾನಾನ್ ಸುವರ್ಣಕವಚೋಜ್ಜ್ವಲಾನ್|
ತತ್ಯಜುಃ ಸಮರೇ ಭೀಮಂ ತವ ಪುತ್ರಾ ಮಹಾಬಲಾಃ ॥16॥
ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳ, ರಥದಲ್ಲಿ ಕುಳಿತ, ಕಾಂತಿಯಿಂದ ಕಂಗೊಳಿಸುವ, ಮಹಾಧನುರ್ಧಾರಿಗಳಾದ, ಸುವರ್ಣಕವಚಗಳಿಂದ ಶೋಭಿಸುತ್ತಿರುವ ಆ ಮಹಾರಥರನ್ನು ನೋಡಿ ಮಹಾಬಲರಾದ ನಿನ್ನ ಪುತ್ರರು ಯುದ್ಧದಲ್ಲಿ ಭೀಮಸೇನನನ್ನು ಬಿಟ್ಟುಬಿಟ್ಟರು.
ತಾನ್ ನಾಮೃಷ್ಯತ ಕೌಂತೇಯೋ ಜೀವಮಾನಾ ಗತಾ ಇತಿ|
ಅನ್ವೀಯ ಚ ಪುನಃ ಸರ್ವಾಂಸ್ತವ ಪುತ್ರಾನಪೀಡಯತ್ ॥17॥
ಅವರು ಜೀವಸಹಿತರಾಗಿ ಹಿಂದಿರುಗಿದುದನ್ನು ಸಹಿಸದ ಭೀಮಸೇನನು ಅವರನ್ನು ಹಿಂಬಾಲಿಸಿ ಪುನಃ ನಿನ್ನ ಪುತ್ರರೆಲ್ಲರನ್ನೂ ಬಾಣಗಳಿಂದ ಪೀಡಿಸಿದನು.
ಅಥಾಭಿಮನ್ಯುಂ ಸಮರೇ ಭೀಮಸೇನೇನ ಸಂಗತಮ್|
ಪಾರ್ಷತೇನ ಚ ಸಂಪ್ರೇಕ್ಷ್ಯ ತವ ಸೈನ್ಯೇ ಮಹಾರಥಾಃ ॥18॥
ದುರ್ಯೋಧನಪ್ರಭೃತಯಃ ಪ್ರಗೃಹೀತಶರಾಸನಾಃ|
ಭೃಶಮಶ್ವೈಃ ಪ್ರಜವಿತೈಃ ಪ್ರಯಯುರ್ಯತ್ರ ತೇ ರಥಾಃ ॥19॥
ಅನಂತರ ರಣರಂಗದಲ್ಲಿ ಅಭಿಮನ್ಯುವು ಭೀಮಸೇನನ ಜೊತೆಯಲ್ಲಿಯೂ ಮತ್ತು ಧೃಷ್ಟದ್ಯುಮ್ನನ ಜೊತೆಯಲ್ಲಿಯೂ ಸೇರಿದುದನ್ನು ನೋಡಿ ನಿನ್ನ ಸೈನ್ಯದ ಮಹಾರಥರಾದ ದುರ್ಯೋಧನ ಮೊದಲಾದವರು ಕೈಯಲ್ಲಿ ಧನುಸ್ಸನ್ನು ಹಿಡಿದು ವೇಗವುಳ್ಳ ಅಶ್ವಗಳಿಂದ ಎಳೆಯಲ್ಪಟ್ಟ ರಥಗಳಲ್ಲಿ ಆ ಮಹಾರಥರು ಇದ್ದ ಕಡೆಗೆ ಹೊರಟರು.
ಅಪರಾಹ್ಣೇ ತತೋ ರಾಜನ್ ಪ್ರಾವರ್ತತ ಮಹಾನ್ ರಣಃ|
ತಾವಕಾನಾಂ ಚ ಬಲಿನಾಂ ಪರೇಷಾಂ ಚೈವ ಭಾರತ ॥20॥
ಎಲೈ ರಾಜನೇ, ಭಾರತನೇ, ಅಪರಾಹ್ಣದಲ್ಲಿ ನಿನ್ನವರಿಗೂ ಮತ್ತು ಬಲಿಷ್ಠರಾದ ಪಾಂಡವರಿಗೂ ದೊಡ್ಡ ಯುದ್ಧವು ಜರುಗಿತು.
ಅಭಿಮನ್ಯುರ್ವಿಕರ್ಣಸ್ಯ ಹಯಾನ್ ಹತ್ವಾ ಮಹಾಜವಾನ್|
ಅಥೈನಂ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮಾಚಿನೋತ್ ॥21॥
ಅಭಿಮನ್ಯುವು ವಿಕರ್ಣನ ವೇಗಶಾಲಿಗಳಾದ ರಥಾಶ್ವಗಳನ್ನು ಕೊಂದು ಇಪ್ಪತ್ತೈದು ಸಣ್ಣ ಬಾಣಗಳನ್ನು ಪ್ರಯೋಗಿಸಿ ಅವುಗಳಿಂದ ಅವನ ಶರೀರವನ್ನು ತುಂಬಿದನು.
ಹತಾಶ್ವಂ ರಥಮುತ್ಸೃಜ್ಯ ವಿಕರ್ಣಸ್ತು ಮಹಾರಥಃ|
ಆರುರೋಹ ರಥಂ ರಾಜನ್ ಚಿತ್ರಸೇನಸ್ಯ ಭಾಸ್ವರಮ್ ॥22॥
ಎಲೈ ರಾಜನೇ, ತನ್ನ ಅಶ್ವಗಳು ಹತವಾದಮೇಲೆ ಮಹಾರಥನಾದ ವಿಕರ್ಣನು ಆ ರಥವನ್ನು ಬಿಟ್ಟು ಚಿತ್ರಸೇನನ ಪ್ರಕಾಶಮಾನವಾದ ರಥವನ್ನು ಏರಿದನು.
ಸ್ಥಿತಾವೇಕರಥೇ ತೌ ತು ಭ್ರಾತರೌ ಕುರುವರ್ಧನೌ|
ಆರ್ಜುನಿಃ ಶರಜಾಲೇನ ಛಾದಯಾಮಾಸ ಭಾರತ ॥23॥
ಎಲೈ ಭಾರತನೇ, ಒಂದೇ ರಥದಲ್ಲಿದ್ದ ಕುರುವರ್ಧನರಾದ ಆ ಸಹೋದರರನ್ನು ಅಭಿಮನ್ಯುವು ಬಾಣಗಳ ಸಮೂಹದಿಂದ ಮುಚ್ಚಿಹಾಕಿದನು.
ಚಿತ್ರಸೇನೋ ವಿಕರ್ಣಶ್ಚ ಕಾರ್ಷ್ಣಿಂ ಪಂಚಭಿರಾಯಸೈಃ|
ವಿವ್ಯಧಾತೇ ನ ಚಾಕಂಪತ್ ಕಾರ್ಷ್ಣಿರ್ಮೇರುರಿವಾಚಲಃ ॥24॥
ಚಿತ್ರಸೇನ ಮತ್ತು ವಿಕರ್ಣರು ಅಭಿಮನ್ಯುವಿನ ಮೇಲೆ ಐದು ಕಬ್ಬಿಣದ ಬಾಣಗಳನ್ನು ಪ್ರಯೋಗಿಸಿದರು. ಅಚಲವಾದ ಮೇರುಪರ್ವತದಂತೆ ಅಭಿಮನ್ಯುವು ಅದರಿಂದ ಅಲುಗಾಡಲಿಲ್ಲ.
ದುಃಶಾಸನಸ್ತು ಸಮರೇ ಕೇಕಯಾನ್ ಪಂಚ ಮಾರಿಷ|
ಯೋಧಯಾಮಾಸ ರಾಜೇಂದ್ರ ತದದ್ಭುತಮಿವಾಭವತ್ ॥25॥
ಎಲೈ ಪೂಜ್ಯನಾದ ರಾಜೇಂದ್ರನೇ, ರಣರಂಗದಲ್ಲಿ ದುಶ್ಶಾಸನನು ಐದು ಜನ ಕೇಕಯ ರಾಜರ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಅದು ಅದ್ಭುತವಾಗಿದ್ದಿತು.
ದ್ರೌಪದೇಯಾ ರಣೇ ಕ್ರುದ್ಧಾ ದುರ್ಯೋಧನಮವಾರಯನ್|
ಏಕೈಕಸ್ತ್ರಿಭಿರಾನರ್ಚ್ಛತ್ ಪುತ್ರಂ ತವ ವಿಶಾಂಪತೇ ॥26॥
ದ್ರೌಪದಿಯ ಐದು ಮಕ್ಕಳು ಕ್ರುದ್ಧರಾಗಿ ಯುದ್ಧದಲ್ಲಿ ದುರ್ಯೋಧನನನ್ನು ತಡೆದರು. ಎಲೈ ರಾಜನೇ, ಅವರಲ್ಲಿ ಒಬ್ಬೊಬ್ಬರೂ ನಿನ್ನ ಪುತ್ರನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದರು.

ಪುತ್ರೋಽಪಿ ತವ ದುರ್ಧರ್ಷೋ ದ್ರೌಪದ್ಯಾಸ್ತನಯಾನ್ ರಣೇ |
ಸಾಯಕೈರ್ನಿಶಿತೈ ರಾಜನ್ನಾಜಘಾನ ಪೃಥಕ್ಪೃಥಕ್ ॥27॥
ಎಲೈ ರಾಜನೇ, ಸೋಲಿಸಲು ಕಷ್ಟಸಾಧ್ಯನಾದ ನಿನ್ನ ಪುತ್ರನೂ ಸಹ ಯುದ್ಧ ಭೂಮಿಯಲ್ಲಿ ದ್ರೌಪದಿಯ ಮಕ್ಕಳನ್ನು ತೀಕ್ಷ್ಣವಾದ ಬಾಣಗಳಿಂದ ಬೇರೆ ಬೇರೆಯಾಗಿ ಹೊಡೆದನು.
ತೈಶ್ಚಾಪಿ ವಿದ್ಧಃ ಶುಶುಭೇ ರುಧಿರೇಣ ಸಮುಕ್ಷಿತಃ |
ಗಿರಿಪ್ರಸ್ರವಣೈರ್ಯದ್ವದ್ ಗಿರಿರ್ಧಾತುವಿಮಿಶ್ರಿತೈಃ ॥28॥
ಅವರಿಂದಲೂ ಬಾಣಗಳಿಂದ ಹೊಡೆಯಲ್ಪಟ್ಟು ರಕ್ತವನ್ನು ಸುರಿಸುತ್ತಿದ್ದ ದುರ್ಯೋಧನನು ಪರ್ವತಧಾತುಗಳಿಂದ ಮಿಶ್ರಿತವಾಗಿದ್ದ ಪರ್ವತದ ಝುರಿಗಳಂತೆ ಶೋಭಿಸಿದನು.
ಭೀಷ್ಮೋಽಪಿ ಸಮರೇ ರಾಜನ್ ಪಾಂಡವಾನಾಮನೀಕಿನೀಮ್ |
ಕಾಲಯಾಮಾಸ ಬಲವಾನ್ ಪಾಲಃ ಪಶುಗಣಾನಿವ ॥29॥
ಎಲೈ ರಾಜನೇ, ಬಲಿಷ್ಠರಾದ ಭೀಷ್ಮರೂ ಸಹ ಯುದ್ಧದಲ್ಲಿ ಪಾಂಡವರ ಸೈನ್ಯವನ್ನು ಗೋಪಾಲಕನು ಪಶುಗಣವನ್ನು ಕಲಕಾಡಿದಂತೆ ಕಲಕಾಡಿದರು.
ತತೋ ಗಾಂಡೀವನಿರ್ಘೋಷಃ ಪ್ರಾದುರಾಸೀದ್ ವಿಶಾಂಪತೇ |
ದಕ್ಷಿಣೇನ ವರೂಥಿನ್ಯಾಃ ಪಾರ್ಥಸ್ಯಾರೀನ್ ವಿನಿಘ್ನತಃ ॥30॥
ಎಲೈ ರಾಜನೇ, ಆಗ ಸೈನ್ಯದ ದಕ್ಷಿಣಭಾಗದಿಂದ ಶತ್ರುಗಳನ್ನು ಸಂಹಾರ ಮಾಡುವ ಅರ್ಜುನನ ಗಾಂಡೀವ ಧನುಸ್ಸಿನ ಘೋಷವು ಕೇಳಿ ಬಂದಿತು.
ಉತ್ತಸ್ಥುಃ ಸಮರೇ ತತ್ರ ಕಬಂಧಾನಿ ಸಮಂತತಃ |
ಕುರೂಣಾಂ ಚಾಪಿ ಸೈನ್ಯೇಷು ಪಾಂಡವಾನಾಂ ಚ ಭಾರತ ॥31॥
ಎಲೈ ಭಾರತನೇ, ಆಗ ಕೌರವರ ಸೈನ್ಯದಲ್ಲಿಯೂ ಮತ್ತು ಪಾಂಡವರ ಸೈನ್ಯದಲ್ಲಿಯೂ ಎಲ್ಲ ಕಡೆಯಲ್ಲಿಯೂ ರಣರಂಗದಲ್ಲಿ ಶಿರಸ್ಸಿಲ್ಲದ ರುಂಡಗಳು ಕಂಡುಬಂದವು.
ಶೋಣಿತೋದಂ ರಥಾವರ್ತಂ ಗಜದ್ವೀಪಂ ಹಯೋರ್ಮಿಣಮ್ |
ರಥನೌಭಿರ್ನರವ್ಯಾಘ್ರಾಃ ಪ್ರತೇರುಃ ಸೈನ್ಯಸಾಗರಮ್ ॥32॥
ರಕ್ತೋದಕದಿಂದ ಕೂಡಿದ, ರಥಗಳೆಂಬ ಸುಳಿಗಳಿಂದ ಕೂಡಿದ, ಗಜಗಳೆಂಬ ದ್ವೀಪಗಳಿಂದ ಕೂಡಿದ, ಅಶ್ವಗಳೆಂಬ ಅಲೆಗಳಿಂದ ಕೂಡಿದ ಸೈನ್ಯ ಸಾಗರವನ್ನು ನರವ್ಯಾಘ್ರರಾದ ವೀರರು ರಥಗಳೆಂಬ ನೌಕೆಗಳಿಂದ ದಾಟಿದರು.
ಛಿನ್ನಹಸ್ತಾ ವಿಕವಚಾ ವಿದೇಹಾಶ್ಚ ನರೋತ್ತಮಾಃ |
ಪತಿತಾಸ್ತತ್ರ ದೃಶ್ಯಂತೇ ಶತಶೋಽಥ ಸಹಸ್ರಶಃ ॥33॥
ಹಸ್ತಗಳು ಕತ್ತರಿಸಲ್ಪಟ್ಟ, ಕವಚಗಳಿಲ್ಲದಿರುವ, ರುಂಡವಿಲ್ಲದಿರುವ ಯೋಧರು ಅಲ್ಲಿ ಬಿದ್ದಿರುವುದು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಕಂಡುಬರುತ್ತಿದ್ದಿತು.
ನಿಹತೈರ್ಮತ್ತಮಾತಂಗೈಃ ಶೋಣಿತೌಘಪರಿಪ್ಲುತೈಃ |
ಭೂರ್ಭಾತಿ ಭರತಶ್ರೇಷ್ಠ ಪರ್ವತೈರಾಚಿತಾ ಯಥಾ ॥34॥
ಎಲೈ ಭರತಶ್ರೇಷ್ಠನೇ, ರಕ್ತದ ಪ್ರವಾಹದಲ್ಲಿ ಮುಳುಗಿ ಮೃತವಾದ ಮದಗಜಗಳಿಂದ ಕೂಡಿದ ರಣಭೂಮಿಯು ಪರ್ವತಗಳನ್ನು ಜೋಡಿಸಿದಂತೆ ಕಂಡುಬರುತ್ತಿತ್ತು.
ತತ್ರಾದ್ಭುತಮಪಶ್ಯಾಮ ತವ ತೇಷಾಂ ಚ ಭಾರತ |
ನ ತತ್ರಾಸೀತ್ ಪುಮಾನ್ ಕಶ್ಚಿದ್ ಯೋ ಯೋದ್ಧುಂ ನಾಭಿಕಾಂಕ್ಷತಿ ॥
ಎಲೈ ಭಾರತನೇ, ಆ ಸಂದರ್ಭದಲ್ಲಿ ನಿನ್ನ ಸೈನ್ಯದಲ್ಲಾಗಲೀ, ಪಾಂಡವರ ಸೈನ್ಯದಲ್ಲಾಗಲೀ ಯುದ್ಧವನ್ನು ಬಯಸದಿರುವ ಯಾವ ಯೋಧನೂ ಇಲ್ಲದ ಅದ್ಭುತವನ್ನು ಅಲ್ಲಿ ನೋಡಿದೆವು.
ಏವಂ ಯುಯುಧಿರೇ ವೀರಾಃ ಪ್ರಾರ್ಥಯಾನಾ ಮಹದ್ಯಶಃ |
ತಾವಕಾಃ ಪಾಂಡವೈಃ ಸಾರ್ಧಂ ಕಾಂಕ್ಷಮಾಣಾ ಜಯಂ ಯುಧಿ ॥36॥
ಹೀಗೆ ಮಹಾಕೀರ್ತಿಯನ್ನು ಸಂಪಾದಿಸಲು ಬಯಸಿ, ಯುದ್ಧದಲ್ಲಿ ಜಯವನ್ನು ಆಶಿಸುತ್ತಾ ನಿನ್ನ ಸೈನ್ಯದ ವೀರರು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೈದನೆಯ ಅಧ್ಯಾಯ
ಭೀಮಸೇನನ ಮತ್ತು ದ್ರೌಪದಿಯ ಪುತ್ರರ ಪರಾಕ್ರಮ.
ಭೀಷ್ಮರಿಂದ ಸೈನ್ಯಾವಹಾರ.
ಸಂಜಯಃ
ತತೋ ದುರ್ಯೋಧನೋ ರಾಜಾ ಲೋಹಿತಾಯತಿ ಭಾಸ್ಕರೇ |

ಸಂಗ್ರಾಮರಭಸೋ ಭೀಮಂ ಹಂತುಕಾಮೋಽಭ್ಯಧಾವತ ॥1॥
ಸಂಜಯ ಆಗ ಸೂರ್ಯನು ಕೆಂಪಾಗುತ್ತಿರಲು ಯುದ್ಧ ರಭಸವುಳ್ಳ ದುರ್ಯೋಧನನು ಭೀಮಸೇನನನ್ನು ಕೊಲ್ಲಲು ಬಯಸಿ ಅವನ ಬಳಿಗೆ ಧಾವಿಸಿದನು.
ತಮಾಯಾಂತಮಭಿಪ್ರೇಕ್ಷ್ಯ ನೃವೀರಂ ದೃಢವೈರಿಣಮ್ ।
ಭೀಮಸೇನಃ ಸುಸಂಕ್ರುದ್ಧ ಇದಂ ವಚನಮಬ್ರವೀತ್ ॥2॥
ದೃಢವೈರಿಯಾದ, ವೀರನಾದ ಅವನು ತನ್ನ ಬಳಿಗೆ ಬರುತ್ತಿರುವುದನ್ನು ನೋಡಿ ಭೀಮಸೇನನು ಬಹಳ ಕೋಪಗೊಂಡು ಈ ಮಾತುಗಳನ್ನು ಆಡಿದನು.
ಅಯಂ ಸ ಕಾಲಃ ಸಂಪ್ರಾಪ್ತೋ ವರ್ಷಪೂಗಾಭಿಕಾಂಕ್ಷಿತಃ ।
ಅದ್ಯ ತ್ವಾಂ ನಿಹನಿಷ್ಯಾಮಿ ಯದಿ ನೋತ್ಸೃಜಸೇ ರಣಮ್ ॥3॥
ಅನೇಕ ವರ್ಷಗಳಿಂದ ಬಯಸಿದ ಆ ಕಾಲವು ಈಗ ಸಂಪ್ರಾಪ್ತವಾಗಿದೆ. ನೀನು ರಣರಂಗವನ್ನು ತ್ಯಜಿಸದಿದ್ದರೆ ಈ ದಿನ ನಿನ್ನನ್ನು ಕೊಲ್ಲುವೆನು.
ಅದ್ಯ ಕುಂತ್ಯಾಃ ಪರಿಕ್ಲೇಶಂ ವನವಾಸಂ ಚ ಕೃತ್ಸ್ನಶಃ ।
ದ್ರೌಪದ್ಯಾಶ್ಚ ಪರಿಕ್ಲೇಶಂ ಪ್ರಣೋತ್ಸ್ಯಾಮಿ ಹತೇ ತ್ವಯಿ ॥4॥
ಈ ದಿನ ನಿನ್ನನ್ನು ಕೊಂದು ಕುಂತಿಯ ಪರಿಕ್ಲೇಶವನ್ನು, ವನವಾಸದ ಎಲ್ಲ ಕ್ಲೇಶಗಳನ್ನು, ದ್ರೌಪದಿಯ ಪರಿಕ್ಲೇಶಗಳನ್ನು ನಿವಾರಿಸುವೆನು.
ಯತ್ತ್ವಂ ದುರೋದರೋ ಭೂತ್ವಾ ಪಾಂಡವಾನವಮನ್ಯಸೇ ।
ತಸ್ಯ ಪಾಪಸ್ಯ ಗಾಂಧಾರೇ ಪಶ್ಯ ವ್ಯಸನಮಾಗತಮ್ ॥5॥
ಎಲೈ ಗಾಂಧಾರಿ ಪುತ್ರನೇ, ನೀನು ಕೆಟ್ಟ ಜೂಜನ್ನಾಡಿ ಪಾಂಡವರಿಗೆ ಅವಮಾನ ಮಾಡಿರುವಿಯಷ್ಟೆ! ಅದರ ಫಲವಾದ ದುಃಖವು ಈಗ ಒದಗಿ ಬಂದಿದೆ ಅದನ್ನು ನೀನು ನೋಡು.
ಕರ್ಣಸ್ಯ ಮತಮಾಜ್ಞಾಯ ಸೌಬಲಸ್ಯ ಚ ಯತ್ ಪುರಾ ।
ಅಚಿಂತ್ಯ ಪಾಂಡವಾನ್ ಕಾಮಾದ್ ಯಥೇಷ್ಟಂ ಕೃತವಾನಸಿ ॥6॥
ನೀನು ಹಿಂದೆ ಕರ್ಣನ ಮತ್ತು ಶಕುನಿಯ ಅಭಿಪ್ರಾಯಗಳನ್ನು ಸ್ವೀಕರಿಸಿ ಪಾಂಡವರನ್ನು ಗಣನೆಗೇ ತೆಗೆದುಕೊಳ್ಳದೆ ನಿನ್ನ ಮನಸ್ಸಿಗೆ ಬಂದಂತೆ ಕಾರ್ಯವನ್ನು ಮಾಡಿದ್ದೀಯೆ.
ಯಾಚಮಾನಂ ಚ ಯನ್ಮೋಹಾದ್ ದಾಶಾರ್ಹಮವಮನ್ಯಸೇ ।
ಉಲೂಕಸ್ಯ ಸಮಾದೇಶಂ ಯದ್ ದದಾಸಿ ಚ ಹೃಷ್ಟವತ್ ॥7॥
ಸಂಧಿಯನ್ನು ಯಾಚಿಸುವ ಕೃಷ್ಣನನ್ನೂ ಸಹ ನೀನು ಮೋಹದಿಂದ ಅವಮಾನ ಮಾಡಿದ್ದೀಯೆ. ಶಕುನಿಯ ಪುತ್ರನಾದ ಉಲೂಕನಿಗೆ ಕೃಷ್ಣನನ್ನು ಬಂಧಿಸಲು ಸಂತೋಷದಿಂದ ಆದೇಶವನ್ನೂ ನೀಡಿದ್ದೀಯೆ.
ಅದ್ಯ ತ್ವಾ ನಿಹನಿಷ್ಯಾಮಿ ಸಾನುಬಂಧಂ ಸಬಾಂಧವಮ್ ।
ಸಮೀಕರಿಷ್ಯೇ ತತ್ಪಾಪಂ ಯತ್ ಪುರಾ ಕೃತವಾನಸಿ ॥8॥
ಈ ದಿನ ನಿನ್ನನ್ನು ನಿನ್ನ ಅನುಯಾಯಿಗಳ ಮತ್ತು ಬಾಂಧವರೊಡನೆ ಕೊಲ್ಲುವೆನು. ನೀನು ಹಿಂದೆ ಮಾಡಿದ ಎಲ್ಲ ಪಾಪಗಳಿಗೆ ಪ್ರತೀಕಾರವನ್ನು ಮಾಡುವೆನು.
ಏವಮುಕತ್ವ ಧನುರ್ಘೋರಂ ವಿಕೃಷ್ಯೋದ್ಭ್ರಾಮ್ಯ ಚಾಸಕೃತ್ ।
ಸಮಾದಾಯ ಶರಾನ್ ಘೋರಾನ್ ಮಹಾಶನಿಸಮಪ್ರಭಾನ್ ॥9॥
ಷಡ್ವಿಂಶತ್ ತರಸಾ ಕ್ರುದ್ಧೋ ಮುಮೋಚಾಶು ಸುಯೋಧನೇ ।
ಜ್ವಲಿತಾಗ್ನಿಶಿಖಾಕಾರಾನ್ ವಜ್ರಕಲ್ಪಾನಜಿಹ್ಮಗಾನ್ ॥10॥
ಹೀಗೆ ಹೇಳಿ ಘೋರವಾದ ಧನುಸ್ಸನ್ನು ಎಳೆದು ಅದನ್ನು ಅನೇಕ ಬಾರಿ ತಿರುಗಿಸಿ ದೊಡ್ಡ ಸಿಡಿಲಿನ ಕಾಂತಿಯುಳ್ಳ ಘೋರವಾದ ಇಪ್ಪತ್ತಾರು ಬಾಣಗಳನ್ನು ತೆಗೆದುಕೊಂಡು ಉರಿಯುವ ಅಗ್ನಿಯ ಜ್ವಾಲೆಯಂತಿದ್ದ, ವಜ್ರಾಯುಧಕ್ಕೆ ಸಮಾನವಾದ, ನೇರವಾಗಿ ಸಾಗುವ ಆ ಬಾಣಗಳನ್ನು ಸುಯೋಧನನ ಮೇಲೆ ಪ್ರಯೋಗಿಸಿದನು.
ತತೋಽಸ್ಯ ಕಾರ್ಮುಕಂ ದ್ವಾಭ್ಯಾಂ ಸೂತಂ ದ್ವಾಭ್ಯಾಂ ಚ ವಿವ್ಯಧೇ ।
ಚತುರ್ಭಿರಶ್ವಾನ್ ಜವನಾನನಯದ್ ಯಮಸಾದನಮ್ ॥11॥
ಅನಂತರ ಎರಡು ಬಾಣಗಳಿಂದ ಅವನ ಧನುಸ್ಸನ್ನು ಕತ್ತರಿಸಿ, ಎರಡು ಬಾಣಗಳಿಂದ ಅವನ ಸೂತನನ್ನು ಕೊಂದು, ನಾಲ್ಕು ಬಾಣಗಳಿಂದ ಅವನ ವೇಗಶಾಲಿಗಳಾದ ಅಶ್ವಗಳನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ದ್ವಾಭ್ಯಾಂ ಚ ಸುವಿಕೃಷ್ಟಾಭ್ಯಾಂ ಶರಾಭ್ಯಾಮರಿಮರ್ದನಃ ।
ಛತ್ರಂ ಚಿಚ್ಛೇದ ಸಮರೇ ರಾಜ್ಞಸ್ತಸ್ಯ ರಥೋತ್ತಮಾತ್ ॥12॥
ಶತ್ರುಮರ್ದನನಾದ ಭೀಮಸೇನನು ಎರಡು ಬಾಣಗಳನ್ನು ಚೆನ್ನಾಗಿ ಎಳೆದು ಪ್ರಯೋಗಿಸಿ ರಣರಂಗದಲ್ಲಿ ಆ ರಾಜನ ಶ್ರೇಷ್ಠವಾದ ರಥದಿಂದ ಛತ್ರವನ್ನು ಕೆಡವಿದನು.
ತ್ರಿಭಿಶ್ಚ ತಸ್ಯ ಚಿಚ್ಛೇದ ಜ್ವಲಂತಂ ಧ್ವಜಮುತ್ತಮಮ್ ।
ಛಿತ್ತ್ವಾ ತಂ ಚ ನನಾದೋಚ್ಚೈಸ್ತವ ಪುತ್ರಸ್ಯ ಪಶ್ಯತಃ ॥13॥
ಪ್ರಕಾಶಮಾನವಾದ ಅವನ ರಥದ ಶ್ರೇಷ್ಠವಾದ ಧ್ವಜವನ್ನು ಮೂರು ಬಾಣಗಳಿಂದ ಕತ್ತರಿಸಿ ನಿನ್ನ ಪುತ್ರನು ನೋಡುತ್ತಿರುವಂತೆಯೇ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು.

ರಥಾಚ್ಚ ಸ ಧ್ವಜಃ ಶ್ರೀಮಾನ್ ನಾನಾರತ್ನವಿಭೂಷಿತಃ |
ಪಪಾತ ಸಹಸಾ ಭೂಮಿಂ ವಿದ್ಯುಜ್ಜಲಧರಾದಿವ ||14||
ನಾನಾರತ್ನಗಳಿಂದ ಅಲಂಕೃತವಾದ, ಕಾಂತಿಯುಕ್ತವಾದ ಅವನ ರಥದ ಧ್ವಜವು ಮೋಡದಿಂದ ಮಿಂಚು ಬಂದಂತೆ ಇದ್ದಕ್ಕಿದ್ದಂತೆಯೇ ಶೀಘ್ರವಾಗಿ ಭೂಮಿಯ ಮೇಲೆ ಬಿದ್ದಿತು.
ಜ್ವಲಂತಂ ಸೂರ್ಯಸಂಕಾಶಂ ನಾಗಂ ಮಣಿಮಯಂ ಶುಭಮ್ |
ಧ್ವಜಂ ಕುರುಪತೇಶ್ಛಿನ್ನಂ ದದೃಶುಃ ಸರ್ವಪಾರ್ಥಿವಾಃ ||15||
ಸೂರ್ಯನ ಪ್ರಭೆಯನ್ನು ಹೊಂದಿ ಪ್ರಕಾಶಿಸುತ್ತಿದ್ದ ಮಣಿಮಯವೂ, ಶುಭವೂ ಆದ ಕುರುಪತಿಯ ಸರ್ಪಧ್ವಜವು ಕತ್ತರಿಸಿ ನೆಲದ ಮೇಲೆ ಬಿದ್ದುದನ್ನು ಎಲ್ಲ ರಾಜರೂ ನೋಡಿದರು.
ಅಥೈನಂ ದಶಭಿರ್ಬಾಣೈಸ್ತೋತ್ತ್ರೈರಿವ ಮಹಾಗಜಮ್ |
ಆಜಘಾನ ರಣೇ ಭೀಮಃ ಸ್ಮಯನ್ನಿವ ಮಹಾರಥಃ ||16||
ಅನಂತರ ಮಹಾರಥನಾದ ಭೀಮನು ಅಂಕುಶದಿಂದ ಮಹಾಗಜವನ್ನು ಪೀಡಿಸಿದಂತೆ ಹತ್ತು ಬಾಣಗಳಿಂದ ನಗುತ್ತಾ ಅವನನ್ನು ಹೊಡೆದನು.
ಸ ಗಾಢವಿದ್ಧೋ ವ್ಯಥಿತೋ ಭೀಮಸೇನೇನ ಸಂಯುಗೇ |
ನಿಷಸಾದ ರಥೋಪಸ್ಥೇ ಮೂರ್ಛಯಾಭಿಹತಚೇತನಃ ||17||
ಗಾಢವಾಗಿ ಭೀಮಸೇನನಿಂದ ರಣರಂಗದಲ್ಲಿ ಹೊಡೆಯಲ್ಪಟ್ಟು ವ್ಯಥೆಗೆ ಒಳಗಾದ ದುರ್ಯೋಧನನು ಮೂರ್ಛಾಕ್ರಾಂತನಾಗಿ ರಥದ ಮಧ್ಯಭಾಗದಲ್ಲಿ ಕುಸಿದನು.
ತತಸ್ತು ರಾಜಾ ಸಿಂಧೂನಾಂ ರಥಶ್ರೇಷ್ಠೋ ಜಯದ್ರಥಃ |
ದುರ್ಯೋಧನಸ್ಯ ಜಗ್ರಾಹ ಪಾರ್ಷ್ಣಿಂ ಸತ್ಪುರುಷೋಚಿತಾಮ್ ||18||
ಆಗ ಸಿಂಧುರಾಜನೂ, ರಥಶ್ರೇಷ್ಠನೂ ಆದ ಜಯದ್ರಥನು ಸತ್ಪುರುಷರಿಗೆ ಉಚಿತವಾದ ದುರ್ಯೋಧನನ ಪಕ್ಷವನ್ನು ಹಿಡಿದನು.
ಕೃಪಶ್ಚ ರಥಿನಾಂ ಶ್ರೇಷ್ಠಃ ಕೌರವ್ಯಮಮಿತೌಜಸಮ್ |
ಆರೋಪಯದ್ ರಥಂ ರಾಜನ್ ದುರ್ಯೋಧನಮಮರ್ಷಣಮ್ ||
ಎಲೈ ರಾಜನೇ, ರಥಿಗಳಲ್ಲಿ ಶ್ರೇಷ್ಠರಾದ ಕೃಪರೂ ಸಹ ಅಮಿತಪರಾಕ್ರಮಿಯೂ, ಕ್ರೋಧಶೀಲನೂ, ಕೌರವ್ಯನೂ ಆದ ದುರ್ಯೋಧನನನ್ನು ತಮ್ಮ ರಥದಲ್ಲಿ ಏರಿಸಿದರು.
ಪರಿವಾರ್ಯ ತತೋ ಭೀಮಂ ಹಂತುಕಾಮೋ ಜಯದ್ರಥಃ |
ರಥೈರನೇಕಸಾಹಸ್ರೈರ್ಭೀಮಸ್ಯಾವಾರಯದ್ ದಿಶಃ ||20||
ಜಯದ್ರಥನು ಭೀಮಸೇನನನ್ನು ಕೊಲ್ಲಲು ಬಯಸಿ ಅನೇಕ ಸಹಸ್ರ ರಥಗಳಿಂದ ಎಲ್ಲ ದಿಕ್ಕುಗಳಲ್ಲಿಯೂ ಭೀಮಸೇನನ ಮೇಲೆ ಮುತ್ತಿದನು.
ಧೃಷ್ಟಕೇತುಸ್ತತೋ ರಾಜನ್ನಭಿಮನ್ಯುಶ್ಚ ವೀರ್ಯವಾನ್ |
ಕೇಕಯಾ ದ್ರೌಪದೇಯಾಶ್ಚ ತವ ಪುತ್ರಾನಯೋಧಯನ್ ||21||
ಎಲೈ ರಾಜನೇ, ಆಗ ಧೃಷ್ಟಕೇತುವೂ ಪರಾಕ್ರಮಶಾಲಿಯಾದ ಅಭಿಮನ್ಯುವೂ, ಕೇಕಯ ಸಹೋದರರೂ ಮತ್ತು ದ್ರೌಪದಿಯ ಪುತ್ರರೂ ನಿನ್ನ ಪುತ್ರರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಚಿತ್ರಸೇನಃ ಸುಚಿತ್ರಶ್ಚ ಚಿತ್ರಾಶ್ವಶ್ಚಿತ್ರದರ್ಶನಃ |
ಚಾರುಚಿತ್ರಃ ಸುಚಾರುಶ್ಚ ತಥಾ ನಂದೋಪನಂದಕೌ ||22||
ಅಷ್ಟಾವೇತೇ ಮಹೇಷ್ವಾಸಾಃ ಸುಕುಮಾರಾ ಯಶಸ್ವಿನಃ |
ಅಭಿಮನ್ಯುರಥಂ ರಾಜನ್ ಸಮಂತಾತ್ ಪರ್ಯವಾರಯನ್ ||23||
ಚಿತ್ರಸೇನ, ಸುಚಿತ್ರ, ಚಿತ್ರಾಶ್ವ, ಚಿತ್ರದರ್ಶನ, ಚಾರುಚಿತ್ರ, ಸುಚಾರು, ನಂದ ಮತ್ತು ಉಪನಂದ ಈ ಕೀರ್ತಿಶಾಲಿಗಳೂ, ಸುಕುಮಾರರೂ, ಮಹಾಧನುರ್ಧಾರಿಗಳೂ ಆದ ನಿನ್ನ ಎಂಟು ಪುತ್ರರು ಎಲೈ ರಾಜನೇ, ಅಭಿಮನ್ಯುವಿನ ರಥವನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಆಜಘಾನ ತತಸ್ತೂರ್ಣಮಭಿಮನ್ಯುರ್ಮಹಾಮನಾಃ |
ಏಕೈಕಂ ಪಂಚಭಿರ್ವಿದ್ಧ್ವಾ ಶರೈಃ ಸನ್ನತಪರ್ವಭಿಃ |
ವಜ್ರಮೃತ್ಯುಪ್ರತೀಕಾಶೈರ್ವಿಚಿತ್ರಾಯುಧನಿಃಸೃತೈಃ ||24||
ಧೈರ್ಯಶಾಲಿಯಾದ ಅಭಿಮನ್ಯುವು ಆಗ ಶೀಘ್ರವಾಗಿ ಅವರಲ್ಲಿ ಒಬ್ಬೊಬ್ಬರನ್ನೂ ಬಾಗಿದ ತುದಿಯುಳ್ಳ, ವಜ್ರದಂತೆ ಇದ್ದ, ಮೃತ್ಯುವನ್ನು ಹೋಲುವ ವಿಚಿತ್ರಾಯುಧಗಳಿಂದ ಹೊರಹೊಮ್ಮುವ ಐದೈದು ಬಾಣಗಳಿಂದ ಹೊಡೆದನು.
ಅಮೃಷ್ಯಮಾಣಾಸ್ತೇ ಸರ್ವೇ ಸೌಭದ್ರಂ ರಥಸತ್ತಮಮ್ |
ವವರ್ಷುರ್ಮಾರ್ಗಣೈಸ್ತೀಕ್ಷ್ಣೈರ್ಗಿರಿಂ ಮೇರುಮಿವಾಂಬುದಾಃ ||25||
ರಥಶ್ರೇಷ್ಠನಾದ ಅಭಿಮನ್ಯುವಿನ ಕಾರ್ಯವನ್ನು ಸಹಿಸದೆ ಅವರೆಲ್ಲರೂ ಮೋಡಗಳು ಮೇರುಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಅಭಿಮನ್ಯುವಿನ ಮೇಲೆ ತೀಕ್ಷ್ಣವಾದ ಬಾಣಗಳ ಮಳೆಯನ್ನು ಸುರಿಸಿದರು.
ಸ ಪೀಡ್ಯಮಾನಃ ಸಮರೇ ಕೃತಾಸ್ತ್ರೋ ಯುದ್ಧದುರ್ಮದಃ |
ಅಭಿಮನ್ಯುರ್ಮಹಾರಾಜ ತಾವಕಾನ್ ಸಮಕಂಪಯತ್ |
ಯಥಾ ದೇವಾಸುರೇ ಯುದ್ಧೇ ವಜ್ರಪಾಣಿರ್ಮಹಾಸುರಾನ್ ||26||

ಎಲೈ ಮಹಾರಾಜನೇ, ಅಸ್ತ್ರಪಾರಂಗತನೂ, ಯುದ್ಧದಲ್ಲಿ ದುರ್ಮದನೂ ಆದ ಅಭಿಮನ್ಯುವು ಅವರಿಂದ ಹಾಗೆ ಪೀಡಿಸಲ್ಪಟ್ಟರೂ ದೇವಾಸುರ ಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನು ಮಹಾದೈತ್ಯರನ್ನು ಅಲುಗಾಡಿಸಿದಂತೆ ನಿನ್ನ ಪುತ್ರರನ್ನು ಕಂಪಿಸುವಂತೆ ಮಾಡಿದನು.
ವಿಕರ್ಣಸ್ಯ ತತೋ ಭಲ್ಲಾನ್ ಪ್ರೇಷಯಾಮಾಸ ಭಾರತ |
ಚತುರ್ದಶ ರಥಶ್ರೇಷ್ಠೋ ಘೋರಾನಾಶೀವಿಷೋಪಮಾನ್ |
ಧ್ವಜಂ ಸೂತಂ ಹಯಾಂಶ್ಚಾಸ್ಯ ಛಿತ್ತ್ವಾ ನೃತ್ಯನ್ನಿವಾಹವೇ ॥27॥
ಎಲೈ ಭಾರತನೇ, ರಥಶ್ರೇಷ್ಠನಾದ ಅವನು ಘೋರವಾದ, ಸರ್ಪಗಳಂತಿದ್ದ ಹದಿನಾಲ್ಕು ಭಲ್ಲಗಳನ್ನು ವಿಕರ್ಣನ ಮೇಲೆ ಪ್ರಯೋಗಿಸಿ, ಯುದ್ಧದಲ್ಲಿ ನೃತ್ಯವನ್ನು ಮಾಡುವವನಂತೆ ಅವನ ರಥದ ಧ್ವಜವನ್ನೂ, ಸೂತನನ್ನೂ ಮತ್ತು ಅಶ್ವಗಳನ್ನೂ ಕತ್ತರಿಸಿದನು.
ಪುನಶ್ಚಾನ್ಯಾನ್ ಶರಾನ್ ಪೀತಾನಕುಂಠಾಗ್ರಾನ್ ಶಿಲಾಶಿತಾನ್ |
ಪ್ರೇಷಯಾಮಾಸ ಸೌಭದ್ರೋ ವಿಕರ್ಣಾಯ ಮಹಾಬಲಃ ॥28॥
ಪುನಃ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ತೀಕ್ಷ್ಣವಾದ ತುದಿಯುಳ್ಳ ನೀರು ಕುಡಿಸಿ ಹದಮಾಡಿದ ಬೇರೆ ಬಾಣಗಳನ್ನು ತೆಗೆದುಕೊಂಡು ಮಹಾಬಲನಾದ ಅಭಿಮನ್ಯುವು ವಿಕರ್ಣನ ಮೇಲೆ ಪ್ರಯೋಗಿಸಿದನು.
ತೇ ವಿಕರ್ಣಂ ಸಮಾಸಾದ್ಯ ಕಂಕಬರ್ಹಿಣವಾಸಸಃ |
ಭಿತ್ತ್ವಾ ದೇಹಂ ಗತಾ ಭೂಮಿಂ ಜ್ವಲಂತ ಇವ ಪನ್ನಗಾಃ ॥29॥
ಕಂಕಪಕ್ಷಿಯ ಮತ್ತು ನವಿಲಿನ ಗರಿಗಳ ಪುಂಖವನ್ನು ಹೊಂದಿದ್ದ ಆ ಬಾಣಗಳು ವಿಕರ್ಣನನ್ನು ಸಮೀಪಿಸಿ ಅವನ ದೇಹವನ್ನು ಭೇದಿಸಿ ಜ್ವಲಿಸುವ ಸರ್ಪಗಳಂತೆ ಭೂಮಿಯನ್ನು ಸೇರಿದವು.
ತೇ ಶರಾ ಹೇಮಪುಂಖಾಗ್ರಾ ವ್ಯದೃಶ್ಯಂತ ಮಹೀತಳೇ |
ವಿಕರ್ಣರುಧಿರಕ್ಲಿನ್ನಾ ವಮಂತ ಇವ ಶೋಣಿತಮ್ ॥30॥
ಭೂಮಿಯ ಮೇಲೆ ಬಿದ್ದ ಸುವರ್ಣಮಯವಾದ ಪುಂಖಗಳನ್ನು ಹೊಂದಿದ್ದ, ವಿಕರ್ಣನ ರಕ್ತದಿಂದ ತೊಯ್ದ ಆ ಬಾಣಗಳು ರಕ್ತವನ್ನು ಕಾರುತ್ತಿರುವಂತೆ ತೋರುತ್ತಿದ್ದವು.
ವಿಕರ್ಣಂ ವೀಕ್ಷ್ಯ ನಿರ್ಭಿನ್ನಂ ತಸ್ಯೈವಾನ್ಯೇ ಸಹೋದರಾಃ |
ಅಭ್ಯದ್ರವಂತ ಸಮರೇ ಸೌಭದ್ರಪ್ರಮುಖಾನ್ ರಥಾನ್ ॥31॥
ವಿಕರ್ಣನು ಹೀಗೆ ಗಾಯಗೊಂಡುದನ್ನು ನೋಡಿ ಅವನ ಉಳಿದ ಸಹೋದರರು ರಣರಂಗದಲ್ಲಿ ಅಭಿಮನ್ಯು ಮೊದಲಾದ ರಥರ ಮೇಲೆ ಎರಗಿದರು.
ಅಭಿಯಾತ್ವಾ ತಥೈವಾಶು ರಥಸ್ಥಾನ್ ಸೂರ್ಯವರ್ಚಸಃ |
ಅವಿಧ್ಯನ್ ಸಮರೇಽನ್ಯೋನ್ಯಂ ಸಂರಬ್ಧಾ ಯುದ್ಧದುರ್ಮದಾಃ ॥32॥
ಶೀಘ್ರವಾಗಿ ಅವರ ಬಳಿಗೆ ಓಡಿ ಬಂದು, ಸೂರ್ಯನ ಕಾಂತಿಯಿಂದ ಕೂಡಿದ ರಥದಲ್ಲಿ ಬೆಳಗುತ್ತಿದ್ದ ಅವರ ಮೇಲೆ ಯುದ್ಧದುರ್ಮದರಾದ ಅವರು ಕೋಪದಿಂದ ಪರಸ್ಪರವಾಗಿ ಹೊಡೆದಾಡಿದರು.
ದುರ್ಮುಖಃ ಶ್ರುತಕರ್ಮಾಣಂ ವಿದ್ಧ್ವಾ ಸಪ್ತಭಿರಾಶುಗೈಃ |
ಧ್ವಜಮೇಕೇನ ಚಿಚ್ಛೇದ ಸಾರಥಿಂ ಚಾಸ್ಯ ಸಪ್ತಭಿಃ ॥33॥
ದುರ್ಮುಖನು ವೇಗಶಾಲಿಗಳಾದ ಏಳು ಬಾಣಗಳಿಂದ ಶ್ರುತಕರ್ಮನನ್ನು ಹೊಡೆದು, ಒಂದು ಬಾಣದಿಂದ ಅವನ ಧ್ವಜವನ್ನು ಕತ್ತರಿಸಿ, ಏಳು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದನು.
ಅಶ್ವಾನ್ ಜಾಂಬೂನದೈರ್ಜಾಲೈಃ ಕಲ್ಮಾಷಾನ್ ವಾತರಂಹಸಃ |
ಜಘಾನ ಷಡ್ಭಿರಾಸಾದ್ಯ ಸಾರಥಿಂ ಚಾಭ್ಯಪಾತಯತ್ ॥34॥
ವಾಯುವೇಗವುಳ್ಳ, ಶುಕ್ಲ-ಕೃಷ್ಣ ವರ್ಣಗಳಿಂದ ಕೂಡಿದ, ಸುವರ್ಣಮಯವಾದ ಹೊದಿಕೆಗಳಿಂದ ಅಲಂಕೃತವಾದ ಅವನ ರಥದ ಅಶ್ವಗಳನ್ನು ಆರು ಬಾಣಗಳಿಂದ ಕೊಂದು ಸಾರಥಿಯನ್ನೂ ಕೆಡವಿದನು.
ಸ ಹತಾಶ್ವೇ ರಥೇ ತಿಷ್ಠನ್ ಶ್ರುತಕರ್ಮಾ ಮಹಾರಥಃ |
ಶಕ್ತಿಂ ಚಿಕ್ಷೇಪ ಸಂಕ್ರುದ್ಧೋ ಮಹೋಲ್ಕಾಂ ಜ್ವಲಿತಾಮಿವ ॥35॥
ಮಹಾರಥನಾದ ಶ್ರುತಕರ್ಮನಾದರೋ ಅಶ್ವರಹಿತವಾದ ರಥದಲ್ಲಿ ನಿಂತು ಕೋಪಗೊಂಡು ಮಹೋಲ್ಕೆಯಂತೆ ಜ್ವಲಿಸುವ ಶಕ್ತ್ಯಾಯುಧವನ್ನು ದುರ್ಮುಖನ ಮೇಲೆ ಪ್ರಯೋಗಿಸಿದನು.
ಸಾ ದುರ್ಮುಖಸ್ಯ ವಿಪುಲಂ ವರ್ಮ ಭಿತ್ತ್ವಾ ಯಶಸ್ವಿನಃ |
ವಿದಾರ್ಯ ಪ್ರಾವಿಶದ್ ಭೂಮಿಂ ದೀಪ್ಯಮಾನಾ ಸುತೇಜನಾ ॥36॥
ವೇಗಶಾಲಿಯಾದ ಜ್ವಲಿಸುವ ಆ ಶಕ್ತ್ಯಾಯುಧವು ಕೀರ್ತಿವಂತನಾದ ದುರ್ಮುಖನ ವಿಪುಲವಾದ ಕವಚವನ್ನು ಭೇದಿಸಿ ಅವನನ್ನು ಸೀಳಿಕೊಂಡು ಭೂಮಿಯನ್ನು ಪ್ರವೇಶಿಸಿತು.
ತಂ ದೃಷ್ಟ್ವಾ ವಿರಥಂ ತತ್ರ ಸುತಸೋಮೋ ಮಹಾಬಲಃ |
ಪಶ್ಯತಾಂ ಸರ್ವಸೈನ್ಯಾನಾಂ ರಥಮಾರೋಪಯತ್ ಸ್ವಕಮ್ ॥37॥
ಸುತಕರ್ಮನು ರಥಹೀನನಾಗಿರುವುದನ್ನು ನೋಡಿ ಮಹಾಬಲನಾದ ಶ್ರುತಸೋಮನು ಎಲ್ಲ ಸೈನ್ಯವೂ ನೋಡುತ್ತಿರುವಂತೆ ಅವನನ್ನು ತನ್ನ ರಥಕ್ಕೆ ಏರಿಸಿದನು.
ಶ್ರುತಕೀರ್ತಿಸ್ತಥಾ ವೀರೋ ಜಯತ್ಸೇನಂ ಸುತಂ ತವ |
ಅಭ್ಯಯಾತ್ ಸಮರೇ ರಾಜನ್ ಹಂತುಕಾಮೋ ಯಶಸ್ವಿನಮ್ ॥38॥

ಎಲೈ ರಾಜನೇ, ಹಾಗೆಯೇ ವೀರನಾದ ಶ್ರುತಕೀರ್ತಿಯು ಕೀರ್ತಿವಂತನಾದ ನಿನ್ನ ಪುತ್ರನಾದ ಜಯತ್ಸೇನನನ್ನು ಕೊಲ್ಲಲು ಬಯಸಿ ರಣರಂಗದಲ್ಲಿ ಅವನ ಕಡೆಗೆ ಸಾಗಿದನು.
ತಸ್ಯ ವಿಕ್ಷಿಪತಶ್ಚಾಪಂ ಶ್ರುತಕೀರ್ತೇರ್ಮಹಾತ್ಮನಃ |
ಚಿಚ್ಛೇದ ಸಮರೇ ರಾಜನ್ ಜಯತ್ಸೇನಃ ಸುತಸ್ತವ |
ಕ್ಷುರಪ್ರೇಣ ಸುತೀಕ್ಷ್ಣೇನ ಪ್ರಹಸನ್ನಿವ ಭಾರತ ॥39॥
ಎಲೈ ಭಾರತನೇ, ಎಲೈ ರಾಜನೇ, ಮಹಾತ್ಮನಾದ ಶ್ರುತಿಕೀರ್ತಿಯು ಧನುಸ್ಸನ್ನು ಬಗ್ಗಿಸುತ್ತಿರುವಂತೆಯೇ ನಿನ್ನ ಸುತನಾದ ಜಯತ್ಸೇನನು ತೀಕ್ಷ್ಣವಾದ ಕ್ಷುರಪ್ರದಿಂದ ನಗುವವನಂತೆ ಅವನ ಧನುಸ್ಸನ್ನು ಕತ್ತರಿಸಿದನು.
ತಂ ದೃಷ್ಟ್ವಾ ಛಿನ್ನಧನ್ವಾನಂ ಶತಾನೀಕಃ ಸಹೋದರಮ್ |
ಅಭ್ಯಪದ್ಯತ ತೇಜಸ್ವೀ ಸಿಂಹವದ್ ವಿನದನ್ ಮುಹುಃ ॥40॥
ಅವನ ಧನುಸ್ಸು ಕತ್ತರಿಸಲ್ಪಟ್ಟುದ್ದನ್ನು ನೋಡಿ ಅವನ ಸಹೋದರನಾದ ತೇಜಸ್ವಿಯಾದ ಶತಾನೀಕನು ಸಿಂಹದಂತೆ ಪುನಃ ಪುನಃ ಗರ್ಜಿಸುತ್ತಾ ಅವನ ಬಳಿಗೆ ಬಂದನು.
ಶತಾನೀಕಸ್ತು ಸಮರೇ ದೃಢಂ ವಿಸ್ಫಾರ್ಯ ಕಾರ್ಮುಕಮ್ |
ವಿವ್ಯಾಧ ದಶಭಿಸ್ತೂರ್ಣಂ ಜಯತ್ಸೇನಂ ಶಿಲೀಮುಖೈಃ |
ನನಾದ ಸುಮಹಾನಾದಂ ಪ್ರಭಿನ್ನ ಇವ ವಾರಣಃ ॥41॥
ಶತಾನೀಕನಾದರೋ ರಣರಂಗದಲ್ಲಿ ತನ್ನ ಬಿಲ್ಲನ್ನು ದೃಢವಾಗಿ ಎಳೆದು ತೀಕ್ಷ್ಣವಾದ ತುದಿಯುಳ್ಳ ಹತ್ತು ಬಾಣಗಳಿಂದ ಶೀಘ್ರವಾಗಿ ಜಯತ್ಸೇನನನ್ನು ಹೊಡೆದನು. ಮತ್ತು ಮದಿಸಿದ ಗಜದಂತೆ ದೊಡ್ಡ ನಾದವನ್ನು ಮಾಡಿದನು.
ಅಥಾನ್ಯೇನ ಸುತೀಕ್ಷ್ಣೇನ ಸರ್ವಾವರಣಭೇದಿನಾ |
ಶತಾನೀಕೋ ಜಯತ್ಸೇನಂ ವಿವ್ಯಾಧ ಹೃದಯೇ ಭೃಶಮ್ ॥42॥
ಅನಂತರ ಶತಾನೀಕನು ಎಲ್ಲ ಕವಚಗಳನ್ನೂ ಭೇದಿಸುವ ಅತ್ಯಂತ ತೀಕ್ಷ್ಣವಾದ ಇನ್ನೊಂದು ಬಾಣದಿಂದ ಜಯತ್ಸೇನನಿಗೆ ಅವನ ಹೃದಯದಲ್ಲಿ ಗಾಢವಾಗಿ ಹೊಡೆದನು.
ತಥಾ ತಸ್ಮಿನ್ ವರ್ತಮಾನೇ ದುಷ್ಕರ್ಣೋ ಭ್ರಾತುರಂತಿಕೇ |
ಚಿಚ್ಛೇದ ಸಮರೇ ಚಾಪಂ ನಾಕುಲೇಃ ಕ್ರೋಧಮೂರ್ಛಿತಃ ॥43॥
ಜಯತ್ಸೇನನು ಅಂತಹ ಸ್ಥಿತಿಗೆ ಒಳಗಾಗಿರುವುದನ್ನು ನೋಡಿದ ಅವನ ಸಹೋದರನಾದ ದುಷ್ಕರ್ಣನು ಕ್ರೋಧಮೂರ್ಛಿತನಾಗಿ ಅವನ ಸಮೀಪಕ್ಕೆ ಬಂದು  ಯುದ್ಧದಲ್ಲಿ ನಕುಲಪುತ್ರನಾದ ಶತನೀಕನ ಧನುಸ್ಸನ್ನು ಕತ್ತರಿಸಿದನು.
ಅಥಾನ್ಯದ್ಧನುರಾದಾಯ ಭಾರಸಾಧನಮುತ್ತಮಮ್ |
ಸಮಾದತ್ತ ಶಿತಾನ್ ಬಾಣಾನ್ ಶತಾನೀಕೋ ಮಹಾಬಲಃ ॥44॥
ಆಗ ಮಹಾಬಲನಾದ ಶತಾನೀಕನು ಗುರುತರವಾದ ಕಾರ್ಯವನ್ನು ಮಾಡುವ ಶ್ರೇಷ್ಠವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತೀಕ್ಷ್ಣವಾದ ಬಾಣವನ್ನು ಕೈಯಲ್ಲಿ ತೆಗೆದುಕೊಂಡನು.
ತಿಷ್ಠ ತಿಷ್ಠೇತಿ ಚಾಮಂತ್ರ್ಯ ದುಷ್ಕರ್ಣಂ ಭ್ರಾತುರಗ್ರತಃ |
ಮುಮೋಚ ನಿಶಿತಾನ್ ಬಾಣಾನ್ ಜ್ವಲಿತಾನ್ ಪನ್ನಗಾನಿವ ॥45॥
ಅವನ ಸಹೋದರನ ಮುಂದೆ ದುಷ್ಕರ್ಣನನ್ನು ಕುರಿತು ನಿಲ್ಲು, ನಿಲ್ಲು ಎಂದು ಹೇಳುತ್ತಾ ಜ್ವಲಿಸುವ ಸರ್ಪಗಳಂತಿದ್ದ ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ತತೋಽಸ್ಯ ಧನುರೇಕೇನ ದ್ವಾಭ್ಯಾಂ ಸೂತಂ ಚ ಮಾರಿಷ |
ಚಿಚ್ಛೇದ ಸಮರೇ ತೂರ್ಣಂ ತಂ ಚ ವಿವ್ಯಾಧ ಸಪ್ತಭಿಃ ॥46॥
ಎಲೈ ಪೂಜ್ಯನೇ, ಅನಂತರ ಒಂದು ಬಾಣದಿಂದ ಅವನ ಧನುಸ್ಸನ್ನೂ, ಎರಡು ಬಾಣಗಳಿಂದ ಅವನ ಸೂತನನ್ನೂ ಕತ್ತರಿಸಿ, ಶೀಘ್ರವಾಗಿ ಅವನ ಮೇಲೆ ರಣರಂಗದಲ್ಲಿ ಏಳು ಬಾಣಗಳನ್ನು ಪ್ರಯೋಗಿಸಿದನು.
ಅಶ್ವಾನ್ ಮನೋಜವಾಂಶ್ಚಾಸ್ಯ ಕಲ್ಮಾಷಾನ್ ವೀತಕಲ್ಮಷಃ |
ಜಘಾನ ನಿಶಿತೈಸ್ತೂರ್ಣಂ ಸರ್ವಾನ್ ದ್ವಾದಶಭಿಃ ಶರೈಃ ॥47॥
ಹನ್ನೆರಡು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಮನೋವೇಗವುಳ್ಳ ಬಿಳಿ ಮತ್ತು ಕಪ್ಪು ಬಣ್ಣಗಳಿಂದ ಕೂಡಿದ ಪರಿಶುದ್ಧ ಜಾತಿಗೆ ಸೇರಿದ ಅವನ ರಥದ ಅಶ್ವಗಳೆಲ್ಲವನ್ನೂ ಶೀಘ್ರವಾಗಿ ಕೊಂದನು.
ಅಥಾಪರೇಣ ಭಲ್ಲೇನ ಸುಮುಕ್ತೇನ ನಿಪಾತಿನಾ |
ದುಷ್ಕರ್ಣಂ ಸಮರೇ ಕ್ರುದ್ಧೋ ವಿವ್ಯಾಧ ಹೃದಯೇ ಭೃಶಮ್ |
ಸ ಪಪಾತ ತತೋ ಭೂಮೌ ವಜ್ರರುಗ್ಣ ಇವ ದ್ರುಮಃ ॥48॥
ಅನಂತರ ತನ್ನ ಗುರಿಯನ್ನು ತಲುಪುವ, ಚೆನ್ನಾಗಿ ಪ್ರಯೋಗಿಸಲ್ಪಟ್ಟ, ಇನ್ನೊಂದು ಭಲ್ಲದಿಂದ ಕ್ರುದ್ಧನಾಗಿ ದುಷ್ಕರ್ಣನಿಗೆ ಅವನ ಎದೆಯಲ್ಲಿ ಗಾಢವಾಗಿ ಹೊಡೆದನು. ಅವನು ಸಿಡಿಲು ಬಡಿದ ವೃಕ್ಷದಂತೆ ಭೂಮಿಯ ಮೇಲೆ ಬಿದ್ದನು.
ದುಷ್ಕರ್ಣಂ ನಿಹತಂ ದೃಷ್ಟ್ವಾ ಪಂಚ ರಾಜನ್ಮಹಾರಥಾಃ |
ಜಿಘಾಂಸಂತಃ ಶತಾನೀಕಂ ಸರ್ವತಃ ಪರ್ಯವಾರಯನ್ ॥49॥
ದುಷ್ಕರ್ಣನು ಹೀಗೆ ಭೂಮಿಯ ಮೇಲೆ ಬಿದ್ದುದನ್ನು ನೋಡಿ ಎಲೈ ರಾಜನೇ, ಮಹಾರಥರಾದ ಅವನ ಐವರು ಸಹೋದರರು ಶತಾನೀಕನನ್ನು ಕೊಲ್ಲಲು ಬಯಸಿ ಎಲ್ಲ ಕಡೆಗಳಿಂದಲೂ ಅವನನ್ನು ಸುತ್ತುವರಿದರು.
ಛಾದ್ಯಮಾನಂ ಶರವ್ರಾತೈಃ ಶತಾನೀಕಂ ಯಶಸ್ವಿನಮ್ |

ಅಭ್ಯಧಾವಂತ ಸಂರಬ್ಧಾಃ ಕೇಕಯಾಃ ಪಂಚ ಸೋದರಾಃ ॥50॥
ಕೀರ್ತಿಶಾಲಿಯಾದ ಶತಾನೀಕನು ಬಾಣಗಳ ಸಮೂಹದಿಂದ ಮುಚ್ಚಲ್ಪಡುತ್ತಿರಲು ಕೋಪಗೊಂಡ ಕೇಕಯದೇಶದ ಐವರು ಸಹೋದರರು ಅವನ ಬಳಿಗೆ ಧಾವಿಸಿದರು.
ತಾನಭ್ಯಾಪತತಃ ಪ್ರೇಕ್ಷ್ಯ ತವ ಪುತ್ರಾ ಮಹಾರಥಾಃ |
ಪ್ರತ್ಯುದ್ಯಯುರ್ಮಹಾರಾಜ ಗಜಾ ಇವ ಮಹಾಗಜಾನ್ ॥51॥
ಎಲೈ ಮಹಾರಾಜನೇ, ಅವರು ಸಮೀಪಕ್ಕೆ ಬರುತ್ತಿರುವುದನ್ನು ನೋಡಿ ಮಹಾರಥರಾದ ನಿನ್ನ ಪುತ್ರರು ಗಜಗಳು ಪ್ರತಿಗಜಗಳ ಮೇಲೆ ಎರಗಿದಂತೆ ಅವರ ಮೇಲೆ ಎರಗಿದರು.
ದುರ್ಮುಖೋ ದುರ್ಜಯಶ್ಚೈವ ತಥಾ ದುರ್ಮರ್ಷಣೋ ಯುವಾ |
ಶತ್ರುಂಜಯಃ ಶತ್ರುಸಹಃ ಸರ್ವೇ ಕ್ರುದ್ಧಾ ಯಶಸ್ವಿನಃ |
ಪ್ರತ್ಯುದ್ಯಾತಾ ಮಹಾರಾಜ ಕೇಕಯಾನ್ ಭ್ರಾತರಃ ಸಮಮ್ ॥52॥
ಎಲೈ ಮಹಾರಾಜನೇ, ದುರ್ಮುಖ, ದುರ್ಜಯ, ಯುವಕನಾದ ದುರ್ಮರ್ಷಣ, ಶತ್ರುಂಜಯ, ಶತ್ರುಸಹ ಈ ಎಲ್ಲ ಕೀರ್ತಿಶಾಲಿಗಳೂ ಕ್ರುದ್ಧರಾಗಿ ಒಟ್ಟಿಗೆ ಕೇಕಯ ದೇಶದ ಐವರು ಸಹೋದರರ ಮೇಲೆ ಎರಗಿದರು.
ರಥೈರ್ನಗರಸಂಕಾಶೈರ್ಹಯೈರ್ಯುಕ್ತೈರ್ಮನೋಜವೈಃ |
ನಾನಾವರ್ಣವಿಚಿತ್ರಾಭಿಃ ಪತಾಕಾಭಿರಲಂಕೃತೈಃ ॥53॥
ವರಚಾಪಧರಾ ವೀರಾ ವಿಚಿತ್ರಕವಚಧ್ವಜಾಃ |
ವಿವಿಶುಸ್ತೇ ಪರಂ ಸೈನ್ಯಂ ಸಿಂಹಾ ಇವ ವನಾದ್ವನಮ್ ॥54॥
ಶ್ರೇಷ್ಠವಾದ ಧನುಸ್ಸನ್ನು ಧರಿಸಿದ, ವಿಚಿತ್ರ ಕವಚ-ಧ್ವಜಗಳನ್ನು ಹೊಂದಿದ ಆ ವೀರರು ನಾನಾವರ್ಣದ ವಿಚಿತ್ರವಾದ ಪತಾಕೆಗಳಿಂದ ಅಲಂಕೃತವಾದ ಮನೋಜವವುಳ್ಳ ಅಶ್ವಗಳನ್ನು ಹೂಡಿದ, ನಗರದಂತೆ ಶೋಭಿಸುವ ರಥಗಳಲ್ಲಿ ಸಿಂಹಗಳು ಒಂದು ವನದಿಂದ ಇನ್ನೊಂದು ವನಕ್ಕೆ ಹೋದಂತೆ ಶತ್ರುಸೈನ್ಯವನ್ನು ಪ್ರವೇಶಿಸಿದರು.
ತೇಷಾಂ ಸುತುಮುಲಂ ಯುದ್ಧಂ ವ್ಯತಿಷಕ್ತರಥದ್ವಿಪಮ್ |
ಅವರ್ತತ ಮಹಾರೌದ್ರಂ ನಿಘ್ನತಾಮಿತರೇತರಮ್ |
ಅನ್ಯೋನ್ಯಾಗಸ್ಕೃತಾಂ ರಾಜನ್ ಯಮರಾಷ್ಟ್ರವಿವರ್ಧನಮ್ ॥55॥
ಎಲೈ ರಾಜನೇ, ಪರಸ್ಪರವಾಗಿ ಅಪಚಾರವನ್ನು ಮಾಡಿ, ಪರಸ್ಪರವಾಗಿ ಕೊಲ್ಲಲು ಬಯಸಿದ ಅವರಿಬ್ಬರ ಸೈನ್ಯದ ರಥ-ಗಜಗಳು ಪರಸ್ಪರ ಮಿಶ್ರಿತವಾಗಿ ಮಹಾಭಯಂಕರವೂ, ತೀವ್ರವೂ, ಯಮಲೋಕವರ್ಧನವೂ ಆದ ಯುದ್ಧವು ನಡೆಯಿತು.
ಮುಹೂರ್ತಾಸ್ತಮಿತೇ ಸೂರ್ಯೇ ಚಕ್ರುರ್ಯುದ್ಧಂ ಸುದಾರುಣಮ್ |
ರಥಿನಃ ಸಾದಿನಶ್ಚೈವ ವ್ಯಕೀರ್ಯಂತ ಸಹಸ್ರಶಃ ॥56॥
ಸೂರ್ಯಾಸ್ತವಾಗಿ ಒಂದು ಮುಹೂರ್ತವು ಕಳೆದಿದ್ದರೂ ಅವರು ದಾರುಣವಾದ ಯುದ್ಧವನ್ನು ಮಾಡಿದರು. ರಥಿಕರು ಮತ್ತು ಅಶ್ವಾರೋಹಿಗಳು ಸಹಸ್ರ ಸಂಖ್ಯೆಯಲ್ಲಿ ನಾಶವನ್ನು ಹೊಂದಿದರು.
ನಾಶಯಾಮಾಸತುರ್ವೀರೌ ಧೃಷ್ಟದ್ಯುಮ್ನವೃಕೋದರೌ |
ಕೌರವಾಣಾಮನೀಕಾನಿ ಶರೈಃ ಸನ್ನತಪರ್ವಭಿಃ ॥57॥
ವೀರರಾದ ಧೃಷ್ಟದ್ಯುಮ್ನ ಮತ್ತು ಭೀಮಸೇನರು ಬಾಗಿದ ತುದಿಯುಳ್ಳ ಬಾಣಗಳಿಂದ ಕೌರವರ ಸೈನ್ಯಗಳನ್ನು ನಾಶಮಾಡಿದರು.
ತತಃ ಶಾಂತನವಃ ಕ್ರುದ್ಧಃ ಶರೈಃ ಸನ್ನತಪರ್ವಭಿಃ |
ನಾಶಯಾಮಾಸ ಸೇನಾಂ ವೈ ಭೀಷ್ಮಸ್ತೇಷಾಂ ಮಹಾತ್ಮನಾಮ್ |
ಪಾಂಚಾಲಾನಾಂ ಚ ಸೈನ್ಯಾನಿ ಶರೈರ್ನಿನ್ಯೇ ಯಮಕ್ಷಯಮ್ ॥58॥
ಆಗ ಕೋಪಗೊಂಡ ಭೀಷ್ಮರು ಬಾಗಿದ ತುದಿಯುಳ್ಳ ಬಾಣಗಳಿಂದ ಮಹಾತ್ಮರಾದ ಪಾಂಡವರ ಸೈನ್ಯವನ್ನು ನಾಶಮಾಡಿದರು. ತಮ್ಮ ಬಾಣಗಳಿಂದ ಪಾಂಚಾಲರ ಸೈನ್ಯವನ್ನೂ ಯಮಪಟ್ಟಣಕ್ಕೆ ಕಳುಹಿಸಿದರು.
ಏವಂ ಭಿತ್ತ್ವಾ ಮಹೇಷ್ವಾಸಃ ಪಾಂಡವಾನಾಮನೀಕಿನೀಮ್ |
ಕೃತ್ವಾವಹಾರಂ ಸೈನ್ಯಾನಾಂ ಯಯೌ ಸ್ವಶಿಬಿರಂ ನೃಪ ॥59॥
ಎಲೈ ರಾಜನೇ, ಮಹಾಧನುರ್ಧಾರಿಗಳಾದ ಭೀಷ್ಮರು ಪಾಂಡವರ ಸೈನ್ಯವನ್ನು ಹೀಗೆ ಭೇದಿಸಿ ತಮ್ಮ ಸೈನ್ಯವನ್ನು ಹಿಂದಕ್ಕೆ ತೆಗೆದುಕೊಂಡು ತಮ್ಮ ಶಿಬಿರಕ್ಕೆ ಹಿಂದಿರುಗಿದರು.
ಧರ್ಮರಾಜೋಽಪಿ ಸಂಪ್ರೇಕ್ಷ್ಯ ಧೃಷ್ಟದ್ಯುಮ್ನವೃಕೋದರೌ |
ಮೂರ್ಧ್ನಿ ಚೈತಾವುಪಾಘ್ರಾಯ ಸಂಹೃಷ್ಟಃ ಶಿಬಿರಂ ಯಯೌ ॥60॥
ಧರ್ಮರಾಜನೂ ಸಹ ಧೃಷ್ಟದ್ಯುಮ್ನ-ಭೀಮಸೇನರನ್ನು ನೋಡಿ ಅವರನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ ಸಂತೋಷದಿಂದ ತನ್ನ ಶಿಬಿರಕ್ಕೆ ಹಿಂದಿರುಗಿದನು.
ಅರ್ಜುನೋ ವಾಸುದೇವಶ್ಚ ಕೌರವಾಣಾಮನೀಕಿನೀಮ್ |
ಹತ್ವಾ ವಿದ್ರಾವ್ಯ ಚ ಶರೈಃ ಶಿಬಿರಾಯೈವ ಜಗ್ಮತುಃ ॥61॥
ಅರ್ಜುನ ಮತ್ತು ಕೃಷ್ಣರೂ ಸಹ ಕೌರವರ ಸೈನ್ಯವನ್ನು ಕೊಂದು ಮತ್ತು ತಮ್ಮ ಬಾಣಗಳಿಂದ ಚದುರಿಸಿ ಶಿಬಿರಕ್ಕೆ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.

ಭೀಷ್ಮರ ಸೇನಾಪತ್ಯದಲ್ಲಿ ಆರನೆಯ ದಿನದ ಯುದ್ಧವು ಮುಗಿಯಿತು.
* * * * *
ಎಪ್ಪತ್ತಾರನೆಯ ಅಧ್ಯಾಯ
ರಾತ್ರಿಯಲ್ಲಿ ಶಿಬಿರದಲ್ಲಿ ಭೀಷ್ಮ-ದುರ್ಯೋಧನರ ಸಂವಾದ.
ಪುನಃ ಏಳನೆಯ ದಿವಸ ಯುದ್ಧಕ್ಕಾಗಿ ಸನ್ನಾಹ.
ಸಂಜಯಃ
ಅಥ ಶೂರಾ ಮಹಾರಾಜ ಪರಸ್ಪರಕೃತಾಗಸಃ |
ಜಗ್ಮುಃ ಸ್ವಶಿಬಿರಾಣ್ಯೇವ ರುಧಿರೇಣ ಸಮುಕ್ಷಿತಾಃ ॥1॥
ಸಂಜಯ ಎಲೈ ಮಹಾರಾಜನೇ, ಅನಂತರ ಪರಸ್ಪರವಾಗಿ ವಿರೋಧ ಮಾಡಿದ ಎಲ್ಲ ಶೂರರೂ ರಕ್ತದಿಂದ ತೋಯ್ದ ಶರೀರವುಳ್ಳವರಾಗಿ ತಮ್ಮ ಶಿಬಿರಗಳಿಗೆ ಹೋದರು.
ವಿಶ್ರಮ್ಯ ಚ ಯಥಾನ್ಯಾಯಂ ಪೂಜಯಿತ್ವಾ ಪರಸ್ಪರಮ್ |
ಸನ್ನದ್ಧಾಃ ಸಮದೃಶ್ಯಂತ ಭೂಯೋ ಯುದ್ಧಚಿಕೀರ್ಷಯಾ ॥2॥
ಶಾಸೋಕ್ತರೀತ್ಯಕ್ತವಾಗಿ ವಿಶ್ರಾಂತಿಯನ್ನು ತೆಗೆದುಕೊಂಡು ಪರಸ್ಪರವಾಗಿ ಗೌರವಿಸಿ ಪುನಃ ಯುದ್ಧ ಮಾಡುವ ಆಸೆಯಿಂದ ಸನ್ನದ್ಧರಾಗುವುದು ಕಂಡುಬಂದಿತು.
ತತಸ್ತವ ಸುತೋ ರಾಜನ್ ಚಿಂತಯಾಭಿಪರಿಪ್ಲುತಃ |
ವಿಸ್ರವಚ್ಛೋಣಿತಾಕ್ತಾಂಗಃ ಪಪ್ರಚ್ಛೇದಂ ಪಿತಾಮಹಮ್ ॥3॥
ಆಗ ಎಲೈ ರಾಜನೇ, ರಕ್ತವು ಸೋರುತ್ತಿದ್ದ ಶರೀರವುಳ್ಳ ನಿನ್ನ ಪುತ್ರನು ಚಿಂತಾಕ್ರಾಂತನಾಗಿ ಪಿತಾಮಹರಾದ ಭೀಷ್ಮರನ್ನು ಕುರಿತು ಈ ಪ್ರಶ್ನೆಯನ್ನು ಮಾಡಿದನು.
ಸೈನ್ಯಾನಿ ರೌದ್ರಾಣಿ ಭಯಾನಕಾನಿ
ವ್ಯೂಢಾನಿ ಸಮ್ಯಗ್ಬಹುಲಧ್ವಜಾನಿ |
ವಿದಾರ್ಯ ಹತ್ವಾ ಚ ನಿಪೀಡ್ಯ ಶೂರಾನ್
ತೇ ಪಾಂಡವಾನಾಂ ತ್ವರಿತಾ ರಥೌಘಾಃ ॥4॥
ಸಮ್ಮೋಹ್ಯ ಸರ್ವಾನ್ ಯುಧಿ ಕೀರ್ತಿಮಂತೋ
ವ್ಯೂಹಂ ಚ ತಂ ಮಕರಂ ವಜ್ರಕಲ್ಪಮ್ |
ಪ್ರವಿಶ್ಯ ಭೀಮೇನ ನಿಬರ್ಹಿತೋಽಸ್ಮಿ
ಘೋರೈಃ ಶರೈರ್ಮೃತ್ಯುದಂಡಪ್ರಕಾಶೈಃ ॥5॥
ಭಯಂಕರವೂ, ಕಠೋರವೂ ಆದ ನಮ್ಮ ಸೈನ್ಯಗಳು ಅನೇಕ ಧ್ವಜ-ಪತಾಕೆಗಳಿಂದ ಕೂಡಿ ವ್ಯೂಹಗೊಳಿಸಲ್ಪಟ್ಟವು. ಆದರೂ ಶೂರರಾದ ಪಾಂಡವರ ಮಹಾರಥರು ಶೀಘ್ರಗಾಮಿಗಳಾಗಿ ನಮ್ಮ ವ್ಯೂಹವನ್ನು ಭೇದಿಸಿ, ನಮ್ಮ ಶೂರರನ್ನು ಹಿಂಸೆಗೊಳಿಸಿ, ನಮ್ಮ ಎಲ್ಲ ಶೂರರಿಗೂ ಮೋಹಗೊಳಿಸಿ ಕೀರ್ತಿಶಾಲಿಗಳಾಗಿದ್ದಾರೆ. ವಜ್ರದಂತೆ ಅಭೇದ್ಯವಾಗಿದ್ದ ಆ ಮಕರವ್ಯೂಹವನ್ನು ಪ್ರವೇಶಿಸಿ ಭೀಮನು ಯಮದಂಡದಂತಿರುವ ಘೋರವಾದ ಬಾಣಗಳಿಂದ ನನ್ನನ್ನು ವಿನಾಶಗೊಳಿಸಿದ್ದಾನೆ.
ಕ್ರುದ್ಧಂ ತಮುದ್ವೀಕ್ಷ್ಯ ಭಯೇನ ರಾಜನ್
ಸಮ್ಮೂರ್ಛಿತೋ ನಾಲಭಂ ಶಾಂತಿಮದ್ಯ |
ಇಚ್ಛೇ ಪ್ರಸಾದಾತ್ ತವ ಸತ್ಯಸಂಧ
ಪ್ರಾಪ್ತುಂ ಜಯಂ ಪಾಂಡವೇಯಾಂಶ್ಚ ಹಂತುಮ್ ॥6॥
ಎಲೈ ರಾಜನೇ (ಭೀಷ್ಮರೇ), ಕ್ರುದ್ಧನಾದ ಆ ಭೀಮಸೇನನನ್ನು ನೋಡಿ ನಾನು ಮೂರ್ಛೆಗೆ ಒಳಗಾಗಿ ಈ ದಿನ ಮನಸ್ಸಮಾಧಾನವನ್ನೇ ಹೊಂದುತ್ತಿಲ್ಲ. ಎಲೈ ಸತ್ಯಸಂಧರೇ, ನಿಮ್ಮ ಅನುಗ್ರಹದಿಂದ ಪಾಂಡವರನ್ನು ಕೊಂದು ಜಯವನ್ನು ಪಡೆಯಲು ಬಯಸುತ್ತೇನೆ.
ತೇನೈವಮುಕ್ತಃ ಪ್ರಹಸನ್ ಮಹಾತ್ಮಾ
ದುರ್ಯೋಧನಂ ಜಾತಮನ್ಯುಂ ವಿದಿತ್ವಾ |
ತಂ ಪ್ರತ್ಯುವಾಚಾವಿಮನಾ ಮನಸ್ವೀ
ಗಂಗಾಸುತಃ ಶಸ್ತ್ರಭೃತಾಂ ವರಿಷ್ಠಃ ॥7॥
ಹೀಗೆ ದುರ್ಯೋಧನನಿಂದ ಹೇಳಲ್ಪಟ್ಟ ಮಹಾತ್ಮರೂ, ಧೈರ್ಯಶಾಲಿಗಳೂ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ, ಗಂಗಾಪುತ್ರರೂ ಆದ ಭೀಷ್ಮರು ಮನಸ್ಸಿನಲ್ಲಿ ಬೇಸರವನ್ನು ತಂದುಕೊಳ್ಳದೆ ದುರ್ಯೋಧನನು ಕೋಪಪೀಡಿತನಾಗಿದ್ದಾನೆಂದು ಗಮನಿಸಿ ಅವನನ್ನು ಕುರಿತು ಮಾತನಾಡಿದರು.
ಪರೇಣ ಯತ್ನೇನ ವಿಗಾಹ್ಯ ಸೇನಾಂ
ಸರ್ವಾತ್ಮನಾಹಂ ತವ ರಾಜಪುತ್ರ |
ಇಚ್ಛಾಮಿ ದಾತುಂ ವಿಜಯಂ ಸುಖಂ ಚ
ನ ಚಾತ್ಮಾನಂ ಛಾದಯೇಽಹಂ ತ್ವದರ್ಥೇ ॥8॥
ಎಲೈ ರಾಜಪುತ್ರನೇ, ನನ್ನ ಸರ್ವಪ್ರಯತ್ನದಿಂದಲೂ ಶತ್ರುಸೈನ್ಯವನ್ನು ಪ್ರವೇಶಿಸಿ ಸರ್ವಪ್ರಯತ್ನದಿಂದ ಯುದ್ಧವನ್ನು ಮಾಡಿ ನಿನಗೆ ವಿಜಯವನ್ನು ಮತ್ತು ಸುಖವನ್ನು ತಂದುಕೊಡಲು ಇಚ್ಛಿಸುತ್ತೇನೆ. ನಿನ್ನ ಸಲುವಾಗಿ ಹೋರಾಡುವ ನಾನು ನನ್ನ ರಕ್ಷಣೆಯನ್ನೂ ಮಾಡಿಕೊಳ್ಳುತ್ತಿಲ್ಲ.

ಏತೇ ತು ರೌದ್ರಾ ಬಹವೋ ಮಹಾರಥಾ
ಯಶಸ್ವಿನಃ ಶೂರತಮಾಃ ಕೃತಾಸ್ತ್ರಾಃ |
ಯೇ ಪಾಂಡವಾನಾಂ ಸಮರೇ ಸಹಾಯಾ
ಜಿತಕ್ಲಮಾಃ ಕ್ರೋಧವಿಷಂ ವಮಂತಿ ॥9॥
ಪಾಂಡವರಿಗೆ ಸಹಾಯಕರಾಗಿರುವ ಈ ಭಯಂಕರರಾದ ಅನೇಕ ಮಹಾರಥರು ಕೀರ್ತಿವಂತರು, ಅತ್ಯಂತ ಶೂರರು ಮತ್ತು ಅಸ್ತ್ರಗಳ ಪರಿಶ್ರಮವುಳ್ಳವರು. ದಣಿವನ್ನು ಮೀರಿದ ಅವರು ನಿನ್ನ ಮೇಲೆ ಕ್ರೋಧವಿಷವನ್ನು ಉಗುಳುತ್ತಿದ್ದಾರೆ.
ತೇ ನೇಹ ಶಕ್ಯಾಃ ಸಹಸಾ ವಿಜೇತುಂ
ವೀರ್ಯೋನ್ನದ್ಧಾಃ ಕೃತವೈರಾಸ್ತ್ವಯಾ ಚ |
ಅಹಂ ಹ್ಯೇತಾನ್ ಪ್ರತಿಯೋತ್ಸ್ಯಾಮಿ ರಾಜನ್
ಸರ್ವಾತ್ಮನಾ ಜೀವಿತಂ ತ್ಯಜ್ಯ ವೀರ ॥10॥
ದರ್ಪಿಷ್ಠರೂ, ನಿನ್ನಲ್ಲಿ ವೈರವನ್ನು ಮಾಡಿದವರೂ ಆದ ಅವರನ್ನು ಇದ್ದಕ್ಕಿದ್ದಂತೆ ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ. ಎಲೈ ರಾಜನೇ, ವೀರನೇ, ನನ್ನ ಪ್ರಾಣದ ಆಸೆಯನ್ನು ಸರ್ವಥಾ ತೊರೆದು ಅವರ ಜೊತೆಯಲ್ಲಿ ನಾನು ಯುದ್ಧ ಮಾಡುವೆನು.
ರಣೇ ತವಾರ್ಥಾಯ ಮಹಾನುಭಾವ
ನ ಜೀವಿತಂ ರಕ್ಷ್ಯತಮಂ ಮಮಾದ್ಯ |
ಸರ್ವಾಂಸ್ತವಾರ್ಥಾಯ ಸದೇವದೈತ್ಯಾನ್
ಲೋಕಾನ್ ದಹೇಯಂ ಕಿಮು ಶತ್ರೂಂಸ್ತವೇಹ ॥11॥
ನಿನ್ನ ಸಲುವಾಗಿ ಯುದ್ಧವನ್ನು ಮಾಡುವ ನನಗೆ ಈ ದಿನ ನನ್ನ ಪ್ರಾಣವು ರಕ್ಷಿಸಲ್ಪಡಬೇಕಾದುದಲ್ಲ. ನಿನ್ನ ಸಲುವಾಗಿ ದೇವತೆಗಳಿಂದ ಮತ್ತು ದೈತ್ಯರಿಂದ ಕೂಡಿದ ಎಲ್ಲ ಲೋಕಗಳನ್ನೂ ಸುಟ್ಟೇನು. ಇನ್ನು ನಿನ್ನ ಶತ್ರುಗಳ ವಿಷಯದಲ್ಲಿ ಹೇಳುವುದೇನಿದೆ?
ತತ್ಪಾಂಡವಾನ್ ಯೋಧಯಿಷ್ಯಾಮಿ ರಾಜನ್
ಪ್ರಿಯಂ ಚ ತೇ ಸರ್ವಮಹಂ ಕರಿಷ್ಯೇ |
ಶ್ರುತ್ವೈವ ಚೈತತ್ ಪರಮಪ್ರತೀತೋ
ದುರ್ಯೋಧನಃ ಪ್ರೀತಮನಾ ಬಭೂವ ॥12॥
ಎಲೈ ರಾಜನೇ, ಆದ್ದರಿಂದ ನಾನು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿ ನಿನಗೆ ಎಲ್ಲಾ ಪ್ರಿಯವನ್ನೂ ಮಾಡುವೆನು (ಎಂದು ಹೇಳಿದರು). ಭೀಷ್ಮರ ಈ ಮಾತುಗಳನ್ನು ಕೇಳಿದ ದುರ್ಯೋಧನನು ಸಮಾಧಾನವನ್ನು ಹೊಂದಿ ಬಹಳ ಸಂತೋಷದಿಂದ ಕೂಡಿದವನಾದನು.
ಸರ್ವಾಣಿ ಸೈನ್ಯಾನಿ ತತಃ ಪ್ರಹೃಷ್ಟೋ
ನಿರ್ಗಚ್ಛತೇತ್ಯಾಹ ನೃಪಾಂಶ್ಚ ಸರ್ವಾನ್ |
ತದಾಜ್ಞಯಾ ತಾನಿ ವಿನಿರ್ಯಯುರ್ದ್ರುತಂ
ರಥಾಶ್ವಪಾದಾತಗಜಾಯುತಾನಿ ॥13॥
ಅನಂತರ ಸಂತೋಷಗೊಂಡ ಅವನು ಎಲ್ಲ ಸೈನ್ಯಗಳನ್ನು ಮತ್ತು ರಾಜರುಗಳನ್ನು ಕುರಿತು ಯುದ್ಧಕ್ಕಾಗಿ ಹೊರಡಿ ಎಂದು ಹೇಳಿದನು. ಅವನ ಆಜ್ಞೆಯಂತೆ ರಥ-ಗಜಾಶ್ವ- ಪದಾತಿಗಳಿಂದ ಕೂಡಿದ ಆ ಸೈನ್ಯಗಳು ಕ್ಷಿಪ್ರವಾಗಿ ಹೊರಟವು.
ಪ್ರಹರ್ಷಯುಕ್ತಾನಿ ತು ತಾನಿ ರಾಜನ್
ಮಹಾಂತಿ ನಾನಾವಿಧಶಸ್ತ್ರವಂತಿ |
ಭಿನ್ನಾನಿ ನಾಗಾಶ್ವಪದಾತಿಮಂತಿ
ವಿರೇಜುರಾಜೌ ತವ ರಾಜನ್ ಬಲಾನಿ ॥14॥
ಶಸ್ತ್ರಾಸ್ತ್ರವಿದ್ಭಿರ್ನರದೇವ ಯೋಧೈಃ
ಅಧಿಷ್ಠಿತಾಃ ಸೈನ್ಯಗಣಾಸ್ತ್ವದೀಯಾಃ ॥15॥
ಎಲೈ ರಾಜನೇ, ಸಂತೋಷದಿಂದ ಕೂಡಿ ನಾನಾವಿಧ ಶಸ್ತ್ರಗಳನ್ನು ಧರಿಸಿ ಬೇರೆ ಬೇರೆ ಗುಂಪುಗಳಾಗಿ ಮಾಡಿದ, ಗಜಾಶ್ವಪದಾತಿಗಳನ್ನು ಹೊಂದಿ ಶಸ್ತ್ರಾಸ್ತ್ರ ಜ್ಞಾನವುಳ್ಳ ಯೋಧರಿಂದ ಕೂಡಿದ, ನಿನ್ನ ದೊಡ್ಡ ಸೈನ್ಯಗಳೆಲ್ಲವೂ ಯುದ್ಧದಲ್ಲಿ ಶೋಭಿಸಿದವು.
ರಥೈಶ್ಚ ಪಾದಾತಗಜಾಶ್ವಸಂಘೈಃ
ಪ್ರಯಾದ್ಭಿರಾಜೌ ವಿಧಿವತ್ ಪ್ರಣುನ್ನೈಃ |
ಸಮುದ್ಧತಂ ವೈ ತರುಣಾರ್ಕವರ್ಣಂ
ರಜೋ ಬಭೌ ಛಾದಯತ್ ಸೂರ್ಯರಶ್ಮೀನ್ ॥16॥
ಶಾಸ್ತ್ರೋಕ್ತ ರೀತಿಯಿಂದ ಪ್ರೇರಿಸಲ್ಪಟ್ಟು ಹೊರಟ ಗಜಾಶ್ವ ರಥಪದಾತಿಗಳಿಂದ ಎದ್ದ ಕೆಂಪು ಬಣ್ಣದ ಧೂಳು ಸೂರ್ಯಕಿರಣಗಳನ್ನು ಮರೆ ಮಾಡಿ ಶೋಭಿಸಿತು.
ರೇಜುಃ ಪತಾಕಾ ರಥದಂತಿಸಂಸ್ಥಾ
ವಾತೇರಿತಾ ಭ್ರಾಮ್ಯಮಾಣಾಃ ಸಮಂತಾತ್ |
ನಾನಾರಂಗಾಃ ಸಮರೇ ತತ್ರ ರಾಜನ್
ಮೇಘೈರ್ಯುಕ್ತಾ ವಿದ್ಯುತಃ ಖೇ ಯಥೈವ ॥17॥

ಎಲೈ ರಾಜನೇ, ರಥಗಜಗಳ ಮೇಲಿದ್ದ ಗಾಳಿಯ ಹೊಡೆತಕ್ಕೆ ಸಿಲುಕಿ ಅಲುಗಾಡುವ ನಾನಾ ವರ್ಣೋಪೇತವಾದ ಪತಾಕೆಗಳು ಆಕಾಶದಲ್ಲಿ ಮೋಡಗಳಿಂದ ಕೂಡಿದ ಮಿಂಚುಗಳಂತೆ ಕಂಗೊಳಿಸಿದವು.
ಧನೂಂಷಿ ವಿಸ್ಫಾರಯತಾಂ ನೃಪಾಣಾಂ
ಬಭೂವ ಶಬ್ದಸ್ತುಮುಲೋಽತಿಘೋರಃ |
ವಿಮಥ್ಯತೋ ದೇವಮಹಾಸುರೌಘೈಃ
ಯಥಾರ್ಣವಸ್ಯಾದಿಯುಗೇ ತದಾನೀಮ್ ||18||
ತಮ್ಮ ಬಿಲ್ಲಿನ ಹೆದೆಗಳನ್ನು ಎಳೆಯುವ ರಾಜರುಗಳಿಂದ ಉಂಟಾದ ಅತಿಘೋರವಾದ ಶಬ್ದವು ಆದಿಯುಗದಲ್ಲಿ ಅಮೃತ ಪ್ರಾಪ್ತಿಗಾಗಿ ಕ್ಷೀರ ಸಮುದ್ರವನ್ನು ಕಡೆಯುವ ದೇವಾಸುರರಿಂದ ಉಂಟಾದ ಕ್ಷೀರಸಮುದ್ರದ ಶಬ್ದದಂತಿದ್ದಿತು.
ತದುಗ್ರನಾದಂ ಬಹುರೂಪವರ್ಣಂ
ತವಾತ್ಮಜಾನಾಂ ಸಮುದೀರ್ಣಮೇವಮ್ |
ಬಭೂವ ಸೈನ್ಯಂ ರಿಪುಸೈನ್ಯಹಂತೃ
ಯುಗಾಂತಮೇೌಘನಿಭಂ ತದಾನೀಮ್ ||19||
ಅನೇಕ ಆಕಾರಗಳಿಂದ ಮತ್ತು ವರ್ಣದಿಂದ ಕೂಡಿದ, ಉಗ್ರವಾದ ನಾದವನ್ನು ಮಾಡುತ್ತಿದ್ದ, ಸಾಮರ್ಥ್ಯಪೂರ್ಣವಾದ, ಶತ್ರುಸೈನ್ಯವನ್ನು ಸಂಹಾರ ಮಾಡುವ, ನಿನ್ನ ಪುತ್ರರ ಸೈನ್ಯವು ಯುಗಾಂತ ಕಾಲದ ಮೇಘಮಂಡಲದಂತೆ ಆಗ ಕಂಗೊಳಿಸಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೇಳನೆಯ ಅಧ್ಯಾಯ
ಭೀಷ್ಮರಿಂದ ದುರ್ಯೋಧನನಿಗೆ ಆಶ್ವಾಸನೆ. ಏಳನೆಯ ದಿವಸದ
ಯುದ್ಧದ ಆರಂಭ. ಭೀಷ್ಮರಿಂದ ಮಂಡಲವ್ಯೂಹದ ಮತ್ತು
ಯುಧಿಷ್ಠಿರನಿಂದ ವಜ್ರವ್ಯೂಹದ ರಚನೆ.
ಸಂಜಯಃ
ಅಥಾತ್ಮಜಂ ತವ ಪುನರ್ಗಾಂಗೇಯೋ ಧ್ಯಾನಮಾಸ್ಥಿತಮ್ |
ಅಬ್ರವೀದ್ ಭರತಶ್ರೇಷ್ಠಃ ಸಂಪ್ರಹರ್ಷಕರಂ ವಚಃ ||1||
ಸಂಜಯ ರಥಶ್ರೇಷ್ಠರೂ ಮತ್ತು ಗಂಗಾಪುತ್ರರೂ ಆದ ಭೀಷ್ಮರು ನಿನ್ನ ಪುತ್ರನು ಚಿಂತಾಕ್ರಾಂತನಾಗಿರುವುದನ್ನು ನೋಡಿ ಅವನಿಗೆ ಸಂತೋಷವನ್ನುಂಟು ಮಾಡುವ ಮಾತುಗಳನ್ನು ಆಡಿದರು.
ಅಹಂ ದ್ರೋಣಶ್ಚ ಶಲ್ಯಶ್ಚ ಕೃತವರ್ಮಾ ಚ ಸಾತ್ವತಃ |
ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತೋಽಥ ಸೈಂಧವಃ ||2||
ವಿಂದಾನುವಿಂದಾವಾವಂತ್ಯೌ ಬಾಹ್ಲಿಕಃ ಸಹ ಬಾಹ್ಲಿಕೈಃ |
ತ್ರಿಗರ್ತರಾಜಶ್ಚ ಬಲೀ ಮಾಗಧಶ್ಚ ಸುದುರ್ಜಯಃ ||3||
ಬೃಹದ್ಬಲಶ್ಚ ಕೌಸಲ್ಯಶ್ಚಿತ್ರಸೇನೋ ವಿವಿಂಶತಿಃ |
ಕೃಪಶ್ಚ ಸಹ ಸೌದರ್ಯೈಸ್ತವ ರಾಜನ್ ಪದಾನುಗೈಃ |
ರಥಾಶ್ಚ ಬಹುಸಾಹಸ್ರಾಃ ಶೋಭಮಾನಾ ಮಹಾಧ್ವಜಾಃ ||4||
ದೇಶಜಾಶ್ಚ ಹಯಾ ರಾಜನ್ ಸ್ವಾರೂಢಾ ಹಯಸಾದಿಭಿಃ |
ಗಜೇಂದ್ರಾಶ್ಚ ಮದೋದ್ವೃತ್ತಾಃ ಪ್ರಭಿನ್ನಕರಟಾಮುಖಾಃ ||5||
ಪದಾತಾಶ್ಚ ತಥಾ ಶೂರಾ ನಾನಾಪ್ರಹರಣಾಯುಧಾಃ |
ನಾನಾದೇಶಸಮುತ್ಪನ್ನಾಸ್ತ್ವದರ್ಥೇ ಯೋದ್ಧುಮುದ್ಯತಾಃ ||6||
ನಾನು, ದ್ರೋಣರು, ಶಲ್ಯ, ಸಾತ್ವತ ಕುಲದ ಕೃತವರ್ಮ, ಅಶ್ವತ್ಥಾಮರು, ವಿಕರ್ಣ, ಸೋಮದತ್ತ, ಸೈಂಧವ, ಅವಂತಿದೇಶದ ವಿಂದಾನುವಿಂದರು, ಬಾಹ್ಲಿಕ ರಾಜ, ಅವನ ಸೈನಿಕರು, ಸೈನ್ಯದಿಂದ ಕೂಡಿದ ತ್ರಿಗರ್ತ ರಾಜ, ದುರ್ಜಯನಾದ ಮಗಧರಾಜ, ಕೋಸಲ ದೇಶದ ಬೃಹದ್ಬಲ, ಚಿತ್ರಸೇನ, ವಿವಿಂಶತಿ, ಕೃಪರು ನಿನ್ನ ಸೋದರರಿಂದ, ಪದಾತಿಗಳಿಂದ ಸಹಿತರಾದ ಶೋಭಮಾನವಾದ ದೊಡ್ಡ ಧ್ವಜಗಳುಳ್ಳ ಅನೇಕ ಸಹಸ್ರ ಸಂಖ್ಯೆಯ ರಥಗಳು, ಅಶ್ವಾರೋಹಿಗಳಿಂದ ಚೆನ್ನಾಗಿ ಏರಲ್ಪಟ್ಟ ಒಳ್ಳೆಯ ಜಾತಿಯ ಅಶ್ವಗಳು, ಗಂಡಸ್ಥಲದಿಂದ ಮದೋದಕವನ್ನು ಸುರಿಸುತ್ತಿರುವ ಮದೋದ್ಧತವಾದ ಶ್ರೇಷ್ಠವಾದ ಗಜಗಳು, ಪ್ರಹಾರಕ್ಕೆ ಯೋಗ್ಯವಾದ ನಾನಾವಿಧವಾದ ಆಯುಧವನ್ನು ಹಿಡಿದ ನಾನಾ ದೇಶದಿಂದ ಬಂದ ಶೂರರಾದ ಪದಾತಿಗಳು ಎಲೈ ರಾಜನೇ, ಎಲ್ಲರೂ ನಿನ್ನ ಸಲುವಾಗಿ ಯುದ್ಧ ಮಾಡಲು ಸನ್ನದ್ಧರಾಗಿದ್ದೇವೆ.
ಏತೇ ಚಾನ್ಯೇ ಚ ಬಹವಸ್ತ್ವದರ್ಥೇ ತ್ಯಕ್ತಜೀವಿತಾಃ |
ದೇವಾನಪಿ ರಣೇ ಜೇತುಂ ಸಮರ್ಥಾ ಇತಿ ಮೇ ಮತಿಃ ||7||
ಮೇಲೆ ಹೇಳಿದ ನಾವು ಮತ್ತು ಇನ್ನು ಅನೇಕ ಶೂರರು ನಿನ್ನ ಸಲುವಾಗಿ ಪ್ರಾಣಗಳನ್ನು ಬಿಡಲು ಸಿದ್ಧರಾಗಿದ್ದಾರೆ. ಅವರು ಯುದ್ಧದಲ್ಲಿ ದೇವತೆಗಳನ್ನೂ ಗೆಲ್ಲಲು ಸಮರ್ಥರಾಗಿದ್ದಾರೆ ಎಂದು ನನ್ನ ಅಭಿಪ್ರಾಯ.
ಅವಶ್ಯಂ ತು ಮಯಾ ರಾಜಂಸ್ತವ ವಾಚ್ಯಂ ಹಿತಂ ಸದಾ |

ಅಶಕ್ಯಾಃ ಪಾಂಡವಾ ಜೇತುಂ ದೇವೈರಪಿ ಸವಾಸವೈಃ |
ವಾಸುದೇವಸಹಾಯಾಶ್ಚ ಮಹೇಂದ್ರಸಮವಿಕ್ರಮಾಃ ॥8॥
ಆದರೆ ರಾಜನೇ, ನಾನು ನಿನಗೆ ಅವಶ್ಯವಾಗಿ ಯಾವಾಗಲೂ ಹಿತವನ್ನು ಹೇಳಲೇಬೇಕು. ಕೃಷ್ಣನ ಸಹಾಯವುಳ್ಳ, ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಪಾಂಡವರನ್ನು ಯುದ್ಧದಲ್ಲಿ ಇಂದ್ರನಿಂದ ಸಹಿತರಾದ ದೇವತೆಗಳೂ ಗೆಲ್ಲಲಾರರು.
ಸರ್ವಥಾಽಹಂ ತು ರಾಜೇಂದ್ರ ಕರಿಷ್ಯೇ ವಚನಂ ತವ |
ಪಾಂಡವಾನ್ ವಾ ರಣೇ ಜೇಷ್ಯೇ ಮಾಂ ವಾ ಜೇಷ್ಯಂತಿ ಪಾಂಡವಾಃ ॥
ಎಲೈ ರಾಜೇಂದ್ರನೇ, ನಾನು ಸರ್ವರೀತಿಯಿಂದ ನಿನ್ನ ಮಾತನ್ನು ನಡೆಸುವೆನು. ಯುದ್ಧದಲ್ಲಿ ಪಾಂಡವರನ್ನು ಜಯಿಸುವೆನು ಅಥವಾ ಪಾಂಡವರಾದರೂ ಯುದ್ಧದಲ್ಲಿ ನನ್ನನ್ನು ಜಯಿಸುವರು.
ಏವಮುಕತ್ವ ದದೌ ಚಾಸ್ಮೈ ವಿಶಲ್ಯಕರಣೀಂ ಶುಭಾಮ್ |
ಓಷಧೀಂ ವೀರ್ಯಸಂಪನ್ನಾಂ ವಿಶಲ್ಯಶ್ಚಾಭವತ್ ತದಾ ॥10॥
ಹೀಗೆ ಹೇಳಿ ಭೀಷ್ಮರು ಬಹಳ ಪ್ರಭಾವಶಾಲಿಯಾದ ವಿಶಲ್ಯಕರಣಿ ಔಷಧವನ್ನು ಅವನಿಗೆ ಕೊಟ್ಟರು. ಅದರಿಂದ ಅವಳೂ ಎಲ್ಲ ಗಾಯಗಳೂ ವಾಸಿಯಾದವು.
ತತಃ ಪ್ರಭಾತೇ ವಿಮಲೇ ಸ್ವೇನಾನೀಕೇನ ವೀರ್ಯವಾನ್ |
ಅವ್ಯೂಹತ ಸ್ವಯಂ ವ್ಯೂಹಂ ಭೀಷ್ಮೋ ವ್ಯೂಹವಿಶಾರದಃ ॥11॥
ಮಂಡಲಂ ಮನುಜಶ್ರೇಷ್ಠ ನಾನಾಶಸ್ತ್ರಸಮಾಕುಲಮ್ |
ಸಂಪೂರ್ಣಂ ಯೋಧಮುಖ್ಯೈಶ್ಚ ತಥಾ ದಂತಿಪದಾತಿಭಿಃ ॥12॥
ರಥೈರನೇಕಸಾಹಸ್ರೈಃ ಸಮಂತಾತ್ ಪರಿವಾರಿತಮ್ |
ಅಶ್ವವೃಂದೈರ್ಮಹದ್ಭಿಶ್ಚ ಋಷ್ಟಿತೋಮರಧಾರಿಭಿಃ ॥13॥
ಎಲೈ ಮನುಜಶ್ರೇಷ್ಠನೇ, ಅನಂತರ ಸ್ವಚ್ಛವಾದ ಪ್ರಾತಃಕಾಲದಲ್ಲಿ ಪರಾಕ್ರಮಶಾಲಿಗಳೂ, ವ್ಯೂಹ ಮಾಡುವುದರಲ್ಲಿ ಪರಿಣತರೂ ಆದ ಭೀಷ್ಮರು ನಾನಾಶಸ್ತ್ರಗಳನ್ನು ತಿಳಿದ ಯೋಧಶ್ರೇಷ್ಠರಿಂದ ತುಂಬಿದಂತಹ ಹಾಗೆಯೇ ಗಜ ಪದಾತಿಗಳಿಂದಲೂ, ಅನೇಕ ಸಹಸ್ರ ರಥಗಳಿಂದಲೂ ಪೂರ್ಣವಾಗಿ ಸುತ್ತುವರಿಯಲ್ಪಟ್ಟ, ಋಷ್ಟಿ ತೋಮರಗಳನ್ನು ಹಿಡಿದ ಅಶ್ವಾರೋಹಿಗಳಿಂದ ಕೂಡಿದ ದೊಡ್ಡ ಅಶ್ವವೃಂದಗಳಿಂದಲೂ ಸಹಿತವಾದ ಮಂಡಲಾಕಾರದ ವ್ಯೂಹವನ್ನು ತಾವೇ ಸ್ವತಃ ರಚಿಸಿದರು.
ನಾಗೇ ನಾಗೇ ರಥಾಃ ಸಪ್ತ ಸಪ್ತ ಚಾಶ್ವಾ ರಥೇ ರಥೇ |
ಅನ್ವಶ್ವಂ ದಶ ಧಾನುಷ್ಕಾ ಧಾನುಷ್ಕೇ ಸಪ್ತ ಚರ್ಮಿಣಃ ॥14॥
ಏವಂ ವ್ಯೂಹಂ ಮಹಾರಾಜ ತವ ಸೈನ್ಯಂ ಮಹಾರಥೈಃ |
ಸ್ಥಿತಂ ರಣಾಯ ಮಹತೇ ಭೀಷ್ಮೇಣ ಯುಧಿ ಪಾಲಿತಮ್ ॥15॥
ಒಂದೊಂದು ಗಜಕ್ಕೆ ಏಳು ರಥಗಳು, ಒಂದೊಂದು ರಥಕ್ಕೆ ಏಳು ಕುದುರೆಗಳು, ಒಂದೊಂದು ಕುದುರೆಗೆ ಹತ್ತು ಧನುರ್ಧಾರಿಗಳು, ಒಬ್ಬೊಬ್ಬ ಧನುರ್ಧಾರಿಗೆ ಏಳು ಜನ (ಖಡ್ಗ) ಗುರಾಣಿಯನ್ನು ಹಿಡಿದವರು, ಎಲೈ ಮಹಾರಾಜನೇ, ಹೀಗೆ ಮಹಾರಥರಿಂದ ಕೂಡಿದ ನಿನ್ನ ಸೈನ್ಯವು ಭೀಷ್ಮರಿಂದ ರಕ್ಷಿಸಲ್ಪಟ್ಟು ವ್ಯೂಹಗೊಂಡು ದೊಡ್ಡ ಯುದ್ಧಕ್ಕೆ ಸನ್ನದ್ಧವಾಯಿತು.
ದಶಾಶ್ವಾನಾಂ ಸಹಸ್ರಾಣಿ ದಂತಿನಾಂ ಚ ತಥೈವ ಚ |
ರಥಾನಾಮಯುತಂ ಚಾಪಿ ಪುತ್ರಾಶ್ಚ ತವ ದಂಸಿತಾಃ |
ಚಿತ್ರಸೇನಾದಯಃ ಶೂರಾ ಅಭ್ಯರಕ್ಷನ್ ಪಿತಾಮಹಮ್ ॥16॥
ಹತ್ತು ಸಹಸ್ರ ಅಶ್ವಗಳು, ಅಷ್ಟೇ ಗಜಗಳು, ಹತ್ತು ಸಹಸ್ರ ರಥಗಳು, ಕವಚ ಧಾರಿಗಳಾದ ನಿನ್ನ ಪುತ್ರರಾದ ಶೂರರಾದ ಚಿತ್ರಸೇನಾದಿಗಳು ಎಲ್ಲರೂ ಪಿತಾಮಹರನ್ನು ರಕ್ಷಿಸಿದರು.
ರಕ್ಷ್ಯಮಾಣಶ್ಚ ತೈಃ ಶೂರೈರ್ಗೋಪ್ಯಮಾನಾಶ್ಚ ತೇನ ತೇ |
ಸನ್ನದ್ಧಾಃ ಸಮದೃಶ್ಯಂತ ರಾಜಾನಶ್ಚ ಮಹಾಬಲಾಃ ॥17॥
ಭೀಷ್ಮರು ಆ ಶೂರರಿಂದ ರಕ್ಷಿಸಲ್ಪಟ್ಟು, ಆ ಶೂರರೂ ಭೀಷ್ಮರಿಂದ ರಕ್ಷಿಸಲ್ಪಟ್ಟು ಮಹಾಬಲರಾದ ರಾಜರು ಯುದ್ಧಕ್ಕೆ ಸನ್ನದ್ಧವಾಗಿರುವುದು ಕಂಡುಬಂದಿತು.
ದುರ್ಯೋಧನಸ್ತು ಸಮರೇ ದಂಸಿತೋ ರಥಮಾಸ್ಥಿತಃ |
ವ್ಯಭ್ರಾಜತ ಶ್ರಿಯಾ ಜುಷ್ಟೋ ಯಥಾ ಶಕ್ರಸ್ತ್ರಿವಿಷ್ಟಪೇ ॥18॥
ಶಸ್ತ್ರಕವಚಧಾರಿಯಾಗಿ, ರಥವನ್ನು ಏರಿದ ದುರ್ಯೋಧನನು ಸ್ವರ್ಗಲೋಕದಲ್ಲಿ ಇಂದ್ರನು ಮೆರೆದಂತೆ ತನ್ನ ಕಾಂತಿಯಿಂದ ಮೆರೆದನು.
ತತಃ ಶಬ್ದೋ ಮಹಾನಾಸೀತ್ ಪುತ್ರಾಣಾಂ ತವ ಭಾರತ |
ರಥಘೋಷಶ್ಚ ತುಮುಲೋ ವಾದಿತ್ರಾಣಾಂ ಚ ನಿಸ್ವನಃ ॥19॥
ಎಲೈ ಭಾರತನೇ, ಆಗ ನಿನ್ನ ಪುತ್ರರಿಂದ ಮಹಾಶಬ್ದ ಉಂಟಾಯಿತು. ತೀವ್ರವಾದ ರಥಘೋಷವೂ ಮತ್ತು ವಾದ್ಯಗಳ ಮೊಳಗುವಿಕೆಯೂ ಉಂಟಾಯಿತು.
ಭೀಷ್ಮೇಣ ಧಾರ್ತರಾಷ್ಟ್ರಾಣಾಂ ವ್ಯೂಢಃ ಪ್ರತ್ಯಙ್ಮುಖೋ ಯುಧಿ |
ಮಂಡಲಃ ಸುಮಹಾವ್ಯೂಹೋ ದುರ್ಭೇದ್ಯೋಽಮಿತ್ರಘಾತಿನಾಮ್ |
ಸರ್ವತಃ ಶುಶುಭೇ ರಾಜನ್ ರಣೇಽರೀಣಾಂ ದುರಾಸದಃ ॥20॥
ಎಲೈ ರಾಜನೇ, ಭೀಷ್ಮರು ರಚಿಸಿದ ಯುದ್ಧದಲ್ಲಿ ಪಶ್ಚಿಮಾಭಿಮುಖವಾದ, ಶತ್ರುಗಳು ಸಮೀಪಕ್ಕೆ ಸುಳಿಯಲು ಸಾಧ್ಯವಿಲ್ಲದ,

ಶತ್ರುಸಂಹಾರಕವಾದ, ಅಭೇದ್ಯವಾದ ಮಂಡಲಾಕಾರವಾದ ಮಹಾವ್ಯೂಹವು ಎಲ್ಲ ಕಡೆಯಲ್ಲಿಯೂ ಶೋಭಿಸಿತು.
ಮಂಡಲಂ ತು ಸಮಾಲೋಕ್ಯ ವ್ಯೂಹಂ ಪರಮದಾರುಣಮ್ |
ಸ್ವಯಂ ಯುಧಿಷ್ಠಿರೋ ರಾಜಾ ವ್ಯೂಹಂ ವಜ್ರಮಥಾಕರೋತ್ ॥21॥
ಪರಮದುರ್ಜಯವಾದ ಮಂಡಲವ್ಯೂಹವನ್ನು ನೋಡಿ ರಾಜನಾದ ಯುಧಿಷ್ಠಿರನು ಸ್ವತಃ ವಜ್ರವ್ಯೂಹವನ್ನು ರಚಿಸಿದನು.
ತಥಾ ವ್ಯೂಢೇಷ್ವನೀಕೇಷು ಯಥಾಸ್ಥಾನಮವಸ್ಥಿತಾಃ |
ರಥಿನಃ ಸಾದಿನಶ್ಚೈವ ಸಿಂಹನಾದಮಥಾನದನ್ ॥22॥
ಹಾಗೆ ವ್ಯೂಹಗಳು ರಚಿಸಲ್ಪಟ್ಟ ಮೇಲೆ ತಮ್ಮ ತಮ್ಮ ಸ್ಥಾನಗಳಲ್ಲಿ ನಿಂತ ರಥಿಕರು ಮತ್ತು ಅಶ್ವಾರೋಹಿಗಳು ಸಿಂಹನಾದವನ್ನು ಮಾಡಿದರು.
ಬಿಭಿತ್ಸವಸ್ತತೋ ವ್ಯೂಹಂ ನಿರ್ಯಯುರ್ಯುದ್ಧಕಾಂಕ್ಷಿಣಃ |
ಇತರೇತರತಃ ಶೂರಾಃ ಸಹಸೈನ್ಯಾಃ ಪ್ರಹಾರಿಣಃ ॥23॥
ಪರರ ವ್ಯೂಹವನ್ನು ಭೇದಿಸುವ ಸಲುವಾಗಿ ಪ್ರಹಾರಶೀಲರಾಗಿ ಯುದ್ಧವನ್ನು ಬಯಸಿದ ಶೂರರು ತಮ್ಮ ತಮ್ಮ ಸೈನ್ಯದ ಜೊತೆಯಲ್ಲಿ ಮುನ್ನುಗ್ಗಿದರು.
ಭಾರದ್ವಾಜೋ ಯಯೌ ಮತ್ಸ್ಯಂ ದ್ರೌಣಿಶ್ಚಾಪಿ ಶಿಖಂಡಿನಮ್ |
ಸ್ವಯಂ ದುರ್ಯೋಧನೋ ರಾಜಾ ಪಾರ್ಷತಂ ಸಮುಪಾದ್ರವತ್ ॥
ದ್ರೋಣರು ಮತ್ಸ್ಯರಾಜನ ಮೇಲೆಯೂ, ಅಶ್ವತ್ಥಾಮರು ಶಿಖಂಡಿಯ ಮೇಲೆಯೂ, ರಾಜನಾದ ದುರ್ಯೋಧನನು ಸ್ವಯಂ ಧೃಷ್ಟದ್ಯುಮ್ನನನ ಮೇಲೆಯೂ ಎರಗಿದರು.
ನಕುಲಃ ಸಹದೇವಶ್ಚ ರಾಜನ್ ಮದ್ರೇಶಮೀಯತುಃ |
ವಿಂದಾನುವಿಂದಾವಾವಂತ್ಯಾವಿರಾವಂತಮಭಿದ್ರುತೌ ॥25॥
ನಕುಲ-ಸಹದೇವರು ಮದ್ರಾಧಿಪತಿಯಾದ ಶಲ್ಯನ ಮೇಲೆ ಏರಿ ಹೋದರು. ಅವಂತಿ ದೇಶದ ವಿಂದಾನುವಿಂದರು ಇರಾವಂತನ ಮೇಲೆ ಧಾವಿಸಿದರು.
ಸರ್ವೇ ನೃಪಾಸ್ತು ಸಮರೇ ಧನಂಜಯಮಯೋಧಯನ್ |
ಭೀಮಸೇನೋ ರಣೇ ಯತ್ತೋ ಹಾರ್ದಿಕ್ಯಂ ಸಮವಾರಯತ್ ॥26॥
ಉಳಿದ ಎಲ್ಲ ರಾಜರೂ ಯುದ್ಧದಲ್ಲಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಭೀಮಸೇನನು ಪ್ರಯತ್ನಪೂರ್ವಕವಾಗಿ ರಣರಂಗದಲ್ಲಿ ಕೃತವರ್ಮನನ್ನು ತಡೆದನು.
ಚಿತ್ರಸೇನಂ ವಿಕರ್ಣಂ ಚ ತಥಾ ದುರ್ಮರ್ಷಣಂ ವಿಭೋ |
ಆರ್ಜುನಿಃ ಸಮರೇ ರಾಜಂಸ್ತವ ಪುತ್ರಾನಯೋಧಯತ್ ॥27॥
ಎಲೈ ವಿಭುವೇ, ರಾಜನೇ, ನಿನ್ನ ಪುತ್ರರಾದ ಚಿತ್ರಸೇನ, ವಿಕರ್ಣ, ದುರ್ಮರ್ಷಣ ಇವರ ಜೊತೆಯಲ್ಲಿ ಅಭಿಮನ್ಯುವು ಯುದ್ಧವನ್ನು ಮಾಡಿದನು.
ಪ್ರಾಗ್ಜ್ಯೋತಿಷಂ ಮಹೇಷ್ವಾಸಂ ಹೈಡಿಂಬೋ ರಾಕ್ಷಸೋತ್ತಮಃ |
ಅಭಿದುದ್ರಾವ ವೇಗೇನ ಮತ್ತೋ ಮತ್ತಮಿವ ದ್ವಿಪಮ್ ॥28॥
ರಾಕ್ಷಸಶ್ರೇಷ್ಠನಾದ ಘಟೋತ್ಕಚನು ಮಹಾಧನುರ್ಧಾರಿಯೂ, ಪ್ರಾಗ್ಜ್ಯೋತಿಷಾಧಿಪತಿಯೂ ಆದ ಭಗದತ್ತನ ಮೇಲೆ ಮದಗಜವು ಮದಗಜದ ಕಡೆಗೆ ಓಡಿದಂತೆ ವೇಗವಾಗಿ ಓಡಿದನು.
ಅಲಂಬುಸಸ್ತತೋ ರಾಜನ್ ಸಾತ್ಯಕಿಂ ಯುದ್ಧದುರ್ಮದಮ್ |
ಸಸೈನ್ಯಂ ಸಮರೇ ಕ್ರುದ್ಧೋ ರಾಕ್ಷಸಃ ಸಮಭಿದ್ರವತ್ ॥29॥
ಎಲೈ ರಾಜನೇ, ಯುದ್ಧದುರ್ಮದನಾದ ಸಾತ್ಯಕಿಯನ್ನು ಕ್ರುದ್ಧನೂ, ರಾಕ್ಷಸನೂ ಆದ ಅಲಂಬುಸನು ತನ್ನ ಸೈನ್ಯದ ಜೊತೆಯಲ್ಲಿ ಎದುರಿಸಿದನು.
ಭೂರಿಶ್ರವಾ ರಣೇ ಯತ್ತೋ ಧೃಷ್ಟಕೇತುಮಯೋಧಯತ್ |
ಶ್ರುತಾಯುಷಂ ತು ರಾಜಾನಂ ಧರ್ಮಪುತ್ರೋ ಯುಧಿಷ್ಠಿರಃ ॥30॥
ರಣರಂಗದಲ್ಲಿ ಭೂರಿಶ್ರವನು ಪ್ರಯತ್ನಪೂರ್ವಕವಾಗಿ ಧೃಷ್ಟಕೇತುವಿನ ಜೊತೆಯಲ್ಲಿಯೂ, ಧರ್ಮಪುತ್ರನಾದ ಯುಧಿಷ್ಠಿರನು ಶ್ರುತಾಯುರಾಜನ ಜೊತೆಯಲ್ಲಿಯೂ ಯುದ್ಧವನ್ನು ಮಾಡಿದರು.
ಚೇಕಿತಾನಸ್ತು ಸಮರೇ ಕೃಪಮೇವಾನ್ವಯೋಧಯತ್ |
ಶೇಷಾಃ ಪ್ರತಿಯಯುರ್ಯತ್ತಾ ಭೀಮಮೇವ ಮಹಾರಥಮ್ ॥31॥
ಚೇಕಿತಾನನಾದರೂ ರಣಭೂಮಿಯಲ್ಲಿ ಕೃಪರ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಉಳಿದವರು ಮಹಾರಥನಾದ ಭೀಮಸೇನನ ಮೇಲೆ ಎಚ್ಚರಿಕೆಯಿಂದ ಎರಗಿದರು.
ತತೋ ರಾಜಸಹಸ್ರಾಣಿ ಪರಿವವ್ರುರ್ಧನಂಜಯಮ್ |
ಶಕ್ತಿತೋಮರನಾರಾಚಗದಾಪರಿಘಪಾಣಯಃ ॥32॥
ಅನಂತರ ಶಕ್ತಿ, ತೋಮರ, ನಾರಾಚ, ಗದಾ, ಪರಿಘಗಳನ್ನು ಧರಿಸಿದ ಸಹಸ್ರಾರು ರಾಜರು ಅರ್ಜುನನನ್ನು ಸುತ್ತುವರಿದರು.
ಅರ್ಜುನೋಽಥ ಭೃಶಂ ಕ್ರುದ್ಧೋ ವಾರ್ಷ್ಣೇಯಮಿದಮಬ್ರವೀತ್ |
ಪಶ್ಯ ಮಾಧವ ಸೈನ್ಯಾನಿ ಧಾರ್ತರಾಷ್ಟ್ರಸ್ಯ ಸಂಯುಗೇ |
ವ್ಯೂಢಾನಿ ವ್ಯೂಹವಿದುಷಾ ಗಾಂಗೇಯೇನ ಮಹಾತ್ಮನಾ ॥33॥

ಆಗ ಬಹಳ ಕೋಪಗೊಂಡ ಅರ್ಜುನನು ಕೃಷ್ಣನನ್ನು ಕುರಿತು ಹೀಗೆ ಮಾತನಾಡಿದನು. ಎಲೈ ಮಾಧವನೇ, ಮಹಾತ್ಮರೂ, ವ್ಯೂಹ ಪರಿಣತರೂ ಆದ ಭೀಷ್ಮರು ದುರ್ಯೋಧನನ ಸೈನ್ಯವನ್ನು ವ್ಯೂಹಗೊಳಿಸಿರುವುದನ್ನು ನೋಡು.
ಯುದ್ಧಾಭಿಕಾಮಾನ್ ಶೂರಾಂಶ್ಚ ಪಶ್ಯ ಮಾಧವ ದಂಸಿತಾನ್ |
ತ್ರಿಗರ್ತರಾಜಂ ಸಹಿತಂ ಭ್ರಾತೃಭಿಃ ಪಶ್ಯ ಕೇಶವ ॥34॥
ಎಲೈ ಮಾಧವನೇ, ಯುದ್ಧವನ್ನು ಬಯಸಿದ ಶಸ್ತ್ರಕವಚಧಾರಿಗಳಾದ ಶೂರರನ್ನು ನೋಡು. ಎಲೈ ಕೇಶವನೇ, ತನ್ನ ಸಹೋದರರಿಂದ ಸಹಿತನಾದ ತ್ರಿಗರ್ತರಾಜನಾದ ಸುಶರ್ಮನನ್ನು ನೋಡು.
ಅದ್ಯೈತಾನ್ ಪಾತಯಿಷ್ಯಾಮಿ ಪಶ್ಯತಸ್ತೇ ಜನಾರ್ದನ |
ಯ ಇಮೇ ಮಾಂ ಯದುಶ್ರೇಷ್ಠ ಯೋದ್ಧುಕಾಮಾ ರಣಾಜಿರೇ ॥35॥
ಎಲೈ ಯದುಶ್ರೇಷ್ಠನೇ, ಜನಾರ್ದನನೇ, ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುವ ಇವರೆಲ್ಲರನ್ನೂ ನಿನ್ನ ಕಣ್ಣೆದುರಿಗೆ ರಣಭೂಮಿಯಲ್ಲಿ ನಾನು ಉರುಳಿಸುವೆನು.
ಏವಮುಕತ್ವ ತು ಕೌಂತೇಯೋ ಧನುರ್ಜ್ಯಾಮವಮೃಜ್ಯ ಚ |
ವವರ್ಷ ಶರವರ್ಷಾಣಿ ನರಾಧಿಪಗಣಾನ್ ಪ್ರತಿ ॥36॥
ಕೌಂತೇಯನಾದ ಅರ್ಜುನನು ಹೀಗೆ ಹೇಳಿ ಧನುಸ್ಸಿನ ಹೆದೆಯನ್ನು ನೇವರಿಸಿ ರಾಜರ ಸಮೂಹದ ಮೇಲೆ ಬಾಣಗಳ ಮಳೆಯನ್ನು ಕರೆದನು.
ತೇಽಪಿ ತಂ ಪರಮೇಷ್ವಾಸಾಃ ಶರವರ್ಷೈರಪೂರಯನ್ |
ತಡಾಗಮಿವ ಧಾರಾಭಿರ್ಯಥಾ ಪ್ರಾವೃಷಿ ತೋಯದಾಃ ॥37॥
ಮಹಾಧನುರ್ಧಾರಿಗಳಾದ ಅವರೂ ಸಹ ಮೋಡಗಳು ಮಳೆಗಾಲದಲ್ಲಿ ವರ್ಷಧಾರೆಗಳಿಂದ ಕೆರೆಯನ್ನು ತುಂಬುವಂತೆ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಕರೆದರು.
ಹಾಹಾಕಾರೋ ಮಹಾನಾಸೀತ್ ತವ ಸೈನ್ಯೇ ವಿಶಾಂಪತೇ |
ಛಾದ್ಯಮಾನೌ ಭೃಶಂ ಕೃಷ್ಣೌ ಶರೈರ್ದೃಷ್ಟ್ವಾ ಮಹಾರಣೇ ॥38॥
ಆ ಮಹಾಯುದ್ಧದಲ್ಲಿ ಕೃಷ್ಣಾರ್ಜುನರು ಬಾಣಗಳಿಂದ ಮುಚ್ಚಲ್ಪಟ್ಟಿದ್ದನ್ನು ನೋಡಿ ಎಲೈ ರಾಜನೇ, ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು.
ದೇವಾ ದೇವರ್ಷಯಶ್ಚೈವ ಗಂಧರ್ವಾಶ್ಚ ಮಹೋರಗಾಃ |
ವಿಸ್ಮಯಂ ಪರಮಂ ಜಗ್ಮುರ್ದೃಷ್ಟ್ವಾ ಕೃಷ್ಣೌ ತಥಾಗತೌ ॥39॥
ಕೃಷ್ಣಾರ್ಜುನರು ಅಂತಹ ಪರಿಸ್ಥಿತಿಯಲ್ಲಿ ಸಿಲುಕಿದುದನ್ನು ನೋಡಿ ದೇವತೆಗಳು, ದೇವರ್ಷಿಗಳು, ಗಂಧರ್ವರು ಮತ್ತು ಮಹಾಸರ್ಪಗಳು ಆಶ್ಚರ್ಯಗೊಂಡರು.
ತತಃ ಕ್ರುದ್ಧೋಽರ್ಜುನೋ ರಾಜನ್ನೈಂದ್ರಮಸ್ತ್ರಮುದೀರಯತ್ |
ತತ್ರಾದ್ಭುತಮಪಶ್ಯಾಮ ವಿಜಯಸ್ಯ ಪರಾಕ್ರಮಮ್ ॥40॥
ಶಸ್ತ್ರವೃಷ್ಟಿಂ ಪರೈರ್ಮುಕ್ತಾಂ ಶರೌಘೈರ್ಯದವಾರಯತ್ |
ನ ಚ ತತ್ರಾಪ್ಯನಿರ್ಭಿನ್ನಃ ಕಶ್ಚಿದಾಸೀದ್ ವಿಶಾಂಪತೇ ॥41॥
ಆಗ ಕೋಪಗೊಂಡ ಅರ್ಜುನನು ಐಂದ್ರಾಸ್ತ್ರವನ್ನು ಪ್ರಯೋಗಿಸಿದನು. ಶತ್ರುಗಳು ತನ್ನ ಮೇಲೆ ಕರೆದ ಬಾಣಗಳ ಮಳೆಯನ್ನು ನಿವಾರಿಸಿ ಎಲೈ ರಾಜನೇ, ಅವರಲ್ಲಿ ಯಾವೊಬ್ಬನೂ ಗಾಯಗೊಳ್ಳದೇ ಇರದಂತೆ ಮಾಡಿದ ಅರ್ಜುನನ ಪರಾಕ್ರಮವನ್ನು ನಾವಲ್ಲಿ ನೋಡಿದೆವು.
ತೇಷಾಂ ರಾಜಸಹಸ್ರಾಣಾಂ ಹಯಾನಾಂ ದಂತಿನಾಂ ತಥಾ |
ದ್ವಾಭ್ಯಾಂ ತ್ರಿಭಿಃ ಶರೈಶ್ಚಾನ್ಯಾನ್ ಪಾರ್ಥೋ ವಿವ್ಯಾಧ ಮಾರಿಷ ॥42॥
ಎಲೈ ಪೂಜ್ಯನೇ, ಆ ಸಹಸ್ರಾರು ರಾಜರು, ಅಶ್ವಗಳು, ಗಜಗಳು, ಉಳಿದವರು ಎಲ್ಲರ ಮೇಲೆಯೂ ಅರ್ಜುನನು ಎರಡು-ಮೂರು ಬಾಣಗಳನ್ನು ಪ್ರಯೋಗಿಸಿ ಯುದ್ಧವನ್ನು ಮಾಡಿದನು.
ತೇ ಹನ್ಯಮಾನಾಃ ಪಾರ್ಥೇನ ಭೀಷ್ಮಂ ಶಾಂತನವಂ ಯಯುಃ |
ಅಗಾಧೇ ಮಜ್ಜಮಾನಾನಾಂ ಭೀಷ್ಮಸ್ತತ್ರಾಭವತ್ ತದಾ ॥43॥
ಅರ್ಜುನನಿಂದ ಹೀಗೆ ಪ್ರಹಾರ ಮಾಡಲ್ಪಟ್ಟ ಅವರು ಶಂತನುಪುತ್ರರಾದ ಭೀಷ್ಮರಿಗೆ ಶರಣಾಗತರಾದರು. ಅಗಾಧ ಸಾಗರದಲ್ಲಿ ಮುಳುಗುವವರಂತೆ ಇದ್ದ ಅವರಿಗೆ ಆಗ ಭೀಷ್ಮರು ರಕ್ಷಕರಾದರು.
ಆಪತದ್ಭಿಸ್ತು ತೈಸ್ತತ್ರ ಪ್ರಭಗ್ನಂ ತಾವಕಂ ಬಲಮ್ |
ಸಂಚುಕ್ಷುಭೇ ಮಹಾರಾಜ ವಾತೈರಿವ ಮಹಾರ್ಣವಃ ॥44॥
ಎಲೈ ಮಹಾರಾಜನೇ, ಮೇಲ ಮೇಲೆ ಬರುತ್ತಿದ್ದ ಪಾಂಡವ ಸೈನ್ಯದಿಂದ ಚೆನ್ನಾಗಿ ಭಗ್ನವಾದ ನಿನ್ನ ಸೈನ್ಯವು ಬಿರುಗಾಳಿಗೆ ಸಿಕ್ಕಿದ ಸಾಗರದಂತೆ ಬಹಳ ಕ್ಷೋಭೆಗೊಂಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆಂಟನೆಯ ಅಧ್ಯಾಯ

ಧೃಷ್ಟದ್ಯುಮ್ನ-ಭೀಮಸೇನರ ಪರಾಕ್ರಮ.
ಸಂಜಯಃ
ತಥಾ ಪ್ರವೃತ್ತೇ ಸಂಗ್ರಾಮೇ ನಿವೃತ್ತೇ ಚ ಸುಶರ್ಮಣಿ |
ಪ್ರಭಗ್ನೇಷು ಚ ವೀರೇಷು ಪಾಂಡವೇನ ಮಹಾತ್ಮನಾ ||1||
ಕ್ಷುಭ್ಯಮಾಣೇ ಬಲೇ ತೂರ್ಣಂ ಸಾಗರಪ್ರತಿಮೇ ತವ |
ಪ್ರತ್ಯುದ್ಯಾತೇ ಚ ಗಾಂಗೇಯೇ ತ್ವರಿತಂ ವಿಜಯಂ ಪ್ರತಿ ||2||
ದೃಷ್ಟ್ವಾ ದುರ್ಯೋಧನೋ ರಾಜನ್ ರಣೇ ಪಾರ್ಥಸ್ಯ ವಿಕ್ರಮಮ್ |
ತ್ವರಮಾಣಃ ಸಮಭ್ಯೇತ್ಯ ಸರ್ವಾಂಸ್ತಾನಬ್ರವೀನ್ನೃಪಾನ್ ||3||
ತೇಷಾಂ ಚ ಪ್ರಮುಖೇ ಶೂರಂ ಸುಶರ್ಮಾಣಂ ಮಹಾಬಲಮ್ |
ಮಧ್ಯೇ ಸರ್ವಸ್ಯ ಸೈನ್ಯಸ್ಯ ಭೃಶಂ ಸಂಹರ್ಷಯನ್ ವಚಃ ||4||
ಸಂಜಯ ಯುದ್ಧವು ಪ್ರಾರಂಭವಾದ ತಕ್ಷಣ ಸುಶರ್ಮನು ಹಿಂದಿರುಗುತ್ತಿರಲು, ಮಹಾತ್ಮನಾದ ಅರ್ಜುನನಿಂದ ಕೌರವ ವೀರರು ಭಗ್ನಗೊಳ್ಳುತ್ತಿರಲು, ಸಾಗರದಂತಿದ್ದ ನಿನ್ನ ಸೈನ್ಯವು ಶೀಘ್ರವಾಗಿ ಕ್ಷೋಭೆಗೊಳ್ಳುತ್ತಿರಲು ಭೀಷ್ಮರು ಅರ್ಜುನನ ಕಡೆಗೆ ಸಾಗುತ್ತಿರಲು, ಎಲೈ ರಾಜನೇ, ದುರ್ಯೋಧನನು ಯುದ್ಧದಲ್ಲಿ ಅರ್ಜುನನ ಪರಾಕ್ರಮವನ್ನು ನೋಡಿ ಶೀಘ್ರವಾಗಿ ಎಲ್ಲ ರಾಜರುಗಳನ್ನೂ ಸಮೀಪಿಸಿ, ಅವರ ಮಧ್ಯದಲ್ಲಿ ಮಹಾಬಲನೂ, ಶೂರನೂ ಆದ ಸುಶರ್ಮನನ್ನು ಸಂತೋಷಗೊಳಿಸುತ್ತಾ ಎಲ್ಲ ಸೈನ್ಯಗಳ ಮಧ್ಯದಲ್ಲಿ ಎಲ್ಲ ರಾಜರನ್ನು ಕುರಿತು ಹೇಳಿದನು.
ಏಷ ಭೀಷ್ಮಃ ಶಾಂತನವೋ ಯೋದ್ಧುಕಾಮೋ ಧನಂಜಯಮ್ |
ಸರ್ವಾತ್ಮನಾ ಕುರುಶ್ರೇಷ್ಠಸ್ತ್ಯಕತ್ವಾ ಜೀವಿತಮಾತ್ಮನಃ ||5||
ತಂ ಪ್ರಯಾಂತಂ ಪರಾನೀಕಂ ಸರ್ವಸೈನ್ಯೇನ ಭಾರತಮ್ |
ಸಂಯತ್ತಾಃ ಸಮರೇ ಸರ್ವೇ ಪಾಲಯಧ್ವಂ ಪಿತಾಮಹಮ್ ||6||
ಶಂತನು ಪುತ್ರರಾದ ಕುರುಶ್ರೇಷ್ಠರಾದ ಈ ಭೀಷ್ಮರು ತಮ್ಮ ಪ್ರಾಣವನ್ನು ತೊರೆದು ಸರ್ವಪ್ರಕಾರದಿಂದ ಅರ್ಜುನನ ಜೊತೆಯಲ್ಲಿ ಯುದ್ಧ ಮಾಡಲು ಬಯಸುತ್ತಾರೆ. ಎಲ್ಲ ಸೈನ್ಯದ ಜೊತೆಯಲ್ಲಿ ಶತ್ರುಸೈನ್ಯದ ಮೇಲೆ ಎರಗುತ್ತಿರುವ ಪಿತಾಮಹರನ್ನು ನೀವೆಲ್ಲರೂ ಯುದ್ಧದಲ್ಲಿ ಜಾಗರೂಕರಾಗಿ ರಕ್ಷಿಸಿ (ಎಂದು ಹೇಳಿದನು).
ಬಾಢಮಿತ್ಯೇವಮುಕತ್ವಾ ತು ತಾನ್ಯನೀಕಾನಿ ಸರ್ವಶಃ |
ನರೇಂದ್ರಾಣಾಂ ಮಹಾರಾಜ ಸಮಾಜಗ್ಮುಃ ಪಿತಾಮಹಮ್ ||7||
ಎಲೈ ಮಹಾರಾಜನೇ, ಹಾಗೆಯೇ ಆಗಲಿ ಎಂದು ಹೇಳಿ ಆ ರಾಜರ ಸೈನ್ಯಗಳೆಲ್ಲವೂ ಭೀಷ್ಮರ ಜೊತೆಯಲ್ಲಿ ಹೊರಟವು.
ತತಃ ಪ್ರಯಾತಃ ಸಹಸಾ ಭೀಷ್ಮಃ ಶಾಂತನವೋಽರ್ಜುನಮ್ |
ರಣೇ ಭಾರತಮಾಯಾಂತಮಾಸಸಾದ ಮಹಾಬಲಮ್ ||8||
ಆಗ ಶಂತನು ಪುತ್ರರಾದ ಭೀಷ್ಮರು ಮಹಾಬಲನೂ, ಭಾರತನೂ, ಎದುರಾಗಿ ಬರುತ್ತಿರುವವನೂ ಆದ ಅರ್ಜುನನ ಕಡೆಗೆ ಯುದ್ಧಭೂಮಿಯಲ್ಲಿ ತಕ್ಷಣ ಹೊರಟರು.
ಮಹಾಶ್ವೇತಾಶ್ವಯುಕ್ತೇನ ಭೀಮವಾನರಕೇತುನಾ |
ಮಹತಾ ಮೇಘನಾದೇನ ರಥೇನಾತಿವಿರಾಜತಾ ||9||
ಸಮರೇ ಸರ್ವಸೈನ್ಯಾನಾಮುಪಯಾತಂ ಧನಂಜಯಮ್ |
ಅಭವತ್ ತುಮುಲೋ ನಾದೋ ಭಯಾದ್ ದೃಷ್ಟ್ವಾ ಕಿರೀಟಿನಮ್ ||
ಶುಭ್ರಶ್ವೇತವರ್ಣದ ಅಶ್ವಗಳನ್ನು ಹೊಂದಿದ, ಭಯಂಕರವಾದ ವಾನರ ಧ್ವಜದಿಂದ ಕೂಡಿದ, ಮೇಘನಾದವನ್ನು ಮಾಡುತ್ತಾ ಬಹಳವಾಗಿ ಶೋಭಿಸುವ ರಥದಲ್ಲಿ ಬರುತ್ತಿರುವ ಅರ್ಜುನನನ್ನು ನೋಡಿ ಯುದ್ಧದಲ್ಲಿ ನಿನ್ನ ಎಲ್ಲ ಸೈನ್ಯಗಳಿಗೂ ಭಯದಿಂದ ತೀವ್ರವಾದ ನಾದ ಉಂಟಾಯಿತು.
ಅಭೀಶುಹಸ್ತಂ ಕೃಷ್ಣಂ ಚ ದೃಷ್ಟ್ವಾಽದಿತ್ಯಮಿವಾಪರಮ್ |
ಮಧ್ಯಂದಿನಗತಂ ಸಂಖ್ಯೇ ನ ಶೇಕುಃ ಪ್ರತಿವೀಕ್ಷಿತುಮ್ ||11||
ಕೈಯಲ್ಲಿ ಕಡಿವಾಣವನ್ನು ಹಿಡಿದು ಮಧ್ಯಾಹ್ನದ ಸೂರ್ಯನಂತೆ ಕಂಗೊಳಿಸುತ್ತಿದ್ದ ಕೃಷ್ಣನನ್ನು ನೋಡಲು ನಿನ್ನ ಯೋಧರು ಸಮರ್ಥರಾಗಲಿಲ್ಲ.
ತಥಾ ಶಾಂತನವಂ ಭೀಷ್ಮಂ ಶ್ವೇತಾಶ್ವಂ ಶ್ವೇತಕಾರ್ಮುಕಮ್ |
ನ ಶೇಕುಃ ಪಾಂಡವಾ ದ್ರಷ್ಟುಂ ಶ್ವೇತಗ್ರಹಮಿವೋದಿತಮ್ ||12||
ಹಾಗೆಯೇ ಶ್ವೇತಾಶ್ವಗಳನ್ನು ಹೊಂದಿ, ಶ್ವೇತವಾದ ಧನುಸ್ಸನ್ನು ಹೊಂದಿ ಉದಯಿಸಿದ ರಾಹುಗ್ರಹದಂತೆ ಇದ್ದ ಭೀಷ್ಮರನ್ನು ನೋಡಲು ಪಾಂಡವರೂ ಶಕ್ತರಾಗಲಿಲ್ಲ.
ಸ ಸರ್ವತಃ ಪರಿವೃತಸ್ತ್ರಿಗರ್ತೈಃ ಸುಮಹಾತ್ಮಭಿಃ |
ಭ್ರಾತೃಭಿಸ್ತವ ಪುತ್ರೈಶ್ಚ ತಥಾನ್ಯೈಶ್ಚ ಮಹಾರಥೈಃ ||13||
ಆ ಭೀಷ್ಮರಾದರೋ ಮಹಾತ್ಮರಾದ ತ್ರಿಗರ್ತರಿಂದಲೂ, ಸಹೋದರರರಾದ ನಿನ್ನ ಪುತ್ರರಿಂದಲೂ ಮತ್ತು ಬೇರೆ ಮಹಾರಥರಿಂದಲೂ ಎಲ್ಲ ಕಡೆಯಲ್ಲಿಯೂ (ಅವರ ರಕ್ಷಣೆಗಾಗಿ) ಸುತ್ತುವರಿಯಲ್ಪಟ್ಟರು.
ಭಾರದ್ವಾಜಸ್ತು ಸಮರೇ ಮತ್ಸ್ಯಂ ವಿವ್ಯಾಧ ಪತ್ರಿಣಾ |
ಧ್ವಜಂ ಚಾಸ್ಯ ಶರೇಣಾಜೌ ಧನುಶ್ಚೈಕೇನ ಚಿಚ್ಛಿದೇ ||14||

ದ್ರೋಣರಾದರೋ ಯುದ್ಧದಲ್ಲಿ ವಿರಾಟನ ಜೊತೆಯಲ್ಲಿ ಬಾಣಗಳಿಂದ ಸೆಣೆಸಿದರು. ಅವರು ಒಂದು ಬಾಣದಿಂದ ಅವನ ಧ್ವಜವನ್ನು, ಇನ್ನೊಂದು ಬಾಣದಿಂದ ಅವನ ಧನುಸ್ಸನ್ನು ಕತ್ತರಿಸಿದರು.
ತದಪಾಸ್ಯ ಧನುಶ್ಛಿನ್ನಂ ವಿರಾಟೋ ವಾಹಿನೀಪತಿಃ |
ಅನ್ಯದಾದತ್ತ ವೇಗೇನ ಧನುರ್ಭಾರಸಹಂ ದೃಢಮ್ |
ಶರಾಂಶ್ಚಾಶೀವಿಷಾಕಾರಾನ್ ಜ್ವಲಿತಾನ್ ಪನ್ನಗಾನಿವ ॥15॥
ಸೇನಾಪತಿಯಾದ ವಿರಾಟನು ಕತ್ತರಿಸಿದ ಧನುಸ್ಸನ್ನು ಎಸೆದು ದೃಢವಾದ, ಗುರುಕಾರ್ಯವನ್ನು ಮಾಡುವ ಇನ್ನೊಂದು ಧನುಸ್ಸನ್ನು ಶೀಘ್ರವಾಗಿ ತೆಗೆದುಕೊಂಡು ಜ್ವಲಿಸುವ ಸರ್ಪದಂತಿದ್ದ ಬಾಣಗಳನ್ನು ಸರ್ಪಗಳಂತೆ ಅವರ ಮೇಲೆ ಪ್ರಯೋಗಿಸಿದನು.
ದ್ರೋಣಂ ತ್ರಿಭಿಃ ಪ್ರವಿವ್ಯಾಧ ಚತುರ್ಭಿಶ್ಚಾಸ್ಯ ವಾಜಿನಃ |
ಧ್ವಜಮೇಕೇನ ವಿವ್ಯಾಧ ಸಾರಥಿಂ ಚಾಸ್ಯ ಪಂಚಭಿಃ |
ಧನುರೇಕೇಷುಣಾವಿಧ್ಯತ್ ತತ್ರಾಕ್ರುಧ್ಯದ್ ದ್ವಿಜರ್ಷಭಃ ॥16॥
ಅವನು ದ್ರೋಣರನ್ನು ಮೂರು ಬಾಣಗಳಿಂದಲೂ, ಅವರ ರಥದ ಅಶ್ವಗಳನ್ನು ನಾಲ್ಕು ಬಾಣಗಳಿಂದಲೂ, ಧ್ವಜವನ್ನು ಒಂದು ಬಾಣದಿಂದಲೂ, ಸಾರಥಿಯನ್ನು ಐದು ಬಾಣಗಳಿಂದಲೂ ಮತ್ತು ಧನುಸ್ಸನ್ನು ಒಂದು ಬಾಣದಿಂದಲೂ ಹೊಡೆದು ಪೀಡಿಸಿದನು. ಆಗ ಬ್ರಾಹ್ಮಣ ಶ್ರೇಷ್ಠರಾದ ದ್ರೋಣರು ಕೋಪಗೊಂಡರು.
ತಸ್ಯ ದ್ರೋಣೋಽವಧೀದಶ್ವಾನ್ ಶರೈಃ ಸನ್ನತಪರ್ವಭಿಃ |
ಅಷ್ಟಾಭಿರ್ಭರತಶ್ರೇಷ್ಠ ಸೂತಮೇಕೇನ ಪತ್ರಿಣಾ ॥17॥
ಎಲೈ ಭರತಶ್ರೇಷ್ಠನೇ, ದ್ರೋಣರು ಬಾಗಿದ ತುದಿಯುಳ್ಳ ಮತ್ತು ಪತ್ರಗಳನ್ನು ಹೊಂದಿದ ಎಂಟು ಬಾಣಗಳಿಂದ ಅವನ ಅಶ್ವಗಳನ್ನು ಮತ್ತು ಒಂದು ಬಾಣದಿಂದ ಅವನ ಸಾರಥಿಯನ್ನು ಹೊಡೆದು ಉರುಳಿಸಿದರು.
ಸ ಹತಾಶ್ವಾದವಪ್ಲುತ್ಯ ಸ್ಯಂದನಾದ್ ಹತಸಾರಥಿಃ |
ಆರುರೋಹ ರಥಂ ತೂರ್ಣಂ ಪುತ್ರಸ್ಯ ರಥಿನಾಂ ವರಃ ॥18॥
ವಿರಾಟ ರಾಜನಾದರೋ ಅಶ್ವಗಳು ಮತ್ತು ಸಾರಥಿಯು ಹತರಾದ ರಥದಿಂದ ಹಾರಿ ರಥಿಶ್ರೇಷ್ಠನಾದ ಅವನು ಶೀಘ್ರವಾಗಿ ತನ್ನ ಪುತ್ರನಾದ ಶಂಖನ ರಥವನ್ನು ಏರಿದನು.
ತತಸ್ತು ತೌ ಪಿತಾಪುತ್ರೌ ಭಾರದ್ವಾಜಂ ರಥೇ ಸ್ಥಿತೌ |
ಮಹತಾ ಶರವರ್ಷೇಣ ವಾರಯಾಮಾಸತುರ್ಬಲಾತ್ ॥19॥
ಅನಂತರ ಆ ತಂದೆ-ಮಕ್ಕಳಿಬ್ಬರೂ ರಥದಲ್ಲಿ ಕುಳಿತು ದ್ರೋಣರ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಸುರಿಸಿ ತಮ್ಮ ಸಾಮರ್ಥ್ಯದಿಂದ ಅವರನ್ನು ತಡೆದರು.
ಭಾರದ್ವಾಜಸ್ತತಃ ಕ್ರುದ್ಧಃ ಶರಮಾಶೀವಿಷೋಪಮಮ್ |
ಚಿಕ್ಷೇಪ ಸಮರೇ ತೂರ್ಣಂ ಶಂಖಂ ಪ್ರತಿ ಜನೇಶ್ವರ ॥20॥
ಎಲೈ ರಾಜನೇ, ಆಗ ದ್ರೋಣರು ಬಹಳ ಕೋಪಗೊಂಡು ಸರ್ಪದಂತಿದ್ದ ಒಂದು ಬಾಣವನ್ನು ಶೀಘ್ರವಾಗಿ ಯುದ್ಧದಲ್ಲಿ ಶಂಖನ ಮೇಲೆ ಪ್ರಯೋಗಿಸಿದರು.
ಸ ತಸ್ಯ ಹೃದಯಂ ಭಿತ್ತ್ವಾ ಪೀತ್ವಾ ಶೋಣಿತಮಾಹವೇ |
ಜಗಾಮ ಧರಣಿಂ ಬಾಣೋ ಲೋಹಿತಾರ್ದ್ರೀಕೃತಚ್ಛವಿಃ ॥21॥
ಆ ಬಾಣವಾದರೋ ರಣರಂಗದಲ್ಲಿ ಅವನ ಹೃದಯವನ್ನು ಭೇದಿಸಿ ರಕ್ತವನ್ನು ಪಾನ ಮಾಡಿ, ಹಸಿರಕ್ತದಿಂದ ಆವೃತವಾದ ಕಾಂತಿಯುಳ್ಳದ್ದಾಗಿ ಭೂಮಿಯನ್ನು ಸೇರಿತು.
ಸ ಪಪಾತ ರಥಾತ್ ತೂರ್ಣಂ ಭಾರದ್ವಾಜಶರಾಹತಃ |
ಧನುಸ್ತ್ಯಕ್ತ್ವಾ ಶರಾಂಶ್ಚೈವ ಪಿತುರೇವ ಸಮೀಪತಃ ॥22॥
ದ್ರೋಣರ ಬಾಣದಿಂದ ಹೊಡೆಯಲ್ಪಟ್ಟ ಅವನು ತನ್ನ ಬಿಲ್ಲು ಬಾಣಗಳನ್ನು ತ್ಯಜಿಸಿ ತಂದೆಯಾದ ವಿರಾಟನ ಸಮೀಪದಲ್ಲಿಯೇ ರಥದಿಂದ ಶೀಘ್ರವಾಗಿ ಕೆಳಗೆ ಉರುಳಿದನು.
ಹತಂ ಸ್ವಮಾತ್ಮಜಂ ದೃಷ್ಟ್ವಾ ವಿರಾಟಃ ಪ್ರಾದ್ರವದ್ ಭಯಾತ್ |
ಉತ್ಸೃಜ್ಯ ಸಮರೇ ದ್ರೋಣಂ ವ್ಯಾತ್ತಾನನಮಿವಾಂತಕಮ್ ॥23॥
ಯುದ್ಧದಲ್ಲಿ ತನ್ನ ಪುತ್ರನು ಹತನಾದುದನ್ನೂ ಮತ್ತು ಬಾಯ್ತೆರೆದ ಯಮನಂತಿರುವ ದ್ರೋಣರನ್ನೂ ನೋಡಿ ವಿರಾಟನು ಅವರನ್ನು ಬಿಟ್ಟು ಭಯದಿಂದ ಓಡಿಹೋದನು.
ಭಾರದ್ವಾಜಸ್ತತಸ್ತೂರ್ಣಂ ಪಾಂಡವಾನಾಂ ಮಹಾಚಮೂಮ್ |
ದಾರಯಾಮಾಸ ಸಮರೇ ಶತಶೋಽಥ ಸಹಸ್ರಶಃ ॥24॥
ದ್ರೋಣರಾದರೋ ಅನಂತರ ಶೀಘ್ರವಾಗಿ ಪಾಂಡವರ ಮಹಾಸೈನ್ಯವನ್ನು ನೂರಾರು ಸಾವಿರಾರು ಭಾಗಗಳಾಗಿ ಸೀಳಿದರು.
ಶಿಖಂಡ್ಯಪಿ ಮಹಾರಾಜ ದ್ರೌಣಿಮಾಸಾದ್ಯ ಸಂಯುಗೇ |
ಆಜಘಾನ ಭ್ರುವೋರ್ಮಧ್ಯೇ ನಾರಾಚೈಸ್ತ್ರಿಭಿರಾಶುಗೈಃ ॥25॥
ಎಲೈ ಮಹಾರಾಜನೇ, ಶಿಖಂಡಿಯಾದರೋ ರಣಭೂಮಿಯಲ್ಲಿ ಅಶ್ವತ್ಥಾಮರನ್ನು ಸಮೀಪಿಸಿ ಶೀಘ್ರಗಾಮಿಗಳಾದ ಮೂರು ಬಾಣಗಳಿಂದ ಅವರ ಭ್ರೂಮಧ್ಯದಲ್ಲಿ ಹೊಡೆದನು.
ಸ ಬಭೌ ನರಶಾರ್ದೂಲೋ ಲಲಾಟೇ ಸಂಸ್ಥಿತೈಸ್ತ್ರಿಭಿಃ |
ಶಿಖರೈಃ ಕಾಂಚನಮಯೈರ್ಮೇರುಸ್ತ್ರಿಭಿರಿವೋಚ್ಛ್ರಿತೈಃ ॥26॥

ಹಣೆಯಲ್ಲಿ ನೆಟ್ಟ ಆ ಮೂರುಬಾಣಗಳಿಂದ ನರಶ್ರೇಷ್ಠರಾದ ಅವರು ಸುವರ್ಣಮಯವಾದ ಮೂರು ಶಿಖರಗಳಿಂದ ಶೋಭಿಸುವ ಮೇರು ಪರ್ವತದಂತೆ ಶೋಭಿಸಿದರು.
ಅಶ್ವತ್ಥಾಮಾ ತತಃ ಕ್ರುದ್ಧೋ ನಿಮೇಷಾರ್ಧಾಚ್ಛಿಖಂಡಿನಃ |
ಸೂತಂ ಧ್ವಜಮಥೋ ರಾಜಂಸ್ತುರಗಾನಾಯುಧಂ ತಥಾ |
ಶರೈರ್ಬಹುಭಿರುದ್ದಿಶ್ಯ ಪಾತಯಾಮಾಸ ಸಂಯುಗೇ ॥27॥
ಎಲೈ ರಾಜನೇ, ಅಶ್ವತ್ಥಾಮರು ಆಗ ಕೋಪಗೊಂಡು ಕಣ್ಣುಮುಚ್ಚಿ ತೆಗೆಯುವಷ್ಟರಲ್ಲಿ ಶಿಖಂಡಿಯ ಸಾರಥಿಯನ್ನು, ಧ್ವಜವನ್ನು, ಅಶ್ವಗಳನ್ನು, ಆಯುಧವನ್ನು ಅನೇಕ ಬಾಣಗಳಿಂದ ಕತ್ತರಿಸಿ ಭೂಮಿಯ ಮೇಲೆ ಬೀಳಿಸಿದರು.
ಸ ಹತಾಶ್ವಾದವಪ್ಲುತ್ಯ ರಥಾದ್ ವೈ ರಥಿನಾಂ ವರಃ |
ಖಡ್ಗಮಾದಾಯ ನಿಶಿತಂ ವಿಮಲಂ ಚ ಶರಾವರಮ್ |
ಶ್ಯೇನವದ್ ವ್ಯಚರತ್ ಕ್ರುದ್ಧಃ ಶಿಖಂಡೀ ಶತ್ರುತಾಪನಃ ॥28॥
ರಥಿಶ್ರೇಷ್ಠನೂ, ಶತ್ರುತಾಪಕನೂ, ಕ್ರುದ್ಧನೂ ಆದ ಆ ಶಿಖಂಡಿಯು ಅಶ್ವವನ್ನು ಕಳೆದುಕೊಂಡ ರಥದಿಂದ ಕೆಳಗೆ ಹಾರಿ ಕೈಯಲ್ಲಿ ಹರಿತವಾದ ಖಡ್ಗವನ್ನು ಮತ್ತು ಸ್ವಚ್ಛವಾದ ಗುರಾಣಿಯನ್ನು ಹಿಡಿದು ಗಿಡುಗನಂತೆ ತಿರುಗಾಡಿದನು.
ಸಖಡ್ಗಸ್ಯ ಮಹಾರಾಜ ಚರತಸ್ತಸ್ಯ ಸಂಯುಗೇ |
ನಾಂತರಂ ದದೃಶೇ ದ್ರೌಣಿಸ್ತದದ್ಭುತಮಿವಾಭವತ್ ॥29॥
ಎಲೈ ಮಹಾರಾಜನೇ, ಖಡ್ಗವನ್ನು ಕೈಯಲ್ಲಿ ಹಿಡಿದು ರಣಭೂಮಿಯಲ್ಲಿ ಸಂಚರಿಸುವ ಅವನನ್ನು ಹೊಡೆಯಲು ಅಶ್ವತ್ಥಾಮರಿಗೆ ಯಾವ ಅವಕಾಶವೂ ದೊರೆಯಲಿಲ್ಲ. ಅದು ಅದ್ಭುತವಾಗಿದ್ದಿತು.
ತತಃ ಶರಸಹಸ್ರಾಣಿ ಬಹೂನಿ ಭರತರ್ಷಭ |
ಪ್ರೇಷಯಾಮಾಸ ಸಮರೇ ದ್ರೌಣಿಃ ಪರಮಕೋಪನಃ ॥30॥
ಎಲೈ ಭರತಶ್ರೇಷ್ಠನೇ, ಆಗ ಪರಮಕೋಪಸ್ವಭಾವದ ಅಶ್ವತ್ಥಾಮರು ಅನೇಕ ಸಹಸ್ರ ಬಾಣಗಳನ್ನು ರಣರಂಗದಲ್ಲಿ ಅವನ ಮೇಲೆ ಪ್ರಯೋಗಿಸಿದರು.
ತಾಮಾಪತಂತೀಂ ಸಮರೇ ಶರವೃಷ್ಟಿಂ ಸುದಾರುಣಾಮ್ |
ಅಸಿನಾ ತೀಕ್ಷ್ಣಧಾರೇಣ ಚಿಚ್ಛೇದ ಬಲಿನಾಂ ವರಃ ॥31॥
ಬಲಿಷ್ಠರಲ್ಲಿ ಶ್ರೇಷ್ಠನಾದ ಅವನು ತನ್ನ ಕಡೆಗೆ ಬರುತ್ತಿದ್ದ ಭಯಂಕರವಾದ ಬಾಣಗಳ ಆ ಮಳೆಯನ್ನು ಹರಿತವಾದ ಅಲುಬುಳ್ಳ ಕತ್ತಿಯಿಂದ ಕತ್ತರಿಸಿದನು.
ತತೋಽಸ್ಯ ವಿಮಲಂ ದ್ರೌಣಿಃ ಶತಚಂದ್ರಂ ಮನೋರಮಮ್ |
ಚರ್ಮಾಚ್ಛಿನದಸಿಂ ಚಾಸ್ಯ ಖಂಡಯಾಮಾಸ ಸಂಯುಗೇ |
ಶಿತೈಃ ಸುಬಹುಶೋ ರಾಜಂಸ್ತಂ ಚ ವಿವ್ಯಾಧ ಪತ್ರಿಭಿಃ ॥32॥
ಅನಂತರ ಅಶ್ವತ್ಥಾಮರು ಅವನ ಸುಂದರವಾದ ಶತಚಂದ್ರಗಳಿದ್ದ ಗುರಾಣಿಯನ್ನು ಮತ್ತು ಖಡ್ಗವನ್ನು ಕತ್ತರಿಸಿ ಎಲೈ ರಾಜನೇ, ಅವನ ಮೇಲೆ ಪತ್ರಗಳನ್ನು ಹೊಂದಿದ ಹರಿತವಾದ ಅನೇಕ ಬಾಣಗಳನ್ನು ಪ್ರಯೋಗಿಸಿದರು.
ಶಿಖಂಡೀ ತು ತತಃ ಖಡ್ಗಂ ಖಂಡಿತಂ ತೇನ ಸಾಯಕೈಃ |
ಆವಿಧ್ಯ ವ್ಯಸೃಜತ್ ತೂರ್ಣಂ ಜ್ವಲಂತಮಿವ ಪನ್ನಗಮ್ ॥33॥
ತಮಾಪತಂತಂ ಸಹಸಾ ಕಾಲಾನಲಸಮಪ್ರಭಮ್ |
ಚಿಚ್ಛೇದ ಸಮರೇ ದ್ರೌಣಿರ್ದರ್ಶಯನ್ ಪಾಣಿಲಾಘವಮ್ |
ಶಿಖಂಡಿನಂ ಚ ವಿವ್ಯಾಧ ಶರೈರ್ಬಹುಭಿರಾಯಸೈಃ ॥34॥
ಶಿಖಂಡಿಯಾದರೋ ಅಶ್ವತ್ಥಾಮರು ಬಾಣಗಳಿಂದ ಕತ್ತರಿಸಿದ ಖಡ್ಗವನ್ನು ತಿರುಗಿಸಿ ಉರಿಯುವ ಸರ್ಪದಂತಿದ್ದ ಅದನ್ನು ಶೀಘ್ರವಾಗಿ ಅವರ ಮೇಲೆಯೇ ಪ್ರಯೋಗಿಸಿದನು. ಅಶ್ವತ್ಥಾಮರು ತಮ್ಮ ಹಸ್ತಲಾಘವವನ್ನು ತೋರಿಸುತ್ತಾ ಕಾಲಾಗ್ನಿಯ ಕಾಂತಿಯಿಂದ ತಮ್ಮ ಕಡೆಗೆ ಬರುತ್ತಿದ್ದ ಆ ಖಡ್ಗದ ತುಂಡನ್ನು ಕತ್ತರಿಸಿದರು ಮತ್ತು ಅಯೋಮಯವಾದ ಅನೇಕ ಬಾಣಗಳಿಂದ ಶಿಖಂಡಿಯನ್ನು ಪೀಡಿಸಿದರು.
ಶಿಖಂಡೀ ತು ಭೃಶಂ ರಾಜಂಸ್ತಾಡ್ಯಮಾನಃ ಶಿತೈಃ ಶರೈಃ |
ಆರುರೋಹ ರಥಂ ತೂರ್ಣಂ ಮಾಧವಸ್ಯ ಮಹಾತ್ಮನಃ ॥35॥
ಎಲೈ ರಾಜನೇ, ಅವರ ಹರಿತವಾದ ಬಾಣಗಳಿಂದ ಚೆನ್ನಾಗಿ ಹೊಡೆಯಲ್ಪಟ್ಟ ಶಿಖಂಡಿಯು ಶೀಘ್ರವಾಗಿ ಮಹಾತ್ಮನಾದ ಸಾತ್ಯಕಿಯ ರಥವನ್ನು ಏರಿದನು.
ಸಾತ್ಯಕಿಸ್ತು ತತಃ ಕ್ರುದ್ಧೋ ರಾಕ್ಷಸಂ ಕ್ರೂರಮಾಹವೇ |
ಅಲಂಬುಸಂ ಶರೈರ್ಘೋರೈರ್ವಿವ್ಯಾಧ ಬಲಿನಾಂ ಬಲೀ ॥36॥
ಆಗ ಬಲಿಷ್ಠರಲ್ಲಿ ಬಲಿಷ್ಠನಾದ ಸಾತ್ಯಕಿಯಾದರೋ ಕ್ರುದ್ಧನಾಗಿ ಯುದ್ಧದಲ್ಲಿ ಕ್ರೂರನಾದ ಅಲಂಬುಸ ರಾಕ್ಷಸನ ಮೇಲೆ ಘೋರವಾದ ಬಾಣಗಳನ್ನು ಪ್ರಯೋಗಿಸಿದನು.
ರಾಕ್ಷಸೇಂದ್ರಸ್ತತಸ್ತಸ್ಯ ಧನುಶ್ಚಿಚ್ಛೇದ ಭಾರತ |
ಅರ್ಧಚಂದ್ರೇಣ ಸಮರೇ ತಂ ಚ ವಿವ್ಯಾಧ ಸಾಯಕೈಃ |
ಮಾಯಾಂ ಚ ರಾಕ್ಷಸೀಂ ಕೃತ್ವಾ ಶರವರ್ಷೈರವಾಕಿರತ್ ॥37॥
ಎಲೈ ಭಾರತನೇ, ರಾಕ್ಷಸೇಂದ್ರನಾದ ಅಲಂಬುಸನು ಸಾತ್ಯಕಿಯ ಬಾಣಗಳನ್ನು ಕತ್ತರಿಸಿದನು ಮತ್ತು ಅರ್ಧಚಂದ್ರಾಕಾರದ

ಬಾಣಗಳಿಂದ ಸಾತ್ಯಕಿಯನ್ನು ಹೊಡೆದು ರಾಕ್ಷಸ ಮಾಯೆಯನ್ನು ಆಶ್ರಯಿಸಿ ಅವನ ಮೇಲೆ ಬಾಣಗಳ ಮಳೆಯನ್ನು ಕರೆದನು.
ತತ್ರಾದ್ಭುತಮಪಶ್ಯಾಮ ಶೈನೇಯಸ್ಯ ಪರಾಕ್ರಮಮ್ |
ನಾಸಂಭ್ರಮದ್ ಯತ್ ಸಮರೇ ವಧ್ಯಮಾನಃ ಶಿತೈಃ ಶರೈಃ ||38||
ಹರಿತವಾದ ಬಾಣಗಳಿಂದ ಪೀಡಿಸಲ್ಪಟ್ಟರೂ ಯುದ್ಧದಲ್ಲಿ ಗಾಬರಿಗೊಳ್ಳದ ಸಾತ್ಯಕಿಯ ಅದ್ಭುತವಾದ ಪರಾಕ್ರಮವನ್ನು ನಾವು ಅಲ್ಲಿ ನೋಡಿದೆವು.
ಐಂದ್ರಮಸ್ತ್ರಂ ಚ ವಾರ್ಷ್ಣೇಯೋ ಯೋಜಯಾಮಾಸ ಭಾರತ |
ವಿಜಯಾದ್ ಯದನುಪ್ರಾಪ್ತಂ ಮಾಧವೇನ ಯಶಸ್ವಿನಾ ||39||
ತದಸ್ತ್ರಂ ಭಸ್ಮಸಾತ್ ಕೃತ್ವಾ ಮಾಯಾಂ ತಾಂ ರಾಕ್ಷಸೀಂ ತದಾ |
ಅಲಂಬುಸಂ ಶರೈರ್ಘೋರೈರಭ್ಯಾಕಿರತ ಸರ್ವಶಃ |
ಪರ್ವತಂ ವಾರಿಧಾರಾಭಿಃ ಪ್ರಾವೃಷೀವ ಬಲಾಹಕಃ ||40||
ಎಲೈ ಭಾರತನೇ, ಸಾತ್ಯಕಿಯು ಅರ್ಜುನನಿಂದ ಪಡೆದ ಐಂದ್ರಾಸ್ತ್ರವನ್ನು ಪ್ರಯೋಗಿಸಿದನು. ಕೀರ್ತಿಶಾಲಿಯಾದ ಸಾತ್ಯಕಿಯಿಂದ ಪ್ರಯೋಗಿಸಲ್ಪಟ್ಟ ಆ ಅಸ್ತ್ರವು ಆ ರಾಕ್ಷಸಮಾಯೆಯನ್ನು ಸುಟ್ಟುಹಾಕಿತು ಮತ್ತು ಮೋಡವು ಮಳೆಗಾಲದಲ್ಲಿ ಪರ್ವತವನ್ನು ಜಲಧಾರೆಗಳಿಂದ ಮುಚ್ಚಿದಂತೆ ಅಲಂಬುಸನನ್ನು ಎಲ್ಲ ಕಡೆಗಳಿಂದಲೂ ಘೋರವಾದ ಬಾಣಗಳ ಧಾರೆಯಿಂದ ಪೀಡಿಸಿತು.
ತತ್ ತಥಾ ಪೀಡಿತಂ ತೇನ ಮಾಧವೇನ ಮಹಾತ್ಮನಾ |
ಪ್ರದುದ್ರಾವ ಭಯಾದ್ ರಕ್ಷೋ ಹಿತ್ವಾ ಸಾತ್ಯಕಿಮಾಹವೇ ||41||
ಮಹಾತ್ಮನಾದ ಮಾಧವನಾದ ಸಾತ್ಯಕಿಯಿಂದ ಹೀಗೆ ಪೀಡಿಸಲ್ಪಟ್ಟ ಆ ರಾಕ್ಷಸನು ಯುದ್ಧಭೂಮಿಯಲ್ಲಿ ಸಾತ್ಯಕಿಯನ್ನು ಬಿಟ್ಟು ಭಯದಿಂದ ಓಡಿಹೋದನು.
ತಮಜೇಯಂ ರಾಕ್ಷಸೇಂದ್ರಂ ಸಂಖ್ಯೇ ಮಘವತಾ ಅಪಿ |
ಶೈನೇಯಃ ಪ್ರಾಣದದ್ ಜಿತ್ವಾ ಯೋಧಾನಾಂ ತವ ಪಶ್ಯತಾಮ್ ||42||
ಇಂದ್ರನಿಗೂ ಸೋಲದಂತಹ ಅಜೇಯನಾದ ಆ ರಾಕ್ಷಸಶ್ರೇಷ್ಠನನ್ನು ಜಯಿಸಿ ನಿನ್ನ ಯೋಧರು ನೋಡುತ್ತಿರುವಂತೆಯೇ ಸಾತ್ಯಕಿಯು ಸಿಂಹನಾದವನ್ನು ಮಾಡಿದನು.
ನ್ಯಹನತ್ ತಾವಕಾಂಶ್ಚಾಪಿ ಸಾತ್ಯಕಿಃ ಸತ್ಯವಿಕ್ರಮಃ |
ನಿಶಿತೈರ್ಬಹುಭಿರ್ಬಾಣೈಸ್ತೇಽದ್ರವಂತ ಭಯಾರ್ದಿತಾಃ ||43||
ಸತ್ಯವಿಕ್ರಮನಾದ ಸಾತ್ಯಕಿಯು ಅನೇಕ ಹರಿತವಾದ ಬಾಣಗಳಿಂದ ನಿನ್ನ ಯೋಧರನ್ನೂ ಪೀಡಿಸಿದನು. ಭಯಾರ್ದಿತರಾದ ನಿನ್ನ ಯೋಧರು ಓಡಿಹೋದರು.
ಏತಸ್ಮಿನ್ನೇವ ಕಾಲೇ ತು ದ್ರುಪದಸ್ಯಾತ್ಮಜೋ ಬಲೀ |
ಧೃಷ್ಟದ್ಯುಮ್ನೋ ಮಹಾರಾಜ ತವ ಪುತ್ರಂ ಜನೇಶ್ವರಮ್ |
ಛಾದಯಾಮಾಸ ಸಮರೇ ಶರೈಃ ಸನ್ನತಪರ್ವಭಿಃ ||44||
ಎಲೈ ಮಹಾರಾಜನೇ, ಅದೇ ಸಮಯದಲ್ಲಿ ದ್ರುಪದ ಪುತ್ರನೂ, ಬಲಿಷ್ಠನೂ ಆದ ಧೃಷ್ಟದ್ಯುಮ್ನನು ಬಾಗಿದ ತುದಿಯುಳ್ಳ ಬಾಣಗಳಿಂದ ರಾಜನಾದ ನಿನ್ನ ಪುತ್ರನನ್ನು ರಣರಂಗದಲ್ಲಿ ಮುಚ್ಚಿಹಾಕಿದನು.
ಸಂಛಾದ್ಯಮಾನೋ ವಿಶಿಖೈರ್ಧೃಷ್ಟದ್ಯುಮ್ನೇನ ಭಾರತ |
ವಿವ್ಯಥೇ ನ ಚ ರಾಜೇಂದ್ರ ತವ ಪುತ್ರೋ ಜನೇಶ್ವರಃ ||45||
ಎಲೈ ಭಾರತನೇ, ರಾಜೇಂದ್ರನೇ, ಧೃಷ್ಟದ್ಯುಮ್ನನು ಪ್ರಯೋಗಿಸಿದ ಬಾಣಗಳಿಂದ ಆವರಿಸಲ್ಪಟ್ಟಿದ್ದರೂ ರಾಜನಾದ ನಿನ್ನ ಪುತ್ರನು ವ್ಯಥೆ ಪಡಲಿಲ್ಲ.
ಧೃಷ್ಟದ್ಯುಮ್ನಂ ಚ ಸಮರೇ ತೂರ್ಣಂ ವಿವ್ಯಾಧ ಸಾಯಕೈಃ |
ಷಷ್ಟ್ಯಾ ಚ ತ್ರಿಂಶತಾ ಚೈವ ತದದ್ಭುತಮಿವಾಭವತ್ ||46||
ಅವನು ಶೀಘ್ರವಾಗಿ ಯುದ್ಧದಲ್ಲಿ ಧೃಷ್ಟದ್ಯುಮ್ನನ ಮೇಲೆ ತೊಂಬತ್ತು ಬಾಣಗಳನ್ನು ಪ್ರಯೋಗಿಸಿದನು. ಅದು ಅದ್ಭುತವಾಗಿದ್ದಿತು.
ತಸ್ಯ ಸೇನಾಪತಿಃ ಕ್ರುದ್ಧೋ ಧನುಶ್ಚಿಚ್ಛೇದ ಮಾರಿಷ |
ಹಯಾಂಶ್ಚ ಚತುರಃ ಶೀಘ್ರಂ ನಿಜಘಾನ ಮಹಾರಥಃ |
ಶರೈಶ್ಚೈನಂ ಸುನಿಶಿತೈಃ ಕ್ಷಿಪ್ರಂ ವಿವ್ಯಾಧ ಸಪ್ತಭಿಃ ||47||
ಎಲೈ ಪೂಜ್ಯನೇ, ಸೇನಾಪತಿಯಾದ ಧೃಷ್ಟದ್ಯುಮ್ನನು ಕ್ರುದ್ಧನಾಗಿ ದುರ್ಯೋಧನನ ಧನುಸ್ಸನ್ನು ಕತ್ತರಿಸಿ ಅವನ ರಥದ ನಾಲ್ಕು ಅಶ್ವಗಳನ್ನು ಕೊಂದನು. ಮಹಾರಥನಾದ ಅವನು ಅತ್ಯಂತ ಹರಿತವಾದ ಏಳು ಬಾಣಗಳಿಂದ ಶೀಘ್ರವಾಗಿ ಅವನನ್ನು ಪೀಡಿಸಿದನು.
ಸ ಹತಾಶ್ವಾತ್ ಮಹಾಬಾಹುರವಪ್ಲುತ್ಯ ರಥಾದ್ ಬಲೀ |
ಪದಾತಿರಸಿಮುದ್ಯಮ್ಯ ಪ್ರಾದ್ರವತ್ ಪಾರ್ಷತಂ ಪ್ರತಿ ||48||
ಬಲಿಷ್ಠನಾದ, ಮಹಾಬಾಹುವಾದ ದುರ್ಯೋಧನನಾದರೋ ಅಶ್ವಗಳು ನಾಶಹೊಂದಿದ ರಥದಿಂದ ಕೆಳಗೆ ಹಾರಿ ಕೈಯಲ್ಲಿ ಕತ್ತಿಯನ್ನು ಹಿಡಿದು ಪದಾತಿಯಾಗಿ ಧೃಷ್ಟದ್ಯುಮ್ನನ ಕಡೆಗೆ ವೇಗದಿಂದ ಸಾಗಿದನು.
ಶಕುನಿಸ್ತಂ ಸಮಭ್ಯೇತ್ಯ ರಾಜಗೃದ್ಧೀ ಮಹಾಬಲಃ |
ರಾಜಾನಂ ಸರ್ವಲೋಕಸ್ಯ ರಥಮಾರೋಪಯತ್ ಸ್ವಕಮ್ ||49||
ಮಹಾಬಲನೂ, ರಾಜನ ಪ್ರಾಣವನ್ನು ಉಳಿಸಲು ಬಯಸುವವನೂ ಆದ ಶಕುನಿಯು ಅವನ ಸಮೀಪಕ್ಕೆ ಬಂದು ಎಲ್ಲ ಯೋಧರು ನೋಡುತ್ತಿರುವಂತೆಯೇ ಅವನನ್ನು ತನ್ನ ರಥಕ್ಕೆ ಏರಿಸಿದನು.

ತತೋ ನೃಪಂ ಪರಾಜಿತ್ಯ ಪಾರ್ಷತಃ ಪರವೀರಹಾ |
ನ್ಯಹನತ್ ತಾವಕಂ ಸೈನ್ಯಂ ವಜ್ರಪಾಣಿರಿವಾಸುರಮ್ ॥50॥
ಪರವೀರಘಾತಕನಾದ ಧೃಷ್ಟದ್ಯುಮ್ನನು ರಾಜನಾದ ದುರ್ಯೋಧನನನ್ನು ಸೋಲಿಸಿ ವಜ್ರಪಾಣಿಯಾದ ಇಂದ್ರನು ಅಸುರರ ಸೈನ್ಯವನ್ನು ನಾಶಮಾಡಿದಂತೆ ನಿನ್ನ ಸೈನ್ಯವನ್ನು ನಾಶಮಾಡಿದನು.
ಕೃತವರ್ಮಾ ರಣೇ ಭೀಮಂ ಶರೈರಾರ್ಛನ್ಮಹಾರಥಮ್ |
ಪ್ರಚ್ಛಾದಯಾಮಾಸ ಚ ತಂ ಮಹಾಮೇಘೋ ರವಿಂ ಯಥಾ ॥51॥
ಕೃತವರ್ಮನು ಯುದ್ಧದಲ್ಲಿ ಮಹಾರಥನಾದ ಭೀಮನನ್ನು ಸಮೀಪಿಸಿ ದೊಡ್ಡ ಮೋಡವು ಸೂರ್ಯನನ್ನು ಮುಚ್ಚುವಂತೆ ತನ್ನ ಬಾಣಗಳಿಂದ ಅವನನ್ನು ಮುಚ್ಚಿದನು.
ತತಃ ಪ್ರಹಸ್ಯ ಸಮರೇ ಭೀಮಸೇನಃ ಪರಂತಪಃ |
ಪ್ರೇಷಯಾಮಾಸ ಸಂಕ್ರುದ್ಧಃ ಸಾಯಕಾನ್ ಕೃತವರ್ಮಣೇ ॥52॥
ಪರಂತಪನಾದ ಭೀಮಸೇನನು ನಕ್ಕು ಆಗ ಯುದ್ಧದಲ್ಲಿ ಬಹಳ ಕೋಪಗೊಂಡು ಕೃತವರ್ಮನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ತೈರರ್ದ್ಯಮಾನೋಽತಿರಥಃ ಸಾತ್ವತಃ ಶಸ್ತ್ರಕೋವಿದಃ |
ನಾಕಂಪತ ಮಹಾರಾಜ ಭೀಮಂ ಚಾರ್ಛಚ್ಚಿತೈಃ ಶರೈಃ ॥53॥
ಎಲೈ ಮಹಾರಾಜನೇ, ಸಾತ್ವತ ಕುಲದಲ್ಲಿ ಜನಿಸಿದವನೂ, ಶಸ್ತ್ರಪಾರಂಗತನೂ, ಅತಿರಥನೂ ಆದ ಕೃತವರ್ಮನು ಆ ಬಾಣಗಳಿಂದ ಪೀಡಿಸಲ್ಪಟ್ಟರೂ ಅಲುಗಾಡಲಿಲ್ಲ ಮತ್ತು ಹರಿತವಾದ ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸಿದನು.
ತಸ್ಯಾಶ್ವಾಂಶ್ಚತುರೋ ಹತ್ವಾ ಭೀಮಸೇನೋ ಮಹಾಬಲಃ |
ಸಾರಥಿಂ ಪಾತಯಾಮಾಸ ಧ್ವಜಂ ಚ ಸುಪರಿಷ್ಕೃತಮ್ ॥54॥
ಮಹಾಬಲನಾದ ಭೀಮಸೇನನು ಅವನ ರಥದ ನಾಲ್ಕು ಅಶ್ವಗಳನ್ನು ಕೊಂದು, ಅಲಂಕೃತವಾದ ಅವನ ರಥಧ್ವಜವನ್ನು ಮತ್ತು ಸಾರಥಿಯನ್ನು ಕೆಳಗೆ ಉರುಳಿಸಿದನು.
ಶರೈರ್ಬಹುವಿಧೈಶ್ಚೈನಮಾಚಿನೋತ್ ಪರವೀರಹಾ |
ಶಕಲೀಕೃತಸರ್ವಾಂಗಃ ಶ್ವಾವಿದ್ವತ್ ಸಮದೃಶ್ಯತ ॥55॥
ಪರವೀರಘಾತಕನಾದ ಭೀಮಸೇನನು ಅನೇಕ ವಿಧವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ಆ ಬಾಣಗಳೆಲ್ಲವೂ ತನ್ನ ಶರೀರದ ಸರ್ವಾಂಗಗಳಲ್ಲಿ ನಾಟಿದ ಕೃತವರ್ಮನು ಮುಳ್ಳುಹಂದಿಯಂತೆ ಕಂಡುಬಂದನು.
ಹತಾಶ್ವಾತ್ ತು ರಥಾತ್ ತೂರ್ಣಂ ವೃಷಕಸ್ಯ ರಥಂ ಯಯೌ |
ಸ್ಯಾಲಸ್ಯ ತೇ ಮಹಾರಾಜ ತವ ಪುತ್ರಸ್ಯ ಪಶ್ಯತಃ ॥56॥
ಎಲೈ ಮಹಾರಾಜನೇ, ತನ್ನ ರಥದ ಅಶ್ವಗಳು ಹತವಾಗುತ್ತಿರಲು ದುರ್ಯೋಧನನು ನೋಡುತ್ತಿರುವಂತೆಯೇ ಕೃತವರ್ಮನು ಶೀಘ್ರವಾಗಿ ಶಕುನಿಯ ತಮ್ಮನೂ, ನಿನ್ನ ಭಾವಮೈದುನನೂ ಆದ ವೃಷಕನ ರಥವನ್ನು ಏರಿದನು.
ಭೀಮಸೇನೋಽಪಿ ಸಂಕ್ರುದ್ಧಸ್ತವ ಸೈನ್ಯಮುಪಾದ್ರವತ್ |
ನಿಜಘಾನ ಚ ಸಂಕ್ರುದ್ಧೋ ದಂಡಪಾಣಿರಿವಾಂತಕಃ ॥57॥
ಭೀಮಸೇನನೂ ಸಹ ಬಹಳ ಕೋಪಗೊಂಡು ನಿನ್ನ ಸೈನ್ಯವನ್ನು ಸಮೀಪಿಸಿ ದಂಡಪಾಣಿಯಾದ ಯಮನಂತೆ ಸಂಹರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂಬತ್ತನೆಯ ಅಧ್ಯಾಯ
ಇರಾವಂತನ ಮತ್ತು ಭಗದತ್ತನ ಪರಾಕ್ರಮ.
ನಕುಲ-ಸಹದೇವರನಿಂದ ಶಲ್ಯನ ಪರಾಭವ.
ಧೃತರಾಷ್ಟ್ರಃ
ಬಹೂನೀಹ ವಿಚಿತ್ರಾಣಿ ದ್ವೈರಥಾನಿ ಸ್ಮ ಸಂಜಯ |
ಪಾಂಡೂನಾಂ ಮಾಮಕೈಃ ಸಾರ್ಧಮಶ್ರೌಷಂ ತವ ಜಲ್ಪತಃ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ನೀನು ಮಾತನಾಡುತ್ತಿರುವಂತೆ ನಿನ್ನಿಂದ ಪಾಂಡವರಿಗೂ ಮತ್ತು ನನ್ನವರಿಗೂ ನಡೆದ ವಿಚಿತ್ರವಾದ ಅನೇಕ ದ್ವಂದ್ವ ಯುದ್ಧಗಳನ್ನು ಕೇಳಿದೆನು.
ನ ಚೈವ ಮಾಮಕಂ ಕಂಚಿದ್ ಹೃಷ್ಟಂ ಶಂಸಸಿ ಸಂಜಯ |
ನಿತ್ಯಂ ಪಾಂಡುಸುತಾನ್ ಹೃಷ್ಟಾನಭಗ್ನಾಂಶ್ಚೈವ ಶಂಸಸಿ ॥2॥
ಎಲೈ ಸಂಜಯನೇ, ನನ್ನವರು ಯಾರೂ ಸಂತೋಷದಿಂದಿದ್ದಾರೆಂದು ನೀನು ಹೇಳಲಿಲ್ಲ. ಪಾಂಡವರು ಯಾವಾಗಲೂ ಸಂತೋಷದಿಂದಿದ್ದಾರೆಂದೂ, ಭಗ್ನರಾಗಿಲ್ಲವೆಂದೂ ಹೇಳುತ್ತಿದ್ದೀಯೆ.
ಜೀಯಮಾನಾನ್ ವಿಮನಸೋ ಮಾಮಕಾನ್ ವಿಗತೌಜಸಃ |
ವದಸೇ ಸಂಯುಗೇ ಸೂತ ದಿಷ್ಟಮೇತದಸಂಶಯಮ್ ॥3॥
ಎಲೈ ಸೂತನೇ, ನನ್ನವರು ಸಾಮರ್ಥ್ಯಹೀನರೆಂದೂ, ಬೇಸರಗೊಂಡವರೆಂದೂ ಮತ್ತು ಯುದ್ಧದಲ್ಲಿ ಪರಾಭವಗೊಳ್ಳುವವರೆಂದೂ

ಹೇಳುತ್ತಿದ್ದೀಯೆ. ಎಲೈ ಸೂತನೇ, ಇದು ನಿಶ್ಚಯವಾಗಿ ವಿಧಿಯ ನಿಯತಿಯೇ ಸರಿ.
ಸಂಜಯಃ
ಯಥಾಶಕ್ತಿ ಯಥೋತ್ಸಾಹಂ ಯುದ್ಧೇ ಚೇಷ್ಟಂತಿ ತಾವಕಾಃ |
ದರ್ಶಯಾನಾಃ ಪರಂ ಶಕ್ತ್ಯಾ ಪೌರುಷಂ ಪುರುಷರ್ಷಭ ||4||
ಸಂಜಯ ಎಲೈ ಪುರುಷಶ್ರೇಷ್ಠನೇ, ನಿನ್ನವರು ತಮ್ಮ ಶಕ್ತಿಗೆ ಅನುಗುಣವಾಗಿ, ಉತ್ಸಾಹಕ್ಕೆ ಅನುಗುಣವಾಗಿ, ತಮ್ಮ ಶಕ್ತಿಯನ್ನು ಮೀರಿ ಪರಾಕ್ರಮವನ್ನು ತೋರಿಸುತ್ತಾ ಯುದ್ಧವನ್ನು ಮಾಡುತ್ತಿದ್ದಾರೆ.
ಗಂಗಾಯಾಃ ಸುರನದ್ಯಾ ವೈ ಸ್ವಾದುಭೂತಂ ಯಥೋದಕಮ್ |
ಮಹೋದಧಿಗುಣಾಭ್ಯಾಸಾಲ್ಲವಣತ್ವಂ ನಿಗಚ್ಛತಿ ||5||
ತಥಾ ತತ್ಪೌರುಷಂ ರಾಜಂಸ್ತಾವಕಾನಾಂ ಮಹಾತ್ಮನಾಮ್ |
ಪ್ರಾಪ್ಯ ಪಾಂಡುಸುತಾನ್ ವೀರಾನ್ ವ್ಯರ್ಥಂ ಭವತಿ ಸಂಯುಗೇ ||6||
ಗಂಗೆಯ ಸಿಹಿಯಾದ ನೀರು ಸಮುದ್ರವನ್ನು ಸೇರಿ ಹೇಗೆ ಉಪ್ಪಾಗುತ್ತದೆಯೋ ಅದರಂತೆ ಎಲೈ ರಾಜನೇ, ಮಹಾತ್ಮರಾದ ನಿನ್ನ ಮಕ್ಕಳ ಪೌರುಷವು ಯುದ್ಧದಲ್ಲಿ ವೀರರಾದ ಪಾಂಡವರನ್ನು ಸೇರಿ ವ್ಯರ್ಥವಾಗುತ್ತದೆ.
ಘಟಮಾನಾನ್ ಯಥಾಶಕ್ತಿ ಕುರ್ವಾಣಾನ್ ಕರ್ಮ ದುಷ್ಕರಮ್ |
ನ ದೋಷೇಣ ಕುರುಶ್ರೇಷ್ಠ ಕೌರವಾನ್ ಗಂತುಮರ್ಹಸಿ ||7||
ಎಲೈ ಕುರುಶ್ರೇಷ್ಠನೇ, ತಮ್ಮ ಶಕ್ತಿಗೆ ಅನುಗುಣವಾಗಿ ದುಷ್ಕರವಾದ ಕಾರ್ಯವನ್ನು ಮಾಡುತ್ತಿರುವ ಕೌರವರನ್ನು ನೀನು ದೋಷ ದೃಷ್ಟಿಯಿಂದ ಎಣಿಸಬೇಡ.
ತವಾಪರಾಧಾತ್ ಸುಮಹಾನ್ ಸಪುತ್ರಸ್ಯ ವಿಶಾಂಪತೇ |
ಪೃಥಿವ್ಯಾಃ ಪ್ರಕ್ಷಯೋ ಘೋರೋ ಯಮರಾಷ್ಟ್ರವಿವರ್ಧನಃ ||8||
ಎಲೈ ರಾಜನೇ, ಪುತ್ರರಿಂದ ಸಹಿತನಾದ ನಿನ್ನ ಮಹಾಪರಾಧದಿಂದ ಯಮರಾಷ್ಟ್ರ ವರ್ಧನವಾದ ಭೂಮಿಯ ಘೋರವಾದ ವಿನಾಶವು ಪ್ರಾಪ್ತವಾಗಿದೆ.
ಆತ್ಮದೋಷಾತ್ ಸಮುತ್ಪನ್ನಂ ಶೋಚಿತುಂ ನಾರ್ಹಸೇ ನೃಪ |
ನ ಹಿ ರಕ್ಷಂತಿ ರಾಜಾನಃ ಸರ್ವಾರ್ಥಾನ್ ನಾಪಿ ಜೀವಿತಮ್ ||9||
ಎಲೈ ರಾಜನೇ, ನಿನ್ನ ದೋಷದಿಂದ ಉಂಟಾದ ಈ ಸಂಕಟವನ್ನು ಕುರಿತು ನೀನು ಶೋಕಪಡುವುದು ಸರಿಯಲ್ಲ. ರಾಜರುಗಳು ಎಲ್ಲಾ ವಸ್ತುಗಳನ್ನಾಗಲೀ ಅಥವಾ ಎಲ್ಲರ ಜೀವಿತವನ್ನಾಗಲೀ ರಕ್ಷಿಸುವುದಿಲ್ಲವಷ್ಟೆ?
ಯುದ್ಧೇ ಸುಕೃತಿನಾಂ ಲೋಕಾನಿಚ್ಛಂತೋ ವಸುಧಾಧಿಪಾಃ |
ಚಮೂಂ ವಿಗಾಹ್ಯ ಯುಧ್ಯಂತೇ ನಿತ್ಯಂ ಸ್ವರ್ಗಪರಾಯಣಾಃ ||10||
ವಸುಧಾಧಿಪರು ಪುಣ್ಯಮಾಡಿದವರ ಲೋಕಗಳನ್ನು ಯುದ್ಧರೂಪವಾದ ಕರ್ಮದಿಂದ ಬಯಸುತ್ತಾ, ಯಾವಾಗಲೂ ಸ್ವರ್ಗಪರಾಯಣರಾಗಿ ಶತ್ರುಸೈನ್ಯವನ್ನು ಪ್ರವೇಶಿಸಿ ಯುದ್ಧವನ್ನು ಮಾಡುತ್ತಿದ್ದಾರೆ.
ಪೂರ್ವಾಹ್ಣೇ ತು ಮಹಾರಾಜ ಪ್ರಾವರ್ತತ ಜನಕ್ಷಯಃ |
ತನ್ಮಮೈಕಮನಾ ಭೂತ್ವಾ ಶೃಣು ದೇವಾಸುರೋಪಮಮ್ ||11||
ಎಲೈ ಮಹಾರಾಜನೇ, ಆ ದಿನ ಪ್ರಾತಃಕಾಲದಲ್ಲಿ ಯೋಧರ ದೊಡ್ಡ ವಿನಾಶವು ಉಂಟಾಯಿತು. ದೇವಾಸುರ ಸಂಗ್ರಾಮವನ್ನು ಹೋಲುವ ಆ ವಿನಾಶವನ್ನು ಏಕಾಗ್ರವಾದ ಮನಸ್ಸಿನಿಂದ ಕೇಳುವವನಾಗು.
ಆವಂತ್ಯೌ ತು ಮಹೇಷ್ವಾಸೌ ಮಹಾತ್ಮಾನೌ ಮಹಾಬಲೌ |
ಇರಾವಂತಮಭಿಪ್ರೇಕ್ಷ್ಯ ಸಮೇಯಾತಾಂ ರಣೋತ್ಕಟೌ |
ತೇಷಾಂ ಪ್ರವವೃತೇ ಯುದ್ಧಂ ತುಮುಲಂ ಲೋಮಹರ್ಷಣಮ್ ||12||
ಮಹಾಬಲರೂ, ಮಹಾಧನುರ್ಧಾರಿಗಳೂ, ರಣೋತ್ಕಟರೂ, ಮಹಾತ್ಮರೂ ಆದ ಅವಂತಿ ದೇಶದ ಸಹೋದರರು ಇರಾವಂತನನ್ನು ಉದ್ದೇಶಿಸಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಅವರಿಗೆ ತೀವ್ರವೂ ಮತ್ತು ಲೋಮಹರ್ಷಣವೂ ಆದ ಯುದ್ಧವು ಜರುಗಿತು.
ಇರಾವಾಂಸ್ತು ಸುಸಂಕ್ರುದ್ಧೋ ಭ್ರಾತರೌ ದೇವರೂಪಿಣೌ |
ವಿವ್ಯಾಧ ನಿಶಿತೈಸ್ತೂರ್ಣಂ ಶರೈಃ ಸನ್ನತಪರ್ವಭಿಃ |
ತಾವೇನಂ ಪ್ರತ್ಯವಿಧ್ಯೇತಾಂ ಸಮರೇ ಚಿತ್ರಯೋಧಿನೌ ||13||
ಬಹಳ ಕ್ರೋಧಗೊಂಡ ಇರಾವಂತನಾದರೋ ದೇವತೆಗಳಂತೆ ಸುಂದರರಾಗಿದ್ದ ಆ ಸಹೋದರರಿಬ್ಬರ ಮೇಲೆ ಬಾಗಿದ ತುದಿಯುಳ್ಳ, ಹರಿತವಾದ ಬಾಣಗಳ ಮಳೆಯನ್ನು ಶೀಘ್ರವಾಗಿ ಕರೆದನು. ವಿಚಿತ್ರವಾಗಿ ಯುದ್ಧವನ್ನು ಮಾಡುವ ಅವರಿಬ್ಬರೂ ಅವನ ಮೇಲೆ ಪ್ರತಿಯಾಗಿ ಬಾಣಗಳನ್ನು ಪ್ರಯೋಗಿಸಿದರು.
ಯುಧ್ಯತಾಂ ಹಿ ತಥಾ ರಾಜನ್ ವಿಶೇಷೋ ನ ವ್ಯದೃಶ್ಯತ |
ಯತತಾಂ ಶತ್ರುನಾಶಾಯ ಕೃತಪ್ರತಿಕೃತೈಷಿಣಾಮ್ ||14||
ಎಲೈ ರಾಜನೇ, ಶತ್ರುನಾಶವನ್ನು ಬಯಸಿ ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತೀಕಾರವನ್ನು ಮಾಡಿ ಯುದ್ಧವನ್ನು ಮಾಡುತ್ತಿದ್ದ ಅವರಲ್ಲಿ ಯಾವ ವೈಲಕ್ಷಣ್ಯವೂ ಕಂಡುಬರಲಿಲ್ಲ.
ಇರಾವಾಂಸ್ತು ತತೋ ರಾಜನ್ನನುವಿಂದಸ್ಯ ಸಾಯಕೈಃ |
ಚತುರ್ಭಿಶ್ಚತುರೋ ವಾಹಾನನಯದ್ ಯಮಸಾದನಮ್ ||15||

ಎಲೈ ರಾಜನೇ, ಆಗ ಇರಾವಂತನು ನಾಲ್ಕು ಬಾಣಗಳಿಂದ ಅನುವಿಂದನ ರಥದ ನಾಲ್ಕು ಅಶ್ವಗಳನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ಭಲ್ಲಾಭ್ಯಾಂ ಚ ಸುತೀಕ್ಷ್ಣಾಭ್ಯಾಂ ಧನುಃ ಕೇತುಂ ಚ ಮಾರಿಷ |
ಚಿಚ್ಛೇದ ಸಮರೇ ರಾಜನ್ ತದದ್ಭುತಮಿವಾಭವತ್ ॥16॥
ಎಲೈ ರಾಜನೇ, ಪೂಜ್ಯನೇ, ಹರಿತವಾದ ಎರಡು ಭಲ್ಲಗಳಿಂದ ಯುದ್ಧದಲ್ಲಿ ಅವನ ಧನುಸ್ಸನ್ನು ಮತ್ತು ಧ್ವಜವನ್ನು ಕತ್ತರಿಸಿದನು. ಅದು ಅದ್ಭುತವಾಗಿದ್ದಿತು.
ತ್ಯಕ್ತ್ವಾನುವಿಂದೋಽಥ ರಥಂ ವಿಂದಸ್ಯ ರಥಮಾಸ್ಥಿತಃ |
ಧನುರ್ಗೃಹೀತ್ವಾ ನವಮಂ ಭಾರಸಾಧನಮುತ್ತಮಮ್ ॥17॥
ತಾವೇಕಸ್ಥೌ ರಣೇ ವೀರಾವಾವಂತ್ಯೌ ರಥಿನಾಂ ವರೌ |
ಶರಾನ್ ಮುಮುಚತುಸ್ತೂರ್ಣಮಿರಾವತಿ ಮಹಾತ್ಮನಿ ॥18॥
ಅನಂತರ ಅನುವಿಂದನಾದರೋ ತನ್ನ ರಥವನ್ನು ಬಿಟ್ಟು ವಿಂದನ ರಥವನ್ನು ಏರಿ ಭಾರಸಾಧನವೂ ಶ್ರೇಷ್ಠವೂ ಆದ ಧನುಸ್ಸನ್ನು ತೆಗೆದುಕೊಂಡನು. ಅವಂತಿ ದೇಶದ ವೀರರಾದ, ರಥಿಶ್ರೇಷ್ಠರಾದ ಅವರಿಬ್ಬರೂ ಒಂದೇ ರಥದಲ್ಲಿ ನೆಲೆಸಿ ಶೀಘ್ರವಾಗಿ ಮಹಾತ್ಮನಾದ ಇರಾವಂತನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದರು.
ತಾಭ್ಯಾಂ ಮುಕ್ತಾ ಮಹಾವೇಗಾಃ ಶರಾಃ ಕಾಂಚನಭೂಷಣಾಃ |
ದಿವಾಕರಪಥಂ ಪ್ರಾಪ್ಯ ಛಾದಯಾಮಾಸುರಂಬರಮ್ ॥19॥
ಅವರಿಬ್ಬರೂ ಪ್ರಯೋಗಿಸಿದ ಮಹಾವೇಗವುಳ್ಳ, ಸುವರ್ಣಭೂಷಿತವಾದ ಬಾಣಗಳು ಆಕಾಶಮಾರ್ಗವನ್ನು ಸೇರಿ ಆಕಾಶವನ್ನು ಮುಚ್ಚಿಹಾಕಿದವು.
ಇರಾವಾಂಸ್ತು ತತಃ ಕ್ರುದ್ಧೋ ಭ್ರಾತರೌ ತೌ ಮಹಾರಥೌ |
ವವರ್ಷ ಶರವರ್ಷೇಣ ಸಾರಥಿಂ ಚಾಪ್ಯಪಾತಯತ್ ॥20॥
ಇರಾವಂತನಾದರೋ ಆಗ ಕ್ರುದ್ಧನಾಗಿ ಮಹಾರಥರಾದ ಆ ಇಬ್ಬರು ಸಹೋದರರ ಮೇಲೆ ಬಾಣಗಳ ಮಳೆಯನ್ನು ಸುರಿಸಿ ಅವರ ಸಾರಥಿಯನ್ನು ಕೆಡವಿದನು.
ತಸ್ಮಿನ್ ನಿಪತಿತೇ ಭೂಮೌ ಗತಸತ್ತ್ವೇಽಥ ಸಾರಥೌ |
ರಥಃ ಪ್ರದುದ್ರಾವ ದಿಶಃ ಸಮುದ್ಭ್ರಾಂತಹಯಸ್ತತಃ ॥21॥
ಅವರ ಸಾರಥಿಯು ಪ್ರಾಣವನ್ನು ಕಳೆದುಕೊಂಡು ಭೂಮಿಯ ಮೇಲೆ ಬೀಳುತ್ತಿರಲು ರಥದ ಅಶ್ವಗಳು ಗಾಬರಿಗೊಂಡು ತಮ್ಮ ಮನಸ್ಸಿಗೆ ಬಂದ ದಿಕ್ಕಿಗೆ ಓಡಿದವು.
ತೌ ಸ ಜಿತ್ವಾ ಮಹಾರಾಜ ನಾಗರಾಜಸುತಾಸುತಃ |
ಪೌರುಷಂ ಖ್ಯಾಪಯಂಸ್ತೂರ್ಣಂ ವ್ಯಧಮತ್ ತವ ವಾಹಿನೀಮ್ ॥22॥
ಎಲೈ ಮಹಾರಾಜನೇ, ನಾಗರಾಜನ ಮಗಳಾದ ಉಲೂಪಿಯ ಮಗನಾದ ಅವನು ಅವರಿಬ್ಬರನ್ನೂ ಜಯಿಸಿ ತನ್ನ ಪೌರುಷವನ್ನು ಪ್ರಕಟಪಡಿಸುತ್ತಾ ಶೀಘ್ರವಾಗಿ ನಿನ್ನ ಸೈನ್ಯವನ್ನು ನಾಶಗೊಳಿಸಿದನು.
ಸಾ ವಧ್ಯಮಾನಾ ಸಮರೇ ಧಾರ್ತರಾಷ್ಟ್ರೀ ಮಹಾಚಮೂಃ |
ವೇಗಾನ್ ಬಹುವಿಧಾಂಶ್ಚಕ್ರೇ ವಿಷಂ ಪೀತ್ವೇವ ಮಾನವಃ ॥23॥
ಯುದ್ಧದಲ್ಲಿ ಅವನಿಂದ ಪೀಡಿಸಲ್ಪಟ್ಟ ನಿನ್ನ ದೊಡ್ಡ ಸೈನ್ಯವು ವಿಷವನ್ನು ಕುಡಿದ ಮನುಷ್ಯನಂತೆ ಅನೇಕ ರೀತಿಯಲ್ಲಿ ಹಿಂದೆ-ಮುಂದೆ ಮತ್ತು ಪಾರ್ಶ್ವಗಳಲ್ಲಿ ಓಡಿಹೋಯಿತು.
ಹೈಡಿಂಬೋ ರಾಕ್ಷಸೇಂದ್ರಸ್ತು ಭಗದತ್ತಂ ಸಮಾದ್ರವತ್ |
ರಥೇನಾದಿತ್ಯವರ್ಣೇನ ಸಧ್ವಜೇನ ಮಹಾಬಲಃ ॥24॥
ರಾಕ್ಷಸಶ್ರೇಷ್ಠನಾದ, ಮಹಾಬಲನಾದ ಘಟೋತ್ಕಚನಾದರೋ ಧ್ವಜದಿಂದ ಕೂಡಿದ ಆದಿತ್ಯವರ್ಣದ ರಥದಲ್ಲಿ ಭಗದತ್ತನನ್ನು ಎದುರಿಸಿದನು.
ತತಃ ಪ್ರಾಗ್ಜ್ಯೋತಿಷೋ ರಾಜಾ ನಾಗರಾಜಂ ಸಮಾಸ್ಥಿತಃ |
ಯಥಾ ವಜ್ರಧರಃ ಪೂರ್ವಂ ಸಂಗ್ರಾಮೇ ತಾರಕಾಮಯೇ ॥25॥
ಆಗ ರಾಜನಾದ ಭಗದತ್ತನು ಗಜರಾಜನನ್ನು ಏರಿ ದೇವಾಸುರ ಸಂಗ್ರಾಮದಲ್ಲಿ ಕಣ್ಣುಗಳಿಗೆ ಹಿಂಸೆಯನ್ನು ಉಂಟುಮಾಡುವ ಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನಂತೆ ಮುಂದೆ ಬಂದನು.
ತತ್ರ ದೇವಾಃ ಸಗಂಧರ್ವಾ ಋಷಯಶ್ಚ ಸಮಾಗತಾಃ |
ವಿಶೇಷಂ ನ ಸ್ಮ ವಿವಿದುರ್ಹೈಡಿಂಬಭಗದತ್ತಯೋಃ ॥26॥
ಘಟೋತ್ಕಚ ಮತ್ತು ಭಗದತ್ತರು ಯುದ್ಧ ಮಾಡುವಾಗ ಅಲ್ಲಿ ಬಂದ ದೇವತೆಗಳಿಗಾಗಲೀ, ಗಂಧರ್ವರಿಗಾಗಲೀ, ಋಷಿಗಳಿಗಾಗಲೀ ಅವರಿಬ್ಬರಲ್ಲಿ ಯಾವ ವಿಶೇಷವೂ ತಿಳಿಯಲಿಲ್ಲ.
ಯಥಾ ಸುರಪತಿಃ ಶಕ್ರಸ್ತ್ರಾಸಯಾಮಾಸ ದಾನವಾನ್ |
ತಥೈವ ಸಮರೇ ರಾಜಂಸ್ತ್ರಾಸಯಾಮಾಸ ಪಾಂಡವಾನ್ ॥27॥
ಎಲೈ ರಾಜನೇ, ಸುರಪತಿಯಾದ ಇಂದ್ರನು ದಾನವರನ್ನು ಹೆದರಿಸಿದಂತೆ ಯುದ್ಧದಲ್ಲಿ ಭಗದತ್ತನು ಪಾಂಡವರಿಗೆ ಭಯವನ್ನು ಉಂಟುಮಾಡಿದನು.
ತೇನ ವಿದ್ರಾವ್ಯಮಾಣಾಸ್ತೇ ಪಾಂಡವಾಃ ಸರ್ವತೋದಿಶಮ್ |

ತ್ರಾತಾರಂ ನಾಭ್ಯವಿಂದಂತ ಸ್ವೇಷ್ವನೀಕೇಷು ಭಾರತ ॥28॥
ಎಲೈ ಭಾರತನೇ, ಅವನಿಂದ ಹೆದರಿಸಲ್ಪಟ್ಟು ದಿಕ್ಕು-ದಿಕ್ಕುಗಳಿಗೆ ಓಡುವ ಪಾಂಡವಯೋಧರಿಗೆ ಆಗ ತಮ್ಮ ಸೈನ್ಯದಲ್ಲಿ ಯಾವ ರಕ್ಷಕರೂ ದೊರೆಯಲಿಲ್ಲ.
ಭೈಮಸೇನಿಂ ರಥಸ್ಥಂ ತು ತತ್ರಾಪಶ್ಯಾಮ ಭಾರತ |
ಶೇಷಾ ವಿಮನಸೋ ಭೂತ್ವಾ ಪ್ರಾದ್ರವಂತ ಮಹಾರಥಾಃ ॥29॥
ಎಲೈ ಭಾರತನೇ, ಘಟೋತ್ಕಚನೊಬ್ಬನು ಅಲ್ಲಿ ರಥದಲ್ಲಿದ್ದುದನ್ನು ನಾವು ನೋಡಿದೆವು. ಉಳಿದ ಮಹಾರಥರು ಹೆದರಿ ಓಡಿಹೋದರು.
ನಿವೃತ್ತೇಷು ತು ಪಾಂಡೂನಾಂ ಪುನಃ ಸೈನ್ಯೇಷು ಭಾರತ |
ಆಸೀತ್ ನಿಸ್ವಾನಕೋ ಘೋರಸ್ತವ ಸೈನ್ಯೇಷು ಸಂಯುಗೇ ॥30॥
ಎಲೈ ಭಾರತನೇ, ಪಾಂಡವರ ಸೈನ್ಯಗಳು ಹೀಗೆ ಓಡಿಹೋದ ಮೇಲೆ ಯುದ್ಧದಲ್ಲಿ ನಿನ್ನ ಸೈನ್ಯದಲ್ಲಿ ಘೋರವಾದ ದೊಡ್ಡ ಹರ್ಷಶಬ್ದವು ಉಂಟಾಯಿತು.
ಘಟೋತ್ಕಚಸ್ತತೋ ರಾಜನ್ ಭಗದತ್ತಂ ಮಹಾರಣೇ |
ಶರೈಃ ಪ್ರಚ್ಛಾದಯಾಮಾಸ ಮೇರುಂ ಗಿರಿಮಿವಾಂಬುದಃ ॥31॥
ಎಲೈ ರಾಜನೇ, ಆಗ ಆ ಮಹಾಯುದ್ಧದಲ್ಲಿ ಘಟೋತ್ಕಚನು ಭಗದತ್ತನನ್ನು ಮೋಡವು ಮೇರುಪರ್ವತವನ್ನು ಮುಚ್ಚಿದಂತೆ ತನ್ನ ಬಾಣಗಳಿಂದ ಮುಚ್ಚಿದನು.
ನಿಹತ್ಯ ತಾನ್ ಶರಾನ್ ರಾಜಾ ರಾಕ್ಷಸಸ್ಯ ಧನುಶ್ಚ್ಯುತಾನ್ |
ಭೈಮಸೇನಿಂ ರಣೇ ತೂರ್ಣಂ ಸರ್ವಮರ್ಮಸ್ವತಾಡಯತ್ ॥32॥
ರಾಜನಾದ ಭಗದತ್ತನು ಘಟೋತ್ಕಚನ ಧನುಸ್ಸಿನಿಂದ ಹೊಮ್ಮಿದ ಆ ಬಾಣಗಳನ್ನು ನಿವಾರಿಸಿ ಘಟೋತ್ಕಚನನ್ನು ಶೀಘ್ರವಾಗಿ ಎಲ್ಲ ಮರ್ಮಗಳಲ್ಲಿಯೂ ಹೊಡೆದನು.
ಸ ತಾಡ್ಯಮಾನೋ ಬಹುಭಿಃ ಶರೈಃ ಸನ್ನತಪರ್ವಭಿಃ |
ನ ವಿವ್ಯಥೇ ರಾಕ್ಷಸೇಂದ್ರೋ ಭಿದ್ಯಮಾನ ಇವಾಚಲಃ ॥33॥
ಬಾಗಿದ ತುದಿಯುಳ್ಳ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟರೂ ರಾಕ್ಷಸೇಂದ್ರನಾದ ಘಟೋತ್ಕಚನು ಸೀಳಲ್ಪಟ್ಟ ಪರ್ವತದಂತೆ ವ್ಯಥೆಯನ್ನು ಹೊಂದಲಿಲ್ಲ.
ತಸ್ಯ ಪ್ರಾಗ್ಜ್ಯೋತಿಷಃ ಕ್ರುದ್ಧಸ್ತೋಮರಾನ್ ಸ ಚತುರ್ದಶ |
ಪ್ರೇಷಯಾಮಾಸ ಸಮರೇ ತಾಂಶ್ಚ ಚಿಚ್ಛೇದ ರಾಕ್ಷಸಃ ॥34॥
ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು ಕ್ರುದ್ಧನಾಗಿ ಅವನ ಮೇಲೆ ಹದಿನಾಲ್ಕು ತೋಮರಗಳನ್ನು ಪ್ರಯೋಗಿಸಿದನು. ರಾಕ್ಷಸನಾದ ಘಟೋತ್ಕಚನು ಅವುಗಳನ್ನೂ ಕತ್ತರಿಸಿ ಹಾಕಿದನು.
ಸ ತಾಂಶ್ಛಿತ್ತ್ವಾ ಮಹಾಬಾಹುಸ್ತೋಮರಾನ್ ನಿಶಿತೈಃ ಶರೈಃ |
ಭಗದತ್ತಂ ಚ ವಿವ್ಯಾಧ ಸಪ್ತತ್ಯಾ ಕಂಕಪತ್ರಿಭಿಃ ॥35॥
ಮಹಾಬಾಹುವಾದ ಘಟೋತ್ಕಚನು ಹರಿತವಾದ ಬಾಣಗಳಿಂದ ಆ ತೋಮರಗಳನ್ನು ಕತ್ತರಿಸಿ ಕಂಕಪತ್ರಗಳಿಂದ ಕೂಡಿದ ಎಪ್ಪತ್ತು ಬಾಣಗಳನ್ನು ಭಗದತ್ತನ ಮೇಲೆ ಪ್ರಯೋಗಿಸಿದನು.
ತತಃ ಪ್ರಾಗ್ಜ್ಯೋತಿಷೋ ರಾಜನ್ ಪ್ರಹಸನ್ನಿವ ಭಾರತ |
ತಸ್ಯಾಶ್ವಾಂಶ್ಚತುರಃ ಸಂಖ್ಯೇ ಪಾತಯಾಮಾಸ ಸಾಯಕೈಃ ॥36॥
ಎಲೈ ರಾಜನೇ, ಭಾರತನೇ, ಆಗ ಪ್ರಾಗ್ಜ್ಯೋತಿಷನು ನಗುವವನಂತೆ ಯುದ್ಧದಲ್ಲಿ ತನ್ನ ಬಾಣಗಳಿಂದ ಘಟೋತ್ಕಚನ ರಥದ ನಾಲ್ಕು ಅಶ್ವಗಳನ್ನು ಉರುಳಿಸಿದನು.
ಸ ಹತಾಶ್ವೇ ರಥೇ ತಿಷ್ಠನ್ ರಾಕ್ಷಸೇಂದ್ರಃ ಪ್ರತಾಪವಾನ್ |
ಶಕ್ತಿಂ ಚಿಕ್ಷೇಪ ವೇಗೇನ ಪ್ರಾಗ್ಜ್ಯೋತಿಷಗಜಂ ಪ್ರತಿ ॥37॥
ಅಶ್ವರಹಿತವಾದ ರಥದಲ್ಲಿದ್ದ ಪ್ರತಾಪಶಾಲಿಯಾದ, ರಾಕ್ಷಸೇಂದ್ರನಾದ ಘಟೋತ್ಕಚನು ಪ್ರಾಗ್ಜ್ಯೋತಿಷನ ಆನೆಯಾದ ಸುಪ್ರತೀಕದ ಮೇಲೆ ವೇಗವಾಗಿ ಶಕ್ತಿಯನ್ನು ಪ್ರಯೋಗಿಸಿದನು.
ತಾಮಾಪತಂತೀಂ ಸಹಸಾ ಹೇಮದಂಡಾಂ ಸುವೇಗಿನಾಮ್ |
ತ್ರಿಧಾ ಚಿಚ್ಛೇದ ನೃಪತಿಃ ಸಾ ವ್ಯಕೀರ್ಯತ ಮೇದಿನೀಮ್ ॥38॥
ಹೇಮದಂಡ ಸಹಿತವಾಗಿ ವೇಗದಿಂದ ತನ್ನ ಕಡೆಗೆ ಬರುತ್ತಿದ್ದ ಆ ಶಕ್ತಿಯನ್ನು ರಾಜನು ಮೂರುಭಾಗವಾಗಿ ಕತ್ತರಿಸಿದನು. ಅದು ನಾಶವನ್ನು ಹೊಂದಿ ಭೂಮಿಯ ಮೇಲೆ ಬಿದ್ದಿತು.
ಶಕ್ತಿಂ ವಿನಿಹತಾಂ ದೃಷ್ಟ್ವಾ ಹೈಡಿಂಬಃ ಪ್ರಾದ್ರವದ್ ಭಯಾತ್ |
ಯಥೇಂದ್ರಸ್ಯ ರಣಾತ್ ಪೂರ್ವಂ ನಮುಚಿರ್ದೈತ್ಯಸತ್ತಮಃ ॥39॥
ಶಕ್ತಿಯು ವಿನಾಶವನ್ನು ಹೊಂದಿದುದನ್ನು ನೋಡಿ ಘಟೋತ್ಕಚನು ಇಂದ್ರನ ಜೊತೆಗೆ ಯುದ್ಧದಲ್ಲಿ ಹಿಂದೆ ದೈತ್ಯಶ್ರೇಷ್ಠನಾದ ನಮುಚಿಯು ಓಡಿಹೋದಂತೆ ಭಯದಿಂದ ಓಡಿಹೋದನು.
ತಂ ವಿಜಿತ್ಯ ರಣೇ ಶೂರಂ ವಿಕ್ರಾಂತಂ ಖ್ಯಾತಪೌರುಷಮ್ |
ಅಜೇಯಂ ಸಮರೇ ರಾಜನ್ ಯಮೇನ ವರುಣೇನ ಚ ॥40॥
ಪಾಂಡವೀಂ ಸಮರೇ ಸೇನಾಂ ಸಮ್ಮಮರ್ದ ಸಕುಂಜರಃ |

ಯಥಾ ವನಗಜೋ ರಾಜನ್ ಮೃದ್ನಂಶ್ಚರತಿ ಪದ್ಮಿನೀಮ್ ॥41॥
ಎಲೈ ರಾಜನೇ, ಶೂರನೂ, ಪರಾಕ್ರಮಶಾಲಿಯೂ, ವಿಖ್ಯಾತ ಪೌರುಷನೂ, ಯುದ್ಧದಲ್ಲಿ ಯಮನಿಗೂ ಮತ್ತು ವರುಣನಿಗೂ ಅಜೇಯನಾದವನೂ ಆದ ಘಟೋತ್ಕಚನನ್ನು ಯುದ್ಧದಲ್ಲಿ ಪರಾಭವಗೊಳಿಸಿ, ವನಗಜವು ಪದ್ಮ ಸರೋವರವನ್ನು ಕಲಕಿ ಓಡಾಡಿದಂತೆ ತನ್ನ ಗಜದ ಜೊತೆಯಲ್ಲಿ ಭಗದತ್ತನು ಪಾಂಡವರ ಸೈನ್ಯವನ್ನು ಮರ್ದಿಸಿದನು.
ಮದ್ರೇಶ್ವರಸ್ತು ಸಮರೇ ಯಮಾಭ್ಯಾಂ ಸಹ ಸಂಗತಃ |
ಸ್ವಸ್ರೀಯೌ ಛಾದಯಾಂಚಕ್ರೇ ಶರೌಘೈಃ ಪಾಂಡುನಂದನೌ ॥42॥
ಮದ್ರೇಶ್ವರನಾದ ಶಲ್ಯನು ಯುದ್ಧದಲ್ಲಿ ನಕುಲ-ಸಹದೇವರನ್ನು ಸಂಧಿಸಿ ತನ್ನ ಸೋದರಳಿಯಂದಿರೂ ಮತ್ತು ಪಾಂಡುಪುತ್ರರೂ ಆದ ಅವರನ್ನು ಬಾಣಗಳ ಸಮೂಹಗಳಿಂದ ಮುಚ್ಚಿಹಾಕಿದನು.
ಸಹದೇವಸ್ತು ಸಮರೇ ಮಾತುಲಂ ವೀಕ್ಷ್ಯ ಸಂಗತಮ್ |
ಅವಾರಯಚ್ಛರೌಘೇಣ ಮೇಘೋ ಯದ್ವದ್ ದಿವಾಕರಮ್ ॥43॥
ಸಹದೇವನಾದರೋ ತನ್ನ ಸೋದರಮಾವನು ಯುದ್ಧದಲ್ಲಿ ಎದುರಾದುದನ್ನು ನೋಡಿ ಮೋಡವು ಸೂರ್ಯನನ್ನು ಮುಚ್ಚಿದಂತೆ ಅವನನ್ನು ಬಾಣಗಳ ಸಮೂಹದಿಂದ ಮುಚ್ಚಿಹಾಕಿದನು.
ಛಾದ್ಯಮಾನಃ ಶರೌಘೇಣ ಹೃಷ್ಟರೂಪತರೋಽಭವತ್ |
ತಯೋಶ್ಚಾಪ್ಯಭವತ್ ಪ್ರೀತಿರತುಲಾ ಮಾತೃಕಾರಣಾತ್ ॥44॥
ಸಹದೇವನ ಬಾಣವರ್ಷದಿಂದ ಮುಚ್ಚಲ್ಪಟ್ಟ ಶಲ್ಯನು ಬಹಳ ಸಂತೋಷಗೊಂಡನು ಮತ್ತು ಅವರಿಬ್ಬರಿಗೂ ಸಹ ತಮ್ಮ ತಾಯಿಯ ಮೂಲಕವಾದ ಸಂಬಂಧದಿಂದ ಅವನಲ್ಲಿ ಅಸದೃಶವಾದ ಪ್ರೀತಿಯುಂಟಾಯಿತು.
ತತಃ ಪ್ರಹಸ್ಯ ಸಮರೇ ನಕುಲಸ್ಯ ಮಹಾರಥಃ |
ಅಶ್ವಾನ್ ವೈ ಚತುರೋ ರಾಜಂಶ್ಚತುರ್ಭಿಃ ಸಾಯಕೋತ್ತಮೈಃ |
ಪ್ರೇಷಯಾಮಾಸ ಸಮರೇ ಯಮಸ್ಯ ಸದನಂ ಪ್ರತಿ ॥45॥
ಎಲೈ ರಾಜನೇ, ಅನಂತರ ಮಹಾರಥನಾದ ಶಲ್ಯನು ನಕ್ಕು ನಕುಲನ ರಥದ ನಾಲ್ಕು ಅಶ್ವಗಳನ್ನು ಶ್ರೇಷ್ಠವಾದ ನಾಲ್ಕು ಬಾಣಗಳಿಂದ ಯಮಪಟ್ಟಣಕ್ಕೆ ಕಳುಹಿಸಿದನು.
ಹತಾಶ್ವಾತ್ ತು ರಥಾತ್ ತೂರ್ಣಮವಪ್ಲುತ್ಯ ಮಹಾರಥಃ |
ಆರುರೋಹ ತತೋ ಯಾನಂ ಭ್ರಾತುರೇವ ಯಶಸ್ವಿನಃ ॥46॥
ಮಹಾರಥನಾದ ನಕುಲನಾದರೋ ಶೀಘ್ರವಾಗಿ ಅಶ್ವರಹಿತವಾದ ತನ್ನ ರಥದಿಂದ ಕೆಳಗೆ ಹಾರಿ ಕೀರ್ತಿವಂತನಾದ ತನ್ನ ಸಹೋದರನ ರಥವನ್ನು ಏರಿದನು.
ಏಕಸ್ಥೌ ತು ರಣೇ ಶೂರೌ ದೃಢೇ ವಿಕ್ಷಿಪ್ಯ ಕಾರ್ಮುಕೇ |
ಮದ್ರರಾಜರಥಂ ಕ್ರುದ್ಧೌ ಛಾದಯಾಮಾಸತುಃ ಕ್ಷಣಾತ್ ॥47॥
ಒಂದೇ ರಥದಲ್ಲಿ ನಿಂತ ಅವರಿಬ್ಬರೂ ತಮ್ಮ ದೃಢವಾದ ಧನುಸ್ಸುಗಳನ್ನು ಎಳೆದು ಒಂದು ಕ್ಷಣದಲ್ಲಿ ಮದ್ರರಾಜನಾದ ಶಲ್ಯನ ರಥವನ್ನು ಬಾಣಗಳಿಂದ ಮುಚ್ಚಿದರು.
ಸ ಚ್ಛಾದ್ಯಮಾನೋ ಬಹುಭಿಃ ಶರೈಃ ಸನ್ನತಪರ್ವಭಿಃ |
ಸ್ವಸ್ರೀಯಾಭ್ಯಾಂ ನರವ್ಯಾಘ್ರೋ ನಾಕಂಪತ ಯಥಾಚಲಃ |
ಪ್ರಹಸನ್ನಿವ ತಾಂ ಚಾಪಿ ಶರವೃಷ್ಟಿಂ ಜಘಾನ ಹ ॥48॥
ತನ್ನ ಸೋದರಳಿಯಂದಿರ ಬಾಗಿದ ತುದಿಯುಳ್ಳ ಅನೇಕ ಬಾಣಗಳಿಂದ ಮುಚ್ಚಲ್ಪಟ್ಟರೂ ನರಶ್ರೇಷ್ಠನಾದ ಅವನು ಪರ್ವತದಂತೆ ಅಲುಗಾಡಲಿಲ್ಲ. ನಗುವವನಂತೆ ಆ ಬಾಣಗಳ ಮಳೆಯನ್ನೂ ಅವನು ವಿನಾಶಗೊಳಿಸಿದನು.
ಸಹದೇವಸ್ತತಃ ಕ್ರುದ್ಧಃ ಶರಮುದ್ಯಮ್ಯ ವೀರ್ಯವಾನ್ |
ಮದ್ರರಾಜಮಭಿಪ್ರೇಕ್ಷ್ಯ ಪ್ರೇಷಯಾಮಾಸ ಭಾರತ ॥49॥
ಎಲೈ ಭಾರತನೇ, ಆಗ ಪರಾಕ್ರಮಶಾಲಿಯಾದ ಸಹದೇವನು ಕ್ರೋಧಯುಕ್ತನಾಗಿ ಬಾಣವನ್ನು ಎತ್ತಿ ಮದ್ರರಾಜನ ಮೇಲೆ ಪ್ರಯೋಗಿಸಿದನು.
ಸ ಶರಃ ಪ್ರೇಷಿತಸ್ತೇನ ಗರುತ್ಮಾನಿವ ವೇಗವಾನ್ |
ಮದ್ರರಾಜಂ ವಿನಿರ್ಭಿದ್ಯ ನಿಪಪಾತ ಮಹೀತಳೇ ॥50॥
ಸಹದೇವನಿಂದ ಪ್ರಯೋಗಿಸಲ್ಪಟ್ಟ ವೇಗಶಾಲಿಯಾದ ಆ ಬಾಣವು ಗರುಡನಂತೆ ಎರಗಿ ಶಲ್ಯನನ್ನು ಭೇದಿಸಿ ಭೂತಳದಲ್ಲಿ ಬಿದ್ದಿತು.
ಸ ಗಾಢವಿದ್ಧೋ ವ್ಯಥಿತೋ ರಥೋಪಸ್ಥೇ ಮಹಾರಥಃ |
ನಿಷಸಾದ ಮಹಾರಾಜ ಕಶ್ಮಲಂ ಚ ಜಗಾಮ ಹ ॥51॥
ಎಲೈ ಮಹಾರಾಜನೇ, ಆ ಬಾಣದಿಂದ ಬಹಳವಾಗಿ ಗಾಯಗೊಂಡ ಮಹಾರಥನಾದ ಶಲ್ಯನು ವ್ಯಥೆಯಿಂದ ಕೂಡಿ ರಥದ ಪೀಠದಲ್ಲಿ ಕುಸಿದು ಮೂರ್ಛೆಯನ್ನು ಹೊಂದಿದನು.
ತಂ ವಿಸಂಜ್ಞಂ ನಿಪತಿತಂ ಸೂತಃ ಸಂಪ್ರೇಕ್ಷ್ಯ ಸಂಯುಗೇ |
ಅಪೋವಾಹ ರಥೇನಾಜೌ ಯಮಾಭ್ಯಾಮಭಿಪೀಡಿತಮ್ ॥52॥
ನಕುಲ-ಸಹದೇವರಿಂದ ಚೆನ್ನಾಗಿ ಪೀಡಿತನಾಗಿ ಯುದ್ಧದಲ್ಲಿ ಮೂರ್ಛೆಯನ್ನು ಹೊಂದಿ ಬಿದ್ದ ಅವನನ್ನು ನೋಡಿ ಅವನ ಸಾರಥಿಯು ತನ್ನ ರಥದಿಂದ ಅವನನ್ನು ರಣಭೂಮಿಯಿಂದ ದೂರಕ್ಕೆ ಕರೆದುಕೊಂಡು ಹೋದನು.
ದೃಷ್ಟ್ವಾ ಮದ್ರೇಶ್ವರರಥಂ ಧಾರ್ತರಾಷ್ಟ್ರಾಃ ಪರಾಙ್ಮುಖಮ್ |

ಸರ್ವೇ ವಿಮನಸೋ ಭೂತ್ವಾ ನೇದಮಸ್ತೀತ್ಯಚಿಂತಯನ್ ॥53॥
ಮದ್ರರಾಜನಾದ ಶಲ್ಯನ ರಥವು ಹಿಂದಿರುಗುವುದನ್ನು ನೋಡಿದ ಧೃತರಾಷ್ಟ್ರ ಪುತ್ರರೆಲ್ಲರೂ ಬೇಸರವನ್ನು ಹೊಂದಿ ಇದು ಎಂದೂ ಸರಿಯಲ್ಲ ಎಂದು ಚಿಂತಿಸಿದರು.
ನಿರ್ಜಿತ್ಯ ಮಾತುಲಂ ಸಂಖ್ಯೇ ಮಾದ್ರೀಪುತ್ರೌ ಮಹಾರಥೌ ।
ದಧ್ಮತುರ್ಮುದಿತೌ ಶಂಖೌ ಸಿಂಹನಾದಂ ವಿನೇದತುಃ ॥54॥
ಮಾದ್ರೀಪುತ್ರರಾದ ಮಹಾರಥರು ಯುದ್ಧದಲ್ಲಿ ತಮ್ಮ ಸೋದರಮಾವನನ್ನು ಪರಾಭವಗೊಳಿಸಿ ಸಂತೋಷಗೊಂಡು ತಮ್ಮ ಶಂಖಗಳನ್ನು ಊದಿ ಸಿಂಹನಾದವನ್ನು ಮಾಡಿದರು.
ಅಭಿದುದ್ರುವತುರ್ಹೃಷ್ಟೌ ತವ ಸೈನ್ಯಂ ವಿಶಾಂಪತೇ ।
ಯಥಾ ದೈತ್ಯಚಮೂಂ ರಾಜನ್ನಿಂದ್ರೋಪೇಂದ್ರಾವಿವಾಮರೌ ॥55॥
ಎಲೈ ರಾಜನೇ, ದೇವತೆಗಳಾದ ಇಂದ್ರೋಪೇಂದ್ರರು ದೈತ್ಯರ ಸೈನ್ಯದ ಮೇಲೆ ಎರಗಿದಂತೆ ಸಂತೋಷದಿಂದ ನಿನ್ನ ಸೈನ್ಯದ ಮೇಲೆ ಎರಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನಾಶೀತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತನೆಯ ಅಧ್ಯಾಯ
ಯುಧಿಷ್ಠಿರನ ಪರಾಕ್ರಮ. ಕೃಪ-ಚೇಕಿತಾನನ ಯುದ್ಧ.
ಅಭಿಮನ್ಯುವಿನ ಪರಾಕ್ರಮ.
ಸಂಜಯಃ
ತತೋ ಯುಧಿಷ್ಠಿರೋ ರಾಜಾ ಮಧ್ಯಂ ಪ್ರಾಪ್ತೇ ದಿವಾಕರೇ ।
ಶ್ರುತಾಯುಷಮಭಿಪ್ರೇಕ್ಷ್ಯ ಚೋದಯಾಮಾಸ ವಾಜಿನಃ ॥1॥
ಸಂಜಯ ಅನಂತರ ಸೂರ್ಯನು ಆಕಾಶದ ಮಧ್ಯಕ್ಕೆ ಬರುತ್ತಿರಲು ಯುಧಿಷ್ಠಿರನು ಶ್ರುತಾಯುವನ್ನು ನೋಡಿ ತನ್ನ ಕುದುರೆಗಳನ್ನು ಪ್ರಚೋದಿಸಿದನು.
ಅಭ್ಯಧಾವತ್ ತತೋ ರಾಜಾ ಶ್ರುತಾಯುಷಮರಿಂದಮಮ್ ।
ವಿನಿಘ್ನನ್ ಸಾಯಕೈಸ್ತೀಕ್ಷ್ಣೈರ್ನವಭಿರ್ನತಪರ್ವಭಿಃ ॥2॥
ಅನಂತರ ರಾಜನು ಬಾಗಿದ ತುದಿಯುಳ್ಳ ಒಂಬತ್ತು ತೀಕ್ಷ್ಣವಾದ ಬಾಣಗಳಿಂದ ಅರಿಂದಮನಾದ ಶ್ರುತಾಯುವನ್ನು ಹೊಡೆಯುತ್ತಾ ಅವನ ಕಡೆಗೆ ಧಾವಿಸಿದನು.
ಸ ಸಂವಾರ್ಯ ರಣೇ ರಾಜಾ ಪ್ರೇಷಿತಾನ್ ಧರ್ಮಸೂನುನಾ ।
ಶರಾನ್ ಸಪ್ತ ಮಹೇಷ್ವಾಸಃ ಕೌಂತೇಯಾಯ ಸಮರ್ಪಯತ್ ॥3॥
ರಾಜನೂ, ಮಹಾಧನುರ್ಧಾರಿಯೂ ಆದ ಶ್ರುತಾಯುವು ಧರ್ಮರಾಜನು ಪ್ರಯೋಗಿಸಿದ ಬಾಣಗಳನ್ನು ನಿವಾರಿಸಿ ಧರ್ಮರಾಜನ ಮೇಲೆ ಏಳು ಬಾಣಗಳನ್ನು ಪ್ರಯೋಗಿಸಿದನು.
ತೇ ತಸ್ಯ ಕವಚಂ ಭಿತ್ತ್ವಾ ಪಪುಃ ಶೋಣಿತಮಾಹವೇ ।
ಅಸೂನಿವ ವಿಚಿನ್ವಂತೋ ದೇಹೇ ತಸ್ಯ ಮಹಾತ್ಮನಃ ॥4॥
ಅವು ಆ ಮಹಾತ್ಮನ ದೇಹದಲ್ಲಿ ಪ್ರಾಣಗಳನ್ನು ಹುಡುಕುವಂತೆ ಅವನ ಕವಚವನ್ನು ಭೇದಿಸಿ ರಕ್ತವನ್ನು ಕುಡಿದವು.
ಪಾಂಡವಸ್ತು ಭೃಶಂ ವಿದ್ಧಸ್ತೇನ ರಾಜ್ಞಾ ಮಹಾತ್ಮನಾ ।
ರಣೇ ವರಾಹಕರ್ಣೇನ ರಾಜಾನಂ ಹೃದಿ ವಿವ್ಯಧೇ ॥5॥
ಮಹಾಪ್ರಯತ್ನಶಾಲಿಯಾದ ರಾಜನಿಂದ ದೃಢವಾಗಿ ಗಾಯಗೊಂಡ ಧರ್ಮರಾಜನು ಯುದ್ಧದಲ್ಲಿ ವರಾಹಕರ್ಣವನ್ನು ಅವನ ಹೃದಯದಲ್ಲಿ ಪ್ರಯೋಗಿಸಿದನು.
ಅಥಾಪರೇಣ ಭಲ್ಲೇನ ಕೇತುಂ ತಸ್ಯ ಮಹಾತ್ಮನಃ ।
ರಥಶ್ರೇಷ್ಠೋ ರಥಾತ್ ತೂರ್ಣಂ ಭೂಮೌ ಪಾರ್ಥೋ ನ್ಯಪಾತಯತ್ ॥
ಅನಂತರ ರಥಶ್ರೇಷ್ಠನಾದ ಪಾರ್ಥನು ಇನ್ನೊಂದು ಭಲ್ಲದಿಂದ ಮಹಾತ್ಮನಾದ ಶ್ರುತಾಯುವಿನ ರಥದ ಧ್ವಜವನ್ನು ಭೂಮಿಯಲ್ಲಿ ಕೆಡವಿದನು.
ಕೇತುಂ ನಿಪತಿತಂ ದೃಷ್ಟ್ವಾ ಶ್ರುತಾಯುಃ ಸ ತು ಪಾರ್ಥಿವಃ ।
ಪಾಂಡವಂ ವಿಶಿಖೈಸ್ತೀಕ್ಷ್ಣೈ ರಾಜನ್ ವಿವ್ಯಾಧ ಸಪ್ತಭಿಃ ॥7॥
ಎಲೈ ರಾಜನೇ, ತನ್ನ ರಥದ ಧ್ವಜವು ಭೂಮಿಯಲ್ಲಿ ಬಿದ್ದುದನ್ನು ನೋಡಿದ ರಾಜನಾದ ಆ ಶ್ರುತಾಯುವು ತೀಕ್ಷ್ಣವಾದ ಏಳು ಬಾಣಗಳಿಂದ ಧರ್ಮರಾಜನನ್ನು ಗಾಯಗೊಳಿಸಿದನು.
ತತಃ ಕ್ರೋಧಾತ್ ಪ್ರಜಜ್ವಾಲ ಧರ್ಮಪುತ್ರೋ ಯುಧಿಷ್ಠಿರಃ ।
ಯಥಾ ಯುಗಾಂತೇ ಭೂತಾನಿ ಧಕ್ಷ್ಯನ್ನಿವ ಹುತಾಶನಃ ॥8॥
ಧರ್ಮರಾಜನು ಯುಗಾಂತದಲ್ಲಿ ಪ್ರಾಣಿಗಳನ್ನು ದಹಿಸುವ ಅಗ್ನಿಯಂತೆ ಕ್ರೋಧದಿಂದ ಉರಿದನು.
ಕ್ರುದ್ಧಂ ತು ಪಾಂಡವಂ ದೃಷ್ಟ್ವಾ ದೇವಗಂಧರ್ವರಾಕ್ಷಸಾಃ ।

ಪ್ರವಿವ್ಯಥುರ್ಮಹಾರಾಜ ವ್ಯಾಕುಲಂ ಚಾಪ್ಯಭೂಜ್ಜಗತ್ ॥9॥
ಎಲೈ ಮಹಾರಾಜನೇ, ಕ್ರೋಧಗೊಂಡ ಪಾಂಡುಪುತ್ರನಾದ ಯುಧಿಷ್ಠಿರನನ್ನು ನೋಡಿ ದೇವ-ಗಂಧರ್ವ-ರಾಕ್ಷಸರು ಬಹಳವಾದ ವ್ಯಥೆಯನ್ನು ಹೊಂದಿದರು. ಜಗತ್ತು ವ್ಯಾಕುಲವಾಯಿತು.
ಸರ್ವೇಷಾಂ ಚೈವ ಭೂತಾನಾಮಿದಮಾಸೀನ್ಮನೋಗತಮ್ |
ತ್ರೀನ್ ಲೋಕಾನದ್ಯ ಸಂಕ್ರುದ್ಧೋ ನೃಪೋಽಯಂ ಧಕ್ಷ್ಯತೀತಿ ವೈ ॥
ಎಲ್ಲ ಪ್ರಾಣಿಗಳ ಮನಸ್ಸಿನಲ್ಲಿ ಈ ದಿನ ಕೋಪಗೊಂಡ ಈ ರಾಜನು ಮೂರು ಲೋಕಗಳನ್ನು ಸುಡುವನು ಎಂಬ ಭಾವನೆಯು ಮೂಡಿತು.
ಋಷಯಶ್ಚೈವ ದೇವಾಶ್ಚ ಚಕ್ರುಃ ಸ್ವಸ್ತ್ಯಯನಂ ಮಹತ್ |
ಲೋಕಾನಾಂ ನೃಪ ಶಾಂತ್ಯರ್ಥಂ ಕ್ರೋಧಿತೇ ಪಾಂಡವೇ ತದಾ ॥11॥
ಎಲೈ ರಾಜನೇ, ಯುಧಿಷ್ಠಿರನು ಕೋಪಗೊಳ್ಳುತ್ತಿರಲು ಆಗ ಋಷಿಗಳು ಮತ್ತು ದೇವತೆಗಳು ಲೋಕಕ್ಕೆ ಶಾಂತಿಯುಂಟಾಗಲಿ ಎಂದು ದೊಡ್ಡ ಸ್ವಸ್ತಿಯನ್ನು ಆಶಂಸಿಸಿದರು.
ಸ ಚ ಕ್ರೋಧಸಮಾವಿಷ್ಟಃ ಸೃಕ್ಕಿಣೀ ಪರಿಲೇಲಿಹನ್ |
ದಧಾರಾತ್ಮವಪುರ್ಘೋರಂ ಯುಗಾಂತಾದಿತ್ಯಸನ್ನಿಭಮ್ ॥12॥
ಯುಧಿಷ್ಠಿರನಾದರೋ ಯುಗಾಂತ ಕಾಲದ ಆದಿತ್ಯನಂತೆ ಘೋರವಾದ ಶರೀರವನ್ನು ಧರಿಸಿ, ಕಟಬಾಯನ್ನು ಸವರಿಕೊಳ್ಳುತ್ತಾ ಕ್ರೋಧಪೂರಿತನಾಗಿದ್ದನು.
ತತಃ ಸರ್ವಾಣಿ ಸೈನ್ಯಾನಿ ತಾವಕಾನಿ ವಿಶಾಂಪತೇ |
ನಿರಾಶಾನ್ಯಭವಂಸ್ತತ್ರ ಜೀವಿತಂ ಪ್ರತಿ ಭಾರತ ॥13॥
ಎಲೈ ರಾಜನೇ, ಭಾರತನೇ, ಆಗ ನಿನ್ನ ಸೈನ್ಯವೆಲ್ಲವೂ ತಮ್ಮ ಜೀವಿತದ ವಿಷಯದಲ್ಲಿ ನಿರಾಶೆಯನ್ನು ಹೊಂದಿದವು.
ಸ ತು ಧೈರ್ಯೇಣ ತಂ ಕೋಪಂ ಸನ್ನಿವಾರ್ಯ ಮಹಾಯಶಾಃ |
ಶ್ರುತಾಯುಷಃ ಪ್ರಚಿಚ್ಛೇದ ಮುಷ್ಟಿದೇಶೇ ಮಹದ್ಧನುಃ ॥14॥
ಮಹಾಕೀರ್ತಿವಂತನಾದ ಯುಧಿಷ್ಠಿರನು ಧೈರ್ಯದಿಂದ ತನ್ನ ಕೋಪವನ್ನು ತಡೆದುಕೊಂಡು ಶ್ರುತಾಯುವಿನ ದೊಡ್ಡ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು.
ಅಥೈನಂ ಛಿನ್ನಧನ್ವಾನಂ ನಾರಾಚೇನ ಸ್ತನಾಂತರೇ |
ನಿರ್ಬಿಭೇದ ರಣೇ ರಾಜಾ ಸರ್ವಸೈನ್ಯಸ್ಯ ಪಶ್ಯತಃ ॥15॥
ಅನಂತರ ಶ್ರುತಾಯುವಿನ ಧನುಸ್ಸು ಕತ್ತರಿಸಲ್ಪಡುತ್ತಿರಲು ರಾಜನಾದ ಯುಧಿಷ್ಠಿರನು ಎಲ್ಲ ಸೈನ್ಯವು ನೋಡುತ್ತಿರುವಂತೆಯೇ ಒಂದು ನಾರಾಚದಿಂದ ಅವನ ಸ್ತನಗಳ ಮಧ್ಯಭಾಗವನ್ನು ಭೇದಿಸಿದನು.
ಸತ್ವರಂ ಚರಣೇ ರಾಜಂಸ್ತಸ್ಯ ವಾಹಾನ್ ಮಹಾತ್ಮನಃ |
ನಿಜಘಾನ ಶರೈಃ ಕ್ಷಿಪ್ರಂ ಸೂತಂ ಚ ಸುಮಹಾಬಲಃ ॥16॥
ಎಲೈ ರಾಜನೇ, ಅತ್ಯಂತ ಬಲಶಾಲಿಯಾದ ಯುಧಿಷ್ಠಿರನು ಯುದ್ಧದಲ್ಲಿ ಶೀಘ್ರವಾಗಿ ಮಹಾತ್ಮನಾದ ಶ್ರುತಾಯುವಿನ ರಥದ ಅಶ್ವಗಳನ್ನು ಮತ್ತು ಸಾರಥಿಯನ್ನು ಕೊಂದನು.
ಹತಾಶ್ವಂ ತು ರಥಂ ತ್ಯಕ್ತ್ವಾ ದೃಷ್ಟ್ವಾ ರಾಜ್ಞಸ್ತು ಪೌರುಷಮ್ |
ವಿಪ್ರದುದ್ರಾವ ವೇಗೇನ ಶ್ರುತಾಯುಃ ಸಮರೇ ತದಾ ॥17॥
ಆಗ ಯುದ್ಧದಲ್ಲಿ ರಾಜನ ಪರಾಕ್ರಮವನ್ನು ನೋಡಿ ರಥಾಶ್ವಗಳು ನಾಶ ಹೊಂದಿದ ತನ್ನ ರಥವನ್ನು ಬಿಟ್ಟು ಶೀಘ್ರವಾಗಿ ಶ್ರುತಾಯುವು ಯುದ್ಧದಿಂದ ಓಡಿಹೋದನು.
ತಸ್ಮಿನ್ ಜಿತೇ ಮಹೇಷ್ವಾಸೇ ಧರ್ಮಪುತ್ರೇಣ ಸಂಯುಗೇ |
ದುರ್ಯೋಧನಬಲಂ ರಾಜನ್ ಸರ್ವಮಾಸೀತ್ ಪರಾಙ್ಮುಖಮ್ ॥18॥
ಎಲೈ ರಾಜನೇ, ಮಹಾಧನುರ್ಧಾರಿಯಾದ ಅವನು ಯುದ್ಧದಲ್ಲಿ ಯುಧಿಷ್ಠಿರನಿಂದ ಪರಾಜಿತನಾಗುತ್ತಿರಲು ದುರ್ಯೋಧನನ ಸೈನ್ಯವೆಲ್ಲವೂ ಯುದ್ಧದಿಂದ ವಿಮುಖವಾಯಿತು.
ಏತತ್ಕೃತ್ವಾ ಮಹಾರಾಜ ಧರ್ಮಪುತ್ರೋ ಯುಧಿಷ್ಠಿರಃ |
ವ್ಯಾತ್ತಾನನೋ ಯಥಾ ಕಾಲಸ್ತವ ಸೈನ್ಯಂ ಜಘಾನ ಹ ॥19॥
ಎಲೈ ಮಹಾರಾಜನೇ, ಧರ್ಮಪುತ್ರನಾದ ಯುಧಿಷ್ಠಿರನು ಈ ಕಾರ್ಯವನ್ನು ಮಾಡಿ ಬಾಯ್ತೆರೆದ ಮೃತ್ಯುವಿನಂತೆ ನಿನ್ನ ಸೈನ್ಯವನ್ನು ಕೊಂದನು.
ಚೇಕಿತಾನಸ್ತು ವಾರ್ಷ್ಣೇಯೋ ಗೌತಮಂ ರಥಿನಾಂ ವರಮ್ |
ಪ್ರೇಕ್ಷತಾಂ ಸರ್ವಸೈನ್ಯಾನಾಂ ಛಾದಯಾಮಾಸ ಸಾಯಕೈಃ ॥20॥
ವೃಷ್ಣಿಕುಲದಲ್ಲಿ ಜನಿಸಿದ ಚೇಕಿತಾನನು ಸರ್ವಸೈನ್ಯಗಳು ನೋಡುತ್ತಿರುವಂತೆಯೇ, ಶ್ರೇಷ್ಠರಾದ ಕೃಪರನ್ನು ಬಾಣಗಳಿಂದ ಮುಚ್ಚಿಹಾಕಿದನು.
ಸನ್ನಿವಾರ್ಯ ಶರಾಂಸ್ತಾಂಸ್ತು ಕೃಪಃ ಶಾರದ್ವತೋ ಯುಧಿ |
ಚೇಕಿತಾನಂ ರಣೇ ಯತ್ತಂ ರಾಜನ್ ವಿವ್ಯಾಧ ಪತ್ರಿಭಿಃ ॥21॥
ಎಲೈ ರಾಜನೇ, ಶರದ್ವತರ ಪುತ್ರರಾದ ಕೃಪಾಚಾರ್ಯರು ಯುದ್ಧದಲ್ಲಿ ಚೇಕಿತಾನನು ಪ್ರಯೋಗಿಸಿದ ಆ ಬಾಣಗಳನ್ನು ನಿವಾರಿಸಿ ಪತ್ರವುಳ್ಳ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದರು.

ಅಥಾಪರೇಣ ಭಲ್ಲೇನ ಧನುಶ್ಚಿಚ್ಛೇದ ಮಾರಿಷ |
ಸಾರಥಿಂ ಚಾಸ್ಯ ಸಮರೇ ಕ್ಷಿಪ್ರಹಸ್ತೋ ನ್ಯಪಾತಯತ್ |
ಹಯಾಂಶ್ಚಾಸ್ಯಾವಧೀದ್ ರಾಜನ್ನುಭೌ ಚ ಪಾರ್ಷ್ಣಿಸಾರಥೀ ॥22॥
ಎಲೈ ಪೂಜ್ಯನೇ, ಅನಂತರ ಇನ್ನೊಂದು ಭಲ್ಲದಿಂದ ಅವನ ಧನುಸ್ಸನ್ನು ಕತ್ತರಿಸಿದರು. ಕ್ಷಿಪ್ರಹಸ್ತರಾದ ಅವರು ಯುದ್ಧದಲ್ಲಿ ಅವನ ಸಾರಥಿಯನ್ನೂ ನೆಲಕ್ಕೆ ಉರುಳಿಸಿದರು. ಎಲೈ ರಾಜನೇ, ಅವನ ರಥದ ಅಶ್ವಗಳನ್ನು ಮತ್ತು ಪಾರ್ಶ್ವದ ಇಬ್ಬರು ಸಾರಥಿಗಳನ್ನು ಕೊಂದರು.
ಸೋಽವಪ್ಲುತ್ಯ ರಥಾತ್ ತೂರ್ಣಂ ಗದಾಂ ಜಗ್ರಾಹ ಸಾತ್ವತಃ |
ಸ ತಯಾ ವೀರಘಾತಿನ್ಯಾ ಗದಯಾ ಗದಿನಾಂ ವರಃ |
ಗೌತಮಸ್ಯ ಹಯಾನ್ ಹತ್ವಾ ಸಾರಥಿಂ ಚ ನ್ಯಪಾತಯತ್ ॥23॥
ಸಾತ್ವತ ಕುಲಪ್ರಸೂತನಾದ ಚೇಕಿತಾನನು ರಥದಿಂದ ಶೀಘ್ರವಾಗಿ ಕೆಳಗೆ ಹಾರಿ ಗದೆಯನ್ನು ತೆಗೆದುಕೊಂಡನು. ಗದಾಧಾರಿಗಳಲ್ಲಿ ಶ್ರೇಷ್ಠನಾದ ಅವನು ವೀರರನ್ನು ಸಂಹರಿಸುವ ಆ ಗದೆಯಿಂದ ಕೃಪಾಚಾರ್ಯರ ರಥಾಶ್ವಗಳನ್ನು ಮತ್ತು ಸಾರಥಿಯನ್ನು ಹೊಡೆದು ಉರುಳಿಸಿದನು.
ಭೂಮಿಷ್ಠೋ ಗೌತಮಸ್ತಸ್ಯ ಶರಾಂಶ್ಚಿಕ್ಷೇಪ ಷೋಡಶ |
ತೇ ಶರಾಃ ಸಾತ್ವತಂ ಭಿತ್ತ್ವಾ ಪ್ರಾವಿಶಂತ ಧರಾತಲಮ್ ॥24॥
ಭೂಮಿಯ ಮೇಲೆ ನಿಂತ ಕೃಪಾಚಾರ್ಯರು ಅವನ ಮೇಲೆ ಹದಿನಾರು ಬಾಣಗಳನ್ನು ಪ್ರಯೋಗಿಸಿದರು. ಆ ಬಾಣಗಳು ಸಾತ್ವತನಾದ ಅವನನ್ನು ಭೇದಿಸಿ ಭೂಮಿಯಲ್ಲಿ ಇಳಿದವು.
ಚೇಕಿತಾನಸ್ತತಃ ಕ್ರುದ್ಧಃ ಪುನಶ್ಚಿಕ್ಷೇಪ ತಾಂ ಗದಾಮ್ |
ಗೌತಮಸ್ಯ ವಧಾಕಾಂಕ್ಷೀ ವೃತ್ರಸ್ಯೇವ ಪುರಂದರಃ ॥25॥
ಚೇಕಿತಾನನು ಆಗ ಬಹಳ ಕೋಪಗೊಂಡು ಇಂದ್ರನು ವೃತ್ರಾಸುರನನ್ನು ಕೊಲ್ಲಲು ಬಯಸಿದಂತೆ ಕೃಪರನ್ನು ಕೊಲ್ಲಲು ಬಯಸಿ ಆ ಗದೆಯನ್ನು ಪುನಃ ಅವರ ಮೇಲೆ ಎಸೆದನು.
ತಾಮಾಪತಂತೀಂ ವಿಮಲಾಮಶ್ಮಗರ್ಭಾಂ ಮಹಾಗದಾಮ್ |
ಶರೈರನೇಕಸಾಹಸ್ರೈರ್ವಾರಯಾಮಾಸ ಗೌತಮಃ ॥26॥
ತಮ್ಮ ಕಡೆಗೆ ಬರುತ್ತಿದ್ದ, ಶಿಲಾಗರ್ಭವನ್ನು ಹೊಂದಿದ ಆ ದೊಡ್ಡ ಗದೆಯನ್ನು ಕೃಪರು ಅನೇಕ ಸಹಸ್ರ ಬಾಣಗಳನ್ನು ಪ್ರಯೋಗಿಸಿ ನಿವಾರಿಸಿಕೊಂಡರು.
ಚೇಕಿತಾನಸ್ತತಃ ಖಡ್ಗಂ ಕೋಶಾದುದ್ವೃತ್ಯ ಭಾರತ |
ಲಾಘವಂ ಪರಮಾಸ್ಥಾಯ ಗೌತಮಂ ಸಮುಪಾದ್ರವತ್ ॥27॥
ಎಲೈ ಭಾರತನೇ, ಅನಂತರ ಚೇಕಿತಾನನು ಒರೆಯಿಂದ ಖಡ್ಗವನ್ನು ಹಿರಿದು ಬಹಳ ವೇಗವನ್ನು ಆಶ್ರಯಿಸಿ ಕೃಪರ ಕಡೆಗೆ ಓಡಿಬಂದನು.
ಗೌತಮೋಽಪಿ ಧನುಸ್ತ್ಯಕ್ತ್ವಾ ಪ್ರಗೃಹ್ಯಾಸಿಂ ಸುಸಂಶಿತಮ್ |
ವೇಗೇನ ಮಹತಾ ರಾಜಂಶ್ಚೇಕಿತಾನಮುಪಾದ್ರವತ್ ॥28॥
ಎಲೈ ರಾಜನೇ, ಕೃಪರೂ ಸಹ ಧನುಸ್ಸನ್ನು ಬಿಟ್ಟು ಬಹಳ ತೀಕ್ಷ್ಣವಾದ ಖಡ್ಗವನ್ನು ಹಿಡಿದು, ಬಹಳ ವೇಗದಿಂದ ಚೇಕಿತಾನನ ಕಡೆಗೆ ಧಾವಿಸಿದರು.
ತಾವುಭೌ ಬಲಸಂಪನ್ನೌ ನಿಸ್ತ್ರಿಂಶವರಧಾರಿಣೌ |
ನಿಸ್ತ್ರಿಂಶಾಭ್ಯಾಂ ಸುತೀಕ್ಷ್ಣಾಭ್ಯಾಮನ್ಯೋನ್ಯಂ ಸಂತತಕ್ಷತುಃ ॥29॥
ಬಲಸಂಪನ್ನರಾಗಿ ಶ್ರೇಷ್ಠವಾದ ಖಡ್ಗವನ್ನು ಹಿಡಿದ ಅವರಿಬ್ಬರು ತೀಕ್ಷ್ಣವಾದ ತಮ್ಮ ಖಡ್ಗಗಳಿಂದ ಪರಸ್ಪರವಾಗಿ ಗಾಯಗೊಳಿಸಿದರು.
ನಿಸ್ತ್ರಿಂಶವೇಗಾಭಿಹತೌ ತತಸ್ತೌ ಪುರುಷರ್ಷಭೌ |
ಧರಣೀಂ ಸಮನುಪ್ರಾಪ್ತೌ ಸರ್ವಭೂತನಿಷೇವಿತಾಮ್ |
ಮೂರ್ಛಯಾಭಿಪರೀತಾಂಗೌ ವ್ಯಾಯಾಮೇನ ಚ ಮೋಹಿತೌ ॥30॥
ಆ ಇಬ್ಬರು ಪುರುಷಶ್ರೇಷ್ಠರು ಖಡ್ಗದ ಪ್ರಹಾರಗಳಿಗೆ ತುತ್ತಾಗಿ ಸರ್ವಪ್ರಾಣಿಗಳಿಂದ ಸೇವಿತವಾದ ಭೂಮಿಯ ಮೇಲೆ ಬಿದ್ದು ಆಯಾಸದಿಂದಲೂ ಮೂರ್ಛಿತರಾಗಿ ಪ್ರಜ್ಞೆಯನ್ನು ಕಳೆದುಕೊಂಡರು.
ತತೋಽಭ್ಯಧಾವದ್ ವೇಗೇನ ಕರಕರ್ಷಃ ಸುಹೃತ್ತಯಾ |
ಚೇಕಿತಾನಂ ತಥಾಭೂತಂ ದೃಷ್ಟ್ವಾ ಸಮರದುರ್ಮದಮ್ |
ರಥಮಾರೋಪಯಚ್ಚೈನಂ ಸರ್ವಸೈನ್ಯಸ್ಯ ಪಶ್ಯತಃ ॥31॥
ಯುದ್ಧದುರ್ಮದನಾದ ಚೇಕಿತಾನನು ಅಂತಹ ಅವಸ್ಥೆಯನ್ನು ಹೊಂದಿದುದನ್ನು ನೋಡಿ ಅವನ ಮಿತ್ರನಾದ ಕರಕರ್ಷನು ವೇಗವಾಗಿ ಅವನ ಕಡೆಗೆ ಧಾವಿಸಿ ಎಲ್ಲ ಸೈನ್ಯವು ನೋಡುತ್ತಿರುವಂತೆಯೇ ಅವನನ್ನು ತನ್ನ ರಥದಲ್ಲಿ ಏರಿಸಿದನು.
ತಥೈವ ಶಕುನಿಃ ಶೂರಃ ಸ್ಯಾಲಸ್ತವ ವಿಶಾಂಪತೇ |
ಆರೋಪಯದ್ ರಥಂ ತೂರ್ಣಂ ಗೌತಮಂ ರಥಿನಾಂ ವರಮ್ ॥
ಎಲೈ ರಾಜನೇ, ನಿನ್ನ ಭಾವಮೈದುನನೂ ಮತ್ತು ಶೂರನೂ ಆದ ಶಕುನಿಯು ಶೀಘ್ರವಾಗಿ ಕೃಪರ ಬಳಿಗೆ ಬಂದು ರಥಿಶ್ರೇಷ್ಠರಾದ ಅವರನ್ನು ತನ್ನ ರಥದಲ್ಲಿ ಏರಿಸಿದನು.
ಸೌಮದತ್ತಿಂ ತಥಾ ಕ್ರುದ್ಧೋ ಧೃಷ್ಟಕೇತುರ್ಮಹಾಬಲಃ |

ನವತ್ಯಾ ಸಾಯಕೈಃ ಕ್ಷಿಪ್ರಂ ರಾಜನ್ ವಿವ್ಯಾಧ ವಕ್ಷಸಿ ॥33॥
ಎಲೈ ರಾಜನೇ, ಇನ್ನೊಂದು ಕಡೆ ಮಹಾಬಲನಾದ ಧೃಷ್ಟಕೇತುವು ಕ್ರುದ್ಧನಾಗಿ ಭೂರಿಶ್ರವನನ್ನು ಒಂಬತ್ತು ಬಾಣಗಳಿಂದ ಶೀಘ್ರವಾಗಿ ಅವನ ವಕ್ಷಸ್ಸ್ಥಲದಲ್ಲಿ ಗಾಯಗೊಳಿಸಿದನು.
ಸೌಮದತ್ತಿರುರಃಸ್ಥೈಸ್ತೈರ್ಭೃಶಂ ಬಾಣೈರಶೋಭತ |
ಮಧ್ಯಂದಿನೇ ಮಹಾರಾಜ ರಶ್ಮಿಭಿಸ್ತಪನೋ ಯಥಾ ॥34॥
ತನ್ನ ವಕ್ಷಸ್ಸ್ಥಲದಲ್ಲಿ ನೆಟ್ಟ ಆ ಬಾಣಗಳಿಂದ ಭೂರಿಶ್ರವನು ಮಧ್ಯಾಹ್ನ ಕಾಲದಲ್ಲಿ ಕಿರಣಗಳಿಂದ ಕೂಡಿದ ಸೂರ್ಯನಂತೆ ಶೋಭಿಸಿದನು.
ಭೂರಿಶ್ರವಾಸ್ತು ಸಮರೇ ಧೃಷ್ಟಕೇತುಂ ಮಹಾರಥಮ್ |
ಹತಸೂತಹಯಂ ಚಕ್ರೇ ವಿರಥಂ ಸಾಯಕೋತ್ತಮೈಃ ॥35॥
ಭೂರಿಶ್ರವನಾದರೋ ಯುದ್ಧದಲ್ಲಿ ಮಹಾರಥನಾದ ಧೃಷ್ಟಕೇತುವಿನ ರಥದ ಸಾರಥಿಯನ್ನು ಮತ್ತು ಅಶ್ವಗಳನ್ನು ತನ್ನ ಶ್ರೇಷ್ಠವಾದ ಬಾಣಗಳಿಂದ ಕೊಂದು ಅವನನ್ನು ರಥಹೀನನನ್ನಾಗಿ ಮಾಡಿದನು.
ವಿರಥಂ ಚೈನಮಾಲೋಕ್ಯ ಹತಾಶ್ವಂ ಹತಸಾರಥಿಮ್ |
ಮಹತಾ ಶರವರ್ಷೇಣ ಛಾದಯಾಮಾಸ ಸಂಯುಗೇ ॥36॥
ಅವನ ರಥದ ಅಶ್ವಸಾರಥಿಗಳು ಹತರಾಗಿ, ಅವನು ರಥಹೀನನಾದುದನ್ನು ನೋಡಿ ಬಾಣಗಳ ದೊಡ್ಡ ಮಳೆಯಿಂದ ಯುದ್ಧದಲ್ಲಿ ಅವನನ್ನು ಮುಚ್ಚಿಹಾಕಿದನು.
ಸ ಚ ತಂ ರಥಮುತ್ಸೃಜ್ಯ ಧೃಷ್ಟಕೇತುರ್ಮಹಾಮನಾಃ |
ಆರುರೋಹ ತತೋ ವಾಹಂ ಶತಾನೀಕಸ್ಯ ಮಾರಿಷ ॥37॥
ಎಲೈ ಪೂಜ್ಯನೇ, ಧೈರ್ಯಶಾಲಿಯಾದ ಧೃಷ್ಟಕೇತುವು ತನ್ನ ಆ ರಥವನ್ನು ಬಿಟ್ಟು ಶತಾನೀಕನ ರಥವನ್ನು ಏರಿದನು.
ಚಿತ್ರಸೇನೋ ವಿಕರ್ಣಶ್ಚ ರಾಜನ್ ದುರ್ಮರ್ಷಣಸ್ತಥಾ |
ರಥಿನೋ ಹೇಮಸನ್ನಾಹಾಃ ಸೌಭದ್ರಮಭಿದುದ್ರುವುಃ ॥38॥
ಎಲೈ ರಾಜನೇ, ಇನ್ನೊಂದು ಕಡೆ ರಥಿಗಳಾದ ಚಿತ್ರಸೇನ, ವಿಕರ್ಣ ಮತ್ತು ದುರ್ಮರ್ಷಣನು ಸುವರ್ಣಾಲಂಕೃತ ಸನ್ನಾಹಗಳಿಂದ ಕೂಡಿದವರಾಗಿ ಅಭಿಮನ್ಯುವಿನ ಮೇಲೆ ಧಾವಿಸಿ ಹೋದರು.
ಅಭಿಮನ್ಯೋಸ್ತತಸ್ತೈಸ್ತು ಘೋರಂ ಯುದ್ಧಮವರ್ತತ |
ಶರೀರಸ್ಯ ಯಥಾ ರಾಜನ್ ವಾತಪಿತ್ತಕಫೈಸ್ತ್ರಿಭಿಃ ॥39॥
ಎಲೈ ರಾಜನೇ, ಶರೀರವು ವಾತ-ಪಿತ್ತ-ಕಫಗಳ ಜೊತೆಯಲ್ಲಿ ಹೋರಾಡಿದಂತೆ ಅಭಿಮನ್ಯುವಿಗೂ ಮತ್ತು ನಿನ್ನ ಮೂರು ಪುತ್ರರಿಗೂ ಘೋರವಾದ ಯುದ್ಧವು ನಡೆಯಿತು.
ವಿರಥಾಂಸ್ತವ ಪುತ್ರಾಂಸ್ತು ಕೃತ್ವಾ ರಾಜನ್ ಮಹಾಹವೇ |
ನ ಜಘಾನ ನರವ್ಯಾಘ್ರಃ ಸ್ಮರನ್ ಭೀಮವಚಸ್ತದಾ ॥40॥
ಎಲೈ ರಾಜನೇ, ನರಶ್ರೇಷ್ಠನಾದ ಅಭಿಮನ್ಯುವು ಆ ಮಹಾಯುದ್ಧದಲ್ಲಿ ನಿನ್ನ ಪುತ್ರರನ್ನು ವಿರಥರನ್ನಾಗಿ ಮಾಡಿ (ಧೃತರಾಷ್ಟ್ರ ಪುತ್ರರೆಲ್ಲರನ್ನೂ ತಾನೇ ಕೊಲ್ಲುವೆನೆಂಬ) ಭೀಮಸೇನನ ಪ್ರತಿಜ್ಞೆಯನ್ನು ಸ್ಮರಿಸಿ ಅವರನ್ನು ಕೊಲ್ಲದೆ ಬಿಟ್ಟನು.
ತತೋ ರಾಜ್ಞಾಂ ಬಹುಶತೈರ್ಗಜಾಶ್ವರಥಯಾಯಿಭಿಃ |
ಸಂವೃತಂ ಸಮರೇ ಭೀಷ್ಮಂ ದೇವೈರಪಿ ದುರಾಸದಮ್ ॥41॥
ಪ್ರಯಾಂತಂ ಶೀಘ್ರಮುದ್ವೀಕ್ಷ್ಯ ಪರಿತ್ರಾತುಂ ಸುತಾಂಸ್ತವ |
ಅಭಿಮನ್ಯುಂ ಸಮುದ್ದಿಶ್ಯ ಬಾಲಮೇಕಂ ಮಹಾರಥಮ್ |
ವಾಸುದೇವಮುವಾಚೇದಂ ಕೌಂತೇಯಃ ಶ್ವೇತವಾಹನಃ ॥42॥
ಅನಂತರ ಬಾಲಕನಾದ ಮಹಾರಥನಾದ ಅಭಿಮನ್ಯುವನ್ನು ಉದ್ದೇಶಿಸಿ ಗಜಾಶ್ವ ರಥಗಳ ಮೇಲೆ ಹೊರಟ, ಅನೇಕ ನೂರು ರಾಜರಿಂದ ಸಹಿತರಾದ, ದೇವತೆಗಳೂ ಹತ್ತಿರ ಸುಳಿಯಲಾರದ ಭೀಷ್ಮರು ನಿನ್ನ ಪುತ್ರರನ್ನು ರಕ್ಷಿಸಲು ಅಭಿಮನ್ಯುವಿನ ಕಡೆಗೆ ಶೀಘ್ರವಾಗಿ ಹೋಗುತ್ತಿರುವುದನ್ನು ನೋಡಿ ಕುಂತೀಪುತ್ರನಾದ ಅರ್ಜುನನು ಕೃಷ್ಣನನ್ನು ಕುರಿತು ಈ ಮಾತುಗಳನ್ನು ಆಡಿದನು.
ಚೋದಯಾಶ್ವಾನ್ ಹೃಷೀಕೇಶ ಯತ್ರೈತೇ ಬಹುಲಾ ರಥಾಃ |
ಏತೇ ಹಿ ಬಹವಃ ಶೂರಾಃ ಕೃತಾಸ್ತ್ರಾ ಯುದ್ಧದುರ್ಮದಾಃ |
ಯಥಾ ನ ಹನ್ಯುರ್ನಃ ಸೇನಾಂ ತಥಾ ಮಾಧವ ಚೋದಯ ॥43॥
ಎಲೈ ಹೃಷೀಕೇಶನೇ, ಈ ಅನೇಕ ರಥಗಳು ಕಾಣುತ್ತಿರುವ ಕಡೆಗೆ ನನ್ನ ಅಶ್ವಗಳನ್ನು ಓಡಿಸು. ಎಲೈ ಮಾಧವನೇ, ಅಶ್ವಪಾರಂಗತರೂ, ಯುದ್ಧದುರ್ಮದರೂ, ಶೂರರೂ ಆದ ಈ ಅನೇಕರು ನನ್ನ ಸೈನ್ಯವನ್ನು ಕೊಲ್ಲದಂತೆ ರಥವನ್ನು ಓಡಿಸುವವನಾಗು.
ಏವಮುಕ್ತಃ ಸ ವಾರ್ಷ್ಣೇಯಃ ಕೌಂತೇಯೇನಾಮಿತೌಜಸಾ |
ರಥಂ ಶ್ವೇತಹಯೈರ್ಯುಕ್ತಂ ಪ್ರೇಷಯಾಮಾಸ ಸಂಯುಗೇ ॥44॥
ಅಮಿತಪರಾಕ್ರಮಿಯಾದ ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಕೃಷ್ಣನು ಶ್ವೇತಾಶ್ವಗಳಿಂದ ಕೂಡಿದ ಅವನ ರಥವನ್ನು ರಣರಂಗದಲ್ಲಿ ಮುಂದೆ ನಡೆಸಿದನು.
ನಿಷ್ಟಾನಕೋ ಮಹಾನಾಸೀತ್ ತವ ಸೈನ್ಯಸ್ಯ ಮಾರಿಷ |
ಯದರ್ಜುನೋ ರಣೇ ಕ್ರುದ್ಧಃ ಸಂಯಾತಸ್ತಾವಕಾನ್ ಪ್ರತಿ ॥45॥
ಎಲೈ ಪೂಜ್ಯನೇ, ಅರ್ಜುನನು ಕ್ರುದ್ಧನಾಗಿ ಯುದ್ಧದಲ್ಲಿ ನಿನ್ನ ಸೈನ್ಯದ ಯೋಧರ ಕಡೆಗೆ ಬರುತ್ತಿರುವುದನ್ನು ನೋಡಿ ನಿನ್ನ ಸೈನ್ಯದಲ್ಲಿ

(ಭಯದಿಂದ ಕೂಡಿದ) ದೊಡ್ಡ ಶಬ್ದ ಉಂಟಾಯಿತು.
ಸಮಾಸಾದ್ಯ ತು ಕೌಂತೇಯೋ ರಾಜ್ಞಸ್ತಾನ್ ಭೀಷ್ಮರಕ್ಷಿಣಃ |
ಸುಶರ್ಮಾಣಮಥೋ ರಾಜನ್ನಿದಂ ವಚನಮಬ್ರವೀತ್ ॥46॥
ಎಲೈ ರಾಜನೇ, ಕುಂತೀಪುತ್ರನಾದ ಅರ್ಜುನನು ಭೀಷ್ಮರನ್ನು ರಕ್ಷಿಸುತ್ತಿದ್ದ ಆ ರಾಜರನ್ನು ಸಮೀಪಿಸಿ ಅನಂತರ ಸುಶರ್ಮನನ್ನು ಕುರಿತು ಹೀಗೆ ಮಾತನಾಡಿದನು.
ಜಾನಾಮಿ ತ್ವಾಂ ಯುಧಿ ಶ್ರೇಷ್ಠಮತ್ಯಂತಂ ಪೂರ್ವವೈರಿಣಮ್ |
ಪರ್ಯಾಯಸ್ಯಾದ್ಯ ಸಂಪ್ರಾಪ್ತಂ ಫಲಂ ಪಶ್ಯ ಸುದಾರುಣಮ್ |
ಅದ್ಯ ತೇ ದರ್ಶಯಿಷ್ಯಾಮಿ ಪೂರ್ವಪ್ರೇತಾನ್ ಪಿತಾಮಹಾನ್ ॥47॥
ನೀನು ನಮ್ಮ ಪೂರ್ವವೈರಿ ಎಂದೂ, ಯುದ್ಧದಲ್ಲಿ ಬಹಳ ಶ್ರೇಷ್ಠನಾದವನೆಂದು ನಿನ್ನನ್ನು ತಿಳಿದಿದ್ದೇನೆ. ನೀನು ಮಾಡಿದ ಅನ್ಯಾಯಗಳ, ಘೋರವಾದ ಫಲವು ಪ್ರಾಪ್ತವಾಗಿರುವುದನ್ನು ಈ ದಿನ ನೋಡು. ಈ ದಿನ ನಿನಗೆ ಹಿಂದೆಯೇ ಮೃತರಾದ ನಿನ್ನ ಪಿತಾಮಹರನ್ನು ತೋರಿಸುವೆನು.
ಏವಂ ಸಂಜಲ್ಪತಸ್ತಸ್ಯ ಬೀಭತ್ಸೋಃ ಶತ್ರುಘಾತಿನಃ |
ಶ್ರುತ್ವಾಪಿ ಪರುಷಂ ವಾಕ್ಯಂ ಸುಶರ್ಮಾ ರಥಯೂಥಪಃ |
ನ ಚೈನಮಬ್ರವೀತ್ ಕಿಂಚಿಚ್ಛುಭಂ ವಾ ಯದಿ ವಾಶುಭಮ್ ॥48॥
ಶತ್ರುಘಾತಕನಾದ ಅರ್ಜುನನ ಹೀಗೆ ಒರಟಾದ ಮಾತುಗಳನ್ನು ಕೇಳಿದರೂ ರಥಯೂಥಪನಾದ ಸುಶರ್ಮನು ಅವುಗಳನ್ನು ಕೇಳಿ ಒಳ್ಳೆಯದನ್ನಾಗಲೀ, ಕೆಟ್ಟದನ್ನಾಗಲೀ ಏನೂ ಮಾತನಾಡಲಿಲ್ಲ.
ಅಭಿಗತ್ವಾರ್ಜುನಂ ವೀರಂ ರಾಜಭಿರ್ಬಹುಭಿರ್ವೃತಃ |
ಪುರಸ್ತಾತ್ ಪೃಷ್ಠತಶ್ಚೈವ ಪಾರ್ಶ್ವತಶ್ಚೈವ ಸರ್ವತಃ ॥49॥
ಪರಿವಾರ್ಯಾರ್ಜುನಂ ಸಂಖೇ ತವ ಪುತ್ರೈಃ ಸಹಾನಘ |
ಶರೈಃ ಸಂಛಾದಯಾಮಾಸ ಮೇಘೈರಿವ ದಿವಾಕರಮ್ ॥50॥
ಎಲೈ ಅನಘನೇ, ಅವನು ಅನೇಕ ರಾಜರ ಜೊತೆಯಲ್ಲಿ ವೀರನಾದ ಅರ್ಜುನನ ಎದುರಾಗಿ ಓಡಿ ಅರ್ಜುನನನ್ನು ಮುಂಭಾಗದಿಂದಲೂ, ಹಿಂಭಾಗದಿಂದಲೂ, ಪಾರ್ಶ್ವಗಳಿಂದಲೂ, ಎಲ್ಲ ಕಡೆಯಲ್ಲಿಯೂ ನಿನ್ನ ಪುತ್ರರ ಜೊತೆಯಲ್ಲಿ ಸುತ್ತುವರಿದು ಮೋಡಗಳು ಸೂರ್ಯನನ್ನು ಮುಚ್ಚಿದಂತೆ ಬಾಣಗಳಿಂದ ಅವನನ್ನು ಮುಚ್ಚಿಹಾಕಿದನು.
ತತಃ ಪ್ರವೃತ್ತಃ ಸುಮಹಾನ್ ಸಂಗ್ರಾಮಃ ಶೋಣಿತೋದಕಃ |
ತಾವಕಾನಾಂ ಚ ಸಮರೇ ಪಾಂಡವಾನಾಂ ಚ ಭಾರತ ॥51॥
ಎಲೈ ಭಾರತನೇ, ಅನಂತರ ಪಾಂಡವರಿಗೂ ಮತ್ತು ನಿನ್ನವರಿಗೂ ರಕ್ತದ ಒಕುಳಿಯ ದೊಡ್ಡ ಯುದ್ಧವು ಜರುಗಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಶೀತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂದನೆಯ ಅಧ್ಯಾಯ
ಪಾಂಡವರ ಜೊತೆಯಲ್ಲಿ ಭೀಷ್ಮರ ಯುದ್ಧ. ಶಿಖಂಡಿಯನ್ನು ಕುರಿತು
ಯುಧಿಷ್ಠಿರನ ಉಗ್ರವಚನಗಳು. ಶಿಖಂಡಿಯ ಮತ್ತು ಭೀಮಸೇನನ ಪರಾಕ್ರಮ.
ಸಂಜಯಃ
ಸ ತುದ್ಯಮಾನಸ್ತು ಶರೈರ್ಧನಂಜಯಃ
ಪದಾ ಹತೋ ನಾಗ ಇವ ಶ್ವಸನ್ ಬಲೀ |
ಬಾಣೇನ ಬಾಣೇನ ಮಹಾರಥಾನಾಂ
ಚಿಚ್ಛೇದ ಚಾಪಾನಿ ರಣೇ ಪ್ರಸಹ್ಯ ॥1॥
ಸಂಜಯ ಶತ್ರುಗಳ ಬಾಣಗಳಿಂದ ಪೀಡಿತನಾದ ಬಲಿಷ್ಠನಾದ ಧನಂಜಯನು ಪಾದದಿಂದ ತುಳಿದ ಸರ್ಪದಂತೆ ಶ್ವಾಸವನ್ನು ಬಿಡುತ್ತಾ ಒಂದೊಂದು ಬಾಣದಿಂದ ಯುದ್ಧದಲ್ಲಿ ಆ ಮಹಾರಥರ ಧನುಸ್ಸುಗಳನ್ನು ಶೀಘ್ರವಾಗಿ ಕತ್ತರಿಸಿದನು.
ಸಂಛಿದ್ಯ ಚಾಪಾನಿ ಚ ತಾನಿ ರಾಜ್ಞಾಂ
ತೇಷಾಂ ರಣೇ ವೀರ್ಯವತಾಂ ಕ್ಷಣೇನ |
ವಿವ್ಯಾಧ ಬಾಣೈರ್ಯುಗಪನ್ಮಹಾತ್ಮಾ
ನಿಃಶೇಷತಾಂ ತೇಷ್ವಥ ಮನ್ಯಮಾನಃ ॥2॥
ಮಹಾತ್ಮನಾದ ಅವನು ತನ್ನ ಬಾಣಗಳಿಂದ ಪರಾಕ್ರಮಶಾಲಿಗಳಾದ ಆ ರಾಜರ ಧನುಸ್ಸುಗಳನ್ನು ರಣರಂಗದಲ್ಲಿ ಒಂದು ಕ್ಷಣದಲ್ಲಿ ಕತ್ತರಿಸಿ ಅವರನ್ನು ನಿಶ್ಶೇಷಗೊಳಿಸಲು ಬಯಸಿದನು.
ನಿಪೇತುರಾಜೌ ರುಧಿರಪ್ರದಿಗ್ಧಾಃ
ತೇ ತಾಡಿತಾಃ ಶಕ್ರಸುತೇನ ರಾಜನ್ |
ವಿಭಿನ್ನಗಾತ್ರಾಃ ಪತಿತೋತ್ತಮಾಂಗಾಃ
ಗತಾಸವಶ್ಛಿನ್ನತನುತ್ರಕಾಯಾಃ ॥3॥

ಎಲೈ ರಾಜನೇ, ಇಂದ್ರಪುತ್ರನಾದ ಅರ್ಜುನನ ಪ್ರಹಾರಕ್ಕೆ ಒಳಗಾದ ಆ ರಾಜರು ರಕ್ತಸಿಕ್ತರಾಗಿ, ಕತ್ತರಿಸಲ್ಪಟ್ಟ ಶರೀರಗಳನ್ನು ಮತ್ತು ಶಿರಸ್ಸುಗಳನ್ನು ಉಳ್ಳವರಾಗಿ, ಅವರ ಕವಚಗಳು ಮತ್ತು ಶರೀರಗಳು ಭೇದಿಸಲ್ಪಡುತ್ತಿರಲು ಪ್ರಾಣಗಳನ್ನು ಕಳೆದುಕೊಂಡು ರಣಭೂಮಿಯಲ್ಲಿ ಬಿದ್ದರು.

ಮಹೀಂಗತಾಃ ಪಾರ್ಥಬಲಾಭಿಭೂತಾ
ವಿಚಿತ್ರರೂಪಾ ಯುಗಪದ್ ವಿನೇಶುಃ |
ದೃಷ್ಟ್ವಾ ಹತಾಂಸ್ತಾನ್ ಯುಧಿ ರಾಜಪುತ್ರಾನ್
ತ್ರಿಗರ್ತರಾಜಃ ಪ್ರಯಯೌ ಕ್ಷಣೇನ ||4||

ಅರ್ಜುನನ ಬಲಕ್ಕೆ ಒಳಗಾದ, ಭೂಮಿಯಲ್ಲಿ ಉರುಳಿದ, ವಿಚಿತ್ರವೇಷದ ರಾಜರು ಯುದ್ಧದಲ್ಲಿ ವಿನಾಶವನ್ನು ಹೊಂದಿದರು. ಯುದ್ಧದಲ್ಲಿ ಆ ರಾಜಪುತ್ರರು ಅರ್ಜುನನಿಂದ ಹತರಾದುದನ್ನು ನೋಡಿ ತ್ರಿಗರ್ತರಾಜನಾದ ಸುಶರ್ಮನು ಶೀಘ್ರವಾಗಿ ಅರ್ಜುನನ ಕಡೆಗೆ ಧಾವಿಸಿದನು.

ತೇಷಾಂ ರಥಾನಾಮಥ ಪೃಷ್ಠಗೋಪಾ
ದ್ವಾತ್ರಿಂಶದನ್ಯೇಽಭ್ಯಪತಂತ ಪಾರ್ಥಮ್ |
ತಥೈವ ತೇ ಸಂಪರಿವಾರ್ಯ ಪಾರ್ಥಂ
ವಿಕೃಷ್ಯ ಚಾಪಾನಿ ಮಹಾರವಾಣಿ |
ಅವೀವೃಷನ್ ಬಾಣಮಹೌಘವೃಷ್ಟ್ಯಾ
ಯಥಾ ಗಿರಿಂ ತೋಯಧರಾ ಜಲೌಘೈಃ ||5||

ರಥಗಳ ಮಧ್ಯದಲ್ಲಿ ಸುಶರ್ಮನ ರಥದ ಹಿಂಭಾಗದ ರಕ್ಷಕರಾದ ಬೇರೆ ಮೂವತ್ತೆರಡು ರಥರೂ ಸಹ ಅರ್ಜುನನ ಕಡೆಗೆ ಧಾವಿಸಿದರು. ಹಾಗೆಯೇ ಅವರು ಅರ್ಜುನನನ್ನು ಸುತ್ತುವರಿದು ಮಹಾನಾದವನ್ನು ಮಾಡುವ ತಮ್ಮ ಬಿಲ್ಲುಗಳನ್ನು ಎಳೆದು ಮೋಡಗಳು ಪರ್ವತದ ಮೇಲೆ ಜಲರಾಶಿಯನ್ನು ಸುರಿಸಿದಂತೆ ಬಾಣಗಳ ಮಹಾಪ್ರವಾಹಗಳ ವೃಷ್ಟಿಯನ್ನು ಅರ್ಜುನನ ಮೇಲೆ ಸುರಿಸಿದರು.

ಸಂಪೀಡ್ಯಮಾನಸ್ತು ಶರೌಘವೃಷ್ಟ್ಯಾ
ಧನಂಜಯಸ್ತಾನ್ ಯುಧಿ ಜಾತರೋಷಃ |
ಷಷ್ಟ್ಯಾ ಶರೈಃ ಸಂಯತಿ ತೈಲಧೌತೈಃ
ಜಘಾನ ತಾನಪ್ಯಥ ಪೃಷ್ಠಗೋಪಾನ್ ||6||

ಆ ಶರಸಮೂಹದ ಮಳೆಯಿಂದ ಪೀಡಿಸಲ್ಪಟ್ಟ ಅರ್ಜುನನು, ಯುದ್ಧದಲ್ಲಿ ರೋಷವನ್ನು ಹೊಂದಿದವನಾಗಿ ತೈಲದಲ್ಲಿ ಸಾಣೆಯನ್ನು ಹಿಡಿದ ಅರವತ್ತು ಬಾಣಗಳನ್ನು ಪ್ರಯೋಗಿಸಿ ಯುದ್ಧದಲ್ಲಿ ಆ ರಾಜಪುತ್ರರನ್ನು ಮತ್ತು ಅವರ ಹಿಂಭಾಗದ ರಕ್ಷಕರಾದ ಮೂವತ್ತೆರಡು ರಥರನ್ನು ಕೊಂದನು.

ಷಷ್ಟಿಂ ರಥಾಂಸ್ತಾನವಜಿತ್ಯ ಸಂಖ್ಯೇ
ಧನಂಜಯಃ ಪ್ರೀತಮನಾ ಯಶಸ್ವೀ |
ಅಥಾತ್ವರದ್ ಭೀಷ್ಮವಧಾಯ ಜಿಷ್ಣುಃ
ಬಲಾನಿ ರಾಜ್ಞಾಂ ಸಮರೇ ನಿಹತ್ಯ ||7||

ಧನಂಜಯನು ಯುದ್ಧದಲ್ಲಿ ಆ ಅರವತ್ತು ರಥರನ್ನು ಸೋಲಿಸಿ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ, ಕೀರ್ತಿವಂತನಾಗಿ ಆ ರಾಜರ ಸೈನ್ಯವನ್ನು ಸಂಹರಿಸಿ ಭೀಷ್ಮರ ವಧೆಯನ್ನು ಉದ್ದೇಶಿಸಿ ತ್ವರೆಯನ್ನು ಮಾಡಿದನು.

ತ್ರಿಗರ್ತರಾಜೋ ನಿಹತಾನ್ ಸಮೀಕ್ಷ್ಯ
ಮಹಾರಥಾಂಸ್ತಾನಥ ಬಂಧುವರ್ಗಾನ್ |
ರಣೇ ಪುರಸ್ಕೃತ್ಯ ನರಾಧಿಪಾಂಸ್ತಾನ್
ಜಗಾಮ ಪಾರ್ಥಂ ತ್ವರಿತೋ ವಧಾಯ ||8||

ತ್ರಿಗರ್ತರಾಜನಾದ ಸುಶರ್ಮನಾದರೋ ತನ್ನ ಪೃಷ್ಟಗೋಪರೂ, ಬಂಧುವರ್ಗಕ್ಕೆ ಸೇರಿದವರೂ ಆದ ಮಹಾರಥರು ಅರ್ಜುನನಿಂದ ಹತರಾದುದನ್ನು ನೋಡಿ ಉಳಿದ ರಾಜರನ್ನು ಮುಂದೆ ಮಾಡಿಕೊಂಡು ಯುದ್ಧದಲ್ಲಿ ಅರ್ಜುನನ ವಧೆಯನ್ನು ಉದ್ದೇಶಿಸಿ ಶೀಘ್ರವಾಗಿ ಅವನ ಕಡೆಗೆ ಸಾಗಿದನು.

ಅಭಿದ್ರುತಂ ಚಾಸ್ತ್ರಭೃತಾಂ ವರಿಷ್ಠಂ
ಧನಂಜಯಂ ವೀಕ್ಷ್ಯ ಶಿಖಂಡಿಮುಖ್ಯಾಃ |
ಅಭ್ಯುದ್ಯಯುಸ್ತೇ ಶಿತಶಸ್ತ್ರಹಸ್ತಾ
ರಿರಕ್ಷಿಷಂತೋ ರಥಮರ್ಜುನಸ್ಯ ||9||

ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಆ ರಾಜರುಗಳಿಂದ ಸುತ್ತುವರಿಯಲ್ಪಡುತ್ತಿರುವುದನ್ನು ನೋಡಿ ಶಿಖಂಡಿಯೇ ಮೊದಲಾದ ತೀಕ್ಷ್ಣ ಶಸ್ತ್ರಧಾರಿಗಳು ಅರ್ಜುನನ ರಥವನ್ನು ರಕ್ಷಿಸಲು ಬಯಸಿ ಅವನ ಕಡೆಗೆ ಸಾಗಿದರು.

ಪಾರ್ಥೋಽಪಿ ತಾನಾಪತತಃ ಸಮೀಕ್ಷ್ಯ
ತ್ರಿಗರ್ತರಾಜ್ಞಾ ಸಹಿತಾನ್ ನೃವೀರಾನ್ |
ವಿಧ್ವಂಸಯಿತ್ವಾ ಸಮರೇ ಧನುಷ್ಮಾನ್
ಗಾಂಡೀವಮುಕ್ತೈರ್ನಿಶಿತೈಃ ಪೃಷತ್ಕೈಃ |
ಭೀಷ್ಮಂ ಯಿಯಾಸುರ್ಯುಧಿ ಸಂದದರ್ಶ

ದುರ್ಯೋಧನಂ ಸೈಂಧವಾದೀಂಶ್ಚ ರಾಜ್ಞಃ ॥10॥

ಅರ್ಜುನನಾದರೋ ತ್ರಿಗರ್ತರಾಜರ ಜೊತೆಯಲ್ಲಿ ತನ್ನ ಕಡೆಗೆ ಒಟ್ಟಾಗಿ ಬರುವ ಆ ರಾಜರನ್ನು ನೋಡಿ ಧನುರ್ಧಾರಿಯಾದ ಅವನು ಗಾಂಡೀವ ಧನುಸ್ಸಿನಿಂದ ಹೊರಹೊಮ್ಮಿದ ಹರಿತವಾದ ಬಾಣಗಳಿಂದ ಯುದ್ಧದಲ್ಲಿ ಅವರನ್ನು ನಾಶಗೊಳಿಸಿ, ಯುದ್ಧಭೂಮಿಯಲ್ಲಿ ಭೀಷ್ಮರ ಕಡೆಗೆ ಹೋಗಲು ಬಯಸುತ್ತಾ ದುರ್ಯೋಧನನನ್ನೂ ಮತ್ತು ಸೈಂಧವಾದಿ ರಾಜರನ್ನೂ ನೋಡಿದನು.

ಆವಾರಯಿಷ್ಣೂನಭಿಸಂಪ್ರಯಾಯ
ಮುಹೂರ್ತಮಾಯೋಧ್ಯ ಬಲೇನ ವೀರಃ।
ಉತ್ಸೃಜ್ಯ ರಾಜಾನಮನಂತವೀರ್ಯೋ
ಜಯದ್ರಥಾದೀಂಶ್ಚ ನೃಪಾನ್ ಮಹೌಜಾಃ।
ಯಯೌ ತತೋ ಭೀಮಬಲೋ ಮನಸ್ವೀ
ಗಾಂಗೇಯಮಾಜೌ ಶರಚಾಪಪಾಣಿಃ ॥11॥

ತನ್ನನ್ನು ತಡೆಯಲು ಬಂದ ಅವರ ಜೊತೆಯಲ್ಲಿ ಒಂದು ಮುಹೂರ್ತದ ಕಾಲ ತನ್ನ ಬಲದಿಂದ ಯುದ್ಧವನ್ನು ಮಾಡಿದ ಅನಂತ ಪರಾಕ್ರಮಿಯಾದ, ಮಹಾಸಾಮರ್ಥ್ಯವನ್ನು ಹೊಂದಿದ, ಭಯಂಕರವಾದ ಬಲವುಳ್ಳ, ಧೈರ್ಯಶಾಲಿಯಾದ, ವೀರನಾದ ಅರ್ಜುನನು ರಾಜನಾದ ದುರ್ಯೋಧನ ಜಯದ್ರಥ ಮೊದಲಾದ ರಾಜರನ್ನು ಬಿಟ್ಟು ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ಭೀಷ್ಮರ ಕಡೆಗೆ ಸಾಗಿಬಂದನು.

ಭೀಷ್ಮೋಽಪಿ ದೃಷ್ಟ್ವಾ ಸಮರೇ ಕೃತಾಸ್ತ್ರಾನ್
ಸ ಪಾಂಡವಾನಾಂ ರಥಿನೋಽಭ್ಯುದಾರಾನ್।
ವಿಹಾಯ ಸಂಗ್ರಾಮಮುಖೇ ಧನಂಜಯಂ
ಜವೇನ ಪಾರ್ಥಂ ಪುನರಾಜಗಾಮ ॥12॥

ಭೀಷ್ಮರೂ ಸಹ ರಣರಂಗದಲ್ಲಿ ಅಸ್ತ್ರಜ್ಞರೂ, ಉದಾರರೂ ಆದ ಪಾಂಡವರ ರಥವನ್ನು ನೋಡಿ ಅರ್ಜುನನನ್ನು ಬಿಟ್ಟು ಶೀಘ್ರವಾಗಿ ಧರ್ಮರಾಜನ ಕಡೆಗೆ ಪುನಃ ಬಂದರು.

ಯುಧಿಷ್ಠಿರಶ್ಚೋಗ್ರಬಲೋ ಮಹಾತ್ಮಾ
ಸಮಾಯಯೌ ತ್ವರಿತೋ ಜಾತಕೋಪಃ।
ಮದ್ರಾಧಿಪಂ ಸಮಭಿತ್ಯಜ್ಯ ಸಂಖೇ
ಸ್ವಭಾಗಮಾಪ್ತಂ ತಮನಂತಕೀರ್ತಿಃ।
ಸಾರ್ಧಂ ಸ ಮಾದ್ರೀಸುತಭೀಮಸೇನೈಃ
ಭೀಷ್ಮಂ ಯಯೌ ಶಾಂತನವಂ ರಣಾಯ ॥13॥

ಅನಂತ ಕೀರ್ತಿಯುಳ್ಳ ಮಹಾತ್ಮನಾದ ಉಗ್ರಬಲವುಳ್ಳ ಯುಧಿಷ್ಠಿರನೂ ಸಹ ಕೋಪಗೊಂಡವನಾಗಿ ಯುದ್ಧದಲ್ಲಿ ತನ್ನ ಭಾಗದಲ್ಲಿ ದೊರಕಿದ ಶಲ್ಯನನ್ನು ತೊರೆದು ನಕುಲ-ಸಹದೇವರ ಮತ್ತು ಭೀಮಸೇನನ ಜೊತೆಯಲ್ಲಿ ಶಂತನು ಪುತ್ರರಾದ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡಲು ಶೀಘ್ರವಾಗಿ ಬಂದನು.

ತೈಃ ಸಂಪ್ರಯುಕ್ತಃ ಸ ಮಹಾರಥಾಗ್ರ್ಯೈಃ
ಗಂಗಾಸುತಃ ಸಮರೇ ಚಿತ್ರಯೋಧೀ।
ನ ವಿವ್ಯಥೇ ಶಾಂತನವೋ ಮಹಾತ್ಮಾ
ಸಮಾಗತೈಃ ಪಾಂಡುಸುತೈಃ ಸಮಸ್ತೈಃ ॥14॥

ಮಹಾರಥಶ್ರೇಷ್ಠರಾದ ಸಮಸ್ತರಾದ ಪಾಂಡುಸುತರು ತನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಂದರೂ ಮಹಾತ್ಮರೂ, ಗಂಗಾಪುತ್ರರೂ, ಶಂತನು ಪುತ್ರರೂ, ವಿಚಿತ್ರಯುದ್ಧವನ್ನು ಮಾಡುವವರೂ ಆದ ಭೀಷ್ಮರು ವ್ಯಥೆ ಪಡಲಿಲ್ಲ.

ಅಥೈತ್ಯ ರಾಜಾ ಯುಧಿ ಸತ್ಯಸಂಧೋ
ಜಯದ್ರಥೋಽತ್ಯುಗ್ರಬಲೋ ಮನಸ್ವೀ।
ಚಿಚ್ಛೇದ ಚಾಪಾನಿ ಮಹಾರಥಾನಾಂ
ಪ್ರಸಹ್ಯ ತೇಷಾಂ ಧನುಷಾ ವರೇಣ ॥15॥

ಆಗ ಸತ್ಯಸಂಧರೂ, ಧೈರ್ಯಶಾಲಿಗಳೂ, ಬಹಳ ಉಗ್ರವಾದ ಬಲವುಳ್ಳವರೂ, ಜಯಿಸುವ ರಥವನ್ನು ಹೊಂದಿದವರೂ ಆದ ಭೀಷ್ಮರು ಆ ಮಹಾರಥರ ಧನುಸ್ಸುಗಳನ್ನು ತಮ್ಮ ಶ್ರೇಷ್ಠವಾದ ಧನುಸ್ಸಿನಿಂದ ಬಲಾತ್ಕರಿಸಿ ಕತ್ತರಿಸಿದರು (ಇಲ್ಲಿ ಜಯದ್ರಥ ಜಯಿಸುವ ರಥವನ್ನುಳ್ಳ ಎಂದರೆ ಭೀಷ್ಮರೆಂದು ಅರ್ಥ- ಲಕ್ಷ್ಯಾಲಂಕಾರ).

ಯುಧಿಷ್ಠಿರಂ ಭೀಮಸೇನಂ ಯಮೌ ಚ
ಪಾರ್ಥಂ ತಥಾ ಯುಧಿ ಸಂಜಾತಕೋಪಃ।
ದುರ್ಯೋಧನಃ ಕ್ರೋಧವಿಷೋ ಮಹಾತ್ಮಾ
ಜಘಾನ ಬಾಣೈರನಲಪ್ರಕಾಶೈಃ ॥16॥

ಯುದ್ಧದಲ್ಲಿ ಕೋಪಗೊಂಡ ಕ್ರೋಧವಿಷವನ್ನು ಉಗುಳುವ, ಮಹಾಪ್ರಯತ್ನಶಾಲಿಯಾದ ದುರ್ಯೋಧನನು ಅಗ್ನಿಯ ಪ್ರಕಾಶವನ್ನು ಹೊಂದಿದ ಬಾಣಗಳಿಂದ ಯುಧಿಷ್ಠಿರನನ್ನೂ, ಭೀಮಸೇನನನ್ನೂ, ನಕುಲ-ಸಹದೇವರನ್ನೂ, ಅರ್ಜುನನನ್ನೂ ಹೊಡೆದನು.

ಕೃಪೇಣ ಶಲ್ಯೇನ ಶಲೇನ ಚೈವ
ತಥಾ ವಿಭೋ ಚಿತ್ರಸೇನೇನ ಚಾಜೌ।

ವಿದ್ಧಾಃ ಶರೈಸ್ತೇऽತಿವಿವೃದ್ಧಕೋಪೈಃ
ದೇವಾ ಯಥಾ ದೈತ್ಯಗಣೈಃ ಸಮೇತೈಃ ॥17॥
ಎಲೈ ವಿಭುವೇ, ಬಹಳವಾಗಿ ಕೋಪಗೊಂಡ ಕೃಪರಿಂದ, ಶಲ್ಯನಿಂದ, ಶಲನಿಂದ ಹಾಗೆಯೇ ಚಿತ್ರಸೇನನಿಂದ ಯುದ್ಧದಲ್ಲಿ ಪಾಂಡವರು ಒಟ್ಟಾಗಿ ಸೇರಿದ ದೈತ್ಯ ಸಮೂಹದಿಂದ ಹೊಡೆಯಲ್ಪಟ್ಟ ದೇವತೆಗಳಂತೆ ಬಾಣಗಳಿಂದ ಹೊಡೆಯಲ್ಪಟ್ಟರು.
ಛಿನ್ನಾಯುಧಂ ಶಾಂತನವೇನ ರಾಜಾ
ಶಿಖಂಡಿನಂ ಪ್ರೇಕ್ಷ್ಯ ಚ ಜಾತಕೋಪಃ ।
ಅಜಾತಶತ್ರುಃ ಸಮರೇ ಮಹಾತ್ಮಾ
ಶಿಖಂಡಿನಂ ಕ್ರುದ್ಧ ಉವಾಚ ವಾಕ್ಯಮ್ ॥18॥
ಭೀಷ್ಮರಿಂದ ಕತ್ತರಿಸಲ್ಪಟ್ಟ ಆಯುಧವುಳ್ಳ ಶಿಖಂಡಿಯನ್ನು ನೋಡಿ ಅಜಾತ ಶತ್ರುವೂ, ಮಹಾತ್ಮನೂ ಆದ ಧರ್ಮರಾಜನು ಕೋಪವನ್ನು ಹೊಂದಿ ಯುದ್ಧದಲ್ಲಿ ಶಿಖಂಡಿಯನ್ನು ಕುರಿತು ಕ್ರುದ್ಧನಾಗಿ ಈ ಮಾತನ್ನು ಆಡಿದನು.
ಉಕ್ತ್ವಾ ತಥಾ ತ್ವಂ ಪಿತುರಗ್ರತೋ ಮಾಮ್
ಅಹಂ ಹನಿಷ್ಯಾಮಿ ಮಹಾವ್ರತಂ ತಮ್ ।
ಭೀಷ್ಮಂ ಶರೌಘೈರ್ವಿಮಲಾರ್ಕವರ್ಣೈಃ
ಸತ್ಯಂ ವದಾಮೀತಿ ಕೃತಾ ಪ್ರತಿಜ್ಞಾ ॥19॥
ನೀನು ನಿನ್ನ ತಂದೆಯ ಎದುರಿನಲ್ಲಿ ನಾನು ಸ್ವಚ್ಛವಾದ ಸೂರ್ಯನ ವರ್ಣದ ಬಾಣವನ್ನು ಹೊಂದಿದ ಮಹಾರಥರಾದ ಭೀಷ್ಮರನ್ನು ಕೊಲ್ಲುವೆನು ಎಂದು ನನಗೆ ಪ್ರತಿಜ್ಞೆಯನ್ನು ಮಾಡಿ, ನಾನು ಸತ್ಯವನ್ನು ನುಡಿದಿದ್ದೇನೆ (ಹಾಗೆ ಮಾಡದಿದ್ದರೆ ಅಗ್ನಿಯನ್ನು ಪ್ರವೇಶಿಸುತ್ತೇನೆ) ಎಂದೂ ಪ್ರತಿಜ್ಞೆಯನ್ನು ಮಾಡಿದ್ದೀಯೆ.
ತ್ವಯಾ ನ ಚೈನಾಂ ಸಫಲಾಂ ಕರೋಷಿ
ದೇವವ್ರತಂ ಯನ್ನ ನಿಹಂಸಿ ಯುದ್ಧೇ ।
ಮಿಥ್ಯಾಪ್ರತಿಜ್ಞೋ ಭವ ಮಾ ನೃವೀರ
ರಕ್ಷಸ್ವ ಧರ್ಮಂ ಚ ಕುಲಂ ಯಶಶ್ಚ ॥20॥
ನೀನು ಯುದ್ಧದಲ್ಲಿ ಭೀಷ್ಮರನ್ನು ಕೊಲ್ಲದಿರುವುದರಿಂದ ನಿನ್ನ ಪ್ರತಿಜ್ಞೆಯನ್ನು ವ್ಯರ್ಥವನ್ನಾಗಿ ಮಾಡುತ್ತಿದ್ದೀಯೆ. ಎಲೈ ಪುರುಷವೀರನೇ, ನಿನ್ನ ಪ್ರತಿಜ್ಞೆಯನ್ನು ವ್ಯರ್ಥಗೊಳಿಸಬೇಡ. ನಿನ್ನ ಕುಲದ ಧರ್ಮವನ್ನು ಮತ್ತು ಕೀರ್ತಿಯನ್ನು ರಕ್ಷಿಸಿಕೊಳ್ಳುವವನಾಗು.
ಪ್ರೇಕ್ಷಸ್ವ ಭೀಷ್ಮಂ ಯುಧಿ ಭೀಮವೇಗಂ
ಸರ್ವಾಂಸ್ತಪಂತಂ ಮಮ ಸೈನ್ಯಸಂಘಾನ್ ।
ಶರೌಘಜಾಲೈರತಿತಿಗ್ಮತೇಜೈಃ
ಕಾಲಂ ಯಥಾ ಕಾಲಕೃತಂ ಕ್ಷಣೇನ ॥21॥
ಆಯುಸ್ಸಿನ ಅವಸಾನ ಕಾಲದಲ್ಲಿ ಒದಗುವ ಯಮನಂತೆ ತಮ್ಮ ಪೂರ್ಣ ಸಾಮರ್ಥ್ಯವುಳ್ಳ ಬಾಣಗಳ ಸಮೂಹದಿಂದ ನನ್ನ ಸೈನ್ಯವೆಲ್ಲವನ್ನೂ ಯುದ್ಧದಲ್ಲಿ ದಹಿಸುತ್ತಿರುವ, ಭಯಂಕರವಾದ ವೇಗವುಳ್ಳ ಭೀಷ್ಮರನ್ನು ನೋಡು.
ನಿಕೃತ್ತಚಾಪಃ ಸಮರಾನಪೇಕ್ಷಃ
ಪರಾಜಿತಃ ಶಾಂತನವೇನ ರಾಜ್ಞಾ ।
ವಿಹಾಯ ಬಂಧೂನಥ ಸೋದರಾಂಶ್ಚ
ಕ್ವ ಯಾಸ್ಯಸೇ ನಾನುರೂಪಂ ತವೇದಮ್ ॥22॥
ಯುದ್ಧದಲ್ಲಿ ಭೀಷ್ಮರಿಂದ ಪರಾಜಿತನಾಗಿ ನಿನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಯುದ್ಧದಿಂದ ವಿಮುಖನಾಗಿ ನಿನ್ನ ಬಂಧುಗಳನ್ನು ಮತ್ತು ಸಹೋದರರನ್ನು ಬಿಟ್ಟು ಎಲ್ಲಿಗೆ ಹೋಗುತ್ತಿದ್ದೀಯೆ? ಇದು ನಿನಗೆ ಅನುರೂಪವಾದುದಲ್ಲ.
ದೃಷ್ಟ್ವಾ ಹಿ ಭೀಷ್ಮಂ ತಮನಂತವೀರ್ಯಂ
ಭಗ್ನಂ ಚ ಸೈನ್ಯಂ ದ್ರುವಮಾಣಮೇವಮ್ ।
ಭೀತೋऽಸಿ ನೂನಂ ದ್ರುಪದಸ್ಯ ಪುತ್ರ
ತಥಾ ಹಿ ತೇ ಮುಖವರ್ಣೋऽಪ್ರಹೃಷ್ಟಃ ॥23॥
ಎಲೈ ದ್ರುಪದಪುತ್ರನೇ, ಅನಂತ ಪರಾಕ್ರಮವುಳ್ಳ ಭೀಷ್ಮರನ್ನು ಮತ್ತು ಭಗ್ನವಾಗಿ ಈ ರೀತಿ ಓಡುತ್ತಿರುವ ನಿನ್ನ ಸೈನ್ಯವನ್ನು ನೋಡಿ ನೀನು ಖಂಡಿತವಾಗಿ ಹೆದರಿದ್ದೀಯೆ. ನಿನ್ನ ಮುಖದ ಕಾಂತಿಯು ದುಃಖದಿಂದ ಕೂಡಿರುವಂತೆ ತೋರುತ್ತಿದೆ.
ಅಜ್ಞಾಯಮಾನೇऽಪಿ ಧನಂಜಯೇ ತು
ಮಹಾಹವೇ ಸಂಪ್ರಸಕ್ತೇ ನೃವೀರ ।
ಕಥಂ ಹಿ ಭೀಷ್ಮಾತ್ ಪ್ರಥಿತಃ ಪೃಥಿವ್ಯಾಂ
ಭಯಂ ತ್ವಮದ್ಯ ಪ್ರಕರೋಷಿ ವೀರ ॥24॥
ಎಲೈ ಪುರುಷವೀರನೇ, ಧನಂಜಯನು ಹಿಂಭಾಗದಲ್ಲಿ ಇರುತ್ತಿರಲು, ದೊಡ್ಡ ಯುದ್ಧವು ಪ್ರಸಕ್ತವಾಗಿರಲು, ಭೂಮಿಯಲ್ಲಿ ಪ್ರಖ್ಯಾತನಾಗಿರುವ ನೀನು ಹೇಗೆ ಈ ದಿನ ಭೀಷ್ಮರಿಗೆ ಹೆದರಿದ್ದೀಯೆ? (ಎಂದು ಹೇಳಿದನು).
ಸ ಧರ್ಮರಾಜಸ್ಯ ವಚೋ ನಿಶಮ್ಯ
ರೂಕ್ಷಾಕ್ಷರಂ ವಿಪ್ರಲಾಪಾನುಬದ್ಧಮ್ ।

ಪ್ರತ್ಯಾದೇಶಂ ಮನ್ಯಮಾನೋ ಮಹಾತ್ಮಾ
ಪ್ರತತ್ವರೇ ಭೀಷ್ಮವಧಾಯ ರಾಜನ್ ॥25॥
ಎಲೈ ರಾಜನೇ, ಅವನು ತನ್ನ ನಿಂದಾಸಹಿತವಾದ ಧರ್ಮರಾಜನ ಕ್ರೂರವಾದ ಮಾತುಗಳನ್ನು ಕೇಳಿ ಅದನ್ನು ನಿರಾಕರಣ ರೂಪವಾದ ಆ ಮಾತುಗಳು ತನಗೆ ಅವನು ಮಾಡಿದ ಆಜ್ಞೆ ಎಂದು ತಿಳಿದು ಮಹಾತ್ಮನಾದ ಅವನು ಭೀಷ್ಮರ ವಧೆಗಾಗಿ ತ್ವರೆ ಮಾಡಿದನು.
ತಮಾಪತಂತಂ ಮಹತಾ ಜವೇನ
ಶಿಖಂಡಿನಂ ಭೀಷ್ಮಮಭಿದ್ರವಂತಮ್ |
ಆವಾರಯಾಮಾಸ ಹಿ ಶಲ್ಯ ಏನಂ
ಶಸ್ತ್ರೇಣ ಘೋರೇಣ ಸುದುರ್ಜಯೇನ ॥26॥
ಮಹಾವೇಗದಿಂದ ಭೀಷ್ಮರ ಕಡೆಗೆ ಸಾಗಿಬರುತ್ತಿದ್ದ ಆ ಶಿಖಂಡಿಯನ್ನು ಜಯಿಸಲು ಅಸಾಧ್ಯವಾದ, ಘೋರವಾದ ಶಸ್ತ್ರಪ್ರಯೋಗದಿಂದ ಶಲ್ಯನು ತಡೆದನು.
ಸ ಚಾಪಿ ದೃಷ್ಟ್ವಾ ಸಮುದೀರ್ಯಮಾಣಮ್
ಅಸ್ತ್ರಂ ಯುಗಾಂತಾಗ್ನಿಸಮಪ್ರಭಾವಮ್ |
ನಾಸೌ ವ್ಯಮುಹ್ಯದ್ ದ್ರುಪದಸ್ಯ ಪುತ್ರೋ
ರಾಜನ್ ಮಹೇಂದ್ರಪ್ರತಿಮಪ್ರಭಾವಃ ॥27॥
ಎಲೈ ರಾಜನೇ, ಶಲ್ಯನು ಪ್ರಯೋಗಿಸಿದ ಯುಗಾಂತ ಕಾಲದ ಅಗ್ನಿಗೆ ಸಮಾನವಾದ ಸಾಮರ್ಥ್ಯವುಳ್ಳ ಆ ಅಸ್ತ್ರವು (ಆಗ್ನೇಯಾಸ್ತ್ರ) ವಿಜೃಂಭಿಸುತ್ತಿರುವುದನ್ನು ನೋಡಿ ಮಹೇಂದ್ರನಿಗೆ ಸಮನಾದ ಸಾಮರ್ಥ್ಯವುಳ್ಳ ಆ ದ್ರುಪದ ಪುತ್ರನು ಮೋಹಕ್ಕೆ ಒಳಗಾಗಲಿಲ್ಲ.
ತಸ್ಥೌ ಚ ತತ್ರೈವ ಮಹಾಧನುಷ್ಮಾನ್
ಶರೈಸ್ತದಸ್ತ್ರಂ ಪ್ರತಿಬಾಧಮಾನಃ |
ಅಥಾದದೇ ವಾರುಣಮನ್ಯದಸ್ತ್ರಂ
ಶಿಖಂಡ್ಯಥೋಗ್ರಂ ಪ್ರತಿಘಾತಾಯ ತಸ್ಯ |
ತದಸ್ತ್ರಮಸ್ತ್ರೇಣ ವಿದಾರ್ಯಮಾಣಂ
ಖಸ್ಥಾಃ ಸುರಾ ದದೃಶುಃ ಪಾರ್ಥಿವಾಶ್ಚ ॥28॥
ಮಹಾಧನುರ್ಧಾರಿಯಾದ ಅವನು ತನ್ನ ಬಾಣಗಳಿಂದ ಆ ಅಸ್ತ್ರವನ್ನು ನಿವಾರಣೆ ಮಾಡುತ್ತಾ ಅಲ್ಲಿಯೇ ನಿಂತನು. ಅನಂತರ ಆ ಅಸ್ತ್ರವನ್ನು ಪ್ರತಿಘಾತಗೊಳಿಸಲು ಉಗ್ರವಾದ ವಾರುಣಾಸ್ತ್ರವನ್ನು ಹೂಡಿದನು. ಶಲ್ಯನು ಪ್ರಯೋಗಿಸಿದ ಆಗ್ನೇಯಾಸ್ತ್ರವು ಶಿಖಂಡಿಯ ವಾರುಣಾಸ್ತ್ರದಿಂದ ನಾಶಹೊಂದುವುದನ್ನು ಅಂತರಿಕ್ಷದಲ್ಲಿ ನಿಂತ ದೇವತೆಗಳು ಮತ್ತು ರಣರಂಗದಲ್ಲಿದ್ದ ರಾಜರು ನೋಡಿದರು.
ಭೀಷ್ಮಸ್ತು ರಾಜನ್ ಸಮರೇ ಮಹಾತ್ಮಾ
ಧನುಃ ಸುಚಿತ್ರಂ ಧ್ವಜಮೇವ ಚಾಪಿ |
ಛಿತ್ತ್ವಾನದತ್ ಪಾಂಡುಸುತಸ್ಯ ವೀರೋ
ಯುಧಿಷ್ಠಿರಸ್ಯಾಜಮೀಢಸ್ಯ ರಾಜ್ಞಃ ॥29॥
ಎಲೈ ರಾಜನೇ, ಮಹಾತ್ಮರೂ, ವೀರರೂ ಆದ ಭೀಷ್ಮರಾದರೋ ಯುದ್ಧದಲ್ಲಿ ಪಾಂಡುಸುತನಾದ, ಆಜಮೀಢನಾದ ಯುಧಿಷ್ಠಿರನ ಅತ್ಯಂತ ಚಿತ್ರವಾದ ಧನುಸ್ಸನ್ನು ಮತ್ತು ಧ್ವಜವನ್ನು ಕತ್ತರಿಸಿ ಸಿಂಹನಾದವನ್ನು ಮಾಡಿದರು.
ತತಃ ಸಮುತ್ಸೃಜ್ಯ ಧನುಃ ಸಬಾಣಂ
ಯುಧಿಷ್ಠಿರಂ ವೀಕ್ಷ್ಯ ಭಯಾಭಿಭೂತಮ್ |
ಗದಾಂ ಪ್ರಗೃಹ್ಯಾಭಿಪಪಾತ ಸಂಖ್ಯೇ
ಜಯದ್ರಥಂ ಭೀಮಸೇನಃ ಪದಾತಿಃ ॥30॥
ಆಗ ಯುಧಿಷ್ಠಿರನು ಭಯದಿಂದ ಆವೃತವಾದುದನ್ನು ನೋಡಿ ಭೀಮಸೇನನು ಧನುಸ್ಸನ್ನು ಮತ್ತು ಬಾಣಗಳನ್ನು ತ್ಯಜಿಸಿ ಗದೆಯನ್ನು ತೆಗೆದುಕೊಂಡು ಪದಾತಿಯಾಗಿ ಸೈಂಧವನಾದ ಜಯದ್ರಥನ ಕಡೆಗೆ ಸಾಗಿಬಂದನು.
ತಮಾಪತಂತಂ ಮಹತಾ ಜವೇನ
ಜಯದ್ರಥಃ ಸಗದಂ ಭೀಮಸೇನಮ್ |
ವಿವ್ಯಾಧ ಘೋರೈರ್ಯಮದಂಡಕಲ್ಪೈಃ
ಶಿತೈಃ ಶರೈಃ ಪಂಚಶತೈಃ ಸಮಂತಾತ್ ॥31॥
ಗದೆಯನ್ನು ಹಿಡಿದು ತನ್ನ ಕಡೆಗೆ ಬಹಳ ವೇಗದಿಂದ ಸಾಗಿಬರುತ್ತಿದ್ದ ಭೀಮಸೇನನನ್ನು ನೋಡಿ ಯಮದಂಡ ಸದೃಶವಾಗಿದ್ದ ಘೋರವಾದ ಐದು ನೂರು ಹರಿತವಾದ ಬಾಣಗಳನ್ನು ಭೀಮಸೇನನ ಮೇಲೆ ಎಲ್ಲ ಕಡೆಗಳಲ್ಲಿಯೂ ಪ್ರಯೋಗಿಸಿದನು.
ಅಚಿಂತಯಿತ್ವಾ ಸ ಶರಾಂಸ್ತರಸ್ವೀ
ವೃಕೋದರಃ ಕ್ರೋಧಪರೀತಚೇತಾಃ |
ಜಘಾನ ವಾಹಾನ್ ಸಮರೇ ಸಮಸ್ತಾನ್
ಆರಟ್ಟಜಾನ್ ಸಿಂಧುರಾಜಸ್ಯ ಸಂಖ್ಯೇ ॥32॥
ಕ್ರೋಧಪೂರ್ಣ ಮನಸ್ಸುಳ್ಳವನೂ, ವೇಗಶಾಲಿಯೂ ಆದ ಆ ವೃಕೋದರನು ಆ ಬಾಣಗಳನ್ನು ಗಣನೆಗೇ ತೆಗೆದುಕೊಳ್ಳದೆ ಯುದ್ಧದಲ್ಲಿ ಸಿಂಧುರಾಜನ ರಥದ ಆರಟ್ಟದೇಶದಲ್ಲಿ ಜನಿಸಿದ ಎಲ್ಲ ಅಶ್ವಗಳನ್ನೂ ಕೊಂದನು.
ತತೋಽಭಿವೀಕ್ಷ್ಯಾಪ್ರತಿಮಪ್ರಭಾವಃ

ತವಾತ್ಮಜಸ್ತ್ವರಮಾಣೋ ರಥೇನ |
ಅಭ್ಯಾಯಯೌ ಭೀಮಸೇನಂ ನಿಹಂತುಂ
ಸಮುದ್ಯತಾಸ್ತ್ರಃ ಸುರರಾಜಕಲ್ಪಃ ॥33॥
ಆಗ ಅಸದೃಶ ಸಾಮರ್ಥ್ಯವುಳ್ಳ, ಸುರರಾಜನಿಗೆ ಸದೃಶನಾದ, ನಿನ್ನ ಪುತ್ರನು ಅಸ್ತ್ರವನ್ನು ಕೈಯಲ್ಲಿ ಎತ್ತಿಹಿಡಿದು ಭೀಮಸೇನನನ್ನು ಕೊಲ್ಲಲು ತನ್ನ ರಥದಿಂದ ಅವನ ಕಡೆಗೆ ಧಾವಿಸಿ ಬಂದನು.
ಜಯದ್ರಥೋ ಭಗ್ನವಾಹಂ ರಥಂ ತಂ
ತ್ಯಕ್ತ್ವಾ ಯಯೌ ಯತ್ರ ರಾಜಾ ಕುರೂಣಾಮ್ |
ಭಯೇನ ಭೀಮಸ್ಯ ಸ ಮೂಢಚೇತಾಃ
ಸಸೌಬಲಸ್ತತ್ರ ಯುದ್ಧಸ್ಯ ಭೀತಃ ॥34॥
ಭೀಮನ ಭಯದಿಂದ ದಿಕ್ಕು ತೋಚದಂತಿದ್ದ ಜಯದ್ರಥನು ಅಲ್ಲಿ ಶಕುನಿಯ ಜೊತೆಯಲ್ಲಿ ನಿಂತು ಯುದ್ಧ ಮಾಡಲು ಹೆದರಿ, ಅಶ್ವಗಳು ಭಗ್ನಗೊಂಡ ತನ್ನ ರಥವನ್ನು ಬಿಟ್ಟು ಕುರುರಾಜನಾದ ದುರ್ಯೋಧನನು ಯುದ್ಧ ಮಾಡುವ ಸ್ಥಳಕ್ಕೆ ಬಂದನು.
ಭೀಮೋಽಪ್ಯಥೈನಂ ಸಹಸಾ ವಿನದ್ಯ
ಪ್ರತ್ಯುದ್ಯಯೌ ಗದಯಾ ತರ್ಜಮಾನಃ |
ಸಮುದ್ಯತಾಂ ತಾಂ ಯಮದಂಡಕಲ್ಪಾಂ
ದೃಷ್ಟ್ವಾ ಗದಾಂ ತೇ ಕುರವಃ ಸಮಂತಾತ್ ॥35॥
ವಿಹಾಯ ಸರ್ವೇ ತವ ಪುತ್ರಮುಗ್ರಂ
ಪಾತಂ ಗದಾಯಾಃ ಪರಿಹರ್ತುಕಾಮಾಃ |
ಅಪಕ್ರಾಂತಾಸ್ತುಮುಲೇ ಸಂವಿಮರ್ದೇ
ಸುದಾರುಣೇ ಭಾರತ ಮೋಹನೀಯೇ ॥36॥
ಭೀಮಸೇನನೂ ಸಹ ಆಗ ತಕ್ಷಣ ಸಿಂಹನಾದವನ್ನು ಮಾಡಿ ಗದೆಯಿಂದ ಅವನನ್ನು ಹೆದರಿಸುತ್ತಾ ಅವನ ಕಡೆಗೆ ಸಾಗಿದನು. ಭೀಮಸೇನನು ಎತ್ತಿ ಹಿಡಿದ ಯಮದಂಡಕ್ಕೆ ಸದೃಶವಾದ ಆ ಗದೆಯನ್ನು ನೋಡಿ ಆ ಕುರುಗಳೆಲ್ಲರೂ ಆ ಗದೆಯ ಉಗ್ರಪಾತವನ್ನು ತಪ್ಪಿಸಿಕೊಳ್ಳಲು ಬಯಸಿ ಘೋರವಾದ ಮತ್ತು ಮೂರ್ಛಾಜನಕವಾದ ಯುದ್ಧವು ಸನ್ನಿಹಿತವಾಗಿರುವಾಗ ನಿನ್ನ ಪುತ್ರನನ್ನು ಒಬ್ಬನನ್ನೇ ಬಿಟ್ಟು ಓಡಿಹೋದರು.
ಅಮೂಢಚೇತಾಸ್ತ್ವಥ ಚಿತ್ರಸೇನೋ
ಮಹಾಗದಾಮಾಪತಂತೀಂ ನಿರೀಕ್ಷ್ಯ |
ರಥಂ ಸಮುತ್ಸೃಜ್ಯ ಪದಾತಿರಾಜೌ
ಪ್ರಗೃಹ್ಯ ಖಡ್ಗಂ ವಿಮಲಂ ಚ ಚರ್ಮ |
ಅವಪ್ಲುತಃ ಸಿಂಹ ಇವಾಚಲಾಗ್ರಾತ್
ಜಗಾಮ ಚಾನ್ಯಂ ಭುವಿ ಭೂಮಿದೇಶಮ್ ॥37॥
ನಿನ್ನ ಪುತ್ರನಾದ ಚಿತ್ರಸೇನನಾದರೋ ಮನಸ್ಸಿನಲ್ಲಿ ಗಾಬರಿಗೊಳ್ಳದೆ ತನ್ನ ಕಡೆಗೆ ಬರುತ್ತಿದ್ದ ಆ ಮಹಾಗದೆಯನ್ನು ನೋಡಿ ರಥವನ್ನು ಬಿಟ್ಟು ಪರ್ವತದಿಂದ ಸಿಂಹವು ಇಳಿದಂತೆ ಕೆಳಗೆ ಹಾರಿ, ಯುದ್ಧಭೂಮಿಯಲ್ಲಿ ಪದಾತಿಯಾಗಿ ಖಡ್ಗ ಮತ್ತು ವಿಮಲವಾದ ಗುರಾಣಿಯನ್ನು ಹಿಡಿದು ರಣಭೂಮಿಯ ಇನ್ನೊಂದು ಪ್ರದೇಶಕ್ಕೆ ಹೋದನು.
ಗದಾಪಿ ಸಾ ಪ್ರಾಪ್ಯ ರಥಂ ಸುಚಿತ್ರಂ
ಸಾಶ್ವಂ ಸಸೂತಂ ವಿನಿಹತ್ಯ ಸಂಖ್ಯೇ |
ಜಗಾಮ ಭೂಮಿಂ ಜ್ವಲಿತಾ ಮಹೋಲ್ಕಾ
ಭ್ರಷ್ಟಾಂಬರಾದ್ ಗಾಮಿವ ಸಂಪತಂತೀ ॥38॥
ಭೀಮಸೇನನು ಪ್ರಯೋಗಿಸಿದ ಆ ಗದೆಯಾದರೂ ಆಶ್ಚರ್ಯಕರವಾದ ಆ ರಥವನ್ನು ಸೇರಿ ಯುದ್ಧಭೂಮಿಯಲ್ಲಿ ಅಶ್ವ-ಸೂತ ಸಹಿತವಾದ ಅದನ್ನು ಪುಡಿ ಮಾಡಿ ಆಕಾಶದಿಂದ ಬಿದ್ದ ಜ್ವಲಿಸುವ ಮಹೋಲ್ಕೆಯಂತೆ ಭೂಮಿಯನ್ನು ಪ್ರವೇಶ ಮಾಡಿತು.
ಆಶ್ಚರ್ಯಭೂತಂ ಸುಮಹತ್ ತ್ವದೀಯಾ
ದೃಷ್ಟ್ವೈವ ತದ್ ಭಾರತ ಸಂಪ್ರಹೃಷ್ಟಾಃ |
ಸರ್ವೇ ವಿನೇದುಃ ಸಹಿತಾಃ ಸಮಂತಾತ್
ಪುಪೂಜಿರೇ ತವ ಪುತ್ರಂ ಸಸೈನ್ಯಾಃ ॥39॥
ಎಲೈ ಭಾರತನೇ, ನಿನ್ನ ಪುತ್ರನಾದ ಚಿತ್ರಸೇನನ ಆಶ್ಚರ್ಯಭೂತವಾದ ಮಹಾಧೈರ್ಯವನ್ನು ನೋಡಿ ನಿನ್ನವರೆಲ್ಲರೂ ಸಂತೋಷಗೊಂಡು ಒಟ್ಟಿಗೆ ಸೇರಿ ಸಿಂಹನಾದವನ್ನು ಮಾಡಿದರು. ಸೈನ್ಯದ ಜೊತೆಯಲ್ಲಿ ಅವರೆಲ್ಲರೂ ನಿನ್ನ ಪುತ್ರನನ್ನು ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಾಶೀತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕಚತ್ವಾರಿಂಶತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆರಡನೆಯ ಅಧ್ಯಾಯ

ಭೀಷ್ಮ-ಯುಧಿಷ್ಠಿರಾದಿಗಳ ಯುದ್ಧ. ಸಪ್ತಮ ದಿವಸದ ಯುದ್ಧ ವಿರಾಮ.
ಸಂಜಯಃ
ವಿರಥಂ ತಂ ಸಮಾಸಾದ್ಯ ಚಿತ್ರಸೇನಂ ಮನಸ್ವಿನಮ್ |
ರಥಮಾರೋಪಯಾಮಾಸ ವಿಕರ್ಣಸ್ತನಯಸ್ತವ ||1||
ಸಂಜಯ ನಿನ್ನ ಪುತ್ರನಾದ ವಿಕರ್ಣನು ವಿರಥನಾದರೂ ಧೈರ್ಯಶಾಲಿಯಾಗಿದ್ದ ಚಿತ್ರಸೇನನನ್ನು ಸಮೀಪಿಸಿ ಅವನನ್ನು ತನ್ನ ರಥಕ್ಕೆ ಏರಿಸಿಕೊಂಡನು.
ತಸ್ಮಿಂಸ್ತಥಾ ವರ್ತಮಾನೇ ತುಮುಲೇ ಸಂಕುಲೇ ಭೃಶಮ್ |
ಭೀಷ್ಮಃ ಶಾಂತನವಸ್ತೂರ್ಣಂ ಯುಧಿಷ್ಠಿರಮುಪಾದ್ರವತ್ ||2||
ಸಂಕುಲವಾದ ಯುದ್ಧವು ಹಾಗೆ ತೀವ್ರವಾಗಿ ನಡೆಯುತ್ತಿರಲು ಶಂತನು ಪುತ್ರರಾದ ಭೀಷ್ಮರು ಶೀಘ್ರವಾಗಿ ಯುಧಿಷ್ಠಿರನ ಬಳಿಗೆ ಧಾವಿಸಿ ಬಂದರು.
ತತಃ ಸರಥನಾಗಾಶ್ವಾಃ ಸಮಕಂಪಂತ ಸೃಂಜಯಾಃ |
ಮೃತ್ಯೋರಾಸ್ಯಮನುಪ್ರಾಪ್ತಂ ಮೇನಿರೇ ಚ ಯುಧಿಷ್ಠಿರಮ್ ||3||
ಆಗ ರಥಗಜಾಶ್ವಗಳಿಂದ ಕೂಡಿದ ಸೃಂಜಯರು ನಡುಗಿ ಹೋದರು ಮತ್ತು ಯುಧಿಷ್ಠಿರನು ಮೃತ್ಯುವಿನ ಬಾಯಿಗೆ ಸಿಲುಕಿದ್ದಾನೆಂದು ತಿಳಿದರು.
ಯುಧಿಷ್ಠಿರೋಽಪಿ ಕೌರವ್ಯ ಯಮಾಭ್ಯಾಂ ಸಹಿತಃ ಪ್ರಭುಃ |
ಮಹೇಷ್ವಾಸಂ ನರವ್ಯಾಘ್ರಂ ಭೀಷ್ಮಂ ಶಾಂತನವಂ ಯಯೌ ||4||
ಎಲೈ ಕೌರವ್ಯನೇ, ಪ್ರಭುವಾದ ಯುಧಿಷ್ಠಿರನೂ ಸಹ ನಕುಲ-ಸಹದೇವರ ಜೊತೆಯಲ್ಲಿ ಮಹಾಧನುರ್ಧಾರಿಗಳೂ, ನರಶ್ರೇಷ್ಠರೂ, ಶಂತನು ಪುತ್ರರೂ ಆದ ಭೀಷ್ಮರ ಕಡೆಗೆ ಹೋದನು.
ತತಃ ಶರಸಹಸ್ರಾಣಿ ಪ್ರಮುಂಚನ್ ಪಾಂಡವೋ ಯುಧಿ |
ಭೀಷ್ಮಂ ಸಂಛಾದಯಾಮಾಸ ಯಥಾ ಮೇಘೋ ದಿವಾಕರಮ್ ||5||
ಅನಂತರ ಪಾಂಡವನಾದ ಯುಧಿಷ್ಠಿರನು ಸಹಸ್ರಾರು ಬಾಣಗಳನ್ನು ಪ್ರಯೋಗಿಸಿ ಮೇಘವು ಸೂರ್ಯನನ್ನು ಮುಚ್ಚಿದಂತೆ ಭೀಷ್ಮರನ್ನು ಮುಚ್ಚಿದನು.
ತೇನ ಸಮ್ಯಕ್ ಪ್ರಣೀತಾನಿ ಶರಜಾಲಾನಿ ಭಾರತ |
ಪ್ರತಿಜಗ್ರಾಹ ಗಾಂಗೇಯಃ ಶತಶೋಽಥ ಸಹಸ್ರಶಃ ||6||
ಎಲೈ ಭಾರತನೇ, ಯುಧಿಷ್ಠಿರನು ನೂರಾರು, ಸಾವಿರಾರು ಸಂಖ್ಯೆಯಲ್ಲಿ ಚೆನ್ನಾಗಿ ಪ್ರಯೋಗಿಸಿದ ಬಾಣಸಮೂಹಗಳನ್ನು ಗಂಗಾಪುತ್ರರಾದ ಭೀಷ್ಮರು ಸ್ವೀಕರಿಸಿದರು.
ತಥೈವ ಶರಜಾಲಾನಿ ಭೀಷ್ಮೇಣಾಸ್ತಾನಿ ಮಾರಿಷ |
ಆಕಾಶೇ ಸಮದೃಶ್ಯಂತ ಖಗಮಾನಾಂ ವ್ರಜಾ ಇವ ||7||
ಎಲೈ ಪೂಜ್ಯನೇ, ಹಾಗೆಯೇ ಭೀಷ್ಮರು ಪ್ರಯೋಗಿಸಿದ ಬಾಣಗಳು ಆಕಾಶದಲ್ಲಿ ಪಕ್ಷಿಗಳ ಸಮೂಹದಂತೆ ಕಂಡುಬಂದವು.
ನಿಮೇಷಾರ್ಧಾಚ್ಚ ಕೌಂತೇಯಂ ಭೀಷ್ಮಃ ಶಾಂತನವೋ ಯುಧಿ |
ಅದೃಶ್ಯಂ ಸಮರೇ ಚಕ್ರೇ ಶರಜಾಲೇನ ಭಾಗಶಃ ||8||
ಅರ್ಧನಿಮಿಷ ಕಾಲದಲ್ಲಿ ಶಂತನುಪುತ್ರರಾದ ಭೀಷ್ಮರು ಯುದ್ಧದಲ್ಲಿ ತಮ್ಮ ಬಾಣಗಳ ಸಮೂಹದಿಂದ ಕುಂತೀಪುತ್ರನಾದ ಯುಧಿಷ್ಠಿರನನ್ನು ಅದೃಶ್ಯನನ್ನಾಗಿ ಮಾಡಿದರು.
ತತೋ ಯುಧಿಷ್ಠಿರೋ ರಾಜಾ ಕೌರವ್ಯಸ್ಯ ಮಹಾತ್ಮನಃ |
ನಾರಾಚಂ ಪ್ರೇಷಯಾಮಾಸ ಕ್ರುದ್ಧ ಆಶೀವಿಷೋಪಮಮ್ ||9||
ಆಗ ರಾಜನಾದ ಯುಧಿಷ್ಠಿರನು ಕ್ರೋಧಗೊಂಡು ಮಹಾತ್ಮರಾದ ಕೌರವ್ಯರಾದ ಭೀಷ್ಮರ ಮೇಲೆ ಸರ್ಪದಂತಿದ್ದ ಒಂದು ನಾರಾಚವನ್ನು ಪ್ರಯೋಗಿಸಿದನು.
ಅಸಂಪ್ರಾಪ್ತಂ ತತಸ್ತಂ ತು ಕ್ಷುರಪ್ರೇಣ ಮಹಾರಥಃ |
ಚಿಚ್ಛೇದ ಸಮರೇ ರಾಜನ್ ಭೀಷ್ಮಸ್ತಸ್ಯ ಧನುಶ್ಚ್ಯುತಮ್ ||10||
ಎಲೈ ರಾಜನೇ, ಮಹಾರಥರಾದ ಭೀಷ್ಮರು ಯುಧಿಷ್ಠಿರನ ಧನುಸ್ಸಿನಿಂದ ಹೊರಟ ಆ ನಾರಾಚವು ತಮ್ಮ ಬಳಿಗೆ ಬರುವುದಕ್ಕಿಂತ ಮುಂಚೆಯೇ ಕ್ಷುರಪ್ರದಿಂದ ಅದನ್ನು ಕತ್ತರಿಸಿದರು.
ತಂ ತು ಛಿತ್ತ್ವಾ ರಣೇ ಭೀಷ್ಮೋ ನಾರಾಚಂ ಕಾಲಸಮ್ಮಿತಮ್ |
ನಿಜಘ್ನೇ ಕೌರವೇಂದ್ರಸ್ಯ ಹಯಾನ್ ಕಾಂಚನಭೂಷಣಾನ್ ||11||
ಭೀಷ್ಮರು ಮೃತ್ಯುವಿನಂತಿದ್ದ ಆ ನಾರಾಚವನ್ನು ಯುದ್ಧದಲ್ಲಿ ಕತ್ತರಿಸಿ ಯುಧಿಷ್ಠಿರನ ಸುವರ್ಣಭೂಷಿತವಾದ ಅಶ್ವಗಳನ್ನು ಕೊಂದರು.
ಹತಾಶ್ವಂ ತು ರಥಂ ತ್ಯಕ್ತ್ವಾ ಧರ್ಮಪುತ್ರೋ ಯುಧಿಷ್ಠಿರಃ |
ಆರುರೋಹ ರಥಂ ತೂರ್ಣಂ ನಕುಲಸ್ಯ ಮಹಾತ್ಮನಃ ||12||
ಧರ್ಮಪುತ್ರನಾದ ಯುಧಿಷ್ಠಿರನು ಅಶ್ವಗಳು ಮೃತವಾದ ತನ್ನ ರಥವನ್ನು ಬಿಟ್ಟು ಶೀಘ್ರವಾಗಿ ಮಹಾತ್ಮನಾದ ನಕುಲನ ರಥವನ್ನು ಹತ್ತಿದನು.
ಯಮಾವಪಿ ಸುಸಂಕ್ರುದ್ಧಃ ಸಮಾಸಾದ್ಯ ರಣೇ ತದಾ |

ಶರೈಃ ಸಂಛಾದಯಾಮಾಸ ಭೀಷ್ಮಃ ಪರಪುರಂಜಯಃ ॥13॥
ಆಗ ಪರಪುರಂಜಯರಾದ ಭೀಷ್ಮರು ಬಹಳ ಕೋಪಗೊಂಡು ರಣರಂಗದಲ್ಲಿ ನಕುಲ-ಸಹದೇವರ ಸಮೀಪಕ್ಕೆ ಬಂದು ಅವರನ್ನೂ ತಮ್ಮ ಬಾಣಗಳಿಂದ ಮುಚ್ಚಿಹಾಕಿದರು.
ತೌ ತು ದೃಷ್ಟ್ವಾ ಮಹಾರಾಜ ಭೀಷ್ಮಬಾಣಪ್ರಪೀಡಿತೌ |
ಜಗಾಮಾಥ ಪರಾಂ ಚಿಂತಾಂ ಭೀಷ್ಮಸ್ಯ ವಧಕಾಂಕ್ಷಯಾ ॥14॥
ಎಲ್ಲೈ ಮಹಾರಾಜನೇ, ಅವರೂ ಭೀಷ್ಮರ ಬಾಣದಿಂದ ಚೆನ್ನಾಗಿ ಪೀಡಿತರಾದುದನ್ನು ನೋಡಿ ಭೀಷ್ಮರ ವಧೆಯನ್ನು ಬಯಸಿದ ಯುಧಿಷ್ಠಿರನು ಚಿಂತಾಕ್ರಾಂತನಾದನು.
ತತೋ ಯುಧಿಷ್ಠಿರೋ ವಶ್ಯಾನ್ ರಾಜ್ಞಸ್ತಾನ್ ಸಮಚೋದಯತ್ |
ಭೀಷ್ಮಂ ಶಾಂತನವಂ ಸರ್ವೇ ನಿಹತೇತಿ ಸುಹೃದ್ಗಣಾನ್ ॥15॥
ಅನಂತರ ಯುಧಿಷ್ಠಿರನು ತನಗೆ ಅಧೀನರೂ, ಸುಹೃದಯರೂ ಆದ ಆ ರಾಜರನ್ನು ಕುರಿತು ನೀವೆಲ್ಲರೂ ಶಂತನುಪುತ್ರರಾದ ಭೀಷ್ಮರನ್ನು ಸಂಹರಿಸಿ ಎಂದು ಪ್ರಚೋದಿಸಿದನು.
ತತಸ್ತೇ ಪಾರ್ಥಿವಾಃ ಸರ್ವೇ ಶ್ರುತ್ವಾ ಪಾರ್ಥಸ್ಯ ಭಾಷಿತಮ್ |
ಮಹತಾ ರಥವಂಶೇನ ಪರಿವವ್ರುಃ ಪಿತಾಮಹಮ್ ॥16॥
ರಾಜನ ಆ ಮಾತುಗಳನ್ನು ಕೇಳಿ ಆಗ ಆ ರಾಜರೆಲ್ಲರೂ ದೊಡ್ಡ ರಥ ಸಮೂಹದಿಂದ ಪಿತಾಮಹರಾದ ಭೀಷ್ಮರನ್ನು ಸುತ್ತುವರಿದರು.
ಸ ಸಮಂತಾತ್ ಪರಿವೃತಃ ಪಿತಾ ದೇವವ್ರತಸ್ತವ |
ಚಿಕ್ರೀಡ ಧನುಷಾ ರಾಜನ್ ಪಾತಯಾನೋ ಮಹಾರಥಾನ್ ॥17॥
ಎಲ್ಲೈ ರಾಜನೇ, ನಿನ್ನ ತಂದೆಯಾದ ದೇವವ್ರತರು ಅಷ್ಟು ಜನ ಮಹಾರಥರಿಂದ ಸುತ್ತುವರಿಯಲ್ಪಟ್ಟಿದ್ದರೂ ತನ್ನ ಧನುಸ್ಸಿನಿಂದ ಅವರನ್ನು ಉರುಳಿಸುತ್ತಾ ಆಟವಾಡಿದರು.
ತಂ ಚರಂತಂ ರಣೇ ಪಾರ್ಥಾ ದದೃಶುಃ ಕೌರವಂ ಯುಧಿ |
ಮೃಗಮಧ್ಯಂ ಪ್ರವಿಶ್ಯೇವ ಯಥಾ ಸಿಂಹಶಿಶುಂ ವನೇ ॥18॥
ಕಾಡಿನಲ್ಲಿ ಜಿಂಕೆಗಳ ಮಧ್ಯದಲ್ಲಿ ಸಿಂಹದ ಮರಿಯಂತೆ ಯುದ್ಧದಲ್ಲಿ ಚಲಿಸುವ ಭೀಷ್ಮರನ್ನು ಪಾಂಡವರು ನೋಡಿದರು.
ತರ್ಜಯಾನಂ ರಣೇ ಶೂರಾಂಸ್ತತ್ರಸಯಾನಂ ಚ ಸಾಯಕೈಃ |
ದೃಷ್ಟ್ವಾ ತ್ರೇಸುರ್ಮಹಾರಾಜ ಸಿಂಹಂ ಮೃಗಗಣಾ ಇವ ॥19॥
ಎಲ್ಲೈ ಮಹಾರಾಜನೇ, ರಣರಂಗದಲ್ಲಿ ಶೂರರನ್ನು ಹೆದರಿಸುತ್ತಾ, ತಮ್ಮ ಬಾಣಗಳಿಂದ ಅವರನ್ನು ಹಿಂಸೆಗೊಳಿಸುತ್ತಿದ್ದ ಭೀಷ್ಮರನ್ನು ನೋಡಿ ಸಿಂಹಕ್ಕೆ ಹೆದರಿದ ಜಿಂಕೆಗಳ ಸಮೂಹದಂತೆ ಆ ರಾಜರು ಹೆದರಿದರು.
ರಣೇ ಭರತಸಿಂಹಸ್ಯ ದದೃಶುಃ ಕ್ಷತ್ರಿಯಾ ಗತಿಮ್ |
ಅಗ್ನೇರ್ವಾಯುಸಹಾಯಸ್ಯ ಯಥಾ ಕಕ್ಷಂ ದಿಧಕ್ಷತಃ ॥20॥
ಭರತಸಿಂಹರಾದ ಭೀಷ್ಮರ ವನವನ್ನು ಸುಡುವ ವಾಯುಸಹಾಯವುಳ್ಳ ಅಗ್ನಿಯಂತೆ ರಣರಂಗದಲ್ಲಿ ತಿರುಗಾಡುವ ಗತಿಯನ್ನು ಕ್ಷತ್ರಿಯರು ನೋಡಿದರು.
ಶಿರಾಂಸಿ ರಥಿನಾಂ ಭೀಷ್ಮಃ ಪಾತಯಾಮಾಸ ಸಂಯುಗೇ |
ತಾಳೇಭ್ಯ ಇವ ಪಕ್ವಾನಿ ಫಲಾನಿ ಕುಶಲೋ ನರಃ ॥21॥
ನಿಪುಣನಾದ ಮನುಷ್ಯನು ತಾಳವೃಕ್ಷದಿಂದ ಪಕ್ವವಾದ ಫಲಗಳನ್ನು ಉದುರಿಸಿದಂತೆ ಯುದ್ಧದಲ್ಲಿ ಭೀಷ್ಮರು ರಥಿಕರ ಶಿರಸ್ಸುಗಳನ್ನು ಉರುಳಿಸಿದರು.
ಪತದ್ಭಿಶ್ಚ ಮಹಾರಾಜ ಶಿರೋಭಿರ್ಧರಣೀತಳೇ |
ಬಭೂವ ತುಮುಲಃ ಶಬ್ದಃ ಪತತಾಮಶ್ಮನಾಮಿವ ॥22॥
ಎಲ್ಲೈ ಮಹಾರಾಜನೇ, ಭೂಮಿಯ ಮೇಲೆ ಬೀಳುವ ಆ ಶಿರಸ್ಸುಗಳಿಂದ ಉಂಟಾದ ತೀವ್ರವಾದ ಶಬ್ದವು ಕೆಳಗೆ ಬೀಳುವ ಕಲ್ಲುಗಳ ಶಬ್ದದಂತೆ ಇದ್ದಿತು.
ತಸ್ಮಿಂಸ್ತು ತುಮುಲೇ ಯುದ್ಧೇ ವರ್ತಮಾನೇ ಸುದಾರುಣೇ |
ಸರ್ವೇಷಾಮೇವ ಸೈನ್ಯಾನಾಮಾಸೀದ್ ವ್ಯತಿಕರೋ ಮಹಾನ್ ॥23॥
ತೀವ್ರವೂ, ಪರಮದಾರುಣವೂ ಆದ ಆ ಯುದ್ಧವು ಹಾಗೆ ನಡೆಯುತ್ತಿರಲು ಎಲ್ಲ ಸೈನ್ಯಗಳಿಗೂ ದೊಡ್ಡ ಮಿಶ್ರಣವುಂಟಾಯಿತು.
ಭಿನ್ನೇಷು ತೇಷು ವ್ಯೂಹೇಷು ಕ್ಷತ್ರಿಯಾ ಇತರೇತರಮ್ |
ಏಕಮೇಕಂ ಸಮಾಹೂಯ ಯುದ್ಧಾಯೈವೋಪತಸ್ಥಿರೇ ॥24॥
ಮೊದಲು ರಚಿಸಿದ ವ್ಯೂಹಗಳು ಭೇದಿಸಲ್ಪಡುತ್ತಿರಲು ಕ್ಷತ್ರಿಯರು ಪರಸ್ಪರವಾಗಿ ಒಬ್ಬರನ್ನೊಬ್ಬರು ಆಹ್ವಾನಿಸಿ ಯುದ್ಧಕ್ಕೆ ನಿಂತರು.
ಶಿಖಂಡೀ ತು ಸಮಾಸಾದ್ಯ ಭರತಾನಾಂ ಪಿತಾಮಹಮ್ |
ಅಭಿದುದ್ರಾವ ವೇಗೇನ ತಿಷ್ಠ ತಿಷ್ಠೇತಿ ಚಾಬ್ರವೀತ್ ॥25॥
ಶಿಖಂಡಿಯಾದರೋ ಭರತರ ಪಿತಾಮಹರಾದ ಭೀಷ್ಮರ ಕಡೆಗೆ ವೇಗದಿಂದ ಸಾಗಿ ನಿಲ್ಲು, ನಿಲ್ಲು ಎಂದು ಹೇಳಿದನು.
ಅನಾದೃತ್ಯ ತತೋ ಭೀಷ್ಮಸ್ತಂ ಶಿಖಂಡಿನಮಾಹವೇ |
ಪ್ರಯಯೌ ಸೃಂಜಯಾನ್ ಕ್ರುದ್ಧಃ ಸ್ತ್ರೀತ್ವಂ ಚಿಂತ್ಯ ಶಿಖಂಡಿನಃ ॥26॥
ಭೀಷ್ಮರು ಶಿಖಂಡಿಯ ಸ್ತ್ರೀತ್ವವನ್ನು ಸ್ಮರಿಸಿ ರಣರಂಗದಲ್ಲಿ ಅವನನ್ನು ಗಣನೆಗೇ ತೆಗೆದುಕೊಳ್ಳದೆ ಕ್ರೋಧದಿಂದ ಸೃಂಜಯರ ಕಡೆಗೆ ಹೊರಟರು.

ಸೃಂಜಯಾಸ್ತು ತತೋ ಹೃಷ್ಟಾ ದೃಷ್ಟ್ವಾ ಭೀಷ್ಮಂ ಮಹಾರಥಮ್ |
ಸಿಂಹನಾದಾನ್ ಬಹುವಿಧಾಂಶ್ಚಕ್ರುಃ ಶಂಖವಿಮಿಶ್ರಿತಾನ್ ॥27॥
ಸೃಂಜಯರಾದರೋ ಮಹಾರಥರಾದ ಭೀಷ್ಮರು ತಮ್ಮ ಕಡೆಗೆ ಬರುತ್ತಿರುವುದನ್ನು ನೋಡಿ ಸಂತೋಷಗೊಂಡು ಶಂಖನಾದ ಮಿಶ್ರಿತವಾದ ಅನೇಕವಿಧವಾದ ಸಿಂಹನಾದಗಳನ್ನು ಮಾಡಿದರು.
ತತಃ ಪ್ರವವೃತೇ ಯುದ್ಧಂ ವ್ಯತಿಷಕ್ತರಥದ್ವಿಪಮ್ |
ಅಪರಾಂ ದಿಶಮಾಸ್ಥಾಯ ಸ್ಥಿತೇ ಸವಿತರಿ ಪ್ರಭೋ ॥28॥
ಅನಂತರ ಸೂರ್ಯನು ಪಶ್ಚಿಮದಿಕ್ಕಿಗೆ ಹೋಗುತ್ತಿರಲು ರಥ-ಗಜಗಳು ಪರಸ್ಪರ ಮಿಶ್ರಿತವಾಗಿ ಯುದ್ಧವು ಪ್ರವೃತ್ತವಾಯಿತು.
ಧೃಷ್ಟದ್ಯುಮ್ನೋಽಥ ಪಾಂಚಾಲ್ಯಃ ಸಾತ್ಯಕಿಶ್ಚ ಮಹಾರಥಃ |
ಪೀಡಯಂತೌ ಭೃಶಂ ಸೈನ್ಯಂ ಶಕ್ತಿತೋಮರವೃಷ್ಟಿಭಿಃ |
ಶಸ್ತ್ರೈಶ್ಚ ಬಹುಭೀ ರಾಜನ್ ಜಘ್ನತುಸ್ತಾವಕಾನ್ ರಣೇ ॥29॥
ಎಲೈ ರಾಜನೇ, ಪಾಂಚಾಲದೇಶದ ಧೃಷ್ಟದ್ಯುಮ್ನನೂ ಮತ್ತು ಮಹಾರಥನಾದ ಸಾತ್ಯಕಿಯೂ ಸಹ ಶಕ್ತಿ, ತೋಮರ, ಋಷ್ಟಿಗಳಿಂದಲೂ ಮತ್ತು ಅನೇಕ ಶಸ್ತ್ರಗಳಿಂದಲೂ ನಿನ್ನ ಸೈನ್ಯವನ್ನು ಬಹಳವಾಗಿ ಪೀಡಿಸುತ್ತಾ ರಣರಂಗದಲ್ಲಿ ನಿನ್ನವರನ್ನು ಸಂಹರಿಸಿದರು.
ತೇ ಹನ್ಯಮಾನಾಃ ಸಮರೇ ತಾವಕಾಃ ಪುರುಷರ್ಷಭ |
ಆರ್ಯಾಂ ಯುದ್ಧೇ ಮತಿಂ ಕೃತ್ವಾ ನ ತ್ಯಜಂತಿ ಸ್ಮ ಸಂಯುಗಮ್ |
ಯಥೋತ್ಸಾಹಂ ಚ ಸಮರೇ ಜಘ್ನುರ್ಲೋಕಂ ಮಹಾರಥಾಃ ॥30॥
ಎಲೈ ಪುರುಷಶ್ರೇಷ್ಠನೇ, ಯುದ್ಧದಲ್ಲಿ ಹೀಗೆ ಪ್ರಹಾರಕ್ಕೆ ಒಳಗಾದ ನಿನ್ನವರು ಉದಾತ್ತವಾದ ಬುದ್ಧಿಯನ್ನು ಹೊಂದಿದವರಾಗಿ ಯುದ್ಧವನ್ನು ತೊರೆಯಲಿಲ್ಲ. ಮಹಾರಥರಾದ ಅವರು ತಮ್ಮ ಉತ್ಸಾಹಕ್ಕೆ ಅನುಗುಣವಾಗಿ ಯುದ್ಧದಲ್ಲಿ ಶತ್ರುಗಳ ಯೋಧರನ್ನು ಕೊಂದರು.
ತತ್ರಾಕ್ರಂದೋ ಮಹಾನಾಸೀತ್ ತಾವಕಾನಾಂ ಮಹಾತ್ಮನಾಮ್ |
ವಧ್ಯತಾಂ ಸಮರೇ ರಾಜನ್ ಪಾರ್ಷತೇನ ಮಹಾತ್ಮನಾ ॥31॥
ಎಲೈ ರಾಜನೇ, ಮಹಾತ್ಮನಾದ ಧೃಷ್ಟದ್ಯುಮ್ನನಿಂದ ಮಹಾತ್ಮರಾದ ನಿನ್ನವರು ಹೀಗೆ ವಧಿಸಲ್ಪಡುತ್ತಿರುವಾಗ ನಿಮ್ಮ ಸೈನ್ಯದಲ್ಲಿ ದೊಡ್ಡ ಚೀರಾಟ ಉಂಟಾಯಿತು.
ತಂ ಶ್ರುತ್ವಾ ನಿನದಂ ಘೋರಂ ತಾವಕಾನಾಂ ಮಹಾರಥೌ |
ವಿಂದಾನುವಿಂದಾವಾವಂತ್ಯೌ ಪಾರ್ಷತಂ ಪ್ರತ್ಯುಪಸ್ಥಿತೌ ॥32॥
ಆ ಘೋರವಾದ ನಿನಾದವನ್ನು ಕೇಳಿ ಅವಂತಿದೇಶದ ಮಹಾರಥರಾದ ವಿಂದಾನುವಿಂದರು ಧೃಷ್ಟದ್ಯುಮ್ನನನ್ನು ಎದುರಿಸಿದರು.
ತೌ ತಸ್ಯ ತುರಗಾನ್ ಹತ್ವಾ ತ್ವರಮಾಣೌ ಮಹಾರಥೌ |
ಛಾದಯಾಮಾಸತುರುಭೌ ಶರವರ್ಷೇಣ ಪಾರ್ಷತಮ್ ॥33॥
ಮಹಾರಥರಾದ ಅವರಿಬ್ಬರೂ ಕ್ಷಿಪ್ರವಾಗಿ ಯುದ್ಧವನ್ನು ಮಾಡುತ್ತಾ ಧೃಷ್ಟದ್ಯುಮ್ನನ ಅಶ್ವಗಳನ್ನು ಕೊಂದು ಬಾಣಗಳ ಮಳೆಯಿಂದ ಅವನನ್ನೂ ಮುಚ್ಚಿಹಾಕಿದರು.
ಅವಪ್ಲುತ್ಯಾಥ ಪಾಂಚಾಲ್ಯೋ ರಥಾತ್ ತೂರ್ಣಂ ಮಹಾಬಲಃ |
ಆರುರೋಹ ರಥಂ ತೂರ್ಣಂ ಸಾತ್ಯಕೇಃ ಸುಮಹಾತ್ಮನಃ ॥34॥
ಆಗ ಮಹಾಬಲನಾದ ಧೃಷ್ಟದ್ಯುಮ್ನನು ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ ಅಷ್ಟೇ ಶೀಘ್ರವಾಗಿ ಮಹಾತ್ಮನಾದ ಸಾತ್ಯಕಿಯ ರಥವನ್ನು ಏರಿದನು.
ತತೋ ಯುಧಿಷ್ಠಿರೋ ರಾಜಾ ಮಹತ್ಯಾ ಸೇನಯಾ ವೃತಃ |
ಆವಂತ್ಯೌ ಸಮರೇ ಕ್ರುದ್ಧಾವಭ್ಯಯಾತ್ ಸ ಪರಂತಪೌ ॥35॥
ಆಗ ರಾಜನಾದ ಯುಧಿಷ್ಠಿರನು ದೊಡ್ಡ ಸೈನ್ಯದಿಂದ ಕೂಡಿ ಶತ್ರುತಾಪನರೂ, ಕ್ರುದ್ಧರೂ ಆದ ಅವಂತಿದೇಶದ ಆ ಇಬ್ಬರು ಸಹೋದರರ ಕಡೆಗೆ ಬಂದನು.
ತಥೈವ ತವ ಪುತ್ರೋಽಪಿ ಸರ್ವೋದ್ಯೋಗೇನ ಮಾರಿಷ |
ವಿಂದಾನುವಿಂದಾವಾವಂತ್ಯೌ ಪರಿವಾರ್ಯೋಪತಸ್ಥಿವಾನ್ ॥36॥
ಎಲೈ ಪೂಜ್ಯನೇ, ಹಾಗೆಯೇ ನಿನ್ನ ಪುತ್ರನೂ ಸಹ ಸರ್ವಪ್ರಯತ್ನದಿಂದ ಅವಂತಿದೇಶದ ವಿಂದಾನುವಿಂದರನ್ನು ಸುತ್ತುವರಿದು ನಿಂತನು.
ಅರ್ಜುನಶ್ಚಾಪಿ ಸಂಕ್ರುದ್ಧಃ ಕ್ಷತ್ರಿಯಾನ್ ಕ್ಷತ್ರಿಯರ್ಷಭ |
ಅಯೋಧಯತ ಸಂಗ್ರಾಮೇ ವಜ್ರಪಾಣಿರಿವಾಸುರಾನ್ ॥37॥
ಎಲೈ ಕ್ಷತ್ರಿಯಶ್ರೇಷ್ಠನೇ, ಬಹಳ ಕೋಪಗೊಂಡ ಅರ್ಜುನನೂ ಸಹ ಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನು ಅಸುರರ ಜೊತೆಯಲ್ಲಿ ಯುದ್ಧವನ್ನು ಮಾಡಿದಂತೆ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ದ್ರೋಣಶ್ಚ ಸಮರೇ ಕ್ರುದ್ಧಃ ಪುತ್ರಸ್ಯ ಪ್ರಿಯಕೃತ್ತವ |
ವ್ಯಧಮತ್ ಸರ್ವಪಾಂಚಾಲಾನ್ ತೂಲರಾಶಿಮಿವಾನಲಃ ॥38॥
ನಿನ್ನ ಪುತ್ರರಿಗೆ ಪ್ರಿಯವನ್ನು ಮಾಡುವ ದ್ರೋಣರೂ ಸಹ ಕೋಪಗೊಂಡು ಅಗ್ನಿಯು ಹತ್ತಿಯ ರಾಶಿಯನ್ನು ನಾಶಗೊಳಿಸುವಂತೆ ಎಲ್ಲ ಪಾಂಚಾಲರನ್ನೂ ನಾಶಗೊಳಿಸಿದರು.

ದುರ್ಯೋಧನಪುರೋಗಾಸ್ತು ಪುತ್ರಾಸ್ತವ ವಿಶಾಂಪತೇ |
ಪರಿವಾರ್ಯ ರಣೇ ಭೀಷ್ಮಂ ಯುಯುಧುಃ ಪಾಂಡವೈಃ ಸಹ ॥39॥
ಎಲೈ ರಾಜನೇ, ದುರ್ಯೋಧನನೇ ಮೊದಲಾದ ನಿನ್ನ ಪುತ್ರರು ಯುದ್ಧದಲ್ಲಿ ಭೀಷ್ಮರನ್ನು ಸುತ್ತುವರಿದು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತೋ ದುರ್ಯೋಧನೋ ರಾಜಾ ಲೋಹಿತಾಯತಿ ಭಾಸ್ಕರೇ |
ಅಬ್ರವೀತ್ ತಾವಕಾನ್ ಸರ್ವಾನ್ ತ್ವರಧ್ವಮಿತಿ ಭಾರತ ॥40॥
ಎಲೈ ಭಾರತನೇ, ಆಗ ಸೂರ್ಯನು ಕೆಂಪುಬಣ್ಣಕ್ಕೆ ತಿರುಗುತ್ತಿರಲು ರಾಜನಾದ ದುರ್ಯೋಧನನು ನಿನ್ನವರೆಲ್ಲರನ್ನೂ ಕುರಿತು ತ್ವರೆ ಮಾಡಿ ಎಂದು ಹೇಳಿದನು.
ಯುಧ್ಯತಾಂ ತು ತಥಾ ತೇಷಾಂ ಕುರ್ವತಾಂ ಕರ್ಮ ದುಷ್ಕರಮ್ |
ಅಸ್ತಂ ಗಿರಿಮಥಾರೂಢೇ ನ ಪ್ರಕಾಶತಿ ಭಾಸ್ಕರೇ ॥41॥
ಪ್ರಾವರ್ತತ ನದೀ ಘೋರಾ ಶೋಣಿತೌಘತರಂಗಿಣೀ |
ಗೋಮಾಯುಗಣಸಂಕೀರ್ಣಾ ಕ್ಷಣೇನ ರಜನೀಮುಖೇ ॥42॥
ದುಷ್ಕರವಾದ ಕಾರ್ಯವನ್ನು ಮಾಡಿ ಅವರು ಹಾಗೆ ಯುದ್ಧವನ್ನು ಮಾಡುತ್ತಿರಲು ಸೂರ್ಯನು ಅಸ್ತಗಿರಿಯವನ್ನು ಏರುತ್ತಿರಲು ರಾತ್ರಿಯ ಪ್ರಾರಂಭದಲ್ಲಿ ಒಂದು ಕ್ಷಣದಲ್ಲಿ ನರಿಗಳ ಸಮೂಹದಿಂದ ನಿಬಿಡವಾದ ರಕ್ತಸಮೂಹದ ತರಂಗವುಳ್ಳ ಘೋರವಾದ ನದಿಯು ಹರಿಯಿತು.
ಶಿವಾಭಿರಶಿವಾಭಿಶ್ಚ ರುವದ್ಭಿರ್ಭೈರವಂ ರವಮ್ |
ಘೋರಮಾಯೋಧನಂ ಜಜ್ಞೇ ಭೂತಸಂಘಸಮಾಕುಲಮ್ ॥43॥
ನರಿಗಳೂ, ಮೃಗ-ಪ್ರಾಣಿಗಳೂ ಭೈರವವಾದ ನಾದವನ್ನು ಮಾಡುತ್ತಿರಲು ಭೂತಗಣಗಳಿಂದ ನಿಬಿಡವಾದ ಆ ರಣರಂಗವು ಘೋರವಾಯಿತು.
ರಾಕ್ಷಸಾಶ್ಚ ಪಿಶಾಚಾಶ್ಚ ತಥಾನ್ಯೇ ಪಿಶಿತಾಶನಾಃ |
ಸಮಂತತೋ ವ್ಯದೃಶ್ಯಂತ ಶತಶೋಽಥ ಸಹಸ್ರಶಃ ॥44॥
ರಾಕ್ಷಸರು, ಪಿಶಾಚಿಗಳು ಮತ್ತು ಉಳಿದ ಮಾಂಸಾಹಾರಿಗಳು ಎಲ್ಲ ಕಡೆಗಳಲ್ಲಿಯೂ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಕಂಡುಬಂದರು.
ಅರ್ಜುನೋಽಥ ಸುಶರ್ಮಾದೀನ್ ರಾಜ್ಞಸ್ತಾನ್ ಸಪದಾನುಗಾನ್ |
ವಿಜಿತ್ಯ ಪೃತನಾಮಧ್ಯೇ ಯಯೌ ಸ್ವಶಿಬಿರಂ ಪ್ರತಿ ॥45॥
ಆಗ ಅರ್ಜುನನು ಅನುಚರರಿಂದ ಸಹಿತರಾದ ಸುಶರ್ಮ ಮೊದಲಾದ ರಾಜರನ್ನು ರಣರಂಗದ ಮಧ್ಯದಲ್ಲಿ ಗೆದ್ದು ತನ್ನ ಶಿಬಿರಕ್ಕೆ ಹೋದನು.
ಯುಧಿಷ್ಠಿರೋಽಪಿ ಕೌರವ್ಯ ಭ್ರಾತೃಭ್ಯಾಂ ಸಹಿತಸ್ತದಾ |
ಯಯೌ ಸ್ವಶಿಬಿರಂ ರಾಜಾ ನಿಶಾಯಾಂ ಸೇನಯಾ ವೃತಃ ॥46॥
ರಾತ್ರಿಯು ಆವರಿಸುತ್ತಿರಲು ಕೌರವ್ಯನಾದ ಯುಧಿಷ್ಠಿರ ರಾಜನೂ ಸಹ ತನ್ನ ತಮ್ಮಂದಿರಾದ ನಕುಲ-ಸಹದೇವರನ್ನು ಒಡಗೂಡಿ ತನ್ನ ಶಿಬಿರಕ್ಕೆ ಹೋದನು.
ಭೀಮಸೇನೋಽಪಿ ರಾಜೇಂದ್ರ ದುರ್ಯೋಧನಮುಖಾನ್ ರಥಾನ್ |
ಅವಜಿತ್ಯ ತತಃ ಸಂಖ್ಯೇ ಯಯೌ ಸ್ವಶಿಬಿರಂ ಪ್ರತಿ ॥47॥
ಎಲೈ ರಾಜೇಂದ್ರನೇ, ಭೀಮಸೇನನೂ ಸಹ ದುರ್ಯೋಧನ ಮೊದಲಾದ ರಥರನ್ನು ಯುದ್ಧದಲ್ಲಿ ಪರಾಭವಗೊಳಿಸಿ ತನ್ನ ಶಿಬಿರಕ್ಕೆ ಹೋದನು.
ದುರ್ಯೋಧನೋಽಪಿ ನೃಪತಿಃ ಪರಿವಾರ್ಯ ಮಹಾರಣೇ |
ಭೀಷ್ಮಂ ಶಾಂತನವಂ ತೂರ್ಣಂ ಪ್ರಯಾತಃ ಶಿಬಿರಂ ಪ್ರತಿ ॥48॥
ರಾಜನಾದ ದುರ್ಯೋಧನನೂ ಸಹ ಆ ಮಹಾಯುದ್ಧದಲ್ಲಿ ಶಂತನು ಪುತ್ರರಾದ ಭೀಷ್ಮರನ್ನು ಸುತ್ತುವರಿದು ಶೀಘ್ರವಾಗಿ ತನ್ನ ಶಿಬಿರಕ್ಕೆ ಹೋದನು.
ದ್ರೋಣೋ ದ್ರೌಣಿಃ ಕೃಪಃ ಶಲ್ಯಃ ಕೃತವರ್ಮಾ ಚ ಸಾತ್ವತಃ |
ಪರಿವಾರ್ಯ ಚಮೂಂ ಸರ್ವಾಂ ಪ್ರಯಯುಃ ಶಿಬಿರಂ ಪ್ರತಿ ॥49॥
ದ್ರೋಣರು, ಅಶ್ವತ್ಥಾಮರು, ಕೃಪರು, ಶಲ್ಯ ಮತ್ತು ಸಾತ್ವತನಾದ ಕೃತವರ್ಮ ಇವರೂ ಸಹ ಎಲ್ಲ ಸೈನ್ಯವನ್ನು ಸುತ್ತುವರಿದು ತಮ್ಮ ಶಿಬಿರಗಳಿಗೆ ಹೋದರು.
ತಥೈವ ಸಾತ್ಯಕೀ ರಾಜನ್ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಪರಿವಾರ್ಯ ರಣೇ ಯೋಧಾನ್ ಯಯತುಃ ಶಿಬಿರಂ ಪ್ರತಿ ॥50॥
ಎಲೈ ರಾಜನೇ, ಹಾಗೆಯೇ ಸಾತ್ಯಕಿ ಮತ್ತು ಪಾರ್ಷತನಾದ ಧೃಷ್ಟದ್ಯುಮ್ನನೂ ಸಹ ರಣರಂಗದಲ್ಲಿ ತಮ್ಮ ಯೋಧರನ್ನು ಸುತ್ತುವರಿದು ತಮ್ಮ ಶಿಬಿರಗಳಿಗೆ ಹೋದರು.
ಏವಮೇತೇ ಮಹಾರಾಜ ತಾವಕಾಃ ಪಾಂಡವೈಃ ಸಹ |
ಪರ್ಯವರ್ತಂತ ಸಹಿತಾ ನಿಶಾಕಾಲೇ ಪರಂತಪಾಃ ॥51॥
ಎಲೈ ಮಹಾರಾಜನೇ, ಹೀಗೆ ಪರಂತಪರಾದ ನಿನ್ನವರು ಮತ್ತು ಪಾಂಡವರು ಸಹ ನಿಶಾಕಾಲದಲ್ಲಿ ತಮ್ಮ ಶಿಬಿರಗಳಿಗೆ ಹಿಂದಿರುಗಿದರು.

ತತಃ ಸ್ವಶಿಬಿರಂ ಗತ್ವಾ ಪಾಂಡವಾಃ ಕುರವಸ್ತಥಾ |
ನ್ಯವಿಶಂತ ಮಹಾರಾಜ ಪೂಜಯಂತಃ ಪರಸ್ಪರಮ್ ||52||
ಎಲೈ ಮಹಾರಾಜನೇ, ತಮ್ಮ ಶಿಬಿರಗಳಿಗೆ ಹಿಂದಿರುಗಿದ ಕೌರವರು ಮತ್ತು ಪಾಂಡವರು ತಮ್ಮ ತಮ್ಮ ಗುಂಪುಗಳನ್ನು ಪರಸ್ಪರವಾಗಿ ಪೂಜಿಸುತ್ತಾ ವಿಶ್ರಾಂತಿಯನ್ನು ಪಡೆದರು.
ರಕ್ಷಾಂ ಕೃತ್ವಾತ್ಮನಃ ಶೂರಾ ನ್ಯಸ್ಯ ಗುಲ್ಮಾನ್ ಯಥಾವಿಧಿ |
ಅಪನೀಯ ಚ ಶಲ್ಯಾಂಸ್ತೇ ಸ್ನಾತ್ವಾ ಚ ವಿವಿಧೈರ್ಜಲೈಃ ||53||
ಕೃತಸ್ವಸ್ತ್ಯಯನಾಃ ಸರ್ವೇ ಸಂಸ್ತೂಯಂತಶ್ಚ ಬಂದಿಭಿಃ |
ಗೀತವಾದಿತ್ರಶಬ್ದೇನ ವ್ಯಕ್ರೀಡಂತ ಯಶಸ್ವಿನಃ ||54||
ಶೂರರಾದ ಅವರು ತಮ್ಮ ಕವಚಾದಿಗಳನ್ನು ವಿಧಿಪೂರ್ವಕವಾಗಿ ತೆಗೆದು, ತಮಗೆ ರಕ್ಷೆಯನ್ನು ಮಾಡಿಕೊಂಡು, ಶರೀರದಲ್ಲಿ ನಾಟಿದ್ದ ಶಲ್ಯಗಳನ್ನು ತೆಗೆದು, ವಿವಿಧ ಜಲಗಳಲ್ಲಿ ಸ್ನಾನವನ್ನು ಮಾಡಿ, ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು, ಬಂಧುಗಳಿಂದ ಸ್ತೋತ್ರ ಮಾಡಲ್ಪಟ್ಟವರಾಗಿ, ಕೀರ್ತಿವಂತರಾದ ಅವರು ಗೀತ-ವಾದಿತ್ರ ಶಬ್ದಗಳಿಂದ ಆಟವಾಡಿ ರಾತ್ರಿಯನ್ನು ಕಳೆದರು.
ಮುಹೂರ್ತಮಿವ ತತ್ಸರ್ವಮಭವತ್ ಸ್ವರ್ಗಸನ್ನಿಭಮ್ |
ನ ಹಿ ಯುದ್ಧಕಥಾಂ ಕಾಂಚಿತ್ ತತ್ರ ಚಕ್ರುರ್ಮಹಾರಥಾಃ ||55||
ಒಂದು ಮುಹೂರ್ತದ ಕಾಲ ಎಲ್ಲವೂ ಸ್ವರ್ಗಸದೃಶವಾಗಿದ್ದಿತು. ಅಲ್ಲಿ ಯಾವ ಮಹಾರಥರೂ ಯುದ್ಧದ ವಿಷಯವನ್ನು ಮಾತನಾಡಲಿಲ್ಲ.
ತೇ ಪ್ರಸುಪ್ತೇ ಬಲೇ ತತ್ರ ಪರಿಶ್ರಾಂತಜನೇ ನೃಪ |
ಹಸ್ತ್ಯಶ್ವಬಹುಲೇ ರಾಜನ್ ಪ್ರೇಕ್ಷಣೀಯೇ ಬಭೂವತುಃ ||56||
ಎಲೈ ರಾಜನೇ, ಬಹಳ ಗಜಾಶ್ವದಿಂದ ತುಂಬಿ, ದಣಿದ ಯೋಧರಿಂದ ತುಂಬಿದ ಆ ಎರಡು ಸೈನ್ಯಗಳು ನಿದ್ರೆಯನ್ನು ಹೊಂದುತ್ತಿರಲು ನೋಡಲು ಬಹಳ ಸುಂದರವಾಗಿ ಕಂಡವು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
ಭೀಷ್ಮರ ಸೇನಾಪತ್ಯದಲ್ಲಿ ಏಳನೆಯ ದಿನದ ಯುದ್ಧವು ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಧೃಷ್ಟದ್ಯುಮ್ನಸ್ತತ್ರ ಭೀಮಾನುಯಾಯೀ
ದುರ್ಯೋಧನಸ್ಯಾವರಜೈಃ ಪ್ರಯುಧ್ಯನ್ |
ಸಮ್ಮೋಹನಾಸ್ತ್ರೇಣ ವಿಮೋಹಯಿತ್ವಾ
ವಿಕರ್ಣಪೂರ್ವಾನಹನಚ್ಚ ಸೇನಾಮ್ ||60||
ಆಗ ಭೀಮನ ಹಿಂಬಾಲಕನಾದ ಧೃಷ್ಟದ್ಯುಮ್ನನು ದುರ್ಯೋಧನನ ತಮ್ಮಂದಿರೊಡನೆ ಹೋರಾಡುತ್ತಾ ಸಂಮೋಹನಾಸ್ತ್ರದಿಂದ ಮೂರ್ಛೆಗೊಳಿಸಿ ಸೈನ್ಯವನ್ನು ನಾಶ ಮಾಡಲು ತೊಡಗಿದನು.
ತತೋ ದ್ರೋಣಸ್ತಾನ್ ಸಮುತ್ಥಾಪ್ಯ ಸರ್ವಾನ್
ವಿಜ್ಞಾನಾಸ್ತ್ರೇಣಾಽಸದತ್ ಪಾರ್ಷತಂ ಚ |
ತಂ ಭೀಮಸೇನಃ ಸೂತಹೀನಂ ವಿಧಾಯ
ವ್ಯದ್ರಾವಯತ್ ಶತ್ರುಗಣಾನ್ ಶರೌಘೈಃ ||61||
ಆಗ ದ್ರೋಣರು ವಿಜ್ಞಾನಾಸ್ತ್ರದಿಂದ ಅವರೆಲ್ಲರನ್ನೂ ಎಬ್ಬಿಸಿ ಧೃಷ್ಟದ್ಯುಮ್ನನನ್ನು ಆಕ್ರಮಿಸಿದರು. ಒಡನೆ ಭೀಮಸೇನನು ಅವನನ್ನು ಸಾರಥಿರಹಿತನನ್ನಾಗಿ ಮಾಡಿ ಶತ್ರು ಸಮೂಹಗಳನ್ನು ಬಾಣ ಸಮೂಹಗಳಿಂದ ಓಡಿಸಿದನು.
ಅಥಾಸದತ್ ಕೃತವರ್ಮಾ ರಥೇನ
ಧೃಷ್ಟದ್ಯುಮ್ನಂ ಸೋಽಭ್ಯಯಾತ್ ತಾವುಭೌ ಚ |
ವವರ್ಷತುಃ ಶರವರ್ಷೈರಥೋಗ್ರೈಃ
ತತ್ರಾಕರೋದ್ ವಿರಥಂ ದ್ರೌಪದಿಸ್ತಮ್ ||62||
ಬಳಿಕ ಕೃತವರ್ಮನು ರಥದಿಂದ ಧೃಷ್ಟದ್ಯುಮ್ನನಿಗೆ ಎದುರಾದನು. ಧೃಷ್ಟದ್ಯುಮ್ನನು ಅವನನ್ನು ಎದುರಿಸಿದನು. ಅವರಿಬ್ಬರೂ ಭಯಂಕರವಾದ ಬಾಣಗಳ ಮಳೆಗರೆದುಕೊಂಡರು. ಆಗ ಧೃಷ್ಟದ್ಯುಮ್ನನು ಕೃತವರ್ಮನನ್ನು ರಥರಹಿತನನ್ನಾಗಿ ಮಾಡಿದನು.
ತಸ್ಮಿನ್ ಜಿತೇ ರಥವೀರೇ ಸ್ವಯಂ ತಂ
ದುರ್ಯೋಧನಃ ಪಾರ್ಷತಮಾಸಸಾದ |
ತಂ ಭೀಮಸೇನೋ ವಿರಥಾಯುಧಂ ಚ
ಕೃತ್ವಾ ಬಾಣೇನಾಹನತ್ ಜತ್ರುದೇಶೇ ||63||
ರಥಿಕರಲ್ಲಿ ಶ್ರೇಷ್ಠನಾದ ಕೃತವರ್ಮನು ಪರಾಜಿತನಾದಾಗ ದುರ್ಯೋಧನನು ಸ್ವತಃ ಧೃಷ್ಟದ್ಯುಮ್ನನನ್ನು ಎದುರಿಸಿದ. ಅವನನ್ನು ಭೀಮಸೇನನು ರಥ, ಆಯುಧರಹಿತನನ್ನಾಗಿ ಮಾಡಿ, ಬಾಣದಿಂದ ಕುತ್ತಿಗೆ, ಎದೆಗಳ ಮಧ್ಯದಲ್ಲಿ ಚೆನ್ನಾಗಿ ಹೊಡೆದನು.

ವಿಮೂರ್ಛಿತಂ ತಂ ರುಧಿರೌಘಮುಚ್ಚೈಃ
ವಮಂತಮಾಶು ಸ್ವರಥೇ ನಿಧಾಯ |
ಕೃಪೋ ಯಯೌ ಮಾರುತಿರ್ಧಾರ್ತರಾಷ್ಟ್ರೀಂ
ವ್ಯದ್ರಾವಯತ್ ಪೃತನಾಂ ಬಾಣಪೂಗೈಃ ॥64॥
ಮೂರ್ಛಿತನಾಗಿ ರಕ್ತಪ್ರವಾಹವನ್ನು ಕಾರುತ್ತಿದ್ದ ದುರ್ಯೋಧನನನ್ನು ಕೃಪರು ಬೇಗನೆ ತನ್ನ ರಥದಲ್ಲಿರಿಸಿ ಕೊಂಡೊಯ್ದರು. ಭೀಮಸೇನನು ಕೌರವಸೇನೆಯನ್ನು ಬಾಣ ಪ್ರವಾಹಗಳಿಂದ ಅಟ್ಟಿದನು.
ಅಥೇಂದ್ರಸೂನುಃ ಕೇಶವಪ್ರೇರಿತೇನ
ರಥೇನ ಶತ್ರೂನ್ ವಿಧಮತ್ ಶರೌಘೈಃ |
ರಥಾನ್ ರಣೇ ಪಂಚವಿಂಶತ್ಸಹಸ್ರಾನ್
ನಿನಾಯ ವೈವಸ್ವತಸಾದನಾಯ ॥65॥
ಬಳಿಕ ಕೃಷ್ಣನು ನಡೆಸುತ್ತಿದ್ದ ರಥದಿಂದ ಅರ್ಜುನನು ಯುದ್ಧದಲ್ಲಿ ಶತ್ರುಗಳನ್ನು ಬಾಣ ಪ್ರವಾಹಗಳಿಂದ ಹೊಡೆಯುತ್ತಾ ಇಪ್ಪತ್ತೈದು ಸಾವಿರ ರಥಿಕರನ್ನು ಯಮ ಸದನಕ್ಕೆ ಕಳುಹಿಸಿದನು.
ತಮನ್ವಯಾದ್ ಯುಯುಧಾನಃ ಸುಧನ್ವಾ
ವಿದ್ರಾವಯನ್ ಧಾರ್ತರಾಷ್ಟ್ರಸ್ಯ ಸೇನಾಮ್ |
ತಮಭ್ಯಯಾತ್ ಸೌಮದತ್ತಿಸ್ತಯೋಶ್ಚ
ಸುಯುದ್ಧಮಾಸೀದತಿಭೈರವಾಸ್ತ್ರಮ್ ॥66॥
ಅರ್ಜುನನ ಹಿಂದಿನಿಂದ ಒಳ್ಳೆಯ ಧನುಸ್ಸನ್ನು ಹಿಡಿದ ಸಾತ್ಯಕಿಯೂ ಕೌರವರ ಸೇನೆಯನ್ನು ಅಟ್ಟುತ್ತ ಬಂದನು. ಅವನನ್ನು ಭೂರಿಶ್ರವನು ಎದುರಿಸಿದನು. ಅವರಿಬ್ಬರೊಳಗೆ ಅತ್ಯಂತ ಭೀಕರ ಅಸ್ತ್ರಗಳಿಂದ ಯುಕ್ತವಾದ ಘೋರಯುದ್ಧವು ನಡೆಯಿತು.
ಪುತ್ರಾನ್ ದಶಾಸ್ಯಾಶು ನಿಹತ್ಯ ವೀರಃ
ಸ ಸಾತ್ಯಕೇಃ ಸೌಮದತ್ತಿಃ ಸಕಾಶೇ |
ಸಮರ್ಪಯಾಮಾಸ ಶರೀರದಾರಣೈಃ
ಶರೈರುಭೌ ತೌ ವಿರಥೌ ಚ ಚಕ್ರತುಃ ॥67॥
ವೀರನಾದ ಭೂರಿಶ್ರವನು ಸಾತ್ಯಕಿಯ ಕಣ್ಣುಮುಂದೆಯೇ ಅವನ ಹತ್ತು ಮಕ್ಕಳನ್ನು ಕೊಂದು, ಶರೀರವನ್ನು ಸೀಳುವ ಆಯುಧಗಳಿಂದ ಅವನನ್ನೂ ಪೀಡಿಸಿದನು. ಅವರಿಬ್ಬರೂ ಒಬ್ಬರನ್ನೊಬ್ಬರು ವಿರಥರನ್ನಾಗಿ ಮಾಡಿದರು.
ಅಥಾಸಿಪಾಣಿಂ ಯುಯುಧಾನಮಾಶು
ಮಹಾಸಿಹಸ್ತೇನ ಚ ಸೌಮದತ್ತಿನಾ |
ಆಸಾದಿತಂ ವೀಕ್ಷ್ಯ ರಥಂ ಸ್ವಕೀಯಮ್
ಆರೋಪಯಾಮಾಸ ಸುತೋಽನಿಲಸ್ಯ ॥68॥
ಬಳಿಕ ಖಡ್ಗಧಾರಿಯಾದ ಸಾತ್ಯಕಿಯನ್ನು ಮಹಾಖಡ್ಗಧಾರಿ ಭೂರಿಶ್ರವನು ಆಕ್ರಮಿಸಿದುದನ್ನು ಕಂಡು ಭೀಮಸೇನನು ಬೇಗನೆ ಸಾತ್ಯಕಿಯನ್ನು ತನ್ನ ರಥದಲ್ಲಿ ಏರಿಸಿಕೊಂಡನು.
ಸುಯೋಧನಃ ಸೌಮದತ್ತಿಂ ಸ್ವಕೀಯ-
ರಥೇ ವ್ಯವಸ್ಥಾಪ್ಯ ಚ ಭೀಮಸೇನಾತ್ |
ಅಪಾದ್ರವದ್ ವಾಸವಿರ್ಭೀಷ್ಮಮಾಜೌ
ಸಮಾಸಸಾದಾಽಶು ಮಹೇಂದ್ರಕಲ್ಪಃ ॥69॥
ದುರ್ಯೋಧನನು ಭೂರಿಶ್ರವನನ್ನು ತನ್ನ ರಥದಲ್ಲಿ ಏರಿಸಿಕೊಂಡು ಭೀಮನನ್ನು ಎದುರಿಸಲಾರದೆ ಪಲಾಯನ ಮಾಡಿದನು. ದೇವೇಂದ್ರನಿಗೆ ಸಮಾನನಾದ ಅರ್ಜುನನು ಯುದ್ಧದಲ್ಲಿ ಬೇಗನೆ ಭೀಷ್ಮರ ಬಳಿಗೆ ಬಂದನು.
ಉಭೌ ಚ ತಾವಸ್ತ್ರವಿದಾಂ ಪ್ರಬರ್ಹೌ
ಶರೈರ್ಮಹಾಶೀವಿಷಸನ್ನಿಕಾಶೈಃ |
ತತಕ್ಷತುರ್ನಾಕಸದಾಂ ಸಮಕ್ಷಂ
ಮಹಾಬಲೌ ಸಂಯತಿ ಜಾತದರ್ಪೌ ॥70॥
ಯುದ್ಧದಲ್ಲಿ ತಮ್ಮ ಸಾಮರ್ಥ್ಯದ ಮೇಲೆ ಹೆಮ್ಮೆಪಡುವ, ಅಸ್ತ್ರವೇತ್ತರಲ್ಲಿ ಶ್ರೇಷ್ಠರಾದ ಮಹಾಬಲಶಾಲಿಗಳಾದ ಭೀಷ್ಮಾರ್ಜುನರು ಇಬ್ಬರೂ ದೇವತೆಗಳ ಸಮಕ್ಷಮದಲ್ಲಿ ಮಹಾಸರ್ಪಸದೃಶವಾದ ಬಾಣಗಳಿಂದ ಒಬ್ಬರನ್ನೊಬ್ಬರು ಗಾಯಗೊಳಿಸಿದರು.
ಸ್ವಬಾಹುವೀರ್ಯೇಣ ಜಿತಃ ಸ ಭೀಷ್ಮಃ
ಕಿರೀಟಿನಾ ಲೋಕಮಹಾರಥೇನ |
ಸೇನಾಮಪಾಹೃತ್ಯ ಯಯೌ ನಿಶಾಯಾಮ್
ಆಸಾದಿತಾಯಾಮಥ ಪಾಂಡವಾಶ್ಚ ॥71॥
ಲೋಕದಲ್ಲಿ ಮಹಾರಥಿಕನಾದ ಅರ್ಜುನನಿಂದ ಬಾಹುಬಲದಿಂದಲೇ ಪರಾಜಿತರಾದ ಆ ಭೀಷ್ಮರು ಸೇನೆಯನ್ನು ಹಿಂದೆ ತೆಗೆದುಕೊಂಡು ಹೊರಟುಹೋದರು. ಕತ್ತಲಾದ್ದರಿಂದ ಪಾಂಡವರೂ ಹಾಗೇ ಮಾಡಿದರು.
ತತಃ ಪರೇದ್ಯುಃ ಪುನರೇವ ಭೀಮ-
ಭೀಷ್ಮೌ ಪುರಸ್ಕೃತ್ಯ ಸಮೀಯತುಸ್ತೇ |

ಸೇನೇ ತದಾ ಸಾರಥಿಹೀನಮಾಶು
ಭೀಷ್ಮಂ ಕೃತ್ವಾ ಮಾರುತಿರಭ್ಯಗಾತ್ ಪರಾನ್ ॥72॥
ಬಳಿಕ ಮರುದಿನ ಪುನಃ ಭೀಮ ಭೀಷ್ಮರನ್ನು ಮುಂದೆ ಮಾಡಿಕೊಂಡು ಎರಡೂ ಸೈನ್ಯಗಳು ಎದುರಾದವು. ಆಗ ಭೀಮಸೇನನು ಭೀಷ್ಮರನ್ನು ಬೇಗನೆ ಸಾರಥಿ ರಹಿತನನ್ನಾಗಿ ಮಾಡಿ ಶತ್ರುಗಳನ್ನು ಎದುರಿಸಿದನು.
ನಿಪಾತಿತಾಸ್ತೇನ ರಥೇಭವಾಜಿನಃ
ಪ್ರದುದ್ರುವುಶ್ಚಾವಶಿಷ್ಟಾಃ ಸಮಸ್ತಾಃ ।
ದುರ್ಯೋಧನಾದ್ಯೇಷು ಪರಾಜಿತೇಷು
ಭೀಷ್ಮದ್ರೌಣದ್ರೌಣಿಪುರಸ್ಸರೇಷು ॥73॥
ರಥ, ಆನೆ, ಕುದುರೆಗಳಲ್ಲಿ ಬಂದ ವೀರರು ಭೀಮನಿಂದ ಹತರಾದರು. ಅವನಿಂದ ಭೀಷ್ಮ-ದ್ರೋಣ-ಅಶ್ವತ್ಥಾಮ, ದುರ್ಯೋಧನ ಮುಂತಾದವರೂ ಪರಾಜಿತರಾದಾಗ ಉಳಿದೆಲ್ಲರೂ ಪಲಾಯನಗೈದರು.
ಮಹಾಗಜಸ್ಥೋ ಭಗದತ್ತ ಆಗಾದಾ-
ಯನ್ ಬಾಣಾನ್ ಭೀಮಸೇನೇಽಮುಚಚ್ಚ ।
ತೇನಾತಿವಿದ್ಧೋ ಭೀಮಸೇನೇಽಸ್ಯ ಪುತ್ರ
ಉದ್ಯಚ್ಛಮಾನಂ ಪಿತರಂ ನಿವಾರ್ಯ ।
ಘಟೋತ್ಕಚೋಽಭ್ಯದ್ರುವದಾಶು ವೀರಃ
ಸ್ವಮಾಯಯಾ ಹಸ್ತಿಚತುಷ್ಟಯಸ್ಥಃ ॥74॥
ಮಹಾಗಜವನ್ನೇರಿದ್ದ ಭಗದತ್ತನು ಬಂದನು. ಬಂದು ಬಾಣಗಳನ್ನು ಭೀಮಸೇನನ ಮೇಲೆ ಎಸೆದನು. ಅದರಿಂದ ಭೀಮ ಬಹಳ ಹೊಡೆಸಿಕೊಂಡಾಗ, ತನ್ನ ಮಾಯೆಯಿಂದ ನಾಲ್ಕು ಆನೆಗಳಲ್ಲಿ ನಾಲ್ಕು ರೂಪಗಳಿಂದ ಕುಳಿತ ವೀರ ಘಟೋತ್ಕಚನು ಯುದ್ಧದಲ್ಲಿ ಉದ್ಯತನಾದ ತಂದೆಯನ್ನು ತಡೆದು ತಾನೇ ಬೇಗನೆ ಭಗದತ್ತನ ಎದುರಿಗೆ ಬಂದನು.
ಸ ವೈಷ್ಣವಾಗ್ರ್ಯಂ ಭಗದತ್ತಸಂಸ್ಥಂ
ವಿಜ್ಞಾಯ ವಿಷ್ಣೋರ್ವರತೋ ವಿಶೇಷತಃ ।
ಅಮೋಘಮನ್ಯತ್ರ ಹರೇರ್ಮರುತ್ಸುತಃ
ಪುತ್ರೇ ಯಾತೇ ನ ಸ್ವಯಮಭ್ಯಧಾವತ್ ॥75॥
ಭಗದತ್ತನಲ್ಲಿರುವ ವೈಷ್ಣವಾಸ್ತ್ರವು ವರಾಹರೂಪಿ ಹರಿಯ ವಿಶೇಷ ವರಬಲದಿಂದ ಹರಿಯಲ್ಲಿ ಹೊರತು ಅನ್ಯರಲ್ಲಿ ವ್ಯರ್ಥವಾಗದುದೆಂದು ತಿಳಿದು ಭೀಮನು, ಘಟೋತ್ಕಚನು ಮುಂದೆ ನಡೆದಾಗ, ತಾನು ಸ್ವತಃ ಮುಂದೆ ಹೋಗಲಿಲ್ಲ.
ಅನುಗ್ರಹಾದಭ್ಯಧಿಕಾದವಧ್ಯಂ
ಜಾನನ್ನಪಿ ಸ್ವಂ ವಾಸುದೇವಸ್ಯ ನಿತ್ಯಮ್ ।
ತದ್ಭಕ್ತಿವೈಶೇಷ್ಯತ ಏವ ತಸ್ಯ
ಸತ್ಯಂ ವಾಕ್ಯಂ ಕರ್ತುಮರಿಂ ನ ಚಾಗಾತ್ ॥76॥
ಹರಿಯ ಪರಮಾನುಗ್ರಹದಿಂದ ತಾನು ಸದಾ ಅವಧ್ಯನೆಂಬುದನ್ನು ತಿಳಿದವನಾದರೂ ಭೀಮನು ಹರಿಭಕ್ತಿಯ ಅತಿಶಯದಿಂದ ವರಾಹರೂಪಿ ಹರಿಯ ವಾಕ್ಯವನ್ನು ಸತ್ಯವನ್ನಾಗಿ ಮಾಡುವುದಕ್ಕೆಂದೇ ಶತ್ರುವಿನ ಎದುರಿಗೆ ಹೋಗಲಿಲ್ಲ.
ಯದಾ ಸ್ವಪುತ್ರೇಣ ಜಿತೋ ಭವೇತ್ ಸ
ಕಿಮ್ವಾತ್ಮನೇತ್ಯೇವ ತದಾ ಪ್ರವೇತ್ತುಮ್ ।
ಸ ವಿಸ್ಮೃತಾಸ್ತ್ರಸ್ತು ಯದಾ ಭವೇತ
ತದಾ ಭೀಮೋ ಭಗದತ್ತಂ ಪ್ರಯಾತಿ ॥77॥
ಭಗದತ್ತನು ಯಾವಾಗ ತನ್ನ ಮಗನಿಂದಲೇ ಪರಾಜಿತನಾಗುವನೋ ಆಗ ತನ್ನಿಂದ ಪರಾಜಿತನಾಗುವನೆಂದು ಏನು ಹೇಳಬೇಕು? ಎಂದು ತಿಳಿಸುವ ಉದ್ದೇಶದಿಂದಲೂ ಭೀಮನು ಭಗದತ್ತನ ಎದುರಿಗೆ ಹೋಗಲಿಲ್ಲ. ಭಗದತ್ತನು ಯಾವಾಗ ಆ ಅಸ್ತ್ರಮಂತ್ರವನ್ನು ಮರೆಯುವನೋ ಆಗ ಭೀಮನು ಅವನನ್ನು ಎದುರಿಸುತ್ತಾನೆ.
ಋತೇ ಭೀಮಂ ವಾಽರ್ಜುನಂ ನಾಸ್ತ್ರಮೇಷ
ಪ್ರಮುಂಚತೀತ್ಯೇವ ಹಿ ವೇದ ಭೀಮಃ ॥78॥
ಭೀಮನ ಮತ್ತು ಅರ್ಜುನನ ಮೇಲೆ ಹೊರತು ಬೇರೆ ಕಡೆ ಭಗದತ್ತನು ವೈಷ್ಣವಾಸ್ತ್ರವನ್ನು ಪ್ರಯೋಗಿಸುವುದಿಲ್ಲವೆಂದು ಭೀಮನು ತಿಳಿದೇ ಇದ್ದಾನೆ.
ಚತುರ್ಗಜಾತ್ಮೋಪರಿಗಾತ್ಮಕಶ್ಚ
ಘಟೋತ್ಕಚಃ ಸುಪ್ರತೀಕಂ ಚ ತಂ ಚ ।
ನಾನಾಪ್ರಹಾರೈರ್ವಿತುದಂಶ್ಚಕಾರ
ಸಂದಿಗ್ಧಜೀವೌ ಜಗತಾಂ ಸಮಕ್ಷಮ್ ॥79॥
ಘಟೋತ್ಕಚನು ನಾಲ್ಕು ಆನೆಗಳೂ ತಾನೇ ಆದ. ಆ ಆನೆಗಳ ಮೇಲೇರಿರುವ ನಾಲ್ವರು ವೀರರೂ ತಾನೇ ಆಗಿ, ಸುಪ್ರತೀಕವನ್ನೂ ಅದಕ್ಕೇರಿರುವ ಭಗದತ್ತನನ್ನೂ ನಾನಾ ಬಗೆಯ ಪ್ರಹಾರಗಳಿಂದ ಪೀಡಿಸುತ್ತಾ, ಜಗತ್ತಿನ ಸಮಕ್ಷಮದಲ್ಲಿ ಇಬ್ಬರ ಉಳಿವೂ ಸಂದಿಗ್ಧವಾಗುವಂತೆ ಮಾಡಿದ.
ಗಜಾರ್ತನಾದಂ ತು ನಿಶಮ್ಯ ಭೀಷ್ಮ-

ಮುಖಾಃ ಸಮಾಪೇತುರಮುಂ ಚ ದೃಷ್ಟ್ವಾ|
ಮಹಾಕಾಯಂ ಭೀಮ-ಮುಷ್ಯ ಪೃಷ್ಠ-
ಗೋಪಂ ಚ ವಾಯ್ವಾತ್ಮಜಮತ್ರಸನ್ ಭೃಶಮ್ ॥80॥
ಸುಪ್ರತೀಕ ಆನೆಯ ಆರ್ತನಾದವನ್ನು ಕೇಳಿ ಭೀಷ್ಮರು ಮುಂತಾದವರು ಧಾವಿಸಿ ಬಂದರು. ಭೀಕರ ಮಹಾಕಾಯನಾದ ಘಟೋತ್ಕಚನನ್ನೂ ಅವನ ಹಿಂದೆ ರಕ್ಷಕನಾಗಿ ನಿಂತ ಭೀಮನನ್ನೂ ಕಂಡು ಬಹಳ ಭಯಪಟ್ಟರು.
ತೇ ಭೀತಭೀತಾಃ ಪೃತನಾಪಹಾರಂ
ಕೃತ್ವಾಽಪಜಗ್ಮುಃ ಶಿಬಿರಾಯ ಶೀಘ್ರಮ್ ॥81॥
ಭೀಷ್ಮ ಮುಂತಾದವರು ಬಹಳ ಭೀತರಾಗಿ ಬೇಗನೆ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಂಡು ಶಿಬಿರದ ಕಡೆಗೆ ನಡೆದರು.
* * * * *
ಎಂಬತ್ಮೂರನೆಯ ಅಧ್ಯಾಯ
ಎಂಟನೆಯ ದಿನದ ಯುದ್ಧದ ಪ್ರಾರಂಭ. ಶೃಂಗಾಟಕ ವ್ಯೂಹದ ರಚನೆ.
ಸಂಜಯಃ
ಪರಿಣಾಮ್ಯ ನಿಶಾಂ ತಾಂ ತು ಸುಖಸುಪ್ತಾ ಜನೇಶ್ವರಾಃ|
ಕುರವಃ ಪಾಂಡವಾಶ್ಚೈವ ಪುನರ್ಯುದ್ಧಾಯ ನಿರ್ಯಯುಃ ॥1॥
ಸಂಜಯ ಕೌರವರೂ, ಪಾಂಡವರೂ ಮತ್ತು ಉಳಿದ ರಾಜರೂ ಸುಖನಿದ್ರೆಯಿಂದ ಆ ರಾತ್ರಿಯನ್ನು ಕಳೆದು ಪುನಃ ಯುದ್ಧಕ್ಕಾಗಿ ಹೊರಟರು.
ತತಃ ಶಬ್ದೋ ಮಹಾನಾಸೀತ್ ಸೇನಯೋರುಭಯೋರಪಿ|
ನಿರ್ಗಚ್ಛಮಾನಯೋಃ ಸಂಖ್ಯೇ ಸಾಗರಪ್ರತಿಮೋ ಮಹಾನ್ ॥2॥
ಎರಡು ಸೇನೆಗಳು ಯುದ್ಧಕ್ಕಾಗಿ ಹೊರಡುತ್ತಿರಲು ಸಾಗರದ ಗರ್ಜನೆಯಂತಹ ದೊಡ್ಡ ಶಬ್ದವುಂಟಾಯಿತು.
ತತೋ ದುರ್ಯೋಧನೋ ರಾಜಾ ಚಿತ್ರಸೇನೋ ವಿವಿಂಶತಿಃ|
ಭೀಷ್ಮಶ್ಚ ರಥಿನಾಂ ಶ್ರೇಷ್ಠೋ ಭಾರದ್ವಾಜಶ್ಚ ವೈ ದ್ವಿಜಃ ॥3॥
ಏಕೀಭೂತಾಃ ಸುಸಂಯತ್ತಾಃ ಕೌರವಾಣಾಂ ಮಹಾಚಮೂಃ|
ವ್ಯೂಹಾಯ ವಿದಧೂ ರಾಜನ್ ಪಾಂಡವಾನ್ ಪ್ರತಿ ದಂಸಿತಾಃ ॥4॥
ಎಲ್ಲೈ ರಾಜನೇ, ಅನಂತರ ರಾಜನಾದ ದುರ್ಯೋಧನ, ಚಿತ್ರಸೇನ, ವಿವಿಂಶತಿ, ರಥಿಶ್ರೇಷ್ಠರಾದ ಭೀಷ್ಮರು, ಬ್ರಾಹ್ಮಣರಾದ ದ್ರೋಣರು ಎಲ್ಲರೂ ಸೇರಿ ಪಾಂಡವರಿಗೆ ಪ್ರತಿಯಾಗಿ ಯುದ್ಧವನ್ನು ಮಾಡಲು ಶಸ್ತ್ರ-ಕವಚಾದಿಗಳನ್ನು ಧರಿಸಿ ಕೌರವರ ಮಹಾಸೈನ್ಯವನ್ನು ವ್ಯೂಹಗೊಳಿಸಿದರು.
ಭೀಷ್ಮಃ ಕೃತ್ವಾ ಮಹಾವ್ಯೂಹಂ ಪಿತಾ ತವ ವಿಶಾಂಪತೇ|
ಸಾಗರಪ್ರತಿಮಂ ಘೋರಂ ವಾಹನೋರ್ಮಿತರಂಗಿಣಮ್ ॥5॥
ಅಗ್ರತಃ ಸರ್ವಸೈನ್ಯಾನಾಂ ಭೀಷ್ಮಃ ಶಾಂತನವೋ ಯಯೌ|
ಮಾಲವೈರ್ದಾಕ್ಷಿಣಾತ್ಯೈಶ್ಚ ಆವಂತ್ಯೈಶ್ಚ ಸಮನ್ವಿತಃ ॥6॥
ಎಲ್ಲೈ ರಾಜನೇ, ನಿನ್ನ ತಂದೆಯಾದ, ಶಂತನುಪುತ್ರರಾದ ಭೀಷ್ಮರು ಸಾಗರಸದೃಶವಾದ, ಘೋರವಾದ, ವಾಹನಗಳೆಂಬ ಅಲೆಗಳು ಮತ್ತು ತರಂಗಗಳನ್ನು ಹೊಂದಿದ ದಂಡಾಕಾರವಾದ ಮಹಾವ್ಯೂಹವನ್ನು ರಚಿಸಿ, ಸರ್ವಸೈನ್ಯಗಳ ಮುಂಭಾಗದಲ್ಲಿ ಮಾಲವರಿಂದಲೂ, ದಾಕ್ಷಿಣಾತ್ಯ ಯೋಧರಿಂದಲೂ, ಅವಂತಿಯ ಯೋಧರಿಂದಲೂ ಸಹಿತರಾಗಿ ಮುಂದೆ ಹೊರಟರು.
ತತೋಽನಂತರಮೇವಾಸೀದ್ ಭಾರದ್ವಾಜಃ ಪ್ರತಾಪವಾನ್|
ಪುಳಿಂದೈಃ ಪಾರದೈಶ್ಚೈವ ತಥಾ ಕ್ಷುದ್ರಕಮಾಲವೈಃ ॥7॥
ಪ್ರತಾಪಶಾಲಿಗಳಾದ ದ್ರೋಣರು ಪುಳಿಂದರಿಂದಲೂ, ಪಾರದರಿಂದಲೂ ಹಾಗೆಯೇ ಕ್ಷುದ್ರಕಮಾಲವರಿಂದಲೂ ಸಹಿತರಾಗಿ ಅವರ ಹಿಂದೆ ಇದ್ದರು.
ದ್ರೋಣಾದನಂತರಂ ಯತ್ತೋ ಭಗದತ್ತಃ ಪ್ರತಾಪವಾನ್|
ಮಾಗಧೈಶ್ಚ ಕಳಿಂಗೈಶ್ಚ ಪಿಶಾಚೈಶ್ಚ ವಿಶಾಂಪತೇ ॥8॥
ಎಲ್ಲೈ ರಾಜನೇ, ಪ್ರತಾಪಶಾಲಿಯಾದ ಭಗದತ್ತನು ಮಾಗಧರಿಂದಲೂ, ಕಳಿಂಗರಿಂದಲೂ, ಪಿಶಾಚರಿಂದಲೂ ಸಹಿತನಾಗಿ ಜಾಗರೂಕನಾಗಿ ದ್ರೋಣರ ಹಿಂದೆ ಇದ್ದನು.
ಪ್ರಾಗ್ಜ್ಯೋತಿಷಾದನು ನೃಪಃ ಕೌಸಲ್ಯೋಽಥ ಬೃಹದ್ಬಲಃ|
ಮೇಕಲೈಸ್ತ್ರೈಪುರೈಶ್ಚೈವ ಚಿಚ್ಛಿಲೈಶ್ಚ ಸಮನ್ವಿತಃ ॥9॥
ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನ ಹಿಂದೆ ಮೇಕಲರಿಂದಲೂ, ತ್ರಿಪುರರಿಂದಲೂ, ಚಿಚ್ಛಿಲರಿಂದಲೂ ಸಹಿತನಾದ ಕೋಸಲಾಧಿಪತಿಯಾದ ಬೃಹದ್ಬಲನಿದ್ದನು.
ಬೃಹದ್ಬಲಾತ್ ತತಃ ಶೂರಸ್ತ್ರಿಗರ್ತಃ ಪ್ರಸ್ಥಲಾಧಿಪಃ|
ಕಾಂಬೋಜೈರ್ಬಹುಭಿಃ ಸಾರ್ಧಂ ಯವನೈಶ್ಚ ಸಹಸ್ರಶಃ ॥10॥
ನಾವು ಏನಾದರೂ ಯುದ್ಧವನ್ನು ಬಿಡುವುದಿಲ್ಲ ಎಂಬ ಛಲವನ್ನು ಧರಿಸಿದ ಸಂಶಪ್ತಕರಿಗೆ ಅಧಿಪತಿಯಾದ ಶೂರನಾದ ತ್ರಿಗರ್ತನು ಬೃಹದ್ಬಲನ ಹಿಂದೆ ಅನೇಕ ಕಾಂಬೋಜರಿಂದಲೂ, ಸಹಸ್ರಾರು ಯವನರಿಂದಲೂ ಸಹಿತನಾಗಿದ್ದನು.
ದ್ರೌಣಿಸ್ತು ರಭಸಃ ಶೂರಸ್ತ್ರಿಗರ್ತಾದನು ಭಾರತ|

ಪ್ರಯಯೌ ಸಿಂಹನಾದೇನ ನಾದಯಾನೋ ಧರಾತಳಮ್ ॥11॥
ಎಲೈ ಭಾರತನೇ, ತ್ರಿಗರ್ತನ ಹಿಂದೆ ಶೂರರೂ, ವೇಗಶಾಲಿಗಳೂ ಆದ ಅಶ್ವತ್ಥಾಮರು ತಮ್ಮ ಸಿಂಹನಾದದಿಂದ ಭೂಮಿಯನ್ನೇ ಪ್ರತಿಧ್ವನಿಸುತ್ತಾ ಸಾಗಿದರು.
ತಥಾ ಸರ್ವೇಣ ಸೈನ್ಯೇನ ರಾಜಾ ದುರ್ಯೋಧನಸ್ತದಾ |
ದ್ರೌಣೇರನಂತರಂ ಪ್ರಾಯಾತ್ ಸೋದರ್ಯೈಃ ಪರಿವಾರಿತಃ ॥12॥
ಹಾಗೆಯೇ ರಾಜನಾದ ದುರ್ಯೋಧನನು ತನ್ನ ಎಲ್ಲ ಸೈನ್ಯದಿಂದಲೂ ಮತ್ತು ಸಹೋದರರಿಂದಲೂ ಕೂಡಿಕೊಂಡವನಾಗಿ ಅಶ್ವತ್ಥಾಮರ ಹಿಂದೆ ಹೊರಟನು.
ದುರ್ಯೋಧನಾದನು ಕೃಪಸ್ತತಃ ಶಾರದ್ವತೋ ಯಯೌ |
ಏವಮೇಷ ಮಹಾವ್ಯೂಹಃ ಪ್ರಯಯೌ ಸಾಗರೋಪಮಃ ॥13॥
ದುರ್ಯೋಧನನ ಹಿಂಭಾಗದಲ್ಲಿ ಶಾರದ್ವತರಾದ ಕೃಪಾಚಾರ್ಯರು ಹೊರಟರು. ಹೀಗೆ ಸಾಗರಸದೃಶವಾಗಿದ್ದ ಆ ಮಹಾವ್ಯೂಹವು ಯುದ್ಧಕ್ಕೆ ಹೊರಟಿತು.
ರೇಜುಸ್ತತ್ರ ಪತಾಕಾಶ್ಚ ಶ್ವೇತಚ್ಛತ್ರಾಣಿ ಚಾಭಿಭೋ |
ಅಂಗದಾನ್ಯಥ ಚಿತ್ರಾಣಿ ಮಹಾರ್ಹಾಣಿ ಧನೂಂಷಿ ಚ ॥14॥
ಎಲೈ ಶತ್ರುನಿವಾರಕನೇ, ಅಲ್ಲಿ ಪತಾಕೆಗಳು, ಶ್ವೇತಚ್ಛತ್ರಗಳು, ವಿಚಿತ್ರವಾದ ಅಂಗದಗಳು, ಬೆಲೆಬಾಳುವ ಧನುಸ್ಸುಗಳು ಸಹ ಶೋಭಿಸಿದವು.
ತಂ ತು ದೃಷ್ಟ್ವಾ ಮಹಾವ್ಯೂಹಂ ತಾವಕಾನಾಂ ಮಹಾರಥಃ |
ಯುಧಿಷ್ಠಿರೋಽಬ್ರವೀತ್ ತೂರ್ಣಂ ಪಾರ್ಷತಂ ಪೃತನಾಪತಿಮ್ ॥15॥
ಮಹಾರಥನಾದ ಯುಧಿಷ್ಠಿರನು ನಿನ್ನವರ ಆ ಮಹಾವ್ಯೂಹವನ್ನು ನೋಡಿ ಶೀಘ್ರವಾಗಿ ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಕುರಿತು ಹೇಳಿದನು.
ಪಶ್ಯ ವ್ಯೂಹಂ ಮಹೇಷ್ವಾಸ ನಿರ್ಮಿತಂ ಸಾಗರೋಪಮಮ್ |
ಪ್ರತಿವ್ಯೂಹಂ ತ್ವಮಪಿ ಹಿ ಕುರು ಪಾರ್ಷತ ಮಾಚಿರಮ್ ॥16॥
ಮಹಾಧನುರ್ಧಾರಿಯೇ, (ಭೀಷ್ಮರು ರಚಿಸಿರುವ) ಸಾಗರಸದೃಶವಾದ ಈ ವ್ಯೂಹವನ್ನು ನೋಡು. ಎಲೈ ಧೃಷ್ಟದ್ಯುಮ್ನನೇ, ನೀನೂ ಸಹ ಶೀಘ್ರವಾಗಿ ಪ್ರತಿ ವ್ಯೂಹವನ್ನು ರಚಿಸು.
ತತಃ ಸ ಪಾರ್ಷತಃ ಶೂರೋ ವ್ಯೂಹಂ ಚಕ್ರೇ ಸುದಾರುಣಮ್ |
ಶೃಂಗಾಟಕಂ ಮಹಾರಾಜ ಪರವ್ಯೂಹವಿನಾಶನಮ್ ॥17॥
ಎಲೈ ಮಹಾರಾಜನೇ, ಆಗ ಶೂರನಾದ ಧೃಷ್ಟದ್ಯುಮ್ನನು ಶತ್ರುವ್ಯೂಹವನ್ನು ವಿನಾಶಮಾಡುವ ಶೃಂಗಾಟಕ ಎಂಬ ಭಯಂಕರವಾದ ವ್ಯೂಹವನ್ನು ರಚಿಸಿದನು (ಗೋಶೃಂಗಗಳಂತಿರುವ ವ್ಯೂಹಕ್ಕೆ ಶೃಂಗಾಟಕ ವ್ಯೂಹವೆಂದು ಹೆಸರು. ಅದರಲ್ಲಿ ಶೃಂಗಗಳ ಸ್ಥಾನದಲ್ಲಿ ಬಹಳ ಪ್ರಮುಖರಾದವರು ಮತ್ತು ಮಧ್ಯದ ಸ್ಥಾನದಲ್ಲಿ ಉಳಿದವರು ಇರುತ್ತಾರೆ).
ಶೃಂಗೇಭ್ಯೋ ಭೀಮಸೇನಶ್ಚ ಸಾತ್ಯಕಿಶ್ಚ ಮಹಾರಥಃ |
ರಥೈರನೇಕಸಾಹಸ್ರೈಸ್ತಥಾ ಹಯಪದಾತಿಭಿಃ ॥18॥
ಆ ವ್ಯೂಹದ ಶೃಂಗಸ್ಥಾನದಲ್ಲಿ ಭೀಮಸೇನ ಮತ್ತು ಮಹಾರಥನಾದ ಸಾತ್ಯಕಿಯು ಅನೇಕ ಸಹಸ್ರ ರಥಗಳಿಂದಲೂ, ಹಯಪದಾತಿಗಳಿಂದಲೂ ಕೂಡಿಕೊಂಡು ನಿಂತರು.
ನಾಭ್ಯಾಮಭೂನ್ನರಶ್ರೇಷ್ಠಃ ಶ್ವೇತಾಶ್ವೋ ವಾನರಧ್ವಜಃ |
ಮಧ್ಯೇ ಯುಧಿಷ್ಠಿರೋ ರಾಜಾ ಮಾದ್ರೀಪುತ್ರೌ ಚ ಪಾಂಡವೌ ॥19॥
ಶೃಂಗಗಳ ನಾಭಿಸ್ಥಾನದಲ್ಲಿ ನರಶ್ರೇಷ್ಠನೂ, ಶ್ವೇತಾಶ್ವನೂ, ವಾನರಧ್ವಜನೂ ಆದ ಅರ್ಜುನನಿದ್ದನು. ಮಧ್ಯಪ್ರದೇಶದಲ್ಲಿ ರಾಜನಾದ ಯುಧಿಷ್ಠಿರನೂ ಮತ್ತು ಪಾಂಡುಪುತ್ರರಾದ ನಕುಲ-ಸಹದೇವರೂ ಇದ್ದರು.
ಅಥೇತರೇ ಮಹೇಷ್ವಾಸಾಃ ಸಹಸೈನ್ಯಾ ನರಾಧಿಪಾಃ |
ವ್ಯೂಹಂ ತಂ ಪೂರಯಾಮಾಸುರ್ವ್ಯೂಹಶಾಸ್ತ್ರವಿಶಾರದಾಃ ॥20॥
ಆಗ ವ್ಯೂಹಶಾಸ್ತ್ರದಲ್ಲಿ ಪರಿಣತರಾದ ಮಹಾಧನುರ್ಧಾರಿಗಳಾದ ರಾಜರು ತಮ್ಮ ಸೈನ್ಯದ ಜೊತೆಯಲ್ಲಿ ವ್ಯೂಹದ ಉಳಿದ ಭಾಗವನ್ನು ಪೂರಣ ಮಾಡಿದರು.
ಏವಮೇತಂ ಮಹಾವ್ಯೂಹಂ ವ್ಯೂಹ್ಯ ಭಾರತ ಪಾಂಡವಾಃ |
ಅತಿಷ್ಠನ್ ಸಮರೇ ಶೂರಾ ಯೋದ್ಧುಕಾಮಾ ಜಯೈಷಿಣಃ ॥21॥
ಎಲೈ ಭಾರತನೇ, ಹೀಗೆ ಪಾಂಡವರು ಈ ಮಹಾವ್ಯೂಹವನ್ನು ರಚಿಸಿ, ಜಯವನ್ನು ಬಯಸಿ, ಯುದ್ಧಮಾಡಲು ಇಚ್ಛಿಸಿ, ಶೂರರಾದ ಅವರು ಯುದ್ಧಕ್ಕಾಗಿ ನಿಂತರು.
ಭೇರೀಶಬ್ದಾಶ್ಚ ತುಮುಲಾ ವಿಮಿಶ್ರಾಃ ಶಂಖನಿಸ್ವನೈಃ |
ಕ್ಷ್ವೇಡಿತಾಸ್ಫೋಟಿತೋತ್ಕ್ರುಷ್ಟೈಃ ಸುಭೀಮಾಃ ಸರ್ವತೋದಿಶಮ್ ॥22॥
ಶಂಖನಾದಗಳಿಂದ ಮಿಶ್ರಿತವಾದ ತೀವ್ರವಾದ ಭೇರೀಶಬ್ದಗಳು, ಸಿಂಹನಾದಗಳು, ಹಸ್ತತಳಶಬ್ದಗಳು ಮತ್ತು ಭಯಂಕರವಾದ ಕಿರುಚುವ ಶಬ್ದಗಳು ಎಲ್ಲ ದಿಕ್ಕುಗಳಲ್ಲಿಯೂ ಕೇಳಿ ಬಂದವು.
ತತಃ ಶೂರಾಃ ಸಮಾಸಾದ್ಯ ಸಮರೇ ತೇ ಪರಸ್ಪರಮ್ |
ನೇತ್ರೈರನಿಮಿಷೈ ರಾಜನ್ನವೈಕ್ಷಂತ ಪ್ರಕೋಪಿತಾಃ ॥23॥

ಎಲೈ ರಾಜನೇ, ಅನಂತರ ಶೂರರು ಪರಸ್ಪರವಾಗಿ ಸಂಧಿಸಿ ಕೋಪಗೊಂಡು ರೆಪ್ಪೆಗಳನ್ನು ಮುಚ್ಚದ ತಮ್ಮ ಕಣ್ಣುಗಳಿಂದ ಒಬ್ಬರನ್ನೊಬ್ಬರು ನೋಡಿದರು (ದೃಷ್ಟಿ ಯುದ್ಧವನ್ನು ಮಾಡಿದರು).
ಮನೋಭಿಸ್ತೇ ಮನುಷ್ಯೇಂದ್ರ ಪೂರ್ವಂ ಯೋಧಾಃ ಪರಸ್ಪರಮ್ |
ಯುದ್ಧಾಯ ಸಮವರ್ತಂತ ಸಮಾಹೂಯೇತರೇತರಮ್ ॥24॥
ಎಲೈ ಮನುಷ್ಯೇಂದ್ರನೇ, ಆ ಯೋಧರು ಮೊದಲು ಒಬ್ಬರನ್ನೊಬ್ಬರು ಆಹ್ವಾನಿಸಿ ಮನಸ್ಸುಗಳಿಂದಲೂ ಯುದ್ಧವನ್ನು ಮಾಡಿದರು.
ತತಃ ಪ್ರವವೃತೇ ಯುದ್ಧಂ ಘೋರರೂಪಂ ಭಯಾವಹಮ್ |
ತಾವಕಾನಾಂ ಪರೇಷಾಂ ಚ ನಿಘ್ನತಾಮಿತರೇತರಮ್ ॥25॥
ಅನಂತರ ನಿನ್ನವರಿಗೂ ಮತ್ತು ಪರರಿಗೂ ಪರಸ್ಪರವಾಗಿ ಕೊಲ್ಲುವ ಭಯಜನಕವಾದ ಘೋರವಾದ ಯುದ್ಧವು ಪ್ರಾರಂಭವಾಯಿತು.
ನಾರಾಚಾ ನಿಶಿತಾಃ ಸಂಖೇ ಸಂಪತಂತಿ ಸ್ಮ ಭಾರತ |
ವ್ಯಾತ್ತಾನನಾ ಭಯಕರಾ ಉರಗಾ ಇವ ಸಂಘಶಃ ॥26॥
ಎಲೈ ಭಾರತನೇ, ಹರಿತವಾದ ನಾರಾಚಗಳು, ಬಾಯಿಯನ್ನು ತೆರೆದ ಭಯಂಕರವಾದ ಸರ್ಪಗಳಂತೆ ಗುಂಪು ಗುಂಪುಗಳಲ್ಲಿ ರಣರಂಗದಲ್ಲಿ ಚಲಿಸಿದವು.
ನಿಷ್ಪೇತುರ್ವಿಮಲಾಃ ಶಕ್ತ್ಯಸ್ತೈಲಧೌತಾಃ ಸುತೇಜನಾಃ |
ಅಂಬುದೇಭ್ಯೋ ಯಥಾ ರಾಜನ್ ಭ್ರಾಜಮಾನಾಃ ಶತಹ್ರದಾಃ ॥27॥
ಎಲೈ ರಾಜನೇ, ಮೋಡಗಳಿಂದ ಹೊಳೆಯುವ ಮಿಂಚುಗಳಂತೆ ಎಣ್ಣೆಯಲ್ಲಿ ಸಾಣೆಯನ್ನು ಹಿಡಿದ ಶಕ್ತಿಶಾಲಿಗಳಾದ ಶುದ್ಧವಾದ ಶಕ್ತ್ಯಾಯುಧಗಳು ಹಾರಾಡಿದವು.
ಗದಾಶ್ಚ ವಿಮಲೈಃ ಪಟ್ಟೈಃ ಪಿನದ್ಧಾಃ ಸ್ವರ್ಣಭೂಷಿತಾಃ |
ಪತಂತ್ಯಸ್ತತ್ರ ದೃಶ್ಯಂತೇ ಗಿರಿಶೃಂಗೋಪಮಾಃ ಶುಭಾಃ |
ನಿಸ್ತ್ರಿಂಶಾಶ್ಚ ವ್ಯರಾಜಂತ ವಿಮಲಾಂಬರಸನ್ನಿಭಾಃ ॥28॥
ಸ್ವರ್ಣಭೂಷಿತವಾದ ಪಟ್ಟಿಗಳಿಂದ ಹಿಡಿಯಲ್ಪಟ್ಟ, ನಿರ್ಮಲವಾದ ಶುಭವಾದ ಗದೆಗಳು ಪರ್ವತದ ಶಿಖರಗಳಂತೆ ಅಲ್ಲಲ್ಲಿ ಬೀಳುತ್ತಿರುವುದು ಕಂಡುಬಂದಿತು. ಸ್ವಚ್ಛವಾದ ಆಕಾಶದಂತೆ ಕಪ್ಪು ಬಣ್ಣದಿಂದ ಕೂಡಿದ ಖಡ್ಗಗಳೂ ವಿರಾಜಿಸಿದವು.
ಆರ್ಷಭಾಣಿ ಚ ಚರ್ಮಾಣಿ ಶತಚಂದ್ರಾಣಿ ಭಾರತ |
ಅಶೋಭಂತ ರಣೇ ರಾಜನ್ ಪತಮಾನಾನಿ ಸರ್ವಶಃ ॥29॥
ಎಲೈ ರಾಜನೇ, ಭಾರತನೇ, ವೃಷಭ ಚರ್ಮಗಳಿಂದ ಮಾಡಿದ ಶತಚಂದ್ರ ಚಿಹ್ನೆಯನ್ನು ಹೊಂದಿದ ಗುರಾಣಿಗಳು ರಣರಂಗದಲ್ಲಿ ಎಲ್ಲ ಕಡೆಯಲ್ಲಿಯೂ ಬೀಳುತ್ತಾ ಶೋಭಿಸಿದವು.
ತೇಽನ್ಯೋನ್ಯಂ ಸಮರೇ ಸೇನೇ ಯುಧ್ಯಮಾನೇ ನರಾಧಿಪ |
ಅಶೋಭೇತಾಂ ಯಥಾ ದೈತ್ಯದೇವಸೇನೇ ಸಮುದ್ಯತೇ |
ಅಭ್ಯದ್ರವಂತ ಸಮರೇ ತೇಽನ್ಯೋನ್ಯಂ ವೈ ಸಮಂತತಃ ॥30॥
ಎಲೈ ರಾಜನೇ, ಪರಸ್ಪರವಾಗಿ ಯುದ್ಧವನ್ನು ಮಾಡುವ ಆ ಎರಡು ಸೈನ್ಯಗಳು ಯುದ್ಧೋದ್ಯುಕ್ತವಾದ ದೇವ-ದಾನವರ ಸೈನ್ಯದಂತೆ ಕಂಗೊಳಿಸಿದವು. ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಪರಸ್ಪರವಾಗಿ ಯೋಧರು ಓಡಿದರು.
ರಥಾಸ್ತು ರಥಿಭಿಸ್ತೂರ್ಣಂ ಪ್ರೇಷಿತಾಃ ಪರಮಾಹವೇ |
ಯುಗೈರ್ಯುಗಾನಿ ಸಂಶ್ಲಿಷ್ಯ ಯುಯುಧುಃ ಪಾರ್ಥಿವರ್ಷಭಾಃ ॥31॥
ಆ ದೊಡ್ಡ ಯುದ್ಧದಲ್ಲಿ ರಥಿಗಳು ಪ್ರಚೋದಿಸಿದ ರಥಗಳ ನೊಗಗಳು ಶತ್ರುರಥಗಳ ನೊಗಗಳ ಜೊತೆಯಲ್ಲಿ ಸಂಶ್ಲೇಷವನ್ನು ಹೊಂದುತ್ತಿರಲು ರಾಜಶ್ರೇಷ್ಠರು ಯುದ್ಧವನ್ನು ಮಾಡಿದರು.
ದಂತಿನಾಂ ಯುಧ್ಯಮಾನಾನಾಂ ಸಂಘರ್ಷಾತ್ ಪಾವಕೋಽಭವತ್ |
ದಂತೇಷು ಭರತಶ್ರೇಷ್ಠ ಸಧೂಮಃ ಸರ್ವತೋದಿಶಮ್ ॥32॥
ಎಲೈ ಭರತಶ್ರೇಷ್ಠನೇ, ಗಜಗಳು ಯುದ್ಧವನ್ನು ಮಾಡುವಾಗ ಅವುಗಳ ದಂತಗಳ ಘರ್ಷಣೆಯಿಂದ ಎಲ್ಲ ದಿಕ್ಕುಗಳಲ್ಲಿಯೂ ಧೂಮಸಹಿತವಾದ ಅಗ್ನಿಯು ಉಂಟಾಯಿತು.
ಪ್ರಾಸೈರಭಿಹತಾಃ ಕೇಚಿದ್ ಗಜಯೋಧಾಃ ಸಮಂತತಃ |
ಪತಮಾನಾಃ ಸ್ಮ ದೃಶ್ಯಂತೇ ಗಿರಿಶೃಂಗಾನ್ನಗಾ ಇವ ॥33॥
ಪ್ರಾಸಗಳಿಂದ ತಿವಿಯಲ್ಪಟ್ಟ ಕೆಲವು ಗಜಯೋಧರು ಪರ್ವತದ ಶಿಖರಗಳಲ್ಲಿದ್ದ ವೃಕ್ಷಗಳಂತೆ ಕೆಳಗೆ ಉರುಳುವುದು ಎಲ್ಲ ಕಡೆಗಳಲ್ಲಿಯೂ ಕಂಡುಬಂದಿತು.
ಪಾದಾತಾಶ್ಚಾಪ್ಯದೃಶ್ಯಂತ ನಿಘ್ನಂತೋ ಹಿ ಪರಸ್ಪರಮ್ |
ಚಿತ್ರರೂಪಧರಾಃ ಶೂರಾ ನಖರಪ್ರಾಸಯೋಧಿನಃ ॥34॥
ವಿಚಿತ್ರರೂಪವನ್ನು ಧರಿಸಿದ ನಖರ, ಪ್ರಾಸ ಮೊದಲಾದ ಆಯುಧಗಳಿಂದ ಯುದ್ಧವನ್ನು ಮಾಡುವ ಶೂರರಾದ ಪದಾತಿಗಳೂ ಸಹ ಪರಸ್ಪರವಾಗಿ ಕೊಲ್ಲುವುದು ಕಂಡುಬಂದಿತು.
ಅನ್ಯೋನ್ಯಂ ತೇ ಸಮಾಸಾದ್ಯ ಕುರುಪಾಂಡವಸೈನಿಕಾಃ |
ಶಸ್ತ್ರೈರ್ನಾನಾವಿಧೈರ್ಘೋರೈ ರಣೇ ನಿನ್ಯುರ್ಯಮಕ್ಷಯಮ್ ॥35॥
ಕುರು-ಪಾಂಡವ ಸೈನಿಕರು ಪರಸ್ಪರವಾಗಿ ಸಂಧಿಸಿ ನಾನಾವಿಧವಾದ ಘೋರ ಶಸ್ತ್ರಗಳಿಂದ ರಣರಂಗದಲ್ಲಿ ಶತ್ರುಯೋಧರನ್ನು ಯಮಪಟ್ಟಣಕ್ಕೆ ಕಳುಹಿಸಿದರು.

ತತಃ ಶಾಂತನವೋ ಭೀಷ್ಮೋ ರಥಘೋಷೇಣ ನಾದಯನ್ |
ಅಭ್ಯಾಗಮದ್ ರಣೇ ಪಾಂಡೂನ್ ಧನುಃಶಬ್ದೇನ ಮೋಹಯನ್ ||36||
ಆಗ ಶಂತನು ಪುತ್ರರಾದ ಭೀಷ್ಮರು ತಮ್ಮ ರಥಘೋಷದಿಂದ ರಣಭೂಮಿಯನ್ನು ಪ್ರತಿಧ್ವನಿಸುತ್ತಾ, ತಮ್ಮ ಧನುಃಶಬ್ದದಿಂದ ಪಾಂಡವರಿಗೆ ಮೋಹವನ್ನುಂಟು ಮಾಡುತ್ತಾ ರಣರಂಗದಲ್ಲಿ ಪಾಂಡವರ ಸಮೀಪಕ್ಕೆ ಬಂದರು.
ಪಾಂಡವಾನಾಂ ರಥಾಶ್ಚಾಪಿ ನದಂತೋ ಭೈರವಸ್ವನಮ್ |
ಅಭ್ಯದ್ರವಂತ ಸಂಯತ್ತಾ ಧೃಷ್ಟದ್ಯುಮ್ನಪುರೋಗಮಾಃ ||37||
ಧೃಷ್ಟದ್ಯುಮ್ನರೇ ಮೊದಲಾದ ಪಾಂಡವರ ಮಹಾರಥರೂ ಸಹ ಭೈರವನಾದವನ್ನು ಮಾಡುತ್ತಾ ಬಹಳ ಎಚ್ಚರಿಕೆಯಿಂದ ಮುಂದೆ ಓಡಿದರು.
ತತಃ ಪ್ರವವೃತೇ ಯುದ್ಧಂ ತವ ತೇಷಾಂ ಚ ಭಾರತ |
ನರಾಶ್ವರಥನಾಗಾನಾಂ ವ್ಯತಿಷಕ್ತಂ ಪರಸ್ಪರಮ್ ||38||
ಎಲೈ ಭಾರತನೇ, ಅನಂತರ ನರಾಶ್ವರಥಗಜಗಳು ಪರಸ್ಪರವಾಗಿ ಮಿಶ್ರಣಗೊಳ್ಳುತ್ತಿರಲು ನಿನಗೂ ಮತ್ತು ಅವರಿಗೂ ಯುದ್ಧವು ಪ್ರಾರಂಭವಾಯಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ನಾಲ್ಕನೆಯ ಅಧ್ಯಾಯ
ಭೀಷ್ಮರನ್ನು ಸೋಲಿಸಿದ ಭೀಮಸೇನನಿಂದ ಧೃತರಾಷ್ಟ್ರನ ಎಂಟು ಪುತ್ರರ ವಧೆ. ಭೀಷ್ಮರನ್ನು ಕುರಿತು ದುರ್ಯೋಧನನ ಕ್ರೂರ ವಚನಗಳು ಮತ್ತು
ಭೀಷ್ಮರ ಸತ್ಯವಾದ ಮಾತುಗಳು.
ಸಂಜಯಃ
ಭೀಷ್ಮಂ ತು ಸಮರೇ ಕ್ರುದ್ಧಂ ಪ್ರತಪಂತಂ ಸಮಂತತಃ |
ನ ಶೇಕುಃ ಪಾಂಡವಾ ದ್ರಷ್ಟುಂ ತಪಂತಮಿವ ಭಾಸ್ಕರಮ್ ||1||
ಸಂಜಯ ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಕ್ರುದ್ಧರಾಗಿ ಶತ್ರುಸೈನ್ಯವನ್ನು ದಹಿಸುತ್ತಿದ್ದ, ಸೂರ್ಯನಂತೆ ಜ್ವಲಿಸುತ್ತಿದ್ದ, ಭೀಷ್ಮರನ್ನು ನೋಡಲು ಪಾಂಡವರು ಸಮರ್ಥರಾಗಲಿಲ್ಲ.
ತತಃ ಸರ್ವಾಣಿ ಸೈನ್ಯಾನಿ ಧರ್ಮಪುತ್ರಸ್ಯ ಶಾಸನಾತ್ |
ಅಭ್ಯದ್ರವಂತ ಗಾಂಗೇಯಂ ಮರ್ದಯಂತಂ ಶಿತೈಃ ಶರೈಃ ||2||
ಆಗ ಧರ್ಮರಾಜನ ಶಾಸನದಂತೆ ಎಲ್ಲ ಸೈನ್ಯಗಳೂ ತಮ್ಮ ಹರಿತವಾದ ಬಾಣದಿಂದ ಕೌರವರ ಸೈನ್ಯರನ್ನು ಮರ್ದಿಸುತ್ತಿದ್ದ ಗಂಗಾಪುತ್ರರ ಕಡೆಗೆ ಓಡಿದವು.
ಸ ತು ಭೀಷ್ಮೋ ರಣಶ್ಲಾಘೀ ಸೋಮಕಾನ್ ಸಹಸೃಂಜಯಾನ್ |
ಪಾಂಚಾಲಾಂಶ್ಚ ಮಹೇಷ್ವಾಸಾನ್ ಪಾತಯಾಮಾಸ ಸಾಯಕೈಃ ||3||
ಯುದ್ಧೋತ್ಸಾಹವುಳ್ಳ ಭೀಷ್ಮರು ತಮ್ಮ ಬಾಣಗಳಿಂದ ಸೃಂಜಯಸಹಿತರಾದ ಸೋಮಕರನ್ನೂ ಮತ್ತು ಮಹಾಧನುರ್ಧಾರಿಗಳಾದ ಪಾಂಚಾಲರನ್ನೂ ಕೆಡವಿದರು.
ತೇ ವಧ್ಯಮಾನಾ ಭೀಷ್ಮೇಣ ಪಾಂಚಾಲಾಃ ಸೋಮಕೈಃ ಸಹ |
ಭೀಷ್ಮಮೇವಾಭ್ಯಯುಸ್ತೂರ್ಣಂ ತ್ಯಕತ್ವಾ ಮೃತ್ಯುಕೃತಂ ಭಯಮ್ ||4||
ಭೀಷ್ಮರಿಂದ ಪ್ರಹಾರಕ್ಕೆ ಒಳಗಾದ ಪಾಂಚಾಲರು ಮತ್ತು ಸೋಮಕರು ಮೃತ್ಯುಭಯವನ್ನು ತೊರೆದು ಭೀಷ್ಮರ ಮೇಲೆಯೇ ಶೀಘ್ರವಾಗಿ ಎರಗಿದರು.
ಸ ತೇಷಾಂ ರಥಿನಾಂ ವೀರೋ ಭೀಷ್ಮಃ ಶಾಂತನವೋ ಯುಧಿ |
ಚಿಚ್ಛೇದ ಸಹಸಾ ರಾಜನ್ ಬಾಹೂನಥ ಶಿರಾಂಸಿ ಚ ||5||
ಎಲೈ ರಾಜನೇ, ರಥಿಶ್ರೇಷ್ಠರಾದ, ವೀರರಾದ, ಶಂತನುಪುತ್ರರಾದ ಆ ಭೀಷ್ಮರು ಯುದ್ಧದಲ್ಲಿ ತಕ್ಷಣದಲ್ಲಿ ಅವರ ಬಾಹುಗಳನ್ನೂ ಮತ್ತು ಶಿರಸ್ಸುಗಳನ್ನೂ ಕತ್ತರಿಸಿದರು.
ವಿರಥಾನ್ ರಥಿನಶ್ಚಕ್ರೇ ಪಿತಾ ದೇವವ್ರತಸ್ತವ |
ಪತಿತಾನ್ಯುತ್ತಮಾಂಗಾನಿ ಹಯೇಭ್ಯೋ ಹಯಸಾದಿನಾಮ್ ||6||
ನಿನ್ನ ತಂದೆಯಾದ ದೇವವ್ರತರು ರಥವುಳ್ಳವರನ್ನು ರಥಹೀನರನ್ನಾಗಿ ಮಾಡಿದರು. ಅಶ್ವಾರೋಹಿಗಳ ಶಿರಸ್ಸುಗಳು ಅಶ್ವಗಳಿಂದ ಕೆಳಗೆ ಉರುಳಿದವು.
ನಿರ್ಮನುಷ್ಯಾಂಶ್ಚ ಮಾತಂಗಾನ್ ಶಯಾನಾನ್ ಪರ್ವತೋಪಮಾನ್ |
ಅಪಶ್ಯಾಮ ಮಹಾರಾಜ ಭೀಷ್ಮಾಸ್ತ್ರೇಣ ಪ್ರಮೋಹಿತಾನ್ ||7||
ಭೀಷ್ಮರ ಅಸ್ತ್ರಗಳಿಂದ ಪ್ರಮರ್ದಿತವಾಗಿ ಗಜಾರೋಹಿಗಳಿಲ್ಲದೆ ಪರ್ವತದಂತೆ ನೆಲದ ಮೇಲೆ ಬಿದ್ದಿರುವ ಗಜಗಳನ್ನು ನಾವು ನೋಡಿದೆವು.
ನ ತತ್ರಾಸೀತ್ ಪುಮಾನ್ ಕಶ್ಚಿತ್ ಪಾಂಡವಾನಾಂ ವಿಶಾಂಪತೇ |

ಅನ್ಯತ್ರ ರಥಿನಾಂ ಶ್ರೇಷ್ಠಾದ್ ಭೀಮಸೇನಾನ್ಮಹಾಬಲಾತ್ ॥8॥
ಎಲೈ ರಾಜನೇ, ಪಾಂಡವರ ಸೈನ್ಯದಲ್ಲಿ ಮಹಾಬಲನೂ, ರಥಿಶ್ರೇಷ್ಠನೂ ಆದ ಭೀಮಸೇನನೊಬ್ಬನನ್ನು ಬಿಟ್ಟು ಬೇರೆ ಯಾವ ಪುರುಷನೂ ಅಲ್ಲಿ ಇರಲಿಲ್ಲ.
ಸ ಹಿ ಭೀಷ್ಮಂ ಸಮಾಸಾದ್ಯ ತಾಡಯಾಮಾಸ ಸಂಯುಗೇ।
ತತೋ ನಿಷ್ಠಾನಕೋ ಘೋರೋ ಭೀಷ್ಮಭೀಮಸಮಾಗಮೇ ॥9॥
ಬಭೂವ ಸರ್ವಸೈನ್ಯಾನಾಂ ಘೋರರೂಪೋ ಭಯಾನಕಃ।
ತಥೈವ ಪಾಂಡವಾ ಹೃಷ್ಟಾಃ ಸಿಂಹನಾದಮಥಾನದನ್ ॥10॥
ಅವನಾದರೋ ಭೀಷ್ಮರನ್ನು ಸಮೀಪಿಸಿ ಯುದ್ಧದಲ್ಲಿ ಅವರಿಗೆ ಪ್ರಹಾರವನ್ನು ಮಾಡಿದನು. ಭೀಷ್ಮ-ಭೀಮರ ಸಮಾಗಮ ಉಂಟಾದಾಗ ನಿನ್ನ ಎಲ್ಲಾ ಸೈನ್ಯಗಳಲ್ಲಿ ಘೋರವೂ, ಭಯಂಕರವೂ ಆದ ದೊಡ್ಡ ಶಬ್ದವು ಉಂಟಾಯಿತು. ಅದರಂತೆ ಪಾಂಡವರೂ ಸಹ ಸಂತೋಷದಿಂದ ಸಿಂಹನಾದವನ್ನು ಮಾಡಿದರು.
ತತೋ ದುರ್ಯೋಧನೋ ರಾಜಾ ಸೋದರ್ಯೈಃ ಪರಿವಾರಿತಃ।
ಭೀಷ್ಮಂ ಜುಗೋಪ ಸಮರೇ ವರ್ತಮಾನೇ ಜನಕ್ಷಯೇ ॥11॥
ಯುದ್ಧದಲ್ಲಿ ಯೋಧರ ಕ್ಷಯವಾಗುತ್ತಿರಲು ಆಗ ರಾಜನಾದ ದುರ್ಯೋಧನನು ತನ್ನ ಸಹೋದರರಿಂದ ಪರಿವಾರಿತನಾಗಿ ಭೀಷ್ಮರನ್ನು ರಕ್ಷಿಸಿದನು.
ಭೀಮಸ್ತು ಸಾರಥಿಂ ಹತ್ವಾ ಭೀಷ್ಮಸ್ಯ ರಥಿನಾಂ ವರಃ।
ಪ್ರಹತಾಶ್ವರಥೇ ತಸ್ಮಿನ್ ದ್ರವಮಾಣೇ ಸಮಂತತಃ।
ಸುನಾಭಸ್ಯ ಶರೇಣಾಶು ಶಿರಶ್ಚಿಚ್ಛೇದ ಚಾರಿಹಾ ॥12॥
ರಥಿಶ್ರೇಷ್ಠನೂ, ಶತ್ರುಘಾತಕನೂ ಆದ ಭೀಮನು ಭೀಷ್ಮರ ಸಾರಥಿಯನ್ನು ಕೊಂದು, ಅಶ್ವಗಳನ್ನೂ ಕೊಂದು, ಭೀಷ್ಮರನ್ನು ಬಿಟ್ಟು ಎಲ್ಲ ಕಡೆಗಳಲ್ಲಿಯೂ ವೇಗವಾಗಿ ಸಂಚರಿಸುತ್ತಾ, ನಿನ್ನ ಪುತ್ರನಾದ ಸುನಾಭನ ಶಿರಸ್ಸನ್ನು ಶೀಘ್ರವಾಗಿ ಬಾಣದಿಂದ ಕತ್ತರಿಸಿದನು.
ಕ್ಷುರಪ್ರೇಣ ಸುತೀಕ್ಷ್ಣೇನ ಸ ಹತೋ ನ್ಯಪತದ್ ಭುವಿ।
ಹತೇ ತಸ್ಮಿನ್ ಮಹಾರಾಜ ತವ ಪುತ್ರೇ ಮಹಾರಥೇ।
ನಾಮೃಷ್ಯಂತ ರಣೇ ಶೂರಾಃ ಸೋದರ್ಯಾಃ ಸಪ್ತ ಸಂಯುಗೇ ॥13॥
ಬಹಳ ತೀಕ್ಷ್ಣವಾದ ಕ್ಷುರಪ್ರದಿಂದ ಹತನಾದ ಸುನಾಭನು ಭೂಮಿಯ ಮೇಲೆ ಬಿದ್ದನು. ಎಲೈ ಮಹಾರಾಜನೇ, ನಿನ್ನ ಪುತ್ರನೂ, ಮಹಾರಥನೂ ಆದ ಅವನು ಹತನಾಗುತ್ತಿರಲು ಶೂರರಾದ ಅವನ ಸಪ್ತ ಸಹೋದರರು ಯುದ್ಧದಲ್ಲಿ ಅದನ್ನು ಸಹಿಸಲಿಲ್ಲ.
ಆದಿತ್ಯಕೇತುರ್ಬಹ್ವಾಶೀ ಕುಂಡಧಾರೋ ಮಹೋದರಃ।
ಅಪರಾಜಿತಃ ಪಂಡಿತಕೋ ವಿಶಾಲಾಕ್ಷಃ ಸುದುರ್ಜಯಃ ॥14॥
ಪಾಂಡವಂ ಚಿತ್ರಸನ್ನಾಹಾ ವಿಚಿತ್ರಕವಚಧ್ವಜಾಃ।
ಅಭ್ಯದ್ರವಂತ ಸಂಗ್ರಾಮೇ ಯೋದ್ಧುಕಾಮಾರಿಮರ್ದನಾಃ ॥15॥
ಶತ್ರುಮರ್ದನರೂ, ಶತ್ರುಗಳ ಜೊತೆಯಲ್ಲಿ ಯುದ್ಧಮಾಡಲು ಬಯಸುವವರೂ, ವಿಚಿತ್ರ ಕವಚಗಳನ್ನು ಮತ್ತು ಧ್ವಜಗಳನ್ನು ಹೊಂದಿದವರೂ, ವಿಚಿತ್ರವಾದ ಸನ್ನಾಹಗಳನ್ನು ಹೊಂದಿದವರೂ ಆದ ಆದಿತ್ಯಕೇತು, ಬಹ್ವಾಶೀ, ಕುಂಡಧಾರ, ಮಹೋದರ, ಅಪರಾಜಿತ, ಪಂಡಿತ, ಅತ್ಯಂತ ದುರ್ಜಯನಾದ ವಿಶಾಲಾಕ್ಷ ಇವರೆಲ್ಲರೂ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ರಣರಂಗದಲ್ಲಿ ಅವನ ಕಡೆಗೆ ಓಡಿದರು.
ಮಹೋದರಸ್ತು ಸಮರೇ ಭೀಮಂ ವಿವ್ಯಾಧ ಪತ್ರಿಭಿಃ।
ನವಭಿರ್ವಜ್ರಸಂಕಾಶೈರ್ನಮುಚಿಂ ವೃತ್ರಹಾ ಯಥಾ ॥16॥
ಮಹೋದರನಾದರೋ ಇಂದ್ರನು ನಮುಚಿಗೆ ಪ್ರಹಾರ ಮಾಡಿದಂತೆ ಪತ್ರಸಹಿತವಾದ ವಜ್ರದಂತಿರುವ ಒಂಬತ್ತು ಬಾಣಗಳಿಂದ ಭೀಮನಿಗೆ ಪ್ರಹಾರವನ್ನು ಮಾಡಿದನು.
ಆದಿತ್ಯಕೇತುಃ ಸಪ್ತತ್ಯಾ ಬಹ್ವಾಶೀ ಚಾಪಿ ಪಂಚಭಿಃ।
ನವತ್ಯಾ ಕುಂಡಧಾರಸ್ತು ವಿಶಾಲಾಕ್ಷಶ್ಚ ಸಪ್ತಭಿಃ ॥17॥
ಅಪರಾಜಿತೋ ಮಹಾರಾಜ ಪರಾಜಿಷ್ಣುರ್ಮಹಾರಥಃ।
ಶರೈರ್ಬಹುಭಿರಾನರ್ಚ್ಛದ್ ಭೀಮಸೇನಂ ಮಹಾಬಲಮ್ ॥18॥
ಎಲೈ ಮಹಾರಾಜನೇ, ಆದಿತ್ಯಕೇತುವು ಎಪ್ಪತ್ತು ಬಾಣಗಳಿಂದಲೂ, ಬಹ್ವಾಶಿಯು ಐದು ಬಾಣಗಳಿಂದಲೂ, ಕುಂಡಧಾರನು ತೊಂಭತ್ತು ಬಾಣಗಳಿಂದಲೂ, ವಿಶಾಲಾಕ್ಷನು ಏಳು ಬಾಣಗಳಿಂದಲೂ, ಶತ್ರುಗಳನ್ನು ಸೋಲಿಸುವವನೂ ಮಹಾರಥನೂ ಆದ ಅಪರಾಜಿತನು ಅನೇಕ ಬಾಣಗಳಿಂದಲೂ ಮಹಾಬಲನಾದ ಭೀಮಸೇನನನ್ನು ಹೊಡೆದರು.
ರಣೇ ಪಂಡಿತಕಶ್ಚೈನಂ ತ್ರಿಭಿರ್ಬಾಣೈಃ ಸಮರ್ದಯತ್।
ಸ ತನ್ನ ಮಮೃಷೇ ಭೀಮಃ ಶತ್ರುಭಿರ್ವಧಮಾಹವೇ ॥19॥
ಯುದ್ಧದಲ್ಲಿ ಪಂಡಿತಕನು ಮೂರುಬಾಣಗಳಿಂದ ಭೀಮಸೇನನನ್ನು ಪೀಡಿಸಿದನು. ಯುದ್ಧದಲ್ಲಿ ಶತ್ರುಗಳ ಈ ಪ್ರಹಾರವನ್ನು ಭೀಮಸೇನನು ಸಹಿಸಲಿಲ್ಲ.
ಧನುಃ ಪ್ರಪೀಡ್ಯ ವಾಮೇನ ಕರೇಣಾಮಿತ್ರಕರ್ಶನಃ।
ಶಿರಶ್ಚಿಚ್ಛೇದ ಸಮರೇ ಶರೇಣ ನತಪರ್ವಣಾ ॥20॥
ಅಪರಾಜಿತಸ್ಯ ಸುನಸಂ ತವ ಪುತ್ರಸ್ಯ ಸಂಯುಗೇ।

ಪರಾಜಿತಸ್ಯ ಭೀಮೇನ ನಿಪಪಾತ ಶಿರೋ ಮಹೀಮ್ ॥21॥
ಶತ್ರುಕರ್ಶನನಾದ ಅವನು ತನ್ನ ಎಡಗೈಯಿಂದ ಧನುಸ್ಸನ್ನು ಚೆನ್ನಾಗಿ ಬಗ್ಗಿಸಿ ಬಾಗಿದ ತುದಿಯುಳ್ಳ ಬಾಣದಿಂದ ನಿನ್ನ ಪುತ್ರನೂ, ಒಳ್ಳೆಯ ನಾಸಿಕವುಳ್ಳವನೂ ಆದ ಅಪರಾಜಿತನ ಶಿರಸ್ಸನ್ನು ಕತ್ತರಿಸಿದನು. ಭೀಮನ ಎದುರಿಗೆ ಸೋತು ಹೋದ ಅವನ ಶಿರಸ್ಸು ಭೂಮಿಯ ಮೇಲೆ ಬಿದ್ದಿತು.
ಅಥಾಪರೇಣ ಭಲ್ಲೇನ ಕುಂಡಧಾರಂ ಮಹಾರಥಮ್ |
ಪ್ರಾಹಿಣೋನ್ಮೃತ್ಯುಲೋಕಾಯ ಸರ್ವಲೋಕಸ್ಯ ಪಶ್ಯತಃ ॥22॥
ಭೀಮಸೇನನು ಇನ್ನೊಂದು ಭಲ್ಲವನ್ನು ತೆಗೆದುಕೊಂಡು ಎಲ್ಲ ಯೋಧರೂ ನೋಡುತ್ತಿರುವಂತೆ ಮಹಾರಥನಾದ ಕುಂಢಧಾರನನ್ನು ಅದರಿಂದ ಮೃತ್ಯುಲೋಕಕ್ಕೆ ಕಳುಹಿಸಿದನು.
ತತಃ ಪುನರಮೇಯಾತ್ಮಾ ಪ್ರಸಂಧಾಯ ಶಿಲೀಮುಖಮ್ |
ಪ್ರೇಷಯಾಮಾಸ ಸಮರೇ ಪಂಡಿತಂ ಪ್ರತಿ ಭಾರತ ॥23॥
ಎಲೈ ಭಾರತನೇ, ಅಚಿಂತ್ಯ ಸಾಮರ್ಥ್ಯವುಳ್ಳ ಅವನು ಪುನಃ ತನ್ನ ಧನುಸ್ಸಿಗೆ ಬಾಣವನ್ನು ಹೂಡಿ ಪಂಡಿತನ ಮೇಲೆ ಬಾಣ ಪ್ರಯೊಗವನ್ನು ಮಾಡಿದನು.
ಸ ಶರಃ ಪಂಡಿತಂ ಹತ್ವಾ ವಿವೇಶ ಧರಣೀತಳಮ್ |
ಯಥಾ ನರಂ ನಿಹತ್ಯಾಶು ಭುಜಗಃ ಕಾಲಚೋದಿತಃ ॥24॥
ಆ ಬಾಣವಾದರೋ ಮೃತ್ಯುಚೋದಿತವಾದ ಸರ್ಪವು ಮನುಷ್ಯನನ್ನು ಕೊಂದು ಶೀಘ್ರವಾಗಿ ಭೂಮಿಯನ್ನು ಪ್ರವೇಶಿಸುವಂತೆ ಪಂಡಿತಕನನ್ನು ಕೊಂದು ಭೂಮಿಯನ್ನು ಪ್ರವೇಶಿಸಿತು.
ವಿಶಾಲಾಕ್ಷಶಿರಶ್ಚಿತ್ತ್ವಾ ಪಾತಯಾಮಾಸ ಭೂತಳೇ |
ತ್ರಿಭಿಃ ಶರೈರದೀನಾತ್ಮಾ ಸ್ಮರನ್ ಕ್ಲೇಶಂ ಪುರಾತನಮ್ ॥25॥
ಧೈರ್ಯಶಾಲಿಯಾದ ಭೀಮಸೇನನು ಹಿಂದಿನ ಕ್ಲೇಶಗಳನ್ನು ಸ್ಮರಿಸುತ್ತಾ ಮೂರು ಬಾಣಗಳಿಂದ ವಿಶಾಲಾಕ್ಷನ ಶಿರಸ್ಸನ್ನು ಕತ್ತರಿಸಿ ಭೂಮಿಯ ಮೇಲೆ ಬೀಳಿಸಿದನು.
ಮಹೋದರಂ ಮಹೇಷ್ವಾಸಂ ನಾರಾಚೇನ ಸ್ತನಾಂತರೇ |
ವಿವ್ಯಾಧ ಸಮರೇ ರಾಜನ್ ಸ ಹತೋ ನ್ಯಪತದ್ ಭುವಿ ॥26॥
ಎಲೈ ರಾಜನೇ, ಮಹಾಧನುರ್ಧಾರಿಯಾದ ಮಹೋದರನಿಗೆ ಒಂದು ನಾರಾಚವನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು. ಅವನು ಆ ಯುದ್ಧದಲ್ಲಿ ಮರಣವನ್ನು ಹೊಂದಿ ಭೂಮಿಯ ಮೇಲೆ ಬಿದ್ದನು.
ಆದಿತ್ಯಕೇತೋಃ ಕೇತುಂ ಚ ಛಿತ್ತ್ವಾ ಬಾಣೇನ ಸಂಯುಗೇ |
ಭಲ್ಲೇನ ಭೃಶತೀಕ್ಷ್ಣೇನ ಶಿರಶ್ಚಿಚ್ಛೇದ ಚಾರಿಹಾ ॥27॥
ಶತ್ರುಘಾತಕನಾದ ಭೀಮಸೇನನು ಯುದ್ಧದಲ್ಲಿ ತನ್ನ ಬಾಣದಿಂದ ಆದಿತ್ಯಕೇತುವಿನ ಧ್ವಜವನ್ನು ಕತ್ತರಿಸಿ ಬಹಳ ತೀಕ್ಷ್ಣವಾದ ಭಲ್ಲದಿಂದ ಅವನ ಶಿರಸ್ಸನ್ನು ಕತ್ತರಿಸಿದನು.
ಬಹ್ವಾಶಿನಂ ತತೋ ಭೀಮಃ ಶರೇಣ ನತಪರ್ವಣಾ |
ಪ್ರೇಷಯಾಮಾಸ ಸಂಕ್ರುದ್ಧೋ ಯಮಸ್ಯ ಸದನಂ ಪ್ರತಿ ॥28॥
ಅನಂತರ ಕ್ರೋಧಯುಕ್ತನಾದ ಭೀಮನು ಬಾಗಿದ ತುದಿಯುಳ್ಳ ಬಾಣದಿಂದ ಬಹ್ವಾಶಿಯನ್ನು ಯಮನ ಆಲಯಕ್ಕೆ ಕಳುಹಿಸಿದನು.
ಪ್ರದುದ್ರುವುಸ್ತತಸ್ತೇಽನ್ಯೇ ಪುತ್ರಾಸ್ತವ ವಿಶಾಂಪತೇ |
ಮನ್ಯಮಾನಾ ಹಿ ತತ್ಸತ್ಯಂ ಸಭಾಯಾಂ ತಸ್ಯ ಭಾಷಿತಮ್ ॥29॥
ಎಲೈ ರಾಜನೇ, ನಿನ್ನ ಉಳಿದ ಮಕ್ಕಳು ಸಭೆಯಲ್ಲಿ ಭೀಮಸೇನನು ಆಡಿದ ಮಾತುಗಳು ಸತ್ಯವೆಂದು ಭಾವಿಸಿ ರಣರಂಗದಿಂದ ಓಡಿಹೋದರು.
ತತೋ ದುರ್ಯೋಧನೋ
ರಾಜಾ ಭ್ರಾತೃವ್ಯಸನಕರ್ಶಿತಃ |
ಅಬ್ರವೀತ್ ತಾವಕಾನ್ ಯೋಧಾನ್
ಭೀಮೋಽಯಂ ಯುಧಿ ವಧ್ಯತಾಮ್ ॥30॥
ತಮ್ಮಂದಿರ ನಿಧನದಿಂದ ಉಂಟಾದ ಶೋಕದಿಂದ ಕರ್ಶಿತನಾದ ದುರ್ಯೋಧನ ರಾಜನು ನಿನ್ನ ಯೋಧರನ್ನು ಕುರಿತು ಈ ಭೀಮನನ್ನು ಯುದ್ಧದಲ್ಲಿ ಕೊಲ್ಲಿ ಎಂದು ಹೇಳಿದನು.
ಏವಮೇತೇ ಮಹೇಷ್ವಾಸಾಃ ಪುತ್ರಾಸ್ತವ ವಿಶಾಂಪತೇ |
ಭ್ರಾತೃನ್ ಸಂದೃಶ್ಯ ನಿಹತಾನ್ ಪ್ರಾಸ್ಮರಂಸ್ತೇ ಹಿ ತದ್ವಚಃ ॥31॥
ಯದುಕ್ತವಾನ್ ಮಹಾಪ್ರಾಜ್ಞಃ ಕ್ಷತ್ತಾ ಹಿತಮನಾಮಯಮ್ |
ತದಿದಂ ಸಮನುಪ್ರಾಪ್ತಂ ವಚನಂ ದಿವ್ಯದರ್ಶಿನಃ ॥32॥
ಎಲೈ ರಾಜನೇ, ಹೀಗೆ ಮಹಾಧನುರ್ಧಾರಿಗಳಾದ ಈ ನಿನ್ನ ಮಕ್ಕಳು ತಮ್ಮ ಸಹೋದರರು ಹತರಾದುದನ್ನು ನೋಡಿ, ಮಹಾಪ್ರಾಜ್ಞನಾದ ವಿದುರನು ಯಾವ ಹಿತವನ್ನು ಮತ್ತು ಕ್ಷೇಮವನ್ನು ನುಡಿದಿದ್ದನೋ ಆ ಮಾತುಗಳನ್ನು ಸ್ಮರಿಸಿ ದಿವ್ಯದರ್ಶಿಯಾದ ಅವನ ಮಾತುಗಳು ಸತ್ಯವಾಗಿವೆ ಎಂದೂ ಸ್ಮರಿಸಿದರು.
ಲೋಭಮೋಹಸಮಾವಿಷ್ಟಃ ಪುತ್ರಪ್ರೀತ್ಯಾ ಜನಾಧಿಪ |
ನ ಬುಧ್ಯಸೇ ಪುರಾ ಯತ್ತತ್ ತಥ್ಯಮುಕ್ತಂ ವಚೋ ಮಹತ್ ॥33॥

ಎಲ್ಲೈ ಮಹಾರಾಜನೇ, ಲೋಭ-ಮೋಹಗಳಿಗೆ ವಶನಾದ ನೀನು ಪುತ್ರರ ಮೇಲಿನ ಮಮತೆಯಿಂದ ವಿದುರನು ಆಡಿದ ದೊಡ್ಡ ಸತ್ಯವಚನಗಳನ್ನು ಹಿಂದೆ ತಿಳಿಯಲಿಲ್ಲ.
ತಥೈವ ಹಿ ವಧಾರ್ಥಾಯ ಪುತ್ರಾಣಾಂ ಪಾಂಡವೋ ಬಲೀ |
ನೂನಂ ಜಾತೋ ಮಹಾಬಾಹುರ್ಯಥಾ ಹಂತಿ ಸ್ಮ ಕೌರವಾನ್ ‖34‖
ಮಹಾಬಾಹುವೂ, ಬಲಿಷ್ಠನೂ, ಪಾಂಡುಪುತ್ರನೂ ಆದ ಭೀಮಸೇನನು ಕೌರವರನ್ನು ಕೊಲ್ಲುವುದನ್ನು ನೋಡಿದರೆ ಅವರ ವಧೆಗಾಗಿಯೇ ಅವನು ಜನಿಸಿದ್ದಾನೆಂದು ಕಂಡುಬರುತ್ತಿದೆ (ಎಂದು ಸಂಜಯನು ಹೇಳಿದನು).
ತತೋ ದುರ್ಯೋಧನೋ ರಾಜಾ ಭೀಷ್ಮಮಾಸಾದ್ಯ ಮಾರಿಷ |
ದುಃಖೇನ ಮಹತಾऽऽವಿಷ್ಟೋ ವಿಲಲಾಪಾತಿಕರ್ಶಿತಃ ‖35‖
ಎಲ್ಲೈ ಪೂಜ್ಯನೇ, ಆಗ ರಾಜನಾದ ದುರ್ಯೋಧನನು ಬಹಳ ದುಃಖದಿಂದ ಕೂಡಿದವನಾಗಿ, ಅತ್ಯಂತ ವ್ಯಥೆಗೆ ಒಳಗಾಗಿ ಭೀಷ್ಮರ ಸಮೀಪಕ್ಕೆ ಹೋಗಿ ವಿಲಾಪವನ್ನು ಮಾಡಿದನು.
ನಿಹತಾ ಭ್ರಾತರಃ ಶೂರಾ ಭೀಮಸೇನೇನ ಮೇ ಯುಧಿ |
ಯತಮಾನಾಸ್ತಥಾನ್ಯೇऽಪಿ ಹನ್ಯಂತೇ ಸರ್ವಸೈನಿಕಾಃ ‖36‖
ಶೂರರೂ, ಪ್ರಯತ್ನಶಾಲಿಗಳೂ ಆದ ನನ್ನ ತಮ್ಮಂದಿರು ಯುದ್ಧದಲ್ಲಿ ಭೀಮಸೇನನಿಂದ ಹತರಾದರು. ಹಾಗೆಯೇ ಉಳಿದ ಎಲ್ಲಾ ಸೈನಿಕರು ಹತರಾಗುತ್ತಿದ್ದಾರೆ.
ಭವಾಂಶ್ಚ ಮಧ್ಯಸ್ಥತಯಾ ನಿತ್ಯಮಸ್ಮಾನುಪೇಕ್ಷತೇ |
ಸೋऽಹಂ ಕಾಪಥಮಾರೂಢಃ ಪಶ್ಯ ದೈವಮಿದಂ ಮಮ ‖37‖
ನೀವಾದರೋ ತಟಸ್ಥರಾಗಿದ್ದು, ಯಾವಾಗಲೂ ನಮ್ಮನ್ನು ಉದಾಸೀನ ಮಾಡುತ್ತಿದ್ದೀರಿ. ನಾನು ದುರ್ಮಾರ್ಗವನ್ನು ಹಿಡಿದಂತಾಯಿತು. ಈ ನನ್ನ ದುರದೃಷ್ಟವನ್ನು ನೋಡಿ (ಎಂದು ಹೇಳಿದನು).
ಏತಚ್ಛ್ರುತ್ವಾ ವಚಃ ಕ್ರೂರಂ ಪಿತಾ ದೇವವ್ರತಸ್ತವ |
ದುರ್ಯೋಧನಮಿದಂ ವಾಕ್ಯಮಬ್ರವೀತ್ ಸಾಶ್ರುಲೋಚನಮ್ ‖38‖
ಈ ಕ್ರೂರವಚನವನ್ನು ಕೇಳಿದ ನಿನ್ನ ತಂದೆಯಾದ ಭೀಷ್ಮರು ಅಶ್ರುಪೂರಿತ ನಯನನಾದ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದರು.
ಉಕ್ತಮೇತನ್ಮಯಾ ಪೂರ್ವಂ ದ್ರೋಣೇನ ವಿದುರೇಣ ಚ |
ಗಾಂಧಾರ್ಯಾ ಚ ಯಶಸ್ವಿನ್ಯಾ ತತ್ತ್ವಂ ತಾತ ನ ಬುದ್ಧವಾನ್ ‖39‖
ಎಲ್ಲೈ ಪ್ರೀತಿಪಾತ್ರನೇ, ಈ ವಿಷಯವನ್ನು ಹಿಂದೆ ನಾನು, ದ್ರೋಣರು, ವಿದುರನು, ಕೀರ್ತಿವಂತಳಾದ ಗಾಂಧಾರಿಯು ಹೇಳಿದ್ದೇವೆ. ಆದರೆ ನೀನು ಆ ಮಾತುಗಳನ್ನು ತಿಳಿಯಲಿಲ್ಲ.
ಸಮಯಶ್ಚ ಮಯಾ ಪೂರ್ವಂ ಕೃತೋ ವಃ ಶತ್ರುಕರ್ಶನ |
ನಾಹಂ ಯುಧಿ ವಿಮೋಕ್ತವ್ಯೋ ನಾಪ್ಯಾಚಾರ್ಯಃ ಕಥಂಚನ ‖40‖
ಎಲ್ಲೈ ಶತ್ರುಕರ್ಶನನೇ, ತಾತನೆಂದು ನನ್ನ ಮೇಲಾಗಲೀ ಅಥವಾ ಗುರುಗಳೆಂದು ದ್ರೋಣಾಚಾರ್ಯರ ಮೇಲಾಗಲೀ ಯಾವ ದಾಕ್ಷಿಣ್ಯವನ್ನು ತೋರಿಸಬಾರದೆಂದು ನಾನು ಹಿಂದೆಯೇ ಪಾಂಡವರಿಂದ ಪ್ರತಿಜ್ಞೆಯನ್ನು ಪಡೆದಿದ್ದೇನೆ.
ಯಂ ಯಂ ಹಿ ಧಾರ್ತರಾಷ್ಟ್ರಾಣಾಂ ಭೀಮೋ ದ್ರಕ್ಷ್ಯತಿ ಸಂಯುಗೇ |
ಹನಿಷ್ಯತಿ ರಣೇ ತಂ ತಂ ಸತ್ಯಮೇತದ್ ಬ್ರವೀಮಿ ತೇ ‖41‖
ಭೀಮಸೇನನು ಯುದ್ಧದಲ್ಲಿ ಯಾವ ಯಾವ ಧೃತರಾಷ್ಟ್ರ ಪುತ್ರರನ್ನು ನೋಡುವನೋ ಅವರನ್ನು ಕೊಲ್ಲುವನು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ಸ ತ್ವಂ ರಾಜನ್ ಸ್ಥಿರೋ ಭೂತ್ವಾ ದೃಢಾಂ ಕೃತ್ವಾ ರಣೇ ಮತಿಮ್ |
ಯೋಧಯಸ್ವ ರಣೇ ಪಾರ್ಥಾನ್ ಸ್ವರ್ಗಂ ಕೃತ್ವಾ ಪರಾಯಣಮ್ ‖42‖
ಎಲ್ಲೈ ರಾಜನೇ, ಆದ್ದರಿಂದ ನೀನು ಸ್ಥೈರ್ಯವನ್ನು ತಂದುಕೊಂಡು, ಯುದ್ಧದ ವಿಷಯದಲ್ಲಿ ದೃಢವಾದ ಮನಸ್ಸನ್ನು ಹೊಂದಿ, ಸ್ವರ್ಗವೇ ಶ್ರೇಷ್ಠವಾದ ಆಶ್ರಯವೆಂದು ತಿಳಿದು ಪಾಂಡವರ ಜೊತೆಯಲ್ಲಿ ಯುದ್ಧ ಮಾಡುವವನಾಗು.
ನ ಶಕ್ಯಾಃ ಪಾಂಡವಾ ಜೇತುಂ ಸೇಂದ್ರೈರಪಿ ಸುರಾಸುರೈಃ |
ತಸ್ಮಾದ್ ಯುದ್ಧೇ ಮತಿಂ ಕೃತ್ವಾ ಸ್ಥಿರಾಂ ಯುಧ್ಯಸ್ವ ಭಾರತ ‖43‖
ಎಲ್ಲೈ ಭಾರತನೇ, ಇಂದ್ರನಿಂದ ಸಹಿತರಾದ ಸುರಾಸುರರು ಸೇರಿದರೂ ಪಾಂಡವರನ್ನು ಗೆಲ್ಲಲು ಸಾಧ್ಯವಿಲ್ಲ. ಆದ್ದರಿಂದ ಯುದ್ಧದ ವಿಷಯದಲ್ಲಿ ದೃಢವಾದ ಬುದ್ಧಿಯನ್ನು ಹೊಂದಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡು (ಎಂದು ಹೇಳಿದರು).
‖ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುರಶೀತಿತಮೋऽಧ್ಯಾಯಃ ‖
‖ ಭೀಷ್ಮವಧಪರ್ವಣಿ ಚತುಶ್ಚತ್ವಾರಿಂಶೋऽಧ್ಯಾಯಃ ‖
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೈದನೆಯ ಅಧ್ಯಾಯ
ಮಧ್ಯಾಹ್ನದ ಯುದ್ಧದಲ್ಲಿ ಎರಡು ಪಕ್ಷಗಳಲ್ಲಿಯೂ ಸೈನ್ಯದ ದೊಡ್ಡ ಕ್ಷಯ.
ಧೃತರಾಷ್ಟ್ರಃ
ದೃಷ್ಟ್ವಾ ಮಮ ಹತಾನ್ ಪುತ್ರಾನ್ ಬಹೂನೇಕೇನ ಸಂಜಯ |

ಭೀಷ್ಮೋ ದ್ರೋಣಃ ಕೃಪಶ್ಚೈವ ಕಿಮಕುರ್ವತ ಸಂಯುಗೇ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ನನ್ನ ಅನೇಕ ಪುತ್ರರು ಭೀಮನೊಬ್ಬನಿಂದಲೇ ಹತರಾದುದನ್ನು ನೋಡಿ ಭೀಷ್ಮರು, ದ್ರೋಣರು ಮತ್ತು ಕೃಪರು ಯುದ್ಧದಲ್ಲಿ ಏನು ಮಾಡಿದರು?
ಅಹನ್ಯಹನಿ ಮೇ ಪುತ್ರಾಃ ಕ್ಷಯಂ ಗಚ್ಛಂತಿ ಸಂಜಯ |
ಮನ್ಯೇಽಹಂ ಸರ್ವಥಾ ಸೂತ ದೈವೇನೋಪಹತಾ ಭೃಶಮ್ ॥2॥
ಎಲೈ ಸಂಜಯನೇ, ಪ್ರತಿದಿವಸವೂ ನನ್ನ ಪುತ್ರರು ವಿನಾಶವನ್ನು ಹೊಂದುತ್ತಿದ್ದಾರೆ. ಎಲೈ ಸೂತನೇ, ನಾನು ಎಲ್ಲ ರೀತಿಯಿಂದಲೂ ವಿಧಿಯ ಪ್ರಕೋಪಕ್ಕೆ ಒಳಗಾಗಿದ್ದೇನೆಂದು ತಿಳಿಯುತ್ತೇನೆ.
ಯತ್ರ ಮೇ ತನಯಾಃ ಸರ್ವೇ ಜೀಯಂತೇ ನ ಜಯಂತ್ಯುತ |
ಯತ್ರ ಭೀಷ್ಮಸ್ಯ ದ್ರೋಣಸ್ಯ ಕೃಪಸ್ಯ ಚ ಮಹಾತ್ಮನಃ ॥3॥
ಸೌಮದತ್ತೇಶ್ಚ ವೀರಸ್ಯ ಭಗದತ್ತಸ್ಯ ಚೋಭಯೋಃ |
ಅಶ್ವತ್ಥಾಮ್ನಸ್ತಥಾ ತಾತ ಶೂರಾಣಾಂ ಸುಮಹಾತ್ಮನಾಮ್ ॥4॥
ಅನ್ಯೇಷಾಂ ಚೈವ ವೀರಾಣಾಂ ಮಧ್ಯಗಾಸ್ತನಯಾ ಮಮ |
ಯದಹನ್ಯಂತ ಸಂಗ್ರಾಮೇ ಕಿಮನ್ಯದ್ ಭಾಗಧೇಯತಃ ॥5॥
ಎಲೈ ಪ್ರೀತಿಪಾತ್ರನೇ, ಯುದ್ಧದಲ್ಲಿ ನನ್ನ ಪುತ್ರರೆಲ್ಲರೂ ಪರಾಭವಗೊಳ್ಳುತ್ತಿದ್ದಾರೆ, ಜಯಿಸುತ್ತಿಲ್ಲ. ಯುದ್ಧದಲ್ಲಿ ನನ್ನ ಮಕ್ಕಳು ಭೀಷ್ಮರ, ದ್ರೋಣರ, ಮಹಾತ್ಮರಾದ ಕೃಪರ, ವೀರರಾದ ಭೂರಿಶ್ರವ ಮತ್ತು ಭಗದತ್ತರಿಬ್ಬರ, ಹಾಗೆಯೇ ಅಶ್ವತ್ಥಾಮರ, ಮಹಾತ್ಮರಾದ ಶೂರರ ಮತ್ತು ಇನ್ನೂ ಅನೇಕ ವೀರರ ಮಧ್ಯದಲ್ಲಿದ್ದರೂ ಕೊಲ್ಲಲ್ಪಡುತ್ತಾರೆಂಬುದಕ್ಕೆ ದುರದೃಷ್ಟವನ್ನು ಬಿಟ್ಟು ಬೇರೆ ಏನು ಕಾರಣವಿದೆ?
ನ ಹಿ ದುರ್ಯೋಧನೋ ಮಂದಃ ಪುರಾ ಪ್ರೋಕ್ತಮಬುಧ್ಯತ |
ವಾರ್ಯಮಾಣೋ ಮಯಾ ತಾತ ಭೀಷ್ಮೇಣ ವಿದುರೇಣ ಚ ॥6॥
ಗಾಂಧಾರ್ಯಾ ಚೈವ ದುರ್ಮೇಧಾಃ ಸತತಂ ಹಿತಕಾಮ್ಯಯಾ |
ನಾವಬುಧ್ಯತ್ ಪುರಾ ಮೋಹಾತ್ ತಸ್ಯ ಪ್ರಾಪ್ತಮಿದಂ ಫಲಮ್ ॥7॥
ಯದ್ ಭೀಮಸೇನಃ ಸಮರೇ ಪುತ್ರಾನ್ ಮಮ ವಿಚೇತಸಃ |
ಅಹನ್ಯಹನಿ ಸಂಕ್ರುದ್ಧೋ ನಯತೇ ಯಮಸಾದನಮ್ ॥8॥
ಎಲೈ ಪ್ರೀತಿಪಾತ್ರನೇ, ಮಂದನೂ, ದುರ್ಬುದ್ಧಿಯುಳ್ಳವನೂ ಆದ ದುರ್ಯೋಧನನು ಹಿಂದೆ ಹೇಳಿದ ಒಳ್ಳೆಯ ಮಾತುಗಳನ್ನು ತಿಳಿಯಲಿಲ್ಲ. ಭೀಷ್ಮರೂ, ವಿದುರನೂ, ನಾನೂ, ನಿರಂತರವಾಗಿ ಅವನ ಹಿತವನ್ನು ಬಯಸುವ ಗಾಂಧಾರಿಯೂ ಸಹ ನಿಷೇಧ ಮಾಡಿದರೂ ಮೋಹಕ್ಕೆ ಒಳಗಾದ ಅವನು ಅದನ್ನು ತಿಳಿಯಲಿಲ್ಲ. ಅದರ ಪರಿಣಾಮವಾಗಿ ಭೀಮಸೇನನು ಸಂಕ್ರುದ್ಧನಾಗಿ ಯುದ್ಧದಲ್ಲಿ ಪ್ರಜ್ಞಾಹೀನನಾದ ನನ್ನ ಪುತ್ರರನ್ನು ಪ್ರತಿದಿನವು ಯಮಪಟ್ಟಣಕ್ಕೆ ಕಳುಹಿಸುತ್ತಿರುವ ದುಷ್ಫಲವು ಈಗ ಪ್ರಾಪ್ತವಾಗಿದೆ.
ಸಂಜಯಃ
ಇದಂ ತತ್ ಸಮನುಪ್ರಾಪ್ತಂ ಕ್ಷತ್ತುರ್ವಚನಮುತ್ತಮಮ್ |
ನ ಬುದ್ಧವಾನಸಿ ವಿಭೋ ಪ್ರೋಚ್ಯಮಾನಂ ಹಿತಂ ತದಾ ॥9॥
ಸಂಜಯ ವಿದುರನು ಹೇಳಿದ ಶ್ರೇಷ್ಠವಾದ ವಚನಗಳ ಫಲವು ಪ್ರಾಪ್ತವಾಗಿದೆ. ಎಲೈ ವಿಭುವೇ, ಆಗ ನಿನ್ನ ಹಿತವನ್ನು ಹೇಳಿದರೂ ನೀನು ಅದನ್ನು ಕೇಳಲಿಲ್ಲ.
ನಿವಾರಯ ಸುತಾನ್ ದ್ಯೂತಾತ್ ಪಾಂಡವಾನ್ ಮಾ ರುದೇತಿ ವೈ |
ಸುಹೃದಾಂ ಹಿತಕಾಮಾನಾಂ ಬ್ರುವತಾಂ ತತ್ತದೇವ ಚ ॥10॥
ನ ಶುಶ್ರೂಷಸಿ ಯದ್ವಾಕ್ಯಂ ಮರ್ತ್ಯಃ ಪಥ್ಯಮಿವೌಷಧಮ್ |
ತದೇವ ತ್ವಾಮನುಪ್ರಾಪ್ತಂ ವಚನಂ ಸಾಧು ಭಾಷಿತಮ್ ॥11॥
ನಿನ್ನ ಪುತ್ರರನ್ನು ದ್ಯೂತದಿಂದ ನಿವಾರಣೆ ಮಾಡು. ಪಾಂಡವರನ್ನು ರೋದಿಸಬೇಡ ಎಂದು ನಿನ್ನ ಹಿತವನ್ನು ಬಯಸುವ ಸುಹೃಜ್ಜನರು ಏನನ್ನು ಹೇಳಬೇಕೋ ಆಯಾ ಕಾಲದಲ್ಲಿ ಅವರು ಆ ಮಾತುಗಳನ್ನು ಆಡಿದರೂ, ಮನುಷ್ಯನು ಪಥ್ಯದ ಔಷಧಿಯನ್ನು ನಿರಾಕರಿಸುವಂತೆ ನೀನು ಹಿಂದೆ ಆ ಮಾತುಗಳನ್ನು ಕೇಳಲಿಲ್ಲ. ಆ ಸತ್ಯವಚನಗಳ ಫಲವು ಈಗ ನಿನಗೆ ಪ್ರಾಪ್ತವಾಗಿದೆ.
ವಿದುರದ್ರೋಣಭೀಷ್ಮಾಣಾಂ ತಥಾನ್ಯೇಷಾಂ ಹಿತೈಷಿಣಾಮ್ |
ಅಕೃತ್ವಾ ವಚನಂ ಪಥ್ಯಂ ಕ್ಷಯಂ ಗಚ್ಛಂತಿ ಕೌರವಾಃ ॥12॥
ಕೌರವರು ವಿದುರ, ದ್ರೋಣರು, ಭೀಷ್ಮರು, ಹಾಗೆಯೇ ಉಳಿದ ಹಿತೈಷಿಗಳ ಹಿತವಾದ ಮಾತುಗಳನ್ನು ಕೇಳದೆ ವಿನಾಶವನ್ನು ಹೊಂದುತ್ತಾರೆ.
ತದೇತತ್ ಸಮತಿಕ್ರಾಂತಂ ಪೂರ್ವಮೇವ ವಿಶಾಂಪತೇ |
ತಸ್ಮಾನ್ಮೇ ಶೃಣು ತತ್ತ್ವೇನ ಯಥಾ ಯುದ್ಧಮವರ್ತತ ॥13॥
ಎಲೈ ರಾಜನೇ, ಇವೆಲ್ಲವೂ ಹಿಂದೆಯೇ ಕಳೆದು ಹೋಯಿತು. ಆದ್ದರಿಂದ ಈಗ ಯುದ್ಧವು ಹೇಗೆ ನಡೆಯಿತೆಂಬ ವಾರ್ತೆಯನ್ನು ಯಥಾರ್ಥವಾಗಿ ಕೇಳುವವನಾಗು.
ಮಧ್ಯಾಹ್ನೇ ಸುಮಹಾರೌದ್ರಃ ಸಂಗ್ರಾಮಃ ಸಮಪದ್ಯತ |
ಲೋಕಕ್ಷಯಕರೋ ರಾಜಂಸ್ತನ್ಮೇ ನಿಗದತಃ ಶೃಣು ॥14॥
ಎಲೈ ರಾಜನೇ, ಆ ದಿನ ಮಧ್ಯಾಹ್ನದಲ್ಲಿ ಲೋಕಕ್ಷಯಕಾರಕವಾದ ಮಹಾಘೋರವಾದ ಸಂಗ್ರಾಮವು ಜರುಗಿತು. ಅದನ್ನು ನನ್ನಿಂದ

ಕೇಳುವವನಾಗು.
ತತಃ ಸರ್ವಾಣಿ ಸೈನ್ಯಾನಿ ಧರ್ಮಪುತ್ರಸ್ಯ ಶಾಸನಾತ್ |
ಸಂರಬ್ಧಾನ್ಯಭ್ಯಧಾವಂತ ಭೀಷ್ಮಮೇವ ಜಿಘಾಂಸಯಾ ॥15॥
ಆಗ ಎಲ್ಲ ಸೈನ್ಯಗಳೂ ಕೋಪಗೊಂಡು ಧರ್ಮಪುತ್ರನಾದ ಯುಧಿಷ್ಠಿರನ ಶಾಸನದಂತೆ ಭೀಷ್ಮರನ್ನು ಕೊಲ್ಲಲು ಬಯಸಿ ಅವರ ಕಡೆಗೆ ಧಾವಿಸಿದವು.
ಧೃಷ್ಟದ್ಯುಮ್ನಃ ಶಿಖಂಡೀ ಚ ಸಾತ್ಯಕಿಶ್ಚ ಮಹಾರಥಃ |
ಯುಕ್ತಾನೀಕಾ ಮಹಾರಾಜ ಭೀಷ್ಮಮೇವ ಸಮಭ್ಯಯುಃ ॥16॥
ಎಲೈ ಮಹಾರಾಜನೇ, ಧೃಷ್ಟದ್ಯುಮ್ನ, ಶಿಖಂಡಿ ಮತ್ತು ಮಹಾರಥನಾದ ಸಾತ್ಯಕಿ ಇವರು ತಮ್ಮ ಸೈನ್ಯಗಳನ್ನು ಹೂಡಿ ಭೀಷ್ಮರಿಗೆ ಅಭಿಮುಖವಾಗಿಯೇ ಹೋದರು.
ವಿರಾಟೋ ದ್ರುಪದಶ್ಚೈವ ಸಹಿತಾ ಸರ್ವಸೋಮಕೈಃ |
ಅಭ್ಯದ್ರವಂತ ಸಂಗ್ರಾಮೇ ಭೀಷ್ಮಮೇವ ಮಹಾರಥಾಃ ॥17॥
ವಿರಾಟ, ದ್ರುಪದ ಮತ್ತು ಎಲ್ಲ ಸೋಮಕರಿಂದ ಸಹಿತರಾದ ಮಹಾರಥರು ಯುದ್ಧದಲ್ಲಿ ಭೀಷ್ಮರಿದ್ದಲ್ಲಿಯೇ ಧಾವಿಸಿದರು.
ಕೇಕಯಾ ಧೃಷ್ಟಕೇತುಶ್ಚ ಕುಂತಿಭೋಜಶ್ಚ ದಂಸಿತಃ |
ಯುಕ್ತಾನೀಕಾ ಮಹಾರಾಜ ಭೀಷ್ಮಮೇವ ಸಮಭ್ಯಯುಃ ॥18॥
ಕೇಕಯರು, ಧೃಷ್ಟಕೇತು ಮತ್ತು ಕುಂತಿಭೋಜ ಇವರು ಸನ್ನದ್ಧರಾಗಿ ತಮ್ಮ ಸೈನ್ಯವನ್ನು ಹೂಡಿ ಎಲೈ ಮಹಾರಾಜನೇ, ಭೀಷ್ಮನ ಕಡೆಗೇ ಧಾವಿಸಿದರು.
ಅರ್ಜುನೋ ದ್ರೌಪದೇಯಾಶ್ಚ ಚೇಕಿತಾನಶ್ಚ ಸಂಯುಗೇ |
ದುರ್ಯೋಧನಸಮಾದಿಷ್ಟಾನ್ ರಾಜ್ಞಃ ಸರ್ವಾನ್ ಸಮಭ್ಯಯುಃ ॥19॥
ಅರ್ಜುನ, ದ್ರೌಪದಿಯ ಐವರು ಮಕ್ಕಳು ಮತ್ತು ಚೇಕಿತಾನ ಇವರು ಯುದ್ಧದಲ್ಲಿ ದುರ್ಯೋಧನನ ಸಹಾಯಕ್ಕಾಗಿ ಇರುವ ದುರ್ಯೋಧನನ ಆಜ್ಞಾಧಾರಕರಾದ ಉಳಿದ ಎಲ್ಲಾ ರಾಜರುಗಳ ಮೇಲೆ ಎರಗಿದರು.
ಅಭಿಮನ್ಯುಸ್ತಥಾ ವೀರೋ ಹೈಡಿಂಬಶ್ಚ ಮಹಾರಥಃ |
ಭೀಮಸೇನಶ್ಚ ಸಂಕ್ರುದ್ಧಸ್ತೇಽಭ್ಯಧಾವಂತ ಕೌರವಾನ್ ॥20॥
ಅಭಿಮನ್ಯುವೂ ವೀರನೂ, ಮಹಾರಥನೂ ಆದ ಘಟೋತ್ಕಚ ಮತ್ತು ಭೀಮಸೇನ ಇವರು ಬಹಳ ಕೋಪಗೊಂಡು ಕೌರವ ವಂಶದಲ್ಲಿ ಜನಿಸಿದವರ ಮೇಲೆ ಎರಗಿದರು.
ತ್ರಿಧಾಭೂತೈರವಧ್ಯಂತ ಪಾಂಡವೈಃ ಕೌರವಾ ಯುಧಿ |
ತಥೈವ ಕೌರವೈ ರಾಜನ್ನವಧ್ಯಂತ ಪರೇ ರಣೇ ॥21॥
ಹೀಗೆ ಮೂರು ಭಾಗವಾದ ಪಾಂಡವ ಸೈನ್ಯದಿಂದ ಯುದ್ಧದಲ್ಲಿ ಕೌರವರು ವಧೆಗೆ ಈಡಾದರು. ಎಲೈ ರಾಜನೇ, ಹಾಗೆಯೇ ಪರರೂ ಸಹ ಯುದ್ಧದಲ್ಲಿ ಕೌರವರಿಂದ ಹತರಾದರು.
ದ್ರೋಣಸ್ತು ರಥಿನಾಂ ಶ್ರೇಷ್ಠಃ ಸೋಮಕಾನ್ ಸಂಜಯೈಃ ಸಹ |
ಅಭ್ಯದ್ರವತ ಸಂಕ್ರುದ್ಧಃ ಪ್ರೇಷಯಿಷ್ಯನ್ ಯಮಕ್ಷಯಮ್ ॥22॥
ರಥಿಕರಲ್ಲಿ ಶ್ರೇಷ್ಠರಾದ ದ್ರೋಣರಾದರೋ ಕೋಪಗೊಂಡು ಸೃಂಜಯರಿಂದ ಸಹಿತರಾದ ಸೋಮಕರನ್ನು ಯಮಪಟ್ಟಣಕ್ಕೆ ಕಳುಹಿಸುವವರಾಗಿ ಅವರ ಮೇಲೆ ಎರಗಿದರು.
ತತ್ರಾಕ್ರಂದೋ ಮಹಾನಾಸೀತ್ ಸೃಂಜಯಾನಾಂ ಮಹಾತ್ಮನಾಮ್ |
ವಧ್ಯತಾಂ ಸಮರೇ ರಾಜನ್ ಭಾರದ್ವಾಜೇನ ಧನ್ವಿನಾ ॥23॥
ಎಲೈ ರಾಜನೇ, ಧನುರ್ಧಾರಿಗಳಾದ ದ್ರೋಣರಿಂದ ಪ್ರಹಾರಕ್ಕೆ ಒಳಗಾದ, ಮಹಾತ್ಮರಾದ ಸೃಂಜಯರಿಂದ ಆಗ ದೊಡ್ಡ ಆಕ್ರಂದನವು ಉಂಟಾಯಿತು.
ದ್ರೋಣೇನ ನಿಹತಾಸ್ತತ್ರ ಕ್ಷತ್ರಿಯಾ ಬಹವೋ ರಣೇ |
ವಿವೇಷ್ಟಂತಃ ಸ್ಮ ದೃಶ್ಯಂತೇ ವ್ಯಾಧಿಕ್ಲಿಷ್ಟಾ ನರಾ ಇವ ॥24॥
ದ್ರೋಣರ ಪ್ರಹಾರಕ್ಕೆ ಒಳಗಾದ ಅನೇಕ ಕ್ಷತ್ರಿಯರು ಅಲ್ಲಿ ಯುದ್ಧಭೂಮಿಯಲ್ಲಿ ವ್ಯಾಧಿಪೀಡಿತ ಮನುಷ್ಯರಂತೆ ಹೊರಳಾಡುವುದು ಕಂಡುಬರುತ್ತಿದ್ದಿತು.
ಕೂಜತಾಂ ಕ್ರಂದತಾಂ ಚೈವ ಸ್ತನತಾಂ ಚೈವ ಸಂಯುಗೇ |
ಅನಿಶಂ ಶ್ರೂಯತೇ ಶಬ್ದಃ ಕ್ಷುತ್ಕೃಶಾನಾಂ ನೃಣಾಮಿವ ॥25॥
ಕಷ್ಟಕ್ಕೆ ಒಳಗಾಗಿ ಚೀರಾಡುವ ಭಟರ, ಹೇಷಾರವವನ್ನು ಮಾಡುವ ಅಶ್ವಗಳ ಮತ್ತು ಗರ್ಜಿಸುವ ಗಜಗಳ ಶಬ್ದವು ಹಸಿದ ಮನುಷ್ಯರ ಗೋಳಾಟದಂತೆ ಸತತವಾಗಿ ಕೇಳಿಬರುತ್ತಿದ್ದಿತು.
ತಥೈವ ಕೌರವೇಯಾಣಾಂ ಭೀಮಸೇನೋ ಮಹಾಬಲಃ |
ಚಕಾರ ಕದನಂ ಘೋರಂ ಕ್ರುದ್ಧಃ ಕಾಲ ಇವಾಪರಃ ॥26॥
ಹಾಗೆಯೇ ಮಹಾಬಲನಾದ ಭೀಮಸೇನನು ಇನ್ನೊಬ್ಬ ಮೃತ್ಯುದೇವತೆಯಂತೆ ಕೌರವ ಕುಲೋತ್ಪನ್ನರ ಜೊತೆಯಲ್ಲಿ ಘೋರವಾದ ಕದನವನ್ನು ಮಾಡಿದನು.
ವಧ್ಯತಾಂ ತತ್ರ ಸೈನ್ಯಾನಾಮನ್ಯೋನ್ಯೇನ ಮಹಾರಣೇ |
ಪ್ರಾವರ್ತತ ನದೀ ಘೋರಾ ರುಧಿರೌಘಪ್ರವಾಹಿನೀ ॥27॥

ಆ ಮಹಾಯುದ್ಧದಲ್ಲಿ ಪರಸ್ಪರವಾಗಿ ವಧೆ ಮಾಡಲ್ಪಡುವ ಸೈನ್ಯದಿಂದ ರಕ್ತ ಸಮೂಹ ಪ್ರವಾಹವುಳ್ಳ ಘೋರವಾದ ನದಿಯು ಹರಿಯಿತು.
ಸ ಸಂಗ್ರಾಮೋ ಮಹಾರಾಜ ಘೋರರೂಪೋಽಭವನ್ಮಹಾನ್ |
ಕುರೂಣಾಂ ಪಾಂಡವಾನಾಂ ಚ ಯಮರಾಷ್ಟ್ರವಿವರ್ಧನಃ ॥28॥
ಎಲೈ ಮಹಾರಾಜನೇ, ಕೌರವರಿಗೂ ಮತ್ತು ಪಾಂಡವರಿಗೂ ನಡೆದ ಆ ಘೋರವಾದ ಮಹಾಸಂಗ್ರಾಮವು ಯಮರಾಷ್ಟ್ರವನ್ನು ತುಂಬುವುದಾಗಿದ್ದಿತು.
ತತೋ ಭೀಮೋ ರಣೇ ಕ್ರುದ್ಧೋ ರಭಸಶ್ಚ ವಿಶೇಷತಃ |
ಗಜಾನೀಕಂ ಸಮಾಸಾದ್ಯ ಪ್ರೇಷಯಾಮಾಸ ಮೃತ್ಯವೇ ॥29॥
ಆಗ ಯುದ್ಧದಲ್ಲಿ ಕ್ರುದ್ಧನಾದ, ವಿಶೇಷವಾಗಿ ವೇಗಶಾಲಿಯಾದ ಭೀಮನು ಗಜ ಸಮೂಹವನ್ನು ತಲುಪಿ ಅವುಗಳನ್ನು ಮೃತ್ಯುಲೋಕಕ್ಕೆ ಕಳುಹಿಸಿದನು.
ತತ್ರ ಭಾರತ ಭೀಮೇನ ನಾರಾಚಾಭಿಹತಾ ಗಜಾಃ |
ಪೇತುಃ ಸೇದುಶ್ಚ ನೇದುಶ್ಚ ದಿಶಶ್ಚ ಪರಿಬಭ್ರಮುಃ ॥30॥
ಎಲೈ ಭಾರತನೇ, ಭೀಮನಿಂದ ನಾರಾಚಗಳಿಂದ ಹೊಡೆಯಲ್ಪಟ್ಟ ಗಜಗಳು ಕೆಲವು ಬಿದ್ದವು, ಕೆಲವು ನಾಶವನ್ನು ಹೊಂದಿದವು, ಕೆಲವು ಗರ್ಜಿಸಿದವು, ಕೆಲವು ದಿಕ್ಕು ದಿಕ್ಕುಗಳಿಗೆ ಓಡಿದವು.
ಛಿನ್ನಹಸ್ತಾ ಮಹಾನಾಗಾಶ್ಛಿನ್ನಪಾದಾಶ್ಚ ಮಾರಿಷ |
ಕ್ರೌಂಚವದ್ ವ್ಯನದನ್ ಭೀತಾಃ ಪೃಥಿವೀಮಧಿಶಿಶ್ಯಿರೇ ॥31॥
ಎಲೈ ಪೂಜ್ಯನೇ, ಸೊಂಡಿಲುಗಳು ಕತ್ತರಿಸಿದ, ಪಾದಗಳನ್ನು ಕತ್ತರಿಸಿದ ಮಹಾಗಜಗಳು ಭಯದಿಂದ ಕೂಡಿ ಕ್ರೌಂಚ ಪಕ್ಷಿಯಂತೆ ಚೀರುತ್ತಾ ಭೂಮಿಯ ಮೇಲೆ ಮಲಗಿದವು.
ನಕುಲಃ ಸಹದೇವಶ್ಚ ಹಯಾನೀಕಮಭಿದ್ರುತೌ |
ತೇ ಹಯಾಃ ಕಾಂಚನಾಪೀಡಾ ರುಗ್ಮಭಾಂಡಪರಿಚ್ಛದಾಃ |
ವಧ್ಯಮಾನಾ ವ್ಯದೃಶ್ಯಂತ ಶತಶೋಽಥ ಸಹಸ್ರಶಃ ॥32॥
ನಕುಲ-ಸಹದೇವರು ಹಯಸಮೂಹಗಳ ಮೇಲೆ ಎರಗಿದರು. ಸುವರ್ಣಾಲಂಕೃತವಾದ, ಸುವರ್ಣಮಯವಾದ ಹೊದಿಕೆಗಳನ್ನು ಹೊಂದಿದ ಆ ಅಶ್ವಗಳು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಕೊಲ್ಲಲ್ಪಡುವುದು ಕಂಡುಬರುತ್ತಿದ್ದಿತು.
ಪತದ್ಭಿಶ್ಚ ಹಯೈ ರಾಜನ್ ಸಮಾಸ್ತೀರ್ಯತ ಮೇದಿನೀ |
ನಿರ್ಜಿಹ್ವೈಶ್ಚ ಶ್ವಸದ್ಭಿಶ್ಚ ಕೂಜದ್ಭಿಶ್ಚ ಗತಾಸುಭಿಃ |
ಹಯೈರ್ಬಭೌ ನರಶ್ರೇಷ್ಠ ನಾನಾರೂಪಧರೈರ್ಧರಾ ॥33॥
ಎಲೈ ರಾಜನೇ, ಭೂಮಿಯ ಮೇಲೆ ಬೀಳುವ ಅಶ್ವಗಳಿಂದ ಭೂಮಿಯು ತುಂಬಿಹೋಯಿತು. ಎಲೈ ನರಶ್ರೇಷ್ಠನೇ, ನಾನಾ ರೂಪಗಳನ್ನು ಧರಿಸಿದ, ನಾಲಿಗೆಯನ್ನು ಕಳೆದುಕೊಂಡ ಅಶ್ವಗಳಿಂದ, ಕೇವಲ ಉಸಿರಾಡುವ ಅಶ್ವಗಳಿಂದ, ನರಳಾಡುವ ಅಶ್ವಗಳಿಂದ ಮತ್ತು ಮೃತವಾದ ಅಶ್ವಗಳಿಂದ ಭೂಮಿಯು ತುಂಬಿಹೋಯಿತು.
ಅರ್ಜುನೇನ ಹತೈಃ ಸಂಖೇ ತಥಾ ಭಾರತ ವಾಜಿಭಿಃ |
ಪ್ರಬಭೌ ವಸುಧಾ ಘೋರಾ ತತ್ರತತ್ರ ವಿಶಾಂಪತೇ ॥34॥
ಎಲೈ ಭಾರತನೇ, ರಾಜನೇ, ಅರ್ಜುನನಿಂದ ಯುದ್ಧದಲ್ಲಿ ಹತವಾದ ಅಶ್ವಗಳಿಂದ ರಣಭೂಮಿಯು ಅಲ್ಲಲ್ಲಿ ಘೋರವಾಗಿ ಕಾಣಿಸಿತು.
ರಥೈರ್ಭಗ್ನೈರ್ಧ್ವಜೈಶ್ಛಿನ್ನೈಶ್ಛತ್ರೈಶ್ಚ ಸುಮಹಾಪ್ರಭೈಃ |
ಹಾರೈರ್ನಿಷ್ಕೈಃ ಸಕೇಯೂರೈಃ ಶಿರೋಭಿಶ್ಚ ಸಕುಂಡಲೈಃ ॥35॥
ಉಷ್ಣೀಷೈರಪವಿದ್ಧೈಶ್ಚ ಪತಾಕಾಭಿಶ್ಚ ಸರ್ವಶಃ |
ಅನುಕರ್ಷೈಃ ಶುಭೈ ರಾಜನ್ ಯೋಕ್ತ್ರೈಶ್ಚ ಸಹ ರಶ್ಮಿಭಿಃ |
ಸಂಛನ್ನಾ ವಸುಧಾ ಭಾತಿ ವಸಂತೇ ಕುಸುಮೈರಿವ ॥36॥
ಎಲೈ ರಾಜನೇ, ಭಗ್ನವಾದ ರಥಗಳಿಂದಲೂ, ಕತ್ತರಿಸಲ್ಪಟ್ಟ ಧ್ವಜ-ಛತ್ರಗಳಿಂದಲೂ, ಮಹಾಕಾಂತಿಯುಳ್ಳ ಹಾರನಿಷ್ಕಗಳಿಂದಲೂ, ಕೇಯೂರಗಳಿಂದಲೂ, ಕುಂಡಲ ಸಹಿತವಾದ ಶಿರಸ್ಸುಗಳಿಂದಲೂ, ಎಸೆದ ರುಮಾಲುಗಳಿಂದಲೂ, ಪತಾಕೆಗಳಿಂದಲೂ, ಸಣ್ಣ ನೊಗಗಳಿಂದಲೂ, ರಶ್ಮಿಸಹಿತವಾದ ಕಡಗೂಟಗಳಿಂದಲೂ ಹರಡಿದ ಭೂಮಿಯು ವಸಂತ ಕಾಲದಲ್ಲಿ ಪುಷ್ಪಗಳು ಹರಡಿರುವಂತೆ ಕಂಡುಬಂದಿತು.
ಏವಮೇಷ ಕ್ಷಯೋ ವೃತ್ತಃ ಪಾಂಡೂನಾಮಪಿ ಭಾರತ |
ಕ್ರುದ್ಧೇ ಶಾಂತನವೇ ಭೀಷ್ಮೇ ದ್ರೋಣೇ ಚ ರಥಸತ್ತಮೇ ॥37॥
ಅಶ್ವತ್ಥಾಮ್ನಿ ಕೃಪೇ ಚೈವ ತಥೈವ ಕೃತವರ್ಮಣಿ |
ತಥೇತರೇಷು ಕ್ರುದ್ಧೇಷು ತಾವಕಾನಾಮಪಿ ಕ್ಷಯಃ ॥38॥
ಎಲೈ ಭಾರತನೇ, ಶಂತನುಪುತ್ರರಾದ ಭೀಷ್ಮರು, ರಥಶ್ರೇಷ್ಠರಾದ ದ್ರೋಣರು, ಅಶ್ವತ್ಥಾಮರು, ಕೃಪರು ಮತ್ತು ಕೃತವರ್ಮನು ಕೋಪಗೊಂಡಿರಲು ಪಾಂಡವರ ಸೈನ್ಯದಲ್ಲಿಯೂ ಹೀಗೆಯೇ ವಿನಾಶವುಂಟಾಯಿತು. ಹಾಗೆಯೇ ಪಾಂಡವರ ಸೈನ್ಯದವರು ಕ್ರುದ್ಧರಾದಾಗ ನಿನ್ನ ಸೈನ್ಯದಲ್ಲಿಯೂ ಕ್ಷಯವುಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಾಶೀತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ದಿನೇ ಪರೇ ಚೈವ ಪುನಃ ಸಮೇತಾಃ
ಪರಸ್ಪರಂ ಪಾಂಡವಾಃ ಕೌರವಾಸ್ತೇ |
ತತ್ರಾऽಸದನ್ನಾಗಸುತಾಸಮುದ್ಭವಃ
ಪಾರ್ಥಾತ್ಮಜಃ ಶಾಕುನೇಯಾನ್ ಷಡೇಕಃ ॥82॥
ಮರುದಿನ ಪುನಃ ಪಾಂಡವರೂ ಕೌರವರೂ ಪರಸ್ಪರ ಸೇರಿದರು. ಆಗ ಅರ್ಜುನನಿಗೆ ನಾಗಕನ್ಯೆ ಉಲೂಪಿಯಲ್ಲಿ ಜನಿಸಿದ ಇರಾವಂತ ಶಕುನಿಯ ಆರುಮಂದಿ ಸೋದರರನ್ನು ಒಬ್ಬನೇ ಎದುರಿಸಿದನು.
ತೈಃ ಪ್ರಾಸಹಸ್ತೈಃ ಕ್ಷತಕಾಯೋऽತಿರೂಢ
ಕೋಪಃ ಸ ಖಡ್ಗೇನ ಚಕರ್ತ ತೇಷಾಮ್ |
ಶಿರಾಂಸಿ ವೀರೋ ಬಲವಾನಿರಾವಾನ್ ಭಯಂ
ದಧದ್ ಧಾರ್ತರಾಷ್ಟ್ರೇಷು ಚೋಗ್ರಮ್ ॥83॥
ಪ್ರಾಸವೆಂಬ ಆಯುಧವನ್ನು ಕೈಯಲ್ಲಿ ಹಿಡಿದಿದ್ದ ಸೋದರರು ಇರಾವಂತನ ಶರೀರವನ್ನು ಗಾಯಗೊಳಿಸಿದಾಗ ಅವನ ಕೋಪ ಹೆಚ್ಚಿತು. ಬಲಿಷ್ಠ ವೀರನಾದ ಆತನು ಕೌರವರಿಗೆ ಮಹಾಭಯವನ್ನು ಹುಟ್ಟಿಸುತ್ತ ಶಕುನಿ ಸೋದರರ ತಲೆಗಳನ್ನು ಖಡ್ಗದಿಂದ ಕತ್ತರಿಸಿದನು.
ದೃಷ್ಟ್ವಾ ತಮುಗ್ರಂ ಧೃತರಾಷ್ಟ್ರಪುತ್ರೋ
ದಿದೇಶ ರಕ್ಷೋऽಲಂಬುಸನಾಮಧೇಯಮ್ |
ಜಹ್ಯಾರ್ಜುನಿಂ ಕ್ಷಿಪ್ರಮಿತಿ ಸ್ಮ ತಚ್ಚ
ಸಮಾಸದನ್ ನಾಗಸುತಾತನೂಜಮ್ ॥84॥
ಭಯಂಕರನಾದ ಇರಾವಂತನನ್ನು ಕಂಡು ದುರ್ಯೋಧನನು ಅಲಂಬುಸನೆಂಬ ಹೆಸರಿನ ರಾಕ್ಷಸನಿಗೆ `ಇರಾವಂತನನ್ನು ಬೇಗನೆ ಕೊಲ್ಲು' ಎಂದು ಆದೇಶಿಸಿದನು. ರಾಕ್ಷಸನು ಇರಾವಂತನನ್ನು ಎದುರಿಸಿದನು.
ತಯೋರಭೂದ್ ಯುದ್ಧಮತೀವ ದಾರುಣಂ
ಮಾಯಾಯುಜೋರ್ವೀರ್ಯವತೋರ್ಮಹಾದ್ಭುತಮ್ |
ಸಸಾದಿನೋऽಶ್ವಾನ್ ಸ ತು ರಾಕ್ಷಸೋऽಸೃಜತ್
ತೇ ಪಾರ್ಥಪುತ್ರಸ್ಯ ಚ ಸಾದಿನೋऽಹನನ್ |
ತತಸ್ತ್ವನಂತಾಕೃತಿಮಾಪ್ತಮಾರ್ಜುನಿಂ
ಸುಪರ್ಣರೂಪೋऽಹನದಾಶು ರಾಕ್ಷಸಃ ॥85॥
ಮಾಯಾವಿಗಳೂ ಪರಾಕ್ರಮಿಗಳೂ ಆದ ಅಲಂಬುಸ ಮತ್ತು ಇರಾವಂತರಿಗೆ ಅತ್ಯಂತ ಭೀಕರವೂ ಮಹಾ ಅದ್ಭುತವೂ ಆದ ಯುದ್ಧವು ನಡೆಯಿತು. ರಾಕ್ಷಸನು ಕುದುರೆಗಳನ್ನೂ ಸವಾರರನ್ನೂ ಮಾಯೆಯಿಂದ ನಿರ್ಮಿಸಿದ. ಅವರು ಇರಾವಂತನ ಅಶ್ವಸೈನಿಕರನ್ನು ಕೊಂದರು. ಆಗ ಸರ್ಪಾಕಾರವನ್ನು ತಳೆದ ಇರಾವಂತನನ್ನು ಗರುಡ ರೂಪನಾದ ರಾಕ್ಷಸನು ಬೇಗನೆ ವಧಿಸಿದ.
ಹತಂ ನಿಶಮ್ಯಾರ್ಜುನಿಮುಗ್ರಪೌರುಷೋ
ನನಾದ ಕೋಪೇನ ವೃಕೋದರಾತ್ಮಜಃ |
ಚಚಾಲ ಭೂರ್ನಾನದತೋऽಸ್ಯ ರಾವತಃ
ಸಸಾಗರಾಗೇಂದ್ರನಗಾ ಭೃಶಂ ತದಾ ॥86॥
ಇರಾವಂತನು ಹತನಾದುದನ್ನು ಕಂಡು ಭಯಂಕರ ಪೌರುಷಶಾಲಿಯಾದ ಘಟೋತ್ಕಚನು ಕೋಪದಿಂದ ಗರ್ಜಿಸಿದನು. ಅವನು ಗರ್ಜಿಸಿದಾಗ ಆ ಶಬ್ದದಿಂದ ಸಾಗರಗಳು, ಮಹಾವೃಕ್ಷಗಳು ಮತ್ತು ಬೆಟ್ಟಗಳಿಂದ ಕೂಡಿದ ಭೂಮಿ ಬಲವಾಗಿ ಕಂಪಿಸಿತು.
ಅಲಂಬುಸಸ್ತಂ ಪ್ರಸಮೀಕ್ಷ್ಯ ಮಾರುತೇಃ
ಸುತಂ ಬಲಾಢ್ಯಂ ಭಯತಃ ಪರಾದ್ರವತ್ |
ಪರಾದ್ರವನ್ ಧಾರ್ತರಾಷ್ಟ್ರಸ್ಯ ಸೇನಾಃ
ಸರ್ವಾಸ್ತಮಾರಾಥ ಸುಯೋಧನೋ ನೃಪಃ ॥87॥
ಅಲಂಬುಸನು ಬಲಾಢ್ಯನಾದ ಘಟೋತ್ಕಚನನ್ನು ಕಂಡು ಭಯದಿಂದ ಓಡಿದನು. ದುರ್ಯೋಧನನ ಸೇನೆಗಳೆಲ್ಲವೂ ಪಲಾಯನಗೈದವು. ಆಗ ದುರ್ಯೋಧನನು ಘಟೋತ್ಕಚನನ್ನು ಎದುರಿಸಿದನು.
* * * * *
ಎಂಬತ್ತಾರನೆಯ ಅಧ್ಯಾಯ
ಅಲಂಬುಸನಿಂದ ಇರಾವಂತನ ವಧೆ.
ಸಂಜಯಃ
ವರ್ತಮಾನೇ ತಥಾ ರೌದ್ರೇ ರಾಜನ್ ವೀರವರಕ್ಷಯೇ |
ಶಕುನಿಃ ಸೌಬಲಃ ಶ್ರೀಮಾನ್ ಪಾಂಡವಾನ್ ಸಮುಪಾದ್ರವತ್ ॥1॥
ಸಂಜಯ ಎಲೈ ರಾಜನೇ, ಶ್ರೇಷ್ಠರಾದ ವೀರರು ನಾಶವನ್ನು ಹೊಂದುವ ಭಯಂಕರವಾದ ಯುದ್ಧವು ಹಾಗೆ ನಡೆಯುತ್ತಿರಲು

ಕಾಂತಿಯುಕ್ತನಾದ ಸೌಬಲನಾದ ಶಕುನಿಯು ಪಾಂಡವರ ಕಡೆಗೆ ಧಾವಿಸಿ ಬಂದನು.
ತಥೈವ ಸಾತ್ವತೋ ರಾಜನ್ ಹಾರ್ದಿಕ್ಯಃ ಪರವೀರಹಾ |
ಅಭ್ಯದ್ರುವತ ಸಂಗ್ರಾಮೇ ಪಾಂಡವಾನಾಮನೀಕಿನೀಮ್ ॥2॥
ಎಲೈ ರಾಜನೇ, ಹಾಗೆಯೇ ಪರವೀರಘಾತಕನೂ, ಸಾತ್ವತನೂ ಆದ ಕೃತವರ್ಮನು ಯುದ್ಧದಲ್ಲಿ ಪಾಂಡವರ ಸೈನ್ಯದ ಮೇಲೆ ಎರಗಿದನು.
ತತಃ ಕಾಂಬೋಜಮುಖ್ಯಾನಾಂ ನದೀಜಾನಾಂ ಚ ವಾಜಿನಾಮ್ |
ಆರಟ್ಟಾನಾಂ ಮಹೀಜಾನಾಂ ಸಿಂಧುಜಾನಾಂ ಚ ಸರ್ವಶಃ ॥3॥
ವನಾಯುಜಾನಾಂ ಶುಭ್ರಾಣಾಂ ತಥಾ ಪರ್ವತವಾಸಿನಾಮ್ |
ಯೇ ಚಾಪರೇ ತಿತ್ತಿರಿಜಾ ಜವನಾ ವಾತರಂಹಸಃ ॥4॥
ಸುವರ್ಣಾಲಂಕೃತೈರೇತೈರ್ವರ್ಮವದ್ಭಿಃ ಸುಕಲ್ಪಿತೈಃ |
ಹಯೈರ್ವಾತಜವೈರ್ಮುಖ್ಯೈಃ ಪಾಂಡವಸ್ಯ ಸುತೋ ಬಲೀ |
ಅಭ್ಯವರ್ತತ ತತ್ಸೈನ್ಯಂ ಹೃಷ್ಟರೂಪಃ ಪರಂತಪಃ ॥5॥
ಅನಂತರ ಕಾಂಭೋಜದೇಶದ ಅಶ್ವಗಳು, ನದೀ ದೇಶದ ಅಶ್ವಗಳು, ಆರಟ್ಟ ದೇಶದ ಅಶ್ವಗಳು, ಈ ಭೂಮಿಯಲ್ಲಿ ಜನಿಸಿದ ಅಶ್ವಗಳು, ಸಿಂಧು ದೇಶದಲ್ಲಿ ಜನಿಸಿದ ಅಶ್ವಗಳು, ವನಾಯು ದೇಶದಲ್ಲಿ ಜನಿಸಿದ ಶುಭ್ರವಾದ ಅಶ್ವಗಳು, ಪರ್ವತ ಪ್ರದೇಶದಲ್ಲಿ ಜನಿಸಿದ ಅಶ್ವಗಳು, ತಿತ್ತಿರ ದೇಶದಲ್ಲಿ ಜನಿಸಿದ ವಾಯುವೇಗವುಳ್ಳ ವೇಗಶಾಲಿಗಳಾದ ಅಶ್ವಗಳು, ಈ ಎಲ್ಲವನ್ನೂ ಚೆನ್ನಾಗಿ ಸಿದ್ಧಗೊಳಿಸಿ ಸುವರ್ಣಾಲಂಕೃತವಾದ ವಾಯುವೇಗವುಳ್ಳ ಪ್ರಧಾನವಾದ ಅಶ್ವಗಳ ಜೊತೆಯಲ್ಲಿ ಪಾಂಡವನಾದ ಅರ್ಜುನನ ಮಗನೂ, ಬಲಿಷ್ಠನೂ, ಪರಂತಪನೂ, ಸಂತೋಷಗೊಂಡವನೂ ಆದ ಇರಾವಂತನು ಕೌರವರ ಸೈನ್ಯವನ್ನು ಪ್ರವೇಶಿಸಿದನು.
ಅರ್ಜುನಸ್ಯಾಥ ದಾಯಾದ ಇರಾವಾನ್ನಾಮ ವೀರ್ಯವಾನ್ |
ಸುತಾಯಾಂ ನಾಗರಾಜಸ್ಯ ಜಾತಃ ಪಾರ್ಥೇನ ಧೀಮತಾ ॥6॥
ಐರಾವತೇನ ಸಾ ದತ್ತಾ ಅನಪತ್ಯಾ ಮಹಾತ್ಮನಾ |
ಪತ್ಯೌ ಹತೇ ಸುಪರ್ಣೇನ ಕೃಪಣಾ ದೀನಚೇತನಾ ॥7॥
ಭಾರ್ಯಾರ್ಥಂ ತಾಂ ಚ ಜಗ್ರಾಹ ಪಾರ್ಥಃ ಕಾಮವಶಾನುಗಾಮ್ |
ಏವಮೇಷ ಸಮುತ್ಪನ್ನಃ ಪರಕ್ಷೇತ್ರೇಽರ್ಜುನಾತ್ಮಜಃ ॥8॥
ಅವನು ಐರಾವತನೆಂಬ ಸರ್ಪರಾಜನ ಮಗಳಾದ ಉಲೂಪಿಯಲ್ಲಿ ಧೀಮಂತನಾದ ಅರ್ಜುನನಿಂದ ಜನಿಸಿದ ಪರಾಕ್ರಮಶಾಲಿಯಾದ ಅರ್ಜುನನ ದಾಯಾದನಾದ ಇರಾವಂತನೆಂಬ ನಾಮವುಳ್ಳವನು. ತನ್ನ ಮಗಳಾದ ಉಲೂಪಿಯ ಪತಿಯು ಗರುಡನಿಂದ ಹತನಾಗುತ್ತಿರಲು ಮಹಾತ್ಮನಾದ ಐರಾವತನು ಮಕ್ಕಳಿಲ್ಲದೆ ಕೃಪಣಳೂ, ದೀನಳೂ ಆಗಿದ್ದ ಅವಳನ್ನು ಅರ್ಜುನನಿಗೆ ಕೊಟ್ಟನು. ಕಾಮವಶಳಾಗಿದ್ದ ಅವಳನ್ನು ಅರ್ಜುನನಾದರೂ ಮುಂದೆ ನಡೆಯಬೇಕಾದ ಕಾರ್ಯದ ಸಲುವಾಗಿ ಪತ್ನಿಯಾಗಿ ಸ್ವೀಕರಿಸಿದನು. ಹೀಗೆ ಇರಾವಂತನು ಅರ್ಜುನನಿಗೆ ಪರಕ್ಷೇತ್ರದಲ್ಲಿ ಜನಿಸಿದ ಪುತ್ರ.
ಸ ನಾಗಲೋಕೇ ಸಂವೃದ್ಧೋ ಮಾತ್ರಾ ಚ ಪರಿರಕ್ಷಿತಃ |
ಪಿತೃವ್ಯೇಣ ಪರಿತ್ಯಕ್ತಃ ಪಾರ್ಥದ್ವೇಷಾದ್ ದುರಾತ್ಮನಾ ॥9॥
ಅವನು ತಾಯಿಯಿಂದ ರಕ್ಷಿಸಲ್ಪಟ್ಟು ನಾಗಲೋಕದಲ್ಲಿ ಬೆಳೆದನು. ಅವನ ಚಿಕ್ಕಪ್ಪನಾದ ದುರಾತ್ಮನಾದ ಅಶ್ವಸೇನನು ಅರ್ಜುನನ ಮೇಲಿನ ದ್ವೇಷದಿಂದ ಅವನನ್ನು ಪರಿತ್ಯಾಗ ಮಾಡಿದನು.
ರೂಪವಾನ್ ವೀರ್ಯಸಂಪನ್ನೋ ಗುಣವಾನ್ ಸತ್ಯವಿಕ್ರಮಃ |
ಇಂದ್ರಲೋಕಂ ಜಗಾಮಾಶು ಶ್ರುತ್ವಾ ತತ್ರಾರ್ಜುನಂ ಗತಮ್ ॥10॥
ರೂಪವಂತನೂ, ವೀರ್ಯಸಂಪನ್ನನೂ, ಗುಣವಂತನೂ, ಸತ್ಯವಾದ ಪರಾಕ್ರಮವುಳ್ಳವನೂ ಆದ ಅವನು ಅರ್ಜುನನು ಇಂದ್ರಲೋಕಕ್ಕೆ ಹೋಗಿದ್ದಾನೆಂದು ಕೇಳಿ ಶೀಘ್ರವಾಗಿ ಇಂದ್ರಲೋಕಕ್ಕೆ ಹೋದನು.
ಸೋಽಭಿಗಮ್ಯ ಮಹಾತ್ಮಾನಂ ಪಿತರಂ ಸತ್ಯವಿಕ್ರಮಮ್ |
ಅಭ್ಯವಾದಯದವ್ಯಗ್ರೋ ವಿನಯೇನ ಕೃತಾಂಜಲಿಃ |
ಇರಾವಾನಸ್ಮಿ ಭದ್ರಂ ತೇ ಪುತ್ರಶ್ಚಾಹಂ ತವಾಭಿಭೋ ॥11॥
ಮಾತುಃ ಸಮಾಗಮೋ ಯಶ್ಚ ತತ್ಸರ್ವಂ ಪ್ರತ್ಯವೇದಯತ್ |
ತಚ್ಚ ಸರ್ವಂ ಯಥಾವೃತ್ತಮನುಸಸ್ಮಾರ ಪಾಂಡವಃ ॥12॥
ಪರಿಷ್ವಜ್ಯ ಸುತಂ ಚಾಪಿ ಸೋಽಽತ್ಮನಃ ಸದೃಶಂ ಗುಣೈಃ |
ಪ್ರೀತಿಮಾನಭವತ್ ಪಾರ್ಥೋ ದೇವರಾಜನಿವೇಶನೇ ॥13॥
ಅವನು ಸತ್ಯವಿಕ್ರಮನೂ, ಮಹಾತ್ಮನೂ ಆದ ತಂದೆಗೆ ವಿನಯದಿಂದ ಕೈಗಳನ್ನು ಮುಗಿದು ಅವ್ಯಗ್ರನಾಗಿ ನಮಸ್ಕಾರವನ್ನು ಮಾಡಿ, ಎಲೈ ಶತ್ರುಗಳನ್ನು ಸೋಲಿಸುವವನೇ, ನಿನಗೆ ಮಂಗಳವಾಗಲಿ. ನಾನು ನಿನ್ನ ಪುತ್ರನಾದ ಇರಾವಾನ್ ಎಂದು ಹೇಳಿದನು. ತನ್ನ ತಾಯಿಗೂ, ಅರ್ಜುನನಿಗೂ ಆದ ಸಮಾಗಮವೆಲ್ಲವನ್ನೂ ಅವನು ವಿವರಿಸಿದನು. ಹಿಂದೆ ನಡೆದ ಎಲ್ಲಾ ಘಟನೆಗಳನ್ನು ಅರ್ಜುನನು ಸ್ಮರಿಸಿಕೊಂಡನು. ಗುಣಗಳಿಂದ ತನಗೆ ಸದೃಶನಾದ ತನ್ನ ಪುತ್ರನನ್ನು ಆಲಿಂಗಿಸಿ ಅರ್ಜುನನು ಇಂದ್ರನ ನಿವೇಶದಲ್ಲಿ ಸಂತೋಷಭರಿತನಾದನು.
ಸೋಽರ್ಜುನೇನ ಸಮಾಜ್ಞಪ್ತೋ ದೇವಲೋಕೇ ತದಾ ನೃಪ |
ಪ್ರೀತಿಪೂರ್ವಂ ಮಹಾಬಾಹುಃ ಸ್ವಕಾರ್ಯಂ ಪ್ರತಿ ಭಾರತ |

ಯುದ್ಧಕಾಲೇ ತ್ವಯಾಸ್ಮಾಕಂ ಸಾಹ್ಯಂ ದೇಯಮಿತಿ ಪ್ರಭೋ ॥14॥
ಎಲೈ ಭಾರತನೇ, ಪ್ರಭುವೇ, ಆಗ ದೇವಲೋಕದಲ್ಲಿ ಮಹಾಬಾಹುವಾದ ಅವನು ಅರ್ಜುನನಿಂದ ಪ್ರೀತಿಪೂರ್ವಕವಾಗಿ, ನೀನು ಯುದ್ಧಕಾಲದಲ್ಲಿ ನಮಗೆ ಸಹಾಯವನ್ನು ಮಾಡಬೇಕು ಎಂದು ಸ್ವಕಾರ್ಯವನ್ನು ಆಜ್ಞಾಪಿಸಲ್ಪಟ್ಟನು.
ಬಾಢಮಿತ್ಯೇವಮುಕ್ತಶ್ಚ ಚ ಯುದ್ಧಕಾಲ ಉಪಾಗತಃ।
ಕಾಮವರ್ಣಜವೈರಶ್ವೈಃ ಸಂವೃತೋ ಬಹುಭಿರ್ನೃಪ ॥15॥
ಎಲೈ ರಾಜನೇ, ಇರಾವಂತನು ಹಾಗೆಯೇ ಆಗಲಿ ಎಂದು ಹೇಳಿ, ಯುದ್ಧಕಾಲದಲ್ಲಿ ಕಾಮವರ್ಣವನ್ನು ಮತ್ತು ಕಾಮವೇಗವನ್ನು ಹೊಂದಿದ ಅನೇಕ ಅಶ್ವಗಳಿಂದ ಸಹಿತನಾಗಿ ಅರ್ಜುನನ ಬಳಿಗೆ ಬಂದನು.
ತೇ ಹಯಾಃ ಕಾಂಚನಾಪೀಡಾ ನಾನಾವರ್ಣಾ ಮನೋಜವಾಃ।
ಉತ್ಪೇತುಃ ಸಹಸಾ ರಾಜನ್ ಹಂಸಾ ಇವ ಮಹೋದಧೌ ॥16॥
ಎಲೈ ರಾಜನೇ, ಸುವರ್ಣಾಲಂಕೃತವಾದ ಮನೋಜವವುಳ್ಳ ನಾನಾವರ್ಣದ ಆ ಅಶ್ವಗಳು ಹಂಸಗಳು ಮಹಾಸಾಗರದಲ್ಲಿ ಹಾರಿದಂತೆ ಹಾರುತ್ತಿದ್ದವು.
ತೇ ತ್ವದೀಯಾನ್ ಸಮಾಸಾದ್ಯ ಹಯಸಂಘಾನ್ ಮಹಾಜವಾನ್।
ಕ್ರೋಡೈಃ ಕ್ರೋಡಾನಭಿಘ್ನಂತೋ ಘೋಣಾಭಿಶ್ಚ ಪರಸ್ಪರಮ್।
ನಿಪೇತುಃ ಸಹಸಾ ರಾಜನ್ ಸುವೇಗಾಭಿಹತಾ ಭುವಿ ॥17॥
ಎಲೈ ರಾಜನೇ, ಆ ಅಶ್ವಗಳು ಮಹಾವೇಗವುಳ್ಳ ನಿನ್ನ ಅಶ್ವಸಮೂಹಗಳನ್ನು ಯುದ್ಧದಲ್ಲಿ ಎದುರಿಸಿ ಭುಜದಿಂದ ಭುಜಗಳನ್ನು, ಮುಖದಿಂದ ಮುಖಗಳನ್ನು ಘಟ್ಟಿಸುತ್ತಾ ತಕ್ಷಣದಲ್ಲಿ ಒಳ್ಳೆಯ ವೇಗದಿಂದ ತಾಡಿತವಾಗಿ ಭೂಮಿಯ ಮೇಲೆ ಬಿದ್ದವು.
ನಿಪತದ್ಭಿಸ್ತಥಾ ತೈಶ್ಚ ಹಯಸಂಘೈಃ ಪರಸ್ಪರಮ್।
ಶುಶ್ರುವೇ ದಾರುಣಃ ಶಬ್ದಃ ಸುಪರ್ಣಪತನೇ ಯಥಾ ॥18॥
ಆ ಅಶ್ವಸಂಘಗಳು ಪರಸ್ಪರವಾಗಿ ಘಟ್ಟಿಸಿ ಭೂಮಿಯ ಮೇಲೆ ಬೀಳುವಾಗ ಗರುಡನು ಹಾರುವ ಶಬ್ದದಂತೆ ದಾರುಣವಾದ ಶಬ್ದವು ಕೇಳಿಬರುತ್ತಿದ್ದಿತು.
ತಥೈವ ಚ ಮಹಾರಾಜ ಸಮೇತ್ಯಾನ್ಯೋನ್ಯಮಾಹವೇ।
ಪರಸ್ಪರವಧಂ ಘೋರಂ ಚಕ್ರುಸ್ತೇ ಹಯಸಾದಿನಃ ॥19॥
ಎಲೈ ಮಹಾರಾಜನೇ, ಹಾಗೆಯೇ ಆ ಅಶ್ವಾರೋಹಿಗಳೂ ಸಹ ಯುದ್ಧದಲ್ಲಿ ಒಬ್ಬರನ್ನೊಬ್ಬರು ಎದುರಿಸಿ, ಪರಸ್ಪರವಾಗಿ ಘೋರವಾದ ವಧೆಯನ್ನು ಮಾಡಿದರು.
ತಸ್ಮಿಂಸ್ತಥಾ ವರ್ತಮಾನೇ ಸಂಕುಲೇ ತುಮುಲೇ ಭೃಶಮ್।
ಉಭಯೋರಪಿ ಸಂಶಾಂತಾ ಹಯಸಂಘಾಃ ಸಮಂತತಃ ॥20॥
ಪ್ರಕ್ಷೀಣಸಾಯಕಾಃ ಶೂರಾ ನಿಹತಾಶ್ವಾಃ ಶ್ರಮಾತುರಾಃ।
ವಿಲಯಂ ಸಮನುಪ್ರಾಪ್ತಾಸ್ತಕ್ಷಮಾಣಾಃ ಪರಸ್ಪರಮ್ ॥21॥
ಆ ಸಂಕುಲಯುದ್ಧವು ಹಾಗೆ ತೀವ್ರವಾಗಿ ನಡೆಯುತ್ತಿರಲು, ಎರಡು ಕಡೆಗಳಲ್ಲಿಯೂ ಅಶ್ವಸಮೂಹಗಳು ನಾಶವನ್ನು ಹೊಂದಿದವು. ಅಶ್ವಗಳನ್ನು ಕಳೆದುಕೊಂಡು, ಭತ್ತಳಿಕೆಗಳು ಬರಿದಾಗಿ, ಶ್ರಮದಿಂದ ಆರ್ತರಾದ ಯೋಧರು ಪರಸ್ಪರವಾಗಿ ಗಾಯಗೊಳಿಸುತ್ತಾ ನಾಶವನ್ನು ಹೊಂದಿದರು.
ತತಃ ಕ್ಷೀಣೇ ಹಯಾನೀಕೇ ಕಿಂಚಿಚ್ಛೇಷೇ ಚ ಭಾರತ।
ಸೌಬಲಸ್ಯಾತ್ಮಜಾಃ ಶೂರಾ ನಿರ್ಗತಾ ರಣಮೂರ್ಧನಿ ॥22॥
ಎಲೈ ಭಾರತನೇ, ಹಯಸಮೂಹವು ಹಾಗೆ ನಾಶವಾಗಿ ಸ್ವಲ್ಪವು ಮಾತ್ರ ಉಳಿದಿರಲು ಸೌಬಲನಾದ ಶಕುನಿಯ ಶೂರರಾದ ಪುತ್ರರು ಉನ್ನತವಾದ ರಣದಲ್ಲಿ ಹೊರಗೆ ಬಂದರು.
ವಾಯುವೇಗಸಮಸ್ಪರ್ಶಾ ಜವೇ ವಾಯುಸಮಾಂಸ್ತಥಾ।
ಆರುಹ್ಯ ಶೀಲಸಂಪನ್ನಾನ್ ವಯಃಸ್ಥಾಂಸ್ತುರಗೋತ್ತಮಾನ್ ॥23॥
ವಾಯುವೇಗಕ್ಕೆ ಸಮವಾದ ಸ್ಪರ್ಶವುಳ್ಳ ಅವರು ವಾಯುವೇಗವನ್ನು ಹೊಂದಿದ ಶೀಲಸಂಪನ್ನವಾದ ತರುಣ ವಯಸ್ಸಿನ ಅಶ್ವಗಳನ್ನು ಏರಿ ಬಂದರು.
ಗಜೋ ಗವಾಕ್ಷೋ ವೃಷಕಶ್ಚರ್ಮವಾನಾರ್ಜವಃ ಶುಕಃ।
ಷಡೇತೇ ಬಲಸಂಪನ್ನಾ ನಿರ್ಯಯುರ್ಮಹತೋ ಬಲಾತ್ ॥24॥
ಗಜ, ಗವಾಕ್ಷ, ವೃಷಕ, ಚರ್ಮವಾನ್, ಆರ್ಜವ, ಶುಕ ಈ ಆರು ಬಲಿಷ್ಠರು ದೊಡ್ಡ ಕೌರವ ಸೈನ್ಯದಿಂದ ಮುಂದೆ ಬಂದರು.
ವಾರ್ಯಮಾಣಾಃ ಶಕುನಿನಾ ಸ್ವೈಶ್ಚ ಯೋಧೈರ್ಮಹಾಬಲೈಃ।
ಸನ್ನದ್ಧಾ ಯುದ್ಧಕುಶಲಾ ರೌದ್ರರೂಪಾ ಮಹಾಬಲಾಃ ॥25॥
ತದನೀಕಂ ಮಹಾಬಾಹೋ ಭಿತ್ತ್ವಾ ಪರಮದುರ್ಜಯಮ್।
ಬಲೇನ ಮಹತಾ ಯುಕ್ತಾಃ ಸ್ವರ್ಗಾಯ ವಿಜಯೈಷಿಣಃ।
ವಿವಿಶುಸ್ತೇ ತದಾ ಹೃಷ್ಟಾ ಗಾಂಧಾರಾ ಯುದ್ಧದುರ್ಮದಾಃ ॥26॥
ಶಕುನಿಯೂ ಮತ್ತು ತಮ್ಮ ಪಕ್ಷದ ಮಹಾಬಲರೂ ನಿಷೇಧಿಸುತ್ತಿದ್ದರೂ ಯುದ್ಧಕುಶಲರೂ, ಘೋರವಾದ ಆಕಾರವನ್ನು ಹೊಂದಿದವರೂ, ಮಹಾಬಲರೂ, ಯುದ್ಧಸನ್ನದ್ಧರೂ ಆದ ಅವರು ಪರಮದುರ್ಜಯವಾದ ಪಾಂಡವರ ಸೈನ್ಯವನ್ನು ಭೇದಿಸಿ, ಸ್ವರ್ಗವನ್ನು ಅಥವಾ ಜಯವನ್ನು ಪಡೆಯಲು ಬಯಸಿ, ದೊಡ್ಡ ಸೈನ್ಯದಿಂದ ಕೂಡಿ ಸಂತೋಷದಿಂದ ಯುದ್ಧದುರ್ಮದರೂ,

ಗಾಂಧಾರರೂ ಆದ ಅವರು ಪಾಂಡವ ಸೈನ್ಯವನ್ನು ಪ್ರವೇಶಿಸಿದರು.
ತಾನ್ ಪ್ರವಿಷ್ಟಾಂಸ್ತದಾ ದೃಷ್ಟ್ವಾ ಇರಾವಾನಪಿ ವೀರ್ಯವಾನ್ |
ಅಬ್ರವೀತ್ ಸಮರೇ ಯೋಧಾನ್ ವಿಚಿತ್ರಾಭರಣಾಯುಧಾನ್ ॥27॥
ತನ್ನ ಸೈನ್ಯವನ್ನು ಪ್ರವೇಶಿಸಿದ ಅವರನ್ನು ನೋಡಿ ಪರಾಕ್ರಮಶಾಲಿಯಾದ ಇರಾವಂತನೂ ಸಹ ವಿಚಿತ್ರಾಭರಣಭೂಷಿತರಾದ ತನ್ನ ಯೋಧರನ್ನು ಕುರಿತು ಹೇಳಿದನು.
ಯಥೈತೇ ಧಾರ್ತರಾಷ್ಟ್ರಸ್ಯ ಯೋಧಾಃ ಸಾನುಗವಾಹನಾಃ |
ಹನ್ಯಂತೇ ಸಮರೇ ಸರ್ವೇ ತಥಾ ನೀತಿರ್ವಿಧೀಯತಾಮ್ ॥28॥
ತಮ್ಮ ಅನುಯಾಯಿಗಳ ಮತ್ತು ವಾಹನಗಳ ಜೊತೆಯಲ್ಲಿ ಬಂದ ಈ ದುರ್ಯೋಧನನ ಯೋಧರೆಲ್ಲರೂ ಯುದ್ಧದಲ್ಲಿ ವಧೆಯನ್ನು ಹೊಂದುವಂತೆ ನೀತಿಯನ್ನು ನಿರೂಪಿಸಿ (ಎಂದು ಹೇಳಿದನು).
ಬಾಢಮಿತ್ಯೇವಮುಕತ್ವ ತೇ ಸರ್ವೇ ಯೋಧಾ ಇರಾವತಃ |
ಜಘ್ನುಸ್ತೇ ವೈ ಪರಾನೀಕಂ ದುರ್ಜಯಂ ಸಮರೇ ಪರೈಃ ॥29॥
ಹಾಗೆಯೇ ಆಗಲಿ ಎಂದು ಹೇಳಿ ಇರಾವಂತನ ಯೋಧರೆಲ್ಲರೂ ಶತ್ರುಗಳಿಂದ ಜಯಿಸಲು ಅಸಾಧ್ಯವಾದ ಆ ಶತ್ರುಸೈನ್ಯವನ್ನು ಪ್ರಹಾರಕ್ಕೆ ಈಡುಮಾಡಿದರು.
ತದನೀಕಮನೀಕೇನ ಸಮರೇ ವೀಕ್ಷ್ಯ ಪಾತಿತಮ್ |
ಅಮೃಷ್ಯಮಾಣಾಸ್ತೇ ಸರ್ವೇ ಸುಬಲಸ್ಯಾತ್ಮಜಾ ರಣೇ |
ಇರಾವಂತಮಭಿದ್ರುತ್ಯ ಸರ್ವತಃ ಪರ್ಯವಾರಯನ್ ॥30॥
ತಮ್ಮ ಸೈನ್ಯವು ಪರಸೈನ್ಯದಿಂದ ಯುದ್ಧದಲ್ಲಿ ನಿಪಾತವನ್ನು ಹೊಂದುವುದನ್ನು ನೋಡಿ ಸುಬಲನ ಪುತ್ರರೆಲ್ಲರೂ ಅದನ್ನು ನೋಡಿ ಸಹಿಸದೆ ಯುದ್ಧದಲ್ಲಿ ಇರಾವಂತನ ಮೇಲೆ ಎರಗಿ ಅವನನ್ನು ಸುತ್ತುವರಿದರು.
ತಾಡಯಂತಃ ಶಿತೈಃ ಪ್ರಾಸೈಶ್ಚೋದಯಂತಃ ಪರಸ್ಪರಮ್ |
ತೇ ಶೂರಾಃ ಪರ್ಯಧಾವಂತ ಕುರ್ವಂತೋ ಮಹದಾಕುಲಮ್ ॥31॥
ಹರಿತವಾದ ಪ್ರಾಸಗಳಿಂದ ಅವನಿಗೆ ಹೊಡೆಯುತ್ತಾ ತಮ್ಮನ್ನೇ ಪರಸ್ಪರವಾಗಿ ಉತ್ಸಾಹಗೊಳಿಸುತ್ತಾ ಶೂರರಾದ ಅವರು ದೊಡ್ಡ ಕ್ಷೋಭೆಯನ್ನು ಮಾಡುತ್ತಾ ಓಡಾಡಿದರು.
ಇರಾವಾನಥ ನಿರ್ಭಿನ್ನಃ ಪ್ರಾಸೈಸ್ತೀಕ್ಷ್ಣೈರ್ಮಹಾತ್ಮಭಿಃ |
ಸ್ರವತಾ ರುಧಿರೇಣಾಕ್ತಸ್ತೋತ್ತ್ರೈರ್ವಿದ್ಧ ಇವ ದ್ವಿಪಃ ॥32॥
ಆಗ ಇರಾವಂತನಾದರೋ ಆ ಮಹಾತ್ಮರ ತೀಕ್ಷ್ಣವಾದ ಪ್ರಾಸಗಳಿಂದ ಗಾಯಗೊಂಡ ಶರೀರವುಳ್ಳವನಾಗಿ ರಕ್ತವು ಸೋರುತ್ತಾ ಅಂಕುಶದಿಂದ ಹೊಡೆಯಲ್ಪಟ್ಟ ಆನೆಯಂತೆ ತೋರಿದನು.
ಉರಸ್ಯಪಿ ಚ ಪೃಷ್ಠೇ ಚ ಪಾರ್ಶ್ವಯೋಶ್ಚ ಭೃಶಾಹತಃ |
ಏಕೋ ಬಹುಭಿರತ್ಯರ್ಥಂ ಧೈರ್ಯಾದ್ ರಾಜನ್ನ ವಿವ್ಯಥೇ ॥33॥
ಎಲೈ ರಾಜನೇ, ಅವನ ಎದೆಯಲ್ಲಿಯೂ, ಬೆನ್ನಿನಲ್ಲಿಯೂ, ಪಕ್ಕೆಗಳಲ್ಲಿಯೂ ಚೆನ್ನಾಗಿ ಆಯುಧಗಳಿಂದ ಒಬ್ಬನೇ ಬಹಳ ಜನರಿಂದ ಹತನಾದರೂ ಧೈರ್ಯದಿಂದ ಅವನು ವ್ಯಥೆಯನ್ನು ಹೊಂದಲಿಲ್ಲ.
ಇರಾವಾನಥ ಸಂಕ್ರುದ್ಧಃ ಸರ್ವಾಂಸ್ತಾನ್ ನಿಶಿತೈಃ ಶರೈಃ |
ಮೋಹಯಾಮಾಸ ಸಮರೇ ವಿದ್ಧ್ವಾ ಪರಪುರಂಜಯಃ ॥34॥
ಆಗ ಪರಪುರಂಜಯನಾದ ಇರಾವಂತನೂ ಸಹ ಬಹಳ ಕೋಪಗೊಂಡು ಅವರೆಲ್ಲರನ್ನೂ ಹರಿತವಾದ ಬಾಣಗಳಿಂದ ಗಾಯಗೊಳಿಸುತ್ತಾ ಯುದ್ಧದಲ್ಲಿ ಅವರಿಗೆ ಮೂರ್ಛೆಯನ್ನು ಉಂಟುಮಾಡಿದನು.
ಪ್ರಾಸಾನುದ್ಧೃತ್ಯ ಸರ್ವಾಂಶ್ಚ ಸ್ವಶರೀರಾದರಿಂದಮಃ |
ತೈರೇವ ತಾಡಯಾಮಾಸ ಸುಬಲಸ್ಯಾತ್ಮಜಾನ್ ರಣೇ ॥35॥
ಅರಿಂದಮನಾದ ಅವನು ತನ್ನ ಶರೀರದಲ್ಲಿ ನಾಟಿದ್ದ ಪ್ರಾಸಗಳನ್ನು ಕಿತ್ತು ಅವುಗಳಿಂದಲೇ ಶಕುನಿಯ ಪುತ್ರರನ್ನು ಯುದ್ಧದಲ್ಲಿ ಹೊಡೆದನು.
ನಿಕೃಷ್ಯ ನಿಶಿತಂ ಖಡ್ಗಂ ಗೃಹೀತ್ವಾ ಚ ಶರಾವರಮ್ |
ಪದಾತಿಸ್ತೂರ್ಣಮಾಗಚ್ಛಜ್ಜಿಘಾಂಸುಃ ಸೌಬಲಾನ್ ಯುಧಿ ॥36॥
ತನ್ನ ಹರಿತವಾದ ಖಡ್ಗವನ್ನು ಒರೆಯಿಂದ ಹಿರಿದು, ಗುರಾಣಿಯನ್ನು ಹಿಡಿದು ಶಕುನಿಯ ಪುತ್ರರನ್ನು ಯುದ್ಧದಲ್ಲಿ ಕೊಲ್ಲಲು ಬಯಸಿ, ಪದಾತಿಯಾಗಿ ಅವನು ಶೀಘ್ರವಾಗಿ ಮುಂದೆ ಬಂದನು.
ತತಃ ಪ್ರತ್ಯಾಗತಪ್ರಾಣಾಃ ಸರ್ವೇ ತೇ ಸುಬಲಾತ್ಮಜಾಃ |
ಭೂಯಃ ಕ್ರೋಧಸಮಾವಿಷ್ಟಾ ಇರಾವಂತಮಥಾದ್ರವನ್ ॥37॥
ಆ ವೇಳೆಗೆ ಪ್ರಜ್ಞೆಯನ್ನು ಮರಳಿ ಪಡೆದ ಶಕುನಿಯ ಪುತ್ರರೆಲ್ಲರೂ ಕ್ರೋಧಪೂರಿತರಾಗಿ ಪುನಃ ಇರಾವಂತನನ್ನು ಮುತ್ತಿದರು.
ಇರಾವಾನಪಿ ಖಡ್ಗೇನ ದರ್ಶಯನ್ ಪಾಣಿಲಾಘವಮ್ |
ಅಭ್ಯವರ್ತತ ತಾನ್ ಸರ್ವಾನ್ ಸೌಬಲಾನ್ ಬಲದರ್ಪಿತಃ ॥38॥
ಬಲದರ್ಪಿತನಾದ ಇರಾವಂತನೂ ಸಹ ಖಡ್ಗವನ್ನು ಹಿಡಿದು ತನ್ನ ಹಸ್ತಚಾತುರ್ಯವನ್ನು ತೋರಿಸುತ್ತಾ ಶಕುನಿಯ ಆ ಎಲ್ಲ ಪುತ್ರರನ್ನೂ ಎದುರಿಸಿದನು.
ಲಾಘವೇನಾಥ ಚರತಃ ಸರ್ವೇ ತೇ ಸುಬಲಾತ್ಮಜಾಃ |

ಅಂತರಂ ನಾಧ್ಯಗಚ್ಛಂತ ಚರಂತಃ ಶೀಘ್ರಗಾಮಿನಃ ॥39॥
ಶೀಘ್ರಗಾಮಿಗಳಾಗಿ ಚಲಿಸುವ ಆ ಎಲ್ಲ ಶಕುನಿಯ ಪುತ್ರರು ಶೀಘ್ರವಾಗಿ ಸಂಚರಿಸುವ ಅವನನ್ನು ಹೊಡೆಯಲು ಯಾವ ಅವಕಾಶವನ್ನೂ ಪಡೆಯಲಿಲ್ಲ.
ಭೂಮಿಷ್ಠಮಥ ತಂ ಸಂಖ್ಯೇ ಸಂಪ್ರದೃಶ್ಯ ತತಃ ಪುನಃ |
ಪರಿವಾರ್ಯ ಭೃಶಂ ಸರ್ವೇ ಗೃಹೀತುಮುಪಚಕ್ರಮುಃ ॥40॥
ಆಗ ಅವರು ಭೂಮಿಯ ಮೇಲೆ ಪದಾತಿಯಾಗಿದ್ದ ಅವನನ್ನು ಸುತ್ತುವರಿದು ಸೆರೆಹಿಡಿಯಲು ಯತ್ನಿಸಿದರು.
ಅಥಾಭ್ಯಾಶಗತಾನಾಂ ಸ ಖಡ್ಗೇನಾಮಿತ್ರಕರ್ಶನಃ |
ಉಪಹಸ್ತಾವಹಸ್ತಾಭ್ಯಾಂ ತೇಷಾಂ ಗಾತ್ರಾಣ್ಯಕೃಂತತ ॥41॥
ಶತ್ರುಕರ್ಶನನಾದ ಇರಾವಂತನು ಸಮೀಪಕ್ಕೆ ಬಂದ ಅವರ ಶರೀರಗಳನ್ನು ಮುಂದಿನ ಹಸ್ತ ಮತ್ತು ಹಿಂದಿನ ಹಸ್ತಗಳ (ಊಟ್ಟಛ್ನಿ ಇಾ ಆ್ಚ್ಣ) ಖಡ್ಗ ಪ್ರಹಾರದಿಂದ ಕತ್ತರಿಸಿದನು.
ಆಯುಧಾನಿ ಚ ಸರ್ವೇಷಾಂ ಬಾಹೂನಪಿ ಚ ಭೂಷಿತಾನ್ |
ಅಪತಂತ ನಿಕೃತ್ತಾಂಗಾ ಗತಾ ಭೂಮಿಂ ಗತಾಸವಃ ॥42॥
ಅವರೆಲ್ಲರ ಆಯುಧಗಳನ್ನು ಮತ್ತು ಅಲಂಕೃತವಾದ ಬಾಹುಗಳನ್ನು ಕತ್ತರಿಸಿದನು. ಅವರು ದೇಹವು ಕತ್ತರಿಸಲ್ಪಟ್ಟು ಪ್ರಾಣಗಳನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದರು.
ವೃಷಕಸ್ತು ಮಹಾರಾಜ ಬಹುಧಾ ಪರಿವಿಕ್ಷತಃ |
ಅಮುಚ್ಯತ ಮಹಾರೌದ್ರಾತ್ ತಸ್ಮಾದ್ ವೀರಾವಕರ್ತನಾತ್ ॥43॥
ಎಲೈ ಮಹಾರಾಜನೇ, ವೃಷಕನೊಬ್ಬನು ಮಾತ್ರ ಬಹಳ ಗಾಯಗೊಂಡರೂ ಸಹ ಮಹಾಭಯಂಕರವಾದ ಆ ವೀರರ ಬಲಿಕರ್ಮದಿಂದ ಮುಕ್ತನಾದನು.
ತಾನ್ ಸರ್ವಾನ್ ಪತಿತಾನ್ ದೃಷ್ಟ್ವಾ ಭೀತೋ ದುರ್ಯೋಧನಸ್ತತಃ |
ಅಭ್ಯಭಾಷತ ಸಂಕ್ರುದ್ಧೋ ರಾಕ್ಷಸಂ ಘೋರದರ್ಶನಮ್ ॥44॥
ಆರ್ಶ್ಯಶೃಂಗಿಂ ಮಹೇಷ್ವಾಸಂ ಮಾಯಾವಿನಮರಿಂದಮಮ್ |
ವೈರಿಣಂ ಭೀಮಸೇನಸ್ಯ ಪೂರ್ವಂ ಬಕವಧೇನ ವೈ ॥45॥
ಅವರೆಲ್ಲರೂ ಹತರಾಗಿ ಬಿದ್ದುದನ್ನು ನೋಡಿದ ದುರ್ಯೋಧನನು ಭೀತನಾಗಿ ಬಹಳ ಕೋಪಗೊಂಡು ಘೋರದರ್ಶನನಾದ ಮಹಾಧನುರ್ಧಾರಿಯಾದ ಮಾಯಾವಿಯೂ ಮತ್ತು ಅರಿಂದಮನೂ ಆದ, ಹಿಂದೆ ಬಕನನ್ನು ವಧೆ ಮಾಡಿದುದರಿಂದ ಭೀಮಸೇನನ ಪೂರ್ವಶತ್ರುವಾದ ಅಲಂಬುಸನನ್ನು ಕುರಿತು ಮಾತನಾಡಿದನು.
ಪಶ್ಯ ವೀರ ಯಥಾ ಹ್ಯೇಷ ಫಲ್ಗುನಸ್ಯ ಸುತೋ ಬಲೀ |
ಮಾಯಾವೀ ವಿಪ್ರಿಯಂ ಘೋರಮಕಾರ್ಷೀನ್ಮೇ ಬಲಕ್ಷಯಮ್ ॥46॥
ಎಲೈ ವೀರನೇ, ಮಾಯಾವಿಯಾದ ಅರ್ಜುನನ ಬಲಿಷ್ಠನಾದ ಈ ಪುತ್ರನು ನನ್ನ ಸೈನ್ಯದ ಕ್ಷಯವನ್ನು ಮಾಡಿ, ನನಗೆ ಹೇಗೆ ಘೋರವಾದ ಅಪ್ರಿಯವನ್ನು ಮಾಡುತ್ತಿದ್ದಾನೆಂಬುದನ್ನು ನೋಡು.
ತ್ವಂ ಚ ಕಾಮಗಮಸ್ತಾತ ಮಾಯಾಸ್ತ್ರೇ ಚ ವಿಶಾರದಃ |
ಕೃತವೈರಶ್ಚ ಪಾರ್ಥೇನ ತಸ್ಮಾದೇನಂ ರಣೇ ಜಹಿ ॥47॥
ಎಲೈ ಪ್ರೀತಿಪಾತ್ರನೇ, ನೀನೂ ಸಹ ಕಾಮಗಮನವುಳ್ಳವನು. ಮಾಯಾ ಯುದ್ಧದಲ್ಲಿ ವಿಶಾರದನಾದವನು. ಅರ್ಜುನನ ಜೊತೆಯಲ್ಲಿ ವೈರವನ್ನು ಮಾಡಿದವನು. ಆದ್ದರಿಂದ ಯುದ್ಧದಲ್ಲಿ ಈ ಇರಾವಂತನನ್ನು ಕೊಲ್ಲು ಎಂದು ಹೇಳಿದನು.
ಬಾಢಮಿತ್ಯೇವಮುಕತ್ವಾ ತು ರಾಕ್ಷಸೋ ಘೋರದರ್ಶನಃ |
ಪ್ರಯಯೌ ಸಿಂಹನಾದೇನ ಯತ್ರಾರ್ಜುನಸುತೋ ಯುವಾ ॥48॥
ಸ್ವಾರೂಢೈರ್ಯುದ್ಧಕುಶಲೈರ್ವಿಮಲಪ್ರಾಸಯೋಧಿಭಿಃ |
ವೀರೈಃ ಪ್ರಹಾರಿಭಿರ್ಯುಕ್ತಃ ಸ್ವೈರನೀಕೈಃ ಸಮಾವೃತಃ |
ನಿಹಂತುಕಾಮಃ ಸಮರೇ ಇರಾವಂತಂ ಮಹಾಬಲಮ್ ॥49॥
ಘೋರರೂಪವನ್ನು ಹೊಂದಿದ ಆ ರಾಕ್ಷಸನು ಹಾಗೆಯೇ ಆಗಲಿ ಎಂದು ಹೇಳಿ, ಸಿಂಹನಾದವನ್ನು ಮಾಡುತ್ತಾ, ಅಶ್ವಾದಿಗಳನ್ನು ಏರಿದ ಯುದ್ಧಕುಶಲರಾದ ನಿರ್ಮಲವಾದ ಪ್ರಾಸಗಳಿಂದ ಯುದ್ಧವನ್ನು ಮಾಡುವ ಪ್ರಹಾರಶೀಲರಾದ ವೀರರಿಂದ ಕೂಡಿದ ತನ್ನ ಸೈನ್ಯದಿಂದ ಸಮಾವೃತನಾಗಿ ಮಹಾಬಲನಾದ ಇರಾವಂತನನ್ನು ಯುದ್ಧದಲ್ಲಿ ಕೊಲ್ಲಲು ಬಯಸಿ ಅವನ ಕಡೆಗೆ ಸಾಗಿದನು.
ಇರಾವಾನಪಿ ಸಂಕ್ರುದ್ಧಸ್ತ್ವರಮಾಣಃ ಪರಾಕ್ರಮೀ |
ಹಂತುಕಾಮಮಮಿತ್ರಘ್ನೋ ರಾಕ್ಷಸಂ ಪ್ರತ್ಯವಾರಯತ್ ॥50॥
ಪರಾಕ್ರಮಶಾಲಿಯೂ, ಶತ್ರುಸೂದನನೂ ಆದ ಇರಾವಂತನೂ ಸಹ ಬಹಳ ಕೋಪಗೊಂಡು ತನ್ನನ್ನು ಕೊಲ್ಲಲು ಬಯಸಿದ ಅಲಂಬುಸ ರಾಕ್ಷಸನನ್ನು ಶೀಘ್ರವಾಗಿ ತಡೆದನು.
ತಮಾಪತಂತಂ ಸಂಪ್ರೇಕ್ಷ್ಯ ರಾಕ್ಷಸಃ ಸುಮಹಾಬಲಃ |
ತ್ವರಮಾಣಸ್ತತೋ ಮಾಯಾಂ ಪ್ರಯೋಕ್ತುಮುಪಚಕ್ರಮೇ ॥51॥
ಅತ್ಯಂತ ಬಲಶಾಲಿಯಾದ ಇರಾವಂತನು ರಾಕ್ಷಸನು ತನ್ನ ಮೇಲೆ ಎರಗುತ್ತಿರುವುದನ್ನು ನೋಡಿ, ಶೀಘ್ರವಾಗಿ ಮಾಯಾಯುದ್ಧವನ್ನು ಮಾಡಲು ಪ್ರಾರಂಭಿಸಿದನು.
ತೇನ ಮಾಯಾಮಯಾಃ ಕ್ಲೃಪ್ತಾ ಹಯಾಸ್ತಾವಂತ ಏವ ಹಿ |

ಸ್ವಾರೂಢಾ ರಾಕ್ಷಸೈರ್ಘೋರೈಃ ಶೂಲಪಟ್ಟಿಶಪಾಣಿಭಿಃ ॥52॥
ಅವನು ಶೂಲ-ಪಟ್ಟಿಶಗಳನ್ನು ಹಿಡಿದ, ಘೋರವಾದ ರಾಕ್ಷಸರಿಂದ ಏರಲ್ಪಟ್ಟ, ಅಷ್ಟೇ ಮಾಯಾಮಯವಾದ ಅಶ್ವಗಳನ್ನು ಸೃಷ್ಟಿಸಿದನು.
ತೇ ಸಂರಬ್ಧಾಃ ಸಮಾಗಮ್ಯ ದ್ವಿಸಾಹಸ್ರಾಃ ಪ್ರಹಾರಿಣಃ |
ಅಚಿರಾದ್ ಗಮಯಾಮಾಸುಃ ಪ್ರೇತಲೋಕಂ ಪರಸ್ಪರಮ್ ॥53॥
ಆ ಎರಡು ಸಹಸ್ರ ಪ್ರಹಾರಶೀಲರಾದ ಯೋಧರು ಕ್ರೋಧಗೊಂಡು ಸಮಾರೋಪವನ್ನು ಹೊಂದಿ ಸ್ವಲ್ಪಕಾಲದಲ್ಲಿಯೇ ಪರಸ್ಪರವಾಗಿ ಒಬ್ಬರನ್ನೊಬ್ಬರು ಯಮಲೋಕಕ್ಕೆ ಕಳುಹಿಸಿದರು.
ತಸ್ಮಿಂಸ್ತು ನಿಹತೇ ಸೈನ್ಯೇ ತಾವುಭೌ ಯುದ್ಧದುರ್ಮದೌ |
ಸಂಗ್ರಾಮೇ ವ್ಯವತಿಷ್ಠೇತಾಂ ಯಥಾ ವೈ ವೃತ್ರವಾಸವೌ ॥54॥
ಆ ಸೈನ್ಯಗಳು ಹತವಾದ ಮೇಲೆ ಯುದ್ಧದುರ್ಮದರಾದ ಇರಾವಂತ ಮತ್ತು ಅಲಂಬುಸರಿಬ್ಬರೂ ವೃತ್ರ-ವಾಸವರಂತೆ ಯುದ್ಧದಲ್ಲಿ ನಿಂತರು.
ಆದ್ರವಂತಮಭಿಪ್ರೇಕ್ಷ್ಯ ರಾಕ್ಷಸಂ ಯುದ್ಧದುರ್ಮದಮ್ |
ಇರಾವಾನ್ ಕ್ರೋಧಸಂರಬ್ಧಃ ಪ್ರತ್ಯಧಾವನ್ಮಹಾಬಲಃ ॥55॥
ತನ್ನ ಕಡೆಗೆ ಓಡಿ ಬರುತ್ತಿದ್ದ ಯುದ್ಧದುರ್ಮದರಾದ ರಾಕ್ಷಸರನ್ನು ನೋಡಿ ಮಹಾಬಲನಾದ ಇರಾವಂತನು ಕ್ರೋಧಪೂರಿತನಾಗಿ ತಾನೂ ಅವನ ಕಡೆಗೆ ಓಡಿದನು.
ಸಮಭ್ಯಾಶಗತಸ್ಯಾಜೌ ತಸ್ಯ ಖಡ್ಗೇನ ದುರ್ಮತೇಃ |
ಚಿಚ್ಛೇದ ಕಾರ್ಮುಕಂ ದೀಪ್ತಂ ಶರಾವಾಪಂ ಚ ಪಂಚಕಮ್ ॥56॥
ಆ ದುರ್ಮತಿಯು ಸಮೀಪಕ್ಕೆ ಬರುತ್ತಿರಲು ಇರಾವಂತನು ತನ್ನ ಖಡ್ಗದಿಂದ ಪ್ರಕಾಶಮಾನವಾದ ಅವನ ಧನುಸ್ಸನ್ನು ಮತ್ತು ಐದು ಭತ್ತಳಿಕೆಗಳನ್ನೂ ಕತ್ತರಿಸಿದನು.
ಸ ನಿಕೃತ್ತಂ ಧನುರ್ದೃಷ್ಟ್ವಾ ಖಂ ಜವೇನ ಸಮಾವಿಶತ್ |
ಇರಾವಂತಮಭಿಕ್ರುದ್ಧಂ ಮೋಹಯನ್ನಿವ ಮಾಯಯಾ ॥57॥
ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಅದನ್ನು ನೋಡಿದ ಅಲಂಬುಸನು ಕ್ರೋಧಗೊಂಡ ಇರಾವಂತನನ್ನು ತನ್ನ ಮಾಯೆಯಿಂದ ಮರುಳುಗೊಳಿಸುತ್ತಾ ಶೀಘ್ರವಾಗಿ ಆಕಾಶಕ್ಕೆ ಹಾರಿದನು.
ತತೋಽಂತರಿಕ್ಷಮುತ್ಪತ್ಯ ಇರಾವಾನಪಿ ರಾಕ್ಷಸಮ್ |
ವಿಮೋಹಯಿತ್ವಾ ಮಾಯಾಭಿಸ್ತಸ್ಯ ಗಾತ್ರಾಣಿ ಸಾಯಕೈಃ |
ಚಿಚ್ಛೇದ ಸರ್ವಮರ್ಮಜ್ಞಃ ಕಾಮರೂಪೋ ದುರಾಸದಃ ॥58॥
ಆಗ ಇರಾವಂತನೂ ಸಹ ಅಂತರಿಕ್ಷಕ್ಕೆ ಹಾರಿ ತನ್ನ ಮಾಯೆಗಳಿಂದ ಅಲಂಬುಸನನ್ನು ಮರುಳುಗೊಳಿಸುತ್ತಾ ಕಾಮರೂಪವನ್ನೂ ಮತ್ತು ಹತ್ತಿರ ಸುಳಿಯಲು ಅಸಾಧ್ಯನಾದವನೂ, ಎಲ್ಲ ಮರ್ಮಗಳನ್ನು ತಿಳಿದವನೂ ಆದ ಅವನು ಅಲಂಬುಸನ ಶರೀರವನ್ನು ಬಾಣಗಳಿಂದ ಕತ್ತರಿಸಿದನು.
ತಥಾ ಸ ರಾಕ್ಷಸಶ್ರೇಷ್ಠಃ ಶರೈಃ ಕೃತ್ತಃ ಪುನಃ ಪುನಃ |
ಸಂಬಭೂವ ಮಹಾರಾಜ ಸಮವಾಪ ಚ ಯೌವನಮ್ ॥59॥
ಎಲೈ ಮಹಾರಾಜನೇ, ಹಾಗೆ ಪುನಃ ಪುನಃ ಕತ್ತರಿಸಲ್ಪಡುತ್ತಿರಲು ಆ ರಾಕ್ಷಸಶ್ರೇಷ್ಠನು ಪುನಃ ಪುನಃ ಶರೀರವನ್ನು ಧರಿಸಿ ಯೌವನಭರಿತನಾದನು.
ಮಾಯಾ ಹಿ ಸಹಜಾ ತೇಷಾಂ ವಯೋ ರೂಪಂ ಚ ಕಾಮಜಮ್ |
ಏವಂ ತದ್ರಾಕ್ಷಸಸ್ಯಾಂಗಂ ಛಿನ್ನಂ ಛಿನ್ನಂ ವ್ಯರೋಹತ ॥60॥
ಅವರಿಗೆ ಇಂತಹ ಮಾಯೆಗಳು ಸಹಜವಾದವು. ಮತ್ತು ಬಯಸಿದಂತೆ ವಯಸ್ಸು ಮತ್ತು ರೂಪವುಂಟಾಗುತ್ತದೆ. ಆ ಕಾರಣದಿಂದ ಆ ರಾಕ್ಷಸನ ಶರೀರವು ಕತ್ತರಿಸಲ್ಪಟ್ಟರೂ ಪುನಃ ಪುನಃ ಬೆಳೆಯಿತು.
ಇರಾವಾನಪಿ ಸಂಕ್ರುದ್ಧೋ ರಾಕ್ಷಸಂ ತಂ ಮಹಾಬಲಮ್ |
ಪರಶ್ವಧೇನ ತೀಕ್ಷ್ಣೇನ ಚಿಚ್ಛೇದ ಚ ಪುನಃ ಪುನಃ ॥61॥
ಬಹಳ ಕೋಪಗೊಂಡ ಇರಾವಂತನೂ ಕೂಡ ಮಹಾಬಲನಾದ ಆ ರಾಕ್ಷಸನನ್ನು ಹರಿತವಾದ ತನ್ನ ಕೊಡಲಿಯಿಂದ ಪುನಃ ಪುನಃ ಕತ್ತರಿಸಿದನು.
ಸ ತೇನ ಬಲಿನಾ ವೀರಶ್ಛಿದ್ಯಮಾನ ಇವ ದ್ರುಮಃ |
ರಾಕ್ಷಸೋ ವ್ಯನದದ್ ಘೋರಂ ಸ ಶಬ್ದಸ್ತುಮುಲೋಽಭವತ್ ॥62॥
ಬಲಿಷ್ಠನಾದ ಇರಾವಂತನಿಂದ ಹಾಗೆ ಕತ್ತರಿಸಲ್ಪಡುವ ವೀರನಾದ ರಾಕ್ಷಸನು ಕತ್ತರಿಸಿದ ವೃಕ್ಷದಂತೆ ಪುನಃ ಬೆಳೆದು ಘೋರವಾದ ನಾದವನ್ನು ಮಾಡಿದನು. ಆ ಶಬ್ದವು ತೀವ್ರವಾಗಿದ್ದಿತು.
ಪರಶ್ವಧಕ್ಷತಂ ರಕ್ಷಃ ಸುಸ್ರಾವ ರುಧಿರಂ ಬಹು |
ತತಶ್ಚುಕ್ರೋಧ ಬಲವಾಂಶ್ಚಕ್ರೇ ವೇಗಂ ಚ ಸಂಯುಗೇ ॥63॥
ಕೊಡಲಿಯಿಂದ ಕಡಿಯಲ್ಪಟ್ಟ ಆ ರಾಕ್ಷಸನು ಬಹಳ ರಕ್ತವನ್ನು ಸುರಿಸಿದನು. ಬಲಿಷ್ಠನಾದ ಅವನು ಅದರಿಂದ ಕೋಪಗೊಂಡು ಯುದ್ಧದಲ್ಲಿ ತನ್ನ ವೇಗವನ್ನು ಹೆಚ್ಚಿಸಿದನು.
ಆರ್ಶ್ಯಶೃಂಗಿಸ್ತತೋ ದೃಷ್ಟ್ವಾ ಸಮರೇ ಶತ್ರುಮೂರ್ಜಿತಮ್ |

ಕೃತ್ವಾ ಘೋರಂ ಮಹದ್ರೂಪಂ ಗ್ರಹೀತುಮುಪಚಕ್ರಮೇ |
ಸಂಗ್ರಾಮಶಿರಸೋ ಮಧ್ಯೇ ಸರ್ವೇಷಾಂ ತತ್ರ ಪಶ್ಯತಾಮ್ ॥64॥
ಅಲಂಬುಸನು ಯುದ್ಧದಲ್ಲಿ ಶತ್ರುವು ಬಲೋನ್ನದ್ಧನಾಗಿರುವುದನ್ನು ನೋಡಿ ಘೋರವಾದ ರೂಪವನ್ನು ಧರಿಸಿ, ಘೋರವಾದ ಯುದ್ಧದ ಮಧ್ಯದಲ್ಲಿ ಎಲ್ಲರೂ ನೋಡುತ್ತಿರುವಂತೆ ಅವನನ್ನು ಹಿಡಿಯಲು ಉಪಕ್ರಮಿಸಿದನು.
ತಾಂ ದೃಷ್ಟ್ವಾ ತಾದೃಶೀಂ ಮಾಯಾಂ ರಾಕ್ಷಸಸ್ಯ ಮಹಾತ್ಮನಃ |
ಇರಾವಾನಪಿ ಸಂಕ್ರುದ್ಧೋ ಮಾಯಾಂ ಸ್ರಷ್ಟುಂ ಪ್ರಚಕ್ರಮೇ ॥65॥
ಮಹಾಪ್ರಯತ್ನಶೀಲನಾದ ರಾಕ್ಷಸನ ಅಂತಹ ಮಾಯೆಯನ್ನು ನೋಡಿ ಕೋಪಗೊಂಡ ಇರಾವಂತನೂ ಸಹ ತಾನೂ ಮಾಯಾಸೃಷ್ಟಿಯನ್ನು ಮಾಡಲು ಪ್ರಾರಂಭಿಸಿದನು.
ತಸ್ಯ ಕ್ರೋಧಾಭಿಭೂತಸ್ಯ ಸಂಯುಗೇಷ್ವನಿವರ್ತಿನಃ |
ಯೋಽನ್ವಯೋ ಮಾತೃಕಸ್ತಸ್ಯ ಸ ಏನಮಭಿಪೇದಿವಾನ್ ॥66॥
ಸ ನಾಗೈರ್ಬಹುಶೋ ರಾಜನ್ ಸರ್ವತಃ ಸಂವೃತೋ ರಣೇ |
ದಧಾರ ಸುಮಹದ್ರೂಪಮನಂತ ಇವ ಭೋಗವಾನ್ |
ತತೋ ಬಹುವಿಧೈರ್ನಾಗೈಶ್ಛಾದಯಾಮಾಸ ರಾಕ್ಷಸಮ್ ॥67॥
ಯುದ್ಧದಿಂದ ಹಿಮ್ಮೆಟ್ಟದಿರುವ ಕ್ರೋಧಾಭಿಭೂತನಾದ ಅವನ ತಾಯಿಯ ವಂಶವೆಲ್ಲವೂ ಅವನನ್ನು ಬಂದು ಸೇರಿತು. ಎಲೈ ರಾಜನೇ, ಅವನು ರಣರಂಗದಲ್ಲಿ ಅನೇಕ ಸರ್ಪಗಳಿಂದ ಎಲ್ಲ ಕಡೆಯಲ್ಲಿಯೂ ಸಂವೃತನಾಗಿ ಅನಂತನಂತೆ ದೊಡ್ಡ ಶರೀರವನ್ನು ಧರಿಸಿದ ಮಹಾರೂಪವನ್ನು ಧರಿಸಿದನು. ಅನಂತರ ಅನೇಕ ವಿಧವಾದ ಸರ್ಪಗಳಿಂದ ರಾಕ್ಷಸನನ್ನು ಮುಚ್ಚಿಹಾಕಿದನು.
ಛಾದ್ಯಮಾನಸ್ತು ನಾಗೈಃ ಸ ಧ್ಯಾತ್ವಾ ರಾಕ್ಷಸಪುಂಗವಃ |
ಸೌಪರ್ಣಂ ರೂಪಮಾಸ್ಥಾಯ ಭಕ್ಷಯಾಮಾಸ ಪನ್ನಗಾನ್ ॥68॥
ಅಲಂಬುಸನು ಹೀಗೆ ಸರ್ಪಗಳಿಂದ ಮುಚ್ಚಲ್ಪಡುತ್ತಿರಲು ರಾಕ್ಷಸಶ್ರೇಷ್ಠನಾದ ಅವನು ಗರುಡನ ರೂಪವನ್ನು ಧರಿಸಿ ಆ ಸರ್ಪಗಳನ್ನು ಭಕ್ಷಿಸಿದನು.
ಮಾಯಯಾ ಭಕ್ಷಿತೇ ತಸ್ಮಿನ್ನನ್ವಯೇ ತಸ್ಯ ಮಾತೃಕೇ |
ವಿಮೋಹಿತಮಿರಾವಂತಮಸಿನಾ ರಾಕ್ಷಸೋಽವಧೀತ್ ॥69॥
ತನ್ನ ತಾಯಿಯ ವಂಶಕ್ಕೆ ಸೇರಿದ ಸರ್ಪಗಳು ಅಲಂಬುಸನಿಂದ ಭಕ್ಷಿಸಲ್ಪಡಲು ಕರ್ತವ್ಯಪ್ರಜ್ಞೆಯನ್ನು ಕಳೆದುಕೊಂಡ ಇರಾವಂತನ ಕಡೆಗೆ ಧಾವಿಸಿ ರಾಕ್ಷಸನು ಖಡ್ಗದಿಂದ ಅವನನ್ನು ಕತ್ತರಿಸಿದನು.
ಸಕುಂಡಲಂ ಸಮುಕುಟಂ ಪದ್ಮೇಂದುಸದೃಶಪ್ರಭಮ್ |
ಇರಾವತಃ ಶಿರೋ ರಕ್ಷಃ ಪಾತಯಾಮಾಸ ಭೂತಳೇ ॥70॥
ಕಿರೀಟ-ಕುಂಡಲಗಳಿಂದ ಸಹಿತವಾದ, ಪದ್ಮದ ಮತ್ತು ಚಂದ್ರನ ಕಾಂತಿಯನ್ನು ಹೊಂದಿದ ಇರಾವಂತನ ಶಿರಸ್ಸನ್ನು ರಾಕ್ಷಸನು ಭೂತಳದಲ್ಲಿ ಕೆಡವಿದನು.
ತಸ್ಮಿಂಸ್ತು ನಿಹತೇ ವೀರೇ ರಾಕ್ಷಸೇನಾರ್ಜುನಾತ್ಮಜೇ |
ವಿಶೋಕಾಃ ಸಮಪದ್ಯಂತ ಧಾರ್ತರಾಷ್ಟ್ರಾಃ ಸರಾಜಕಾಃ ॥71॥
ಅರ್ಜುನನ ಪುತ್ರನಾದ ಆ ವೀರನು ಹಾಗೆ ಹತನಾಗುತ್ತಿರಲು ಧೃತರಾಷ್ಟ್ರ ಪುತ್ರರೂ ಮತ್ತು ಉಳಿದ ರಾಜರೂ ಸಮಾಧಾನಗೊಂಡರು.
ತಸ್ಮಿನ್ ಮಹತಿ ಸಂಗ್ರಾಮೇ ತಾದೃಶೇ ಭೈರವೇ ಪುನಃ |
ಮಹಾನ್ ವ್ಯತಿಕರೋ ಘೋರಃ ಸೇನಯೋಃ ಸಮಪದ್ಯತ ॥72॥
ಆ ದೊಡ್ಡ ಭಯಂಕರವಾದ ಸಂಗ್ರಾಮದಲ್ಲಿ ಪುನಃ ಎರಡು ಸೇನೆಗಳಿಗೆ ಘೋರವಾದ ದೊಡ್ಡ ಮಿಶ್ರಣವು ಉಂಟಾಯಿತು.
ಹಯಾ ಗಜಾಃ ಪದಾತಾಶ್ಚ ವಿಮಿಶ್ರಾ ದಂತಿಭಿರ್ಹತಾಃ |
ರಥಾಶ್ಚ ದಂತಿನಶ್ಚೈವ ಪತ್ತಿಭಿಸ್ತತ್ರ ಸೂದಿತಾಃ ॥73॥
ಅಶ್ವಗಳು, ಗಜಗಳು ಮತ್ತು ಪದಾತಿಗಳು ಮಿಶ್ರಣಗೊಂಡು ಗಜಗಳಿಂದ ಹತವಾದರು. ರಥರೂ ಮತ್ತು ಗಜಗಳೂ ಪದಾತಿಗಳಿಂದಲೂ ಅಲ್ಲಿ ಹತರಾದರು.
ತಥಾ ಪತ್ತಿರಥೌಘಾಶ್ಚ ಹಯಾಶ್ಚ ಬಹವೋ ರಣೇ |
ರಥಿಭಿರ್ನಿಹತಾ ರಾಜಂಸ್ತವ ತೇಷಾಂ ಚ ಸಂಕುಲೇ ॥74॥
ಎಲೈ ರಾಜನೇ, ನಿನಗೂ ಮತ್ತು ಪರರಿಗೂ ಸಂಕುಲ ಯುದ್ಧವು ಜರುಗಿದಾಗ ಹಾಗೆಯೇ ರಥರಿಂದ ಪದಾತಿಗಳೂ, ರಥರೂ ಮತ್ತು ಅನೇಕ ಅಶ್ವಗಳೂ ಯುದ್ಧದಲ್ಲಿ ಹತವಾದವು.
ಅಜಾನನ್ನರ್ಜುನಶ್ಚಾಪಿ ನಿಹತಂ ಪುತ್ರಮೌರಸಮ್ |
ಜಘಾನ ಸಮರೇ ಶೂರಾನ್ ರಾಜ್ಞಸ್ತಾನ್ ಭೀಷ್ಮರಕ್ಷಿಣಃ ॥75॥
ಅರ್ಜುನನು ತನ್ನ ಔರಸಪುತ್ರನು ಹತನಾಗಿರುವುದನ್ನು ತಿಳಿಯದೆ ಭೀಷ್ಮರ ರಕ್ಷಕರಾಗಿದ್ದ ಶೂರರಾದ ಆ ರಾಜರನ್ನು ಯುದ್ಧದಲ್ಲಿ ಕೊಂದನು.
ತಥೈವ ತಾವಕಾ ರಾಜನ್ ಸೃಂಜಯಾಶ್ಚ ಮಹಾಬಲಾಃ |
ಜುಹ್ವತಃ ಸಮರೇ ಪ್ರಾಣಾನ್ ನಿಜಘ್ನುರಿತರೇತರಮ್ ॥76॥
ಎಲೈ ರಾಜನೇ, ಹಾಗೆಯೇ ನಿನ್ನವರು ಮತ್ತು ಮಹಾಬಲರಾದ ಸೃಂಜಯರೂ ಸಹ ಯುದ್ಧದಲ್ಲಿ ತಮ್ಮ ಪ್ರಾಣಗಳನ್ನು ಹೋಮಿಸುವ ಒಬ್ಬರನ್ನೊಬ್ಬರು ಪರಸ್ಪರವಾಗಿ ಕೊಂದರು.

ಮುಕ್ತಕೇಶಾ ವಿಕವಚಾ ವಿರಥಾಶ್ಛಿನ್ನಕಾರ್ಮುಕಾಃ |
ಬಾಹುಭಿಃ ಸಮಯುಧ್ಯಂತ ಸಮವೇತಾಃ ಪರಸ್ಪರಮ್ ||77||
ತಲೆಕೂದಲುಗಳನ್ನು ಕೆದರಿಕೊಂಡು, ಕವಚವಿಲ್ಲದೆ, ರಥಹೀನರಾಗಿ, ಧನುಸ್ಸುಗಳು ಕತ್ತರಿಸಲ್ಪಟ್ಟು, ಒಬ್ಬರನ್ನೊಬ್ಬರು ಸಂಧಿಸಿ ಬಾಹುಯುದ್ಧವನ್ನು ಮಾಡಿದರು.
ತಥಾ ಮರ್ಮಾತಿಗೈರ್ಭೀಷ್ಮೋ ನಿಜಘಾನ ಮಹಾರಥಾನ್ |
ಕಂಪಯನ್ ಸಮರೇ ಸೇನಾಂ ಪಾಂಡವಾನಾಂ ಮಹಾಬಲಃ ||78||
ಹಾಗೆಯೇ ಮಹಾಬಲರಾದ ಭೀಷ್ಮರು ಯುದ್ಧದಲ್ಲಿ ಪಾಂಡವರ ಸೈನ್ಯವನ್ನು ನಡುಗಿಸುತ್ತಾ ಮಹಾರಥರನ್ನು ಮರ್ಮಭೇದಕವಾದ ಬಾಣಗಳಿಂದ ಸಂಹರಿಸಿದರು.
ತೇನ ಯೌಧಿಷ್ಠಿರೇ ಸೈನ್ಯೇ ಬಹವೋ ಮಾನವಾ ಹತಾಃ |
ದಂತಿನಃ ಸಾದಿನಶ್ಚೈವ ರಥಿನೋಽಥ ಹಯಾಸ್ತಥಾ ||79||
ಅವರಿಂದ ಧರ್ಮರಾಜನ ಸೈನ್ಯದಲ್ಲಿ ಅನೇಕ ಯೋಧರು, ಗಜಗಳು, ಅಶ್ವಾರೋಹಿಗಳು ಮತ್ತು ರಥಿಕರು ಹತರಾದರು.
ತತ್ರ ಭಾರತ ಭೀಷ್ಮಸ್ಯ ರಣೇ ದೃಷ್ಟ್ವಾ ಪರಾಕ್ರಮಮ್ |
ಅತ್ಯದ್ಭುತಮಪಶ್ಯಾಮ ಶಕ್ರಸ್ಯೇವ ಪರಾಕ್ರಮಮ್ ||80||
ಎಲೈ ಭಾರತನೇ, ಆ ಯುದ್ಧದಲ್ಲಿ ಇಂದ್ರನ ಪರಾಕ್ರಮದಂತಿದ್ದ ಭೀಷ್ಮರ ಅತ್ಯದ್ಭುತ ಪರಾಕ್ರಮವನ್ನು ನಾವು ನೋಡಿದೆವು.
ತಥೈವ ಭೀಮಸೇನಸ್ಯ ಪಾರ್ಷತಸ್ಯ ಚ ಭಾರತ |
ರೌದ್ರಮಾಸೀತ್ ತದಾ ಯುದ್ಧಂ ಸಾತ್ವತಸ್ಯ ಚ ಧನ್ವಿನಃ ||81||
ಎಲೈ ಭಾರತನೇ, ಹಾಗೆಯೇ ಭೀಮಸೇನನಿಗೂ ಮತ್ತು ಧೃಷ್ಟದ್ಯುಮ್ನನಿಗೂ ಸಾತ್ವತನೂ, ಧನುರ್ಧಾರಿಯೂ ಆದ ಕೃತವರ್ಮನ ಜೊತೆಯಲ್ಲಿ ಘೋರವಾದ ಯುದ್ಧವು ನಡೆಯಿತು.
ದೃಷ್ಟ್ವಾ ದ್ರೋಣಸ್ಯ ವಿಕ್ರಾಂತಂ ಪಾಂಡವಾನ್ ಭಯಮಾವಿಶತ್ |
ಏಕ ಏವ ರಣೇ ಶಕ್ತೋ ಹಂತುಮಸ್ಮಾನ್ ಸಸೈನಿಕಾನ್ ||82||
ಕಿಂ ಪುನಃ ಪೃಥಿವೀಶೂರೈರ್ಯೋಧವ್ರಾತೈಃ ಸಮಾವೃತಃ |
ಇತ್ಯಬ್ರುವನ್ ಮಹಾರಾಜ ರಣೇ ದ್ರೋಣೇನ ಪೀಡಿತಾಃ ||83||
ಎಲೈ ಮಹಾರಾಜನೇ, ಹಾಗೆಯೇ ದ್ರೋಣರ ಪರಾಕ್ರಮವನ್ನು ನೋಡಿ ಪಾಂಡವರಿಗೆ ಭಯ ಉಂಟಾಯಿತು. ಸೈನಿಕರಿಂದ ಒಡಗೂಡಿದ ನಮ್ಮನ್ನು ಕೊಲ್ಲಲು ಅವರೊಬ್ಬರೇ ಸಮರ್ಥರಾಗಿದ್ದಾರೆ. ಇನ್ನು ಭೂಮಿಯಲ್ಲಿ ಶೂರರಾದ ಯೋಧರ ಸಮೂಹದಿಂದ ಅವರು ಸಮಾವೃತರಾಗಿರುವಾಗ ಹೇಳಬೇಕಾದುದೇನು! ಎಂದು ಯುದ್ಧದಲ್ಲಿ ದ್ರೋಣರ ಬಾಣಗಳಿಂದ ಪೀಡಿತರಾದ ಪಾಂಡವರು ಮಾತನಾಡಿಕೊಂಡರು.
ವರ್ತಮಾನೇ ತಥಾ ರೌದ್ರೇ ಸಂಗ್ರಾಮೇ ಭರತರ್ಷಭ |
ಉಭಯೋಃ ಸೇನಯೋಃ ಶೂರಾ ನಾಮೃಷ್ಯಂತ ಪರಸ್ಪರಮ್ ||84||
ಎಲೈ ಭರತಶ್ರೇಷ್ಠನೇ, ಭಯಂಕರವಾದ ಯುದ್ಧವು ಆ ರೀತಿಯಲ್ಲಿ ನಡೆಯುತ್ತಿರಲು ಎರಡೂ ಸೈನ್ಯಗಳ ಶೂರರು ಒಬ್ಬರನ್ನೊಬ್ಬರು ಸಹಿಸಲಿಲ್ಲ.
ಆವಿಷ್ಟಾ ಇವ ಯುಧ್ಯಂತೇ ರಕ್ಷೋಭೂತಾ ಮಹಾಬಲಾಃ |
ತಾವಕಾಃ ಪಾಂಡವೇಯಾಶ್ಚ ಸಂರಬ್ಧಾಸ್ತಾತ ಧನ್ವಿನಃ ||85||
ರಾಕ್ಷಸರಿಂದ ಅಥವಾ ಪಿಶಾಚಿಗಳಿಂದ ಆವಿಷ್ಟರಾದವರಂತೆ ಮಹಾಬಲರಾದ ನಿನ್ನವರು ಮತ್ತು ಪಾಂಡವರು ಧನುರ್ಧಾರಿಗಳಾಗಿ ಕ್ರೋಧಗೊಂಡು ಯುದ್ಧವನ್ನು ಮಾಡಿದರು.
ನ ಸ್ಮ ಪಶ್ಯಾಮಹೇ ಕಂಚಿದ್ ಯಃ ಪ್ರಾಣಾನ್ ಪರಿರಕ್ಷತಿ |
ಸಂಗ್ರಾಮೇ ದೈತ್ಯಸಂಕಾಶೇ ತಸ್ಮಿನ್ ಯೋದ್ಧಾ ನರಾಧಿಪ ||86||
ಎಲೈ ರಾಜನೇ, ದೈತ್ಯಾಕಾರದ ಆ ಯುದ್ಧದಲ್ಲಿ ಪ್ರಾಣಗಳನ್ನು ರಕ್ಷಿಸಿಕೊಳ್ಳಲು ಬಯಸುವ ಯಾವ ಯೋಧನನ್ನೂ ನಾವು ಕಾಣಲಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಡಶೀತಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಸ ಭೀಮಪುತ್ರಸ್ಯ ಜಘಾನ ಮಂತ್ರಿಣೋ
ಮಹಾಬಲಾಂಶ್ಚತುರೋಽನ್ಯಾಂಸ್ತಥೈವ |
ಹತಾವಶೇಷೇಷು ಚ ವಿದ್ರುವತ್ಸು
ಘಟೋತ್ಕಚೋಽಭ್ಯಾಹನದಾಶು ತಂ ನೃಪಮ್ ||88||
ದುರ್ಯೋಧನನು ಘಟೋತ್ಕಚನ ನಾಲ್ಕು ಮಂದಿ ಮಹಾಬಲಶಾಲಿಗಳಾದ ಸಹಾಯಕರನ್ನು ಕೊಂದನು. ಹಾಗೇ ಇತರರನ್ನೂ ಕೊಂದನು. ಅಳಿದುಳಿದ ಸೈನಿಕರು ಓಡಿಹೋದಾಗ ಘಟೋತ್ಕಚನು ಬೇಗನೆ ದುರ್ಯೋಧನನನ್ನು ಹೊಡೆದನು.
ಸ ಪೀಡ್ಯಮಾನೋ ಯುಧಿ ತೇನ ರಕ್ಷಸಾ
ಪ್ರವೇಶಯಾಮಾಸ ಶರಂ ಘಟೋತ್ಕಚೇ |

ದೃಢಾಹತಸ್ತೇನ ತದಾ ಬಲೀಯಸಾ
ಘಟೋತ್ಕಚಃ ಪ್ರವ್ಯಥಿತೇಂದ್ರಿಯೋ ಭೃಶಮ್ ।
ತಸ್ಥೌ ಕಥಂಚಿದ್ ಭುವಿ ಪಾತ್ಯಮಾನಃ
ಪುನಃ ಶರಾನಪ್ಯಸೃಜತ್ ಸುಯೋಧನೇ ॥89॥
ದುರ್ಯೋಧನನು, ಯುದ್ಧದಲ್ಲಿ ಘಟೋತ್ಕಚನಿಂದ ಪೀಡಿತನಾಗುತ್ತಿದ್ದಂತೆ, ಘಟೋತ್ಕಚನ ಮೈಯೊಳಗೆ ಬಾಣವನ್ನು ತೂರಿದ. ಬಲಿಷ್ಠನಾದ ದುರ್ಯೋಧನನಿಂದ ಬಲವಾಗಿ ಹೊಡೆಸಿಕೊಂಡ ಘಟೋತ್ಕಚನ ಇಂದ್ರಿಯಗಳೆಲ್ಲವೂ ಬಹಳ ಗಾಯಗೊಂಡವು. ನೆಲದಲ್ಲಿ ಕೆಡವಲ್ಪಡುತ್ತಲೇ ಅವನು ಹೇಗೋ ಸಾವರಿಸಿಕೊಂಡು ನಿಂತು, ಪುನಃ ದುರ್ಯೋಧನನ ಮೇಲೆ ಬಾಣಗಳನ್ನೆಸೆದನು.
ಚಿರಪ್ರಯುದ್ಧೌ ನೃಪರಾಕ್ಷಸಾಧಿಪೌ
ಪರಸ್ಪರಾಜೇಯತಮೌ ರಣಾಜಿರೇ ।
ದ್ರೋಣಾದಯೋ ವೀಕ್ಷ್ಯ ರಿರಕ್ಷಿಷಂತಃ
ಸುಯೋಧನಂ ಪ್ರಾಪುರಮಿತ್ರಸಾಹಾಃ ॥90॥
ದುರ್ಯೋಧನ-ಘಟೋತ್ಕಚರು ರಣರಂಗದಲ್ಲಿ ದೀರ್ಘಕಾಲ ಯುದ್ಧ ಮಾಡಿದರು. ಆದರೆ ಒಬ್ಬರಿಗೊಬ್ಬರು ಸೋಲಲಿಲ್ಲ. ಶತ್ರುಗಳನ್ನು ಸಮರ್ಥವಾಗಿ ಎದುರಿಸಬಲ್ಲ ದ್ರೋಣ ಮುಂತಾದವರು ನೋಡಿ ದುರ್ಯೋಧನನನ್ನು ರಕ್ಷಿಸಲು ಅವನ ಬಳಿಗೆ ಬಂದರು.
ಸದ್ರೋಣಶಲ್ಯೌ ಗುರುಪುತ್ರಗೌತಮೌ
ಭೂರಿಶ್ರವಃ ಕೃತವರ್ಮಾದಿಕಾಂಶ್ಚ ।
ವವರ್ಷ ಬಾಣೈರ್ಗಗನಂ ಸಮಾಶ್ರಿತೋ
ಘಟೋತ್ಕಚಃ ಸ್ಥೂಲತಮೈಃ ಸುವೇಗೈಃ ॥91॥
ದ್ರೋಣ, ಶಲ್ಯ, ಅಶ್ವತ್ಥಾಮ, ಕೃಪ, ಭೂರಿಶ್ರವ, ಕೃತವರ್ಮಾದಿಗಳ ಮೇಲೆ ಆಕಾಶದಲ್ಲಿ ನಿಂತಿದ್ದ ಘಟೋತ್ಕಚನು ಅತಿ ದೊಡ್ಡ ಗಾತ್ರದ,ಬಲು ವೇಗದ ಬಾಣಗಳ ಮಳೆಗರೆದನು.
ತಮೇಕಮಗ್ರ್ಯೈ ರಥಿಭಿಃ ಪರಿಷ್ಕೃತಂ
ನಿರೀಕ್ಷ್ಯ ಭೀಮೋಽಭ್ಯಗಮತ್ ಸಮಸ್ತಾನ್ ।
ದ್ರೋಣೋಽತ್ರ ಭೀಮಪ್ರಹಿತೈಃ ಶರೋತ್ತಮೈಃ
ಸುಪೀಡಿತಃ ಪ್ರಾಪ್ತಮೂರ್ಛಃ ಪಪಾತ ॥92॥
ಒಬ್ಬ ಘಟೋತ್ಕಚನು ಅನೇಕ ಶ್ರೇಷ್ಠ ರಥಿಕರಿಂದ ಸುತ್ತುವರಿಯಲ್ಪಟ್ಟುದನ್ನು ಕಂಡು ಭೀಮ ಎಲ್ಲರನ್ನೂ ಆಕ್ರಮಿಸಿದನು. ಆಗ ಭೀಮನು ಎಸೆದ ಉತ್ತಮ ಬಾಣಗಳಿಂದ ಬಹಳ ಪೀಡಿತರಾದ ದ್ರೋಣರು ಮೂರ್ಛೆ ಹೊಂದಿ ಬಿದ್ದರು.
ದ್ರೌಣಿಂ ಕೃಪಾದ್ಯಾನ್ ಸಸುಯೋಧನಾಂಶ್ಚ
ಚಕಾರ ಭೀಮೋ ವಿರಥಾನ್ ಕ್ಷಣೇನ ।
ನಿವಾರ್ಯಮಾಣಾಂಸ್ತು ವೃಕೋದರೇಣ
ಘಟೋತ್ಕಚಸ್ತಾನ್ ಪ್ರವವರ್ಷ ಸಾಯಕೈಃ ॥93॥
ಅಶ್ವತ್ಥಾಮ, ದುರ್ಯೋಧನ, ಕೃಪ ಮುಂತಾದವರನ್ನು ಭೀಮ ಕ್ಷಣದಲ್ಲಿ ವಿರಥರನ್ನಾಗಿ ಮಾಡಿದ. ಅವರನ್ನು ಭೀಮ ತಡೆಯುತ್ತಿದ್ದಂತೆ ಘಟೋತ್ಕಚ ಅವರ ಮೇಲೆ ಬಾಣಗಳ ಮಳೆಗರೆದ.
ತೇನಾಂಬರಸ್ಥೇನ ತರುಪ್ರಮಾಣೈಃ
ಅಭ್ಯರ್ದಿತಾ ಕುರವಃ ಸಾಯಕೌಘೈಃ ।
ಭೂಮೌ ಚ ಭೀಮೇನ ಶರೌಘಪೀಡಿತಾಃ
ಪೇತುರ್ನೇದುಃ ಪ್ರಾದ್ರವಂಶ್ಚಾತಿಭೀತಾಃ ॥94॥
ಕೌರವರು ಆಕಾಶದಲ್ಲಿ ನಿಂತ ಘಟೋತ್ಕಚನಿಂದ ಮರಗಳಷ್ಟು ಗಾತ್ರದ ಬಾಣ ಸಮೂಹಗಳಿಂದ ಪೀಡಿಸಲ್ಪಡುತ್ತಾ ನೆಲದಲ್ಲಿಯೂ ಭೀಮನ ಬಾಣ ಪ್ರವಾಹಗಳಿಂದ ಪೀಡಿತರಾಗಿ ಬಿದ್ದರು. ಕೂಗಿದರು, ಅತ್ಯಂತ ಭೀತರಾಗಿ ಪಲಾಯನ ಮಾಡಿದರು.
ಸರ್ವಾಂಶ್ಚ ತಾನ್ ಶಿಬಿರಂ ಪ್ರಾಪಯಿತ್ವಾ
ವಿನಾ ಭೀಷ್ಮಂ ಕೌರವಾನ್ ಭೀಮಸೇನಃ ।
ಘಟೋತ್ಕಚಶ್ಚಾನದತಾಂ ಮಹಾಸ್ವನೌ
ನಾದೇನ ಲೋಕಾನಭಿಪೂರಯಂತೌ ॥95॥
ಭೀಷ್ಮನನ್ನು ಹೊರತು ಆ ಎಲ್ಲ ಕೌರವರನ್ನೂ ಶಿಬಿರಕ್ಕೆ ಅಟ್ಟಿ ಭೀಮ ಘಟೋತ್ಕಚರು ಮಹಾಧ್ವನಿ ಮಾಡಿ ಗರ್ಜಿಸಿದರು. ಆ ಧ್ವನಿಯಿಂದ ಲೋಕಗಳನ್ನು ತುಂಬಿಸಿದರು.
ದುರ್ಯೋಧನೋಽಥ ಸ್ವಜನೈಃ ಸಮೇತಃ
ಪುನಃ ಪ್ರಾಯಾದ್ ರಣಭೂಮಿಂ ಸ ಭೀಷ್ಮಮ್ ।
ಜಯೋಪಾಯಂ ಭೈಮಸೇನೇರಪೃಚ್ಛತ್
ಸ್ವಸ್ಯೈವ ಸ ಪ್ರಾಹ ನ ತಂ ವ್ರಜೇತಿ ॥96॥
ಬಳಿಕ ದುರ್ಯೋಧನ ತಮ್ಮವರೊಂದಿಗೆ ಪುನಃ ರಣಭೂಮಿಗೆ ಹೋದ. ಭೀಷ್ಮರಲ್ಲಿ ಘಟೋತ್ಕಚನನ್ನು ತಾನು ಗೆಲ್ಲುವ ಉಪಾಯವನ್ನು ಕೇಳಿದ. ಭೀಷ್ಮರೆಂದರು `ನೀನು ಅವನ ಎದುರಿಗೆ ಹೋಗಬೇಡ'.

* * * * *
ಎಂಬತ್ತೇಳನೆಯ ಅಧ್ಯಾಯ
ಇರಾವಂತನು ಹತನಾದುದನ್ನು ನೋಡಿ ಘಟೋತ್ಕಚನ ಕ್ರೋಧ. ಭಯಂಕರನಾದ ಅವನ ಕಡೆಗೆ ದುರ್ಯೋಧನನ ಗಮನ.
ಧೃತರಾಷ್ಟ್ರಃ
ಇರಾವಂತಂ ತು ನಿಹತಂ ದೃಷ್ಟ್ವಾ ಪಾರ್ಥಾ ಮಹಾರಥಾಃ |
ಸಂಗ್ರಾಮೇ ಕಿಮಕುರ್ವಂತ ತನ್ಮಮಾಚಕ್ಷ್ವ ಸಂಜಯ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಇರಾವಂತನು ಹತನಾದುದನ್ನು ನೋಡಿ ಮಹಾರಥರಾದ ಪಾಂಡವರು ಸಂಗ್ರಾಮದಲ್ಲಿ ಏನು ಮಾಡಿದರು ಎಂದು ನನಗೆ ಹೇಳು.
ಸಂಜಯಃ
ಇರಾವಂತಂ ತು ನಿಹತಂ ಸಂಗ್ರಾಮೇ ವೀಕ್ಷ್ಯ ರಾಕ್ಷಸಃ |
ವ್ಯನದತ್ ಸುಮಹಾನಾದಂ ಭೈಮಸೇನಿರ್ಘಟೋತ್ಕಚಃ ॥2॥
ನದತಸ್ತಸ್ಯ ಶಬ್ದೇನ ಪೃಥಿವೀ ಸಾಗರಾಂಬರಾ |
ಸಪರ್ವತವನಾ ರಾಜಂಶ್ಚಚಾಲ ಸುಭೃಶಂ ತದಾ |
ಅಂತರಿಕ್ಷಂ ದಿಶಶ್ಚೈವ ಸರ್ವಾಶ್ಚ ಪ್ರದಿಶಸ್ತಥಾ ॥3॥
ಸಂಜಯ ಇರಾವಂತನು ಯುದ್ಧದಲ್ಲಿ ಹತನಾದುದನ್ನು ನೋಡಿ ಭೀಮಸೇನ ಪುತ್ರನಾದ ಘಟೋತ್ಕಚ ರಾಕ್ಷಸನು ಮಹಾನಾದವನ್ನು ಮಾಡಿದನು. ಎಲೈ ರಾಜನೇ, ಅವನ ಗರ್ಜನೆಯಿಂದ ಉಂಟಾದ ಶಬ್ದದಿಂದ ಪರ್ವತ, ವನಸಹಿತವಾದ ಸಮುದ್ರವಸನವಾದ ಭೂಮಿಯು ಬಹಳವಾಗಿ ನಡುಗಿತು. ಅಂತರಿಕ್ಷವೂ, ದಿಕ್ಕುಗಳೂ ಎಲ್ಲಾ ವಿದಿಕ್ಕುಗಳೂ ಸಹ (ನಡುಗಿದವು).
ತಂ ಶ್ರುತ್ವಾ ಸುಮಹಾನಾದಂ ತವ ಸೈನ್ಯಸ್ಯ ಭಾರತ |
ಊರುಸ್ತಂಭಃ ಸಮಭವದ್ ವೇಪಥುಃ ಸ್ವೇದ ಏವ ಚ ॥4॥
ಎಲೈ ಭಾರತನೇ, ಆ ಮಹಾನಾದವನ್ನು ಕೇಳಿದ ನಿನ್ನ ಸೈನ್ಯಕ್ಕೆ ತೊಡೆಗಳು ಸ್ತಂಭಿತವಾದವು. ದೇಹದಲ್ಲಿ ನಡುಕವು ಮತ್ತು ಬೆವರು ಉಂಟಾದವು.
ಸರ್ವ ಏವ ಚ ರಾಜೇಂದ್ರ ತಾವಕಾ ದೀನಚೇತಸಃ |
ಸರ್ಪವತ್ ಸಮವೇಷ್ಟಂತ ಸಿಂಹಭೀತಾ ಗಜಾ ಇವ ॥5॥
ಎಲೈ ರಾಜನೇ, ನಿನ್ನವರೆಲ್ಲರೂ ದೈನ್ಯದಿಂದ ಕೂಡಿದ ಮನಸ್ಸುಳ್ಳವರಾಗಿ ಸಿಂಹಕ್ಕೆ ಹೆದರಿದ ಗಜಗಳಂತೆ, ಸರ್ಪಗಳಂತೆ ಮುದುರಿಕೊಂಡರು.
ನಿನದನ್ ಸುಮಹಾನಾದಂ ನಿರ್ಘಾತಮಿವ ರಾಕ್ಷಸಃ |
ಜ್ವಲಿತಂ ಶೂಲಮುದ್ಯಮ್ಯ ರೂಪಂ ಕೃತ್ವಾ ವಿಭೀಷಣಮ್ ॥6॥
ನಾನಾಪ್ರಹರಣೈರ್ಘೋರೈರ್ವೃತೋ ರಾಕ್ಷಸಪುಂಗವೈಃ |
ಆಜಗಾಮ ಸುಸಂಕ್ರುದ್ಧಃ ಕಾಲಾಂತಕಯಮೋಪಮಃ ॥7॥
ರಾಕ್ಷಸನಾದ ಘಟೋತ್ಕಚನು ಸಿಡಿಲಿನಂತೆ ಮಹಾನಾದವನ್ನು ಮಾಡಿ ಭಯಂಕರವಾದ ರೂಪವನ್ನು ಧರಿಸಿ, ಜ್ವಲಿಸುವ ಶೂಲವನ್ನು ಎತ್ತಿ, ನಾನಾವಿಧವಾದ ಆಯುಧಗಳನ್ನು ಧರಿಸಿದ ಘೋರವಾದ ರಾಕ್ಷಸಶ್ರೇಷ್ಠರಿಂದ ಪರಿವೃತನಾಗಿ, ಬಹಳ ಕೋಪದಿಂದ ಕೂಡಿ ಕಾಲಾಂತಕ ಯಮನಂತೆ (ನಿನ್ನ ಸೈನ್ಯದ ಕಡೆಗೆ) ಬಂದನು.
ತಮಾಪತಂತಂ ಸಂಪ್ರೇಕ್ಷ್ಯ ಸಂಕ್ರುದ್ಧಂ ಭೀಮದರ್ಶನಮ್ |
ಸ್ವಬಲಂ ಚ ಭಯಾತ್ ತಸ್ಯ ಪ್ರಾಯಶೋ ವಿಮುಖೀಕೃತಮ್ ॥8॥
ತತೋ ದುರ್ಯೋಧನೋ ರಾಜಾ ಘಟೋತ್ಕಚಮುಪಾದ್ರವತ್ |
ಪ್ರಗೃಹ್ಯ ವಿಪುಲಂ ಚಾಪಂ ಸಿಂಹವದ್ ವಿನದನ್ ಮುಹುಃ ॥9॥
ಭಯಂಕರವಾದ ರೂಪವುಳ್ಳ ಅವನು ಕ್ರೋಧಗೊಂಡು ತನ್ನ ಸೈನ್ಯದ ಕಡೆಗೆ ಬರುತ್ತಿರುವುದನ್ನು ಮತ್ತು ತನ್ನ ಸೈನ್ಯವು ಪ್ರಾಯಶಃ ಯುದ್ಧ ವಿಮುಖವಾಗಿರುವುದನ್ನು ಗಮನಿಸಿದ ರಾಜನಾದ ದುರ್ಯೋಧನನು ದೊಡ್ಡ ಬಿಲ್ಲನ್ನು ಹಿಡಿದು ಸಿಂಹದಂತೆ ಪುನಃ ಪುನಃ ಗರ್ಜನೆಯನ್ನು ಮಾಡುತ್ತಾ ಘಟೋತ್ಕಚನ ಕಡೆಗೆ ಸಾಗಿದನು.
ಪೃಷ್ಠತೋಽನುಯಯೌ ಚೈನಂ ಸ್ರವದ್ಭಿಃ ಪರ್ವತೋಪಮೈಃ |
ಕುಂಜರೈರ್ದಶಸಾಹಸ್ರೈರ್ವಂಗಾನಾಮಧಿಪಃ ಸ್ವಯಮ್ ॥10॥
ಅವನ ಹಿಂದೆ ಮದೋದಕವನ್ನು ಸುರಿಸುವ ಪರ್ವತ ಸದೃಶವಾದ ಹತ್ತು ಸಹಸ್ರ ಆನೆಗಳಿಂದ ಕೂಡಿದ ವಂಗಾಧಿಪತಿಯು ಸ್ವತಃ ಅವನನ್ನು ಹಿಂಬಾಲಿಸಿದನು.
ತಮಾಪತಂತಂ ಸಂಪ್ರೇಕ್ಷ್ಯ ಗಜಾನೀಕೇನ ಸಂವೃತಮ್ |
ಪುತ್ರಂ ತವ ಮಹಾರಾಜ ಚುಕೋಪ ಸ ನಿಶಾಚರಃ ॥11॥
ಎಲೈ ಮಹಾರಾಜನೇ, ಗಜಸಮೂಹದ ಜೊತೆಯಲ್ಲಿ ತನ್ನ ಮೇಲೆ ಏರಿ ಬರುತ್ತಿದ್ದ ನಿನ್ನ ಪುತ್ರನನ್ನು ನೋಡಿ ನಿಶಾಚರನಾದ ಘಟೋತ್ಕಚನು ಕೋಪಗೊಂಡನು.
ತತಃ ಪ್ರವವೃತೇ ಯುದ್ಧಂ ತುಮುಲಂ ಲೋಮಹರ್ಷಣಮ್ |
ರಾಕ್ಷಸಾನಾಂ ಚ ರಾಜೇಂದ್ರ ದುರ್ಯೋಧನಬಲಸ್ಯ ಚ ॥12॥
ಎಲೈ ರಾಜೇಂದ್ರನೇ, ಅನಂತರ ರಾಕ್ಷಸರಿಗೂ ಮತ್ತು ದುರ್ಯೋಧನನ ಸೈನ್ಯಕ್ಕೂ ತೀವ್ರವೂ, ರೋಮಾಂಚಕಾರಿಯೂ ಆದ ಯುದ್ಧವು

ಪ್ರಾರಂಭವಾಯಿತು.
ಗಜಾನೀಕಂ ಚ ಸಂಪ್ರೇಕ್ಷ್ಯ ಮೇಘವೃಂದಮಿವೋದ್ಯತಮ್ |
ಅಭ್ಯಧಾವಂತ ಸಂಕ್ರುದ್ಧಾ ರಾಕ್ಷಸಾಃ ಶಸ್ತ್ರಪಾಣಯಃ ॥13॥
ಮೋಡಗಳ ಸಮೂಹದಂತೆ ಬಂದ ಆನೆಗಳ ಸಮೂಹಗಳನ್ನು ನೋಡಿ ಶಸ್ತ್ರಪಾಣಿಗಳಾದ ರಾಕ್ಷಸರು ಕೋಪಗೊಂಡು ಅವುಗಳ ಕಡೆಗೆ ಓಡಿದರು.
ನದಂತೋ ವಿವಿಧಾನ್ ನಾದಾನ್ ಮೇಘಾ ಇವ ಸವಿದ್ಯುತಃ |
ಶರಶಕ್ತ್ಯೃಷ್ಟಿನಾರಾಚೈರ್ನಿಘ್ನಂತೋ ಗಜಯೋಧಿನಃ ॥14॥
ಭಿಂಡಿಪಾಲೈಸ್ತಥಾ ಶೂಲೈರ್ಮುದ್ಗರೈಃ ಸಪರಶ್ವಧೈಃ |
ಪರ್ವತಾಗ್ರೈಶ್ಚ ವೃಕ್ಷೈಶ್ಚ ನಿಜಘ್ನುಸ್ತೇ ಮಹಾಗಜಾನ್ ॥15॥
ಮಿಂಚಿನಿಂದ ಕೂಡಿದ ಮೇಘಗಳಂತೆ ವಿವಿಧವಾದ ನಾದಗಳನ್ನು ಗರ್ಜಿಸುತ್ತಾ, ಬಾಣಗಳಿಂದಲೂ, ಶಕ್ತಿ-ಋಷ್ಟಿ-ನಾರಾಚಗಳಿಂದಲೂ, ಭಿಂಡಿಪಾಲಗಳಿಂದಲೂ, ಶೂಲಗಳಿಂದಲೂ, ಮುದ್ಗರಗಳಿಂದಲೂ, ಪರಶ್ವಧಗಳಿಂದಲೂ, ಪರ್ವತದ ಶಿಖರಗಳಿಂದಲೂ, ವೃಕ್ಷಗಳಿಂದಲೂ ಗಜ-ಯೋಧರನ್ನು ಮತ್ತು ಮಹಾಗಜಗಳನ್ನು ಅವರು ಸಂಹರಿಸಿದರು.
ಭಿನ್ನಕುಂಭಾನ್ ವಿರುಧಿರಾನ್ ಭಿನ್ನಗಾತ್ರಾಂಶ್ಚ ವಾರಣಾನ್ |
ಅಪಶ್ಯಾಮ ಮಹಾರಾಜ ವಧ್ಯಮಾನಾನ್ ನಿಶಾಚರೈಃ ॥16॥
ಎಲ್ಲೈ ಮಹಾರಾಜನೇ, ಕುಂಭಸ್ಥಲದಿಂದ ರಕ್ತವು ಸೋರುತ್ತಾ ಶರೀರವು ಜಜ್ಜಲ್ಪಟ್ಟ ಗಜಗಳು ನಿಶಾಚರರಿಂದ ಕೊಲ್ಲಲ್ಪಡುವುದನ್ನು ನಾವು ನೋಡಿದೆವು.
ತೇಷು ಪ್ರಕ್ಷೀಯಮಾಣೇಷು ಭಗ್ನೇಷು ಗಜಯೋಧಿಷು |
ದುರ್ಯೋಧನೋ ಮಹಾರಾಜ ರಾಕ್ಷಸಾನ್ ಸಮುಪಾದ್ರವತ್ ॥17॥
ಆಗ ಆ ಗಜಯೋಧಿಗಳು ಭಗ್ನಗೊಂಡು, ಅವರ ಸಂಖ್ಯೆಯು ಕಡಿಮೆಯಾಗುತ್ತಿರಲು ಎಲ್ಲೈ ಮಹಾರಾಜನೇ, ದುರ್ಯೋಧನನು ರಾಕ್ಷಸರ ಮೇಲೆ ಎರಗಿದನು.
ಅಮರ್ಷವಶಮಾಪನ್ನಸ್ತ್ಯಕ್ತ್ವಾ ಜೀವಿತಮಾತ್ಮನಃ |
ಮುಮೋಚ ನಿಶಿತಾನ್ ಬಾಣಾನ್ ರಾಕ್ಷಸೇಷು ಮಹಾಬಲಃ ॥18॥
ಮಹಾಬಲನಾದ ಅವನು ಕ್ರೋಧವಶನಾಗಿ ತನ್ನ ಜೀವಿತದ ಆಸೆಯನ್ನು ತೊರೆದು ರಾಕ್ಷಸರ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.
ಜಘಾನ ಚ ಮಹೇಷ್ವಾಸಃ ಪ್ರಧಾನಾಂಸ್ತತ್ರ ರಾಕ್ಷಸಾನ್ |
ಸಂಕ್ರುದ್ಧೋ ಭರತಶ್ರೇಷ್ಠ ಪುತ್ರೋ ದುರ್ಯೋಧನಸ್ತವ ॥19॥
ಎಲ್ಲೈ ಭರತಶ್ರೇಷ್ಠನೇ, ನಿನ್ನ ಪುತ್ರನೂ, ಮಹಾಧನುರ್ಧಾರಿಯೂ ಆದ ದುರ್ಯೋಧನನು ಬಹಳ ಕೋಪಗೊಂಡು ಅಲ್ಲಿ ಪ್ರಧಾನರಾದ ರಾಕ್ಷಸರನ್ನು ಕೊಂದನು.
ವೇಗವಂತಂ ಮಹಾರೌದ್ರಂ ವಿದ್ಯುಜ್ಜಿಹ್ವಂ ಪ್ರಮಾಥಿನಮ್ |
ಶರೈಶ್ಚತುರ್ಭಿಶ್ಚತುರೋ ನಿಜಘಾನ ಮಹಾರಥಃ ॥20॥
ಮಹಾರಥನಾದ ಅವನು ವೇಗವಂತ, ಮಹಾರೌದ್ರ, ವಿದ್ಯುಜ್ಜಿಹ್ವ, ಪ್ರಮಾಥಿ ಎಂಬ ನಾಲ್ಕು ರಾಕ್ಷಸರನ್ನು ನಾಲ್ಕು ಬಾಣಗಳಿಂದ ಸಂಹರಿಸಿದನು.
ತತಃ ಪುನರಮೇಯಾತ್ಮಾ ಶರವರ್ಷಂ ದುರಾಸದಮ್ |
ಮುಮೋಚ ಭರತಶ್ರೇಷ್ಠ ನಿಶಾಚರಬಲಂ ಪ್ರತಿ ॥21॥
ಎಲ್ಲೈ ಭರತಶ್ರೇಷ್ಠನೇ, ಪುನಃ ಅಚಿಂತ್ಯವಾದ ಸಾಮರ್ಥ್ಯವುಳ್ಳ ಅವನು ತಡೆಯಲು ಅಸಾಧ್ಯವಾದ ಬಾಣಗಳ ಮಳೆಯನ್ನು ರಾಕ್ಷಸರ ಸೈನ್ಯದ ಮೇಲೆ ಕರೆದನು.
ತತ್ತು ದೃಷ್ಟ್ವಾ ಮಹತ್ಕರ್ಮ ಪುತ್ರಸ್ಯ ತವ ಮಾರಿಷ |
ಕ್ರೋಧೇನಾಭಿಪ್ರಜಜ್ವಾಲ ಭೈಮಸೇನಿರ್ಮಹಾಬಲಃ ॥22॥
ಎಲ್ಲೈ ಪೂಜ್ಯನೇ, ನಿನ್ನ ಪುತ್ರನ ಆ ಮಹಾಕಾರ್ಯವನ್ನು ನೋಡಿ ಮಹಾಬಲನೂ, ಭೀಮಸೇನನ ಪುತ್ರನೂ ಆದ ಘಟೋತ್ಕಚನು ಕ್ರೋಧದಿಂದ ಉರಿದನು.
ವಿಸ್ಫಾರ್ಯ ಚ ಮಹಚ್ಚಾಪಮಿಂದ್ರಾಶನಿಸಮಸ್ವನಮ್ |
ಅಭಿದುದ್ರಾವ ವೇಗೇನ ದುರ್ಯೋಧನಮರಿಂದಮಮ್ ॥23॥
ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಘೋಷವುಳ್ಳ ತನ್ನ ದೊಡ್ಡ ಧನುಸ್ಸನ್ನು ಎಳೆಯುತ್ತಾ ವೇಗದಿಂದ ಅರಿಂದಮನಾದ ದುರ್ಯೋಧನನ ಕಡೆಗೆ ಓಡಿಬಂದನು.
ತಮಾಪತಂತಮುದ್ವೀಕ್ಷ್ಯ ಕಾಲಸೃಷ್ಟಮಿವಾಂತಕಮ್ |
ನ ವಿವ್ಯಥೇ ಮಹಾರಾಜ ಪುತ್ರೋ ದುರ್ಯೋಧನಸ್ತವ ॥24॥
ಎಲ್ಲೈ ಮಹಾರಾಜನೇ, ಕಾಲಸೃಷ್ಟನಾದ ಯಮನಂತೆ ತನ್ನ ಕಡೆಗೆ ಓಡಿಬರುತ್ತಿದ್ದ ಅವನನ್ನು ನೋಡಿ ನಿನ್ನ ಪುತ್ರನಾದ ದುರ್ಯೋಧನನು ವ್ಯಥೆ ಪಡಲಿಲ್ಲ.
ಅಥೈನಮಬ್ರವೀತ್ ಕ್ರುದ್ಧಃ ಕ್ರೂರಃ ಸಂರಕ್ತಲೋಚನಃ |
ಯೇ ತ್ವಯಾ ಸುನೃಶಂಸೇನ ದೀರ್ಘಕಾಲಂ ಪ್ರವಾಸಿತಾಃ |

ಯಚ್ಚ ತೇ ಪಾಂಡವಾ ರಾಜಂಶ್ಚಲದ್ಯೂತೇ ಪರಾಜಿತಾಃ ॥25॥
ಯಚ್ಚೈವ ದ್ರೌಪದೀ ಕೃಷ್ಣಾ ಏಕವಸ್ತ್ರಾ ರಜಸ್ವಲಾ |
ಸಭಾಮಾನೀಯ ದುರ್ಬುದ್ಧೇ ಬಹುಧಾ ಕ್ಲೇಶಿತಾ ತ್ವಯಾ ॥26॥
ತವ ಚ ಪ್ರಿಯಕಾಮೇನ ಆಶ್ರಮಸ್ಥಾ ದುರಾತ್ಮನಾ |
ಸೈಂಧವೇನ ಪರಿಕ್ಲಿಷ್ಟಾ ಪರಿಭೂಯ ಪಿತ್ರೂನ್ ಮಮ ॥27॥
ಏತೇಷಾಮವಮಾನಾನಾಮನ್ಯೇಷಾಂ ಚ ಕುಲಾಧಮ |
ಅಂತಮದ್ಯ ಗಮಿಷ್ಯಾಮಿ ಯದಿ ನೋತ್ಸೃಜಸೇ ರಣಮ್ ॥28॥
ಅನಂತರ ಕ್ರೂರನೂ, ಕೆಂಪಾದ ಕಣ್ಣುಳ್ಳವನೂ, ಕ್ರೋಧಗೊಂಡವನೂ ಆದ ಘಟೋತ್ಕಚನು ದುರ್ಯೋಧನನನ್ನು ಕುರಿತು ಮಾತನಾಡಿದನು. ಯಾವ ಕ್ರೂರನಾದ ನಿನ್ನಿಂದ ಪಾಂಡವರು ದೀರ್ಘಕಾಲದವರೆಗೆ ರಾಜ್ಯದಿಂದ ಹೊರಗೆ ಕಳುಹಿಸಲ್ಪಟ್ಟಿದ್ದಾರೆಯೋ ಮತ್ತು ಆ ಪಾಂಡವರು ಎಲೈ ರಾಜನೇ, ನಿನ್ನ ಯಾವ ಮೋಸದ ದ್ಯೂತದಲ್ಲಿ ಪರಾಜಿತರಾಗಿದ್ದಾರೆಯೋ ಎಲೈ ದುರ್ಬುದ್ಧಿಯೇ, ರಜಸ್ವಲೆಯೂ, ಏಕವಸ್ತ್ರಳೂ ಆದ ದ್ರೌಪದಿಯನ್ನು ಸಭೆಗೆ ಎಳೆತಂದು ನೀನು ಯಾವ ಕ್ಲೇಶವನ್ನು ಕೊಟ್ಟಿದ್ದೀಯೋ, ನಿನಗೆ ಪ್ರಿಯವನ್ನು ಮಾಡುವ ಉದ್ದೇಶದಿಂದ ದುರಾತ್ಮನಾದ ಸೈಂಧವನು ನನ್ನ ಪಿತೃಗಳನ್ನು ಕಡೆಗಣಿಸಿ ಆಶ್ರಮದಲ್ಲಿದ್ದ ದ್ರೌಪದಿಗೆ ಯಾವ ಕ್ಲೇಶವನ್ನು ಕೊಟ್ಟಿದ್ದಾನೆಯೋ, ಎಲೈ ಕುಲಾಧಮನೇ, ಇವೆಲ್ಲವುಗಳ ಮತ್ತು ನೀನು ಮಾಡಿದ ಉಳಿದ ಅವಮಾನಗಳ ಪ್ರತೀಕಾರವನ್ನು ನೀನು ರಣರಂಗವನ್ನು ತೊರೆಯದಿದ್ದರೆ ನಾನು ಈ ದಿನ ಮಾಡುವೆನು (ಎಂದು ಹೇಳಿದನು).
ಏವಮುಕ್ತ್ವಾ ತು ಹೈಡಿಂಬೋ ಮಹದ್ ವಿಸ್ಫಾರ್ಯ ಕಾರ್ಮುಕಮ್ |
ಸಂದಶ್ಯ ದಶನೈರೋಷ್ಠಂ ಸೃಕ್ಕಿಣೀ ಪರಿಸಂಲಿಹನ್ ॥29॥
ಶರವರ್ಷೇಣ ಮಹತಾ ದುರ್ಯೋಧನಮವಾಕಿರತ್ |
ಪರ್ವತಂ ವಾರಿಧಾರಾಭಿಃ ಪ್ರಾವೃಷೀವ ಬಲಾಹಕಃ ॥30॥
ಹೀಗೆ ಹೇಳಿ ಹಿಡಿಂಬೆಯ ಪುತ್ರನಾದ ಘಟೋತ್ಕಚನು ತನ್ನ ದೊಡ್ಡ ಧನುಸ್ಸನ್ನು ಎಳೆದು, ಹಲ್ಲುಗಳಿಂದ ತುಟಿಯನ್ನು ಕಚ್ಚಿ, ಕಟಬಾಯನ್ನು ಸವರಿಕೊಳ್ಳುತ್ತಾ, ಮಳೆಗಾಲದಲ್ಲಿ ಮೋಡವು ಪರ್ವತವನ್ನು ಜಲಧಾರೆಗಳನ್ನು ಸುರಿಸಿ ಮುಚ್ಚುವಂತೆ ದುರ್ಯೋಧನನ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಕರೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆಂಟನೆಯ ಅಧ್ಯಾಯ
ಘಟೋತ್ಕಚನ ಪರಾಕ್ರಮ.
ಸಂಜಯಃ
ತತಸ್ತದ್ಬಾಣವರ್ಷಂ ತು ದುಃಸಹಂ ದಾನವೈರಪಿ |
ದಧಾರ ಯುಧಿ ರಾಜೇಂದ್ರೋ ಯಥಾ ವರ್ಷಂ ಮಹಾದ್ವಿಪಃ ॥1॥
ಸಂಜಯ ಆಗ ದಾನವರಿಗೂ ಸಹಿಸಲು ಕಷ್ಟವಾದ ಆ ಬಾಣಗಳ ಮಳೆಯನ್ನು ರಾಜೇಂದ್ರನಾದ ದುರ್ಯೋಧನನು ಮಹಾಗಜವು ಮಳೆಯನ್ನು ಧರಿಸಿದಂತೆ ಯುದ್ಧದಲ್ಲಿ ಧರಿಸಿದನು.
ತತಃ ಕ್ರೋಧಸಮಾವಿಷ್ಟೋ ನಿಃಶ್ವಸನ್ನಿವ ಪನ್ನಗಃ |
ಸಂಶಯಂ ಪರಮಂ ಪ್ರಾಪ್ತಃ ಪುತ್ರಸ್ತೇ ಭರತರ್ಷಭ ॥2॥
ಮುಮೋಚ ನಿಶಿತಾಂಸ್ತೀಕ್ಷ್ಣಾನ್ ನಾರಾಚಾನ್ ಪಂಚವಿಂಶತಿಮ್ |
ತೇಽಪತನ್ ಸಹಸಾ ರಾಜಂಸ್ತಸ್ಮಿನ್ ರಾಕ್ಷಸಪುಂಗವೇ |
ಆಶೀವಿಷಾ ಇವ ಕ್ರುದ್ಧಾಃ ಪರ್ವತೇ ಗಂಧಮಾದನೇ ॥3॥
ಎಲೈ ಭರತಶ್ರೇಷ್ಠನೇ, ಆಗ ಕ್ರೋಧಸಮಾವಿಷ್ಟನಾದ ನಿನ್ನ ಪುತ್ರನು ಬುಸುಗುಟ್ಟುವ ಸರ್ಪದಂತೆ ಪ್ರಾಣಸಂಶಯವನ್ನು ಹೊಂದಿ ಇಪ್ಪತ್ತೈದು ತೀಕ್ಷ್ಣವಾದ ನಾರಾಚಗಳನ್ನು ಪ್ರಯೋಗಿಸಿದನು. ಎಲೈ ರಾಜನೇ, ಅವು ಆ ರಾಕ್ಷಸಶ್ರೇಷ್ಠನಲ್ಲಿ ಗಂಧಮಾದನ ಪರ್ವತದಲ್ಲಿ ಕೋಪಗೊಂಡ ಸರ್ಪಗಳು ಪ್ರವೇಶಿಸಿದಂತೆ ಬಲವಾಗಿ ಬಿದ್ದವು.
ಸ ತೈರ್ವಿದ್ಧಃ ಸ್ರವನ್ ರಕ್ತಂ ಪ್ರಭಿನ್ನ ಇವ ಕುಂಜರಃ |
ದಧ್ರೇ ಮತಿಂ ವಿನಾಶಾಯ ರಾಜ್ಞಃ ಸ ಪಿಶಿತಾಶನಃ |
ಜಗ್ರಾಹ ಚ ಮಹಾಶಕ್ತಿಂ ಗಿರೀಣಾಮಪಿ ದಾರಣೀಮ್ ॥4॥
ಸಂಪ್ರದೀಪ್ತಾಂ ಮಹೋಲ್ಕಾಭಾಮಶನೀಂ ಮಘವಾನಿವ |
ಸಮುದ್ಯಚ್ಛನ್ಮಹಾಬಾಹುರ್ಜಿಘಾಂಸುಸ್ತನಯಂ ತವ ॥5॥
ರಾಕ್ಷಸನಾದ ಮಾಂಸಾಹಾರಿಯಾದ ಘಟೋತ್ಕಚನು ಆ ನಾರಾಚಗಳಿಂದ ಗಾಯಗೊಂಡು ಮದೋದಕವನ್ನು ಸುರಿಸುವ ಗಜದಂತೆ ರಕ್ತವನ್ನು ಸುರಿಸುತ್ತಾ ರಾಜನ ವಿನಾಶಕ್ಕಾಗಿ ನಿಶ್ಚಯವನ್ನು ಮಾಡಿದನು. ಮಹಾಬಾಹುವಾದ ಅವನು ಇಂದ್ರನು ವಜ್ರಾಯುಧವನ್ನು ತೆಗೆದುಕೊಂಡಂತೆ ಮಹೋಲ್ಕೆಗೆ ಸದೃಶವಾದ, ಪರ್ವತಗಳನ್ನೂ ಭೇದಿಸುವ, ಜ್ವಲಿಸುವ ದೊಡ್ಡ ಶಕ್ತ್ಯಾಯುಧವನ್ನು ತೆಗೆದುಕೊಂಡು ನಿನ್ನ ಪುತ್ರನನ್ನು ಕೊಲ್ಲಲು ಬಯಸಿ ಅದನ್ನು ಎತ್ತಿಹಿಡಿದನು.
ತಾಮುದ್ಯತಾಮಭಿಪ್ರೇಕ್ಷ್ಯ ವಂಗಾನಾಮಧಿಪಸ್ತ್ವರನ್ |

ಕುಂಜರಂ ಗಿರಿಸಂಕಾಶಂ ರಾಕ್ಷಸಂ ಪ್ರತ್ಯಚೋದಯತ್ ॥6॥
ಆಗ ಆ ಶಕ್ತಿಯು ಎತ್ತಿಹಿಡಿಯಲ್ಪಟ್ಟಿದ್ದನ್ನು ನೋಡಿ ವಂಗಾಧಿಪತಿಯು ಪರ್ವತದಂತಿದ್ದ ತನ್ನ ಗಜವನ್ನು ರಾಕ್ಷಸನ ಮೇಲೆ ಪ್ರಚೋದಿಸಿದನು.
ಸ ನಾಗಪ್ರವರೇಣಾಜೌ ಬಲಿನಾ ಶೀಘ್ರಗಾಮಿನಾ |
ಯತೋ ದುರ್ಯೋಧನರಥಸ್ತಂ ಮಾರ್ಗಂ ಪ್ರತ್ಯಪದ್ಯತ |
ರಥಂ ಚ ವಾರಯಾಮಾಸ ಕುಂಜರೇಣ ಸುತಸ್ಯ ತೇ ॥7॥
ಆ ವಂಗಾಧಿಪತಿಯು ಬಲಿಷ್ಠವೂ, ಶೀಘ್ರಗಾಮಿಯೂ ಆದ ಆ ಶ್ರೇಷ್ಠ ಗಜವನ್ನು ಏರಿ, ರಣರಂಗದಲ್ಲಿ ದುರ್ಯೋಧನನ ರಥವಿದ್ದ ಮಾರ್ಗವನ್ನು ತಲುಪಿ, ನಿನ್ನ ಪುತ್ರನ ರಥಕ್ಕೆ ತನ್ನ ಗಜವನ್ನು ಅಡ್ಡವಾಗಿ ನಿಲ್ಲಿಸಿದನು.
ಮಾರ್ಗಮಾವಾರಿತಂ ದೃಷ್ಟ್ವಾ ರಾಜ್ಞಾ ವಂಗೇನ ಧೀಮತಾ |
ಘಟೋತ್ಕಚೋ ಮಹಾರಾಜ ಕ್ರೋಧಸಂರಕ್ತಲೋಚನಃ |
ಉದ್ಯತಾಂ ತಾಂ ಮಹಾಶಕ್ತಿಂ ತಸ್ಮಿಂಶ್ಚಿಕ್ಷೇಪ ವಾರಣೇ ॥8॥
ಮೇಧಾವಿಯಾದ ವಂಗರಾಜನು ದುರ್ಯೋಧನನ ಮಾರ್ಗವನ್ನು ತಡೆದುದನ್ನು ನೋಡಿ ಎಲೈ ಮಹಾರಾಜನೇ, ಘಟೋತ್ಕಚನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಆ ಮಹಾಶಕ್ತಿಯನ್ನು ಆ ಗಜದ ಮೇಲೆ ಪ್ರಯೋಗಿಸಿದನು.
ಸ ತಯಾಭಿಹತೋ ರಾಜಂಸ್ತೇನ ಬಾಹುವಿಮುಕ್ತಯಾ |
ಸಂಜಾತರುಧಿರೋತ್ಪೀಡಃ ಪಪಾತ ಚ ಮಮಾರ ಚ ॥9॥
ಎಲೈ ರಾಜನೇ, ಘಟೋತ್ಕಚನ ಬಾಹುವಿನಿಂದ ವಿಮುಕ್ತವಾದ ಆ ಶಕ್ತ್ಯಾಯುಧದಿಂದ ತಾಡಿತವಾದ ಆ ಗಜವು ಶಿರಸ್ಸಿನಲ್ಲಿ ರಕ್ತದ ಅಲಂಕಾರವುಳ್ಳದ್ದಾಗಿ ಬಿದ್ದು ಮರಣವನ್ನು ಹೊಂದಿತು.
ಪತತ್ಯಥ ಗಜೇ ಚಾಪಿ ವಂಗಾನಾಮೀಶ್ವರೋ ಬಲೀ |
ಜವೇನ ಸಮಭಿದ್ರುತ್ಯ ಜಗಾಮ ಧರಣೀತಳಮ್ ॥10॥
ಗಜವು ಬೀಳುತ್ತಿರಲು ಬಲಿಷ್ಠನಾದ ವಂಗಾಧಿಪತಿಯು ಬೇಗ ಓಡಿ ಭೂಮಿಯನ್ನು ಸೇರಿದನು.
ದುರ್ಯೋಧನೋಽಪಿ ಸಂಪ್ರೇಕ್ಷ್ಯ ಪಾತಿತಂ ವರವಾರಣಮ್ |
ಪ್ರಭಗ್ನಂ ಚ ಬಲಂ ದೃಷ್ಟ್ವಾ ಜಗಾಮ ಪರಮಾಂ ವ್ಯಥಾಮ್ ॥11॥
ದುರ್ಯೋಧನನಾದರೋ ಶ್ರೇಷ್ಠವಾದ ಆ ಗಜವು ಕೆಡವಲ್ಪಟ್ಟಿದ್ದನ್ನು ಮತ್ತು ತನ್ನ ಸೈನ್ಯವು ಭಗ್ನವಾದುದನ್ನು ನೋಡಿ ಬಹಳ ವ್ಯಥೆಯನ್ನು ಹೊಂದಿದನು.
ಕ್ಷತ್ರಧರ್ಮಂ ಪುರಸ್ಕೃತ್ಯ ಆತ್ಮನಶ್ಚಾಭಿಮಾನಿತಾಮ್ |
ಪ್ರಾಪ್ತೇಽಪಕ್ರಮಣೇ ರಾಜಾ ತಸ್ಥೌ ಗಿರಿರಿವಾಚಲಃ ॥12॥
ಯುದ್ಧಭೂಮಿಯಿಂದ ಅಪಯಾನವು ಪ್ರಾಪ್ತವಾಗಿದ್ದರೂ ಕ್ಷತ್ರಿಯಧರ್ಮವನ್ನು ಗೌರವಿಸಿ, ತನ್ನ ಅಭಿಮಾನವನ್ನು ಗಮನಿಸಿ, ರಾಜನಾದ ಅವನು ಪರ್ವತದಂತೆ ಸ್ಥಿರವಾಗಿ ನಿಂತನು.
ಸಂಧಾಯ ಚ ಶಿತಂ ಬಾಣಂ ಕಾಲಾಗ್ನಿಸಮತೇಜಸಮ್ |
ಮುಮೋಚ ಪರಮಕ್ರುದ್ಧಸ್ತಸ್ಮಿನ್ ಘೋರೇ ನಿಶಾಚರೇ ॥13॥
ಕಾಲಾಗ್ನಿಗೆ ಸಮವಾದ ತೇಜಸ್ಸನ್ನು ಹೊಂದಿ ತೀಕ್ಷ್ಣವಾದ ಬಾಣವನ್ನು ಬಿಲ್ಲಿನಲ್ಲಿ ಹೂಡಿ ಪರಮಕ್ರೋಧಗೊಂಡು ಅದನ್ನು ಘೋರ ರಾಕ್ಷಸನಾದ ಘಟೋತ್ಕಚನ ಮೇಲೆ ಪ್ರಯೋಗಿಸಿದನು.
ತಮಾಪತಂತಂ ಸಂಪ್ರೇಕ್ಷ್ಯ ಬಾಣಮಿಂದ್ರಾಶನಿಪ್ರಭಮ್ |
ಲಾಘವಾದ್ ವಂಚಯಾಮಾಸ ಮಹಾಕಾಯೋ ಘಟೋತ್ಕಚಃ ॥14॥
ಇಂದ್ರನ ವಜ್ರಾಯುಧದ ಕಾಂತಿಯನ್ನು ಹೊಂದಿದ ಆ ಬಾಣವು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಮಹಾಕಾಯನಾದ ಘಟೋತ್ಕಚನು ತನ್ನ ಕ್ಷಿಪ್ರತೆಯಿಂದ ಅದರಿಂದ ತಪ್ಪಿಸಿಕೊಂಡು ಅದನ್ನು ವ್ಯರ್ಥಗೊಳಿಸಿದನು.
ಭೂಯ ಏವ ನನಾದೋಗ್ರಃ ಕ್ರೋಧಸಂರಕ್ತಲೋಚನಃ |
ತ್ರಾಸಯನ್ ಸರ್ವಭೂತಾನಿ ಯುಗಾಂತೇ ಜಲದೋ ಯಥಾ ॥15॥
ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಸರ್ವಪ್ರಾಣಿಗಳನ್ನೂ ಭಯಪಡಿಸುತ್ತಾ ಯುಗಾಂತಕಾಲದ ಮೋಡದಂತೆ ಪುನಃ ಘೋರವಾದ ಗರ್ಜನೆಯನ್ನು ಮಾಡಿದನು.
ತಂ ಶ್ರುತ್ವಾ ನಿನದಂ ಘೋರಂ ತಸ್ಯ ಭೀಷ್ಮಸ್ಯ ರಕ್ಷಸಃ |
ಆಚಾರ್ಯಮುಪಸಂಗಮ್ಯ ಭೀಷ್ಮಃ ಶಾಂತನವೋಽಬ್ರವೀತ್ ॥16॥
ಭಯಂಕರವಾದ ಆ ರಾಕ್ಷಸನ ಘೋರವಾದ ಗರ್ಜನೆಯನ್ನು ಕೇಳಿದ ಶಂತನು ಪುತ್ರರಾದ ಭೀಷ್ಮರು ದ್ರೋಣಾಚಾರ್ಯರನ್ನು ಸಮೀಪಿಸಿ ಮಾತನಾಡಿದರು.
ಯಥೈಷ ನಿನದೋ ಘೋರಃ ಶ್ರೂಯತೇ ರಾಕ್ಷಸೇರಿತಃ |
ಹೈಡಿಂಬೋ ಯುಧ್ಯತೇ ನೂನಂ ರಾಜ್ಞಾ ದುರ್ಯೋಧನೇನ ಹ ॥17॥
ರಾಕ್ಷಸನಿಂದ ಹೊರಹೊಮ್ಮುತ್ತಿರುವ ಈ ಘೋರವಾದ ನಿನಾದವನ್ನು ಕೇಳಿದರೆ ಖಂಡಿತವಾಗಿ ಘಟೋತ್ಕಚನು ರಾಜನಾದ ದುರ್ಯೋಧನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿರುವಂತೆ ತೋರುತ್ತದೆ.
ನೈಷ ಶಕ್ಯೋ ಹಿ ಸಂಗ್ರಾಮೇ ಜೇತುಂ ಭೂತೇನ ಕೇನಚಿತ್ |
ತತ್ರ ಗಚ್ಛತ ಭದ್ರಂ ವೋ ರಾಜಾನಂ ಪರಿರಕ್ಷತ ॥18॥

ಅಭಿದ್ರುತಂ ಮಹಾಭಾಗಂ ರಾಕ್ಷಸೇನ ದುರಾತ್ಮನಾ |
ಏತದ್ಧಿ ಪರಮಂ ಕೃತ್ಯಂ ಸರ್ವೇಷಾಂ ನಃ ಪರಂತಪಾಃ ||19||
ಅವನನ್ನು ಯಾವ ಪ್ರಾಣಿಯೂ ಸಹ ಯುದ್ಧದಲ್ಲಿ ಜಯಿಸಲು ಸಾಧ್ಯವಿಲ್ಲ. ಆದ್ದರಿಂದ ನಿಮಗೆ ಮಂಗಳವಾಗಲಿ, ಅಲ್ಲಿಗೆ ಹೋಗಿ ದುರಾತ್ಮನಾದ ರಾಕ್ಷಸನಿಂದ ಪೀಡಿತನಾದ ರಾಜನನ್ನು ರಕ್ಷಿಸಿ. ಎಲೈ ಪರಂತಪರೇ, ಇದು ನಾವೆಲ್ಲರೂ ಈಗ ಮಾಡಬೇಕಾದ ಶ್ರೇಷ್ಠವಾದ ಕಾರ್ಯ.
ಪಿತಾಮಹವಚಃ ಶ್ರುತ್ವಾ ತ್ವರಮಾಣಾ ಮಹಾರಥಾಃ |
ಉತ್ತಮಂ ಜವಮಾಸ್ಥಾಯ ಪ್ರಯಯುರ್ಯತ್ರ ಕೌರವಃ ||20||
ದ್ರೋಣಶ್ಚ ಸೋಮದತ್ತಶ್ಚ ಬಾಹ್ಲಿಕಶ್ಚ ಜಯದ್ರಥಃ |
ಕೃಪೋ ಭೂರಿಶ್ರವಾಃ ಶಲ್ಯಶ್ಚಿತ್ರಸೇನೋ ವಿವಿಂಶತಿಃ ||21||
ಅಶ್ವತ್ಥಾಮಾ ವಿಕರ್ಣಶ್ಚ ಆವಂತ್ಯಶ್ಚ ಬೃಹದ್ಬಲಃ |
ರಥಾಶ್ಚಾನೇಕಸಾಹಸ್ರಾ ಯೇ ತೇಷಾಮನುಯಾಯಿನಃ |
ಅಭಿದ್ರುತಂ ಪರೀಪ್ಸಂತಃ ಪುತ್ರಂ ದುರ್ಯೋಧನಂ ತವ ||22||
ಪಿತಾಮಹರ ಮಾತುಗಳನ್ನು ಕೇಳಿ ಮಹಾರಥರೆಲ್ಲರೂ ತ್ವರೆಯನ್ನು ಮಾಡುತ್ತಾ ಉತ್ತಮವಾದ ವೇಗವನ್ನು ಆಶ್ರಯಿಸಿ, ದುರ್ಯೋಧನನು ಇದ್ದ ಕಡೆಗೆ ಹೊರಟರು. ದ್ರೋಣರು, ಸೋಮದತ್ತ, ಬಾಹ್ಲಿಕ, ಜಯದ್ರಥ, ಕೃಪರು, ಭೂರಿಶ್ರವ, ಶಲ್ಯ, ಚಿತ್ರಸೇನ, ವಿವಿಂಶತಿ, ಅಶ್ವತ್ಥಾಮರು, ವಿಕರ್ಣ, ಅವಂತಿದೇಶದ ಬೃಹದ್ಬಲ ಮತ್ತು ಇನ್ನೂ ಅನೇಕ ಸಹಸ್ರ ಮಹಾರಥರು ಮತ್ತು ಅವರ ಅನುಯಾಯಿಗಳು ಎಲ್ಲರೂ ರಾಕ್ಷಸನಿಂದ ಪೀಡಿತನಾದ ನಿನ್ನ ಪುತ್ರನಾದ ದುರ್ಯೋಧನನನ್ನು ರಕ್ಷಿಸಲು ಬಯಸಿ (ಅಲ್ಲಿಗೆ ಹೋದರು).
ತದನೀಕಮನಾಧೃಷ್ಯಂ ಪಾಲಿತಂ ಲೋಕಸತ್ತಮೈಃ |
ಆತತಾಯಿನಮಾಯಾಂತಂ ಪ್ರೇಕ್ಷ್ಯ ರಾಕ್ಷಸಸತ್ತಮಃ |
ನಾಕಂಪತ ಮಹಾಬಾಹುರ್ಮೈನಾಕ ಇವ ಪರ್ವತಃ ||23||
ಪ್ರಗೃಹ್ಯ ವಿಪುಲಂ ಚಾಪಂ ಜ್ಞಾತಿಭಿಃ ಪರಿವಾರಿತಃ |
ಶೂಲಮುದ್ಗರಹಸ್ತೈಶ್ಚ ನಾನಾಪ್ರಹರಣೈರಪಿ ||24||
ಲೋಕಶ್ರೇಷ್ಠರಿಂದ ಪಾಲಿತವಾದ, ಸೋಲಿಸಲು ಅಸಾಧ್ಯವಾದ, ಶಸ್ತ್ರಧಾರಿಯಾದ ಆ ಸೈನ್ಯವು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದ ಮಹಾಬಾಹುವಾದ ರಾಕ್ಷಸಶ್ರೇಷ್ಠನಾದ ಘಟೋತ್ಕಚನು ಮೈನಾಕಪರ್ವತದಂತೆ ಅಲುಗಾಡದೇ ನಿಂತನು. ಹಸ್ತಗಳಲ್ಲಿ ಶೂಲ-ಮುದ್ಗರಗಳನ್ನೂ, ನಾನಾವಿಧವಾದ ಆಯುಧಗಳನ್ನೂ ಹಿಡಿದ ರಾಕ್ಷಸ ಬಂಧುಗಳಿಂದ ಪರಿವಾರಿತನಾಗಿ ವಿಸ್ತಾರವಾದ ಧನುಸ್ಸನ್ನು ಕೈಯಲ್ಲಿ ಹಿಡಿದು (ನಿಂತನು).
ತತಃ ಸಮಭವದ್ ಯುದ್ಧಂ ತುಮುಲಂ ಲೋಮಹರ್ಷಣಮ್ |
ರಾಕ್ಷಸಾನಾಂ ಚ ಮುಖ್ಯಸ್ಯ ದುರ್ಯೋಧನಬಲಸ್ಯ ಚ ||25||
ಅನಂತರ ರಾಕ್ಷಸಶ್ರೇಷ್ಠನಾದ ಅವನಿಗೂ ಮತ್ತು ದುರ್ಯೋಧನನ ಸೈನ್ಯಕ್ಕೂ ತೀವ್ರವೂ, ರೋಮಾಂಚಕಾರಿಯೂ ಆದ ಯುದ್ಧವು ನಡೆಯಿತು.
ಧನುಷಾಂ ಕೂಜತಾಂ ಶಬ್ದಃ ಸರ್ವತಸ್ತುಮುಲೋಽಭವತ್ |
ಅಶ್ರೂಯತ ಮಹಾರಾಜ ವಂಶಾನಾಂ ದಹ್ಯತಾಮಿವ ||26||
ಎಲೈ ಮಹಾರಾಜನೇ, ರಣರಂಗದಲ್ಲಿ ನಾದವನ್ನು ಮಾಡುವ ಧನುಸ್ಸುಗಳ ತೀವ್ರವಾದ ಶಬ್ದವು ಉರಿಯುವ ಬಿದಿರುಗಳ ಶಬ್ದದಂತೆ ಎಲ್ಲ ಕಡೆಗಳಲ್ಲಿಯೂ ಕೇಳಿಬಂದಿತು.
ಶಸತ್ರಣಾಂ ಪಾತ್ಯಮಾನಾನಾಂ ಕವಚೇಷು ಶರೀರಿಣಾಮ್ |
ಶಬ್ದಃ ಸಮಭವದ್ ರಾಜನ್ನದ್ರೀಣಾಮಿವ ದೀರ್ಯತಾಮ್ ||27||
ಎಲೈ ರಾಜನೇ, ಯೋಧರು ಧರಿಸಿದ ಶಸ್ತ್ರಗಳಿಂದ ಉಂಟಾದ ಶಬ್ದವು ಬಿರಿಯುವ ಪರ್ವತಗಳ ಶಬ್ದಗಳಂತೆ ಇದ್ದಿತು.
ವೀರಬಾಹುವಿಸೃಷ್ಟಾನಾಂ ತೋಮರಾಣಾಂ ವಿಶಾಂಪತೇ |
ರೂಪಮಾಸೀದ್ ವಿಯತ್ಸ್ಥಾನಾಂ ಸರ್ಪಾಣಾಂ ಸರ್ಪತಾಮಿವ ||28||
ಎಲೈ ರಾಜನೇ, ವೀರಬಾಹುಗಳಿಂದ ಮುಕ್ತವಾದ ಆಕಾಶದಲ್ಲಿ ಹಾರುವ ತೋಮರಗಳ ಆಕಾರವು ಹರಿಯುವ ಸರ್ಪಗಳಂತಿದ್ದಿತು.
ತತಃ ಪರಮಸಂಕ್ರುದ್ಧೋ ವಿಸ್ಫಾರ್ಯ ಸುಮಹದ್ಧನುಃ |
ರಾಕ್ಷಸೇಂದ್ರೋ ಮಹಾಬಾಹುರ್ವಿನದನ್ ಭೈರವಂ ರವಮ್ ||29||
ಆಚಾರ್ಯಸ್ಯಾರ್ಧಚಂದ್ರೇಣ ಕ್ರುದ್ಧಶ್ಚಿಚ್ಛೇದ ಕಾರ್ಮುಕಮ್ |
ಸೋಮದತ್ತಸ್ಯ ಭಲ್ಲೇನ ಧ್ವಜಮುನ್ಮಥ್ಯ ಚಾನದತ್ ||30||
ಆಗ ಪರಮಕ್ರುದ್ಧನಾದ, ಮಹಾಬಾಹುವಾದ ರಾಕ್ಷಸೇಂದ್ರನಾದ ಘಟೋತ್ಕಚನು ಭಯಂಕರವಾದ ಗರ್ಜನೆಯನ್ನು ಮಾಡುತ್ತಾ ತನ್ನ ದೊಡ್ಡ ಧನುಸ್ಸನ್ನು ಎಳೆದು ಕೋಪಗೊಂಡು ದ್ರೋಣಾಚಾರ್ಯರ ಧನುಸ್ಸನ್ನು ಅರ್ಧಚಂದ್ರದಿಂದ ಕತ್ತರಿಸಿದನು. ಭಲ್ಲದಿಂದ ಸೋಮದತ್ತನ ಧ್ವಜವನ್ನು ಧ್ವಂಸ ಮಾಡಿ ಸಿಂಹನಾದವನ್ನು ಮಾಡಿದನು.
ಬಾಹ್ಲಿಕಂ ಚ ತ್ರಿಭಿರ್ಬಾಣೈರಭ್ಯವಿಧ್ಯತ್ ಸ್ತನಾಂತರೇ |
ಕೃಪಮೇಕೇನ ವಿವ್ಯಾಧ ಚಿತ್ರಸೇನಂ ತ್ರಿಭಿಃ ಶರೈಃ ||31||
ಬಾಹ್ಲಿಕನನ್ನು ಅವನ ಸ್ತನಗಳ ಮಧ್ಯದಲ್ಲಿ ಮೂರು ಬಾಣಗಳಿಂದ ಹೊಡೆದನು. ಕೃಪರನ್ನು ಒಂದು ಬಾಣದಿಂದಲೂ,

ಚಿತ್ರಸೇನನನ್ನು ಮೂರು ಬಾಣದಿಂದಲೂ ಗಾಯಗೊಳಿಸಿದನು.
ಪೂರ್ಣಾಯತವಿಸೃಷ್ಟೇನ ಸಮ್ಯಕ್‌ಪ್ರಣಿಹಿತೇನ ಚ |
ಜತ್ರುದೇಶೇ ಸಮಾಸಾದ್ಯ ವಿಕರ್ಣಂ ಸಮತಾಡಯತ್ |
ನ್ಯಷೀದತ್ ಸ ರಥೋಪಸ್ಥೇ ಶೋಣಿತೇನ ಪರಿಪ್ಲುತಃ ॥32॥
ಪೂರ್ಣವಾಗಿ ಎಳೆದು, ಚೆನ್ನಾಗಿ ಪ್ರಯೋಗಿಸಿದ ಬಾಣದಿಂದ ವಿಕರ್ಣನನ್ನು ಅವನ ಭುಜಸಂಧಿದೇಶದಲ್ಲಿ ಹೊಡೆದನು. ವಿಕರ್ಣನಾದರೋ ರಕ್ತದಿಂದ ತೊಯ್ದವನಾಗಿ ರಥದ ಪೀಠದಲ್ಲಿ ಕುಸಿದನು.
ತತಃ ಪುನರಮೇಯಾತ್ಮಾ ನಾರಾಚಾನ್ ದಶ ಪಂಚ ಚ |
ಭೂರಿಶ್ರವಸಿ ಸಂಕ್ರುದ್ಧಃ ಪ್ರಾಹಿಣೋದ್ ಭರತರ್ಷಭ |
ತೇ ವರ್ಮ ಭಿತ್ತ್ವಾ ತಸ್ಯಾಶು ಪ್ರಾವಿಶನ್ ಮೇದಿನೀತಳಮ್ ॥33॥
ಎಲೈ ಭರತಶ್ರೇಷ್ಠನೇ, ಅನಂತರ ಪುನಃ ಅಚಿಂತ್ಯಶಕ್ತಿಯುಳ್ಳ ಅವನು ಹದಿನೈದು ನಾರಾಚಗಳನ್ನು ತೆಗೆದುಕೊಂಡು ಕೋಪಗೊಂಡವನಾಗಿ ಭೂರಿಶ್ರವನ ಮೇಲೆ ಅವುಗಳನ್ನು ಪ್ರಯೋಗಿಸಿದನು. ಅವುಗಳು ಅವನ ಕವಚವನ್ನು ಭೇದಿಸಿ ಶೀಘ್ರವಾಗಿ ಭೂತಳದಲ್ಲಿ ಇಳಿದವು.
ವಿವಿಂಶತೇಶ್ಚ ದ್ರೌಣೇಶ್ಚ ಯಂತಾರೌ ಸಮತಾಡಯತ್ |
ತೌ ಪೇತತೂ ರಥೋಪಸ್ಥೇ ರಶ್ಮೀನುತ್ಸೃಜ್ಯ ವಾಜಿನಾಮ್ ॥34॥
ವಿವಿಂಶತಿ ಮತ್ತು ಅಶ್ವತ್ಥಾಮರ ಸಾರಥಿಗಳನ್ನು ಬಾಣಗಳಿಂದ ಹೊಡೆದನು. ಅವರು ಕುದುರೆಯ ಕಡಿವಾಣಗಳನ್ನು ಬಿಟ್ಟು ರಥದ ಪೀಠದಲ್ಲಿ ಬಿದ್ದರು.
ಸಿಂಧುರಾಜ್ಞೋಽರ್ಧಚಂದ್ರೇಣ ವಾರಾಹಂ ಸ್ವರ್ಣಭೂಷಿತಮ್ |
ಉನ್ಮಮಾಥ ಮಹಾರಾಜ ದ್ವಿತೀಯೇನಾಚ್ಛಿನದ್ ಧನುಃ ॥35॥
ಎಲೈ ಮಹಾರಾಜನೇ, ಸಿಂಧುರಾಜನಾದ ಸೈಂಧವನ ಧ್ವಜದ ಸ್ವರ್ಣಭೂಷಿತವಾದ ವರಾಹವನ್ನು ಅರ್ಧಚಂದ್ರದಿಂದ ಕೆಡವಿದನು. ಅನಂತರ ಇನ್ನೊಂದು ಅರ್ಧಚಂದ್ರದಿಂದ ಅವನ ಧನುಸ್ಸನ್ನು ಕತ್ತರಿಸಿದನು.
ಚತುರ್ಭಿರಥ ನಾರಾಚೈರಾವಂತ್ಯಸ್ಯ ಮಹಾತ್ಮನಃ |
ಜಘಾನ ಚತುರೋ ವಾಹಾನ್ ಕ್ರೋಧಸಂರಕ್ತಲೋಚನಃ ॥36॥
ಕೋಪದಿಂದ ಕೆಂಪಾದ ಕಣ್ಣುಳ್ಳ ಅವನು ನಾಲ್ಕು ನಾರಾಚಗಳಿಂದ ಮಹಾತ್ಮನಾದ ಅವಂತಿರಾಜನ ನಾಲ್ಕು ಕುದುರೆಗಳನ್ನು ಕೊಂದನು.
ಪೂರ್ಣಾಯತವಿಸೃಷ್ಟೇನ ಪೀತೇನ ನಿಶಿತೇನ ಚ |
ನಿರ್ಬಿಭೇದ ಮಹಾರಾಜ ರಾಜಪುತ್ರಂ ಬೃಹದ್ಬಲಮ್ |
ಸ ಗಾಢವಿದ್ಧೋ ವ್ಯಥಿತೋ ರಥೋಪಸ್ಥ ಉಪಾವಿಶತ್ ॥37॥
ಎಲೈ ಮಹಾರಾಜನೇ, ಪೂರ್ಣವಾಗಿ ಎಳೆದು ಪ್ರಯೋಗಿಸಿದ ನೀರನ್ನು ಕುಡಿಸಿ ಹದಮಾಡಿದ ತೀಕ್ಷ್ಣವಾದ ಬಾಣದಿಂದ ಅವನು ರಾಜಪುತ್ರನಾದ ಬೃಹದ್ಬಲನನ್ನು ಹೊಡೆದನು. ಆ ಬಾಣದಿಂದ ಗಾಢವಾಗಿ ಗಾಯಗೊಂಡ ಬೃಹದ್ಬಲನು ವ್ಯಥೆಗೊಂಡು ರಥದ ಪೀಠದಲ್ಲಿ ಕುಳಿತುಕೊಂಡನು.
ಭೃಶಂ ಕ್ರೋಧೇನ ಚಾವಿಷ್ಟೋ ರಥಸ್ಥೋ ರಾಕ್ಷಸಾಧಿಪಃ |
ಚಿಕ್ಷೇಪ ನಿಶಿತಾಂಸ್ತೀಕ್ಷ್ಣಾನ್ ಶರಾನಾಶೀವಿಷೋಪಮಾನ್ |
ವಿಭಿದುಸ್ತೇ ಮಹಾರಾಜ ಶಲ್ಯಂ ಯುದ್ಧವಿಶಾರದಮ್ ॥38॥
ಬಹಳ ಕೋಪದಿಂದ ಕೂಡಿ ತನ್ನ ರಥದಲ್ಲಿದ್ದ ರಾಕ್ಷಸಶ್ರೇಷ್ಠನಾದ ಘಟೋತ್ಕಚನು ಹರಿತವಾದ, ತೀಕ್ಷ್ಣವಾದ, ಸರ್ಪಸದೃಶವಾದ ಬಾಣಗಳನ್ನು ಪ್ರಯೋಗಿಸಿದನು. ಎಲೈ ಮಹಾರಾಜನೇ, ಅವು ಯುದ್ಧವಿಶಾರದನಾದ ಶಲ್ಯನನ್ನು ಭೇದಿಸಿದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಾಶೀತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಪ್ರಾಗ್ಜ್ಯೋತಿಷಂ ಚೈವ ಘಟೋತ್ಕಚಾಯ
ಸಂಪ್ರೇಷಯಾಮಾಸ ಸುರಾಪಗಾಸುತಃ |
ಸ ಪ್ರಾಪ್ಯ ಹೈಡಿಂಬಮಯೋಧಯದ್ ಬಲೀ
ಸ ಚಾರ್ದಯಾಮಾಸ ಸಕುಂಜರಂ ತಮ್ ॥97॥
ಭೀಷ್ಮರು ಘಟೋತ್ಕಚನ ಎದುರಿಗೆ ಭಗದತ್ತನನ್ನು ಕಳುಹಿಸಿದರು. ಬಲಿಷ್ಠನಾದ ಭಗದತ್ತನು ಘಟೋತ್ಕಚನ ಬಳಿಗೆ ಹೋಗಿ ಯುದ್ಧ ಮಾಡಿದನು. ಘಟೋತ್ಕಚ ಅವನನ್ನೂ ಅವನ ಆನೆಯನ್ನೂ ಪೀಡಿಸಿದನು.
ತೇನಾರ್ದಿತಃ ಪ್ರಾಹಿಣೋತ್ ಶೂಲಮಸ್ಮೈ
ವಿಯತ್ಯಭಿಪ್ಲುತ್ಯ ತದಾ ಘಟೋತ್ಕಚಃ |
ಪ್ರಗೃಹ್ಯ ಶೂಲಂ ಪ್ರಬಭಂಜ ಜಾನುಮ್
ಆರೋಪ್ಯ ದೇವಾ ಜಹೃಷುಸ್ತದೀಕ್ಷ್ಯ ॥98॥

ಘಟೋತ್ಕಚನಿಂದ ಪೀಡಿತನಾದ ಭಗದತ್ತನು ಅವನ ಮೇಲೆ ಶೂಲವನ್ನೆಸೆದನು. ಆಗ ಘಟೋತ್ಕಚನು ಶೂಲವನ್ನು ಹಿಡಿದು ಆಕಾಶದಲ್ಲಿ ಹಾರಿ ಮೊಣಕಾಲ ಮೇಲೆ ಅದನ್ನಿಟ್ಟು ಮುರಿದ. ಅದನ್ನು ನೋಡಿ ದೇವತೆಗಳು ಆನಂದಿಸಿದರು.

ತದಾ ಸ ತಸ್ಯೈವ ಪದಾನುಗಾನ್ ನೃಪಃ
ಜಘಾನ ತಂ ಮಾರುತಿರಭ್ಯಯಾದ್ ರಣೇ |
ಸ ಪ್ರಾಹಿಣೋದ್ ಭೀಮಸೇನಾಯ ವೀರೋ
ಗಜಂ ತಮಸ್ತಂಭಯದಾಶು ಸಾಯಕೈಃ ॥99॥

ಆಗ ಭಗದತ್ತನು ಘಟೋತ್ಕಚನ ಪರಿವಾರದವರನ್ನು ಕೊಂದನು. ಅವನನ್ನು ಯುದ್ಧದಲ್ಲಿ ಭೀಮನು ಎದುರಿಸಿದನು. ಆಗ ವೀರನಾದ ಅವನು ಭೀಮಸೇನನಿಗೆ ಎದುರಾಗಿ ಆನೆಯನ್ನು ನಡೆಸಿದ. ಒಡನೆ ಭೀಮನು ಆನೆಯನ್ನು ಬಾಣಗಳಿಂದ ತಡೆದನು.

ಸಂಸ್ತಂಭಿತೇ ಬಾಣವರೈಸ್ತು ನಾಗೇ
ಭೀಮಸ್ಯಾಶ್ವಾನ್ ಸಾಯಕೈರರ್ದಯತ್ ಸಃ |
ಸೋಽಭ್ಯರ್ದಿತಾಶ್ವೋಽಥ ಗದಾಂ ಪ್ರಗೃಹ್ಯ
ಹಂತು ನೃಪಂ ತಂ ಸಗಜಂ ಸಮಾಸದತ್ ॥100॥

ಭೀಮನು ಶ್ರೇಷ್ಠವಾದ ಬಾಣಗಳಿಂದ ಸುಪ್ರತೀಕ ಆನೆಯನ್ನು ತಡೆದಾಗ ಅವನ ಕುದುರೆಗಳನ್ನು ಭಗದತ್ತನು ಬಾಣಗಳಿಂದ ಪೀಡಿಸಿದನು. ತನ್ನ ಕುದುರೆಗಳಿಗೆ ಬಹಳ ಪೀಡೆಯಾದಾಗ ಭೀಮನು ಗದೆಯನ್ನೆತ್ತಿಕೊಂಡು ಭಗದತ್ತನನ್ನು ಆನೆ ಸಮೇತವಾಗಿ ಕೊಲ್ಲಲು ಮುಂದೆ ಬಂದನು.

ಸ ಹಂತುಕಾಮೇನ ರುಷಾಽಭಿಪನ್ನೋ
ಭೀಮೇನ ರಾಜಾ ಪುರತಃ ಪೃಷ್ಠತಶ್ಚ |
ಕೃಷ್ಣೇನಾಸ್ತ್ರಂ ವೈಷ್ಣವಂ ತದ್ ಗೃಹೀತುಂ
ಸಹಾರ್ಜುನೇನಾಪಯಯೌ ಸುಭೀತಃ ॥101॥

ಮುಂದಿನಿಂದ, ತನ್ನನ್ನು ಕೊಲ್ಲಲು ಬಯಸಿ ಕೋಪದಿಂದ ಭೀಮನು ಬರುತ್ತಿರುವುದನ್ನೂ ಹಿಂದಿನಿಂದ, ತನ್ನ ವೈಷ್ಣವಾಸ್ತ್ರವನ್ನು ಅಪಹರಿಸಲು ಅರ್ಜುನ ಸಮೇತನಾಗಿ ಕೃಷ್ಣ ಬರುತ್ತಿರುವುದನ್ನೂ ಕಂಡು ಭಗದತ್ತನು ಭಯಗ್ರಸ್ತನಾಗಿ ಪಲಾಯನಗೈದನು.

ತಸ್ಮಿನ್ ಗತೇ ಭೀಮಸೇನಾರ್ಜುನಾಭ್ಯಾಂ
ವಿದ್ರಾವಿತೇ ರಾಜಸೇಂ ಸಮಸ್ತೇ |
ಭೀಷ್ಮಃ ಸೇನಾಮಪಹೃತ್ಯಾಪಯಾತೋ
ದುರ್ಯೋಧನಸ್ತಂ ನಿಶಿ ಚೋಪಜಗ್ಮಿವಾನ್ ॥102॥

ಭಗದತ್ತನು ಪಲಾಯನ ಮಾಡಿದಾಗ ಭೀಮಾರ್ಜುನರು ಸಮಸ್ತ ರಾಜ ಸಮೂಹವನ್ನೂ ಓಡಿಸಿದರು. ಆಗ ಭೀಷ್ಮರು ಸೈನ್ಯವನ್ನು ಹಿಂದೆ ಕರೆಸಿಕೊಂಡು ಹೊರಟು ಹೋದರು. ರಾತ್ರಿಯಲ್ಲಿ ಅವರ ಬಳಿಗೆ ದುರ್ಯೋಧನನು ಬಂದನು.

* * * * *

ಎಂಬತ್ತೊಂಬತ್ತನೆಯ ಅಧ್ಯಾಯ

ಅನೇಕ ವೀರರೊಡನೆ ಘಟೋತ್ಕಚನ ಯುದ್ಧ.

ಕ್ಲೇಶಕ್ಕೆ ಒಳಗಾದ ಅವನ ಸಹಾಯಕ್ಕಾಗಿ ಭೀಮಸೇನನ ಆಗಮನ.

ಸಂಜಯಃ

ವಿಮುಖೀಕೃತ್ಯ ತಾನ್ ಸರ್ವಾಂಸ್ತಾವಕಾನ್ ಯುಧಿ ರಾಕ್ಷಸಃ |
ಜಿಘಾಂಸುರ್ಭರತಶ್ರೇಷ್ಠ ದುರ್ಯೋಧನಮುಪಾದ್ರವತ್ ॥1॥

ಸಂಜಯ ರಾಕ್ಷಸನಾದ ಘಟೋತ್ಕಚನು ನಿನ್ನ ಯೋಧರನ್ನೆಲ್ಲ ಯುದ್ಧ ವಿಮುಖರನ್ನಾಗಿ ಮಾಡಿ ಎಲೈ ಭರತಶ್ರೇಷ್ಠನೇ, ದುರ್ಯೋಧನನನ್ನು ಕೊಲ್ಲಲು ಬಯಸಿ ಅವನ ಸಮೀಪಕ್ಕೆ ಧಾವಿಸಿದನು.

ತಮಾಪತಂತಂ ಸಂಪ್ರೇಕ್ಷ್ಯ ರಾಜಾನಂ ಪ್ರತಿ ವೇಗಿತಮ್ |
ಅಭ್ಯಧಾವಜ್ಜಿಘಾಂಸಂತಸ್ತಾವಕಾ ಯುದ್ಧದುರ್ಮದಾಃ ॥2॥

ರಾಜನ ಕಡೆಗೆ ವೇಗದಿಂದ ಬರುತ್ತಿದ್ದ ಅವನನ್ನು ನೋಡಿ ಯುದ್ಧ ದುರ್ಮದರಾದ ನಿನ್ನ ವೀರರು ಅವನನ್ನೇ ಕೊಲ್ಲಲು ಬಯಸಿ ಅವನ ಕಡೆಗೆ ಓಡಿದರು.

ತಾಳಮಾತ್ರಾಣಿ ಚಾಪಾನಿ ವಿಕರ್ಷಂತೋ ಮಹಾಬಲಾಃ |
ತಮೇಕಮಭ್ಯಧಾವಂತ ನದಂತಃ ಸಿಂಹಸಂಘವತ್ ॥3॥

ತಾಳವೃಕ್ಷದಷ್ಟು ಎತ್ತರವಾದ ಧನುಸ್ಸುಗಳನ್ನು ಎಳೆಯುತ್ತಾ ಮಹಾಬಲರಾದ ಅವರು ಸಿಂಹಸಮೂಹದಂತೆ ಗರ್ಜಿಸುತ್ತಾ ಅವನೊಬ್ಬನ ಮೇಲೆ ಎರಗಿದರು.

ಅಥೈನಂ ಶರವರ್ಷೇಣ ಸಮಂತಾತ್ ಪರ್ಯವಾರಯನ್ |
ಪರ್ವತಂ ವಾರಿಧಾರಾಭಿಃ ಶರದೀವ ಬಲಾಹಕಾಃ ॥4॥

ಶರತ್ಕಾಲದಲ್ಲಿ ಮೋಡಗಳು ಜಲಧಾರೆಗಳಿಂದ ಪರ್ವತವನ್ನು ಮುಚ್ಚುವಂತೆ ಬಾಣಗಳ ಮಳೆಯಿಂದ ಅವನನ್ನು ಸುತ್ತಲೂ ಮುಚ್ಚಿದರು.

ಸ ಗಾಢವಿದ್ಧೋ ವ್ಯಥಿತಸ್ತೋತ್ರಾರ್ದಿತ ಇವ ದ್ವಿಪಃ |
ಉತ್ಪಪಾತ ತದಾಕಾಶಂ ಸಮಂತಾದ್ ವೈನತೇಯವತ್ ॥5॥

ಗಾಢವಾದ ಪ್ರಹಾರಕ್ಕೆ ಒಳಗಾಗಿ ಅಂಕುಶದಿಂದ ಪೀಡಿತವಾದ ಗಜದಂತೆ ವ್ಯಥೆಗೊಂಡ ಘಟೋತ್ಕಚನು ಆಗ ಗರುಡನಂತೆ ಆಕಾಶಕ್ಕೆ ಹಾರಿದನು.
ವ್ಯನದತ್ ಸುಮಹಾನಾದಂ ಜೀಮೂತ ಇವ ಶಾರದಃ |
ದಿಶಃ ಖಂ ಪ್ರದಿಶಶ್ಚೈವ ನಾದಯನ್ ಭೈರವಸ್ವನಃ ॥6॥
ಶರತ್ಕಾಲದ ಮೋಡದಂತೆ ಭೈರವಸ್ವನದಿಂದ ದೊಡ್ಡ ಗರ್ಜನೆಯನ್ನು ಮಾಡಿ ಅಂತರಿಕ್ಷವನ್ನೂ, ದಿಕ್ಕು-ವಿದಿಕ್ಕುಗಳನ್ನೂ ಪ್ರತಿಧ್ವನಿಸಿದನು.
ರಾಕ್ಷಸಸ್ಯ ತು ತಂ ಶಬ್ದಂ ಶ್ರುತ್ವಾ ರಾಜಾ ಯುಧಿಷ್ಠಿರಃ |
ಉವಾಚ ಭರತಶ್ರೇಷ್ಠೋ ಭೀಮಸೇನಮಿದಂ ವಚಃ ॥7॥
ಘಟೋತ್ಕಚನ ಆ ಶಬ್ದವನ್ನು ಕೇಳಿದ ಭರತಶ್ರೇಷ್ಠನಾದ ಯುಧಿಷ್ಠಿರ ರಾಜನು ಭೀಮಸೇನನನ್ನು ಕುರಿತು ಈ ಮಾತನ್ನಾಡಿದನು.
ಯುಧ್ಯತೇ ರಾಕ್ಷಸೋ ನೂನಂ ಧಾರ್ತರಾಷ್ಟ್ರೈರ್ಮಹಾರಥೈಃ |
ಯಥಾಸ್ಯ ಶ್ರೂಯತೇ ಶಬ್ದೋ ನದತೋ ಭೈರವಂ ಸ್ವನಮ್ |
ಅತಿಭಾರಂ ಚ ಪಶ್ಯಾಮಿ ತತ್ರ ತಾತ ಸಮಾಹಿತಮ್ ॥8॥
ಘಟೋತ್ಕಚನು ಮಾಡುತ್ತಿರುವ ಭಯಂಕರ ಗರ್ಜನೆಗಳನ್ನು ಕೇಳಿದರೆ ಅವನು ಖಂಡಿತವಾಗಿ ಮಹಾರಥರಾದ ಧೃತರಾಷ್ಟ್ರನ ಪುತ್ರರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆಂದು ತೋರುತ್ತದೆ. ಎಲೈ ಪ್ರೀತಿಪಾತ್ರನೇ, ಅವನ ಮೇಲೆ ದೊಡ್ಡ ಭಾರವು ಒದಗಿಬಂದಿದೆ ಎಂದು ನಾನು ಭಾವಿಸುತ್ತೇನೆ.
ಪಿತಾಮಹಶ್ಚ ಸಂಕ್ರುದ್ಧಃ ಪಾಂಚಾಲಾನ್ ಹಂತುಮುದ್ಯತಃ |
ತೇಷಾಂ ಚ ರಕ್ಷಣಾರ್ಥಾಯ ಯುಧ್ಯತೇ ಫಲ್ಗುನಃ ಪರೈಃ ॥9॥
ಪಿತಾಮಹರಾದ ಭೀಷ್ಮರು ಕೋಪಗೊಂಡು ಪಾಂಚಾಲರನ್ನು ಕೊಲ್ಲಲು ಉದ್ಯುಕ್ತರಾಗಿದ್ದಾರೆ. ಪಾಂಚಾಲರನ್ನು ರಕ್ಷಿಸಲು ಅರ್ಜುನನು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ.
ಏತಚ್ಛ್ರುತ್ವಾ ಮಹಾಬಾಹೋ ಕಾರ್ಯದ್ವಯಮುಪಸ್ಥಿತಮ್ |
ಗಚ್ಛ ರಕ್ಷಸ್ವ ಹೈಡಿಂಬಂ ಸಂಶಯಂ ಪರಮಂ ಗತಮ್ ॥10॥
ಎಲೈ ಮಹಾಬಾಹುವೇ, ಒದಗಿ ಬಂದಿರುವ ಈ ಎರಡು ಕಾರ್ಯಗಳನ್ನು ಕೇಳಿ ಪ್ರಾಣಸಂಶಯಕ್ಕೆ ಸಿಲುಕಿದ ಘಟೋತ್ಕಚನ ಬಳಿಗೆ ಹೋಗಿ ಅವನನ್ನು ರಕ್ಷಿಸು (ಎಂದು ಹೇಳಿದನು).
ಭ್ರಾತುರ್ವಚನಮಾಜ್ಞಾಯ ತ್ವರಮಾಣೋ ವೃಕೋದರಃ |
ಪ್ರಯಯೌ ಸಿಂಹನಾದೇನ ತ್ರಾಸಯನ್ ಸರ್ವಪಾರ್ಥಿವಾನ್ |
ವೇಗೇನ ಮಹತಾ ರಾಜನ್ ಪರ್ವಕಾಲೇ ಯಥೋದಧಿಃ ॥11॥
ಎಲೈ ರಾಜನೇ, ಅಣ್ಣನ ಮಾತುಗಳನ್ನು ಕೇಳಿದ ವೃಕೋದರನು ಸಿಂಹನಾದದಿಂದ ಎಲ್ಲ ರಾಜರನ್ನೂ ಭಯಪಡಿಸುತ್ತಾ ಪರ್ವಕಾಲದ ಸಮುದ್ರದಂತೆ ಮಹಾವೇಗದಿಂದ ಹೊರಟನು.
ತಮನ್ವಯಾತ್ ಸತ್ಯಧೃತಿಃ ಸೌಚಿತ್ತಿರ್ಯುದ್ಧದುರ್ಮದಃ |
ಶ್ರೇಣಿಮಾನ್ ವಸುದಾನಶ್ಚ ಪುತ್ರಃ ಕಾಶ್ಯಸ್ಯ ಚಾಭಿಭೂಃ ॥12॥
ಅಭಿಮನ್ಯುಮುಖಾಶ್ಚೈವ ದ್ರೌಪದೇಯಾ ಮಹಾರಥಾಃ |
ಕ್ಷತ್ರದೇವಶ್ಚ ವಿಕ್ರಾಂತಃ ಕ್ಷತ್ರಧರ್ಮಾ ತಥೈವ ಚ ॥13॥
ಅನೂಪಾಧಿಪತಿಶ್ಚೈವ ನೀಲಃ ಸ್ವಬಲಮಾಸ್ಥಿತಃ |
ಮಹತಾ ರಥವಂಶೇನ ಹೈಡಿಂಬಂ ಪರ್ಯವಾರಯನ್ ॥14॥
ಅವನನ್ನು ಹಿಂಬಾಲಿಸಿ ಸತ್ಯಧೃತಿ, ಯುದ್ಧದುರ್ಮದನಾದ ಸೌಚಿತ್ತಿ, ಶ್ರೇಣಿಮಾನ್, ವಸುದಾನ, ಕಾಶಿರಾಜನ ಪುತ್ರ, ಅಭಿಮನ್ಯು ಮೊದಲಾದವರು, ಮಹಾರಥರಾದ ದ್ರೌಪದಿಯ ಪುತ್ರರು, ಪರಾಕ್ರಮಶಾಲಿಯಾದ ಕ್ಷತ್ರದೇವ ಮತ್ತು ಕ್ಷತ್ರಧರ್ಮ, ಅನೂಪಾಧಿಪತಿಯಾದ ಮತ್ತು ತನ್ನ ಸೈನ್ಯದಿಂದೊಡಗೂಡಿದ ನೀಲ ಇವರೆಲ್ಲರೂ ದೊಡ್ಡ ರಥಸಮೂಹದಿಂದ ಘಟೋತ್ಕಚನನ್ನು ಸುತ್ತುವರಿದು (ಅವನ ರಕ್ಷಣೆಗಾಗಿ ನಿಂತರು).
ಕುಂಜರೈಶ್ಚ ಸದಾ ಮತ್ತೈಃ ಷಟ್ಸಹಸ್ರೈಃ ಪ್ರಹಾರಿಭಿಃ |
ಅಭ್ಯರಕ್ಷಂತ ಸಹಿತಾ ರಾಕ್ಷಸೇಂದ್ರಂ ಘಟೋತ್ಕಚಮ್ ॥15॥
ಸದಾ ಮದವುಳ್ಳವೂ, ಪ್ರಹಾರಶೀಲಗಳೂ ಆದ ಆರುಸಾವಿರ ಗಜಗಳಿಂದ ಎಲ್ಲರೂ ಒಟ್ಟಾಗಿ ರಾಕ್ಷಸೇಂದ್ರನಾದ ಘಟೋತ್ಕಚನನ್ನು ರಕ್ಷಿಸಿದರು.
ಸಿಂಹನಾದೇನ ಮಹತಾ ನೇಮಿಘೋಷೇಣ ಚೈವ ಹಿ |
ಖುರಶಬ್ದನಿನಾದೈಶ್ಚ ಕಂಪಯಂತೋ ವಸುಂಧರಾಮ್ ॥16॥
ತೇಷಾಮಾಪತತಾಂ ಶ್ರುತ್ವಾ ಶಬ್ದಂ ತಂ ತಾವಕಂ ಬಲಮ್ |
ಭೀಮಸೇನಭಯೋದ್ವಿಗ್ನಂ ವಿವರ್ಣವದನಂ ತಥಾ |
ಪರಿವೃತ್ತಂ ಮಹಾರಾಜ ಪರಿತ್ಯಜ್ಯ ಘಟೋತ್ಕಚಮ್ ॥17॥
ದೊಡ್ಡ ಸಿಂಹನಾದದಿಂದಲೂ, ರಥದ ಚಕ್ರಗಳ ಘೋಷದಿಂದಲೂ, ಕುದುರೆಗಳ ಖುರಪುಟದ ನಾದಗಳಿಂದಲೂ ಭೂಮಿಯನ್ನು ನಡುಗಿಸುತ್ತಾ ತಮ್ಮ ಕಡೆಗೆ ಬರುತ್ತಿದ್ದ ಅವರ ಶಬ್ದವನ್ನು ಕೇಳಿ ನಿನ್ನ ಸೈನ್ಯವು ಭೀಮಸೇನನ ಭಯದಿಂದ ನಡುಗಿ ಮುಖದ ಕಾಂತಿಯನ್ನು ಕಳೆದುಕೊಂಡಿತು. ಮತ್ತು ಎಲೈ ಮಹಾರಾಜನೇ, ಘಟೋತ್ಕಚನನ್ನು ಬಿಟ್ಟು ಭೀಮಸೇನನ ಕಡೆಗೆ ತಿರುಗಿತು.

ತತಃ ಪ್ರವವೃತೇ ಯುದ್ಧಂ ತತ್ರತತ್ರ ಮಹಾತ್ಮನಾಮ್ |
ತಾವಕಾನಾಂ ಪರೇಷಾಂ ಚ ಸಂಗ್ರಾಮೇಷ್ವನಿವರ್ತಿನಾಮ್ ||18||
ಅನಂತರ ಯುದ್ಧದಲ್ಲಿ ಹಿಮ್ಮೆಟ್ಟದಿರುವ ಮಹಾತ್ಮರಾದ ನಿನ್ನವರಿಗೂ ಮತ್ತು ಪರರಿಗೂ ಯುದ್ಧವು ಪ್ರಾರಂಭವಾಯಿತು.
ನಾನಾರೂಪಾಣಿ ಶಸತ್ರಣಿ ವಿಸೃಜಂತೋ ಮಹಾರಥಾಃ |
ಅನ್ಯೋನ್ಯಮಭಿಧಾವಂತಃ ಸಂಪ್ರಹಾರಂ ಪ್ರಚಕ್ರಿರೇ |
ವ್ಯತಿಷಕ್ತಂ ಮಹಾರೌದ್ರಂ ಯುದ್ಧಂ ಭೀರುಭಯಾವಹಮ್ ||19||
ಮಹಾರಥರು ನಾನಾಕಾರದ ಶಸ್ತ್ರಗಳನ್ನು ಪ್ರಯೋಗಿಸುತ್ತಾ ಪರಸ್ಪರವಾಗಿ ಮುನ್ನುಗುತ್ತಾ ಪ್ರಹಾರವನ್ನು ಮಾಡಿದರು. ಭೀರುಗಳಿಗೆ ಭಯವನ್ನುಂಟು ಮಾಡುವ ಮಹಾಘೋರವಾದ ಯುದ್ಧವು ನಡೆಯಿತು.
ಹಯಾ ಗಜೈಃ ಸಮಾಜಗ್ಮುಃ ಪಾದಾತಾ ರಥಿಭಿಃ ಸಹ |
ರಥಾ ರಥೈಃ ಸಮಾಗಚ್ಛನ್ ನಾಗಾ ನಾಗೈಶ್ಚ ಸಂಯುಗೇ |
ಅನ್ಯೋನ್ಯಂ ಸಮರೇ ರಾಜನ್ ಪ್ರಾರ್ಥಯಾನಾ ಮಹದ್ಯಶಃ ||20||
ಅಶ್ವಗಳು ಗಜಗಳ ಜೊತೆಯಲ್ಲಿಯೂ, ಪದಾತಿಗಳು ರಥಿಗಳ ಜೊತೆಯಲ್ಲಿಯೂ, ರಥಗಳು ರಥಗಳ ಜೊತೆಯಲ್ಲಿಯೂ, ಗಜಗಳು ಗಜಗಳ ಜೊತೆಯಲ್ಲಿಯೂ ಯುದ್ಧದಲ್ಲಿ ಸಮಾಗಮವನ್ನು ಹೊಂದಿದವು. ಎಲೈ ರಾಜನೇ, ಯುದ್ಧದಲ್ಲಿ ಪರಸ್ಪರವಾಗಿ ದೊಡ್ಡ ಕೀರ್ತಿಯನ್ನು ಆಶಿಸುತ್ತಾ ಅವರು ಹೋರಾಡಿದರು.
ಸಹಸಾ ಚಾಭವತ್ ತೀವ್ರಂ ಸಂನಿಪಾತಾನ್ ಮಹದ್ರಜಃ |
ರಥಾಶ್ವಗಜಪತ್ತೀನಾಂ ಪದನೇಮಿಸಮುದ್ಧತಮ್ ||21||
ಆ ಸಂಘರ್ಷದಲ್ಲಿ ರಥಾಶ್ವಗಜಪದಾತಿಗಳ ಪಾದಗಳಿಂದಲೂ, ರಥಚಕ್ರದಿಂದಲೂ ತೀವ್ರವಾದ ಧೂಳು ತಕ್ಷಣವೇ ಮೇಲಕ್ಕೆದ್ದಿತು.
ಧೂಮ್ರಾರುಣಂ ರಜಸ್ತೀವ್ರಂ ರಣಭೂಮಿಂ ಸಮಾವೃಣೋತ್ |
ನೈವ ಸ್ವೇ ನ ಪರೇ ರಾಜನ್ ಸಮಜಾನನ್ಪರಸ್ಪರಮ್ ||22||
ಧೂಮದಂತೆ ಅರುಣವರ್ಣೋಪೇತವಾದ, ನಿಬಿಡವಾದ ಧೂಳು ರಣಭೂಮಿಯನ್ನು ಆವರಿಸಿತು. ಎಲೈ ರಾಜನೇ, ನಿನ್ನವರಾಗಲೀ ಅಥವಾ ಪರರಾಗಲೀ ಪರಸ್ಪರವಾಗಿ ತಮ್ಮವರನ್ನು ತಿಳಿಯಲಿಲ್ಲ.
ಪಿತಾ ಪುತ್ರಂ ನ ಜಾನೀತೇ ಪುತ್ರೋ ವಾ ಪಿತರಂ ತಥಾ |
ನಿರ್ಮರ್ಯಾದೇ ತಥಾ ಭೂತೇ ವೈಶಸೇ ಲೋಮಹರ್ಷಣೇ ||23||
ಶಸತ್ರಣಾಂ ಭರತಶ್ರೇಷ್ಠ ಮನುಷ್ಯಾಣಾಂ ಚ ಗರ್ಜತಾಮ್ |
ಸುಮಹಾನಭವಚ್ಛಬ್ದೋ ವಂಶಾನಾಮಿವ ದಹ್ಯತಾಮ್ ||24||
ತಂದೆಯು ಮಗನನ್ನು ತಿಳಿಯಲಿಲ್ಲ ಅಥವಾ ಮಗನಾದರೂ ತಂದೆಯನ್ನು ತಿಳಿಯಲಿಲ್ಲ. ಎಲ್ಲ ಎಲ್ಲೆಗಳನ್ನು ಮೀರಿದ ರೋಮಾಂಚಕಾರಿಯಾದ ಅಂತಹ ಯುದ್ಧ ಹಿಂಸೆಯು ನಡೆಯುತ್ತಿರುವಾಗ ಎಲೈ ಭರತಶ್ರೇಷ್ಠನೇ, ಶಸ್ತ್ರಗಳಿಂದ ಮತ್ತು ಗರ್ಜಿಸುವ ಮನುಷ್ಯರಿಂದ ಉಂಟಾದ ದೊಡ್ಡ ಶಬ್ದವು ಉರಿಯುವ ಬಿದಿರುಗಳ ಶಬ್ದದಂತೆ ಇದ್ದಿತು.
ಗಜವಾಜಿಮನುಷ್ಯಾಣಾಂ ಶೋಣಿತಾಂತ್ರತರಂಗಿಣೀ |
ಪ್ರಾವರ್ತತ ನದೀ ತತ್ರ ಕೇಶಶೈವಲಶಾದ್ವಲಾ ||25||
ಗಜಾಶ್ವಮನುಷ್ಯರ ರಕ್ತ-ಮಾಂಸಗಳ ತರಂಗವುಳ್ಳ, ಕೇಶಗಳೆಂಬ, ಪಾಚಿಗಳನ್ನು ಮತ್ತು ಮೃದುಪ್ರದೇಶಗಳುಳ್ಳ ಘೋರವಾದ ನದಿಯು ಅಲ್ಲಿ ಹರಿಯಿತು.
ನರಾಣಾಂ ಚೈವ ಕಾಯೇಭ್ಯಃ ಶಿರಸಾಂ ಪತತಾಂ ರಣೇ |
ಶುಶ್ರುವೇ ಸುಮಹಾನ್ ಶಬ್ದಃ ಪತತಾಮಶ್ಮನಾಮಿವ ||26||
ಯುದ್ಧದಲ್ಲಿ ಯೋಧರ ಶರೀರಗಳಿಂದ ಬೀಳುವ ಶಿರಸ್ಸುಗಳ ದೊಡ್ಡ ಶಬ್ದವು ಕಲ್ಲುಬಂಡೆಗಳು ಬೀಳುವ ಶಬ್ದವನ್ನು ಹೋಲುವಂತೆ ಇದ್ದಿತು.
ವಿಶಿರಸ್ಕೈರ್ಮನುಷ್ಯೈಶ್ಚ ಛಿನ್ನಗಾತ್ರೈಶ್ಚ ವಾರಣೈಃ |
ಅಶ್ವೈಃ ಸಂಭಿನ್ನದೇಹೈಶ್ಚ ಸಂಕೀರ್ಣಾಭೂದ್ ವಸುಂಧರಾ ||27||
ರಣಭೂಮಿಯು ಶಿರಸ್ಸಿಲ್ಲದ ಮನುಷ್ಯರಿಂದಲೂ, ಕತ್ತರಿಸಲ್ಪಟ್ಟ ದೇಹವುಳ್ಳ ಗಜಗಳಿಂದಲೂ ಮತ್ತು ಅಂತಹ ಅಶ್ವಗಳಿಂದಲೂ ನಿಬಿಡವಾಗಿ ತುಂಬಿಹೋಯಿತು.
ನಾನಾವಿಧಾನಿ ಶಸತ್ರಣಿ ವಿಸೃಜಂತೋ ಮಹಾರಥಾಃ |
ಅನ್ಯೋನ್ಯಮಭಿಧಾವಂತಃ ಸಂಪ್ರಹಾರಂ ಪ್ರಚಕ್ರಿರೇ ||28||
ಮಹಾರಥರು ನಾನಾವಿಧವಾದ ಶಸ್ತ್ರಗಳನ್ನು ಪ್ರಯೋಗಿಸುತ್ತಾ, ಪರಸ್ಪರವಾಗಿ ಧಾವಿಸುತ್ತಾ, ಸಂಪ್ರಹಾರವನ್ನು ಮಾಡಿದರು.
ಹಯಾ ಹಯಾನ್ ಸಮಾಸಾದ್ಯ ಪ್ರೇಷಿತಾ ಹಯಸಾದಿಭಿಃ |
ಸಮಾಹತ್ಯ ರಣೇಽನ್ಯೋನ್ಯಂ ನಿಪೇತುರ್ಗತಜೀವಿತಾಃ ||29||
ಕುದುರೆಗಳು ಅಶ್ವಾರೋಹಿಗಳಿಂದ ಪ್ರೇರಿಸಲ್ಪಟ್ಟು ಶತ್ರುಪಕ್ಷದ ಕುದುರೆಗಳನ್ನು ಘಟ್ಟಿಸಿ, ಪರಸ್ಪರವಾಗಿ ಪ್ರಾಣಗಳನ್ನು ತ್ಯಜಿಸಿ ರಣಭೂಮಿಯಲ್ಲಿ ಬಿದ್ದವು.
ನರಾ ನರಾನ್ ಸಮಾಸಾದ್ಯ ಕ್ರೋಧರಕ್ತೇಕ್ಷಣಾ ಭೃಶಮ್ |
ಉರಾಂಸ್ಯುರೋಭಿರನ್ಯೋನ್ಯಂ ಸಮಾಶ್ಲಿಷ್ಯ ನಿಜಘ್ನಿರೇ ||30||
ಯೋಧರು ಕ್ರೋಧದಿಂದ ಕೆಂಪಾದ ಕಣ್ಣುಳ್ಳವರಾಗಿ ಶತ್ರುಯೋಧರನ್ನು ಸಮೀಪಿಸಿ ತಮ್ಮ ಎದೆಯಿಂದ ಅವರ ಎದೆಗೆ ಗಟ್ಟಿಯಾಗಿ

ಹೊಡೆದು ಆಲಿಂಗಿಸಿ ಪ್ರಹಾರವನ್ನು ಮಾಡಿದರು.
ಪ್ರೇಷಿತಾಶ್ಚ ಮಹಾಮಾತ್ರೈರ್ವಾರಣಾಃ ಪರವಾರಣಾಃ |
ಅಭಿಘ್ನಂತಿ ವಿಷಾಣಾಗ್ರೈರ್ವಾರಣಾನೇವ ಸಂಯುಗೇ ॥31॥
ಮಹಾಮಾತ್ರದಿಂದ ಪ್ರೇರಿಸಲ್ಪಟ್ಟ ಶತ್ರುನಿವಾರಕವಾದ ಗಜಗಳು ಯುದ್ಧಭೂಮಿಯಲ್ಲಿ ತಮ್ಮ ದಂತದ ತುದಿಗಳಿಂದ ಗಜಗಳನ್ನೇ ತಿವಿದವು.
ತೇ ಜಾತರುಧಿರಾಪೀಡಾಃ ಪತಾಕಾಭಿರಲಂಕೃತಾಃ |
ಸಂಸಕ್ತಾಃ ಪ್ರತ್ಯದೃಶ್ಯಂತ ಮೇಘಾ ಇವ ಸವಿದ್ಯುತಃ ॥32॥
ಪತಾಕೆಗಳಿಂದ ಅಲಂಕೃತವಾದ ಆ ಗಜಗಳು ಅದರಿಂದ ರಕ್ತಾಭರಣಭೂಷಿತವಾಗಿ ಪರಸ್ಪರವಾಗಿ ಸೆಣೆಸಿ ಮಿಂಚಿನಿಂದ ಕೂಡಿದ ಮೋಡಗಳಂತೆ ಕಂಡುಬಂದವು.
ಕೇಚಿದ್ ಭಿನ್ನಾ ವಿಷಾಣಾಗ್ರೈರ್ಭಿನ್ನಕುಂಭಾಶ್ಚ ತೋಮರೈಃ |
ವಿನದಂತೋಽಭ್ಯಧಾವಂತ ಗರ್ಜಂತೋ ಜಲದಾ ಇವ ॥33॥
ಕೆಲವು ಗಜಗಳು ದಂತದ ಅಗ್ರಭಾಗಗಳಿಂದ ಭಿನ್ನವಾಗಿ, ಇನ್ನು ಕೆಲವು ಗಜಗಳು ತೋಮರಗಳಿಂದ ಅವುಗಳ ಕುಂಭಸ್ಥಲಗಳು ಭಿನ್ನವಾಗಿ ಮೋಡಗಳಂತೆ ಗರ್ಜಿಸುತ್ತಾ ರಣಭೂಮಿಯಲ್ಲಿ ಓಡಿದವು.
ಕೇಚಿದ್ ಹಸ್ತೈರ್ದ್ವಿಧಾ ಛಿನ್ನೈಶ್ಛಿನ್ನಗಾತ್ರಾಸ್ತಥಾಪರೇ |
ನಿಪೇತುಸ್ತುಮುಲೇ ತಸ್ಮಿಂಶ್ಛಿನ್ನಪಕ್ಷಾ ಇವಾದ್ರಯಃ ॥34॥
ಕೆಲವು ಗಜಗಳು ಎರಡು ಭಾಗವಾಗಿ ಕತ್ತರಿಸಿದ ಸೊಂಡಿಲುಗಳನ್ನು ಹೊಂದಿ, ಇನ್ನು ಕೆಲವು ಗಜಗಳು ಶರೀರವೆಲ್ಲ ಕತ್ತರಿಸಲ್ಪಟ್ಟು ರೆಕ್ಕೆಗಳನ್ನು ಕತ್ತರಿಸಿದ ಪರ್ವತಗಳಂತೆ ಆ ತೀವ್ರವಾದ ಸಂಘರ್ಷದಲ್ಲಿ ರಣಭೂಮಿಯಲ್ಲಿ ಬಿದ್ದವು.
ಪಾರ್ಶ್ವೈಸ್ತು ದಾರಿತೈರನ್ಯೇ ವಾರಣೈರ್ವರವಾರಣಾಃ |
ಮುಮುಚುಃ ಶೋಣಿತಂ ಭೂರಿ ಧಾತೂನಿವ ಮಹೀಧರಾಃ ॥35॥
ಇನ್ನು ಕೆಲವು ಗಜಗಳು ಶತ್ರುಗಜಗಳಿಂದ ಪಾರ್ಶ್ವಗಳಲ್ಲಿ ಸೀಳಲ್ಪಟ್ಟು ಪರ್ವತವು ಧಾತುಗಳನ್ನು ಸುರಿಸಿದಂತೆ ಬಹಳ ರಕ್ತವನ್ನು ಸುರಿಸಿದವು.
ನಾರಾಚಾಭಿಹತಾಸ್ತ್ವನ್ಯೇ ತಥಾ ವಿದ್ಧಾಶ್ಚ ತೋಮರೈಃ |
ಹತಾರೋಹಾ ವ್ಯದೃಶ್ಯಂತ ವಿಶೃಂಗಾ ಇವ ಪರ್ವತಾಃ ॥36॥
ನಾರಾಚಗಳಿಂದ ಹೊಡೆಯಲ್ಪಟ್ಟು, ಹಾಗೆಯೇ ತೋಮರಗಳಿಂದ ಹೊಡೆಯಲ್ಪಟ್ಟು, ಗಜಾರೋಹಿಗಳು ಹತರಾಗುತ್ತಿರಲು ಆ ಗಜಗಳು ಶಿಖರವಿಲ್ಲದ ಪರ್ವತದಂತೆ ಕಂಡುಬಂದವು.
ಕೇಚಿತ್ ಕ್ರೋಧಸಮಾವಿಷ್ಟಾ ಮದಾಂಧಾ ನಿರವಗ್ರಹಾಃ |
ರಥಾನ್ ಹಯಾನ್ ಪದಾತಾಂಶ್ಚ ಮಮೃದುಃ ಶತಶೋ ರಣೇ ॥37॥
ಕೆಲವು ಕ್ರೋಧಾವಿಷ್ಟವಾದ ಗಜಗಳು ಮದಾಂಧವಾಗಿ ಯಾವ ತಡೆಯೂ ಇಲ್ಲದೆ ರಣರಂಗದಲ್ಲಿ ನೂರಾರು ಸಂಖ್ಯೆಯಲ್ಲಿ ರಥಗಳನ್ನೂ, ಅಶ್ವಗಳನ್ನೂ ಮತ್ತು ಪದಾತಿಗಳನ್ನೂ ತುಳಿದು ಪುಡಿಮಾಡಿದವು.
ತಥಾ ಹಯಾ ಹಯಾರೋಹೈಸ್ತಾಡಿತಾಃ ಪ್ರಾಸತೋಮರೈಃ |
ತೇನ ತೇನಾಭ್ಯವರ್ತಂತ ಕುರ್ವಂತೋ ವ್ಯಾಕುಲಾ ದಿಶಃ ॥38॥
ಹಾಗೆಯೇ ಅಶ್ವಾರೋಹಿಗಳಿಂದ ಪ್ರಾಸ-ತೋಮರಗಳಿಂದ ಪ್ರಹಾರವನ್ನು ಹೊಂದಿದ ಅಶ್ವಗಳು ತಮಗೆ ಮನಸ್ಸು ಬಂದ ಕಡೆ ಓಡಿ, ಎಲ್ಲ ದಿಕ್ಕುಗಳನ್ನೂ ವ್ಯಾಕುಲಗೊಳಿಸಿದವು.
ರಥಿನೋ ರಥಿಭಿಃ ಸಾರ್ಧಂ ಕುಲಪುತ್ರಾಸ್ತನುತ್ಯಜಃ |
ಪರಾಂ ಶಕ್ತಿಂ ಸಮಾಸ್ಥಾಯ ಚಕ್ರುಃ ಕರ್ಮಾಣ್ಯಭೀತವತ್ ॥39॥
ಕುಲಪುತ್ರರೂ, ಶರೀರವನ್ನು ತ್ಯಜಿಸಲು ಸಿದ್ಧರಾದವರೂ ಆದ ರಥಿಕರು ರಥಿಕರ ಜೊತೆಯಲ್ಲಿ ಸೇರಿ ತಮ್ಮ ಉತ್ತಮವಾದ ಶಕ್ತಿಯನ್ನು ಆಶ್ರಯಿಸಿ ನಿರ್ಭಯವಾಗಿ ಹೋರಾಟವನ್ನು ಮಾಡಿದರು.
ಸ್ವಯಂವರ ಇವಾಮರ್ದೇ ಪ್ರಜಹ್ರುರಿತರೇತರಮ್ |
ಪ್ರಾರ್ಥಯಾನಾ ಯಶೋ ರಾಜನ್ ಸ್ವರ್ಗಂ ವಾ ಯುದ್ಧಶಾಲಿನಃ ॥
ಎಲೈ ರಾಜನೇ, ಸ್ವಯಂವರದ ಉತ್ಸಾಹದಂತೆ ರಣರಂಗದಲ್ಲಿ ಉತ್ಸಾಹವನ್ನು ಹೊಂದಿ ಯಶಸ್ಸನ್ನಾಗಲೀ ಅಥವಾ ಸ್ವರ್ಗವನ್ನಾಗಲೀ ಬಯಸಿ ಯುದ್ಧಶೀಲರಾದ ಯೋಧರು ಪರಸ್ಪರವಾಗಿ ಪ್ರಹಾರವನ್ನು ಮಾಡಿದರು.
ತಸ್ಮಿಂಸ್ತಥಾ ವರ್ತಮಾನೇ ಸಂಗ್ರಾಮೇ ಲೋಮಹರ್ಷಣೇ |
ಧಾರ್ತರಾಷ್ಟ್ರಂ ಮಹತ್ಸೈನ್ಯಂ ಪ್ರಾಯಶೋ ವಿಮುಖೀಕೃತಮ್ ॥41॥
ರೋಮಾಂಚಕಾರಿಯಾದ ಆ ಸಂಘರ್ಷವು ಹಾಗೆ ನಡೆಯುತ್ತಿರಲು ದುರ್ಯೋಧನನ ದೊಡ್ಡ ಸೈನ್ಯವು ಹೆಚ್ಚಾಗಿ ಯುದ್ಧ ವಿಮುಖವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕೋನಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

ತೊಂಬತ್ತನೆಯ ಅಧ್ಯಾಯ
ಘಟೋತ್ಕಚನಿಗೆ ಹೆದರಿ ಕೌರವಸೇನೆಯ ಪಲಾಯನ.
ಸಂಜಯಃ
ಸ್ವಸೈನ್ಯಂ ನಿಹತಂ ದೃಷ್ಟ್ವಾ ರಾಜಾ ದುರ್ಯೋಧನಃ ಸ್ವಯಮ್ |
ಅಭ್ಯಧಾವತ ಸಂಕ್ರುದ್ಧೋ ಭೀಮಸೇನಮರಿಂದಮಮ್ ||1||
ಸಂಜಯ ತನ್ನ ಸೈನ್ಯವು ಹತವಾಗುತ್ತಿರುವುದನ್ನು ನೋಡಿ ರಾಜನಾದ ದುರ್ಯೋಧನನು ಬಹಳ ಕೋಪಗೊಂಡು ಅರಿಂದಮನಾದ ಭೀಮಸೇನನ ಕಡೆಗೆ ಸ್ವತಃ ಧಾವಿಸಿದನು.
ಪ್ರಗೃಹ್ಯ ಸುಮಹಚ್ಚಾಪಮಿಂದ್ರಾಶನಿಸಮಸ್ವನಮ್ |
ಮಹತಾ ಶರವರ್ಷೇಣ ಪಾಂಡವಂ ಸಮವಾಕಿರತ್ ||2||
ಇಂದ್ರನ ವಜ್ರಾಯುಧಕ್ಕೆ ಸಮವಾದ ನಾದವನ್ನು ಮಾಡುವ ದೊಡ್ಡ ಧನುಸ್ಸನ್ನು ಕೈಯಲ್ಲಿ ಹಿಡಿದು ಪಾಂಡವನ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಸುರಿಸಿದನು.
ಅರ್ಧಚಂದ್ರಂ ಚ ಸಂಧಾಯ ಸುತೀಕ್ಷ್ಣಂ ಲೋಮವಾಪಿನಮ್ |
ಭೀಮಸೇನಸ್ಯ ಚಿಚ್ಛೇದ ಚಾಪಂ ಕ್ರೋಧಸಮನ್ವಿತಃ ||3||
ಕ್ರೋಧದಿಂದ ಕೂಡಿದ ಅವನು ರೋಮವನ್ನೂ ಸೀಳುವಷ್ಟು ಹರಿತವಾದ ಅರ್ಧಚಂದ್ರವನ್ನು ಬಿಲ್ಲಿಗೆ ಹೂಡಿ ಭೀಮಸೇನನ ಧನುಸ್ಸನ್ನು ಕತ್ತರಿಸಿದನು.
ತದಂತರಂ ಚ ಸಂಪ್ರೇಕ್ಷ್ಯ ತ್ವರಮಾಣೋ ಮಹಾರಥಃ |
ಸಂದಧೇ ನಿಶಿತಂ ಬಾಣಂ ಗಿರೀಣಾಮಪಿ ದಾರಣಮ್ |
ತೇನೋರಸಿ ಮಹಾಬಾಹುರ್ಭೀಮಸೇನಮತಾಡಯತ್ ||4||
ಭೀಮಸೇನನು ಕೊಟ್ಟ ಒಂದು ಅವಕಾಶವನ್ನು ನೋಡಿ ಮಹಾರಥನೂ, ಮಹಾಬಾಹುವೂ ಆದ ದುರ್ಯೋಧನನು ಪರ್ವತವನ್ನೂ ಭೇದಿಸುವಂತಹ ತೀಕ್ಷ್ಣವಾದ ಬಾಣವನ್ನು ಹೂಡಿ ಅದರಿಂದ ಭೀಮಸೇನನನ್ನು, ವಕ್ಷಸ್ಸ್ಥಲದಲ್ಲಿ ಹೊಡೆದನು.
ಸ ಗಾಢವಿದ್ಧೋ ವ್ಯಥಿತಃ ಸೃಕ್ಕಿಣೀ ಪರಿಸಂಲಿಹನ್ |
ಸಮಾಲಲಂಬೇ ತೇಜಸ್ವೀ ಧ್ವಜಂ ಹೇಮಪರಿಷ್ಕೃತಮ್ ||5||
ಆ ಬಾಣದಿಂದ ಗಾಢವಾಗಿ ಗಾಯಗೊಂಡು ವ್ಯಥಿತನಾದ ತೇಜಸ್ವಿಯಾದ ಭೀಮನು ಕಟಬಾಯಿಯನ್ನು ಸವರಿಕೊಳ್ಳುತ್ತಾ ಸುವರ್ಣಾಲಂಕೃತವಾದ ರಥಧ್ವಜವನ್ನು ಆಶ್ರಯಿಸಿದನು.
ತಥಾ ವಿಮನಸಂ ದೃಷ್ಟ್ವಾ ಭೀಮಸೇನಂ ಘಟೋತ್ಕಚಃ |
ಕ್ರೋಧೇನಾಭಿಪ್ರಜಜ್ವಾಲ ದಿಧಕ್ಷನ್ನಿವ ಪಾವಕಃ ||6||
ಭೀಮಸೇನನು ಪೀಡಿತನಾಗಿ ವಿಮನಸ್ಕನಾಗಿರುವುದನ್ನು ನೋಡಿದ ಘಟೋತ್ಕಚನು ದಹಿಸುವ ಅಗ್ನಿಯಂತೆ ಕ್ರೋಧದಿಂದ ಉರಿದನು.
ಅಭಿಮನ್ಯುಮುಖಾಶ್ಚೈವ ಪಾಂಡವಾನಾಂ ಮಹಾರಥಾಃ |
ಸಮಭ್ಯಧಾವನ್ ಕ್ರೋಶಂತೋ ರಾಜಾನಂ ಜಾತಸಂಭ್ರಮಾಃ ||7||
ಅಭಿಮನ್ಯು ಮೊದಲಾದ ಪಾಂಡವರ ಮಹಾರಥರು ಗಾಬರಿಗೊಂಡು ಸಿಂಹನಾದವನ್ನು ಮಾಡುತ್ತಾ ಭೀಮಸೇನನ ಬಳಿಗೆ ಓಡಿ ಬಂದರು.
ಸಂಪ್ರೇಕ್ಷ್ಯ ತಾನಾಪತತಃ ಸಂಕ್ರುದ್ಧಾನ್ ಜಾತಸಂಭ್ರಮಾನ್ |
ಭಾರದ್ವಾಜೋಽಬ್ರವೀದ್ ವಾಕ್ಯಂ ತಾವಕಾನಾಂ ಮಹಾರಥಾನ್ ||8||
ಬಹಳ ಕೋಪಗೊಂಡವರೂ ಮತ್ತು ಗಾಬರಿಗೊಂಡವರೂ ಆದ ಅವರು ತಮ್ಮ ಕಡೆಗೆ ಬರುತ್ತಿದ್ದುದನ್ನು ನೋಡಿದ ದ್ರೋಣರು ನಿನ್ನ ಮಹಾರಥರನ್ನು ಕುರಿತು ಮಾತನಾಡಿದರು.
ಕ್ಷಿಪ್ರಂ ಗಚ್ಛತ ಭದ್ರಂ ವೋ ರಾಜಾನಂ ಪರಿರಕ್ಷತ |
ಸಂಶಯಂ ಪರಮಂ ಪ್ರಾಪ್ತಂ ಮಜ್ಜಂತಂ ವ್ಯಸನಾರ್ಣವೇ ||9||
ನಿಮಗೆ ಮಂಗಳವಾಗಲಿ. ಬೇಗ ಹೋಗಿ. ಪ್ರಾಣಸಂಶಯಕ್ಕೆ ಸಿಲುಕಿ ವ್ಯಸನ ಸಮುದ್ರದಲ್ಲಿ ಮುಳುಗುತ್ತಿರುವ ರಾಜನನ್ನು ರಕ್ಷಿಸಿ.
ಏತೇ ಕ್ರುದ್ಧಾ ಮಹೇಷ್ವಾಸಾಃ ಪಾಂಡವಾನಾಂ ಮಹಾರಥಾಃ |
ಭೀಮಸೇನಂ ಪುರಸ್ಕೃತ್ಯ ದುರ್ಯೋಧನಮುಪದ್ರುತಾಃ ||10||
ಕ್ರೋಧಗೊಂಡವರೂ, ಮಹಾಧನುರ್ಧಾರಿಗಳೂ ಆದ ಪಾಂಡವರ ಈ ಮಹಾರಥರು ಭೀಮಸೇನನನ್ನು ಮುಂದೆ ಮಾಡಿಕೊಂಡು ದುರ್ಯೋಧನನ ಕಡೆಗೆ ಓಡಿಬರುತ್ತಿದ್ದಾರೆ.
ನಾನಾವಿಧಾನಿ ಶಸ್ತ್ರಾಣಿ ವಿಸೃಜಂತೋ ಜಯೇ ರತಾಃ |
ನದಂತೋ ಭೈರವಾನ್ನಾದಾನ್ ತ್ರಾಸಯಂತಶ್ಚ ಭೂಮಿಪಾನ್ ||11||
ಜಯದಲ್ಲಿಯೇ ಮನಸ್ಸುಳ್ಳ ಅವರು ನಾನಾವಿಧವಾದ ಶಸ್ತ್ರಗಳನ್ನು ಪ್ರಯೋಗಿಸುತ್ತಾ ಭಯಂಕರವಾದ ನಾದವನ್ನು ಮಾಡಿ ನಮ್ಮ ರಾಜರುಗಳನ್ನು ಹೆದರಿಸುತ್ತಾ (ಬರುತ್ತಿದ್ದಾರೆ) (ಎಂದು ಹೇಳಿದರು).
ತದಾಚಾರ್ಯವಚಃ ಶ್ರುತ್ವಾ ಸೋಮದತ್ತಪುರೋಗಮಾಃ |
ತಾವಕಾಃ ಸಮವರ್ತಂತ ಪಾಂಡವಾನಾಮನೀಕಿನೀಮ್ ||12||
ಆಚಾರ್ಯರ ಆ ಮಾತುಗಳನ್ನು ಕೇಳಿ ಸೋಮದತ್ತನೇ ಮೊದಲಾದ ನಿನ್ನವರು ಪಾಂಡವರ ಸೈನ್ಯವನ್ನು ಎದುರಿಸಿದರು.
ಕೃಪೋ ಭೂರಿಶ್ರವಾಃ ಶಲ್ಯೋ ದ್ರೋಣಪುತ್ರೋ ವಿವಿಂಶತಿಃ |

ಚಿತ್ರಸೇನೋ ವಿಕರ್ಣಶ್ಚ ಸೈಂಧವೋಽಥ ಬೃಹದ್ಬಲಃ |
ಆವಂತ್ಯೌ ಚ ಮಹೇಷ್ವಾಸೌ ಕೌರವಂ ಪರ್ಯವಾರಯನ್ ॥13॥
ಕೃಪರು, ಭೂರಿಶ್ರವ, ಶಲ್ಯ, ಅಶ್ವತ್ಥಾಮರು, ವಿವಿಂಶತಿ, ಚಿತ್ರಸೇನ, ವಿಕರ್ಣ, ಸೈಂಧವ, ಬೃಹದ್ಬಲ, ಅವಂತಿದೇಶದ ಸಹೋದರರು ಈ ಎಲ್ಲಾ ಮಹಾಧನುರ್ಧಾರಿಗಳು ದುರ್ಯೋಧನನನ್ನು ರಕ್ಷಿಸಲು ಅವನನ್ನು ಸುತ್ತುವರಿದರು.
ತೇ ವಿಂಶತಿಪದಂ ಗತ್ವಾ ಸಂಪ್ರಹಾರಂ ಪ್ರಚಕ್ರಿರೇ |
ಪಾಂಡವಾ ಧಾರ್ತರಾಷ್ಟ್ರಾಶ್ಚ ಪರಸ್ಪರಜಿಘಾಂಸವಃ ॥14॥
ಇಪ್ಪತ್ತು ಹೆಜ್ಜೆಗಳು ಮುಂದೆ ಹೋಗಿ ಪಾಂಡವರು ಮತ್ತು ದುರ್ಯೋಧನಾದಿಗಳು ಪರಸ್ಪರವಾಗಿ ಕೊಲ್ಲಲು ಬಯಸಿ ಶ್ರೇಷ್ಠವಾದ ಪ್ರಹಾರಗಳನ್ನು ಮಾಡಿದರು.
ಏವಮುಕತ್ವ ಮಹಾಬಾಹುರ್ಮಹದ್ ವಿಸ್ಫಾರ್ಯ ಕಾರ್ಮುಕಮ್ |
ಭಾರದ್ವಾಜಸ್ತತೋ ಭೀಮಂ ಷಡ್ವಿಂಶತ್ಯಾ ಸಮಾರ್ಪಯತ್ ॥15॥
ಮಹಾಬಾಹುಗಳಾದ ದ್ರೋಣರು ಹಿಂದೆ ಹೇಳಿದಂತೆ ಮಾತನಾಡಿ ತಮ್ಮ ಧನುಸ್ಸನ್ನು ಎಳೆದು ಭೀಮಸೇನನ ಮೇಲೆ ಇಪ್ಪತ್ತಾರು ಬಾಣಗಳನ್ನು ಪ್ರಯೋಗಿಸಿದರು.
ಭೂಯಶ್ಚೈನಂ ಮಹಾಬಾಹುಃ ಶರೈಃ ಶೀಘ್ರಮವಾಕಿರತ್ |
ಪರ್ವತಂ ವಾರಿಧಾರಾಭಿಃ ಶರದೀವ ಬಲಾಹಕಃ ॥16॥
ಮಹಾಬಾಹುಗಳಾದ ಅವರು ಪುನಃ ಶರತ್ಕಾಲದಲ್ಲಿ ಮೋಡವು ಪರ್ವತದ ಮೇಲೆ ಜಲಧಾರೆಗಳನ್ನು ಸುರಿಸುವಂತೆ ಶೀಘ್ರವಾಗಿ ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತಂ ಪ್ರತ್ಯವಿಧ್ಯದ್ ದಶಭಿರ್ಭೀಮಸೇನಃ ಶಿಲೀಮುಖೈಃ |
ತ್ವರಮಾಣೋ ಮಹೇಷ್ವಾಸಃ ಸವ್ಯೇ ಪಾರ್ಶ್ವೇ ಮಹಾಬಲಃ ॥17॥
ಮಹಾಬಲನೂ, ಮಹಾಧನುರ್ಧಾರಿಯೂ ಆದ ಭೀಮಸೇನನು ಶೀಘ್ರವಾಗಿ ದ್ರೋಣರಿಗೆ ಅವರ ಎಡಪಾರ್ಶ್ವದಲ್ಲಿ ಹತ್ತು ಬಾಣಗಳಿಂದ ಹೊಡೆದನು.
ಸ ಗಾಢವಿದ್ಧೋ ವ್ಯಥಿತೋ ವಯೋವೃದ್ಧಶ್ಚ ಭಾರತ |
ಪುನಷ್ಟಸಂಜ್ಞಃ ಸಹಸಾ ರಥೋಪಸ್ಥ ಉಪಾವಿಶತ್ ॥18॥
ಎಲೈ ಭಾರತನೇ, ಭೀಮಸೇನನ ಬಾಣಗಳಿಂದ ಗಾಢವಾಗಿ ಗಾಯಗೊಂಡು ವ್ಯಥೆಯನ್ನು ಹೊಂದಿದ ವಯೋವೃದ್ಧರಾದ ದ್ರೋಣರು ಸಂಜ್ಞೆಯನ್ನು ಕಳೆದುಕೊಂಡು ತಕ್ಷಣ ರಥಪೀಠದಲ್ಲಿ ಕುಳಿತರು.
ಗುರುಂ ಪ್ರವ್ಯಥಿತಂ ದೃಷ್ಟ್ವಾ ರಾಜಾ ದುರ್ಯೋಧನಃ ಸ್ವಯಮ್ |
ದ್ರೌಣಾಯನಿಶ್ಚ ಸಂಕ್ರುದ್ಧೌ ಭೀಮಸೇನಮಭಿದ್ರುತೌ ॥19॥
ಗುರುಗಳು ವ್ಯಥೆಗೆ ಈಡಾದುದನ್ನು ನೋಡಿ ಸ್ವತಃ ರಾಜನಾದ ದುರ್ಯೋಧನನು ಮತ್ತು ಅಶ್ವತ್ಥಾಮರು ಕೋಪಗೊಂಡು ಭೀಮಸೇನನ ಕಡೆಗೆ ಧಾವಿಸಿದರು.
ತಾವಾಪತಂತೌ ಸಂಪ್ರೇಕ್ಷ್ಯ ಕಾಲಾಂತಕಯಮೋಪಮೌ |
ಭೀಮಸೇನೋ ಮಹಾಬಾಹುರ್ಗದಾಮಾದಾಯ ಸತ್ವರಃ ॥20॥
ಅವಪ್ಲುತ್ಯ ರಥಾತ್ ತೂರ್ಣಂ ತಸ್ಥೌ ಗಿರಿರಿವಾಚಲಃ |
ಸಮುದ್ಯಮ್ಯ ಗದಾಂ ಗುರ್ವೀಂ ಯಮದಂಡೋಪಮಾಂ ರಣೇ ॥21॥
ಕಾಲಾಂತಕ ಯಮನಂತೆ ತನ್ನ ಕಡೆಗೆ ಬರುತ್ತಿದ್ದ ಅವರಿಬ್ಬರನ್ನೂ ನೋಡಿ ಮಹಾಬಾಹುವಾದ ಭೀಮಸೇನನು ಜಾಗ್ರತೆಯಾಗಿ ಗದೆಯನ್ನು ತೆಗೆದುಕೊಂಡು, ಶೀಘ್ರವಾಗಿ ರಥದಿಂದ ಕೆಳಗೆ ಹಾರಿ, ಯಮದಂಡಸದೃಶವಾದ ಆ ಭಾರವಾದ ಗದೆಯನ್ನು ಎತ್ತಿಹಿಡಿದು ರಣರಂಗದಲ್ಲಿ ಪರ್ವತದಂತೆ ಅಚಲನಾಗಿ ನಿಂತನು.
ತಮುದ್ಯತಗದಂ ದೃಷ್ಟ್ವಾ ಕೈಲಾಸಮಿವ ಶೃಂಗಿಣಮ್ |
ಕೌರವೋ ದ್ರೋಣಪುತ್ರಶ್ಚ ಸಹಿತಾವಭ್ಯಧಾವತಾಮ್ ॥22॥
ಗದೆಯನ್ನು ಎತ್ತಿಹಿಡಿದು ಕೈಲಾಸದ ಶಿಖರದಂತಿದ್ದ ಭೀಮಸೇನನನ್ನು ನೋಡಿ ದುರ್ಯೋಧನ ಮತ್ತು ಅಶ್ವತ್ಥಾಮರಿಬ್ಬರೂ ಜೊತೆಯಲ್ಲಿಯೇ ಅವನ ಕಡೆಗೆ ಧಾವಿಸಿದರು.
ತಾವಾಪತಂತೌ ಸಹಿತೌ ತ್ವರಿತೌ ಬಲಿನಾಂ ವರೌ |
ಅಭ್ಯಧಾವತ ವೇಗೇನ ತ್ವರಮಾಣೋ ವೃಕೋದರಃ ॥23॥
ಬಲಿಷ್ಠರಲ್ಲಿ ಶ್ರೇಷ್ಠರಾದ ಅವರಿಬ್ಬರೂ ಜೊತೆಯಲ್ಲಿ ತನ್ನ ಕಡೆಗೆ ಧಾವಿಸಿ ಬರುತ್ತಿರುವುದನ್ನು ನೋಡಿದ ಭೀಮಸೇನನು ತಾನೂ ತ್ವರೆಮಾಡಿ ಶೀಘ್ರವಾಗಿ ಅವರ ಕಡೆಗೆ ಓಡಿದನು.
ತಮಾಪತಂತಂ ಸಂಪ್ರೇಕ್ಷ್ಯ ಸಂಕ್ರುದ್ಧಂ ಭೀಮದರ್ಶನಮ್ |
ಸಮಭ್ಯಧಾವಂಸ್ತ್ವರಿತಾಃ ಕೌರವಾಣಾಂ ಮಹಾರಥಾಃ ॥24॥
ಬಹಳ ಕೋಪಗೊಂಡವನೂ, ನೋಡಲು ಭಯಂಕರನೂ ಆದ ಭೀಮಸೇನನು ತಮ್ಮ ಕಡೆಗೆ ಬರುತ್ತಿರುವುದನ್ನು ನೋಡಿ ಕೌರವರ ಮಹಾರಥರು ಶೀಘ್ರವಾಗಿ ಅವನ ಕಡೆಗೆ ಧಾವಿಸಿದರು.
ಭಾರದ್ವಾಜಮುಖಾಃ ಸರ್ವೇ ಭೀಮಸೇನಜಿಘಾಂಸಯಾ |
ನಾನಾವಿಧಾನಿ ಶಸತ್ರಣಿ ಭೀಮಸ್ಯೋರಸ್ಯಪಾತಯನ್ |
ಸಹಿತಾಃ ಪಾಂಡವಂ ಸರ್ವೇ ಪೀಡಯಂತಃ ಸಮಂತತಃ ॥25॥

ದ್ರೋಣರೇ ಮೊದಲಾದ ಎಲ್ಲರೂ ಜೊತೆಯಾಗಿ ಎಲ್ಲ ಕಡೆಗಳಿಂದಲೂ ಭೀಮಸೇನನನ್ನು ಪೀಡಿಸುತ್ತಾ, ಅವನನ್ನು ಕೊಲ್ಲಲು ಬಯಸಿ ನಾನಾವಿಧವಾದ ಶಸ್ತ್ರಗಳನ್ನು ಅವನ ವಕ್ಷಸ್ಸ್ಥಲದಲ್ಲಿ ಪ್ರಯೋಗಿಸಿದರು.
ತಂ ದೃಷ್ಟ್ವಾ ಸಂಶಯಂ ಪ್ರಾಪ್ತಂ ಪೀಡ್ಯಮಾನಂ ಮಹಾರಥಮ್ |
ಅಭಿಮನ್ಯುಪ್ರಭೃತಯಃ ಪಾಂಡವಾನಾಂ ಮಹಾರಥಾಃ |
ಅಭ್ಯಧಾವನ್ ಪರೀಪ್ಸಂತಃ ಪ್ರಾಣಾಂಸ್ತ್ಯಕತ್ವ ಸುದುಸ್ತ್ಯಜಾನ್ ॥26॥
ದ್ರೋಣಾದಿಗಳಿಂದ ಪೀಡಿತನಾಗಿ, ಸಂಕಟಕ್ಕೆ ಸಿಲುಕಿದ ಮಹಾರಥನಾದ ಭೀಮಸೇನನನ್ನು ರಕ್ಷಿಸಲು ಬಯಸಿ, ಅಭಿಮನ್ಯು ಮೊದಲಾದ ಪಾಂಡವರ ಮಹಾರಥರು ದುಸ್ತ್ಯಜವಾದ ತಮ್ಮ ಪ್ರಾಣಗಳನ್ನೂ ಲೆಕ್ಕಿಸದೆ (ಭೀಮಸೇನನ ರಕ್ಷಣೆಗಾಗಿ) ಓಡಿಬಂದರು.
ಅನೂಪಾಧಿಪತಿಃ ಶೂರೋ ಭೀಮಸ್ಯ ದಯಿತಃ ಸಖಾ |
ನೀಲೋ ನೀಲಾಂಬುದಪ್ರಖ್ಯಃ ಸಂಕ್ರುದ್ಧೋ ದ್ರೌಣಿಮಭ್ಯಯಾತ್ |
ಸ್ಪರ್ಧತೇ ಹಿ ಮಹೇಷ್ವಾಸೋ ನಿತ್ಯಂ ದ್ರೋಣಸುತೇನ ಯಃ ॥27॥
ಭೀಮನ ಪ್ರಿಯಸ್ನೇಹಿತನೂ, ನೀಲಮೇಘವರ್ಣನೂ, ಶೂರನೂ, ಅನೂಪ ದೇಶದ ರಾಜನೂ ಆದ ನೀಲನು ಬಹಳ ಕೋಪಗೊಂಡು ಅಶ್ವತ್ಥಾಮರನ್ನು ಎದುರಿಸಿದನು. ಮಹಾಧನುರ್ಧಾರಿಯಾದ ಅವನು ಯಾವಾಗಲೂ ಅಶ್ವತ್ಥಾಮರ ಜೊತೆಯಲ್ಲಿ ಸ್ಪರ್ಧಿಸುತ್ತಾನೆ ಎಂಬುದು ಪ್ರಸಿದ್ಧವಾದುದು.
ಸ ವಿಸ್ಫಾರ್ಯ ಮಹಚ್ಚಾಪಂ ದ್ರೌಣಿಂ ವಿವ್ಯಾಧ ಪತ್ರಿಣಾ |
ಯಥಾ ಶಕ್ರೋ ಮಹಾರಾಜ ಪುರಾ ವಿವ್ಯಾಧ ದಾನವಮ್ ॥28॥
ವಿಪ್ರಚಿತ್ತಿಂ ದುರಾಧರ್ಷಂ ದೇವತಾನಾಂ ಭಯಂಕರಮ್ |
ಯೇನ ಲೋಕತ್ರಯಂ ಕ್ರೋಧಾತ್ ತ್ರಾಸಿತಂ ಸ್ವೇನ ತೇಜಸಾ ॥29॥
ಎಲೈ ಮಹಾರಾಜನೇ, ಲೋಕತ್ರಯವನ್ನು ಕ್ರೋಧದಿಂದ ಮತ್ತು ತನ್ನ ಸಾಮರ್ಥ್ಯದಿಂದ ಹೆದರಿಸಿದವನೂ, ದೇವತೆಗಳಿಗೆ ಭಯಂಕರನೂ, ಸೋಲಿಸಲು ಸಾಧ್ಯವಿಲ್ಲದವನೂ ಆದ ದಾನವನಾದ ವಿಪ್ರಚಿತ್ತಿಯ ಜೊತೆಯಲ್ಲಿ ಹಿಂದೆ ಇಂದ್ರನು ಯುದ್ಧಮಾಡಿದಂತೆ ನೀಲನು ತನ್ನ ದೊಡ್ಡ ಧನುಸ್ಸನ್ನು ಬಗ್ಗಿಸಿ ಅಶ್ವತ್ಥಾಮರನ್ನು ಬಾಣದಿಂದ ಹೊಡೆದನು.
ತಥಾ ನೀಲೇನ ನಿರ್ಭಿನ್ನಃ ಸುಮುಖೇನ ಪತತ್ರಿಣಾ |
ಸಂಜಾತರುಧಿರೋತ್ಪೀಡೋ ದ್ರೌಣಿಃ ಕ್ರೋಧಸಮನ್ವಿತಃ ॥30॥
ಸ ವಿಸ್ಫಾರ್ಯ ಧನುಶ್ಚಿತ್ರಮಿಂದ್ರಾಶನಿಸಮಸ್ವನಮ್ |
ದಧ್ರೇ ನೀಲವಿನಾಶಾಯ ಮತಿಂ ಮತಿಮತಾಂ ವರಃ ॥31॥
ನೀಲನು ಚೆನ್ನಾಗಿ ಪ್ರಯೋಗಿಸಿದ ಪತ್ರಸಹಿತವಾದ ಬಾಣದಿಂದ ಗಾಯಗೊಂಡ ಅಶ್ವತ್ಥಾಮರು ರಕ್ತದ ಶಿರೋಭೂಷಣವನ್ನು ಹೊಂದಿದವರಾಗಿ, ಕ್ರೋಧಸಮನ್ವಿತರಾಗಿ ಇಂದ್ರನ ವಜ್ರಾಯುಧದಂತೆ ನಾದವನ್ನು ಮಾಡುವ ತಮ್ಮ ವಿಚಿತ್ರವಾದ ಧನುಸ್ಸನ್ನು ಎಳೆದು ಮೇಧಾವಿಗಳಲ್ಲಿ ಶ್ರೇಷ್ಠರಾದ ಅವರು ನೀಲನನ್ನು ವಿನಾಶ ಮಾಡುವುದಾಗಿ ನಿಶ್ಚಯಿಸಿದರು.
ತತಃ ಸಂಧಾಯ ವಿಮಲಾನ್ ಭಲ್ಲಾನ್ ಕರ್ಮಾರಪಾಯಿತಾನ್ |
ಜಘಾನ ಚತುರೋ ವಾಹಾನ್ ಪಾತಯಾಮಾಸ ಚ ಧ್ವಜಮ್ ॥32॥
ಅನಂತರ ಕಮ್ಮಾರನು ನೀರು ಕುಡಿಸಿ ಹದಮಾಡಿದ ಸ್ವಚ್ಛವಾದ ಭಲ್ಲಗಳನ್ನು ಧನುಸ್ಸಿನಲ್ಲಿ ಹೂಡಿ ಅವುಗಳಿಂದ ನೀಲನ ರಥದ ನಾಲ್ಕು ಕುದುರೆಗಳನ್ನು ಮತ್ತು ಧ್ವಜವನ್ನು ಕೆಡವಿದರು.
ಸಪ್ತಮೇನ ಚ ಭಲ್ಲೇನ ನೀಲಂ ವಿವ್ಯಾಧ ವಕ್ಷಸಿ |
ಸ ಗಾಢವಿದ್ಧೋ ವ್ಯಥಿತೋ ರಥೋಪಸ್ಥ ಉಪಾವಿಶತ್ ॥33॥
ಏಳನೆಯ ಭಲ್ಲವನ್ನು ಪ್ರಯೋಗಿಸಿ ನೀಲನನ್ನು ಎದೆಯಲ್ಲಿ ಹೊಡೆದರು. ಗಾಢವಾದ ಪ್ರಹಾರಕ್ಕೆ ಒಳಗಾದ ಅವನು ವ್ಯಥೆಯಿಂದ ಕೂಡಿ ರಥಪೀಠದಲ್ಲಿ ಕುಳಿತನು.
ಮೋಹಿತಂ ವೀಕ್ಷ್ಯ ರಾಜಾನಂ ನೀಲಮಭ್ರಚಯೋಪಮಮ್ |
ಘಟೋತ್ಕಚೋಽಪಿ ಸಂಕ್ರುದ್ಧೋ ಭ್ರಾತೃಭಿಃ ಪರಿವಾರಿತಃ ॥34॥
ಅಭಿದುದ್ರಾವ ವೇಗೇನ ದ್ರೌಣಿಮಾಹವಶೋಭಿನಮ್ |
ತಥೇತರೇ ಅಭ್ಯಧಾವನ್ ರಾಕ್ಷಸಾ ಯುದ್ಧದುರ್ಮದಾಃ ॥35॥
ಮೋಡದ ರಾಶಿಯಂತೆ ನೀಲವರ್ಣದಿಂದ ಕೂಡಿದ್ದ ನೀಲರಾಜನು ಮೂರ್ಛೆ ಹೊಂದಿದುದನ್ನು ನೋಡಿ ಘಟೋತ್ಕಚನೂ ಸಹ ಕ್ರೋಧಗೊಂಡು ತನ್ನ ಬಂಧುಗಳಿಂದ ಪರಿವಾರಿತನಾಗಿ ಯುದ್ಧದಲ್ಲಿ ಶೋಭಿಸುವ ಅಶ್ವತ್ಥಾಮರ ಕಡೆಗೆ ವೇಗದಿಂದ ಸಾಗಿದನು. ಯುದ್ಧದುರ್ಮದರಾದ ಇತರ ರಾಕ್ಷಸರೂ ಹಾಗೆಯೇ ಓಡಿದರು.
ತಮಾಪತಂತಂ ಸಂಪ್ರೇಕ್ಷ್ಯ ರಾಕ್ಷಸಂ ಘೋರದರ್ಶನಮ್ |
ಅಭ್ಯಧಾವತ ತೇಜಸ್ವೀ ಭಾರದ್ವಾಜಾತ್ಮಜಸ್ತ್ವರನ್ ॥36॥
ತನ್ನ ಕಡೆಗೆ ಓಡಿ ಬರುತ್ತಿದ್ದ ಘೋರರೂಪನಾದ ರಾಕ್ಷಸನನ್ನು ನೋಡಿ ತೇಜಸ್ವಿಗಳಾದ ದ್ರೋಣಪುತ್ರರು ತಾವೂ ಕ್ಷಿಪ್ರವಾಗಿ ಅವನ ಕಡೆಗೆ ಓಡಿದರು.
ನಿಜಘಾನ ಚ ಸಂಕ್ರುದ್ಧೋ ರಾಕ್ಷಸಾನ್ ಭೀಮದರ್ಶನಾನ್ |
ಯೋಽಭವನ್ನಗ್ರತಃ ಕ್ರುದ್ಧಾ ರಾಕ್ಷಸಸ್ಯ ಪುರಃಸರಾಃ ॥37॥
ಬಹಳ ಕೋಪಗೊಂಡ ಅವರು ಘಟೋತ್ಕಚನ ಮುಂಭಾಗದಲ್ಲಿದ್ದ ಕ್ರೋಧಗೊಂಡ ಭಯಂಕರ ರೂಪವುಳ್ಳ ರಾಕ್ಷಸರನ್ನು ಬಾಣಗಳಿಂದ ಹೊಡೆದರು.

ವಿಮುಖಾಂಶ್ಚೈವ ತಾನ್ ದೃಷ್ಟ್ವಾ ದ್ರೌಣಿಚಾಪಚ್ಯುತೈಃ ಶರೈಃ |
ಅಕ್ರುಧ್ಯತ ಮಹಾಕಾಯೋ ಭೈಮಸೇನಿರ್ಘಟೋತ್ಕಚಃ ||38||
ಅಶ್ವತ್ಥಾಮರ ಬಿಲ್ಲಿನಿಂದ ಹೊರಹೊಮ್ಮಿದ ಬಾಣಗಳಿಂದ ಪೀಡಿತರಾಗಿ ಯುದ್ಧವಿಮುಖರಾದ ಅವರನ್ನು ನೋಡಿ ಮಹಾಕಾಯನೂ, ಭೀಮಸೇನ ಪುತ್ರನೂ ಆದ ಘಟೋತ್ಕಚನು ಕ್ರೋಧವನ್ನು ತಾಳಿದನು.
ಪ್ರಾದುಶ್ಚಕ್ರೇ ಮಹಾಮಾಯಾಂ ಘೋರರೂಪಾಂ ಸುದಾರುಣಾಮ್ |
ಮೋಹಯನ್ ಸಮರೇ ದ್ರೌಣಿಂ ಮಾಯಾವೀ ರಾಕ್ಷಸಾಧಿಪಃ ||39||
ರಾಕ್ಷಸಾಧಿಪತಿಯೂ ಮತ್ತು ಮಾಯಾವಿಯೂ ಆದ ಅವನು ಭಯಂಕರವಾದ ಘೋರರೂಪವುಳ್ಳ ದೊಡ್ಡ ಮಾಯೆಯನ್ನು ಸೃಷ್ಟಿಸಿ ಯುದ್ಧದಲ್ಲಿ ಅಶ್ವತ್ಥಾಮರನ್ನು ಮರುಳು ಮಾಡಿದನು.
ತತಸ್ತೇ ತಾವಕಾಃ ಸರ್ವೇ ಮಾಯಯಾ ವಿಮುಖೀಕೃತಾಃ |
ಅನ್ಯೋನ್ಯಂ ಸಮಪಶ್ಯಂತ ನಿಕೃತ್ತಾನ್ ಮೇದಿನೀತಳೇ |
ವಿಚೇಷ್ಟಮಾನಾನ್ ಕೃಪಣಾನ್ ಶೋಣಿತೇನ ಸಮುಕ್ಷಿತಾನ್ ||40||
ಆಗ ನಿನ್ನ ಯೋಧರೆಲ್ಲರೂ ಘಟೋತ್ಕಚನ ಮಾಯೆಯಿಂದ ಯುದ್ಧ ವಿಮುಖರಾಗಿ ತಾವು ಪರಸ್ಪರವಾಗಿ ಭೂಮಿಯಲ್ಲಿ ಬಿದ್ದು ಶರೀರವು ಕತ್ತರಿಸಲ್ಪಟ್ಟು, ರಕ್ತದಿಂದ ತೊಯ್ದು ಹೊರಳಾಡುವುದನ್ನು ನೋಡಿದರು.
ದ್ರೋಣಂ ದುರ್ಯೋಧನಂ ಶಲ್ಯಮಶ್ವತ್ಥಾಮಾನಮೇವ ಚ |
ಪ್ರಾಯಶಶ್ಚ ಮಹೇಷ್ವಾಸಾ ಯೇ ಪ್ರಧಾನಾಶ್ಚ ಕೌರವಾಃ ||41||
ವಿಧ್ವಸ್ತಾ ರಥಿನಃ ಸರ್ವೇ ಗಜಾಶ್ಚ ವಿನಿಪಾತಿತಾಃ |
ಹಯಾಶ್ಚ ಸಹಯಾರೋಹಾ ವಿನಿಕೃತ್ತಾಃ ಸಹಸ್ರಶಃ ||42||
ದ್ರೋಣರು, ದುರ್ಯೋಧನ, ಶಲ್ಯ, ಅಶ್ವತ್ಥಾಮ ಮತ್ತು ಕೌರವರ ಪಕ್ಷದ ಪ್ರಧಾನರಾದ ಧನುರ್ಧಾರಿಗಳು, ಎಲ್ಲ ಮಹಾರಥರು, ಗಜಗಳು, ಅಶ್ವಗಳು ಮತ್ತು ಅಶ್ವಾರೋಹಿಗಳು ಸಹಸ್ರ ಸಂಖ್ಯೆಯಲ್ಲಿ ಕತ್ತರಿಸಲ್ಪಟ್ಟವು.
ತದ್ ದೃಷ್ಟ್ವಾ ತಾವಕಂ ಸೈನ್ಯಂ ವಿದ್ರುತಂ ಶಿಬಿರಂ ಪ್ರತಿ |
ಮಮ ಪ್ರಾಕ್ರೋಶತೋ ರಾಜನ್ ತಥಾ ದೇವವ್ರತಸ್ಯ ಚ ||43||
ಅದನ್ನು ನೋಡಿದ ನಿನ್ನ ಸೈನ್ಯವು ಎಲೈ ರಾಜನೇ, ನಾನು ಮತ್ತು ಭೀಷ್ಮರು ಕಿರುಚುತ್ತಿದ್ದರೂ ತಮ್ಮ ಶಿಬಿರಕ್ಕೆ ಓಡಿಹೋಯಿತು.
ಯುಧ್ಯಧ್ವಂ ಮಾ ಪಲಾಯಧ್ವಂ ಮಾಯೈಷಾ ರಾಕ್ಷಸೀ ರಣೇ |
ಘಟೋತ್ಕಚಪ್ರಯುಕ್ತೇತಿ ನಾತಿಷ್ಠಂತ ವಿಮೋಹಿತಾಃ |
ನೈವ ತೇ ಶ್ರದ್ದಧುರ್ಭೀತಾ ವದತೋರಾವಯೋರ್ವಚಃ ||44||
ಯುದ್ಧವನ್ನು ಮಾಡಿ, ಓಡಬೇಡಿ, ಇದು ಘಟೋತ್ಕಚನು ಪ್ರಯೋಗಿಸಿದ ರಾಕ್ಷಸ ಮಾಯೆಗೆ (ಎಂದು ನಾವಿಬ್ಬರೂ ಕಿರುಚಿದರೂ) ಮರುಳುಗೊಂಡ ಅವರು ನಿಲ್ಲಲಿಲ್ಲ. ಭಯಗ್ರಸ್ತರಾದ ಅವರು ನಮ್ಮಿಬ್ಬರ ಮಾತನ್ನು ನಂಬಲಿಲ್ಲ.
ತಾಂಶ್ಚ ಪ್ರದ್ರುವತೋ ದೃಷ್ಟ್ವಾ ಜಯಂ ಪ್ರಾಪ್ತಾಶ್ಚ ಪಾಂಡವಾಃ |
ಘಟೋತ್ಕಚೇನ ಸಹಿತಾಃ ಸಿಂಹನಾದಾನ್ ಪ್ರಚಕ್ರಿರೇ |
ಶಂಖದುಂದುಭಿಘೋಷಾಶ್ಚ ಸಮಂತಾತ್ ಸಸ್ವನುರ್ಭೃಶಮ್ ||45||
ನಿನ್ನ ಯೋಧರು ಓಡುವುದನ್ನು ನೋಡಿ ಜಯವನ್ನು ಪಡೆದ ಪಾಂಡವರು ಘಟೋತ್ಕಚನ ಜೊತೆಯಲ್ಲಿ ಸಿಂಹನಾದಗಳನ್ನು ಮಾಡಿದರು. ಎಲ್ಲ ಕಡೆಗಳಲ್ಲಿಯೂ ಶಂಖ-ದುಂದುಭಿಗಳ ದೊಡ್ಡ ಘೋಷವು ಉಂಟಾಯಿತು.
ಏವಂ ತವ ಬಲಂ ಸರ್ವಂ ಹೈಡಿಂಬೇನ ದುರಾತ್ಮನಾ |
ಸೂರ್ಯಾಸ್ತಮಯವೇಲಾಯಾಂ ಪ್ರಭಗ್ನಂ ವಿದ್ರುತಂ ದಿಶಃ ||46||
ಹೀಗೆ ನಿನ್ನ ಸೈನ್ಯವೆಲ್ಲವೂ ದುರಾತ್ಮನಾದ ಘಟೋತ್ಕಚನಿಂದ ಭಗ್ನವಾಗಿ ಸೂರ್ಯಾಸ್ತ ಸಮಯದಲ್ಲಿ ದಿಕ್ಕು ದಿಕ್ಕುಗಳಿಗೆ ಓಡಿಹೋಯಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ನವತಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಪಂಚಾಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂದನೆಯ ಅಧ್ಯಾಯ
ಘಟೋತ್ಕಚನಿಂದ ಪರಾಜಯವನ್ನು ಹೊಂದಿದ ದುರ್ಯೋಧನನಿಂದ ಭಗದತ್ತನ ಪ್ರೇಷಣ. ಭಗದತ್ತ-ಘಟೋತ್ಕಚರ ಯುದ್ಧ.
ಸಂಜಯಃ
ತಸ್ಮಿನ್ ಮಹತಿ ಸಂಕ್ರಂದೇ ರಾಜಾ ದುರ್ಯೋಧನಸ್ತದಾ |
ಪರಾಜಯಂ ರಾಕ್ಷಸೇನ ನಾಮೃಷ್ಯತ ಪರಂತಪ |
ಗಾಂಗೇಯಮುಪಸಂಗಮ್ಯ ವಿನಯೇನಾಭಿವಾದ್ಯ ಚ ||1||
ತಸ್ಯ ಸರ್ವಂ ಯಥಾವೃತ್ತಮಾಖ್ಯಾತುಮುಪಚಕ್ರಮೇ |
ಘಟೋತ್ಕಚಸ್ಯ ವಿಜಯಮಾತ್ಮನಶ್ಚ ಪರಾಜಯಮ್ ||2||
ಸಂಜಯ ಅಂತಹ ದೊಡ್ಡಸಂಘರ್ಷದಲ್ಲಿ ರಾಜನಾದ ದುರ್ಯೋಧನನು ಘಟೋತ್ಕಚನಿಂದ ಆದ ಪರಾಜಯವನ್ನು ಸಹಿಸಲಿಲ್ಲ. ಎಲೈ ಪರಂತಪನೇ, ಅವನು ಭೀಷ್ಮರನ್ನು ಸಮೀಪಿಸಿ ವಿನಯದಿಂದ ನಮಸ್ಕಾರವನ್ನು ಮಾಡಿ ಘಟೋತ್ಕಚನ ವಿಜಯ, ತನ್ನ

ಪರಾಜಯ ಎಲ್ಲವನ್ನೂ ನಡೆದಂತೆ ಹೇಳಲು ಪ್ರಾರಂಭಿಸಿದನು.
ಕಥಯಾಮಾಸ ದುರ್ಧರ್ಷೋ ವಿನಿಃಶ್ವಸ್ಯ ಪುನಃ ಪುನಃ |
ಅಬ್ರುವೀಚ್ಚ ತದಾ ರಾಜನ್ ಭೀಷ್ಮಂ ಕುರುಪಿತಾಮಹಮ್ ॥3॥
ಎಲೈ ರಾಜನೇ, ಯುದ್ಧದಲ್ಲಿ ಸೋಲಿಸಲು ಕಷ್ಟಸಾಧ್ಯನಾದ ಅವನು ಪುನಃ ಪುನಃ ನಿಟ್ಟುಸಿರನ್ನು ಬಿಟ್ಟು ಕುರುಪಿತಾಮಹರಾದ ಭೀಷ್ಮರನ್ನು ಕುರಿತು ಆಗ ಮಾತನಾಡಿದನು.
ಭವಂತಂ ಸಮುಪಾಶ್ರಿತ್ಯ ವಾಸುದೇವಂ ಯಥಾ ಪರೈಃ |
ಪಾಂಡವೈರ್ವಿಗ್ರಹೋ ಘೋರಃ ಸಮಾರಬ್ಧೋ ಮಯಾ ಪ್ರಭೋ ॥4॥
ಎಲೈ ಪ್ರಭುವೇ, ಪಾಂಡವರು ಕೃಷ್ಣನನ್ನು ಆಶ್ರಯಿಸಿದಂತೆ ನಾನು ನಿಮ್ಮನ್ನು ಆಶ್ರಯಿಸಿ ಪಾಂಡವರ ಜೊತೆಯಲ್ಲಿ ಘೋರವಾದ ಕದನವನ್ನು ಪ್ರಾರಂಭಿಸಿದ್ದೇನೆ.
ಏಕಾದಶ ಸಮಾಖ್ಯಾತಾ ಅಕ್ಷೋಹಿಣ್ಯಶ್ಚ ಯಾ ಮಮ |
ನಿದೇಶೇ ತವ ತಿಷ್ಠಂತಿ ಮಯಾ ಸಾರ್ಧಂ ಪರಂತಪ ॥5॥
ಎಲೈ ಪರಂತಪರೇ, ನನ್ನ ಹನ್ನೊಂದು ಅಕ್ಷೋಹಿಣಿ ಸೈನ್ಯಗಳು ನನ್ನ ಜೊತೆಯಲ್ಲಿ ನಿಮ್ಮ ಆಜ್ಞಾಧಾರಕವಾಗಿವೆ.
ಸೋಽಹಂ ಭರತಶಾರ್ದೂಲ ಭೀಮಸೇನಪುರೋಗಮೈಃ |
ಘಟೋತ್ಕಚಂ ಸಮಾಶ್ರಿತ್ಯ ಪಾಂಡವೈರ್ಯುಧಿ ನಿರ್ಜಿತಃ ॥6॥
ಎಲೈ ಭರತಶಾರ್ದೂಲರೇ, ಅಂತಹ ನಾನು ಘಟೋತ್ಕಚನನ್ನು ಆಶ್ರಯಿಸಿದ ಭೀಮಸೇನ ಮೊದಲಾದ ಪಾಂಡವರಿಂದ ಯುದ್ಧದಲ್ಲಿ ಪರಾಜಯವನ್ನು ಹೊಂದಿದೆ.
ತನ್ಮೇ ದಹತಿ ಗಾತ್ರಾಣಿ ಶುಷ್ಕವೃಕ್ಷಮಿವಾನಲಃ |
ತದಿಚ್ಛಾಮಿ ಮಹಾಭಾಗ ತ್ವತ್ಪ್ರಸಾದಾತ್ ಪರಂತಪ ॥7॥
ರಾಕ್ಷಸಾಪಶದಂ ಹಂತುಂ ಸ್ವಯಮೇವ ಪಿತಾಮಹ |
ತ್ವಾಂ ಸಮಾಶ್ರಿತ್ಯ ದುರ್ಧರ್ಷಂ ತನ್ಮೇ ಕರ್ತುಂ ತ್ವಮರ್ಹಸಿ ॥8॥
ಆ ಪರಾಜಯವು ಒಣಗಿದ ವೃಕ್ಷವನ್ನು ಅಗ್ನಿಯು ಸುಡುವಂತೆ ನನ್ನ ಶರೀರವನ್ನು ಸುಡುತ್ತಿದೆ. ಎಲೈ ಪರಂತಪರೇ, ಪಿತಾಮಹರೇ, ಮಹಾನುಭಾವರೇ, ನಿಮ್ಮ ಅನುಗ್ರಹದಿಂದ ನಿಮ್ಮನ್ನು ಆಶ್ರಯಿಸಿ, ಸೋಲಿಸಲು ಕಷ್ಟಸಾಧ್ಯನಾದ ಆ ರಾಕ್ಷಸಾಧಮನನ್ನು ನಾನೇ ಕೊಲ್ಲಲು ಬಯಸುತ್ತೇನೆ. ನೀವು ನನಗೆ ಆ ಉಪಕಾರವನ್ನು ಮಾಡಬೇಕು (ಎಂದು ಹೇಳಿದನು).
ಸಂಜಯಃ
ಏತಚ್ಛ್ರುತ್ವಾ ತು ವಚನಂ ರಾಜ್ಞೋ ಭರತಸತ್ತಮ |
ದುರ್ಯೋಧನಮಿದಂ ವಾಕ್ಯಂ ಭೀಷ್ಮಃ ಶಾಂತನವೋಽಬ್ರವೀತ್ ॥9॥
ಸಂಜಯ ಎಲೈ ಭರತಶ್ರೇಷ್ಠನೇ, ರಾಜನ ಈ ಮಾತುಗಳನ್ನು ಕೇಳಿ ಶಂತನು ಪುತ್ರರಾದ ಭೀಷ್ಮರು ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಆಡಿದರು.
ಶೃಣು ರಾಜನ್ ಮಮ ವಚೋ ಯತ್ತತ್ತ್ವ ವಕ್ಷ್ಯಾಮಿ ಕೌರವ |
ಯಥಾ ತ್ವಯಾ ಮಹಾರಾಜ ವರ್ತಿತವ್ಯಂ ಪರಂತಪ ॥10॥
ಎಲೈ ರಾಜನೇ, ಕೌರವನೇ, ಪರಂತಪನೇ, ನೀನು ಹೇಗೆ ನಡೆದುಕೊಳ್ಳಬೇಕೆಂದು ನಾನು ನಿನಗೆ ಹೇಳುವೆನು. ಆ ನನ್ನ ಮಾತುಗಳನ್ನು ಕೇಳು.
ಆತ್ಮಾ ರಕ್ಷ್ಯೋ ರಣೇ ತಾತ ಸರ್ವಾವಸ್ಥಾಸ್ವರಿಂದಮ |
ಧರ್ಮರಾಜೇನ ಸಂಗ್ರಾಮಸ್ತ್ವಯಾ ಕಾರ್ಯಃ ಸದಾನಘ ॥11॥
ಎಲೈ ಪ್ರೀತಿಪಾತ್ರನೇ, ಅರಿಂದಮನೇ, ಎಲ್ಲಾ ಪರಿಸ್ಥಿತಿಯಲ್ಲಿಯೂ ರಾಜನು ಯುದ್ಧದಲ್ಲಿ ತನ್ನನ್ನು ರಕ್ಷಿಸಿಕೊಳ್ಳಬೇಕು. ಎಲೈ ಅನಘನೇ, ನೀನು ಧರ್ಮರಾಜನ ಜೊತೆಯಲ್ಲಿಯೇ ಸದಾ ಯುದ್ಧವನ್ನು ಮಾಡಬೇಕು.
ಅರ್ಜುನೇನ ಯಮಾಭ್ಯಾಂ ವಾ ಭೀಮಸೇನೇನ ವಾ ಪುನಃ |
ರಾಜಧರ್ಮಂ ಪುರಸ್ಕೃತ್ಯ ರಾಜಾ ರಾಜಾನಮೃಚ್ಛತಿ ॥12॥
ನೀನು ರಾಜಧರ್ಮವನ್ನು ಪುರಸ್ಕರಿಸಿ ಅರ್ಜುನನ ಜೊತೆಯಲ್ಲಾಗಲೀ, ನಕುಲ- ಸಹದೇವರ ಜೊತೆಯಲ್ಲಾಗಲೀ ಅಥವಾ ಭೀಮಸೇನನ ಜೊತೆಯಲ್ಲಾಗಲೀ ಯುದ್ಧವನ್ನು ಮಾಡಬೇಕು. ರಾಜನು ರಾಜನ ಜೊತೆಯಲ್ಲಿ ಹೋರಾಡಬೇಕೆಂಬುದು ರಾಜಧರ್ಮ.
ಅಹಂ ದ್ರೋಣಃ ಕೃಪೋ ದ್ರೌಣಿಃ ಕೃತವರ್ಮಾ ಚ ಸಾತ್ವತಃ |
ಶಲ್ಯಶ್ಚ ಸೌಮದತ್ತಿಶ್ಚ ವಿಕರ್ಣಶ್ಚ ಮಹಾರಥಃ ॥13॥
ತವ ಚ ಭ್ರಾತರಃ ಶೂರಾ ದುಃಶಾಸನಪುರೋಗಮಾಃ |
ತ್ವದರ್ಥಂ ಪ್ರತಿಯೋತ್ಸ್ಯಾಮೋ ರಾಕ್ಷಸಂ ತಂ ಮಹಾಬಲಮ್ ॥14॥
ನಾನು, ದ್ರೋಣರು, ಕೃಪರು, ಅಶ್ವತ್ಥಾಮರು, ಸಾತ್ವತನಾದ ಕೃತವರ್ಮ, ಶಲ್ಯ, ಭೂರಿಶ್ರವ, ಮಹಾರಥನಾದ ವಿಕರ್ಣ, ದುಶ್ಶಾಸನನೇ ಮೊದಲಾದ ಶೂರರಾದ ನಿಮ್ಮ ತಮ್ಮಂದಿರು, ನಾವೆಲ್ಲರೂ ನಿನ್ನ ಸಲುವಾಗಿ ಮಹಾಬಲನಾದ ಘಟೋತ್ಕಚನ ಜೊತೆಯಲ್ಲಿ ಯುದ್ಧವನ್ನು ಮಾಡುವೆವು.
ತಸ್ಮಿನ್ ರೌದ್ರೇ ರಾಕ್ಷಸೇಂದ್ರೇ ಯದಿ ತೇಽನುಶಯೋ ಮಹಾನ್ |
ಅಯಂ ವಾ ಗಚ್ಛತು ರಣೇ ತಸ್ಯ ಯುದ್ಧಾಯ ದುರ್ಮತೇಃ |
ಭಗದತ್ತೋ ಮಹೀಪಾಲಃ ಪುರಂದರಸಮೋ ಯುಧಿ ॥15॥

ಆ ಘೋರವಾದ ರಾಕ್ಷಸೇಂದ್ರನನ್ನು ಕೊಲ್ಲಲೇಬೇಕು ಎಂದು ನಿನಗೆ ಆಗ್ರಹವಿದ್ದರೆ ಆ ದುರ್ಮತಿಯ ವಧೆಗಾಗಿ ಯುದ್ಧದಲ್ಲಿ ಇಂದ್ರನಿಗೆ ಸಮನಾದ ಈ ಭಗದತ್ತರಾಜನು ಅವನ ಜೊತೆಯಲ್ಲಿ ಯುದ್ಧಕ್ಕೆ ಹೋಗಲು (ಎಂದು ಹೇಳಿದರು).

ಏತಾವದುಕತ್ವ ರಾಜಾನಂ ಭಗದತ್ತಮಥಾಬ್ರವೀತ್ |
ಸಮಕ್ಷಂ ಪಾರ್ಥಿವೇಂದ್ರಸ್ಯ ವಾಕ್ಯಂ ವಾಕ್ಯವಿಶಾರದಃ ॥16॥
ಗಚ್ಛ ಶೀಘ್ರಂ ಮಹಾರಾಜ ಹೈಡಿಂಬಂ ಯುದ್ಧದುರ್ಮದಮ್ |
ವಾರಯಸ್ವ ರಣೇ ಯತ್ತೋ ಮಿಷತಾಂ ಸರ್ವಧನ್ವಿನಾಮ್ |
ರಾಕ್ಷಸಂ ಕ್ರೂರಕರ್ಮಾಣಂ ಯಥೇಂದ್ರಸ್ತಾರಕಂ ಪುರಾ ॥17॥

ವಾಕ್ಯವಿಶಾರದರಾದ ಆ ಭೀಷ್ಮರು ರಾಜನನ್ನು ಕುರಿತು ಇಷ್ಟು ಮಾತುಗಳನ್ನು ಹೇಳಿ ರಾಜನ ಎದುರಿನಲ್ಲಿಯೇ ಭಗದತ್ತನನ್ನು ಕುರಿತು, ಮಹಾರಾಜನೇ, ಯುದ್ಧ ದುರ್ಮದನಾದ ಘಟೋತ್ಕಚನ ಬಳಿಗೆ ಹೋಗು. ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆ ಕ್ರೂರಕರ್ಮವನ್ನು ಮಾಡುವ ಅವನನ್ನು ಇಂದ್ರನು ಹಿಂದೆ ತಾರಕಾಸುರನನ್ನು ನಿವಾರಿಸಿದಂತೆ ನಿವಾರಣೆ ಮಾಡು ಎಂದು ಹೇಳಿದರು.

ತವ ದಿವ್ಯಾನಿ ಚಾಸತ್ರಣಿ ವಿಕ್ರಮಶ್ಚ ಪರಂತಪ |
ಸಮಾಗಮಶ್ಚ ಬಹುಭಿಃ ಪುರಾಭೂದಸುರೈಃ ಸಹ ॥18॥

ಎಲೈ ಪರಂತಪನೇ, ನಿನ್ನ ಬಳಿ ದಿವ್ಯಾಸ್ತ್ರಗಳಿವೆ, ಪರಾಕ್ರಮವೂ ಇದೆ. ನೀನು ಹಿಂದೆ ಅನೇಕ ಅಸುರರ ಜೊತೆಯಲ್ಲಿ ಯುದ್ಧವನ್ನು ಮಾಡಿದ್ದೀಯೆ.

ತ್ವಂ ತಸ್ಯ ರಾಜಶಾರ್ದೂಲ ಪ್ರತಿಯೋದ್ಧಾ ಮಹಾಹವೇ |
ಸ್ವಬಲೇನ ವೃತೋ ರಾಜನ್ ಜಹಿ ರಾಕ್ಷಸಪುಂಗವಮ್ ॥19॥

ಎಲೈ ರಾಜಶಾರ್ದೂಲನೇ, ದೊಡ್ಡ ಯುದ್ಧದಲ್ಲಿ ನೀನು ಅವನಿಗೆ ಪ್ರತಿಯುದ್ಧವನ್ನು ಮಾಡುವವನಾಗುತ್ತೀಯೆ. ಎಲೈ ರಾಜನೇ, ನಿನ್ನ ಸೈನ್ಯದ ಜೊತೆಯಲ್ಲಿ ಹೋಗಿ ಆ ರಾಕ್ಷಸಶ್ರೇಷ್ಠನನ್ನು ಕೊಲ್ಲು (ಎಂದು ಹೇಳಿದರು).

ಏತಚ್ಛ್ರುತ್ವಾ ತು ವಚನಂ ಭೀಷ್ಮಸ್ಯ ಪೃತನಾಪತೇಃ |
ಪ್ರಯಯೌ ಸಿಂಹನಾದೇನ ಪರಾನಭಿಮುಖೋ ದ್ರುತಮ್ ॥20॥

ಸೇನಾಪತಿಗಳಾದ ಭೀಷ್ಮರ ಈ ಮಾತುಗಳನ್ನು ಕೇಳಿ ಭಗದತ್ತನು ಸಿಂಹನಾದವನ್ನು ಮಾಡುತ್ತಾ ಶೀಘ್ರವಾಗಿ ಶತ್ರುಗಳಿಗೆ ಅಭಿಮುಖವಾಗಿ ಹೊರಟನು.

ತಮಾದ್ರವಂತಂ ಸಂಪ್ರೇಕ್ಷ್ಯ ಗರ್ಜಂತಮಿವ ತೋಯದಮ್ |
ಅಭ್ಯವರ್ತಂತ ಸಂಕ್ರುದ್ಧಾಃ ಪಾಂಡವಾನಾಂ ಮಹಾರಥಾಃ ॥21॥
ಭೀಮಸೇನೋಽಭಿಮನ್ಯುಶ್ಚ ರಾಕ್ಷಸಶ್ಚ ಘಟೋತ್ಕಚಃ |
ದ್ರೌಪದೇಯಾಃ ಸತ್ಯಧೃತಿಃ ಕ್ಷತ್ರದೇವಶ್ಚ ಮಾರಿಷ ॥22॥
ಚೇದಿಪೋ ವಸುದಾನಶ್ಚ ದಶಾರ್ಣಾಧಿಪತಿಸ್ತಥಾ |
ಸುಪ್ರತೀಕೇನ ತಾಂಶ್ಚಾಪಿ ಭಗದತ್ತೋಽಪ್ಯುಪಾದ್ರವತ್ ॥23॥

ಗರ್ಜಿಸುವ ಮೇಘದಂತೆ ತಮ್ಮ ಕಡೆಗೆ ಧಾವಿಸಿ ಬರುತ್ತಿದ್ದ ಅವನನ್ನು ನೋಡಿ ಪಾಂಡವರ ಮಹಾರಥರು ಕ್ರೋಧಗೊಂಡು ಅವನ ಕಡೆಗೆ ಸಾಗಿದರು. ಭೀಮಸೇನ, ಅಭಿಮನ್ಯು, ರಾಕ್ಷಸನಾದ ಘಟೋತ್ಕಚ, ದ್ರೌಪದಿಯ ಪುತ್ರರು, ಸತ್ಯಧೃತಿ, ಕ್ಷತ್ರದೇವ, ಚೇದಿರಾಜ, ವಸುದಾನ, ದಶಾರ್ಣಾಧಿಪತಿ ಎಲ್ಲರೂ ಎಲೈ ಪೂಜ್ಯನೇ, ಅವನ ಕಡೆಗೆ ಹೋದರು. ಭಗದತ್ತನೂ ಸಹ ಸುಪ್ರತೀಕ ಗಜದ ಜೊತೆಯಲ್ಲಿ ಅವರ ಕಡೆಗೆ ಧಾವಿಸಿ ಬಂದನು.

ತತಃ ಸಮಭವದ್ ಯುದ್ಧಂ ಘೋರರೂಪಂ ಭಯಾನಕಮ್ |
ಪಾಂಡೂನಾಂ ಭಗದತ್ತೇನ ಯಮರಾಷ್ಟ್ರವಿವರ್ಧನಮ್ ॥24॥

ಅನಂತರ ಪಾಂಡವರಿಗೂ ಮತ್ತು ಭಗದತ್ತನಿಗೂ ಯಮರಾಷ್ಟ್ರವಿವರ್ಧನವಾದ, ಭಯಂಕರವಾದ, ಘೋರವಾದ ಯುದ್ಧವು ನಡೆಯಿತು.

ಪ್ರಮುಕ್ತಾ ರಥಿಭಿರ್ಬಾಣಾ ಭೀಮವೇಗಾಃ ಸುತೇಜನಾಃ |
ತೇ ನಿಪೇತುರ್ಮಹಾರಾಜ ನಾಗೇಷು ಚ ರಥೇಷು ಚ ॥25॥

ಎಲೈ ಮಹಾರಾಜನೇ, ರಥಿಕರು ಪ್ರಯೋಗಿಸಿದ ತೀಕ್ಷ್ಣವಾದ ಮತ್ತು ಭಯಂಕರ ವೇಗವುಳ್ಳ ಬಾಣಗಳು ಗಜಗಳ ಮೇಲೆಯೂ ಮತ್ತು ರಥಗಳ ಮೇಲೆಯೂ ಬಿದ್ದವು.

ಪ್ರಭಿನ್ನಾಶ್ಚ ಮಹಾನಾಗಾ ವಿನೀತಾ ಹಸ್ತಿಸಾದಿಭಿಃ |
ಪರಸ್ಪರಂ ಸಮಾಸಾದ್ಯ ಸನ್ನಿಪೇತುರಭೀತವತ್ ॥26॥

ಗಜಾರೋಹಿಗಳಿಂದ ಪಳಗಿಸಲ್ಪಟ್ಟ ದೊಡ್ಡ ಮಹಾಗಜಗಳು ಪರಸ್ಪರವಾಗಿ ಸಮೀಪಿಸಿ ನಿರ್ಭಯವಾಗಿ ಘಟ್ಟಿಸಿ, ಕೆಳಗೆ ಉರುಳಿದವು.

ಮದಾಂಧಾ ರೋಷಸಂರಬ್ಧಾ ವಿಷಾಣಾಗ್ರೈರ್ಮಹಾಹವೇ |
ಬಿಭಿದುರ್ದಂತಮುಸಲೈಃ ಸಮಾಸಾದ್ಯ ಪರಸ್ಪರಮ್ ॥27॥

ಮದಾಂಧಗಳೂ ಮತ್ತು ರೋಷಯುಕ್ತಗಳೂ ಆದ ಆ ಗಜಗಳು ಆ ದೊಡ್ಡ ರಣದಲ್ಲಿ ಪರಸ್ಪರವಾಗಿ ಸಮೀಪಿಸಿ ಒನಕೆಗಳಂತಹ ತಮ್ಮ ದಂತದ ತುದಿಗಳಿಂದ ಒಂದನ್ನೊಂದು ತಿವಿದವು.

ಹಯಾಶ್ಚ ಚಾಮರಾಪೀಡಾಃ ಪ್ರಾಸಪಾಣಿಭಿರಾಸ್ಥಿತಾಃ |
ಚೋದಿತಾಃ ಸಾದಿಭಿಃ ಕ್ಷಿಪ್ರಂ ನಿಪೇತುರಿತರೇತರಮ್ ॥28॥

ಚಾಮರಗಳ ಅಲಂಕಾರಗಳನ್ನು ಹೊಂದಿದ ಹಯಗಳು ಪ್ರಾಸವನ್ನು ಹಿಡಿದ ಅಶ್ವಾರೋಹಿಗಳಿಂದ ಆರೂಢವಾಗಿ, ಅವರಿಂದ ಪ್ರಚೋದಿಸಲ್ಪಟ್ಟು ಪರಸ್ಪರವಾಗಿ, ಶೀಘ್ರವಾಗಿ ಒಂದನ್ನೊಂದು ಉರುಳಿಸಿದವು.
ಪಾದಾತಾಶ್ಚ ಪದಾತ್ಯೋಘೈಸ್ತಾಡಿತಾಃ ಶಕ್ತಿತೋಮರೈಃ |
ನ್ಯಪತಂತ ತದಾ ಭೂಮೌ ಶತಶೋಽಥ ಸಹಸ್ರಶಃ ॥29॥
ಪದಾತಿಗಳೂ ಸಹ ಪದಾತಿಗಳ ಸಮೂಹದಿಂದ ಶಕ್ತಿ-ತೋಮರಗಳಿಂದ ಹೊಡೆಯಲ್ಪಟ್ಟು ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ಆಗ ಭೂಮಿಯ ಮೇಲೆ ಬಿದ್ದರು.
ರಥಿನಶ್ಚ ತಥಾ ರಾಜನ್ ಕರ್ಣಿನಾಲೀಕಸಾಯಕೈಃ |
ನಿಹತ್ಯ ಸಮರೇ ವೀರಾನ್ ಸಿಂಹನಾದಾನ್ ವಿನೇದಿರೇ ॥30॥
ಎಲೈ ರಾಜನೇ, ರಥಿಕರೂ ಸಹ ಕರ್ಣಿ, ನಾಲೀಕ, ಸಾಯಕ ಮೊದಲಾದ ಬಾಣ ವಿಶೇಷಗಳಿಂದ ಯುದ್ಧದಲ್ಲಿ ಶತ್ರುವೀರರನ್ನು ಕೊಂದು ಸಿಂಹನಾದಗಳನ್ನು ಮಾಡಿದರು.
ತಸ್ಮಿಂಸ್ತಥಾ ವರ್ತಮಾನೇ ಸಂಗ್ರಾಮೇ ಲೋಮಹರ್ಷಣೇ |
ಭಗದತ್ತೋ ಮಹೇಷ್ವಾಸೋ ಭೀಮಸೇನಮಥಾದ್ರವತ್ ॥31॥
ಕುಂಜರೇಣ ಪ್ರಭಿನ್ನೇನ ಸಪ್ತಧಾ ಸ್ರವತಾ ಮದಮ್ |
ಪರ್ವತೇನ ಯಥಾ ತೋಯಂ ಸ್ರವಮಾಣೇನ ಸರ್ವತಃ ॥32॥
ಕಿರನ್ ಶರಸಹಸ್ರಾಣಿ ಸುಪ್ರತೀಕಶಿರೋಗತಃ |
ಐರಾವತಸ್ಥೋ ಮಘವಾನ್ ವಾರಿಧಾರಾ ಇವಾನಘ ॥33॥
ಎಲೈ ಅನಘನೇ, ರೋಮಾಂಚಕಾರಿಯಾದ ಆ ಯುದ್ಧವು ಹಾಗೆ ನಡೆಯುತ್ತಿರಲು ಮಹಾಧನುರ್ಧಾರಿಯಾದ ಭಗದತ್ತನು ಪರ್ವತದಿಂದ ನೀರು ಎಲ್ಲ ಕಡೆಗಳಲ್ಲಿಯೂ ಹರಿಯುವಂತೆ, ಏಳು ಧಾರೆಗಳಲ್ಲಿ ಮದೋದಕವನ್ನು ಸುರಿಸುತ್ತಿದ್ದ ಸುಪ್ರತೀಕದ ಶಿರಸ್ಸಿನಲ್ಲಿ ಐರಾವತದ ಮೇಲೆ ಇಂದ್ರನಂತೆ ಕುಳಿತು, ಮಳೆಯ ಧಾರೆಗಳಂತೆ ಸಹಸ್ರಾರು ಬಾಣಗಳನ್ನು ಪ್ರಯೋಗಿಸುತ್ತಾ ಭೀಮಸೇನನ ಕಡೆಗೆ ಧಾವಿಸಿದನು.
ಸ ಭೀಮಂ ಶರಧಾರಾಭಿಸ್ತಾಡಯಾಮಾಸ ಪಾರ್ಥಿವಃ |
ಪರ್ವತಂ ವಾರಿಧಾರಾಭಿಃ ಸಂಪಾತೇ ಜಲದೋ ಯಥಾ ॥34॥
ಆ ರಾಜರು ಮಳೆಗಾಲದಲ್ಲಿ ಮೋಡಗಳು ಪರ್ವತದ ಮೇಲೆ ನೀರಿನ ಧಾರೆಗಳನ್ನು ಸುರಿಸಿದಂತೆ ಭೀಮನನ್ನು ಬಾಣಗಳ ಧಾರೆಗಳಿಂದ ಹೊಡೆದನು.
ಭೀಮಸೇನಸ್ತು ಸಂಕ್ರುದ್ಧಃ ಪಾದರಕ್ಷಾನ್ ಪರಃಶತಾನ್ |
ನಿಜಘಾನ ಮಹೇಷ್ವಾಸಃ ಸಂಕ್ರುದ್ಧಃ ಶರವೃಷ್ಟಿಭಿಃ ॥35॥
ಕೋಪಗೊಂಡ ಮಹಾಧನುರ್ಧಾರಿಯಾದ ಭೀಮಸೇನನಾದರೋ ನೂರಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಗಜಪಾದ ರಕ್ಷಕರನ್ನು ತನ್ನ ಬಾಣಗಳ ಮಳೆಯಿಂದ ಕೊಂದನು.
ತಾನ್ ದೃಷ್ಟ್ವಾ ನಿಹತಾನ್ ಕ್ರುದ್ಧೋ ಭಗದತ್ತಃ ಪ್ರತಾಪವಾನ್ |
ಚೋದಯಾಮಾಸ ನಾಗೇಂದ್ರಂ ಭೀಮಸೇನರಥಂ ಪ್ರತಿ ॥36॥
ತನ್ನ ಗಜಪಾದರಕ್ಷಕರು ಹತರಾದುದನ್ನು ನೋಡಿ ಪ್ರತಾಪಶಾಲಿಯಾದ ಭಗದತ್ತನು ತನ್ನ ಗಜರಾಜನನ್ನು ಭೀಮಸೇನನ ರಥದ ಮೇಲೆ ಪ್ರಚೋದಿಸಿದನು.
ಸ ನಾಗಃ ಪ್ರೇಷಿತಸ್ತೇನ ಬಾಣೋ ಜ್ಯಾಚೋದಿತೋ ಯಥಾ |
ಅಭ್ಯಧಾವತ ವೇಗೇನ ಭೀಮಸೇನಮರಿಂದಮಮ್ ॥37॥
ಅವನಿಂದ ಪ್ರಚೋದಿಸಲ್ಪಟ್ಟ ಆ ಮಹಾಗಜವು ಹೆದೆಯಿಂದ ಹೊರಹೊಮ್ಮಿದ ಬಾಣದಂತೆ ವೇಗವಾಗಿ ಅರಿಂದಮನಾದ ಭೀಮಸೇನನ ಕಡೆಗೆ ಸಾಗಿತು.
ತಮಾಪತಂತಂ ಸಂಪ್ರೇಕ್ಷ್ಯ ಪಾಂಡವಾನಾಂ ಮಹಾರಥಾಃ |
ಅಭ್ಯವರ್ತಂತ ವೇಗೇನ ಭೀಮಸೇನಪುರೋಗಮಾಃ ॥38॥
ತನ್ನ ಕಡೆಗೆ ಬರುತ್ತಿದ್ದ ಆ ಮಹಾಗಜವನ್ನು ನೋಡಿ ಭೀಮಸೇನ ಮೊದಲಾದ ಪಾಂಡವರ ಮಹಾರಥರು ತಾವೂ ವೇಗವಾಗಿ ಆ ಗಜದ ಕಡೆಗೆ ಸಾಗಿದರು.
ಕೇಕಯಾಶ್ಚಾಭಿಮನ್ಯುಶ್ಚ ದ್ರೌಪದೇಯಾಶ್ಚ ಸರ್ವಶಃ |
ದಶಾರ್ಣಾಧಿಪತಿಃ ಶೂರಃ ಕ್ಷತ್ರದೇವಶ್ಚ ಮಾರಿಷ |
ಚೇದಿಪಶ್ಚಿತ್ರಕೇತುಶ್ಚ ಸಂಕ್ರುದ್ಧಾಃ ಸರ್ವ ಏವ ತೇ ॥39॥
ಉತ್ತಮಾಸತ್ರಣಿ ದಿವ್ಯಾನಿ ದರ್ಶಯಂತೋ ಮಹಾಬಲಾಃ |
ತಮೇಕಂ ಕುಂಜರಂ ಕ್ರುದ್ಧಾಃ ಸಮಂತಾತ್ ಪರ್ಯವಾರಯನ್ ॥40॥
ಕೇಕಯ ಸಹೋದರರು, ಅಭಿಮನ್ಯು, ದ್ರೌಪದಿಯ ಪುತ್ರರು, ದಶಾರ್ಣಾಧಿಪತಿಯಾದ ಶೂರನಾದ ಕ್ಷತ್ರದೇವ, ಚೇದಿರಾಜ, ಚಿತ್ರಕೇತು ಎಲ್ಲರೂ ಕೋಪಗೊಂಡು ಎಲೈ ಪೂಜ್ಯನೇ, ದಿವ್ಯವಾದ ಶ್ರೇಷ್ಠವಾದ ಅಸ್ತ್ರವನ್ನು ಪ್ರದರ್ಶಿಸುತ್ತಾ ಮಹಾಬಲರಾದ ಅವರು ಆ ಒಂದು ಗಜವನ್ನು ಎಲ್ಲ ಕಡೆಯಿಂದಲೂ ಸುತ್ತುವರಿದರು.
ಸ ವಿದ್ಧೋ ಬಹುಭಿರ್ಬಾಣೈರ್ವ್ಯರೋಚತ ಮಹಾದ್ವಿಪಃ |
ಸಂಜಾತರುಧಿರೋತ್ಪೀಡೋ ಧಾತುಚಿತ್ರ ಇವಾದ್ರಿರಾಟ್ ॥41॥

ಅನೇಕ ಬಾಣಗಳಿಂದ ಹೊಡೆಯಲ್ಪಟ್ಟ ಆ ಮಹಾಗಜವು ರಕ್ತದ ಅಲಂಕಾರವನ್ನು ಹೊಂದಿ, ಧಾತುಗಳಿಂದ ಚಿತ್ರಿತವಾದ ಪರ್ವತರಾಜನಂತೆ ಕಂಗೊಳಿಸಿತು.
ದಶಾರ್ಣಾಧಿಪತಿಶ್ಚಾಪಿ ಗಜಂ ಭೂಮಿಧರೋಪಮಮ್ |
ಸಮಾಸ್ಥಿತೋಽಭಿದುದ್ರಾವ ಭಗದತ್ತಸ್ಯ ವಾರಣಮ್ ॥42॥
ದಶಾರ್ಣಾಧಿಪತಿಯೂ ಸಹ ಪರ್ವತದಂತಹ ಗಜವನ್ನು ಏರಿ ಭಗದತ್ತನ ಗಜಕ್ಕೆ ಪ್ರತಿಯಾಗಿ ಅವನ ಕಡೆಗೆ ಬಂದನು.
ತಮಾಪತಂತಂ ಸಮರೇ ಗಜಂ ಗಜಪತಿಃ ಸ ಚ |
ದಧಾರ ಸುಪ್ರತೀಕೋಽಪಿ ವೇಲೇವ ಮಕರಾಲಯಮ್ ॥43॥
ರಣರಂಗದಲ್ಲಿ ತನ್ನೆಡೆಗೆ ಬರುತ್ತಿದ್ದ ಗಜವನ್ನು ಮತ್ತು ಗಜಪತಿಯಾದ ದಶಾರ್ಣಾಧಿಪತಿಯನ್ನು, ಸುಪ್ರತೀಕವು ತೀರವು ಸಮುದ್ರವನ್ನು ತಡೆಯುವಂತೆ ತಡೆಯಿತು.
ವಾರಿತಂ ಪ್ರೇಕ್ಷ್ಯ ನಾಗೇಂದ್ರಂ ದರ್ಶಾರ್ಣಸ್ಯ ಮಹಾತ್ಮನಃ |
ಸಾಧು ಸಾಧ್ವಿತಿ ಸೈನ್ಯಾನಿ ಪಾಂಡವೇಯಾನ್ಯಪೂಜಯನ್ ॥44॥
ಮಹಾತ್ಮನಾದ ದಶಾರ್ಣಾಧಿಪತಿಯನ್ನು ಗಜೇಂದ್ರನು ತಡೆಯಲ್ಪಟ್ಟುದನ್ನು ನೋಡಿ ಪಾಂಡವರ ಸೈನ್ಯಗಳೂ ಸಹ ಸಾಧು, ಸಾಧು ಎಂದು ಗೌರವಿಸಿದವು.
ತತಃ ಪ್ರಾಗ್ಜ್ಯೋತಿಷಃ ಕ್ರುದ್ಧಸ್ತೋಮರಾನ್ ವೈ ಚತುರ್ದಶ |
ಪ್ರಾಹಿಣೋತ್ ತಸ್ಯ ನಾಗಸ್ಯ ಪ್ರಮುಖೇ ನೃಪಸತ್ತಮ ॥45॥
ಎಲೈ ನೃಪಶ್ರೇಷ್ಠನೇ, ಆಗ ಪ್ರಾಗ್ಜ್ಯೋತಿಷನು ಕ್ರುದ್ಧನಾಗಿ ಹದಿನಾಲ್ಕು ತೋಮರಗಳನ್ನು ಆ ಗಜದ ಮುಖದಲ್ಲಿ ಪ್ರಯೋಗಿಸಿದನು.
ತಸ್ಯ ವರ್ಮ ಮುಖತ್ರಾಣಂ ಶಾತಕುಂಭಪರಿಷ್ಕೃತಮ್ |
ವಿದಾರ್ಯ ಪ್ರಾವಿಶನ್ ಕ್ಷಿಪ್ರಂ ವಲ್ಮೀಕಮಿವ ಪನ್ನಗಾಃ ॥46॥
ಆ ಬಾಣಗಳು ಆ ಗಜದ ಸುವರ್ಣಮಯವಾದ ಕುಂಭಕವಚವನ್ನು ಮತ್ತು ಮುಖತ್ರಾಣವನ್ನು ಸೀಳಿ, ಸರ್ಪಗಳು ಹುತ್ತವನ್ನು ಪ್ರವೇಶಿಸುವಂತೆ ಕ್ಷಿಪ್ರವಾಗಿ ಗಜಶರೀರವನ್ನು ಪ್ರವೇಶಿಸಿದವು.
ಸ ಗಾಢವಿದ್ಧೋ ವ್ಯಥಿತೋ ನಾಗೋ ಭರತಸತ್ತಮ |
ಉಪಾವೃತ್ತಮದಃ ಕ್ಷಿಪ್ರಂ ಸ ನ್ಯವರ್ತತ ವೇಗತಃ ॥47॥
ಎಲೈ ಭರತಶ್ರೇಷ್ಠನೇ, ಗಾಢವಾಗಿ ಗಾಯಗೊಂಡ ಆ ಗಜವು ವ್ಯಥೆಯಿಂದ ಕೂಡಿ ತನ್ನ ಮದವನ್ನು ಕಳೆದುಕೊಂಡು ವೇಗವಾಗಿ ಹಿಂದಿರುಗಿತು.
ಪ್ರದುದ್ರಾವ ಚ ವೇಗೇನ ಪ್ರಣದನ್ ಭೈರವಂ ಸ್ವನಮ್ |
ಸ ಮರ್ದಮಾನಃ ಸ್ವಬಲಂ ವಾಯುರ್ವೃಕ್ಷಾನಿವೌಜಸಾ ॥48॥
ಅದು ಭಯಂಕರ ನಾದವನ್ನು ಮಾಡುತ್ತಾ ವಾಯುವು ತನ್ನ ಸಾಮರ್ಥ್ಯದಿಂದ ವೃಕ್ಷಗಳನ್ನು ಮರ್ದಿಸುವಂತೆ ತನ್ನ ಸೈನ್ಯವನ್ನೇ ಮರ್ದಿಸುತ್ತಾ ಓಡಿಹೋಯಿತು.
ತಸ್ಮಿನ್ ಪರಾಜಿತೇ ನಾಗೇ ಪಾಂಡವಾನಾಂ ಮಹಾರಥಾಃ |
ಸಿಂಹನಾದಂ ವಿನದ್ಯೋಚ್ಚೈರ್ಯುದ್ಧಾಯೈವೋಪತಸ್ಥಿರೇ ॥49॥
ಆ ಗಜವು ಪರಾಭವಗೊಳ್ಳುತ್ತಿರಲು ಪಾಂಡವರ ಮಹಾರಥರು ಉಚ್ಚವಾದ ಸಿಂಹನಾದವನ್ನು ಮಾಡಿ ಯುದ್ಧಕ್ಕೇ ನಿಂತರು.
ತತೋ ಭೀಮಂ ಪುರಸ್ಕೃತ್ಯ ಭಗದತ್ತಮುಪಾದ್ರವನ್ |
ಕಿರಂತೋ ವಿವಿಧಾನ್ ಬಾಣಾನ್ ಶಸತ್ರಣಿ ವಿವಿಧಾನಿ ಚ ॥50॥
ಅನಂತರ ಭೀಮನನ್ನು ಮುಂದೆ ಮಾಡಿಕೊಂಡು ಅನೇಕವಿಧವಾದ ಬಾಣಗಳನ್ನೂ ಮತ್ತು ಶಸ್ತ್ರಗಳನ್ನೂ ಪ್ರಯೋಗಿಸುತ್ತಾ ಭಗದತ್ತನ ಕಡೆಗೆ ಧಾವಿಸಿದರು.
ತೇಷಾಮಾಪತತಾಂ ರಾಜನ್ ಸಂಕ್ರುದ್ಧಾನಾಮಮರ್ಷಿಣಾಮ್ |
ಶ್ರುತ್ವಾ ಸ ನಿನದಂ ಘೋರಮಮರ್ಷಾದ್ ಗತಸಾಧ್ವಸಃ |
ಭಗದತ್ತೋ ಮಹೇಷ್ವಾಸಃ ಸ್ವನಾಗಂ ಪ್ರತ್ಯಚೋದಯತ್ ॥51॥
ಎಲೈ ರಾಜನೇ, ಬಹಳ ಕೋಪ ಮತ್ತು ರೋಷದಿಂದ ಕೂಡಿ ತನ್ನ ಮೇಲೆ ಬರುತ್ತಿರುವ ಪಾಂಡವರ ಘೋರ ನಿನಾದವನ್ನು ಕೇಳಿ ಮಹಾಧನುರ್ಧಾರಿಯಾದ ಭಗದತ್ತನು ಯಾವ ಭಯವೂ ಇಲ್ಲದೆ ತನ್ನ ಗಜವನ್ನು ಅವರ ಕಡೆಗೆ ಪ್ರಚೋದಿಸಿದನು.
ಅಂಕುಶಾಂಗುಷ್ಠನುದಿತಃ ಸ ಗಜಪ್ರವರೋ ಯುಧಿ |
ತಸ್ಮಿನ್ ಕ್ಷಣೇ ಸಮಭವತ್ ಸಂವರ್ತಕ ಇವಾನಲಃ ॥52॥
ಅಂಕುಶದಿಂದಲೂ ಮತ್ತು ಅಂಗುಷ್ಠದಿಂದಲೂ ಪ್ರಚೋದಿಸಲ್ಪಟ್ಟ ಆ ಶ್ರೇಷ್ಠ ಗಜವು ಆ ಕ್ಷಣದಲ್ಲಿ ರಣರಂಗದಲ್ಲಿ ಸಂವರ್ತಕಾಗ್ನಿಯಂತೆ ಆಯಿತು.
ರಥಸಂಘಾಂಸ್ತಥಾ ನಾಗಾನ್ ಹಯಾಂಶ್ಚ ಸಹ ಸಾದಿಭಿಃ |
ಪಾದಾತಾಂಶ್ಚ ಸುಸಂಕ್ರುದ್ಧಃ ಶತಶೋಽಥ ಸಹಸ್ರಶಃ |
ಅಮೃದ್ನಾತ್ ಸಮರೇ ರಾಜನ್ ಸಂಪ್ರಧಾವಂಸ್ತತಸ್ತತಃ ॥53॥
ಎಲೈ ರಾಜನೇ, ರಣರಂಗದಲ್ಲಿ ಅಲ್ಲಿಂದಿಲ್ಲಿಗೆ ಓಡುತ್ತಾ ಅದು ರಥಸಮೂಹಗಳನ್ನೂ, ಗಜಗಳನ್ನೂ, ಅಶ್ವಾರೋಹಿಗಳಿಂದ ಸಹಿತವಾದ ಅಶ್ವಗಳನ್ನೂ, ಪದಾತಿಗಳನ್ನೂ ಬಹಳ ಕೋಪದಿಂದ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ತುಳಿದು ಹಾಕಿತು.
ತೇನ ಸಂಲೋಡ್ಯಮಾನಂ ತು ಪಾಂಡೂನಾಂ ತದ್ಬಲಂ ಮಹತ್ |

ಸಂಚುಕೋಚ ಮಹಾರಾಜ ಚರ್ಮೇವಾಗ್ನೌ ಸಮಾಹಿತಮ್ ॥54॥
ಎಲೈ ಮಹಾರಾಜನೇ, ಆ ಗಜದಿಂದ ಕಲಕಲ್ಪಡುವ ಪಾಂಡವರ ಆ ದೊಡ್ಡ ಸೈನ್ಯವು ಅಗ್ನಿಯಲ್ಲಿ ಹಾಕಿದ ಚರ್ಮದಂತೆ ಮುದುರಿಕೊಂಡಿತು.
ಭಗ್ನಂ ತು ಸ್ವಬಲಂ ದೃಷ್ಟ್ವಾ ಭಗದತ್ತೇನ ಧೀಮತಾ |
ಘಟೋತ್ಕಚೋಽಥ ಸಂಕ್ರುದ್ಧೋ ಭಗದತ್ತಮುಪಾದ್ರವತ್ ॥55॥
ವಿಕಟಃ ಪುರುಷೋ ರಾಜನ್ ದೀಪ್ತಾಸ್ಯೋ ದೀಪ್ತಲೋಚನಃ |
ರೂಪಂ ವಿಭೀಷಣಂ ಕೃತ್ವಾ ರೋಷೇಣ ಪ್ರಜ್ವಲನ್ನಿವ ॥56॥
ಎಲೈ ರಾಜನೇ, ತನ್ನ ಸೈನ್ಯವು ಮೇಧಾವಿಯಾದ ಭಗದತ್ತನಿಂದ ಭಗ್ನವಾದುದನ್ನು ನೋಡಿ ವಿಕಟ ಪುರುಷನೂ, ಜ್ವಲಿಸುವ ಮುಖವುಳ್ಳವನೂ, ಜ್ವಲಿಸುವ ಕಣ್ಣುಗಳುಳ್ಳವನೂ ಆದ ಘಟೋತ್ಕಚನು ರೋಷದಿಂದ ಉರಿಯುವವನಂತೆ ಭಯಂಕರವಾದ ರೂಪವನ್ನು ತಾಳಿ ಭಗದತ್ತನ ಕಡೆಗೆ ಧಾವಿಸಿದನು.
ಜಗ್ರಾಹ ವಿಪುಲಂ ಶೂಲಂ ಗಿರೀಣಾಮಪಿ ದಾರಣಮ್ |
ನಾಗಂ ಜಿಘಾಂಸುಃ ಸಹಸಾ ಚಿಕ್ಷೇಪ ಚ ಮಹಾಬಲಃ |
ಸವಿಸ್ಫುಲಿಂಗಜ್ವಾಲಾಭಿಃ ಸಮಂತಾತ್ ಪರಿವೇಷ್ಟಿತಮ್ ॥57॥
ಪರ್ವತಗಳನ್ನೂ ಭೇದಿಸುವ ಅಗ್ನಿಯ ಕಿಡಿಗಳಿಂದ ಮತ್ತು ಜ್ವಾಲೆಗಳಿಂದ ಸುತ್ತಲೂ ಪರಿವೃತವಾದ ದೊಡ್ಡ ಶೂಲವನ್ನು ತೆಗೆದುಕೊಂಡು ಗಜವನ್ನು ಕೊಲ್ಲಲು ಬಯಸಿ ಮಹಾಬಲನಾದ ಅವನು ಅದನ್ನು ತನ್ನ ಬಲದಿಂದ ಗಜದ ಮೇಲೆ ಎಸೆದನು.
ತಮಾಪತಂತಂ ಸಹಸಾ ದೃಷ್ಟ್ವಾ ಜ್ವಾಲಾಕುಲಂ ರಣೇ |
ಚಿಕ್ಷೇಪ ರುಚಿರಂ ತೀಕ್ಷ್ಣಮರ್ಧಚಂದ್ರಂ ಸ ಪಾರ್ಥಿವಃ |
ಚಿಚ್ಛೇದ ಸುಮಹಚ್ಛೂಲಂ ತೇನ ಬಾಣೇನ ವೇಗವತ್ ॥58॥
ಜ್ವಾಲೆಗಳಿಂದ ಸಹಿತವಾಗಿ ರಣರಂಗದಲ್ಲಿ ತನ್ನ ಕಡೆಗೆ ಇದ್ದಕ್ಕಿದ್ದಂತೆ ಬರುತ್ತಿದ್ದ ಆ ದೊಡ್ಡ ಶೂಲವನ್ನು ನೋಡಿ ಭಗದತ್ತ ರಾಜನು ತೀಕ್ಷ್ಣವೂ, ಮನೋಹರವೂ ಆದ ಅರ್ಧಚಂದ್ರಾಕಾರದ ಬಾಣವನ್ನು ತೆಗೆದುಕೊಂಡು ಆ ಬಾಣದಿಂದ ಶೀಘ್ರವಾಗಿ ಶೂಲವನ್ನು ಕತ್ತರಿಸಿದನು.
ನಿಪಪಾತ ದ್ವಿಧಾ ಛಿನ್ನಂ ಶೂಲಂ ಹೇಮಪರಿಷ್ಕೃತಮ್ |
ಮಹಾಶನಿರ್ಯಥಾ ಭ್ರಷ್ಟಾ ಶಕ್ರಮುಕ್ತಾ ನಭೋಗತಾ ॥59॥
ಸುವರ್ಣಾಲಂಕೃತವಾದ ಆ ಶೂಲವು ಎರಡು ಭಾಗವಾಗಿ ಕತ್ತರಿಸಲ್ಪಟ್ಟು ಶಕ್ರನ ಕೈಯಿಂದ ಜಾರಿ ಆಕಾಶದಿಂದ ಬೀಳುತ್ತಿರುವ ವಜ್ರಾಯುಧದಂತೆ ತೋರಿತು.
ಶೂಲಂ ನಿಪತಿತಂ ದೃಷ್ಟ್ವಾ ದ್ವಿಧಾಕೃತ್ತಂ ಸ ಪಾರ್ಥಿವಃ |
ರುಗ್ಮದಂಡಾಂ ಮಹಾಶಕ್ತಿಂ ಜಗ್ರಾಹಾಗ್ನಿಶಿಖೋಪಮಾಮ್ |
ಚಿಕ್ಷೇಪ ತಾಂ ರಾಕ್ಷಸಸ್ಯ ತಿಷ್ಠ ತಿಷ್ಠೇತಿ ಚಾಬ್ರವೀತ್ ॥60॥
ಶೂಲವು ಕತ್ತರಿಸಲ್ಪಟ್ಟು ಕೆಳಗೆ ಬಿದ್ದುದನ್ನು ನೋಡಿದ ಆ ಭಗದತ್ತನು ಚಿನ್ನದ ಹಿಡಿಯಿರುವ ಅಗ್ನಿಶಿಖೆಯಂತಿದ್ದ ಶಕ್ತ್ಯಾಯುಧವನ್ನು ತೆಗೆದುಕೊಂಡು ನಿಲ್ಲು, ನಿಲ್ಲು ಎಂದು ಹೇಳುತ್ತಾ ಅದನ್ನು ಘಟೋತ್ಕಚನ ಮೇಲೆ ಎಸೆದನು.
ತಾಮಾಪತಂತೀಂ ಸಂಪ್ರೇಕ್ಷ್ಯ ವಿಯತ್ಸ್ಥಾಮಶನೀಮಿವ |
ಉತ್ಪತ್ಯ ರಾಕ್ಷಸಸ್ತೂರ್ಣಂ ಜಗ್ರಾಹ ಚ ನನಾದ ಚ ॥61॥
ಸಿಡಿಲಿನಂತೆ ತನ್ನ ಕಡೆಗೆ ಆಕಾಶದಲ್ಲಿ ಬರುತ್ತಿದ್ದ ಆ ಶಕ್ತಿಯನ್ನು ನೋಡಿ ಘಟೋತ್ಕಚನು ಶೀಘ್ರವಾಗಿ ಹಾರಿ ಅದನ್ನು ಹಿಡಿದು ಸಿಂಹನಾದವನ್ನು ಮಾಡಿದನು.
ಬಭಂಜ ಚೈನಾಂ ತ್ವರಿತೋ ಜಾನುನ್ಯಾರೋಪ್ಯ ಭಾರತ |
ಪಶ್ಯತಃ ಪಾರ್ಥಿವೇಂದ್ರಸ್ಯ ತದದ್ಭುತಮಿವಾಭವತ್ ॥62॥
ಎಲೈ ಭಾರತನೇ, ಅವನು ಅದನ್ನು ಶೀಘ್ರವಾಗಿ ಭಗದತ್ತನು ನೋಡುತ್ತಿರುವಂತೆಯೇ ತನ್ನ ಮಂಡಿಯನ್ನು ಕೊಟ್ಟು ಅದನ್ನು ಮುರಿದನು. ಅದು ಅದ್ಭುತವಾಗಿದ್ದಿತು.
ತದವೇಕ್ಷ್ಯ ಕೃತಂ ಕರ್ಮ ರಾಕ್ಷಸೇನ ಬಲೀಯಸಾ |
ದಿವಿ ದೇವಾಃ ಸಗಂಧರ್ವಾ ಮುನಯಶ್ಚಾಪಿ ವಿಸ್ಮಿತಾಃ ॥63॥
ಬಲಿಷ್ಠನೂ, ರಾಕ್ಷಸನೂ ಆದ ಆ ಘಟೋತ್ಕಚನು ಮಾಡಿದ ಆ ಕರ್ಮವನ್ನು ನೋಡಿ, ಆಕಾಶದಲ್ಲಿದ್ದ ಗಂಧರ್ವಸಹಿತರಾದ ದೇವತೆಗಳು ಮತ್ತು ಋಷಿಗಳು ವಿಸ್ಮಿತರಾದರು.
ಪಾಂಡವಾಶ್ಚ ಮಹೇಷ್ವಾಸಾ ಭೀಮಸೇನಪುರೋಗಮಾಃ |
ಸಾಧುಸಾಧ್ವಿತಿ ನಾದೇನ ಪೃಥಿವೀಮನುನಾದಯನ್ ॥64॥
ಭೀಮಸೇನನನೇ ಮೊದಲಾದ ಮಹಾಧನುರ್ಧಾರಿಗಳಾದ ಪಾಂಡವರೂ ಸಹ ಸಾಧು, ಸಾಧು ಎಂದು ಹೇಳುತ್ತಾ ತಮ್ಮ ನಾದದಿಂದ ಭೂಮಿಯನ್ನು ಪ್ರತಿಧ್ವನಿಸಿದರು.
ತಂ ತು ಶ್ರುತ್ವಾ ಮಹಾನಾದಂ ಪ್ರಹೃಷ್ಟಾನಾಂ ಮಹಾತ್ಮನಾಮ್ |
ನಾಮೃಷ್ಯತ ಮಹೇಷ್ವಾಸೋ ಭಗದತ್ತಃ ಪ್ರತಾಪವಾನ್ ॥65॥
ಸಂತೋಷದಿಂದ ಕೂಡಿದ ಮಹಾತ್ಮರಾದ ಪಾಂಡವರ ಆ ಮಹಾನಾದವನ್ನು ಕೇಳಿ ಪ್ರತಾಪಶಾಲಿಯೂ, ಮಹಾಧನುರ್ಧಾರಿಯೂ ಆದ ಭಗದತ್ತನು ಸಹಿಸಲಿಲ್ಲ.

ಸ ವಿಸ್ಫಾರ್ಯ ಮಹಚ್ಚಾಪಮಿಂದ್ರಾಶನಿಸಮಸ್ವನಮ್ |
ಅಭಿದುದ್ರಾವ ವೇಗೇನ ಪಾಂಡವಾನಾಂ ಮಹಾರಥಾನ್ |
ವಿಸೃಜನ್ ವಿಮಲಾಂಸ್ತೀಕ್ಷ್ಣಾನ್ ನಾರಾಚಾನ್ ಜ್ವಲನಪ್ರಭಾನ್ ||66||
ಅವನು ಇಂದ್ರಾಯುಧಕ್ಕೆ ಸಮಾನವಾದ ನಾದವುಳ್ಳ ತನ್ನ ದೊಡ್ಡ ಧನುಸ್ಸನ್ನು ಎಳೆದು ವಿಮಲವೂ, ತೀಕ್ಷ್ಣವೂ ಮತ್ತು ಅಗ್ನಿಸದೃಶವೂ ಆದ ನಾರಾಚಗಳನ್ನು ಪ್ರಯೋಗಿಸುತ್ತಾ ಪಾಂಡವರ ಮಹಾರಥರ ಮೇಲೆ ವೇಗದಿಂದ ಎರಗಿದನು.
ಭೀಮಮೇಕೇನ ವಿವ್ಯಾಧ ರಾಕ್ಷಸಂ ನವಭಿಃ ಶರೈಃ |
ಅಭಿಮನ್ಯುಂ ತ್ರಿಭಿಶ್ಚೈವ ಕೇಕಯಾನ್ ಪಂಚಭಿಸ್ತಥಾ ||67||
ಅವನು ಭೀಮನನ್ನು ಒಂದು ನಾರಾಚದಿಂದಲೂ, ಘಟೋತ್ಕಚನನ್ನು ಒಂಬತ್ತು ನಾರಾಚಗಳಿಂದಲೂ, ಅಭಿಮನ್ಯುವನ್ನು ಮೂರು ನಾರಾಚಗಳಿಂದಲೂ ಮತ್ತು ಕೇಕಯ ಸಹೋದರರನ್ನು ಐದು ನಾರಾಚಗಳಿಂದಲೂ ವ್ಯಥೆಗೊಳಿಸಿದನು.
ಪೂರ್ಣಾಯತವಿಸೃಷ್ಟೇನ ಸ್ವರ್ಣಪುಂಖೇನ ಪತ್ರಿಣಾ |
ಬಿಭೇದ ದಕ್ಷಿಣಂ ಬಾಹುಂ ಕ್ಷತ್ರದೇವಸ್ಯ ಚಾಹವೇ |
ಪಪಾತ ಸಹಸಾ ತಸ್ಯ ಸಶರಂ ಧನುರುತ್ತಮಮ್ ||68||
ಪೂರ್ಣವಾಗಿ ಎಳೆದು ಪ್ರಯೋಗಿಸಿದ ಸ್ವರ್ಣಪುಂಖವನ್ನು ಮತ್ತು ಪತ್ರವನ್ನು ಹೊಂದಿದ್ದ ಬಾಣದಿಂದ ರಣರಂಗದಲ್ಲಿ ಅವನು ಕ್ಷತ್ರದೇವನ ಬಲಬಾಹುವನ್ನು ಕತ್ತರಿಸಿದನು. ಕ್ಷತ್ರದೇವನ ಬಾಣ ಸಹಿತವಾದ ಧನುಸ್ಸು ತಕ್ಷಣ ಕೆಳಗೆ ಬಿದ್ದಿತು.
ದ್ರೌಪದೇಯಾಂಸ್ತತಃ ಪಂಚ ಪಂಚಭಿಃ ಸಮತಾಡಯತ್ |
ಭೀಮಸೇನಸ್ಯ ಚ ಕ್ರೋಧಾನ್ನಿಜಘಾನ ತುರಂಗಮಾನ್ ||69||
ಅನಂತರ ದ್ರೌಪದಿಯ ಐದು ಪುತ್ರರನ್ನು ಐದು ಬಾಣಗಳಿಂದ ಹೊಡೆದನು. ಭೀಮಸೇನನ ಮೇಲಿನ ಕ್ರೋಧದಿಂದ ಅವನ ರಥದ ಅಶ್ವಗಳನ್ನು ಕೊಂದನು.
ಧ್ವಜಂ ಕೇಸರಿಣಂ ಚಾಸ್ಯ ಚಿಚ್ಛೇದ ವಿಶಿಖೈಸ್ತ್ರಿಭಿಃ |
ನಿರ್ಬಿಭೇದ ತ್ರಿಭಿಶ್ಚಾನ್ಯೈಃ ಸಾರಥಿಂ ಚಾಸ್ಯ ಪತ್ರಿಭಿಃ ||70||
ಮೂರು ಬಾಣಗಳಿಂದ ಅವನ ಸಿಂಹಧ್ವಜವನ್ನು ಕತ್ತರಿಸಿದನು. ಬೇರೆ ಪತ್ರ ಸಹಿತವಾದ ಮೂರು ಬಾಣಗಳಿಂದ ಅವನ ಸಾರಥಿಯನ್ನು ಗಾಯಗೊಳಿಸಿದನು.
ಸ ಗಾಢವಿದ್ಧೋ ವ್ಯಥಿತೋ ರಥೋಪಸ್ಥ ಉಪಾವಿಶತ್ |
ವಿಶೋಕೋ ಭರತಶ್ರೇಷ್ಠ ಭಗದತ್ತೇನ ಸಂಯುಗೇ ||71||
ಎಲೈ ಭರತಶ್ರೇಷ್ಠನೇ, ರಣರಂಗದಲ್ಲಿ ಭಗದತ್ತನಿಂದ ಗಾಢವಾಗಿ ಗಾಯಗೊಂಡ ವಿಶೋಕನು ರಥದ ಪೀಠದಲ್ಲಿ ಕುಳಿತನು.
ತತೋ ಭೀಮೋ ಮಹಾರಾಜ ವಿರಥೋ ರಥಿನಾಂ ವರಃ |
ಗದಾಂ ಪ್ರಗೃಹ್ಯ ವೇಗೇನ ಪ್ರಚಸ್ಕಂದ ಮಹಾರಥಾತ್ ||72||
ಎಲೈ ಮಹಾರಾಜನೇ, ಆಗ ರಥಿಶ್ರೇಷ್ಠನಾದ ಭೀಮನು ರಥವಿಲ್ಲದೆ ಕೈಯಲ್ಲಿ ಗದೆಯನ್ನು ಹಿಡಿದು ಶೀಘ್ರವಾಗಿ ಆ ಮಹಾರಥದಿಂದ ಕೆಳಗೆ ಹಾರಿದನು.
ತಮುದ್ಯತಗದಂ ದೃಷ್ಟ್ವಾ ಸಶೃಂಗಮಿವ ಪರ್ವತಮ್ |
ತಾವಕಾನಾಂ ಭಯಂ ಘೋರಂ ಸಮಪದ್ಯತ ಭಾರತ ||73||
ಎಲೈ ಭಾರತನೇ, ಶಿಖರ ಸಹಿತವಾದ ಪರ್ವತದಂತೆ ಗದೆಯನ್ನು ಎತ್ತಿಹಿಡಿದ ಅವನನ್ನು ನೋಡಿ ನಿನ್ನ ಯೋಧರಿಗೆ ಘೋರವಾದ ಭಯವುಂಟಾಯಿತು.
ಏತಸ್ಮಿನ್ನೇವ ಕಾಲೇ ತು ಪಾಂಡವಃ ಕೃಷ್ಣಸಾರಥಿಃ |
ಆಜಗಾಮ ಮಹಾರಾಜ ನಿಘ್ನನ್ ಶತ್ರೂನ್ ಸಹಸ್ರಶಃ ||74||
ಯತ್ರ ತೌ ಪುರುಷವ್ಯಾಘ್ರೌ ಪಿತಾಪುತ್ರೌ ಪರಂತಪೌ |
ಪ್ರಾಗ್ಜ್ಯೋತಿಷೇಣ ಸಂಸಕ್ತೌ ಭೀಮಸೇನಘಟೋತ್ಕಚೌ ||75||
ಎಲೈ ಮಹಾರಾಜನೇ, ಇದೇ ಸಮಯದಲ್ಲಿ ಕೃಷ್ಣಸಾರಥಿಯಾದ ಅರ್ಜುನನು ಶತ್ರುಗಳನ್ನು ಸಹಸ್ರ ಸಂಖ್ಯೆಯಲ್ಲಿ ಸಂಹರಿಸುತ್ತಾ ಪುರುಷವ್ಯಾಘ್ರರಾದ, ಪರಂತಪರಾದ, ತಂದೆ-ಮಕ್ಕಳಾದ ಭೀಮಸೇನ ಮತ್ತು ಘಟೋತ್ಕಚರು ಎಲ್ಲಿ ಪ್ರಾಗ್ಜ್ಯೋತಿಷನಾದ ಭಗದತ್ತನೊಂದಿಗೆ ಸೆಣಸುತ್ತಿದ್ದರೋ ಅಲ್ಲಿಗೆ ಬಂದನು.
ದೃಷ್ಟ್ವಾ ತು ಪಾಂಡವೋ ರಾಜನ್ ಯುಧ್ಯಮಾನಾನ್ ಮಹಾರಥಾನ್ |
ತ್ವರಿತೋ ಭರತಶ್ರೇಷ್ಠ ತತ್ರಾಯಾದ್ ವಿಕಿರನ್ ಶರಾನ್ ||76||
ಎಲೈ ರಾಜನೇ, ಭರತಶ್ರೇಷ್ಠನೇ, ಪಾಂಡವನಾದ ಅರ್ಜುನನು ಯುದ್ಧ ಮಾಡುತ್ತಿರುವ ಮಹಾರಥರನ್ನು ನೋಡಿ ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸುತ್ತಾ ಅಲ್ಲಿಗೆ ಬಂದನು.
ತತೋ ದುರ್ಯೋಧನೋ ರಾಜಾ ತ್ವರಮಾಣೋ ಮಹಾರಥಃ |
ಸೇನಾಮಚೋದಯತ್ ಕ್ಷಿಪ್ರಂ ರಥನಾಗಾಶ್ವಸಂಕುಲಾಮ್ ||77||
ಆಗ ಮಹಾರಥನಾದ, ರಾಜನಾದ ದುರ್ಯೋಧನನು ತ್ವರೆ ಮಾಡುತ್ತಾ, ಶೀಘ್ರವಾಗಿ ರಥ-ಗಜಾಶ್ವಗಳಿಂದ ತುಂಬಿದ ತನ್ನ ಸೈನ್ಯವನ್ನು ಅರ್ಜುನನ ಮೇಲೆ ಪ್ರಚೋದಿಸಿದನು.
ತಾಮಾಪತಂತೀಂ ಸಹಸಾ ಕೌರವಾಣಾಂ ಮಹಾಚಮೂಮ್ |
ಅಭಿದುದ್ರಾವ ವೇಗೇನ ಪಾಂಡವಃ ಶ್ವೇತವಾಹನಃ ||78||

ಶ್ವೇತವಾಹನನಾದ ಅರ್ಜುನನು ಕೌರವರ ಮಹಾಸೈನ್ಯವು ತನ್ನ ಕಡೆಗೆ ಬರುತ್ತಿದ್ದುದನ್ನು ನೋಡಿ ತಾನೂ ವೇಗವಾಗಿ ಅದರ ಕಡೆಗೆ ಓಡಿದನು.
ಭಗದತ್ತೋಽಪಿ ಸಮರೇ ತೇನ ನಾಗೇನ ಭಾರತ |
ವಿಮೃದ್ನನ್ ಪಾಂಡವಬಲಂ ಯುಧಿಷ್ಠಿರಮುಪಾದ್ರವತ್ ॥79॥
ಎಲೈ ಭಾರತನೇ, ಭಗದತ್ತನೂ ಸಹ ರಣರಂಗದಲ್ಲಿ ಪಾಂಡವಸೈನ್ಯವನ್ನು ಆ ಗಜದಿಂದ ಭಗ್ನಗೊಳಿಸುತ್ತಾ ಯುಧಿಷ್ಠಿರನ ಕಡೆಗೆ ಧಾವಿಸಿ ಬಂದನು.
ತದಾಸೀತ್ ತುಮುಲಂ ಯುದ್ಧಂ ಭಗದತ್ತಸ್ಯ ಮಾರಿಷ |
ಪಾಂಚಾಲ್ಯೈಃ ಸೃಂಜಯೈಶ್ಚೈವ ಕೇಕಯೈಶ್ಚೋದ್ಯತಾಯುಧೈಃ ॥80॥
ಎಲೈ ಪೂಜ್ಯನೇ, ಆಗ ಭಗದತ್ತನಿಗೂ, ಪಾಂಚಾಲರು, ಸೃಂಜಯರು ಮತ್ತು ಆಯುಧಧಾರಿಗಳಾದ ಕೇಕಯರು ಇವರಿಗೂ ತೀವ್ರವಾದ ಯುದ್ಧವು ನಡೆಯಿತು.
ಭೀಮಸೇನೋಽಪಿ ಸಮರೇ ತಾವುಭೌ ಕೇಶವಾರ್ಜುನೌ |
ಆಶ್ರಾವಯದ್ ಯಥಾವೃತ್ತಮಿರಾವದ್ವಧಮುತ್ತಮಮ್ ॥81॥
ಭೀಮಸೇನನೂ ಸಹ ಕೇಶವಾರ್ಜುನರಿಬ್ಬರನ್ನೂ ಕುರಿತು ರಣರಂಗದಲ್ಲಿ ಇರಾವಂತನ ವಧೆಯು ನಡೆದ ರೀತಿಯನ್ನು ಯಥಾರ್ಥವಾಗಿ ತಿಳಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆರಡನೆಯ ಅಧ್ಯಾಯ
ವಿಷಣ್ಣನಾದ ಅರ್ಜುನನಿಂದ ಪುನಃ ಯುದ್ಧದಲ್ಲಿ ಪರಾಕ್ರಮ ಪ್ರದರ್ಶನ. ಭೀಮಸೇನನ ಪರಾಕ್ರಮ. ರಣರಂಗದ ವರ್ಣನೆ ಮತ್ತು ಎಂಟನೆಯ ದಿವಸದ ಸೈನ್ಯಾವಹಾರ.
ಸಂಜಯಃ
ಪುತ್ರಂ ತು ನಿಹತಂ ಶ್ರುತ್ವಾ ಇರಾವಂತಂ ಧನಂಜಯಃ |
ದುಃಖೇನ ಮಹತಾವಿಷ್ಟೋ ನಿಃಶ್ವಸನ್ ಪನ್ನಗೋ ಯಥಾ ॥1॥
ಅಬ್ರವೀತ್ ಸಮರೇ ರಾಜನ್ ವಾಸುದೇವಮಿದಂ ವಚಃ |
ಇದಂ ನೂನಂ ಮಹಾಪ್ರಾಜ್ಞೋ ವಿದುರೋ ದೃಷ್ಟವಾನ್ ಪುರಾ ॥2॥
ಕುರೂಣಾಂ ಪಾಂಡವಾನಾಂ ಚ ಕ್ಷಯಂ ಘೋರಂ ಮಹಾಮತಿಃ |
ತತೋ ನಿವಾರಯಿತವಾನ್ ಧೃತರಾಷ್ಟ್ರಂ ಜನೇಶ್ವರಮ್ ॥3॥
ಸಂಜಯ ಎಲೈ ರಾಜನೇ, ಪುತ್ರನಾದ ಇರಾವಂತನ ವಧೆಯ ವಾರ್ತೆಯನ್ನು ಕೇಳಿ ಧನಂಜಯನು ಬಹಳ ದುಃಖದಿಂದ ಕೂಡಿದವನಾಗಿ, ಸರ್ಪದಂತೆ ನಿಟ್ಟುಸಿರನ್ನು ಬಿಡುತ್ತಾ ಕೃಷ್ಣನನ್ನು ಕುರಿತು ಈ ಮಾತನ್ನಾಡಿದನು. ಮಹಾಪ್ರಾಜ್ಞನಾದ ವಿದುರನು ಕೌರವರ ಮತ್ತು ಪಾಂಡವರ ಘೋರವಾದ ವಿನಾಶವನ್ನು ಮೊದಲೇ ತಿಳಿದಿದ್ದನು. ಆದ್ದರಿಂದಲೇ ಅವನು ರಾಜನಾದ ಧೃತರಾಷ್ಟ್ರನನ್ನು ಯುದ್ಧದಿಂದ ನಿವಾರಿಸಲು ಪ್ರಯತ್ನಪಟ್ಟನು.
ಅವಧ್ಯಾ ಬಹವೋ ವೀರಾಃ ಸಂಗ್ರಾಮೇ ಮಧುಸೂದನ |
ನಿಹತಾಃ ಕೌರವೈಃ ಸಂಖ್ಯೇ ತಥಾಸ್ಮಾಭಿಶ್ಚ ತೇ ಹತಾಃ ॥4॥
ಎಲೈ ಮಧುಸೂದನನೇ, ಅವಧ್ಯರಾದ ಅನೇಕ ವೀರರು ಸಂಗ್ರಾಮದಲ್ಲಿ ಕೌರವರಿಂದ ಹತರಾದರು. ಹಾಗೆಯೇ ನಮ್ಮಿಂದಲೂ ಕೌರವ ಪಕ್ಷದ ವೀರರು ಹತರಾದರು.
ಅರ್ಥಹೇತೋರ್ನರಶ್ರೇಷ್ಠ ಕ್ರಿಯತೇ ಕರ್ಮ ಕುತ್ಸಿತಮ್ |
ಧಿಗರ್ಥಾನ್ ಯತ್ ಕೃತೇ ಹ್ಯೇವಂ ಕ್ರಿಯತೇ ಜ್ಞಾತಿಸಂಕ್ಷಯಃ ॥5॥
ಎಲೈ ಪುರುಷಶ್ರೇಷ್ಠನೇ, ಅರ್ಥದ ಸಲುವಾಗಿ ನಾವು ಕುತ್ಸಿತವಾದ ಕರ್ಮವನ್ನು ಮಾಡುತ್ತಿದ್ದೇವೆ. ಯಾವ ಅರ್ಥದ ಸಲುವಾಗಿ ಇಂತಹ ಬಂಧುವಿನಾಶ ಉಂಟಾಗುತ್ತಿದೆಯೋ ಅಂತಹ ಅರ್ಥಕ್ಕೆ (ಸಂಪತ್ತಿಗೆ) ಧಿಕ್ಕಾರವಿರಲಿ.
ಅಧನಸ್ಯ ಮೃತಂ ಶ್ರೇಯೋ ನ ಚ ಜ್ಞಾತಿವಧಾದ್ ಧನಮ್ |
ಕಿಂ ನು ಪ್ರಾಪ್ಸ್ಯಾಮಹೇ ಕೃಷ್ಣ ಹತ್ವಾ ಜ್ಞಾತೀನ್ ಸಮಾಗತಾನ್ ॥6॥
ನಿರ್ಧನನಾಗಿ ಮೃತನಾಗುವುದು ಒಳ್ಳೆಯದು. ಬಂಧುವಧೆಯಿಂದ ಧನವನ್ನು ಸಂಪಾದಿಸುವುದಲ್ಲ. ಎಲೈ ಕೃಷ್ಣನೇ, ಸಮಾಗತರಾದ ದಾಯಾದಿಗಳನ್ನು ಕೊಂದು ನಾವು ಏನನ್ನು ಪಡೆಯುವೆವು?
ದುರ್ಯೋಧನಾಪರಾಧೇನ ಶಕುನೇಃ ಸೌಬಲಸ್ಯ ಚ |
ಕ್ಷತ್ರಿಯಾ ನಿಧನಂ ಯಾಂತಿ ಕರ್ಣದುರ್ಮಂತ್ರಿತೇನ ಚ ॥7॥
ದುರ್ಯೋಧನ ಮತ್ತು ಸೌಬಲನಾದ ಶಕುನಿಯ ಅಪರಾಧದಿಂದಲೂ, ಕರ್ಣನ ದುರ್ಮಂತ್ರಣದಿಂದಲೂ ಕ್ಷತ್ರಿಯರು ನಿಧನವನ್ನು ಹೊಂದುತ್ತಿದ್ದಾರೆ.
ಇದಾನೀಂ ಚ ವಿಜಾನಾಮಿ ಸುಕೃತಂ ಮಧುಸೂದನ |
ಕೃತಂ ರಾಜ್ಞಾ ಮಹಾಬಾಹೋ ಯಾಚತಾ ಸ್ಮ ಸುಯೋಧನಮ್ |

ರಾಜ್ಯಾರ್ಧಂ ಪಂಚ ವಾ ಗ್ರಾಮಾನ್ ನಾಕಾರ್ಷೀತ್ ಸ ಚ ದುರ್ಮತಿಃ ||
ಎಲೈ ಮಧುಸೂದನನೇ, ಮಹಾಬಾಹುವೇ, ಸುಯೋಧನನನ್ನು ಅರ್ಧರಾಜ್ಯವನ್ನು ಅಥವಾ ಐದು ಗ್ರಾಮಗಳನ್ನು ಯಾಚಿಸಿ ಯುಧಿಷ್ಠಿರನು ಎಂತಹ ಒಳ್ಳೆಯ ಕೆಲಸ ಮಾಡಿದನು ಎಂದು ಈಗ ತಿಳಿಯುತ್ತಿದ್ದೇನೆ. ಆದರೆ ಆ ದುರ್ಮತಿಯು ಯುಧಿಷ್ಠಿರನ ಮಾತನ್ನು ನಡೆಸಿಕೊಡಲಿಲ್ಲ.
ದೃಷ್ಟ್ವಾ ಹಿ ಕ್ಷತ್ರಿಯಾನ್ ಶೂರಾನ್ ಶಯಾನಾನ್ ಧರಣೀತಳೇ |
ನಿಂದಾಮಿ ಭೃಶಮಾತ್ಮಾನಂ ಧಿಗಸ್ತು ಕ್ಷತ್ರಜೀವಿಕಾಮ್ ||9||
ಭೂಮಿಯ ಮೇಲೆ ಮೃತರಾಗಿ ಮಲಗಿರುವ ಕ್ಷತ್ರಿಯ ವೀರರನ್ನು ನೋಡಿ ನಾನು ಕ್ಷತ್ರಿಯ ಜೀವನಕ್ಕೆ ಧಿಕ್ಕಾರವಿರಲಿ ಎಂದು ನನ್ನನ್ನೇ ನಿಂದಿಸಿಕೊಳ್ಳುತ್ತೇನೆ.
ಅಶಕ್ತಮಿತಿ ಮಾಮೇತೇ ಜ್ಞಾಸ್ಯಂತಿ ಕ್ಷತ್ರಿಯಾ ರಣೇ |
ಯುದ್ಧಂ ಮಮ್ಯೆಭೀ ರುಚಿತಂ ಜ್ಞಾತಿಭಿರ್ಮಧುಸೂದನ ||10||
ಈ ಕ್ಷತ್ರಿಯರು ನನ್ನನ್ನು ಯುದ್ಧದಲ್ಲಿ ಅಶಕ್ತರೆಂದು ತಿಳಿಯುವರು. ಎಲೈ ಮಧುಸೂದನನೇ, ಆ ಕಾರಣದಿಂದ ಜ್ಞಾತಿಗಳ ಜೊತೆಯಲ್ಲಿ ಯುದ್ಧವು ನನಗೆ ಇಷ್ಟವಾಗಿದೆ.
ಸಂಚೋದಯ ಹಯಾನ್ ಕ್ಷಿಪ್ರಂ ಧಾರ್ತರಾಷ್ಟ್ರಚಮೂಂ ಪ್ರತಿ |
ಪ್ರತರಿಷ್ಯೇ ಮಹಾಪಾರಂ ಭುಜಾಭ್ಯಾಂ ಸಮರೋದಧಿಮ್ |
ನಾಯಂ ಕ್ಲೀಬಯಿತುಂ ಕಾಲೋ ವಿದ್ಯತೇ ಮಾಧವ ಕ್ವಚಿತ್ ||11||
ದುರ್ಯೋಧನನ ಸೈನ್ಯವನ್ನು ಕುರಿತು ನಮ್ಮ ಅಶ್ವಗಳನ್ನು ಶೀಘ್ರವಾಗಿ ಪ್ರಚೋದಿಸು. ಅಪಾರವಾದ ದೊಡ್ಡ ಈ ಸಮರಸಮುದ್ರವನ್ನು ನಾನು ಎರಡು ಭುಜಗಳಿಂದಲೇ ದಾಟುವೆನು. ಎಲೈ ಮಾಧವನೇ, ಇದು ನಪುಂಸಕನಂತೆ ಹೆದರಿ ಹಿಂದಕ್ಕೆ ಸರಿಯುವ ಕಾಲವಲ್ಲ (ಎಂದು ಹೇಳಿದನು).
ಏವಮುಕ್ತಸ್ತು ಪಾರ್ಥೇನ ಕೇಶವಃ ಪರವೀರಹಾ |
ಚೋದಯಾಮಾಸ ತಾನಶ್ವಾನ್ ಪಾಂಡರಾನ್ ವಾತರಂಹಸಃ ||12||
ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಪರವೀರಘಾತಕನಾದ ಕೇಶವನು ಶ್ವೇತವರ್ಣದ, ವಾಯುವೇಗದ ಆ ಅಶ್ವಗಳನ್ನು ಪ್ರಚೋದಿಸಿದನು.
ಅಥ ಶಬ್ದೋ ಮಹಾನಾಸೀತ್ ತವ ಸೈನ್ಯಸ್ಯ ಭಾರತ |
ಮಾರುತೋದ್ಧೂತವೇಗಸ್ಯ ಸಾಗರಸ್ಯೇವ ಪರ್ವಣಿ ||13||
ಎಲೈ ಭಾರತನೇ, ಆಗ ಪರ್ವಕಾಲದಲ್ಲಿ ಬಿರುಗಾಳಿಗೆ ಸಿಕ್ಕಿ ವೇಗಗೊಂಡ ಸಮುದ್ರದ ಮೊರೆತದಂತೆ ನಿನ್ನ ಸೈನ್ಯದಲ್ಲಿ ತೀವ್ರವಾದ ಶಬ್ದವುಂಟಾಯಿತು.
ಅಪರಾಹ್ಣೇ ಮಹಾರಾಜ ಸಂಗ್ರಾಮಃ ಸಮಪದ್ಯತ |
ಪರ್ಜನ್ಯಸಮನಿರ್ಘೋಷೋ ಭೀಷ್ಮಸ್ಯ ಸಹ ಪಾಂಡವೈಃ ||14||
ಎಲೈ ಮಹಾರಾಜನೇ, ಅಪರಾಹ್ಣದ ಸಮಯದಲ್ಲಿ ಭೀಷ್ಮರಿಗೂ ಮತ್ತು ಪಾಂಡವರಿಗೂ ಸಿಡಿಲಿನ ಘೋಷದಂತಹ ಘೋಷವಿರುವ ಸಂಗ್ರಾಮವು ಜರುಗಿತು.
ತತೋ ರಾಜಂಸ್ತವ ಸುತಾ ಭೀಮಸೇನಮುಪಾದ್ರವನ್ |
ಪರಿವಾರ್ಯ ರಣೇ ದ್ರೋಣಂ ವಸವೋ ವಾಸವಂ ಯಥಾ ||15||
ಎಲೈ ರಾಜನೇ, ಆಗ ನಿನ್ನ ಮಕ್ಕಳು ವಸುಗಳು ಇಂದ್ರನನ್ನು ಸುತ್ತುವರಿದಂತೆ ರಣರಂಗದಲ್ಲಿ ದ್ರೋಣರನ್ನು ಸುತ್ತುವರಿದು ಭೀಮಸೇನನ ಕಡೆಗೆ ಧಾವಿಸಿದರು.
ತತಃ ಶಾಂತನವೋ ಭೀಷ್ಮಃ ಕೃಪಶ್ಚ ರಥಿನಾಂ ವರಃ |
ಭಗದತ್ತಃ ಸುಶರ್ಮಾ ಚ ಧನಂಜಯಮುಪಾದ್ರವನ್ ||16||
ಆಗ ಶಂತನು ಪುತ್ರರಾದ ಭೀಷ್ಮರು, ರಥಿಶ್ರೇಷ್ಠರಾದ ಕೃಪರು, ಭಗದತ್ತ ಮತ್ತು ಸುಶರ್ಮರು ಅರ್ಜುನನ ಕಡೆಗೆ ಧಾವಿಸಿದರು.
ಹಾರ್ದಿಕ್ಯೋ ಬಾಹ್ಲಿಕಶ್ಚೈವ ಸಾತ್ಯಕಿಂ ಸಮಭಿದ್ರುತೌ |
ಅಂಬಷ್ಠಕಸ್ತು ನೃಪತಿರಭಿಮನ್ಯುಮವಾರಯತ್ ||17||
ಕೃತವರ್ಮ ಮತ್ತು ಬಾಹ್ಲಿಕರು ಸಾತ್ಯಕಿಯ ಕಡೆಗೆ ಧಾವಿಸಿದರು. ರಾಜನಾದ ಅಂಬಷ್ಠನು ಅಭಿಮನ್ಯುವನ್ನು ತಡೆದನು.
ಶೇಷಾಸ್ತ್ವನ್ಯೇ ಮಹಾರಾಜ ಶೇಷಾನೇವ ಮಹಾರಥಾನ್ |
ತತಃ ಪ್ರವವೃತೇ ಯುದ್ಧಂ ಘೋರರೂಪಂ ಭಯಾವಹಮ್ ||18||
ಎಲೈ ಮಹಾರಾಜನೇ, ಉಳಿದವರು ಉಳಿದ ಮಹಾರಥರ ಜೊತೆಯಲ್ಲಿ ಸೆಣೆಸಿದರು. ಅನಂತರ ಘೋರವೂ, ಭಯಂಕರವೂ ಆದ ಯುದ್ಧವು ಪ್ರಾರಂಭವಾಯಿತು.
ಭೀಮಸೇನಸ್ತು ಸಂಪ್ರೇಕ್ಷ್ಯ ಪುತ್ರಾಂಸ್ತವ ಜನೇಶ್ವರ |
ಪ್ರಜಜ್ವಾಲ ರಣೇ ಕ್ರುದ್ಧೋ ಹವಿಷಾ ಹವ್ಯವಾಡಿವ ||19||
ಎಲೈ ಜನೇಶ್ವರನೇ, ಭೀಮಸೇನನಾದರೂ ನಿನ್ನ ಪುತ್ರರನ್ನು ನೋಡಿ ಹವಿಸ್ಸಿನಿಂದ ಅಗ್ನಿಯು ಪ್ರಜ್ವಲಿಸುವಂತೆ ರಣರಂಗದಲ್ಲಿ ಕ್ರುದ್ಧನಾಗಿ ಪ್ರಜ್ವಲಿಸಿದನು.
ಪುತ್ರಾಸ್ತು ತವ ಕೌಂತೇಯಂ ಛಾದಯಾಂಚಕ್ರಿರೇ ಶರೈಃ |
ಪ್ರಾವೃಷೀವ ಮಹಾರಾಜ ಜಲದಾಃ ಪರ್ವತಂ ಯಥಾ ||20||

ಎಲೈ ಮಹಾರಾಜನೇ, ನಿನ್ನ ಮಕ್ಕಳಾದರೋ ಮಳೆಗಾಲದಲ್ಲಿ ಮೋಡಗಳು ನೀರಿನಲ್ಲಿ ಪರ್ವತವನ್ನು ಆಚ್ಛಾದಿಸಿದಂತೆ ಬಾಣಗಳಿಂದ ಕುಂತೀಪುತ್ರನಾದ ಭೀಮಸೇನನನ್ನು ಆಚ್ಛಾದಿಸಿದರು.
ಸ ಚ್ಛಾದ್ಯಮಾನೋ ಬಹುಧಾ ಪುತ್ರೈಸ್ತವ ವಿಶಾಂಪತೇ |
ಸೃಕ್ಕಿಣೀ ವಿಲಿಹನ್ ವೀರಃ ಶಾರ್ದೂಲ ಇವ ದರ್ಪಿತಃ ॥21॥
ವ್ಯೂಢೋರಸ್ಕಂ ತತೋ ಭೀಮಃ ಪಾತಯಾಮಾಸ ಪಾರ್ಥಿವ |
ಕ್ಷುರಪ್ರೇಣ ಸುತೀಕ್ಷ್ಣೇನ ಸೋಽಭವದ್ ಗತಜೀವಿತಃ ॥22॥
ಎಲೈ ರಾಜನೇ, ಹೀಗೆ ನಿನ್ನ ಪುತ್ರರಿಂದ ಅನೇಕ ರೀತಿಯಲ್ಲಿ ಆಚ್ಛಾದಿಸಲ್ಪಟ್ಟ ವೀರನಾದ ಭೀಮಸೇನನು ಕಟಬಾಯಿಯನ್ನು ಸವರಿಕೊಳ್ಳುತ್ತಾ ವ್ಯಾಘ್ರದಂತೆ ದರ್ಪಯುಕ್ತನಾಗಿ ನಿನ್ನ ಪುತ್ರನಾದ ವ್ಯೂಢೋರಸ್ಕನನ್ನು ತೀಕ್ಷ್ಣವಾದ ಕ್ಷುರಪ್ರದಿಂದ ಕೆಡವಿದನು. ವ್ಯೂಢೋರಸ್ಕನು ಪ್ರಾಣವನ್ನು ತ್ಯಜಿಸಿದನು.
ಅಪರೇಣ ತು ಭಲ್ಲೇನ ಪೀತೇನ ನಿಶಿತೇನ ಚ |
ಅಪಾತಯತ್ ಕುಂಡಲಿನಂ ಸಿಂಹಃ ಕ್ಷುದ್ರಮೃಗಂ ಯಥಾ ॥23॥
ಇನ್ನೊಂದು ತೀಕ್ಷ್ಣವಾದ ನೀರು ಕುಡಿಸಿ ಹದ ಮಾಡಿದ ಭಲ್ಲದಿಂದ ಸಿಂಹವು ಕ್ಷುದ್ರ ಮೃಗವನ್ನು ಕೆಡವಿದಂತೆ ನಿನ್ನ ಪುತ್ರನಾದ ಕುಂಡಲಿಯನ್ನು ಹೊಡೆದು ಉರುಳಿಸಿದನು.
ತತಃ ಸುನಿಶಿತಾನ್ ಪೀತಾನ್ ಸಮಾದತ್ತ ಶಿಲೀಮುಖಾನ್ |
ಸ ಸಪ್ತ ತ್ವರಯಾ ಯುಕ್ತಃ ಪುತ್ರಾಂಸ್ತೇ ಪ್ರಾಪ್ಯ ಮಾರಿಷ ॥24॥
ಎಲೈ ಪೂಜ್ಯನೇ, ಅನಂತರ ಅವನು ನಿನ್ನ ಪುತ್ರರ ಸಮೀಪಕ್ಕೆ ಬಂದು ಶೀಘ್ರವಾಗಿ ಅತ್ಯಂತ ತೀಕ್ಷ್ಣವಾದ ನೀರು ಕುಡಿಸಿದ ಏಳು ಬಾಣಗಳನ್ನು ತೆಗೆದುಕೊಂಡನು.
ಪ್ರೇಷಿತಾ ಭೀಮಸೇನೇನ ಶರಾಸ್ತೇ ದೃಢಧನ್ವನಾ |
ಅಪಾತಯಂತ ಪುತ್ರಾಂಸ್ತೇ ರಥೇಭ್ಯಃ ಸುಮಹಾರಥಾನ್ ॥25॥
ಅನಾಧೃಷ್ಟಿಂ ಕುಂಡಭೇದಂ ವೈರಾಟಂ ದೀರ್ಘಲೋಚನಮ್ |
ದೀರ್ಘಬಾಹುಂ ಸುಬಾಹುಂ ಚ ತಥೈವ ಕನಕಧ್ವಜಮ್ ॥26॥
ದೃಢವಾದ ಧನುಸ್ಸುಳ್ಳ ಭೀಮಸೇನನಿಂದ ಪ್ರಯೋಗಿಸಲ್ಪಟ್ಟ ಆ ಬಾಣಗಳು ಮಹಾರಥರಾದ, ನಿನ್ನ ಪುತ್ರರಾದ ಅನಾಧೃಷ್ಟಿ, ಕುಂಡಭೇದ, ವೈರಾಟ, ದೀರ್ಘ ಲೋಚನ, ದೀರ್ಘಬಾಹು, ಸುಬಾಹು ಮತ್ತು ಕನಕಧ್ವಜ ಇವರನ್ನು ಅವರ ರಥಗಳಿಂದ ಕೆಡವಿದವು.
ಪ್ರಪತಂತ ಸ್ಮ ತೇ ವೀರಾ ವಿರೇಜುರ್ಭರತರ್ಷಭ |
ವಸಂತೇ ಪುಷ್ಪಶಬಲಾಶ್ಚೂತಾಃ ಪ್ರಪತಿತಾ ಇವ ॥27॥
ಎಲೈ ಭರತಶ್ರೇಷ್ಠನೇ, ಆ ವೀರರು ತಮ್ಮ ರಥದಿಂದ ಬೀಳುತ್ತಾ ವಸಂತ ಕಾಲದಲ್ಲಿ ಪುಷ್ಪಭರಿತವಾದ ಮಾವಿನ ವೃಕ್ಷಗಳು ಬೀಳುವಂತೆ ಕಂಗೊಳಿಸಿದರು.
ತತಃ ಪ್ರದುದ್ರುವುಃ ಶೇಷಾಃ ಪುತ್ರಾಸ್ತವ ವಿಶಾಂಪತೇ |
ತಂ ಕಾಲಮಿವ ಮನ್ಯಂತೋ ಭೀಮಸೇನಂ ಮಹಾಬಲಮ್ ॥28॥
ಆಗ ಎಲೈ ರಾಜನೇ, ಮಹಾಬಲಶಾಲಿಯಾದ ಭೀಮನನ್ನು ಮೃತ್ಯುವೆಂದು ತಿಳಿಯುತ್ತಾ ನಿನ್ನ ಉಳಿದ ಪುತ್ರರು ಓಡಿಹೋದರು.
ದ್ರೋಣಸ್ತು ಸಮರೇ ವೀರಂ ನಿರ್ದಹಂತಂ ಸುತಾಂಸ್ತವ |
ಯಥಾದ್ರಿಂ ವಾರಿಧಾರಾಭಿಃ ಸಮಂತಾದ್ ವ್ಯಕಿರಚ್ಛರೈಃ ॥29॥
ದ್ರೋಣರಾದರೋ ಯುದ್ಧದಲ್ಲಿ ನಿನ್ನ ಪುತ್ರರನ್ನು ದಹಿಸುತ್ತಿದ್ದ ವೀರನಾದ ಭೀಮಸೇನನ ಮೇಲೆ ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಎಲ್ಲ ಕಡೆಗಳಿಂದಲೂ ಬಾಣಗಳನ್ನು ಪ್ರಯೋಗಿಸಿದರು.
ತತ್ರಾದ್ಭುತಮಪಶ್ಯಾಮ ಕುಂತೀಪುತ್ರಸ್ಯ ಪೌರುಷಮ್ |
ದ್ರೋಣೇನ ವಾರ್ಯಮಾಣೋಽಪಿ ನಿಜಘ್ನೇ ಯತ್ ಸುತಾಂಸ್ತವ ॥
ದ್ರೋಣರು ತಡೆಯುತ್ತಿದ್ದರೂ ಕುಂತೀಪುತ್ರನಾದ ಭೀಮಸೇನನು ನಿನ್ನ ಪುತ್ರರನ್ನು ಹೊಡೆಯುತ್ತಿದ್ದ ಅವನ ಅದ್ಭುತ ಪರಾಕ್ರಮವನ್ನು ನಾವು ನೋಡಿದೆವು.
ಯಥಾ ಹಿ ಗೋವೃಷೋ ವರ್ಷಂ ಸಂಧಾರಯತಿ ಖಾತ್ ಪತತ್ |
ಭೀಮಸ್ತಥಾ ದ್ರೋಣಮುಕ್ತಂ ಶರವರ್ಷಮದೀಧರತ್ ॥31॥
ಹೇಗೆ ಗೋವೃಷವು ಆಕಾಶದಿಂದ ಬೀಳುವ ಮಳೆಯನ್ನು ಧರಿಸುತ್ತದೆಯೋ ಹಾಗೆ ಭೀಮಸೇನನು ದ್ರೋಣರು ಪ್ರಯೋಗಿಸಿದ ಬಾಣಗಳ ಮಳೆಯನ್ನು ಧರಿಸಿದನು.
ಅದ್ಭುತಂ ಚ ಮಹಾರಾಜ ತತ್ರ ಚಕ್ರೇ ವೃಕೋದರಃ |
ಯತ್ಪುತ್ರಾಂಸ್ತೇಽವಧೀತ್ ಸಂಖ್ಯೇ ದ್ರೋಣಂ ಚೈವ ನ್ಯಯೋಧಯತ್ ॥
ಎಲೈ ಮಹಾರಾಜನೇ, ಭೀಮಸೇನನು ನಿನ್ನ ಪುತ್ರರನ್ನೂ ಬಾಣಗಳಿಂದ ಹೊಡೆಯುತ್ತಾ ದ್ರೋಣರ ಜೊತೆಯಲ್ಲೂ ಯುದ್ಧವನ್ನು ಮಾಡುವ ಅದ್ಭುತ ಕಾರ್ಯವನ್ನು ಮಾಡಿದನು.
ಪುತ್ರೇಷು ತವ ವೀರೇಷು ಚಿಕ್ರೀಡಾರ್ಜುನಪೂರ್ವಜಃ |
ಮೃಗೇಷ್ವಿವ ಮಹಾರಾಜ ಚರನ್ ವ್ಯಾಘ್ರೋ ಮಹಾಬಲಃ ॥33॥
ಎಲೈ ಮಹಾರಾಜನೇ, ಅರ್ಜುನನ ಅಣ್ಣನಾದ ಭೀಮನು ಮಹಾಭುಜವುಳ್ಳ ವ್ಯಾಘ್ರವು ಜಿಂಕೆಗಳ ಮಧ್ಯದಲ್ಲಿ ಸಂಚರಿಸಿದಂತೆ ವೀರರಾದ ನಿನ್ನ ಪುತ್ರರ ಜೊತೆಯಲ್ಲಿ ಆಟವಾಡಿದನು.

ಯಥಾ ವಾ ಪಶುಮಧ್ಯಸ್ಥೋ ದ್ರಾವಯೇತ ಪಶೂನ್ ವೃಕಃ |
ವೃಕೋದರಸ್ತವ ಸುತಾಂಸ್ತಥಾ ವ್ಯದ್ರಾವಯದ್ ರಣೇ ॥34॥
ಪಶುಗಳ ಮಧ್ಯದಲ್ಲಿದ್ದ ತೋಳವು ಪಶುಗಳನ್ನು ಓಡಿಸುವಂತೆ ವೃಕೋದರನು ರಣರಂಗದಲ್ಲಿ ನಿನ್ನ ಪುತ್ರರನ್ನು ಓಡಿಸಿದನು.
ಗಾಂಗೇಯೋ ಭಗದತ್ತಶ್ಚ ಗೌತಮಶ್ಚ ಮಹಾರಥಃ |
ಪಾಂಡವಂ ರಭಸಂ ಯುದ್ಧೇ ವಾರಯಾಮಾಸುರರ್ಜುನಮ್ ॥35॥
ಭೀಷ್ಮರು, ಭಗದತ್ತ ಮತ್ತು ಮಹಾರಥರಾದ ಕೃಪರು ವೇಗಶಾಲಿಯಾದ ಪಾಂಡುಪುತ್ರನಾದ ಅರ್ಜುನನನ್ನು ಯುದ್ಧದಲ್ಲಿ ತಡೆದರು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ತೇಷಾಂ ಸೋಽತಿರಥೋ ರಣೇ |
ಪ್ರವೀರಾಂಸ್ತವ ಸೈನ್ಯೇಷು ಪ್ರೇಷಯಾಮಾಸ ಮೃತ್ಯವೇ ॥36॥
ಅತಿರಥನಾದ ಅರ್ಜುನನು ಯುದ್ಧದಲ್ಲಿ ಅವರ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನಿವಾರಿಸಿ ನಿನ್ನ ಸೈನ್ಯದಲ್ಲಿದ್ದ ಶ್ರೇಷ್ಠರಾದ ವೀರರನ್ನು ಮೃತ್ಯುಲೋಕಕ್ಕೆ ಕಳುಹಿಸಿದನು.
ಅಭಿಮನ್ಯುಶ್ಚ ರಾಜಾನಮಂಬಷ್ಠಂ ಲೋಕವಿಶ್ರುತಮ್ |
ವಿರಥಂ ರಥಿನಾಂ ಶ್ರೇಷ್ಠಂ ಕಾರಯಾಮಾಸ ಸಾಯಕೈಃ ॥37॥
ಅಭಿಮನ್ಯುವೂ ಸಹ ಲೋಕವಿಖ್ಯಾತನಾದ ರಥಿಶ್ರೇಷ್ಠನಾದ ಅಂಬಷ್ಠರಾಜನನ್ನು ತನ್ನ ಬಾಣಗಳಿಂದ ರಥಹೀನನ್ನಾಗಿ ಮಾಡಿದನು.
ವಿರಥೋ ವಧ್ಯಮಾನಃ ಸ ಸೌಭದ್ರೇಣ ಯಶಸ್ವಿನಾ |
ಅವಪ್ಲುತ್ಯ ರಥಾತ್ ತೂರ್ಣಂ ಸವ್ರೀಡೋ ಮನುಜಾಧಿಪಃ ॥38॥
ಅಸಿಂ ಚಿಕ್ಷೇಪ ಸಮರೇ ಸೌಭದ್ರಸ್ಯ ಮಹಾತ್ಮನಃ |
ಆರುರೋಹ ರಥಂ ಚೈವ ಹಾರ್ದಿಕ್ಯಸ್ಯ ಮಹಾತ್ಮನಃ ॥39॥
ರಥವನ್ನು ಕಳೆದುಕೊಂಡು ಕೀರ್ತಿವಂತನಾದ ಅಭಿಮನ್ಯುವಿನಿಂದ ಬಾಣಗಳಿಂದ ಹೊಡೆಯಲ್ಪಡುತ್ತಿದ್ದ ರಾಜನಾದ ಅಂಬಷ್ಠನು ನಾಚಿಕೆಗೊಂಡು ಶೀಘ್ರವಾಗಿ ರಥದಿಂದ ಕೆಳಗೆ ಹಾರಿ ಮಹಾತ್ಮನಾದ ಅಭಿಮನ್ಯುವಿನ ಮೇಲೆ ಒಂದು ಖಡ್ಗವನ್ನು ಎಸೆದನು ಮತ್ತು ಮಹಾತ್ಮನಾದ ಹಾರ್ದಿಕ್ಯನ ರಥವನ್ನು ಏರಿದನು.
ಆಪತಂತಂ ತು ನಿಸ್ತ್ರಿಂಶಂ ಯುದ್ಧಮಾರ್ಗವಿಶಾರದಃ |
ಲಾಘವಾದ್ ವ್ಯಂಸಯಾಮಾಸ ಸೌಭದ್ರಃ ಪರವೀರಹಾ ॥40॥
ಪರವೀರಘಾತಕನೂ, ಯುದ್ಧಮಾರ್ಗಗಳಲ್ಲಿ ಕುಶಲನೂ ಆದ ಅಭಿಮನ್ಯುವು ತನ್ನ ಕ್ಷಿಪ್ರತನದಿಂದ ತನ್ನ ಕಡೆಗೆ ಬರುತ್ತಿದ್ದ ಖಡ್ಗವನ್ನು ವಂಚಿಸಿದನು.
ವ್ಯಂಸಿತಂ ವೀಕ್ಷ್ಯ ನಿಸ್ತ್ರಿಂಶಂ ಸೌಭದ್ರೇಣ ರಣೇ ತದಾ |
ಸಾಧುಸಾಧ್ವಿತಿ ಸೈನ್ಯಾನಾಂ ಪ್ರಣಾದೋಽಭೂದ್ ವಿಶಾಂಪತೇ ॥41॥
ಎಲೈ ರಾಜನೇ, ಅಭಿಮನ್ಯುವು ಯುದ್ಧದಲ್ಲಿ ಖಡ್ಗವನ್ನು ವಂಚಿಸಿದುದನ್ನು ನೋಡಿ ಸೈನ್ಯಗಳಲ್ಲಿ ಸಾಧು, ಸಾಧು ಎಂಬ ಮಹಾನಾದವುಂಟಾಯಿತು.
ಧೃಷ್ಟದ್ಯುಮ್ನಮುಖಾಸ್ತ್ವನ್ಯೇ ತವ ಸೈನ್ಯಮಯೋಧಯನ್ |
ತಥೈವ ತಾವಕಾಃ ಸರ್ವೇ ಪಾಂಡುಸೈನ್ಯಮಯೋಧಯನ್ ॥42॥
ಉಳಿದ ಧೃಷ್ಟದ್ಯುಮ್ನ ಮೊದಲಾದವರು ನಿನ್ನ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಹಾಗೆಯೇ ನಿನ್ನವರೆಲ್ಲರೂ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತ್ರಾಕ್ರಂದೋ ಮಹಾನಾಸೀತ್ ತವ ತೇಷಾಂ ಚ ಭಾರತ |
ನಿಘ್ನತಾಂ ಭೃಶಮನ್ಯೋನ್ಯಂ ಕುರ್ವತಾಂ ಕರ್ಮ ದುಷ್ಕರಮ್ ॥43॥
ಎಲೈ ಭಾರತನೇ, ಪರಸ್ಪರವಾಗಿ ಕೊಂದು ದುಷ್ಕರವಾದ ಕರ್ಮವನ್ನು ಮಾಡುವ ನಿನ್ನ ಮತ್ತು ಅವರ ಸೈನ್ಯಗಳಲ್ಲಿ ದೊಡ್ಡ ಆಕ್ರಂದನ (ಗೋಳಾಟ) ಉಂಟಾಯಿತು.
ಅನ್ಯೋನ್ಯಂ ಹಿ ರಣೇ ಶೂರಾಃ ಕೇಶೇಷ್ವಾಕ್ಷಿಪ್ಯ ಮಾರಿಷ |
ನಖೈರ್ದಂತೈರಯುಧ್ಯಂತ ಮುಷ್ಟಿಭಿರ್ಜಾನುಭಿಸ್ತಥಾ ॥44॥
ಎಲೈ ಪೂಜ್ಯನೇ, ಶೂರರಾದವರು ಯುದ್ಧದಲ್ಲಿ ಒಬ್ಬರನ್ನೊಬ್ಬರು ತಲೆಕೂದಲಲ್ಲಿ ಹಿಡಿದು ನಖಗಳಿಂದಲೂ, ದಂತಗಳಿಂದಲೂ, ಮುಷ್ಟಿಗಳಿಂದಲೂ, ಮಂಡಿಗಳಿಂದಲೂ ಹೋರಾಡಿದರು.
ಬಾಹುಭಿಶ್ಚ ತಳೈಶ್ಚೈವ ನಿಸ್ತ್ರಿಂಶೈಶ್ಚ ಸುಸಂಶಿತೈಃ |
ವಿವರಂ ಪ್ರಾಪ್ಯ ಚಾನ್ಯೋನ್ಯಮನಯನ್ ಯಮಸಾದನಮ್ ॥45॥
ಬಾಹುಗಳಿಂದಲೂ, ಹಸ್ತತಳಗಳಿಂದಲೂ, ತೀಕ್ಷ್ಣವಾದ ಖಡ್ಗಗಳಿಂದಲೂ ಒಬ್ಬರ ರಂಧ್ರವನ್ನು ಇನ್ನೊಬ್ಬರು ಹೊಂದಿ ಪರಸ್ಪರವಾಗಿ ಯಮಪಟ್ಟಣಕ್ಕೆ ಕಳುಹಿಸಿದರು.
ನ್ಯಹನಚ್ಚ ಪಿತಾ ಪುತ್ರಂ ಪುತ್ರಶ್ಚ ಪಿತರಂ ರಣೇ |
ವ್ಯಾಕುಲೀಕೃತಸಂಕಲ್ಪಾ ಯುಯುಧುಸ್ತತ್ರ ಮಾನವಾಃ ॥46॥
ತಂದೆಯು ಮಗನನ್ನು ಕೊಂದನು, ಮಗನೂ ತಂದೆಯನ್ನು ಕೊಂದನು. ಮಾನವರು ಅಲ್ಲಿ ತಮ್ಮ ಸಂಕಲ್ಪದಲ್ಲಿ ವ್ಯತ್ಯಾಸಗೊಂಡು ಯುದ್ಧವನ್ನು ಮಾಡಿದರು.
ರಣೇ ಚಾರೂಣಿ ಚಾಪಾನಿ ಹೇಮಪೃಷ್ಠಾನಿ ಭಾರತ |
ಹತಾನಾಮಪವಿದ್ಧಾನಿ ಕಲಾಪಾಶ್ಚ ಮಹಾಧನಾಃ ॥47॥

ಜಾತರೂಪಮಯೈಃ ಪುಂಖೈ ರಾಜತೈಶ್ಚ ಶಿತಾಃ ಶರಾಃ |
ತೈಲಧೌತಾ ವ್ಯರಾಜಂತ ನಿರ್ಮುಕ್ತಭುಜಗೋಪಮಾಃ ॥48॥
ಎಲೈ ಭಾರತನೇ, ಯುದ್ಧಭೂಮಿಯಲ್ಲಿ ಚಿನ್ನದ ಹಿಡಿಯಿರುವ ಸುಂದರವಾದ ಧನುಸ್ಸುಗಳು, ಮೃತರಾದವರ ದೇಹದಿಂದ ಎಸೆದ ಬೆಲೆಬಾಳುವ ಆಭರಣಗಳು, ಸುವರ್ಣಮಯವಾದ ಮತ್ತು ರಜತಮಯವಾದ ಪುಂಖಗಳನ್ನು ಹೊಂದಿದ ಎಣ್ಣೆಯಲ್ಲಿ ಸಾಣೆಯನ್ನು ಹಿಡಿದ, ಪೊರೆಯನ್ನು ಬಿಟ್ಟ ಸರ್ಪದಂತಿರುವ ತೀಕ್ಷ್ಣವಾದ ಬಾಣಗಳು ಎಲ್ಲವೂ ಶೋಭಿಸಿದವು.
ಹಸ್ತಿದಂತತ್ಸರೂನ್ ಖಡ್ಗಾನ್ ಜಾತರೂಪಪರಿಷ್ಕೃತಾನ್ |
ಚರ್ಮಾಣಿ ಚಾಪವಿದ್ಧಾನಿ ರುಗ್ಮಪೃಷ್ಠಾನಿ ಧನ್ವಿನಾಮ್ ॥49॥
ಸುವರ್ಣವಿಕೃತಪ್ರಾಸಾನ್ ಪಟ್ಟಿಶಾನ್ ಹೇಮಭೂಷಿತಾನ್ |
ಜಾತರೂಪಮಯಾಶ್ಚರ್ಷ್ಟೀಃ ಶಕ್ತ್ಯಶ್ಚ ಕನಕೋಜ್ಜ್ವಲಾಃ ॥50॥
ಅಪಕೃತ್ತಾಶ್ಚ ಪತಿತಾ ಮುಸಲಾನಿ ಗುರೂಣಿ ಚ |
ಆನೆಯ ದಂತದ ಹಿಡಿಯುಳ್ಳ ಸುವರ್ಣಾಲಂಕೃತವಾದ ಖಡ್ಗಗಳು, ಧನುರ್ಧಾರಿಗಳ ಸುವರ್ಣಪೃಷ್ಠವುಳ್ಳ ಎಸೆದ ಗುರಾಣಿಗಳು, ಸುವರ್ಣಮಯವಾದ ಪ್ರಾಸಗಳು, ಸುವರ್ಣಾಲಂಕೃತವಾದ ಪಟ್ಟಿಶಗಳು, ಸುವರ್ಣಮಯವಾದ ಋಷ್ಟಿಗಳು, ಸುವರ್ಣದಿಂದ ಪ್ರಜ್ವಲಿಸುವ ಶಕ್ತ್ಯಾಯುಧಗಳು, ದೊಡ್ಡ ದೊಡ್ಡ ಒನಕೆಗಳು ಎಲ್ಲವೂ ಕತ್ತರಿಸಿ ನೆಲದ ಮೇಲೆ ಬಿದ್ದಿದ್ದವು.
ಪರಿಘಾನ್ ಪಟ್ಟಿಶಾಂಶ್ಚೈವ ಭಿಂಡಿಪಾಲಾಂಶ್ಚ ಮಾರಿಷ ॥51॥
ಪತಿತಾಂಸ್ತೋಮರಾಂಶ್ಚಾಪಿ ಚಿತ್ರಾ ಹೇಮಪರಿಷ್ಕೃತಾಃ |
ಕುಥಾಶ್ಚ ಬಹುಧಾಕಾರಾಶ್ಚಾಮರವ್ಯಜನಾನಿ ಚ ॥52॥
ನಾನಾವಿಧಾನಿ ಶಸ್ತ್ರಾಣಿ ವಿಸೃಜ್ಯ ಪತಿತಾ ನರಾಃ |
ಜೀವಂತ ಇವ ದೃಶ್ಯಂತೇ ಗತಸತ್ತ್ವಾ ಮಹಾರಥಾಃ ॥53॥
ಎಲೈ ಪೂಜ್ಯನೇ, ಪರಿಘಗಳು, ಪಟ್ಟಿಶಗಳು, ಭಿಂಡಿಪಾಲಗಳು, ಕೆಳಗೆ ಬಿದ್ದ ತೋಮರಗಳು, ಸುವರ್ಣಾಲಂಕೃತವಾದ ವಿಚಿತ್ರವಾದ ಹಾಸುಗಳು, ಅನೇಕ ಆಕಾರದ ಚಾಮರ-ವ್ಯಜನಗಳು, ನಾನಾವಿಧವಾದ ಶಸ್ತ್ರಗಳು ಇವುಗಳನ್ನು ಬಿಟ್ಟು ಪತಿತರಾಗಿ ಮೃತರಾದ ಮಹಾರಥರು ಬದುಕಿರುವಂತೆ ಕಾಣುತ್ತಿದ್ದರು.
ಗದಾವಿಮಥಿತೈರ್ಗಾತ್ರೈರ್ಮುಸಲೈರ್ಭಿನ್ನಮಸ್ತಕಾಃ |
ಗಜವಾಜಿರಥಕ್ಷುಣ್ಣಾಃ ಶೇರತೇ ಸ್ಮ ನರಾಃ ಕ್ಷಿತೌ ॥54॥
ತಥೈವಾಶ್ವನೃನಾಗಾನಾಂ ಶರೀರೈರಾಬಭೌ ತದಾ |
ಸಂಛನ್ನಾ ವಸುಧಾ ರಾಜನ್ ಪರ್ವತೈರಿವ ಸರ್ವತಃ ॥55॥
ಗದೆಗಳಿಂದ ಪುಡಿಮಾಡಲ್ಪಟ್ಟ ಶರೀರಗಳಿಂದ ಒನಕೆಗಳಿಂದ ಭಗ್ನವಾದ ಶಿರಸ್ಸುಳ್ಳ ಗಜಾಶ್ವರಥಗಳಿಗೆ ಸಿಕ್ಕಿ ಮೃತರಾದ ಯೋಧರು ಭೂಮಿಯ ಮೇಲೆ ಮಲಗಿದ್ದರು. ಹಾಗೆಯೇ ಮೃತವಾದ ಅಶ್ವಗಳ, ಯೋಧರ, ಗಜಗಳ ಶರೀರಗಳಿಂದ ಆವೃತವಾದ ರಣಭೂಮಿಯು ಎಲೈ ರಾಜನೇ, ಎಲ್ಲ ಕಡೆಗಳಲ್ಲಿಯೂ ಪರ್ವತಗಳಿಂದ ಆವೃತವಾದಂತೆ ಇದ್ದಿತು.
ಸಮರೇ ಪತಿತೈಶ್ಚೈವ ಶಕ್ತ್ಯೃಷ್ಟಿಶರತೋಮರೈಃ |
ನಿಸ್ತ್ರಿಂಶೈಃ ಪಟ್ಟಿಶೈಃ ಪ್ರಾಸೈರಯಸ್ಕುಂತೈಃ ಪರಶ್ವಧೈಃ ॥56॥
ಪರಿಘೈರ್ಭಿಂಡಿಪಾಲೈಶ್ಚ ಶತಘ್ನೀಭಿಸ್ತಥೈವ ಚ |
ಶರೀರೈಃ ಶಸ್ತ್ರಭಿನ್ನೈಶ್ಚ ಸಮಾಸ್ತೀರ್ಯತ ಮೇದಿನೀ ॥57॥
ಯುದ್ಧದಲ್ಲಿ ಬಿದ್ದ ಶಕ್ತಿ-ಋಷ್ಟಿ-ಬಾಣ-ತೋಮರಗಳಿಂದಲೂ, ಖಡ್ಗಗಳಿಂದಲೂ, ಪಟ್ಟಿಶಗಳಿಂದಲೂ, ಪ್ರಾಸಗಳಿಂದಲೂ, ಕಬ್ಬಿಣದ ಹಾರೆಗಳಿಂದಲೂ, ಕೊಡಲಿಗಳಿಂದಲೂ, ಕಬ್ಬಿಣದ ಒನಕೆಗಳಿಂದಲೂ, ಭಿಂಡಿಪಾಲಗಳಿಂದಲೂ ಹಾಗೆಯೇ ಶಸ್ತ್ರದಿಂದ ಕತ್ತರಿಸಲ್ಪಟ್ಟ ಶರೀರಗಳಿಂದಲೂ ಭೂಮಿಯು ಎಲ್ಲ ಕಡೆಗಳಲ್ಲಿಯೂ ಹರಡಲ್ಪಟ್ಟಿತು.
ನಿಃಶಬ್ದೈರಲ್ಪಶಬ್ದೈಶ್ಚ ಶೋಣಿತೌಘಪರಿಪ್ಲುತೈಃ |
ಗತಾಸುಭಿರಮಿತ್ರಘ್ನ ವಿಬಭೌ ಸಂವೃತಾ ಮಹೀ ॥58॥
ನಿಶ್ಶಬ್ದವಾದ ಅಥವಾ ಅಲ್ಪಶಬ್ದವನ್ನು ಮಾಡುತ್ತಿರುವ ರಕ್ತದಿಂದ ತೋಯಿಸಲ್ಪಟ್ಟ ಮೃತರಾದ ಯೋಧರಿಂದ ಮುಚ್ಚಲ್ಪಟ್ಟ ಭೂಮಿಯು ಶೋಭಿಸಿತು.
ಸತಳತ್ರೈಃ ಸಕೇಯೂರೈರ್ಬಾಹುಭಿಶ್ಚಂದನೋಕ್ಷಿತೈಃ |
ಹಸ್ತಿಹಸ್ತೋಪಮೈಶ್ಛಿನ್ನೈರೂರುಭಿಶ್ಚ ತರಸ್ವಿನಾಮ್ ॥59॥
ಬದ್ಧಚೂಡಾಮಣಿಧರೈಃ ಶಿರೋಭಿಶ್ಚ ಸಕುಂಡಲೈಃ |
ಪತಿತೈರ್ವೃಷಭಾಕ್ಷಾಣಾಂ ಬಭೌ ಭಾರತ ಮೇದಿನೀ ॥60॥
ಎಲೈ ಭಾರತನೇ, ವೃಷಭಾಕ್ಷವುಳ್ಳ ವೀರರ ಹಸ್ತರಕ್ಷೆಗಳಿಂದಲೂ, ಚಂದನ ಲೇಪಿತವಾದ ಕೇಯೂರ ಸಹಿತವಾದ ಭುಜಗಳಿಂದಲೂ, ವೇಗಶಾಲಿಗಳ ಆನೆಯ ಸೊಂಡಿಲಿನಂತಹ ಕತ್ತರಿಸಲ್ಪಟ್ಟ ತೊಡೆಗಳಿಂದಲೂ, ಕಟ್ಟಿದ ಚೂಡಾಮಣಿಗಳನ್ನು ಧರಿಸಿದ ಶಿರಸ್ಸುಗಳಿಂದಲೂ, ಕುಂಡಲಸಹಿತವಾದ ಶಿರಸ್ಸುಗಳಿಂದಲೂ ಯುದ್ಧಭೂಮಿಯು ಶೋಭಿಸಿತು.
ಕವಚೈಃ ಶೋಣಿತಾದಿಗ್ಧೈರ್ವಿಪ್ರಕೀರ್ಣೈಶ್ಚ ಕಾಂಚನೈಃ |
ರರಾಜ ಸುಭೃಶಂ ಭೂಮಿಃ ಶಾಂತಾರ್ಚಿಭಿರಿವಾನಲೈಃ ॥61॥
ರಕ್ತಲೇಪಿತವಾದ, ಸುವರ್ಣಮಯವಾದ ಚೆಲ್ಲಾಡಿದ ಕವಚಗಳಿಂದ ಭೂಮಿಯು ಜ್ವಾಲೆಗಳು ಶಾಂತವಾದ ಅಗ್ನಿಯಂತೆ ಶೋಭಿಸಿತು.
ವಿಪ್ರವಿದ್ಧೈಃ ಕಲಾಪೈಶ್ಚ ಪತಿತೈಶ್ಚ ಶರಾಸನೈಃ |

ವಿಪ್ರಕೀರ್ಣೈಃ ಶರೈಶ್ಚಾಪಿ ರುಗ್ಮಪುಂಖೈಃ ಸಮಂತತಃ ॥62॥
ರಥೈಶ್ಚ ಬಹುಭಿರ್ಭಗ್ನೈಃ ಕಿಂಕಿಣೀಜಾಲಮಾಲಿಭಿಃ।
ವಾಜಿಭಿಶ್ಚ ಹತೈಃ ಕೀರ್ಣೈಃ ಸ್ರಸ್ತಜಿಹ್ವೈಃ ಸಶೋಣಿತೈಃ ॥63॥
ಅನುಕರ್ಷೈಃ ಪತಾಕಾಭಿರುಪಾಸಂಗೈರ್ಧ್ವಜೈರಪಿ।
ಪ್ರವೀರಾಣಾಂ ಮಹಾಶಂಖೈರ್ವಿಪ್ರಕೀರ್ಣೈಶ್ಚ ಪಾಂಡರೈಃ ॥64॥
ಸ್ರಸ್ತಹಸ್ತೈಶ್ಚ ಮಾತಂಗೈಃ ಶಯಾನೈರ್ವಿಬಭೌ ಮಹೀ।
ನಾನಾರೂಪೈರಲಂಕಾರೈಃ ಪ್ರಮದೇವಾಭ್ಯಲಂಕೃತಾ ॥65॥
ಎಸೆಯಲ್ಪಟ್ಟ ಆಭರಣಗಳಿಂದಲೂ, ಬಿದ್ದಿರುವ ಧನುಸ್ಸುಗಳಿಂದಲೂ, ರುಗ್ಮಪುಂಖವನ್ನು ಹೊಂದಿದ ಎಲ್ಲಕಡೆಗಳಲ್ಲಿಯೂ ಚೆಲ್ಲಾಡಿದ ಬಾಣಗಳಿಂದಲೂ, ಭಗ್ನವಾದ ಸಣ್ಣಗಂಟೆಯ ಮಾಲೆಯನ್ನು ಹೊಂದಿದ ರಥಗಳಿಂದಲೂ, ಮೃತವಾಗಿ ನಾಲಿಗೆಯನ್ನು ಚಾಚಿ ರಕ್ತಸಿಕ್ತವಾಗಿ ಅಲ್ಲಲ್ಲಿ ಬಿದ್ದಿರುವ ಅಶ್ವಗಳಿಂದಲೂ, ಸಣ್ಣನೊಗಗಳು, ಪತಾಕೆಗಳು, ಬತ್ತಳಿಕೆಗಳು, ಧ್ವಜಗಳು, ಪ್ರವೀರರ ಚೆಲ್ಲಾಡಿದ ಶ್ವೇತವರ್ಣದ ಶಂಖಗಳು ಇವುಗಳಿಂದಲೂ, ಸೊಂಡಲಿಲ್ಲದೆ ಭೂಮಿಯ ಮೇಲೆ ಮಲಗಿದ ಗಜಗಳಿಂದಲೂ ಭೂಮಿಯು ನಾನಾ ರೂಪವಾದ ಅಲಂಕಾರವನ್ನು ಧರಿಸಿದ ವನಿತೆಯಂತೆ ಶೋಭಿಸಿತು.
ದಂತಿಭಿಶ್ಚಾಪರೈಸ್ತತ್ರ ಸಪ್ರಾಸೈರ್ಗಾಢವೇದನೈಃ।
ಕರೈಃ ಶಬ್ದಂ ವಿಮುಂಚದ್ಭಿಃ ಶೀಕರಂ ಚ ಮುಹುರ್ಮುಹುಃ।
ವಿಬಭೌ ತದ್ ರಣಸ್ಥಾನಂ ಧಮ್ಯಮಾನೈರಿವಾಚಲೈಃ ॥66॥
ಪ್ರಾಸಗಳಿಂದ ಬಲವಾದ ಪ್ರಹಾರವನ್ನು ಹೊಂದಿ, ವೇದನೆಯನ್ನು ಅನುಭವಿಸುತ್ತಿರುವ ಗಜಗಳಿಂದಲೂ, ಸೊಂಡಿಲುಗಳಿಂದ ಪುನಃ ಪುನಃ ಶೀಕರ ಶಬ್ದವನ್ನು ಮಾಡುತ್ತಿದ್ದ ಗಜಗಳಿಂದಲೂ ಆ ರಣಭೂಮಿಯು ಉಸಿರಾಡುವ ಪರ್ವತದಂತೆ ತೋರುತ್ತಿದ್ದಿತು.
ನಾನಾರಾಗೈಃ ಕಂಬಲೈಶ್ಚ ಪರಿಸ್ತೋಮೈಶ್ಚ ದಂತಿನಾಮ್।
ವೈಡೂರ್ಯಮಣಿದಂಡೈಶ್ಚ ಪತಿತೈರಂಕುಶೈಃ ಶುಭೈಃ ॥67॥
ಘಂಟಾಭಿಶ್ಚ ಗಜೇಂದ್ರಾಣಾಂ ಪತಿತಾಭಿಃ ಸಮಂತತಃ।
ವಿಘಾಟಿತವಿಚಿತ್ರಾಭಿಃ ಕುಥಾಭೀ ರಾಂಕವೈಸ್ತಥಾ ॥68॥
ಗ್ರೈವೇಯೈಶ್ಚಿತ್ರರೂಪೈಶ್ಚ ರುಗ್ಮಕಕ್ಷ್ಯಾಭಿರೇವ ಚ।
ಯಂತ್ರೈಶ್ಚ ಬಹುಧಾ ಛಿನ್ನೈಸ್ತೋಮರೈಶ್ಚ ಸಕಂಪನೈಃ ॥69॥
ಅಶ್ವಾನಾಂ ರೇಣುಕಪಿಲೈ ರುಗ್ಮಚ್ಛನ್ನೈರುರಶ್ಛದೈಃ।
ಸಾದಿನಾಂ ಚ ಭುಜೈಶ್ಛಿನ್ನೈಃ ಪತಿತೈಃ ಸಾಂಗದೈಸ್ತಥಾ ॥70॥
ಪ್ರಾಸೈಶ್ಚ ವಿಮಲೈಸ್ತೀಕ್ಷ್ಣೈರ್ವಿಮಲಾಭಿಸ್ತಥರ್ಷ್ಟಿಭಿಃ।
ಉಷ್ಣೀಷೈಶ್ಚ ತಥಾ ಛಿನ್ನೈಃ ಪ್ರವಿದ್ಧೈಶ್ಚ ತತಸ್ತತಃ ॥71॥
ವಿಚಿತ್ರೈರರ್ಧಚಂದ್ರೈಶ್ಚ ಜಾತರೂಪಪರಿಷ್ಕೃತೈಃ।
ಅಶ್ವಾಸ್ತರಪರಿಸ್ತೋಮೈ ರಾಂಕವೈರ್ಮೃದಿತೈಸ್ತಥಾ ॥72॥
ನರೇಂದ್ರಚೂಡಾಮಣಿಭಿರ್ವಿಚಿತ್ರೈಶ್ಚ ಮಹಾಧನೈಃ।
ಛತ್ರೈಸ್ತಥಾಪವಿದ್ಧೈಶ್ಚ ಚಾಮರವ್ಯಜನೈರಪಿ ॥73॥
ಪದ್ಮೇಂದುದ್ಯುತಿಭಿಶ್ಚೈವ ವದನೈಶ್ಚಾರುಕುಂಡಲೈಃ।
ಕ್ಲೃಪ್ತಶ್ಮಶ್ರುಭಿರತ್ಯರ್ಥಂ ವೀರಾಣಾಂ ಸಮಲಂಕೃತೈಃ ॥74॥
ಅಪವಿದ್ಧೈರ್ಮಹಾರಾಜ ಸುವರ್ಣೋಜ್ಜ್ವಲಕುಂಡಲೈಃ।
ಗ್ರಹನಕ್ಷತ್ರಶಬಲಾ ದ್ಯೌರಿವಾಸೀದ್ ವಸುಂಧರಾ ॥75॥
ಅನೇಕ ವರ್ಣದ ಕಂಬಳಿಗಳಿಂದಲೂ, ಗಜದ ಮೇಲಿನ ಹಾಸುಗಳಿಂದಲೂ, ವೈಡೂರ್ಯಮಣಿಯ ಹಿಡಿಯುಳ್ಳ ನೆಲದ ಮೇಲೆ ಬಿದ್ದ ಶುಭವಾದ ಅಂಕುಶಗಳಿಂದಲೂ, ಎಲ್ಲ ಕಡೆಗಳಲ್ಲಿಯೂ ಬಿದ್ದ ಶ್ರೇಷ್ಠ ಗಜಗಳ ಗಂಟೆಗಳಿಂದಲೂ, ಮೃಗರೋಮಗಳಿಂದ ಮಾಡಿದ ವಿಚಿತ್ರವಾದ ರತ್ನಕಂಬಳಿಗಳಿಂದಲೂ, ವಿಚಿತ್ರ ರೂಪವುಳ್ಳ ಗಜಗಳ ಕೊರಳಿನ ಆಭರಣಗಳಿಂದಲೂ, ಸುವರ್ಣಮಯವಾದ ಸರಪಳಿಗಳಿಂದಲೂ, ಅನೇಕ ವಿಧವಾಗಿ ಕತ್ತರಿಸಲ್ಪಟ್ಟ ಯಂತ್ರಗಳಿಂದಲೂ, ಕಂಪನಗಳಿಂದ ಕೂಡಿದ ತೋಮರಗಳಿಂದಲೂ, ಧೂಳಿನಿಂದ ಕಂದುಬಣ್ಣಕ್ಕೆ ತಿರುಗಿದ ಸುವರ್ಣದಿಂದ ಆವೃತವಾದ ಅಶ್ವಗಳ ವಕ್ಷಸ್ಸ್ಥಲದ ವಸ್ತ್ರಗಳಿಂದಲೂ, ಛಿನ್ನವಾದ ಅಂಗದಿಂದ ಕೂಡಿದ ನೆಲದ ಮೇಲೆ ಬಿದ್ದ ಅಶ್ವಾರೋಹಿಗಳ ಭುಜಗಳಿಂದಲೂ, ವಿಮಲವೂ ತೀಕ್ಷ್ಣವೂ ಆದ ಪ್ರಾಸ ಮತ್ತು ಋಷ್ಟಿಗಳಿಂದಲೂ, ಹರಿದು ಅಲ್ಲಲ್ಲಿ ಎಸೆದ ರುಮಾಲುಗಳಿಂದಲೂ, ಸುವರ್ಣದಿಂದ ಅಲಂಕೃತವಾದ ಅರ್ಧಚಂದ್ರಾಕೃತಿಯ ವಿಚಿತ್ರವಾದ ಬಾಣಗಳಿಂದಲೂ, ಅಶ್ವದ ಬೆನ್ನಿನ ಮೇಲೆ ಹಾಸುವ ವಸ್ತ್ರಗಳಿಂದಲೂ, ತುಳಿದು ಹಾಳಾದ ಮೃಗರೋಮದ ಕಂಬಳಿಗಳಿಂದಲೂ, ವಿಚಿತ್ರವೂ ಮತ್ತು ಮಹಾಬೆಲೆಯುಳ್ಳವೂ ಆದ ರಾಜರ ಚೂಡಾಮಣಿಗಳಿಂದಲೂ, ಅಲ್ಲಲ್ಲಿ ಎಸೆದ ಛತ್ರ-ಚಾಮರ-ವ್ಯಜನಗಳಿಂದಲೂ, ವೀರರ ಪದ್ಮೇಂದು ಕಾಂತಿಯುಳ್ಳ, ಚಾರುಕುಂಡಲಗಳನ್ನು ಧರಿಸಿದ, ಅಲಂಕರಿಸಿದ ಮೀಸೆಗಳನ್ನುಳ್ಳ ಅಲ್ಲಲ್ಲಿ ಬಿದ್ದ ಶಿರಸ್ಸುಗಳಿಂದಲೂ ಎಲೈ ಮಹಾರಾಜನೇ, ರಣಭೂಮಿಯು ಗ್ರಹ-ನಕ್ಷತ್ರಗಳಿಂದ ಕೂಡಿದ ಆಕಾಶದಂತೆ ಇದ್ದಿತು.
ಏವಮೇತೇ ಮಹಾಸೇನೇ ಮೃದಿತೇ ತತ್ರ ಭಾರತ।
ಪರಸ್ಪರಂ ಸಮಾಸಾದ್ಯ ತವ ತೇಷಾಂ ಚ ಸಂಯುಗೇ ॥76॥
ಎಲೈ ಭಾರತನೇ, ಹೀಗೆ ಆ ಎರಡು ಸೈನ್ಯಗಳು ಯುದ್ಧದಲ್ಲಿ ಪರಸ್ಪರವಾಗಿ ಸಮಾಗಮವನ್ನು ಹೊಂದಿ ವಿನಾಶಗೊಳಿಸಲ್ಪಟ್ಟವು.

ತೇಷು ಶ್ರಾಂತೇಷು ಭಗ್ನೇಷು ಮೃದಿತೇಷು ಚ ಭಾರತ |
ರಾತ್ರಿಃ ಸಮಭವದ್ ಘೋರಾ ನಾಪಶ್ಯಾಮ ತತೋ ರಣಮ್ ||77||
ಎಲೈ ಭಾರತನೇ, ಆ ವೀರರು ಮತ್ತು ವಾಹನಗಳು ಭಗ್ನಗೊಂಡು ತುಳಿಯಲ್ಪಟ್ಟು ದಣಿದಿರಲು ಘೋರವಾದ ರಾತ್ರಿಯುಂಟಾಯಿತು. ಆಗ ನಾವು ಯುದ್ಧವನ್ನು ಕಾಣಲಿಲ್ಲ.
ತತೋಽವಹಾರಂ ಸೈನ್ಯಾನಾಂ ಪ್ರಚಕ್ರುಃ ಕುರುಪಾಂಡವಾಃ |
ಘೋರೇ ನಿಶಾಮುಖೇ ರೌದ್ರೇ ವರ್ತಮಾನೇ ಸುದಾರುಣೇ ||78||
ಘೋರವೂ, ಭಯಂಕರವೂ ಆದ ನಿಶಾಮುಖ (ರಾತ್ರಿ) ಉಂಟಾಗುತ್ತಿರಲು ಕುರು- ಪಾಂಡವರಿಬ್ಬರೂ ಸೈನ್ಯದ ಅವಹಾರವನ್ನು ಮಾಡಿದರು.
ಅವಹಾರಂ ತತಃ ಕೃತ್ವಾ ಸಹಿತಾಃ ಕುರುಪಾಂಡವಾಃ |
ನ್ಯವಿಶಂತ ಯಥಾಕಾಲಂ ಗತ್ವಾ ಸ್ವಶಿಬಿರಂ ತದಾ ||79||
ಕುರು-ಪಾಂಡವರು ಜೊತೆಯಲ್ಲಿಯೇ ಸೈನ್ಯಾವಹಾರವನ್ನು ಮಾಡಿ ಯೋಗ್ಯವಾದ ಕಾಲದಲ್ಲಿ ತಮ್ಮ ಶಿಬಿರವನ್ನು ಪ್ರವೇಶಿಸಿ ವಿಶ್ರಾಂತಿಯನ್ನು ಪಡೆದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಿನವತಿತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ದ್ವಿಪಂಚಾಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ಮೂರನೆಯ ಅಧ್ಯಾಯ
ಕರ್ಣಾದಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ
ಭೀಷ್ಮರನ್ನು ಕುರಿತು ದುರ್ಯೋಧನನ ಉಗ್ರವಚನಗಳು.
ಸಂಜಯಃ
ತತೋ ದುರ್ಯೋಧನೋ ರಾಜಾ ಶಕುನಿಶ್ಚಾಪಿ ಸೌಬಲಃ |
ದುಃಶಾಸನಶ್ಚ ಪುತ್ರಸ್ತೇ ಸೂತಪುತ್ರಶ್ಚ ದುರ್ಜಯಃ ||1||
ಸಮಾಗಮ್ಯ ಮಹಾರಾಜ ಮಂತ್ರಂ ಚಕ್ರುರ್ವಿವಕ್ಷಿತಮ್ |
ಕಥಂ ಪಾಂಡುಸುತಾ ಯುದ್ಧೇ ಜೇತವ್ಯಾಃ ಸಗಣಾ ಇತಿ ||2||
ಸಂಜಯ ಎಲೈ ಮಹಾರಾಜನೇ, ಅನಂತರ ರಾಜನಾದ ದುರ್ಯೋಧನನೂ, ಸೌಬಲನಾದ ಶಕುನಿಯೂ, ನಿನ್ನ ಪುತ್ರನಾದ ದುಶ್ಶಾಸನನೂ, ದುರ್ಜಯನಾದ ಕರ್ಣನೂ ಒಟ್ಟಿಗೆ ಸೇರಿ, ಪರಿವಾರಸಹಿತರಾದ ಪಾಂಡವರನ್ನು ಯುದ್ಧದಲ್ಲಿ ಹೇಗೆ ಗೆಲ್ಲುವುದು ಎಂದು ಮಂತ್ರಾಲೋಚನೆಯನ್ನು ಮಾಡಿದರು.
ತತೋ ದುರ್ಯೋಧನೋ ರಾಜಾ ಸರ್ವಾಂಸ್ತಾನಾಹ ಮಂತ್ರಿಣಃ |
ಸೂತಪುತ್ರಂ ಸಮಾಭಾಷ್ಯ ಸೌಬಲಂ ಚ ಮಹಾಬಲಮ್ ||3||
ಆಗ ರಾಜನಾದ ದುರ್ಯೋಧನನು ಸೂತಪುತ್ರನಾದ ಕರ್ಣನನ್ನು ಮತ್ತು ಮಹಾಬಲನಾದ ಶಕುನಿಯನ್ನು ಕುರಿತು, ಮಂತ್ರಾಲೋಚನೆಗೆ ಸೇರಿದ ಎಲ್ಲರೂ ಕೇಳುವಂತೆ ಹೇಳಿದನು.
ದ್ರೋಣೋ ಭೀಷ್ಮಃ ಕೃಪಃ ಶಲ್ಯಃ ಸೌಮದತ್ತಿಶ್ಚ ಸಂಯುಗೇ |
ನ ಪಾರ್ಥಾನ್ ಪ್ರತಿಬಾಧಂತೇ ನ ಜಾನೇ ತತ್ರ ಕಾರಣಮ್ ||4||
ದ್ರೋಣರು, ಭೀಷ್ಮರು, ಕೃಪರು, ಶಲ್ಯ ಮತ್ತು ಭೂರಿಶ್ರವರು ಯುದ್ಧದಲ್ಲಿ ಪಾಂಡವರನ್ನು ಬಾಧಿಸುತ್ತಿಲ್ಲ. ಇದಕ್ಕೆ ನನಗೆ ಕಾರಣವು ತಿಳಿಯುತ್ತಿಲ್ಲ.
ಅವಧ್ಯಮಾನಾಸ್ತೇ ಚಾಪಿ ಕ್ಷಪಯಂತಿ ಬಲಂ ಮಮ |
ಸೋಽಸ್ಮಿ ಕ್ಷೀಣಬಲಃ ಕರ್ಣ ಕ್ಷೀಣಶಸ್ತ್ರಶ್ಚ ಸಂಯುಗೇ ||5||
ಪಾಂಡವರು ಅವಧ್ಯರಾಗಿ ನನ್ನ ಸೈನ್ಯವನ್ನು ವಿನಾಶಗೊಳಿಸುತ್ತಿದ್ದಾರೆ. ಆದ್ದರಿಂದ ಎಲೈ ಕರ್ಣನೇ, ನಾನು ಯುದ್ಧದಲ್ಲಿ ಸೈನ್ಯವನ್ನು ಮತ್ತು ಶಸ್ತ್ರಗಳನ್ನು ಕಳೆದುಕೊಂಡಿದ್ದೇನೆ.
ದ್ರೋಣಸ್ಯ ಪ್ರಮುಖೇ ವೀರಾ ಹತಾಸ್ತೇ ಭ್ರಾತರೋ ಮಮ |
ಭೀಮಸೇನೇನ ರಾಧೇಯ ಮಮ ಚೈವ ಚ ಪಶ್ಯತಃ ||6||
ಎಲೈ ಕರ್ಣನೇ, ದ್ರೋಣರ ಎದುರಿನಲ್ಲಿ ನಾನು ನೋಡುತ್ತಿದ್ದಂತೆಯೇ ವೀರರಾದ ನನ್ನ ತಮ್ಮಂದಿರು ಭೀಮಸೇನನಿಂದ ಹತರಾದರು.
ನಿಕೃತಃ ಪಾಂಡವೈಃ ಶೂರೈರವಧ್ಯೈರ್ದೈವತ್ತೈರಪಿ |
ಸೋಽಹಂ ಸಂಶಯಮಾಪನ್ನಃ ಪ್ರಕರಿಷ್ಯೇ ಕಥಂ ರಣಮ್ ||7||
ಹೀಗೆ ದೇವತೆಗಳಿಂದಲೂ ಅವಧ್ಯರಾದ ಪಾಂಡವರಿಂದ ಅವಮಾನವನ್ನು ಹೊಂದಿದ ನಾನು ಪ್ರಾಣಸಂಶಯವನ್ನು ಹೊಂದಿ ಹೇಗೆ ಯುದ್ಧವನ್ನು ಮಾಡಲಿ? (ಎಂದು ಹೇಳಿದನು).
ತಮಬ್ರವೀನ್ಮಹಾರಾಜ ಸೂತಪುತ್ರೋ ನರಾಧಿಪಮ್ |
ಮಾ ಶುಚೋ ಭರತಶ್ರೇಷ್ಠ ಪ್ರಕರಿಷ್ಯೇ ಪ್ರಿಯಂ ತವ ||8||
ಎಲೈ ಮಹಾರಾಜನೇ, ಆ ರಾಜನನ್ನು ಕುರಿತು ಸೂತಪುತ್ರನಾದ ಕರ್ಣನು ಭರತಶ್ರೇಷ್ಠನೇ, ಶೋಕಪಡಬೇಡ. ನಾನು ನಿನಗೆ ಪ್ರಿಯವನ್ನು ಮಾಡುವೆನು.

ಭೀಷ್ಮಃ ಶಾಂತನವಸ್ತೂರ್ಣಮಪಯಾತು ಮಹಾರಣಾತ್ |
ನಿವೃತ್ತೇ ಯುಧಿ ಗಾಂಗೇಯೇ ನ್ಯಸ್ತಶಸ್ತ್ರೇ ಚ ಭಾರತ ॥9॥
ಅಹಂ ಪಾರ್ಥಾನ್ ಹನಿಷ್ಯಾಮಿ ಸಹಿತಾನ್ ಸರ್ವಸೋಮಕೈಃ |
ಪಶ್ಯತೋ ಯುಧಿ ಭೀಷ್ಮಸ್ಯ ಶಪೇ ಸತ್ಯೇನ ತೇ ನೃಪ ॥10॥
ಶಂತನು ಪುತ್ರರಾದ ಭೀಷ್ಮರು ಮಹಾಯುದ್ಧದಿಂದ ಶೀಘ್ರವಾಗಿ ಹಿಂದಕ್ಕೆ ಸರಿಯಲಿ. ಎಲೈ ಭಾರತನೇ, ಗಂಗಾಪುತ್ರರು ಶಸ್ತ್ರಸಂನ್ಯಾಸವನ್ನು ಮಾಡಿ ಯುದ್ಧದಿಂದ ನಿವೃತ್ತರಾದ ಮೇಲೆ ಎಲೈ ರಾಜನೇ, ನಾನು ಭೀಷ್ಮರ ಕಣ್ಣೆದುರಿಗೇ ಸೋಮಕರಿಂದ ಸಹಿತರಾದ ಪಾಂಡವರನ್ನು ಕೊಲ್ಲುವೆನು. ಇದನ್ನು ನಿನಗೆ ಶಪಥ ಮಾಡಿ ಹೇಳುತ್ತಿದ್ದೇನೆ.
ಪಾಂಡವೇಷು ದಯಾಂ ರಾಜನ್ ಸದಾ ಭೀಷ್ಮಃ ಕರೋತಿ ವೈ |
ಅಶಕ್ತಶ್ಚ ರಣೇ ಭೀಷ್ಮೋ ಜೇತುಮೇತಾನ್ ಮಹಾರಥಾನ್ ॥10॥
ಎಲೈ ರಾಜನೇ, ಭೀಷ್ಮರು ಪಾಂಡವರಲ್ಲಿ ಯಾವಾಗಲೂ ದಯೆಯನ್ನು ತೋರಿಸುತ್ತಾರೆ. ಮತ್ತು ಮಹಾರಥರಾದ ಅವರನ್ನು ಯುದ್ಧದಲ್ಲಿ ಗೆಲ್ಲಲು ಭೀಷ್ಮರಿಗೆ ಶಕ್ತಿಯೂ ಇಲ್ಲ.
ಅಭಿಮಾನೀ ರಣೇ ಭೀಷ್ಮೋ ನಿತ್ಯಂ ಚಾಪಿ ರಣಪ್ರಿಯಃ |
ಸ ಕಥಂ ಪಾಂಡವಾನ್ ಯುದ್ಧೇ ಜೇಷ್ಯತೇ ತಾತ ಸಂಗತಾನ್ ॥11॥
ಭೀಷ್ಮರು ಯಾವಾಗಲೂ ಯುದ್ಧಪ್ರಿಯರಾದರೂ ಬಹಳ ಅಹಂಕಾರವುಳ್ಳವರು. ಎಲೈ ಪ್ರೀತಿಪಾತ್ರನೇ, ಅವರು ಒಟ್ಟುಗೂಡಿದ ಪಾಂಡವರನ್ನು ಹೇಗೆ ಗೆಲ್ಲುವರು?
ಸ ತ್ವಂ ಶೀಘ್ರಮಿತೋ ಗತ್ವಾ ಭೀಷ್ಮಸ್ಯ ಶಿಬಿರಂ ಪ್ರತಿ |
ಅನುಮಾನ್ಯ ರಣೇ ಭೀಷ್ಮಂ ಶಸ್ತ್ರಂ ನ್ಯಾಸಯ ಭಾರತ ॥12॥
ಎಲೈ ಭಾರತನೇ, ಆದ್ದರಿಂದ ನೀನು ಶೀಘ್ರವಾಗಿ ಇಲ್ಲಿಂದ ಭೀಷ್ಮರ ಶಿಬಿರಕ್ಕೆ ಹೋಗಿ ಅವರನ್ನು ಒಪ್ಪಿಸಿ ಯುದ್ಧದಲ್ಲಿ ಅವರು ಶಸ್ತ್ರವನ್ನು ಕೆಳಗಿಡುವಂತೆ ಮಾಡು.
ನ್ಯಸ್ತಶಸ್ತ್ರೇ ತತೋ ಭೀಷ್ಮೇ ನಿಹತಾನ್ ಪಶ್ಯ ಪಾಂಡವಾನ್ |
ಮಯ್ಯೈಕೇನ ರಣೇ ರಾಜನ್ ಸಸುಹೃದ್ಗಣಬಾಂಧವಾನ್ ॥13॥
ಎಲೈ ರಾಜನೇ, ಭೀಷ್ಮರು ಶಸ್ತ್ರಸಂನ್ಯಾಸವನ್ನು ಮಾಡಿದ ಮೇಲೆ ನಾನೊಬ್ಬನೇ ಸುಹೃದರಿಂದಲೂ ಮತ್ತು ಬಾಂಧವರಿಂದಲೂ ಸಹಿತರಾದ ಪಾಂಡವರನ್ನು ಕೊಲ್ಲುವುದನ್ನು ನೋಡು (ಎಂದು ಹೇಳಿದನು).
ಏವಮುಕ್ತಸ್ತು ಕರ್ಣೇನ ಪುತ್ರೋ ದುರ್ಯೋಧನಸ್ತವ |
ಅಬ್ರವೀದ್ ಭ್ರಾತರಂ ತತ್ರ ದುಃಶಾಸನಮಿದಂ ವಚಃ ॥14॥
ಅನುಯಾತ್ರಂ ಯಥಾ ಸಜ್ಜಂ ಸರ್ವಂ ಭವತಿ ಸರ್ವತಃ |
ದುಃಶಾಸನ ತಥಾ ಕ್ಷಿಪ್ರಂ ಸರ್ವಮೇವೋಪಪಾದಯ ॥15॥
ಕರ್ಣನಿಂದ ಹೀಗೆ ಹೇಳಲ್ಪಟ್ಟ ನಿನ್ನ ಪುತ್ರನಾದ ದುರ್ಯೋಧನನು ತಮ್ಮನಾದ ದುಶ್ಶಾಸನನನ್ನು ಕುರಿತು, ದುಶ್ಶಾಸನನೇ ಪ್ರಯಾಣಕ್ಕೆ ಪರಿವಾರವು ಸಿದ್ಧವಾಗುವಂತೆ ನೀನು ಎಲ್ಲಾ ವ್ಯವಸ್ಥೆಯನ್ನೂ ಶೀಘ್ರವಾಗಿ ಮಾಡು ಎಂದು ಹೇಳಿದನು.
ಏವಮುಕತ್ವ ತತೋ ರಾಜನ್ ಕರ್ಣಮಾಹ ಜನೇಶ್ವರಃ |
ಅನುಮಾನ್ಯ ರಣೇ ಭೀಷ್ಮಮಿತೋಽಹಂ ದ್ವಿಪದಾಂ ವರಮ್ ॥16॥
ಆಗಮಿಷ್ಯೇ ತತಃ ಕ್ಷಿಪ್ರಂ ತ್ವತ್ಸಕಾಶಮರಿಂದಮ |
ತತಸ್ತ್ವಂ ಪುರುಷವ್ಯಾಘ್ರ ಪ್ರಕರಿಷ್ಯಸಿ ಸಂಯುಗಮ್ ॥17॥
ಎಲೈ ರಾಜನೇ, ರಾಜನಾದ ಅವನು ದುಶ್ಶಾಸನನಿಗೆ ಹೀಗೆ ಹೇಳಿ ಕರ್ಣನನ್ನು ಕುರಿತು ನಾನು ಇಲ್ಲಿಂದ ಹೊರಟು ಪುರುಷಶ್ರೇಷ್ಠರಾದ ಭೀಷ್ಮರನ್ನು ಒಪ್ಪಿಸಿ ಶೀಘ್ರವಾಗಿ ನಿನ್ನ ಸಮೀಪಕ್ಕೆ ಹಿಂದಿರುಗುವೆನು. ಎಲೈ ಅರಿಂದಮನೇ, ಪುರುಷವ್ಯಾಘ್ರನೇ, ಅನಂತರ ನೀನು ಯುದ್ಧವನ್ನು ಮಾಡುವಿ ಎಂದು ಹೇಳಿದನು.
ಸಂಜಯಃ
ನಿಷ್ಪಪಾತ ತತಸ್ತೂರ್ಣಂ ಪುತ್ರಸ್ತವ ವಿಶಾಂಪತೇ |
ಸಹಿತೋ ಭ್ರಾತೃಭಿಃ ಸರ್ವೈರ್ದೇವೈರಿವ ಶತಕ್ರತುಃ ॥18॥
ಸಂಜಯ ಎಲೈ ರಾಜನೇ, ಅನಂತರ ನಿನ್ನ ಪುತ್ರನು ಎಲ್ಲ ಸಹೋದರರಿಂದ ಸಹಿತನಾಗಿ, ಎಲ್ಲ ದೇವತೆಗಳಿಂದ ಸಹಿತನಾದ ಇಂದ್ರನಂತೆ ಅಲ್ಲಿಂದ ಶೀಘ್ರವಾಗಿ ಹೊರಟನು.
ತತಸ್ತಂ ನೃಪಶಾರ್ದೂಲಂ ಶಾರ್ದೂಲಸಮವಿಕ್ರಮಮ್ |
ಆರೋಹಯದ್ ಹಯಂ ತೂರ್ಣಂ ಭ್ರಾತಾ ದುಃಶಾಸನಸ್ತದಾ ॥19॥
ಅನಂತರ ದುಶ್ಶಾಸನನು ಶಾರ್ದೂಲವಿಕ್ರಮವನ್ನು ಹೊಂದಿದ, ನೃಪಶ್ರೇಷ್ಠನಾದ ತನ್ನ ಅಣ್ಣನನ್ನು ಶೀಘ್ರವಾಗಿ ಅಶ್ವವನ್ನು ಏರಿಸಿದನು.
ಅಂಗದೀ ಬದ್ಧಮುಕುಟೋ ಹಸ್ತಾಭರಣವಾನ್ ನೃಪಃ |
ಧಾರ್ತರಾಷ್ಟ್ರೋ ಮಹಾರಾಜ ವಿಬಭೌ ಸ ಮಹೇಂದ್ರವತ್ ॥20॥
ಎಲೈ ಮಹಾರಾಜನೇ, ಅಂಗದಗಳನ್ನೂ, ಕಿರೀಟವನ್ನೂ, ಹಸ್ತಾಭರಣಗಳನ್ನೂ ಧರಿಸಿದ ದುರ್ಯೋಧನನು ಮಹೇಂದ್ರನಂತೆ ಶೋಭಿಸಿದನು.
ಭಾಂಡೀಪುಷ್ಪನಿಕಾಶೇನ ತಪನೀಯನಿಭೇನ ಚ |

ಅನುಲಿಪ್ತಃ ಪರಾರ್ಧ್ಯೇನ ಚಂದನೇನ ಸುಗಂಧಿನಾ ॥21॥
ಅರಜೋಂಬರಸಂವೀತಃ ಸಿಂಹಖೇಲಗತಿರ್ನೃಪಃ।
ಶುಶುಭೇ ವಿಮಲಾರ್ಚಿಷ್ಮಾನ್ ಶರದೀವ ದಿವಾಕರಃ ॥22॥
ಸುವರ್ಣದ ಕಾಂತಿಯನ್ನು ಹೊಂದಿದ್ದ, ಕುಂಕುಮ-ಕೇಸರ ಪುಷ್ಪಗಳ ಬಣ್ಣದ, ಸುಗಂಧಯುಕ್ತವಾದ ಬೆಲೆಬಾಳುವ ಚಂದನದಿಂದ ಲಿಪ್ತನಾಗಿ, ಸ್ವಚ್ಛವಾದ ವಸ್ತ್ರಗಳನ್ನು ಧರಿಸಿ ಸಿಂಹದ ನಡಿಗೆಯುಳ್ಳ ರಾಜನು ಶರತ್ಕಾಲದಲ್ಲಿ ಪರಿಶುದ್ಧವಾದ ಕಿರಣಗಳನ್ನು ಹೊಂದಿದ ಸೂರ್ಯನಂತೆ ಕಂಗೊಳಿಸಿದನು.
ತಂ ಪ್ರಯಾಂತಂ ನರವ್ಯಾಘ್ರಂ ಭೀಷ್ಮಸ್ಯ ಶಿಬಿರಂ ಪ್ರತಿ।
ಅನುಜಗ್ಮುರ್ಮಹೇಷ್ವಾಸಾಃ ಸರ್ವಲೋಕಸ್ಯ ಧನ್ವಿನಃ।
ಭ್ರಾತರಶ್ಚ ಮಹೇಷ್ವಾಸಾಸ್ತ್ರಿದಶಾ ಇವ ವಾಸವಮ್ ॥23॥
ಭೀಷ್ಮರ ಶಿಬಿರಕ್ಕೆ ಹೊರಟ ಆ ನರವ್ಯಾಘ್ರನನ್ನು ಮಹಾಧನುರ್ಧಾರಿಗಳಾದ ಸರ್ವಲೋಕವೀರರೂ ಮತ್ತು ಅವನ ತಮ್ಮಂದಿರೂ ದೇವತೆಗಳು ಇಂದ್ರನನ್ನು ಹಿಂಬಾಲಿಸಿದಂತೆ ಹಿಂಬಾಲಿಸಿದರು.
ಹಯಾನನ್ಯೇ ಸಮಾರುಹ್ಯ ಗಜಾನನ್ಯೇ ಚ ಭಾರತ।
ರಥೈರನ್ಯೇ ನರಶ್ರೇಷ್ಠಾಃ ಪರಿವವ್ರುಃ ಸಮಂತತಃ ॥24॥
ಎಲೈ ಭಾರತನೇ, ಕೆಲವರು ಅಶ್ವಗಳನ್ನು ಏರಿ, ಇನ್ನು ಕೆಲವರು ಗಜಗಳನ್ನು ಏರಿ, ಇನ್ನು ಕೆಲವು ನರಶ್ರೇಷ್ಠರು ರಥಗಳನ್ನು ಏರಿ ದುರ್ಯೋಧನನನ್ನು ಸುತ್ತುವರಿದರು.
ಆತ್ತಶಸ್ತ್ರಾಶ್ಚ ಸುಹೃದೋ ರಕ್ಷಣಾರ್ಥಂ ಮಹೀಪತೇಃ।
ಪ್ರಾದುರ್ಬಭೂವುಃ ಸಹಿತಾಃ ಶಕ್ರಸ್ಯೇವಾಮರಾ ದಿವಿ ॥25॥
ರಾಜನ ರಕ್ಷಣೆಗಾಗಿ ಕೈಯಲ್ಲಿ ಶಸ್ತ್ರಗಳನ್ನು ಹಿಡಿದ ಯೋಧರು ಸ್ವರ್ಗದಲ್ಲಿ ದೇವತೆಗಳು ಇಂದ್ರನನ್ನು ಸುತ್ತುವರಿದಂತೆ ಒಟ್ಟಾಗಿ ಕಾಣಿಸಿಕೊಂಡರು.
ಸಂಪೂಜ್ಯಮಾನಃ ಕುರುಭಿಃ ಕೌರವಾಣಾಂ ಮಹಾರಥಃ।
ಪ್ರಯಯೌ ಸದನಂ ರಾಜನ್ ಗಾಂಗೇಯಸ್ಯ ಯಶಸ್ವಿನಃ।
ಅನ್ವೀಯಮಾನಃ ಸಹಿತೈಃ ಸೋದರ್ಯೈಃ ಸರ್ವತೋ ನೃಪಃ ॥26॥
ಎಲೈ ರಾಜನೇ, ಕೌರವರ ಮಹಾರಥನಾದ ಅವನು ಕುರುಗಳಿಂದ ಗೌರವಿಸಲ್ಪಟ್ಟು, ತನ್ನ ಎಲ್ಲ ಸಹೋದರರಿಂದಲೂ ಹಿಂಬಾಲಿಸಲ್ಪಟ್ಟು ಕೀರ್ತಿವಂತರಾದ ಭೀಷ್ಮರ ಶಿಬಿರಕ್ಕೆ ಹೊರಟನು.
ದಕ್ಷಿಣಂ ದಕ್ಷಿಣಾಕಾರಂ ಸಂಭೃತ್ಯ ಸ್ವಭುಜಂ ತದಾ।
ಹಸ್ತಿಹಸ್ತೋಪಮಂ ಶೈಕ್ಷಂ ಸರ್ವಶತ್ರುನಿಬರ್ಹಣಮ್ ॥27॥
ಪ್ರಗೃಹ್ಣನ್ನಂಜಲೀನ್ ನೃಣಾಮುದ್ಯತಾನ್ ಸರ್ವತೋ ದಿಶಮ್।
ಶುಶ್ರಾವ ಮಧುರಾ ವಾಚೋ ನಾನಾದೇಶನಿವಾಸಿನಾಮ್ ॥28॥
ದಕ್ಷಿಣೆಯನ್ನು ಕೊಡುವ, ಆನೆಯ ಸೊಂಡಿಲಿನಂತಿದ್ದ, ಶತ್ರುವಿನಾಶಕವಾದ, ವ್ಯಾಯಾಮದಿಂದ ಪೂರ್ಣವಾದ, ತನ್ನ ಭುಜವನ್ನು ಮೇಲಕ್ಕೆತ್ತಿ ಎಲ್ಲ ದಿಕ್ಕುಗಳಲ್ಲಿಯೂ ಎದ್ದುನಿಂತ ಮನುಷ್ಯರ ನಮಸ್ಕಾರರೂಪವಾದ ಅಂಜಲಿಗಳನ್ನು ಸ್ವೀಕರಿಸುತ್ತಾ ನಾನಾ ದೇಶದಲ್ಲಿ ವಾಸಿಸುವ ಜನರು ಹೇಳುವ ತನ್ನ ಪ್ರಶಂಸಾರೂಪವಾದ ಮಧುರವಾದ ಮಾತುಗಳನ್ನು ಕೇಳಿದನು.
ಸಂಸ್ತೂಯಮಾನಃ ಸೂತೈಶ್ಚ ಮಾಗಧೈಶ್ಚ ಮಹಾಯಶಾಃ।
ಪೂಜಯಾನಶ್ಚ ತಾನ್ ಸರ್ವಾನ್ ಸರ್ವಲೋಕೇಶ್ವರೇಶ್ವರಃ ॥29॥
ಮಹಾಕೀರ್ತಿವಂತನೂ, ಸರ್ವಲೋಕೇಶ್ವರನೂ ಆದ ಅವನು ಸೂತ- ಮಾಗಧರಿಂದ ಸೋತ್ರಮಾಡಲ್ಪಟ್ಟು, ಅವರೆಲ್ಲರನ್ನೂ ಸನ್ಮಾನಿಸುತ್ತಾ ಹೊರಟನು.
ಪ್ರದೀಪ್ತೈಃ ಕಾಂಚನೈಸ್ತತ್ರ ಗಂಧತೈಲಾವಸೇಚನೈಃ।
ಪರಿವವ್ರುರ್ಮಹಾತ್ಮಾನಂ ಪ್ರಜ್ವಲದ್ಭಿಃ ಸಮಂತತಃ ॥30॥
ಅವನ ಅನುಚರರು ಸುಂಗಧಯುಕ್ತವಾದ ತೈಲಗಳಿಂದ ಪೂರಿತವಾದ, ಜ್ವಲಿಸುವ ಸುವರ್ಣಮಯವಾದ ಪ್ರದೀಪಗಳನ್ನು ಹಿಡಿದು ಆ ಮಹಾತ್ಮನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಸ ತೈಃ ಪರಿವೃತೋ ರಾಜಾ ಪ್ರದೀಪ್ತೈಃ ಕಾಂಚನೈಃ ಶುಭೈಃ।
ಶುಶುಭೇ ಚಂದ್ರಮಾ ಯುಕ್ತೋ ದೀಪ್ತೈರಿವ ಮಹಾಗ್ರಹೈಃ ॥31॥
ಸುವರ್ಣಮಯವಾದ ಶುಭಪ್ರದೀಪಗಳಿಂದ ಸುತ್ತುವರಿಯಲ್ಪಟ್ಟ ಆ ರಾಜನು ಪ್ರಕಾಶಿಸುವ ಮಹಾಗ್ರಹಗಳಿಂದ ಕೂಡಿದ ಚಂದ್ರನಂತೆ ಶೋಭಿಸಿದನು.
ಕಂಚುಕೋಷ್ಣೀಷಿಣಸ್ತತ್ರ ವೇತ್ರಝರ್ಝರಪಾಣಯಃ।
ಪ್ರೋತ್ಸಾರಯಂತಃ ಶನಕೈಸ್ತಂ ಜನಂ ಸರ್ವತೋ ದಿಶಮ್ ॥32॥
ಕಂಚುಕೋಷ್ಣೀಷಗಳನ್ನು ಧರಿಸಿ, ಕೈಯಲ್ಲಿ ವೇತ್ರಝರ್ಝರಗಳನ್ನು ಹಿಡಿದ ಅವನ ಚರರು ಎಲ್ಲ ದಿಕ್ಕುಗಳಲ್ಲಿಯೂ ಜನರನ್ನು ನಿಧಾನವಾಗಿ ಹಿಂದೆ ಸರಿಸಿದರು.
ಸಂಪ್ರಾಪ್ಯ ತು ತತೋ ರಾಜಾ ಭೀಷ್ಮಸ್ಯ ಸದನಂ ಶುಭಮ್।
ಅವತೀರ್ಯ ಹಯಾಚ್ಚಾಪಿ ಭೀಷ್ಮಂ ಪ್ರಾಪ್ಯ ಜನೇಶ್ವರಃ ॥33॥
ಅಭಿವಾದ್ಯ ತತೋ ಭೀಷ್ಮಂ ನಿಷಣ್ಣಃ ಪರಮಾಸನೇ।

ಕಾಂಚನೇ ಸರ್ವತೋಭದ್ರೇ ಸ್ಪರ್ಧ್ಯಾಸ್ತರಣಸಂವೃತೇ |
ಉವಾಚ ಪ್ರಾಂಜಲಿರ್ಭೀಷ್ಮಂ ಬಾಷ್ಪಕಂಠೋಽಶ್ರುಲೋಚನಃ ॥34॥
ಅನಂತರ ರಾಜನು ಭೀಷ್ಮರ ಶುಭವಾದ ಶಿಬಿರವನ್ನು ತಲುಪಿ, ಅಶ್ವದಿಂದ ಇಳಿದು ಭೀಷ್ಮರ ಸಮೀಪಕ್ಕೆ ಬಂದು, ಭೀಷ್ಮರಿಗೆ ನಮಸ್ಕಾರವನ್ನು ಮಾಡಿ, ಸರ್ವಮಂಗಳವಾದ ಒಳ್ಳೆಯ ಹಾಸುಗಳಿಂದ ಕೂಡಿದ ಸುವರ್ಣಮಯವಾದ ಆಸನದಲ್ಲಿ ಕುಳಿತು ಭೀಷ್ಮರಿಗೆ ಕೈಗಳನ್ನು ಮುಗಿದು ಬಾಷ್ಪಕಂಠನೂ, ಅಶ್ರುಪೂರಿತನೇತ್ರನೂ ಆಗಿ ಅವರನ್ನು ಕುರಿತು ಮಾತನಾಡಿದನು.
ತ್ವಾಂ ವಯಂ ಸಮುಪಾಶ್ರಿತ್ಯ ಸಂಯುಗೇ ಶತ್ರುಸೂದನ |
ಉತ್ಸಹೇಮ ರಣೇ ಜೇತುಂ ಸೇಂದ್ರಾನಪಿ ಸುರಾಸುರಾನ್ ॥35॥
ಕಿಮು ಪಾಂಡುಸುತಾನ್ ವೀರಾನ್ ಸಸುಹೃದ್ಗಣಬಾಂಧವಾನ್ |
ತಸ್ಮಾದರ್ಹಸಿ ಗಾಂಗೇಯ ಕೃಪಾಂ ಕರ್ತುಂ ಮಯಿ ಪ್ರಭೋ |
ಜಹಿ ಪಾಂಡುಸುತಾನ್ ವೀರಾನ್ ಮಹೇಂದ್ರ ಇವ ದಾನವಾನ್ ॥36॥
ಎಲೈ ಶತ್ರುಸೂದನರೇ, ನಿಮ್ಮನ್ನು ಆಶ್ರಯಿಸಿ ಯುದ್ಧದಲ್ಲಿ ನಾವು ಇಂದ್ರನಿಂದ ಕೂಡಿದ ಸುರಾಸುರರನ್ನೂ ಗೆಲ್ಲಲು ಉತ್ಸುಕರಾಗಿದ್ದೇವೆ. ಸುಹೃದ್ಗಣದಿಂದಲೂ, ಮತ್ತು ಬಾಂಧವರಿಂದಲೂ ಸಹಿತರಾದ ವೀರರಾದ ಪಾಂಡವರನ್ನು ಗೆಲ್ಲುವುದು ಯಾವ ದೊಡ್ಡ ವಿಷಯ? ಆದ್ದರಿಂದ ಗಂಗಾಪುತ್ರರೇ, ಪ್ರಭುಗಳೇ, ನನ್ನಲ್ಲಿ ದಯೆಯನ್ನು ಮಾಡಬೇಕು. ಮಹೇಂದ್ರನು ದಾನವರನ್ನು ಸಂಹರಿಸಿದಂತೆ ನೀವು ವೀರರಾದ ಪಾಂಡುಪುತ್ರರನ್ನು ಸಂಹರಿಸಿ.
ಪೂರ್ವಮುಕ್ತಂ ಮಹಾಬಾಹೋ ನಿಹನಿಷ್ಯಾಮಿ ಸೋಮಕಾನ್ |
ಪಾಂಚಾಲಾನ್ ಪಾಂಡವೈಃ ಸಾರ್ಧಂ ಕರೂಷಾಂಶ್ಚೇತಿ ಭಾರತ ॥37॥
ಎಲೈ ಮಹಾಬಾಹುಗಳೇ, ಭಾರತರೇ, ನೀವು ಪಾಂಡವರಿಂದ ಸಹಿತರಾದ ಸೋಮಕರನ್ನೂ, ಪಾಂಚಾಲರನ್ನೂ, ಕರೂಷರನ್ನೂ ಕೊಲ್ಲುವೆನು ಎಂದು ಹಿಂದೆ ಹೇಳಿದ್ದೀರಿ.
ತದ್ವಚಃ ಸತ್ಯಮೇವಾಸ್ತು ಜಹಿ ಪಾರ್ಥಾನ್ ಸಮಾಗತಾನ್ |
ಸೋಮಕಾಂಶ್ಚ ಮಹೇಷ್ವಾಸಾನ್ ಸತ್ಯವಾಗ್ ಭವ ಭಾರತ ॥38॥
ಆ ಮಾತು ಸತ್ಯವೇ ಆಗಲಿ. ಪ್ರಾಪ್ತರಾದ ಪಾಂಡವರನ್ನೂ ಮತ್ತು ಮಹಾಧನುರ್ಧಾರಿಗಳಾದ ಸೋಮಕರನ್ನೂ ಕೊಲ್ಲುವವರಾಗಿ. ಎಲೈ ಭಾರತರೇ, ಸತ್ಯವಚನವುಳ್ಳವರಾಗಿ.
ದಯಯಾ ಯದಿ ವಾ ರಾಜನ್ ದ್ವೇಷ್ಯಭಾವಾನ್ಮಮ ಪ್ರಭೋ |
ಮಂದಭಾಗ್ಯತಯಾ ವಾಪಿ ಮಮ ರಕ್ಷಸಿ ಪಾಂಡವಾನ್ ॥39॥
ಅನುಜಾನೀಹಿ ಸಮರೇ ಕರ್ಣಮಾಹವಶೋಭಿನಮ್ |
ಸ ಜೇಷ್ಯತಿ ರಣೇ ಪಾರ್ಥಾನ್ ಸಸುಹೃದ್ಗಣಬಾಂಧವಾನ್ ॥40॥
ಪ್ರಭುಗಳೇ, ರಾಜರೇ, ಪಾಂಡವರ ಮೇಲಿನ ದಯೆಯಿಂದಾಗಲೀ ಅಥವಾ ನನ್ನ ಮೇಲಿನ ದ್ವೇಷದಿಂದಾಗಲೀ ಅಥವಾ ನನ್ನ ದುರದೃಷ್ಟದಿಂದಾಗಲೀ ನೀವು ಪಾಂಡವರನ್ನು ರಕ್ಷಿಸುವುದಾದರೆ ಸಮರದಲ್ಲಿ ಶೋಭಿಸುವ ಕರ್ಣನಿಗೆ ಯುದ್ಧವನ್ನು ಮಾಡಲು ಅನುಮತಿಯನ್ನು ಕೊಡಿ. ಅವನು ಯುದ್ಧದಲ್ಲಿ ಸುಹೃದ್ಗಣದಿಂದಲೂ ಮತ್ತು ಬಾಂಧವರಿಂದಲೂ ಸಹಿತರಾದ ಪಾಂಡವರನ್ನು ಗೆಲ್ಲುವನು (ಎಂದು ಹೇಳಿದನು).
ಏತಾವದುಕ್ತ್ವಾ ನೃಪತಿಃ ಪುತ್ರೋ ದುರ್ಯೋಧನಸ್ತವ |
ನೋವಾಚ ವಚನಂ ಕಿಂಚಿದ್ ಭೀಷ್ಮಂ ಭೀಮಪರಾಕ್ರಮಮ್ ॥41॥
ನಿನ್ನ ಪುತ್ರನೂ, ರಾಜನೂ ಆದ ದುರ್ಯೋಧನನು ಭಯಂಕರ ಪರಾಕ್ರಮವುಳ್ಳ ಭೀಷ್ಮರನ್ನು ಕುರಿತು ಇಷ್ಟು ಮಾತುಗಳನ್ನು ಆಡಿ ಮುಂದೆ ಏನೂ ಮಾತನಾಡಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರಿನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ಭೀಷ್ಮರ ಪ್ರತಿಜ್ಞೆ.
ಸಂಜಯಃ
ವಾಕ್‌ಶಲ್ಯೈಸ್ತವ ಪುತ್ರೇಣ ಸೋಽತಿವಿದ್ಧಃ ಪಿತಾಮಹಃ |
ದುಃಖೇನ ಮಹತಾವಿಷ್ಟೋ ನೋವಾಚಾಪ್ರಿಯಮಣ್ವಪಿ ॥1॥
ಸಂಜಯ ನಿನ್ನ ಪುತ್ರನ ಮಾತುಗಳೆಂಬ ಶಲ್ಯಗಳಿಂದ ಇರಿಯಲ್ಪಟ್ಟ ಪಿತಾಮಹರಾದ ಭೀಷ್ಮರು ಬಹಳ ದುಃಖದಿಂದ ಕೂಡಿದವರಾಗಿ ಸ್ವಲ್ಪ ಅಪ್ರಿಯವಾದ ಮಾತನ್ನೂ ಸಹ ಆಡಲಿಲ್ಲ.
ಸ ಧ್ಯಾತ್ವಾ ಸುಚಿರಂ ಕಾಲಂ ದುಃಖರೋಷಸಮನ್ವಿತಃ |
ಶ್ವಸಮಾನೋ ಯಥಾ ನಾಗಃ ಪ್ರಣುನ್ನೋ ವೈ ಶಲಾಕಯಾ ॥2॥
ಉದ್ವೃತ್ಯ ಚಕ್ಷುಷೀ ಕೋಪಾನ್ನಿರ್ದಹನ್ನಿವ ಭಾರತ |
ಸದೇವಾಸುರಗಂಧರ್ವಂ ಲೋಕಂ ಲೋಕವಿದಾಂ ವರಃ |
ಅಬ್ರವೀತ್ ತವ ಪುತ್ರಂ ತು ಸಾಮಪೂರ್ವಮಿದಂ ವಚಃ ॥3॥

ಅವರು ಬಹಳ ಹೊತ್ತಿನವರೆಗೆ ಆಲೋಚಿಸಿ, ದುಃಖ-ರೋಷ ಸಮನ್ವಿತರಾಗಿ ಸಲಾಕೆಯಿಂದ ತಿವಿದ ಸರ್ಪದಂತೆ ಶ್ವಾಸವನ್ನು ಬಿಡುತ್ತಾ, ಕೋಪದಿಂದ ಕಣ್ಣುಗಳನ್ನು ಮೇಲಕ್ಕೆತ್ತಿ ಲೋಕವೇತ್ತರಲ್ಲಿ ಶ್ರೇಷ್ಠರಾದ ಅವರು ದೇವಾಸುರ-ಗಂಧರ್ವಸಹಿತವಾದ ಲೋಕವನ್ನು ಸುಡುವವರಂತೆ, ನಿನ್ನ ಪುತ್ರನನ್ನು ಕುರಿತು ಸಮಾಧಾನ ಪೂರ್ವಕವಾಗಿ ಈ ಮಾತನ್ನು ಆಡಿದರು.

ಕಿಂ ನು ದುರ್ಯೋಧನೈವಂ ಮಾಂ ವಾಕ್‌ಶಲ್ಯೈರುಪವಿಧ್ಯಸಿ |
ಘಟಮಾನಂ ಯಥಾಶಕ್ತಿ ಕುರ್ವಾಣಂ ಚ ತವ ಪ್ರಿಯಮ್ |
ಜುಹ್ವಾನಂ ಸಮರೇ ಪ್ರಾಣಾಂಸ್ತವೈವ ಹಿತಕಾಮ್ಯಯಾ ||4||

ಎಲೈ ದುರ್ಯೋಧನನೇ ನನ್ನ ಶಕ್ತಿ ಇದ್ದಷ್ಟು ಯುದ್ಧವನ್ನು ಮಾಡಿ ನಿನಗೆ ಪ್ರಿಯವನ್ನು ಮಾಡುತ್ತಾ, ನಿನ್ನ ಹಿತವನ್ನು ಬಯಸಿ, ಯುದ್ಧದಲ್ಲಿ ನನ್ನ ಪ್ರಾಣಗಳನ್ನು ಹೋಮ ಮಾಡುತ್ತಿರುವ ನನ್ನನ್ನು ಏಕೆ ಇಂತಹ ವಾಗ್ಬಾಣಗಳಿಂದ ತಿವಿಯುತ್ತಿದ್ದೀಯೆ?

ಯದಾ ತು ಪಾಂಡವಃ ಶೂರಃ ಖಾಂಡವೇಽಗ್ನಿಮತರ್ಪಯತ್ |
ಪರಾಜಿತ್ಯ ರಣೇ ಶಕ್ರಂ ಪರ್ಯಾಪ್ತಂ ತನ್ನಿದರ್ಶನಮ್ ||5||

ಶೂರನಾದ ಅರ್ಜುನನು ಯುದ್ಧದಲ್ಲಿ ಇಂದ್ರನನ್ನು ಸೋಲಿಸಿ ಖಾಂಡವ ವನದಲ್ಲಿ ಅಗ್ನಿಯನ್ನು ತೃಪ್ತಿಪಡಿಸಿದ ಒಂದು ನಿದರ್ಶನವು ಸಾಕು.

ಯದಾ ಚ ತ್ವಾಂ ಮಹಾಬಾಹೋ ಗಂಧರ್ವೈರ್ಹೃತಮೋಜಸಾ |
ಅಮೋಚಯತ್ ಪಾಂಡುಸುತಃ ಪರ್ಯಾಪ್ತಂ ತನ್ನಿದರ್ಶನಮ್ ||6||
ದ್ರವಮಾಣೇಷು ಶೂರೇಷು ಸೋದರೇಷು ತಥಾಭಿಭೋ |
ಸೂತಪುತ್ರೇ ಚ ರಾಧೇಯೇ ಪರ್ಯಾಪ್ತಂ ತನ್ನಿದರ್ಶನಮ್ ||7||

ಎಲೈ ಮಹಾಬಾಹುವೇ, ಗಂಧರ್ವರು ಅವರ ಸಾಮರ್ಥ್ಯದಿಂದ ನಿನ್ನನ್ನು ಅಪಹರಿಸಿದಾಗ, ನಿನ್ನ ತಮ್ಮಂದಿರೂ, ಸೂತಪುತ್ರನಾದ ಕರ್ಣನೂ ಓಡುತ್ತಿರಲು ಎಲೈ ಶತ್ರುಸೂದನನೇ, ಪಾಂಡುಪುತ್ರನಾದ ಅರ್ಜುನನು ನಿನ್ನನ್ನು ವಿಮೋಚನೆಗೊಳಿಸಿದ ಒಂದು ನಿದರ್ಶನವು ಸಾಕು.

ಯಚ್ಚ ನಃ ಸಹಿತಾನ್ ಸರ್ವಾನ್ ವಿರಾಟನಗರೇ ತದಾ |
ಏಕ ಏವ ಸಮುದ್ಯಾತಃ ಪರ್ಯಾಪ್ತಂ ತನ್ನಿದರ್ಶನಮ್ ||8||

ವಿರಾಟನಗರದಲ್ಲಿ ಗೋಗ್ರಹಣ ಸಮಯದಲ್ಲಿ ನಾವೆಲ್ಲರೂ ಒಟ್ಟಾಗಿ ಯುದ್ಧ ಮಾಡುವಾಗ ಅರ್ಜುನನೊಬ್ಬನೇ ನಮ್ಮ ಎದುರಿಗೆ ಸಾಗಿಬಂದ ನಿದರ್ಶನವು ಸಾಕು.

ದ್ರೋಣಂ ಚ ಯುಧಿ ಸಂರಬ್ಧಂ ಮಾಂ ಚ ನಿರ್ಜಿತ್ಯ ಸಂಯುಗೇ |
ಕರ್ಣಂ ಚ ತ್ವಾಂ ಚ ದ್ರೌಣಿಂ ಚ ಕೃಪಂ ಚ ಸುಮಹಾರಥಮ್ |
ವಾಸಾಂಸಿ ಸ ಸಮಾದತ್ತ ಪರ್ಯಾಪ್ತಂ ತನ್ನಿದರ್ಶನಮ್ ||9||

ಯುದ್ಧದಲ್ಲಿ ಕೋಪಗೊಂಡ ದ್ರೋಣರನ್ನು ಮತ್ತು ನನ್ನನ್ನು ಸೋಲಿಸಿ, ಕರ್ಣನನ್ನು, ಮಹಾರಥರಾದ ನಿನ್ನನ್ನು, ಅಶ್ವತ್ಥಾಮರನ್ನು, ಕೃಪರನ್ನು ಸೋಲಿಸಿ ನಮ್ಮ ವಸ್ತ್ರಗಳನ್ನು ಅಪಹರಿಸಿದ ಆ ನಿದರ್ಶನವು ಸಾಕು.

ನಿವಾತಕವಚಾನ್ ಯುದ್ಧೇ ವಾಸವೇನಾಪಿ ದುರ್ಜಯಾನ್ |
ಜಿತವಾನ್ ಸಮರೇ ಪಾರ್ಥಃ ಪರ್ಯಾಪ್ತಂ ತನ್ನಿದರ್ಶನಮ್ ||10||

ಇಂದ್ರನಿಂದಲೂ ಸೋಲಿಸಲು ಸಾಧ್ಯವಾಗದ ನಿವಾತಕವಚರನ್ನು ಯುದ್ಧದಲ್ಲಿ ಅರ್ಜುನನು ಜಯಿಸಿದ ಆ ನಿದರ್ಶನವು ಸಾಕು.

ಕೋ ಹಿ ಶಕ್ತೋ ರಣೇ ಜೇತುಂ ಪಾಂಡವಂ ರಭಸಂ ರಣೇ |
ಯಸ್ಯ ಗೋಪ್ತಾ ಜಗದ್ಗೋಪ್ತಾ ಶಂಖಚಕ್ರಗದಾಧರಃ |
ವಾಸುದೇವೋಽನಂತಶಕ್ತಿಃ ಸೃಷ್ಟಿಸಂಹಾರಕಾರಕಃ |
ಸರ್ವೇಶ್ವರೋ ದೇವದೇವಃ ಪರಮಾತ್ಮಾ ಸನಾತನಃ ||11||

ಯಾವ ಪಾರ್ಥನಿಗೆ ಜಗದ್ರಕ್ಷಕನೂ, ಶಂಖಚಕ್ರಗದಾಧರನೂ ಸೃಷ್ಟಿಸಂಹಾರ ಕರ್ತನೂ, ಅನಂತಶಕ್ತಿಯೂ, ಸರ್ವೇಶ್ವರನೂ, ದೇವದೇವನೂ, ಪರಮಾತ್ಮನೂ, ವೇದಪ್ರತಿಪಾದ್ಯನೂ ಆದ ಕೃಷ್ಣನು ರಕ್ಷಕನಾಗಿದ್ದಾನೆಯೋ ಅಂತಹ ವೇಗಶಾಲಿಯಾದ ಅವನನ್ನು ಯುದ್ಧದಲ್ಲಿ ಯಾರು ಗೆಲ್ಲಲು ಸಾಧ್ಯ?

ಉಕ್ತೋಽಸಿ ಬಹುಶೋ ರಾಜನ್ ನಾರದಾದ್ಯೈರ್ಮಹರ್ಷಿಭಿಃ |
ತ್ವಂ ತು ಮೋಹಾನ್ನ ಜಾನೀಷೇ ವಾಚ್ಯಾವಾಚ್ಯಂ ಸುಯೋಧನ ||12||

ಎಲೈ ರಾಜನೇ, ನಾರದಾದಿ ಮಹರ್ಷಿಗಳು ಈ ವಿಷಯವನ್ನು ನಿನಗೆ ಅನೇಕ ಬಾರಿ ಹೇಳಿದ್ದಾರೆ. ಎಲೈ ಸುಯೋಧನನೇ, ನೀನು ಮೋಹಕ್ಕೆ ವಶನಾಗಿ ಏನನ್ನು ಮಾತನಾಡಬೇಕು, ಏನನ್ನು ಮಾತನಾಡಬಾರದು ಎಂದು ತಿಳಿದಿಲ್ಲ.

ಮುಮೂರ್ಷುರ್ಹಿ ನರಃ ಸರ್ವಾನ್ ವೃಕ್ಷಾನ್ ಪಶ್ಯತಿ ಕಾಂಚನಾನ್ |
ತಥಾ ತ್ವಮಪಿ ಗಾಂಧಾರೇ ವಿಪರೀತಾನಿ ಪಶ್ಯಸಿ ||13||

ಮರಣವು ಸನ್ನಿಹಿತನಾದ ಮನುಷ್ಯನು ವೃಕ್ಷಗಳನ್ನು ಸುವರ್ಣಮಯವಾಗಿ ನೋಡುತ್ತಾನೆ. ಎಲೈ ಗಾಂಧಾರಿ ಪುತ್ರನೇ, ಹಾಗೆ ನೀನೂ ಸಹ ಎಲ್ಲವನ್ನೂ ವಿರುದ್ಧವಾಗಿ ನೋಡುತ್ತಿದ್ದೀಯೆ.

ಸ್ವಯಂ ವೈರಂ ಮಹತ್ಕೃತ್ವಾ ಪಾಂಡವೈಃ ಸಹಸೃಂಜಯೈಃ |
ಯುಧ್ಯಸ್ವ ತಾನದ್ಯ ರಣೇ ಪಶ್ಯಾಮಃ ಪುರುಷೋ ಭವ |
ಅಶಕ್ಯಾ ಪಾಂಡವಾ ಜೇತುಂ ದೇವೈರಪಿ ಸವಾಸವೈಃ ||14||

ಪಾಂಡವರ ಮತ್ತು ಸೃಂಜಯರ ಜೊತೆಯಲ್ಲಿ ದೊಡ್ಡ ವೈರವನ್ನು ಮಾಡಿದ ನೀನು ಈ ದಿನ ಅವರ ಜೊತೆಯಲ್ಲಿ ಯುದ್ಧವನ್ನು

ಮಾಡು. ಯುದ್ಧದಲ್ಲಿ ನಿನ್ನ ಪೌರುಷವನ್ನು ನೋಡೋಣ. ಪುರುಷನಾಗು. ಇಂದ್ರನಿಂದ ಸಹಿತರಾದ ದೇವತೆಗಳೂ ಸಹ ಪಾಂಡವರನ್ನು ಗೆಲ್ಲಲಾರರು.
ಅಹಂ ತು ಸೋಮಕಾನ್ ಸರ್ವಾನ್ ಸಪಾಂಚಾಲಾನ್ ಸಮಾಗತಾನ್|
ನಿಹನಿಷ್ಯೇ ನರವ್ಯಾಘ್ರ ವರ್ಜಯಿತ್ವಾ ಶಿಖಂಡಿನಮ್ ॥15॥
ಎಲೈ ನರವ್ಯಾಘ್ರನೇ, ಶಿಖಂಡಿಯೊಬ್ಬನನ್ನು ಬಿಟ್ಟು ಯುದ್ಧಕ್ಕೆ ಸಮಾಗತರಾದ ಪಾಂಚಾಲ ಸಹಿತರಾದ ಎಲ್ಲಾ ಸೋಮಕರನ್ನೂ ನಾನು ಕೊಲ್ಲುವೆನು.
ತೈರ್ವಾಹಂ ನಿಹತಃ ಸಂಖ್ಯೇ ಗಮಿಷ್ಯೇ ಯಮಸಾದನಮ್ |
ತಾನ್ ವಾ ನಿಹತ್ಯ ಸಂಗ್ರಾಮೇ ಪ್ರೀತಿಂ ದಾಸ್ಯಾಮಿ ವೈ ತವ ॥16॥
ಅವರಿಂದ ಕೊಲ್ಲಲ್ಪಟ್ಟು ನಾನಾದರೂ ಯಮಲೋಕಕ್ಕೆ ಹೋಗುವೆನು ಅಥವಾ ಯುದ್ಧದಲ್ಲಿ ಅವರನ್ನು ಕೊಂದು ನಿನಗೆ ಬಹಳ ಸಂತೋಷವನ್ನು ಕೊಡುವೆನು.
ಪೂರ್ವಂ ಹಿ ಸ್ತ್ರೀ ಸಮುತ್ಪನ್ನಾ ಶಿಖಂಡೀ ರಾಜವೇಶ್ಮನಿ |
ವರದಾನಾತ್ ಪುಮಾನ್ ಜಾತಃ ಸೈಷಾ ವೈ ಸ್ತ್ರೀ ಶಿಖಂಡಿನೀ ॥17॥
ಹಿಂದೆ ರಾಜಮಂದಿರದಲ್ಲಿ ಕನ್ಯೆಯಾಗಿ ಹುಟ್ಟಿದ ಶಿಖಂಡಿಯು ದೇವತೆಗಳ ವರದಾನದಿಂದ ಪುರುಷಳಾದಳು. ಅಂತಹ ಈ ಶಿಖಂಡಿನಿಯು ವನಿತೆಯಾದವಳು.
ತಾಮಹಂ ನ ಹನಿಷ್ಯಾಮಿ ಪ್ರಾಣತ್ಯಾಗೇಽಪಿ ಭಾರತ |
ಸೈಷಾ ವಾಙ್ನಿರ್ಮಿತಾ ಧಾತ್ರಾ ಸೈಷಾ ವೈ ಸ್ತ್ರೀ ಶಿಖಂಡಿನೀ ॥18॥
ಎಲೈ ಭಾರತನೇ, ನನ್ನ ಪ್ರಾಣವು ಹೋದರೂ ನಾನು ಅವಳನ್ನು ಕೊಲ್ಲುವುದಿಲ್ಲ. ಇವಳು ಬ್ರಹ್ಮದೇವರು ಸೃಷ್ಟಿಸಿದ ವಾಕ್ ಎಂಬ ಕನ್ಯೆ. ಶಿಖಂಡಿನಿಯು ನಿಶ್ಚಯವಾಗಿ ವನಿತೆಯಾದವಳು.
ಸುಖಂ ಸ್ವಪಿಹಿ ಗಾಂಧಾರೇ ಶ್ವೋಽಸ್ಮಿ ಕರ್ತಾ ಮಹಾರಣಮ್ |
ಯಂ ಜನಾಃ ಕಥಯಿಷ್ಯಂತಿ ಯಾವತ್ ಸ್ಥಾಸ್ಯತಿ ಮೇದಿನೀ ॥19॥
ಎಲೈ ಗಾಂಧಾರಿಪುತ್ರನೇ, ಸುಖವಾಗಿ ನಿದ್ರೆಯನ್ನು ಮಾಡು. ನಾಳೆ ದೊಡ್ಡ ಯುದ್ಧವನ್ನು ಮಾಡುವೆನು. ಆ ಯುದ್ಧವನ್ನು ಮಾಡಿದ ನನ್ನನ್ನು ಭೂಮಿಯು ಇರುವವರೆಗೆ ಮಾನವರು ಪ್ರಶಂಸಿಸುವರು (ಎಂದು ಹೇಳಿದರು).
ಏವಮುಕ್ತಸ್ತವ ಸುತೋ ನಿರ್ಜಗಾಮ ಜನೇಶ್ವರ |
ಅಭಿವಾದ್ಯ ಗುರುಂ ಮೂರ್ಧ್ನಾ ಪ್ರಯಯೌ ಸ್ವಂ ನಿವೇಶನಮ್ ॥20॥
ಎಲೈ ರಾಜನೇ, ಹೀಗೆ ಹೇಳಲ್ಪಟ್ಟ ನಿನ್ನ ಪುತ್ರನು ಹಿರಿಯರಾದ ಅವರಿಗೆ ಶಿರಸ್ಸಹಿತವಾದ ನಮಸ್ಕಾರವನ್ನು ಮಾಡಿ ತನ್ನ ಶಿಬಿರಕ್ಕೆ ಹೋದನು.
ಆಗಮ್ಯ ತು ತತೋ ರಾಜಾ ವಿಸೃಜ್ಯ ಚ ಮಹಾಜನಮ್ |
ಪ್ರವಿವೇಶ ತತಸ್ತೂರ್ಣಂ ಕ್ಷಯಂ ಶತ್ರುಕ್ಷಯಂಕರಃ |
ಪ್ರವಿಷ್ಟಃ ಸ ನಿಶಾಂ ತಾಂ ಚ ಗಮಯಾಮಾಸ ಪಾರ್ಥಿವಃ ॥21॥
ತನ್ನ ಶಿಬಿರವನ್ನು ತಲುಪಿ, ಮಹಾಜನರನ್ನು ಕಳುಹಿಸಿಕೊಟ್ಟು ಶತ್ರು ಕ್ಷಯಕಾರಿಯಾದ ಅವನು ತನ್ನ ವಿಶ್ರಾಂತಿ ಸ್ಥಾನಕ್ಕೆ ಶೀಘ್ರವಾಗಿ ಹೋಗಿ ಆ ರಾತ್ರಿಯನ್ನು ಕಳೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುರ್ನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುಃಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೈದನೆಯ ಅಧ್ಯಾಯ
ದುರ್ಯೋಧನನಿಂದ ದುಶ್ಶಾಸನನನ್ನು ಕುರಿತು
ಸೈನ್ಯವನ್ನು ಯೋಜಿಸುವಂತೆ ಆದೇಶ.
ಸಂಜಯಃ
ಪ್ರಭಾತಾಯಾಂ ತು ಶರ್ವರ್ಯಾಂ ಪ್ರಾತರುತ್ಥಾಯ ವೈ ನೃಪಃ |
ರಾಜ್ಞಃ ಸಮಾಜ್ಞಾಪಯತ ಸೇನಾಂ ಯೋಜಯತೇತಿ ಹ |
ಅದ್ಯ ಭೀಷ್ಮೋ ರಣೇ ಕ್ರುದ್ಧೋ ನಿಹನಿಷ್ಯತಿ ಸೋಮಕಾನ್ ॥1॥
ಸಂಜಯ ಎಲೈ ರಾಜನೇ, ರಾತ್ರಿಯು ಕಳೆದು ಪ್ರಾತಃಕಾಲವಾದ ಮೇಲೆ ರಾಜನು ಎದ್ದು ಈ ದಿನ ಭೀಷ್ಮರು ಯುದ್ಧದಲ್ಲಿ ಕ್ರುದ್ಧರಾಗಿ ಸೋಮಕರನ್ನು ಕೊಲ್ಲುವರು. ನೀವು ಸೇನೆಯನ್ನು ಯೋಜಿಸಿ ಎಂದು ರಾಜರಿಗೆ ಆಜ್ಞೆಯನ್ನು ಮಾಡಿದನು.
ದುರ್ಯೋಧನಸ್ಯ ತಚ್ಛ್ರುತ್ವಾ ರಾತ್ರೌ ವಿಲಪಿತಂ ಬಹು |
ಮನ್ಯಮಾನಃ ಸ ತಂ ರಾಜನ್ ಪ್ರತ್ಯಾದೇಶಮಿವಾತ್ಮನಃ ॥2॥
ನಿರ್ವೇದಂ ಪರಮಂ ಗತ್ವಾ ವಿನಿಂದ್ಯ ಪರವಾಚ್ಯತಾಮ್ |
ದೀರ್ಘಂ ದಧ್ಯೌ ಶಾಂತನವೋ ಯೋದ್ಧುಕಾಮೋಽರ್ಜುನಂ ರಣೇ ॥
ಎಲೈ ರಾಜನೇ, ದುರ್ಯೋಧನನು ಹಿಂದಿನ ರಾತ್ರಿಯಲ್ಲಿ ಆಡಿದ ಅನೇಕ ಮಾತುಗಳನ್ನು ತಮ್ಮ ನಿರಾಕರಣೆ ಎಂದು ತಿಳಿದ ಭೀಷ್ಮರು ಬಹಳ ಬೇಸರಗೊಂಡವರಾಗಿ ಇನ್ನೊಬ್ಬರಿಂದ ಕರ್ತವ್ಯವನ್ನು ಹೇಳಿಸಿಕೊಳ್ಳುವುದನ್ನು ನಿಂದಿಸಿ ಅರ್ಜುನನ ಜೊತೆಯಲ್ಲಿ

ಯುದ್ಧವನ್ನು ಮಾಡಲು ಬಯಸಿ ಬಹಳ ಕಾಲ ಆಲೋಚಿಸಿದರು.
ಇಂಗಿತೇನ ತು ತಜ್ಜ್ಞಾತ್ವಾ ಗಾಂಗೇಯೇನ ವಿಚಿಂತಿತಮ್ |
ದುರ್ಯೋಧನೋ ಮಹಾರಾಜ ದುಃಶಾಸನಮಚೋದಯತ್ ॥4॥
ಭೀಷ್ಮರ ಇಂಗಿತದಿಂದ ಅವರ ಚಿಂತನೆಯನ್ನು ತಿಳಿದ ದುರ್ಯೋಧನನು ಎಲೈ ಮಹಾರಾಜನೇ, ದುಶ್ಶಾಸನನಿಗೆ ಆಜ್ಞೆಯನ್ನು ಮಾಡಿದನು.
ದುಃಶಾಸನ ರಥಾಸ್ತೂರ್ಣಂ ಯುಜ್ಯಂತಾಂ ಭೀಷ್ಮರಕ್ಷಿಣಃ |
ದ್ವಾವಿಂಶತಿಮನೀಕಾನಿ ಸರ್ವಾಣ್ಯೇವಾಭಿಚೋದಯ ॥5॥
ಎಲೈ ದುಶ್ಶಾಸನನೇ, ಭೀಷ್ಮರ ರಕ್ಷಣೆಯನ್ನು ಮಾಡುವ ರಥಗಳು ಶೀಘ್ರವಾಗಿ ಹೂಡಲ್ಪಡಲಿ. ಸೈನ್ಯವನ್ನು ಇಪ್ಪತ್ತೆರಡು ಯೋಧರ ಗುಂಪುಗಳಾಗಿ ವಿಭಾಗಿಸಿ ಎಲ್ಲರನ್ನೂ ಪ್ರೇರಿಸುವವನಾಗು.
ಇದಂ ಹಿ ಸಮನುಪ್ರಾಪ್ತಂ ವರ್ಷಪೂಗಾಭಿಚಿಂತಿತಮ್ |
ಪಾಂಡವಾನಾಂ ಸಸೈನ್ಯಾನಾಂ ವಧೋ ರಾಜ್ಯಸ್ಯ ಚಾಗಮಃ ॥6॥
ನಾವು ಅನೇಕ ವರ್ಷಗಳಿಂದ ಚಿಂತಿಸಿದ ಸೈನ್ಯಸಹಿತರಾದ ಪಾಂಡವರ ವಧೆಯೂ, ನಮ್ಮ ಮತ್ತು ನಮ್ಮ ರಾಜ್ಯಲಾಭವೂ ಈಗ ಪ್ರಾಪ್ತವಾಗಿದೆ.
ತತ್ರ ಕಾರ್ಯಮಹಂ ಮನ್ಯೇ ಭೀಷ್ಮಸ್ಯೈವಾಭಿರಕ್ಷಣಮ್ |
ಸ ನೋ ಗುಪ್ತಃ ಸುಖಾಯ ಸ್ಯಾದ್ ಹನ್ಯಾತ್ ಪಾರ್ಥಾಂಶ್ಚ ಸಂಯುಗೇ ॥
ಈಗ ಭೀಷ್ಮರ ರಕ್ಷಣೆಯು ನಾವು ಮಾಡಬೇಕಾದ ಪರಮಕಾರ್ಯವೆಂದು ನಾನು ಭಾವಿಸುತ್ತೇನೆ. ರಕ್ಷಿಸಲ್ಪಟ್ಟ ಭೀಷ್ಮರು ನಮಗೆ ಸುಖವನ್ನು ಕೊಡುವವರಾಗಿ ಯುದ್ಧದಲ್ಲಿ ಪಾಂಡವರನ್ನು ಕೊಂದಾರು.
ಅಬ್ರವೀಚ್ಚ ವಿಶುದ್ಧಾತ್ಮಾ ನಾಹಂ ಹನ್ಯಾಂ ಶಿಖಂಡಿನಮ್ |
ಸ್ತ್ರೀಪೂರ್ವಕೋ ಹ್ಯಸೌ ಜಾತಸ್ತಸ್ಮಾದ್ ವರ್ಜ್ಯೋ ರಣೇ ಮಯಾ ॥8॥
ಕ್ರುದ್ಧಮನಸ್ಸುಳ್ಳ ಅವರು ನನ್ನನ್ನು ಕುರಿತು, ನಾನು ಶಿಖಂಡಿಯನ್ನು ಕೊಲ್ಲುವುದಿಲ್ಲ. ಅವನು ಮೊದಲು ಸ್ತ್ರೀಯಾಗಿದ್ದವನು. ಆದ್ದರಿಂದ ಅವನನ್ನು ನಾನು ವರ್ಜಿಸುತ್ತೇನೆ.
ಲೋಕಸ್ತದ್ವೇದ ಯದಹಂ ಪಿತುಃ ಪ್ರಿಯಚಿಕೀರ್ಷಯಾ |
ರಾಜ್ಯಂ ಸ್ಫೀತಂ ಮಹಾಬಾಹೋ ಸ್ತ್ರಿಯಶ್ಚ ತ್ಯಕ್ತವಾನ್ ಪುರಾ ॥9॥
ಎಲೈ ಮಹಾಬಾಹುವೇ, ನಾನು ತಂದೆಗೆ ಪ್ರಿಯವನ್ನು ಮಾಡಲು ಸಂಪದ್ಯುಕ್ತವಾದ ರಾಜ್ಯವನ್ನೂ, ಸ್ತ್ರೀಯರನ್ನೂ ಮೊದಲೇ ತ್ಯಜಿಸಿದ್ದೇನೆಂಬುದನ್ನು ಲೋಕವೆಲ್ಲವೂ ತಿಳಿದಿದೆ.
ನೈವ ಚಾಹಂ ಸ್ತ್ರಿಯಂ ಜಾತು ನ ಸ್ತ್ರೀಪೂರ್ವಂ ಕಥಂಚನ |
ಹನ್ಯಾಂ ಯುಧಿ ನರಶ್ರೇಷ್ಠ ಸತ್ಯಮೇತದ್ ಬ್ರವೀಮಿ ತೇ ॥10॥
ಎಲೈ ನರಶ್ರೇಷ್ಠನೇ, ನಾನು ಸ್ತ್ರೀಯನ್ನಾಗಲೀ ಅಥವಾ ಮೊದಲು ಸ್ತ್ರೀಯಾಗಿದ್ದವನನ್ನಾಗಲೀ ಯುದ್ಧದಲ್ಲಿ ಎಂದೂ ಕೊಲ್ಲಲಾರೆ. ಈ ಸತ್ಯವಚನವನ್ನು ನಿನಗೆ ಹೇಳುತ್ತಿದ್ದೇನೆ.
ಅಯಂ ಸ್ತ್ರೀಪೂರ್ವಕೋ ರಾಜನ್ ಶಿಖಂಡೀ ಯದಿ ತೇ ಶ್ರುತಃ |
ಉದ್ಯೋಗೇ ಕಥಿತಂ ಯತ್ ತತ್ತಥಾ ಜಾತಾ ಶಿಖಂಡಿನೀ ॥11॥
ಎಲೈ ರಾಜನೇ, ನೀನು ಕೇಳಿದ್ದರೆ, ಈ ಶಿಖಂಡಿಯು ಮೊದಲು ಸ್ತ್ರೀಯಾಗಿದ್ದವನು. ಯುದ್ಧೋದ್ಯೋಗ ಸಮಯದಲ್ಲಿ ಹೇಳಿದಂತೆ ಶಿಖಂಡಿಯು ಹಾಗೆಯೇ ಜನಿಸಿದವನು.
ಕನ್ಯಾ ಭೂತ್ವಾ ಪುಮಾನ್ ಜಾತಃ ಸ ಚ ಯೋತ್ಸ್ಯತಿ ಭಾರತ |
ತಸ್ಯಾಹಂ ಪ್ರಮುಖೇ ಬಾಣಾನ್ ನ ಮುಂಚೇಯಂ ಕಥಂಚನ ॥12॥
ಎಲೈ ಭಾರತನೇ, ಮೊದಲು ಕನ್ಯೆಯಾಗಿ ಅವನು ಪುನಃ ಪುರುಷನಾದನು. ಅವನು ಯುದ್ಧವನ್ನು ಮಾಡುವನು. ಅವನ ಎದುರಿನಲ್ಲಿ ನಾನು ಯಾವ ಕಾರಣದಿಂದಲೂ ಬಾಣಪ್ರಯೋಗವನ್ನು ಮಾಡುವುದಿಲ್ಲ.
ಯುದ್ಧೇ ತು ಕ್ಷತ್ರಿಯಾಂಸ್ತಾತ ಪಾಂಡವಾನಾಂ ಜಯೈಷಿಣಃ |
ಸರ್ವಾನನ್ಯಾನ್ ಹನಿಷ್ಯಾಮಿ ಸಂಪ್ರಾಪ್ತಾನ್ ಬಾಣಗೋಚರಾನ್ ॥13॥
ಎಲೈ ಪ್ರೀತಿಪಾತ್ರನೇ, ಯುದ್ಧದಲ್ಲಿ ಪಾಂಡವರ ಜಯವನ್ನು ಬಯಸಿದ ನನ್ನ ಬಾಣದ ವ್ಯಾಪ್ತಿಗೆ ಸಿಲುಕುವ ಉಳಿದ ಎಲ್ಲಾ ಕ್ಷತ್ರಿಯರನ್ನೂ ಕೊಲ್ಲುವೆನು.
ಏವಂ ಮಾಂ ಭರತಶ್ರೇಷ್ಠೋ ಗಾಂಗೇಯಃ ಪ್ರಾಹ ಶಾಸ್ತ್ರವಿತ್ |
ತತ್ರ ಸರ್ವಾತ್ಮನಾ ಮನ್ಯೇ ಭೀಷ್ಮಸ್ಯೈವಾಭಿಪಾಲನಮ್ ॥14॥
ಹೀಗೆಂದು ಭರತಶ್ರೇಷ್ಠರೂ, ಶಾಸ್ತ್ರಜ್ಞರೂ ಆದ ಭೀಷ್ಮರು ನನಗೆ ಹೇಳಿದರು. ಆದ್ದರಿಂದ ಸರ್ವರೀತಿಯಿಂದ ಭೀಷ್ಮರನ್ನು ರಕ್ಷಿಸಬೇಕೆಂದು ನಾನು ಭಾವಿಸುತ್ತೇನೆ.
ಅರಕ್ಷ್ಯಮಾಣಂ ಹಿ ವೃಕೋ ಹನ್ಯಾತ್ ಸಿಂಹಂ ಮಹಾವನೇ |
ಮಾ ವೃಕೇಣೇವ ಶಾರ್ದೂಲಂ ಘಾತಯೇಮ ಶಿಖಂಡಿನಾ ॥15॥
ಸಿಂಹವನ್ನು ರಕ್ಷಿಸದಿದ್ದರೆ ಮಹಾವನದಲ್ಲಿ ತೋಳವೂ ಅದನ್ನು ಕೊಂದೀತು. ತೋಳದಿಂದ ವ್ಯಾಘ್ರವನ್ನು ಕೊಲ್ಲಿಸಿದಂತೆ ಶಿಖಂಡಿಯಿಂದ ಭೀಷ್ಮರನ್ನು ಕೊಲ್ಲಿಸುವುದು ಬೇಡ.
ಮಾತುಲಃ ಶಕುನಿಃ ಶಲ್ಯಃ ಕೃಪೋ ದ್ರೋಣೋ ವಿವಿಂಶತಿಃ |

ಯತ್ತಾ ರಕ್ಷಂತು ಗಾಂಗೇಯಂ ತಸ್ಮಿನ್ ಗುಪ್ತೇ ಧ್ರುವೋ ಜಯಃ ॥16॥
ಸೋದರಮಾವನಾದ ಶಕುನಿ, ಶಲ್ಯ, ಕೃಪರು, ದ್ರೋಣರು, ವಿವಿಂಶತಿ ಎಲ್ಲರೂ ಜಾಗರೂಕರಾಗಿ ಭೀಷ್ಮರನ್ನು ರಕ್ಷಿಸಲಿ. ಅವರನ್ನು ರಕ್ಷಿಸಿದರೆ ನಮಗೆ ಜಯವು ನಿಶ್ಚಿತವಾದುದು (ಎಂದು ಹೇಳಿದನು).
ಸಂಜಯಃ
ಏತಚ್ಛ್ರುತ್ವಾ ತು ರಾಜಾನೋ ದುರ್ಯೋಧನವಚಸ್ತದಾ |
ಸರ್ವತೋ ರಥವಂಶೇನ ಗಾಂಗೇಯಂ ಪರ್ಯವಾರಯನ್ ॥17॥
ಸಂಜಯ ದುರ್ಯೋಧನನ ಈ ಮಾತುಗಳನ್ನು ಕೇಳಿ ಆಗ ಆ ರಾಜರು ರಥಸಮೂಹದಿಂದ ಎಲ್ಲ ಕಡೆಗಳಿಂದಲೂ ಭೀಷ್ಮರನ್ನು ಸುತ್ತುವರಿದರು.
ಪುತ್ರಾಶ್ಚ ತವ ಗಾಂಗೇಯಂ ಪರಿವಾರ್ಯ ಯಯುರ್ಮುದಾ |
ಕಂಪಯಂತೋ ಭುವಂ ದ್ಯಾಂ ಚ ಕ್ಷೋಭಯಂತಶ್ಚ ಪಾಂಡವಾನ್ ॥
ನಿನ್ನ ಪುತ್ರರೂ ಸಹ ಭೀಷ್ಮರನ್ನು ಸುತ್ತುವರಿದು ಭೂಮಿಯನ್ನು ಮತ್ತು ಅಂತರಿಕ್ಷವನ್ನು ನಡುಗಿಸುತ್ತಾ, ಪಾಂಡವರಿಗೆ ಕ್ಷೋಭೆಯನ್ನುಂಟು ಮಾಡುತ್ತಾ, ಸಂತೋಷದಿಂದ ಹೊರಟರು.
ತೈ ರಥೈಶ್ಚ ಸುಸಂಯುಕ್ತೈರ್ದಂತಿಭಿಶ್ಚ ಮಹಾರಥಾಃ |
ಪರಿವಾರ್ಯ ರಣೇ ಭೀಷ್ಮಂ ದಂಸಿತಾಃ ಸಮವಸ್ಥಿತಾಃ ॥19॥
ಚೆನ್ನಾಗಿ ಹೂಡಿದ ರಥಗಳಿಂದಲೂ, ಸಜ್ಜುಗೊಂಡ ಗಜಗಳಿಂದಲೂ ಮಹಾರಥರಾದ ಅವರು ರಣರಂಗದಲ್ಲಿ ಭೀಷ್ಮರನ್ನು ಸುತ್ತುವರಿದು ತಾವೂ ಶಸ್ತ್ರ-ಕವಚ ಸನ್ನದ್ಧರಾಗಿ ನಿಂತರು.
ಯಥಾ ದೇವಾಸುರೇ ಯುದ್ಧೇ ತ್ರಿದಶಾ ವಜ್ರಧಾರಿಣಮ್ |
ಸರ್ವೇ ತೇ ಸ್ಮ ವ್ಯತಿಷ್ಠಂತ ರಕ್ಷಂತಸ್ತಂ ಮಹಾರಥಮ್ ॥20॥
ದೇವಾಸುರ ಯುದ್ಧದಲ್ಲಿ ದೇವತೆಗಳೆಲ್ಲರೂ ಮಹಾರಥನಾದ ವಜ್ರಾಯುಧ- ಧಾರಿಯಾದ ದೇವೇಂದ್ರನನ್ನು ರಕ್ಷಿಸುತ್ತಾ ಸುತ್ತುವರಿದಂತೆ (ಅವರು ನಿಂತರು).
ತತೋ ದುರ್ಯೋಧನೋ ರಾಜಾ ಪುನರ್ಭ್ರಾತರಮಬ್ರವೀತ್ |
ಸವ್ಯಂ ಚಕ್ರಂ ಯುಧಾಮನ್ಯುರುತ್ತಮೌಜಾಶ್ಚ ದಕ್ಷಿಣಮ್ |
ಗೋಪ್ತಾರಾವರ್ಜುನಸ್ಯೈತಾವರ್ಜುನೋಽಪಿ ಶಿಖಂಡಿನಃ ॥21॥
ಸ ರಕ್ಷ್ಯಮಾಣಃ ಪಾರ್ಥೇನ ತಥಾಸ್ಮಾಭಿರ್ವಿವರ್ಜಿತಃ |
ಯಥಾ ಭೀಷ್ಮಂ ನ ನೋ ಹನ್ಯಾದ್ ದುಃಶಾಸನ ತಥಾ ಕುರು ॥22॥
ಆಗ ರಾಜನಾದ ದುರ್ಯೋಧನನು ಪುನಃ ತಮ್ಮನನ್ನು ಕುರಿತು ಹೀಗೆ ಹೇಳಿದನು. ಅರ್ಜುನನ ಎಡಪಾರ್ಶ್ವದ ಸೈನ್ಯವನ್ನು ಯುಧಾಮನ್ಯುವೂ, ಬಲಪಾರ್ಶ್ವದ ಸೈನ್ಯವನ್ನು ಉತ್ತಮೌಜನೂ ರಕ್ಷಿಸುವರು. ಅರ್ಜುನನೂ ಸಹ ಶಿಖಂಡಿಯನ್ನು ರಕ್ಷಿಸುವನು. ಎಲೈ ದುಶ್ಶಾಸನನೇ, ಅವನು ಅರ್ಜುನನಿಂದ ರಕ್ಷಿತನಾಗಿ ನಮ್ಮಿಂದ ಪರಿತ್ಯಕ್ತನಾಗಿ ಭೀಷ್ಮರನ್ನು ಮತ್ತು ನಮ್ಮನ್ನು ಕೊಲ್ಲದಂತೆ ಯೋಜನೆಯನ್ನು ಮಾಡು.
ಸಂಜಯಃ
ಭ್ರಾತುಸ್ತದ್ವಚನಂ ಶ್ರುತ್ವಾ ಪುತ್ರೋ ದುಃಶಾಸನಸ್ತವ |
ಭೀಷ್ಮಂ ಪ್ರಮುಖತಃ ಕೃತ್ವಾ ಪ್ರಯಯೌ ಸೇನಯಾ ಸಹ ॥23॥
ಸಂಜಯ ಅಣ್ಣನ ಆ ಮಾತುಗಳನ್ನು ಕೇಳಿ ನಿನ್ನ ಪುತ್ರನಾದ ದುಶ್ಶಾಸನನು ಭೀಷ್ಮರನ್ನು ಮುಂದೆ ಮಾಡಿಕೊಂಡು ಸೈನ್ಯದ ಜೊತೆಯಲ್ಲಿ ಹೊರಟನು.
ಭೀಷ್ಮಂ ತು ರಥವಂಶೇನ ದೃಷ್ಟ್ವಾ ತಮಭಿಸಂವೃತಮ್ |
ಅರ್ಜುನೋ ರಥಿನಾಂ ಶ್ರೇಷ್ಠೋ ಧೃಷ್ಟದ್ಯುಮ್ನಮುವಾಚ ಹ ॥24॥
ಶಿಖಂಡಿನಂ ನರವ್ಯಾಘ್ರ ಭೀಷ್ಮಸ್ಯ ಪ್ರಮುಖೇಽನಘ |
ಸ್ಥಾಪಯಸ್ವಾದ್ಯ ಪಾಂಚಾಲ್ಯ ತಸ್ಯ ಗೋಪ್ತಾಹಮಪ್ಯುತ ॥25॥
ಭೀಷ್ಮರು ರಥಸಮೂಹಗಳಿಂದ ಸುತ್ತುವರಿಯಲ್ಪಟ್ಟುದನ್ನು ನೋಡಿದ ರಥಿಶ್ರೇಷ್ಠನಾದ ಅರ್ಜುನನು ಧೃಷ್ಟದ್ಯುಮ್ನನನ್ನು ಕುರಿತು ಎಲೈ ಅನಘನೇ, ನರವ್ಯಾಘ್ರನೇ, ಪಾಂಚಾಲ ರಾಜಕುಮಾರನೇ, ಶಿಖಂಡಿಯನ್ನು ಈ ದಿನ ಭೀಷ್ಮರ ಎದುರಿಗೆ ನಿಲ್ಲಿಸು, ನಾನು ಅವನನ್ನು ರಕ್ಷಿಸುವೆನು ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಸಂಶ್ರಾವಿತಃ ಕ್ರೂರವಚಃ ಸ ತೇನ
ಚಕ್ರೇ ಸತ್ಯಂ ಮೃತ್ಯುಭಯಂ ವಿಹಾಯ |
ಶಕ್ತ್ಯಾ ಹನಿಷ್ಯಾಮಿ ಪರಾನಿತಿ ಸ್ಮ
ಚಕ್ರೇ ಚ ತತ್ಕರ್ಮ ತಥಾ ಪರೇದ್ಯುಃ ॥103॥

ದುರ್ಯೋಧನನಿಂದ ಕಠೋರ ಮಾತುಗಳನ್ನು ಕೇಳಿಸಿಕೊಂಡ ಭೀಷ್ಮರು ಮೃತ್ಯು ಭಯವನ್ನು ತೊರೆದು ಶಕ್ತಿಪೂರ್ತಿ ವೈರಿಗಳನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದರು. ಮರುದಿನ ಆ ಕಾರ್ಯವನ್ನೂ ಮಾಡಿದರು.
ತಂ ಶಕ್ತಿತೋ ಜುಗುಪುರ್ಧಾರ್ತರಾಷ್ಟ್ರಾ-
ಸ್ತೇನಾರ್ದಿತಾಶ್ಚೇದಿಪಾಂಚಾಲಮತ್ಸ್ಯಾಃ |
ಪರಾದ್ರುವನ್ ಭೀಷ್ಮಬಾಣೋರುಭೀತಾಃ
ಸಿಂಹಾರ್ದಿತಾಃ ಕ್ಷುದ್ರಮೃಗಾ ಇವಾರ್ತಾಃ ॥104॥
ಕೌರವರು ಭೀಷ್ಮರನ್ನು ಶಕ್ತಿಪೂರ್ತಿ ರಕ್ಷಿಸಿಕೊಂಡರು. ಭೀಷ್ಮರಿಂದ ಪೀಡಿತರಾದ ಚೇದಿ ಪಾಂಚಾಲ ಮತ್ಸ್ಯದೇಶಗಳ ರಾಜರು ಭೀಷ್ಮರ ಬಾಣಗಳಿಗೆ ಬಹಳ ಭಯಪಟ್ಟು ಆರ್ತರಾಗಿ ಸಿಂಹದಿಂದ ಪೀಡಿತವಾದ ಕ್ಷುದ್ರಮೃಗಗಳಂತೆ ಓಡಿದರು.
* * * * *
ತೊಂಬತ್ತಾರನೆಯ ಅಧ್ಯಾಯ
ಒಂಬತ್ತನೆಯ ದಿವಸದ ಯುದ್ಧದ ಪ್ರಾರಂಭ. ಭೀಷ್ಮರಿಂದ ಸರ್ವತೋಭದ್ರ ವ್ಯೂಹದ ಮತ್ತು ಪಾಂಡವರಿಂದ ಪ್ರತಿವ್ಯೂಹದ ರಚನೆ.
ಸಂಜಯಃ
ತತಃ ಶಾಂತನವೋ ಭೀಷ್ಮೋ ನಿರ್ಯಯೌ ಸೇನಯಾ ಸಹ |
ವ್ಯೂಹಂ ಚಾವ್ಯೂಹತ ಮಹತ್ ಸರ್ವತೋಭದ್ರಮಾಹವೇ ॥1॥
ಸಂಜಯ ಅನಂತರ ಶಂತನುಪುತ್ರರಾದ ಭೀಷ್ಮರು ಸೈನ್ಯದ ಜೊತೆಯಲ್ಲಿ ಹೊರಟು ರಣರಂಗದಲ್ಲಿ ದೊಡ್ಡದಾದ ಸರ್ವತೋಭದ್ರವ್ಯೂಹವನ್ನು ರಚಿಸಿದರು.
ಕೃಪಶ್ಚ ಕೃತವರ್ಮಾ ಚ ಶೈಬ್ಯಶ್ಚೈವ ಮಹಾರಥಃ |
ಶಕುನಿಃ ಸೈಂಧವಶ್ಚೈವ ಕಾಂಬೋಜಶ್ಚ ಸುದಕ್ಷಿಣಃ ॥2॥
ಭೀಷ್ಮೇಣ ಸಹಿತಾಃ ಸರ್ವೇ ಪುತ್ರೈಶ್ಚ ತವ ಭಾರತ |
ಅಗ್ರತಃ ಸರ್ವಸೈನ್ಯಾನಾಂ ವ್ಯೂಹಸ್ಯ ಪ್ರಮುಖೇ ಸ್ಥಿತಾಃ ॥3॥
ಕೃಪರು, ಕೃತವರ್ಮ, ಮಹಾರಥನಾದ ಶೈಬ್ಯ, ಶಕುನಿ, ಸೈಂಧವ, ಕಾಂಬೋಜ ರಾಜನಾದ ಸುದಕ್ಷಿಣ, ನಿನ್ನ ಪುತ್ರರಿಂದ ಒಡಗೂಡಿದ ಭೀಷ್ಮರು ಇವರೆಲ್ಲರೂ ಎಲೈ ಭಾರತನೇ, ಸರ್ವ ಸೈನ್ಯಗಳ ವ್ಯೂಹದಲ್ಲಿ ಮುಂಭಾಗದಲ್ಲಿದ್ದರು.
ದ್ರೋಣೋ ಭೂರಿಶ್ರವಾಃ ಶಲ್ಯೋ ಭಗದತ್ತಶ್ಚ ಮಾರಿಷ |
ದಕ್ಷಿಣಂ ಪಕ್ಷಮಾಶ್ರಿತ್ಯ ಸ್ಥಿತಾ ವ್ಯೂಹಸ್ಯ ದಂಸಿತಾಃ ॥4॥
ಎಲೈ ಪೂಜ್ಯನೇ, ದ್ರೋಣರು, ಭೂರಿಶ್ರವ, ಶಲ್ಯ ಮತ್ತು ಭಗದತ್ತ ಇವರು ವ್ಯೂಹದ ಬಲಭಾಗವನ್ನು ಆಶ್ರಯಿಸಿ ಸನ್ನದ್ಧರಾದರು.
ಅಶ್ವತ್ಥಾಮಾ ಸೋಮದತ್ತ ಆವಂತ್ಯೌ ಚ ಮಹಾರಥೌ |
ಮಹತ್ಯಾ ಸೇನಯಾ ಯುಕ್ತಾ ವಾಮಂ ಪಕ್ಷಮಪಾಲಯನ್ ॥5॥
ಅಶ್ವತ್ಥಾಮರು, ಸೋಮದತ್ತ ಮತ್ತು ಅವಂತಿದೇಶದ ಮಹಾರಥರಿಬ್ಬರು ದೊಡ್ಡ ಸೇನೆಯಿಂದ ಕೂಡಿ ಎಡಭಾಗವನ್ನು ರಕ್ಷಿಸಿದರು.
ದುರ್ಯೋಧನೋ ಮಹಾರಾಜ ತ್ರಿಗರ್ತೈಃ ಸರ್ವತೋ ವೃತಃ |
ವ್ಯೂಹಮಧ್ಯೇ ಸ್ಥಿತೋ ರಾಜನ್ ಪಾಂಡವಾನ್ ಪ್ರತಿ ಭಾರತ ॥6॥
ಎಲೈ ಮಹಾರಾಜನೇ, ಭಾರತನೇ, ಸರ್ವತ್ರಿಗರ್ತರಿಂದಲೂ ಪರಿವೃತನಾಗಿ ದುರ್ಯೋಧನನು ವ್ಯೂಹಮಧ್ಯದಲ್ಲಿ ನಿಂತು ಪಾಂಡವರನ್ನು ಎದುರಿಸಿದನು.
ಅಲಂಬುಸೋ ರಥಶ್ರೇಷ್ಠಃ ಶ್ರುತಾಯುಶ್ಚ ಮಹಾರಥಃ |
ಪೃಷ್ಠತಃ ಸರ್ವಸೈನ್ಯಾನಾಂ ಸ್ಥಿತೌ ವ್ಯೂಹಸ್ಯ ದಂಸಿತೌ ॥7॥
ಶ್ರೇಷ್ಠರಥನಾದ ಅಲಂಬುಸನು ಮತ್ತು ಮಹಾರಥನಾದ ಶ್ರುತಾಯುವು ವ್ಯೂಹದಲ್ಲಿ ಎಲ್ಲ ಸೈನ್ಯಗಳ ಹಿಂಭಾಗದಲ್ಲಿ ಸನ್ನದ್ಧರಾಗಿದ್ದರು.
ಏವಮೇತೇ ತದಾ ವ್ಯೂಹಂ ಕೃತ್ವಾ ಭಾರತ ತಾವಕಾಃ |
ಸನ್ನದ್ಧಾಃ ಸಮದೃಶ್ಯಂತ ಪ್ರತಪಂತ ಇವಾಗ್ನಯಃ ॥8॥
ಎಲೈ ಭಾರತನೇ, ಹೀಗೆ ನಿನ್ನವರೆಲ್ಲರೂ ಆಗ ವ್ಯೂಹವನ್ನು ಮಾಡಿ ಯುದ್ಧ ಸನ್ನದ್ಧರಾಗಿ ಜ್ವಲಿಸುವ ಅಗ್ನಿಗಳಂತೆ ಕಂಡುಬಂದರು.
ತಥಾ ಯುಧಿಷ್ಠಿರೋ ರಾಜಾ ಭೀಮಸೇನಶ್ಚ ಪಾಂಡವಃ |
ನಕುಲಃ ಸಹದೇವಶ್ಚ ಮಾದ್ರೀಪುತ್ರಾವುಭಾವಪಿ |
ಅಗ್ರತಃ ಸರ್ವಸೈನ್ಯಾನಾಂ ಸ್ಥಿತಾ ವ್ಯೂಹಸ್ಯ ದಂಸಿತಾಃ ॥9॥
ಹಾಗೆಯೇ, ರಾಜನಾದ ಯುಧಿಷ್ಠಿರನೂ, ಪಾಂಡುಪುತ್ರನಾದ ಭೀಮಸೇನ, ಮಾದ್ರೀಪುತ್ರರಾದ ನಕುಲ-ಸಹದೇವರು ತಮ್ಮ ವ್ಯೂಹದ ಮುಂಭಾಗದಲ್ಲಿ ಸನ್ನದ್ಧರಾದರು.
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚ ಮಹಾರಥಃ |
ಸ್ಥಿತಾಃ ಸೈನ್ಯೇನ ಮಹತಾ ಪರಾನೀಕವಿನಾಶನಾಃ ॥10॥
ಧೃಷ್ಟದ್ಯುಮ್ನ, ವಿರಾಟ, ಮಹಾರಥನಾದ ಸಾತ್ಯಕಿ-ಪರಸೈನ್ಯ ವಿನಾಶಕರಾದ ಇವರೂ ಸಹ ದೊಡ್ಡ ಸೈನ್ಯದಿಂದ ಕೂಡಿ ನಿಂತರು.
ಶಿಖಂಡೀ ವಿಜಯಶ್ಚೈವ ರಾಕ್ಷಸಶ್ಚ ಘಟೋತ್ಕಚಃ |
ಚೇಕಿತಾನೋ ಮಹಾಬಾಹುಃ ಕುಂತಿಭೋಜಶ್ಚ ವೀರ್ಯವಾನ್ |
ಸ್ಥಿತಾ ರಣೇ ಮಹಾರಾಜ ಮಹತ್ಯಾ ಸೇನಯಾ ವೃತಾಃ ॥11॥

ಎಲೈ ಮಹಾರಾಜನೇ, ಶಿಖಂಡಿ, ಅರ್ಜುನ, ರಾಕ್ಷಸನಾದ ಘಟೋತ್ಕಚ, ಮಹಾಬಾಹುವಾದ ಚೇಕಿತಾನ, ಪರಾಕ್ರಮಶಾಲಿಯಾದ ಕುಂತಿಭೋಜ- ಇವರೂ ದೊಡ್ಡ ಸೈನ್ಯದಿಂದ ಕೂಡಿ ರಣರಂಗದಲ್ಲಿ ನಿಂತರು.
ಅಭಿಮನ್ಯುರ್ಮಹೇಷ್ವಾಸೋ ದ್ರುಪದಶ್ಚ ಮಹಾರಥಃ |
ಕೇಕಯಾ ಭ್ರಾತರಃ ಪಂಚ ಸ್ಥಿತಾ ಯುದ್ಧಾಯ ದಂಸಿತಾಃ ॥12॥
ಮಹಾಧನುರ್ಧಾರಿಯಾದ ಅಭಿಮನ್ಯು, ಮಹಾರಥರಾದ ದ್ರುಪದ, ಕೇಕಯ ದೇಶದ ಐವರು ಸಹೋದರರು- ಇವರೂ ಯುದ್ಧಕ್ಕೆ ಸನ್ನದ್ಧರಾಗಿ ನಿಂತರು.
ಏವಂ ತೇಽಪಿ ಮಹಾವ್ಯೂಹಂ ಪ್ರತಿವ್ಯೂಹ್ಯ ಸುದುರ್ಜಯಮ್ |
ಪಾಂಡವಾಃ ಸಮರೇ ಶೂರಾಃ ಸ್ಥಿತಾ ಯುದ್ಧಾಯ ಮಾರಿಷ ॥13॥
ಎಲೈ ಪೂಜ್ಯನೇ, ಹೀಗೆ ಅವರೂ ಸಹ ಭೀಷ್ಮರ ವ್ಯೂಹಕ್ಕೆ ಪ್ರತಿಯಾಗಿ ಜಯಿಸಲು ಬಹಳ ಕಷ್ಟ ಸಾಧ್ಯವಾದ ಮಹಾವ್ಯೂಹವನ್ನು ರಚಿಸಿ ರಣಶೂರರಾದ ಪಾಂಡವರು ಯುದ್ಧಕ್ಕೆ ಸನ್ನದ್ಧರಾದರು.
ತಾವಕಾಸ್ತು ರಣೇ ಯತ್ತಾಃ ಸಹಸೇನಾ ನರಾಧಿಪಾಃ |
ಅಭ್ಯುದ್ಯಯೂ ರಣೇ ಪಾರ್ಥಾನ್ ಭೀಷ್ಮಂ ಕೃತ್ವಾಗ್ರತೋ ನೃಪ ॥14॥
ಎಲೈ ರಾಜನೇ, ನಿನ್ನವರಾದ ರಾಜರಾದರೋ ತಮ್ಮ ಸೈನ್ಯದಿಂದ ಕೂಡಿ ರಣರಂಗದಲ್ಲಿ ಜಾಗರೂಕರಾಗಿದ್ದು, ಭೀಷ್ಮರನ್ನು ಮುಂದೆ ಮಾಡಿಕೊಂಡು ಪಾಂಡವರ ಮೇಲೆ ಎರಗಿದರು.
ತಥೈವ ಪಾಂಡವಾ ರಾಜನ್ ಭೀಮಸೇನಪುರೋಗಮಾಃ |
ಭೀಷ್ಮಂ ಯುದ್ಧಮಭೀಪ್ಸಂತಃ ಸಂಗ್ರಾಮೇ ವಿಜಿಗೀಷವಃ ॥15॥
ಕ್ಷ್ವೇಡಾಃ ಕಿಲಕಿಲಾಶಬ್ದಾನ್ ಕ್ರಕಚಾನ್ ಗೋವಿಷಾಣಿಕಾಃ |
ಭೇರೀಮೃದಂಗಪಣವಾನ್ನಾದಯಂತಶ್ಚ ಪುಷ್ಕರಾನ್ |
ಪಾಂಡವಾ ಅಭ್ಯಧಾವಂತ ನದಂತೋ ಭೈರವಾನ್ ರವಾನ್ ॥16॥
ಎಲೈ ರಾಜನೇ, ಹಾಗೆಯೇ ಭೀಮಸೇನ ಮೊದಲಾದ ಪಾಂಡವರೂ ಸಹ ಯುದ್ಧಾಕಾಂಕ್ಷಿಗಳಾದ ಭೀಷ್ಮರನ್ನು ಯುದ್ಧದಲ್ಲಿ ಗೆಲ್ಲಲು ಬಯಸಿ, ಸಿಂಹನಾದಗಳನ್ನೂ ಕಿಲಕಿಲ ಶಬ್ದಗಳನ್ನೂ ಮಾಡುತ್ತಾ, ಕರಗಸ, ಗೋವಿಷಾಣ, ಭೇರೀ-ಮೃದಂಗ- ಪಣವಗಳು, ಪುಷ್ಕರಗಳು ಇವುಗಳ ನಾದವನ್ನು ಮಾಡುತ್ತಾ, ಭಯಂಕರವಾದ ನಾದಗಳನ್ನು ಮಾಡುತ್ತಾ ನಿನ್ನ ಸೈನ್ಯದ ಕಡೆಗೆ ಧಾವಿಸಿದರು.
ಭೇರೀಮೃದಂಗಶಂಖಾನಾಂ ದುಂದುಭೀನಾಂ ಚ ನಿಸ್ವನೈಃ |
ಉತ್ಕೃಷ್ಟಸಿಂಹನಾದೈಶ್ಚ ವಲ್ಗಿತೈಶ್ಚ ಪೃಥಗ್ವಿಧೈಃ ॥17॥
ಭಯಂ ಪ್ರತಿನದಂತಸ್ತಾನಭ್ಯಗಚ್ಛಾಮ ಸತ್ವರಾಃ |
ಸಹಸೈವಾಭಿಸಂಕ್ರುದ್ಧಾಸ್ತದಾಸೀತ್ ತುಮುಲಂ ಮಹತ್ ॥18॥
ನಾವೂ ಸಹ ಭೇರೀ-ಮೃದಂಗ-ಶಂಖಗಳಿಂದಲೂ, ದುಂದುಭಿಗಳ ಧ್ವನಿಯಿಂದಲೂ, ಉತ್ಕೃಷ್ಟವಾದ ಸಿಂಹನಾದಗಳಿಂದಲೂ, ವಿವಿಧವಾದ ವೀರನಾದಗಳಿಂದಲೂ ಪಾಂಡವಸೇನೆಗೆ ಭಯವುಂಟಾಗುವಂತೆ ಪ್ರತಿಯಾಗಿ ಗರ್ಜಿಸುತ್ತಾ ಶೀಘ್ರವಾಗಿ ಪಾಂಡವರ ಕಡೆಗೆ ಕ್ರುದ್ಧರಾಗಿ ಧಾವಿಸಿದೆವು. ಅನಂತರ ತೀವ್ರವಾದ ಯುದ್ಧವು ಜರುಗಿತು.
ತತೋಽನ್ಯೋನ್ಯಂ ಪ್ರಧಾವಂತಃ ಸಂಪ್ರಹಾರಂ ಪ್ರಚಕ್ರಿರೇ |
ತತಃ ಶಬ್ದೇನ ಮಹತಾ ಪ್ರಚಕಂಪೇ ವಸುಂಧರಾ ॥19॥
ಆಗ ಪರಸ್ಪರವಾಗಿ ಎರಗುತ್ತಾ ಯೋಧರು ಪ್ರಹಾರಗಳನ್ನು ಮಾಡಿದರು. ಅದರಿಂದ ಉಂಟಾದ ದೊಡ್ಡ ಶಬ್ದದಿಂದ ಭೂಮಿಯು ನಡುಗಿತು.
ಪಕ್ಷಿಣಶ್ಚ ಮಹಾಘೋರಂ ವ್ಯಾಹರಂತೋ ವಿಬಭ್ರಮುಃ |
ಸಪ್ರಭಶ್ಚೋದಿತಃ ಸೂರ್ಯೋ ನಿಷ್ಪ್ರಭಃ ಸಮಪದ್ಯತ ॥20॥
ಪಕ್ಷಿಗಳೂ ಸಹ ಬಹಳ ಘೋರವಾದ ಶಬ್ದವನ್ನು ಮಾಡುತ್ತಾ ಹಾರಾಡಿದವು. ಕಾಂತಿಯುಕ್ತನಾಗಿ ಉದಯಿಸಿದ ಸೂರ್ಯನು ನಿಷ್ಪ್ರಭನಾದನು.
ವವುಶ್ಚ ತುಮುಲಾ ವಾತಾಃ ಶಂಸಂತಃ ಸುಮಹದ್ಭಯಮ್ |
ಘೋರಾಶ್ಚ ಘೋರನಿರ್ಹ್ರಾದಾಃ ಶಿವಾಸ್ತತ್ರ ವವಾಶಿರೇ |
ವೇದಯಂತ್ಯೋ ಮಹಾರಾಜ ಮಹದ್ ವೈಶಸಮಾಗತಮ್ ॥21॥
ದೊಡ್ಡ ಭಯವನ್ನು ಸೃಷ್ಟಿಸುತ್ತಾ ವಾಯುವು ತೀವ್ರವಾಗಿ ಬೀಸಿತು. ಎಲೈ ಮಹಾರಾಜನೇ, ಘೋರವಾದ ಹೆಣ್ಣುನರಿಗಳು ದೊಡ್ಡ ಹಿಂಸೆಯು ಪ್ರಾಪ್ತವಾಗಿದೆ ಎಂದು ಸೂಚಿಸುತ್ತಾ ಭಯಂಕರವಾಗಿ ನಾದಗಳನ್ನು ಮಾಡಿದವು.
ದಿಶಃ ಪ್ರಜ್ವಲಿತಾ ರಾಜನ್ ಪಾಂಸುವರ್ಷಂ ಪಪಾತ ಚ |
ರುಧಿರೇಣ ಸಮುನ್ಮಿಶ್ರಮಸ್ಥಿವರ್ಷಂ ತಥೈವ ಚ ॥22॥
ಎಲೈ ರಾಜನೇ, ದಿಕ್ಕುಗಳು ಪ್ರಜ್ವಲಿಸಿದವು. ಧೂಳಿನ ಮಳೆಯು ಬಿದ್ದಿತು. ರಕ್ತದಿಂದ ಮಿಶ್ರಿತವಾದ ಅಸ್ಥಿಗಳ ಮಳೆಯೂ ಉಂಟಾಯಿತು.

ರುದತಾಂ ವಾಹನಾನಾಂ ಚ ನೇತ್ರೇಭ್ಯಃ ಪ್ರಾಪತಜ್ಜಲಮ್ |
ಸುಸ್ರುವುಶ್ಚ ಶಕೃನ್ಮೂತ್ರಂ ಪ್ರಧ್ಯಾಯಂತೋ ವಿಶಾಂಪತೇ ॥23॥
ರೋದಿಸುವ ವಾಹನಗಳ ಕಣ್ಣುಗಳಿಂದ ನೀರು ಸುರಿಯಿತು. ಎಲೈ ರಾಜನೇ, ಮೌನವಾಗಿ ಧ್ಯಾನಿಸುತ್ತಾ ನಿಂತ ವಾಹನಗಳು ಮಲ-ಮೂತ್ರಗಳನ್ನು ಸ್ರವಿಸಿದವು.

ಅಂತರ್ಹಿತಾ ಮಹಾನಾದಾಃ ಶ್ರೂಯಂತೇ ಭರತರ್ಷಭ |
ರಕ್ಷಸಾಂ ಪುರುಷಾದಾನಾಂ ನದತಾಂ ಭೈರವಾನ್ ರವಾನ್ ॥24॥
ಎಲೈ ಭರತಶ್ರೇಷ್ಠನೇ, ಆ ಮಹಾನಾದಗಳು ಭೈರವವಾದ ನಾದಗಳನ್ನು ಮಾಡುವ ರಾಕ್ಷಸರ ಗರ್ಜನೆಗಳಿಂದ ಮುಳುಗಿಹೋಗುವುದು ಕೇಳಿ ಬಂದಿತು.
ಸಂಪತಂತಃ ಸ್ಮ ದೃಶ್ಯಂತೇ ಗೋಮಾಯುಬಕವಾಯಸಾಃ |
ಶ್ವಾನಶ್ಚ ವಿವಿಧೈರ್ನಾದೈರ್ಭಷಂತಸ್ತತ್ರ ತಸ್ಥಿರೇ ॥25॥
ನರಿಗಳು, ಬಕಪಕ್ಷಿಗಳು ಮತ್ತು ಕಾಗೆಗಳು ಹಾರಾಡುವುದು ಕಂಡುಬಂದಿತು. ನಾಯಿಗಳು ಅನೇಕ ವಿಧವಾಗಿ ಬೊಗಳುತ್ತಾ ಅಲ್ಲಿ ನಿಂತವು.
ಜ್ವಲಿತಾಶ್ಚ ಮಹೋಲ್ಕಾ ವೈ ಸಮಾಹತ್ಯ ದಿವಾಕರಮ್ |
ನಿಪೇತುಃ ಸಹಸಾ ಭೂಮೌ ವೇದಯಾನಾ ಮಹದ್ಭಯಮ್ ॥26॥
ಜ್ವಲಿಸುವ ದೊಡ್ಡ ಉಲ್ಕೆಗಳು ದೊಡ್ಡ ಭಯವನ್ನು ಸೂಚಿಸುತ್ತಾ ಸೂರ್ಯನನ್ನು ಬಡಿದು ಭೂಮಿಯ ಮೇಲೆ ತಕ್ಷಣದಲ್ಲಿ ಬಿದ್ದವು.
ಮಹಾಂತ್ಯನೀಕಾನಿ ಮಹಾಸಮುಚ್ಛ್ರಯೇ
ಸಮಾಗಮೇ ಪಾಂಡವಧಾರ್ತರಾಷ್ಟ್ರಯೋಃ |
ಚಕಂಪಿರೇ ಶಂಖಮೃದಂಗನಿಸ್ವನೈಃ
ಪ್ರಕಂಪಿತಾನೀವ ವನಾನಿ ವಾಯುನಾ ॥27॥
ಪಾಂಡವ-ಕೌರವರಿಗೆ ಅಂತಹ ದೊಡ್ಡ ಸಂಘರ್ಷ ಉಂಟಾದಾಗ ಶಂಖ- ಮೃದಂಗ ಶಬ್ದಗಳಿಂದ ಕೂಡಿದ ಆ ದೊಡ್ಡ ಸೈನ್ಯಗಳು ಬಿರುಗಾಳಿಗೆ ಸಿಕ್ಕಿದ ಕಾಡುಗಳಂತೆ ಅಲುಗಾಡುವುದು ಕಂಡುಬಂದಿತು.
ನರೇಂದ್ರನಾಗಾಶ್ವಸಮಾಕುಲಾನಾಮ್
ಅಭ್ಯಾಯತೀನಾಮಶಿವೇ ಮುಹೂರ್ತೇ |
ಬಭೂವ ಘೋಷಸ್ತುಮುಲಶ್ಚಮೂನಾಂ
ವಾತೋದ್ಧುತಾನಾಮಿವ ಸಾಗರಾಣಾಮ್ ॥28॥
ರಾಜರಿಂದಲೂ, ಗಜಗಳಿಂದಲೂ, ಅಶ್ವಗಳಿಂದಲೂ ನಿಬಿಡವಾದ ವಿಸ್ತಾರವಾದ ಸೈನ್ಯದಲ್ಲಿ ಉಂಟಾದ ಆ ತೀವ್ರವಾದ ಶಬ್ದವು ಬಿರುಗಾಳಿಗೆ ಎದ್ದ ಸಮುದ್ರದ ಗರ್ಜನೆಯಂತೆ ಆ ಅಮಂಗಳ ಮುಹೂರ್ತದಲ್ಲಿ ಕೇಳಿಬಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಣ್ಣವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ತದ್ ಯುದ್ಧಮಾಸೀನ್ನೃಪಪಾರ್ಥಪುತ್ರಯೋಃ
ವಿಚಿತ್ರಮತ್ಯದ್ಭುತಮುಗ್ರರೂಪಮ್ |
ಸಮಂ ಚಿರಂ ತತ್ರ ಧನುಶ್ಚಕರ್ತ
ಧ್ವಜಂ ಚ ರಾಜಾ ಸಹಸಾಽಭಿಮನ್ಯೋಃ ॥106॥
ದುರ್ಯೋಧನ-ಅಭಿಮನ್ಯುಗಳ ಆ ಯುದ್ಧ ವಿಚಿತ್ರ, ಅತ್ಯದ್ಭುತ ಸ್ವರೂಪದ್ದಾಗಿತ್ತು. ಭಯಂಕರವಾಗಿತ್ತು. ದೀರ್ಘಕಾಲದವರೆಗೆ ಸಮವಾಗಿಯೇ ಇತ್ತು. ಬಳಿಕ ದುರ್ಯೋಧನ ಅಭಿಮನ್ಯುವಿನ ಬಿಲ್ಲನ್ನೂ ಧ್ವಜವನ್ನೂ ಬಲಾತ್ಕಾರವಾಗಿ ಕತ್ತರಿಸಿದ.
ಅಥೈನಮುಗ್ರೈಶ್ಚ ಶರೈರ್ವವರ್ಷ
ಸೂತಂ ಚ ತಸ್ಯಾಶು ಜಘಾನ ವೀರಃ |
ತದಾಽಽಸದದ್ ಭೀಮಸೇನೋ ನೃಪಂ ತಂ
ಜಘಾನ ಚಾಶ್ವಾನ್ ಧೃತರಾಷ್ಟ್ರಜಸ್ಯ ॥107॥
ಬಳಿಕ ವೀರ ದುರ್ಯೋಧನ ಅಭಿಮನ್ಯುವಿನ ಮೇಲೆ ಭಯಂಕರ ಬಾಣಗಳ ಮಳೆಗರೆದ. ಅವನ ಸಾರಥಿಯನ್ನು ಬೇಗನೆ ಕೊಂದ. ಆಗ ಭೀಮಸೇನ ದುರ್ಯೋಧನನನ್ನು ಆಕ್ರಮಿಸಿದ. ಅವನ ಕುದುರೆಗಳನ್ನು ಕೊಂದ.
ದ್ರೋಣೋ ದ್ರೌಣಿರ್ಭಗದತ್ತಃ ಕೃಪಶ್ಚ
ಸಚಿತ್ರಸೇನಾ ಅಭ್ಯುಯುರ್ಭೀಮಸೇನಮ್ |
ಸರ್ವಾಂಶ್ಚ ತಾನ್ ವಿಮುಖೀಕೃತ್ಯ ಭೀಮಃ
ಸ ಚಿತ್ರಸೇನಾಯ ಗದಾಂ ಸಮಾದದೇ ॥108॥
ದ್ರೋಣರು, ಅಶ್ವತ್ಥಾಮರು, ಭಗದತ್ತ, ಕೃಪರು ಮತ್ತು ಚಿತ್ರಸೇನನೆಂಬ ದುರ್ಯೋಧನನ ಸೋದರ ಇವರು ಭೀಮನನ್ನು ಆಕ್ರಮಿಸಿದರು. ಅವರೆಲ್ಲರನ್ನೂ ಹಿಮ್ಮೆಟ್ಟಿಸಿ ಭೀಮ ಚಿತ್ರಸೇನನ ವಧೆಗೆ ಗದೆ ಬೀಸಿದ.
ತಾಮುದ್ಯತಾಂ ವೀಕ್ಷ್ಯ ಪರಾದ್ರವನ್ ತೇ
ಸ ಚಿತ್ರಸೇನಶ್ಚ ರಥಾದವಪ್ಲುತಃ |
ಸಂಚೂರ್ಣಿತೋ ಗದಯಾ ತದ್ ರಥಶ್ಚ
ತಜ್ಜೀವನೇನೋದ್ಧೃಷಿತಾಶ್ಚ ಕೌರವಾಃ ॥109॥

ಬೀಸಿ ಒಗೆದ ಆ ಗದೆಯನ್ನು ಕಂಡು ಎಲ್ಲರೂ ಪಲಾಯನ ಮಾಡಿದರು. ಚಿತ್ರಸೇನ ರಥದಿಂದ ಕೆಳಗೆ ಹಾರಿದ. ಅವನ ರಥ ಗದೆಯಿಂದ ಪುಡಿಯಾಯಿತು. ಚಿತ್ರಸೇನ ಬದುಕಿದನೆಂದು ಕೌರವರು ಹರ್ಷಿತರಾದರು.
* * * * *
ತೊಂಬತ್ತೇಳನೆಯ ಅಧ್ಯಾಯ
ಅಭಿಮನ್ಯುವಿನ ಪರಾಕ್ರಮ. ಅಲಂಬುಸನ ಜೊತೆಯಲ್ಲಿ ಅವನ ಯುದ್ಧ.
ಸಂಜಯಃ
ಅಭಿಮನ್ಯೂ ರಥೋದಾರಃ ಪಿಶಂಗೈಸ್ತುರಗೋತ್ತಮೈಃ |
ಅಭಿದುದ್ರಾವ ತೇಜಸ್ವೀ ದುರ್ಯೋಧನಬಲಂ ಮಹತ್ |
ವಿಕಿರನ್ ಶರವರ್ಷಾಣಿ ವಾರಿಧಾರಾ ಇವಾಂಬುದಃ ॥1॥
ಸಂಜಯ ತೇಜಸ್ವಿಯೂ, ರಥಶ್ರೇಷ್ಠನೂ ಆದ ಅಭಿಮನ್ಯುವು ಪಿಶಂಗ ವರ್ಣದ ಅಶ್ವಗಳನ್ನು ಹೂಡಿದ ರಥದಲ್ಲಿ ಮೋಡವು ಮಳೆಯ ಧಾರೆಯನ್ನು ಸುರಿಸುವಂತೆ ಬಾಣಗಳ ಮಳೆಯನ್ನು ಸುರಿಸುತ್ತಾ ದೊಡ್ಡದಾದ ದುರ್ಯೋಧನನ ಸೈನ್ಯವನ್ನು ಕುರಿತು ವೇಗದಿಂದ ಧಾವಿಸಿದನು.
ನ ಶೇಕುಃ ಸಮರೇ ಕ್ರುದ್ಧಂ ಸೌಭದ್ರಮರಿಸೂದನಮ್ |
ಶಸೌತ್ರಘಿಣಂ ಗಾಹಮಾನಂ ಸೇನಾಸಾಗರಮಕ್ಷಯಮ್ |
ನಿವಾರಯಿತುಮಪ್ಯಾಜೌ ತ್ವದೀಯಾಃ ಕುರುಪುಂಗವಾಃ ॥2॥
ನಿನ್ನವರಾದ ಕುರುಶ್ರೇಷ್ಠರು ಯುದ್ಧದಲ್ಲಿ ಕೋಪಗೊಂಡು ಅಪಾರವಾದ ಸೈನ್ಯಸಾಗರವನ್ನು ಪ್ರವೇಶಿಸಲು ಮುನ್ನುಗ್ಗುತ್ತಿರುವ ಶತ್ರುಸೂದನನೂ, ಶಸ್ತ್ರಸಮೂಹ ಸಂಪನ್ನನೂ ಆದ ಅಭಿಮನ್ಯುವನ್ನು ತಡೆಯಲು ಸಾಧ್ಯವಾಗಲಿಲ್ಲ.
ತೇನ ಮುಕ್ತಾ ರಣೇ ರಾಜನ್ ಶರಾಃ ಶತ್ರುನಿಬರ್ಹಣಾಃ |
ಕ್ಷತ್ರಿಯಾನನಯನ್ ಶೂರಾನ್ ಪ್ರೇತರಾಜನಿವೇಶನಮ್ ॥3॥
ಎಲೈ ರಾಜನೇ, ಅವನಿಂದ ಪ್ರಯುಕ್ತವಾದ ಶತ್ರುಸಂಹಾರಕವಾದ ಬಾಣಗಳು ಶೂರರಾದ ಕ್ಷತ್ರಿಯರನ್ನು ಯಮಪಟ್ಟಣಕ್ಕೆ ಕಳುಹಿಸಿದವು.
ಯಮದಂಡೋಪಮಾನ್ ಘೋರಾನ್ ಜ್ವಲನಾಶೀವಿಷೋಪಮಾನ್ |
ಸೌಭದ್ರಃ ಸಮರೇ ಕ್ರುದ್ಧಃ ಪ್ರೇಷಯಾಮಾಸ ಸಾಯಕಾನ್ ॥4॥
ಯುದ್ಧದಲ್ಲಿ ಕೋಪಗೊಂಡ ಅಭಿಮನ್ಯುವು ಯಮದಂಡದಂತೆ, ಅಗ್ನಿಯಂತೆ, ಸರ್ಪಗಳಂತೆ ಘೋರವಾಗಿದ್ದ ಬಾಣಗಳನ್ನು ಶತ್ರುಗಳ ಮೇಲೆ ಪ್ರಯೋಗಿಸಿದನು.
ರಥಿನಂ ಚ ರಥಾತ್ ತೂರ್ಣಂ ಹಯಪೃಷ್ಠಾಚ್ಚ ಸಾದಿನಮ್ |
ಗಜಾರೋಹಾಂಶ್ಚ ಸಗಜಾನ್ ಪಾತಯಾಮಾಸ ಫಾಲ್ಗುನಿಃ ॥5॥
ಅರ್ಜುನನ ಪುತ್ರನಾದ ಅವನು ಶೀಘ್ರವಾಗಿ ರಥಿಕನನ್ನು ರಥದಿಂದಲೂ, ಅಶ್ವಾರೋಹಿಯನ್ನು ಅಶ್ವದಿಂದಲೂ, ಗಜಾರೋಹಿಗಳನ್ನು ಗಜಗಳಿಂದಲೂ ಕೆಡವಿದನು.
ತಸ್ಯ ತತ್ ಕುರ್ವತಃ ಕರ್ಮ ಮಹತ್ ಸಂಖ್ಯೇಽದ್ಭುತಂ ನೃಪಾಃ |
ಪೂಜಯಾಂಚಕ್ರಿರೇ ಹೃಷ್ಟಾಃ ಪ್ರಶಶಂಸುಶ್ಚ ಫಾಲ್ಗುನಿಮ್ ॥6॥
ಯುದ್ಧದಲ್ಲಿ ಅಂತಹ ಅದ್ಭುತವಾದ ಮತ್ತು ದೊಡ್ಡದಾದ ಕಾರ್ಯವನ್ನು ಮಾಡುವುದನ್ನು ನೋಡಿ ಸಂತೋಷಗೊಂಡ ರಾಜರು ಅಭಿಮನ್ಯುವನ್ನು ಗೌರವಿಸಿದರು.
ತಾನ್ಯನೀಕಾನಿ ಸೌಭದ್ರೋ ದ್ರಾವಯನ್ ಬಹ್ವಶೋಭತ |
ತೂಲರಾಶಿಮಿವಾಧೂಯ ಮಾರುತಃ ಸರ್ವತೋದಿಶಮ್ ॥7॥
ಆ ಸೈನ್ಯಗಳನ್ನು ಚದುರಿಸುವ ಅಭಿಮನ್ಯುವು ಹತ್ತಿಯ ರಾಶಿಯನ್ನು ಎಲ್ಲ ದಿಕ್ಕುಗಳಿಗೂ ಹಾರಿಸುವ ವಾಯುವಿನಂತೆ ಶೋಭಿಸಿದನು.
ತೇನ ವಿದ್ರಾವ್ಯಮಾಣಾನಿ ತವ ಸೈನ್ಯಾನಿ ಭಾರತ |
ತ್ರಾತಾರಂ ನಾಧ್ಯಗಚ್ಛಂತ ಪಂಕೇ ಮಗ್ನಾ ಇವ ದ್ವಿಪಾಃ ॥8॥
ಎಲೈ ಭಾರತನೇ, ಅವನಿಂದ ಚದುರಿಸಲ್ಪಡುವ ನಿನ್ನ ಸೈನ್ಯಗಳು ಕೆಸರಿನಲ್ಲಿ ಮುಳುಗಿದ ಗಜದಂತೆ ರಕ್ಷಕನನ್ನು ಕಾಣಲಿಲ್ಲ.
ವಿದ್ರಾವ್ಯ ಸರ್ವಸೈನ್ಯಾನಿ ತಾವಕಾನಿ ನರೋತ್ತಮಃ |
ಅಭಿಮನ್ಯುಃ ಸ್ಥಿತೋ ರಾಜನ್ ವಿಧೂಮೋಽಗ್ನಿರಿವ ಜ್ವಲನ್ ॥9॥
ಎಲೈ ರಾಜನೇ, ನರಶ್ರೇಷ್ಠನಾದ ಅಭಿಮನ್ಯುವು ನಿನ್ನ ಸೈನ್ಯವನ್ನೆಲ್ಲಾ ಓಡಿಸಿ, ಧೂಮರಹಿತ ಅಗ್ನಿಯಂತೆ ಜ್ವಲಿಸುತ್ತಾ ನಿಂತನು.
ನ ಚೈನಂ ತಾವಕಾಃ ಸರ್ವೇ ವಿಷೇಹುರರಿಘಾತಿನಮ್ |
ಪ್ರದೀಪ್ತಂ ಪಾವಕಂ ಯದ್ವತ್ ಪತಂಗಾಃ ಕಾಲಚೋದಿತಾಃ ॥10॥
ಮೃತ್ಯುಪ್ರೇರಿತವಾದ ಪತಂಗಗಳು ಜ್ವಲಿಸುವ ಅಗ್ನಿಯನ್ನು ಸಹಿಸಲು ಸಾಧ್ಯವಿಲ್ಲದಂತೆ, ಶತ್ರುಸಂಹಾರಕನಾದ ಅವನನ್ನು ನಿನ್ನವರೆಲ್ಲರೂ ಸೇರಿ ಸಹಿಸಲು ಸಾಧ್ಯವಾಗಲಿಲ್ಲ.
ಪ್ರಹರನ್ ಸರ್ವಶತ್ರುಭ್ಯಃ ಪಾಂಡವಾನಾಂ ಮಹಾರಥಃ |
ಅದೃಶ್ಯತ ಮಹೇಷ್ವಾಸಃ ಸವಜ್ರ ಇವ ವಜ್ರಭೃತ್ ॥11॥
ಪಾಂಡವರ ಮಹಾರಥನೂ, ಮಹಾಧನುರ್ಧಾರಿಯೂ ಆದ ಅವನು ತನ್ನ ಎಲ್ಲ ಶತ್ರುಗಳ ಮೇಲೆ ಪ್ರಹಾರವನ್ನು ಮಾಡುತ್ತಾ ವಜ್ರಾಯುಧವನ್ನು ಹಿಡಿದ ಇಂದ್ರನಂತೆ ಕಂಡುಬಂದನು.

ಹೇಮಪೃಷ್ಠಂ ಧನುಶ್ಚಾಸ್ಯ ದದೃಶೇ ಚರತೋ ದಿಶಃ |
ತೋಯದೇಷು ಯಥಾ ರಾಜನ್ ಭ್ರಾಜಮಾನಾಃ ಶತಹ್ರದಾಃ ॥12॥
ಎಲೈ ರಾಜನೇ, ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುವ ಅವನ ಚಿನ್ನದ ಹಿಡಿಯ ಧನುಸ್ಸು ಮೋಡಗಳ ಮಧ್ಯದಲ್ಲಿ ಹೊಳೆಯುವ ಮಿಂಚುಗಳಂತೆ ಕಂಡುಬಂದಿತು.
ಶರಾಶ್ಚ ನಿಶಿತಾಃ ಪೀತಾ ನಿಶ್ಚರಂತಿ ಸ್ಮ ಸಂಯುಗೇ |
ವನಾತ್ ಫುಲ್ಲದ್ರುಮಾದ್ ರಾಜನ್ ಭ್ರಮರಾಣಾಮಿವ ವ್ರಜಾಃ ॥13॥
ಎಲೈ ರಾಜನೇ, ಯುದ್ಧದಲ್ಲಿ ಅವನ ಬಿಲ್ಲಿನಿಂದ ಹೊರಹೊಮ್ಮಿದ ಹರಿತವಾದ ಮತ್ತು ಜಲಸಂಸ್ಕೃತವಾದ ಬಾಣಗಳು ಅರಳಿದ ಹೂವಿನ ಮರಗಳ ಕಾಡಿನಿಂದ ಹೊರಹೊಮ್ಮುವ ದುಂಬಿಗಳ ಸಮೂಹದಂತಿದ್ದಿತು.
ತಥೈವ ಚರತಸ್ತಸ್ಯ ಸೌಭದ್ರಸ್ಯ ಮಹಾತ್ಮನಃ |
ರಥೇನ ಮೇಘಘೋಷೇಣ ದದೃಶುರ್ನಾಂತರಂ ಜನಾಃ ॥14॥
ಹಾಗೆ ಮೇಘಗರ್ಜನೆಯಂತಹ ಗರ್ಜನೆಯುಳ್ಳ ರಥದಿಂದ ಸಂಚರಿಸುವ ಮಹಾತ್ಮನಾದ ಅಭಿಮನ್ಯುವಿನಲ್ಲಿ ಶತ್ರುಪಕ್ಷದವರು ಅಲ್ಪವಾದ ಒಂದು ಅವಕಾಶವನ್ನೂ ಕಾಣಲಿಲ್ಲ.
ಮೋಹಯಿತ್ವಾ ಕೃಪಂ ದ್ರೋಣಂ ದ್ರೌಣಿಂ ಚ ಸ ಬೃಹದ್ಬಲಮ್ |
ಸೈಂಧವಂ ಚ ಮಹೇಷ್ವಾಸಂ ವ್ಯಚರಲ್ಲಘು ಸುಷ್ಠು ಚ ॥15॥
ಅವನು ಕೃಪರನ್ನೂ, ದ್ರೋಣರನ್ನೂ, ಮಹಾಬಲಿಷ್ಠರಾದ ಅಶ್ವತ್ಥಾಮರನ್ನೂ, ಮಹಾಧನುರ್ಧಾರಿಯಾದ ಸೈಂಧವನನ್ನೂ ಮರುಳುಗೊಳಿಸಿ ಶೀಘ್ರವಾಗಿ ಮತ್ತು ಬಹಳ ಚೆನ್ನಾಗಿ ರಣರಂಗದಲ್ಲಿ ಸಂಚರಿಸಿದನು.
ಮಂಡಲೀಕೃತಮೇವಾಸ್ಯ ಧನುಃ ಪಶ್ಯಾಮ ಮಾರಿಷ |
ಸೂರ್ಯಮಂಡಲಸಂಕಾಶಂ ತಪತಸ್ತವ ವಾಹಿನೀಮ್ ॥16॥
ಎಲೈ ಪೂಜ್ಯನೇ, ನಿನ್ನ ಸೈನ್ಯವನ್ನು ದಹಿಸುವ ಸೂರ್ಯಮಂಡಲದಂತಿದ್ದ ಅವನ ಧನುಸ್ಸನ್ನು ಯಾವಾಗಲೂ ಮಂಡಲಾಕಾರವಾಗಿರುವುದನ್ನೇ ನೋಡಿದೆವು.
ತಂ ದೃಷ್ಟ್ವಾ ಕ್ಷತ್ರಿಯಾಃ ಶೂರಾಃ ಪ್ರತಪಂತಂ ಶರಾರ್ಚಿಭಿಃ |
ದ್ವಿಫಲ್ಗುನಮಿಮಂ ಲೋಕಂ ಮೇನಿರೇ ತಸ್ಯ ಕರ್ಮಭಿಃ ॥17॥
ತನ್ನ ಬಾಣಗಳ ಜ್ವಾಲೆಗಳಿಂದ ಶತ್ರುಗಳನ್ನು ದಹಿಸುವ ಅವನ ಕಾರ್ಯಗಳನ್ನು ನೋಡಿದ ಶೂರರಾದ ಕ್ಷತ್ರಿಯರು ಈ ಲೋಕದಲ್ಲಿ ಇಬ್ಬರು ಅರ್ಜುನರಿದ್ದಾರೆ ಎಂದು ತಿಳಿದರು.
ತೇನಾರ್ದಿತಾ ಮಹಾರಾಜ ಭಾರತೀ ಸಾ ಮಹಾಚಮೂಃ |
ಬಭ್ರಾಮ ತತ್ರ ತತ್ರೈವ ಯೋಷಿನ್ಮದವಶಾದಿವ ॥18॥
ಎಲೈ ಮಹಾರಾಜನೇ, ಅವನಿಂದ ಪೀಡಿತವಾದ ಕೌರವರ ಆ ದೊಡ್ಡ ಸೈನ್ಯವು ಮದವಶಳಾದ ವನಿತೆಯಂತೆ ಅಲ್ಲಲ್ಲಿಯೇ ಗುರಿ ಇಲ್ಲದೆಯೇ ತಿರುಗಾಡಿತು.
ದ್ರಾವಯಿತ್ವಾ ಚ ತತ್ಸೈನ್ಯಂ ಕಂಪಯಿತ್ವಾ ಮಹಾರಥಾನ್ |
ನಂದಯಾಮಾಸ ಸುಹೃದೋ ಮಯಂ ಜಿತ್ವೇವ ವಾಸವಃ ॥19॥
ಅಭಿಮನ್ಯುವು ಮಹಾರಥರನ್ನು ನಡುಗಿಸಿ, ಆ ನಿನ್ನ ಸೈನ್ಯವನ್ನು ಓಡಿಸಿ, ಮಯಾಸುರನನ್ನು ಗೆದ್ದ ಇಂದ್ರನಂತೆ ತನ್ನ ವಿಶ್ವಾಸಪಾತ್ರರನ್ನು ಸಂತೋಷಗೊಳಿಸಿದನು.
ತೇನ ವಿದ್ರಾವ್ಯಮಾಣಾನಿ ತವ ಸೈನ್ಯಾನಿ ಸಂಯುಗೇ |
ಚಕ್ರುರಾರ್ತಸ್ವರಂ ಘೋರಂ ಪರ್ಜನ್ಯನಿನದೋಪಮಮ್ ॥20॥
ರಣರಂಗದಲ್ಲಿ ಅವನಿಂದ ಓಡಿಸಲ್ಪಡುವ ನಿನ್ನ ಸೈನ್ಯಗಳು ಮೇಘ ಗರ್ಜನೆಯಂತಹ ಘೋರವಾದ ಆರ್ತನಾದವನ್ನು ಮಾಡಿದವು.
ತಂ ಶ್ರುತ್ವಾ ನಿನದಂ ಘೋರಂ ತವ ಸೈನ್ಯಸ್ಯ ಮಾರಿಷ |
ಮಾರುತೋದ್ಧೂತವೇಗಸ್ಯ ಸಮುದ್ರಸ್ಯೇವ ಪರ್ವಣಿ |
ದುರ್ಯೋಧನಸ್ತದಾ ರಾಜಾ ಆರ್ಶ್ಯಶೃಂಗಿಮಭಾಷತ ॥21॥
ಪರ್ವಕಾಲದಲ್ಲಿ ಬಿರುಗಾಳಿಗೆ ಎದ್ದ ಸಮುದ್ರದ ಗರ್ಜನೆಯಂತಿದ್ದ ನಿನ್ನ ಸೈನ್ಯದ ಆ ಗರ್ಜನೆಯನ್ನು ಕೇಳಿ ಎಲೈ ಪೂಜ್ಯನೇ, ರಾಜನಾದ ದುರ್ಯೋಧನನು ಆಗ ಋಷ್ಯಶೃಂಗಾರ ಪುತ್ರನಾದ ಅಲಂಬುಸನನ್ನು ಕುರಿತು ಮಾತನಾಡಿದನು.
ಏಷ ಕಾರ್ಷ್ಣಿರ್ಮಹೇಷ್ವಾಸೋ ದ್ವಿತೀಯ ಇವ ಫಲ್ಗುನಃ |
ಚಮೂಂ ದ್ರಾವಯತೇ ಕ್ರೋಧಾದ್ ವೃತ್ರೋ ದೇವಚಮೂಮಿವ ॥22॥
ಅರ್ಜುನನ ಪುತ್ರನೂ, ಮಹಾಧನುರ್ಧಾರಿಯೂ ಆದ ಈ ಅಭಿಮನ್ಯುವು ಎರಡನೆಯ ಅರ್ಜುನನಂತೆ, ವೃತ್ರನು ದೇವಸೈನ್ಯವನ್ನು ಓಡಿಸಿದಂತೆ ಕ್ರೋಧದಿಂದ ನಮ್ಮ ಸೈನ್ಯವನ್ನು ಓಡಿಸುತ್ತಿದ್ದಾನೆ.
ತಸ್ಯ ನಾನ್ಯಂ ಪ್ರಪಶ್ಯಾಮಿ ಸಂಯುಗೇ ಭೇಷಜಂ ಮಹತ್ |
ಋತೇ ತ್ವಾಂ ರಾಕ್ಷಸಶ್ರೇಷ್ಠ ಸರ್ವವಿದ್ಯಾಸು ಪಾರಗಮ್ ॥23॥
ಎಲೈ ರಾಕ್ಷಸಶ್ರೇಷ್ಠನೇ, ಸರ್ವವಿದ್ಯಾಪಾರಂಗತನಾದ ನಿನ್ನನ್ನು ಬಿಟ್ಟು ಅವನನ್ನು ಪರಿಹರಿಸಲು ನಾನು ಬೇರೆ ಯಾವ ಶ್ರೇಷ್ಠವಾದ ಉಪಾಯವನ್ನೂ ಕಾಣುತ್ತಿಲ್ಲ.
ಸ ಗತ್ವಾ ತ್ವರಿತಂ ವೀರಂ ಜಹಿ ಸೌಭದ್ರಮಾಹವೇ |
ವಯಂ ಪಾರ್ಥಾನ್ ಹನಿಷ್ಯಾಮೋ ಭೀಷ್ಮದ್ರೋಣಪುರಃಸರಾಃ ॥24॥

ಅಂತಹ ನೀನು ಶೀಘ್ರವಾಗಿ ಹೋಗಿ ಯುದ್ಧದಲ್ಲಿ ವೀರನಾದ ಅಭಿಮನ್ಯುವನ್ನು ಸೋಲಿಸು. ನಾವು ಭೀಷ್ಮ-ದ್ರೋಣರನ್ನು ಮುಂದೆ ಮಾಡಿಕೊಂಡು ಪಾಂಡವರನ್ನು ಕೊಲ್ಲುವೆವು.
ಸ ಏವಮುಕ್ತೋ ಬಲವಾನ್ ರಾಕ್ಷಸೇಂದ್ರಃ ಪ್ರತಾಪವಾನ್ |
ಪ್ರಯಯೌ ಸಮರೇ ತೂರ್ಣಂ ತವ ಪುತ್ರಸ್ಯ ಶಾಸನಾತ್ |
ನರ್ದಮಾನೋ ಮಹಾನಾದಂ ಪ್ರಾವೃಷೀವ ಬಲಾಹಕಃ ॥25॥
ಹೀಗೆ ಹೇಳಲ್ಪಟ್ಟ ರಾಕ್ಷಸಶ್ರೇಷ್ಠನೂ, ಪ್ರತಾಪಶಾಲಿಯೂ ಆದ ಅಲಂಬುಸನು ನಿನ್ನ ಮಗನ ಶಾಸನದಂತೆ, ಮಳೆಗಾಲದ ಮೋಡದಂತೆ ಮಹಾನಾದವನ್ನು ಮಾಡುತ್ತಾ, ಶೀಘ್ರವಾಗಿ ರಣರಂಗದಲ್ಲಿ ಅಭಿಮನ್ಯುವಿನ ಕಡೆಗೆ ಹೊರಟನು.
ತಸ್ಯ ಶಬ್ದೇನ ಮಹತಾ ಪಾಂಡವಾನಾಂ ಮಹದ್ಬಲಮ್ |
ಪ್ರಾಚಲತ್ ಸರ್ವತೋ ರಾಜನ್ ಪೂರ್ಯಮಾಣ ಇವಾರ್ಣವಃ ॥26॥
ಎಲೈ ರಾಜನೇ, ಅವನ ಆ ದೊಡ್ಡ ಶಬ್ದದಿಂದ ಪಾಂಡವರ ದೊಡ್ಡ ಸೈನ್ಯವು ನದಿಗಳು ಬಂದು ಸೇರುವ ಸಮುದ್ರದಂತೆ ಎಲ್ಲ ಕಡೆಯಲ್ಲಿಯೂ ಕ್ಷೋಭೆಗೊಂಡಿತು.
ಬಹವಶ್ಚ ನರಾ ರಾಜಂಸ್ತಸ್ಯ ನಾದೇನ ಭೀಷಿತಾಃ |
ಪ್ರಿಯಾನ್ ಪ್ರಾಣಾನ್ ಪರಿತ್ಯಜ್ಯ ನಿಪೇತುರ್ಧರಣೀತಳೇ ॥27॥
ಎಲೈ ರಾಜನೇ, ಅವನ ಆ ಮಹಾನಾದದಿಂದ ಹೆದರಿದ ಅನೇಕ ಯೋಧರು ತಮ್ಮ ಪ್ರಿಯ ಪ್ರಾಣಗಳನ್ನು ತ್ಯಜಿಸಿ ಭೂಮಿಯ ಮೇಲೆ ಬಿದ್ದರು.
ಕಾರ್ಷ್ಣಿಶ್ಚಾಪಿ ಮುದಾ ಯುಕ್ತಃ ಪ್ರಗೃಹೀತಶರಾಸನಃ |
ನೃತ್ಯನ್ನಿವ ರಥೋಪಸ್ಥೇ ತದ್‌ರಕ್ಷಃ ಸಮುಪಾದ್ರವತ್ ॥28॥
ಅಭಿಮನ್ಯುವಾದರೋ ಸಂತೋಷದಿಂದ ಕೂಡಿದವನಾಗಿ, ಕೈಯಲ್ಲಿ ಧನುಸ್ಸನ್ನು ಹಿಡಿದು ರಥದ ಪೀಠದಲ್ಲಿ ಕುಣಿಯುವವನಂತೆ ಆ ರಾಕ್ಷಸನ ಕಡೆಗೆ ಧಾವಿಸಿದನು.
ತತಃ ಸ ರಾಕ್ಷಸಃ ಕ್ರುದ್ಧಃ ಸಂಪ್ರಾಪ್ಯೈವಾರ್ಜುನಿಂ ರಣೇ |
ನಾತಿದೂರೇ ಸ್ಥಿತಸ್ತಸ್ಯ ದ್ರಾವಯಾಮಾಸ ವೈ ಚಮೂಮ್ ॥29॥
ಅನಂತರ ಕ್ರುದ್ಧನಾದ ಆ ರಾಕ್ಷಸನು ರಣರಂಗದಲ್ಲಿ ಅಭಿಮನ್ಯುವಿನ ಸಮೀಪಕ್ಕೆ ಬಂದು ನಿಂತು ಅವನ ಸೈನ್ಯವನ್ನು ಚದುರಿಸಿದನು.
ಸಾ ವಧ್ಯಮಾನಾ ಸಮರೇ ಪಾಂಡವಾನಾಂ ಮಹಾಚಮೂಃ |
ಪ್ರತ್ಯುದ್ಯಯೌ ರಣೇ ರಕ್ಷೋ ದೇವಸೇನಾ ಯಥಾ ಬಲಿಮ್ ॥30॥
ಅವನಿಂದ ಪ್ರಹಾರಕ್ಕೆ ಒಳಗಾದ ಪಾಂಡವರ ಸೈನ್ಯವು ರಣರಂಗದಲ್ಲಿ ದೇವತೆಗಳ ಸೈನ್ಯವು ಬಲಿಯ ಮೇಲೆ ಎರಗಿದಂತೆ ಆ ರಾಕ್ಷಸನ ಮೇಲೆ ಎರಗಿತು.
ವಿಮರ್ದಃ ಸುಮಹಾನಾಸೀತ್ ತಸ್ಯ ಸೈನ್ಯಸ್ಯ ಮಾರಿಷ |
ರಕ್ಷಸಾ ಘೋರರೂಪೇಣ ವಧ್ಯಮಾನಸ್ಯ ಸಂಯುಗೇ ॥31॥
ಎಲೈ ಪೂಜ್ಯನೇ, ಘೋರವಾದ ಆಕಾರದ ಆ ರಾಕ್ಷಸನಿಂದ ಪ್ರಹಾರಕ್ಕೆ ಒಳಗಾದ ಪಾಂಡವ ಸೈನ್ಯಕ್ಕೂ ಮತ್ತು ಆ ರಾಕ್ಷಸನಿಗೂ ದೊಡ್ಡ ಸಂಘರ್ಷ ಉಂಟಾಯಿತು.
ತತಃ ಶರಸಹಸ್ರೈಸ್ತಾಂ ಪಾಂಡವಾನಾಂ ಮಹಾಚಮೂಮ್ |
ವ್ಯದ್ರಾವಯದ್ ರಣೇ ರಕ್ಷೋ ದರ್ಶಯದ್ ವೈ ಪರಾಕ್ರಮಮ್ ॥32॥
ಆಗ ಆ ರಾಕ್ಷಸನು ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿಸುತ್ತಾ ಪಾಂಡವರ ಆ ದೊಡ್ಡ ಸೈನ್ಯವನ್ನು ಸಹಸ್ರಾರು ಬಾಣಗಳಿಂದ ರಣರಂಗದಿಂದ ಓಡಿಸಿದನು.
ಸಾ ವಧ್ಯಮಾನಾ ಚ ತಥಾ ಪಾಂಡವಾನಾಮನೀಕಿನೀ |
ರಕ್ಷಸಾ ಘೋರರೂಪೇಣ ಪ್ರದುದ್ರಾವ ರಣೇ ಭಯಾತ್ ॥33॥
ಹೀಗೆ ಘೋರರೂಪನಾದ ಆ ರಾಕ್ಷಸನ ಪ್ರಹಾರಕ್ಕೆ ಒಳಗಾದ ಪಾಂಡವರ ಸೈನ್ಯವು ಭಯದಿಂದ ರಣರಂಗದಿಂದ ಓಡಿಹೋಯಿತು.
ತಾಂ ಪ್ರಮೃದ್ಯ ತತಃ ಸೇನಾಂ ಪದ್ಮಿನೀಂ ವಾರಣೋ ಯಥಾ |
ತತೋಽಭಿದುದ್ರಾವ ರಣೇ ದ್ರೌಪದೇಯಾನ್ ಮಹಾಬಲಾನ್ ॥34॥
ಗಜವು ಪದ್ಮಸರೋವರವನ್ನು ಕಲಕಿದಂತೆ ಪಾಂಡವರ ಆ ಸೈನ್ಯವನ್ನು ಮರ್ದಿಸಿ ಅನಂತರ ಆ ರಾಕ್ಷಸನು ಮಹಾಬಲರಾದ ದ್ರೌಪದಿಯ ಪುತ್ರರ ಮೇಲೆ ಧಾವಿಸಿದನು.
ತೇ ತು ಕ್ರುದ್ಧಾ ಮಹೇಷ್ವಾಸಾ ದ್ರೌಪದೇಯಾಃ ಪ್ರಹಾರಿಣಃ |
ರಾಕ್ಷಸಂ ದುದ್ರುವುಃ ಸರ್ವೇ ಗ್ರಹಾಃ ಪಂಚ ಯಥಾ ರವಿಮ್ ॥35॥
ಮಹಾಧನುರ್ಧಾರಿಗಳೂ, ಪ್ರಹಾರಶೀಲರೂ, ಕ್ರುದ್ಧರೂ ಆದ ಆ ದ್ರೌಪದಿಯ ಪುತ್ರರು ಸೂರ್ಯನ ಕಡೆಗೆ ಐದು ಗ್ರಹಗಳು ಓಡಿದಂತೆ ಆ ರಾಕ್ಷಸನ ಕಡೆಗೆ ಓಡಿದರು.
ವೀರ್ಯವದ್ಭಿಸ್ತತಸ್ತೈಸ್ತು ಪೀಡಿತೋ ರಾಕ್ಷಸೋತ್ತಮಃ |
ಯಥಾ ಯುಗಕ್ಷಯೇ ಘೋರೇ ಚಂದ್ರಮಾಃ ಪಂಚಭಿರ್ಗ್ರಹೈಃ ॥36॥
ಘೋರವಾದ ಯುಗಾಂತ್ಯಕಾಲದಲ್ಲಿ ಚಂದ್ರನು ಐದು ಗ್ರಹಗಳಿಂದ ಪೀಡಿಸಲ್ಪಡುವಂತೆ ಆ ರಾಕ್ಷಸೋತ್ತಮನು ಪರಾಕ್ರಮಶಾಲಿಗಳಾದ ಆ ಐವರಿಂದ ಪೀಡಿಸಲ್ಪಟ್ಟನು.
ಪ್ರತಿವಿಂಧ್ಯಸ್ತತೋ ರಕ್ಷೋ ಬಿಭೇದ ನಿಶಿತೈಃ ಶರೈಃ |

ಸರ್ವಪಾರಶವೈಸ್ತೂರ್ಣಮಕುಂಠಾಗ್ರೈರ್ಮಹಾಬಲಃ ॥37॥
ಆಗ ಮಹಾಬಲನಾದ ಪ್ರತಿವಿಂಧ್ಯನು ತೀಕ್ಷ್ಣವಾದ, ಅಯೋಮಯವಾದ ಹರಿತವಾದ ತುದಿಯುಳ್ಳ ಬಾಣಗಳಿಂದ ಆ ರಾಕ್ಷಸನನ್ನು ಭೇದಿಸಿದನು.
ಸ ತೈರ್ಭಿನ್ನತನುತ್ರಾಣಃ ಶುಶುಭೇ ರಾಕ್ಷಸೋತ್ತಮಃ |
ಮರೀಚಿಭಿರಿವಾರ್ಕಸ್ಯ ಸಂಸ್ಯೂತೋ ಜಲದೋ ಮಹಾನ್ ॥38॥
ಆ ಬಾಣಗಳಿಂದ ತನ್ನ ಕವಚವು ಭೇದಿಸಲ್ಪಡುತ್ತಿರಲು ಆ ರಾಕ್ಷಸಶ್ರೇಷ್ಠನು ಸೂರ್ಯಕಿರಣಗಳಿಂದ ಪೋಣಿಸಲ್ಪಟ್ಟ ದೊಡ್ಡ ಮೇಘದಂತೆ ಶೋಭಿಸಿದನು.
ವಿಷಕ್ತೈಃ ಸ ಶರೈಶ್ಚಾಪಿ ತಪನೀಯಪರಿಚ್ಛದೈಃ |
ಆರ್ಶ್ಯಶೃಂಗಿರ್ಬಭೌ ರಾಜನ್ ದೀಪ್ತಶೃಂಗ ಇವಾಚಲಃ ॥39॥
ಎಲೈ ರಾಜನೇ, ಸುವರ್ಣದ ಹೊದಿಕೆಗಳಿದ್ದ ದೇಹದಲ್ಲಿ ನಾಟಿದ ಆ ಬಾಣಗಳಿಂದ ಅಲಂಬುಸನು ಜ್ವಲಿಸುವ ಶಿಖರದಿಂದ ಕೂಡಿದ ಪರ್ವತದಂತೆ ಶೋಭಿಸಿದನು.
ತತಸ್ತೇ ಭ್ರಾತರಃ ಪಂಚ ರಾಕ್ಷಸೇಂದ್ರಂ ಮಹಾಹವೇ |
ವಿವ್ಯಧುರ್ನಿಶಿತೈರ್ಬಾಣೈಸ್ತಪನೀಯವಿಭೂಷಿತೈಃ ॥40॥
ಅನಂತರ ಆ ಐವರು ಸಹೋದರರು ಆ ದೊಡ್ಡ ಯುದ್ಧದಲ್ಲಿ ಸುವರ್ಣಾಲಂಕೃತವಾದ ತೀಕ್ಷ್ಣವಾದ ಬಾಣಗಳಿಂದ ಆ ರಾಕ್ಷಸಶ್ರೇಷ್ಠನನ್ನು ಹೊಡೆದರು.
ಸ ನಿರ್ಭಿನ್ನಃ ಶರೈರ್ಘೋರೈರ್ಭುಜಗೈಃ ಕೋಪಿತೈರಿವ |
ಅಲಂಬುಸೋ ಭೃಶಂ ರಾಜನ್ ನಾಗೇಂದ್ರ ಇವ ಚುಕ್ರುಧೇ ॥41॥
ಎಲೈ ರಾಜನೇ, ಕೋಪಗೊಂಡ ಸರ್ಪಗಳಂತಹ ಘೋರವಾದ ಬಾಣಗಳಿಂದ ಗಾಯಗೊಂಡ ಅಲಂಬುಸನು ಸರ್ಪರಾಜನಂತೆ ಶೀಘ್ರವಾಗಿ ಕೋಪಗೊಂಡನು.
ಸೋಽತಿವಿದ್ಧೋ ಮಹಾರಾಜ ಮುಹೂರ್ತಮಥ ಮಾರಿಷ |
ಪ್ರವಿವೇಶ ತಮೋ ದೀರ್ಘಂ ಪೀಡಿತಸ್ತೈರ್ಮಹಾರಥೈಃ ॥42॥
ಎಲೈ ಮಹಾರಾಜನೇ, ಪೂಜ್ಯನೇ, ಮಹಾರಥರಾದ ಆ ಐವರಿಂದ ಪೀಡಿತರಾಗಿ ಬಹಳ ಗಾಯಗೊಂಡ ಅವನು ಒಂದು ಮುಹೂರ್ತದವರೆಗೆ ದೀರ್ಘವಾಗಿ ಪ್ರಜ್ಞಾಶೂನ್ಯನಾದನು.
ಪ್ರತಿಲಭ್ಯ ತತಃ ಸಂಜ್ಞಾಂ ಕ್ರೋಧೇನ ದ್ವಿಗುಣೀಕೃತಃ |
ಚಿಚ್ಛೇದ ಸಾಯಕೈಸ್ತೇಷಾಂ ಧ್ವಜಾಂಶ್ಚೈವ ಧನೂಂಷಿ ಚ ॥43॥
ಅನಂತರ ಸಂಜ್ಞೆಯನ್ನು ಮರಳಿ ಪಡೆದು, ಎರಡರಷ್ಟು ಕ್ರೋಧದಿಂದ ಕೂಡಿದವನಾಗಿ ತನ್ನ ಬಾಣಗಳಿಂದ ಅವರ ಧ್ವಜಗಳನ್ನು ಮತ್ತು ಧನುಸ್ಸುಗಳನ್ನು ಕತ್ತರಿಸಿದನು.
ಏಕೈಕಂ ಚ ತ್ರಿಭಿರ್ಬಾಣೈರಾಜಘಾನ ಸ್ಮಯನ್ನಿವ |
ಅಲಂಬುಸೋ ರಥೋಪಸ್ಥೇ ನೃತ್ಯನ್ನಿವ ಮಹಾರಥಃ ॥44॥
ಮಹಾರಥನಾದ ಅಲಂಬುಸನು ರಥದ ಪೀಠದಲ್ಲಿ ನರ್ತಿಸುವವನಂತೆ ನಗುತ್ತಾ ಅವರಲ್ಲಿ ಒಬ್ಬೊಬ್ಬರ ಮೇಲೆಯೂ ಐದು ಬಾಣಗಳನ್ನು ಪ್ರಯೋಗಿಸಿದನು.
ತ್ವರಮಾಣಶ್ಚ ಸಂಕ್ರುದ್ಧೋ ಹಯಾಂಸ್ತೇಷಾಂ ಮಹಾತ್ಮನಾಮ್ |
ಜಘಾನ ರಾಕ್ಷಸಃ ಕ್ರುದ್ಧಃ ಸಾರಥೀಂಶ್ಚ ಮಹಾಬಲಃ ॥45॥
ಮಹಾಬಲನಾದ ಆ ರಾಕ್ಷಸನು ಕ್ರುದ್ಧನಾಗಿ ತಕ್ಷಣ ಶೀಘ್ರವಾಗಿ ಆ ಮಹಾತ್ಮರ ರಥದ ಅಶ್ವಗಳನ್ನು ಮತ್ತು ಸಾರಥಿಗಳನ್ನು ಕೊಂದನು.
ಬಿಭೇದ ಚ ಸುಸಂಹೃಷ್ಟಃ ಪುನಶ್ಚೈನಾನ್ ಸುಸಂಶಿತೈಃ |
ಶರೈರ್ಬಹುವಿಧಾಕಾರೈಃ ಶತಶೋಽಥ ಸಹಸ್ರಶಃ ॥46॥
ಪುನಃ ಬಹಳ ಸಂತೋಷಗೊಂಡು ಬಹಳ ತೀಕ್ಷ್ಣವಾದ, ಬಹುವಿಧವಾದ ಆಕಾರವನ್ನು ಹೊಂದಿದ, ನೂರಾರು ಸಹಸ್ರಾರು ಬಾಣಗಳನ್ನು ಪ್ರಯೋಗಿಸಿ ಅವರನ್ನು ಭೇದಿಸಿದನು.
ವಿರಥಾಂಶ್ಚ ಮಹೇಷ್ವಾಸಾನ್ ಕೃತ್ವಾ ತತ್ರ ಸ ರಾಕ್ಷಸಃ |
ಅಭಿದುದ್ರಾವ ವೇಗೇನ ಹಂತುಕಾಮೋ ನಿಶಾಚರಃ ॥47॥
ನಿಶಾಚರನಾದ ಆ ರಾಕ್ಷಸನು ಆ ಮಹಾಧನುರ್ಧಾರಿಗಳ ರಥಗಳನ್ನು ನಾಶಗೊಳಿಸಿ ಅವರನ್ನು ಕೊಲ್ಲಲು ಬಯಸಿ ಅವರ ಕಡೆಗೆ ವೇಗವಾಗಿ ಓಡಿದನು.
ತಾನರ್ದಿತಾನ್ ರಣೇ ತೇನ ರಾಕ್ಷಸೇನ ದುರಾತ್ಮನಾ |
ದೃಷ್ಟ್ವಾರ್ಜುನಸುತಃ ಸಂಖೇ ರಾಕ್ಷಸಂ ಸಮುಪಾದ್ರವತ್ ॥48॥
ಆ ದುರಾತ್ಮನಾದ ರಾಕ್ಷಸನಿಂದ ಯುದ್ಧದಲ್ಲಿ ಪೀಡಿತರಾದ ಆ ಪಂಚಸಹೋದರರನ್ನು ನೋಡಿ ರಣರಂಗದಲ್ಲಿ ಅರ್ಜುನನ ಸುತನಾದ ಅಭಿಮನ್ಯುವು ರಾಕ್ಷಸನ ಕಡೆಗೆ ಧಾವಿಸಿದನು.
ತಯೋಃ ಸಮಭವದ್ ಯುದ್ಧಂ ವೃತ್ರವಾಸವಯೋರಿವ |
ದದೃಶುಸ್ತಾವಕಾಃ ಸರ್ವೇ ಪಾಂಡವಾಶ್ಚ ಮಹಾರಥಾಃ ॥49॥
ವೃತ್ರ-ವಾಸವರಿಗೆ ನಡೆದಂತೆ ಅವರಿಬ್ಬರಿಗೂ ದೊಡ್ಡ ಯುದ್ಧವು ನಡೆದುದನ್ನು ಮಹಾರಥರಾದ ಎಲ್ಲ ಪಾಂಡವರೂ ಮತ್ತು ನಿನ್ನವರೂ ನೋಡಿದರು.

ತೌ ಸಮೇತೌ ಮಹಾಯುದ್ಧೇ ಕ್ರೋಧದೀಪ್ತೌ ಪರಸ್ಪರಮ್ |
ಮಹಾಬಲೌ ಮಹಾರಾಜ ಕ್ರೋಧಸಂರಕ್ತಲೋಚನೌ ॥50॥
ಪರಸ್ಪರಮವೇಕ್ಷೇತಾಂ ಕಾಲಾನಲಸಮೌ ಯುಧಿ |
ಆಶೀವಿಷಾವಿವ ಕ್ರುದ್ಧೌ ನೇತ್ರಾಭ್ಯಾಮಿತರೇತರಮ್ ॥51॥
ಎಲೈ ಮಹಾರಾಜನೇ, ಮಹಾಬಲರೂ, ಕ್ರೋಧದಿಂದ ಪರಸ್ಪರವಾಗಿ ಜ್ವಲಿಸುವವರೂ ಮತ್ತು ಕ್ರೋಧದಿಂದ ಕೆಂಪಾದ ಕಣ್ಣುಳ್ಳವರೂ, ಕಾಲಾಗ್ನಿಗೆ ಸಮರಾದಂತಹ, ಸರ್ಪಗಳಂತೆ ಕ್ರುದ್ಧರಾದಂತಹವರೂ ಆದ ಅವರು ಮಹಾಯುದ್ಧದಲ್ಲಿ ಒಬ್ಬರನ್ನೊಬ್ಬರು ಸಂಧಿಸಿ ತಮ್ಮ ನೇತ್ರಗಳಿಂದ ಒಬ್ಬರನ್ನೊಬ್ಬರು ನೋಡಿದರು.
ತಯೋಃ ಸಮಾಗಮೋ ಘೋರೋ ಬಭೂವ ಕಟುಕೋದಯಃ |
ಯಥಾ ದೇವಾಸುರೇ ಯುದ್ಧೇ ಶಕ್ರಶಂಬರಯೋರಿವ ॥52॥
ದೇವಾಸುರ ಯುದ್ಧದಲ್ಲಿ ಇಂದ್ರ-ಶಂಬರರ ಸಮಾಗಮದಂತೆ ಅಭಿಮನ್ಯು ಮತ್ತು ಅಲಂಬುಸರ ಸಮಾಗಮವು ಭಯಂಕರವಾದ ಮತ್ತು ಘೋರವಾದ ಪರಿಣಾಮವನ್ನು ಉಂಟುಮಾಡುವುದಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಭೀಷ್ಮಸ್ತು ಪಾಂಚಾಲಕರೂಶಚೇದಿ-
ಷ್ವಹನ್ ಸಹಸ್ರಾಣಿ ಚತುರ್ದಶೋಗ್ರಃ |
ರಥಪ್ರಬರ್ಹಾನತಿತಿಗ್ಮತೇಜಾ
ವಿದ್ರಾವಯಾಮಾಸ ಪರಾನವೀನಿವ ॥110॥
ಭಯಂಕರನಾದ, ಪ್ರಖರ ತೇಜಸ್ಸುಳ್ಳ, ಭೀಷ್ಮ ಪಾಂಚಾಲ ಕರೂಷ ಚೇದಿ ದೇಶಗಳ ಹದಿನಾಲ್ಕು ಸಾವಿರ ಮಹಾರಥರನ್ನು ಕೊಂದ. ತೋಳ ಕುರಿಗಳನ್ನು ಓಡಿಸುವಂತೆ ಉಳಿದವರನ್ನು ಓಡಿಸಿದ.
ವಿದ್ರಾಪ್ಯ ಸರ್ವಾಮಪಿ ಪಾಂಡುಸೇನಾಂ
ವಿಶ್ರಾವ್ಯ ಲೋಕೇಷು ಚ ಕೀರ್ತಿಮಾತ್ಮನಃ |
ಸೇನಾಂ ಸಮಾಹೃತ್ಯ ಯಯೌ ನಿಶಾಗಮೇ
ಸಂಪೂಜ್ಯಮಾನೋ ಧೃತರಾಷ್ಟ್ರಪುತ್ರೈಃ ॥111॥
ಭೀಷ್ಮರು ಸಮಸ್ತ ಪಾಂಡವ ಸೈನ್ಯವನ್ನು ಓಡಿಸಿ, ಲೋಕಗಳಲ್ಲಿ ತನ್ನ ಕೀರ್ತಿಯನ್ನು ಶ್ರುತಪಡಿಸಿ, ರಾತ್ರಿ ಕಾಲ ಬಂದಾಗ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಂಡು, ಕೌರವರಿಂದ ಹೊಗಳಿಸಿಕೊಳ್ಳುತ್ತ, ಶಿಬಿರಕ್ಕೆ ನಡೆದ.
ದ್ರೋಣೋ ವಿರಾಟಸ್ಯ ಪುರೋ ನಿಹತ್ಯ
ಶಂಖಂ ಸುತಂ ತಸ್ಯ ವಿಜಿತ್ಯ ತಂ ಚ |
ವಿದ್ರಾಪ್ಯ ಸೇನಾಮಪಿ ಪಾಂಡವಾನಾಂ
ಯಯೌ ನದೀಜೇನ ಸಹೈವ ಹೃಷ್ಟಃ ॥113॥
ದ್ರೋಣರು ವಿರಾಟನ ಮುಂದೆಯೇ ಅವನ ಮಗನಾದ ಶಂಖನನ್ನು ಕೊಂದು, ವಿರಾಟನನ್ನೂ ಗೆದ್ದು, ಪಾಂಡವರ ಸೈನ್ಯವನ್ನೂ ಓಡಿಸಿ, ಹರ್ಷಿತರಾಗಿ ಭೀಷ್ಮರೊಡನೆ ಹೊರಟು ಹೋದರು.
ಭೀಮಾರ್ಜುನಾವಪಿ ಶತ್ರೂನ್ ನಿಹತ್ಯ
ವಿದ್ರಾಪ್ಯ ಸರ್ವಾಂಶ್ಚ ಯುಧಿ ಪ್ರವೀರಾನ್ |
ಯುಧಿಷ್ಠಿರೇಣಾಪಹೃತೇ ಸ್ವಸೈನ್ಯೇ
ಭೀತೇನ ಭೀಷ್ಮಾಚ್ಛಿಬಿರಂ ಪ್ರಜಗ್ಮತುಃ ॥113॥
ಭೀಮಾರ್ಜುನರೂ ಕೂಡ ಶತ್ರುಗಳನ್ನು ಕೊಂದು, ಯುದ್ಧದಲ್ಲಿ ವೀರರಾಗಿರುವ ಉಳಿದ ಎಲ್ಲರನ್ನೂ ಓಡಿಸಿ, ಯುಧಿಷ್ಠಿರ ಭೀಷ್ಮರಿಗೆ ಭಯಗೊಂಡು ತನ್ನ ಸೈನ್ಯವನ್ನು ಹಿಂದೆ ಕರೆಸಿಕೊಂಡಾಗ, ತಾವೂ ಶಿಬಿರಕ್ಕೆ ತೆರಳಿದರು.
* * * * *
ತೊಂಬತ್ತೆಂಟನೆಯ ಅಧ್ಯಾಯ
ಅಭಿಮನ್ಯುವಿನಿಂದ ಅಲಂಬುಸನ ಪರಾಜಯ. ಅಭಿಮನ್ಯುವಿನ ಪರಾಕ್ರಮ. ಸಾತ್ಯಕಿಯಿಂದ ದ್ರೋಣರ ಪರಾಜಯ.
ಧೃತರಾಷ್ಟ್ರಃ
ಆರ್ಜುನಿಂ ಸಮರೇ ಶೂರಂ ವಿನಿಘ್ನಂತಂ ಮಹಾರಥಾನ್ |
ಅಲಂಬುಸಃ ಕಥಂ ಯುದ್ಧೇ ಪ್ರತ್ಯಯುಧ್ಯತ ಸಂಜಯ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ಮಹಾರಥನೂ, ಯುದ್ಧದಲ್ಲಿ ಶೂರನೂ, ನಮ್ಮ ಸೈನ್ಯವನ್ನು ವಿನಾಶವನ್ನು ಮಾಡುವವನೂ ಆದ ಅಭಿಮನ್ಯುವಿನ ಜೊತೆಯಲ್ಲಿ ಅಲಂಬುಸನು ಹೇಗೆ ಯುದ್ಧವನ್ನು ಮಾಡಿದನು?
ಆರ್ಶ್ಯಶೃಂಗಿಂ ಕಥಂ ಚಾಪಿ ಸೌಭದ್ರಃ ಪರವೀರಹಾ |
ತನ್ಮಮಾಚಕ್ಷ್ವ ತತ್ತ್ವೇನ ಯಥಾವೃತ್ತಂ ಸ್ಮ ಸಂಯುಗೇ ॥2॥

ಪರವೀರಘಾತಕನಾದ ಅಭಿಮನ್ಯುವಾದರೂ ಅಲಂಬುಸನ ಜೊತೆಯಲ್ಲಿ ಹೇಗೆ ಯುದ್ಧಮಾಡಿದನು ಎಂದು ನನಗೆ ನಡೆದಂತೆ ಯಥಾರ್ಥವಾಗಿ ಹೇಳು.
ಧನಂಜಯಶ್ಚ ಕಿಂ ಚಕ್ರೇ ಮಮ ಸೈನ್ಯೇಷು ಸಂಜಯ |
ಭೀಮೋ ವಾ ಬಲಿನಾಂ ಶ್ರೇಷ್ಠೋ ರಾಕ್ಷಸೋ ವಾ ಘಟೋತ್ಕಚಃ ॥3॥
ಎಲೈ ಸಂಜಯನೇ, ಅರ್ಜುನನಾದರೂ ನನ್ನ ಸೈನ್ಯದಲ್ಲಿ ಏನು ಮಾಡಿದನು? ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನಾಗಲೀ ಅಥವಾ ರಾಕ್ಷಸನಾದ ಘಟೋತ್ಕಚನಾಗಲೀ ಏನು ಮಾಡಿದರು?
ನಕುಲಃ ಸಹದೇವೋ ವಾ ಸಾತ್ಯಕಿರ್ವಾ ಮಹಾರಥಃ |
ಏತದಾಚಕ್ಷ್ವ ಮೇ ಸರ್ವಂ ಕುಶಲೋ ಹ್ಯಸಿ ಸಂಜಯ ॥4॥
ನಕುಲ-ಸಹದೇವರಾಗಲೀ, ಮಹಾರಥನಾದ ಸಾತ್ಯಕಿಯಾಗಲೀ ಏನು ಮಾಡಿದರು? ಎಲೈ ಸಂಜಯನೇ, ನಿರೂಪಣೆ ಮಾಡುವುದರಲ್ಲಿ ನೀನು  ನಿಪುಣನಾಗಿದ್ದೀಯೆ. ಆದ್ದರಿಂದ ಇವೆಲ್ಲವನ್ನೂ ನನಗೆ ಹೇಳು.
ಸಂಜಯಃ
ಹಂತ ತೇಽಹಂ ಪ್ರವಕ್ಷ್ಯಾಮಿ ಸಂಗ್ರಾಮಂ ಲೋಮಹರ್ಷಣಮ್ |
ಯಥಾಭೂದ್ ರಾಕ್ಷಸೇಂದ್ರಸ್ಯ ಸೌಭದ್ರಸ್ಯ ಚ ಮಾರಿಷ ॥5॥
ಸಂಜಯ ಸಂತೋಷ. ಎಲೈ ಪೂಜ್ಯನೇ, ರಾಕ್ಷಸೇಂದ್ರನಾದ ಅಲಂಬುಸನಿಗೂ ಮತ್ತು ಸುಭದ್ರೆಯ ಪುತ್ರನಾದ ಅಭಿಮನ್ಯುವಿಗೂ ರೋಮಾಂಚಕಾರಿಯಾದ ಯುದ್ಧವು ಹೇಗೆ ನಡೆಯಿತೆಂದು ನಾನು ನಿನಗೆ ಹೇಳುವೆನು.
ಅರ್ಜುನಶ್ಚ ಯಥಾ ಸಂಖೇ ಭೀಮಸೇನಶ್ಚ ಪಾಂಡವಃ |
ನಕುಲಃ ಸಹದೇವಶ್ಚ  ರಣೇ ಚಕ್ರುಃ ಪರಾಕ್ರಮಮ್  ॥6॥
ಪಾಂಡುಪುತ್ರರಾದ ಅರ್ಜುನನೂ, ಭೀಮಸೇನನೂ, ನಕುಲ- ಸಹದೇವರೂ ಯುದ್ಧದಲ್ಲಿ ಹೇಗೆ ಪರಾಕ್ರಮವನ್ನು ಮಾಡಿದರು ಎಂಬುದನ್ನೂ;
ತಥೈವ ತಾವಕಾಃ ಸರ್ವೇ ಭೀಷ್ಮದ್ರೋಣಪುರೋಗಮಾಃ |
ಅದ್ಭುತಾನಿ ವಿಚಿತ್ರಾಣಿ ಚಕ್ರುಃ ಕರ್ಮಾಣ್ಯಭೀತವತ್ ॥7॥
ಅದರಂತೆಯೇ ಭೀಷ್ಮ-ದ್ರೋಣ ಮೊದಲಾದ ನಿನ್ನವರೆಲ್ಲರೂ ಯುದ್ಧದಲ್ಲಿ ಹೇಗೆ ಅದ್ಭುತವಾದ ಮತ್ತು ವಿಚಿತ್ರವಾದ ಕರ್ಮವನ್ನು ನಿರ್ಭಯವಾಗಿ ಮಾಡಿದರು ಎಂಬುದನ್ನೂ ಹೇಳುವೆವು.
ಅಲಂಬುಸಸ್ತು ಸಮರೇ ಅಭಿಮನ್ಯುಂ ಮಹಾರಥಮ್ |
ವಿನದ್ಯ ಸುಮಹಾನಾದಂ ತರ್ಜಯಿತ್ವಾ ಮುಹುರ್ಮುಹುಃ |
ಅಭಿದುದ್ರಾವ ವೇಗೇನ ತಿಷ್ಠ ತಿಷ್ಠೇತಿ ಚಾಬ್ರವೀತ್  ॥8॥
ಅಲಂಬುಸನಾದರೋ ಮಹಾರಥನಾದ ಅಭಿಮನ್ಯುವಿನ ಎದುರಿಗೆ ಮಹಾನಾದಗಳಿಂದ ಗರ್ಜಿಸಿ ಪುನಃ ಪುನಃ ಅವನನ್ನು ಬೆದರಿಸಿ ನಿಲ್ಲು, ನಿಲ್ಲು ಎಂದು ಹೇಳುತ್ತಾ ಅವನ ಕಡೆಗೆ ಓಡಿದನು.
ಸೌಭದ್ರೋಽಪಿ ರಣೇ ರಾಜನ್ ಸಿಂಹವದ್ ವಿನದನ್ ಮುಹುಃ |
ಆರ್ಶ್ಯಶೃಂಗಿಂ ಮಹೇಷ್ವಾಸಂ ಪಿತುರತ್ಯಂತವೈರಿಣಮ್ ॥9॥
ಎಲೈ ರಾಜನೇ, ಅಭಿಮನ್ಯುವೂ ಸಹ ಸಿಂಹದಂತೆ ಪುನಃ ಪುನಃ ಗರ್ಜಿಸುತ್ತಾ, ತನ್ನ ತಂದೆಗೆ ಪರಮವೈರಿಯಾದ ಮಹಾಧನುರ್ಧಾರಿಯಾದ ಅಲಂಬುಸನ ಕಡೆಗೆ ಓಡಿದನು.
ತತಃ ಸಮೇಯತುಃ ಸಂಖೇ ತ್ವರಿತೌ ನರರಾಕ್ಷಸೌ |
ರಥಾಭ್ಯಾಂ ರಥಿನಾಂ ಶ್ರೇಷ್ಠೌ ಯಥಾ ವೈ ದೇವದಾನವೌ |
ಮಾಯಾವೀ ರಾಕ್ಷಸಶ್ರೇಷ್ಠೋ ದಿವ್ಯಾಸ್ತ್ರಜ್ಞಶ್ಚ ಫಾಲ್ಗುನಿಃ ॥10॥
ಅನಂತರ ಮಾಯಾವಿಯಾದ ರಾಕ್ಷಸಶ್ರೇಷ್ಠನೂ ಮತ್ತು ದಿವ್ಯಾಸ್ತ್ರಗಳನ್ನು ತಿಳಿದ ಅಭಿಮನ್ಯುವೂ ರಥಿಕರಲ್ಲಿ ಶ್ರೇಷ್ಠರಾದ ಈ ನರ-ರಾಕ್ಷಸರು ಶೀಘ್ರವಾಗಿ ದೇವ- ದಾನವರಂತೆ ತಮ್ಮ ರಥಗಳಿಂದ ಪರಸ್ಪರವಾಗಿ ಎದುರಿಸಿದರು.
ತತಃ ಕಾರ್ಷ್ಣಿರ್ಮಹಾರಾಜ ನಿಶಿತೈಃ ಸಾಯಕೈಸ್ತ್ರಿಭಿಃ |
ಆರ್ಶ್ಯಶೃಂಗಿಂ ರಣೇ ವಿದ್ಧ್ವಾ ಪುನರ್ವಿವ್ಯಾಧ ಪಂಚಭಿಃ ॥11॥
ಎಲೈ ಮಹಾರಾಜನೇ, ಆಗ ಅಭಿಮನ್ಯುವು ಅಲಂಬುಸನನ್ನು ಮೂರು ಬಾಣಗಳಿಂದ ಹೊಡೆದು ಪುನಃ ಐದು ಬಾಣಗಳಿಂದ ಹೊಡೆದನು.
ಅಲಂಬುಸೋಽಪಿ ಸಂಕ್ರುದ್ಧಃ ಕಾರ್ಷ್ಣಿಂ ನವಭಿರಾಶುಗೈಃ |
ಹೃದಿ ವಿವ್ಯಾಧ ವೇಗೇನ ತೋತ್ತ್ರೈರಿವ ಮಹಾದ್ವಿಪಮ್ ॥12॥
ಅಲಂಬುಸನೂ ಸಹ ಬಹಳ ಕೋಪಗೊಂಡು ವೇಗಶಾಲಿಗಳಾದ ಒಂಬತ್ತು ಬಾಣಗಳಿಂದ ಅಂಕುಶದಿಂದ ಮಹಾಗಜವನ್ನು ಹೊಡೆದಂತೆ ಅಭಿಮನ್ಯುವಿನ ಎದೆಗೆ ಹೊಡೆದನು.
ತತಃ ಶರಸಹಸ್ರೇಣ ಕ್ಷಿಪ್ರಕಾರೀ ನಿಶಾಚರಃ |
ಅರ್ಜುನಸ್ಯ ಸುತಂ ಸಂಖೇ ಪೀಡಯಾಮಾಸ ಭಾರತ ॥13॥
ಎಲೈ ಭಾರತನೇ, ವೇಗಶಾಲಿಯಾದ ಆ ರಾಕ್ಷಸನು ಅನಂತರ ಒಂದು ಸಹಸ್ರ ಬಾಣಗಳನ್ನು ಪ್ರಯೋಗಿಸಿ ಅರ್ಜುನನ ಪುತ್ರನನ್ನು ಪೀಡಿಸಿದನು.
ಅಭಿಮನ್ಯುಸ್ತತಃ ಕ್ರುದ್ಧೋ ನವತಿಂ ನತಪರ್ವಣಾಮ್ |

ಚಿಕ್ಷೇಪ ನಿಶಿತಾನ್ ಬಾಣಾನ್ ರಾಕ್ಷಸಸ್ಯ ಮಹೋರಸಿ ॥14॥
ಆಗ ಕೋಪಗೊಂಡ ಅಭಿಮನ್ಯುವು ಬಾಗಿದ ತುದಿಯುಳ್ಳ ಹರಿತವಾದ ತೊಂಬತ್ತು ಬಾಣಗಳನ್ನು ರಾಕ್ಷಸನ ವಿಶಾಲವಾದ ವಕ್ಷಸ್ಸ್ಥಲದಲ್ಲಿ ಪ್ರಯೋಗಿಸಿದನು.
ತೇ ತಸ್ಯ ವಿವಿಶುಸ್ತೂರ್ಣಂ ಕಾಯಂ ನಿರ್ಭಿದ್ಯ ಮರ್ಮಣಿ |
ಸ ತೈರ್ವಿಭಿನ್ನಸರ್ವಾಂಗಃ ಶುಶುಭೇ ರಾಕ್ಷಸೋತ್ತಮಃ |
ಪುಷ್ಪಿತೈಃ ಕಿಂಶುಕೈ ರಾಜನ್ ಸಂಸ್ತೀರ್ಣ ಇವ ಪರ್ವತಃ ॥15॥
ಆ ಬಾಣಗಳು ಶೀಘ್ರವಾಗಿ ಅವನ ಮರ್ಮವನ್ನು ಭೇದಿಸಿ ದೇಹದೊಳಗೆ ಇಳಿದವು. ಆ ಬಾಣಗಳಿಂದ ಗಾಯಗೊಂಡ ಸರ್ವಾಂಗಗಳುಳ್ಳ ಆ ರಾಕ್ಷಸಶ್ರೇಷ್ಠನು ಎಲೈ ರಾಜನೇ, ಪುಷ್ಪಸಹಿತವಾದ ಕಿಂಶುಕವೃಕ್ಷದಿಂದ ತುಂಬಿದ ಪರ್ವತದದಂತೆ ಶೋಭಿಸಿದನು.
ಸ ಧಾರಯನ್ ಶರಾನ್ ಹೇಮಪುಂಖಾನಪಿ ಮಹಾಬಲಃ |
ವಿಬಭೌ ರಾಕ್ಷಸಶ್ರೇಷ್ಠಃ ಸಜ್ವಾಲ ಇವ ಪರ್ವತಃ ॥16॥
ಮಹಾಬಲನಾದ ಆ ರಾಕ್ಷಸಶ್ರೇಷ್ಠನು ಹೇಮಪುಂಖಗಳುಳ್ಳ ಬಾಣಗಳನ್ನು ಧರಿಸಿ ಅಗ್ನಿಜ್ವಾಲಾ ಸಹಿತವಾದ ಪರ್ವತದಂತೆ ಶೋಭಿಸಿದನು.
ತತಃ ಕ್ರುದ್ಧೋ ಮಹಾರಾಜ ಆರ್ಶ್ಯಶೃಂಗಿರ್ಮಹಾಬಲಃ |
ಮಹೇಂದ್ರಪ್ರತಿಮಂ ಕಾರ್ಷ್ಣಿಂ ಛಾದಯಾಮಾಸ ಪತ್ರಿಭಿಃ ॥17॥
ಎಲೈ ಮಹಾರಾಜನೇ, ಆಗ ಮಹಾಬಲನಾದ ಅಲಂಬುಸನು ಕ್ರುದ್ಧನಾಗಿ ಮಹೇಂದ್ರ ಸದೃಶನಾದ ಅಭಿಮನ್ಯುವನ್ನು ಪತ್ರವುಳ್ಳ ತನ್ನ ಬಾಣಗಳಿಂದ ಮುಚ್ಚಿದನು.
ತೇನ ತೇ ವಿಶಿಖಾ ಮುಕ್ತಾ ಯಮದಂಡೋಪಮಾಃ ಶಿತಾಃ |
ಅಭಿಮನ್ಯುಂ ವಿನಿರ್ಭಿದ್ಯ ಪ್ರಾವಿಶನ್ ಧರಣೀತಳಮ್ ॥18॥
ಅವನಿಂದ ಪ್ರಯುಕ್ತವಾದ ಯಮದಂಡದಂತಿದ್ದ ಆ ತೀಕ್ಷ್ಣವಾದ ಬಾಣಗಳು ಅಭಿಮನ್ಯುವಿನ ಶರೀರವನ್ನು ಭೇದಿಸಿ ಭೂಮಿಯನ್ನು ಪ್ರವೇಶಿಸಿದವು.
ತಥೈವಾರ್ಜುನಿನಿರ್ಮುಕ್ತಾಃ ಶರಾಃ ಕಾಂಚನಭೂಷಣಾಃ |
ಅಲಂಬುಸಂ ವಿನಿರ್ಭಿದ್ಯ ಪ್ರಾವಿಶಂತ ಧರಾತಳಮ್ ॥19॥
ಹಾಗೆಯೇ, ಅಭಿಮನ್ಯುವು ಪ್ರಯೋಗಿಸಿದ ಸುವರ್ಣಾಲಂಕೃತ ಬಾಣಗಳೂ ಸಹ ಅಲಂಬುಸನನ್ನು ಭೇದಿಸಿ ಭೂತಳದಲ್ಲಿ ಇಳಿದವು.
ಸೌಭದ್ರಸ್ತು ರಣೇ ರಕ್ಷಃ ಶರೈಃ ಸನ್ನತಪರ್ವಭಿಃ |
ಚಕ್ರೇ ವಿಮುಖಮಾಸಾದ್ಯ ಮಯಂ ಶಕ್ರ ಇವಾಹವೇ ॥20॥
ಅಭಿಮನ್ಯುವಾದರೋ ಯುದ್ಧದಲ್ಲಿ ಮಯನನ್ನು ಇಂದ್ರನು ವಿಮುಖನನ್ನಾಗಿ ಮಾಡಿದಂತೆ ಬಾಗಿದ ತುದಿಯುಳ್ಳ ಬಾಣಗಳಿಂದ ಆ ರಾಕ್ಷಸನನ್ನು ಯುದ್ಧ ವಿಮುಖನನ್ನಾಗಿ ಮಾಡಿದನು.
ವಿಮುಖಂ ಚ ತತೋ ರಕ್ಷೋ ವಧ್ಯಮಾನಂ ರಣೇಽರಿಣಾ |
ಪ್ರಾದುಶ್ಚಕ್ರೇ ಮಹಾಮಾಯಾಂ ತಾಮಸೀಮರಿಘಾತಿನೀಮ್ ॥21॥
ಯುದ್ಧದಲ್ಲಿ ಶತ್ರುವಿನಿಂದ ಪ್ರಹಾರ ಮಾಡಲ್ಪಟ್ಟು ವಿಮುಖನಾದ ಆ ರಾಕ್ಷಸನು ಶತ್ರುಸಂಹಾರಕವಾದ, ತಮೋರೂಪವಾದ (ಕತ್ತಲೆಯ ರೂಪವಾದ) ಮಹಾಮಾಯೆಯನ್ನು ಆವಿಷ್ಕರಿಸಿದನು.
ತತಸ್ತೇ ತಮಸಾ ಸರ್ವೇ ಹೃತಾ ಹ್ಯಾಸನ್ ಮಹೀತಳೇ |
ನಾಭಿಮನ್ಯುಮಪಶ್ಯಂತ ನೈವ ಸ್ವಾನ್ನ ಪರಾನ್ ರಣೇ ॥22॥
ಆಗ ಅವರೆಲ್ಲರೂ ಆ ಕತ್ತಲೆಯಿಂದ ಅಪಹೃತರಾದರು. ಅಭಿಮನ್ಯುವನ್ನಾಗಲೀ, ತಮ್ಮವರನ್ನಾಗಲೀ ಅಥವಾ ಶತ್ರುಗಳನ್ನಾಗಲೀ ರಣರಂಗದಲ್ಲಿ ಕಾಣಲಿಲ್ಲ.
ಅಭಿಮನ್ಯುಶ್ಚ ತದ್ ದೃಷ್ಟ್ವಾ ಘೋರರೂಪಂ ಮಹತ್ತಮಃ |
ಪ್ರಾದುಶ್ಚಕ್ರೇಽಸ್ತ್ರಮತ್ಯುಗ್ರಂ ಭಾಸ್ಕರಂ ಕುರುನಂದನಃ ॥23॥
ಕುರುನಂದನನಾದ ಅಭಿಮನ್ಯುವಾದರೂ ಘೋರವಾದ ಆ ಕತ್ತಲೆಯನ್ನು ನೋಡಿ ಅತಿಭಯಂಕರವಾದ ಸೂರ್ಯಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದನು.
ತತಃ ಪ್ರಕಾಶಮಭವಜ್ಜಗತ್ ಸರ್ವಂ ಮಹೀಪತೇ |
ತಾಂ ಚಾಪಿ ಜಘ್ನಿವಾನ್ ಮಾಯಾಂ ರಾಕ್ಷಸಸ್ಯ ದುರಾತ್ಮನಃ ॥24॥
ಎಲೈ ರಾಜನೇ, ಆಗ ಜಗತ್ತಿನಲ್ಲಿ ಎಲ್ಲ ಕಡೆಯಲ್ಲಿಯೂ ಪುನಃ ಪ್ರಕಾಶ ಉಂಟಾಯಿತು. ಮತ್ತು ಆ ಅಸ್ತ್ರವು ದುರಾತ್ಮನಾದ ರಾಕ್ಷಸನ ಮಾಯೆಯನ್ನು ವಿನಾಶಗೊಳಿಸಿತು.
ಸಂಕ್ರುದ್ಧಶ್ಚ ಮಹಾವೀರ್ಯೋ ರಾಕ್ಷಸೇಂದ್ರಂ ನರೋತ್ತಮಃ |
ಛಾದಯಾಮಾಸ ಸಮರೇ ಶರೈಃ ಸನ್ನತಪರ್ವಭಿಃ ॥25॥
ಬಹಳ ಕೋಪಗೊಂಡ, ಮಹಾಪರಾಕ್ರಮಶಾಲಿಯಾದ, ನರಶ್ರೇಷ್ಠನಾದ ಅಭಿಮನ್ಯುವು ಆ ರಾಕ್ಷಸಶ್ರೇಷ್ಠನಾದ ಅಲಂಬುಸನನ್ನು ಬಾಗಿದ ತುದಿಯುಳ್ಳ ಬಾಣಗಳಿಂದ ರಣರಂಗದಲ್ಲಿ ಮುಚ್ಚಿಹಾಕಿದನು.
ಬಹ್ವೀಸ್ತಥಾನ್ಯಾ ಮಾಯಾಶ್ಚ ಪ್ರಯುಕ್ತಾಸ್ತೇನ ರಕ್ಷಸಾ |
ಸರ್ವಾಸ್ತ್ರವಿದಮೇಯಾತ್ಮಾ ವಾರಯಾಮಾಸ ಫಾಲ್ಗುನಿಃ ॥26॥
ಆ ರಾಕ್ಷಸನು ಹಾಗೆಯೇ ಇನ್ನೂ ಅನೇಕ ಮಾಯೆಗಳನ್ನು ಸೃಷ್ಟಿಸಿದನು. ಸರ್ವಾಸ್ತ್ರಗಳನ್ನು ತಿಳಿದ, ಅಪರಿಮಿತವಾದ ಸಾಮರ್ಥ್ಯವುಳ್ಳ

ಅಭಿಮನ್ಯುವು ಅವೆಲ್ಲವನ್ನೂ ನಾಶಪಡಿಸಿದನು.
ಹತಮಾಯಂ ತತೋ ರಕ್ಷೋ ವಧ್ಯಮಾನಂ ಚ ಸಾಯಕೈಃ |
ರಥಂ ತತ್ರೈವ ಸಂತ್ಯಜ್ಯ ಪ್ರಾದ್ರವನ್ ಮಹತೋ ಭಯಾತ್ ॥27॥
ತನ್ನ ಮಾಯೆಗಳು ವಿನಾಶಗೊಂಡು, ತಾನು ಬಾಣಗಳಿಂದ ಹೊಡೆಯಲ್ಪಡುತ್ತಿರಲು ಆ ರಾಕ್ಷಸನು ಭಯಗೊಂಡು ತನ್ನ ರಥವನ್ನು ಅಲ್ಲಿಯೇ ಬಿಟ್ಟು ಓಡಿಹೋದನು.
ತಸ್ಮಿನ್ ವಿನಿರ್ಜಿತೇ ತೂರ್ಣಂ ಕೂಟಯೋಧಿನಿ ರಾಕ್ಷಸೇ |
ಆರ್ಜುನಿಃ ಸಮರೇ ಸೈನ್ಯಂ ತಾವಕಂ ಸಮ್ಮಮರ್ದ ಹ |
ಮದಾಂಧೋ ವನ್ಯನಾಗೇಂದ್ರಃ ಸಪದ್ಮಾಂ ಪದ್ಮಿನೀಮಿವ ॥28॥
ಮಾಯಾಯುದ್ಧವನ್ನು ಮಾಡುವ ಆ ರಾಕ್ಷಸನು ಹಾಗೆ ಶೀಘ್ರವಾಗಿ ಪರಾಭವಗೊಳ್ಳುತ್ತಿರಲು ಮದಾಂಧವಾದ ವನಗಜವು ಪದ್ಮ ಸರೋವರವನ್ನು ತುಳಿದು ಕಲಕಿದಂತೆ ಅಭಿಮನ್ಯುವು ನಿನ್ನ ಸೈನ್ಯವನ್ನು ಮರ್ದಿಸಿದನು.
ತತಃ ಶಾಂತನವೋ ಭೀಷ್ಮಃ ಸೈನ್ಯಂ ದೃಷ್ಟ್ವಾಭಿವಿದ್ರುತಮ್ |
ಮಹತಾ ರಥವಂಶೇನ ಸೌಭದ್ರಂ ಪರ್ಯವಾರಯತ್ ॥29॥
ಅನಂತರ ಶಂತನು ಪುತ್ರರಾದ ಭೀಷ್ಮರು ತಮ್ಮ ಸೈನ್ಯವು ಓಡಿ ಹೋಗುತ್ತಿರುವುದನ್ನು ನೋಡಿ ರಥಗಳ ದೊಡ್ಡ ಸಮೂಹದಿಂದ ಅಭಿಮನ್ಯುವನ್ನು ಸುತ್ತುವರಿದರು.
ಕೋಷ್ಠಕೀಕೃತ್ಯ ತಂ ವೀರಂ ಧಾರ್ತರಾಷ್ಟ್ರಾ ಮಹಾರಥಾಃ |
ಏಕಂ ಸುಬಹವೋ ಯುದ್ಧೇ ತತಕ್ಷುಃ ಸಾಯಕೈರ್ದೃಢಮ್ ॥30॥
ಮಹಾರಥರಾದ ಧೃತರಾಷ್ಟ್ರಪುತ್ರರು ಎಲ್ಲ ಕಡೆಗಳಿಂದಲೂ ಅವನನ್ನು ಕೂಡಿಹಾಕಿಕೊಂಡು ಅನೇಕರಾದ ಅವರು ಏಕಾಕಿಯಾದ ಅಭಿಮನ್ಯುವನ್ನು ತಮ್ಮ ಬಾಣಗಳಿಂದ ದೃಢವಾಗಿ ಗಾಯಗೊಳಿಸಿದರು.
ಸ ತೇಷಾಂ ರಥಿನಾಂ ವೀರಃ ಪಿತುಸ್ತುಲ್ಯಪರಾಕ್ರಮಃ |
ಸದೃಶೋ ವಾಸುದೇವಸ್ಯ ವಿಕ್ರಮೇಣ ಬಲೇನ ಚ ॥31॥
ಉಭಯೋಃ ಸದೃಶಂ ಕರ್ಮ ಸ ಪಿತುರ್ಮಾತುಲಸ್ಯ ಚ |
ರಣೇ ಬಹುವಿಧಂ ಚಕ್ರೇ ಸರ್ವಶಸ್ತ್ರಭೃತಾಂ ವರಃ ॥32॥
ರಥಿಶ್ರೇಷ್ಠನೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ, ತಂದೆಗೆ ಸಮಾನವಾದ ಪರಾಕ್ರಮವುಳ್ಳವನೂ, ಪರಾಕ್ರಮದಲ್ಲಿಯೂ ಬಲದಲ್ಲಿಯೂ ಕೃಷ್ಣನಿಗೆ ಸದೃಶನಾದವನೂ ಆದ ಅವನು ತನ್ನ ತಂದೆ ಮತ್ತು ಸೋದರಮಾವರಿಬ್ಬರಿಗೂ ಯೋಗ್ಯವಾದ ಕರ್ಮವನ್ನು ಯುದ್ಧದಲ್ಲಿ ಶತ್ರುರಥರ ಮೇಲೆ ಬಹುವಿಧವಾಗಿ ಮಾಡಿದನು.
ತತೋ ಧನಂಜಯೋ ರಾಜನ್ ವಿನಿಘ್ನಂಸ್ತವ ಸೈನಿಕಾನ್ |
ಆಸಸಾದ ರಣೇ ಭೀಷ್ಮಂ ಪುತ್ರಪ್ರೇಪ್ಸುರಮರ್ಷಣಃ ॥33॥
ಎಲೈ ರಾಜನೇ, ಆಗ ಅರ್ಜುನನು ಕೋಪಗೊಂಡು ಪುತ್ರನನ್ನು ರಕ್ಷಿಸುವ ಸಲುವಾಗಿ ನಿನ್ನ ಸೈನಿಕರನ್ನು ಕೊಲ್ಲುತ್ತಾ ರಣರಂಗದಲ್ಲಿ ಭೀಷ್ಮರ ಸಮೀಪಕ್ಕೆ ಬಂದನು.
ತಥೈವ ಸಮರೇ ರಾಜನ್ ಪಿತಾ ದೇವವ್ರತಸ್ತವ |
ಆಸಸಾದ ರಣೇ ಪಾರ್ಥಂ ಸ್ವರ್ಭಾನುರಿವ ಭಾಸ್ಕರಮ್ ॥34॥
ಎಲೈ ರಾಜನೇ, ಹಾಗೆಯೇ ದೇವವ್ರತನಾದ ನಿನ್ನ ತಂದೆಯೂ ಸಹ ರಾಹುವು ಸೂರ್ಯನನ್ನು ಸಮೀಪಿಸಿದಂತೆ ರಣರಂಗದಲ್ಲಿ ಅರ್ಜುನನನ್ನು ಸಮೀಪಿಸಿದನು.
ತತಃ ಸರಥನಾಗಾಶ್ವಾಃ ಪುತ್ರಾಸ್ತವ ವಿಶಾಂಪತೇ |
ಪರಿವವ್ರೂ ರಣೇ ಭೀಷ್ಮಂ ಜುಗುಪುಶ್ಚ ಸಮಂತತಃ ॥35॥
ಎಲೈ ರಾಜನೇ, ಆಗ ರಥಾಶ್ವಗಜಗಳಿಂದ ಸಹಿತರಾದ ನಿನ್ನ ಪುತ್ರರು ರಣರಂಗದಲ್ಲಿ ಭೀಷ್ಮರ ಸುತ್ತಲೂ ನಿಂತು ಎಲ್ಲ ಕಡೆಯಿಂದಲೂ ಅವರನ್ನು ರಕ್ಷಿಸಿದರು.
ತಥೈವ ಪಾಂಡವಾ ರಾಜನ್ ಪರಿವಾರ್ಯ ಧನಂಜಯಮ್ |
ರಣಾಯ ಮಹತೇ ಯುಕ್ತಾ ದಂಸಿತಾ ಭರತರ್ಷಭ ॥36॥
ಎಲೈ ಭರತಶ್ರೇಷ್ಠನೇ, ರಾಜನೇ, ಹಾಗೆಯೇ ಪಾಂಡವರೆಲ್ಲರೂ ಅರ್ಜುನನನ್ನು ಸುತ್ತುವರಿದು ದೊಡ್ಡ ಯುದ್ಧಕ್ಕೆ ಸನ್ನದ್ಧರಾಗಿ ನಿಂತರು.
ಶಾರದ್ವತಸ್ತತೋ ರಾಜನ್ ಭೀಷ್ಮಸ್ಯ ಪ್ರಮುಖೇ ಸ್ಥಿತಮ್ |
ಅರ್ಜುನಂ ಪಂಚವಿಂಶತ್ಯಾ ಸಾಯಕಾನಾಂ ಸಮಾಚಿನೋತ್ ॥37॥
ಎಲೈ ರಾಜನೇ, ಆಗ ಭೀಷ್ಮರ ಮುಂಭಾಗದಲ್ಲಿದ್ದ ಕೃಪಾಚಾರ್ಯರು ಅರ್ಜುನನ ಮೇಲೆ ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿದರು.
ಪ್ರತ್ಯುದ್ಗಮ್ಯಾಥ ವಿವ್ಯಾಧ ಸಾತ್ಯಕಿಸ್ತಂ ಶಿತೈಃ ಶರೈಃ |
ಪಾಂಡವಪ್ರಿಯಕಾಮಾರ್ಥಂ ಶಾರ್ದೂಲ ಇವ ಕುಂಜರಮ್ ॥38॥
ಸಾತ್ಯಕಿಯು ಎದ್ದು ಅವರಿಗೆ ಅಭಿಮುಖವಾಗಿ ಹೋಗಿ, ಪಾಂಡವರಿಗೆ ಪ್ರಿಯವನ್ನು ಮಾಡಲು ಬಯಸಿ, ವ್ಯಾಘ್ರವು ಗಜದ ಜೊತೆಯಲ್ಲಿ ಹೋರಾಡಿದಂತೆ ನಿಶಿತವಾದ ಬಾಣಗಳಿಂದ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಗೌತಮೋಽಪಿ ತ್ವರಾಯುಕ್ತೋ ಮಾಧವಂ ನವಭಿಃ ಶರೈಃ |
ಹೃದಿ ವಿವ್ಯಾಧ ಸಂಕ್ರುದ್ಧಃ ಕಂಕಪತ್ರಪರಿಚ್ಛದೈಃ ॥39॥

ಕೃಪಾಚಾರ್ಯರಾದರೋ ಕೋಪಗೊಂಡು ಶೀಘ್ರವಾಗಿ ಕಂಕಪತ್ರದಿಂದ ಕೂಡಿದ ಒಂಬತ್ತು ಬಾಣಗಳಿಂದ ಮಧುಕುಲದಲ್ಲಿ ಜನಿಸಿದ ಆ ಸಾತ್ಯಕಿಯ ಎದೆಯಲ್ಲಿ ಹೊಡೆದರು.
ಶೈನೇಯೋಽಪಿ ತತಃ ಕ್ರುದ್ಧೋ ಭೃಶಂ ವಿದ್ಧೋ ಮಹಾರಥಃ |
ಗೌತಮಾಂತಕರಂ ಘೋರಂ ಸಮಾದತ್ತ ಶಿಲೀಮುಖಮ್ ॥40॥
ಮಹಾರಥನಾದ ಸಾತ್ಯಕಿಯಾದರೋ ಬಹಳವಾಗಿ ಗಾಯಗೊಂಡು ಅದರಿಂದ ಬಹಳ ಕ್ರುದ್ಧನಾಗಿ ಗೌತಮರ ನಾಶವನ್ನುಂಟು ಮಾಡುವ ಘೋರವಾದ ಬಾಣವನ್ನು ತೆಗೆದುಕೊಂಡನು.
ತಮಾಪತಂತಂ ವೇಗೇನ ಶಕ್ರಾಶನಿಸಮದ್ಯುತಿಮ್ |
ದ್ವಿಧಾ ಚಿಚ್ಛೇದ ಸಂಕ್ರುದ್ಧೋ ದ್ರೌಣಿಃ ಪರಮಕೋಪನಃ ॥41॥
ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಾಂತಿಯನ್ನು ಹೊಂದಿ ಕೃಪರ ಕಡೆಗೆ ಸಾಗುತ್ತಿದ್ದ ಆ ಬಾಣವನ್ನು ಪರಮಕೋಪವನ್ನು ಹೊಂದಿದ ಅಶ್ವತ್ಥಾಮರು ಎರಡು ಭಾಗವಾಗಿ ಕತ್ತರಿಸಿದರು.
ಸಮುತ್ಸೃಜ್ಯಾಥ ಶೈನೇಯೋ ಗೌತಮಂ ರಥಿನಾಂ ವರಮ್ |
ಅಭ್ಯದ್ರವದ್ ರಣೇ ದ್ರೌಣಿಂ ರಾಹುಃ ಖೇ ಶಶಿನಂ ಯಥಾ ॥42॥
ಆಗ ಸಾತ್ಯಕಿಯು ರಥಿಶ್ರೇಷ್ಠರಾದ ಕೃಪಾಚಾರ್ಯರನ್ನು ಬಿಟ್ಟು ಆಕಾಶದಲ್ಲಿ ರಾಹುವು ಚಂದ್ರನ ಕಡೆಗೆ ಓಡಿದಂತೆ ರಣರಂಗದಲ್ಲಿ ಅಶ್ವತ್ಥಾಮರ ಕಡೆಗೆ ಓಡಿದನು.
ತಸ್ಯ ದ್ರೋಣಸುತಶ್ಚಾಪಂ ದ್ವಿಧಾ ಚಿಚ್ಛೇದ ಭಾರತ |
ಅಥೈನಂ ಛಿನ್ನಧನ್ವಾನಂ ತಾಡಯಾಮಾಸ ಸಾಯಕೈಃ ॥43॥
ಎಲೈ ಭಾರತನೇ, ದ್ರೋಣಪುತ್ರರಾದ ಅಶ್ವತ್ಥಾಮರು ಅವನ ಧನುಸ್ಸನ್ನು ಎರಡು ಭಾಗವಾಗಿ ಕತ್ತರಿಸಿ, ಛಿನ್ನವಾದ ಧನುಸ್ಸುಳ್ಳ ಅವನನ್ನು ಪುನಃ ಬಾಣಗಳಿಂದ ಹೊಡೆದರು.
ಸೋಽನ್ಯತ್ ಕಾರ್ಮುಕಮಾದಾಯ ಶತ್ರುಘ್ನಂ ಭಾರಸಾಧನಮ್ |
ದ್ರೌಣಿಂ ಷಷ್ಟ್ಯಾ ಮಹಾರಾಜ ಬಾಹ್ವೋರುರಸಿ ಚಾರ್ಪಯತ್ ॥44॥
ಎಲೈ ಮಹಾರಾಜನೇ, ಸಾತ್ಯಕಿಯು ಶತ್ರುನಾಶಕವಾದ ಗುರುತರವಾದ ಕಾರ್ಯವನ್ನು ಮಾಡಲು ಸಮರ್ಥವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅರವತ್ತು ಬಾಣಗಳನ್ನು ಹೂಡಿ, ಅಶ್ವತ್ಥಾಮರ ಬಾಹುಗಳಲ್ಲಿಯೂ ಮತ್ತು ಎದೆಯಲ್ಲಿಯೂ ಹೊಡೆದನು.
ಸ ವಿದ್ಧೋ ವ್ಯಥಿತಶ್ಚೈವ ಮುಹೂರ್ತಂ ಕಶ್ಮಲಾಯುತಃ |
ನಿಷಸಾದ ರಥೋಪಸ್ಥೇ ಧ್ವಜಯಷ್ಟಿಮುಪಾಶ್ರಿತಃ ॥45॥
ಗಾಯಗೊಂಡು ವ್ಯಥೆಯನ್ನು ಹೊಂದಿದ ಅಶ್ವತ್ಥಾಮರು ಕಣ್ಣು ಕತ್ತಲೆಯನ್ನು ಹೊಂದಿ ಧ್ವಜದಂಡವನ್ನು ಹಿಡಿದು ರಥದ ಪೀಠದಲ್ಲಿ ಕುಳಿತರು.
ಪ್ರತಿಲಭ್ಯ ತತಃ ಸಂಜ್ಞಾಂ ದ್ರೋಣಪುತ್ರಃ ಪ್ರತಾಪವಾನ್ |
ವಾರ್ಷ್ಣೇಯಂ ಸಮರೇ ಕ್ರುದ್ಧೋ ನಾರಾಚೇನ ಸಮರ್ದಯತ್ ॥46॥
ಪ್ರತಾಪಶಾಲಿಗಳಾದ ದ್ರೋಣಪುತ್ರರಾದ ಅವರು ಪುನಃ ಸಂಜ್ಞೆಯನ್ನು ಮರಳಿ ಪಡೆದು ಕ್ರುದ್ಧರಾಗಿ ನಾರಾಚದಿಂದ ಸಾತ್ಯಕಿಯನ್ನು ಹೊಡೆದರು.
ಶೈನೇಯಂ ಸ ತು ನಿರ್ಭಿದ್ಯ ಪ್ರಾವಿಶದ್ ಧರಣೀತಳಮ್ |
ವಸಂತಕಾಲೇ ಬಲವಾನ್ ಬಿಲಂ ಸರ್ಪಶಿಶುರ್ಯಥಾ ॥47॥
ಆ ನಾರಾಚವು ಸಾತ್ಯಕಿಯನ್ನು ಸೀಳಿಕೊಂಡು, ವಸಂತಕಾಲದಲ್ಲಿ ಬಲವಾದ ಸರ್ಪಶಿಶುವು ಬಿಲವನ್ನು ಪ್ರವೇಶಿಸುವಂತೆ ಭೂಮಿಯನ್ನು ಪ್ರವೇಶಿಸಿತು.
ತತೋಽಪರೇಣ ಭಲ್ಲೇನ ಮಾಧವಸ್ಯ ಧ್ವಜೋತ್ತಮಮ್ |
ಚಿಚ್ಛೇದ ಸಮರೇ ದ್ರೌಣಿಃ ಸಿಂಹನಾದಂ ನನಾದ ಚ ॥48॥
ಅನಂತರ ಇನ್ನೊಂದು ಭಲ್ಲದಿಂದ ಸಾತ್ಯಕಿಯ ರಥದ ಶ್ರೇಷ್ಠವಾದ ಧ್ವಜವನ್ನು ಕತ್ತರಿಸಿ ಅಶ್ವತ್ಥಾಮರು ರಣರಂಗದಲ್ಲಿ ಸಿಂಹನಾದವನ್ನು ಮಾಡಿದರು.
ಪುನಶ್ಚೈನಂ ಶರೈರ್ಘೋರೈಶ್ಛಾದಯಾಮಾಸ ಭಾರತ |
ನಿದಾಘಾಂತೇ ಮಹಾರಾಜ ಯಥಾ ಮೇಘೋ ದಿವಾಕರಮ್ ॥49॥
ಎಲೈ ಭಾರತನೇ, ಮಹಾರಾಜನೇ, ಬೇಸಿಗೆಯು ಕಳೆದ ಮೇಲೆ ಮೋಡಗಳು ಸೂರ್ಯನನ್ನು ಮುಚ್ಚಿದಂತೆ ಪುನಃ ಘೋರವಾದ ಬಾಣಗಳನ್ನು ಪ್ರಯೋಗಿಸಿ ಸಾತ್ಯಕಿಯನ್ನು ಮುಚ್ಚಿಹಾಕಿದರು.
ಸಾತ್ಯಕಿಶ್ಚ ಮಹಾರಾಜ ಶರಜಾಲಂ ನಿಹತ್ಯ ತತ್ |
ದ್ರೌಣಿಮಭ್ಯಪತತ್ ತೂರ್ಣಂ ಶರಜಾಲೈರನೇಕಧಾ ॥50॥
ಎಲೈ ಮಹಾರಾಜನೇ, ಸಾತ್ಯಕಿಯೂ ಸಹ ಅಶ್ವತ್ಥಾಮರ ಬಾಣಗಳ ಸಮೂಹಗಳನ್ನು ವಿನಾಶಗೊಳಿಸಿ ತಾನೂ ಅನೇಕ ವಿಧವಾದ ಶರಜಾಲಗಳನ್ನು ಸೃಷ್ಟಿಸಿ ಶೀಘ್ರವಾಗಿ ಅವರ ಮೇಲೆ ಎರಗಿದನು.
ತಾಪಯಾಮಾಸ ಚ ದ್ರೌಣಿಂ ಶೈನೇಯಃ ಪರವೀರಹಾ |
ವಿಮುಕ್ತೋ ಮೇಘಜಾಲೇನ ಯಥೈವ ತಪನಸ್ತಥಾ ॥51॥
ಮೇಘಮಂಡಲದಿಂದ ಹೊರಗೆ ಬಂದ ಸೂರ್ಯನು ತಾಪವನ್ನು ಕೊಡುವಂತೆ ಪರವೀರಘಾತಕನಾದ ಸಾತ್ಯಕಿಯು ಅಶ್ವತ್ಥಾಮರನ್ನು

ಸಂತಾಪಗೊಳಿಸಿದನು.
ಶರಾಣಾಂ ಚ ಸಹಸ್ರೇಣ ಪುನರೇನಂ ಸಮುದ್ಯತಮ್ |
ಸಾತ್ಯಕಿಶ್ಛಾದಯಾಮಾಸ ನನಾದ ಚ ಮಹಾಬಲಃ ॥52॥
ಪುನಃ ತಮ್ಮ ಧನುಸ್ಸಿನಲ್ಲಿ ಬಾಣವನ್ನು ಹೂಡಲು ಪ್ರಯತ್ನಿಸುತ್ತಿದ್ದ ಅವರ ಮೇಲೆ ಸಾತ್ಯಕಿಯು ಸಾವಿರ ಬಾಣಗಳನ್ನು ಪ್ರಯೋಗಿಸಿ, ಅವರನ್ನು ಮುಚ್ಚಿಹಾಕಿ ಮಹಾಬಲನಾದ ಅವನು ಸಿಂಹನಾದವನ್ನು ಮಾಡಿದನು.
ದೃಷ್ಟ್ವಾ ಪುತ್ರಂ ತಥಾ ಗ್ರಸ್ತಂ ರಾಹುಣೇವ ನಿಶಾಕರಮ್ |
ಅಭ್ಯದ್ರವತ ಶೈನೇಯಂ ಭಾರದ್ವಾಜಃ ಪ್ರತಾಪವಾನ್ ॥53॥
ತಮ್ಮ ಪುತ್ರನು ರಾಹುವಿನಿಂದ ಚಂದ್ರನು ಗ್ರಸ್ತನಾದಂತೆ ಸಾತ್ಯಕಿಯಿಂದ ಪೀಡಿತನಾಗಿರುವುದನ್ನು ನೋಡಿ ಪ್ರತಾಪಶಾಲಿಗಳಾದ ದ್ರೋಣರು ಸಾತ್ಯಕಿಯ ಮೇಲೆ ಎರಗಿದರು.
ವಿವ್ಯಾಧ ಚ ಪೃಷತ್ಕೇನ ಸುತೀಕ್ಷ್ಣೇನ ಮಹಾಮೃಧೇ |
ಪರೀಪ್ಸನ್ ಸ್ವಸುತಂ ರಾಜನ್ ವಾರ್ಷ್ಣೇಯೇನಾಭಿತಾಪಿತಮ್ ॥54॥
ಎಲೈ ರಾಜನೇ, ಸಾತ್ಯಕಿಯಿಂದ ಬಹಳ ಪೀಡಿತರಾದ ತಮ್ಮ ಪುತ್ರರನ್ನು ರಕ್ಷಿಸಲು ಆ ಮಹಾಯುದ್ಧದಲ್ಲಿ ಸಾತ್ಯಕಿಯ ಮೇಲೆ ಬಹಳ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದರು.
ಸಾತ್ಯಕಿಸ್ತು ರಣೇ ಜಿತ್ವಾ ಗುರುಪುತ್ರಂ ಮಹಾರಥಮ್ |
ದ್ರೋಣಂ ವಿವ್ಯಾಧ ವಿಂಶತ್ಯಾ ಸರ್ವಪಾರಶವೈಃ ಶರೈಃ ॥55॥
ಸಾತ್ಯಕಿಯಾದರೋ ಯುದ್ಧದಲ್ಲಿ ಮಹಾರಥರೂ, ಗುರುಪುತ್ರರೂ ಆದ ಅಶ್ವತ್ಥಾಮರನ್ನು ಗೆದ್ದು, ಅಯೋಮಯವಾದ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿ ದ್ರೋಣರನ್ನು ವ್ಯಥೆಗೊಳಿಸಿದನು.
ತದಂತರಮಮೇಯಾತ್ಮಾ ಕೌಂತೇಯಃ ಶ್ವೇತವಾಹನಃ |
ಅಭ್ಯದ್ರವದ್ ರಣೇ ಕ್ರುದ್ಧೋ ದ್ರೋಣಂ ಪ್ರತಿ ಮಹಾರಥಃ ॥56॥
ಆ ಸಮಯದಲ್ಲಿ ಮಹಾರಥನೂ, ಕೌಂತೇಯನೂ, ಅಚಿಂತ್ಯ ಸಾಮರ್ಥ್ಯೋಪೇತನೂ, ಶ್ವೇತಾಶ್ವನೂ ಆದ ಅರ್ಜುನನು ಕ್ರುದ್ಧನಾಗಿ ಯುದ್ಧದಲ್ಲಿ ದ್ರೋಣರ ಕಡೆಗೆ ಧಾವಿಸಿದನು.
ತತೋ ದ್ರೋಣಶ್ಚ ಪಾರ್ಥಶ್ಚ ಸಮೇಯಾತಾಂ ಮಹಾಮೃಧೇ |
ಯಥಾ ಬುಧಶ್ಚ ಶುಕ್ರಶ್ಚ ಮಹಾರಾಜ ನಭಸ್ತಳೇ ॥57॥
ಎಲೈ ಮಹಾರಾಜನೇ, ಆಗ ಆಕಾಶದಲ್ಲಿ ಬುಧನೂ ಮತ್ತು ಶುಕ್ರನೂ ಸೇರಿದಂತೆ ದ್ರೋಣರೂ ಮತ್ತು ಅರ್ಜುನನೂ ಯುದ್ಧದಲ್ಲಿ ಪರಸ್ಪರ ಸಮಾಗಮವನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟನವತಿತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂಬತ್ತನೆಯ ಅಧ್ಯಾಯ
ದ್ರೋಣಾರ್ಜುನರ ಯುದ್ಧ.
ಭೀಮಸೇನನಿಂದ ಗದೆಯಿಂದ ಗಜಸೇನೆಯ ಮರ್ದನ.
ಧೃತರಾಷ್ಟ್ರಃ
ಕಥಂ ದ್ರೋಣೋ ಮಹೇಷ್ವಾಸಃ ಪಾಂಡವಶ್ಚ ಧನಂಜಯಃ |
ಸಮೀಯತುಃ ರಣೇ ಶೂರೌ ತನ್ಮಮಾಚಕ್ಷ್ವ ಸಂಜಯ ॥1॥
ಧೃತರಾಷ್ಟ್ರ, ಎಲೈ ಸಂಜಯನೇ, ಮಹಾಧನುರ್ಧಾರಿಗಳಾದ ದ್ರೋಣರು ಮತ್ತು ಪಾಂಡುಪುತ್ರನಾದ ಅರ್ಜುನನು- ಶೂರರಾದ ಇವರಿಬ್ಬರೂ ಹೇಗೆ ಯುದ್ಧದಲ್ಲಿ ಪರಸ್ಪರ ಸೆಣಸಾಡಿದರು ಎಂದು ನನಗೆ ಹೇಳು.
ಪ್ರಿಯೋ ಹಿ ಪಾಂಡವೋ ನಿತ್ಯಂ ಭಾರದ್ವಾಜಸ್ಯ ಧೀಮತಃ |
ಆಚಾರ್ಯಶ್ಚ ರಣೇ ನಿತ್ಯಂ ಪ್ರಿಯಃ ಪಾರ್ಥಸ್ಯ ಸಂಜಯ ॥2॥
ಎಲೈ ಸಂಜಯನೇ, ಮೇಧಾವಿಗಳಾದ ದ್ರೋಣರಿಗೆ ಅರ್ಜುನನು ಯಾವಾಗಲೂ ಪ್ರಿಯನಾದವನಷ್ಟೆ? ದ್ರೋಣರೂ ಸಹ ಯುದ್ಧದಲ್ಲಿ ಯಾವಾಗಲೂ ಅರ್ಜುನನಿಗೆ ಪ್ರಿಯರಾದವರು.
ತಾವುಭೌ ರಥಿನೌ ಸಂಖ್ಯೇ ದೃಪ್ತೌ ಸಿಂಹಾವಿವೋತ್ಕಟೌ |
ಕಥಂ ಸಮೀಯತುರ್ಯುದ್ಧೇ ಭಾರದ್ವಾಜಧನಂಜಯೌ ॥3॥
ಎಲೈ ಸಂಜಯನೇ, ದ್ರೋಣ ಮತ್ತು ಅರ್ಜುನರಿಬ್ಬರೂ ಸಿಂಹದಂತೆ ಉತ್ಕಟವಾದ ದರ್ಪವುಳ್ಳ ಮಹಾರಥರು. ಅವರು ಹೇಗೆ ಒಬ್ಬರ ಜೊತೆಯಲ್ಲಿ ಒಬ್ಬರು ಯುದ್ಧವನ್ನು ಮಾಡಿದರು?
ಸಂಜಯಃ
ನ ದ್ರೋಣಃ ಸಮರೇ ಪಾರ್ಥಂ ಜಾನೀತೇ ಪ್ರಿಯಮಾತ್ಮನಃ |
ಕ್ಷತ್ರಧರ್ಮಂ ಪುರಸ್ಕೃತ್ಯ ಪಾರ್ಥೋ ವಾ ಗುರುಮಾಹವೇ ॥4॥
ಸಂಜಯ ದ್ರೋಣರು ಯುದ್ಧದಲ್ಲಿ ಅರ್ಜುನನನ್ನು ತಮಗೆ ಪ್ರಿಯನಾದವನೆಂದು ತಿಳಿಯುವುದಿಲ್ಲ. ಕ್ಷತ್ರಿಯ ಧರ್ಮವನ್ನು ಗೌರವಿಸುವ ಅರ್ಜುನನೂ ಸಹ ಯುದ್ಧದಲ್ಲಿ ದ್ರೋಣರನ್ನು ತನ್ನ ಗುರುಗಳೆಂದು ತಿಳಿಯುವುದಿಲ್ಲ.

ನ ಕ್ಷತ್ರಿಯಾ ರಣೇ ರಾಜನ್ ವರ್ಜಯಂತಿ ಪರಸ್ಪರಮ್ |
ನಿರ್ಮರ್ಯಾದಂ ಹಿ ಯುಧ್ಯಂತೇ ಪಿತೃಭಿರ್ಭ್ರಾತೃಭಿಃ ಸಹ ॥5॥
ಎಲೈ ರಾಜನೇ, ಯುದ್ಧದಲ್ಲಿ ಕ್ಷತ್ರಿಯರು ಪರಸ್ಪರವಾಗಿ ಯಾರನ್ನೂ ಬಿಡುವುದಿಲ್ಲ. ಎಲ್ಲ ಎಲ್ಲೆಯನ್ನೂ ಮೀರಿ ತಂದೆಯ ಜೊತೆಯಲ್ಲಿಯೂ, ಸಹೋದರರ ಜೊತೆಯಲ್ಲಿಯೂ ಯುದ್ಧ ಮಾಡುವರಷ್ಟೆ?
ರಣೇ ಭಾರತ ಪಾರ್ಥೇನ ದ್ರೋಣೋ ವಿದ್ಧಸ್ತ್ರಿಭಿಃ ಶರೈಃ |
ನಾಚಿಂತಯತ ತಾನ್ ಬಾಣಾನ್ ಪಾರ್ಥಚಾಪಚ್ಯುತಾನ್ ಯುಧಿ ॥6॥
ಎಲೈ ಭಾರತನೇ, ಯುದ್ಧದಲ್ಲಿ ಅರ್ಜುನನಿಂದ ಮೂರುಬಾಣಗಳಿಂದ ಹೊಡೆಯಲ್ಪಟ್ಟ ದ್ರೋಣರು ಅರ್ಜುನನು ಪ್ರಯೋಗಿಸಿದ ಬಾಣಗಳನ್ನು ಗಂಭೀರವಾಗಿ ತೆಗೆದುಕೊಳ್ಳಲೇ ಇಲ್ಲ.
ಶರವೃಷ್ಟ್ಯಾ ಪುನಃ ಪಾರ್ಥಶ್ಛಾದಯಾಮಾಸ ತಂ ರಣೇ |
ಪ್ರಜಜ್ವಾಲ ಚ ರೋಷೇಣ ಗಹನೇಽಗ್ನಿರಿವೋತ್ಥಿತಃ ॥7॥
ಅರ್ಜುನನು ರಣರಂಗದಲ್ಲಿ ಅವರನ್ನು ಪುನಃ ತನ್ನ ಬಾಣಗಳ ಮಳೆಯಿಂದ ಆಚ್ಛಾದಿಸಿ ಕಾಡಿನಲ್ಲಿ ಉಂಟಾದ ಅಗ್ನಿಯಂತೆ ರೋಷದಿಂದ ಜ್ವಲಿಸಿದನು.
ತತೋಽರ್ಜುನಂ ರಣೇ ದ್ರೋಣಃ ಶರೈಃ ಸನ್ನತಪರ್ವಭಿಃ |
ವಾರಯಾಮಾಸ ರಾಜೇಂದ್ರ ನಚಿರಾದಿವ ಭಾರತ ॥8॥
ಎಲೈ ಭಾರತನೇ, ರಾಜೇಂದ್ರನೇ, ಆಗ ದ್ರೋಣರು ಬಾಗಿದ ತುದಿಯುಳ್ಳ ಬಾಣಗಳಿಂದ ಶೀಘ್ರವಾಗಿ ಅರ್ಜುನನನ್ನು ತಡೆದರು.
ತತೋ ದುರ್ಯೋಧನೋ ರಾಜಾ ಸುಶರ್ಮಾಣಮಚೋದಯತ್ |
ದ್ರೋಣಸ್ಯ ಸಮರೇ ರಾಜನ್ ಪಾರ್ಷ್ಣಿಗ್ರಹಣಕಾರಣಾತ್ ॥9॥
ಎಲೈ ರಾಜನೇ, ಆಗ ದ್ರೋಣರಿಗೆ ಸಹಾಯವನ್ನು ಮಾಡುವಂತೆ ರಾಜನಾದ ದುರ್ಯೋಧನನು ಸುಶರ್ಮನನ್ನು ಪ್ರಚೋದಿಸಿದನು.
ತ್ರಿಗರ್ತರಾಡಪಿ ಕ್ರುದ್ಧೋ ಭೃಶಮಾಯಮ್ಯ ಕಾರ್ಮುಕಮ್ |
ಛಾದಯಾಮಾಸ ಸಮರೇ ಪಾರ್ಥಂ ಬಾಣೈರಯೋಮುಖೈಃ ॥10॥
ತ್ರಿಗರ್ತರಾಜನಾದ ಸುಶರ್ಮನೂ ಸಹ ಕೋಪಗೊಂಡು ತನ್ನ ಧನುಸ್ಸನ್ನು ಬಗ್ಗಿಸಿ ಕಬ್ಬಿಣದ ತುದಿಯುಳ್ಳ ಬಾಣಗಳಿಂದ ಯುದ್ಧದಲ್ಲಿ ಅರ್ಜುನನನ್ನು ಆಚ್ಛಾದಿಸಿದನು.
ತಾಭ್ಯಾಂ ಮುಕ್ತಾಃ ಶರಾ ರಾಜನ್ನಂತರಿಕ್ಷೇ ವಿರೇಜಿರೇ |
ಹಂಸಾ ಇವ ಮಹಾರಾಜ ಶರತ್ಕಾಲೇ ನಭಸ್ತಲೇ ॥11॥
ಎಲೈ ಮಹಾರಾಜನೇ, ಅವರಿಬ್ಬರೂ ಪ್ರಯೋಗಿಸಿದ ಬಾಣಗಳು ಅಂತರಿಕ್ಷದಲ್ಲಿ ಶರತ್ಕಾಲದಲ್ಲಿ ಆಕಾಶದಲ್ಲಿ ತೋರುವ ಹಂಸಪಕ್ಷಿಗಳಂತೆ ಶೋಭಿಸಿದವು.
ತೇ ಶರಾಃ ಪ್ರಾಪ್ಯ ಕೌಂತೇಯಂ ಸಮಸ್ತಾ ವಿವಿಶುಃ ಪ್ರಭೋ |
ಫಲಭಾರನತಂ ಯದ್ವತ್ ಸ್ವಾದುವೃಕ್ಷಂ ವಿಹಂಗಮಾಃ ॥12॥
ಎಲೈ ಪ್ರಭುವೇ, ಮಧುರವಾದ ಫಲದ ಭಾರದಿಂದ ಬಗ್ಗಿದ ವೃಕ್ಷಗಳನ್ನು ಪಕ್ಷಿಗಳು ಸೇರುವಂತೆ ಆ ಬಾಣಗಳು ಕೌಂತೇಯನಾದ ಅರ್ಜುನನನ್ನು ಸೇರಿದವು.
ಅರ್ಜುನಸ್ತು ರಣೇ ನಾದಂ ವಿನದ್ಯ ರಥಿನಾಂ ವರಃ |
ತ್ರಿಗರ್ತರಾಜಂ ಸಮರೇ ಸಪುತ್ರಂ ವಿವ್ಯಧೇ ಶರೈಃ ॥13॥
ರಥಿಶ್ರೇಷ್ಠನಾದ ಅರ್ಜುನನು ರಣರಂಗದಲ್ಲಿ ಘೋರವಾದ ನಾದವನ್ನು ಮಾಡಿ ಪುತ್ರಸಹಿತನಾದ ತ್ರಿಗರ್ತರಾಜನನ್ನು ಯುದ್ಧದಲ್ಲಿ ಬಾಣಗಳಿಂದ ಪೀಡಿಸಿದನು.
ತೇ ವಧ್ಯಮಾನಾಃ ಪಾರ್ಥೇನ ಕಾಲೇನೇವ ಯುಗಕ್ಷಯೇ |
ಪಾರ್ಥಮೇವಾಭ್ಯವರ್ತಂತ ಮರಣೇ ಕೃತನಿಶ್ಚಯಾಃ |
ಮುಮುಚುಃ ಶರವೃಷ್ಟಿಂ ಚ ಪಾಂಡವಸ್ಯ ರಥಂ ಪ್ರತಿ ॥14॥
ಯುಗಾಂತ ಸಮಯದಲ್ಲಿ ಮೃತ್ಯುವಿನ ಪ್ರಹಾರಕ್ಕೆ ಒಳಗಾದಂತೆ ಅರ್ಜುನನ ಪ್ರಹಾರಕ್ಕೆ ಒಳಗಾದ ಅವರು ಮರಣವನ್ನು ನಿಶ್ಚಯಿಸಿ ಅರ್ಜುನನ ಕಡೆಗೇ ಧಾವಿಸಿದರು. ಮತ್ತು ಅರ್ಜುನನ ರಥದ ಮೇಲೆ ಬಾಣಗಳ ಮಳೆಯನ್ನು ಕರೆದರು.
ಶರವೃಷ್ಟಿಂ ತತಸ್ತಾಂ ತು ಶರವರ್ಷೇಣ ಪಾಂಡವಃ |
ಪ್ರತಿಜಗ್ರಾಹ ರಾಜೇಂದ್ರ ತೋಯವೃಷ್ಟಿಮಿವಾಚಲಃ ॥15॥
ಎಲೈ ರಾಜೇಂದ್ರನೇ, ಆಗ ಅರ್ಜುನನು ಪರ್ವತವು ಮಳೆಯ ಧಾರೆಯನ್ನು ಸ್ವೀಕರಿಸುವಂತೆ ಆ ಬಾಣಗಳ ಮಳೆಯನ್ನು ಸ್ವೀಕರಿಸಿದನು.
ತತ್ರಾದ್ಭುತಮಪಶ್ಯಾಮ ಬೀಭತ್ಸೋರ್ಹಸ್ತಲಾಘವಮ್ |
ವಿಮುಕ್ತಾಂ ಬಹುಭಿಃ ಶೂರೈಃ ಶಸ್ತ್ರವೃಷ್ಟಿಂ ದುರಾಸದಾಮ್ ॥16॥
ಯದೇಕೋ ವಾರಯಾಮಾಸ ಮಾರುತೋಽಭ್ರಗಣಾನಿವ |
ಕರ್ಮಣಾ ತೇನ ಪಾರ್ಥಸ್ಯ ತುತುಷುರ್ದೇವದಾನವಾಃ ॥17॥
ಅನೇಕ ಶೂರರು ಮಾಡಿದ, ಹತ್ತಿರ ಸುಳಿಯಲೂ ಅಸಾಧ್ಯವಾದ ಆ ಬಾಣಗಳ ಮಳೆಯನ್ನು ಬಿರುಗಾಳಿಯು ಮೋಡಗಳನ್ನು ಚದುರಿಸಿದಂತೆ ಒಬ್ಬನೇ ತಡೆದ (ಚದುರಿಸಿದ) ಅರ್ಜುನನ ಆ ಅದ್ಭುತವಾದ ಕ್ಷಿಪ್ರಕಾರಿತ್ವವನ್ನು ನಾವು ನೋಡಿದೆವು. ಅರ್ಜುನನ ಆ ಕಾರ್ಯವನ್ನು ನೋಡಿ ದೇವತೆಗಳು ಮತ್ತು ದಾನವರು ಸಂತೋಷಗೊಂಡರು.
ಅಥ ಕ್ರುದ್ಧೋ ರಣೇ ಪಾರ್ಥಸ್ತ್ರಿಗರ್ತಾನ್ ಪ್ರತಿ ಭಾರತ |

ಮುಮೋಚಾಸ್ತ್ರಂ ಮಹಾರಾಜ ವಾಯವ್ಯಂ ಪೃತನಾಮುಖೇ ॥18॥
ಎಲೈ ಭಾರತನೇ, ಮಹಾರಾಜನೇ, ಅನಂತರ ಕೋಪಗೊಂಡ ಅರ್ಜುನನು ಸೈನ್ಯದ ಅಗ್ರಭಾಗದಲ್ಲಿ ನಿಂತು ತ್ರಿಗರ್ತರ ಮೇಲೆ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು.
ಪ್ರಾದುರಾಸೀತ್ ತತೋ ವಾಯುಃ ಕ್ಷೋಭಯಾಣೋ ನಭಸ್ಥಳಮ್ |
ಪಾತಯನ್ ವೈ ತರುಗಣಾನ್ ವಿನಿಘ್ನಂಶ್ಚೈವ ಸೈನಿಕಾನ್ ॥19॥
ಆಗ ಅಸ್ತ್ರಸಮೂಹವನ್ನು ಒಡಿಸುತ್ತಾ, ಸೈನಿಕರನ್ನು ಕೆಡವುತ್ತಾ ಆಕಾಶವನ್ನೆಲ್ಲಾ ಕ್ಷೋಭೆಗೊಳಿಸುವ ಬಿರುಗಾಳಿಯು ಉದ್ಭವಿಸಿತು.
ತತೋ ದ್ರೋಣೋಽಭಿವೀಕ್ಷ್ಯೈವ ವಾಯವ್ಯಾಸ್ತ್ರಂ ಸುದಾರುಣಮ್ |
ಶೈಲಮನ್ಯನ್ಮಹಾರಾಜ ಘೋರಮಸ್ತ್ರಂ ಮುಮೋಚ ಹ ॥20॥
ಎಲೈ ಮಹಾರಾಜನೇ, ಆಗ ದ್ರೋಣರು ದಾರುಣವಾದ ಆ ವಾಯವ್ಯಾಸ್ತ್ರವನ್ನು ನೋಡಿ ಘೋರವಾದ ಪರ್ವತಾಸ್ತ್ರವನ್ನು ಪ್ರಯೋಗಿಸಿದರು.
ದ್ರೋಣೇನ ಯುಧಿ ನಿರ್ಮುಕ್ತೇ ತಸ್ಮಿನ್ನಸ್ತ್ರೇ ಮಹಾಮೃಧೇ |
ಪ್ರಶಶಾಮ ತತೋ ವಾಯುಃ ಪ್ರಸನ್ನಾಶ್ಚಾಭವನ್ ದಿಶಃ ॥21॥
ಮಹಾಯುದ್ಧದಲ್ಲಿ ದ್ರೋಣರು ಆ ಅಸ್ತ್ರವನ್ನು ಪ್ರಯೋಗಿಸುತ್ತಿರಲು ವಾಯುವು ಶಾಂತವಾಯಿತು ಮತ್ತು ದಿಕ್ಕುಗಳು ಪ್ರಸನ್ನವಾದವು.

ತತಃ ಪಾಂಡುಸುತೋ ವೀರಸ್ತ್ರಿಗರ್ತಸ್ಯ ರಥವ್ರಜಾನ್ |
ನಿರುತ್ಸಾಹಾನ್ ರಣೇ ಚಕ್ರೇ ವಿಮುಖಾನ್ ವಿಪರಾಕ್ರಮಾನ್ ॥22॥
ಆಗ ಪಾಂಡುಸುತನಾದ ಅರ್ಜುನನು ತ್ರಿಗರ್ತರ ರಥಸಮೂಹಗಳನ್ನು ಉತ್ಸಾಹ, ಪರಾಕ್ರಮಶೂನ್ಯಗಳನ್ನಾಗಿ ಮಾಡಿ ಯುದ್ಧವಿಮುಖಳನ್ನಾಗಿ ಮಾಡಿದನು.
ತತೋ ದುರ್ಯೋಧನೋ ರಾಜಾ ಕೃಪಶ್ಚ ರಥಿನಾಂ ವರಃ |
ಅಶ್ವತ್ಥಾಮಾ ತತಃ ಶಲ್ಯಃ ಕಾಂಬೋಜಶ್ಚ ಸುದಕ್ಷಿಣಃ ॥23॥
ವಿಂದಾನುವಿಂದಾವಾವಂತ್ಯೌ ಬಾಹ್ಲಿಕಶ್ಚ ಸಬಾಹ್ಲಿಕಃ |
ಮಹತಾ ರಥವಂಶೇನ ಪಾರ್ಥಸ್ಯಾವಾರಯನ್ ದಿಶಃ ॥24॥
ಆಗ ರಾಜನಾದ ದುರ್ಯೋಧನನೂ, ರಥಿಶ್ರೇಷ್ಠರಾದ ಕೃಪರೂ, ಅಶ್ವತ್ಥಾಮರೂ, ಕಾಂಬೋಜ ದೇಶದ ಸುದಕ್ಷಿಣನೂ, ಅವಂತಿದೇಶದ ವಿಂದಾನುವಿಂದರೂ, ಬಾಹ್ಲಿಕ ಸೇನೆಯಿಂದ ಕೂಡಿದ ಬಾಹ್ಲಿಕ ಇವರೆಲ್ಲರೂ ದೊಡ್ಡ ರಥಸಮೂಹದಿಂದ ಅರ್ಜುನನನ್ನು ಎಲ್ಲ ದಿಕ್ಕುಗಳಿಂದಲೂ ತಡೆದರು.
ತಥೈವ ಭಗದತ್ತಶ್ಚ ಶ್ರುತಾಯುಶ್ಚ ಮಹಾಬಲಃ |
ಗಜಾನೀಕೇನ ಭೀಮಸ್ಯ ತಾವವಾರಯತಾಂ ದಿಶಃ ॥25॥
ಹಾಗೆಯೇ ಮಹಾಬಲನಾದ ಶ್ರುತಾಯು ಮತ್ತು ಭಗದತ್ತರು ಗಜಸಮೂಹದಿಂದ ಭೀಮನನ್ನು ಎಲ್ಲ ದಿಕ್ಕುಗಳಲ್ಲಿಯೂ ತಡೆದರು.
ಭೂರಿಶ್ರವಾಃ ಶಲಶ್ಚೈವ ಸೌಬಲಶ್ಚ ವಿಶಾಂಪತೇ |
ಶರೌಘೈರ್ವಿವಿಧೈಸ್ತೂರ್ಣಂ ಮಾದ್ರೀಪುತ್ರಾವವಾರಯನ್ ॥26॥
ಎಲೈ ರಾಜನೇ, ಭೂರಿಶ್ರವ, ಶಲ ಮತ್ತು ಶಕುನಿ- ಇವರು ವಿವಿಧವಾದ ಬಾಣಗಳಿಂದ ಶೀಘ್ರವಾಗಿ ಮಾದ್ರೀಪುತ್ರರನ್ನು ತಡೆದರು.
ಭೀಷ್ಮಸ್ತು ಸಹಿತಃ ಸರ್ವೈರ್ಧಾರ್ತರಾಷ್ಟ್ರಸ್ಯ ಸೈನಿಕೈಃ |
ಯುಧಿಷ್ಠಿರಂ ಸಮಾಸಾದ್ಯ ಸರ್ವತಃ ಪರ್ಯವಾರಯತ್ ॥27॥
ಭೀಷ್ಮರಾದರೋ ದುರ್ಯೋಧನಾದಿಗಳ ಎಲ್ಲಾ ಸೈನ್ಯದಿಂದಲೂ ಸಹಿತರಾಗಿ ಯುಧಿಷ್ಠಿರನನ್ನು ಸಮೀಪಿಸಿ ಅವನನ್ನು ಎಲ್ಲ ದಿಕ್ಕುಗಳಿಂದಲೂ ತಡೆದರು.
ಆಪತಂತಂ ಗಜಾನೀಕಂ ದೃಷ್ಟ್ವಾ ಪಾರ್ಥೋ ವೃಕೋದರಃ |
ಲೇಲಿಹನ್ ಸೃಕ್ಕಿಣೀ ವೀರೋ ಮೃಗರಾಡಿವ ಕಾನನೇ ॥28॥
ತತಸ್ತು ರಥಿನಾಂ ಶ್ರೇಷ್ಠೋ ಗದಾಂ ಗೃಹ್ಯ ಮಹಾಹವೇ |
ಅವಪ್ಲುತ್ಯ ರಥಾತ್ ತೂರ್ಣಂ ತವ ಸೈನ್ಯಮಭೀಷಯತ್ ॥29॥
ತನ್ನ ಬಳಿಗೆ ಬರುತ್ತಿರುವ ಗಜಸಮೂಹವನ್ನು ನೋಡಿದ ವೀರನಾದ, ರಥಿಶ್ರೇಷ್ಠನಾದ ಭೀಮಸೇನನು ಕಾಡಿನಲ್ಲಿ ಸಿಂಹದಂತೆ ಕಟಬಾಯಿಯನ್ನು ಸವರಿಕೊಳ್ಳುತ್ತಾ ಗದೆಯನ್ನು ಹಿಡಿದು ರಥದಿಂದ ಧುಮುಕಿ ನಿನ್ನ ಸೈನ್ಯವನ್ನು ಭಯಕ್ಕೆ ಈಡುಮಾಡಿದನು.
ತಮುದೀಕ್ಷ್ಯ ಗದಾಹಸ್ತಂ ತತಸ್ತೇ ಗಜಸಾದಿನಃ |
ಪರಿವವ್ರು ರಣೇ ಯತ್ತಾ ಭೀಮಸೇನಂ ಸಮಂತತಃ ॥30॥
ಕೈಯಲ್ಲಿ ಗದೆಯನ್ನು ಹಿಡಿದ ಭೀಮಸೇನನನ್ನು ನೋಡಿ ನಿನ್ನ ಗಜಯೋಧರು ಪ್ರಯತ್ನಪೂರ್ವಕವಾಗಿ ಭೀಮಸೇನನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಗಜಮಧ್ಯಮನುಪ್ರಾಪ್ತಃ ಪಾಂಡವಶ್ಚ ವ್ಯರಾಜತ |
ಮೇಘಜಾಲಸ್ಯ ಮಹತೋ ಯಥಾ ಮಧ್ಯಗತೋ ರವಿಃ ॥31॥
ಗಜಮಧ್ಯದಲ್ಲಿ ನಿಂತ ಭೀಮಸೇನನು ದೊಡ್ಡ ಮೋಡಗಳ ಮಧ್ಯದಲ್ಲಿ ನಿಂತ ಸೂರ್ಯನಂತೆ ಕಂಗೊಳಿಸಿದನು.
ವ್ಯಧಮತ್ ಸ ಗಜಾನೀಕಂ ಗದಯಾ ಪಾಂಡವರ್ಷಭಃ |
ಮಹಾಭ್ರಜಾಲಮತುಲಂ ಮಾತರಿಶ್ವೇವ ಸಂತತಮ್ ॥32॥

ಪಾಂಡವಶ್ರೇಷ್ಠನಾದ ಅವನು ವಾಯುವು ಅಸದೃಶವಾಗಿ ಹಬ್ಬಿದ ಮೋಡದ ಜಾಲವನ್ನು ನಾಶಪಡಿಸುವಂತೆ ಆ ಗಜಸಮೂಹವನ್ನು ಗದೆಯಿಂದ ನಾಶಪಡಿಸಿದನು.
ತೇ ವಧ್ಯಮಾನಾ ಬಲಿನಾ ಭೀಮಸೇನೇನ ದಂತಿನಃ |
ಆರ್ತನಾದಂ ರಣೇ ಚಕ್ರುರ್ಗರ್ಜಂತೋ ಜಲದಾ ಇವ ॥33॥
ಬಲಿಷ್ಠನಾದ ಭೀಮಸೇನನ ಹೊಡೆತಕ್ಕೆ ಸಿಕ್ಕಿದ ಗಜಗಳು ಮೋಡದಂತೆ ಗರ್ಜಿಸುತ್ತಾ ರಣರಂಗದಲ್ಲಿ ಆರ್ತನಾದವನ್ನು ಮಾಡಿದವು.
ಬಹುಧಾ ದಾರಿತಶ್ಚೈವ ವಿಷಾಣೈಸ್ತತ್ರ ದಂತಿಭಿಃ |
ಫುಲ್ಲಾಶೋಕನಿಭಃ ಪಾರ್ಥಃ ಶುಶುಭೇ ರಣಮೂರ್ಧನಿ ॥34॥
ಗಜಗಳ ದಂತಗಳಿಂದ ಬಹಳವಾಗಿ ಗಾಯಗೊಂಡ ಭೀಮಸೇನನು ರಣರಂಗದಲ್ಲಿ ಹೂವರಳಿದ ಅಶೋಕವೃಕ್ಷದಂತೆ ಶೋಭಿಸಿದನು.
ಸಾದಿನಾಂ ಶರವೃಷ್ಟಿಂ ಚ ವ್ಯಧಮದ್ ಗದಯಾ ತತಃ |
ವಾಯುವೇಗಸಮಾಯುಕ್ತೋ ವ್ಯಚರತ್ ಪಾಂಡವೋ ಯುಧಿ |
ವಿಷಾಣೋಲ್ಲಿಖಿತೈರ್ಗಾತ್ರೈರ್ವಿಷಾಣಾಭಿಹತೋ ಭೃಶಮ್ ॥35॥
ಅಶ್ವಾರೋಹಿಗಳ (ಗಜಾರೋಹಿಗಳ) ಬಾಣಗಳ ಮಳೆಯನ್ನು ಅವನು ತನ್ನ ಗದೆಯಿಂದ ನಾಶಗೊಳಿಸಿದನು. ಗಜದಂತಗಳಿಂದ ಹೊಡೆಯಲ್ಪಟ್ಟು ಅವುಗಳಿಂದ ಗಾಯಗೊಂಡ ಪಾಂಡವನು ಯುದ್ದದಲ್ಲಿ ವಾಯುವೇಗದಿಂದ ಸಂಚರಿಸಿದನು.
ವಿಷಾಣೇ ದಂತಿನಂ ಗೃಹ್ಯ ನಿರ್ವಿಷಾಣಮಥಾಕರೋತ್ |
ವಿಷಾಣೇನ ಚ ತೇನೈವ ಕುಂಭೇಽಭ್ಯಾಹತ್ಯ ದಂತಿನಮ್ |
ಪಾತಯಾಮಾಸ ಸಮರೇ ದಂಡಹಸ್ತ ಇವಾಂತಕಃ ॥36॥
ಗಜವನ್ನು ದಂತದಲ್ಲಿ ಹಿಡಿದು ಎಳೆದು, ಅದನ್ನು ದಂತವಿಲ್ಲದಂತೆ ಮಾಡಿ, ಅದೇ ದಂತದಿಂದ ಗಜವನ್ನು ಕುಂಭಸ್ಥಲದಲ್ಲಿ ಹೊಡೆದು, ದಂಡಹಸ್ತನಾದ ಯಮನಂತೆ ಯುದ್ಧದಲ್ಲಿ ಗಜಗಳನ್ನು ಕೆಡವಿದನು.
ಶೋಣಿತಾಕ್ತಾಂ ಗದಾಂ ಬಿಭ್ರನ್ಮೇದೋಮಜ್ಜಾಕೃತಚ್ಛವಿಃ |
ಕೃತಾಂಗದಃ ಶೋಣಿತೇನ ರುದ್ರವತ್ ಪ್ರತ್ಯದೃಶ್ಯತ ॥36॥
ಮೇಧಸ್ಸು ಮತ್ತು ಮಜ್ಜಗಳ ಲೇಪದಿಂದ ಉಂಟಾದ ಕಾಂತಿಯುಳ್ಳವನಾಗಿ ಅಂಗದವನ್ನು ಧರಿಸಿದ ಭೀಮಸೇನನು ರಕ್ತಸಿಕ್ತವಾದ ಗದೆಯನ್ನು ಹಿಡಿದು ರುದ್ರದೇವನಂತೆ ತೋರಿದನು.
ಏವಂ ತೇ ವಧ್ಯಮಾನಾಸ್ತು ಹತಶೇಷಾ ಮಹಾಗಜಾಃ |
ಪ್ರಾದ್ರವಂತ ದಿಶೋ ರಾಜನ್ ವಿಮೃದ್ನಂತಃ ಸ್ವಕಂ ಬಲಮ್ ॥37॥
ಎಲೈ ರಾಜನೇ, ಹೀಗೆ ಭೀಮಸೇನನಿಂದ ಪ್ರಹಾರಕ್ಕೆ ಒಳಗಾದಾಗ ಉಳಿದ ಮಹಾಗಜಗಳು ತಮ್ಮ ಸೈನ್ಯವನ್ನೇ ತುಳಿಯುತ್ತಾ ದಿಕ್ಕು ದಿಕ್ಕುಗಳಿಗೆ ಓಡಿಹೋದವು.
ದ್ರವದ್ಭಿಸ್ತೈರ್ಮಹಾನಾಗೈಃ ಸಮಂತಾದ್ ಭರತರ್ಷಭ |
ದುರ್ಯೋಧನಬಲಂ ಸರ್ವಂ ಪುನರಾಸೀತ್ ಪರಾಙ್ಮುಖಮ್ ॥38॥
ಎಲೈ ಭರತಶ್ರೇಷ್ಠನೇ, ಆ ಮಹಾಗಜಗಳು ಎಲ್ಲವೂ ಓಡಿಹೋಗುತ್ತಿರಲು ದುರ್ಯೋಧನನ ಸೈನ್ಯವೆಲ್ಲವೂ ಪುನಃ ಯುದ್ಧವಿಮುಖವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕೋನಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ನವಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ತೊಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರನೆಯ ಅಧ್ಯಾಯ
ಭೀಷ್ಮಾರ್ಜುನರ ಯುದ್ಧ.
ಸಂಜಯಃ
ಮಧ್ಯಾಹ್ನೇ ತು ಮಹಾರಾಜ ಸಂಗ್ರಾಮಃ ಸಮಪದ್ಯತ |
ಲೋಕಕ್ಷಯಕರೋ ರೌದ್ರೋ ಭೀಷ್ಮಸ್ಯ ಸಹ ಸೋಮಕೈಃ ॥1॥
ಸಂಜಯ ಎಲೈ ಮಹಾರಾಜನೇ, ಮಧ್ಯಾಹ್ನದಲ್ಲಿ ಭೀಷ್ಮರಿಗೂ ಮತ್ತು ಸೋಮಕರಿಗೂ ಘೋರವೂ, ಲೋಕನಾಶಕರವೂ ಆದ ಸಂಗ್ರಾಮವು ನಡೆಯಿತು.
ಗಾಂಗೇಯೋ ರಥಿನಾಂ ಶ್ರೇಷ್ಠಃ ಪಾಂಡವಾನಾಮನೀಕಿನೀಮ್ |
ವ್ಯಧಮನ್ನಿಶಿತೈರ್ಬಾಣೈಃ ಶತಶೋಽಥ ಸಹಸ್ರಶಃ ॥2॥
ರಥಿಶ್ರೇಷ್ಠರಾದ ಭೀಷ್ಮರು ತಮ್ಮ ತೀಕ್ಷ್ಣವಾದ ಬಾಣಗಳಿಂದ ಪಾಂಡವರ ಸೈನ್ಯವನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ವಿನಾಶಗೊಳಿಸಿದರು.
ಸಂಮಮರ್ದ ಚ ತತ್ಸೈನ್ಯಂ ಪಿತಾ ದೇವವ್ರತಸ್ತವ |
ಧಾನ್ಯಾನಾಮಿವ ಲೂನಾನಾಂ ಪ್ರಕರಂ ಗೋಗಣಾ ಇವ ॥3॥
ನಿನ್ನ ತಂದೆಯಾದ ಭೀಷ್ಮರು ಕೊಯ್ದ ಧಾನ್ಯಗಳ ರಾಶಿಯನ್ನು ಗೋವುಗಳು ವಿನಾಶಪಡಿಸಿದಂತೆ ಆ ಸೈನ್ಯವನ್ನು ಮರ್ದಿಸಿದರು.
ಧೃಷ್ಟದ್ಯುಮ್ನಃ ಶಿಖಂಡೀ ಚ ವಿರಾಟೋ ದ್ರುಪದಸ್ತಥಾ |

ಭೀಷ್ಮಮಾಸಾದ್ಯ ಸಮರೇ ಶರೈರ್ಜಘ್ನುರ್ಮಹಾರಥಮ್ ॥4॥
ಧೃಷ್ಟದ್ಯುಮ್ನ, ಶಿಖಂಡಿ, ವಿರಾಟ ಮತ್ತು ದ್ರುಪದರು ಯುದ್ಧದಲ್ಲಿ ಭೀಷ್ಮರನ್ನು ಸಮೀಪಿಸಿ ಮಹಾರಥರಾದ ಅವರನ್ನು ಬಾಣಗಳಿಂದ ಹೊಡೆದರು.
ಧೃಷ್ಟದ್ಯುಮ್ನಂ ತತೋ ವಿದ್ಧ್ವಾ ವಿರಾಟಂ ಚ ತ್ರಿಭಿಃ ಶರೈಃ |
ದ್ರುಪದಸ್ಯ ಚ ನಾರಾಚಂ ಪ್ರೇಷಯಾಮಾಸ ಭಾರತ ॥5॥
ಎಲೈ ಭಾರತನೇ, ಭೀಷ್ಮರು ಧೃಷ್ಟದ್ಯುಮ್ನನನ್ನು ಬಾಣದಿಂದ ಹೊಡೆದು, ವಿರಾಟನನ್ನು ಮೂರು ಬಾಣದಿಂದ ಹೊಡೆದು, ದ್ರುಪದನ ಮೇಲೆ ಒಂದು ನಾರಾಚವನ್ನು ಪ್ರಯೋಗಿಸಿದರು.
ತೇನ ವಿದ್ಧಾ ಮಹೇಷ್ವಾಸಾ ಭೀಷ್ಮೇಣಾಮಿತ್ರಕರ್ಶಿನಾ |
ಚುಕ್ರುಧುಃ ಸಮರೇ ರಾಜನ್ ಪಾದಸ್ಪೃಷ್ಟಾ ಇವೋರಗಾಃ ॥6॥
ಎಲೈ ರಾಜನೇ, ಶತ್ರುಸಂತಾಪಕರಾದ ಭೀಷ್ಮರಿಂದ ಹೀಗೆ ಹೊಡೆಯಲ್ಪಟ್ಟ ಮಹಾಧನುರ್ಧಾರಿಗಳಾದ ಅವರು ಪಾದದಿಂದ ತುಳಿದ ಸರ್ಪಗಳಂತೆ ಯುದ್ಧದಲ್ಲಿ ಕೋಪಗೊಂಡರು.
ಶಿಖಂಡೀ ತಂ ಚ ವಿವ್ಯಾಧ ಭರತಾನಾಂ ಪಿತಾಮಹಮ್ |
ಸ್ತ್ರೀಮಯಂ ಮನಸಾ ಧ್ಯಾತ್ವಾ ನಾಸ್ಮೈ ಪ್ರಾಹರದಚ್ಯುತಃ ॥7॥
ಶಿಖಂಡಿಯೂ ಸಹ ಭರತರ ಪಿತಾಮಹರಾದ ಭೀಷ್ಮರ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಅವನು ಮೊದಲು ಕನ್ಯೆಯಾಗಿದ್ದುದನ್ನು ಮನಸ್ಸಿನಲ್ಲಿ ಸ್ಮರಿಸಿದ, ತಮ್ಮ ಕ್ಷತ್ರಿಯಧರ್ಮದಿಂದ ಚ್ಯುತರಾಗದ ಭೀಷ್ಮರು ಅವನ ಮೇಲೆ ಬಾಣ ಪ್ರಯೋಗವನ್ನು ಮಾಡಲಿಲ್ಲ.
ಧೃಷ್ಟದ್ಯುಮ್ನಸ್ತು ಸಮರೇ ಕ್ರೋಧಾದಗ್ನಿರಿವ ಜ್ವಲನ್ |
ಪಿತಾಮಹಂ ತ್ರಿಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ ॥8॥
ಧೃಷ್ಟದ್ಯುಮ್ನನಾದರೋ ಕೋಪದಿಂದ ಅಗ್ನಿಯಂತೆ ಜ್ವಲಿಸುತ್ತಾ ಮೂರು ಬಾಣಗಳಿಂದ ಪಿತಾಮಹರನ್ನು ಅವರ ಬಾಹುಗಳಲ್ಲಿಯೂ ಮತ್ತು ಎದೆಯಲ್ಲಿಯೂ ಹೊಡೆದನು.
ದ್ರುಪದಃ ಪಂಚವಿಂಶತ್ಯಾ ವಿರಾಟೋ ದಶಭಿಃ ಶರೈಃ |
ಶಿಖಂಡೀ ಪಂಚವಿಂಶತ್ಯಾ ಭೀಷ್ಮಂ ವಿವ್ಯಾಧ ಸಾಯಕೈಃ ॥9॥
ದ್ರುಪದನು ಇಪ್ಪತ್ತೈದು ಬಾಣಗಳಿಂದಲೂ, ವಿರಾಟನು ಹತ್ತು ಬಾಣಗಳಿಂದಲೂ, ಶಿಖಂಡಿಯು ಇಪ್ಪತ್ತೈದು ಬಾಣಗಳಿಂದಲೂ ಭೀಷ್ಮರನ್ನು ಹೊಡೆದರು.
ಸೋಽತಿವಿದ್ಧೋ ಮಹಾರಾಜ ಭೀಷ್ಮಃ ಸಂಖೇ ಮಹಾತ್ಮಭಿಃ |
ವಸಂತೇ ಪುಷ್ಪಶಬಲೋ ರಕ್ತಾಶೋಕ ಇವಾಬಭೌ ॥10॥
ಎಲೈ ಮಹಾರಾಜನೇ, ಆ ಮಹಾತ್ಮರಿಂದ ಯುದ್ಧದಲ್ಲಿ ಹಾಗೆ ಪ್ರಹಾರಕ್ಕೆ ಒಳಗಾದ ಭೀಷ್ಮರು ವಸಂತಕಾಲದಲ್ಲಿ ಪುಷ್ಪಗಳು ಅರಳಿದ ರಕ್ತಾಶೋಕ ವೃಕ್ಷದಂತೆ ಕಂಗೊಳಿಸಿದರು.
ತಾನ್ ಪ್ರತ್ಯವಿಧ್ಯದ್ ಗಾಂಗೇಯಸ್ತ್ರಿಭಿಸ್ತ್ರಿಭಿರಜಿಹ್ಮಗೈಃ |
ದ್ರುಪದಸ್ಯ ಚ ಭಲ್ಲೇನ ಧನುಶ್ಚಿಚ್ಛೇದ ಮಾರಿಷ ॥11॥
ಗಂಗಾಪುತ್ರರಾದ ಭೀಷ್ಮರು ಅವರಲ್ಲಿ ಒಬ್ಬೊಬ್ಬರ ಮೇಲೆಯೂ ನೇರವಾಗಿ ಸಾಗುವ ಮೂರು ಮೂರು ಬಾಣಗಳನ್ನು ಪ್ರಯೋಗಿಸಿದರು. ಎಲೈ ಶ್ರೇಷ್ಠನೇ, ಮತ್ತು ಭಲ್ಲದಿಂದ ದ್ರುಪದನ ಧನುಸ್ಸನ್ನು ಕತ್ತರಿಸಿದರು.
ಸೋಽನ್ಯತ್ಕಾರ್ಮುಕಮಾದಾಯ ಭೀಷ್ಮಂ ವಿವ್ಯಾಧ ಪಂಚಭಿಃ |
ಸಾರಥಿಂ ಚ ತ್ರಿಭಿರ್ಬಾಣೈಃ ಸುಶಿತೈ ರಣಮೂರ್ಧನಿ ॥12॥
ದ್ರುಪದನಾದರೋ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಐದು ಬಾಣಗಳಿಂದ ಭೀಷ್ಮರನ್ನು ಹೊಡೆದನು ಮತ್ತು ಘೋರ ಸಂಗ್ರಾಮದಲ್ಲಿ ಅವರ ಸಾರಥಿಯನ್ನೂ ತೀಕ್ಷ್ಣವಾದ ಮೂರುಬಾಣದಿಂದ ಹೊಡೆದನು.
ತತೋ ಭೀಮೋ ಮಹಾರಾಜ ದ್ರೌಪದ್ಯಾಃ ಪಂಚ ಚಾತ್ಮಜಾಃ |
ಕೇಕಯಾ ಭ್ರಾತರಃ ಪಂಚ ಸಾತ್ಯಕಿಶ್ಚೈವ ಸಾತ್ವತಃ ॥13॥
ಅಭ್ಯದ್ರವಂತ ಗಾಂಗೇಯಂ ಯುಧಿಷ್ಠಿರಹಿತೇಪ್ಸಯಾ |
ರಿರಕ್ಷಿಷಂತಃ ಪಾಂಚಾಲ್ಯಂ ಧೃಷ್ಟದ್ಯುಮ್ನಮುಖಾನ್ ರಣೇ ॥14॥
ಎಲೈ ಮಹಾರಾಜನೇ, ಆಗ ಭೀಮಸೇನ, ದ್ರೌಪದಿಯ ಐವರು ಮಕ್ಕಳು, ಕೇಕಯ ದೇಶದ ಐವರು ಸಹೋದರರು, ಸಾತ್ವತನಾದ ಸಾತ್ಯಕಿ ಇವರೆಲ್ಲರೂ ಯುಧಿಷ್ಠಿರನ ಹಿತದ ಅಪೇಕ್ಷೆಯಿಂದ ದ್ರುಪದನನ್ನೂ, ಧೃಷ್ಟದ್ಯುಮ್ನ ಮೊದಲಾದವರನ್ನೂ ಯುದ್ಧದಲ್ಲಿ ರಕ್ಷಿಸಲು ಬಯಸಿ ಭೀಷ್ಮರ ಕಡೆಗೆ ಧಾವಿಸಿದರು.
ತಥೈವ ತಾವಕಾಃ ಸರ್ವೇ ಭೀಷ್ಮರಕ್ಷಾರ್ಥಮುದ್ಯತಾಃ |
ಪ್ರತ್ಯುದ್ಯಯುಃ ಪಾಂಡುಸೇನಾಂ ಸಹಸೈನ್ಯಾ ನರಾಧಿಪ ॥15॥
ಎಲೈ ರಾಜನೇ, ಆಗ ನಿನ್ನವರೆಲ್ಲರೂ ಭೀಷ್ಮರನ್ನು ರಕ್ಷಿಸಲು ಉದ್ಯುಕ್ತರಾಗಿ ತಮ್ಮ ಸೈನ್ಯಗಳ ಜೊತೆಯಲ್ಲಿ ಪಾಂಡವರ ಸೇನೆಯ ಮೇಲೆ ಎರಗಿದರು.
ತತ್ರಾಸೀತ್ ಸುಮಹದ್‌ಯುದ್ಧಂ ತವ ತೇಷಾಂ ಚ ಸಂಕುಲಮ್ |
ನರಾಶ್ವರಥನಾಗಾನಾಂ ಯಮರಾಷ್ಟ್ರವಿವರ್ಧನಮ್ ॥16॥
ಆಗ ನಿನ್ನವರಿಗೂ ಮತ್ತು ಅವರಿಗೂ ನರಾಶ್ವರಥಗಜಗಳಿಂದ ಯಮರಾಷ್ಟ್ರ ವಿವರ್ಧನವಾದ ಸಂಕುಲವಾದ ದೊಡ್ಡ ಯುದ್ಧವು

ನಡೆಯಿತು.
ರಥೀ ರಥಿನಮಾಸಾದ್ಯ ಪ್ರಾಹಿಣೋದ್ ಯಮಸಾದನಮ್ |
ತಥೇತರಾನ್ ಸಮಾಸಾದ್ಯ ನರನಾಗಾಶ್ವಸಾದಿನಃ ॥17॥
ಅನಯನ್ ಪರಲೋಕಾಯ ಶರೈಃ ಸನ್ನತಪರ್ವಭಿಃ |
ಅಸ್ತ್ರೈಶ್ಚ ವಿವಿಧೈರ್ಘೋರೈಸ್ತತ್ರ ತತ್ರ ವಿಶಾಂಪತೇ ॥18॥
ಎಲೈ ರಾಜನೇ, ರಥಿಕನು ರಥಿಕನನ್ನು ಸಮೀಪಿಸಿ ಯಮಪಟ್ಟಣಕ್ಕೆ ಕಳುಹಿಸಿದನು. ಹಾಗೆಯೇ, ಯೋಧರು, ಗಜಾರೋಹಿಗಳು ಮತ್ತು ಅಶ್ವಾರೋಹಿಗಳು ತಮ್ಮ ಶತ್ರುಗಳಾದ ಇತರರನ್ನು ಸಮೀಪಿಸಿ ಬಾಗಿದ ತುದಿಯುಳ್ಳ ಬಾಣಗಳಿಂದಲೂ, ಉಳಿದವಾದ ಘೋರವಾದ ಅಸ್ತ್ರಗಳಿಂದಲೂ ಅಲ್ಲಲ್ಲಿ ಯಮಪಟ್ಟಣಕ್ಕೆ ಕಳುಹಿಸಿದರು.
ರಥಾಶ್ಚ ರಥಿಭಿರ್ಹೀನಾ ಹತಸಾರಥಯಸ್ತಥಾ |
ವಿಪ್ರದ್ರುತಾಶ್ವಾಃ ಸಮರೇ ದಿಶೋ ಜಗ್ಮುಃ ಸಮಂತತಃ ॥19॥
ರಥಿಕರಿಂದ ಹೀನವಾದ, ಸಾರಥಿಗಳಿಂದಲೂ ಹೀನವಾದ ರಥಗಳು ಅಶ್ವಗಳು ಮಾತ್ರ ಓಡಿಹೋಗುತ್ತಿರಲು ರಣರಂಗದಲ್ಲಿ ಎಲ್ಲ ದಿಕ್ಕುಗಳಿಗೂ ಎಳೆಯಲ್ಪಟ್ಟವು.
ಮರ್ದಮಾನಾ ನರಾನ್ ರಾಜನ್ ಹಯಾಂಶ್ಚ ಸುಬಹೂನ್ ರಣೇ |
ವಾತಾಯಮಾನಾ ದೃಶ್ಯಂತೇ ಗಂಧರ್ವನಗರೋಪಮಾಃ ॥20॥
ಎಲೈ ರಾಜನೇ, ಅಂತಹ ರಥಗಳು ಸೈನಿಕರನ್ನೂ ಮತ್ತು ಅನೇಕ ಅಶ್ವಗಳನ್ನೂ ಯುದ್ಧದಲ್ಲಿ ಮರ್ದಿಸುತ್ತಾ, ವಾಯುವೇಗದಿಂದ ಸಾಗುತಾ, ಗಂಧರ್ವನಗರಗಳಂತೆ ತೋರಿಬಂದವು.
ರಥಿನಶ್ಚ ರಥೈರ್ಹೀನಾ ವರ್ಮಿಣಸ್ತೇಜಸಾ ಯುತಾಃ |
ಕುಂಡಲೋಷ್ಣೀಷಿಣಃ ಸರ್ವೇ ನಿಷ್ಕಾಂಗದವಿಭೂಷಿತಾಃ ॥21॥
ದೇವಪುತ್ರಸಮಾ ರೂಪೇ ಶೌರ್ಯೇ ಶಕ್ರಸಮಾ ಯುಧಿ |
ಋದ್ಧ್ಯಾ ವೈಶ್ರವಣಂ ಚಾತಿ ನಯೇನ ಚ ಬೃಹಸ್ಪತಿಮ್ ॥22॥
ಸರ್ವಲೋಕೇಶ್ವರಾಃ ಶೂರಾಸ್ತತ್ರ ತತ್ರ ವಿಶಾಂಪತೇ |
ವಿಪ್ರದ್ರುತಾ ವ್ಯದೃಶ್ಯಂತ ಪ್ರಾಕೃತಾ ಇವ ಮಾನವಾಃ ॥23॥
ರಥವನ್ನು ಕಳೆದುಕೊಂಡು, ಕವಚವನ್ನು ಧರಿಸಿ, ತೇಜೋಯುಕ್ತರಾಗಿ, ಕುಂಡಲ- ಉಷ್ಣೀಷಗಳನ್ನು ಮತ್ತು ನಿಷ್ಕಾಂಗದಗಳನ್ನು ಧರಿಸಿದ, ರೂಪದಲ್ಲಿ ದೇವಪುತ್ರ ಸಮರಾದ, ಶೌರ್ಯದಲ್ಲಿ ಇಂದ್ರರಿಗೆ ಸಮರಾದ, ಸಮೃದ್ಧಿಯಲ್ಲಿ ಕುಬೇರನನ್ನು ಮೀರಿಸಿದ, ನೀತಿಯಲ್ಲಿ ಬೃಹಸ್ಪತಿಯನ್ನು ಮೀರಿಸಿದ, ಸರ್ವಲೋಕೇಶ್ವರರಾದ ಶೂರರು ಅಲ್ಲಲ್ಲಿ ಪ್ರಾಕೃತ ಜನರಂತೆ ಓಡಿಹೋಗುವುದು ಕಂಡುಬಂದಿತು.
ದಂತಿನಶ್ಚ ನರಶ್ರೇಷ್ಠ ವಿಹೀನಾ ವರಸಾದಿಭಿಃ |
ಮೃದ್ನಂತಃ ಸ್ವಾನ್ಯನೀಕಾನಿ ನಿಪೇತುಃ ಸರ್ವಶಬ್ದಗಾಃ ॥24॥
ಎಲೈ ನರಶ್ರೇಷ್ಠನೇ, ಗಜಗಳೂ ಸಹ ಗಜಾರೋಹಿಗಳಿಂದ ಸಹಿತವಾಗಿ ಯಾವ ಹಾಹಾಕಾರ ಶಬ್ದವನ್ನೂ ಲೆಕ್ಕಿಸದೇ ತಮ್ಮ ಸೈನ್ಯವನ್ನೇ ಮರ್ದಿಸುತ್ತಾ ಓಡಿದವು.
ವರ್ಮಭಿಶ್ಚಾಮರೈಶ್ಚತ್ರೈಃ ಪತಾಕಾಭಿಶ್ಚ ಮಾರಿಷ |
ಕಕ್ಷ್ಯಾಭಿರಥ ತೋತ್ತ್ರೈಶ್ಚ ಘಂಟಾಭಿಸ್ತೋಮರೈಸ್ತಥಾ ॥25॥
ವಿಶೀರ್ಣೈರ್ವಿಪ್ರಧಾವಂತೋ ದೃಶ್ಯಂತೇ ಸ್ಮ ದಿಶೋ ದಶ |
ನಗಮೇಘಪ್ರತೀಕಾಶೈರ್ಜಲದೋಪಮನಿಸ್ವನೈಃ ॥26॥
ಕವಚಗಳು, ಚಾಮರಗಳು, ಛತ್ರಗಳು, ಪತಾಕೆಗಳು, ಸರಪಳಿಗಳು, ಅಂಕುಶಗಳು, ಗಂಟೆಗಳು, ತೋಮರಗಳು ಎಲೈ ರಾಜನೇ, ಇವೆಲ್ಲವೂ ಭಿನ್ನವಾಗಿ ನಾಶಗೊಳಿಸಲ್ಪಟ್ಟ ಮಹಾಗಜಗಳು ಪರ್ವತಗಳ ಸಮೂಹದಂತೆ, ಮೇಘಗಳಂತೆ ಗರ್ಜಿಸುತ್ತಾ ಮೇಘಮಂಡಲದಂತೆ ದಿಕ್ಕುದಿಕ್ಕುಗಳಿಗೆ ಓಡಿಹೋಗುವುದು ಕಂಡುಬಂದಿತು.
ತಥೈವ ದಂತಿಭಿರ್ಹೀನಾನ್ ಗಜಾರೋಹಾನ್ ವಿಶಾಂಪತೇ |
ಪ್ರಧಾವಂತೋಽನ್ವಪಶ್ಯಾಮ ತವ ತೇಷಾಂ ಚ ಸಂಕುಲೇ ॥27॥
ಹಾಗೆಯೇ, ಎಲೈ ರಾಜನೇ, ಗಜಗಳನ್ನು ಕಳೆದುಕೊಂಡು ಓಡಿಹೋಗುವ ಗಜಾರೋಹಿಗಳನ್ನು ಆ ಸಂಕುಲ ಯುದ್ಧದಲ್ಲಿ ನಿನ್ನ ಮತ್ತು ಅವರ ಸೈನ್ಯಗಳಲ್ಲಿ ನೋಡಿದೆವು.
ನಾನಾದೇಶಸಮುತ್ಥಾಂಶ್ಚ ತುರಗಾನ್ ಹೇಮಭೂಷಿತಾನ್ |
ವಾತಾಯಮಾನಾನದ್ರಾಕ್ಷಂ ಶತಶೋಽಥ ಸಹಸ್ರಶಃ ॥28॥
ನಾನಾದೇಶಗಳಲ್ಲಿ ಜನಿಸಿದ, ಸುವರ್ಣಾಲಂಕೃತವಾದ ಅಶ್ವಗಳು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ವಾಯುವೇಗದಿಂದ ಓಡಿಹೋಗುವುದನ್ನು ನೋಡಿದೆನು.
ಅಶ್ವಾರೋಹಾನ್ ಹತೈರಶ್ವೈರ್ಗೃಹೀತಾಸೀನ್ ಸಮಂತತಃ |
ದ್ರವಮಾಣಾನಪಶ್ಯಾಮ ದ್ರಾವ್ಯಮಾಣಾಂಶ್ಚ ಸಂಯುಗೇ ॥29॥
ಅಶ್ವಗಳನ್ನು ಕಳೆದುಕೊಂಡ ಅಶ್ವಾರೋಹಿಗಳು, ಕೈಯಲ್ಲಿ ಖಡ್ಗವನ್ನು ಹಿಡಿದು ಯುದ್ಧದಲ್ಲಿ ತಾವು ಓಡುತ್ತಾ ಶತ್ರುಗಳಿಂದ ಓಡಿಸಲ್ಪಡುವುದನ್ನು ನಾವು ನೋಡಿದೆವು.
ಗಜೋ ಗಜಂ ಸಮಾಸಾದ್ಯ ದ್ರವಮಾಣಂ ಮಹಾರಣೇ |

ಯಯೌ ವಿಮೃದ್ನಂಸ್ತರಸಾ ಪದಾತೀನ್ ವಾಜಿನಸ್ತಥಾ ॥30॥
ಮಹಾಯುದ್ಧದಲ್ಲಿ ಗಜವು ಓಡುತ್ತಿರುವ ಇನ್ನೊಂದು ಗಜದ ಸಮೀಪಕ್ಕೆ ಓಡುತ್ತಾ ಶೀಘ್ರವಾಗಿ ಪದಾತಿಗಳನ್ನೂ ಮತ್ತು ಅಶ್ವಗಳನ್ನೂ ತುಳಿದು ನಾಶಪಡಿಸುತ್ತಿದ್ದವು.
ತಥೈವ ಚ ರಥಾನ್ ರಾಜನ್ ಸಮ್ಮಮರ್ದ ರಣೇ ಗಜಃ |
ರಥಶ್ಚೈವ ಸಮಾಸಾದ್ಯ ಪದಾತಿಂ ತುರಗಂ ತಥಾ ॥31॥
ವ್ಯಮೃದ್ನಾತ್ ಸಮರೇ ರಾಜಂಸ್ತುರಗಾಂಶ್ಚ ನರಾನ್ ರಣೇ |
ಎಲೈ ರಾಜನೇ, ಹಾಗೆಯೇ, ಗಜಗಳು ಯುದ್ಧದಲ್ಲಿ ರಥಗಳನ್ನು ನಾಶಗೊಳಿಸುತ್ತಿದ್ದವು. ಹಾಗೆಯೇ ರಥಗಳು ಪದಾತಿಗಳನ್ನು ಮತ್ತು ಅಶ್ವಗಳನ್ನು ಸಮೀಪಿಸಿ ತುರಗಗಳನ್ನು ಮತ್ತು ಯೋಧರನ್ನು ಯುದ್ಧದಲ್ಲಿ ನಾಶಪಡಿಸುತ್ತಿದ್ದರು.
ಏವಂ ತೇ ಬಹುಧಾ ರಾಜನ್ ಪ್ರಮೃದ್ನಂತಃ ಪರಸ್ಪರಮ್ |
ದೃಶ್ಯಂತೇ ಸ್ಮ ಮಹಾಬಾಹೋ ತತ್ರತತ್ರ ಮಹಾಬಲಾಃ ॥32॥
ಎಲೈ ಮಹಾಬಾಹುವೇ, ರಾಜನೇ, ಮಹಾಬಲರಾದ ಎರಡೂ ಸೈನ್ಯಗಳ ಯೋಧರು ಪರಸ್ಪರವಾಗಿ ನಾಶಗೊಳಿಸುತ್ತಿರುವುದು ಅಲ್ಲಿ ಅನೇಕ ಪ್ರಕಾರವಾಗಿ ಕಂಡುಬಂದಿತು.
ತಸ್ಮಿನ್ ರೌದ್ರೇ ತಥಾ ಯುದ್ಧೇ ವರ್ತಮಾನೇ ಮಹಾಭಯೇ |
ಪ್ರಾವರ್ತತ ನದೀ ಘೋರಾ ಶೋಣಿತಾಂತ್ರತರಂಗಿಣೀ ॥33॥
ಅಸ್ಥಿಸಂಚಯಸಂಬಾಧಾ ಕೇಶಶೈವಲಶಾದ್ವಲಾ |
ರಥಹ್ರದಾ ಶರಾವರ್ತಾ ಹಯಮೀನಾ ದುರಾಸದಾ ॥34॥
ಶೀರ್ಷೋಪಲಸಮಾಕೀರ್ಣಾ ಹಸ್ತಿಗ್ರಾಹಸಮಾಕುಲಾ |
ಕವಚೋಷ್ಣೀಷಫೇನಾಢ್ಯಾ ಧನುರ್ದ್ವೀಪಾಸಿಕಚ್ಛಪಾ |
ಶಂಖಚಕ್ರೌಘಸಂಪೂರ್ಣಾ ಛತ್ರಕೂರ್ಮಾ ರಥೋಡುಪಾ ॥35॥
ಪತಾಕಾಧ್ವಜವೃಕ್ಷಾಢ್ಯಾ ಮರ್ತ್ಯಕೂಲಾಪಹಾರಿಣೀ |
ಕ್ರವ್ಯಾದಸಂಘಸಂಕೀರ್ಣಾ ಯಮರಾಷ್ಟ್ರವಿವರ್ಧಿನೀ ॥36॥
ಅಂತಹ ಘೋರವು ಮತ್ತು ಭಯಂಕರವಾದ ಯುದ್ಧವು ರಕ್ತ ಮತ್ತು ಕರುಳುಗಳ ತರಂಗವುಳ್ಳ, ಅಸ್ಥಿಸಂಚಯವೆಂಬ ಗೆಡ್ಡೆಗಳುಳ್ಳ, ಕೇಶವೆಂಬ ಶೈವಲದಿಂದ ಕೂಡಿದ ಮೃದು ಪ್ರದೇಶವುಳ್ಳ, ರಥಗಳೆಂಬ ಮೃಗಗಳಿಂದಲೂ, ಬಾಣಗಳೆಂಬ ಸುಳಿಗಳಿಂದಲೂ, ಅಶ್ವಗಳೆಂಬ ಮೀನುಗಳಿಂದಲೂ ದುರಾಸದವಾದ, ಶಿರಸ್ಸುಗಳೆಂಬ ಕಲ್ಲುಗಳಿಂದ ಕೂಡಿದ, ಗಜಗಳೆಂಬ ಮೊಸಳೆಗಳಿಂದ ಕೂಡಿದ, ಕವಚ ಮತ್ತು ಉಷ್ಣೀಷವೆಂಬ ನೊರೆಗಳಿಂದ ಕೂಡಿದ, ಧನುಸ್ಸುಗಳೆಂಬ ದ್ವೀಪವುಳ್ಳ, ಕತ್ತಿಗಳೆಂಬ ಕೂರ್ಮಗಳುಳ್ಳ, ಶಂಖ ಸಮೂಹಗಳೆಂಬ ವೇಗದಿಂದ ಕೂಡಿದ, ಛತ್ರಗಳೆಂಬ ಕೂರ್ಮಗಳಿಂದಲೂ, ರಥಗಳೆಂಬ ಚಂದ್ರನಿಂದಲೂ, ಪತಾಕೆಗಳು ಮತ್ತು ಧ್ವಜಗಳೆಂಬ ವೃಕ್ಷಗಳಿಂದಲೂ ಕೂಡಿದ, ಯೋಧರೆಂಬ ತೀರವನ್ನು ನಾಶಗೊಳಿಸುವ ಮಾಂಸಾಹಾರಿ ಪ್ರಾಣಿಗಳ ಸಮೂಹದಿಂದ ನಿಬಿಡವಾದ, ಯಮರಾಷ್ಟ್ರ ಪೋಷಕವಾದ ಘೋರವಾದ ನದಿಯು ಹರಿಯಿತು.
ತಾಂ ನದೀಂ ಕ್ಷತ್ರಿಯಾಃ ಶೂರಾ ಹಯನಾಗರಥಪ್ಲವೈಃ |
ಪ್ರತೇರುರ್ಬಹವೋ ರಾಜನ್ ಭಯಂ ತ್ಯಕ್ತ್ವಾ ಮಹಾಹವೇ ॥37॥
ಎಲೈ ರಾಜನೇ, ಆ ಮಹಾಯುದ್ಧದಲ್ಲಿ ಶೂರರಾದ ಅನೇಕ ಕ್ಷತ್ರಿಯರು ಭಯವನ್ನು ತೊರೆದು ಹಯ-ಗಜ-ರಥಗಳೆಂಬ ದೋಣಿಗಳಿಂದ ಆ ನದಿಯನ್ನು ದಾಟಿದರು.
ಅಪೋವಾಹ ರಣೇ ಭೀರೂನ್ ಕಶ್ಮಲೇನಾಭಿಸಂವೃತಾನ್ |
ಯಥಾ ವೈತರಣೀ ಪ್ರೇತಾನ್ ಪ್ರೇತರಾಜಪುರಂ ಪ್ರತಿ ॥38॥
ವೈತರಣಿಯು ಮೃತರಾದವರನ್ನು ಯಮಪಟ್ಟಣಕ್ಕೆ ಸೆಳೆದುಕೊಂಡು ಹೋಗುವಂತೆ ಆ ನದಿಯು ಭಯಗ್ರಸ್ತರನ್ನೂ, ಮನೋದೌರ್ಬಲ್ಯಕ್ಕೆ ಒಳಗಾದವರನ್ನೂ ರಣರಂಗದಿಂದ ಸೆಳೆದು (ಯಮಪಟ್ಟಣಕ್ಕೆ) ಕೊಂಡೊಯ್ಯಿತು.
ಪ್ರಾಕ್ರೋಶನ್ ಕ್ಷತ್ರಿಯಾಸ್ತತ್ರ ದೃಷ್ಟ್ವಾ ತದ್ವೈಶಸಂ ಮಹತ್ |
ದುರ್ಯೋಧನಾಪರಾಧೇನ ಕ್ಷಯಂ ಗಚ್ಛಂತಿ ಕೌರವಾಃ ॥39॥
ಗುಣವತ್ಸು ಕಥಂ ದ್ವೇಷಂ ಧಾರ್ತರಾಷ್ಟ್ರೋ ಜನೇಶ್ವರಃ |
ಕೃತವಾನ್ ಪಾಂಡುಪುತ್ರೇಷು ಪಾಪಾತ್ಮಾ ಲೋಭಮೋಹಿತಃ ॥40॥
ಆ ದೊಡ್ಡ ಹಿಂಸೆಯನ್ನು ನೋಡಿದ ಕ್ಷತ್ರಿಯರು ದುರ್ಯೋಧನನ ಅಪರಾಧದಿಂದ ಕೌರವರು ನಾಶಗೊಳ್ಳುತ್ತಿದ್ದಾರೆ. ಪಾಪಾತ್ಮನಾದ ರಾಜನಾದ ದುರ್ಯೋಧನನು ಲೋಭಕ್ಕೆ ಒಳಗಾಗಿ ಗುಣವಂತರಾದ ಪಾಂಡವರಲ್ಲಿ ಹೇಗೆ ದ್ವೇಷವನ್ನು ಮಾಡಿದನು ಎಂದು ಶಪಿಸುತ್ತಿದ್ದರು.
ಏವಂ ಬಹುವಿಧಾ ವಾಚಃ ಶ್ರೂಯಂತೇ ಸ್ಮಾತ್ರ ಭಾರತ |
ಪಾಂಡವಸ್ತವಸಂಯುಕ್ತಾಃ ಪುತ್ರಾಣಾಂ ತೇ ಸುದಾರುಣಾಃ ॥41॥
ಎಲೈ ಭಾರತನೇ, ಹೀಗೆ ಪಾಂಡವರ ಪ್ರಶಂಸಾ ಸಹಿತವಾದ ನಿನ್ನ ಪುತ್ರನ ಕಿವಿಗಳಿಗೆ ದಾರುಣವಾದ ಅನೇಕ ಮಾತುಗಳು ಅಲ್ಲಿ ಕೇಳಿಬರುತ್ತಿದ್ದವು.
ತಾ ನಿಶಮ್ಯ ತದಾ ವಾಚಃ ಸರ್ವಯೋಧೈರುದಾಹೃತಾಃ |
ಆಗಸ್ಕೃತ್ ಸರ್ವಲೋಕಸ್ಯ ಪುತ್ರೋ ದುರ್ಯೋಧನಸ್ತವ ॥42॥
ಭೀಷ್ಮಂ ದ್ರೋಣಂ ಕೃಪಂ ಚೈವ ಶಲ್ಯಂ ಚೋವಾಚ ಭಾರತ |

ಯುಧ್ಯಧ್ವಮನಹಂಕಾರಾಃ ಕಿಂ ಚಿರಂ ಕುರುಥೇತಿ ಚ |
ಇತಿ ದುರ್ಯೋಧನೋತ್ಸೃಷ್ಟಾಃ ಸರ್ವೇ ಯುಯುಧಿರೇ ನೃಪಾಃ ॥43॥
ಸರ್ವಯೋಧರು ಹೇಳುವ ಆ ಮಾತುಗಳನ್ನು ಕೇಳಿ, ಸರ್ವಲೋಕಕ್ಕೂ ಅಪಚಾರವನ್ನು ಮಾಡಿದ ನಿನ್ನ ಪುತ್ರನಾದ ದುರ್ಯೋಧನನು ಭೀಷ್ಮ-ದ್ರೋಣ- ಕೃಪ-ಶಲ್ಯರನ್ನು ಸಮೀಪಿಸಿ, ಅಹಂಕಾರವನ್ನು ಬಿಟ್ಟು ಯುದ್ಧವನ್ನು ಮಾಡಿ, ಏಕೆ ವಿಳಂಬವನ್ನು ಮಾಡುತ್ತಿದ್ದೀರಿ ಎಂದು ಹೇಳಿದನು. ಎಲ್ಲೈ ಭಾರತನೇ, ದುರ್ಯೋಧನನಿಂದ ಪ್ರಚೋದಿಸಲ್ಪಟ್ಟು ಎಲ್ಲ ರಾಜರೂ ಯುದ್ಧವನ್ನು ಮಾಡಿದರು.
ತತಃ ಪ್ರವವೃತೇ ಯುದ್ಧಂ ಕುರೂಣಾಂ ಪಾಂಡವೈಃ ಸಹ |
ಅಕ್ಷದ್ಯೂತಕೃತಂ ರಾಜನ್ ಸುಘೋರಂ ವೈಶಸಂ ತದಾ ॥44॥
ಎಲ್ಲೈ ರಾಜನೇ, ಆಗ ಕೌರವರಿಗೂ ಮತ್ತು ಪಾಂಡವರಿಗೂ ಅಕ್ಷದ್ಯೂತವನ್ನು ನಿಮಿತ್ತೀಕರಿಸಿದ ಘೋರವಾದ ಯುದ್ಧವು ಜರುಗಿತು.
ಯತ್ ಪುರಾ ನ ನಿಗೃಹ್ಣೀಷೇ ವಾರ್ಯಮಾಣೋ ಮಹಾತ್ಮಭಿಃ |
ವೈಚಿತ್ರವೀರ್ಯ ತಸ್ಯೇದಂ ಫಲಂ ಪಶ್ಯ ತಥಾವಿಧಮ್ ॥45॥
ಎಲ್ಲೈ ವಿಚಿತ್ರವೀರ್ಯಪುತ್ರನಾದ ಧೃತರಾಷ್ಟ್ರನೇ, ಮಹಾತ್ಮರು ನಿಷೇಧಿಸಿದರೂ ನೀನು ಹಿಂದೆ ಯಾವ ಅಕ್ಷದ್ಯೂತವನ್ನು ತಡೆಯಲಿಲ್ಲವೋ, ಅದರ ಈ ಫಲವು ಹೇಗಿದೆ ಎಂಬುದನ್ನು ನೋಡು.
ನ ಹಿ ಪಾಂಡುಸುತಾ ರಾಜನ್ ಸಸೈನ್ಯಾಃ ಸಪದಾನುಗಾಃ |
ರಕ್ಷಂತಿ ಸಮರೇ ಪ್ರಾಣಾನ್ ಕೌರವಾ ವಾ ವಿಶಾಂಪತೇ ॥46॥
ಎಲ್ಲೈ ರಾಜನೇ, ಸೈನ್ಯ ಮತ್ತು ಪದಾತಿಗಳಿಂದ ಕೂಡಿದ ಪಾಂಡವರಾಗಲೀ, ಕೌರವರಾಗಲೀ ಯುದ್ಧದಲ್ಲಿ ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳುವುದಿಲ್ಲ.
ಏತಸ್ಮಾತ್ ಕಾರಣಾದ್ ಘೋರೋ ವರ್ತತೇ ಸ್ಮ ಜನಕ್ಷಯಃ |
ದೈವಾದ್ ವಾ ಪುರುಷವ್ಯಾಘ್ರ ತವ ಚಾಪನಯಾನ್ನೃಪ ॥47॥
ಎಲ್ಲೈ ಪುರುಷವ್ಯಾಘ್ರನೇ, ಆ ಕಾರಣದಿಂದ ದೇವಸಂಕಲ್ಪದಂತೆ ಅಥವಾ ನಿನ್ನ ದುರ್ನೀತಿಯ ಕಾರಣದಿಂದ ಘೋರವಾದ ಜನಕ್ಷಯವು ಉಂಟಾಗುತ್ತಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಒಂದನೆಯ ಅಧ್ಯಾಯ

ದ್ರೋಣಾರ್ಜುನರ ಮತ್ತು ಭೀಷ್ಮ-ಸಾತ್ಯಕಿಗಳ ಯುದ್ಧ.
ಸಂಜಯಃ
ಅರ್ಜುನಸ್ತು ನರವ್ಯಾಘ್ರ ಸುಶರ್ಮಪ್ರಮುಖಾನ್ ನೃಪಾನ್ |
ಅನಯತ್ ಪ್ರೇತರಾಜಸ್ಯ ಭವನಂ ಸಾಯಕೈಃ ಶಿತೈಃ ॥1॥
ಸಂಜಯ ಎಲ್ಲೈ ನರಶ್ರೇಷ್ಠನೇ, ಅರ್ಜುನನಾದರೋ ತನ್ನ ಹರಿತವಾದ ಬಾಣಗಳಿಂದ ಸುಶರ್ಮ ಮೊದಲಾದ ರಾಜರನ್ನು ಯಮದೇವರ ಮನೆಗೆ ಕಳುಹಿಸಿದನು.
ಸುಶರ್ಮಾಪಿ ತತೋ ಬಾಣೈಃ ಪಾರ್ಥಂ ವಿವ್ಯಾಧ ಸಂಯುಗೇ |
ವಾಸುದೇವಂ ಚ ಸಪ್ತತ್ಯಾ ಪಾರ್ಥಂ ಚ ನವಭಿಃ ಪುನಃ ॥2॥
ಸುಶರ್ಮನು ಯುದ್ಧದಲ್ಲಿ ತನ್ನ ಬಾಣಗಳಿಂದ ಅರ್ಜುನನನ್ನು ಹೊಡೆದು, ಪುನಃ ಕೃಷ್ಣನ ಮೇಲೆ ಎಪ್ಪತ್ತು ಬಾಣಗಳನ್ನೂ, ಅರ್ಜುನನ ಮೇಲೆ ಒಂಬತ್ತು ಬಾಣಗಳನ್ನೂ ಪ್ರಯೋಗಿಸಿದನು.
ತಾನ್ ನಿವಾರ್ಯ ಶರೌಘೇಣ ಶಕ್ರಸೂನುರ್ಮಹಾರಥಃ |
ಸುಶರ್ಮಣೋ ರಣೇ ಯೋಧಾನ್ ಪ್ರಾಹಿಣೋದ್ ಯಮಸಾದನಮ್ ॥
ಇಂದ್ರಪುತ್ರನೂ, ಮಹಾರಥನೂ ಆದ ಅರ್ಜುನನು ತನ್ನ ಶರಸಮೂಹದಿಂದ ಆ ಬಾಣಗಳನ್ನು ನಿವಾರಿಸಿ ಸುಶರ್ಮನ ಸೈನಿಕರನ್ನು ಯಮಪಟ್ಟಣಕ್ಕೆ ಕಳುಹಿಸಿದನು.
ತೇ ವಧ್ಯಮಾನಾಃ ಪಾರ್ಥೇನ ಕಾಲೇನೇವ ಯುಗಕ್ಷಯೇ |
ವ್ಯದ್ರವಂತ ರಣೇ ರಾಜನ್ ಭಯೇ ಜಾತೇ ಮಹಾರಥಾಃ ॥4॥
ಎಲ್ಲೈ ರಾಜನೇ, ಯುಗಾಂತಕಾಲದ ಯಮನಂತೆ ಪಾರ್ಥನಿಂದ ಪ್ರಹಾರಕ್ಕೆ ಒಳಗಾದ ಮಹಾರಥರಾದ ಅವರು ಅಂತಹ ಭಯವುಂಟಾಗಲು ರಣಭೂಮಿಯಿಂದ ಓಡಿಹೋದರು.
ಉತ್ಸೃಜ್ಯ ತುರಗಾನ್ ಕೇಚಿದ್ ರಥಾನ್ ಕೇಚಿಚ್ಚ ಮಾರಿಷ |
ಗಜಾನನ್ಯೇ ಸಮುತ್ಸೃಜ್ಯ ಪ್ರಾದ್ರವಂತ ದಿಶೋ ದಶ ॥5॥
ಎಲ್ಲೈ ಪೂಜ್ಯನೇ, ಕೆಲವರು ಅಶ್ವಗಳನ್ನು, ಕೆಲವರು ರಥಗಳನ್ನು, ಕೆಲವರು ಗಜಗಳನ್ನು ಬಿಟ್ಟು ಹತ್ತುದಿಕ್ಕುಗಳಿಗೆ ಓಡಿಹೋದರು.
ಅಪರೇ ತುದ್ಯಮಾನಾಸ್ತು ವಾಜಿನಾಗರಥಾ ರಣಾತ್ |
ತ್ವರಯಾ ಪರಯಾ ಯುಕ್ತಾಃ ಪ್ರಾದ್ರವಂತ ವಿಶಾಂಪತೇ ॥6॥
ಎಲ್ಲೈ ರಾಜನೇ, ಅರ್ಜುನನ ಬಾಣಗಳಿಂದ ಪೀಡಿಸಲ್ಪಟ್ಟ ಅಶ್ವ-ಗಜ-ರಥಗಳು ಬಹಳ ವೇಗವಾಗಿ ರಣಭೂಮಿಯಿಂದ ಓಡಿಹೋದವು.

ಪಾದಾತಾಶ್ಚಾಪಿ ಶಸ್ತ್ರಾಣಿ ಸಮುತ್ಸೃಜ್ಯ ಮಹಾರಣೇ |
ನಿರಪೇಕ್ಷಾ ವ್ಯಧಾವಂತ ತೇನ ತೇನ ಸ್ಮ ಭಾರತ ॥7॥
ಎಲೈ ಭಾರತನೇ, ಪದಾತಿಗಳೂ ಸಹ ಆ ಮಹಾರಣದಲ್ಲಿ ತಮ್ಮ ಶಸ್ತ್ರಗಳನ್ನು ಬಿಸುಟು ಯಾವುದರ ಅಪೇಕ್ಷೆಯೂ ಇಲ್ಲದೆ ಮನಸ್ಸಿಗೆ ಬಂದ ಕಡೆಗೆ ಓಡಿಹೋದರು.
ವಾರ್ಯಮಾಣಾಃ ಸ್ಮ ಬಹುಶಸ್ತ್ರೈಗರ್ತೇನ ಸುಶರ್ಮಣಾ |
ತಥಾನ್ಯೈಃ ಪಾರ್ಥಿವಶ್ರೇಷ್ಠೈರ್ನ ವ್ಯತಿಷ್ಠಂತ ಸಂಯುಗೇ ॥8॥
ತ್ರಿಗರ್ತಾಧಿಪತಿಯಾದ ಸುಶರ್ಮನಿಂದಲೂ ಮತ್ತು ಉಳಿದ ರಾಜರಿಂದಲೂ ನಿಷೇಧಿಸಲ್ಪಟ್ಟರೂ ಸಹ ಅವರು ರಣರಂಗದಲ್ಲಿ ನಿಲ್ಲಲಿಲ್ಲ.
ತದ್ಬಲಂ ಪ್ರದ್ರುತಂ ದೃಷ್ಟ್ವಾ ಪುತ್ರೋ ದುರ್ಯೋಧನಸ್ತವ |
ಪುರಸ್ಕೃತ್ಯ ರಣೇ ಭೀಷ್ಮಂ ಸರ್ವಸೈನ್ಯಪುರಸ್ಕೃತಮ್ ॥9॥
ಸರ್ವೋದ್ಯೋಗೇನ ಮಹತಾ ಧನಂಜಯಮುಪಾದ್ರವತ್ |
ತ್ರಿಗರ್ತಾಧಿಪತೇರರ್ಥೇ ಜೀವಿತಸ್ಯ ವಿಶಾಂಪತೇ ॥10॥
ಎಲೈ ರಾಜನೇ, ತನ್ನ ಸೈನ್ಯವು ಓಡಿಹೋಗುತ್ತಿರುವುದನ್ನು ನೋಡಿದ ನಿನ್ನ ಪುತ್ರನಾದ ದುರ್ಯೋಧನನು ಸರ್ವಸೈನ್ಯದ ಮುಂಭಾಗದಲ್ಲಿದ್ದ ಭೀಷ್ಮರನ್ನು ರಣರಂಗದಲ್ಲಿ ಮುಂದೆ ಮಾಡಿಕೊಂಡು, ತನ್ನ ಎಲ್ಲಾ ಪ್ರಯತ್ನವನ್ನು ಮಾಡಿ, ತ್ರಿಗರ್ತಾಧಿಪತಿಯಾದ ಸುಶರ್ಮನ ಪ್ರಾಣವನ್ನು ಉಳಿಸಲು ಅರ್ಜುನನ ಕಡೆಗೆ ಧಾವಿಸಿದನು.
ಸ ಏಕಃ ಸಮರೇ ತಸ್ಥೌ ಕಿರನ್ ಬಹುವಿಧಾನ್ ಶರಾನ್ |
ಭ್ರಾತೃಭಿಃ ಸಹಿತಃ ಸರ್ವೈಃ ಶೇಷಾ ವಿಪ್ರದ್ರುತಾ ನರಾಃ ॥11॥
ತನ್ನ ತಮ್ಮಂದಿರಿಂದ ಸಹಿತನಾದ ದುರ್ಯೋಧನನೊಬ್ಬನೇ ಅನೇಕ ವಿಧವಾದ ಬಾಣಗಳನ್ನು ಪ್ರಯೋಗಿಸುತ್ತಾ ಯುದ್ಧದಲ್ಲಿ ನಿಂತನು. ಉಳಿದ ಯೋಧರು ಓಡಿಹೋದರು.
ತಥೈವ ಪಾಂಡವಾ ರಾಜನ್ ಸರ್ವೋದ್ಯೋಗೇನ ದಂಸಿತಾಃ |
ಪ್ರಯಯುಃ ಫಲ್ಗುನಾರ್ಥಾಯ ಯತ್ರ ಭೀಷ್ಮೋ ವ್ಯವಸ್ಥಿತಃ ॥12॥
ರಾಜನೇ, ಹಾಗೆಯೇ ಪಾಂಡವರೂ ಸಹ ಸನ್ನದ್ಧರಾಗಿ, ಅರ್ಜುನನ ರಕ್ಷಣೆಗಾಗಿ ತಮ್ಮ ಸರ್ವಪ್ರಯತ್ನದಿಂದ ಭೀಷ್ಮರಿದ್ದ ಕಡೆಗೆ ಧಾವಿಸಿದರು.
ಜಾನಂತೋಽಪಿ ರಣೇ ಶೌರ್ಯಂ ಘೋರಂ ಗಾಂಡೀವಧನ್ವನಃ |
ಹಾಹಾಕಾರಕೃತೋತ್ಸಾಹಾ ಭೀಷ್ಮಂ ಜಗ್ಮುಃ ಸಮಂತತಃ ॥13॥
ಗಾಂಡೀವಧನುರ್ಧಾರಿಯಾದ ಅರ್ಜುನನ ಘೋರವಾದ ರಣಪರಾಕ್ರಮವನ್ನು ತಿಳಿದಿದ್ದರೂ ಸಹ ಸೈನ್ಯದ ಹಾಹಾಕಾರದಿಂದ ಉಂಟಾದ ಉತ್ಸಾಹವುಳ್ಳವರಾಗಿ ಎಲ್ಲ ಕಡೆಯಿಂದಲೂ ಭೀಷ್ಮರ ಬಳಿಗೆ ಸಮೀಪಿಸಿದರು.
ತತಸ್ತಾಳಧ್ವಜಃ ಶೂರಃ ಪಾಂಡವಾನಾಮನೀಕಿನೀಮ್ |
ಛಾದಯಾಮಾಸ ಸಮರೇ ಶರೈಃ ಸನ್ನತಪರ್ವಭಿಃ ॥14॥
ಆಗ ಶೂರರೂ, ತಾಳಧ್ವಜರೂ ಆದ ಭೀಷ್ಮರು ಬಾಗಿದ ತುದಿಯುಳ್ಳ ಬಾಣಗಳಿಂದ ರಣರಂಗದಲ್ಲಿ ಪಾಂಡವರ ಸೈನ್ಯವನ್ನು ಮುಚ್ಚಿಹಾಕಿದರು.
ಏಕೀಭೂತಾಸ್ತತಃ ಸರ್ವೇ ಕುರವಃ ಪಾಂಡವೈಃ ಸಹ |
ಅಯುಧ್ಯಂತ ಮಹಾರಾಜ ಮಧ್ಯಂ ಪ್ರಾಪ್ತೇ ದಿವಾಕರೇ ॥15॥
ಎಲೈ ಮಹಾರಾಜನೇ, ಸೂರ್ಯನು ದಿವಸದ ಮಧ್ಯಭಾಗಕ್ಕೆ ಬರುತ್ತಿರಲು ಪಾಂಡವರು ಕೌರವರೆಲ್ಲರೂ ಒಂದೇ ಕಡೆಯಲ್ಲಿ ಸೇರಿ ಪರಸ್ಪರವಾಗಿ ಯುದ್ಧವನ್ನು ಮಾಡಿದರು.
ಸಾತ್ಯಕಿಃ ಕೃತವರ್ಮಾಣಂ ವಿದ್ಧ್ವಾ ಪಂಚಭಿರಾಯಸೈಃ |
ಅತಿಷ್ಠದಾಹವೇ ಶೂರಃ ಕಿರನ್ ಬಾಣಾನ್ ಸಹಸ್ರಶಃ ॥16॥
ಶೂರನಾದ ಸಾತ್ಯಕಿಯು ಐದು ಕಬ್ಬಿಣದ ಬಾಣಗಳಿಂದ ಕೃತವರ್ಮನನ್ನು ಹೊಡೆದು ಪುನಃ ಸಹಸ್ರಾರು ಬಾಣಗಳನ್ನು ಪ್ರಯೋಗಿಸುತ್ತಾ ರಣರಂಗದಲ್ಲಿ ನಿಂತನು.
ತಥೈವ ದ್ರುಪದೋ ರಾಜಾ ದ್ರೋಣಂ ವಿದ್ಧ್ವಾ ಶಿತೈಃ ಶರೈಃ |
ಪುನರ್ವಿವ್ಯಾಧ ಸಪ್ತತ್ಯಾ ಸಾರಥಿಂ ಚಾಸ್ಯ ಸಪ್ತಭಿಃ ॥17॥
ಹಾಗೆಯೇ, ದ್ರುಪದರಾಜನೂ ಸಹ ದ್ರೋಣರ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಪುನಃ ಅವರ ಮೇಲೆ ಎಪ್ಪತ್ತು ಬಾಣಗಳನ್ನೂ, ಅವರ ಸಾರಥಿಯ ಮೇಲೆ ಏಳು ಬಾಣಗಳನ್ನೂ ಪ್ರಯೋಗಿಸಿದನು.
ಭೀಮಸೇನಸ್ತು ರಾಜಾನಂ ಬಾಹ್ಲಿಕಂ ಪ್ರಪಿತಾಮಹಮ್ |
ವಿದ್ಧ್ವಾಽನದನ್ ಮಹಾನಾದಂ ಶಾರ್ದೂಲ ಇವ ಕಾನನೇ ॥18॥
ಭೀಮಸೇನನಾದರೋ ತಮ್ಮ ಪ್ರಪಿತಾಮಹನಾದ ಬಾಹ್ಲಿಕರಾಜನನ್ನು ಬಾಣಗಳಿಂದ ಹೊಡೆದು ಕಾಡಿನಲ್ಲಿನ ಹುಲಿಯಂತೆ ಮಹಾಗರ್ಜನೆಯನ್ನು ಮಾಡಿದನು.
ಆರ್ಜುನಿಶ್ಚಿತ್ರಸೇನೇನ ವಿದ್ಧೋ ಬಹುಭಿರಾಶುಗೈಃ |
ಚಿತ್ರಸೇನಂ ತ್ರಿಭಿರ್ಬಾಣೈರ್ವಿವ್ಯಾಧ ಹೃದಯೇ ಭೃಶಮ್ ॥19॥
ಅಭಿಮನ್ಯುವು ಚಿತ್ರಸೇನನಿಂದ ವೇಗಶಾಲಿಗಳಾದ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟು ಚಿತ್ರಸೇನನ ಹೃದಯದಲ್ಲಿ ಮೂರು

ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.
ಸಮಾಗತೌ ತೌ ತು ರಣೇ ಮಹಾಮಾತ್ರೌ ವ್ಯರೋಚತಾಮ್ |
ಯಥಾ ದಿವಿ ಮಹಾಘೋರೌ ರಾಜನ್ ಬುಧಶನೈಶ್ಚರೌ ||20||
ಎಲೈ ರಾಜನೇ, ಒಬ್ಬರ ಜೊತೆಯಲ್ಲಿ ಒಬ್ಬರು ಸೆಣೆಸುವ ಆ ಇಬ್ಬರು ಪ್ರಧಾನರು ಆಕಾಶದಲ್ಲಿ ಮಹಾಘೋರವಾದ ಬುಧ-ಶನಿಗಳ ಸಮಾಗಮದಂತೆ ತೋರಿದರು.
ತಸ್ಯಾಶ್ವಾಂಶ್ಚತುರೋ ಹತ್ವಾ ಸೂತಂ ಚ ನವಭಿಃ ಶರೈಃ |
ನನಾದ ಬಲವನ್ನಾದಂ ಸೌಭದ್ರಃ ಪರವೀರಹಾ ||21||
ಪರವೀರಘಾತಕನಾದ ಅಭಿಮನ್ಯುವು ಚಿತ್ರಸೇನನ ರಥದ ನಾಲ್ಕು ಕುದುರೆಗಳನ್ನು ಕೊಂದು, ಸಾರಥಿಯ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿ, ಬಲವಾದ ಸಿಂಹನಾದವನ್ನು ಮಾಡಿದನು.
ಹತಾಶ್ವಾತ್ ತು ರಥಾತ್ ತೂರ್ಣಮವಪ್ಲುತ್ಯ ಮಹಾರಥಃ |
ಆರುರೋಹ ರಥಂ ತೂರ್ಣಂ ದುರ್ಮುಖಸ್ಯ ವಿಶಾಂಪತೇ ||22||
ಎಲೈ ರಾಜನೇ, ಮಹಾರಥನಾದ ಚಿತ್ರಸೇನನು ಅಶ್ವವು ನಷ್ಟವಾದ ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ ಅಷ್ಟೇ ಶೀಘ್ರವಾಗಿ ದುರ್ಮುಖನ ರಥವನ್ನು ಏರಿದನು.
ದ್ರೋಣಶ್ಚ ದ್ರುಪದಂ ವಿದ್ಧ್ವಾ ಶರೈಃ ಸನ್ನತಪರ್ವಭಿಃ |
ಸಾರಥಿಂ ಚಾಸ್ಯ ವಿವ್ಯಾಧ ತ್ವರಮಾಣಃ ಪರಾಕ್ರಮೀ ||23||
ಪರಾಕ್ರಮಶಾಲಿಗಳಾದ ದ್ರೋಣರಾದರೋ ಬಾಗಿದ ತುದಿಯುಳ್ಳ ಬಾಣಗಳಿಂದ ದ್ರುಪದನನ್ನು ಹೊಡೆದು ಅವನ ಸಾರಥಿಯ ಮೇಲೆಯೂ ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸಿದರು.
ಪೀಡ್ಯಮಾನಸ್ತತೋ ರಾಜಾ ದ್ರುಪದೋ ವಾಹಿನೀಮುಖೇ |
ಅಪಾಯಾಜ್ಜವನೈರಶ್ವೈಃ ಪೂರ್ವವೈರಮನುಸ್ಮರನ್ ||24||
ಸೇನಾಮುಖದಲ್ಲಿ ದ್ರೋಣರಿಂದ ಪೀಡಿತನಾದ ದ್ರುಪದನು ಹಿಂದಿನ ವೈರವನ್ನು ಸ್ಮರಿಸುತ್ತಾ ವೇಗಶಾಲಿಯಾದ ಅಶ್ವಗಳಿಂದ ರಣರಂಗದಿಂದ ಹೊರಗೆ ಹೋದನು.
ಭೀಮಸೇನಸ್ತು ರಾಜಾನಂ ಮುಹೂರ್ತಾದಿವ ಬಾಹ್ಲಿಕಮ್ |
ವ್ಯಶ್ವಸೂತರಥಂ ಚಕ್ರೇ ಸರ್ವಸೈನ್ಯಸ್ಯ ಪಶ್ಯತಃ ||25||
ಭೀಮಸೇನನಾದರೋ ಒಂದು ಮುಹೂರ್ತದಷ್ಟು ಸಮಯದಲ್ಲಿ ಎಲ್ಲ ಸೈನ್ಯಗಳೂ ನೋಡುತ್ತಿರುವಂತೆ ಬಾಹ್ಲಿಕ ರಾಜನ ರಥದ ಅಶ್ವಗಳನ್ನು ಮತ್ತು ಸಾರಥಿಯನ್ನು ಕೊಂದನು.
ಸಸಂಭ್ರಮೋ ಮಹಾರಾಜ ಸಂಶಯಂ ಪರಮಂ ಗತಃ |
ಅವಪ್ಲುತ್ಯ ತತೋ ವಾಹಾದ್ ಬಾಹ್ಲಿಕಃ ಪುರುಷೋತ್ತಮಃ |
ಆರುರೋಹ ರಥಂ ತೂರ್ಣಂ ಲಕ್ಷಣಸ್ಯ ಮಹಾರಥಃ ||26||
ಎಲೈ ಮಹಾರಾಜನೇ, ಪ್ರಾಣಸಂಶಯವನ್ನು ಹೊಂದಿದ, ಪುರುಷಶ್ರೇಷ್ಠನಾದ ಬಾಹ್ಲಿಕನು ಗಾಬರಿಯಿಂದ ತನ್ನ ರಥದಿಂದ ಕೆಳಗೆ ಹಾರಿ ಶೀಘ್ರವಾಗಿ ದುರ್ಯೋಧನನ ಪುತ್ರನಾದ ಲಕ್ಷಣನ ರಥವನ್ನು ಏರಿದನು.
ಸಾತ್ಯಕಿಃ ಕೃತವರ್ಮಾಣಂ ವಾರಯಿತ್ವಾ ಮಹಾರಥಃ |
ಶರೈರ್ಬಹುವಿಧೈ ರಾಜನ್ನಾಸಸಾದ ಪಿತಾಮಹಮ್ ||27||
ಮಹಾರಥನಾದ ಸಾತ್ಯಕಿಯು ಅನೇಕ ವಿಧವಾದ ಬಾಣಗಳಿಂದ ಕೃತವರ್ಮನನ್ನು ತಡೆದು ಭೀಷ್ಮ-ಪಿತಾಮಹರ ಸಮೀಪಕ್ಕೆ ಬಂದರು.
ಸ ವಿದ್ಧ್ವಾ ಭಾರತಂ ಷಷ್ಟ್ಯಾ ನಿಶಿತೈರ್ಲೋಮವಾಹಿಭಿಃ |
ನನರ್ತೇವ ರಥೋಪಸ್ಥೇ ವಿಧುನ್ವಾನೋ ಮಹದ್ಧನುಃ ||28||
ಭರತಶ್ರೇಷ್ಠರಾದ ಅವರನ್ನು ಅವನು ಕೂದಲನ್ನೂ ಸೀಳುವಂಥ ಹರಿತವಾದ ಅರವತ್ತು ಬಾಣಗಳಿಂದ ಹೊಡೆದು ತನ್ನ ದೊಡ್ಡ ಧನುಸ್ಸನ್ನು ಕುಣಿಸುತ್ತಾ, ರಥಪೀಠದಲ್ಲಿ ನರ್ತಿಸುವವನಂತೆ ತೋರಿದನು.
ತಸ್ಯಾಯಸೀಂ ಮಹಾಶಕ್ತಿಂ ಚಿಕ್ಷೇಪಾಥ ಪಿತಾಮಹಃ |
ಹೇಮಚಿತ್ರಾಂ ಮಹಾವೇಗಾಂ ನಾಗಕನ್ಯೋಪಮಾಂ ಶುಭಾಮ್ ||29||
ಪಿತಾಮಹರಾದ ಭೀಷ್ಮರು ಅವನ ಮೇಲೆ ಸುವರ್ಣಾಲಂಕೃತವಾದ, ಮಹಾವೇಗಶಾಲಿಯಾದ, ನಾಗಕನ್ಯೆಯಂತಿದ್ದ, ಸ್ವಚ್ಛವಾದ, ಕಬ್ಬಿಣದಿಂದ ಮಾಡಿದ ಮಹಾಶಕ್ತ್ಯಾಯುಧವನ್ನು ಎಸೆದರು.
ತಾಮಾಪತಂತೀಂ ಸಹಸಾ ಮೃತ್ಯುಕಲ್ಪಾಂ ಸುತೇಜನಾಮ್ |
ಧ್ವಂಸಯಾಮಾಸ ವಾರ್ಷ್ಣೇಯೋ ಲಾಘವೇನ ಮಹಾಯಶಾಃ ||30||
ಮಹಾಕೀರ್ತಿಶಾಲಿಯಾದ ಸಾತ್ಯಕಿಯು ತನ್ನ ಕಡೆಗೆ ಮೃತ್ಯುವಿನಂತೆ ಕ್ಷಿಪ್ರವಾಗಿ ಬರುತ್ತಿದ್ದ ತೇಜೋಮಯವಾದ ಆ ಶಕ್ತಿಯನ್ನು ತನ್ನ ಚುರುಕುತನದಿಂದ ನಾಶಗೊಳಿಸಿದನು.
ಅನಾಸಾದ್ಯ ತು ವಾರ್ಷ್ಣೇಯಂ ಶಕ್ತಿಃ ಪರಮದಾರುಣಾ |
ನ್ಯಪತದ್ ಧರಣೀಪೃಷ್ಠೇ ಮಹೋಲ್ಕೇವ ಗತಪ್ರಭಾ ||31||
ಪರಮಘೋರವಾದ ಆ ಶಕ್ತಿಯು ಸಾತ್ಯಕಿಯನ್ನು ತಲುಪದೆಯೇ ತನ್ನ ಕಾಂತಿಯನ್ನು ಕಳೆದುಕೊಂಡು ದೊಡ್ಡ ಉಲ್ಕೆಯಂತೆ ಭೂಮಿಯ ಮೇಲೆ ಬಿದ್ದಿತು.

ವಾರ್ಷ್ಣೇಯಸ್ತು ತತೋ ರಾಜನ್ ಸ್ವಾಂ ಶಕ್ತಿಂ ಘೋರದರ್ಶನಾಮ್ |
ವೇಗವದ್ ಗೃಹ್ಯ ಚಿಕ್ಷೇಪ ಪಿತಾಮಹರಥಂ ಪ್ರತಿ ॥32॥
ಎಲೈ ರಾಜನೇ, ಅನಂತರ ಸಾತ್ಯಕಿಯಾದರೋ ಘೋರವಾಗಿ ತೋರುತ್ತಿದ್ದ ತನ್ನ ಶಕ್ತ್ಯಾಯುಧವನ್ನು ಹಿಡಿದು ಅದನ್ನು ಪಿತಾಮಹರ ರಥದ ಮೇಲೆ ವೇಗವಾಗಿ ಎಸೆದನು.
ವಾರ್ಷ್ಣೇಯಭುಜವೇಗೇನ ಪ್ರಣುನ್ನಾ ಸಾ ಮಹಾಹವೇ |
ಅಭಿದುದ್ರಾವ ವೇಗೇನ ಕಾಲರಾತ್ರಿರ್ಯಥಾ ನರಮ್ ॥33॥
ಸಾತ್ಯಕಿಯ ಭುಜವೇಗದಿಂದ ಪ್ರೇರಿತವಾದ ಶಕ್ತಿಯು ಆ ದೊಡ್ಡ ರಣರಂಗದಲ್ಲಿ ಮನುಷ್ಯನ ಬಳಿಗೆ ಕಾಲರಾತ್ರಿಯು ಬರುವಂತೆ ವೇಗವಾಗಿ ಬಂದಿತು.
ತಾಮಾಪತಂತೀಂ ಸಹಸಾ ದ್ವಿಧಾ ಚಿಚ್ಛೇದ ಭಾರತ |
ಕ್ಷುರಪ್ರಾಭ್ಯಾಂ ಸುತೀಕ್ಷ್ಣಾಭ್ಯಾಂ ಸಾಽನ್ವಕೀರ್ಯತ ಭೂತಳೇ ॥34॥
ಎಲೈ ಭಾರತನೇ, ತನ್ನ ಕಡೆಗೆ ಬರುತ್ತಿದ್ದ ಆ ಶಕ್ತಿಯನ್ನು ಭೀಷ್ಮರು ತಕ್ಷಣ ಹರಿತವಾದ ಎರಡು ಕ್ಷುರಪ್ರದಿಂದ ಎರಡು ಭಾಗವಾಗಿ ಕತ್ತರಿಸಿದರು. ಅದು ಭೂಮಿಯಲ್ಲಿ ಬಿದ್ದು ವಿನಾಶವನ್ನು ಹೊಂದಿತು.
ಛಿತ್ತ್ವಾ ತು ಶಕ್ತಿಂ ಗಾಂಗೇಯಃ ಸಾತ್ಯಕಿಂ ನವಭಿಃ ಶರೈಃ |
ಆಜಘಾನೋರಸಿ ಕ್ರುದ್ಧಃ ಪ್ರಹಸನ್ ಶತ್ರುಕರ್ಶನಃ ॥35॥
ಶತ್ರುಸೂದನರಾದ ಭೀಷ್ಮರು ಆ ಶಕ್ತಿಯನ್ನು ನಾಶಗೊಳಿಸಿ, ಕೋಪಗೊಂಡು ಸಾತ್ಯಕಿಯ ವಕ್ಷಸ್ಸ್ಥಲದಲ್ಲಿ ಒಂಭತ್ತು ಬಾಣಗಳನ್ನು ಪ್ರಯೋಗಿಸಿದರು.
ತತಃ ಸರಥನಾಗಾಶ್ವಾಃ ಪಾಂಡವಾಃ ಪಾಂಡುಪೂರ್ವಜ |
ಪರಿವವ್ರೂ ರಣೇ ಭೀಷ್ಮಂ ಮಾಧವತ್ರಾಣಕಾರಣಾತ್ ॥36॥
ಎಲೈ ಪಾಂಡುವಿನ ಅಣ್ಣನೇ, ಆಗ ಸಾತ್ಯಕಿಯನ್ನು ರಕ್ಷಿಸುವ ಕಾರಣದಿಂದ ತಮ್ಮ ರಥ-ಗಜಾಶ್ವದಿಂದ ಸಹಿತರಾದ ಪಾಂಡವರು ರಣರಂಗದಲ್ಲಿ ಭೀಷ್ಮರನ್ನು ಸುತ್ತುವರಿದರು.
ತತಃ ಪ್ರವವೃತೇ ಯುದ್ಧಂ ತುಮುಲಂ ಲೋಮಹರ್ಷಣಮ್ |
ಪಾಂಡವಾನಾಂ ಕುರೂಣಾಂ ಚ ಸಮರೇ ವಿಜಯೈಷಿಣಾಮ್ ॥37॥
ಅನಂತರ ಯುದ್ಧದಲ್ಲಿ ಜಯವನ್ನು ಬಯಸುವ ಪಾಂಡವರಿಗೂ ಮತ್ತು ಕೌರವರಿಗೂ ತೀವ್ರವೂ ಮತ್ತು ರೋಮಾಂಚಕಾರಿಯೂ ಆದ ಯುದ್ಧವು ಜರುಗಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಒಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎರಡನೆಯ ಅಧ್ಯಾಯ
ಭೀಷ್ಮರ ಸಹಾಯಕ್ಕಾಗಿ ದುರ್ಯೋಧನನಿಂದ ದುಶ್ಶಾಸನನ ಪ್ರೇಷಣ. ಪಾಂಡವರಿಂದ ಕೌರವರ ಅಶ್ವಾರೋಹಿಗಳ ವಿನಾಶ.
ಶಲ್ಯ ಮತ್ತು ಪಾಂಡವರ ಯುದ್ಧ.
ಸಂಜಯಃ
ದೃಷ್ಟ್ವಾ ಭೀಷ್ಮಂ ರಣೇ ಕ್ರುದ್ಧಂ ಪಾಂಡವೈರಭಿಸಂವೃತಮ್ |
ಯಥಾ ಮೇಘೈರ್ಮಹಾರಾಜ ತಪಾಂತೇ ದಿವಿ ಭಾಸ್ಕರಮ್ ॥1॥
ದುರ್ಯೋಧನೋ ಮಹಾರಾಜ ದುಃಶಾಸನಮಭಾಷತ |
ಸಂಜಯ ಎಲೈ ಮಹಾರಾಜನೇ, ರಣದಲ್ಲಿ ಕ್ರೋಧಗೊಂಡ ಭೀಷ್ಮರು ಬೇಸಿಗೆಯ ಅನಂತರ ಆಕಾಶದಲ್ಲಿ ಮೋಡಗಳು ಸೂರ್ಯನನ್ನು ಮುಚ್ಚಿದಂತೆ ಪಾಂಡವರಿಂದ ಸುತ್ತುವರಿಯಲ್ಪಟ್ಟುದನ್ನು ನೋಡಿದ ದುರ್ಯೋಧನನು ದುಶ್ಶಾಸನನನ್ನು ಕುರಿತು ಮಾತನಾಡಿದನು.

ಏಷ ಶೂರೋ ಮಹೇಷ್ವಾಸೋ ಭೀಷ್ಮಃ ಶತ್ರುನಿಷೂದನಃ ॥2॥
ಛಾದಿತಃ ಪಾಂಡವೈಃ ಶೂರೈಃ ಸಮಂತಾದ್ ಭರತರ್ಷಭ |
ತಸ್ಯ ಕಾರ್ಯಂ ತ್ವಯಾ ವೀರ ರಕ್ಷಣಂ ಸುಮಹಾತ್ಮನಃ ॥3॥
ಎಲೈ ಭರತಶ್ರೇಷ್ಠನೇ, ಮಹಾಧನುರ್ಧಾರಿಗಳೂ, ಶತ್ರುಸಂಹಾರಕರೂ, ಶೂರರೂ ಆದ ಈ ಭೀಷ್ಮರು ಶೂರರಾದ ಪಾಂಡವರಿಂದ ಸುತ್ತುವರಿಯಲ್ಪಟ್ಟಿದ್ದಾರೆ. ಎಲೈ ವೀರನೇ, ನೀನು ಮಹಾತ್ಮರಾದ ಅವರ ರಕ್ಷಣೆಯನ್ನು ಮಾಡಬೇಕು.
ರಕ್ಷ್ಯಮಾಣೋ ಹಿ ಸಮರೇ ಭೀಷ್ಮೋಽಸ್ಮಾಕಂ ಪಿತಾಮಹಃ |
ನಿಹನ್ಯಾತ್ ಸಮರೇ ಯತ್ತಾನ್ ಪಾಂಚಾಲಾನ್ ಪಾಂಡವೈಃ ಸಹ ॥4॥
ನಮ್ಮ ಪಿತಾಮಹರಾದ ಭೀಷ್ಮರನ್ನು ರಕ್ಷಿಸಿದರೆ ಅವರು ಯುದ್ಧದಲ್ಲಿ ಪ್ರಯತ್ನಶೀಲರಾದ ಪಾಂಚಾಲರನ್ನು ಪಾಂಡವರ ಜೊತೆಯಲ್ಲಿ ಕೊಂದಾರು.
ತತ್ರ ಕಾರ್ಯತಮಂ ಮನ್ಯೇ ಭೀಷ್ಮಸ್ಯೈವಾಭಿರಕ್ಷಣಮ್ |
ಗೋಪ್ತಾ ಹ್ಯೇಷ ಮಹೇಷ್ವಾಸೋ ಭೀಷ್ಮೋಽಸ್ಮಾಕಂ ಪಿತಾಮಹಃ ॥5॥
ಆ ವಿಷಯದಲ್ಲಿ ಭೀಷ್ಮರ ರಕ್ಷಣೆಯೇ ನಾವು ಮಾಡಬೇಕಾದ ಕಾರ್ಯವೆಂದು ಭಾವಿಸುತ್ತೇನೆ. ಮಹಾಧನುರ್ಧಾರಿಗಳಾದ ನಮ್ಮ

ಪಿತಾಮಹರಾದ ಈ ಭೀಷ್ಮರು ನಮ್ಮನ್ನು ರಕ್ಷಿಸುವರು.
ಸ ಭವಾನ್ ಸರ್ವಸೈನ್ಯೇನ ಪರಿವಾರ್ಯ ಪಿತಾಮಹಮ್ |
ಸಮರೇ ದುಷ್ಕರಂ ಕರ್ಮ ಕುರ್ವಾಣಂ ಪರಿರಕ್ಷತು ॥6॥
ನೀನು ಯುದ್ಧದಲ್ಲಿ ದುಷ್ಕರವಾದ ಕಾರ್ಯವನ್ನು ಮಾಡುತ್ತಿರುವ ಪಿತಾಮಹರನ್ನು ಸರ್ವಸೈನ್ಯದಿಂದ ಸುತ್ತುವರಿದು ರಕ್ಷಿಸು (ಎಂದು ಹೇಳಿದನು).
ಏವಮುಕ್ತಸ್ತು ಸಮರೇ ಪುತ್ರೋ ದುಃಶಾಸನಸ್ತವ |
ಪರಿವಾರ್ಯ ಸ್ಥಿತೋ ಭೀಷ್ಮಂ ಸೈನ್ಯೇನ ಮಹತಾ ವೃತಃ ॥7॥
ಹೀಗೆ ಹೇಳಲ್ಪಟ್ಟ ನಿನ್ನ ಪುತ್ರನಾದ ದುಶ್ಶಾಸನನು ದೊಡ್ಡ ಸೈನ್ಯದಿಂದ ಕೂಡಿ ರಣರಂಗದಲ್ಲಿ ಭೀಷ್ಮರನ್ನು ಸುತ್ತುವರಿದು ನಿಂತನು.
ತತಃ ಶತಸಹಸ್ರೇಣ ಹಯಾನಾಂ ಸುಬಲಾತ್ಮಜಃ |
ವಿಮಲಪ್ರಾಸಹಸ್ತಾನಾಮೃಷ್ಟಿತೋಮರಧಾರಿಣಾಮ್ ॥8॥
ದರ್ಪಿತಾನಾಂ ಸುವೇಗಾನಾಂ ಬಲಸ್ಥಾನಾಂ ಪತಾಕಿನಾಮ್ |
ಶಿಕ್ಷಿತೈರ್ಯುದ್ಧಕುಶಲೈರುಪೇತಾನಾಂ ನರೋತ್ತಮೈಃ ॥9॥
ನಕುಲಂ ಸಹದೇವಂ ಚ ಧರ್ಮರಾಜಂ ಚ ಪಾಂಡವಮ್ |
ನ್ಯವಾರಯನ್ ನರಶ್ರೇಷ್ಠಂ ಪರಿವಾರ್ಯ ಸಮಂತತಃ ॥10॥
ಆಗ ಸುಬಲಾತ್ಮಜನಾದ ಶಕುನಿಯ ದರ್ಪಿಷ್ಠನಾದ, ಒಳ್ಳೆಯ ವೇಗಶಾಲಿಯಾದ, ಯೌವನಾವಸ್ಥೆಯನ್ನು ಹೊಂದಿರುವ, ಪತಾಕೆಗಳನ್ನು ಧರಿಸಿದ, ಹೊಳೆಯುವ ಪ್ರಾಸ, ಋಷ್ಟಿ, ತೋಮರಗಳನ್ನು ಧರಿಸಿದ, ಯುದ್ಧಕುಶಲರಾದ ಸುಶಿಕ್ಷಿತರಾದ ನರೋತ್ತಮರಿಂದ ಏರಲ್ಪಟ್ಟ ಹತ್ತುಸಹಸ್ರ ಅಶ್ವಗಳಿಂದ ನರಶ್ರೇಷ್ಠರಾದ ಭೀಷ್ಮರನ್ನು ಸುತ್ತುವರಿದು, ಪಾಂಡುಪುತ್ರರಾದ ನಕುಲ-ಸಹದೇವ ಮತ್ತು ಯುಧಿಷ್ಠಿರರನ್ನು ಎಲ್ಲ ಕಡೆಗಳಿಂದಲೂ ತಡೆದನು.
ತತೋ ದುರ್ಯೋಧನೋ ರಾಜಾ ಶೂರಾಣಾಂ ಹಯಸಾದಿನಾಮ್ |
ಅಯುತಂ ಪ್ರೇಷಯಾಮಾಸ ಪಾಂಡವಾನಾಂ ನಿವಾರಣೇ ॥11॥
ಆಗ ದುರ್ಯೋಧನನು ಪಾಂಡವರನ್ನು ತಡೆಯಲು ಶೂರರಾದ ಹತ್ತು ಸಹಸ್ರ ಅಶ್ವಾರೋಹಿಗಳನ್ನು ಕಳುಹಿಸಿದನು.
ತೈಃ ಪ್ರವಿಷ್ಟೈರ್ಮಹಾವೇಗೈರ್ಗರುತ್ಮದ್ಭಿರಿವಾಹವೇ |
ಖುರಾಹತಾ ಧರಾ ರಾಜಂಶ್ಚಕಂಪೇ ಚ ನನಾದ ಚ ॥12॥
ಎಲೈ ರಾಜನೇ, ಯುದ್ಧದಲ್ಲಿ ಗರುಡನಂತೆ ಮಹಾವೇಗಶಾಲಿಗಳಾದ ಆ ಅಶ್ವಗಳು ಪ್ರವೇಶಿಸುತ್ತಿರಲು ಅವುಗಳ ಖುರಗಳ ಘಾತದಿಂದ ಪೀಡಿತವಾದ ಭೂಮಿಯಲ್ಲಿ ಭೂಕಂಪವೂ ಮತ್ತು ಗರ್ಜನೆಯೂ ಉಂಟಾಯಿತು.
ಖುರಶಬ್ದಶ್ಚ ಸುಮಹಾನ್ ವಾಜಿನಾಂ ಶುಶ್ರುವೇ ತದಾ |
ಮಹಾವಂಶವನಸ್ಯೇವ ದಹ್ಯಮಾನಸ್ಯ ಪರ್ವತೇ ॥13॥
ಪರ್ವತದಲ್ಲಿ ಕಾಡ್ಗಿಚ್ಚಿನಿಂದ ಉರಿಯುವ ದೊಡ್ಡ ಬಿದಿರಿನ ಸಮೂಹದ ಶಬ್ದದಂತೆ ಆ ಅಶ್ವಗಳ ದೊಡ್ಡ ಖುರ ಶಬ್ದವು ಆಗ ಕೇಳಿಬಂದಿತು.
ಉತ್ಪತದ್ಭಿಶ್ಚ ತೈಸ್ತತ್ರ ಸಮುದ್ಧೂತಂ ಮಹದ್ರಜಃ |
ದಿವಾಕರಪಥಂ ಪ್ರಾಪ್ಯ ಛಾದಯಾಮಾಸ ಭಾಸ್ಕರಮ್ ॥14॥
ಮೇಲೆ ನೆಗೆಯುವ ಅಶ್ವಗಳಿಂದ ಎದ್ದ ದೊಡ್ಡ ಧೂಳು ಸೂರ್ಯಮಾರ್ಗವನ್ನು ಸೇರಿ ಸೂರ್ಯನನ್ನು ಮರೆಮಾಡಿತು.
ವೇಗವದ್ಭಿರ್ಹಯೈಸ್ತೈಸ್ತು ಕ್ಷೋಭಿತಂ ಪಾಂಡವಂ ಬಲಮ್ |
ನಿಪತದ್ಭಿರ್ಮಹಾವೇಗೈರ್ಹಂಸೈರಿವ ಮಹತ್ಸರಃ ॥15॥
ಮಹಾವೇಗವುಳ್ಳ ಹಂಸಗಳು ದೊಡ್ಡ ಸರೋವರವಿದ್ದಲ್ಲಿ ಬಿದ್ದಂತೆ ವೇಗವುಳ್ಳ ಆ ಅಶ್ವಗಳಿಂದ ಪಾಂಡವರ ಸೈನ್ಯವು ಕ್ಷೋಭೆಗೊಂಡಿತು.
ಹೇಷತಾಂ ಚೈವ ಶಬ್ದೇನ ನ ಪ್ರಾಜ್ಞಾಯತ ಕಿಂಚನ |
ಅಂತರ್ದಧೇ ಮಹಾನ್ ಶಬ್ದಸ್ತೇನ ಶಬ್ದೇನ ಮೋಹಿತಃ ॥16॥
ಆ ಅಶ್ವಗಳ ಹೇಷಾರವಶಬ್ದದಿಂದ ಯಾವುದೂ ತಿಳಿದುಬರುತ್ತಿರಲಿಲ್ಲ. ಆ ದೊಡ್ಡ ಶಬ್ದದಿಂದ ಪರಾಭೂತವಾದ ಉಳಿದ ಸೈನ್ಯದ ದೊಡ್ಡ ಶಬ್ದವು ಅಂತರ್ಧಾನವನ್ನು ಹೊಂದಿತು.
ತತೋ ಯುಧಿಷ್ಠಿರೋ ರಾಜಾ ಮಾದ್ರೀಪುತ್ರೌ ಚ ಪಾಂಡವೌ |
ಪ್ರತ್ಯಘ್ನನ್ ತರಸಾ ವೇಗಂ ಸಮರೇ ಹಯಸಾದಿನಾಮ್ ॥17॥
ಆಗ ರಾಜನಾದ ಯುಧಿಷ್ಠಿರನೂ, ಪಾಂಡುಪುತ್ರರಾದ ನಕುಲ-ಸಹದೇವರೂ ಶೀಘ್ರವಾಗಿ ರಣರಂಗದಲ್ಲಿ ಅಶ್ವಾರೋಹಿಗಳ ವೇಗವನ್ನು ಅಡ್ಡಿಪಡಿಸಿದರು.
ಉದ್ವೃತ್ತಸ್ಯ ಮಹಾರಾಜ ಪ್ರಾವೃಟ್ಕಾಲೇನ ಪೂರ್ಯತಃ |
ಪೌರ್ಣಮಾಸ್ಯಾಮಂಬುವೇಗಂ ಯಥಾ ವೇಲಾ ಮಹೋದಧೇಃ ॥18॥
ಎಲೈ ಮಹಾರಾಜನೇ, ಮಳೆಗಾಲದಲ್ಲಿ ತುಂಬುವ ಮಹಾಸಮುದ್ರದ ಹುಣ್ಣಿಮೆಯ ಜಲವೇಗವನ್ನು ತೀರವು ತಡೆದಂತೆ ಧರ್ಮರಾಜ, ನಕುಲ ಮತ್ತು ಸಹದೇವರು ಅಶ್ವಗಳ ವೇಗವನ್ನು ತಡೆದರು.
ತತಸ್ತೇ ರಥಿನೋ ರಾಜನ್ ಶರೈಃ ಸನ್ನತಪರ್ವಭಿಃ |
ನ್ಯಕೃಂತನ್ನುತ್ತಮಾಂಗಾನಿ ಕಾಯೇಭ್ಯೋ ಹಯಸಾದಿನಾಮ್ ॥19॥

ಎಲೈ ರಾಜನೇ, ಆಗ ಅವರು ಬಾಗಿದ ತುದಿಯನ್ನು ಹೊಂದಿದ ಬಾಣಗಳಿಂದ ಅಶ್ವಾರೋಹಿಗಳ ಶರೀರದಿಂದ ಅವರ ಶಿರಸ್ಸುಗಳನ್ನು ಕತ್ತರಿಸಿದರು.
ತೇ ನಿಪೇತುರ್ಮಹಾರಾಜ ನಿಹತಾ ದೃಢಧನ್ವಿಭಿಃ |
ನಾಗೈರಿವ ಮಹಾನಾಗಾ ಯಥಾ ಸ್ಯುರ್ಗಿರಿಗಹ್ವರೇ ||20||
ಎಲೈ ಮಹಾರಾಜನೇ, ದೃಢವಾದ ಧನುರ್ಧಾರಿಗಳಿಂದ ಹೊಡೆಯಲ್ಪಟ್ಟ ಅವರು ಗಿರಿಗಹ್ವರದಲ್ಲಿ ಗಜಗಳಿಂದ ಹೊಡೆಯಲ್ಪಟ್ಟ ಮಹಾಗಜಗಳಂತೆ ಬಿದ್ದರು.
ತೇಽಪಿ ಪ್ರಾಸ್ಯೈಃ ಸುನಿಶಿತೈಃ ಶರೈಃ ಸನ್ನತಪರ್ವಭಿಃ |
ನ್ಯಕೃಂತನ್ನುತ್ತಮಾಂಗಾನಿ ವಿಚರಂತೋ ದಿಶೋ ದಶ ||21||
ಅವರೂ ಸಹ ಹತ್ತುದಿಕ್ಕುಗಳಲ್ಲಿಯೂ ಸಂಚರಿಸುತ್ತಾ, ಬಾಗಿದ ತುದಿಯುಳ್ಳ ತೀಕ್ಷ್ಣವಾದ ಬಾಣಗಳಿಂದ ಪಾಂಡವ ಸೈನಿಕರ ಶಿರಸ್ಸುಗಳನ್ನು ಕತ್ತರಿಸಿದರು.
ಅತ್ಯಾಸನ್ನಾ ಹಯಾರೋಹಾ ಋಷ್ಟಿಭಿರ್ಭರತರ್ಷಭ |
ಅಚ್ಛಿನನ್ನುತ್ತಮಾಂಗಾನಿ ಫಲಾನೀವ ಮಹಾದ್ರುಮಾತ್ ||22||
ಎಲೈ ಭರತಶ್ರೇಷ್ಠನೇ, ಸಮೀಪಕ್ಕೇ ಬಂದ ಅಶ್ವಾರೋಹಿಗಳು ದೊಡ್ಡ ವೃಕ್ಷದಿಂದ ಫಲಗಳನ್ನು ಕೆಡವಿದಂತೆ ಋಷ್ಟಿಗಳಿಂದ ಯೋಧರ ಶಿರಸ್ಸುಗಳನ್ನು ಕತ್ತರಿಸಿದರು.
ಸಸಾದಿನೋ ಹಯಾ ರಾಜಂಸ್ತತ್ರ ತತ್ರ ನಿಷೂದಿತಾಃ |
ಪತಿತಾಃ ಪಾತ್ಯಮಾನಾಶ್ಚ ಶತಶೋಽಥ ಸಹಸ್ರಶಃ ||23||
ಎಲೈ ರಾಜನೇ, ಅಲ್ಲಲ್ಲಿ ಅಶ್ವಾರೋಹಿಗಳಿಂದ ಸಹಿತವಾದ ಅಶ್ವಗಳು ಕೊಲ್ಲಲ್ಪಟ್ಟು ಬಿದ್ದಿರುವುದು ಮತ್ತು ಓಡುತ್ತಿರುವುದು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಕಂಡುಬಂದವು.
ವಧ್ಯಮಾನಾ ಹಯಾಸ್ತೇ ತು ಪ್ರಾದ್ರವಂತ ಭಯಾರ್ದಿತಾಃ |
ಯಥಾ ಸಿಂಹಾನ್ ಸಮಾಸಾದ್ಯ ಮೃಗಾಃ ಪ್ರಾಣಪರಾಯಣಾಃ ||24||
ಹೀಗೆ ಹೊಡೆಯಲ್ಪಟ್ಟ ಆ ಅಶ್ವಗಳು ಭಯಗ್ರಸ್ತಗಳಾಗಿ ಸಿಂಹಗಳ ಸಮೀಪಕ್ಕೆ ಬಂದು ಪ್ರಾಣವನ್ನು ಉಳಿಸಿಕೊಳ್ಳುವ ಇಚ್ಛೆಯುಳ್ಳ ಜಿಂಕೆಗಳಂತೆ ಓಡಿಹೋದವು.
ಪಾಂಡವಾಸ್ತು ಮಹಾರಾಜ ಜಿತ್ವಾ ಶತ್ರೂನ್ ಮಹಾಹವೇ |
ದಧ್ಮುಃ ಶಂಖಾಂಶ್ಚ ಭೇರೀಶ್ಚ ತಾಡಯಾಮಾಸುರಾಹವೇ ||25||
ಎಲೈ ಮಹಾರಾಜನೇ, ಪಾಂಡವರಾದರೋ ದೊಡ್ಡ ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಶಂಖಗಳನ್ನು ಊದಿ, ಭೇರಿಗಳನ್ನು ಬಾರಿಸಿದರು.
ತತೋ ದುರ್ಯೋಧನೋ ದೃಷ್ಟ್ವಾ ದೀನಂ ಸೈನ್ಯಮವಸ್ಥಿತಮ್ |
ಅಬ್ರವೀದ್ ಭರತಶ್ರೇಷ್ಠ ಮದ್ರರಾಜಮಿದಂ ವಚಃ ||26||
ಎಲೈ ಭರತಶ್ರೇಷ್ಠನೇ, ಆಗ ದುರ್ಯೋಧನನು ತನ್ನ ಸೈನ್ಯದ ದೈನ್ಯಾವಸ್ಥೆಯನ್ನು ನೋಡಿ ಮದ್ರರಾಜನಾದ ಶಲ್ಯನನ್ನು ಕುರಿತು ಈ ಮಾತನ್ನಾಡಿದನು.
ಏಷ ಪಾಂಡುಸುತೋ ಜ್ಯೇಷ್ಠೋ ಜಿತ್ವಾ ಮಾತುಲ ಮಾಮಕಾನ್ |
ಪಶ್ಯತಾಂ ನೋ ಮಹಾಬಾಹೋ ಸೇನಾಂ ದ್ರಾವಯತೇ ಬಲೀ ||27||
ಎಲೈ ಮಹಾಬಾಹುವೇ, ಸೋದರಮಾವನೇ, ಪಾಂಡುವಿನ ಹಿರಿಯ ಮಗನಾದ ಬಲಿಷ್ಠನಾದ ಯುಧಿಷ್ಠಿರನು ನಾವು ನೋಡುತ್ತಿರುವಂತೆಯೇ ನಮ್ಮವರನ್ನು ಗೆದ್ದು ನಮ್ಮ ಸೈನ್ಯವನ್ನು ಓಡಿಸುತ್ತಿದ್ದಾನೆ.
ತಂ ವಾರಯ ಮಹಾಬಾಹೋ ವೇಲೇವ ಮಕರಾಲಯಮ್ |
ತ್ವಂ ಹಿ ಸಂಶ್ರೂಯಸೇಽತ್ಯರ್ಥಮಸಹ್ಯಬಲವಿಕ್ರಮಃ ||28||
ಎಲೈ ಮಹಾಬಾಹುವೇ, ನೀನು ಅಪರಿಮಿತವಾದ ಬಲಪರಾಕ್ರಮವುಳ್ಳವನು ಎಂದು ಒಳ್ಳೆಯ ಪ್ರಸಿದ್ಧಿ ಇದೆ. ಆದ್ದರಿಂದ ತೀರವು ಸಮುದ್ರವನ್ನು ತಡೆದಂತೆ ಅವನನ್ನು ತಡೆ.
ಪುತ್ರಸ್ಯ ತವ ತದ್ವಾಕ್ಯಂ ಶ್ರುತ್ವಾ ಶಲ್ಯಃ ಪ್ರತಾಪವಾನ್ |
ಪ್ರಯಯೌ ರಥವಂಶೇನ ಯತ್ರ ರಾಜಾ ಯುಧಿಷ್ಠಿರಃ ||29||
ನಿನ್ನ ಪುತ್ರನ ಆ ಮಾತುಗಳನ್ನು ಕೇಳಿ ಪ್ರತಾಪಶಾಲಿಯಾದ ಶಲ್ಯನು ರಾಜನಾದ ಯುಧಿಷ್ಠಿರನಿದ್ದೆಡೆಗೆ ರಥಸಮೂಹದಿಂದ ಹೊರಟನು.
ತದಾಪತದ್ ವೈ ಸಹಸಾ ಶಲ್ಯಸ್ಯ ಸುಮಹದ್ಬಲಮ್ |
ಮಹೌಘವೇಗಂ ಸಮರೇ ವಾರಯಾಮಾಸ ಪಾಂಡವಃ ||30||
ಶಲ್ಯನ ದೊಡ್ಡ ಸೈನ್ಯವು ಇದ್ದಕ್ಕಿದ್ದಂತೆಯೇ ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಪಾಂಡುಪುತ್ರನಾದ ಯುಧಿಷ್ಠಿರನು ಮಹಾಜಲಪ್ರವಾಹದ ವೇಗವನ್ನು ಹೊಂದಿದ್ದ ಯುದ್ಧದಲ್ಲಿ ಆ ದೊಡ್ಡ ಸೈನ್ಯವನ್ನು ತಡೆದನು.
ಮದ್ರರಾಜಂ ಚ ಸಮರೇ ಧರ್ಮರಾಜೋ ಮಹಾರಥಃ |
ದಶಭಿಃ ಸಾಯಕೈಸ್ತೂರ್ಣಮಾಜಘಾನ ಸ್ತನಾಂತರೇ |
ನಕುಲಃ ಸಹದೇವಶ್ಚ ತ್ರಿಭಿಸ್ತ್ರಿಭಿರಜಿಹ್ಮಗೈಃ ||31||
ಮಹಾರಥನಾದ ಧರ್ಮರಾಜನು ಯುದ್ಧದಲ್ಲಿ ಮದ್ರರಾಜನಾದ ಶಲ್ಯನನ್ನು ಹತ್ತುಬಾಣಗಳಿಂದ ಶೀಘ್ರವಾಗಿ ಅವನ ಸ್ತನಗಳ

ಮಧ್ಯದಲ್ಲಿ ಹೊಡೆದನು. ನಕುಲ- ಸಹದೇವರೂ ಸಹ ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ಅವನನ್ನು ಹೊಡೆದರು.
ಮದ್ರರಾಜೋಽಪಿ ತಾನ್ ಸರ್ವಾನಾಜಘಾನ ತ್ರಿಭಿಸ್ತ್ರಿಭಿಃ |
ಯುಧಿಷ್ಠಿರಂ ಪುನಃ ಷಷ್ಟ್ಯಾ ವಿವ್ಯಾಧ ನಿಶಿತೈಃ ಶರೈಃ |
ಮಾದ್ರೀಪುತ್ರೌ ಚ ಸಂರಬ್ಧೌ ದ್ವಾಭ್ಯಾಂ ದ್ವಾಭ್ಯಾಮತಾಡಯತ್ ॥32॥
ಮದ್ರರಾಜನೂ ಸಹ ಅವರೆಲ್ಲರನ್ನೂ ಮೂರು-ಮೂರು ಬಾಣಗಳಿಂದ ಹೊಡೆದು ಪುನಃ ಯುಧಿಷ್ಠಿರನ ಮೇಲೆ ತೀಕ್ಷ್ಣವಾದ ಅರವತ್ತು ಬಾಣಗಳನ್ನು ಪ್ರಯೋಗಿಸಿದನು. ಕೋಪಗೊಂಡ ಮಾದ್ರೀಪುತ್ರರನ್ನೂ ಸಹ ಎರಡೆರಡು ಬಾಣಗಳಿಂದ ಹೊಡೆದನು.
ತತೋ ಭೀಮೋ ಮಹಾಬಾಹುರ್ದೃಷ್ಟ್ವಾ ರಾಜಾನಮಾಹವೇ |
ಮದ್ರರಾಜವಶಂ ಪ್ರಾಪ್ತಂ ಮೃತ್ಯೋರಾಸ್ಯಗತಂ ಯಥಾ |
ಅಭ್ಯದ್ರವತ ಸಂಗ್ರಾಮೇ ಯುಧಿಷ್ಠಿರಮಮಿತ್ರಜಿತ್ ॥33॥
ಆಗ ಶತ್ರುಗಳನ್ನು ಜಯಿಸುವ ಮಹಾಬಾಹುವಾದ ಭೀಮಸೇನನು ಯುದ್ಧದಲ್ಲಿ ರಾಜನು ಮೃತ್ಯುವಿನ ಬಾಯಿಗೆ ಸಿಲುಕಿದಂತೆ ಮದ್ರರಾಜನ ವಶವಾಗಿರುವುದನ್ನು ನೋಡಿ ಯುಧಿಷ್ಠಿರನ ಕಡೆಗೆ ಧಾವಿಸಿ ಬಂದನು.
ಆಪತನ್ನೇವ ಭೀಮಸ್ತು ಮದ್ರರಾಜಮತಾಡಯತ್ |
ಸರ್ವಪಾರಶವೈಸ್ತೀಕ್ಷ್ಣೈರ್ನಾರಾಚೈರ್ಮರ್ಮಭೇದಿಭಿಃ ॥34॥
ಭೀಮನಾದರೋ ಬರುತ್ತಲೇ ಮದ್ರರಾಜನ ಮೇಲೆ ಅಯೋಮಯವಾದ, ತೀಕ್ಷ್ಣವಾದ, ಮರ್ಮಭೇದಿಗಳಾದ ನಾರಾಚಗಳನ್ನು ಪ್ರಯೋಗಿಸಿದನು.
ತತೋ ಭೀಷ್ಮಶ್ಚ ದ್ರೋಣಶ್ಚ ಸೈನ್ಯೇನ ಮಹತಾ ವೃತೌ |
ರಾಜಾನಮಭ್ಯಪದ್ಯೇತಾಮಂಜಸಾ ಶರವರ್ಷಿಣೌ ॥35॥
ಆಗ ಭೀಷ್ಮರು ಮತ್ತು ದ್ರೋಣರು ದೊಡ್ಡ ಸೈನ್ಯದಿಂದ ಕೂಡಿ ಬಾಣಗಳ ಒಳ್ಳೆಯ ಮಳೆಯನ್ನು ಸುರಿಸುತ್ತಾ ರಾಜನಾದ ಯುಧಿಷ್ಠಿರನನ್ನು ಸಮೀಪಿಸಿದರು.
ತತೋ ಯುದ್ಧಂ ಮಹಾಘೋರಂ ಪ್ರಾವರ್ತತ ಸುದಾರುಣಮ್ |
ಅಪರಾಂ ದಿಶಮಾಸ್ಥಾಯ ದ್ಯೋತಮಾನೇ ದಿವಾಕರೇ ॥36॥
ಅನಂತರ ಸೂರ್ಯನು ಪಶ್ಚಿಮದಿಕ್ಕಿನಲ್ಲಿ ಪ್ರಕಾಶಿಸುತ್ತಿರಲು ಮಹಾಘೋರವೂ, ಭಯಂಕರವೂ ಆದ ಯುದ್ಧವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವ್ಯಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಯುಧಿಷ್ಠಿರೋ ಭೀಷ್ಮಪರಾಕ್ರಮೇಣ
ಭೀತೋ ಭೀಷ್ಮಂ ಸ್ವವಧೋಪಾಯಮೇವ |
ಪ್ರಷ್ಟುಂ ಯಯೌ ನಿಶಿ ಕೃಷ್ಣೋಽನುಜಾಶ್ಚ
ತಸ್ಯಾನ್ವಯುಸ್ತಂ ಸ ಪಿತಾಮಹೋ ಯತ್ ॥114॥
ಯುಧಿಷ್ಠಿರ ಭೀಷ್ಮರ ಪರಾಕ್ರಮದಿಂದ ಭೀತನಾಗಿ ಅವನ ವಧೆಗೆ ಉಪಾಯವನ್ನು ಅವನಲ್ಲಿಯೇ ಕೇಳುವುದಕ್ಕಾಗಿ ಅವರು ಪಿತಾಮಹರಾದುದರಿಂದ ರಾತ್ರಿಯಲ್ಲಿ ಅವರ ಶಿಬಿರಕ್ಕೇ ನಡೆದ. ಅವನ ತಮ್ಮಂದಿರೂ ಕೃಷ್ಣನೂ ಅವನನ್ನು ಹಿಂಬಾಲಿಸಿದರು.
ಭೀಮಾರ್ಜುನೌ ಶಕ್ನುವಂತಾಪಿ ಸ್ಮ
ನರ್ತ್ತೇಽನುಜ್ಞಾಂ ಹಂತುಮಿಮಂ ತದೈಚ್ಚತಾಮ್ |
ಪೂಜ್ಯೋ ಯತೋ ಭೀಷ್ಮ ಉದಾರಕರ್ಮಾ
ಕೃಷ್ಣೋಽಪ್ಯಯಾತ್ ತೇನ ಹಿ ಪಾಂಡವಾರ್ಥೇ ॥115॥
ಭೀಮಾರ್ಜುನರು ಭೀಷ್ಮರನ್ನು ಕೊಲ್ಲಲು ಶಕ್ತರಾಗಿದ್ದರೂ ಅವರ ಅನುಜ್ಞೆ ಇಲ್ಲದೆ ಅವರನ್ನು ಕೊಲ್ಲಲು ಬಯಸಲಿಲ್ಲ. ಏಕೆಂದರೆ ಉತ್ತಮ ಕರ್ಮವನ್ನೇ ಮಾಡುತ್ತಿದ್ದ ಭೀಷ್ಮರು ಅವರಿಗೆ ಪೂಜ್ಯರಾಗಿದ್ದರು. ಆದ್ದರಿಂದಲೇ ಕೃಷ್ಣನೂ ಪಾಂಡವರಿಗಾಗಿ ಅಲ್ಲಿಗೆ ಬಂದಿದ್ದ.
* * * * *
ನೂರ ಮೂರನೆಯ ಅಧ್ಯಾಯ
ಯುದ್ಧದಲ್ಲಿ ಭೀಷ್ಮರ ಪ್ರತಾಪ. ಕೋಪಗೊಂಡ ಕೃಷ್ಣನಿಂದ
ರಥದಿಂದ ಇಳಿದು ಭೀಷ್ಮರ ರಥದ ಕಡೆಗೆ ಓಟ. ಅರ್ಜುನನಿಂದ
ಸಮಾಧಾನ ಮಾಡಿ ಹಿಂದಕ್ಕೆ ಕರೆತರುವಿಕೆ. ಅರ್ಜುನನಿಗೆ
ಯುಧಿಷ್ಠಿರನ ಆದೇಶ. ಎರಡೂ ಸೈನ್ಯಗಳ ಆಯಾಸ.
ಸಂಜಯಃ
ತತಃ ಪಿತಾ ತವ ಕ್ರುದ್ಧೋ ನಿಶಿತೈಃ ಸಾಯಕೋತ್ತಮೈಃ |
ಆಜಘಾನ ರಣೇ ಪಾರ್ಥಾನ್ ಸಹಸೇನಾನ್ ಸಮಂತತಃ ॥1॥
ಸಂಜಯ ಆಗ ಕ್ರುದ್ಧನಾದ ನಿನ್ನ ತಂದೆಯು ತೀಕ್ಷ್ಣವಾದ ಮತ್ತು ಶ್ರೇಷ್ಠವಾದ ಬಾಣಗಳಿಂದ ಎಲ್ಲ ಕಡೆಯಲ್ಲಿಯೂ ಸೈನ್ಯ ಸಹಿತರಾದ

ಪಾಂಡವರನ್ನು ಹೊಡೆದನು.
ಭೀಮಂ ದ್ವಾದಶಭಿರ್ವಿದ್ಧ್ವಾ ಸಾತ್ಯಕಿಂ ನವಭಿಃ ಶರೈಃ |
ನಕುಲಂ ಚ ತ್ರಿಭಿರ್ಬಾಣೈಃ ಸಹದೇವಂ ಚ ಸಪ್ತಭಿಃ ॥2॥
ಯುಧಿಷ್ಠಿರಂ ದ್ವಾದಶಭಿರ್ಬಾಹ್ವೋರುರಸಿ ಚಾರ್ಪಯತ್ |
ಧೃಷ್ಟದ್ಯುಮ್ನಂ ತತೋ ವಿದ್ಧ್ವಾ ವಿನನಾದ ಮಹಾಬಲಃ ॥3॥
ಮಹಾಬಲರಾದ ಅವರು ಭೀಮನನ್ನು ಹತ್ತುಬಾಣಗಳಿಂದಲೂ, ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದಲೂ, ನಕುಲನನ್ನು ಮೂರು ಬಾಣಗಳಿಂದಲೂ, ಸಹದೇವನನ್ನು ಏಳು ಬಾಣಗಳಿಂದಲೂ, ಯುಧಿಷ್ಠಿರನನ್ನು ಹನ್ನೆರಡು ಬಾಣಗಳಿಂದಲೂ ಬಾಹುಗಳಲ್ಲಿಯೂ, ವಕ್ಷಸ್ಸ್ಥಲದಲ್ಲಿಯೂ ಹೊಡೆದು, ಅನಂತರ ಧೃಷ್ಟದ್ಯುಮ್ನನನ್ನು ಹೊಡೆದು ಸಿಂಹನಾದವನ್ನು ಮಾಡಿದರು.
ತಂ ದ್ವಾದಶಾರ್ಧೈರ್ನಕುಲೋ ಮಾಧವಶ್ಚ ತ್ರಿಭಿಃ ಶರೈಃ |
ಧೃಷ್ಟದ್ಯುಮ್ನಶ್ಚ ಸಪ್ತತ್ಯಾ ಭೀಮಸೇನಶ್ಚ ಪಂಚಭಿಃ |
ಯುಧಿಷ್ಠಿರೋ ದ್ವಾದಶಭಿಃ ಪ್ರತ್ಯವಿಧ್ಯತ್ ಪಿತಾಮಹಮ್ ॥4॥
ಪಿತಾಮಹರಾದ ಅವರನ್ನು ನಕುಲನು ಆರು ಬಾಣಗಳಿಂದಲೂ, ಸಾತ್ಯಕಿಯು ಮೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನು ಎಪ್ಪತ್ತು ಬಾಣಗಳಿಂದಲೂ, ಭೀಮಸೇನನು ಐದು ಬಾಣಗಳಿಂದಲೂ ಮತ್ತು ಯುಧಿಷ್ಠಿರನು ಹನ್ನೆರಡು ಬಾಣಗಳಿಂದಲೂ ಪ್ರತಿಯಾಗಿ ಹೊಡೆದರು.
ದ್ರೋಣಸ್ತು ಸಾತ್ಯಕಿಂ ವಿದ್ಧ್ವಾ ಭೀಮಸೇನಮವಿಧ್ಯತ |
ಏಕೈಕಂ ಪಂಚಭಿರ್ಬಾಣೈರ್ಯಮದಂಡೋಪಮೈಃ ಶಿತೈಃ ॥5॥
ದ್ರೋಣರಾದರೋ ಒಂದೊಂದೂ ಯಮದಂಡದಂತೆ ತೀಕ್ಷ್ಣವಾಗಿದ್ದ ಐದು ಬಾಣಗಳಿಂದ ಸಾತ್ಯಕಿಯನ್ನು ಹೊಡೆದು ಭೀಮಸೇನನನ್ನೂ ಹೊಡೆದರು.
ತೌ ಚ ತಂ ಪ್ರತ್ಯವಿಧ್ಯೇತಾಂ ತ್ರಿಭಿಸ್ತ್ರಿಭಿರಜಿಹ್ಮಗೈಃ |
ತೋತ್ತ್ರೈರಿವ ಮಹಾನಾಗಂ ದ್ರೋಣಂ ಬ್ರಾಹ್ಮಣಪುಂಗವಮ್ ॥6॥
ಅವರಿಬ್ಬರೂ ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ಅಂಕುಶಗಳಿಂದ ಮಹಾಗಜವನ್ನು ಹೊಡೆದಂತೆ ಬ್ರಾಹ್ಮಣೋತ್ತಮರಾದ ದ್ರೋಣರನ್ನು ಪ್ರತಿಯಾಗಿ ಹೊಡೆದರು.
ಸೌವೀರಾಃ ಕಿತವಾಃ ಪ್ರಾಚ್ಯಾಃ ಪ್ರತೀಚ್ಯೋದೀಚ್ಯಮಾಲವಾಃ |
ಅಭೀಷಾಹಾಃ ಶೂರಸೇನಾಃ ಶಿಬಯೋಽಥ ವಸಾತಯಃ |
ಸಂಗ್ರಾಮೇ ನಾಜಹುರ್ಭೀಷ್ಮಂ ವಧ್ಯಮಾನಾಃ ಶಿತೈಃ ಶರೈಃ ॥7॥
ಸೌವೀರರು, ಕಿತವರು, ಪೂರ್ವದಿಕ್ಕಿನವರು, ಪಶ್ಚಿಮದಿಕ್ಕಿನವರು, ಉತ್ತರ ದಿಕ್ಕಿನವರು, ಮಾಲವರು, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು ಇಷ್ಟು ಯೋಧರು ತೀಕ್ಷ್ಣವಾದ ಬಾಣಗಳಿಂದ ಹೊಡೆಯಲ್ಪಡುತ್ತಿದ್ದರೂ ಯುದ್ಧದಲ್ಲಿ ಭೀಷ್ಮರನ್ನು ಬಿಟ್ಟು ಕದಲಲಿಲ್ಲ.
ತಥೈವಾನ್ಯೇ ವಧ್ಯಮಾನಾಃ ಪಾಂಡವೇಯೈರ್ಮಹಾತ್ಮಭಿಃ |
ಪಾಂಡವಾನಭ್ಯವರ್ತಂತ ವಿವಿಧಾಯುಧಪಾಣಯಃ |
ತಥೈವ ಪಾಂಡವಾ ರಾಜನ್ ಪರಿವವ್ರುಃ ಪಿತಾಮಹಮ್ ॥8॥
ಮಹಾತ್ಮರಾದ ಪಾಂಡವರಿಂದ ಹೊಡೆಯಲ್ಪಡುತ್ತಿದ್ದ ಇನ್ನಿತರರು ಕೈಯಲ್ಲಿ ಅನೇಕ ಆಯುಧಗಳನ್ನು ಹಿಡಿದು ಪಾಂಡವರಲ್ಲಿಗೇ ಸಾಗಿಬಂದರು. ಪಾಂಡವರೂ ಹಾಗೆಯೇ ಪಿತಾಮಹರನ್ನು ಸುತ್ತುವರಿದರು.
ಸ ಸಮಂತಾತ್ ಪರಿವೃತೋ ರಥೌಘೈರಪರಾಜಿತಃ |
ಗಹನೇಽಗ್ನಿರಿವೋತ್ಸೃಷ್ಟಃ ಪ್ರಜಜ್ವಾಲ ದಹನ್ ಪರಾನ್ ॥9॥
ಯುದ್ಧದಲ್ಲಿ ಎಂದೂ ಸೋಲದ ಭೀಷ್ಮರು ಎಲ್ಲ ಕಡೆಗಳಿಂದಲೂ ಸುತ್ತುವರಿಯಲ್ಪಟ್ಟು ಕಾಡಿನಲ್ಲಿ ಬಿದ್ದ ಅಗ್ನಿಯಂತೆ ಶತ್ರುಗಳನ್ನು ಸುಡುತ್ತಾ ಪ್ರಜ್ವಲಿಸಿದರು.
ರಥಾಗ್ನ್ಯಗಾರಶ್ಚಾಪಾರ್ಚಿರಸಿಶಕ್ತಿಗದೇಂಧನಃ |
ಶರಸ್ಫುಲಿಂಗೋ ಭೀಷ್ಮಾಗ್ನಿರ್ದದಾಹ ಕ್ಷತ್ರಿಯರ್ಷಭಾನ್ ॥10॥
ರಥವೆಂಬ ಅಗ್ನಿಕುಟೀರದಿಂದಲೂ, ಧನುಸ್ಸುಗಳೆಂಬ ಜ್ವಾಲೆಗಳಿಂದಲೂ, ಖಡ್ಗ- ಗದಾ-ಶಕ್ತಿಗಳೆಂಬ ಕಟ್ಟಿಗೆಗಳಿಂದಲೂ, ಬಾಣಗಳೆಂಬ ಕಿಡಿಗಳಿಂದಲೂ ಕೂಡಿದ ಭೀಷ್ಮಾಗ್ನಿಯು ಕ್ಷತ್ರಿಯರನ್ನು ಸುಟ್ಟುಹಾಕಿತು.
ಯಥಾ ಹಿ ಸುಮಹಾನಗ್ನಿಃ ಕಕ್ಷೇ ಚರತಿ ಸಾನಿಲಃ |
ತಥಾ ಭೀಷ್ಮೋ ಮಹಾರಾಜ ದಿವ್ಯಮಸ್ತ್ರಮುದೀರಯನ್ ॥11॥
ಸುವರ್ಣಪುಂಖೈರಿಷುಭಿರ್ಗಾರ್ಧ್ರಪಕ್ಷೈಃ ಸುತೇಜನೈಃ |
ಕರ್ಣಿನಾಲೀಕನಾರಾಚೈಶ್ಛಾದಯಾಮಾಸ ತದ್ಬಲಮ್ ॥12॥
ಎಲೈ ಮಹಾರಾಜನೇ, ಹುಲ್ಲುಗಾವಲಿನಲ್ಲಿ ಬಿದ್ದ ವಾಯುಸಹಿತವಾದ ದೊಡ್ಡ ಅಗ್ನಿಯು ಸಂಚರಿಸಿದಂತೆ ಭೀಷ್ಮರು ದಿವ್ಯಾಸ್ತ್ರಗಳನ್ನು ಪ್ರಾದುರ್ಭವಿಸಿ ಸುವರ್ಣ ಪುಂಖಗಳನ್ನೂ, ಪಕ್ಷಿಗಳ ಗರಿಗಳನ್ನೂ ಹೊಂದಿದ ವೇಗಶಾಲಿಗಳಾದ ಬಾಣಗಳಿಂದ, ಕರ್ಣಿಗಳಿಂದ, ನಾಲೀಕ-ನಾರಾಚಗಳಿಂದ ಪಾಂಡವರ ಸೈನ್ಯವನ್ನು ಮುಚ್ಚಿಹಾಕಿದರು.
ಅಪಾತಯದ್ ಧ್ವಜಾಂಶ್ಚೈವ ರಥಿನಶ್ಚ ಶಿತೈಃ ಶರೈಃ |
ಮುಂಡತಾಳವನಾನೀವ ಚಕಾರ ಸ ರಥವ್ರಜಾನ್ ॥13॥

ತಮ್ಮ ತೀಕ್ಷ್ಣವಾದ ಬಾಣಗಳಿಂದ ಧ್ವಜಗಳನ್ನು ಮತ್ತು ರಥಿಕರನ್ನು ಉರುಳಿಸಿದರು. ರಥಸಮೂಹಗಳನ್ನು ಶಿರೋಭಾಗವನ್ನು ಕತ್ತರಿಸಿದ ತಾಳವೃಕ್ಷದ ವನಗಳಂತೆ ಮಾಡಿದರು.
ನಿರ್ಮನುಷ್ಯಾನ್ ರಥಾನ್ ರಾಜನ್ ಗಜಾನಶ್ವಾಂಶ್ಚ ಸಂಯುಗೇ |
ಅಕರೋತ್ಸ ಮಹಾಬಾಹುಃ ಸರ್ವಶಸ್ತ್ರಭೃತಾಂ ವರಃ ॥14॥
ಎಲೈ ರಾಜನೇ, ಮಹಾಬಾಹುಗಳೂ, ಶಸ್ತ್ರಧಾರಿಗಳೆಲ್ಲರಲ್ಲಿಯೂ ಶ್ರೇಷ್ಠರೂ ಆದ ಅವರು ಯುದ್ಧದಲ್ಲಿ ರಥಗಳನ್ನು ಮತ್ತು ಗಜಾಶ್ವಗಳನ್ನು ಮನುಷ್ಯರಹಿತಗಳನ್ನಾಗಿ ಮಾಡಿದರು.
ತಸ್ಯ ಜ್ಯಾತಳನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ನಿಶಮ್ಯ ಸರ್ವಭೂತಾನಿ ಸಮಕಂಪಂತ ಭಾರತ ॥15॥
ಎಲೈ ಭಾರತನೇ, ಸಿಡಿಲಿನ ಸ್ಫೋಟದಂತಿದ್ದ ಅವರ ಹೆದೆಯ ನಿರ್ಘೋಷವನ್ನು ಕೇಳಿದ ಎಲ್ಲ ಪ್ರಾಣಿಗಳೂ ನಡುಗಿ ಹೋದವು.
ಅಮೋಘಾ ಹ್ಯಪತನ್ ಬಾಣಾಃ ಪಿತುಸ್ತೇ ಭರತರ್ಷಭ |
ನಾಸಜ್ಜಂತ ತನುತ್ರೇಷು ಭೀಷ್ಮಚಾಪಚ್ಯುತಾಃ ಶರಾಃ ॥16॥
ಎಲೈ ಭರತಶ್ರೇಷ್ಠನೇ, ನಿನ್ನ ತಂದೆಯ ಬಾಣಗಳು ಗುರಿಯನ್ನು ತಪ್ಪಿ ಎಂದೂ ವ್ಯರ್ಥವಾಗಲಿಲ್ಲ. ಭೀಷ್ಮರ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳು ಕವಚಗಳಲ್ಲಿಯೇ ನಿಲ್ಲಲಿಲ್ಲ (ಕವಚವನ್ನು ಭೇದಿಸಿ ಶರೀರಗಳಲ್ಲಿ ಇಳಿದವು).
ಹತವೀರಾನ್ ರಥಾನ್ ರಾಜನ್ ಸಂಯುಕ್ತಾನ್ ಜವನೈರ್ಹಯೈಃ |
ಅಪಶ್ಯಾಮ ಮಹಾರಾಜ ಹ್ರಿಯಮಾಣಾನ್ ರಣಾಜಿರೇ ॥17॥
ಎಲೈ ಮಹಾರಾಜನೇ, ರಣರಂಗದಲ್ಲಿ ವೀರರನ್ನು ಕಳೆದುಕೊಂಡು ವೇಗಶಾಲಿಗಳಾದ ಅಶ್ವಗಳಿಂದ ಎಳೆಯಲ್ಪಡುವ ಬರಿಯ ರಥಗಳನ್ನು ನೋಡಿದೆವು.
ಚೇದಿಕಾಶಿಕರೂಷಾಣಾಂ ಸಹಸ್ರಾಣಿ ಚತುರ್ದಶ |
ಮಹಾರಥಾಃ ಸಮಾಖ್ಯಾತಾಃ ಕುಲಪುತ್ರಾಸ್ತನುತ್ಯಜಃ |
ಅಪರಾವರ್ತಿನಃ ಸರ್ವೇ ಸುವರ್ಣವಿಕೃತಧ್ವಜಾಃ ॥18॥
ಸಂಗ್ರಾಮೇ ಭೀಷ್ಮಮಾಸಾದ್ಯ ವ್ಯಾದಿತಾಸ್ಯಮಿವಾಂತಕಮ್ |
ನಿಮಗ್ನಾಃ ಪರಲೋಕಾಯ ಸವಾಜಿರಥಕುಂಜರಾಃ ॥19॥
ಸುವರ್ಣಾಲಂಕೃತ ಧ್ವಜವುಳ್ಳವರೂ, ಯುದ್ಧದಲ್ಲಿ ಹಿಮ್ಮೆಟ್ಟದವರೂ, ಪ್ರಾಣ- ತ್ಯಾಗವನ್ನು ಮಾಡಲು ಸಿದ್ಧರಾದವರೂ, ಕುಲಪುತ್ರರೂ ಆದ ಚೇದಿ-ಕಾಶಿ- ಕರೂಷರ ಹದಿನಾಲ್ಕು ಸಾವಿರ ಮಹಾರಥರು ಸಂಗ್ರಾಮದಲ್ಲಿ ಬಾಯಿತೆರೆದ ಮೃತ್ಯುವಿನಂತಿದ್ದ ಭೀಷ್ಮರನ್ನು ಸಮೀಪಿಸಿ ತಮ್ಮ ರಥಾಶ್ವಗಜಗಳೊಡನೆ ಪರಲೋಕಕ್ಕೆ ಹೋಗಿ ನೆಲೆಸಿದರು.
ಭಗ್ನಾಕ್ಷೋಪಸ್ಕರಾನ್ ಕಾಂಶ್ಚಿದ್ ಭಗ್ನಚಕ್ರಾಂಶ್ಚ ಸರ್ವಶಃ |
ಅಪಶ್ಯಾಮ ರಥಾನ್ ರಾಜನ್ ಶತಶೋಽಥ ಸಹಸ್ರಶಃ ॥20॥
ಎಲೈ ರಾಜನೇ, ಅಕ್ಷ ಮತ್ತು ಉಳಿದ ಸಾಮಗ್ರಿಗಳು ಮುರಿದ ಕೆಲವು ರಥಗಳನ್ನು, ಚಕ್ರಗಳು ಮುರಿದ ಕೆಲವು ರಥಗಳನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ನೋಡಿದೆವು.
ಸವರೂಥೈ ರಥೈರ್ಭಗ್ನೈ ರಥಿಭಿಶ್ಚ ನಿಪಾತಿತೈಃ |
ಶರೈಃ ಸುಕವಚೈಶ್ಛಿನ್ನೈಃ ಪಟ್ಟಿಶೈಶ್ಚ ವಿಶಾಂಪತೇ ॥21॥
ಗದಾಭಿರ್ಮುಸಲೈಶ್ಚೈವ ನಿಶಿತ್ರಂಶೈಶ್ಚ ಶಿಲೀಮುಖೈಃ |
ಅನುಕರ್ಷೈರುಪಾಸಂಗೈಶ್ಚಕ್ರೈರ್ಭಗ್ನೈಶ್ಚ ಮಾರಿಷ ॥22॥
ಬಾಹುಭಿಃ ಕಾರ್ಮುಕೈಃ ಖಡ್ಗೈಃ ಶಿರೋಭಿಶ್ಚ ಸಕುಂಡಲೈಃ |
ತಳತ್ರೈರಂಗುಲಿತ್ರೈಶ್ಚ ಧ್ವಜೈಶ್ಚ ವಿನಿಪಾತಿತೈಃ |
ಚಾಪೈಶ್ಚ ಬಹುಧಾ ಛಿನ್ನೈಃ ಸಮಾಸ್ತೀರ್ಯತ ಮೇದಿನೀ ॥23॥
ಎಲೈ ಶ್ರೇಷ್ಠನೇ, ರಕ್ಷೆಗಳಿಂದ ಕೂಡಿದ ಭಗ್ನವಾದ ರಥಗಳಿಂದಲೂ, ಬಾಣಗಳಿಂದಲೂ ಪಟ್ಟಿಶಗಳಿಂದಲೂ ಭಿನ್ನವಾದ ಕವಚಗಳುಳ್ಳ ಭೂಮಿಯ ಮೇಲೆ ಬಿದ್ದ ರಥಿಕರಿಂದಲೂ, ನೆಲದ ಮೇಲೆ ಬಿದ್ದ ಗಜಗಳು, ಒನಕೆಗಳು, ಖಡ್ಗಗಳು, ಬಾಣಗಳು, ಬತ್ತಳಿಕೆಗಳು, ಭಗ್ನವಾದ ಚಕ್ರಗಳು, ಕತ್ತರಿಸಲ್ಪಟ್ಟ ಬಾಹುಗಳು, ಬಿಲ್ಲುಗಳು, ಕುಂಡಲಸಹಿತವಾದ ಶಿರಸ್ಸುಗಳು, ಹಸ್ತರಕ್ಷೆಗಳು, ಅಂಗುಲಿ ರಕ್ಷಗಳು, ಕೆಳಗೆ ಬಿದ್ದ ಧ್ವಜಗಳು, ಕತ್ತರಿಸಲ್ಪಟ್ಟ ಚಾಕುಗಳು- ಇವುಗಳಿಂದಲೂ ಭೂಮಿಯು ಹರಡಿ ತುಂಬಿಹೋಯಿತು.
ಹತಾರೋಹಾ ಗಜಾ ರಾಜನ್ ಹಯಾಶ್ಚ ಹತಸಾದಿನಃ |
ಪರಿಪೇತುರ್ದ್ರುತಂ ತತ್ರ ಶತಶೋಽಥ ಸಹಸ್ರಶಃ ॥24॥
ಎಲೈ ರಾಜನೇ, ಗಜಗಳು ಗಜಾರೋಹಿಗಳನ್ನು ಕಳೆದುಕೊಂಡು, ಅಶ್ವಗಳು ಅಶ್ವಾರೋಹಿಗಳನ್ನು ಕಳೆದುಕೊಂಡು ನೂರರ, ಸಾವಿರದ ಸಂಖ್ಯೆಯಲ್ಲಿ ಶೀಘ್ರವಾಗಿ ಬಿದ್ದವು.
ಯತಮಾನಾಶ್ಚ ತೇ ವೀರಾ ದ್ರವಮಾಣಾನ್ ಮಹಾರಥಾನ್ |
ನಾಶಕ್ನುವನ್ ವಾರಯಿತುಂ ಭೀಷ್ಮಬಾಣಪ್ರಪೀಡಿತಾನ್ ॥25॥
ವೀರರಾದ ಪಾಂಡವ ಯೋಧರು ಪ್ರಯತ್ನಪಟ್ಟರೂ ಭೀಷ್ಮರ ಬಾಣಗಳಿಂದ ಪೀಡಿತರಾಗಿ ಓಡಿಹೋಗುತ್ತಿದ್ದ ಮಹಾರಥರನ್ನು ನಿಲ್ಲಿಸಲು ಸಾಧ್ಯವಾಗಲಿಲ್ಲ.
ಮಹೇಂದ್ರಸಮವೀರ್ಯೇಣ ವಧ್ಯಮಾನಾ ಮಹಾಚಮೂಃ |
ಅಭಜ್ಯತ ಮಹಾರಾಜ ನ ಚ ದ್ವೌ ಸಹ ಧಾವತಃ ॥26॥

ಎಲೈ ಮಹಾರಾಜನೇ, ಇಂದ್ರನಿಗೆ ಸಮಾನವಾದ ಸಾಮರ್ಥ್ಯವುಳ್ಳ ಭೀಷ್ಮರಿಂದ ಪ್ರಹಾರಕ್ಕೆ ಒಳಗಾದ ಆ ದೊಡ್ಡ ಸೈನ್ಯವು ಭಗ್ನವಾಯಿತು. ಯಾರಿಬ್ಬರೂ ಜೊತೆಯಲ್ಲಿ ಓಡುತ್ತಿರಲಿಲ್ಲ.
ಆವಿದ್ಧರಥನಾಗಾಶ್ವಂ ಪತಿತಧ್ವಜಕೂಬರಮ್ |
ಅನೀಕಂ ಪಾಂಡುಪುತ್ರಾಣಾಂ ಹಾಹಾಭೂತಮಚೇತನಮ್ ॥27॥
ಚೆನ್ನಾಗಿ ಪೆಟ್ಟುತಿಂದ ರಥಗಜಾಶ್ವಗಳು, ಕೆಳಗೆ ಬಿದ್ದ ಧ್ವಜಕೂಬರಗಳುಳ್ಳ ರಥಗಳು ಇವುಗಳಿಂದ ಪಾಂಡುಪುತ್ರರ ಸೈನ್ಯವು ಕರ್ತವ್ಯಪ್ರಜ್ಞೆಯನ್ನು ಕಳೆದುಕೊಂಡು ಹಾಹಾಕಾರವನ್ನು ಮಾಡಿತು.
ಜಘಾನಾತ್ರ ಪಿತಾ ಪುತ್ರಂ ಪುತ್ರಶ್ಚ ಪಿತರಂ ತಥಾ |
ಪ್ರಿಯಂ ಸಖಾಯಂ ಚಾಕ್ರಂದೇ ಸಖಾ ದೈವಬಲಾತ್ಕೃತಃ ॥28॥
ಅಂತಹ ತೀವ್ರವಾದ ಯುದ್ಧದಲ್ಲಿ ವಿಧಿಗೆ ವಶರಾಗಿ ತಂದೆಯು ಮಗನನ್ನೂ, ಮಗನು ತಂದೆಯನ್ನೂ, ಮಿತ್ರನು ಮಿತ್ರನನ್ನೂ ಕೊಂದರು.
ವಿಮುಚ್ಯ ಕವಚಾನನ್ಯೇ ಪಾಂಡುಪುತ್ರಸ್ಯ ಸೈನಿಕಾಃ |
ಪ್ರಕೀರ್ಯ ಕೇಶಾನ್ ಧಾವಂತಃ ಪ್ರತ್ಯದೃಶ್ಯಂತ ಭಾರತ ॥29॥
ಎಲೈ ಭಾರತನೇ, ಇನ್ನು ಕೆಲವು ಪಾಂಡವರ ಸೈನಿಕರು ಕವಚಗಳನ್ನು ಬಿಚ್ಚಿ, ತಲೆಗೂದಲುಗಳನ್ನು ಕೆದರಿಕೊಂಡು ಓಡುತ್ತಿರುವುದು ಕಂಡುಬಂದಿತು.
ತದ್ಗೋಕುಲಮಿವೋದ್ಭ್ರಾಂತಮುದ್ಭ್ರಾಂತರಥಕುಂಜರಮ್ |
ದದೃಶೇ ಪಾಂಡುಪುತ್ರಸ್ಯ ಸೈನ್ಯಮಾರ್ತಸ್ವರಂ ತದಾ ॥30॥
ಗಾಬರಿಗೊಂಡ ರಥ-ಗಜಗಳಿಂದ ಕೂಡಿದ ಪಾಂಡುಪುತ್ರರ ಸೈನ್ಯವು ಗಾಬರಿಗೊಂಡ ಗೋಸಮೂಹದಂತೆ ಆರ್ತಸ್ವರದಿಂದ ಕೂಡಿದುದು ಆಗ ಕಂಡುಬಂದಿತು.
ಪ್ರಭಜ್ಯಮಾನಂ ಸೈನ್ಯಂ ತು ದೃಷ್ಟ್ವಾ ಯಾದವನಂದನಃ |
ಉವಾಚ ಪಾರ್ಥಂ ಬೀಭತ್ಸುಂ ನಿಗೃಹ್ಯ ರಥಮುತ್ತಮಮ್ ॥31॥
ತಮ್ಮ ಸೈನ್ಯವು ಭಗ್ನಗೊಳ್ಳುತ್ತಿರುವುದನ್ನು ನೋಡಿದ ಯಾದವ ನಂದನನಾದ ಕೃಷ್ಣನು ತನ್ನ ಶ್ರೇಷ್ಠವಾದ ರಥವನ್ನು ನಿಲ್ಲಿಸಿ ಅರ್ಜುನನನ್ನು ಕುರಿತು ಹೇಳಿದನು.
ಅಯಂ ಸ ಕಾಲಃ ಸಂಪ್ರಾಪ್ತಃ ಪಾರ್ಥ ಯಃ ಕಾಂಕ್ಷಿತಸ್ತವ |
ಪ್ರಹರಾಸ್ಮೈ ನರವ್ಯಾಘ್ರ ನ ಚೇನ್ಮೋಹಾತ್ ಪ್ರಮುಹ್ಯಸೇ ॥32॥
ಎಲೈ ಪಾರ್ಥನೇ, ನೀನು ಬಹಳ ಸಮಯದಿಂದ ಬಯಸಿದ ಆ ಕಾಲವು ಈಗ ಪ್ರಾಪ್ತವಾಗಿದೆ. ನರವ್ಯಾಘ್ರನೇ, ನೀನು ಮೋಹಕ್ಕೆ ಒಳಗಾಗದಿದ್ದರೆ ಭೀಷ್ಮರ ಮೇಲೆ ಪ್ರಹಾರವನ್ನು ಮಾಡು.
ಯತ್ ಪುರಾ ಕಥಿತಂ ವೀರ ತ್ವಯಾ ರಾಜ್ಞಾಂ ಸಮಾಗಮೇ |
ವಿರಾಟನಗರೇ ಪಾರ್ಥ ಸಂಜಯಸ್ಯ ಸಮೀಪತಃ ॥33॥
ಭೀಷ್ಮದ್ರೋಣಮುಖಾನ್ ಸರ್ವಾನ್ ಧಾರ್ತರಾಷ್ಟ್ರಸ್ಯ ಸೈನಿಕಾನ್ |
ಸಾನುಬಂಧಾನ್ ಹನಿಷ್ಯಾಮಿ ಯೇ ಮಾಂ ಯೋತ್ಸ್ಯಂತಿ ಸಂಯುಗೇ ॥
ಇತಿ ತತ್ಕುರು ಕೌಂತೇಯ ಸತ್ಯಂ ವಾಕ್ಯಮರಿಂದಮ |
ಕ್ಷತ್ರಧರ್ಮಮನುಸ್ಮೃತ್ಯ ಯುಧ್ಯಸ್ವ ಭರತರ್ಷಭ ॥35॥
ಎಲೈ ವೀರನೇ, ಅರ್ಜುನನೇ, ನೀನು ಹಿಂದೆ ವಿರಾಟನಗರದಲ್ಲಿ ರಾಜರುಗಳ ಸಮಾಗಮವುಂಟಾದಾಗ ಸಂಜಯನ ಎದುರಿನಲ್ಲಿ, ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡುವ ಭೀಷ್ಮ-ದ್ರೋಣರೇ ಮೊದಲಾದ ದುರ್ಯೋಧನನ ಎಲ್ಲಾ ಸೈನಿಕರನ್ನು ಅವರ ಪರಿವಾರದ ಜೊತೆಯಲ್ಲಿ ಕೊಲ್ಲುವೆನು ಎಂದು ಏನು ಪ್ರತಿಜ್ಞೆಯನ್ನು ಮಾಡಿದ್ದೆಯೋ, ಎಲೈ ಕೌಂತೇಯನೇ, ಅರಿಂದಮನೇ, ಆ ವಾಕ್ಯವನ್ನು ಸತ್ಯವನ್ನಾಗಿ ಮಾಡು. ಎಲೈ ಭರತಶ್ರೇಷ್ಠನೇ, ಕ್ಷತ್ರಿಯ ಧರ್ಮವನ್ನು ಅನುಸರಿಸಿ ಯುದ್ಧವನ್ನು ಮಾಡು.
ಇತ್ಯುಕ್ತೋ ವಾಸುದೇವೇನ ತಿರ್ಯಗ್ದೃಷ್ಟಿರಧೋಮುಖಃ |
ಅಕಾಮ ಇವ ಬೀಭತ್ಸುರಿದಂ ವಚನಮಬ್ರವೀತ್ ॥36॥
ಹೀಗೆ ಕೃಷ್ಣನಿಂದ ಹೇಳಲ್ಪಟ್ಟ ಅರ್ಜುನನು ಮುಖವನ್ನು ಕೆಳಗೆ ಮಾಡಿ ದೃಷ್ಟಿಯನ್ನು ತಿರುಗಿಸಿ ಮನಸ್ಸಿಲ್ಲದವನಂತೆ ಮಾತನಾಡಿದನು.
ಅವಧ್ಯಾನಾಂ ವಧಂ ಕೃತ್ವಾ ರಾಜ್ಯಂ ವಾ ನರಕೋತ್ತರಮ್ |
ದುಃಖಾನಿ ವನವಾಸೇ ವಾ ಕಿಂ ನು ಮೇ ಸುಕೃತಂ ಭವೇತ್ ॥37॥
ಕೊಲ್ಲಬಾರದವರನ್ನು ಕೊಂದು ನರಕವೇ ಮುಂದಿರುವ ರಾಜ್ಯವಾಗಲೀ ಅಥವಾ ವನವಾಸ ದುಃಖವಾಗಲೀ ಇವುಗಳಲ್ಲಿ ಯಾವುದು ಒಳ್ಳೆಯದು ಎಂದು ನನಗೆ ತಿಳಿಯುವುದಿಲ್ಲ.
ಚೋದಯಾಶ್ವಾನ್ ಯತೋ ಭೀಷ್ಮಃ ಕರಿಷ್ಯೇ ವಚನಂ ತವ |
ಪಾತಯಿಷ್ಯಾಮಿ ದುರ್ಧರ್ಷಂ ವೃದ್ಧಂ ಕುರುಪಿತಾಮಹಮ್ ॥38॥
ನನ್ನ ಅಶ್ವಗಳನ್ನು ಭೀಷ್ಮರಿದ್ದ ಕಡೆಗೆ ಹೊಡೆಯುವವನಾಗು. ನಿನ್ನ ಮಾತನ್ನು ನಾನು ನಡೆಸುವೆನು. ಸೋಲಿಸಲು ಅಸಾಧ್ಯರೂ, ವೃದ್ಧರೂ, ಕುರುಪಿತಾಮಹರೂ ಆದ ಭೀಷ್ಮರನ್ನು ನಾನು ಉರುಳಿಸುವೆನು (ಎಂದು ಹೇಳಿದನು).
ತತೋಽಶ್ವಾನ್ ರಜತಪ್ರಖ್ಯಾನ್ ಚೋದಯಾಮಾಸ ಮಾಧವಃ |
ಯತೋ ಭೀಷ್ಮಸ್ತತೋ ರಾಜನ್ ದುಷ್ಪ್ರೇಕ್ಷ್ಯೋ ರಶ್ಮಿಮಾನಿವ ॥39॥

ಎಲೈ ರಾಜನೇ, ಕೃಷ್ಣನು ಬೆಳ್ಳಿಯ ಬಣ್ಣದ ಕುದುರೆಗಳನ್ನು ಹೊಂದಿದ ಅರ್ಜುನನ ರಥವನ್ನು ತಮ್ಮ ತೇಜಸ್ಸಿನಿಂದ ಸೂರ್ಯನಂತೆ ನೋಡಲು ಅಸಾಧ್ಯನಾದ ಭೀಷ್ಮರಿದ್ದ ಕಡೆಗೆ ಪ್ರಚೋದಿಸಿದನು.
ತತಸ್ತತ್ಪುನರಾವೃತ್ತಂ ಯುಧಿಷ್ಠಿರಬಲಂ ಮಹತ್ |
ದೃಷ್ಟ್ವಾ ಪಾರ್ಥಂ ಮಹಾಬಾಹುಂ ಭೀಷ್ಮಾಯೋದ್ಯಂತಮಾಹವೇ ॥40॥
ಮಹಾಬಾಹುವಾದ ಅರ್ಜುನನು ಯುದ್ಧದಲ್ಲಿ ಭೀಷ್ಮರ ಕಡೆಗೆ ಹೋಗುತ್ತಿರುವುದನ್ನು ನೋಡಿ ಧರ್ಮರಾಜನ ಆ ದೊಡ್ಡ ಸೈನ್ಯವು ಆಗ ಹಿಂದಿರುಗಿತು.
ತತೋ ಭೀಷ್ಮಃ ಕುರುಶ್ರೇಷ್ಠಃ ಸಿಂಹವದ್ ವಿನದನ್ ಮುಹುಃ |
ಧನಂಜಯರಥಂ ಶೀಘ್ರಂ ಶರವರ್ಷೈರವಾಕಿರತ್ ॥41॥
ಆಗ ಕುರುಶ್ರೇಷ್ಠರಾದ ಭೀಷ್ಮರು ಪುನಃ ಪುನಃ ಸಿಂಹನಾದವನ್ನು ಮಾಡುತ್ತಾ ಅರ್ಜುನನ ರಥದ ಮೇಲೆ ಶೀಘ್ರವಾಗಿ ಬಾಣಗಳ ಮಳೆಯನ್ನು ಕರೆದರು.
ಕ್ಷಣೇನ ಸ ರಥಸ್ತಸ್ಯ ಸಹಯಃ ಸಹಸಾರಥಿಃ |
ಶರವರ್ಷೇಣ ಮಹತಾ ನ ಪ್ರಾಜ್ಞಾಯತ ಕಿಂಚನ ॥42॥
ಒಂದು ಕ್ಷಣದಲ್ಲಿ ಅಶ್ವ-ಸಾರಥಿಗಳಿಂದ ಕೂಡಿದ ಅರ್ಜುನನ ಆ ರಥವು ದೊಡ್ಡ ಬಾಣಗಳ ಮಳೆಗೆ ಸಿಲುಕಿ ಯಾವುದೂ ಕಾಣಲಿಲ್ಲ.
ವಾಸುದೇವಸ್ತ್ವಸಂಭ್ರಾಂತೋ ಧೈರ್ಯಮಾಸ್ಥಾಯ ಸಾತ್ವತಃ |
ಚೋದಯಾಮಾಸ ತಾನಶ್ವಾನ್ ವಿತುನ್ನಾನ್ ಭೀಷ್ಮಸಾಯಕೈಃ ॥43॥
ಸಾತ್ವತನಾದ ಕೃಷ್ಣನು ಧೈರ್ಯವನ್ನು ಹೊಂದಿ, ಗಾಬರಿಗೊಳ್ಳದೆ ಭೀಷ್ಮರ ಬಾಣಗಳಿಂದ ಪೀಡಿಸಲ್ಪಟ್ಟ ಆ ಅಶ್ವಗಳನ್ನು ಪ್ರಚೋದಿಸಿದನು.
ತತಃ ಪಾರ್ಥೋ ಧನುರ್ಗೃಹ್ಯ ದಿವ್ಯಂ ಜಲದನಿಸ್ವನಮ್ |
ಪಾತಯಾಮಾಸ ಭೀಷ್ಮಸ್ಯ ಧನುಶ್ಛಿತ್ತ್ವಾ ಶಿತೈಃ ಶರೈಃ ॥44॥
ಆಗ ಅರ್ಜುನನು ಮೇಘದಂತೆ ಗರ್ಜಿಸುವ ದಿವ್ಯವಾದ ಧನುಸ್ಸನ್ನು ಹಿಡಿದು ತೀಕ್ಷ್ಣವಾದ ಬಾಣಗಳಿಂದ ಭೀಷ್ಮರ ಧನುಸ್ಸನ್ನು ಕತ್ತರಿಸಿ ಕೆಡವಿದನು.
ಸ ಚ್ಛಿನ್ನಧನ್ವಾ ಕೌರವ್ಯಃ ಪುನರನ್ಯನ್ಮಹದ್ಧನುಃ |
ನಿಮೇಷಾಂತರಮಾತ್ರೇಣ ಸಜ್ಯಂ ಚಕ್ರೇ ಪಿತಾ ತವ ॥45॥
ತಮ್ಮ ಧನುವು ಕತ್ತರಿಸಲ್ಪಡುತ್ತಿರಲು ಕೌರವ್ಯನಾದ ನಿನ್ನ ತಂದೆಯು ಇನ್ನೊಂದು ದೊಡ್ಡ ಧನುಸ್ಸನ್ನು ತೆಗೆದುಕೊಂಡು ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ಹೆದೆ ಏರಿಸಿದರು.
ವಿಚಕರ್ಷ ತತೋ ದೋರ್ಭ್ಯಾಂ ಧನುರ್ಜಲದನಿಸ್ವನಮ್ |
ಅಥಾಸ್ಯ ತದಪಿ ಕ್ರುದ್ಧಶ್ಚಿಚ್ಛೇದ ಧನುರರ್ಜುನಃ ॥46॥
ಮೇಘಗರ್ಜನೆಯಂತೆ ಗರ್ಜಿಸುವ ತಮ್ಮ ಧನುಸ್ಸನ್ನು ಭೀಷ್ಮರು ಪುನಃ ಎಳೆದರು. ಆಗ ಅರ್ಜುನನು ಕೋಪಗೊಂಡು ಆ ಧನುಸ್ಸನ್ನೂ ಕತ್ತರಿಸಿದನು.
ತಸ್ಯ ತತ್ಪೂಜಯಾಮಾಸ ಲಾಘವಂ ಶಂತನೋಃ ಸುತಃ |
ಸಾಧು ಪಾರ್ಥ ಮಹಾಬಾಹೋ ಸಾಧು ಕುಂತೀಸುತೇತಿ ಚ ॥47॥
ಅರ್ಜುನನ ಆ ಕ್ಷಿಪ್ರಕಾರಿತ್ವವನ್ನು ನೋಡಿ ಶಂತನು ಪುತ್ರರಾದ ಭೀಷ್ಮರು ಪಾರ್ಥನೇ, ಮಹಾಬಾಹುವೇ, ಕುಂತೀಪುತ್ರನೇ, ಸಾಧು-ಸಾಧು ಎಂದು ಪ್ರಶಂಸಿಸಿದರು.
ಸಮಾಭಾಷ್ಯೈನಮಪರಂ ಪ್ರಗೃಹ್ಯ ರುಚಿರಂ ಧನುಃ |
ಮುಮೋಚ ಸಮರೇ ಭೀಷ್ಮಃ ಶರಾನ್ ಪಾರ್ಥರಥಂ ಪ್ರತಿ ॥48॥
ಅರ್ಜುನನನ್ನು ಕುರಿತು ಹೀಗೆ ಮಾತನಾಡಿ, ಇನ್ನೊಂದು ಸುಂದರವಾದ ಧನುಸ್ಸನ್ನು ತೆಗೆದುಕೊಂಡು ಅರ್ಜುನನ ರಥದ ಮೇಲೆ ಬಾಣಗಳನ್ನು ಪ್ರಯೋಗಿಸಿದರು.
ಅದರ್ಶಯದ್ ವಾಸುದೇವೋ ಹಯಯಾನೇ ಪರಂ ಬಲಮ್ |
ಮೋಘಾನ್ ಕುರ್ವನ್ ಶರಾಂಸ್ತಸ್ಯ ಮಂಡಲಾನಿ ವಿದರ್ಶಯನ್ ॥49॥
ಕೃಷ್ಣನು ಯುದ್ಧಕಾಲದಲ್ಲಿ ರಥವನ್ನು ಮಂಡಲಗಳಲ್ಲಿ ತಿರುಗಿಸುತ್ತಾ, ಭೀಷ್ಮರ ಬಾಣಪ್ರಯೋಗವನ್ನು ವ್ಯರ್ಥಗೊಳಿಸಿ, ಸಾರಥ್ಯದಲ್ಲಿ ತನಗಿರುವ ಪರಮ ಕೌಶಲವನ್ನು ವ್ಯಕ್ತಪಡಿಸಿದನು.
ಶುಶುಭಾತೇ ನರವ್ಯಾಘ್ರೌ ಭೀಷ್ಮಪಾರ್ಥೌ ಶರಕ್ಷತೌ |
ಗೋವೃಷಾವಿವ ಸಂರಬ್ಧೌ ವಿಷಾಣೋಲ್ಲಿಖಿತಾಂಕಿತೌ ॥50॥
ನರಶ್ರೇಷ್ಠರಾದ ಭೀಷ್ಮಾರ್ಜುನರಿಬ್ಬರೂ ಕ್ರೋಧಗೊಂಡು ತಮ್ಮ ಕೊಂಬುಗಳಿಂದ ತಿವಿದು ಗಾಯಗೊಂಡ ಎರಡು ಗೋ-ವೃಷಭಗಳಂತೆ ಬಾಣಗಳ ಪ್ರಹಾರದಿಂದ ಉಂಟಾದ ಗಾಯಗಳಿಂದ ಶೋಭಿಸಿದರು.
ವಾಸುದೇವಸ್ತು ಸಂಪ್ರೇಕ್ಷ್ಯ ಪಾರ್ಥಸ್ಯ ಮೃದುಯುದ್ಧತಾಮ್ |
ಭೀಷ್ಮಂ ಚ ಶರವರ್ಷಾಣಿ ಸೃಜಂತಮನಿಶಂ ಯುಧಿ ॥51॥
ಪ್ರತಪಂತಮಿವಾದಿತ್ಯಂ ಮಧ್ಯಮಾಸಾದ್ಯ ಸೇನಯೋಃ |
ವರಾನ್ವರಾನ್ ವಿನಿಘ್ನಂತಂ ಪಾಂಡುಪುತ್ರಸ್ಯ ಸೈನಿಕಾನ್ ॥52॥
ಯುಗಾಂತಮಿವ ಕುರ್ವಾಣಂ ಭೀಷ್ಮಂ ಯೌಧಿಷ್ಠಿರೇ ಬಲೇ |

ನಾಮೃಷ್ಯತ ಮಹಾಬಾಹುರ್ಮಾಧವಃ ಪರವೀರಹಾ ॥53॥
ಅರ್ಜುನನು ಮೃದುವಾಗಿ ಯುದ್ಧಮಾಡುವುದನ್ನೂ, ಭೀಷ್ಮರು ಸತತವಾಗಿ ಯುದ್ಧದಲ್ಲಿ ಬಾಣಗಳ ಮಳೆಯನ್ನು ಸೃಷ್ಟಿ ಮಾಡಿ, ಪಾಂಡವರ ಸೈನಿಕರಲ್ಲಿ ಶ್ರೇಷ್ಠರಾದವರನ್ನು ಆರಿಸಿ ಆರಿಸಿ ಕೊಲ್ಲುತ್ತಾ, ಎರಡು ಸೇನೆಯ ಮಧ್ಯದಲ್ಲಿ ಸೂರ್ಯನಂತೆ ಜ್ವಲಿಸಿ, ಯುಧಿಷ್ಠಿರನ ಸೈನ್ಯದಲ್ಲಿ ಯುಗಾಂತದಂತಹ ಪರಿಸ್ಥಿತಿಯನ್ನು ಉಂಟುಮಾಡುತ್ತಿದ್ದ ಭೀಷ್ಮರನ್ನೂ ನೋಡಿ ಪರವೀರಘಾತಕನೂ, ಮಹಾಬಾಹುವೂ ಆದ ಕೃಷ್ಣನು ಆದ ಅವನು ಸಹಿಸಲಿಲ್ಲ.
ಉತ್ಸೃಜ್ಯ ರಜತಪ್ರಖ್ಯಾನ್ ಹಯಾನ್ ಪಾರ್ಥಸ್ಯ ಮಾರಿಷ |
ಕ್ರುದ್ಧೋ ನಾಮ ಮಹಾಯೋಗೀ ಪ್ರಚಸ್ಕಂದ ಮಹಾರಥಾತ್ |
ಅಭಿದುದ್ರಾವ ಭೀಷ್ಮಂ ಸ ಭುಜಪ್ರಹರಣೋ ಬಲೀ ॥54॥
ಎಲೈ ಪೂಜ್ಯನೇ, ಬಲಿಷ್ಠನಾದ ಅವನು ಅರ್ಜುನನ ರಥದ ಶ್ವೇತಾಶ್ವಗಳ ಕಡಿವಾಣವನ್ನು ಎಸೆದು ಕ್ರುದ್ಧನಾಗಿ, ಮಹಾರಥದಿಂದ ಇಳಿದು ಮಹಾಯೋಗಿಯಾದ ಅವನು ಕೇವಲ ಭುಜಾಯುಧನಾಗಿ ಭೀಷ್ಮರ ಕಡೆಗೆ ಓಡಿದನು.
ಪ್ರತೋದಪಾಣಿಸ್ತೇಜಸ್ವೀ ಸಿಂಹವದ್ ವಿನದನ್ ಮುಹುಃ |
ದಾರಯನ್ನಿವ ಪದ್ಭ್ಯಾಂ ಸ ಜಗತೀಂ ಜಗತೀಶ್ವರಃ ॥55॥
ಕ್ರೋಧತಾಮ್ರೇಕ್ಷಣಃ ಕೃಷ್ಣೋ ಜಿಘಾಂಸುರಮಿತದ್ಯುತಿಃ |
ಗ್ರಸನ್ನಿವ ಚ ಚೇತಾಂಸಿ ತಾವಕಾನಾಂ ಮಹಾಹವೇ ॥56॥
ಅಮಿತದ್ಯುತಿಯೂ, ಜಗದೀಶ್ವರನೂ ಆದ ಕೃಷ್ಣನು ಕೈಯಲ್ಲಿ ಕೇವಲ ಚಾವಟಿಯನ್ನು ಹಿಡಿದು ಸಿಂಹದಂತೆ ಪುನಃ ಪುನಃ ಗರ್ಜಿಸುತ್ತಾ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ತನ್ನ ಪಾದನ್ಯಾಸಗಳಿಂದ ಭೂಮಿಯನ್ನು ಸೀಳುವವನಂತೆ, ಭೀಷ್ಮರನ್ನು ಕೊಲ್ಲಲು ಬಯಸಿದವನಂತೆ, ನಿನ್ನ ಸೈನಿಕರ ಮನಸ್ಸುಗಳನ್ನು ನುಂಗುವವನಂತೆ ಓಡಿದನು.
ದೃಷ್ಟ್ವಾ ಮಾಧವಮಾಕ್ರಂದೇ ಭೀಷ್ಮಾಯೋದ್ಯಂತಮಾಹವೇ |
ಹತೋ ಭೀಷ್ಮೋ ಹತೋ ಭೀಷ್ಮ ಇತಿ ತತ್ರ ಸ್ಮ ಸೈನಿಕಾಃ |
ಕ್ರೋಶಂತಃ ಪ್ರಾದ್ರವನ್ ಸರ್ವೇ ವಾಸುದೇವಭಯಾನ್ನರಾಃ ॥57॥
ರಣರಂಗದಲ್ಲಿ ಭೀಷ್ಮರ ಕಡೆಗೆ ವಧೋದ್ಯುಕ್ತನಾಗಿ ಹೋಗುತ್ತಿರುವ ಕೃಷ್ಣನನ್ನು ನೋಡಿ ನಿನ್ನ ಸೈನಿಕರು ಭೀಷ್ಮರು ಮೃತರಾದರು, ಭೀಷ್ಮರು ಮೃತರಾದರು ಎಂದು ಕಿರುಚುತ್ತಾ ಕೃಷ್ಣನ ಭಯದಿಂದ ಎಲ್ಲರೂ ಓಡಿಹೋದರು.
ಪೀತಕೌಶೇಯಸಂವೀತೋ ಮಣಿಶ್ಯಾಮೋ ಜನಾರ್ದನಃ |
ಶುಶುಭೇ ವಿದ್ರವನ್ ಭೀಷ್ಮಂ ವಿದ್ಯುನ್ಮಾಲೀ ಯಥಾಂಬುದಃ ॥58॥
ಪೀತಾಂಬರವನ್ನು ಧರಿಸಿ, ಮರಕತ ಮಣಿಯ ಕಾಂತಿಯನ್ನು ಹೊಂದಿದ ಜನಾರ್ದನನು ಭೀಷ್ಮರ ಕಡೆಗೆ ಓಡುತ್ತಾ, ಮಿಂಚುಗಳ ಮಾಲೆಯನ್ನು ಧರಿಸಿದ ಮೇಘದಂತೆ ಕಂಗೊಳಿಸಿದನು.
ಸ ಸಿಂಹ ಇವ ಮಾತಂಗಂ ಯೂಥರ್ಷಭ ಇವರ್ಷಭಮ್ |
ಅಭಿದುದ್ರಾವ ತೇಜಸ್ವೀ ವಿನದನ್ ಯಾದವರ್ಷಭಃ ॥59॥
ತೇಜಸ್ವಿಯಾದ ಯಾದವ ಶ್ರೇಷ್ಠನಾದ ಅವನು ಸಿಂಹವು ಗಜದ ಕಡೆಗೆ ಓಡಿದಂತೆ ಗುಂಪಿನ ನಾಯಕನಾದ ವೃಷಭವು ಇನ್ನೊಂದು ವೃಷಭದ ಕಡೆಗೆ ಓಡಿದಂತೆ ಸಿಂಹನಾದವನ್ನು ಮಾಡುತ್ತಾ ಭೀಷ್ಮರ ಕಡೆಗೆ ಓಡಿದನು.
ತಮಾಪತಂತಂ ಸಂಪ್ರೇಕ್ಷ್ಯ ಪುಂಡರೀಕಾಕ್ಷಮಾಹವೇ |
ಅಸಂಭ್ರಮಂ ರಣೇ ಭೀಷ್ಮೋ ವಿಚಕರ್ಷ ಮಹದ್ಧನುಃ |
ಉವಾಚ ಚೈನಂ ಗೋವಿಂದಮಸಂಭ್ರಾಂತೇನ ಚೇತಸಾ ॥60॥
ರಣರಂಗದಲ್ಲಿ ತನ್ನ ಮೇಲೆ ಎರಗಿ ಬರುತ್ತಿರುವ ಪುಂಡರೀಕಾಕ್ಷನಾದ ಕೃಷ್ಣನನ್ನು ನೋಡಿ ಏನೂ ಗಾಬರಿಗೊಳ್ಳದೆ ತಮ್ಮ ದೊಡ್ಡ ಧನುಸ್ಸನ್ನು ಎಳೆದು ಸಮಾಧಾನಚಿತ್ತದಿಂದ ಈ ಗೋವಿಂದನನ್ನು ಕುರಿತು ಮಾತನಾಡಿದರು.
ಏಹ್ಯೇಹಿ ಪುಂಡರೀಕಾಕ್ಷ ದೇವದೇವ ನಮೋಽಸ್ತು ತೇ |
ಮಾಮದ್ಯ ಸಾತ್ವತಶ್ರೇಷ್ಠ ಪಾತಯಸ್ವ ಮಹಾಹವೇ ॥61॥
ಪುಂಡರೀಕಾಕ್ಷನೇ ಬಾ, ಬಾ. ದೇವದೇವನೇ, ನಿನಗೆ ನಮಸ್ಕಾರಗಳು. ಸಾತ್ವತ ಶ್ರೇಷ್ಠನೇ, ಈ ದಿನ ಯುದ್ಧದಲ್ಲಿ ನನ್ನನ್ನು ಕೆಡವುವವನಾಗು.
ತ್ವಯಾ ಹಿ ದೇವ ಸಂಗ್ರಾಮೇ ಹತಸ್ಯಾಪಿ ಮಮಾನಘ |
ಶ್ರೇಯ ಏವ ಪರಂ ಕೃಷ್ಣ ಲೋಕೇಽಮುಷ್ಮಿನ್ನಿಹೈವ ಚ ॥62॥
ಎಲೈ ದೇವನೇ, ನಿರ್ದೋಷನೇ, ಕೃಷ್ಣನೇ, ಯುದ್ಧದಲ್ಲಿ ನಿನ್ನಿಂದ ಹತನಾದರೂ ನನಗೆ ಪರಲೋಕದಲ್ಲಿ ಶ್ರೇಷ್ಠವಾದ ಶ್ರೇಯಸ್ಸೂ ಮತ್ತು ಈ ಲೋಕದಲ್ಲಿ ಶ್ರೇಷ್ಠವಾದ ಕೀರ್ತಿಯೂ ಉಂಟಾಗುವುದು.
ಪ್ರಹರಸ್ವ ಯಥೇಷ್ಟಂ ವೈ ದಾಸೋಽಸ್ಮಿ ತವ ಚಾನಘ |
ಸಂಭಾವಿತೋಽಸ್ಮಿ ಗೋವಿಂದ ತ್ರೈಲೋಕ್ಯೇನಾದ್ಯ ಸಂಯುಗೇ ॥63॥
ಎಲೈ ನಿರ್ದೋಷನೇ, ನಿನ್ನ ಮನಸ್ಸಿಗೆ ಬಂದಂತೆ ದಾಸನಾದ ನನ್ನ ಮೇಲೆ ಪ್ರಹಾರವನ್ನು ಮಾಡು. ಗೋವಿಂದನೇ, ಈ ದಿನ ಯುದ್ಧದಲ್ಲಿ ನಾನು ಮೂರು ಲೋಕಗಳಿಂದಲೂ ಗೌರವಿಸಲ್ಪಟ್ಟಿದ್ದೇನೆ (ಎಂದು ಹೇಳಿದರು).
ಅನ್ವಗೇವ ತತಃ ಪಾರ್ಥಸ್ತಮನುದ್ರುತ್ಯ ಕೇಶವಮ್ |
ನಿಜಗ್ರಾಹ ಮಹಾಬಾಹುರ್ಬಾಹುಭ್ಯಾಂ ಪರಿಗೃಹ್ಯ ವೈ ॥64॥
ಮಹಾಬಾಹುವಾದ ಅರ್ಜುನನಾದರೋ ಕೃಷ್ಣನ ಹಿಂದೆಯೇ ಓಡಿಬಂದು ಅವನ ಬಾಹುಗಳನ್ನು ಹಿಡಿದು ನಿಲ್ಲಿಸಿದನು.

ನಿಗೃಹ್ಯಮಾಣಃ ಪಾರ್ಥೇನ ಕೃಷ್ಣೋ ರಾಜೀವಲೋಚನಃ |
ಜಗಾಮ ಚೈನಮಾದಾಯ ವೇಗೇನ ಪುರುಷೋತ್ತಮಃ ||65||
ಪಾರ್ಥನಿಂದ ಹಿಡಿಯಲ್ಪಟ್ಟ ರಾಜೀವಲೋಚನನೂ, ಪುರುಷೋತ್ತಮನೂ ಆದ ಕೃಷ್ಣನು ತನ್ನ ವೇಗದಿಂದ ಅವನನ್ನೂ ಎಳೆದುಕೊಂಡು ಸಾಗಿದನು.
ಪಾರ್ಥಸ್ತು ವಿಷ್ಟಭ್ಯ ಬಲಾಚ್ಚರಣೌ ಪರವೀರಹಾ |
ನಿಜಗ್ರಾಹ ಹೃಷೀಕೇಶಂ ಕಥಂಚಿದ್ ದಶಮೇ ಪದೇ ||66||
ಪರವೀರಘಾತಕನಾದ ಅರ್ಜುನನಾದರೋ ತನ್ನ ಎಲ್ಲಾ ಸಾಮರ್ಥ್ಯದಿಂದ ಕಾಲುಗಳನ್ನು ಗಟ್ಟಿಯಾಗಿ ಊರಿ ಹತ್ತನೆಯ ಹೆಜ್ಜೆಯಲ್ಲಿ ಪ್ರಯಾಸದಿಂದ ಕೃಷ್ಣನನ್ನು ನಿಲ್ಲಿಸಿದನು.
ತತ ಏನಮುವಾಚಾರ್ತಃ ಕ್ರೋಧಪರ್ಯಾಕುಲೇಕ್ಷಣಮ್ |
ನಿಃಶ್ವಸಂತಂ ಯಥಾ ನಾಗಮರ್ಜುನಃ ಪರವೀರಹಾ ||67||
ಅನಂತರ ಪರವೀರಘಾತಕನಾದ ಅರ್ಜುನನು ಆರ್ತನಾಗಿ, ಕ್ರೋಧದಿಂದ ಕದಡಿದ ಕಣ್ಣುಳ್ಳ ಮತ್ತು ಸರ್ಪದಂತೆ ನಿಶ್ವಾಸವನ್ನು ಬಿಡುತ್ತಿದ್ದ ಕೃಷ್ಣನನ್ನು ಕುರಿತು ಮಾತನಾಡಿದನು.
ನಿವರ್ತಸ್ವ ಮಹಾಬಾಹೋ ನಾನೃತಂ ಕರ್ತುಮರ್ಹಸಿ |
ಯತ್ ತ್ವಯಾ ಕಥಿತಂ ಪೂರ್ವಂ ನ ಯೋತ್ಸ್ಯಾಮೀತಿ ಕೇಶವ ||68||
ಎಲೈ ಮಹಾಬಾಹುವೇ, ಹಿಂದಿರುಗು. ಎಲೈ ಕೇಶವನೇ, ನಾನು ಯುದ್ಧವನ್ನು ಮಾಡುವುದಿಲ್ಲ ಎಂದು ಹಿಂದೆ ಏನು ನುಡಿದಿದ್ದೆಯೋ ಅದನ್ನು ಸತ್ಯವನ್ನಾಗಿ ಮಾಡು.
ಮಿಥ್ಯಾವಾದೀತಿ ಲೋಕಸ್ತ್ವಾಂ ಕಥಯಿಷ್ಯತಿ ಮಾಧವ |
ಮಮೈಷ ಭಾರಃ ಸರ್ವೋ ಹಿ ಹನಿಷ್ಯಾಮಿ ಯತವ್ರತಮ್ ||69||
ಎಲೈ ಮಾಧವನೇ, ಇಲ್ಲದಿದ್ದರೆ ಜನರು ನಿನ್ನನ್ನು ಮಿಥ್ಯಾವಚನನೆಂದು ಹೇಳುವರು. ಈ ಯುದ್ಧದಲ್ಲಿ ಎಲ್ಲ ಭಾರವೂ ನನ್ನ ಮೇಲೆಯೇ ಇದೆ. ಭೀಷ್ಮರನ್ನು ಕೊಲ್ಲುವೆನು.
ಶಪೇ ಮಾಧವ ಸಖ್ಯೇನ ಸತ್ಯೇನ ಸುಕೃತೇನ ಚ |
ಅಂತಂ ಯಥಾ ಗಮಿಷ್ಯಾಮಿ ಶತ್ರೂಣಾಂ ಶತ್ರುಕರ್ಶನ ||70||
ಎಲೈ ಮಾಧವನೇ, ಶತ್ರುಸೂದನನೇ, ನಾನು ನಮ್ಮ ಸ್ನೇಹದ ಮೇಲೆ, ಸತ್ಯದ ಮೇಲೆ ಮತ್ತು ನನ್ನ ಪುಣ್ಯದ ಮೇಲೆ ಆಣೆಯನ್ನು ಮಾಡಿ ಹೇಳುತ್ತಿದ್ದೇನೆ. ನಾನು ಶತ್ರುಗಳ ವಿನಾಶವನ್ನು ಮಾಡುವೆನು.
ಅದ್ಯೈವ ಪಶ್ಯ ದುರ್ಧರ್ಷಂ ಪಾತ್ಯಮಾನಂ ಮಹಾವ್ರತಮ್ |
ತಾರಾಪತಿಮಿವಾಪೂರ್ಣಮಂತಕಾಲೇ ಯದೃಚ್ಛಯಾ ||71||
ಈ ದಿನವೇ ಅಂತ್ಯಕಾಲದಲ್ಲಿ ಚಂದ್ರನಂತೆ ಬಹಳಷ್ಟು ಪೂರ್ಣರಾದ, ಮಹಾವ್ರತರಾದ, ಸೋಲಿಸಲು ಕಷ್ಟಸಾಧ್ಯರಾದ ಭೀಷ್ಮರು ದೈವದ ಇಚ್ಛೆಗೆ ಅನುಗುಣವಾಗಿ ಬೀಳುವುದನ್ನು ನೋಡು (ಎಂದು ಹೇಳಿದನು).
ಮಾಧವಸ್ತು ವಚಃ ಶ್ರುತ್ವಾ ಫಲ್ಗುನಸ್ಯ ಮಹಾತ್ಮನಃ |
ಅಭವತ್ ಪರಮಪ್ರೀತೋ ಜ್ಞಾತ್ವಾ ಪಾರ್ಥಸ್ಯ ವಿಕ್ರಮಮ್ |
ನಕಿಂಚಿದುಕ್ತ್ವಾ ಸಕ್ರೋಧ ಆರುರೋಹ ರಥಂ ಪುನಃ ||72||
ಮಹಾತ್ಮನಾದ ಅರ್ಜುನನ ವಚನಗಳನ್ನು ಕೇಳಿ ಮಾಧವನು ಅರ್ಜುನನ ಪರಾಕ್ರಮವನ್ನು ತಿಳಿದು ಬಹಳ ಸಂತೋಷಗೊಂಡನು. ಏನೂ ಮಾತನಾಡದೆ ಕ್ರೋಧದಿಂದಲೇ ಹಿಂದಿರುಗಿ ಬಂದು ಪುನಃ ರಥವನ್ನು ಏರಿದನು.
ತೌ ರಥಸ್ಥೌ ನರವ್ಯಾಘ್ರೌ ಭೀಷ್ಮಃ ಶಾಂತನವಃ ಪುನಃ |
ವವರ್ಷ ಶರವರ್ಷೇಣ ಮೇಘೋ ವೃಷ್ಟ್ಯಾ ಯಥಾಚಲೌ ||73||
ಆ ಇಬ್ಬರು ನರಶ್ರೇಷ್ಠರು ರಥವನ್ನು ಏರಿದ ಮೇಲೆ ಶಂತನು ಪುತ್ರರಾದ ಭೀಷ್ಮರು ಎರಡು ಪರ್ವತಗಳ ಮೇಲೆ ಮೇಘವು ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸಿದರು.
ಪ್ರಾಣಾಂಶ್ಚಾದದತ್ತ ಯೋಧಾನಾಂ ಪಿತಾ ದೇವವ್ರತಸ್ತವ |
ಗಭಸ್ತಿಭಿರಿವಾದಿತ್ಯಸ್ತೇಜಾಂಸಿ ಶಿಶಿರಾತ್ಯಯೇ ||74||
ಶಿಶಿರಋತು ಅಂತ್ಯವಾಗುತ್ತಿರಲು ಸೂರ್ಯನು ತನ್ನ ಕಿರಣಗಳಿಂದ ಜಗತ್ತಿನ ತೇಜಸ್ಸನ್ನು ಪರಹರಿಸುವಂತೆ ದೇವವ್ರತರಾದ ನಿನ್ನ ತಂದೆಯು ಯೋಧರ ಪ್ರಾಣಗಳನ್ನು ಅಪಹರಿಸಿದನು.
ಯಥಾ ಕುರೂಣಾಂ ಸೈನ್ಯಾನಿ ಬಭಂಜ ಯುಧಿ ಪಾಂಡವಃ |
ತಥಾ ಪಾಂಡವಸೈನ್ಯಾನಿ ಬಭಂಜ ಯುಧಿ ತೇ ಪಿತಾ ||75||
ಹೇಗೆ ಅರ್ಜುನನು ಕೌರವ ಸೈನ್ಯಗಳನ್ನು ಮುರಿದನೋ, ಹಾಗೆಯೇ ಯುದ್ಧದಲ್ಲಿ ನಿನ್ನ ತಂದೆಯು ಪಾಂಡವರ ಸೈನ್ಯಗಳನ್ನು ಭಗ್ನಗೊಳಿಸಿದನು.
ಹತವಿದ್ರುತಸೈನ್ಯಾಸ್ತು ನಿರುತ್ಸಾಹಾ ವಿಚೇತಸಃ |
ನಿರೀಕ್ಷಿತುಂ ನ ಶೇಕುಸ್ತೇ ಭೀಷ್ಮಮಪ್ರತಿಮಂ ರಣೇ |
ಮಧ್ಯಂಗತಮಿವಾದಿತ್ಯಂ ಪ್ರತಪಂತಂ ಸ್ವತೇಜಸಾ ||76||
ಕೆಲವರು ಹತರಾಗಿ, ಇನ್ನು ಕೆಲವರು ಓಡಿಹೋದ ಪಾಂಡವರ ಸೈನ್ಯಗಳು ಕರ್ತವ್ಯ ಪ್ರಜ್ಞಾಶೂನ್ಯಗಳಾಗಿ, ಉತ್ಸಾಹವನ್ನು ಕಳೆದುಕೊಂಡು ತನ್ನ ತೇಜಸ್ಸಿನಿಂದ ಉರಿಯುವ ಮಧ್ಯಾಹ್ನದ ಸೂರ್ಯನಂತೆ ಅಸದೃಶವಾಗಿ ಯುದ್ಧದಲ್ಲಿ ಜ್ವಲಿಸುವ ಭೀಷ್ಮರನ್ನು

ನೋಡಲೂ ಸಾಧ್ಯವಾಗಲಿಲ್ಲ.
ತೇ ವಧ್ಯಮಾನಾ ಭೀಷ್ಮೇಣ ಕಾಲೇನೇವ ಯುಗಕ್ಷಯೇ |
ಕುರ್ವಾಣಂ ಸಮರೇ ಕರ್ಮಾಣ್ಯತಿಮಾನುಷವಿಕ್ರಮಮ್ ॥77॥
ತಥಾ ಪಾಂಡವಸೈನ್ಯಾನಿ ದ್ರಾವ್ಯಮಾಣಾನಿ ಭಾರತ |
ವೀಕ್ಷಾಂಚಕ್ರುರ್ಮಹಾರಾಜ ಪಾಂಡವಾ ಭಯಪೀಡಿತಾಃ ॥78॥
ಎಲೈ ಭಾರತನೇ, ಮಹಾರಾಜನೇ, ಯುಗಾಂತದ ಮೃತ್ಯುವಿನಂತೆ ಭೀಷ್ಮರಿಂದ ಕೊಲ್ಲಲ್ಪಡುವ ತಮ್ಮ ಸೈನ್ಯವನ್ನೂ, ಮನುಷ್ಯರಿಗೆ ಮೀರಿದ ಪರಾಕ್ರಮವನ್ನು ಯುದ್ಧದಲ್ಲಿ ತೋರಿಸುತ್ತಿದ್ದ ಭೀಷ್ಮರನ್ನೂ ಮತ್ತು ಪಾಂಡವರ ಸೈನ್ಯಗಳು ಓಡಿಹೋಗುತ್ತಿರುವುದನ್ನೂ ಭಯಪೀಡಿತರಾದ ಪಾಂಡವರು ನೋಡಿದರು.
ತ್ರಾತಾರಂ ನಾಧ್ಯಗಚ್ಛಂತ ಗಾವಃ ಪಂಕಗತಾ ಇವ |
ಪಿಪೀಲಿಕಾ ಇವ ಕ್ಷುಣ್ಣಾ ದುರ್ಬಲಾ ಬಲಿನಾ ರಣೇ ॥79॥
ದುರ್ಬಲರಾದ ಪಾಂಡವರು ಬಲಿಷ್ಠರಾದ ಭೀಷ್ಮರಿಂದ ವಿನಾಶಗೊಳಿಸಲ್ಪಟ್ಟು ಕೆಸರಿನಲ್ಲಿ ಮುಳುಗಿದ ಗೋವುಗಳಂತೆ, ತುಳಿತಕ್ಕೆ ಸಿಲುಕಿದ ಇರುವೆಗಳಂತೆ ರಕ್ಷಕನನ್ನು ಕಾಣಲಿಲ್ಲ.
ತಥೈವ ಯೋಧಾ ರಾಜೇಂದ್ರ ಭೀಷ್ಮೇಣಾಮಿತ್ರಘಾತಿನಾ |
ಸಮರೇ ಮೃದಿತಾಃ ಸರ್ವೇ ಪಾಂಡವಾಃ ಸಹ ಸೃಂಜಯೈಃ ॥80॥
ಮಹಾರಥಂ ಭಾರತ ದುಷ್ಪ್ರಧರ್ಷಂ
ಶರೌಘಿಣಂ ಪ್ರತಪಂತಂ ನರೇಂದ್ರಾನ್ |
ಭೀಷ್ಮಂ ನ ಶೇಕುಃ ಪ್ರತಿವೀಕ್ಷಿತುಂ ತೇ
ಶರಾರ್ಚಿಷಂ ಸೂರ್ಯಮಿವಾತಪಂತಮ್ ॥81॥
ಎಲೈ ರಾಜೇಂದ್ರನೇ, ಶತ್ರುಘಾತಿಯಾದ ಭೀಷ್ಮರಿಂದ ಯುದ್ಧದಲ್ಲಿ ವಿನಾಶಗೊಳಿಸಲ್ಪಡುತ್ತಿದ್ದ ಪಾಂಡವ ಮತ್ತು ಸೃಂಜಯ ಸೈನಿಕರು ಬಾಣಗಳ ಮಳೆಯನ್ನು ಸುರಿಸುತ್ತಿದ್ದ, ರಾಜರುಗಳನ್ನು ದಹಿಸುತ್ತಿದ್ದ, ಸೋಲಿಸಲು ಅಸಾಧ್ಯರಾಗಿದ್ದ, ಬಾಣಗಳೆಂಬ ಕಿರಣಗಳುಳ್ಳ ಸೂರ್ಯನಂತೆ ಜ್ವಲಿಸುತ್ತಿದ್ದ, ಮಹಾರಥರಾದ ಭೀಷ್ಮರನ್ನು ನೋಡಲೂ ಸಮರ್ಥರಾಗಲಿಲ್ಲ.
ವಿಮೃದ್ನತಸ್ತಸ್ಯ ತು ಪಾಂಡುಸೇನಾಮ್
ಅಸ್ತಂ ಜಗಾಮಾಥ ಸಹಸ್ರರಶ್ಮಿಃ |
ತತೋಽಪಿ ಭೀಷ್ಮಃ ಸಬಲಃ ಸಸೈನ್ಯಾನ್
ನ್ಯವಾರಯತ್ ಪಾಂಡುಸುತಾನ್ ಶರೋ೯ಃ ॥82॥
ಪಾಂಡವರ ಸೇನೆಯನ್ನು ಭೀಷ್ಮರು ಹೀಗೆ ಮರ್ದಿಸುತ್ತಿರಲು ಸಹಸ್ರರಶ್ಮಿಯಾದ ಸೂರ್ಯನು ಅಸ್ತವನ್ನು ಹೊಂದಿದನು. ಆದರೂ ಭೀಷ್ಮರು ತಮ್ಮ ಬಾಣಗಳ ಸಮೂಹದಿಂದ ತಮ್ಮ ಸೈನ್ಯಸಹಿತರಾಗಿ ಸೈನ್ಯದಿಂದ ಒಡಗೂಡಿದ ಪಾಂಡವರನ್ನು ತಡೆದರು.
ಜಘಾನ ಚೈತಾನ್ ಸುಭೃಶಂ ಮಹಾಬಲೋ
ಮಹಾವ್ರತಃ ಪಾಂಡುಸುತಾನ್ ಮಹಾತ್ಮಾ |
ರಣೇ ಕರೂಷಾಧಿಪಚೇದಿಪೈರ್ಬಲೈಃ
ವೃತಾನ್ ಸದಾ ಚಕ್ರಧರಸ್ಯ ಪಶ್ಯತಃ |
ತತೋ ಬಲಾನಾಂ ಶ್ರಮಕರ್ಶಿತಾನಾಂ
ಮನೋಽವಹಾರಂ ಪ್ರತಿ ಸಂಬಭೂವ ॥83॥
ಮಹಾತ್ಮರೂ, ಮಹಾರಥರೂ, ಮಹಾಬಲವುಳ್ಳವರೂ ಆದ ಭೀಷ್ಮರು ಕರೂಷ ಮತ್ತು ಚೇದಿರಾಜ್ಯದ ಸೈನ್ಯದಿಂದ ಸಹಿತರಾದ ಪಾಂಡವಯೋಧರನ್ನು ಚಕ್ರಧರನಾದ ಕೃಷ್ಣನು ನೋಡುತ್ತಿರುವಂತೆಯೇ ವಧಿಸಿದರು. ಆಗ ದಣಿದ ಸೈನ್ಯಗಳಿಗೆ ಸೈನ್ಯವನ್ನು ಹಿಂದಕ್ಕೆ ತೆಗೆದುಕೊಳ್ಳುವ (ಯುದ್ಧವಿರಾಮವನ್ನು ಮಾಡುವ) ಬುದ್ಧಿಯುಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ತ್ರ್ಯಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಾಲ್ಕನೆಯ ಅಧ್ಯಾಯ
ಭೀಷ್ಮರ ಪ್ರತಾಪವನ್ನು ನೋಡಿ ಯುಧಿಷ್ಠಿರನಿಂದ ಕೃಷ್ಣನ
ಮುಂದೆ ಪ್ರಲಾಪ. ಕೃಷ್ಣನ ಸಮಾಧಾನ ವಚನ. ಭೀಷ್ಮರ ಬಳಿಗೆ
ಹೋಗಿ ಅವರ ವಧೋಪಾಯ ಪ್ರಶ್ನೆ. ಶಿಖಂಡಿಯನ್ನು ಮುಂದೆ
ಮಾಡಿಕೊಂಡು ಯುದ್ಧ ಮಾಡುವಂತೆ ಅವರ ಸಲಹೆ.
ಸಂಜಯಃ
ಯುಧ್ಯತಾಮೇವ ತೇಷಾಂ ತು ಭಾಸ್ಕರೇಽಸ್ತಮುಪಾಗತೇ |
ಸಂಧ್ಯಾ ಸಮಭವದ್ ಘೋರಾ ನಾಪಶ್ಯಾಮ ತತೋ ರಣಮ್ ॥1॥
ಸಂಜಯ ಎರಡು ಸೈನ್ಯಗಳು ಯುದ್ಧ ಮಾಡುತ್ತಿರುವಂತೆಯೇ ಸೂರ್ಯನು ಅಸ್ತಂಗತನಾಗಿ ಘೋರವಾದ ಸಂಧ್ಯಾಕಾಲವಾಯಿತು. ಅನಂತರ ನಮಗೆ ಯುದ್ಧವು ಕಾಣಲಿಲ್ಲ.

ತತೋ ಯುಧಿಷ್ಠಿರೋ ರಾಜಾ ಸಂಧ್ಯಾಂ ಸಂದೃಶ್ಯ ಭಾರತ |
ವಧ್ಯಮಾನಂ ಬಲಂ ಚಾಪಿ ಭೀಷ್ಮೇಣಾಮಿತ್ರಘಾತಿನಾ ॥2॥
ಮುಕ್ತಶಸ್ತ್ರಂ ಪರಾವೃತ್ತಂ ಪಲಾಯನಪರಾಯಣಮ್ |
ಭೀಷ್ಮಂ ಚ ಯುಧಿ ಸಂರಬ್ಧಮನುಯಾಂತಂ ಮಹಾರಥಾನ್ ॥3॥
ಸೋಮಕಾಂಶ್ಚ ಜಿತಾನ್ ದೃಷ್ಟ್ವಾ ನಿರುತ್ಸಾಹಾನ್ ಮಹಾರಥಾನ್ |
ನಿಶಾಮುಖಂ ಚ ಸಂಪ್ರೇಕ್ಷ್ಯ ಘೋರರೂಪಂ ಭಯಾನಕಮ್ |
ಚಿಂತಯಿತ್ವಾ ಚಿರಂ ಧ್ಯಾತ್ವಾ ಅವಹಾರಮರೋಚಯತ್ ॥4॥
ಎಲೈ ಭಾರತನೇ, ಆಗ ಯುಧಿಷ್ಠಿರನು ಸಂಧ್ಯಾಕಾಲವನ್ನೂ ಶತ್ರುಕರ್ಶನರಾದ ಭೀಷ್ಮರಿಂದ ತಮ್ಮ ಸೈನ್ಯವು ವಧಿಸಲ್ಪಡುತ್ತಿರುವುದನ್ನೂ, ತಮ್ಮ ಸೈನ್ಯವು ಶಸ್ತ್ರವನ್ನು ತ್ಯಜಿಸಿ ಯುದ್ಧದಿಂದ ವಿಮುಖವಾಗಿ ಪಲಾಯನಪರವಾಗಿರುವುದನ್ನೂ, ಭೀಷ್ಮರು ಯುದ್ಧದಲ್ಲಿ ಕೋಪದಿಂದ ಮಹಾರಥರನ್ನು ಹಿಂಬಾಲಿಸುವುದನ್ನೂ, ಮಹಾರಥರಾದ ಸೋಮಕರು ಪರಾಜಿತರಾಗಿ ಉತ್ಸಾಹಶೂನ್ಯರಾಗಿರುವುದನ್ನೂ, ಭಯಂಕರವೂ ಘೋರವೂ ಆದ ನಿಶ್ಯಾಮವು ಪ್ರಾಪ್ತವಾದುದನ್ನೂ ನೋಡಿ, ಚಿಂತಿಸಿ, ಬಹಳ ಕಾಲ ಯೋಚಿಸಿ ಸೈನ್ಯದ ಅವಹಾರವನ್ನು ಬಯಸಿದನು.
ತತೋಽವಹಾರಂ ಸೈನ್ಯಾನಾಂ ಚಕ್ರೇ ರಾಜಾ ಯುಧಿಷ್ಠಿರಃ |
ತಥೈವ ತವ ಸೈನ್ಯಾನಾಮವಹಾರೋ ಹ್ಯಭೂತ್ ತದಾ ॥5॥
ಅನಂತರ ರಾಜನಾದ ಯುಧಿಷ್ಠಿರನು ತನ್ನ ಸೈನ್ಯದ ಅವಹಾರವನ್ನು ಮಾಡಿದನು. ಹಾಗೆಯೇ ಆಗ ನಿನ್ನ ಸೈನ್ಯಗಳ ಅವಹಾರವೂ ಆಯಿತು.
ತತೋಽವಹಾರಂ ಸೈನ್ಯಾನಾಂ ಕೃತ್ವಾ ತತ್ರ ಮಹಾರಥಾಃ |
ನ್ಯವಿಶಂತ ಕುರುಶ್ರೇಷ್ಠ ಸಂಗ್ರಾಮೇ ಕ್ಷತವಿಕ್ಷತಾಃ ॥6॥
ಎಲೈ ಕುರುಶ್ರೇಷ್ಠನೇ, ಆಗ ಸೈನ್ಯಗಳ ಅವಹಾರವನ್ನು ಮಾಡಿ, ಬಾಣಗಳಿಂದ ಬಹಳ ಗಾಯಗೊಂಡ ಮಹಾರಥರು ವಿಶ್ರಾಂತಿಯನ್ನು ಪಡೆದರು.
ಭೀಷ್ಮಸ್ಯ ಸಮರೇ ಕರ್ಮ ಚಿಂತಯಾನಾಸ್ತು ಪಾಂಡವಾಃ |
ನಾಲಭಂತ ತದಾ ಶಾಂತಿಂ ಭೃಶಂ ಭೀಷ್ಮೇಣ ಪೀಡಿತಾಃ ॥7॥
ಭೀಷ್ಮರಿಂದ ಬಹಳವಾಗಿ ಪೀಡಿತರಾದ ಪಾಂಡವರು ಯುದ್ಧದಲ್ಲಿ ಭೀಷ್ಮರ ಕರ್ಮಗಳನ್ನು ಚಿಂತಿಸುತ್ತಾ ಸಮಾಧಾನವನ್ನು ಹೊಂದಲಿಲ್ಲ.
ಭೀಷ್ಮೋಽಪಿ ಸಮರೇ ಜಿತ್ವಾ ಪಾಂಡವಾನ್ ಸಹ ಸೃಂಜಯೈಃ |
ಪೂಜ್ಯಮಾನಸ್ತವ ಸುತೈರ್ವಂದ್ಯಮಾನಶ್ಚ ಭಾರತ ॥8॥
ನ್ಯವಿಶತ್ ಕುರುಭಿಃ ಸಾರ್ಧಂ ಹೃಷ್ಟರೂಪೈಃ ಸಮಂತತಃ |
ತತೋ ರಾತ್ರಿಃ ಸಮಭವತ್ ಸರ್ವಭೂತಪ್ರಮೋಹಿನೀ ॥9॥
ಎಲೈ ಭಾರತನೇ, ಭೀಷ್ಮರೂ ಸಹ ಪಾಂಡವರನ್ನು ಮತ್ತು ಸೃಂಜಯರನ್ನು ಯುದ್ಧದಲ್ಲಿ ಗೆದ್ದು ನಿನ್ನ ಪುತ್ರರಿಂದ ನಮಸ್ಕರಿಸಲ್ಪಟ್ಟು ಮತ್ತು ಗೌರವಿಸಲ್ಪಟ್ಟು ಎಲ್ಲ ಕಡೆಗಳಲ್ಲಿಯೂ ಸಂತೋಷಗೊಂಡ ಕುರುಸೈನ್ಯದ ಜೊತೆಯಲ್ಲಿ ವಿಶ್ರಾಂತಿಯನ್ನು ಪಡೆದರು. ಆಗ ಎಲ್ಲ ಪ್ರಾಣಿಗಳ ಜ್ಞಾನಗಳನ್ನು ಅಳಿಸುವ ರಾತ್ರಿಯುಂಟಾಯಿತು.
ತಸ್ಮಿನ್ ರಾತ್ರಿಮುಖೇ ಘೋರೇ ಪಾಂಡವಾ ವೃಷ್ಣಿಭಿಃ ಸಹ |
ಸೃಂಜಯಾಶ್ಚ ದುರಾಧರ್ಷಾ ಮಂತ್ರಾಯ ಸಮುಪಾವಿಶನ್ ॥10॥
ಆ ಘೋರವಾದ ರಾತ್ರಿಯ ಆರಂಭಕಾಲದಲ್ಲಿ ವೃಷ್ಣಿಗಳ ಜೊತೆಯಲ್ಲಿ ಸೇರಿದ ಪಾಂಡವರು ಮತ್ತು ಸೋಲಿಸಲು ಕಷ್ಟಸಾಧ್ಯರಾದ ಸೃಂಜಯರು ಮಂತ್ರಾಲೋಚನೆಗಾಗಿ ಕುಳಿತರು.
ಆತ್ಮನಿಶ್ರೇಯಸಂ ಸರ್ವೇ ಪ್ರಾಪ್ತಕಾಲಂ ಮಹಾಬಲಾಃ |
ಮಂತ್ರಯಾಮಾಸುರವ್ಯಗ್ರಾ ಮಂತ್ರನಿಶ್ಚಯಕೋವಿದಾಃ ॥11॥
ಮಂತ್ರನಿಶ್ಚಯದಲ್ಲಿ ಪಾರಂಗತರಾದ, ಮಹಾಬಲರಾದ ಅವರೆಲ್ಲರೂ ಸಮಾಧಾನ ಉಳ್ಳ ಮನಸ್ಸಿನಿಂದ ಆ ಸಮಯದಲ್ಲಿ ಅನುಸರಿಸಬೇಕಾದ ತಮ್ಮ ಶ್ರೇಯೋಮಾರ್ಗವನ್ನು ಕುರಿತು ಚಿಂತಿಸಿದರು.
ತತೋ ಯುಧಿಷ್ಠಿರೋ ರಾಜಾ ಮಂತ್ರಯಿತ್ವಾ ಚಿರಂ ನೃಪ |
ವಾಸುದೇವಂ ಸಮುದ್ವೀಕ್ಷ್ಯ ವಾಕ್ಯಮೇತದುವಾಚ ಹ ॥12॥
ಎಲೈ ರಾಜನೇ, ಆಗ ರಾಜನಾದ ಯುಧಿಷ್ಠಿರನು ದೀರ್ಘಕಾಲ ಮಂತ್ರಾಲೋಚನೆಯನ್ನು ಮಾಡಿ ಕೃಷ್ಣನನ್ನು ನೋಡಿ ಈ ಮಾತುಗಳನ್ನು ಆಡಿದನು.
ಪಶ್ಯ ಕೃಷ್ಣ ಮಹಾತ್ಮಾನಂ ಭೀಷ್ಮಂ ಭೀಮಪರಾಕ್ರಮಮ್ |
ಗಜಂ ನಲವನಾನೀವ ವಿಮೃದ್ನಂತಂ ಬಲಂ ಮಮ ॥13॥
ಕೃಷ್ಣನೇ, ಮಹಾತ್ಮರೂ, ಭಯಂಕರ ಪರಾಕ್ರಮವುಳ್ಳವರೂ ಆದ ಭೀಷ್ಮರು ಆನೆಗಳು ಕಮಲ ವನಗಳನ್ನು ಮರ್ದಿಸಿದಂತೆ ನನ್ನ ಸೈನ್ಯವನ್ನು ಮರ್ದಿಸುತ್ತಿರುವುದನ್ನು ನೋಡು.
ನ ಚೈವೈನಂ ಮಹಾತ್ಮಾನಮುತ್ಸಹಾಮೋ ನಿರೀಕ್ಷಿತುಮ್ |
ಲೇಲಿಹ್ಯಮಾನಂ ಸೈನ್ಯೇಷು ಪ್ರವೃದ್ಧಮಿವ ಪಾವಕಮ್ ॥14॥
ಅಭಿವೃದ್ಧಿಗೊಂಡ ಅಗ್ನಿಯಂತೆ ನಮ್ಮ ಸೈನ್ಯಗಳನ್ನು ನುಂಗುತ್ತಿರುವ ಈ ಮಹಾತ್ಮರನ್ನು ನಾವು ಕಣ್ಣಿನಿಂದ ನೋಡಲೂ

ಸಾಧ್ಯವಾಗುತ್ತಿಲ್ಲ.
ಯಥಾ ಘೋರೋ ಮಹಾನಾಗಸ್ತಕ್ಷಕೋ ವೈ ವಿಷೋಲ್ಬಣಃ |
ತಥಾ ಭೀಷ್ಮೋ ರಣೇ ಕೃಷ್ಣ ತೀಕ್ಷ್ಣಶಸ್ತ್ರಃ ಪ್ರತಾಪವಾನ್ ॥15॥
ಎಲೈ ಕೃಷ್ಣನೇ, ಘೋರವಾದ ಮಹಾಸರ್ಪವಾದ ವಿಷಪೂರಿತನಾದ ತಕ್ಷಕನಂತೆ ತೀಕ್ಷ್ಣಶಾಸ್ತ್ರಗಳುಳ್ಳ ಭೀಷ್ಮರು ಯುದ್ಧದಲ್ಲಿ ಪ್ರತಾಪಶಾಲಿಗಳಾಗಿದ್ದಾರೆ.
ಗೃಹೀತಚಾಪಃ ಸಮರೇ ವಿಮುಂಚಂಶ್ಚ ಶಿತಾನ್ ಶರಾನ್ |
ಶಕ್ಯೋ ಜೇತುಂ ಯಮಃ ಕ್ರುದ್ಧೋ ವಜ್ರಪಾಣಿಶ್ಚ ದೇವರಾಟ್ ॥16॥
ವರುಣಃ ಪಾಶಭೃದ್ ವಾಪಿ ಸಗದೋ ವಾ ಧನೇಶ್ವರಃ |
ನ ತು ಭೀಷ್ಮಃ ಸುಸಂಕ್ರುದ್ಧಃ ಶಕ್ಯೋ ಜೇತುಂ ಮಹಾಹವೇ ॥17॥
ಕ್ರುದ್ಧನಾದ ಯಮನನ್ನೂ ಜಯಿಸಬಹುದು, ವಜ್ರಪಾಣಿಯಾದ ದೇವೇಂದ್ರನನ್ನು ಜಯಿಸಬಹುದು, ಪಾಶಧರಿಸಿದ ವರುಣನನ್ನಾಗಲೀ ಅಥವಾ ಗದಾಧಾರಿಯಾದ ಕುಬೇರನನ್ನಾಗಲೀ ಜಯಿಸಬಹುದು. ಆದರೆ ಯುದ್ಧದಲ್ಲಿ ಬಿಲ್ಲನ್ನು ಹಿಡಿದು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುವ ಬಹಳ ಕೋಪಗೊಂಡ ಭೀಷ್ಮರನ್ನು ಜಯಿಸಲು ಸಾಧ್ಯವಿಲ್ಲ.
ಸೋಽಹಮೇವಂಗತೇ ಕೃಷ್ಣ ನಿಮಗ್ನಃ ಶೋಕಸಾಗರೇ |
ಆತ್ಮನೋ ಬುದ್ಧಿದೌರ್ಬಲ್ಯಾದ್ ಭೀಷ್ಮಮಾಸಾದ್ಯ ಸಂಯುಗೇ ॥18॥
ಎಲೈ ಕೃಷ್ಣನೇ, ಪರಿಸ್ಥಿತಿಯು ಹೀಗಿರುವಾಗ ಅಂತಹ ನಾನು ಯುದ್ಧದಲ್ಲಿ ಭೀಷ್ಮರನ್ನು ಎದುರಿಸಿ ನನ್ನ ಬುದ್ಧಿದೌರ್ಬಲ್ಯದಿಂದ ಶೋಕಸಾಗರದಲ್ಲಿ ಮುಳುಗಿದ್ದೇನೆ.
ವನಂ ಯಾಸ್ಯಾಮಿ ದುರ್ಧರ್ಷ ಶ್ರೇಯೋ ಮೇ ತತ್ರ ವೈ ಗತಮ್ |
ನ ಯುದ್ಧಂ ರೋಚಯೇ ಕೃಷ್ಣ ಹಂತಿ ಭೀಷ್ಮೋ ಹಿ ನಃ ಸದಾ ॥19॥
ಎಲೈ ದುರ್ಧರ್ಷನೇ, ಕಾಡಿಗೆ ಹೋಗುವೆನು. ನನಗೆ ವನಗಮನವೇ ಶ್ರೇಯಸ್ಕರವಾಗಿರುತ್ತದೆ. ಕೃಷ್ಣನೇ, ನಾನು ಯುದ್ಧವನ್ನು ಮಾಡಲಾರೆ. ಭೀಷ್ಮರು ಯಾವಾಗಲೂ ನಮ್ಮನ್ನು ಕೊಲ್ಲುತ್ತಿದ್ದಾರೆ.
ಯಥಾ ಪ್ರಜ್ವಲಿತಂ ವಹ್ನಿಂ ಪತಂಗಃ ಸಮಭಿದ್ರವನ್ |
ಏಕತೋ ಮೃತ್ಯುಮಭ್ಯೇತಿ ತಥಾಹಂ ಭೀಷ್ಮಮೀಯಿವಾನ್ ॥20॥
ಜ್ವಲಿಸುವ ಅಗ್ನಿಯನ್ನು ಪ್ರವೇಶಿಸುವ ಪತಂಗವು ಹೇಗೆ ನಿಯಮೇನ ಮೃತ್ಯುವನ್ನು ಹೊಂದುವುದೋ ಹಾಗೆ ನಾನು ಭೀಷ್ಮರನ್ನು ಹೊಂದಿದ್ದೇನೆ.
ಕ್ಷಯಂ ನೀತೋಽಸ್ಮಿ ವಾರ್ಷ್ಣೇಯ ರಾಜ್ಯಹೇತೋಃ ಪರಾಕ್ರಮೀ |
ಭ್ರಾತರಶ್ಚೈವ ಮೇ ಶೂರಾಃ ಸಾಯಕೈರ್ಭೃಶಪೀಡಿತಾಃ ॥21॥
ಎಲೈ ವಾರ್ಷ್ಣೇಯನೇ, ರಾಜ್ಯದ ನಿಮಿತ್ತದಿಂದಾಗಿ ನಾನು ಪರಾಕ್ರಮಶಾಲಿಯಾದ ನಾನು ವಿನಾಶವನ್ನು ಹೊಂದಿದ್ದೇನೆ. ಶೂರರಾದ ನನ್ನ ಸಹೋದರರೂ ಸಹ ಬಹಳವಾಗಿ ಗಾಯಗೊಂಡಿದ್ದಾರೆ.
ಮತ್ಕೃತೇ ಭ್ರಾತೃಸೌಹಾರ್ದಾದ್ ರಾಜ್ಯಾತ್ ಪ್ರಭ್ರಂಶನಂ ಗತಾಃ |
ಪರಿಕ್ಲಿಷ್ಟಾ ತಥಾ ಕೃಷ್ಣಾ ಮತ್ಕೃತೇ ಮಧುಸೂದನ ॥22॥
ಎಲೈ ಕೃಷ್ಣನೇ, ಅವರು ನನ್ನ ನಿಮಿತ್ತದಿಂದಾಗಿ ಮತ್ತು ನನ್ನ ಮೇಲಿನ ಸ್ನೇಹದಿಂದಾಗಿ ರಾಜ್ಯಭ್ರಷ್ಟರಾಗಿದ್ದಾರೆ. ಎಲೈ ಮಧುಸೂದನನೇ, ನನ್ನ ನಿಮಿತ್ತದಿಂದಾಗಿಯೇ ದ್ರೌಪದಿಯು ಅಂತಹ ಕ್ಲೇಶವನ್ನು ಅನುಭವಿಸಿದಳು.
ಜೀವಿತಂ ಬಹು ಮನ್ಯೇಽಹಂ ಜೀವಿತಂ ಹ್ಯದ್ಯ ದುರ್ಲಭಮ್ |
ಜೀವಿತಸ್ಯಾದ್ಯ ಶೇಷೇಣ ಚರಿಷ್ಯೇ ಧರ್ಮಮುತ್ತಮಮ್ ॥23॥
ಬದುಕಿರುವುದೇ ದೊಡ್ಡದೆಂದು ನನಗೆ ತೋರುತ್ತದೆ. ಆದರೆ ಅಂತಹ ಜೀವನವು ಈ ದಿನ ದುರ್ಲಭವಾಗಿದೆ. ನನ್ನ ಜೀವನದ ಉಳಿದ ಭಾಗದಿಂದ ನಾನು ಶ್ರೇಷ್ಠವಾದ ಧರ್ಮಾಚರಣೆಯನ್ನು ಮಾಡುವೆನು.
ಯದಿ ತೇಽಹಮನುಗ್ರಾಹ್ಯೋ ಭ್ರಾತೃಭಿಃ ಸಹ ಕೇಶವ |
ಸ್ವಧರ್ಮಸ್ಯಾವಿರೋಧೇನ ತದುದಾಹರ ಕೇಶವ ॥24॥
ಎಲೈ ಕೇಶವನೇ, ನಾನು ಮತ್ತು ನನ್ನ ತಮ್ಮಂದಿರು ನಿನ್ನ ಅನುಗ್ರಹಕ್ಕೆ ಪಾತ್ರರಾಗಿದ್ದರೆ ನಮ್ಮ ಧರ್ಮಕ್ಕೆ ವಿರೋಧವಿಲ್ಲದಂತೆ ನಾವು ಈ ದಿನ ಏನು ಮಾಡಬಹುದೆಂದು ಹೇಳು (ಎಂದು ಹೇಳಿದನು).
ಏತಚ್ಛ್ರುತ್ವಾ ವಚಸ್ತಸ್ಯ ಕಾರುಣ್ಯಾದ್ ಬಹುವಿಸ್ತರಮ್ |
ಪ್ರತ್ಯುವಾಚ ತತಃ ಕೃಷ್ಣಃ ಸಾಂತ್ವಯಾನೋ ಯುಧಿಷ್ಠಿರಮ್ ॥25॥
ಅವನ ವಿಸ್ತಾರವಾದ, ಕರುಣೆಯಿಂದ ಕೂಡಿದ ಈ ಮಾತುಗಳನ್ನು ಕೇಳಿ ಕೃಷ್ಣನು ಯುಧಿಷ್ಠಿರನನ್ನು ಸಮಾಧಾನಪಡಿಸುತ್ತಾ ಅವನಿಗೆ ಉತ್ತರವನ್ನು ನೀಡಿದನು.
ಧರ್ಮಪುತ್ರ ವಿಷಾದಂ ತ್ವಂ ಮಾ ಕೃಥಾಃ ಸತ್ಯಸಂಗರ |
ಯಸ್ಯ ತೇ ಭ್ರಾತರಃ ಶೂರಾ ದುರ್ಜಯಾಃ ಶತ್ರುಸೂದನಾಃ ॥26॥
ಎಲೈ ಧರ್ಮಪುತ್ರನೇ, ಸತ್ಯಸಂಗರನೇ, ಯುದ್ಧದಲ್ಲಿ ದುರ್ಜಯರೂ, ಶತ್ರುಸೂದನರೂ, ಶೂರರೂ ಆದ ಸಹೋದರರು ಇರುವಾಗ ನೀನು ವಿಷಾದವನ್ನು ಮಾಡಬೇಡ.
ಅರ್ಜುನೋ ಭೀಮಸೇನಶ್ಚ ವಾಯ್ವಗ್ನಿಸಮತೇಜಸೌ |
ಮಾದ್ರೀಪುತ್ರೌ ಚ ವಿಕ್ರಾಂತೌ ತ್ರಿದಶಾನಾಮಿವೇಶ್ವರೌ ॥27॥

ಅರ್ಜುನ ಮತ್ತು ಭೀಮಸೇನರು ಅಗ್ನಿ-ವಾಯುಗಳಿಗೆ ಸಮವಾದ ಸಾಮರ್ಥ್ಯವುಳ್ಳವರು. ಮಾದ್ರೀಪುತ್ರರು ಪರಾಕ್ರಮದಲ್ಲಿ ಸ್ವರ್ಗದ ಪ್ರಭುವಾದ ಇಂದ್ರನಂತಿದ್ದಾರೆ.
ಮಾಂ ವಾ ನಿಯುಂಕ್ಷ್ವ ಸೌಹಾರ್ದಾದ್
ಯೋತ್ಸ್ಯೇ ಭೀಷ್ಮೇಣ ಪಾಂಡವ |
ತ್ವತ್ಪ್ರಯುಕ್ತೋ ಹ್ಯಹಂ ರಾಜನ್ ಕಿಂ
ನ ಕುರ್ಯಾಂ ಮಹಾಹವೇ ||28||
ಎಲ್ಲೈ ಪಾಂಡವನೇ, ನನ್ನನ್ನಾದರೂ ನೀನು ಪ್ರೀತಿಯಿಂದ ನಿಯೋಜಿಸು. ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಎಲ್ಲೈ ರಾಜನೇ, ನೀನು ಹೇಳಿದರೆ ಯುದ್ಧದಲ್ಲಿ ನಾನು ಯಾವ ಕಾರ್ಯವನ್ನು ಮಾಡದೇ ಇರಬಲ್ಲೆ?
ಹನಿಷ್ಯಾಮಿ ರಣೇ ಭೀಷ್ಮಮಾಹೂಯ ಪುರುಷರ್ಷಭಮ್ |
ಪಶ್ಯತಾಂ ಧಾರ್ತರಾಷ್ಟ್ರಾಣಾಂ ಯದಿ ನೇಚ್ಛತಿ ಫಲ್ಗುನಃ ||29||
ಅರ್ಜುನನಿಗೆ ಭೀಷ್ಮರನ್ನು ಕೊಲ್ಲುವುದು ಇಷ್ಟವಿಲ್ಲದಿದ್ದರೆ ನಾನೇ ಪುರುಷಶ್ರೇಷ್ಠರಾದ ಭೀಷ್ಮರನ್ನು ಆಹ್ವಾನಿಸಿ, ದುರ್ಯೋಧನಾದಿಗಳ ಎದುರಿಗೇ ಯುದ್ಧದಲ್ಲಿ ಅವರನ್ನು ಕೊಲ್ಲುವೆನು.
ಯದಿ ಭೀಷ್ಮೇ ಹತೇ ರಾಜನ್ ಜಯಂ ಪಶ್ಯಸಿ ಪಾಂಡವ |
ಹಂತಾಸ್ಮ್ಯೇಕರಥೇನಾದ್ಯ ಕುರುವೃದ್ಧಂ ಪಿತಾಮಹಮ್ ||30||
ಎಲ್ಲೈ ರಾಜನೇ, ಪಾಂಡವನೇ, ಭೀಷ್ಮರು ಹತರಾದರೆ ಜಯವನ್ನು ಪಡೆಯುವಿಯಾದರೆ ನಾನು ಈ ದಿನ ಒಂದು ರಥದಿಂದ ಕುರುವೃದ್ಧರಾದ ಪಿತಾಮಹರನ್ನು ಕೊಲ್ಲುವೆನು.
ಪಶ್ಯ ಮೇ ವಿಕ್ರಮಂ ರಾಜನ್ ಮಹೇಂದ್ರಸ್ಯೇವ ಸಂಯುಗೇ |
ವಿಮುಂಚಂತಂ ಮಹಾಸತ್ರಣಿ ಪಾತಯಿಷ್ಯಾಮಿ ತಂ ರಥಾತ್ ||31||
ಎಲ್ಲೈ ರಾಜನೇ, ಯುದ್ಧದಲ್ಲಿ ಮಹೇಂದ್ರನ ಪರಾಕ್ರಮದಂತಿರುವ ನನ್ನ ಪರಾಕ್ರಮವನ್ನು ನೋಡು. ಮಹಾಸ್ತ್ರಗಳನ್ನು ಪ್ರಯೋಗಿಸುವ (ನನ್ನನ್ನು ನೋಡು). ಭೀಷ್ಮರನ್ನು ರಥದಿಂದ ಕೆಳಗೆ ಉರುಳಿಸುವೆನು.
ಯಃ ಶತ್ರುಃ ಪಾಂಡುಪುತ್ರಾಣಾಂ ಮಚ್ಚತ್ರುಃ ಸ ನ ಸಂಶಯಃ |
ಮದರ್ಥಾ ಭವದರ್ಥಾ ಯೇ ಯೇ ಮದೀಯಾಸ್ತವೈವ ತೇ ||32||
ಪಾಂಡವರಿಗೆ ಯಾರು ಶತ್ರುವೋ ಅವನು ನಿಸ್ಸಂಶಯವಾಗಿ ನನಗೂ ಶತ್ರು. ಯಾರು ನಿಮ್ಮ ಪರವಾಗಿದ್ದಾರೆಯೋ, ಅವರು ನನ್ನ ಪರವಾಗಿಯೂ ಇದ್ದಾರೆ. ಯಾರು ನನ್ನವರೋ ಅವರೆಲ್ಲರೂ ನಿನ್ನವರು. ಇದರಲ್ಲಿ ಸಂಶಯವಿಲ್ಲ.
ತವ ಭ್ರಾತಾ ಮಮ ಸಖಾ ಸಂಬಂಧೀ ಶಿಷ್ಯ ಏವ ಚ |
ಮಾಂಸಾನ್ಯುತ್ಕೃತ್ಯ ವೈ ದದ್ಯಾಮರ್ಜುನಾರ್ಥೇ ಮಹೀಪತೇ ||33||
ಎಲ್ಲೈ ರಾಜನೇ, ನಿನ್ನ ತಮ್ಮನು ನನಗೆ ಸ್ನೇಹಿತ, ಬಂಧು ಮತ್ತು ಶಿಷ್ಯ. ಅರ್ಜುನನ ಸಲುವಾಗಿ ನಾನು ನನ್ನ ಮಾಂಸವನ್ನಾದರೂ ಕಿತ್ತುಕೊಟ್ಟೇನು.
ಏಷ ಚಾಪಿ ನರವ್ಯಾಘ್ರೋ ಮತ್ಕೃತೇ ಜೀವಿತಂ ತ್ಯಜೇತ್ |
ಏಷ ನಃ ಸಮಯಸ್ತಾತ ತಾರಯೇಮ ಪರಸ್ಪರಮ್ |
ಸ ಮಾಂ ನಿಯುಂಕ್ಷ್ವ ರಾಜೇಂದ್ರ ಯಾವದ್ ದ್ವೀಪೋ ಭವಾಮ್ಯಹಮ್ ||
ಈ ನರವ್ಯಾಘ್ರನಾದರೂ ಸಹ ನನ್ನ ಸಲುವಾಗಿ ಜೀವಿತವನ್ನು ತೊರೆದಾನು! ಪ್ರೀತಿಪಾತ್ರನೇ, ಇದು ನಾವಿಬ್ಬರೂ ಪರಸ್ಪರವಾಗಿ ಮಾಡಿಕೊಂಡಿರುವ ಒಪ್ಪಂದ. ರಾಜೇಂದ್ರನೇ, ನೀನು ನನಗೆ ಅಂತಹ ಆದೇಶವನ್ನು ಕೊಡು. ನಾನು ನಿಮ್ಮನ್ನು ಈ ಸಂಕಟದಿಂದ ಪಾರುಮಾಡುವ ದ್ವೀಪವಾಗುತ್ತೇನೆ.
ಪ್ರತಿಜ್ಞಾತಮುಪಪ್ಲಾವ್ಯೇ ಯತ್ತತ್ ಪಾರ್ಥೇನ ಪೂರ್ವತಃ |
ಘಾತಯಿಷ್ಯಾಮಿ ಗಾಂಗೇಯಮಿತ್ಯುಲೂಕಸ್ಯ ಸನ್ನಿಧೌ ||35||
ಪರಿರಕ್ಷ್ಯಂ ಚ ಮಮ ತದ್ವಚಃ ಪಾರ್ಥಸ್ಯ ಧೀಮತಃ |
ಅನುಜ್ಞಾತಂ ತು ಪಾರ್ಥೇನ ಮಯಾ ಕಾರ್ಯಂ ನ ಸಂಶಯಃ ||36||
ಹಿಂದೆ ಉಪಪ್ಲಾವ್ಯನಗರದಲ್ಲಿ ಶಕುನಿಯ ಮಗನಾದ ಉಲೂಕನ ಸನ್ನಿಧಿಯಲ್ಲಿ ನಾನು ಗಾಂಗೇಯರನ್ನು ಕೊಲ್ಲುವೆನು ಎಂದು ಮೇಧಾವಿಯಾದ ಪಾರ್ಥನು ಯಾವ ಮಾತನ್ನು ಆಡಿದನೋ ಅದನ್ನು ನಾನು ರಕ್ಷಿಸಬೇಕು. ಅರ್ಜುನನ ಅನುಮತಿಯನ್ನು ಪಡೆದಾದರೂ ನಾನು ಆ ಕಾರ್ಯವನ್ನು ಮಾಡಬೇಕು. ಇದರಲ್ಲಿ ಸಂಶಯವಿಲ್ಲ.
ಅಥ ವಾ ಫಲ್ಗುನಸ್ಯೈಷ ಭಾರಃ ಪರಿಮಿತೋ ರಣೇ |
ನಿಹನಿಷ್ಯತಿ ಸಂಗ್ರಾಮೇ ಭೀಷ್ಮಂ ಪರಪುರಂಜಯಮ್ ||37||
ಅಥವಾ ಭೀಷ್ಮರನ್ನು ಯುದ್ಧದಲ್ಲಿ ಕೊಲ್ಲುವ ಭಾರವು ಅರ್ಜುನನದೆಂದು ನಿಶ್ಚಿತವಾಗಿದೆ. ಪರಪುರಂಜಯರಾದ ಭೀಷ್ಮರನ್ನು ಯುದ್ಧದಲ್ಲಿ ಅವನ ಕೊಲ್ಲುವನು.
ಅಶಕ್ಯಮಪಿ ಕುರ್ಯಾದ್ಧಿ ರಣೇ ಪಾರ್ಥಃ ಸಮುದ್ಯತಃ |
ತ್ರಿದಶಾನ್ ವಾ ಸಮುದ್ಯುಕ್ತಾನ್ ಸಹಿತಾನ್ ದೈತ್ಯದಾನವೈಃ |
ನಿಹನ್ಯಾದರ್ಜುನಃ ಸಂಖ್ಯೇ ಕಿಮು ಭೀಷ್ಮಂ ನರಾಧಿಪ ||38||
ಅರ್ಜುನನು ರಣದಲ್ಲಿ ಚೆನ್ನಾಗಿ ಉದ್ಯತನಾದರೆ ಅಸಾಧ್ಯವಾದ ಕಾರ್ಯವನ್ನೂ ಮಾಡಿಯಾನು. ಅರ್ಜುನನು ದೈತ್ಯ-ದಾನವರಿಂದ ಸಹಿತರಾದ, ಯುದ್ಧಸನ್ನದ್ಧರಾದ ದೇವತೆಗಳನ್ನೂ ಕೊಂದಾನು. ಎಲ್ಲೈ ರಾಜನೇ, ಯುದ್ಧದಲ್ಲಿ ಭೀಷ್ಮರನ್ನು ಕೊಲ್ಲುವುದು ಯಾವ

ದೊಡ್ಡ ವಿಷಯ?
ವಿಪರೀತೋ ಮಹಾವೀರ್ಯೋ ಗತಸತೊತ್ವೋಽಲ್ಪಜೀವಿತಃ |
ಭೀಷ್ಮಃ ಶಾಂತನವೋ ನೂನಂ ಕರ್ತವ್ಯಂ ನಾವಬುಧ್ಯತೇ ||39||
ಮಹಾಪರಾಕ್ರಮಶಾಲಿಗಳಾದ, ಶಂತನುಪುತ್ರರಾದ ಭೀಷ್ಮರು ವಿಶೇಷವಾಗಿ ವಿಧಿವಶರಾಗಿ, ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡು ಅಲ್ಪಜೀವನವನ್ನು ಹೊಂದಿದ್ದಾರೆ. ಅವರು ಮಾಡಬೇಕಾದ ಕರ್ತವ್ಯವನ್ನು ತಿಳಿಯುತ್ತಿಲ್ಲ.
ಯುಧಿಷ್ಠಿರಃ
ಏವಮೇತನ್ಮಹಾಬಾಹೋ ಯಥಾ ವದಸಿ ಮಾಧವ |
ಸರ್ವೇ ಹ್ಯೇತೇ ನ ಪರ್ಯಾಪ್ತಾಸ್ತವ ವೇಗನಿವಾರಣೇ ||40||
ಯುಧಿಷ್ಠಿರ ಎಲ್ಲೆ ಮಾಧವನೇ, ಮಹಾಬಾಹುವೇ, ಎಲ್ಲವೂ ನೀನು ಹೇಳಿದಂತೆಯೇ ಸರಿ. ನಿನ್ನ ವೇಗವನ್ನು ನಿವಾರಿಸಲು ಇವರೆಲ್ಲರೂ ಸಹಿತರಾಗಿಯೂ ಶಕ್ತರಾಗುವುದಿಲ್ಲ.
ನಿಯತಂ ಸಮವಾಪ್ಸ್ಯಾಮಿ ಸರ್ವಮೇವ ಯಥೇಪ್ಸಿತಮ್ |
ಯಸ್ಯ ಮೇ ಪುರುಷವ್ಯಾಘ್ರ ಭವಾನ್ ನಾಥೋ ಮಹಾಬಲಃ ||41||
ಎಲೈ ಪುರುಷವ್ಯಾಘ್ರನೇ, ಯಾವ ನನಗೆ ಮಹಾಬಲನಾದ ನೀನು ಒಡೆಯನಾಗಿದ್ದೀಯೋ ಅಂತಹ ನಾನು ಅಭೀಪ್ಸಿತವಾದ ಎಲ್ಲವನ್ನೂ ಖಂಡಿತವಾಗಿ ಸಂಪಾದಿಸುವೆನು.
ಸೇಂದ್ರಾನಪಿ ರಣೇ ದೇವಾನ್ ಜಯೇಯಂ ಜಯತಾಂ ವರ |
ತ್ವಯಾ ನಾಥೇನ ಗೋವಿಂದ ಕಿಮು ಭೀಷ್ಮಂ ಮಹಾಹವೇ ||42||
ಎಲೈ ಜಯಿಸುವವರಲ್ಲಿ ಶ್ರೇಷ್ಠನೇ, ಗೋವಿಂದನೇ, ನಿನ್ನಂತಹ ನಾಥನಿರುವಾಗ ನಾನು ಯುದ್ಧದಲ್ಲಿ ಇಂದ್ರ ಸಹಿತರಾದ ದೇವತೆಗಳನ್ನೂ ಗೆದ್ದೇನು. ಇನ್ನು ಭೀಷ್ಮರನ್ನು ಯುದ್ಧದಲ್ಲಿ ಕೊಲ್ಲುವುದು ಯಾವ ದೊಡ್ಡ ವಿಷಯ?
ನ ತು ತ್ವಾಮನೃತಂ ಕರ್ತುಮುತ್ಸಹೇ ಸ್ವಾರ್ಥಗೌರವಾತ್ |
ಅಯುಧ್ಯಮಾನಃ ಸಾಹಾಯ್ಯಂ ಯಥೋಕ್ತಂ ಕುರು ಮಾಧವ ||43||
ನಾನು ನನ್ನ ಸ್ವಾರ್ಥದ ಸಲುವಾಗಿ ನಿನ್ನ ಮಾತನ್ನು ಸುಳ್ಳು ಮಾಡಲು ಬಯಸುವುದಿಲ್ಲ. ಎಲ್ಲೆ ಮಾಧವನೇ, ಯುದ್ಧವನ್ನು ಮಾಡದೆ ನಿಮಗೆ ಸಹಾಯವನ್ನು ಮಾಡುವೆನು ಎಂದು ಹಿಂದೆ ನೀನು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡು.
ಸಮಯಸ್ತು ಕೃತಃ ಕಶ್ಚಿದ್ ಭೀಷ್ಮೇಣ ಮಮ ಮಾಧವ |
ಮಂತ್ರಯಿಷ್ಯೇ ತವಾರ್ಥಾಯ ನ ತು ಯೋತ್ಸ್ಯೇ ಕಥಂಚನ |
ದುರ್ಯೋಧನಾರ್ಥೇ ಯೋತ್ಸ್ಯಾಮಿ ಸತ್ಯಮೇತದಿತಿ ಪ್ರಭೋ ||44||
ಎಲೈ ಪ್ರಭುವೇ, ಮಾಧವನೇ, ಭೀಷ್ಮರ ಜೊತೆಯಲ್ಲಿ ಒಂದು ಒಪ್ಪಂದ ಮಾಡಿಕೊಂಡಿದ್ದೇನೆ. ನಾನು ನಿನಗಾಗಿ ಮಂತ್ರಾಲೋಚನೆಯನ್ನು ಮಾಡುವೆನು. ಆದರೆ ಎಂದೂ ನಿನ್ನ ಪರವಾಗಿ ಯುದ್ಧವನ್ನು ಮಾಡುವುದಿಲ್ಲ. ದುರ್ಯೋಧನನ ಸಲುವಾಗಿ ಯುದ್ಧವನ್ನು ಮಾಡುವೆನು. ಈ ಮಾತು ಸತ್ಯವಾದುದು ಎಂದು (ಒಪ್ಪಂದವನ್ನು ಮಾಡಿಕೊಂಡಿದ್ದೇನೆ).
ಸ ಹಿ ರಾಜ್ಯಸ್ಯ ನೋ ದಾತಾ ಮಂತ್ರಸ್ಯೈವ ಚ ಮಾಧವ |
ತಸ್ಮಾದ್ ದೇವವ್ರತಂ ಭೂಯೋ ವಧೋಪಾಯಾರ್ಥಮಾತ್ಮನಃ |
ಭವತಾ ಸಹಿತಾಃ ಸರ್ವೇ ಪೃಚ್ಛಾಮೋ ಮಧುಸೂದನ ||45||
ಎಲೈ ಮಾಧವನೇ, ಭೀಷ್ಮರು ನಮಗೆ ರಾಜ್ಯವನ್ನು ಕೊಡುವುದಿಲ್ಲ. ಸೂಕ್ತವಾದ ಸಲಹೆಯನ್ನು ಮಾತ್ರ ಕೊಡುತ್ತಾರೆ. ಎಲೈ ಮಧುಸೂದನನೇ, ಆದ್ದರಿಂದ ನಾವೆಲ್ಲರೂ ಜೊತೆಯಲ್ಲಿ ಹೋಗಿ ಭೀಷ್ಮರನ್ನೇ ಅವರ ವಧೋಪಾಯವನ್ನು ಪುನಃ ಕೇಳೋಣ.
ತದ್ ವಯಂ ಸಹಿತಾ ಗತ್ವಾ ಭೀಷ್ಮಮಾಶು ನರೋತ್ತಮಮ್ |
ರುಚಿತೇ ತವ ವಾರ್ಷ್ಣೇಯ ಮಂತ್ರಂ ಪೃಚ್ಛಾಮ ಕೌರವಮ್ ||46||
ಎಲೈ ವಾರ್ಷ್ಣೇಯನೇ, ನಾವೆಲ್ಲರೂ ಶೀಘ್ರವಾಗಿ ನರಶ್ರೇಷ್ಠರ ಬಳಿಗೆ ಹೋಗಿ ನಿನಗೆ ಒಪ್ಪಿಗೆ ಇದ್ದರೆ ಕೌರವರಾದ ಅವರನ್ನು ಮಂತ್ರವನ್ನು ಕೇಳೋಣ (ಅವರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡೋಣ).
ಸ ವಕ್ಷ್ಯತಿ ಹಿತಂ ವಾಕ್ಯಂ ತಥ್ಯಂ ಚೈವ ಜನಾರ್ದನ |
ಯಥಾ ಸ ವಕ್ಷ್ಯತೇ ಕೃಷ್ಣ ತಥಾ ಕರ್ತಾಽಸ್ಮಿ ಸಂಯುಗೇ ||47||
ಎಲೈ ಜನಾರ್ದನನೇ, ಅವರು ಹಿತವೂ ಮತ್ತು ಸತ್ಯವೂ ಆದ ಮಾತನ್ನು ಆಡುವರು. ಕೃಷ್ಣನೇ, ಅವರು ಏನು ಹೇಳುವರೋ ಅದರಂತೆ ನಾನು ಯುದ್ಧದಲ್ಲಿ ಮಾಡುವವನಾಗುವೆನು.
ಸ ನೋ ಜಯಸ್ಯ ದಾತಾ ಚ ಮಂತ್ರಸ್ಯ ಚ ಧೃತವ್ರತಃ |
ಬಾಲಾಃ ಪಿತ್ರಾ ವಿಹೀನಾಶ್ಚ ತೇನ ಸಂವರ್ಧಿತಾ ವಯಮ್ ||48||
ವ್ರತವನ್ನು ಧರಿಸಿದ ಅವರು ನಮಗೆ ಜಯವನ್ನೂ ಮತ್ತು ಮಂತ್ರವನ್ನೂ ಕೊಡುವರು. ಬಾಲಕರೂ, ಪಿತೃಹೀನರೂ ಆದ ನಮ್ಮನ್ನು ಅವರು ಬೆಳೆಸಿದ್ದಾರೆ.
ತಂ ಚೇತ್ ಪಿತಾಮಹಂ ವೃದ್ಧಂ ಹಂತುಮಿಚ್ಛಾಮಿ ಮಾಧವ |
ಪಿತುಃ ಪಿತರಮಿಷ್ಟಂ ವೈ ಧಿಗಸ್ತು ಕ್ಷತ್ರಜೀವಿಕಾಮ್ ||49||
ಎಲೈ ಮಾಧವನೇ, ಅಂತಹ ತಂದೆಯ ತಂದೆಯಾದ, ನಮಗೆ ಇಷ್ಟರಾದ, ವೃದ್ಧರಾದ ಪಿತಾಮಹರನ್ನು ಕೊಲ್ಲಲು ನಾವು ಬಯಸುವುದಾದರೆ ಕ್ಷತ್ರಿಯಜೀವನಕ್ಕೆ ಧಿಕ್ಕಾರವಿರಲಿ.
ಸಂಜಯಃ

ತತೋऽಬ್ರುವೀನ್ಮಹಾರಾಜ ವಾರ್ಷ್ಣೇಯಃ ಕುರುನಂದನಮ್ |
ರೋಚತೇ ಮೇ ಮಹಾಬಾಹೋ ಸತತಂ ತವ ಭಾಷಿತಮ್ ||50||
ಸಂಜಯ ಎಲ್ಲೈ ಮಹಾರಾಜನೇ, ಆಗ ವೃಷ್ಣಿಕುಲೋತ್ಪನ್ನನಾದ ಕೃಷ್ಣನು ಕುರುನಂದನನಾದ ಧರ್ಮರಾಜನನ್ನು ಕುರಿತು ಎಲ್ಲೈ ಮಹಾಬಾಹುವೇ, ನಿನ್ನ ಮಾತುಗಳು ನನಗೆ ಯಾವಾಗಲೂ ಇಷ್ಟವಾಗುತ್ತವೆ ಎಂದು ಹೇಳಿದನು.
ದೇವವ್ರತಃ ಕೃತೀ ಭೀಷ್ಮಃ ಪ್ರೇಕ್ಷಿತೇನಾಪಿ ನಿರ್ದಹೇತ್ |
ಗಮ್ಯತಾಂ ಸ ವಧೋಪಾಯಂ ಪ್ರಷ್ಟುಂ ಸಾಗರಗಾಸುತಃ |
ವಕ್ತುಮರ್ಹತಿ ಸತ್ಯಂ ಸ ತ್ವಯಾ ಪೃಷ್ಟೋ ವಿಶೇಷತಃ ||51||
ದೇವವ್ರತರಾದ ಭೀಷ್ಮರು ಕುಶಲರು. ಅವರು ತಮ್ಮ ದೃಷ್ಟಿಪಾತದಿಂದಲೂ ಸೈನ್ಯವನ್ನು ಸುಟ್ಟಾರು. ನದೀಪುತ್ರರಾದ ಅವರನ್ನು ಅವರ ವಧೋಪಾಯವನ್ನು ಕೇಳಲು ನಾವೆಲ್ಲರೂ ಹೋಗೋಣ. ವಿಶೇಷವಾಗಿ ನೀನು ಕೇಳಿದ ಮೇಲೆ ಅವರು ಸತ್ಯವನ್ನೇ ನುಡಿಯುತ್ತಾರೆ.
ಯುಧಿಷ್ಠಿರಃ
ತೇ ವಯಂ ತತ್ರ ಗಚ್ಛಾಮಃ ಪ್ರಷ್ಟುಂ ಕುರುಪಿತಾಮಹಮ್ |
ಪ್ರಣಮ್ಯ ಶಿರಸಾ ಚೈನಂ ಮಂತ್ರಂ ಪೃಚ್ಛಾಮ ಮಾಧವ |
ಸ ನೋ ದಾಸ್ಯತಿ ಯಂ ಮಂತ್ರಂ ತೇನ ಯೋತ್ಸ್ಯಾಮಹೇ ಪರಾನ್ ||
ಯುಧಿಷ್ಠಿರ ಅಂತಹ ನಾವು ಕುರುಪಿತಾಮಹರನ್ನು ಕೇಳಲು ಅವರ ಬಳಿಗೆ ಹೋಗೋಣ. ಎಲ್ಲೈ ಮಾಧವನೇ, ಅವರನ್ನು ಶಿರಸಾ ನಮಸ್ಕರಿಸಿ ಮಂತ್ರವನ್ನು ಕೇಳೋಣ. ಅವರು ನಮಗೆ ಯಾವ ಸಲಹೆಯನ್ನು ಕೊಡುವರೋ ಅದರಂತೆ ನಾವು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವೆವು.
ಸಂಜಯಃ
ಏವಂ ಸಮ್ಮಂತ್ರ್ಯ ವೈ ವೀರಾಃ ಪಾಂಡವಾಃ ಪಾಂಡುಪೂರ್ವಜ |
ಜಗ್ಮುಸ್ತೇ ಸಹಿತಾಃ ಸರ್ವೇ ವಾಸುದೇವಶ್ಚ ವೀರ್ಯವಾನ್ |
ವಿಮುಕ್ತಶಸ್ತ್ರಕವಚಾ ಭೀಷ್ಮಸ್ಯ ಸದನಂ ಪ್ರತಿ ||53||
ಸಂಜಯ ಎಲ್ಲೈ ಪಾಂಡುವಿನ ಅಗ್ರಜನೇ, ಹೀಗೆ ಮಂತ್ರಾಲೋಚನೆಯನ್ನು ಮಾಡಿ, ವೀರರಾದ ಪಾಂಡವರೆಲ್ಲರೂ ತಮ್ಮ ಶಸ್ತ್ರ-ಕವಚಗಳನ್ನು ತ್ಯಜಿಸಿ, ಜೊತೆಯಲ್ಲಿ ಭೀಷ್ಮರ ಶಿಬಿರದ ಕಡೆಗೆ ಹೊರಟರು. ಪರಾಕ್ರಮಶಾಲಿಯಾದ ಕೃಷ್ಣನೂ ಹೊರಟನು.
ಪ್ರವಿಶ್ಯ ಚ ತದಾ ಭೀಷ್ಮಂ ಶಿರೋಭಿಃ ಪ್ರತಿಪೇದಿರೇ |
ಪೂಜಯಂತೋ ಮಹಾರಾಜ ಪಾಂಡವಾ ಭರತರ್ಷಭ |
ಪ್ರಣಮ್ಯ ಶಿರಸಾ ಚೈನಂ ಭೀಷ್ಮಂ ಶರಣಮನ್ವಯುಃ ||54||
ಎಲ್ಲೈ ಭರತಶ್ರೇಷ್ಠನೇ, ಭೀಷ್ಮರ ಶಿಬಿರವನ್ನು ಪ್ರವೇಶಿಸಿ ಅವರಿಗೆ ಶಿರಸಾ ನಮಸ್ಕಾರವನ್ನು ಮಾಡಿದರು. ಎಲ್ಲೈ ಮಹಾರಾಜನೇ, ಭರತಶ್ರೇಷ್ಠನೇ, ಅವರು ಭೀಷ್ಮರನ್ನು ಗೌರವಿಸುತ್ತಾ ಶಿರಸಾ ನಮಸ್ಕರಿಸಿ ಅವರಿಗೆ ಶರಣಾಗತರಾದರು.
ತಾನುವಾಚ ಮಹಾಬಾಹುರ್ಭೀಷ್ಮಃ ಕುರುಪಿತಾಮಹಃ |
ಸ್ವಾಗತಂ ತವ ವಾರ್ಷ್ಣೇಯ ಸ್ವಾಗತಂ ತೇ ಧನಂಜಯ |
ಸ್ವಾಗತಂ ಧರ್ಮಪುತ್ರಾಯ ಭೀಮಾಯ ಯಮಯೋಸ್ತಥಾ ||55||
ಕುರುಪಿತಾಮಹರೂ, ಮಹಾಬಾಹುಗಳೂ ಆದ ಭೀಷ್ಮರು ಅವರನ್ನು ಕುರಿತು ಮಾತನಾಡಿದರು. ಕೃಷ್ಣನೇ ನಿನಗೆ ಸ್ವಾಗತ. ಅರ್ಜುನನೇ ನಿನಗೆ ಸ್ವಾಗತ. ಧರ್ಮಪುತ್ರನಿಗೂ, ಭೀಮನಿಗೂ ಮತ್ತು ನಕುಲ-ಸಹದೇವರಿಗೂ ಸ್ವಾಗತ.
ಕಿಂ ಕಾರ್ಯಂ ವಃ ಕರೋಮ್ಯದ್ಯ ಯುಷ್ಮತ್ಪ್ರೀತಿವಿವರ್ಧನಮ್ |
ಸರ್ವಾತ್ಮನಾ ಚ ಕರ್ತಾಸ್ಮಿ ಯದ್ಯಪಿ ಸ್ಯಾತ್ ಸುದುಷ್ಕರಮ್ ||56||
ನಿಮ್ಮ ಸಂತೋಷವನ್ನು ಹೆಚ್ಚಿಸುವ ಯಾವ ಕಾರ್ಯವನ್ನು ನಾನು ಈ ದಿನ ಮಾಡಲಿ? ಅದು ಎಷ್ಟೇ ಕಷ್ಟಸಾಧ್ಯವಾದರೂ ನಾನು ಅದನ್ನು ಸರ್ವಪ್ರಯತ್ನದಿಂದಲೂ ಮಾಡುವೆನು (ಎಂದು ಹೇಳಿದರು).
ತಥಾ ಬ್ರುವಾಣಂ ಗಾಂಗೇಯಂ ಪ್ರೀತಿಯುಕ್ತಂ ಪುನಃ ಪುನಃ |
ಉವಾಚ ವಾಕ್ಯಂ ದೀನಾತ್ಮಾ ಧರ್ಮಪುತ್ರೋ ಯುಧಿಷ್ಠಿರಃ ||57||
ಹಾಗೆ ಪುನಃ ಪುನಃ ಪ್ರೀತಿಯಿಂದ ಮಾತನಾಡುತ್ತಿದ್ದ ಭೀಷ್ಮರನ್ನು ಕುರಿತು ಧರ್ಮಪುತ್ರನಾದ ಯುಧಿಷ್ಠಿರನು ದೈನ್ಯದಿಂದ ಕೂಡಿದ ಮನಸ್ಸುಳ್ಳವನಾಗಿ ಮಾತನಾಡಿದನು.
ಕಥಂ ಜಯೇಮ ಧರ್ಮಜ್ಞ ಕಥಂ ರಾಜ್ಯಂ ಲಭೇಮಹಿ |
ಪ್ರಜಾನಾಂ ಸಂಕ್ಷಯೋ ನ ಸ್ಯಾತ್ ಕಥಂ ತನ್ಮೇ ವದಾಭಿಭೋ ||58||
ಎಲ್ಲೈ ಧರ್ಮಜ್ಞರೇ, ಜಯಶೀಲರೇ, ನಾವು ಹೇಗೆ ಜಯವನ್ನು ಪಡೆದು ರಾಜ್ಯವನ್ನು ಹೊಂದೇವು? ಹೇಗೆ ಮಾಡಿದರೆ ಪ್ರಜೆಗಳ ವಿನಾಶವು ಉಂಟಾಗಲಾರದು ಎಂಬುದನ್ನು ನನಗೆ ಹೇಳಿ.
ಭವಾನ್ ಹಿ ನೋ ವಧೋಪಾಯಂ ಬ್ರವೀತು ಸ್ವಯಮಾತ್ಮನಃ |
ಭವಂತಂ ಸಮರೇ ರಾಜನ್ ವಿಷಹೇಮ ಕಥಂ ವಯಮ್ ||59||
ನಿಮ್ಮ ವಧೋಪಾಯವನ್ನು ಸ್ವತಃ ನೀವೇ ನಮಗೆ ಹೇಳಿ. ಎಲ್ಲೈ ರಾಜರೇ, ಯುದ್ಧದಲ್ಲಿ ನಾವು ನಿಮ್ಮನ್ನು ತಡೆಯುವ ಬಗೆಯು ಹೇಗೆ?
ನ ಹಿ ತೇ ಸೂಕ್ಷ್ಮಮಪ್ಯಸ್ತಿ ರಂಧ್ರಂ ಕುರುಪಿತಾಮಹ |
ಮಂಡಲೇನೈವ ಧನುಷಾ ಸದಾ ದೃಶ್ಯೋऽಸಿ ಸಂಯುಗೇ ||60||

ಎಲೈ ಕುರುಪಿತಾಮಹರೇ, ನೀವು ನಮಗೆ ಸೂಕ್ಷ್ಮವಾದ ಒಂದು ಸಣ್ಣ ಅವಕಾಶವನ್ನೂ ಕೊಡುತ್ತಿಲ್ಲ. ಯುದ್ಧದಲ್ಲಿ ನೀವು ಯಾವಾಗಲೂ ಮಂಡಲಾಕಾರವಾದ ಧನುಸ್ಸಿನ ಜೊತೆಯಲ್ಲಿಯೇ ಕಾಣುತ್ತೀರಿ.
ನಾದದಾನಂ ಸಂದಧಾನಂ ವಿಕರ್ಷಂತಂ ಧನುರ್ನ ಚ |
ಪಶ್ಯಾಮಸತ್ತ್ವ ಮಹಾಬಾಹೋ ರಥೇ ಸೂರ್ಯಮಿವ ಸ್ಥಿತಮ್ ||61||
ಎಲೈ ಮಹಾಬಾಹುವೇ, ರಥದಲ್ಲಿ ಸೂರ್ಯನಂತೆ ಇರುವ ನೀವು ಬಾಣವನ್ನು ತೆಗೆದುಕೊಳ್ಳುವುದನ್ನಾಗಲೀ, ಹೂಡುವುದನ್ನಾಗಲೀ, ಬಿಲ್ಲನ್ನು ಎಳೆಯುವುದನ್ನಾಗಲೀ ನಾವು ನೋಡುತ್ತಿಲ್ಲ.
ನರಾಶ್ವರಥನಾಗಾನಾಂ ಹಂತಾರಂ ಪರವೀರಹನ್ |
ಕ ಇವೋತ್ಸಹತೇ ಹಂತುಂ ತ್ವಾಂ ಪುಮಾನ್ ಭರತರ್ಷಭ ||62||
ಎಲೈ ಶತ್ರುವೀರಘಾತಕರೇ, ಪುರುಷಶ್ರೇಷ್ಠರೇ, ನರ-ಗಜಾಶ್ವ-ರಥಗಳನ್ನು ಕೊಲ್ಲುವ ನಿಮ್ಮನ್ನು ಕೊಲ್ಲಲು ಯಾವ ಪುರುಷನು ಸಾಹಸವನ್ನು ಮಾಡುತ್ತಾನೆ?
ವರ್ಷತಾ ಶರವರ್ಷಾಣಿ ಮಹಾಂತಿ ಪುರುಷೋತ್ತಮ |
ಕ್ಷಯಂ ನೀತಾ ಹಿ ಪೃತನಾ ಭವತಾ ಮಹತೀ ಮಮ ||63||
ಎಲೈ ಪುರುಷಶ್ರೇಷ್ಠರೇ, ದೊಡ್ಡ ಬಾಣಗಳ ಮಳೆಯನ್ನು ಕರೆಯುವ ನಿಮ್ಮಿಂದ ನನ್ನ ದೊಡ್ಡ ಸೈನ್ಯವು ವಿನಾಶವನ್ನು ಹೊಂದಿದೆ.
ಯಥಾ ಯುಧಿ ಜಯೇಯಂ ತ್ವಾಂ ಯಥಾ ರಾಜ್ಯಂ ಭವೇನ್ಮಮ |
ಭವೇತ್ ಸೈನ್ಯಸ್ಯ ವಾ ಶಾಂತಿಸ್ತನ್ಮೇ ಬ್ರೂಹಿ ಪಿತಾಮಹ ||64||
ಎಲೈ ಪಿತಾಮಹರೇ, ನಾವು ಹೇಗೆ ನಿಮ್ಮನ್ನು ಯುದ್ಧದಲ್ಲಿ ಜಯಿಸಿಯೇವು? ನನಗೆ ಹೇಗೆ ರಾಜ್ಯವು ದೊರಕೀತು? ಸೈನ್ಯಕ್ಕೆ ಹೇಗೆ ಶಾಂತಿಯುಂಟಾದೀತು? ಎಂಬುದನ್ನು ನನಗೆ ಹೇಳಿ (ಎಂದು ಹೇಳಿದನು).
ತತೋಽಬ್ರವೀಚ್ಛಾಂತನವಃ ಪಾಂಡವಾನ್ ಪಾಂಡುಪೂರ್ವಜ |
ನ ಕಥಂಚನ ಕೌಂತೇಯ ಮಯಿ ಜೀವತಿ ಸಂಯುಗೇ |
ಯುಷ್ಮಾಸು ದೃಶ್ಯತೇ ವೃದ್ಧಿಃ ಸತ್ಯಮೇತದ್ ಬ್ರವೀಮಿ ವಃ | |65||
ಎಲೈ ಪಾಂಡುವಿನ ಅಣ್ಣನೇ, ಆಗ ಶಂತನು ಪುತ್ರರಾದ ಭೀಷ್ಮರು ಪಾಂಡವರನ್ನು ಕುರಿತು ಮಾತನಾಡಿದರು. ಎಲೈ ಕೌಂತೇಯನೇ, ನಾನು ಜೀವಿಸಿರುವವರೆಗೆ ಯುದ್ಧದಲ್ಲಿ ಯಾವ ರೀತಿಯಿಂದಲೂ ನಿಮಗೆ ಅಭಿವೃದ್ಧಿಯುಂಟಾಗುವುದಿಲ್ಲ. ಈ ಮಾತನ್ನು ನಿಮಗೆ ಸತ್ಯವಾಗಿ ಹೇಳುತ್ತಿದ್ದೇನೆ.
ನಿರ್ಜಿತೇ ಮಯಿ ಯುದ್ಧೇ ತು ಧ್ರುವಂ ಜೇಷ್ಯಥ ಕೌರವಾನ್ |
ಕ್ಷಿಪ್ರಂ ಮಯಿ ಪ್ರಹರತ ಯದೀಚ್ಛಥ ರಣೇ ಜಯಮ್ |
ಅನುಜಾನಾಮಿ ವಃ ಪಾರ್ಥಾಃ ಪ್ರಹರಧ್ವಂ ಯಥಾಸುಖಮ್ ||66||
ನಾನು ಯುದ್ಧದಲ್ಲಿ ಪರಾಜಿತನಾದರೆ ನೀವು ಖಂಡಿತವಾಗಿ ಕೌರವರನ್ನು ಗೆಲ್ಲುವಿರಿ. ಯುದ್ಧದಲ್ಲಿ ಜಯವನ್ನು ಅಪೇಕ್ಷಿಸುವುದಾದರೆ ನೀವು ನನ್ನ ಮೇಲೆ ಪ್ರಹಾರವನ್ನು ಮಾಡಿ. ಎಲೈ ಪಾಂಡವರೇ, ನಿಮಗೆ ಅನುಮತಿಯನ್ನು ಕೊಟ್ಟಿದ್ದೇನೆ. ಯಾವ ಸಂಕೋಚವೂ ಇಲ್ಲದೆ ಪ್ರಹಾರವನ್ನು ಮಾಡಿ.
ಏವಂ ಹಿ ಸುಕೃತಂ ಮನ್ಯೇ ಭವತಾಂ ವಿದಿತೋ ಹ್ಯಹಮ್ |
ಹತೇ ಮಯಿ ಹತಂ ಸರ್ವಂ ತಸ್ಮಾದೇವಂ ವಿಧೀಯತಾಮ್ ||67||
ಹೀಗೆ ಮಾಡಿದರೆ ಒಳ್ಳೆಯದಾಗುತ್ತದೆ ಎಂದು ನಾನು ಭಾವಿಸುತ್ತೇನೆ. ನೀವು ನನ್ನನ್ನು ಚೆನ್ನಾಗಿ ತಿಳಿದಿದ್ದೀರಷ್ಟೆ? ನಾನು ಹತನಾದರೆ ಕೌರವ ಸೈನ್ಯವೆಲ್ಲವೂ ಹತವಾಗುತ್ತದೆ. ಆದ್ದರಿಂದ ಹೀಗೆ ಮಾಡಿ.
ಯುಧಿಷ್ಠಿರಃ
ಬ್ರೂಹಿ ತಸ್ಮಾದುಪಾಯಂ ನೋ ಯಥಾ ಯುದ್ಧೇ ಜಯೇಮಹಿ |
ಭವಂತಂ ಸಮರೇ ಕ್ರುದ್ಧಂ ದಂಡಪಾಣಿಮಿವಾಂತಕಮ್ ||68||
ಯುಧಿಷ್ಠಿರ ಹಾಗಾದರೆ ಯುದ್ಧದಲ್ಲಿ ಕ್ರುದ್ಧರಾಗಿ ದಂಡಹಸ್ತನಾದ ಯಮನಂತೆ ಇರುವ ನಿಮ್ಮನ್ನು ಕೊಲ್ಲುವ ಉಪಾಯವನ್ನು ನೀವೇ ಹೇಳಿ.
ಶಕ್ಯೋ ವಜ್ರಧರೋ ಜೇತುಂ ವರುಣೋಽಥ ಯಮಸ್ತಥಾ |
ನ ಭವಾನ್ ಸಮರೇ ಶಕ್ಯಃ ಸೇಂದ್ರೈರಪಿ ಸುರಾಸುರೈಃ ||69||
ವಜ್ರಧರನಾದ ಇಂದ್ರನನ್ನು ಯುದ್ಧದಲ್ಲಿ ಗೆಲ್ಲಲು ಸಾಧ್ಯ. ವರುಣನನ್ನು ಅಥವಾ ಯಮನನ್ನು ಗೆಲ್ಲಬಹುದು. ಆದರೆ ಇಂದ್ರಸಹಿತರಾದ ಸುರಾಸುರರಿಂದಲೂ ಯುದ್ಧದಲ್ಲಿ ನಿಮ್ಮನ್ನು ಗೆಲ್ಲಲು ಸಾಧ್ಯವಿಲ್ಲ.
ಭೀಷ್ಮಃ
ಸತ್ಯಮೇತನ್ಮಹಾಬಾಹೋ ಯಥಾ ವದಸಿ ಪಾಂಡವ |
ನಾಹಂ ಶಕ್ಯೋ ರಣೇ ಜೇತುಂ ಸೇಂದ್ರೈರಪಿ ಸುರಾಸುರೈಃ ||70||
ಆತ್ತಶಸ್ತ್ರೋ ರಣೇ ಯತ್ತೋ ಗೃಹೀತವರಕಾರ್ಮುಕಃ |
ನ್ಯಸ್ತಶಸ್ತ್ರಂ ತು ಮಾಂ ರಾಜನ್ ಹನ್ಯುರ್ಯುಧಿ ಮಹಾರಥಾಃ ||71||
ಭೀಷ್ಮ ಎಲೈ ಮಹಾಬಾಹುವೇ, ಪಾಂಡವನೇ, ನೀನು ಹೇಳಿದಂತೆಯೇ ಎಲ್ಲವೂ ಸತ್ಯವೇ ಸರಿ. ಯುದ್ಧದಲ್ಲಿ ಶಸ್ತ್ರಗಳನ್ನು ಧರಿಸಿ, ಧನುಸ್ಸನ್ನು ಹಿಡಿದ ನನ್ನನ್ನು ಇಂದ್ರನಿಂದ ಸಹಿತರಾದ ಸುರಾಸುರರೂ ಸಹ ಗೆಲ್ಲಲಾರರು. ರಾಜನೇ, ಆದರೆ ನಾನು ಶಸ್ತ್ರನ್ಯಾಸವನ್ನು ಮಾಡಿದರೆ ಮಹಾರಥರು ಯುದ್ಧದಲ್ಲಿ ನನ್ನನ್ನು ಕೊಲ್ಲಬಹುದು.

ನಿಕ್ಷಿಪ್ತಶಸ್ತ್ರೇ ಪತಿತೇ ವಿಮುಕ್ತಕವಚಧ್ವಜೇ |
ದ್ರವಮಾಣೇ ಚ ಭೀತೇ ಚ ತವಾಸ್ಮೀತಿ ಚ ವಾದಿನಿ ॥72॥
ಸ್ತ್ರೀಜಿತೇ ಸ್ತ್ರೀಪ್ರಧಾನೇ ಚ ಸ್ತ್ರೀಪ್ರಧಾಯಿನಿ ಧರ್ಮಜ |
ಸ್ತ್ರಿಯಾಂ ಸ್ತ್ರೀನಾಮಧೇಯೇ ಚ ವಿಕಲೇ ಚೈಕಪುತ್ರಕೇ |
ಅಪ್ರಸೂತೇ ಚ ಷಂಡೇನ ನ ಯುದ್ಧಂ ರೋಚತೇ ಮಮ ॥73॥
ಎಲೈ ಧರ್ಮರಾಜನೇ, ಶಸ್ತ್ರಸಂನ್ಯಾಸ ಮಾಡಿದವನ, ಬಿದ್ದವನ, ಕವಚಧ್ವಜವನ್ನು ಕಳೆದುಕೊಂಡವನ, ಓಡುವವನ, ಭಯಗೊಂಡವನ, ನಿನ್ನ ದಾಸನಾಗಿದ್ದೇನೆ ಎಂದು ಹೇಳುವವನ, ಸ್ತ್ರೀಜಿತನಾದವನ, ಸ್ತ್ರೀಗೆ ವಶನಾದವನ, ವನಿತೆಯ, ಸ್ತ್ರೀ ನಾಮಧೇಯವನ್ನು ಧರಿಸಿದವನ, ಹೀನಾಂಗನ, ಏಕಮಾತ್ರ ಪುತ್ರನ, ಇನ್ನೂ ಮಕ್ಕಳಿಲ್ಲದವನ ಮತ್ತು ನಪುಂಸಕನ ಜೊತೆಯಲ್ಲಿ ನನಗೆ ಯುದ್ಧವು ಇಷ್ಟವಾಗುವುದಿಲ್ಲ.
ಇಮಂ ಚ ಶೃಣು ಮೇ ಪಾರ್ಥ ಸಂಕಲ್ಪಂ ಪೂರ್ವಚಿಂತಿತಮ್ |
ಅಮಂಗಲ್ಯಧ್ವಜಂ ದೃಷ್ಟ್ವಾ ನ ಯುಧ್ಯೇಯಂ ಕಥಂಚನ ॥74॥
ಎಲೈ ಪಾರ್ಥನೇ, ನಾನು ಹಿಂದೆ ಮಾಡಿದ ನನ್ನ ಈ ಸಂಕಲ್ಪವನ್ನು ಕೇಳು. ಅಮಂಗಳ ಧ್ವಜವನ್ನು ಎಂದರೆ ಸ್ತ್ರೀತ್ವ, ಸ್ತ್ರೀ ನಾಮಧೇಯ, ನಪುಂಸಕತ್ವಾದಿಗಳನ್ನು ಹೊಂದಿದವನನ್ನು ನೋಡಿದರೆ ನಾನು ಯಾವ ಕಾರಣದಿಂದಲೂ ಯುದ್ಧವನ್ನು ಮಾಡಲಾರೆ.
ಯ ಏಷ ದ್ರೌಪದೋ ರಾಜಂಸ್ತವ ಸೈನ್ಯೇ ಮಹಾರಥಃ |
ಶಿಖಂಡೀ ಸಮರಾಕಾಂಕ್ಷೀ ಶೂರಶ್ಚ ಸಮಿತಿಂಜಯಃ ॥75॥
ಯಥಾಭವಚ್ಚ ಸ್ತ್ರೀ ಪೂರ್ವಂ ಪಶ್ಚಾತ್ ಪುಂಸ್ತ್ವಮುಪಾಗತಃ |
ಜಾನಂತಿ ಚ ಭವಂತೋಽಪಿ ಸರ್ವಮೇತದ್ ಯಥಾತಥಮ್ ॥76॥
ಎಲೈ ರಾಜನೇ, ನಿನ್ನ ಸೈನ್ಯದಲ್ಲಿ ಇರುವ ದ್ರುಪದನ ಪುತ್ರನಾದ, ಮಹಾರಥನಾದ ಯುದ್ಧಪ್ರಿಯನೂ, ಶೂರನೂ ಮತ್ತು ಶತ್ರುಗಳನ್ನು ಜಯಿಸುವವನೂ ಆದ ಶಿಖಂಡಿಯು ಮೊದಲು ಹೇಗೆ ಸ್ತ್ರೀಯಾಗಿ ಜನಿಸಿದ, ಅನಂತರ ಹೇಗೆ ಪುರುಷತ್ವವನ್ನು ಪಡೆದ ಎಂಬ ಎಲ್ಲಾ ವಿಷಯಗಳನ್ನೂ ನೀವೂ ಸಹ ಚೆನ್ನಾಗಿ ತಿಳಿದಿದ್ದೀರಿ.
ಅರ್ಜುನಃ ಸಮರೇ ಶೂರಃ ಪುರಸ್ಕೃತ್ಯ ಶಿಖಂಡಿನಮ್ |
ಮಾಮೇವ ವಿಶಿಖೈಸ್ತೂರ್ಣಮಭಿದ್ರವತು ದಂಸಿತಃ ॥77॥
ಸಮರಶೂರನಾದ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಶಸ್ತ್ರಾದಿಗಳನ್ನು ಧರಿಸಿ ನನ್ನ ಮೇಲೆಯೇ ಬಾಣಗಳಿಂದ ಶೀಘ್ರವಾಗಿ ಪ್ರಹರಿಸಲಿ.
ಅಮಂಗಲ್ಯಧ್ವಜೇ ತಸ್ಮಿನ್ ಸ್ತ್ರೀಪೂರ್ವೇ ಚ ವಿಶೇಷತಃ |
ನ ಪ್ರಹರ್ತುಮಭೀಪ್ಸಾಮಿ ಗೃಹೀತೇಷುಂ ಕಥಂಚನ ॥78॥
ಸ್ತ್ರೀ ನಾಮಧೇಯನು ಅಥವಾ ನಪುಂಸಕನು ಅಥವಾ ಮೊದಲು ಸ್ತ್ರೀಯಾಗಿದ್ದವನು ಕೈಯಲ್ಲಿ ಬಾಣವನ್ನು ಹಿಡಿದುದನ್ನು ನೋಡಿದರೆ ನಾನು ಅವನನ್ನು ಹೊಡೆಯಲು ಬಯಸುವುದಿಲ್ಲ.
ತದಂತರಂ ಸಮಾಸಾದ್ಯ ಪಾಂಡವೋ ಮಾಂ ಧನಂಜಯಃ |
ಶರೈರ್ಘಾತಯತು ಕ್ಷಿಪ್ರಂ ಸಮಂತಾದ್ ಭರತರ್ಷಭ ॥79॥
ಎಲೈ ಭರತಶ್ರೇಷ್ಠನೇ, ಆ ಅವಕಾಶವನ್ನು ಪಡೆದು ಅರ್ಜುನನು ಶೀಘ್ರವಾಗಿ ನನ್ನ ಮೇಲೆ ಎಲ್ಲ ಕಡೆಗಳಿಂದಲೂ ಪ್ರಹಾರ ಮಾಡಲಿ.
ನ ತಂ ಪಶ್ಯಾಮಿ ಲೋಕೇಷು ಯೋ ಮಾಂ ಹನ್ಯಾತ್ ಸಮುದ್ಯತಮ್|
ಋತೇ ಕೃಷ್ಣಾನ್ಮಹಾಭಾಗಾತ್ ಪಾಂಡವಾದ್ ವಾ ಧನಂಜಯಾತ್ ॥80॥
ನಾನು ಯುದ್ಧೋದ್ಯುಕ್ತನಾದರೆ ಮಹಾನುಭಾವನಾದ ಕೃಷ್ಣನನ್ನು ಬಿಟ್ಟು ಮತ್ತು ಪಾಂಡುಪುತ್ರನಾದ ಧನಂಜಯನನ್ನು ಬಿಟ್ಟು ನನ್ನನ್ನು ಕೊಲ್ಲುವ ಸಾಮರ್ಥ್ಯವಿರುವ ಬೇರೆ ಯಾವನನ್ನೂ ನಾನು ಲೋಕಗಳಲ್ಲಿ ಕಾಣುವುದಿಲ್ಲ.
ಏಷ ತಸ್ಮಾತ್ ಪುರೋಧಾಯ ಕಂಚಿದನ್ಯಂ ಮಮಾಗ್ರತಃ |
ಮಾಂ ಪಾತಯತು ಬೀಭತ್ಸುರೇವಂ ತೇ ವಿಜಯೋ ಭವೇತ್ ॥81॥
ಆದ್ದರಿಂದ ಅರ್ಜುನನು ಬೇರೆ ಅಂತಹ ಯಾವನನ್ನಾದರೂ ನನ್ನ ಮುಂದೆ ಇಟ್ಟು ನನ್ನನ್ನು ಕೆಡವಲಿ. ಹಾಗೆ ಮಾಡಿದರೆ ನಿಮಗೆ ಜಯವುಂಟಾದೀತು.
ಏತತ್ಕುರುಷ್ವ ಕೌಂತೇಯ ಯಥೋಕ್ತಂ ವಚನಂ ಮಮ |
ತತೋ ಜೇಷ್ಯಸಿ ಸಂಗ್ರಾಮೇ ಧಾರ್ತರಾಷ್ಟ್ರಾನ್ ಸಮಾಗತಾನ್ ॥82॥
ಎಲೈ ಕೌಂತೇಯನೇ, ನಾನು ಹೇಳಿದಂತೆ ನೀನು ಇದನ್ನು ಮಾಡು. ಅನಂತರ ಯುದ್ಧದಲ್ಲಿ ಪ್ರಾಪ್ತರಾದ ದುರ್ಯೋಧನಾದಿಗಳನ್ನು ಗೆಲ್ಲುವಿ.
ಸಂಜಯಃ
ತೇಽನುಜ್ಞಾತಾಸ್ತತಃ ಪಾರ್ಥಾ ಜಗ್ಮುಃ ಸ್ವಶಿಬಿರಂ ಪ್ರತಿ |
ಅಭಿವಾದ್ಯ ಮಹಾತ್ಮಾನಂ ಭೀಷ್ಮಂ ಕುರುಪಿತಾಮಹಮ್ ॥83॥
ಸಂಜಯ ಹೀಗೆ ಭೀಷ್ಮರ ಅನುಮತಿಯನ್ನು ಪಡೆದ ಪಾಂಡವರು ಕುರುಪಿತಾಮಹರಾದ ಆ ಮಹಾತ್ಮರಿಗೆ ನಮಸ್ಕಾರವನ್ನು ಮಾಡಿ ತಮ್ಮ ಶಿಬಿರಕ್ಕೆ ಹೋದರು.
ತಥೋಕ್ತವತಿ ಗಾಂಗೇಯೇ ಪರಲೋಕಾಯ ದೀಕ್ಷಿತೇ |

ಅರ್ಜುನೋ ದುಃಖಸಂತಪ್ತಃ ಸವ್ರೀಡಮಿದಮಬ್ರವೀತ್ ॥84॥
ಗಂಗಾಪುತ್ರರಾದ ಭೀಷ್ಮರು ತಮ್ಮ ಪರಲೋಕ ಯಾತ್ರೆಯನ್ನು ನಿಶ್ಚಯಿಸಿ ಹಾಗೆ ಹೇಳುತ್ತಿರಲು ದುಃಖತಪ್ತನಾದ ಅರ್ಜುನನು ನಾಚಿಕೆಯಿಂದ ಹೀಗೆ ಮಾತನಾಡಿದನು.
ಗುರುಣಾ ಕುಲವೃದ್ಧೇನ ಕೃತಪ್ರಜ್ಞೇನ ಧೀಮತಾ |
ಪಿತಾಮಹೇನ ಸಂಗ್ರಾಮೇ ಕಥಂ ಯೋತ್ಸ್ಯಾಮಿ ಮಾಧವ ॥85॥
ಎಲ್ಲೈ ಮಾಧವನೇ, ಗುರುಗಳೂ, ಕುಲವೃದ್ಧರೂ, ಶಾಸ್ತ್ರಸಂಪನ್ನರೂ, ಮೇಧಾವಿಗಳೂ ಆದ ಪಿತಾಮಹರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಲಿ?
ಕ್ರೀಡತಾ ಹಿ ಮಯಾ ಬಾಲ್ಯೇ ವಾಸುದೇವ ಮಹಾಮನಾಃ |
ಪಾಂಸುರೂಷಿತಗಾತ್ರೇಣ ಮಹಾತ್ಮಾ ಪರುಷೀಕೃತಃ ॥86॥
ಎಲ್ಲೈ ವಾಸುದೇವನೇ, ನಾನು ಬಾಲ್ಯದಲ್ಲಿ ಶರೀರಕ್ಕೆಲ್ಲಾ ಧೂಳನ್ನು ಲೇಪಿಸಿಕೊಂಡು ಆಟವಾಡುತ್ತಾ ಧೈರ್ಯಶಾಲಿಗಳೂ ಮತ್ತು ಮಹಾತ್ಮರೂ ಆದ ಅವರನ್ನು ಮಲಿನಗೊಳಿಸಿದ್ದೇನೆ.
ಯಸ್ಯಾಹಮಧಿರುಹ್ಯಾಂಕಂ ಬಾಲಃ ಕಿಲ ಗದಾಗ್ರಜ |
ತಾತೇತ್ಯವೋಚಂ ಪಿತರಂ ಪಿತುಃ ಪಾಂಡೋರ್ಮಹಾತ್ಮನಃ ॥87॥
ನಾಹಂ ತಾತಸ್ತವ ಪಿತುಸ್ತಾತೋಽಸ್ಮಿ ತವ ಭಾರತ |
ಇತಿ ಮಾಮಬ್ರವೀದ್ ಬಾಲ್ಯೇ ಯಃ ಸ ವಧ್ಯಃ ಕಥಂ ಮಯಾ ॥88॥
ಎಲ್ಲೈ ಗದಾಗ್ರಜನೇ, ಮಹಾತ್ಮರಾದ ಪಾಂಡುವಿನ ತಂದೆಯಾದ ಅವರ ತೊಡೆಯನ್ನೇರಿ ಬಾಲಕನಾಗಿದ್ದಾಗ ನಾನು ಅಪ್ಪ ಎಂದು ಕರೆದಾಗ ನನ್ನನ್ನು ಕುರಿತು ಎಲ್ಲೈ ಭಾರತನೇ, ನಾನು ನಿನ್ನ ತಂದೆಯಲ್ಲ, ನಿನ್ನ ತಂದೆಯ ತಂದೆ ಎಂದು ಯಾರು ಹೇಳಿದರೋ ಅವರನ್ನು ಬಾಣಗಳಿಂದ ಹೇಗೆ ಹೊಡೆಯಲಿ?
ಕಾಮಂ ವಧ್ಯತು ಮೇ ಸೈನ್ಯಂ ನಾಹಂ ಯೋತ್ಸ್ಯೇ ಮಹಾತ್ಮನಾ |
ಜಯೋ ವಾಸ್ತು ವಧೋ ವಾ ಮೇ ಕಥಂ ವಾ ಕೃಷ್ಣ ಮನ್ಯಸೇ ॥89॥
ಕೌರವ ಸೈನ್ಯವು ನನಗೆ ಬೇಕಾದಂತೆ ಹೊಡೆಯಲಿ. ನಾನು ಮಹಾತ್ಮರಾದ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡಲಾರೆ. ಜಯವಾಗಲಿ ಅಥವಾ ನನ್ನ ವಧೆಯಾಗಲಿ, ಕೃಷ್ಣನೇ, ನಿನ್ನ ಅಭಿಪ್ರಾಯವೇನು?
ಶ್ರೀಕೃಷ್ಣಃ
ಪ್ರತಿಜ್ಞಾಯ ವಧಂ ಜಿಷ್ಣೋ ಪುರಾ ಭೀಷ್ಮಸ್ಯ ಸಂಯುಗೇ |
ಕ್ಷತ್ರಧರ್ಮೇ ಸ್ಥಿತಃ ಪಾರ್ಥ ಕಥಂ ನೈನಂ ಹನಿಷ್ಯಸಿ ॥90॥
ಶ್ರೀಕೃಷ್ಣ ಎಲ್ಲೈ ಜಿಷ್ಣುವೇ, ಯುದ್ಧದಲ್ಲಿ ಭೀಷ್ಮರನ್ನು ಕೊಲ್ಲುವೆನು ಎಂದು ಹಿಂದೆ ಪ್ರತಿಜ್ಞೆಯನ್ನು ಮಾಡಿ, ಕ್ಷತ್ರಿಯಧರ್ಮದಲ್ಲಿ ನಿರತನಾದ ನೀನು ಅವರನ್ನು ಹೇಗೆ ಕೊಲ್ಲದೇ ಇರಲು ಸಾಧ್ಯ?
ಪಾತಯೈನಂ ರಥಾತ್ ಪಾರ್ಥ ವಜ್ರಾಹತಮಿವ ದ್ರುಮಮ್ |
ನಾಹತ್ವಾ ಯುಧಿ ಗಾಂಗೇಯಂ ವಿಜಯಸ್ತೇ ಭವಿಷ್ಯತಿ ॥91॥
ಎಲ್ಲೈ ಪಾರ್ಥನೇ, ವಜ್ರದಿಂದ ಹೊಡೆಯಲ್ಪಟ್ಟ ವೃತ್ರನಂತೆ ಅವರನ್ನು ರಥದಿಂದ ಬೀಳಿಸು. ಯುದ್ಧದಲ್ಲಿ ಗಂಗಾಪುತ್ರರನ್ನು ಬೀಳಿಸದೆ ನಿನಗೆ ಜಯವು ಉಂಟಾಗುವುದಿಲ್ಲ.
ದಿಷ್ಟಮೇತತ್ ಪುರಾ ದೇವೈರ್ಭವಿಷ್ಯತ್ಯವಶಸ್ಯ ತೇ |
ಹಂತಾ ಭೀಷ್ಮಸ್ಯ ಪೂರ್ವೇಂದ್ರ ಇತಿ ತನ್ನ ತದನ್ಯಥಾ ॥92॥
ಇದನ್ನು ದೇವತೆಗಳು ಹಿಂದೆಯೇ ಸಂಕಲ್ಪಿಸಿದ್ದಾರೆ. ನೀನು ಅವಶನಾಗಿಯಾದರೂ ಭೀಷ್ಮರನ್ನು ಕೊಲ್ಲುವಿ. ಇಂದ್ರಪುತ್ರನೇ, ಇದು ಬೇರೆ ರೀತಿಯಲ್ಲಿ ಆಗಲು ಸಾಧ್ಯವಿಲ್ಲ.
ನ ಹಿ ಭೀಷ್ಮಂ ದುರಾಧರ್ಷಂ ವ್ಯಾತ್ತಾನನಮಿವಾಂತಕಮ್ |
ತ್ವದನ್ಯಃ ಶಕ್ನುಯಾದ್ ಹಂತುಮಪಿ ವಜ್ರಧರಃ ಸ್ವಯಮ್ ॥93॥
ಸೋಲಿಸಲು ಅಸಾಧ್ಯರಾದ, ಬಾಯನ್ನು ತೆರೆದ ಮೃತ್ಯುವಾದ ಭೀಷ್ಮರನ್ನು ನೀನಲ್ಲದೆ ವಜ್ರಪಾಣಿಯಾದ ಇಂದ್ರನು ಸ್ವತಃ ಬಂದರೂ ಕೊಲ್ಲಲಾರ.
ಜಹಿ ಭೀಷ್ಮಂ ಮಹಾಬಾಹೋ ಶೃಣು ಚೇದಂ ವಚೋ ಮಮ |
ಯಥೋವಾಚ ಪುರಾ ಶಕ್ರಂ ಮಹಾಬುದ್ಧಿರ್ಬೃಹಸ್ಪತಿಃ ॥94॥
ಎಲ್ಲೈ ಮಹಾಬಾಹುವೇ, ಹಿಂದೆ ಮಹಾಬುದ್ಧಿಯುಳ್ಳ ಬೃಹಸ್ಪತಿಯು ಇಂದ್ರನನ್ನು ಕುರಿತು ಹೇಳಿದಂತೆ ಭೀಷ್ಮರನ್ನು ಗೆಲ್ಲುವವನಾಗು. ಈ ನನ್ನ ಮಾತನ್ನು ಕೇಳು.
ಜ್ಯಾಯಾಂಸಮಪಿ ಚೇಚ್ಛಕ್ರ ಗುಣೈರಪಿ ಸಮನ್ವಿತಮ್ |
ಆತತಾಯಿನಮಾಮಂತ್ರ್ಯ ಹನ್ಯಾದ್ ಘಾತಕಮಾಗತಮ್ ॥95॥
ಎಲ್ಲೈ ಇಂದ್ರನೇ, ಗುಣಗಳಿಂದ ಕೂಡಿದ ಶ್ರೇಷ್ಠನಾದವನು ಕೈಯಲ್ಲಿ ಶಸ್ತ್ರವನ್ನು ಹಿಡಿದು ಕೊಲ್ಲಲು ಬಂದಾಗ ಅವನನ್ನೂ ಕೊಲ್ಲಬೇಕು (ಎಂದು ಬೃಹಸ್ಪತಿಗಳು ಹೇಳಿದರು).
ಶಾಶ್ವತೋಽಯಂ ಸ್ಥಿತೋ ಧರ್ಮಃ ಕ್ಷತ್ರಿಯಾಣಾಂ ಧನಂಜಯ |
ಯೋದ್ಧವ್ಯಂ ರಕ್ಷಿತವ್ಯಂ ಚ ಯಷ್ಟವ್ಯಂ ಚಾನಸೂಯುಭಿಃ ॥96॥
ಎಲ್ಲೈ ಧನಂಜಯನೇ, ಇದು ಕ್ಷತ್ರಿಯರ ಶಾಶ್ವತವಾದ ಧರ್ಮ. ಅವರು ಯಾವ ಅಸೂಯೆಯೂ ಇಲ್ಲದೆ ಯುದ್ಧವನ್ನು ಮಾಡಬೇಕು,

ಪ್ರಜೆಗಳನ್ನು ರಕ್ಷಿಸಬೇಕು ಮತ್ತು ಯಜ್ಞಗಳನ್ನು ಮಾಡಬೇಕು.
ಅರ್ಜುನಃ
ಶಿಖಂಡೀ ನಿಧನಂ ಕೃಷ್ಣ ಭೀಷ್ಮಸ್ಯ ಭವಿತಾ ಧ್ರುವಮ್ |
ದೃಷ್ಟ್ವೈವ ಹಿ ಸದಾ ಭೀಷ್ಮಃ ಪಾಂಚಾಲ್ಯಂ ವಿನಿವರ್ತತೇ ॥97॥
ಅರ್ಜುನ ಎಲೈ ಕೃಷ್ಣನೇ, ಶಿಖಂಡಿಯು ನಿಶ್ಚಿತವಾಗಿ ಭೀಷ್ಮರ ಮೃತ್ಯುವಾಗುವನು. ಭೀಷ್ಮರು ಅವನನ್ನು ನೋಡಿದಾಗಲೆಲ್ಲಾ ಯುದ್ಧದಿಂದ ನಿವೃತ್ತರಾಗುತ್ತಾರೆ.
ತೇ ವಯಂ ಪ್ರಮುಖೇ ತಸ್ಯ ಸ್ಥಾಪಯಿತ್ವಾ ಶಿಖಂಡಿನಮ್ |
ಗಾಂಗೇಯಂ ಪಾತಯಿಷ್ಯಾಮ ಉಪಾಯೇನೇತಿ ಮೇ ಮತಿಃ ॥98॥
ಅಂತಹ ನಾವು ಅವರ ಎದುರಿನಲ್ಲಿ ಶಿಖಂಡಿಯನ್ನು ನಿಲ್ಲಿಸಿ, ಭೀಷ್ಮರನ್ನು ಉಪಾಯದಿಂದ ಕೆಡವುವೆವು ಎಂದು ನನ್ನ ಅಭಿಪ್ರಾಯ.
ಅಹಮನ್ಯಾನ್ಮಹೇಷ್ವಾಸಾನ್ ವಾರಯಿಷ್ಯಾಮಿ ಸಾಯಕೈಃ |
ಶಿಖಂಡ್ಯಪಿ ಯುಧಾಂ ಶ್ರೇಷ್ಠೋ ಭೀಷ್ಮಮೇವಾಭಿಯಾಸ್ಯತು ॥99॥
ನಾನು ನನ್ನ ಬಾಣಗಳಿಂದ ಉಳಿದ ಧನುಷ್ಕರನ್ನು ತಡೆಯುವೆನು. ಯೋಧರಲ್ಲಿ ಶ್ರೇಷ್ಠನಾದ ಶಿಖಂಡಿಯಾದರೂ ಭೀಷ್ಮರ ಮೇಲೆಯೇ ಎರಗಲಿ.
ಶ್ರುತಂ ತೇ ಕುರುಮುಖ್ಯಸ್ಯ ನಾಹಂ ಹನ್ಯಾಂ ಶಿಖಂಡಿನಮ್ |
ಕನ್ಯಾ ಹ್ಯೇಷಾ ಪುರಾ ಜಾತಾ ಪುರುಷಃ ಸಮಪದ್ಯತ ॥100॥
ನಾನು ಶಿಖಂಡಿಯನ್ನು ಕೊಲ್ಲಲಾರೆ. ಅವನು ಮೊದಲು ಸ್ತ್ರೀಯಾಗಿ ಜನಿಸಿದವನು, ಅನಂತರ ಪುರುಷನಾದವನು ಎಂಬ ಕುರುಶ್ರೇಷ್ಠರಾದ ಭೀಷ್ಮರ ಮಾತನ್ನು ನೀನು ಕೇಳಿದ್ದೀಯೆ.
ಇತ್ಯೇವಂ ನಿಶ್ಚಯಂ ಕೃತ್ವಾ ಪಾಂಡವಾಃ ಸಹಮಾಧವಾಃ |
ಶಯನಾನಿ ಯಥಾಸ್ವಾನಿ ಭೇಜಿರೇ ಪುರುಷರ್ಷಭಾಃ ॥101॥
ಹೀಗೆ ನಿಶ್ಚಯವನ್ನು ಮಾಡಿ, ಕೃಷ್ಣನಿಂದ ಒಡಗೂಡಿದ, ಪುರುಷಶ್ರೇಷ್ಠರಾದ ಪಾಂಡವರು ತಮ್ಮ ತಮ್ಮ ಶಯನಗಳಿಗೆ ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಚತುರಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುಷ್ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 25ನೇ ಅಧ್ಯಾಯ
ಪ್ರಾಪ್ಯಾನುಜ್ಞಾಂ ಭೀಷ್ಮತಸ್ತೇ ವಧಾಯ
ಶಿಖಂಡಿನಂ ತದ್ವಚಸಾಽಗ್ರಯಾಯಿನಮ್ |
ಕೃತ್ವಾ ಪರೇದ್ಯುರ್ಯುಧಯೇ ವಿನಿರ್ಗತಾ
ಭೀಷ್ಮಂ ಪುರಸ್ಕೃತ್ಯ ತಥಾ ಪರೇಽಪಿ ॥116॥
ಪಾಂಡವರು ಭೀಷ್ಮರಿಂದ ಅವರ ವಧೆಗೆ ಅನುಜ್ಞೆ ಪಡೆದು, ಮರುದಿನ ಅವನ ಮಾತಿನಂತೆ ಶಿಖಂಡಿಯನ್ನು ಮುಂದೆ ಮಾಡಿಕೊಂಡು, ಯುದ್ಧಕ್ಕೆ ಹೊರಟರು. ಕೌರವರೂ ಭೀಷ್ಮರನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೊರಟರು.
ಶಿಖಂಡಿನೋ ರಕ್ಷಕಃ ಫಲ್ಗುನೋಽಭೂದ್
ಭೀಷ್ಮಸ್ಯ ದುಃಶಾಸನ ಆಸ ಚಾಗ್ರೇ |
ಅನ್ಯೇ ಚ ಸರ್ವೇ ಜುಗುಪುರ್ಭೀಷ್ಮಮೇವ
ನ್ಯವಾರಯನ್ ಭೀಮಸೇನಾದಯಸ್ತಾನ್ ॥117॥
ಶಿಖಂಡಿಗೆ ರಕ್ಷಕನಾಗಿ ಅರ್ಜುನ ಹಿಂದೆ ನಿಂತ. ಭೀಷ್ಮರ ರಕ್ಷಕನಾಗಿ ದುಶ್ಶಾಸನ ಮುಂದೆ ನಿಂತ. ಬೇರೆ ಎಲ್ಲ ಕೌರವ ಸೈನಿಕರೂ ಭೀಷ್ಮರ ರಕ್ಷಣೆಗೆ ನಿಂತರು. ಭೀಮಸೇನ ಮುಂತಾದವರು ಅವರನ್ನು ಎದುರಿಸಿದರು.
ಭೀಷ್ಮಾಯ ಯಾಂತಂ ಯುಯುಧಾನಮಾಜೌ
ನ್ಯವಾರಯದ್ ರಾಕ್ಷಸೋಽಲಂಬುಸೋಽಥ |
ತಂ ವಜ್ರಕಲ್ಪೈರತುದದ್ ವೃಷ್ಣಿವೀರಃ
ಶರೈಃ ಸ ಮಾಯಾಮಸೃಜತ್ ತದೋಗ್ರಾಮ್ ॥118॥
ಯುದ್ಧದಲ್ಲಿ ಭೀಷ್ಮರ ಮೇಲೇರಿ ಬರುತ್ತಿದ್ದ ಸಾತ್ಯಕಿಯನ್ನು ಅಲಂಬುಸ ರಾಕ್ಷಸ ತಡೆದ. ವೀರಸಾತ್ಯಕಿ ಅವನನ್ನು ವಜ್ರಾಯುಧದಂಥ ಬಾಣಗಳಿಂದ ಗಾಯಗೊಳಿಸಿದ. ಆಗ ರಾಕ್ಷಸ ಭಯಂಕರವಾದ ಮಾಯೆಯನ್ನು ನಿರ್ಮಿಸಿದ.
ಅಸ್ತ್ರೇಣ ಮಾಯಾಮಪನುದ್ಯ ವೀರೋ
ವ್ಯದ್ರಾವಯದ್ ರಾಕ್ಷಸಂ ಸಾತ್ಯಕಿಸ್ತಮ್ |
ತಸ್ಮಿನ್ ಗತೇ ಯುಯುಧಾನೋ ರಥೇನ
ಯಯೌ ಭೀಷ್ಮಂ ಪಾರ್ಥಮನ್ವೇವ ಧನ್ವೀ ॥119॥
ವೀರಸಾತ್ಯಕಿ ಅಸ್ತ್ರದಿಂದ ಮಾಯೆಯನ್ನು ದೂರ ಮಾಡಿ ರಾಕ್ಷಸನನ್ನು ಓಡಿಸಿದ. ರಾಕ್ಷಸ ಓಡಿಹೋದಾಗ ಧನುರ್ಧಾರಿಯಾದ ಸಾತ್ಯಕಿ ಅರ್ಜುನನಿಗೆ ಸಹಾಯಕನಾಗಿ ರಥದಿಂದ ಭೀಷ್ಮರ ಬಳಿಗೆ ಹೋದ.
ದ್ರೋಣೋ ದ್ರೌಣಿರ್ಧಾರ್ತರಾಷ್ಟ್ರಶ್ಚ ರಾಜಾ

ಭೂರಿಶ್ರವಾ ಭಗದತ್ತಃ ಕೃಪಶ್ಚ |
ಶಲ್ಯೋ ಬಾಹ್ಲೀಕಃ ಕೃತವರ್ಮಾ ಸುಶರ್ಮಾ
ಸರ್ವಾಶ್ಚ ಸೇನಾ ವಾರಿತಾ ವಾಯುಜೇನ ॥120॥
ದ್ರೋಣ-ಅಶ್ವತ್ಥಾಮರು, ದುರ್ಯೋಧನ-ಭೂರಿಶ್ರವ, ಭಗದತ್ತ-ಕೃಪರು, ಶಲ್ಯ-ಬಾಹ್ಲೀಕ, ಕೃತವರ್ಮ-ಸುಶರ್ಮರನ್ನೂ ಎಲ್ಲ ಸೈನ್ಯಗಳನ್ನೂ ಭೀಮ ತಡೆದ.
ಸ ತಾನ್ ಮುಹುರ್ವಿರಥೀಕೃತ್ಯ ವೀರಃ
ಪ್ರಾಗ್ಜ್ಯೋತಿಷಂ ಸಗಜಂ ದ್ರಾವಯಿತ್ವಾ |
ನ್ಯವಾರಯತ್ ಫಲ್ಗುಣಂ ರೋದ್ಧುಕಾಮಂ
ಪಾರ್ಥಶ್ಚ ದೇವವ್ರತಮಾಸಸಾದ ॥121॥
ವೀರ ಭೀಮಸೇನ ಅವರನ್ನು ಪುನಃ ಪುನಃ ವಿರಥರನ್ನಾಗಿ ಮಾಡಿ ಓಡಿಸಿ, ಅರ್ಜುನನನ್ನು ತಡೆಯಲು ಬಯಸಿದ ಭಗದತ್ತನನ್ನೂ ಆನೆ ಸಹಿತವಾಗಿ ತಡೆದ, ಓಡಿಸಿದ. ಅದರಿಂದ ಅರ್ಜುನ ನಿರಾತಂಕವಾಗಿ ಭೀಷ್ಮರೊಡನೆ ಹೋರಾಡಿದ.
ಯುಧಿಷ್ಠಿರಂ ಭೀಷ್ಮಮಭಿಪ್ರಯಾಂತಂ
ಮಾದ್ರೀಸುತಾಭ್ಯಾಂ ಸಹಿತಂ ನೃವೀರಮ್ |
ನ್ಯವಾರಯತ್ ಶಕುನಿಃ ಸಾದಿನಾಂ ಚ
ಯುತೋಽಯುತೇನೈವ ವರಾಶ್ವಗೇನ ॥122॥
ನಕುಲ-ಸಹದೇವರ ಸಮೇತನಾಗಿ ಭೀಷ್ಮರ ಮೇಲೇರಿ ಹೋಗುತ್ತಿದ್ದ ವೀರ ಯುಧಿಷ್ಠಿರನನ್ನು ಹತ್ತು ಸಾವಿರ ಅಶ್ವಸೈನಿಕರಿಂದ ಯುಕ್ತನಾದ ಶಕುನಿ ತಡೆದ.
ತಾನ್ ಸಾದಿನೋಽಶ್ವಾಂಶ್ಚ ನಿಹತ್ಯ
ಸರ್ವಾನ್ ವಿಜಿತ್ಯ ತಂ ಶಕುನಿಂ ಪಾಂಡವಾಸ್ತೇ |
ಪ್ರಾಪುರ್ಭೀಷ್ಮಂ ದ್ರೌಪದೇಯಾಶ್ಚ ಸರ್ವೇ
ತಥಾ ವಿರಾಟದ್ರುಪದೌ ಕುಂತಿಭೋಜಃ ॥123॥
ಯುಧಿಷ್ಠಿರ, ನಕುಲ-ಸಹದೇವರು ಆ ಅಶ್ವಸೈನಿಕರನ್ನೂ ಕುದುರೆಗಳನ್ನೂ ಕೊಂದು ಶಕುನಿಯನ್ನೂ ಪರಾಭವಗೊಳಿಸಿ ಭೀಷ್ಮರ ಬಳಿಗೆ ಬಂದರು. ಹಾಗೇ ದ್ರೌಪದೀ ಪುತ್ರರು, ವಿರಾಟ-ದ್ರುಪದರು, ಕುಂತಿಭೋಜ ಎಲ್ಲರೂ ಬಂದರು.
ಧೃಷ್ಟದ್ಯುಮ್ನಂ ಭೀಷ್ಮಮಭಿಪ್ರಯಾಂತಂ
ನ್ಯವಾರಯತ್ ಸೈಂಧವಸ್ತಂ ಸ ಬಾಣೈಃ |
ಹತಾಶ್ವಸೂತಂ ಸಗಣಂ ದ್ರಾವಯಿತ್ವಾ
ಸಮಾಸದದ್ ಭೀಷ್ಮಮೇವಾಶು ವೀರಃ ॥124॥
ಭೀಷ್ಮರಿಗೆ ಎದುರಾಗಿ ಹೋಗುತ್ತಿದ್ದ ಧೃಷ್ಟದ್ಯುಮ್ನನನ್ನು ಜಯದ್ರಥ ತಡೆದ. ವೀರ ಧೃಷ್ಟದ್ಯುಮ್ನ ಬಾಣಗಳಿಂದ ಅವನ ಕುದುರೆಗಳನ್ನೂ ಸಾರಥಿಯನ್ನೂ ಕೊಂದು, ಅವರನ್ನು ಪರಿವಾರಸಮೇತವಾಗಿ ಅಟ್ಟಿ ಬೇಗನೆ ಭೀಷ್ಮರ ಬಳಿಗೆ ಬಂದ.
ಗುಪ್ತೋಽಥ ಪಾರ್ಥೇನ ರಣೇ ಶಿಖಂಡೀ
ಭೀಷ್ಮಂ ಸಮಾಸಾದ್ಯ ಶರೈರತಾಡಯತ್ |
ಭೀಷ್ಮಃ ಸ್ತ್ರೀತ್ವಂ ತಸ್ಯ ಜಾನನ್ನ ತಸ್ಮೈ
ಮುಮೋಚ ಬಾಣಾನ್ ಸ ತು ತಂ ತುತೋದ ॥125॥
ಯುದ್ಧದಲ್ಲಿ ಅರ್ಜುನನಿಂದ ರಕ್ಷಿತನಾದ ಶಿಖಂಡಿ ಭೀಷ್ಮರ ಎದುರಿಗೆ ಹೋಗಿ ಬಾಣಗಳಿಂದ ಹೊಡೆದ. ಆದರೆ ಹಿಂದೆ ಶಿಖಂಡಿ ಹೆಣ್ಣಾಗಿದ್ದುದನ್ನು ತಿಳಿದಿರುವ ಭೀಷ್ಮ ಅವನಿಗೆ ಪ್ರತಿಯಾಗಿ ಬಾಣಗಳನ್ನು ಎಸೆಯಲಿಲ್ಲ. ಅದರಿಂದ ಶಿಖಂಡಿ ಭೀಷ್ಮರನ್ನು ನಿರಾತಂಕವಾಗಿ ಪೀಡಿಸತೊಡಗಿದ.
ಶಿಖಂಡಿನಂ ವಾರಯಾಮಾಸ ಬಾಣೈಃ
ದುರ್ಮರ್ಷಣೋಽಮರ್ಷಣವಿಹ್ವಲೇಕ್ಷಣಃ |
ನಾತ್ಯೇತುಮೇನಮಶಕತ್ ಶಿಖಂಡೀ
ದುಃಶಾಸನಃ ಪಾರ್ಥಮವಾರಯತ್ ತದಾ ॥126॥
ದುರ್ಮರ್ಷಣ ಕೋಪದಿಂದ ಕಣ್ಣು ತಿರುಗಿಸುತ್ತ ಬಾಣಗಳಿಂದ ಶಿಖಂಡಿಯನ್ನು ತಡೆದ. ಅವನನ್ನು ದಾಟಿ ಹೋಗಲು ಶಿಖಂಡಿ ಶಕ್ತನಾಗಲಿಲ್ಲ. ಅರ್ಜುನನನ್ನೂ ದುಶ್ಶಾಸನ ತಡೆದ.
ಸ ಲೋಕವೀರೋಽಪಿ ದುರಾತ್ಮನಾಽಮುನಾ
ರುದ್ಧೋಽಶಕನ್ನೈನಮತೀತ್ಯ ಯಾತುಮ್ |
ಭೀಷ್ಮಂ ಪಾರ್ಥಃ ಸಾಯಕಾಶ್ಚಾಸ್ಯ ತಸ್ಮಿನ್
ಸಸಜ್ಜಿರೇ ಪರ್ವತೇಷ್ವಪ್ಯಸಕ್ತಾಃ ॥127॥
ದುರಾತ್ಮನಾದ ದುಶ್ಶಾಸನ ತಡೆದಾಗ ಅವನನ್ನು ದಾಟಿ ಭೀಷ್ಮರ ಬಳಿಗೆ ಹೋಗಲು ಲೋಕೈಕ ವೀರನಾದ ಅರ್ಜುನನೂ ಶಕ್ತನಾಗಲಿಲ್ಲ. ಪರ್ವತವನ್ನೂ ಭೇದಿಸಿಕೊಂಡು ಹೋಗಬಲ್ಲ ಅವನ ಬಾಣಗಳೂ ದುಶ್ಶಾಸನನ ಮೈಗೆ ತಾಗಿ ನಿಂತನೇ ಹೊರತು ಭೇದಿಸಲಿಲ್ಲ.
ಅಮರ್ಷಯುಕ್ತೋ ಚಿರಮೇವ ವೀರೌ

ಅಯುಧ್ಯತಾಮರ್ಜುನಧಾರ್ತರಾಷ್ಟ್ರೌ ।
ಸಮಂ ತದಾಸೀನ್ಮಹದದ್ಭುತಂ ಚ
ದಿವೌಕಸಾಂ ಪಶ್ಯತಾಂ ಭೂಭೃತಾಂ ಚ ॥128॥
ವೀರರಾದ ಅರ್ಜುನ-ದುಶ್ಶಾಸನರು ಕೋಪಯುಕ್ತರಾಗಿ ದೀರ್ಘಕಾಲ ಯುದ್ಧ ಮಾಡಿದರು. ಯುದ್ಧ ಸಮವಾಗಿಯೇ ಇದ್ದಿತು. ನೋಡುವ ದೇವತೆಗಳಿಗೂ ರಾಜರಿಗೂ ಅದು ಮಹಾ ಅದ್ಭುತವೆನಿಸಿತು.
ತದಾ ವಿರಾಟದ್ರುಪದೌ ಕುಂತಿಭೋಜಂ
ಕೃಷ್ಣಾಸುತಾನ್ ಕೇಕಯಾಂಶ್ಚೇಕಿತಾನಮ್ ।
ಭೂರಿಃ ಶಲಃ ಸೋಮದತ್ತೋ ವಿಕರ್ಣಃ
ಸಕೇಕಯಾ ವಾರಯಾಮಾಸುರುಚ್ಚೈಃ ॥129॥
ಆಗಲೇ ವಿರಾಟ ದ್ರುಪದ ಕುಂತಿಭೋಜ ದ್ರೌಪದಿ ಪುತ್ರರು ಕೈಕಯರು ಚೇಕಿತಾನ ಇವರನ್ನು ಭೂರಿ ಶಲ ಸೋಮದತ್ತ ವಿಕರ್ಣ ಕೈಕಯರು ಬಲವಾಗಿ ತಡೆದರು.
ಜಿತ್ವೈವ ತಾಂಸ್ತೇಽಭಿಯಯುಶ್ಚ ಭೀಷ್ಮಂ
ತತೋಽರ್ಜುನೋಽತೀತ್ಯ ದುಃಶಾಸನಂ ಚ ।
ಭೀಷ್ಮಂ ಶರೈರಾರ್ಧದರಿಪ್ರಮಾಥಿಭಿಃ
ಶಿಖಂಡಿನಂ ಧಾರ್ತರಾಷ್ಟ್ರಾದ್ ವಿಮುಚ್ಯ ॥130॥
ಅವರನ್ನು ಪರಾಭವಗೊಳಿಸಿ ವಿರಾಟ ಮುಂತಾದವರು ಭೀಷ್ಮರ ಬಳಿಗೆ ಬಂದರು. ಆಗಲೇ ಅರ್ಜುನನೂ ದುಶ್ಶಾಸನನನ್ನು ದಾಟಿ ಬಂದು, ಶಿಖಂಡಿಯನ್ನು ದುರ್ಮರ್ಷಣನಿಂದ ಬಿಡಿಸಿ ಶತ್ರುನಾಶಕವಾದ ಬಾಣಗಳಿಂದ ಭೀಷ್ಮರನ್ನು ಪೀಡಿಸಿದ.
ಸ ತೈಃ ಸಮಸ್ತೈರ್ಬಹುಶಸ್ತ್ರಪೂಗೈಃ
ಭೃಶಂ ಮರ್ಮಸ್ವರ್ದಿತಶ್ಚಾಪಮುಕ್ತೈಃ ।
ಶರೈಃ ಸಮಸ್ತಾನ್ ವಿರಥಾಂಶ್ಚಕಾರ
ಶೈನೇಯಪಾಂಚಾಲಯುಧಿಷ್ಠಿರಾದ್ಯಾನ್ ॥131॥
ಯುಧಿಷ್ಠಿರಾದಿ ಸಮಸ್ತ ವೀರರ ನಾನಾ ಬಗೆಯ ಆಯುಧ ಸಮೂಹಗಳಿಂದ ಭೀಷ್ಮರ ಮರ್ಮಸ್ಥಳಗಳಲ್ಲಿ ಪೀಡಿತನಾದರೂ ಬಿಲ್ಲಿನಿಂದ ಬಾಣಗಳನ್ನೆಸೆದು ಸಾತ್ಯಕಿ ದ್ರುಪದ ಯುಧಿಷ್ಠಿರ ಮುಂತಾದ ಎಲ್ಲರನ್ನೂ ವಿರಥರನ್ನಾಗಿ ಮಾಡಿದ.
ಸ ಚೇದಿಪಾಂಚಾಲಕರೂಷಮುಖ್ಯಾನ್
ರಥೋತ್ತಮಾನ್ ಪಂಚವಿಂಶತ್ ಸಹಸ್ರಾನ್ ।
ಸಂಪ್ರೇಷಯಾಮಾಸ ಯಮಾಯ ಬಾಣೈಃ
ಯುಗಾಂತಕಾಲಾಗ್ನಿರಿವ ಪ್ರವೃದ್ಧಃ ॥132॥
ಭೀಷ್ಮ ಧಗಧಗಿಸುವ ಪ್ರಳಯಕಾಲದ ಅಗ್ನಿಯಂತಾಗಿ ಚೇದಿ, ಪಾಂಚಾಲ ಕರೂಷರಲ್ಲಿ ಮುಖ್ಯರಾದ ಇಪ್ಪತ್ತೈದು ಸಾವಿರ ಶ್ರೇಷ್ಠ ರಥಿಕರನ್ನು ಬಾಣಗಳಿಂದ ಯಮನಿಗೆ ಕಳಿಸಿಕೊಟ್ಟ.
ನಿರೀಕ್ಷ್ಯ ತಂ ಸೂರ್ಯಮಿವಾತಪಂತಂ
ಸಂಚೋದಿತೋ ವಾಸುದೇವೇನ ಪಾರ್ಥಃ ।
ಚಿಚ್ಛೇದ ತತ್ಕಾರ್ಮುಕಂ ಲೋಕವೀರೋ
ರಣೇಽರ್ಧಚಂದ್ರೇಣ ಸ ಚಾನ್ಯದಾದದೇ ॥133॥
ಭೀಷ್ಮರು ರಣರಂಗದಲ್ಲಿ ಸೂರ್ಯನಂತೆ ಉರಿಯುತ್ತಿದ್ದುದನ್ನು ಕಂಡು ಶ್ರೀಕೃಷ್ಣನಿಂದ ಪ್ರೇರಿತನಾದ, ಲೋಕವೀರ ಅರ್ಜುನ ಅವನ ಬಿಲ್ಲನ್ನು ಒಂದು ಅರ್ಧಚಂದ್ರ ಬಾಣದಿಂದ ಕತ್ತರಿಸಿದ. ಒಡನೆ ಅವನು ಇನ್ನೊಂದು ಬಿಲ್ಲನೆತ್ತಿಕೊಂಡ.
ಚಿಚ್ಛೇದ ತಚ್ಚೈವಮಷ್ಟೌ ಧನೂಂಷಿ
ಶಕ್ತಿಂ ಚ ಚರ್ಮಾಸಿವರಂ ಪರಾಣಿ ಚ ।
ಧನೂಂಷಿ ದತ್ತಾನಿ ನೃಭಿರ್ನೃಪಸ್ಯ
ಸರ್ವಾಣಿ ಚಿಚ್ಛೇದ ಸ ಪಾಕಶಾಸನಿಃ ॥134॥
ಆ ಬಿಲ್ಲನ್ನೂ ಅರ್ಜುನ ಕತ್ತರಿಸಿದ. ಹೀಗೇ ಎಂಟು ಬಿಲ್ಲುಗಳನ್ನೂ ಶಕ್ತ್ಯಾಯುಧವನ್ನೂ ಶ್ರೇಷ್ಠವಾದ ಖಡ್ಗ-ಚರ್ಮಗಳನ್ನೂ ಕತ್ತರಿಸಿದ. ದುರ್ಯೋಧನನ ಭೃತ್ಯರು ಕೊಟ್ಟ ಬೇರೆ ಎಲ್ಲ ಬಿಲ್ಲುಗಳನ್ನೂ ಕತ್ತರಿಸಿದ.
ತತಃ ಶರೈಃ ಸೂರ್ಯಕರಪ್ರಕಾಶೈಃ
ವಿವ್ಯಾಧ ಸರ್ವೇ ಚ ಯುಧಿಷ್ಠಿರಾದ್ಯಾಃ ।
ತೈರರ್ದಿತೋ ನ್ಯಪತದ್ ಭೂತಳೇ ಸಃ
ಪ್ರಾಣಾನ್ ದಧಾರಾಪಿ ತಥೋತ್ತರಾಯಣಾತ್ ॥135॥
ಬಳಿಕ ಸೂರ್ಯಕಿರಣಗಳಂತೆ ಹೊಳೆವ ಬಾಣಗಳಿಂದ ಅರ್ಜುನ ಭೀಷ್ಮರನ್ನು ಹೊಡೆದ. ಯುಧಿಷ್ಠಿರ ಮುಂತಾದವರೆಲ್ಲರೂ ಹೊಡೆದರು. ಅವರಿಂದ ಪೀಡಿತನಾದ ಭೀಷ್ಮರು ನೆಲದ ಮೇಲೆ ಬಿದ್ದರು. ಉತ್ತರಾಯಣದವರೆಗೆ ಪ್ರಾಣಧಾರಣ ಮಾಡಿದ.
ನಿಪಾತಿತೇಽಸ್ಮಿನ್ ಮಾರುತಿರ್ದ್ರೋಣಮುಖ್ಯಾನ್
ವಿದ್ರಾಪ್ಯ ತತ್ರಾಗಮದಾಶು ತೇಽಪಿ ।
ತದಾಯುಧಾನಿ ಪ್ರಣಿಧಾಯ ವೀರಾಃ

ಪಾರ್ಥಾಃ ಪರೇ ಚೈನಮುಪಾಸದನ್ ಸ್ಮ ॥136॥
ಭೀಷ್ಮರು ಪತನ ಹೊಂದಿದಾಗ ಭೀಮಸೇನ ದ್ರೋಣಾದಿಗಳನ್ನು ಓಡಿಸಿ ಭೀಷ್ಮರು ಬಿದ್ದ ಸ್ಥಳಕ್ಕೆ ಬೇಗನೆ ಬಂದ. ಆಯುಧಗಳನ್ನು ಕೆಳಗಿಟ್ಟು ಅವರೂ ಅಲ್ಲಿಗೆ ಬಂದರು. ಪಾಂಡವರೂ ಕೌರವರೂ ಎಲ್ಲ ವೀರರೂ ಭೀಷ್ಮರ ಬಳಿಗೆ ಬಂದು ಸೇರಿದರು.
ಪ್ರಣಮ್ಯಂ ತಂ ತದ್ವಚನಾದ್ ಸಮೀಯುಃ
ತಸ್ಮಿನ್ ದಿನೇ ಶಿಬಿರಾಣ್ಯೇವ ಸರ್ವೇ |
ಪರೇ ದಿನೇ ಸರ್ವ ಏವೋಪತಸ್ಥುಃ
ಭೀಷ್ಮಂ ಯದೂನಾಂಪತಿನಾ ಸಹೈವ ॥137॥
ಎಲ್ಲರೂ ಭೀಷ್ಮರನ್ನು ನಮಸ್ಕರಿಸಿ, ಅವರ ಮಾತಿನಿಂದ ಆ ದಿನದಲ್ಲಿ ಶಿಬಿರಕ್ಕೆ ಹಿಂದಿರುಗಿದರು. ಮರುದಿನ ಶ್ರೀಕೃಷ್ಣನೊಂದಿಗೆ ಎಲ್ಲರೂ ಭೀಷ್ಮರ ಬಳಿಗೆ ಬಂದರು.
ಸ ಪೂರ್ವದಿವಸೇ ಪಾರ್ಥದತ್ತಬಾಣೋಪಬರ್ಹಣಃ |
ತದಾऽಪಿ ತೃಟ್‌ಪರೀತಾತ್ಮಾ ಯೋಗ್ಯಂ ಪೇಯಮಯಾಚತ ॥138॥
ಭೀಷ್ಮರು ಹಿಂದಿನ ದಿನ ಅರ್ಜುನ ನೀಡಿದ ಬಾಣಗಳ ತಲೆದಿಂಬನ್ನು ಸ್ವೀಕರಿಸಿದ್ದರು. ಈಗಲೂ ತೃಷೆಯಿಂದ ಪೀಡಿತರಾಗಿ ಯೋಗ್ಯವಾದ ಪಾನೀಯವನ್ನು ಬೇಡಿದರು.
ಧಾರ್ತರಾಷ್ಟ್ರೈರವಿಜ್ಞಾತಂ ತದಭಿಜ್ಞಾಯ ವಾಸವಿಃ |
ವಾರುಣಾಸ್ತ್ರೇಣ ಭಿತ್ವಾ ಚ ಭೂಮಿಂ ವಾರಿ ಸುಗಂಧಿ ಚ |
ಊರ್ಧ್ವಧಾರಮಧಾದಾಸ್ಯೇ ತರ್ಪಿತೋऽನೇನ ಸೋऽವದತ್ ॥139॥
ಭೀಷ್ಮರಿಗೆ ಯೋಗ್ಯವಾದ ನೀರು ಯಾವುದೆಂದು ಕೌರವರಿಗೆ ತಿಳಿಯಲಿಲ್ಲ. ಅರ್ಜುನ ತಿಳಿದು ವಾರುಣಾಸ್ತ್ರದಿಂದ ಭೂಮಿಯನ್ನು ಭೇದಿಸಿ ಮೇಲ್ಮುಖ ಧಾರೆಯಾಗಿ ಬಂದ ಸುಗಂಧಯುಕ್ತವಾದ ನೀರನ್ನು ಮೇಲಿಂದ ಧಾರಾಕಾರವಾಗಿ ಭೀಷ್ಮರ ಬಾಯಿಯಲ್ಲಿ ಬೀಳಿಸಿದ. ಅದರಿಂದ ತೃಪ್ತರಾದ ಭೀಷ್ಮರು ನುಡಿದರು.
ಯಾದೃಶ್ಯಸ್ತ್ರಜ್ಞತಾ ಪಾರ್ಥೇ ದೃಷ್ಟಾऽತ್ರ ಕುರುನಂದನಾಃ |
ಯಾದೃಗ್ ಬಾಹುಬಲಂ ಭೀಮೇ ಸಂಯುಗೇಷು ಪುನಃ ಪುನಃ ॥140॥
ಯಾದೃಶಂ ಚೈವ ಮಾಹಾತ್ಮ್ಯಮನಂತಮಜರಂ ಹರೇಃ |
ವಿಜ್ಞಾತಂ ಸರ್ವಲೋಕಸ್ಯ ಸಭಾಯಾಂ ದೃಷ್ಟಮೇವ ಚ ॥141॥
ಕೌರವರೇ, ಅರ್ಜುನನಲ್ಲಿ ಎಂಥ ಅಸ್ತ್ರಜ್ಞಾನವಿದೆ ಎಂಬುದನ್ನು ನೀವು ಈಗ ಕಂಡಿರಿ. ಯುದ್ಧಗಳಲ್ಲಿ ಭೀಮನ ಬಾಹುಬಲ ಎಂಥದೆಂಬುದನ್ನೂ ಹೆಜ್ಜೆಹೆಜ್ಜೆಗೂ ಕಂಡಿರುವಿರಿ. ಶ್ರೀಕೃಷ್ಣನ ಅಮಿತವಾದ ಮುಪ್ಪಿಲ್ಲದ ಮಾಹಾತ್ಮ್ಯವೂ ಎಂಥದೆಂಬುದನ್ನು ತಿಳಿದಿರುವಿರಿ. ಸಭೆಯಲ್ಲಿ ಎಲ್ಲ ಜನರ ಮಧ್ಯದಲ್ಲಿ ಅದನ್ನು ಪ್ರತ್ಯಕ್ಷವಾಗಿಯೂ ಕಂಡಿರುವಿರಿ.
ಉಪಾರಮತ ತದ್ ಯುದ್ಧಂ ಸುಖಿನಃ ಸಂತು ಭೂಮಿಪಾಃ |
ಯಥೋಚಿತವಿಭಕ್ತಾಂ ಚ ಭುಙ್ಗ್ಧ್ವಂ ಭೂಮಾಃ ಸದಾ ಭುವಮ್ ॥
ಅದರಿಂದ ರಾಜರುಗಳೇ, ಇನ್ನಾದರೂ ಈ ಯುದ್ಧವನ್ನು ನಿಲ್ಲಿಸಿರಿ. ಸುಖಿಗಳಾಗಿರಿ. ನೆಲವನ್ನು ಯಥೋಚಿತವಾಗಿ ಭಾಗಮಾಡಿ, ನಿಮ್ಮ ಪಾಲಿಗೆ ಬಂದುದನ್ನು ನೀವು ಅನುಭವಿಸಿರಿ ಎಂದರು ಭೀಷ್ಮರು.
ಇತ್ಯುಕ್ತಃ ಪ್ರಯಯೌ ತೂಷ್ಣೀಂ ಧಾರ್ತರಾಷ್ಟ್ರಃ ಸ್ವಕಂ ಗೃಹಮ್ ॥143॥
ಭೀಷ್ಮರು ಹೀಗೆ ಹೇಳಿದಾಗ ದುರ್ಯೋಧನ ಏನೂ ಮಾತನಾಡದೆ ತನ್ನ ಮನೆಗೆ ಹೊರಟು ಹೋದ.
ವ್ಯಾಸದತ್ತೋರುವಿಜ್ಞಾನಾತ್ ಸಂಜಯಾದಖಿಲಂ ಪಿತಾ |
ಶ್ರುತ್ವಾ ತದಾ ಪರ್ಯತಪ್ಯತ್ ಪಾಂಡವಾಃ ಕೃಷ್ಣದೇವತಾಃ |
ಮುಮುದುಃ ಶಿಬಿರಂ ಪ್ರಾಪ್ಯ ಸರ್ವೇ ಕೃಷ್ಣಾನು ಮೋದಿತಾಃ ॥144॥
ವೇದವ್ಯಾಸರು ನೀಡಿದ ದಿವ್ಯಜ್ಞಾನಶಕ್ತಿ ಉಳ್ಳ ಸಂಜಯನಿಂದ ಈ ಎಲ್ಲ ದೃಷ್ಟಾಂತವನ್ನೂ ಕೇಳಿ ತಂದೆಯಾದ ಧೃತರಾಷ್ಟ್ರ ಪರಿತಪಿಸಿದ. ಕೃಷ್ಣನನ್ನೇ ದೇವತೆ ಎಂದು ಬಗೆದು, ಅವನಿಂದಲೇ ಮಾರ್ಗದರ್ಶನ ಪಡೆದ ಪಾಂಡವರು ಎಲ್ಲರೂ ಶಿಬಿರಕ್ಕೆ ಹೋಗಿ ಆನಂದಪಟ್ಟರು.
* * * * *
ನೂರ ಐದನೆಯ ಅಧ್ಯಾಯ
ಹತ್ತನೆಯ ದಿವಸದ ಯುದ್ಧದ ಪ್ರಾರಂಭ. ಭೀಷ್ಮರ ಪ್ರತಾಪ. ಶಿಖಂಡಿಯನ್ನು ಮುಂದೆ ಮಾಡಿಕೊಂಡು ರಣರಂಗದಲ್ಲಿ ಅರ್ಜುನನ ಪ್ರವೇಶ.
ಧೃತರಾಷ್ಟ್ರಃ
ಕಥಂ ಶಿಖಂಡೀ ಗಾಂಗೇಯಮಭ್ಯವರ್ತತ ಸಂಯುಗೇ |
ಪಾಂಡವಾಶ್ಚ ತಥಾ ಭೀಷ್ಮಂ ತನ್ಮಮಾಚಕ್ಷ್ವ ಸಂಜಯ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಯುದ್ಧದಲ್ಲಿ ಶಿಖಂಡಿಯು ಹೇಗೆ ಭೀಷ್ಮರ ಮೇಲೆ ಎರಗಿದನು? ಪಾಂಡವರೂ ಸಹ ಭೀಷ್ಮರ ಜೊತೆಯಲ್ಲಿ ಹೇಗೆ ಹೋರಾಡಿದರು ಎಂಬುದನ್ನು ನನಗೆ ಹೇಳು.
ಸಂಜಯಃ
ತತಃ ಪ್ರಭಾತೇ ವಿಮಲೇ ಸೂರ್ಯಸ್ಯೋದಯನಂ ಪ್ರತಿ |
ವಾದ್ಯಮಾನಾಸು ಭೇರೀಷು ಮೃದಂಗೇಷ್ವಾನಕೇಷು ಚ ॥2॥

ಧ್ಮಾಯತ್ಸು ದಧಿವರ್ಣೇಷು ಜಲಜೇಷು ಸಮಂತತಃ |
ಶಿಖಂಡಿನಂ ಪುರಸ್ಕೃತ್ಯ ನಿರ್ಯಾತಾಃ ಪಾಂಡವಾ ಯುಧಿ ॥3॥
ಸಂಜಯ ಸೂರ್ಯೋದಯದ ವೇಳೆಗೆ ಶುಭ್ರವಾದ ಪ್ರಾತಃಕಾಲವು ಉಂಟಾಗುತ್ತಿರಲು ಭೇರಿಗಳು, ಮೃದಂಗಗಳು ಮತ್ತು ಆನಕಗಳು ಮೊಳಗುತ್ತಿರಲು ಮೊಸರಿನ ಬಣ್ಣದ ಶಂಖಗಳು ಎಲ್ಲ ಕಡೆಗಳಲ್ಲಿಯೂ ಊದಲ್ಪಡುತ್ತಿರಲು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಪಾಂಡವರು ಯುದ್ಧಕ್ಕೆ ಹೊರಟರು.
ಕೃತ್ವಾ ವ್ಯೂಹಂ ಮಹಾರಾಜ ಸರ್ವಶತ್ರುನಿಬರ್ಹಣಮ್ |
ಶಿಖಂಡೀ ಸರ್ವಸೈನ್ಯಾನಾಮಗ್ರ ಆಸೀದ್ ವಿಶಾಂಪತೇ ॥4॥
ಎಲೈ ಮಹಾರಾಜನೇ, ಸರ್ವಶತ್ರುಸಂಹಾರಕವಾದ ವ್ಯೂಹವನ್ನು ರಚಿಸಿ ಶಿಖಂಡಿಯು ಎಲ್ಲಾ ಸೈನ್ಯಗಳ ಮುಂಭಾಗದಲ್ಲಿ ಇದ್ದನು.
ಚಕ್ರರಕ್ಷೌ ತತಸ್ತಸ್ಯ ಭೀಮಸೇನಧನಂಜಯೌ |
ಪೃಷ್ಠತೋ ದ್ರೌಪದೇಯಾಶ್ಚ ಸೌಭದ್ರಶ್ಚೈವ ವೀರ್ಯವಾನ್ ॥5॥
ಭೀಮಸೇನ ಮತ್ತು ಅರ್ಜುನರು ಅವನ ರಥದ ಎರಡು ಪಾರ್ಶ್ವಗಳ ರಕ್ಷಕರಾಗಿದ್ದರು. ಅವನ ಹಿಂಭಾಗದಲ್ಲಿ ದ್ರೌಪದಿಯ ಐವರು ಮಕ್ಕಳು ಮತ್ತು ಪರಾಕ್ರಮಶಾಲಿಯಾದ ಅಭಿಮನ್ಯುವು ಇದ್ದರು.
ಸಾತ್ಯಕಿಶ್ಚೇಕಿತಾನಶ್ಚ ತೇಷಾಂ ಗೋಪ್ತಾ ಮಹಾರಥಃ |
ಧೃಷ್ಟದ್ಯುಮ್ನಸ್ತತಃ ಪಶ್ಚಾತ್ ಪಾಂಚಾಲ್ಯೈರಭಿರಕ್ಷಿತಃ ॥6॥
ಮಹಾರಥರಾದ ಸಾತ್ಯಕಿ ಮತ್ತು ಚೇಕಿತಾನರು ಅವರಿಗೆ ರಕ್ಷಕರಾಗಿದ್ದರು. ಅವರ ಹಿಂದೆ ಪಾಂಚಾಲರಿಂದ ರಕ್ಷಿತನಾದ ಧೃಷ್ಟದ್ಯುಮ್ನನಿದ್ದನು.
ತತೋ ಯುಧಿಷ್ಠಿರೋ ರಾಜಾ ಯಮಾಭ್ಯಾಂ ಸಹಿತಃ ಪ್ರಭುಃ |
ಪ್ರಯಯೌ ಸಿಂಹನಾದೇನ ನಾದಯನ್ ಭರತರ್ಷಭ ॥7॥
ಎಲೈ ಭರತಶ್ರೇಷ್ಠನೇ, ಅವರ ಹಿಂದೆ ನಕುಲ-ಸಹದೇವರಿಂದ ಸಹಿತನಾದ, ಪ್ರಭುವಾದ ಯುಧಿಷ್ಠಿರ ರಾಜನು ಸಿಂಹನಾದವನ್ನು ಮಾಡುತ್ತಾ ಹೊರಟನು.
ವಿರಾಟಸ್ತು ತತಃ ಪಶ್ಚಾತ್ ಸ್ವೇನ ಸೈನ್ಯೇನ ಸಂವೃತಃ |
ದ್ರುಪದಶ್ಚ ಮಹಾರಾಜ ತತಃ ಪಶ್ಚಾದುಪಾದ್ರವತ್ ॥8॥
ಎಲೈ ಮಹಾರಾಜನೇ, ಅವನ ಹಿಂದೆ ತನ್ನ ಸೈನ್ಯದಿಂದ ಪರಿವೃತನಾದ ವಿರಾಟನೂ, ಅವನ ಹಿಂದೆ ದ್ರುಪದನೂ ಹೊರಟರು.
ಕೇಕಯಾ ಭ್ರಾತರಃ ಪಂಚ ಧೃಷ್ಟಕೇತುಶ್ಚ ವೀರ್ಯವಾನ್ |
ಜಘನಂ ಪಾಲಯಾಮಾಸ ಪಾಂಡುಸೈನ್ಯಸ್ಯ ಭಾರತ ॥9॥
ಎಲೈ ಭಾರತನೇ, ಕೇಕಯದೇಶದ ಐವರು ಸಹೋದರರು ಮತ್ತು ಪರಾಕ್ರಮಶಾಲಿಯಾದ ಧೃಷ್ಟಕೇತು ಪಾಂಡವ ಸೈನ್ಯದ ಹಿಂಭಾಗವನ್ನು ರಕ್ಷಿಸಿದರು.
ಏವಂ ವ್ಯೂಹ್ಯ ಮಹತ್ಸೈನ್ಯಂ ಪಾಂಡವಾಸ್ತವ ವಾಹಿನೀಮ್ |
ಅಭ್ಯದ್ರವಂತ ಸಂಗ್ರಾಮೇ ತ್ಯಕ್ತ್ವಾ ಜೀವಿತಮಾತ್ಮನಃ ॥10॥
ಹೀಗೆ ಪಾಂಡವರು ತಮ್ಮ ದೊಡ್ಡ ಸೈನ್ಯವನ್ನು ವ್ಯೂಹವಾಗಿ ರಚಿಸಿ ಯುದ್ಧದಲ್ಲಿ ಪ್ರಾಣದ ಆಸೆಯನ್ನು ತೊರೆದು ನಿನ್ನ ಸೈನ್ಯದ ಕಡೆಗೆ ಮುನ್ನುಗ್ಗಿದರು.
ತಥೈವ ಕುರವೋ ರಾಜನ್ ಭೀಷ್ಮಂ ಕೃತ್ವಾ ಮಹಾಬಲಮ್ |
ಅಗ್ರತಃ ಸರ್ವಸೈನ್ಯಾನಾಂ ಪ್ರಯಯುಃ ಪಾಂಡವಾನ್ ಪ್ರತಿ ॥11॥
ಎಲೈ ರಾಜನೇ, ಹಾಗೆಯೇ ಕುರುಗಳೂ ಸಹ ಮಹಾಬಲರಾದ ಭೀಷ್ಮರನ್ನು ಎಲ್ಲ ಸೈನ್ಯಗಳ ಮುಂಭಾಗದಲ್ಲಿಟ್ಟುಕೊಂಡು ಪಾಂಡವರ ಕಡೆಗೆ ಹೊರಟರು.
ಪುತ್ರೈಸ್ತವ ದುರಾಧರ್ಷೈ ರಕ್ಷಿತಃ ಸುಮಹಾಬಲೈಃ |
ತತೋ ದ್ರೋಣೋ ಮಹೇಷ್ವಾಸಃ ಪುತ್ರಶ್ಚಾಸ್ಯ ಮಹಾರಥಃ ॥12॥
ಅವರ ಹಿಂದೆ ನಿನ್ನ ಮಹಾಬಲಿಷ್ಠರಾದ, ಪುತ್ರರಿಂದ ರಕ್ಷಿತರಾದ, ಮಹಾಧನುರ್ಧಾರಿಗಳಾದ ದ್ರೋಣರೂ ಮತ್ತು ಅವರ ಪುತ್ರರಾದ ಅಶ್ವತ್ಥಾಮರೂ ಇದ್ದರು.
ಭಗದತ್ತಸ್ತತಃ ಪಶ್ಚಾದ್ ಗಜಾನೀಕೇನ ಸಂವೃತಃ |
ಕೃಪಶ್ಚ ಕೃತವರ್ಮಾ ಚ ಭಗದತ್ತಮನುವ್ರತೌ ॥13॥
ಅವರ ಹಿಂದೆ ತನ್ನ ಗಜಸೇನೆಯಿಂದ ಪರಿವೃತನಾದ ಭಗದತ್ತನೂ ಮತ್ತು ಭಗದತ್ತನ ಹಿಂದೆ ಕೃಪ ಮತ್ತು ಕೃತವರ್ಮರೂ ಇದ್ದರು.
ಕಾಂಬೋಜರಾಜೋ ಬಲವಾಂಸ್ತತಃ ಪಶ್ಚಾತ್ ಸುದಕ್ಷಿಣಃ |
ಮಾಗಧಶ್ಚ ಜಯತ್ಸೇನಃ ಸೌಬಲಶ್ಚ ಬೃಹದ್ಬಲಃ ॥14॥
ಅವರ ಹಿಂದೆ ಕಾಂಬೋಜರಾಜ, ಬಲಿಷ್ಠನಾದ ಸುದಕ್ಷಿಣ, ಮಗಧ ದೇಶದ ಜಯತ್ಸೇನ ಮತ್ತು ಸೌಬಲದೇಶದ ಬೃಹದ್ಬಲರಿದ್ದರು.
ತಥೇತರೇ ಮಹೇಷ್ವಾಸಾಃ ಸುಶರ್ಮಪ್ರಮುಖಾ ನೃಪಾಃ |
ಜಘನಂ ಪಾಲಯಾಮಾಸುಸ್ತವ ಸೈನ್ಯಸ್ಯ ಭಾರತ ॥15॥
ಎಲೈ ಭಾರತನೇ, ಹಾಗೆಯೇ ಸುಶರ್ಮ ಮೊದಲಾದ ಮಹಾಧನುರ್ಧಾರಿಗಳಾದ ರಾಜರು ನಿನ್ನ ಸೈನ್ಯದ ಹಿಂಭಾಗವನ್ನು ರಕ್ಷಿಸಿದರು.
ದಿವಸೇ ದಿವಸೇ ಪ್ರಾಪ್ತೇ ಭೀಷ್ಮಃ ಶಾಂತನವೋ ಯುಧಿ |
ಆಸುರಾನಕರೋದ್ ವ್ಯೂಹಾನ್ ಪೈಶಾಚಾನಥ ರಾಕ್ಷಸಾನ್ ॥16॥

ದಿವಸಗಳು ಕಳೆದಂತೆ ಕಳೆದಂತೆ ಶಂತನುಪುತ್ರರಾದ ಭೀಷ್ಮರು ಯುದ್ಧದಲ್ಲಿ ಅಸುರವ್ಯೂಹಗಳನ್ನೂ, ಪಿಶಾಚವ್ಯೂಹಗಳನ್ನೂ ಮತ್ತು ರಾಕ್ಷಸ ವ್ಯೂಹಗಳನ್ನೂ ರಚಿಸಿದರು.
ತತಃ ಪ್ರವವೃತೇ ಯುದ್ಧಂ ತವ ತೇಷಾಂ ಚ ಭಾರತ |
ಅನ್ಯೋನ್ಯಂ ನಿಘ್ನತಾಂ ರಾಜನ್ ಯಮರಾಷ್ಟ್ರವಿವರ್ಧನಮ್ ॥17॥
ಎಲೈ ಭಾರತನೇ, ರಾಜನೇ, ಅನಂತರ ನಿನ್ನ ಸೈನ್ಯಕ್ಕೂ ಅವರಿಗೂ ಪರಸ್ಪರವಾಗಿ ಸಂಹಾರ ಮಾಡುವ ಯಮರಾಷ್ಟ್ರವನ್ನು ವರ್ಧಿಸುವ ಯುದ್ಧವು ಪ್ರವೃತ್ತವಾಯಿತು.
ಅರ್ಜುನಪ್ರಮುಖಾಃ ಪಾರ್ಥಾಃ ಪುರಸ್ಕೃತ್ಯ ಶಿಖಂಡಿನಮ್ |
ಭೀಷ್ಮಂ ಯುದ್ಧೇಽಭ್ಯವರ್ತಂತ ಕಿರಂತೋ ವಿವಿಧಾನ್ ಶರಾನ್ ॥18॥
ಅರ್ಜುನ ಮೊದಲಾದ ಪಾಂಡವರು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಅನೇಕ ವಿಧವಾದ ಬಾಣಗಳನ್ನು ಪ್ರಯೋಗಿಸುತ್ತಾ ಯುದ್ಧದಲ್ಲಿ ಭೀಷ್ಮರ ಕಡೆಗೆ ನುಗ್ಗಿದರು.
ತತ್ರ ಭಾರತ ಭೀಮೇನ ಪೀಡಿತಾಸ್ತಾವಕಾಃ ಶರೈಃ |
ರುಧಿರೌಘಪರಿಕ್ಲಿನ್ನಾಃ ಪರಲೋಕಂ ಯಯುಸ್ತದಾ ॥19॥
ಎಲೈ ಭಾರತನೇ, ಆಗ ಭೀಮಸೇನನ ಬಾಣಗಳಿಂದ ಪೀಡಿತರಾದ ನಿನ್ನ ಸೈನಿಕರು ರಕ್ತಸಮೂಹದಿಂದ ಒದ್ದೆಯಾಗಿ ಪರಲೋಕವನ್ನು ಹೊಂದಿದರು.
ನಕುಲಃ ಸಹದೇವಶ್ಚ ಸಾತ್ಯಕಿಶ್ಚ ಮಹಾರಥಃ |
ತವ ಸೈನ್ಯಂ ಸಮಾಸಾದ್ಯ ಪೀಡಯಾಮಾಸುರೋಜಸಾ ॥20॥
ಮಹಾರಥರಾದ ನಕುಲ-ಸಹದೇವ ಮತ್ತು ಸಾತ್ಯಕಿ ಇವರು ನಿನ್ನ ಸೈನ್ಯವನ್ನು ತಲುಪಿ ತಮ್ಮ ಸಾಮರ್ಥ್ಯದಿಂದ ಪೀಡಿಸಿದರು.
ತೇ ವಧ್ಯಮಾನಾಃ ಸಮರೇ ತಾವಕಾ ಭರತರ್ಷಭ |
ನಾಶಕ್ನುವನ್ ವಾರಯಿತುಂ ಪಾಂಡವಾನಾಂ ಮಹದ್ಬಲಮ್ ॥21॥
ಎಲೈ ಭರತಶ್ರೇಷ್ಠನೇ, ಅವರಿಂದ ಯುದ್ಧದಲ್ಲಿ ವಧಿಸಲ್ಪಡುತ್ತಿದ್ದ ನಿನ್ನವರು ಪಾಂಡವರ ದೊಡ್ಡ ಸೈನ್ಯವನ್ನು ತಡೆಯಲು ಶಕ್ತರಾಗಲಿಲ್ಲ.
ತತಸ್ತು ತಾವಕಂ ಸೈನ್ಯಂ ವಧ್ಯಮಾನಂ ಸಮಂತತಃ |
ಸಂಪ್ರಾದ್ರವದ್ ದಿಶೋ ರಾಜನ್ ಕಾಲ್ಯಮಾನಂ ಮಹಾರಥೈಃ ॥22॥
ಆಗ ಎಲೈ ರಾಜನೇ, ಪಾಂಡವರ ಸೈನ್ಯದ ಮಹಾರಥರಿಂದ ಕಲಕಾಡಲ್ಪಟ್ಟು ವಧಿಸಲ್ಪಡುತ್ತಿದ್ದ ನಿನ್ನ ಸೈನ್ಯವು ಎಲ್ಲ ಕಡೆಗಳಲ್ಲಿಯೂ ದಿಕ್ಕು-ದಿಕ್ಕುಗಳಿಗೆ ಓಡಿಹೋಯಿತು.
ತ್ರಾತಾರಂ ನಾಧ್ಯಗಚ್ಛಂತ ತಾವಕಾ ಭರತರ್ಷಭ |
ವಧ್ಯಮಾನಾಃ ಶಿತೈರ್ಬಾಣೈಃ ಪಾಂಡವೈಃ ಸಹಸೃಂಜಯೈಃ ॥23॥
ಎಲೈ ಭರತಶ್ರೇಷ್ಠನೇ, ಪಾಂಡವರ ಮತ್ತು ಸೃಂಜಯರ ತೀಕ್ಷ್ಣವಾದ ಬಾಣಗಳಿಂದ ಪ್ರಹಾರಕ್ಕೆ ಒಳಗಾದ ನಿನ್ನವರು ಯಾವ ರಕ್ಷಕನನ್ನೂ ಹೊಂದಲಿಲ್ಲ.
ಧೃತರಾಷ್ಟ್ರಃ
ಪೀಡ್ಯಮಾನಂ ಬಲಂ ಪಾರ್ಥೈರ್ದೃಷ್ಟ್ವಾ ಭೀಷ್ಮಃ ಪರಾಕ್ರಮೀ |
ಯದಕಾರ್ಷೀದ್ ರಣೇ ಕ್ರುದ್ಧಸ್ತನ್ಮಮಾಚಕ್ಷ್ವ ಸಂಜಯ ॥24॥
ಧೃತರಾಷ್ಟ್ರ ಎಲೈ ಸಂಜಯನೇ, ತಮ್ಮ ಸೈನ್ಯವು ಪಾಂಡವರಿಂದ ಪೀಡಿಸಲ್ಪಡುತ್ತಿರುವುದನ್ನು ನೋಡಿ ಪರಾಕ್ರಮಶಾಲಿಗಳಾದ ಭೀಷ್ಮರು ಕ್ರುದ್ಧರಾಗಿ ಯುದ್ಧದಲ್ಲಿ ಏನು ಮಾಡಿದರೆಂದು ನನಗೆ ಹೇಳು.
ಕಥಂ ವಾ ಪಾಂಡವಾನ್ ಯುದ್ಧೇ ಪ್ರತ್ಯುದ್ಯಾತಃ ಪರಂತಪಃ |
ವಿನಿಘ್ನನ್ ಸೋಮಕಾನ್ ವೀರಾಂಸ್ತನ್ಮಮಾಚಕ್ಷ್ವ ಸಂಜಯ ॥25॥
ಎಲೈ ಸಂಜಯನೇ, ಶತ್ರುತಾಪಕರಾದ ಅವರು ಸೋಮಕವೀರರನ್ನು ಸಂಹರಿಸುತ್ತಾ ಯುದ್ಧದಲ್ಲಿ ಪಾಂಡವರ ಮೇಲೆ ಹೇಗೆ ಮುನ್ನುಗ್ಗಿದರು ಎಂಬುದನ್ನು ನನಗೆ ಹೇಳು.
ಸಂಜಯಃ
ಆಚಕ್ಷೇ ತೇ ಮಹಾರಾಜ ಯದಕಾರ್ಷೀತ್ ಪಿತಾಮಹಃ |
ಪೀಡಿತೇ ತವ ಪುತ್ರಸ್ಯ ಸೈನ್ಯೇ ಪಾಂಡವಸೃಂಜಯೈಃ ॥26॥
ಸಂಜಯ ಎಲೈ ಮಹಾರಾಜನೇ, ಪಾಂಡವರಿಂದ ಮತ್ತು ಸೃಂಜಯರಿಂದ ನಿನ್ನ ಸೈನ್ಯವು ಪೀಡಿತವಾದಾಗ ಪಿತಾಮಹರು ಏನು ಮಾಡಿದರೆಂದು ನಿನಗೆ ಹೇಳುತ್ತೇನೆ.
ಪ್ರಹೃಷ್ಟಮನಸಃ ಶೂರಾಃ ಪಾಂಡವಾಃ ಪಾಂಡುಪೂರ್ವಜ |
ಅಭ್ಯವರ್ತಂತ ನಿಘ್ನಂತಸ್ತವ ಪುತ್ರಸ್ಯ ವಾಹಿನೀಮ್ ॥27॥
ಎಲೈ ಪಾಂಡುವಿನ ಅಣ್ಣನೇ, ಶೂರರಾದ ಪಾಂಡವರು ಸಂತೋಷಗೊಂಡ ಮನಸ್ಸಿನಿಂದ ಕೂಡಿದವರಾಗಿ ನಿನ್ನ ಪುತ್ರರ ಸೈನ್ಯವನ್ನು ಸಂಹರಿಸುತ್ತಾ ಮುಂದೆ ನುಗ್ಗಿದರು.
ತಂ ವಿನಾಶಂ ಮನುಷ್ಯೇಂದ್ರ ನರವಾರಣವಾಜಿನಾಮ್ |
ನಾಮೃಷ್ಯತ ತದಾ ಭೀಷ್ಮಃ ಸೈನ್ಯಘಾತಂ ರಣೇ ಪರೈಃ ॥28॥
ಎಲೈ ಮನುಷ್ಯೇಂದ್ರನೇ, ಯುದ್ಧದಲ್ಲಿ ಪರರಿಂದ ಉಂಟಾಗುತ್ತಿರುವ ಯೋಧ, ಗಜ, ಅಶ್ವಗಳ ಸೈನ್ಯದ ವಧೆಯನ್ನು ಭೀಷ್ಮರು

ಸಹಿಸಲಿಲ್ಲ.
ಸ ಪಾಂಡವಾನ್ ಮಹೇಷ್ವಾಸಃ ಪಾಂಚಾಲಾಂಶ್ಚ ಸಸೃಂಜಯಾನ್ |
ಅಭ್ಯದ್ರವತ ದುರ್ಧರ್ಷಸ್ತ್ಯಕತ್ವಾ ಜೀವಿತಮಾತ್ಮನಃ ||29||
ಮಹಾಧನುರ್ಧಾರಿಗಳೂ, ಸೋಲಿಸಲು ಕಷ್ಟಸಾಧ್ಯರೂ ಆದ ಅವರು ತಮ್ಮ ಜೀವಿತದ ಹಂಗನ್ನು ತೊರೆದು ಪಾಂಡವರ, ಪಾಂಚಾಲರ ಮತ್ತು ಸೃಂಜಯರ ಕಡೆಗೆ ನುಗ್ಗಿದರು.
ಸ ಪಾಂಡವಾನಾಂ ಪ್ರವರಾನ್ ಪಂಚ ರಾಜನ್ ಮಹಾರಥಾನ್ |
ಆತ್ತಶಸತ್ರುನ್ ರಣೇ ಯತ್ತಾನ್ ವಾರಯಾಮಾಸ ಸಾಯಕೈಃ |
ನಾರಾಚೈರ್ವತ್ಸದಂತೈಶ್ಚ ಶಿತೈರಂಜಲಿಕೈಸ್ತಥಾ ||30||
ಎಲೈ ರಾಜನೇ, ಅವರು ಕೈಯಲ್ಲಿ ಶಸ್ತ್ರವನ್ನು ಹಿಡಿದ, ಯುದ್ದೋದ್ಯುಕ್ತರಾದ ಪಾಂಡವರ ಐವರು ಮಹಾರಥಶ್ರೇಷ್ಠರನ್ನು ತಮ್ಮ ಬಾಣಗಳಿಂದಲೂ, ನಾರಾಚಗಳಿಂದಲೂ, ವತ್ಸದಂತಗಳಿಂದಲೂ, ತೀಕ್ಷ್ಣವಾದ ಅಂಜಲಿಗಳಿಂದಲೂ ತಡೆದರು.
ನಿಜಘ್ನೇ ಸಮರೇ ಕ್ರುದ್ಧೋ ಹಸ್ತ್ಯಶ್ವಮಮಿತಂ ಬಹು |
ರಥಿನೋಽಪಾತಯದ್ ರಾಜನ್ ರಥೇಭ್ಯಃ ಪುರುಷರ್ಷಭಃ ||31||
ಕ್ರುದ್ಧರಾದ ಭೀಷ್ಮರು ಯುದ್ಧದಲ್ಲಿ ಅಮಿತವಾದ ಅಶ್ವ-ಗಜಗಳನ್ನು ಕೊಂದರು. ಪುರುಷಶ್ರೇಷ್ಠರಾದ ಅವರು ಎಲೈ ರಾಜನೇ, ರಥಗಳಿಂದ ರಥಿಕರನ್ನು ಉರುಳಿಸಿದರು.
ಸಾದಿನಶ್ಚಾಶ್ವಪೃಷ್ಠೇಭ್ಯಃ ಪದಾತೀಂಶ್ಚ ಸಮಾಗತಾನ್ |
ಗಜಾರೋಹಾನ್ ಗಜೇಭ್ಯಶ್ಚ ಪರೇಷಾಂ ವಿದಧದ್ ಭಯಮ್ ||32||
ಅಶ್ವಗಳಿಂದ ಅಶ್ವಾರೋಹಿಗಳನ್ನೂ, ಹತ್ತಿರ ಬಂದ ಪದಾತಿಗಳನ್ನೂ, ಗಜಗಳಿಂದ ಗಜಾರೋಹಿಗಳನ್ನೂ ಉರುಳಿಸುತ್ತಾ ಅವರು ಶತ್ರುಗಳಿಗೆ ಭಯವನ್ನು ಉಂಟು ಮಾಡಿದರು.
ತಮೇಕಂ ಸಮರೇ ಭೀಷ್ಮಂ ತ್ವರಮಾಣಂ ಮಹಾರಥಮ್ |
ಪಾಂಡವಾಃ ಸಮವರ್ತಂತ ವಜ್ರಪಾಣಿಮಿವಾಸುರಾಃ ||33||
ಯುದ್ಧದಲ್ಲಿ ತ್ವರೆಮಾಡಿ ಕಾರ್ಯವನ್ನು ಮಾಡುತ್ತಿದ್ದ ಮಹಾರಥರಾದ ಒಬ್ಬ ಭೀಷ್ಮರ ಮೇಲೆ ವಜ್ರಪಾಣಿಯಾದ ಇಂದ್ರನ ಮೇಲೆ ಅಸುರರು ಮುನ್ನುಗ್ಗಿದಂತೆ ಪಾಂಡವರು ನುಗ್ಗಿದರು.
ಶಕ್ರಾಶನಿಸಮಸ್ಪರ್ಶಾನ್ ವಿಮುಂಚನ್ ನಿಶಿತಾನ್ ಶರಾನ್ |
ದಿಕ್ಷ್ವದೃಶ್ಯತ ಸರ್ವಾಸು ಘೋರಂ ಸಂಧಾರಯನ್ ವಪುಃ ||34||
ಭೀಷ್ಮರು ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಸ್ಪರ್ಶವುಳ್ಳ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಘೋರವಾದ ಶರೀರವನ್ನು ಧರಿಸಿ ಎಲ್ಲ ದಿಕ್ಕುಗಳಲ್ಲಿಯೂ ಕಂಡುಬಂದರು.
ಮಂಡಲೀಕೃತಮೇವಾಸ್ಯ ನಿತ್ಯಂ ಧನುರದೃಶ್ಯತ |
ಸಂಗ್ರಾಮೇ ಯುಧ್ಯಮಾನಸ್ಯ ಶಕ್ರಚಾಪನಿಭಂ ಮಹತ್ ||35||
ರಣರಂಗದಲ್ಲಿ ಯುದ್ಧವನ್ನು ಮಾಡುವ ಅವರ ಇಂದ್ರನ ಧನುಸ್ಸಿನ ಕಾಂತಿಯನ್ನು ಹೊಂದಿದ ದೊಡ್ಡ ಧನುಸ್ಸು ಯಾವಾಗಲೂ ಮಂಡಲಾಕಾರವಾಗಿರುವುದೇ ಕಂಡು ಬರುತ್ತಿದ್ದಿತು.
ತದ್ ದೃಷ್ಟ್ವಾ ಸಮರೇ ಕರ್ಮ ತವ ಪುತ್ರಾ ವಿಶಾಂಪತೇ |
ವಿಸ್ಮಯಂ ಪರಮಂ ಪ್ರಾಪ್ತಾಃ ಪಿತಾಮಹಮಪೂಜಯನ್ ||36||
ಎಲೈ ರಾಜನೇ, ರಣರಂಗದಲ್ಲಿ ಭೀಷ್ಮರ ಆ ಕಾರ್ಯವನ್ನು ನೋಡಿ ನಿನ್ನ ಪುತ್ರರು ಬಹಳ ವಿಸ್ಮಯವನ್ನು ಹೊಂದಿ ಪಿತಾಮಹರನ್ನು ಪೂಜಿಸಿದರು.
ಪಾರ್ಥಾ ವಿಮನಸೋ ಭೂತ್ವಾ ಪ್ರೈಕ್ಷಂತ ಪಿತರಂ ತವ |
ಯುಧ್ಯಮಾನಂ ರಣೇ ಶೂರಂ ವಿಪ್ರಚಿತ್ತಿಮಿವಾಮರಾಃ |
ನ ಚೈನಂ ವಾರಯಾಮಾಸುರ್ವ್ಯಾತ್ತಾನನಮಿವಾಂತಕಮ್ ||37||
ಪಾಂಡವರು ಯುದ್ಧದಲ್ಲಿ ಶೂರನಾದ ವಿಪ್ರಚಿತ್ತಿಯನ್ನು ದೇವತೆಗಳು ನೋಡಿದಂತೆ ಯುದ್ಧವನ್ನು ಮಾಡುತ್ತಿದ್ದ ನಿನ್ನ ತಂದೆಯಾದ ಭೀಷ್ಮರನ್ನು ವಿಷಣ್ಣವಾದ ಮನಸ್ಸಿನಿಂದ ನೋಡಿದರು. ಬಾಯ್ತೆರೆದ ಮೃತ್ಯುವಿನಂತಿದ್ದ ಅವರನ್ನು ತಡೆಯಲು ಅವರಿಗೆ ಸಾಧ್ಯವಾಗಲಿಲ್ಲ.
ದಶಮೇಽಹನಿ ಸಂಪ್ರಾಪ್ತೇ ರಥಾನೀಕಂ ಶಿಖಂಡಿನಃ |
ಅದಹನ್ ನಿಶಿತೈರ್ಬಾಣೈಃ ಕೃಷ್ಣವರ್ತ್ಮೇವ ಕಾನನಮ್ ||38||
ಹತ್ತನೆಯ ದಿನವು ಪ್ರಾಪ್ತವಾಗಿರಲು ಶಿಖಂಡಿಯ ರಥಸಮೂಹವನ್ನು ಭೀಷ್ಮರು ತಮ್ಮ ತೀಕ್ಷ್ಣವಾದ ಬಾಣಗಳಿಂದ ಅಗ್ನಿಯು ಕಾಡನ್ನು ಸುಡುವಂತೆ ಸುಟ್ಟುಹಾಕಿದರು.
ತಂ ಶಿಖಂಡೀ ತ್ರಿಭಿರ್ಬಾಣೈರಭ್ಯವಿಧ್ಯತ್ ಸ್ತನಾಂತರೇ |
ಆಶೀವಿಷಮಿವ ಕ್ರುದ್ಧಂ ಕಾಲಸೃಷ್ಟಮಿವಾಂತಕಮ್ ||39||
ಸರ್ಪದಂತೆ ಕ್ರುದ್ಧರಾದ, ಯುಗಾಂತಕಾಲದಲ್ಲಿ ಸೃಷ್ಟನಾದ ಯಮನಂತಿರುವ ಭೀಷ್ಮರಿಗೆ ಶಿಖಂಡಿಯು ಮೂರು ಬಾಣಗಳಿಂದ ಅವರ ಸ್ತನಗಳ ಮಧ್ಯದಲ್ಲಿ ಹೊಡೆದನು.
ಸ ತೇನಾತಿಭೃಶಂ ವಿದ್ಧಃ ಪ್ರೇಕ್ಷ್ಯ ಭೀಷ್ಮಃ ಶಿಖಂಡಿನಮ್ |
ಅನಿಚ್ಛನ್ನಪಿ ಸಂಕ್ರುದ್ಧಃ ಪ್ರಹಸನ್ನಿದಮಬ್ರವೀತ್ ||40||

ಆ ಬಾಣಗಳಿಂದ ಗಾಢವಾಗಿ ಗಾಯಗೊಂಡ ಭೀಷ್ಮರು ಶಿಖಂಡಿಯನ್ನು ನೋಡಿ ಕ್ರುದ್ಧರಾಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡುವ ಇಚ್ಛೆಯಿಲ್ಲದೆ ನಗುತ್ತಾ ಹೀಗೆ ಮಾತನಾಡಿದರು.
ಕಾಮಮಭ್ಯಾಸ ವಾ ಮಾ ವಾ ನ ತ್ವಾಂ ಯೋತ್ಸ್ಯೇ ಕಥಂಚನ |
ಯೈವ ಹಿ ತ್ವಂ ಕೃತಾ ಧಾತ್ರಾ ಸೈವ ಹಿ ತ್ವಂ ಶಿಖಂಡಿನೀ ॥41॥
ನೀನು ನಿನ್ನ ಮನಸ್ಸಿಗೆ ಬಂದಂತೆ ನನ್ನ ಮೇಲೆ ಬಾಣಗಳನ್ನು ಬಿಡು ಅಥವಾ ಸುಮ್ಮನಿರು. ಏನಾದರೂ ನಾನು ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲ. ಹಿಂದೆ ಬ್ರಹ್ಮದೇವರು ನಿನ್ನನ್ನು ಯಾವ ಸ್ತ್ರೀಯಾಗಿ ಸೃಷ್ಟಿಸಿದರೋ ನೀನು ಅಂತಹ ಸ್ತ್ರೀಯಾಗಿದ್ದೀಯೆ (ಎಂದು ಹೇಳಿದರು).
ತಸ್ಯ ತದ್ವಚನಂ ಶ್ರುತ್ವಾ ಶಿಖಂಡೀ ಕ್ರೋಧಮೂರ್ಚ್ಛಿತಃ |
ಉವಾಚ ಭೀಷ್ಮಂ ಸಮರೇ ಸೃಕ್ಕಿಣೀ ಪರಿಲೇಲಿಹನ್ ॥42॥
ಅವರ ಆ ಮಾತನ್ನು ಕೇಳಿ ಕ್ರೋಧಮೂರ್ಛಿತನಾದ ಶಿಖಂಡಿಯು ತನ್ನ ಕಟಬಾಯಿಯನ್ನು ಸವರಿಕೊಳ್ಳುತ್ತಾ ರಣರಂಗದಲ್ಲಿ ಭೀಷ್ಮರನ್ನು ಕುರಿತು ಹೇಳಿದನು.
ಜಾನಾಮಿ ತ್ವಾಂ ಮಹಾಬಾಹೋ ಕ್ಷತ್ರಿಯಾಣಾಂ ಕ್ಷಯಂಕರಮ್ |
ಮಯಾ ಶ್ರುತಂ ಚ ತೇ ಯುದ್ಧಂ ಜಾಮದಗ್ನ್ಯೇನ ವೈ ಸಹ ॥43॥
ಎಲೈ ಮಹಾಬಾಹುವೇ, ನೀವು ಕ್ಷತ್ರಿಯರ ವಿನಾಶಕರು ಎಂದು ನಾನು ತಿಳಿದಿದ್ದೇನೆ. ನೀವು ಪರಶುರಾಮರ ಜೊತೆಯಲ್ಲಿ ಮಾಡಿದ ಯುದ್ಧವನ್ನೂ ನಾನು ಕೇಳಿದ್ದೇನೆ.
ದಿವ್ಯಶ್ಚ ತೇ ಪ್ರಭಾವೋಽಯಂ ಸ ಮಯಾ ಬಹುಶಃ ಶ್ರುತಃ |
ಜಾನನ್ನಪಿ ಪ್ರಭಾವಂ ತೇ ಯೋತ್ಸ್ಯೇಽದ್ಯಾಹಂ ತ್ವಯಾ ಸಹ ॥44॥
ನೀವು ದಿವ್ಯಸಾಮರ್ಥ್ಯವುಳ್ಳವರು. ಅದನ್ನು ನಾನು ಅನೇಕ ಬಾರಿ ಕೇಳಿದ್ದೇನೆ. ನಿಮ್ಮ ಸಾಮರ್ಥ್ಯವನ್ನು ತಿಳಿದಿದ್ದರೂ ಸಹ ನಾನು ಈ ದಿನ ನಿಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ಪಾಂಡವಾನಾಂ ಪ್ರಿಯಂ ಕುರ್ವನ್ನಾತ್ಮನಶ್ಚ ನರೋತ್ತಮ |
ಅದ್ಯ ತ್ವಾ ಯೋಧಯಿಷ್ಯಾಮಿ ರಣೇ ಪುರುಷಸತ್ತಮ ॥45॥
ಎಲೈ ಪುರುಷಶ್ರೇಷ್ಠರೇ, ಪಾಂಡವರಿಗೂ ಮತ್ತು ನನಗೂ ಹಿತವನ್ನು ಉಂಟುಮಾಡುತ್ತಾ ಈ ದಿನ ರಣರಂಗದಲ್ಲಿ ನಿಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ಧ್ರುವಂ ಚ ತ್ವಾ ಹನಿಷ್ಯಾಮಿ ಶಪೇ ಸತ್ಯೇನ ತೇಽಗ್ರತಃ |
ಏತಚ್ಛ್ರುತ್ವಾ ವಚೋ ಮಹ್ಯಂ ಯತ್ ಕ್ಷಮಂ ತತ್ ಸಮಾಚರ ॥46॥
ನಿಶ್ಚಿತವಾಗಿ ನಿಮ್ಮನ್ನು ಕೊಲ್ಲುವೆನು. ನಿಮ್ಮ ಮುಂದೆ ಇದನ್ನು ಸತ್ಯಶಪಥವನ್ನು ಮಾಡಿ ಹೇಳುತ್ತಿದ್ದೇನೆ. ಈ ನನ್ನ ಮಾತನ್ನು ಕೇಳಿ ನಿಮಗೆ ಹೇಗೆ ತೋರುತ್ತದೆಯೋ ಹಾಗೆ ಮಾಡಿ.
ಕಾಮಮಭ್ಯಾಸ ವಾ ಮಾ ವಾ ನ ಮೇ ಜೀವನ್ ವಿಮೋಕ್ಷ್ಯಸೇ |
ಸುದೃಷ್ಟಃ ಕ್ರಿಯತಾಂ ಭೀಷ್ಮ ಲೋಕೋಽಯಂ ಸಮಿತಿಂಜಯ ॥47॥
ನೀವು ನನ್ನ ಮೇಲೆ ಬೇಕಾದರೆ ಬಾಣವನ್ನು ಪ್ರಯೋಗಿಸಿ ಅಥವಾ ಸುಮ್ಮನಿರಿ. ಆದರೆ ಈ ದಿನ ನೀವು ಜೀವಸಹಿತವಾಗಿ ಇಲ್ಲಿಂದ ಹೋಗುವುದಿಲ್ಲ. ಎಲೈ ಸೈನ್ಯವನ್ನು ಜಯಿಸುವ ಭೀಷ್ಮರೇ, ಈ ಲೋಕವನ್ನು ಚೆನ್ನಾಗಿ ನೋಡಿ.
ಏವಮುಕಾತ್ವ ತತೋ ಭೀಷ್ಮಂ ಪಂಚಭಿರ್ನತಪರ್ವಭಿಃ |
ಅವಿಧ್ಯತ ರಣೇ ರಾಜನ್ ಪ್ರಣುನ್ನಂ ವಾಕ್ಯಸಾಯಕೈಃ ॥48॥
ಎಲೈ ರಾಜನೇ, ಹೀಗೆ ಹೇಳಿ ತನ್ನ ವಾಗ್ಬಾಣಗಳಿಂದ ಗಾಯಗೊಂಡ ಭೀಷ್ಮರ ಮೇಲೆ ಬಾಗಿದ ತುದಿಯುಳ್ಳ ಐದುಬಾಣಗಳನ್ನು ಪ್ರಯೋಗಿಸಿದನು.
ತಸ್ಯ ತದ್ವಚನಂ ಶ್ರುತ್ವಾ ಸವ್ಯಸಾಚೀ ಪರಂತಪಃ |
ಕಾಲೋಽಯಮಿತಿ ಸಂಚಿಂತ್ಯ ಶಿಖಂಡಿನಮಚೋದಯತ್ ॥49॥
ಶಿಖಂಡಿಯ ಆ ಮಾತುಗಳನ್ನು ಕೇಳಿ ಪರಂತಪನಾದ ಅರ್ಜುನನು ಇದೇ ಸರಿಯಾದ ಕಾಲವೆಂದು ತಿಳಿದು ಶಿಖಂಡಿಯನ್ನು ಪ್ರಚೋದಿಸಿದನು.
ಅಹಂ ತ್ವಾಮನುಯಾಸ್ಯಾಮಿ ಪರಾನ್ ವಿದ್ರಾವಯನ್ ಶರೈಃ |
ಅಭಿದ್ರವ ಸುಸಂರಬ್ಧೋ ಭೀಷ್ಮಂ ಭೀಮಪರಾಕ್ರಮಮ್ ॥50॥
ನಾನು ನನ್ನ ಬಾಣಗಳಿಂದ ಶತ್ರುಗಳನ್ನು ಓಡಿಸುತ್ತಾ ನಿನ್ನ ಹಿಂದೆ ಬರುವೆನು. ನೀನು ಬಹಳ ಕೋಪದಿಂದ ಕೂಡಿದವನಾಗಿ ಭಯಂಕರ ಪರಾಕ್ರಮವುಳ್ಳ ಭೀಷ್ಮರ ಮೇಲೆ ಎರಗುವವನಾಗು.
ನ ಹಿ ತೇ ಸಂಯುಗೇ ಪೀಡಾಂ ಶಕ್ತಃ ಕರ್ತುಂ ಮಹಾಬಲಃ |
ತಸ್ಮಾದದ್ಯ ಮಹಾಬಾಹೋ ವೀರ ಭೀಷ್ಮಮಭಿದ್ರವ ॥51॥
ಮಹಾಬಲರಾದ ಭೀಷ್ಮರು ಯುದ್ಧದಲ್ಲಿ ನಿನಗೆ ಪೀಡೆಯನ್ನು ಕೊಡಲು ಶಕ್ತರಲ್ಲ. ಆದ್ದರಿಂದ ವೀರನೇ, ಮಹಾಬಾಹುವೇ, ಈ ದಿನ ಭೀಷ್ಮರ ಕಡೆಗೆ ನುಗ್ಗುವವನಾಗು.
ಅಹತ್ವಾ ಸಮರೇ ಭೀಷ್ಮಂ ಯದಿ ಯಾಸ್ಯಸಿ ಮಾರಿಷ |
ಅವಹಾಸ್ಯೋಽಸ್ಯ ಲೋಕಸ್ಯ ಭವಿಷ್ಯಸಿ ಮಯಾ ಸಹ ॥52॥
ಎಲೈ ಶ್ರೇಷ್ಠನೇ, ಈ ದಿನ ಭೀಷ್ಮರನ್ನು ಕೊಲ್ಲದೆ ಹಿಂದಿರುಗಿದರೆ ನನ್ನ ಜೊತೆಯಲ್ಲಿ ನೀನು ಲೋಕದ ಅಪಹಾಸ್ಯಕ್ಕೆ ಗುರಿಯಾಗುವಿ.

ನಾವಹಾಸ್ಯಾ ಯಥಾ ವೀರ ಭವೇಮ ಪರಮಾಹವೇ |
ತಥಾ ಕುರು ರಣೇ ಯತ್ನಂ ಸಾಧಯಸ್ವ ಪಿತಾಮಹಮ್ ||53||
ಎಲೈ ವೀರನೇ, ನಾವು ಈ ದೊಡ್ಡ ಯುದ್ಧದಲ್ಲಿ ಲೋಕಕ್ಕೆ ಹಾಸ್ಯಾಸ್ಪದರಾಗದಂತೆ ಯುದ್ಧವನ್ನು ಮಾಡಿ ಭೀಷ್ಮರನ್ನು ಕೊಲ್ಲುವವನಾಗು.
ಅಹಂ ತೇ ರಕ್ಷಣಂ ಯುದ್ಧೇ ಕರಿಷ್ಯಾಮಿ ಪರಂತಪ |
ವಾರಯನ್ ರಥಿನಃ ಸರ್ವಾನ್ ಸಾಧಯಸ್ವ ಪಿತಾಮಹಮ್ ||54||
ಎಲೈ ಪರಂತಪನೇ, ಯುದ್ಧದಲ್ಲಿ ನಾನು ಎಲ್ಲ ರಥಿಕರನ್ನೂ ತಡೆಯುತ್ತಾ ನಿನ್ನ ರಕ್ಷಣೆಯನ್ನು ಮಾಡುವೆನು. ಭೀಷ್ಮರನ್ನು ಸಂಹರಿಸುವವನಾಗು.
ದ್ರೋಣಂ ಚ ದ್ರೋಣಪುತ್ರಂ ಚ ಕೃಪಂ ಚಾಥ ಸುಯೋಧನಮ್ |
ಚಿತ್ರಸೇನಂ ವಿಕರ್ಣಂ ಚ ಸೈಂಧವಂ ಚ ಜಯದ್ರಥಮ್ ||55||
ವಿಂದಾನುವಿಂದಾವಾವಂತ್ಯೌ ಕಾಂಬೋಜಂ ಚ ಸುದಕ್ಷಿಣಮ್ |
ಭಗದತ್ತಂ ತಥಾ ಶೂರಂ ಮಾಗಧಂ ಚ ಮಹಾರಥಮ್ ||56||
ಸೌಮದತ್ತಿಂ ರಣೇ ಶೂರಮಾರ್ಶ್ಯರ್ಶೃಂಗಿಂ ಚ ರಾಕ್ಷಸಮ್ |
ತ್ರಿಗರ್ತರಾಜಂ ಚ ರಣೇ ಸಹ ಸರ್ವೈರ್ಮಹಾರಥೈಃ |
ಅಹಮಾವಾರಯಿಷ್ಯಾಮಿ ವೇಲೇವ ಮಕರಾಲಯಮ್ ||57||
ದ್ರೋಣರು, ದ್ರೋಣಪುತ್ರರಾದ ಅಶ್ವತ್ಥಾಮರು, ಕೃಪರು, ಸುಯೋಧನ, ಚಿತ್ರಸೇನ, ವಿಕರ್ಣ, ಸಿಂಧುದೇಶದ ಜಯದ್ರಥ, ಅವಂತಿದೇಶದ ವಿಂದಾನುವಿಂದರು, ಕಾಂಬೋಜದೇಶದ ಸುದಕ್ಷಿಣ, ಭಗದತ್ತ, ಮಗಧದೇಶದ ಶೂರನಾದ ಮಹಾರಥ, ಯುದ್ಧದಲ್ಲಿ ಶೂರನಾದ ಭೂರಿಶ್ರವ, ರಾಕ್ಷಸನಾದ ಅಲಂಬುಸ, ತ್ರಿಗರ್ತರಾಜನಾದ ಸುಶರ್ಮ ಇವರೆಲ್ಲರನ್ನೂ, ಉಳಿದ ಎಲ್ಲಾ ಮಹಾರಥರ ಜೊತೆಯಲ್ಲಿ ತೀರವು ಸಮುದ್ರವನ್ನು ತಡೆದಂತೆ ನಾನು ತಡೆಯುವೆನು.
ಕುರೂಂಶ್ಚ ಸಹಿತಾನ್ ಸರ್ವಾನ್ ಯೇ ಚೈಷಾಂ ಸೈನಿಕಾಃ ಸ್ಥಿತಾಃ |
ನಿವಾರಯಿಷ್ಯಾಮಿ ರಣೇ ಸಾಧಯಸ್ವ ಪಿತಾಮಹಮ್ ||58||
ಒಟ್ಟಾದ ಎಲ್ಲಾ ಕುರುಗಳನ್ನೂ ಮತ್ತು ಅವರ ಯೋಧರನ್ನೂ ನಾನು ನಿವಾರಿಸುವೆನು. ಯುದ್ಧದಲ್ಲಿ ಪಿತಾಮಹರನ್ನು ಕೊಲ್ಲುವವನಾಗು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಪಂಚಾಧಿಕಶತತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಆರನೆಯ ಅಧ್ಯಾಯ
ಹತ್ತನೆಯ ದಿವಸದ ಯುದ್ಧ. ಭೀಷ್ಮರ ಪ್ರತಾಪ.
ಧೃತರಾಷ್ಟ್ರಃ
ಕಥಂ ಶಿಖಂಡೀ ಗಾಂಗೇಯಮಭ್ಯಧಾವತ್ ಪಿತಾಮಹಮ್ |
ಪಾಂಚಾಲ್ಯಃ ಸಮರೇ ಕ್ರುದ್ಧೋ ಧರ್ಮಾತ್ಮಾನಂ ಯತವ್ರತಮ್ ||1||
ಧೃತರಾಷ್ಟ್ರ, ಪಾಂಚಾಲ ದೇಶದವನೂ, ಯುದ್ಧದಲ್ಲಿ ಕ್ರುದ್ಧನೂ ಆದ ಶಿಖಂಡಿಯು ನಿಯತವ್ರತವುಳ್ಳವರೂ, ಧರ್ಮಾತ್ಮರೂ ಆದ ಭೀಷ್ಮಪಿತಾಮಹರನ್ನು ಹೀಗೆ ಸೆಣೆಸಿದನು?
ಕೇಽರಕ್ಷನ್ ಪಾಂಡವಾನೀಕೇ ಶಿಖಂಡಿನಮುದಾಯುಧಮ್ |
ತ್ವರಮಾಣಾಸ್ತ್ವರಾಕಾಲೇ ಜಿಗೀಷಂತೋ ಮಹಾರಥಾಃ ||2||
ಜಾಗ್ರತೆಯಾಗಿ ಕಾರ್ಯವನ್ನು ಮಾಡಬೇಕಾದ ಕಾಲದಲ್ಲಿ ಭೀಷ್ಮರನ್ನು ಗೆಲ್ಲಲು ಬಯಸಿದ ಪಾಂಡವ ಸೈನ್ಯದ ಯಾವ ಮಹಾರಥರು ಕೈಯಲ್ಲಿ ಆಯುಧವನ್ನು ಹಿಡಿದ ಶಿಖಂಡಿಯನ್ನು ರಕ್ಷಿಸಿದರು?
ಕಥಂ ಶಾಂತನವೋ ಭೀಷ್ಮಃ ಸ ತಸ್ಮಿನ್ ದಶಮೇಽಹನಿ |
ಅಯುಧ್ಯತ ಮಹಾವೀರ್ಯಃ ಪಾಂಡವೈಃ ಸಹಸೃಂಜಯೈಃ ||3||
ಆ ಹತ್ತನೆಯ ದಿವಸದಲ್ಲಿ ಮಹಾಸಾಮರ್ಥ್ಯವುಳ್ಳವರೂ, ಶಂತನುಪುತ್ರರೂ ಆದ ಆ ಭೀಷ್ಮರು ಪಾಂಡವರ ಮತ್ತು ಸೃಂಜಯರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದರು?
ನ ಮೃಷ್ಯಾಮಿ ರಣೇ ಭೀಷ್ಮಂ ಪ್ರತ್ಯುದ್ಯಾತಂ ಶಿಖಂಡಿನಮ್ |
ಕಚ್ಚಿನ್ನ ರಥಭಂಗೋಽಸ್ಯ ಧನುರ್ವಾಽಶೀರ್ಯತಾಸ್ಯತಃ ||4||
ರಣರಂಗದಲ್ಲಿ ಶಿಖಂಡಿಯು ಭೀಷ್ಮರ ಕಡೆಗೆ ಮುನ್ನುಗ್ಗಿದನು ಎಂಬುದನ್ನೂ ನಾನು ಸಹಿಸಲಾರೆ. ಭೀಷ್ಮರ ರಥವು ಭಗ್ನವಾಯಿತೇ? ಅಥವಾ ಬಾಣಪ್ರಯೋಗವಾಗುವಾಗ ಅವರ ಧನುಸ್ಸು ಮುರಿಯಿತೇ?
ಸಂಜಯಃ
ನಾಶೀರ್ಯತ ಧನುಸ್ತಸ್ಯ ರಥಭಂಗೋ ನ ಚಾಪ್ಯಭೂತ್ |
ಯುಧ್ಯಮಾನಸ್ಯ ಸಂಗ್ರಾಮೇ ಭೀಷ್ಮಸ್ಯ ಭರತರ್ಷಭ |

ನಿಘ್ನತಃ ಸಮರೇ ಶತ್ರೂನ್ ಶರೈಃ ಸನ್ನತಪರ್ವಭಿಃ ॥5॥
ಸಂಜಯ ಎಲೈ ಭರತಶ್ರೇಷ್ಠನೇ, ರಣರಂಗದಲ್ಲಿ ತಮ್ಮ ಬಾಗಿದ ತುದಿಯುಳ್ಳ ಬಾಣಗಳಿಂದ ಶತ್ರುಗಳನ್ನು ಸಂಹರಿಸುತ್ತಾ ಯುದ್ಧಮಾಡುವ ಭೀಷ್ಮರ ಧನುಸ್ಸೂ ಮುರಿಯಲಿಲ್ಲ, ರಥವೂ ಭಗ್ನವಾಗಲಿಲ್ಲ.
ಅನೇಕಶತಸಾಹಸ್ರಾಸ್ತಾವಕಾನಾಂ ಮಹಾರಥಾಃ।
ರಥದಂತಿಗಣಾ ರಾಜನ್ ಹಯಾಶ್ಚೈವ ಸುಸಜ್ಜಿತಾಃ।
ಅಭ್ಯವರ್ತಂತ ಯುದ್ಧಾಯ ಪುರಸ್ಕೃತ್ಯ ಪಿತಾಮಹಮ್ ॥6॥
ಎಲೈ ರಾಜನೇ, ನಿನ್ನವರಾದ ಅನೇಕ ಲಕ್ಷ ಮಹಾರಥರು, ರಥ-ಗಜಗಳ ಸಮೂಹಗಳು, ಸುಸಜ್ಜಿತವಾದ ಅಶ್ವಗಳು ಪಿತಾಮಹರನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೊರಟವು.
ಯಥಾಪ್ರತಿಜ್ಞಂ ಕೌರವ್ಯ ಸ ಚಾಪಿ ಸಮಿತಿಂಜಯಃ।
ಪಾರ್ಥಾನಾಮಕರೋದ್ ಭೀಷ್ಮಃ ಸತತಂ ಸಮಿತಿಕ್ಷಯಮ್ ॥7॥
ಎಲೈ ಕೌರವ್ಯನೇ, ತಮ್ಮ ಪ್ರತಿಜ್ಞೆಗೆ ಅನುಗುಣವಾಗಿ ಯುದ್ಧದಲ್ಲಿ ಜಯಶೀಲರಾದ ಭೀಷ್ಮರು ಪಾಂಡವರ ಸೈನ್ಯವನ್ನು ಸತತವಾಗಿ ನಾಶಮಾಡಿದರು.
ಯುಧ್ಯಮಾನಂ ಮಹೇಷ್ವಾಸಂ ವಿನಿಘ್ನಂತಂ ಪರಾನ್ ಶರೈಃ।
ಪಾಂಚಾಲಾಃ ಪಾಂಡವೈಃ ಸಾರ್ಧಂ ಸರ್ವ ಏವಾಭ್ಯವಾರಯನ್ ॥8॥
ತಮ್ಮ ಬಾಣಗಳಿಂದ ಶತ್ರುಗಳನ್ನು ಕೊಲ್ಲುತ್ತಾ ಯುದ್ಧ ಮಾಡುವ ಮಹಾಧನುರ್ಧಾರಿಗಳಾದ ಭೀಷ್ಮರನ್ನು ಪಾಂಡವರಿಂದ ಕೂಡಿದ ಪಾಂಚಾಲರೆಲ್ಲರೂ ತಡೆದರು.
ದಶಮೇಽಹನಿ ಸಂಪ್ರಾಪ್ತೇ ತತಾಪ ರಿಪುವಾಹಿನೀಮ್।
ಕೀರ್ಯಮಾಣಾಂ ಶಿತೈರ್ಬಾಣೈಃ ಶತಶೋಽಥ ಸಹಸ್ರಶಃ ॥9॥
ಹತ್ತನೆಯ ದಿವಸವು ಪ್ರಾಪ್ತವಾದಾಗ ಶತಸಂಖ್ಯೆಯಲ್ಲಿ, ಸಹಸ್ರ ಸಂಖ್ಯೆಯಲ್ಲಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಭೀಷ್ಮರು ಚದುರಿ ಹೋಗುತ್ತಿದ್ದ ಶತ್ರುಸೈನ್ಯವನ್ನು ತಾಪಗೊಳಿಸಿದರು.
ನ ಹಿ ಭೀಷ್ಮಂ ಮಹೇಷ್ವಾಸಂ ಪಾಂಡವಾಃ ಪಾಂಡುಪೂರ್ವಜ।
ಅಶಕ್ನುವನ್ ರಣೇ ಜೇತುಂ ಪಾಶಹಸ್ತಮಿವಾಂತಕಮ್ ॥10॥
ಎಲೈ ಪಾಂಡುವಿನ ಅಣ್ಣನೇ, ಪಾಶಹಸ್ತನಾದ ಯಮನಂತೆ ಯುದ್ಧದಲ್ಲಿ ಮಹಾಧನುರ್ಧಾರಿಗಳಾದ ಭೀಷ್ಮರನ್ನು ಗೆಲ್ಲಲು ಪಾಂಡವರು ಸಮರ್ಥರಾಗಲಿಲ್ಲ.
ಅಥೋಪಾಯಾನ್ಮಹಾರಾಜ ಸವ್ಯಸಾಚೀ ಪರಂತಪಃ।
ತ್ರಾಸಯನ್ ರಥಿನಃ ಸರ್ವಾನ್ ಬೀಭತ್ಸುರಪರಾಜಿತಃ ॥11॥
ಸಿಂಹವದ್ ವಿನದನ್ನುಚ್ಚೈರ್ಧನುರ್ಜ್ಯಾಂ ವಿಕ್ಷಿಪನ್ ಮುಹುಃ।
ಶರೌಘಾನ್ ವಿಸೃಜನ್ ಪಾರ್ಥೋ ವ್ಯಚರತ್ ಕಾಲವದ್ ರಣೇ ॥12॥
ಎಲೈ ಮಹಾರಾಜನೇ, ಆಗ ಪರಂತಪನಾದ, ಅಪರಾಜಿತನಾದ, ಸವ್ಯಸಾಚಿಯಾದ ಅರ್ಜುನನು ಎಲ್ಲ ರಥರನ್ನೂ ಭಯಗೊಳಿಸುತ್ತಾ, ಗಟ್ಟಿಯಾಗಿ ಸಿಂಹನಾದವನ್ನು ಮಾಡುತ್ತಾ, ಧನುಸ್ಸಿನ ಹೆದೆಯನ್ನು ಮತ್ತೆ ಮತ್ತೆ ಮೀಟಿ ಬಾಣಗಳ ಸಮೂಹವನ್ನು ಪ್ರಯೋಗಿಸುತ್ತಾ, ಸಮೀಪಕ್ಕೆ ಬಂದು ಮೃತ್ಯುವಿನಂತೆ ರಣರಂಗದಲ್ಲಿ ತಿರುಗಾಡಿದನು.
ತಸ್ಯ ಶಬ್ದೇನ ವಿತ್ರಸ್ತಾಸ್ತಾವಕಾ ಭರತರ್ಷಭ।
ಸಿಂಹಸ್ಯೇವ ಮೃಗಾ ರಾಜನ್ ವ್ಯದ್ರವಂತ ಮಹಾಭಯಾತ್ ॥13॥
ಎಲೈ ಭರತಶ್ರೇಷ್ಠನೇ, ಗಾಂಡೀವ ಧನುಸ್ಸಿನ ಶಬ್ದದಿಂದ ಹೆದರಿದ ನಿನ್ನ ಸೈನಿಕರು ಸಿಂಹದ ಎದುರಿನಲ್ಲಿ ಮಹಾಭಯದಿಂದ ಓಡುವ ಜಿಂಕೆಗಳಂತೆ ಹೆದರಿ ಓಡಿ ಹೋದರು.
ಜಯಂತಂ ಪಾಂಡವಂ ದೃಷ್ಟ್ವಾ ತ್ವತ್ಸೈನ್ಯಂ ಚಾಭಿಪೀಡಿತಮ್।
ದುರ್ಯೋಧನಸ್ತತೋ ಭೀಷ್ಮಮಬ್ರವೀದ್ ಭೃಶಪೀಡಿತಃ ॥14॥
ಜಯಿಸುತ್ತಿದ್ದ ಅರ್ಜುನನನ್ನೂ ಮತ್ತು ಪೀಡಿತವಾದ ನಿನ್ನ ಸೈನ್ಯವನ್ನೂ ನೋಡಿ ಬಹಳ ಪೀಡಿತನಾದ ದುರ್ಯೋಧನನು ಆಗ ಭೀಷ್ಮರನ್ನು ಕುರಿತು ಮಾತನಾಡಿದನು.
ಏಷ ಪಾಂಡುಸುತಸ್ತಾತ ಶ್ವೇತಾಶ್ವಃ ಕೃಷ್ಣಸಾರಥಿಃ।
ದಹತೇ ಮಾಮಕಾನ್ ಸರ್ವಾನ್ ಕೃಷ್ಣವರ್ತ್ಮೇವ ಕಾನನಮ್ ॥15॥
ಎಲೈ ಪ್ರೀತಿಪಾತ್ರರೇ, ಶ್ವೇತಾಶ್ವನೂ, ಕೃಷ್ಣಸಾರಥಿಯೂ ಆದ ಪಾಂಡುಸುತನಾದ ಈ ಅರ್ಜುನನು ಅಗ್ನಿಯು ವನವನ್ನು ಸುಡುವಂತೆ ನನ್ನವರೆಲ್ಲರನ್ನೂ ಸುಡುತ್ತಿದ್ದಾನೆ.
ಪಶ್ಯ ಸೈನ್ಯಾನಿ ಗಾಂಗೇಯ ದ್ರವಮಾಣಾನಿ ಸರ್ವಶಃ।
ಪಾಂಡವೇನ ಯುಧಾಂಶ್ರೇಷ್ಠ ಕಾಲ್ಯಮಾನಾನಿ ಸಂಯುಗೇ ॥16॥
ಎಲೈ ಗಾಂಗೇಯರೇ, ಯುದ್ಧಮಾಡುವವರಲ್ಲಿ ಶ್ರೇಷ್ಠರಾದವರೇ, ಯುದ್ಧದಲ್ಲಿ ಅರ್ಜುನನಿಂದ ಚದುರಿಸಲ್ಪಟ್ಟು ಎಲ್ಲ ಕಡೆಗಳಲ್ಲಿಯೂ ಓಡುತ್ತಿರುವ ನನ್ನ ಸೈನ್ಯಗಳನ್ನು ನೋಡಿ.
ಯಥಾ ಪಶುಗಣಾನ್ ಪಾಲಃ ಸಂಕಾಲಯತಿ ಕಾನನೇ।
ತಥೇದಂ ಮಾಮಕಂ ಸೈನ್ಯಂ ಕಾಲ್ಯತೇ ಶತ್ರುತಾಪನ ॥17॥
ಎಲೈ ಶತ್ರುತಾಪನರೇ, ಕಾಡಿನಲ್ಲಿ ಪಶುಪಾಲಕನು ಪಶುಗಳನ್ನು ಅಟ್ಟಾಡುವಂತೆ ಈ ನನ್ನ ಸೈನ್ಯವು ಅಟ್ಟಿಸಲ್ಪಡುತ್ತಿದೆ.

ಧನಂಜಯಶರೈರ್ಭಗ್ನಂ ದ್ರವಮಾಣಮಿತಸ್ತತಃ |
ಭೀಮೋ ಹ್ಯೇಷ ದುರಾಧರ್ಷೋ ವಿದ್ರಾವಯತಿ ಮೇ ಬಲಮ್ ॥18॥
ಅರ್ಜುನನ ಬಾಣಗಳಿಂದ ಭಗ್ನವಾಗಿ ಇಲ್ಲಿಂದಲ್ಲಿಗೆ ಓಡುತ್ತಿರುವ ನನ್ನ ಸೈನ್ಯವನ್ನು ಈ ದುರಾಧರ್ಷನಾದ ಭೀಮನು ಇನ್ನೂ ಓಡಿಸುತ್ತಿದ್ದಾನೆ.
ಸಾತ್ಯಕಿಶ್ಚೇಕಿತಾನಶ್ಚ ಮಾದ್ರೀಪುತ್ರೌ ಚ ಪಾಂಡವೌ |
ಅಭಿಮನ್ಯುಶ್ಚ ವಿಕ್ರಾಂತೋ ವಾಹಿನೀಂ ದಹತೇ ಮಮ ॥19॥
ಸಾತ್ಯಕಿ, ಚೇಕಿತಾನ, ಪಾಂಡುಪುತ್ರರಾದ ನಕುಲ-ಸಹದೇವರು, ಪರಾಕ್ರಮಶಾಲಿಯಾದ ಅಭಿಮನ್ಯು ಇವರು ನನ್ನ ಸೈನ್ಯವನ್ನು ದಹಿಸುತ್ತಿದ್ದಾರೆ.
ಧೃಷ್ಟದ್ಯುಮ್ನಸ್ತಥಾ ಶೂರೋ ರಾಕ್ಷಸಶ್ಚ ಘಟೋತ್ಕಚಃ |
ವ್ಯದ್ರಾವಯೇತಾಂ ಸಹಸಾ ಸೈನ್ಯಂ ಮಮ ಮಹಾಬಲೌ ॥20॥
ಮಹಾಬಲರಾದ, ಶೂರನಾದ ಧೃಷ್ಟದ್ಯುಮ್ನ ಮತ್ತು ರಾಕ್ಷಸನಾದ ಘಟೋತ್ಕಚರು ನನ್ನ ಸೈನ್ಯವನ್ನು ಓಡಿಸುತ್ತಿದ್ದಾರೆ.
ವಧ್ಯಮಾನಸ್ಯ ಸೈನ್ಯಸ್ಯ ಸರ್ವೈರೇತೈರ್ಮಹಾಬಲೈಃ |
ನಾನ್ಯಾಂ ಗತಿಂ ಪ್ರಪಶ್ಯಾಮಿ ಸ್ಥಾನೇ ಯುದ್ಧೇ ಚ ಭಾರತ ॥21॥
ಋತೇ ತ್ವಾಂ ಪುರುಷವ್ಯಾಘ್ರ ದೇವತುಲ್ಯಪರಾಕ್ರಮ |
ಪರ್ಯಾಪ್ತಶ್ಚ ಭವಾನ್ ಕ್ಷಿಪ್ರಂ ಪೀಡಿತಾನಾಂ ಗತಿರ್ಭವ ॥22॥
ಎಲೈ ಪುರುಷವ್ಯಾಘ್ರರೇ, ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವರೇ, ಭಾರತರೇ, ಎಲ್ಲ ಮಹಾಬಲರಿಂದ ಪೀಡಿಸಲ್ಪಡುತ್ತಿರುವ ನನ್ನ ಸೈನ್ಯವು ಯುದ್ಧದಲ್ಲಿ ನಿಲ್ಲುವಂತೆ ಮಾಡಲು ನಿಮ್ಮನ್ನು ಬಿಟ್ಟು ಬೇರೆ ಯಾರನ್ನೂ ಕಾಣುತ್ತಿಲ್ಲ. ನೀವೊಬ್ಬರು ಸಮರ್ಥರಾಗಿದ್ದೀರಿ. ಪೀಡಿತವಾದ ನನ್ನ ಸೈನ್ಯಗಳಿಗೆ ಶೀಘ್ರವಾಗಿ ನೀವು ರಕ್ಷಕರಾಗಿ.
ಏವಮುಕ್ತೋ ಮಹಾರಾಜ ಪಿತಾ ದೇವವ್ರತಸ್ತವ |
ಚಿಂತಯಿತ್ವಾ ಮುಹೂರ್ತಂ ತು ಕೃತ್ವಾ ನಿಶ್ಚಯಮಾತ್ಮನಃ |
ತವ ಸಂಧರಯನ್(?) ಪುತ್ರಮಬ್ರವೀತ್ ಶಂತನೋಃ ಸುತಃ ॥23॥
ಎಲೈ ಮಹಾರಾಜನೇ, ಹೀಗೆ ಹೇಳಲ್ಪಟ್ಟ ನಿನ್ನ ತಂದೆಯಾದ ದೇವವ್ರತರಾದ ಭೀಷ್ಮರು ಒಂದು ಮುಹೂರ್ತದ ಕಾಲ ಆಲೋಚನೆಯನ್ನು ಮಾಡಿ ಮನಸ್ಸಿನಲ್ಲಿ ತಮ್ಮ ಕಾರ್ಯವನ್ನು ನಿಶ್ಚಯಿಸಿ ನಿನ್ನ ಪುತ್ರನನ್ನು ಸಮಾಧಾನ ಮಾಡುತ್ತಾ ಮಾತನಾಡಿದರು.
ದುರ್ಯೋಧನ ವಿಜಾನೀಹಿ ಸ್ಥಿರೋ ಭವ ವಿಶಾಂಪತೇ |
ಪಾತಯಿಷ್ಯೇ ರಿಪೂನನ್ಯಾನ್ ಪಾಂಡವಾನ್ ಪ್ರತಿಪಾಲಯನ್ ॥24॥
ಎಲೈ ದುರ್ಯೋಧನನೇ, ಇದನ್ನು ತಿಳಿ. ರಾಜನೇ, ಮನಸ್ಸನ್ನು ಸ್ಥಿರವನ್ನಾಗಿ ಮಾಡು. ಪಾಂಡವರನ್ನಾದರೂ ನೋಡುತ್ತಾ ನಾನು ಬೇರೆ ಶತ್ರುಗಳನ್ನು ಕೆಡವುವೆನು.
ಪ್ರತಿಜ್ಞಾತೋ ಜಯೋ ಹ್ಯದ್ಯ ಪಾಂಡವಾನಾಂ ಮಹಾತ್ಮನಾಮ್ |
ಪೂರ್ವಕಾಲಂ ತವ ಮಯಾ ಪ್ರತಿಜ್ಞಾತಂ ಮಹಾಬಲ |
ಹತ್ವಾ ದಶ ಸಹಸ್ರಾಣಿ ಕ್ಷತ್ರಿಯಾಣಾಂ ಮಹಾತ್ಮನಾಮ್ ॥25॥
ಸಂಗ್ರಾಮಾದ್ ವ್ಯಪಯಾತವ್ಯಮೇತತ್ ಕರ್ಮ ಮಮಾಹ್ನಿಕಮ್ |
ಇತಿ ತತ್ಕೃತವಾಂಶ್ಚಾಹಂ ಯಥೋಕ್ತಂ ಭರತರ್ಷಭ ॥26॥
ಈ ದಿನ ಮಹಾತ್ಮರಾದ ಪಾಂಡವರಿಗೆ ಜಯವು ಪ್ರತಿಜ್ಞಾತವಾಗಿದೆ. ಎಲೈ ಮಹಾಬಲನೇ, ನಾನು ಹಿಂದೆ ನಿನ್ನ ಬಳಿಯಲ್ಲಿ ಮಹಾತ್ಮರಾದ ಹತ್ತು ಸಹಸ್ರ ಕ್ಷತ್ರಿಯರನ್ನು ಕೊಲ್ಲದೇ ಯುದ್ಧದಿಂದ ಹಿಂದಿರುಗುವುದಿಲ್ಲ, ಇದು ನನ್ನ ಪ್ರತಿದಿನದ ಕರ್ಮ ಎಂದು ಪ್ರತಿಜ್ಞೆಯನ್ನು ಮಾಡಿದೆ. ಎಲೈ ಭರತಶ್ರೇಷ್ಠನೇ, ನಾನು ಪ್ರತಿಜ್ಞೆಯನ್ನು ಮಾಡಿದಂತೆ ಕಾರ್ಯವನ್ನು ಮಾಡಿದ್ದೇನೆ.
ಅದ್ಯ ಚಾಪಿ ಮಹತ್ಕರ್ಮ ಪ್ರಕರಿಷ್ಯೇ ಮಹಾಹವೇ |
ಅಹಂ ವಾ ನಿಹತಃ ಶೇಷ್ಯೇ ಹನಿಷ್ಯೇ ವಾಽದ್ಯ ಪಾಂಡವಾನ್ ॥27॥
ಈ ದಿನವೂ ಸಹ ದೊಡ್ಡ ಯುದ್ಧದಲ್ಲಿ ಮಹಾಕಾರ್ಯವನ್ನು ಮಾಡುವೆನು. ನಾನಾದರೂ ಹತನಾಗಿ ಭೂಮಿಯ ಮೇಲೆ ಮಲಗುವೆನು ಅಥವಾ ಈ ದಿನ ಪಾಂಡವರನ್ನು ಕೊಲ್ಲುವೆನು.
ಅಶಕ್ಯಾ ಪಾಂಡವಾ ಜೇತುಂ ದೇವೈರಪಿ ಸವಾಸವೈಃ |
ಕಿಂ ಪುನರ್ಮರ್ತ್ಯಧರ್ಮೇಣ ಕ್ಷತ್ರಿಯೇಣ ಮಹಾಬಲ ॥28॥
ಪಾಂಡವರನ್ನು ಇಂದ್ರನಿಂದ ಕೂಡಿದ ದೇವತೆಗಳೂ ಯುದ್ಧದಲ್ಲಿ ಗೆಲ್ಲಲಾರರು. ಎಲೈ ಮಹಾಬಲನೇ, ಇನ್ನು ಮರಣಶೀಲವಾದ ದೇಹವುಳ್ಳ ಕ್ಷತ್ರಿಯನು ಹೇಗೆ ಗೆದ್ದಾನು?
ಅದ್ಯ ತೇ ಪುರುಷವ್ಯಾಘ್ರ ಪ್ರತಿಮೋಕ್ಷ್ಯೇ ಋಣಂ ಮಹತ್ |
ಭರ್ತೃಪಿಂಡಕೃತಂ ರಾಜನ್ ನಿಹತಃ ಪೃತನಾಮುಖೇ ॥29॥
ಎಲೈ ಪುರುಷವ್ಯಾಘ್ರನೇ, ಎಲೈ ರಾಜನೇ, ಈ ದಿನ ಸೇನಾಗ್ರದಲ್ಲಿ ಹತನಾಗಿ ನಾನು ಸ್ವಾಮಿಯ ಅನ್ನವನ್ನು ತಿಂದ ದೊಡ್ಡ ಋಣವನ್ನು ತೀರಿಸುವೆನು.
ಇತ್ಯುಕ್ತ್ವಾ ಭರತಶ್ರೇಷ್ಠಃ ಕ್ಷತ್ರಿಯಾನ್ ಪ್ರತಪನ್ ಶರೈಃ |
ಆಸಸಾದ ದುರಾಧರ್ಷಃ ಪಾಂಡವಾನಾಮನೀಕಿನೀಮ್ ॥30॥

ಹೀಗೆ ಹೇಳಿ ಭರತಶ್ರೇಷ್ಠರೂ, ಯುದ್ಧದಲ್ಲಿ ಸಮೀಪಕ್ಕೆ ಸುಳಿಯಲು ಸಾಧ್ಯವಿಲ್ಲದವರೂ ಆದ ಅವರು ತಮ್ಮ ಬಾಣಗಳಿಂದ ಕ್ಷತ್ರಿಯರನ್ನು ತಾಪಗೊಳಿಸುತ್ತಾ ಪಾಂಡವರ ಸೈನ್ಯದ ಸಮೀಪಕ್ಕೆ ಬಂದರು.
ಅನೀಕಮಧ್ಯೇ ತಿಷ್ಠಂತಂ ಗಾಂಗೇಯಂ ಭರತರ್ಷಭ |
ಆಶೀವಿಷಮಿವ ಕ್ರುದ್ಧಂ ಪಾಂಡವಾಃ ಪರ್ಯವಾರಯನ್ ॥31॥
ಎಲೈ ಭರತಶ್ರೇಷ್ಠನೇ, ತನ್ನ ಸೈನ್ಯದ ಮಧ್ಯದಲ್ಲಿ ನಿಂತು ಸರ್ಪದಂತೆ ಕ್ರುದ್ಧರಾದ ಭೀಷ್ಮರನ್ನು ಪಾಂಡವರು ಸುತ್ತುವರಿದರು.
ದಶಮೇಽಹನಿ ತಸ್ಮಿಂಸ್ತು ದರ್ಶಯನ್ ಶಕ್ತಿಮಾತ್ಮನಃ |
ರಾಜನ್ ಶತಸಹಸ್ರಾಣಿ ಸೋಽವಧೀತ್ ಕುರುನಂದನ ॥32॥
ಎಲೈ ಕುರುನಂದನನೇ, ಆ ಹತ್ತನೆಯ ದಿವಸದಲ್ಲಿ ತಮ್ಮ ಶಕ್ತಿಯನ್ನು ತೋರಿಸುತ್ತಾ ಒಂದು ಲಕ್ಷ ಕ್ಷತ್ರಿಯರನ್ನು ಭೀಷ್ಮರು ಕೊಂದರು.
ಪಾಂಚಾಲಾನಾಂ ಚ ಯೇ ಶ್ರೇಷ್ಠಾ ರಾಜಪುತ್ರಾ ಮಹಾಬಲಾಃ |
ತೇಷಾಮಾದತ್ತ ತೇಜಾಂಸಿ ಜಲಂ ಸೂರ್ಯ ಇವಾಂಶುಭಿಃ ॥33॥
ಪಾಂಚಾಲರಲ್ಲಿ ಶ್ರೇಷ್ಠರೂ, ಮಹಾಬಲರೂ ಆದ ರಾಜಪುತ್ರರು ಯಾರಿದ್ದಾರೆಯೋ ಅವರ ತೇಜಸ್ಸೆಲ್ಲವನ್ನೂ ಸೂರ್ಯನು ತನ್ನ ಕಿರಣಗಳಿಂದ ಜಲವನ್ನು ಹೀರುವಂತೆ ಹೀರಿದರು.
ಹತ್ವಾ ದಶ ಸಹಸ್ರಾಣಿ ಕುಂಜರಾಣಾಂ ತರಸ್ವಿನಾಮ್ |
ಸಾರೋಹಾಣಾಂ ಮಹಾರಾಜ ಹಯಾನಾಂ ಚಾಯುತಂ ಪುನಃ ॥34॥
ಪೂರ್ಣೇ ಶತಸಹಸ್ರೇ ದ್ವೇ ಪದಾತೀನಾಂ ನರೋತ್ತಮಃ |
ಪ್ರಜಜ್ವಾಲ ರಣೇ ಭೀಷ್ಮೋ ವಿಧೂಮ ಇವ ಪಾವಕಃ ॥35॥
ಎಲೈ ಮಹಾರಾಜನೇ, ವೇಗಶಾಲಿಗಳಾದ ಹತ್ತುಸಹಸ್ರ ಗಜಗಳನ್ನು ಗಜಾರೋಹಿಗಳ ಜೊತೆಯಲ್ಲಿ ಕೊಂದು, ಹತ್ತು ಸಹಸ್ರ ಅಶ್ವಗಳನ್ನು ಕೊಂದು, ಪೂರ್ಣವಾದ ಎರಡು ಲಕ್ಷ ಪದಾತಿಗಳನ್ನು ಕೊಂದು, ನರಶ್ರೇಷ್ಠರಾದ ಭೀಷ್ಮರು ರಣರಂಗದಲ್ಲಿ ಧೂಮರಹಿತವಾದ ಅಗ್ನಿಯಂತೆ ಜ್ವಲಿಸಿದರು.
ನ ಚೈನಂ ಪಾಂಡವೇಯಾನಾಂ ಕೇಚಿಚ್ಛೇಕುರ್ನಿರೀಕ್ಷಿತುಮ್ |
ಉತ್ತರಂ ಮಾರ್ಗಮಾಸ್ಥಾಯ ತಪಂತಮಿವ ಭಾಸ್ಕರಮ್ ॥36॥
ಉತ್ತರಾಯಣ ಕಾಲದಲ್ಲಿ ಜ್ವಲಿಸುವ ಸೂರ್ಯನಂತಿದ್ದ ಅವರನ್ನು ನೋಡಲು ಪಾಂಡವರ ಸೈನ್ಯದಲ್ಲಿ ಯಾರೂ ಸಮರ್ಥರಾಗಲಿಲ್ಲ.
ತೇ ಪಾಂಡವೇಯಾಃ ಸಂರಬ್ಧಾ ಮಹೇಷ್ವಾಸೇನ ಪೀಡಿತಾಃ |
ವಧಾಯಾಭ್ಯದ್ರವನ್ ಭೀಷ್ಮಂ ಸೃಂಜಯಾಶ್ಚ ಮಹಾರಥಾಃ ॥37॥
ಮಹಾಧನುರ್ಧಾರಿಗಳಾದ ಭೀಷ್ಮರಿಂದ ಪೀಡಿತರಾಗಿ ಕೋಪಗೊಂಡ ಆ ಪಾಂಡುಪುತ್ರರು ಮತ್ತು ಮಹಾರಥರಾದ ಸೃಂಜಯರು ಸಹ ವಧೆಯನ್ನು ಮಾಡುವುದಕ್ಕಾಗಿ ಭೀಷ್ಮರ ಕಡೆಗೆ ಧಾವಿಸಿದರು.
ಸ ಯುಧ್ಯಮಾನೋ ಬಹುಭಿರ್ಭೀಷ್ಮಃ ಶಾಂತನವಸ್ತದಾ |
ಅವಕೀರ್ಣೋ ಮಹಾಬಾಹುಃ ಶೈಲೋ ಮೇಘೈರಿವಾಸಿತೈಃ ॥38॥
ಶಂತನು ಪುತ್ರರಾದ, ಮಹಾಬಾಹುವಾದ ಭೀಷ್ಮರು ಆಗ ಅನೇಕ ಯೋಧರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಕಪ್ಪು ಮೋಡಗಳಿಂದ ಮುಚ್ಚಲ್ಪಟ್ಟ ಪರ್ವತದಂತೆ ಎಲ್ಲ ಕಡೆಗಳಲ್ಲಿಯೂ ಬಾಣ ಪ್ರಯೋಗಕ್ಕೆ ಒಳಗಾದರು.
ಪುತ್ರಾಸ್ತು ತವ ಗಾಂಗೇಯಂ ಸಮಂತಾತ್ ಪರ್ಯವಾರಯನ್ |
ಮಹತ್ಯಾ ಸೇನಯಾ ಸಾರ್ಧಂ ತತೋ ಯುದ್ಧಮವರ್ತತ ॥39॥
ನಿನ್ನ ಪುತ್ರರು ಎಲ್ಲ ಕಡೆಗಳಿಂದಲೂ ದೊಡ್ಡ ಸೈನ್ಯದ ಜೊತೆಯಲ್ಲಿ ಅವರನ್ನು ರಕ್ಷಿಸಿದರು. ಅನಂತರ ಯುದ್ಧವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಷಡಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಷಟ್‌ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಏಳನೆಯ ಅಧ್ಯಾಯ
ಪಾಂಡವರಿಂದ ಮತ್ತು ಎಲ್ಲಾ ಮಹಾರಥರಿಂದ ಭೀಷ್ಮರ ಕಡೆಗೆ ಧಾವನ.
ಭೀಷ್ಮರ ರಥದ ಸಮೀಪದಲ್ಲಿ ಅರ್ಜುನ-ದುಶ್ಶಾಸನರ ಯುದ್ಧ.
ಸಂಜಯಃ
ಅರ್ಜುನಸ್ತು ರಣೇ ರಾಜನ್ ದೃಷ್ಟ್ವಾ ಭೀಷ್ಮಸ್ಯ ವಿಕ್ರಮಮ್ |
ಶಿಖಂಡಿನಮಥೋವಾಚ ಸಮಭ್ಯೇಹಿ ಪಿತಾಮಹಮ್ ॥1॥
ಸಂಜಯ ಎಲೈ ರಾಜನೇ, ಅರ್ಜುನನಾದರೋ ಯುದ್ಧದಲ್ಲಿ ಭೀಷ್ಮರ ಪರಾಕ್ರಮವನ್ನು ನೋಡಿ ಶಿಖಂಡಿಯನ್ನು ಕುರಿತು, ಪಿತಾಮಹರನ್ನು ಎದುರಿಸುವವನಾಗು ಎಂದು ಹೇಳಿದನು.
ನ ಚಾಪಿ ಭೀಸ್ತ್ವಯಾ ಕಾರ್ಯಾ ಭೀಷ್ಮಾದದ್ಯ ಕಥಂಚನ |
ಅಹಮೇನಂ ಶರೈಸ್ತೀಕ್ಷ್ಣೈಃ ಪಾತಯಿಷ್ಯೇ ರಥೋತ್ತಮಾತ್ ॥2॥
ನೀನು ಈ ದಿನ ಭೀಷ್ಮರಿಂದ ಯಾವ ರೀತಿಯಿಂದಲೂ ಭಯಪಡುವ ಕಾರಣವಿಲ್ಲ. ನಾನು ಅವರನ್ನು ನನ್ನ ತೀಕ್ಷ್ಣವಾದ ಬಾಣಗಳಿಂದ ಅವರ ಶ್ರೇಷ್ಠ ರಥದಿಂದ ಉರುಳಿಸುವೆನು (ಎಂದು ಹೇಳಿದನು).

ಏವಮುಕ್ತಸ್ತು ಪಾರ್ಥೇನ ಶಿಖಂಡೀ ಭರತರ್ಷಭ |
ಅಭ್ಯದ್ರವತ ಗಾಂಗೇಯಂ ಶ್ರುತ್ವಾ ಪಾರ್ಥಸ್ಯ ಭಾಷಿತಮ್ ॥3॥
ಎಲೈ ಭರತಶ್ರೇಷ್ಠನೇ, ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಶಿಖಂಡಿಯು ಅರ್ಜುನನ ಮಾತುಗಳನ್ನು ಕೇಳಿ ಭೀಷ್ಮರ ಕಡೆಗೆ ನುಗ್ಗಿದನು.
ಧೃಷ್ಟದ್ಯುಮ್ನಸ್ತಥಾ ರಾಜನ್ ಸೌಭದ್ರಶ್ಚ ಮಹಾರಥಃ |
ಹೃಷ್ಟಾವಾದ್ರವತಾಂ ಭೀಷ್ಮಂ ಶ್ರುತ್ವಾ ಪಾರ್ಥಸ್ಯ ಭಾಷಿತಮ್ ॥4॥
ಎಲೈ ರಾಜನೇ, ಅರ್ಜುನನ ಮಾತನ್ನು ಕೇಳಿ ಹಾಗೆಯೇ ಧೃಷ್ಟದ್ಯುಮ್ನನೂ, ಮಹಾರಥನಾದ ಅಭಿಮನ್ಯುವೂ ಸಂತೋಷದಿಂದ ಭೀಷ್ಮರ ಕಡೆಗೆ ನುಗ್ಗಿದರು.
ವಿರಾಟದ್ರುಪದೌ ವೃದ್ಧೌ ಕುಂತಿಭೋಜಶ್ಚ ದಂಸಿತಃ |
ಅಭ್ಯದ್ರವತ ಗಾಂಗೇಯಂ ಪುತ್ರಸ್ಯ ತವ ಪಶ್ಯತಃ ॥5॥
ವೃದ್ಧರಾದ ವಿರಾಟ-ದ್ರುಪದರು ಮತ್ತು ಸನ್ನದ್ಧನಾದ ಕುಂತಿಭೋಜ ಇವರೂ ನಿನ್ನ ಪುತ್ರರು ನೋಡುತ್ತಿರುವಂತೆಯೇ ಭೀಷ್ಮರ ಕಡೆಗೆ ಧಾವಿಸಿದರು.
ನಕುಲಃ ಸಹದೇವಶ್ಚ ಧರ್ಮರಾಜಶ್ಚ ವೀರ್ಯವಾನ್ |
ತಥೇತರಾಣಿ ಸೈನ್ಯಾನಿ ಸರ್ವಾಣ್ಯೇವ ವಿಶಾಂಪತೇ |
ಸಮಾದ್ರವಂತ ಗಾಂಗೇಯಂ ಶ್ರುತ್ವಾ ಪಾರ್ಥಸ್ಯ ಭಾಷಿತಮ್ ॥6॥
ಎಲೈ ರಾಜನೇ, ನಕುಲ-ಸಹದೇವರು, ಪರಾಕ್ರಮಶಾಲಿಯಾದ ಯುಧಿಷ್ಠಿರ ಮತ್ತು ಇತರ ಎಲ್ಲಾ ಸೈನ್ಯಗಳು ಅರ್ಜುನನ ಮಾತನ್ನು ಕೇಳಿ ಭೀಷ್ಮರ ಕಡೆಗೆ ಮುನ್ನುಗ್ಗಿದರು.
ಪ್ರತ್ಯುದ್ಯಯುಸ್ತಾವಕಾಶ್ಚ ಸಮೇತಾಸ್ತಾನ್ ಮಹಾರಥಾನ್ |
ಯಥಾಶಕ್ತಿ ಯಥೋತ್ಸಾಹಂ ತನ್ಮೇ ನಿಗದತಃ ಶೃಣು ॥7॥
ನಿನ್ನವರೂ ಸಹ ಜೊತೆಯಾಗಿ ಬರುತ್ತಿದ್ದ ಆ ಮಹಾರಥರಿಗೆ ಅಭಿಮುಖವಾಗಿ ತಮ್ಮ ಶಕ್ತಿ ಮತ್ತು ಉತ್ಸಾಹಗಳಿಗೆ ಅನುಗುಣವಾಗಿ ಹೊರಟರು. ಅದನ್ನು ನನ್ನಿಂದ ಕೇಳು.
ಚಿತ್ರಸೇನೋ ಮಹಾರಾಜ ಚೇಕಿತಾನಂ ಸಮಭ್ಯಯಾತ್ |
ಭೀಷ್ಮಪ್ರೇಪ್ಸುಂ ರಣೇ ಯಾಂತಂ ವೃಷಂ ವ್ಯಾಘ್ರಶಿಶುರ್ಯಥಾ ॥8॥
ಎಲೈ ಮಹಾರಾಜನೇ, ಭೀಷ್ಮರ ಸಮೀಪಕ್ಕೆ ಹೋಗಲು ಯತ್ನಿಸಿದ ಚೇಕಿತಾನನನ್ನು ವ್ಯಾಘ್ರಶಿಶುವು ವೃಷಭವನ್ನು ಸಮೀಪಿಸಿದಂತೆ ಚಿತ್ರಸೇನನು ಸಮೀಪಿಸಿದನು.
ಧೃಷ್ಟದ್ಯುಮ್ನಂ ಮಹಾರಾಜ ಭೀಷ್ಮಾಂತಿಕಮುಪಾಗತಮ್ |
ತ್ವರಮಾಣೋ ರಣೇ ಯತ್ತಂ ಕೃತವರ್ಮಾ ನ್ಯವಾರಯತ್ ॥9॥
ಎಲೈ ಮಹಾರಾಜನೇ, ಭೀಷ್ಮರ ಸಮೀಪಕ್ಕೆ ಬಂದ ಸನ್ನದ್ಧನಾದ ಧೃಷ್ಟದ್ಯುಮ್ನನನ್ನು ಕೃತವರ್ಮನು ಕ್ಷಿಪ್ರವಾಗಿ ರಣರಂಗದಲ್ಲಿ ತಡೆದನು.
ಭೀಮಸೇನಂ ಸುಸಂಕ್ರುದ್ಧಂ ಗಾಂಗೇಯಸ್ಯ ವಧೈಷಿಣಮ್ |
ತ್ವರಮಾಣೋ ಮಹಾರಾಜ ಸೌಮದತ್ತಿರ್ನ್ಯವಾರಯತ್ ॥10॥
ಎಲೈ ಮಹಾರಾಜನೇ, ಭೀಷ್ಮರ ವಧೆಯನ್ನು ಬಯಸಿದ, ಬಹಳವಾಗಿ ಕೋಪಗೊಂಡ ಭೀಮಸೇನನನ್ನು ಭೂರಿಶ್ರವನು ತ್ವರೆಯಿಂದ ತಡೆದನು.
ತಥೈವ ನಕುಲಂ ವೀರಂ ಕಿರಂತಂ ಸಾಯಕಾನ್ ಬಹೂನ್ |
ವಿಕರ್ಣೋ ವಾರಯಾಮಾಸ ಇಚ್ಛನ್ ಭೀಷ್ಮಸ್ಯ ಜೀವಿತಮ್ ॥11॥
ಹಾಗೆಯೇ ಅನೇಕ ಬಾಣಗಳನ್ನು ಪ್ರಯೋಗಿಸುತ್ತಿದ್ದ ವೀರನಾದ ನಕುಲನನ್ನು ಭೀಷ್ಮರ ಪ್ರಾಣವನ್ನು ಉಳಿಸಲು ಬಯಸಿದ ವಿಕರ್ಣನು ತಡೆದನು.
ಸಹದೇವಂ ತಥಾಽಽಯಾಂತಂ ಯತ್ತಂ ಭೀಷ್ಮರಥಂ ಪ್ರತಿ |
ವಾರಯಾಮಾಸ ಸಂಕ್ರುದ್ಧಃ ಕೃಪಃ ಶಾರದ್ವತೋ ಯುಧಿ ॥12॥
ಹಾಗೆಯೇ ಭೀಷ್ಮರ ರಥದ ಕಡೆಗೆ ಬರುತ್ತಿದ್ದ ಸಹದೇವನನ್ನು ಯುದ್ಧದಲ್ಲಿ ಕ್ರುದ್ಧರಾದ ಕೃಪಾಚಾರ್ಯರು ತಡೆದರು.
ರಾಕ್ಷಸಂ ಕ್ರೂರಕರ್ಮಾಣಂ ಭೈಮಸೇನಿಂ ಮಹಾಬಲಮ್ |
ಭೀಷ್ಮಸ್ಯ ನಿಧನಂ ಪ್ರೇಪ್ಸುಂ ದುರ್ಮುಖೋಽಭ್ಯದ್ರವದ್ ಬಲೀ ॥13॥
ಭೀಷ್ಮರ ವಧೆಯನ್ನು ಬಯಸಿ ಅವರನ್ನು ಹಿಡಿಯಲು ಬರುತ್ತಿದ್ದ ಮಹಾಬಲನೂ, ಕ್ರೂರಕರ್ಮನೂ ಆದ ಘಟೋತ್ಕಚರಾಕ್ಷಸನನ್ನು ಬಲಿಷ್ಠನಾದ ದುರ್ಮುಖನು ಎದುರಿಸಿದನು.
ಸಾತ್ಯಕಿಂ ಸಮರೇ ಕ್ರುದ್ಧಮಾರ್ಶ್ಯಶೃಂಗಿರವಾರಯತ್ |
ಭೀಷ್ಮಸ್ಯ ವಧಮಿಚ್ಛಂತಂ ಪಾಂಡವಪ್ರೀತಿಕಾಮ್ಯಯಾ ॥14॥
ಪಾಂಡವರ ಪ್ರೀತಿಯನ್ನು ಬಯಸಿ, ಭೀಷ್ಮರ ವಧೆಯನ್ನು ಇಚ್ಛಿಸಿ, ಯುದ್ಧದಲ್ಲಿ ಕ್ರುದ್ಧನಾಗಿ ಬರುತ್ತಿದ್ದ ಸಾತ್ಯಕಿಯನ್ನು ಅಲಂಬುಸನು ತಡೆದನು.
ಅಭಿಮನ್ಯುಂ ಮಹಾರಾಜ ಯಾಂತಂ ಭೀಷ್ಮರಥಂ ಪ್ರತಿ |
ಸುದಕ್ಷಿಣೋ ಮಹಾರಾಜ ಕಾಂಬೋಜಃ ಪ್ರತ್ಯವಾರಯತ್ ॥15॥
ಎಲೈ ಮಹಾರಾಜನೇ, ಭೀಷ್ಮರ ರಥದ ಕಡೆಗೆ ಹೋಗುತ್ತಿದ್ದ ಅಭಿಮನ್ಯುವನ್ನು ಕಾಂಬೋಜರಾಜನಾದ ಸುದಕ್ಷಿಣನು ತಡೆದನು.

ವಿರಾಟದ್ರುಪದೌ ವೃದ್ಧೌ ಸಮೇತಾವರಿಮರ್ದನೌ |
ಅಶ್ವತ್ಥಾಮಾ ತತಃ ಕ್ರುದ್ಧೋ ವಾರಯಾಮಾಸ ಭಾರತ ||16||
ಎಲೈ ಭಾರತನೇ, ಆಗ ಕೋಪಗೊಂಡ ಅಶ್ವತ್ಥಾಮರು ವೃದ್ಧರೂ ಮತ್ತು ಶತ್ರು ಮರ್ದನರೂ ಆಗಿ ಜೊತೆಯಲ್ಲಿ ಬರುತ್ತಿದ್ದ ವಿರಾಟ-ದ್ರುಪದರನ್ನು ತಡೆದರು.
ತಥಾ ಪಾಂಡುಸುತಂ ಜ್ಯೇಷ್ಠಂ ಭೀಷ್ಮಸ್ಯ ವಧಕಾಂಕ್ಷಿಣಮ್ |
ಭಾರದ್ವಾಜೋ ರಣೇ ಯತ್ತೋ ಧರ್ಮಪುತ್ರಮವಾರಯತ್ ||17||
ಹಾಗೆಯೇ, ಭೀಷ್ಮರ ವಧೆಯನ್ನು ಬಯಸಿ ಸನ್ನದ್ಧನಾಗಿದ್ದ ಪಾಂಡುವಿನ ಜ್ಯೇಷ್ಠ ಪುತ್ರನಾದ ಯುಧಿಷ್ಠಿರನನ್ನು ದ್ರೋಣರು ಯುದ್ಧದಲ್ಲಿ ತಡೆದರು.
ಅರ್ಜುನಂ ರಭಸಂ ಯುದ್ಧೇ ಪುರಸ್ಕೃತ್ಯ ಶಿಖಂಡಿನಮ್ |
ಭೀಷ್ಮಪ್ರೇಪ್ಸುಂ ಮಹಾರಾಜ ತಾಪಯಂತಂ ದಿಶೋ ದಶ |
ದುಃಶಾಸನೋ ಮಹೇಷ್ವಾಸೋ ವಾರಯಾಮಾಸ ಸಂಯುಗೇ ||18||
ಎಲೈ ಮಹಾರಾಜನೇ, ಭೀಷ್ಮರನ್ನು ಕೊಲ್ಲಲು ಬಯಸಿ, ಶಿಖಂಡಿಯನ್ನು ಮುಂದಿಟ್ಟುಕೊಂಡು ಹತ್ತು ದಿಕ್ಕುಗಳಲ್ಲಿಯೂ ಶತ್ರುಗಳನ್ನು ತಾಪಗೊಳಿಸುತ್ತಿದ್ದ ವೇಗಶಾಲಿಯಾದ ಅರ್ಜುನನನ್ನು ಮಹಾಧನುರ್ಧಾರಿಯಾದ ದುಶ್ಶಾಸನನು ಯುದ್ಧದಲ್ಲಿ ತಡೆದನು.
ಅನ್ಯೇ ಚ ತಾವಕಾ ಯೋಧಾಃ ಪಾಂಡವಾನಾಂ ಮಹಾರಥಾನ್ |
ಭೀಷ್ಮಾಯಾಭಿಮುಖಂ ಯಾತಾನ್ ವಾರಯಾಮಾಸುರಾಹವೇ ||19||
ನಿನ್ನ ಉಳಿದ ಯೋಧರು ಭೀಷ್ಮರ ಅಭಿಮುಖವಾಗಿ ಹೋಗುತ್ತಿದ್ದ ಪಾಂಡವರ ಮಹಾರಥರನ್ನು ರಣರಂಗದಲ್ಲಿ ತಡೆದರು.
ಧೃಷ್ಟದ್ಯುಮ್ನಸ್ತು ಸೈನ್ಯಾನಿ ಪ್ರಾಕ್ರೋಶತ ಪುನಃ ಪುನಃ |
ಅಭಿದ್ರವತ ಸಂರಬ್ಧಾ ಭೀಷ್ಮಮೇಕಂ ಮಹಾಬಲಮ್ ||20||
ಧೃಷ್ಟದ್ಯುಮ್ನನಾದರೋ ಪುನಃ ಪುನಃ ಕಿರುಚಿ ಎಲ್ಲರೂ ಕ್ರುದ್ಧರಾಗಿ ಮಹಾಬಲರಾದ ಭೀಷ್ಮರೊಬ್ಬರ ಮೇಲೆಯೇ ಎರಗಿ ಎಂದು ಸೈನ್ಯಗಳಿಗೆ ಹೇಳುತ್ತಿದ್ದನು.
ಏಷೋಽರ್ಜುನೋ ರಣೇ ಭೀಷ್ಮಂ ಪ್ರಯಾತಿ ಕುರುನಂದನಃ |
ಅಭಿದ್ರವತ ಮಾ ಭೈಷ್ಟ ಭೀಷ್ಮೋ ನ ಪ್ರಾಪ್ಸ್ಯತೇ ಹಿ ವಃ ||21||
ಕುರುನಂದನನಾದ ಈ ಅರ್ಜುನನು ಯುದ್ಧದಲ್ಲಿ ಭೀಷ್ಮರ ಮೇಲೆ ಹೋಗುತ್ತಿದ್ದಾನೆ. ನೀವೂ ಧಾವಿಸಿ, ಹೆದರಬೇಡಿ. ಭೀಷ್ಮರು ನಿಮ್ಮನ್ನು ಮುಟ್ಟಲಾರರು.
ಅರ್ಜುನಂ ಸಮರೇ ಯೋದ್ಧುಂ ನೋತ್ಸಹೇತಾಪಿ ವಾಸವಃ |
ಕಿಮು ಭೀಷ್ಮೋ ರಣೇ ವೀರಾ ಗತಸತ್ತ್ವೋಽಲ್ಪಜೀವಿತಃ ||22||
ಇಂದ್ರನೂ ಸಹ ಅರ್ಜುನನನ್ನು ಯುದ್ಧದಲ್ಲಿ ಎದುರಿಸಲಾರ. ಎಲೈ ವೀರರೇ, ಹೀಗಿರುವಾಗ ತಮ್ಮ ಶಕ್ತಿಯನ್ನು ಕಳೆದುಕೊಂಡು ಅಲ್ಪಜೀವನವನ್ನು ಹೊಂದಿರುವ ಭೀಷ್ಮರು ಹೇಗೆ ಎದುರಿಸಬಹುದು? (ಎಂದು ಹೇಳುತ್ತಿದ್ದನು)
ಇತಿ ಸೇನಾಪತೇಃ ಶ್ರುತ್ವಾ ಪಾಂಡವಾನಾಂ ಮಹಾರಥಾಃ |
ಅಭ್ಯದ್ರವಂತ ಸಂಹೃಷ್ಟಾ ಗಾಂಗೇಯಸ್ಯ ರಥಂ ಪ್ರತಿ ||23||
ಪಾಂಡವರ ಮಹಾರಥರು ಸೇನಾಪತಿಯ ಈ ರೀತಿಯ ಮಾತುಗಳನ್ನು ಕೇಳಿ ಸಂತೋಷಗೊಂಡವರಾಗಿ ಭೀಷ್ಮರ ರಥದ ಕಡೆಗೆ ಮುನ್ನುಗ್ಗಿದರು.
ಆಗಚ್ಛತಸ್ತಾನ್ ಸಮರೇ ವಾರ್ಯೋರ್ಘಾನ್ ಪ್ರಬಲಾನಿವ |
ನ್ಯವಾರಯಂತ ಸಂಹೃಷ್ಟಾಸ್ತಾವಕಾಃ ಪುರುಷರ್ಷಭಾಃ ||24||
ಭೀಷ್ಮರ ಕಡೆಗೆ ಬರುತ್ತಿದ್ದ ಅವರನ್ನು ನಿನ್ನ ಸೈನ್ಯದ ಪುರುಷಶ್ರೇಷ್ಠರು ಹರ್ಷಗೊಂಡವರಾಗಿ ಜಲಪ್ರವಾಹವನ್ನು ಪರ್ವತವು ತಡೆದಂತೆ ರಣರಂಗದಲ್ಲಿ ತಡೆದರು.
ದುಃಶಾಸನೋ ಮಹಾರಾಜ ಭಯಂ ತ್ಯಕ್ತ್ವಾ ಮಹಾರಥಃ |
ಭೀಷ್ಮಸ್ಯ ಜೀವಿತಾಕಾಂಕ್ಷೀ ಧನಂಜಯಮುಪಾದ್ರವತ್ ||25||
ಎಲೈ ಮಹಾರಾಜನೇ, ಮಹಾರಥನಾದ ದುಶ್ಶಾಸನನು ಭಯವನ್ನು ತೊರೆದು ಭೀಷ್ಮರ ಜೀವಿತವನ್ನು ಬಯಸಿ ಅರ್ಜುನನ ಮೇಲೆ ಎರಗಿದನು.
ತಥೈವ ಪಾಂಡವಾಃ ಶೂರಾ ಗಾಂಗೇಯಸ್ಯ ರಥಂ ಪ್ರತಿ |
ಅಭ್ಯದ್ರವಂತ ಸಂಗ್ರಾಮೇ ತವ ಪುತ್ರಾನ್ ಮಹಾರಥಾನ್ ||26||
ಹಾಗೆಯೇ, ಶೂರರಾದ ಪಾಂಡವರು ಭೀಷ್ಮರ ರಥದ ಬಳಿ ಇದ್ದ ಮಹಾರಥರಾದ ನಿನ್ನ ಪುತ್ರರ ಮೇಲೆ ರಣರಂಗದಲ್ಲಿ ಎರಗಿದರು.
ತತ್ರಾದ್ಭುತಮಪಶ್ಯಾಮ ಚಿತ್ರರೂಪಂ ವಿಶಾಂಪತೇ |
ದುಃಶಾಸನರಥಂ ಪ್ರಾಪ್ತೋ ಯತ್ ಪಾರ್ಥೋ ನಾತ್ಯವರ್ತತ ||27||
ಎಲೈ ರಾಜನೇ, ದುಶ್ಶಾಸನನ ರಥದ ಸಮೀಪಕ್ಕೆ ಬಂದ ಅರ್ಜುನನು ಅವನನ್ನು ದಾಟಿ ಹೋಗಲಾರದ ಅದ್ಭುತವಾದ ಮತ್ತು ವಿಚಿತ್ರವಾದ ಘಟನೆಯನ್ನು ನಾನು ನೋಡಿದೆನು.
ಯಥಾ ವಾರಯತೇ ವೇಲಾ ಕ್ಷುಭಿತಂ ವೈ ಮಹಾರ್ಣವಮ್ |
ತಥೈವ ಪಾಂಡವಂ ಕ್ರುದ್ಧಂ ತವ ಪುತ್ರೋ ನ್ಯವಾರಯತ್ ||28||
ಸಮುದ್ರ ತೀರವು ಕ್ಷೋಭೆಗೊಂಡ ಮಹಾಸಮುದ್ರವನ್ನು ತಡೆದಂತೆ ನಿನ್ನ ಪುತ್ರನಾದ ದುಶ್ಶಾಸನನು ಕೋಪಗೊಂಡ ಅರ್ಜುನನನ್ನು

ತಡೆದನು.
ಉಭೌ ಹಿ ರಥಿನಾಂ ಶ್ರೇಷ್ಠಾವುಭೌ ಭಾರತ ದುರ್ಜಯೌ |
ಉಭೌ ಚಂದ್ರಾರ್ಕಸದೃಶೌ ಕಾಂತ್ಯಾ ದೀಪ್ತ್ಯಾ ಚ ಭಾರತ ||29||
ಎಲ್ಲೈ ಭಾರತನೇ, ಇಬ್ಬರೂ ರಥಿಶ್ರೇಷ್ಠರು, ಇಬ್ಬರೂ ದುರ್ಜಯರು, ಕಾಂತಿಯಿಂದಲೂ ಮತ್ತು ದೀಪ್ತಿಯಿಂದಲೂ ಇಬ್ಬರೂ ಚಂದ್ರ-ಸೂರ್ಯರಿಗೆ ಸದೃಶರಾದವರು.
ತೌ ತಥಾ ಜಾತಸಂರಂಭಾವನ್ಯೋನ್ಯವಧಕಾಂಕ್ಷಿಣೌ |
ಸಮೀಯತುರ್ಮಹಾಸಂಖೇ ಮಯಶಕ್ರೌ ಯಥಾ ಪುರಾ ||30||
ಅಂತಹ ಅವರಿಬ್ಬರು ಕೋಪಗೊಂಡವರಾಗಿ ಅನ್ಯೋನ್ಯ ವಧೆಯನ್ನು ಬಯಸಿ ಹಿಂದೆ ಮಯ-ಶಕ್ರರು ಸೇರಿದಂತೆ ಮಹಾಯುದ್ಧದಲ್ಲಿ ಪರಸ್ಪರವಾಗಿ ಎದುರಿಸಿದರು.
ದುಃಶಾಸನೋ ಮಹಾರಾಜ ಪಾಂಡವಂ ವಿಶಿಖೈಸ್ತ್ರಿಭಿಃ |
ವಾಸುದೇವಂ ಚ ವಿಂಶತ್ಯಾ ತಾಡಯಾಮಾಸ ಸಂಯುಗೇ ||31||
ಎಲ್ಲೈ ಮಹಾರಾಜನೇ, ದುಶ್ಶಾಸನನು ಮೂರು ಬಾಣಗಳಿಂದ ಅರ್ಜುನನನ್ನು ಹೊಡೆದು ಯುದ್ಧದಲ್ಲಿ ಕೃಷ್ಣನನ್ನು ಇಪ್ಪತ್ತು ಬಾಣಗಳಿಂದ ಹೊಡೆದನು.
ದುರ್ಯೋಧನೋ ಜಾತಮನ್ಯುರ್ವಾರ್ಷ್ಣೇಯಂ ವೀಕ್ಷ್ಯ ಪೀಡಿತಮ್ |
ದುಃಶಾಸನಂ ಶತೇನಾಜೌ ನಾರಾಚಾನಾಂ ಸಮಾರ್ಪಯತ್ ||32||
ಆಗ ಪ್ರತಿಯಾಗಿ ಯುದ್ಧಮಾಡಲು ಅಶಕ್ಯನಾದ ಅರ್ಜುನನು ಕೃಷ್ಣನು ಪೀಡಿತನಾದುದನ್ನು ನೋಡಿ ಎಲ್ಲೈ ರಾಜನೇ, ದುಶ್ಶಾಸನನ ಮೇಲೆ ನೂರು ನಾರಾಚಗಳನ್ನು ಪ್ರಯೋಗಿಸಿದನು (ದುರ್ಯೋಧನ ಶಬ್ದಕ್ಕೆ ಅರ್ಜುನನೆಂದು ಅರ್ಥವನ್ನು ಮಾಡಬೇಕು-ಲಕ್ಷಾಲಂಕಾರ).
ತೇ ತಸ್ಯ ಕವಚಂ ಭಿತ್ತ್ವಾ ಪಪುಃ ಶೋಣಿತಮಾಹವೇ |
ಯಥೈವ ಪನ್ನಗಾ ರಾಜನ್ ತಟಾಕಂ ತೃಷಿತಾ ಯಥಾ ||33||
ಎಲ್ಲೈ ರಾಜನೇ, ಆ ನಾರಾಚಗಳು ಅವನ ಕವಚವನ್ನು ಭೇದಿಸಿ ಬಾಯಾರಿದ ಸರ್ಪಗಳು ತಟಾಕದೊಳಗೆ ಬೀಳುವಂತೆ ಅವನ ಶರೀರದೊಳಗೆ ಇಳಿದು ಅವನ ರಕ್ತವನ್ನು ಕುಡಿದವು.
ದುಃಶಾಸನಸ್ತತಃ ಕ್ರುದ್ಧಃ ಪಾರ್ಥಂ ವಿವ್ಯಾಧ ಪಂಚಭಿಃ |
ಲಲಾಟೇ ಭರತಶ್ರೇಷ್ಠ ಶರೈಃ ಸನ್ನತಪರ್ವಭಿಃ ||34||
ಎಲ್ಲೈ ಭರತಶ್ರೇಷ್ಠನೇ, ಆಗ ದುಶ್ಶಾಸನನು ಕ್ರುದ್ಧನಾಗಿ ಅರ್ಜುನನನ್ನು ಅವನ ಹಣೆಯಲ್ಲಿ ಬಾಗಿದ ತುದಿಯುಳ್ಳ ಐದು ಬಾಣಗಳಿಂದ ಹೊಡೆದನು.
ಲಲಾಟಸ್ಥೈಸ್ತು ತೈರ್ಬಾಣೈಃ ಶುಶುಭೇ ಪಾಂಡವೋತ್ತಮಃ |
ಯಥಾ ಮೇರುರ್ಮಹಾರಾಜ ಶೃಂಗೈರತ್ಯರ್ಥಮುಚ್ಛ್ರಿತೈಃ ||35||
ಎಲ್ಲೈ ಮಹಾರಾಜನೇ, ಪಾಂಡವಶ್ರೇಷ್ಠನಾದ ಅರ್ಜುನನು ತನ್ನ ಹಣೆಯಲ್ಲಿ ನೆಟ್ಟ ಆ ಬಾಣಗಳಿಂದ ಎತ್ತರವಾದ ಶೃಂಗಗಳಿಂದ ಕೂಡಿದ ಮೇರುಪರ್ವತದಂತೆ ಶೋಭಿಸಿದನು.
ಸೋಽತಿವಿದ್ಧೋ ಮಹೇಷ್ವಾಸಃ ಪುತ್ರೇಣ ತವ ಧನ್ವಿನಾ |
ವ್ಯರಾಜತ ರಣೇ ಪಾರ್ಥಃ ಕಿಂಶುಕಃ ಪುಷ್ಪವಾನಿವ ||36||
ಧನುರ್ಧಾರಿಯಾದ ನಿನ್ನ ಪುತ್ರನಿಂದ ಬಹಳವಾಗಿ ಗಾಯಗೊಂಡ ಮಹಾಧನುರ್ಧಾರಿಯಾದ ಅರ್ಜುನನು ಪುಷ್ಪಭರಿತವಾದ ಕಿಂಶುಕವೃಕ್ಷದಂತೆ ರಣದಲ್ಲಿ ಶೋಭಿಸಿದನು.
ದುಃಶಾಸನಂ ತತಃ ಕ್ರುದ್ಧಃ ಪೀಡಯಾಮಾಸ ಪಾಂಡವಃ |
ಪರ್ವಣೀವ ಸುಸಂಕ್ರುದ್ಧೋ ರಾಹುರುಗ್ರೋ ನಿಶಾಕರಮ್ ||37||
ಅನಂತರ ಕೋಪಗೊಂಡ ಅರ್ಜುನನು ಪರ್ವಕಾಲದಲ್ಲಿ ಬಹಳ ಕೋಪಗೊಂಡ ಘೋರವಾದ ರಾಹುವು ಚಂದ್ರನನ್ನು ಪೀಡಿಸುವಂತೆ ದುಶ್ಶಾಸನನನ್ನು ಪೀಡಿಸಿದನು.
ಪೀಡ್ಯಮಾನೋ ಬಲವತಾ ಪುತ್ರಸ್ತವ ವಿಶಾಂಪತೇ |
ವಿವ್ಯಾಧ ಸಮರೇ ಪಾರ್ಥಂ ಕಂಕಪತ್ರೈಃ ಶಿಲಾಶಿತೈಃ ||38||
ಎಲ್ಲೈ ರಾಜನೇ, ಬಲಿಷ್ಠನಾದ ಅರ್ಜುನನಿಂದ ಪೀಡಿಸಲ್ಪಟ್ಟ ನಿನ್ನ ಪುತ್ರನು ಕಂಕಪತ್ರವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳಿಂದ ಯುದ್ಧದಲ್ಲಿ ಅರ್ಜುನನನ್ನು ಹೊಡೆದನು.
ತಸ್ಯ ಪಾರ್ಥೋ ಧನುಶ್ಛಿತ್ತ್ವಾ ತ್ವರಮಾಣಃ ಪರಾಕ್ರಮೀ |
ಆಜಘಾನ ತತಃ ಪಶ್ಚಾತ್ ಪುತ್ರಂ ತೇ ನವಭಿಃ ಶರೈಃ ||39||
ಪರಾಕ್ರಮಶಾಲಿಯಾದ ಅರ್ಜುನನು ತ್ವರೆ ಮಾಡುತ್ತಾ, ನಿನ್ನ ಪುತ್ರನ ಧನುಸ್ಸನ್ನು ಕತ್ತರಿಸಿ, ಅನಂತರ ಒಂಬತ್ತು ಬಾಣಗಳಿಂದ ಅವನನ್ನು ಹೊಡೆದನು.
ಸೋಽನ್ಯತ್ ಕಾರ್ಮುಕಮಾದಾಯ ಭೀಷ್ಮಸ್ಯ ಪ್ರಮುಖೇ ಸ್ಥಿತಃ |
ಅರ್ಜುನಂ ಪಂಚವಿಂಶತ್ಯಾ ಬಾಹ್ವೋರುರಸಿ ಚಾರ್ಪಯತ್ ||40||
ಭೀಷ್ಮರ ಎದುರಿನಲ್ಲಿ ನಿಂತಿದ್ದ ದುಶ್ಶಾಸನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಇಪ್ಪತ್ತೈದು ಬಾಣಗಳಿಂದ ಅರ್ಜುನನನ್ನು ಬಾಹುಗಳಲ್ಲಿ ಮತ್ತು ವಕ್ಷಸ್ಸ್ಥಲದಲ್ಲಿ ಹೊಡೆದನು.

ತಸ್ಯ ಕ್ರುದ್ಧೋ ಮಹಾರಾಜ ಪಾಂಡವಃ ಶತ್ರುಕರ್ಶನಃ |
ಅಪ್ರೈಷೀದ್ ವಿಶಿಖಾನ್ ಘೋರಾನ್ ಯಮದಂಡೋಪಮಾನ್ ಬಹೂನ್॥
ಎಲೈ ಮಹಾರಾಜನೇ, ಶತ್ರುಕರ್ಶನನಾದ ಪಾಂಡವನು ಬಹಳ ಕೋಪಗೊಂಡು ಅವನ ಮೇಲೆ ಯಮದಂಡದಂತಿದ್ದ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ಅಪ್ರಾಪ್ತಾನೇವ ತಾನ್ ಬಾಣಾಂಶ್ಚಿಚ್ಛೇದ ತನಯಸ್ತವ |
ಯತಮಾನಸ್ಯ ಪಾರ್ಥಸ್ಯ ತದದ್ಭುತಮಿವಾಭವತ್ |
ಪಾರ್ಥಂ ಚ ನಿಶಿತೈರ್ಬಾಣೈರವಿಧ್ಯತ್ತನಯಸ್ತವ ॥42॥
ನಿನ್ನ ಪುತ್ರನು ತನ್ನ ಬಳಿಗೆ ಬರುವುದಕ್ಕಿಂತ ಮೊದಲೇ ಪ್ರಯತ್ನಶಾಲಿಯಾದ ಅರ್ಜುನನ ಆ ಬಾಣಗಳನ್ನು ಕತ್ತರಿಸಿದನು. ಅದು ಅದ್ಭುತವಾಗಿದ್ದಿತು ಮತ್ತು ನಿನ್ನ ಪುತ್ರನು ತೀಕ್ಷ್ಣವಾದ ಬಾಣಗಳಿಂದ ಅರ್ಜುನನನ್ನು ಹೊಡೆದನು.
ತತಃ ಕ್ರುದ್ಧೋ ರಣೇ ಪಾರ್ಥಃ ಶರಾನ್ ಸಂಧಾಯ ಕಾರ್ಮುಕೇ |
ಪ್ರೇಷಯಾಮಾಸ ಸಮರೇ ಸ್ವರ್ಣಪುಂಖಾನ್ ಶಿಲಾಶಿತಾನ್ ॥43॥
ಆಗ ಅರ್ಜುನನು ಯುದ್ಧದಲ್ಲಿ ಕೋಪಗೊಂಡು, ಸ್ವರ್ಣಪುಂಖಗಳನ್ನು ಹೊಂದಿ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳನ್ನು ಧನುಸ್ಸಿನಲ್ಲಿ ಹೂಡಿ ಪ್ರಯೋಗಿಸಿದನು.
ನ್ಯಮಜ್ಜಂಸ್ತೇ ಮಹಾರಾಜ ತಸ್ಯ ಕಾಯೇ ಮಹಾತ್ಮನಃ |
ಯಥಾ ಹಂಸಾ ಮಹಾರಾಜ ತಡಾಗಂ ಪ್ರಾಪ್ಯ ಭಾರತ ॥44॥
ಎಲೈ ಭಾರತನೇ, ಮಹಾರಾಜನೇ, ಹಂಸಗಳು ತಟಾಕವನ್ನು ಪ್ರವೇಶಿಸುವಂತೆ ಮಹಾತ್ಮನಾದ ದುಶ್ಶಾಸನನ ಶರೀರವನ್ನು ಅವು ಪ್ರವೇಶಿಸಿದವು.
ಪೀಡಿತಶ್ಚೈವ ಪುತ್ರಸ್ತೇ ಪಾಂಡವೇನ ಮಹಾತ್ಮನಾ |
ಹಿತ್ವಾ ಪಾರ್ಥಂ ರಣೇ ತೂರ್ಣಂ ಭೀಷ್ಮಸ್ಯ ರಥಮಾಶ್ರಯತ್ |
ಅಗಾಧೇ ಮಜ್ಜತಸ್ತಸ್ಯ ದ್ವೀಪೋ ಭೀಷ್ಮೋಽಭವತ್ ತದಾ ॥45॥
ಮಹಾತ್ಮನಾದ ಅರ್ಜುನನಿಂದ ಹೀಗೆ ಪೀಡಿತನಾದ ನಿನ್ನ ಪುತ್ರನು ಶೀಘ್ರವಾಗಿ ತನ್ನ ರಥವನ್ನು ಬಿಟ್ಟು ಭೀಷ್ಮರ ರಥವನ್ನು ಆಶ್ರಯಿಸಿದನು. ಅಗಾಧವಾದ ನೀರಿನಲ್ಲಿ ಮುಳುಗುವ ಅವನಿಗೆ ಆಗ ಭೀಷ್ಮರು ದ್ವೀಪವಾದರು.
ಪ್ರತಿಲಭ್ಯ ತತಃ ಸಂಜ್ಞಾಂ ಪುತ್ರಸ್ತವ ವಿಶಾಂಪತೇ |
ಅವಾರಯತ್ ತತಃ ಶೂರೋ ಭೂಯ ಏವ ಪರಾಕ್ರಮೀ ॥46॥
ಶರೈಃ ಸುನಿಶಿತೈಃ ಪಾರ್ಥಂ ಯಥಾ ವೃತ್ರಃ ಪುರಂದರಮ್ |
ನಿರ್ಬಿಭೇದ ಮಹಾವೀರ್ಯೋ ವಿವ್ಯಥೇ ನೈವ ಚಾರ್ಜುನಾತ್ ॥47॥
ಎಲೈ ರಾಜನೇ, ನಿನ್ನ ಪುತ್ರನು ಪುನಃ ಪ್ರಜ್ಞೆಯನ್ನು ಪಡೆದು ಶೂರನೂ, ಪರಾಕ್ರಮಶಾಲಿಯೂ ಆದ ಅವನು ಪುನಃ ವೃತ್ರಾಸುರನು ಇಂದ್ರನನ್ನು ಭೇದಿಸಿದಂತೆ ಅರ್ಜುನನನ್ನು ತೀಕ್ಷ್ಣವಾದ ಬಾಣಗಳಿಂದ ಭೇದಿಸಿದನು. ಮಹಾಪರಾಕ್ರಮ- ಶಾಲಿಯಾದ ಅವನು ಅರ್ಜುನನಿಗೆ ಹೆದರಲಿಲ್ಲ (ವ್ಯಥೆ ಹಡಲಿಲ್ಲ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಎಂಟನೆಯ ಅಧ್ಯಾಯ

ಅಲಂಬುಸಾದಿಗಳ ಜೊತೆಯಲ್ಲಿ ಸಾತ್ಯಕಿ ಮೊದಲಾದವರ ಯುದ್ಧ.
ಸಂಜಯಃ
ಸಾತ್ಯಕಿಂ ದಂಸಿತಂ ಯುದ್ಧೇ ಭೀಷ್ಮಾಯಾಭ್ಯುದ್ಯತಂ ತದಾ |
ಆರ್ಶ್ಯಶೃಂಗಿರ್ಮಹೇಷ್ವಾಸೋ ವಾರಯಾಮಾಸ ಸಂಯುಗೇ ॥1॥
ಸಂಜಯ ಯುದ್ಧದಲ್ಲಿ ಸನ್ನದ್ಧನಾಗಿ ಭೀಷ್ಮರ ಜೊತೆಯಲ್ಲಿ ಹೋರಾಡಲು ಉದ್ಯುಕ್ತನಾದ ಸಾತ್ಯಕಿಯನ್ನು
ಮಹಾಧನುರ್ಧಾರಿಯಾದ ಅಲಂಬುಸನು ತಡೆದನು.
ಮಾಧವಸ್ತು ಸುಸಂಕ್ರುದ್ಧೋ ರಾಕ್ಷಸಂ ನವಭಿಃ ಶರೈಃ |
ಆಜಘಾನ ರಣೇ ರಾಜನ್ ಪ್ರಹಸನ್ನಿವ ಭಾರತ ॥2॥
ಎಲೈ ರಾಜನೇ, ಭಾರತನೇ, ಬಹಳ ಕೋಪಗೊಂಡ ಸಾತ್ಯಕಿಯಾದರೋ ನಗುವವನಂತೆ ಅಲಂಬುಸ ರಾಕ್ಷಸನನ್ನು ಒಂಬತ್ತು ಬಾಣಗಳಿಂದ ಹೊಡೆದನು.
ತಥೈವ ರಾಕ್ಷಸೋ ರಾಜನ್ ಮಾಧವಂ ನಿಶಿತೈಃ ಶರೈಃ |
ಅರ್ದಯಾಮಾಸ ರಾಜೇಂದ್ರ ಸಂಕ್ರುದ್ಧಃ ಶಿನಿಪುಂಗವಮ್ ॥3॥
ಎಲೈ ರಾಜೇಂದ್ರನೇ, ಹಾಗೆಯೇ ರಾಕ್ಷಸನೂ ಸಹ ಕೋಪಗೊಂಡು ತೀಕ್ಷ್ಣವಾದ ಬಾಣಗಳಿಂದ ಶಿನಿಪುಂಗವನಾದ ಸಾತ್ಯಕಿಯನ್ನು ಮರ್ದಿಸಿದನು.
ಶೈನೇಯಃ ಶರಸಂಘಂ ತು ಪ್ರೇಷಯಾಮಾಸ ಸಂಯುಗೇ |
ರಾಕ್ಷಸಾಯ ಸುಸಂಕ್ರುದ್ಧೋ ಮಾಧವಃ ಪರವೀರಹಾ ॥4॥

ಪರವೀರಘಾತಕನಾದ ಶಿನಿಪುತ್ರನಾದ ಸಾತ್ಯಕಿಯು ಯುದ್ಧದಲ್ಲಿ ಬಹಳ ಕ್ರುದ್ಧನಾಗಿ ರಾಕ್ಷಸನ ಮೇಲೆ ಬಾಣಗಳ ಸಮೂಹಗಳನ್ನು ಪ್ರಯೋಗಿಸಿದನು.
ತತೋ ರಕ್ಷೋ ಮಹಾಬಾಹುಂ ಸಾತ್ಯಕಿಂ ಸತ್ಯವಿಕ್ರಮಮ್ |
ವಿವ್ಯಾಧ ವಿಶಿಖೈಸ್ತೀಕ್ಷ್ಣೈಃ ಸಿಂಹನಾದಂ ನನಾದ ಚ ॥5॥
ಆಗ ರಾಕ್ಷಸನಾದ ಅಲಂಬುಸನು ಸತ್ಯವಿಕ್ರಮನೂ, ಮಹಾಬಾಹುವೂ ಆದ ಸಾತ್ಯಕಿಯನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದು ಸಿಂಹನಾದವನ್ನು ಮಾಡಿದನು.
ಮಾಧವಸ್ತು ಭೃಶಂ ವಿದ್ಧೋ ರಾಕ್ಷಸೇನ ರಣೇ ತದಾ |
ಧೈರ್ಯಮಾಲಂಬ್ಯ ತೇಜಸ್ವೀ ಜಹಾಸ ಚ ನನಾದ ಚ ॥6॥
ಮಧುಕುಲೋತ್ಪನ್ನನಾದ, ತೇಜಸ್ವಿಯಾದ ಸಾತ್ಯಕಿಯಾದರೋ ಯುದ್ಧದಲ್ಲಿ ರಾಕ್ಷಸನಿಂದ ಗಾಯಗೊಳಿಸಲ್ಪಟ್ಟರೂ ಧೈರ್ಯವನ್ನು ಅವಲಂಬಿಸಿ, ನಕ್ಕು ಸಿಂಹನಾದವನ್ನು ಮಾಡಿದನು.
ಭಗದತ್ತಸ್ತತಃ ಕ್ರುದ್ಧೋ ಮಾಧವಂ ನಿಶಿತೈಃ ಶರೈಃ |
ತಾಡಯಾಮಾಸ ಸಮರೇ ತೋತ್ತ್ರೈರಿವ ಮಹಾಗಜಮ್ ॥7॥
ಅನಂತರ ಕೋಪಗೊಂಡ ಭಗದತ್ತನು ಅಂಕುಶದಿಂದ ಮಹಾಗಜವನ್ನು ಹೊಡೆದಂತೆ ತೀಕ್ಷ್ಣವಾದ ಬಾಣಗಳಿಂದ ರಣರಂಗದಲ್ಲಿ ಸಾತ್ಯಕಿಯನ್ನು ಹೊಡೆದನು.
ವಿಹಾಯ ರಾಕ್ಷಸಂ ಯುದ್ಧೇ ಶೈನೇಯೋ ರಥಿನಾಂವರಃ |
ಪ್ರಾಗ್ಜ್ಯೋತಿಷಾಯ ಚಿಕ್ಷೇಪ ಶರಾನ್ ಸನ್ನತಪರ್ವಣಃ ॥8॥
ರಥಿಶ್ರೇಷ್ಠನಾದ ಸಾತ್ಯಕಿಯು ಯುದ್ಧದಲ್ಲಿ ಅಲಂಬುಸ ರಾಕ್ಷಸನನ್ನು ಬಿಟ್ಟು ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನ ಮೇಲೆ ಬಾಗಿದ ತುದಿಯುಳ್ಳ ಬಾಣಗಳನ್ನು ಪ್ರಯೋಗಿಸಿದನು.
ತಸ್ಯ ಪ್ರಾಗ್ಜ್ಯೋತಿಷೋ ರಾಜಾ ಮಾಧವಸ್ಯ ಮಹದ್ಧನುಃ |
ಚಿಚ್ಛೇದ ಶಿತಧಾರೇಣ ಭಲ್ಲೇನ ಕೃತಹಸ್ತವತ್ ॥9॥
ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತರಾಜನು ಸಾತ್ಯಕಿಯ ದೊಡ್ಡ ಧನುಸ್ಸನ್ನು ತೀಕ್ಷ್ಣವಾದ ಧಾರೆಯುಳ್ಳ ತನ್ನ ಭಲ್ಲದಿಂದ ಸಿದ್ಧಹಸ್ತನಂತೆ ಕತ್ತರಿಸಿದನು.
ಅಥಾನ್ಯದ್ ಧನುರಾದಾಯ ವೇಗವತ್ ಪರವೀರಹಾ |
ಭಗದತ್ತಂ ರಣೇ ಕ್ರುದ್ಧೋ ವಿವ್ಯಾಧ ನಿಶಿತೈಃ ಶರೈಃ ॥10॥
ಪರವೀರಘಾತಕನಾದ ಸಾತ್ಯಕಿಯು ವೇಗಶಾಲಿಯಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಕೋಪಗೊಂಡು ತೀಕ್ಷ್ಣವಾದ ಬಾಣಗಳಿಂದ ಭಗದತ್ತನನ್ನು ಹೊಡೆದನು.
ಸೋಽತಿವಿದ್ಧೋ ಮಹೇಷ್ವಾಸಃ ಸೃಕ್ಕಿಣೀ ಸಂಲಿಹನ್ ಮುಹುಃ |
ಶಕ್ತಿಂ ಕನಕವೈಡೂರ್ಯಭೂಷಿತಾಮಾಯಸೀಂ ದೃಢಾಮ್ |
ಯಮದಂಡೋಪಮಾಂ ಘೋರಾಂ ಪ್ರಾಹಿಣೋತ್ ಸಾತ್ಯಕಾಯ ವೈ ॥
ಬಹಳ ಗಾಯಗೊಂಡ ಮಹಾಧನುರ್ಧಾರಿಯಾದ ಭಗದತ್ತನು ತನ್ನ ಕಟಬಾಯಿಯನ್ನು ಪುನಃ ಪುನಃ ಸವರಿಕೊಳ್ಳುತ್ತಾ ಸುವರ್ಣವೈಡೂರ್ಯಗಳಿಂದ ಅಲಂಕೃತವಾದ, ಅಯೋಮಯವಾದ, ಯಮದಂಡದಂತೆ ಘೋರವಾದ ಶಕ್ತ್ಯಾಯುಧವನ್ನು ಸಾತ್ಯಕಿಯ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ತಸ್ಯ ಬಾಹೋರ್ಬಲೇರಿತಾಮ್ |
ಸಾತ್ಯಕಿಃ ಸಮರೇ ರಾಜನ್ ತ್ರಿಧಾ ಚಿಚ್ಛೇದ ಸಾಯಕೈಃ |
ಸಾ ಪಪಾತ ತದಾ ಭೂಮೌ ಮಹೋಲ್ಕೇವ ಹತಪ್ರಭಾ ॥12॥
ಎಲೈ ರಾಜನೇ, ಅವನ ಬಾಹುಬಲದಿಂದ ಎಸೆಯಲ್ಪಟ್ಟು ತನ್ನ ಕಡೆಗೆ ವೇಗದಿಂದ ಬರುತ್ತಿದ್ದ ಆ ಶಕ್ತಿಯನ್ನು ಸಾತ್ಯಕಿಯು ರಣರಂಗದಲ್ಲಿ ಮೂರು ಬಾಣಗಳಿಂದ ಕತ್ತರಿಸಿದನು. ಆ ಶಕ್ತಿಯು ಕಾಂತಿಹೀನವಾಗಿ ದೊಡ್ಡ ಉಲ್ಕೆಯಂತೆ ಭೂಮಿಯ ಮೇಲೆ ಬಿದ್ದಿತು.
ಶಕ್ತಿಂ ವಿನಿಹತಾಂ ದೃಷ್ಟ್ವಾ ಪುತ್ರಸ್ತವ ವಿಶಾಂಪತೇ |
ಮಹತಾ ರಥವಂಶೇನ ವಾರಯಾಮಾಸ ಮಾಧವಮ್ ॥13॥
ಶಕ್ತಿಯು ವಿನಾಶ ಹೊಂದಿದುದನ್ನು ನೋಡಿ ಎಲೈ ರಾಜನೇ, ನಿನ್ನ ಪುತ್ರನು (ದುಶ್ಶಾಸನನು) ದೊಡ್ಡ ರಥಸಮೂಹದಿಂದ ಸಾತ್ಯಕಿಯನ್ನು ತಡೆದನು.
ತಥಾ ಪರಿವೃತಂ ದೃಷ್ಟ್ವಾ ವಾರ್ಷ್ಣೇಯಾನಾಂ ಮಹಾರಥಮ್ |
ದುರ್ಯೋಧನೋ ಭೃಶಂ ಹೃಷ್ಟೋ ಭ್ರಾತೄನ್ ಸರ್ವಾನುವಾಚ ಹ ॥
ವಾರ್ಷ್ಣೇಯರ ಮಹಾರಥನಾದ ಸಾತ್ಯಕಿಯು ಹಾಗೆ ಸುತ್ತುವರಿಯಲ್ಪಟ್ಟುದನ್ನು ನೋಡಿ ದುರ್ಯೋಧನನು ಬಹಳ ಸಂತೋಷಗೊಂಡು ತನ್ನ ಸಹೋದರನನ್ನು ಕುರಿತು ಹೇಳಿದನು.
ತಥಾ ಕುರುತ ಕೌರವ್ಯಾ ಯಥಾ ವಃ ಸಾತ್ಯಕೋ ಯುಧಿ |
ನ ಜೀವನ್ ಪ್ರತಿನಿರ್ಯಾತಿ ಮಹತೋಽಸ್ಮಾದ್ ರಥವ್ರಜಾತ್ |
ಅಸ್ಮಿನ್ ಹತೇ ಹತಂ ಮನ್ಯೇ ಪಾಂಡವಾನಾಂ ಮಹದ್ಬಲಮ್ ॥15॥
ಎಲೈ ಕೌರವ್ಯರೇ, ಈ ದಿನ ಸಾತ್ಯಕಿಯು ನಮ್ಮ ದೊಡ್ಡ ರಥಸಮೂಹದಿಂದ ತಪ್ಪಿಸಿಕೊಂಡು ಜೀವಸಹಿತವಾಗಿ ಹೊರಗೆ ಹೋಗದಂತೆ

ಮಾಡಿ. ಇವನು ಹತನಾದರೆ ಪಾಂಡವರ ದೊಡ್ಡ ಸೈನ್ಯವು ಹತವಾಯಿತೆಂದು ನಾನು ಭಾವಿಸುತ್ತೇನೆ (ಎಂದು ಹೇಳಿದನು).
ತತ್ತಥೇತಿ ವಚಸ್ತಸ್ಯ ಪರಿಗೃಹ್ಯ ಮಹಾರಥಾಃ |
ಶೈನೇಯಂ ಯೋಧಯಾಮಾಸುರ್ಭೀಷ್ಮಸ್ಯ ಪ್ರಮುಖೇ ತದಾ ॥16॥
ಹಾಗೆಯೇ ಆಗಲಿ ಎಂದು ಅವನ ಮಾತನ್ನು ಸ್ವೀಕರಿಸಿ ಮಹಾರಥರು ಭೀಷ್ಮರ ಮುಂಭಾಗದಲ್ಲಿ ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಅಭಿಮನ್ಯುಂ ತದಾಽಽಯಾಂತಂ ಭೀಷ್ಮಾಯಾಭ್ಯುದ್ಯತಂ ಮೃಧೇ |
ಕಾಂಬೋಜರಾಜೋ ಬಲವಾನ್ ವಾರಯಾಮಾಸ ಸಂಯುಗೇ ॥17॥
ಆಗ ಯುದ್ಧದಲ್ಲಿ ಭೀಷ್ಮರ ಮೇಲೆ ಎರಗಲು ಬರುತ್ತಿದ್ದ ಅಭಿಮನ್ಯುವನ್ನು ಬಲಿಷ್ಠನಾದ ಕಾಂಬೋಜರಾಜನು ತಡೆದನು.
ಆರ್ಜುನಿರ್ನೃಪತಿಂ ವಿದ್ಧ್ವಾ ಶರೈಃ ಸನ್ನತಪರ್ವಭಿಃ |
ಪುನರೇವ ಚತುಃಷಷ್ಟ್ಯಾ ರಾಜನ್ ವಿವ್ಯಾಧ ತಂ ನೃಪಮ್ ॥18॥
ಅರ್ಜುನ ಪುತ್ರನಾದ ಅಭಿಮನ್ಯುವು ಕಾಂಬೋಜರಾಜನನ್ನು ಬಾಗಿದ ತುದಿಯುಳ್ಳ ಬಾಣಗಳಿಂದ ಹೊಡೆದು ಎಲೈ ರಾಜನೇ, ಪುನಃ ಅರವತ್ತನಾಲ್ಕು ಬಾಣಗಳಿಂದ ಆ ರಾಜನನ್ನು ಮರ್ದಿಸಿದನು.
ಸುದಕ್ಷಿಣಸ್ತು ಸಮರೇ ಕಾರ್ಷ್ಣಿಂ ವಿವ್ಯಾಧ ಪಂಚಭಿಃ |
ಸಾರಥಿಂ ಚಾಸ್ಯ ನವಭಿರಿಚ್ಛನ್ ಭೀಷ್ಮಸ್ಯ ಜೀವಿತಮ್ ॥19॥
ಸುದಕ್ಷಿಣನಾದರೋ ಭೀಷ್ಮರ ಪ್ರಾಣವನ್ನು ಉಳಿಸಲು ಇಚ್ಛಿಸುತ್ತಾ ಅಭಿಮನ್ಯುವನ್ನು ಐದು ಬಾಣಗಳಿಂದ ಹೊಡೆದು ಅವನ ಸಾರಥಿಯನ್ನು ಒಂಬತ್ತು ಬಾಣಗಳಿಂದ ಹೊಡೆದನು.
ತದ್ಯುದ್ಧಮಾಸೀತ್ ಸುಮಹತ್ ತಯೋಸ್ತತ್ರ ಪರಾಕ್ರಮೇ |
ಯದಭ್ಯಧಾವದ್ ಗಾಂಗೇಯಂ ಶಿಖಂಡೀ ಶತ್ರುತಾಪನಃ ॥20॥
ಅವರಿಬ್ಬರ ಸಮಾಗಮವಾದಾಗ ದೊಡ್ಡ ಯುದ್ಧವು ಜರುಗಿತು. ಆ ಸಮಯದಲ್ಲಿ ಶತ್ರುತಾಪನನಾದ ಶಿಖಂಡಿಯು ಭೀಷ್ಮರ ಕಡೆಗೆ ನುಗ್ಗಿದನು.
ವಿರಾಟದ್ರುಪದೌ ವೃದ್ಧೌ ವಾರಯಂತೌ ಮಹಾಚಮೂಮ್ |
ಭೀಷ್ಮಂ ಚ ಯುಧಿ ಸಂರಬ್ಧಾವಾದ್ರವಂತೌ ಮಹಾರಥೌ ॥21॥
ವೃದ್ಧರೂ, ಮಹಾರಥರೂ ಆದ ವಿರಾಟ-ದ್ರುಪದರು ಯುದ್ಧದಲ್ಲಿ ಕೋಪಗೊಂಡು ಕೌರವರ ದೊಡ್ಡ ಸೈನ್ಯವನ್ನು ನಿವಾರಿಸಿಕೊಂಡು ಭೀಷ್ಮರ ಕಡೆಗೆ ಧಾವಿಸಿದರು.
ಅಶ್ವತ್ಥಾಮಾ ತತಃ ಕ್ರುದ್ಧಃ ಸಮಾಯಾದ್ ರಥಸತ್ತಮಃ |
ತತಃ ಪ್ರವವೃತೇ ಯುದ್ಧಂ ತವ ತೇಷಾಂ ಚ ಭಾರತ ॥22॥
ಆಗ ರಥಶ್ರೇಷ್ಠರಾದ ಅಶ್ವತ್ಥಾಮರು ಕ್ರುದ್ಧರಾಗಿ ಅಲ್ಲಿಗೆ ಬಂದರು. ಎಲೈ ಭಾರತನೇ, ಅನಂತರ ಅವರಿಗೂ ಮತ್ತು ನಿಮ್ಮವರಿಗೂ ಯುದ್ಧವು ನಡೆಯಿತು.
ವಿರಾಟೋ ದಶಭಿರ್ಭಲ್ಲೈರಾಜಘಾನ ಪರಂತಪ |
ಯತಮಾನಂ ಮಹೇಷ್ವಾಸಂ ದ್ರೌಣಿಮಾಹವಶೋಭಿನಮ್ ॥23॥
ಎಲೈ ಪರಂತಪನೇ, ಮಹಾಧನುರ್ಧಾರಿಗಳೂ, ಪ್ರಯತ್ನಶೀಲರೂ, ಯುದ್ಧದಲ್ಲಿ ಶೋಭಿಸುವವರೂ ಆದ ಅಶ್ವತ್ಥಾಮರನ್ನು ವಿರಾಟನು ಹತ್ತು ಭಲ್ಲಗಳಿಂದ ಹೊಡೆದನು.
ದ್ರುಪದಶ್ಚ ತ್ರಿಭಿರ್ಬಾಣೈರ್ವಿವ್ಯಾಧ ನಿಶಿತೈಸ್ತಥಾ |
ಗುರುಪುತ್ರಂ ಸಮಾಸಾದ್ಯ ಭೀಷ್ಮಸ್ಯ ಪುರತಃ ಸ್ಥಿತಮ್ ॥24॥
ಭೀಷ್ಮರ ಮುಂಭಾಗದಲ್ಲಿ ನಿಂತಿದ್ದ ಗುರುಪುತ್ರರಾದ ಅಶ್ವತ್ಥಾಮರನ್ನು ಸಮೀಪಿಸಿ ದ್ರುಪದನೂ ಸಹ ಮೂರು ತೀಕ್ಷ್ಣವಾದ ಬಾಣಗಳಿಂದ ಅವರನ್ನು ಹೊಡೆದನು.
ಅಶ್ವತ್ಥಾಮಾ ತತಸ್ತೌ ತು ವಿವ್ಯಾಧ ದಶಭಿಃ ಶರೈಃ |
ವಿರಾಟದ್ರುಪದೌ ವೃದ್ಧೌ ಭೀಷ್ಮಂ ಪ್ರತಿ ಸಮುದ್ಯತೌ ॥25॥
ಅಶ್ವತ್ಥಾಮರು ಭೀಷ್ಮರ ಮೇಲೆ ಸಾಗಿ ಬರುತ್ತಿದ್ದ ವೃದ್ಧರಾದ ಆ ವಿರಾಟ- ದ್ರುಪದರನ್ನು ಹತ್ತು ಬಾಣಗಳಿಂದ ಹೊಡೆದರು.
ತತ್ರಾದ್ಭುತಮಪಶ್ಯಾಮ ವೃದ್ಧಯೋಶ್ಚರಿತಂ ಮಹತ್ |
ಯದ್ ದ್ರೋಣೇಃ ಸಾಯಕಾನ್ ಘೋರಾನ್ ಪ್ರತ್ಯವಾರಯತಾಂ ಯುಧಿ ॥
ಅಶ್ವತ್ಥಾಮರ ಘೋರವಾದ ಬಾಣಗಳನ್ನು ಯುದ್ಧದಲ್ಲಿ ನಿವಾರಿಸಿದ, ವೃದ್ಧರಾದ ಅವರಿಬ್ಬರ ದೊಡ್ಡದಾದ ಮತ್ತು ಅದ್ಭುತವಾದ ಚರ್ಯೆಯನ್ನು ನಾವು ಅಲ್ಲಿ ನೋಡಿದೆವು.
ಸಹದೇವಂ ತಥಾಽಽಯಾಂತಂ ಕೃಪಃ ಶಾರದ್ವತೋಽಭ್ಯಯಾತ್ |
ಯಥಾ ನಾಗೋ ವನೇ ನಾಗಂ ಮತ್ತೋ ಮತ್ತಮುಪಾದ್ರವತ್ ॥27॥
ಭೀಷ್ಮರ ಕಡೆಗೆ ಬರುತ್ತಿದ್ದ ಸಹದೇವನನ್ನು ನೋಡಿ ಶಾರದ್ವತರಾದ ಕೃಪರು ಕಾಡಿನಲ್ಲಿ ಮದಗಜವು ಇನ್ನೊಂದು ಮದಗಜದ ಕಡೆಗೆ ಧಾವಿಸಿದಂತೆ ಧಾವಿಸಿ ಬಂದರು.
ಕೃಪಶ್ಚ ಸಮರೇ ರಾಜನ್ ಮಾದ್ರೀಪುತ್ರಂ ಮಹಾರಥಮ್ |
ಆಜಘಾನ ಶರೈಸ್ತೂರ್ಣಂ ಸಪ್ತತ್ಯಾ ರುಗ್ಮಭೂಷಣೈಃ ॥28॥
ಎಲೈ ರಾಜನೇ, ಕೃಪರು ಯುದ್ಧದಲ್ಲಿ ಮಹಾರಥನಾದ ಮಾದ್ರೀಪುತ್ರನಾದ ಸಹದೇವನನ್ನು ಸುವರ್ಣಭೂಷಿತವಾದ ಎಪ್ಪತ್ತು

ಬಾಣಗಳಿಂದ ಶೀಘ್ರವಾಗಿ ಹೊಡೆದರು.
ತಸ್ಯ ಮಾದ್ರೀಸುತಶ್ಚಾಪಂ ದ್ವಿಧಾ ಚಿಚ್ಛೇದ ಸಾಯಕೈಃ |
ಅಥೈನಂ ಛಿನ್ನಧನ್ವಾನಂ ವಿವ್ಯಾಧ ನವಭಿಃ ಶರೈಃ ॥29॥
ಮಾದ್ರೀಪುತ್ರನಾದ ಸಹದೇವನು ಅವರ ಧನುಸ್ಸನ್ನು ತನ್ನ ಬಾಣಗಳಿಂದ ಎರಡು ಭಾಗವಾಗಿ ಕತ್ತರಿಸಿದನು. ಅನಂತರ ಅವರ ಧನುಸ್ಸು ಕತ್ತರಿಸಲ್ಪಟ್ಟ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದರು.
ಸೋಽನ್ಯತ್ಕಾರ್ಮುಕಮಾದಾಯ ಸಮರೇ ಭಾರಸಾಧನಮ್ |
ಮಾದ್ರೀಪುತ್ರಂ ಸುಸಂಹೃಷ್ಟೋ ದಶಭಿರ್ನಿಶಿತೈಃ ಶರೈಃ |
ಆಜಘಾನೋರಸಿ ಕ್ರುದ್ಧ ಇಚ್ಛನ್ ಭೀಷ್ಮಸ್ಯ ಜೀವಿತಮ್ ॥30॥
ಕೃಪರು ಯುದ್ಧದಲ್ಲಿ ಗುರುತರ ಕಾರ್ಯವನ್ನು ಮಾಡುವ ಸಾಮರ್ಥ್ಯವನ್ನು ಹೊಂದಿದ ಇನ್ನೊಂದು ಬಿಲ್ಲನ್ನು ತೆಗೆದುಕೊಂಡು ಬಹಳ ಸಂತೋಷದಿಂದ ಕೂಡಿದವರಾಗಿ, ಭೀಷ್ಮರ ಪ್ರಾಣವನ್ನು ಉಳಿಸಲು ಬಯಸಿ, ಕ್ರುದ್ಧರಾಗಿ ತೀಕ್ಷ್ಣವಾದ ಹತ್ತು ಬಾಣಗಳಿಂದ ಸಹದೇವನನ್ನು ಎದೆಯಲ್ಲಿ ಹೊಡೆದರು.
ತಥೈವ ಪಾಂಡವೋ ರಾಜನ್ ಶಾರದ್ವತಮಮರ್ಷಣಮ್ |
ಆಜಘಾನೋರಸಿ ಕ್ರುದ್ಧೋ ಭೀಷ್ಮಸ್ಯ ವಧಕಾಂಕ್ಷಯಾ |
ತಯೋರ್ಯುದ್ಧಂ ಸಮಭವದ್ ಘೋರರೂಪಂ ಭಯಾವಹಮ್ ॥
ಎಲೈ ರಾಜನೇ, ಹಾಗೆಯೇ ಪಾಂಡವನಾದ ಸಹದೇವನು ಭೀಷ್ಮರ ವಧೆಯನ್ನು ಉದ್ದೇಶಿಸಿ ಕ್ರುದ್ಧನಾಗಿ ವೃದ್ಧರಾದ ಕೃಪರನ್ನು ಅವರ ವಕ್ಷಸ್ಸ್ಥಲದಲ್ಲಿ ಹೊಡೆದನು. ಅವರಿಬ್ಬರಿಗೂ ಘೋರವೂ ಮತ್ತು ಭಯಂಕರವೂ ಆದ ಯುದ್ಧವು ನಡೆಯಿತು.
ನಕುಲಂ ತು ರಣೇ ಕ್ರುದ್ಧಂ ವಿಕರ್ಣಃ ಶತ್ರುತಾಪನಃ |
ವಿವ್ಯಾಧ ಸಾಯಕೈಃ ಷಷ್ಟ್ಯಾ ರಕ್ಷನ್ ಭೀಷ್ಮಸ್ಯ ಜೀವಿತಮ್ ॥32॥
ಶತ್ರುತಾಪನನಾದ ವಿಕರ್ಣನು ಭೀಷ್ಮರ ಜೀವಿತವನ್ನು ರಕ್ಷಿಸುತ್ತಾ ಯುದ್ಧದಲ್ಲಿ ಕೋಪಗೊಂಡ ನಕುಲನನ್ನು ಅರವತ್ತು ಬಾಣಗಳಿಂದ ಹೊಡೆದನು.
ನಕುಲೋಽಪಿ ಭೃಶಂ ವಿದ್ಧಸ್ತವ ಪುತ್ರೇಣ ಧನ್ವಿನಾ |
ವಿಕರ್ಣಂ ಸಪ್ತಸಪ್ತತ್ಯಾ ನಿರ್ಬಿಭೇದ ಶಿಲೀಮುಖೈಃ ॥33॥
ಧನುರ್ಧಾರಿಯಾದ ನಿನ್ನ ಪುತ್ರನಿಂದ ಗಾಢವಾಗಿ ಗಾಯಗೊಂಡ ನಕುಲನೂ ಸಹ ಎಪ್ಪತ್ತೇಳು ಬಾಣಗಳಿಂದ ವಿಕರ್ಣನನ್ನು ಭೇದಿಸಿದನು.
ತತ್ರ ತೌ ನರಶಾರ್ದೂಲೌ ಭೀಷ್ಮಹೇತೋಃ ಪರಂತಪೌ |
ಅನ್ಯೋನ್ಯಂ ಜಘ್ನತುರ್ವೀರೌ ಗೋಷ್ಠೇ ಗೋವೃಷಭಾವಿವ ॥34॥
ಅಲ್ಲಿ ಆ ಇಬ್ಬರು ವೀರರೂ ಮತ್ತು ನರಶಾರ್ದೂಲರೂ ಕೊಟ್ಟಿಗೆಯಲ್ಲಿ ಗೂಳಿಗಳಂತೆ ಪರಸ್ಪರವಾಗಿ ಹೊಡೆದಾಡಿದರು.
ಘಟೋತ್ಕಚಂ ರಣೇ ಯತ್ತಂ ನಿಘ್ನಂತಂ ತವ ವಾಹಿನೀಮ್ |
ದುರ್ಮುಖಃ ಸಮರೇ ಪ್ರಾಯಾದ್ ಭೀಷ್ಮಹೇತೋಃ ಪರಾಕ್ರಮೀ ॥35॥
ನಿನ್ನ ಸೈನ್ಯವನ್ನು ಕೊಲ್ಲುತ್ತಿದ್ದ ಪ್ರಯತ್ನಶೀಲನಾದ ಘಟೋತ್ಕಚನನ್ನು ಕುರಿತು ಭೀಷ್ಮರನ್ನು ರಕ್ಷಿಸುವ ನಿಮಿತ್ತದಿಂದಾಗಿ ಪರಾಕ್ರಮಶಾಲಿಯಾದ ದುರ್ಮುಖನು ಯುದ್ಧದಲ್ಲಿ ಅವನ ಕಡೆಗೆ ಹೋದನು.
ಹೈಡಿಂಬಸ್ತು ತತೋ ರಾಜನ್ ದುರ್ಮುಖಂ ಶತ್ರುತಾಪನಮ್ |
ಆಜಘಾನೋರಸಿ ಕ್ರುದ್ಧೋ ನವತ್ಯಾ ನಿಶಿತೈಃ ಶರೈಃ ॥36॥
ಎಲೈ ರಾಜನೇ, ಘಟೋತ್ಕಚನಾದರೋ ಕ್ರುದ್ಧನಾಗಿ ಆಗ ಶತ್ರುತಾಪನನಾದ ದುರ್ಮುಖನನ್ನು ತೊಂಬತ್ತು ತೀಕ್ಷ್ಣವಾದ ಬಾಣಗಳಿಂದ ವಕ್ಷಸ್ಸ್ಥಲದಲ್ಲಿ ಹೊಡೆದನು.
ಭೀಮಸೇನಸುತಂ ಚಾಪಿ ದುರ್ಮುಖಃ ಸುಮುಖೈಃ ಶರೈಃ |
ಷಷ್ಟ್ಯಾ ವೀರೋ ನದನ್ ಹೃಷ್ಟೋ ವಿವ್ಯಾಧ ರಣಮೂರ್ಧನಿ ॥37॥
ವೀರನಾದ ದುರ್ಮುಖನೂ ಸಹ ಸಂತೋಷಗೊಂಡು ಶ್ರೇಷ್ಠವಾದ ಆ ರಣದಲ್ಲಿ ಸಿಂಹನಾದವನ್ನು ಮಾಡುತ್ತಾ, ಅರವತ್ತು ಬಾಣಗಳಿಂದ ಭೀಮಸೇನಸುತನಾದ ಘಟೋತ್ಕಚನನ್ನು ಹೊಡೆದನು.
ಧೃಷ್ಟದ್ಯುಮ್ನಂ ರಣೇ ಯಾಂತಂ ಭೀಷ್ಮಸ್ಯ ವಧಕಾಂಕ್ಷಿಣಮ್ |
ಹಾರ್ದಿಕ್ಯೋ ವಾರಯಾಮಾಸ ರಕ್ಷನ್ ಭೀಷ್ಮಸ್ಯ ಜೀವಿತಮ್ ॥38॥
ಭೀಷ್ಮರ ವಧೆಯನ್ನು ಆಶಿಸಿ ಅವರ ಬಳಿಗೆ ಸಾಗುತ್ತಿದ್ದ ಧೃಷ್ಟದ್ಯುಮ್ನನನ್ನು ಭೀಷ್ಮರ ಜೀವಿತವನ್ನು ರಕ್ಷಿಸುತ್ತಾ ಕೃತವರ್ಮನು ತಡೆದನು.
ವಾರ್ಷ್ಣೇಯಃ ಪಾರ್ಷತಂ ಶೂರಂ ವಿದ್ಧ್ವಾ ಪಂಚಭಿರಾಯಸೈಃ |
ಪುನಃ ಪಂಚಾಶತಾ ತೂರ್ಣಂ ತಿಷ್ಠತಿಷ್ಠೇತಿ ಚಾಬ್ರವೀತ್ |
ಆಜಘಾನ ಮಹಾಬಾಹುಃ ಪಾರ್ಷತಂ ತಂ ಮಹಾರಥಮ್ ॥39॥
ಕೃತವರ್ಮನು ಶೂರನಾದ ಧೃಷ್ಟದ್ಯುಮ್ನನನ್ನು ಐದು ಕಬ್ಬಿಣದ ಬಾಣಗಳಿಂದ ಹೊಡೆದು ಮಹಾಶೀಘ್ರವಾಗಿ ಐದು ನೂರು ಬಾಣಗಳನ್ನು ಪ್ರಯೋಗಿಸಿ ನಿಲ್ಲು, ನಿಲ್ಲು ಎಂದು ಹೇಳಿದನು. ಮಹಾಬಾಹುವಾದ ಅವನು ಮಹಾರಥನಾದ ಆ ಧೃಷ್ಟದ್ಯುಮ್ನನನ್ನು ಪುನಃ ಬಾಣಗಳಿಂದ ಹೊಡೆದನು.
ತಥೈವ ಪಾರ್ಷತೋ ರಾಜನ್ ಹಾರ್ದಿಕ್ಯಂ ನವಭಿಃ ಶರೈಃ |

ವಿವ್ಯಾಧ ನಿಶಿತೈಸ್ತೀಕ್ಷ್ಣೈಃ ಕಂಕಪತ್ರಪರಿಚ್ಛದೈಃ ॥40॥
ಎಲೈ ರಾಜನೇ, ಹಾಗೆಯೇ ಧೃಷ್ಟದ್ಯುಮ್ನನೂ ಸಹ ಕಂಕಪತ್ರದಿಂದ ಕೂಡಿದ ತೀಕ್ಷ್ಣವಾದ ಒಂಬತ್ತು ಬಾಣಗಳಿಂದ ಕೃತವರ್ಮನನ್ನು ಹೊಡೆದನು.
ತಯೋಃ ಸಮಭವದ್ ಯುದ್ಧಂ ಭೀಷ್ಮಹೇತೋರ್ಮಹಾರಣೇ |
ಅನ್ಯೋನ್ಯಾತಿಶಯೈರ್ಯುಕ್ತಂ ಯಥಾ ವೃತ್ರಮಹೇಂದ್ರಯೋಃ ॥41॥
ವೃತ್ರ-ಮಹೇಂದ್ರರಂತೆ ಒಬ್ಬರಿಗಿಂತ ಒಬ್ಬರು ಅತಿಶಯವನ್ನು ಮಾಡುತ್ತಿದ್ದ ಅವರಿಗೆ ಭೀಷ್ಮರ ಕಾರಣದಿಂದಾಗಿ ಮಾಡಿದ ಆ ಮಹಾಯುದ್ಧವು ನಡೆಯಿತು.
ಭೀಮಸೇನಮಥಾಯಾಂತಂ ಭೀಷ್ಮಂ ಪ್ರತಿ ಮಹಾಬಲಮ್ |
ಭೂರಿಶ್ರವಾಭ್ಯಯಾತ್ ತೂರ್ಣಂ ತಿಷ್ಠತಿಷ್ಠೇತಿ ಚಾಬ್ರವೀತ್ ॥42॥
ಅನಂತರ ಭೀಷ್ಮರ ಕಡೆಗೆ ಬರುತ್ತಿದ್ದ ಮಹಾಬಲನಾದ ಭೀಮಸೇನನನ್ನು ಭೂರಿಶ್ರವನು ಶೀಘ್ರವಾಗಿ ಸಮೀಪಿಸಿ ನಿಲ್ಲು, ನಿಲ್ಲು ಎಂದು ಹೇಳಿದನು.
ಸೌಮದತ್ತಿರಥೋ ಭೀಮಮಾಜಘಾನ ಸ್ತನಾಂತರೇ |
ನಾರಾಚೇನ ಸುತೀಕ್ಷ್ಣೇನ ರುಗ್ಮಪುಂಖೇನ ಸಂಯುಗೇ ॥43॥
ಅನಂತರ ಸೋಮದತ್ತನ ಪುತ್ರನಾದ ಭೂರಿಶ್ರವನು ರಣರಂಗದಲ್ಲಿ ಸುವರ್ಣ ಪುಂಖವನ್ನು ಹೊಂದಿದ ತೀಕ್ಷ್ಣವಾದ ನಾರಾಚದಿಂದ ಭೀಮಸೇನನನ್ನು ಸ್ತನಗಳ ಮಧ್ಯದಲ್ಲಿ ಹೊಡೆದನು.
ಉರಃಸ್ಥೇನ ಬಭೌ ತೇನ ಭೀಮಸೇನಃ ಪ್ರತಾಪವಾನ್ |
ಸ್ಕಂದಶಕ್ತ್ಯಾ ಯಥಾ ಕ್ರೌಂಚಃ ಪುರಾ ನೃಪತಿಸತ್ತಮ ॥44॥
ಎಲೈ ರಾಜಶ್ರೇಷ್ಠನೇ, ಪ್ರತಾಪಶಾಲಿಯಾದ ಭೀಮಸೇನನು ವಕ್ಷಸ್ಸ್ಥಲದಲ್ಲಿ ನಾಟಿದ ಆ ನಾರಾಚದಿಂದ ಹಿಂದೆ ಸ್ಕಂದನು ಪ್ರಯೋಗಿಸಿದ್ದ ಶಕ್ತಿಯು ನಾಟಿದ ಕ್ರೌಂಚ ಪರ್ವತದಂತೆ ಶೋಭಿಸಿದನು.
ತೌ ಶರಾನ್ ಸೂರ್ಯಸಂಕಾಶಾನ್ ಕರ್ಮಾರಪರಿಮಾರ್ಜಿತಾನ್ |
ಅನ್ಯೋನ್ಯಸ್ಯ ರಣೇ ಕ್ರುದ್ಧೌ ಚಿಕ್ಷಿಪಾತೇ ಮುಹುರ್ಮುಹುಃ ॥45॥
ಅವರಿಬ್ಬರೂ ಕ್ರುದ್ಧರಾಗಿ ಕಮ್ಮಾರರು ಚೆನ್ನಾಗಿ ತಯಾರಿಸಿದ, ಸೂರ್ಯನಂತೆ ಹೊಳೆಯುವ ಬಾಣಗಳನ್ನು ಪುನಃ ಪುನಃ ಪರಸ್ಪರವಾಗಿ ಪ್ರಯೋಗಿಸಿದರು.
ಭೀಮೋ ಭೀಷ್ಮವಧಾಕಾಂಕ್ಷೀ ಸೌಮದತ್ತಿಂ ಮಹಾರಥಮ್ |
ತಥಾ ಭೀಷ್ಮಜಯೇ ಗೃಧ್ನುಃ ಸೌಮದತ್ತಿಶ್ಚ ಪಾಂಡವಮ್ |
ಕೃತಪ್ರತಿಕೃತೇ ಯತ್ತೌ ಯೋಧಯಾಮಾಸತೂ ರಣೇ ॥46॥
ಭೀಷ್ಮರ ವಧಾಕಾಂಕ್ಷಿಯಾದ ಭೀಮನು ಮಹಾರಥನಾದ ಭೂರಿಶ್ರವನನ್ನೂ ಹಾಗೆಯೇ ಭೀಷ್ಮರ ಜಯದಲ್ಲಿ ಆಸೆಯುಳ್ಳ ಭೂರಿಶ್ರವನು ಭೀಮಸೇನನನ್ನೂ ಯುದ್ಧದಲ್ಲಿ ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತೀಕಾರವನ್ನು ಮಾಡುತ್ತಾ ಪ್ರಯತ್ನಶೀಲರಾಗಿ ಯುದ್ಧವನ್ನು ಮಾಡಿದರು.
ಯುಧಿಷ್ಠಿರಂ ಮಹಾರಾಜ ಮಹತ್ಯಾ ಸೇನಯಾ ವೃತಮ್ |
ಭೀಷ್ಮಾಯಾಭಿಮುಖಂ ಯಾಂತಂ ಭಾರದ್ವಾಜೋ ನ್ಯವಾರಯತ್ ॥47॥
ಎಲೈ ಮಹಾರಾಜನೇ, ತನ್ನ ದೊಡ್ಡ ಸೇನೆಯಿಂದ ಸಹಿತನಾಗಿ ಭೀಷ್ಮರಿಗೆ ಅಭಿಮುಖವಾಗಿ ಹೋಗುತ್ತಿದ್ದ ಯುಧಿಷ್ಠಿರನನ್ನು ದ್ರೋಣರು ತಡೆದರು.
ದ್ರೋಣಸ್ಯ ರಥನಿರ್ಘೋಷಂ ಪರ್ಜನ್ಯನಿನದೋಪಮಮ್ |
ಶ್ರುತ್ವಾ ಪ್ರಭದ್ರಕಾ ರಾಜನ್ ಸಮಕಂಪಂತ ಮಾರಿಷ ॥48॥
ಎಲೈ ರಾಜನೇ, ಪೂಜ್ಯನೇ, ಪರ್ಜನ್ಯಘೋಷದಂತೆ ಇದ್ದ ದ್ರೋಣರ ರಥದ ಘೋಷವನ್ನು ಕೇಳಿ ಪ್ರಭದ್ರಕರು ನಡುಗಿ ಹೋದರು.
ಸಾ ಸೇನಾ ಮಹತೀ ರಾಜನ್ ಪಾಂಡುಪುತ್ರಸ್ಯ ಸಂಯುಗೇ |
ದ್ರೋಣೇನ ವಾರಿತಾ ಯತ್ತಾ ನ ಚಚಾಲ ಪದಾತ್ಪದಮ್ ॥49॥
ಎಲೈ ರಾಜನೇ, ಯುದ್ಧದಲ್ಲಿ ಪಾಂಡುಪುತ್ರನ ದೊಡ್ಡ ಸೇನೆಯು ದ್ರೋಣರಿಂದ ತಡೆಯಲ್ಪಟ್ಟರೂ ಪ್ರಯತ್ನಪಟ್ಟರೂ ಒಂದು ಹೆಜ್ಜೆ ಮುಂದಿಡಲಾಗಲಿಲ್ಲ.
ಚೇಕಿತಾನಂ ರಣೇ ಕ್ರುದ್ಧಂ ಭೀಷ್ಮಂ ಪ್ರತಿ ಜನೇಶ್ವರ |
ಚಿತ್ರಸೇನಸ್ತವ ಸುತಃ ಕ್ರುದ್ಧರೂಪಮವಾರಯತ್ ॥50॥
ಎಲೈ ರಾಜನೇ, ಭೀಷ್ಮರ ಮೇಲೆ ಕೋಪಗೊಂಡ ಚೇಕಿತಾನನನ್ನು ನಿನ್ನ ಪುತ್ರನಾದ ಚಿತ್ರಸೇನನು ರಣರಂಗದಲ್ಲಿ ತಡೆದನು.
ಭೀಷ್ಮಹೇತೋಃ ಪರಾಕ್ರಾಂತಶ್ಚಿತ್ರಸೇನೋ ಮಹಾರಥಃ |
ಚೇಕಿತಾನಂ ಪರಂ ಶಕ್ತ್ಯಾ ಯೋಧಯಾಮಾಸ ಭಾರತ ॥51॥
ಎಲೈ ಭಾರತನೇ, ಭೀಷ್ಮರ ಸಲುವಾಗಿ ಪರಾಕ್ರಮವನ್ನು ತೋರಿಸಿದ ಮಹಾರಥನಾದ ಚಿತ್ರಸೇನನು ತನ್ನ ಶಕ್ತಿಯನ್ನು ಮೀರಿ ಚೇಕಿತಾನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತಥೈವ ಚೇಕಿತಾನೋಽಪಿ ಚಿತ್ರಸೇನಮಯೋಧಯತ್ |
ತದ್ಯುದ್ಧಮಾಸೀತ್ ಸುಮಹತ್ ತಯೋಸ್ತತ್ರ ಪರಾಕ್ರಮೇ ॥52॥
ಹಾಗೆಯೇ ಚೇಕಿತಾನನೂ ಸಹ ಚಿತ್ರಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಅವರಿಬ್ಬರ ಸಮಾಗಮ ಉಂಟಾದಾಗ ದೊಡ್ಡ

ಯುದ್ಧವು ನಡೆಯಿತು.
ಅರ್ಜುನೋ ವಾರ್ಯಮಾಣಸ್ತು ಬಹುಶಸ್ತನಯೇನ ತೇ |
ವಿಮುಖೀಕೃತ್ಯ ಪುತ್ರಂ ತೇ ತವ ಸೇನಾಂ ಮಮರ್ದ ಹ ॥53॥
ಅರ್ಜುನನನ್ನು ನಿನ್ನ ಪುತ್ರನು ಅನೇಕ ಬಾರಿ ತಡೆದರೂ ಅವನನ್ನು ಯುದ್ಧ ವಿಮುಖನನ್ನಾಗಿ ಮಾಡಿ ಅರ್ಜುನನು ನಿನ್ನ ಸೇನೆಯನ್ನು ಮರ್ದಿಸಿದನು.
ದುಃಶಾಸನೋಽಪಿ ಪರಯಾ ಶಕ್ತ್ಯಾ ಪಾರ್ಥಮವಾರಯತ್ |
ಕಥಂ ಭೀಷ್ಮಂ ಪರೋ ಹನ್ಯಾದಿತಿ ನಿಶ್ಚಿತ್ಯ ಭಾರತ ॥54॥
ಎಲೈ ಭಾರತನೇ, ನಿನ್ನ ಪುತ್ರನಾದ ದುಶ್ಶಾಸನನೂ ಸಹ ಭೀಷ್ಮರನ್ನು ಇನ್ನೊಬ್ಬನು ಹೇಗೆ ಕೊಲ್ಲಲು ಸಾಧ್ಯ ಎಂದು ನಿಶ್ಚಯಿಸಿ ತನ್ನ ಪರಮಶಕ್ತಿಯಿಂದ ಅರ್ಜುನನನ್ನು ತಡೆದನು.
ಸಾ ವಧ್ಯಮಾನಾ ಸಮರೇ ಪುತ್ರಸ್ಯ ತವ ವಾಹಿನೀ |
ಲೋಡ್ಯತೇ ರಥಿಭಿಃ ಶ್ರೇಷ್ಠೈಸ್ತತ್ರ ತತ್ರೈವ ಭಾರತ ॥55॥
ಎಲೈ ಭಾರತನೇ, ಪಾಂಡವರಿಂದ ವಧಿಸಲ್ಪಡುತ್ತಿದ್ದ ನಿನ್ನ ಪುತ್ರರ ಸೈನ್ಯವು ಅಲ್ಲಲ್ಲಿಯೇ ಶ್ರೇಷ್ಠರಥಿಕರಿಂದ ಮರ್ದಿಸಲ್ಪಟ್ಟಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಅಷ್ಟಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂಬತ್ತನೆಯ ಅಧ್ಯಾಯ
ದುರ್ನಿಮಿತ್ತಗಳನ್ನು ನೋಡಿ ದ್ರೋಣರಿಂದ ಅಶ್ವತ್ಥಾಮರ ಪ್ರಚೋದನೆ.
ಸಂಜಯಃ
ಅಥ ವೀರೋ ಮಹೇಷ್ವಾಸೋ ಮತ್ತವಾರಣವಿಕ್ರಮಃ |
ಸಮಾದಾಯ ಮಹಚ್ಚಾಪಂ ಮತ್ತವಾರಣವಾರಣಮ್ ॥1॥
ವಿಧುನ್ವಾನೋ ಧನುಃಶ್ರೇಷ್ಠಂ ದ್ರಾವಯಾಣೋ ಮಹಾರಥಾನ್ |
ಪೃತನಾಂ ಪಾಂಡವೇಯಾನಾಂ ಪಾತಯಾನೋ ಮಹಾರಥಃ ॥2॥
ನಿಮಿತ್ತಾನಿ ನಿಮಿತ್ತಜ್ಞಃ ಸರ್ವತೋ ವೀಕ್ಷ್ಯ ವೀರ್ಯವಾನ್ |
ಪ್ರತಪಂತಮನೀಕಾನಿ ದ್ರೋಣಃ ಪುತ್ರಮಭಾಷತ ॥3॥
ಸಂಜಯ ಆಗ ಮತ್ತಗಜಪರಾಕ್ರಮವುಳ್ಳವರೂ, ಮಹಾಧನುರ್ಧಾರಿಗಳೂ, ಮಹಾರಥರೂ, ವೀರಶಾಲಿಗಳೂ ಆದ ದ್ರೋಣರು ಮದಗಜಗಳನ್ನು ನಿವಾರಿಸುವಂಥ ದೊಡ್ಡ ಧನುಸ್ಸನ್ನು ಕೈಯಲ್ಲಿ ಹಿಡಿದು, ಆ ಶ್ರೇಷ್ಠ ಧನುಸ್ಸನ್ನು ಎಳೆದು, ಮಹಾರಥರನ್ನು ಓಡಿಸುತ್ತಾ ಪಾಂಡವ ಸೇನೆಯನ್ನು ಧ್ವಂಸ ಮಾಡುತ್ತಾ ನಿಮಿತ್ತಗಳನ್ನು ತಿಳಿದ ಅವರು, ಎಲ್ಲ ಕಡೆಗಳಲ್ಲಿಯೂ ದುರ್ನಿಮಿತ್ತಗಳನ್ನು ನೋಡಿ, ಪಾಂಡವರ ಸೇನೆಯನ್ನು ದಹಿಸುತ್ತಿದ್ದ ಪುತ್ರರಾದ ಅಶ್ವತ್ಥಾಮರನ್ನು ಕುರಿತು ಮಾತನಾಡಿದರು.
ಅಯಂ ಸ ದಿವಸಸ್ತಾತ ಯತ್ರ ಪಾರ್ಥೋ ಮಹಾರಥಃ |
ಜಿಘಾಂಸುಃ ಸಮರೇ ಭೀಷ್ಮಂ ಪರಂ ಯತ್ನಂ ಕರಿಷ್ಯತಿ ॥4॥
ಎಲೈ ಪ್ರೀತಿಪಾತ್ರನೇ, ಇದು ಮಹಾರಥನಾದ ಪಾರ್ಥನು ಯುದ್ಧದಲ್ಲಿ ಭೀಷ್ಮರನ್ನು ಕೊಲ್ಲಲು ಪರಮ ಪ್ರಯತ್ನವನ್ನು ಮಾಡುವ ದಿವಸ.
ಉತ್ಪತಂತಿ ಹಿ ಮೇ ಬಾಣಾ ಧನುಃ ಪ್ರಸ್ಫುರತೀವ ಮೇ |
ಯೋಗಮಸ್ತ್ರಾಣಿ ಗಚ್ಛಂತಿ ಕ್ರೂರೇ ಮೇ ವರ್ತತೇ ಮತಿಃ ॥5॥
ನನ್ನ ಬಾಣಗಳು ಭತ್ತಳಿಕೆಯಿಂದ ತಾವೇ ಮೇಲೆ ಬರುತ್ತಿವೆ. ಮನಸ್ಸು ಅದುರುತ್ತಿದೆ. ದಿವ್ಯಾಸ್ತ್ರಗಳು ನನ್ನ ಬುದ್ಧಿಯೋಗವನ್ನು ಹೊಂದುತ್ತಿವೆ. ನನ್ನ ಮನಸ್ಸು ಕ್ರೂರವಾಗಿದೆ.
ದಿಕ್ಷ್ವಶಾಂತಾನಿ ಘೋರಾಣಿ ವ್ಯಾಹರಂತಿ ಮೃಗದ್ವಿಜಾಃ |
ನೀಚೈರ್ಗೃಧ್ರಾ ನಿಲೀಯಂತೇ ಭಾರತಾನಾಂ ಚಮೂಂ ಪ್ರತಿ ॥6॥
ಮೃಗ-ಪಕ್ಷಿಗಳು ದಿಕ್ಕುಗಳಲ್ಲಿ ಅಶಾಂತವಾದ ಘೋರಶಬ್ಧಗಳನ್ನು ಮಾಡುತ್ತಿವೆ. ಹದ್ದುಗಳು ಕೌರವರ ಸೇನೆಯ ಮೇಲೆ ಬಹಳ ಕೆಳಗೆ ಬಂದು ಅಡಗಿಕೊಳ್ಳುತ್ತಿವೆ.
ನಷ್ಟಪ್ರಭ ಇವಾದಿತ್ಯಃ ಸರ್ವತೋ ಲೋಹಿತಾ ದಿಶಃ |
ರಸತೇ ವ್ಯಥತೇ ಭೂಮಿಃ ಕಂಪತೀವ ಚ ಸರ್ವಶಃ ॥7॥
ಸೂರ್ಯನು ತನ್ನ ಪ್ರಭೆಯನ್ನು ಕಳೆದುಕೊಂಡಿದ್ದಾನೆ. ಎಲ್ಲ ದಿಕ್ಕುಗಳೂ ಕೆಂಪಾಗಿವೆ. ಭೂಮಿಯು ಗುಡುಗುತ್ತಿದೆ ಮತ್ತು ಎಲ್ಲ ಕಡೆಗಳಲ್ಲಿಯೂ ಕಂಪಿಸುವಂತೆ ತೋರುತ್ತಿದೆ.
ಕಂಕಾ ಗೃಧ್ರಾ ಬಲಾಕಾಶ್ಚ ವ್ಯಾಹರಂತಿ ಮುಹುರ್ಮುಹುಃ |
ಶಿವಾಶ್ಚಾಶಿವನಿರ್ಘೋಷಾ ವೇದಯಂತ್ಯೋ ಮಹದ್ಭಯಮ್ ॥8॥
ಕಂಕಗಳು, ಹದ್ದುಗಳು ಮತ್ತು ಬಲಾಕಗಳು ಪುನಃ ಪುನಃ ಕೂಗುತ್ತಿವೆ. ಹೆಣ್ಣು ನರಿಗಳು ದೊಡ್ಡ ಭಯವನ್ನು ಸೂಚಿಸುತ್ತಾ ಅಮಂಗಳವಾದ ಶಬ್ಧಗಳನ್ನು ಮಾಡುತ್ತಿವೆ.
ಪಪಾತ ಮಹತೀ ಚೋಲ್ಕಾ ಮಧ್ಯೇನಾದಿತ್ಯಮಂಡಲಾತ್ |

ಸಕಬಂಧಃ ಸಪರಿಘೋ ಭಾನುಮಾವೃತ್ಯ ತಿಷ್ಠತಿ ॥9॥
ದೊಡ್ಡ ಉಲ್ಕೆಯು ಆದಿತ್ಯಮಂಡಲದ ಮಧ್ಯದಲ್ಲಿ ಬಿದ್ದಿತು. ಪರಿಘರೂಪವಾದ ಆಯುಧದಿಂದ ಸಹಿತನಾದ ರಾಹುರೂಪವಾದ ಕಬಂಧವು ಸೂರ್ಯನನ್ನು ಆವರಿಸಿದೆ.
ಪರಿವೇಷಸ್ತಥಾ ಘೋರಶ್ಚಂದ್ರಭಾಸ್ಕರಯೋರಭೂತ್ |
ವೇದಯಾನೋ ಭಯಂ ಘೋರಂ ರಾಜ್ಞಾಂ ದೇಹಾವಕರ್ತನಮ್ ॥
ರಾಜರ ದೇಹದ ಭೇದರೂಪವಾದ ಘೋರವಾದ ಭಯವನ್ನು ಸೂಚಿಸುತ್ತಾ ಸೂರ್ಯ-ಚಂದ್ರರಿಗಿಬ್ಬರಿಗೂ ಘೋರವಾದ ಪರಿವೇಷ ಉಂಟಾಯಿತು.
ದೇವತಾಯತನಸ್ಥಾಶ್ಚ ಕೌರವೇಂದ್ರಸ್ಯ ದೇವತಾಃ |
ಕಂಪಂತೇ ಚ ಹಸಂತೇ ಚ ನೃತ್ಯಂತಿ ಚ ರುದಂತಿ ಚ ॥11॥
ದೇವಾಲಯಗಳಲ್ಲಿರುವ ದುರ್ಯೋಧನನ ದೇವತಾ ಪ್ರತಿಮೆಗಳು ಕಂಪಿಸುತ್ತಿವೆ, ನಗುತ್ತಿವೆ, ನೃತ್ಯವನ್ನು ಮಾಡುತ್ತಿವೆ ಮತ್ತು ಅಳುತ್ತಿವೆ.

ಅಪಸವ್ಯಂ ಗ್ರಹಾಶ್ಚಕ್ರುರಲಕ್ಷ್ಮಣಂ ನಿಶಾಕರಮ್ |
ಅವಾಕ್ಶಿರಾಶ್ಚ ಭಗವಾನುದತಿಷ್ಠತ ಚಂದ್ರಮಾಃ ॥12॥
ಗ್ರಹಗಳು ಅಪಸವ್ಯದಲ್ಲಿ ತಿರುಗುತ್ತಿವೆ. ಚಂದ್ರನು ಶಶಚಿಹ್ನೆಯಿಂದ ರಹಿತನಾಗಿ ಉದಯಿಸುತ್ತಿದ್ದಾನೆ. ಪೂಜ್ಯನಾದ ಚಂದ್ರನು ತಲೆಕೆಳಗಾಗಿ ಉದಯಿಸಿದ್ದಾನೆ.
ವಪೂಂಷಿ ಚ ನರೇಂದ್ರಾಣಾಂ ವಿಗತಾನೀವ ಲಕ್ಷಯೇ |
ಧಾರ್ತರಾಷ್ಟ್ರಸ್ಯ ಸೈನ್ಯೇಷು ನ ಚ ಭ್ರಾಜಂತಿ ದಂಸಿತಾಃ ॥13॥
ನರೇಂದ್ರರ ದೇಹಗಳು ಕಾಂತಿಹೀನವಾಗಿರುವುದನ್ನು ನೋಡುತ್ತಿದ್ದೇನೆ. ದುರ್ಯೋಧನನ ಸೈನ್ಯಗಳಲ್ಲಿ ಶಸ್ತ್ರಕವಚ ಸನ್ನದ್ಧರಾದ ಯೋಧರು ಪ್ರಕಾಶಿಸುತ್ತಿಲ್ಲ.
ಸೇನಯೋರುಭಯೋಶ್ಚೈವ ಸಮಂತಾತ್ ಶ್ರೂಯತೇ ಮಹಾನ್ |
ಪಾಂಚಜನ್ಯಸ್ಯ ನಿರ್ಘೋಷೋ ಗಾಂಡೀವಸ್ಯ ಚ ನಿಸ್ವನಃ ॥14॥
ಪಾಂಚಜನ್ಯದ ನಿರ್ಘೋಷವೂ, ಗಾಂಡೀವದ ಮಹಾಸ್ವನವೂ ಎರಡು ಸೈನ್ಯಗಳಲ್ಲಿಯೂ ಎಲ್ಲ ಕಡೆಗಳಿಂದಲೂ ಕೇಳಿಬರುತ್ತಿದೆ.
ಧ್ರುವಮಾಸ್ಥಾಯ ಬೀಭತ್ಸುರುತ್ತಮಾಸ್ತ್ರಾಣಿ ಸಂಯುಗೇ |
ಅಪಾಸ್ಯಾನ್ಯಾನ್ ರಣೇ ಯೋಧಾನಭ್ಯಸ್ಯತಿ ಪಿತಾಮಹಮ್ ॥15॥
ಈ ದಿನ ನಿಶ್ಚಿತವಾಗಿ ಅರ್ಜುನನು ಯುದ್ಧದಲ್ಲಿ ಉತ್ತಮಾಸ್ತ್ರಗಳನ್ನು ಆಶ್ರಯಿಸಿ ಬೇರೆ ಯೋಧರನ್ನು ದೂರ ಸರಿಸಿ, ಪಿತಾಮಹರ ಮೇಲೆ ಬಾಣ ಪ್ರಯೋಗವನ್ನು ಮಾಡುತ್ತಾನೆ.
ಹೃಷ್ಯಂತಿ ರೋಮಕೂಪಾನಿ ಸೀದತೀವ ಚ ಮೇ ಮನಃ |
ಚಿಂತಯಿತ್ವಾ ಮಹಾಬಾಹೋ ಭೀಷ್ಮಾರ್ಜುನಸಮಾಗಮಮ್ ॥16॥
ಎಲೈ ಮಹಾಬಾಹುವೇ, ಭೀಷ್ಮಾರ್ಜುನರ ಸಮಾಗಮವನ್ನು ಯೋಚಿಸಿ ನನಗೆ ರೋಮಾಂಚವಾಗುತ್ತಿದೆ. ನನ್ನ ಮನಸ್ಸು ಕುಸಿದು ಹೋಗುವಂತೆ ತೋರುತ್ತಿದೆ.
ತಂ ಚೈವ ನಿಕೃತಿಪ್ರಜ್ಞಂ ಪಾಂಚಾಲ್ಯಂ ಪಾಪಚೇತಸಮ್ |
ಪುರಸ್ಕೃತ್ಯ ರಣೇ ಪಾರ್ಥೋ ಭೀಷ್ಮಸ್ಯಾಯೋಧನಂ ಗತಃ ॥17॥
ಅರ್ಜುನನಾದರೋ ಆ ಮೋಸದ ಬುದ್ಧಿಯುಳ್ಳವನೂ, ಪಾಪಮನಸ್ಸುಳ್ಳವನೂ ಆದ, ಪಾಂಚಾಲದೇಶದ ಶಿಖಂಡಿಯನ್ನು ಯುದ್ಧದಲ್ಲಿ ಮುಂದೆ ಮಾಡಿಕೊಂಡು ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡಲು ರಣರಂಗಕ್ಕೆ ಹೋಗಿದ್ದಾನೆ.
ಅಬ್ರವೀಚ್ಚ ಪುರಾ ಭೀಷ್ಮೋ ನಾಹಂ ಹನ್ಯಾಂ ಶಿಖಂಡಿನಮ್ |
ಸ್ತ್ರೀ ಹ್ಯೇಷಾ ವಿಹಿತಾ ಧಾತ್ರಾ ದೈವಾಚ್ಚ ಸ ಪುನಃ ಪುಮಾನ್ ॥18॥
ಭೀಷ್ಮರು ಹಿಂದೆಯೇ ನಾನು ಶಿಖಂಡಿಯ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲ. ಬ್ರಹ್ಮನಿಂದ ಸ್ತ್ರೀಯಾಗಿ ಸೃಷ್ಟಿಸಲ್ಪಟ್ಟ ಅವನು ದೈವಬಲದಿಂದ ಪುನಃ ಪುರುಷನಾಗಿದ್ದಾನೆ ಎಂದು ಹೇಳಿದ್ದಾರೆ.
ಅಮಂಗಲ್ಯಧ್ವಜಶ್ಚೈವ ಯಾಜ್ಞಸೇನಿರ್ಮಹಾರಥಃ |
ನ ಚಾಮಂಗಲಕೇತೋಃ ಸ ಪ್ರಹರೇದಾಪಗಾಸುತಃ ॥19॥
ಮಹಾರಥನಾದ ಶಿಖಂಡಿಯು ಅಮಂಗಳ ಚಿಹ್ನೆಯುಳ್ಳವನು. ಗಂಗಾಸುತರಾದ ಭೀಷ್ಮರು ಅಮಂಗಳ ಚಿಹ್ನೆಯನ್ನು ಧರಿಸಿದ ಅವನ ಮೇಲೆ ಪ್ರಹಾರ ಮಾಡುವುದಿಲ್ಲ.
ಏತದ್ ವಿಚಿಂತಯಾನಸ್ಯ ಪ್ರಜ್ಞಾ ಸೀದತಿ ಮೇ ಭೃಶಮ್ |
ಅದ್ಯೈವ ತು ರಣೇ ಪಾರ್ಥಃ ಕುರುವೃದ್ಧಮುಪಾದ್ರವತ್ ॥20॥
ಇದನ್ನು ಚಿಂತನೆ ಮಾಡುವ ನನಗೆ ನನ್ನ ಪ್ರಜ್ಞೆಯು ಬಹಳವಾಗಿ ಕುಸಿಯುತ್ತಿದೆ. ಈ ದಿನವೇ ಅರ್ಜುನನು ಯುದ್ಧದಲ್ಲಿ ಕುರುವೃದ್ಧರಾದ ಭೀಷ್ಮರ ಮೇಲೆ ಎರಗಲಿದ್ದಾನೆ.
ಯುಧಿಷ್ಠಿರಸ್ಯ ಚ ಕ್ರೋಧೋ ಭೀಷ್ಮಾರ್ಜುನಸಮಾಗಮಃ |
ಮಮ ಚಾಸತ್ರಭಿಸಂರಂಭಃ ಪ್ರಜಾನಾಮಶುಭಂ ಧ್ರುವಮ್ ॥21॥
ಯುಧಿಷ್ಠಿರನ ಕೋಪ, ಭೀಷ್ಮಾರ್ಜುನರ ಸಮಾಗಮ, ನನ್ನ ಅಸ್ತ್ರಗಳ ಸಂಚಲನೆ ಇವೆಲ್ಲವೂ ನಿಶ್ಚಿತವಾಗಿ ಪ್ರಜೆಗಳಿಗೆ ಅಶುಭವನ್ನುಂಟು ಮಾಡುತ್ತವೆ.

ಮನಸ್ವೀ ಬಲವಾನ್ ಶೂರಃ ಕೃತಾಸ್ತ್ರೋ ದೃಢವಿಕ್ರಮಃ |
ದೂರಪಾತೀ ದೃಢೇಷುಶ್ಚ ನಿಮಿತ್ತಜ್ಞಶ್ಚ ಪಾಂಡವಃ ||22||
ಪಾಂಡುಪುತ್ರನಾದ ಅರ್ಜುನನು ಧೈರ್ಯಶಾಲಿ, ಬಲಿಷ್ಠ, ಶೂರ, ಅಸ್ತ್ರಜ್ಞ, ದೃಢಪರಾಕ್ರಮಿ, ದೂರದಿಂದಲೂ ಹೊಡೆಯುವವನು, ದೃಢವಾದ ಬಾಣವುಳ್ಳವನು ಮತ್ತು ಶಕುನಗಳನ್ನು ತಿಳಿದವನು.
ಅಜೇಯಃ ಸಮರೇ ಚೈವ ದೇವೈರಪಿ ಸವಾಸವೈಃ |
ಬಲವಾನ್ ಬುದ್ಧಿಮಾಂಶ್ಚೈವ ಜಿತಕ್ಲೇಶೋ ಯುಧಾಂವರಃ ||23||
ಇಂದ್ರನಿಂದ ಕೂಡಿದ ದೇವತೆಗಳಿಂದಲೂ ಅವನು ಅಜೇಯನಾದವನು. ಅವನು ಬಲಿಷ್ಠನಾದವನು ಮೇಧಾವಿ, ದಣಿವಿಲ್ಲದವನು ಮತ್ತು ಯೋಧರಲ್ಲಿ ಶ್ರೇಷ್ಠನಾದವನು.
ವಿಜಯೀ ಚ ರಣೇ ನಿತ್ಯಂ ಭೈರವಾಸ್ತ್ರಶ್ಚ ಪಾಂಡವಃ |
ತಸ್ಯ ಮಾರ್ಗಂ ಪರಿಹರನ್ ದ್ರುತಂ ಗಚ್ಛ ಯತವ್ರತಮ್ ||24||
ಪಾಂಡುಪುತ್ರನಾದ ಅವನು ಯುದ್ಧದಲ್ಲಿ ಯಾವಾಗಲೂ ಗೆಲ್ಲುವವನು ಮತ್ತು ಭಯಂಕರವಾದ ಅಸ್ತ್ರವನ್ನು ಹೊಂದಿರುವವನು. ಅವನ ಮಾರ್ಗವನ್ನು ತಡೆಯುತ್ತಾ ಶೀಘ್ರವಾಗಿ ನೀನು ಭೀಷ್ಮರ ಬಳಿಗೆ ಹೋಗು.
ಪಶ್ಯ ಚೈತನ್ಮಹಾಬಾಹೋ ವೈಶಸಂ ಸಮುಪಸ್ಥಿತಮ್ |
ಹೇಮಚಿತ್ರಾಣಿ ಶೂರಾಣಾಂ ಮಹಾಂತಿ ಚ ಶುಭಾನಿ ಚ ||25||
ಕವಚಾನ್ಯವದೀರ್ಯಂತೇ ಶರೈಃ ಸನ್ನತಪರ್ವಭಿಃ |
ಛಿದ್ಯಂತೇ ಚ ಧ್ವಜಾಗ್ರಾಣಿ ತೋಮರಾಣಿ ಧನೂಂಷಿ ಚ ||26||
ಪ್ರಾಸಾಶ್ಚ ವಿಮಲಾಸ್ತೀಕ್ಷ್ಣಾಃ ಶಕ್ತ್ಯಶ್ಚ ಕನಕೋಜ್ಜ್ವಲಾಃ |
ವೈಜಯಂತ್ಯಶ್ಚ ನಾಗಾನಾಂ ಸಂಕ್ರುದ್ಧೇನ ಕಿರೀಟಿನಾ ||27||
ಎಲೈ ಮಹಾಬಾಹುವೇ, ಘೋರವಾದ ಹಿಂಸೆಯು ಪ್ರಾಪ್ತವಾಗಿರುವುದನ್ನು ನೋಡು. ಸುವರ್ಣಾಲಂಕೃತವಾದ ಶೂರರ ದೊಡ್ಡ ಶುಭಕವಚಗಳು ಬಾಗಿದ ತುದಿಯುಳ್ಳ ಬಾಣಗಳಿಂದ ಸೀಳಲ್ಪಡುತ್ತಿವೆ. ಧ್ವಜದ ಮೇಲ್ಭಾಗಗಳು, ತೋಮರಗಳು ಮತ್ತು ಧನುಸ್ಸುಗಳು ಕತ್ತರಿಸಲ್ಪಡುತ್ತಿವೆ. ಬಹಳ ಕೋಪಗೊಂಡ ಅರ್ಜುನನು ಶುದ್ಧವಾದ ತೀಕ್ಷ್ಣವಾದ ಪ್ರಾಸಗಳನ್ನೂ, ಕನಕಭೂಷಿತವಾದ ಶಕ್ತಿಗಳನ್ನೂ, ಗಜಗಳ ವೈಜಯಂತಿ ಮಾಲೆಗಳನ್ನೂ ಕತ್ತರಿಸುತ್ತಿದ್ದಾನೆ.
ನಾಯಂ ಸಂರಕ್ಷಿತುಂ ಕಾಲಃ ಪ್ರಾಣಾನ್ ಪುತ್ರೋಪಜೀವಿಭಿಃ |
ಯಾಹಿ ಸ್ವರ್ಗಂ ಪುರಸ್ಕೃತ್ಯ ಯಶಸೇ ವಿಜಯಾಯ ಚ ||28||
ಎಲೈ ಪುತ್ರನೇ, ಇನ್ನೊಬ್ಬರನ್ನು ಉಪಜೀವಿಸುವವರು ಇದು ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವ ಕಾಲವಲ್ಲ. ಸ್ವರ್ಗವನ್ನು ಮುಂದೆ ಮಾಡಿಕೊಂಡು ಕೀರ್ತಿಗಾಗಿ ಮತ್ತು ವಿಜಯಕ್ಕಾಗಿ ಭೀಷ್ಮರ ಬಳಿಗೆ ಹೋಗು.
ಹಯನಾಗರಥಾವರ್ತಾಂ ಮಹಾಘೋರಾಂ ಸುದುಸ್ತರಾಮ್ |
ರಥೇನ ಸಂಗ್ರಾಮನದೀಂ ತರತ್ಯೇಷ ಕಪಿಧ್ವಜಃ ||29||
ಗಜಾಶ್ವರಥಗಳೆಂಬ ಸುಳಿಗಳಿಂದ ಕೂಡಿದ, ಮಹಾಘೋರವಾದ, ದಾಟಲು ಅಸಾಧ್ಯವಾದ ಸಂಗ್ರಾಮದ ನದಿಯನ್ನು ಕಪಿಧ್ವಜನಾದ ಈ ಅರ್ಜುನನು ರಥದಿಂದ ದಾಟುತ್ತಿದ್ದಾನೆ.
ಬ್ರಹ್ಮಣ್ಯತಾ ದಮೋ ದಾನಂ ತಪಶ್ಚ ಚರಿತಂ ಮಹತ್ |
ಇಹೈವ ದೃಶ್ಯತೇ ರಾಜ್ಞೋ ಭ್ರಾತಾ ಯಸ್ಯ ಧನಂಜಯಃ ||30||
ಯಾವನಿಗೆ ಅರ್ಜುನನು ತಮ್ಮನಾಗಿದ್ದಾನೆಯೋ ಅಂತಹ ರಾಜನ ಬ್ರಾಹ್ಮಣ ವಾತ್ಸಲ್ಯ, ಇಂದ್ರಿಯನಿಗ್ರಹ, ದಾನ, ತಪಸ್ಸು, ಸಚ್ಚರಿತ ಇವು ಇಲ್ಲಿ ಕಂಡು ಬರುತ್ತಿವೆ.
ಭೀಮಸೇನಶ್ಚ ಬಲವಾನ್ ಮಾದ್ರೀಪುತ್ರೌ ಚ ಪಾಂಡವೌ |
ವಾಸುದೇವಶ್ಚ ವಾರ್ಷ್ಣೇಯೋ ಯಸ್ಯ ನಾಥೋ ವ್ಯವಸ್ಥಿತಃ ||31||
ಬಲಿಷ್ಠನಾದ ಭೀಮಸೇನನೂ, ಪಾಂಡುಪುತ್ರರಾದ ನಕುಲ-ಸಹದೇವರೂ (ಅವನ ಜೊತೆಗೆ ಇದ್ದಾರೆ). ವೃಷ್ಣಿಕುಲದಲ್ಲಿ ಅವತರಿಸಿದ ವಾಸುದೇವನು ಅವನಿಗೆ ಸ್ವಾಮಿಯಾಗಿ ನಿಂತಿದ್ದಾನೆ.
ತಸ್ಯೈಷ ಮನ್ಯುಪ್ರಭವೋ ಧಾರ್ತರಾಷ್ಟ್ರಸ್ಯ ದುರ್ಮತೇಃ |
ತಪೋದಗ್ಧಶರೀರಸ್ಯ ಕೋಪೋ ದಹತಿ ಭಾರತಾನ್ ||32||
ಅಂತಹ ತಪಸ್ಸಿನಿಂದ ಕೃಶವಾದ ಶರೀರವುಳ್ಳ ಧರ್ಮರಾಜನ ಕ್ಲೇಶದಿಂದ ಉಂಟಾದ ಕೋಪವು ದುರ್ಮತಿಯಾದ ದುರ್ಯೋಧನನಿಗೆ ಸೇರಿದ ಭಾರತರ ಸೇನೆಯನ್ನು ಸುಡುತ್ತಿದೆ.
ಏಷ ಸಂದೃಶ್ಯತೇ ಪಾರ್ಥೋ ವಾಸುದೇವವ್ಯಪಾಶ್ರಯಃ |
ದಾರಯನ್ ಸರ್ವಸೈನ್ಯಾನಿ ಧಾರ್ತರಾಷ್ಟ್ರಾಣಿ ಸರ್ವಶಃ ||33||
ಕೃಷ್ಣನನ್ನು ಆಶ್ರಯಿಸಿ ದುರ್ಯೋಧನನ ಎಲ್ಲ ಸೈನ್ಯಗಳನ್ನೂ ಎಲ್ಲ ಕಡೆಗಳಲ್ಲಿಯೂ ಸೀಳುತ್ತಿರುವ ಈ ಅರ್ಜುನನು ಕಾಣುತ್ತಿದ್ದಾನೆ.
ಏತದಾಲೋಕ್ಯತೇ ಸೈನ್ಯಂ ಕ್ಷೋಭ್ಯಮಾಣಂ ಕಿರೀಟಿನಾ |
ಮಹೋರ್ಮಿನದ್ಧಂ ಸುಮಹತ್ ತಿಮಿನೇವ ನದೀಮುಖಮ್ ||34||
ತಿಮಿಂಗಿಲವು ಅನೇಕ ಅಲೆಗಳಿಂದ ಕೂಡಿದ ನದೀಮುಖವನ್ನು ನೋಡಿದಂತೆ ಅರ್ಜುನನು ಕ್ಷೋಭೆಗೊಳಗಾದ ಈ ಸೈನ್ಯವನ್ನು ನೋಡುತ್ತಿದ್ದಾನೆ.
ಹಾಹಾಕಿಲಕಿಲಾಶಬ್ದಾಃ ಶ್ರೂಯಂತೇ ಚ ಚಮೂಮುಖೇ |

ಯಾಹಿ ಪಾಂಚಾಲದಾಯಾದಮಹಂ ಯಾಸ್ಯೇ ಯುಧಿಷ್ಠಿರಮ್ ॥35॥
ಹಾಹಾಕಾರವೂ ಮತ್ತು ಕಿಲಕಿಲ ಗಾಬರಿ ಶಬ್ಧವೂ ಸೇನೆಯ ಮುಂಭಾಗದಲ್ಲಿ ಕೇಳಿಬರುತ್ತಿವೆ. ಆದ್ದರಿಂದ ನೀನು ಶಿಖಂಡಿಯ ಬಳಿಗೆ ಹೋಗು. ನಾನು ಯುಧಿಷ್ಠಿರನ ಬಳಿಗೆ ಹೋಗುವೆನು.
ದುರ್ಲಭಂ ಹ್ಯಂತರಂ ರಾಜ್ಞೋ ವ್ಯೂಹಸ್ಯಾಮಿತತೇಜಸಃ।
ಸಮುದ್ರಕುಕ್ಷಿಪ್ರತಿಮಂ ಸರ್ವತೋಽತಿರಥೈಃ ಸ್ಥಿತೈಃ ॥36॥
ಅಮಿತ ಪರಾಕ್ರಮಿಯಾದ ಧರ್ಮರಾಜನ ಸಮುದ್ರಕುಕ್ಷಿಯಂತಿರುವ, ಎಲ್ಲ ಕಡೆಗಳಿಂದಲೂ ಅತಿರಥರು ನಿಂತಿರುವ, ವ್ಯೂಹವು ಭೇದಿಸಲು ಅವಕಾಶವನ್ನು ಪಡೆಯಲು ದುರ್ಲಭವಾದುದು.
ಸಾತ್ಯಕಿಶ್ಚಾಭಿಮನ್ಯುಶ್ಚ ಧೃಷ್ಟದ್ಯುಮ್ನವೃಕೋದರೌ।
ಪರಿರಕ್ಷಂತಿ ರಾಜಾನಂ ಯಮೌ ಚ ಮನುಜೇಶ್ವರಮ್ ॥37॥
ಸಾತ್ಯಕಿ, ಅಭಿಮನ್ಯು, ಧೃಷ್ಟದ್ಯುಮ್ನ, ಭೀಮಸೇನ ಮತ್ತು ನಕುಲ-ಸಹದೇವರು ರಾಜನಾದ ಯುಧಿಷ್ಠಿರನನ್ನು ರಕ್ಷಿಸುತ್ತಿದ್ದಾರೆ.
ಉಪೇಂದ್ರಸದೃಶಃ ಶ್ಯಾಮೋ ಮಹಾಸಾಲ ಇವೋದ್ಗತಃ।
ಏಷ ಗಚ್ಛತ್ಯನೀಕಾನಿ ದ್ವಿತೀಯ ಇವ ಫಲ್ಗುನಃ ॥38॥
ಉಪೇಂದ್ರನಂತೆ ಶ್ಯಾಮವರ್ಣೋಪೇತನೂ, ಮಹಾಸಾಲವೃಕ್ಷದಂತೆ ಎತ್ತರನಾದವನು ಆದ ಈ ಅಭಿಮನ್ಯುವು ಎರಡನೆಯ ಅರ್ಜುನನಂತೆ ನಮ್ಮ ಸೈನ್ಯದ ಕಡೆಗೆ ಹೋಗುತ್ತಿದ್ದಾನೆ.
ಉತ್ತಮಾಸ್ತ್ರಾಣಿ ಚಾದತ್ಸ್ವ ಗೃಹೀತ್ವಾನ್ಯನ್ಮಹದ್ಧನುಃ।
ಪಾರ್ಶ್ವತೋ ಯಾಹಿ ರಾಜಾನಂ ಯುಧ್ಯಸ್ವ ಚ ವೃಕೋದರಮ್ ॥39॥
ಬೇರೆ ದೊಡ್ಡ ಧನುಸ್ಸನ್ನು ತೆಗೆದುಕೊಂಡು ಉತ್ತಮಾಸ್ತ್ರಗಳನ್ನು ತೆಗೆದುಕೊ. ಧರ್ಮರಾಜನ ಪಾರ್ಶ್ವದಲ್ಲಿ ಹೋಗಿ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡು.
ಕೋ ಹಿ ನೇಚ್ಛೇತ್ ಪ್ರಿಯಂ ಪುತ್ರಂ ಜೀವಂತಂ ಶಾಶ್ವತೀಃ ಸಮಾಃ।
ಕ್ಷತ್ರಧರ್ಮಂ ಪುರಸ್ಕೃತ್ಯ ತತಸ್ತ್ವಾ ವಿನಿಯುಜ್ಮಹೇ ॥40॥
ತನ್ನ ಪ್ರಿಯನಾದ ಪುತ್ರನು ಬಹುಕಾಲ ಬದುಕಿರುವುದನ್ನು ಯಾವನು ಇಚ್ಛಿಸುವುದಿಲ್ಲ? ಆದರೆ ಕ್ಷತ್ರಿಯ ಧರ್ಮವನ್ನು ಪುರಸ್ಕರಿಸಿ ನಾನು ನಿನಗೆ ಆದೇಶವನ್ನು ಮಾಡುತ್ತಿದ್ದೇನೆ.
ಏಷ ಚಾಪಿ ರಣೇ ಭೀಷ್ಮೋ ದಹತೇ ವೈ ಮಹಾಚಮೂಮ್।
ಯುದ್ಧೇ ಸುಸದೃಶಸ್ತಾತ ಯಮಸ್ಯ ವರುಣಸ್ಯ ಚ ॥41॥
ಎಲೈ ಪ್ರೀತಿಪಾತ್ರನೇ, ಯುದ್ಧದಲ್ಲಿ ಯಮನಿಗೂ ಮತ್ತು ವರುಣನಿಗೂ ಬಹಳ ಸದೃಶರಾದ ಈ ಭೀಷ್ಮರೂ ಪಾಂಡವರ ಮಹಾಸೈನ್ಯವನ್ನು ದಹಿಸುತ್ತಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ನವಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕೋನಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹತ್ತನೆಯ ಅಧ್ಯಾಯ
ಭೀಮಸೇನನ ಪರಾಕ್ರಮ.
ಸಂಜಯಃ
ಪುತ್ರಂ ಸಮನುಶಾಸ್ಯೈವಂ ಭಾರದ್ವಾಜಃ ಪ್ರತಾಪವಾನ್।
ಮಹಾರಣೇ ಮಹಾರಾಜ ಧರ್ಮರಾಜಮಯೋಧಯತ್ ॥1॥
ಸಂಜಯ ಎಲೈ ಮಹಾರಾಜನೇ, ಹೀಗೆ ತಮ್ಮ ಪುತ್ರನಿಗೆ ಆದೇಶವನ್ನು ನೀಡಿ ಪ್ರತಾಪಶಾಲಿಯಾದ ದ್ರೋಣರು ಮಹಾರಣದಲ್ಲಿ ಧರ್ಮರಾಜನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಭಗದತ್ತಃ ಕೃಪಃ ಶಲ್ಯಃ ಕೃತವರ್ಮಾ ಚ ಸಾತ್ವತಃ।
ವಿಂದಾನುವಿಂದಾವಾವಂತ್ಯೌ ಸೈಂಧವಶ್ಚ ಜಯದ್ರಥಃ ॥2॥
ಚಿತ್ರಸೇನೋ ವಿಕರ್ಣಶ್ಚ ತಥಾ ದುರ್ಮರ್ಷಣೋ ಯುವಾ।
ದಶೈತೇ ತಾವಕಾ ಯೋಧಾ ಭೀಮಸೇನಮಯೋಧಯನ್ ॥3॥
ಮಹತ್ಯಾ ಸೇನಯಾ ಯುಕ್ತಾ ನಾನಾದೇಶಸಮುತ್ಥಯಾ।
ಭೀಷ್ಮಸ್ಯ ಸಮರೇ ರಾಜನ್ ಪ್ರಾರ್ಥಯಾನಾ ಮಹದ್ಯಶಃ ॥4॥
ಭಗದತ್ತ, ಕೃಪರು, ಶಲ್ಯ, ಸಾತ್ವತಕುಲದ ಕೃತವರ್ಮ, ಅವಂತಿ ದೇಶದ ವಿಂದಾನುವಿಂದರು, ಸಿಂಧುದೇಶದ ಜಯದ್ರಥ, ಚಿತ್ರಸೇನ, ವಿಕರ್ಣ ಮತ್ತು ಯುವಕನಾದ ದುರ್ಮರ್ಷಣ ನಿನ್ನ ಈ ಹತ್ತು ಯೋಧರು ನಾನಾದೇಶಗಳಿಂದ ಬಂದ ದೊಡ್ಡ ಸೈನ್ಯದಿಂದ ಕೂಡಿದವರಾಗಿ ಭೀಷ್ಮರ ಈ ಕಾಳಗದಲ್ಲಿ ದೊಡ್ಡ ಕೀರ್ತಿಯನ್ನು ಆಶಿಸುತ್ತಾ ಎಲೈ ರಾಜನೇ, ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಶಲ್ಯಸ್ತು ನವಭಿರ್ಬಾಣೈರ್ಭೀಮಸೇನಮತಾಡಯತ್।
ಕೃತವರ್ಮಾ ತ್ರಿಭಿರ್ಬಾಣೈಃ ಕೃಪಶ್ಚ ನವಭಿಃ ಶರೈಃ ॥5॥
ಶಲ್ಯನು ಒಂಬತ್ತು ಬಾಣಗಳಿಂದಲೂ, ಕೃತವರ್ಮನು ಮೂರು ಬಾಣಗಳಿಂದಲೂ, ಕೃಪರು ಒಂಬತ್ತು ಬಾಣಗಳಿಂದಲೂ

ಭೀಮಸೇನನನ್ನು ಹೊಡೆದರು.
ಚಿತ್ರಸೇನೋ ವಿಕರ್ಣಶ್ಚ ಭಗದತ್ತಶ್ಚ ಮಾರಿಷ |
ದಶಭಿರ್ದಶಭಿರ್ಭಲ್ಲೈರ್ಭೀಮಸೇನಮತಾಡಯನ್ ॥6॥
ಎಲೈ ಶ್ರೇಷ್ಠನೇ, ಚಿತ್ರಸೇನ, ವಿಕರ್ಣ ಮತ್ತು ಭಗದತ್ತರು ಹತ್ತು-ಹತ್ತು ಭಲ್ಲಗಳಿಂದ ಭೀಮಸೇನನನ್ನು ಹೊಡೆದರು.
ಸೈಂಧವಶ್ಚ ತ್ರಿಭಿರ್ಬಾಣೈರ್ಜತ್ರುದೇಶೇಽಭ್ಯತಾಡಯತ್ |
ವಿಂದಾನುವಿಂದಾವಾವಂತ್ಯೌ ಪಂಚಭಿಃ ಪಂಚಭಿಃ ಶರೈಃ |
ದುರ್ಮರ್ಷಣಶ್ಚ ವಿಂಶತ್ಯಾ ಪಾಂಡವಂ ನಿಶಿತೈಃ ಶರೈಃ ॥7॥
ಸೈಂಧವನು ಮೂರು ಬಾಣಗಳಿಂದ ಭೀಮಸೇನನನ್ನು ಭುಜಸಂಧಿ ಪ್ರದೇಶದಲ್ಲಿ ಹೊಡೆದನು. ಅವಂತಿದೇಶದ ವಿಂದಾನುವಿಂದರು ಐದೈದು ಬಾಣಗಳಿಂದಲೂ, ದುರ್ಮರ್ಷಣನು ಇಪ್ಪತ್ತು ತೀಕ್ಷ್ಣವಾದ ಬಾಣಗಳಿಂದಲೂ ಪಾಂಡವನಾದ ಭೀಮಸೇನನನ್ನು ಹೊಡೆದರು.
ಸ ತಾನ್ ಸರ್ವಾನ್ ಮಹಾರಾಜ ಭ್ರಾಜಮಾನಾನ್ ಪೃಥಕ್ಪೃಥಕ್ |
ಪ್ರವೀರಾನ್ ಸರ್ವಲೋಕಸ್ಯ ಧಾರ್ತರಾಷ್ಟ್ರಾನ್ ಮಹಾರಥಾನ್ |
ವಿವ್ಯಾಧ ಬಹುಭಿರ್ಬಾಣೈರ್ಭೀಮಸೇನೋ ಮಹಾಬಲಃ ॥8॥
ಎಲೈ ಮಹಾರಾಜನೇ, ಕಾಂತಿಯುಕ್ತರಾದ, ದುರ್ಯೋಧನನ ಮಹಾರಥರಾದ, ಸರ್ವಲೋಕವೀರರಾದ ಅವರೆಲ್ಲರನ್ನೂ ಮಹಾಬಲನಾದ ಭೀಮಸೇನನು ಬೇರೆ ಬೇರೆಯಾಗಿ ಅನೇಕ ಬಾಣಗಳಿಂದ ಹೊಡೆದನು.
ಶಲ್ಯಂ ಪಂಚಾಶತಾ ವಿದ್ಧ್ವಾ ಕೃತವರ್ಮಾಣಮಷ್ಟಭಿಃ |
ಕೃಪಸ್ಯ ಸಶರಂ ಚಾಪಂ ಮಧ್ಯೇ ಚಿಚ್ಛೇದ ಭಾರತ |
ಅಥೈನಂ ಛಿನ್ನಧನ್ವಾನಂ ಪುನರ್ವಿವ್ಯಾಧ ಪಂಚಭಿಃ ॥9॥
ಎಲೈ ಭಾರತನೇ, ಶಲ್ಯನನ್ನು ಐವತ್ತು ಬಾಣಗಳಿಂದಲೂ, ಕೃತವರ್ಮನನ್ನು ಎಂಟು ಬಾಣಗಳಿಂದಲೂ ಹೊಡೆದು, ಕೃಪರ ಧನುಸ್ಸನ್ನು ಬಾಣ ಸಹಿತವಾಗಿ ಮಧ್ಯದಲ್ಲಿ ಕತ್ತರಿಸಿದನು. ಅವರ ಧನುಸ್ಸು ಕತ್ತರಿಸಲ್ಪಟ್ಟ ಮೇಲೆ ಪುನಃ ಅವರ ಮೇಲೆ ಐದು ಬಾಣಗಳನ್ನು ಪ್ರಯೋಗಿಸಿದನು.
ವಿಂದಾನುವಿಂದೌ ಚ ತಥಾ ತ್ರಿಭಿಸ್ತ್ರಿಭಿರತಾಡಯತ್ |
ದುರ್ಮರ್ಷಣಂ ಚ ವಿಂಶತ್ಯಾ ಚಿತ್ರಸೇನಂ ಚ ಪಂಚಭಿಃ ॥10॥
ವಿಕರ್ಣಂ ದಶಭಿರ್ಬಾಣೈಃ ಪಂಚಭಿಶ್ಚ ಜಯದ್ರಥಮ್ |
ವಿದ್ಧ್ವಾ ಭೀಮೋಽನದದ್ ಹೃಷ್ಟಃ ಸೈಂಧವಂ ಚ ಪುನಸ್ತ್ರಿಭಿಃ ॥11॥
ಹಾಗೆಯೇ ವಿಂದಾನುವಿಂದರನ್ನು ಮೂರು-ಮೂರು ಬಾಣಗಳಿಂದಲೂ, ದುರ್ಮರ್ಷಣನನ್ನು ಇಪ್ಪತ್ತು ಬಾಣಗಳಿಂದಲೂ, ಚಿತ್ರಸೇನನನ್ನು ಐದು ಬಾಣಗಳಿಂದಲೂ, ವಿಕರ್ಣನನ್ನು ಹತ್ತು ಬಾಣಗಳಿಂದಲೂ, ಜಯದ್ರಥನನ್ನು ಐದು ಬಾಣಗಳಿಂದಲೂ ಹೊಡೆದು ಸಂತೋಷಗೊಂಡು, ಸಿಂಹನಾದವನ್ನು ಮಾಡಿ ಭೀಮಸೇನನು ಸೈಂಧವನನ್ನು ಪುನಃ ಮೂರು ಬಾಣಗಳಿಂದ ಹೊಡೆದನು.

ಅಥಾನ್ಯದ್ ಧನುರಾದಾಯ ಗೌತಮೋ ರಥಿನಾಂ ವರಃ |
ಭೀಮಂ ವಿವ್ಯಾಧ ಸಂರಬ್ಧೋ ದಶಭಿರ್ನಿಶಿತೈಃ ಶರೈಃ ॥12॥
ರಥಿಶ್ರೇಷ್ಠರಾದ ಕೃಪರು ಅನಂತರ ಕೋಪಗೊಂಡು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಭೀಮನನ್ನು ಹತ್ತು ತೀಕ್ಷ್ಣವಾದ ಬಾಣಗಳಿಂದ ಹೊಡೆದರು.
ಸ ವಿದ್ಧೋ ಬಹುಭಿರ್ಬಾಣೈಸ್ತೋತ್ತ್ರೈರಿವ ಮಹಾದ್ವಿಪಃ |
ತತಃ ಕ್ರುದ್ಧೋ ಮಹಾಬಾಹುರ್ಭೀಮಸೇನಃ ಪ್ರತಾಪವಾನ್ |
ಗೌತಮಂ ತಾಡಯಾಮಾಸ ಶರೈರ್ಬಹುಭಿರಾಹವೇ ॥13॥
ಅಂಕುಶದಿಂದ ಹೊಡೆದ ಮಹಾಗಜದಂತೆ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟ ಪ್ರತಾಪಶಾಲಿಯೂ, ಮಹಾಬಾಹುವೂ ಆದ ಭೀಮಸೇನನು ಕ್ರುದ್ಧನಾಗಿ ರಣರಂಗದಲ್ಲಿ ಅನೇಕ ಬಾಣಗಳಿಂದ ಕೃಪರನ್ನು ಹೊಡೆದನು.
ಸೈಂಧವಸ್ಯ ತಥಾಶ್ವಾಂಶ್ಚ ಸಾರಥಿಂ ಚ ತ್ರಿಭಿಃ ಶರೈಃ |
ಪ್ರಾಹಿಣೋತ್ ಮೃತ್ಯುಲೋಕಾಯ ಕಾಲಾಂತಕಸಮದ್ಯುತಿಃ ॥14॥
ಹಾಗೆಯೇ ಸೈಂಧವನ ಅಶ್ವಗಳನ್ನು ಮತ್ತು ಸಾರಥಿಯನ್ನು ಕಾಲಾಂತಕನಿಗೆ ಸಮನಾದ ಕಾಂತಿಯುಳ್ಳ ಭೀಮಸೇನನು ಮೂರು ಬಾಣಗಳಿಂದ ಮೃತ್ಯುಲೋಕಕ್ಕೆ ಕಳುಹಿಸಿದನು.
ಹತಾಶ್ವಾತ್ ತು ರಥಾತ್ ತೂರ್ಣಮವಪ್ಲುತ್ಯ ಮಹಾರಥಃ |
ಶರಾಂಶ್ಚಿಕ್ಷೇಪ ನಿಶಿತಾನ್ ಭೀಮಸೇನಸ್ಯ ಸಂಯುಗೇ ॥15॥
ಮಹಾರಥನಾದ ಸೈಂಧವನು ಅಶ್ವಗಳು ಮೃತವಾದ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ, ಯುದ್ಧದಲ್ಲಿ ಭೀಮಸೇನನ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.
ತಸ್ಯ ಭೀಮೋ ಧನುರ್ಮಧ್ಯೇ ದ್ವಾಭ್ಯಾಂ ಚಿಚ್ಛೇದ ಭಾರತ |
ಭಲ್ಲಾಭ್ಯಾಂ ಭರತಶ್ರೇಷ್ಠ ಸೈಂಧವಸ್ಯ ಮಹಾತ್ಮನಃ ॥16॥
ಎಲೈ ಭರತಶ್ರೇಷ್ಠನೇ, ಭಾರತನೇ, ಮಹಾತ್ಮನಾದ ಸೈಂಧವನ ಧನುಸ್ಸನ್ನು ಭೀಮಸೇನನು ಎರಡು ಭಲ್ಲಗಳಿಂದ ಮಧ್ಯದಲ್ಲಿ ಕತ್ತರಿಸಿದನು.

ಸ ಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಚಿತ್ರಸೇನರಥಂ ರಾಜನ್ನಾರುರೋಹ ತ್ವರಾನ್ವಿತಃ ॥17॥
ಎಲೈ ರಾಜನೇ, ಅವನು ತನ್ನ ಧನುಸ್ಸು ಕತ್ತರಿಸಲ್ಪಟ್ಟು ಅಶ್ವಗಳು ಮತ್ತು ಸಾರಥಿಯು ಹತರಾಗಿ ವಿರಥನಾಗಿ ತ್ವರೆಯಿಂದ ಕೂಡಿ ಚಿತ್ರಸೇನನ ರಥವನ್ನು ಏರಿದನು.
ಅತ್ಯದ್ಭುತಂ ರಣೇ ಕರ್ಮ ಕೃತವಾಂಸ್ತತ್ರ ಪಾಂಡವಃ |
ಮಹಾರಥಾನ್ ಶರೈರ್ವಿದ್ಧ್ವಾ ವಾರಯಿತ್ವಾ ಮಹಾರಥಃ |
ವಿರಥಂ ಸೈಂಧವಂ ಚಕ್ರೇ ಸರ್ವಲೋಕಸ್ಯ ಪಶ್ಯತಃ ॥18॥
ಪಾಂಡವನಾದ ಭೀಮಸೇನನು ಅಲ್ಲಿ ಯುದ್ಧದಲ್ಲಿ ಬಹಳ ಅದ್ಭುತವಾದ ಕಾರ್ಯವನ್ನು ಮಾಡಿದನು. ಮಹಾರಥನಾದ ಅವನು ಮಹಾರಥರನ್ನು ಬಾಣಗಳಿಂದ ಹೊಡೆದು, ತಡೆದು ಎಲ್ಲ ಲೋಕವೂ ನೋಡುತ್ತಿರುವಂತೆಯೇ ಸೈಂಧವನನ್ನು ರಥಹೀನನನ್ನಾಗಿ ಮಾಡಿದನು.
ನಾತೀವ ಮಮೃಷೇ ಶಲ್ಯೋ ಭೀಮಸೇನಸ್ಯ ವಿಕ್ರಮಮ್ |
ಸ ಸಂಧಾಯ ಶರಾಂಸ್ತೀಕ್ಷ್ಣಾನ್ ಕರ್ಮಾರಪರಿಮಾರ್ಜಿತಾನ್ |
ಭೀಮಂ ವಿವ್ಯಾಧ ಸಪ್ತತ್ಯಾ ತಿಷ್ಠತಿಷ್ಠೇತಿ ಚಾಬ್ರವೀತ್ ॥19॥
ಶಲ್ಯನು ಭೀಮಸೇನನ ಪರಾಕ್ರಮವನ್ನು ನೋಡಿ ಬಹಳವಾಗಿ ಸಹಿಸಲಿಲ್ಲ. ಅವನು ಕಮ್ಮಾರರು ಪರಿಷ್ಕರಿಸಿದ ತೀಕ್ಷ್ಣವಾದ ಎಪ್ಪತ್ತು ಬಾಣಗಳನ್ನು ಧನುಸ್ಸಿನಲ್ಲಿ ಹೂಡಿ ಭೀಮಸೇನನಿಗೆ ಹೊಡೆದು ನಿಲ್ಲು-ನಿಲ್ಲು ಎಂದು ಹೇಳಿದನು.
ಕೃಪಶ್ಚ ಕೃತವರ್ಮಾ ಚ ಭಗದತ್ತಶ್ಚ ಮಾರಿಷ |
ವಿಂದಾನುವಿಂದಾವಾವಂತ್ಯೌ ಚಿತ್ರಸೇನಶ್ಚ ಸಂಯುಗೇ ॥20॥
ದುರ್ಮರ್ಷಣೋ ವಿಕರ್ಣಶ್ಚ ಸಿಂಧುರಾಜಶ್ಚ ವೀರ್ಯವಾನ್ |
ಭೀಮಂ ತೇ ವಿವ್ಯಧುಸ್ತೂರ್ಣಂ ಶಲ್ಯಹೇತೋರರಿಂದಮಾಃ ॥21॥
ಎಲೈ ಪೂಜ್ಯನೇ, ಕೃಪರು, ಕೃತವರ್ಮ, ಭಗದತ್ತ, ಅವಂತಿದೇಶದ ವಿಂದಾನುವಿಂದರು, ಚಿತ್ರಸೇನ, ದುರ್ಮರ್ಷಣ, ವಿಕರ್ಣ, ಪರಾಕ್ರಮಶಾಲಿಯಾದ ಸೈಂಧವ- ಅರಿಂದಮರಾದ ಇವರೆಲ್ಲರೂ ಯುದ್ಧದಲ್ಲಿ ಶಲ್ಯನನ್ನು ರಕ್ಷಿಸುವ ಸಲುವಾಗಿ ಶೀಘ್ರವಾಗಿ ಭೀಮಸೇನನನ್ನು ಬಾಣಗಳಿಂದ ಹೊಡೆದರು.
ಸ ತು ತಾನ್ ಪ್ರತಿವಿವ್ಯಾಧ ಪಂಚಭಿಃ ಪಂಚಭಿಃ ಶರೈಃ |
ಶಲ್ಯಂ ವಿವ್ಯಾಧ ಸಪ್ತತ್ಯಾ ಪುನಶ್ಚ ದಶಭಿಃ ಶರೈಃ ॥22॥
ಭೀಮಸೇನನು ಅವರೆಲ್ಲರನ್ನೂ ಐದೈದು ಬಾಣಗಳಿಂದ ಹೊಡೆದನು. ಶಲ್ಯನನ್ನು ಎಪ್ಪತ್ತು ಬಾಣಗಳಿಂದ ಹೊಡೆದು ಪುನಃ ಹತ್ತು ಬಾಣಗಳಿಂದ ಹೊಡೆದನು.
ತಂ ಶಲ್ಯೋ ನವಭಿರ್ವಿದ್ಧ್ವಾ ಪುನರ್ವಿವ್ಯಾಧ ಪಂಚಭಿಃ |
ಸಾರಥಿಂ ಚಾಸ್ಯ ಭಲ್ಲೇನ ಗಾಢಂ ವಿವ್ಯಾಧ ಮರ್ಮಣಿ ॥23॥
ಶಲ್ಯನು ಭೀಮಸೇನನನ್ನು ಒಂಬತ್ತು ಬಾಣಗಳಿಂದ ಹೊಡೆದು ಪುನಃ ಐದು ಬಾಣಗಳಿಂದ ಹೊಡೆದನು ಮತ್ತು ಭಲ್ಲದಿಂದ ಅವನ ಸಾರಥಿಯನ್ನು ಮರ್ಮಗಳಲ್ಲಿ ಗಾಢವಾಗಿ ಹೊಡೆದು ಗಾಯಗೊಳಿಸಿದನು.
ವಿಶೋಕಂ ವೀಕ್ಷ್ಯ ನಿರ್ಭಿನ್ನಂ ಭೀಮಸೇನಃ ಪ್ರತಾಪವಾನ್ |
ಮದ್ರರಾಜಂ ತ್ರಿಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ ॥24॥
ತನ್ನ ಸಾರಥಿಯಾದ ವಿಶೋಕನು ಗಾಯಗೊಂಡುದನ್ನು ನೋಡಿ ಪ್ರತಾಪಶಾಲಿಯಾದ ಭೀಮಸೇನನು ಶಲ್ಯನನ್ನು ಮೂರು ಬಾಣಗಳಿಂದ ಅವನ ಬಾಹುಗಳಲ್ಲಿ ಮತ್ತು ವಕ್ಷಸ್ಸ್ಥಲದಲ್ಲಿ ಹೊಡೆದನು.
ತಥೇತರಾನ್ ಮಹೇಷ್ವಾಸಾನ್ ತ್ರಿಭಿಸ್ತ್ರಿಭಿರಜಿಹ್ಮಗೈಃ |
ತಾಡಯಾಮಾಸ ಸಮರೇ ಸಿಂಹವಚ್ಚ ನನಾದ ಚ ॥25॥
ಹಾಗೆಯೇ ಇತರ ಮಹಾಧನುರ್ಧಾರಿಗಳನ್ನು ಯುದ್ಧದಲ್ಲಿ ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ಹೊಡೆದು ಸಿಂಹದಂತೆ ಗರ್ಜಿಸಿದನು.
ತೇ ಹಿ ಯತ್ತಾ ಮಹೇಷ್ವಾಸಾಃ ಪಾಂಡವಂ ಯುದ್ಧದುರ್ಮದಮ್ |
ತ್ರಿಭಿಸ್ತ್ರಿಭಿರಕುಂಠಾಗ್ರೈರ್ಭೃಶಂ ಮರ್ಮಸ್ವತಾಡಯನ್ ॥26॥
ಪ್ರಯತ್ನಶೀಲರಾದ ಆ ಮಹಾಧನುರ್ಧಾರಿಗಳು ಯುದ್ಧದುರ್ಮದನಾದ ಭೀಮಸೇನನನ್ನು ತೀಕ್ಷ್ಣವಾದ ತುದಿಗಳನ್ನು ಹೊಂದಿದ ಮೂರು-ಮೂರು ಬಾಣಗಳಿಂದ ಮರ್ಮಸ್ಥಾನಗಳಲ್ಲಿ ಚೆನ್ನಾಗಿ ಹೊಡೆದರು.
ಸೋಽತಿವಿದ್ಧೋ ಮಹೇಷ್ವಾಸೋ ಭೀಮಸೇನೋ ನ ವಿವ್ಯಥೇ |
ಪರ್ವತೋ ವಾರಿಧಾರಾಭಿರ್ವರ್ಷಮಾಣೈರಿವಾಂಬುದೈಃ ॥27॥
ಶತ್ರುಗಳಿಂದ ಬಹಳವಾಗಿ ಹೊಡೆಯಲ್ಪಟ್ಟ ಮಹಾಧನುರ್ಧಾರಿಯಾದ ಭೀಮಸೇನನು ಮೋಡಗಳು ಮಳೆಗಳ ಧಾರೆಗಳನ್ನು ಸುರಿಸಿದ ಪರ್ವತದಂತೆ ವ್ಯಥೆಯನ್ನು ಹೊಂದಲಿಲ್ಲ.
ಸ ತು ಕ್ರೋಧಸಮಾವಿಷ್ಟೋ ಭೀಮಸೇನೋ ಮಹಾಬಲಃ |
ಮದ್ರೇಶ್ವರಂ ತ್ರಿಭಿರ್ಬಾಣೈರ್ಭೃಶಂ ವಿದ್ಧ್ವಾ ಮಹಾಯಶಾಃ |
ಪ್ರಾಗ್ಜ್ಯೋತಿಷಂ ಶತೇನಾಜೌ ರಾಜನ್ ವಿವ್ಯಾಧ ವೈ ದೃಢಮ್ ॥28॥
ಮಹಾಬಲನೂ, ಕ್ರೋಧಾವಿಷ್ಟನೂ, ಮಹಾಕೀರ್ತಿಶಾಲಿಯೂ ಆದ ಭೀಮಸೇನನಾದರೋ ಮದ್ರಾಧಿಪತಿಯಾದ ಶಲ್ಯನನ್ನು ಮೂರು

ಬಾಣಗಳಿಂದ ಗಾಢವಾಗಿ ಹೊಡೆದು, ಪುನಃ ಒಂಬತ್ತು ಬಾಣಗಳಿಂದ ಗಾಢವಾಗಿ ಹೊಡೆದು ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನನ್ನು ಮೂರು ಬಾಣಗಳಿಂದ ದೃಢವಾಗಿ ಹೊಡೆದನು.
ತತಸ್ತು ಸಶರಂ ಚಾಪಂ ಸಾತ್ವತಸ್ಯ ಮಹಾತ್ಮನಃ |
ಕ್ಷುರಪ್ರೇಣ ಸುತೀಕ್ಷ್ಣೇನ ಚಿಚ್ಚೇದ ಕೃತಹಸ್ತವತ್ ॥29॥
ಅನಂತರ ಅವನು ಮಹಾತ್ಮನಾದ ಸಾತ್ವತಕುಲದ ಕೃತವರ್ಮನ ಧನುಸ್ಸನ್ನು ಸಿದ್ಧಹಸ್ತನಂತೆ ಬಹಳ ತೀಕ್ಷ್ಣವಾದ ಕ್ಷುರಪ್ರದಿಂದ ಕತ್ತರಿಸಿದನು.
ಅಥಾನ್ಯದ್ ಧನುರಾದಾಯ ಕೃತವರ್ಮಾ ವೃಕೋದರಮ್ |
ಆಜಘಾನ ಭ್ರುವೋರ್ಮಧ್ಯೇ ನಾರಾಚೇನ ಪರಂತಪ ॥30॥
ಎಲೈ ಪರಂತಪನೇ, ಆಗ ಕೃತವರ್ಮನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ನಾರಾಚವನ್ನು ಹೂಡಿ ವೃಕೋದರನನ್ನು ಅವನ ಹುಬ್ಬುಗಳ ಮಧ್ಯದಲ್ಲಿ ಹೊಡೆದನು.
ಭೀಮಸ್ತು ಸಮರೇ ವಿದ್ಧ್ವಾ ಶಲ್ಯಂ ನವಭಿರಾಯಸೈಃ |
ಭಗದತ್ತಂ ತ್ರಿಭಿಶ್ಚೈವ ಕೃತವರ್ಮಾಣಮಷ್ಟಭಿಃ ॥31॥
ದ್ವಾಭ್ಯಾಂ ದ್ವಾಭ್ಯಾಂ ಚ ವಿವ್ಯಾಧ ಗೌತಮಪ್ರಭೃತೀನ್ ರಥಾನ್ |
ತೇ ತು ತಂ ಸಮರೇ ರಾಜನ್ ವಿವ್ಯಧುರ್ನಿಶಿತೈಃ ಶರೈಃ ॥32॥
ಭೀಮಸೇನನು ಯುದ್ಧದಲ್ಲಿ ಒಂಬತ್ತು ಕಬ್ಬಿಣದ ಬಾಣಗಳಿಂದ ಶಲ್ಯನನ್ನು ಹೊಡೆದು, ಭಗದತ್ತನನ್ನು ಮೂರು ಬಾಣಗಳಿಂದಲೂ, ಕೃತವರ್ಮನನ್ನು ಎಂಟು ಬಾಣಗಳಿಂದಲೂ ಹೊಡೆದು, ಕೃಪರೇ ಮೊದಲಾದವರನ್ನು ಎರಡೆರಡು ಬಾಣಗಳಿಂದ ಹೊಡೆದನು. ಎಲೈ ರಾಜನೇ, ಅವರೂ ಸಹ ತೀಕ್ಷ್ಣವಾದ ಬಾಣಗಳಿಂದ ರಣರಂಗದಲ್ಲಿ ಭೀಮಸೇನನನ್ನು ಹೊಡೆದರು.
ಸ ತಥಾ ಪೀಡ್ಯಮಾನೋಽಪಿ ಸರ್ವತಸ್ತೈರ್ಮಹಾರಥೈಃ |
ಮತ್ವಾ ತೃಣೇನ ತಾಂಸ್ತುಲ್ಯಾನ್ ವಿಚಚಾರ ಗತವ್ಯಥಃ ॥33॥
ಆ ಮಹಾರಥರಿಂದ ಎಲ್ಲ ದಿಕ್ಕುಗಳಿಂದಲೂ ಹೀಗೆ ಪೀಡಿಸಲ್ಪಟ್ಟರೂ ಸಹ ಭೀಮಸೇನನು ಯಾವ ವ್ಯಥೆಯೂ ಇಲ್ಲದೆ ಅವರನ್ನು ತೃಣಕ್ಕೆ ಸಮಾನರೆಂದು ಪರಿಗಣಿಸಿ ರಣಭೂಮಿಯಲ್ಲಿ ಸಂಚರಿಸಿದನು.
ತೇ ಚಾಪಿ ರಥಿನಾಂ ಶ್ರೇಷ್ಠಾ ಭೀಮಾಯ ನಿಶಿತಾನ್ ಶರಾನ್ |
ಪ್ರೇಷಯಾಮಾಸುರವ್ಯಗ್ರಾಃ ಶತಶೋಽಥ ಸಹಸ್ರಶಃ ॥34॥
ಆ ರಥಿಶ್ರೇಷ್ಠರಾದರೋ ಎಚ್ಚರಿಕೆಯಿಂದ ಕೂಡಿ ಭೀಮಸೇನನ ಮೇಲೆ ತೀಕ್ಷ್ಣವಾದ ಬಾಣಗಳನ್ನು ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ಕಳುಹಿಸಿದರು.
ತಸ್ಯ ಶಕ್ತಿಂ ಮಹಾವೇಗಾಂ ಭಗದತ್ತೋ ಮಹಾರಥಃ |
ಚಿಕ್ಷೇಪ ಸಮರೇ ವೀರಃ ಸ್ವರ್ಣದಂಡಾಂ ಮಹಾಘನಾಮ್ ॥35॥
ಮಹಾರಥನೂ, ವೀರನೂ ಆದ ಭಗದತ್ತನು ಭೀಮಸೇನನ ಮೇಲೆ ಸ್ವರ್ಣದಂಡವುಳ್ಳ, ಬಹಳ ಗಟ್ಟಿಯಾದ, ಮಹಾವೇಗವುಳ್ಳ ಶಕ್ತ್ಯಾಯುಧವನ್ನು ಎಸೆದನು.
ತೋಮರಂ ಸೈಂಧವೋ ರಾಜಾ ಪಟ್ಟಿಶಂ ಚ ಮಹಾಭುಜಃ |
ಶತಘ್ನೀಂ ಚ ಕೃಪೋ ರಾಜನ್ ಶರಂ ಶಲ್ಯಶ್ಚ ಸಂಯುಗೇ ॥36॥
ಎಲೈ ರಾಜನೇ, ಮಹಾಭುಜನಾದ ಸಿಂಧುರಾಜನು ತೋಮರ ಮತ್ತು ಪಟ್ಟಿಶಗಳನ್ನೂ, ಕೃಪರು ಶತಘ್ನಿಯನ್ನೂ, ಶಲ್ಯನು ಬಾಣವನ್ನೂ ಭೀಮಸೇನನ ಮೇಲೆ ಪ್ರಯೋಗಿಸಿದರು.
ಅಥೇತರೇ ಮಹೇಷ್ವಾಸಾಃ ಪಂಚ ಪಂಚ ಶಿಲೀಮುಖಾನ್ |
ಭೀಮಸೇನಂ ಸಮುದ್ದಿಶ್ಯ ಪ್ರೇಷಯಾಮಾಸುರೋಜಸಾ ॥37॥
ಆಗ ಉಳಿದ ಧನುರ್ಧಾರಿಗಳು ಭೀಮಸೇನನನ್ನು ಉದ್ದೇಶಿಸಿ ಐದೈದು ಬಾಣಗಳನ್ನು ತಮ್ಮ ಸಾಮರ್ಥ್ಯದಿಂದ ಅವನ ಮೇಲೆ ಪ್ರಯೋಗಿಸಿದರು.
ತೋಮರಂ ಸ ದ್ವಿಧಾ ಚಕ್ರೇ ಕ್ಷುರಪ್ರೇಣಾನಿಲಾತ್ಮಜಃ |
ಪಟ್ಟಿಶಂ ಚ ತ್ರಿಭಿರ್ಬಾಣೈಶ್ಚಿಚ್ಚೇದ ತಿಲಕಾಂಡವತ್ ॥38॥
ಅನಿಲಪುತ್ರನಾದ ಭೀಮಸೇನನು ಕ್ಷುರಪ್ರದಿಂದ ತೋಮರವನ್ನು ಎರಡು ಭಾಗವಾಗಿ ಕತ್ತರಿಸಿದನು. ಮೂರು ಬಾಣಗಳನ್ನು ಪ್ರಯೋಗಿಸಿ ಪಟ್ಟಿಶವನ್ನು ಎಳ್ಳಿನ ಗಿಡದ ಕಾಂಡದಂತೆ ಕತ್ತರಿಸಿದನು.
ಸ ಬಿಭೇದ ಶತಘ್ನೀಂ ಚ ನವಭಿಃ ಕಂಕಪತ್ರಿಭಿಃ |
ಮದ್ರರಾಜಪ್ರಯುಕ್ತಂ ಚ ಶರಂ ಛಿತ್ತ್ವಾ ಮಹಾಬಲಃ ॥39॥
ಶಕ್ತಿಂ ಚಿಚ್ಚೇದ ಸಹಸಾ ಭಗದತ್ತೇರಿತಾಂ ರಣೇ |
ತಥೇತರಾನ್ ಶರಾನ್ ಘೋರಾನ್ ಶರೈಃ ಸನ್ನತಪರ್ವಭಿಃ ॥40॥
ಭೀಮಸೇನೋ ರಣಶ್ಲಾಘೀ ತ್ರಿಧೈಕೈಕಂ ಸಮಾಚ್ಛಿನತ್ |
ತಾಂಶ್ಚ ಸರ್ವಾನ್ ಮಹೇಷ್ವಾಸಾನ್ ತ್ರಿಭಿಸ್ತ್ರಿಭಿರತಾಡಯತ್ ॥41॥
ಅವನು ಕಂಕಪತ್ರವನ್ನು ಹೊಂದಿದ ಒಂಬತ್ತು ಬಾಣಗಳಿಂದ ಶತಘ್ನಿಯನ್ನು ಕತ್ತರಿಸಿದನು. ಮಹಾಬಲನಾದ ಅವನು ಮದ್ರರಾಜನು ಪ್ರಯೋಗಿಸಿದ ಶರವನ್ನು ಕತ್ತರಿಸಿ ಯುದ್ಧದಲ್ಲಿ ಭಗದತ್ತನಿಂದ ಪ್ರಯೋಗಿಸಲ್ಪಟ್ಟ ಶಕ್ತಿಯನ್ನು ತಕ್ಷಣ ಕತ್ತರಿಸಿದನು. ಹಾಗೆಯೇ ಉಳಿದ ಘೋರವಾದ ಬಾಣಗಳನ್ನು ಬಾಗಿದ ತುದಿಯುಳ್ಳ ತನ್ನ ಬಾಣಗಳಿಂದ ರಣಶ್ಲಾಘಿಯಾದ ಭೀಮಸೇನನು ಒಂದೊಂದನ್ನೂ

ಮೂರು ಭಾಗವಾಗಿ ಕತ್ತರಿಸಿದನು. ಮತ್ತು ಆ ಎಲ್ಲ ಧನುರ್ಧಾರಿಗಳನ್ನು ಮೂರು-ಮೂರು ಬಾಣಗಳಿಂದ ಹೊಡೆದನು.
ತತೋ ಧನಂಜಯಸ್ತತ್ರ ವರ್ತಮಾನೇ ಮಹಾರಣೇ |
ಜಗಾಮ ಸ ರಥೇನಾಜೌ ಭೀಮಂ ದೃಷ್ಟ್ವಾ ಮಹಾರಥಮ್ |
ನಿಘ್ನಂತಂ ಸಮರೇ ಶತ್ರೂನ್ ಯೋಧಯಾನಂ ಚ ಸಾಯಕೈಃ ॥42॥
ಭೀಮಸೇನನು ಶತ್ರುಗಳನ್ನು ಕೊಲ್ಲುತ್ತಿರುವುದನ್ನೂ, ಬಾಣಗಳಿಂದ ಯುದ್ದ ಮಾಡುತ್ತಿರುವುದನ್ನೂ ನೋಡಿದ ಅರ್ಜುನನು ಆ ಮಹಾರಣವು ನಡೆಯುತ್ತಿದ್ದಾಗ ತನ್ನ ರಥದಿಂದ ಅಲ್ಲಿಗೆ ಬಂದನು.
ತೌ ತು ತತ್ರ ಮಹಾತ್ಮಾನೌ ಸಮೇತೌ ವೀಕ್ಷ್ಯ ಪಾಂಡವೌ |
ನಾಶಶಂಸುರ್ಜಯಂ ತತ್ರ ತಾವಕಾಃ ಪುರುಷರ್ಷಭ ॥43॥
ಎಲೈ ಪುರುಷಶ್ರೇಷ್ಠನೇ, ಮಹಾತ್ಮರಾದ ಆ ಇಬ್ಬರು ಪಾಂಡುಪುತ್ರರು ಸೇರಿದುದನ್ನು ನೋಡಿ ನಿನ್ನವರು ಅಲ್ಲಿ ಜಯದ ಆಸೆಯನ್ನು ತೊರೆದರು.
ಅಥಾರ್ಜುನೋ ರಣೇ ಭೀಷ್ಮಂ ಯೋಧಯನ್ ವೈ ಮಹಾರಥಮ್ |
ಭೀಷ್ಮಸ್ಯ ನಿಧನಾಕಾಂಕ್ಷೀ ಪುರಸ್ಕೃತ್ಯ ಶಿಖಂಡಿನಮ್ |
ಆಸಸಾದ ರಣೇ ಯೋಧಾನ್ ತಾವಕಾನ್ ದಶ ಭಾರತ ॥44॥
ಯೇ ಸ್ಮ ಭೀಮಂ ರಣೇ ರಾಜನ್ ಯೋಧಯಂತೋ ವ್ಯವಸ್ಥಿತಾಃ |
ಬೀಭತ್ಸುಸ್ತಾನಥಾವಿಧ್ಯದ್ ಭೀಮಸ್ಯ ಪ್ರಿಯಕಾಮ್ಯಯಾ ॥45॥
ಎಲೈ ಭಾರತನೇ, ರಾಜನೇ, ಅನಂತರ ಅರ್ಜುನನು ಮಹಾರಥರಾದ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಅವರ ನಿಧನವನ್ನು ಬಯಸಿ, ಶಿಖಂಡಿಯನ್ನು ಮುಂದೆ ಮಾಡಿಕೊಂಡು, ಯಾರು ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದರೋ ಅಂತಹ ನಿನ್ನ ಹತ್ತು ಯೋಧರನ್ನು ಸಮೀಪಿಸಿ, ಭೀಮನಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ಅವನು ಅವರಿಗೆಲ್ಲಾ ಹೊಡೆದನು.
ತತೋ ದುರ್ಯೋಧನೋ ರಾಜಾ ಸುಶರ್ಮಾಣಮಚೋದಯತ್ |
ಅರ್ಜುನಸ್ಯ ವಧಾರ್ಥಾಯ ಭೀಮಸೇನಸ್ಯ ಚೋಭಯೋಃ ॥46॥
ಆಗ ರಾಜನಾದ ದುರ್ಯೋಧನನು ಅರ್ಜುನ ಮತ್ತು ಭೀಮಸೇನರಿಬ್ಬರ ವಧೆಗಾಗಿ ಸುಶರ್ಮನನ್ನು ಪ್ರಚೋದಿಸಿದನು.
ಸುಶರ್ಮನ್ ಗಚ್ಛ ಶೀಘ್ರಂ ತ್ವಂ ಬಲೌಘೈಃ ಪರಿವಾರಿತಃ |
ಜಹಿ ಪಾಂಡುಸುತಾವೇತೌ ಧನಂಜಯವೃಕೋದರೌ ॥47॥
ಎಲೈ ಸುಶರ್ಮನೇ, ನೀನು ಶೀಘ್ರವಾಗಿ ಸೇನಾಸಮೂಹದಿಂದ ಪರಿವೃತನಾಗಿ ಹೋಗಿ ಪಾಂಡುಸುತರಾದ ಈ ಅರ್ಜುನ-ಭೀಮಸೇನರಿಬ್ಬರನ್ನೂ ಕೊಲ್ಲು (ಎಂದು ಹೇಳಿದನು).
ತಚ್ಛ್ರುತ್ವಾ ಶಾಸನಂ ತಸ್ಯ ತ್ರಿಗರ್ತಃ ಪ್ರಸ್ಥಲಾಧಿಪಃ |
ಅಭಿದ್ರುತ್ಯ ರಣೇ ಭೀಮಮರ್ಜುನಂ ಚೈವ ಧನ್ವಿನೌ ॥48॥
ರಥೈರನೇಕಸಾಹಸ್ರೈಃ ಪರಿವವ್ರೇ ಸಮಂತತಃ |
ತತಃ ಪ್ರವವೃತೇ ಯುದ್ಧಮರ್ಜುನಸ್ಯ ಪರೈಃ ಸಹ ॥49॥
ಆ ಶಾಸನವನ್ನು ಕೇಳಿದ ತ್ರಿಗರ್ತಾಧಿಪತಿಯೂ, ಪ್ರಸ್ಥಲಾಧಿಪನೂ ಆದ ಸುಶರ್ಮನು ಧನುರ್ಧಾರಿಗಳಾದ ಭೀಮಾರ್ಜುನರ ಬಳಿಗೆ ರಣರಂಗದಲ್ಲಿ ಧಾವಿಸಿ ಅನೇಕ ಸಹಸ್ರ ರಥಗಳಿಂದ ಅವರಿಬ್ಬರನ್ನೂ ಸುತ್ತುವರಿದನು. ಅನಂತರ ಅರ್ಜುನನಿಗೂ ಅವನ ಶತ್ರುಗಳಿಗೂ ಯುದ್ಧವು ಜರುಗಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೊಂದನೆಯ ಅಧ್ಯಾಯ
ಕೌರವರ ಜೊತೆಯಲ್ಲಿ ಭೀಮಾರ್ಜುನರ ಯುದ್ಧ.
ಸಂಜಯಃ
ಅರ್ಜುನಸ್ತು ರಣೇ ಶಲ್ಯಂ ಯತಮಾನಂ ಮಹಾರಥಮ್ |
ಛಾದಯಾಮಾಸ ಸಮರೇ ಶರೈಃ ಸನ್ನತಪರ್ವಭಿಃ ॥1॥
ಸಂಜಯ ಅರ್ಜುನನಾದರೋ ಯುದ್ಧದಲ್ಲಿ ಪ್ರಯತ್ನಶೀಲನಾಗಿದ್ದ ಮಹಾರಥನಾದ ಶಲ್ಯನನ್ನು ಬಾಗಿದ ತುದಿಯುಳ್ಳ ಬಾಣಗಳಿಂದ ಮುಚ್ಚಿಹಾಕಿದನು.
ಸುಶರ್ಮಾಣಂ ಕೃಪಂ ಚೈವ ತ್ರಿಭಿಸ್ತ್ರಿಭಿರವಿಧ್ಯತ |
ಪ್ರಾಗ್ಜ್ಯೋತಿಷಂ ಚ ಸಮರೇ ಸೈಂಧವಂ ಚ ಜಯದ್ರಥಮ್ ॥2॥
ಸುಶರ್ಮ, ಕೃಪರು, ಪ್ರಾಗ್ಜ್ಯೋತಿಷನಾದ ಭಗದತ್ತ ಮತ್ತು ಸೈಂಧವನಾದ ಜಯದ್ರಥನನ್ನು ರಣರಂಗದಲ್ಲಿ ಮೂರು-ಮೂರು ಬಾಣಗಳಿಂದ ಹೊಡೆದನು.
ಚಿತ್ರಸೇನಂ ವಿಕರ್ಣಂ ಚ ಕೃತವರ್ಮಾಣಮೇವ ಚ |
ದುರ್ಮರ್ಷಣಂ ಚ ರಾಜೇಂದ್ರ ಆವಂತ್ಯೌ ಚ ಮಹಾರಥೌ ॥3॥

ಏಕೈಕಂ ತ್ರಿಭಿರಾನರ್ಚ್ಛತ್ ಕಂಕಬರ್ಹಿಣವಾಜಿತೈಃ |
ಶರೈರತಿರಥೋ ಯುದ್ಧೇ ಪೀಡಯನ್ ವಾಹಿನೀಂ ತವ ॥4॥
ಎಲೈ ರಾಜೇಂದ್ರನೇ, ಅತಿರಥನಾದ ಅರ್ಜುನನು ಯುದ್ಧದಲ್ಲಿ ನಿನ್ನ ಸೈನ್ಯವನ್ನು ಪೀಡಿಸುತ್ತಾ ಚಿತ್ರಸೇನ, ವಿಕರ್ಣ, ಕೃತವರ್ಮ, ದುರ್ಮರ್ಷಣ, ಅವಂತಿಯ ಇಬ್ಬರು ಮಹಾರಥರು ಇವರಲ್ಲಿ ಒಬ್ಬೊಬ್ಬರನ್ನೂ ಕಂಕಪತ್ರವನ್ನು ಹೊಂದಿದ ಮೂರು-ಮೂರು ಬಾಣಗಳಿಂದ ಹೊಡೆದನು.

ಜಯದ್ರಥೋ ರಣೇ ಪಾರ್ಥಂ ಭಿತ್ತ್ವಾ ಭಾರತ ಸಾಯಕೈಃ |
ಭೀಮಮಂ ವಿವ್ಯಾಧ ತರಸಾ ಚಿತ್ರಸೇನರಥೇ ಸ್ಥಿತಃ ॥5॥
ಎಲೈ ಭಾರತನೇ, ಜಯದ್ರಥನು ಚಿತ್ರಸೇನನ ರಥದಲ್ಲಿ ಇದ್ದು ಯುದ್ಧದಲ್ಲಿ ಅರ್ಜುನನನ್ನು ಮೂರು ಬಾಣಗಳಿಂದ ಭೇದಿಸಿ ಶೀಘ್ರವಾಗಿ ಭೀಮಸೇನನ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.

ಶಲ್ಯಶ್ಚ ಸಮರೇ ಜಿಷ್ಣುಂ ಕೃಪಶ್ಚ ರಥಿನಾಂ ವರಃ |
ವಿವ್ಯಧಾತೇ ಮಹಾಬಾಹುಂ ಬಹುಧಾ ಮರ್ಮಭೇದಿಭಿಃ ॥6॥
ರಥಿಶ್ರೇಷ್ಠರಾದ ಶಲ್ಯ ಮತ್ತು ಕೃಪರು ಯುದ್ಧದಲ್ಲಿ ಮಹಾಬಾಹುವಾದ ಅರ್ಜುನನನ್ನು ಮರ್ಮಭೇದಿಗಳಾದ ಬಾಣಗಳಿಂದ ಬಹುಪ್ರಕಾರದಿಂದ ಹೊಡೆದರು.

ಚಿತ್ರಸೇನಾದಯಶ್ಚೈವ ಪುತ್ರಾಸ್ತವ ವಿಶಾಂಪತೇ |
ಪಂಚಭಿಃ ಪಂಚಭಿಸ್ತೂರ್ಣಂ ಸಂಯುಗೇ ನಿಶಿತೈಃ ಶರೈಃ |
ಆಜಘ್ನುರರ್ಜುನಂ ಸಂಖ್ಯೇ ಭೀಮಸೇನಂ ಚ ಮಾರಿಷ ॥7॥
ಎಲೈ ರಾಜನೇ, ಪೂಜ್ಯನೇ, ಚಿತ್ರಸೇನ ಮೊದಲಾದ ನಿನ್ನ ಪುತ್ರರು ತೀಕ್ಷ್ಣವಾದ ಐದೈದು ಬಾಣಗಳಿಂದ ಯುದ್ಧದಲ್ಲಿ ಶೀಘ್ರವಾಗಿ ಅರ್ಜುನನನ್ನು ಮತ್ತು ಭೀಮಸೇನನನ್ನು ಹೊಡೆದರು.

ತೌ ತತ್ರ ರಥಿನಾಂ ಶ್ರೇಷ್ಠೌ ಕೌಂತೇಯೌ ಭರತರ್ಷಭೌ |
ಅಪೀಡಯೇತಾಂ ಸಮರೇ ತ್ರಿಗರ್ತಾನಾಂ ಮಹದ್ಬಲಮ್ ॥8॥
ಅಲ್ಲಿ ರಥಿಶ್ರೇಷ್ಠರೂ, ಭರತಶ್ರೇಷ್ಠರೂ ಆದ, ಕುಂತೀಪುತ್ರರಾದ ಭೀಮಾರ್ಜುನರು ತ್ರಿಗರ್ತರ ಮಹಾಸೈನ್ಯವನ್ನು ಯುದ್ಧದಲ್ಲಿ ಪೀಡಿಸಿದರು.

ಸುಶರ್ಮಾಪಿ ರಣೇ ಪಾರ್ಥಂ ವಿದ್ಧ್ವಾ ಬಹುಭಿರಾಯಸೈಃ |
ನನಾದ ಬಲವನ್ನಾದಂ ನಾದಯನ್ ವೈ ನಭಸ್ತಳಮ್ ॥9॥
ಸುಶರ್ಮನೂ ಸಹ ಯುದ್ಧದಲ್ಲಿ ಅನೇಕ ಕಬ್ಬಿಣದ ಬಾಣಗಳಿಂದ ಅರ್ಜುನನನ್ನು ಹೊಡೆದು ನಭಸ್ತಳವು ಪ್ರತಿಧ್ವನಿಸುವಂತೆ ಬಲವಾದ ನಾದವನ್ನು ಮಾಡಿದನು.

ಅನ್ಯೇ ಚ ರಥಿನಃ ಶೂರಾ ಭೀಮಸೇನಧನಂಜಯೌ |
ವಿವ್ಯಧುರ್ನಿಶಿತೈರ್ಬಾಣೈ ರುಗ್ಮಪುಂಖೈರಜಿಹ್ಮಗೈಃ ॥10॥
ಉಳಿದ ಶೂರರಾದ ರಥಿಕರೂ ಸಹ ಸುವರ್ಣಪುಂಖಗಳನ್ನು ಹೊಂದಿದ, ನೇರವಾಗಿ ಸಾಗುವ ತೀಕ್ಷ್ಣವಾದ ಬಾಣಗಳಿಂದ ಭೀಮಾರ್ಜುನರನ್ನು ಹೊಡೆದರು.

ತೇಷಾಂ ತು ರಥಿನಾಂ ಮಧ್ಯೇ ಕೌಂತೇಯೌ ರಥಿನಾಂ ವರೌ |
ಕ್ರೀಡಮಾನೌ ರಥೋದಾರೌ ಚಿತ್ರರೂಪೌ ವ್ಯರೋಚತಾಮ್ |
ಆಮಿಷೇಪ್ಸೂ ಗವಾಂ ಮಧ್ಯೇ ಸಿಂಹಾವಿವ ಬಲೋತ್ಕಟೌ ॥11॥
ಆ ರಥಿಕರ ಮಧ್ಯೆ ರಥಿಶ್ರೇಷ್ಠರಾದ ಕುಂತೀಪುತ್ರರು ಬಲೋತ್ಕಟವಾದ, ಮಾಂಸ ಅಭಿಲಾಷೆಯುಳ್ಳ ಸಿಂಹಗಳು ಗೋವುಗಳ ಮಧ್ಯದಲ್ಲಿ ಸಂಚರಿಸಿದಂತೆ ವಿಚಿತ್ರರೂಪವನ್ನು ಧರಿಸಿ, ಶ್ರೇಷ್ಠವಾದ ರಥದಲ್ಲಿ ಇದ್ದು ಆಟವಾಡುತ್ತಾ ಶೋಭಿಸಿದರು.

ಛಿತ್ತ್ವಾ ಧನೂಂಷಿ ವೀರಾಣಾಂ ಶರಾಂಶ್ಚ ಬಹುಧಾ ರಣೇ |
ಪಾತಯಾಮಾಸತುರ್ವೀರೌ ಶಿರಾಂಸಿ ಶತಶೋ ನೃಣಾಮ್ ॥12॥
ವೀರರಾದ ಅವರು ಯುದ್ಧದಲ್ಲಿ ಶತ್ರುವೀರರ ಧನುಸ್ಸುಗಳನ್ನು ಮತ್ತು ಬಾಣಗಳನ್ನು ಅನೇಕ ರೀತಿಯಾಗಿ ಕತ್ತರಿಸಿ, ಯೋಧರ ಶಿರಸ್ಸುಗಳನ್ನು ನೂರರ ಸಂಖ್ಯೆಯಲ್ಲಿ ಉರುಳಿಸಿದರು.

ರಥಾಶ್ಚ ಬಹವೋ ಭಗ್ನಾ ಹಯಾಶ್ಚ ಶತಶೋ ಹತಾಃ |
ಗಜಾಶ್ಚ ಸಗಜಾರೋಹಾಃ ಪೇತುರುರ್ವ್ಯಾಂ ಮಹಾಮೃಧೇ ॥13॥
ಅನೇಕ ರಥಗಳು ಭಗ್ನವಾದವು. ನೂರಾರು ಅಶ್ವಗಳು ಹತವಾದವು. ಆ ದೊಡ್ಡ ಯುದ್ಧದಲ್ಲಿ ಗಜಾರೋಹಿಗಳಿಂದ ಸಹಿತವಾದ ಗಜಗಳು ಭೂಮಿಯ ಮೇಲೆ ಉರುಳಿದವು.

ರಥಿನಃ ಸಾದಿನಶ್ಚೈವ ತತ್ರ ತತ್ರ ನಿಷೂದಿತಾಃ |
ದೃಶ್ಯಂತೇ ಬಹುಧಾ ರಾಜನ್ ವೇಷ್ಟಮಾನಾಃ ಸಮಂತತಃ ॥14॥
ಎಲೈ ರಾಜನೇ, ರಥಿಕರು ಮತ್ತು ಅಶ್ವಾರೋಹಿಗಳು ಪ್ರಹಾರವನ್ನು ಹೊಂದಿ ಅಲ್ಲಲ್ಲಿ ಎಲ್ಲಾ ಕಡೆಗಳಲ್ಲಿಯೂ ಹೊರಳಾಡುತ್ತಿರುವುದು ಅನೇಕ ಪ್ರಕಾರದಲ್ಲಿ ಕಂಡಿತು.

ಹತೈರ್ಗಜಪದಾತ್ಯೋಘೈರ್ವಾಜಿಭಿಶ್ಚ ನಿಷೂದಿತೈಃ |
ರಥೈಶ್ಚ ಬಹುಧಾ ಭಗ್ನೈಃ ಸಮಾಸ್ತೀರ್ಯತ ಮೇದಿನೀ ॥15॥
ಹತವಾದ ಗಜ-ಪದಾತಿಗಳ ಸಮೂಹದಿಂದಲೂ, ಹತವಾದ ಅಶ್ವಗಳಿಂದಲೂ, ಅನೇಕ ರೀತಿಯಲ್ಲಿ ಭಗ್ನವಾದ ರಥಗಳಿಂದಲೂ

ರಣಭೂಮಿಯು ಹರಡಲ್ಪಟ್ಟಿತು.
ಛತ್ರೈಶ್ಚ ಬಹುಧಾ ಛಿನ್ನೈರ್ಧ್ವಜೈಶ್ಚ ವಿನಿಪಾತಿತೈಃ |
ಅಂಕುಶೈರಪವಿದ್ಧೈಶ್ಚ ಪರಿಸ್ತೋಮೈಶ್ಚ ಭಾರತ ॥16॥
ಕೇಯೂರೈರಂಗದೈರ್ಹಾರೈ ರಾಂಕವೈರ್ಮೃದಿತೈಸ್ತಥಾ |
ಉಷ್ಣೀಷೈರಪವಿದ್ಧೈಶ್ಚ ಚಾಮರವ್ಯಜನೈರಪಿ ॥17॥
ತತ್ರ ತತ್ರಾಪವಿದ್ಧೈಶ್ಚ ಬಾಹುಭಿಶ್ಚಂದನೋಕ್ಷಿತೈಃ |
ಊರುಭಿಶ್ಚ ನರೇಂದ್ರಾಣಾಂ ಸಮಾಸ್ತೀರ್ಯತ ಮೇದಿನೀ ॥18॥
ಎಲೈ ಭಾರತನೇ, ಅನೇಕ ರೀತಿಯಲ್ಲಿ ಹರಿದ ಛತ್ರಗಳು, ಬಿದ್ದ ಧ್ವಜಗಳು, ಎಸೆದ ಅಂಕುಶಗಳು ಮತ್ತು ಪರಿಸ್ತೋಮಗಳು, ಕೇಯೂರಾಂಗದ-ಹಾರಗಳು, ತುಳಿಯಲ್ಪಟ್ಟ ಶಾಲು, ಹಾಸುಗಳು, ಎಸೆದ ಉಷ್ಣೀಷಗಳು ಮತ್ತು ಚಾಮರ-ವ್ಯಜನಗಳು, ಅಲ್ಲಲ್ಲಿ ಪರಿತ್ಯಜಿಸಿದ ಚಂದನಲೇಪಿತವಾದ ಬಾಹುಗಳು, ನರೇಂದ್ರರ ತೊಡೆಗಳು ಇವುಗಳಿಂದ ಭೂಮಿಯು ಹರಡಿ ಹೋಯಿತು.
ತತ್ರಾದ್ಭುತಮಪಶ್ಯಾಮ ರಣೇ ಪಾರ್ಥಸ್ಯ ವಿಕ್ರಮಮ್ |
ಶರೈಃ ಸಂವಾರ್ಯ ತಾನ್ ವೀರಾನ್ ನಿಜಘಾನ ಬಲಂ ತವ ॥19॥
ಅಲ್ಲಿ ಎಲ್ಲ ವೀರರನ್ನು ತನ್ನ ಬಾಣಗಳಿಂದ ತಡೆದು, ನಿನ್ನ ಸೈನ್ಯವನ್ನು ಸಂಹರಿಸುತ್ತಿದ್ದ ಅರ್ಜುನನ ಅದ್ಭುತವಾದ ರಣವಿಕ್ರಮವನ್ನು ನಾವು ನೋಡಿದೆವು.
ಪುತ್ರಸ್ತು ತವ ತಂ ದೃಷ್ಟ್ವಾ ಭೀಮಾರ್ಜುನಸಮಾಗಮಮ್ |
ಗಾಂಗೇಯಸ್ಯ ರಥಾಭ್ಯಾಶಮುಪಜಗ್ಮೇ ಮಹಾಭಯೇ ॥20॥
ನಿನ್ನ ಪುತ್ರನು ಭೀಮಾರ್ಜುನರ ಆ ಸಮಾಗಮವನ್ನು ನೋಡಿ ಮಹಾಭಯವು ಉಂಟಾಗುತ್ತಿರಲು ಭೀಷ್ಮರ ರಥದ ಸಮೀಪಕ್ಕೆ ಬಂದನು.
ಕೃಪಶ್ಚ ಕೃತವರ್ಮಾ ಚ ಸೈಂಧವಶ್ಚ ಜಯದ್ರಥಃ |
ವಿಂದಾನುವಿಂದಾವಾವಂತ್ಯಾವಾಜಗ್ಮುಃ ಸಂಯುಗಂ ತದಾ ॥21॥
ಆಗ ಕೃಪರು, ಕೃತವರ್ಮ, ಸೈಂಧವನಾದ ಜಯದ್ರಥ, ಅವಂತಿಯ ವಿಂದಾನುವಿಂದರು ಆ ಯುದ್ಧದ ಸ್ಥಳಕ್ಕೆ ಬಂದರು.
ತತೋ ಭೀಮೋ ಮಹೇಷ್ವಾಸಃ ಫಲ್ಗುನಶ್ಚ ಮಹಾರಥಃ |
ಕೌರವಾಣಾಂ ಚಮೂಂ ಘೋರಾಂ ಭೃಶಂ ದುದ್ರುವತೂ ರಣೇ ॥22॥
ಆಗ ಮಹಾಧನುರ್ಧಾರಿಯಾದ ಭೀಮನೂ, ಮಹಾರಥನಾದ ಅರ್ಜುನನೂ ಕೌರವರ ಘೋರವಾದ ಸೇನೆಯ ಕಡೆಗೆ ಯುದ್ಧದಲ್ಲಿ ವೇಗದಿಂದ ಧಾವಿಸಿದರು.
ತತೋ ಬರ್ಹಿಣವಾಜಾನಾಮಯುತಾನ್ಯರ್ಬುದಾನಿ ಚ |
ಧನಂಜಯರಥೇ ತೂರ್ಣಂ ಪಾತಯಂತಿ ಸ್ಮ ಸಂಯುಗೇ ॥23॥
ಆಗ ನಿನ್ನ ಯೋಧರು ನವಿಲುಗರಿಯ ರೆಕ್ಕೆಗಳನ್ನು ಹೊಂದಿದ್ದ ಹತ್ತುಸಾವಿರ ಬಾಣಗಳನ್ನು ಅರ್ಜುನನ ರಥದ ಮೇಲೆ ಶೀಘ್ರವಾಗಿ ಪ್ರಯೋಗಿಸಿ ಬೀಳಿಸಿದರು.
ತತಸ್ತಾನ್ ಶರಜಾಲೇನ ಸನ್ನಿವಾರ್ಯ ಮಹಾರಥಾನ್ |
ಪಾರ್ಥಃ ಸಮಂತಾತ್ ಸಮರೇ ಪ್ರೇಷಯಾಮಾಸ ಮೃತ್ಯವೇ ॥24॥
ಆಗ ಅರ್ಜುನನು ಆ ಎಲ್ಲ ಮಹಾರಥರನ್ನು ತನ್ನ ಬಾಣ ಸಮೂಹದಿಂದ ನಿವಾರಿಸಿ ಎಲ್ಲ ಕಡೆ ಇದ್ದ ಯೋಧರನ್ನು ಮೃತ್ಯುಲೋಕಕ್ಕೆ ಕಳುಹಿಸಿದನು.
ಶಲ್ಯಸ್ತು ಸಮರೇ ಜಿಷ್ಣುಂ ಕ್ರೀಡನ್ನಿವ ಮಹಾರಥಃ |
ಆಜಘಾನೋರಸಿ ಕ್ರುದ್ಧೋ ಭಲ್ಲೈಃ ಸನ್ನತಪರ್ವಭಿಃ ॥25॥
ಮಹಾರಥನೂ, ಕ್ರುದ್ಧನೂ ಆದ ಶಲ್ಯನಾದರೋ ಆಡುವವನಂತೆ ಯುದ್ಧದಲ್ಲಿ ಅರ್ಜುನನಿಗೆ ಬಾಗಿದ ತುದಿಯುಳ್ಳ ಭಲ್ಲಗಳಿಂದ ಅವನ ವಕ್ಷಸ್ಸ್ಥಲದಲ್ಲಿ ಹೊಡೆದನು.
ತಸ್ಯ ಪಾರ್ಥೋ ಧನುಶ್ಛಿತ್ತ್ವಾ ಹಸ್ತಾವಾಪಂ ಚ ಪಂಚಭಿಃ |
ಅಥೈನಂ ಸಾಯಕೈಸ್ತೀಕ್ಷ್ಣೈರ್ಭೃಶಂ ವಿವ್ಯಾಧ ಮರ್ಮಣಿ ॥26॥
ಅರ್ಜುನನು ಐದು ಬಾಣಗಳಿಂದ ಅವನ ಧನುಸ್ಸನ್ನೂ ಮತ್ತು ಬತ್ತಳಿಕೆಯನ್ನೂ ಕತ್ತರಿಸಿ, ಅನಂತರ ತೀಕ್ಷ್ಣವಾದ ಬಾಣಗಳಿಂದ ಅವನನ್ನು ಮರ್ಮಗಳಲ್ಲಿ ಚೆನ್ನಾಗಿ ಹೊಡೆದನು.
ಅಥಾನ್ಯದ್ ಧನುರಾದಾಯ ಸಮರೇ ಭಾರಸಾಧನಮ್ |
ಮದ್ರೇಶ್ವರೋ ರಣೇ ಜಿಷ್ಣುಂ ತಾಡಯಾಮಾಸ ರೋಷಿತಃ ॥27॥
ತ್ರಿಭಿಃ ಶರೈರ್ಮಹಾರಾಜ ವಾಸುದೇವಂ ಚ ಪಂಚಭಿಃ |
ಭೀಮಸೇನಂ ಚ ನವಭಿರ್ಬಾಹ್ವೋರುರಸಿ ಚಾರ್ಪಯತ್ ॥28॥
ಎಲೈ ಮಹಾರಾಜನೇ, ಆಗ ಮದ್ರಾಧಿಪತಿಯಾದ ಶಲ್ಯನು ಯುದ್ಧದಲ್ಲಿ ಬಹುಕಾರ್ಯವನ್ನು ಮಾಡುವ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ರೋಷದಿಂದ ಕೂಡಿದವನಾಗಿ ಅರ್ಜುನನನ್ನು ಮೂರು ಬಾಣಗಳಿಂದಲೂ, ಕೃಷ್ಣನನ್ನು ಐದು ಬಾಣಗಳಿಂದಲೂ ಮತ್ತು ಭೀಮಸೇನನನ್ನು ಒಂಬತ್ತು ಬಾಣಗಳಿಂದಲೂ ಬಾಹುಗಳಲ್ಲಿಯೂ ಮತ್ತು ಎದೆಯಲ್ಲಿಯೂ ಹೊಡೆದನು.
ತತೋ ದ್ರೋಣೋ ಮಹಾರಾಜ ಮಾಗಧಶ್ಚ ಮಹಾರಥಃ |
ದುರ್ಯೋಧನಸಮಾದಿಷ್ಟೌ ತಂ ದೇಶಮುಪಜಗ್ಮತುಃ ॥29॥

ಯತ್ರ ಪಾರ್ಥೋ ಮಹಾರಾಜ ಭೀಮಸೇನಶ್ಚ ಪಾಂಡವಃ |
ಕೌರವ್ಯಸ್ಯ ಮಹಾಸೇನಾಂ ಜಘ್ನತುಸ್ತೌ ಮಹಾರಥೌ ||30||
ಎಲೈ ಮಹಾರಾಜನೇ, ಆಗ ದ್ರೋಣರು ಮತ್ತು ಮಹಾರಥನಾದ ಮಾಗಧನೂ ಸಹ ದುರ್ಯೋಧನನಿಂದ ಆಜ್ಞಪ್ತರಾಗಿ ಎಲ್ಲಿ ಮಹಾರಥರಾದ ಭೀಮಾರ್ಜುನರು ಕೌರವರ ಮಹಾಸೇನೆಯನ್ನು ನಾಶಮಾಡುತ್ತಿದ್ದರೋ ಆ ಸ್ಥಳಕ್ಕೆ ಬಂದರು.
ಜಯತ್ಸೇನಸ್ತು ಸಮರೇ ಭೀಮಂ ಭೀಮಾಯುಧಂ ಯುವಾ |
ವಿವ್ಯಾಧ ನಿಶಿತೈರ್ಬಾಣೈರಷ್ಟಭಿರ್ಭರತರ್ಷಭ ||31||
ಎಲೈ ಭರತಶ್ರೇಷ್ಠನೇ, ಮಾಗಧ ರಾಜನೂ, ಯುವಕನೂ ಆದ ಜಯತ್ಸೇನನು ಯುದ್ಧದಲ್ಲಿ ಭಯಂಕರವಾದ ಆಯುಧವನ್ನು ಹೊಂದಿದ್ದ ಭೀಮನನ್ನು ತೀಕ್ಷ್ಣವಾದ ಎಂಟು ಬಾಣಗಳಿಂದ ಹೊಡೆದನು.
ತಂ ಭೀಮೋ ದಶಭಿರ್ವಿದ್ಧ್ವಾ ಪುನರ್ವಿವ್ಯಾಧ ಸಪ್ತಭಿಃ |
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾಹರತ್ ||32||
ಭೀಮನು ಹತ್ತು ಬಾಣಗಳಿಂದ ಅವನನ್ನು ಹೊಡೆದು ಪುನಃ ಏಳು ಬಾಣಗಳಿಂದ ಹೊಡೆದನು. ಅವನ ಸಾರಥಿಯನ್ನು ಭಲ್ಲದಿಂದ ರಥದ ಮುಂಭಾಗದಿಂದ ಕೆಡವಿದನು.
ಉದ್ಭ್ರಾಂತೈಸ್ತುರಗೈಃ ಸೋಽಥ ದ್ರವಮಾಣೈಃ ಸಮಂತತಃ |
ಮಾಗಧೋಽಪಹೃತೋ ರಾಜಾ ಸರ್ವಸೈನ್ಯಸ್ಯ ಪಶ್ಯತಃ ||33||
ಗಾಬರಿಗೊಂಡ ಅವನ ಅಶ್ವಗಳು ಎಲ್ಲ ಕಡೆಗಳಲ್ಲಿಯೂ ಓಡುತ್ತಿರಲು ಮಾಗಧನಾದ ಬೃಹದ್ಬಲನು ಎಲ್ಲ ಸೈನ್ಯವು ನೋಡುತ್ತಿರುವಂತೆಯೇ ಅಶ್ವಗಳಿಂದ ದೂರ ಎಳೆಯಲ್ಪಟ್ಟನು.
ದ್ರೋಣಸ್ತು ವಿವರಂ ಲಬ್ಧ್ವಾ ಭೀಮಸೇನಂ ಶಿಲೀಮುಖೈಃ |
ವಿವ್ಯಾಧ ಬಾಣೈಃ ಸುಶಿತೈಃ ಪಂಚಷಷ್ಟ್ಯಾ ತಮಾಯಸೈಃ ||34||
ದ್ರೋಣರಾದರೋ ಒಂದು ಅವಕಾಶವನ್ನು ಹೊಂದಿ ಭೀಮಸೇನನನ್ನು ಅಯೋಮಯವಾದ ಮತ್ತು ತೀಕ್ಷ್ಣವಾದ ಶಿಲೀಮುಖವುಳ್ಳ ಬಾಣಗಳಿಂದ ಹೊಡೆದರು.
ತಂ ಭೀಮಃ ಸಮರಶ್ಲಾಘೀ ಗುರುಂ ಪಿತೃಸಮಂ ರಣೇ |
ವಿವ್ಯಾಧ ನವಭಿರ್ಭಲ್ಲೈಸ್ತಥಾ ಷಷ್ಟ್ಯಾ ಚ ಭಾರತ ||35||
ಎಲೈ ಭಾರತನೇ, ಯುದ್ಧವನ್ನು ಹೊಗಳುವ ಭೀಮಸೇನನು ಪಿತೃಸಮರೂ ಮತ್ತು ಗುರುಗಳೂ ಆದ ಅವರನ್ನು ಒಂಬತ್ತು ಭಲ್ಲಗಳಿಂದ ಹೊಡೆದು, ಪುನಃ ಅರವತ್ತು ಭಲ್ಲಗಳಿಂದ ಹೊಡೆದನು.
ಅರ್ಜುನಸ್ತು ಸುಶರ್ಮಾಣಂ ವಿದ್ಧ್ವಾ ಬಹುಭಿರಾಯಸೈಃ |
ವ್ಯಧಮತ್ ತಸ್ಯ ತತ್ಸೈನ್ಯಂ ಮಹಾಭ್ರಾಣಿ ಯಥಾನಿಲಃ ||36||
ಅರ್ಜುನನಾದರೋ ಅನೇಕ ಕಬ್ಬಿಣದ ಬಾಣಗಳಿಂದ ಸುಶರ್ಮನನ್ನು ಹೊಡೆದು ಬಿರುಗಾಳಿಯು ಮಹಾಮೋಡವನ್ನು ಹಾರಿಸುವಂತೆ ಅವನ ಸೈನ್ಯವನ್ನು ಹಾರಿಸಿದನು.
ತತೋ ಭೀಷ್ಮಶ್ಚ ರಾಜಾ ಚ ಸೌಬಲಶ್ಚ ಬೃಹದ್ಬಲಃ |
ಅಭ್ಯದ್ರವಂತ ಸಂಕ್ರುದ್ಧಾ ಭೀಮಸೇನಧನಂಜಯೌ ||37||
ಅನಂತರ ಭೀಷ್ಮರೂ ಮತ್ತು ಕೋಸಲರಾಜನಾದ ಬೃಹದ್ಬಲನೂ ಬಹಳ ಕ್ರುದ್ಧರಾಗಿ ಭೀಮಾರ್ಜುನರ ಕಡೆಗೆ ಧಾವಿಸಿದರು.
ತಥೈವ ಪಾಂಡವಾಃ ಶೂರಾ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಅಭ್ಯದ್ರವನ್ ರಣೇ ಭೀಷ್ಮಂ ವ್ಯಾದಿತಾಸ್ಯಮಿವಾಂತಕಮ್ ||38||
ಹಾಗೆಯೇ ಶೂರರಾದ ಪಾಂಡವರೂ ಮತ್ತು ಪಾರ್ಷತನಾದ ಧೃಷ್ಟದ್ಯುಮ್ನನೂ ಬಾಯನ್ನು ತೆರೆದ ಯಮನಂತಿದ್ದ ಭೀಷ್ಮರ ಕಡೆಗೆ ರಣರಂಗದಲ್ಲಿ ಧಾವಿಸಿದರು.
ಶಿಖಂಡೀ ತು ಸಮಾಸಾದ್ಯ ಭಾರತಾನಾಂ ಪಿತಾಮಹಮ್ |
ಅಭ್ಯದ್ರವತ ಸಂಹೃಷ್ಟೋ ಭಯಂ ತ್ಯಕ್ತ್ವಾ ಯತವ್ರತಮ್ ||39||
ಶಿಖಂಡಿಯು ಸಂತೋಷಗೊಂಡು, ಭಯವನ್ನು ತ್ಯಜಿಸಿ ನಿಯತವ್ರತರಾದ ಭಾರತ ಪಿತಾಮಹರ ಕಡೆಗೆ ಧಾವಿಸಿ ಅಲ್ಲಿ ಸೇರಿದನು.
ಯುಧಿಷ್ಠಿರಮುಖಾಃ ಪಾರ್ಥಾಃ ಪುರಸ್ಕೃತ್ಯ ಶಿಖಂಡಿನಮ್ |
ಅಯೋಧಯನ್ ರಣೇ ಭೀಷ್ಮಂ ಸಂಹತಾಃ ಸಹ ಸೃಂಜಯೈಃ ||40||
ಯುಧಿಷ್ಠಿರ ಮೊದಲಾದ ಪಾಂಡವರು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಸೃಂಜಯರಿಂದ ಸಹಿತರಾಗಿ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತಥೈವ ತಾವಕಾಃ ಸರ್ವೇ ಪುರಸ್ಕೃತ್ಯ ಯತವ್ರತಮ್ |
ಶಿಖಂಡಿಪ್ರಮುಖಾನ್ ಪಾರ್ಥಾನ್ ಯೋಧಯಂತಿ ಸ್ಮ ಸಂಯುಗೇ ||
ಹಾಗೆಯೇ ನಿನ್ನವರೆಲ್ಲರೂ ಯತವ್ರತರಾದ ಭೀಷ್ಮರನ್ನು ಮುಂದೆ ಮಾಡಿಕೊಂಡು, ಶಿಖಂಡಿಯನ್ನು ಮುಂದೆ ಮಾಡಿಕೊಂಡ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತಃ ಪ್ರವವೃತೇ ಯುದ್ಧಂ ಕೌರವಾಣಾಂ ಭಯಾವಹಮ್ |
ತತ್ರ ಪಾಂಡುಸುತೈಃ ಸಾರ್ಧಂ ಭೀಷ್ಮಸ್ಯ ವಿಜಯಂ ಪ್ರತಿ ||42||
ಅನಂತರ ಭೀಷ್ಮರ ವಿಜಯದ ವಿಷಯದಲ್ಲಿ ಪಾಂಡವರಿಗೂ ಮತ್ತು ಕೌರವರಿಗೂ ಭಯಂಕರವಾದ ಯುದ್ಧವು ನಡೆಯಿತು.
ತಾವಕಾನಾಂ ರಣೇ ಭೀಷ್ಮೋ ಗ್ಲಹ ಆಸೀದ್ ವಿಶಾಂಪತೇ |

ತತ್ರ ಹಿ ದ್ಯೂತಮಾಯತ್ತಂ ವಿಜಯಾಯೇತರಾಯ ವಾ ॥43॥
ಎಲೈ ರಾಜನೇ, ನಿನ್ನವರಿಗೆ ಯುದ್ಧದಲ್ಲಿ ಭೀಷ್ಮರೇ ಪಣವಾಗಿದ್ದರು. ಯುದ್ಧವೆಂಬ ದ್ಯೂತವು ಸೋಲು-ಗೆಲುವಿಗಾಗಿ ಅವರನ್ನೇ ಅವಲಂಬಿಸಿದ್ದಿತು.
ಧೃಷ್ಟದ್ಯುಮ್ನೋ ಮಹಾರಾಜ ಸರ್ವಸೈನ್ಯಾನ್ಯಚೋದಯತ್ ।
ಅಭಿದ್ರವತ ಗಾಂಗೇಯಂ ಮಾ ಭೈಷ್ಟ ನರಸತ್ತಮಾಃ ॥44॥
ಎಲೈ ಮಹಾರಾಜನೇ, ಧೃಷ್ಟದ್ಯುಮ್ನನು ಎಲ್ಲ ಸೈನ್ಯವನ್ನು ಕುರಿತು ಎಲೈ ನರಶ್ರೇಷ್ಠರೇ, ಭೀಷ್ಮರ ಕಡೆಗೆ ಮುನ್ನುಗ್ಗಿ, ಹೆದರಬೇಡಿ ಎಂದು ಪ್ರಚೋದಿಸಿದನು.
ಸೇನಾಪತಿವಚಃ ಶ್ರುತ್ವಾ ಪಾಂಡವಾನಾಂ ವರೂಥಿನೀ ।
ಭೀಷ್ಮಮೇವಾಭ್ಯಯಾತ್ ತೂರ್ಣಂ ಪ್ರಾಣಾಂಸ್ತ್ಯಕತ್ವ ಮಹಾಹವೇ ॥
ಸೇನಾಪತಿಯ ಮಾತುಗಳನ್ನು ಕೇಳಿ ಪಾಂಡವರ ಸೈನ್ಯವು ಆ ದೊಡ್ಡ ಯುದ್ಧದಲ್ಲಿ ಪ್ರಾಣಗಳ ಹಂಗನ್ನು ತೊರೆದು ಭೀಷ್ಮರ ಕಡೆಗೇ ಶೀಘ್ರವಾಗಿ ಮುನ್ನುಗ್ಗಿದವು.
ಭೀಷ್ಮೋಽಪಿ ರಥಿನಾಂ ಶ್ರೇಷ್ಠಃ ಪ್ರತಿಜಗ್ರಾಹ ತಾಂ ಚಮೂಮ್ ।
ಆಪತಂತೀಂ ಮಹಾರಾಜ ವೇಲಾಮಿವ ಮಹೋದಧೇಃ ॥46॥
ಎಲೈ ಮಹಾರಾಜನೇ, ಭೀಷ್ಮರೂ ಸಹ ತನ್ನ ಕಡೆಗೆ ಬರುತ್ತಿದ್ದ ಆ ಸೈನ್ಯವನ್ನು ಮಹೋದಧಿಯ ಜಲಪ್ರವಾಹವನ್ನು ತೀರವು ಸ್ವೀಕರಿಸಿದಂತೆ ಆ ಸೈನ್ಯವನ್ನು ಸ್ವೀಕರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಏಕಾದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಏಕಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೆರಡನೆಯ ಅಧ್ಯಾಯ
ಭೀಷ್ಮರಿಗೆ ಯುದ್ಧದಲ್ಲಿ ನಿರ್ವೇದ. ಯುಧಿಷ್ಠಿರನನ್ನು ಕುರಿತು ಅದರ ಸೂಚನೆ. ಘೋರವಾದ ಯುದ್ಧ.
ಧೃತರಾಷ್ಟ್ರಃ
ಕಥಂ ಶಾಂತನವೋ ಭೀಷ್ಮೋ ದಶಮೇಽಹನಿ ಸಂಜಯ ।
ಅಯುಧ್ಯತ ಮಹಾವೀರ್ಯೈಃ ಪಾಂಡವೈಃ ಸಹಸೃಂಜಯೈಃ ॥1॥
ಕುರವಶ್ಚ ಕಥಂ ಯುದ್ಧೇ ಪಾಂಡವಾನ್ ಪ್ರತ್ಯವಾರಯನ್ ।
ಆಚಕ್ಷ್ವ ಮೇ ಮಹಾಯುದ್ಧಂ ಭೀಷ್ಮಸ್ಯಾಹವಶೋಭಿನಃ ॥2॥
ಧೃತರಾಷ್ಟ್ರ ಎಲೈ ಸಂಜಯನೇ, ಹತ್ತನೆಯ ದಿವಸದಲ್ಲಿ ಮಹಾಪರಾಕ್ರಮ- ಶಾಲಿಗಳಾದ, ಶಂತನುಪುತ್ರರಾದ ಭೀಷ್ಮರು ಪಾಂಡವರ ಮತ್ತು ಸೃಂಜಯರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದರು? ಕುರುಗಳೂ ಸಹ ಯುದ್ಧದಲ್ಲಿ ಹೇಗೆ ಪಾಂಡವರನ್ನು ತಡೆದರು? ಯುದ್ಧದಲ್ಲಿ ಶೋಭಿಸುವ ಭೀಷ್ಮರ ಮಹಾಯುದ್ಧವನ್ನು ನನಗೆ ಹೇಳು.
ಸಂಜಯಃ
ಕುರವಃ ಪಾಂಡವೈಃ ಸಾರ್ಧಂ ಯಥಾಯುಧ್ಯಂತ ಭಾರತ ।
ಯಥಾ ಚ ತದಭೂದ್ ಯುದ್ಧಂ ತತ್ತೇ ವಕ್ಷ್ಯಾಮಿ ಶೃಣ್ವತಃ ॥3॥
ಸಂಜಯ ಎಲೈ ಭಾರತನೇ, ಕುರುಗಳು ಪಾಂಡವರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದರು ಮತ್ತು ಆ ಯುದ್ಧವು ಹೇಗೆ ನಡೆಯಿತು ಎಂದು ನಿನಗೆ ನಾನು ಹೇಳುವೆನು, ಕೇಳುವವನಾಗು.
ಪ್ರೇಷಿತಾಃ ಪರಲೋಕಾಯ ಪರಮಾಸ್ತ್ರೈಃ ಕಿರೀಟಿನಾ ।
ಅಹನ್ಯಹನಿ ಸಂಪ್ರಾಪ್ತಾಸ್ತಾವಕಾನಾಂ ರಥವ್ರಜಾಃ ॥4॥
ಪ್ರತಿದಿನವೂ ತನ್ನ ಬಳಿಗೆ ಬಂದ ನಿನ್ನ ರಥಸಮೂಹಗಳನ್ನು ಅರ್ಜುನನು ಪರಮಾಸ್ತ್ರಗಳಿಂದ ಪರಲೋಕಕ್ಕೆ ಕಳುಹಿಸಿದನು.
ಯಥಾಪ್ರತಿಜ್ಞಂ ಕೌರವ್ಯಃ ಸ ಚಾಪಿ ಸಮಿತಿಂಜಯಃ ।
ಪಾರ್ಥಾನಾಮಕರೋದ್ ಭೀಷ್ಮಃ ಸತತಂ ಸಮಿತಿಕ್ಷಯಮ್ ॥5॥
ತಮ್ಮ ಪ್ರತಿಜ್ಞೆಗೆ ಅನುಗುಣವಾಗಿ ಸೈನ್ಯಕ್ಷಯಕಾರಿಯಾದ ಕೌರವ್ಯರಾದ ಆ ಭೀಷ್ಮರೂ ಸಹ ಸತತವಾಗಿ ಪಾಂಡವರ ಸೇನೆಯನ್ನು ನಾಶಮಾಡಿದರು.
ಕುರುಭಿಃ ಸಹಿತಂ ಭೀಷ್ಮಂ ಯುಧ್ಯಮಾನಂ ಮಹಾರಥಮ್ ।
ಅರ್ಜುನಂ ಚ ಸಪಾಂಚಾಲ್ಯಂ ದೃಷ್ಟ್ವಾ ಸಂಶಯಿತಾ ಜನಾಃ ॥6॥
ಕೌರವರ ಜೊತೆಯಲ್ಲಿ ಯುದ್ಧ ಮಾಡುವ ಭೀಷ್ಮರನ್ನೂ, ಪಾಂಚಾಲರ ಜೊತೆಯಲ್ಲಿ ಯುದ್ಧ ಮಾಡುವ ಮಹಾರಥನಾದ ಅರ್ಜುನನನ್ನೂ ನೋಡಿ ಜನರಿಗೆ ಯಾರಿಗೆ ಜಯ ಎಂಬ ವಿಷಯದಲ್ಲಿ ಸಂಶಯವುಂಟಾಯಿತು.
ದಶಮೇಽಹನಿ ತಸ್ಮಿಂಸ್ತು ಭೀಷ್ಮಾರ್ಜುನಸಮಾಗಮೇ ।
ಅವರ್ತತ ಮಹಾರೌದ್ರಃ ಸತತಂ ಸಮಿತಿಕ್ಷಯಃ ॥7॥

ಆ ಹತ್ತನೆಯ ದಿವಸದಲ್ಲಿ ಭೀಷ್ಮಾರ್ಜುನರ ಸಮಾಗಮವಾಗುತ್ತಿರಲು ಸತತವಾಗಿ ಮಹಾಘೋರವಾದ ಸೇನಾಕ್ಷಯ ಉಂಟಾಯಿತು.
ತಸ್ಮಿನ್ನಯುತಶೋ ರಾಜನ್ ಭೂಯಶ್ಚ ಸ ಪರಂತಪಃ |
ಭೀಷ್ಮಃ ಶಾಂತನವೋ ಯೋಧಾನ್ ಜಘಾನ ಪರಮಾಸ್ತ್ರವಿತ್ ॥8॥
ಎಲೈ ರಾಜನೇ, ಆ ಯುದ್ಧದಲ್ಲಿ ಪರಮಾಸ್ತ್ರವೇತ್ತರಾದ, ಪರಂತಪರಾದ, ಶಂತನು ಪುತ್ರರಾದ ಭೀಷ್ಮರು ಹತ್ತಾರು ಸಾವಿರ ಸಂಖ್ಯೆಯಲ್ಲಿ ಯೋಧರನ್ನು ಪುನಃ ಕೊಂದರು.
ಯೇಷಾಮಜ್ಞಾತಕಲ್ಪಾನಿ ನಾಮಗೋತ್ರಾಣಿ ಪಾರ್ಥಿವ |
ತೇ ಹತಾಸ್ತತ್ರ ಭೀಷ್ಮೇಣ ಶೂರಾಃ ಸರ್ವೇಽನಿವರ್ತಿನಃ ॥9॥
ಎಲೈ ರಾಜನೇ, ಯಾವ ಯೋಧರ ನಾಮ-ಗೋತ್ರಗಳು ತಿಳಿದಿರಲಿಲ್ಲವೋ ಅಂತಹ ಯುದ್ಧದಲ್ಲಿ ಹಿಮ್ಮೆಟ್ಟದಿರುವ ಎಲ್ಲಾ ಶೂರರು ಅಲ್ಲಿ ಭೀಷ್ಮರಿಂದ ಹತರಾದರು.
ದಶಾಹಾನಿ ತತಸ್ತಪ್ತ್ವಾ ಭೀಷ್ಮಃ ಪಾಂಡವವಾಹಿನೀಮ್ |
ನಿರವಿದ್ಯತ ಧರ್ಮಾತ್ಮಾ ಜೀವಿತೇನ ಪರಂತಪಃ ॥10॥
ಧರ್ಮಾತ್ಮರೂ, ಪರಂತಪರೂ ಆದ ಭೀಷ್ಮರು ಪಾಂಡವಸೈನ್ಯವನ್ನು ಹತ್ತು ದಿವಸಗಳವರೆಗೆ ದಹಿಸಿ, ಅನಂತರ ತಮ್ಮ ಜೀವಿತದಲ್ಲಿಯೇ ವೈರಾಗ್ಯವನ್ನು ಹೊಂದಿದರು.
ಸ ಕ್ಷಿಪ್ರಂ ವಧಮನ್ವಿಚ್ಛನ್ನಾತ್ಮನೋಽಭಿಮುಖಂ ರಣೇ |
ನ ಹನ್ಯಾಂ ಮಾನವಶ್ರೇಷ್ಠಾನ್ ಸಂಗ್ರಾಮೇಽಭಿಮುಖಾನಿತಿ ॥11॥
ಚಿಂತಯಿತ್ವಾ ಮಹಾಬಾಹುಃ ಪಿತಾ ದೇವವ್ರತಸ್ತವ |
ಅಭ್ಯಾಶಸ್ಥಂ ಮಹಾರಾಜ ಪಾಂಡವಂ ವಾಕ್ಯಮಬ್ರವೀತ್ ॥12॥
ಅವರು ಕ್ಷಿಪ್ರವಾಗಿ ತಮ್ಮ ವಧೆಯನ್ನು ಬಯಸಿ ಸಂಗ್ರಾಮದಲ್ಲಿ ಎದುರಿಗೆ ಬಂದ ಮಾನವಶ್ರೇಷ್ಠರನ್ನು ಕೊಲ್ಲುವುದಿಲ್ಲ ಎಂದು ನಿಶ್ಚಯಿಸಿ, ಎಲೈ ಮಹಾರಾಜನೇ, ನಿನ್ನ ತಂದೆಯಾದ, ಮಹಾಬಾಹುವಾದ ಭೀಷ್ಮರು ಯುದ್ಧದಲ್ಲಿ ಸಮೀಪದಲ್ಲಿ ಎದುರಿಗಿದ್ದ ಧರ್ಮರಾಜನನ್ನು ಕುರಿತು ಮಾತನಾಡಿದರು.
ಯುಧಿಷ್ಠಿರ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಶೃಣು ಮೇ ವಚನಂ ತಾತ ಧರ್ಮ್ಯಂ ಸ್ವರ್ಗ್ಯಂ ಚ ಜಲ್ಪತಃ ॥13॥
ಎಲೈ ಯುಧಿಷ್ಠಿರನೇ, ಮಹಾಪ್ರಾಜ್ಞನೇ, ಸರ್ವಶಾಸ್ತ್ರವಿಶಾರದನೇ, ಪ್ರೀತಿಪಾತ್ರನೇ, ನಾನು ಮಾತನಾಡುವ ಧರ್ಮಸಹಿತವಾದ, ಸ್ವರ್ಗಸಾಧನವಾದ ಮಾತುಗಳನ್ನು ಕೇಳು.
ನಿರ್ವಿಣ್ಣೋಽಸ್ಮಿ ಭೃಶಂ ತಾತ ದೇಹೇನಾನೇನ ಭಾರತ |
ಘ್ನತಶ್ಚ ಮೇ ಗತಃ ಕಾಲಃ ಸುಬಹೂನ್ ಪ್ರಾಣಿನೋ ರಣೇ ॥14॥
ಪ್ರೀತಿಪಾತ್ರನೇ, ಭಾರತನೇ, ಈ ನನ್ನ ದೇಹದಲ್ಲಿ ನನಗೆ ವೈರಾಗ್ಯ ಉಂಟಾಗಿದೆ. ಯುದ್ಧದಲ್ಲಿ ಅನೇಕ ಯೋಧರನ್ನು ಮತ್ತು ಪ್ರಾಣಿಗಳನ್ನು ಕೊಲ್ಲುವ ನನಗೆ ಬಹಳ ಕಾಲವು ಕಳೆದುಹೋಯಿತು.
ತಸ್ಮಾತ್ ಪಾರ್ಥಂ ಪುರೋಧಾಯ ಪಾಂಚಾಲಾನ್ ಸೃಂಜಯಾಂಸ್ತಥಾ |
ಮದ್ವಧೇ ಕ್ರಿಯತಾಂ ಯತ್ನೋ ಮಮ ಚೇದಿಚ್ಛಸಿ ಪ್ರಿಯಮ್ ॥15॥
ಆದ್ದರಿಂದ ಎಲೈ ಪಾರ್ಥನೇ, ನನಗೆ ಪ್ರಿಯವನ್ನು ಮಾಡಲು ಬಯಸುವುದಾದರೆ ಪಾಂಚಾಲರನ್ನೂ ಮತ್ತು ಸೃಂಜಯರನ್ನೂ ಮುಂದೆ ಮಾಡಿಕೊಂಡು ನನ್ನ ವಧೆಯ ಪ್ರಯತ್ನವನ್ನು ಮಾಡು (ಎಂದು ಹೇಳಿದರು).
ತಸ್ಯ ತನ್ಮತಮಾಜ್ಞಾಯ ಪಾಂಡವಃ ಸತ್ಯದರ್ಶನಃ |
ಭೀಷ್ಮಂ ಪ್ರತಿಯಯೌ ಯತ್ತಃ ಸಂಗ್ರಾಮೇ ಸಹ ಸೃಂಜಯೈಃ ॥16॥
ಅವರ ಅಭಿಪ್ರಾಯವನ್ನು ತಿಳಿದ ಸತ್ಯದರ್ಶನನಾದ ಯುಧಿಷ್ಠಿರನು ಯುದ್ಧದಲ್ಲಿ ಸೃಂಜಯರ ಜೊತೆಯಲ್ಲಿ ಪ್ರಯತ್ನ ಪೂರ್ವಕವಾಗಿ ಅವರ ಕಡೆಗೆ ಮುನ್ನುಗ್ಗಿದನು.
ಧೃಷ್ಟದ್ಯುಮ್ನಸ್ತತೋ ರಾಜನ್ ಪಾಂಡವಶ್ಚ ಯುಧಿಷ್ಠಿರಃ |
ಶ್ರುತ್ವಾ ಭೀಷ್ಮಸ್ಯ ತಾಂ ವಾಚಂ ಚೋದಯಾಮಾಸತುರ್ಬಲಮ್ ॥17॥
ಎಲೈ ರಾಜನೇ, ಆಗ ಧೃಷ್ಟದ್ಯುಮ್ನನೂ ಮತ್ತು ಪಾಂಡುಪುತ್ರನಾದ ಯುಧಿಷ್ಠಿರನೂ ಭೀಷ್ಮರ ಆ ಮಾತನ್ನು ಕೇಳಿ ತಮ್ಮ ಸೈನ್ಯವನ್ನು ಪ್ರಚೋದಿಸಿದರು.
ಅಭಿದ್ರವತ ಯುಧ್ಯಧ್ವಂ ಭೀಷ್ಮಂ ಜಯತ ಸಂಯುಗೇ |
ರಕ್ಷಿತಾಃ ಸತ್ಯಸಂಧೇನ ಜಿಷ್ಣುನಾ ರಿಪುಜಿಷ್ಣುನಾ ॥18॥
ಶತ್ರುಗಳನ್ನು ಜಯಿಸುವ ಸತ್ಯಸಂಧನಾದ ಅರ್ಜುನನಿಂದ ರಕ್ಷಿತರಾಗಿ ಮುಂದೆ ಸಾಗಿ ಯುದ್ಧವನ್ನು ಮಾಡಿ, ಯುದ್ಧದಲ್ಲಿ ಭೀಷ್ಮರನ್ನು ಜಯಿಸಿ.
ಅಯಂ ಚಾಪಿ ಮಹೇಷ್ವಾಸಃ ಪಾರ್ಷತೋ ವಾಹಿನೀಪತಿಃ |
ಭೀಮಸೇನಶ್ಚ ಸಮರೇ ಪಾಲಯಿಷ್ಯತಿ ವೋ ಧ್ರುವಮ್ ॥19॥
ಸೇನಾಪತಿಯಾದ, ಮಹಾಧನುರ್ಧಾರಿಯಾದ ಈ ಧೃಷ್ಟದ್ಯುಮ್ನನೂ ಮತ್ತು ಭೀಮಸೇನನೂ ಯುದ್ಧದಲ್ಲಿ ನಿಶ್ಚಿತವಾಗಿ ನಿಮ್ಮನ್ನು ರಕ್ಷಿಸುವರು.
ನ ವೈ ಭೀಷ್ಮಾದ್ ಭಯಂ ಕಿಂಚಿತ್ ಕರ್ತವ್ಯಂ ಯುಧಿ ಸೃಂಜಯಾಃ |
ಧ್ರುವಂ ಭೀಷ್ಮಂ ವಿಜೇಷ್ಯಾಮಃ ಪುರಸ್ಕೃತ್ಯ ಶಿಖಂಡಿನಮ್ ॥20॥

ಎಲೈ ಸೃಂಜಯರೇ, ಯುದ್ಧದಲ್ಲಿ ಭೀಷ್ಮರಿಗೆ ಹೆದರಬೇಕಾದ ಯಾವ ಕಾರಣವೂ ಇಲ್ಲ. ಶಿಖಂಡಿಯನ್ನು ಮುಂದೆ ಮಾಡಿಕೊಂಡು ನಾವು ಖಂಡಿತವಾಗಿ ಭೀಷ್ಮರನ್ನು ಗೆಲ್ಲುವೆವು (ಎಂದು ಹೇಳಿದನು).
ತಥಾ ತು ಸಮಯಂ ಕೃತ್ವಾ ದಶಮೇಽಹನಿ ಪಾಂಡವಾಃ।
ಬ್ರಹ್ಮಲೋಕಪರಾ ಭೂತ್ವಾ ಸಂಜಗ್ಮುಃ ಕ್ರೋಧಮೂರ್ಚ್ಛಿತಾಃ ॥21॥
ಹಾಗೆ ಒಪ್ಪಂದವನ್ನು ಮಾಡಿಕೊಂಡು ಹತ್ತನೆಯ ದಿವಸದಲ್ಲಿ ಪಾಂಡವರು ಬ್ರಹ್ಮಲೋಕವನ್ನು ಹೊಂದುವ ಇಚ್ಛೆಯುಳ್ಳವರಾಗಿ, ಕ್ರೋಧಪೂರ್ಣರಾಗಿ ಯುದ್ಧಕ್ಕೆ ಹೊರಟರು.
ಶಿಖಂಡಿನಂ ಪುರಸ್ಕೃತ್ಯ ಪಾಂಡವಂ ಚ ಧನಂಜಯಮ್।
ಭೀಷ್ಮಸ್ಯ ಪಾತನೇ ಯತ್ನಂ ಪರಮಂ ತೇ ಸಮಾಸ್ಥಿತಾಃ ॥22॥
ಶಿಖಂಡಿಯನ್ನೂ ಮತ್ತು ಪಾಂಡುಪುತ್ರನಾದ ಅರ್ಜುನನನ್ನೂ ಮುಂದೆ ಮಾಡಿಕೊಂಡು ಅವರು ಭೀಷ್ಮರನ್ನು ಕೆಡವುವ ವಿಷಯದಲ್ಲಿ ಪರಮ ಪ್ರಯತ್ನವನ್ನು ಮಾಡಿದರು.
ತತಸ್ತವ ಸುತಾದಿಷ್ಟಾ ನಾನಾಜನಪದೇಶ್ವರಾಃ।
ದ್ರೋಣೇನ ಸಹಪುತ್ರೇಣ ಸಹಸೇನಾ ಮಹಾಬಲಾಃ ॥23॥
ದುಃಶಾಸನಶ್ಚ ಬಲವಾನ್ ಸಹ ಸರ್ವೈಃ ಸಹೋದರೈಃ।
ಭೀಷ್ಮಂ ಸಮರಮಧ್ಯಸ್ಥಂ ಪಾಲಯಾಂಚಕ್ರಿರೇ ತದಾ ॥24॥
ಆಗ ನಿನ್ನ ಪುತ್ರರಿಂದ ಆಜ್ಞಪ್ತರಾದ, ನಾನಾ ಜನಪದೇಶ್ವರರಾದ ಮಹಾಬಲರಾದ ರಾಜರು ತಮ್ಮ ಸೇನೆಯಿಂದ ಸಹಿತರಾಗಿ, ಪುತ್ರಸಹಿತರಾದ ದ್ರೋಣರಿಂದಲೂ ಸಹಿತರಾಗಿ (ಭೀಷ್ಮರನ್ನು ರಕ್ಷಿಸಿದರು). ಬಲಿಷ್ಠನಾದ ದುರ್ಯೋಧನನೂ ಸಹ ತನ್ನ ಎಲ್ಲ ಸಹೋದರರಿಂದೊಡಗೂಡಿ ಯುದ್ಧಮಧ್ಯದಲ್ಲಿದ್ದ ಭೀಷ್ಮರನ್ನು ರಕ್ಷಿಸಿದನು.
ತತಸ್ತು ತಾವಕಾಃ ಶೂರಾಃ ಪುರಸ್ಕೃತ್ಯ ಯತವ್ರತಮ್।
ಶಿಖಂಡಿಪ್ರಮುಖಾನ್ ಪಾರ್ಥಾನ್ ಯೋಧಯಂತಿ ಸ್ಮ ಸಂಯುಗೇ ॥
ಆಗ ನಿನ್ನ ಸೈನ್ಯದ ಶೂರರು ಭೀಷ್ಮರನ್ನು ಮುಂದೆ ಮಾಡಿಕೊಂಡು ಶಿಖಂಡಿಯನ್ನು ಮುಂದಿಟ್ಟುಕೊಂಡ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಚೇದಿಭಿಶ್ಚ ಸಪಾಂಚಾಲೈಃ ಸಹಿತೋ ವಾನರಧ್ವಜಃ।
ಯಯೌ ಶಾಂತನವಂ ಭೀಷ್ಮಂ ಪುರಸ್ಕೃತ್ಯ ಶಿಖಂಡಿನಮ್ ॥26॥
ಚೇದಿಗಳಿಂದ ಮತ್ತು ಪಾಂಚಾಲರಿಂದ ಸಹಿತನಾದ ವಾನರಧ್ವಜನಾದ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಶಂತನುಪುತ್ರರಾದ ಭೀಷ್ಮರ ಕಡೆಗೆ ಸಾಗಿದನು.
ದ್ರೋಣಪುತ್ರಂ ಶಿನೇರ್ನಪ್ತಾ ಧೃಷ್ಟಕೇತುಸ್ತು ಪೌರವಮ್।
ಯುಧಾಮನ್ಯುಃ ಸಹಾಮಾತ್ಯಂ ದುರ್ಯೋಧನಮಯೋಧಯತ್ ॥
ಅಶ್ವತ್ಥಾಮರು ಶಿನಿಯ ಮೊಮ್ಮಗನಾದ ಸಾತ್ಯಕಿಯ ಜೊತೆಯಲ್ಲಿಯೂ, ಧೃಷ್ಟಕೇತುವು ಪೌರವನ ಜೊತೆಯಲ್ಲಿಯೂ, ಯುದಾಮನ್ಯುವು ಅಮಾತ್ಯ ಸಹಿತನಾದ ದುರ್ಯೋಧನನ ಜೊತೆಯಲ್ಲಿಯೂ ಯುದ್ಧವನ್ನು ಮಾಡಿದರು.
ವಿರಾಟಸ್ತು ಸಹಾನೀಕಃ ಸಹಸೇನಂ ಜಯದ್ರಥಮ್।
ವೃದ್ಧಕ್ಷತ್ರಸ್ಯ ದಾಯಾದಮಾಸಸಾದ ಪರಂತಪಃ ॥28॥
ಪರಂತಪನಾದ ವಿರಾಟನು ತನ್ನ ಸೈನ್ಯದೊಂದಿಗೆ ತನ್ನ ಸೈನ್ಯದಿಂದ ಸಹಿತನಾದ ವೃದ್ಧಕ್ಷತ್ರನ ಪುತ್ರನಾದ ಜಯದ್ರಥನನ್ನು ಎದುರಿಸಿದನು.
ಮದ್ರರಾಜಂ ಮಹೇಷ್ವಾಸಂ ಸಹಸೈನ್ಯಂ ಯುಧಿಷ್ಠಿರಃ।
ಭೀಮಸೇನಾಭಿಗುಪ್ತಶ್ಚ ನಾಗಾನೀಕಮುಪಾದ್ರವತ್ ॥29॥
ಭೀಮಸೇನನಿಂದ ರಕ್ಷಿತನಾದ ಯುಧಿಷ್ಠಿರನು ಸೈನ್ಯಸಹಿತನಾದ, ಮಹಾಧನುರ್ಧಾರಿಯಾದ, ಗಜಸೇನೆಯನ್ನು ಹೊಂದಿದ, ಮದ್ರರಾಜನಾದ ಶಲ್ಯನ ಮೇಲೆ ಎರಗಿದನು.
ಅಪ್ರಧೃಷ್ಯಮನಾವಾರ್ಯಂ ಸರ್ವಶಸ್ತ್ರಭೃತಾಂ ವರಮ್।
ದ್ರೋಣಂ ಪ್ರತಿ ಯಯೌ ಯತ್ತಃ ಪಾಂಚಾಲ್ಯಃ ಸಹ ಸೋಮಕೈಃ ॥30॥
ಸೋಲಿಸಲು ಅಸಾಧ್ಯರಾದವರೂ, ತಡೆಯಲೂ ಅಸಾಧ್ಯರಾದವರೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ ಆದ ದ್ರೋಣರನ್ನು ಕುರಿತು ಸೋಮಕರಿಂದ ಒಡಗೂಡಿದ ಪಾಂಚಾಲ ದೇಶದವನಾದ ಧೃಷ್ಟದ್ಯುಮ್ನನು ಪ್ರಯತ್ನಪೂರ್ವಕವಾಗಿ ಸಾಗಿದನು.
ಕರ್ಣಿಕಾರಧ್ವಜಂ ಚಾಪಿ ಸಿಂಹಕೇತುರರಿಂದಮಃ।
ಪ್ರತ್ಯುಜ್ಜಗಾಮ ಸೌಭದ್ರಂ ರಾಜಪುತ್ರೋ ಬೃಹದ್ಬಲಃ ॥31॥
ಸಿಂಹಧ್ವಜವುಳ್ಳ, ಅರಿಂದಮನಾದ, ರಾಜಪುತ್ರನಾದ ಬೃಹದ್ಬಲನು ಕರ್ಣಿಕಾರ ಧ್ವಜವನ್ನು ಹೊಂದಿದ ಅಭಿಮನ್ಯುವಿನ ಮೇಲೆ ಎರಗಿದನು.
ಶಿಖಂಡಿನಂ ಚ ಪುತ್ರಾಸ್ತೇ ಪಾಂಡವಂ ಚ ಧನಂಜಯಮ್।
ರಾಜಭಿಃ ಸಮರೇ ಸಾರ್ಧಮಭಿಪೇತುರ್ಜಿಘಾಂಸವಃ ॥32॥
ನಿನ್ನ ಪುತ್ರರು ರಾಜರಿಂದ ಸಹಿತರಾಗಿ ಯುದ್ಧದಲ್ಲಿ ಶಿಖಂಡಿಯನ್ನು ಮತ್ತು ಪಾಂಡವನಾದ ಅರ್ಜುನನನ್ನು ಕೊಲ್ಲುವ ಇಚ್ಛೆಯನ್ನು ಹೊಂದಿ ಅವರ ಮೇಲೆ ಎರಗಿದರು.
ತಸ್ಮಿನ್ನತಿಮಹಾಭೀಮೇ ಸೇನಯೋರ್ವೈ ಪರಾಕ್ರಮೇ।

ಸಂಪ್ರಧಾವತ್ಸ್ವನೀಕೇಷು ಮೇದಿನೀ ಸಮಕಂಪತ ॥33॥
ಆ ಮಹಾಭಯಂಕರವಾದ ಯುದ್ಧದಲ್ಲಿ ಎರಡು ಸೇನೆಗಳೂ ಪರಾಕ್ರಮವನ್ನು ತೋರಿಸುತ್ತಾ ಓಡುತ್ತಿರಲು ಭೂಮಿಯು ನಡುಗಿತು.
ತಾನ್ಯನೀಕಾನ್ಯನೀಕೇಷು ಸಮಸಜ್ಜಂತ ಭಾರತ ।
ತಾವಕಾನಾಂ ಪರೇಷಾಂ ಚ ದೃಷ್ಟ್ವಾ ಶಾಂತನವಂ ರಣೇ ॥34॥
ಎಲೈ ಭಾರತನೇ, ರಣರಂಗದಲ್ಲಿ ಭೀಷ್ಮರನ್ನು ನೋಡಿ ನಿನ್ನ ಮತ್ತು ಪರರ ಸೈನ್ಯಗಳು ಪರಸ್ಪರವಾಗಿ ಒಂದನ್ನೊಂದು ಸಂಧಿಸಿದವು.
ತತಸ್ತೇಷಾಂ ಪ್ರಯತತಾಮನ್ಯೋನ್ಯಮಭಿಧಾವತಾಮ್ ।
ಪ್ರಾದುರಾಸೀನ್ಮಹಾನ್ ಶಬ್ದೋ ದಿಕ್ಷು ಸರ್ವಾಸು ಭಾರತ ॥35॥
ಎಲೈ ಭಾರತನೇ, ಅನಂತರ ಪ್ರಯತ್ನಶಾಲಿಗಳಾಗಿ ಪರಸ್ಪರವಾಗಿ ಅಭಿಮುಖವಾಗಿ ಓಡಾಡುವ ಆ ಸೈನ್ಯಗಳಿಂದ ಎಲ್ಲ ದಿಕ್ಕುಗಳಲ್ಲಿಯೂ ದೊಡ್ಡ ಶಬ್ದ ಉಂಟಾಯಿತು.
ಶಂಖದುಂದುಭಿಘೋಷೈಶ್ಚ ವಾರಣಾನಾಂ ಚ ಬೃಂಹಿತೈಃ ।
ಸಿಂಹನಾದೈಶ್ಚ ಸೈನ್ಯಾನಾಂ ದಾರುಣಃ ಸಮಪದ್ಯತ ॥36॥
ಶಂಖ-ದುಂದುಭಿ ಘೋಷಗಳಿಂದಲೂ, ಗಜಗಳ ಬೃಂಹಣಗಳಿಂದಲೂ, ಯೋಧರ ಸಿಂಹನಾದದಿಂದಲೂ ಸಹಿತವಾದ ಆ ಶಬ್ದವು ದಾರುಣವಾಯಿತು.
ಸಾ ಚ ಸರ್ವನರೇಂದ್ರಾಣಾಂ ಚಂದ್ರಾರ್ಕಸದೃಶೀ ಪ್ರಭಾ ।
ವೀರಾಂಗದಕಿರೀಟೇಷು ನಿಷ್ಪ್ರಭಾ ಸಮಪದ್ಯತ ॥37॥
ಎಲ್ಲ ರಾಜರ ಭುಜಕೀರ್ತಿ ಮತ್ತು ಕಿರೀಟಗಳಲ್ಲಿ ಇದ್ದ ಸೂರ್ಯ-ಚಂದ್ರರಿಗೆ ಸಮಾನವಾದ ಕಾಂತಿಯು ನಾಶವನ್ನು ಹೊಂದಿತು.
ರಜೋಮೇಘಾಶ್ಚ ಸಂಜಜ್ಞುಃ ಶಸ್ತ್ರವಿದ್ಯುದ್ಭಿರಾವೃತಾಃ ।
ಧನುಷಾಂ ಚೈವ ನಿರ್ಘೋಷೋ ದಾರುಣಃ ಸಮಪದ್ಯತ ॥38॥
ಶಸ್ತ್ರಗಳೆಂಬ ಮಿಂಚುಗಳಿಂದ ಕೂಡಿದ ಧೂಳಿನ ಮೇಘಗಳು ಉಂಟಾದವು. ಧನುಸ್ಸುಗಳ ಶಬ್ದವು ದಾರುಣವಾದವು.
ಬಾಣಶಂಖಪ್ರಣಾದಾಶ್ಚ ಭೇರೀಣಾಂ ಚ ಮಹಾಸ್ವನಾಃ ।
ರಥಘೋಷಾಶ್ಚ ಸಂಜಗ್ಮುಃ ಸೇನಯೋರುಭಯೋರಪಿ ॥39॥
ಎರಡು ಸೇನೆಗಳಲ್ಲಿಯೂ ಬಾಣ ಮತ್ತು ಶಂಖಗಳ ನಾದಗಳೂ, ಭೇರಿಗಳ ಮಹಾನಾದಗಳೂ, ರಥಘೋಷಗಳೂ ಉಂಟಾದವು.
ಪ್ರಾಸಶಕ್ತ್ಯೃಷ್ಟಿಸಂಘೈಶ್ಚ ಬಾಣೌಘೈಶ್ಚ ಸಮಾಕುಲಮ್ ।
ನಿಷ್ಪ್ರಕಾಶಮಿವಾಕಾಶಂ ಸೇನಯೋಃ ಸಮಪದ್ಯತ ॥40॥
ಪ್ರಾಸ, ಶಕ್ತಿ, ಋಷ್ಟಿ ಸಮೂಹಗಳಿಂದಲೂ ಬಾಣ ಸಮೂಹಗಳಿಂದಲೂ ನಿಬಿಡವಾದ ಎರಡು ಸೇನೆಗಳ ಮೇಲಿನ ಆಕಾಶವು ಪ್ರಕಾಶಶೂನ್ಯವಾಯಿತು.
ಅನ್ಯೋನ್ಯಂ ರಥಿನಃ ಪೇತುರ್ವಾಜಿನಶ್ಚ ಮಹಾಹವೇ ।
ಕುಂಜರಾಃ ಕುಂಜರಾನ್ ಜಘ್ನುಃ ಪದಾತೀಂಶ್ಚ ಪದಾತಯಃ ॥41॥
ಆ ಮಹಾಯುದ್ಧದಲ್ಲಿ ರಥಿಕರು ಮತ್ತು ಅಶ್ವಾರೋಹಿಗಳು ಪರಸ್ಪರವಾಗಿ ಎರಗಿದರು. ಗಜಗಳು ಗಜಗಳನ್ನು, ಪದಾತಿಗಳು ಪದಾತಿಗಳನ್ನು ಕೊಂದರು.
ತದಾಸೀತ್ ಸುಮಹದ್ ಯುದ್ಧಂ ಕುರೂಣಾಂ ಪಾಂಡವೈಃ ಸಹ ।
ಭೀಷ್ಮಹೇತೋರ್ನರವ್ಯಾಘ್ರ ಶ್ಯೇನಯೋರಾಮಿಷೇ ಯಥಾ ॥42॥
ಎಲೈ ನರವ್ಯಾಘ್ರನೇ, ಭೀಷ್ಮರ ಸಲುವಾಗಿ ಕೌರವರಿಗೂ ಮತ್ತು ಪಾಂಡವರಿಗೂ ಮಾಂಸದ ತುಂಡಿನ ಸಲುವಾಗಿ ಹದ್ದುಗಳಿಗೆ ಉಂಟಾದಂತೆ, ಬಹಳ ಘೋರವಾದ ಯುದ್ಧವು ಉಂಟಾಯಿತು.
ತಯೋಃ ಸಮಾಗಮೋ ಘೋರೋ ಬಭೂವ ಯುಧಿ ಭಾರತ ।
ಅನ್ಯೋನ್ಯಸ್ಯ ವಧಾರ್ಥಾಯ ಜಿಗೀಷೂಣಾಂ ರಣಾಜಿರೇ ॥43॥
ಎಲೈ ಭಾರತನೇ, ರಣರಂಗದಲ್ಲಿ ಜಯವನ್ನು ಬಯಸಿದ ಅವರಿಬ್ಬರಿಗೆ ಪರಸ್ಪರ ವಧೆಯ ಸಲುವಾಗಿ ಘೋರವಾದ ಸಂಘರ್ಷವು ಉಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ದ್ವಾದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ದ್ವಾಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿಮೂರನೆಯ ಅಧ್ಯಾಯ
ಘೋರ ಯುದ್ಧದಲ್ಲಿ ಭೀಷ್ಮರ ಪ್ರತಾಪ.
ಸಂಜಯಃ
ಅಭಿಮನ್ಯುರ್ಮಹಾರಾಜ ತವ ಪುತ್ರಮಯೋಧಯತ್ ।
ಮಹತ್ಯಾ ಸೇನಯಾ ಯುಕ್ತೋ ಭೀಷ್ಮಹೇತೋಃ ಪರಾಕ್ರಮೀ ॥1॥
ಸಂಜಯ ಎಲೈ ಮಹಾರಾಜನೇ, ಪರಾಕ್ರಮಶಾಲಿಯಾದ ಅಭಿಮನ್ಯುವು ದೊಡ್ಡ ಸೇನೆಯಿಂದ ಕೂಡಿದವನಾಗಿ ಭೀಷ್ಮರ ನಿಮಿತ್ತದಿಂದಾಗಿ ನಿನ್ನ ಪುತ್ರನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ದುರ್ಯೋಧನೋ ರಣೇ ಕಾರ್ಷ್ಣಿಂ ನವಭಿರ್ನತಪರ್ವಭಿಃ |
ಆಜಘಾನ ರಣೇ ಕ್ರುದ್ಧಃ ಪುನಶ್ಚೈನಂ ತ್ರಿಭಿಃ ಶರೈಃ ||2||
ಎಲೈ ರಾಜನೇ, ದುರ್ಯೋಧನನು ಯುದ್ಧದಲ್ಲಿ ಅಭಿಮನ್ಯುವನ್ನು ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳಿಂದ ಹೊಡೆದು ಪುನಃ ಕ್ರುದ್ಧನಾಗಿ ಅವನನ್ನು ಮೂರು ಬಾಣಗಳಿಂದ ಹೊಡೆದನು.
ತಸ್ಯ ಶಕ್ತಿಂ ರಣೇ ಕಾರ್ಷ್ಣಿರ್ಮೃತ್ಯೋರ್ಘೋರಾಮಿವ ಸ್ವಸಾಮ್ |
ಪ್ರೇಷಯಾಮಾಸ ಸಂಕ್ರುದ್ಧೋ ದುರ್ಯೋಧನರಥಂ ಪ್ರತಿ ||3||
ಅಭಿಮನ್ಯುವು ಬಹಳ ಕೋಪಗೊಂಡು ಮೃತ್ಯುವಿನ ತಂಗಿಯಂತಿದ್ದ ಘೋರವಾದ ಶಕ್ತಿಯನ್ನು ಯುದ್ಧದಲ್ಲಿ ದುರ್ಯೋಧನನ ರಥದ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ಘೋರರೂಪಾಂ ವಿಶಾಂಪತೇ |
ದ್ವಿಧಾ ಚಿಚ್ಛೇದ ತೇ ಪುತ್ರಃ ಕ್ಷುರಪ್ರೇಣ ಮಹಾರಥಃ ||4||
ಎಲೈ ರಾಜನೇ, ಮಹಾರಥನಾದ ನಿನ್ನ ಪುತ್ರನು ತನ್ನ ಕಡೆಗೆ ಬರುತ್ತಿದ್ದ ಘೋರ ರೂಪವಾದ ಆ ಶಕ್ತಿಯನ್ನು ತಕ್ಷಣ ಕ್ಷುರಪ್ರದಿಂದ ಕತ್ತರಿಸಿದನು.
ತಾಂ ಶಕ್ತಿಂ ಪತಿತಾಂ ದೃಷ್ಟ್ವಾ ಕಾರ್ಷ್ಣಿಃ ಪರಮಕೋಪನಃ |
ದುರ್ಯೋಧನಂ ತ್ರಿಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ ||5||
ಆ ಶಕ್ತಿಯು ಕೆಳಗೆ ಬಿದ್ದುದನ್ನು ನೋಡಿ ಅಭಿಮನ್ಯುವು ಬಹಳ ಕೋಪಗೊಂಡು ದುರ್ಯೋಧನನನ್ನು ಮೂರು ಬಾಣಗಳಿಂದ ಅವನ ಬಾಹುಗಳಲ್ಲಿ ಮತ್ತು ವಕ್ಷಸ್ಸ್ಥಲದಲ್ಲಿ ಹೊಡೆದನು.
ಪುನಶ್ಚೈನಂ ಶರೈರ್ಘೋರೈರಾಜಘಾನ ಸ್ತನಾಂತರೇ |
ದಶಭಿರ್ಭರತಶ್ರೇಷ್ಠ ದುರ್ಯೋಧನಮಮರ್ಷಣಮ್ ||6||
ಎಲೈ ಭರತಶ್ರೇಷ್ಠನೇ, ಅವನು ಪುನಃ ಕ್ರೋಧಶೀಲನಾದ ದುರ್ಯೋಧನನನ್ನು ಘೋರವಾದ ಹತ್ತು ಬಾಣಗಳಿಂದ ಸ್ತನಗಳ ಮಧ್ಯದಲ್ಲಿ ಹೊಡೆದನು.
ತದ್ ಯುದ್ಧಮಭವದ್ ಘೋರಂ ಚಿತ್ರರೂಪಂ ಚ ಭಾರತ |
ಈಕ್ಷಿತೃಪ್ರೀತಿಜನನಂ ಸರ್ವಪಾರ್ಥಿವಪೂಜಿತಮ್ ||7||
ಎಲೈ ಭಾರತನೇ, ಅವರಿಬ್ಬರಿಗೂ ನಡೆದ ಘೋರವಾದ ಮತ್ತು ವಿಚಿತ್ರವಾದ ಯುದ್ಧವು ನೋಡುವವರಿಗೆ ಸಂತೋಷಜನಕವೂ ಮತ್ತು ಸರ್ವರಾಜರಿಂದ ಪೂಜಿತವೂ ಆಗಿದ್ದಿತು.
ಭೀಷ್ಮಸ್ಯ ನಿಧನಾರ್ಥಾಯ ಪಾರ್ಥಸ್ಯ ವಿಜಯಾಯ ಚ |
ಯುಯುಧಾತೇ ರಣೇ ವೀರೌ ಸೌಭದ್ರಕುರುಪುಂಗವೌ ||8||
ಭೀಷ್ಮರ ವಿಜಯವನ್ನೂ ಮತ್ತು ಅರ್ಜುನನ ವಿಜಯವನ್ನೂ ಉದ್ದೇಶಿಸಿ ವೀರರಾದ ಅಭಿಮನ್ಯು ಮತ್ತು ಕುರುಶ್ರೇಷ್ಠನಾದ ದುರ್ಯೋಧನರು ಯುದ್ಧವನ್ನು ಮಾಡಿದರು.
ಸಾತ್ಯಕಿಂ ರಭಸಂ ಯುದ್ಧೇ ದ್ರೌಣಿರ್ಬ್ರಾಹ್ಮಣಪುಂಗವಃ |
ಆಜಘಾನೋರಸಿ ಕ್ರುದ್ಧೋ ನಾರಾಚೇನ ಪರಂತಪಃ ||9||
ಬ್ರಾಹ್ಮಣ ಶ್ರೇಷ್ಠರಾದ, ಪರಂತಪರೂ, ಕೋಪಗೊಂಡವರೂ ಆದ ಅಶ್ವತ್ಥಾಮರು ಯುದ್ಧದಲ್ಲಿ ವೇಗಶಾಲಿಯಾಗಿರುವ ಸಾತ್ಯಕಿಯನ್ನು ನಾರಾಚದಿಂದ ವಕ್ಷಸ್ಸ್ಥಲದಲ್ಲಿ ಹೊಡೆದರು.
ಶೈನೇಯೋಽಪಿ ಗುರೋಃ ಪುತ್ರಂ ಸರ್ವಮರ್ಮಸು ಭಾರತ |
ಅತಾಡಯದಮೇಯಾತ್ಮಾ ನವಭಿಃ ಕಂಕಪತ್ರಿಭಿಃ ||10||
ಎಲೈ ಭಾರತನೇ, ಅಚಿಂತ್ಯ ಪ್ರಭಾವವುಳ್ಳ ಸಾತ್ಯಕಿಯೂ ಸಹ ಕಂಕಪತ್ರವನ್ನು ಹೊಂದಿದ್ದ ಒಂಬತ್ತು ಬಾಣಗಳಿಂದ ಗುರುಪುತ್ರರಾದ ಅಶ್ವತ್ಥಾಮರನ್ನು ಎಲ್ಲ ಮರ್ಮಸ್ಥಾನಗಳಲ್ಲಿ ಹೊಡೆದನು.
ಅಶ್ವತ್ಥಾಮಾ ತು ಸಮರೇ ಸಾತ್ಯಕಿಂ ನವಭಿಃ ಶರೈಃ |
ತ್ರಿಂಶತಾ ಚ ಪುನಸ್ತೂರ್ಣಂ ಬಾಹ್ವೋರುರಸಿ ಚಾರ್ಪಯತ್ ||11||
ಅಶ್ವತ್ಥಾಮರಾದರೋ ಯುದ್ಧದಲ್ಲಿ ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದ ಹೊಡೆದು ಪುನಃ ಶೀಘ್ರವಾಗಿ ಮೂವತ್ತು ಬಾಣಗಳಿಂದ ಅವನ ಬಾಹುಗಳಲ್ಲಿ ಮತ್ತು ವಕ್ಷಸ್ಸ್ಥಲದಲ್ಲಿ ಹೊಡೆದರು.
ಸೋಽತಿವಿದ್ಧೋ ಮಹೇಷ್ವಾಸೋ ದ್ರೋಣಪುತ್ರೇಣ ಸಾತ್ವತಃ |
ದ್ರೋಣಪುತ್ರಂ ತ್ರಿಭಿರ್ಬಾಣೈರಾಜಘಾನ ಮಹಾಯಶಾಃ ||12||
ದ್ರೋಣಪುತ್ರರಿಂದ ಗಾಢವಾಗಿ ಗಾಯಗೊಂಡ ಮಹಾಕೀರ್ತಿವಂತನೂ, ಮಹಾಧನುರ್ಧಾರಿಯೂ ಆದ ಸಾತ್ವತನಾದ ಸಾತ್ಯಕಿಯು ಅವರನ್ನು ಮೂರು ಬಾಣಗಳಿಂದ ಹೊಡೆದನು.
ಪೌರವೋ ಧೃಷ್ಟಕೇತುಂ ಚ ಶರೈರಾಸಾದ್ಯ ಸಂಯುಗೇ |
ಬಹುಧಾ ದಾರಯಾಂಚಕ್ರೇ ಮಹೇಷ್ವಾಸಂ ಮಹಾರಥಮ್ ||13||
ರಣರಂಗದಲ್ಲಿ ಪೌರವನು ಧೃಷ್ಟಕೇತುವನ್ನು ಬಾಣಗಳಿಂದ ತಲುಪಿ, ಮಹಾಧನುರ್ಧಾರಿಯೂ, ಮಹಾರಥನೂ ಆದ ಅವನನ್ನು ಬಹುರೀತಿಯಲ್ಲಿ ಗಾಯಗೊಳಿಸಿದನು.
ತಥೈವ ಪೌರವಂ ಯುದ್ಧೇ ಧೃಷ್ಟಕೇತುರ್ಮಹಾರಥಃ |
ತ್ರಿಂಶತಾ ನಿಶಿತೈರ್ಬಾಣೈರ್ವಿವ್ಯಾಧ ಸುಮಹಾಬಲಃ ||14||

ಹಾಗೆಯೇ ಮಹಾಬಲಿಷ್ಠನೂ ಮತ್ತು ಮಹಾರಥನೂ ಆದ ಧೃಷ್ಟಕೇತುವು ಪೌರವನನ್ನು ತೀಕ್ಷ್ಣವಾದ ಮೂವತ್ತು ಬಾಣಗಳಿಂದ ಹೊಡೆದನು.
ಪೌರವಸ್ತು ಧನುಶ್ಛಿತ್ತ್ವಾ ಧೃಷ್ಟಕೇತೋರ್ಮಹಾರಥಃ |
ನನಾದ ಬಲವನ್ನಾದಂ ವಿವ್ಯಾಧ ದಶಭಿಃ ಶರೈಃ ||15||
ಮಹಾರಥನಾದ ಪೌರವನಾದರೋ ಧೃಷ್ಟಕೇತುವಿನ ಧನುಸ್ಸನ್ನು ಕತ್ತರಿಸಿ, ಬಲವಾದ ನಾದವನ್ನು ಮಾಡಿ ಪುನಃ ಹತ್ತು ಬಾಣಗಳಿಂದ ಹೊಡೆದನು.
ಸೋಽನ್ಯತ್ ಕಾರ್ಮುಕಮಾದಾಯ ಪೌರವಂ ನಿಶಿತೈಃ ಶರೈಃ |
ಆಜಘಾನ ಮಹಾರಾಜ ತ್ರಿಸಪ್ತತ್ಯಾ ಶಿಲೀಮುಖೈಃ ||16||
ಎಲೈ ಮಹಾರಾಜನೇ, ಧೃಷ್ಟಕೇತುವಾದರೋ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತೀಕ್ಷ್ಣವಾದ ಎಪ್ಪತ್ತಮೂರು ಬಾಣಗಳಿಂದ ಪೌರವನನ್ನು ಹೊಡೆದನು.
ತೌ ತು ತತ್ರ ಮಹೇಷ್ವಾಸೌ ಮಹಾಮಾತ್ರೌ ಮಹಾರಥೌ |
ಮಹತಾ ಶರವರ್ಷೇಣ ಪರಸ್ಪರಮವರ್ಷತಾಮ್ ||17||
ಮಹಾಧನುರ್ಧಾರಿಗಳೂ, ಪ್ರಧಾನರೂ ಮತ್ತು ಮಹಾರಥರೂ ಆದ ಅವರಿಬ್ಬರೂ ಪರಸ್ಪರವಾಗಿ ಬಾಣಗಳ ದೊಡ್ಡ ಮಳೆಯನ್ನು ಕರೆದರು.
ಅನ್ಯೋನ್ಯಸ್ಯ ಧನುಶ್ಛಿತ್ತ್ವಾ ಹಯಾನ್ ಹತ್ವಾ ಚ ಭಾರತ |
ವಿರಥಾವಸಿಯುದ್ಧಾಯ ಸಂಗತೌ ತೌ ಮಹಾರಥೌ ||18||
ಎಲೈ ಭಾರತನೇ, ಮಹಾರಥರಾದ ಅವರು ಪರಸ್ಪರವಾಗಿ ಧನುಸ್ಸುಗಳನ್ನು ಕತ್ತರಿಸಿ, ಅಶ್ವಗಳನ್ನು ಕೊಂದು, ರಥಹೀನರಾಗಿ, ಖಡ್ಗ ಯುದ್ಧಕ್ಕಾಗಿ ಸಂಗತರಾದರು.
ಆರ್ಷಭೇ ಚರ್ಮಣೀ ಚಿತ್ರೇ ಶತಚಂದ್ರಪರಿಷ್ಕೃತೇ |
ತಾರಕಾಶತಚಿತ್ರೌ ಚ ನಿಸಿತ್ರಿಂಶೌ ಸುಮಹಾಪ್ರಭೌ ||19||
ಪ್ರಗೃಹ್ಯ ವಿಮಲೌ ರಾಜನ್ ತಾವನ್ಯೋನ್ಯಮಭಿದ್ರುತೌ |
ವಾಸಿತಾಸಂಗಮೇ ಯತ್ತೌ ಸಿಂಹಾವಿವ ಮಹಾವನೇ ||20||
ವೃಷಭ ಚರ್ಮದಿಂದ ಮಾಡಿದ ಶತಚಂದ್ರಗಳಿಂದ ಭೂಷಿತವಾದ ವಿಚಿತ್ರವಾದ ಗುರಾಣಿಗಳನ್ನೂ, ನೂರು ನಕ್ಷತ್ರಗಳ ಚಿಹ್ನೆಯಿಂದ ಅಲಂಕೃತವಾದ ವಿಮಲವಾದ ಖಡ್ಗಗಳನ್ನೂ ಹಿಡಿದು ಎಲೈ ರಾಜನೇ, ಅವರು ಕಾಡಿನಲ್ಲಿ ಹೆಣ್ಣಾನೆಯ ಸಂಗಮದ ಸಲುವಾಗಿ ಪ್ರಯತ್ನಶೀಲವಾದ ಸಿಂಹಗಳಂತೆ ಪರಸ್ಪರವಾಗಿ ಧಾವಿಸಿದರು.
ಮಂಡಲಾನಿ ವಿಚಿತ್ರಾಣಿ ಗತಪ್ರತ್ಯಾಗತಾನಿ ಚ |
ಚೇರತುರ್ದರ್ಶಯಂತೌ ಚ ಪ್ರಾರ್ಥಯಂತೌ ಪರಸ್ಪರಮ್ ||21||
ಪರಸ್ಪರವಾಗಿ ಆಹ್ವಾನವನ್ನು ಮಾಡುತ್ತಾ, ವಿಚಿತ್ರವಾದ ಮಂಡಲಗಳನ್ನೂ, ಮುಂದೆ ಹೋಗಿ ಹಿಂದೆ ಬರುವ ಕ್ರಮಗಳನ್ನೂ ತೋರಿಸುತ್ತಾ ಅವರು ಸಂಚರಿಸಿದರು.
ಪೌರವೋ ಧೃಷ್ಟಕೇತುಂ ತು ಶಂಖದೇಶೇ ಮಹಾಸಿನಾ |
ತಾಡಯಾಮಾಸ ಸಂಕ್ರುದ್ಧಸ್ತಿಷ್ಠತಿಷ್ಠೇತಿ ಚಾಬ್ರವೀತ್ ||22||
ಪೌರವನು ತನ್ನ ದೊಡ್ಡ ಕತ್ತಿಯಿಂದ ಶಂಖದೇಶದಲ್ಲಿ ಧೃಷ್ಟಕೇತುವನ್ನು ಹೊಡೆದು ಕೋಪಗೊಂಡು ನಿಲ್ಲು-ನಿಲ್ಲು ಎಂದು ಹೇಳಿದನು.
ಚೇದಿರಾಜೋಽಪಿ ಸಮರೇ ಪೌರವಂ ಪುರುಷರ್ಷಭಮ್ |
ಆಜಘಾನ ಶಿತಾಗ್ರೇಣ ಜತ್ರುದೇಶೇ ಮಹಾಸಿನಾ ||23||
ಚೇದಿರಾಜನಾದ ಧೃಷ್ಟಕೇತುವೂ ಸಹ ಯುದ್ಧದಲ್ಲಿ ಪುರುಷಶ್ರೇಷ್ಠನಾದ ಪೌರವನನ್ನು ತೀಕ್ಷ್ಣವಾದ ಅಲುಬುಳ್ಳ ತನ್ನ ದೊಡ್ಡ ಖಡ್ಗದಿಂದ ಭುಜಸಂಧಿ ಪ್ರದೇಶದಲ್ಲಿ ಹೊಡೆದನು.
ತಾವನ್ಯೋನ್ಯಂ ಮಹಾರಾಜ ಸಮಾಸಾದ್ಯ ಮಹಾಹವೇ |
ಅನ್ಯೋನ್ಯವೇಗಾಭಿಹತೌ ನಿಪೇತತುರರಿಂದಮೌ ||24||
ಎಲೈ ಮಹಾರಾಜನೇ, ಅರಿಂದಮರಾದ ಅವರಿಬ್ಬರೂ ಆ ದೊಡ್ಡ ಯುದ್ಧದಲ್ಲಿ ಪರಸ್ಪವಾಗಿ ಸಂಧಿಸಿ, ಪರಸ್ಪರ ಖಡ್ಗವೇಗದಿಂದ ತಾಡಿತರಾಗಿ ಭೂಮಿಯ ಮೇಲೆ ಬಿದ್ದರು.
ತತಃ ಸ್ವರಥಮಾರೋಪ್ಯ ಪೌರವಂ ತನಯಸ್ತವ |
ಜಯತ್ಸೇನೋ ರಥೇ ರಾಜನ್ನಪೋವಾಹ ರಣಾಜಿರಾತ್ ||25||
ಎಲೈ ರಾಜನೇ, ಆಗ ನಿನ್ನ ಪುತ್ರನಾದ ಜಯತ್ಸೇನನು ಪೌರವನನ್ನು ತನ್ನ ರಥಕ್ಕೆ ಏರಿಸಿಕೊಂಡು ರಣಭೂಮಿಯಿಂದ ದೂರ ಕರೆದುಕೊಂಡು ಹೋದನು.
ಧೃಷ್ಟಕೇತುಂ ಚ ಸಮರೇ ಮಾದ್ರೀಪುತ್ರಃ ಪರಂತಪಃ |
ಅಪೋವಾಹ ರಣೇ ರಾಜನ್ ಸಹದೇವಃ ಪ್ರತಾಪವಾನ್ ||26||
ಎಲೈ ರಾಜನೇ, ಮಾದ್ರೀಪುತ್ರನೂ, ಪರಂತಪನೂ, ಪ್ರತಾಪಶಾಲಿಯೂ ಆದ ಸಹದೇವನು ಧೃಷ್ಟಕೇತುವನ್ನು ತನ್ನ ರಥದಲ್ಲಿ ಏರಿಸಿಕೊಂಡು ರಣರಂಗದಿಂದ ಹೊರಗೆ ದೂರ ಕರೆದುಕೊಂಡು ಹೋದನು.
ಚಿತ್ರಸೇನಃ ಸುಶರ್ಮಾಣಂ ವಿದ್ಧ್ವಾ ನವಭಿರಾಶುಗೈಃ |

ಪುನರ್ವಿವ್ಯಾಧ ತಂ ಷಷ್ಟ್ಯಾ ಪುನಶ್ಚ ನವಭಿಃ ಶರೈಃ ॥27॥
ಚಿತ್ರಸೇನನು ಸುಶರ್ಮನನ್ನು ಶೀಘ್ರಗಾಮಿಗಳಾದ ಒಂಬತ್ತು ಬಾಣಗಳಿಂದ ಹೊಡೆದು, ಪುನಃ ಅರವತ್ತು ಬಾಣಗಳಿಂದ ಹೊಡೆದು, ಪುನಃ ಒಂಬತ್ತು ಬಾಣಗಳಿಂದ ಹೊಡೆದನು (ಈ ಸುಶರ್ಮನು ತ್ರಿಗರ್ತರಾಜನಲ್ಲ).
ಸುಶರ್ಮಾ ತು ರಣೇ ಕ್ರುದ್ಧಸ್ತವ ಪುತ್ರಂ ವಿಶಾಂಪತೇ |
ದಶಭಿರ್ದಶಭಿಶ್ಚೈವ ವಿವ್ಯಾಧ ನಿಶಿತೈಃ ಶರೈಃ ॥28॥
ಎಲೈ ರಾಜನೇ, ಸುಶರ್ಮನಾದರೋ ಯುದ್ಧದಲ್ಲಿ ಕ್ರುದ್ಧನಾಗಿ ನಿನ್ನ ಪುತ್ರನ ಮೇಲೆ ತೀಕ್ಷ್ಣವಾದ ಹತ್ತು-ಹತ್ತು ಬಾಣಗಳನ್ನು ಪ್ರಯೋಗಿಸಿದನು.
ಚಿತ್ರಸೇನಶ್ಚ ತಂ ರಾಜನ್ ತ್ರಿಂಶತಾ ನತಪರ್ವಣಾಮ್ |
ಆಜಘಾನ ರಣೇ ಕ್ರುದ್ಧಃ ಸ ಚ ತಂ ಪ್ರತ್ಯವಿಧ್ಯತ |
ಭೀಷ್ಮಸ್ಯ ಸಮರೇ ರಾಜನ್ ಯಶೋ ಮಾನಂ ಚ ವರ್ಧಯನ್ ॥29॥
ಎಲೈ ರಾಜನೇ, ಚಿತ್ರಸೇನನಾದರೋ ಬಾಗಿದ ತುದಿಯುಳ್ಳ ಮೂವತ್ತು ಬಾಣಗಳಿಂದ ಯುದ್ಧದಲ್ಲಿ ಕ್ರುದ್ಧನಾಗಿ ಸುಶರ್ಮನನ್ನು ಹೊಡೆದನು. ಸುಶರ್ಮನೂ ಪ್ರತಿಯಾಗಿ ಯುದ್ಧದಲ್ಲಿ ಭೀಷ್ಮರ ಕೀರ್ತಿ ಮತ್ತು ಮರ್ಯಾದೆಯನ್ನು ಹೆಚ್ಚಿಸುತ್ತಾ ಅವನಿಗೆ ಪ್ರತಿಯಾಗಿ ಹೊಡೆದನು.
ಸೌಭದ್ರೋ ರಾಜಪುತ್ರಂ ತು ಬೃಹದ್ಬಲಮಯೋಧಯತ್ |
ಆರ್ಜುನಿಂ ಕೋಸಲೇಂದ್ರಸ್ತು ವಿದ್ಧ್ವಾ ಪಂಚಭಿರಾಯಸೈಃ |
ಪುನರ್ವಿವ್ಯಾಧ ವಿಂಶತ್ಯಾ ಶರೈಃ ಸನ್ನತಪರ್ವಭಿಃ ॥30॥
ಅಭಿಮನ್ಯುವು ರಾಜಪುತ್ರನಾದ ಬೃಹದ್ಬಲನ ಜೊತೆಯಲ್ಲಿ ಯುದ್ಧವನ್ನು ಮಾಡಿದನು, ಕೋಸಲಾಧಿಪತಿಯಾದ ಬೃಹದ್ಬಲನು ಅಭಿಮನ್ಯುವನ್ನು ಐದು ಕಬ್ಬಿಣದ ಬಾಣಗಳಿಂದ ಹೊಡೆದು ಪುನಃ ಬಾಗಿದ ತುದಿಯುಳ್ಳ ಇಪ್ಪತ್ತು ಬಾಣಗಳಿಂದ ಅವನನ್ನು ಹೊಡೆದನು.
ಬೃಹದ್ಬಲಂ ಚ ಸೌಭದ್ರೋ ವಿದ್ಧ್ವಾ ನವಭಿರಾಯಸೈಃ |
ನಾಕಂಪಯತ ಸಂಗ್ರಾಮೇ ವಿವ್ಯಾಧ ಚ ಪುನಃ ಪುನಃ ॥31॥
ಅಭಿಮನ್ಯುವು ಬೃಹದ್ಬಲನನ್ನು ಕಬ್ಬಿಣದ ಒಂಬತ್ತು ಬಾಣಗಳಿಂದ ಹೊಡೆದರೂ ಯುದ್ಧದಲ್ಲಿ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ. ಆಗ ಅವನು ಪುನಃ ಪುನಃ ಬಾಣಗಳಿಂದ ಹೊಡೆದನು.
ಕೌಸಲ್ಯಸ್ಯ ಪುನಶ್ಚಾಪಿ ಧನುಶ್ಚಿಚ್ಛೇದ ಫಾಲ್ಗುಣಿಃ |
ಆಜಘಾನ ಶರೈಶ್ಚೈವ ತ್ರಿಂಶತಾ ಕಂಕಪತ್ರಿಭಿಃ ॥32॥
ಅರ್ಜುನನ ಮಗನಾದ ಅಭಿಮನ್ಯುವು ಪುನಃ ಕೋಸಲಾಧಿಪತಿಯಾದ ಬೃಹದ್ಬಲನ ಧನುಸ್ಸನ್ನು ಕತ್ತರಿಸಿದನು ಮತ್ತು ಕಂಕಪತ್ರವನ್ನು ಧರಿಸಿದ ಮೂವತ್ತು ಬಾಣಗಳಿಂದ ಅವನನ್ನು ಹೊಡೆದನು.
ಸೋಽನ್ಯತ್ ಕಾರ್ಮುಕಮಾದಾಯ ರಾಜಪುತ್ರೋ ಬೃಹದ್ಬಲಃ |
ಫಾಲ್ಗುನಿಂ ಸಮರೇ ಕ್ರುದ್ಧೋ ವಿವ್ಯಾಧ ಬಹುಭಿಃ ಶರೈಃ ॥33॥
ರಾಜಪುತ್ರನಾದ ಬೃಹದ್ಬಲನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಯುದ್ಧದಲ್ಲಿ ಕ್ರುದ್ಧನಾಗಿ ಅಭಿಮನ್ಯುವನ್ನು ಅನೇಕ ಬಾಣಗಳಿಂದ ಹೊಡೆದನು.
ತಯೋರ್ಯುದ್ಧಂ ಸಮಭವದ್ ಭೀಷ್ಮಹೇತೋಃ ಪರಂತಪ |
ಸಂರಬ್ಧಯೋರ್ಮಹಾರಾಜ ಸಮರೇ ಚಿತ್ರಯೋಧಿನೋಃ |
ಯಥಾ ದೇವಾಸುರೇ ಯುದ್ಧೇ ಮಯವಾಸವಯೋರಭೂತ್ ॥34॥
ಎಲೈ ಪರಂತಪನೇ, ಮಹಾರಾಜನೇ, ಭೀಷ್ಮರ ಕಾರಣದಿಂದಾಗಿ ಕೋಪಗೊಂಡು ವಿಚಿತ್ರವಾಗಿ ಯುದ್ಧವನ್ನು ಮಾಡುವ ಅವರಿಬ್ಬರಿಗೆ ದೇವಾಸುರ ಯುದ್ಧದಲ್ಲಿ ಮಯ ಮತ್ತು ಇಂದ್ರರಿಗೆ ನಡೆದಂತೆ ಘೋರವಾದ ಯುದ್ಧವು ನಡೆಯಿತು.
ಭೀಮಸೇನೋ ಗಜಾನೀಕಂ ಯೋಧಯನ್ ಬಹ್ವಶೋಭತ |
ಯಥಾ ಶಕ್ರೋ ವಜ್ರಪಾಣಿರ್ದಾರಯನ್ ಪರ್ವತೋತ್ತಮಾನ್ ॥35॥
ಭೀಮಸೇನನು ಗಜಸಮೂಹದ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ, ವಜ್ರಪಾಣಿಯಾದ ಇಂದ್ರನು ಶ್ರೇಷ್ಠ ಪರ್ವತಗಳನ್ನು ಸೀಳಿದಂತೆ ಬಹಳವಾಗಿ ಶೋಭಿಸಿದನು.
ತೇ ವಧ್ಯಮಾನಾ ಭೀಮೇನ ಮಾತಂಗಾ ಗಿರಿಸನ್ನಿಭಾಃ |
ನಿಪೇತುರುರ್ವ್ಯಾಂ ಸಹಿತಾ ನಾದಯಂತೋ ವಸುಂಧರಾಮ್ ॥36॥
ಭೀಮನಿಂದ ಕೊಲ್ಲಲ್ಪಡುವ ಪರ್ವತ ಸದೃಶವಾದ ಗಜಗಳು ಭೂಮಿಯಲ್ಲಿ ನಾದವನ್ನು ಮಾಡುತ್ತಾ ಜೊತೆಜೊತೆಯಾಗಿ ಭೂಮಿಯ ಮೇಲೆ ಬಿದ್ದವು.
ಗಿರಿಮಾತ್ರಾ ಹಿ ತೇ ನಾಗಾ ಭಿನ್ನಾಂಜನಚಯೋಪಮಾಃ |
ವಿರೇಜುರ್ವಸುಧಾಂ ಪ್ರಾಪ್ಯ ವಿಕೀರ್ಣಾ ಇವ ಪರ್ವತಾಃ ॥37॥
ಕಾಡಿಗೆಯ ರಾಶಿಯಂತಿದ್ದ ಗಿರಿಪ್ರಮಾಣದ ಭಿನ್ನವಾದ ಆ ಗಜಗಳು ಬಿರಿದ ಪರ್ವತಗಳಂತೆ ಭೂಮಿಯ ಮೇಲೆ ಬಿದ್ದು ಕಂಗೊಳಿಸಿದವು.
ಯುಧಿಷ್ಠಿರೋ ಮಹೇಷ್ವಾಸೋ ಮದ್ರರಾಜಾನಮಾಹವೇ |
ಮಹತ್ಯಾ ಸೇನಯಾ ಗುಪ್ತಂ ಪೀಡಯಾಮಾಸ ಸಂಗತಃ ॥38॥

ಮಹಾಧನುರ್ಧಾರಿಯಾದ ಯುಧಿಷ್ಠಿರನು ಯುದ್ಧದಲ್ಲಿ ದೊಡ್ಡ ಸೇನೆಯಿಂದ ರಕ್ಷಿತವಾದ ಮದ್ರರಾಜನಾದ ಶಲ್ಯನ ಜೊತೆಯಲ್ಲಿ ಸಂಗತನಾಗಿ ಯುದ್ಧದಲ್ಲಿ ಅವನನ್ನು ಪೀಡಿಸಿದನು.
ಮದ್ರೇಶ್ವರಶ್ಚ ಸಮರೇ ಧರ್ಮಪುತ್ರಂ ಮಹಾರಥಮ್ |
ಪೀಡಯಾಮಾಸ ಸಂರಬ್ಧೋ ಭೀಷ್ಮಹೇತೋಃ ಪರಾಕ್ರಮೀ ॥39॥
ಪರಾಕ್ರಮಿಯಾದ ಮದ್ರರಾಜನೂ ಸಹ ಮಹಾರಥನಾದ ಯುಧಿಷ್ಠಿರನನ್ನು ಭೀಷ್ಮರ ಸಲುವಾಗಿ ಕೋಪಗೊಂಡು ಪೀಡಿಸಿದನು.
ವಿರಾಟಂ ಸೈಂಧವೋ ರಾಜಾ ವಿದ್ಧ್ವಾ ಸನ್ನತಪರ್ವಭಿಃ |
ನವಭಿಃ ಸಾಯಕೈಸ್ತೀಕ್ಷ್ಣೈಸ್ತ್ರಿಂಶತಾ ಪುನರರ್ದಯತ್ ॥40॥
ರಾಜನಾದ ಸೈಂಧವನು ವಿರಾಟನನ್ನು ಬಾಗಿದ ತುದಿಯುಳ್ಳ ಒಂಬತ್ತು ತೀಕ್ಷ್ಣವಾದ ಬಾಣಗಳಿಂದ ಹೊಡೆದು, ಪುನಃ ಮೂವತ್ತು ಬಾಣಗಳಿಂದ ಹೊಡೆದನು.
ವಿರಾಟಶ್ಚ ಮಹಾರಾಜ ಸೈಂಧವಂ ವಾಹಿನೀಮುಖೇ |
ತ್ರಿಂಶತಾ ನಿಶಿತೈರ್ಬಾಣೈರಾಜಘಾನ ಸ್ತನಾಂತರೇ ॥41॥
ಎಲೈ ಮಹಾರಾಜನೇ, ವಿರಾಟನೂ ಸಹ ಸೇನಾಮುಖದಲ್ಲಿ ಸೈಂಧವನನ್ನು ಮೂವತ್ತು ತೀಕ್ಷ್ಣವಾದ ಬಾಣಗಳಿಂದ ಸ್ತನಗಳ ಮಧ್ಯದಲ್ಲಿ ಹೊಡೆದನು.
ಚಿತ್ರಕಾರ್ಮುಕನಿಸ್ತ್ರಿಂಶೌ ಚಿತ್ರವರ್ಮಾಯುಧಧ್ವಜೌ |
ರೇಜತುಶ್ಚಿತ್ರರೂಪೌ ತೌ ಸಂಗ್ರಾಮೇ ಮತ್ಸ್ಯಸೈಂಧವೌ ॥42॥
ಮತ್ಸರಾಜನಾದ ವಿರಾಟನೂ ಮತ್ತು ಸಿಂಧುರಾಜನಾದ ಜಯದ್ರಥನೂ ವಿಚಿತ್ರವಾದ ಧನುಸ್ಸು ಮತ್ತು ಖಡ್ಗಗಳನ್ನು ಧರಿಸಿ, ವಿಚಿತ್ರವಾದ ಕವಚ, ಆಯುಧ ಮತ್ತು ಧ್ವಜಗಳನ್ನು ಹೊಂದಿ, ವಿಚಿತ್ರರೂಪವನ್ನು ಧರಿಸಿ ಸಂಗ್ರಾಮದಲ್ಲಿ ಶೋಭಿಸಿದರು.
ದ್ರೋಣಃ ಪಾಂಚಾಲಪುತ್ರೇಣ ಸಮಾಗಮ್ಯ ಮಹಾರಣೇ |
ಮಹಾಸಮುದಯಂ ಚಕ್ರೇ ಶರೈಃ ಸನ್ನತಪರ್ವಭಿಃ ॥43॥
ದ್ರೋಣರು ಮಹಾಯುದ್ಧದಲ್ಲಿ ಪಾಂಚಾಲ ಪುತ್ರನಾದ ಧೃಷ್ಟದ್ಯುಮ್ನನಿಂದ ಸಂಗತರಾಗಿ ಬಾಗಿದ ತುದಿಯುಳ್ಳ ಬಾಣಗಳಿಂದ ಘೋರವಾದ ಯುದ್ಧವನ್ನು ಮಾಡಿದರು.
ತತೋ ದ್ರೋಣೋ ಮಹಾರಾಜ ಪಾರ್ಷತಸ್ಯ ಮಹದ್ಧನುಃ |
ಛಿತ್ತ್ವಾ ಪಂಚಾಶತೇಷೂಣಾಂ ಪಾರ್ಷತಂ ಸಮವಿಧ್ಯತ ॥44॥
ಎಲೈ ಮಹಾರಾಜನೇ, ಅನಂತರ ದ್ರೋಣರು ಧೃಷ್ಟದ್ಯುಮ್ನನ ದೊಡ್ಡ ಧನುಸ್ಸನ್ನು ಕತ್ತರಿಸಿ ಐವತ್ತು ಬಾಣಗಳಿಂದ ಅವನನ್ನು ಹೊಡೆದರು.
ಸೋಽನ್ಯತ್ಕಾರ್ಮುಕಮಾದಾಯ ಪಾರ್ಷತಃ ಪರವೀರಹಾ |
ದ್ರೋಣಸ್ಯ ಮಿಷತೋ ಯುದ್ಧೇ ಪ್ರೇಷಯಾಮಾಸ ಸಾಯಕಾನ್ ॥45॥
ಪರವೀರಘಾತಕನಾದ ಧೃಷ್ಟದ್ಯುಮ್ನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ದ್ರೋಣರು ನೋಡುತ್ತಿರುವಂತೆಯೇ ಯುದ್ಧದಲ್ಲಿ ಅವರ ಮೇಲೆ ಬಾಣಗಳನ್ನು ಪ್ರಯೋಗಿಸಿದನು.
ತಾನ್ ಶರಾನ್ ಶರಸಂಘೈಸ್ತು ಸನ್ನಿವಾರ್ಯ ಮಹಾರಥಃ |
ದ್ರೋಣೋ ದ್ರುಪದಪುತ್ರಾಯ ಪ್ರಾಹಿಣೋತ್ ಪಂಚ ಸಾಯಕಾನ್ ॥
ಮಹಾರಥರಾದ ದ್ರೋಣರು ತಮ್ಮ ಬಾಣ ಸಮೂಹಗಳಿಂದ ಆ ಬಾಣಗಳನ್ನು ನಿವಾರಿಸಿ ಧೃಷ್ಟದ್ಯುಮ್ನನ ಮೇಲೆ ಐದು ಬಾಣಗಳನ್ನು ಕಳುಹಿಸಿದರು.
ತಸ್ಯ ಕ್ರುದ್ಧೋ ಮಹಾರಾಜ ಪಾರ್ಷತಃ ಪರವೀರಹಾ |
ದ್ರೋಣಾಯ ಚಿಕ್ಷೇಪ ಗದಾಂ ಯಮದಂಡೋಪಮಾಂ ರಣೇ ॥47॥
ಎಲೈ ಮಹಾರಾಜನೇ, ದ್ರೋಣರ ಮೇಲೆ ಕೋಪಗೊಂಡ ಪರವೀರಘಾತಕನಾದ ಧೃಷ್ಟದ್ಯುಮ್ನನು ಯಮದಂಡದಂತಿದ್ದ ತನ್ನ ಗದೆಯನ್ನು ಯುದ್ಧದಲ್ಲಿ ಅವರ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ಹೇಮಪಟ್ಟವಿಭೂಷಿತಾಮ್ |
ಶರೈಃ ಪಂಚಾಶತಾ ದ್ರೋಣೋ ವಾರಯಾಮಾಸ ಸಂಯುಗೇ ॥48॥
ಸುವರ್ಣಪಟ್ಟಿಗಳಿಂದ ಭೂಷಿತವಾದ ತಮ್ಮ ಕಡೆಗೆ ವೇಗವಾಗಿ ಬರುತ್ತಿದ್ದ ಆ ಗದೆಯನ್ನು ದ್ರೋಣರು ಐವತ್ತು ಬಾಣಗಳನ್ನು ಪ್ರಯೋಗಿಸಿ ನಿವಾರಿಸಿದರು.
ಸಾ ಛಿನ್ನಾ ಬಹುಧಾ ರಾಜನ್ ದ್ರೋಣಚಾಪಚ್ಯುತೈಃ ಶರೈಃ |
ಚೂರ್ಣೀಕೃತಾ ವಿಶೀರ್ಯಂತೀ ಪಪಾತ ವಸುಧಾತಳೇ ॥49॥
ಎಲೈ ರಾಜನೇ, ದ್ರೋಣರ ಬಿಲ್ಲಿನಿಂದ ಹೊರಹೊಮ್ಮಿದ ಬಾಣಗಳಿಂದ ಬಹು ರೀತಿಯಾಗಿ ಕತ್ತರಿಸಲ್ಪಟ್ಟ ಆ ಗದೆಯು ಬಿರಿದು ಪುಡಿಯಾಗಿ ಭೂಮಿಯ ಮೇಲೆ ಬಿದ್ದಿತು.
ಗದಾಂ ವಿನಿಹತಾಂ ದೃಷ್ಟ್ವಾ ಪಾರ್ಷತಃ ಶತ್ರುಸೂದನಃ |
ದ್ರೋಣಾಯ ಶಕ್ತಿಂ ಚಿಕ್ಷೇಪ ಸರ್ವಪಾರಶವೀಂ ಶುಭಾಮ್ ॥50॥
ಗದೆಯು ವಿನಾಶ ಹೊಂದಿದುದನ್ನು ನೋಡಿ ಶತ್ರುಸೂದನನಾದ ಧೃಷ್ಟದ್ಯುಮ್ನನು ಕಬ್ಬಿಣದಿಂದ ಮಾಡಿದ ಶುಭವಾದ ಶಕ್ತ್ಯಾಯುಧವನ್ನು ದ್ರೋಣರ ಮೇಲೆ ಎಸೆದನು.
ತಾಂ ದ್ರೋಣೋ ನವಭಿರ್ಬಾಣೈಶ್ಚಿಚ್ಛೇದ ಯುಧಿ ಭಾರತ |

ಪಾರ್ಷತಂ ಚ ಮಹೇಷ್ವಾಸಂ ಪೀಡಯಾಮಾಸ ಸಂಯುಗೇ ॥51॥
ಎಲೈ ಭಾರತನೇ, ದ್ರೋಣರು ಆ ಶಕ್ತಿಯನ್ನು ಒಂಬತ್ತು ಬಾಣಗಳಿಂದ ಕತ್ತರಿಸಿದರು ಮತ್ತು ಯುದ್ಧದಲ್ಲಿ ಮಹಾಧನುರ್ಧಾರಿಯಾದ ಧೃಷ್ಟದ್ಯುಮ್ನನನ್ನು ಪೀಡಿಸಿದರು.
ಏವಮೇತನ್ಮಹದ್ ಯುದ್ಧಂ ದ್ರೋಣಪಾರ್ಷತಯೋರಭೂತ್ ।
ಭೀಷ್ಮಂ ಪ್ರತಿ ಮಹಾರಾಜ ಘೋರರೂಪಂ ಭಯಾನಕಮ್ ॥52॥
ಹೀಗೆ ಭೀಷ್ಮರನ್ನು ಉದ್ದೇಶಿಸಿ ದ್ರೋಣ ಮತ್ತು ಧೃಷ್ಟದ್ಯುಮ್ನರಿಗೆ ಎಲೈ ಮಹಾರಾಜನೇ, ಘೋರವೂ ಭಯಂಕರವೂ ಆದ ದೊಡ್ಡ ಯುದ್ಧವು ನಡೆಯಿತು.
ಅರ್ಜುನಃ ಪ್ರಾಪ್ಯ ಗಾಂಗೇಯಂ ಪೀಡಯನ್ ನಿಶಿತೈಃ ಶರೈಃ ।
ಅಭ್ಯದ್ರವತ ಸಂಯತ್ತಂ ವನೇ ಮತ್ತಮಿವ ದ್ವಿಪಮ್ ॥53॥
ಅರ್ಜುನನು ಭೀಷ್ಮರನ್ನು ತೀಕ್ಷ್ಣವಾದ ಬಾಣಗಳಿಂದ ಪೀಡಿಸುತ್ತಾ ಕಾಡಿನಲ್ಲಿ ಗಜವು ಪ್ರತಿಗಜದ ಕಡೆಗೆ ಧಾವಿಸುವಂತೆ ಪ್ರಯತ್ನಶೀಲರಾದ ಭೀಷ್ಮರ ಕಡೆಗೆ ಧಾವಿಸಿದನು.
ಪ್ರತ್ಯುದ್ಯಯೌ ಚ ತಂ ಪಾರ್ಥಂ ಭಗದತ್ತಃ ಪ್ರತಾಪವಾನ್ ।
ತ್ರಿಧಾ ಭಿನ್ನೇನ ನಾಗೇನ ಮದಾಂಧೇನ ಮಹಾಬಲಃ ॥54॥
ಪ್ರತಾಪಶಾಲಿಯೂ, ಮಹಾಬಲನೂ ಆದ ಭಗದತ್ತನು ಮೂರುಧಾರೆಗಳಲ್ಲಿ ಮದೋದಕವನ್ನು ಸುರಿಸುತ್ತಿದ್ದ ಮದಾಂಧವಾದ ತನ್ನ ಗಜದ ಜೊತೆಯಲ್ಲಿ ಅರ್ಜುನನನ್ನು ಎದುರಿಸಿದನು.
ತಮಾಪತಂತಂ ಸಹಸಾ ಮಹೇಂದ್ರಗಜಸನ್ನಿಭಮ್ ।
ಪರಂ ಯತ್ನಂ ಸಮಾಸ್ಥಾಯ ಬೀಭತ್ಸುಃ ಪ್ರತ್ಯಪದ್ಯತ ॥55॥
ಇದ್ದಕ್ಕಿದ್ದಂತೆಯೇ ತನ್ನ ಕಡೆಗೆ ಬರುತ್ತಿದ್ದ ಮಹೇಂದ್ರನ ಐರಾವತದ ಕಾಂತಿಯನ್ನು ಹೊಂದಿದ ಆ ಗಜದ ಸಮೀಪಕ್ಕೆ ಅರ್ಜುನನು ಪರಮ ಪ್ರಯತ್ನಪೂರ್ವಕವಾಗಿ ಬಂದನು.
ತತೋ ಗಜಗತೋ ರಾಜಾ ಭಗದತ್ತಃ ಪ್ರತಾಪವಾನ್ ।
ಅರ್ಜುನಂ ಶರವರ್ಷೇಣ ವಾರಯಾಮಾಸ ಸಂಯುಗೇ ॥56॥
ಆಗ ಗಜದ ಮೇಲಿದ್ದ ಪ್ರತಾಪಶಾಲಿಯಾದ ಭಗದತ್ತ ರಾಜನು ಯುದ್ಧದಲ್ಲಿ ಬಾಣಗಳ ಮಳೆಯಿಂದ ಅರ್ಜುನನನ್ನು ತಡೆದನು.
ಅರ್ಜುನಸ್ತು ರಣೇ ನಾಗಮಾಯಾಂತಂ ರಜತೋಪಮಮ್ ।
ವಿಮಲೈರಾಯಸೈಸ್ತೀಕ್ಷ್ಣೈರವಿಧ್ಯತ ಮಹಾರಣೇ ॥57॥
ಅರ್ಜುನನಾದರೋ ಯುದ್ಧಭೂಮಿಯಲ್ಲಿ ರಜತರಾಶಿಯಂತೆ ತನ್ನ ಕಡೆಗೆ ಬರುತ್ತಿದ್ದ ಆ ಗಜವನ್ನು ವಿಮಲವಾದ ಅಯೋಮಯವಾದ ತೀಕ್ಷ್ಣವಾದ ಬಾಣಗಳಿಂದ ಹೊಡೆದನು.
ಶಿಖಂಡಿನಂ ಚ ಕೌಂತೇಯೋ ಯಾಹಿ ಯಾಹೀತ್ಯಚೋದಯತ್ ।
ಭೀಷ್ಮಂ ಪ್ರತಿ ಮಹಾರಾಜ ಜಹ್ಯೇನಮಿತಿ ಚಾಬ್ರವೀತ್ ॥58॥
ಎಲೈ ಮಹಾರಾಜನೇ, ಮತ್ತು ಅರ್ಜುನನು ಶಿಖಂಡಿಯನ್ನು ಕುರಿತು, ಭೀಷ್ಮರ ಕಡೆಗೆ ಹೋಗು-ಹೋಗು, ಅವರನ್ನು ಕೊಲ್ಲು ಎಂದು ಹೇಳಿ ಪ್ರಚೋದಿಸಿದನು.
ಪ್ರಾಗ್ಜ್ಯೋತಿಷಸ್ತತೋ ಹಿತ್ವಾ ಪಾಂಡವಂ ಪಾಂಡುಪೂರ್ವಜ ।
ಪ್ರಯಯೌ ತ್ವರಿತೋ ರಾಜನ್ ದ್ರುಪದಸ್ಯ ರಥಂ ಪ್ರತಿ ॥59॥
ಎಲೈ ಪಾಂಡುವಿನ ಅಣ್ಣನೇ, ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು ಆಗ ಅರ್ಜುನನನ್ನು ಬಿಟ್ಟು ಶೀಘ್ರವಾಗಿ ದ್ರುಪದನ ರಥದ ಕಡೆಗೆ ಹೋದನು.
ತತೋಽರ್ಜುನೋ ಮಹಾರಾಜ ಭೀಷ್ಮಮಭ್ಯದ್ರವದ್ ದ್ರುತಮ್ ।
ಶಿಖಂಡಿನಂ ಪುರಸ್ಕೃತ್ಯ ತತೋ ಯುದ್ಧಮವರ್ತತ ॥60॥
ಎಲೈ ಮಹಾರಾಜನೇ, ಆಗ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಶೀಘ್ರವಾಗಿ ಭೀಷ್ಮರ ಕಡೆಗೆ ಧಾವಿಸಿದನು. ಅನಂತರ ಯುದ್ಧವು ಜರುಗಿತು.
ತತಸ್ತೇ ತಾವಕಾಃ ಶೂರಾಃ ಪಾಂಡವಂ ರಭಸಂ ರಣೇ ।
ಸರ್ವೇಽಭ್ಯಧಾವನ್ ಕ್ರೋಶಂತಸ್ತದದ್ಭುತಮಿವಾಭವತ್ ॥61॥
ಆಗ ನಿನ್ನ ಶೂರರೆಲ್ಲರೂ ಕಿರುಚುತ್ತಾ ಯುದ್ಧದಲ್ಲಿ ವೇಗಶಾಲಿಯಾದ ಪಾಂಡವನಾದ ಅರ್ಜುನನ ಕಡೆಗೆ ಧಾವಿಸಿದರು. ಅದು ಅದ್ಭುತವಾಗಿದ್ದಿತು.
ನಾನಾವಿಧಾನ್ಯನೀಕಾನಿ ಪುತ್ರಾಣಾಂ ತೇ ಜನಾಧಿಪ ।
ಅರ್ಜುನೋ ವ್ಯಧಮತ್ ಕಾಲೇ ದಿವೀವಾಭ್ರಾಣಿ ಮಾರುತಃ ॥62॥
ಎಲೈ ರಾಜನೇ, ನಿನ್ನ ಪುತ್ರರ ನಾನಾವಿಧವಾದ ಸೇನೆಗಳನ್ನು ಅರ್ಜುನನು ವಾಯುವು ಆಕಾಶದಲ್ಲಿ ಮೋಡಗಳನ್ನು ಹಾರಿಸುವಂತೆ ಹಾರಿಸಿ ನಾಶವನ್ನು ಮಾಡಿದನು.
ಶಿಖಂಡೀ ತು ಸಮಾಸಾದ್ಯ ಭರತಾನಾಂ ಪಿತಾಮಹಮ್ ।
ಇಷುಭಿಸ್ತೂರ್ಣಮವ್ಯಗ್ರೋ ಬಹುಭಿಃ ಸ ಸಮಾಚಿನೋತ್ ॥63॥
ಶಿಖಂಡಿಯಾದರೋ ಭರತರ ಪಿತಾಮಹರಾದ ಭೀಷ್ಮರನ್ನು ಸಮೀಪಿಸಿ ಎಚ್ಚರಿಕೆಯಿಂದ ಅನೇಕ ಬಾಣಗಳನ್ನು ಶೀಘ್ರವಾಗಿ ಅವರ ಮೇಲೆ ಪ್ರಯೋಗಿಸಿದನು.

ಸೋಮಕಾಂಶ್ಚ ರಣೇ ಭೀಷ್ಮೋ ಜಘ್ನೇ ಪಾರ್ಥಪದಾನುಗಾನ್ |
ನ್ಯವಾರಯತ ಸೈನ್ಯಂ ಚ ಪಾಂಡವಾನಾಂ ಮಹಾರಥಃ ॥64॥
ಮಹಾರಥರಾದ ಭೀಷ್ಮರು ಅರ್ಜುನನ ಅನುಯಾಯಿಗಳಾಗಿದ್ದ ಸೋಮಕರನ್ನು ಯುದ್ಧದಲ್ಲಿ ಕೊಂದು ಪಾಂಡವರ ಸೈನ್ಯವನ್ನೂ ನಿವಾರಿಸಿದರು.
ರಥಾಗ್ನ್ಯಗಾರಶ್ಚಾಪಾರ್ಚಿರಸಿಶಕ್ತಿಗದೇಂಧನಃ |
ಶರಸಂಘಮಹಾಜ್ವಾಲಃ ಕ್ಷತ್ರಿಯಾನ್ ಸಮರೇಽದಹತ್ ॥65॥
ರಥವೆಂಬ ಅಗ್ನಿಶಾಲೆಗಳಿಂದಲೂ, ಚಾಪವೆಂಬ ಸಣ್ಣ ಜ್ವಾಲೆಗಳಿಂದಲೂ, ಖಡ್ಗ- ಶಕ್ತಿ-ಗದೆಗಳೆಂಬ ಇಂಧನಗಳಿಂದಲೂ, ಬಾಣಗಳ ಸಮೂಹವೆಂಬ ಮಹಾಜ್ವಾಲೆಗಳಿಂದಲೂ ಕೂಡಿದ ಯುದ್ಧಾಗ್ನಿಯು ಕ್ಷತ್ರಿಯರನ್ನು ಸುಟ್ಟುಹಾಕಿತು.
ಯಥಾ ಹಿ ಸುಮಹಾನಗ್ನಿಃ ಕಕ್ಷೇ ಚರತಿ ಸಾನಿಲಃ |
ತಥಾ ಜಜ್ವಾಲ ಭೀಷ್ಮೋಽಪಿ ದಿವ್ಯಾನ್ಯಸ್ತ್ರಾಣ್ಯುದೀರಯನ್ ॥66॥
ದೊಡ್ಡ ಅಗ್ನಿಯು ವಾಯುವಿನಿಂದ ಕೂಡಿ ಕಾಡಿನಲ್ಲಿ ಸಂಚರಿಸುವಂತೆ ಭೀಷ್ಮರೂ ಸಹ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ಜ್ವಲಿಸಿದರು.
ಸುವರ್ಣಪುಂಖೈರಿಷುಭಿಃ ಶಿತೈಃ ಸನ್ನತಪರ್ವಭಿಃ |
ನಾದಯನ್ ಸ ದಿಶೋ ಭೀಷ್ಮಃ ಪ್ರದಿಶಶ್ಚ ಮಹಾಯಶಾಃ ॥67॥
ಪಾತಯನ್ ರಥಿನೋ ರಾಜನ್ ಗಜಾಂಶ್ಚ ಸಹ ಸಾದಿಭಿಃ |
ಮುಂಡತಾಳವನಾನೀವ ಚಕಾರ ಸ ರಥವ್ರಜಾನ್ ॥68॥
ಮಹಾಕೀರ್ತಿಶಾಲಿಗಳಾದ ಭೀಷ್ಮರು ಬಾಗಿದ ತುದಿಗಳುಳ್ಳ, ಸುವರ್ಣ ಪುಂಖಗಳುಳ್ಳ ಬಾಣಗಳಿಂದ ದಿಕ್ಕು ಮತ್ತು ವಿದಿಕ್ಕುಗಳನ್ನು ಪ್ರಜ್ವಲಿಸುತ್ತಾ, ರಥಗಳಿಂದ ರಥಿಕರನ್ನು ಕೆಡವುತ್ತಾ, ಗಜಾರೋಹಿಗಳ ಜೊತೆಯಲ್ಲಿ ಗಜಗಳನ್ನು ಉರುಳಿಸುತ್ತಾ ರಥಸಮೂಹಗಳನ್ನು ತುದಿಯ ಭಾಗವನ್ನು ಕತ್ತರಿಸಿದ ತಾಳವನದಂತೆ ಮಾಡಿದರು.
ನಿರ್ಮನುಷ್ಯಾನ್ ರಥಾನ್ ರಾಜನ್ ಗಜಾನಶ್ವಾಂಶ್ಚ ಸಂಯುಗೇ |
ಚಕಾರ ಸ ತದಾ ಭೀಷ್ಮಃ ಸರ್ವಶಸ್ತ್ರಭೃತಾಂ ವರಃ ॥69॥
ಎಲೈ ರಾಜನೇ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಭೀಷ್ಮರು ಆಗ ರಥಗಳನ್ನೂ, ಗಜಗಳನ್ನೂ ಮತ್ತು ಅಶ್ವಗಳನ್ನೂ ಯುದ್ಧದಲ್ಲಿ ಮನುಷ್ಯಹೀನಗಳನ್ನಾಗಿ ಮಾಡಿದರು.
ತಸ್ಯ ಜ್ಯಾತಳನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ನಿಶಮ್ಯ ಸರ್ವತೋ ರಾಜನ್ ಸಮಕಂಪಂತ ಸೈನಿಕಾಃ ॥70॥
ಎಲೈ ರಾಜನೇ, ಸಿಡಿಲಿನ ಆರ್ಭಟದಂತಿದ್ದ ಅವರ ಜ್ಯಾತಳ ನಿರ್ಘೋಷಗಳನ್ನು ಕೇಳಿ ಸೈನಿಕರು ಎಲ್ಲ ಕಡೆಗಳಲ್ಲಿಯೂ ನಡುಗಿದರು.
ಅಮೋಘಾ ಹ್ಯಪತನ್ ಬಾಣಾಃ ಪಿತುಸ್ತೇ ಮನುಜೇಶ್ವರ |
ನಾಸಜ್ಜಂತ ಶರೀರೇಷು ಭೀಷ್ಮಚಾಪಚ್ಯುತಾಃ ಶರಾಃ ॥71॥
ಎಲೈ ರಾಜನೇ, ನಿನ್ನ ತಂದೆಯು ಪ್ರಯೋಗಿಸಿದ ಬಾಣಗಳು ಅಮೋಘವಾಗಿದ್ದವು. ಭೀಷ್ಮರ ಬಿಲ್ಲಿನಿಂದ ಹೊರಟ ಬಾಣಗಳು ಶರೀರಗಳಲ್ಲೇ ನಾಟಿ ಉಳಿಯಲಿಲ್ಲ (ಶರೀರಗಳನ್ನು ಭೇದಿಸಿ ಭೂಮಿಯಲ್ಲಿ ಇಳಿದವು).
ನಿರ್ಮನುಷ್ಯಾನ್ ರಥಾನ್ ರಾಜನ್ ಸುಯುಕ್ತಾನ್ ಜವನೈರ್ಹಯೈಃ |
ವಾತಾಯಮಾನಾನ್ ಪಶ್ಯಾಮ ಹ್ರಿಯಮಾಣಾನ್ ವಿಶಾಂಪತೇ ॥72॥
ಎಲೈ ರಾಜನೇ, ಮನುಷ್ಯರಿಲ್ಲದ ರಥಗಳು ಚೆನ್ನಾಗಿ ಹೂಡಿದ ಒಳ್ಳೆಯ ಕುದುರೆಗಳಿಂದ ಬಿರುಗಾಳಿಯಿಂದಲೋ ಎಂಬಂತೆ ಅಲ್ಲಲ್ಲಿ ಎಳೆಯಲ್ಪಡುವುದನ್ನು ನಾವು ನೋಡಿದೆವು.
ಚೇದಿಕಾಶಿಕರೂಷಾಣಾಂ ಸಹಸ್ರಾಣಿ ಚತುರ್ದಶ |
ಮಹಾರಥಾಃ ಸಮಾಖ್ಯಾತಾಃ ಕುಲಪುತ್ರಾಸ್ತನುತ್ಯಜಃ ॥73॥
ಅಪರಾವರ್ತಿನಃ ಶೂರಾಃ ಸುವರ್ಣವಿಕೃತಧ್ವಜಾಃ |
ಸಂಗ್ರಾಮೇ ಭೀಷ್ಮಮಾಸಾದ್ಯ ಸವಾಜಿರಥಕುಂಜರಾಃ |
ಜಗ್ಮುಸ್ತೇ ಪರಲೋಕಾಯ ವ್ಯಾದಿತಾಸ್ಯಮಿವಾಂತಕಮ್ ॥74॥
ಚೇದಿ-ಕಾಶಿ-ಕರೂಷರ ಹದಿನಾಲ್ಕು ಸಾವಿರ ಮಹಾರಥರೂ, ಕುಲಪುತ್ರರೂ, ಶರೀರತ್ಯಾಗಿಗಳೂ, ಯುದ್ಧದಲ್ಲಿ ಹಿಂದಿರುಗದವರೂ, ಶೂರರೂ, ಸುವರ್ಣಾಲಂಕೃತವಾದ ಧ್ವಜವುಳ್ಳವರೂ ಆದ ಯೋಧರು ಬಾಯಿತೆರೆದ ಯಮನಂತಿರುವ ಭೀಷ್ಮರನ್ನು ಸಮೀಪಿಸಿ ತಮ್ಮ ಅಶ್ವ-ಗಜ-ರಥಗಳ ಜೊತೆಯಲ್ಲಿ ಪರಲೋಕಕ್ಕೆ ಹೋದರು.
ನ ತತ್ರಾಸೀನ್ಮಹಾರಾಜ ಸೋಮಕಾನಾಂ ಮಹಾರಥಃ |
ಯಃ ಸಂಪ್ರಾಪ್ಯ ರಣೇ ಭೀಷ್ಮಂ ಜೀವಿತೇ ಸ್ಮ ಮನೋ ದಧೇ ॥75॥
ಎಲೈ ಮಹಾರಾಜನೇ, ಅಲ್ಲಿ ಭೀಷ್ಮರನ್ನು ಸಮೀಪಿಸಿ ಬದುಕಲು ಆಸೆಯನ್ನು ಮಾಡುವ ಸೋಮಕರ ಯಾವ ಮಹಾರಥನೂ ಇರಲಿಲ್ಲ.
ತಾಂಶ್ಚ ಸರ್ವಾನ್ ರಣೇ ಯೋಧಾನ್ ಪ್ರೇತರಾಜಪುರಂ ಪ್ರತಿ |
ನೀತಾನಮನ್ಯಂತ ಜನಾ ದೃಷ್ಟ್ವಾ ಭೀಷ್ಮಸ್ಯ ವಿಕ್ರಮಮ್ ॥76॥
ನ ಕಶ್ಚಿದೇನಂ ಸಮರೇ ಪ್ರತ್ಯುದ್ಯಾತಿ ಮಹಾರಥಃ |
ಋತೇ ಪಾಂಡುಸುತಂ ವೀರಂ ಶ್ವೇತಾಶ್ವಂ ಕೃಷ್ಣಸಾರಥಿಮ್ |

ಶಿಖಂಡಿನಂ ಚ ಸಮರೇ ಪಾಂಚಾಲ್ಯಮಮಿತೌಜಸಮ್ ॥77॥
ಭೀಷ್ಮರ ವಿಕ್ರಮವನ್ನು ನೋಡಿದ ಜನರು ಯುದ್ಧದಲ್ಲಿ ಭೀಷ್ಮರ ಎದುರಿಗಿದ್ದ ಎಲ್ಲ ಯೋಧರೂ ಯಮಪಟ್ಟಣಕ್ಕೆ ಹೋಗಿದ್ದಾರೆ ಎಂದೇ ತಿಳಿದರು. ಶ್ವೇತಾಶ್ವನೂ, ಕೃಷ್ಣಸಾರಥಿಯೂ, ವೀರನೂ ಆದ ಅರ್ಜುನನನ್ನು ಬಿಟ್ಟು ಅಮಿತಪರಾಕ್ರಮಿಯಾದ ಪಾಂಚಾಲ ದೇಶದ ಶಿಖಂಡಿಯನ್ನು ಬಿಟ್ಟು, ಯಾವ ಮಹಾರಥನೂ ಭೀಷ್ಮರ ಎದುರಿಗೆ ಬರಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ
ತ್ರಯೋದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹದಿಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾಲ್ಕನೆಯ ಅಧ್ಯಾಯ
ಅರ್ಜುನ ಮತ್ತು ಭೀಷ್ಮರ ಪರಾಕ್ರಮ.
ಸಂಜಯಃ
ಶಿಖಂಡೀ ತು ರಣೇ ಭೀಷ್ಮಮಾಸಾದ್ಯ ಭರತರ್ಷಭ |
ದಶಭಿರ್ದಶಭಿರ್ಬಾಣೈರಾಜಘಾನ ಮಹಾಹವೇ ॥1॥
ಸಂಜಯ ಎಲೈ ಭರತಶ್ರೇಷ್ಠನೇ, ಶಿಖಂಡಿಯು ಯುದ್ಧದಲ್ಲಿ ಭೀಷ್ಮರನ್ನು ಸಮೀಪಿಸಿ ಹತ್ತು-ಹತ್ತು ಬಾಣಗಳಿಂದ ಅವರನ್ನು ಹೊಡೆದನು.
ಶಿಖಂಡಿನಂ ತು ಗಾಂಗೇಯಃ ಕ್ರೋಧದೀಪ್ತೇನ ಚಕ್ಷುಷಾ |
ಅವೈಕ್ಷತ ಕಟಾಕ್ಷೇಣ ನಿರ್ದಹನ್ನಿವ ಭಾರತ ॥2॥
ಎಲೈ ಭಾರತನೇ, ಗಂಗಾಪುತ್ರರಾದ ಭೀಷ್ಮರು ಕ್ರೋಧದೀಪ್ತವಾದ ಕಡೆಗಣ್ಣಿನಿಂದ ಶಿಖಂಡಿಯನ್ನು ಸುಟ್ಟುಬಿಡುವವರಂತೆ ನೋಡಿದರು.
ಸ್ತ್ರೀತ್ವಂ ತತ್ಸಂಸ್ಮರನ್ ರಾಜನ್ ಸರ್ವಲೋಕಸ್ಯ ಪಶ್ಯತಃ |
ನ ಜಘಾನ ರಣೇ ಭೀಷ್ಮಃ ಸ ಚ ತಂ ನಾವಬುದ್ಧವಾನ್ ॥3॥
ಎಲೈ ರಾಜನೇ, ಅವನ ಸ್ತ್ರೀತ್ವವನ್ನು ಸ್ಮರಿಸಿ ಸರ್ವಲೋಕವು ನೋಡುತ್ತಿರುವಂತೆ ಯುದ್ಧದಲ್ಲಿ ಅವನನ್ನು ಹೊಡೆಯಲಿಲ್ಲ. ಆದರೆ ಶಿಖಂಡಿಗೆ ಅದು ತಿಳಿಯಲಿಲ್ಲ.
ಅರ್ಜುನಸ್ತು ಮಹಾರಾಜ ಶಿಖಂಡಿನಮಭಾಷತ |
ಅಭಿತ್ವರಸ್ವ ತ್ವರಿತೋ ಜಹಿ ಚೈನಂ ಪಿತಾಮಹಮ್ ॥4॥
ಎಲೈ ಮಹಾರಾಜನೇ, ಅರ್ಜುನನು ಶಿಖಂಡಿಯನ್ನು ಕುರಿತು ಮಾತನಾಡಿದನು. ತ್ವರೆಮಾಡು, ಶೀಘ್ರವಾಗಿ ಈ ಪಿತಾಮಹರನ್ನು ಕೊಲ್ಲು.
ಕಿಂ ತೇ ವಿವಕ್ಷಯಾ ವೀರ ಜಹಿ ಭೀಷ್ಮಂ ಮಹಾರಥಮ್ |
ನ ಹ್ಯನ್ಯಮನುಪಶ್ಯಾಮಿ ಕಂಚಿದ್ ಯೌಧಿಷ್ಠಿರೇ ಬಲೇ ॥5॥
ಯಃ ಶಕ್ತಃ ಸಮರೇ ಭೀಷ್ಮಂ ಯೋಧಯೇತ ಪಿತಾಮಹಮ್ |
ಋತೇ ತ್ವಾಂ ಪುರುಷವ್ಯಾಘ್ರ ಸತ್ಯಮೇತದ್ ಬ್ರವೀಮಿ ತೇ ॥6॥
ನಿನ್ನ ಮನಸ್ಸಿನಲ್ಲಿ ಏನನ್ನು ಯೋಚಿಸುತ್ತಿದ್ದೀಯೆ? ಮಹಾರಥರಾದ ಭೀಷ್ಮರನ್ನು ಕೊಲ್ಲು. ಯುಧಿಷ್ಠಿರ ಸೈನ್ಯದಲ್ಲಿ ಪಿತಾಮಹರಾದ ಭೀಷ್ಮರ ಜೊತೆಯಲ್ಲಿ ಪುರುಷ ವ್ಯಾಘ್ರನಾದ ನಿನ್ನನ್ನು ಬಿಟ್ಟು ಯುದ್ಧ ಮಾಡಲು ಸಮರ್ಥರಾದ ಬೇರೆ ಯಾರನ್ನೂ ನಾನು ಕಾಣುತ್ತಿಲ್ಲ. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ (ಎಂದು ಹೇಳಿದನು).
ಏವಮುಕ್ತಸ್ತು ಪಾರ್ಥೇನ ಶಿಖಂಡೀ ಭರತರ್ಷಭ |
ಶರೈರ್ನಾನಾವಿಧೈಸ್ತೂರ್ಣಂ ಪಿತಾಮಹಮುಪಾದ್ರವತ್ ॥7॥
ಎಲೈ ಭರತಶ್ರೇಷ್ಠನೇ, ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಶಿಖಂಡಿಯು ಶೀಘ್ರವಾಗಿ ನಾನಾ ವಿಧವಾದ ಬಾಣಗಳನ್ನು ಪ್ರಯೋಗಿಸುತ್ತಾ ಪಿತಾಮಹರ ಕಡೆಗೆ ಮುನ್ನುಗ್ಗಿದನು.
ಅಚಿಂತಯಿತ್ವಾ ತಾನ್ ಬಾಣಾನ್ ಪಿತಾ ದೇವವ್ರತಸ್ತವ |
ಅರ್ಜುನಂ ಸಮರೇ ಕ್ರುದ್ಧಂ ವಾರಯಾಮಾಸ ಸಾಯಕೈಃ ॥8॥
ನಿನ್ನ ತಂದೆಯಾದ ಭೀಷ್ಮರು ಆ ಬಾಣಗಳನ್ನು ಗಣನೆಗೇ ತಂದುಕೊಳ್ಳದೇ ಕ್ರುದ್ಧರಾಗಿ ಯುದ್ಧದಲ್ಲಿ ಅರ್ಜುನನನ್ನು ತಮ್ಮ ಬಾಣಗಳಿಂದ ತಡೆದರು.
ತಥೈವ ಚ ಚಮೂಂ ಸರ್ವಾಂ ಪಾಂಡವಾನಾಂ ಮಹಾರಥಃ |
ಅಪ್ರೈಷೀತ್ ಸಮರೇ ತೀಕ್ಷ್ಣೈಃ ಪರಲೋಕಾಯ ಮಾರಿಷ ॥9॥
ಎಲೈ ಶ್ರೇಷ್ಠನೇ, ಹಾಗೆಯೇ ಮಹಾರಥರಾದ ಅವರು ತಮ್ಮ ತೀಕ್ಷ್ಣವಾದ ಬಾಣಗಳಿಂದ ಪಾಂಡವರ ಸೈನ್ಯವನ್ನೆಲ್ಲಾ ಪರಲೋಕಕ್ಕೆ ಕಳುಹಿಸಿದರು.
ತಥೈವ ಪಾಂಡವಾ ರಾಜನ್ ಸೈನ್ಯೇನ ಮಹತಾ ವೃತಾಃ |
ಭೀಷ್ಮಂ ಪ್ರಚ್ಛಾದಯಾಮಾಸುರ್ಮೇಘಾ ಇವ ದಿವಾಕರಮ್ ॥10॥

ಎಲೈ ರಾಜನೇ, ಹಾಗೆಯೇ ಪಾಂಡವರೂ ಸಹ ದೊಡ್ಡ ಸೈನ್ಯದಿಂದ ಕೂಡಿದವರಾಗಿ ಮೋಡಗಳು ಸೂರ್ಯನನ್ನು ಮುಚ್ಚಿದಂತೆ ತಮ್ಮ ಬಾಣಗಳಿಂದ ಭೀಷ್ಮರನ್ನು ಮುಚ್ಚಿದರು.
ಸ ಸಮಂತಾತ್ ಪರಿವೃತೋ ಭಾರತೋ ಭರತರ್ಷಭ |
ನಿರ್ದದಾಹ ರಣೇ ಶೂರಾನ್ ವನಂ ವಹ್ನಿರಿವ ಜ್ವಲನ್ ॥11॥
ಎಲೈ ಭರತಶ್ರೇಷ್ಠನೇ, ಎಲ್ಲ ಕಡೆಯಿಂದಲೂ ಸುತ್ತುವರಿಯಲ್ಪಟ್ಟ ಭೀಷ್ಮರು ಕಾಡಿನಲ್ಲಿ ಅಗ್ನಿಯಂತೆ ಜ್ವಲಿಸುತ್ತಾ ಯುದ್ಧದಲ್ಲಿ ಶತ್ರುಗಳನ್ನು ದಹಿಸಿದರು.
ತತ್ರಾದ್ಭುತಮಪಶ್ಯಾಮ ತವ ಪುತ್ರಸ್ಯ ಪೌರುಷಮ್ |
ಅಯೋಧಯತ ಯತ್ ಪಾರ್ಥಂ ಜುಗೋಪ ಚ ಯತವ್ರತಮ್ ॥12॥
ಅಲ್ಲಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿ ಭೀಷ್ಮರನ್ನು ರಕ್ಷಿಸುತ್ತಿದ್ದ ನಿನ್ನ ಪುತ್ರನ ಅದ್ಭುತವಾದ ಪರಾಕ್ರಮವನ್ನು ನಾವು ನೋಡಿದೆವು.
ಕರ್ಮಣಾ ತೇನ ಸಮರೇ ತವ ಪುತ್ರಸ್ಯ ಧನ್ವಿನಃ |
ದುಃಶಾಸನಸ್ಯ ತುತುಷುಃ ಸರ್ವೇ ಲೋಕಾ ಮಹಾತ್ಮನಃ ॥13॥
ಧನುರ್ಧಾರಿಯೂ, ಮಹಾತ್ಮನೂ ಆದ, ನಿನ್ನ ಪುತ್ರನಾದ ದುಶ್ಶಾಸನನ ಆ ಯುದ್ಧಕರ್ಮದಿಂದ ಎಲ್ಲ ಜನರೂ ಸಂತೋಷಗೊಂಡರು.

ಯದೇಕಃ ಸಮರೇ ಪಾರ್ಥಾನ್ ಸಾನುಗಾನ್ ಸಮಯೋಧಯತ್ |
ನ ಚೈನಂ ಪಾಂಡವಾ ಯುದ್ಧೇ ವಾರಯಾಮಾಸುರುಲ್ಬಣಮ್ ॥14॥
ಏಕೆಂದರೆ ಅವನು ಒಬ್ಬನೇ ಅನುಚರರಿಂದ ಸಹಿತರಾದ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಯುದ್ಧದಲ್ಲಿ ಉಲ್ಬಣನಾಗಿದ್ದ ಅವನನ್ನು ಪಾಂಡವರು ತಡೆಯಲು ಸಾಧ್ಯವಾಗಲಿಲ್ಲ.
ದುಃಶಾಸನೇನ ಸಮರೇ ರಥಿನೋ ವಿರಥೀಕೃತಾಃ |
ಸಾದಿನಶ್ಚ ಮಹಾರಾಜ ದಂತಿನಶ್ಚ ಮಹಾಬಲಾಃ ॥15॥
ವಿನಿರ್ಭಿನ್ನಾಃ ಶರೈಸ್ತೀಕ್ಷ್ಣೈರ್ನಿಪೇತುರ್ಧರಣೀತಳೇ |
ಶರಾತುರಾಸ್ತಥೈವಾನ್ಯೇ ದಂತಿನೋ ವಿದ್ರುತಾ ದಿಶಃ ॥16॥
ಎಲೈ ಮಹಾರಾಜನೇ, ದುಶ್ಶಾಸನನಿಂದ ಯುದ್ಧದಲ್ಲಿ ರಥಿಕರು ರಥಹೀನರಾಗಿ ಮಾಡಲ್ಪಟ್ಟರು. ಮಹಾಬಲವುಳ್ಳ ಅಶ್ವಾರೋಹಿಗಳು ಮತ್ತು ಗಜಾರೋಹಿಗಳು ತೀಕ್ಷ್ಣವಾದ ಬಾಣಗಳಿಂದ ಭೇದಿಸಲ್ಪಟ್ಟು ಭೂತಳದಲ್ಲಿ ಬಿದ್ದರು. ಶರಪೀಡಿತವಾದ ಇನ್ನು ಕೆಲವು ಗಜಗಳು ದಿಕ್ಕು-ದಿಕ್ಕುಗಳಿಗೆ ಓಡಿಹೋದವು.
ಯಥಾಗ್ನಿರಿಂಧನಂ ಪ್ರಾಪ್ಯ ಜ್ವಲೇದ್ ದೀಪ್ತಾರ್ಚಿರುಲ್ಬಣಃ |
ತಥಾ ಜಜ್ವಾಲ ಪುತ್ರಸ್ತೇ ಪಾಂಡವಾನ್ ವೈ ವಿನಿರ್ದಹನ್ ॥17॥
ಹೇಗೆ ಅಗ್ನಿಯು ಇಂಧನವನ್ನು ಹೊಂದಿ ಪ್ರಕಾಶಮಾನವಾದ ಜ್ವಾಲೆಗಳಿಂದ ಉಲ್ಬಣವಾಗಿ ಜ್ವಲಿಸುತ್ತದೆಯೋ ಅದರಂತೆ ನಿನ್ನ ಪುತ್ರನು ಪಾಂಡವ ಸೈನ್ಯವನ್ನು ದಹಿಸುತ್ತಾ ಜ್ವಲಿಸಿದನು.
ತಂ ಭಾರತಮಹಾಮಾತ್ರಂ ಪಾಂಡವಾನಾಂ ಮಹಾರಥಃ |
ಜೇತುಂ ನೋತ್ಸಹತೇ ಕಶ್ಚಿನ್ನಾಪ್ಯುದ್ಯಾತುಂ ಕಥಂಚನ |
ಋತೇ ಮಹೇಂದ್ರತನಯಂ ಶ್ವೇತಾಶ್ವಂ ಕೃಷ್ಣಸಾರಥಿಮ್ ॥18॥
ಮಹೇಂದ್ರಪುತ್ರನೂ, ಕೃಷ್ಣಸಾರಥಿಯೂ ಆದ ಅರ್ಜುನನೊಬ್ಬನನ್ನು ಬಿಟ್ಟು ಭಾರತಪ್ರಧಾನನಾದ ದುಶ್ಶಾಸನನನ್ನು ಗೆಲ್ಲಲು ಅಥವಾ ಅವನ ಮೇಲೆ ಎರಗಲು ಪಾಂಡವರ ಯಾವ ಮಹಾರಥನೂ ಬಯಸಲಿಲ್ಲ.
ಸ ಹಿ ತಂ ಸಮರೇ ರಾಜನ್ ವಿಜಿತ್ಯ ವಿಜಯೋಽರ್ಜುನಃ |
ಭೀಷ್ಮಮೇವಾಭಿದುದ್ರಾವ ಸರ್ವಸೈನ್ಯಸ್ಯ ಪಶ್ಯತಃ ॥19॥
ಎಲೈ ರಾಜನೇ, ವಿಜಯನಾದ ಅರ್ಜುನನಾದರೋ ಯುದ್ಧದಲ್ಲಿ ಅವನನ್ನು ಗೆದ್ದು ಎಲ್ಲ ಸೈನ್ಯವೂ ನೋಡುತ್ತಿರುವಂತೆಯೇ ಭೀಷ್ಮರ ಕಡೆಗೆ ಧಾವಿಸಿದನು.
ವಿಜಿತಸ್ತವ ಪುತ್ರೋಽಪಿ ಭೀಷ್ಮಬಾಹುವ್ಯಪಾಶ್ರಯಃ |
ಪುನಃ ಪುನಃ ಸಮಾಶ್ವಸ್ಯ ಪ್ರಾಯುಧ್ಯತ ರಣೋತ್ಕಟಃ |
ಅರ್ಜುನಂ ಚ ರಣೇ ರಾಜನ್ ಯೋಧಯನ್ ಸ ವ್ಯರಾಜತ ॥20॥
ಪರಾಜಿತನಾದ ನಿನ್ನ ಪುತ್ರನೂ ಸಹ ಭೀಷ್ಮರ ಬಾಹುಗಳನ್ನು ಆಶ್ರಯಿಸಿದವನಾಗಿ ಪುನಃ ಪುನಃ ಸುಧಾರಿಸಿಕೊಂಡು, ರಣೋತ್ಕಟನಾಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ರಾಜನೇ, ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಅವನು ಶೋಭಿಸಿದನು.
ಶಿಖಂಡೀ ತು ರಣೇ ರಾಜನ್ ವಿವ್ಯಾಧೈವ ಪಿತಾಮಹಮ್ |
ಶರೈರಶನಿಸಂಸ್ಪರ್ಶೈಸ್ತಥಾ ಸರ್ಪವಿಷೋಪಮೈಃ ॥21॥
ಎಲೈ ರಾಜನೇ, ಶಿಖಂಡಿಯಾದರೋ ವಜ್ರದ ಸ್ಪರ್ಶದಂತಿದ್ದ, ಸರ್ಪವಿಷದಂತಿದ್ದ ಬಾಣಗಳಿಂದ ಪಿತಾಮಹರನ್ನು ಹೊಡೆದೇ ಹೊಡೆದನು.
ನ ಚ ತೇಽಸ್ಯ ರುಜಂ ಚಕ್ರುಃ ಪಿತುಸ್ತವ ಜನೇಶ್ವರ |
ಸ್ಮಯಮಾನಶ್ಚ ಗಾಂಗೇಯಸ್ತಾನ್ ಬಾಣಾನ್ ಜಗೃಹೇ ತದಾ ॥22॥

ಎಲೈ ರಾಜನೇ, ಆ ಬಾಣಗಳು ನಿನ್ನ ತಂದೆಯಾದ ಭೀಷ್ಮರನ್ನು ವ್ಯಥೆ ಪಡಿಸಲಿಲ್ಲ. ಗಂಗಾಪುತ್ರರಾದ ಅವರು ನಗುತ್ತಲೇ ಆ ಬಾಣಗಳನ್ನು ಸ್ವೀಕರಿಸಿದರು.
ಉಷ್ಣಾರ್ತೋ ಹಿ ನರೋ ಯದ್ವಜ್ಜಲಧಾರಾಃ ಪ್ರತೀಚ್ಛತಿ |
ತಥಾ ಜಗ್ರಾಹ ಗಾಂಗೇಯಃ ಶರಧಾರಾಃ ಶಿಖಂಡಿನಃ ॥23॥
ಉಷ್ಣಾರ್ತನಾದ (ಬಿಸಿಲಿಗೆ ಬಳಲಿದ) ಮನುಷ್ಯನು ಹೇಗೆ ಜಲಧಾರೆಗಳನ್ನು ಸ್ವೀಕರಿಸುತ್ತಾನೆಯೋ ಹಾಗೆ ಭೀಷ್ಮರು ಶಿಖಂಡಿಯ ಶರಧಾರೆಗಳನ್ನು ಸ್ವೀಕರಿಸಿದರು.
ತಂ ಕ್ಷತ್ರಿಯಾ ಮಹಾರಾಜ ದದೃಶುರ್ಘೋರಮಾಹವೇ |
ಭೀಷ್ಮಂ ದಹಂತಂ ಸೈನ್ಯಾನಿ ಪಾಂಡವಾನಾಂ ಮಹಾತ್ಮನಾಮ್ ॥24॥
ಎಲೈ ಮಹಾರಾಜನೇ, ಯುದ್ಧದಲ್ಲಿ ಮಹಾತ್ಮರಾದ ಪಾಂಡವರ ಸೈನ್ಯಗಳನ್ನು ದಹಿಸುತ್ತಿದ್ದ ಘೋರರಾದ ಭೀಷ್ಮರನ್ನು ಕ್ಷತ್ರಿಯರು ನೋಡಿದರು.
ತತೋಽಬ್ರವೀತ್ ತವ ಸುತಃ ಸರ್ವಸೈನ್ಯಾನಿ ಮಾರಿಷ |
ಅಭಿದ್ರವತ ಸಂಗ್ರಾಮೇ ಫಲ್ಗುನಂ ಸರ್ವತೋ ರಥೈಃ ॥25॥
ಭೀಷ್ಮೋ ವಃ ಸಮರೇ ಸರ್ವಾನ್ ಪಾಲಯಿಷ್ಯತಿ ಧರ್ಮವಿತ್ |
ತೇ ಭಯಂ ಸುಮಹತ್ ತ್ಯಕ್ತ್ವಾ ಪಾಂಡವಾನ್ ಪ್ರತಿಯುಧ್ಯತ ॥26॥
ಎಲೈ ಶ್ರೇಷ್ಠನೇ, ಆಗ ನಿನ್ನ ಪುತ್ರನು ಎಲ್ಲಾ ಸೈನ್ಯಗಳನ್ನು ಕುರಿತು, ಯುದ್ಧದಲ್ಲಿ ಎಲ್ಲರೂ ನಿಮ್ಮ ರಥಗಳಿಂದ ಎಲ್ಲ ಕಡೆಗಳಿಂದಲೂ ಅರ್ಜುನನ ಕಡೆಗೆ ಧಾವಿಸಿ. ನಿಮ್ಮೆಲ್ಲರನ್ನೂ ಧರ್ಮಜ್ಞರಾದ ಭೀಷ್ಮರು ಯುದ್ಧದಲ್ಲಿ ರಕ್ಷಿಸುವರು ಎಂದು ಹೇಳಿದನು. ಅವರು ತಮ್ಮ ದೊಡ್ಡ ಭಯವನ್ನು ತ್ಯಜಿಸಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಏಷ ತಾಳೇನ ದೀಪ್ತೇನ ಭೀಷ್ಮಸ್ತಿಷ್ಠತಿ ಪಾಲಯನ್ |
ಸರ್ವೇಷಾಂ ಧಾರ್ತರಾಷ್ಟ್ರಾಣಾಂ ರಣೇ ಶರ್ಮ ಚ ವರ್ಮ ಚ ॥27॥
ಪ್ರಕಾಶಮಾನವಾದ ತಾಳಧ್ವಜದಿಂದ ಕೂಡಿದ ಭೀಷ್ಮರು ನಿಮ್ಮನ್ನು ರಕ್ಷಿಸುತ್ತಾ ಎಲ್ಲ ಧೃತರಾಷ್ಟ್ರ ಪುತ್ರರಿಗೂ ಯುದ್ಧದಲ್ಲಿ ಸುಖವನ್ನು ಮತ್ತು ರಕ್ಷಣೆಯನ್ನು ಕೊಡುತ್ತಿದ್ದಾರೆ.
ತ್ರಿದಶಾಪಿ ಸಮುದ್ಯುಕ್ತಾ ನಾಲಂ ಭೀಷ್ಮಂ ಸಮಾಸಿತುಮ್ |
ಕಿಮು ಪಾರ್ಥಾ ಮಹಾತ್ಮಾನಂ ಮರ್ತ್ಯಭೂತಾಸ್ತಥಾಽಬಲಾಃ |
ತಸ್ಮಾದ್ ದ್ರವತ ಹೇ ಯೋಧಾಃ ಫಲ್ಗುನಂ ಪ್ರಾಪ್ಯ ಸಂಯುಗೇ ॥28॥
ದೇವತೆಗಳು ಒಳ್ಳೆಯ ಪ್ರಯತ್ನವನ್ನು ಮಾಡಿದರೂ ಭೀಷ್ಮರ ಜೊತೆಯಲ್ಲಿ ಯುದ್ಧವನ್ನು ಮಾಡಲಾರರು. ಇನ್ನು ಮರ್ತ್ಯರೂ, ಅಬಲರೂ ಆದ ಪಾಂಡವರು ಮಹಾತ್ಮರಾದ ಭೀಷ್ಮರ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿಯಾರು? ಆದ್ದರಿಂದ ಎಲೈ ಯೋಧರೇ, ಅರ್ಜುನನನ್ನು ಉದ್ದೇಶಿಸಿ ಯುದ್ಧದಲ್ಲಿ ಅವನ ಕಡೆಗೆ ಧಾವಿಸಿ.
ಅಹಮದ್ಯ ರಣೇ ಯತ್ತೋ ಯೋಧಯಿಷ್ಯಾಮಿ ಫಲ್ಗುನಮ್ |
ಸಹಿತಃ ಸರ್ವತೋ ಯತ್ತೈರ್ಭವದ್ಭಿರ್ವಸುಧಾಧಿಪಾಃ ॥29॥
ಎಲೈ ರಾಜರೇ, ಪ್ರಯತ್ನಶೀಲರಾದ ನಿಮ್ಮೆಲ್ಲರಿಂದಲೂ ಸಹಿತನಾಗಿ ನಾನು ಈ ದಿನ ಜಾಗರೂಕನಾಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು (ಎಂದು ದುರ್ಯೋಧನನು ಹೇಳಿದನು).
ತಚ್ಛ್ರುತ್ವಾ ತು ವಚೋ ರಾಜಂಸ್ತವ ಪುತ್ರಸ್ಯ ಧನ್ವಿನಃ |
ಅರ್ಜುನಂ ಪ್ರತಿ ಸಂಯತ್ತಾ ಬಲವಂತೋ ಮಹಾರಥಾಃ ॥30॥
ತೇ ವಿದೇಹಾಃ ಕಳಿಂಗಾಶ್ಚ ದಾಶೇರಕಗಣೈಃ ಸಹ |
ಅಭಿಪೇತುರ್ನಿಷಾದಾಶ್ಚ ಸೌವೀರಾಶ್ಚ ಮಹಾರಣೇ ॥31॥
ಎಲೈ ರಾಜನೇ, ಧನುರ್ಧಾರಿಯಾದ ನಿನ್ನ ಪುತ್ರನ ಆ ಮಾತುಗಳನ್ನು ಕೇಳಿ ಬಲಿಷ್ಠರಾದ ಮಹಾರಥರಾದ ವಿದೇಹರು ಮತ್ತು ಕಳಿಂಗರು ದಾಶೇರಕಗಣಗಳ ಜೊತೆಯಲ್ಲಿ ಅರ್ಜುನನ ಮೇಲೆ ಎರಗಿದರು. ನಿಷಾದರೂ ಮತ್ತು ಸೌವೀರರೂ ಮಹಾಯುದ್ಧದಲ್ಲಿ ಅರ್ಜುನನ ಮೇಲೆ ಎರಗಿದರು.
ಬಾಹ್ಲಿಕಾ ದರದಾಶ್ಚೈವ ಪ್ರಾಚ್ಯೋದೀಚ್ಯಾಶ್ಚ ಮಾಲವಾಃ |
ಅಭೀಷಾಹಾಃ ಶೂರಸೇನಾಃ ಶಿಬಯೋಽಥ ವಸಾತಯಃ ॥32॥
ಸಾಲ್ವಾಶ್ರಯಾಸ್ತ್ರಿಗರ್ತಾಶ್ಚ ಅಂಬಷ್ಠಾಃ ಕೇಕಯೈಃ ಸಹ |
ಅಭಿಪೇತೂ ರಣೇ ಪಾರ್ಥಂ ಪತಂಗಾ ಇವ ಪಾವಕಮ್ ॥33॥
ಬಾಹ್ಲಿಕರು, ದರದರು, ಪೂರ್ವ ಮತ್ತು ಉತ್ತರ ದಿಕ್ಕಿನವರು, ಮಾಲವರು, ಅಭೀಷಾಹರು, ಶೂರಸೇನರು, ವಸಾತಿಗಳು, ಸಾಲ್ವನನ್ನು ಆಶ್ರಯಿಸಿದವರು, ತ್ರಿಗರ್ತರು, ಕೇಕಯರ ಜೊತೆಯಲ್ಲಿ ಸೇರಿದ ಅಂಬಷ್ಠರು- ಎಲ್ಲರೂ ಪತಂಗಗಳು ಅಗ್ನಿಯ ಮೇಲೆ ಬೀಳುವಂತೆ ಯುದ್ಧದಲ್ಲಿ ಅರ್ಜುನನ ಮೇಲೆ ಬಿದ್ದರು.
ಸ ತಾನ್ ಸರ್ವಾನ್ ಸಹಾನೀಕಾನ್ ಮಹಾರಾಜ ಮಹಾರಥಾನ್ |
ದಿವ್ಯಾನ್ಯಸ್ತ್ರಾಣಿ ಸಂಚಿಂತ್ಯ ಪ್ರಸಂಧಾಯ ಧನಂಜಯಃ ॥34॥
ಸ ತೈರಸ್ತ್ರೈರ್ಮಹಾವೇಗೈರ್ದದಾಹಾಶು ಮಹಾಬಲಃ |
ಶರಪ್ರತಾಪೈರ್ಬೀಭತ್ಸುಃ ಪತಂಗಾನಿವ ಪಾವಕಃ ॥35॥
ಎಲೈ ಮಹಾರಾಜನೇ, ಧನಂಜಯನಾದರೋ ದಿವ್ಯಾಸ್ತ್ರಗಳನ್ನು ಧ್ಯಾನ ಮಾಡಿ ಧನುಸ್ಸಿನಲ್ಲಿ ಹೂಡಿ ಆ ಎಲ್ಲ ಮಹಾರಥರನ್ನೂ

ಮಹಾಬಲನಾದ ಅವನು ಅಗ್ನಿಯು ಪತಂಗಗಳನ್ನು ದಹಿಸುವಂತೆ ಮಹಾವೇಗವುಳ್ಳ ತನ್ನ ಅಸ್ತ್ರಗಳ ಮತ್ತು ಬಾಣಗಳ ಪ್ರತಾಪದಿಂದ ಶೀಘ್ರವಾಗಿ ದಹಿಸಿದನು.
ತಸ್ಯ ಬಾಣಸಹಸ್ರಾಣಿ ಸೃಜತೋ ದೃಢಧನ್ವಿನಃ |
ದೀಪ್ಯಮಾನಮಿವಾಕಾಶೇ ಗಾಂಡೀವಂ ಸಮದೃಶ್ಯತ ॥36॥
ದೃಢವಾದ ಧನುಸ್ಸನ್ನು ಹೊಂದಿ, ಸಹಸ್ರಾರು ಬಾಣಗಳನ್ನು ಸೃಷ್ಟಿಸುವ ಅವನ ಗಾಂಡೀವ ಧನುಸ್ಸು ಆಕಾಶದಲ್ಲಿ ಹೊಳೆಯುವಂತೆ ತೋರುತ್ತಿದ್ದಿತು.
ತೇ ಶರಾರ್ತಾ ಮಹಾರಾಜ ವಿಪ್ರಕೀರ್ಣರಥಧ್ವಜಾಃ |
ನಾಭ್ಯವರ್ತಂತ ರಾಜಾನಃ ಸಹಿತಾ ವಾನರಧ್ವಜಮ್ ॥37॥
ಎಲೈ ಮಹಾರಾಜನೇ, ಬಾಣಗಳ ಹೊಡೆತಕ್ಕೆ ಸಿಕ್ಕಿ ತಮ್ಮ ರಥ-ಧ್ವಜಗಳನ್ನು ಭಗ್ನಗೊಳಿಸಿಕೊಂಡ ರಾಜರು ತಾವೂ ಸಹಿತರಾಗಿ ಕಪಿಧ್ವಜನಾದ ಅರ್ಜುನನ ಬಳಿಗೆ ಬರಲಿಲ್ಲ.
ಸಧ್ವಜಾ ರಥಿನಃ ಪೇತುರ್ಹಯಾರೋಹಾ ಹಯೈಃ ಸಹ |
ಗಜಾಃ ಸಹ ಗಜಾರೋಹೈಃ ಕಿರೀಟಿಶರತಾಡಿತಾಃ ॥38॥
ಅರ್ಜುನನ ಬಾಣಗಳಿಂದ ತಾಡಿತರಾಗಿ ಧ್ವಜಸಹಿತರಾದ ರಥಿಕರು, ಅಶ್ವಗಳಿಂದ ಸಹಿತರಾದ ಅಶ್ವಾರೋಹಿಗಳು, ಗಜಗಳಿಂದ ಸಹಿತರಾದ ಗಜಾರೋಹಿಗಳು ನೆಲದ ಮೇಲೆ ಉರುಳಿದರು.
ತತೋಽರ್ಜುನಭುಜೋತ್ಸೃಷ್ಟೈರಾವೃತಾಽಽಸೀದ್ ವಸುಂಧರಾ |
ವಿದ್ರವದ್ಭಿಶ್ಚ ಬಹುಧಾ ಬಲೈ ರಾಜ್ಞಾಂ ಸಮಂತತಃ ॥39॥
ಆಗ ಅರ್ಜುನನ ಭುಜಗಳಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ಪೀಡಿತವಾಗಿ ಅನೇಕ ವಿಧವಾಗಿ ಓಡಿಹೋಗುವ ರಾಜರ ಸೇನೆಗಳಿಂದ ರಣಭೂಮಿಯು ಎಲ್ಲಾ ಕಡೆಯಲ್ಲಿಯೂ ತುಂಬಿಹೋಯಿತು.
ಅಥ ಪಾರ್ಥೋ ಮಹಾಬಾಹುರ್ದ್ರಾವಯಿತ್ವಾ ವರೂಥಿನೀಮ್ |
ದುಃಶಾಸನಾಯ ಸಮರೇ ಪ್ರೇಷಯಾಮಾಸ ಸಾಯಕಾನ್ ॥40॥
ಅನಂತರ ಮಹಾಬಾಹುವಾದ ಅರ್ಜುನನು ಕೌರವಸೇನೆಯನ್ನು ಓಡಿಸಿ ದುಶ್ಶಾಸನನ ಮೇಲೆ ಬಾಣಗಳನ್ನು ಪ್ರಯೋಗಿಸಿದನು.
ತೇ ತು ಭಿತ್ತ್ವಾ ತವ ಸುತಂ ದುಃಶಾಸನಮಯೋಮುಖಾಃ |
ಧರಣೀಂ ವಿವಿಶುಃ ಸರ್ವೇ ವಲ್ಮೀಕಮಿವ ಪನ್ನಗಾಃ |
ಹಯಾಂಶ್ಚಾಸ್ಯ ತತೋ ಜಘ್ನೇ ಸಾರಥಿಂ ಚ ನ್ಯಪಾತಯತ್ ॥41॥
ಅಯೋಮುಖವನ್ನು ಹೊಂದಿದ ಆ ಬಾಣಗಳೆಲ್ಲವೂ ನಿನ್ನ ಪುತ್ರನಾದ ದುಶ್ಶಾಸನನನ್ನು ಭೇದಿಸಿ, ಸರ್ಪಗಳು ಹುತ್ತದೊಳಗೆ ಹೋಗುವಂತೆ ಭೂಮಿಯನ್ನು ಪ್ರವೇಶಿಸಿದವು. ಅನಂತರ ಅರ್ಜುನನು ದುಶ್ಶಾಸನನ ರಥದ ಅಶ್ವಗಳನ್ನು ಮತ್ತು ಸಾರಥಿಯನ್ನು ಉರುಳಿಸಿದನು.
ವಿವಿಂಶತಿಂ ಚ ವಿಂಶತ್ಯಾ ವಿರಥಂ ಕೃತವಾನ್ ಪ್ರಭೋ |
ಆಜಘಾನ ಭೃಶಂ ಚೈವ ಪಂಚಭಿರ್ನತಪರ್ವಭಿಃ ॥42॥
ಎಲೈ ಪ್ರಭುವೇ, ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿ ವಿವಿಂಶತಿಯನ್ನು ರಥಹೀನನನ್ನಾಗಿ ಮಾಡಿದನು. ಮತ್ತು ಬಾಗಿದ ತುದಿಯುಳ್ಳ ಐದು ಬಾಣಗಳಿಂದ ಅವನನ್ನೂ ಚೆನ್ನಾಗಿ ಹೊಡೆದನು.
ಕೃಪಂ ಶಲ್ಯಂ ವಿಕರ್ಣಂ ಚ ವಿದ್ಧ್ವಾ ಬಹುಭಿರಾಯಸೈಃ |
ಚಕಾರ ವಿರಥಾಂಶ್ಚೈವ ಕೌಂತೇಯಃ ಶ್ವೇತವಾಹನಃ ॥43॥
ಕುಂತೀಪುತ್ರನೂ, ಶ್ವೇತವಾಹನನೂ ಆದ ಅರ್ಜುನನು ಕೃಪರು, ಶಲ್ಯ, ವಿಕರ್ಣ ಇವರನ್ನು ಅನೇಕ ಅಯೋಮಯವಾದ ಬಾಣಗಳಿಂದ ಹೊಡೆದು ಅವರನ್ನು ರಥಹೀನರನ್ನಾಗಿ ಮಾಡಿದನು.
ಏವಂ ತೇ ವಿರಥಾಃ ಪಂಚ ಕೃಪಃ ಶಲ್ಯಶ್ಚ ಮಾರಿಷ |
ದುಃಶಾಸನೋ ವಿಕರ್ಣಶ್ಚ ತಥೈವ ಚ ವಿವಿಂಶತಿಃ |
ಸಂಪ್ರಾದ್ರವಂತ ಸಮರೇ ನಿರ್ಜಿತಾಃ ಸವ್ಯಸಾಚಿನಾ ॥44॥
ಎಲೈ ಪೂಜ್ಯನೇ, ಹೀಗೆ ಕೃಪರು, ಶಲ್ಯ, ದುಶ್ಶಾಸನ, ವಿಕರ್ಣ ಮತ್ತು ವಿವಿಂಶತಿ ಈ ಐವರು ರಥವನ್ನು ಕಳೆದುಕೊಂಡು ಯುದ್ಧದಲ್ಲಿ ಅರ್ಜುನನಿಂದ ಪರಾಜಿತರಾಗಿ ಓಡಿಹೋದರು.
ಪೂರ್ವಾಹ್ಣೇ ತು ತಥಾ ರಾಜನ್ ಪರಾಜಿತ್ಯ ಮಹಾರಥಾನ್ |
ಪ್ರಜಜ್ವಾಲ ರಣೇ ಪಾರ್ಥೋ ವಿಧೂಮ ಇವ ಪಾವಕಃ ॥45॥
ಎಲೈ ರಾಜನೇ, ಆ ದಿನದ ಪೂರ್ವಾಹ್ಣದಲ್ಲಿ ಅರ್ಜುನನು ಹಾಗೆ ಮಹಾರಥರನ್ನು ಪರಾಜಯಗೊಳಿಸಿ ಧೂಮರಹಿತವಾದ ಅಗ್ನಿಯಂತೆ ರಣರಂಗದಲ್ಲಿ ಪ್ರಜ್ವಲಿಸಿದನು.
ತಥೈವ ಶರವರ್ಷೇಣ ಭಾಸ್ಕರೋ ರಶ್ಮಿವಾನಿವ |
ಅನ್ಯಾನಪಿ ಮಹಾರಾಜ ಪಾತಯಾಮಾಸ ಪಾರ್ಥಿವಾನ್ ॥46॥
ಎಲೈ ಮಹಾರಾಜನೇ, ಹಾಗೆಯೇ ರಶ್ಮಿಸಹಿತನಾದ ಆದಿತ್ಯನಂತೆ ಉಳಿದ ರಾಜರುಗಳನ್ನೂ ಉರುಳಿಸಿದನು.
ಪರಾಙ್ಮುಖೀಕೃತ್ಯ ತದಾ ಶರವರ್ಷೈರ್ಮಹಾರಥಾನ್ |
ಪ್ರಾವರ್ತಯತ ಸಂಗ್ರಾಮೇ ಶೋಣಿತೋದಾಂ ಮಹಾನದೀಮ್ |
ಮಧ್ಯೇನ ಕುರುಸೈನ್ಯಾನಾಂ ಪಾಂಡವಾನಾಂ ಚ ಭಾರತ ॥47॥

ಎಲೈ ಭಾರತನೇ, ಆಗ ತನ್ನ ಬಾಣಗಳ ಮಳೆಯಿಂದ ಮಹಾರಥರನ್ನು ಯುದ್ಧ ವಿಮುಖರನ್ನಾಗಿ ಮಾಡಿ, ಕೌರವರ ಮತ್ತು ಪಾಂಡವರ ಸೈನ್ಯದ ಮಧ್ಯದಲ್ಲಿ ರಣರಂಗದಲ್ಲಿ ರಕ್ತೋದಕದ ಮಹಾನದಿಯನ್ನು ಹರಿಸಿದನು.

ತಸ್ಮಿನ್ನತಿಮಹಾಭೀಮೇ ರಾಜನ್ ವೀರವರಕ್ಷಯೇ |
ಭೀಷ್ಮಂ ಪ್ರತಿ ಪರಾಕ್ರಾಂತಾಃ ಪಾಂಡವಾಃ ಸಹ ಸೃಂಜಯೈಃ ॥48॥

ಎಲೈ ರಾಜನೇ, ಶ್ರೇಷ್ಠರಾದ ವೀರರನ್ನು ವಿನಾಶಗೊಳಿಸುವ ಅತಿ ಮಹಾಭಯಂಕರವಾದ ಆ ಯುದ್ಧದಲ್ಲಿ ಪಾಂಡವರು ಸೃಂಜಯರ ಜೊತೆ ಸೇರಿ ಭೀಷ್ಮರ ಮೇಲೆ ಎರಗಿದರು.

ತೇ ಪರಾಕ್ರಾಂತಮಾಲೋಕ್ಯ ಯುಧಿ ರಾಜನ್ ಪಿತಾಮಹಮ್ |
ನ ನ್ಯವರ್ತಂತ ತೇ ಪುತ್ರಾ ಬ್ರಹ್ಮಲೋಕಪುರಸ್ಕೃತಾಃ ॥49॥

ಎಲೈ ರಾಜನೇ, ಅವರು ಪಿತಾಮಹರ ಮೇಲೆ ಎರಗುತ್ತಿರುವುದನ್ನು ನೋಡಿ ನಿನ್ನ ಪುತ್ರರು ಬ್ರಹ್ಮಲೋಕವನ್ನು ಪುರಸ್ಕರಿಸಿ ಹಿಮ್ಮೆಟ್ಟಲಿಲ್ಲ.

ಇಚ್ಛಂತೋ ನಿಧನಂ ಯುದ್ಧೇ ಸ್ವರ್ಗಲೋಕಪರಾಯಣಾಃ |
ಪಾಂಡವಾನಭ್ಯವರ್ತಂತ ತಾವಕಾ ಯುದ್ಧದುರ್ಮದಾಃ ॥50॥

ಸ್ವರ್ಗಲೋಕ ಪರಾಯಣರಾಗಿ ಯುದ್ಧದಲ್ಲಿ ಮರಣವನ್ನು ಬಯಸುತ್ತಾ ಯುದ್ಧ ದುರ್ಮದರಾದ ನಿನ್ನ ಪುತ್ರರು ಪಾಂಡವರ ಮೇಲೆಯೇ ಎರಗಿದರು.

ಪಾಂಡವಾಶ್ಚ ಮಹಾರಾಜ ಸ್ಮರಂತೋ ವಿವಿಧಾನ್ ಬಹೂನ್ |
ಕ್ಲೇಶಾನ್ ಕೃತಾನ್ ಸಪುತ್ರೇಣ ತ್ವಯಾ ಪೂರ್ವಂ ನರಾಧಿಪ ॥51॥
ಭಯಂ ತ್ಯಕ್ತ್ವಾ ರಣೇ ಶೂರಾಃ ಸ್ವರ್ಗಲೋಕಪುರಸ್ಕೃತಾಃ |
ತಾವಕಾನ್ ತವ ಪುತ್ರಾಂಶ್ಚ ಯೋಧಯಂತಿ ಸ್ಮ ಹೃಷ್ಟವತ್ ॥52॥

ಎಲೈ ಮಹಾರಾಜನೇ, ಪಾಂಡವರಾದರೋ ನಿನ್ನ ಮತ್ತು ನಿನ್ನ ಪುತ್ರರಿಂದ ಹಿಂದೆ ಉಂಟಾದ ಬಹುವಿಧವಾದ ಅನೇಕ ಕ್ಲೇಶಗಳನ್ನು ಸ್ಮರಿಸುತ್ತಾ, ಸ್ವರ್ಗಲೋಕವನ್ನು ಪುರಸ್ಕರಿಸಿ ಸಮರಶೂರರಾದ ಅವರು ಭಯವನ್ನು ತ್ಯಜಿಸಿ, ನಿನ್ನ ಯೋಧರ ಮತ್ತು ಪುತ್ರರ ಜೊತೆಯಲ್ಲಿ ಸಂತೋಷದಿಂದ ಯುದ್ಧವನ್ನು ಮಾಡಿದರು.

ಗಜಾಶ್ಚ ರಥಸಂಘಾಶ್ಚ ಬಹುಧಾ ರಥಿಭಿರ್ಹತಾಃ |
ರಥಾಶ್ಚ ನಿಹತಾ ನಾಗೈರ್ನಾಗಾ ಹಯಪದಾತಿಭಿಃ ॥53॥

ಗಜಗಳು ಮತ್ತು ರಥಸಮೂಹಗಳು ರಥಿಕರಿಂದ ಅನೇಕ ವಿಧವಾಗಿ ಹತವಾದವು. ರಥಗಳೂ ಗಜಗಳಿಂದ ನಾಶವನ್ನು ಹೊಂದಿದವು. ಗಜಗಳೂ ಸಹ ಹಯ- ಪದಾತಿಗಳಿಂದ ನಾಶವನ್ನು ಹೊಂದಿದವು.

ಅಂತರಾ ಛಿದ್ಯಮಾನಾನಿ ಶರೀರಾಣಿ ಶಿರಾಂಸಿ ಚ |
ನಿಪೇತುರ್ದಿಕ್ಷು ಸರ್ವಾಸು ಗಜಾಶ್ವರಥಯೋಧಿನಾಮ್ ॥54॥

ಮಧ್ಯದಲ್ಲಿ ಕತ್ತರಿಸಲ್ಪಟ್ಟ ಗಜಾಶ್ವರಥಯೋಧಿಗಳ ಶರೀರಗಳು ಮತ್ತು ಶಿರಸ್ಸುಗಳು ಎಲ್ಲ ದಿಕ್ಕುಗಳಲ್ಲಿಯೂ ಭೂಮಿಯ ಮೇಲೆ ಉರುಳಿದವು.

ಛನ್ನಮಾಯೋಧನಂ ರೇಜೇ ಕುಂಡಲಾಂಗದಧಾರಿಭಿಃ |
ಪತಿತೈಃ ಪಾತ್ಯಮಾನೈಶ್ಚ ರಾಜಪುತ್ರೈರ್ಮಹಾರಥೈಃ ॥55॥

ನೆಲದ ಮೇಲೆ ಬಿದ್ದಿರುವ ಮತ್ತು ಬೀಳುತ್ತಿರುವ ಕುಂಡಲಾಂಗದ ಧಾರಿಗಳಾದ ಮಹಾರಥರಾದ ರಾಜಪುತ್ರರಿಂದ ಆವರಿಸಲ್ಪಟ್ಟ ರಣರಂಗವು ಶೋಭಿಸಿತು.

ರಥನೇಮಿನಿಕೃತ್ತಾಶ್ಚ ಗಜೈಶ್ಚೈವಾವಪೋಥಿತಾಃ |
ಪಾದಾತಾಶ್ಚಾಪ್ಯದೃಶ್ಯಂತ ಸಾಶ್ವಾಃ ಸಹಯಸಾದಿನಃ ॥56॥

ರಥದ ಚಕ್ರಗಳಿಗೆ ಸಿಲುಕಿ ಜಜ್ಜಿಹೋದ, ಗಜಗಳ ತುಳಿತಕ್ಕೆ ಸಿಕ್ಕಿ ಭಗ್ನರಾದ ಪದಾತಿಗಳೂ, ಅಶ್ವಾರೋಹಿಗಳಿಂದ ಸಹಿತವಾದ ಅಶ್ವಗಳೂ ಕಂಡುಬಂದವು.

ಗಜಾಶ್ವರಥಸಂಘಾಶ್ಚ ಪರಿಪೇತುಃ ಸಮಂತತಃ |
ವಿಶೀರ್ಣಾಶ್ಚ ರಥಾ ಭೂಮೌ ಭಗ್ನಚಕ್ರಯುಗಧ್ವಜಾಃ ॥57॥

ಗಜಾಶ್ವ-ರಥ ಸಮೂಹಗಳು ಎಲ್ಲ ಕಡೆಗಳಲ್ಲಿಯೂ ಬಿದ್ದವು. ರಥಗಳ ಚಕ್ರ, ನೊಗ ಮತ್ತು ಧ್ವಜಗಳು ಭಗ್ನವಾಗಿ, ರಥಗಳೂ ನಾಶಹೊಂದಿ ಭೂಮಿಯ ಮೇಲೆ ಬಿದ್ದವು.

ತದ್ಗಜಾಶ್ವರಥೌಘಾನಾಂ ರುಧಿರೇಣ ಸಮುಕ್ಷಿತಮ್ |
ಛನ್ನಮಾಯೋಧನಂ ರೇಜೇ ರಕ್ತಾಭ್ರಮಿವ ಶಾರದಮ್ ॥58॥

ಗಜಾಶ್ವ-ರಥ ಸಮೂಹಗಳ ರಕ್ತದಿಂದ ಒದ್ದೆಯಾಗಿ ಆವರಿಸಲ್ಪಟ್ಟ ರಣರಂಗವು ಶರತ್ಕಾಲದ ಕೆಂಪು ಮೋಡದಂತೆ ಕಂಗೊಳಿಸಿತು.

ಶ್ವಾನಃ ಕಾಕಾಶ್ಚ ಗೃಧ್ರಾಶ್ಚ ವೃಕಾ ಗೋಮಾಯುಭಿಃ ಸಹ |
ಪ್ರಣೇದುರ್ಭಕ್ಷ್ಯಮಾಸಾದ್ಯ ವಿಕೃತಾಶ್ಚ ಮೃಗದ್ವಿಜಾಃ ॥59॥

ನಾಯಿಗಳು, ಕಾಗೆಗಳು, ಹದ್ದುಗಳು, ತೋಳಗಳು ಮತ್ತು ನರಿಗಳು ಹಾಗೂ ವಿಕಾರವನ್ನು ಹೊಂದಿದ ಮೃಗ-ಪಕ್ಷಿಗಳು ತಮ್ಮ ಭಕ್ಷ್ಯವನ್ನು ನೋಡಿ ದೊಡ್ಡ ನಾದವನ್ನು ಮಾಡಿದವು.

ವವುರ್ಬಹುವಿಧಾಶ್ಚೈವ ದಿಕ್ಷು ಸರ್ವಾಸು ಮಾರುತಾಃ |
ದೃಶ್ಯಮಾನೇಷು ರಕ್ಷಃಸು ಭೂತೇಷು ವಿನದತ್ಸು ಚ ॥60॥

ಎಲ್ಲ ದಿಕ್ಕುಗಳಲ್ಲಿಯೂ ರಾಕ್ಷಸರು ಮತ್ತು ಭೂತಗಳು ಗರ್ಜನೆಯನ್ನು ಮಾಡುತ್ತಿರಲು ಬಹುವಿಧವಾದ ಒರಟಾದ ಗಾಳಿಯು ಬೀಸಿತು.
ಕಾಂಚನಾನಿ ಚ ದಾಮಾನಿ ಪತಾಕಾಶ್ಚ ಮಹಾಧನಾಃ |
ಧೂಮಾಯಮಾನಾ ದೃಶ್ಯಂತೇ ಸಹಸಾ ಮಾರುತೇರಿತಾಃ ॥61॥
ವಾಯುವಿನ ಹೊಡೆತಕ್ಕೆ ಸಿಕ್ಕಿದ ಸುವರ್ಣಮಯವಾದ ದಾಮಗಳು (ಹಗ್ಗಗಳು, ಸರಪಣಿಗಳು) ಮತ್ತು ಮಹಾಬೆಲೆಬಾಳುವ ಪತಾಕೆಗಳು ಧೂಮದಂತೆ ಕಾಣುತ್ತಿದ್ದವು.
ಶ್ವೇತಚ್ಛತ್ರಸಹಸ್ರಾಣಿ ಸಧ್ವಜಾಶ್ಚ ಮಹಾರಥಾಃ |
ವಿನಿಕೀರ್ಣಾಃ ಸ್ಮ ದೃಶ್ಯಂತೇ ಶತಶೋಽಥ ಸಹಸ್ರಶಃ |
ಸಪತಾಕಾಶ್ಚ ಮಾತಂಗಾ ದಿಶೋ ಜಗ್ಮುಃ ಶರಾತುರಾಃ ॥62॥
ಸಹಸ್ರಾರು ಶ್ವೇತಚ್ಛತ್ರಗಳೂ, ಧ್ವಜಗಳಿಂದ ಕೂಡಿದ ಮಹಾರಥಗಳೂ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಭೂಮಿಯ ಮೇಲೆ ಚಲ್ಲಾಪಿಲ್ಲಿಯಾಗಿ ಬಿದ್ದುದು ಕಂಡುಬಂದಿತು. ಪತಾಕೆಗಳಿಂದ ಸಹಿತವಾದ ಗಜಗಳು ಬಾಣಗಳ ಏಟನ್ನು ತಡೆಯಲಾಗದೆ ದಿಕ್ಕು-ದಿಕ್ಕುಗಳಿಗೆ ಓಡಿಹೋದವು.
ಕ್ಷತ್ರಿಯಾಶ್ಚ ಮನುಷ್ಯೇಂದ್ರ ಗದಾಶಕ್ತಿಧನುರ್ಧರಾಃ |
ಸಮಂತತೋ ವ್ಯದೃಶ್ಯಂತ ಪತಿತಾ ಧರಣೀತಳೇ ॥63॥
ಎಲೈ ಮನುಷ್ಯೇಂದ್ರನೇ, ಗದಾ-ಶಕ್ತಿ-ಧನುಸ್ಸುಗಳನ್ನು ಹಿಡಿದ ಕ್ಷತ್ರಿಯರು ಭೂಮಿಯ ಮೇಲೆ ಬಿದ್ದಿರುವುದು ಎಲ್ಲೆಡೆಯಲ್ಲಿಯೂ ಕಂಡುಬಂದಿತು.
ತತೋ ಭೀಷ್ಮೋ ಮಹಾರಾಜ ದಿವ್ಯಮಸ್ತ್ರಮುದೀರಯನ್ |
ಅಭ್ಯಧಾವತ ಕೌಂತೇಯಂ ಮಿಷತಾಂ ಸರ್ವಧನ್ವಿನಾಮ್ ॥64॥
ಎಲೈ ಮಹಾರಾಜನೇ, ಆಗ ಭೀಷ್ಮರು ದಿವ್ಯಾಸ್ತ್ರಗಳನ್ನು ಪ್ರಾದುರ್ಭಾವಗೊಳಿಸುತ್ತಾ ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆ ಅರ್ಜುನನ ಕಡೆಗೆ ಧಾವಿಸಿದರು.
ತಂ ಶಿಖಂಡೀ ರಣೇ ಯತ್ತಮಭ್ಯಧಾವತ ದಂಸಿತಃ |
ಸಂಜಹಾರ ತತೋ ಭೀಷ್ಮಸ್ತದಸ್ತ್ರಂ ಪಾವಕೋಪಮಮ್ ॥65॥
ಶಸ್ತ್ರ-ಕವಚಗಳನ್ನು ಧರಿಸಿದ ಶಿಖಂಡಿಯು ಎಚ್ಚರಿಕೆಯಿಂದ ಅವರ ಕಡೆಗೆ ಧಾವಿಸಿದನು. ಆಗ ಭೀಷ್ಮರು ಅಗ್ನಿ ಸದೃಶವಾದ ಆ ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಂಡರು.
ಏತಸ್ಮಿನ್ನೇವ ಕಾಲೇ ತು ಕೌಂತೇಯಃ ಶ್ವೇತವಾಹನಃ |
ನಿಜಘ್ನೇ ತಾವಕಂ ಸೈನ್ಯಂ ಮೋಹಯಿತ್ವಾ ಪಿತಾಮಹಮ್ ॥66॥
ಅದೇ ಕಾಲದಲ್ಲಿ ಕುಂತೀಪುತ್ರನಾದ ಅರ್ಜುನನು ಪಿತಾಮಹರಾದ ಭೀಷ್ಮರನ್ನು ಮರುಳುಗೊಳಿಸಿ ನಿನ್ನ ಸೈನ್ಯವನ್ನು ಸಂಹರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ
ಚತುರ್ದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಚತುಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹದಿನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನೈದನೆಯ ಅಧ್ಯಾಯ
ಭೀಷ್ಮರ ಮತ್ತು ಅರ್ಜುನನ ಪ್ರತಾಪ. ಪಾಂಡವಸೇನೆಯಿಂದ
ಸಮಗ್ರವಾಗಿ ಭೀಷ್ಮರ ಕಡೆಗೆ ಅಭಿಧಾವನೆ.
ಸಂಜಯಃ
ಏವಂ ವ್ಯೂಢೇಷ್ವನೀಕೇಷು ಭೂಯಿಷ್ಠಮನುವರ್ತಿಷು |
ಬ್ರಹ್ಮಲೋಕಪರಾಃ ಸರ್ವೇ ಸಮಪದ್ಯಂತ ಭಾರತ ॥1॥
ಸಂಜಯ ಸೈನ್ಯಗಳು ವ್ಯೂಹಗೊಂಡು ಯೋಧರು ಪರಾಕ್ರಮಶಾಲಿಗಳನ್ನು ಹಿಂಬಾಲಿಸುತ್ತಿರಲು ಎಲೈ ಭಾರತನೇ, ಎಲ್ಲರೂ ಬ್ರಹ್ಮಲೋಕಪರಾಯಣರಾದರು.
ನ ಹ್ಯನೀಕಮನೀಕೇನ ಸಮಸಜ್ಜತ ಸಂಕುಲೇ |
ನ ರಥಾ ರಥಿಭಿಃ ಸಾರ್ಧಂ ನ ಪದಾತಾಃ ಪದಾತಿಭಿಃ ॥2॥
ಸಂಕುಲ ಯುದ್ಧದಲ್ಲಿ ಸೈನ್ಯವು ಸೈನ್ಯದಿಂದಾಗಲಿ, ರಥಿಕರು ರಥಿಕರಿಂದಾಗಲೀ, ಪದಾತಿಗಳು ಪದಾತಿಗಳಿಂದಾಗಲೀ ಸರಿಯಾಗಿ ಸೇರಲಿಲ್ಲ.
ಅಶ್ವಾ ನಾಶ್ವೈರಯುಧ್ಯಂತ ನ ಗಜಾ ಗಜಯೋಧಿಭಿಃ |
ಮಹಾನ್ವ್ಯತಿಕರೋ ರೌದ್ರಃ ಸೇನಯೋಃ ಸಮಪದ್ಯತ ॥3॥
ಅಶ್ವಗಳು ಅಶ್ವಗಳ ಜೊತೆಯಲ್ಲಿ ಹೋರಾಡಲಿಲ್ಲ. ಗಜಾರೋಹಿಗಳು ಗಜಾರೋಹಿಗಳ ಜೊತೆಯಲ್ಲಿ ಹೋರಾಡಲಿಲ್ಲ. ಎಲೈ ಭಾರತನೇ, ಮಹಾರಾಜನೇ, ಅಲ್ಲಿ ಹುಚ್ಚರಂತೆ ಯುದ್ಧ ಮಾಡಲು ಪ್ರಾರಂಭಿಸಿದರು. ಎರಡು ಸೈನ್ಯಗಳಿಗೆ ಭಯಂಕರವಾದ ಮಿಶ್ರಣ ಉಂಟಾಯಿತು.
ನರನಾಗರಥೇಷ್ವೇವಂ ವ್ಯವಕೀರ್ಣೇಷು ಸರ್ವಶಃ |

ಕ್ಷಯೇ ತಸ್ಮಿನ್ ಮಹಾರೌದ್ರೇ ನಿರ್ವಿಶೇಷಮಜಾಯತ ॥4॥
ಯೋಧರು, ಗಜಗಳು ಮತ್ತು ರಥಗಳು ಹೀಗೆ ಎಲ್ಲ ಕಡೆಗಳಲ್ಲಿಯೂ ಮಿಶ್ರಣಗೊಂಡಿರಲು ಭಯಂಕರವಾದ ಆ ವೀರಕ್ಷಯದಲ್ಲಿ ಎರಡು ಸೈನ್ಯಗಳಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ.
ತತಃ ಶಲ್ಯಃ ಕೃಪಶ್ಚೈವ ಚಿತ್ರಸೇನಶ್ಚ ಭಾರತ |
ದುಃಶಾಸನೋ ವಿಕರ್ಣಶ್ಚ ರಥಾನಾಸ್ಥಾಯ ಸತ್ವರಾಃ |
ಪಾಂಡವಾನಾಂ ರಣೇ ಶೂರಾ ಧ್ವಜಿನೀಂ ಸಮಕಂಪಯನ್ ॥5॥
ಎಲೈ ಭಾರತನೇ, ಆಗ ಶಲ್ಯ, ಕೃಪರು, ಚಿತ್ರಸೇನ, ದುಶ್ಶಾಸನ ಮತ್ತು ವಿಕರ್ಣರು ಜಾಗ್ರತೆಯಾಗಿ ತಮ್ಮ ರಥಗಳನ್ನು ಏರಿ, ರಣರಂಗದಲ್ಲಿ ಪಾಂಡವರ ಸೈನ್ಯವನ್ನು ನಡುಗಿಸಿದರು.
ಸಾ ವಧ್ಯಮಾನಾ ಸಮರೇ ಪಾಂಡುಸೇನಾ ಮಹಾತ್ಮಭಿಃ |
ತ್ರಾತಾರಂ ನಾಧ್ಯಗಚ್ಛದ್ ವೈ ಮಜ್ಜಮಾನೇವ ನೌರ್ಜಲೇ ॥6॥
ಮಹಾತ್ಮರಾದ ಅವರಿಂದ ಯುದ್ಧದಲ್ಲಿ ವಧಿಸಲ್ಪಡುತ್ತಿದ್ದ ಪಾಂಡವರ ಸೈನ್ಯವು ನೀರಿನಲ್ಲಿ ಮುಳುಗುವ ಹಡಗಿನಂತೆ ರಕ್ಷಕರನ್ನು ಕಾಣಲಿಲ್ಲ.
ಯಥಾ ಹಿ ಶೈಶಿರಃ ಕಾಲೋ ಗವಾಂ ಮರ್ಮಾಣಿ ಕೃಂತತಿ |
ತಥಾ ಪಾಂಡುಸುತಾನಾಂ ವೈ ಭೀಷ್ಮೋ ಮರ್ಮಾಣ್ಯಕೃಂತತ ॥7॥
ಶಿಶಿರ ಋತುವು ಗೋವುಗಳ ಮರ್ಮವನ್ನು ಛೇದಿಸಿದಂತೆ ಭೀಷ್ಮರು ಪಾಂಡವರ ಸೈನ್ಯದ ಮರ್ಮಸ್ಥಾನಗಳನ್ನು ಕತ್ತರಿಸಿದರು.
ತಥೈವ ತವ ಸೈನ್ಯಸ್ಯ ಪಾರ್ಥೇನ ಚ ಮಹಾತ್ಮನಾ |
ನಗಮೇಘಪ್ರತೀಕಾಶಾಃ ಪಾತಿತಾ ಬಹುಧಾ ಗಜಾಃ ॥8॥
ಮಹಾತ್ಮನಾದ ಅರ್ಜುನನಿಂದ ನಿನ್ನ ಸೈನ್ಯದ ಪರ್ವತದಂತೆ, ಮೇಘದಂತೆ ಶೋಭಿಸುವ ಗಜಗಳು ಅನೇಕ ರೀತಿಯಲ್ಲಿ ಉರುಳಿಸಲ್ಪಟ್ಟವು.
ಮೃದ್ಯಮಾನಾಶ್ಚ ದೃಶ್ಯಂತೇ ಪಾರ್ಥೇನ ನರಯೂಥಪಾಃ |
ಇಷುಭಿಸ್ತಾಡ್ಯಮಾನಾಶ್ಚ ನಾರಾಚೈಶ್ಚ ಸಹಸ್ರಶಃ ॥9॥
ಯೋಧಶ್ರೇಷ್ಠರು ಬಾಣಗಳಿಂದ ಹೊಡೆಯಲ್ಪಟ್ಟು, ಸಹಸ್ರಾರು ನಾರಾಚಗಳಿಂದ ಹೊಡೆಯಲ್ಪಟ್ಟು ಅರ್ಜುನನಿಂದ ಮರ್ದಿಸಲ್ಪಡುವುದು ಕಂಡುಬರುತ್ತಿದ್ದಿತು.
ಪೇತುರಾರ್ತಸ್ವರಂ ಕೃತ್ವಾ ತತ್ರ ತತ್ರ ಮಹಾಗಜಾಃ |
ಮಹಾಗಜಗಳು ಅಲ್ಲಲ್ಲಿ ಆರ್ತನಾದವನ್ನು ಮಾಡಿ ಬೀಳುತ್ತಿದ್ದವು.
ಆಬದ್ಧಾಭರಣೈಃ ಕಾಯೈರ್ನಿಹತಾನಾಂ ಮಹಾತ್ಮನಾಮ್ ॥10॥
ಛನ್ನಮಾಯೋಧನಂ ರೇಜೇ ಶಿರೋಭಿಶ್ಚ ಸಕುಂಡಲೈಃ |
ತಸ್ಮಿನ್ನತಿಮಹಾಭೀಮೇ ರಾಜನ್ ವೀರವರಕ್ಷಯೇ |
ಭೀಷ್ಮೇ ಚ ಯುಧಿ ವಿಕ್ರಾಂತೇ ಪಾಂಡವೇ ಚ ಧನಂಜಯೇ ॥11॥
ಆಭರಣಗಳನ್ನು ಧರಿಸಿ, ಕುಂಡಲಗಳನ್ನು ಧರಿಸಿ, ಕತ್ತರಿಸಲ್ಪಟ್ಟ ಮಹಾತ್ಮರ ಕೆಳಗುರುಳಿದ ದೇಹಗಳಿಂದ ಮತ್ತು ಶಿರಸ್ಸುಗಳಿಂದ ರಣರಂಗವು ಆವೃತವಾಗಿ ಶೋಭಿಸಿತು. ಎಲೈ ರಾಜನೇ, ವೀರವರರ ವಿನಾಶವನ್ನು ಮಾಡುವ ಅತ್ಯಂತ ಭಯಂಕರವಾದ ಆ ಯುದ್ಧದಲ್ಲಿ ಪಾಂಡುಸುತನಾದ ಅರ್ಜುನನೂ ಮತ್ತು ಭೀಷ್ಮರೂ ಯುದ್ಧದಲ್ಲಿ ಪರಾಕ್ರಮವನ್ನು ತೋರಿಸುತ್ತಿರಲು (ರಣಭೂಮಿಯು ಶೋಭಿಸಿತು).
ಸೇನಾಪತಿಸ್ತು ಸಮರೇ ಪ್ರಾಹ ಸೇನಾಂ ಮಹಾರಥಃ |
ಅಭಿದ್ರವತ ಗಾಂಗೇಯಂ ಸೋಮಕಾಃ ಸೃಂಜಯೈಃ ಸಹ ॥12॥
ಮಹಾರಥನೂ, ಸೇನಾಪತಿಯೂ ಆದ ಧೃಷ್ಟದ್ಯುಮ್ನನು ಯುದ್ಧದಲ್ಲಿ ತನ್ನ ಸೇನೆಯನ್ನು ಕುರಿತು ಎಲೈ ಸೋಮಕರೇ, ಸೃಂಜಯರ ಜೊತೆಯಲ್ಲಿ ಭೀಷ್ಮರ ಮೇಲೆ ಹೋಗುವವರಾಗಿ ಎಂದು ಹೇಳಿದನು.
ಸೇನಾಪತಿವಚಃ ಶ್ರುತ್ವಾ ಸೋಮಕಾಃ ಸಹ ಸೃಂಜಯೈಃ |
ಅಭ್ಯದ್ರುವಂತ ಗಾಂಗೇಯಂ ಶಸ್ತ್ರವೃಷ್ಟ್ಯಾ ಸಮಂತತಃ ॥13॥
ಸೇನಾಪತಿಯ ಮಾತುಗಳನ್ನು ಕೇಳಿ ಸೃಂಜಯರಿಂದ ಸಹಿತರಾಗಿ ಸೋಮಕರು ಎಲ್ಲ ಕಡೆಗಳಲ್ಲಿಯೂ ಶಸ್ತ್ರಗಳ ಮಳೆಯನ್ನು ಕರೆಯುತ್ತಾ ಭೀಷ್ಮರ ಬಳಿಗೆ ಓಡಿದರು.
ವಧ್ಯಮಾನಸ್ತತೋ ರಾಜನ್ ಪಿತಾ ಶಾಂತನವಸ್ತವ |
ಅಮರ್ಷವಶಮಾಪನ್ನೋ ಯೋಧಯಾಮಾಸ ಸೃಂಜಯಾನ್ ॥14॥
ಎಲೈ ರಾಜನೇ, ಆಗ ಅವರಿಂದ ಹೊಡೆಯಲ್ಪಟ್ಟ ನಿನ್ನ ತಂದೆಯಾದ ಭೀಷ್ಮರು ಕ್ರೋಧವಶರಾಗಿ ಸೃಂಜಯರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತಸ್ಯ ಕೀರ್ತಿಮತಸ್ತಾತ ಪುರಾ ರಾಮೇಣ ಧೀಮತಾ |
ಸಂಪ್ರದತ್ತಾಸ್ತ್ರಶಿಕ್ಷಾ ವೈ ಪರಾನೀಕವಿನಾಶಿನೀ ॥15॥
ಎಲೈ ಪ್ರೀತಿಪಾತ್ರನೇ, ಕೀರ್ತಿಶಾಲಿಗಳಾದ ಅವರಿಗೆ ಹಿಂದೆ ಮೇಧಾವಿಗಳಾದ ಪರಶುರಾಮರು ಪ್ರೀತಿಪೂರ್ವಕವಾಗಿ ಕೊಟ್ಟ ಅಸ್ತ್ರವಿದ್ಯೆಯು ಶತ್ರುಸೈನ್ಯಗಳನ್ನು ನಾಶಮಾಡಿತು.
ಸ ತಾಂ ಶಿಕ್ಷಾಮಧಿಷ್ಠಾಯ ಕೃತ್ವಾ ಪರಬಲಕ್ಷಯಮ್ |

ಅಹನ್ಯಹನಿ ಪಾರ್ಥಾನಾಂ ವೃದ್ಧಃ ಕುರುಪಿತಾಮಹಃ |
ಭೀಷ್ಮೋ ದಶ ಸಹಸ್ರಾಣಿ ಜಘಾನ ಪರವೀರಹಾ ॥16॥
ವೃದ್ಧರೂ, ಕುರುಪಿತಾಮಹರೂ, ಪರವೀರಘಾತಕರೂ ಆದ ಭೀಷ್ಮರು ಆ ವಿದ್ಯೆಯನ್ನು ಅವಲಂಬಿಸಿ, ಶತ್ರುಸೈನ್ಯದ ಕ್ಷಯವನ್ನು ಉಂಟುಮಾಡಿ, ಪ್ರತಿದಿವಸವೂ ಪಾಂಡವರ ಸೇನೆಯಲ್ಲಿ ಹತ್ತು ಸಹಸ್ರ ಯೋಧರನ್ನು ಕೊಂದರು.
ತಸ್ಮಿಂಸ್ತು ದಿವಸೇ ಪ್ರಾಪ್ತೇ ದಶಮೇ ಭರತರ್ಷಭ |
ಭೀಷ್ಮೇಣೈಕೇನ ಮತ್ಸ್ಯೇಷು ಪಾಂಚಾಲೇಷು ಚ ಸಂಯುಗೇ |
ಗಜಾಶ್ವಮಮಿತಂ ಹತ್ವಾ ಹತಾಃ ಸಪ್ತ ಮಹಾರಥಾಃ ॥17॥
ಎಲೈ ಭರತಶ್ರೇಷ್ಠನೇ, ಆ ಹತ್ತನೆಯ ದಿವಸವು ಪ್ರಾಪ್ತವಾಗುತ್ತಿರಲು ಭೀಷ್ಮರೊಬ್ಬರೇ ಮತ್ಸ್ಯ ಮತ್ತು ಪಾಂಚಾಲರ ಜೊತೆ ಯುದ್ಧದಲ್ಲಿ ಅಪರಿಮಿತವಾದ ಗಜಾಶ್ವಗಳನ್ನು ಕೊಂದು, ಏಳು ಮಹಾರಥರನ್ನೂ ಕೊಂದರು.
ಹತ್ವಾ ಪಂಚ ಸಹಸ್ರಾಣಿ ರಥಿನಾಂ ಪ್ರಪಿತಾಮಹಃ |
ನರಾಣಾಂ ಚ ಮಹಾಯುದ್ಧೇ ಸಹಸ್ರಾಣಿ ಚತುರ್ದಶ ॥18॥
ಪ್ರಪಿತಾಮಹರಾದ ಭೀಷ್ಮರು ಐದು ಸಹಸ್ರ ರಥಿಕರನ್ನು ಕೊಂದು, ಆ ಮಹಾಯುದ್ಧದಲ್ಲಿ ಹದಿನಾಲ್ಕು ಸಾವಿರ ಯೋಧರನ್ನೂ ಕೊಂದರು.
ತಥಾ ದಂತಿಸಹಸ್ರಂ ಚ ಹಯಾನಾಮಯುತಂ ಪುನಃ |
ಶಿಕ್ಷಾಬಲೇನ ನಿಹತಂ ಪಿತ್ರಾ ತವ ವಿಶಾಂಪತೇ ॥19॥
ಎಲೈ ರಾಜನೇ, ವಿದ್ಯಾಭ್ಯಾಸ ಬಲದಿಂದ ನಿನ್ನ ತಂದೆಯಾದ ಅವರು ಸಹಸ್ರ ಗಜಗಳನ್ನೂ ಮತ್ತು ಹತ್ತು ಸಾವಿರ ಅಶ್ವಗಳನ್ನೂ ಕೊಂದರು.
ತತಃ ಸರ್ವಮಹೀಪಾನಾಂ ಕ್ಷೋಭಯಿತ್ವಾ ವರೂಥಿನೀಮ್ |
ವಿರಾಟಸ್ಯ ಪ್ರಿಯೋ ಭ್ರಾತಾ ಶತಾನೀಕೋ ನಿಪಾತಿತಃ ॥20॥
ನಂತರ ಸರ್ವರಾಜರ ಸೈನ್ಯವನ್ನು ಕ್ಷೋಭೆಗೊಳಿಸಿ ವಿರಾಟನ ಪ್ರಿಯ ಸಹೋದರನಾದ ಶತಾನೀಕನನ್ನು ಕೊಂದರು.
ಶತಾನೀಕಂ ಚ ಸಮರೇ ಹತ್ವಾ ಭೀಷ್ಮಃ ಪ್ರತಾಪವಾನ್ |
ಸಹಸ್ರಾಣಿ ಮಹಾರಾಜ ರಾಜ್ಞಾಂ ಭಲ್ಲೈರ್ನ್ಯಪಾತಯತ್ ॥21॥
ಎಲೈ ಮಹಾರಾಜನೇ, ಶತಾನೀಕನನ್ನು ಯುದ್ಧದಲ್ಲಿ ಕೊಂದು ಪ್ರತಾಪಶಾಲಿಗಳಾದ ಭೀಷ್ಮರು ಒಂದು ಸಹಸ್ರ ರಾಜರನ್ನು ಭಲ್ಲಗಳಿಂದ ಭೂಮಿಯ ಮೇಲೆ ಉರುಳಿಸಿದರು.
ಯೇ ಚ ಕೇಚನ ಪಾರ್ಥಾನಾಮಭಿಯಾತಾ ಧನಂಜಯಮ್ |
ರಾಜಾನೋ ಭೀಷ್ಮಮಾಸಾದ್ಯ ಗತಾಸ್ತೇ ಯಮಸಾದನಮ್ ॥22॥
ಯಾರು ಯಾರು ಅರ್ಜುನನನ್ನು ಹಿಂಬಾಲಿಸಿ ಯುದ್ಧವನ್ನು ಮಾಡುತ್ತಿದ್ದರೋ ಅಂತಹ ರಾಜರೆಲ್ಲರೂ ಭೀಷ್ಮರನ್ನು ಸಮೀಪಿಸಿ ಯಮಪಟ್ಟಣಕ್ಕೆ ಹೋದರು.
ಏವಂ ದಶ ದಿಶೋ ಭೀಷ್ಮಃ ಶರಜಾಲೈಃ ಸಮಂತತಃ |
ಅತೀತ್ಯ ಸೇನಾಂ ಪಾರ್ಥಾನಾಮವತಸ್ಥೇ ಚಮೂಮುಖೇ ॥23॥
ಹೀಗೆ ಭೀಷ್ಮರು ಹತ್ತು ದಿಕ್ಕುಗಳನ್ನು ತಮ್ಮ ಬಾಣಸಮೂಹಗಳಿಂದ ಹರಡಿ, ತಮ್ಮ ಸೇನೆಯನ್ನು ದಾಟಿ ಪಾಂಡವರ ಸೇನಾಮುಖದಲ್ಲಿ ನಿಂತರು.
ಸ ಕೃತ್ವಾ ಸುಮಹತ್ಕರ್ಮ ತಸ್ಮಿನ್ ವೈ ದಶಮೇಽಹನಿ |
ಸೇನಯೋರಂತರೇ ತಿಷ್ಠನ್ ಪ್ರಗೃಹೀತಶರಾಸನಃ ॥24॥
ಆ ಹತ್ತನೆಯ ದಿವಸದಲ್ಲಿ ಬಹಳ ದೊಡ್ಡ ಕಾರ್ಯವನ್ನು ಮಾಡಿ, ಕೈಯಲ್ಲಿ ಧನುಸ್ಸನ್ನು ಹಿಡಿದು ಅವರು ಎರಡು ಸೈನ್ಯಗಳ ಮಧ್ಯದಲ್ಲಿ ನಿಂತರು.
ನ ಚೈನಂ ಪಾರ್ಥಿವಾ ರಾಜನ್ ಶೇಕುಃ ಕೇಚಿನ್ನಿರೀಕ್ಷಿತುಮ್ |
ಮಧ್ಯಂ ಪ್ರಾಪ್ತಂ ಯಥಾ ಗ್ರೀಷ್ಮೇ ತಪಂತಂ ಭಾಸ್ಕರಂ ದಿವಿ ॥25॥
ಎಲೈ ರಾಜನೇ, ಗ್ರೀಷ್ಮಕಾಲದಲ್ಲಿ ಆಕಾಶಮಧ್ಯದಲ್ಲಿ ಜ್ವಲಿಸುವ ಸೂರ್ಯನಂತಿದ್ದ ಅವರನ್ನು ನೋಡಲು ಯಾವ ರಾಜರಿಗೂ ಸಾಧ್ಯವಾಗಲಿಲ್ಲ.
ಯಥಾ ದೈತ್ಯಚಮೂಂ ಶಕ್ರಸ್ತಾಪಯಾಮಾಸ ಸಂಯುಗೇ |
ತಥಾ ಭೀಷ್ಮಃ ಪಾಂಡವೇಯಾಂಸ್ತಾಪಯಾಮಾಸ ಭಾರತ ॥26॥
ಎಲೈ ಭಾರತನೇ, ಹೇಗೆ ದೇವಾಸುರ ಯುದ್ಧದಲ್ಲಿ ಇಂದ್ರನು ದೈತ್ಯಸೇನೆಯನ್ನು ತಾಪಗೊಳಿಸಿದನೋ ಹಾಗೆ ಭೀಷ್ಮರು ಪಾಂಡವ ಸೈನ್ಯವನ್ನು ತಾಪಗೊಳಿಸಿದರು.
ತಥಾ ಚ ತಂ ಪರಾಕ್ರಾಂತಮಾಲೋಕ್ಯ ಮಧುಸೂದನಃ |
ಉವಾಚ ದೇವಕೀಪುತ್ರಃ ಪ್ರೀಯಮಾಣೋ ಧನಂಜಯಮ್ ॥27॥
ಅವರು ಹಾಗೆ ಪರಾಕ್ರಮವನ್ನು ತೋರಿಸುತ್ತಿರುವುದನ್ನು ನೋಡಿ ದೇವಕೀಪುತ್ರನಾದ ಮಧುಸೂದನನು ಸಂತೋಷಗೊಂಡು ಅರ್ಜುನನನ್ನು ಕುರಿತು ಮಾತನಾಡಿದನು.
ಏಷ ಶಾಂತನವೋ ಭೀಷ್ಮಃ ಸೇನಯೋರಂತರೇ ಸ್ಥಿತಃ |
ನಾನಿಹತ್ಯ ಬಲಾದೇನಂ ವಿಜಯಸ್ತೇ ಭವಿಷ್ಯತಿ ॥28॥

ಶಂತನುಪುತ್ರರಾದ ಈ ಭೀಷ್ಮರು ಎರಡು ಸೈನ್ಯಗಳ ಮಧ್ಯದಲ್ಲಿ ನಿಂತಿದ್ದಾರೆ. ನಿನ್ನ ಸಾಮರ್ಥ್ಯದಿಂದ ಇವರನ್ನು ಕೊಲ್ಲದೆ ನಿನಗೆ ಜಯವುಂಟಾಗುವುದಿಲ್ಲ.
ಯತ್ತಃ ಸಂಸ್ತಂಭಯಸ್ವೈನಂ ಯತ್ರೈಷಾ ಭಿದ್ಯತೇ ಚಮೂಃ |
ನ ಹಿ ಭೀಷ್ಮಶರಾನನ್ಯಃ ಸೋಢುಮುತ್ಸಹತೇ ವಿಭೋ ॥29॥
ನಿನ್ನ ಸೈನ್ಯವು ಭಗ್ನವಾಗುತ್ತಿರುವ ಕಡೆಯಲ್ಲಿ ಪ್ರಯತ್ನಪೂರ್ವಕವಾಗಿ ಅವರನ್ನು ಸ್ತಂಭನಗೊಳಿಸು. ಎಲೈ ವಿಭುವೇ, ನಿನ್ನನ್ನು ಬಿಟ್ಟು ಬೇರೆ ಯಾರೂ ಭೀಷ್ಮರ ಬಾಣಗಳನ್ನು ಸಹಿಸಲಾರರು (ಎಂದು ಹೇಳಿದನು).
ತತಸ್ತಸ್ಮಿನ್ ಕ್ಷಣೇ ರಾಜನ್ ಚೋದಿತೋ ವಾನರಧ್ವಜಃ |
ಸಧ್ವಜಂ ಸರಥಂ ಸಾಶ್ವಂ ಭೀಷ್ಮಮಂತರ್ದಧೇ ಶರೈಃ ॥30॥
ಎಲೈ ರಾಜನೇ, ಹೀಗೆ ಕೃಷ್ಣನಿಂದ ಪ್ರೇರಿತನಾದ ಕಪಿಧ್ವಜನಾದ ಅರ್ಜುನನು ಆ ಕ್ಷಣದಲ್ಲಿ ಧ್ವಜಾಶ್ವರಥಗಳಿಂದ ಸಹಿತರಾದ ಭೀಷ್ಮರನ್ನು ತನ್ನ ಬಾಣಗಳಿಂದ ಅಂತರ್ಧಾನಗೊಳಿಸಿದನು.
ಸ ಚಾಪಿ ಕುರುಮುಖ್ಯಾನಾಮೃಷಭಃ ಪಾಂಡವೇರಿತಾನ್ |
ಶರವ್ರಾತೈಃ ಶರವ್ರಾತಾನ್ ಬಹುಧಾ ವಿದುಧಾವ ತಾನ್ ॥31॥
ಕುರುಶ್ರೇಷ್ಠರಲ್ಲಿ ಶ್ರೇಷ್ಠರಾದ ಅವರು ಪಾಂಡವನು ಪ್ರಯೋಗಿಸಿದ ಬಾಣ ಸಮೂಹಗಳನ್ನು ತಮ್ಮ ಬಾಣಸಮೂಹಗಳಿಂದ ಬಹುವಿಧವಾಗಿ ಭಗ್ನಗೊಳಿಸಿದರು.
ತೇನ ಪಾಂಚಾಲರಾಜಶ್ಚ ಧೃಷ್ಟಕೇತುಶ್ಚ ವೀರ್ಯವಾನ್ |
ಪಾಂಡವೋ ಭೀಮಸೇನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥32॥
ಯಮೌ ಚ ಚೇಕಿತಾನಶ್ಚ ಕೇಕಯಾಃ ಪಂಚ ಚೈವ ಹ |
ಸಾತ್ಯಕಿಶ್ಚ ಮಹಾರಾಜ ಸೌಭದ್ರೋಽಥ ಘಟೋತ್ಕಚಃ ॥33॥
ದ್ರೌಪದೇಯಾಃ ಶಿಖಂಡೀ ಚ ಕುಂತಿಭೋಜಶ್ಚ ವೀರ್ಯವಾನ್ |
ಸುಶರ್ಮಾ ಚ ವಿರಾಟಶ್ಚ ಪಾಂಡವೇಯಾ ಮಹಾಬಲಾಃ ॥34॥
ಏತೇ ಚಾನ್ಯೇ ಚ ಬಹವಃ ಪೀಡಿತಾ ಭೀಷ್ಮಸಾಯಕೈಃ |
ಸಮುದ್ಧೃತಾಃ ಫಲ್ಗುನೇನ ನಿಮಗ್ನಾಃ ಶೋಕಸಾಗರೇ ॥35॥
ಪಾಂಚಾಲರಾಜ, ಪರಾಕ್ರಮಶಾಲಿಯಾದ ಧೃಷ್ಟಕೇತು, ಪಾಂಡವನಾದ ಭೀಮಸೇನ, ದ್ರುಪದ ಪುತ್ರನಾದ ಧೃಷ್ಟದ್ಯುಮ್ನ, ನಕುಲ-ಸಹದೇವರು, ಚೇಕಿತಾನ, ಕೇಕಯ ಪಂಚ ಸಹೋದರರು, ಸಾತ್ಯಕಿ, ಅಭಿಮನ್ಯು, ಘಟೋತ್ಕಚ, ದ್ರೌಪದಿಯ ಐವರು ಮಕ್ಕಳು, ಶಿಖಂಡಿ, ಪರಾಕ್ರಮಶಾಲಿಯಾದ ಕುಂತಿಭೋಜ, ಸುಶರ್ಮ, ವಿರಾಟ, ಪಾಂಡವಸೈನ್ಯದ ಮಹಾಬಲಿಷ್ಠರು- ಎಲೈ ಮಹಾರಾಜನೇ, ಭೀಷ್ಮ ಬಾಣಗಳಿಂದ ಪೀಡಿತರಾಗಿ, ಶೋಕ ಸಾಗರದಲ್ಲಿ ಮುಳುಗಿದ ಇವರೆಲ್ಲರೂ ಮತ್ತು ಇನ್ನೂ ಅನೇಕರೂ ಅರ್ಜುನನಿಂದ ಉದ್ಧರಿಸಲ್ಪಟ್ಟರು.
ತತಃ ಶಿಖಂಡೀ ವೇಗೇನ ಪ್ರಗೃಹ್ಯ ಪರಮಾಯುಧಮ್ |
ಭೀಷ್ಮಮೇವಾಭಿದುದ್ರಾವ ರಕ್ಷ್ಯಮಾಣಃ ಕಿರೀಟಿನಾ ॥36॥
ಆಗ ಶಿಖಂಡಿಯು ಶ್ರೇಷ್ಠವಾದ ಆಯುಧವನ್ನು ಹಿಡಿದು, ಅರ್ಜುನನಿಂದ ರಕ್ಷಿತನಾಗಿ ಭೀಷ್ಮರನ್ನೇ ಉದ್ದೇಶಿಸಿ ವೇಗವಾಗಿ ಓಡಿದನು.
ತತೋಽಸ್ಯಾನುಚರಾನ್ ಹತ್ವಾ ಸರ್ವಾನ್ ರಣವಿಭಾಗವಿತ್ |
ಭೀಷ್ಮಮೇವಾಭಿದುದ್ರಾವ ಬೀಭತ್ಸುರಪರಾಜಿತಃ ॥37॥
ಆಗ ರಣವಿಭಾಗವನ್ನು ತಿಳಿದ ಅರ್ಜುನನು ಭೀಷ್ಮರ ಅನುಚರರೆಲ್ಲರನ್ನೂ ಕೊಂದು, ಅಪರಾಜಿತನಾಗಿ ಭೀಷ್ಮರ ಕಡೆಗೇ ಧಾವಿಸಿದನು.

ಸಾತ್ಯಕಿಶ್ಚೇಕಿತಾನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ವಿರಾಟೋ ದ್ರುಪದಶ್ಚೈವ ಮಾದ್ರೀಪುತ್ರೌ ಚ ಪಾಂಡವೌ |
ದುದ್ರುವುರ್ಭೀಷ್ಮಮೇವಾಜೌ ರಕ್ಷಿತಾ ದೃಢಧನ್ವನಾ ॥38॥
ಸಾತ್ಯಕಿ, ಚೇಕಿತಾನ, ಪಾರ್ಷತನಾದ ಧೃಷ್ಟದ್ಯುಮ್ನ, ವಿರಾಟ, ದ್ರುಪದ, ಪಾಂಡವರಾದ ನಕುಲ-ಸಹದೇವರು ಎಲ್ಲರೂ ದೃಢವಾದ ಧನುಸ್ಸನ್ನು ಹೊಂದಿದ ಅರ್ಜುನನಿಂದ ರಕ್ಷಿತರಾಗಿ ಭೀಷ್ಮರ ಮೇಲೆಯೇ ಎರಗಿದರು.
ಅಭಿಮನ್ಯುಶ್ಚ ಸಮರೇ ದ್ರೌಪದ್ಯಾಃ ಪಂಚ ಚಾತ್ಮಜಾಃ |
ದುದ್ರುವುಃ ಸಮರೇ ಭೀಷ್ಮಂ ಸಮುದ್ಯತಮಹಾಯುಧಾಃ ॥39॥
ಅಭಿಮನ್ಯು, ದ್ರೌಪದಿಯ ಐದು ಜನ ಪುತ್ರರು ಯುದ್ಧದಲ್ಲಿ ತಮ್ಮ ಆಯುಧಗಳನ್ನು ಎತ್ತಿ ಹಿಡಿದು ಭೀಷ್ಮರ ಕಡೆಗೆ ಓಡಿದರು.
ತೇ ಸರ್ವೇ ದೃಢಧನ್ವಾನಃ ಸಂಯುಗೇಷ್ವಪಲಾಯಿನಃ |
ಬಹುಧಾ ಭೀಷ್ಮಮಾನರ್ಚ್ಛನ್ ಮಾರ್ಗಣೈಃ ಕೃತಮಾರ್ಗಣಾಃ ॥40॥
ದೃಢವಾದ ಧನುಸ್ಸುಳ್ಳವರೂ, ಯುದ್ಧದಲ್ಲಿ ಹಿಮ್ಮೆಟ್ಟದವರೂ, ಧನುರ್ವಿದ್ಯೆಯನ್ನು ಚೆನ್ನಾಗಿ ಅಭ್ಯಾಸವನ್ನು ಮಾಡಿದವರೂ ಆದ ಅವರೆಲ್ಲರೂ ತಮ್ಮ ಬಾಣಗಳಿಂದ ಭೀಷ್ಮರನ್ನು ಅನೇಕ ರೀತಿಯಲ್ಲಿ ಪೀಡಿಸಿದರು.
ವಿಧೂಯ ತಾನ್ ಬಾಣಗಣಾನ್ ಯೇ ಮುಕ್ತಾಃ ಪಾರ್ಥಿವೋತ್ತಮೈಃ |
ಪಾಂಡವಾನಾಮದೀನಾತ್ಮಾ ವ್ಯಗಾಹತ ವರೂಥಿನೀಮ್ |
ಕೃತ್ವಾ ಶರವಿಘಾತಂ ಚ ಕ್ರೀಡನ್ನಿವ ಪಿತಾಮಹಃ ॥41॥
ಗಾಬರಿಗೊಳ್ಳದ ಭೀಷ್ಮರು ಶ್ರೇಷ್ಠರಾದ ರಾಜರುಗಳಿಂದ ಪ್ರಯೋಗಿಸಲ್ಪಟ್ಟ ಆ ಬಾಣಸಮೂಹಗಳನ್ನು ನಾಶಪಡಿಸಿ,

ಆಟವಾಡುವವರಂತೆ ಶರವಿಘಾತವನ್ನು ಮಾಡಿ ಪಾಂಡವರ ಸೈನ್ಯವನ್ನು ಪ್ರವೇಶಿಸಿದರು.
ನಾಭಿಸಂಧತ್ತ ಪಾಂಚಾಲ್ಯಂ ಸ್ಮಯಮಾನೋ ಮುಹುರ್ಮುಹುಃ |
ಸ್ತ್ರೀತ್ವಂ ತಸ್ಯಾನುಸಂಸ್ಮೃತ್ಯ ಭೀಷ್ಮೋ ಬಾಣಾನ್ ಶಿಖಂಡಿನಃ |
ಜಘಾನ ದ್ರುಪದಾನೀಕೇ ರಥಾನ್ ಸಪ್ತ ಮಹಾರಥಃ ॥42॥
ಭೀಷ್ಮರು ಶಿಖಂಡಿಯನ್ನು ನೋಡಿ ಅವನ ಸ್ತ್ರೀತ್ವವನ್ನು ಸ್ಮರಿಸುತ್ತಾ, ನಗುತ್ತಾ ಅವನ ಮೇಲೆ ಬಾಣಗಳನ್ನೇ ಹೂಡಲಿಲ್ಲ. ದ್ರುಪದನ ಸೈನ್ಯದಲ್ಲಿ ಮಹಾರಥರಾದ ಅವರು ಏಳು ರಥರನ್ನು ಕೊಂದರು.
ತತಃ ಕಿಲಕಿಲಾಶಬ್ದಃ ಕ್ಷಣೇನ ಸಮಪದ್ಯತ |
ಮತ್ಸ್ಯಪಾಂಚಾಲಚೇದೀನಾಂ ತಮೇಕಮಭಿಧಾವತಾಮ್ ॥43॥
ಆಗ ಭೀಷ್ಮರೊಬ್ಬರ ಕಡೆಗೇ ಸಾಗುವ ಮತ್ಸ್ಯ-ಪಾಂಚಾಲ-ಚೇದಿಗಳಲ್ಲಿ ಒಂದು ಕ್ಷಣದಲ್ಲಿ ಹಾಹಾಕಾರ ಶಬ್ದ ಉಂಟಾಯಿತು.
ತೇ ವರಾಶ್ವರಥವ್ರಾತೈರ್ವಾರಣೈಃ ಸಪದಾತಿಭಿಃ |
ತಮೇಕಂ ಛಾದಯಾಮಾಸುರ್ಮೇಘಾ ಇವ ದಿವಾಕರಮ್ |
ಭೀಷ್ಮಂ ಭಾಗೀರಥೀಪುತ್ರಂ ಪ್ರತಪಂತಂ ರಣೇ ರಿಪೂನ್ ॥44॥
ಅವರು ಪದಾತಿಗಳಿಂದ ಕೂಡಿದ ಅಶ್ವ-ರಥ-ಗಜ ಸಮೂಹಗಳಿಂದ ಮಧ್ಯಾಹ್ನದಲ್ಲಿ ಪ್ರಕಾಶಿಸುವ ಸೂರ್ಯನನ್ನು ಮೋಡಗಳು ಮುಚ್ಚಿದಂತೆ ಯುದ್ಧದಲ್ಲಿ ದಿಕ್ಕುಗಳನ್ನು ದಹಿಸುತ್ತಿದ್ದ ಭಾಗೀರಥೀ ಪುತ್ರರಾದ ಭೀಷ್ಮರನ್ನು ಮುಚ್ಚಿದರು.
ತತಸ್ತಸ್ಯ ಚ ತೇಷಾಂ ಚ ಯುದ್ಧೇ ದೇವಾಸುರೋಪಮೇ |
ಕಿರೀಟೀ ಭೀಷ್ಮಮಾನರ್ಚ್ಛತ್ ಪುರಸ್ಕೃತ್ಯ ಶಿಖಂಡಿನಮ್ ॥45॥
ಆಗ ಅವರಿಗೂ ಮತ್ತು ಪಾಂಡವರಿಗೂ ನಡೆದ ದೇವಾಸುರ ಯುದ್ಧಕ್ಕೆ ಸಮವಾದ ಯುದ್ಧದಲ್ಲಿ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಭೀಷ್ಮರ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ
ಪಂಚದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹದಿನೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾರನೆಯ ಅಧ್ಯಾಯ
ಭೀಷ್ಮರ ಪಾತ.
ಸಂಜಯಃ
ಏವಂ ತೇ ಪಾಂಡವಾಃ ಸರ್ವೇ ಪುರಸ್ಕೃತ್ಯ ಶಿಖಂಡಿನಮ್ |
ವಿವ್ಯಧುಃ ಸಮರೇ ಭೀಷ್ಮಂ ಪರಿವಾರ್ಯ ಸಮಂತತಃ ॥1॥
ಸಂಜಯ ಹೀಗೆ ಆ ಪಾಂಡವರೆಲ್ಲರೂ ಶಿಖಂಡಿಯನ್ನು ಮುಂದೆ ಮಾಡಿಕೊಂಡು ಯುದ್ಧದಲ್ಲಿ ಎಲ್ಲ ಕಡೆಗಳಿಂದಲೂ ಭೀಷ್ಮರನ್ನು ಸುತ್ತುವರಿದು ಅವರ ಮೇಲೆ ಪ್ರಹಾರವನ್ನು ಮಾಡಿದರು.
ಶತಘ್ನೀಭಿಃ ಸುಘೋರಾಭಿಃ ಪಟ್ಟಿಶೈಃ ಸಪರಶ್ವಧೈಃ |
ಮುದ್ಗರೈರ್ಮುಸಲೈಃ ಪ್ರಾಸೈಃ ಕ್ಷೇಪಣೀಭಿಶ್ಚ ಸರ್ವಶಃ ॥2॥
ಶರೈಃ ಕನಕಪುಂಖೈಶ್ಚ ಶಕ್ತಿತೋಮರಕಂಪನೈಃ |
ನಾರಾಚೈರ್ವತ್ಸದಂತೈಶ್ಚ ಭುಶುಂಡೀಭಿಶ್ಚ ಭಾರತ |
ಅತಾಡಯನ್ ರಣೇ ಭೀಷ್ಮಂ ಸಹಿತಾಃ ಸರ್ವಸೃಂಜಯಾಃ ॥3॥
ಎಲೈ ಭಾರತನೇ, ಸೃಂಜಯರೆಲ್ಲರೂ ಒಟ್ಟಿಗೆ ಸೇರಿ ಯುದ್ಧದಲ್ಲಿ ಭೀಷ್ಮರ ಮೇಲೆ ಘೋರವಾದ ಶತಘ್ನಿಗಳಿಂದಲೂ, ಪರಶು ಸಹಿತವಾದ ಪಟ್ಟಿಶಗಳಿಂದಲೂ, ಮುದ್ಗರ, ಮುಸಲ, ಪ್ರಾಸಗಳಿಂದಲೂ, ಕ್ಷೇಪಣಿಗಳಿಂದಲೂ, ಸುವರ್ಣ ಪುಂಖವನ್ನು ಹೊಂದಿದ ಬಾಣಗಳಿಂದಲೂ, ಶಕ್ತಿ-ತೋಮರ-ಕಂಪನಗಳಿಂದಲೂ, ನಾರಾಚ- ವತ್ಸದಂತಗಳಿಂದಲೂ, ಭುಶುಂಡಿಗಳಿಂದಲೂ ಪ್ರಹಾರ ಮಾಡಿದರು.
ಸ ವಿಶೀರ್ಣತನುತ್ರಾಣಃ ಪೀಡಿತೋ ಬಹುಭಿಸ್ತದಾ |
ವಿವ್ಯಥೇ ನೈವ ಗಾಂಗೇಯೋ ಭಿದ್ಯಮಾನೇಷು ಮರ್ಮಸು ॥4॥
ಗಾಂಗೇಯರು ಬಹುಯೋಧರಿಂದ ಪೀಡಿತರಾಗಿ ಮರ್ಮಗಳಲ್ಲಿ ಭೇದಿಸಲ್ಪಟ್ಟು ಕವಚವು ಹರಿದು ಹೋದರೂ ವ್ಯಥೆ ಪಡಲಿಲ್ಲ.
ಸ ದೀಪ್ತಶರಚಾಪಾರ್ಚಿರಸ್ತ್ರಪ್ರಸೃತಮಾರುತಃ |
ನೇಮಿನಿರ್ಹ್ರಾದಸನ್ನಾದೋ ಮಹಾಸ್ತ್ರೋದಯಪಾವಕಃ ॥5॥
ಚಿತ್ರಚಾಪಮಹಾಜ್ವಾಲೋ ವೀರಕ್ಷಯಮಹೇಂಧನಃ |
ಯುಗಾಂತಾಗ್ನಿಸಮೋ ಭೀಷ್ಮಃ ಪರೇಷಾಂ ಸಮಪದ್ಯತ ॥6॥
ಆ ಭೀಷ್ಮರು ಶತ್ರುಗಳಿಗೆ ದೀಪ್ತವಾದ ಬಿಲ್ಲುಬಾಣಗಳೆಂಬ ಸಣ್ಣ ಜ್ವಾಲೆಗಳಿಂದ ಕೂಡಿದ, ಅಸ್ತ್ರಗಳಿಂದ ಉಂಟಾದ ವಾಯುವಿನಿಂದ ಕೂಡಿದ, ರಥನೇಮಿಗಳ ದೊಡ್ಡ ಶಬ್ದವೆಂಬ ಘೋಷದಿಂದ ಕೂಡಿದ, ಮಹಾಸ್ತ್ರಗಳ ಉಗಮ ಎಂಬ ಪಾವಕದಿಂದ ಕೂಡಿದ, ವಿಚಿತ್ರ ಧನುಸ್ಸುಗಳೆಂಬ ಮಹಾಜ್ವಾಲೆಗಳಿಂದ ಕೂಡಿದ, ವೀರಕ್ಷಯ ಎಂಬ ದೊಡ್ಡ ಇಂಧನದಿಂದ ಕೂಡಿದವರಾಗಿ ಯುಗಾಂತಾಗ್ನಿಗೆ

ಸಮರಾದರು.
ನಿಪತ್ಯ ರಥಸಂಘಾನಾಮಂತರೇಣ ವಿನಿಃಸೃತಃ |
ದೃಶ್ಯತೇ ಸ್ಮ ನರೇಂದ್ರಾಣಾಂ ಪುನರ್ಮಧ್ಯಗತಶ್ಚರನ್ ॥7॥
ಅವರು ರಥಸಮೂಹದ ಮಧ್ಯದಲ್ಲಿ ಪ್ರವೇಶಿಸಿ, ಪುನಃ ಹೊರಗೆ ಬಂದು, ಪುನಃ ಶತ್ರುರಾಜರ ಮಧ್ಯದಲ್ಲಿ ಸಂಚರಿಸುವುದು ಕಂಡುಬರುತ್ತಿದ್ದಿತು.
ತತಃ ಪಾಂಚಾಲರಾಜಂ ಚ ಧೃಷ್ಟಕೇತುಮತೀತ್ಯ ಚ |
ಪಾಂಡವಾನೀಕಿನೀಮಧ್ಯಮಾಸಸಾದ ಸ ವೇಗಿತಃ ॥8॥
ಆಗ ಅವರು ಪಾಂಚಾಲರಾಜನಾದ ದ್ರುಪದನನ್ನು ಮತ್ತು ಧೃಷ್ಟಕೇತುವನ್ನು ದಾಟಿ ವೇಗವಾಗಿ ಪಾಂಡವರ ಸೈನ್ಯದ ಮಧ್ಯಭಾಗವನ್ನು ತಲುಪಿದರು.
ತತಃ ಸಾತ್ಯಕಿಭೀಮೌ ಚ ಪಾಂಡವಂ ಚ ಧನಂಜಯಮ್ |
ದ್ರುಪದಂ ಚ ವಿರಾಟಂ ಚ ಧೃಷ್ಟದ್ಯುಮ್ನಂ ಚ ಪಾರ್ಷತಮ್ ॥9॥
ಭೀಮಘೋಷೈರ್ಮಹಾವೇಗೈರ್ವೈರಿವಾರಣಭೇದಿಭಿಃ |
ಷಡೇತಾನ್ ಷಡ್ಭಿರಾನರ್ಚ್ಛದ್ ಭಾಸ್ಕರಪ್ರತಿಮೈಃ ಶರೈಃ ॥10॥
ಆಗ ಸಾತ್ಯಕಿ, ಪಾಂಡವರಾದ ಭೀಮಸೇನ ಮತ್ತು ಅರ್ಜುನ, ದ್ರುಪದ, ವಿರಾಟ ಮತ್ತು ಪಾರ್ಷತನಾದ ಧೃಷ್ಟದ್ಯುಮ್ನ- ಈ ಆರು ಯೋಧರನ್ನು ಭಯಂಕರವಾದ ಘೋಷವುಳ್ಳ, ವೇಗವುಳ್ಳ, ಶತ್ರು ಗಜಗಳನ್ನು ಭೇದಿಸಲು ಸಮರ್ಥವಾದ, ಸೂರ್ಯನಂತೆ ಪ್ರಕಾಶಿಸುವ ಆರು ಬಾಣಗಳಿಂದ ಹೊಡೆದರು.
ತಸ್ಯ ತೇ ನಿಶಿತಾನ್ ಬಾಣಾನ್ ಸನ್ನಿವಾರ್ಯ ಮಹಾರಥಾಃ |
ದಶಭಿರ್ದಶಭಿರ್ಭೀಷ್ಮಮರ್ದಯಾಮಾಸುರೋಜಸಾ ॥11॥
ಮಹಾರಥರಾದ ಅವರು ಭೀಷ್ಮರ ಆ ತೀಕ್ಷ್ಣವಾದ ಬಾಣಗಳನ್ನು ನಿವಾರಿಸಿಕೊಂಡು ಹತ್ತು-ಹತ್ತು ಬಾಣಗಳನ್ನು ಪ್ರಯೋಗಿಸಿ, ತಮ್ಮ ಸಾಮರ್ಥ್ಯದಿಂದ ಭೀಷ್ಮರನ್ನು ಹಿಂಸಿಸಿದರು.
ಶಿಖಂಡೀ ತು ರಣೇ ಬಾಣಾನ್ ಯಾನ್ ಮುಮೋಚ ಮಹಾವ್ರತೇ |
ತೇ ಭೀಷ್ಮಂ ವಿವಿಶುಸ್ತೂರ್ಣಂ ಸ್ವರ್ಣಪುಂಖಾಃ ಶಿಲಾಶಿತಾಃ ॥12॥
ಯುದ್ಧದಲ್ಲಿ ಭೀಷ್ಮರ ಮೇಲೆ ಶಿಖಂಡಿಯು ಪ್ರಯೋಗಿಸಿದ ಸ್ವರ್ಣಪುಂಖವುಳ್ಳ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳು ಶೀಘ್ರವಾಗಿ ಅವರ ಶರೀರವನ್ನು ಪ್ರವೇಶಿಸಿದವು.
ತತಃ ಕಿರೀಟೀ ಸಂರಬ್ಧೋ ಭೀಷ್ಮಮೇವಾಭ್ಯವರ್ತತ |
ಶಿಖಂಡಿನಂ ಪುರಸ್ಕೃತ್ಯ ಧನುಶ್ಚಾಸ್ಯ ಸಮಾಚ್ಛಿನತ್ ॥13॥
ಆಗ ಕೋಪಗೊಂಡ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಭೀಷ್ಮರ ಮೇಲೆ ಎರಗಿ ಅವರ ಧನುಸ್ಸನ್ನು ಕತ್ತರಿಸಿದನು.
ಭೀಷ್ಮಸ್ಯ ಧನುಷಶ್ಛೇದಂ ನಾಮೃಷ್ಯಂತ ಮಹಾರಥಾಃ |
ದ್ರೋಣಶ್ಚ ಕೃತವರ್ಮಾ ಚ ಸೈಂಧವಶ್ಚ ಜಯದ್ರಥಃ ॥14॥
ಭೂರಿಶ್ರವಾಃ ಶಲಃ ಶಲ್ಯೋ ಭಗದತ್ತಸ್ತಥೈವ ಚ |
ಸಪ್ತೈತೇ ಪರಮಕ್ರುದ್ಧಾಃ ಕಿರೀಟಿನಮಭಿದ್ರುತಾಃ ॥15॥
ದ್ರೋಣರು, ಕೃತವರ್ಮ, ಸೈಂಧವನಾದ ಜಯದ್ರಥ, ಭೂರಿಶ್ರವ, ಶಲ, ಶಲ್ಯ ಮತ್ತು ಭಗದತ್ತ ಈ ಏಳು ಮಹಾರಥರು ಬಹಳವಾಗಿ ಕೋಪಗೊಂಡು ಭೀಷ್ಮರ ಧನುಸ್ಸಿನ ಛೇದನವನ್ನು ಸಹಿಸದೆ ಅರ್ಜುನನ ಮೇಲೆ ಧಾವಿಸಿದರು.
ಉತ್ತಮಾಸ್ತ್ರಾಣಿ ದಿವ್ಯಾನಿ ದರ್ಶಯಂತೋ ಮಹಾರಥಾಃ |
ಅಭಿಪೇತುರ್ಭೃಶಂ ಕ್ರುದ್ಧಾಶ್ಛಾದಯಂತಃ ಸ್ಮ ಪಾಂಡವಾನ್ ॥16॥
ಮಹಾರಥರಾದ ಅವರು ಉತ್ತಮವಾದ ತಮ್ಮ ದಿವ್ಯಾಸ್ತ್ರಗಳನ್ನು ಪ್ರದರ್ಶಿಸುತ್ತಾ ಬಹಳ ಕ್ರುದ್ಧರಾಗಿ ಅವುಗಳಿಂದ ಪಾಂಡವರನ್ನು ಮುಚ್ಚುತ್ತಾ ಅರ್ಜುನನ ಮೇಲೆ ಎರಗಿದರು.
ತೇಷಾಮಾಪತತಾಂ ಶಬ್ದಃ ಶುಶ್ರುವೇ ಫಲ್ಗುನಂ ಪ್ರತಿ |
ಉದ್‌ವೃತ್ತಾನಾಂ ಯಥಾ ಶಬ್ದಃ ಸಮುದ್ರಾಣಾಂ ಯುಗಕ್ಷಯೇ ॥17॥
ಅರ್ಜುನನ ಮೇಲೆ ಧಾವಿಸಿ ಬರುತ್ತಿರುವ ಅವರಿಂದ ಉಂಟಾದ ಶಬ್ದವು ಯುಗಾಂತದಲ್ಲಿ ಕ್ಷೋಭೆಗೊಂಡ ಸಮುದ್ರದ ಘೋಷದಂತೆ ಇದ್ದಿತು.
ಹತಾನಯತ ಗೃಹ್ಣೀತ ಯುಧ್ಯತಾಪಿ ಚ ಕೃಂತತ |
ಇತ್ಯಾಸೀತ್ ತುಮುಲಃ ಶಬ್ದಃ ಫಲ್ಗುನಸ್ಯ ರಥಂ ಪ್ರತಿ ॥18॥
ಅರ್ಜುನನ ರಥದ ಸಮೀಪದಲ್ಲಿ, ಕೊಲ್ಲಿ, ಎಳೆದು ತನ್ನಿ, ಹಿಡಿಯಿರಿ, ಯುದ್ಧವನ್ನು ಮಾಡಿ, ಕತ್ತರಿಸಿ ಎಂಬ ತೀವ್ರವಾದ ಶಬ್ದಗಳು ಉಂಟಾದವು.
ತಂ ಶಬ್ದಂ ತುಮುಲಂ ಶ್ರುತ್ವಾ ಪಾಂಡವಾನಾಂ ಮಹಾರಥಾಃ |
ಅಭ್ಯಧಾವನ್ ಪರೀಪ್ಸಂತಃ ಫಲ್ಗುನಂ ಭರತರ್ಷಭ ॥19॥
ಎಲೈ ಭರತಶ್ರೇಷ್ಠನೇ, ಆ ಘೋರವಾದ ಶಬ್ದವನ್ನು ಕೇಳಿದ ಪಾಂಡವ ಮಹಾರಥರು ಅರ್ಜುನನನ್ನು ರಕ್ಷಿಸಲು ಬಯಸಿ ಅವನ ಬಳಿಗೆ ಓಡಿದರು.
ಸಾತ್ಯಕಿರ್ಭೀಮಸೇನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ |

ವಿರಾಟದ್ರುಪದೌ ಚೋಭೌ ರಾಕ್ಷಸಶ್ಚ ಘಟೋತ್ಕಚಃ ॥20॥
ಅಭಿಮನ್ಯುಶ್ಚ ಸಂಕ್ರುದ್ಧಃ ಸಪ್ತೈತೇ ಕ್ರೋಧಮೂರ್ಚ್ಛಿತಾಃ।
ಸಮಭ್ಯಧಾವಂಸ್ತ್ವರಿತಾಶ್ಚಿತ್ರಕಾರ್ಮುಕಧಾರಿಣಃ ॥21॥
ಸಾತ್ಯಕಿ, ಭೀಮಸೇನ, ಧೃಷ್ಟದ್ಯುಮ್ನ, ವಿರಾಟ-ದ್ರುಪದರು, ರಾಕ್ಷಸನಾದ ಘಟೋತ್ಕಚ ಮತ್ತು ಅಭಿಮನ್ಯು ಈ ಏಳು ವೀರರು ಬಹಳ ಕೋಪಗೊಂಡು ಕ್ರೋಧ ಮೂರ್ಛಿತರಾಗಿ ವಿಚಿತ್ರವಾದ ಧನುಸ್ಸುಗಳನ್ನು ಹಿಡಿದು ಶೀಘ್ರವಾಗಿ ಅರ್ಜುನನ ಕಡೆಗೆ ಧಾವಿಸಿದರು.
ತೇಷಾಂ ಸಮಭವದ್ ಯುದ್ಧಂ ತುಮುಲಂ ಲೋಮಹರ್ಷಣಮ್।
ಸಂಗ್ರಾಮೇ ಭರತಶ್ರೇಷ್ಠ ದೇವಾನಾಂ ದಾನವೈರಿವ ॥22॥
ಎಲೈ ಭರತಶ್ರೇಷ್ಠನೇ, ದೇವ-ದಾನವರಿಗೆ ನಡೆದಂತೆ ಅವರಿಗೆ ತೀವ್ರವೂ ಮತ್ತು ರೋಮಾಂಚಕಾರಿಯೂ ಆದ ಯುದ್ಧವು ನಡೆಯಿತು.
ಶಿಖಂಡೀ ತು ರಥಶ್ರೇಷ್ಠೋ ರಕ್ಷ್ಯಮಾಣಃ ಕಿರೀಟಿನಾ।
ಅವಿಧ್ಯದ್ ದಶಭಿರ್ಭೀಷ್ಮಂ ಛಿನ್ನಧನ್ವಾನಮಾಹವೇ।
ಸಾರಥಿಂ ದಶಭಿಶ್ಚಾಸ್ಯ ಧ್ವಜಂ ಚೈಕೇನ ಚಿಚ್ಛಿದೇ ॥23॥
ಅರ್ಜುನನಿಂದ ರಕ್ಷಿಸಲ್ಪಡುತ್ತಿದ್ದ ರಥಶ್ರೇಷ್ಠನಾದ ಶಿಖಂಡಿಯು ಧನುಸ್ಸು ಕತ್ತರಿಸಲ್ಪಟ್ಟ ಭೀಷ್ಮರನ್ನು ಹತ್ತು ಬಾಣಗಳಿಂದ ಹೊಡೆದು, ಅವರ ಸಾರಥಿಯನ್ನೂ ಹತ್ತು ಬಾಣಗಳಿಂದ ಹೊಡೆದು, ಒಂದು ಬಾಣದಿಂದ ಅವರ ರಥದ ಧ್ವಜವನ್ನು ಕತ್ತರಿಸಿದನು.
ಸೋಽನ್ಯತ್ ಕಾರ್ಮುಕಮಾದಾಯ ಗಾಂಗೇಯೋ ವೇಗವತ್ತರಮ್।
ತದಪ್ಯಸ್ಯ ಶಿತೈರ್ಭಲ್ಲೈಸ್ತ್ರಿಭಿಶ್ಚಿಚ್ಛೇದ ಫಲ್ಗುನಃ ॥24॥
ಆ ಭೀಷ್ಮರು ಬಹಳ ವೇಗಶಾಲಿಯಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡರು. ಅರ್ಜುನನು ಅದನ್ನೂ ಸಹ ತೀಕ್ಷ್ಣವಾದ ಭಲ್ಲಗಳಿಂದ ಮೂರು ಭಾಗಗಳಾಗಿ ಕತ್ತರಿಸಿದನು.
ಏವಂ ಸ ಪಾಂಡವಃ ಕ್ರುದ್ಧ ಆತ್ತಮಾತ್ತಂ ಪುನಃ ಪುನಃ।
ಧನುರ್ಭೀಷ್ಮಸ್ಯ ಚಿಚ್ಛೇದ ಸವ್ಯಸಾಚೀ ಪರಂತಪಃ ॥25॥
ಹೀಗೆ ಸವ್ಯಸಾಚಿಯೂ, ಪರಂತಪನೂ ಆದ ಅರ್ಜುನನು ಭೀಷ್ಮರು ಪುನಃ ಪುನಃ ತೆಗೆದುಕೊಂಡ ಧನುಸ್ಸುಗಳನ್ನು ಕ್ರುದ್ಧನಾಗಿ ಕತ್ತರಿಸಿದನು.
ಸ ಚ್ಛಿನ್ನಧನ್ವಾ ಸಂಕ್ರುದ್ಧಃ ಸೃಕ್ಕಿಣೀ ಪರಿಸಂಲಿಹನ್।
ಶಕ್ತಿಂ ಜಗ್ರಾಹ ಸಂಕ್ರುದ್ಧೋ ಗಿರೀಣಾಮಪಿ ದಾರಣೀಮ್।
ತಾಂ ಚ ಚಿಕ್ಷೇಪ ಸಂಕ್ರುದ್ಧಃ ಫಲ್ಗುನಸ್ಯ ರಥಂ ಪ್ರತಿ ॥26॥
ತಮ್ಮ ಧನುಸ್ಸು ಕತ್ತರಿಸಲ್ಪಟ್ಟ ಭೀಷ್ಮರು ಬಹಳ ಕೋಪಗೊಂಡು ಕಟಬಾಯಿಯನ್ನು ಸವರಿಕೊಳ್ಳುತ್ತಾ, ಪರ್ವತವನ್ನು ಭೇದಿಸುವಂತಹ ಶಕ್ತ್ಯಾಯುಧವನ್ನು ತೆಗೆದುಕೊಂಡು ಅದನ್ನೂ ಅರ್ಜುನನ ರಥದ ಮೇಲೆ ಎಸೆದರು.
ತಾಮಾಪತಂತೀಂ ಸಂಪ್ರೇಕ್ಷ್ಯ ಜ್ವಲಂತೀಮಶನೀಮಿವ।
ಸಮಾದತ್ತ ಶಿತಾನ್ ಭಲ್ಲಾನ್ ಪಂಚ ಪಾಂಡವನಂದನಃ ॥27॥
ಉರಿಯುವ ಸಿಡಿಲಿನಂತೆ ತನ್ನ ಬಳಿಗೆ ಬರುತ್ತಿದ್ದ ಆ ಶಕ್ತಿಯನ್ನು ನೋಡಿ ಪಾಂಡವನಂದನನಾದ ಅರ್ಜುನನು ತೀಕ್ಷ್ಣವಾದ ಐದು ಭಲ್ಲಗಳನ್ನು ತೆಗೆದುಕೊಂಡನು.
ತಸ್ಯ ಚಿಚ್ಛೇದ ತಾಂ ಶಕ್ತಿಂ ಪಂಚಧಾ ಪಂಚಭಿಃ ಶರೈಃ।
ಸಂಕ್ರುದ್ಧೋ ಭರತಶ್ರೇಷ್ಠ ಭೀಷ್ಮಬಾಹುಬಲೇರಿತಾಮ್ ॥28॥
ಎಲೈ ಭರತಶ್ರೇಷ್ಠನೇ, ಕೋಪಗೊಂಡ ಅರ್ಜುನನು ಭೀಷ್ಮರ ಬಾಹುಬಲದಿಂದ ಪ್ರೇರಿಸಲ್ಪಟ್ಟ ಆ ಶಕ್ತಿಯನ್ನು ಐದು ಬಾಣಗಳಿಂದ ಐದು ಭಾಗಗಳಾಗಿ ಕತ್ತರಿಸಿದನು.
ಸಾ ಪಪಾತ ಪರಿಚ್ಛಿನ್ನಾ ಸಂಕ್ರುದ್ಧೇನ ಕಿರೀಟಿನಾ।
ಮೇಘವೃಂದಪರಿಭ್ರಷ್ಟಾ ವಿಚ್ಛಿನ್ನೇವ ಶತಹ್ರದಾ ॥29॥
ಆ ಶಕ್ತಿಯು ಕೋಪಗೊಂಡ ಅರ್ಜುನನಿಂದ ಕತ್ತರಿಸಲ್ಪಟ್ಟು ಮೇಘವೃಂದದಿಂದ ಕತ್ತರಿಸಲ್ಪಟ್ಟ ಮಿಂಚಿನಂತೆ ಬಿದ್ದಿತು.
ಛಿನ್ನಾಂ ತಾಂ ಶಕ್ತಿಮಾಲೋಕ್ಯ ಭೀಷ್ಮಃ ಕ್ರೋಧಸಮನ್ವಿತಃ।
ಅಚಿಂತಯದ್ ರಣೇ ವೀರೋ ಬುದ್ಧ್ಯಾ ಪರಪುರಂಜಯಃ ॥30॥
ಆ ಶಕ್ತಿಯು ಕತ್ತರಿಸಲ್ಪಟುದನ್ನು ನೋಡಿ ಪರಪುರಂಜಯರಾದ, ವೀರರಾದ ಭೀಷ್ಮರು ಕ್ರೋಧದಿಂದ ಕೂಡಿದವರಾಗಿ ತಮ್ಮ ಬುದ್ಧಿಯಿಂದ ಆಲೋಚಿಸಿದರು.
ಶಕ್ತೋಽಹಂ ಧನುಷೈಕೇನ ನಿಹಂತುಂ ಸರ್ವಪಾಂಡವಾನ್।
ಯದ್ಯೇಷಾಂ ನ ಭವೇದ್ ಗೋಪ್ತಾ ವಿಷ್ವಕ್ಸೇನೋ ಮಹಾಬಲಃ।
ಅಜಯ್ಯಶ್ಚೈವ ಸರ್ವೇಷಾಂ ಲೋಕಾನಾಮಿತಿ ಮೇ ಮತಿಃ ॥31॥
ಮಹಾಬಲನಾದ, ವಿಷ್ವಕ್ಸೇನನಾದ ಕೃಷ್ಣನು ಅವರಿಗೆ ರಕ್ಷಕನಾಗಿರದಿದ್ದರೆ ನಾನು ಎಲ್ಲ ಪಾಂಡವರನ್ನೂ ಒಂದು ಧನುಸ್ಸಿನಿಂದ ಕೊಲ್ಲಲು ಸಮರ್ಥನಾಗಿರುತ್ತಿದ್ದೆ. ಆದರೆ ಆ ಕೃಷ್ಣನು ಎಲ್ಲ ಲೋಕಗಳಿಂದಲೂ ಅಜೇಯನಾದವನು ಎಂದು ನನ್ನ ಅಭಿಪ್ರಾಯ.
ಕಾರಣದ್ವಯಮಾಸ್ಥಾಯ ನಾಹಂ ಯೋತ್ಸ್ಯಾಮಿ ಪಾಂಡವೈಃ।
ಅವಧ್ಯತ್ವಾಚ್ಚ ಪಾಂಡೂನಾಂ ಸ್ತ್ರೀಭಾವಾಚ್ಚ ಶಿಖಂಡಿನಃ ॥32॥
ಪಾಂಡವರು ಅವಧ್ಯರಾದವರು ಮತ್ತು ಶಿಖಂಡಿಯು ಸ್ತ್ರೀಯಾದವನು. ಈ ಎರಡು ಕಾರಣದಿಂದಾಗಿ ನಾನು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲ.

ಪಿತ್ರಾ ತುಷ್ಟೇನ ಮೇ ಪೂರ್ವಂ ಯದಾ ಕಾಳೀಮುದಾವಹತ್ |
ಸ್ವಚ್ಛಂದಮರಣಂ ದತ್ತಮವಧ್ಯತ್ವಂ ರಣೇ ತಥಾ |
ತಸ್ಮಾನ್ಮೃತ್ಯುಮಹಂ ಮನ್ಯೇ ಪ್ರಾಪ್ತಕಾಲಮಿವಾತ್ಮನಃ ||33||
ನನ್ನ ತಂದೆಯು ಕಾಳಿಯನ್ನು ವಿವಾಹ ಮಾಡಿಕೊಂಡಾಗ ಸಂತುಷ್ಟರಾಗಿ ನನಗೆ ಸ್ವಚ್ಛಂದ ಮರಣ ಮತ್ತು ಯುದ್ಧದಲ್ಲಿ ಅವಧ್ಯತ್ವ ಎಂಬ ಎರಡು ವರಗಳನ್ನು ಕೊಟ್ಟನು. ಆದ್ದರಿಂದ ನಾನು ಈಗ ನನ್ನ ಮರಣಕಾಲವು ಪ್ರಾಪ್ತವಾಗಿದೆ ಎಂದು ಭಾವಿಸುತ್ತೇನೆ.
ಏವಂ ಜ್ಞಾತ್ವಾ ವ್ಯವಸಿತಂ ಭೀಷ್ಮಸ್ಯಾಮಿತತೇಜಸಃ |
ಋಷಯೋ ವಸವಶ್ಚೈವ ವಿಯತ್ಸ್ಥಾ ಭೀಷ್ಮಮಬ್ರುವನ್ ||34||
ಅಮಿತಪರಾಕ್ರಮಿಗಳಾದ ಭೀಷ್ಮರ ಈ ನಿಶ್ಚಯವನ್ನು ತಿಳಿದ ಋಷಿಗಳೂ ಮತ್ತು ವಸುಗಳೂ ಆಕಾಶದಲ್ಲಿ ನಿಂತು ಭೀಷ್ಮರಿಗೆ ಹೇಳಿದರು.
ಯತ್ತೇ ವ್ಯವಸಿತಂ ವೀರ ಅಸ್ಮಾಕಂ ಸುಮಹತ್ಪ್ರಿಯಮ್ |
ತತ್ಕುರುಷ್ವ ಮಹೇಷ್ವಾಸ ಯುದ್ಧಾದ್ ಬುದ್ಧಿಂ ನಿವರ್ತಯ | |35||
ಎಲೈ ವೀರನೇ, ನೀನು ಏನು ನಿಶ್ಚಯಿಸಿದ್ದೀಯೋ ಅದು ನಮಗೆ ಬಹಳ ಪ್ರಿಯವಾದುದು. ಎಲೈ ಮಹಾಧನುರ್ಧಾರಿಯೇ, ಅದನ್ನು ಮಾಡು. ನಿನ್ನ ಬುದ್ಧಿಯನ್ನು ಯುದ್ಧದಿಂದ ಹಿಂದಿರುಗಿಸು (ಎಂದು ಹೇಳಿದರು).
ತಸ್ಯ ವಾಕ್ಯಸ್ಯ ನಿಧನೇ ಪ್ರಾದುರಾಸೀಚ್ಛಿವೋಽನಿಲಃ |
ಅನುಲೋಮಃ ಸುಗಂಧೀ ಚ ಪೃಷತೈಶ್ಚ ಸಮನ್ವಿತಃ ||36||
ಋಷಿಗಳು ಮತ್ತು ವಸುಗಳು ಆ ಮಾತುಗಳನ್ನು ಮುಗಿಸುತ್ತಿದ್ದಂತೆ ಮಂಗಳಕರವಾದ ವಾಯುವು ಬೀಸಿತು. ಅದು ಅನುಕೂಲವಾಗಿ ಸುಗಂಧಯುಕ್ತವಾಗಿ ಜಲಕಣಗಳಿಂದ ಕೂಡಿದ್ದಿತು.
ದೇವದುಂದುಭಯಶ್ಚೈವ ಸಂಪ್ರಣೇದುರ್ಮಹಾಸ್ವನಾಃ |
ಪಪಾತ ಪುಷ್ಪವೃಷ್ಟಿಶ್ಚ ಭೀಷ್ಮಸ್ಯೋಪರಿ ಪಾರ್ಥಿವ ||37||
ಶಂಖ-ದುಂದುಭಿಗಳು ಆಕಾಶದಲ್ಲಿ ದೊಡ್ಡ ಶಬ್ದವನ್ನು ಮಾಡಿದವು. ಎಲೈ ರಾಜನೇ, ಭೀಷ್ಮರ ಮೇಲೆ ಪುಷ್ಪವೃಷ್ಟಿಯೂ ಬಿದ್ದಿತು.
ನ ಚ ತಚ್ಛುಶ್ರುವೇ ಕಶ್ಚಿತ್ ತೇಷಾಂ ಸಂವದತಾಂ ನೃಪ |
ಋತೇ ಭೀಷ್ಮಂ ಮಹಾಬಾಹುಂ ಮಾಂ ಚಾಪಿ ಮುನಿತೇಜಸಾ ||38||
ಎಲೈ ರಾಜನೇ, ಭೀಷ್ಮರ ಮತ್ತು ವಸುಗಳ ಸಂವಾದವನ್ನು ಮಹಾಬಾಹುಗಳಾದ ಭೀಷ್ಮರನ್ನು ಬಿಟ್ಟು ಮತ್ತು ವೇದವ್ಯಾಸರ ಅನುಗ್ರಹಕ್ಕೆ ಪಾತ್ರನಾದ ನನ್ನನ್ನು ಬಿಟ್ಟು ಬೇರೆ ಯಾರೂ ಕೇಳಲಿಲ್ಲ.
ಸಂಭ್ರಮಶ್ಚ ಮಹಾನಾಸೀತ್ ತ್ರಿದಶಾನಾಂ ವಿಶಾಂಪತೇ |
ಪತಿಷ್ಯತಿ ರಥಾದ್ ಭೀಷ್ಮೇ ಸರ್ವಲೋಕಪ್ರಿಯೇ ತದಾ ||39||
ಎಲೈ ರಾಜನೇ, ಸರ್ವಲೋಕಪ್ರಿಯರಾದ ಭೀಷ್ಮರು ರಥದಿಂದ ತಮ್ಮ ಪಾತವನ್ನು ನಿರ್ಧರಿಸಿರಲು ದೇವತೆಗಳಿಗೆ ದೊಡ್ಡ ಸಂಭ್ರಮ ಉಂಟಾಯಿತು.
ಇತಿ ದೇವಗಣಾನಾಂ ಚ ಶ್ರುತ್ವಾ ವಾಕ್ಯಂ ಮಹಾಮನಾಃ |
ತತಃ ಶಾಂತನವೋ ಭೀಷ್ಮೋ ಬೀಭತ್ಸುಂ ನಾಭ್ಯವರ್ತತ |
ಭಿದ್ಯಮಾನಃ ಶಿತೈರ್ಬಾಣೈಃ ಸರ್ವಾವರಣಭೇದಿಭಿಃ ||40||
ದೇವತೆಗಳ ಈ ಮಾತುಗಳನ್ನು ಕೇಳಿದ ಧೈರ್ಯಶಾಲಿಗಳಾದ ಶಂತನು ಪುತ್ರರಾದ ಭೀಷ್ಮರು ಅರ್ಜುನನಿಂದ ನಿಶಿತವಾದ ಬಾಣಗಳಿಂದ ತಮ್ಮ ಎಲ್ಲಾ ಕವಚವೂ ಭೇದಿಸಲ್ಪಡುತ್ತಿದ್ದರೂ ಅರ್ಜುನನ ಮೇಲೆ ಬಾಣ ಪ್ರಯೋಗವನ್ನು ಮಾಡಲಿಲ್ಲ.
ಶಿಖಂಡೀ ತು ಮಹಾರಾಜ ಭರತಾನಾಂ ಪಿತಾಮಹಮ್ |
ಆಜಘಾನೋರಸಿ ಕ್ರುದ್ಧೋ ನವಭಿರ್ನಿಶಿತೈಃ ಶರೈಃ ||41||
ಎಲೈ ಮಹಾರಾಜನೇ, ಆದರೆ ಶಿಖಂಡಿಯಾದರೋ ಕೋಪಗೊಂಡು ಭರತರ ಪಿತಾಮಹರಾದ ಭೀಷ್ಮರನ್ನು ಒಂಬತ್ತು ತೀಕ್ಷ್ಣವಾದ ಬಾಣಗಳಿಂದ ಅವರ ಎದೆಯಲ್ಲಿ ಹೊಡೆದನು.
ಸ ತೇನಾಭಿಹತಃ ಸಂಖ್ಯೇ ಭೀಷ್ಮಃ ಕುರುಪಿತಾಮಹಃ |
ನಾಕಂಪತ ಮಹಾರಾಜ ಕ್ಷಿತಿಕಂಪೇ ಯಥಾಚಲಃ ||42||
ಎಲೈ ಮಹಾರಾಜನೇ, ಯುದ್ಧದಲ್ಲಿ ಶಿಖಂಡಿಯಿಂದ ಹೊಡೆಯಲ್ಪಟ್ಟ ಕುರುಪಿತಾಮಹರಾದ ಭೀಷ್ಮರು ಭೂಕಂಪವಾದಾಗ ಅಲುಗಾಡದ ಪರ್ವತದಂತೆ ಸ್ಥಿರವಾಗಿ ನಿಂತರು.
ತತಃ ಪ್ರಹಸ್ಯ ಬೀಭತ್ಸುರ್ವ್ಯಾಕ್ಷಿಪನ್ ಗಾಂಡಿವಂ ಧನುಃ |
ಗಾಂಗೇಯಂ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮರ್ಪಯತ್ ||43||
ಆಗ ಅರ್ಜುನನು ನಕ್ಕು ಗಾಂಡೀವ ಧನುಸ್ಸನ್ನು ಓಲಾಡಿಸುತ್ತಾ ಭೀಷ್ಮರ ಮೇಲೆ ಇಪ್ಪತ್ತೈದು ಸಣ್ಣ ಬಾಣಗಳನ್ನು ಪ್ರಯೋಗಿಸಿದನು.
ಪುನಃ ಶರಶತೇನೈನಂ ತ್ವರಮಾಣೋ ಧನಂಜಯಃ |
ಸರ್ವಗಾತ್ರೇಷು ಸಂಕ್ರುದ್ಧಃ ಸರ್ವಮರ್ಮಸ್ವತಾಡಯತ್ ||44||
ಪುನಃ ಅರ್ಜುನನು ತ್ವರೆ ಮಾಡಿ ಕೋಪದಿಂದ ನೂರು ಬಾಣಗಳನ್ನು ಅವರ ಸರ್ವಶರೀರದಲ್ಲಿ ಸರ್ವ ಮರ್ಮಸ್ಥಾನಗಳಲ್ಲಿ ಹೊಡೆದನು.
ತಾನ್ಯಪ್ಯಾಶು ಶರೈರ್ಭೀಷ್ಮಃ ಪ್ರವಿವ್ಯಾಧ ಮಹಾರಥಃ |
ತೈಶ್ಚ ಮುಕ್ತಾನ್ ಶರಾನ್ ಭೀಷ್ಮೋ ಯುಧಿ ಸತ್ಯಪರಾಕ್ರಮಃ ||45||

ಮಹಾರಥರೂ, ಸತ್ಯಪರಾಕ್ರಮರೂ ಆದ ಭೀಷ್ಮರು ಆ ಬಾಣಗಳನ್ನೂ, ಉಳಿದ ಯೋಧರು ಪ್ರಯೋಗಿಸಿದ ಬಾಣಗಳನ್ನೂ ರಣರಂಗದಲ್ಲಿ ತಮ್ಮ ಬಾಣಗಳಿಂದ ನಿವಾರಿಸಿದರು.
ನಿವಾರಯಾಮಾಸ ಶರೈಃ ಸಮಂ ಸನ್ನತಪರ್ವಭಿಃ |
ಶಿಖಂಡೀ ತು ರಣೇ ಬಾಣಾನ್ ಯಾನ್ ಮುಮೋಚ ಮಹಾರಥಃ ||
ಮಹಾರಥನಾದ ಶಿಖಂಡಿಯು ಯುದ್ಧದಲ್ಲಿ ಯಾವ ಬಾಣಗಳನ್ನು ಅವರ ಮೇಲೆ ಪ್ರಯೋಗಿಸಿದನೋ ಅವುಗಳನ್ನೂ ಬಾಗಿದ ತುದಿಯುಳ್ಳ ತಮ್ಮ ಬಾಣಗಳಿಂದ ನಿವಾರಿಸಿದರು.
ಏವಮನ್ಯೈರಪಿ ಭೃಶಂ ವಧ್ಯಮಾನೋ ಮಹಾರಣೇ |
ನ ಚಕ್ರುಸ್ತೇ ರುಜಂ ತಸ್ಯ ರುಗ್ಮಪುಂಖಾಃ ಶಿಲಾಶಿತಾಃ ||47||
ಹೀಗೆ ಉಳಿದವರಿಂದಲೂ ಮಹಾಯುದ್ಧದಲ್ಲಿ ತೀವ್ರವಾಗಿ ಹೊಡೆಯಲ್ಪಟ್ಟು ಸುವರ್ಣಪುಂಖಗಳನ್ನು ಹೊಂದಿ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಆ ಬಾಣಗಳು ಅವರಿಗೆ ಯಾವ ವ್ಯಥೆಯನ್ನೂ ಮಾಡಲಿಲ್ಲ.
ತತಃ ಕಿರೀಟೀ ಸಂರಬ್ಧೋ ಭೀಷ್ಮಮೇವಾಭ್ಯವರ್ತತ |
ಶಿಖಂಡಿನಂ ಪುರಸ್ಕೃತ್ಯ ಧನುಶ್ಚಾಸ್ಯ ಸಮಾಚ್ಛಿನತ್ ||48||
ಆಗ ಕೋಪಗೊಂಡ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಭೀಷ್ಮರ ಮೇಲೆ ಎರಗಿ ಅವರ ಧನುಸ್ಸನ್ನು ಕತ್ತರಿಸಿದನು.
ಅಥೈನಂ ದಶಭಿರ್ವಿದ್ಧ್ವಾ ಧ್ವಜಮೇಕೇನ ಚಿಚ್ಛಿದೇ |
ಸಾರಥಿಂ ವಿಶಿಖೈಶ್ಚಾಸ್ಯ ದಶಭಿಃ ಸಮಕಂಪಯತ್ ||49||
ಅನಂತರ ಅವನು ಭೀಷ್ಮರನ್ನು ಹತ್ತು ಬಾಣಗಳಿಂದ ಹೊಡೆದು ಒಂದು ಬಾಣದಿಂದ ಅವರ ಧ್ವಜವನ್ನು ಕತ್ತರಿಸಿದನು ಮತ್ತು ಅವರ ಸಾರಥಿಯನ್ನು ಹತ್ತು ಬಾಣಗಳಿಂದ ಮರ್ದಿಸಿದನು.
ಸೋಽನ್ಯತ್ ಕಾರ್ಮುಕಮಾದತ್ತ ಗಾಂಗೇಯೋ ಬಲವತ್ತರಮ್ |
ತದಪ್ಯಸ್ಯ ಶಿತೈರ್ಭಲ್ಲೈಸ್ತ್ರಿಧಾ ತ್ರಿಭಿರಪಾನುದತ್ |
ನಿಮೇಷಾಂತರಮಾತ್ರೇಣ ಆತ್ತಮಾತ್ತಂ ಮಹಾರಣೇ ||50||
ಭೀಷ್ಮರು ಬಲವಾದ ಇನ್ನೊಂದು ಬಿಲ್ಲನ್ನು ತೆಗೆದುಕೊಂಡರು. ಅದನ್ನೂ ಹಾಗೆಯೇ ಪುನಃ ಪುನಃ ತೆಗೆದುಕೊಂಡ ಬಿಲ್ಲುಗಳನ್ನೂ ಅರ್ಜುನನು ಕಣ್ಣುಮುಚ್ಚು ಬಿಡುವಷ್ಟರಲ್ಲಿ ತೀಕ್ಷ್ಣವಾದ ಮೂರು ಭಲ್ಲಗಳಿಂದ ಮೂರು ಭಾಗಗಳಾಗಿ ಕತ್ತರಿಸಿದನು.
ಏವಮಸ್ಯ ಧನೂಂಷ್ಯಾಜೌ ಚಿಚ್ಛೇದ ಸುಬಹೂನ್ಯಪಿ |
ತತಃ ಶಾಂತನವೋ ಭೀಷ್ಮೋ ಬೀಭತ್ಸುಂ ನಾಭ್ಯವರ್ತತ ||51||
ಹೀಗೆ ಯುದ್ಧದಲ್ಲಿ ಅವರ ಅನೇಕ ಧನುಸ್ಸುಗಳನ್ನು ಅರ್ಜುನನು ಕತ್ತರಿಸಿದನು. ಅನಂತರ ಶಂತನುಪುತ್ರರಾದ ಭೀಷ್ಮರು ಅರ್ಜುನನ ಮೇಲೆ ಬಾಣ ಪ್ರಯೋಗವನ್ನು ಮಾಡಲಿಲ್ಲ.
ಅಥೈನಂ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮರ್ದಯತ್ |
ಸೋಽತಿವಿದ್ಧೋ ಮಹೇಷ್ವಾಸೋ ದುಃಶಾಸನಮಭಾಷತ ||52||
ಅನಂತರ ಅರ್ಜುನನು ಇಪ್ಪತ್ತೈದು ಸಣ್ಣಬಾಣಗಳಿಂದ ಭೀಷ್ಮರನ್ನು ಘಾಸಿಗೊಳಿಸಿದನು. ಬಹಳ ಗಾಯಗೊಂಡ ಮಹಾಧನುರ್ಧಾರಿಗಳಾದ ಭೀಷ್ಮರು ದುಶ್ಶಾಸನನನ್ನು ಕುರಿತು ಮಾತನಾಡಿದರು.
ಏಷ ಪಾರ್ಥೋ ರಣೇ ಕ್ರುದ್ಧಃ ಪಾಂಡವಾನಾಂ ಮಹಾರಥಃ |
ಶರೈರನೇಕಸಾಹಸ್ರೈರ್ಮಾಮೇವಾಭ್ಯಸ್ಯತೇ ರಣೇ ||53||
ಪಾಂಡವರ ಮಹಾರಥನಾದ, ಕ್ರುದ್ಧನಾದ ಈ ಅರ್ಜುನನು ಯುದ್ಧದಲ್ಲಿ ನನ್ನ ಮೇಲೆಯೇ ಅನೇಕ ಸಹಸ್ರ ಬಾಣಗಳನ್ನು ಬಿಡುತ್ತಿದ್ದಾನೆ.
ನ ಚೈಷ ಶಕ್ಯಃ ಸಮರೇ ಜೇತುಂ ವಜ್ರಭೃತಾ ಅಪಿ |
ನ ಚಾಪಿ ಸಹಿತಾ ವೀರಾ ದೇವದಾನವರಾಕ್ಷಸಾಃ |
ಮಾಂ ಚೈವ ಶಕ್ತಾ ನಿರ್ಜೇತುಂ ಕಿಮು ಮರ್ತ್ಯಾ ಸುದುರ್ಬಲಾಃ ||54||
ಇವನನ್ನು ಇಂದ್ರನೂ ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ. ದೇವ-ದಾನವ- ರಾಕ್ಷಸರಿಂದ ಸಹಿತರಾದ ವೀರರು ಯುದ್ಧದಲ್ಲಿ ನನ್ನನ್ನೂ ಗೆಲ್ಲಲಾರರು. ಇನ್ನು ದುರ್ಬಲರಾದ ಮನುಷ್ಯರ ಮಾತೇನು? (ಎಂದು ಹೇಳಿದರು).
ಏವಂ ತಯೋಃ ಸಂವದತೋಃ ಫಲ್ಗುನೋ ನಿಶಿತೈಃ ಶರೈಃ |
ಶಿಖಂಡಿನಂ ಪುರಸ್ಕೃತ್ಯ ಭೀಷ್ಮಂ ವಿವ್ಯಾಧ ಸಂಯುಗೇ ||55||
ಹೀಗೆ ಅವರು ಮಾತನಾಡುತ್ತಿರುವಾಗ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ತೀಕ್ಷ್ಣವಾದ ಬಾಣಗಳಿಂದ ರಣರಂಗದಲ್ಲಿ ಭೀಷ್ಮರನ್ನು ಹೊಡೆದನು.
ತತೋ ದುಃಶಾಸನಂ ಭೂಯಃ ಸ್ಮಯಮಾನೋಽಭ್ಯಭಾಷತ |
ಅತಿವಿದ್ಧಃ ಶಿತೈರ್ಬಾಣೈರ್ಭೃಶಂ ಗಾಂಡೀವಧನ್ವನಾ ||56||
ಆಗ ಗಾಂಡೀವ ಧನುರ್ಧಾರಿಯಾದ ಅರ್ಜುನನಿಂದ ತೀಕ್ಷ್ಣವಾದ ಬಾಣಗಳಿಂದ ಬಹಳವಾಗಿ ಹೊಡೆಯಲ್ಪಟ್ಟ ಭೀಷ್ಮರು ನಗುತ್ತಾ ಪುನಃ ದುಶ್ಶಾಸನನನ್ನು ಕುರಿತು ಮಾತನಾಡಿದರು.
ವಜ್ರಾಶನಿಸಮಸ್ಪರ್ಶಾಃ ಶಿತಾಗ್ರಾಃ ಸಂಪ್ರವೇಶಿತಾಃ |
ವಿಮುಕ್ತಾ ಅವ್ಯವಚ್ಛಿನ್ನಾ ನೇಮೇ ಬಾಣಾಃ ಶಿಖಂಡಿನಃ ||57||
ವಜ್ರಾಯುಧಕ್ಕೆ ಮತ್ತು ಸಿಡಿಲಿಗೆ ಸಮಾನವಾದ ಸ್ಪರ್ಶವುಳ್ಳ, ತೀಕ್ಷ್ಣವಾದ ತುದಿಯನ್ನು ಹೊಂದಿರುವ, ಸತತವಾಗಿ

ಪ್ರಯೋಗಿಸಲ್ಪಡುತ್ತಿರುವ, ನನ್ನ ದೇಹದೊಳಗೆ ನಾಟುತ್ತಿರುವ ಈ ಬಾಣಗಳು ಶಿಖಂಡಿಯ ಬಾಣಗಳಲ್ಲ.
ನಿಕೃಂತಮಾನಾ ಮರ್ಮಾಣಿ ದೃಢಾವರಣಭೇದಿನಃ |
ಮುಸಲಾನೀವ ಮೇ ಘ್ನಂತಿ ನೇಮೇ ಬಾಣಾಃ ಶಿಖಂಡಿನಃ ||58||
ನನ್ನ ಮರ್ಮಗಳನ್ನು ಕತ್ತರಿಸುತ್ತಾ, ದೃಢವಾದ ಕವಚಗಳನ್ನು ಭೇದಿಸುತ್ತಾ, ಒನಕೆಗಳಂತೆ ನನ್ನನ್ನು ಹೊಡೆಯುವ ಈ ಬಾಣಗಳು ಶಿಖಂಡಿಯ ಬಾಣಗಳಲ್ಲ.
ಬ್ರಹ್ಮದಂಡಸಮಸ್ಪರ್ಶಾ ವಜ್ರವೇಗಾ ದುರಾಸದಾಃ |
ಮಮ ಪ್ರಾಣಾನಾರುಜಂತಿ ನೇಮೇ ಬಾಣಾಃ ಶಿಖಂಡಿನಃ ||59||
ಬ್ರಹ್ಮದಂಡಕ್ಕೆ ಸಮಾನವಾದ ಸ್ಪರ್ಶವುಳ್ಳ, ವಜ್ರಾಯುಧದ ವೇಗವುಳ್ಳ, ಸಮೀಪ ಸುಳಿಯಲೂ ಶಕ್ಯವಲ್ಲದ ಈ ಬಾಣಗಳು ನನ್ನ ಪ್ರಾಣಗಳನ್ನು ಹಿಂಸಿಸುತ್ತಿವೆ. ಈ ಬಾಣಗಳು ಶಿಖಂಡಿಯ ಬಾಣಗಳಲ್ಲ.
ಭುಜಗಾ ಇವ ಸಂಕ್ರುದ್ಧಾ ಲೇಲಿಹಾನಾ ವಿಷೋಲ್ಬಣಾಃ |
ಮಮಾವಿಶಂತಿ ಮರ್ಮಾಣಿ ನೇಮೇ ಬಾಣಾಃ ಶಿಖಂಡಿನಃ ||60||
ಕೋಪಗೊಂಡು ನಾಲಿಗೆಗಳನ್ನು ಹೊರಗೆ ಚಾಚುವ ವಿಷಪೂರಿತವಾದ ಸರ್ಪಗಳಂತೆ ಇರುವ ನನ್ನ ಮರ್ಮಗಳನ್ನು ಪ್ರವೇಶಿಸುತ್ತಿರುವ ಇವು ಶಿಖಂಡಿಯ ಬಾಣಗಳಲ್ಲ.
ನಾಶಯಂತೀವ ಮೇ ಪ್ರಾಣಾನ್ ಯಮದೂತಾ ಇವಾಹಿತಾಃ |
ಗದಾಪರಿಘಸಂಸ್ಪರ್ಶಾ ನೇಮೇ ಬಾಣಾಃ ಶಿಖಂಡಿನಃ ||61||
ನನ್ನ ಮೇಲೆ ಪ್ರಯೋಗಿಸಲ್ಪಟ್ಟ ಗದಾ-ಪರಿಘಗಳ ಸ್ಪರ್ಶದಂತೆ ಸ್ಪರ್ಶವುಳ್ಳ ಇವು ಯಮದೂತರಂತೆ ನನ್ನ ಪ್ರಾಣಗಳನ್ನು ನಾಶಗೊಳಿಸುತ್ತಿವೆ. ಇವು ಶಿಖಂಡಿಯ ಬಾಣಗಳಲ್ಲ.
ಕೃಂತಂತಿ ಮಮ ಗಾತ್ರಾಣಿ ಮಾಘಮಾ ಸೇಗವಾಮಿವ |
ಅರ್ಜುನಸ್ಯ ಇಮೇ ಬಾಣಾ ನೇಮೇ ಬಾಣಾಃ ಶಿಖಂಡಿನಃ ||62||
ಚೇಳಿನ ಮರಿಯು ತಾಯಿ ಚೇಳನ್ನು ಭೇದಿಸಿದಂತೆ ಅರ್ಜುನನ ಈ ಬಾಣಗಳು ನನ್ನನ್ನು ಭೇದಿಸುತ್ತಿವೆ, ಇವು ಶಿಖಂಡಿಯ ಬಾಣಗಳಲ್ಲ (ಲಕ್ಷಾಲಂಕಾರ).
ಸರ್ವೇ ಹ್ಯಪಿ ನ ಮೇ ದುಃಖಂ ಕುರ್ಯುರನ್ಯೇ ನರಾಧಿಪಾಃ |
ವೀರಂ ಗಂಡೀವಧನ್ವಾನಮೃತೇ ಜಿಷ್ಣುಂ ಕಪಿಧ್ವಜಮ್ ||63||
ಗಾಂಡೀವ ಧನುರ್ಧಾರಿಯಾದ, ಕಪಿಧ್ವಜನಾದ, ವೀರನಾದ ಜಯಶೀಲನಾದ ಅರ್ಜುನನೊಬ್ಬನನ್ನು ಬಿಟ್ಟು ಉಳಿದ ಎಲ್ಲಾ ರಾಜರು ಸೇರಿದರೂ ನನಗೆ ಯಾವ ದುಃಖವನ್ನೂ ಉಂಟು ಮಾಡಲಾರರು.
ಇತಿ ಬ್ರುವನ್ ಶಾಂತನವೋ ದಿಧಕ್ಷುರಿವ ಪಾಂಡವಮ್ |
ಸವಿಷ್ಫುಲಿಂಗಾಂ ದೀಪ್ತಾಗ್ರಾಂ ಶಕ್ತಿಂ ಚಿಕ್ಷೇಪ ಭಾರತ ||64||
ಎಲೈ ಭಾರತನೇ, ಹೀಗೆ ಹೇಳುತ್ತಾ ಭೀಷ್ಮರು ಪಾಂಡುನಂದನನಾದ ಅರ್ಜುನನನ್ನು ಸುಡುವಂತೆ ಕಿಡಿಗಳಿಂದ ಸಹಿತವಾದ, ಜ್ವಲಿಸುವ ಅಗ್ರಭಾಗವುಳ್ಳ ಶಕ್ತಿಯನ್ನು ಅರ್ಜುನನ ಮೇಲೆ ಎಸೆದರು.
ತಾಮಸ್ಯ ವಿಶಿಖೈಶ್ಛಿತ್ತಶತ್ವ ತ್ರಿಧಾ ತ್ರಿಭಿರಪಾತಯತ್ |
ಪಶ್ಯತಾಂ ಕುರುವೀರಾಣಾಂ ಸರ್ವೇಷಾಂ ತತ್ರ ಭಾರತ ||65||
ಎಲೈ ಭಾರತನೇ, ಕುರುವೀರರು ಎಲ್ಲರೂ ನೋಡುತ್ತಿರುವಂತೆಯೇ ಆ ಶಕ್ತಿಯನ್ನು ಅರ್ಜುನನು ಮೂರು ಬಾಣಗಳಿಂದ ಮೂರು ಭಾಗವಾಗಿ ಕತ್ತರಿಸಿ ಕೆಡವಿದನು.
ಚರ್ಮಾಥಾದತ್ತ ಗಾಂಗೇಯೋ ಜಾತರೂಪಪರಿಷ್ಕೃತಮ್ |
ಖಡ್ಗಂ ಚಾನ್ಯತರಂ ಪ್ರೇಪ್ಸುರ್ಮೃತ್ಯೋರಗ್ರೇ ಜಯದ್ರಥಃ ||66||
ಆಗ ಜಯಿಸುವ ರಥವುಳ್ಳ ಭೀಷ್ಮರು ಮೃತ್ಯುವನ್ನಾಗಲೀ ಅಥವಾ ಜಯವನ್ನಾಗಲೀ ಪಡೆಯಲು ಬಯಸಿ, ಸುವರ್ಣಾಲಂಕೃತವಾದ ಗುರಾಣಿಯನ್ನೂ ಮತ್ತು ಖಡ್ಗವನ್ನೂ ತೆಗೆದುಕೊಂಡರು (ಲಕ್ಷಾಲಂಕಾರ).
ತಸ್ಯ ತಚ್ಛತಧಾ ಚರ್ಮ ವ್ಯಧಮದ್ ದಂಸಿತಾತ್ಮನಃ |
ರಥಾದನವರೂಢಸ್ಯ ತದದ್ಭುತಮಿವಾಭವತ್ ||67||
ಅರ್ಜುನನು ಅವರು ರಥದಿಂದ ಇಳಿಯುವುದಕ್ಕಿಂತ ಮೊದಲೇ ಆ ಗುರಾಣಿಯನ್ನು ನೂರು ಚೂರುಗಳನ್ನಾಗಿ ನಾಶ ಮಾಡಿದನು. ಅದು ಅದ್ಭುತವಾಗಿದ್ದಿತು.
ವಿನದ್ಯೋಚ್ಚೈಃ ಸಿಂಹ ಇವ ಸ್ವಾನ್ಯನೀಕಾನ್ಯಚೋದಯತ್ |
ಅಭಿದ್ರವತ ಗಾಂಗೇಯಂ ಮಾ ವೋಽಸ್ತು ಭಯಮಣ್ವಪಿ ||68||
ಸಿಂಹದಂತೆ ಗರ್ಜನೆಯನ್ನು ಮಾಡಿ, ಅರ್ಜುನನು ತನ್ನ ಸೈನ್ಯಗಳನ್ನು ಕುರಿತು, ಭೀಷ್ಮರ ಮೇಲೆ ಎರಗಿ, ನಿಮಗೆ ಸ್ವಲ್ಪವೂ ಭಯಬೇಡ ಎಂದು ಪ್ರಚೋದಿಸಿದನು.
ಅಥ ತೇ ತೋಮರೈಃ ಪ್ರಾಸೈರ್ಬಾಣೌಘೈಶ್ಚ ಸಮಂತತಃ |
ಪಟ್ಟಿಶೈಶ್ಚ ಸನಿಸಿತ್ರಂಶೈರ್ನಾನಾಪ್ರಹರಣೈಸ್ತಥಾ ||69||
ವತ್ಸದಂತೈಶ್ಚ ಭಲ್ಲೈಶ್ಚ ತಮೇಕಮಭಿದುದ್ರುವುಃ |
ಸಿಂಹನಾದಸ್ತತೋ ಘೋರಃ ಪಾಂಡವಾನಾಮಜಾಯತ ||70||
ಆಗ ಅವರು ಎಲ್ಲ ಕಡೆಗಳಲ್ಲಿಯೂ ತೋಮರಗಳು, ಪ್ರಾಸಗಳು, ಬಾಣ ಸಮೂಹಗಳು, ಪಟ್ಟಿಶಗಳು, ಖಡ್ಗಗಳು, ವತ್ಸದಂತಗಳು,

ಭಲ್ಲಗಳು ಮೊದಲಾದ ನಾನಾ ವಿಧವಾದ ಆಯುಧಗಳಿಂದ ಭೀಷ್ಮರೊಬ್ಬರ ಮೇಲೆಯೇ ಎರಗಿದರು. ಪಾಂಡವರ ಸೈನ್ಯದಲ್ಲಿ ಆಗ ಘೋರವಾದ ಸಿಂಹನಾದವು ಉಂಟಾಯಿತು.
ತಥೈವ ತವ ಪುತ್ರಾಶ್ಚ ರಾಜನ್ ಭೀಷ್ಮಜಯೈಷಿಣಃ |
ತಮೇಕಮಭ್ಯವರ್ತಂತ ಸಿಂಹನಾದಾಂಶ್ಚ ನೇದಿರೇ ||71||
ಎಲೈ ರಾಜನೇ, ಹಾಗೆಯೇ ಭೀಷ್ಮರ ಜಯವನ್ನು ಬಯಸಿದ ನಿನ್ನ ಪುತ್ರರು ಅವರೊಬ್ಬರನ್ನೇ ರಕ್ಷಿಸುತ್ತಾ ಸಿಂಹನಾದಗಳನ್ನು ಮಾಡಿದರು.
ತತ್ರಾಸೀತ್ ತುಮುಲಂ ಯುದ್ಧಂ ತಾವಕಾನಾಂ ಪರೈಃ ಸಹ |
ದಶಮೇಽಹನಿ ರಾಜೇಂದ್ರ ಭೀಷ್ಮಾರ್ಜುನಸಮಾಗಮೇ ||72||
ಎಲೈ ರಾಜೇಂದ್ರನೇ, ಹತ್ತನೆಯ ದಿವಸ ಭೀಷ್ಮಾರ್ಜುನರ ಸಮಾಗಮ ಉಂಟಾಗುತ್ತಿರಲು ನಿನ್ನವರಿಗೂ ಮತ್ತು ಪರರಿಗೂ ಘೋರವಾದ ಯುದ್ಧ ಉಂಟಾಯಿತು.
ಆಸೀದ್ ಗಾಂಗ ಇವಾವರ್ತೋ ಮುಹೂರ್ತಮುದಧೇರಿವ |
ಸೈನ್ಯಾನಾಂ ಯುಧ್ಯಮಾನಾನಾಂ ನಿಘ್ನತಾಮಿತರೇತರಮ್ ||73||
ಪರಸ್ಪರವಾಗಿ ಯುದ್ಧ ಮಾಡಿ ಹೊಡೆಯುವಾಗ ಪರಸ್ಪರವಾಗಿ ಆ ಸೈನ್ಯಗಳಿಗೆ ಒಂದು ಮುಹೂರ್ತದ ಕಾಲ ಗಂಗೆಯ ಸುಳಿಯಂತೆ, ಸಮುದ್ರದ ಸುಳಿಯಂತೆ ಸೇನೆಗಳು ಮಿಶ್ರಣಗೊಂಡವು.
ಅಗಮ್ಯರೂಪಾ ಪೃಥಿವೀ ಶೋಣಿತಾಕ್ತಾ ತದಾಭವತ್ |
ಸಮಂ ಚ ವಿಷಮಂ ಚೈವ ನ ಪ್ರಾಜ್ಞಾಯತ ಕಿಂಚನ ||74||
ಆಗ ರಕ್ತದಿಂದ ನೆನೆದ ಭೂಮಿಯು ನಡೆಯಲು ಅಸಾಧ್ಯವಾಗಿ ಪರಿಣಮಿಸಿತು. ಸಮವಾದ ಪ್ರದೇಶವಾಗಲೀ, ವಿಷಮವಾದ ಪ್ರದೇಶವಾಗಲೀ, ಯಾವುದೂ ತಿಳಿಯಲಿಲ್ಲ.
ಯೋಧಾನಾಮಯುತಂ ಹತ್ವಾ ತಸ್ಮಿನ್ ಸ ದಶಮೇಽಹನಿ |
ಅತಿಷ್ಠದಾಹವೇ ಭೀಷ್ಮೋ ಭಿದ್ಯಮಾನೇಷು ಮರ್ಮಸು ||75||
ತಮ್ಮ ಮರ್ಮಗಳು ಭೇದಿಸಲ್ಪಡುತ್ತಿದ್ದರೂ ಭೀಷ್ಮರು ಆ ಹತ್ತನೆಯ ದಿವಸ ಹತ್ತು ಸಹಸ್ರ ಯೋಧರನ್ನು ಕೊಂದು ರಣರಂಗದಲ್ಲಿ ಸ್ಥಿರವಾಗಿ ನಿಂತರು.
ತತಃ ಸೇನಾಮುಖೇ ತಸ್ಮಿನ್ ಸ್ಥಿತಃ ಪಾರ್ಥೋ ಧನಂಜಯಃ |
ಮಧ್ಯೇನ ಕುರುಸೈನ್ಯಾನಾಂ ದ್ರಾವಯಾಮಾಸ ವಾಹಿನೀಮ್ ||76||
ಆಗ ಸೇನೆಯ ಮುಂಭಾಗದಲ್ಲಿ ನಿಂತ ಅರ್ಜುನನು ಕುರುಸೈನ್ಯದ ಮಧ್ಯವನ್ನು ಪ್ರವೇಶಿಸಿ ಅದನ್ನು ಚದುರಿಸಿದನು.
ತತ್ರಾದ್ಭುತಮಪಶ್ಯಾಮ ಪಾಂಡವಾನಾಂ ಪರಾಕ್ರಮಮ್ |
ದ್ರಾವಯಾಮಾಸುರಿಷುಭಿಃ ಸರ್ವಾನ್ ಭೀಷ್ಮಪದಾನುಗಾನ್ ||77||
ಭೀಷ್ಮರ ಅನುಯಾಯಿಗಳಾದ ಎಲ್ಲರನ್ನೂ ತಮ್ಮ ಬಾಣಗಳಿಂದ ದೂರ ಓಡಿಸಿದ ಪಾಂಡವರ ಅದ್ಭುತವಾದ ಪರಾಕ್ರಮವನ್ನು ನಾವು ಅಲ್ಲಿ ನೋಡಿದೆವು.
ವಯಂ ಶ್ವೇತಹಯಾದ್ ಭೀತಾಃ ಕುಂತೀಪುತ್ರಾದ್ ಧನಂಜಯಾತ್ |
ಪೀಡ್ಯಮಾನಾಃ ಶಿತೈಃ ಶಸ್ತ್ರೈಃ ಪ್ರದ್ರವಾಮ ಮಹಾರಣಾತ್ ||78||
ನಾವು ಕುಂತೀಪುತ್ರನೂ, ಶ್ವೇತಾಶ್ವನೂ ಆದ ಅರ್ಜುನನಿಂದ ಭೀತರಾಗಿ ತೀಕ್ಷ್ಣವಾದ ಶಸ್ತ್ರಗಳಿಂದ ಪೀಡಿಸಲ್ಪಟ್ಟು ರಣರಂಗದಿಂದ ಹೊರಗೆ ಓಡಿ ಹೋದೆವು.
ಪಾಂಡವೈಃ ಪಂಚಭಿಃ ಸಾರ್ಧಂ ಸಾತ್ಯಕೇನ ಚ ಧನ್ವಿನಾ |
ಧೃಷ್ಟದ್ಯುಮ್ನಮುಖೈಃ ಸರ್ವೈಃ ಪಾಂಚಾಲೈಶ್ಚ ಸಮಂತತಃ ||79||
ಭಿದ್ಯಮಾನಾ ಶರೈಸ್ತೀಕ್ಷ್ಣೈಃ ಸರ್ವೈಃ ಕಾರ್ಷ್ಣಿಪುರೋಗಮೈಃ |
ದ್ರೋಣದ್ರೌಣಿಕೃಪೈಃ ಸಾರ್ಧಂ ಸರ್ವೇ ಶಲ್ಯಕೃಪಾದಯಃ |
ತಾವಕಾ ಸಮರೇ ರಾಜನ್ ಜಹುರ್ಭೀಷ್ಮಂ ಮಹಾಮೃಧೇ ||80||
ಎಲೈ ರಾಜನೇ, ಧನುರ್ಧಾರಿಗಳಾದ, ಸಾತ್ಯಕಿಸಹಿತರಾದ ಪಂಚಪಾಂಡವರಿಂದಲೂ, ಧೃಷ್ಟದ್ಯುಮ್ನ ಮೊದಲಾದ ಎಲ್ಲ ಪಾಂಚಾಲರಿಂದಲೂ ಮತ್ತು ಅಭಿಮನ್ಯುವೇ ಮೊದಲಾದವರಿಂದಲೂ ಎಲ್ಲ ಕಡೆಯಿಂದಲೂ ತೀಕ್ಷ್ಣವಾದ ಬಾಣಗಳಿಂದ ದಹಿಸಲ್ಪಡುತ್ತಿದ್ದ ನಿನ್ನ ಸೈನ್ಯದವರಾದ ಶಲ್ಯ, ಕೃಪ ಮೊದಲಾದವರೆಲ್ಲರೂ ದ್ರೋಣರು, ಅಶ್ವತ್ಥಾಮರ ಜೊತೆಯಲ್ಲಿ ಸೇರಿ ಆ ದೊಡ್ಡ ಯುದ್ಧದಲ್ಲಿ ಭೀಷ್ಮರನ್ನು ಏಕಾಕಿಯಾಗಿ ಮಾಡಿ ತ್ಯಜಿಸಿದರು.
ಸೌವೀರಾಃ ಕಿತವಾಃ ಪ್ರಾಚ್ಯಾಃ ಪ್ರತೀಚ್ಯೋದೀಚ್ಯಮಾಲವಾಃ |
ಅಭೀಷಾಹಾಃ ಶೂರಸೇನಾಃ ಶಿಬಯೋಽಥ ವಸಾತಯಃ ||81||
ಸಾಲ್ವಾಶ್ರಯಾಸ್ತ್ರಿಗರ್ತಾಶ್ಚ ಅಂಬಷ್ಠಾಃ ಕೇಕಯೈಃ ಸಹ |
ದ್ವಾದಶೈತೇ ಜನಪದಾಃ ಶರಾರ್ತಾ ವ್ರಣಪೀಡಿತಾಃ |
ಸಂಗ್ರಾಮೇ ನ ಜಹುರ್ಭೀಷ್ಮಂ ಯುಧ್ಯಮಾನಂ ಕಿರೀಟಿನಾ ||82||
ಸೌವೀರರು, ಕಿತವರು, ಪೂರ್ವ-ಪಶ್ಚಿಮ-ಉತ್ತರ ದಿಕ್ಕಿನವರು, ಮಾಲವರು, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು, ಸಾಲ್ವಾಶ್ರಯರು, ತ್ರಿಗರ್ತರು, ಕೇಕಯ ಸಹಿತರಾದ ಅಂಬಷ್ಠರು ಈ ಹನ್ನೆರಡು ದೇಶದವರು ಮಾತ್ರ ಬಾಣಗಳ ಏಟನ್ನು ತಿಂದು, ಗಾಯಗಳಿಂದ ಪೀಡಿತರಾಗಿದ್ದರೂ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದ ಭೀಷ್ಮರನ್ನು ರಣರಂಗದಲ್ಲಿ ತ್ಯಜಿಸಲಿಲ್ಲ.

ತತಸ್ತಮೇಕಂ ಬಹವಃ ಪರಿವಾರ್ಯ ಸಮಂತತಃ |
ಪರಿಕಾಲ್ಯ ಕುರೂನ್ ಸರ್ವಾನ್ ಶರವರ್ಷೈರವಾಕಿರನ್ ॥83॥
ಆಗ ಪಾಂಡವರ ಬಹುಯೋಧರು ಭೀಷ್ಮರೊಬ್ಬರನ್ನು ಸುತ್ತುಗಟ್ಟಿ, ಉಳಿದ ಎಲ್ಲಾ ಕುರುಗಳನ್ನೂ ದೂರ ಓಡಿಸಿ, ಭೀಷ್ಮರ ಮೇಲೆ ಬಾಣಗಳ ಮಳೆಯನ್ನು ಕರೆದರು.
ನಿಪಾತಯತ ಗೃಹ್ಣೀತ ವಿಧ್ಯತಾಥ ಚ ಕರ್ಷತ |
ಇತ್ಯಾಸೀತ್ ತುಮುಲಃ ಶಬ್ದೋ ರಾಜನ್ ಭೀಷ್ಮರಥಂ ಪ್ರತಿ ॥84॥
ಎಲೈ ರಾಜನೇ, ಕೆಳಗೆ ಉರುಳಿಸಿ, ಹಿಡಿಯಿರಿ, ಗಾಯಗೊಳಿಸಿ, ಎಳೆಯಿರಿ ಮೊದಲಾದ ತೀವ್ರವಾದ ಶಬ್ದಗಳು ಭೀಷ್ಮರ ರಥದ ಬಳಿಯಲ್ಲಿ ಕೇಳಿಬಂದವು.
ಅಭಿಹತ್ಯ ಶರೌಘೈಸ್ತಂ ಶತಶೋಽಥ ಸಹಸ್ರಶಃ |
ನ ತಸ್ಯಾಸೀದನಿರ್ಭಿನ್ನಂ ಗಾತ್ರೇಷ್ವಂಗುಲಮಾತ್ರಕಮ್ ॥85॥
ಭೀಷ್ಮರನ್ನು ನೂರಾರು, ಸಹಸ್ರಾರು ಬಾಣಗಳಿಂದ ಅವರು ಹೊಡೆದರು. ಅವರ ಶರೀರದಲ್ಲಿ ಬಾಣಗಳಿಂದ ಭೇದಿಸಲ್ಪಡದ ಒಂದು ಅಂಗುಲದ ಸ್ಥಳವೂ ಉಳಿದಿರಲಿಲ್ಲ.
ಏವಂ ವಿಭೋ ತವ ಪಿತಾ ಶರೈರ್ವಿಶಕಲೀಕೃತಃ |
ಶಿತಾಗ್ರೈಃ ಫಲ್ಗುನೇನಾಜೌ ಪ್ರಾಕ್ ಶಿರಾಃ ಪ್ರಾಪತದ್ ರಥಾತ್ |
ಕಿಂಚಿಚ್ಛೇಷೇ ದಿನಕರೇ ಪುತ್ರಾಣಾಂ ತವ ಪಶ್ಯತಾಮ್ ॥86॥
ಎಲೈ ವಿಭುವೇ, ಹೀಗೆ ಬಾಣಗಳಿಂದ ಭೇದಿಸಲ್ಪಟ್ಟ ನಿನ್ನ ತಂದೆಯು ರಣರಂಗದಲ್ಲಿ ತೀಕ್ಷ್ಣವಾದ ಅಗ್ರವುಳ್ಳ ಬಾಣಗಳಿಂದ ಅರ್ಜುನನಿಂದ ಹೊಡೆಯಲ್ಪಟ್ಟವರಾಗಿ, ಸೂರ್ಯನು ಇನ್ನೂ ಸ್ವಲ್ಪ ಕಾಲ ಇರುವಾಗಲೇ, ನಿನ್ನ ಪುತ್ರರು ನೋಡುತ್ತಿರುವಂತೆಯೇ ಪೂರ್ವದಿಕ್ಕಿಗೆ ಶಿರಸ್ಸನ್ನು ಮಾಡಿ ರಥದಿಂದ ಬಿದ್ದರು.
ಹಾ ಹೇತಿ ದಿವಿ ದೇವಾನಾಂ ಪಾರ್ಥಿವಾನಾಂ ಚ ಸರ್ವಶಃ |
ಪತಮಾನೇ ರಥಾದ್ ಭೀಷ್ಮೇ ಬಭೂವ ಸುಮಹಾನ್ ಸ್ವನಃ ॥87॥
ಭೀಷ್ಮರು ರಥದಿಂದ ಬೀಳುತ್ತಿರಲು ಆಕಾಶದಲ್ಲಿ ಮತ್ತು ಭೂಮಿಯಲ್ಲಿ ದೇವತೆಗಳ ಮತ್ತು ರಾಜರ ಹಾಹಾಕಾರದ ದೊಡ್ಡ ಶಬ್ದವು ಉಂಟಾಯಿತು.
ತಂ ಪತಂತಮಭಿಪ್ರೇಕ್ಷ್ಯ ಮಹಾತ್ಮಾನಂ ಪಿತಾಮಹಮ್ |
ಸಹ ಭೀಷ್ಮೇಣ ಸರ್ವೇಷಾಂ ಪ್ರಾಪತನ್ ಹೃದಯಾನಿ ನಃ ॥88॥
ರಥದಿಂದ ಬೀಳುತ್ತಿರುವ ಮಹಾತ್ಮರಾದ ಪಿತಾಮಹರನ್ನು ನೋಡಿ ಅವರ ಜೊತೆಯಲ್ಲಿಯೇ ನಮ್ಮೆಲ್ಲರ ಹೃದಯಗಳೂ ಬಿದ್ದುಹೋದವು.
ಸ ಪಪಾತ ಮಹಾಬಾಹುರ್ವಸುಧಾಮನುನಾದಯನ್ |
ಇಂದ್ರಧ್ವಜ ಇವೋತ್ಸೃಷ್ಟಃ ಕೇತುಃ ಸರ್ವಧನುಷ್ಮತಾಮ್ |
ಧರಣೀಂ ನಾಸ್ಪೃಶಚ್ಚಾಪಿ ಶರಸಂಘೈಃ ಸಮಾಚಿತಃ ॥89॥
ಮಹಾಬಾಹುಗಳೂ, ಸರ್ವಧನುರ್ಧಾರಿಗಳಿಗೆ ಶಿಖರಪ್ರಾಯರೂ ಆದ ಭೀಷ್ಮರು ಕೈಬಿಟ್ಟ ಇಂದ್ರಧ್ವಜದಂತೆ ಭೂಮಿಯ ಮೇಲೆ ದೊಡ್ಡ ಸದ್ದನ್ನು ಮಾಡುತ್ತಾ ಬಿದ್ದರು. ಆದರೆ ದೇಹದಲ್ಲೆಲ್ಲಾ ಬಾಣಸಮೂಹಗಳು ನಾಟಿದುದರಿಂದ ಅವರು ಭೂಮಿಯನ್ನು ಮುಟ್ಟಲಿಲ್ಲ (ತಲ್ಪಾಕಾರವಾದ ಶರಗಳ ಮೇಲೆ ಮಲಗಿದರು).
ಶರತಲ್ಪೇ ಮಹೇಷ್ವಾಸಂ ಶಯಾನಂ ಪುರುಷರ್ಷಭಮ್ |
ರಥಾತ್ ಪ್ರಪತಿತಂ ಚೈನಂ ದಿವ್ಯೋ ಭಾವಃ ಸಮಾವಿಶತ್ ॥90॥
ರಥದಿಂದ ಬಿದ್ದು ಶರತಲ್ಪದಲ್ಲಿ ಮಲಗಿದ, ಮಹಾಧನುರ್ಧಾರಿಗಳಾದ ಅವರಿಗೆ ದಿವ್ಯವಾದ ಅಭಿಪ್ರಾಯಗಳು ಮೂಡಿಬಂದವು (ದೇವಭಾವ ಉಂಟಾಯಿತು).
ಅಭ್ಯವರ್ಷತ ಪರ್ಜನ್ಯಃ ಪ್ರಾಕಂಪತ ಚ ಮೇದಿನೀ |
ಪತನ್ ಸ ದದೃಶೇ ಚಾಪಿ ಖರ್ವಿತಂ ಚ ದಿವಾಕರಮ್ ॥91॥
ಪರ್ಜನ್ಯನು ಮಳೆಯನ್ನು ಸುರಿಸಿದನು. ಭೂಮಿಯು ನಡುಗಿತು. ಬೀಳುತ್ತಾ ಅವರು ಕಪ್ಪು ಪರಿವೇಷವನ್ನು ಹೊಂದಿದ ಸೂರ್ಯನನ್ನು ನೋಡಿದರು.
ಸಂಜ್ಞಾಂ ಚೈವಾಲಭದ್ ವೀರಃ ಕಾಲಂ ಸಂಚಿಂತ್ಯ ಭಾರತ |
ಅಂತರಿಕ್ಷೇ ಚ ಶುಶ್ರಾವ ದಿವ್ಯಾಂ ವಾಚಂ ಸಮಂತತಃ ॥92॥
ಎಲೈ ಭಾರತನೇ, ವೀರರಾದ ಅವರು ತಮ್ಮ ಮರಣಕಾಲವನ್ನು ಚಿಂತಿಸಿ ಸಂಜ್ಞೆಯನ್ನು ಪುನಃ ಪಡೆದರು ಮತ್ತು ಅಂತರಿಕ್ಷದಲ್ಲಿ ಎಲ್ಲ ಕಡೆಗಳಿಂದಲೂ ದಿವ್ಯವಾದ ಮಾತುಗಳನ್ನು ಕೇಳಿದರು.
ಕಥಂ ಮಹಾತ್ಮಾ ಗಾಂಗೇಯಃ ಸರ್ವಶಸ್ತ್ರಭೃತಾಂ ವರಃ |
ಕಾಲಂ ಕರ್ತಾ ನರವ್ಯಾಘ್ರಃ ಸಂಪ್ರಾಪ್ತೇ ದಕ್ಷಿಣಾಯನೇ ॥93॥
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ, ನರವ್ಯಾಘ್ರರಾದ, ಮಹಾತ್ಮರಾದ ಭೀಷ್ಮರು ದಕ್ಷಿಣಾಯನವು ಪ್ರಾಪ್ತವಾಗಿರುವಾಗ ಅದನ್ನು ಹೇಗೆ ತಮ್ಮ ಮರಣಕಾಲವನ್ನಾಗಿ ಸ್ವೀಕರಿಸುತ್ತಾರೆ? (ಎಂಬ ಮಾತುಗಳು ಕೇಳಿಬಂದವು).
ಸ್ಥಿತೋಽಸ್ಮೀತಿ ಚ ಗಾಂಗೇಯಸ್ತಚ್ಛ್ರುತ್ವಾ ವಾಕ್ಯಮಬ್ರವೀತ್ |
ಧಾರಯಾಮಾಸ ಚ ಪ್ರಾಣಾನ್ ಪತಿತೋಽಪಿ ಹಿ ಭೂತಳೇ |

ಉತ್ತರಾಯಣಮನ್ವಿಚ್ಛನ್ ಭೀಷ್ಮಃ ಕುರುಪಿತಾಮಹಃ ॥94॥
ಕುರುಪಿತಾಮಹರಾದ ಭೀಷ್ಮರು ಆ ಮಾತುಗಳನ್ನು ಕೇಳಿ ಭೂತಳದಲ್ಲಿ ಬಿದ್ದಿದ್ದರೂ ನಾನು ಹೀಗೆಯೇ ಇರುತ್ತೇನೆ ಎಂದು ಹೇಳುತ್ತಾ, ಉತ್ತರಾಯಣವನ್ನು ಬಯಸುತ್ತಾ ಅಲ್ಲಿಯವರೆಗೆ ತಮ್ಮ ಪ್ರಾಣಗಳನ್ನು ಹಿಡಿದುಕೊಂಡರು.
ತಸ್ಯ ತನ್ಮತಮಾಜ್ಞಾಯ ಗಂಗಾ ಹಿಮವತಃ ಸುತಾ |
ಮಹರ್ಷೀನ್ ಹಂಸರೂಪೇಣ ಪ್ರೇಷಯಾಮಾಸ ತತ್ರ ವೈ ॥95॥
ಅವರ ಆ ಅಭಿಪ್ರಾಯವನ್ನು ತಿಳಿದ ಹಿಮಾಲಯದ ಸುತಳಾದ ಗಂಗೆಯು ಭೀಷ್ಮರು ಬಿದ್ದಲ್ಲಿಗೆ ಹಂಸರೂಪದಿಂದ ಮಹರ್ಷಿಗಳನ್ನು ಕಳುಹಿಸಿದಳು.
ತತಃ ಸಂಪಾತಿನೋ ಹಂಸಾಸ್ತ್ವರಿತಾ ಮಾನಸೌಕಸಃ |
ಆಜಗ್ಮುಃ ಸಹಿತಾ ದ್ರಷ್ಟುಂ ಭೀಷ್ಮಂ ಕುರುಪಿತಾಮಹಮ್ |
ಯತ್ರ ಶೇತೇ ನರಶ್ರೇಷ್ಠಃ ಶರತಲ್ಪೇ ಪಿತಾಮಹಃ ॥96॥
ಆಗ ಮಾನಸಸರೋವರದಲ್ಲಿ ವಾಸಿಸುವ ದೂರ ಹಾರುವ ಹಂಸಗಳು ಶೀಘ್ರವಾಗಿ ನರಶ್ರೇಷ್ಠರಾದ ಪಿತಾಮಹರು ಎಲ್ಲಿ ಬಿದ್ದಿದ್ದಾರೆಯೋ ಅಲ್ಲಿ ಅವರನ್ನು ನೋಡಲು ಜೊತೆಯಾಗಿ, ತ್ವರಿತವಾಗಿ ಬಂದವು.
ತೇ ತು ಭೀಷ್ಮಂ ಸಮಾಸಾದ್ಯ ಮುನಯೋ ಹಂಸರೂಪಿಣಃ |
ಅಪಶ್ಯನ್ ಶರತಲ್ಪಸ್ಥಂ ಭೀಷ್ಮಂ ಕುರುಪಿತಾಮಹಮ್ ॥97॥
ಹಂಸರೂಪವನ್ನು ಧರಿಸಿದ ಆ ಋಷಿಗಳು ಭೀಷ್ಮರ ಸಮೀಪಕ್ಕೆ ಬಂದು ಶರತಲ್ಪದಲ್ಲಿದ್ದ ಕುರುಪಿತಾಮಹರಾದ ಅವರನ್ನು ನೋಡಿದರು.
ತೇ ತಂ ದೃಷ್ಟ್ವಾ ಮಹಾತ್ಮಾನಂ ಕೃತ್ವಾ ಚಾಪಿ ಪ್ರದಕ್ಷಿಣಮ್ |
ಗಾಂಗೇಯಂ ಭರತಶ್ರೇಷ್ಠಂ ದಕ್ಷಿಣೇನ ಚ ಭಾಸ್ಕರಮ್ ॥98॥
ಇತರೇತರಮಾಮಂತ್ರ್ಯ ಪ್ರಾಹುಸ್ತತ್ರ ಮನೀಷಿಣಃ |
ಭೀಷ್ಮ ಏವ ಮಹಾತ್ಮಾ ಸನ್ ಸಂಸ್ಥಿತೋ ದಕ್ಷಿಣಾಯನೇ ॥99॥
ಭರತಶ್ರೇಷ್ಠರೂ, ಮಹಾತ್ಮರೂ ಆದ ಭೀಷ್ಮರು ಶರತಲ್ಪದಲ್ಲಿ ಮಲಗಿರುವುದನ್ನು ನೋಡಿ ಅವರಿಗೆ ಪ್ರದಕ್ಷಿಣೆಯನ್ನು ಮಾಡಿ, ಸೂರ್ಯನು ದಕ್ಷಿಣಾಯನದಲ್ಲಿ ಇರುವುದನ್ನು ನೋಡಿ, ಮೇಧಾವಿಗಳಾದ ಆ ಋಷಿಗಳು ಪರಸ್ಪರವಾಗಿ ಮಾತನಾಡಿಕೊಂಡು, ಅಲ್ಲಿ ಭೀಷ್ಮರು ಮಹಾತ್ಮರಾದರೂ ದಕ್ಷಿಣಾಯನದಲ್ಲಿ ಪ್ರಯಾಣ ಮಾಡುತ್ತಿದ್ದಾರೆ ಎಂದು ಹೇಳಿದರು.
ಇತ್ಯುಕ್ತ್ವಾ ಪ್ರಸ್ಥಿತಾನ್ ಹಂಸಾನ್ ದಕ್ಷಿಣಾಮಭಿತೋ ದಿಶಮ್ |
ಸಂಪ್ರೇಕ್ಷ್ಯ ವೈ ಮಹಾಬುದ್ಧಿಶ್ಚಿಂತಯಿತ್ವಾ ಚ ಭಾರತ ॥100॥
ತಾನಬ್ರವೀಚ್ಛಾಂತನವೋ ನಾಹಂ ಗಂತಾ ಕಥಂಚನ |
ದಕ್ಷಿಣಾವೃತ್ತ ಆದಿತ್ಯೇ ಏತನ್ಮೇ ಮನಸಿ ಸ್ಥಿತಮ್ ॥101॥
ಎಲೈ ಭಾರತನೇ, ಹೀಗೆ ಹೇಳಿ ದಕ್ಷಿಣಾಭಿಮುಖವಾಗಿ ಹೊರಟ ಆ ಹಂಸಗಳನ್ನು ನೋಡಿ ಮಹಾಬುದ್ಧಿಯುಳ್ಳ ಭೀಷ್ಮರು ಮನಸ್ಸಿನಲ್ಲಿ ಚಿಂತಿಸಿ, ಅವರನ್ನು ಕುರಿತು, ಸೂರ್ಯನು ದಕ್ಷಿಣಾಯನದಲ್ಲಿರುವಾಗ ನಾನು ಖಂಡಿತವಾಗಿ ಪ್ರಯಾಣ ಮಾಡುವುದಿಲ್ಲ. ಇದು ನನ್ನ ಮನಸ್ಸಿನ ಅಭಿಪ್ರಾಯವಾಗಿದೆ ಎಂದು ಹೇಳಿದರು.
ಗಮಿಷ್ಯಾಮಿ ಸ್ವಕಂ ಸ್ಥಾನಮಾಸೀದ್ಯನ್ಮೇ ಪುರಾತನಮ್ |
ಉದಗಾವೃತ್ತ ಆದಿತ್ಯೇ ಹಂಸಾಃ ಸತ್ಯಂ ಬ್ರವೀಮಿ ವಃ ॥102॥
ನನಗೆ ಹಿಂದೆ ಯಾವ ಸ್ಥಾನವಿದ್ದಿತೋ ಅದೇ ಸ್ಥಾನಕ್ಕೆ ಸೂರ್ಯನು ಉತ್ತರಾಯಣಕ್ಕೆ ತಿರುಗಿದ ಮೇಲೆ ನಾನು ಹೋಗುವೆನು. ಎಲೈ ಹಂಸಗಳೇ, ನಾನು ನಿಮಗೆ ಸತ್ಯವನ್ನು ಹೇಳುತ್ತಿದ್ದೇನೆ.
ಧಾರಯಿಷ್ಯಾಮ್ಯಹಂ ಪ್ರಾಣಾನುತ್ತರಾಯಣಕಾಂಕ್ಷಯಾ |
ಐಶ್ವರ್ಯಭೂತಃ ಪ್ರಾಣಾನಾಮುತ್ಸರ್ಗೇ ನಿಯತೋ ಹ್ಯಹಮ್ |
ತಸ್ಮಾತ್ ಪ್ರಾಣಾನ್ ಧಾರಯಿಷ್ಯೇ ಮುಮೂರ್ಷುರುದಗಾಯನೇ ॥
ನಾನು ಉತ್ತರಾಯಣವನ್ನು ಬಯಸುತ್ತಾ ನನ್ನ ಪ್ರಾಣಗಳನ್ನು ಧರಿಸುವೆನು. ನಾನು ನನ್ನ ಪ್ರಾಣವನ್ನು ಬಿಡುವ ವಿಷಯದಲ್ಲಿ, ಶಂತನುವಿನ ಅನುಗ್ರಹದಿಂದ ಇಚ್ಛಿಸಿದಾಗ ಪ್ರಾಣಗಳನ್ನು ತೊರೆಯುವ ಸಾಮರ್ಥ್ಯವನ್ನು ಹೊಂದಿದ್ದೇನೆ. ಆದ್ದರಿಂದ ಮರಣವು ಸನ್ನಿಹಿತವಾಗಿದ್ದರೂ ಉತ್ತರಾಯಣದವರೆಗೆ ಪ್ರಾಣಗಳನ್ನು ಧರಿಸುವೆನು.
ಯಶ್ಚ ದತ್ತೋ ವರೋ ಮಹ್ಯಂ ಪಿತ್ರಾ ತೇನ ಮಹಾತ್ಮನಾ |
ಛಂದತೋ ಮೃತ್ಯುರಿತ್ಯೇವಂ ತಸ್ಯ ಚಾಸ್ತು ವರಸ್ತಥಾ ॥104॥
ನನ್ನ ಮಹಾತ್ಮನಾದ ತಂದೆಯು ನನಗೆ ಸ್ವಚ್ಛಂದ ಮೃತ್ಯುರೂಪವಾದ ಯಾವ ವರವನ್ನು ಕೊಟ್ಟಿದ್ದಾನೆಯೋ ಆ ವರವು ಹಾಗೆಯೇ ಆಗಲಿ.
ಧಾರಯಿಷ್ಯೇ ತತಃ ಪ್ರಾಣಾನುತ್ಸರ್ಗೇ ನಿಯತೇ ಸತಿ |
ಇತ್ಯುಕ್ತ್ವಾ ತಾಂಸ್ತದಾ ಹಂಸಾನಶೇತ ಶರತಲ್ಪಗಃ ॥105॥
ಆದ್ದರಿಂದ ಪ್ರಾಣಗಳನ್ನು ಬಿಡುವುದು ನನ್ನ ಅಧೀನವಾಗಿರುವುದರಿಂದ ನಾನು ಉತ್ತರಾಯಣದವರೆಗೆ ಬದುಕಿರುವೆನು ಎಂದು ಆ ಹಂಸಗಳನ್ನು ಕುರಿತು ಹೇಳಿ ಭೀಷ್ಮರು ಶರಕಲ್ಪದಲ್ಲಿ ಮಲಗಿದರು.
ಏವಂ ಕುರೂಣಾಂ ಪತಿತೇ ಶೃಂಗೇ ಭೀಷ್ಮೇ ಮಹೌಜಸಿ |
ಪಾಂಡವಾಃ ಸೃಂಜಯಾಶ್ಚೈವ ಸಿಂಹನಾದಂ ಪ್ರಚಕ್ರಿರೇ ॥106॥

ಹೀಗೆ ಕುರುಗಳಿಗೆ ಶಿರಃಪ್ರಾಯರಾದ, ಮಹಾಸಾಮರ್ಥ್ಯವುಳ್ಳ ಭೀಷ್ಮರು ಬೀಳುತ್ತಿರಲು ಪಾಂಡವರೂ ಮತ್ತು ಸೃಂಜಯರೂ ಸಿಂಹನಾದವನ್ನು ಮಾಡಿದರು.
ತಸ್ಮಿನ್ ಹತೇ ಮಹಾಸತ್ತ್ವೇ ಭರತಾನಾಮಮಧ್ಯಪೇ |
ನ ಕಿಂಚಿತ್ ಪ್ರತ್ಯಪದ್ಯಂತ ಪುತ್ರಾಸ್ತೇ ಭರತರ್ಷಭ |
ಸರ್ವೇಷ್ವೇಹಶ್ಚೈವ ತುಮುಲಃ ಕುರೂಣಾಮಭವತ್ ತದಾ ॥107॥
ಎಲೈ ಭರತಶ್ರೇಷ್ಠನೇ, ಭರತರಲ್ಲಿ ಮಹಾವ್ರತವನ್ನು ಧರಿಸಿದ ಕಾರಣದಿಂದ ಮದ್ಯಪಾನವನ್ನು ಮಾಡದ, ಮಹಾಬಲಶಾಲಿಗಳಾದ ಅವರು ಬೀಳುತ್ತಿರಲು ನಿನ್ನ ಪುತ್ರರಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಕುರುಗಳೆಲ್ಲರಿಗೂ ಆಗ ತೀವ್ರವಾದ ಮೌಢ್ಯ ಉಂಟಾಯಿತು.

ನೃಪಾ ದುರ್ಯೋಧನಮುಖಾ ನಿಃಶ್ವಸ್ಯ ರುರುದುಸ್ತತಃ |
ವಿಷಾದಾಚ್ಚ ಚಿರಂ ಕಾಲಮತಿಷ್ಠನ್ ವಿಗತೇಂದ್ರಿಯಾಃ ॥108॥
ದುರ್ಯೋಧನನೇ ಮೊದಲಾದ ರಾಜರು ನಿಟ್ಟುಸಿರನ್ನು ಬಿಟ್ಟು ಆಗ ಅತ್ತರು. ವಿಷಾದದಿಂದ ಬಹುಕಾಲದವರೆಗೆ ಯಾವ ಇಂದ್ರಿಯ ವ್ಯಾಪಾರವೂ ಇಲ್ಲದೆ ನಿಂತರು.
ದಧ್ಯುಶ್ಚೈವ ಮಹಾರಾಜ ನ ಯುದ್ಧೇ ದಧಿರೇ ಮನಃ |
ಊರುಗ್ರಾಹಗೃಹೀತಾಶ್ಚ ನಾಭ್ಯಧಾವಂತ ಪಾಂಡವಾನ್ ॥109॥
ಎಲೈ ಮಹಾರಾಜನೇ, ಅವರು ಚಿಂತಾಕ್ರಾಂತರಾದರು. ಯುದ್ಧದಲ್ಲಿ ಮನಸ್ಸನ್ನು ಮಾಡಲಿಲ್ಲ. ತೊಡೆಗಳು ಸ್ತಂಭಿತವಾದುದರಿಂದ ಪಾಂಡವರ ಕಡೆಗೆ ಧಾವಿಸಲಿಲ್ಲ.
ಅವಧ್ಯೇ ಶಂತನೋಃ ಪುತ್ರೇ ಹತೇ ಭೀಷ್ಮೇ ಮಹೌಜಸಿ |
ದುಃಖಾರ್ತಾಸ್ತೇ ತತೋ ರಾಜನ್ ಕುರೂಣಾಂ ಪತಯೋಽಭವನ್ |
ಅಭಾವಃ ಸುಮಹಾನ್ ರಾಜನ್ ಕುರೂನಾಗಾದತಂದ್ರಿತಃ ॥110॥
ಎಲೈ ರಾಜನೇ, ಶಂತನುಪುತ್ರರಾದ, ಮಹಾಬಲಶಾಲಿಗಳಾದ, ಅವಧ್ಯರಾದ ಭೀಷ್ಮರು ಹತರಾಗುತ್ತಿರಲು ಕುರುಪುತ್ರರೆಲ್ಲರೂ ಆಗ ದುಃಖಾರ್ತರಾದರು. ಎಲೈ ರಾಜನೇ, ಕುರುಗಳಿಗೆ ಯಾವ ವಿಳಂಬವೂ ಇಲ್ಲದೇ ದೊಡ್ಡ ವಿನಾಶವು ಪ್ರಾಪ್ತವಾಯಿತು.
ಹತಪ್ರವೀರಾಶ್ಚ ವಯಂ ನಿಕೃತ್ತಾಶ್ಚ ಶಿತೈಃ ಶರೈಃ |
ಕರ್ತವ್ಯಂ ನಾಭಿಜಾನೀಮೋ ನಿರ್ಜಿತಾಃ ಸವ್ಯಸಾಚಿನಾ ॥111॥
ಅರ್ಜುನನಿಂದ ಪರಾಜಿತರಾಗಿ, ಶ್ರೇಷ್ಠ ವೀರರನ್ನು ಕಳೆದುಕೊಂಡು, ತೀಕ್ಷ್ಣವಾದ ಬಾಣಗಳಿಂದ ಗಾಯಗೊಂಡ ದೇಹಗಳುಳ್ಳ ನಮಗೆ ನಾವು ಏನು ಮಾಡಬೇಕೆಂದು ತಿಳಿಯುತ್ತಿಲ್ಲ (ಎಂದು ಚಿಂತಿಸಿದರು).
ಪಾಂಡವಾಸ್ತು ಜಯಂ ಲಬ್ಧ್ವಾ ಪರತ್ರ ಚ ಪರಾಂ ಗತಿಮ್ |
ಸರ್ವೇ ದಧ್ಮುರ್ಮಹಾಶಂಖಾನ್ ಶೂರಾಃ ಪರಿಘಬಾಹವಃ |
ಸೋಮಕಾಶ್ಚ ಸಪಂಚಾಲಾಃ ಪ್ರಾಹೃಷ್ಯಂತ ಜನೇಶ್ವರ ॥112॥
ಶೂರರೂ, ಪರಿಘಬಾಹುಗಳೂ ಆದ ಪಾಂಡವರು ಈ ಲೋಕದಲ್ಲಿ ಜಯವನ್ನೂ, ಪರಲೋಕದಲ್ಲಿ ಶ್ರೇಷ್ಠ ಗತಿಯನ್ನೂ ಸಂಪಾದಿಸಿ, ತಮ್ಮ ಮಹಾಶಂಖಗಳನ್ನು ಎಲ್ಲರೂ ಊದಿದರು. ಎಲೈ ರಾಜನೇ, ಸೋಮಕರು ಮತ್ತು ಪಾಂಚಾಲರು ಹರ್ಷಗೊಂಡರು.
ತತಸ್ತೂರ್ಯಸಹಸ್ರೇಷು ನದತ್ಸು ಸುಮಹಾಬಲಃ |
ಆಸ್ಫೋಟಯಾಮಾಸ ಭೃಶಂ ಭೀಮಸೇನೋ ನನಾದ ಚ ॥113॥
ಆಗ ಸಹಸ್ರ ಸೂರ್ಯಗಳು ಮೊಳಗುತ್ತಿರಲು, ಅತ್ಯಂತ ಬಲಶಾಲಿಯಾದ ಭೀಮಸೇನನು ಗಟ್ಟಿಯಾಗಿ ತೊಡೆಗಳನ್ನು ತಟ್ಟಿನಾದನವನ್ನು ಮಾಡಿದನು.
ಸೇನಯೋರುಭಯೋಶ್ಚಾಪಿ ಗಾಂಗೇಯೇ ವಿನಿಪಾತಿತೇ |
ಸನ್ನ್ಯಸ್ಯ ವೀರಾಃ ಶಸತ್ರಣಿ ಪ್ರಾಧ್ಯಾಯಂತ ಸಮಂತತಃ ॥114॥
ಭೀಷ್ಮರು ಬೀಳುತ್ತಿರಲು ಎರಡು ಸೈನ್ಯಗಳ ವೀರರೂ ಸಹ ಶಸ್ತ್ರಗಳನ್ನು ಬಿಸುಟು ಎಲ್ಲ ಕಡೆಗಳಲ್ಲಿಯೂ ಚಿಂತಾಕ್ರಾಂತರಾದರು.
ಪ್ರಾಕ್ರೋಶನ್ ಪ್ರಾಪತಂಶ್ಚಾನ್ಯೇ ಜಗ್ಮುರ್ಮೋಹಂ ತಥಾಪರೇ |
ಕ್ಷತ್ರಂ ಚಾನ್ಯೇಽಭ್ಯನಿಂದಂತ ಭೀಷ್ಮಂ ಚೈಕೇಽಭ್ಯಪೂಜಯನ್ ॥115॥
ಕೆಲವರು ಕಿರುಚಿದರು, ಕೆಲವರು ಬಿದ್ದರು, ಇನ್ನು ಕೆಲವರು ಮೂರ್ಛೆ ಹೋದರು, ಇನ್ನು ಕೆಲವರು ಕ್ಷತ್ರಿಯ ಧರ್ಮವನ್ನು ನಿಂದಿಸುತ್ತಾ ಭೀಷ್ಮರನ್ನು ಹೊಗಳಿದರು.
ಋಷಯಃ ಪಿತರಶ್ಚೈವ ಪ್ರಶಶಂಸುರ್ಮಹಾವ್ರತಮ್ |
ಭರತಾನಾಂ ಚ ಯೇ ಪೂರ್ವೇ ತೇ ಚೈನಂ ಪ್ರಶಶಂಸಿರೇ ॥116॥
ಋಷಿಗಳು ಮತ್ತು ಪಿತೃಗಳು ಮಹಾವ್ರತರಾದ ಭೀಷ್ಮರನ್ನು ಹೊಗಳಿದರು. ಭರತವಂಶದ ಪೂರ್ವಜರೂ ಸಹ ಭೀಷ್ಮರನ್ನು ಹೊಗಳಿದರು.
ಮಹೋಪನಿಷದಂ ಚೈವ ಯೋಗಮಾಸ್ಥಾಯ ವೀರ್ಯವಾನ್ |
ಜಪನ್ ಶಾಂತನವೋ ಧೀಮಾನ್ ಕಾಲಾಕಾಂಕ್ಷೀ ಸ್ಥಿತೋಽಭವತ್ ॥
ವೀರ್ಯಶಾಲಿಗಳಾದ, ಶಂತನುಪುತ್ರರಾದ, ಮೇಧಾವಿಗಳಾದ ಭೀಷ್ಮರು ಯೋಗವನ್ನು ಧರಿಸಿ ಉಪನಿಷತ್ತುಗಳನ್ನು ಜಪಿಸುತ್ತಾ, ಉತ್ತರಾಯಣಕಾಲವನ್ನು ನಿರೀಕ್ಷಿಸುತ್ತಾ ಶರತಲ್ಪದಲ್ಲಿಯೇ ಇದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ

ಷೋಡಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಷಟ್ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹದಿನಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನೇಳನೆಯ ಅಧ್ಯಾಯ
ಅರ್ಜುನನಿಂದ ಭೀಷ್ಮರಿಗೆ ತಲೆದಿಂಬಿನ ವ್ಯವಸ್ಥೆ.
ಭೀಷ್ಮರಿಂದ ಅರ್ಜುನನ ಪ್ರಶಂಸೆ.
ಧೃತರಾಷ್ಟ್ರಃ
ಕಥಮಾಸಂಸ್ತದಾ ಯೋಧಾ ಹೀನಾ ಭೀಷ್ಮೇಣ ಸಂಜಯ |
ಬಲಿನಾ ದೇವಕಲ್ಪೇನ ಗುರ್ವರ್ಥೇ ಬ್ರಹ್ಮಚಾರಿಣಾ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಬಲಿಷ್ಠರೂ, ದೇವತೆಗಳಿಗೆ ಸಮಾನರಾದವರೂ, ತಂದೆಯ ಸಲುವಾಗಿ ಬ್ರಹ್ಮಚರ್ಯವನ್ನು ಧರಿಸಿದವರೂ ಆದ ಭೀಷ್ಮರಿಂದ ಹೀನರಾದ ಯೋಧರು ಹೇಗಿದ್ದರು?
ತದೈವ ನಿಹತಾನ್ ಮನ್ಯೇ ಕುರೂನನ್ಯಾಂಶ್ಚ ಪಾರ್ಥಿವಾನ್ |
ನ ಪ್ರಾಹರದ್ ಯದಾ ಭೀಷ್ಮೋ ಘೃಣಿತ್ವಾದ್ ದ್ರುಪದಾತ್ಮಜೇ ॥2॥
ಭೀಷ್ಮರು ದಯೆಯಿಂದ ಕೂಡಿದವರಾಗಿ ಶಿಖಂಡಿಯ ಮೇಲೆ ಬಾಣ ಪ್ರಯೋಗವನ್ನು ಮಾಡದಿದ್ದಾಗಲೇ ಕುರುಗಳು ಮತ್ತು ಇತರ ರಾಜರು ಹತರಾದರು ಎಂದು ನಾನು ಭಾವಿಸುತ್ತೇನೆ.
ತತೋ ದುಃಖತರಂ ಮನ್ಯೇ ಕಿಮನ್ಯತ್ ಪ್ರಭವಿಷ್ಯತಿ |
ಯದದ್ಯ ಪಿತರಂ ಶ್ರುತ್ವಾ ನಿಹತಂ ಮಮ ದುರ್ಮತೇಃ ॥3॥
ಈ ದಿನ ತಂದೆಯ ಪಾತದ ವಾರ್ತೆಯನ್ನು ಕೇಳಿದ ದುರ್ಮತಿಯಾದ ನನಗೆ ಇದಕ್ಕಿಂತ ಅಧಿಕವಾದ ಇನ್ನೊಂದು ದುಃಖವು ಏನು ಕಾದಿದೆಯೋ ಎಂದು ಭಾವಿಸುತ್ತೇನೆ.
ಅಶ್ಮಸಾರಮಯಂ ನೂನಂ ಹೃದಯಂ ಮಮ ಸಂಜಯ |
ಶ್ರುತ್ವಾ ವಿನಿಹತಂ ಭೀಷ್ಮಂ ಶತಧಾ ಯನ್ನ ದೀರ್ಯತೇ ॥4॥
ಎಲೈ ಸಂಜಯನೇ, ತಂದೆಯಾದ ಭೀಷ್ಮರ ನಿಧನವನ್ನು ಕೇಳಿಯೂ ನೂರು ಹೋಳುಗಳಾಗಿ ಬಿರಿದು ಹೋಗದಿರುವ ನನ್ನ ಹೃದಯವು ಖಂಡಿತವಾಗಿ ಕಲ್ಲಿನ ಸಾರದಿಂದ ಮಾಡಲ್ಪಟ್ಟಿದೆ.
ಯದದ್ಯ ನಿಹತೇನಾಜೌ ಭೀಷ್ಮೇಣ ಜಯಮಿಚ್ಛತಾ |
ಚೇಷ್ಟಿತಂ ನರಸಿಂಹೇನ ತನ್ಮೇ ಕಥಯ ಸಂಜಯ ॥5॥
ಎಲೈ ಸಂಜಯನೇ, ನರಶ್ರೇಷ್ಠರಾದ ಭೀಷ್ಮರು ಜಯವನ್ನು ಬಯಸಿ ಈ ದಿನ ಯುದ್ಧದಲ್ಲಿ ಏನು ಮಾಡಿದರೆಂಬುದನ್ನು ನನಗೆ ಹೇಳು.
ಸಂಜಯಃ
ಪುನಃ ಪುನರ್ನ ಮೃಷ್ಯಾಮಿ ಹತಂ ದೇವವ್ರತಂ ರಣೇ |
ನ ಹತೋ ಜಾಮದಗ್ನ್ಯೇನ ದಿವ್ಯೈರಸ್ತ್ರೈಃ ಸ್ಮ ಯಃ ಪುರಾ ॥6॥
ಸಂಜಯ ಯಾವ ಭೀಷ್ಮರು ಹಿಂದೆ ಪರಶುರಾಮರ ದಿವ್ಯಾಸ್ತ್ರಗಳಿಂದಲೂ ಹತರಾಗಲಿಲ್ಲವೋ ಅಂತಹ ಅವರು ಯುದ್ಧದಲ್ಲಿ ಹತರಾದರೆಂದು ಕೇಳಿ ನಾನು ಪುನಃ ಪುನಃ ಅದನ್ನು ಸಹಿಸುತ್ತಿಲ್ಲ.
ಸಾಯಾಹ್ನೇ ನ್ಯಪತದ್ ಭೂಮೌ ಧಾರ್ತರಾಷ್ಟ್ರಾನ್ ವಿಷಾದಯನ್ |
ಪಾಂಚಾಲಾನಾಂ ದದದ್ ಹರ್ಷಂ ಕುರುವೃದ್ಧಃ ಪಿತಾಮಹಃ ॥7॥
ಕುರುವೃದ್ಧರೂ, ಪಿತಾಮಹರೂ ಆದ ಭೀಷ್ಮರು ಸಾಯಂಕಾಲದ ಸಮಯದಲ್ಲಿ ದುರ್ಯೋಧನಾದಿಗಳಿಗೆ ವಿಷಾದವನ್ನುಂಟು ಮಾಡುತ್ತಾ, ಪಾಂಚಾಲರಿಗೆ ಸಂತೋಷವನ್ನುಂಟು ಮಾಡುತ್ತಾ ಭೂಮಿಯಲ್ಲಿ ಬಿದ್ದರು.
ಸ ಶೇತೇ ಶರತಲ್ಪಸ್ಥೋ ಮೇದಿನೀಮಸ್ಪೃಶಂಸ್ತದಾ |
ಭೀಷ್ಮೋ ರಥಾತ್ ಪ್ರಪತಿತಃ ಪ್ರಚ್ಯುತೋ ಧರಣೀತಳೇ ॥8॥
ರಥದಿಂದ ಜಾರಿ ಭೂಮಿಯ ಮೇಲೆ ಬಿದ್ದ ಭೀಷ್ಮರು ಭೂಮಿಯ ಸ್ಪರ್ಶವನ್ನು ಮಾಡದೆ ಆಗ ಶರತಲ್ಪದಲ್ಲಿ ಮಲಗಿದರು.
ಹಾ ಹೇತಿ ತುಮುಲಃ ಶಬ್ದೋ ಭೂತಾನಾಂ ಸಮಪದ್ಯತ |
ಸೀಮಾವೃಕ್ಷೇ ನಿಪತಿತೇ ಕುರೂಣಾಂ ಸಮಿತಿಕ್ಷಯೇ |
ಉಭಯೋಃ ಸೇನಯೋ ರಾಜನ್ ಕ್ಷತ್ರಿಯಾನ್ ಭಯಮಾವಿಶತ್ ॥9॥
ಆಗ ಎಲ್ಲ ಪ್ರಾಣಿಗಳಿಗೂ ತೀವ್ರವಾದ ಹಾಹಾಕಾರ ಉಂಟಾಯಿತು. ಶತ್ರುವಿನಾಶದ ವಿಷಯದಲ್ಲಿ ಕುರುಗಳಿಗೆ ಮರ್ಯಾದಾ ಪುರುಷರ ಸ್ಥಾನದಲ್ಲಿದ್ದ ಭೀಷ್ಮರು ಬೀಳುತ್ತಿರಲು ಎಲೈ ರಾಜನೇ, ಎರಡು ಸೇನೆಯ ಕ್ಷತ್ರಿಯರನ್ನೂ ಭಯವು ಆವರಿಸಿತು.
ಭೀಷ್ಮಂ ಶಾಂತನವಂ ದೃಷ್ಟ್ವಾ ವಿಶೀರ್ಣಕವಚಧ್ವಜಮ್ |
ಕುರವಃ ಪರ್ಯವರ್ತಂತ ಪಾಂಡವಾಶ್ಚ ವಿಶಾಂಪತೇ ॥10॥
ಎಲೈ ರಾಜನೇ, ಶಂತನುಪುತ್ರರಾದ ಭೀಷ್ಮರ ಕವಚ-ಧ್ವಜಗಳು ಛಿನ್ನ- ಭಿನ್ನವಾಗಿರುವುದನ್ನು ನೋಡಿದ ಕೌರವರು ಮತ್ತು ಪಾಂಡವರು ಅವರ ಸಮೀಪಕ್ಕೆ ಬಂದರು.
ಖಂ ತಮೋವೃತಮಾಸೀಚ್ಚ ನಾಸೀದ್ ಭಾನುಮತಃ ಪ್ರಭಾ |

ರರಾಸ ಪೃಥಿವೀ ಚೈವ ಭೀಷ್ಮೇ ಶಾಂತನವೇ ಹತೇ ॥11॥
ಶಂತನು ಪುತ್ರರಾದ ಭೀಷ್ಮರು ಹತರಾಗುತ್ತಿರಲು ಆಕಾಶವು ಕತ್ತಲಿನಿಂದ ಆವರಿಸಲ್ಪಟ್ಟಿತು. ಸೂರ್ಯನಲ್ಲಿ ಪ್ರಭೆಯು ಕಾಣಲಿಲ್ಲ, ಭೂಮಿಯು ಗುಡುಗಿತು.
ಅಯಂ ಬ್ರಹ್ಮವಿದಾಂ ಶ್ರೇಷ್ಠೋ ಅಯಂ ಬ್ರಹ್ಮವಿದಾಂ ಗತಿಃ |
ಇತ್ಯಭಾಷಂತ ಭೂತಾನಿ ಶಯಾನಂ ಭರತರ್ಷಭಮ್ ॥12॥
ಮಲಗಿದ್ದ ಭರತಶ್ರೇಷ್ಠರನ್ನು ನೋಡಿ ಇವರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರು, ಇವರು ಬ್ರಹ್ಮಜ್ಞಾನಿಗಳಲ್ಲಿ ಗತಿಯಾದವರು ಎಂದು ಮನುಷ್ಯರು ಮಾತನಾಡಿಕೊಂಡರು.
ಅಯಂ ಪಿತರಮಾಜ್ಞಾಯ ಕಾಮಾರ್ತಂ ಶಂತನುಂ ಪುರಾ |
ಊರ್ಧ್ವರೇತಸಮಾತ್ಮಾನಂ ಚಕಾರ ಪುರುಷರ್ಷಭಃ ॥13॥
ಈ ಪುರುಷಶ್ರೇಷ್ಠರು ತಮ್ಮ ತಂದೆಯಾದ ಶಂತನುವು ಕಾಮಾರ್ತನಾಗಿರುವುದನ್ನು ತಿಳಿದು ಹಿಂದೆಯೇ ಊರ್ಧ್ವರೇತಸ್ಕರಾದರು.
ಇತಿ ಸ್ಮ ಶರತಲ್ಪಸ್ಥಂ ಭರತಾನಾಮಮದ್ಯಪಮ್ |
ಋಷಯಃ ಪರ್ಯಧಾವಂತ ಸಹಿತಾಃ ಸಿದ್ಧಚಾರಣೈಃ ॥14॥
ಭರತರ ವಂಶದಲ್ಲಿ ಮದ್ಯಪಾನವನ್ನು ಮಾಡದೆ, ಶರತಲ್ಪದಲ್ಲಿ ಮಲಗಿದ ಭೀಷ್ಮರ ವಿಷಯದಲ್ಲಿ ಹೀಗೆ ಚಿಂತಿಸಿ, ಸಿದ್ಧ-ಚಾರಣರಿಂದ ಸಹಿತರಾಗಿ ಋಷಿಗಳು ಅಲ್ಲಿಗೆ ಬಂದರು.
ಹತೇ ಶಾಂತನವೇ ಭೀಷ್ಮೇ ಭರತಾನಾಂ ಪಿತಾಮಹೇ |
ನ ಕಿಂಚಿತ್ ಪ್ರತ್ಯಪದ್ಯಂತ ಪುತ್ರಾಸ್ತವ ಚ ಭಾರತ ॥15॥
ಎಲೈ ಭಾರತನೇ, ಭರತರ ಪಿತಾಮಹರಾದ ಭೀಷ್ಮರು ಹತರಾಗುತ್ತಿರಲು ನಿನ್ನ ಪುತ್ರರಿಗೆ ಏನು ಮಾಡಬೇಕೆಂದು ತೋಚಲಿಲ್ಲ.
ವಿವರ್ಣವದನಾಶ್ಚಾಸನ್ ಗತಶ್ರೀಕಾಶ್ಚ ಭಾರತ |
ಅತಿಷ್ಠನ್ ವ್ರೀಡಿತಾಶ್ಚೈವ ಹ್ರಿಯಾ ಯುಕ್ತಾ ಹ್ಯಧೋಮುಖಾಃ ॥16॥
ಎಲೈ ಭಾರತನೇ, ಮುಖದ ಕಾಂತಿಯನ್ನೂ, ತೇಜಸ್ಸನ್ನೂ ಕಳೆದುಕೊಂಡು ನಾಚಿಕೆಯಿಂದ ಮುಖವನ್ನು ತಗ್ಗಿಸಿ ನಿಂತರು.
ಪಾಂಡವಾಶ್ಚ ಜಯಂ ಲಬ್ಧ್ವಾ ಸಂಗ್ರಾಮಶಿರಸಿ ಸ್ಥಿತಾಃ |
ಸರ್ವೇ ದಧ್ಮುರ್ಮಹಾಶಂಖಾನ್ ಹೇಮಜಾಲಪರಿಷ್ಕೃತಾನ್ ॥17॥
ಪಾಂಡವರಾದರೋ ಸಂಗ್ರಾಮ ಶಿರಸ್ಸಿನಲ್ಲಿ ಜಯವನ್ನು ಪಡೆದವರಾಗಿ, ಎಲ್ಲರೂ ಸುವರ್ಣಾಲಂಕೃತವಾದ ಮಹಾಶಂಖಗಳನ್ನು ಊದಿದರು.
ಭೃಶಂ ತೂರ್ಯನಿನಾದೇಷು ವಾದ್ಯಮಾನೇಷು ಚಾನಘ |
ಅಪಶ್ಯಾಮ ರಣೇ ರಾಜನ್ ಭೀಮಸೇನಂ ಮಹಾಬಲಮ್ |
ಆಕ್ರೀಡಮಾನಂ ಕೌಂತೇಯಂ ಹರ್ಷೇಣ ಮಹತಾ ಯುತಮ್ ॥18॥
ಎಲೈ ಅನಘನೇ, ತೂರ್ಯಾದಿ ವಾದ್ಯಗಳು ಬಹಳವಾಗಿ ಮೊಳಗುತ್ತಿರಲು ಮಹಾಬಲನಾದ, ಕುಂತೀಪುತ್ರನಾದ ಭೀಮಸೇನನು ಬಹಳ ಸಂತೋಷದಿಂದ ಕೂಡಿದವನಾಗಿ ಲೀಲೆಯಿಂದ ರಣರಂಗದಲ್ಲಿ ಆಟವಾಡುವುದನ್ನು ನಾವು ನೋಡಿದೆವು.
ನಿಹತ್ಯ ಸಮರೇ ಶತ್ರೂನ್ ಮಹಾಬಲಸಮನ್ವಿತಾನ್ |
ಸಮ್ಮೋಹಶ್ಚಾಪಿ ತುಮುಲಃ ಕುರೂಣಾಮಭವತ್ ತದಾ ॥19॥
ಮಹಾಬಲದಿಂದ ಕೂಡಿದ ಶತ್ರುಗಳನ್ನು ರಣರಂಗದಲ್ಲಿ ಕೊಂದ ಕುರುಗಳಿಗೂ ಸಹ ಆಗ ತೀವ್ರವಾದ ಕರ್ತವ್ಯಮೌಢ್ಯ ಉಂಟಾಯಿತು.
ಕರ್ಣದುರ್ಯೋಧನೌ ಚಾಪಿ ನಿಃಶ್ವಸೇತಾಂ ಮುಹುರ್ಮುಹುಃ |
ತಥಾ ನಿಪತಿತೇ ಭೀಷ್ಮೇ ಕೌರವಾಣಾಂ ಧುರಂಧರೇ |
ಹಾಹಾಕಾರಮಭೂತ್ ಸರ್ವಂ ನಿರ್ಮರ್ಯಾದಮವರ್ತತ ॥20॥
ಕೌರವರ ಧುರಂಧರರಾದ ಭೀಷ್ಮರು ಹಾಗೆ ಬೀಳುತ್ತಿರಲು ಕರ್ಣ- ದುರ್ಯೋಧನರೂ ಸಹ ಪುನಃ ಪುನಃ ನಿಟ್ಟುಸಿರನ್ನು ಬಿಟ್ಟರು. ಎಲ್ಲ ಕಡೆಗಳಲ್ಲಿಯೂ ಹಾಹಾಕಾರ ಉಂಟಾಯಿತು ಮತ್ತು ಪರಿಸ್ಥಿತಿಯು ಎಲ್ಲ ಎಲ್ಲೆಗಳನ್ನೂ ಮೀರಿತು.
ದೃಷ್ಟ್ವಾ ಚ ಪತಿತಂ ಭೀಷ್ಮಂ ಪುತ್ರೋ ದುಃಶಾಸನಸ್ತವ |
ಉತ್ತಮಂ ಜವಮಾಸ್ಥಾಯ ದ್ರೋಣಾನೀಕಂ ಸಮಾದ್ರವತ್ ॥21॥
ಭೀಷ್ಮರು ಬಿದ್ದುದನ್ನು ನೋಡಿ ನಿನ್ನ ಪುತ್ರನಾದ ದುಶ್ಶಾಸನನು ದ್ರೋಣರ ಸೇನೆಯ ಕಡೆಗೆ ಓಡಿದನು.
ಭ್ರಾತ್ರಾ ಪ್ರಸ್ಥಾಪಿತೋ ವೀರಃ ಸ್ವೇನಾನೀಕೇನ ದಂಸಿತಃ |
ಪ್ರಯಯೌ ಪುರುಷವ್ಯಾಘ್ರಃ ಸ್ವಸೈನ್ಯಮಭಿಚೋದಯನ್ ॥22॥
ಅಣ್ಣನಿಂದ ಕಳುಹಿಸಲ್ಪಟ್ಟ ವೀರನೂ, ಪುರುಷವ್ಯಾಘ್ರನೂ, ಕವಚಾದಿಗಳನ್ನು ಧರಿಸಿದವನೂ ಆದ ಅವನು ತನ್ನ ಸೈನ್ಯವನ್ನು ಪ್ರಚೋದಿಸುತ್ತಾ, ಅದರ ಜೊತೆಯಲ್ಲಿ ದ್ರೋಣರ ಕಡೆಗೆ ಹೊರಟನು.
ತಮಾಯಾಂತಮಭಿಪ್ರೇಕ್ಷ್ಯ ಕುರವಃ ಪರ್ಯವಾರಯನ್ |
ದುಃಶಾಸನಂ ಮಹಾರಾಜ ಕಿಮಯಂ ವಕ್ಷ್ಯತೀತಿ ವೈ ॥23॥
ಎಲೈ ಮಹಾರಾಜನೇ, ಅವನು ಬರುತ್ತಿರುವುದನ್ನು ನೋಡಿ, ಇವನು ಏನು ಹೇಳುವನೋ ಎಂದು ದ್ರೋಣರ ಸೇನೆಯಲ್ಲಿದ್ದ ಕುರುಗಳು ದುಶ್ಶಾಸನನನ್ನು ಸುತ್ತುವರಿದರು.
ತತೋ ದ್ರೋಣಾಯ ನಿಹತಂ ಭೀಷ್ಮಮಾಚಷ್ಟ ಕೌರವಃ |
ದ್ರೋಣಸ್ತದಪ್ರಿಯಂ ಶ್ರುತ್ವಾ ಸಹಸಾ ನ್ಯಪತದ್ ರಥಾತ್ ॥24॥

ಆಗ ಕೌರವನಾದ ದುಶ್ಶಾಸನನು ದ್ರೋಣರಿಗೆ ಭೀಷ್ಮರ ಪಾತವನ್ನು ತಿಳಿಸಿದನು. ಆ ಅಪ್ರಿಯವಾದ ವಾರ್ತೆಯನ್ನು ಕೇಳಿದ ದ್ರೋಣರು ತಕ್ಷಣ ರಥದಿಂದ ಕುಸಿದು ಬಿದ್ದರು.
ಸ ಸಂಜ್ಞಾಮುಪಲಭ್ಯಾಥ ಭಾರದ್ವಾಜಃ ಪ್ರತಾಪವಾನ್ |
ನಿವಾರಯಾಮಾಸ ತದಾ ಸ್ವಾನ್ಯನೀಕಾನಿ ಮಾರಿಷ ||25||
ಎಲೈ ಶ್ರೇಷ್ಠನೇ, ಪ್ರತಾಪಶಾಲಿಗಳಾದ ದ್ರೋಣರು ಪುನಃ ಸಂಜ್ಞೆಯನ್ನು ಪಡೆದು ತಮ್ಮ ಸೇನೆಗಳಿಗೆ ಯುದ್ಧವನ್ನು ನಿಲ್ಲಿಸಿ ಎಂದು ನಿವಾರಣೆಯನ್ನು ಮಾಡಿದರು.
ವಿನಿವೃತ್ತಾನ್ ಕುರೂನ್ ದೃಷ್ಟ್ವಾ ಪಾಂಡವಾಪಿ ಸ್ವಸೈನಿಕಾನ್ |
ದೂತೈಃ ಶೀಘ್ರಾಶ್ವಸಂಯುಕ್ತೈಃ ಸಮಂತಾತ್ ಪರ್ಯವಾರಯನ್ ||26||
ಕುರುಗಳು ಯುದ್ಧದಿಂದ ನಿವೃತ್ತರಾದುದನ್ನು ನೋಡಿ ಪಾಂಡವರೂ ಸಹ ಶೀಘ್ರಾಶ್ವ ಸಹಿತರಾದ ತಮ್ಮ ದೂತರಿಂದ ಸುತ್ತಲೂ ಇದ್ದ ಎಲ್ಲಾ ಸೈನಿಕರಿಗೂ ಯುದ್ಧವನ್ನು ನಿಲ್ಲಿಸಿ ಎಂದು ಹೇಳಿದರು.
ವಿನಿವೃತ್ತೇಷು ಸೈನ್ಯೇಷು ಪಾರಂಪರ್ಯೇಣ ಸರ್ವಶಃ |
ವಿಮುಕ್ತಕವಚಾಃ ಸರ್ವೇ ಭೀಷ್ಮಮೀಯುರ್ನರಾಧಿಪಾಃ ||27||
ಒಬ್ಬರಿಂದೊಬ್ಬರು ವಾರ್ತೆಯನ್ನು ಕೇಳಿ ಎಲ್ಲ ಸೈನ್ಯಗಳೂ ನಿವೃತ್ತವಾಗುತ್ತಿರಲು ತಮ್ಮ ಕವಚಗಳನ್ನು ಬಿಚ್ಚಿ ಎಲ್ಲ ರಾಜರೂ ಭೀಷ್ಮರ ಸಮೀಪಕ್ಕೆ ಬಂದರು.
ವ್ಯುಪಾರಮ್ಯ ತತೋ ಯುದ್ಧಾದ್ ಯೋಧಾಃ ಶತಸಹಸ್ರಶಃ |
ಉಪತಸ್ಥುರ್ಮಹಾತ್ಮಾನಂ ಪ್ರಜಾಪತಿಮಿವಾಮರಾಃ ||28||
ಯುದ್ಧದಿಂದ ವಿರಮಿಸಿ ಯೋಧರು ಶತಸಹಸ್ರ ಸಂಖ್ಯೆಗಳಲ್ಲಿ ದೇವತೆಗಳು ಬ್ರಹ್ಮದೇವರ ಬಳಿಗೆ ಬಂದಂತೆ ಮಹಾತ್ಮರಾದ ಭೀಷ್ಮರ ಬಳಿಯಲ್ಲಿ ಬಂದು ನಿಂತರು.
ತೇ ತು ಭೀಷ್ಮಂ ಸಮಾಸಾದ್ಯ ಶಯಾನಂ ಭರತರ್ಷಭಮ್ |
ಅಭಿವಾದ್ಯ ವ್ಯತಿಷ್ಠಂತ ಪಾಂಡವಾಃ ಕುರುಭಿಃ ಸಹ ||29||
ಆ ಪಾಂಡವರಾದರೋ ಮಲಗಿದ ಭರತಶ್ರೇಷ್ಠರನ್ನು ಸಮೀಪಿಸಿ, ನಮಸ್ಕರಿಸಿ ಕೌರವರ ಜೊತೆಯಲ್ಲಿ ನಿಂತರು.
ಅಥ ಪಾಂಡೂನ್ ಕುರೂಂಶ್ಚೈವ ಪ್ರಣಿಪತ್ಯಾಗ್ರತಃ ಸ್ಥಿತಾನ್ |
ಅಭ್ಯಭಾಷತ ಧರ್ಮಾತ್ಮಾ ಭೀಷ್ಮಃ ಶಾಂತನವಸ್ತದಾ ||30||
ಆಗ ನಮಸ್ಕಾರವನ್ನು ಮಾಡಿ ಎದುರಿಗೆ ನಿಂತಿದ್ದ ಪಾಂಡವರನ್ನೂ ಮತ್ತು ಕೌರವರನ್ನೂ ಕುರಿತು ಧರ್ಮಾತ್ಮರೂ, ಶಂತನುಪುತ್ರರೂ ಆದ ಭೀಷ್ಮರು ಮಾತನಾಡಿದರು.
ಸ್ವಾಗತಂ ವೋ ಮಹಾಭಾಗಾಃ ಸ್ವಾಗತಂ ವೋ ಮಹಾರಥಾಃ |
ತುಷ್ಯಾಮಿ ದರ್ಶನಾಚ್ಚಾಹಂ ಯುಷ್ಮಾಕಮಮರೋಪಮಾಃ ||31||
ಎಲೈ ಮಹಾನುಭಾವರೇ ನಿಮಗೆ ಸ್ವಾಗತ. ಎಲೈ ಮಹಾರಥರೇ ನಿಮಗೆ ಸ್ವಾಗತ. ದೇವತೆಗಳಂತಿರುವ ನಿಮ್ಮ ದರ್ಶನದಿಂದ ನಾನು ಸಂತೋಷಗೊಂಡಿದ್ದೇನೆ.
ಅಭಿನಂದ್ಯ ಸ ತಾನೇವಂ ಶಿರಸಾ ಲಂಬತಾಽಬ್ರವೀತ್ |
ಶಿರೋ ಮೇ ಲಂಬತೇಽತ್ಯರ್ಥಮುಪಧಾನಂ ಪ್ರದೀಯತಾಮ್ ||32||
ಅವರನ್ನು ಈ ರೀತಿಯಾಗಿ ಅಭಿನಂದಿಸಿ ಜೋಲುತ್ತಿದ್ದ ಶಿರಸ್ಸಿನಿಂದ ಕೂಡಿದ ಅವರು, ನನ್ನ ಶಿರಸ್ಸು ಬಹಳವಾಗಿ ಜೋಲುತ್ತಿದೆ. ಒಂದು ದಿಂಬನ್ನು ಕೊಡಿ ಎಂದು ಕೇಳಿದರು.
ತತೋ ನೃಪಾಃ ಸಮಾಜಹ್ರುಸ್ತನೂನಿ ಚ ಮೃದೂನಿ ಚ |
ಉಪಧಾನಾನಿ ಮುಖ್ಯಾನಿ ನೈಚ್ಛತ್ ತಾನಿ ಪಿತಾಮಹಃ ||33||
ಆಗ ರಾಜರು ತೆಳುವಾದ ಮತ್ತು ಮೃದುವಾದ ಹಾಗೂ ಶ್ರೇಷ್ಠವಾದ ತಲೆದಿಂಬುಗಳನ್ನು ತಂದರು. ಪಿತಾಮಹರು ಅವುಗಳನ್ನು ಒಪ್ಪಲಿಲ್ಲ.
ಅಬ್ರವೀಚ್ಚ ನರವ್ಯಾಘ್ರಃ ಪ್ರಹಸನ್ನಿವ ತಾನ್ ನೃಪಾನ್ |
ನೈತಾನಿ ವೀರಶಯ್ಯಾಸು ಯುಕ್ತರೂಪಾಣಿ ಪಾರ್ಥಿವಾಃ ||34||
ನರವ್ಯಾಘ್ರರಾದ ಅವರು ನಗುವವರಂತೆ ಆ ರಾಜರನ್ನು ಕುರಿತು ಎಲೈ ರಾಜರೇ, ವೀರಶಯ್ಯೆಯಲ್ಲಿ ಮಲಗಿದವರಿಗೆ ಇವು ಉಚಿತವಾದವುಗಳಲ್ಲ ಎಂದು ಹೇಳಿದರು.
ತತೋ ವೀಕ್ಷ್ಯ ನರಶ್ರೇಷ್ಠಮಭ್ಯಭಾಷತ ಪಾಂಡವಮ್ |
ಧನಂಜಯಂ ದೀರ್ಘಬಾಹುಂ ಸರ್ವಲೋಕಮಹಾರಥಮ್ ||35||
ಅನಂತರ ನರಶ್ರೇಷ್ಠನೂ, ದೀರ್ಘಬಾಹುವೂ, ಸರ್ವಲೋಕ ಮಹಾರಥನೂ, ಪಾಂಡುಪುತ್ರನೂ ಆದ ಅರ್ಜುನನನ್ನು ನೋಡಿ ಮಾತನಾಡಿದರು.
ಧನಂಜಯ ಮಹಾಬಾಹೋ ಶಿರಸೋ ಮೇಽಸ್ಯ ಲಂಬತಃ |
ದೀಯತಾಮುಪಧಾನಂ ವೈ ಯದ್ ಯುಕ್ತಮಿಹ ಮನ್ಯಸೇ ||36||
ಎಲೈ ಮಹಾಬಾಹುವೇ, ಜೋಲುಬೀಳುತ್ತಿರುವ ನನ್ನ ಶಿರಸ್ಸಿಗೆ ನೀನು ಉಚಿತವೆಂದು ಭಾವಿಸುವ ಒಂದು ದಿಂಬನ್ನು ಕೊಡು (ಎಂದು ಹೇಳಿದರು).
ಸ ಸನ್ನ್ಯಸ್ಯ ಮಹಚ್ಚಾಪಮಭಿವಾದ್ಯ ಪಿತಾಮಹಮ್ |

ನೇತ್ರಾಭ್ಯಾಮಶ್ರುಪೂರ್ಣಾಭ್ಯಾಮಿದಂ ವಚನಮಬ್ರವೀತ್ ॥37॥
ಅರ್ಜುನನು ತನ್ನ ದೊಡ್ಡ ಧನುಸ್ಸನ್ನು ತ್ಯಜಿಸಿ, ಪಿತಾಮಹರಿಗೆ ನಮಸ್ಕಾರವನ್ನು ಮಾಡಿ ಕಣ್ಣೀರಿನಿಂದ ತುಂಬಿದ ಕಣ್ಣಿನಿಂದ ಸಹಿತನಾಗಿ ಈ ಮಾತನ್ನು ಆಡಿದನು.
ಆಜ್ಞಾಪಯ ಕುರುಶ್ರೇಷ್ಠ ಸರ್ವಶಸ್ತ್ರಭೃತಾಂ ವರ |
ಪ್ರೇಷ್ಯೋಽಹಂ ತವ ದುರ್ಧರ್ಷ ಕ್ರಿಯತಾಂ ಕಿಂ ಪಿತಾಮಹ ॥38॥
ಕುರುಶ್ರೇಷ್ಠರೇ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರೇ, ಪಿತಾಮಹರೇ, ದುರ್ಧರ್ಷರೇ, ನಾನು ನಿಮ್ಮ ಸೇವಕ. ನನಗೆ ಆಜ್ಞೆಯನ್ನು ಮಾಡಿ. ನಾನು ನಿಮಗೆ ಏನು ಮಾಡಲಿ?
ತಮಬ್ರವೀಚ್ಛಾಂತನವಃ ಶಿರೋ ಮೇ ತಾತ ಲಂಬತೇ |
ಉಪಧಾನಂ ಕುರುಶ್ರೇಷ್ಠ ಫಲ್ಗುನೋಪನಯಸ್ವ ಮೇ |
ಶಯಾನಸ್ಯಾನುರೂಪಂ ಹಿ ಶೀಘ್ರಂ ವೀರ ಪ್ರಯಚ್ಛ ಮೇ ॥39॥
ಅವನನ್ನು ಕುರಿತು ಶಂತನುಪುತ್ರರಾದ ಭೀಷ್ಮರು, ಪ್ರೀತಿಪಾತ್ರನೇ, ನನ್ನ ಶಿರಸ್ಸು ಜೋಲುತ್ತಿದೆ. ಕುರುಶ್ರೇಷ್ಠನಾದ ಅರ್ಜುನನೇ, ವೀರನೇ, ವೀರಶಯ್ಯೆಯಲ್ಲಿ ಮಲಗಿದವನಿಗೆ ಯೋಗ್ಯವಾದ ತಲೆದಿಂಬನ್ನು ಶೀಘ್ರವಾಗಿ ನನಗೆ ಕೊಡು.
ತ್ವಂ ಹಿ ಪಾರ್ಥ ಮಹಾಬಾಹೋ ಶ್ರೇಷ್ಠಃ ಸರ್ವಧನುಷ್ಮತಾಮ್ |
ಕ್ಷತ್ರಧರ್ಮಸ್ಯ ವೇತ್ತಾ ಚ ಬುದ್ಧಿಸತ್ತ್ವಗುಣಾನ್ವಿತಃ ॥40॥
ಎಲೈ ಮಹಾಬಾಹುವಾದ ಅರ್ಜುನನೇ, ನೀನು ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠನಾದವನು. ಕ್ಷತ್ರಿಯ ಧರ್ಮವನ್ನು ತಿಳಿದವನು ಮತ್ತು ಬುದ್ಧಿ-ಬಲ ಮೊದಲಾದ ಗುಣಗಳಿಂದ ಕೂಡಿದವನು (ಎಂದು ಹೇಳಿದರು).
ಫಲ್ಗುನಸ್ತು ತಥೇತ್ಯುಕ್ತ್ವಾ ವ್ಯವಸಾಯಪುರೋಜವಃ |
ಪ್ರಗೃಹ್ಯಾಮಂತ್ರ್ಯ ಗಾಂಡೀವಂ ಶರಾಂಶ್ಚ ನತಪರ್ವಣಃ ॥41॥
ಅನುಮಾನ್ಯ ಮಹಾತ್ಮಾನಂ ಭರತಾನಾಮಮದ್ಯಪಮ್ |
ತ್ರಿಭಿಸ್ತೀಕ್ಷ್ಣೈರ್ಮಹಾವೇಗೈರುದಗೃಹ್ಣಾಚ್ಛಿರಃ ಶರೈಃ ॥42॥
ಅರ್ಜುನನಾದರೋ ಹಾಗೆಯೇ ಆಗಲಿ ಎಂದು ಹೇಳಿ, ಏನು ಮಾಡಬೇಕೆಂದು ನಿಶ್ಚಯಿಸಿ ಭೀಷ್ಮರ ಅನುಮತಿಯನ್ನು ಪಡೆದು ಗಾಂಡೀವ ಧನುಸ್ಸನ್ನು ಮತ್ತು ಬಾಗಿದ ತುದಿಯುಳ್ಳ ಬಾಣಗಳನ್ನು ಅಭಿಮಂತ್ರಿಸಿ, ಪುನಃ ಮಹಾತ್ಮರಾದ, ಮದ್ಯಪಾನವನ್ನು ಮಾಡದ ಭರತರಾದ ಭೀಷ್ಮರ ಅನುಮತಿಯನ್ನು ಪಡೆದು ತೀಕ್ಷ್ಣವಾದ ಮತ್ತು ವೇಗಶಾಲಿಯಾದ ಮೂರು ಬಾಣಗಳನ್ನು ಪ್ರಯೋಗಿಸಿ ಅವುಗಳಿಂದ ಭೀಷ್ಮರ ತಲೆಯನ್ನು ಎತ್ತಿದನು.
ಅಭಿಪ್ರಾಯೇ ತು ವಿದಿತೇ ಧರ್ಮಾತ್ಮಾ ಸವ್ಯಸಾಚಿನಾ |
ಅತುಷ್ಯದ್ ಭರತಶ್ರೇಷ್ಠೋ ಭೀಷ್ಮೋ ಧರ್ಮಾರ್ಥತತ್ತ್ವವಿತ್ ॥43॥
ಅರ್ಜುನನಿಗೆ ತಮ್ಮ ಅಭಿಪ್ರಾಯವು ತಿಳಿಯುತ್ತಿರಲು ಧರ್ಮಾರ್ತ ತತ್ತ್ವಗಳನ್ನು ಚೆನ್ನಾಗಿ ತಿಳಿದ ಭರತಶ್ರೇಷ್ಠರಾದ ಧರ್ಮಾತ್ಮರಾದ ಭೀಷ್ಮರು ಸಂತೋಷಪಟ್ಟರು.
ಉಪಧಾನೇನ ದತ್ತೇನ ಪ್ರತ್ಯನಂದದ್ ಧನಂಜಯಮ್ |
ಕುಂತೀಪುತ್ರಂ ಯುಧಾಂ ಶ್ರೇಷ್ಠಂ ಸುಹೃದಾಂ ಪ್ರೀತಿವರ್ಧನಮ್ ॥44॥
ಅವನು ಕೊಟ್ಟ ತಲೆದಿಂಬಿನಿಂದ ಯುದ್ಧ ಮಾಡುವವರಲ್ಲಿ ಶ್ರೇಷ್ಠನೂ, ಸುಹೃದರಿಗೆ ಸಂತೋಷವುಂಟು ಮಾಡುವವನೂ, ಕುಂತೀಪುತ್ರನೂ ಆದ ಅರ್ಜುನನನ್ನು ಅಭಿನಂದಿಸಿದರು.
ಅನುರೂಪಂ ಶಯಾನಸ್ಯ ಪಾಂಡವೋಪಹಿತಂ ತ್ವಯಾ |
ಯದ್ಯನ್ಯಥಾ ಪ್ರವರ್ತೇಥಾಃ ಶಪೇಯಂ ತ್ವಾಮಹಂ ರುಷಾ ॥45॥
ಏವಮೇತನ್ಮಹಾಬಾಹೋ ಧರ್ಮೇಷು ಪರಿನಿಷ್ಠಿತಮ್ |
ಸ್ವಪ್ತವ್ಯಂ ಕ್ಷತ್ರಿಯೇಣಾಜೌ ಶರತಲ್ಪಗತೇನ ವೈ ॥46॥
ಎಲೈ ಅರ್ಜುನನೇ, ವೀರಶಯ್ಯೆಯಲ್ಲಿ ಮಲಗಿರುವ ನನಗೆ ಅನುರೂಪವಾದ ತಲೆದಿಂಬನ್ನು ನೀನು ನೀಡಿದ್ದೀಯೆ. ನೀನು ಬೇರೆ ರೀತಿಯಲ್ಲಿ ಪ್ರವೃತ್ತನಾಗಿದ್ದರೆ ನಾನು ಕೋಪದಿಂದ ನಿನಗೆ ಶಾಪವನ್ನು ಕೊಡುತ್ತಿದ್ದೆ. ಎಲೈ ಮಹಾಬಾಹುವೇ, ರಣರಂಗದಲ್ಲಿ ಶರತಲ್ಪದಲ್ಲಿ ಮಲಗಿದ ಕ್ಷತ್ರಿಯನು ಧರ್ಮಲೋಪವಾಗದಂತೆ ಹೀಗೆಯೇ ಮಲಗಬೇಕು.
ಏವಮುಕ್ತ್ವಾ ತು ಬೀಭತ್ಸುಂ ಸರ್ವಾನ್ ತಾನಬ್ರವೀದ್ ವಚಃ |
ರಾಜ್ಞಶ್ಚ ರಾಜಪುತ್ರಾಂಶ್ಚ ಪಾಂಡವೇನಾಭಿಸಂಸ್ಥಿತಾನ್ ॥47॥
ಅರ್ಜುನನನ್ನು ಕುರಿತು ಹೀಗೆ ಹೇಳಿ ಪಾಂಡವನಾದ ಅರ್ಜುನನ ಸುತ್ತಲೂ ಇದ್ದ ರಾಜರನ್ನೂ ಮತ್ತು ರಾಜಪುತ್ರರನ್ನೂ ಕುರಿತು ಭೀಷ್ಮರು ಮಾತನಾಡಿದರು.
ಪಶ್ಯಧ್ವಮುಪಧಾನಂ ಮೇ ಪಾಂಡವೇನಾಭಿಸಂಧಿತಮ್ |
ಶಯೇಯಮಸ್ಯಾಂ ಶಯ್ಯಾಯಾಂ ಯಾವದಾವರ್ತನಂ ರವೇಃ |
ಯೇ ತದಾ ಪಾರಯಿಷ್ಯಂತಿ ತೇ ಮಾಂ ದ್ರಕ್ಷ್ಯಂತಿ ವೈ ನೃಪಾಃ ॥48॥
ಅರ್ಜುನನು ನನಗೆ ನೀಡಿದ ತಲೆದಿಂಬನ್ನು ನೋಡಿ. ನಾನು ಈ ಶಯನದಲ್ಲಿ ಸೂರ್ಯನು ಉತ್ತರಾಯಣಕ್ಕೆ ತಿರುಗುವವರೆಗೆ ಮಲಗಿರುವೆನು. ಅಲ್ಲಿಯವರೆಗೆ ಬದುಕುವ ರಾಜರು ನನ್ನನ್ನು ನೋಡುವರು.
ದಿಶಂ ವೈಶ್ರವಣಾಕ್ರಾಂತಾಂ ಯದಾ ಗಂತಾ ದಿವಾಕರಃ |
ಅರ್ಚಿಷ್ಮಾನ್ ಪ್ರತಪನ್ ಲೋಕಾನ್ ರಥೇನೋತ್ತಮತೇಜಸಾ |

ವಿಮೋಕ್ಷ್ಯೇಽಹಂ ತದಾ ಪ್ರಾಣಾನ್ ಸುಹೃದಃ ಸುಪ್ರಿಯಾನಪಿ ॥49॥
ಯಾವಾಗ ತನ್ನ ಕಿರಣಗಳಿಂದ ಲೋಕಗಳನ್ನು ದಹಿಸುವ ಸೂರ್ಯನು ಉತ್ತಮ ತೇಜಸ್ಸಿನಿಂದ ಕೂಡಿ ತನ್ನ ರಥದಲ್ಲಿ ಕುಬೇರನಿಂದ ಆಶ್ರಿತವಾದ ಉತ್ತರದಿಕ್ಕಿಗೆ ಹೋಗುವನೋ ಆಗ ಎಲ್ಲೈ ವಿಶ್ವಾಸಪಾತ್ರರೇ, ಅತ್ಯಂತ ಪ್ರಿಯವಾದ ನನ್ನ ಪ್ರಾಣಗಳನ್ನು ನಾನು ತ್ಯಜಿಸುವೆನು.
ಪರಿಷಚ್ಚಾಪ್ಯುಮ್ಯತಾಮತ್ರ ಮಮಾವಸದನೇ ನೃಪಾಃ |
ಉಪಾಸಿಷ್ಯೇ ವಿವಸ್ವಂತಮೇವಂ ಶರಶತಾಚಿತಃ |
ಉಪಾರಮಧ್ವಂ ಸಂಗ್ರಾಮಾದ್ ವೈರಾಣ್ಯುತ್ಸೃಜ್ಯ ಪಾರ್ಥಿವಾಃ ॥50॥
ಎಲ್ಲೈ ರಾಜರೇ, ನನ್ನ ಅವಸಾನದಿಂದ ಈ ಯುದ್ಧ ಸಭೆಯು ವಿರಮಿಸಲಿ ಹೊಂದಲಿ (ತನ್ನ ಪ್ರಯಾಣ ಕಾಲದಲ್ಲಿ ಎಲ್ಲರೂ ಸುತ್ತ ನಿಂತು ಗಾಬರಿಪಡಬೇಡಿ). ಹೀಗೆ ನೂರಾರು ಬಾಣಗಳು ಮೈಯಲ್ಲಿ ನೆಟ್ಟ ನಾನು ಸೂರ್ಯನನ್ನು ಉಪಾಸನೆ ಮಾಡುವೆನು. ಎಲ್ಲೈ ರಾಜರೇ, ವೈರಗಳನ್ನು ತೊರೆದು ಯುದ್ಧದಿಂದ ನಿವೃತ್ತರಾಗಿ.
ಉಪಾತಿಷ್ಠನ್ನಥೋ ವೈದ್ಯಾಃ ಶಲ್ಯೋದ್ಧರಣಕೋವಿದಾಃ |
ಸರ್ವೋಪಕರಣೈರ್ಯುಕ್ತಾಃ ಕುಶಲಾಸ್ತೇ ಸುಶಿಕ್ಷಿತಾಃ ॥51॥
ಅನಂತರ ಬಾಣಗಳನ್ನು ತೆಗೆಯುವುದರಲ್ಲಿ ಕೋವಿದರಾದ, ಕುಶಲರೂ, ಸುಶಿಕ್ಷಿತರೂ ಆದ ವೈದ್ಯರು ತಮ್ಮ ಎಲ್ಲಾ ಉಪಕರಣಗಳ ಜೊತೆಯಲ್ಲಿ ಭೀಷ್ಮರ ಬಳಿಗೆ ಬಂದರು.
ತಾನ್ ದೃಷ್ಟ್ವಾ ಜಾಹ್ನವೀಪುತ್ರಃ ಪ್ರೋವಾಚ ವಚನಂ ತದಾ |
ದತ್ತದೇಯಾ ವಿಸೃಜ್ಯಂತಾಂ ಪೂಜಯಿತ್ವಾ ಚಿಕಿತ್ಸಕಾಃ ॥52॥
ಅವರನ್ನು ನೋಡಿದ ಭೀಷ್ಮರು ಈ ವೈದ್ಯರಿಗೆ ಸಂಭಾವನೆಯನ್ನು ಕೊಟ್ಟು ಗೌರವಿಸಿ ಕಳುಹಿಸಿ ಎಂದು ಹೇಳಿದರು.
ಏವಂಗತೇ ನ ಹೇದಾನೀಂ ವೈದ್ಯೈಃ ಕಾರ್ಯಮಿಹಾಸ್ತಿ ಮೇ |
ಕ್ಷತ್ರಧರ್ಮಪ್ರಶಸ್ತಾಂ ಹಿ ಪ್ರಾಪ್ತೋಽಸ್ಮಿ ಪರಮಾಂ ಗತಿಮ್ ॥53॥
ಪರಿಸ್ಥಿತಿಯು ಹೀಗಿರುವಾಗ ನನಗೆ ಈಗ ವೈದ್ಯರಿಂದ ಆಗಬೇಕಾದ ಯಾವ ಕಾರ್ಯವೂ ಇಲ್ಲ. ಕ್ಷತ್ರಿಯ ಧರ್ಮಕ್ಕೆ ಅನುಗುಣವಾದ, ಪ್ರಶಸ್ತವಾದ, ಶ್ರೇಷ್ಠವಾದ ಗತಿಯನ್ನು ನಾನು ಹೊಂದಿದ್ದೇನೆ.
ನೈಷ ಧರ್ಮೋ ಮಹೀಪಾಲಾಃ ಶರತಲ್ಪಗತಸ್ಯ ಮೇ |
ಏತೈರೇವ ಶರೈಶ್ಚಾಹಂ ದಗ್ಧವ್ಯೋಽಂತೇ ನರಾಧಿಪಾಃ ॥54॥
ಎಲ್ಲೈ ರಾಜರೇ, ಶರತಲ್ಪದಲ್ಲಿ ಮಲಗಿದವನಿಗೆ ಇದು ಧರ್ಮವಲ್ಲ. ಎಲ್ಲೈ ರಾಜರೇ, ಕೊನೆಯಲ್ಲಿ ಈ ಶರತಲ್ಪದ ಬಾಣಗಳಿಂದಲೇ ನನ್ನ ಶರೀರವನ್ನು ದಹಿಸಬೇಕು.
ತಚ್ಛ್ರುತ್ವಾ ವಚನಂ ತಸ್ಯ ಪುತ್ರೋ ದುರ್ಯೋಧನಸ್ತವ |
ವೈದ್ಯಾನ್ ವಿಸರ್ಜಯಾಮಾಸ ಪೂಜಯಿತ್ವಾ ಯಥಾರ್ಹತಃ ॥55॥
ಭೀಷ್ಮರ ಆ ಮಾತುಗಳನ್ನು ಕೇಳಿ ನಿನ್ನ ಪುತ್ರನಾದ ದುರ್ಯೋಧನನು ವೈದ್ಯರನ್ನು ಯೋಗ್ಯವಾಗಿ ಗೌರವಿಸಿ ಕಳುಹಿಸಿಕೊಟ್ಟನು.
ತತಸ್ತೇ ವಿಸ್ಮಯಂ ಜಗ್ಮುರ್ನಾನಾಜನಪದೇಶ್ವರಾಃ |
ಸ್ಥಿತಿಂ ಧರ್ಮೇ ಪರಾಂ ದೃಷ್ಟ್ವಾ ಭೀಷ್ಮಸ್ಯಾಮಿತತೇಜಸಃ ॥56॥
ಅಮಿತ ಪರಾಕ್ರಮಿಗಳಾದ ಭೀಷ್ಮರ ಧರ್ಮನಿಷ್ಠೆಯನ್ನು ನೋಡಿ ನಾನಾ ದೇಶದ ರಾಜರು ವಿಸ್ಮಯವನ್ನು ಹೊಂದಿದರು.
ಉಪಧಾನಂ ತತೋ ದತ್ತ್ವಾ ಪಿತುಸ್ತವ ಜನೇಶ್ವರ |
ಸಹಿತಾಃ ಪಾಂಡವಾಃ ಸರ್ವೇ ಕುರವಶ್ಚ ಮಹಾರಥಾಃ ॥57॥
ಉಪಗಮ್ಯ ಮಹಾತ್ಮಾನಂ ಶಯಾನಂ ಶಯನೇ ಶುಭೇ |
ತೇಽಭಿವಾದ್ಯ ತತೋ ಭೀಷ್ಮಂ ಕೃತ್ವಾ ಚಾಭಿಪ್ರದಕ್ಷಿಣಮ್ ॥58॥
ವಿಧಾಯ ರಕ್ಷಾಂ ಭೀಷ್ಮಸ್ಯ ಸರ್ವ ಏವ ಸಮಂತತಃ |
ವೀರಾಃ ಸ್ವಶಿಬಿರಾಣ್ಯೇವ ಧ್ಯಾಯಂತಃ ಪರಮಾತುರಾಃ |
ನಿವೇಶಾಯಾಭ್ಯುಪಾಗಚ್ಛನ್ ಸಾಯಾಹ್ನೇ ರುಧಿರೋಕ್ಷಿತಾಃ ॥59॥
ಎಲ್ಲೈ ರಾಜನೇ, ನಿನ್ನ ತಂದೆಗೆ ತಲೆದಿಂಬನ್ನು ಕೊಟ್ಟು, ಮಹಾರಥರಾದ ಕೌರವ ಪಾಂಡವರೆಲ್ಲರೂ ಜೊತೆಯಲ್ಲಿ ಮಹಾತ್ಮರಾದ ಭೀಷ್ಮರು ಮಲಗಿದ ಶುಭ ಶಯನದ ಬಳಿಗೆ ಬಂದು, ಅವರಿಗೆ ಪ್ರದಕ್ಷಿಣೆಯನ್ನು ಮತ್ತು ನಮಸ್ಕಾರವನ್ನು ಮಾಡಿ, ಅವರ ರಕ್ಷಣೆಗೆ ಬೇಕಾದ ಎಲ್ಲಾ ವ್ಯವಸ್ಥೆಯನ್ನೂ ಮಾಡಿ, ಅವರನ್ನೇ ಚಿಂತಿಸುತ್ತಾ ಪರಮ ದುಃಖದಿಂದ ಕೂಡಿದ, ರಕ್ತದಿಂದ ತೊಯ್ದ ಅವರು ಸಾಯಂಕಾಲದಲ್ಲಿ ವಿಶ್ರಾಂತಿಗಾಗಿ ತಮ್ಮ ಶಿಬಿರಗಳಿಗೆ ಹೋದರು.
ನಿವಿಷ್ಟಾನ್ ಪಾಂಡವಾಂಶ್ಚಾಪಿ ಪ್ರೀಯಮಾಣಾನ್ ಮಹಾರಥಾನ್ |
ಭೀಷ್ಮಸ್ಯ ಪತನಾದ್ ಹೃಷ್ಟಾನುಪಗಮ್ಯ ಮಹಾರಥಾನ್ |
ಉವಾಚ ಯಾದವಃ ಕಾಲೇ ಧರ್ಮಪುತ್ರಂ ಯುಧಿಷ್ಠಿರಮ್ ॥60॥
ವಿಶ್ರಾಂತಿ ಪಡೆಯುತ್ತಿದ್ದ ಮಹಾರಥರೂ, ಭೀಷ್ಮರ ಪತನದಿಂದ ಸಂತೋಷಗೊಂಡವರೂ ಆದ ಪಾಂಡವರ ಬಳಿಗೆ ಬಂದು ಯಾದವ ಕೃಷ್ಣನು ಆ ಕಾಲದಲ್ಲಿ ಧರ್ಮಪುತ್ರನಾದ ಯುಧಿಷ್ಠಿರನನ್ನು ಕುರಿತು ಮಾತನಾಡಿದನು.
ದಿಷ್ಟ್ಯಾ ಜಯಸಿ ಕೌರವ್ಯ ದಿಷ್ಟ್ಯಾ ಭೀಷ್ಮೋ ನಿಪಾತಿತಃ |
ಅವಧ್ಯೋ ಮಾನುಷೈರೇಷ ಸತ್ಯಸಂಧೋ ಮಹಾರಥಃ ॥61॥
ಎಲ್ಲೈ ಕೌರವ್ಯನೇ, ದೇವರ ದಯೆಯಿಂದ ನೀನು ಜಯಿಸಿದ್ದೀಯೆ. ದೇವರ ದಯೆಯಿಂದಲೇ ಭೀಷ್ಮರು ಬಿದ್ದಿದ್ದಾರೆ. ಸತ್ಯಸಂಧರೂ,

ಮಹಾರಥರೂ ಆದ ಅವರು ಮನುಷ್ಯರಿಂದ ಅವಧ್ಯರಾದವರು.
ಅಥವಾ ದೈವತೈಃ ಪಾರ್ಥ ಸರ್ವಶಸ್ತ್ರಾಸ್ತ್ರಪಾರಗಃ |
ತ್ವಾಂ ತು ಚಕ್ಷುರ್ಹಣಂ ಪ್ರಾಪ್ಯ ದಗ್ಧೋ ಘೋರೇಣ ಚಕ್ಷುಷಾ ॥62॥
ಅಥವಾ ಎಲೈ ಅರ್ಜುನನೇ, ದೇವತೆಗಳು ಚಕ್ಷುಸ್ಸಿನಿಂದಲೇ ಕೊಲ್ಲುವ ನಿನ್ನಲ್ಲಿ ಆಶ್ರಿತರಾಗಿ ತಮ್ಮ ಘೋರವಾದ ಚಕ್ಷುಸ್ಸಿನಿಂದ ಸರ್ವಶಸ್ತ್ರಾಸ್ತ್ರ ಪಾರಂಗತರಾದ ಭೀಷ್ಮರನ್ನು ದಹಿಸಿದರು (ಎಂದು ತಿಳಿಯುತ್ತೇನೆ).
ಏವಮುಕ್ತೋ ಧರ್ಮರಾಜಃ ಪ್ರತ್ಯುವಾಚ ಜನಾರ್ದನಮ್ |
ತವ ಪ್ರಸಾದಾದ್ ವಿಜಯಃ ಕ್ರೋಧಾತ್ ತವ ಪರಾಜಯಃ |
ತ್ವಂ ಹಿ ನಃ ಶರಣಂ ಕೃಷ್ಣ ಭಕ್ತಾನಾಮಭಯಂಕರಃ ॥63॥
ಹೀಗೆ ಹೇಳಿದಾಗ ಧರ್ಮರಾಜನು ಕೃಷ್ಣನನ್ನು ಕುರಿತು ಮಾತನಾಡಿದನು. ಎಲೈ ಕೃಷ್ಣನೇ, ನಿನ್ನ ಅನುಗ್ರಹದಿಂದ ವಿಜಯವು ಮತ್ತು ನಿನ್ನ ಕ್ರೋಧದಿಂದ ಪರಾಜಯವು ಉಂಟಾಗುತ್ತದೆ. ಕೃಷ್ಣನೇ, ಭಕ್ತರಿಗೆ ಅಭಯಂಕರನಾದ ನೀನೇ ನಮಗೆ ಸರ್ವದಾ ರಕ್ಷಕನಾಗಿದ್ದೀಯೆ.
ಅನಾಶ್ಚರ್ಯೋ ಜಯಸ್ತೇಷಾಂ ಯೇಷಾಂ ತ್ವಮಸಿ ಕೇಶವ |
ರಕ್ಷಿತಾ ಸಮರೇ ನಿತ್ಯಂ ನಿತ್ಯಂ ಚಾಪಿ ಹಿತೇ ರತಃ |
ಸರ್ವಥಾ ತ್ವಾಂ ಸಮಾಸಾದ್ಯ ನಾಶ್ಚರ್ಯಮಿತಿ ಮೇ ಮತಿಃ ॥64॥
ಎಲೈ ಕೇಶವನೇ, ಯಾರಿಗೆ ನೀನು ನಿತ್ಯವೂ ಯುದ್ಧದಲ್ಲಿ ರಕ್ಷಕನಾಗಿಯೂ, ಹಿತಚಿಂತಕನಾಗಿಯೂ ಇರುವಿಯೋ ಅಂತಹವರಿಗೆ ಜಯವು ಆಶ್ಚರ್ಯಕರವಲ್ಲ. ನಿನ್ನನ್ನು ಸರ್ವಪ್ರಕಾರದಿಂದಲೂ ಆಶ್ರಯಿಸಿದವರಿಗೆ ಯಾವುದೂ ಆಶ್ಚರ್ಯವಲ್ಲವೆಂದು ನನ್ನ ಅಭಿಪ್ರಾಯ.
ಏವಮುಕ್ತಃ ಪ್ರತ್ಯುವಾಚ ಸ್ಮಯಮಾನೋ ಜನಾರ್ದನಃ |
ತ್ವಯ್ಯೇವೈತದ್ ಯುಕ್ತರೂಪಂ ವಚನಂ ಪಾರ್ಥಿವೋತ್ತಮ ॥65॥
ಹೀಗೆ ಹೇಳಲ್ಪಟ್ಟ ಕೃಷ್ಣನು ನಗುತ್ತಾ ಎಲೈ ಪಾರ್ಥಿವಶ್ರೇಷ್ಠನೇ, ಇವು ನಿನಗೇ ಯೋಗ್ಯವಾದ ಮಾತುಗಳು ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸಪ್ತದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹದಿನೇಳನೆಯ
ಅಧ್ಯಾಯ ಮುಗಿಯಿತು.
* * * * *

## ನೂರ ಹದಿನೆಂಟನೆಯ ಅಧ್ಯಾಯ

ಅರ್ಜುನನಿಂದ ಬಾಯಾರಿದ ಭೀಷ್ಮರಿಗೆ ಜಲದಾನ. ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವಂತೆ ದುರ್ಯೋಧನನಿಗೆ ಭೀಷ್ಮರ ಉಪದೇಶ.
ಸಂಜಯಃ
ವ್ಯುಷ್ಟಾಯಾಂ ತು ಮಹಾರಾಜ ರಜನ್ಯಾಂ ಸರ್ವಪಾರ್ಥಿವಾಃ |
ಪಾಂಡವಾ ಧಾರ್ತರಾಷ್ಟ್ರಾಶ್ಚ ಅಭಿಜಗ್ಮುಃ ಪಿತಾಮಹಮ್ ॥1॥
ಸಂಜಯ ಎಲೈ ಮಹಾರಾಜನೇ, ರಾತ್ರಿಯು ಕಳೆಯುತ್ತಿರಲು ಎಲ್ಲ ರಾಜರೂ, ಪಾಂಡವರೂ ಮತ್ತು ಕೌರವರೂ ಪಿತಾಮಹರ ಬಳಿಗೆ ಬಂದರು.
ತಂ ವೀರಶಯನೇ ವೀರಂ ಶಯಾನಂ ಕುರುಸತ್ತಮಮ್ |
ಅಭಿವಾದ್ಯೋಪತಸ್ಥುರ್ವೈ ಕ್ಷತ್ರಿಯಾಃ ಕ್ಷತ್ರಿಯರ್ಷಭಮ್ ॥2॥
ವೀರಶಯನದಲ್ಲಿ ಮಲಗಿದ, ವೀರರೂ, ಕ್ಷತ್ರಿಯರೂ, ಕುರುಶ್ರೇಷ್ಠರೂ ಆದ ಭೀಷ್ಮರಿಗೆ ನಮಸ್ಕರಿಸಿ ಕ್ಷತ್ರಿಯರೆಲ್ಲರೂ ಸಮೀಪದಲ್ಲಿ ನಿಂತರು.
ಕನ್ಯಾಶ್ಚಂದನಚೂರ್ಣೈಶ್ಚ ಲಾಜೈರ್ಮಾಲ್ಯೈಶ್ಚ ಸರ್ವಶಃ |
ಅವಾಕಿರನ್ ಶಾಂತನವಂ ತತ್ರ ಗತ್ವಾ ಸಹಸ್ರಶಃ ॥3॥
ಕನ್ಯೆಯರು ಸಹಸ್ರ ಸಂಖ್ಯೆಯಲ್ಲಿ ಅಲ್ಲಿಗೆ ಹೋಗಿ ಭೀಷ್ಮರ ಮೇಲೆ ಚಂದನ ಚೂರ್ಣಗಳನ್ನೂ, ಲಾಜಗಳನ್ನೂ ಮತ್ತು ಪುಷ್ಪಮಾಲೆಗಳನ್ನೂ ಸುರಿಸಿದರು.
ಸ್ತ್ರಿಯೋ ಬಾಲಾಸ್ತಥಾ ವೃದ್ಧಾಃ ಪ್ರೇಕ್ಷಕಾಶ್ಚ ಪೃಥಗ್ ಜನಾಃ |
ಸಮಭ್ಯಯುಃ ಶಾಂತನವಂ ಭೂತಾನೀವ ತಮೋನುದಮ್ ॥4॥
ಸ್ತ್ರೀಯರು, ಬಾಲಕರು, ವೃದ್ಧರು ಮತ್ತು ನೋಡಲು ಉತ್ಸುಕರಾದ ಸಾಮಾನ್ಯ ಜನರು, ಪ್ರಾಣಿಗಳು ಸೂರ್ಯನನ್ನು ನೋಡುವಂತೆ ಭೀಷ್ಮರ ಬಳಿಗೆ ಬಂದರು.
ತೂರ್ಯಾಣಿ ಗಣಿಕಾ ವಾರಾಸ್ತಥೈವ ನಟನರ್ತಕಾಃ |
ಉಪಾನೃತ್ಯನ್ ಜಗುಶ್ಚೈವ ವೃದ್ಧಂ ಕುರುಪಿತಾಮಹಮ್ ॥5॥
ವೃದ್ಧರಾದ ಕುರುಪಿತಾಮಹರ ಬಳಿ ಮಂಗಳವಾದ್ಯಗಳು ಮೊಳಗಿದವು. ಗಣಿಕೆಯರು, ವಾರಾಂಗನೆಯರು, ನಟರು ನರ್ತನವನ್ನು ಮತ್ತು ಗಾಯನವನ್ನು ಮಾಡಿದರು.

ಉಪಾರಮ್ಯ ಚ ಯುದ್ಧೇಭ್ಯಃ ಸನ್ನಾಹಾನ್ ವಿಪ್ರಮುಚ್ಯ ಚ |
ಆಯುಧಾನಿ ಚ ನಿಕ್ಷಿಪ್ಯ ಸಹಿತಾಃ ಕುರುಪಾಂಡವಾಃ ||6||
ಅನ್ವಾಸತ ದುರಾಧರ್ಷಂ ದೇವವ್ರತಮರಿಂದಮಮ್ |
ಅನ್ಯೋನ್ಯಂ ಪ್ರೀತಿಮಂತಸ್ತೇ ಯಥಾಪೂರ್ವಂ ಯಥಾವಯಃ ||7||
ಯುದ್ಧದಿಂದ ವಿರಾಮವನ್ನು ಹೊಂದಿ, ತಮ್ಮ ಶಸ್ತ್ರಕವಚವಗಳನ್ನು ತ್ಯಜಿಸಿ ಕುರು-ಪಾಂಡವರು ಮೊದಲಿನಂತೆಯೇ ಅವರ ವಯಸ್ಸಿಗೆ ಅನುಗುಣವಾಗಿ ಅನ್ಯೋನ್ಯ ಪ್ರೀತಿಯುಳ್ಳವರಾಗಿ ಅರಿಂದಮರೂ, ದುರಾಧರ್ಷರೂ ಆದ ಭೀಷ್ಮರ ಬಳಿ ನಿಂತರು.
ಸಾ ಪಾರ್ಥಿವಶತಾಕೀರ್ಣಾ ಸಮಿತಿರ್ಭೀಷ್ಮಶೋಭಿತಾ |
ಶುಶುಭೇ ಭಾರತೀ ದೀಪ್ತಾ ದಿವೀವಾದಿತ್ಯಮಂಡಲಮ್ ||8||
ನೂರಾರು ರಾಜರಿಂದ ತುಂಬಿದ, ಭೀಷ್ಮರಿಂದ ಶೋಭಿತವಾದ ಆ ಭಾರತರ ದೀಪ್ತವಾದ ಸಭೆಯು ಆಕಾಶದಲ್ಲಿನ ಆದಿತ್ಯಮಂಡಲದಂತೆ ಶೋಭಿಸಿತು.
ವಿಬಭೌ ಚ ನೃಪಾಣಾಂ ಸಾ ಪಿತಾಮಹಮುಪಾಸತಾಮ್ |
ದೇವಾನಾಮಿವ ದೇವೇಶಂ ಪಿತಾಮಹಮುಪಾಸತಾಮ್ ||9||
ಪಿತಾಮಹರ ಸಮೀಪದಲ್ಲಿ ನಿಂತ ರಾಜರ ಆ ಸಭೆಯು ದೇವೇಶರಾದ ಪಿತಾಮಹರಾದ ಬ್ರಹ್ಮದೇವರ ಸಮೀಪದಲ್ಲಿ ನಿಂತ ದೇವತೆಗಳ ಸಭೆಯಂತೆ ಶೋಭಿಸಿತು.
ಭೀಷ್ಮಸ್ತು ವೇದನಾಂ ಧೈರ್ಯಾನ್ನಿಗೃಹ್ಯ ಭರತರ್ಷಭ |
ಅಭಿತಪ್ತಃ ಶರೈಶ್ಚೈವ ನಾತಿಹೃಷ್ಟಮನಾಬ್ರವೀತ್ ||10||
ಎಲೈ ಭರತಶ್ರೇಷ್ಠನೇ, ಭೀಷ್ಮರಾದರೋ (ತಮ್ಮ ದೇಹದಲ್ಲಿ ನಾಟಿದ) ಬಾಣಗಳಿಂದ ತಾಡಗೊಂಡು, ಆ ವೇದನೆಯನ್ನು ಧೈರ್ಯದಿಂದ ತಡೆದುಕೊಳ್ಳದ ಬಹಳ ಸಂತೋಷಗೊಂಡ ಮನಸ್ಸಿನಿಂದ ಹೇಳಿದರು.
ಶರಾಭಿತಪ್ತಕಾಯೋಽಹಂ ಶರಸಂತಾಪಮೂರ್ಚ್ಛಿತಃ |
ಪಾನೀಯಮಭಿಕಾಂಕ್ಷೇಽಹಂ ರಾಜ್ಞಸ್ತಾನ್ ಪ್ರತ್ಯಭಾಷತ ||11||
ಬಾಣಗಳಿಂದ ಗಾಯಗೊಂಡ ಶರೀರವುಳ್ಳ ನಾನು ಅವುಗಳಿಂದ ಉಂಟಾದ ಸಂತಾಪದಿಂದ ಮೂರ್ಛಿತನಾಗಿದ್ದೇನೆ. ನನಗೆ ನೀರು ಬೇಕಾಗಿದೆ ಎಂದು ಆ ರಾಜರಿಗೆ ಹೇಳಿದರು.
ತತಸ್ತೇ ಕ್ಷತ್ರಿಯಾ ರಾಜನ್ ಸಮಾಜಹ್ರುಃ ಸಮಂತತಃ |
ಭಕ್ಷ್ಯಾನುಚ್ಚಾವಚಾಂಸ್ತತ್ರ ವಾರಿಕುಂಭಾಂಶ್ಚ ಶೀತಲಾನ್ ||12||
ಎಲೈ ರಾಜನೇ, ಆಗ ಆ ಕ್ಷತ್ರಿಯರು ಎಲ್ಲ ಕಡೆಗಳಿಂದಲೂ ಅನೇಕ ವಿಧವಾದ ಭಕ್ಷ್ಯಗಳನ್ನೂ, ಶೀತಲವಾದ ನೀರಿನಿಂದ ಕೂಡಿದ ಕುಂಭಗಳನ್ನೂ ತಂದರು.
ಉಪನೀತಂ ಚ ತದ್ ದೃಷ್ಟ್ವಾ ಭೀಷ್ಮಃ ಶಾಂತನವೋಽಬ್ರವೀತ್ |
ನಾದ್ಯ ತಾತ ಮಯಾ ಶಕ್ಯಂ ಭೋಗಾನ್ ಕಾಂಶ್ಚನ ಮಾನುಷಾನ್ ||
ಉಪಭೋಕ್ತುಂ ಮನುಷ್ಯೇಭ್ಯಃ ಶರಶಯ್ಯಾಗತೋ ಹ್ಯಹಮ್ |
ಪ್ರತೀಕ್ಷಮಾಣಸ್ತಿಷ್ಠಾಮಿ ನಿವೃತ್ತಿಂ ಶಶಿಸೂರ್ಯಯೋಃ ||14||
ತರಲ್ಪಟ್ಟ ಅವುಗಳನ್ನು ನೋಡಿ ಶಂತನು ಪುತ್ರರಾದ ಭೀಷ್ಮರು ಪ್ರೀತಿಪಾತ್ರನೇ, ನಾನು ಈ ದಿನ ಮನುಷ್ಯರಿಂದ ತರಲ್ಪಟ್ಟ ಯಾವ ಮಾನುಷಭೋಗವನ್ನೂ ಉಪಭೋಗಿಸಲು ಸಾಧ್ಯವಿಲ್ಲ. ಶರತಲ್ಪದಲ್ಲಿ ಮಲಗಿದ ನಾನು ಚಂದ್ರ-ಸೂರ್ಯರ ನಿವೃತ್ತಿಯನ್ನು ನಿರೀಕ್ಷಿಸುತ್ತಾ (ದಿನಗಳನ್ನು ಎಣಿಸುತ್ತಾ ಇದ್ದೇನೆ) ಎಂದು ಹೇಳಿದರು.
ಏವಮುಕತ್ವ ತತೋವಾಚ ಭೀಷ್ಮಃ ಶರಶತೈಶ್ಚಿತಃ |
ಪಯಃ ಪಾಸ್ಯಾಮಿ ಗೋಪಾಲಾ ಗೋಮಯಂ ನ ತು ಗೋಮಯಮ್ ||
ಹೀಗೆ ಹೇಳಿ ನೂರಾರು ಬಾಣಗಳು ನೆಟ್ಟ ಭೀಷ್ಮರು ಪುನಃ ಹೇಳಿದರು. ಎಲೈ ಭೂಮಿಪಾಲರೇ, ನಾನು ಭೂಮಿಯಿಂದ ಹೊಸದಾಗಿ ಮೇಲೆ ಬಂದ ನೀರನ್ನು ಕುಡಿಯಲು ಇಚ್ಛಿಸುತ್ತೇನೆ. ಗೋವುಗಳಿಂದ ಉಂಟಾದ ಕ್ಷೀರವನ್ನಾಗಲೀ ಅಥವಾ ಕೂಪಾದಿಗಳಿಂದ ಉದ್ಧೃತವಾದ ಜಲವನ್ನಾಗಲೀ ಕುಡಿಯುವುದಿಲ್ಲ (ಎಂದು ಹೇಳಿದರು).
ಏವಮುಕತ್ವ ಶಾಂತನವೋ ನಿಂದನ್ ವಾಕ್ಯೇನ ಪಾರ್ಥಿವಾನ್ |
ಧನಂಜಯಂ ಮಹಾಬಾಹುಮಭ್ಯಭಾಷತ ಭಾರತ ||16||
ಎಲೈ ಭಾರತನೇ, ಶಂತನು ಪುತ್ರರಾದ ಭೀಷ್ಮರು ಹೀಗೆ ಹೇಳಿ, ತನ್ನ ಮಾತಿನಿಂದ ಉಳಿದ ರಾಜರನ್ನು ನಿಂದಿಸಿ, ಮಹಾಬಾಹುವಾದ ಅರ್ಜುನನನ್ನು ಕುರಿತು ಹೇಳಿದರು.
ಅಥೋಪೇತ್ಯ ಮಹಾಬಾಹುರಭಿವಾದ್ಯ ಪಿತಾಮಹಮ್ |
ಅತಿಷ್ಠತ್ ಪ್ರಾಂಜಲಿಃ ಪ್ರಹ್ವಃ ಕಿಂ ಕರೋಮೀತಿ ಚಾಬ್ರವೀತ್ ||17||
ಆಗ ಮಹಾಬಾಹುವಾದ ಅರ್ಜುನನು ಭೀಷ್ಮರ ಸಮೀಪಕ್ಕೆ ಬಂದು, ಅವರಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ಏನು ಮಾಡಲಿ ಎಂದು ವಿನಯದಿಂದ ಕೇಳಿದನು.
ತಂ ದೃಷ್ಟ್ವಾ ಪಾಂಡವಂ ರಾಜನ್ನಭಿವಾದ್ಯಾಗ್ರತಃ ಸ್ಥಿತಮ್ |
ಅಭ್ಯಭಾಷತ ಧರ್ಮಾತ್ಮಾ ಭೀಷ್ಮಃ ಪ್ರೀತೋ ಧನಂಜಯಮ್ ||18||
ಎಲೈ ರಾಜನೇ, ನಮಸ್ಕಾರವನ್ನು ಮಾಡಿ ಎದುರಿಗೆ ನಿಂತ ಅರ್ಜುನನನ್ನು ನೋಡಿ ಸಂತೋಷಗೊಂಡ ಧರ್ಮಾತ್ಮರಾದ ಭೀಷ್ಮರು ಅವನನ್ನು ಕುರಿತು ಹೇಳಿದರು.

ದಹ್ಯತೇಽದಃ ಶರೀರಂ ಮೇ ಸಂಸ್ಯೂತೋಽಸ್ಮಿ ಮಹೇಷುಭಿಃ |
ಮರ್ಮಾಣಿ ಪರಿದೂಯಂತೇ ವದನಂ ಮಮ ಶುಷ್ಯತಿ ||19||
ಈ ನನ್ನ ಶರೀರವು ಸುಡುತ್ತಿದೆ. ದೊಡ್ಡ ಬಾಣಗಳಿಂದ ಪೋಣಿಸಲ್ಪಟ್ಟಿದ್ದೇನೆ. ಮರ್ಮಗಳು ನೋವಿನಿಂದ ಕೂಡಿವೆ. ನನ್ನ ಬಾಯಿಯು ಒಣಗುತ್ತಿದೆ.
ಹ್ಲಾದನಾರ್ಥಂ ಶರೀರಸ್ಯ ಪ್ರಯಚ್ಛಾಪೋ ಮಮಾರ್ಜುನ |
ತ್ವಂ ಹಿ ಶಕ್ತೋ ಮಹೇಷ್ವಾಸ ದಾತುಮಂಭೋ ಯಥಾವಿಧಿ ||20||
ಎಲೈ ಅರ್ಜುನನೇ, ದೇಹವನ್ನು ರಕ್ಷಿಸಲು ನನಗೆ ಸ್ವಲ್ಪ ನೀರನ್ನು ಕೊಡು. ಎಲೈ ಮಹಾಧನುರ್ಧಾರಿಯೇ, ಶಾಸ್ತ್ರವಿಧಿಯಂತೆ ನನಗೆ ನೀರನ್ನು ಕೊಡಲು ನೀನೊಬ್ಬನೇ ಸಮರ್ಥನಾಗಿದ್ದೀಯೆ.
ಅರ್ಜುನಸ್ತು ತಥೇತ್ಯುಕ್ತ್ವಾ ರಥಮಾರುಹ್ಯ ವೀರ್ಯವಾನ್ |
ಅಧಿಜ್ಯಂ ಬಲವತ್ಕೃತ್ವಾ ಗಾಂಡೀವಂ ವ್ಯಾಕ್ಷಿಪದ್ ಧನುಃ ||21||
ಪರಾಕ್ರಮಶಾಲಿಯಾದ ಅರ್ಜುನನಾದರೋ ಹಾಗೆಯೇ ಆಗಲಿ ಎಂದು ಹೇಳಿ ರಥವನ್ನು ಏರಿ, ಗಾಂಡೀವ ಧನುಸ್ಸಿನ ಹೆದೆಯನ್ನು ಬಿಗಿಯಾಗಿ ಏರಿಸಿ ಧನುಸ್ಸಿನ ಹೆದೆಯನ್ನು ಎಳೆದನು.
ತಸ್ಯ ಜ್ಯಾತಳನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ವಿತ್ರೇಸುಃ ಸರ್ವಭೂತಾನಿ ಶ್ರುತ್ವಾ ಸರ್ವೇ ಚ ಪಾರ್ಥಿವಾಃ ||22||
ಸಿಡಿಲಿನ ಆರ್ಭಟದಂತಿದ್ದ ಅವನ ಹೆದೆಯ ಘೋಷವನ್ನು ಕೇಳಿ ಎಲ್ಲ ಪ್ರಾಣಿಗಳೂ ಮತ್ತು ರಾಜರೂ ಹೆದರಿ ಹೋದರು.
ತತಃ ಪ್ರದಕ್ಷಿಣಂ ಕೃತ್ವಾ ರಥೇನ ರಥಿನಾಂ ವರಃ |
ಶಯಾನಂ ಭರತಶ್ರೇಷ್ಠಂ ಸರ್ವಶಸ್ತ್ರಭೃತಾಂ ವರಮ್ ||23||
ಸಂಧಾಯ ಚ ಶರಂ ದೀಪ್ತಮಭಿಮಂತ್ರ್ಯ ಮಹಾಯಶಾಃ |
ಪರ್ಜನ್ಯಾಸ್ತ್ರೇಣ ಸಂಯೋಜ್ಯ ಸರ್ವಲೋಕಸ್ಯ ಪಶ್ಯತಃ |
ಅವಿಧ್ಯತ್ ಪೃಥಿವೀಂ ಪಾರ್ಥಃ ಪಾರ್ಶ್ವೇ ಭೀಷ್ಮಸ್ಯ ದಕ್ಷಿಣೇ ||24||
ಅನಂತರ ರಥಿಶ್ರೇಷ್ಠನೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ ಆದ ಅವನು ಮಲಗಿದ ರಥದಿಂದ ಭೀಷ್ಮರಿಗೆ ಪ್ರದಕ್ಷಿಣೆಯನ್ನು ಮಾಡಿ ಹೊಳೆಯುತ್ತಿದ್ದ ಬಾಣವನ್ನು ಹೂಡಿ, ಅಭಿಮಂತ್ರಣ ಮಾಡಿ, ಪರ್ಜನ್ಯಾಸ್ತ್ರದಿಂದ ಸಂಯೋಜಿಸಿ ಎಲ್ಲರೂ ನೋಡುತ್ತಿರುವಂತೆಯೇ ಮಹಾಕೀರ್ತಿವಂತನಾದ ಅರ್ಜುನನು ಭೀಷ್ಮರ ಬಲಭಾಗದಲ್ಲಿ ಭೂಮಿಯಲ್ಲಿ ಆ ಬಾಣವನ್ನು ಪ್ರಯೋಗಿಸಿದನು.
ಉತ್ಪಪಾತ ತತೋ ಧಾರಾ ವಿಮಲಾ ವಾರಿಣಃ ಶಿವಾ |
ಶೀತಸ್ಯಾಮೃತಕಲ್ಪಸ್ಯ ದಿವ್ಯಗಂಧರಸಸ್ಯ ಚ ||25||
ಅನಂತರ ದಿವ್ಯಗಂಧಯುಕ್ತವಾದ, ಅಮೃತದಂತಿದ್ದ, ಮಂಗಳವಾದ, ಸ್ವಚ್ಛವಾದ ಜಲಧಾರೆಯು ಅಲ್ಲಿಂದ ಮೇಲಕ್ಕೆ ಚಿಮ್ಮಿತು.
ಅತರ್ಪಯತ್ ತತಃ ಪಾರ್ಥಃ ಶೀತಯಾ ವಾರಿಧಾರಯಾ |
ಭೀಷ್ಮಂ ಕುರೂಣಾಮೃಷಭಂ ದಿವ್ಯಕರ್ಮಪರಾಕ್ರಮಃ ||26||
ದಿವ್ಯಕರ್ಮಪರಾಕ್ರಮವುಳ್ಳ ಅರ್ಜುನನು ಆ ಶೀತಲ ಜಲಧಾರೆಯಿಂದ ಕುರುಶ್ರೇಷ್ಠರಾದ ಭೀಷ್ಮರನ್ನು ತೃಪ್ತಿಪಡಿಸಿದನು.
ಕರ್ಮಣಾ ತೇನ ಪಾರ್ಥಸ್ಯ ಶಕ್ರಸ್ಯೇವ ವಿಕುರ್ವತಃ |
ವಿಸ್ಮಯಂ ಪರಮಂ ಜಗ್ಮುಸ್ತತಸ್ತೇ ವಸುಧಾಧಿಪಾಃ ||27||
ಇಂದ್ರನಂತೆ ವಿಚಿತ್ರವಾದ ಕರ್ಮಗಳನ್ನು ಮಾಡುವ ಅರ್ಜುನನ ಆ ಕಾರ್ಯವನ್ನು ನೋಡಿ ಎಲ್ಲ ರಾಜರೂ ಪರಮವಿಸ್ಮಿತರಾದರು.
ತತ್ಕರ್ಮ ಪ್ರೇಕ್ಷ್ಯ ಬೀಭತ್ಸೋರತಿಮಾನುಷಮದ್ಭುತಮ್ |
ಸಂಪ್ರಾವೇಪಂತ ಕುರವೋ ಗಾವಃ ಶೀತಾರ್ದಿತಾ ಇವ ||28||
ಅರ್ಜುನನ ಮನುಷ್ಯರನ್ನು ಮೀರಿದ ಅದ್ಭುತವಾದ ಆ ಕಾರ್ಯವನ್ನು ನೋಡಿ ಕುರುಗಳು ಶೀತಕ್ಕೆ ನಡುಗುವ ಗೋವುಗಳಂತೆ ನಡುಗಿಹೋದರು.
ವಿಸ್ಮಯಾಚ್ಚೋತ್ತರೀಯಾಣಿ ವ್ಯಾವಿಧ್ಯನ್ ಸರ್ವತೋ ನೃಪಾಃ |
ಶಂಖದುಂದುಭಿನಿರ್ಘೋಷೈಸ್ತುಮುಲಂ ಸರ್ವತೋಽಭವತ್ ||29||
ವಿಸ್ಮಯಗೊಂಡ ರಾಜರುಗಳು ಮಾತ್ರ ಎಲ್ಲ ಕಡೆಗಳಲ್ಲಿಯೂ ತಮ್ಮ ಉತ್ತರೀಯಗಳನ್ನು ಬೀಸಿದರು. ಶಂಖ-ದುಂದುಭಿಗಳ ನಾದದಿಂದ ಎಲ್ಲ ಕಡೆಗಳಲ್ಲಿಯೂ ತೀವ್ರವಾದ ಶಬ್ದವುಂಟಾಯಿತು.
ತೃಪ್ತಃ ಶಾಂತನವಶ್ಚಾಪಿ ರಾಜನ್ ಬೀಭತ್ಸುಮಬ್ರವೀತ್ |
ಸರ್ವಪಾರ್ಥಿವವೀರಾಣಾಂ ಸನ್ನಿಧೌ ಪೂಜಯನ್ನಿವ ||30||
ಎಲೈ ರಾಜನೇ, ತೃಪ್ತಿಗೊಂಡ ಭೀಷ್ಮರು ಭೂಮಿಯ ಎಲ್ಲ ರಾಜರ ಸನ್ನಿಧಿಯಲ್ಲಿ ಅರ್ಜುನನನ್ನು ಪೂಜಿಸುವವರಂತೆ ಮಾತನಾಡಿದರು.
ನೈತಚ್ಚಿತ್ರಂ ಮಹಾಬಾಹೋ ತ್ವಯಿ ಕೌರವನಂದನ |
ಕಥಿತೋ ನಾರದೇನಾಸಿ ಪೂರ್ವರ್ಷಿರಮಿತದ್ಯುತಿಃ ||31||
ಎಲೈ ಮಹಾಬಾಹುವೇ, ಕೌರವನಂದನನೇ, ಇದು ನಿನ್ನಲ್ಲಿ ಆಶ್ಚರ್ಯಕರವಲ್ಲ. ನೀನು ಹಿಂದೆ ಅಮಿತ ತೇಜಸ್ಸುಳ್ಳ ಋಷಿಯಾಗಿದ್ದಿ ಎಂದು ನಾರದರು ಹೇಳಿದ್ದಾರೆ.
ವಾಸುದೇವಸಹಾಯಸ್ತ್ವಂ ಮಹತ್ಕರ್ಮ ಕರಿಷ್ಯಸಿ |
ಯನ್ನೋತ್ಸಹತಿ ದೇವೇಂದ್ರಃ ಸಹ ದೇವೈರಪಿ ಧ್ರುವಮ್ ||32||

ಕೃಷ್ಣನ ಸಹಾಯವನ್ನು ಹೊಂದಿದ ನೀನು ದೇವತೆಗಳಿಂದ ಕೂಡಿದ ದೇವೇಂದ್ರನೂ ಮಾಡಲು ಯೋಚಿಸದ ದೊಡ್ಡ ಕಾರ್ಯಗಳನ್ನು ಖಂಡಿತವಾಗಿ ಮಾಡುವಿ.
ವಿದುಸ್ತ್ವಾಂ ನಿಧನಂ ಪಾರ್ಥ ಸರ್ವಕ್ಷತ್ರಸ್ಯ ತದ್ವಿದಃ |
ಧನುರ್ಧರಾಣಾಮೇಕಸ್ತ್ವಂ ಪೃಥಿವ್ಯಾಂ ಪ್ರವರೋ ನೃಷು ॥33॥
ಎಲೈ ಪಾರ್ಥನೇ, ನೀನು ಸರ್ವಕ್ಷತ್ರಿಯರ ವಿನಾಶಕಾರಣನೆಂದು ತಿಳಿದವರು ಹೇಳುತ್ತಾರೆ. ನೀನು ಧನುರ್ಧಾರಿಗಳಲ್ಲಿ ಶ್ರೇಷ್ಠನಾದವನು. ಭೂಮಿಯಲ್ಲಿರುವ ಮನುಷ್ಯರಲ್ಲಿಯೂ ಶ್ರೇಷ್ಠನಾದವನು.
ಮನುಷ್ಯಾ ಜಗತಿ ಶ್ರೇಷ್ಠಾಃ ಪಕ್ಷಿಣಾಂ ಗರುಡೋ ವರಃ |
ಸರಸಾಂ ಸಾಗರಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ॥34॥
ಆದಿತ್ಯಸ್ತೇಜಸಾಂ ಶ್ರೇಷ್ಠೋ ಗಿರೀಣಾಂ ಹಿಮವಾನ್ ವರಃ |
ಜಾತೀನಾಂ ಬ್ರಾಹ್ಮಣಃ ಶ್ರೇಷ್ಠಃ ಶ್ರೇಷ್ಠಸ್ತ್ವಮಸಿ ಧನ್ವಿನಾಮ್ ॥35॥
ಅನೇಕ ಪ್ರಾಣಿಗಳಿರುವ ಜಗತ್ತಿನಲ್ಲಿ ಮನುಷ್ಯರು ಶ್ರೇಷ್ಠರು. ಪಕ್ಷಿಗಳಲ್ಲಿ ಗರುಡನು ಶ್ರೇಷ್ಠನು. ಸರೋವರಗಳಲ್ಲಿ ಸಾಗರವು ಶ್ರೇಷ್ಠವಾದುದು. ನಾಲ್ಕುಕಾಲಿನ ಪ್ರಾಣಿಗಳಲ್ಲಿ ಗೋವು ಶ್ರೇಷ್ಠವಾದುದು. ಪ್ರಕಾಶವುಳ್ಳ ವಸ್ತುಗಳಲ್ಲಿ ಸೂರ್ಯನು ಶ್ರೇಷ್ಠನಾದವನು. ಪರ್ವತಗಳಲ್ಲಿ ಹಿಮಾಲಯವು ಶ್ರೇಷ್ಠವಾದುದು. ಜಾತಿಗಳಲ್ಲಿ ಬ್ರಾಹ್ಮಣನು ಶ್ರೇಷ್ಠನಾದವನು. ಸರ್ವಧನುರ್ಧಾರಿಗಳಲ್ಲಿ ನೀನು ಶ್ರೇಷ್ಠನಾದವನು.
ನ ವೈ ಶ್ರುತಂ ಧಾರ್ತರಾಷ್ಟ್ರೇಣ ವಾಕ್ಯಂ
ಸಂಬೋಧ್ಯಮಾನಂ ವಿದುರೇಣ ಚೈವ |
ದ್ರೋಣೇನ ರಾಮೇಣ ಜನಾರ್ದನೇನ
ಮುಹುರ್ಮುಹುಃ ಸಂಜಯೇನಾಪಿ ಚೋಕ್ತಮ್ ॥36॥
ವಿದುರನು, ದ್ರೋಣರು, ಪರಶುರಾಮನು, ಕೃಷ್ಣನು, ಸಂಜಯನು ಪುನಃ ಪುನಃ ದುರ್ಯೋಧನನನ್ನು ಸಂಬೋಧಿಸಿ ಹೇಳಿದ ಮಾತುಗಳನ್ನು ಅವನು ಕೇಳಲೇ ಇಲ್ಲ.
ಪರೀತಬುದ್ಧಿರ್ಹಿ ವಿಸಂಜ್ಞಕಲ್ಪೋ
ದುರ್ಯೋಧನೋ ನಾಭ್ಯನಂದದ್ ವಚೋ ಮೇ |
ಸ ಶೇಷ್ಯತೇ ವೈ ನಿಹತಶ್ಚಿರಾಯ
ಶಾಸ್ತ್ರಾತಿಗೋ ಭೀಮಬಲಾಭಿಭೂತಃ ॥37॥
ವಿಪರೀತ (ವಿರುದ್ಧ) ಬುದ್ಧಿಯುಳ್ಳವನೂ, ಜ್ಞಾನಶೂನ್ಯನಂತೆ ಇರುವವನೂ ಆದ ದುರ್ಯೋಧನನು ನನ್ನ ಮಾತುಗಳನ್ನೂ ಕೇಳಲಿಲ್ಲ. ಶಾಸ್ತ್ರವನ್ನು ಮೀರಿದ ಅವನು ಭೀಮಸೇನನ ಬಲಕ್ಕೆ ವಶನಾಗಿ, ಮೃತನಾಗಿ, ಶಾಶ್ವತವಾಗಿ ಮಲಗುವನು (ಎಂದು ಹೇಳಿದರು).
ತತಃ ಶ್ರುತ್ವಾ ತದ್ವಚಃ ಕೌರವೇಂದ್ರೋ
ದುರ್ಯೋಧನೋ ದೀನಮನಾ ಬಭೂವ |
ತಮಬ್ರವೀಚ್ಛಾಂತನವೋಽಭಿವೀಕ್ಷ್ಯ
ನಿಬೋಧ ರಾಜನ್ ಭವ ವೀತಮನ್ಯುಃ ॥38॥
ಕೌರವೇಂದ್ರನಾದ ದುರ್ಯೋಧನನು ಆ ಮಾತುಗಳನ್ನು ಕೇಳಿ ದೀನ ಮನಸ್ಕನಾದನು. ಅವನನ್ನು ನೋಡಿ ಭೀಷ್ಮರು ಹೇಳಿದರು ರಾಜನೇ, ನಾನು ಹೇಳುವುದನ್ನು ಕೇಳು, ಕೋಪವನ್ನು ಬಿಡು.
ದೃಷ್ಟಂ ದುರ್ಯೋಧನೇದಂ ತೇ ಯಥಾ ಪಾರ್ಥೇನ ಧೀಮತಾ |
ಜಲಸ್ಯ ಧಾರಾ ಜನಿತಾ ಶೀತಸ್ಯಾಮೃತಗಂಧಿನಃ |
ಏತಸ್ಯ ಕರ್ತಾ ಲೋಕೇಽಸ್ಮಿನ್ ನಾನ್ಯಃ ಕಶ್ಚನ ವಿದ್ಯತೇ ॥39॥
ಎಲೈ ದುರ್ಯೋಧನನೇ, ಮೇಧಾವಿಯಾದ ಅರ್ಜುನನು ಹೇಗೆ ಅಮೃತಗಂಧವುಳ್ಳ ಶೀತಲವಾದ ಜಲದ ಧಾರೆಯನ್ನು ಉಂಟುಮಾಡಿದನು ಎಂಬುದನ್ನು ನೀನು ನೋಡಿದ್ದೀಯೆ. ಇಂತಹ ಕಾರ್ಯವನ್ನು ಮಾಡುವವನು ಲೋಕದಲ್ಲಿ ಬೇರೆ ಯಾವನೂ ಇಲ್ಲ.
ಆಗ್ನೇಯಂ ವಾರುಣಂ ಸೌಮ್ಯಂ ವಾಯವ್ಯಮಥ ವೈಷ್ಣವಮ್ |
ಐಂದ್ರಂ ಪಾಶುಪತಂ ಬ್ರಾಹ್ಮಂ ಪಾರಮೇಷ್ಠ್ಯಂ ಪ್ರಜಾಪತೇಃ |
ಧಾತುಸ್ತ್ವಷ್ಟುಶ್ಚ ಸವಿತುರ್ದಿವ್ಯಾನ್ಯಸ್ತ್ರಾಣಿ ಸರ್ವಶಃ ॥40॥
ಸರ್ವಸ್ಮಿನ್ ಮಾನುಷೇ ಲೋಕೇ ವೇತ್ತ್ಯೇಕೋ ಹಿ ಧನಂಜಯಃ |
ಕೃಷ್ಣೋ ವಾ ದೇವಕೀಪುತ್ರೋ ನಾನ್ಯೋ ವೈ ವೇದ ಕಶ್ಚನ |
ನ ಶಕ್ಯಾಃ ಪಾಂಡವಾಸ್ತಾತ ಯುದ್ಧೇ ಜೇತುಂ ಕಥಂಚನ ॥41॥
ಆಗ್ನೇಯ, ವಾರುಣ, ಚಾಂದ್ರ, ವಾಯುವ್ಯ, ವೈಷ್ಣವ, ಐಂದ್ರ, ಪಾಶುಪತ, ಬ್ರಾಹ್ಮ, ಪ್ರಜಾಪತಿಯ ಪಾರಮೇಷ್ಠ್ಯ, ಧಾತೃವಿನ ಅಸ್ತ್ರ, ತ್ವಷ್ಟೃವಿನ ಅಸ್ತ್ರ, ಸೂರ್ಯನ ಅಸ್ತ್ರ - ಎಲ್ಲ ದಿವ್ಯಾಸ್ತ್ರಗಳನ್ನೂ ಮನುಷ್ಯಲೋಕದಲ್ಲಿ ಅರ್ಜುನನೊಬ್ಬನೇ ತಿಳಿದಿದ್ದಾನೆ ಅಥವಾ ದೇವಕೀ ಪುತ್ರನಾದ ಕೃಷ್ಣನು ತಿಳಿದಿದ್ದಾನೆ. ಇನ್ನು ಯಾರೂ ಇವುಗಳನ್ನು ತಿಳಿದಿಲ್ಲ. ಎಲೈ ಪ್ರೀತಿಪಾತ್ರನೇ, ಪಾಂಡವರನ್ನು ಯಾವ ರೀತಿಯಿಂದಲೂ ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ.
ಅಮಾನುಷಾಣಿ ಕರ್ಮಾಣಿ ಯಸ್ಯೈತಾನಿ ಮಹಾತ್ಮನಃ |

ತೇನ ಸತ್ತ್ವವತಾ ಸಂಖ್ಯೇ ಶೂರೇಣಾಹವಶೋಭಿನಾ |
ಕೃತಿನಾ ಸಮರೇ ರಾಜನ್ ಸಂಧಿಸ್ತೇ ತಾತ ಯುಜ್ಯತಾಮ್ ॥42॥
ಎಲೈ ಪ್ರೀತಿಪಾತ್ರನೇ, ರಾಜನೇ, ಯಾವ ಮಹಾತ್ಮನು ಇಂತಹ ಅಮಾನುಷ ಕರ್ಮಗಳನ್ನು ಮಾಡುವನೋ ಅಂತಹ ಬಲಶಾಲಿಯಾದ, ಯುದ್ಧದಲ್ಲಿ ಶೂರನಾದ, ಯುದ್ಧದಲ್ಲಿ ಶೋಭಿಸುವ, ಯುದ್ಧದಲ್ಲಿ ಕುಶಲನಾದ ಅರ್ಜುನನ ಜೊತೆಯಲ್ಲಿ ನಿನಗೆ ಸಂಧಿ ಉಂಟಾಗಲಿ.
ಯಾವತ್ ಕೃಷ್ಣೋ ಮಹಾಬಾಹುಃ ಸ್ವಾಧೀನಃ ಕುರುಸಂಸದಿ |
ತಾವತ್ ಪಾರ್ಥೇನ ಶೂರೇಣ ಸಂಧಿಸ್ತೇ ತಾತ ಯುಜ್ಯತಾಮ್ ॥43॥
ಎಲೈ ಕುರುಶ್ರೇಷ್ಠನೇ, ಎಲ್ಲಿಯವರೆಗೆ ಮಹಾಬಾಹುವಾದ ಕೃಷ್ಣನು ಶೂರನಾದ ಅರ್ಜುನನಿಗೆ ಅಧೀನನಾಗಿರುತ್ತಾನೆಯೋ ಅಷ್ಟರೊಳಗೆ ಪ್ರೀತಿಪಾತ್ರನೇ ಸಂಧಿಯನ್ನು ಮಾಡಿಕೋ.
ಯಾವಚ್ಚಮೂಂ ನ ತೇ ಶೇಷಾಂ ಶರೈಃ ಸನ್ನತಪರ್ವಭಿಃ |
ನಾಶಯತ್ಯರ್ಜುನಸ್ತಾವತ್ ಸಂಧಿಸ್ತೇ ತಾತ ಯುಜ್ಯತಾಮ್ ॥44॥
ಎಲೈ ಪ್ರೀತಿಪಾತ್ರನೇ, ಅರ್ಜುನನು ಬಾಗಿದ ತುದಿಯುಳ್ಳ ತನ್ನ ಬಾಣಗಳಿಂದ ನಿನ್ನ ಉಳಿದ ಸೈನ್ಯವನ್ನು ನಾಶಮಾಡುವುದಕ್ಕಿಂತ ಮೊದಲೇ ಅವನ ಜೊತೆಯಲ್ಲಿ ಸಂಧಿಯನ್ನು ಮಾಡಿಕೋ.
ಯಾವತ್ ತಿಷ್ಠಂತಿ ಸಮರೇ ಹತಶೇಷಾಃ ಸಹೋದರಾಃ |
ನೃಪಾಶ್ಚ ಬಹವೋ ರಾಜನ್ ತಾವತ್ಸಂಧಿಃ ಪ್ರಯುಜ್ಯತಾಮ್ ॥45॥
ಎಲೈ ರಾಜನೇ, ಯುದ್ಧದಲ್ಲಿ ಹತರಾಗಿ ಉಳಿದ ನಿನ್ನ ಸಹೋದರರು ಮತ್ತು ಅನೇಕ ರಾಜರು ಇರುವಾಗಲೇ ನೀನು ಸಂಧಿಯನ್ನು ಮಾಡಿಕೋ.
ನ ನಿರ್ದಹತಿ ತೇ ಯಾವತ್ಕ್ರೋಧದೀಪ್ತೇಕ್ಷಣಶ್ಚಮೂಮ್ |
ಯುಧಿಷ್ಠಿರೋ ಹಿ ತಾವದ್ವೈ ಸಂಧಿಸ್ತೇ ತಾತ ಯುಜ್ಯತಾಮ್ ॥46॥
ಎಲೈ ಪ್ರೀತಿಪಾತ್ರನೇ, ಯುಧಿಷ್ಠಿರನು ಕೋಪಯುಕ್ತವಾದ ತನ್ನ ಕಣ್ಣುಗಳಿಂದ ನೋಡಿ ನಿನ್ನ ಸೈನ್ಯವನ್ನು ದಹಿಸುವುದಕ್ಕಿಂತ ಮೊದಲೇ ಸಂಧಿಯನ್ನು ಮಾಡಿಕೋ.
ನಕುಲಃ ಸಹದೇವಶ್ಚ ಭೀಮಸೇನಶ್ಚ ಪಾಂಡವಃ |
ಯಾವಚ್ಚಮೂಂ ಮಹಾರಾಜ ನಾಶಯಂತಿ ನ ಸರ್ವಶಃ |
ತಾವತ್ ತೇ ಪಾಂಡವೈಃ ಸಾರ್ಧಂ ಸೌಭ್ರಾತ್ರಂ ತಾತ ರೋಚತಾಮ್ ॥
ಎಲೈ ಪ್ರೀತಿಪಾತ್ರನೇ, ಮಹಾರಾಜನೇ, ನಕುಲ-ಸಹದೇವರು, ಪಾಂಡುಪುತ್ರನಾದ ಭೀಮಸೇನ ಇವರು ಎಲ್ಲ ಕಡೆಗಳಿಂದಲೂ ನಿನ್ನ ಸೈನ್ಯವನ್ನು ನಾಶಮಾಡುವುದಕ್ಕಿಂತ ಮೊದಲೇ ಪಾಂಡವರ ಜೊತೆಯಲ್ಲಿ ಒಳ್ಳೆಯ ಸಹೋದರಭಾವವನ್ನು ಬಯಸುವವನಾಗು.
ಯುದ್ಧಂ ಮದಂತಮೇವಾಸ್ತು ತಾತ ಸಂಶಾಮ್ಯ ಪಾಂಡವೈಃ |
ಏತತ್ ತೇ ರೋಚತಾಂ ವಾಕ್ಯಂ ಯದುಕ್ತೋಽಸಿ ಮಯಾನಘ |
ಏತತ್ಕ್ಷೇಮಮಹಂ ಮನ್ಯೇ ತವ ಚೈವ ಕುಲಸ್ಯ ಚ ॥48॥
ಪ್ರೀತಿಪಾತ್ರನೇ, ಯುದ್ಧವು ನನ್ನಲ್ಲಿಯೇ ಕೊನೆಯಾಗಲಿ. ಪಾಂಡವರ ಜೊತೆಯಲ್ಲಿ ಶಾಂತಿಯಿಂದಿರು. ಎಲೈ ಅನಘನೇ, ನಾನು ಹೇಳಿದ ಮಾತುಗಳು ನಿನಗೆ ಇಷ್ಟವಾಗಲಿ. ಇದರಿಂದ ನಿನಗೂ ಮತ್ತು ಕುಲಕ್ಕೂ ಕ್ಷೇಮವಾಗುವುದೆಂದು ಭಾವಿಸುತ್ತೇನೆ.
ತ್ಯಕ್ತ್ವಾ ಮನ್ಯುಮುಪಶಾಮ್ಯಸ್ವ ಪಾರ್ಥೈಃ
ಪರ್ಯಾಪ್ತಮೇತದ್ ಯತ್ಕೃತಂ ಫಲ್ಗುನೇನ |
ಭೀಷ್ಮಸ್ಯಾಂತಾದಸ್ತು ವಃ ಸೌಹೃದಂ ವಾ
ಸಂಪ್ರಶ್ಲೇಷಃ ಸಾಧು ರಾಜನ್ ಪ್ರಸೀದ ॥49॥
ಕೋಪವನ್ನು ಬಿಟ್ಟು ಪಾಂಡವರ ಜೊತೆಯಲ್ಲಿ ಶಾಂತಿಯನ್ನು ಹೊಂದು. ಅರ್ಜುನನು ಇದುವರೆಗೆ ಮಾಡಿರುವ ಈ ವಿನಾಶವು ಸಾಕು. ಭೀಷ್ಮನಾದ ನನ್ನ ಅಂತದಿಂದಾಗಿ ನಿಮಗೆ ಸೌಹಾರ್ದವೂ, ಪರಸ್ಪರ ಸಂಶ್ಲೇಷವೂ ಚೆನ್ನಾಗಿ ಉಂಟಾಗಲಿ. ರಾಜನೇ, ಪ್ರಸನ್ನನಾಗು.
ರಾಜ್ಯಸ್ಯಾರ್ಧಂ ದೀಯತಾಂ ಪಾಂಡವಾನಾಮ್
ಇಂದ್ರಪ್ರಸ್ಥಂ ಧರ್ಮರಾಜೋಽನುಶಾಸ್ತು |
ಮಾ ಮಿತ್ರಧ್ರುಕ್ ಪಾರ್ಥಿವಾನಾಂ ಜಘನ್ಯಃ
ಪಾಪಾಂ ಕೀರ್ತಿಂ ಪ್ರಾಪ್ಸ್ಯಸೇ ಕೌರವೇಂದ್ರ ॥50॥
ಪಾಂಡವರಿಗೆ ಅರ್ಧರಾಜ್ಯವನ್ನು ಕೊಡು. ಧರ್ಮರಾಜನು ಇಂದ್ರಪ್ರಸ್ಥವನ್ನು ಆಳಲಿ. ಮಿತ್ರದ್ರೋಹವನ್ನು ಮಾಡಿ ರಾಜರಲ್ಲಿ ನೀಚನಾಗಬೇಡ. ಎಲೈ ಕೌರವೇಂದ್ರನೇ, ಇಲ್ಲದಿದ್ದರೆ ನೀನು ಅಪಕೀರ್ತಿಯನ್ನು ಹೊಂದುವಿ.
ಮಮಾವಸಾನಾಚ್ಛಾಂತಿರಸ್ತು ಪ್ರಜಾನಾಂ
ಸಂಗಚ್ಛಂತಾಂ ಪಾರ್ಥಿವಾಃ ಪ್ರೀತಿಮಂತಃ |
ಪಿತಾ ಪುತ್ರಂ ಮಾತುಲಂ ಭಾಗಿನೇಯೋ
ಭ್ರಾತಾ ಚೈವ ಭ್ರಾತರಂ ಪ್ರೈತು ರಾಜನ್ ॥51॥
ನನ್ನ ಅವಸಾನದಿಂದ ಪ್ರಜೆಗಳಿಗೆ ಶಾಂತಿಯುಂಟಾಗಲಿ. ರಾಜರು ಸಂತೋಷದಿಂದ ಪರಸ್ಪರವಾಗಿ ಬೆರೆಯಲಿ. ಎಲೈ ರಾಜನೇ, ತಂದೆಯು ಮಗನನ್ನೂ ಸೋದರಳಿಯನು ಸೋದರಮಾವನನ್ನೂ, ಸಹೋದರನು ಸಹೋದರನನ್ನೂ ಸೇರಲಿ.
ನ ಚೇದೇವಂ ಪ್ರಾಪ್ತಕಾಲಂ ವಚೋ ಮೇ
ಮೋಹಾವಿಷ್ಟಃ ಪ್ರತಿಪತ್ಸ್ಯಸ್ಯಬುದ್ಧ್ಯಾ |

ಭೀಷ್ಮಸ್ಯಾಂತಾದೇತದಂತಾಃ ಸ್ಥ ಸರ್ವೇ
ಸತ್ಯಾಮೇತಾಂ ಭಾರತೀಮೀರಯಾಮಿ ॥52॥
ಮೋಹಾವಿಷ್ಟನಾಗಿ ನೀನು ಬುದ್ಧಿಯಿಲ್ಲದೆ ಈ ಕಾಲದಲ್ಲಿ ಅನುಸರಿಸಲು ಯೋಗ್ಯವಾದ ನನ್ನ ಮಾತನ್ನು ಸ್ವೀಕರಿಸದಿದ್ದರೆ ಭೀಷ್ಮರ ಅವಸಾನದಿಂದ ನಿಮ್ಮೆಲ್ಲರ ಅವಸಾನವೂ ಉಂಟಾಗುತ್ತದೆ. ನಾನು ಈ ಮಾತನ್ನು ಸತ್ಯವಾಗಿ ಹೇಳುತ್ತಿದ್ದೇನೆ.
ಏತದ್ ವಾಕ್ಯಂ ಸೌಹೃದಾದಾಪಗೇಯೋ
ಮಧ್ಯೇ ರಾಜ್ಞಾಂ ಭಾರತಂ ಶ್ರಾವಯಿತ್ವಾ |
ತೂಷ್ಣೀಮಾಸೀಚ್ಛಲ್ಯಸಂತಪ್ತಮರ್ಮಾ
ಯತ್ವಾತ್ಮಾನಂ ವೇದನಾಂ ಸನ್ನಿಗೃಹ್ಯ ॥53॥
ಗಂಗಾಸುತರಾದ ಭೀಷ್ಮರು ಎಲ್ಲ ರಾಜರ ಮಧ್ಯದಲ್ಲಿ ಈ ಮಾತುಗಳನ್ನು ದುರ್ಯೋಧನನಿಗೆ ಹೇಳಿ, ಬಾಣಗಳಿಂದ ಪೀಡಿತವಾದ ಮರ್ಮಗಳುಳ್ಳ ಅವರು ಪ್ರಯತ್ನಪೂರ್ವಕವಾಗಿ ತಮ್ಮ ವೇದನೆಯನ್ನು ಸಹಿಸಿಕೊಂಡು ಸುಮ್ಮನಾದರು.
ಧರ್ಮಾರ್ಥಸಂಹಿತಂ ವಾಕ್ಯಂ ಶ್ರುತ್ವಾ ಹಿತಮನಾಮಯಮ್ |
ನಾರೋಚಯತ ಪುತ್ರಸ್ತೇ ಮುಮೂರ್ಷುರಿವ ಭೇಷಜಮ್ ॥54॥
ಧರ್ಮಾರ್ಥಸಮ್ಮತವೂ, ಹಿತವೂ, ನಿರ್ದುಷ್ಟವೂ ಆದ ಅವರ ವಾಕ್ಯಗಳನ್ನು ಕೇಳಿ ನಿನ್ನ ಪುತ್ರನಾದ ದುರ್ಯೋಧನನು, ಮರಣವು ಸನ್ನಿಹಿತನಾದವನು ಔಷಧವನ್ನು ಇಷ್ಟಪಡದಂತೆ ಆ ಮಾತುಗಳನ್ನು ಇಷ್ಟಪಡಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ
ಅಷ್ಟದಶಾಧಿಕಶತತಮೋಽಧ್ಯಾಯಃ ॥
॥ ಭೀಷ್ಮವಧಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹದಿನೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹತ್ತೊಂಬತ್ತನೆಯ ಅಧ್ಯಾಯ
ಭೀಷ್ಮ-ಕರ್ಣರ ಸಮಾಗಮ ಮತ್ತು ಸಂವಾದ.
ಸಂಜಯಃ
ತತಸ್ತೇ ಪಾರ್ಥಿವಾಃ ಸರ್ವೇ ಜಗ್ಮುಃ ಸ್ವಾನಾಲಯಾನ್ ಪುನಃ |
ತೂಷ್ಣೀಂಭೂತೇ ಮಹಾರಾಜ ಭೀಷ್ಮೇ ಶಂತನುನಂದನೇ ॥1॥
ಸಂಜಯ ಎಲೈ ಮಹಾರಾಜನೇ, ಆಗ ಶಂತನುಪುತ್ರರಾದ ಭೀಷ್ಮರು ಸುಮ್ಮನಾಗುತ್ತಿರಲು ಎಲ್ಲ ರಾಜರೂ ಪುನಃ ತಮ್ಮ ಶಿಬಿರಗಳಿಗೆ ಹೋದರು.
ಶ್ರುತ್ವಾ ತು ನಿಹತಂ ಭೀಷ್ಮಂ ರಾಧೇಯಃ ಪುರುಷರ್ಷಭಃ |
ಈಷದಾಗತಸಂತ್ರಾಸಃ ತ್ವರಯೋಪಜಗಾಮ ಹ ॥2॥
ಭೀಷ್ಮರು ನಿಹತರಾದುದನ್ನು ಕೇಳಿ ಪುರುಷಶ್ರೇಷ್ಠನಾದ ಕರ್ಣನು ಸ್ವಲ್ಪ ಭಯವನ್ನು ಹೊಂದಿ ತ್ವರೆಯಿಂದ ಅಲ್ಲಿಗೆ ಬಂದನು.
ಸ ದದರ್ಶ ಮಹಾತ್ಮಾನಂ ಶರತಲ್ಪಗತಂ ತದಾ |
ಜನ್ಮಶಯ್ಯಾಗತಂ ದೇವಂ ಕಾರ್ತ್ತಿಕೇಯಮಿವ ಪ್ರಭುಮ್ ॥3॥
ಅವನು ಜನ್ಮಕಾಲದ ತೊಟ್ಟಿಲಿನಲ್ಲಿ ಮಲಗಿದ ಷಣ್ಮುಖನಂತಿದ್ದ, ಪ್ರಭುವೂ, ವೀರರೂ, ಮಹಾತ್ಮರೂ ಆದ ಭೀಷ್ಮರು ಶರತಲ್ಪದಲ್ಲಿ ಇದ್ದುದನ್ನು ನೋಡಿದನು.
ನಿಮೀಲಿತಾಕ್ಷಂ ತಂ ವೀರಂ ಸಾಶ್ರುಕಂಠಸ್ತದಾ ವೃಷಃ |
ಅಭ್ಯೇತ್ಯ ಪಾದಯೋಸ್ತಸ್ಯ ನಿಪಪಾತ ಮಹಾದ್ಯುತಿಃ ॥4॥
ಮಹಾದ್ಯುತಿಯುಳ್ಳ ಕರ್ಣನು ಅವರ ಸಮೀಪಕ್ಕೆ ಬಂದು, ಅಶ್ರುಸಹಿತವಾದ ಕಂಠದಿಂದ ಕಣ್ಣನ್ನು ಮುಚ್ಚಿದ ಆ ವೀರರ ಪಾದದ ಮೇಲೆ ಬಿದ್ದನು.
ರಾಧೇಯೋಽಹಂ ಕುರುಶ್ರೇಷ್ಠ ನಿತ್ಯಂ ಚಾಕ್ಷಿಗತಸ್ತವ |
ದ್ವೇಷ್ಯೋಽತ್ಯಂತಮನಾಗಾಃ ಸನ್ನಿತಿ ಚೈನಮುವಾಚ ಹ ॥5॥
ಎಲೈ ಕುರುಶ್ರೇಷ್ಠರೇ, ನಾನು ರಾಧೇಯನಾದ ಕರ್ಣ. ಯಾವಾಗಲೂ ನಿನ್ನ ಕಣ್ಣೆದುರಿನಲ್ಲಿ ಇರುವವನು. ನಿರಪರಾಧಿಯಾದರೂ ನಿನ್ನ ದ್ವೇಷಕ್ಕೆ ಗುರಿಯಾದವನು ಎಂದು ಅವರನ್ನು ಕುರಿತು ಹೇಳಿದನು.
ತಚ್ಛ್ರುತ್ವಾ ಕುರುವೃದ್ಧಃ ಸ ಶರೈಃ ಸಂವೃತ್ತಲೋಚನಃ |
ಶನೈರುದ್ವೀಕ್ಷ್ಯ ಸಸ್ನೇಹಮಿದಂ ವಚನಮಬ್ರವೀತ್ ॥6॥
ಅದನ್ನು ಕೇಳಿದ ಕುರುವೃದ್ಧರಾದ ಭೀಷ್ಮರು ಬಾಣದ ಹೊಡೆತಗಳಿಂದ ಮುಚ್ಚಿದ ಕಣ್ಣುಗಳನ್ನು ನಿಧಾನವಾಗಿ ಸ್ವಲ್ಪ ತೆಗೆದು ಸ್ನೇಹಪೂರ್ವಕವಾಗಿ ಮಾತನಾಡಿದರು.
ಏಹ್ಯೇಹಿ ಮೇ ವಿಪ್ರತೀಪ ಸ್ಪರ್ಧಸೇ ತ್ವಂ ಮಯಾ ಸಹ |
ರಹಿತಂ ಧಿಷ್ಣ್ಯಮಾಲೋಕ್ಯ ಸಮುತ್ಸಾರ್ಯ ಚ ರಕ್ಷಿಣಃ |
ಪಿತೇವ ಪುತ್ರಂ ಗಾಂಗೇಯಃ ಪರಿಷ್ವಜ್ಯೈಕಬಾಹುನಾ ॥7॥
ನನ್ನ ವಿರೋಧಿಯೇ, ಬಾ, ಬಾ. ಯಾವಾಗಲೂ ನನ್ನ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತೀಯೆ ಎಂದು ಹೇಳಿ, ಆ ಸ್ಥಾನವು

ಶೂನ್ಯವಾಗಿರುವುದನ್ನು ನೋಡಿ ಕಾವಲುಗಾರನನ್ನು ದೂರ ಸರಿಸಿ ತಂದೆಯು ಮಗನನ್ನು ಆಲಿಂಗಿಸಿದಂತೆ ಭೀಷ್ಮರು ಒಂದೇ ಬಾಹುವಿನಿಂದ ಅವನನ್ನು ಆಲಿಂಗಿಸಿದರು.
ಯದಿ ಮಾಂ ನಾಭಿಗಚ್ಛೇಥಾ ನ ತೇ ಶ್ರೇಯೋ ಭವೇದ್ ಧ್ರುವಮ್ ॥
ಕೌಂತೇಯಸ್ತ್ವಂ ನ ರಾಧೇಯೋ ವಿದಿತೋ ನಾರದಾನ್ಮಮ |
ಕೃಷ್ಣದ್ವೈಪಾಯನಾಚ್ಚೈವ ಕೇಶವಾಚ್ಚ ನ ಸಂಶಯಃ ॥9॥
ನೀನು ನನ್ನ ಬಳಿಗೆ ಬರದಿದ್ದರೆ ಖಂಡಿತವಾಗಿ ನಿನಗೆ ಶ್ರೇಯಸ್ಸಾಗುತ್ತಿರಲಿಲ್ಲ. ನೀನು ಕುಂತಿಯ ಪುತ್ರ. ರಾಧೆಯ ಮಗನಲ್ಲ. ಇದನ್ನು ನಾನು ನಾರದರಿಂದಲೂ, ಕೃಷ್ಣದ್ವೈಪಾಯನರಿಂದಲೂ, ಕೃಷ್ಣನಿಂದಲೂ ತಿಳಿದಿದ್ದೇನೆ. ಈ ವಿಷಯದಲ್ಲಿ ಸಂಶಯವಿಲ್ಲ.
ನ ಚ ದ್ವೇಷೋಽಸ್ತಿ ಮೇ ತಾತ ತ್ವಯಿ ಸತ್ಯಂ ಬ್ರವೀಮಿ ತೇ |
ತೇಜೋವಧನಿಮಿತ್ತಂ ತು ಪರುಷಾಣ್ಯಹಮುಕ್ತವಾನ್ ॥10॥
ಎಲೈ ಪ್ರೀತಿಪಾತ್ರನೇ, ನನಗೆ ನಿನ್ನಲ್ಲಿ ದ್ವೇಷವಿಲ್ಲ. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ. ನಿನ್ನ ತೇಜೋವಧೆಯನ್ನು ಮಾಡುವ ಸಲುವಾಗಿ ನಾನು ಉಗ್ರವಾದ ಮಾತುಗಳನ್ನು ಆಡಿದೆ.
ಅಕಸ್ಮಾತ್ ಪಾಂಡವಾನ್ ಹಿ ತ್ವಂ ದ್ವಿಷಸೀತಿ ಮತಿರ್ಮಮ |
ಯೇನಾಸಿ ಬಹುಶೋ ರೂಕ್ಷಂ ಚೋದಿತಃ ಸೂರ್ಯನಂದನ ॥11॥
ನೀನು ನಿಷ್ಕಾರಣವಾಗಿ ಪಾಂಡವರನ್ನು ದ್ವೇಷಿಸುತ್ತಿದ್ದೀಯೆ ಎಂದು ನನ್ನ ಅಭಿಪ್ರಾಯ. ಎಲೈ ಸೂರ್ಯನಂದನನೇ, ಆ ಕಾರಣದಿಂದಾಗಿ ನೀನು ಅನೇಕ ಬಾರಿ ನನ್ನಿಂದ ಉಗ್ರವಾದ ವಚನಗಳನ್ನು ಕೇಳಿದ್ದೀಯೆ.
ಜಾನಾಮಿ ಸಮರೇ ವೀರ್ಯಂ ಶತ್ರುಭಿರ್ದುಃಸಹಂ ತವ |
ಬ್ರಹ್ಮಣ್ಯತಾಂ ಚ ಶೌರ್ಯಂ ಚ ದಾನೇ ಚ ಪರಮಾಂ ಗತಿಮ್ ॥12॥
ಶತ್ರುಗಳಿಗೆ ಸಹಿಸಲು ಅಸಾಧ್ಯವಾದ ನಿನ್ನ ಯುದ್ಧಪರಾಕ್ರಮವನ್ನೂ, ಬ್ರಾಹ್ಮಣ ವಾತ್ಸಲ್ಯವನ್ನೂ, ಶೌರ್ಯವನ್ನೂ, ದಾನದಲ್ಲಿ ಪರಮಶ್ರದ್ಧೆಯನ್ನೂ ನಾನು ತಿಳಿದಿದ್ದೇನೆ.
ನ ತ್ವಯಾ ಸದೃಶಃ ಕಶ್ಚಿತ್ಪುರುಷೇಷ್ವಮರೋಪಮ |
ಕುಲಭೇದಂ ಚ ಮತ್ವಾಹಂ ಸದಾ ಪರುಷಮುಕ್ತವಾನ್ ॥13॥
ಎಲೈ ದೇವತೆಯಂತೆ ಇರುವವನೇ, ನಿನಗೆ ಸದೃಶನಾದ ಪುರುಷನು ಯಾವನೂ ಇಲ್ಲ. ಕುಲಭೇದವಾಗಬಾರದು ಎಂದು ಚಿಂತಿಸಿ ನಾನು ಯಾವಾಗಲೂ ಕ್ರೂರವಾದ ಮಾತುಗಳನ್ನಾಡಿದೆ.
ಇಷ್ವಸ್ತ್ರೇ ಭಾರಸಂಧಾನೇ ಲಾಘವೇಽಸ್ತ್ರಬಲೇ ತಥಾ |
ಸದೃಶಃ ಫಲ್ಗುನೇನಾಸಿ ಕೃಷ್ಣೇನ ಚ ಮಹಾತ್ಮನಾ ॥14॥
ಬಾಣಗಳನ್ನು ಪ್ರಯೋಗಿಸುವುದರಲ್ಲಿಯೂ, ಗುರುತರವಾದ ಕಾರ್ಯವನ್ನು ಮಾಡುವುದರಲ್ಲಿಯೂ, ಕ್ಷಿಪ್ರತೆಯಲ್ಲಿಯೂ, ಅಸ್ತ್ರದ ಬಲದಲ್ಲಿಯೂ ನೀನು ಅರ್ಜುನನಿಗೂ, ಮಹಾತ್ಮನಾದ ಕೃಷ್ಣನಿಗೂ ಸದೃಶನಾಗಿದ್ದೀಯೆ.
ಕರ್ಣ ಕಾಶಿಪುರಂ ಗತ್ವಾ ತ್ವಯೈಕೇನ ಧನುಷ್ಮತಾ |
ತಸ್ಯಾರ್ಥೇ ಕುರುರಾಜಸ್ಯ ರಾಜಾನೋ ಮೃದಿತಾ ಯುಧಿ ॥15॥
ಎಲೈ ಕರ್ಣನೇ, ಕುರುರಾಜನಾದ ದುರ್ಯೋಧನನ ಸಲುವಾಗಿ ನೀನು ಧನುರ್ಧಾರಿಯಾಗಿ ಒಬ್ಬನೇ ಕಾಶೀಪಟ್ಟಣಕ್ಕೆ ಹೋಗಿ ಯುದ್ಧದಲ್ಲಿ ಅನೇಕ ರಾಜರನ್ನು ಮರ್ದಿಸಿದೆ.
ತಥಾ ಚ ಬಲವಾನ್ ರಾಜಾ ಜರಾಸಂಧೋ ದುರಾಸದಃ |
ಸಮರೇ ಸಮರಶ್ಲಾಘೀ ತ್ವಯಾ ನ ಸದೃಶೋಽಭವತ್ ॥16॥
ಹಾಗೆಯೇ ಯಾರೂ ಸಮೀಪದಲ್ಲಿ ಸುಳಿಯಲು ಅಸಾಧ್ಯನಾದ, ಬಲಿಷ್ಠನಾದ, ಯಾವಾಗಲೂ ಯುದ್ಧವನ್ನು ಪ್ರಶಂಸಿಸುವ ಜರಾಸಂಧರಾಜನೂ ನಿನಗೆ ಸದೃಶನಾಗಲಿಲ್ಲ.
ಬ್ರಹ್ಮಣ್ಯಃ ಸತ್ಯವಾದೀ ಚ ತೇಜಸಾಽರ್ಕ ಇವಾಪರಃ |
ದೇವಗರ್ಭೋಽಜಿತಃ ಸಂಖ್ಯೇ ಮನುಷ್ಯೈರಧಿಕೋ ಭುವಿ ॥17॥
ನೀನು ಬ್ರಾಹ್ಮಣ ವತ್ಸಲನಾದವನು, ಸತ್ಯವಚನನು ಮತ್ತು ದೀಪ್ತಿಯಿಂದ ಇನ್ನೊಬ್ಬ ಸೂರ್ಯನಂತೆ ಇರುವವನು. ದೇವತೆಯಿಂದ ಜನಿಸಿದವನು, ಯುದ್ಧದಲ್ಲಿ ಅಪರಾಜಿತನು ಮತ್ತು ಭೂಮಿಯಲ್ಲಿರುವ ಎಲ್ಲ ಮನುಷ್ಯರಿಗಿಂತಲೂ ಶ್ರೇಷ್ಠನಾದವನು.
ವ್ಯಪನೀತೋಽದ್ಯ ಮನ್ಯುರ್ಮೇ ಯಸ್ತತ್ವಂ ಪ್ರತಿ ಪುರಾ ಕೃತಃ |
ದೈವಂ ಪುರುಷಕಾರೇಣ ನ ಶಕ್ಯಮತಿವರ್ತಿತುಮ್ ॥18॥
ನಿನ್ನ ಮೇಲೆ ನನಗೆ ಹಿಂದೆ ಇದ್ದ ಕೋಪವು ಈ ದಿನ ಹೊರಟುಹೋಗಿದೆ. ದೈವಸಂಕಲ್ಪವನ್ನು ಪುರುಷ ಪ್ರಯತ್ನದಿಂದ ಮೀರಲು ಸಾಧ್ಯವಿಲ್ಲ.
ಸೋದರ್ಯಾಃ ಪಾಂಡವಾ ವೀರಾ ಭ್ರಾತರಸ್ತೇಽರಿಸೂದನ |
ಸಂಗಚ್ಛ ತೈರ್ಮಹಾಬಾಹೋ ಮಮ ಚೇದಿಚ್ಛಸಿ ಪ್ರಿಯಮ್ ॥19॥
ಎಲೈ ವೀರನೇ, ಶತ್ರುಸೂದನನೇ, ವೀರರಾದ ಪಾಂಡವರು ನಿನ್ನ ಸಹೋದರರು. ಎಲೈ ಮಹಾಬಾಹುವೇ, ನನಗೆ ನೀನು ಪ್ರಿಯವನ್ನು ಮಾಡಲು ಬಯಸುವುದಾದರೆ ಅವರ ಜೊತೆಯಲ್ಲಿ ಸ್ನೇಹ ಸಮಾಗಮವನ್ನು ಹೊಂದು.
ಮಯಾ ಭವತು ನಿರ್ವೃತ್ತಂ ವೈರಮಾದಿತ್ಯನಂದನ |
ಪೃಥಿವ್ಯಾಂ ಸರ್ವರಾಜಾನೋ ಭವಂತ್ವದ್ಯ ನಿರಾಮಯಾಃ ॥20॥
ಎಲೈ ಸೂರ್ಯನಂದನನೇ, ನನ್ನ ಜೊತೆಯಲ್ಲಿಯೇ ಈ ವೈರವು ಕೊನೆಗೊಳ್ಳಲಿ. ಭೂಮಿಯಲ್ಲಿರುವ ಎಲ್ಲ ರಾಜರೂ ಈ ದಿನ

ನಿಶ್ಚಿಂತೆಯಿಂದ ಇರಲಿ.
ಕರ್ಣಃ
ಜಾನಾಮ್ಯಹಂ ಮಹಾಪ್ರಾಜ್ಞ ಸರ್ವಮೇತನ್ನ ಸಂಶಯಃ |
ಯಥಾ ವದಸಿ ದುರ್ಧರ್ಷ ಕೌಂತೇಯೋಽಹಂ ನ ಸೂತಜಃ |
ವಸುದೇವಸುತೋ ಯದ್ವತ್ ಪಾಂಡವಾಯ ದೃಢವ್ರತಃ ||21||
ಕರ್ಣ ಮಹಾಪ್ರಾಜ್ಞರೇ, ಇದೆಲ್ಲವನ್ನೂ ನಾನು ತಿಳಿದಿದ್ದೇನೆ. ಇದರಲ್ಲಿ ಸಂಶಯವಿಲ್ಲ. ಎಲೈ ದುರ್ಧರ್ಷರೇ, ನೀವು ಹೇಳುವಂತೆ ನಾನು ಕುಂತೀಪುತ್ರ, ಸೂತಪುತ್ರನಲ್ಲ. ವಸುದೇವ ಸುತನಾದ ಕೃಷ್ಣನು ಪಾಂಡವರ ಹಿತದಲ್ಲಿ ದೃಢ ದೀಕ್ಷೆಯನ್ನು ಹೊಂದಿದಂತೆ (ನಾನು ದುರ್ಯೋಧನನ ಹಿತದಲ್ಲಿ ದೀಕ್ಷೆಯನ್ನು ಹೊಂದಿದ್ದೇನೆ).
ಅವಕೀರ್ಣಸ್ತ್ವಹಂ ಕುಂತ್ಯಾ ಸೂತೇನ ಚ ವಿವರ್ಧಿತಃ |
ಭುಕ್ತ್ವಾ ದುರ್ಯೋಧನೈಶ್ವರ್ಯಂ ನ ಮಿಥ್ಯಾ ಕರ್ತುಮುತ್ಸಹೇ ||22||
ನಾನು ಕುಂತಿಯಿಂದ ಪರಿತ್ಯಾಗ ಮಾಡಲ್ಪಟ್ಟು ಸೂತನಿಂದ ಬೆಳೆಸಲ್ಪಟ್ಟೆ. ದುರ್ಯೋಧನನ ಐಶ್ವರ್ಯವನ್ನು ಭೋಗಿಸಿ ಈಗ ಅದನ್ನು ಸುಳ್ಳು ಮಾಡಲಾರೆ.
ವಸು ಚೈವ ಶರೀರಂ ಚ ಯದುದಾರಂ ತಥಾ ಯಶಃ |
ಸರ್ವಂ ದುರ್ಯೋಧನಸ್ಯಾರ್ಥೇ ತ್ಯಕ್ತಂ ಮೇ ಭೂರಿದಕ್ಷಿಣ ||23||
ಎಲೈ ಭೂರಿದಕ್ಷಿಣರೇ, ನನ್ನ ಸಂಪತ್ತು, ನನ್ನ ಶರೀರ, ನನ್ನ ಅಪಾರವಾದ ಕೀರ್ತಿ ಎಲ್ಲವನ್ನೂ ನಾನು ದುರ್ಯೋಧನನ ಸಲುವಾಗಿ ತ್ಯಾಗ ಮಾಡಿದ್ದೇನೆ.
ಮಾ ಚೈತದ್ ವ್ಯಾಧಿಮರಣಂ ಕ್ಷತ್ರಂ ಸ್ಯಾದಿತಿ ಕೌರವ |
ಕೋಪಿತಾಃ ಪಾಂಡವಾ ನಿತ್ಯಂ ಮಯಾಽಽಶ್ರಿತ್ಯ ಸುಯೋಧನಮ್ ||
ಎಲೈ ಕೌರವರೇ, ಕ್ಷತ್ರಿಯರಿಗೆ ವ್ಯಾಧಿಯಿಂದ ಮರಣವುಂಟಾಗುವುದು ಬೇಡ ಎಂದು ಉದ್ದೇಶಿಸಿ, ನಾನು ಸುಯೋಧನನನ್ನು ಆಶ್ರಯಿಸಿ, ಯಾವಾಗಲೂ ಪಾಂಡವರಿಗೆ ಕೋಪವನ್ನು ಉಂಟುಮಾಡಿದೆ.
ಅವಶ್ಯಭಾವೀ ವೈ ಯೋಽರ್ಥೋ ನ ಸ ಶಕ್ಯೋ ನಿವರ್ತಿತುಮ್ |
ದೈವಂ ಪುರುಷಕಾರೇಣ ಕೋ ನಿವರ್ತಿತುಮುತ್ಸಹೇತ್ ||25||
ಅವಶ್ಯವಾಗಿ ನಡೆಯಲೇಬೇಕಾದ ಕಾರ್ಯವನ್ನು ಬದಲಾಯಿಸಲು ಸಾಧ್ಯವಿಲ್ಲ. ದೈವ ಸಂಕಲ್ಪವನ್ನು ಪುರುಷಪ್ರಯತ್ನದಿಂದ ಯಾವನು ತಡೆದಾನು?
ಪೃಥಿವೀಕ್ಷಯಶಂಸೀನಿ ನಿಮಿತ್ತಾನಿ ಪಿತಾಮಹ |
ಭವದ್ಭಿರುಪಲಬ್ಧಾನಿ ಕಥಿತಾನಿ ಚ ಸಂಸದಿ ||26||
ಎಲೈ ಪಿತಾಮಹರೇ, ಪೃಥ್ವಿಯ ಕ್ಷಯವನ್ನು ಸೂಚಿಸುವ ಅಪಶಕುನಗಳನ್ನು ನೀವು ನೋಡಿದ್ದೀರಿ ಮತ್ತು ಸಭೆಯಲ್ಲಿ ಹೇಳಿದ್ದೀರಿ.
ಪಾಂಡವಾ ವಾಸುದೇವಶ್ಚ ವಿದಿತಾ ಮಮ ಸರ್ವಶಃ |
ಅಜೇಯಾಃ ಪುರುಷೈರನ್ಯೈರಿತಿ ತಾಂಶ್ಚೋತ್ಸಹಾಮಹೇ ||27||
ಪಾಂಡವರನ್ನು ಮತ್ತು ಕೃಷ್ಣನನ್ನು ನಾನು ಎಲ್ಲ ರೀತಿಯಿಂದಲೂ ತಿಳಿದಿದ್ದೇನೆ. ಅವರು ಬೇರೆ ಯಾವ ಪುರುಷರಿಂದಲೂ ಅಜೇಯರು ಎಂದು ತಿಳಿದೂ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತೇನೆ.
ವಿಜಯಿಷ್ಯೇ ರಣೇ ಪಾಂಡೂನಿತಿ ಮೇ ನಿಶ್ಚಿತಂ ಮನಃ |
ನ ಚೇಚ್ಛಕ್ಯಮವಸ್ರಷ್ಟುಂ ವೈರಮೇತತ್ ಸುದಾರುಣಮ್ |
ಧನಂಜಯೇನ ಯೋತ್ಸ್ಯೇಽಹಂ ಸ್ವಧರ್ಮಪ್ರೀತಿಮಾನಸಃ ||28||
ಪಾಂಡವರನ್ನು ಯುದ್ಧದಲ್ಲಿ ಗೆಲ್ಲುವೆನು, ಇದು ನನ್ನ ನಿಶ್ಚಿತವಾದ ಅಭಿಪ್ರಾಯ. ಈ ಘೋರವಾದ ವೈರವನ್ನು ಪರಿತ್ಯಾಗ ಮಾಡುವುದು ಅಶಕ್ಯವಾದರೆ ನಾನು ನನ್ನ ಕ್ಷತ್ರಿಯಧರ್ಮದಲ್ಲಿಯೇ ಪ್ರೀತಿಯುಳ್ಳ ಮನಸ್ಸಿನಿಂದ ಅರ್ಜುನನ ಜೊತೆಯಲ್ಲಿ ಯುದ್ಧ ಮಾಡುವೆನು.
ಅನುಜಾನೀಷ್ವ ಮಾಂ ತಾತ ಯುದ್ಧೇ ಪ್ರೀತಮನಾಃ ಸದಾ |
ಅನುಜ್ಞಾತಸ್ತ್ವಯಾ ವೀರ ಯುಧ್ಯೇಯಮಿತಿ ಮೇ ಮತಿಃ ||29||
ಯುದ್ಧದಲ್ಲಿ ಯಾವಾಗಲೂ ಪ್ರೀತಿಯುಳ್ಳ ತಂದೆಯೇ, ನನಗೆ ಅನುಮತಿಯನ್ನು ನೀಡಿ. ಎಲೈ ವೀರರೇ, ನಿಮ್ಮಿಂದ ಅನುಮತಿಯನ್ನು ಪಡೆದು ಯುದ್ಧವನ್ನು ಮಾಡುವೆನು ಎಂದು ನನ್ನ ಅಭಿಪ್ರಾಯ.
ದುರುಕ್ತಂ ವಿಪ್ರತೀಪಂ ವಾ ಸಂರಂಭಾಚ್ಚಾಪಲಾತ್ ತಥಾ |
ಯನ್ಮಯಾಽಪಕೃತಂ ಕಿಂಚಿತ್ ತದನುಕ್ಷಂತುಮರ್ಹಸಿ ||30||
ನಾನು ಕೋಪದಿಂದ ಅಥವಾ ಚಾಪಲ್ಯದಿಂದ ಯಾವ ಕೆಟ್ಟ ಮಾತುಗಳನ್ನು, ವಿರೋಧ ಮಾತುಗಳನ್ನು ಆಡಿ ಸ್ವಲ್ಪ ಅಪಕಾರವನ್ನು ಮಾಡಿದ್ದೇನೆಯೋ ಅದನ್ನು ನೀವು ಕ್ಷಮಿಸಬೇಕು.
ಭೀಷ್ಮಃ
ನ ಚೇಚ್ಛಕ್ಯಮಥೋತ್ಸ್ರಷ್ಟುಂ ವೈರಮೇತತ್ಸುದಾರುಣಮ್ |
ಅನುಜಾನಾಮಿ ಕರ್ಣ ತ್ವಾಂ ಯುಧ್ಯಸ್ವ ಸ್ವರ್ಗಕಾಮ್ಯಯಾ ||31||
ಭೀಷ್ಮ ಎಲೈ ಕರ್ಣನೇ, ಈ ದಾರುಣವಾದ ವೈರವನ್ನು ಪರಿತ್ಯಾಗ ಮಾಡುವುದು ಅಶಕ್ಯವಾದರೆ ನಿನಗೆ ಅನುಮತಿಯನ್ನು ನೀಡುತ್ತಿದ್ದೇನೆ. ಸ್ವರ್ಗವನ್ನು ಬಯಸಿ ಯುದ್ಧವನ್ನು ಮಾಡು.

ವಿಮನ್ಯುರ್ಗತಸಂರಂಭಃ ಕುರು ಕರ್ಮ ನೃಪಸ್ಯ ಹಿ |
ಯಥಾಶಕ್ತಿ ಯಥೋತ್ಸಾಹಂ ಸತಾಂ ವೃತ್ತೇಷು ವೃತ್ತವಾನ್ ||32||
ಕ್ರೋಧವನ್ನು ತಡೆದು, ನಿನ್ನ ಶಕ್ತಿಗೆ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ಸಜ್ಜನರ ಮಾರ್ಗದಲ್ಲಿ ನಡೆಯುತ್ತಾ ದುರ್ಯೋಧನನಿಗೆ ಉಪಕಾರವನ್ನು ಮಾಡು.
ಅಹಂ ತ್ವಾಮನುಜಾನಾಮಿ ಯದಿಚ್ಛಸಿ ತದಾಪ್ನುಹಿ |
ಕ್ಷತ್ರಧರ್ಮಜಿತಾನ್ ಲೋಕಾನ್ ಸಂಪ್ರಾಪ್ಸ್ಯಸಿ ನ ಸಂಶಯಃ ||33||
ನಾನು ನಿನಗೆ ಅನುಮತಿಯನ್ನು ನೀಡುತ್ತಿದ್ದೇನೆ. ನೀನು ಏನನ್ನು ಬಯಸುತ್ತೀಯೋ ಅದನ್ನು ಪಡೆಯುವವನಾಗು. ನೀನು ಕ್ಷತ್ರಿಯಧರ್ಮದಿಂದ ಸಂಪಾದಿಸಿದ ಲೋಕಗಳನ್ನು ಹೊಂದುವಿ, ಇದರಲ್ಲಿ ಸಂಶಯವಿಲ್ಲ.
ಯುಧ್ಯಸ್ವ ನಿರಹಂಕಾರೋ ಬಲವೀರ್ಯವ್ಯಪಾಶ್ರಯಃ |
ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ||
ಅಹಂಕಾರವನ್ನು ತೊರೆದು, ನಿನ್ನ ಬಲ-ವೀರ್ಯಗಳನ್ನು ಅವಲಂಬಿಸಿ ಯುದ್ಧವನ್ನು ಮಾಡು. ಕ್ಷತ್ರಿಯನಿಗೆ ಯುದ್ಧಕ್ಕಿಂತ ದೊಡ್ಡದಾದ ಶ್ರೇಯಸ್ಕರವಾದ ಧರ್ಮವು ಇನ್ನೊಂದು ಇರುವುದಿಲ್ಲ.
ಪ್ರಶಮೇ ಹಿ ಕೃತೋ ಯತ್ನಃ ಸುಚಿರಾತ್ ಸುಚಿರಂ ಮಯಾ |
ನ ಚೈವ ಶಕ್ಯಿತಃ ಕರ್ತುಂ ಯತೋ ಧರ್ಮಸ್ತತೋ ಜಯಃ ||35||
ನಾನು ಬಹಳ ಬಹಳ ಸಮಯದವರೆಗೆ ಸಂಧಿಗಾಗಿ ಪ್ರಯತ್ನವನ್ನು ಮಾಡಿದೆ. ಆದರೆ ಅದು ನನ್ನಿಂದ ಸಾಧ್ಯವಾಗಲಿಲ್ಲ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಿದೆ.
ಸಂಜಯಃ
ಏವಂ ಬ್ರುವಂತಂ ಗಾಂಗೇಯಮಭಿವಾದ್ಯ ಪ್ರಸಾದ್ಯ ಚ |
ರಾಧೇಯೋ ರಥಮಾರುಹ್ಯ ಪ್ರಾಯಾತ್ ತವ ಸುತಂ ಪ್ರತಿ ||36||
ಹೀಗೆ ಮಾತನಾಡಿದ ಭೀಷ್ಮರನ್ನು ಕರ್ಣನು ನಮಸ್ಕರಿಸಿ, ಪ್ರಸನ್ನಗೊಳಿಸಿ, ರಥವನ್ನೇರಿ ನಿನ್ನ ಪುತ್ರನ ಬಳಿಗೆ ಹೊರಟನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ
ಏಕೋನವಿಂಶಾಧಿಕಶತತಮೋಽಧ್ಯಾಯಃ ||
|| ಭೀಷ್ಮವಧಪರ್ವಣಿ ಏಕೋನಾಶೀತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
||ಸಮಾಪ್ತಂ ಭೀಷ್ಮವಧಪರ್ವ ||

|| ಸಮಾಪ್ತಂ ಭೀಷ್ಮಪರ್ವ ||
||ಶ್ರೀಮಧ್ವೇಶಾರ್ಪಣಮಸ್ತು ||
* * * * *

ಮಹಾಭಾರತ - ದ್ರೋಣಪರ್ವ
1. ದ್ರೋಣಾಭಿಷೇಕಪರ್ವ
ಒಂದನೆಯ ಅಧ್ಯಾಯ
ಭೀಷ್ಮಪಾತಾನಂತರ ನಡೆದ ಯುದ್ಧವಿಷಯದಲ್ಲಿ ಧೃತರಾಷ್ಟ್ರನ ಪ್ರಶ್ನೆ
ಮತ್ತು ಸಂಜಯನ ಉತ್ತರ.
ಜನಮೇಜಯಃ
ತಮಪ್ರತಿಮಸತ್ತ್ವೌಜೋಬಲವೀರ್ಯಪರಾಕ್ರಮಮ್ |
ಹತಂ ದೇವವ್ರತಂ ಶ್ರುತ್ವಾ ಪಾಂಚಾಲ್ಯೇನ ಶಿಖಂಡಿನಾ || 1 ||
ಧೃತರಾಷ್ಟ್ರಸ್ತದಾ ರಾಜಾ ಬಾಷ್ಪವ್ಯಾಕುಲಲೋಚನಃ |
ಕಿಮಚೇಷ್ಟತ ವಿಪ್ರರ್ಷೇ ಹತೇ ಪಿತರಿ ವೀರ್ಯವಾನ್ || 2 ||
ಜನಮೇಜಯ ಅಸದೃಶವಾದ ಸಾಮರ್ಥ್ಯ, ಬಲ, ಶೌರ್ಯ ಮತ್ತು ಪರಾಕ್ರಮಗಳನ್ನುಳ್ಳ ದೇವವ್ರತರು (ಭೀಷ್ಮರು) ಪಾಂಚಾಲದೇಶದ ಶಿಖಂಡಿಯಿಂದ ಹತರಾದುದನ್ನು ಕೇಳಿ ಎಲೈ ವಿಪ್ರರ್ಷಿಗಳೇ, ಬಾಷ್ಪಪೂರಿತ ಲೋಚನನೂ, ಪರಾಕ್ರಮಶಾಲಿಯೂ ಆದ ಧೃತರಾಷ್ಟ್ರನು ತಂದೆಯು ಹತನಾಗುತ್ತಿರಲು ಏನು ಮಾಡಿದನು?
ಯಸ್ಯ ಪುತ್ರೋ ಹಿ ಭಗವನ್ ಭೀಷ್ಮದ್ರೋಣಮುಖ್ಯೈ ರಥೈಃ |
ಪರಾಜಿತ್ಯ ಮಹೇಷ್ವಾಸಾನ್ ಪಾಂಡವಾನ್ ರಾಜ್ಯಮಿಚ್ಛತಿ || 3 ||
ತಸ್ಮಿನ್ ಹತೇ ತು ಭಗವನ್ ಕೇತೌ ಸರ್ವಧನುಷ್ಮತಾಮ್ |
ಯದಚೇಷ್ಟತ ಕೌರವ್ಯಃ ತನ್ಮೇ ಬ್ರೂಹಿ ದ್ವಿಜೋತ್ತಮ || 4 ||
ಪೂಜ್ಯರೇ, ಬ್ರಾಹ್ಮಣಶ್ರೇಷ್ಠರೇ, ಯಾವನ ಪುತ್ರನು ಭೀಷ್ಮ-ದ್ರೋಣ ಮೊದಲಾದ ಮಹಾರಥರ ಸಹಾಯದಿಂದ ಮಹಾಧನುರ್ಧಾರಿಗಳಾದ ಪಾಂಡವರನ್ನು ಸೋಲಿಸಿ ರಾಜ್ಯವನ್ನು ಬಯಸುತ್ತಾನೆಯೋ ಅಂತಹ ಕೌರವ್ಯನಾದ ಧೃತರಾಷ್ಟ್ರನು

ಸರ್ವಧನುರ್ಧಾರಿಗಳಿಗೆ ಧ್ವಜಪ್ರಾಯರಾಗಿದ್ದ ಭೀಷ್ಮರು ಹತರಾದಾಗ ಏನು ಮಾಡಿದನೆಂದು ನನಗೆ ಹೇಳಿ.
ವೈಶಂಪಾಯನಃ
ಶ್ರುತ್ವಾ ಭೀಷ್ಮಸ್ಯ ನಿಧನಮಪ್ರಹೃಷ್ಟಮನಾ ಭೃಶಮ್ |
ಪುತ್ರಾಣಾಂ ಜಯಮಾಕಾಂಕ್ಷನ್ ವಿಲಲಾಪ ಸುದುಃಖಿತಃ ॥ 5 ॥
ವೈಶಂಪಾಯನ ಭೀಷ್ಮರ ನಿಧನದ ವಾರ್ತೆಯನ್ನು ಕೇಳಿ, ಮನಸ್ಸಿನಲ್ಲಿ ಸಂತೋಷವಿಲ್ಲದೆ, ದುಃಖದಿಂದ ಕೂಡಿದವನಾಗಿ, ತನ್ನ ಪುತ್ರರ ಜಯವನ್ನು ಬಯಸುತ್ತಾ ಧೃತರಾಷ್ಟ್ರನು ವಿಲಾಪವನ್ನು ಮಾಡಿದನು.
ನಿಹತಂ ಪಿತರಂ ಶ್ರುತ್ವಾ ಧೃತರಾಷ್ಟ್ರೋ ಜನಾಧಿಪಃ |
ಲೇಭೇ ನ ಶಾಂತಿಂ ಕೌರವ್ಯಶ್ಚಿಂತಾಶೋಕಪರಾಯಣಃ ॥ 6 ॥
ತನ್ನ ತಂದೆಯು ಹತನಾದುದನ್ನು ಕೇಳಿ ಜನಾಧಿಪನೂ, ಕೌರವ್ಯನೂ ಆದ ಧೃತರಾಷ್ಟ್ರನು ಚಿಂತಾ-ಶೋಕಪರಾಯಣನಾಗಿ ಶಾಂತಿಯನ್ನು ಹೊಂದಲಿಲ್ಲ.
ತಸ್ಯ ಚಿಂತಯತೋ ದುಃಖಮನಿಶಂ ಕೌರವಸ್ಯ ತತ್ |
ಆಜಗಾಮ ವಿಶುದ್ಧಾತ್ಮಾ ಪುನರ್ಗಾವಲ್ಗಣಿಸ್ತದಾ| ॥ 7 ॥
ವ್ಯಾಸಪ್ರಸಾದಾದ್ ವಿಜ್ಞಾಯ ಸರ್ವವೃತ್ತಾಂತಮುತ್ತಮಮ್ |
ಸೈನಿಕಾನಾಂ ಚ ಸರ್ವೇಷಾಂ ಸೇನಯೋರುಭಯೋರಪಿ ॥ 8 ॥
ಕೌರವನಾದ ಅವನು ಸತತವಾಗಿ ದುಃಖದಿಂದ ಅದನ್ನೇ ಚಿಂತಿಸುತ್ತಿರುವಾಗ, ಶುದ್ಧವಾದ ಮನಸ್ಸುಳ್ಳ ಸಂಜಯನು ವ್ಯಾಸರ ಅನುಗ್ರಹದಿಂದ, ಎರಡು ಸೈನ್ಯಗಳಲ್ಲಿಯೂ ನಡೆಯುವ ಎಲ್ಲ ಯೋಧರ ಶ್ರೇಷ್ಠವಾದ ವೃತ್ತಾಂತವನ್ನು ತಿಳಿದು ಪುನಃ ಅವನ ಸಮೀಪಕ್ಕೆ ಬಂದನು.
ಶಿಬಿರಾತ್ ಸಂಜಯಂ ಪ್ರಾಪ್ತಂ ನಿಶಿ ನಾಗಾಹ್ವಯಂ ಪುರಮ್ |
ಆಂಬಿಕೇಯೋ ಮಹಾರಾಜ ಧೃತರಾಷ್ಟ್ರೋಽನ್ವಪೃಚ್ಛತ ॥ 9 ॥
ಎಲೈ ಮಹಾರಾಜನೇ, ಶಿಬಿರದಿಂದ ರಾತ್ರಿಯ ಕಾಲದಲ್ಲಿ ಹಸ್ತಿನಪುರಕ್ಕೆ ಬಂದ ಸಂಜಯನನ್ನು ಅಂಬಿಕಾಪುತ್ರನಾದ ಧೃತರಾಷ್ಟ್ರನು ಪ್ರಶ್ನೆ ಮಾಡಿದನು.
ಧೃತರಾಷ್ಟ್ರಃ
ಸಂಕಾಲ್ಯ ತು ಮಹಾತ್ಮಾನಂ ಭೀಷ್ಮಂ ಭೀಮಪರಾಕ್ರಮಮ್ |
ಕಿಮಚೇಷ್ಟನ್ ಪರಂ ತಾತ ಕುರವಃ ಕಾಲಚೋದಿತಾಃ ॥ 10 ॥
ಧೃತರಾಷ್ಟ್ರ ಭಯಂಕರ ಪರಾಕ್ರಮವುಳ್ಳ, ಮಹಾತ್ಮರಾದ ಭೀಷ್ಮರನ್ನು ನಾಶಗೊಳಿಸಿ ಎಲೈ ಪ್ರೀತಿಪಾತ್ರನೇ, ಮೃತ್ಯುಚೋದಿತರಾದ ಕುರುಗಳು ಅನಂತರ ಏನು ಮಾಡಿದರು?
ತಸ್ಮಿಂಸ್ತು ನಿಹತೇ ವೀರೇ ಭೀಷ್ಮೇ ಯುಧಿ ಮಹೌಜಸಿ |
ಕಸ್ಯ ಸ್ಮ ಕುರವೋಽಸ್ಮಾರ್ಷುಃ ನಿಮಗ್ನಾಃ ಶೋಕಸಾಗರೇ ॥ 11 ॥
ವೀರರೂ, ಮಹಾಸಾಮರ್ಥ್ಯವುಳ್ಳವರೂ ಆದ ಭೀಷ್ಮರು ಯುದ್ಧದಲ್ಲಿ ನಿಧನವನ್ನು ಹೊಂದುತ್ತಿರಲು ಶೋಕಸಾಗರದಲ್ಲಿ ಮುಳುಗಿದ ಕುರುಗಳು ಯಾರನ್ನು ಸ್ಮರಿಸಿದರು?
ತದ್ ದ್ವಿತೀಯಂ ಮಹತ್ ಖಂಡಂ ತ್ರೈಲೋಕ್ಯಸ್ಯಾಪಿ ಭೀಷಣಮ್ |
ಭಯಮುತ್ಪಾದಯಂಸ್ತೀವ್ರಂ ಬಾಧೇನ್ನಾಮ ಮಹದ್ಬಲಮ್ |
ಭೀಷ್ಮತಃ ಕೌರವೇಯಾಣಾಮಪಿ ಯಾಸ್ಯತಿ ಕಿನ್ನು ತತ್ ॥ 12 ॥|
ನಮ್ಮ ಸೈನ್ಯಕ್ಕಿಂತಲೂ ದೊಡ್ಡದಾದ, ಮೂರುಲೋಕಕ್ಕೂ ಭಯವನ್ನುಂಟು ಮಾಡುವ ಪಾಂಡವರ ಸೇನಾಭಾಗವನ್ನು ಭೀಷ್ಮರು ಬಾಧಿಸಬಹುದಾಗಿದ್ದಿತು! ಕೌರವ್ಯರಾದ ನಮ್ಮ ಸೈನ್ಯವು ಭೀಷ್ಮರನ್ನು ಬಿಟ್ಟು ಬೇರೆ ಯಾರನ್ನು ಶರಣು ಹೊಂದುವುದು?
ದೇವವ್ರತೇ ತು ನಿಹತೇ ಕುರೂಣಾಮೃಷಭೇ ತದಾ |
ಕಿಮಕುರ್ವನ್ ನೃಪತಯಃ ತನ್ಮಮಾಚಕ್ಷ್ವ ಸಂಜಯ ॥ 13 ॥
ಕುರುಶ್ರೇಷ್ಠರಾದ ದೇವವ್ರತರು ಹತರಾಗುತ್ತಿರಲು ಆಗ ಎಲೈ ಸಂಜಯನೇ, ರಾಜರು ಏನು ಮಾಡಿದರು ಎಂದು ನನಗೆ ಹೇಳು.
ಸಂಜಯಃ
ಶೃಣು ರಾಜನ್ನೇಕಮನಾ ವಚನಂ ಬ್ರುವತೋ ಮಮ |
ಯತ್ ತೇ ಪುತ್ರಾಸ್ತದಾಽಕಾರ್ಷುಃ ಹತೇ ದೇವವ್ರತೇ ಮೃಧೇ ॥ 14 ॥
ಸಂಜಯ ಎಲೈ ರಾಜನೇ, ದೇವವ್ರತರು ಯುದ್ಧದಲ್ಲಿ ಹತರಾದ ಮೇಲೆ ನಿನ್ನ ಪುತ್ರರು ಏನು ಮಾಡಿದರೆಂದು ನಾನು ಹೇಳುತ್ತೇನೆ, ಒಂದೇ ಮನಸ್ಸಿನಿಂದ ಅದನ್ನು ಕೇಳು.
ನಿಹತೇ ತು ತದಾ ಸಂಖೇ ಭೀಷ್ಮೇ ಸತ್ಯಪರಾಕ್ರಮೇ |
ತಾವಕಾಃ ಪಾಂಡವೇಯಾಶ್ಚ ಪ್ರವದಂತಃ ಪೃಥಕ್ಪೃಥಕ್ ॥ 15 ॥
ವಿಸ್ಮಿತಾಶ್ಚ ಪ್ರಹೃಷ್ಟಾಶ್ಚ ಕ್ಷತ್ರಧರ್ಮಂ ವಿಶಾಂಪತೇ |
ಸ್ವಧರ್ಮಂ ನಿಂದಮಾನಾಸ್ತೇ ಪ್ರಣಿಪತ್ಯ ಮಹಾತ್ಮನೇ ॥ 16 ॥
ಶಯನಂ ಕಲ್ಪಯಾಮಾಸುಃ ಭೀಷ್ಮಾಯಾಮಿತತೇಜಸೇ |
ಸೋಪಧಾನಂ ನರವ್ಯಾಘ್ರ ಶರೈಃ ಸನ್ನತಪರ್ವಭಿಃ ॥ 17 ॥
ಸತ್ಯಪರಾಕ್ರಮವುಳ್ಳ ಭೀಷ್ಮರು ಯುದ್ಧದಲ್ಲಿ ಹತರಾಗುತ್ತಿರಲು ನಿನ್ನವರು ಮತ್ತು ಪಾಂಡವರು ಬೇರೆ ಬೇರೆಯಾಗಿ ಮಾತನಾಡಿದರು.

ಎಲ್ಲೆ ರಾಜನ್, ಅವರು ವಿಸ್ಮಯದಿಂದಲೂ, ಸಂತೋಷದಿಂದಲೂ ಕೂಡಿದವರಾಗಿ, ತಮ್ಮ ಧರ್ಮವಾದ ಕ್ಷತ್ರಿಯ ಧರ್ಮವನ್ನು ನಿಂದಿಸುತ್ತಾ, ಮಹಾತ್ಮರಾದ ಭೀಷ್ಮರಿಗೆ ನಮಸ್ಕಾರವನ್ನು ಮಾಡಿ, ಅಮಿತ ತೇಜಸ್ವಿಗಳಾದ ಅವರಿಗೆ ಬಾಗಿದ ತುದಿಯುಳ್ಳ ಬಾಣಗಳಿಂದ ತಲೆದಿಂಬಿನಿಂದ ಸಹಿತವಾದ ಶಯನವನ್ನು ಕಲ್ಪಿಸಿದರು.
ವಿಧಾಯ ರಕ್ಷಾಂ ಭೀಷ್ಮಾಯ ಪ್ರಣಿಪತ್ಯ ಪಿತಾಮಹಮ್ |
ಅನುಮಾನ್ಯ ಚ ಗಾಂಗೇಯಂ ಕೃತ್ವಾ ಚಾಪಿ ಪ್ರದಕ್ಷಿಣಮ್ ॥ 18 ॥
ಕ್ರೋಧಸಂರಕ್ತನಯನಾಃ ಸಮವೇತ್ಯ ಪರಸ್ಪರಮ್ |
ಪುನರ್ಯುದ್ಧಾಯ ಸಂಜಗ್ಮುಃ ಕ್ಷತ್ರಿಯಾಃ ಕಾಲಚೋದಿತಾಃ ॥ 19 ॥
ಭೀಷ್ಮರ ರಕ್ಷಣೆಯ ವ್ಯವಸ್ಥೆಯನ್ನು ಮಾಡಿ, ಪಿತಾಮಹರಾದ, ಗಂಗಾಪುತ್ರರಾದ ಅವರಿಗೆ ನಮಸ್ಕಾರವನ್ನು ಮಾಡಿ, ಅವರಿಗೆ ಪ್ರದಕ್ಷಿಣೆಯನ್ನು ಮಾಡಿ, ಅವರ ಅನುಮತಿಯನ್ನು ಪಡೆದು, ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ, ಮೃತ್ಯುಚೋದಿತರಾದ ಕ್ಷತ್ರಿಯರು ಪರಸ್ಪರವಾಗಿ ಒಂದುಗೂಡಿ ಪುನಃ ಯುದ್ಧಕ್ಕೆ ಹೊರಟರು.
ತತಸ್ತೂರ್ಯನಿನಾದೈಶ್ಚ ಭೇರೀಣಾಂ ಚ ಮಹಾಸ್ವನೈಃ |
ತಾವಕಾನಾಮನೀಕಾನಿ ಪರೇಷಾಂ ಚಾಪಿ ನಿರ್ಯಯುಃ ॥ 20 ॥
ಆಗ ತೂರ್ಯನಿನಾದಗಳಿಂದಲೂ, ಭೇರಿಯ ಮಹಾಶಬ್ದಗಳಿಂದಲೂ ಸಹಿತವಾಗಿ ನಿನ್ನ ಮತ್ತು ಪಾಂಡವರ ಸೈನ್ಯಗಳು ಹೊರಟವು.
ತಸ್ಮಿನ್ನಹನಿ ರಾಜೇಂದ್ರ ಪತಿತೇ ಶಂತನೋಃ ಸುತೇ |
ಅಮರ್ಷವಶಮಾಪನ್ನಾಃ ಕಾಲೋಪಹತಚೇತಸಃ ॥ 21 ॥
ಅನಾದೃತ್ಯ ವಚಃ ಪಥ್ಯಂ ಗಾಂಗೇಯಸ್ಯ ಮಹಾತ್ಮನಃ |
ನಿರ್ಯಯುಃ ಭರತಶ್ರೇಷ್ಠಾಃ ಶಸತ್ರಣ್ಯಾದಾಯ ಸರ್ವಶಃ ॥ 22 ॥
ಎಲ್ಲೆ ರಾಜೇಂದ್ರನೇ, ಶಂತನು ಪುತ್ರರಾದ ಭೀಷ್ಮರು ಆ ದಿವಸದಲ್ಲಿ ಬೀಳುತ್ತಿರಲು, ಕ್ರೋಧಕ್ಕೆ ವಶರಾದ ಮತ್ತು ಮೃತ್ಯುವಿನಿಂದ ಪ್ರೇರಿತವಾದ ಬುದ್ಧಿಯುಳ್ಳ ಭರತಶ್ರೇಷ್ಠರು ಮಹಾತ್ಮರಾದ ಭೀಷ್ಮರ ಹಿತನುಡಿಗಳನ್ನು ಆದರಿಸದೆ ಶಸ್ತ್ರಗಳನ್ನು ತೆಗೆದುಕೊಂಡು ಎಲ್ಲ ಕಡೆಗಳಿಂದಲೂ ಹೊರಟರು.
ಮೋಹಾತ್ ತವ ಚ ಪುತ್ರಸ್ಯ ವಧಾಚ್ಛಾಂತನವಸ್ಯ ಚ |
ಕೌರವಾ ಮೃತ್ಯುನಾಽಽಜ್ಞಪ್ತಾಃ ಸಹಿತಾಃ ಸರ್ವರಾಜಭಿಃ ॥ 23 ॥
ಅಜಾವಯ ಇವಾಗೋಪಾ ವನೇ ಶ್ವಾಪದಸಂಕುಲೇ |
ಕರ್ಣ ಕರ್ಣೇತಿ ಚಾಕ್ರುಶ್ಯ ಶೇಷಾ ಭಾರತ ತಾವಕಾಃ ॥ 24 ॥
ನಿನ್ನ ಮತ್ತು ನಿನ್ನ ಪುತ್ರನ ಮೋಹದಿಂದಲೂ ಮತ್ತು ಭೀಷ್ಮರ ವಧೆಯಿಂದಲೂ (ಪ್ರೇರಿತರಾಗಿ) ಮೃತ್ಯುವಿನಿಂದ ಆದೇಶಿಸಲ್ಪಟ್ಟ ಕೌರವರು ಎಲ್ಲ ರಾಜರಿಂದಲೂ ಸಹಿತರಾಗಿ, ಮಾಂಸಾಹಾರಿಗಳಿಂದ ತುಂಬಿದ ಕಾಡುಗಳಲ್ಲಿ ರಕ್ಷಕರಿಲ್ಲದ ಆಡು-ಕುರಿಗಳಂತೆ ಕರ್ಣ, ಕರ್ಣ ಎಂದು ಕಿರುಚುತ್ತಾ ಎಲ್ಲೆ ಭಾರತನೇ, ನಿನ್ನ ಉಳಿದ ಸೈನಿಕರು ಭೀಷ್ಮರಿಲ್ಲದೆ ಬಹಳ ಉದ್ವೇಗಗೊಂಡ ಮನಸ್ಸುಳ್ಳವರಾಗಿ ಹೀನಸ್ಥಿತಿಯನ್ನು ತಲುಪಿದರು.
ಭೃಶಮುದ್ವಿಗ್ನಮನಸೋ ಹೀನಾ ದೇವವ್ರತೇನ ತೇ ॥ 25 ॥
ಪತಿತೇ ಭರತಶ್ರೇಷ್ಠೇ ಬಭೂವ ಕುರುವಾಹಿನೀ |
ದ್ಯೌರಿವಾಪೇತನಕ್ಷತ್ರಾ ಹೀನಂ ಖಮಿವ ಭಾನುನಾ ॥ 26 ॥
ಭರತಶ್ರೇಷ್ಠರಾದ ಭೀಷ್ಮರು ಪಾತವನ್ನು ಹೊಂದುತ್ತಿರಲು ಕೌರವ ಸೇನೆಯು ನಕ್ಷತ್ರಗಳಿಲ್ಲದ ಆಕಾಶದಂತೆ ಮತ್ತು ಸೂರ್ಯನಿಲ್ಲದ ಆಕಾಶದಂತೆ ಆಯಿತು.
ವಿಪನ್ನಸಸ್ಯೇವ ಮಹೀ ವಾಕ್ ಚೈವಾಸಂಸ್ಕೃತಾ ಯಥಾ |
ಆಸುರೀವ ಯಥಾ ಸೇನಾ ನಿಗೃಹೀತೇ ನೃಪೇ ಬಲೌ ॥ 27 ॥
ಎಲ್ಲ ಸಸ್ಯಗಳು ನಾಶಹೊಂದಿದ ಭೂಮಿಯಂತೆ, ಅಸಂಸ್ಕೃತವಾದ ವಾಣಿಯಂತೆ, ರಾಜನಾದ ಬಲಿಯು ನಿಗ್ರಹಿಸಲ್ಪಡುತ್ತಿರಲು ದೈತ್ಯರ ಸೇನೆಯಂತೆ ಆಯಿತು.
ವಿಧವಾ ತು ಯಥಾ ನಾರೀ ಶುಷ್ಕತೋಯೇವ ನಿಮ್ನಗಾ |
ವೃಕೈರಿವ ವನೇ ರುದ್ಧಾ ಪೃಷತೀ ಹತಯೂಥಪಾ ॥ 28 ॥
ವಿಧವೆಯಾದ ನಾರಿಯಂತೆ, ನೀರು ಒಣಗಿದ ನದಿಯಂತೆ, ತನ್ನ ಪತಿಯನ್ನು ಕಳೆದುಕೊಂಡು ತೋಳಗಳಿಂದ ಹೆದರಿಸಲ್ಪಟ್ಟ ಹೆಣ್ಣು ಜಿಂಕೆಯಂತೆ ಆಯಿತು.
ಯಥಾ ಸಿಂಹೇ ವಿನಿಷ್ಕ್ರಾಂತೇ ಪರ್ವತಸ್ಯೇವ ಕಂದರಾ ॥ 29 ॥
ಸಾ ಸೇನಾ ಭರತಶ್ರೇಷ್ಠೇ ಪತಿತೇ ಜಾಹ್ನವೀಸುತೇ |
ಶರಭಾಹತಸಿಂಹೇವ ಮಹತೀ ಗಿರಿಕಂದರಾ ॥ 30 ॥
ವಿಷ್ವಗ್ ವಾತಾಹತಾ ಕ್ಷುಬ್ಧಾ ನೌರಿವಾಸೀನ್ಮಹಾರ್ಣವೇ ॥ 31 ॥
ಜಾಹ್ನವಿಯ ಪುತ್ರರಾದ, ಭರತಶ್ರೇಷ್ಠರಾದ ಭೀಷ್ಮರು ಬೀಳುತ್ತಿರಲು ಕೌರವ ಸೇನೆಯು, ಸಿಂಹವು ಹೊರಟುಹೋದ ಪರ್ವತದ ಗುಹೆಯಂತೆ, ಶರಭದ ಆಕ್ರಮಣಕ್ಕೆ ಸಿಲುಕಿದ ಸಿಂಹದಂತೆ, ಮಹಾಸಾಗರದಲ್ಲಿ ಎಲ್ಲ ಕಡೆಯಲ್ಲಿಯೂ ಬೀಸುವ ಸುಂಟರಗಾಳಿಯಿಂದ ಕ್ಷೋಭೆಗೊಂಡ ಹಡಗಿನಂತೆ ದುಃಖಕ್ಕೆ ಈಡಾಯಿತು.
ಬಲಿಭಿಃ ಪಾಂಡವೈರ್ದೃಪ್ತೈಃ ಲಬ್ಧಲಕ್ಷೈರ್ಭೃಶಾರ್ದಿತಾ |
ಸಾ ತಥಾ ನಿಹತಾ ಸೇನಾ ವ್ಯಾಕುಲಾಶ್ವರಥದ್ವಿಪಾ ॥ 32 ॥

ವಿಷಣ್ಣಭೂಯಿಷ್ಠನರಾ ಕೃಪಣಾ ದೃಷ್ಟುರಾಬಭೌ ॥ 33 ॥
ಬಲಿಷ್ಠರೂ, ಲಕ್ಷ್ಯಭೇದಿಗಳೂ, ದರ್ಪಶೀಲರೂ ಆದ ಪಾಂಡವರಿಂದ ಚೆನ್ನಾಗಿ ಪೀಡಿಸಲ್ಪಟ್ಟ, ನಿಹತವಾದ ಆ ಸೈನ್ಯವು ವ್ಯಾಕುಲಗೊಂಡ ಅಶ್ವ-ರಥ- ಗಜಗಳಿಂದ ಕೂಡಿದುದಾಗಿ ವಿಷಾದವನ್ನು ಹೊಂದಿದ ಅನೇಕ ಯೋಧರಿಂದ ಕೂಡಿದುದಾಗಿ ನೋಡುವವರಿಗೆ ಕಾರ್ಪಣ್ಯವನ್ನು ಹೊಂದಿದಂತೆ ಕಂಡುಬರುತ್ತಿದ್ದಿತು.
ತಸ್ಯಾಂ ದೃಪ್ತಾ ನೃಪತಯಃ ಸೈನಿಕಾಶ್ಚ ಪೃಥಗ್ವಿಧಾಃ |
ಪಾತಾಳ ಇವ ಮಜ್ಜಂತೋ ಹೀನಾ ದೇವವ್ರತೇನ ತೇ ॥ 34 ॥
ಕರ್ಣಂ ಹಿ ಕುರವೋಽಸ್ಮಾರ್ಷುಃ ಸ ಹಿ ದೇವವ್ರತೋಪಮಃ ॥ 35 ॥
ಆ ಸೈನ್ಯದಲ್ಲಿದ್ದ ದರ್ಪಿಷ್ಠರಾದ ರಾಜರು ಮತ್ತು ಅನೇಕ ವಿಧವಾದ ಸೈನಿಕರು ಮತ್ತು ಕುರುಗಳು ಭೀಷ್ಮರಿಲ್ಲದೆ ಪಾತಾಳದಲ್ಲಿ ಮುಳುಗಿದವರಂತೆ ಕರ್ಣನನ್ನು ಸ್ಮರಿಸಿದರು. ಅವನು ಭೀಷ್ಮರಿಗೆ ಸದೃಶನಷ್ಟೆ!
ಸರ್ವಶಸ್ತ್ರಭೃತಾಂ ಶ್ರೇಷ್ಠಂ ರೋಚಮಾನಮಿವಾನಲಮ್ |
ಬಂಧುಮಾಪದ್ಗತಸ್ಯೇವ ತೇಷಾಮಾಸೀದ್ ಗತಂ ಮನಃ ॥ 36 ॥
ಆಪತ್ತಿಗೆ ಸಿಲುಕಿದವರು ಬಂಧುಗಳನ್ನು ಸ್ಮರಿಸಿದಂತೆ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಅಗ್ನಿಯಂತೆ ಕಂಗೊಳಿಸುವ ಕರ್ಣನಲ್ಲಿ ಅವರ ಮನಸ್ಸು ಹೋಯಿತು.
ಚುಕ್ರುಶುಃ ಕರ್ಣ ಕರ್ಣೇತಿ ಶೇಷಾ ಭಾರತ ಪಾರ್ಥಿವಾಃ |
ರಾಧೇಯೋ ಹಿ ಹಿತೋಽಸ್ಮಾಕಂ ಸೂತಪುತ್ರಸ್ತನುತ್ಯಜಃ ॥ 37 ॥
ಎಲೈ ಭಾರತನೇ, ಉಳಿದ ರಾಜರು ಕರ್ಣ, ಕರ್ಣ ಎಂದೂ, ಸೂತಪುತ್ರನು ತನ್ನ ಶರೀರವನ್ನು ತ್ಯಜಿಸುವುದಕ್ಕೆ ಸಿದ್ಧನಾದವನೂ ಆದ, ರಾಧಾಪುತ್ರನಾದ ಕರ್ಣನು ನಮಗೆ ಹಿತನಾದವನು ಎಂದೂ ಕಿರುಚಿದರು.
ಸ ಹಿ ನಾಯುದ್ಧ್ಯತ ತದಾ ದಶಾಹಾನ್ಯೇಕ ಏವ ಚ |
ಸಾಮಾತ್ಯಬಾಂಧವಃ ಕರ್ಣಃ ಸಮಾನಯತ ಮಾಚಿರಮ್ ॥ 38 ॥
ಅಮಾತ್ಯ-ಬಾಂಧವರಿಂದ ಕೂಡಿದ ಕರ್ಣನೊಬ್ಬನೇ ಹತ್ತು ದಿನಗಳವರೆಗೆ ಯುದ್ಧವನ್ನು ಮಾಡಲಿಲ್ಲ. ಅವನನ್ನು ಶೀಘ್ರವಾಗಿ ಕರೆದು ತನ್ನಿ.
ಭೀಷ್ಮೇಣ ಹಿ ಮಹಾಬಾಹುಃ ಸರ್ವಕ್ಷತ್ರಸ್ಯ ಪಶ್ಯತಃ |
ರಥೇಷು ಗಣ್ಯಮಾನೇಷು ಬಲವಿಕ್ರಮಶಾಲಿಷು ॥39॥
ಸಂಖ್ಯಾತೋಽರ್ಧರಥಃ ಕರ್ಣೋ ದೋಷಾನುಕತ್ವ ಮಹಾರಥಃ ॥40॥
ಸರ್ವಕ್ಷತ್ರಿಯರ ಎದುರಿನಲ್ಲಿ ಬಲ- ಪರಾಕ್ರಮಶಾಲಿಗಳಾದ ಮಹಾರಥರನ್ನು ಎಣಿಸುವ ಸಂದರ್ಭದಲ್ಲಿ ಭೀಷ್ಮರು ಮಹಾರಥನಾದ ಕರ್ಣನ ದೋಷಗಳನ್ನು ಹೇಳಿ ಮಹಾಬಾಹುವಾದ ಅವನನ್ನು ಅರ್ಧರಥನೆಂದು ಪರಿಗಣಿಸಿದರು.
ರಥಾತಿರಥಸಂಖ್ಯಾಯಾಂ ಯೋಽಗ್ರಣೀಃ ಶೂರ ಉತ್ತಮಃ |
ಪಿತೃವಿತ್ತಾಂಬುದೇವೇಶಾನಪಿ ಯೋದ್ಧುಂ ಸಮುತ್ಸಹೇತ್ ॥ 41 ॥
ಯಾವನು ಶ್ರೇಷ್ಠನಾದ ಶೂರನೋ, ನಾಯಕನೋ, ಯಮನ ಜೊತೆಯಲ್ಲಿ, ಕುಬೇರನ ಜೊತೆಯಲ್ಲಿ, ವರುಣನ ಜೊತೆಯಲ್ಲಿ ಮತ್ತು ಇಂದ್ರನ ಜೊತೆಯಲ್ಲಿಯೂ ಯುದ್ಧ ಮಾಡಲು ಉತ್ಸುಕನಾದವನೋ ಅಂತಹವನನ್ನು ರಥಾತಿರಥರ ಗಣನೆಯ ಸಂದರ್ಭದಲ್ಲಿ (ಅರ್ಧರಥನೆಂದು ಎಣಿಸಿದರು).
ಸ ಚ ತೇನೈವ ಕೋಪೇನ ರಾಜನ್ ಗಾಂಗೇಯಮುಕ್ತವಾನ್ |
ತ್ವಯಿ ಯುದ್ಧ್ಯತಿ ಕೌರವ್ಯ ನಾಹಂ ಯೋತ್ಸ್ಯೇ ಕಥಂಚನ ॥ 42 ॥
ಎಲೈ ರಾಜನೇ, ಅವನು ಅದೇ ಕೋಪದಿಂದ ಭೀಷ್ಮರನ್ನು ಕುರಿತು ಎಲೈ ಕೌರವ್ಯರೇ, ನೀವು ಯುದ್ಧ ಮಾಡುತ್ತಿರುವವರೆಗೆ ನಾನು ಯಾವ ಕಾರಣದಿಂದಲೂ ಯುದ್ಧವನ್ನು ಮಾಡುವುದಿಲ್ಲ.
ತ್ವಯಾ ತು ಪಾಂಡವೇಯೇಷು ನಿಹತೇಷು ಮಹಾಮೃಧೇ |
ದುರ್ಯೋಧನಮನುಜ್ಞಾಪ್ಯ ವನಂ ಯಾಸ್ಯಾಮಿ ಕೌರವ ॥ 43 ॥
ಎಲೈ ಕೌರವರೇ, ನೀವು ದೊಡ್ಡ ಯುದ್ಧದಲ್ಲಿ ಪಾಂಡವರನ್ನು ವಧಿಸಿದ ಮೇಲೆ ದುರ್ಯೋಧನನ ಅನುಮತಿಯನ್ನು ಪಡೆದು ನಾನು ಕಾಡಿಗೆ ಹೋಗುವೆನು.
ಹತೇ ವಾ ಯುಧಿ ಪಾರ್ಥೈಸ್ತು ತ್ವಯಿ ಸ್ವರ್ಗಂ ಸಮೇಯುಷಿ |
ಹಂತಾಸ್ಮ್ಯೇಕರಥೇನೈವ ಕೃತ್ಸ್ನಾನ್ ಯಾನ್ ಮನ್ಯಸೇ ರಥಾನ್ ॥44॥
ಅಥವಾ ನೀವೇ ಪಾಂಡವರಿಂದ ಹತರಾಗಿ ಸ್ವರ್ಗಕ್ಕೆ ಹೋದರೆ ನೀವು ಯಾರನ್ನು ರಥರು ಎಂದು ತಿಳಿಯುತ್ತೀರೋ ಅವರೆಲ್ಲರನ್ನೂ ಒಂದೇ ರಥದಿಂದ ಕೊಲ್ಲುವೆನು (ಎಂದು ಹೇಳಿದನು).
ಸಂಜಯಃ
ಏವಮುಕತ್ವ ಮಹಾತೇಜಾ ದಶಾಹಾನ್ಯೇಕ ಏವ ಸಃ |
ನಾಯುದ್ಧ್ಯತ ತದಾ ಕರ್ಣಃ ಪುತ್ರಸ್ಯ ತವ ಸಮ್ಮತೇ ॥ 45 ॥
ಸಂಜಯ ಹೀಗೆ ಹೇಳಿ ಮಹಾತೇಜಸ್ವಿಯಾದ ಕರ್ಣನೊಬ್ಬನೇ ನಿನ್ನ ಪುತ್ರನ ಅನುಮತಿಯನ್ನು ಪಡೆದು ಹತ್ತುದಿನಗಳ ಕಾಲ ಯುದ್ಧವನ್ನು ಮಾಡಲಿಲ್ಲ.
ಭೀಷ್ಮಸ್ತ್ವಮಿತವಿಕ್ರಾಂತಃ ಪಾಂಡವೇಯಸ್ಯ ಪಾರ್ಥಿವ |
ಜಘಾನ ಸಮರೇ ಯೋಧಾನ್ ಅಸಂಖ್ಯೇಯಪರಾಕ್ರಮಾನ್ ॥ 46 ॥

ಅಮಿತಪರಾಕ್ರಮಿಗಳಾದ ಭೀಷ್ಮರು ಎಲೈ ರಾಜನೇ, ಅಗಣಿತ ಪರಾಕ್ರಮವುಳ್ಳ ಪಾಂಡವಸೇನೆಯ ಯೋಧರನ್ನು ಯುದ್ಧದಲ್ಲಿ ಕೊಂದರು.
ತಸ್ಮಿಂಸ್ತು ನಿಹತೇ ಶೂರೇ ತವ ಪುತ್ರಾ ಮಹಾರಥಮ್ |
ಕರ್ಣಂ ರಾಜಂಸ್ತದಾ ಜಗ್ಮುಃ ತರ್ತುಕಾಮಾ ಇವ ಪ್ಲವಮ್ ॥ 47 ॥
ಎಲೈ ರಾಜನೇ, ಅಂತಹ ಶೂರರಾದ ಭೀಷ್ಮರು ಹತರಾದ ಮೇಲೆ ನಿನ್ನ ಪುತ್ರರು ನದಿಯನ್ನು ದಾಟಲು ದೋಣಿಯನ್ನು ಬಯಸುವಂತೆ ಮಹಾರಥನಾದ ಕರ್ಣನನ್ನು ಸ್ಮರಿಸಿದರು.
ತಾವಕಾಸ್ತವ ಪುತ್ರಾಶ್ಚ ಸಹಿತಾಃ ಸರ್ವರಾಜಭಿಃ |
ಹಾ ಕರ್ಣ ಇತಿ ಚಕ್ರಂದುಃ ಕಾಲೋಽಯಮಿತಿ ಚಾಬ್ರುವನ್ ॥ 48 ॥
ಎಲ್ಲ ರಾಜರಿಂದ ಸಹಿತರಾದ ನಿನ್ನ ಯೋಧರು ಮತ್ತು ಪುತ್ರರು ಅಯ್ಯೋ ಕರ್ಣ! ಎಂದು ಆಕ್ರಂದನವನ್ನು ಮಾಡಿದರು. ಇದು ನೀನು ಪೌರುಷವನ್ನು ತೋರಿಸಬೇಕಾದ ಕಾಲ ಎಂದು ಹೇಳಿದರು.
ಜಾಮದಗ್ನ್ಯಾಭ್ಯನುಜ್ಞಾತಮ್ ಅಸ್ತ್ರೈರ್ದುರ್ವಾರಪೌರುಷಮ್ |
ಅಗಮನ್ ಮನಸಾ ಕರ್ಣಂ ಮನ್ಯುನಾಭ್ಯಧಿಕೇಷ್ವಿಹ ॥ 49 ॥
ಶ್ರೇಷ್ಠರಾದ ಪಾಂಡವರಲ್ಲಿ ಕ್ರೋಧವನ್ನು ಹೊಂದಿದ ಕಾರಣದಿಂದ ಆ ರಾಜರು ಪರಶುರಾಮರಿಂದ ಅನುಜ್ಞೆಯನ್ನು ಪಡೆದು ಅಸ್ತ್ರಗಳಿಂದ ನಿವಾರಿಸಲು ಸಾಧ್ಯವಿಲ್ಲದಂತಹ ಪರಾಕ್ರಮವನ್ನು ಹೊಂದಿದ ಕರ್ಣನನ್ನು ಮನಸ್ಸಿನಲ್ಲಿಯೇ ಯೋಚಿಸಿದರು.
ಸ ಹಿ ಶಕ್ತೋ ರಣೇ ರಾಜಂಸಾತ್ರತುಮಸ್ಮಾನ್ಮಹಾಭಯಾತ್ |
ತ್ರಿದಶಾನಿವ ಗೋವಿಂದಃ ಸತತಂ ಸ್ವಾಸುರಾದ್ ಭಯಾತ್ ॥50॥
ವಿಷ್ಣುವು ಅಸುರರ ಭಯದಿಂದ ದೇವತೆಗಳನ್ನು ಸತತವಾಗಿ ರಕ್ಷಿಸುವಂತೆ ಎಲೈ ರಾಜನೇ, ಈ ಮಹಾಭಯದಿಂದ ತಮ್ಮನ್ನು ರಕ್ಷಿಸಲು ರಣರಂಗದಲ್ಲಿ ಅವನೊಬ್ಬನೇ ಶಕ್ತನಾಗಿದ್ದಾನೆ (ಎಂದು ಚಿಂತಿಸಿದರು).
ವೈಶಂಪಾಯನಃ
ತಥಾ ತು ಸಂಜಯೇ ಕರ್ಣಂ ಕೀರ್ತಯಾನೇ ಪುನಃಪುನಃ |
ಅಶೀತಮಿವ ನಿಃಶ್ವಸ್ಯ ಧೃತರಾಷ್ಟ್ರೋಽಬ್ರವೀದಿದಮ್ ॥ 51 ॥
ವೈಶಂಪಾಯನ ಹಾಗೆ, ಸಂಜಯನು ಪುನಃ ಪುನಃ ಕರ್ಣನ ಹೆಸರನ್ನು ಹೇಳುತ್ತಿರಲು ಧೃತರಾಷ್ಟ್ರನು ಬಿಸಿಯಾದ ನಿಟ್ಟುಸಿರನ್ನು ಬಿಟ್ಟು ಈ ಮಾತನ್ನಾಡಿದನು.
ಯತ್ ತದ್ ವೈಕರ್ತನಂ ಕರ್ಣಮಗಮದ್ವೋ ಮನಸ್ತದಾ |
ಅಪ್ಯರಕ್ಷತ್ ಸ ರಾಧೇಯಃ ಸೂತಪುತ್ರಸ್ತನುತ್ಯಜಃ ॥ 52 ॥
ಧೃತರಾಷ್ಟ್ರ ನಿಮ್ಮ ಮನಸ್ಸು ಆಗ ಕರ್ಣನನ್ನು ಕುರಿತು ಹೋಯಿತಷ್ಟೆ! ಶರೀರತ್ಯಾಗಕ್ಕೆ ಸಿದ್ಧನಾದ ಆ ಸೂತಪುತ್ರನಾದ ಕರ್ಣನು ನಿಮ್ಮನ್ನು ರಕ್ಷಿಸಿದನೇ?
ಅಪಿ ತನ್ನ ಮೃಷಾ ಕರ್ಣೋ ಯುಧಿ ಸತ್ಯಪರಾಕ್ರಮಃ |
ಸಂಭ್ರಾಂತಾನಾಂ ತದಾರ್ತಾನಾಂ ತ್ರಸ್ತಾನಾಂ ತ್ರಾಣಮಿಚ್ಛತಾಮ್॥53॥
ಸತ್ಯಪರಾಕ್ರಮನಾದ ಕರ್ಣನು ಸಂಭ್ರಾಂತರಾಗಿ, ಆರ್ತರಾಗಿ, ಹೆದರಿ ಅವರಿಂದ ರಕ್ಷಣೆಯನ್ನು ಬಯಸುವವರ ಆಸೆಯನ್ನು (ಸ್ಮರಣೆಯನ್ನು) ವ್ಯರ್ಥಗೊಳಿಸಲಿಲ್ಲವಷ್ಟೆ?
ಅಪಿ ತತ್ ಪೂರಯಾಂಚಕ್ರೇ ಧನುರ್ಧರವರೋ ಯುಧಿ |
ಯತ್ ತದ್ ವಿನಿಹತೇ ಭೀಷ್ಮೇ ಕೌರವಾಣಾಂ ಮಹಾವೃತೇ ॥ 54 ॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅವನು ಕೌರವರಿಗೆ ಶ್ರೇಷ್ಠವಾದ ಆಶ್ರಯರಾಗಿದ್ದ ಭೀಷ್ಮರು ಹತರಾದಾಗ ಉಂಟಾದ ಶೂನ್ಯಪ್ರದೇಶವನ್ನು ತುಂಬಿದನಷ್ಟೆ?
ತತ್ ಖಂಡಂ ಪೂರಯನ್ ಕರ್ಣಃ ಪರೇಷಾಮಾದಧದ್ ಭಯಮ್ |
ಕೃತವಾನ್ ಮಮ ಪುತ್ರಾಣಾಂ ಜಯಾಶಾಂ ಸಫಲಾಮಪಿ ॥ 55 ॥
ಸೈನ್ಯದ ಆ ಭಾಗವನ್ನು ತುಂಬಿ ಶತ್ರುಗಳಿಗೆ ಭಯವನ್ನುಂಟು ಮಾಡುತ್ತಾ, ನನ್ನ ಪುತ್ರರ ಜಯದ ಆಸೆಯನ್ನು ಸಫಲವನ್ನಾಗಿ ಮಾಡಿದನೆ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪ್ರಥಮೋಽಧ್ಯಾಯಃ ॥
ದ್ರೋಣಾಭಿಷೇಕಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಪಾಂಡವರ ಉಚ್ಛೇದನದ ಪ್ರತಿಜ್ಞೆಯನ್ನು ಮಾಡಿ
ಕರ್ಣನಿಂದ ಯುದ್ಧಕ್ಕೆ ಪ್ರಯಾಣ.
ಸಂಜಯಃ
ಶ್ರುತ್ವಾ ತು ಕರ್ಣಃ ಪುರುಷೇಂದ್ರಮಚ್ಯುತಂ
ನಿಪಾತಿತಂ ಶಾಂತನವಂ ರಿಪುಘ್ನಮ್ |

ಅಥೋಪಾಯಾತ್ ತೂರ್ಣಮಮಿತ್ರಘಾತೀ
ಧನುರ್ಧರಾಣಾಂ ಪ್ರವರಃ ಕ್ಷಿತೌ ರುಷಾ ॥ 1 ॥
ಸಂಜಯ ಧನುರ್ಧಾರಿಗಳಲ್ಲಿ ಶ್ರೇಷ್ಠನಾದವನೂ, ಶತ್ರುಸಂಹಾರಿಯಾದವನೂ ಆದ ಕರ್ಣನು ಪುರುಷಶ್ರೇಷ್ಠರೂ, ತಮ್ಮ ವ್ರತದಿಂದ ಚ್ಯುತರಾಗದವರೂ, ಶತ್ರು ಸಂಹಾರಕರೂ ಆದ ಭೀಷ್ಮರು ನಿಪಾತಿತರಾದುದನ್ನು ಕೇಳಿ ಕೋಪದಿಂದ ಅವರ ಬಳಿಗೆ ಹೊರಟನು.
ಹತಂ ಭೀಷ್ಮಂ ಚಾಧಿರಥಿರ್ವಿದಿತ್ವಾ
ಭಿನ್ನಾಂ ನಾವಂ ವಾರಿಧಾವತ್ಯಗಾಧೇ ।
ಸೋದರ್ಯವದ್ ವ್ಯಸನಾತ್ ಸೂತಪುತ್ರಃ
ಸಂತಾರಯಿಷ್ಯಂಸ್ತವ ಪುತ್ರಸೇನಾಮ್ ॥ 2 ॥
ಅಧಿರಥಪುತ್ರನಾದ ಕರ್ಣನು ಅಗಾಧವಾದ ಸಮುದ್ರದಲ್ಲಿ ಭಿನ್ನವಾದ ನೌಕೆಯಂತೆ ಭೀಷ್ಮರು ಬಿದ್ದುದನ್ನು ತಿಳಿದು, ಸೂತಪುತ್ರನಾದ ಅವನು ನಿನ್ನ ಪುತ್ರರ ಸೇನೆಯನ್ನು ಸಂಕಟದಿಂದ ಪಾರುಮಾಡಲು ಬಯಸಿ ಸಹೋದರನಂತೆ ಹೊರಟನು.
ಹತೇ ತು ಭೀಷ್ಮೇ ರಥಸತ್ತಮೇ ತದಾ
ನಿಮಜ್ಜತೀಂ ನಾವಮಿವಾರ್ಣವೇ ಕುರೂನ್ ।
ಪಿತೇವ ಪುತ್ರಾಂಸ್ತ್ವರಿತೋಽಭ್ಯಗಾತ್ ತದಾ
ಸಂತಾರಯಿಷ್ಯಂಸ್ತವ ಪುತ್ರಸ್ಯ ಸೇನಾಮ್ ॥ 3 ॥
ರಥಶ್ರೇಷ್ಠರಾದ ಭೀಷ್ಮರು ಹತರಾಗುತ್ತಿರಲು, ಸಮುದ್ರದಲ್ಲಿ ಮುಳುಗುವ ನೌಕೆಯಂತಿದ್ದ ಕುರುಗಳನ್ನು ಮತ್ತು ನಿನ್ನ ಪುತ್ರನ ಸೈನ್ಯವನ್ನು ಸಂಕಟದಿಂದ ಪಾರು ಮಾಡಲು ಬಯಸಿ, ಆಗ ತಂದೆಯು ಪುತ್ರರ ಕಡೆಗೆ ಹೋಗುವಂತೆ ತ್ವರಿತವಾಗಿ ಹೊರಟನು.
ಸಮ್ಮ ೃಜ್ಯ ದಿವ್ಯಂ ಧನುರಾತತಜ್ಯಂ
ಸ ರಾಮದತ್ತಂ ರಿಪುಸಂಘಹಂತಾ ।
ಬಾಣಾಂಶ್ಚ ಕಾಲಾನಲತುಲ್ಯರೂಪಾನ್
ಉಲ್ಲಾಲಯನ್ ವಾಕ್ಯಮಿದಂ ಬಭಾಷೇ ॥ 4 ॥
ಪರಶುರಾಮರು ಕೊಟ್ಟ ದೀರ್ಘವಾದ ದಿವ್ಯವಾದ ತನ್ನ ಧನುಸ್ಸಿನ ಹೆದೆಯನ್ನು ಸವರುತ್ತಾ, ಕಾಲಾನಲ ಸದೃಶವಾದ ರೂಪವನ್ನು ಹೊಂದಿದ ಬಾಣಗಳನ್ನು ಲಾಲಿಸುತ್ತಾ, ರಿಪುಸಮೂಹ ಘಾತಕನಾದ ಅವನು ಈ ಮಾತನ್ನು ಆಡಿದನು.
ಯಸ್ಮಿನ್ ಧೃತಿರ್ಧರ್ಮದಮೌ ಬಲಂ ಹ್ರೀಃ
ಸತ್ಯಂ ಚ ದಾನಂ ಚ ಪರಾಕ್ರಮಶ್ಚ ।
ಶಸತ್ರಣಿ ದಿವ್ಯಾನ್ಯಥ ಸನ್ನತಿಶ್ರೀಃ
ಧೀಶ್ಚಾಪಿ ಭೀಷ್ಮೇ ನಿಯತಾಃ ಸದೈವ ॥ 5 ॥
ಬ್ರಹ್ಮದ್ವಿಷಘ್ನೇ ಸತತಂ ಕೃತಜ್ಞೇ
ಸನಾತನೀ ಚಾಂದ್ರಮಸೀವ ಲಕ್ಷ್ಮೀ ಕ್ಷಮೇಃ ।
ಸ ಚೇತ್ ಪ್ರಶಾಂತಃ ಪರವೀರಹಂತಾ
ಸರ್ವಾನನ್ಯಾನಾತುರಾನದ್ಯ ಮನ್ಯೇ ॥ 6 ॥
ಯಾವ ಭೀಷ್ಮರಲ್ಲಿ ಧೈರ್ಯ, ಧರ್ಮ, ಇಂದ್ರಿಯನಿಗ್ರಹ, ಬಲ, ನಾಚಿಕೆ, ಸತ್ಯ, ದಾನ, ಪರಾಕ್ರಮ, ದಿವ್ಯಶಸ್ತ್ರಗಳು, ವಿನಯ ಸಂಪತ್ತು ಮತ್ತು ಬುದ್ಧಿಯು ಚಂದ್ರನಲ್ಲಿಯ ಶಾಶ್ವತ ಕಾಂತಿಯಂತೆ ಯಾವಾಗಲೂ ನಿಯತವಾಗಿದ್ದವೋ, ಯಾವ ಭೀಷ್ಮರು ಬ್ರಹ್ಮದ್ವೇಷಿಗಳನ್ನು ಸಂಹರಿಸಿ ಯಾವಾಗಲೂ ಕೃತಜ್ಞರಾಗಿದ್ದರೋ, ಅಂತಹ ಪರವೀರಘಾತಕರಾದ ಅವರು ಪ್ರಶಾಂತರಾದರೆ ಉಳಿದ ಎಲ್ಲರನ್ನೂ ನಾನು ಈ ದಿನ ರೋಗಗ್ರಸ್ತರಾದವರೆಂದು ತಿಳಿಯುತ್ತೇನೆ.
ನೇಹ ಧ್ರುವಂ ಕಿಂಚನ ಜಾತು ವಿದ್ಯತೇ
ಅಸ್ಮಿಲ್ಲೋಕೇ ಕರ್ಮಣೋಽನಿತ್ಯಯೋಗಾತ್ ।
ಸೂರ್ಯೋದಯೇ ಕೋ ಹಿ ವಿಮುಕ್ತಸಂಶಯೋ
ಭಾವಂ ಕುರ್ವೀತಾದ್ಯ ಮಹಾವ್ರತೇ ಹತೇ ॥ 7 ॥
ಈ ಲೋಕದಲ್ಲಿ ಅನಿತ್ಯವಾದ ಕರ್ಮಗಳ ಕಾರಣದಿಂದ ದೃಢವಾದುದು ಯಾವುದೂ ಇಲ್ಲ. ಸೂರ್ಯನ ಉದಯಕ್ಕೆ ಸದೃಶವಾದ ಉದಯವನ್ನು ಹೊಂದಿದ್ದ ಮಹಾವ್ರತರಾದ ಭೀಷ್ಮರು ಹತರಾದ ಮೇಲೆ ಈ ದಿನ ಯಾವನು ನಿಸ್ಸಂಶಯವಾಗಿ `ನಾನು ಪಾಂಡವರನ್ನು ಗೆಲ್ಲುವೆನು' ಎಂಬ ಬುದ್ಧಿಯನ್ನು ಹೊಂದಿಯಾನು?
ವಸುಪ್ರಭಾವೇ ವಸುವೀರ್ಯಸಂಭವೇ
ಗತೇ ವಸೂನೇವ ವಸುಂಧರಾಧಿಪೇ ।
ವಸೂನಿ ಪುತ್ರಾಂಶ್ಚ ವಸುಂಧರಾಂ ತಥಾ
ಕುರೂಂಶ್ಚ ಶೋಚಧ್ವಮಿಮಾಂ ಚ ವಾಹಿನೀಮ್ ॥ 8 ॥
ವಸುಗಳ ಪ್ರಭಾವವುಳ್ಳವರೂ, ವಸುವೀರ್ಯದಿಂದ ಜನಿಸಿದವರೂ, ವಸುಂಧರಾಧಿಪರೂ ಆದ ಭೀಷ್ಮರು ವಸುಗಳನ್ನೇ ಹೋಗಿ ಸೇರಿದ ಮೇಲೆ ಅವರ ಸಂಪತ್ತನ್ನು, ಪುತ್ರರನ್ನು, ಭೂಮಿಯನ್ನು, ಕುರುಗಳನ್ನು ಮತ್ತು ಈ ಸೈನ್ಯವನ್ನು ಕುರಿತು ಶೋಕವನ್ನು ಹೊಂದುವವರಾಗಿ;
ಸಂಜಯಃ
ಮಹಾಪ್ರಭಾವೇ ವರದೇ ನಿಪಾತಿತೇ

ಲೋಕಜ್ಯೇಷ್ಠೇ ಶಾಂತನವೇಽಮಿತೌಜಸಿ |
ಪರಾಜಿತೇಷು ಭರತೇಷು ದುರ್ಮನಾಃ
ಕರ್ಣೋ ಭೃಶಂ ನಿಃಶ್ವಸನ್ನಶ್ರುವರ್ತಯತ್ ॥ 9 ॥
ಮಹಾಪ್ರಭಾವವುಳ್ಳವರೂ, ಲೋಕದಲ್ಲಿ ಹಿರಿಯರಾದವರೂ, ಅಮಿತ ಪರಾಕ್ರಮಿಗಳೂ, ವರಪ್ರದರೂ ಆದ ಭೀಷ್ಮರು ನಿಪಾತವನ್ನು ಹೊಂದುತ್ತಿರಲು, ಕೌರವರು ಪರಾಜಿತರಾಗುತ್ತಿರಲು ಖೇದಗೊಂಡ ಕರ್ಣನು ಬಹಳವಾಗಿ ನಿಟ್ಟುಸಿರನ್ನು ಬಿಡುತ್ತಾ ಕಣ್ಣೀರನ್ನು ಸುರಿಸಿದನು.
ಇದಂ ತು ರಾಧೇಯವಚೋ ನಿಶಮ್ಯ ತೇ
ಸುತಾಶ್ಚ ರಾಜಂಸ್ತವ ಸೈನಿಕಾಶ್ಚ ಯೇ |
ಪರಸ್ಪರಂ ಚುಕ್ರುಶುರಂಬು ಚಾರ್ತಿಜಂ
ತದಾಽಶು ನೇತ್ರೈರ್ಮುಮುಚುರ್ಹಿ ಶಬ್ದವತ್ ॥ 10 ॥
ಎಲೈ ರಾಜನೇ, ಕರ್ಣನ ಈ ಮಾತುಗಳನ್ನು ಕೇಳಿ ಆ ನಿನ್ನ ಪುತ್ರರು ಮತ್ತು ಸೈನಿಕರು ಪರಸ್ಪರವಾಗಿ ಕಿರುಚಿ ತಮ್ಮ ನೇತ್ರಗಳಿಂದ ದುಃಖದ ಕಣ್ಣೀರನ್ನು ಶಬ್ದ ಸಹಿತವಾಗಿ ಸುರಿಸಿದರು.
ಪ್ರವರ್ತಮಾನೇ ತು ಪುನರ್ಮಹಾಹವೇ
ಮಹಾರಥಾನಾಂ ಚ ಮದೇ ಸಮುತ್ಥಿತೇ |
ಅಥಾಬ್ರವೀದ್ ಹರ್ಷಕರಂ ವಚಸ್ತದಾ
ರಥರ್ಷಭಾನ್ ಸರ್ವಮಹಾರಥರ್ಷಭಃ ॥ 11 ॥
ಪುನಃ ದೊಡ್ಡ ಯುದ್ಧವು ಪ್ರವೃತ್ತವಾಗುತ್ತಿರಲು ಮಹಾರಥರಿಗೆ ಮದವು ಉಂಟಾಗುತ್ತಿರಲು, ಸರ್ವಮಹಾರಥರಲ್ಲಿ ಶ್ರೇಷ್ಠನಾದ ಕರ್ಣನು ಆ ರಥಶ್ರೇಷ್ಠರಿಗೆ ಹರ್ಷಕರವಾದ ಮಾತುಗಳನ್ನು ಆಡಿದನು.
ಜಗತ್ಯನಿತ್ಯೇ ಸತತಂ ಪ್ರಧಾವಿತೇ
ವಿಚಿಂತಯನ್ನಸ್ಥಿರಮದ್ಯ ಲಕ್ಷಯೇ |
ಭವತ್ಸು ತಿಷ್ಠತ್ಸ್ವಿಹ ಪಾತಿತೋ ರಣೇ
ಗಿರಿಪ್ರಕಾಶಃ ಕುರುಪುಂಗವಃ ಪರೈಃ ॥ 12 ॥
ಸತತವಾಗಿ ಓಡುತ್ತಿರುವ ಈ ಅನಿತ್ಯವಾದ ಜಗತ್ತಿನಲ್ಲಿ ಯೋಚನೆ ಮಾಡಿದರೆ ಈ ದಿನ ಎಲ್ಲವೂ ಅಸ್ಥಿರವೆಂದು ಭಾವಿಸುತ್ತೇನೆ. ನೀವೆಲ್ಲರೂ ಇರುವಾಗಲೇ ಪರ್ವತದಂತಿದ್ದ ಕುರುಪುಂಗವರಾದ ಭೀಷ್ಮರು ಯುದ್ಧದಲ್ಲಿ ಶತ್ರುಗಳಿಂದ ಕೆಡವಲ್ಪಟ್ಟರು.
ನಿಪಾತಿತೇ ಶಾಂತನವೇ ನರರ್ಷಭೇ
ದಿವಾಕರೇ ಭೂತಳಮಾಶ್ರಿತೇ ಯಥಾ |
ನ ಪಾರ್ಥಿವಾಃ ಸೋಢುಮಲಂ ಧನಂಜಯಂ
ಗಿರಿಪ್ರವೋಢಾರಮಿವಾನಿಲಂ ದ್ರುಮಾಃ ॥ 13 ॥
ಸೂರ್ಯನು ಭೂತಳದಲ್ಲಿ ಬಿದ್ದಂತೆ ನರಶ್ರೇಷ್ಠರಾದ ಭೀಷ್ಮರು ಭೂತಳದಲ್ಲಿ ಕೆಡವಲ್ಪಡುತ್ತಿರಲು ಈ ದಿನ ಪರ್ವತವನ್ನೇ ಹೊತ್ತುಕೊಂಡು ಹೋಗುವ ವಾಯುವನ್ನು ವೃಕ್ಷಗಳು ತಡೆಯಲು ಸಾಧ್ಯವಿಲ್ಲದಂತೆ ಯಾವ ರಾಜರೂ ಅರ್ಜುನನನ್ನು ತಡೆಯಲು (ಸಹಿಸಲು) ಸಮರ್ಥರಾಗುವುದಿಲ್ಲ.
ಹತಪ್ರಧಾನಂ ತ್ವಿದಮಾರ್ತಮಾತುರಂ
ಪರೈರಭಿಗ್ರಸ್ತಮನಾಥವದ್ ದ್ರುತಮ್ |
ಮಯಾ ಕುರೂಣಾಂ ಪರಿಪಾಲ್ಯಮಾಹವೇ
ಬಲಂ ತಥಾ ತೇನ ಮಹಾತ್ಮನಾ ಯಥಾ ॥ 14 ॥
ಪ್ರಧಾನರನ್ನು ಕಳೆದುಕೊಂಡ ಈ ಸೈನ್ಯವು ಆರ್ತವಾಗಿ ರೋಗದಿಂದ ಕೂಡಿದಂತಿದೆ. ಶತ್ರುಗಳಿಂದ ಉಪದ್ರವಕ್ಕೆ ಒಳಗಾಗಿ ಅನಾಥರಂತೆ ಓಡುತ್ತಿದೆ. ನಾನು ಕುರುಗಳ ಸೈನ್ಯವನ್ನು ಯುದ್ಧದಲ್ಲಿ ಆ ಮಹಾತ್ಮರು ರಕ್ಷಿಸಿದಂತೆಯೇ ರಕ್ಷಿಸಬೇಕು.
ಸಮಾಹಿತಂ ಚಾತ್ಮನಿ ಭಾರಮೀದೃಶಂ
ಜಗತ್ ತಥಾಽನಿತ್ಯಮಹಂ ಚ ಲಕ್ಷಯೇ |
ನಿಪಾತಿತಂ ಚಾಹವಶೌಂಡಮಾಹವೇ
ಕಥಂ ನು ಕುರ್ಯಾಮಹಮಾಹವೇ ಭಯಮ್ ॥ 15 ॥
ನನ್ನ ಮೇಲೆ ಹೊರಿಸಿದ ಈ ಭಾರವನ್ನು ಬಹಳ ಭಾರಭೂತವಾದುದು ಎಂದು ಭಾವಿಸುತ್ತೇನೆ. ಹಾಗೆಯೇ ಜಗತ್ತು ಅನಿತ್ಯವಾದುದು ಎಂದೂ ಭಾವಿಸುತ್ತೇನೆ. ಯುದ್ಧಕುಶಲರಾದ ಭೀಷ್ಮರು ರಣರಂಗದಲ್ಲಿ ಕೆಡವಲ್ಪಡುವುದನ್ನು ನೋಡಿ ನಾನು ಹೇಗೆ ಯುದ್ಧಕ್ಕೆ ಹೆದರಲು ಸಾಧ್ಯ?
ಅಹಂ ಹಿ ತಾನ್ ಕುರುವೃಷಭಾನಜಿಹ್ಮಗೈಃ
ಪ್ರಯಾಪಯನ್ ಯಮಸದನಂ ರಣೇ ಚರನ್
ಯಶಃ ಪರಂ ಜಗತಿ ವಿಭಾವ್ಯ ವರ್ತಯೇ
ಪರೈರ್ಹತಃ ಸ ಇವ ಭವಾಮಿ ವಾ ಪುನಃ ॥ 16 ॥
ನಾನು ಕುರುಶ್ರೇಷ್ಠರಾದ ರಣರಂಗದಲ್ಲಿ ಸಂಚರಿಸುತ್ತಾ ಆ ಪಾಂಡವರನ್ನು ನೇರವಾಗಿ ಸಾಗುವ ನನ್ನ ಬಾಣಗಳಿಂದ ಯಮಲೋಕಕ್ಕೆ ಕಳುಹಿಸುತ್ತಾ ಜಗತ್ತಿನಲ್ಲಿ ಶ್ರೇಷ್ಠವಾದ ಕೀರ್ತಿಯನ್ನು ಹೊಂದಿ ಬದುಕುತ್ತೇನೆ ಅಥವಾ ಅವರಿಂದಲೇ ಹತನಾಗಿ ಭೀಷ್ಮರಂತೆಯೇ

ಆಗುತ್ತೇನೆ.
ಯುಧಿಷ್ಠಿರೋ ಧೃತಿಮತಿಸತ್ಯಸತ್ತ್ವವಾನ್
ವೃಕೋದರೋ ಗಜಶತತುಲ್ಯವಿಕ್ರಮಃ |
ಅಥಾರ್ಜುನಸ್ತ್ರಿದಶವರಾತ್ಮಜೋ ಯತೋ
ನ ತದ್ಬಲಂ ಸುಜಯಮಿಹಾಮರೈರಪಿ ॥ 17 ॥
ಯುಧಿಷ್ಠಿರನು ಧೈರ್ಯ, ಬುದ್ಧಿ, ಸತ್ಯ ಮತ್ತು ಬಲಗಳಿಂದ ಕೂಡಿದವನು. ವೃಕೋದರನು ನೂರು ಗಜಗಳಿಗೆ ಸಮಾನವಾದ ಪರಾಕ್ರಮವುಳ್ಳವನು ಮತ್ತು ಅರ್ಜುನನು ದೇವಶ್ರೇಷ್ಠನಾದ ಇಂದ್ರನ ಪುತ್ರನು. ಆ ಕಾರಣದಿಂದ ದೇವತೆಗಳೂ ಆ ಸೈನ್ಯವನ್ನು ಸುಲಭವಾಗಿ ಗೆಲ್ಲಲಾರರು.
ಯಮೌ ರಣೇ ಯತ್ರ ಯಮೋಪಮೌ ಬಲೇ
ಸಸಾತ್ಯಕಿರ್ಯತ್ರ ಚ ದೇವಕೀಸುತಃ |
ಸ ತದ್ಬಲಂ ಕಃ ಪುರುಷೋಽಭ್ಯುಪೇಯಿವಾನ್
ನಿವರ್ತತೇ ಮೃತ್ಯುಮುಖಾದಿವಾಸಕೃತ್ ॥ 18 ॥
ಯಮರಿಗೆ ಸದೃಶರಾದ ನಕುಲ-ಸಹದೇವರು ಯಾವ ಸೈನ್ಯದಲ್ಲಿ ಇರುತ್ತಾರೆಯೋ, ಯಾವ ಸೈನ್ಯದಲ್ಲಿ ಸಾತ್ಯಕಿಯಿಂದ ಸಹಿತನಾದ ದೇವಕೀಪುತ್ರನು ಇರುತ್ತಾನೆಯೋ ಆ ಸೈನ್ಯವನ್ನು ಪ್ರವೇಶಿಸಿ ಮೃತ್ಯುಮುಖದಿಂದ ಹಿಂದೆ ಬಂದಂತೆ ಯಾವನು ಪುನಃ ಹಿಂದೆ ಬರುತ್ತಾನೆ?
ತಪೋಽಭ್ಯುದೀರ್ಣಂ ತಪಸೈವ ಧಾರ್ಯತೇ
ಬಲಂ ಬಲೇನಾಪ್ಯರಿಣಾ ಮನಸ್ವಿನಾ |
ಮನಶ್ಚ ಮೇ ಶತ್ರುನಿವಾರಣೇ ಧ್ರುವಂ
ಸ್ವರಕ್ಷಣೇ ಚಾಚಲವದ್ ವ್ಯವಸ್ಥಿತಮ್ ॥ 19 ॥
ಶ್ರೇಷ್ಠವಾದ ತಪಸ್ಸು ತಪಸ್ಸಿನಿಂದಲೇ ಎದುರಿಸಲ್ಪಡುತ್ತದೆ. ಸೈನ್ಯವೂ ಸಹ ಧೈರ್ಯಶಾಲಿಯಾದ ಶತ್ರುಭೂತವಾದ ಸೈನ್ಯದಿಂದ ಎದುರಿಸಲ್ಪಡುತ್ತದೆ. ನನ್ನ ಮನಸ್ಸು ನನ್ನ ರಕ್ಷಣೆಯಲ್ಲಿಯೂ ಮತ್ತು ಶತ್ರುನಿವಾರಣೆಯಲ್ಲಿಯೂ ಪರ್ವತದಂತೆ ಸ್ಥಿರವಾಗಿದೆ.
ಏವಂ ತೇಷಾಂ ಬಾಧಮಾನಃ ಪ್ರಭಾವಂ
ಗತ್ವೈವಾಹಂ ತಾನ್ ಜಯಾಮ್ಯದ್ಯ ಸೂತ |
ಮಿತ್ರದ್ರೋಹೋ ಮರ್ಷಣೀಯೋ ನ ಮೇಽಯಮ್
ಭಗ್ನೇ ಸೈನ್ಯೇ ಯಃ ಸಮೇಯಾತ್ ಸ ಮಿತ್ರಮ್ ॥ 20 ॥
ಎಲೈ ಸಾರಥಿಯೇ, ಈಗ ನಾನು ಅವರ ಪ್ರಭಾವವನ್ನು ಬಾಧಿಸಿ ಈ ದಿನ ರಣರಂಗವನ್ನು ಸೇರಿ ಅವರನ್ನು ಗೆಲ್ಲುತ್ತೇನೆ. ಈ ಮಿತ್ರದ್ರೋಹವನ್ನು ನಾನು ಸಹಿಸಲಾರೆ. ಸೈನ್ಯವು ಭಗ್ನವಾಗಿರುವಾಗ ಯಾವನು ಸಹಾಯಕ್ಕೆ ಒದಗುತ್ತಾನೆಯೋ ಅವನೇ ಮಿತ್ರನಾದವನು.
ಆಹುರ್ಹ್ಯೇತತ್ ಸತ್ಪುರುಷಸ್ಯ ಕರ್ಮ
ತ್ಯಕ್ತ್ವಾ ಪ್ರಾಣಾನ್ ಯೋಧಯೇದ್ ಯತ್ ಸಪತ್ನೈಃ |
ಸರ್ವಾನ್ ಶತ್ರೂನಾಹವೇಽಹಂ ಹನಿಷ್ಯೇ
ತೈರ್ವಾ ಹತೋ ಮೃತ್ಯುಲೋಕಂ ಗಮಿಷ್ಯೇ ॥ 21 ॥
ಪ್ರಾಣಗಳನ್ನು ತ್ಯಜಿಸಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವುದನ್ನು ಸತ್ಪುರುಷರು ಮಾಡಬೇಕಾದ ಕಾರ್ಯವೆಂದು ಹಿರಿಯರು ಹೇಳುತ್ತಾರೆ. ನಾನು ಎಲ್ಲ ಶತ್ರುಗಳನ್ನೂ ಯುದ್ಧದಲ್ಲಿ ಕೊಲ್ಲುವೆನು ಅಥವಾ ಅವರಿಂದ ಕೊಲ್ಲಲ್ಪಟ್ಟು ಮೃತ್ಯುಲೋಕಕ್ಕೆ ಹೋಗುವೆನು.
ಸಂಪ್ರಾಕ್ರುಷ್ಟೇ ರುದಿತೇ ಸ್ತ್ರೀ ಕುಮಾರೇ
ಪರಾಜಿತೇಽಪೌರುಷೇ ಧಾರ್ತರಾಷ್ಟ್ರೇ |
ಮಯಾ ಕಾರ್ಯಂ ಸಾಹ್ಯಮದ್ಯೈವ ಸೂತ
ತಸ್ಮಾಚ್ಛತ್ರೂನ್ ಧಾರ್ತರಾಷ್ಟ್ರಸ್ಯ ಜೇಷ್ಯೇ ॥ 22 ॥
ಶಿಶುವು ಅತ್ತರೆ ತಾಯಿಯು ಅಳುತ್ತಾಳೆ. ಹಾಗೆ ಅಳುವುದು ವೀರಭಟನ ಧರ್ಮವಲ್ಲ. ಎಲೈ ಸಾರಥಿಯೇ, ದುರ್ಯೋಧನನು ಹೀನಪೌರುಷನಾಗಿ ಪರಾಜಿತನಾಗಿರುವಾಗ ನಾನು ಈ ದಿನ ಅವನಿಗೆ ಸಹಾಯವನ್ನು ಮಾಡಲೇಬೇಕು. ಆದ್ದರಿಂದ ಅವನ ಶತ್ರುಗಳನ್ನು ಗೆಲ್ಲುವೆನು.
ಕುರೂನ್ ರಕ್ಷನ್ ಪಾಂಡುಪುತ್ರಾನ್ ಜಿಘಾಂಸನ್
ತ್ಯಕ್ತ್ವಾ ಪ್ರಾಣಾನನುಯಾಸ್ಯಾಮಿ ಭೀಷ್ಮಮ್ |
ಸರ್ವಾನ್ ವಾಽಹಂ ಶತ್ರುಸಂಘಾನ್ ವಿಜಿತ್ಯ
ತಸ್ಮೈ ದಾಸ್ಯೇ ಧಾರ್ತರಾಷ್ಟ್ರಾಯ ರಾಜ್ಯಮ್ ॥ 23 ॥
ಕುರುಗಳನ್ನು ರಕ್ಷಿಸುತ್ತಾ ಪಾಂಡವರನ್ನು ವಧೆ ಮಾಡಲು ಬಯಸಿ ನಾನು ಪ್ರಾಣಗಳನ್ನು ಬಿಟ್ಟು ಭೀಷ್ಮರನ್ನು ಹಿಂಬಾಲಿಸುವೆನು ಅಥವಾ ಎಲ್ಲ ಶತ್ರುಸಮೂಹವನ್ನು ಗೆದ್ದು ದುರ್ಯೋಧನನಿಗೆ ರಾಜ್ಯವನ್ನು ನೀಡುವೆನು.
ನಿಬಧ್ಯತಾಂ ಮೇ ಕವಚಂ ವಿಚಿತ್ರಂ
ಹೈಮಂ ಚಿತ್ರಂ ಮಣಿಮತ್ ಸ್ವಾವಭಾಸಿ |

ಶಿರಸಾತ್ರಣಂ ಚಾರ್ಕಸಮಾನಭಾಸಂ
ಧನುಃ ಶರಾಂಶ್ಚಾಪಿ ವಿಷಾಗ್ನಿಕಲ್ಪಾನ್ ॥ 24 ॥
ನನಗೆ ವಿಚಿತ್ರವಾದ, ಸುವರ್ಣಮಯವಾದ, ಮಣಿಗಳಿಂದ ಭೂಷಿತವಾದ, ತಾನಾಗಿಯೇ ಹೊಳೆಯುವ ಕವಚವನ್ನು ತೊಡಿಸಿ. ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯುಳ್ಳ ಶಿರಸಾತ್ರಣವನುನ, ಧನುಸ್ಸನ್ನು ಮತ್ತು ವಿಷಾಗ್ನಿ ಸದೃಶವಾದ ಬಾಣಗಳನ್ನು ರಥದಲ್ಲಿ ಸಿದ್ಧಪಡಿಸಿ.
ಉಪಾಸಂಗಾನ್ ಷೋಡಶ ಯೋಜಯಂತು
ಧನೂಂಷಿ ದಿವ್ಯಾನಿ ಸಮಾಹರಂತು ।
ಅಸೀನ್ ಶತಘ್ನೀಶ್ಚ ಗದಾಶ್ಚ ಗುರ್ವೀಃ
ಶಂಖಂ ಚ ಜಾಂಬೂನದಚಿತ್ರನಾಭಮ್ ॥ 25 ॥
ಹದಿನಾರು ಬತ್ತಳಿಕೆಗಳನ್ನು ರಥದಲ್ಲಿ ಸೇವಕರು ಜೋಡಿಸಲಿ. ದಿವ್ಯವಾದ ಧನುಸ್ಸುಗಳನ್ನು ತೆಗೆದುಕೊಂಡು ಬರಲಿ. ಖಡ್ಗಗಳು, ಶತಘ್ನಿಗಳು, ದೊಡ್ಡ ಗದೆಗಳು, ಸುವರ್ಣಾಲಂಕೃತ ನಾಭಿಯುಳ್ಳ ಶಂಖ (ಇವುಗಳನ್ನೂ ತೆಗೆದುಕೊಂಡು ಬರಲಿ).
ಸ್ವೀತಾಂ ರೌಗ್ಮೀಂ ನಾಗಕಕ್ಷ್ಯಾಂ ವಿಚಿತ್ರಾಂ
ಛತ್ರಂ ಶ್ವೇತಂ ಧ್ವಜಮಿಂದೀವರಾಭಮ್ ।
ಶ್ಲಕ್ಷ್ಣೈರ್ವಸ್ತ್ರೈರ್ವಿಪ್ರಮೃಜ್ಯಾನಯಸ್ವ
ಚಿತ್ರಾಂ ಮಾಲಾಂ ತತ್ರ ಬದ್ಧ್ವಾ ಸಜಾಲಾಮ್ ॥ 26 ॥
ಶುದ್ಧವಾದ, ಸುವರ್ಣಮಯವಾದ, ವಿಚಿತ್ರವಾದ ಸರ್ಪಾಕಾರ ಉದರಬಂಧನವನ್ನೂ ಶ್ವೇತಚ್ಛತ್ರ, ಇಂದೀವರ ಕಾಂತಿಯುಳ್ಳ ಧ್ವಜಗಳನ್ನೂ ಸೂಕ್ಷ್ಮವಸ್ತ್ರಗಳಿಂದ ಉಜ್ಜಿದ ವಿಚಿತ್ರವಾದ ಮಾಲೆಗಳನ್ನೂ ಮತ್ತು ಜಾಲಗಳನ್ನೂ ರಥದಲ್ಲಿ ಬಂಧಿಸಿ.
ಅಶ್ವಾನಗ್ರ್ಯಾನ್ ಪಾಂಡರಾಭ್ರಪ್ರಕಾಶಾನ್
ಪುಷ್ಟಾನ್ ಸ್ನಾತಾನ್ ವೇದಪೂತಾಭಿರದ್ಭಿಃ ।
ಚಿತ್ರೈರ್ಭಾಂಡೈಃ ಕಾಂಚನೈರಭ್ಯುಪೇತಾನ್
ಶೀಘ್ರಂ ಶೀಘ್ರಾನ್ ಸೂತಪುತ್ರಾನಯಸ್ವ ॥ 27 ॥
ಎಲೈ ಸೂತಪುತ್ರನೇ, ಬಿಳಿಯ ಮೋಡದ ಪ್ರಕಾಶವನ್ನು ಹೊಂದಿದ, ಪುಷ್ಟವಾದ, ವೇದಗಳಿಂದ ಅಭಿಮಂತ್ರಿತವಾದ ಜಲದಲ್ಲಿ ಸ್ನಾನವನ್ನು ಮಾಡಿಸಿದ, ವಿಚಿತ್ರವಾದ, ಸುವರ್ಣಾಲಂಕೃತವಾದ, ಶೀಘ್ರಗಾಮಿಗಳಾದ, ಶ್ರೇಷ್ಠವಾದ ಅಶ್ವಗಳನ್ನು ಶೀಘ್ರವಾಗಿ ತೆಗೆದುಕೊಂಡು ಬಾ.
ರಥಂ ಚಾಗ್ರ್ಯಂ ಹೇಮಮಾಲಾವನದ್ಧಂ
ರತ್ನೈಶ್ಚಿತ್ರಂ ಚಂದ್ರಸೂರ್ಯಪ್ರಕಾಶೈಃ ।
ದಿವ್ಯೈರ್ಯುಕ್ತಂ ಸಂಪ್ರಹಾರೋಪಪನ್ನೈಃ
ವಾಹೈರ್ಯುಕ್ತಂ ತೂರ್ಣಮಾವರ್ತಯಸ್ವ ॥ 28 ॥
ಹೇಮಮಾಲೆಗಳಿಂದ ಭೂಷಿತವಾದ, ಚಂದ್ರ-ಸೂರ್ಯರಂತೆ ರತ್ನಗಳಿಂದ ಹೊಳೆಯುವ, ವಿಚಿತ್ರವಾದ ಸಂಪ್ರಹಾರವನ್ನು ತಡೆಯುವ, ದಿವ್ಯವಾದ ಅಶ್ವಗಳಿಂದ ಯುಕ್ತವಾದ, ಶ್ರೇಷ್ಠವಾದ ರಥವನ್ನು ಶೀಘ್ರವಾಗಿ ತೆಗೆದುಕೊಂಡು ಬಾ.
ಚಿತ್ರಾಣಿ ಚಾಪಾನಿ ಚ ವೇಗವಂತಿ
ಜ್ಯಾಶ್ಚೋತ್ತಮಾಃ ಸಂಹನನೋಪಪನ್ನಾಃ ।
ತೂಣಾನಿ ಪೂರ್ಣಾನಿ ಚ ಮರ್ಮಭಿದ್ಭಿಃ
ಆಸಜ್ಯ ತತ್ರಾವರಣಾನಿ ಚೈವ ॥ 29 ॥
ವೇಗಶಾಲಿಗಳಾದ ವಿಚಿತ್ರವಾದ ಧನುಸ್ಸುಗಳನ್ನು, ಬಲದಿಂದ ಕೂಡಿರುವ ಉತ್ತಮವಾದ ಹೆದೆಗಳನ್ನು; ಮರ್ಮಭೇದಕವಾದ ಬಾಣಗಳಿಂದ ತುಂಬಿರುವ ಬತ್ತಳಿಕೆಗಳನ್ನು ಮತ್ತು ಆವರಣಗಳನ್ನು ಅಲ್ಲಿ ತೂಗಿಹಾಕಿ (ರಥವನ್ನು ತೆಗೆದುಕೊಂಡು ಬಾ).
ಪ್ರಾಯಾತ್ರಿಕಂ ಚಾನಯ ಸರ್ವಮಾಶು
ಪೂರ್ಣಂ ಕಾಂತ್ಯಾ ವೀರಕಾಂಸ್ಯಂ ಚ ಹೈಮಮ್ ।
ಆನೀಯ ಮಾಲಾಮವಲಂಬ್ಯ ಚಾಂಗೇ
ಪ್ರವಾದಯಿತ್ವಾ ವಿಜಯಾಯ ಭೇರೀಮ್ ॥ 30 ॥
ರಣರಂಗಕ್ಕೆ ಹೋಗಲು ಬೇಕಾದ ಎಲ್ಲ ಸಾಮಗ್ರಿಗಳನ್ನೂ ತೆಗೆದುಕೊಂಡು ಬಾ. ವೀರರ ಕೊರಳಿಗೆ ಯೋಗ್ಯವಾದ ಸುವರ್ಣಮಯವಾದ ಮಾಲೆಗಳನ್ನೂ, ಪುಷ್ಪಮಾಲೆಗಳನ್ನೂ ನನ್ನ ಶರೀರದಲ್ಲಿ ಧರಿಸಿ ವಿಜಯ ಭೇರಿಯನ್ನು ಬಾರಿಸಿ (ನಾನು ಯುದ್ಧಕ್ಕೆ ಹೊರಡುವೆನು).
ಪ್ರಯಾಹಿ ಸೂತಾಶು ಯತಃ ಕಿರೀಟೀ
ವೃಕೋದರೋ ಧರ್ಮಸುತೋ ಯಮೌ ಚ ।
ತಾನ್ ವಾ ಹನಿಷ್ಯಾಮಿ ಸಮೇತ್ಯ ಸಂಖ್ಯೇ
ಭೀಷ್ಮಾಯ ವೈಷ್ಯಾಮಿ ಹತೋ ದ್ವಿಷದ್ಭಿಃ ॥ 31 ॥
ಎಲೈ ಸೂತನೇ, ಎಲ್ಲಿ ಅರ್ಜುನ, ಭೀಮಸೇನ, ಯುಧಿಷ್ಠಿರ ಮತ್ತು ನಕುಲ ಸಹದೇವರು ಇದ್ದಾರೆಯೋ ಅಲ್ಲಿಗೆ ಶೀಘ್ರವಾಗಿ ಹೋಗುವವನಾಗು. ಯುದ್ಧದಲ್ಲಿ ಅವರನ್ನು ಸಂಧಿಸಿ ಅವರನ್ನಾದರೂ ಕೊಲ್ಲುವೆನು ಅಥವಾ ಶತ್ರುಗಳಿಂದ ಹತನಾಗಿ ಭೀಷ್ಮರನ್ನಾದರೂ ಸೇರುವೆನು.

ಯತ್ರ ರಾಜಾ ಸತ್ಯಧೃತಿರ್ಯುಧಿಷ್ಠಿರಃ
ಸಮಾಸ್ಥಿತೋ ಭೀಮಸೇನಾರ್ಜುನೌ ತೌ |
ವಾಸುದೇವಃ ಸಾತ್ಯಕಿಃ ಸೃಂಜಯಾಶ್ಚ
ಯಮೌ ಪಾಂಚಾಲಾಃ ಕೇಕಯಾಶ್ಚೈವ ಸರ್ವೇ ॥ 32 ॥
ತಿಷ್ಠೇನ್ಮ ೃತ್ಯುಃ ಸರ್ವಹರೋಽಭಿರಕ್ಷನ್
ಸ್ಯಾದಪ್ರಮತ್ತಃ ಸಮರೇ ಕಿರೀಟಿನಮ್
ತಂ ವಾ ಹನಿಷ್ಯಾಮಿ ಸಮೇತ್ಯ ಸಂಖ್ಯೇ
ಯಾಸ್ಯಾಮಿ ವಾ ಭೀಷ್ಮಮುಖೋ ಯಮಾಯ ॥ 33 ॥
ಎಲ್ಲಿ ಸತ್ಯವಾದ ಧೈರ್ಯವುಳ್ಳ ರಾಜನಾದ ಯುಧಿಷ್ಠಿರನು ಇರುತ್ತಾನೆಯೋ, ಆ ಭೀಮಾರ್ಜುನರು ಇರುತ್ತಾರೆಯೋ, ಕೃಷ್ಣ-ಸಾತ್ಯಕಿ-ಸೃಂಜಯರು, ನಕುಲ-ಸಹದೇವರು, ಪಾಂಚಾಲರು ಮತ್ತು ಎಲ್ಲ ಕೈಕೇಯರು ಇರುತ್ತಾರೆಯೋ ಅಲ್ಲಿ ಸರ್ವಸಂಹಾರಕವಾದ ಮೃತ್ಯುವು ಇರುತ್ತದೆ. ಆದ್ದರಿಂದ ಎಚ್ಚರಿಕೆಯಿಂದ ನಿನ್ನನ್ನು (ಮತ್ತು ನನ್ನನ್ನು) ರಕ್ಷಿಸಿಕೊಂಡು, ರಣರಂಗದಲ್ಲಿ ಅರ್ಜುನನಿದ್ದಲ್ಲಿಗೆ ಹೋಗಿ, ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವನನ್ನು ಕೊಲ್ಲುವೆನು ಅಥವಾ ಭೀಷ್ಮರನ್ನು ಮುಂದೆ ಮಾಡಿಕೊಂಡು ಯಮನ ಬಳಿಗೆ ಹೋಗುವೆನು.
ನ ತ್ವೇವಾಹಂ ನ ಗಮಿಷ್ಯಾಮಿ ಯೇಷಾಂ
ಮಧ್ಯೇ ಶೂರಾಣಾಂ ತತ್ರ ಸತ್ಯಂ ಬ್ರವೀಮಿ
ಮಿತ್ರದ್ರುಹೋ ದುರ್ಬಲಾಭಕ್ತಯೋ ಯೇ
ಪಾಪಾತ್ಮಾನೋ ಮಮ ನ ಸ್ಯುಃ ಸಹಾಯಾಃ ॥ 34 ॥
ನಾನು ಶೂರರಾದ ಅವರ ಮಧ್ಯದಲ್ಲಿ ಹೋಗುವುದಿಲ್ಲವೆಂಬುದು ಎಂದೂ ಇಲ್ಲ. ಶೂರರ ಮಧ್ಯವನ್ನು ಪ್ರವೇಶಿಸಿದ ಮೇಲೆ ನನ್ನ ಅಭೀಷ್ಟವನ್ನು ಹೇಳುತ್ತೇನೆ. ಮಿತ್ರದ್ರೋಹಿಗಳೂ, ದುರ್ಬಲರೂ, ಸ್ವಾಮಿನಿಷ್ಠೆ ಇಲ್ಲದವರೂ ಮತ್ತು ಪಾಪಿಷ್ಠರೂ ನನ್ನ ಸಹಾಯಕ್ಕೆ ಬರುವುದು ಬೇಡ.
ಸಂಜಯಃ
ತಂ ಸಿದ್ಧಿಮಂತಂ ದೃಢಮುತ್ತಮಂ ರಥಂ
ಸುಕೂಬರಂ ಹೇಮಪರಿಷ್ಕೃತಂ ಶುಭಮ್
ಪತಾಕಿನಂ ವಾತಜವೈರ್ಹಯೋತ್ತಮೈಃ
ಯುತಂ ಸಮಾಸ್ಥಾಯ ಯಯೌ ಜಯಾಯ ॥ 35 ॥
ಸಂಜಯ ಅವನು ಒಳ್ಳೆಯ ಸಿದ್ಧಿಯುಳ್ಳ, ಒಳ್ಳೆಯ ಕೂಬರದಿಂದ ಸಹಿತವಾದ, ಸುವರ್ಣಾಲಂಕೃತವಾದ, ಶುಭವಾದ ಪತಾಕೆಗಳಿಂದ ಕೂಡಿದ, ವಾಯುವೇಗವುಳ್ಳ ಅಶ್ವಗಳನ್ನು ಹೂಡಿದ, ದೃಢವಾದ ಮತ್ತು ಉತ್ತಮವಾದ ರಥವನ್ನು ಏರಿ ಜಯವನ್ನು ಸಂಪಾದಿಸಲು ಹೊರಟನು.
ಸಂಪೂಜ್ಯಮಾನಃ ಕುರುಭಿರ್ಮಹಾತ್ಮಾ
ರಥರ್ಷಭಃ ಪಾಂಡರವಾಜಿವಾಹಃ
ಯಯೌ ತದಾಯೋಧನಮುಗ್ರಧನ್ವಾ
ಯತ್ರಾವಸಾನಂ ಭರತರ್ಷಭಸ್ಯ ॥ 36 ॥
ಮಹಾತ್ಮನೂ, ರಥಶ್ರೇಷ್ಠನೂ, ಉಗ್ರವಾದ ಧನುಸ್ಸುಳ್ಳವನೂ, ಪಾಂಡುವರ್ಣದ ಅಶ್ವಗಳನ್ನು ಹೊಂದಿದ ರಥವುಳ್ಳವನೂ ಆದ ಅವನು ಕೌರವರಿಂದ ಪೂಜಿತನಾಗಿ ರಣರಂಗದಲ್ಲಿ ಭರತರ ಸೈನ್ಯವು ಕೊನೆಗೊಳ್ಳುವಲ್ಲಿಗೆ ಹೋದನು.
ವರೂಥಿನಾ ಮಹತಾ ಸಧ್ವಜೇನ
ಸುವರ್ಣಮುಕ್ತಾಮಣಿವಜ್ರಶಾಲಿನಾ
ಸದಶ್ವಯುಕ್ತೇನ ರಥೇನ ಕರ್ಣೋ
ಮೇಘಸ್ವನೇನಾರ್ಕ ಇವಾವಭಾಸೇ ॥ 37 ॥
ದೊಡ್ಡ ರಕ್ಷಣೆಯಿಂದ ಕೂಡಿದವನಾಗಿ, ಸುವರ್ಣ ಮತ್ತು ಮುತ್ತು-ರತ್ನ- ವಜ್ರಗಳಿಂದ ಅಲಂಕೃತವಾದ, ಒಳ್ಳೆಯ ಅಶ್ವಗಳನ್ನು ಹೂಡಿದ, ಧ್ವಜಸಹಿತವಾದ, ಮೇಘದಂತೆ ಧ್ವನಿಯುಳ್ಳ ರಥದಿಂದ ಕೂಡಿದವನಾಗಿ ಕರ್ಣನು ಸೂರ್ಯನಂತೆ ಕಂಗೊಳಿಸಿದನು.
ಹುತಾಶನಾಭಃ ಸ ಹುತಾಶನಪ್ರಭೇ
ಶುಭಃ ಶುಭೇ ಸರ್ವಧನುರ್ಧರೇ ರಥೇ
ಸ್ಥಿತೋ ರರಾಜಾಧಿರಥಿರ್ಮಹಾರಥೋ
ಯಥಾ ವಿಮಾನೇ ಸುರರಾಡವಸ್ಥಿತಃ ॥ 38 ॥
ಅಧಿರಥನ ಪುತ್ರನಾದ, ಮಹಾರಥನಾದ, ಶುಭನಾದ ಅವನು ಅಗ್ನಿಯ ಕಾಂತಿಯನ್ನು ಹೊಂದಿದ ಎಲ್ಲ ವಿಧವಾದ ಧನುಸ್ಸುಗಳನ್ನು ತುಂಬಿದ ಶುಭವಾದ ರಥದಲ್ಲಿ ನಿಂತು ವಿಮಾನದಲ್ಲಿ ಕುಳಿತ ದಿವಾಕರನಂತೆ ಶೋಭಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಿತೀಯೋಽಧ್ಯಾಯಃ ॥
ದ್ರೋಣಾಭಿಷೇಕಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.

* * * * *
मूರನೆಯ ಅಧ್ಯಾಯ
ಭೀಷ್ಮರ ಸಮೀಪಕ್ಕೆ ಹೋಗಿ ಕರ್ಣನಿಂದ ಯುದ್ಧಕ್ಕೆ ಅನುಮತಿಯ ಯಾಚನೆ.
ಸಂಜಯಃ
ಶರತಲ್ಪೇ ಮಹಾತ್ಮಾನಂ ಶಯಾನಮಪರಾಜಿತಮ್ |
ಮಹಾವಾತಸಮುತ್ಥೇನ ಸಮುದ್ರಮಿವ ಶೋಷಿತಮ್ ॥ 1 ॥
ಉತ್ಸಾದ್ಯ ಚಾಖಿಲಾಮುರ್ವೀಂ ಸರ್ವಕ್ಷತ್ರಾಂತಕಂ ಗುರುಮ್ |
ದಿವ್ಯೈರಸ್ತ್ರೈರ್ಮಹೇಷ್ವಾಸಂ ಪಾತಿತಂ ಸವ್ಯಸಾಚಿನಾ ॥ 2 ॥
ಜಯಾಶಾ ತವ ಪುತ್ರಾಣಾಂ ಸಂಭಗ್ನಾ ಶರ್ಮ ವರ್ಮ ಚ |
ಅಪರಾಜಿತರಾದ, ಮಹಾತ್ಮರಾದ, ಮಹಾಬಿರುಗಾಳಿಗೆ ಸಿಲುಕಿ ಒಣಗಿದ ಸಮುದ್ರದಂತಿದ್ದ, ಸಮಗ್ರ ಭೂಮಿಯನ್ನೂ ನಾಶಮಾಡಿ ಸರ್ವಕ್ಷತ್ರಿಯಾಂತಕರಾದ ಪರಶುರಾಮರನ್ನು ಗುರುಗಳಾಗಿ ಹೊಂದಿದ, ಸವ್ಯಸಾಚಿಯಾದ ಅರ್ಜುನನಿಂದ ದಿವ್ಯಾಸ್ತ್ರಗಳಿಂದ ಉರುಳಿಸಲ್ಪಟ್ಟ ಮಹಾಧನುರ್ಧಾರಿಗಳಾದ, ಶರತಲ್ಪದಲ್ಲಿ ಮಲಗಿದ, ನಿನ್ನ ಪುತ್ರರಿಗೆ ಸುಖದಾಯಕರೂ ಮತ್ತು ಕವಚಸ್ಥಾನೀಯರೂ ಆಗಿದ್ದ ಭೀಷ್ಮರನ್ನು ನೋಡಿ ನಿನ್ನ ಪುತ್ರರ ಜಯದ ಆಸೆಯು ಭಗ್ನವಾಯಿತು.
ಅಪಾರಾಣಾಮಿವ ದ್ವೀಪಮಗಾಧೇ ಗಾಧಮಿಚ್ಛತಾಮ್ ॥ 3 ॥
ಸ್ರೋತಸಾ ಯಾಮುನೇನೇವ ಶರೌಘೇಣ ಪರಿಪ್ಲುತಮ್ |
ಮಹಾಂತಮಿವ ಮೈನಾಕಮ್ ಇಂದ್ರೇಣೇವ ಚ ಪಾತಿತಮ್ ॥ 4 ॥
ನಭಶ್ಚ್ಯುತಮಿವಾದಿತ್ಯಂ ಶಕ್ರಸ್ಯೇವಾಮೃತಂ ಹೃತಮ್ |
ಶತಕ್ರತೋರಿವಾಚಿಂತ್ಯಂ ಪುರಾ ವೃತ್ರೇಣ ನಿರ್ಜಯಮ್ ॥ 5 ॥
ಮೋಹನಂ ಸರ್ವಲೋಕಸ್ಯ ಯುಧಿ ಭೀಷ್ಮಂ ನಿಪಾತಿತಮ್ |
ಕಕುದಂ ಸರ್ವಸೈನ್ಯಾನಾಂ ಲಕ್ಷ ೕಯಂ ಸರ್ವಧನುಷ್ಮತಾಮ್ ॥ 6 ॥
ಧನಂಜಯಶರವ್ಯಾಪ್ತಂ ವೃದ್ಧಂ ಕುರುಪಿತಾಮಹಮ್ |
ತಂ ವೀರಶಯನೇ ಶ್ರೇಷ್ಠೇ ಶಯಾನಂ ಪುರುಷರ್ಷಭಮ್ ॥ 7 ॥
ಕರ್ಣಸ್ತ್ವತಿರಥಂ ದೃಷ್ಟ್ವಾ ಭರತಾನಾಂ ಪಿತಾಮಹಮ್ |
ಪ್ರಸ್ಕಂದ್ಯ ಸ ರಥಾತ್ ತೂರ್ಣಂ ಶೋಕಮೋಹಪರಿಪ್ಲುತಃ |
ಪದ್ಭ್ಯಾಮೇವ ಜಗಾಮಾರ್ತೋ ಬಾಷ್ಪವ್ಯಾಕುಲಲೋಚನಃ ॥ 8 ॥
ಅಭಿವಾದ್ಯಾಂಜಲಿಂ ಕೃತ್ವಾ ವಂದಮಾನೋಽಭ್ಯಭಾಷತ ॥ 9 ॥|
ಅಗಾಧವಾದ ಸಮುದ್ರದಲ್ಲಿ ರಕ್ಷಣೆಯನ್ನು ಬಯಸುವವರಿಗೆ ದ್ವೀಪದಂತಿದ್ದ, ದಡವಿಲ್ಲದವರಿಗೆ ರಕ್ಷಕವಾದ ದಡದಂತಿದ್ದ, ಯಮುನಾ ಪ್ರವಾಹದಂತಿದ್ದ ಬಾಣಸಮೂಹಗಳಿಂದ ಶರೀರವೆಲ್ಲಾ ತುಂಬಿದ, ಇಂದ್ರನಿಂದ ಬೀಳಿಸಲ್ಪಟ್ಟ ದೊಡ್ಡ ಮೈನಾಕ ಪರ್ವತದಂತಿದ್ದ, ಭೂಮಿಯ ಮೇಲೆ ಬಿದ್ದ ಸೂರ್ಯನಂತಿದ್ದ, ಇಂದ್ರನ ಅಪಹೃತವಾದ ಅಮೃತದಂತಿದ್ದ, ವೃತ್ರನು ಉಂಟುಮಾಡಿದ ಅಚಿಂತ್ಯವಾದ ಇಂದ್ರನ ಪರಾಭವದಂತೆ ತೋರುವ, ಸರ್ವಲೋಕಕ್ಕೂ ಯುದ್ಧದಲ್ಲಿ ಮೋಹವನ್ನು ಉಂಟುಮಾಡುವ, ಎಲ್ಲ ಸೈನ್ಯಗಳಿಗೂ ಶಿಖರಪ್ರಾಯರಾಗಿದ್ದ, ಎಲ್ಲ ಧನುರ್ಧಾರಿಗಳಿಗೂ ರಕ್ಷಕವಾಗಿದ್ದ, ಕುರು ಪಿತಾಮಹರೂ, ಪುರುಷಶ್ರೇಷ್ಠರೂ, ವೃದ್ಧರೂ, ಗುಣಗಳಿಂದ ಶ್ರೇಷ್ಠರೂ ಆದ ಅತಿರಥರಾದ ಭೀಷ್ಮರು ಅರ್ಜುನನ ಬಾಣಗಳಿಂದ ದೇಹವೆಲ್ಲ ತುಂಬಿದವರಾಗಿರುವುದನ್ನು ನೋಡಿ ಕರ್ಣನು ಶೀಘ್ರವಾಗಿ ತನ್ನ ರಥದಿಂದ ಇಳಿದು, ಶೋಕ-ಮೋಹದಿಂದ ತುಂಬಿದವನಾಗಿ, ನೀರು ತುಂಬಿದ ಕಣ್ಣುಗಳಿಂದ ಆರ್ತನಾಗಿ, ನಡೆದುಕೊಂಡೇ ಅವರ ಬಳಿಗೆ ಹೋದನು. ಅವರಿಗೆ ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಮಾತನಾಡಿದನು.
ಕರ್ಣೋಽಹಮಸ್ಮಿ ಭದ್ರಂ ತೇ ಅದ್ಯ ಮಾಂ ವದ ಭಾರತ |
ಪುಣ್ಯಯಾ ಕ್ಷೇಮಯಾ ವಾಚಾ ಚಕ್ಷುಷಾ ಚಾವಲೋಕಯ ॥ 10 ॥
ಎಲೈ ಭಾರತರೇ, ನಾನು ಕರ್ಣ. ನಿಮಗೆ ಕ್ಷೇಮವಾಗಲಿ. ನನ್ನನ್ನು ಕಣ್ತೆರೆದು ನೋಡಿ ಪುಣ್ಯಕರವಾದ ಮತ್ತು ಕ್ಷೇಮಕರವಾದ ಮಾತುಗಳನ್ನು ಆಡಿ.
ನ ನೂನಂ ಸುಕೃತಸ್ಯೇಹ ಫಲಂ ಕಶ್ಚಿತ್ ಸಮಶ್ನುತೇ |
ಯತ್ರ ಧರ್ಮಪರೋ ವೃದ್ಧಃ ಶೇತೇ ಭುವಿ ಭವಾನಿಹ ॥ 11 ॥
ಧರ್ಮಪರರೂ, ವೃದ್ಧರೂ ಆದ ನೀವು ಭೂಮಿಯಲ್ಲಿ ಮಲಗಿರುವುದನ್ನು ನೋಡಿ ಪುಣ್ಯಕರ್ಮದ ಫಲವನ್ನು ಈ ಲೋಕದಲ್ಲಿ ಯಾರೂ ಅನುಭವಿಸುವುದಿಲ್ಲವೆಂದು ತಿಳಿಯುತ್ತೇನೆ.
ಕೋಶಸಂಜನನೇ ಮಂತ್ರೇ ವ್ಯೂಹೇ ಪ್ರಹರಣೇಷು ಚ |
ನಾಹಮನ್ಯಂ ಪ್ರಪಶ್ಯಾಮಿ ಕುರೂಣಾಂ ಕುರುಸತ್ತಮ ॥ 12 ॥
ಬುದ್ಧ್ಯಾ ವಿಶುದ್ಧಯಾ ಯುಕ್ತೋ ಯಃ ಕುರೂಂಸ್ತಾರಯೇದ್ ಭಯಾತ್ |
ಯೋಧಾಂಸ್ತ್ವಮಪ್ಲವೇ ಹಿತ್ವಾ ಪಿತೃಲೋಕಂ ಗಮಿಷ್ಯಸಿ ॥ 13 ॥
ಎಲೈ ಕುರುಶ್ರೇಷ್ಠರೇ, ಕೋಶವನ್ನು ಬೆಳೆಸುವುದರಲ್ಲಿ, ಮಂತ್ರಾಲೋಚನೆಯಲ್ಲಿ, ಸೈನ್ಯವನ್ನು ವ್ಯೂಹ ಮಾಡುವುದರಲ್ಲಿ, ಪ್ರಹಾರ ಮಾಡುವುದರಲ್ಲಿ, ವಿಶುದ್ಧವಾದ ಬುದ್ಧಿಯಿಂದ ಯುಕ್ತರಾಗಿ ಕುರುಗಳನ್ನು ಭಯದಿಂದ ದಾಟಿಸುವ ಇನ್ನೊಬ್ಬ ವ್ಯಕ್ತಿಯನ್ನು ನಾನು ಕುರುಗಳಲ್ಲಿ ಕಾಣುವುದಿಲ್ಲ. ಕೌರವ ಸೈನಿಕರನ್ನು ನೌಕೆಯಿಲ್ಲದ ಸೈನ್ಯಸಾಗರದಲ್ಲಿ ಬಿಟ್ಟು ಪಿತೃಲೋಕಕ್ಕೆ ಹೊರಟಿರುವಿರಿ.

ಅದ್ಯಪ್ರಭೃತಿ ಸಂಕ್ರುದ್ಧಾ ವ್ಯಾಘ್ರಾ ಇವ ಮೃಗಕ್ಷಯಮ್ |
ಪಾಂಡವಾ ಭರತಶ್ರೇಷ್ಠ ಕರಿಷ್ಯಂತಿ ಕುರುಕ್ಷಯಮ್ ॥ 14 ॥
ಎಲೈ ಭರತಶ್ರೇಷ್ಠರೇ, ಇಂದಿನಿಂದ ಆರಂಭಿಸಿ ಕೋಪಗೊಂಡ ಪಾಂಡವರು ವ್ಯಾಘ್ರಗಳು ಜಿಂಕೆಗಳನ್ನು ನಾಶಮಾಡುವಂತೆ ಕೌರವರನ್ನು ನಾಶಮಾಡುವರು.
ಅದ್ಯ ಗಾಂಡೀವಘೋಷೇಣ ವೀರ್ಯಜ್ಞಾಃ ಸವ್ಯಸಾಚಿನಃ |
ಕುರವಃ ಸಂತ್ರಸಿಷ್ಯಂತಿ ವಜ್ರಘೋಷಾದಿವಾಸುರಾಃ ॥ 15 ॥
ಈ ದಿನ ಅರ್ಜುನನ ಗಾಂಡೀವ ಘೋಷದ ಸಾಮರ್ಥ್ಯವನ್ನು ತಿಳಿದ ಕುರುಗಳು ವಜ್ರಾಯುಧದ ಘೋಷಕ್ಕೆ ಅಸುರರು ಹೆದರಿರುವಂತೆ ಹೆದರುವರು.
ಅದ್ಯ ಗಾಂಡೀವಮುಕ್ತಾನಾಮಶನೀನಾಮಿವ ಸ್ವನಃ |
ನಿಪಾತಃ ಶರಧಾರಾಣಾಂ ಕುರೂನ್ ಸಂತ್ರಾಸಯಿಷ್ಯತಿ ॥16॥
ಈ ದಿನ ಗಾಂಡೀವದಿಂದ ಹೊರಬರುವ ಬಾಣಗಳ ಸಿಡಿಲಿನಂತಹ ಶಬ್ದವು ಮತ್ತು ಆ ಬಾಣಸಮೂಹಗಳ ಪಾತವು ಕುರುಗಳನ್ನು ಭಯಕ್ಕೆ ಒಳಪಡಿಸುವುದು.
ಅಗ್ನೇರಿವ ಸಮಿದ್ಧಸ್ಯ ಮಹಾಜ್ವಾಲಾ ವನೇ ದ್ರುಮಾನ್ |
ಧಾರ್ತರಾಷ್ಟ್ರಾನ್ ಪ್ರಧಕ್ಷ್ಯಂತಿ ತಥಾ ಬಾಣಾಃ ಕಿರೀಟಿನಃ ॥ 17 ॥
ಬಹಳವಾಗಿ ಪ್ರವೃದ್ಧವಾದ ಅಗ್ನಿಯ ಮಹಾಜ್ವಾಲೆಗಳು ಕಾಡಿನಲ್ಲಿ ವೃಕ್ಷಗಳನ್ನು ದಹಿಸುವಂತೆ ಅರ್ಜುನನ ಬಾಣಗಳು ಧಾರ್ತರಾಷ್ಟ್ರರನ್ನು ದಹಿಸುವವು.
ಯೇನ ಯೇನ ಪ್ರವಹತಿ ವಾಯುರಗ್ನಿರ್ಮಹಾವನೇ |
ತೇನ ತೇನ ಪ್ರದಹತಿ ಭಗವಾನ್ ವಾಯುತೇಜಸಾ ॥ 18 ॥
ಯಾದೃಗಗ್ನಿಃ ಸಮಿದ್ಧೋ ಹಿ ತಾದೃಕ್ ಪಾರ್ಥೋ ನ ಸಂಶಯಃ |
ತಾದೃಗೇವ ಹಿ ಕೌಂತೇಯೋ ದವಾಗ್ನಿರಿವ ಪರ್ವತೇ ॥ 19 ॥
ದೊಡ್ಡ ಕಾಡಿನಲ್ಲಿ ವಾಯುವು ಹೇಗೆ ಹೇಗೆ ಬೀಸುತ್ತದೆಯೋ, ಅದರಂತೆ ವಾಯುವಿನ ಸಾಮರ್ಥ್ಯದಿಂದ ಯುಕ್ತವಾದ ಅಗ್ನಿಯು ಸುಡುತ್ತಾನೆ. ಅರ್ಜುನನು ಅಂತಹ ಪ್ರವೃದ್ಧವಾದ ಅಗ್ನಿಯಂತಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ. ಕುಂತೀಪುತ್ರನಾದ ಅವನು ಪರ್ವತದಲ್ಲಿ ಇರುವ ದವಾಗ್ನಿಯಂತೆಯೇ ಇದ್ದಾನೆ.
ಯಥಾ ವಾಯುರ್ನರವ್ಯಾಘ್ರ ತಥಾ ಕೃಷ್ಣೋ ನ ಸಂಶಯಃ |
ನಿರ್ದಹಂತಮನೀಕಾನಿ ಪ್ರಧಕ್ಷ್ಯತಿ ಜನಾರ್ದನಃ ॥ 20 ॥
ಎಲೈ ನರಶ್ರೇಷ್ಠರೇ, ವಾಯುವು ಹೇಗೆಯೋ ಹಾಗೆಯೇ ಕೃಷ್ಣನೆಂಬ ವಿಷಯದಲ್ಲಿ ಸಂಶಯವಿಲ್ಲ. ಅರ್ಜುನನು ಸೈನ್ಯಗಳನ್ನು ದಹಿಸಿದಂತೆ ಕೃಷ್ಣನೂ ದಹಿಸುವನು.
ಸೂರ್ಯಚಂದ್ರಪ್ರಕಾಶಸ್ಯ ಪೂರ್ಯಮಾಣಸ್ಯ ವಿಷ್ಣುನಾ |
ನದತಃ ಪಾಂಚಜನ್ಯಸ್ಯ ರಸತೋ ಗಾಂಡಿವಸ್ಯ ಚ |
ಶ್ರುತ್ವಾ ಸರ್ವಾಣಿ ಭೂತಾನಿ ವಿತ್ರಸಂತ್ಯಮಿತೌಜಸಃ ॥ 21 ॥
ಕೃಷ್ಣನು ಊದುವ ಸೂರ್ಯ-ಚಂದ್ರರ ಪ್ರಕಾಶವನ್ನು ಹೊಂದಿದ ಪಾಂಚಜನ್ಯ ಘೋಷವನ್ನು ಮತ್ತು ಗಾಂಡೀವ ಧನುಸ್ಸಿನ ಘೋಷವನ್ನು ಕೇಳಿ ಅಮಿತ ಪರಾಕ್ರಮಿಗಳಾದ ಎಲ್ಲ ಯೋಧರೂ ಹೆದರುತ್ತಾರೆ.
ಕಪಿಧ್ವಜಸ್ಯ ಚಾಪಸ್ಯ ರಥಸ್ಯಾಮಿತ್ರಕರ್ಶಿನಃ |
ಶಬ್ದಂ ಸೋಢುಂ ನ ಶಕ್ಷ್ಯಂತಿ ತ್ವಾಮೃತೇ ಸರ್ವಪಾರ್ಥಿವಾಃ ॥ 22 ॥
ಶತ್ರುಸೂದನನಾದ ಅವನ ಕಪಿಧ್ವಜದ ಧನುಸ್ಸಿನ ಮತ್ತು ರಥದ ಶಬ್ದವನ್ನು ಸಹಿಸಲು ನಿಮ್ಮನ್ನು ಬಿಟ್ಟು ಬೇರೆ ಯಾವ ರಾಜರೂ ಸಮರ್ಥರಾಗುವುದಿಲ್ಲ.
ಕೋ ಹ್ಯರ್ಜುನಂ ರಣೇ ಯೋದ್ಧುಂ ತ್ವದನ್ಯಃ ಪಾರ್ಥಿವೋಽರ್ಹತಿ |
ಯಸ್ಯ ದಿವ್ಯಾನಿ ಕರ್ಮಾಣಿ ಪ್ರವದಂತಿ ಮನೀಷಿಣಃ ॥ 23 ॥
ಯಾವನ ದಿವ್ಯವಾದ ಕರ್ಮಗಳನ್ನು ವಿವೇಕಿಗಳಾದವರು ಹೇಳುತ್ತಾರೆಯೋ ಅಂತಹ ಅರ್ಜುನನ ಜೊತೆಯಲ್ಲಿ ನಿಮ್ಮನ್ನು ಬಿಟ್ಟು ಬೇರೆ ಯಾವ ರಾಜನು ಯುದ್ಧ ಮಾಡಲು ಸಮರ್ಥನಾಗುತ್ತಾನೆ?
ಅಮಾನುಷಶ್ಚ ಸಂಗ್ರಾಮಃ ತ್ರ್ಯಂಬಕೇಣ ಚ ಧೀಮತಃ |
ತಸ್ಮಾಚ್ಚೈವ ವರಃ ಪ್ರಾಪ್ತೋ ದುಷ್ಪ್ರಾಪಶ್ಚಾಕೃತಾತ್ಮಭಿಃ ॥ 24 ॥
ಮೇಧಾವಿಯಾದ ಅರ್ಜುನನು ರುದ್ರದೇವನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವನಿಂದಲೇ ಪುಣ್ಯಶಾಲಿಗಳಲ್ಲದವರು ಪಡೆಯಲು ಸಾಧ್ಯವಿಲ್ಲದ ವರವನ್ನು ಪಡೆದಿದ್ದಾನೆ.
ಕೋ ಹಿ ಶಕ್ತೋ ರಣೇ ಜೇತುಂ ಪೂರ್ವಂ ಯೋ ನ ಜಿತಸ್ತ್ವಯಾ |
ಜಿತೋ ಹಿ ಚ ರಣೇ ರಾಮೋ ಭವತಾ ರಣಶಾಲಿನಾ |
ಕ್ಷತ್ರಿಯಾಂತಕರೋ ಘೋರೋ ದೇವದೇವೇನ ಪೂಜಿತಃ ॥ 25 ॥
ಕ್ಷತ್ರಿಯಾಂತಕರಾದ, ಘೋರರಾದ, ದೇವದೇವತೆಗಳಿಂದಲೂ ಪೂಜಿತರಾದ, ಯುದ್ಧಕುಶಲರಾದ ಪರಶುರಾಮರನ್ನು ಪರಾಜಯಗೊಳಿಸಿದ, ನಿಮ್ಮಿಂದಲೂ ಹಿಂದೆ ಯಾವನು ಪರಾಭವವನ್ನು ಹೊಂದಲಿಲ್ಲವೋ ಅಂತಹ ಅರ್ಜುನನನ್ನು ಯುದ್ಧದಲ್ಲಿ ಜಯಿಸಲು ಯಾವನು ಶಕ್ತನಾಗುತ್ತಾನೆ?

ಅಹಂ ಹ್ಯೇಕಃ ಪಾಂಡವಂ ಯುದ್ಧಶೌಂಡಮ್
ಅಮೃಷ್ಯಮಾಣೋ ಭವತಾಽನುಶಿಷ್ಟಃ |
ಆಶೀವಿಷಂ ದೃಷ್ಟಿವಿಷೋ ಯಥೋರಗಃ
ಶಕ್ಷ್ಯಾಮ್ಯೇನಂ ಹ್ಯಸ್ತ್ರಬಲೇನ ಹಂತುಮ್ ॥ 27 ॥
ನಾನೊಬ್ಬನು ಮಾತ್ರ ಅರ್ಜುನನ ಆ ಪರಾಕ್ರಮವನ್ನು ಸಹಿಸದೆ ನಿಮ್ಮ ಆಜ್ಞೆಯನ್ನು ಪಡೆದು ದೃಷ್ಟಿ ವಿಷವುಳ್ಳ ಒಂದು ಸರ್ಪವು ಇನ್ನೊಂದು ಸರ್ಪವನ್ನು ಕೊಂದಂತೆ ನನ್ನ ಅಸ್ತ್ರಬಲದಿಂದ ಯುದ್ಧ ಕುಶಲನಾದ ಪಾಂಡವನಾದ ಅರ್ಜುನನನ್ನು ಕೊಲ್ಲಲು ಸಮರ್ಥನಾಗುವೆನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತೃತೀಯೋಽಧ್ಯಾಯಃ ॥
ದ್ರೋಣಾಭಿಷೇಕಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ಭೀಷ್ಮರ ಅನುಜ್ಞೆಯನ್ನು ಪಡೆದು ಕರ್ಣನ ಯುದ್ಧ ಪ್ರಯಾಣ.
ಸಂಜಯಃ
ತಸ್ಯ ಲಾಲಪಿತಂ ಶ್ರುತ್ವಾ ವೃದ್ಧಃ ಕುರುಪಿತಾಮಹಃ |
ದೇಶಕಾಲೋಚಿತಂ ವಾಕ್ಯಂ ಭೀಷ್ಮಃ ಶಾಂತನವೋಽಬ್ರವೀತ್ ॥ 1 ॥
ಕರ್ಣನ ವಿಲಾಪವನ್ನು ಕೇಳಿ ವೃದ್ಧರೂ, ಕುರುಪಿತಾಮಹರೂ, ಶಂತನು ಪುತ್ರರೂ ಆದ ಭೀಷ್ಮರು ದೇಶ-ಕಾಲೋಚಿತವಾದ ಮಾತುಗಳನ್ನು ಆಡಿದರು.
ಸಮುದ್ರ ಇವ ಸಿಂಧೂನಾಂ ಜ್ಯೋತಿಷಾಮಿವ ಭಾಸ್ಕರಃ |
ಸತ್ಯಸ್ಯ ಚ ಯಥಾ ಸಂತೋ ಬೀಜಾನಾಮಿವ ಚೋರ್ವರಾ ॥ 2 ॥
ಪರ್ಜನ್ಯ ಇವ ಭೂತಾನಾಂ ಪ್ರತಿಷ್ಠಾ ಸುಹೃದಾಂ ಭವಾನ್ |
ಬಾಂಧವಾಸ್ತ್ವಾನುಜೀವಂತು ಸ್ವಾದುವೃಕ್ಷಮಿವಾಂಡಜಾಃ ॥ 3 ॥
ಭೀಷ್ಮ ಎಲ್ಲ ನದಿಗಳಿಗೆ ಸಮುದ್ರದಂತೆ, ಜ್ಯೋತಿಸ್ಸುಗಳಿಗೆ ಸೂರ್ಯನಂತೆ, ಸತ್ಯಕ್ಕೆ ಸಜ್ಜನರಂತೆ, ಬೀಜಗಳಿಗೆ ಭೂಮಿಯಂತೆ, ಪ್ರಾಣಿಗಳಿಗೆ ಮಳೆಯಂತೆ ಸುಹೃದಯರಿಗೆ ನೀನು ಆಶ್ರಯನಾಗು. ಸಿಹಿಯಾದ ಹಣ್ಣನ್ನು ಹೊಂದಿದ ಮರವನ್ನು ಪಕ್ಷಿಗಳು ಆಶ್ರಯಿಸುವಂತೆ ಬಾಂಧವರು ನಿನ್ನನ್ನು ಆಶ್ರಯಿಸಿ ಜೀವಿಸಲಿ.
ಮಾನಹಾ ಭವ ಶತ್ರೂಣಾಂ ಮಿತ್ರಾಣಾಂ ಹರ್ಷವರ್ಧನಃ |
ಕೌರವಾಣಾಂ ಭವ ಗತಿರ್ಯಥಾ ವಿಷ್ಣುರ್ದಿವೌಕಸಾಮ್ ॥ 4 ॥
ಶತ್ರುಗಳ ಮಾನವನ್ನಪಹರಿಸಿ, ಮಿತ್ರರಿಗೆ ಸಂತೋಷವನ್ನುಂಟು ಮಾಡಿ ದೇವತೆಗಳಿಗೆ ವಿಷ್ಣುವು ಗತಿಯಾದಂತೆ ನೀನು ಕೌರವರಿಗೆ ಗತಿಯಾಗು.
ಸ್ವಬಾಹುಬಲವೀರ್ಯೇಣ ಧಾರ್ತರಾಷ್ಟ್ರಪ್ರಿಯೈಷಿಣಾ |
ಕರ್ಣ ರಾಜಪುರಂ ಗತ್ವಾ ಕಾಂಬೋಜಾ ನಿಹತಾಸ್ತ್ವಯಾ ॥ 5 ॥
ಎಲೈ ಕರ್ಣನೇ, ದುರ್ಯೋಧನನ ಪ್ರಿಯವನ್ನು ಬಯಸಿದ ನೀನು ರಾಜಪುರಕ್ಕೆ ಹೋಗಿ ನಿನ್ನ ಬಾಹುಗಳ ಬಲದಿಂದ ಮತ್ತು ಪರಾಕ್ರಮದಿಂದ ಕಾಂಬೋಜರನ್ನು ಸಂಹರಿಸಿದೆ.
ಗಿರಿವ್ರಜಗತಾಶ್ಚಾಪಿ ನಗ್ನಜಿತ್ಪ್ರಮುಖಾ ನೃಪಾಃ |
ಅಂಬಷ್ಠಾಶ್ಚ ವಿದೇಹಾಶ್ಚ ಗಾಂಧಾರಾಶ್ಚ ಜಿತಾಸ್ತ್ವಯಾ ॥ 6 ॥
ಪರ್ವತ ಪ್ರದೇಶಗಳಲ್ಲಿದ್ದ ನಗ್ನಜಿತ್ ಮೊದಲಾದ ರಾಜರು, ಅಂಬಷ್ಠರು, ವಿದೇಹರು ಮತ್ತು ಗಾಂಧಾರರು ನಿನ್ನಿಂದ ಪರಾಜಿತರಾದರು.
ಹಿಮವದ್ದುರ್ಗನಿಲಯಾಃ ಕಿರಾತಾ ರಣಕರ್ಕಶಾಃ |
ದುರ್ಯೋಧನಸ್ಯ ವಶಗಾಸ್ತ್ವಯಾ ಕರ್ಣ ಕೃತಾಃ ಪುರಾ ॥ 7 ॥
ಎಲೈ ಕರ್ಣನೇ, ಹಿಮಾಲಯದ ದುರ್ಗಗಳಲ್ಲಿ ವಾಸಿಸುವ ರಣಕರ್ಕಶರಾದ ಕಿರಾತರನ್ನು ನೀನು ಹಿಂದೆ ದುರ್ಯೋಧನನ ವಶವರ್ತಿಗಳನ್ನಾಗಿ ಮಾಡಿದ್ದೀಯೆ.
ಉತ್ಕಲಾ ಮೇಕಲಾಃ ಪುಂಡ್ರಾಃ ಕಳಿಂಗಾದ್ಯಾಶ್ಚ ಸಂಯುಗೇ |
ನಿಷಾದಾಶ್ಚ ತ್ರಿಗರ್ತಾಶ್ಚ ಬಾಹ್ಲೀಕಾಶ್ಚ ಜಿತಾಸ್ತ್ವಯಾ ॥ 8 ॥
ಉತ್ಕಲರು, ಮೇಕಲರು, ಪುಂಡ್ರರು, ಕಳಿಂಗಾದಿಗಳು, ನಿಷಾದರು, ತ್ರಿಗರ್ತರು, ಬಾಹ್ಲೀಕರು- ಇವರೆಲ್ಲರನ್ನೂ ನೀನು ಯುದ್ಧದಲ್ಲಿ ಜಯಿಸಿದ್ದೀಯೆ.
ತತ್ರ ತತ್ರ ಚ ಸಂಗ್ರಾಮೇ ದುರ್ಯೋಧನಹಿತೈಷಿಣಾ |
ಬಹವೋ ನಿರ್ಜಿತಾಃ ಕರ್ಣ ತ್ವಯಾಽರ್ಣವಸಮೌಜಸಾ ॥ 9 ॥
ಯಥಾ ದುರ್ಯೋಧನಸ್ತಾತ ಸಜ್ಞಾತಿಕುಲಬಾಂಧವಃ |
ತಥಾ ತ್ವಮಪಿ ಸರ್ವೇಷಾಂ ಕೌರವಾಣಾಂ ಗತಿರ್ಭವ ॥ 10 ॥
ಎಲೈ ಕರ್ಣನೇ, ದುರ್ಯೋಧನನ ಹಿತವನ್ನು ಬಯಸಿದ, ಸಾಗರದಂತೆ ಸಾಮರ್ಥ್ಯವುಳ್ಳ ನೀನು ಅಲ್ಲಲ್ಲಿ ಯುದ್ಧಗಳಲ್ಲಿ ಬಹಳ

ಯೋಧರನ್ನು ಪರಾಭವಗೊಳಿಸಿದ್ದೀಯೆ ಮತ್ತು ಎಲೈ ಪ್ರೀತಿಪಾತ್ರನೇ, ಜ್ಞಾತಿ-ಕುಲ-ಬಾಂಧವರಿಗೆ ದುರ್ಯೋಧನನು ಹೇಗೆ ಆಶ್ರಯನೋ ಹಾಗೆ ಎಲ್ಲ ಕೌರವರಿಗೂ ನೀನೂ ಸಹ ಆಶ್ರಯನಾಗು.
ಶಿವೇನಾಭಿವದಾಮಿ ತ್ವಾ ಗಚ್ಛ ಯುದ್ಧ್ಯಸ್ವ ಶತ್ರುಭಿಃ |
ಅನುಶಾಸ್ಯ ಕುರೂನ್ ಸರ್ವಾನ್ ಧತ್ಸ್ವ ದುರ್ಯೋಧನೇ ಜಯಮ್ ॥11॥
ಕಲ್ಯಾಣಕರವಾದ ಮಾತುಗಳಿಂದ ಆಶೀರ್ವಾದ ಮಾಡುತ್ತಿದ್ದೇನೆ. ಹೋಗಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡು. ಎಲ್ಲ ಕುರುಗಳಿಗೂ ಶಾಸನವನ್ನು ಮಾಡಿ ದುರ್ಯೋಧನನಿಗೆ ಜಯವನ್ನು ತಂದುಕೊಡು.
ಭವಾನ್ ಪೌತ್ರಸಮೋಽಸ್ಮಾಕಂ ಯಥಾ ದುರ್ಯೋಧನಸ್ತಥಾ |
ತವಾಪಿ ಧರ್ಮತಃ ಸರ್ವೇ ಯಥಾ ತಸ್ಯ ವಯಂ ತಥಾ ॥ 12 ॥
ನೀನು ದುರ್ಯೋಧನನಂತೆ ನಮಗೆ ಮೊಮ್ಮಗನಿಗೆ ಸಮಾನನಾದವನು. ಧರ್ಮದ ದೃಷ್ಟಿಯಿಂದ ನಾವೆಲ್ಲರೂ ಅವನಿಗೆ ಹೇಗೋ ಹಾಗೆ ನಿನಗೂ ಪಿತಾಮಹ ಸಮರಾದವರು.
ಯೌನಾತ್ ಸಂಬಂಧಕಾಲ್ಲೋಕೇ ವಿಶಿಷ್ಟಃ ಸಂಗಮಃ ಸತಾಮ್ |
ಸದ್ಭಿಃ ಸಂಗಮಮಿಚ್ಛಂತಿ ತಸ್ಮಾತ್ ಪ್ರಾಜ್ಞಾಃ ಪರೈರಪಿ ॥ 13 ॥
ಸ ಸತ್ಯಸಂಗರೋ ಭೂತ್ವಾ ಮಮ್ಯೈತದಿತಿ ನಿಶ್ಚಿತಮ್ |
ಕುರೂಣಾಂ ಪಾಲಯ ಬಲಂ ಯಥಾ ದುರ್ಯೋಧನಸ್ತಥಾ ॥ 14 ॥
ಶರೀರ ಸಂಬಂಧಕ್ಕಿಂತಲೂ ಸಜ್ಜನ ಸಂಬಂಧವೇ ಶ್ರೇಷ್ಠವಾದುದು. ಆದ್ದರಿಂದ ಪ್ರಾಜ್ಞರು ಸಜ್ಜನರ ಸಮಾಗಮವನ್ನು ಬಯಸುತ್ತಾರೆ. ಶತ್ರುಗಳ ಜೊತೆಯಲ್ಲಿ ಸಂಗತನಾಗಿ ಈ ಭಾರವು ನನ್ನದು ಎಂದು ತಿಳಿದು, ಸತ್ಯಸಂಧನಾಗಿ ದುರ್ಯೋಧನನಂತೆ ಕೌರವರ ಸೈನ್ಯವನ್ನು ರಕ್ಷಿಸು.
ಯಥಾ ಚ ಕುರವೋ ಯುದ್ಧೇ ಯೋಧಯಂತಿ ಸ್ಮ ಪಾಂಡವಾನ್ |
ತಥಾ ಕರ್ಣ ತ್ವಯಾ ಕಾರ್ಯಂ ದುರ್ಯೋಧನಹಿತೈಷಿಣಾ ॥ 15 ॥
ಎಲೈ ಕರ್ಣನೇ, ದುರ್ಯೋಧನನ ಹಿತೈಷಿಯಾದ ನೀನು ಕುರುಗಳು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವಂತೆ ಮಾಡಬೇಕು.
ಸಂಜಯಃ
ನಿಶಮ್ಯ ವಚನಂ ತಸ್ಯ ಚರಣಾವಭಿವಾದ್ಯ ಚ |
ಯಯೌ ವೈಕರ್ತನಃ ಕರ್ಣಃ ತೂರ್ಣಮಾಯೋಧನಂ ಪ್ರತಿ ॥ 16 ॥
ಸಂಜಯ ವೈಕರ್ತನನಾದ ಕರ್ಣನು ಅವರ ಮಾತನ್ನು ಕೇಳಿ, ಅವರ ಪಾದಗಳಿಗೆ ನಮಸ್ಕರಿಸಿ ಶೀಘ್ರವಾಗಿ ರಣರಂಗಕ್ಕೆ ಹೊರಟನು.
ಸೋಽಭಿವೀಕ್ಷ್ಯ ನರೌಘಾಣಾಂ ಸ್ಥಾನಮಪ್ರತಿಮಂ ಮಹತ್ |
ವ್ಯೂಢಪ್ರಹರಣೋರಸ್ಕಂ ಸೈನ್ಯಂ ತತ್ ಸಮಬೃಂಹಯತ್ ॥ 17 ॥
ಅವನು ಯೋಧರ ಸಮೂಹಗಳ ಅಪ್ರತಿಮವಾದ ದೊಡ್ಡ ಸ್ಥಾನವು ಆಯುಧಾದಿಗಳನ್ನು ಹಿಡಿದು ನಿಂತಿರುವುದನ್ನು ನೋಡಿ ಅದನ್ನು ಪ್ರವೇಶಿಸಿ ಅದನ್ನು ಪುಷ್ಟೀಕರಿಸಿದನು.
ಅಥೋಷಸಿ ಮಹೇಷ್ವಾಸೋ ವ್ಯಾದಿಶ್ಯ ರಥಿನೋಽಯುತಮ್ |
ವಾರಣಾಂಸ್ತತ್ಪ್ರಮಾಣೇನ ಚಕಾರ ತದನಂತರಮ್ ॥ 18 ॥
ಅನಂತರ ಮಹಾಧನುರ್ಧಾರಿಯಾದ ಕರ್ಣನು ಪ್ರಾತಃಕಾಲದಲ್ಲಿ ಹತ್ತುಸಾವಿರ ರಥಿಕರಿಗೆ ಆದೇಶವನ್ನು ನೀಡಿ ಅವರ ಹಿಂದೆ ಅಷ್ಟೇ ಸಂಖ್ಯೆಯ ಗಜಗಳನ್ನು ನಿಲ್ಲಿಸಿದನು.
ಸಾದಿನೋಽಥ ಪದಾತೀಂಶ್ಚ ಯಥಾಶಾಸ್ತ್ರಂ ಬೃಹಸ್ಪತೇಃ |
ಸ್ಥಾಪಯಾಮಾಸ ಚ ತತಃ ಪುತ್ರಾಣಾಂ ತೇ ಜಯೇ ಧೃತಃ ॥ 19 ॥
ನಿನ್ನ ಪುತ್ರರ ಜಯದಲ್ಲಿ ನಿರತನಾಗಿ ಬೃಹಸ್ಪತಿಯ ಶಾಸ್ತ್ರಕ್ಕೆ ಅನುಗುಣವಾಗಿ ಅಶ್ವಾರೋಹಿಗಳನ್ನು ಮತ್ತು ಪದಾತಿಗಳನ್ನು ನಿಲ್ಲಿಸಿದನು.
ತತಃ ಪಕ್ಷೌ ಪ್ರಪಕ್ಷೌ ಚ ವಿಧಾಯ ಭರತರ್ಷಭ |
ಪಕ್ಷಕೋಟೀ ಪುನರ್ದ್ವಾಭ್ಯಾಂ ಪಶ್ಚಾದ್ ದ್ವಾಭ್ಯಾಮಬೃಂಹಯತ್ ॥20॥
ಎಲೈ ಭರತಶ್ರೇಷ್ಠನೇ, ಅನಂತರ ಸೈನ್ಯವನ್ನು ಪಕ್ಷ ಮತ್ತು ಪ್ರಪಕ್ಷಗಳಾಗಿ (ಪ್ರಪಕ್ಷ ಎಂದರೆ ಮುಂದಿರುವ ಪಕ್ಷಕ್ಕೆ ಹಿಂಭಾಗದಲ್ಲಿ ಬೆಂಬಲವಾಗಿ ನಿಂತ ಸೈನ್ಯದ ಭಾಗ) ಭಾಗವನ್ನಾಗಿ ಮಾಡಿ, ಅವೆರಡು ಭಾಗಗಳನ್ನು ಪುನಃ ಹಿಂದುಗಡೆಯಿಂದ ಇನ್ನೆರಡು ಭಾಗಗಳಿಂದ ಬಲಪಡಿಸಿದನು.
ಏವಮೇತಂ ಮಹಾವ್ಯೂಹಂ ಕರ್ಣೇನ ವಿಹಿತಂ ಪುನಃ |
ಪ್ರೇಕ್ಷಣೀಯಮಮನ್ಯಂತ ರಾಜಾನಃ ಕುರುಭಿಃ ಸಹ ॥ 21 ॥
ನೃತ್ಯಂತಮಿವ ತಂ ವ್ಯೂಹಂ ದಿಧಕ್ಷಂತಮಿವಾಹಿತಾನ್ |
ಕೃತಂ ಬೃಹಸ್ಪತ್ಯುಶನಸೋಃ ಮತೇ ಕರ್ಣೇನ ದುರ್ಜಯಮ್ |
ಬಲಂ ವ್ಯೂಹಶರೀರಸ್ಯ ಸಾರಾನೀಕಂ ಪರಸ್ಪರಮ್ ॥ 22 ॥
ಕರ್ಣನಿಂದ ಹೂಡಲ್ಪಟ್ಟ, ನರ್ತನವನ್ನು ಮಾಡುವಂತೆ ತೋರುತ್ತಿರುವ, ಶತ್ರುಗಳನ್ನು ದಹಿಸಲು ಬಯಸುವ, ಬೃಹಸ್ಪತಿ ಮತ್ತು ಶುಕ್ರರ ಮತಕ್ಕೆ ಅನುಸಾರವಾಗಿ ಮಾಡಿದ, ದುರ್ಜಯವಾದ ಆ ಮಹಾವ್ಯೂಹವನ್ನು ನೋಡಿ ರಾಜರು ಮತ್ತು ಕುರುಗಳು ಮನೋಹರವಾಗಿದೆ ಎಂದು ತಿಳಿದರು. ಶ್ರೇಷ್ಠವಾದ ಅಶ್ವ-ಗಜಗಳಿಂದ ವ್ಯೂಹ.... ಪರಸ್ಪರವಾಗಿ ಬಲಪಡಿಸಲ್ಪಟ್ಟಿತು.

ದ್ರೋಣಂ ದೃಷ್ಟ್ವಾ ಮಹೇಷ್ವಾಸಂ ಯುದ್ಧಾಯ ಸಮುಪಸ್ಥಿತಮ್ |
ತಮಾಗತಂ ಮಹಾಬಾಹುಂ ಸರ್ವಾನೀಕಪುರಃಸರಮ್ ॥ 23 ॥
ಕ್ಷ್ವೇಡಿತಾಸ್ಫೋಟಿತಾಕ್ರುಷ್ಟೈಃ ಸಿಂಹನಾದರವೈರಪಿ |
ಧನುಃಶಬ್ದೈಶ್ಚ ವಿವಿಧೈಃ ಕುರವಃ ಸಮಪೂಜಯನ್ ॥ 24 ॥
ಮಹಾಧನುರ್ಧಾರಿಗಳಾದ ದ್ರೋಣರು ಯುದ್ಧಕ್ಕೆ ಸಿದ್ಧರಾಗಿ ನಿಂತಿರುವುದನ್ನೂ, ಮಹಾಬಾಹುವಾದ ಕರ್ಣನು ಬಂದು ಎಲ್ಲ ಸೈನ್ಯದ ಮುಂಭಾಗದಲ್ಲಿರುವುದನ್ನೂ ನೋಡಿದ ಕುರುಗಳು ಸಿಂಹನಾದಗಳಿಂದಲೂ, ಹಸ್ತ-ತಳ ಶಬ್ದಗಳಿಂದಲೂ, ಆಕ್ರೋಶಗಳಿಂದಲೂ, ವಿವಿಧವಾದ ಧನುಶ್ಶಬ್ದಗಳಿಂದಲೂ ಅವರನ್ನು ಪೂಜಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರ್ಥೋಽಧ್ಯಾಯಃ ॥
ದ್ರೋಣಾಭಿಷೇಕಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ಕರ್ಣನ ಸಹಮತಿಯಿಂದ ದುರ್ಯೋಧನನಿಂದ ದ್ರೋಣರಿಗೆ
ಸೇನಾಪತಿಯ ಪಟ್ಟದಲ್ಲಿ ಅಭಿಷೇಕ.
ಸಂಜಯಃ
ರಥಸ್ಥಂ ಪುರುಷವ್ಯಾಘ್ರಂ ದೃಷ್ಟ್ವಾ ಕರ್ಣಮವಸ್ಥಿತಮ್ |
ಹೃಷ್ಟೋ ದುರ್ಯೋಧನೋ ರಾಜಾ ಕರ್ಣಂ ವಚನಮಬ್ರವೀತ್ ॥1॥
ಸನಾಥಮಿವ ಮನ್ಯೇಽಹಂ ಭವತಾ ಪಾಲಿತಂ ಬಲಮ್ |
ಮನ್ಯೇ ಕಿಂತು ತದೇತದ್ ವೈ ಯದ್ಧಿತಂ ತತ್ ಪ್ರಧಾರ್ಯತಾಮ್ ॥2॥
ಸಂಜಯ ರಥದಲ್ಲಿ ಕುಳಿತ ಪುರುಷವ್ಯಾಘ್ರನಾದ ಕರ್ಣನನ್ನು ನೋಡಿ ಸಂತೋಷಗೊಂಡ ದುರ್ಯೋಧನನು ಅವನನ್ನು ಕುರಿತು, ನಿನ್ನಿಂದ ರಕ್ಷಿತವಾದ ನನ್ನ ಸೈನ್ಯವು ಸನಾಥವಾಗಿದೆ ಎಂದು ಭಾವಿಸುತ್ತೇನೆ. ಆದರೆ ಈಗ ಮಾಡಬೇಕಾದುದರಲ್ಲಿ ಯಾವುದು ಹಿತವೋ ಅದನ್ನು ನಿರ್ಧರಿಸಬೇಕು.
ಕರ್ಣಃ
ಬ್ರೂಹಿ ತತ್ ಪುರುಷವ್ಯಾಘ್ರ ತ್ವಂ ಹಿ ಪ್ರಾಜ್ಞತಮೋ ನೃಷು |
ಯಥಾ ಚಾರ್ಥಪತಿಃ ಕೃತ್ಯಂ ಪಶ್ಯತೇ ನ ತಥೇತರಃ ॥3॥
ವಯಂ ಸರ್ವೇ ತವ ವಚಃ ಶ್ರೋತುಕಾಮಾ ನರೇಶ್ವರ |
ನಾನ್ಯಾಯ್ಯಂ ಹಿ ಭವಾನ್ ವಾಕ್ಯಂ ಬ್ರೂಯಾದಿತಿ ಮತಿರ್ಮಮ ॥4॥
ಕರ್ಣ ಎಲೈ ಪುರುಷವ್ಯಾಘ್ರನೇ, ನೀನೇ ಮನುಷ್ಯರಲ್ಲಿ ಅತ್ಯಂತ ಪ್ರಾಜ್ಞನಾದವನು. ಆದ್ದರಿಂದ ನೀನೇ ಹೇಳು. ಮಾಡಬೇಕಾದ ಕಾರ್ಯವನ್ನು ಸ್ವಾಮಿಯಾದವನು ಹೇಗೆ ಗಮನಿಸುತ್ತಾನೆಯೋ ಹಾಗೆ ಇನ್ನೊಬ್ಬನು ಗಮನಿಸುವುದಿಲ್ಲ. ಎಲೈ ರಾಜನೇ, ನಾವೆಲ್ಲರೂ ನಿನ್ನ ಮಾತನ್ನು ಕೇಳಲು ಬಯಸಿದ್ದೇವೆ. ನೀನು ಎಂದೂ ಅನ್ಯಾಯದ ಮಾತುಗಳನ್ನು ಆಡುವುದಿಲ್ಲವೆಂದು ನನ್ನ ಭಾವನೆ.
ದುರ್ಯೋಧನಃ
ಭೀಷ್ಮಃ ಸೇನಾಪ್ರಣೇತಾಽಽಸೀದ್ ವಯಸಾ ವಿಕ್ರಮೇಣ ಚ |
ಶ್ರುತೇನ ಚ ಸುಸಂಪನ್ನಃ ಸರ್ವೈರ್ಯೋಧಗಣೈಃ ಸಹ ॥ 5 ॥
ದುರ್ಯೋಧನ ವಯಸ್ಸಿನಿಂದಲೂ, ಪರಾಕ್ರಮದಿಂದಲೂ, ವಿದ್ಯೆಯಿಂದಲೂ ಸಂಪನ್ನರಾದ ಭೀಷ್ಮರು ಸರ್ವ ಯೋಧಗಣಗಳ ಜೊತೆಯಲ್ಲಿ ಇದುವರೆಗೆ ಸೇನಾ ನಾಯಕರಾಗಿದ್ದರು.
ತೇನಾತಿರಥಿನಾ ಕರ್ಣ ಘ್ನತಾ ಶತ್ರುಗಣಾನ್ ಮಮ |
ಸುಯುದ್ಧೇನ ದಶಾಹಾನಿ ಪಾಲಿತಾಃ ಸ್ಮ ಮಹಾತ್ಮನಾ ॥ 6 ॥
ತಸ್ಮಿನ್ನಸುಕರಂ ಕರ್ಮ ಕೃತವತ್ಯಾಸ್ಥಿತೇ ದಿವಮ್ |
ಕಂ ನು ಸೇನಾಪ್ರಣೇತಾರಂ ಮನ್ಯಸೇ ತದನಂತರಮ್ ॥ 7 ॥
ಎಲೈ ಕರ್ಣನೇ, ಆ ಅತಿರಥರಾದ ಮಹಾತ್ಮರು ಹತ್ತು ದಿನಗಳ ಕಾಲ ಘೋರವಾದ ಯುದ್ಧವನ್ನು ಮಾಡಿ ನನ್ನ ಶತ್ರುಗಳನ್ನು ಕೊಂದು ನಮ್ಮನ್ನು ರಕ್ಷಿಸಿದರು. ದುಸ್ಸಾಧ್ಯವಾದ ಕಾರ್ಯವನ್ನು ಮಾಡಿ ಈಗ ಅವರು ಸ್ವರ್ಗಕ್ಕೆ ಹೊರಟಿರುವಾಗ ಅವರ ಅನಂತರದಲ್ಲಿ ಯಾರನ್ನು ನೀನು ಸೇನಾಪತಿಯೆಂದು ಭಾವಿಸುತ್ತೀಯೆ?
ಋತೇ ತು ನಾಯಕಂ ಸೇನಾ ಮುಹೂರ್ತಂ ನಾವತಿಷ್ಠತೇ |
ಆಹವೇಷು ವಿಶೇಷೇಣ ಭೃಷ್ಟನೇತ್ರೇಷ್ವಿವಾಂಜನಮ್ |
ಆಹವೇಷ್ವಾಹವಶ್ರೇಷ್ಠ ನೇತೃಹೀನೇವ ನೌರ್ಜಲೇ ॥ 8 ॥
ಯಥಾ ಹ್ಯಕರ್ಣಧಾರಾ ನೌ ರಥಶ್ಚಾಸಾರಥಿರ್ಯಥಾ |
ದ್ರವೇದ್ ಯಥೇಷ್ಟಂ ತದ್ವತ್ ಸ್ಯಾದ್ ಋತೇ ಸೇನಾಪತೇರ್ಬಲಮ್ ॥ 9 ॥
ಅದೇಶಿಕೇ ಯಥಾ ಸಾರ್ಥಃ ಸರ್ವಂ ಕೃಚ್ಛ್ರಂ ಸಮೃಚ್ಛತಿ |
ಅನಾಯಕೀ ತಥಾ ಸೇನಾ ಸರ್ವಾನ್ ದೋಷಾನ್ ಸಮೃಚ್ಛತಿ ॥ 10 ॥

ಎಲೈ ಯುದ್ಧಶ್ರೇಷ್ಠನೇ, ನೇತ್ರರಹಿತರಾದವರಲ್ಲಿ ಅಂಜನದಂತೆ, ಸಾಗರದಲ್ಲಿ ನಾಯಕನಿಲ್ಲದಿರುವ ನೌಕೆಯಂತೆ ಸೈನ್ಯವು ಒಂದು ಮುಹೂರ್ತವೂ ನಿಲ್ಲುವುದಿಲ್ಲ. ನಾವಿಕನಿಲ್ಲದ ದೋಣಿಯಂತೆ, ಸಾರಥಿಯಿಲ್ಲದ ರಥದಂತೆ, ಸೇನಾಪತಿ ಇಲ್ಲದ ಸೈನ್ಯವು ಮನಸ್ಸಿಗೆ ಬಂದಂತೆ ಓಡಿಹೋದೀತು! ನಾಯಕನಿಲ್ಲದ ವಣಿಕ್ ಸಮೂಹವು ಕಷ್ಟವನ್ನು ಹೊಂದುವಂತೆ ನಾಯಕನಿಲ್ಲದ ಸೈನ್ಯವು ಎಲ್ಲ ದೋಷಗಳನ್ನು ಹೊಂದುತ್ತದೆ.

ಸ ಭವಾನ್ ವೀಕ್ಷ್ಯ ಸರ್ವೇಷು ಮಾಮಕೇಷು ಮಹಾತ್ಮಸು |
ಪಶ್ಯ ಸೇನಾಪತಿಂ ಯುಕ್ತಮ್ ಅನುಶಾಸ್ತು ಭವಾನಿಹ ॥11॥
ಯಂ ಹಿ ಸೇನಾಪ್ರಣೇತಾರಂ ಮನ್ಯಸೇ ತದನಂತರಮ್ |

ಆದ್ದರಿಂದ ನೀನು ನಮ್ಮ ಸೈನ್ಯದಲ್ಲಿರುವ ಎಲ್ಲ ಮಹಾತ್ಮರನ್ನೂ ನೋಡಿ ಯಾವನು ಯೋಗ್ಯನಾದ ಸೇನಾಪತಿಯಾಗುತ್ತಾನೆ ಎಂದು ಗಮನಿಸಿ, ಭೀಷ್ಮರ ಅನಂತರದಲ್ಲಿ ಯಾರು ಸೇನಾನಾಯಕರಾಗುತ್ತಾರೆಂದು ತಿಳಿದು ನನಗೆ ಆದೇಶವನ್ನು ಮಾಡು.

ಯಂ ಹಿ ಸೇನಾಪ್ರಣೇತಾರಂ ಭವಾನ್ ವಕ್ಷ್ಯತಿ ಸಂಯುಗೇ |
ತಂ ವಯಂ ಸಹಿತಾಃ ಸರ್ವೇ ಪ್ರಕರಿಷ್ಯಾಮ ನಾಯಕಮ್ ॥ 12 ॥

ನೀನು ಯುದ್ಧದಲ್ಲಿ ಯಾರನ್ನು ಸೇನಾನಾಯಕರನ್ನಾಗಿ ಮಾಡಬೇಕೆಂದು ಹೇಳುವಿಯೋ ನಾವೆಲ್ಲರೂ ಸೇರಿ ಅವನನ್ನು ಸೇನಾನಾಯಕರನ್ನಾಗಿ ಮಾಡುವೆವು.

ಕರ್ಣಃ

ಸರ್ವ ಏವ ಮಹಾತ್ಮಾನ ಇಮೇ ಪುರುಷಸತ್ತಮಾಃ |
ಸೇನಾಪತಿತ್ವಮರ್ಹಂತಿ ನಾತ್ರ ಕಾರ್ಯಾ ವಿಚಾರಣಾ ॥ 13 ॥
ಕುಲಸಂಹನನಜ್ಞಾನಬಲವಿಕ್ರಮಬುದ್ಧಿಭಿಃ |
ಯುಕ್ತಾಃ ಕೃತಜ್ಞಾ ಹ್ರೀಮಂತ ಆಹವೇಷ್ವನಿವರ್ತಿನಃ ॥ 14 ॥

ಕರ್ಣ ಈ ಪುರುಷಶ್ರೇಷ್ಠರಾದ ಮಹಾತ್ಮರೆಲ್ಲರೂ ಸೇನಾಪತಿಗಳಾಗಲು ಯೋಗ್ಯರಾದವರು. ಇದರಲ್ಲಿ ವಿಚಾರ ಮಾಡಬೇಕಾದ ಅಗತ್ಯವಿಲ್ಲ. ಇವರು ಒಳ್ಳೆಯ ಕುಲದಲ್ಲಿ ಜನಿಸಿ, ದೃಢವಾದ ಶರೀರವನ್ನು ಹೊಂದಿ, ಜ್ಞಾನ-ಬಲ-ಪರಾಕ್ರಮ- ಬುದ್ಧಿಗಳಿಂದ ಯುಕ್ತರಾಗಿ, ಕೃತಜ್ಞರೂ, ನಾಚಿಕೆಯುಳ್ಳವರೂ, ಯುದ್ಧದಲ್ಲಿ ಹಿಮ್ಮೆಟ್ಟದವರೂ ಆಗಿದ್ದಾರೆ.

ಯುಗಪನ್ನ ತು ತೇ ಶಕ್ಯಾಃ ಕರ್ತುಂ ಸರ್ವೇ ಪುರಸ್ಸರಾಃ |
ಏಕ ಏವಾತ್ರ ಕರ್ತವ್ಯೋ ಯಸ್ಮಿನ್ ವೈಶೇಷಿಕಾ ಗುಣಾಃ ॥ 15 ॥

ಅವರೆಲ್ಲರನ್ನೂ ಒಂದೇ ಬಾರಿಗೆ ನಾಯಕರನ್ನಾಗಿ ಮಾಡಲು ಸಾಧ್ಯವಿಲ್ಲ. ಯಾವನಲ್ಲಿ ವಿಶೇಷವಾದ ಗುಣವಿದೆಯೋ ಅಂತಹ ಒಬ್ಬನನ್ನು ಮಾಡಬೇಕು.

ಅನ್ಯೋನ್ಯಸ್ಪರ್ಧಿನಾಂ ತೇಷಾಂ ಯದ್ಯೇಕಂ ತ್ವಂ ಕರಿಷ್ಯಸಿ |
ಶೇಷಾ ವಿಮನಸೋಽತ್ಯರ್ಥಂ ನ ಯೋತ್ಸ್ಯಂತೀಹ ಭಾರತ ॥ 16 ॥

ಎಲೈ ಭಾರತನೇ, ಪರಸ್ಪರವಾಗಿ ಸ್ಪರ್ಧಿಸುವ ಅವರಲ್ಲಿ ಒಬ್ಬನನ್ನು ಸೇನಾನಾಯಕನನ್ನಾಗಿ ಮಾಡಿದರೆ ಉಳಿದವರು ಬೇಸರಗೊಂಡು ಚೆನ್ನಾಗಿ ಯುದ್ಧವನ್ನು ಮಾಡುವುದಿಲ್ಲ.

ಅಯಂ ತು ಸರ್ವಸೈನ್ಯಾನಾಮಾಚಾರ್ಯಃ ಸ್ಥವಿರೋ ಗುರುಃ |
ಯುಕ್ತಃ ಸೇನಾಪತಿತ್ವಾಯ ದ್ರೋಣಃ ಶಸ್ತ್ರಭೃತಾಂ ವರಃ ॥ 17 ॥

ಆಚಾರ್ಯರೂ, ವೃದ್ಧರೂ, ಎಲ್ಲರಿಗೂ ಗುರುಗಳೂ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ ಆದ ಈ ದ್ರೋಣರಾದರೋ ಎಲ್ಲ ಸೈನ್ಯಗಳಿಗೆ ಸೇನಾಪತಿಗಳಾಗಲು ಅರ್ಹರಾದವರು.

ಕೋ ಹಿ ತಿಷ್ಠತಿ ಸಂಗ್ರಾಮೇ ದ್ರೋಣೇ ಬ್ರಾಹ್ಮಣಪುಂಗವೇ |
ಸೇನಾಪತಿರಿಹಾನ್ಯೋಽಸ್ಮಾಚ್ಛುಕ್ರಾಂಗಿರಸದರ್ಶನಾತ್ ॥ 18 ॥

ಶುಕ್ರ-ಬೃಹಸ್ಪತಿಗಳ ದರ್ಶನಕ್ಕೆ ಅನುಗುಣವಾದ ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಸಂಗ್ರಾಮದಲ್ಲಿರುವಾಗ ಇನ್ನೊಬ್ಬ ಯಾವನು ಸೇನಾಪತಿಯಾಗಲು ಅರ್ಹನಾಗುತ್ತಾನೆ?

ನಚ ಸ ಹ್ಯಸ್ತಿ ಯೋಧಸ್ತೇ ಸರ್ವರಾಜಸು ಭಾರತ |
ಯೋ ದ್ರೋಣಂ ಸಮರಂ ಯಾಂತಮನುಯಾಸ್ಯತಿ ಸಂಯುಗೇ ॥19॥

ಎಲೈ ಭಾರತನೇ, ದ್ರೋಣರು ಯುದ್ಧದಲ್ಲಿ ನಿಂತಾಗ ಯುದ್ಧದಲ್ಲಿ ಅವರನ್ನು ಎದುರಿಸುವ ಯಾವ ಯೋಧನೂ ಸರ್ವರಾಜರುಗಳಲ್ಲಿಯೂ ಇಲ್ಲ.

ಏಷ ಸೇನಾಪ್ರಣೇತೄಣಾಮೇಷ ಶಸ್ತ್ರಭೃತಾಂ ವರಃ |
ಏಷ ಬುದ್ಧಿಮತಾಂ ಶ್ರೇಷ್ಠೋ ಬ್ರಾಹ್ಮಣಃ ಸ್ಥವಿರೋ ಗುರುಃ ॥ 20 ॥

ಇವರು ಸೇನಾನಾಯಕರಲ್ಲಿ ಶ್ರೇಷ್ಠರಾದವರು, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದವರು. ಬ್ರಾಹ್ಮಣರೂ, ವೃದ್ಧರೂ, ಗುರುಗಳೂ ಆದ ಇವರು ಮೇಧಾವಿಗಳಲ್ಲಿ ಶ್ರೇಷ್ಠರಾದವರು.

ಏನಂ ದುರ್ಯೋಧನಾಚಾರ್ಯಮಾಶು ಸೇನಾಪತಿಂ ಕುರು |
ಜಿಗೀಷಂತೋಽಸುರಾನ್ ಸಂಖೇ ಕಾರ್ತಿಕೇಯಮಿವಾಮರಾಃ ॥ 21 ॥

ಎಲೈ ದುರ್ಯೋಧನನೇ, ಅಸುರರನ್ನು ಗೆಲ್ಲಲು ಬಯಸಿದ ದೇವತೆಗಳು ಯುದ್ಧದಲ್ಲಿ ಷಣ್ಮುಖನನ್ನು ಸೇನಾಪತಿಯನ್ನಾಗಿ ಮಾಡಿದಂತೆ ಈ ಆಚಾರ್ಯರನ್ನು ಶೀಘ್ರವಾಗಿ ಸೇನಾಪತಿಯನ್ನಾಗಿ ಮಾಡು.

ಸಂಜಯಃ

ಕರ್ಣಸ್ಯ ವಚನಂ ಶ್ರುತ್ವಾ ರಾಜಾ ದುರ್ಯೋಧನಸ್ತದಾ |
ಸೇನಾಮಧ್ಯಗತಂ ದ್ರೋಣಮಿದಂ ವಚನಮಬ್ರವೀತ್ ॥ 22 ॥
ಸಂಜಯ ಕರ್ಣನ ಮಾತನ್ನು ಕೇಳಿ ಆಗ ರಾಜನಾದ ದುರ್ಯೋಧನನು ಸೇನೆಯ ಮಧ್ಯದಲ್ಲಿದ್ದ ದ್ರೋಣರನ್ನು ಕುರಿತು ಈ ಮಾತನ್ನಾಡಿದನು.
ವರ್ಣಶ್ರೈಷ್ಠ್ಯಾತ್ ಕುಲೋತ್ಪತ್ತ್ಯಾಯ ಶ್ರುತೇನ ವಯಸಾ ಧಿಯಾ |
ವೀರ್ಯಾದ್ ದಾಕ್ಷ್ಯಾದಧೃಷ್ಯತ್ವಾದರ್ಥಜ್ಞಾನಾನ್ನಯಾನ್ವಯಾತ್ ॥ 23 ॥
ತಪಸಾ ಚ ಕೃತಜ್ಞತ್ವಾದ್ ವೃದ್ಧಃ ಸರ್ವಗುಣೈಸ್ತಥಾ |
ಯುಕ್ತೋ ಭವತ್ಸಮೋ ಗೋಪ್ತಾ ರಾಜ್ಞಾಮನ್ಯೋ ನ ವಿದ್ಯತೇ |
ಸ ಭವಾನ್ ಪಾತು ನಃ ಸರ್ವಾನ್ ವಿಬುಧಾನಿವ ವಾಸವಃ ॥ 24 ॥
ಶ್ರೇಷ್ಠವಾದ ವರ್ಣದಿಂದ ಕೂಡಿರುವುದರಿಂದಲೂ, ಒಳ್ಳೆಯ ಕುಲದಲ್ಲಿ ಜನ್ಮದಿಂದಲೂ, ವಿದ್ಯೆಯಿಂದಲೂ, ವಯಸ್ಸಿನಿಂದಲೂ, ಬುದ್ಧಿಯಿಂದಲೂ, ಪರಾಕ್ರಮದಿಂದಲೂ, ದಕ್ಷತೆಯಿಂದಲೂ, ಅರ್ಥ-ಜ್ಞಾನದಿಂದಲೂ, ರಾಜನೀತಿಯ ಪ್ರಯೋಗದಿಂದಲೂ, ಅಧೃಷ್ಯತ್ವದಿಂದಲೂ (ಇನ್ನೊಬ್ಬರಿಗೆ ಸೋಲದಿರುವುದ ರಿಂದಲೂ), ತಪಸ್ಸಿನಿಂದಲೂ, ಕೃತಜ್ಞತೆಯಿಂದಲೂ ಮತ್ತು ಸರ್ವಗುಣಗಳಿಂದಲೂ ಕೂಡಿದ ವೃದ್ಧರಾದ ನಿಮಗೆ ಸಮಾನರಾದ ರಕ್ಷಕನು ರಾಜರಲ್ಲಿ ಬೇರೆ ಯಾವನೂ ಇರುವುದಿಲ್ಲ. ಇಂದ್ರನು ದೇವತೆಗಳನ್ನು ರಕ್ಷಿಸಿದಂತೆ ನೀವು ನಮ್ಮೆಲ್ಲರನ್ನೂ ರಕ್ಷಿಸಿ.
ತ್ವಯಾ ನೇತ್ರಾ ಪರಾನ್ ಜೇತುಮಿಚ್ಛಾಮೋ ದ್ವಿಜಸತ್ತಮ |
ರುದ್ರಾಣಾಮಿವ ಕಾಪಾಲಿರ್ವಸೂನಾಮಿವ ಪಾವಕಃ ॥ 25 ॥
ಕುಬೇರ ಇವ ಯಕ್ಷಾಣಾಂ ಮರುತಾಮಿವ ವಾಸವಃ |
ವಸಿಷ್ಠ ಇವ ವಿಪ್ರಾಣಾಂ ತೇಜಸಾಮಿವ ಭಾಸ್ಕರಃ ॥ 26 ॥
ಪಿತೄಣಾಮಿವ ಧರ್ಮೋಽಥ ಆದಿತ್ಯಾನಾಮಿವಾಂಬುರಾಟ್ |
ನಕ್ಷತ್ರಾಣಾಮಿವ ಶಶೀ ವೀರುಧಾಮಂಶುಮಾನಿವ ॥ 27 ॥
ಸರ್ವೇಷಾಮಿಹ ಲೋಕಾನಾಂ ವಿಶ್ವಸ್ಯ ಚ ಯಥಾ ಕ್ಷಯಃ |
ವಿಶ್ವೋತ್ಪತ್ತಿಸ್ಥಿತಿಶ್ಚೈವ ಶ್ರೇಷ್ಠೋ ನಾರಾಯಣಃ ಪ್ರಭುಃ |
ಏವಂ ಸೇನಾಪ್ರಣೇತೄಣಾಂ ಮಮ ಸೇನಾಪತಿರ್ಭವ ॥ 28॥
ಎಲೈ ಬ್ರಾಹ್ಮಣಶ್ರೇಷ್ಠರೇ, ನಿಮ್ಮನ್ನು ನಾಯಕರನ್ನಾಗಿ ಹೊಂದಿ ನಾವು ಶತ್ರುಗಳನ್ನು ಜಯಿಸಲು ಇಚ್ಛಿಸುತೆತೇವೆ. ರುದ್ರರಿಗೆ ಕಪಾಲಿಯಾದ ಪಾರ್ವತೀ ಪತಿಯಂತೆ, ವಸುಗಳಿಗೆ ಅಗ್ನಿಯಂತೆ, ಯಕ್ಷರಿಗೆ ಕುಬೇರನಂತೆ, ಮರುತ್ತುಗಳಿಗೆ ಇಂದ್ರನಂತೆ, ಬ್ರಾಹ್ಮಣರಿಗೆ ವಸಿಷ್ಠರಂತೆ, ತೇಜಸ್ವಿಗಳಿಗೆ ಸೂರ್ಯನಂತೆ, ಪಿತೃಗಳಿಗೆ ಯಮನಂತೆ, ಅದಿತಿಪುತ್ರರಿಗೆ ವರುಣನಂತೆ, ನಕ್ಷತ್ರಗಳಿಗೆ ಚಂದ್ರನಂತೆ, ಸಸಿಗಳಿಗೆ ಸೂರ್ಯನಂತೆ, ಸರ್ವಲೋಕಗಳಿಗೂ ಉತ್ಪತ್ತಿ-ಸ್ಥಿತಿ-ಸಂಹಾರಗಳಿಗೆ ಕಾರಣನಾದ ಪ್ರಭುವಾದ ಶ್ರೇಷ್ಠ ನಾರಾಯಣನಂತೆ ನಮ್ಮೆಲ್ಲ ಸೇನಾನಾಯಕರಿಗೂ ನೀವು ಸೇನಾಪತಿಯಾಗಿ.
ಏಕಾದಶೇಮಾ ವಶಗಾ ಅಕ್ಷೋಹಿಣ್ಯಸ್ತವಾನಘ |
ತಾಭಿಃ ಶತ್ರೂನ್ ಪ್ರತಿವ್ಯೂಹ್ಯ ಜಹೀಂದ್ರೋ ದಿತಿಜಾನಿವ ॥ 29 ॥
ಎಲೈ ದೋಷರಹಿತರೇ, ಈ ಹನ್ನೊಂದು ಅಕ್ಷೋಹಿಣಿ ಸೈನ್ಯಗಳು ನಿಮ್ಮ ವಶವಾಗಿವೆ. ಅವುಗಳಿಂದ ಪಾಂಡವರ ವ್ಯೂಹಕ್ಕೆ ಪ್ರತಿಯಾಗಿ ವ್ಯೂಹವನ್ನು ರಚಿಸಿ, ಇಂದ್ರನು ದೈತ್ಯರನ್ನು ಸಂಹರಿಸಿದಂತೆ ಶತ್ರುಗಳನ್ನು ಸಂಹರಿಸಿ.
ಪ್ರಯಾತು ಸ ಭವಾನಗ್ರೇ ದೇವಾನಾಮಿವ ಪಾವಕಿಃ |
ಅನುಯಾಸ್ಯಾಮಹೇ ತ್ವಾಽಽಜೌ ಸೌರಭೇಯಾ ಇವರ್ಷಭಮ್ ॥ 30 ॥
ನೀವು ದೇವತೆಗಳ ಮುಂಭಾಗದಲ್ಲಿ ಷಣ್ಮುಖನು ಹೋದಂತೆ ಮುಂದೆ ಹೋಗಿ. ನಾವು ಗೋವುಗಳು ವೃಷಭವನ್ನು ಹಿಂಬಾಲಿಸುವಂತೆ ರಣರಂಗದಲ್ಲಿ ನಿಮ್ಮನ್ನು ಹಿಂಬಾಲಿಸುವೆವು.
ಉಗ್ರಧನ್ವಾ ಮಹೇಷ್ವಾಸೋ ದಿವ್ಯಂ ವಿಷ್ಫಾರಯನ್ ಧನುಃ |
ದೃಷ್ಟ್ವಾ ಭವಂತಂ ಸಂಗ್ರಾಮೇ ನಾರ್ಜುನಃ ಪ್ರಸಹಿಷ್ಯತೇ ॥ 31 ॥
ನಿಮ್ಮನ್ನು ಯುದ್ಧದಲ್ಲಿ ನೋಡಿ ಉಗ್ರಧನುಸ್ಸುಳ್ಳ, ಮಹಾಧನುರ್ಧಾರಿಯಾದ, ದಿವ್ಯವಾದ ಧನುಸ್ಸನ್ನು ಎಳೆಯುವ ಅರ್ಜುನನು ಸಹಿಸುವುದಿಲ್ಲ.
ಧ್ರುವಂ ಯುಧಿಷ್ಠಿರಂ ಸಂಖ್ಯೇ ಸಸೈನ್ಯಂ ಸಹಬಾಂಧವಮ್ |
ಜೇತಾಸ್ಮಿ ಪುರುಷವ್ಯಾಘ್ರ ಭವಾನ್ ಸೇನಾಪತಿರ್ಯದಿ ॥ 32 ॥
ಎಲೈ ಪುರುಷವ್ಯಾಘ್ರರೇ, ನೀವು ಸೇನಾಪತಿಗಳಾದರೆ ನಿಶ್ಚಿತವಾಗಿ ತಮ್ಮ ಸೈನ್ಯ ಮತ್ತು ಬಾಂಧವರಿಂದ ಕೂಡಿದ ಯುಧಿಷ್ಠಿರನನ್ನು ಯುದ್ಧದಲ್ಲಿ ಗೆಲ್ಲುವೆನು.
ಸಂಜಯಃ
ಏವಮುಕ್ತೇ ತತೋ ದ್ರೋಣೇ ಜಯೇತ್ಯೂಚುರ್ನರಾಧಿಪಾಃ |
ಸಿಂಹನಾದೇನ ಸಂಹೃಷ್ಟಾ ಹರ್ಷಯಂತಸ್ತವಾತ್ಮಜಮ್ ॥33॥
ಸೈನಿಕಾಶ್ಚ ಮುದಾ ಯುಕ್ತಾ ವರ್ಧಯಂತೋ ದ್ವಿಜೋತ್ತಮಮ್ |
ದುರ್ಯೋಧನಂ ಪುರಸ್ಕೃತ್ಯ ಪ್ರಾರ್ಥಯಂತೋ ಮಹದ್ ಯಶಃ ॥34॥
ಸಂಜಯ ದ್ರೋಣರಿಗೆ ದುರ್ಯೋಧನನು ಹೀಗೆ ಹೇಳುತ್ತಿರಲು, ರಾಜರು ಸಂತೋಷಗೊಂಡು ನಿನ್ನ ಪುತ್ರನನ್ನು ಸಂತೋಷಪಡಿಸುತ್ತಾ

ಸಿಂಹನಾದವನ್ನು ಮಾಡಿ, ದ್ರೋಣರಿಗೆ ಜಯವಾಗಲಿ ಎಂದು ಹೇಳಿದರು. ದುರ್ಯೋಧನನನ್ನು ಮುಂದೆ ಮಾಡಿಕೊಂಡು ದೊಡ್ಡ ಕೀರ್ತಿಯನ್ನು ಬಯಸುವ ಸೈನಿಕರೂ ಸಹ ಸಂತೋಷದಿಂದ ಕೂಡಿದವರಾಗಿ ಬ್ರಾಹ್ಮಣಶ್ರೇಷ್ಠರಾದ ಅವರಿಗೆ ಶುಭಾಶಂಸನೆಯನ್ನು ಮಾಡುತ್ತಾ ಜಯವಾಗಲಿ ಎಂದು ಹೇಳಿದರು.
ದ್ರೋಣಃ
ವೇದಾನ್ ಷಡಂಗಾನ್ ವೇದಾಹಮರ್ಥವಿದ್ಯಾಂ ಚ ಮಾನವೀಮ್ |
ತ್ರೈಯ್ಯಂಬಕಮಥೇಷ್ವಸ್ತ್ರಮಸತ್ರಣಿ ವಿವಿಧಾನಿ ಚ ॥ 35 ॥
ದ್ರೋಣ ನಾನು ಷಡಂಗ ಸಹಿತವಾದ ವೇದಗಳನ್ನು ಮತ್ತು ಮನುವಿನ ಅರ್ಥಶಾಸ್ತ್ರವನ್ನು ತಿಳಿದಿದ್ದೇನೆ. ರುದ್ರದೇವರ ಯುದ್ಧಶಾಸ್ತ್ರವನ್ನು ಮತ್ತು ವಿವಿಧವಾದ ಅಸ್ತ್ರಗಳನ್ನು ತಿಳಿದಿದ್ದೇನೆ.
ಯೇ ಚಾಪ್ಯುಕ್ತಾ ಮಯಿ ಗುಣಾ ಭವದ್ಭಿರ್ಜಯಕಾಂಕ್ಷಿಭಿಃ |
ಚಿಕೀರ್ಷಂಸ್ತಾನಹಂ ಸತ್ಯಾನ್ ಯೋಧಯಿಷ್ಯಾಮಿ ಪಾಂಡವಾನ್ ॥36॥
ಜಯಾಪೇಕ್ಷಿಗಳಾದ ನೀವು ನನ್ನಲ್ಲಿ ಯಾವ ಗುಣಗಳನ್ನು ಹೇಳಿದ್ದೀರೋ ಅಂತಹ ನಿಮ್ಮ ಮಾತನ್ನು ಸತ್ಯವನ್ನಾಗಿ ಮಾಡಲು ಬಯಸಿ ನಾನು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ಪಾರ್ಷತಂ ತು ರಣೇ ರಾಜನ್ ನ ಹನಿಷ್ಯೇ ಕಥಂಚನ |
ಸ ಹಿ ಸೃಷ್ಟೋ ವಧಾರ್ಥಾಯ ಮಮೈವ ಪುರುಷರ್ಷಭಃ ॥ 37 ॥
ಎಲೈ ರಾಜನೇ, ಧೃಷ್ಟದ್ಯುಮ್ನನನ್ನು ಯುದ್ಧದಲ್ಲಿ ಯಾವ ಕಾರಣದಿಂದಲೂ ಕೊಲ್ಲುವುದಿಲ್ಲ. ಪುರುಷಶ್ರೇಷ್ಠನಾದ ಅವನು ನನ್ನ ವಧೆಗಾಗಿಯೇ ಜನಿಸಿದ್ದಾನೆ.
ಯೋಧಯಿಷ್ಯಾಮಿ ಸೈನ್ಯಾನಿ ನಾಶಯನ್ ಸರ್ವಸೋಮಕಾನ್ |
ನ ಚ ಮಾಂ ಪಾಂಡವಾ ಯುದ್ಧೇ ಯೋಧಯಿಷ್ಯಂತಿ ಹರ್ಷಿತಾಃ ॥38॥
ಸರ್ವಸೋಮಕರನ್ನು ನಾಶ ಮಾಡುತ್ತಾ ಉಳಿದ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಹರ್ಷಯುಕ್ತರಾದ ಪಾಂಡವರು ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡುವುದಿಲ್ಲ.
ಸಂಜಯಃ
ಏವಮುಕ್ತೋಽಭ್ಯನುಜ್ಞಾತಃ ಚಕ್ರೇ ಸೇನಾಪತಿಂ ತದಾ |
ದ್ರೋಣಂ ತವ ಸುತೋ ರಾಜನ್ ವಿಧಿದೃಷ್ಟೇನ ಕರ್ಮಣಾ ॥ 39 ॥
ಸಂಜಯ ದ್ರೋಣರಿಂದ ಹೀಗೆ ಹೇಳಲ್ಪಟ್ಟು ಅನುಮತಿಯನ್ನು ಪಡೆದ ನಿನ್ನ ಪುತ್ರನು ವಿಧಿವತ್ತಾದ ಕರ್ಮದಿಂದ ದ್ರೋಣರನ್ನು ಆಗ ಸೇನಾಪತಿಯನ್ನಾಗಿ ಮಾಡಿದನು.
ತಥಾಽಭಿಷಿಷಿಚುರ್ದ್ರೋಣಂ ದುರ್ಯೋಧನಮುಖಾ ನೃಪಾಃ |
ಯಥಾ ಸೇನಾಪತಿಂ ಸ್ಕಂದಂ ಪುರಾ ಶಕ್ರಮುಖಾಃ ಸುರಾಃ ॥ 40 ॥
ಇಂದ್ರ ಮೊದಲಾದ ದೇವತೆಗಳು ಹಿಂದೆ ಷಣ್ಮುಖನನ್ನು ಸೇನಾಪತಿಯಾಗಿ ಮಾಡಿದಂತೆ ದುರ್ಯೋಧನ ಮೊದಲಾದ ರಾಜರು ದ್ರೋಣರಿಗೆ ಅಭಿಷೇಕವನ್ನು ಮಾಡಿದರು.
ತತೋ ವಾದಿತ್ರಘೋಷೇಣ ಶಂಖಾನಾಂ ಚ ಮಹಾಸ್ವನೈಃ |
ಪ್ರಾದುರಾಸೀತ್ ತತೋ ದ್ರೋಣೇ ಕೃತೇ ಸೇನಾಪತೌ ರವಃ ॥ 41 ॥
ದ್ರೋಣರು ಸೇನಾಪತಿಯಾಗಿ ಮಾಡಲ್ಪಡುತ್ತಿರಲು ವಾದ್ಯಘೋಷಗಳಿಂದಲೂ, ಶಂಖಘೋಷಗಳಿಂದಲೂ ಮಹಾಶಬ್ದವು ಉಂಟಾಯಿತು.
ತತಃ ಪುಣ್ಯಾಹಘೋಷೇಣ ಸಾಶೀರ್ವಾದಸ್ವನೇನ ಚ |
ಸೂತಮಾಗಧವಂದೀನಾಂ ಸಂಸ್ತವೈರ್ಗೀತಮಂಗಲೈಃ ॥42॥
ಜಯಶಬ್ದೈರ್ಮನೋಜ್ಞೈಶ್ಚ ನರ್ತನೈಸ್ತತ್ರ ತಂ ಪ್ರತಿ |
ಸತ್ಕೃತ್ಯ ವಿಧಿವದ್ ದ್ರೋಣಂ ಜಿತಾನ್ ಮನ್ಯಂತ ಪಾಂಡವಾನ್ ॥43॥
ಅನಂತರ ಪುಣ್ಯಾಹ ಘೋಷಗಳಿಂದಲೂ, ಆಶೀರ್ವಾದ ವಚನಗಳಿಂದಲೂ, ಸೂತ-ಮಾಗಧ-ವಂದಿಗಳ ಸ್ತೋತ್ರಗಳಿಂದಲೂ, ಮಂಗಳ ಗೀತೆಗಳಿಂದಲೂ, ಜಯಶಬ್ದಗಳಿಂದಲೂ, ಮನೋಹರವಾದ ನರ್ತನಗಳಿಂದಲೂ ದ್ರೋಣರನ್ನು ಶಾಸೊತ್ರೀಕ್ತ ರೀತಿಯಿಂದ ಸತ್ಕರಿಸಿ ದುರ್ಯೋಧನನು ಪಾಂಡವರನ್ನು ಗೆದ್ದಿದ್ದೇನೆ ಎಂದು ತಿಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಪಂಚಮೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ಸಂಜಯನಿಂದ ದ್ರೋಣರ ಪರಾಕ್ರಮದ ವರ್ಣನೆ.
ಸಂಜಯಃ
ಸೈನಾಪತ್ಯಂ ತು ಸಂಪ್ರಾಪ್ಯ ಭಾರದ್ವಾಜೋ ಮಹಾರಥಃ |
ಯುಯುತ್ಸುರ್ವ್ಯೂಹ್ಯ ಸೈನ್ಯಾನಿ ಪ್ರಾಯಾತ್ ತವ ಸುತೈಃಸಹ ॥ 1 ॥

ಸಂಜಯ ಮಹಾರಥರಾದ ದ್ರೋಣರು ಸೇನಾಧಿಪತ್ಯವನ್ನು ಹೊಂದಿ ಯುದ್ಧವನ್ನು ಮಾಡಲು ಬಯಸಿ, ಸೈನ್ಯವನ್ನು ವ್ಯೂಹಗೊಳಿಸಿ ನಿನ್ನ ಪುತ್ರರ ಜೊತೆಯಲ್ಲಿ ಹೊರಟರು.
ಸೈಂಧವಶ್ಚ ಕಳಿಂಗಶ್ಚ ವಿಕರ್ಣಶ್ಚ ತವಾತ್ಮಜಃ |
ದಕ್ಷಿಣಂ ಪಕ್ಷಮಾಸ್ಥಾಯ ಸಮತಿಷ್ಠಂತ ದಂಸಿತಾಃ ॥ 2 ॥
ಸೈಂಧವ, ಕಳಿಂಗ ಮತ್ತು ನಿನ್ನ ಪುತ್ರನಾದ ವಿಕರ್ಣ ಇವರು ಕವಚಗಳನ್ನು ಧರಿಸಿ ಸೈನ್ಯದ ದಕ್ಷಿಣಭಾಗದಲ್ಲಿ ನಿಂತರು.
ಪ್ರಪಕ್ಷಂ ಶಕುನಿಸ್ತೇಷಾಂ ಪ್ರವರೈರ್ಹಯಸಾದಿಭಿಃ |
ಯಯೌ ಗಾಂಧಾರಕೈಃ ಸಾರ್ಧಂ ವಿಮಲಪ್ರಾಸಯೋಧಿಭಿಃ ॥ 3 ॥
ಶುದ್ಧವಾದ ಪ್ರಾಸಗಳಿಂದ ಯುದ್ಧವನ್ನು ಮಾಡುವ ಗಾಂಧಾರಕರಿಂದಲೂ ಮತ್ತು ಶ್ರೇಷ್ಠರಾದ ಅಶ್ವಾರೋಹಿಗಳಿಂದಲೂ ಸಹಿತನಾದ ಶಕುನಿಯು ಅವರಿಗೆ ಹಿಂದಿನಿಂದ ಬಲವನ್ನು ಕೊಡುವ ಪ್ರಪಕ್ಷನಾಗಿದ್ದನು.
ಕೃಪಶ್ಚ ಕೃತವರ್ಮಾ ಚ ಚಿತ್ರಸೇನೋ ವಿವಿಂಶತಿಃ |
ದುಃಶಾಸನಮುಖಾ ಯತ್ತಾಃ ಸವ್ಯಂ ಪಕ್ಷಮಪಾಲಯನ್ ॥ 4 ॥
ಕೃಪರು, ಕೃತವರ್ಮ, ಚಿತ್ರಸೇನ, ವಿವಿಂಶತಿ, ದುಶ್ಶಾಸನ ಮೊದಲಾದವರು ಎಚ್ಚರಿಕೆಯಿಂದ ಸೈನ್ಯದ ಎಡಭಾಗವನ್ನು ರಕ್ಷಿಸಿದರು.
ತೇಷಾಂ ಪ್ರಪಕ್ಷಾಃ ಕಾಂಬೋಜಾಃ ಸುದಕ್ಷಿಣಪುರಃಸರಾಃ |
ಯಯುರಶ್ವೈರ್ಮಹಾವೇಗೈಃ ಶಕಾಶ್ಚ ಯವನೈಃ ಸಹ ॥ 5 ॥
ಕಾಂಬೋಜದೇಶದ ಸುದಕ್ಷಿಣ ಮೊದಲಾದವರು ಮಹಾವೇಗವುಳ್ಳ ಅಶ್ವಗಳಿಂದಲೂ, ಶಕರಿಂದಲೂ ಮತ್ತು ಯವನರಿಂದಲೂ ಸಹಿತರಾಗಿ ಅವರಿಗೆ ಪ್ರಪಕ್ಷವಾಗಿ ಹೊರಟರು.
ಅಂಗಾಸ್ತ್ರಿಗರ್ತಾಃ ಸಾಂಬಷ್ಠಾಃ ಪ್ರತೀಚ್ಯೋದೀಚ್ಯವಾಸಿನಃ |
ಶಿಬಯಃ ಶೂರಸೇನಾಶ್ಚ ಮಲ್ಲಾಶ್ಚ ಮಗಧೈಃ ಸಹ ॥ 6 ॥
ಸೌವೀರಾಃ ಕಿತವಾಃ ಪ್ರಾಚ್ಯಾ ದಾಕ್ಷಿಣಾತ್ಯಾಶ್ಚ ಸರ್ವಶಃ |
ತವಾತ್ಮಜಂ ಪುರಸ್ಕೃತ್ಯ ಸೂತಪುತ್ರಸ್ಯ ಪೃಷ್ಠತಃ ॥ 7 ॥
ಅಂಗರು, ತ್ರಿಗರ್ತರು, ಅಂಬಷ್ಠರು, ಪಶ್ಚಿಮ ಮತ್ತು ಉತ್ತರದಿಕ್ಕಿನಲ್ಲಿ ವಾಸವಿರುವ ಯೋಧರು, ಶಿಬಿಗಳು, ಶೂರಸೇನರು, ಮಲ್ಲರು, ಮಗಧರು, ಸೌವೀರರು, ಕಿತವರು, ಪೂರ್ವದಿಕ್ಕಿನಲ್ಲಿ ವಾಸಿಸುವವರು ಮತ್ತು ದಕ್ಷಿಣ ದಿಕ್ಕಿನಲ್ಲಿ ವಾಸಿಸುವವರು ಎಲ್ಲರೂ ನಿನ್ನ ಪುತ್ರನಾದ ದುರ್ಯೋಧನನನ್ನು ಮುಂದೆ ಮಾಡಿಕೊಂಡು ಕರ್ಣನ ಹಿಂದೆ ನಡೆದರು.
ಹರ್ಷಯನ್ ಸರ್ವಸೈನ್ಯಾನಿ ಬಲೇಷು ಬಲಮಾದಧತ್ |
ಯಯೌ ವೈಕರ್ತನಃ ಕರ್ಣಃ ಪ್ರಮುಖಃ ಸರ್ವಧನ್ವಿನಾಮ್ ॥ 8 ॥
ತಸ್ಯ ದೀಪ್ತೋ ಮಹಾಕಾಯಃ ಸ್ವಾನ್ಯನೀಕಾನಿ ಹರ್ಷಯನ್ |
ಹಸ್ತಿಕಕ್ಷ್ಯೋ ಮಹಾಕೇತುರ್ಬಭೌ ಸೂರ್ಯಸಮದ್ಯುತಿಃ |
ನ ಭೀಷ್ಮವ್ಯಸನಂ ಕಶ್ಚಿದ್ ದೃಷ್ಟ್ವಾ ಕರ್ಣಮಮನ್ಯತ ॥ 9 ॥
ಎಲ್ಲ ಸೈನ್ಯಕ್ಕೂ ಹರ್ಷವನ್ನುಂಟು ಮಾಡುತ್ತ, ಸೈನ್ಯಗಳಿಗೆ ಬಲವನ್ನು ಕೊಡುತ್ತ ವೈಕರ್ತನಾದ ಕರ್ಣನು ಎಲ್ಲ ಧನುರ್ಧಾರಿಗಳ ಮುಂದೆ ನಡೆದನು. ಕಾಕಚಿಹ್ನೆಯುಳ್ಳ ದೊಡ್ಡದಾದ ಮತ್ತು ದೀಪ್ತವಾದ ಮಹಾಧ್ವಜವು, ಸೂರ್ಯನಿಗೆ ಸಮಾನವಾದ ಕಾಂತಿಯನ್ನು ಹೊಂದಿ ತನ್ನ ಸೈನ್ಯವನ್ನು ಹರ್ಷಗೊಳಿಸುತ್ತಾ ಶೋಭಿಸಿತು. ಕರ್ಣನನ್ನು ನೋಡಿ ಯಾವನೂ ಭೀಷ್ಮರ ದುಃಖದ ಬಗ್ಗೆ ಚಿಂತಿಸಲಿಲ್ಲ.
ವಿಶೋಕಾಃ ಸಮಪದ್ಯಂತ ರಾಜಾನಃ ಕುರುಭಿಃ ಸಹ |
ಹೃಷ್ಟಾಶ್ಚ ಬಹವೋ ಯೋಧಾಃ ತತ್ರ ಜಲ್ಪಂತಿ ಸಂಯುಗೇ ॥10॥
ನ ಹಿ ಕರ್ಣಂ ರಣೇ ದೃಷ್ಟ್ವಾ ಯುದ್ಧೇ ಸ್ಥಾಸ್ಯಂತಿ ಪಾಂಡವಾಃ ॥11॥
ಕರ್ಣೋ ಹಿ ಸಮರೇ ಶಕ್ತೋ ಜೇತುಂ ದೇವಾನಪಿ ಧ್ರುವಮ್ |
ಕಿಂ ಪುನಃ ಪಾಂಡವಾನ್ ಯುದ್ಧೇ ಹೀನವೀರ್ಯಪರಾಕ್ರಮಾನ್ ॥12॥
ಭೀಷ್ಮೇಣ ತು ರಣೇ ಪಾರ್ಥಾಃ ಪಾಲಿತಾ ಬಲಶಾಲಿನಾ |
ತಾಂಸ್ತು ಕರ್ಣಃ ಶರೈಸ್ತೀಕ್ಷ್ಣೈಃ ನಾಶಯಿಷ್ಯತ್ಯಸಂಶಯಮ್ ॥ 13 ॥
ರಾಜರು ಕೌರವರ ಜೊತೆಯಲ್ಲಿ ಶೋಕಹೀನರಾಗಿ ಹರ್ಷಗೊಂಡರು. ಬಹಳ ಯೋಧರು-ಯುದ್ಧದಲ್ಲಿ ಕರ್ಣನನ್ನು ನೋಡಿ ಪಾಂಡವರು ರಣರಂಗದಲ್ಲಿ ನಿಲ್ಲುವುದಿಲ್ಲ. ಕರ್ಣನು ಖಂಡಿತವಾಗಿ ಯುದ್ಧದಲ್ಲಿ ದೇವತೆಗಳನ್ನೂ ಗೆಲ್ಲಲು ಸಮರ್ಥನಾದವನು. ಇನ್ನು ಹೀನ ಬಲ-ಪರಾಕ್ರಮವುಳ್ಳ ಪಾಂಡವರನ್ನು ಯುದ್ಧದಲ್ಲಿ ಗೆಲ್ಲುವುದು ಯಾವ ದೊಡ್ಡ ವಿಷಯ? ಬಲಶಾಲಿಗಳಾದ ಭೀಷ್ಮರಾದರೋ ಯುದ್ಧದಲ್ಲಿ ಪಾಂಡವರನ್ನು ರಕ್ಷಿಸಿದರು. ಕರ್ಣನಾದರೋ ಅವರನ್ನು ತನ್ನ ತೀಕ್ಷ್ಣವಾದ ಬಾಣಗಳಿಂದ ನಿಸ್ಸಂಶಯವಾಗಿ ನಾಶಗೊಳಿಸುವನು- ಎಂದು ಮಾತನಾಡಿಕೊಂಡರು.
ಏವಂ ಬ್ರುವಂತಸ್ತೇಽನ್ಯೋನ್ಯಂ ಹೃಷ್ಟರೂಪಾ ವಿಶಾಂಪತೇ |
ರಾಧೇಯಂ ಪೂಜಯಂತಶ್ಚ ಪ್ರಶಂಸಂತಶ್ಚ ನಿರ್ಯಯುಃ ॥ 14 ॥
ಎಲೈ ರಾಜನೇ, ಹೀಗೆ ಸಂತೋಷಗೊಂಡ ಅವರು ಪರಸ್ಪರವಾಗಿ ಮಾತನಾಡುತ್ತಾ, ಕರ್ಣನನ್ನು ಪೂಜಿಸುತ್ತಾ ಮತ್ತು ಪ್ರಶಂಸಿಸುತ್ತಾ ಹೊರಟರು.
ಅಸ್ಮಾಕಂ ಶಕಟವ್ಯೂಹೋ ದ್ರೋಣೇನ ವಿಹಿತೋಽಭವತ್ |
ಪರೇಷಾಂ ಕ್ರೌಂಚ ಏವಾಸೀದ್ ವ್ಯೂಹೋ ರಾಜನ್ ಮಹಾತ್ಮನಾಮ್ |
ಪ್ರೀಯಮಾಣೇನ ವಿಹಿತೋ ಧರ್ಮರಾಜೇನ ಮಾರಿಷ ॥ 15 ॥

ದ್ರೋಣರು ನಮ್ಮ ಸೈನ್ಯದಲ್ಲಿ ಶಕಟ ವ್ಯೂಹವನ್ನು ರಚಿಸಿದರು. ಎಲ್ಲೈ ರಾಜನೇ, ಪೂಜ್ಯನೇ, ಸಂತೋಷಗೊಂಡ ಧರ್ಮರಾಜನು ಮಹಾತ್ಮರಾದ ಪಾಂಡವರ ಸಲುವಾಗಿ ಕ್ರೌಂಚವ್ಯೂಹವನ್ನೇ ರಚಿಸಿದ್ದನು.
ವ್ಯೂಹಪ್ರಮುಖತಸ್ತೇಷಾಮಾಸ್ಥಿತೌ ಪುರುಷರ್ಷಭೌ |
ವಾನರಧ್ವಜಮುಚ್ಛ್ರಿತ್ಯ ವಿಷ್ವಕ್ಸೇನಧನಂಜಯೌ ॥ 16 ॥
ಕಕುದಂ ಸರ್ವಸೈನ್ಯಾನಾಂ ಲಕ್ಷ್ಮ ಸರ್ವಧನುಷ್ಮತಾಮ್ |
ಅವರ ವ್ಯೂಹದ ಮುಂಭಾಗದಲ್ಲಿ ಸರ್ವಸೈನ್ಯಗಳಿಗೂ ಶಿಖರಪ್ರಾಯರಾಗಿದ್ದ, ಸರ್ವಧನುರ್ಧಾರಿಗಳಿಗೂ ಲಕ್ಷ್ಯರಾಗಿದ್ದ, ಪುರುಷಶ್ರೇಷ್ಠರಾದ ಕೃಷ್ಣಾರ್ಜುನರು ವಾನರ ಧ್ವಜವನ್ನು ಎತ್ತಿ ನಿಂತರು.
ಆದಿತ್ಯಪಥಗಃ ಕೇತುಃ ಪಾರ್ಥಸ್ಯಾಮಿತತೇಜಸಃ ॥ 17 ॥
ದೀಪಯಾಮಾಸ ತತ್ ಸೈನ್ಯಂ ಪಾಂಡವಸ್ಯ ಮಹಾತ್ಮನಃ |
ಯಥಾ ಪ್ರಜ್ವಲಿತಃ ಸೂರ್ಯೋ ಯುಗಾಂತೇ ವೈ ವಸುಂಧರಾಮ್ ॥18॥
ಮಹಾತ್ಮನಾದ ಮತ್ತು ಅಮಿತಪರಾಕ್ರಮಿಯಾದ ಅರ್ಜುನನ ಆ ಧ್ವಜವು ಸೂರ್ಯಮಾರ್ಗದಲ್ಲಿ ನಿಂತು ಆ ಸೈನ್ಯವನ್ನು ಪ್ರಕಾಶಿಸುತ್ತಿದ್ದಿತು. ಯುಗಾಂತ ಕಾಲದಲ್ಲಿ ಪ್ರಜ್ವಲಿತನಾದ ಸೂರ್ಯನು ಭೂಮಿಯನ್ನು ದಹಿಸುವಂತೆ ಮೇಧಾವಿಯಾದ ಅರ್ಜುನನ ಆ ಧ್ವಜವು ಸೈನ್ಯವನ್ನು ದಹಿಸುವಂತೆ ಇದ್ದಿತು.
ಪ್ರದಹನ್ ದೃಶ್ಯತೇ ತದ್ವತ್ ಕೇತುಃ ಪಾರ್ಥಸ್ಯ ಧೀಮತಃ ॥ 18 ॥
ಅಸ್ಯತಾಮರ್ಜುನಃ ಶ್ರೇಷ್ಠೋ ಗಾಂಡೀವಂ ಧನುಷಾಂ ವರಮ್ |
ವಾಸುದೇವಶ್ಚ ಭೂತಾನಾಂ ಚಕ್ರಾಣಾಂ ಚ ಸುದರ್ಶನಮ್ ॥ 19 ॥
ಚತ್ವಾರ್ಯೇತಾನಿ ತೇಜಾಂಸಿ ವಹನ್ ಶ್ವೇತಹಯೋ ರಥಃ |
ಪರೇಷಾಮಗ್ರತಸ್ತಸ್ಥೌ ಕಾಲಚಕ್ರಮಿವೋದ್ಯತಮ್ ॥ 20 ॥
ಬಾಣವನ್ನು ಪ್ರಯೋಗಿಸುವವರಲ್ಲಿ ಅರ್ಜುನನು ಶ್ರೇಷ್ಠನಾದವನು. ಗಾಂಡೀವವು ಧನುಸ್ಸುಗಳಲ್ಲಿ ಶ್ರೇಷ್ಠವಾದುದು. ಕೃಷ್ಣನು ಎಲ್ಲ ಚೇತನಗಳಿಗಿಂತಲೂ ಶ್ರೇಷ್ಠನಾದವನು. ಸುದರ್ಶನವು ಎಲ್ಲ ಚಕ್ರಗಳಲ್ಲಿ ಶ್ರೇಷ್ಠವಾದುದು. ಅರ್ಜುನನ ಶ್ವೇತಾಶ್ವಗಳಿಂದ ಕೂಡಿದ ರಥವು ಈ ನಾಲ್ಕು ತೇಜಸ್ಸುಗಳನ್ನು ಹೊತ್ತು ಉದಯಿಸಿದ ಕಾಲಚಕ್ರದಂತೆ ಪಾಂಡವರ ಅಗ್ರಭಾಗದಲ್ಲಿ ನಿಂತಿದ್ದಿತು.
ಏವಮೇತೌ ಮಹಾತ್ಮಾನೌ ಬಲಸಾಗರಗಾವುಭೌ |
ತಾವಕಾನಾಂ ಮುಖಂ ಕರ್ಣಃ ಪರೇಷಾಂ ತು ಧನಂಜಯಃ ॥ 21 ॥
ಹೀಗೆ ಈ ಇಬ್ಬರು ಮಹಾತ್ಮರು ಸೈನ್ಯಸಾಗರದ ಮುಂಭಾಗದಲ್ಲಿದ್ದು, ನಿನ್ನ ಸೈನಿಕರ ಮುಂಭಾಗದಲ್ಲಿ ಕರ್ಣನೂ, ಅವರ ಮುಂಭಾಗದಲ್ಲಿ ಅರ್ಜುನನೂ ಇದ್ದರು.
ಯೌ ತೌ ಜಾತಾಭಿಸಂರಂಭೌ ಪರಸ್ಪರವಧೈಷಿಣೌ |
ಅವೇಕ್ಷೇತಾಂ ತದಾಽನ್ಯೋನ್ಯಂ ಸಮರೇ ಕರ್ಣಪಾಂಡವೌ ॥ 22 ॥
ಪರಸ್ಪರ ವಧೆಯನ್ನು ಬಯಸಿದ ಕರ್ಣಾರ್ಜುನರು ಆಗ ಕೋಪದಿಂದ ಕೂಡಿದವರಾಗಿ ರಣರಂಗದಲ್ಲಿ ಒಬ್ಬರನ್ನೊಬ್ಬರು ನೋಡಿದರು.

ಸಂಪ್ರಯಾತೇ ತು ಸಹಸಾ ಭಾರದ್ವಾಜೇ ಮಹಾರಥೇ |
ಸಿಂಹನಾದೇನ ಮಹತಾ ವಸುಧಾ ಸಮಕಂಪತ ॥ 23 ॥
ಮಹಾರಥರಾದ ದ್ರೋಣರು ಶೀಘ್ರವಾಗಿ ಹೋಗುತ್ತಿರಲು ಸೈನಿಕರ ದೊಡ್ಡ ಸಿಂಹನಾದದಿಂದ ಭೂಮಿಯು ನಡುಗಿತು.
ತತಸ್ತುಮುಲಮಾಕಾಶಮಾವೃಣೋತ್ ಸದಿವಾಕರಮ್ |
ವಾತೋದ್ಧತಂ ರಜಸ್ತೀವ್ರಂ ಕೌಶೇಯನಿಕರೋಪಮಮ್ ॥ 24 ॥
ಆ ತೀವ್ರವಾದ ಶಬ್ದವೂ ಮತ್ತು ಗಾಳಿಯಿಂದ ಕೆಂಪಾದ ರಕ್ತವಸ್ತ್ರದ ರಾಶಿಯಂತಿದ್ದ ಧೂಳೂ ಸಹ ಸೂರ್ಯನಿಂದ ಸಹಿತವಾದ ಆಕಾಶವನ್ನು ಆವರಿಸಿದವು.
ಅನಭ್ರೇ ವರ್ಷತಿ ವ್ಯೋಮ್ನಿ ಮಾಂಸಾಸ್ಥಿರುಧಿರಾಣ್ಯುತ |
ಗೃಧ್ರಾಃ ಕಂಕಾ ಬಲಶ್ಯೇನಾ ವಾಯಸಾಶ್ಚ ಸಹಸ್ರಶಃ |
ಉಪರ್ಯುಪರಿ ಸೇನಾಂ ತೇ ತದಾ ಪರ್ಯಪತನ್ ನೃಪ ॥ 25 ॥
ಮೋಡವಿಲ್ಲದ ಆಕಾಶವು ರಕ್ತ-ಮಾಂಸದ ಮಳೆಯನ್ನು ಸುರಿಸುತ್ತಿರಲು ಎಲ್ಲೆ ರಾಜನೇ, ಹದ್ದುಗಳು, ಕಂಕಗಳು, ಬಲಗಳು, ಶ್ಯೇನಗಳು (ಹದ್ದು) ಮತ್ತು ಕಾಗೆಗಳು ಸಹಸ್ರ ಸಂಖ್ಯೆಯಲ್ಲಿ ಆಗ ನಿನ್ನ ಸೈನ್ಯದ ಮೇಲ್ಭಾಗದಲ್ಲಿ ಸಂಚರಿಸಿದವು.
ಗೋಮಾಯವಶ್ಚ ವ್ಯಾಕ್ರೋಶನ್ ಭಯದಾ ದಾರುಣಸ್ವರಾಃ |
ಅಕಾರ್ಷುರಪಸವ್ಯಂ ಚ ಪೃತನಾಂ ಬಹುಶಸ್ತವ ॥26॥
ಚಿಖಾದಿಷಂತೋ ಮಾಂಸಾನಿ ಪಿಪಾಸಂತಶ್ಚ ಶೋಣಿತಮ್ |
ಭಯವನ್ನುಂಟು ಮಾಡುವ ದಾರುಣಸ್ವರದಿಂದ ಕೂಡಿದ ನರಿಗಳು ರೋದಿಸಿದವು. ಮಾಂಸವನ್ನು ತಿನ್ನಲು ಬಯಸಿ, ರಕ್ತವನ್ನು ಪಾನ ಮಾಡಲು ಬಯಸಿ ಅವು ಬಹುಸಂಖ್ಯೆಯಲ್ಲಿ ನಿನ್ನ ಸೈನ್ಯಕ್ಕೆ ಅಪಸವ್ಯದ ಮಾರ್ಗದಲ್ಲಿ ಹೋದವು.
ಅಪತನ್ ದೀಪ್ಯಮಾನಾಶ್ಚ ನಿರ್ಘಾತಾಶ್ಚ ಸುದಾರುಣಾಃ ॥27॥
ಉಲ್ಕಾ ಜ್ವಲಂತ್ಯಃ ಸೇನಾಂ ತೇ ಪುಚ್ಛೇನಾವೃತ್ಯ ಸರ್ವಶಃ |
ಅಪತನ್ ದೀಪ್ಯಮಾನಾಶ್ಚ ನಿರ್ಘನಾ ವೈ ಸುದಾರುಣಾಃ ॥ 28 ॥
ಬಹಳ ದಾರುಣವೂ, ಪ್ರಕಾಶಮಾನವೂ ಆದ ಜ್ವಲಿಸುವ ಉಲ್ಕೆಗಳು (ಧೂಮಕೇತುಗಳು) ತಮ್ಮ ಪುಚ್ಛದಿಂದ ನಿನ್ನ ಸೈನ್ಯಗಳೆಲ್ಲವನ್ನೂ

ಆವರಿಸಿದವು. ಮೋಡಗಳಿಲ್ಲದೆಯೇ ದಾರುಣವಾದ, ಪ್ರಕಾಶಮಾನವಾದ ಉಲ್ಕೆಗಳು ನಿನ್ನ ಸೈನ್ಯದ ಮೇಲೆ ಬಿದ್ದವು.
ಪರಿವೇಷೋ ಮಹಾಂಶ್ಚೈವ ಸವಿದ್ಯುತ್ಸ್ತನಯಿತ್ನುಮಾನ್ |
ಭಾಸ್ಕರಸ್ಯಾಭವದ್ ರಾಜನ್ ಪ್ರಯಾತೇ ವಾಹಿನೀಪತೌ ॥ 29 ॥
ಎಲೈ ರಾಜನೇ, ಸೇನಾಪತಿಗಳಾದ ದ್ರೋಣರು ಹೋಗುತ್ತಿರಲು ಸೂರ್ಯನಿಗೆ ಮಿಂಚು, ಸಿಡಿಲುಗಳಿಂದ ಸಹಿತವಾದ ದೊಡ್ಡ ಪರಿವೇಷವು ಉಂಟಾಯಿತು.
ಏತೇ ಚಾನ್ಯೇ ಚ ಬಹವಃ ಪ್ರಾದುರಾಸನ್ ಸುದಾರುಣಾಃ |
ಉತ್ಪಾತಾ ಯುಧಿ ವೀರಾಣಾಂ ಜೀವಿತಕ್ಷಯಕಾರಕಾಃ ॥ 30 ॥
ಯುದ್ಧದಲ್ಲಿ ವೀರರಿಗೆ ಪ್ರಾಣಹಾನಿಯನ್ನು ಸೂಚಿಸುವ ಈ ಅಪಶಕುನಗಳೂ ಮತ್ತು ಇನ್ನೂ ಅನೇಕ ಘೋರವಾದ ಅಪಶಕುನಗಳೂ ಉಂಟಾದವು.
ತತಃ ಪ್ರವವೃತೇ ಯುದ್ಧಂ ಪರಸ್ಪರವಧೈಷಿಣಾಮ್ |
ಕುರುಪಾಂಡವಯೋಧಾನಾಂ ಶಬ್ದೇನಾನಾದಯಜ್ಜಗತ್ ॥ 31 ॥
ಅನಂತರ ಪರಸ್ಪರ ವಧೆಯನ್ನು ಬಯಸಿದ ಕುರು-ಪಾಂಡವ ಯೋಧರಿಗೆ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವು ಜಗತ್ತನ್ನು ಶಬ್ದದಿಂದ ತುಂಬಿತು.
ತೇ ತ್ವನ್ಯೋನ್ಯಂ ಸುಸಂರಬ್ಧಾಃ ಪಾಂಡವಾಃ ಸಹ ಕೌರವೈಃ |
ಪ್ರತ್ಯಘ್ನನ್ ನಿಶಿತೈರ್ಬಾಣೈರ್ಜಯಗೃದ್ಧಾಃ ಪ್ರಹಾರಿಣಃ ॥ 32 ॥
ಪರಸ್ಪರವಾಗಿ ಕೋಪಗೊಂಡ, ಪ್ರಹಾರಶೀಲರಾದ, ಜಯಾಕಾಂಕ್ಷಿಗಳಾದ ಪಾಂಡವರು ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡಿ, ಅವರನ್ನು ನಿಶಿತವಾದ ಬಾಣಗಳಿಂದ ಹೊಡೆದರು.
ಸ ಪಾಂಡವಾನಾಂ ಮಹತೀಂ ಮಹೇಷ್ವಾಸೋ ಮಹಾದ್ಯುತಿಃ |
ವೇಗೇನಾಭ್ಯದ್ರವತ್ ಸೇನಾಂ ಕಿರನ್ ಶರಶತೈರ್ಗುರುಃ ॥ 33 ॥
ಗುರುಗಳೂ, ಮಹಾಧನುರ್ಧಾರಿಗಳೂ, ಮಹಾಕಾಂತಿಯುಕ್ತರೂ ಆದ ದ್ರೋಣರು ನೂರಾರು ಬಾಣಗಳನ್ನು ಪಾಂಡವರ ಸೈನ್ಯದ ಮೇಲೆ ಸುರಿಸುತ್ತಾ ಪಾಂಡವರ ದೊಡ್ಡ ಸೈನ್ಯದ ಕಡೆಗೆ ವೇಗದಿಂದ ಮುನ್ನುಗ್ಗಿದರು.
ದ್ರೋಣಮಭ್ಯಾಗತಂ ದೃಷ್ಟ್ವಾ ಪಾಂಡವಾಃ ಸಹಸೃಂಜಯೈಃ |
ಪ್ರತ್ಯಗೃಹ್ಣಂಸ್ತದಾ ರಾಜನ್ ಶರವರ್ಷೈಃ ಪೃಥಕ್ ಪೃಥಕ್ ॥ 34 ॥
ದ್ರೋಣರು ತಮ್ಮ ಕಡೆಗೆ ಬರುವುದನ್ನು ನೋಡಿ ಸೃಂಜಯರಿಂದ ಸಹಿತರಾದ ಪಾಂಡವರು ಎಲೈ ರಾಜನೇ, ಬೇರೆ ಬೇರೆ ಶರವರ್ಷಗಳಿಂದ ಅವರನ್ನು ಸ್ವೀಕರಿಸಿದರು.
ಸಂಕ್ಷೋಭ್ಯಮಾಣಾ ದ್ರೋಣೇನ ಭಿದ್ಯಮಾನಾ ಚ ಸಾ ಚಮೂಃ |
ವ್ಯಶೀರ್ಯತ ಸಪಾಂಚಾಲಾ ವಾತೇನೇವ ಬಲಾಹಕಾಃ ॥ 35 ॥
ದ್ರೋಣರಿಂದ ಭಗ್ನವಾಗಿ ಕ್ಷೋಭೆಗೆ ಒಳಗಾದ, ಪಾಂಚಾಲರಿಂದ ಕೂಡಿದ ಆ ಸೈನ್ಯವು ವಾಯುವಿನಿಂದ ಮೋಡಗಳು ನಾಶ ಹೊಂದುವಂತೆ ನಾಶವನ್ನು ಹೊಂದಿತು.
ಬಹೂನ್ಯಪಿ ವಿಕುರ್ವಾಣೋ ದಿವ್ಯಾನ್ಯಸ್ತ್ರಾಣಿ ಸಂಯುಗೇ |
ಅಪೀಡಯತ್ ಕ್ಷಣೇನೈವ ದ್ರೋಣಃ ಪಾಂಡವಸೃಂಜಯಾನ್ ॥ 36 ॥
ದ್ರೋಣರು ಒಂದು ಕ್ಷಣದಲ್ಲಿಯೇ ಯುದ್ಧದಲ್ಲಿ ಅನೇಕ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ಪಾಂಡವ-ಸೃಂಜಯರನ್ನು ಪೀಡಿಸಿದರು.
ತೇ ಹನ್ಯಮಾನಾ ದ್ರೋಣೇನ ವಾಸವೇನೇವ ದಾನವಾಃ |
ಪಾಂಚಾಲಾಃ ಸಮಕಂಪಂತ ಧೃಷ್ಟದ್ಯುಮ್ನಪುರೋಗಮಾಃ ॥ 37 ॥
ದ್ರೋಣರಿಂದ ಹೊಡೆಯಲ್ಪಟ್ಟ ಧೃಷ್ಟದ್ಯುಮ್ನ ಮೊದಲಾದ ಆ ಪಾಂಚಾಲರು ಇಂದ್ರನಿಂದ ಹೊಡೆಯಲ್ಪಟ್ಟ ದಾನವರಂತೆ ನಡುಗಿದರು.
ತತೋ ದಿವ್ಯಾಸ್ತ್ರವಿಚ್ಛೂರೋ ಯಾಜ್ಞಸೇನಿರ್ಮಹಾರಥಃ |
ಅಭಿನಚ್ಛರವರ್ಷೇಣ ದ್ರೋಣಾನೀಕಮನೇಕಧಾ ॥ 38 ॥
ಅನಂತರ ದಿವ್ಯಾಸ್ತ್ರವೇತ್ತನೂ, ಶೂರನೂ, ಮಹಾರಥನೂ ಆದ ಧೃಷ್ಟದ್ಯುಮ್ನನು ತನ್ನ ಶರವರ್ಷದಿಂದ ದ್ರೋಣರ ಸೈನ್ಯವನ್ನು ಅನೇಕ ರೀತಿಯಲ್ಲಿ ಭಗ್ನಗೊಳಿಸಿದನು.
ದ್ರೋಣಸ್ಯ ಶರವರ್ಷಾಣಿ ಶರವರ್ಷೇಣ ಪಾರ್ಷತಃ |
ಸನ್ನಿವಾರ್ಯ ತತಃ ಸರ್ವಾನ್ ಕುರೂನಭ್ಯಪತದ್ ಬಲೀ ॥ 39 ॥
ಧೃಷ್ಟದ್ಯುಮ್ನನು ದ್ರೋಣರ ಬಾಣದ ಮಳೆಯನ್ನು ತನ್ನ ಬಾಣಗಳ ಮಳೆಯಿಂದ ನಿವಾರಿಸಿ ಅನಂತರ ಎಲ್ಲ ಕುರುಗಳ ಮೇಲೆ ಎರಗಿದನು.
ಸಂಗೃಹ್ಯ ತು ತತೋ ದ್ರೋಣಃ ಸಮವಸ್ಥಾಪ್ಯ ಚಾಹವೇ |
ಸ್ವಮನೀಕಂ ಮಹಾಬಾಹುಃ ಪಾರ್ಷತಂ ಸಮುಪಾದ್ರವತ್ ॥ 40 ॥
ಆಗ ಯುದ್ಧದಲ್ಲಿ ಮಹಾಬಾಹುಗಳಾದ ದ್ರೋಣರು ತಮ್ಮ ಸೈನ್ಯವನ್ನು ಒಂದುಗೂಡಿಸಿ, ನಿಲ್ಲಿಸಿ, ಧೃಷ್ಟದ್ಯುಮ್ನನ ಮೇಲೆ ಮುನ್ನುಗ್ಗಿದರು.
ಸ ಬಾಣವರ್ಷಂ ಸುಮಹದ್ ಅಸೃಜತ್ ಪಾರ್ಷತಂ ಪ್ರತಿ |
ಮಘವಾನ್ ಸಮಭಿಕ್ರುದ್ಧಃ ಸಹಸಾ ದಾನವೇಷ್ವಿವ ॥ 41 ॥

ಅವರು ಕೋಪಗೊಂಡ ಇಂದ್ರನು ದಾನವರ ಮೇಲೆ ಸುರಿಸಿದಂತೆ ಧೃಷ್ಟದ್ಯುಮ್ನನ ಮೇಲೆ ಶೀಘ್ರವಾಗಿ ದೊಡ್ಡ ಬಾಣಗಳ ಮಳೆಯನ್ನು ಸೃಷ್ಟಿಸಿದರು.
ತೇ ಕಂಪ್ಯಮಾನಾ ದ್ರೋಣೇನ ಬಾಣೈಃ ಪಾಂಡವಸೃಂಜಯಾಃ |
ಪುನಃಪುನರಭಜ್ಯಂತ ಸಿಂಹೇನೇವೇತರೇ ಮೃಗಾಃ ॥ 42 ॥
ದ್ರೋಣರ ಬಾಣಗಳಿಂದ ನಡುಗಿಸಲ್ಪಟ್ಟ ಪಾಂಡವ-ಸೃಂಜಯರು ಸಿಂಹದಿಂದ ನಡುಗಿದ ಮೃಗಗಳಂತೆ ಪುನಃ ಪುನಃ ಭಗ್ನಗೊಂಡರು.
ಅಥ ಪರ್ಯಪತದ್ ದ್ರೋಣಃ ಪಾಂಡವಾನಾಂ ಬಲಂ ಬಲೀ |
ಅಲಾತಚಕ್ರವದ್ ರಾಜನ್ ತದದ್ಭುತಮಿವಾಭವತ್ ॥ 43 ॥
ಎಲೈ ರಾಜನೇ, ಆಗ ಬಲಿಷ್ಠರಾದ ದ್ರೋಣರು ಅಲಾತಚಕ್ರ (ಕೊಳ್ಳಿಯ ಚಕ್ರ) ದಂತೆ ತಿರುಗುತ್ತಾ ಪಾಂಡವರ ಸೈನ್ಯವನ್ನು ಸಂತಾಪಗೊಳಿಸಿದರು, ಅದು ಅದ್ಭುತವಾಗಿದ್ದಿತು.
ಖಚರನಗರಕಲ್ಪಂ ಕಲ್ಪಿತಂ ಶಾಸ್ತ್ರದೃಷ್ಟ್ಯಾ
ಪವನಚಲಪತಾಕಂ ಹ್ರಾದಿನಂ ವಲ್ಗಿತಾಶ್ವಮ್ |
ಸ್ಫಟಿಕವಿಮಲಕೇತುಂ ತಾಪನಂ ಶಾತ್ರವಾಣಾಂ
ರಥವರಮಧಿರೂಢಃ ಸಂಜಹಾರಾರಿಸೇನಾಮ್ ॥ 44 ॥|
ದ್ರೋಣರು ಗಂಧರ್ವ ನಗರದಂತಿದ್ದ, ಶಾಸ್ತ್ರವಿಧಾನದಂತೆ ಸಿದ್ಧಗೊಳಿಸಿದ, ಗಾಳಿಗೆ ಚಲಿಸುವ ಪತಾಕೆಗಳನ್ನು ಹೊಂದಿದ್ದ, ಘೋಷದಿಂದ ಕೂಡಿದ, ಕೆನೆಯುವ ಅಶ್ವಗಳಿಂದ ಕೂಡಿದ, ಸ್ಫಟಿಕದಿಂದ ಮಾಡಿದ ಶುದ್ಧವಾದ ಧ್ವಜಗಳನ್ನುಳ್ಳ, ಶತ್ರುಗಳಿಗೆ ತಾಪವನ್ನುಂಟು ಮಾಡುವ, ಶ್ರೇಷ್ಠವಾದ ರಥವನ್ನು ಏರಿದವರಾಗಿ ಶತ್ರುಸೈನ್ಯವನ್ನು ಸಂಹಾರ ಮಾಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಷ್ಠೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ಸಂಜಯನಿಂದ ದ್ರೋಣರ ನಿಧನದ ಕಥನ
ಸಂಜಯಃ
ತಥಾ ದ್ರೋಣಮಭಿಘ್ನಂತಂ ಸಾಶ್ವಸೂತರಥದ್ವಿಪಾನ್ |
ವ್ಯಥಿತಾಃ ಪಾಂಡವಾ ರಾಜನ್ ನ ಚೈನಂ ಪ್ರತ್ಯವಾರಯನ್ ॥ 1 ॥
ಸಂಜಯ ಅಶ್ವ, ಸಾರಥಿ, ರಥ-ಗಜಗಳನ್ನು ಆ ರೀತಿಯಲ್ಲಿ ಸಂಹರಿಸುತ್ತಿದ್ದ ದ್ರೋಣರನ್ನು ಎಲೈ ರಾಜನೇ, ವ್ಯಥೆಯಿಂದ ಕೂಡಿದ ಪಾಂಡವರು ತಡೆಯಲು ಸಾಧ್ಯವಾಗಲಿಲ್ಲ.
ತತೋ ಯುಧಿಷ್ಠಿರೋ ರಾಜಾ ಧೃಷ್ಟದ್ಯುಮ್ನಧನಂಜಯೌ |
ಅಬ್ರವೀತ್ ಸರ್ವತೋ ಯತ್ನಾತ್ ಕುಂಭಯೋನಿರ್ನಿವಾರ್ಯತಾಮ್ ॥2॥
ಆಗ ರಾಜನಾದ ಯುಧಿಷ್ಠಿರನು ಅರ್ಜುನ ಮತ್ತು ಧೃಷ್ಟದ್ಯುಮ್ನರನ್ನು ಕುರಿತು ಸರ್ವಪ್ರಯತ್ನದಿಂದ ದ್ರೋಣರನ್ನು ನಿವಾರಿಸಿ ಎಂದು ಹೇಳಿದನು.
`ಆಚಾರ್ಯಃ ಕಲಶಾಜ್ಜಾತಃ ಶರಸ್ತಂಬಾದ್‌ಗುರುಕೃಪಃ' ದ್ರೋಣಾಚಾರ್ಯರು ಕಲಶದಿಂದ ಜನಿಸಿದರು. ನೊಜೆಯ ಹುಲ್ಲಿನ ಗೆಡ್ಡೆಯಿಂದ ಕೃಪಾಚಾರ್ಯರು ಜನಿಸಿದರು ಎಂಬ ಸ್ಪಷ್ಟ ವಚನವಿರುವುದರಿಂದ, ದೊನ್ನೆಯಲ್ಲಿ (ದ್ರೋಣದಲ್ಲಿ) ಪತಿತವಾದ ರೇತಸ್ಸನ್ನು ಪುನಃ ಕಲಶದಲ್ಲಿ ಇಟ್ಟು ರಕ್ಷಿಸಿದ ಕಾರಣದಿಂದ ದ್ರೋಣರಿಗೆ `ಕುಂಭಯೋನಿ' ಎಂದು ಹೆಸರು ಲಕ್ಷ್ಯಾಲಂಕಾರ.
ತತ್ರೈನಮರ್ಜುನಶ್ಚೈವ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಯೇ ಚಾನ್ಯೇ ಪಾರ್ಥಿವಾ ರಾಜನ್ ಪಾಂಡವಸ್ಯಾನುಸೈನಿಕಾಃ |
ಪರ್ಯಗೃಹ್ಣಂಸ್ತತಸ್ತತ್ರ ಸಮಾಗಚ್ಛನ್ ಮಹಾರಥಾಃ ॥ 3 ॥
ಆಗ ಧೃಷ್ಟದ್ಯುಮ್ನನೂ, ಅರ್ಜುನನೂ ಮತ್ತು ಪಾಂಡವರ ಅನುಯಾಯಿಗಳಾಗಿ ಅಲ್ಲಿಗೆ ಬಂದ, ತಮ್ಮ ಸೈನ್ಯದಿಂದ ಒಡಗೂಡಿದ ಮಹಾರಥರಾದ ರಾಜರೂ ಎಲ್ಲರೂ ಸೇರಿ ದ್ರೋಣರನ್ನು ಎದುರಿಸಿದರು.
ಕೇಕಯಾ ಭೀಮಸೇನಶ್ಚ ಸೌಭದ್ರಶ್ಚ ಘಟೋತ್ಕಚಃ |
ಯುಧಿಷ್ಠಿರೋ ಯಮೌ ಮಾತ್ಸ್ಯೋ ದ್ರುಪದಸ್ಯಾತ್ಮಜಾಸ್ತಥಾ ॥ 4 ॥
ದ್ರೌಪದೇಯಾಶ್ಚ ಸಂಹೃಷ್ಟಾ ಧೃಷ್ಟಕೇತುಃ ಸಸಾತ್ಯಕಿಃ |
ಚೇಕಿತಾನಶ್ಚ ಸಂಕ್ರುದ್ಧೋ ಯುಯುತ್ಸುಶ್ಚ ಮಹಾರಥಃ ॥ 5 ॥
ಯೇ ಚಾನ್ಯೇ ಪಾರ್ಥಿವಾ ರಾಜನ್ ಪಾಂಡವಸ್ಯಾನುಯಾಯಿನಃ |
ಕುಲವೀರ್ಯಾನುರೂಪಾಣಿ ಚಕ್ರುಃ ಕರ್ಮಾಣ್ಯಶೇಷತಃ ॥ 6 ॥
ಕೇಕಯರು, ಭೀಮಸೇನ, ಅಭಿಮನ್ಯು, ಘಟೋತ್ಕಚ, ಯುಧಿಷ್ಠಿರ, ನಕುಲ-ಸಹದೇವರು, ವಿರಾಟ, ದ್ರುಪದನ ಪುತ್ರರು, ಸಂತೋಷಗೊಂಡ ದ್ರೌಪದಿಯ ಪುತ್ರರು, ಧೃಷ್ಟಕೇತು, ಸಾತ್ಯಕಿ, ಕೋಪಗೊಂಡ ಚೇಕಿತಾನ, ಮಹಾರಥನಾದ ಯುಯುತ್ಸು, ಎಲೈ ರಾಜನೇ, ಇವರಲ್ಲದೆ ಪಾಂಡವರ ಅನುಯಾಯಿಗಳಾದ ಉಳಿದ ರಾಜರೆಲ್ಲರೂ ತಮ್ಮ ಕುಲ-ವೀರ್ಯಗಳಿಗೆ ಅನುಗುಣವಾದ ಕಾರ್ಯಗಳನ್ನು ಮಾಡಿದರು.

ಸಂಭಿದ್ಯಮಾನಾಂ ತಾಂ ದೃಷ್ಟ್ವಾ ಪಾಂಡವೈರ್ವಾಹಿನೀಂ ರಣೇ |
ವ್ಯಾವೃತ್ಯ ಚಕ್ಷುಷೀ ಕೋಪಾದ್ ಭಾರದ್ವಾಜೋಽನ್ವವೈಕ್ಷತ ॥ 7 ॥
ರಣರಂಗದಲ್ಲಿ ಪಾಂಡವರಿಂದ ಭಗ್ನಗೊಳಿಸಲ್ಪಡುತ್ತಿರುವ ತಮ್ಮ ಸೈನ್ಯವನ್ನು ನೋಡಿ ದ್ರೋಣರು ಕಣ್ಣುಗಳನ್ನು ಅರಳಿಸಿ ನೋಡಿದರು.
ಸ ತೀವ್ರಂ ವೇಗಮಾಸ್ಥಾಯ ವಿಷ್ವಗ್ವಾತ ಇವೋತ್ಥಿತಃ |
ಸ ತೀವ್ರಂ ಕೋಪಮಾಸ್ಥಾಯ ರಥೇ ಸಮರದುರ್ಮದಃ |
ವ್ಯಧಮತ್ ಪಾಂಡವಾನೀಕಂ ಅಭ್ರಾಣೀವ ಸದಾಗತಿಃ ॥ 8 ॥
ಸಮರ ದುರ್ಮದರಾದ ಅವರು ತೀವ್ರವಾದ ಕೋಪವನ್ನು ಹೊಂದಿ, ಮೇಲೆದ್ದ ಸುಂಟರಗಾಳಿಯಂತೆ ತೀವ್ರವಾದ ವೇಗವನ್ನು ಹೊಂದಿ, ವಾಯುವು ಮೋಡಗಳನ್ನು ಚದುರಿಸುವಂತೆ ಪಾಂಡವರ ಸೈನ್ಯವನ್ನು ಚದುರಿಸಿದರು.
ರಥಾನಶ್ವಾನ್ ನರಾನ್ ನಾಗಾನಭ್ಯಧಾವತ್ ಸಮಂತತಃ |
ಚಚಾರೋನ್ಮತ್ತವದ್ ದ್ರೋಣೋ ವೃದ್ಧೋಽಪಿ ತರುಣೋ ಯಥಾ ॥9॥
ರಥಗಳು, ಅಶ್ವಗಳು, ಪದಾತಿಗಳು, ಗಜಗಳು ಇವುಗಳ ಮೇಲೆ ಎಲ್ಲ ಕಡೆಯಲ್ಲಿಯೂ ಧಾವಿಸಿದರು. ದ್ರೋಣರು ವೃದ್ಧರಾದರೂ ತರುಣನಂತೆ, ಉನ್ಮತ್ತನಂತೆ ರಣರಂಗದಲ್ಲಿ ತಿರುಗಿದರು.
ತಸ್ಯ ಶೋಣಿತದಿಗ್ಧಾಂಗಾಃ ಶೋಣಾಃ ಪವನರಂಹಸಃ |
ಆಜಾನೇಯಾ ಹಯಾ ರಾಜನ್ ವಿಭ್ರಮನ್ ವೈ ಶಿವಂ ವಪುಃ॥10॥
ಎಲೈ ರಾಜನೇ, ಅವರ ವಾಯುವೇಗವುಳ್ಳ ರಕ್ತಲೇಪಿತವಾದ ಅಂಗಗಳುಳ್ಳ, ಒಳ್ಳೆಯ ಜಾತಿಯ ಶೋಣಾಶ್ವಗಳು ವಿಶ್ರಾಂತಿ ಇಲ್ಲದೆ ಸುಖವಾಗಿ ಸಂಚರಿಸಿದವು (ವಿಶ್ರಾಂತಿ ಇಲ್ಲದಿದ್ದರೂ ಒಳ್ಳೆಯ ಕಾಂತಿಯನ್ನು ಹೊಂದಿದ್ದವು).
ತಮಂತಕಮಿವ ಕ್ರುದ್ಧಮಾಪತಂತಂ ಯತವ್ರತಮ್ |
ದೃಷ್ಟ್ವಾ ಸಂಪ್ರಾದ್ರವನ್ ಯೋಧಾಃ ಪಾಂಡವಸ್ಯ ತತಸ್ತತಃ ॥ 11 ॥
ಯಮನಂತೆ ಕೋಪಗೊಂಡು ತಮ್ಮ ಮೇಲೆ ಎರಗುತ್ತಿದ್ದ, ದೃಢವ್ರತರಾದ ದ್ರೋಣರನ್ನು ನೋಡಿ ಪಾಂಡವರ ಸೈನ್ಯದ ಯೋಧರು ಅಲ್ಲಲ್ಲಿಂದ ಓಡಿಹೋದರು.
ತೇಷಾಂ ಪ್ರದ್ರವತಾಂ ಭೀಮಃ ಪುನರಾವರ್ತತಾಮಪಿ |
ವೀಕ್ಷತಾಂ ತಿಷ್ಠತಾಂ ಚಾಸೀಚ್ಛಬ್ದಃ ಪರಮದಾರುಣಃ ॥ 12 ॥
ಕೆಲವರು ಓಡುತ್ತಾ, ಕೆಲವರು ಹಿಂದಿರುಗಿ ಬರುತ್ತಾ, ಕೆಲವರು ನೋಡುತ್ತಾ, ಕೆಲವರು ಅಲ್ಲಿಯೇ ನಿಲ್ಲುತ್ತಾ ಇದ್ದ ಅವರಿಂದ ಉಂಟಾದ ಶಬ್ದವು ಬಹಳ ದಾರುಣವಾಗಿದ್ದಿತು.
ಶೂರಾಣಾಂ ಹರ್ಷಜನನೋ ಭೀರೂಣಾಂ ಭಯವರ್ಧನಃ |
ದ್ಯಾವಾಪೃಥಿವ್ಯೋರ್ವಿವರಂ ಸಮಾಲಂಬತ ಸ ಸ್ವನಃ ॥ 13 ॥
ಶೂರರಿಗೆ ಹರ್ಷದಾಯಕವೂ, ಹೇಡಿಗಳಿಗೆ ಭಯವರ್ಧಕವೂ ಆದ ಆ ಶಬ್ದವು ಭೂಮಿಯ ಮತ್ತು ಆಕಾಶದ ಮಧ್ಯಭಾಗವನ್ನು ತುಂಬಿತು.
ತತಃ ಪುನರಪಿ ದ್ರೋಣೋ ನಾಮ ವಿಶ್ರಾವ್ಯ ಚಾತ್ಮನಃ |
ಅಕರೋದ್ ರೌದ್ರಮಾತ್ಮಾನಂ ಕಿರನ್ ಶರಶತೈಃ ಪರಾನ್ ॥ 14 ॥
ಆಗ ದ್ರೋಣರು ಪುನಃ ತಮ್ಮ ಹೆಸರನ್ನು ಘೋಷಿಸುತ್ತಾ, ನೂರಾರು ಬಾಣಗಳಿಂದ ಶತ್ರುಗಳನ್ನು ಪೀಡಿಸುತ್ತಾ ತಮ್ಮನ್ನು ಭಯಂಕರರನ್ನಾಗಿ ಮಾಡಿದರು.
ಸ ತಥಾ ಪಾಂಡವೇಯಸ್ಯ ತಾನ್ಯನೀಕಾನಿ ಭಾರತ |
ಕಾಲವನ್ನ್ಯಹನದ್ ದ್ರೋಣೋ ಯುವೇವ ಸ್ಥವಿರೋ ಬಲೀ ॥ 15 ॥
ಆ ದ್ರೋಣರು ವೃದ್ಧರಾದರೂ ಬಲಿಷ್ಠನಾದ ಯುವಕನಂತೆ ಎಲೈ ಭಾರತನೇ, ಯುಧಿಷ್ಠಿರನ ಆ ಸೈನ್ಯಗಳನ್ನು ಯಮನಂತೆ ಸಂಹರಿಸಿದರು.
ಉತ್ಕೃತ್ಯ ತು ಶಿರಾಂಸ್ಯುಗ್ರೋ ಬಾಹೂನಪಿ ಸುಭೂಷಣಾನ್ |
ಕೃತ್ವಾ ಶೂನ್ಯಾನ್ ರಥೋಪಸ್ಥಾನ್ ಉದಕ್ರೋಶನ್ಮಹಾರವಾನ್ ॥ 16 ॥
ಉಗ್ರರಾದ ಅವರು ಯೋಧರ ಶಿರಸ್ಸುಗಳನ್ನು ಕತ್ತರಿಸಿ, ಭೂಷಿತವಾದ ಬಾಹುಗಳನ್ನೂ ಕತ್ತರಿಸಿ, ರಥೋಪಸ್ಥಗಳನ್ನು ಶೂನ್ಯಗಳನ್ನಾಗಿ ಮಾಡಿ ಮಹಾನಾದಗಳನ್ನು ಮಾಡಿದರು.
ತಸ್ಯ ಹರ್ಷಪ್ರಣಾದೇನ ಬಾಣವೇಗೇನ ಚಾಭಿಭೋ |
ಅಕಂಪಂತ ರಣೇ ಯೋಧಾ ಗಾವಃ ಶೀತಾರ್ದಿತಾ ಇವ ॥ 17 ॥
ಎಲೈ ಶತ್ರುಸಂಹಾರಕನೇ, ಹರ್ಷದಿಂದ ಕೂಡಿದ ಅವರ ನಾದದಿಂದ ಮತ್ತು ಬಾಣಗಳಿಂದ ರಣರಂಗದಲ್ಲಿ ಯೋಧರು ಶೀತದಿಂದ ಪೀಡಿಸಲ್ಪಟ್ಟ ಗೋವುಗಳಂತೆ ನಡುಗಿದರು.
ದ್ರೋಣಸ್ಯ ರಥಘೋಷೇಣ ಮೌರ್ವೀನಿಷ್ಪೇಷಣೇನ ಚ |
ಧನುಃಶಬ್ದೇನ ಚಾಕಾಶೇ ಶಬ್ದಃ ಸಮಭವನ್ಮಹಾನ್ ॥ 18 ॥
ದ್ರೋಣರ ರಥಘೋಷದಿಂದ, ಹೆದೆಯನ್ನು ಎಳೆಯುವುದರಿಂದ ಮತ್ತು ಧನುಶ್ಶಬ್ದದಿಂದ ಆಕಾಶದಲ್ಲಿ ದೊಡ್ಡ ಶಬ್ದವು ಉಂಟಾಯಿತು.
ಅಥಾಸ್ಯ ಧನುಷೋ ಬಾಣಾ ನಿಸ್ಸರಂತಃ ಸಹಸ್ರಶಃ |

ವ್ಯಾಪ್ಯ ಸರ್ವಾ ದಿಶಃ ಪೇತುರ್ನಾಗಾಶ್ವರಥಪತ್ತಿಷು ॥ 19 ॥
ಆಗ ಅವರ ಧನುಸ್ಸಿನಿಂದ ಸಹಸ್ರ ಸಂಖ್ಯೆಯಲ್ಲಿ ಹೊರಬರುತ್ತಿದ್ದ ಬಾಣಗಳು ಸರ್ವದಿಕ್ಕುಗಳನ್ನೂ ವ್ಯಾಪಿಸಿ ಗಜಾಶ್ವ-ರಥ-ಪದಾತಿಗಳ ಮೇಲೆ ಬಿದ್ದವು.
ತಂ ಕಾರ್ಮುಕಮಹಾವೇಗಮಸ್ತ್ರಜ್ವಲಿತಪಾವಕಮ್ ।
ದ್ರೋಣಮಾವಾರಯಾಂಚಕ್ರುಃ ಪಾಂಚಾಲಾಃ ಪಾಂಡವೈಃ ಸಹ ॥ 20 ॥
ಧನುಸ್ಸಿನ ಮಹಾವೇಗವುಳ್ಳ, ಅಸ್ತ್ರಗಳಿಂದ ಅಗ್ನಿಯನ್ನು ಜ್ವಲಿಸುತ್ತಿದ್ದ, ಆ ದ್ರೋಣರನ್ನು ಪಾಂಚಾಲರು ಪಾಂಡವರ ಜೊತೆಯಲ್ಲಿ ಸುತ್ತುವರಿದರು.
ಸ ನಾಗರಥಪತ್ತ್ಯಶ್ವಾನ್ ಪ್ರಾಹಿಣೋದ್ ಯಮಸಾದನಮ್ ।
ಅಚಿರಾದಕರೋದ್ ದ್ರೋಣೋ ಮಹೀಂ ಶೋಣಿತಕರ್ದಮಾಮ್ ॥21॥
ದ್ರೋಣರು ಗಜಾಶ್ವ-ರಥ-ಪದಾತಿಗಳನ್ನು ಯಮಲೋಕಕ್ಕೆ ಕಳುಹಿಸಿ, ಶೀಘ್ರವಾಗಿ ಭೂಮಿಯನ್ನು ರಕ್ತದ ಕೆಸರಿನಿಂದ ಕೂಡಿರುವಂತೆ ಮಾಡಿದರು.
ತನ್ವತಾ ಪರಮಾಸ್ತ್ರಾಣಿ ಶರಾನ್ ಸತತಮಸ್ಯತಾ ।
ದ್ರೋಣೇನ ವಿಹಿತಂ ದಿಕ್ಷು ಬಾಣಜಾಲಮದೃಶ್ಯತ ॥ 22 ॥
ಪರಮಾಸ್ತ್ರಗಳನ್ನು ಪ್ರಯೋಗಿಸುತ್ತಾ, ಸತತವಾಗಿ ಬಾಣಗಳನ್ನು ಪ್ರಯೋಗಿಸುತ್ತಿದ್ದ ದ್ರೋಣರಿಂದ ದಿಕ್ಕುಗಳಲ್ಲಿ ಉಂಟಾದ ಬಾಣಗಳ ಜಾಲಗಳು ಕಂಡುಬಂದವು.
ಪದಾತಿಷು ರಥಾಶ್ವೇಷು ವಾರಣೇಷು ಚ ಸರ್ವಶಃ ।
ತಸ್ಯ ವಿದ್ಯುದಿವಾಭ್ರೇಷು ಚರನ್ ಕೇತುರದೃಶ್ಯತ ॥ 23 ॥
ಪದಾತಿಗಳಲ್ಲಿಯೂ, ರಥಗಳಲ್ಲಿಯೂ, ಅಶ್ವಗಳಲ್ಲಿಯೂ ಮತ್ತು ಗಜಗಳಲ್ಲಿಯೂ ಎಲ್ಲ ಕಡೆಗಳಲ್ಲಿಯೂ ಸಂಚರಿಸುತ್ತಿದ್ದ ಅವರ ಧ್ವಜವು ಮೋಡಗಳಲ್ಲಿ ಮಿಂಚಿನಂತೆ ಕಂಡುಬಂದಿತು.
ಸ ಕೇಕಯಾನಾಂ ಪ್ರವರಾಂಶ್ಚ ಪಂಚ
ಪಾಂಚಾಲರಾಜಂ ಚ ಶರೈಃ ಪ್ರಮೃದ್ಯ ।
ಯುಧಿಷ್ಠಿರಾನೀಕಮದೀನಸತ್ತ್ವೋ
ದ್ರೋಣೋಽಭ್ಯಯಾತ್ ಕಾರ್ಮುಕಬಾಣಪಾಣಿಃ ॥ 24 ॥
ಧೈರ್ಯಶಾಲಿಗಳೂ ಮತ್ತು ಬಲಿಷ್ಠರೂ ಆದ ದ್ರೋಣರು ಕೇಕಯ ದೇಶದ ಐದು ವೀರರನ್ನು ಮತ್ತು ಪಾಂಚಾಲ ರಾಜನಾದ ದ್ರುಪದನನ್ನು ಬಾಣಗಳಿಂದ ಪೀಡಿಸಿ, ಬಿಲ್ಲು ಬಾಣಗಳನ್ನು ಕೈಯಲ್ಲಿ ಹಿಡಿದು ಯುಧಿಷ್ಠಿರನ ಸೈನ್ಯದ ಮೇಲೆ ಎರಗಿದರು.
ತಂ ಭೀಮಸೇನಶ್ಚ ಧನಂಜಯಶ್ಚ
ಶಿನೇಶ್ಚ ನಪ್ತಾ ದ್ರುಪದಾತ್ಮಜಶ್ಚ ।
ತಥಾಽಽರ್ಜುನಿಃ ಕಾಶಿಪತಿಃ ಶಿಬಿಶ್ಚ
ಹೃಷ್ಟಾ ನದಂತೋ ವ್ಯಕಿರನ್ ಶರೌಘೈಃ ॥ 25 ॥
ಭೀಮಸೇನ, ಅರ್ಜುನ, ಸಾತ್ಯಕಿ, ದ್ರುಪದ ಪುತ್ರನಾದ ಧೃಷ್ಟದ್ಯುಮ್ನ, ಅರ್ಜುನ ಪುತ್ರನಾದ ಅಭಿಮನ್ಯು, ಕಾಶೀರಾಜನಾದ ಸುದಕ್ಷಿಣ, ಶಿಬಿ ಎಲ್ಲರೂ ಸಂತೋಷದಿಂದ ಗರ್ಜಿಸುತ್ತಾ ದ್ರೋಣರ ಮೇಲೆ ಬಾಣಗಳ ಸಮೂಹವನ್ನು ಸುರಿಸಿದರು.
ತೇಷಾಂ ಶರಾ ದ್ರೋಣಶರೈರ್ನಿಕೃತ್ತಾ
ಭೂಮಾವದೃಶ್ಯಂತ ವಿವರ್ತಮಾನಾಃ ।
ಶ್ರೇಣೀಕೃತಾಃ ಸಂಯತಿ ಮೋಘವೇಗಾ
ದ್ವೀಪೇ ನದೀನಾಮಿವ ಕಾಶರೋಹಾಃ ॥ 26 ॥
ಅವರ ಬಾಣಗಳು ದ್ರೋಣರ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬೀಳುವುದು ಕಂಡುಬಂದಿತು. ಆ ಬಾಣಗಳ ವೇಗಗಳು ವ್ಯರ್ಥವಾಗಿ, ನದಿಗಳ ದ್ವೀಪದಲ್ಲಿ ಕಾಶಗಳೆಂಬ ಹುಲ್ಲಿನ ರಾಶಿಯಂತೆ ಅವು ರಣರಂಗದಲ್ಲಿ ಒಟ್ಟಾಗಿ ಬಿದ್ದಿರುವುದು ಕಂಡುಬಂದಿತು.
ತೇ ದ್ರೋಣಬಾಣಾಸನವಿಪ್ರಮುಕ್ತಾಃ
ಪತತ್ರಿಣಃ ಕಾಂಚನಚಿತ್ರಪುಂಖಾಃ ।
ಭಿತ್ತ್ವಾ ಶರೀರಾಣಿ ಗಜಾಶ್ವಯೂನಾಂ
ಜಗ್ಮುರ್ಮಹೀಂ ಶೋಣಿತದಿಗ್ಧವಾಜಾಃ ॥ 27 ॥
ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಸುವರ್ಣಮಯವಾದ, ವಿಚಿತ್ರವಾದ ಪುಂಖಗಳನ್ನುಳ್ಳ ಬಾಣಗಳು ಗಜಾಶ್ವ-ಯುವಕರ ಶರೀರಗಳನ್ನು ಭೇದಿಸಿ ರಕ್ತದಿಂದ ಸಿಕ್ತವಾದ ವಾಜಗಳನ್ನು (ಪುಂಖಗಳನ್ನು ಹೊಂದಿ) ಭೂಮಿಯಲ್ಲಿ ಇಳಿದವು.
ಸಾ ಯೋಧಸಂಘೈಶ್ಚ ರಥೈಶ್ಚ ಭೂಮಿಃ
ಶರೈರ್ವಿಭಿನ್ನೈರ್ಗಜವಾಜಿಭಿಶ್ಚ ।
ಪ್ರಚ್ಛಾದ್ಯಮಾನಾ ಪತಿತೈಃ ಬಭೂವ
ಸಮಾವೃತಾ ದ್ಯೌರಿವ ಲೋಹಿತಾಭ್ರೈಃ ॥ 28 ॥
ಬಾಣಗಳಿಂದ ಭೇದಿಸಲ್ಪಟ್ಟು ಭೂಮಿಯ ಮೇಲೆ ಬಿದ್ದ ಗಜಾಶ್ವಗಳಿಂದಲೂ, ಯೋಧರ ಸಮೂಹಗಳಿಂದಲೂ ಮತ್ತು ರಥಗಳಿಂದಲೂ ಆವೃತವಾದ ಭೂಮಿಯು ಕೆಂಪು ಮೋಡಗಳಿಂದ ಆವೃತವಾದ ಆಕಾಶದಂತೆ ತೋರಿತು.
ಶೈನೇಯಭೀಮಾರ್ಜುನವಾಹಿನೀಪಾನ್

ಶೈಬ್ಯಾಭಿಮನ್ಯೂ ಚ ಸಕಾಶಿರಾಜೌ |
ಅನ್ಯಾಂಶ್ಚ ವೀರಾನ್ ಸಮರೇ ಮಮರ್ದ
ದ್ರೋಣಃ ಸುತಾನಾಂ ತವ ಭೂತಿಕಾಮಃ ॥ 29 ॥
ದ್ರೋಣರು ನಿನ್ನ ಪುತ್ರರಿಗೆ ಸಂಪತ್ತನ್ನು ಬಯಸಿ ಸಾತ್ಯಕಿ, ಭೀಮ, ಅರ್ಜುನ ಮೊದಲಾದ ಸೇನಾನಾಯಕರನ್ನೂ ಕಾಶಿರಾಜರಿಂದ ಸಹಿತರಾದ ಶೈಬ್ಯ ಮತ್ತು ಅಭಿಮನ್ಯುವನ್ನೂ ಮತ್ತು ಉಳಿದ ವೀರರನ್ನೂ ಯುದ್ಧದಲ್ಲಿ ಮರ್ದಿಸಿದರು.
ಏತಾನಿ ಚಾನ್ಯಾನಿ ಚ ಕೌರವೇಂದ್ರ
ಕರ್ಮಾಣಿ ಕೃತ್ವಾ ಸಮರೇ ಮಹಾಂತಿ |
ಪ್ರತಾಪ್ಯ ಲೋಕಾನಿವ ಕಾಲಸೂರ್ಯೋ
ದ್ರೋಣೋ ಗತಃ ಸ್ವರ್ಗಮಿತೋ ಹಿ ರಾಜನ್ ॥ 30 ॥
ಎಲೈ ರಾಜನೇ, ಕೌರವೇಂದ್ರನೇ, ದ್ರೋಣರು ಇಂತಹ ಮತ್ತು ಇನ್ನೂ ಅನೇಕ ಮಹತ್ಕರ್ಮಗಳನ್ನು ಮಾಡಿ ಯುದ್ಧದಲ್ಲಿ ಕಾಲಸೂರ್ಯನಂತೆ ಯೋಧರನ್ನು ಸಂತಾಪಗೊಳಿಸಿ ಇಲ್ಲಿಂದ ಸ್ವರ್ಗಕ್ಕೆ ಹೋದರು.
ಸ ತು ಕೃತ್ವಾ ಮಹತ್ ಕರ್ಮ ದ್ರೋಣಃ ಪರಬಲಾರ್ದನಃ |
ಏವಂ ರುಗ್ಮರಥಃ ಶೂರೋ ಹತ್ವಾ ಶತಸಹಸ್ರಶಃ |
ಪಾಂಡವಾನಾಂ ರಣೇ ಯೋಧಾನ್ ಪಾರ್ಷತೇನ ನಿಪಾತಿತಃ ॥ 31 ॥
ಸುವರ್ಣರಥವನ್ನು ಹೊಂದಿದ ಶೂರರಾದ, ಶತ್ರುಸಮೂಹವನ್ನು ನಾಶ ಮಾಡುವ ದ್ರೋಣರು ಹೀಗೆ ಮಹತ್ಕರ್ಮವನ್ನು ಮಾಡಿ ಪಾಂಡವರ ಯೋಧರನ್ನು ನೂರರ-ಸಾವಿರದ ಸಂಖ್ಯೆಯಲ್ಲಿ ಕೊಂದು ಧೃಷ್ಟದ್ಯುಮ್ನನಿಂದ ಕೆಡವಲ್ಪಟ್ಟರು.
ಅಕ್ಷೋಹಿಣೀಮಭ್ಯಧಿಕಾಂ ಶೂರಾಣಾಮನಿವರ್ತಿನಾಮ್ |
ನಿಹತ್ಯ ಪಶ್ಚಾದ್ ಧೃತಿಮಾನಗಚ್ಛತ್ ಪರಮಾಂ ಗತಿಮ್ ॥32॥
ಧೈರ್ಯಶಾಲಿಗಳಾದ ಅವರು ಯುದ್ಧದಿಂದ ಹಿಮ್ಮೆಟ್ಟದಿರುವ ಒಂದು ಅಕ್ಷೋಹಿಣಿಗಿಂತಲೂ ಅಧಿಕವಾದ ಶೂರರನ್ನು ಕೊಂದು ಅನಂತರ ಶ್ರೇಷ್ಠವಾದ ಗತಿಯನ್ನು ಹೊಂದಿದರು.
ಪಾಂಡವೈಃ ಸಹಪಾಂಚಾಲ್ಯೈರಶಿವೈಃ ಕ್ರೂರಕರ್ಮಿಭಿಃ |
ಹತೋ ರುಗ್ಮರಥೋ ರಾಜನ್ ಕೃತ್ವಾ ಕರ್ಮ ಸುದುಷ್ಕರಮ್ |
ಅಹೋ ಧಿಗಿತಿ ಭೂತಾನಾಂ ಶಬ್ದಃ ಸಮಭವನ್ಮಹಾನ್ ॥ 33 ॥
ಎಲೈ ರಾಜನೇ, ಒಬ್ಬ ರಥರಾದ ಅವರು ಸುದುಷ್ಕರವಾದ ಕರ್ಮವನ್ನು ಮಾಡಿ, ಕ್ರೂರಕರ್ಮಿಗಳೂ ಮತ್ತು ಅಮಂಗಳರೂ ಆದ ಪಾಂಡವರಿಂದ ಮತ್ತು ಪಾಂಚಾಲರಿಂದ ಕೊಲ್ಲಲ್ಪಟ್ಟರು. ಆಗ ಅಯ್ಯೋ ಧಿಕ್ಕಾರವಿರಲಿ! ಎಂಬ ಯೋಧರ ದೊಡ್ಡ ಶಬ್ದವು ಉಂಟಾಯಿತು.
ದೇವಾಶ್ಚ ಪಿತರಶ್ಚೈವ ಪೂರ್ವೇ ಯೇ ಚಾಸ್ಯ ಬಾಂಧವಾಃ |
ದದೃಶುರ್ನಿಹತಂ ತತ್ರ ಭಾರದ್ವಾಜಂ ಮಹಾರಥಮ್ ॥ 34 ॥
ದೇವತೆಗಳು, ಪಿತೃಗಳು ಮತ್ತು ದ್ರೋಣರ ಪೂರ್ವಜರಾದ ಬಂಧುಗಳೆಲ್ಲರೂ ಮಹಾರಥರಾದ ಅವರು ಅಲ್ಲಿ ನಿಹತರಾದುದನ್ನು ನೋಡಿದರು.
ಪಾಂಡವಾಸ್ತು ಜಯಂ ಲಬ್ಧ್ವಾ ಸಿಂಹನಾದಾನ್ ಪ್ರಚಕ್ರಿರೇ |
ತತೋ ನಿನಾದೋ ಭೂತಾನಾಮಾಕಾಶೇ ಸಮಪದ್ಯತ ॥ 35 ॥
ಪಾಂಡವರಾದರೋ ಜಯವನ್ನು ಪಡೆದು ಸಿಂಹನಾದಗಳನ್ನು ಮಾಡಿದರು. ಆಕಾಶದಲ್ಲಿ ಭೂತಗಳ ದೊಡ್ಡ ನಾದ ಉಂಟಾಯಿತು.
ಸೈನ್ಯಾನಾಂ ಚ ತತೋ ರಾಜನ್ನಾಚಾರ್ಯೇ ನಿಹತೇ ಯುಧಿ |
ಧರಾಂ ಖಂ ದ್ಯಾಂ ದಶ ದಿಶಃ ಪ್ರದಿಶಶ್ಚಾನ್ವನಾದಯತ್ |
ತೇನ ನಾದೇನ ಮಹತಾ ಸಮಕಂಪತ ಮೇದಿನೀ ॥ 36 ॥
ಎಲೈ ರಾಜನೇ, ಆಚಾರ್ಯರು ಯುದ್ಧದಲ್ಲಿ ನಿಹತರಾದಾಗ ಉಂಟಾದ ಸೈನ್ಯಗಳ ನಾದವು ಭೂಮಿಯನ್ನು, ಆಕಾಶವನ್ನು, ಅಂತರಿಕ್ಷವನ್ನು, ಹತ್ತು ದಿಕ್ಕುಗಳನ್ನು ಮತ್ತು ಪ್ರದಿಕ್ಕುಗಳನ್ನು ಪ್ರತಿಧ್ವನಿಸಿತು. ಆ ದೊಡ್ಡ ನಾದದಿಂದ ಭೂಮಿಯು ನಡುಗಿತು.
ವಿಚಿತ್ರಜಾಂಬೂನದಭೂಷಿತಧ್ವಜಂ
ಮಹಾರಥಂ ರುಗ್ಮರಥಂ ನಿಪಾತಿತಮ್ |
ನಿಶಾಮ್ಯ ಕಶ್ಚಿದ್ ಹತಹರ್ಷ ಏವ
ಋತೇ ಮೃಧೇ ದ್ರುಪದಸುತಾತ್ ಸಸೃಂಜಯಾತ್ ॥ 37 ॥
ವಿಚಿತ್ರ ಸುವರ್ಣಭೂಷಣದಿಂದ ಭೂಷಿತವಾದ, ಧ್ವಜದಿಂದ ಕೂಡಿದ, ಸುವರ್ಣಮಯವಾದ ರಥವನ್ನು ಹೊಂದಿದ ಮಹಾರಥರಾದ ದ್ರೋಣರು ಮೃತರಾದುದನ್ನು ನೋಡಿ ನಿನ್ನ ಸೈನ್ಯದಲ್ಲಿ ಯಾವನಿಗೂ ಸಂತೋಷವಾಗಲಿಲ್ಲ. ರಣರಂಗದಲ್ಲಿದ್ದ ದ್ರುಪದಪುತ್ರರು ಮತ್ತು ಸೃಂಜಯರು ಮಾತ್ರ ಸಂತೋಷವನ್ನು ಹೊಂದಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಮೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *

ಎಂಟನೆಯ ಅಧ್ಯಾಯ
ದ್ರೋಣರ ವಧೆಯ ವಾರ್ತೆಯನ್ನು ಕೇಳಿ ಧೃತರಾಷ್ಟ್ರನ ಶೋಕ ಮತ್ತು ವಿಲಾಪ.
ಧೃತರಾಷ್ಟ್ರಃ
ಕಿಂ ಕುರ್ವಾಣಂ ರಣೇ ದ್ರೋಣಂ ಜಘ್ನುಃ ಪಾಂಡವಸೃಂಜಯಾಃ |
ತಥಾ ನಿಪುಣಮಸ್ತ್ರೇಷು ಸರ್ವಶಸ್ತ್ರಭೃತಾಮಪಿ ॥ 1 ॥
ಧೃತರಾಷ್ಟ್ರ ಆ ರೀತಿಯಲ್ಲಿ ಸರ್ವಶಸ್ತ್ರಧಾರಿಗಳಲ್ಲೂ ಮತ್ತು ಅಸ್ತ್ರ ಪ್ರಯೋಗಗಳಲ್ಲಿಯೂ ನಿಪುಣರಾದ ದ್ರೋಣರನ್ನು ಅವರು ಏನು ಮಾಡುತ್ತಿದ್ದಾಗ, ಯುದ್ಧದಲ್ಲಿ ಪಾಂಡವ- ಸೃಂಜಯರು ಹೇಗೆ ಕೊಂದರು?
ರಥಃ ಪರ್ಯಪತದ್ ವಾಽಸ್ಯ ಧನುರ್ವಾಽಶೀರ್ಯತಾಸ್ಯತಃ |
ಪ್ರಮತ್ತೋ ವಾಽಭವದ್ ದ್ರೋಣೋ ಯಥಾ ಮೃತ್ಯುಮುಪೇಯಿವಾನ್ ॥
ಅವರ ರಥವು ಬಿದ್ದುಹೋಯಿತೇ? ಅಥವಾ ಬಾಣಗಳನ್ನು ಪ್ರಯೋಗಿಸುವಾಗ ಅವರ ಧನುಸ್ಸು ಮುರಿಯಿತೇ? ಅಥವಾ ಅವರು ಮರಣ ಹೊಂದಿದುದನ್ನು ನೋಡಿದರೆ ದ್ರೋಣರು ಪ್ರಮಾದಕ್ಕೆ ಒಳಗಾದರೇ?
ಕಥಂ ನು ಪಾರ್ಷತಸ್ತಾತ ಶತ್ರುಭಿರ್ದುಷ್ಪ್ರಧರ್ಷಣಮ್ |
ಕಿರಂತಮಿಷುಸಂಘಾಂಸ್ತಾನ್ ರುಗ್ಮಪುಂಖಾನನೇಕಶಃ ॥ 3 ॥
ಕ್ಷಿಪ್ರಹಸ್ತಂ ದ್ವಿಜಶ್ರೇಷ್ಠಂ ಕೃತಿನಂ ಚಿತ್ರಯೋಧಿನಮ್ |
ದೂರೇಷುಪಾತಿನಂ ದಾಂತಮಸ್ತ್ರಯುದ್ಧೇ ಚ ಪಾರಗಮ್ ॥ 4 ॥
ಪಾಂಚಾಲಪುತ್ರೋ ನ್ಯಹನದ್ ಇಷ್ವಾಸವರಮಚ್ಯುತಮ್ |
ಕುರ್ವಾಣಂ ದಾರುಣಂ ಕರ್ಮ ರಣೇ ಯತ್ತಂ ಮಹಾಬಲಮ್ ॥ 5 ॥
ಎಲೈ ಪ್ರೀತಿಪಾತ್ರನೇ, ಶತ್ರುಗಳಿಗೆ ಸೋಲಿಸಲು ಅಸಾಧ್ಯರಾದ, ಸುವರ್ಣ ಪುಂಖಗಳುಳ್ಳ ಬಾಣಗಳ ಸಮೂಹಗಳನ್ನು ಅನೇಕ ರೀತಿಯಲ್ಲಿ ಪ್ರಯೋಗಿಸುವ, ಕ್ಷಿಪ್ರ ಹಸ್ತರೂ, ಅಭ್ಯಾಸಪಟುಗಳೂ, ವಿಚಿತ್ರವಾಗಿ ಯುದ್ಧವನ್ನು ಮಾಡುವವರೂ, ದೂರದವರೆಗೂ ಬಾಣಪ್ರಯೋಗವನ್ನು ಮಾಡುವವರೂ, ಇಂದ್ರಿಯನಿಗ್ರಹ- ವುಳ್ಳವರೂ, ಅಸ್ತ್ರವಿದ್ಯೆಯಲ್ಲಿ ಪಾರಂಗತರಾದವರೂ, ಧನುರ್ಧಾರಿಗಳಲ್ಲಿ ಶ್ರೇಷ್ಠರಾದವರೂ, ಗುಣಗಳಿಂದ ಚ್ಯುತರಾಗದವರೂ, ಯುದ್ಧದಲ್ಲಿ ದಾರುಣವಾದ ಕರ್ಮಗಳನ್ನು ಮಾಡುವವರೂ, ಪ್ರಯತ್ನಪೂರ್ವಕವಾಗಿ ಯುದ್ಧವನ್ನು ಮಾಡುವವರೂ, ಮಹಾಬಲರೂ ಆದ ಅವರನ್ನು ಪಾಂಚಾಲಪುತ್ರನಾದ ಧೃಷ್ಟದ್ಯುಮ್ನನು ಹೇಗೆ ಕೊಂದನು?
ವ್ಯಕ್ತಂ ದಿಷ್ಟಂ ಹಿ ಬಲವತ್ ಪೌರುಷಾದಿತಿ ಮೇ ಮತಿಃ |
ಯತ್ರ ದ್ರೋಣೋ ಹತಃ ಶೂರಃ ಪಾರ್ಷತೇನ ದುರಾತ್ಮನಾ ॥ 6 ॥
ಶೂರರಾದ ದ್ರೋಣರು ದುರಾತ್ಮನಾದ ಧೃಷ್ಟದ್ಯುಮ್ನನಿಂದ ಹತರಾದ ಮೇಲೆ ಪುರುಷ ಪ್ರಯತ್ನಕ್ಕಿಂತಲೂ ದೈವನಿಯಮವೇ ಪ್ರಬಲವಾದುದೆಂದು ನನ್ನ ಸ್ಪಷ್ಟವಾದ ಅಭಿಪ್ರಾಯ.
ಅಸ್ತ್ರಂ ಚತುರ್ವಿಧಂ ಶೂರೇ ಯಸ್ಮಿನ್ ನಿತ್ಯಂ ಪ್ರತಿಷ್ಠಿತಮ್ |
ತಮಿಷ್ವಸ್ತ್ರವರಾಚಾರ್ಯಂ ದ್ರೋಣಂ ಶಂಸಸಿ ಮೇ ಹತಮ್ ॥ 7 ॥
ಮಂತ್ರ, ಬಾಣ, ಪ್ರಯೋಗ ಮತ್ತು ಉಪಸಂಹಾರಗಳಿಂದ ಕೂಡಿದ ನಾಲ್ಕು ಅಂಗಗಳುಳ್ಳ ಅಸ್ತ್ರವಿದ್ಯೆಯು ಯಾವ ಶೂರರಾದ ಅವರಲ್ಲಿ ಯಾವಾಗಲೂ ಪ್ರತಿಷ್ಠಿತವಾಗಿದ್ದಿತೋ ಅಂತಹ, ಧನುರ್ಧಾರಿಗಳಿಗೂ ಮತ್ತು ಶ್ರೇಷ್ಠವಾದ ಅಸ್ತ್ರಗಳನ್ನು ಹೊಂದಿದವರಿಗೂ ಆಚಾರ್ಯರಾದ ದ್ರೋಣರು ಹತರಾದರೆಂದು ನನಗೆ ಹೇಳುತ್ತಿದ್ದೀಯೆ!
ಶ್ರುತ್ವಾ ಹತಂ ರುಗ್ಮರಥಂ ವೈಯಾಘ್ರಪರಿವಾರಣಮ್ |
ಜಾತರೂಪಪರಿಷ್ಕಾರಂ ನಾದ್ಯ ಶೋಕಮಪಾನುದೇ ॥ 8 ॥
ವ್ಯಾಘ್ರಚರ್ಮದಿಂದ ಸುತ್ತುವರಿದ, ಸುವರ್ಣಾಲಂಕಾರಗಳಿಂದ ಕೂಡಿದ ಸುವರ್ಣ ರಥವುಳ್ಳ ಅವರು ಹತರಾದರೆಂದು ಕೇಳಿ ನಾನು ಈ ದಿನ ಶೋಕವನ್ನು ಪರಿಹರಿಸಿಕೊಳ್ಳಲಾರೆ.
ನ ನೂನಂ ಪರದುಃಖೇನ ಕಶ್ಚಿನ್ಮ್ರಿಯತಿ ಸಂಜಯ |
ಯತ್ರ ದ್ರೋಣಮಹಂ ಶ್ರುತ್ವಾ ಹತಂ ಜೀವಾಮಿ ನ ಮ್ರಿಯೇ ॥ 9 ॥
ಎಲೈ ಸಂಜಯನೇ, ದ್ರೋಣರು ಹತರಾದುದನ್ನು ಕೇಳಿಯೂ ನಾನು ಮರಣವನ್ನು ಹೊಂದದಿರುವುದರಿಂದ ಇನ್ನೊಬ್ಬರ ದುಃಖದಿಂದ ಯಾವನೂ ಮರಣವನ್ನು ಹೊಂದುವುದಿಲ್ಲವೆಂಬುದು ನಿಶ್ಚಿತವಾದುದು.
ಅಶ್ಮಸಾರಮಯಂ ನೂನಂ ಸುದೃಢಂ ಹೃದಯಂ ಮಮ |
ಶ್ರುತ್ವಾ ಚ ನಿಹತಂ ದ್ರೋಣಂ ಶತಧೇದಂ ನ ದೀರ್ಯತೇ ॥ 10 ॥
ದ್ರೋಣರ ಮರಣದ ವಾರ್ತೆಯನ್ನು ಕೇಳಿಯೂ ನೂರು ಭಾಗಗಳಾಗಿ ಬಿರಿದು ಹೋಗದಿರುವ ನನ್ನ ಈ ಕಠಿಣವಾದ ಹೃದಯವು ಕಲ್ಲಿನ ಸಾರದಿಂದ ಕೂಡಿದುದಾಗಿದೆ.
ಬ್ರಾಹ್ಮೇ ವೇದೇ ತಥೇಷ್ವಸ್ತ್ರೇ ಯಮುಪಾಸನ್ ಗುಣಾರ್ಥಿನಃ |
ಬ್ರಾಹ್ಮಣಾ ರಾಜಪುತ್ರಾಶ್ಚ ಸ ಕಥಂ ಮೃತ್ಯುನಾ ಹತಃ ॥ 11 ॥
ಗುಣವನ್ನು ಬಯಸುವ ಬ್ರಾಹ್ಮಣರು ಮತ್ತು ಕ್ಷತ್ರಿಯರು ಬ್ರಹ್ಮಪ್ರತಿಪಾದಕ ವೇದಗಳಲ್ಲಿಯೂ ಮತ್ತು ಶಸತ್ರಸ್ತ್ರಗಳ ವಿಷಯದಲ್ಲಿಯೂ ಯಾರನ್ನು ಉಪಾಸನೆ ಮಾಡುತ್ತಿದ್ದರೋ ಅಂತಹ ದ್ರೋಣರು ಹೇಗೆ ಮೃತ್ಯುವಿನಿಂದ ಹತರಾಗಿದ್ದಾರೆ?
ಶೋಷಣಂ ಸಾಗರಸ್ಯೇವ ಮೇರೋಃ ಪರ್ಯಸನಂ ಯಥಾ |
ಪತನಂ ಭಾಸ್ಕರಸ್ಯೇವ ನ ಮೃಷ್ಯೇ ದ್ರೋಣಪಾತನಮ್ ॥ 12 ॥

ಸಮುದ್ರದ ಬತ್ತುವಿಕೆಯಂತೆ, ಮೇರುಪರ್ವತವನ್ನು ಎತ್ತಿ ಎಸೆದಂತೆ, ಸೂರ್ಯನ ಪತನದಂತೆ ಈ ದ್ರೋಣರ ಪತನವನ್ನು ನಾನು ಸಹಿಸಲಾರೆ.
ದುಷ್ಟಾನಾಂ ಪ್ರತಿರೋದ್ಧಾಽಽಸೀದ್ ಧಾರ್ಮಿಕಾಣಾಂ ಚ ರಕ್ಷಿತಾ |
ಅತ್ಯಾಕ್ಷೀತ್ ಕೃಪಣಸ್ಯಾರ್ಥೇ ಪ್ರಾಣಾನಪಿ ಪರಂತಪಃ ॥ 13 ॥
ಪರಂತಪರಾದ ದ್ರೋಣರು ದುಷ್ಟರನ್ನು ತಡೆಯುವವರೂ, ಧಾರ್ಮಿಕರನ್ನು ರಕ್ಷಿಸುವವರೂ ಆಗಿದ್ದರು. ಕಷ್ಟದಲ್ಲಿರುವವರ ಸಲುವಾಗಿ ಪ್ರಾಣಗಳನ್ನು ಬೇಕಾದರೂ ಬಿಡುತ್ತಿದ್ದರು.
ಮಂದಾನಾಂ ಮಮ ಪುತ್ರಾಣಾಂ ಜಯಾಶಾ ಯಸ್ಯ ವಿಕ್ರಮೇ |
ಬೃಹಸ್ಪತ್ಯುಶನಸ್ತುಲ್ಯೋ ಬುದ್ಧ್ಯಾ ಸ ನಿಹತಃ ಕಥಮ್ ॥ 14 ॥
ಬೃಹಸ್ಪತಿ ಮತ್ತು ಶುಕ್ರರಿಗೆ ಸಮಾನರಾದ ಯಾರ ಬುದ್ಧಿಯಲ್ಲಿ ಮತ್ತು ಪರಾಕ್ರಮದಲ್ಲಿ ನನ್ನ ಮಂದರಾದ ಪುತ್ರರಿಗೆ ಜಯದ ಆಸೆ ಇದ್ದಿತೋ ಅಂತಹ ದ್ರೋಣರು ಹೇಗೆ ಹತರಾದರು?
ತೇ ಹಿ ಶೋಣಾ ಬೃಹಂತೋಽಶ್ವಾಃ ಚ್ಛನ್ನಾ ಜಾಲೈರ್ಹಿರಣ್ಮಯೈಃ |
ರಥೇ ವಾತಜವಾ ಯುಕ್ತಾಃ ಸರ್ವಶಬ್ದಾತಿಪಾತಿನಃ ॥ 15 ॥
ಬಲಿನೋ ಘೋಷಿಣೋ ದಾಂತಾಃ ಸೈಂಧವಾಃ ಸಾಧುವಾಹಿನಃ |
ದೃಢಾಃ ಸಂಗ್ರಾಮಮಧ್ಯೇ ತು ಕಚ್ಚಿದಾಸನ್ ನ ವಿಹ್ವಲಾಃ ॥ 16 ॥
ಅವರ ದೃಢವಾದ ಶೋಣಾಶ್ವಗಳು, ಸುವರ್ಣಮಯವಾದ ಬಲೆಗಳಿಂದ ಮುಚ್ಚಲ್ಪಟ್ಟಿದ್ದವು. ರಥದಲ್ಲಿ ಹೂಡಿದಾಗ ವಾಯುವೇಗವನ್ನು ಹೊಂದಿದ್ದವು. ಎಲ್ಲ ಶಬ್ದಗಳನ್ನು ಮೀರಿ ನಡೆಯುತ್ತಿದ್ದವು. ಸೈಂಧವದೇಶದ, ಚೆನ್ನಾಗಿ ರಥವನ್ನು ತೆಗೆದುಕೊಂಡು ಹೋಗುವ ದೃಢವಾದವುಗಳೂ, ಬಲಿಷ್ಠವೂ, ಹೇಷಾರವವನ್ನು ಮಾಡುವವೂ, ಪಳಗಿದವೂ ಆದ ಆ ಕುದುರೆಗಳು ಸಂಗ್ರಾಮಮಧ್ಯದಲ್ಲಿ ವಿಹ್ವಲವಾದವೆ?
ಕರಿಣಾಂ ಬೃಂಹತಾಂ ಯುದ್ಧೇ ಶಂಖದುಂದುಭಿನಿಃಸ್ವನೇ |
ಜ್ಯಾಕ್ಷೇಪಶರವರ್ಷಾಣಾಂ ಶಸ್ತ್ರಾಣಾಂ ಚ ಸಹಿಷ್ಣವಃ ॥ 17 ॥
ಆಶಂಸಂತಃ ಪರಾನ್ ಜೇತುಂ ಜಿತಶ್ವಾಸಾ ಜಿತವ್ಯಥಾಃ |
ಹಯಾಃ ಪರಾಜಿತಾಃ ಶೀಘ್ರಾ ಭಾರದ್ವಾಜರಥೋದ್ವಹಾಃ ॥ 18 ॥
ಅವು ಯುದ್ಧದಲ್ಲಿ ಗಜಗಳ ಬೃಂಹಣವನ್ನು, ಶಂಖ-ದುಂದುಭಿ ನಾದಗಳನ್ನು, ಹೆದೆಯ ಶಬ್ದಗಳನ್ನು, ಬಾಣಗಳ ಮತ್ತು ಶಸ್ತ್ರಗಳ ಮಳೆಯನ್ನು ಸಹಿಸಿಕೊಳ್ಳುತ್ತಿದ್ದವು. ಶತ್ರುಗಳನ್ನು ಗೆಲ್ಲಲು ಬಯಸುತ್ತಿದ್ದ, ತಮ್ಮ ಶ್ವಾಸವನ್ನು ಗೆದ್ದಿರುತ್ತಿದ್ದ, ವ್ಯಥೆಯಿಲ್ಲದೆ ಶೀಘ್ರವಾಗಿ ದ್ರೋಣರ ರಥವನ್ನು ಎಳೆಯುವ ಆ ಅಶ್ವಗಳು ಹೇಗೆ ಪರಾಜಿತವಾದವು?
ತೇ ಚ ರುಗ್ಮರಥೇ ಯುಕ್ತಾಃ ನರವೀರಸಮಾಸ್ಥಿತಾಃ |
ಕಥಂ ನಾಭ್ಯತರನ್ ಶೀಘ್ರಂ ಪಾಂಡವಾನಾಮನೀಕಿನೀಮ್ ॥ 19 ॥
ಸುವರ್ಣರಥದಲ್ಲಿ ಹೂಡಲ್ಪಟ್ಟ ನರಶ್ರೇಷ್ಠರಾದ ದ್ರೋಣರಿಂದ ಅಧಿಷ್ಠಿತವಾದ ಆ ಅಶ್ವಗಳು ಪಾಂಡವರ ಸೈನ್ಯವನ್ನು ಏಕೆ ಶೀಘ್ರವಾಗಿ ದಾಟಲಿಲ್ಲ?
ತಂ ತು ರುಗ್ಮರಥಂ ದೃಷ್ಟ್ವಾ ವಿದ್ರವಂತಿ ಸ್ಮ ಶತ್ರವಃ |
ದಿವ್ಯಮಸ್ತ್ರಂ ವಿಕುರ್ವಾಣಂ ಸಂಗತಾಃ ಸರ್ವತಃ ಪರೇ ॥ 20 ॥
ದಿವ್ಯಾಸ್ತ್ರಗಳನ್ನು ಪ್ರಯೋಗಿಸುವ, ರುಗ್ಮರಥದಲ್ಲಿ ನಿಂತ ಅವರನ್ನು ನೋಡಿ, ಅವರ ಜೊತೆಯಲ್ಲಿ ಸಂಗತರಾದ ಶತ್ರುಗಳು ಓಡಿಹೋಗುತ್ತಾರಷ್ಟೆ!
ಜಾತರೂಪಪರಿಷ್ಕಾರಮಾಸ್ಥಿತೋ ರಥಮುತ್ತಮಮ್ |
ಭಾರದ್ವಾಜಃ ಕಿಮಕರೋತ್ ಶೂರಃ ಸಂಕ್ರಂದನೋ ಯುಧಿ ॥ 21 ॥
ಸುವರ್ಣಾಭರಣಗಳಿಂದ ಅಲಂಕೃತವಾದ, ಶ್ರೇಷ್ಠರಥದಲ್ಲಿದ್ದ, ಶೂರರಾದ, ಯುದ್ಧದಲ್ಲಿ ಶತ್ರುಗಳನ್ನು ರೋಧಿಸುವ ದ್ರೋಣರು ಏನು ಮಾಡಿದರು?
ವಿದ್ಯಾಸ್ತ್ವಸ್ಯೋಪಜೀವಂತಿ ಸರ್ವಲೋಕಧನುರ್ಭೃತಃ |
ಸ ಸತ್ಯಸಂಧೋ ಬಲವಾನ್ ದ್ರೋಣಃ ಕಿಮಕರೋದ್ ಯುಧಿ ॥22॥
ಸರ್ವಲೋಕದ ಧನುರ್ಧಾರಿಗಳು ಅವರ ವಿದ್ಯೆಯನ್ನೇ ಉಪಜೀವಿಸುತ್ತಾರೆ. ಅಂತಹ ಸತ್ಯಸಂಧರೂ, ಬಲಿಷ್ಠರೂ ಆದ ದ್ರೋಣರು ಯುದ್ಧದಲ್ಲಿ ಏನು ಮಾಡಿದರು?
ದಿವಿ ಶಕ್ರಮಿವ ಶ್ರೇಷ್ಠಂ ಮಹಾಮಾತ್ರಂ ಧನುರ್ಭೃತಾಮ್ |
ಕೇ ತು ತಂ ರೌದ್ರಕರ್ಮಾಣಂ ಯುದ್ಧೇ ಪ್ರತ್ಯುದ್ಯಯೂ ರಥಾಃ ॥23॥
ಸ್ವರ್ಗದಲ್ಲಿ ಶ್ರೇಷ್ಠನಾದ ಇಂದ್ರನಂತೆ, ಧನುರ್ಧಾರಿಗಳಲ್ಲಿ ಪ್ರಧಾನರಾದ, ಭಯಂಕರ ಕರ್ಮವನ್ನು ಮಾಡುವ ಅವರನ್ನು ಯಾವ ಮಹಾರಥರು ಯುದ್ಧದಲ್ಲಿ ಎದುರಿಸಿದರು?
ಕೇತುಂ ರುಗ್ಮರಥಂ ದೃಷ್ಟ್ವಾ ಪ್ರದ್ರವಂತಿ ಸ್ಮ ಪಾಂಡವಾಃ |
ದಿವ್ಯಮಸ್ತ್ರಂ ವಿಕುರ್ವಾಣಂ ಸೇನಾಂ ಕ್ಷಿಣ್ವಂತಮವ್ಯಯಾಮ್ ॥ 24 ॥
ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ, ಪಾಂಡವರ ಅಗಾಧವಾದ ಸೇನೆಯನ್ನು ನಾಶಪಡಿಸುವ ಅವರ ರುಗ್ಮರಥವನ್ನು ಮತ್ತು ಧ್ವಜವನ್ನು ನೋಡಿ ಪಾಂಡವರು ಓಡಿಹೋಗುತ್ತಾರಷ್ಟೆ!
ಉತಾಹೋ ಸರ್ವಸೈನ್ಯೇನ ಧರ್ಮರಾಜಃ ಸಹಾನುಜಃ |

ಪಾಂಚಾಲ್ಯಗ್ರಾಹಕೋ ದ್ರೋಣಂ ಸರ್ವತಃ ಪರ್ಯವಾರಯತ್ ॥25॥
ಅಥವಾ ಸರ್ವಸೈನ್ಯದಿಂದಲೂ ಮತ್ತು ತಮ್ಮಂದಿರಿಂದಲೂ ಸಹಿತನಾದ ಧರ್ಮರಾಜನು ಧೃಷ್ಟದ್ಯುಮ್ನನಿಗೆ ಅನುಗ್ರಹವನ್ನು ಮಾಡಲು ಬಯಸಿ ದ್ರೋಣರನ್ನು ಎಲ್ಲ ಕಡೆಯಿಂದಲೂ ಸುತ್ತುವರಿದನೆ?
ನೂನಮಾವಾರಯತ್ ಪಾರ್ಥೋ ರಥಿನೋಽನ್ಯಾನಜಿಹ್ಮಗೈಃ |
ತತೋ ದ್ರೋಣಂ ತದಾಽರೌತ್ಸೀತ್ ಪಾರ್ಷತಃ ಕ್ರೂರಕರ್ಮಕೃತ್ ॥26॥
ಖಂಡಿತವಾಗಿ ಅರ್ಜುನನು ಉಳಿದ ಮಹಾರಥರನ್ನು ನೇರವಾಗಿ ಸಾಗುವ ತನ್ನ ಬಾಣಗಳಿಂದ ತಡೆದನು. ಆಗ ಕ್ರೂರಕರ್ಮವನ್ನು ಮಾಡುವ ಧೃಷ್ಟದ್ಯುಮ್ನನು ದ್ರೋಣರನ್ನು ಎದುರಿಸಿದನು ಎಂದು ತೋರುತ್ತದೆ.
ನ ಹ್ಯನ್ಯಂ ಪರಿಪಶ್ಯಾಮಿ ಹಂತಾರಂ ತಸ್ಯ ಶುಷ್ಮಿಣಃ |
ಧೃಷ್ಟದ್ಯುಮ್ನಾದೃತೇ ರೌದ್ರಾತ್ ಪಾಲ್ಯಮಾನಾತ್ ಕಿರೀಟಿನಾ ॥ 27 ॥
ಅರ್ಜುನನಿಂದ ಪಾಲಿಸಲ್ಪಟ್ಟ ಭೀಕರನಾದ ಧೃಷ್ಟದ್ಯುಮ್ನನೊಬ್ಬನನ್ನು ಬಿಟ್ಟು ಅಂತಹ ವೀರ್ಯಸಂಪನ್ನರಾದ ದ್ರೋಣರನ್ನು ಕೊಲ್ಲುವ ಇನ್ನೊಬ್ಬ ಯೋಧನನ್ನು ನಾನು ಕಾಣುವುದಿಲ್ಲ.
ಉತಾಹೋ ಸರ್ವಸೈನ್ಯೇನ ಧರ್ಮರಾಜಃ ಸಹಾನುಜಃ |
ಉತ್ಸ ೃಜ್ಯ ಸರ್ವಸೈನ್ಯಾನಿ ದ್ರೋಣಮೇವಾಭಿದುದ್ರುವೇ ॥ 28 ॥
ಅಥವಾ ಸರ್ವಸೈನ್ಯದಿಂದಲೂ, ಸಹೋದರರಿಂದಲೂ ಸಹಿತನಾದ ಧರ್ಮರಾಜನು ಉಳಿದ ಎಲ್ಲ ಸೈನ್ಯವನ್ನು ಬಿಟ್ಟು ದ್ರೋಣರ ಮೇಲೆಯೇ ಎರಗಿದನೇ?
ತೈರ್ವೃತಃ ಸರ್ವತಃ ಕ್ಷುದ್ರೈಃ ಪಾಂಚಾಲಾಪಶದೈಸ್ತಥಾ |
ಕೇಕಯೈಶ್ಚೇದಿಕಾರೂಶೈಃ ಮತ್ಸ್ಯೈರನ್ಯೈಶ್ಚ ಭೂಮಿಪೈಃ ॥ 29 ॥
ವ್ಯಾಕುಲೀಕೃತಮಾಚಾರ್ಯಂ ಪಿಪೀಲೈರುರಗಂ ಯಥಾ |
ಕರ್ಮಣ್ಯಸುಕರೇ ಸಕ್ತಂ ಜಘಾನೈಕಂ ಸಹಾಯವಾನ್ ॥ 30 ॥
ಅಂತಹ ಪಾಂಚಾಲ ಅಧಮರಾದ ಕ್ಷುದ್ರರಿಂದ ಎಲ್ಲ ಕಡೆಗಳಿಂದಲೂ ಕೇಕಯರಿಂದಲೂ, ಚೇದಿ-ಕಾರೂಶರಿಂದಲೂ, ಮತ್ಸ್ಯರಿಂದಲೂ, ಉಳಿದ ರಾಜರಿಂದಲೂ ಪರಿವೃತನಾದ ಧರ್ಮರಾಜನು ವ್ಯಾಕುಲಗೊಳಿಸಲ್ಪಟ್ಟು ದುಷ್ಕರವಾದ ಕರ್ಮವನ್ನು ಮಾಡುತ್ತಿದ್ದ, ಒಂಟಿಯಾದ ದ್ರೋಣಾಚಾರ್ಯರನ್ನು ಇರುವೆಗಳು ಸರ್ಪವನ್ನು ಕೊಂದಂತೆ ಸಹಾಯದಿಂದ ಕೂಡಿದ ಯುಧಿಷ್ಠಿರನು ಕೊಂದನೇ?
ಯೋಽಧೀತ್ಯ ಚತುರೋ ವೇದಾನ್ ಸಾಂಗಾನಾಖ್ಯಾತಪಂಚಮಾನ್ |
ಬ್ರಾಹ್ಮಣಾನಾಂ ಪ್ರತಿಷ್ಠಾಽಽಸೀತ್ ಸ್ರೋತಸಾಮಿವ ಸಾಗರಃ |
ಕ್ಷತ್ರಂ ಚ ಬ್ರಹ್ಮ ಚೈವೇಹ ಯೋಽಭ್ಯತಿಷ್ಠತ್ ಪರಂತಪಃ ॥31॥
ದೃಪ್ತಾನಾಂ ಪ್ರತಿಷೇದ್ಧಾ ಚ ಚಕ್ಷುರಾಸೀದಚಕ್ಷುಷಾಮ್ |
ಅಮರ್ಷೀ ಚಾವಿಲಿಪ್ತೇಷು ಧಾರ್ಮಿಕೇಷು ಚ ಧಾರ್ಮಿಕಃ ॥32॥
ಸ ಕಥಂ ಬ್ರಾಹ್ಮಣೋ ವೃದ್ಧಃ ಶಸ್ತ್ರೇಣ ವಧಮಾಪ್ತವಾನ್ |
ಅಮರ್ಷಣೋ ಮರ್ಷಿತವಾನ್ ಕ್ಲಿಶ್ಯಮಾನೋ ಮಯಾಽಸಕೃತ್ |
ಅನರ್ಹಮಾಣಃ ಕೌಂತೇಯಾನ್ ಕರ್ಮಣಸ್ತಸ್ಯ ತತ್ ಫಲಮ್ ॥33॥
ಯಾವ ದ್ರೋಣರು ಅಂಗಗಳಿಂದ ಸಹಿತವಾದ ಮತ್ತು ಪಂಚಮವೇದವಾದ, ಇತಿಹಾಸ-ಪುರಾಣದಿಂದ ಸಹಿತವಾದ ನಾಲ್ಕು ವೇದಗಳನ್ನೂ ಅಧ್ಯಯನ ಮಾಡಿ, ನದಿಗಳಿಗೆ ಸಾಗರದಂತೆ ಬ್ರಾಹ್ಮಣರಿಗೆ ಆಶ್ರಯರಾಗಿದ್ದರೋ, ಪರಂತಪರಾದ ಯಾರು ಕ್ಷತ್ರಿಯ ಧರ್ಮ ಮತ್ತು ಬ್ರಾಹ್ಮಣ ಧರ್ಮ ಎರಡನ್ನೂ ಅನುಷ್ಠಾನ ಮಾಡುತ್ತಿದ್ದರೋ, ದರ್ಪಿಷ್ಠರಾದವರನ್ನು ನಿಷೇಧಿಸುತ್ತಿದ್ದರೋ, ಶೂರರಿಗೆ ಕಣ್ಣಿನಂತೆ ಇದ್ದರೋ, ದುರಹಂಕಾರಿಗಳಲ್ಲಿ ರೋಷವನ್ನು ಹೊಂದಿದ್ದರೋ, ಧಾರ್ಮಿಕರ ವಿಷಯದಲ್ಲಿ ಧಾರ್ಮಿಕರಾಗಿದ್ದರೋ ಅಂತಹ ವೃದ್ಧರೂ, ಬ್ರಾಹ್ಮಣರೂ ಆದ ದ್ರೋಣರು ಹೇಗೆ ಶಸ್ತ್ರದಿಂದ ವಧೆಯನ್ನು ಹೊಂದಿದರು? ಬ್ರಾಹ್ಮಣರಾದುದರಿಂದ ಯುದ್ಧ ಮಾಡಲು ಅನರ್ಹರಾದ ಅವರು ಯುದ್ಧವನ್ನು ಸಹಿಸದಿದ್ದರೂ ನನ್ನಿಂದ ಬಹಳ ಒತ್ತಡಕ್ಕೆ ಒಳಗಾಗಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಯುದ್ಧವನ್ನು ಸಹಿಸಿ ಒಪ್ಪಿದರು. ಇದು ಆ ಕರ್ಮದ ಫಲವಾಗಿದೆ.
ಯಸ್ಯ ಕರ್ಮಾನುಜೀವಂತಿ ಲೋಕೇ ಸರ್ವಧನುರ್ಭೃತಃ |
ಸತ್ಯಸಂಧಃ ಸತ್ಯಧೃತಿಃ ಶ್ರೀಕಾಮೈರ್ನಿಹತಃ ಕಥಮ್ ॥ 34 ॥
ಲೋಕದಲ್ಲಿ ಎಲ್ಲ ಧನುರ್ಧಾರಿಗಳೂ ಯಾರ ಕರ್ಮವನ್ನು ಉಪಜೀವಿಸುತ್ತಾರೆಯೋ, ಸತ್ಯಸಂಧರೂ, ಸತ್ಯವಾದ ಧೈರ್ಯವುಳ್ಳವರೂ ಆದ ಅವರು ಸಂಪತ್ತನ್ನು ಬಯಸುವ ಪಾಂಡವರಿಂದ ಹೇಗೆ ಹತರಾದರು?
ದಿವಿ ಶಕ್ರ ಇವ ಶ್ರೇಷ್ಠೋ ಮಹಾಸತ್ತ್ವೋ ಮಹಾಬಲಃ |
ಸ ಕಥಂ ನಿಹತಃ ಪಾರ್ಥೈಃ ಕ್ಷುದ್ರಮತ್ಸ್ಯೈಸ್ತಿಮಿರ್ಯಥಾ ॥ 35 ॥
ಸ್ವರ್ಗದಲ್ಲಿ ಇಂದ್ರನಂತೆ ಶ್ರೇಷ್ಠರಾದ, ಮಹಾಧೈರ್ಯವನ್ನು, ಮಹಾಬಲವನ್ನು ಹೊಂದಿದ, ಅವರು ಕ್ಷುದ್ರವಾದ ಮೀನುಗಳಿಂದ ತಿಮಿಂಗಿಲವು ಹತವಾದಂತೆ ಪಾಂಡವರಿಂದ ಹೇಗೆ ಹತರಾದರು?
ಕ್ಷಿಪ್ರಹಸ್ತೋ ಮಹಾಬಾಹುಃ ದೃಢಧನ್ವಾಽರಿಮರ್ದನಃ |
ನ ಹ್ಯಸ್ಯ ಜೀವಿತಾಕಾಂಕ್ಷೀ ವಿಷಮಂ ಪ್ರಾಪ್ಯ ಜೀವತಿ ॥ 36 ॥
ಮಹಾಬಾಹುಗಳೂ, ದೃಢವಾದ ಧನುಸ್ಸುಳ್ಳವರೂ, ಶತ್ರುಮರ್ದನರೂ, ಕ್ಷಿಪ್ರಹಸ್ತರೂ ಆದ ಅವರನ್ನು ಯುದ್ಧದಲ್ಲಿ ಸಂಧಿಸಿದ ತನ್ನ ಜೀವನಾಪೇಕ್ಷೆಯುಳ್ಳ ಯಾವನೂ ಬದುಕಿ ಉಳಿಯುತ್ತಿರಲಿಲ್ಲ.

ಯಂ ದ್ವೌ ನ ಜಹತುಃ ಶಬ್ದೌ ಜೀವಮಾನಂ ಕದಾಚನ |
ಬ್ರಾಹ್ಮಶ್ಚ ವೇದಕಾಮಾನಾಂ ಜ್ಯಾಶಬ್ದಶ್ಚ ಧನುಷ್ಮತಾಮ್ ॥ 37 ॥
ಅದೀನಂ ಪುರುಷವ್ಯಾಘ್ರಂ ಶ್ರೀಮಂತಮಪರಾಜಿತಮ್ |
ನಾಹಂ ಮೃಷ್ಯೇ ಹತಂ ದ್ರೋಣಂ ಸಿಂಹಂ ದ್ವಿರದವಿಕ್ರಮಾತ್ ॥ 38 ॥
ಯಾರು ಬದುಕಿರುವವರೆಗೆ ವೇದದ ಅಪೇಕ್ಷೆಯುಳ್ಳ ಬ್ರಾಹ್ಮಣರ ವೇದಶಬ್ದವೂ, ಧನುರ್ಧಾರಿಗಳ ಹೆದೆಯ ಶಬ್ದವೂ ಯಾರನ್ನು ತೊರೆಯಲಿಲ್ಲವೋ ಅಂತಹ ದೀನರಲ್ಲದ ಪುರುಷವ್ಯಾಘ್ರರಾದ, ಕಾಂತಿಯುಕ್ತರಾದ, ಅಪರಾಜಿತರಾದ ದ್ರೋಣರು ಗಜವಿಕ್ರಮದಿಂದ ಸಿಂಹವು ಹತವಾದಂತೆ ಹತರಾದುದನ್ನು ನಾನು ಸಹಿಸಲಾರೆ.
ಕಥಂ ಸಂಜಯ ದುರ್ಧರ್ಷಮನಾಧೃಷ್ಯಯಶೋಬಲಮ್ |
ಪಶ್ಯತಾಂ ಪುರುಷೇಂದ್ರಾಣಾಂ ಸಮರೇ ಪಾರ್ಷತೋಽವಧೀತ್ ॥39॥
ಎಲೈ ಸಂಜಯನೇ, ದುರ್ಧರ್ಷರೂ, ಮಾಸಿ ಹೋಗದ ಕೀರ್ತಿ ಮತ್ತು ಬಲವುಳ್ಳವರೂ ಆದ ಅವರನ್ನು ಪುರುಷಶ್ರೇಷ್ಠರು ನೋಡುತ್ತಿರುವಾಗಲೇ ಯುದ್ಧದಲ್ಲಿ ಧೃಷ್ಟದ್ಯುಮ್ನನು ಹೇಗೆ ಕೊಂದನು?
ಅಸ್ತ್ರಂ ಚತುಷ್ಪಾತ್ ಸಕಲಂ ಯಸ್ಮಿನ್ನಾಸೀತ್ ಪ್ರತಿಷ್ಠಿತಮ್ |
ತಮಿಷ್ವಾಸವರಾಚಾರ್ಯಂ ದ್ರೋಣಂ ಜಘ್ನುಃ ಕಥಂ ರಥಾಃ ॥ 40 ॥
ನಾಲ್ಕು ಅಂಗಗಳಿಂದ ಕೂಡಿದ ಸಕಲವಾದ ಅಸ್ತ್ರವಿದ್ಯೆಯು ಯಾರಲ್ಲಿ ಪ್ರತಿಷ್ಠಿತವಾಗಿದ್ದಿತೋ ಅಂತಹ ಶ್ರೇಷ್ಠರಾದ ಧನುರ್ಧಾರಿಗಳಿಗೆ ಗುರುಗಳಾದ ದ್ರೋಣರನ್ನು ಮಹಾರಥರು ಹೇಗೆ ಕೊಂದರು?
ನಾಹಂ ಮನ್ಯೇ ಹತಂ ದ್ರೋಣಂ ಸ ಹಿ ಲೋಕಮಯೋತ್ಸ್ಯತ |
ಕೋ ಹಿ ಶಕ್ತೋ ರಣೇ ಜೇತುಮನಾಧೃಷ್ಯಯಶೋಬಲಮ್ ॥ 41 ॥
ದ್ರೋಣರು ಹತರಾದರೆಂದು ನಾನು ನಂಬುವುದಿಲ್ಲ. ಅವರು ಸರ್ವಲೋಕಗಳ ಜೊತೆಯಲ್ಲಿಯೂ ಯುದ್ಧವನ್ನು ಮಾಡುತ್ತಿದ್ದವರು. ಮಾಸಿ ಹೋಗದ ಕೀರ್ತಿ ಮತ್ತು ಬಲಗಳುಳ್ಳ ದ್ರೋಣರನ್ನು ಯುದ್ಧದಲ್ಲಿ ಜಯಿಸಲು ಯಾರಿಗೆ ಸಾಧ್ಯವಾಗುತ್ತದೆ?
ಬ್ರಹ್ಮಕಲ್ಪೋ ಭವೇದ್ ಬ್ರಾಹ್ಮೇ ಕ್ಷಾತ್ರೇ ನಾರಾಯಣೋಪಮಃ |
ಬ್ರಹ್ಮಕ್ಷತ್ರೇ ಚ ಯಸ್ಯಾಸ್ತಾಂ ವಶೇ ಸ್ಥಾಣೋರಿವಾಖಿಲೇ ॥ 42 ॥
ಅವರು ಬ್ರಹ್ಮವಿದ್ಯೆಯಲ್ಲಿ ಬ್ರಹ್ಮದೇವರಿಗೆ ಸಮರು ಮತ್ತು ಕ್ಷಾತ್ರತೇಜಸ್ಸಿನಲ್ಲಿ ನಾರಾಯಣನಂತೆ ಇದ್ದವರು. ರುದ್ರದೇವರ ವಶದಲ್ಲಿ ಸಮಸ್ತ ಜಗತ್ತೂ ಇದ್ದಂತೆ, ಬ್ರಾಹ್ಮಣ-ಕ್ಷತ್ರಿಯರೆಲ್ಲರೂ ಅವರ ವಶವಾಗಿದ್ದರು.
ಸರ್ವಾನ್ ಹಿ ಮಾಮಕಾನ್ ವೀರಾನ್ ಸಹಾಶ್ವರಥಕುಂಜರಾನ್ |
ಯುಧಿಷ್ಠಿರಸ್ಯ ತಪಸಾ ಹತಾನ್ ಮನ್ಯಾಮಹೇ ಕುರೂನ್ ॥ 43 ॥
ಅಶ್ವ-ರಥ-ಕುಂಜರಗಳಿಂದ ಸಹಿತರಾದ, ವೀರರಾದ, ನನ್ನವರಾದ ಕುರುಗಳೆಲ್ಲರೂ ಯುಧಿಷ್ಠಿರನ ತಪಸ್ಸಿನಿಂದ ಹತರಾಗಿದ್ದಾರೆಂದು ತಿಳಿಯುತ್ತೇನೆ.
ಕೇಽರಕ್ಷನ್ ದಕ್ಷಿಣಂ ಚಕ್ರಂ ಕೇ ಸವ್ಯಂ ಕೇ ಚ ಪೃಷ್ಠತಃ |
ಪುರಸ್ತಾತ್ ಕೇ ಚ ವೀರಸ್ಯ ಯುಧ್ಯಮಾನಸ್ಯ ಸಂಯುಗೇ ॥ 44 ॥
ದ್ರೋಣರು ಯುದ್ಧವನ್ನು ಮಾಡುವಾಗ ಅವರ ಬಲಭಾಗವನ್ನು ಯಾರು ರಕ್ಷಿಸಿದರು? ಅವರ ಎಡಭಾಗದಲ್ಲಿ ಮತ್ತು ಹಿಂಭಾಗದಲ್ಲಿ ಯಾರಿದ್ದರು? ಆ ವೀರರ ಮುಂಭಾಗದಲ್ಲಿ ಯಾರಿದ್ದರು?
ಕೇ ಪುರಸ್ತಾದಯುದ್ಧ್ಯಂತ ರಕ್ಷಂತೋ ದ್ರೋಣಮಂತಿಕಾತ್ |
ಕೇ ತು ಪಶ್ಚಾದಯುದ್ಧ್ಯಂತ ಗಚ್ಛಂತೋ ದುರ್ಗಮಾಂ ಗತಿಮ್ ॥45॥
ದ್ರೋಣರನ್ನು ಸಮೀಪದಿಂದ ರಕ್ಷಿಸುತ್ತಾ ಅವರ ಮುಂಭಾಗದಲ್ಲಿ ಯಾರು ಯುದ್ಧವನ್ನು ಮಾಡಿದರು? ಯಾರು ದುರ್ಗಮವಾದ ಗತಿಯನ್ನು ಹೊಂದುತ್ತಾ ಅವರ ಹಿಂಭಾಗದಲ್ಲಿ ಯುದ್ಧವನ್ನು ಮಾಡಿದರು?
ಕೇ ನು ತತ್ರ ತನುಂ ತ್ಯಕ್ತ್ವಾ ಪ್ರತೀಪಂ ಮೃತ್ಯುಮಾವ್ರಜನ್ |
ಅಮಾನುಷಾಣಾಂ ಜೇತಾರಂ ಯುದ್ಧೇಷ್ವಪಿ ಚ ಸಂಜಯ ॥ 46 ॥
ಎಲೈ ಸಂಜಯನೇ, ಮನುಷ್ಯರನ್ನು ಮೀರಿದವರನ್ನೂ ಯುದ್ಧದಲ್ಲಿ ಗೆಲ್ಲುವ ಅವರನ್ನು ಹಿಂಬಾಲಿಸಿ ಯಾರು ತಮ್ಮ ದೇಹವನ್ನು ತ್ಯಾಗ ಮಾಡಿ ಪ್ರತೀಪಕಾರಿಯಾದ ಮೃತ್ಯುವನ್ನು ಹೊಂದಿದರು?
ದ್ರೋಣಸ್ಯ ಸಮರೇ ವೀರಾಃ ಕೇಽಕುರ್ವಂತ ಪರಾಂ ಗತಿಮ್ |
ಕೇಚಿಚ್ಚೈನಂ ಭಯಾನ್ಮಂದಾಃ ಕ್ಷತ್ರಿಯಾ ವ್ಯಜಹೂ ರಣೇ |
ರಕ್ಷಿತಾರೋ ಹತಾಃ ಶೂನ್ಯೇ ಕಶ್ಚಿದೇಕೋ ಹತಃ ಪರೈಃ ॥47॥
ಯುದ್ಧದಲ್ಲಿ ಯಾವ ವೀರರು ದ್ರೋಣರಿಗೆ ಸಹಾಯವನ್ನು ಮಾಡಿದರು? ಯಾವ ಮಂದರಾದ ಕ್ಷತ್ರಿಯರು ಭಯದಿಂದ ರಣರಂಗದಲ್ಲಿ ಅವರನ್ನು ತೊರೆದರು? ಅವರನ್ನು ರಕ್ಷಿಸುವವರನ್ನೆಲ್ಲ ಕೊಂದು ಏಕಾಕಿಯಾಗಿದ್ದ ಅವರನ್ನು ಯಾರಾದರೂ ಶತ್ರುಗಳು ಕೊಂದರೆ?
ನ ಸ ಪೃಷ್ಠಮರೇಽಸತ್ರಸಾದ್ ರಣೇ ಶೌರ್ಯಾತ್ ಪ್ರದರ್ಶಯೇತ್ |
ಪರಾಮಪ್ಯಾಪದಂ ಪ್ರಾಪ್ಯ ಕಥಂ ಸ ನಿಹಿತಃ ಪರೈಃ ॥ 48 ॥
ಯುದ್ಧದಲ್ಲಿ ಎಷ್ಟು ಸಂಕಟ ಒದಗಿದರೂ ಭಯದಿಂದ ಶತ್ರುಗಳಿಗೆ ಬೆನ್ನನ್ನು ತೋರಿಸದೆ ಶೌರ್ಯವನ್ನು ಅವಲಂಬಿಸಿದ ಅವರು ಹೇಗೆ ಶತ್ರುಗಳಿಂದ ಹತರಾದರು?
ಏತದಾರ್ಯೇಣ ಕರ್ತವ್ಯಂ ಕೃಚ್ಛ್ರಾಸ್ವಾಪತ್ಸು ಸಂಜಯ |
ಪರಾಕ್ರಮೇದ್ ಯಥಾಶಕ್ತ್ಯಾ ದ್ವಿಷದ್ಭಿಃ ಸ್ವಾಂಶ್ಚ ಪಾಲಯೇತ್ ॥49॥

ಎಲೈ ಸಂಜಯನೇ, ಪರಾಕ್ರಮವನ್ನು ಅವಲಂಬಿಸಿ ಶಕ್ತಿ ಇದ್ದಷ್ಟು ಶತ್ರುಗಳನ್ನು ಕೊಲ್ಲುವುದು ಮತ್ತು ತನ್ನವರನ್ನು ರಕ್ಷಿಸುವುದು ಇವೆರಡೂ ಶ್ರೇಷ್ಠರಾದವರು ಕಷ್ಟ ಕಾಲದಲ್ಲಿ ಮಾಡಬೇಕಾದ ಕಾರ್ಯ.
ಕಚ್ಚಿನ್ನೈನಂ ಭಯಾತ್ ಕ್ಷುದ್ರಾಃ ಪಾರ್ಥೇಭ್ಯಃ ಪ್ರದದೂ ರಣೇ |
ಗೋಪ್ತೃಭಿಸ್ತೈಃ ಸಮುತ್ಸ ೃಷ್ಟಃ ಕಚ್ಚಿನ್ನೈಷ ಪರ್ಯೆಹರ್ತತಃ ॥ 50 ॥
ಅಥವಾ ಕ್ಷುದ್ರರಾದ ನನ್ನ ಸೈನಿಕರು ಭಯದಿಂದ ಪಾಂಡವರಿಗೆ ರಣರಂಗದಲ್ಲಿ ಅವರನ್ನು ಒಪ್ಪಿಸಿದರೆ? ರಕ್ಷಕರಿಂದ ತೊರೆಯಲ್ಪಟ್ಟ ಅವರನ್ನು ಶತ್ರುಗಳು ಕೊಲ್ಲಲಿಲ್ಲವಷ್ಟೆ?
ಧೃಷ್ಟದ್ಯುಮ್ನಂ ಪ್ರಪಶ್ಯಾಮಿ ನಿಘ್ನಂತಮಿವ ಬ್ರಾಹ್ಮಣಮ್ |
ವಾರ್ಯಮಾಣಂ ರಣೇ ತಾತ ದ್ರೌಣಿನಾಽಮಿತತೇಜಸಾ ॥ 51 ॥
ಎಲೈ ಪ್ರೀತಿಪಾತ್ರನೇ, ಅಮಿತ ಪರಾಕ್ರಮಿಗಳಾದ ಅಶ್ವತ್ಥಾಮರಿಂದ ನಿಷೇಧಿಸಲ್ಪಡುತ್ತಿದ್ದರೂ ಯುದ್ಧದಲ್ಲಿ ಧೃಷ್ಟದ್ಯುಮ್ನನು ಬ್ರಾಹ್ಮಣರಾದ ಅವರನ್ನು ಕೊಲ್ಲುತ್ತಿರುವವನಂತೆ ಕಾಣುತ್ತಿದ್ದೇನೆ?
ಮುಹ್ಯತೇ ಮೇ ಮನಸ್ತಾತ ಮಾ ತಾವತ್ ಕಿಂಚಿದುಚ್ಯತಾಮ್ |
ಭೂಯಸ್ತು ಲಬ್ಧಸಂಜ್ಞಃ ಸನ್ ಪರಿಪ್ರಕ್ಷ್ಯಾಮಿ ಸಂಜಯ ॥ 52 ॥
ಎಲೈ ಪ್ರೀತಿಪಾತ್ರನೇ, ನನ್ನ ಮನಸ್ಸಿಗೆ ಮೋಹವುಂಟಾಗುತ್ತಿದೆ (ನಾನು ಮೂರ್ಛೆಯನ್ನು ಹೊಂದುವೆನು). ಸದ್ಯಕ್ಕೆ ಏನನ್ನೂ ಹೇಳಬೇಡ. ಪ್ರಜ್ಞೆಯನ್ನು ಮರಳಿ ಪಡೆದ ಮೇಲೆ ನಿನ್ನನ್ನು ಪ್ರಶ್ನಿಸುವೆನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಮೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಮೂರ್ಛೆಯಿಂದ ಧೃತರಾಷ್ಟ್ರನ ಎಚ್ಚರಿಕೆ. ಸಂಜಯನನ್ನು ಕುರಿತು
ಪುನಃ ಯುದ್ಧದ ಪ್ರಶ್ನೆ.
ವೈಶಂಪಾಯನಃ
ಏವಂ ಪೃಷ್ಟ್ವಾ ಸೂತಪುತ್ರಂ ಹೃಚ್ಛೋಕೇನಾರ್ದಿತೋ ಭೃಶಮ್ |
ಜಯೇ ನಿರಾಶಃ ಪುತ್ರಾಣಾಂ ಧೃತರಾಷ್ಟ್ರೋಽಪತತ್ ಕ್ಷಿತೌ ॥ 1 ॥
ವೈಶಂಪಾಯನ ಧೃತರಾಷ್ಟ್ರನು ಸಂಜಯನನ್ನು ಕುರಿತು ಹೀಗೆ ಪ್ರಶ್ನೆಯನ್ನು ಮಾಡಿ, ಮನಶ್ಶೋಕದಿಂದ ಬಹಳ ಪೀಡಿತನಾಗಿ, ತನ್ನ ಪುತ್ರನ ಜಯದಲ್ಲಿ ಆಸೆಯನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದನು.
ತಂ ವಿಸಂಜ್ಞಂ ನಿಪತಿತಂ ಸಿಷಿಚುಃ ಪರಿಚಾರಿಕಾಃ |
ಜಲೇನಾತ್ಯಂತಶೀತೇನ ವೀಜಂತ್ಯಃ ಪುಣ್ಯಗಂಧಿನಾ ॥ 2 ॥
ಭೂಮಿಯ ಮೇಲೆ ಬಿದ್ದ ಅವನನ್ನು ಪರಿಚಾರಿಕೆಯರು ಸುಗಂಧಯುಕ್ತವಾದ, ಅತ್ಯಂತ ಶೀತಲವಾದ ನೀರಿನಿಂದ ಚುಮುಕಿಸಿ ಅವನಿಗೆ ಗಾಳಿಯನ್ನು ಬೀಸಿದರು.
ಪತಿತಂ ಚೈನಮಾಜ್ಞಾಯ ಸಮಸ್ತಾ ಭಾರತಸ್ತ್ರಿಯಃ |
ಪರಿವವ್ರುರ್ಮಹಾತ್ಮಾನಂ ಸಂಸ್ಪ ೃಶಂತ್ಯಶ್ಚ ಪಾಣಿಭಿಃ ॥ 3 ॥
ಅವನು ಬಿದ್ದುದನ್ನು ತಿಳಿದ ಭಾರತಸ್ತ್ರೀಯರೆಲ್ಲರೂ ಮಹಾತ್ಮನಾದ ಅವನನ್ನು ತಮ್ಮ ಹಸ್ತಗಳಿಂದ ಸ್ಪರ್ಶಿಸುತ್ತಾ ಸುತ್ತುವರಿದರು.
ಉತ್ಥಾಪ್ಯ ಚೈನಂ ಶನಕೈ ರಾಜಾನಂ ಪೃಥಿವೀತಳಾತ್ |
ಆಸನಂ ಪ್ರಾಪಯಾಮಾಸುರ್ಬಾಷ್ಪಕಂಠ್ಯೋ ವರಾಂಗನಾಃ ॥ 4 ॥
ಬಾಷ್ಪಕಂಠದಿಂದ ಕೂಡಿದ ಆ ಸುಂದರಿಯರು ರಾಜನನ್ನು ಮೆಲ್ಲನೆ ಭೂತಳದಿಂದ ಎತ್ತಿ ಆಸನದಲ್ಲಿ ಕೂಡಿಸಿದರು.
ಆಸನಂ ಪ್ರಾಪ್ಯ ರಾಜಾ ತು ಮೂರ್ಚ್ಛಯಾಽಭಿಪರಿಪ್ಲುತಃ |
ನಿಶ್ಚೇಷ್ಟೋಽತಿಷ್ಠತ ತದಾ ವೀಜ್ಯಮಾನಃ ಸಮಂತತಃ ॥ 5 ॥
ಆಸನದಲ್ಲಿ ಕೂಡಿಸಲ್ಪಟ್ಟ ರಾಜನು ಎಲ್ಲ ಕಡೆಗಳಿಂದಲೂ ಗಾಳಿಯನ್ನು ಬೀಸಿದರೂ ಮೂರ್ಛಾಕ್ರಾಂತನಾಗಿ ನಿಶ್ಚೇಷ್ಟನಾಗಿದ್ದನು.
ಸ ಲಬ್ಧ್ವಾ ಶನಕೈಃ ಸಂಜ್ಞಾಂ ವೇಪಮಾನೋ ಮುಹುರ್ಮುಹುಃ |
ಪುನರ್ಗಾವಲ್ಗಣಿಂ ಸೂತಂ ಪರ್ಯಪೃಚ್ಛದ್ ಯಥಾತಥಮ್ ॥ 6 ॥
ಅವನು ಪುನಃ ನಿಧಾನವಾಗಿ ಪ್ರಜ್ಞೆಯನ್ನು ಪಡೆದು, ಪುನಃ ಪುನಃ ನಡುಗುತ್ತಾ, ಗಾವಲ್ಗಣಿಯಾದ ಸಂಜಯನನ್ನು ಕುರಿತು ಯುದ್ಧದ ಸತ್ಯಸಂಗತಿಗಳ ವಿಷಯದಲ್ಲಿ ಪುನಃ ಪ್ರಶ್ನೆಯನ್ನು ಮಾಡಿದನು.
ಧೃತರಾಷ್ಟ್ರಃ
ಯಃ ಸದೋದ್ಯನ್ನಿವಾದಿತ್ಯಃ ತೇಜಸಾ ಪ್ರಣುದನ್ ತಮಃ |
ಆಯಾದಜಾತಶತ್ರುರ್ವೈ ಕಸ್ತಂ ದ್ರೋಣಾದವಾರಯತ್ ॥ 7 ॥
ಧೃತರಾಷ್ಟ್ರ ಯಾವನು ನಿತ್ಯೋದಿತನಾದ ಸೂರ್ಯನಂತೆ ತನ್ನ ತೇಜಸ್ಸಿನಿಂದ ಅಂಧಕಾರವನ್ನು ಪರಿಹರಿಸುವನೋ ಅಂತಹ ಅಜಾತಶತ್ರುವು ಬಂದಾಗ ಯಾರು ಅವನನ್ನು ದ್ರೋಣರಿಂದ ತಡೆದರು?
ಪ್ರಭಿನ್ನಮಿವ ಮಾತಂಗಂ ತಥಾ ಕ್ರುದ್ಧಂ ತರಸ್ವಿನಮ್ |

ಆಸಕ್ತಮನಸಂ ದೃಪ್ತಂ ಪ್ರತಿದ್ವಿರದಘಾತಿನಮ್ ॥ 8 ॥
ವಾಸಿತಾಸಂಗಮೇ ಯಾಂತಮ್ ಅಜಯ್ಯಂ ಪ್ರತಿಯೂಥಪೈಃ |
ಅತೀತ್ಯಾನ್ಯಾನ್ ರಣೇ ವೀರಾನ್ ವೀರಃ ಪುರುಷಸತ್ತಮಃ ॥ 9 ॥
ಸ ಹ್ಯೇಕೋ ಹಿ ಮಹಾಬಾಹುರ್ನಿರ್ದಹೇದ್ ಘೋರಚಕ್ಷುಷಾ |
ಕೃತ್ಸ್ನಂ ದುರ್ಯೋಧನಬಲಂ ಧೃತಿಮಾನ್ ಸತ್ಯಸಂಗರಃ ॥ 10 ॥
ಚಕ್ಷುಷ್ಮಂತಂ ಜಯೇ ಸಕ್ತಮ್ ಇಷ್ವಾಸವರರಕ್ಷಿತಮ್ |
ದಾಂತಂ ಲೋಕೇ ಬಹುಮತಂ ಕಸ್ತಂ ದ್ರೋಣಾದವಾರಯತ್ ॥ 11 ॥
ಮದೋದಕವನ್ನು ಸುರಿಸುವ, ಕೋಪಗೊಂಡ, ವೇಗಶಾಲಿಯಾದ, ದರ್ಪದಿಂದ ಕೂಡಿದ, ಪ್ರತಿಗಜವನ್ನು ಸಂಹರಿಸುವ, ವಾಸಿತಾಸಂಗಮದಲ್ಲಿ ಆಸೆಯನ್ನು ಹೊಂದಿ ಮುಂದೆ ಹೋಗುವ, ಪ್ರತಿಗಜಗಳಿಂದ ಜಯಿಸಲು ಸಾಧ್ಯವಿಲ್ಲದ ಗಜದಂತೆ ರಣರಂಗದಲ್ಲಿ ಪುರುಷಶ್ರೇಷ್ಠನಾದ ಯುಧಿಷ್ಠಿರನು ಅನ್ಯವೀರರನ್ನು ದಾಟಿ ಮುಂದೆ ಹೋದನೋ ಅಂತಹ ಮಹಾಬಾಹುವೂ, ಧೈರ್ಯಶಾಲಿಯೂ, ಸತ್ಯಸಂಧನೂ ಆದ ಯುಧಿಷ್ಠಿರನು ತನ್ನ ಘೋರವಾದ ದೃಷ್ಟಿಯಿಂದ ದುರ್ಯೋಧನನ ಸಮಗ್ರವಾದ ಬಲವನ್ನೇ ಸುಟ್ಟಾನು! ಅಂತಹ ಚಕ್ಷುಸ್ಸನ್ನು ಹೊಂದಿದ, ಜಯದಲ್ಲಿ ಆಸಕ್ತನಾದ, ಶ್ರೇಷ್ಠ ಧನುರ್ಧಾರಿಗಳಿಂದ ರಕ್ಷಿತನಾದ, ಇಂದ್ರಿಯನಿಗ್ರಹವುಳ್ಳ, ಲೋಕದಲ್ಲಿ ಗೌರವಿಸಲ್ಪಡುವ ಯುಧಿಷ್ಠಿರನನ್ನು ಯಾರು ದ್ರೋಣರಿಂದ (ದ್ರೋಣರ ಬಳಿಗೆ ಹೋಗದಂತೆ) ತಡೆದರು?
ಕೇ ದುಷ್ಪ್ರಧರ್ಷಂ ರಾಜಾನಮ್ ಇಷ್ವಾಸವರಮಚ್ಯುತಮ್ |
ಸಮಾಸೇದುರ್ನರವ್ಯಾಘ್ರಂ ಮದೀಯಾ ವೈ ಯುಧಿಷ್ಠಿರಮ್ ॥ 12 ॥
ಸೋಲಿಸಲು ಕಷ್ಟಸಾಧ್ಯನಾದ, ಶ್ರೇಷ್ಠಧನುರ್ಧಾರಿಯಾದ, ತನ್ನ ಗುಣಗಳನ್ನು ಎಂದೂ ಕಳೆದುಕೊಳ್ಳದ ನರವ್ಯಾಘ್ರನಾದ ಯುಧಿಷ್ಠಿರನನ್ನು ನನ್ನವರು ಯಾರು ಸಮೀಪಿಸಿದರು?
ತರಸ್ವೈವಾಭಿಪದ್ಯಾಥ ಯೋ ವೈ ದ್ರೋಣಮುಪಾದ್ರವತ್ |
ಯಃ ಕರೋತಿ ಮಹತ್ಕರ್ಮ ಶತ್ರೂಣಾಂ ವೈ ಮಹಾಬಲಃ ॥ 13 ॥
ಮಹಾಕಾಯೋ ಮಹೋತ್ಸಾಹೋ ನಾಗಾಯುತಸಮೋ ಬಲೇ |
ತಂ ಭೀಮಸೇನಮಾಯಾಂತಂ ಕೇ ವೀರಾಃ ಪರ್ಯವಾರಯನ್ ॥14॥
ಯಾವನು ಶೀಘ್ರವಾಗಿ ದ್ರೋಣರ ಕಡೆಗೆ ಧಾವಿಸಿದನೋ? ಮಹಾಬಲನಾದ ಯಾವನು ಶತ್ರುಗಳಿಗೆ ದೊಡ್ಡ ಅನಿಷ್ಟಕಾರ್ಯವನ್ನು ಮಾಡುತ್ತಾನೆಯೋ ಅಂತಹ ಮಹಾಶರೀರವುಳ್ಳವನೂ, ಮಹಾ ಉತ್ಸಾಹವುಳ್ಳವನೂ, ಬಲದಲ್ಲಿ ಹತ್ತುಸಾವಿರ ಆನೆಗಳಿಗೆ ಸಮನಾದವನೂ ಆದ ಭೀಮಸೇನನು ದ್ರೋಣರ ಬಳಿಗೆ ಬರುವಾಗ ಯಾವ ವೀರರು ಅವನನ್ನು ತಡೆದರು?
ಸ ಯದಾ ಜಲದಪ್ರಖ್ಯೋ ರಥಘೋಷೇಣ ವೀರ್ಯವಾನ್ |
ಪರ್ಜನ್ಯ ಇವ ಬೀಭತ್ಸುಃ ತುಮುಲಾಮಶನಿಂ ಸೃಜನ್ ॥ 15 ॥
ವಿಸೃಜನ್ ಶರವರ್ಷಾಣಿ ವರ್ಷಾಣಿ ಮಘವಾನಿವ |
ಇಷುಸಂಬಾಧಮಾಕಾಶಂ ಕುರ್ವನ್ ಕಪಿವರಧ್ವಜಃ ॥ 16 ॥
ಮೇಘದ ಕಾಂತಿಯನ್ನು ಹೊಂದಿದ, ವೀರ್ಯಶಾಲಿಯಾದ, ರಥಘೋಷದಿಂದ ಪರ್ಜನ್ಯನಂತೆ ತೀವ್ರವಾದ ಸಿಡಿಲುಗಳನ್ನು ಸೃಷ್ಟಿಸುವ, ಇಂದ್ರನು ಮಳೆಯನ್ನು ಸುರಿಸಿದಂತೆ ಬಾಣದ ಮಳೆಯನ್ನು ಸುರಿಸುವ, ಆಕಾಶವನ್ನು ಬಾಣಗಳಿಂದ ತುಂಬುವ (ನಿಬಿಡವನ್ನಾಗಿ ಮಾಡುವ) ಕಪಿಧ್ವಜನಾದ ಅರ್ಜುನನು;
ಅವಸ್ಫೂರ್ಜನ್ ದಿಶಃ ಸರ್ವಾಸ್ತಳನೇಮಿಸ್ವನೇನ ಚ |
ಚಾಪವಿದ್ಯುತ್ಪ್ರಭೋ ಘೋರೋ ರಥಗುಲ್ಮಬಲಾಹಕಃ ॥ 17 ॥
ನೇಮಿಸ್ವನಾಭಿಸ್ತನಿತಃ ಶರಶಬ್ದಾತಿಬಂಧುರಃ |
ರೋಷನಿರ್ಜಿತಜೀಮೂತೋ ಮನೋಭಿಪ್ರಾಯಶೀಘ್ರಗಃ ॥ 18 ॥
ತನ್ನ ರಥದ ನೇಮಿಶಬ್ದದಿಂದಲೂ, ಹಸ್ತ-ತಳಶಬ್ದದಿಂದಲೂ, ದಿಕ್ಕುಗಳನ್ನು ಪ್ರತಿಧ್ವನಿಸುತ್ತಾ, ಧನುಸ್ಸೆಂಬ ವಿದ್ಯುತ್ಪ್ರಭೆಯುಳ್ಳವನಾಗಿ, ಘೋರನಾಗಿ, ರಥಸಮೂಹವೆಂಬ ಮೋಡವನ್ನು ಹೊಂದಿ, ರಥನೇಮಿಸ್ವನವೆಂಬ ಗುಡುಗುಗಳಿಂದ ಕೂಡಿ, ಶರಶಬ್ದಗಳೆಂಬ ಬಂಧುಗಳಿಂದ ಕೂಡಿ, ರೋಷದಿಂದ ಮೇಘ ಗರ್ಜನೆಯನ್ನು ಜಯಿಸಿ, ಮನಸ್ಸಿನ ಅಭಿಪ್ರಾಯದಂತೆ ಶೀಘ್ರಗತಿಯನ್ನು ಹೊಂದಿ;
ಮರ್ಮಾತಿಗಃ ಬಾಣಧಾರಸ್ತುಮುಲಃ ಶೋಣಿತೋದಕೈಃ |
ದಿಶಶ್ಚ ಪ್ರದಿಶಃ ಸರ್ವಾ ಮಾನವೈರಾಸ್ತೃಣೋನ್ಮಹೀಮ್ ॥ 19 ॥
ಗದಾಸಿವಿದ್ಯುತ್ಕಲಿಲಃ ಶಾತ್ರವಾಣಾಂ ಭಯಂಕರಃ |
ಯುದ್ಧೇಽಭಿವರ್ಷನ್ ಕೌಂತೇಯೋ ಗೃಧ್ರಪತ್ರೈಃ ಶಿಲಾಶಿತೈಃ ॥20॥
ಗಾಂಡೀವಂ ಧನುರಾದಾಯ ಕ್ವ ತದಾ ಪ್ರತ್ಯವಸ್ಥಿತಃ|
ಕಚ್ಚಿದ್ಗಾಂಡೀವಶಬ್ದೇನ ನ ಪ್ರಣಶ್ಯತಿ ಮೇ ಬಲಮ್ ॥ 21 ॥
ಬಾಣಗಳ ಮಳೆಯಿಂದ ಶತ್ರುಗಳ ಮರ್ಮವನ್ನು ಭೇದಿಸಿ, ರಕ್ತೋದಕದಿಂದ ಎಲ್ಲ ದಿಕ್ಕು-ವಿದಿಕ್ಕುಗಳಲ್ಲಿ ಭೂಮಿಯನ್ನು ಮೃತರಾದ ಯೋಧರಿಂದ ತುಂಬಿದನೋ, ಗದಾ-ಖಡ್ಗ ಎಂಬ ಮಿಂಚುಗಳಿಂದ ಕೂಡಿದ, ಶತ್ರುಭಯಂಕರನಾದ ಅರ್ಜುನನು ಗಾಂಡೀವ ಧನುಸ್ಸನ್ನು ತೆಗೆದುಕೊಂಡು ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಗೃಧ್ರಪತ್ರಗಳಿಂದ ಕೂಡಿದ ಬಾಣಗಳ ಮಳೆಯನ್ನು ಯುದ್ಧದಲ್ಲಿ ಸುರಿಸುವಾಗ ಅವನು ಎಲ್ಲಿ ಇದ್ದನು? ಗಾಂಡೀವ ಶಬ್ದದಿಂದಲೇ ನನ್ನ ಸೈನ್ಯವು ನಾಶ ಹೊಂದಲಿಲ್ಲವಷ್ಟೆ?

ಯದಾ ಘೋ ಭೈರವಂ ಕುರ್ವನ್ನರ್ಜುನೋ ಭೃಶಮತ್ಯಗಾತ್ |
ವಾತೋ ಮೇಘಾನಿವಾವಿಧ್ಯ ಬಲವಾನ್ ಭೀಮವಿಕ್ರಮಃ |
ಕೋ ಹಿ ಶಕ್ತೋ ರಣೇ ಜೇತುಂ ಮಾನವಃ ಪಾರ್ಥಮೀಕ್ಷಿತುಮ್ ॥22॥
ಯಾವ ಬಲಿಷ್ಠನೂ, ಭಯಂಕರ ಪರಾಕ್ರಮವುಳ್ಳವನೂ ಆದ ಅರ್ಜುನನು ವಾಯುವು ಮೇಘಗಳನ್ನು ಅಪ್ಪಳಿಸುವಂತೆ ಭಯಂಕರವಾದ ಕಾರ್ಯವನ್ನು ಮಾಡಿ ನಿಮ್ಮನ್ನು ದಾಟಿದನೋ ಆಗ ಯಾವ ಮಾನವನು ರಣರಂಗದಲ್ಲಿ ಅವನನ್ನು ನೋಡಲು ಶಕ್ತನಾಗುತ್ತಾನೆ?
ಕಚ್ಚಿನ್ನಾಪಾನುದತ್ ಪ್ರಾಣಾನ್ ಇಷುಭಿರ್ವೋ ಧನಂಜಯಃ |
ವಾಯುರ್ಮೇಘಾನಿವಾವಿಧ್ಯತ್ ರೇಣೂನಿವ ಮಹಾಬಲಃ ॥ 23 ॥
ವಾಯುವು ಧೂಳನ್ನು ಮತ್ತು ಮೇಘಗಳನ್ನು ಅಪ್ಪಳಿಸಿ ಹಾರಿಸುವಂತೆ ಮಹಾಬಲನಾದ ಅರ್ಜುನನು ತನ್ನ ಬಾಣಗಳಿಂದ ನಿಮ್ಮ ಪ್ರಾಣಗಳನ್ನು ಹಾರಿಸಲಿಲ್ಲವಷ್ಟೆ?
ಕೋ ಹಿ ಗಾಂಡೀವಧನ್ವಾನಂ ನರಃ ಸೋಢುಂ ರಣೇಽರ್ಹತಿ |
ಯತ್ ಸೇನಾಃ ಸಮಕಂಪಂತ ಯದ್ ವೀರಾನಸ್ಪ ೃಶದ್ ಭಯಮ್ ॥24॥
ಸೈನ್ಯವೆಲ್ಲವೂ ನಡುಗಿದುದರಿಂದ ಮತ್ತು ವೀರರಿಗೆ ಭಯವುಂಟಾದುದರಿಂದ ಗಾಂಡೀವ ಧನುರ್ಧಾರಿಯಾದ ಅರ್ಜುನನನ್ನು ಯುದ್ಧದಲ್ಲಿ ಯಾವನು ಸಹಿಸಲು ಸಾಧ್ಯವಾದೀತು?
ಕೇ ತತ್ರ ನ ಜಹುರ್ದ್ರೋಣಂ ಕೇ ಕ್ಷುದ್ರಾಃ ಪ್ರಾದ್ರವನ್ ಭಯಾತ್ |
ಕೇ ವಾ ತತ್ರ ತನುಂ ತ್ಯಕ್ತ್ವಾ ಪ್ರತೀಪಂ ಮೃತ್ಯುಮಾವ್ರಜನ್ ॥ 25 ॥
ಅಲ್ಲಿ ಯಾರು ದ್ರೋಣರನ್ನು ತ್ಯಜಿಸಲಿಲ್ಲ? ಯಾವ ಕ್ಷುದ್ರರು ಭಯದಿಂದ ಓಡಿಹೋದರು? ಯಾರು ಅಲ್ಲಿ ತಮ್ಮ ಶರೀರಗಳನ್ನು ತ್ಯಜಿಸಿ (ಪರಿಗಣಿಸದೆ) ವೈರಿಯೂ, ಮಾರಕನೂ, ದೇವತೆಗಳನ್ನೂ ಗೆಲ್ಲುವವನೂ ಆದ ಅರ್ಜುನನ ಮೇಲೆ ಎರಗಿದರು?
ಅಮಾನುಷಾಣಾಂ ಜೇತಾರಂ ಯುದ್ಧೇಷ್ವಪಿ ಧನಂಜಯಮ್ |
ನ ವೈ ವೇಗಂ ಸಿತಾಶ್ವಸ್ಯ ಪ್ರಸಹಿಷ್ಯತಿ ಮಾನವಃ |
ಗಾಂಡೀವಸ್ಯ ಚ ನಿರ್ಘೋಷಂ ಪ್ರಾವೃಡ್ಜಲದನಿಸ್ವನಮ್ ॥ 26 ॥
ಅರ್ಜುನನ ವೇಗವನ್ನು ಮತ್ತು ಮಳೆಗಾಲದ ಮೋಡಗಳ ಗರ್ಜನೆಯಂತಿರುವ ಗಾಂಡೀವ ಧನುಸ್ಸಿನ ಘೋಷವನ್ನು ಯಾವ ಮಾನವನೂ ಸಹಿಸುವುದಿಲ್ಲ.
ವಿಷ್ವಕ್ಸೇನೋ ಯಸ್ಯ ಯಂತಾ ಯತ್ರ ಯೋದ್ಧಾ ಧನಂಜಯಃ |
ಅಜಯ್ಯಂ ತಂ ರಥಂ ಮನ್ಯೇ ದೇವೈರಪಿ ಸವಾಸವೈಃ ॥ 27 ॥
ಎಲ್ಲಿ ವಿಶ್ವಕ್ಸೇನನಾದ ಕೃಷ್ಣನು ಸಾರಥಿಯಾಗಿದ್ದಾನೆಯೋ, ಅರ್ಜುನನು ಯೋಧನಾಗಿದ್ದಾನೆಯೋ ಅಂತಹ ರಥವು ಇಂದ್ರಸಹಿತರಾದ ದೇವತೆಗಳಿಂದಲೂ ಜಯಿಸಲು ಅಸಾಧ್ಯವಾದುದು ಎಂದು ತಿಳಿಯುತ್ತೇನೆ.
ಸುಕುಮಾರೋ ಯುವಾ ಶೂರೋ ದರ್ಶನೀಯಶ್ಚ ಪಾಂಡವಃ |
ಮೇಧಾವೀ ನಿಪುಣೋ ಧೀಮಾನ್ ಯುಧಿ ಸತ್ಯಪರಾಕ್ರಮಃ ॥ 28 ॥
ತಂ ರಥಾನಾಂ ರಥಂ ವೀರಂ ಸದಾ ಯುದ್ಧೇಷು ದುರ್ಜಯಮ್ |
ಆರಾವಂ ವಿಪುಲಂ ಕುರ್ವನ್ ವಿಧಮನ್ ಸರ್ವಸೈನಿಕಾನ್ |
ನಕುಲಂ ಪಾಂಡವಶ್ರೇಷ್ಠಂ ಕೇ ವೀರಾಃ ಪರ್ಯವಾರಯನ್ ॥ 29 ॥
ನಕುಲನು ಯುವಕನಾದವನು, ಸುಕುಮಾರ, ಶೂರ, ಸುಂದರ, ಮೇಧಾವಿ, ಕುಶಲ ಮತ್ತು ಯುದ್ಧದಲ್ಲಿ ಸತ್ಯಪರಾಕ್ರಮವುಳ್ಳವನು. ಅಂತಹ ಯುದ್ಧದಲ್ಲಿ ದುರ್ಜಯನಾದ, ವೀರನಾದ, ಪಾಂಡವಶ್ರೇಷ್ಠನಾದ ನಕುಲನು ರಥಗಳ ಮಧ್ಯದಲ್ಲಿ ಸಂಚರಿಸುತ್ತಾ, ಎಲ್ಲ ಸೈನಿಕರನ್ನು ನಾಶಪಡಿಸುತ್ತಾ, ವಿಪುಲವಾದ ಸಿಂಹನಾದವನ್ನು ಮಾಡುತ್ತಿರುವಾಗ ಯಾವ ವೀರರು ಅವರನ್ನು ತಡೆದರು?
ಆಶೀವಿಷ ಇವ ಕ್ರುದ್ಧಃ ಸಹದೇವೋ ಯದಾಭ್ಯಯಾತ್ |
ಅಮೋಘಬಾಣಃ ಸಿದ್ಧೇಷುಃ ಶತ್ರುಭಿರ್ಯುಧಿ ದುರ್ಜಯಃ ॥ 30 ॥
ಆರಾವಂ ತುಮುಲಂ ಕುರ್ವನ್ ವ್ಯಥಯನ್ ಭೈರವಾನ್ ರಣೇ |
ಕದನಂ ಕರಿಷ್ಯಂಚ್ಛತ್ರೂಣಾಂ ಜೇತಾಸೀದ್ ದುರ್ಜಯೋ ಯುಧಿ |
ಆರ್ಯವ್ರತಮಮೋಘೇಷುಂ ಹ್ರೀಮಂತಮಪರಾಜಿತಮ್ |
ಯದಾಭ್ಯಯಾತ್ ತದಾ ದ್ರೋಣಂ ಕೇ ಶೂರಾಃ ಪರ್ಯವಾರಯನ್ ॥31॥
ದೃಷ್ಟಿ ವಿಷವುಳ್ಳ ಸರ್ಪದಂತೆ ಕ್ರುದ್ಧನಾದ, ಅಮೋಘವಾದ ಬಾಣವುಳ್ಳ, ಗುರಿ ತಪ್ಪದ ಬಾಣಗಳನ್ನು ಹೊಂದಿದ, ಯುದ್ಧದಲ್ಲಿ ಶತ್ರುಗಳಿಂದ ದುರ್ಜಯನಾದ ಯಾವ ಸಹದೇವನು ಯಾವಾಗ ತೀವ್ರವಾದ ಮತ್ತು ಭಯಂಕರವಾದ ಸಿಂಹನಾದವನ್ನು ಮಾಡುತ್ತಾ, ಶತ್ರುಗಳಿಗೆ ವ್ಯಥೆಯನ್ನು ಉಂಟುಮಾಡಿ, ಯುದ್ಧವನ್ನು ಮಾಡುತ್ತಾ ಶತ್ರುಗಳನ್ನು ಜಯಿಸಿದನೋ ಅಂತಹ ಆರ್ಯವ್ರತವುಳ್ಳ, ವ್ಯರ್ಥವಲ್ಲದ ಬಾಣವುಳ್ಳ, ನಾಚಿಕೆಯುಳ್ಳ, ಅಪರಾಜಿತನಾದ ಅವನು ದ್ರೋಣರ ಕಡೆಗೆ ಬಂದಾಗ ಯಾವ ಶೂರರು ಅವನನ್ನು ತಡೆದರು?
ಯಃ ಸ ಸೌವೀರರಾಜಸ್ಯ ಪ್ರಮಥ್ಯ ಮಹತೀಂ ಚಮೂಮ್ |
ಆದತ್ತ ಮಹಿಷೀಂ ಭೋಜ್ಯಾಂ ಕಾಮ್ಯಾಂ ಸರ್ವಾಂಗಶೋಭನಾಮ್ ॥32॥
ಸತ್ಯಂ ಧೃತಿಶ್ಚ ಶೌರ್ಯಂ ಚ ಬ್ರಹ್ಮಚರ್ಯಂ ಚ ಕೇವಲಮ್ |
ಸರ್ವಾಣಿ ಯುಯುಧಾನೇಽಸ್ಮಿನ್ ನಿತ್ಯಾನಿ ಪುರುಷರ್ಷಭೇ ॥ 33 ॥

ಬಲಿನಂ ಸತ್ಯಕರ್ಮಾಣಮ್ ಅದೀನಮಪರಾಜಿತಮ್ |
ವಾಸುದೇವಸಮಂ ಯುದ್ಧೇ ವಾಸುದೇವಾದನಂತರಮ್ |
ಧನಂಜಯೋಪದೇಶೇನ ಶ್ರೇಷ್ಠಮಿಷ್ವಸ್ತ್ರಕರ್ಮಣಿ ॥ 34 ॥
ಯುಕ್ತಂ ಧನಂಜಯಹಿತೇ ಮಮಾನರ್ಥಾಯ ಕಲ್ಪಿತಮ್ |
ಪಾರ್ಥೇನ ಸಮಮಸ್ತ್ರೇಷು ಕಸ್ತಂ ದ್ರೋಣಾದವಾರಯತ್ ॥ 35 ॥
ಯಾವನು ಸೌವೀರರಾಜನ ದೊಡ್ಡ ಸೈನ್ಯವನ್ನು ನಾಶಗೊಳಿಸಿ, ಎಲ್ಲರಿಂದಲೂ ಅಪೇಕ್ಷಿತವಾದ, ಸರ್ವಾಂಗ ಸುಂದರಿಯಾದ ಕನ್ಯೆಯನ್ನು ಸ್ವೀಕರಿಸಿದನೋ, ಯಾವ ಪುರುಷಶ್ರೇಷ್ಠನಲ್ಲಿ ಧೈರ್ಯವೂ, ಶೌರ್ಯವೂ, ಶುದ್ಧವಾದ ಬ್ರಹ್ಮಚರ್ಯವೂ ಎಲ್ಲವೂ ಯಾವಾಗಲೂ ಇವೆಯೋ, ಅಂತಹ ಬಲಿಷ್ಠನಾದ, ಸತ್ಯಕರ್ಮನಾದ, ದೈನ್ಯವನ್ನು ಹೊಂದದ, ಪರಾಜಯವನ್ನು ಹೊಂದದ, ಯುದ್ಧದಲ್ಲಿ ಕೃಷ್ಣನಿಗೆ ಸಮನಾದ, ಕೃಷ್ಣನ ಅನಂತರದವನಾದ, ಅರ್ಜುನನ ಉಪದೇಶದಿಂದ ಶಸತ್ರಸ್ತ್ರ ಕರ್ಮಗಳಲ್ಲಿ ಶ್ರೇಷ್ಠನಾದ, ಧನಂಜಯನ ಹಿತದಲ್ಲೇ ನಿರತನಾದ, ನನ್ನ ಅನರ್ಥಕ್ಕಾಗಿ ಸೃಷ್ಟಿಸಲ್ಪಟ್ಟ, ಅಸ್ತ್ರಗಳಲ್ಲಿ ಅರ್ಜುನನಿಗೆ ಸಮನಾದ ಸಾತ್ಯಕಿಯನ್ನು ಯಾರು ದ್ರೋಣರಿಂದ ತಡೆದರು?
ವೃಷ್ಣೀನಾಂ ಪ್ರವರಂ ವೀರಂ ಶೂರಂ ಸರ್ವಧನುಷ್ಮತಾಮ್ |
ರಾಮೇಣ ಸಮಮಸ್ತ್ರೇಷು ಕಸ್ತಂ ದ್ರೋಣಾದವಾರಯತ್ ॥ 36 ॥
ಸರ್ವಧನುರ್ಧಾರಿಗಳಲ್ಲಿ ಶೂರನಾದ, ವೀರನಾದ, ವೃಷ್ಣಿಶ್ರೇಷ್ಠನಾದ, ಅಸ್ತ್ರಗಳಲ್ಲಿ ಪರಶುರಾಮರಿಗೆ ಸಮನಾದ ಅವನನ್ನು ಯಾರು ದ್ರೋಣರಿಂದ ತಡೆದರು?
ಸತ್ಯಂ ಧೃತಿಶ್ಚ ಶೌರ್ಯಂ ಚ ಬ್ರಹ್ಮಚರ್ಯಮನುತ್ತಮಮ್ |
ಯಸ್ಮಿನ್ ನಿತ್ಯಾನಿ ಸಂತಿ ಸ್ಮ ವೀರೇ ಸತ್ಯಪರಾಕ್ರಮೇ ॥ 37 ॥
ತಮೇವಂ ಗುಣಸಂಪನ್ನಂ ದುರ್ವಾರಮಪಿ ದೈವತೈಃ |
ಸಮಾಸಾದ್ಯ ಮಹೇಷ್ವಾಸಂ ಕೇ ವೀರಾಃ ಪರ್ಯವಾರಯನ್ ॥ 38 ॥
ಸತ್ಯ, ಧೈರ್ಯ, ಶೌರ್ಯ, ಶ್ರೇಷ್ಠವಾದ ಬ್ರಹ್ಮಚರ್ಯ ಇವುಗಳು ಸತ್ಯಪರಾಕ್ರಮವುಳ್ಳ ಯಾವ ವೀರನಲ್ಲಿ ಇವೆಯೋ ಅಂತಹ ಗುಣಸಂಪನ್ನನಾದ, ದೇವತೆಗಳಿಂದಲೂ ದುರ್ವಾರನಾದ, ಮಹಾಧನುರ್ಧಾರಿಯಾದ ಸಾತ್ಯಕಿಯನ್ನು ಸಮೀಪಿಸಿ ಯಾವ ವೀರರು ಅವನನ್ನು ತಡೆದರು?
ಪಾಂಚಾಲೇಷೂತ್ತಮಂ ವೀರಮುತ್ತಮಾಭಿಜನಪ್ರಿಯಮ್ |
ನಿತ್ಯಮುತ್ತಮಕರ್ಮಾಣಮುತ್ತಮೌಜಸಮಾಹವೇ ॥39॥
ಯುಕ್ತಂ ಧನಂಜಯಹಿತೇ ಮಮಾನರ್ಥಾರ್ಥಮುತ್ಥಿತಮ್ |
ಯಮವೈಶ್ರವಣಾದಿತ್ಯಮಹೇಂದ್ರವರುಣೋಪಮಮ್ ॥40॥
ಮಹಾರಥಂ ಸಮಾಖ್ಯಾತಂ ದ್ರೋಣಾಯೋದ್ಯಂತಮಾಹವೇ |
ತ್ಯಜಂತಂ ತುಮುಲೇ ಪ್ರಾಣಾನ್ ಕೇ ಶೂರಾಃ ಸಮವಾರಯನ್ ॥41॥
ಪಾಂಚಾಲಯೋಧರಲ್ಲಿ ಉತ್ತಮನಾದ, ವೀರನಾದ, ಶ್ರೇಷ್ಠವಾದ ಕುಲದಲ್ಲಿ ಜನಿಸಿದವರಿಗೆ ಪ್ರಿಯನಾದ, ಯಾವಾಗಲೂ ಶ್ರೇಷ್ಠವಾದ ಕರ್ಮವನ್ನು ಮಾಡುವ, ಅರ್ಜುನನ ಹಿತದಲ್ಲಿಯೇ ರತನಾದ, ನನ್ನ ಅನರ್ಥಕ್ಕಾಗಿಯೇ ಸೃಷ್ಟಿಸಲ್ಪಟ್ಟ, ಯಮ-ಕುಬೇರ-ಸೂರ್ಯ-ಮಹೇಂದ್ರ-ವರುಣರಂತೆ ಇರುವ, ಮಹಾರಥನೆಂದು ಪರಿಗಣಿತನಾದ, ದ್ರೋಣರ ಮೇಲೆ ಎರಗುವ, ತೀವ್ರವಾದ ಯುದ್ಧದಲ್ಲಿ ಪ್ರಾಣಗಳನ್ನು ಬಿಡಲು ಸಿದ್ಧನಿರುವ ಉತ್ತಮೌಜನನ್ನು ಯುದ್ಧದಲ್ಲಿ ಯಾರು ನಿವಾರಿಸಿದರು?
ಏಕೋಽಪಸೃತ್ಯ ಚೇದಿಭ್ಯಃ ಪಾಂಡವಾನ್ ಯಃ ಸಮಾಶ್ರಿತಃ |
ಧೃಷ್ಟಕೇತುಂ ತಮಾಯಾಂತಂ ದ್ರೋಣಾತ್ ಕಃ ಸಮವಾರಯತ್ ॥42॥
ಯಾವ ಧೃಷ್ಟಕೇತುವೊಬ್ಬನೇ ಚೇದಿಗಳನ್ನು ಬಿಟ್ಟು ಬಂದು ಪಾಂಡವರನ್ನು ಆಶ್ರಯಿಸಿದನೋ ಅಂತಹ ಅವನು ದ್ರೋಣರ ಮೇಲೆ ಎರಗುವಾಗ ಅವನನ್ನು ಯಾವನು ತಡೆದನು?
ಯೋಽವಧೀತ್ ಕೇತುಮಾನ್ ವೀರೋ ರಾಜಪುತ್ರಂ ಸುದರ್ಶನಮ್ |
ಅಪರಾಂತೇ ಗಿರಿದ್ವಾರೇ ಕಸ್ತಂ ದ್ರೋಣಾದವಾರಯತ್ ॥ 43 ॥
ಯಾವ ಕೇತುಮಾನ್ ವೀರನು ಪಶ್ಚಿಮ ನದಿದ್ವಾರದಲ್ಲಿ ರಾಜಪುತ್ರನಾದ ಸುದರ್ಶನನನ್ನು ಕೊಂದನೋ ಅವನನ್ನು ಯಾವನು ದ್ರೋಣರಿಂದ ನಿವಾರಿಸಿದನು?
ಸ್ತ್ರೀಪುಂಸೋಃ ಪುರುಷವ್ಯಾಘ್ರಂ ಯಃ ಸ ವೇದ ಗುಣಾಗುಣಾನ್ |
ಶಿಖಂಡಿನಂ ಯಾಜ್ಞಸೇನಿಮಸ್ಯಂತಮಪರಾಜಿತಮ್ ॥ 44 ॥
ದೇವವ್ರತಸ್ಯ ಸಮರೇ ಹೇತುಂ ಮೃತ್ಯೋರ್ಮಹಾತ್ಮನಃ |
ದ್ರೋಣಾಯಾಭಿಮುಖಂ ಯಾಂತಂ ಕೇ ವೀರಾಃ ಪರ್ಯವಾರಯನ್॥
ಸ್ತ್ರೀ-ಪುರುಷ ಇಬ್ಬರ ಗುಣ-ದೋಷಗಳನ್ನು ತಿಳಿದ, ಪುರುಷ ವ್ಯಾಘ್ರನಾದ, ಅಪರಾಜಿತನಾದ, ಬಾಣಪ್ರಯೋಗವನ್ನು ಮಾಡುವ, ಯುದ್ಧದಲ್ಲಿ ಮಹಾತ್ಮರಾದ ಭೀಷ್ಮರ ಮೃತ್ಯುವಿಗೆ ಕಾರಣನಾದ, ಶಿಖಂಡಿಯು ದ್ರೋಣರಿಗೆ ಅಭಿಮುಖವಾಗಿ ಬರುವಾಗ ಅವನನ್ನು ಯಾವ ವೀರರು ತಡೆದರು?
ಯಸ್ಮಿನ್ನಭ್ಯಧಿಕಾ ವೀರೇ ಗುಣಾಃ ಸರ್ವೇ ಧನಂಜಯಾತ್ |
ಯಸ್ಮಿನ್ನಸತ್ರಾಣಿ ದಿವ್ಯಾನಿ ಬ್ರಹ್ಮಚರ್ಯಂ ಚ ನಿತ್ಯಶಃ ॥ 46 ॥
ವಾಸುದೇವಸಮಂ ವೀರ್ಯೇ ಧನಂಜಯಸಮಂ ಬಲೇ |

ತೇಜಸಾಽಽದಿತ್ಯಸದೃಶಂ ಬೃಹಸ್ಪತಿಸಮಂ ಮತೌ ॥ 47 ॥
ಅಭಿಮನ್ಯುಂ ಮಹಾತ್ಮಾನಂ ವ್ಯಾತ್ತಾನನಮಿವಾಂತಕಮ್ ।
ದ್ರೋಣಾಯಾಭಿಮುಖಂ ಯಾಂತಂ ಕೇ ವೀರಾಃ ಪರ್ಯವಾರಯನ್ ॥
ಯಾವ ವೀರನಲ್ಲಿ ಅರ್ಜುನನಿಗಿಂತ ಎಲ್ಲ ಗುಣಗಳೂ ಅಧಿಕವಾಗಿವೆಯೋ, ಯಾವನಲ್ಲಿ ದಿವ್ಯವಾದ ಅಸ್ತ್ರಗಳು ಮತ್ತು ಬ್ರಹ್ಮಚರ್ಯವು ಯುಕ್ತವಾಗಿವೆಯೋ ಅಂತಹ ಪರಾಕ್ರಮದಲ್ಲಿ ಕೃಷ್ಣನಿಗೆ ಸಮನಾದ, ಬಲದಲ್ಲಿ ಅರ್ಜುನನಿಗೆ ಸಮನಾದ, ತೇಜಸ್ಸಿನಲ್ಲಿ ಸೂರ್ಯನಿಗೆ ಸದೃಶನಾದ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮನಾದ, ಮಹಾತ್ಮನಾದ ಅಭಿಮನ್ಯುವು ಬಾಯ್ತೆರೆದ ಮೃತ್ಯುವಿನಂತೆ ದ್ರೋಣರಿಗೆ ಅಭಿಮುಖವಾಗಿ ಹೋಗುವಾಗ ಯಾವ ವೀರರು ಅವನನ್ನು ತಡೆದರು?
ತರುಣಸ್ತರಣಿಪ್ರಖ್ಯಃ ಸೌಭದ್ರಃ ಪರವೀರಹಾ ಯದಾಽಭ್ಯಯಾತ್ ।
ಸ ತಂ ದ್ರೋಣಂ ತದಾಽಽಸೀದ್ ವೋ ಮನಃ ಕಥಮ್ ॥49॥
ಪರವೀರಘಾತಕನೂ, ತರುಣನೂ, ಸೂರ್ಯನಂತಿರುವವನೂ ಆದ ಅಭಿಮನ್ಯುವು ದ್ರೋಣರನ್ನು ಕುರಿತು ಬಂದಾಗ ನಿಮ್ಮ ಮನಸ್ಸು ಹೇಗಿದ್ದಿತು?
ದ್ರೌಪದೇಯಾ ನರವ್ಯಾಘ್ರಾಃ ಸಮುದ್ರಮಿವ ಸಿಂಧವಃ ।
ಯದ್ ದ್ರೋಣಮಾದ್ರವನ್ ಸಂಖ್ಯೇ ಕೇ ವೀರಾಸ್ತಾನವಾರಯನ್ ॥
ನದಿಗಳು ಸಮುದ್ರಕ್ಕೆ ಬಂದು ಸೇರಿದಂತೆ ನರವ್ಯಾಘ್ರರಾದ ದ್ರೌಪದಿಯ ಐವರು ಪುತ್ರರು ಯುದ್ಧದಲ್ಲಿ ದ್ರೋಣರ ಮೇಲೆ ಓಡಿಬಂದಾಗ ಯಾವ ವೀರರು ಅವರನ್ನು ತಡೆದರು?
ಯೇ ತೇ ದ್ವಾದಶ ವರ್ಷಾಣಿ ಕ್ರೀಡಾಮುತ್ಸ ೃಜ್ಯ ಬಾಲಕಾಃ ।
ಅಸತ್ತರ್ಥಮವಸನ್ ಭೀಷ್ಮೇ ಬಿಭ್ರತೋ ವ್ರತಮುತ್ತಮಮ್ ॥ 51 ॥
ಕ್ಷತ್ರಂಜಯಃ ಕ್ಷತ್ರದೇವಃ ಕ್ಷತ್ರಧರ್ಮಾ ಚ ಮಾನಿನಃ ।
ಧೃಷ್ಟದ್ಯುಮ್ನಾತ್ಮಜಾನ್ ವೀರಾನ್ ಕಸ್ತಾನ್ ದ್ರೋಣಾದವಾರಯತ್ ॥
ಧೃಷ್ಟದ್ಯುಮ್ನನ ಪುತ್ರರಾದ, ವೀರರಾದ, ಅಭಿಮಾನಿಗಳಾದ ಬಾಲಕರಾದ ಕ್ಷತ್ರಂಜಯ, ಕ್ಷತ್ರದೇವ ಮತ್ತು ಶತ್ರಧರ್ಮರು ಆಟವಾಡುವುದನ್ನು ಬಿಟ್ಟು ಹನ್ನೆರಡು ವರ್ಷಗಳ ಕಾಲ ಶ್ರೇಷ್ಠವಾದ ವ್ರತವನ್ನು ಧರಿಸಿ, ಭೀಷ್ಮರಲ್ಲಿ ಅಸ್ತ್ರವಿದ್ಯೆಗಾಗಿ ವಾಸವನ್ನು ಮಾಡಿದರೋ ಅಂತಹ ವೀರರನ್ನು ಯಾವನು ದ್ರೋಣರಿಂದ ತಡೆದನು?
ಯಸ್ಮಾದ್ ವಿಶಿಷ್ಟಂ ಯಂ ಯುದ್ಧೇ ನ ಚಾಮನ್ಯಂತ ವೃಷ್ಣಯಃ ।
ಚೇಕಿತಾನಂ ಮಹೇಷ್ವಾಸಂ ಕಸ್ತಂ ದ್ರೋಣಾದವಾರಯತ್ ॥ 53 ॥
ಯಾವ ಚೇಕಿತಾನನನ್ನು ವೃಷ್ಣಿಗಳು ಯುದ್ಧದಲ್ಲಿ ಅವನಿಗಿಂತ ಶ್ರೇಷ್ಠನಾದವನು ಇಲ್ಲ ಎಂದು ತಿಳಿದರೋ ಅಂತಹ ಮಹಾಧನುರ್ಧಾರಿಯಾದ ಅವನನ್ನು ಯಾವನು ದ್ರೋಣರಿಂದ ತಡೆದನು?
ವಾರ್ಧಕ್ಷೇಮಿಃ ಕಳಿಂಗಾನಾಂ ಯಃ ಕನ್ಯಾಮಾಹರದ್ ಯುಧಿ ।
ಅನಾಧೃಷ್ಟಿರದೀನಾತ್ಮಾ ಕಸ್ತಂ ದ್ರೋಣಾದವಾರಯತ್ ॥ 54 ॥
ವೃದ್ಧಕ್ಷೇಮನ ಪುತ್ರನಾದ ಅನಾಧೃಷ್ಟಿಯು ಕಳಿಂಗ ರಾಜಕುಮಾರಿಯನ್ನು ಯುದ್ಧದಲ್ಲಿ ಕರೆದುಕೊಂಡು ಬಂದನು. ಅಂತಹ ಅಧೀನನಾದ ಅವನನ್ನು ಯಾವನು ದ್ರೋಣರಿಂದ ತಡೆದನು?
ಕೈಕಯಾ ಭ್ರಾತರಃ ಪಂಚ ಧಾರ್ಮಿಕಾಃ ಸತ್ಯವಿಕ್ರಮಾಃ ।
ಇಂದ್ರಗೋಪಕವರ್ಣಾಶ್ಚ ರಕ್ತವರ್ಣಾಯುಧಧ್ವಜಾಃ ॥ 55 ॥
ಮಾತೃಷ್ವಸೃಸುತಾ ವೀರಾಃ ಪಾಂಡವಾನಾಂ ಜಯಾರ್ಥಿನಃ ।
ತಾನ್ ದ್ರೋಣಂ ಹಂತುಮಾಯಾತಾನ್ ಕೇ ವೀರಾಃ ಪರ್ಯವಾರಯನ್ ॥
ಕೇಕಯ ದೇಶದ ಐವರು ಸಹೋದರರು ಧಾರ್ಮಿಕರು, ಸತ್ಯವಾದ ಪರಾಕ್ರಮವುಳ್ಳವರು, ಇಂದ್ರಗೋಪದಂತೆ ಅರುಣವರ್ಣೋಪೇತರು, ರಕ್ತವರ್ಣದ ಆಯುಧವನ್ನು ಮತ್ತು ಧ್ವಜವನ್ನು ಧರಿಸಿದವರು. ಪಾಂಡವರ ಚಿಕ್ಕಮ್ಮನ ಮಕ್ಕಳಾದ ಜಯಾರ್ಥಿಗಳಾದ ಆ ವೀರರು ದ್ರೋಣರನ್ನು ಕೊಲ್ಲಲು ಬಂದಾಗ ಅವರನ್ನು ಯಾವ ವೀರರು ತಡೆದರು?
ಯಂ ಯೋಧಯಂತೋ ರಾಜಾನೋ ನಾಜಯನ್ ವಾರಣಾವತೇ ।
ಷಣ್ಮಾಸಾನಭಿಸಂರಬ್ಧಾ ಜಿಘಾಂಸಂತೋ ಯುಧಾಂಪತಿಮ್ ॥ 57 ॥
ಧನುಷ್ಮತಾಂ ವರಂ ವೀರಂ ಸತ್ಯಸಂಧಂ ಮಹಾಬಲಮ್ ।
ದ್ರೋಣಾತ್ ಕಸ್ತಂ ನರವ್ಯಾಘ್ರಂ ಯುಯುತ್ಸುಂ ಸಮವಾರಯತ್ ॥
ಯಾವ ಯುದ್ಧಶ್ರೇಷ್ಠನಾದ ಯುಯುತ್ಸುವನ್ನು ಕೊಲ್ಲಲು ಬಯಸಿ ವಾರಣಾವತದಲ್ಲಿ ರಾಜರು ಆರು ತಿಂಗಳುಗಳ ಕಾಲ ಕೋಪದಿಂದ ಯುದ್ಧ ಮಾಡಿದರೂ ಜಯಿಸಲಿಲ್ಲವೋ ಅಂತಹ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ, ವೀರನಾದ, ಸತ್ಯಸಂಧನಾದ, ಮಹಾಬಲನಾದ, ನರವ್ಯಾಘ್ರನಾದ ಯುಯುತ್ಸುವನ್ನು ಯಾವನು ದ್ರೋಣರಿಂದ ತಡೆದನು?
ಯಃ ಪುತ್ರಂ ಕಾಶಿರಾಜಸ್ಯ ವಾರಾಣಸ್ಯಾಂ ಮಹಾರಥಮ್ ।
ಸಮರೇ ಸ್ತ್ರೀಷು ಗೃಧ್ಯಂತಂ ಭಲ್ಲೇನಾಪಾಹರದ್ ರಥಾತ್ ॥ 59 ॥
ಧೃಷ್ಟದ್ಯುಮ್ನಂ ಮಹೇಷ್ವಾಸಂ ಪಾರ್ಥಾನಾಂ ಮಂತ್ರಧಾರಿಣಮ್ ।
ಯುಕ್ತಂ ದುರ್ಯೋಧನಾನರ್ಥೇ ಸೃಷ್ಟಂ ದ್ರೋಣವಧಾಯ ಚ ॥ 60 ॥
ನಿರ್ದಹಂತಂ ರಣೇ ಯೋಧಾನ್ ವಾರಯಂತಂ ಚ ಸರ್ವಶಃ ।
ದ್ರೋಣಾಯಾಭಿಮುಖಂ ಯಾಂತಂ ಕೇ ವೀರಾಃ ಪರ್ಯವಾರಯನ್ ॥

ಯಾವ ಧೃಷ್ಟದ್ಯುಮ್ನನು ವಾರಣಾಸಿಯಲ್ಲಿ ಕನ್ಯೆಯರಲ್ಲಿ ಆಸೆ ಪಡುವ ಕಾಶಿರಾಜನ ಶಿರಸ್ಸನ್ನು ಭಲ್ಲದಿಂದ ರಥದಿಂದ ಕೆಳಗೆ ಕೆಡವಿದನೋ ಅಂತಹ ಮಹಾಧನುರ್ಧಾರಿಯಾದ, ಪಾಂಡವರ ಮಂತ್ರಿಯಾದ, ದುರ್ಯೋಧನನ ಅನರ್ಥದಲ್ಲಿ ನಿರತನಾದ, ದ್ರೋಣರ ವಧೆಗಾಗಿಯೇ ಸೃಷ್ಟಿಯಾದ, ರಣರಂಗದಲ್ಲಿ ನಮ್ಮ ಯೋಧರನ್ನು ದಹಿಸುವ ಮತ್ತು ಎಲ್ಲ ಕಡೆಯಲ್ಲಿಯೂ ನಿವಾರಿಸುವ ಅಂತಹ ಧೃಷ್ಟದ್ಯುಮ್ನನು ದ್ರೋಣರಿಗೆ ಅಭಿಮುಖವಾಗಿ ಹೋಗುವಾಗ ಯಾವ ವೀರರು ಅವನನ್ನು ತಡೆದರು?

ಉತ್ಸಂಗ ಇವ ಸಂವೃದ್ಧಂ ದ್ರುಪದಸ್ಯಾಸ್ತ್ರವಿತ್ತಮಮ್ |
ಶೈಖಂಡಿನಂ ಕ್ಷತ್ರಗುಪ್ತಂ ಕೇ ತು ದ್ರೋಣಾದವಾರಯನ್ ॥ 62 ॥

ತೊಡೆಯ ಮೇಲೆ ಇಟ್ಟುಕೊಂಡು ಬೆಳೆಸಿದ, ದ್ರುಪದ ಪುತ್ರನಾದ, ಅಸ್ತ್ರವೇತ್ತರಲ್ಲಿ ಶ್ರೇಷ್ಠನಾದ, ಕ್ಷತ್ರಿಯರಿಂದ ರಕ್ಷಿತನಾದ ಶಿಖಂಡಿಯನ್ನು ಯಾರು ದ್ರೋಣರಿಂದ ನಿವಾರಿಸಿದರು?

ಯ ಇಮಾಂ ಪೃಥಿವೀಂ ಕೃತ್ಸ್ನಾಂ ಚರ್ಮವತ್ ಸಮವೇಷ್ಟಯನ್ |
ಮಹತಾ ರಥವಂಶೇನ ಮುಖ್ಯಾರಿಘ್ನೋ ಮಹಾರಥಃ ॥ 63 ॥
ದಶಾಶ್ವಮೇಧಾನಾಜಹ್ರೇ ಸ್ವನ್ನಪಾನಾನ್ ಸ್ವದಕ್ಷಿಣಾನ್ |
ನಿರರ್ಗಲಾನ್ ಸರ್ವಮೇಧಾನ್ ಪುತ್ರವತ್ ಪಾಲಯನ್ ಪ್ರಜಾಃ ॥
ಗಂಗಾಸ್ರೋತಸ್ಸು ಯಾವತ್ಯಃ ಸಿಕತಾ ಅಪ್ಯಶೇಷತಃ |
ತಾವತೀರ್ಗಾ ದದೌ ವೀರ ಉಶೀನರಸುತೋಽಧ್ವರೇ ॥ 65 ॥

ಯಾವ ಮಹಾರಥನು ರಥ ಸಮೂಹದಿಂದ ಶ್ರೇಷ್ಠನಾದ ಶತ್ರುವನ್ನು ಕೊಂದು ಸಮಗ್ರವಾದ ಭೂಮಿಯನ್ನು ಚರ್ಮದಂತೆ ಸುತ್ತಿದನೋ, ಒಳ್ಳೆಯ ಅನ್ನಪಾನಗಳನ್ನು, ದಕ್ಷಿಣೆಗಳನ್ನು ಹೊಂದಿದ ಹತ್ತು ಅಶ್ವಮೇಧ ಯಾಗಗಳನ್ನು ಮತ್ತು ನಿರ್ದುಷ್ಟವಾದ ಎಲ್ಲ ಯಾಗಗಳನ್ನೂ ಮಾಡಿದನೋ, ಪ್ರಜೆಗಳನ್ನು ಪುತ್ರರಂತೆ ರಕ್ಷಿಸಿದನೋ, ಯಾವನು ಗಂಗೆಯ ದಡದ ಮರಳಿನ ಸಂಖ್ಯೆಯಷ್ಟು ಗೋವುಗಳನ್ನು ಯಜ್ಞಗಳಲ್ಲಿ ದಾನ ಮಾಡಿದನೋ ಅಂತಹ ಔಶೀನರ ಸುತನಾದ ಶಿಬಿಯು;

ನ ಪೂರ್ವೇ ನಾಪರೇ ಚಕ್ರುರಿದಂ ಕೇಚನ ಮಾನವಾಃ |
ಇತಿ ಸಂಚುಕ್ರುಶುರ್ದೇವಾಃ ಕೃತೇ ಕರ್ಮಣಿ ದುಷ್ಕರೇ ॥ 66 ॥

ಯಾವನ ವಿಷಯದಲ್ಲಿ ಅವನ ದುಷ್ಕರವಾದ ಕರ್ಮಗಳನ್ನು ಮಾಡಿದುದನ್ನು ನೋಡಿ ದೇವತೆಗಳು ಹಿಂದೆ ಬಂದ ಅಥವಾ ಮುಂದೆ ಬರುವ ಯಾರೇ ಮಾನವರು ಈ ಕಾರ್ಯವನ್ನು ಮಾಡಲಾರರು ಎಂದು ಕಿರುಚಿದರೋ;

ಪಶ್ಯಾಮಸ್ತ್ರಿಷು ಲೋಕೇಷು ನಚ ಸ್ಥಾಸ್ನು ಚರಿಷ್ಣು ಚ |
ಜಾತಂ ವಾಪಿ ಜನಿಷ್ಯದ್ ವಾ ನಚ ಸಂಪ್ರತಿ ವರ್ತತೇ |
ಅನ್ಯಮೌಶೀನರಾಚ್ಛೈಬ್ಯಾದ್ ಧುರೋ ವೋಢಾರಮಿತ್ಯುತ ॥ 67 ॥
ಗತಿಂ ಯಸ್ಯ ನ ಯಾಸ್ಯಂತಿ ಮನುಷ್ಯಾ ಲೋಕವಾಸಿನಃ |
ತಸ್ಯ ನಪ್ತಾರಮಾಯಾಂತಂ ಶೈಬ್ಯಂ ಕಃ ಸಮವಾರಯತ್ ॥ 68 ॥

ಮೂರುಲೋಕಗಳಲ್ಲಿ ನೋಡಿದರೂ ಹಿಂದೆ ಜನಿಸಿದ, ಮುಂದೆ ಜನಿಸುವ ಮತ್ತು ಈಗ ಇರುವ ಯಾವ ಸ್ಥಾವರ-ಜಂಗಮ ಪ್ರಾಣಿಗಳಲ್ಲಿ ಔಶೀನರನಾದ ಶಿಬಿಗಿಂತಲೂ ಹೆಚ್ಚು ಭಾರವನ್ನು ಹೊರುವವನು ಮೂರುಲೋಕಗಳಲ್ಲಿ ಕಾಣುವುದಿಲ್ಲ ಎಂದು (ದೇವತೆಗಳು) ಕಿರುಚಿದರೋ, ಯಾವನ ಮಾರ್ಗವನ್ನು ಲೋಕವಾಸಿಗಳಾದ ಮನುಷ್ಯರು ಅನುಸರಿಸಲು ಸಾಧ್ಯವಿಲ್ಲವೋ, ಅಂತಹ ಶಿಬಿಯ ಮೊಮ್ಮಗನಾದ ಶೈಬ್ಯನನ್ನು ಯಾರು ನಿವಾರಿಸಿದರು?

ದ್ರೋಣಾಯಾಭಿಮುಖಂ ಯಾಂತಂ ವ್ಯಾತ್ತಾನನಮಿವಾಂತಕಮ್ |
ವಿರಾಟಸ್ಯ ರಥಾನೀಕಂ ಮಾತ್ಸ್ಯಸ್ಯಾಮಿತ್ರಘಾತಿನಃ ॥ 69 ॥

ಬಾಯ್ದೆರೆದ ಯಮನಂತೆ ದ್ರೋಣರಿಗೆ ಅಭಿಮುಖವಾಗಿ ಬರುವ, ಶತ್ರುಘಾತಿಯಾದ, ಮತ್ಸ್ಯರಾಜನಾದ ವಿರಾಟನ ದ್ರೋಣರ ಸಮೀಪಕ್ಕೆ ಬರಲು ಯತ್ನಿಸುವ ರಥಸಮೂಹವನ್ನು ಯಾವ ವೀರರು ತಡೆದರು?

ಪ್ರೇಪ್ಸಂತಂ ಸಮರೇ ದ್ರೋಣಂ ಕೇ ವೀರಾಃ ಪರ್ಯವಾರಯನ್ ॥70॥
ಸದ್ಯೋ ವೃಕೋದರಾಜ್ಜಾತೋ ಮಹಾಬಲಪರಾಕ್ರಮಃ |
ಮಾಯಾವೀ ರಾಕ್ಷಸೋ ಘೋರೋ ಯಸ್ಮಾನ್ಮಮ ಮಹದ್ ಭಯಮ್ ॥
ಪಾರ್ಥಾನಾಂ ಜಯಕಾಮಂ ತಂ ಪುತ್ರಾಣಾಂ ಮಮ ಕಂಟಕಮ್ |
ಘಟೋತ್ಕಚಂ ಮಹಾಕಾಯಂ ಕಸ್ತಂ ದ್ರೋಣಾದವಾರಯತ್ |
ತಂ ರಥಾನಾಂ ರಥಂ ವೀರಂ ಹೈಡಿಂಬಂ ಕೋ ನ್ಯವಾರಯತ್ ॥72॥

ಮಹಾಪರಾಕ್ರಮವುಳ್ಳ ರಾಕ್ಷಸನಾದ ಮತ್ತು ಮಾಯಾವಿಯಾದ, ವೃಕೋದರನಿಂದ ತಕ್ಷಣದಲ್ಲಿಯೇ ಜನಿಸಿದ ಘೋರನಾದ ಯಾವ ಘಟೋತ್ಕಚನು ನನ್ನ ದೊಡ್ಡ ಭಯಕ್ಕೆ ಕಾರಣನಾಗಿದ್ದಾನೆಯೋ, ಪಾಂಡವರ ಜಯವನ್ನು ಬಯಸುವ ನನ್ನ ಪುತ್ರರಿಗೆ ಕಂಟಕಪ್ರಾಯನಾಗಿರುವ, ಮಹಾಕಾಯನಾದ ಅಂತಹ ಘಟೋತ್ಕಚನನ್ನು ಯಾವನು ದ್ರೋಣರಿಂದ ನಿವಾರಿಸಿದನು? ರಥಗಳ ಮಧ್ಯದಲ್ಲಿ ಸಂಚರಿಸುವ ವೀರನೂ, ಹಿಂಡಿಬಿಯ ಪುತ್ರನೂ ಆದ ಅವನನ್ನು ಯಾವನು ನಿವಾರಿಸಿದನು?

ಪಿತುಃ ಸ್ಮ ಮಾತುಃ ಪಿತರಂ ವಾಸುದೇವಂ ದ್ವಿಜಾತಯಃ |
ಸ ಏಷ ನಿಯತಃ ಕೃಷ್ಣ ಆಪದರ್ಥಂ ಧನಂಜಯೇ ॥ 73 ॥

ವಾಸುದೇವನನ್ನು ಅವನು ನಾರಾಯಣನ ಅವತಾರವಾದ ಕಾರಣದಿಂದ ತಂದೆಯಾದ ವಸುದೇವನಿಗೂ, ತಾಯಿಯಾದ ದೇವಕಿಗೂ ತಂದೆ ಎಂದು ಬ್ರಾಹ್ಮಣರು ಹೇಳುತ್ತಾರೆ. ಅಂತಹ ಈ ಕೃಷ್ಣನು ಅರ್ಜುನನ ಆಪತ್ತನ್ನು ಪರಿಹಾರ ಮಾಡುವುದರಲ್ಲಿ ದೀಕ್ಷಿತನಾಗಿದ್ದಾನೆ.

ಸನ್ನಹ್ಯತೇ ಯಥಾSನರ್ಥೇ ಧಾರ್ತರಾಷ್ಟ್ರಸ್ಯ ಸಂಜಯ |
ಸ್ತ್ರಾತಾರಂ ನಾಧಿಗಚ್ಛಾಮಿ ಪ್ರತ್ಯನೀಕೇ ಮಹೌಜಸಿ ॥ 74 ॥
ಎಲೈ ಸಂಜಯನೇ, ಧೃತರಾಷ್ಟ್ರನಿಗೆ ಇಂತಹ ಅನರ್ಥವು ಗಂಟುಬೀಳುತ್ತಿರುವಾಗ, ಶತ್ರುಗಳ ಸೈನ್ಯವು ಮಹಾಸಾಮರ್ಥ್ಯದಿಂದ ಕೂಡಿರುವಾಗ, ಅವರ ಎದುರಿಗೆ ನಿಲ್ಲುವ ಯಾವನನ್ನೂ ನಾನು ಕಾಣುತ್ತಿಲ್ಲ.
ಸಂಕರ್ಷಣಗದೌ ಚೋಭೌ ಪ್ರದ್ಯುಮ್ನೋSಥ ವಿಡೂರಥಃ |
ಆಶಾಪ್ಲವಶ್ಚ ಸಾಂಬಶ್ಚ ವೃಷ್ಣಿವೀರಾಃ ಪ್ರಹಾರಿಣಃ ॥ 75 ॥
ಏತೇ ವೈ ಸಹಿತಾಸ್ತತ್ರ ಪಾಂಡವಾರ್ಥೇ ಜಿಗೀಷವಃ |
ಕೇಶವೋ ಯತ್ರ ತತ್ರೈತೇ ಯತ್ರೈತೇ ತತ್ರ ಕೇಶವಃ ॥ 76 ॥
ಸಂಕರ್ಷಣ-ಗದಾ ಇವರಿಬ್ಬರೂ; ಪ್ರದ್ಯುಮ್ನ-ವಿಡೂರಥ, ಬಹಳ ಆಸೆಯುಳ್ಳ ಸಾಂಬ, ಪ್ರಹಾರಶೀಲರಾದ ವೃಷ್ಣಿವೀರರು ಇವರೆಲ್ಲರೂ ಪಾಂಡವರ ಸಲುವಾಗಿ ಜೊತೆಯಾಗಿ ಯುದ್ಧದಲ್ಲಿ ಗೆಲ್ಲಲು ಬಯಸುವವರು. ಕೃಷ್ಣನು ಎಲ್ಲಿದ್ದಾನೆಯೋ ಅಲ್ಲಿ ಇವರಿದ್ದಾರೆ. ಇವರು ಎಲ್ಲಿದ್ದಾರೆಯೋ ಅಲ್ಲಿ ಕೃಷ್ಣನಿದ್ದಾನೆ.
ಅರ್ಜುನಃ ಕೇಶವಸ್ಯಾತ್ಮಾ ಕೃಷ್ಣಶ್ಚಾತ್ಮಾ ಕಿರೀಟಿನಃ |
ಏತೇ ಚಾನ್ಯೇ ಚ ಬಹವೋ ಯೇಷಾಮರ್ಥಾಯ ಸಂಜಯ |
ತ್ಯಕ್ತಾರಃ ಸಂಯುಗೇ ಪ್ರಾಣಾನ್ ಕಿಂ ತೇಷಾಮಜಿತಂ ಯುಧಿ ॥ 77 ॥
ಅರ್ಜುನನು ಕೇಶವನಿಗೆ ಆತ್ಮನಂತೆ ಇರುವವನು. ಕೃಷ್ಣನೂ ಸಹ ಅರ್ಜುನನಿಗೆ ಆತ್ಮನಂತೆ ಇರುವವನು (ಬಹಳ ಪ್ರಿಯನಾದವನು). ಎಲೈ ಸಂಜಯನೇ, ಇವರು ಮತ್ತು ಇವರ ಸಲುವಾಗಿ ಇನ್ನೂ ಅನೇಕರು ಯುದ್ಧದಲ್ಲಿ ಪ್ರಾಣಗಳನ್ನು ಬಿಡಲು ಸಿದ್ಧರಿರುವಾಗ ಯುದ್ಧದಲ್ಲಿ ಅವರು ಜಯಿಸಲಾರದುದು ಯಾವುದಿದೆ?
ಯೇಷಾಂ ಚ ಪುರುಷವ್ಯಾಘ್ರಃ ಶಾರ್ ಂಗಧನ್ವಾ ವ್ಯಪಾಶ್ರಯಃ |
ಹಿತಾರ್ಥೀ ಚಾಪಿ ಪಾರ್ಥಾನಾಂ ಕಥಂ ತೇಷಾಂ ಪರಾಜಯಃ ॥ 78 ॥
ಪುರುಷವ್ಯಾಘ್ರನೂ, ಶಾರ್ಙ್ಗಧನುರ್ಧಾರಿಯೂ ಆದ ಕೃಷ್ಣನು ಯಾರಿಗೆ ಆಶ್ರಯನೂ ಮತ್ತು ಹಿತಚಿಂತಕನೂ ಆಗಿದ್ದಾನೆಯೋ ಅಂತಹ ಪಾಂಡವರಿಗೆ ಪರಾಜಯವು ಹೇಗೆ ಉಂಟಾದೀತು?
ಅರ್ಜುನೇ ತು ಜಯೋ ನಿತ್ಯಂ ಕೃಷ್ಣೇ ಕೀರ್ತಿಶ್ಚ ಶಾಶ್ವತೀ ॥ 79 ॥
ಪ್ರಾಧಾನ್ಯಾದಪಿ ಭೂಯಾಂಸೋ ಹ್ಯಮೇಯಾಃ ಕೇಶವೇ ಗುಣಾಃ |
ಮೋಹಾತ್ ತು ವಶಿನಂ ಕೃಷ್ಣಂ ನ ಸರ್ವೋ ವೇತ್ತಿ ಮಾಧವಮ್ ॥
ಅರ್ಜುನನಲ್ಲಿ ಜಯವು ನಿತ್ಯವಾದುದು. ಕೃಷ್ಣನಲ್ಲಿ ಕೀರ್ತಿಯು ಶಾಶ್ವತವಾದುದು. ಪ್ರಧಾನವಾದ ಗುಣಗಳನ್ನು ಎಣಿಸಿದರೂ ಕೇಶವನಲ್ಲಿರುವ ಗುಣಗಳ ಸಂಖ್ಯೆಯು ಪರಿಗಣಿಸಲು ಸಾಧ್ಯವಿಲ್ಲದವು.
ಮೋಹಿತೋ ದೇವಪಾಶೇನ ಮೃತ್ಯುಪಾಶಪುರಸ್ಕೃತಃ|
ನ ವೇದ ಕೃಷ್ಣಂ ದಾಶಾರ್ಹಮರ್ಜುನಂ ಜಯತಾಂ ವರಮ್ ॥ 81 ॥
ದೈವಪಾಶದಿಂದ ಮೋಹಿತರಾದ, ಮೃತ್ಯುಪಾಶದಿಂದ ಬದ್ಧರಾದ ಎಲ್ಲ ಜನರು ತಮ್ಮ ಮೋಹದಿಂದ ಸರ್ವೇಶ್ವರನಾದ ಮಾಧವನಾದ ಕೃಷ್ಣನನ್ನು ಸರ್ವವಶೀ ಎಂದು ತಿಳಿಯುವುದಿಲ್ಲ.
ಆದಿದೇವೌ ಮಹಾತ್ಮಾನೌ ನರನಾರಾಯಣಾವುಭೌ ॥ 82 ॥
ಆದಿದೇವತೆಗಳೂ, ಮಹಾತ್ಮರೂ, ನರ-ನಾರಾಯಣರೂ ಆದ ಅವರಿಬ್ಬರನ್ನು ಎಂದರೆ ದಾಶಾರ್ಹನಾದ ಕೃಷ್ಣನನ್ನು, ಜಯಿಸುವವರಲ್ಲಿ ಶ್ರೇಷ್ಠನಾದ ಅರ್ಜುನನನ್ನು (ಮೋಹಿತರಾದ ಜನರು ತಿಳಿಯುವುದಿಲ್ಲ).
ಮನಸಾSಪಿ ಹಿ ದುರ್ಧರ್ಷೌ ಸೇನಾಮೇತಾಂ ತರಸ್ವಿನೌ |
ನಾಶಯೇತಾಮಿಹೇಚ್ಛಂತೌ ಮಾನುಷತ್ವಾತ್ ತು ನೇಚ್ಛತಃ ॥ 83 ॥
ವೇಗಶಾಲಿಗಳೂ ಮತ್ತು ದುರ್ಧರ್ಷರೂ ಆದ ಅವರು ಮನಸ್ಸಿನಿಂದಲೇ ಬಯಸಿದರೆ ಈ ಸೈನ್ಯವನ್ನು ನಾಶಮಾಡಬಹುದು. ಮನುಷ್ಯರಾಗಿ ಜನಿಸಿರುವುದರಿಂದ ಹಾಗೆ ಬಯಸುವುದಿಲ್ಲ.
ಯುಗಸ್ಯೇವ ವಿಪರ್ಯಾಸೋ ಭೂತಾನಾಮಿವ ಮೋಹನಮ್ |
ಇತಿ ಮಾಂ ಪ್ರತಿಭಾತ್ಯೇತದ್ ಭೀಷ್ಮದ್ರೋಣನಿಪಾತನಮ್ ॥ 84 ॥
ಎಲ್ಲ ಭೂತಗಳಿಗೆ ಮೋಹವನ್ನು ಉಂಟುಮಾಡುವ ಭೀಷ್ಮ-ದ್ರೋಣರ ನಿಪಾತನವು ಯುಗದ ವ್ಯತ್ಯಾಸದಂತೆ ನನಗೆ ಕಾಣುತ್ತಿದೆ.
ಲೋಕಸ್ಯ ಸ್ಥವಿರೌ ವೀರೌ ಮಂತ್ರಜ್ಞೌ ಮಂತ್ರಧಾರಿಣೌ |
ಭೀಷ್ಮದ್ರೋಣೌ ಹತೌ ಯುದ್ಧೇ ಮನುಷ್ಯಾನ್ ಮೋಹಯಿಷ್ಯತಃ ॥85॥
ಲೋಕದಲ್ಲಿ ಜ್ಞಾನವೃದ್ಧರೂ, ವೀರರೂ, ಮಂತ್ರಜ್ಞರೂ, ಮಂತ್ರಧಾರಿಗಳೂ ಆದ ಭೀಷ್ಮ-ದ್ರೋಣರು ಯುದ್ಧದಲ್ಲಿ ಹತರಾಗಿ ಮನುಷ್ಯರಿಗೆ ಮೋಹವನ್ನು ಉಂಟುಮಾಡುತ್ತಿದ್ದಾರೆ.
ಯಾಂ ತಾಂ ಶ್ರಿಯಮಸೂಯಾಮಿ ಪುರಾ ದೃಷ್ಟ್ವಾ ಯುಧಿಷ್ಠಿರೇ |
ಅದ್ಯ ತಾಮನುಜಾನಾಮಿ ಭೀಷ್ಮದ್ರೋಣೌ ಯದಾ ಹತೌ ॥ 86 ॥
ನಾನು ಹಿಂದೆ ಯುಧಿಷ್ಠಿರನ ಯಾವ ಸಂಪತ್ತನ್ನು ನೋಡಿ ಅಸೂಯೆಯನ್ನು ಪಡುತ್ತಿದ್ದೆನೋ, ಭೀಷ್ಮ-ದ್ರೋಣರು ಹತರಾದ ಈ ದಿನ ಅದು ಅವನಲ್ಲಿಯೇ ಇರಲೆಂದು ಸಮ್ಮತಿಸುತ್ತೇನೆ.
ಅಥವಾ ಮತ್ಕೃತೇ ಪ್ರಾಪ್ತಃ ಕುರೂಣಾಮೇಷ ಸಂಕ್ಷಯಃ |
ಪಕ್ವಾನಾಂ ಹಿ ವಧೇ ಸೂತ ವಜ್ರಾಯಂತೇ ತೃಣಾನ್ಯಪಿ ॥ 87 ॥

ಸಂಜಯನೇ, ಅಥವಾ ನನ್ನ ನಿಮಿತ್ತದಿಂದಾಗಿ ಕುರುಗಳ ಈ ವಿನಾಶವು ಪ್ರಾಪ್ತವಾಗಿದೆ. ಮಾಗಿದ ಹಣ್ಣುಗಳನ್ನು ಬೀಳಿಸಲು ತೃಣಗಳೂ ವಜ್ರಗಳಂತೆ ಆಗುತ್ತವೆ.
ಲೋಕಾನಾಂ ಗುರುರತ್ಯಂತಂ ಲೋಕನಾಥಃ ಸನಾತನಃ |
ನಾರಾಯಣೋ ರಣೇ ನಾಥೋ ದಿವ್ಯೋ ದಿವ್ಯಾತ್ಮವಾನ್ ಪ್ರಭುಃ ||
ಲೋಕನಾಥನೂ, ವೇದಪ್ರತಿಪಾದನೂ, ಲೋಕಗುರುವೂ, ದಿವ್ಯನೂ, ದಿವ್ಯಶರೀರವುಳ್ಳವನೂ, ಪ್ರಭುವೂ ಆದ ನಾರಾಯಣನು (ಕೃಷ್ಣನು) ಯುದ್ಧದಲ್ಲಿ ಸ್ವಾಮಿಯಾಗಿದ್ದಾನೆ.
ಯಸ್ಯ ದಿವ್ಯಾನಿ ಕರ್ಮಾಣಿ ಪ್ರವದಂತಿ ಮನೀಷಿಣಃ |
ತಾನ್ಯಹಂ ಕೀರ್ತಯಿಷ್ಯಾಮಿ ಭಕ್ತ್ಯಾ ಸ್ಥೈರ್ಯಾರ್ಥಮಾತ್ಮನಃ || 89 ||
ಜ್ಞಾನಿಗಳಾದವರು ಯಾವ ಅವನ ದಿವ್ಯಕರ್ಮಗಳನ್ನು ಹೇಳುತ್ತಾರೆಯೋ ಅವುಗಳನ್ನು ನಾನು ಮನಸ್ಸಿಗೆ ಸ್ಥೈರ್ಯವನ್ನು ಕಂಡುಕೊಳ್ಳಲು ಭಕ್ತಿಯಿಂದ ಕೀರ್ತಿಸುವೆನು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ನವಮೋಽಧ್ಯಾಯಃ ||
|| ದ್ರೋಣಾಭಿಷೇಕಪರ್ವಣಿ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ಧೃತರಾಷ್ಟ್ರನಿಂದ ಕೃಷ್ಣನ ಮಹಿಮೆಯನ್ನು ವರ್ಣಿಸಿ, ಯುದ್ಧದ
ವರ್ಣನೆಯನ್ನು ಮಾಡುವಂತೆ ಸಂಜಯನಿಗೆ ಆದೇಶ
ಧೃತರಾಷ್ಟ್ರಃ
ಶೃಣು ದಿವ್ಯಾನಿ ಕರ್ಮಾಣಿ ವಾಸುದೇವಸ್ಯ ಸಂಜಯ |
ಕೃತವಾನ್ ಯಾನಿ ವಿಶ್ವಾತ್ಮಾ ಯಥಾ ನಾನ್ಯಃ ಪುಮಾನ್ ಕ್ವಚಿತ್ || 1 ||
ಧೃತರಾಷ್ಟ್ರ ಎಲೈ ಸಂಜಯನೇ, ಜಗತ್ಸ್ವಾಮಿಯಾದ ವಾಸುದೇವನು ಇನ್ನೊಬ್ಬ ಪುರುಷನು ಮಾಡಲು ಸಾಧ್ಯವಿಲ್ಲದ ಎಂತಹ ದಿವ್ಯಕರ್ಮಗಳನ್ನು ಮಾಡಿದನೋ ಅವುಗಳನ್ನು ಕೇಳು.
ಸಂವರ್ಧತಾ ಗೋಪಕುಲೇ ಬಾಲೇನ ಚ ಮಹಾತ್ಮನಾ |
ವಿಖ್ಯಾಪಿತಂ ಬಲಂ ಬಾಲ್ಯೇ ತ್ರಿಷು ಲೋಕೇಷು ಸಂಜಯ || 2 ||
ಎಲೈ ಸಂಜಯನೇ, ಮಹಾತ್ಮನಾದ ಅವನು ಬಾಲನಾಗಿ ಗೋಪಕುಲದಲ್ಲಿ ಬೆಳೆಯುತ್ತಿರುವಾಗಲೇ ಬಾಲ್ಯದಲ್ಲಿ ಅವನ ಬಲವು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಯಿತು.
ಪೂತನಾಂ ಶಕಟಂ ಹತ್ವಾ ಕೇಶಿನಂ ಚೈವ ವಾಜಿನಮ್ |
ವತ್ಸಾಸುರಂ ಧೇನುಕಾದೀನ್ ಪ್ರಲಂಬಂ ಚಾವಧೀದ್ ವಿಭುಃ || 3 ||
ಪೂತನಿಯನ್ನೂ, ಶಕಟನನ್ನೂ ಕೊಂದು ವಿಭುವಾದ ಅವನು ಅಶ್ವರೂಪದ ಕೇಶಿಯನ್ನು, ವತ್ಸಾಸುರನನ್ನು, ಧೇನುಕನನ್ನು ಮತ್ತು ಪ್ರಲಂಬನನ್ನು ಕೊಂದನು.
ಉಚ್ಚೈಃಶ್ರವಸ್ತುಲ್ಯಬಲಂ ವಾಯುವೇಗಂ ಸಮಂ ಜವೇ |
ಜಘಾನ ಹಯರಾಜಾನಂ ಯಮುನಾವನವಾಸಿನಮ್ || 4 ||
ಉಚ್ಚೈಃಶ್ರವಸ್ಸಿನ ಬಲಕ್ಕೆ ಸಮನಾದ ಬಲವುಳ್ಳ, ವಾಯುವೇಗಕ್ಕೆ ಸಮವಾದ ವೇಗವುಳ್ಳ, ಯಮುನಾ ತೀರವಾಸಿಯಾದ ಅಶ್ವರಾಜನನ್ನು ಕೊಂದನು.
ದಾನವಂ ಘೋರಕರ್ಮಾಣಂ ಗವಾಂ ಮೃತ್ಯುಮಿವೋದ್ಧ್ವತಮ್ |
ವೃಷರೂಪಧರಂ ಬಾಲ್ಯೇ ಭುಜಾಭ್ಯಾಂ ನಿಜಘಾನ ಹ || 5 ||
ಗೋವುಗಳಿಗೆ ಮೃತ್ಯುವಿನಂತೆ ಇದ್ದ, ಘೋರಕರ್ಮವನ್ನು ಮಾಡುವ, ವೃಷಭ ರೂಪವನ್ನು ಧರಿಸಿದ ದಾನವನನ್ನು ಬಾಲ್ಯದಲ್ಲಿ ತನ್ನ ಭುಜಗಳಿಂದ ಕೊಂದನು.
ಗವಾಂ ಮೋಕ್ತಾ ಮಹಾಬಾಹುಃ ಧೃತ್ವಾ ಗೋವರ್ಧನಂ ಗಿರಿಮ್ |
ಚಾಣೂರಂ ಮುಷ್ಟಿಕಂ ಚೈವ ರಂಗಮಧ್ಯೇ ನಿಹತ್ಯ ಚ || 6 ||
ದಾವಾಗ್ನಿಯಿಂದ ಗೋವುಗಳನ್ನು ಬಿಡಿಸಿದ ಮಹಾಬಾಹುವಾದ ಅವನು ಗೋವರ್ಧನಗಿರಿಯನ್ನು ಎತ್ತಿ, ರಂಗಮಧ್ಯದಲ್ಲಿ ಚಾಣೂರ-ಮುಷ್ಟಿಕರನ್ನು ವಧೆ ಮಾಡಿದನು.
ತಥಾ ಕಂಸೋ ಮಹಾರಾಜೋ ಜರಾಸಂಧೇನ ಪಾಲಿತಃ |
ವಿಕ್ರಮೇಣೈವ ಕೃಷ್ಣೇನ ಸಾನುಬಂಧಾಶ್ರಯೋ ಹತಃ || 7 ||
ಹಾಗೆಯೇ ಜರಾಸಂಧನಿಂದ ರಕ್ಷಿತನಾದ, ಮಹಾರಾಜನಾದ ಕಂಸನು ಅವನ ಬಂಧು-ಬಾಂಧವರಿಂದ ಸಹಿತನಾಗಿ ಕೃಷ್ಣನಿಂದ ಪರಾಕ್ರಮದಿಂದಲೇ ಹತನಾದನು.
ಸುನಾಮಾ ನಾಮ ವಿಕ್ರಾಂತಃ ಸಮಗ್ರಾಕ್ಷೋಹಿಣೀಪತಿಃ |
ಭೋಜರಾಜಸ್ಯ ಮಧ್ಯಸ್ಥೋ ಭ್ರಾತಾ ಕಂಸಸ್ಯ ವೀರ್ಯವಾನ್ || 8 ||
ಬಲದೇವದ್ವಿತೀಯೇನ ಕೃಷ್ಣೇನಾಮಿತ್ರಘಾತಿನಾ |

ತರಸ್ವೀ ಸಮರೇ ದಗ್ಧಃ ಸಸೇನಃ ಶೂರಸೇನರಾಟ್ ॥ 9 ॥
ಭೋಜರಾಜನಾದ, ಕಂಸನ ಮಧ್ಯಮ ಸಹೋದರನಾದ, ಪರಾಕ್ರಮಶಾಲಿಯಾದ, ಸಮಗ್ರ ಅಕ್ಷೋಹಿಣಿಗಳಿಗೆ ಪತಿಯಾದ, ವೇಗಶಾಲಿಯಾದ ಶೂರನಾದ ಸುನಾಮನೆಂಬುವನು ಶತ್ರುಘಾತಕನಾದ ಕೃಷ್ಣನಿಂದ ತನ್ನ ಸೈನ್ಯದ ಜೊತೆಯಲ್ಲಿ ಯುದ್ಧದಲ್ಲಿ ದಹಿಸಲ್ಪಟ್ಟನು.
ದುರ್ವಾಸಾ ನಾಮ ವಿಪ್ರರ್ಷಿಃ ತಥಾ ಪರಮಕೋಪನಃ |
ಆರಾಧಿತಃ ಸದಾರೇಣ ಸ ಚಾಸ್ಮೈ ಪ್ರದದೌ ವರಮ್ ॥ 10 ॥
ಪರಮಕೋಪನರಾದ ದುರ್ವಾಸ ಮಹರ್ಷಿಗಳು ಪತ್ನೀ ಸಹಿತನಾದ ಅವನಿಂದ ಪೂಜಿಸಲ್ಪಟ್ಟಿದ್ದರು ಮತ್ತು ಅವನಿಗೆ (ಅವಧ್ಯತ್ವ) ವರವನ್ನು ಕೊಟ್ಟಿದ್ದರು.
ತಥಾ ಗಾಂಧಾರರಾಜಸ್ಯ ಸುತಾಂ ವೀರಃ ಸ್ವಯಂವರೇ |
ನಿರ್ಜಿತ್ಯ ಪೃಥಿವೀಪಾಲಾನವಹತ್ ಪುಷ್ಕರೇಕ್ಷಣಃ ॥ 11 ॥
ಪುಷ್ಕರೇಕ್ಷಣನೂ, ವೀರನೂ ಆದ ಕೃಷ್ಣನು ಸ್ವಯಂವರದಲ್ಲಿ ಪೃಥಿವೀಪಾಲರನ್ನು ಗೆದ್ದು, ಗಾಂಧಾರ ರಾಜಕುಮಾರಿಯನ್ನು ವಿವಾಹ ಮಾಡಿಕೊಂಡನು.
ಅಮೃಷ್ಯಮಾಣಾ ರಾಜಾನೋ ಯಸ್ಯ ಜಾತ್ಯಾ ಹಯಾ ಇವ |
ರಥೇ ವೈವಾಹಿಕೇ ಯುಕ್ತಾಃ ಪ್ರತೋದೇನ ಕೃತವ್ರಣಾಃ ॥ 12 ॥
ವೈವಾಹಿಕ ರಥದಲ್ಲಿ ಹೂಡಲ್ಪಟ್ಟ, ಚಾವಟಿಯಿಂದ ವ್ರಣವನ್ನು ಹೊಂದಿದ, ಒಳ್ಳೆಯ ಜಾತಿಯ ಅಶ್ವಗಳಂತಿದ್ದ ಆ ರಾಜರನ್ನು ಗೆದ್ದು (ರಾಜಕುಮಾರಿಯನ್ನು ವಿವಾಹವಾದನು).
ಜರಾಸಂಧಂ ಮಹಾರಾಜಮುಪಾಯೇನ ಜನಾರ್ದನಃ |
ಪರೇಣ ಘಾತಯಾಮಾಸ ಸಮಗ್ರಾಕ್ಷೋಹಿಣೀಪತಿಮ್ ॥ 13 ॥
ಜನಾರ್ದನನಾದ ಅವನು ಅನೇಕ ಅಕ್ಷೋಹಿಣೀ ಪತಿಯಾದ, ಮಹಾರಾಜನಾದ ಜರಾಸಂಧನನ್ನು ಉಪಾಯದಿಂದ ಇನ್ನೊಬ್ಬರಿಂದ ಕೊಲ್ಲಿಸಿದನು.
ಚೇದಿರಾಜಂ ಚ ವಿಕ್ರಾಂತಂ ರಾಜಸೇನಾಪತಿಂ ಬಲೀ |
ಅರ್ಘ್ಯೇ ವಿವದಮಾನಂ ತಂ ಜಘಾನ ಪಶುವತ್ತದಾ ॥ 14 ॥
ಬಲಿಷ್ಠನಾದ ಕೃಷ್ಣನು ರಾಜಸೇನಾಪತಿಯೂ, ಪರಾಕ್ರಮಶಾಲಿಯೂ ಆದ, ಅಗ್ರಪೂಜೆಯಲ್ಲಿ ವಿವಾದವನ್ನು ಮಾಡಿದ ಚೇದಿರಾಜನಾದ ಶಿಶುಪಾಲನನ್ನು ಆಗ ಪಶುವಿನಂತೆ ಕೊಂದನು.
ಸೌಭಂ ದೈತ್ಯಪುರಂ ಖಸ್ಥಂ ಸಾಲ್ವಗುಪ್ತಂ ದುರಾಸದಮ್ |
ಸಮುದ್ರಕುಕ್ಷೌ ವಿಕ್ರಮ್ಯ ಪಾತಯಾಮಾಸ ಮಾಧವಃ ॥ 15 ॥
ಮಾಧವನು ಸಾಲ್ವನಿಂದ ರಕ್ಷಿತವಾದ, ಸಮೀಪಿಸಲು ಕಷ್ಟಸಾಧ್ಯವಾದ, ದೈತ್ಯ ಪಟ್ಟಣವಾದ ಸೌಭ ವಿಮಾನವನ್ನು ತಮ್ಮ ಪರಾಕ್ರಮದಿಂದ ಸಮುದ್ರದ ಕುಕ್ಷಿಯಲ್ಲಿ ಕೆಡವಿದನು.
ಅಂಗಾನ್ ವಂಗಾನ್ ಕಳಿಂಗಾಂಶ್ಚ ಮಾಗಧಾನ್ ಕಾಶಿಕೋಸಲಾನ್ |
ವತ್ಸಗರ್ಭಕರೂಶಾಂಶ್ಚ ಪುಂಡ್ರಾಂಶ್ಚಾಥಾಜಯದ್ ರಣೇ ॥ 16 ॥
ಅನಂತರ ಅಂಗರನ್ನೂ, ವಂಗರನ್ನೂ, ಕಳಿಂಗರನ್ನೂ, ಮಾಗಧರನ್ನೂ, ಕಾಶಿ- ಕೋಸಲರನ್ನೂ, ವತ್ಸಗರ್ಭ-ಕರೂಷರನ್ನೂ, ಪುಂಡ್ರರನ್ನೂ ಯುದ್ಧದಲ್ಲಿ ಜಯಿಸಿದನು.
ಆವಂತ್ಯಾನ್ ದಾಕ್ಷಿಣಾತ್ಯಾಂಶ್ಚ ಪಾರ್ವತೀಯಾನ್ ದಶೇರುಕಾನ್ |
ಕಾಶ್ಮೀರಕಾನೌರಸಕಾನ್ ಪಿಶಾಚಾಂಶ್ಚ ಸಮಂದರಾನ್ ॥ 17 ॥
ಕಾಂಬೋಜಾನ್ ಮಾಲವಾಂಶ್ಚೈವ ಚೋಳಾನ್ ಪಾಂಡ್ಯಾಂಶ್ಚ ಸಂಜಯ |
ತ್ರಿಗರ್ತಾನ್ ಮಗಧಾಂಶ್ಚೈವ ದರದಾಂಶ್ಚ ಸುದುರ್ಜಯಾನ್ ॥ 18 ॥
ನಾನಾದಿಗ್ಭ್ಯಶ್ಚ ಸಂಪ್ರಾಪ್ತಾನ್ ಆಂಧ್ರಾನ್ ಮ್ಲೇಚ್ಛಗಣಾನಪಿ |
ಜಿತವಾನ್ ಪುಂಡರೀಕಾಕ್ಷೋ ಯವನಾಂಶ್ಚ ಸಹಾನುಗಾನ್ ॥ 19 ॥
ಆವಂತ್ಯರು, ದಾಕ್ಷಿಣಾತ್ಯರು, ಪರ್ವತ ಪ್ರದೇಶದವರು, ದಶೇರುಕರು, ಕಾಶ್ಮೀರಕರು, ಔರಸಕರು, ಪಿಶಾಚರು, ಮಂದರರು, ಕಾಂಬೋಜರು, ಮಾಲವರು, ಚೋಳರು, ಪಾಂಡ್ಯರು, ತ್ರಿಗರ್ತರು, ಮಗಧರು, ದುರ್ಜಯರಾದ ದರದರು, ನಾನಾ ದಿಕ್ಕುಗಳಿಂದ ಬಂದ ಆಂಧ್ರರು ಮತ್ತು ಮ್ಲೇಚ್ಛಗಣಗಳು- ಎಲೈ ಸಂಜಯನೇ, ಇವರೆಲ್ಲರನ್ನೂ ಮತ್ತು ಅನುಯಾಯಿಗಳಿಂದ ಸಹಿತರಾದ ಯವನರನ್ನೂ ಪುಂಡರೀಕಾಕ್ಷನು ಗೆದ್ದನು.
ಪ್ರವಿಶ್ಯ ಮಕರಾವಾಸಂ ಯಾದೋಭಿರಭಿಸಂವೃತಮ್ |
ಜಿಗಾಯ ವರುಣಂ ಯುದ್ಧೇ ಸಲಿಲಾಂತರ್ಗತಂ ಪುರಾ ॥ 20 ॥
ಜಲಚರ ಪ್ರಾಣಿಗಳಿಂದ ರಕ್ಷಿಸಲ್ಪಟ್ಟ ಸಮುದ್ರವನ್ನು ಪ್ರವೇಶಿಸಿ, ಹಿಂದೆ ಜಲಾಂತರ್ಗತನಾದ ವರುಣನನ್ನು ಯುದ್ಧದಲ್ಲಿ ಗೆದ್ದನು.
ಯುಧಿ ಪಂಚಜನಂ ಹತ್ವಾ ಪಾತಾಳತಳವಾಸಿನಮ್ |
ಪಾಂಚಜನ್ಯಂ ಹೃಷೀಕೇಶೋ ದಿವ್ಯಂ ಶಂಖಮವಾಪ್ತವಾನ್ ॥ 21 ॥
ಹೃಷೀಕೇಶನು ಪಾತಾಳ ತಳದಲ್ಲಿ ವಾಸಿಸುವ ಪಂಚಜನ ದೈತ್ಯನನ್ನು ಯುದ್ಧದಲ್ಲಿ ಕೊಂದು ದಿವ್ಯವಾದ ಪಾಂಚಜನ್ಯ ಶಂಖವನ್ನು ಪಡೆದನು.
ಖಾಂಡವೇ ಪಾರ್ಥಸಹಿತಃ ತೋಷಯಿತ್ವಾ ಹುತಾಶನಮ್ |

ಆಗ್ನೇಯಮಸ್ತ್ರಂ ದುರ್ಧರ್ಷಂ ಚಕ್ರಂ ಲೇಭೇ ಮಹಾಬಲಃ ॥ 22 ॥
ಮಹಾಬಲನಾದ ಅವನು ಅರ್ಜುನನಿಂದ ಸಹಿತನಾಗಿ ಖಾಂಡವವನದಲ್ಲಿ ಅಗ್ನಿಯನ್ನು ಸಂತೋಷಪಡಿಸಿ, ಆಗ್ನೇಯಾಸ್ತ್ರವನ್ನು ಮತ್ತು ಸೋಲಿಸಲು ಅಸಾಧ್ಯವಾದ ಸುದರ್ಶನ ಚಕ್ರವನ್ನು ಪಡೆದನು.
ವೈನತೇಯಂ ಸಮಾರುಹ್ಯ ತ್ರಾಸಯಿತ್ವಾಽಮರಾವತೀಮ್ |
ಮಹೇಂದ್ರಭವನಾದ್ ವೀರಃ ಪಾರಿಜಾತಮುಪಾನಯತ್ ॥ 23 ॥
ಗರುಡನನ್ನು ಏರಿ ಹೋಗಿ, ಅಮರಾವತಿಯನ್ನು ಭಯಗೊಳಿಸಿ, ವೀರನಾದ ಅವನು ಇಂದ್ರನ ಮನೆಯಿಂದ ಪಾರಿಜಾತ ವೃಕ್ಷವನ್ನು ತಂದನು.
ತಚ್ಚ ಮರ್ಷಿತವಾನ್ ಶಕ್ರೋ ಜಾನಂಸ್ತಸ್ಯ ಪರಾಕ್ರಮಮ್ |
ರಾಜ್ಞಾಂ ಚಾಪ್ಯಜಿತಂ ಕಂಚಿತ್ ಕೃಷ್ಣೇನೇಹ ನ ಶುಶ್ರುಮ ॥ 24 ॥
ಕೃಷ್ಣನ ಪರಾಕ್ರಮವನ್ನು ತಿಳಿದ ಇಂದ್ರನು ಅದನ್ನು ಸಹಿಸಿದನು. ಕೃಷ್ಣನಿಂದ ಪರಾಜಿತನಾದ ಯಾವ ರಾಜನನ್ನೂ ನಾವು ಕೇಳಲಿಲ್ಲ.
ಯಚ್ಚ ತನ್ಮಹದಾಶ್ಚರ್ಯಂ ಸಭಾಯಾಂ ಮಮ ಸಂಜಯ |
ಕೃತವಾನ್ ಪುಂಡರೀಕಾಕ್ಷಃ ತದನ್ಯಃ ಕಃ ಕರಿಷ್ಯತಿ ॥ 25 ॥
ಎಲೈ ಸಂಜಯನೇ, ಪುಂಡರೀಕಾಕ್ಷನು ನನ್ನ ಸಭೆಯಲ್ಲಿ ಯಾವ ದೊಡ್ಡ ಆಶ್ಚರ್ಯವನ್ನು ಮಾಡಿದನೋ ಅದನ್ನು ಇನ್ನೊಬ್ಬನು ಯಾವನು ಮಾಡುವನು?
ಯಚ್ಚ ಭಕ್ತ್ಯಾ ಪ್ರಪನ್ನೋಽಹಮದ್ರಾಕ್ಷಂ ಕೃಷ್ಣಮೀಶ್ವರಮ್ |
ತನ್ಮೇ ಸುವಿದಿತಂ ಸರ್ವಂ ಪ್ರತ್ಯಕ್ಷಮಿವ ಚಾಗಮಾತ್ ॥ 26 ॥
ಈಶ್ವರನಾದ ಕೃಷ್ಣನಿಗೆ ಭಕ್ತಿಯಿಂದ ಶರಣಾಗತನಾದ ನಾನು ಏನನ್ನು ನೋಡಿದೆನೋ ಅದೆಲ್ಲವೂ ಪ್ರತ್ಯಕ್ಷದಂತೆ ಮತ್ತು ಆಗಮಕ್ಕೆ ಅನುಸಾರವಾಗಿ ನನಗೆ ಚೆನ್ನಾಗಿ ತಿಳಿದಿದೆ.
ನಾಂತೋ ವಿಕ್ರಮಯುಕ್ತಸ್ಯ ಬುದ್ಧ್ಯಾ ಯುಕ್ತಸ್ಯ ವಾ ಪುನಃ |
ಕರ್ಮಣಃ ಶಕ್ಯತೇ ಗಂತುಂ ಹೃಷೀಕೇಶಸ್ಯ ಸಂಜಯ ॥ 27 ॥
ಎಲೈ ಸಂಜಯನೇ, ಪರಾಕ್ರಮಯುಕ್ತನಾದ ಮತ್ತು ಮೇಧಾವಿಯಾದ ಆ ಹೃಷೀಕೇಶನು ಮಾಡಿದ ಕಾರ್ಯಗಳ ಅಂತವನ್ನು ಮುಟ್ಟಲು ಸಾಧ್ಯವಿಲ್ಲ.
ತಥಾ ಗದಶ್ಚ ಸಾಂಬಶ್ಚ ಪ್ರದ್ಯುಮ್ನೋಽಥ ವಿಡೂರಥಃ |
ಆಶಾವಹೋಽನಿರುದ್ಧಶ್ಚ ಚಾರುದೇಷ್ಣಃ ಸಸಾರಣಃ ॥ 28 ॥
ಉಲ್ಮುಕೋ ನಿಶಠಶ್ಚೈವ ವಿಬಭ್ರುಶ್ಚೈವ ವೀರ್ಯವಾನ್ |
ಪೃಥುಶ್ಚ ವಿಪೃಥುಶ್ಚೈವ ಸಮಕ್ರೋಧಾಶ್ಚ ಸಂಜಯ ॥ 29 ॥
ಹಾಗೆಯೇ, ಗದ, ಸಾಂಬ, ಪ್ರದ್ಯುಮ್ನ, ವಿಡೂರಥ, ಆಶಾಶಾಲಿಯಾದ ಅನಿರುದ್ಧ, ಸಾರಣನಿಂದ ಸಹಿತನಾದ ಚಾರುದೇಷ್ಣ, ಉಲ್ಮುಖ, ನಿಶಠ, ಪರಾಕ್ರಮಶಾಲಿಯಾದ ವಿಬಭ್ರು, ಪೃಥು ಮತ್ತು ವಿಪೃಥುಗಳು - ಎಲೈ ಸಂಜಯನೇ, ಇವರು ಕೌರವರ ಮೇಲೆ ಕೃಷ್ಣನಿಗೆ ಸಮಾನವಾದ ಕ್ರೋಧವುಳ್ಳವರಾಗಿದ್ದಾರೆ.
ಏತೇ ವೈ ಬಲವಂತಶ್ಚ ವೃಷ್ಣಿವೀರಾಃ ಪ್ರಹಾರಿಣಃ |
ಕಥಂಚಿತ್ ಪಾಂಡವಾನೀಕಂ ಶ್ರಯೇಯುಃ ಸಮರೇ ಸ್ಥಿತಾಃ ॥ 30 ॥
ಆಹೂತಾ ವೃಷ್ಣಿವೀರೇಣ ಕೇಶವೇನ ಮಹಾತ್ಮನಾ |
ತತಃ ಸಂಶಯಿತಂ ಸರ್ವಂ ಭವೇದಿತಿ ಮತಿರ್ಮಮ ॥ 31 ॥
ಈ ವೃಷ್ಣಿವೀರರು ಪ್ರಹಾರ ಸಮರ್ಥರು ಮತ್ತು ಬಲಿಷ್ಠರಾದವರು. ಮಹಾತ್ಮನಾದ ವೃಷ್ಣಿವೀರನಾದ ಕೇಶವನಿಂದ ಆಹೂತರಾಗಿ ಯುದ್ಧದಲ್ಲಿ ಅವರು ಎಲ್ಲ ರೀತಿಯಿಂದಲೂ ಪಾಂಡವರ ಸೈನ್ಯವನ್ನೇ ಆಶ್ರಯಿಸುವರು. ಆಗ ಎಲ್ಲವೂ ಸಂಶಯಗ್ರಸ್ತವಾಗುವುದು ಎಂದು ನನ್ನ ಅಭಿಪ್ರಾಯ.
ನಾಗಾಯುತಬಲೋ ವೀರಃ ಕೈಲಾಸಶಿಖರೋಪಮಃ |
ವನಮಾಲೀ ಹಲೀ ರಾಮೋ ಯತ್ರ ತತ್ರ ಜನಾರ್ದನಃ ॥ 32 ॥
ಹತ್ತುಸಹಸ್ರ ಆನೆಗಳ ಬಲವುಳ್ಳ ವೀರನಾದ, ಕೈಲಾಸ ಶಿಖರದಂತೆ ಉನ್ನತನಾದ, ವನಮಾಲಿಯಾದ, ಹಲಾಯುಧಧಾರಿಯಾದ ಬಲರಾಮನೆಲ್ಲಿ ಇರುತ್ತಾನೆಯೋ ಅಲ್ಲಿ ಜನಾರ್ದನನು ಇರುತ್ತಾನೆ.
ಏಕ ಏವ ದ್ವಿಧಾ ಭೂತೋ ದೃಶ್ಯತೇ ಮಾನುಷೈರ್ಭುವಿ |
ಯಮಾಹುಃ ಸರ್ವಪಿತರಂ ವಾಸುದೇವಂ ದ್ವಿಜಾತಯಃ ॥ 33 ॥
ಪಿತ್ರೂಣಾಮಪಿ ಯಃ ಪೂರ್ವೋ ವೇದೇಷು ಪರಿಪಠ್ಯತೇ |
ಸೋಽಪಿ ಕೃಚ್ಛ್ರೇಷು ಪಾರ್ಥಾನಾಂ ಯೋತ್ಸ್ಯತೇಽರ್ಥಾಯ ಕೇಶವಃ ॥
ಕೃಷ್ಣನೊಬ್ಬನೇ ಕೃಷ್ಣ-ಬಲರಾಮ ರೂಪದಿಂದ ಎರಡು ಭಾಗವಾಗಿ ಭೂಮಿಯಲ್ಲಿ ಮನುಷ್ಯರಿಗೆ ಕಾಣಿಸುತ್ತಾನೆ. ಯಾವ ವಾಸುದೇವನನ್ನು ಬ್ರಾಹ್ಮಣರು ಎಲ್ಲರಿಗೂ ತಂದೆ ಎಂದು ಹೇಳುತ್ತಾರೆಯೋ, ಯಾವನನ್ನು ವೇದಗಳು ಪಿತೃಗಳಿಗೂ ಪ್ರಾಚೀನನಾದವನು ಎಂದು ಹೇಳುತ್ತವೆಯೋ ಅಂತಹ ಕೇಶವನೂ ಸಹ ಪಾಂಡವರಿಗೆ ಸಂಕಟ ಉಂಟಾದಾಗ ಅವರ ಸಲುವಾಗಿ ಯುದ್ಧವನ್ನು ಮಾಡುವನು.
ಸ ಯದಾ ತಾತ ಸನ್ನಹ್ಯೇತ್ ಪಾಂಡವಾರ್ಥಾಯ ಕೇಶವಃ |

ನ ತದಾ ಪ್ರತ್ಯನೀಕೋಽನ್ಯೋ ಭವಿತಾ ತಸ್ಯ ಕಶ್ಚನ ॥ 35 ॥
ಎಲ್ಲೈ ಪ್ರೀತಿಪಾತ್ರನೇ, ಕೇಶವನು ಪಾಂಡವರ ಸಲುವಾಗಿ ಯಾವಾಗ ಶಸ್ತ್ರ ಕವಚವನ್ನು ಧರಿಸುವನೋ ಆಗ ಅವನಿಗೆ ಎದುರಾಗುವವನು ಯಾವನೂ ಇರುವುದಿಲ್ಲ.
ಯದಿ ಸ್ಮ ಕುರವಃ ಸರ್ವೇ ಜಯೇಯುರ್ನಾಮ ಪಾಂಡವಾನ್ |
ವಾರ್ಷ್ಣೇಯೋಽರ್ಥಾಯ ತೇಷಾಂ ವೈ ಗೃಹ್ಣೀಯಾಚ್ಚಸ್ತ್ರಮುತ್ತಮಮ್ ॥
ಒಂದು ಪಕ್ಷ ಎಲ್ಲ ಕುರುಗಳೂ ಸೇರಿ ಪಾಂಡವರನ್ನು ಗೆದ್ದರೆ ವಾರ್ಷ್ಣೇಯನಾದ ಕೃಷ್ಣನು ಅವರ ಹಿತವನ್ನು ಸಾಧಿಸಲು ಉತ್ತಮವಾದ ಶಸ್ತ್ರವನ್ನು ಹಿಡಿದಾನು!
ತತಃ ಸರ್ವಾನ್ ನರವ್ಯಾಘ್ರಾನ್ ಹತ್ವಾ ನಾರಾಯಣೋ ರಣೇ |
ಕೌರವಾಂಶ್ಚ ಮಹಾಬಾಹುಃ ಕುಂತ್ಯೈ ದದ್ಯಾತ್ ಸ ಮೇದಿನೀಮ್ ॥
ಆಗ ಮಹಾಬಾಹುವಾದ ನಾರಾಯಣನಾದ ಅವನು ಯುದ್ಧದಲ್ಲಿ ಎಲ್ಲ ನರಶ್ರೇಷ್ಠರನ್ನು ಮತ್ತು ಕೌರವರನ್ನು ಸಂಹರಿಸಿ ಕುಂತಿಗೆ ಭೂಮಿಯನ್ನು ಕೊಟ್ಟಾನು!
ಯಸ್ಯ ಯಂತಾ ಹೃಷೀಕೇಶೋ ಯೋದ್ಧಾ ಯಸ್ಯ ಧನಂಜಯಃ |
ರಥಸ್ಯ ತಸ್ಯ ಕಃ ಸಂಖ್ಯೇ ಪ್ರತ್ಯನೀಕೋ ಭವೇದ್ ರಥಃ ॥ 38 ॥
ಯಾವ ರಥದಲ್ಲಿ ಹೃಷೀಕೇಶನು ಸಾರಥಿಯಾಗಿ, ಧನಂಜಯನು ಯೋಧನಾಗಿ ಇರುವನೋ, ಯುದ್ಧದಲ್ಲಿ ಅಂತಹ ರಥಕ್ಕೆ ಯಾವ ಮಹಾರಥನು ಎದುರಾಗಿ ಹೋದಾನು!
ನ ಕೇನಚಿದುಪಾಯೇನ ಕುರೂಣಾಂ ದೃಶ್ಯತೇ ಜಯಃ |
ತಸ್ಮಾನ್ಮೇ ಸಂಜಯಾಚಕ್ಷ್ವ ಯಥಾ ಯುದ್ಧಮವರ್ತತ ॥ 39 ॥
ಎಲ್ಲೈ ಸಂಜಯನೇ, ಯಾವ ರೀತಿಯಿಂದಲೂ ಕುರುಗಳಿಗೆ ಜಯವುಂಟಾಗುವುದು ಕಾಣುವುದಿಲ್ಲ. ಆದ್ದರಿಂದ ಯುದ್ಧವು ಹೇಗೆ ನಡೆಯಿತು ಎಂದು ನನಗೆ ಹೇಳು.
ಅರ್ಜುನಃ ಕೇಶವಸ್ಯಾತ್ಮಾ ಕೃಷ್ಣಶ್ಚಾಪ್ಯಾತ್ಮಾ ಕಿರೀಟಿನಃ |
ಅರ್ಜುನೇ ವಿಜಯೋ ನಿತ್ಯಂ ಕೃಷ್ಣೇ ಕೀರ್ತಿಶ್ಚ ಶಾಶ್ವತೀ ॥40॥
ಅರ್ಜುನನು ಕೇಶವನ ಆತ್ಮನಾಗಿದ್ದಾನೆ. ಕೃಷ್ಣನೂ ಸಹ ಅರ್ಜುನನ ಆತ್ಮನಾಗಿದ್ದಾನೆ. ಅರ್ಜುನನಲ್ಲಿ ಯಾವಾಗಲೂ ವಿಜಯವಿದೆ ಮತ್ತು ಕೃಷ್ಣನಲ್ಲಿ ಶಾಶ್ವತವಾದ ಕೀರ್ತಿ ಇದೆ.
ಪ್ರಾಧಾನ್ಯೇನ ತು ಭೂಯಿಷ್ಠಾ ಅಮೇಯಾಃ ಕೇಶವೇ ಗುಣಾಃ |
ಮೋಹಾತ್ ತು ವಶಿನಂ ಕೃಷ್ಣಂ ನ ಸರ್ವೋ ವೇತ್ತಿ ಮಾಧವಮ್ ॥
ಕೇಶವನಲ್ಲಿ ಪ್ರಧಾನವಾಗಿರುವ ಗುಣಗಳು ಅಸಂಖ್ಯಾತವಾಗಿವೆ. ಮೋಹಕ್ಕೆ ಒಳಗಾದ ಎಲ್ಲ ಮನುಷ್ಯರು ಸರ್ವವಶಿಯಾದ ಮಾಧವನನ್ನು ತಿಳಿಯುವುದಿಲ್ಲ.
ಮೋಹಿತೋ ದೈವಯೋಗೇನ ಮೃತ್ಯುಪಾಶಪುರಸ್ಕೃತಃ |
ಮೋಹಾತ್ ದುರ್ಯೋಧನಃ ಕೃಷ್ಣಂ ಯೋ ನ ವೇತ್ತೀಹ ಕೇಶವಮ್ ॥
ನ ವೇದ ಕೃಷ್ಣಂ ದಾಶಾರ್ಹಮ್ ಅರ್ಜುನಂ ಚೈವ ಪಾಂಡವಮ್ |
ಪೂರ್ವದೇವೌ ಮಹಾತ್ಮಾನೌ ನರನಾರಾಯಣಾವುಭೌ |
ಏಕಾತ್ಮಾನೌ ದ್ವಿಧಾಭೂತೌ ದೃಶ್ಯೇತೇ ಮಾನವೈರ್ಭುವಿ ॥ 43 ॥
ಯಾವನು ಕೇಶವನನ್ನು ಸರಿಯಾಗಿ ತಿಳಿಯುವುದಿಲ್ಲವೋ ಅಂತಹವನು ಮೃತ್ಯುಪಾಶದಿಂದ ಬದ್ಧನಾಗಿ ದೈವಯೋಗದಿಂದ ಮೋಹಿತನಾಗುತ್ತಾನೆ. ದುರ್ಯೋಧನನೂ ಸಹ ಅಂತಹ ಮೋಹದಿಂದ ಕೃಷ್ಣನನ್ನು ತಿಳಿದಿಲ್ಲ. ಅವನು ದಾಶಾರ್ಹನಾದ ಕೃಷ್ಣನನ್ನೂ ಮತ್ತು ಪಾಂಡುಪುತ್ರನಾದ ಅರ್ಜುನನನ್ನೂ ಸಹ ತಿಳಿದಿಲ್ಲ. ಅವರಿಬ್ಬರೂ ಮಹಾತ್ಮರಾದ, ಪೂರ್ವದೇವತೆಗಳಾದ ನರ-ನಾರಾಯಣರು. ಒಬ್ಬರೇ ಆದ ಅವರನ್ನು ಇಬ್ಬರನ್ನಾಗಿ ಭೂಮಿಯಲ್ಲಿ ಮನುಷ್ಯರು ನೋಡುತ್ತಾರೆ.
ಮನಸಾಽಪಿ ಹಿ ದುರ್ಧರ್ಷೌ ಸೇನಾಮೇತಾಂ ಯಶಸ್ವಿನೌ |
ನಾಶಯೇತಾಮಿಹೇಚ್ಛಂತೌ ಮಾನುಷತ್ವಾಚ್ಚ ನೇಚ್ಛತಃ ॥ 44 ॥
ಕೀರ್ತಿವಂತರಾದ ಮತ್ತು ದುರ್ಧರ್ಷರಾದ ಅವರು ಬಯಸಿದರೆ ತಮ್ಮ ಮನಸ್ಸಿನಿಂದಲೇ ಈ ಸೈನ್ಯವನ್ನು ನಾಶಗೊಳಿಸಬಹುದು. ಆದರೆ ಮನುಷ್ಯರಾಗಿ ಅವತಾರ ಮಾಡಿರುವುದರಿಂದ ಹಾಗೆ ಬಯಸುವುದಿಲ್ಲ.
ಯುಗಸ್ಯೇವ ವಿಪರ್ಯಾಸೋ ಲೋಕಾನಾಮಿವ ಮೋಹನಮ್ |
ಭೀಷ್ಮಸ್ಯ ಚ ವಧಸ್ತಾತ ದ್ರೋಣಸ್ಯ ಚ ಮಹಾತ್ಮನಃ ॥ 45 ॥
ಎಲ್ಲೈ ಪ್ರೀತಿಪಾತ್ರನೇ, ಮಹಾತ್ಮರಾದ ಭೀಷ್ಮರ ಮತ್ತು ದ್ರೋಣರ ವಧೆಯು ಯುಗದ ವ್ಯತ್ಯಾಸರೂಪವಾಗಿ ಲೋಕಕ್ಕೆ ಮೋಹವನ್ನುಂಟು ಮಾಡುವುದಾಗಿದೆ.
ನಹ್ಯೇವ ಬ್ರಹ್ಮಚರ್ಯೇಣ ನ ವೇದಾಧ್ಯಯನೇನ ಚ |
ನ ಕ್ರಿಯಾಭಿರ್ನ ಶಸ್ತ್ರೇಣ ಮೃತ್ಯೋರಧ್ವನಿ ಮುಚ್ಯತೇ ॥ 46 ॥
ಬ್ರಹ್ಮಚರ್ಯದಿಂದಾಗಲೀ, ವೇದಾಧ್ಯಯನದಿಂದಾಗಲೀ, ಸತ್ಕರ್ಮ- ಗಳಿಂದಾಗಲೀ, ಶಸ್ತ್ರದಿಂದಾಗಲೀ ಯಾರೂ ಮೃತ್ಯುವಿನ ಮಾರ್ಗದಿಂದ ಬಿಡುಗಡೆಯನ್ನು ಹೊಂದುವುದಿಲ್ಲ.
ಲೋಕಸಂಭಾವಿತೌ ವೀರೌ ಕೃತಾಸ್ತ್ರೌ ಯುದ್ಧದುರ್ಮದೌ |
ಭೀಷ್ಮದ್ರೋಣೌ ಹತೌ ಶ್ರುತ್ವಾ ಕಿಂ ನು ಜೀವಾಮಿ ಸಂಜಯ ॥ 47 ॥

ಎಲೈ ಸಂಜಯನೇ, ಎಲ್ಲ ಲೋಕದಿಂದಲೂ ಪೂಜಿತರಾದ, ಶಸ್ತ್ರಪಾರಂಗತರಾದ, ಯುದ್ಧದುರ್ಮದರಾದ, ವೀರರಾದ,
ಭೀಷ್ಮ-ದ್ರೋಣರು ಹತರಾದರು ಎಂದು ಕೇಳಿ ನಾನು ಏಕೆ ಬದುಕಿದ್ದೇನೆ?
ಯಾಂ ತಾಂ ಶ್ರಿಯಮಸೂಯಾಮಃ ಪಾಂಡವಸ್ಯ ಮಹಾತ್ಮನಃ |
ಅದ್ಯ ತಾಮನುಜಾನೀಮೋ ಭೀಷ್ಮದ್ರೋಣವಧೇನ ಹ ॥ 48 ॥
ನಾವು ಮಹಾತ್ಮನಾದ ಪಾಂಡವನ ಯಾವ ಸಂಪತ್ತನ್ನು ನೋಡಿ ಅಸೂಯೆ ಪಟ್ಟೆವೋ ಈ ದಿನ ಭೀಷ್ಮ-ದ್ರೋಣರ ವಧೆಯಿಂದ ಆ ಸಂಪತ್ತು ಅವನಲ್ಲಿಯೇ ಇರಲಿ ಎಂದು ಅನುಮೋದಿಸುತ್ತಿದ್ದೇವೆ.
ತಥಾ ಚ ಮತ್ಕೃತೇ ಪ್ರಾಪ್ತಃ ಕುರೂಣಾಮೇಷ ಸಂಕ್ಷಯಃ |
ಪಕ್ವಾನಾಂ ಹಿ ವಧೇ ಸೂತ ವಜ್ರಾಯಂತೇ ತೃಣಾನ್ಯಪಿ ॥ 49 ॥
ಅದರಂತೆ ನನ್ನ ನಿಮಿತ್ತದಿಂದಾಗಿ ಕುರುಗಳ ಈ ವಿನಾಶವು ಪ್ರಾಪ್ತವಾಗಿದೆ. ಎಲೈ ಸೂತನೇ, ಪಕ್ವವಾದ ಹಣ್ಣುಗಳನ್ನು ಕೆಡವುವದರಲ್ಲಿ ತೃಣಗಳೂ ಸಹ ವಜ್ರಾಯುಧಗಳಂತಾಗುತ್ತವೆ.
ಅನಂತಮಿದಮೈಶ್ವರ್ಯಂ ಲೋಕೇ ಪ್ರಾಪ್ತೋ ಯುಧಿಷ್ಠಿರಃ |
ಯಸ್ಯ ಕೋಪಾನ್ಮಹೇಷ್ವಾಸೌ ಭೀಷ್ಮದ್ರೋಣೌ ನಿಪಾತಿತೌ ॥ 50 ॥
ಅನಂತವಾದ ಈ ಐಶ್ವರ್ಯವನ್ನು ಪ್ರಪಂಚದಲ್ಲಿ ಯುಧಿಷ್ಠಿರನು ಪಡೆದಿದ್ದಾನೆ. ಅವನ ಕೋಪದಿಂದ (ಕೋಪದಿಂದಲೇ) ಮಹಾಧನುರ್ಧಾರಿಗಳಾದ ಭೀಷ್ಮ- ದ್ರೋಣರು ನಿಪಾತವನ್ನು ಹೊಂದಿದ್ದಾರೆ.
ಪ್ರಾಪ್ತಃ ಪ್ರಕೃತಿತೋಽಧರ್ಮೋ ಮಾ ಧರ್ಮೋ ಮಾನವಾನ್ ಪ್ರತಿ |
ಕ್ರೂರಃ ಸರ್ವವಿನಾಶಾಯ ಕಾಲೋಽಯಂ ನಾತಿವರ್ತತೇ ॥ 51 ॥
ಮನುಷ್ಯರಿಗೆ ಸ್ವಾಭಾವಿಕವಾಗಿಯೇ ಅಧರ್ಮವು ಬರುತ್ತದೆ; ಧರ್ಮವು ಬರುವುದಿಲ್ಲ. ಸರ್ವವಿನಾಶಕ್ಕಾಗಿ ಒದಗಿರುವ ಈ ಕ್ರೂರವಾದ ಕಾಲವು (ನಮ್ಮನ್ನು ವಿನಾಶ ಮಾಡದೆ) ಮುಂದೆ ಹೋಗುವುದಿಲ್ಲ.
ಅನ್ಯಥಾ ಚಿಂತಿತಾ ಹ್ಯರ್ಥಾ ನರೈಸ್ತಾತ ತಪಸ್ವಿಭಿಃ |
ಅನ್ಯಥೈವ ಹಿ ಗಚ್ಛಂತಿ ದೈವಾದಿತಿ ಮತಿರ್ಮಮ ॥ 52 ॥
ಎಲೈ ಪ್ರೀತಿಪಾತ್ರನೇ, ತಪಸ್ವಿಗಳು ಬೇರೆ ರೀತಿಯಲ್ಲಿ ಯೋಚಿಸಿದ ಅರ್ಥಗಳು ದೈವದಿಂದ ಬೇರೆಯ ಮಾರ್ಗದಲ್ಲಿಯೇ ಹೋಗುತ್ತವೆ ಎಂದು ನನ್ನ ಅಭಿಪ್ರಾಯ.
ತಸ್ಮಾದಪರಿಹಾರ್ಯೇಽರ್ಥೇ ಸಂಪ್ರಾಪ್ತಂ ಕೃಚ್ಛ್ರಮುತ್ತಮಮ್ |
ಅವಾರಣೀಯೇ ದುಶ್ಚಿಂತ್ಯೇ ಯಥಾಭೂತಂ ಪ್ರಚಕ್ಷ ೆವ ಮೇ ॥ 53 ॥
ಆದ್ದರಿಂದ ಪರಿಹಾರ ಮಾಡಲು ಅಸಾಧ್ಯವಾದ, ಚಿಂತೆ ಮಾಡಿದರೂ ದುಃಖವನ್ನು ಕೊಡುವ ಶ್ರೇಷ್ಠವಾದ ಸಂಕಟವು ಪ್ರಾಪ್ತವಾಗಿದೆ. ಯುದ್ಧವು ಹೇಗೆ ನಡೆಯಿತೆಂದು ನನಗೆ ಹೇಳು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದಶಮೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *

ಹನ್ನೊಂದನೆಯ ಅಧ್ಯಾಯ
ದುರ್ಯೋಧನ ಪ್ರೇರಿತರಾದ ದ್ರೋಣರಿಂದ ಯುಧಿಷ್ಠಿರನನ್ನು
ಜೀವ ಸಹಿತವಾಗಿ ಹಿಡಿಯುವ ಪ್ರತಿಜ್ಞೆ.
ಸಂಜಯಃ
ಸೇನಾಪತಿತ್ವಂ ಸಂಪ್ರಾಪ್ಯ ದ್ರೋಣೋ ಹರ್ಷಮುಪೇಯಿವಾನ್ |
ಮಧ್ಯೇ ಸೈನ್ಯಸ್ಯ ರಾಜಾನಮಿದಂ ವಚನಮಬ್ರವೀತ್ ॥ 1 ॥
ಸಂಜಯ ಸೇನಾಪತಿ ಪಟ್ಟವನ್ನು ಪಡೆದ ದ್ರೋಣರು ಹರ್ಷಗೊಂಡರು. ಸೈನ್ಯದ ಮಧ್ಯದಲ್ಲಿ ರಾಜನಾದ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದರು.
ಯತ್ ಕೌರವಾಣಾಮೃಷಭಾದಾಪಗೇಯಾದನಂತರಮ್ |
ಸೇನಾಪತ್ಯೇನ ಮಾಂ ರಾಜನ್ನದ್ಯ ಸತ್ಕೃತವಾನಸಿ ॥ 2 ॥
ಅನುರೂಪಂ ಫಲಂ ತಸ್ಯ ಕರ್ಮಣೋ ಲಭ್ಯತಾಂ ತ್ವಯಾ |
ಸದೃಶಂ ಕರ್ಮಣಸ್ತಸ್ಯ ಫಲಮಾಪ್ನುಹಿ ಪಾರ್ಥಿವ |
ಕರೋಮಿ ಕಾಮಂ ಕಂ ತೇಽದ್ಯ ಪ್ರವೃಣೀಷ್ವ ಯಮಿಚ್ಛಸಿ ॥ 3 ॥|
ಕೌರವಶ್ರೇಷ್ಠರಾದ, ಗಂಗಾಸುತರಾದ ಭೀಷ್ಮರ ಅನಂತರ ಎಲೈ ರಾಜನೇ, ಈ ದಿನ ನೀನು ನನ್ನನ್ನು ಸೇನಾಪತಿಯನ್ನಾಗಿ ಮಾಡಿ ಗೌರವಿಸಿದ್ದೀಯೆ. ಈ ಕಾರ್ಯಕ್ಕೆ ಅನುಗುಣವಾದ ಫಲವು ನಿನ್ನಿಂದ ಹೊಂದಲ್ಪಡಲಿ. ಎಲೈ ರಾಜನೇ, ಈ ಕಾರ್ಯಕ್ಕೆ ಸದೃಶವಾದ ಫಲವನ್ನು ನೀನು ಹೊಂದುವವನಾಗು. ನಾನು ನಿನಗೆ ಈ ದಿನ ಯಾವ ಆಸೆಯನ್ನು ಪೂರೈಸಲಿ? ನೀನು ಬಯಸುವ ವರವನ್ನು ಕೇಳು.
ಸಂಜಯಃ
ತತೋ ದುರ್ಯೋಧನೋ ರಾಜಾ ಕರ್ಣದುಃಶಾಸನಾದಿಭಿಃ |
ಸಮ್ಮಂತ್ರ್ಯೋವಾಚ ದುರ್ಧರ್ಷಮಾಚಾರ್ಯಂ ಜಯತಾಂ ವರಮ್ ॥

ಸಂಜಯ ಆಗ ರಾಜನಾದ ದುರ್ಯೋಧನನು ಕರ್ಣ-ದುಶ್ಶಾಸನಾದಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ದುರ್ಧರ್ಷರೂ, ಜಯಿಸುವವರಲ್ಲಿ ಶ್ರೇಷ್ಠರೂ ಆದ ಆಚಾರ್ಯರನ್ನು ಕುರಿತು ಮಾತನಾಡಿದನು.
ದದಾಸಿ ಚೇದ್ ವರಂ ಮಹ್ಯಂ ಜೀವಗ್ರಾಹಂ ಯುಧಿಷ್ಠಿರಮ್ |
ಗೃಹೀತ್ವಾ ರಥಿನಾಂ ಶ್ರೇಷ್ಠಂ ಮತ್ಸಕಾಶಮಿಹಾನಯ ॥ 5 ॥
ನನಗೆ ವರವನ್ನು ಕೊಡುವುದಾದರೆ ರಥಿಶ್ರೇಷ್ಠನಾದ ಯುಧಿಷ್ಠಿರನನ್ನು ಜೀವಸಹಿತನಾಗಿ ಹಿಡಿದು ಇಲ್ಲಿ ನನ್ನ ಸಮೀಪಕ್ಕೆ ತನ್ನಿ.
ಇಚ್ಛೇಯಂ ವೈ ಮಹಾರಾಜಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ಭ್ರಾತೄಣಾಂ ಪಶ್ಯತಾಮೇವ ಜೀವಗ್ರಾಹೇಣ ಮೇ ದ್ವಿಜ |
ಪ್ರೀಣಾಮ್ಯನೇನ ಕಾರ್ಯೇಣ ಸಸುಹೃಜ್ಜನಬಾಂಧವಃ ॥ 6 ॥
ಎಲೈ ಬ್ರಾಹ್ಮಣರೇ, ಸೋದರರು ನೋಡುತ್ತಿರುವಂತೆಯೇ ಧರ್ಮಾತ್ಮನಾದ, ಮಹಾರಾಜನಾದ ಯುಧಿಷ್ಠಿರನನ್ನು ಜೀವಸಹಿತವಾಗಿ ಹಿಡಿಯುವುದನ್ನು ನಾನು ಬಯಸುವೆನು. ನಾನು ನನ್ನ ಸುಹೃಜ್ಜನ ಮತ್ತು ಬಾಂಧವರೊಡನೆ ಈ ಕಾರ್ಯದಿಂದ ಸಂತೋಷಗೊಳ್ಳುವೆನು.
ಸಂಜಯಃ
ತತಃ ಕುರೂಣಾಮಾಚಾರ್ಯಃ ಶ್ರುತ್ವಾ ಪುತ್ರಸ್ಯ ತೇ ವಚಃ |
ಸೇನಾಂ ಪ್ರಹರ್ಷಯನ್ ಸರ್ವಾಮಿದಂ ವಚನಮಬ್ರವೀತ್ ॥ 7 ॥
ಸಂಜಯ ಆಗ ಕುರುಗಳ ಆಚಾರ್ಯರಾದ ದ್ರೋಣರು ನಿನ್ನ ಪುತ್ರನ ಮಾತನ್ನು ಕೇಳಿ ಎಲ್ಲ ಸೈನ್ಯಕ್ಕೂ ಸಂತೋಷವನ್ನುಂಟು ಮಾಡುತ್ತಾ ಈ ಮಾತನ್ನು ಆಡಿದರು.
ಧನ್ಯಃ ಕುಂತೀಸುತೋ ರಾಜನ್ ಯಸ್ಯ ಗ್ರಹಣಮಿಚ್ಛಸಿ |
ನ ವಧಂ ತಸ್ಯ ದುರ್ಧರ್ಷ ವರಮದ್ಯ ಪ್ರಯಾಚಸೇ ॥ 8 ॥
ಎಲೈ ರಾಜನೇ, ಯಾವನ ಗ್ರಹಣವನ್ನು ಬಯಸುವಿಯೋ ಅಂತಹ ಕುಂತೀಪುತ್ರನು ಧನ್ಯನಾದವನು. ಏಕೆಂದರೆ ಎಲೈ ದುರ್ಧರ್ಷನೇ, ನೀನು ಏತಕ್ಕೆ ಅವನ ವಧೆಯನ್ನು ವರವಾಗಿ ಕೇಳುತ್ತಿಲ್ಲ.
ಕಿಮರ್ಥಂ ಚ ನರವ್ಯಾಘ್ರ ನ ವಧಂ ತಸ್ಯ ಕಾಂಕ್ಷಸೇ |
ನಾಶಂಸಸೇ ಕ್ರಿಯಾಮೇತಾಂ ಮಯಿ ದುರ್ಯೋಧನ ಧ್ರುವಮ್ ॥9॥
ಎಲೈ ನರವ್ಯಾಘ್ರನೇ, ಅವನ ವಧೆಯನ್ನು ನೀನು ಏಕೆ ಬಯಸುವುದಿಲ್ಲ? ಎಲೈ ದುರ್ಯೋಧನನೇ, ನಾನು ಅಂತಹ ಕಾರ್ಯವನ್ನು ಮಾಡಬೇಕೆಂದು ನೀನು ಖಂಡಿತವಾಗಿಯೂ ಆಶಿಸುವುದಿಲ್ಲ.
ಆಹೋಸ್ವಿದ್ ಧರ್ಮರಾಜಸ್ಯ ದ್ವೇಷ್ಟಾ ಕಶ್ಚಿನ್ನ ವಿದ್ಯತೇ |
ತಮಿಚ್ಛಸಿ ತ್ವಂ ಜೀವಂತಂ ಕುಲಂ ರಕ್ಷಸಿ ಚಾತ್ಮನಃ ॥ 10 ॥
ಅಥವಾ ಧರ್ಮರಾಜನನ್ನು ದ್ವೇಷಿಸುವವನು ಯಾವನೂ ಇಲ್ಲ. ಆದ್ದರಿಂದ ನೀನು ಅವನು ಜೀವಂತವಾಗಿರುವುದನ್ನು ಬಯಸಿ ನಿನ್ನ ಕುಲವನ್ನು ರಕ್ಷಿಸುತ್ತಿದ್ದೀಯೆ!
ಅಥವಾ ಭರತಶ್ರೇಷ್ಠ ನಿರ್ಜಿತ್ಯ ಯುಧಿ ಪಾಂಡವಾನ್ |
ರಾಜ್ಯಾಂಶಂ ಪ್ರತಿ ದತ್ವಾ ಚ ಸೌಭ್ರಾತ್ರಂ ಕರ್ತುಮಿಚ್ಛಸಿ ॥ 11 ॥
ಎಲೈ ಭರತಶ್ರೇಷ್ಠನೇ, ಅಥವಾ ನೀನು ಯುದ್ಧದಲ್ಲಿ ಪಾಂಡವರನ್ನು ಗೆದ್ದು, ಅವರಿಗೆ ಅವರ ರಾಜ್ಯಭಾಗವನ್ನು ಕೊಟ್ಟು, ನಿನ್ನ ಒಳ್ಳೆಯ ಸಹೋದರ ಭಾವವನ್ನು ತೋರಿಸಲು ಬಯಸುತ್ತಿದ್ದೀಯೆ!
ಧನ್ಯಃ ಕುಂತೀಸುತೋ ರಾಜಾ ಸುಜಾತಾ ತಸ್ಯ ಧೀಮತಃ |
ಅಜಾತಶತ್ರುತಾ ಯಸ್ಯ ಯೇನ ಸಂಸ್ನಿಹ್ಯತೇ ಭವಾನ್ ॥ 12 ॥
ರಾಜನಾದ ಕುಂತೀಪುತ್ರನಾದ ಯುಧಿಷ್ಠಿರನು ಧನ್ಯನಾದವನು. ಮೇಧಾವಿಯಾದ ಅವನ ಅಜಾತಶತ್ರುತ್ವವೂ ಸಹ ಈಗ ಚೆನ್ನಾಗಿ ವ್ಯಕ್ತವಾಗಿದೆ. ಏಕೆಂದರೆ ನೀನು ಅವನ ಜೊತೆಯಲ್ಲಿ ಸ್ನೇಹವನ್ನು ಹೊಂದಿದ್ದೀಯೆ (ಎಂದು ಹೇಳಿದರು).
ಸಂಜಯಃ
ದ್ರೋಣೇನ ಚೈವಮುಕ್ತಸ್ಯ ತವ ಪುತ್ರಸ್ಯ ಭಾರತ |
ಸಹಸಾ ನಿಃಸೃತೋ ಭಾವೋ ಯೋಽಸ್ಯ ನಿತ್ಯಂ ಪ್ರವರ್ತತೇ ॥ 13 ॥
ಸಂಜಯ ಎಲೈ ಭಾರತನೇ, ದ್ರೋಣರಿಂದ ಹೀಗೆ ಹೇಳಲ್ಪಟ್ಟ ನಿನ್ನ ಪುತ್ರನಿಂದ ಅವನ ಮನಸ್ಸಿನಲ್ಲಿ ಯಾವಾಗಲೂ ಇರುವ ಅಭಿಪ್ರಾಯವು ತಕ್ಷಣ ಹೊರಬಿದ್ದಿತು.
ನಾಕಾರೋ ಗೂಹಿತುಂ ಶಕ್ಯೋ ಬೃಹಸ್ಪತಿಸಮೈರಪಿ |
ತಸ್ಮಾತ್ ತವ ಸುತೋ ರಾಜನ್ ಪ್ರಹೃಷ್ಟೋ ವಾಕ್ಯಮಬ್ರವೀತ್ ॥ 14 ॥
ಬೃಹಸ್ಪತಿಗೆ ಸಮರಾದವರೂ ಸಹ ತಮ್ಮ ಹೃದಯದ ಅಭಿಪ್ರಾಯವನ್ನು ಮುಚ್ಚಿಡಲು ಸಾಧ್ಯವಿಲ್ಲ. ಎಲೈ ರಾಜನೇ, ಆದ್ದರಿಂದ ನಿನ್ನ ಪುತ್ರನು ಸಂತೋಷಗೊಂಡು ಮಾತನಾಡಿದನು.
ವಧೇ ಕುಂತೀಸುತಸ್ಯಾಜಾವಾಚಾರ್ಯ ನ ಜಯೋ ಮಮ |
ಹತೇ ಯುಧಿಷ್ಠಿರೇ ಪಾರ್ಥೋ ಹನ್ಯಾತ್ ಸರ್ವಾನ್ ಹಿ ನೋ ಧ್ರುವಮ್ ॥
ಆಚಾರ್ಯರೇ, ಕುಂತೀಸುತನ ವಧೆಯಿಂದ ನನಗೆ ಜಯವುಂಟಾಗುವುದಿಲ್ಲ. ಯುಧಿಷ್ಠಿರನು ಹತನಾದರೆ ಅರ್ಜುನನು ನಮ್ಮೆಲ್ಲರನ್ನೂ ಖಂಡಿತವಾಗಿ ಕೊಂದಾನು!
ನೈವ ಶಕ್ಯೋ ರಣೇ ಸರ್ವೈರ್ನಿಹಂತುಮಮರೈರಪಿ ॥ 16 ॥

ಯದಿ ಸರ್ವೇ ಹನಿಷ್ಯಂತೇ ಪಾಂಡವಾಃ ಸಸುತಾ ಮೃಧೇ |
ತತಃ ಕೃತ್ಸ್ನಂ ವಶೇ ಕೃತ್ವಾ ನಿಃಶೇಷಂ ನೃಪಮಂಡಲಮ್ ॥ 17 ॥
ಸಸಾಗರವನಾಂ ಸ್ಫೀತಾಂ ವಿಜಿತ್ಯ ವಸುಧಾಮಿಮಾಮ್ |
ವಿಷ್ಣುರ್ದಾಸ್ಯತಿ ಕೃಷ್ಣಾಯೈ ಕುಂತ್ಯೈ ವಾ ಪುರುಷೋತ್ತಮಃ ॥ 18 ॥
ಅರ್ಜುನನನ್ನು ಯುದ್ಧದಲ್ಲಿ ಕೊಲ್ಲಲು ದೇವತೆಗಳಿಗೂ ಸಾಧ್ಯವಿಲ್ಲ. ಪಾಂಡವರೆಲ್ಲರೂ ತಮ್ಮ ಪುತ್ರರ ಜೊತೆಯಲ್ಲಿ ಯುದ್ಧದಲ್ಲಿ ಹತರಾದರೆ ಆಗ ಪುರುಷೋತ್ತಮನಾದ ವಿಷ್ಣುವು ರಾಜರ ಸಮೂಹವನ್ನೆಲ್ಲಾ ನಿಶ್ಶೇಷವಾಗಿ ನಾಶ ಮಾಡಿ ಎಲ್ಲವನ್ನೂ ತನ್ನ ವಶವನ್ನಾಗಿ ಮಾಡಿಕೊಂಡು, ಸಾಗರದಿಂದ ಸಹಿತವಾದ, ಈ ಸಂಪದ್ಯುಕ್ತವಾದ ಭೂಮಿಯನ್ನು ಗೆದ್ದು ದ್ರೌಪದಿಗೆ ಅಥವಾ ಕುಂತಿಗೆ ಕೊಡುವನು.
ಯದ್ಯೇಷ ಚೈಷಾಂ ಶೇಷಃ ಸ್ಯಾತ್ ಸ ಏವಾಸ್ಮಾನ್ನ ಶೇಷಯೇತ್ |
ಸತ್ಯಪ್ರತಿಜ್ಞೇ ತ್ವಾನೀತೇ ಪುನರ್ದ್ಯೂತೇನ ನಿರ್ಜಿತೇ ॥ 19 ॥
ತಸ್ಮಿನ್ ಜೀವತಿ ಚಾನೀತೇ ಹ್ಯುಪಾಯೈರ್ಬಹುಭಿಃ ಕೃತೈಃ |
ಪುನರ್ಯಾಸ್ಯಂತ್ಯರಣ್ಯಾಯ ಕೌಂತೇಯಾಸ್ತಮನುವ್ರತಾಃ ॥ 20 ॥
ಒಂದು ಪಕ್ಷ ಪಾಂಡವರ ಸಮೂಹದಲ್ಲಿ ಯಾವನಾದರೂ ಉಳಿದರೆ ಅವನೇ ನಮ್ಮನ್ನು ನಿಶ್ಶೇಷವಾಗಿ ನಾಶಮಾಡುವನು. ಸತ್ಯಪ್ರತಿಜ್ಞೆಯುಳ್ಳ ಯುಧಿಷ್ಠಿರನನ್ನು ಜೀವ ಸಹಿತವಾಗಿ ಹಿಡಿದು, ಅನೇಕ ಉಪಾಯಗಳನ್ನು ಮಾಡಿ, ಪುನಃ ದ್ಯೂತದಲ್ಲಿ ಅವನನ್ನು ಸೋಲಿಸಿದರೆ ಅವನನ್ನು ಅನುಸರಿಸುವ ಪಾಂಡವರೆಲ್ಲರೂ ಪುನಃ ಅರಣ್ಯಕ್ಕೆ ಹೋಗುವರು.
ಸೋಽಯಂ ಮಮ ಜಯೋ ನಿತ್ಯೋ ದೀರ್ಘಕಾಲಂ ಭವಿಷ್ಯತಿ |
ಅತೋ ನ ವಧಮಿಚ್ಛಾಮಿ ಧರ್ಮರಾಜಸ್ಯ ಕರ್ಹಿಚಿತ್ ॥ 21 ॥
ಆಗ ಈ ನನ್ನ ಜಯವು ದೀರ್ಘಕಾಲ ಸ್ಥಾಯಿಯೂ ಮತ್ತು ನಿತ್ಯವೂ ಆಗುವುದು. ಆದ್ದರಿಂದ ಯಾವ ರೀತಿಯಿಂದಲೂ ಧರ್ಮರಾಜನ ವಧೆಯನ್ನು ಬಯಸುವುದಿಲ್ಲ.
ಸಂಜಯಃ
ತಸ್ಯ ಜಿಹ್ಮಮಭಿಪ್ರಾಯಂ ಜ್ಞಾತ್ವಾ ದ್ರೋಣೋಽರ್ಥತತ್ತ್ವವಿತ್ |
ತಂ ವರಂ ಸಾಂತರಂ ತಸ್ಮೈ ದದೌ ಸಂಚಿಂತ್ಯ ಬುದ್ಧಿಮಾನ್ ॥ 22 ॥
ಸಂಜಯ ಅರ್ಥತತ್ವವನ್ನು ತಿಳಿದ ದ್ರೋಣರು ಅವನ ಕುಟಿಲ ಅಭಿಪ್ರಾಯವನ್ನು ತಿಳಿದು, ಮೇಧಾವಿಗಳಾದ ಅವರು ಚೆನ್ನಾಗಿ ಯೋಚಿಸಿ ಅವನಿಗೆ ಪ್ರತಿಬಂಧಕ ಸಹಿತವಾದ ಆ ವರವನ್ನು ಕೊಟ್ಟರು.
ನ ಚೇದ್ ಯುಧಿಷ್ಠಿರಂ ವೀರಃ ಪಾಲಯೇದರ್ಜುನೋ ಯುಧಿ |
ಮನ್ಯಸ್ವ ಪಾಂಡವಶ್ರೇಷ್ಠಮಾನೀತಂ ವಶಮಾತ್ಮನಃ ॥ 23 ॥
ಯುದ್ಧದಲ್ಲಿ ವೀರನಾದ ಅರ್ಜುನನು ಯುಧಿಷ್ಠಿರನನ್ನು ರಕ್ಷಿಸದಿದ್ದರೆ ನಿನ್ನ ವಶಕ್ಕೆ ಪಾಂಡವ ಶ್ರೇಷ್ಠನಾದ ಯುಧಿಷ್ಠಿರನನ್ನು ತಂದಿದ್ದೇನೆ ಎಂದು ತಿಳಿ.
ನ ಹಿ ಪಾರ್ಥೋ ರಣೇ ಯತ್ತಃ ಶಕ್ಯೋ ದೇವಾಸುರೈರಪಿ |
ಪ್ರತ್ಯುದ್ಯಾತುಮತಸ್ತಾತ ನೈತಸ್ಮಾದ್ದರ್ಷಯಾಮ್ಯಹಮ್ ॥ 24 ॥
ಎಲೈ ಪ್ರೀತಿಪಾತ್ರನೇ, ಯುದ್ಧದಲ್ಲಿ ಸನ್ನದ್ಧನಾದ ಅರ್ಜುನನನ್ನು ದೇವಾಸುರರೂ ಎದುರಿಸಲಾರರು. ಆದ್ದರಿಂದ ಇದರಿಂದ (ಅರ್ಜುನನನ್ನು ಸೋಲಿಸಿ) ನಾನು ನಿನ್ನನ್ನು ಸಂತೋಷಪಡಿಸಲಾರೆ.
ಅಸಂಶಯಂ ಸ ಶಿಷ್ಯೋ ಮೇ ಮತ್ಪೂರ್ವಃ ಶಸ್ತ್ರಕರ್ಮಣಿ |
ತರುಣಃ ಸುಕೃತೀ ಯುಕ್ತ ಏಕಾಯನಗತಶ್ಚ ಸಃ ॥ 25 ॥
ನಿಸ್ಸಂಶಯವಾಗಿ ಅವನು ನನ್ನ ಶಿಷ್ಯ. ಶಸ್ತ್ರವಿದ್ಯೆಯಲ್ಲಿ ನಾನೇ ಅವನಿಗೆ ಮೊದಲನೆಯ ಗುರು. ಅವನು ತರುಣನಾದವನು, ಪುಣ್ಯಶಾಲಿಯಾದವನು, ಎಚ್ಚರಿಕೆಯಿಂದ ಇರುವವನು ಮತ್ತು ನನ್ನ ಜೊತೆಯಲ್ಲಿ ಒಟ್ಟಿಗೆ ಕುಳಿತವನು.
ಅಸ್ತ್ರಾಣೀಂದ್ರಾಚ್ಚ ರುದ್ರಾಚ್ಚ ಭೂಯಾಂಸಿ ಸಮವಾಪ್ತವಾನ್ |
ಅಮರ್ಷಿತಶ್ಚ ತೇ ರಾಜನ್ ಸತತಂ ಮರ್ಷಯಾಮ್ಯಹಮ್ ॥ 26 ॥
ಅವನು ಇಂದ್ರನಿಂದಲೂ ಮತ್ತು ರುದ್ರನಿಂದಲೂ ಅನೇಕ ಅಸ್ತ್ರಗಳನ್ನು ಪಡೆದಿದ್ದಾನೆ. ಎಲೈ ರಾಜನೇ, ನಿನ್ನ ಮೇಲೆ ಅವನು ರೋಷವನ್ನು ಹೊಂದಿದ್ದಾನೆ. ಅವನನ್ನು ನಾನು ಯಾವಾಗಲೂ ಸಹಿಸುತ್ತೇನೆ.
ಸ ತ್ವಪಕ್ರಮ್ಯತಾಂ ಯುದ್ಧಾದ್ ಯೇನೋಪಾಯೇನ ಶಕ್ಯತೇ |
ಅಪನೀತೇ ತತಃ ಪಾರ್ಥೇ ಧರ್ಮರಾಜೋ ಜಿತಸ್ತ್ವಯಾ ॥ 27 ॥
ಯಾವುದಾದರೂ ಉಪಾಯದಿಂದ ಅವನನ್ನು ಯುದ್ಧ ಸ್ಥಳದಿಂದ ಬೇರೆ ಕಡೆಗೆ ಕರೆದುಕೊಂಡು ಹೋಗಿ. ಅವನು ಬೇರೆ ಕಡೆಗೆ ಎಳೆದೊಯ್ಯಲ್ಪಟ್ಟರೆ ಧರ್ಮರಾಜನನ್ನು ನೀನು ಗೆದ್ದಿದ್ದೀಯೆ (ಎಂದು ತಿಳಿ).
ಗ್ರಹಣಂ ಹಿ ವಧಾತ್ ತಸ್ಯ ಧರ್ಮರಾಜಸ್ಯ ಮನ್ಯಸೇ |
ಅನೇನೈವಾಭ್ಯುಪಾಯೇನ ಧ್ರುವಂ ಗ್ರಹಣಮೇಷ್ಯತಿ ॥ 28 ॥
ನೀನು ಅವನ ವಧೆಗಿಂತಲೂ ಗ್ರಹಣವನ್ನೇ ಶ್ರೇಷ್ಠವೆಂದು ತಿಳಿದಿದ್ದೀಯೆ. ಈ ಉಪಾಯದಿಂದ ಅವನ ಗ್ರಹಣವು ಖಂಡಿತವಾಗಿ ಸಾಧ್ಯವಾಗುತ್ತದೆ.
ಅಹಂ ಗೃಹೀತ್ವಾ ರಾಜಾನಂ ಸತ್ಯವಾದಿನಮಾಹವೇ |
ಆನಯಿಷ್ಯಾಮಿ ತೇ ರಾಜನ್ ವಶಮದ್ಯ ನ ಸಂಶಯಃ ॥ 29 ॥

ಯದಿ ಸ್ಥಾಸ್ಯತಿ ಸಂಗ್ರಾಮೇ ಮುಹೂರ್ತಮಪಿ ಮೇಽಗ್ರತಃ |
ಅಪನೀತೇ ನರವ್ಯಾಘ್ರೇ ಕುಂತೀಪುತ್ರೇ ಧನಂಜಯೇ || 30 ||
ನರವ್ಯಾಘ್ರನಾದ, ಕುಂತೀಪುತ್ರನಾದ ಧನಂಜಯನು ದೂರ ಸರಿಸಲ್ಪಟ್ಟು ಯುಧಿಷ್ಠಿರನು ಯುದ್ಧದಲ್ಲಿ ನನ್ನ ಎದುರಿಗೆ ಒಂದು ಮುಹೂರ್ತದ ಕಾಲವಾದರೂ ಇರುವುದಾದರೆ ಎಲ್ಲೈ ರಾಜನೇ, ನಾನು ಸತ್ಯವಾದಿಯಾದ ಆ ರಾಜನನ್ನು ಯುದ್ಧದಲ್ಲಿ ಹಿಡಿದು ಈ ದಿನ ನಿನ್ನ ವಶನನ್ನಾಗಿ ಮಾಡುವೆನು. ಇದರಲ್ಲಿ ಸಂಶಯವಿಲ್ಲ.
ಫಲ್ಗುನಸ್ಯ ಸಮಕ್ಷಂ ತು ನಹಿ ಶಕ್ಯೋ ಯುಧಿಷ್ಠಿರಃ |
ಗ್ರಹೀತುಂ ಸಮರೇ ರಾಜನ್ ಸೇಂದ್ರೈರಪಿ ಸುರಾಸುರೈಃ || 31 ||
ಎಲ್ಲೈ ರಾಜನೇ, ಅರ್ಜುನನ ಎದುರಿನಲ್ಲಿ ಮಾತ್ರ ಇಂದ್ರನಿಂದ ಸಹಿತರಾದ ಸುರಾಸುರರಿಂದಲೂ ಯುಧಿಷ್ಠಿರನನ್ನು ಹಿಡಿಯಲು ಸಾಧ್ಯವಿಲ್ಲ.
ಸಂಜಯಃ
ಏವಮುಕ್ತೇ ತದಾ ತಸ್ಮಿನ್ ಯುದ್ಧೇ ದೇವಾಸುರೋಪಮೇ |
ಸಾಂತರಂ ತು ಪ್ರತಿಜ್ಞಾತೇ ರಾಜ್ಞೋ ದ್ರೋಣೇನ ನಿಗ್ರಹೇ |
ಗೃಹೀತಮೇವಾಮನ್ಯಂತ ತವ ಪುತ್ರಾಃ ಸುಬಾಲಿಶಾಃ || 32 ||
ಸಂಜಯ ದ್ರೋಣರು ಹೀಗೆ ಹೇಳುತ್ತಿರಲು, ಆಗ ಧರ್ಮರಾಜನನ್ನು ನಿಗ್ರಹಿಸುವ ವಿಷಯದಲ್ಲಿ ಒಂದು ಪ್ರತಿಬಂಧಕವನ್ನು ಇಟ್ಟು ಪ್ರತಿಜ್ಞೆಯನ್ನು ಮಾಡುತ್ತಿರಲು, ಅತ್ಯಂತ ಬಾಲಿಶರಾದ ನಿನ್ನ ಪುತ್ರರು ಯುಧಿಷ್ಠಿರನು ಸೆರೆಹಿಡಿಯಲ್ಪಟ್ಟಿದ್ದಾನೆ ಎಂದೇ ತಿಳಿದರು.
ತತೋ ದುರ್ಯೋಧನಶ್ಚಾಪಿ ಗ್ರಹಣಂ ಪಾಂಡವಸ್ಯ ತತ್ |
ಸ್ಕಂಧಾವರೇಷು ಸರ್ವೇಷು ಯಥಾಸ್ಥಾನೇಷು ಮಾರಿಷ |
ಸೈನ್ಯಸ್ಥಾನೇಷು ಸರ್ವೇಷು ಘೋಷಯಾಮಾಸ ಪಾರ್ಥಿವಃ || 33 ||
ಎಲ್ಲೈ ಪೂಜ್ಯನೇ, ಆಗ ದುರ್ಯೋಧನನು ಯುಧಿಷ್ಠಿರನ ಆ ಗ್ರಹಣವನ್ನು ತನ್ನ ಎಲ್ಲ ಸೈನ್ಯಶಿಬಿರಗಳಲ್ಲಿಯೂ, ಎಲ್ಲ ಸೈನ್ಯಸ್ಥಾನಗಳಲ್ಲಿಯೂ ಮತ್ತು ಉಳಿದ ಸ್ಥಾನಗಳಲ್ಲಿಯೂ ಘೋಷಣೆ ಮಾಡಿಸಿದನು.
ಪಾಂಡವೇಷು ಚ ಸಾಪೇಕ್ಷಂ ದ್ರೋಣಂ ಜಾನಾತಿ ತೇ ಸುತಃ |
ತತಃ ಪ್ರತಿಜ್ಞಾಸ್ಥೈರ್ಯಾರ್ಥಂ ಸ ಮಂತ್ರೋ ಬಹುಲೀಕೃತಃ || 34 ||
ನಿನ್ನ ಪುತ್ರನು, ದ್ರೋಣರು ಪಾಂಡವರಲ್ಲಿ ಸ್ನೇಹವುಳ್ಳವರು ಎಂದು ತಿಳಿದಿದ್ದಾನೆ. ಆದ್ದರಿಂದ ಅವರ ಪ್ರತಿಜ್ಞೆಯನ್ನು ದೃಢಪಡಿಸಲು ಅವನು ಆ ಮಂತ್ರಾಲೋಚನೆಯನ್ನು ಎಲ್ಲ ಕಡೆಗಳಲ್ಲಿಯೂ ಹರಡಿದನು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಾದಶೋಽಧ್ಯಾಯಃ ||
|| ದ್ರೋಣಾಭಿಷೇಕಪರ್ವಣಿ ಏಕಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ದ್ರೋಣರ ಪ್ರತಿಜ್ಞೆಯನ್ನು ಕೇಳಿದ ಯುಧಿಷ್ಠಿರನಿಗೆ
ಅರ್ಜುನನಿಂದ ಆಶ್ವಾಸನೆ. ಯುದ್ಧಾರಂಭ.
ಸಂಜಯಃ
ತತಸ್ತೇ ಸೈನಿಕಾಃ ಶ್ರುತ್ವಾ ತಂ ಯುಧಿಷ್ಠಿರನಿಗ್ರಹಮ್ |
ಸಿಂಹನಾದರವಾಂಶ್ಚಕ್ರುರ್ಬಾಣಶಂಖರವೈಃ ಸಹ || 1 ||
ಸಂಜಯ ಆಗ (ಕೌರವ) ಸೈನಿಕರು ಯುಧಿಷ್ಠಿರನ ಗ್ರಹಣದ ವಿಷಯದ ಪ್ರತಿಜ್ಞೆಯನ್ನು ಕೇಳಿ ಶಂಖ-ಬಾಣ ಶಬ್ದಗಳ ಜೊತೆಯಲ್ಲಿ ಸಿಂಹನಾದವನ್ನು ಮಾಡಿದರು.
ತತಃ ಸರ್ವಂ ಯಥಾವೃತ್ತಂ ಧರ್ಮರಾಜೇನ ಭಾರತ |
ಆಪ್ತೈಶ್ಚಾರೈಃ ಪರಿಜ್ಞಾತಂ ಭಾರದ್ವಾಜಚಿಕೀರ್ಷಿತಮ್ || 2 ||
ಎಲ್ಲೈ ಭಾರತನೇ, ನಡೆದ ಎಲ್ಲ ವೃತ್ತಾಂತವನ್ನು ಮತ್ತು ದ್ರೋಣರ ಪ್ರತಿಜ್ಞೆಯನ್ನು ಆಪ್ತರಾದ ಗೂಢಚಾರರಿಂದ ಯುಧಿಷ್ಠಿರನು ತಿಳಿದನು.
ತತಃ ಸರ್ವಾನ್ ಸಮಾನಾಯ್ಯ ಭ್ರಾತೄನ್ ಸೈನ್ಯಾಂಶ್ಚ ಭಾರತ |
ಅಬ್ರವೀದ್ ಧರ್ಮರಾಜೋ ವೈ ಧನಂಜಯಮಿದಂ ವಚಃ || 3 ||
ಎಲ್ಲೈ ಭಾರತನೇ, ಆಗ ಎಲ್ಲ ಸಹೋದರರನ್ನು ಮತ್ತು ಸೈನ್ಯವನ್ನು ಕರೆದು ಧರ್ಮರಾಜನು ಅರ್ಜುನನನ್ನು ಕುರಿತು ಈ ಮಾತನ್ನು ಆಡಿದನು.
ಶ್ರುತಂ ತೇ ಪುರುಷವ್ಯಾಘ್ರ ದ್ರೋಣಸ್ಯ ಚ ಚಿಕೀರ್ಷಿತಮ್ |
ಯಥಾ ತನ್ನ ಭವೇತ್ ಸತ್ಯಂ ತಥಾ ನೀತಿರ್ವಿಧೀಯತಾಮ್ || 4 ||
ಪುರುಷವ್ಯಾಘ್ರನೇ, ದ್ರೋಣರ ಸಂಕಲ್ಪವನ್ನು ನೀನು ಕೇಳಿದ್ದೀಯೆ. ಅದು ಸತ್ಯವಾಗದಂತೆ ನೀತಿಯನ್ನು ರೂಪಿಸುವವನಾಗು.
ಸಾಂತರಂ ತು ಪ್ರತಿಜ್ಞಾತಂ ದ್ರೋಣೇನಾಮಿತ್ರಕರ್ಶಿನಾ |
ತಚ್ಚಾಂತರಮಮೋಘೇಷೌ ತ್ವಯಿ ತೇನ ಸಮಾಹಿತಮ್ || 5 ||

ಶತ್ರುಘಾತಕರಾದ ದ್ರೋಣರು ಅಂತರ ಸಹಿತವಾಗಿ (ಒಂದು ಷರತ್ತಿನ ಜೊತೆಯಲ್ಲಿ) ಪ್ರತಿಜ್ಞೆಯನ್ನು ಮಾಡಿದ್ದಾರೆ. ಅವರು ಆ ಅಂತರವನ್ನು ಅಮೋಘ ಬಾಣಗಳುಳ್ಳ ನಿನ್ನಲ್ಲಿ ಇಟ್ಟಿದ್ದಾರೆ.
ತತ್ ತ್ವಮದ್ಯ ಮಹಾಬಾಹೋ ಯುದ್ಧ್ಯಸ್ವ ಮದನಂತರಮ್ |
ಯಥಾ ದುರ್ಯೋಧನಃ ಕಾಮಂ ನೇಮಂ ದ್ರೋಣಾದವಾಪ್ನುಯಾತ್ ॥
ಎಲೈ ಮಹಾಬಾಹುವೇ, ದುರ್ಯೋಧನನು ದ್ರೋಣರಿಂದ ತನ್ನ ಈ ಕಾಮವನ್ನು ಪಡೆಯದಂತೆ ನೀನು ಈ ದಿನ ನನ್ನ ಸಮೀಪದಲ್ಲಿಯೇ ಯುದ್ಧವನ್ನು ಮಾಡು (ಎಂದು ಹೇಳಿದನು).
ಅರ್ಜುನಃ
ಯಥಾ ನ ಮೇ ವಧಃ ಕಾರ್ಯ ಆಚಾರ್ಯಸ್ಯ ಕಥಂಚನ |
ತಥಾ ತವ ಪರಿತ್ಯಾಗೋ ನ ಮೇ ರಾಜಂಶ್ಚಿಕೀರ್ಷಿತಃ ॥ 7 ॥
ಅರ್ಜುನ ಹೇಗೆ ನಾನು ಆಚಾರ್ಯರ ವಧೆಯನ್ನು ಯಾವ ರೀತಿಯಿಂದಲೂ ಮಾಡುವುದಿಲ್ಲವೋ ಹಾಗೆಯೇ ಎಲೈ ರಾಜನೇ, ಹಾಗೆ ನಿನ್ನ ಪರಿತ್ಯಾಗವನ್ನು ಮಾಡಲೂ ಬಯಸುವುದಿಲ್ಲ.
ಅದ್ಯೈವ ಪಾಂಡವ ಪ್ರಾಣಾನುತ್ಸ ೃಜೇಯಮಹಂ ಯುಧಿ |
ಪ್ರತಿಯಾತಾಽಹಮಾಚಾರ್ಯಂ ತ್ವಾಂ ನ ಜಹ್ಯಾಂ ಕಥಂಚನ ॥ 8 ॥
ಎಲೈ ಪಾಂಡವನೇ, ನಾನು ಆಚಾರ್ಯರ ಮೇಲೆ ಹೋಗಿ ಯುದ್ಧವನ್ನು ಮಾಡುವುದಾದರೆ ಈ ದಿನವೇ ಪ್ರಾಣಗಳನ್ನು ಬಿಟ್ಟೇನು. ನಾನು ಯಾವ ರೀತಿಯಿಂದಲೂ ನಿನ್ನನ್ನು ಬಿಟ್ಟು ದೂರ ಹೋಗುವುದಿಲ್ಲ.
ತ್ವಾಂ ನಿಗೃಹ್ಯಾಹವೇ ರಾಜನ್ ಧಾರ್ತರಾಷ್ಟ್ರೋ ಯಮಿಚ್ಛತಿ |
ನ ಸ ತಂ ಜೀವಲೋಕೇಽಸ್ಮಿನ್ ಕಾಮಂ ಪ್ರಾಪ್ತಾ ಕಥಂಚನ ॥ 9 ॥
ಎಲೈ ರಾಜನೇ, ನಿನ್ನನ್ನು ಹಿಡಿದು ದುರ್ಯೋಧನನು ಯಾವ ಕಾಮವನ್ನು ಪಡೆಯಲು ಬಯಸುತ್ತಾನೆಯೋ ಈ ಜೀವಲೋಕದಲ್ಲಿ ಅವನು ಅದನ್ನು ಯಾವ ರೀತಿಯಿಂದಲೂ ಹೊಂದುವುದಿಲ್ಲ.
ಪ್ರಪತೇದ್ ದ್ಯೌಃ ಸನಕ್ಷತ್ರಾ ಪೃಥಿವೀ ಶಕಲೀಭವೇತ್ |
ನ ತ್ವಾಂ ದ್ರೋಣೋ ನಿಗೃಹ್ಣೀಯಾತ್ ಜೀವಮಾನೇ ಮಯಿ ಧ್ರುವಮ್ ॥
ನಕ್ಷತ್ರದಿಂದ ಕೂಡಿದ ಆಕಾಶವು ಬಿದ್ದೀತು, ಭೂಮಿಯು ಪುಡಿಯಾದೀತು, ಆದರೆ ನಾನು ಬದುಕಿರುವಾಗ ದ್ರೋಣರು ಖಂಡಿತವಾಗಿ ನಿನ್ನನ್ನು ಹಿಡಿಯಲಾರರು.
ಯದಿ ತಸ್ಯ ರಣೇ ಸಾಹ್ಯಂ ಕುರುತೇ ವಜ್ರಭೃತ್ ಸ್ವಯಮ್ |
ವಿಷ್ಣುರ್ವಾ ಸಹಿತೋ ದೇವೈರ್ನ ತ್ವಾಂ ಪ್ರಾಪ್ತಾ ಹ್ಯಸೌ ರಣೇ ॥ 11 ॥
ಒಂದು ಪಕ್ಷ ಯುದ್ಧದಲ್ಲಿ ವಜ್ರಧರನಾದ ಇಂದ್ರನೇ ಆಗಲಿ ಅಥವಾ ದೇವತೆಗಳಿಂದ ಸಹಿತನಾದ ವಿಷ್ಣುವೇ ಆಗಲಿ, ಅವರಿಗೆ ಸಹಾಯವನ್ನು ಮಾಡಿದರೂ ಅವರು ರಣರಂಗದಲ್ಲಿ ನಿನ್ನನ್ನು ಹೊಂದುವುದಿಲ್ಲ.
ಮಯಿ ಜೀವತಿ ರಾಜೇಂದ್ರ ನ ಭಯಂ ಕರ್ತುಮರ್ಹಸಿ |
ದ್ರೋಣಾದಸ್ತ್ರಭೃತಾಂ ಶ್ರೇಷ್ಠಾತ್ ಸರ್ವಶಸ್ತ್ರಭೃತಾಮಪಿ ॥ 12 ॥
ಎಲೈ ರಾಜೇಂದ್ರನೇ, ನಾನು ಬದುಕಿರುವಾಗ ಅಸ್ತ್ರಧಾರಿಗಳಲ್ಲಿ ಮತ್ತು ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರಿಂದ ನೀನು ಭಯಪಡುವ ಕಾರಣವಿಲ್ಲ.
ಅನ್ಯಚ್ಚ ಬ್ರೂಯಾಂ ರಾಜೇಂದ್ರ ಪ್ರತಿಜ್ಞಾ ಮಮ ನಿತ್ಯದಾ |
ನ ಸ್ಮರಾಮ್ಯನೃತಂ ಪ್ರೋಕ್ತಂ ನ ಸ್ಮರಾಮಿ ಪರಾಜಯಮ್ |
ನ ಸ್ಮರಾಮಿ ಪ್ರತಿಶ್ರುತ್ಯ ಕಿಂಚಿದಪ್ಯನೃತಂ ಕೃತಮ್ ॥ 13 ॥
ಎಲೈ ರಾಜೇಂದ್ರನೇ, ನನ್ನ ಇನ್ನೊಂದು ನಿತ್ಯವಾದ ಪ್ರತಿಜ್ಞೆಯನ್ನು ಹೇಳುವೆನು ನಾನು ಎಂದಾದರೂ ಸುಳ್ಳು ಹೇಳಿದುದು ನನ್ನ ಸ್ಮರಣೆಯಲ್ಲಿಲ್ಲ. ಪರಾಜಯವೂ ನನ್ನ ಸ್ಮರಣೆಯಲ್ಲಿಲ್ಲ. ಪ್ರತಿಜ್ಞೆಯನ್ನು ಮಾಡಿ ಅದನ್ನು ವ್ಯರ್ಥಗೊಳಿಸಿರುವುದನ್ನೂ ನಾನು ಸ್ಮರಿಸುವುದಿಲ್ಲ.
ಸಂಜಯಃ
ತತಃ ಶಂಖಾಶ್ಚ ಭೇರ್ಯಶ್ಚ ಮೃದಂಗಾಶ್ಚ ಸಹಸ್ರಶಃ |
ಪ್ರಾವಾದ್ಯಂತ ಮಹಾರಾಜ ಪಾಂಡವಾನಾಂ ನಿವೇಶನೇ ॥ 14 ॥
ಸಿಂಹನಾದಶ್ಚ ಸಂಜಾತಃ ಪಾಂಡವಾನಾಂ ಮಹಾತ್ಮನಾಮ್ |
ಧನುರ್ಜ್ಯಾತಳಶಬ್ದಶ್ಚ ಗಗನಸ್ಪೃಕ್ ಸುಭೈರವಃ ॥ 15 ॥
ಸಂಜಯ ಎಲೈ ಮಹಾರಾಜನೇ, ಆಗ ಪಾಂಡವರ ಬಿಡಾರಗಳಲ್ಲಿ ಶಂಖ- ಭೇರಿ ಮತ್ತು ಮೃದಂಗಗಳು ಸಹಸ್ರ ಸಂಖ್ಯೆಯಲ್ಲಿ ಊದಲ್ಪಟ್ಟವು ಮತ್ತು ಬಾರಿಸಲ್ಪಟ್ಟವು. ಮಹಾತ್ಮರಾದ ಪಾಂಡವರ ಸಿಂಹನಾದವು ಉಂಟಾಯಿತು. ಧನುಸ್ಸುಗಳ ಮತ್ತು ತಳಗಳ ಭಯಂಕರವಾದ ಶಬ್ದವು ಆಕಾಶವನ್ನು ಮುಟ್ಟಿತು.
ತಂ ಶ್ರುತ್ವಾ ಶಂಖನಿರ್ಘೋಷಂ ಪಾಂಡವಸ್ಯ ಮಹೌಜಸಃ |
ತ್ವದೀಯೇಷ್ವಪಿ ಸೈನ್ಯೇಷು ವಾದಿತ್ರಾಣ್ಯಭಿಜಘ್ನಿರೇ ॥ 16 ॥
ಮಹಾಸಾಮರ್ಥ್ಯಶಾಲಿಯಾದ ಯುಧಿಷ್ಠಿರನ ಶಂಖಘೋಷವನ್ನು ಕೇಳಿ ನಿನ್ನ ಸೈನ್ಯಗಳಲ್ಲಿಯೂ ವಾದ್ಯಗಳು ಬಾರಿಸಲ್ಪಟ್ಟವು.
ತತೋ ವ್ಯೂಢಾನ್ಯನೀಕಾನಿ ತವ ತೇಷಾಂ ಚ ಭಾರತ |
ಶನೈರುಪೇಯುರನ್ಯೋನ್ಯಂ ಯೋತ್ಸ್ಯಮಾನಾನಿ ಸಂಯುಗೇ ॥ 17 ॥

ಎಲೈ ಭಾರತನೇ, ಅನಂತರ ವ್ಯೂಹಗೊಂಡ ನಿನ್ನ ಮತ್ತು ಅವರ ಸೈನ್ಯಗಳು ಯುದ್ಧ ಮಾಡುವವುಗಳಾಗಿ ರಣರಂಗದಲ್ಲಿ ಪರಸ್ಪರವಾಗಿ ನಿಧಾನವಾಗಿ ಸಂಧಿಸಿದವು.
ತತಃ ಪ್ರವವೃತೇ ಯುದ್ಧಂ ತುಮುಲಂ ಲೋಮಹರ್ಷಣಮ್ |
ಪಾಂಡವಾನಾಂ ಕುರೂಣಾಂ ಚ ದ್ರೋಣಪಾಂಚಾಲಯೋರಪಿ ॥ 18 ॥
ಅನಂತರ ಪಾಂಡವರಿಗೂ-ಕುರುಗಳಿಗೂ ಮತ್ತು ದ್ರೋಣರಿಗೂ- ಪಾಂಚಾಲರಿಗೂ ರೋಮಾಂಚಕಾರಿಯಾದ ತೀವ್ರವಾದ ಯುದ್ಧವು ಪ್ರಾರಂಭವಾಯಿತು.
ಯತಮಾನಾಃ ಪ್ರಯತ್ನೇನ ದ್ರೋಣಾನೀಕವಿಶಾತನೇ |
ನ ಶೇಕುಃ ಸೃಂಜಯಾ ರಾಜಂಸ್ತದ್ಧಿ ದ್ರೋಣೇನ ಪಾಲಿತಮ್ ॥ 19 ॥
ಎಲೈ ರಾಜನೇ, ದ್ರೋಣಸೈನ್ಯವನ್ನು ಭೇದಿಸಲು ಪ್ರಯತ್ನಪಟ್ಟರೂ ಹಾಗೆ ಮಾಡಲು ಸೃಂಜಯರು ಸಮರ್ಥರಾಗಲಿಲ್ಲ. ಏಕೆಂದರೆ ಅದು ದ್ರೋಣರಿಂದ ರಕ್ಷಿಸಲ್ಪಟ್ಟಿದ್ದಿತು.
ತಥೈವ ತವ ಪುತ್ರಸ್ಯ ರಥೋದಾರಾಃ ಪ್ರಹಾರಿಣಃ |
ನ ಶೇಕುಃ ಪಾಂಡವೀಂ ಸೇನಾಂ ಪಾಲ್ಯಮಾನಾಂ ಕಿರೀಟಿನಾ ॥ 20 ॥
ಹಾಗೆಯೇ ಪ್ರಹಾರಿಗಳಾದ ನಿನ್ನ ರಥಶ್ರೇಷ್ಠರು ಅರ್ಜುನನಿಂದ ರಕ್ಷಿಸಲ್ಪಡುವ ಪಾಂಡವ ಸೇನೆಯನ್ನು ಭೇದಿಸಲು ಸಮರ್ಥರಾಗಲಿಲ್ಲ.
ತೇ ಸೇನೇ ಸ್ತಿಮಿತೇ ಆಸ್ತಾಂ ಸಂಪ್ರಸಕ್ತೇ ಪರಸ್ಪರಮ್ |
ಸಮಾಸಕ್ತೇ ಯಥಾ ನಕ್ತಂ ವನರಾಜೀ ಸುಪುಷ್ಪಿತೇ ॥ 21 ॥
ಪರಸ್ಪರವಾಗಿ ಸಂಧಿಸಿದ ಈ ಎರಡು ಸೈನ್ಯಗಳು ಒಂದನ್ನೊಂದು ಸಂಧಿಸಿ, ರಾತ್ರಿಯ ಕಾಲದಲ್ಲಿ ಚೆನ್ನಾಗಿ ಪುಷ್ಪಭರಿತವಾದ ಎರಡು ವನಶ್ರೇಣಿಗಳಂತೆ ನಿಶ್ಚಲವಾಗಿದ್ದವು.
ತತೋ ರುಗ್ಮರಥೋ ರಾಜನ್ನರ್ಕೇಣೇವ ವಿರಾಜತಾ |
ವರೂಥಿನೀಂ ವಿನಿಷ್ಪತ್ಯ ವ್ಯಚರತ್ ಪೃತನಾಂತರೇ ॥ 22 ॥
ಆಗ ಎಲೈ ರಾಜನೇ, ರುಗ್ಮರಥರಾದ ದ್ರೋಣರು ಸೂರ್ಯನಂತೆ ವಿರಾಜಿಸುವ ತಮ್ಮ ರಥದಿಂದ ಪಾಂಡವರ ಸೈನ್ಯದ ಮಧ್ಯದಲ್ಲಿ ಪ್ರವೇಶಿಸಿ ಸಂಚರಿಸಿದರು.
ತಮುದ್ಯಂತಂ ರಥೇನೈಕಮಾಶುಕಾರಿಣಮಾಹವೇ |
ಅನೇಕಮಿವ ಸಂತ್ರಾಸಾನ್ಮೇನಿರೇ ಪಾಂಡುಸೃಂಜಯಾಃ ॥ 23 ॥
ಯುದ್ಧದಲ್ಲಿ ಕ್ಷಿಪ್ರಕಾರಿಗಳಾದ, ಒಂದು ರಥದಿಂದ ವಿಜೃಂಭಿಸುತ್ತಿದ್ದ ಅವರೊಬ್ಬರನ್ನು ನೋಡಿ ಹೆದರಿದ ಪಾಂಡು-ಸೃಂಜಯರು ಅವರನ್ನು ಅನೇಕರೆಂದು ತಿಳಿದರು.
ತೇನ ಮುಕ್ತಾಃ ಶರಾ ಘೋರಾ ವಿಚೇರುಃ ಸರ್ವತೋದಿಶಮ್ |
ತ್ರಾಸಯಂತೋ ಮಹಾರಾಜ ಪಾಂಡವೇಯಸ್ಯ ವಾಹಿನೀಮ್ ॥ 24 ॥
ಮಹಾರಾಜನೇ, ಅವರು ಪ್ರಯೋಗಿಸಿದ ಬಲವಾದ ಬಾಣಗಳು ಪಾಂಡವ ಸೈನ್ಯವನ್ನು ಭಯಗೊಳಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಚಲಿಸಿದವು.
ಮಧ್ಯಂದಿನಮನುಪ್ರಾಪ್ತೋ ಗಭಸ್ತಿಶತಸಂವೃತಃ |
ಯಥಾಽದೃಶ್ಯತ ಘರ್ಮಾಂಶುಸ್ತಥಾ ದ್ರೋಣೋಽಪ್ಯದೃಶ್ಯತ ॥ 25 ॥
ನೂರು ಕಿರಣಗಳಿಂದ ಸಂವೃತನಾದ ಮಧ್ಯದಿನಗತನಾದ, ಉಷ್ಣಕಿರಣನಾದ ಸೂರ್ಯನಂತೆ ದ್ರೋಣರು ಕಂಡುಬಂದರು.
ನ ಚೈನಂ ಪಾಂಡವೇಯಾನಾಂ ಕಶ್ಚಿಚ್ಛಕ್ನೋತಿ ಭಾರತ |
ವೀಕ್ಷಿತುಂ ಸಮರೇ ಕ್ರುದ್ಧಂ ಮಹೇಂದ್ರಮಿವ ದಾನವಾಃ ॥ 26 ॥
ಎಲೈ ಭಾರತನೇ, ದಾನವರು ಯುದ್ಧದಲ್ಲಿ ಕೋಪಗೊಂಡ ಮಹೇಂದ್ರನು ನೋಡಲು ಸಾಧ್ಯವಾಗದಂತೆ ಪಾಂಡವರ ಸೈನ್ಯದಲ್ಲಿ ಯಾವನೂ ದ್ರೋಣರನ್ನು ನೋಡಲು ಸಮರ್ಥನಾಗಲಿಲ್ಲ.
ಮೋಹಯಿತ್ವಾ ತತಃ ಸೇನಾಂ ಭಾರದ್ವಾಜಃ ಪ್ರತಾಪವಾನ್ |
ಧೃಷ್ಟದ್ಯುಮ್ನಬಲಂ ತೂರ್ಣಂ ವ್ಯಧಮನ್ನಿಶಿತೈಃ ಶರೈಃ ॥ 27 ॥
ಪ್ರತಾಪಶಾಲಿಯಾದ ದ್ರೋಣರು ಪಾಂಡವರ ಸೇನೆಗೆ ಹೀಗೆ ಮೋಹವನ್ನು ಉಂಟುಮಾಡಿ, ಧೃಷ್ಟದ್ಯುಮ್ನನ ಸೈನ್ಯವನ್ನು ಶೀಘ್ರವಾಗಿ ನಿಶಿತವಾದ ಬಾಣಗಳಿಂದ ನಾಶಮಾಡಿದರು.
ಸ ದಿಶಃ ಸರ್ವತೋ ಗತ್ವಾ ಸಂವೃತ್ಯ ಖಮಜಿಹ್ಮಗೈಃ |
ಪಾರ್ಷತೋ ಯತ್ರ ತತ್ರೈನಾಮಭಿನತ್ ಪಾಂಡುವಾಹಿನೀಮ್ ॥ 28 ॥
ಅವರು ಎಲ್ಲ ದಿಕ್ಕುಗಳಿಗೂ ಹೋಗಿ, ನೇರವಾಗಿ ಸಾಗುವ ಬಾಣಗಳಿಂದ ಆಕಾಶವನ್ನು ಆಚ್ಛಾದಿಸಿ, ಧೃಷ್ಟದ್ಯುಮ್ನನಿದ್ದ ಕಡೆಗೆ ಹೋಗಿ ಪಾಂಡವರ ಸೈನ್ಯವನ್ನು ಭೇದಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಾದಶೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *

ಹದಿಮೂರನೆಯ ಅಧ್ಯಾಯ
ದ್ವೈರಥ ಯುದ್ಧಗಳು ಮತ್ತು ಅಭಿಮನ್ಯುವಿನ ಪರಾಕ್ರಮ
ಸಂಜಯಃ
ತತಃ ಸ ಪಾಂಡವಾನೀಕೇ ಜನಯಂಸ್ತುಮುಲಂ ಭಯಮ್ |
ವ್ಯಧಮತ್ ಪಾಂಡವಾನ್ ದ್ರೋಣೋ ದಹನ್ ಕಕ್ಷಮಿವಾನಲಃ ॥ 1 ॥
ಸಂಜಯ ಆಗ ಆ ದ್ರೋಣರು ಪಾಂಡವರ ಸೈನ್ಯಕ್ಕೆ ತೀವ್ರವಾದ ಭಯವನ್ನುಂಟು ಮಾಡುತ್ತಾ, ಅಗ್ನಿಯು ಹುಲ್ಲುಗಾವಲನ್ನು ಸುಡುವಂತೆ ಪಾಂಡವರ ಸೈನ್ಯವನ್ನು ಪುಡಿಮಾಡಿದರು.
ನಿರ್ದಹಂತಮನೀಕಾನಿ ಸಾಕ್ಷಾದಗ್ನಿಮಿವೋತ್ಥಿತಮ್ |
ದೃಷ್ಟ್ವಾ ರುಗ್ಮರಥಂ ಸಂಖ್ಯೇ ಸಮಕಂಪಂತ ಸೃಂಜಯಾಃ ॥ 2 ॥
ಪ್ರವೃದ್ಧವಾದ ಸಾಕ್ಷಾತ್ ಅಗ್ನಿಯಂತೆ ತಮ್ಮ ಸೈನ್ಯವನ್ನು ಯುದ್ಧದಲ್ಲಿ ಸುಡುತ್ತಿರುವ ರುಗ್ಮರಥರಾದ ದ್ರೋಣರನ್ನು ನೋಡಿ ಸೃಂಜಯರು ನಡುಗಿದರು.
ಸತತಂ ಚಾಸ್ಯಮಾನಸ್ಯ ಧನುಷೋऽಸ್ಯಾಶುಕಾರಿಣಃ |
ಜ್ಯಾಘೋಷಃ ಶುಶ್ರುವೇऽತ್ಯರ್ಥಂ ವಿಸ್ಫೂರ್ಜಿತಮಿವಾಶನೇಃ ॥ 3 ॥
ಸತತವಾಗಿ ಬಾಣಪ್ರಯೋಗವನ್ನು ಮಾಡುವ, ಶೀಘ್ರಕಾರಿಗಳಾದ ದ್ರೋಣರ ಧನುಸ್ಸಿನ ಜ್ಯಾಘೋಷವು ಸಿಡಿಲಿನ ಆರ್ಭಟದಂತೆ ತೀವ್ರವಾಗಿ ಕೇಳಿಬರುತ್ತಿದ್ದಿತು.
ರಥಿನಃ ಸಾದಿನಃ ಪತ್ತೀನ್ ದ್ವಿಪಾನ್ ದ್ವಿಪಗತಾನಪಿ |
ರೌದ್ರಾ ಹಸ್ತವತಾ ಮುಕ್ತಾಃ ಪ್ರಮಥ್ನಂತಿ ಸ್ಮ ಸಾಯಕಾಃ ॥ 4 ॥
ಪಳಗಿದ ಹಸ್ತವುಳ್ಳ ಅವರಿಂದ ಪ್ರಯೋಗಿಸಲ್ಪಟ್ಟ ಭಯಂಕರವಾದ ಬಾಣಗಳು ರಥಿಕರನ್ನು, ಅಶ್ವಾರೋಹಿಗಳನ್ನು, ಪದಾತಿಗಳನ್ನು, ಗಜಗಳನ್ನು ಮತ್ತು ಗಜಾರೋಹಿಗಳನ್ನು ಮರ್ದಿಸಿದವು.
ನಾನದ್ಯಮಾನಃ ಪರ್ಜನ್ಯಃ ಸಾಶನಿಃ ಶುಚಿಸಂಕ್ಷಯೇ |
ಅಶ್ಮವರ್ಷಮಿವಾವರ್ಷತ್ ಪರೇಷಾಮಾದಧದ್ ಭಯಮ್ ॥ 5 ॥
ಬೇಸಿಗೆಯು ಕಳೆದ ನಂತರ ಸಿಡಿಲಿನಿಂದ ಕೂಡಿದ ಮೋಡಗಳು ಪುನಃ ಪುನಃ ನಾದವನ್ನು ಮಾಡುತ್ತಾ ಕಲ್ಲಿನ ಮಳೆಯನ್ನು ಸುರಿಸಿದಂತೆ ದ್ರೋಣರು ಶತ್ರುಗಳಿಗೆ ಭಯವನ್ನುಂಟು ಮಾಡುತ್ತಾ ಬಾಣಗಳ ಮಳೆಯನ್ನು ಸುರಿಸಿದರು.
ವ್ಯಚರತ್ ಸ ದಿಶಃ ಸರ್ವಾಃ ಸೇನಾಂ ವಿಕ್ಷೋಭಯನ್ನಿವ |
ವರ್ಧಯಾಮಾಸ ಸಂತ್ರಾಸಂ ಶತ್ರೂಣಾಮತಿಮಾನುಷಮ್ ॥ 6 ॥
ಶತ್ರುಸೈನ್ಯವನ್ನು ವಿಕ್ಷೋಭಗೊಳಿಸುತ್ತಾ ಅವರು ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಿದರು ಮತ್ತು ಶತ್ರುಗಳ ಅತಿಮಾನುಷವಾದ ಭಯವನ್ನು ಹೆಚ್ಚಿಸಿದರು.
ತಸ್ಯ ವಿದ್ಯುದಿವಾಭ್ರೇಷು ಚಾಪಂ ಹೇಮಪರಿಷ್ಕೃತಮ್ |
ಭ್ರಾಜಮಾನಂ ರಥೇ ತಸ್ಮಿನ್ ದೃಶ್ಯತೇ ಸ್ಮ ಮಹಾಭಯಮ್ |
ಭ್ರಮದ್ರಥಾಂಬುದೇ ತಸ್ಮಿನ್ ದೃಶ್ಯತೇ ಸ್ಮ ಮಹಾಪ್ರಭಮ್ ॥ 7 ॥
ಅವರ ಆ ರಥದಲ್ಲಿ ಸುವರ್ಣಭೂಷಿತವಾದ, ಮಹಾಭಯವನ್ನುಂಟು ಮಾಡುವ ಅವರ ಧನುಸ್ಸು ಮೋಡಗಳಲ್ಲಿ ಮಿಂಚಿನಂತೆ ಶೋಭಿಸುವುದು ಕಂಡುಬಂದಿತು. ಸಂಚರಿಸುವ ರಥವೆಂಬ ಮೋಡದಲ್ಲಿ ಮಹಾಪ್ರಭೆಯುಳ್ಳ ಅವರ ಧನುಸ್ಸು ಕಂಡುಬರುತ್ತಿದ್ದಿತು.
ಸ ವೀರಃ ಸತ್ಯವಾಕ್ ಪ್ರಾಜ್ಞೋ ಧರ್ಮನಿತ್ಯೋ ದುರಾಸದಃ |
ಯುದ್ಧಕಾಲೇ ಪ್ರಯತ್ನೇನ ರೌದ್ರೀಂ ಪ್ರಾಸ್ಯಂದಯನ್ನದೀಮ್ ॥ 8 ॥
ಅಮರ್ಷಶೈಲಪ್ರಭವಾಂ ಶರವೇಗಮಹಾರವಾಮ್ |
ಬಲೌಘೈಃ ಸರ್ವತಃ ಪೂರ್ಣಾಂ ವೀರವೃಕ್ಷಾಪಹಾರಿಣೀಮ್ ॥ 9 ॥
ಶೋಣಿತೋದಾಂ ರಥಾವರ್ತಾಂ ಹಸ್ತ್ಯಶ್ವಕೃತರೋಧಸಮ್ |
ಕವಚದ್ವೀಪಸಂಯುಕ್ತಾಂ ಮಾಂಸಪಂಕಸಮಾಕುಲಾಮ್ ॥ 10 ॥
ವೀರರೂ, ಸತ್ಯವಚನರೂ, ಪ್ರಾಜ್ಞರೂ, ನಿತ್ಯವೂ ಧರ್ಮಶೀಲರೂ, ಶತ್ರುಗಳಿಂದ ಸಮೀಪಕ್ಕೆ ಬರಲೂ ಸಾಧ್ಯವಿಲ್ಲದವರೂ ಆದ ದ್ರೋಣರು ಯುದ್ಧಕಾಲದಲ್ಲಿ ಪ್ರಯತ್ನಪೂರ್ವಕವಾಗಿ ತಮ್ಮ ಕೋಪವೆಂಬ ಪರ್ವತದಿಂದ ಜನಿಸಿದ, ಶರವೇಗವೆಂಬ ಮಹಾಶಬ್ಧವನ್ನು ಹೊಂದಿದ್ದ ಸೈನ್ಯಗಳೆಂಬಪ್ರವಾಹದಿಂದ ಎಲ್ಲ ಕಡೆಗಳಲ್ಲಿಯೂ ಪೂರ್ಣವಾದ, ವೀರರೆಂಬ ವೃಕ್ಷಗಳನ್ನು ಕೊಚ್ಚಿಕೊಂಡು ಹೋಗುವ, ರಕ್ತವೆಂಬ ಉದಕವುಳ್ಳ, ರಥಗಳೆಂಬ ಸುಳಿಗಳುಳ್ಳ, ಹಸ್ತಿ-ಅಶ್ವಗಳ ಶರೀರವೆಂಬ ತೀರವುಳ್ಳ, ಕವಚವೆಂಬ ದ್ವೀಪವುಳ್ಳ, ಮಾಂಸವೆಂಬ ಕೆಸರಿನಿಂದ ತುಂಬಿದ ಭಯಂಕರವಾದ ನದಿಯನ್ನು ಹರಿಸಿದರು.
ಮೇದೋಮಜ್ಜಾಸ್ಥಿಸಿಕತಾಮ್ ಉಷ್ಣೀಷಚಯಫೇನಿಲಾಮ್ |
ಸಂಗ್ರಾಮರಜಸಾ ಪೂರ್ಣಾಮತ್ಯುಗ್ರಾಂ ವೀರಸೇವಿತಾಮ್ ॥ 11 ॥
ನರನಾಗಾಶ್ವಕಲಿಲಾಂ ಶರವೇಗೌಘವಾಹಿನೀಮ್ |
ಶರೀರದಾರುಸಂಘಾತಾಂ ಭುಜನಾಗಸಮಾಕುಲಾಮ್ ॥ 12 ॥
ಉತ್ತಮಾಂಗೋಪಲಯುತಾಂ ನಿಸ್ತ್ರಿಂಶಝಷಸೇವಿತಾಮ್ |
ರಥನಾಗಹ್ರದೋಪೇತಾಂ ನಾನಾಭರಣನೀರಜಾಮ್ ॥ 13 ॥
ಮೇದಸ್ಸು, ಮಜ್ಜಾ ಮತ್ತು ಅಸ್ಥಿಗಳೆಂಬ ಮರಳುಳ್ಳ, ಉಷ್ಣೀಷಗಳ ಸಮೂಹವೆಂಬ ನೊರೆಯುಳ್ಳ, ಯುದ್ಧದಲ್ಲಿ ಎದ್ದ ಧೂಳಿನಿಂದ

ತುಂಬಿದ, ವೀರರಿಂದ ಸೇವಿತವಾದ, ಬಹಳ ಉಗ್ರವಾದ, ಪದಾತಿ-ಗಜಾಶ್ವಗಳಿಂದ ನಿಬಿಡವಾದ, ಶರವೇಗಗಳೆಂಬ ಪ್ರವಾಹವನ್ನು ಹೊಂದಿದ, ಶರೀರವೆಂಬ ಮರಗಳಿಂದ ಕೂಡಿದ, ಭುಜಗಳೆಂಬ ಸರ್ಪಗಳಿಂದ ಕೂಡಿದ, ಶಿರಸ್ಸುಗಳೆಂಬ ಕಲ್ಲುಗಳಿಂದ ಕೂಡಿದ, ಖಡ್ಗಗಳೆಂಬ ಮಕರಗಳಿಂದ ಕೂಡಿದ, ರಥ-ಗಜಗಳೆಂಬ ಮಡುಗಳಿಂದ ಕೂಡಿದ, ನಾನಾಭರಣವೆಂಬ ಕಮಲಗಳಿಂದ ಕೂಡಿದ (ಭಯಂಕರವಾದ ನದಿಯನ್ನು ಹರಿಸಿದರು).
ಮಹಾರಥಶತಾವರ್ತಾಂ ಭೂಮಿರೇಣೂರ್ಮಿಮಾಲಿನೀಮ್ |
ಮಹಾವೀರ್ಯವತಾಂ ಸಂಖ್ಯೇ ಸುತರಾಂ ಭೀರುದುಸ್ತರಾಮ್ ॥ 14 ॥
ಶರೀರಶತಸಂಬಾಧಾಂ ಗೃಧ್ರಕಂಕನಿಷೇವಿತಾಮ್ |
ಮಹಾರಥಸಹಸ್ರಾಣಿ ನಯಂತೀಂ ಯಮಸಾದನಮ್ ॥ 15 ॥
ಶೂರವ್ಯಾಲಮೃಗಾಕೀರ್ಣಾಂ ಪ್ರಾಣಿವಾರಿಜಸೇವಿತಾಮ್ |
ಛಿನ್ನಚ್ಛತ್ರಮಹಾಹಂಸಾಂ ಮುದ್ಗರೋಡುಪಸಂಕುಲಾಮ್ ॥ 16 ॥
ಮಹಾರಥರೆಂಬ ನೂರಾರು ಸುಳಿಗಳನ್ನುಳ್ಳ, ಭೂಮಿಯ ಧೂಳೆಂಬ ಅಲೆಗಳ ಮಾಲೆಗಳನ್ನುಳ್ಳ, ಭೀರುಗಳು ದಾಟಲು ಸಾಧ್ಯವಿಲ್ಲದ, ಮಹಾಪರಾಕ್ರಮಶಾಲಿಗಳು ಮಾತ್ರ ಯುದ್ಧದಲ್ಲಿ ದಾಟಬಹುದಾದ, ನೂರಾರು ಶರೀರಗಳಿಂದ ಕೂಡಿದ, ಹದ್ದು-ಕಂಕ ಮೊದಲಾದ ಪಕ್ಷಿಗಳಿಂದ ಸೇವಿತವಾದ, ಸಾವಿರಾರು ಮಹಾರಥರನ್ನು ಯಮಲೋಕಕ್ಕೆ ಸೆಳೆದುಕೊಂಡು ಹೋಗುವ, ಶೂರರೆಂಬ ವ್ಯಾಳಮೃಗಗಳಿಂದ ತುಂಬಿದ, ಪ್ರಾಣಿಗಳೆಂಬ ಕಮಲಗಳಿಂದ ಕೂಡಿದ, ಕತ್ತರಿಸಲ್ಪಟ್ಟ ಛತ್ರವೆಂಬ ಮಹಾಹಂಸಗಳಿಂದ ಕೂಡಿದ, ಮುದ್ಗರಗಳೆಂಬ ಚಂದ್ರನಿಂದ ಕೂಡಿದ (ಘೋರವಾದ ನದಿಯನ್ನು ಹರಿಸಿದರು).
ಚಕ್ರಕೂರ್ಮಾಂ ಗದಾನಕ್ರಾಂ ಶರಶಂಕುಝಷಾಕುಲಾಮ್ |
ಬಲಗೃಧ್ರಸೃಗಾಲಾನಾಂ ಘೋರೈಃ ಸಂಘೈರ್ನಿಷೇವಿತಾಮ್ ॥ 17 ॥
ನಿಹತಾನ್ ಪ್ರಾಣಿನಃ ಸಂಖ್ಯೇ ದ್ರೋಣೇನ ಬಲಿನಾ ರಣೇ |
ವಹಂತೀಂ ಪಿತೃಲೋಕಾಯ ಶತಶೋ ರಾಜಸತ್ತಮ ॥ 18 ॥
ಶರೀರಶತಸಂಬಾಧಾಂ ಕೇಶಶೈವಲಶಾದ್ವಲಾಮ್ ನದೀಂ |
ಪ್ರಾಸ್ಯಂದಯದ್ ದ್ರೋಣಃ ಭೀರೂಣಾಂ ಭಯವರ್ಧಿನೀಮ್ ॥ 19 ॥
ಚಕ್ರಗಳೆಂಬ ಕೂರ್ಮಗಳನ್ನುಳ್ಳ, ಗಜಗಳೆಂಬ ಮೊಸಳೆಗಳನ್ನುಳ್ಳ, ಶರ-ಶಂಕುಗಳೆಂಬ ಮೀನುಗಳನ್ನು ಹೊಂದಿದ, ಬಲ-ಗುಧ್ರ ಮತ್ತು ನದಿಗಳ ಘೋರವಾದ ಸಮೂಹಗಳಿಂದ ಸೇವಿತವಾದ, ಬಲಿಷ್ಠರಾದ ದ್ರೋಣರಿಂದ ರಣರಂಗದಲ್ಲಿ ನಿಧನರಾದ ಪ್ರಾಣಿಗಳನ್ನು ನೂರಾರು ಸಂಖ್ಯೆಯಲ್ಲಿ ಯಮಲೋಕಕ್ಕೆ ಸೆಳೆದುಕೊಂಡು ಹೋಗುವ, ನೂರಾರು ಶರೀರಗಳಿಂದ ನಿಬಿಡವಾದ, ಕೇಶಗಳೆಂಬ ಪಾಚಿ ಮತ್ತು ಮೃದುಪ್ರದೇಶಗಳನ್ನು ಹೊಂದಿದ, ಭೀರುಗಳಿಗೆ ಭಯವನ್ನು ಹೆಚ್ಚಿಸುವ ಘೋರವಾದ ನದಿಯನ್ನು ಎಲೈ ರಾಜಶ್ರೇಷ್ಠನೇ, ದ್ರೋಣರು ಹರಿಸಿದರು.
ಸಾ ತದಾ ಪ್ರಾಣಿನಃ ಸಂಖ್ಯೇ ದ್ರೋಣೇನ ಬಲಿನಾ ಕೃತಾ |
ಉವಾಹ ಶತಶೋ ರಾಜನ್ ಪಿತೃಲೋಕಾಯ ವಾಹಿನೀ ॥ 20 ॥
ಎಲೈ ರಾಜನೇ, ಯುದ್ಧದಲ್ಲಿ ಬಲಿಷ್ಠರಾದ ದ್ರೋಣರು ಸೃಷ್ಟಿಸಿದ ಆ ನದಿಯು ನೂರಾರು ಸಂಖ್ಯೆಯಲ್ಲಿ ಪ್ರಾಣಿಗಳನ್ನು ಯಮಲೋಕಕ್ಕೆ ಎಳೆದುಕೊಂಡು ಹೋಯಿತು.
ಶರೀರಶತಸಂಬಾಧಾ ಕ್ರವ್ಯಾದಗಣಸಂಕುಲಾ |
ಬಭೂವ ಸಾ ನದೀ ರಾಜನ್ ಭೀರೂಣಾಂ ಘೋರದರ್ಶನಾ ॥ 21 ॥
ರಾಜನೇ, ನೂರಾರು ಶರೀರಗಳಿಂದ ನಿಬಿಡವಾದ, ಮಾಂಸಾಹಾರಿ ಪ್ರಾಣಿಗಳಿಂದಲೂ ಮತ್ತು ಪಕ್ಷಿಗಳಿಂದಲೂ ತುಂಬಿದ ಆ ನದಿಯು ಭೀರುಗಳಿಗೆ ನೋಡಲು ಭಯಂಕರವಾಗಿ ತೋರುತ್ತಿದ್ದಿತು.
ತರ್ಜಯಂತಮನೀಕಾನಿ ತಾನಿ ತಾನಿ ನರರ್ಷಭ |
ಸರ್ವತೋಽಭ್ಯದ್ರವನ್ ದ್ರೋಣಂ ಯುಧಿಷ್ಠಿರಪುರೋಗಮಾಃ ॥ 22 ॥
ನರರ್ಷಭನೇ, ತಮ್ಮ ಆಯಾ ಸೈನ್ಯಗಳನ್ನು ಭಯಗೊಳಿಸುತ್ತಾ ಎಲ್ಲ ಕಡೆಯಲ್ಲಿಯೂ ಸಂಚರಿಸುವ ದ್ರೋಣರ ಕಡೆಗೆ ಯುಧಿಷ್ಠಿರ ಮೊದಲಾದವರು ಮುನ್ನುಗ್ಗಿದರು.
ತಾನಭಿದ್ರವತಃ ಶೂರಾಂಸ್ತಾವಕಾ ಜಿತಕಾಶಿನಃ |
ಸರ್ವತಃ ಪ್ರತ್ಯಗೃಹ್ಣಂಸ್ತೇ ತದಾಽಭೂದ್ ರೋಮಹರ್ಷಣಮ್ ॥ 23 ॥
ತಮ್ಮ ಕಡೆಗೆ ಬರುತ್ತಿದ್ದ ಆ ಪಾಂಡವರನ್ನು, ಜಯವನ್ನು ಬಯಸುವ ನಿನ್ನ ಶೂರರು ಎಲ್ಲ ಕಡೆಗಳಲ್ಲಿಯೂ ಸ್ವೀಕರಿಸಿದರು. ಆಗ ರೋಮಾಂಚ ಉಂಟಾಯಿತು.
ಯತಮಾನಸ್ತು ಶಕುನಿಃ ಸಹದೇವಮುಪಾದ್ರವತ್ |
ಸಾದಿಯಂತೃಧ್ವಜಹಯಂ ವಿವ್ಯಾಧ ನಿಶಿತೈಃ ಶರೈಃ ॥ 24 ॥
ಶಕುನಿಯು ಪ್ರಯತ್ನಪಟ್ಟು ಸಹದೇವನನ್ನು ಸಮೀಪಿಸಿ, ಅವನ ಅಶ್ವ- ಸಾರಥಿ-ಧ್ವಜ ಸಹಿತವಾದ ರಥವನ್ನು ನಿಶಿತವಾದ ಬಾಣಗಳಿಂದ ಹೊಡೆದನು.
ತಸ್ಯ ಮಾದ್ರೀಸುತಃ ಕೇತುಂ ಧನುಸ್ಸೂತಂ ಹಯಾನಪಿ |
ನಾತಿಕ್ರುದ್ಧಃ ಶರೈಶ್ಛಿತ್ತ್ವಾ ಷಷ್ಟ್ಯಾ ವಿವ್ಯಾಧ ಸೌಬಲಮ್ ॥25॥
ಮಾದ್ರೀಸುತನಾದ ಸಹದೇವನು ಬಹಳ ಕೋಪಗೊಳ್ಳದೆ ಅವನ ಧ್ವಜ, ಧನುಸ್ಸು, ಸಾರಥಿ ಮತ್ತು ಅಶ್ವಗಳನ್ನು ಬಾಣಗಳಿಂದ ಕತ್ತರಿಸಿ, ಅವನ ಮೇಲೆ ಅರವತ್ತು ಬಾಣಗಳನ್ನು ಪ್ರಯೋಗಿಸಿದನು.

ಗದಾಂ ಗೃಹೀತ್ವಾ ಶಕುನಿಃ ಪ್ರಚಸ್ಕಂದ ರಥೋತ್ತಮಾತ್ |
ಸ ತಯಾ ಗದಯಾ ರಾಜನ್ ಸೂತಮಾಪಾತಯದ್ ರಥಾತ್ ॥ 26 ॥
ರಾಜನೇ, ಗದೆಯನ್ನು ಹಿಡಿದು ತನ್ನ ಶ್ರೇಷ್ಠ ರಥದಿಂದ ಕೆಳಗಿಳಿದ ಶಕುನಿಯು ಆ ಗದೆಯಿಂದ ಸಹದೇವನ ರಥದ ಸಾರಥಿಯನ್ನು ಭೂಮಿಯ ಮೇಲೆ ಕೆಡವಿದನು.
ವಿರಥೌ ರಥಿನಾಂ ಶ್ರೇಷ್ಠೌ ಗದಾಹಸ್ತೌ ಮಹಾಬಲೌ |
ಚಿಕ್ರೀಡತುಃ ರಣೇ ರಾಜನ್ ಸಶೃಂಗಾವಿವ ಪರ್ವತೌ ॥ 27 ॥
ರಾಜನೇ, ರಥವನ್ನು ಕಳೆದುಕೊಂಡ ಮಹಾಬಲರಾದ ಆ ಇಬ್ಬರು ರಥಶ್ರೇಷ್ಠರು ಕೈಯಲ್ಲಿ ಗದೆಗಳನ್ನು ಹಿಡಿದು, ಶಿಖರಸಹಿತವಾದ ಪರ್ವತದಂತೆ ರಣರಂಗದಲ್ಲಿ ಆಟವಾಡಿದರು.
ತಯೋಸ್ತತ್ರ ಮಹಾರಾಜ ಬಾಣವರ್ಷೈಃ ಪ್ರಕಾಶಿತಮ್ |
ಖದ್ಯೋತೈರಿವ ಚಾಕಾಶಂ ಪ್ರದೋಷೇ ಪುರುಷರ್ಷಭ ॥ 28 ॥
ಎಲೈ ಮಹಾರಾಜನೇ, ಪುರುಷಶ್ರೇಷ್ಠನೇ, ಅವರು ಬಾಣಗಳಿಂದ ಯುದ್ಧ ಮಾಡುವಾಗ ಸಾಯಂಕಾಲ ಸಮಯದಲ್ಲಿ ಆಕಾಶವು ಮಿಣುಕು ಹುಳಗಳಿಂದ ಶೋಭಿಸಿದಂತೆ ಅವರ ಬಾಣಗಳ ಮಳೆಯಿಂದ ಶೋಭಿಸುತ್ತಿದ್ದಿತು.
ದ್ರೋಣಃ ಪಾಂಚಾಲರಾಜಾನಂ ವಿದ್ಧ್ವಾ ದಶಭಿರಾಶುಗೈಃ |
ಬಹುಭಿಸ್ತೇನ ಚಾಭ್ಯಸ್ತಸ್ತಂ ವಿವ್ಯಾಧ ಶತಾಧಿಕೈಃ ॥ 29 ॥
ದ್ರೋಣರು ಪಾಂಚಾಲ ರಾಜನಾದ ದ್ರುಪದನನ್ನು ಶೀಘ್ರಗಾಮಿಗಳಾದ ಹತ್ತು ಬಾಣಗಳಿಂದ ಹೊಡೆದು, ಅವನಿಂದಲೂ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟು ಪುನಃ ಅವನನ್ನು ನೂರಕ್ಕಿಂತಲೂ ಹೆಚ್ಚು ಬಾಣಗಳಿಂದ ಹೊಡೆದರು.
ವಿವಿಂಶತಿಂ ಭೀಮಸೇನೋ ವಿಂಶತ್ಯಾ ನಿಶಿತೈಃ ಶರೈಃ |
ವಿದ್ಧ್ವಾ ನಾಕಂಪಯದ್ ವೀರಸ್ತದದ್ಭುತಮಿವಾಭವತ್ ॥ 30 ॥
ವೀರನಾದ ಭೀಮಸೇನನು ವಿವಿಂಶತಿಯನ್ನು ನಿಶಿತವಾದ ಇಪ್ಪತ್ತು ಬಾಣಗಳಿಂದ ಹೊಡೆದರೂ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ, ಅದು ಅದ್ಭುತವಾಗಿದ್ದಿತು.
ವಿವಿಂಶತಿಸ್ತು ಸಹಸಾ ವ್ಯಶ್ವಕೇತುಶರಾಸನಮ್ |
ಚಕ್ರೇ ತಂ ಸರ್ವಸೈನ್ಯಾನಿ ಪ್ರಹೃಷ್ಟಾನ್ಯಭ್ಯಪೂಜಯನ್ ॥ 31 ॥
ವಿವಿಂಶತಿಯಾದರೋ ತಕ್ಷಣ ಭೀಮಸೇನನನ್ನು ಅಶ್ವ-ಧ್ವಜ-ಧನುಸ್ಸುಗಳಿಂದ ರಹಿತನನ್ನಾಗಿ ಮಾಡಿದನು. ಅದನ್ನು ನೋಡಿ ಸಂತೋಷಗೊಂಡ ನಿನ್ನ ಸೈನ್ಯಗಳು ಅವನನ್ನು ಪೂಜಿಸಿದವು.
ಸ ತನ್ನ ಮಮೃಷೇ ಭೀಮಃ ಶತ್ರೋರ್ವಿಜಯಮಾಹವೇ |
ತತೋಽಸ್ಯ ಗದಯಾ ದಾಂತಾನ್ ಹಯಾನ್ ಸರ್ವಾನಪೋಥಯತ್ ॥
ಭೀಮಸೇನನು ಯುದ್ಧದಲ್ಲಿ ಶತ್ರುವಿನ ಆ ವಿಜಯವನ್ನು ಸಹಿಸಲಿಲ್ಲ. ಅವನು ವಿವಿಂಶತಿಯ ಪಳಗಿದ ಎಲ್ಲಾ ಅಶ್ವಗಳನ್ನೂ ಸಂಹರಿಸಿದನು.
ಹತಾಶ್ವಾತ್ ಸ ರಥಾದ್ ರಾಜನ್ ಗೃಹ್ಯ ಚರ್ಮ ಮಹಾಬಲಃ |
ಅಭ್ಯಯಾದ್ ಭೀಮಸೇನಂ ತು ಮತ್ತೋ ಮತ್ತಮಿವ ದ್ವಿಪಮ್ ॥
ಮಹಾಬಲನಾದ ವಿವಿಂಶತಿಯು ಅಶ್ವಹೀನವಾದ ರಥದಿಂದ ಖಡ್ಗ-ಚರ್ಮಗಳನ್ನು ಹಿಡಿದು ಕೆಳಗೆ ಬಂದು ಒಂದು, ಮದಗಜವು ಇನ್ನೊಂದು ಮದಗಜವನ್ನು ಸಮೀಪಿಸಿದಂತೆ ಭೀಮಸೇನನ ಕಡೆಗೆ ನುಗ್ಗಿದನು.
ಭೂರಿಶ್ರವಾ ರಣೇ ರಾಜನ್ ಯಾಜ್ಞಸೇನಿಂ ಮಹಾರಥಮ್ |
ಮಹತಾ ಸಾಯಕೌಘೇನ ಚ್ಛಾದಯಾಮಾಸ ವೀರ್ಯವಾನ್ ॥ 34 ॥
ರಾಜನೇ, ಪರಾಕ್ರಮಶಾಲಿಯಾದ ಭೂರಿಶ್ರವನು ತನ್ನ ಬಾಣಗಳ ದೊಡ್ಡ ಸಮೂಹದಿಂದ ಮಹಾರಥನಾದ, ಯಜ್ಞಸೇನನ ಪುತ್ರನಾದ ಶಿಖಂಡಿಯನ್ನು ಯುದ್ಧದಲ್ಲಿ ಮುಚ್ಚಿಹಾಕಿದನು.
ಶಿಖಂಡೀ ತು ತತಃ ಕ್ರುದ್ಧಃ ಸೌಮದತ್ತಿಂ ವಿಶಾಂಪತೇ |
ಛಾದಯಾಮಾಸ ನಾರಾಚೈಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 35 ॥
ರಾಜನೇ, ಶಿಖಂಡಿಯಾದರೋ ಆಗ ಕ್ರುದ್ಧನಾಗಿ ಸೌಮದತ್ತಿಯನ್ನು ನಾರಾಚಗಳಿಂದ ಮುಚ್ಚಿ ನಿಲ್ಲು, ನಿಲ್ಲು ಎಂದು ಹೇಳಿದನು.
ಋಕ್ಷಚರ್ಮಪಿನದ್ಧೌ ತು ಚಕ್ರತುಸ್ತೌ ಖರಸ್ವನಮ್ |
ಬಾಹ್ಯಮಾಭ್ಯಂತರಂ ಮಾರ್ಗಂ ಸಂಪ್ಲವಂತೌ ಯಶಸ್ವಿನೌ ॥ 36 ॥
ಕರಡಿಯ ಚರ್ಮವನ್ನು ಧರಿಸಿದ್ದ ಕೀರ್ತಿವಂತರಾದ ಅವರಿಬ್ಬರೂ ಘೋರವಾದ ನಾದವನ್ನು ಮಾಡಿ, ಒಳಗಿನ ಮತ್ತು ಹೊರಗಿನ ಮಾರ್ಗಗಳಲ್ಲಿ ಚಲಿಸುತ್ತಾ ತಿರುಗಾಡಿದರು.
ಯುದ್ಧಂ ಯೋಧವರೌ ಲೋಕೇ ಸೌಮದತ್ತಿಶಿಖಂಡಿನೌ |
ಭೂತಾನಾಂ ತ್ರಾಸಜನನಂ ಚಕ್ರಾತೇಽಸ್ತ್ರವಿಶಾರದೌ ॥ 37 ॥
ಅಸ್ತ್ರವಿಶಾರದರೂ, ಯೋಧಶ್ರೇಷ್ಠರೂ ಆದ ಭೂರಿಶ್ರವ ಮತ್ತು ಶಿಖಂಡಿ ಇವರು ಲೋಕದಲ್ಲಿ ಭೂತಗಳಿಗೆ ಭಯವನ್ನುಂಟು ಮಾಡುವಂತೆ ಯುದ್ಧವನ್ನು ಮಾಡಿದರು.
ಭೂರಿಶ್ರವಾ ರಣೇ ರಾಜನ್ ಯಾಜ್ಞಸೇನಿಂ ಮಹಾರಥಮ್ |
ಮಹತಾ ಸಾಯಕೌಘೇನ ಛಾದಯಾಮಾಸ ವೀರ್ಯವಾನ್ ॥ 38 ॥
ರಾಜನೇ, ಪರಾಕ್ರಮಶಾಲಿಯಾದ ಭೂರಿಶ್ರವನು ರಣರಂಗದಲ್ಲಿ ಮಹಾರಥನಾದ ಶಿಖಂಡಿಯನ್ನು ತನ್ನ ಬಾಣಗಳ ಸಮೂಹದಿಂದ

ಮುಚ್ಚಿದನು.
ಶಿಖಂಡೀ ತು ತತಃ ಕ್ರುದ್ಧಃ ಸೌಮದತ್ತಿಂ ವಿಶಾಂಪತೇ |
ನವತ್ಯಾ ಸಾಯಕಾನಾಂ ತು ಕಂಪಯಾಮಾಸ ಭಾರತ ॥ 39 ॥
ರಾಜನ್, ಭಾರತನೇ, ಶಿಖಂಡಿಯು ಆಗ ಕೋಪಗೊಂಡು ಸೋಮದತ್ತ ಪುತ್ರನಾದ ಭೂರಿಶ್ರವನನ್ನು ತೊಂಬತ್ತು ಬಾಣಗಳನ್ನು ಪ್ರಯೋಗಿಸಿ ನಡುಗಿಸಿದನು.
ದದೃಶಾತೇ ಮಹಾತ್ಮಾನೌ ಸುಪಕ್ಷಾವಿವ ಪಕ್ಷಿಣೌ |
ಪಿಶಿತಾಶನಸಂಯುಕ್ತೌ ವಾಹೈರುಲ್ಬಣಪಾತಿಭಿಃ ॥ 40 ॥
ಆ ಇಬ್ಬರು ಮಹಾತ್ಮರು ಬಾಯಿಯಲ್ಲಿ ಮಾಂಸವನ್ನು ಹಿಡಿದ, ದೂರ ಕರೆದುಕೊಂಡು ಹೋಗುವ ಉತ್ತಮ ಗರಿಗಳಿಂದ ಕೂಡಿದ, ಒಳ್ಳೆಯ ರೆಕ್ಕೆಗಳುಳ್ಳ ಪಕ್ಷಿಗಳಂತೆ ಕಂಡುಬಂದರು.
ಬೃಹತ್ಪತಾಕೌ ತೂಣೀರೌ ಘೋರರೂಪೌ ಭಯಾನಕೌ |
ಕಾಲಮೇಘಾವಿವ ಗತೌ ಲೋಕಾನಾಂ ಭರ್ತ್ಸ್ಯ ಗರ್ಜನೈಃ ॥ 41 ॥
ಅವರು ಬೃಹತ್ಪತಾಕೆಗಳನ್ನು, ಘೋರರೂಪವಾದ ಮತ್ತು ಭಯಂಕರವಾದ ಬತ್ತಳಿಕೆಗಳನ್ನು ಹೊಂದಿ, ತಮ್ಮ ಗರ್ಜನೆಗಳಿಂದ ಯೋಧರನ್ನು ಬೆದರಿಸಿ, ಕಾಲ- ಮೇಘಗಳಂತೆ ಸಂಚರಿಸಿದರು.
ರಥಘೋಷೇಣ ಮಹತಾಽಪ್ಯಾಸ್ಥಿತೌ ಸ್ಯಂದನೋತ್ತಮೌ |
ಬೃಹತ್ಪತಾಕೌ ತೂಣೀರೌ ಪೈಶಾಚೈರ್ವಾಹನೈರ್ಯುತೌ ॥ 42 ॥
ರಾಕ್ಷಸೌ ರೌದ್ರಕರ್ಮಾಣೌ ಹೈಡಿಂಬಾಲಂಬಸಾವುಭೌ |
ಚಕ್ರಾತೇಽತ್ಯದ್ಭುತಂ ಯುದ್ಧಂ ಪರಸ್ಪರವಧೈಷಿಣೌ ॥ 43 ॥
ದೊಡ್ಡ ಪತಾಕೆಗಳಿಂದ ಕೂಡಿದ, ಬತ್ತಳಿಕೆಗಳನ್ನು ಹೊಂದಿದ, ಪೈಶಾಚದೇಶದ ಅಶ್ವಗಳಿಂದ ಹೂಡಲ್ಪಟ್ಟ, ದೊಡ್ಡ ಘೋಷದಿಂದ ಕೂಡಿದ, ಶ್ರೇಷ್ಠವಾದ ರಥಗಳನ್ನು ಏರಿದ, ಭಯಂಕರವಾದ ಕರ್ಮಗಳನ್ನು ಮಾಡುವ ರಾಕ್ಷಸರಾದ ಘಟೋತ್ಕಚ ಮತ್ತು ಅಲಂಬುಸರಿಬ್ಬರೂ ಪರಸ್ಪರ ವಧೆಯನ್ನು ಮಾಡಲು ಬಯಸಿ ಬಹಳ ಅದ್ಭುತವಾದ ಯುದ್ಧವನ್ನು ಮಾಡಿದರು.
ಮಾಯಾಶತಸೃಜೌ ದೃಪ್ತೌ ಮಾಯಾಭಿರಿತರೇತರಮ್ |
ಅಂತರ್ಧಾನೇನ ದೃಷ್ಟ ್ರಾಣಾಂ ಭೃಶಂ ವಿಸ್ಮಯಕಾರಿಣೌ ॥ 44 ॥
ನೂರು ಮಾಯೆಗಳನ್ನು ಸೃಷ್ಟಿಸುವ ದರ್ಪಿಷ್ಠರಾದ ಅವರಿಬ್ಬರು ಪರಸ್ಪರವಾಗಿ ಮಾಯೆಗಳನ್ನು ಮತ್ತು ಅಂತರ್ಧಾನವನ್ನು ಸೃಷ್ಟಿಸಿ ನೋಡುವವರಿಗೆ ಬಹಳ ವಿಸ್ಮಯವನ್ನು ಉಂಟುಮಾಡಿದರು.
ಚೇಕಿತಾನೋಽನುವಿಂದೇನ ಯುಯುಧೇ ತ್ವತಿಭೈರವಮ್ |
ಯಥಾ ದೇವಾಸುರೇ ಯುದ್ಧೇ ಬಲಿಶಕ್ರೌ ಮಹಾಬಲೌ ॥ 45 ॥
ದೇವಾಸುರರ ಯುದ್ಧದಲ್ಲಿ ಮಹಾಬಲಿಷ್ಠರಾದ ಬಲಿ ಮತ್ತು ದೇವೇಂದ್ರರಂತೆ ಚೇಕಿತಾನ ಮತ್ತು ಅನುವಿಂದರು ಅತಿ ಭಯಂಕರವಾದ ಯುದ್ಧವನ್ನು ಮಾಡಿದರು.
ಲಕ್ಷಣಃ ಕ್ಷತ್ರದೇವೇನ ವಿಮರ್ದಮಕರೋನ್ಮಹತ್ |
ಯಥಾ ವಿಷ್ಣುಃ ಪುರಾ ರಾಜನ್ ಹಿರಣ್ಯಾಕ್ಷೇಣ ಸಂಯುಗೇ ॥ 46 ॥
ರಾಜನೇ, ವಿಷ್ಣುವು ಹಿಂದೆ ಹಿರಣ್ಯಾಕ್ಷನ ಜೊತೆಯಲ್ಲಿ ಯುದ್ಧವನ್ನು ಮಾಡಿದಂತೆ ದುರ್ಯೋಧನನ ಪುತ್ರನಾದ ಲಕ್ಷಣನು ಕ್ಷತ್ರದೇವನ ಜೊತೆಯಲ್ಲಿ ದೊಡ್ಡ ಯುದ್ಧವನ್ನು ಮಾಡಿದನು.
ಶಲ್ಯಸ್ತು ನಕುಲಂ ಶೂರಂ ಸ್ವಸ್ರೀಯಂ ಪ್ರಿಯಮಾತ್ಮನಃ |
ವಿವ್ಯಾಧ ಪ್ರಹಸನ್ ಬಾಣೈರ್ಲೀಲಯಾ ಕೋಪಯನ್ನಿವ ॥
ಶಲ್ಯನಾದರೋ ಶೂರನೂ, ತನ್ನ ಸೋದರಳಿಯನೂ, ತನಗೆ ಪ್ರಿಯನೂ ಆದ ನಕುಲನನ್ನು ಕೋಪಗೊಳಿಸುವವನಂತೆ, ಲೀಲೆಯಿಂದ ನಗುತ್ತಾ ಅವನನ್ನು ಬಾಣಗಳಿಂದ ಹೊಡೆದನು.
ತಸ್ಯಾಶ್ವಾನಾತಪತ್ರಂ ಚ ಧ್ವಜಂ ಸೂತಮಥೋ ಧನುಃ |
ನಿಪಾತಯಿತ್ವಾ ನಕುಲೋ ದಧ್ಮೌ ಶಂಖಂ ಮುದಾಽನ್ವಿತಃ ॥ 48 ॥
ನಕುಲನು ಅವನ ಅಶ್ವಗಳನ್ನೂ, ಛತ್ರವನ್ನೂ, ಧ್ವಜವನ್ನೂ, ಸಾರಥಿಯನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿ ಸಂತೋಷದಿಂದ ಕೂಡಿ ಶಂಖವನ್ನು ಊದಿದನು.
ಧೃಷ್ಟಕೇತುಃ ಕೃಪೇಣಾಸ್ತಾನ್ ಛಿತ್ತ್ವಾ ಬಹುವಿಧಾನ್ ಶರಾನ್ |
ಕೃಪಂ ವಿವ್ಯಾಧ ಸಪ್ತತ್ಯಾ ಧ್ವಜಂ ಚಾಸ್ಯ ತ್ರಿಭಿಃ ಶರೈಃ ॥49॥
ಧೃಷ್ಟಕೇತುವು ಕೃಪರು ಪ್ರಯೋಗಿಸಿದ ಅನೇಕ ವಿಧವಾದ ಬಾಣವನ್ನು ಕತ್ತರಿಸಿ, ಕೃಪರ ಮೇಲೆ ಎಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು ಮತ್ತು ಅವರ ರಥದ ಧ್ವಜಕ್ಕೆ ಮೂರು ಬಾಣಗಳಿಂದ ಹೊಡೆದನು.
ತಂ ಕೃಪಃ ಶರವರ್ಷೇಣ ಮಹತಾ ಸಮವಾಕಿರತ್ |
ನಿಹತ್ಯ ತಾನ್ ಶರಾನ್ ಕ್ಷಿಪ್ರಂ ಧೃಷ್ಟಕೇತುರಪೋಥಯತ್ ॥ 50 ॥
ಕೃಪರು ಬಾಣಗಳ ದೊಡ್ಡ ಮಳೆಯನ್ನು ಅವನ ಮೇಲೆ ಸುರಿಸಿದರು. ಧೃಷ್ಟಕೇತುವು ಶೀಘ್ರವಾಗಿ ಆ ಬಾಣಗಳನ್ನೆಲ್ಲಾ ಬಾಣಗಳಿಂದ ಹೊಡೆದು ಪುಡಿ ಮಾಡಿದನು.
ಸಾತ್ಯಕಿಃ ಕೃತವರ್ಮಾಣಂ ನಾರಾಚೇನ ಸ್ತನಾಂತರೇ |
ವಿದ್ಧ್ವಾ ವಿವ್ಯಾಧ ಸಪ್ತತ್ಯಾ ಪುನರನ್ಯೈಃ ಸ್ಮಯನ್ನಿವ ॥ 51 ॥

ಸಾತ್ಯಕಿಯು ಕೃತವರ್ಮನನ್ನು ನಾರಾಚದಿಂದ ಸ್ತನಗಳ ಮಧ್ಯದಲ್ಲಿ ಹೊಡೆದು ಪುನಃ ಬೇರೆ ಎಪ್ಪತ್ತು ಬಾಣಗಳಿಂದ ನಗುತ್ತಾ ಅವನನ್ನು ಹೊಡೆದನು.
ತಂ ಭೋಜಃ ಸಪ್ತಸಪ್ತತ್ಯಾ ವಿದ್ಧ್ವಾ ಸುನಿಶಿತೈಃ ಶರೈಃ |
ನಾಕಂಪಯತ ಶೈನೇಯಂ ವೀರೋ ವಾಯುರ್ಯಥಾಽಚಲಮ್ ||
ಭೋಜನಾದ, ವೀರನಾದ ಕೃತವರ್ಮನು ಅವನನ್ನು ನಿಶಿತವಾದ ಎಪ್ಪತ್ತೇಳು ಬಾಣಗಳಿಂದ ಹೊಡೆದರೂ ವಾಯುವು ಪರ್ವತವನ್ನು ಅಲುಗಾಡಿಸಲು ಸಾಧ್ಯವಾಗದಂತೆ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ.
ಸೇನಾಪತಿಃ ಸುಶರ್ಮಾಣಂ ಭೃಶಂ ಮರ್ಮಣ್ಯತಾಡಯತ್ |
ಸ ಚಾಪಿ ತಂ ತೋಮರೇಣ ಜತ್ರುದೇಶೇಽಭ್ಯತಾಡಯತ್ || 53 ||
ಸೇನಾಪತಿಯಾದ ಧೃಷ್ಟದ್ಯುಮ್ನನು ಸುಶರ್ಮನನ್ನು ಮರ್ಮಗಳಲ್ಲಿ ಚೆನ್ನಾಗಿ ಹೊಡೆದನು. ಸುಶರ್ಮನೂ ಸಹ ಅವನನ್ನು ತೋಮರದಿಂದ ಭುಜಸಂಧಿದೇಶದಲ್ಲಿ ಹೊಡೆದನು.
ವೀರಂ ವೈಕರ್ತನಂ ಕರ್ಣಂ ವಿರಾಟಃ ಪ್ರತ್ಯವಾರಯತ್ |
ಸಹ ಮಾತ್ಸ್ಯೈರ್ಮಹಾವೀರ್ಯೈಃ ತದದ್ಭುತಮಿವಾಭವತ್ || 54 ||
ವೀರನಾದ, ವೈಕರ್ತನನಾದ ಕರ್ಣನನ್ನು ಮಹಾಪರಾಕ್ರಮಿಗಳಾದ ಮತ್ಸ್ಯಯೋಧರ ಜೊತೆಯಲ್ಲಿ ವಿರಾಟನು ತಡೆದನು. ಅದು ಅದ್ಭುತವಾಗಿದ್ದಿತು.
ತತ್ರಾದ್ಭುತಮಪಶ್ಯಾಮ ಸೂತಪುತ್ರಸ್ಯ ಲಾಘವಮ್ |
ಯತ್ ಸೈನ್ಯಂ ವಾರಯಾಮಾಸ ಶರೈಃ ಸನ್ನತಪರ್ವಭಿಃ || 55 ||
ಅಲ್ಲಿ ಸೂತಪುತ್ರನಾದ ಕರ್ಣನ ಬಾಗಿದ ತುದಿಯುಳ್ಳ ಬಾಣಗಳಿಂದ ಆ ಸೈನ್ಯವನ್ನು ತಡೆದ ಅವನ ಅದ್ಭುತವಾದ ಕ್ಷಿಪ್ರತನವನ್ನು ನಾವು ನೋಡಿದೆವು.
ದ್ರುಪದಸ್ತು ಸ್ವಯಂ ರಾಜಾ ಭಗದತ್ತೇನ ಸಂಗತಃ |
ತಯೋರ್ಯುದ್ಧಂ ಮಹಾರಾಜ ಚಿತ್ರರೂಪಮಿವಾಭವತ್ || 56 ||
ಎಲೈ ಮಹಾರಾಜನೇ, ದ್ರುಪದ ರಾಜನು ಸ್ವತಃ ಭಗದತ್ತನ ಜೊತೆಯಲ್ಲಿ ಸಮಾಗಮವನ್ನು ಹೊಂದಿದನು. ಅವರಿಬ್ಬರಿಗೆ ವಿಚಿತ್ರರೂಪವನ್ನು ಹೊಂದಿದ ಯುದ್ಧವು ನಡೆಯಿತು.
ಭಗದತ್ತಸ್ತು ರಾಜಾನಂ ದ್ರುಪದಂ ನತಪರ್ವಭಿಃ |
ಸನಿಯಂತೃಧ್ವಜರಥಂ ವಿವ್ಯಾಧ ಪುರುಷರ್ಷಭಃ || 57 ||
ಪುರುಷಶ್ರೇಷ್ಠನಾದ ಭಗದತ್ತನು ಬಾಗಿದ ತುದಿಯುಳ್ಳ ಬಾಣಗಳಿಂದ ಅವನ ಸಾರಥಿ, ಧ್ವಜ ಮತ್ತು ರಥಗಳಿಂದ ಸಹಿತನಾದ ದ್ರುಪದನನ್ನು ಹೊಡೆದನು.
ದ್ರುಪದಸ್ತು ತತಃ ಕ್ರುದ್ಧೋ ಭಗದತ್ತಂ ಮಹಾರಥಮ್ |
ಆಜಘಾನೋರಸಿ ಕ್ಷಿಪ್ರಂ ಶರೇಣ ನತಪರ್ವಣಾ || 58 ||
ಆಗ ಕೋಪಗೊಂಡ ದ್ರುಪದನು ಮಹಾರಥನಾದ ಭಗದತ್ತನನ್ನು ಬಾಗಿದ ತುದಿಯುಳ್ಳ ಬಾಣದಿಂದ ಶೀಘ್ರವಾಗಿ ಎದೆಯಲ್ಲಿ ಹೊಡೆದನು.
ತತಃ ಪ್ರಜವಿತಾಶ್ವೇನ ವಿಧಿವತ್ ಕಲ್ಪಿತೇನ ಚ |
ರಥೇನಾಭ್ಯದ್ರವದ್ ರಾಜನ್ ಸೌಭದ್ರಂ ಪೌರವೋ ನದನ್ || 59 ||
ಎಲೈ ರಾಜನೇ, ಅನಂತರ ವೇಗಶಾಲಿಗಳಾದ ಅಶ್ವಗಳಿಂದ ವಿಧಿವತ್ತಾಗಿ ಹೂಡಿದ ರಥದಿಂದ ಪೌರವನು ಗರ್ಜಿಸುತ್ತಾ ಅಭಿಮನ್ಯುವಿನ ಮೇಲೆ ಎರಗಿದನು.
ತೇನಾಭಿಯಾತಸ್ತ್ವರಿತಃ ಶತಮನ್ಯೋಃ ಸುತಾತ್ಮಜಃ |
ತಸ್ಮಿಂಶ್ಚಕ್ರೇ ಮಹದ್ ಯುದ್ಧಮ್ ಅಭಿಮನ್ಯುರರಿಂದಮಃ || 60 ||
ಇಂದ್ರನ ಮಗನ ಮಗನಾದ, ಅರಿಂದಮನಾದ ಅಭಿಮನ್ಯುವು ಆ ಪೌರವನು ತನ್ನೆಡೆಗೆ ಓಡಿಬಂದಾಗ ಶೀಘ್ರವಾಗಿ ಅವನ ಜೊತೆಯಲ್ಲಿ ದೊಡ್ಡ ಯುದ್ಧವನ್ನು ಮಾಡಿದನು.
ಪೌರವಸ್ತ್ವಥ ಸೌಭದ್ರಂ ಶರವ್ರಾತೈರವಾಕಿರತ್ |
ತಸ್ಯಾರ್ಜುನಿರ್ಧ್ವಜಂ ಛತ್ರಂ ಧನುಶ್ಚೋರ್ವ್ಯಾಮಪಾತಯತ್ || 61 ||
ಅನಂತರ ಪೌರವನು ಅಭಿಮನ್ಯುವಿನ ಮೇಲೆ ಬಾಣಗಳ ಮಳೆಯನ್ನು ಕರೆದನು. ಅರ್ಜುನ ಪುತ್ರನಾದ ಅಭಿಮನ್ಯುವು ಅವನ ಧ್ವಜ-ಛತ್ರ ಮತ್ತು ಧನುಸ್ಸುಗಳನ್ನು ಭೂಮಿಯ ಮೇಲೆ ಕೆಡವಿದನು.
ಸೌಭದ್ರಃ ಪೌರವಂ ತ್ವನ್ಯೈರ್ವಿದ್ಧ್ವಾ ಸಪ್ತಭಿರಾಶುಗೈಃ |
ಪಂಚಭಿಸ್ತಸ್ಯ ವಿವ್ಯಾಧ ಹಯಾನ್ ಸೂತಂ ಚ ಸಾಯಕೈಃ || 62 ||
ಅಭಿಮನ್ಯುವು ಪೌರವನನ್ನು ಶೀಘ್ರಗಾಮಿಗಳಾದ ಬೇರೆ ಏಳು ಬಾಣಗಳಿಂದ ಹೊಡೆದು, ಐದು ಬಾಣಗಳಿಂದ ಅವನ ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಹೊಡೆದನು.
ತತಃ ಸಂಹರ್ಷಯನ್ ಸೇನಾಂ ಸಿಂಹವದ್ ವಿನದನ್ ಮುಹುಃ |
ಸಮಾಧತ್ತಾರ್ಜುನಿಸ್ತೂರ್ಣಂ ಪೌರವಾಂತಕರಂ ಶರಮ್ || 63 ||
ಆಗ ಅಭಿಮನ್ಯುವು ತನ್ನ ಸೇನೆಗೆ ಸಂತೋಷವನ್ನುಂಟು ಮಾಡುತ್ತಾ, ಸಿಂಹದಂತೆ ಪುನಃ ಪುನಃ ಗರ್ಜಿಸುತ್ತಾ, ಪೌರವನ ಪ್ರಾಣಾಂತಕವಾದ ಬಾಣವನ್ನು ತನ್ನ ಧನುಸ್ಸಿನಲ್ಲಿ ಹೂಡಿದನು.

ತಂ ತು ಸಂಧಿತಮಾಜ್ಞಾಯ ಸಾಯಕಂ ಘೋರದರ್ಶನಮ್ |
ದ್ವಾಭ್ಯಾಂ ಶರಾಭ್ಯಾಂ ಹಾರ್ದಿಕ್ಯಶ್ಚಕರ್ತ ಸಶರಂ ಧನುಃ ॥ 64 ॥
ಘೋರವಾದ ಆ ಬಾಣವು ಧನುಸ್ಸಿನಲ್ಲಿ ಹೂಡಲ್ಪಟ್ಟುದನ್ನು ನೋಡಿ ಕೃತವರ್ಮನು ಎರಡು ಬಾಣಗಳಿಂದ ಬಾಣ ಸಹಿತವಾದ ಧನುಸ್ಸನ್ನು ಕತ್ತರಿಸಿದನು.
ತದುತ್ಸ ೃಜ್ಯ ಧನುಶ್ಛಿನ್ನಂ ಸೌಭದ್ರಃ ಪರವೀರಹಾ |
ಉದ್ವಬರ್ಹ ಶಿತಂ ಖಡ್ಗಮಾದದಾನಃ ಶರಾವರಮ್ ॥ 65 ॥
ಪರವೀರಘಾತಕನಾದ ಅಭಿಮನ್ಯುವು ಕತ್ತರಿಸಲ್ಪಟ್ಟ ಧನುಸ್ಸನ್ನು ಬಿಟ್ಟು ಹರಿತವಾದ ಖಡ್ಗವನ್ನು ಒರೆಯಿಂದ ಎಳೆದು ಗುರಾಣಿಯನ್ನು ತೆಗೆದುಕೊಂಡನು.
ಸ ತೇನಾನೇಕತಾರೇಣ ಚರ್ಮಣಾ ಕೃತಹಸ್ತವತ್ |
ಭ್ರಾಂತಾಸಿನಾಽಚರನ್ಮಾರ್ಗಾನ್ ದರ್ಶಯನ್ ವೀರ್ಯಮಾತ್ಮನಃ ॥
ಅವನು ಸುಶಿಕ್ಷಿತವಾದ ಹಸ್ತವುಳ್ಳವನಾಗಿ ಅನೇಕ ನಕ್ಷತ್ರಗಳನ್ನು ಮೆಟ್ಟಿದ ಗುರಾಣಿ ಮತ್ತು ಕೈಯಲ್ಲಿ ತಿರುಗಿಸುತ್ತಿರುವ ಕತ್ತಿಯಿಂದ ತನ್ನ ಪರಾಕ್ರಮವನ್ನು ತೋರಿಸುತ್ತಾ ವಿವಿಧ ಮಾರ್ಗಗಳಲ್ಲಿ ಸಂಚರಿಸಿದನು.
ಭ್ರಾಮಿತಂ ಪುನರುದ್ಭ್ರಾಂತಮಾಧೂತಂ ಪುನರುಚ್ಛ್ರಿತಮ್ |
ಚರ್ಮನಿಸ್ತ್ರಿಂಶಯೋ ರಾಜನ್ ನಿರ್ವಿಶೇಷಮದೃಶ್ಯತ ॥ 67 ॥
ಎಲೈ ರಾಜನೇ, ಪುನಃ ಮೇಲ್ಭಾಗದಲ್ಲಿ ತಿರುಗಿಸಲ್ಪಟ್ಟ, ಬೀಸಲ್ಪಟ್ಟ, ಪುನಃ ಮೇಲೆ ಎತ್ತಲ್ಪಟ್ಟ ಖಡ್ಗ ಮತ್ತು ಚರ್ಮಗಳಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ.
ಸ ಪೌರವರಥಸ್ಯೇಷಾಮಾಪ್ಲುತ್ಯ ಸಹಸಾ ನದನ್ |
ಪೌರವಂ ರಥಮಾಸ್ಥಾಯ ಕೇಶಪಕ್ಷೇ ಪರಾಮೃಶತ್ ॥ 68 ॥
ಅವನು ತಕ್ಷಣ ಗರ್ಜಿಸುತ್ತಾ ಪೌರವ ರಥದ ಮೂಕಿಯ ಮೇಲೆ ಹಾರಿ ರಥದಲ್ಲಿ ನಿಂತು ಪೌರವನನ್ನು ಅವನ ಕೇಶಗಳಲ್ಲಿ ಹಿಡಿದನು.
ಜಘಾನಾಸ್ಯ ಪದಾ ಸೂತಮಸಿನಾಽಪಾತಯದ್ ಧ್ವಜಮ್ |
ವಿಕ್ಷೋಭ್ಯಾಂಭೋನಿಧಿಂ ತಾಕ್ಷ ರ್ ್ಯಃ ತಂ ನಾಗಮಿವ ಚಾಗ್ರಹೀತ್ ॥69॥
ತನ್ನ ಕಾಲಿನಿಂದ ಒದ್ದು ಅವನ ಸೂತನನ್ನು ಕೊಂದನು. ಅವನ ಧ್ವಜವನ್ನು ಖಡ್ಗದಿಂದ ಕೆಡವಿದನು. ಗರುಡನು ಸಮುದ್ರವನ್ನು ಕಲಕಿ ನಾಗನನ್ನು ಹಿಡಿದಂತೆ ಪೌರವನನ್ನು ಹಿಡಿದನು.
ತಮಾಕುಲಿತಕೇಶಾಂತಂ ದದೃಶುಃ ಸರ್ವಪಾರ್ಥಿವಾಃ |
ಉಕ್ಷಾಣಮಿವ ಸಿಂಹೇನ ಪಾತ್ಯಮಾನಮಚೇತನಮ್ ॥ 70 ॥
ಪೌರವನ ಕೇಶವು ವ್ಯತ್ಯಾಸವಾಗಿರುವುದನ್ನು ಮತ್ತು ಸಿಂಹದಿಂದ ವೃಷಭದಂತೆ ಪ್ರಜ್ಞೆಯಿಲ್ಲದೆ ಕೆಡಹುವುದನ್ನು ಎಲ್ಲ ರಾಜರೂ ನೋಡಿದರು.
ತಮಾರ್ಜುನಿವಶಂ ಪ್ರಾಪ್ತಂ ಕೃಷ್ಯಮಾಣಮನಾಥವತ್ |
ಪೌರವಂ ಪತಿತಂ ದೃಷ್ಟ್ವಾ ನಾಮೃಷ್ಯತ ಜಯದ್ರಥಃ ॥ 71 ॥
ಅಭಿಮನ್ಯುವಿಗೆ ವಶವಾಗಿ ಅನಾಥನಂತೆ ಎಳೆದಾಡಲ್ಪಡುತ್ತಿದ್ದ ಪೌರವನು ಬಿದ್ದುದನ್ನು ನೋಡಿ ಜಯದ್ರಥನು ಸಹಿಸಲಿಲ್ಲ.
ಸ ಬರ್ಹಿಣಮಹಾವಾಜಂ ಕಿಂಕಿಣೀಶತಜಾಲವತ್ |
ಚರ್ಮ ಚಾದಾಯ ಖಡ್ಗಂ ಚ ನದನ್ ಪರ್ಯಪತದ್ ರಥಾತ್ ॥
ಅವನು ಪಕ್ಷಿಗಳ ಗರಿಗಳ ಪುಂಖವನ್ನು ಹೊಂದಿದ್ದ, ನೂರು ಕಿಂಕಿಣಿಗಳ ಮಾಲೆಯನ್ನು ಹೊಂದಿದ್ದ ಚರ್ಮವನ್ನು (ಗುರಾಣಿಯನ್ನು) ಮತ್ತು ಖಡ್ಗವನ್ನು ತೆಗೆದುಕೊಂಡು ಗರ್ಜಿಸುತ್ತಾ ತನ್ನ ರಥದಿಂದ ಹಾರಿ ಬಂದನು.
ಪ್ರಾಸಪಟ್ಟಿಸನಿಸ್ತ್ರಿಂಶಾನ್ ಸೌಭದ್ರೇಣಾಹಿತೇರಿತಾನ್ |
ಅಪಶ್ಯಾಮ ಮಹಾರಾಜ ವಿಧೂತಾನಸಿಚರ್ಮಣಾ ॥ 73 ॥
ಎಲೈ ಮಹಾರಾಜನೇ, ಅಭಿಮನ್ಯುವು ಪ್ರಯೋಗಿಸಿದ ಪ್ರಾಸ, ಪಟ್ಟಿಸ ಮತ್ತು ಖಡ್ಗಗಳು ಜಯದ್ರಥನ ಖಡ್ಗ-ಚರ್ಮಗಳಿಂದ ನಿವಾರಿಸಲ್ಪಡುವುದನ್ನು ನಾವು ನೋಡಿದೆವು.
ದರ್ಶಯನ್ ಸರ್ವಸೈನ್ಯಾನಾಂ ಸ್ವಬಾಹುಬಲಮಾತ್ಮವಾನ್ |
ಉತ್ಪಪಾತ ರಥಾತ್ ತೂರ್ಣಂ ಶ್ಯೇನವನ್ನಿಪಪಾತ ಹ ॥ 74 ॥
ಧೈರ್ಯಶಾಲಿಯಾದ ಅವನು ಎಲ್ಲ ಸೈನ್ಯಗಳಿಗೆ ತನ್ನ ಬಾಹುಬಲವನ್ನು ತೋರಿಸುತ್ತಾ, ರಥದಿಂದ ಶೀಘ್ರವಾಗಿ ಶ್ಯೇನದಂತೆ ಮೇಲಕ್ಕೆ ಹಾರಿ ಪುನಃ ಕೆಳಗೆ ಬರುತ್ತಿದ್ದನು.
ತತಃ ಸೈಂಧವಮಾಲೋಕ್ಯ ಕಾರ್ಷ್ಣಿಃ ಪೌರವಮುತ್ಸ ೃಜನ್ |
ದುಧಾವ ಸಹಸಾ ಖಡ್ಗಂ ಚರ್ಮ ಚಾತಿರಥಃ ಪುನಃ ॥ 75 ॥
ಆಗ ಅಭಿಮನ್ಯುವು ಸೈಂಧವನನ್ನು ನೋಡಿ, ಪೌರವನನ್ನು ಬಿಟ್ಟು ಅತಿರಥನಾದ ಅವನು ಖಡ್ಗ-ಚರ್ಮಗಳನ್ನು ಝಳುಪಿಸಿದನು.
ವೃದ್ಧಕ್ಷತ್ರಸ್ಯ ದಾಯಾದಂ ಪಿತುರತ್ಯಂತವೈರಿಣಮ್ |
ಸಸಾರಾಭಿಮುಖಃ ಶೂರಃ ಶಾರ್ದೂಲ ಇವ ಕುಂಜರಮ್ ॥ 76 ॥
ವೃದ್ಧಕ್ಷತ್ರನ ಪುತ್ರನೂ, ತನ್ನ ತಂದೆಗೆ ಅತ್ಯಂತ ವೈರಿಯೂ ಆದ ಸೈಂಧವನನ್ನು ವ್ಯಾಘ್ರವು ಗಜವನ್ನು ಸಮೀಪಿಸಿದಂತೆ ಅಭಿಮುಖವಾಗಿ ಸಮೀಪಿಸಿದನು.
ತೌ ಪರಸ್ಪರಮಾಸಾದ್ಯ ಖಡ್ಗದಂತನಖಾಯುಧೌ |

ಹೃಷ್ಟವತ್ ಸಂಪ್ರಜಹ್ರಾತೇ ವ್ಯಾಘ್ರಕೇಸರಿಣಾವಿವ ॥ 77 ॥
ಅವರಿಬ್ಬರೂ ವ್ಯಾಘ್ರಸಿಂಹಗಳಂತೆ ಪರಸ್ಪರವಾಗಿ ಸಮೀಪಿಸಿ, ಖಡ್ಗವೆಂಬ ದಂತದಿಂದಲೂ, ನಖವೆಂಬ ಆಯುಧದಿಂದಲೂ ಸಂತೋಷದಿಂದ ಹೊಡೆದಾಡಿದರು.
ಸಂಪಾತೇಷ್ವಭಿಪಾತೇಷು ನಿಪಾತೇಷ್ವಸಿಚರ್ಮಣಾಮ್ |
ನ ತಯೋರಂತರಂ ಕಶ್ಚಿದ್ ದದರ್ಶ ನರಸಿಂಹಯೋಃ ॥ 78 ॥
ನರಶ್ರೇಷ್ಠರಾದ ಅವರಿಬ್ಬರ ಖಡ್ಗಯುದ್ಧದ ಪ್ರಕಾರಗಳಾದ ಸಂಪಾತ, ಅಭಿಪಾತ, ನಿಪಾತಗಳಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ.
ಅವಕ್ಷೇಪೋಽಸಿನಿರ್ಹ್ರಾದಃ ಶಸ್ತ್ರಾಂತರನಿದರ್ಶನಮ್ |
ಬಾಹ್ವಂತರನಿಪಾತಶ್ಚ ನಿರ್ವಿಶೇಷಮದೃಶ್ಯತ ॥ 79 ॥|
ಖಡ್ಗವನ್ನು ಕೆಳಗೆ ಬೀಸುವುದು, ಖಡ್ಗದಿಂದ ಶಬ್ಧವನ್ನುಂಟು ಮಾಡುವುದು, ಖಡ್ಗದಿಂದ ಶಸ್ತ್ರಾಂತರದ ಕಾರ್ಯವನ್ನು ಮಾಡುವುದು, ಬಾಹುಗಳ ಮಧ್ಯದಲ್ಲಿ ಹೊಡೆಯುವುದು - ಇವುಗಳಲ್ಲಿಯೂ ಯಾವ ವ್ಯತ್ಯಾಸವೂ ಕಾಣಲಿಲ್ಲ.
ಬಾಹ್ಯಮಾಭ್ಯಂತರಂ ಮಾರ್ಗಂ ಸಂಪತಂತೌ ಯಶಸ್ವಿನೌ |
ದದೃಶಾತೇ ಮಹಾತ್ಮಾನೌ ಸಪಕ್ಷಾವಿವ ಪರ್ವತೌ ॥ 80 ॥
ಮಹಾತ್ಮರೂ, ಕೀರ್ತಿಶಾಲಿಗಳೂ ಆದ ಅವರು ಒಳಗಿನ ಮತ್ತು ಹೊರಗಿನ ಮಾರ್ಗಗಳಲ್ಲಿ ಸಂಚರಿಸುತ್ತಾ, ರೆಕ್ಕೆಗಳಿಂದ ಕೂಡಿದ ಪರ್ವತಗಳಂತೆ ಕಂಡುಬಂದರು.
ತತೋ ವಿಕ್ಷಿಪತಃ ಖಡ್ಗಂ ಸೌಭದ್ರಸ್ಯ ಯಶಸ್ವಿನಃ |
ಶರಾವರಣಪಕ್ಷಾಂತೇ ಪ್ರಜಹಾರ ಜಯದ್ರಥಃ ॥ 81 ॥|
ಆಗ ಕೀರ್ತಿವಂತನಾದ ಅಭಿಮನ್ಯುವು ಖಡ್ಗವನ್ನು ಬೀಸುತ್ತಿರುವಾಗ ಜಯದ್ರಥನು ಅವನ ಗುರಾಣಿಯ ಪಕ್ಕದ ತುದಿಯನ್ನು ತನ್ನ ಖಡ್ಗದಿಂದ ಹೊಡೆದನು.
ರುಗ್ಮಪಕ್ಷಾಂತರೇ ಸಕ್ತಃ ತಸ್ಮಿಂಶ್ಚರ್ಮಣಿ ಭಾಸ್ವರೇ |
ಸಿಂಧುರಾಜಕರೋದ್ಧೂತಃ ಸೋಽಭಜ್ಯತ ಮಹಾನಸಿಃ ॥ 82 ॥
ಸಿಂಧುರಾಜನಾದ ಜಯದ್ರಥನಿಂದ ಬೀಸಿ ಹೊಡೆಯಲ್ಪಟ್ಟ ಆ ದೊಡ್ಡ ಖಡ್ಗವು, ಅಭಿಮನ್ಯುವಿನ ಪ್ರಕಾಶಮಾನವಾದ ಗುರಾಣಿಯ ಸುವರ್ಣಮಯವಾದ ಪಾರ್ಶ್ವದಲ್ಲಿ ನಾಟಿ ಮುರಿದು ಹೋಯಿತು.
ಭಗ್ನಮಾಜ್ಞಾಯ ನಿಸ್ತ್ರಿಂಶಮವಪ್ಲುತ್ಯ ಪದಾನಿ ಷಟ್ |
ಸೋಽದೃಶ್ಯತ ನಿಮೇಷೇಣ ಸ್ವರಥಂ ಪುನರಾಸ್ಥಿತಃ ॥ 83 ॥
ತನ್ನ ಖಡ್ಗವು ಮುರಿದುದನ್ನು ನೋಡಿ ಜಯದ್ರಥನು ಆರು ಹೆಜ್ಜೆ ಹಿಂದೆ ಹೋಗಿ, ಒಂದು ನಿಮಿಷದಲ್ಲಿ ತನ್ನ ರಥವನ್ನು ಏರಿದುದು ಕಂಡುಬಂದಿತು.
ತತಶ್ಚರ್ಮ ಚ ಖಡ್ಗಂ ಚ ಸಮುತ್ಕ್ಷಿಪ್ಯ ಮಹಾಬಲಃ |
ನನಾದಾರ್ಜುನದಾಯಾದಃ ಪ್ರೇಕ್ಷಮಾಣೋ ಜಯದ್ರಥಮ್ ॥ 84 ॥
ಆಗ ಅರ್ಜುನಪುತ್ರನಾದ, ಮಹಾಬಲನಾದ ಅಭಿಮನ್ಯುವು ತನ್ನ ಖಡ್ಗ- ಚರ್ಮಗಳನ್ನು ಝಳುಪಿಸುತ್ತಾ, ಜಯದ್ರಥನನ್ನು ನೋಡುತ್ತಾ, ಮಹಾನಾದವನ್ನು ಮಾಡಿದನು.
ಸಿಂಧುರಾಜಂ ಪರಿತ್ಯಜ್ಯ ಸೌಭದ್ರಃ ಪರವೀರಹಾ |
ತಾಪಯಾಮಾಸ ತತ್ ಸೈನ್ಯಂ ಭುವನಂ ಭಾಸ್ಕರೋ ಯಥಾ ॥ 85 ॥
ಅನಂತರ ಪರವೀರಘಾತಕನಾದ ಅಭಿಮನ್ಯುವು ಸೈಂಧವನನ್ನು ಬಿಟ್ಟು, ಅವನ ಸೈನ್ಯದ ಮೇಲೆ ತಿರುಗಿ, ಸೂರ್ಯನು ಜಲವನ್ನು ಶೋಷಿಸುವಂತೆ ಅದನ್ನು ಶೋಷಿಸಿದನು (ತಾಪಗೊಳಿಸಿದನು).
ತಂ ಕಾರ್ಷ್ಣಿಂ ಸಮರಾನ್ಮುಕ್ತಮಭಿಜ್ಞಾಯ ರಥೇ ಸ್ಥಿತಮ್ |
ಸಹಸಾ ಸರ್ವರಾಜಾನಃ ಪರಿವವ್ರುಃ ಸಮಂತತಃ ॥ 86 ॥
ಆ ಅಭಿಮನ್ಯುವು ಸೈಂಧವನ ಜೊತೆಯಲ್ಲಿನ ಯುದ್ಧದಿಂದ ಹೊರಗೆ ಬಂದು ರಥದಲ್ಲಿ ಇರುವುದನ್ನು ನೋಡಿ ಎಲ್ಲ ರಾಜರೂ ತಕ್ಷಣದಲ್ಲಿ ಅವನನ್ನು ಸುತ್ತುವರಿದರು.
ತಸ್ಯ ಸರ್ವಾಯಸೀಂ ಶಲ್ಯಃ ಶಕ್ತಿಂ ಕನಕಭೂಷಿತಾಮ್ |
ಪ್ರಜಹಾರ ಭುಜಾಗ್ರೇಣ ದೀಪ್ತಮಗ್ನಿಶಿಖಾಮಿವ ॥ 87 ॥
ಶಲ್ಯನು ಕನಕಭೂಷಿತವಾದ ಪೂರ್ಣವಾದ, ಅಯೋಮಯವಾದ, ಜ್ವಲಿಸುವ ಅಗ್ನಿಶಿಖೆಯಂತಿರುವ ಶಕ್ತಿಯನ್ನು ತನ್ನ ಭುಜದಿಂದ ಅವನ ಮೇಲೆ ಪ್ರಯೋಗಿಸಿದನು.
ತಾಮವಪ್ಲುತ್ಯ ಜಗ್ರಾಹ ವಿಕೋಶಂ ಕೃತವಾನಸಿಮ್ |
ವೈನತೇಯೋ ಯಥಾ ಕಾರ್ಷ್ಣಿಃ ಪತಂತೀಮುರಗಾಂಗನಾಮ್ ॥ 88 ॥
ಅಭಿಮನ್ಯುವು ರಥದಿಂದ ಕೆಳಗೆ ಹಾರಿ, ಶಕ್ತಿಯನ್ನು ಒರೆಯಿಂದ ಹಿಡಿದು ಗರುಡನು ಹೆಣ್ಣುಸರ್ಪವನ್ನು ಹಿಡಿದಂತೆ ಆ ಶಕ್ತಿಯನ್ನು ಹಿಡಿದನು.
ತಸ್ಯ ಲಾಘವಮಾಜ್ಞಾಯ ಸತ್ತ್ವಂ ಚಾಮಿತತೇಜಸಃ |
ಸಹಿತಾಃ ಸರ್ವರಾಜಾನಃ ಸಿಂಹನಾದಮಥಾನದನ್ ॥ 89 ॥
ಅಮಿತ ಸಾಮರ್ಥ್ಯವುಳ್ಳ ಅವನ ಬಲವನ್ನು ಮತ್ತು ಕ್ಷಿಪ್ರತೆಯನ್ನು ನೋಡಿ ಎಲ್ಲ ರಾಜರೂ ಆಗ ಸಿಂಹನಾದವನ್ನು ಮಾಡಿದರು.
ತತಸ್ತಾಮೇವ ಶಲ್ಯಾಯ ಸೌಭದ್ರಃ ಪರವೀರಹಾ |

ಪ್ರಜಹಾರ ಮಹಾಶಕ್ತಿಂ ವೈಡೂರ್ಯವಿಕೃತಾಂ ಸ್ಥಿರಾಮ್ ॥ 90 ॥
ಅನಂತರ ಪರವೀರಘಾತಕನಾದ ಅಭಿಮನ್ಯುವು ವೈಡೂರ್ಯಖಚಿತವೂ, ದೃಢವೂ ಆದ ಅದೇ ಮಹಾಶಕ್ತಿಯನ್ನು ಶಲ್ಯನ ಮೇಲೆ ಎಸೆದನು.
ಸಾ ಕಾರ್ಷ್ಣಿಭುಜನಿರ್ಮುಕ್ತಾ ಸಹಸಾ ಭುಜಗೋಪಮಾ |
ಜಘಾನ ಸೂತಂ ಶಲ್ಯಸ್ಯ ರಥಾಚ್ಚೈನಮಪಾತಯತ್ ॥ 91 ॥
ಅಭಿಮನ್ಯುವಿನ ಭುಜದಿಂದ ನಿರ್ಮುಕ್ತವಾದ ಸರ್ಪದಂತಿದ್ದ ಆ ಶಕ್ತಿಯು ತಕ್ಷಣ ಶಲ್ಯನ ಸೂತನನ್ನು ಕೊಂದು, ಅವನನ್ನು ರಥದಿಂದ ಕೆಳಗೆ ಉರುಳಿಸಿತು.
ತತೋ ವಿರಾಟದ್ರುಪದೌ ಧೃಷ್ಟಕೇತುರ್ಯುಧಿಷ್ಠಿರಃ |
ಸಾತ್ಯಕಿಃ ಕೇಕಯಾ ಭೀಮೋ ಧೃಷ್ಟದ್ಯುಮ್ನಶಿಖಂಡಿನೌ |
ಯಮೌ ಚ ದ್ರೌಪದೇಯಾಶ್ಚ ಸಾಧು ಸಾಧ್ವಿತಿ ಚುಕ್ರುಶುಃ ॥ 92 ॥
ಆಗ ವಿರಾಟ- ದ್ರುಪದರೂ, ಧೃಷ್ಟಕೇತು, ಯುಧಿಷ್ಠಿರ, ಸಾತ್ಯಕಿ, ಕೇಕಯರೂ, ಭೀಮಸೇನ, ಧೃಷ್ಟದ್ಯುಮ್ನ, ಶಿಖಂಡಿ, ನಕುಲ-ಸಹದೇವರೂ ಮತ್ತು ದ್ರೌಪದಿಯ ಪುತ್ರರೆಲ್ಲರೂ ಸಾಧು-ಸಾಧು ಎಂದು ಕಿರುಚಿದರು.
ಸಾಧುವಾದಾಶ್ಚ ವಿವಿಧಾಃ ಸಿಂಹನಾದಾಶ್ಚ ಪುಷ್ಕಳಾಃ |
ಪ್ರಾದುರಾಸನ್ ಹರ್ಷಯಂತಃ ಸೌಭದ್ರಮಪರಾಜಿತಮ್ ॥ 93 ॥
ಅಪರಾಜಿತನಾದ ಅಭಿಮನ್ಯುವನ್ನು ಹರ್ಷಗೊಳಿಸುತ್ತಾ, ಅನೇಕವಿಧವಾದ ಸಾಧುವಾದಗಳು, ಪುಷ್ಕಳವಾದ ಸಿಂಹನಾದಗಳು ಉಂಟಾದವು.
ಪರಿವವ್ರುಃ ಸ್ಮ ತೇ ಸರ್ವೇ ಪಾಂಡವಾನಾಂ ಮಹಾರಥಾಃ |
ಹರ್ಷಯಂತಶ್ಚ ಸೌಭದ್ರಂ ರೋಷಯಂತಃ ಸುತಾಂಶ್ಚ ತೇ ॥ 94 ॥
ಪಾಂಡವರ ಮಹಾರಥರೆಲ್ಲರೂ ಅಭಿಮನ್ಯುವನ್ನು ಹರ್ಷಗೊಳಿಸುತ್ತಾ, ನಿನ್ನ ಪುತ್ರರನ್ನು ರೋಷಗೊಳಿಸುತ್ತಾ, ಅವನನ್ನು ಸುತ್ತುವರಿದರು.
ತನ್ನಾಮೃಷ್ಯಂತ ಪುತ್ರಾಸ್ತೇ ಶತ್ರೋರ್ವಿಜಯಲಕ್ಷಣಮ್ |
ಅಥೈನಂ ಸಹಿತಾಃ ಸರ್ವೇ ಸಮಂತಾನ್ನಿಶಿತೈಃ ಶರೈಃ |
ಅಭ್ಯಾಕಿರನ್ ಮಹಾರಾಜ ತೋಯದಾ ಇವ ಪರ್ವತಮ್ ॥ 95 ॥
ಶತ್ರುವಿನ ಆ ವೀರಚಿಹ್ನೆಯನ್ನು ನಿನ್ನ ಪುತ್ರರು ಸಹಿಸಲಿಲ್ಲ. ಎಲೈ ಮಹಾರಾಜನೇ, ಆಗ ಅವರೆಲ್ಲರೂ ಒಟ್ಟಿಗೆ ಸೇರಿ, ಎಲ್ಲ ಕಡೆಗಳಿಂದಲೂ ಮೋಡವು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಅವನ ಮೇಲೆ ನಿಶಿತವಾದ ಬಾಣಗಳಿಂದ ಬಾಣಗಳ ಮಳೆಯನ್ನು ಸುರಿಸಿದರು.
ತೇಷಾಂ ತು ಪ್ರಿಯಮನ್ವಿಚ್ಛನ್ ಸೂತಸ್ಯ ತು ಪರಾಭವಾತ್ |
ಆರ್ತಾಯನಿರಮಿತ್ರಘ್ನಃ ಕ್ರುದ್ಧಃ ಸೌಭದ್ರಮಭ್ಯಯಾತ್ ॥ 96 ॥
ಅವರಿಗೆ ಪ್ರಿಯವನ್ನು ಮಾಡಲು ಬಯಸಿ, ತನ್ನ ಸೂತನು ಹತನಾದ ಕಾರಣದಿಂದಲೂ ಸಹ ಕ್ರುದ್ಧನಾದ, ಶತ್ರುಸಂಹಾರಕನಾದ, ಋತಾಯನ ಪುತ್ರನಾದ ಶಲ್ಯನು ಅಭಿಮನ್ಯುವಿನ ಕಡೆಗೆ ನುಗ್ಗಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಯೋದಶೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ಗದಾಯುದ್ಧದಲ್ಲಿ ಭೀಮನಿಂದ ಶಲ್ಯನ ಪರಾಜಯ
ಧೃತರಾಷ್ಟ್ರಃ
ಬಹೂನಿ ಸುವಿಚಿತ್ರಾಣಿ ದ್ವಂದ್ವಯುದ್ಧಾನಿ ಸಂಜಯ |
ತ್ವಯೋಕ್ತಾನಿ ನಿಶಮ್ಯಾಹಂ ಸ್ಪೃಹಯಾಮಿ ಸಚಕ್ಷುಷಾಮ್ ॥ 1 ॥
ಧೃತರಾಷ್ಟ್ರ, ಎಲೈ ಸಂಜಯನೇ, ನೀನು ಬಹಳ ವಿಚಿತ್ರವಾದ, ಅನೇಕ ದ್ವಂದ್ವ ಯುದ್ಧಗಳನ್ನು ಹೇಳುತಿತದ್ದೀಯೆ. ಅವುಗಳನ್ನು ಕೇಳಿ ನಾನು ಚಕ್ಷುಸ್ಸನ್ನು ಬಯಸುತ್ತೇನೆ.
ನಹಿ ದೇವಾಸುರಂ ಯುದ್ಧಮೀದೃಗ್ರೂಪಂ ಭವೇದಿತಿ |
ಚಿಂತಯಾಮಿ ಚ ಯುದ್ಧಾನಿ ಶ್ರುತ್ವಾ ಘೋರಾಣಿ ಸಂಜಯ ॥ 2 ॥
ಎಲೈ ಸಂಜಯನೇ, ನೀನು ಹೇಳಿರುವ ಘೋರ ಯುದ್ಧಗಳನ್ನು ಕೇಳಿ, ದೇವಾಸುರ ಯುದ್ಧವೂ ಸಹ ಇಂತಹ ಆಕಾರವನ್ನು ಹೊಂದಿರಲಿಲ್ಲವೆಂದು ಚಿಂತಿಸುತ್ತೇನೆ.
ಆಶ್ಚರ್ಯಭೂತಂ ಲೋಕೇಽಸ್ಮಿನ್ ಕಥಯಿಷ್ಯಂತಿ ಮಾನವಾಃ |
ಕುರೂಣಾಂ ಪಾಂಡವಾನಾಂ ಚ ಯುದ್ಧಂ ದೇವಾಸುರೋಪಮಮ್ ॥
ಕುರು-ಪಾಂಡವರಿಗೆ ನಡೆದ, ದೇವಾಸುರರ ಯುದ್ಧಕ್ಕೆ ಸದೃಶವಾದ ಯುದ್ಧವು ಆಶ್ಚರ್ಯಭೂತವಾದುದೆಂದು ಈ ಲೋಕದಲ್ಲಿ ಮಾನವರು ಮುಂದೆ ಹೇಳುವರು.

ನಹಿ ಮೇ ತೃಪ್ತಿರಸ್ತೀಹ ಶೃಣ್ವತೋ ಯುದ್ಧಮುತ್ತಮಮ್ |
ತಸ್ಮಾದಾರ್ತಾಯನೇರ್ಯುದ್ಧಂ ಸೌಭದ್ರಸ್ಯ ಚ ಶಂಸ ಮೇ ॥ 4 ॥
ನೀನು ಹೇಳುವ ಶ್ರೇಷ್ಠವಾದ ಯುದ್ಧವನ್ನು ಕೇಳುವ ನನಗೆ ತೃಪ್ತಿಯೇ ಆಗುತ್ತಿಲ್ಲ. ಆದ್ದರಿಂದ ಶಲ್ಯ ಮತ್ತು ಅಭಿಮನ್ಯು ಇವರ ಯುದ್ಧವನ್ನು ನನಗೆ ಹೇಳು.
ಸಂಜಯಃ
ಸಾದಿತಂ ಪ್ರೇಕ್ಷ್ಯ ಯಂತಾರಂ ಶಲ್ಯಃ ಸರ್ವಾಯಸೀಂ ಗದಾಮ್ |
ಸಮುತ್ಕ್ಷಿಪ್ಯ ನದನ್ ಕ್ರುದ್ಧಃ ಪ್ರಚಸ್ಕಂದ ರಥೋತ್ತಮಾತ್ ॥ 5 ॥
ಸಂಜಯ ತನ್ನ ಸಾರಥಿಯು ಮೃತನಾದುದನ್ನು ನೋಡಿ ಶಲ್ಯನು ಪೂರ್ಣವಾಗಿ ಕಬ್ಬಿಣದಿಂದ ಮಾಡಿದ ಗದೆಯನ್ನು ಎತ್ತಿ, ಕ್ರುದ್ಧನಾಗಿ ಗರ್ಜಿಸುತ್ತಾ ತನ್ನ ಶ್ರೇಷ್ಠ ರಥದಿಂದ ಇಳಿದನು.
ಸೌಭದ್ರೋಽಪ್ಯಶನಿಪ್ರಖ್ಯಾಮಾದಾಯ ಸ್ವರಥಾದ್ ಗದಾಮ್ |
ಏಹ್ಯೇಹೀತ್ಯಬ್ರುವೀಚ್ಛಲ್ಯಂ ಯತ್ನಾದ್ ಭೀಮೇನ ವಾರಿತಃ ॥ 6 ॥
ಅಭಿಮನ್ಯುವೂ ಸಹ ಸಿಡಿಲಿನಂತಿದ್ದ ಗದೆಯನ್ನು ತೆಗೆದುಕೊಂಡು, ತನ್ನ ರಥದಿಂದ ಇಳಿದು ಶಲ್ಯನನ್ನು ಕುರಿತು ಬಾ, ಬಾ ಎಂದು ಹೇಳುತ್ತಿದ್ದಾಗ, ಭೀಮಸೇನನು ಪ್ರಯತ್ನಪಟ್ಟು ಅವನನ್ನು ತಡೆದನು.
ವಾರಯಿತ್ವಾ ತು ಸೌಭದ್ರಂ ಭೀಮಸೇನಃ ಪ್ರತಾಪವಾನ್ |
ಶಲ್ಯಮಾಸಾದ್ಯ ಸಮರೇ ತಸ್ಥೌ ಮೇರುರಿವಾಚಲಃ ॥ 7 ॥
ಪ್ರತಾಪಶಾಲಿಯಾದ ಭೀಮಸೇನನು ಅಭಿಮನ್ಯುವನ್ನು ತಡೆದು, ಶಲ್ಯನನ್ನು ಸಮೀಪಿಸಿ ಮೇರುಪರ್ವತದಂತೆ ರಣರಂಗದಲ್ಲಿ ನಿಂತನು.
ತಥೈವ ಮದ್ರರಾಜೋಽಪಿ ಭೀಮಂ ದೃಷ್ಟ್ವಾ ಮಹಾಗದಮ್ |
ಸಸಾರಾಭಿಮುಖಸ್ತೂರ್ಣಂ ಶಾರ್ದೂಲ ಇವ ಕುಂಜರಮ್ ॥ 8 ॥
ಹಾಗೆಯೇ ಮದ್ರರಾಜನೂ ಸಹ ಭೀಮಸೇನನು ದೊಡ್ಡ ಗದೆಯನ್ನು ಹಿಡಿದಿರುವುದನ್ನು ನೋಡಿ, ವ್ಯಾಘ್ರವು ಗಜದ ಎದುರಿಗೆ ಬಂದಂತೆ ಶೀಘ್ರವಾಗಿ ಅವನಿಗೆ ಅಭಿಮುಖವಾಗಿ ಬಂದನು.
ತಂ ದೀಪ್ತಮಿವ ಕಾಲಾಗ್ನಿಂ ದಂಡಹಸ್ತಮಿವಾಂತಕಮ್ |
ಜವೇನಾಭ್ಯಪತದ್ ಭೀಮಃ ಪ್ರಗೃಹ್ಯ ಮಹತೀಂ ಗದಾಮ್ ॥ 9 ॥
ಭೀಮನು ದೊಡ್ಡ ಗದೆಯನ್ನು ಹಿಡಿದು ಜ್ವಲಿಸುವ ಕಾಲಾಗ್ನಿಯಂತೆ, ದಂಡವನ್ನು ಹಿಡಿದ ಯಮನಂತೆ ಇದ್ದ ಅವನ ಬಳಿಗೆ ಶೀಘ್ರವಾಗಿ ಧಾವಿಸಿದನು.
ತತಸ್ತೂರ್ಯನಿನಾದಶ್ಚ ಶಂಖಾನಾಂ ಚ ಸಹಸ್ರಶಃ |
ಸಿಂಹನಾದಶ್ಚ ಸಂಜಜ್ಞೇ ಭೇರೀಣಾಂ ಚ ಮಹಾಸ್ವನಃ ॥ 10 ॥
ಆಗ ಸಹಸ್ರಸಂಖ್ಯೆಯಲ್ಲಿ ತೂರ್ಯ ನಾದಗಳೂ, ಶಂಖನಾದಗಳೂ, ಸಿಂಹನಾದಗಳೂ ಮತ್ತು ಭೇರಿಯ ನಾದಗಳೂ ಉಂಟಾದವು.
ಪಶ್ಯತಾಂ ಶತಶೋ ಹ್ಯಾಸೀದ್ ಅನ್ಯೋನ್ಯಗತಚೇತಸಾಮ್ |
ಪಾಂಡವಾನಾಂ ಕುರೂಣಾಂ ಚ ಸಾಧು ಸಾಧ್ವಿತಿ ನಿಸ್ವನಃ ॥ 11 ॥
ಕೆಲವರು ಶಲ್ಯನಲ್ಲಿಯೂ, ಕೆಲವರು ಅಭಿಮನ್ಯುವಿನಲ್ಲಿಯೂ ಮನಸ್ಸಿನಲ್ಲಿ ಆಸಕ್ತರಾಗಿ, ಅವರಿಬ್ಬರನ್ನು ನೋಡುವ ನೂರಾರು ಸಂಖ್ಯೆಯ ಪಾಂಡವರಿಂದ ಮತ್ತು ಕೌರವರಿಂದ `ಸಾಧು-ಸಾಧು' ಎಂಬ ದೊಡ್ಡ ಶಬ್ದವು ಕೇಳಿ ಬಂದಿತು.
ನಹಿ ಮದ್ರಾಧಿಪಾದನ್ಯಃ ಸರ್ವರಾಜಸು ಭಾರತ |
ಸೋಢುಮುತ್ಸಹತೇ ವೇಗಂ ಭೀಮಸೇನಸ್ಯ ಸಂಯುಗೇ ॥ 12 ॥
ಎಲೈ ಭಾರತನೇ, ಎಲ್ಲ ರಾಜರ ಮಧ್ಯದಲ್ಲಿ ಮದ್ರಾಧಿಪನಾದ ಶಲ್ಯನನ್ನು ಬಿಟ್ಟು ಬೇರೆ ಯಾವನೂ ಯುದ್ಧದಲ್ಲಿ ಭೀಮಸೇನನ ವೇಗವನ್ನು ತಡೆಯಲು ಸಮರ್ಥನಾಗುವುದಿಲ್ಲ.
ತಥಾ ಮದ್ರಾಧಿಪಸ್ಯಾಪಿ ಗದಾವೇಗಂ ಮಹಾತ್ಮನಃ |
ಸೋಢುಮುತ್ಸಹತೇ ಲೋಕೇ ಯುಧಿ ಕೋಽನ್ಯೋ ವೃಕೋದರಾತ್ ॥
ಹಾಗೆಯೇ ಮಹಾತ್ಮನಾದ ಶಲ್ಯನ ಗದಾ ವೇಗವನ್ನು ಸಹಿಸಲು ಲೋಕದಲ್ಲಿ ಭೀಮಸೇನನನ್ನು ಬಿಟ್ಟು ಬೇರೆ ಯಾವನು ಸಮರ್ಥನಾಗುತ್ತಾನೆ?
ಪಟ್ಟೈರ್ಜಾಂಬೂನದೈರ್ಬದ್ಧಾ ಬಭೂವ ಜನಭೀಷಣೀ |
ಪ್ರಜಜ್ವಾಲ ತದಾ ವಿದ್ಧಾ ಭೀಮೇನ ಮಹತೀ ಗದಾ |
ಸಾಗ್ನಿದೀಪ್ತಾ ಮಹಾರೌದ್ರಾ ಗದಾ ಸಾ ಶುಶುಭೇ ತದಾ ॥ 14 ॥
ಸುವರ್ಣಮಯವಾದ ಕಟ್ಟುಗಳಿಂದ ಬಿಗಿಯಲ್ಪಟ್ಟ, ನೋಡುವ ಜನರಿಗೆ ಭಯಂಕರವಾದ, ಭೀಮಸೇನನ ದೊಡ್ಡ ಗದೆಯು ಶಲ್ಯನನ್ನು ಅಪ್ಪಳಿಸಿ ಜ್ವಾಲೆಗಳನ್ನು ಸೂಸಿತು. ಮಹಾಭಯಂಕರವಾದ ಅಗ್ನಿಯಂತೆ ದೀಪ್ತವಾದ ಆ ಗದೆಯು ಆಗ ಶೋಭಿಸಿತು.
ತಥೈವ ಚರತೋ ಮಾರ್ಗಾನ್ ಮಂಡಲಾನಿ ಚ ಭಾಗಶಃ |
ಮಹಾವಿದ್ಯುತ್ಪ್ರತೀಕಾಶಾ ಶಲ್ಯಸ್ಯ ಶುಶುಭೇ ಗದಾ ॥ 15 ॥
ಹಾಗೆಯೇ ರಣರಂಗದ ಭಾಗಗಳಲ್ಲಿ, ಮಾರ್ಗಗಳಲ್ಲಿ ಮತ್ತು ಮಂಡಲಗಳಲ್ಲಿ ಸಂಚರಿಸುವ ಶಲ್ಯನ ದೊಡ್ಡ ಮಿಂಚಿನ ಕಾಂತಿಯನ್ನು ಹೊಂದಿದ ದೊಡ್ಡ ಗದೆಯೂ ಶೋಭಿಸಿತು.
ತೌ ವೃಷಾವಿವ ನರ್ದಂತೌ ಮಂಡಲಾನಿ ವಿಚೇರತುಃ |

ಆವರ್ತಿತಗದಾಹಸ್ತಾವುಭೌ ಶಲ್ಯವೃಕೋದರೌ ॥ 16 ॥
ಶಲ್ಯ-ವೃಕೋದರರು ಗೂಳಿಗಳಂತೆ ಗರ್ಜಿಸುತ್ತಾ, ಕೈಯಲ್ಲಿದ್ದ ಗದೆಗಳನ್ನು ತಿರುಗಿಸುತ್ತಾ ಮಂಡಲಗಳಲ್ಲಿ ಸಂಚರಿಸಿದರು.
ಕೋಪತಾಮ್ರೇಕ್ಷಣೌ ವೀರೌ ಶತ್ರುಸಂಘವಿಮರ್ದನೌ |
ಮಹಾಮಾತ್ರೌ ಮಹೋತ್ಸಾಹೌ ಗದಾಯುದ್ಧವಿಶಾರದೌ ॥ 17 ॥
ಕೋಪದಿಂದ ಕೆಂಪಾದ ಕಣ್ಣುಳ್ಳ, ವೀರರಾದ, ಶತ್ರುಸಮೂಹ, ನಾಶಕರಾದ, ಪ್ರಧಾನರಾದ, ಮಹಾ ಉತ್ಸಾಹವನ್ನು ಹೊಂದಿದ, ಗದಾಯುದ್ಧ ವಿಶಾರದರಾದ ಅವರಿಬ್ಬರೂ (ಮಂಡಲಗಳಲ್ಲಿ ಸಂಚರಿಸಿದರು).
ಮಂಡಲಾವರ್ತವೇಗೇಷು ಗದಾಪ್ರಹರಣೇಷು ಚ |
ನಿರ್ವಿಶೇಷಮಭೂದ್ ಯುದ್ಧಂ ತಯೋಃ ಪುರುಷಸಿಂಹಯೋಃ ॥
ಮಂಡಲಗಳಲ್ಲಿ ತಿರುಗುವುದರಲ್ಲಿ, ವೇಗದಲ್ಲಿ ಮತ್ತು ಗದೆಯ ಅಭಿಘಾತದಲ್ಲಿ ಆ ಇಬ್ಬರು ಪುರುಷಸಿಂಹರಿಗೆ ಯುದ್ಧದಲ್ಲಿ ಯಾವ ವ್ಯತ್ಯಾಸವೂ ಇರಲಿಲ್ಲ.
ತಾಡಿತಾ ಭೀಮಸೇನೇನ ಶಲ್ಯಸ್ಯ ಮಹತೀ ಗದಾ |
ಸಾಗ್ನಿಜ್ವಾಲಾ ಮಹಾರೌದ್ರಾ ತದಾ ತೂರ್ಣಮಶೀರ್ಯತ ॥ 19 ॥
ಭೀಮಸೇನನಿಂದ ತಾಡಿತವಾದ ಶಲ್ಯನ ಮಹಾಭಯಂಕರವಾದ ದೊಡ್ಡ ಗದೆಯು ಅಗ್ನಿಜ್ವಾಲೆಗಳಿಂದ ಸಹಿತವಾಗಿ ಶೀಘ್ರವಾಗಿ ಒಡೆದು ಹೋಯಿತು.
ತಥೈವ ಭೀಮಸೇನಸ್ಯ ದ್ವಿಷತಾಽಭಿಹತಾ ಗದಾ |
ವರ್ಷಾಪ್ರದೋಷೇ ಖದ್ಯೋತೈಃ ವೃತೋ ವೃಕ್ಷ ಇವಾಬಭೌ ॥ 20 ॥
ಹಾಗೆಯೇ ಶತ್ರುವಾದ ಶಲ್ಯನಿಂದ ಹೊಡೆಯಲ್ಪಟ್ಟ ಭೀಮಸೇನನ ಗದೆಯು ಮಳೆಗಾಲದಲ್ಲಿ ರಾತ್ರಿಯ ಕಾಲದಲ್ಲಿ ಮಿಣುಕು ಹುಳುಗಳಿಂದ ತುಂಬಿದ ವೃಕ್ಷದಂತೆ (ಅಗ್ನಿ ಕಿಡಿಗಳನ್ನು ಸೂಸುತ್ತಾ ಪ್ರಕಾಶಿಸಿತು).
ಗದಾ ಕ್ಷಿಪ್ತಾ ತು ಸಮರೇ ಮದ್ರರಾಜೇನ ಧೀಮತಾ |
ಆಕಾಶಂ ದೀಪಯಂತೀ ಸಾ ಪಾವಕಂ ಚಾಸೃಜದ್ ಬಹು ॥ 21 ॥
ಮೇಧಾವಿಯಾದ ಮದ್ರರಾಜನಿಂದ ಯುದ್ಧದಲ್ಲಿ ಎಸೆಯಲ್ಪಟ್ಟ ಗದೆಯು ಆಕಾಶವನ್ನು ಪ್ರಕಾಶಿಸುತ್ತಾ ದೊಡ್ಡ ಅಗ್ನಿಯನ್ನು ಉತ್ಪಾದಿಸಿತು.
ತಥೈವ ಭೀಮಸೇನೇನ ಪ್ರೇಷಿತಾ ಶತ್ರುಘಾತಿನಾ |
ಭೀಮರೂಪಾ ಮಹಾವೇಗಾ ಗದಾ ಶಲ್ಯಂ ರಣೇಽತುದತ್ ॥ 22 ॥
ಹಾಗೆಯೇ ಶತ್ರುಸಂಹಾರಕನಾದ ಭೀಮಸೇನನು ಎಸೆದ ಮಹಾವೇಗವುಳ್ಳ ಭಯಂಕರವಾದ ಗದೆಯು ರಣರಂಗದಲ್ಲಿ ಶಲ್ಯನನ್ನು ಪೀಡಿಸಿತು.
ತ್ರಾಸಯಾಮಾಸ ತತ್ ಸೈನ್ಯಂ ಮಹಾವೇಗೋಗ್ರದರ್ಶನಾ ॥ 23 ॥
ಮಹಾವೇಗವುಳ್ಳ, ನೋಡಲು ಭಯಂಕರವಾದ ಆ ಗದೆಯು ಆ ಶತ್ರುಸೈನ್ಯಕ್ಕೆ ಭಯವನ್ನುಂಟು ಮಾಡಿತು.
ತೇ ಚೈವೋಭೇ ಗದೇ ಶ್ರೇಷ್ಠೇ ಸಮಾಸಾದ್ಯ ಪರಸ್ಪರಮ್ |
ತಥಾ ವಿಸೃಜತಾಂ ವಹ್ನಿಂ ನಾಗಕನ್ಯೇ ಇವೋಜ್ಜ್ವಲೇ ॥ 24 ॥
ಅವೆರಡು ಶ್ರೇಷ್ಠವಾದ ಗದೆಗಳು ಪರಸ್ಪರವಾಗಿ ಘಟ್ಟಿಸಿ, ಉಜ್ವಲರಾದ ನಾಗಕನ್ಯೆಯರಂತೆ ಅಗ್ನಿಯನ್ನು ಸೃಷ್ಟಿಸಿದವು.
ಪುನಃ ಶಲ್ಯೇನ ಭೀಮಸ್ಯ ಗದಾಗ್ರಾದ್ ಗದಯಾ ಹತಾತ್ |
ಸಂಘರ್ಷಣಾದುತ್ಥಿತೋಽಗ್ನಿಃ ದೀಪಯಾಮಾಸ ಮೇದಿನೀಮ್ ॥25॥
ಪುನಃ ಭೀಮನ ಶ್ರೇಷ್ಠ ಗದೆಯಿಂದ ಹೊಡೆಯಲ್ಪಟ್ಟ ಶಲ್ಯನ ಗದೆಯ ಸಂಘರ್ಷದಿಂದ ಉಂಟಾದ ಅಗ್ನಿಯು ಭೂಮಿಯನ್ನು ಪ್ರಕಾಶಿಸಿತು.
ಪುನಶ್ಚ ಭೀಮಸೇನೇನ ಶಲ್ಯಸ್ಯ ಮಹತೀ ಗದಾ |
ತಾಡಿತಾ ಸಹಸಾ ರಾಜನ್ ವಿಸಸರ್ಜಾಥ ಪಾವಕಮ್ ॥ 26 ॥
ಎಲೈ ರಾಜನೇ, ಪುನಃ ಭೀಮಸೇನನಿಂದ ಹೊಡೆಯಲ್ಪಟ್ಟ ಶಲ್ಯನ ದೊಡ್ಡ ಗದೆಯು ಅಗ್ನಿಯನ್ನು ಉಂಟುಮಾಡಿತು.
ನಖೈರಿವ ಮಹಾವ್ಯಾಘ್ರೌ ದಂತೈರಿವ ಮಹಾಗಜೌ |
ತೌ ವಿಚೇರತುರಾಸಾದ್ಯ ಗದಾಗ್ರಾಭ್ಯಾಂ ಪರಸ್ಪರಮ್ ॥ 27 ॥
ಮಹಾವ್ಯಾಘ್ರಗಳು ನಖಗಳಿಂದ ಯುದ್ಧಮಾಡಿದಂತೆ, ಮಹಾಗಜಗಳು ದಂತದಿಂದ ಯುದ್ಧಮಾಡಿದಂತೆ, ಅವರಿಬ್ಬರೂ ಪರಸ್ಪರವಾಗಿ ಶ್ರೇಷ್ಠ ಗದೆಗಳಿಂದ ಒಬ್ಬರನ್ನೊಬ್ಬರು ಸಮೀಪಿಸಿ ಸಂಚರಿಸಿದರು.
ತೌ ಗದಾಗ್ರಾಹತೈರ್ಗಾತ್ರೈಃ ಕ್ಷಣೇನ ರುಧಿರೋಕ್ಷಿತೌ |
ದದೃಶಾತೇ ಮಹಾತ್ಮಾನೌ ಕಿಂಶುಕಾವಿವ ಪುಷ್ಪಿತೌ ॥ 28 ॥
ಮಹಾತ್ಮರಾದ ಅವರು ಶ್ರೇಷ್ಠವಾದ ಗದೆಯ ಹೊಡೆತದಿಂದ ಒಂದುಕ್ಷಣದಲ್ಲಿ ಶರೀರದಿಂದ ರಕ್ತವನ್ನು ಸುರಿಸುತ್ತಾ, ಹೂವರಳಿದ ಮುತ್ತುಗದ ಮರದಂತೆ ಕಂಡುಬಂದರು.
ಶುಶ್ರುವುರ್ದಿಕ್ಷು ಸರ್ವಾಸು ತಯೋಃ ಪುರುಷಸಿಂಹಯೋಃ |
ಗದಾಸಂಘಾತಸಂಹ್ರಾದಾಃ ಶಕ್ರಾಶನಿರವಾ ಇವ ॥ 29 ॥
ಆ ಇಬ್ಬರು ಪುರುಷಸಿಂಹರ ಗದೆಗಳ ಸಂಘರ್ಷದಿಂದ ಉಂಟಾದ ದೊಡ್ಡ ನಾದವು ಇಂದ್ರನ ವಜ್ರಾಯುಧದ ನಾದಗಳಂತೆ ಎಲ್ಲ ದಿಕ್ಕುಗಳಲ್ಲಿಯೂ ಕೇಳಿಬಂದವು.

ಗದಯಾ ಮದ್ರರಾಜೇನ ಸವ್ಯದಕ್ಷಿಣಮಾಹತಃ |
ನ ಸ ಸ್ಮ ವಿವ್ಯಥೇ ಭೀಮೋ ಭಿದ್ಯಮಾನ ಇವಾಚಲಃ ॥ 30 ॥
ಮದ್ರರಾಜನಿಂದ, ಅವನ ಗದೆಯಿಂದ ಎಡ-ಬಲ ಭಾಗಗಳಲ್ಲಿ ಹೊಡೆಯಲ್ಪಟ್ಟ ಭೀಮನು ಭೇದಿಸಲ್ಪಡುವ ಪರ್ವತದಂತೆ ವ್ಯಥೆಯನ್ನು ಹೊಂದಲಿಲ್ಲ.
ತಥಾ ಭೀಮಗದಾವೇಗೈಃ ತಾಡ್ಯಮಾನೋ ಮಹಾಬಲಃ |
ಧೈರ್ಯಾನ್ಮದ್ರಾಧಿಪಸ್ತಸ್ಥೌ ವಜ್ರೈರ್ಗಿರಿರಿವಾಹತಃ ॥ 31 ॥
ಹಾಗೆಯೇ ಭೀಮನ ಗದೆಯ ವೇಗಗಳಿಂದ ಹೊಡೆಯಲ್ಪಟ್ಟ ಮಹಾಬಲನಾದ ಮದ್ರರಾಜನು ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ ಧೈರ್ಯದಿಂದ ನಿಂತನು.
ಆಪೇತತುರ್ಮಹಾಮಾರ್ಗಾತ್ ಸಮುಚ್ಛ್ರಿತಮಹಾಗದೌ |
ಪುನರಾವೃತ್ತಮಾರ್ಗಸ್ಥೌ ಮಂಡಲಾನಿ ವಿಚೇರತುಃ ॥ 32 ॥
ಮಹಾಗದೆಗಳನ್ನು ಎತ್ತಿದ ಅವರಿಬ್ಬರೂ ಮಹಾಮಾರ್ಗಗಳಲ್ಲಿ ಒಬ್ಬರ ಮೇಲೆ ಒಬ್ಬರು ಎರಗಿದರು. ಪುನಃ ಆ ಮಾರ್ಗಗಳಿಂದ ಹಿಂದಿರುಗಿದ ಅವರು ಮಂಡಲಗಳಲ್ಲಿ ಸಂಚರಿಸಿದರು.
ಅಥಾಪ್ಲುತ್ಯ ಪದಾನ್ಯಷ್ಟೌ ಸನ್ನಿಪತ್ಯ ಗಜಾವಿವ |
ಸಹಸಾ ಲೋಹದಂಡಾಭ್ಯಾಮನ್ಯೋನ್ಯಮಭಿಜಘ್ನತುಃ ॥ 33 ॥
ಅನಂತರ ಎಂಟು ಹೆಜ್ಜೆಯಷ್ಟು ದೂರವನ್ನು ಹಾರಿ, ಗಜಗಳಂತೆ ಒಬ್ಬರ ಮೇಲೆ ಒಬ್ಬರು ಎರಗಿ, ಲೋಹದಂಡಗಳನ್ನು ಹೊಂದಿದ ಗದೆಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ತೌ ಪರಸ್ಪರವೇಗಾಚ್ಚ ಗದಾಭ್ಯಾಂ ಚ ದೃಢಾಹತೌ |
ಯುಗಪತ್ ಪೇತತುರ್ವೀರೌ ಕ್ಷಿತಾವಿಂದ್ರಧ್ವಜಾವಿವ ॥ 34 ॥
ಪರಸ್ಪರ ವೇಗದಿಂದಲೂ ಮತ್ತು ಗದೆಗಳ ದೃಢವಾದ ಪ್ರಹಾರದಿಂದಲೂ ಆ ವೀರರು ಇಂದ್ರಧ್ವಜಗಳಂತೆ ಒಂದೇ ಕಾಲದಲ್ಲಿ ಭೂಮಿಯ ಮೇಲೆ ಬಿದ್ದರು.
ತಥಾ ವಿಹ್ವಲಗಾತ್ರಂ ತಂ ನಿಃಶ್ವಸಂತಂ ಪುನಃಪುನಃ |
ಶಲ್ಯಮಭ್ಯಪತತ್ ತೂರ್ಣಂ ಕೃತವರ್ಮಾ ಮಹಾರಥಃ ॥ 35 ॥
ತನ್ನ ಶರೀರವು ಪೀಡಿತವಾಗಿ ಪುನಃ ಪುನಃ ನಿಃಶ್ವಾಸವನ್ನು ಬಿಡುತ್ತಿದ್ದ ಶಲ್ಯನ ಬಳಿಗೆ ಮಹಾರಥನಾದ ಕೃತವರ್ಮನು ಶೀಘ್ರವಾಗಿ ಬಂದನು.
ದೃಷ್ಟ್ವಾ ಚೈನಂ ಮದ್ರರಾಜಂ ಗದಯಾಽಭಿನಿಪೀಡಿತಮ್ |
ವೇಷ್ಟಮಾನಂ ಮಹಾರಾಜ ಮೂರ್ಚ್ಛಯಾಽಭಿಪರಿಪ್ಲುತಮ್ ॥ 36 ॥
ತತಃ ಸ ನಿಜಮಾರೋಪ್ಯ ಮದ್ರಾಣಾಮಧಿಪಂ ರಥಮ್ |
ಅಪೋವಾಹ ರಣಾದ್ ರಾಜನ್ ತೂರ್ಣಮಾಯೋಧನಾದ್ ಬಹಿಃ ॥
ಎಲೈ ಮಹಾರಾಜನೇ, ಮದ್ರರಾಜನು ಗದೆಯಿಂದ ಬಹಳವಾಗಿ ಪೀಡಿಸಲ್ಪಟ್ಟು ಭೂಮಿಯ ಮೇಲೆ ಮೂರ್ಛೆಯಿಂದ ಮುದುರಿಕೊಂಡು ಬಿದ್ದಿರುವುದನ್ನು ನೋಡಿ, ಕೃತವರ್ಮನು ಮಹಾರಥನಾದ ಮದ್ರಾಧಿಪತಿಯಾದ ಶಲ್ಯನನ್ನು ತನ್ನ ರಥಕ್ಕೆ ಏರಿಸಿ ಶೀಘ್ರವಾಗಿ ರಣರಂಗದಿಂದ ಹೊರಗೆ ಕರೆದುಕೊಂಡು ಹೋದನು.
ಭೂಮೌ ನಿಪತಿತೋ ವೀರೋ ನಿಮೇಷಾತ್ ಪುನರುತ್ಥಿತಃ |
ಭೀಮಸೇನೋ ಮಹಾಬಾಹುರ್ಗದಾಪಾಣಿರದೃಶ್ಯತ ॥ 38 ॥
ಭೂಮಿಯಲ್ಲಿ ಬಿದ್ದ ವೀರನಾದ, ಮಹಾಬಾಹುವಾದ ಭೀಮಸೇನನು ಒಂದು ನಿಮಿಷದಲ್ಲಿ ಪುನಃ ಎದ್ದು ಕೈಯಲ್ಲಿ ಗದೆಯನ್ನು ಹಿಡಿದು ಎಲ್ಲರಿಗೂ ಕಾಣಿಸಿದನು.
ತತೋ ಮದ್ರಾಧಿಪಂ ದೃಷ್ಟ್ವಾ ಧಾರ್ತರಾಷ್ಟ್ರಾಃ ಪರಾಙ್ಮುಖಮ್ |
ಸನಾಗರಥಪತ್ತ್ಯಶ್ವಾಃ ಸಮಕಂಪಂತ ಮಾರಿಷ ॥ 39 ॥
ಎಲೈ ಪೂಜ್ಯನೇ, ಆಗ ಮದ್ರಾಧಿಪನಾದ ಶಲ್ಯನು ಯುದ್ಧವಿಮುಖನಾದುದನ್ನು ನೋಡಿ ಧೃತರಾಷ್ಟ್ರ ಪುತ್ರರು ತಮ್ಮ ಗಜಾಶ್ವ-ರಥ-ಪದಾತಿಗಳಿಂದ ಸಹಿತರಾಗಿ ನಡುಗಿ ಹೋದರು.
ತೇ ಪಾಂಡವೈರರ್ದ್ಯಮಾನಾಃ ತಾವಕಾ ಜಿತಕಾಶಿಭಿಃ |
ಭೀತಾ ದಿಶೋ ವ್ಯಕೀರ್ಯಂತ ವಾಯುನುನ್ನಾ ಯಥಾ ಘನಾಃ ॥ 40 ॥
ಜಯಾಕಾಂಕ್ಷಿಗಳಾದ ಪಾಂಡವರಿಂದ ಹಿಂಸಿಸಲ್ಪಡುವ ಆ ನಿನ್ನ ಯೋಧರು ಭಯಗೊಂಡು, ಗಾಳಿಗೆ ಸಿಕ್ಕಿದ ಮೋಡಗಳಂತೆ ದಿಕ್ಕು-ದಿಕ್ಕುಗಳಲ್ಲಿ ಚದುರಿ ಹೋದರು.
ನಿರ್ಜಿತ್ಯ ಧಾರ್ತರಾಷ್ಟ್ರಾಂಸ್ತೇ ಪಾಂಡವೇಯಾ ಮಹಾರಥಾಃ |
ವ್ಯರೋಚಂತ ರಣೇ ರಾಜನ್ ದೀಪ್ಯಮಾನಾ ಇವಾಗ್ನಯಃ ॥ 41 ॥
ಎಲೈ ರಾಜನೇ, ಪಾಂಡವರ ಆ ಮಹಾರಥರು ದುರ್ಯೋಧನಾದಿಗಳನ್ನು ಜಯಿಸಿ ರಣರಂಗದಲ್ಲಿ ಜ್ವಲಿಸುವ ಅಗ್ನಿಗಳಂತೆ ಶೋಭಿಸಿದರು.
ಅಥ ಮಡ್ಡುಕಭೇರಿಮಹಾಮುರಜಾಃ
ಪಣವಾನಕದುಂದುಭಿಝರ್ಝರಿಭಿಃ |
ವಿನದಂತಿ ಭೃಶಂ ಸಹ ಶಂಖರವೈಃ

ವಿವಿಧೈಶ್ಚ ನರೋತ್ತಮ ಸಿಂಹರವೈಃ ॥ 42 ॥
ಎಲೈ ನರಶ್ರೇಷ್ಠನೇ, ಆಗ ಪಾಂಡವರ ಪಾಳಯದಲ್ಲಿ ಮಡ್ಡುಕ, ಭೇರಿ, ಮಹಾಮುರಜಗಳು, ಪಣವ, ಆನಕ, ದುಂದುಭಿ, ಝರ್ಝರಗಳು, ಶಂಖಧ್ವನಿಗಳಿಂದಲೂ, ವಿವಿಧವಾದ ಸಿಂಹನಾದಗಳಿಂದಲೂ ಕೂಡಿ ಬಹಳವಾಗಿ ನಾದವನ್ನುಂಟು ಮಾಡಿದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರ್ದಶೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ದ್ರೋಣರಿಂದ ಯುಧಿಷ್ಠಿರನ ಗ್ರಹಣೋದ್ಯಮದಲ್ಲಿ ಅರ್ಜುನನಿಂದ ಪ್ರತಿಬಂಧ. ಮೊದಲನೆಯ ದಿನದ ಯುದ್ಧದಲ್ಲಿ ದ್ರೋಣರಿಂದ ಸೈನ್ಯಾವಹಾರ.
ಸಂಜಯಃ
ತದ್ ಬಲಂ ಸುಮಹದ್ ದೀರ್ಣಂ ತ್ವದೀಯಂ ಪ್ರೇಕ್ಷ್ಯ ವೀರ್ಯವಾನ್ |
ದಧಾರೈಕೋ ರಣೇ ಪಾಂಡೂನ್ ವೃಷಸೇನೋಽಸ್ತ್ರಮಾಯಯಾ ॥ 1 ॥
ಸಂಜಯ ನಿನ್ನ ದೊಡ್ಡ ಸೈನ್ಯವು ಬಹಳವಾಗಿ ಭಗ್ನವಾದುದನ್ನು ನೋಡಿ ಶೂರನಾದ, ಕರ್ಣಪುತ್ರನಾದ ವೃಷಸೇನನೊಬ್ಬನೇ ತನ್ನ ಅಸ್ತ್ರಸಾಮರ್ಥ್ಯದಿಂದ ರಣರಂಗದಲ್ಲಿ ಪಾಂಡವರನ್ನು ತಡೆದನು.
ಶರಾ ದಶ ದಿಶೋ ಮುಕ್ತಾ ವೃಷಸೇನೇನ ತೇಜಸಾ |
ಪ್ರವಿಚೇರುರ್ವಿನಿರ್ಭಿದ್ಯ ನರವಾಜಿರಥದ್ವಿಪಾನ್ ॥ 2 ॥
ವೃಷಸೇನನಿಂದ ತೇಜೋಯುಕ್ತವಾಗಿ ಪ್ರಯೋಗಿಸಲ್ಪಟ್ಟ ಬಾಣಗಳು ಪದಾತಿ- ಅಶ್ವ-ರಥ-ಗಜಗಳನ್ನು ಭೇದಿಸಿ ಹತ್ತು ದಿಕ್ಕುಗಳಲ್ಲಿಯೂ ಸಂಚರಿಸಿದವು.
ತಸ್ಯ ದೀಪ್ತಾ ಮಹಾಬಾಣಾ ವಿನಿಶ್ಚೇರುಃ ಸಹಸ್ರಶಃ |
ಭಾನೋರಿವ ಮಹಾರಾಜ ದೀಪ್ಯಮಾನಾ ಗಭಸ್ತಯಃ ॥ 3 ॥
ಮಹಾರಾಜನೇ, ಸೂರ್ಯನಿಂದ ಪ್ರಕಾಶಿಸುವ ಕಿರಣಗಳು ಹೊರಟಂತೆ ಜ್ವಲಿಸುವ ಅವನ ಮಹಾಬಾಣಗಳು ಅವನ ಧನುಸ್ಸಿನಿಂದ ಸಹಸ್ರಸಂಖ್ಯೆಯಲ್ಲಿ ಹೊರಟವು.
ತೇನಾರ್ದಿತಾ ಮಹಾರಾಜ ರಥಿನಃ ಸಾದಿನಸ್ತಥಾ |
ನಿಪೇತುರುರ್ವ್ಯಾಂ ಸಹಸಾ ವಾತನುನ್ನಾ ಇವ ದ್ರುಮಾಃ ॥ 4 ॥
ಮಹಾರಾಜನೇ, ಆ ಬಾಣಗಳಿಂದ ಪೀಡಿತರಾದ ರಥಿಕರು ಮತ್ತು ಅಶ್ವಾರೋಹಿಗಳು ವಾಯುವಿನ ಹೊಡೆತಕ್ಕೆ ಸಿಲುಕಿದ ವೃಕ್ಷಗಳಂತೆ ತಕ್ಷಣ ಭೂಮಿಯ ಮೇಲೆ ಬಿದ್ದರು.
ಹಯೌಘಾಂಶ್ಚ ಗಜೌಘಾಂಶ್ಚ ರಥೌಘಾಂಶ್ಚ ಸಮಂತತಃ |
ಅಪಾತಯದ್ ರಣೇ ರಾಜನ್ ಶತಶೋಽಥ ಸಹಸ್ರಶಃ ॥ 5 ॥
ರಾಜನೇ, ಅವನು ಗಜಸಮೂಹಗಳನ್ನೂ, ಅಶ್ವಸಮೂಹಗಳನ್ನೂ ಮತ್ತು ರಥಸಮೂಹಗಳನ್ನೂ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಎಲ್ಲ ಕಡೆಗಳಲ್ಲಿಯೂ ಕೆಡವಿದನು.
ಕರ್ಣಾತ್ಮಜಂ ರಣೇ ದೃಷ್ಟ್ವಾ ವಿಚರಂತಮಭೀತವತ್ |
ರಾಜಾನಃ ಸಹಿತಾಃ ಸರ್ವೇ ಪರಿವವ್ರುಃ ಸಮಂತತಃ ॥ 6 ॥
ಕರ್ಣಪುತ್ರನಾದ ವೃಷಸೇನನು ನಿರ್ಭಯವಾಗಿ ರಣರಂಗದಲ್ಲಿ ಸಂಚರಿಸುವುದನ್ನು ನೋಡಿ ಎಲ್ಲ ರಾಜರೂ ಸಹಿತರಾಗಿ ಅವನನ್ನು ಸುತ್ತುವರಿದರು.
ನಾಕುಲಸ್ತು ಶತಾನೀಕೋ ವೃಷಸೇನಂ ಸಮಭ್ಯಯಾತ್ |
ವಿವ್ಯಾಧ ಚೈನಂ ದಶಭಿರ್ನಾರಾಚೈರ್ಮರ್ಮಭೇದಿಭಿಃ |
ತಸ್ಯ ಕರ್ಣಸುತಶ್ಚಾಪಂ ಛಿತ್ತ್ವಾ ಕೇತುಮಪಾತಯತ್ ॥ 7 ॥
ನಕುಲಪುತ್ರನಾದ ಶತಾನೀಕನು ವೃಷಸೇನನನ್ನು ಸಮೀಪಿಸಿ, ಮರ್ಮಭೇದಿಗಳಾದ ಹತ್ತು ನಾರಾಚಗಳಿಂದ ಅವನನ್ನು ಹೊಡೆದನು. ಕರ್ಣಪುತ್ರನು ಅವನ ಧನುಸ್ಸನ್ನು ಕತ್ತರಿಸಿ ಧ್ವಜವನ್ನು ಉರುಳಿಸಿದನು.
ತಂ ಭ್ರಾತರಮಭೀಪ್ಸಂತೋ ದ್ರೌಪದೇಯಾಃ ಸಮಭ್ಯಯುಃ |
ಕರ್ಣಾತ್ಮಜಂ ಶರವ್ರಾತೈಃ ಚಕ್ರುಶ್ಚಾದೃಶ್ಯಮಂಜಸಾ ॥ 8 ॥
ತಮ್ಮ ಸಹೋದರರನ್ನು ರಕ್ಷಿಸುವ ಸಲುವಾಗಿ ದ್ರೌಪದಿಯ ಪುತ್ರರು ತಮ್ಮ ಬಾಣ ಸಮೂಹಗಳಿಂದ ಕರ್ಣಪುತ್ರನಾದ ವೃಷಸೇನನನ್ನು ಅದೃಶ್ಯನನ್ನಾಗಿ ಮಾಡಿದರು.
ತಾನ್ ನದಂತೋಽಭ್ಯಧಾವಂತ ದ್ರೋಣಪುತ್ರಮುಖಾ ರಥಾಃ |
ಛಾದಯಂತೋ ಮಹಾರಾಜ ದ್ರೌಪದೇಯಾನ್ ಮಹಾರಥಾನ್ |
ಶರೈರ್ನಾನಾವಿಧೈಸ್ತೂರ್ಣಂ ಪರ್ವತಾನ್ ಜಲದಾ ಇವ ॥ 9 ॥
ಎಲೈ ಮಹಾರಾಜನೇ, ಅಶ್ವತ್ಥಾಮ ಮೊದಲಾದಮಹಾರಥರು ಗರ್ಜಿಸುತ್ತಾ, ಮೋಡಗಳು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ, ನಾನಾ ವಿಧವಾದ ಶಸ್ತ್ರಗಳನ್ನು ಶೀಘ್ರವಾಗಿ ಪ್ರಯೋಗಿಸುತ್ತಾ, ಓಡಿ ಬಂದು ಮಹಾರಥರಾದ ದ್ರೌಪದಿಯ ಪುತ್ರರನ್ನು ಶಸ್ತ್ರಗಳಿಂದ

ಮುಚ್ಚಿಹಾಕಿದರು.
ತಾನ್ ಪಾಂಡವಾಃ ಪ್ರತ್ಯಗೃಹ್ಣನ್ ತ್ವರಿತಾಃ ಪುತ್ರಗೃದ್ಧಿನಃ |
ಪಾಂಚಾಲಾಃ ಸೃಂಜಯಾ ಮಾತ್ಸ್ಯಾಃ ಕೇಕಯಾಶ್ಚೋದ್ಯತಾಯುಧಾಃ ||
ಮತ್ತು ತಮ್ಮ ಮಕ್ಕಳ ಕ್ಷೇಮವನ್ನು ಬಯಸುವ ಪಾಂಡವರು ಶೀಘ್ರವಾಗಿ ಆಯುಧಧಾರಿಗಳಾದ ಪಾಂಚಾಲರ, ಸೃಂಜಯರ, ಮತ್ಸ್ಯರ ಜೊತೆಯಲ್ಲಿ ಸೇರಿ ಅವರನ್ನು ಎದುರಿಸಿದರು.
ತದ್ ಯುದ್ಧಮಭವದ್ ಘೋರಂ ತುಮುಲಂ ಲೋಮಹರ್ಷಣಮ್ |
ತ್ವದೀಯೈಃ ಪಾಂಡುಪುತ್ರಾಣಾಂ ದೇವಾನಾಮಿವ ದಾನವೈಃ || 11 ||
ನಿನ್ನವರಿಗೂ ಮತ್ತು ಪಾಂಡವರಿಗೂ ದೇವ-ದಾನವರಿಗೆ ನಡೆದಂತೆ ತೀವ್ರವೂ, ಘೋರವೂ ಮತ್ತು ರೋಮಾಂಚಕರವೂ ಆದ ಯುದ್ಧವು ನಡೆಯಿತು.
ಏವಮುತ್ತಮಸಂರಂಭಾ ಯುಯುಧುಃ ಕುರುಪಾಂಡವಾಃ |
ಪರಸ್ಪರಮುದೀಕ್ಷಂತಃ ಪರಸ್ಪರಕೃತಾಗಸಃ || 12 ||
ಹೀಗೆ ಕುರು-ಪಾಂಡವರು ಬಹಳ ಕ್ರೋಧವನ್ನು ಹೊಂದಿ, ಒಬ್ಬರನ್ನೊಬ್ಬರು ನೋಡುತ್ತಾ, ಒಬ್ಬರನೊಬನಬ್ಬರು ಪೀಡಿಸುತ್ತಾ ಯುದ್ಧವನ್ನು ಮಾಡಿದರು.
ತೇಷಾಂ ದದೃಶಿರೇ ಕೋಪಾದ್ ವಪೂಂಷ್ಯಮಿತತೇಜಸಾಮ್ |
ಯುಯುತ್ಸೂನಾಮಿವಾಕಾಶೇ ಪತತ್ರಿವರಭೋಗಿನಾಮ್ || 13 ||
ಅಮಿತ ತೇಜಸ್ವಿಗಳಾದ, ಕೋಪದಿಂದ ಕೂಡಿದ ಅವರ ದೇಹಗಳು ಆಕಾಶದಲ್ಲಿ ಹೋರಾಡುವ ಗರುಡ ಮತ್ತು ಸರ್ಪಗಳ ದೇಹಗಳಂತೆ ತೋರಿದವು.
ಭೀಮಕರ್ಣಕೃಪದ್ರೋಣದ್ರೌಣಿಪಾರ್ಷತಸಾತ್ಯಕೈಃ |
ಬಭಾಸೇ ಸ ರಣೋದ್ದೇಶಃ ಕಾಲಸೂರ್ಯೈರಿವೋದಿತೈಃ || 14 ||
ಭೀಮ, ಕರ್ಣ, ಕೃಪ, ದ್ರೋಣ, ಅಶ್ವತ್ಥಾಮ, ಧೃಷ್ಟದ್ಯುಮ್ನ ಮತ್ತು ಸಾತ್ಯಕಿಗಳಿಂದ ಕೂಡಿದ ಆ ಯುದ್ಧಭೂಮಿಯು ಅನೇಕ ಲಯಕಾಲಸೂರ್ಯರು ಒಟ್ಟಿಗೆ ಉದಯಿಸಿದಂತೆ ತೋರುತ್ತಿದ್ದಿತು.
ಪ್ರಜಾನಾಂ ಸಂಕ್ಷಯೇ ಘೋರೇ ಯಥಾ ಸೂರ್ಯೋದಯೋ ಭವೇತ್|
ಶೂರಾಣಾಮುದಯಸ್ತದ್ವತ್ ಸ ಆಸೀತ್ ಪುರುಷರ್ಷಭ || 15 ||
ಎಲೈ ಪುರುಷಶ್ರೇಷ್ಠನೇ, ಪ್ರಜೆಗಳ ಘೋರವಾದ ಸಂಕ್ಷಯದ ಕಾಲದಲ್ಲಿ ಹೇಗೆ ಸೂರ್ಯೋದಯವಾಗುವುದೋ ಹಾಗೆ ಆ ಶೂರರ ಉದಯವು ಉಂಟಾಯಿತು.
ತದಾऽऽಸೀತ್ ತುಮುಲಂ ಯುದ್ಧಂ ನಿಘ್ನತಾಮಿತರೇತರಮ್ |
ಮಹಾಬಲಾನಾಂ ಬಿಲಭಿಃ ದಾನವಾನಾಂ ಯಥಾ ಸುರೈಃ || 16 ||
ಪರಸ್ಪರವಾಗಿ ಸಂಹರಿಸುವ ಬಲಶಾಲಿಗಳಾದ ಅವರಿಗೆ ಬಲಶಾಲಿಗಳಾದ ಶತ್ರುಗಳ ಜೊತೆಯಲ್ಲಿ ನಡೆದ ಯುದ್ಧವು ದೇವಾಸುರರ ಯುದ್ಧದಂತೆ ಇದ್ದಿತು.
ತತೋ ಯುಧಿಷ್ಠಿರಾನೀಕಮುದೀರ್ಣಾರ್ಣವನಿಸ್ವನಮ್ |
ತ್ವದೀಯಮವಧೀತ್ ಸೈನ್ಯಂ ಸಂಪ್ರದ್ರುತಮಹಾರಥಮ್ || 17 ||
ಆಗ ಉಕ್ಕಿದ ಸಾಗರದ ಘೋಷವನ್ನು ಹೊಂದಿದ ಯುಧಿಷ್ಠಿರನ ಸೈನ್ಯವು ಮಹಾರಥರು ಓಡಿಹೋಗುತ್ತಿದ್ದ ನಿನ್ನ ಸೈನ್ಯವನ್ನು ಪೀಡಿಸಿತು.
ತತ್ ಪ್ರಭಗ್ನಂ ಬಲಂ ದೃಷ್ಟ್ವಾ ಶತ್ರುಭಿರ್ಭೃಶಮರ್ದಿತಮ್ |
ಅಲಂ ದ್ರುತೇನ ವಃ ಶೂರಾ ಇತಿ ದ್ರೋಣೋऽಭ್ಯಭಾಷತ |
ಭಾರದ್ವಾಜಮಮರ್ಷಶ್ಚ ವಿಕ್ರಮಶ್ಚ ಸಮಾವಿಶತ್ || 18 ||
ಶತ್ರುಗಳಿಂದ ಬಹಳ ಪೀಡೆಗೆ ಒಳಗಾಗಿ ಭಗ್ನಗೊಂಡ ಸೈನ್ಯವನ್ನು ನೋಡಿ ದ್ರೋಣರು ಎಲೈ ಶೂರರೇ, ಓಡಬೇಡಿ ಎಂದು ಹೇಳಿದರು. ಕೋಪ ಮತ್ತು ಪರಾಕ್ರಮಗಳು ದ್ರೋಣರನ್ನು ಪ್ರವೇಶಿಸಿದವು.
ಸಮುದ್ದ ೃತ್ಯ ನಿಷಂಗಾಚ್ಚ ಧನುರ್ಜ್ಯಾಮವಮೃಜ್ಯ ಚ |
ಮಹಾಶರಧನುಷ್ಪಾಣಿಃ ಯಂತಾರಮಿದಮಬ್ರವೀತ್ || 19 ||
ಬತ್ತಳಿಕೆಯಿಂದ ಬಾಣಗಳನ್ನು ಎತ್ತಿ, ಧನುಸ್ಸಿನ ಹೆದೆಯನ್ನು ಸವರಿ, ಕೈಯಲ್ಲಿ ಮಹಾಧನುಸ್ಸು ಮತ್ತು ಬಾಣಗಳನ್ನು ಹಿಡಿದು ಅವರು ಸಾರಥಿಯನ್ನು ಕುರಿತು ಇದನ್ನು ಹೇಳಿದರು.
ಸಾರಥೇ ಯಾಹಿ ಯತ್ರೈಷ ಪಾಂಡರೇಣ ವಿರಾಜತಾ |
ಧ್ರಿಯಮಾಣೇನ ಚ್ಛತ್ರೇಣ ರಾಜಾ ತಿಷ್ಠತಿ ಧರ್ಮರಾಟ್ || 20 ||
ಎಲೈ ಸಾರಥಿಯೇ, ಎಲ್ಲಿ ಪ್ರಕಾಶಮಾನವಾದ ಶ್ವೇತಚ್ಛತ್ರದಿಂದ ಸಹಿತನಾದ, ರಾಜನಾದ ಯುಧಿಷ್ಠಿರನು ಇದ್ದಾನೆಯೋ ಅಲ್ಲಿಗೆ ಹೋಗು.
ತದೇತದ್ ದೀರ್ಯತೇ ಸೈನ್ಯಂ ಧಾರ್ತರಾಷ್ಟ್ರಮನೇಕಧಾ |
ಏತತ್ ಸಂಸ್ತಂಭಯಿಷ್ಯಾಮಿ ಪ್ರತಿವಾರ್ಯ ಯುಧಿಷ್ಠಿರಮ್ || 21 ||
ಈ ಧೃತರಾಷ್ಟ್ರನ ಸೈನ್ಯವು ಬಹಳವಾಗಿ ಭಗ್ನಗೊಳ್ಳುತ್ತಿದೆ. ಯುಧಿಷ್ಠಿರನನ್ನು ತಡೆದು ಈ ಭಂಗವನ್ನು ತಡೆಯುವೆನು.
ನ ಹಿ ಮಾಮತಿವರ್ತಂತಿ ಸಂಯುಗೇ ತಾತ ಪಾಂಡವಾಃ |

ಮಾತ್ಸ್ಯಪಾಂಚಾಲರಾಜಾನಃ ಸರ್ವೇ ಚ ಸಹಸೋಮಕಾಃ ॥ 22 ॥
ಎಲೈ ಪ್ರೀತಿಪಾತ್ರನೇ, ಸೋಮಕರಿಂದ ಸಹಿತರಾದ ಮತ್ಸ್ಯ-ಪಾಂಚಾಲ ರಾಜರೆಲ್ಲರೂ ಮತ್ತು ಪಾಂಡವರೂ ಯುದ್ಧದಲ್ಲಿ ನನ್ನನ್ನು ಮೀರಿ ಹೋಗುವುದಿಲ್ಲ.
ಅರ್ಜುನೋ ಮತ್ಪ್ರಸಾದಾದ್ಧಿ ಮಹಾಸಾತ್ರಣಿ ಸಮಾಪ್ತವಾನ್ |
ನ ಮಾಮುತ್ಸಹತೇ ತಾತ ನ ಭೀಮೋ ನ ಚ ಸಾತ್ಯಕಿಃ ॥ 23 ॥
ಅರ್ಜುನನು ನನ್ನ ಅನುಗ್ರಹದಿಂದ ಮಹಾಸ್ತ್ರಗಳನ್ನು ಪಡೆದಿರುವನಷ್ಟೆ! ಎಲೈ ಪ್ರೀತಿಪಾತ್ರನೇ, ಅವನಾಗಲೀ, ಭೀಮನಾಗಲೀ, ಸಾತ್ಯಕಿಯಾಗಲೀ ನನ್ನ ಮೇಲೆ ಪ್ರಹಾರ ಮಾಡುವುದಿಲ್ಲ.
ಮತ್ಪ್ರಸಾದಾದ್ಧಿ ಬೀಭತ್ಸುಃ ಪರಮೇಷ್ವಾಸತಾಂ ಗತಃ |
ಮಮೈವಾಸ್ತ್ರಂ ವಿಜಾನಾತಿ ಧೃಷ್ಟದ್ಯುಮ್ನೋಽಪಿ ಪಾರ್ಷತಃ ॥ 24 ॥
ನನ್ನ ಅನುಗ್ರಹದಿಂದಲೇ ಅರ್ಜುನನು ಶ್ರೇಷ್ಠ ಧನುರ್ಧಾರಿ ಎಂಬ ಪದವಿಯನ್ನು ಹೊಂದಿದ್ದಾನೆ. ಪಾರ್ಷತನಾದ ಧೃಷ್ಟದ್ಯುಮ್ನನೂ ಸಹ (ಶಿಷ್ಯನಾಗಿ) ನನ್ನಿಂದಲೇ ಅಸ್ತ್ರವನ್ನು ತಿಳಿದಿದ್ದಾನೆ.
ನಾಯಂ ಸಂರಕ್ಷಿತುಂ ಕಾಲಃ ಪ್ರಾಣಾಂಸ್ತಾತ ಜಯೈಷಿಣಾ |
ಸಾಹಸಾಗ್ರ್ಯಂ ಪುರಸ್ಕೃತ್ಯ ಯಶಸೇ ಚ ಜಯಾಯ ಚ ॥ 25 ॥
ಎಲೈ ಪ್ರೀತಿಪಾತ್ರನೇ, ಜಯವನ್ನು ಬಯಸುವವರಿಗೆ ಇದು ಪ್ರಾಣವನ್ನು ರಕ್ಷಿಸಿಕೊಳ್ಳುವ ಕಾಲವಲ್ಲ. ಶ್ರೇಷ್ಠವಾದ ಸಾಹಸವನ್ನು ಮುಂದೆ ಮಾಡಿ ಕೀರ್ತಿ ಮತ್ತು ಜಯವನ್ನು ಪಡೆಯಬೇಕು.
ಏವಂ ಸಂಚೋದಿತೋ ಯಂತಾ ದ್ರೋಣಮಭ್ಯವಹತ್ ತತಃ |
ತದಾ ಸ್ವಹೃದಯಾನಾಶ್ವಾನಭಿಮಂತ್ರ್ಯಾಶು ಹರ್ಷಯನ್ |
ರಥೇನ ಸವರೂಥೇನ ಭಾಸ್ವರೇಣ ವಿರಾಜತಾ ॥ 26 ॥
ಹೀಗೆ ದ್ರೋಣರಿಂದ ಪ್ರೇರಿಸಲ್ಪಟ್ಟ ಸುರಥಿನಾಮಕನಾದ ಸಾರಥಿಯು ತನ್ನ ಮನಸ್ಸಿನ ಅಭಿಪ್ರಾಯದಂತೆ ನಡೆಯುವ ಅಶ್ವಗಳಿಗೆ ಶೀಘ್ರವಾಗಿ ಸಂತೋಷವನ್ನುಂಟು ಮಾಡುತ್ತಾ, ರಥದ ಸಲಕರಣೆಗಳಿಂದ ಕೂಡಿದ, ಪ್ರಕಾಶಮಾನವಾದ ಶೋಭಿಸುವ ರಥದಿಂದ ದ್ರೋಣರನ್ನು ಕರೆದುಕೊಂಡು ಹೋದನು.
ತಂ ಕರೂಷಾಶ್ಚ ಮತ್ಸ್ಯಾಶ್ಚ ಚೇದಯಶ್ಚ ಸಸಾತ್ವತಾಃ |
ಪಾಂಡವಾಶ್ಚ ಸಪಾಂಚಾಲಾಃ ಸಹಿತಾಃ ಪರ್ಯವಾರಯನ್ ॥ 27 ॥
ಅವರನ್ನು ಕರೂಷರೂ, ಮತ್ಸ್ಯರೂ, ಚೇದಿಗಳೂ, ಸಾತ್ವತರೂ, ಪಾಂಚಾಲ ಸಹಿತರಾದ ಪಾಂಡವರೂ ಎಲ್ಲರೂ ಒಟ್ಟಿಗೆ ಸೇರಿ ಸುತ್ತುವರಿದರು.
ತತಃ ಶೋಣಹಯಃ ಕ್ರುದ್ಧಃ ಚತುರ್ದಂತ ಇವ ದ್ವಿಪಃ |
ಪ್ರವಿಶ್ಯ ಪಾಂಡವಾನೀಕಂ ಯುಧಿಷ್ಠಿರಮಭಿದ್ರವತ್ ॥ 28 ॥
ಆಗ ಶೋಣಾಶ್ವರಾದ (ಕುಟುಂಬ ಕುದುರೆ ಸಹಿತ) ದ್ರೋಣರು ಕ್ರುದ್ಧರಾಗಿ ನಾಲ್ಕು ದಂತಗಳುಳ್ಳ ಗಜದಂತೆ ಪಾಂಡವರ ಸೈನ್ಯವನ್ನು ಪ್ರವೇಶಿಸಿ ಯುಧಿಷ್ಠಿರನ ಕಡೆಗೆ ಧಾವಿಸಿದರು.
ತಮವಿಧ್ಯಚ್ಛಿತೈರ್ಬಾಣೈಃ ಕಂಕಪತ್ರೈರ್ಯುಧಿಷ್ಠಿರಃ |
ತಸ್ಯ ದ್ರೋಣೋ ಧನುಶ್ಛಿತ್ವಾ ತಂ ದ್ರುತಂ ಸಮುಪಾದ್ರವತ್ ॥ 29 ॥
ಯುಧಿಷ್ಠಿರನು ಕಂಕಪತ್ರವನ್ನು ಹೊಂದಿದ್ದ ಹರಿತವಾದ ಬಾಣಗಳಿಂದ ದ್ರೋಣರನ್ನು ಹೊಡೆದನು. ದ್ರೋಣರು ಅವನ ಧನುಸ್ಸನ್ನು ಕತ್ತರಿಸಿ ಶೀಘ್ರವಾಗಿ ಅವನೆಡೆಗೆ ಧಾವಿಸಿದರು.
ಚಕ್ರರಕ್ಷಃ ಕುಮಾರಸ್ತು ಪಾಂಚಾಲಾನಾಂ ಯಶಸ್ಕರಃ |
ದಧಾರ ದ್ರೋಣಮಾಯಾಂತಂ ವೇಲೇವೋದ್ಧೂತಮರ್ಣವಮ್ ॥30॥
ಯುಧಿಷ್ಠಿರನ ಚಕ್ರರಕ್ಷಕನಾದ, ಪಾಂಚಾಲ ರಾಜಕುಮಾರನಾದ ಸುಕುಮಾರನು ಯುಧಿಷ್ಠಿರನ ಕಡೆಗೆ ಬರುತ್ತಿದ್ದ ದ್ರೋಣರನ್ನು ಉಕ್ಕುವ ಸಮುದ್ರವನ್ನು ತೀರವು ತಡೆದಂತೆ ತಡೆಹಿಡಿದನು.
ಸ ಶೂರಮಾರ್ಯವ್ರತಿನಂ ಶಸಾತ್ರಸ್ತ್ರಕೃತನಿಶ್ರಮಮ್ |
ವಾರಯದ್ ದ್ರೋಣಮಾಯಾಂತಂ ವೇಲೇವ ಮಕರಾಲಯಮ್ ॥
ಅವನು ಶೂರರೂ, ಉದಾತ್ತವಾದ ವ್ರತವುಳ್ಳವರೂ, ಶಸಾತ್ರಸ್ತ್ರಗಳಲ್ಲಿ ಪಾರಂಗತರಾದವರೂ ಆದ ದ್ರೋಣರನ್ನು ಸಮುದ್ರವನ್ನು ದಡವು ತಡೆದಂತೆ ತಡೆದನು.
ದ್ರೋಣೇ ನಿವಾರಿತೇ ತೇನ ಸುಕುಮಾರೇಣ ಮಾರಿಷ |
ಸಿಂಹನಾದರವಶ್ಚಾಸೀತ್ ಸಾಧು ಸಾಧ್ವಿತಿ ಚ ಸ್ವನಃ ॥ 32 ॥
ಎಲೈ ಪೂಜ್ಯನೇ, ಸುಕುಮಾರನಿಂದ ದ್ರೋಣರು ತಡೆಯಲ್ಪಡುತ್ತಿರಲು `ಸಾಧು- ಸಾಧು' ಎಂಬ ಮಾತುಗಳು ಮತ್ತು ಸಿಂಹನಾದದ ಶಬ್ದಗಳು ಕೇಳಿಬಂದವು.
ಸುಕುಮಾರಸ್ತತೋ ದ್ರೋಣಂ ಸಾಯಕೇನ ಮಹಾಹವೇ |
ವಿವ್ಯಾಧೋರಸಿ ಸಂಕ್ರುದ್ಧಃ ಸಿಂಹನಾದಮಥಾಕರೋತ್ ॥ 33 ॥
ಸಂವಾರ್ಯ ತು ರಣೇ ದ್ರೋಣಂ ಸುಕುಮಾರೋ ಮಹಾರಥಃ |
ಶರೈರನೇಕಸಾಹಸ್ರೈಃ ಕೃತಹಸ್ತೋ ಜಿತಕ್ಲಮಃ ॥ 34 ॥
ಮಹಾರಥನಾದ ಸುಕುಮಾರನು ಪಳಗಿದ ಹಸ್ತವುಳ್ಳವನಾಗಿ, ಶ್ರಮವನ್ನು ಜಯಿಸಿದವನಾಗಿ, ಅನೇಕ ಸಹಸ್ರ ಬಾಣಗಳಿಂದ

ಯುದ್ಧದಲ್ಲಿ ದ್ರೋಣರನ್ನು ತಡೆದು, ಒಂದು ಬಾಣದಿಂದ ಕೋಪದಿಂದ ಅವರ ಎದೆಗೆ ಹೊಡೆದು ಸಿಂಹನಾದವನ್ನು ಮಾಡಿದನು.
ತಂ ಶೂರಮಾರ್ಯವ್ರತಿನಂ ಮಂತ್ರಾಸ್ತ್ರಕೃತನಿಶ್ಚಯಮ್ |
ಚಕ್ರರಕ್ಷಮವಾಮೃದ್ನಾತ್ ಸುಕುಮಾರಂ ದ್ವಿಜಪುಂಗವಃ ॥ 35 ॥
ದ್ವಿಜಶ್ರೇಷ್ಠರಾದ ದ್ರೋಣರು ಶೂರನೂ, ಶ್ರೇಷ್ಠವ್ರತಧಾರಿಯೂ, ಮಂತ್ರಾಸ್ತ್ರಗಳಲ್ಲಿ ನಿಪುಣನೂ ಮತ್ತು ಯುಧಿಷ್ಠಿರನ ಚಕ್ರರಕ್ಷಕನೂ ಆದ ಸುಕುಮಾರನನ್ನು ಮರ್ದಿಸಿದರು.
ಸ ಮಧ್ಯಂ ಪ್ರಾಪ್ಯ ಸೇನಾಯಾಂ ಸರ್ವಾಃ ಸಮಚರದ್ ದಿಶಃ |
ತವ ಸೈನ್ಯಸ್ಯ ಗೋಪ್ತಾಽಽಸೀದ್ ಭಾರದ್ವಾಜೋ ಮಹಾರಥಃ ॥ 36 ॥
ಅವರು ಪಾಂಡವರ ಸೈನ್ಯದ ಮಧ್ಯಭಾಗವನ್ನು ಪ್ರವೇಶಿಸಿ, ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಿದರು. ಮಹಾರಥರಾದ ದ್ರೋಣರು ನಿನ್ನ ಸೈನ್ಯಕ್ಕೆ ರಕ್ಷಕರಾಗಿದ್ದರು.
ಶಿಖಂಡಿನಂ ದ್ವಾದಶಭಿಃ ವಿಂಶತ್ಯಾ ಚೋತ್ತಮೌಜಸಮ್ |
ನಕುಲಂ ಪಂಚಭಿರ್ವಿದ್ಧ್ವಾ ಸಹದೇವಂ ಚ ಸಪ್ತಭಿಃ ॥ 37 ॥
ಯುಧಿಷ್ಠಿರಂ ದ್ವಾದಶಭಿಃ ದ್ರೌಪದೇಯಾಂಸ್ತ್ರಿಭಿಸ್ತ್ರಿಭಿಃ |
ಸಾತ್ಯಕಿಂ ಪಂಚಭಿರ್ವಿದ್ಧ್ವಾ ಮತ್ಸ್ಯಂ ಚ ದಶಭಿಃ ಶರೈಃ |
ವ್ಯಕ್ಷೋಭಯದ್ ರಣೇ ಮುಖ್ಯಾನಥ ಯೋಧಾನಭಿದ್ರುವತ್ ॥ 38 ॥
ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜನನ್ನು ಇಪ್ಪತ್ತು ಬಾಣಗಳಿಂದಲೂ, ನಕುಲನನ್ನು ಐದು ಬಾಣಗಳಿಂದಲೂ, ಸಹದೇವನನ್ನು ಏಳು ಬಾಣಗಳಿಂದಲೂ, ಯುಧಿಷ್ಠಿರನನ್ನು ಹನ್ನೆರಡು ಬಾಣಗಳಿಂದಲೂ, ದ್ರೌಪದಿಯ ಪುತ್ರರನ್ನು ಮೂರು-ಮೂರು ಬಾಣಗಳಿಂದಲೂ, ಸಾತ್ಯಕಿಯನ್ನು ಐದು ಬಾಣಗಳಿಂದಲೂ, ವಿರಾಟನನ್ನು ಹತ್ತು ಬಾಣಗಳಿಂದಲೂ ರಣರಂಗದಲ್ಲಿ ಹೊಡೆದು ಕ್ಷೋಭೆಗೊಳಿಸಿ ಅನಂತರ ಮುಖ್ಯವಾದ ಯೋಧರ ಕಡೆಗೆ ಮುನ್ನುಗ್ಗಿದರು.
ಯುಗಂಧರಸ್ತತೋ ರಾಜನ್ ಭಾರದ್ವಾಜಂ ಮಹಾರಥಮ್ |
ವಾರಯಾಮಾಸ ಸಂಕ್ರುದ್ಧೋ ವೇಲೇವೋದ್ಧೂತಮರ್ಣವಮ್ ॥ 39 ॥
ಎಲೈ ರಾಜನೇ, ಆಗ ದ್ರೋಣರ ಸಾರಥಿಯು ಕೋಪಗೊಂಡವನಾಗಿ ತೀರವು ಉಕ್ಕಿದ ಸಮುದ್ರವನ್ನು ತಡೆದಂತೆ ಮಹಾರಥರಾದ ದ್ರೋಣರನ್ನು ಪಾಂಡುಸೈನ್ಯದ ಬಾಣದ ಹೊಡೆತದಿಂದ ನಿವಾರಿಸಿದನು.
ಯುಧಿಷ್ಠಿರಂ ಸ ವಿದ್ಧ್ವಾಽಥ ಶರೈಃ ಸನ್ನತಪರ್ವಭಿಃ |
ಯುಗಂಧರಂ ತು ಭಲ್ಲೇನ ರಥನೀಡಾದಪಾತಯತ್ ॥ 40 ॥
ದ್ರೋಣರು ಯುಧಿಷ್ಠಿರನನ್ನು ಬಾಗಿದ ತುದಿಯುಳ್ಳ ಬಾಣಗಳಿಂದ ಹೊಡೆದು, ಅವನ ಸಾರಥಿಯನ್ನು ಭಲ್ಲದಿಂದ ರಥದಿಂದ ಕೆಳಕ್ಕೆ ಕೆಡವಿದರು.
ತಂ ವಿಜಿತ್ಯ ಮಹಾತೇಜಾ ಭಾರದ್ವಾಜೋ ಮಹಾಮನಾಃ |
ಅಭ್ಯವರ್ತತ ಸಂಪ್ರೇಪ್ಸುಃ ಕುಂತೀಪುತ್ರಂ ಯುಧಿಷ್ಠಿರಮ್ ॥ 41 ॥
ಮಹಾತೇಜಸ್ವಿಗಳೂ, ಧೈರ್ಯಶಾಲಿಗಳೂ ಆದ ದ್ರೋಣರು ಸಾರಥಿಯನ್ನು ಗೆದ್ದು ಕುಂತೀಪುತ್ರನಾದ ಯುಧಿಷ್ಠಿರನನ್ನು ಹಿಡಿಯಲು ಮುಂದೆ ಬಂದರು.
ತತೋ ವಿರಾಟದ್ರುಪದೌ ಕೇಕಯಾಃ ಸಾತ್ಯಕಿಃ ಶಲಃ |
ವ್ಯಾಘ್ರದತ್ತಶ್ಚ ಪಾಂಚಾಲ್ಯಃ ಸಿಂಹಸೇನಶ್ಚ ವೀರ್ಯವಾನ್ ॥ 42 ॥
ಏತೇ ಚಾನ್ಯೇ ಚ ಬಹವಃ ಪರೀಪ್ಸಂತೋ ಯುಧಿಷ್ಠಿರಮ್ |
ಆವವ್ರುಸ್ತಸ್ಯ ಪಂಥಾನಂ ಕಿರಂತಃ ಸಾಯಕಾನ್ ಬಹೂನ್ ॥ 43 ॥
ಆಗ ವಿರಾಟ-ದ್ರುಪದರು, ಕೇಕಯರು, ಸಾತ್ಯಕಿ, ಶಲ, ಪಾಂಚಾಲ ದೇಶದ ವ್ಯಾಘ್ರದತ್ತ, ಪರಾಕ್ರಮಶಾಲಿಯಾದ ಸಿಂಹಸೇನ - ಇವರು ಮತ್ತು ಇನ್ನೂ ಅನೇಕರು ಯುಧಿಷ್ಠಿರನನ್ನು ರಕ್ಷಿಸಲು ಬಯಸುತ್ತಾ, ಅನೇಕ ಬಾಣಗಳನ್ನು ಪ್ರಯೋಗಿಸುತ್ತಾ ದ್ರೋಣರ ಮಾರ್ಗವನ್ನು ತಡೆದರು.
ತ್ವರಿತಃ ಸಿಂಹಸೇನಸ್ತು ದ್ರೋಣಂ ವಿದ್ಧ್ವಾ ಮಹಾರಥಮ್ |
ಪ್ರಾಣದತ್ ಸಹಸಾ ನಾದಂ ರೋಷಯಂಶ್ಚ ಮಹಾರಥಾನ್ ॥ 44 ॥
ಮಹಾರಥನಾದ ಸಿಂಹಸೇನನು ಶೀಘ್ರವಾಗಿ ದ್ರೋಣರನ್ನು ಬಾಣದಿಂದ ಹೊಡೆದು, ಶತ್ರುಗಳ ಮಹಾರಥರಿಗೆ ರೋಷವನ್ನುಂಟು ಮಾಡುತ್ತಾ, ತಕ್ಷಣದಲ್ಲಿ ದೊಡ್ಡ ನಾದವನ್ನು ಮಾಡಿದನು.
ವ್ಯಾಘ್ರದತ್ತಶ್ಚ ಪಾಂಚಾಲ್ಯೋ ದ್ರೋಣಂ ವಿವ್ಯಾಧ ಮಾರ್ಗಣೈಃ |
ಪಂಚಾಶದ್ಭಿಸ್ತತೋ ರಾಜನ್ ತತಸ್ತೇ ಚುಕ್ರುಶುರ್ಜನಾಃ ॥ 46 ॥
ಎಲೈ ರಾಜನೇ, ಪಾಂಚಾಲದೇಶದ ವ್ಯಾಘ್ರದತ್ತನೂ ಸಹ ಐವತ್ತು ಬಾಣಗಳಿಂದ ದ್ರೋಣರನ್ನು ಹೊಡೆದನು. ಆಗ ಜನರು (ಪಾಂಡವ ಯೋಧರು) ಸಂತೋಷದ ನಾದವನ್ನು ಮಾಡಿದರು.
ತತೋ ವಿಷ್ಫಾರ್ಯ ನಯನೇ ಧನುರ್ಜ್ಯಾಮವಮೃಜ್ಯ ಚ |
ತಳಶಬ್ದಂ ಮಹತ್ ಕೃತ್ವಾ ಕ್ರುದ್ಧಸ್ತಾನ್ ಸಮಭಿದ್ರುವತ್ ॥ 45 ॥
ದ್ರೋಣರು ಆಗ ಕಣ್ಣುಗಳನ್ನು ಅಗಲವಾಗಿ ತೆರೆದು, ಧನುಸ್ಸಿನ ಹೆದೆಯನ್ನು ಸವರಿ, ದೊಡ್ಡ ಹಸ್ತತಳಶಬ್ದವನ್ನು ಮಾಡಿ, ಕೋಪಗೊಂಡು ಅವರ ಕಡೆಗೆ ಧಾವಿಸಿದರು.
ತತಸ್ತತ್ ಸಿಂಹಸೇನಸ್ಯ ಶಿರಃ ಕಾಯಾತ್ ಸಕುಂಡಲಮ್ |

ವ್ಯಾಘ್ರದತ್ತಸ್ಯ ಚಾಕ್ರಮ್ಯ ಭಲ್ಲಾಭ್ಯಾಮಾಹರದ್ ಬಲೀ ॥ 46 ॥
ಅನಂತರ ಬಲಿಷ್ಠರಾದ ಅವರು ಎರಡು ಭಲ್ಲಗಳಿಂದ ಕುಂಡಲಸಹಿತವಾದ ಸಿಂಹಸೇನ ಮತ್ತು ವ್ಯಾಘ್ರದತ್ತನ ಶಿರಸ್ಸುಗಳನ್ನು ಅವರ ಶರೀರದಿಂದ ಬೇರ್ಪಡಿಸಿದರು.
ತಾನ್ ಪ್ರಮೃಜ್ಯ ಶರವ್ರಾತೈಃ ಪಾಂಡವಾನಾಂ ಮಹಾರಥಾನ್ |
ಯುಧಿಷ್ಠಿರಸಮಭ್ಯಾಶೇ ತಸ್ಥೌ ಮೃತ್ಯುರಿವಾಂತಕಃ ॥ 47 ॥
ಪಾಂಡವರ ಆ ಮಹಾರಥರನ್ನು ತಮ್ಮ ಬಾಣಗಳ ಸಮೂಹದಿಂದ ಒರೆಸಿ, ಪ್ರಾಣಗಳನ್ನು ತೆಗೆಯುವ ಮೃತ್ಯುವಿನಂತೆ ಯುಧಿಷ್ಠಿರನ ಸಮೀಪದಲ್ಲಿ ನಿಂತರು.
ತತ ಆಸೀನ್ಮಹಾನ್ ಶಬ್ದೋ ರಾಜನ್ ಯೌಧಿಷ್ಠಿರೇ ಬಲೇ |
ಹೃತೋ ರಾಜೇತಿ ಯೋಧಾನಾಂ ಸಮೀಪಸ್ಥೇ ಯತವ್ರತೇ |
ಜಜಲ್ಪುಃ ಸೈನಿಕಾಸ್ತತ್ರ ದೃಷ್ಟ್ವಾ ದ್ರೋಣಸ್ಯ ವಿಕ್ರಮಮ್ ॥ 48 ॥|
ಎಲೈ ರಾಜನೇ, ನಿಯತವ್ರತವುಳ್ಳ ದ್ರೋಣರು ಯುಧಿಷ್ಠಿರನ ಸಮೀಪದಲ್ಲಿರಲು ಯುಧಿಷ್ಠಿರ ಸೈನ್ಯದಲ್ಲಿ ರಾಜನು ಅಪಹರಿಸಲ್ಪಟ್ಟನು ಎಂಬ ಯೋಧರ ದೊಡ್ಡ ಶಬ್ದವು ಉಂಟಾಯಿತು. ದ್ರೋಣರ ಪರಾಕ್ರಮವನ್ನು ನೋಡಿ ಕೌರವರ ಸೈನಿಕರು ಪರಸ್ಪರವಾಗಿ ಮಾತನಾಡಿಕೊಂಡರು.
ಸೈನಿಕಾಃ
ಅದ್ಯ ರಾಜಾ ಧಾರ್ತರಾಷ್ಟ್ರಃ ಪಾಂಡವಂ ಸನ್ನಿಗೃಹ್ಯ ಚ |
ಆಹರಿಷ್ಯತಿ ನೋ ಮೂಲಂ ಧೃತರಾಷ್ಟ್ರಂ ಪ್ರಹರ್ಷಯನ್ ॥ 49 ॥
ಸೈನಿಕರು ಈ ದಿನ ರಾಜನಾದ ದುರ್ಯೋಧನನು ಯುಧಿಷ್ಠಿರನನ್ನು ಸೆರೆಹಿಡಿದು ಧೃತರಾಷ್ಟ್ರನನ್ನು ಸಂತೋಷಪಡಿಸಿ ನಮಗೆ ಬಹಳ ಧನವನ್ನು ಕೊಡುವನು.
ಅದ್ಯ ರಾಜಾ ಧಾರ್ತರಾಷ್ಟ್ರಃ ಕೃತಾರ್ಥೋ ವೈ ಭವಿಷ್ಯತಿ |
ಆನಯಿಷ್ಯತಿ ಭ್ರಾತೄಣಾಂ ನೂನಂ ಹೃಷ್ಟಸ್ತು ಸಂಯುಗೇ ॥ 50 ॥
ಈ ದಿನ ರಾಜನಾದ ದುರ್ಯೋಧನನು ಕೃತಾರ್ಥನಾಗುವನು. ರಣರಂಗದಲ್ಲಿ ಸಂತೋಷಗೊಂಡು ಖಂಡಿತವಾಗಿ ತನ್ನ ಸಹೋದರರಿಗೆ ಅಪಾರವಾದ ಸಂಪತ್ತನ್ನು ತಂದುಕೊಡುವನು.
ಸಂಜಯಃ
ಏವಂ ಸಂಜಲ್ಪತಾಂ ತೇಷಾಂ ತಾವಕಾನಾಂ ಮಹಾರಥಃ |
ಪ್ರಾಯಾಜ್ಜವೇನ ಕೌಂತೇಯೋ ರಥಘೋಷೇಣ ನಾದಯನ್ ॥ 51 ॥
ಸಂಜಯ ಹೀಗೆ ನಿನ್ನ ಮಹಾರಥರು ಮಾತನಾಡುತ್ತಿರುವಾಗ, ಕುಂತೀಪುತ್ರನಾದ ಅರ್ಜುನನು ತನ್ನ ರಥಘೋಷದಿಂದ ಎಲ್ಲ ಕಡೆಯಲ್ಲಿಯೂ ಶಬ್ದವನ್ನುಂಟು ಮಾಡುತ್ತಾ ಶೀಘ್ರವಾಗಿ ದ್ರೋಣರ ಕಡೆಗೆ ಸಾಗಿದನು.
ಶೋಣಿತೋದಾಂ ರಥಾವರ್ತಾಂ ಕೃತ್ವಾ ವಿಶಸನೇ ನದೀಮ್ |
ಶೂರಾಸ್ಥಿಚಯಸಂಕೀರ್ಣಾಂ ಪ್ರೇತಕೂಲಾಪಹಾರಿಣೀಮ್ ॥ 52 ॥
ತಾಂ ಶರೌಘಮಹಾಫೇನಾಂ ಪ್ರಾಸಮತ್ಸ್ಯಸಮಾಕುಲಾಮ್ |
ನದೀಮುತ್ತೀರ್ಯ ವೇಗೇನ ಕುರೂನ್ ವಿದ್ರಾವ್ಯ ಪಾಂಡವಃ ॥ 53 ॥
ತತಃ ಕಿರೀಟೀ ಸಹಸಾ ದ್ರೋಣಾನೀಕಮಭಿದ್ರುವತ್ |
ಛಾದಯನ್ನಿಷುಜಾಲೇನ ಮಹತಾ ಮೋಹಯನ್ನಿವ ॥ 54 ॥
ರಕ್ತೋದಕವುಳ್ಳ, ರಥಗಳೆಂಬ ಸುಳಿಗಳುಳ್ಳ, ಶೂರರ ಅಸ್ಥಿ ಸಮೂಹಗಳೆಂಬ ನಡುಗಡ್ಡೆಗಳುಳ್ಳ, ಮೃತರ ಶರೀರವೆಂಬ ತೀರವನ್ನು ಕೊಚ್ಚಿಕೊಂಡು ಹೋಗುವ, ಬಾಣಗಳ ಸಮೂಹವೆಂಬ ದೊಡ್ಡ ನೊರೆಗಳಿಂದ ಕೂಡಿದ, ಪ್ರಾಸಗಳೆಂಬ ಮತ್ಸ್ಯಗಳಿಂದ ನಿಬಿಡವಾದ, ನದಿಯನ್ನು ಉಂಟುಮಾಡಿ ಶೀಘ್ರವಾಗಿ ಆ ನದಿಯನ್ನು ದಾಟಿ ಅರ್ಜುನನು ಕುರುಗಳನ್ನು ಓಡಿಸಿ, ದೊಡ್ಡ ಬಾಣಸಮೂಹಗಳನ್ನು ಪ್ರಯೋಗಿಸಿ, ಕೌರವ ಸೈನಿಕರಿಗೆ ಮೋಹವನ್ನುಂಟು ಮಾಡುವಂತೆ ಬಾಣಗಳ ದೊಡ್ಡ ಜಾಲವನ್ನು ನಿರ್ಮಿಸಿ ಅವರನ್ನು ಮುಚ್ಚಿ, ಇದ್ದಕ್ಕಿದ್ದಂತೆಯೇ ದ್ರೋಣರ ಸೈನ್ಯದ ಕಡೆಗೆ ಧಾವಿಸಿ ಬಂದನು.
ಶೀಘ್ರಮಭ್ಯಸ್ಯತೋ ಬಾಣಾನ್ ಸಂದಧಾನಸ್ಯ ಚಾನಿಶಮ್ |
ನಾಂತರಂ ದದೃಶೇ ಕಶ್ಚಿತ್ ಕೌಂತೇಯಸ್ಯ ಯಶಸ್ವಿನಃ ॥ 55 ॥
ಕೀರ್ತಿವಂತನಾದ ಅರ್ಜುನನು ಧನುಸ್ಸಿನಲ್ಲಿ ಬಾಣಗಳನ್ನು ಹೂಡುವುದಕ್ಕೂ ಮತ್ತು ಶೀಘ್ರವಾಗಿ ಅವುಗಳನ್ನು ಪ್ರಯೋಗಿಸುವುದಕ್ಕೂ ಮಧ್ಯೆ ಸ್ವಲ್ಪವೂ ಕಾಲಾವಕಾಶವು ಕಾಣುತ್ತಿರಲಿಲ್ಲ.
ನ ದಿಶೋ ನಾಂತರಿಕ್ಷಂ ಚ ನ ದ್ಯೌರ್ನೈವ ಚ ಮೇದಿನೀ |
ಅದೃಶ್ಯತ ಮಹಾರಾಜ ಬಾಣಭೂತಮಿವಾಭವತ್ ॥ 56 ॥
ಎಲೈ ಮಹಾರಾಜನೇ, ದಿಕ್ಕುಗಳಾಗಲೀ, ಅಂತರಿಕ್ಷವಾಗಲೀ, ಆಕಾಶವಾಗಲೀ, ಭೂಮಿಯಾಗಲೀ ಕಾಣುತ್ತಿರಲಿಲ್ಲ. ಎಲ್ಲ ಜಗತ್ತೂ ಬಾಣಮಯವಾದಂತೆ ಆಯಿತು.
ನಾದೃಶ್ಯತ ತದಾ ರಾಜನ್ ತತ್ರ ಕಿಂಚನ ಸಂಯುಗೇ |
ಬಾಣಾಂಧಕಾರೇ ಮಹತಿ ಕೃತೇ ಗಾಂಡೀವಧನ್ವನಾ ॥ 57 ॥
ಎಲೈ ರಾಜನೇ, ಗಾಂಡೀವ ಧನುರ್ಧಾರಿಯಾದ ಅರ್ಜುನನು ಬಾಣಗಳಿಂದ ದೊಡ್ಡ ಅಂಧಕಾರವನ್ನು ಸೃಷ್ಟಿಸುತ್ತಿರಲು ರಣರಂಗದಲ್ಲಿ ಯಾವುದೂ ಕಾಣಿಸುತ್ತಿರಲಿಲ್ಲ.

ಸೂರ್ಯೇ ಚಾಸ್ತಮನುಪ್ರಾಪ್ತೇ ರಜಸಾ ಚಾಭಿಸಂವೃತೇ |
ನಾಜ್ಞಾಯತ ತದಾ ಶತ್ರುರ್ನ ಸುಹೃನ್ನ ಚ ಕಶ್ಚನ |
ತತೋಽವಹಾರಂ ಚಕ್ರುಸ್ತೇ ದ್ರೋಣದುರ್ಯೋಧನಾದಯಃ ॥ 58 ॥
ಸೂರ್ಯನು ಅಸ್ತಂಗತವಾಗುತ್ತಿರಲು ಸೈನ್ಯದ ಧೂಳಿನಿಂದ ಎಲ್ಲವೂ ಮುಚ್ಚಿಹೋಗಿರಲು ಅಲ್ಲಿ ಶತ್ರುವನ್ನಾಗಲೀ, ಮಿತ್ರರನ್ನಾಗಲೀ ಯಾವನೂ ತಿಳಿಯಲಿಲ್ಲ. ಆಗ ದ್ರೋಣ-ದುರ್ಯೋಧನಾದಿಗಳು ಸೈನ್ಯದ ಅವಹಾರವನ್ನು ಮಾಡಿದರು.
ತಾನ್ ವಿದಿತ್ವಾ ಭೃಶಂ ತ್ರಸ್ತಾನಯುದ್ಧಮನಸಃ ಪರಾನ್ |
ಸ್ವಾನ್ಯನೀಕಾನಿ ಬೀಭತ್ಸುಃ ಶನಕೈರವಹಾರಯತ್ ॥ 59 ॥
ಶತ್ರುಗಳು ಬಹಳ ಹೆದರಿರುವುದನ್ನು ಮತ್ತು ಯುದ್ಧ ವಿಮುಖರಾಗಿರುವುದನ್ನು ಗಮನಿಸಿದ ಅರ್ಜುನನು ನಿಧಾನವಾಗಿ ತನ್ನ ಸೈನ್ಯಗಳನ್ನು ಹಿಂದಕ್ಕೆ ತೆಗೆದುಕೊಂಡನು.
ತತೋಽಭಿತುಷ್ಟುವುಃ ಪಾರ್ಥಂ ಪ್ರಹೃಷ್ಟಾಃ ಪಾಂಡುಸೃಂಜಯಾಃ |
ಪಾಂಚಾಲಾಶ್ಚ ಮನೋಜ್ಞಾಭಿಃ ವಾಗ್ಭಿಃ ಸೂರ್ಯಮಿವರ್ಷಯಃ ॥
ಆಗ ಸಂತೋಷಗೊಂಡ ಪಾಂಡವರೂ, ಸೃಂಜಯರೂ ಮತ್ತು ಪಾಂಚಾಲರೂ ಋಷಿಗಳು ಸೂರ್ಯನನ್ನು ಪ್ರಶಂಸಿಸುವಂತೆ ಮನೋಜ್ಞವಾದ ವಚನಗಳಿಂದ ಅರ್ಜುನನನ್ನು ಪ್ರಶಂಸಿಸಿದರು.
ಏವಂ ಸ್ವಶಿಬಿರಂ ಪ್ರಾಯಾದ್ ಜಿತಶತ್ರುರ್ಧನಂಜಯಃ |
ಪೃಷ್ಠತಃ ಸರ್ವಸೈನ್ಯಾನಾಂ ಮುದಿತಃ ಸಹಕೇಶವಃ ॥ 61 ॥
ಹೀಗೆ ಶತ್ರುಗಳನ್ನು ಜಯಿಸಿ ಧನಂಜಯನು ಕೃಷ್ಣನ ಜೊತೆಯಲ್ಲಿ ಎಲ್ಲ ಸೈನ್ಯಗಳ ಹಿಂಭಾಗದಲ್ಲಿ ತನ್ನ ಶಿಬಿರಕ್ಕೆ ಹಿಂದಿರುಗಿದನು.
ಮಸಾರಗಲ್ವರ್ಕಸುವರ್ಣರೂಪ್ಯೈಃ
ವಜ್ರಪ್ರವಾಲೈಃ ಸ್ಫಟಿಕೈಶ್ಚ ಮುಖ್ಯೈಃ |
ಚಿತ್ರೇ ರಥೇ ಪಾಂಡುಸುತೋ ರರಾಜ
ನಕ್ಷತ್ರಚಿತ್ರೇ ವಿಯತೀವ ಚಂದ್ರಃ ॥ 62 ॥
ಶ್ರೇಷ್ಠವಾದ ಮರಕತ, ಪುಷ್ಯರಾಗ, ಸುವರ್ಣ, ರಜತ, ವಜ್ರ, ಹವಳ ಮತ್ತು ಸ್ಫಟಿಕಗಳಿಂದ ವಿಚಿತ್ರವಾಗಿ ಕಾಣುತ್ತಿದ್ದ ರಥದಲ್ಲಿ, ನಕ್ಷತ್ರದಿಂದ ವಿಚಿತ್ರವಾಗಿ ಕಾಣುವ ಆಕಾಶದಲ್ಲಿ ಚಂದ್ರನಂತೆ, ಪಾಂಡುಸುತನಾದ ಅರ್ಜುನನು ಶೋಭಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚದಶೋಽಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಪಂಚದಶೋಽಧ್ಯಾಯಃ ॥
॥ ದ್ರೋಣಯುದ್ಧೇ ಪ್ರಥಮಾವಹಾರಃ ಸಮಾಪ್ತಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.

॥ ದ್ರೋಣಾಭಿಷೇಕಪರ್ವ ಸಮಾಪ್ತಮ್ ॥
* * * * *

2. ಸಂಶಪ್ತಕವಧಪರ್ವ
ಮಹಾಭಾರತ ತಾತ್ಪರ್ಯನಿರ್ಣಯ - ಅಧ್ಯಾಯ 26
ಸ ವಾಸುದೇವಪ್ರಯತೇ ರಥೇ ಸ್ಥಿತಃ
ಶರೈಃ ಶರೀರಾಂತರಕರೈಃ ಸಮಂತತಃ |
ನಿಹತ್ಯ ನಾಗಾಶ್ವರಥಾನ್ ಪ್ರವರ್ತಯ-
ನ್ನದೃಶ್ಯತಾಽಶ್ವೇವ ಚ ಶೋಣಿತಾಪಗಾಃ ॥
ಕೃಷ್ಣ ನಡೆಸುವ ರಥದಲ್ಲಿ ನಿಂತು ಅರ್ಜುನ ಶರೀರನಾಶಕರವಾದ ಬಾಣಗಳಿಂದ ಸುತ್ತಲೂ ಗಜ-ಅಶ್ವ-ರಥಗಳನ್ನು ನಾಶಪಡಿಸಿ ರಕ್ತದ ಹೊಳೆ ಹರಿಸುತ್ತ ಲೋಕಕ್ಕೆ ದೃಷ್ಟಿಗೋಚರನಾದ.
ನಿಹನ್ಯಮಾನಾಸು ಕಿರೀಟಿನಾ ಚಮೂ
ಷ್ವಾರಕ್ಷಿತೇ ಧರ್ಮಸುತೇ ತಥಾಽಽಪದಃ |
ಚಮೂಂ ಚ ಭೀಮಾರ್ಜುನಬಾಣಭಗ್ನಾಂ
ದ್ರೋಣೋಽಪಹೃತ್ಯಾಪಯಯೌ ನಿಶಾಗಮೇ ॥
ಸೇನೆಗಳು ಅರ್ಜುನನಿಂದ ಹತವಾಗುತ್ತಿದ್ದಾಗ, ಯುಧಿಷ್ಠಿರನೂ ಆಪತ್ತಿನಿಂದ ರಕ್ಷಿತನಾದಾಗ, ಭೀಮಾರ್ಜುನರ ಬಾಣಗಳಿಂದ ಜರ್ಜರಿತವಾದ ಸೈನ್ಯವನ್ನು, ರಾತ್ರಿಕಾಲ ಬರುತ್ತಿದ್ದಂತೆ ದ್ರೋಣರು ಹಿಂದೆ ಕರೆಸಿಕೊಂಡು ಹೊರಟುಹೋದರು.
ಸ ಧಾರ್ತರಾಷ್ಟ್ರೇಣ ಯುಧಿಷ್ಠಿರಾಗ್ರಹಾತ್
ಸಂಶ್ರಾವಿತಃ ಕ್ರೂರವಚೋ ನಿಶಾಯಾಮ್ |
ಜಗದಾ ದೂರಂ ಸಮರಾದ್ ವಿನೀಯತಾಂ
ಪಾರ್ಥಸ್ತತೋ ಧರ್ಮಸುತಂ ಗ್ರಹೀಷ್ಯೇ ॥
ರಾತ್ರಿಯಲ್ಲಿ ದುರ್ಯೋಧನ ದ್ರೋಣನನ್ನು ಅವನು ಯುಧಿಷ್ಠಿರನನ್ನು ಸೆರೆಹಿಡಿಯದಿದ್ದುದಕ್ಕೆ ಕಟುವಾಗಿ ಆಕ್ಷೇಪಿಸಿದನು. ಆಗ ದ್ರೋಣರಿಂದ ಅರ್ಜುನನನ್ನು ಯುದ್ಧದಿಂದ ದೂರಕ್ಕೆ ಕರೆದುಕೊಂಡು ಹೋಗಿರಿ. ಆಗ ನಾನು ಯುಧಿಷ್ಠಿರನನ್ನು ಸೆರೆ ಹಿಡಿಯುವೆನು

ಎಂದರು.
ತತಃ ಸುಶರ್ಮಾ ಸಹಿತೋ ಮಹಾರಥೈಃ
ಸಂಶಪ್ತಕೈರ್ದೂತರಂ ಪ್ರಣೇತುಮ್ ।
ಯುದ್ಧಾಯ ಭೀಮಾನುಜಮಾಶು ಕ್ಲೃಪ್ತೋ
ದುರ್ಯೋಧನೇನೋಮಿತಿ ಸೋಽಪ್ಯವಾದೀತ್ ॥
ಆಗ ದುರ್ಯೋಧನನು ಅರ್ಜುನನನ್ನು ಯುದ್ಧಕ್ಕೆ ದೂರ ಕರೆದೊಯ್ಯಲು ಮಹಾರಥರಾದ ಸಂಶಪ್ತಕರೊಂದಿಗೆ ಸುಶರ್ಮನನ್ನು ಆಜ್ಞಾಪಿಸಿದನು. ಅವನೂ ಆಗಲಿ ಎಂದು ಒಪ್ಪಿಕೊಂಡನು.
ಸಮಾಹ್ವಯಾಮಾಸುರಥಾರ್ಜುನಂ ತೇ
ಪ್ರಾತುರ್ಹುತಾಶಸ್ಯ ದಿನಂ ರಣಾಯ ।
ಅಯೋಧಯತ್ ತಾನ್ ಸ ಚ ತತ್ರ ಗತ್ವಾ
ಭೀಮೋ ಗಜಾನೀಕಮಥಾತ್ರ ಚಾವಧೀತ್ ॥
ಬಳಿಕ ಬೆಳಿಗ್ಗೆ ಸಂಶಪ್ತಕರು ಅರ್ಜುನನನ್ನು ಆಗ್ನೇಯ ದಿಕ್ಕಿನಲ್ಲಿ ಯುದ್ಧಕ್ಕೆ ಕರೆದರು. ಅರ್ಜುನನು ಅಲ್ಲಿಗೆ ಹೋಗಿ ಅವರೊಡನೆ ಯುದ್ಧ ಮಾಡಿದನು. ಇತ್ತ ಭೀಮ ಗಜಸೇನೆಯನ್ನು ಸಂಹರಿಸಿದನು.
ನಿಹನ್ಯಮಾನೇಷು ಗಜೇಷು ಸರ್ವಕೋ
ವಿದ್ರಾವ್ಯಮಾಣೇಷ್ವಖಿಲೇಷು ರಾಜಸು ।
ಪ್ರಾಗ್ಜ್ಯೋತಿಷೋ ಧಾರ್ತರಾಷ್ಟ್ರಾರ್ಥಿತಸ್ತಂ
ಸಮಾಸದತ್ ಸುಪ್ರತೀಕೇನ ಧನ್ವೀ ॥
ಭೀಮನು ಎಲ್ಲೆಡೆ ಆನೆಗಳನ್ನು ಸಂಹರಿಸಿ ಎಲ್ಲ ರಾಜರನ್ನೂ ಓಡಿಸುತ್ತಿದ್ದಾಗ ದುರ್ಯೋಧನನ ಕೋರಿಕೆಯಂತೆ ಧನುರ್ಧಾರಿಯಾದ ಭಗದತ್ತನು ಸುಪ್ರತೀಕ ಆನೆಯ ಮೇಲೇರಿ ಬಂದನು.
ವಿಭೀಷಿತಾಃ ಸುಪ್ರತೀಕೇನ ಭೀಮ
ಹಯಾ ನ ತಸ್ಥುಸ್ತದನು ಸ್ಮ ಸಾತ್ಯಕಿಃ ।
ಸೌಭದ್ರಮುಖ್ಯಾಶ್ಚ ಗಜಂ ತಮಭ್ಯಯ
ಶ್ಚಿಕ್ಷೇಪ ತೇಷಾಂ ಸ ರಥಾನಥಾಂಬರೇ ॥
ಸುಪ್ರತೀಕ ಆನೆಗೆ ಬೆದರಿದ ಭೀಮನ ಕುದುರೆಗಳು ವಶದಲ್ಲಿ ನಿಲ್ಲಲಿಲ್ಲ. ಬಳಿಕ ಸಾತ್ಯಕಿ ಮತ್ತು ಅಭಿಮನ್ಯು ಮುಂತಾದವರು ಆ ಆನೆಯನ್ನು ಎದುರಿಸಿದರು. ಆನೆ ಅವರ ರಥಗಳನ್ನು ಆಕಾಶಕ್ಕೆ ಹಾರಿಸಿತು.
ಶೈನೇಯಪೂರ್ವೇಷು ರಥೋಜ್ಝಿತೇಷು
ಭೂಮಾವವಪ್ಲುತ್ಯ ಕಥಂಚಿದೇವ ।
ಸ್ಥಿತೇಷು ಭೀಮೇ ಚ ವಿಭೀಷಿತಾಶ್ವಾನ್
ಸಂಯಮ್ಯ ಯುದ್ಧ್ಯತ್ಯಪಿ ಕೃಷ್ಣ ಐಕ್ಷತ್ ॥
ಸಾತ್ಯಕಿ ಮುಂತಾದವರು ರಥಗಳನ್ನು ಕಳೆದುಕೊಂಡು ಹಾರಿ ನೆಲದಲ್ಲಿ ಕಷ್ಟದಿಂದ ನಿಂತಿರಲು, ಭೀಮನೂ ಹೆದರಿದ ಕುದುರೆಗಳನ್ನು ಹತೋಟಿಗೆ ತಂದು ಯುದ್ಧ ಮಾಡುತ್ತಿರಲು ಕೃಷ್ಣನು ಹೀಗೆ ಆಲೋಚಿಸಿದನು.
ಸಂಕ್ಲೇಶಿತೋ ವೈಷ್ಣವಾಸ್ತ್ರಂ ಪ್ರಮುಂಚೇತ್
ಪ್ರಾಗ್ಜ್ಯೋತಿಷೋ ಭೀಮಸೇನೋ ತತೋಽಹಮ್ ।
ಯಾಮ್ಯರ್ಜುನೇನೈವ ತದಸ್ತ್ರಮಾತ್ಮನಃ
ಸ್ವೀಕರ್ತುಮನ್ಯೇನ ವರಾದಧಾರ್ಯಮ್ ॥
ಭೀಮನಿಂದ ಬಹಳ ಪೀಡಿತನಾದ ಭಗದತ್ತ ಅವನ ಮೇಲೆ ವೈಷ್ಣವಾಸ್ತ್ರವನ್ನು ಎಸೆಯಬಹುದು. ಅದರಿಂದ ನನ್ನ ವರದಿಂದ ಬೇರೆಯವರಿಗೆ ಧರಿಸಲಾಗದ ಆ ಅಸ್ತ್ರವನ್ನು ಸ್ವೀಕರಿಸಲು ಅರ್ಜುನನೊಂದಿಗೆ ನಾನೇ ಹೋಗುತ್ತೇನೆ.
ಇತಿ ಸ್ಮ ಸಂಚಿಂತ್ಯ ಸಹಾರ್ಜುನೇನ
ತತ್ರಾಽಯಯಾವಥ ಪಾರ್ಥಂತ್ರಿಗರ್ತಾಃ ।
ನ್ಯವಾರಯಂಸತತ್ವಷ್ಟ್ರಮಸ್ತ್ರಂ ಸ ತೇಷು
ವ್ಯವಾಸೃಜನ್ಮೋಹನಾಯಾಽಶು ವೀರಃ ॥
ಹೀಗೆ ಆಲೋಚಿಸಿ ಕೃಷ್ಣ ಅರ್ಜುನನೊಂದಿಗೆ ಭಗದತ್ತನಲ್ಲಿಗೆ ಹೊರಟ. ಆಗ ಅರ್ಜುನನನ್ನು ಸಂಶಪ್ತಕರು ತಡೆದರು. ವೀರ ಅರ್ಜುನನು ಬೇಗನೆ ಅವರನ್ನು ಮೋಹಗೊಳಿಸುವುದಕ್ಕಾಗಿ ಅವರ ಮೇಲೆ ತ್ವಾಷ್ಟ್ರಾಸ್ತ್ರವನ್ನು ಪ್ರಯೋಗಿಸಿದನು.
ತದಸ್ತ್ರವೀರ್ಯೇಣ ವಿಮೋಹಿತಾಸ್ತೇ
ಪರಸ್ಪರಂ ಕೃಷ್ಣಪಾರ್ಥಾವಿತಿ ಸ್ಮ ।
ಜಘ್ನುಸ್ತದಾ ವಾಸವಿಸ್ತಾನ್ ವಿಸೃಜ್ಯ
ಪ್ರಾಗ್ಜ್ಯೋತಿಷಂ ಹಂತುಮಿಹಾಭ್ಯಗಾದ್ ದ್ರುತಮ್ ॥
ಆ ಅಸ್ತ್ರದ ಪ್ರಭಾವದಿಂದ ಸಂಶಪ್ತಕರು ಪರಸ್ಪರ ತಾವೇ ಕೃಷ್ಣಾರ್ಜುನರೆಂಬ ಭ್ರಮೆಗೊಳಗಾಗಿ ಒಬ್ಬರಿಗೊಬ್ಬರು ಹೊಡೆದುಕೊಂಡರು. ಆಗ ಅರ್ಜುನ ಅವರನ್ನು ಬಿಟ್ಟು ಭಗದತ್ತನನ್ನು ಕೊಲ್ಲುವುದಕ್ಕಾಗಿ ಬೇಗನೆ ಅಲ್ಲಿಗೆ ಎದುರಾಗಿ ಬಂದನು.
ವಿಸೃಜ್ಯ ಭೀಮಂ ಸ ಚ ಪಾರ್ಥಮೇವ

ಯಯೌ ಗಜಸ್ಕಂಧಗತೋ ಗಜಂ ತಮ್ |
ಸಂಚೋದಯಾಮಾಸ ರಥಾಯ ತಸ್ಯ
ಚಕ್ರೇSಪಸವ್ಯಂ ಹರಿರೇನಮಾಶು .|
ಭಗದತ್ತನು ಭೀಮನನ್ನು ಬಿಟ್ಟು ಅರ್ಜುನನನ್ನೇ ಸಮೀಪಿಸಿದನು. ಆನೆಯ ಹೆಗಲ ಮೇಲೆ ಕುಳಿತಿದ್ದ ಆತ ಆನೆಯನ್ನು ಅಜುನನ ರಥದ ಕಡೆಗೆ ನಡೆಸಿದನು. ಕೃಷ್ಣನು ರಥವನ್ನು ಆನೆಯ ಸುತ್ತಲೂ ವೇಗವಾಗಿ ಚಲಿಸಿದನು.
ಮನೋಜವೇನೈವ ರಥೇ ಪರೇಣ
ಸಂಭ್ರಾಮ್ಯಮಾಣೇ ನ ತು ತಂ ಗಜಃ ಸಃ |
ಪ್ರಾಪ್ತುಂ ಶಶಾಕಾಥ ಶರೈಃ ಸುತೀಕ್ಷ್ಣೈ
ರಭ್ಯರ್ದಯಾಮಾಸ ನೃಪಂ ಸ ವಾಸವಿಃ ॥
ಶ್ರೀಕೃಷ್ಣನು ರಥವನ್ನು ಮನೋವೇಗದಿಂದ ಸುತ್ತಲೂ ತಿರುಗಿಸುತ್ತಿದ್ದುದರಿಂದ ಆನೆಯು ರಥವನ್ನು ಹಿಡಿಯಲು ಶಕ್ತವಾಗಲಿಲ್ಲ. ಅರ್ಜುನನು ಅತಿ ತೀಕ್ಷ್ಣವಾದ ಬಾಣಗಳಿಂದ ಭಗದತ್ತನನ್ನು ಪೀಡಿಸಿದನು.
ಅಸ್ತ್ರೈಶ್ಚ ಶಸ್ತ್ರೈ ಸುಚಿರಂ ನೃವೀರಾ
ವಯುದ್ಧ್ಯತಾಂ ತೌ ಬಲಿನಾಂ ಪ್ರಬರ್ಹೌ |
ಅಥೋ ಚಕರ್ತಾಸ್ಯ ಧನುಃ ಸ ಪಾರ್ಥಃ
ಸ ವೈಷ್ಣವಾಸ್ತ್ರಂ ಚ ತದಾಂಕುಶೇSಕರೋತ್ ॥
ಬಲಿಷ್ಠರಲ್ಲಿ ಮೊದಲಿಗರಾದ ಆ ಅರ್ಜುನ-ಭಗದತ್ತರು ದೀರ್ಘಕಾಲ ಅಸ್ತ್ರಗಳಿಂದಲೂ ಶಸ್ತ್ರಗಳಿಂದಲೂ ಯುದ್ಧಮಾಡಿದರು. ಬಳಿಕ ಅರ್ಜುನನು ಭಗದತ್ತನ ಬಿಲ್ಲನ್ನು ತುಂಡರಿಸಿದನು. ಭಗದತ್ತನು ಅಂಕುಶದಲ್ಲಿ ವೈಷ್ಣವಾಸ್ತ್ರವನ್ನು ಅಭಿಮಂತ್ರಿಸಿದನು.
ತಸ್ಮಿನ್ನಸ್ತ್ರೇ ತೇನ ತದಾ ಪ್ರಮುಕ್ತೇ
ದಧಾರ ತದ್ ವಾಸುದೇವೋSಮಿತೌಜಾಃ |
ತದಂಸದೇಶೇSಸ್ಯ ತು ವೈಜಯಂತೀ
ಬಭೂವ ಮಾಲಾSಖಿಲಲೋಕಭರ್ತುಃ ॥
ಭಗದತ್ತನು ವೈಷ್ಣವಾಸ್ತ್ರವನ್ನು ಪ್ರಯೋಗಿಸಿದಾಗ ಅಮಿತ ಶಕ್ತಿ ಉಳ್ಳ ಶ್ರೀಕೃಷ್ಣನು ಅದನ್ನು ಧರಿಸಿದನು. ಅದು ಸಕಲ ಲೋಕದೊಡೆಯನಾದ ಕೃಷ್ಣನ ಹೆಗಲಲ್ಲಿ ವೈಜಯಂತೀ ಮಾಲೆಯಾಯಿತು.
ದೃಷ್ಟ್ವೈವ ತದ್ ಧಾರಿತಮಚ್ಯುತೇನ
ಪಾರ್ಥಃ ಕಿಮರ್ಥಂ ವಿಧೃತಂ ತ್ವಯೇತಿ |
ಊಚೇ ತಮಾಹಾSಶು ಜಗನ್ನಿವಾಸೋ
ಮಯಾSಖಿಲಂ ಧಾರ್ಯತೇ ಸರ್ವದೈವ ॥
ವೈಷ್ಣವಾಸ್ತ್ರವನ್ನು ಶ್ರೀಕೃಷ್ಣ ಧರಿಸಿದುದನ್ನು ನೋಡಿ ಅರ್ಜುನ `ನೀನೇಕೆ ಅದನ್ನು ಧರಿಸಿದೆ?' ಎಂದನು. ಆಗ ಜಗದಾಶ್ರಯನಾದ ಕೃಷ್ಣನು `ಯಾವಾಗಲೂ ಎಲ್ಲವನ್ನೂ ನಾನೇ ಧರಿಸುತ್ತೇನೆ' ಎಂದು ಹೇಳಿದನು.
ನ ಮಾದೃಶೋSನ್ಯೋSಸ್ತಿ ಕುತಃ ಪರೋ ಮತ್
ಸೋSಹಂ ಚತುರ್ಧಾ ಜಗತೋ ಹಿತಾಯ |
ಸ್ಥಿತೋSಸ್ಮಿ ಮೋಕ್ಷಪ್ರಲಯಂ ಸ್ಥಿತೀನಾಂ
ಸೃಷ್ಟೇಶ್ಚ ಕರ್ತಾ ಕ್ರಮಶಃ ಸ್ವಮೂರ್ತಿಭಿಃ |
ಸ  ವಾಸುದೇವಾದಿಚತುಃ ಸ್ವರೂಪಃ
ಸ್ಥಿತೋSನಿರುದ್ಧೋ ಹೃದಿ ಚಾಖಿಲಸ್ಯ ॥
ನನಗೆ ಸಮಾನ ಇನ್ನೊಬ್ಬನಿಲ್ಲ. ನನಗಿಂತ ಮಿಗಿಲು ಇನ್ನೆಲ್ಲಿ? ಜಗತ್ತಿನ ಹಿತಕ್ಕಾಗಿ ನಾಲ್ಕು ರೂಪದವನಾಗಿದ್ದೇನೆ. ನನ್ನ ರೂಪಗಳಿಂದ ಕ್ರಮವಾಗಿ ಮೋಕ್ಷ, ಪ್ರಲಯ, ಸ್ಥಿತಿ, ಸೃಷ್ಟಿಗಳಿಗೆ ಕರ್ತನಾಗಿದ್ದೇನೆ. ವಾಸುದೇವ ಮುಂತಾದ ನಾಲ್ಕು ರೂಪದವನಾದ ನಾನೇ ಅನಿರುದ್ಧನಾಗಿ ಎಲ್ಲರ ಹೃದಯದಲ್ಲಿರುತ್ತೇನೆ.
ಸ ಏವ ಚ ಕ್ರೋಡತನುಃ ಪುರಾSಹಂ
ಭೂಮಿ ಪ್ರಿಯಾರ್ಥಂ ನರಕಾಯ ಚಾದಾಮ್ |
ಅಸ್ತ್ರಂ ಮದೀಯಂ ವರಮಸ್ಯ ಚಾದಾ-
ಮವಧ್ಯತಾಂ ಯಾವದಸ್ತ್ರಂ ಸಸೂನೋಃ ॥
ಚತುರ್ಮೂರ್ತಿ ಸ್ವರೂಪನಾದ ನಾನೇ ವರಾಹರೂಪನಾಗಿ ಹಿಂದೆ ಭೂದೇವಿಗೆ ಪ್ರಿಯ ಉಂಟುಮಾಡುವುದಕ್ಕಾಗಿ ನರಕಾಸುರನಿಗೆ ನನ್ನ ಅಸ್ತ್ರವನ್ನಿತ್ತೆ. ಅವನಿಗೂ ಅವನ ಮಗನಿಗೂ ಅಸ್ತ್ರವಿರುವಷ್ಟು ಕಾಲ ಅವಧ್ಯತ್ವವನ್ನೂ ವರವಾಗಿ ನೀಡಿದೆ.
ಅಸ್ತ್ರಸ್ಯ ಚಾನ್ಯೋ ನ ತು ಕಶ್ಚಿದಸ್ತಿ
ಯೋSವಧ್ಯ ಏತಸ್ಯ ಕುತಶ್ಚ ಮತ್ತಃ |
ಇತಿ ಸ್ಮ ತೇ ನೈವ ಮಯಾ ಧೃತಂ ತ-
ದಸ್ತ್ರಂ ತದೇನಂ ಜಹಿ ಚಾಸ್ತ್ರಹೀನಮ್ ॥
ಈ ಅಸ್ತ್ರಕ್ಕೆ ಅವಧ್ಯನು ನಾನೇ ಹೊರತು ಇನ್ನಾರೂ ಯಾವ ಕಾರಣದಿಂದಲೂ ಅಲ್ಲ. ಅದರಿಂದಲೇ ನಾನು ಆ ಅಸ್ತ್ರವನ್ನು ಧರಿಸಿದೆ. ಅದರಿಂದ ಈಗ ಅಸ್ತ್ರಹೀನನಾಗಿರುವ ಈ ಭಗದತ್ತನನ್ನು ನೀನು ಕೊಲ್ಲು.

ಇತ್ಯುಕ್ತಮಾಕರ್ಣ್ಯ ಸ ಕೇಶವೇನ
ಸಮ್ಮಂತ್ರ್ಯ ಬಾಣಂ ಹೃದಯೇಮುಮೋಚ |
ಪ್ರಾಗ್ಜ್ಯೋತಿಷಸ್ಯಾಪರಮುತ್ತಮಂ ಶರಂ
ಗಜೇಂದ್ರಕುಂಭಸ್ಥಲ ಆಶ್ವಮಜ್ಜಯತ್ ||
ಶ್ರೀಕೃಷ್ಣ ಹೀಗೆ ಹೇಳಿದ್ದನ್ನು ಕೇಳಿ ಅರ್ಜುನ ಅವನೊಡನೆ ವಿಚಾರಮಾಡಿ ಭಗದತ್ತನ ಎದೆಯ ಮೇಲೆ ಬೇಗನೆ ಒಂದು ಬಾಣವನ್ನೆಸೆದನು. ಗಜೇಂದ್ರನ ಕುಂಭಸ್ಥಲದಲ್ಲಿಯೂ ಇನ್ನೊಂದು ಉತ್ತಮವಾದ ಬಾಣವನ್ನು ನೆಟ್ಟ.
ಉಭೌ ಚ ತೌ ಪೇತತುರದ್ರಿಸನ್ನಿಭೌ
ಮಹೇಂದ್ರ ವಜ್ರಾಭಿಹತಾವಿವಾಽಶು |
ನಿಹತ್ಯ ತೌ ವಾಸವಿರುಗ್ರಪೌರುಷೋ
ಮುಮೋದ ಸಾಧು ಸ್ವಜನಾಭಿಪೂಜಿತಃ ||
ಭಗದತ್ತ ಮತ್ತು ಸುಪ್ರತೀಕ ಆನೆ ಇಬ್ಬರೂ ಮಹೇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಬೆಟ್ಟಗಳಂತೆ ಬೇಗನೆ ನೆಲಕ್ಕೆ ಉರುಳಿಸಿದರು. ಉಗ್ರಪ್ರತಾಪಿಯಾದ ಅರ್ಜುನನನು ಅವರಿಬ್ಬರನ್ನು ಕೊಂದು ಚೆನ್ನಾಗಿ ತನ್ನವರ ಪ್ರಶಂಸೆಗೆ ಪಾತ್ರನಾಗಿ ಆನಂದಪಟ್ಟನು.
ಅಥಾಚಲಂ ವೃಷಕಂ ಚೈವ ಹತ್ವಾ
ಕನೀಯಸೌ ಶಕುನೇಸ್ತಂ ಚ ಬಾಣೈಃ |
ವಿವ್ಯಾಧಮಾಯಾಮಸೃಜತ್ ಸ ತಾಂ ಚ
ವಿಜ್ಞಾನಾಸ್ತ್ರೇಣಾಽಶು ನಾಶಾಯ ಚಕ್ರೇ||
ಬಳಿಕ ಅರ್ಜುನ ಶಕುನಿಯ ತಮ್ಮಂದಿರಾದ ಅಚಲನನ್ನೂ ವೃಷಕನನ್ನೂ ಕೊಂದು ಶಕುನಿಯನ್ನೂ ಬಾಣಗಳಿಂದ ಹೊಡೆದನು. ಶಕುನಿ ಮಾಯೆಯನ್ನು ಸೃಷ್ಟಿಸಿದನು. ಅದನ್ನೂ ಅರ್ಜುನನು ವಿಜ್ಞಾನಾಸ್ತ್ರದಿಂದ ನಾಶಪಡಿಸಿದನು.
ಸ ನಷ್ಟಮಾಯಃ ಪ್ರಾದ್ರವತ್ ಪಾಪಕರ್ಮಾ
ತತಃ ಪಾರ್ಥಃ ಶರಪೂಗೈಶ್ಚಮೂಂ ತಾಮ್ |
ವಿದ್ರಾವಯಾಮಾಸ ತದಾ ಗುರೋಃ ಸುತೋ
ಮಾಹಿಷ್ಮತೀಪತಿಮಾಜೌ ಜಘಾನ ||
ಪಾಪಕರ್ಮಿಯಾದ ಶಕುನಿ ತನ್ನ ಮಾಯೆ ನಾಶವಾದೊಡನೆ ಪಲಾಯನ ಮಾಡಿದನು. ಬಳಿಕ ಅರ್ಜುನನು ಬಾಣ ಸಮೂಹಗಳಿಂದ ಕೌರವ ಸೇನೆಯನ್ನು ಅಟ್ಟಿದನು. ಆಗ ಅಶ್ವತ್ಥಾಮರು ಮಾಹಿಷ್ಮತಿಯ ಅರಸನಾದ ನೀಲನನ್ನು ಕೊಂದನು.
ತದಾ ಭೀಮಸ್ತಸ್ಯ ನಿಹತ್ಯ ವಾಹಾನ್
ವ್ಯದ್ರಾವಯದ್ ಧಾರ್ತರಾಷ್ಟ್ರೀಂ ಚಮೂಂ ಚ |
ಭೀಮಾರ್ಜುನಾಭ್ಯಾಂ ಹನ್ಯಮಾನಾಂ ಚಮೂಂ ತಾಂ
ದೃಷ್ಟ್ವಾ ದ್ರೋಣಃ ಕ್ಷಿಪ್ರಮಪಾಜಹಾರ ||
ಆಗ ಭೀಮನು ಅಶ್ವತ್ಥಾಮನ ಕುದುರೆಗಳನ್ನು ಕೊಂದು ಕೌರವ ಸೇನೆಯನ್ನು ಓಡಿಸಿದನು. ಭೀಮಾರ್ಜುನರಿಂದ ಆ ಸೈನ್ಯ ಹತವಾಗುತ್ತಿದ್ದುದನ್ನು ಕಂಡು ದ್ರೋಣ ಬೇಗನೆ ಅದನ್ನು ಹಿಂದೆ ಕರೆಸಿಕೊಂಡನು.
ಪ್ರಾಗ್ಜ್ಯೋತಿಷೇ ನಿಹತೇಽಥಾಗ್ರಹಾಚ್ಚ
ಯುಧಿಷ್ಠಿರಸ್ಯಾತಿವಿಷಣ್ಣರೂಪಃ |
ದುರ್ಯೋಧನೋಽಶ್ರಾವಯದ್ ದೀನವಾಕ್ಯಾ-
ನ್ಯತ್ರ ದ್ರೋಣಂ ಸೋಽಪಿ ನೃಪಂ ಜಗಾದ ||
ಭಗದತ್ತ ಹತನಾದಾಗ ಯುಧಿಷ್ಠಿರನನ್ನೂ ಸೆರೆ ಹಿಡಿಯಲಾಗದಿದ್ದುದರಿಂದ ದುರ್ಯೋಧನನು ಬಹಳ ವಿಷಣ್ಣನಾಗಿ ಶಿಬಿರದಲ್ಲಿ ದ್ರೋಣರಿಗೆ ಬಹಳ ಕಪಟವಾದ ಮಾತುಗಳನ್ನಾಡಿದನು. ಆಗ ದ್ರೋಣರು ಅವನಿಗೆ ಹೀಗೆ ಹೇಳಿದರು.
* * * * *
ಹದಿನಾರನೆಯ ಅಧ್ಯಾಯ
ಸಂಶಪ್ತಕರಿಂದ ಅರ್ಜುನನಿಗೆ ಯುದ್ಧಾಹ್ವಾನ. ಸತ್ಯಜಿತನನ್ನು ಯುಧಿಷ್ಠಿರನ ರಕ್ಷಣೆಗೆ ನಿಲ್ಲಿಸಿ, ಅರ್ಜುನನಿಂದ ಯುದ್ಧಕ್ಕೆ ಪ್ರಯಾಣ.
ಸಂಜಯಃ
ತೇ ಸೇನೇ ಶಿಬಿರಂ ಗತ್ವಾ ನ್ಯವಿಶೇತಾಂ ವಿಶಾಂಪತೇ |
ಯಥಾನ್ಯಾಯಂ ಯಥಾಗುಲ್ಮಂ ಯಥಾಭಾಗಂ ಚ ಸರ್ವಶಃ || 1 ||
ಸಂಜಯ ಎಲೈ ರಾಜನೇ, ಆ ಎರಡು ಸೈನ್ಯಗಳು ಶಿಬಿರಕ್ಕೆ ಹೋಗಿ, ತಮ್ಮ ಸೇನಾಖಂಡಗಳಿಗೆ ಅನುಗುಣವಾಗಿ, ತಮ್ಮ ಭಾಗಗಳಿಗೆ ಅನುಗುಣವಾಗಿ ನ್ಯಾಯವಾದ ರೀತಿಯಲ್ಲಿ ವಿಶ್ರಾಂತಿಯನ್ನು ಪಡೆದವು.
ಕೃತ್ವಾಽವಹಾರಂ ಸೈನ್ಯಾನಾಂ ದ್ರೋಣಃ ಪರಮದುರ್ಮನಾಃ |
ದುರ್ಯೋಧನಮಭಿಪ್ರೇಕ್ಷ್ಯ ಸವ್ರೀಡಮಿದಮಬ್ರವೀತ್ || 2 ||
ಸೈನ್ಯಗಳನ್ನು ಹಿಂತೆಗೆದುಕೊಂಡು ಬಹಳ ಬೇಸರದಿಂದ ಕೂಡಿದ ದ್ರೋಣರು ದುರ್ಯೋಧನನನ್ನು ನೋಡಿ ನಾಚಿಕೆಯಿಂದ ಈ ಮಾತನ್ನು ಆಡಿದರು.
ದ್ರೋಣಃ

ಉಕ್ತಮೇತನ್ಮಯಾ ಪೂರ್ವಂ ನ ತಿಷ್ಠತಿ ಧನಂಜಯೇ |
ಶಕ್ಯೋ ಗೃಹೀತುಂ ಸಮರೇ ದೇವೈರಪಿ ಯುಧಿಷ್ಠಿರಃ ॥ 3 ॥
ದ್ರೋಣ ಅರ್ಜುನನು ಯುದ್ಧದಲ್ಲಿ ಇರುವಾಗ ಯುಧಿಷ್ಠಿರನನ್ನು ದೇವತೆಗಳೂ ಹಿಡಿಯಲು ಸಾಧ್ಯವಿಲ್ಲ ಎಂದು ನಾನು ಮೊದಲೇ ಹೇಳಿದ್ದೇನೆ.
ಇತಿ ತದ್ವಚನಂ ಸತ್ಯಂ ಜಾನೀಧ್ವಂ ಸಾಧು ಸಂಯುಗೇ |
ಮಾಽತಿಶಂಕೀ ವಚೋ ಮಹ್ಯಮಜಯ್ಯೌ ಕೃಷ್ಣಪಾಂಡವೌ ॥ 4 ॥
ಯುದ್ಧದಲ್ಲಿ ಈ ಮಾತು ಸತ್ಯವೆಂದು ನೀವೆಲ್ಲರೂ ಚೆನ್ನಾಗಿ ತಿಳಿಯಿರಿ. ನನ್ನ ಮಾತನ್ನು ಶಂಕಿಸಬೇಡ. ಕೃಷ್ಣಾರ್ಜುನರು ಅಜೇಯರಾದವರು.
ಅಪನೀತೇ ತು ಯೋಗೇನ ಕೇನಚಿಚ್ಛ್ವೇತವಾಹನೇ |
ತತ ಏಷ್ಯತಿ ತೇ ರಾಜನ್ ವಶಮದ್ಯ ಯುಧಿಷ್ಠಿರಃ ॥ 5 ॥
ರಾಜನೇ, ಶ್ವೇತವಾಹನನಾದ ಅರ್ಜುನನು ಯಾವುದಾದರೂ ಉಪಾಯದಿಂದ ದೂರಕ್ಕೆ ಎಳೆಯಲ್ಪಟ್ಟರೆ ಈ ದಿನ ಯುಧಿಷ್ಠಿರನು ನಿನ್ನ ವಶನಾಗುವನು.
ಕಶ್ಚಿದಾಹ್ವಯತಾಂ ಸಂಖ್ಯೇ ದೇಶಮನ್ಯಮಿತೋಽರ್ಜುನಮ್ |
ತಮಜಿತ್ವಾ ತು ಕೌಂತೇಯೋ ನಿವರ್ತೇನ್ನ ಕಥಂಚನ ॥ 6 ॥
ಯಾವನಾದರೂ ಒಬ್ಬನು ಈ ಪ್ರದೇಶದಿಂದ ಬೇರೆ ಪ್ರದೇಶಕ್ಕೆ ಬಂದು ಯುದ್ಧ ಮಾಡುವಂತೆ ಅರ್ಜುನನನ್ನು ಆಹ್ವಾನಿಸಲಿ. ಕೌಂತೇಯನಾದರೂ ಅವನನ್ನು ಗೆಲ್ಲದೆ ಯಾವ ರೀತಿಯಿಂದಲೂ ಹಿಂದಿರುಗುವುದಿಲ್ಲ.
ಏತಸ್ಮಿನ್ನಂತರೇ ಶೂನ್ಯೇ ಧರ್ಮರಾಜಮಹಂ ನೃಪಮ್ |
ಗ್ರಹೀಷ್ಯಾಮಿ ಚಮೂಂ ಭಿತ್ತ್ವಾ ಧೃಷ್ಟದ್ಯುಮ್ನಸ್ಯ ಪಶ್ಯತಃ ॥ 7 ॥
ಈ ಮಧ್ಯದಲ್ಲಿ ಧರ್ಮರಾಜನು ಸಹಾಯರಹಿತನಾಗಿರುವಾಗ ನಾನು ಪಾಂಡವರ ಸೈನ್ಯವನ್ನು ಭೇದಿಸಿ, ಧೃಷ್ಟದ್ಯುಮ್ನನೆದುರಿಗೆ ರಾಜನಾದ ಯುಧಿಷ್ಠಿರನನ್ನು ಹಿಡಿಯುವೆನು.
ಅರ್ಜುನೇನ ಪರಿತ್ಯಕ್ತೋ ನ ಚೇತ್ ತ್ರಾಸಾತ್ ಪಲಾಯತೇ |
ಮಾಮುಪಾಯಾಂತಮಾಲೋಕ್ಯ ಗೃಹೀತಮಿತಿ ವಿದ್ಧಿ ತಮ್ ॥ 8 ॥
ಅರ್ಜುನನಿಂದ ಪರಿತ್ಯಕ್ತನಾಗಿ ಯುದ್ಧಕ್ಕೆ ಬರುತ್ತಿರುವ ನನ್ನನ್ನು ನೋಡಿ ಭಯದಿಂದ ಓಡಿಹೋಗದಿದ್ದರೆ ಈ ದಿನ ಅವನನ್ನು ಹಿಡಿದಿದ್ದೇನೆಂದು ತಿಳಿ.
ಕ್ಷೋಭಯಿತ್ವಾ ಬಲಂ ತೇಷಾಂ ಪಾಂಡವಾನಾಂ ಮಹಾತ್ಮನಾಮ್ |
ತಮಾನೇಷ್ಯಾಮಿ ಸಗಣಂ ವಶಂ ತವ ನ ಸಂಶಯಃ ॥ 9 ॥
ಮಹಾತ್ಮರಾದ ಆ ಪಾಂಡವರ ಸೈನ್ಯವನ್ನು ಕ್ಷೋಭೆಗೊಳಿಸಿ, ಪರಿವಾರ ಸಹಿತನಾಗಿ ಅವನನ್ನು ನಿನ್ನ ವಶಕ್ಕೆ ತರುವೆನು. ಇದರಲ್ಲಿ ಸಂಶಯವಿಲ್ಲ.
ಯದಿ ಸ್ಥಾಸ್ಯತಿ ಸಂಗ್ರಾಮೇ ಮುಹೂರ್ತಮಪಿ ಪಾಂಡವಃ |
ಯದ್ಯಪ್ಯೇಷ್ಯತಿ ಸಂಗ್ರಾಮಾದ್ ಗ್ರಹಣಾತ್ ತದ್ ವಿಶಿಷ್ಯತೇ ॥ 10 ॥
ಯುಧಿಷ್ಠಿರನು ಒಂದು ಮುಹೂರ್ತವಾದರೂ ಯುದ್ಧದಲ್ಲಿ ನಿಲ್ಲುವವನಾದರೆ (ಅವನನ್ನು ಹಿಡಿಯುವೆನು). ಅವನು ಒಂದು ಪಕ್ಷ ರಣರಂಗದಿಂದಲೇ ಹೊರಗೆ ಹೋಗುವವನಾದರೆ ಅದು ಅವನನ್ನು ಹಿಡಿಯುವುದಕ್ಕಿಂತಲೂ ಶ್ರೇಷ್ಠವಾದುದು.
ಸಂಜಯಃ
ದ್ರೋಣಸ್ಯ ತದ್ ವಚಃ ಶ್ರುತ್ವಾ ತ್ರಿಗರ್ತಾಧಿಪತಿಸ್ತತಃ |
ಭ್ರಾತೃಭಿಃ ಸಹಿತೋ ರಾಜನ್ನಿದಂ ವಚನಮಬ್ರವೀತ್ ॥ 11 ॥
ಸಂಜಯ ರಾಜನೇ, ದ್ರೋಣರ ಆ ಮಾತುಗಳನ್ನು ಕೇಳಿ, ಆಗ ತ್ರಿಗರ್ತಾಧಿಪತಿಯು ತನ್ನ ಸಹೋದರರಿಂದ ಸಹಿತನಾಗಿ ಈ ಮಾತನ್ನು ಆಡಿದನು.
ವಯಂ ವಿನಿಕೃತಾ ರಾಜನ್ ಸದಾ ಗಾಂಡೀವಧನ್ವನಾ |
ಅನಾಗಸೋಽಪಿ ಚಾಕಸ್ಮಾತ್ ಪ್ರೇಷ್ಯಾಃ ಪ್ರಭವತಾ ಯಥಾ ॥ 12 ॥
ರಾಜನೇ, ನಾವು ನಿರಪರಾಧಿಗಳಾದರೂ ನಿಷ್ಕಾರಣವಾಗಿ ಸ್ವಾಮಿಯು ಭೃತ್ಯರಿಗೆ ಅವಮಾನ ಮಾಡಿದಂತೆ ನಾವು ಅರ್ಜುನನಿಂದ ಅಪಚಾರಕ್ಕೆ ಒಳಗಾಗಿದ್ದೇವೆ.
ತೇ ವಯಂ ಸ್ಮರಮಾಣಾಸ್ತಾನ್ ವಿಪ್ರಕಾರಾನ್ ಪೃಥಗ್ವಿಧಾನ್ |
ಕ್ರೋಧಾಗ್ನಿನಾ ದಹ್ಯಮಾನಾ ನಾಶೀಮಹಿ ದಿವಾನಿಶಮ್ ॥ 13 ॥
ಅಂತಹ ನಾವು ಅವನು ಮಾಡಿದ ಅನೇಕ ವಿಧವಾದ ಅಪಚಾರಗಳನ್ನು ಸ್ಮರಿಸುತ್ತಾ, ಹಗಲೂ-ರಾತ್ರಿಯೂ ಕ್ರೋಧಾಗ್ನಿಯಿಂದ ಜ್ವಲಿಸುತ್ತಾ ಭೋಜನವನ್ನು ಮಾಡುತ್ತಿಲ್ಲ.
ಸ ನೋ ದಿಷ್ಟ್ಯಾಸ್ತ್ರಸಂಪನ್ನಃ ಚಕ್ಷುರ್ವಿಷಯಮಾಗತಃ |
ಯದಿ ಕುರ್ಯಾಮ ತತ್ ಕರ್ಮ ಯಚ್ಚಿಕೀರ್ಷಾಮ ಹೃದ್ಗತಮ್ |
ಭವತಶ್ಚ ಪ್ರಿಯಂ ತತ್ ಸ್ಯಾದ್ ಅಸ್ಮಾಕಂ ಚ ಯಶಸ್ಕರಮ್ ॥14॥
ದೈವಾನುಗ್ರಹದಿಂದ ವ್ರತಸಂಪನ್ನನಾದ ಅವನು ಈಗ ನಮ್ಮ ಕಣ್ಣಿಗೆ ಗೋಚರನಾಗಿದ್ದಾನೆ. ನಾವು ಯಾವಾಗಲೂ ಬಯಸಿದ, ನಮಗೆ ಅಭಿಪ್ರೇತವಾದ, ಕರ್ಮವನ್ನು ನಾವು ಮಾಡುವುದಾದರೆ ಅದು ನಿಮಗೂ ಪ್ರಿಯವಾದೀತು ಮತ್ತು ನಮಗೂ ಕೀರ್ತಿಕರವಾದೀತು.

ಅದ್ಯಾಸ್ತ್ವನರ್ಜುನಾ ಭೂಮಿರತ್ರಿಗರ್ತಾಽಥವಾ ಪುನಃ |
ವಯಮೇನಂ ಹನಿಷ್ಯಾಮೋ ನಿಕೃಷ್ಯಾಯೋಧನಾದ್ ಬಹಿಃ |
ಸತ್ಯಂ ತೇ ಪ್ರತಿಜಾನೀಮೋ ನೈತನ್ಮಿಥ್ಯಾ ಭವಿಷ್ಯತಿ ॥ 15 ॥|
ಈ ದಿನ ಭೂಮಿಯು ನಿರರ್ಜುನವಾಗಲಿ ಅಥವಾ ತ್ರಿಗರ್ತಶೂನ್ಯವಾಗಲಿ. ನಾವು ಅವನನ್ನು ರಣರಂಗದ ಹೊರಗೆ ಎಳೆದು ಕೊಲ್ಲುವೆವು. ನಿನಗೆ ಸತ್ಯವಾಗಿ ಪ್ರತಿಜ್ಞೆಯನ್ನು ಮಾಡುತ್ತಿದ್ದೇವೆ, ಇದು ಸುಳ್ಳಾಗುವುದಿಲ್ಲ.
ಸಂಜಯಃ
ಏವಂ ಸತ್ಯರಥಶ್ಚೋಕ್ತತ್ವ ಸತ್ಯವರ್ಮಾ ಚ ಭಾರತ |
ಸತ್ಯಧರ್ಮಾಽಪಿ ಸತ್ಯೇಷುಃ ಸತ್ಯಕರ್ಮಾ ಚ ಭಾರತ ॥ 16 ॥
ಸಹಿತಾ ಭ್ರಾತರಃ ಪಂಚ ರಥಾನಾಮಯುತೇನ ಚ |
ನ್ಯವರ್ತಂತ ಮಹಾರಾಜ ಕರ್ತುಂ ಸಮಯಬಂಧನಮ್ ॥ 17 ॥
ಸಂಜಯ ಎಲೈ ಭಾರತನೇ, ಹೀಗೆ ಸಹೋದರರಾದ ಸತ್ಯರಥ, ಸತ್ಯವರ್ಮ, ಸತ್ಯಧರ್ಮ, ಸತ್ಯೇಷು ಮತ್ತು ಸತ್ಯಕರ್ಮರು ಐವರೂ ಒಟ್ಟಾಗಿ ಅರ್ಜುನನ ಜೊತೆಯಲ್ಲಿ ಸಮಯ ಬಂಧನವನ್ನು ಮಾಡಿಕೊಳ್ಳಲು ಹತ್ತುಸಾವಿರ ರಥಗಳ ಜೊತೆಯಲ್ಲಿ ಹಿಂದಿರುಗಿದರು.
ಮಾಲವಾಸ್ತುಂಡಿಕೇರಾಶ್ಚ ರಥಾನಾಮಯುತೈಸ್ತ್ರಿಭಿಃ |
ಸುಶರ್ಮಾ ಚ ನರವ್ಯಾಘ್ರಃ ತ್ರೈಗರ್ತಃ ಪ್ರಸ್ಥಲಾಧಿಪಃ ॥ 18 ॥
ಮಚ್ಚಿಲ್ಲಕೈರ್ಲಲಿಂಥೈಶ್ಚ ಸಹಿತೋ ಮದ್ರಕೈರಪಿ |
ರಥಾನಾಮಯುತೇನೈವಮಗಮದ್ ಭ್ರಾತೃಭಿಃ ಸಹ ॥ 19 ॥
ಮಾಲವರು ಮತ್ತು ದುಂಡಿಕೇರರು ಮೂವತ್ತು ಸಾವಿರ ರಥಗಳಿಂದಲೂ, ಹಾಗೆಯೇ ನರಶ್ರೇಷ್ಠನೂ, ಪ್ರಸ್ಥಲಾಧಿಪನೂ, ತ್ರಿಗರ್ತರಲ್ಲಿ ಪ್ರಧಾನನೂ ಆದ ಸುಶರ್ಮನು ಮಚ್ಚಿಲ್ಲಕರಿಂದ, ಲಲಿಂಥರಿಂದ ಮತ್ತು ಮದ್ರಕರಿಂದ ಸಹಿತನಾಗಿ ಹತ್ತು ಸಾವಿರ ರಥಗಳನ್ನು ತೆಗೆದುಕೊಂಡು ಹೀಗೆಯೇ ತನ್ನ ಸಹೋದರರ ಜೊತೆಯಲ್ಲಿ ಹೊರಟರು.
ಮಲದಾಶ್ಚ ಕರೂಷಾಶ್ಚ ದರದಾಶ್ಚ ಮಹಾರಥಾಃ |
ತಂಕಣಾಶ್ಚ ಪರಾದಾಶ್ಚ ಯುಗಪತ್ ತೇ ಸಮಾಗತಾಃ ॥ 20 ॥
ಮಹಾರಥರಾದ ಮಲದರೂ, ಕರೂಷರೂ, ದರದರೂ, ತಂಕಣರೂ ಮತ್ತು ಪರಾದರೂ ಒಟ್ಟಿಗೆ (ಪ್ರತಿಜ್ಞೆಯನ್ನು ಮಾಡಲು) ಬಂದರು.
ನಾನಾಜನಪದೇಭ್ಯಶ್ಚ ರಥಾನಾಮಯುತಂ ಪುನಃ |
ಸಮುಚ್ಛ್ರಿತಂ ವಿಶಿಷ್ಟಾನಾಂ ಶಪಥಾರ್ಥಮುಪಾಗಮತ್ ॥ 21 ॥
ನಾನಾ ರಾಜ್ಯಗಳಿಂದ ಉನ್ನತರಾದ, ವಿಶಿಷ್ಟರಾದ ಹತ್ತುಸಾವಿರ ಮಹಾರಥರು ಪ್ರತಿಜ್ಞೆಯನ್ನು ಮಾಡಲು ಬಂದರು.
ತತೋ ಜ್ವಲನಮಾಧಾಯ ಹುತ್ವಾ ಸರ್ವೇ ಪೃಥಕ್ ಪೃಥಕ್ |
ಜಗೃಹುಃ ಕುಶಚೀರಾಣಿ ಚಿತ್ರಾಣಿ ಕವಚಾನಿ ಚ ॥ 22 ॥
ಆಗ ಅಗ್ನಿಯನ್ನು ಆಧಾನ ಮಾಡಿ, ಎಲ್ಲರೂ ಬೇರೆ ಬೇರೆಯಾಗಿ ಹೋಮವನ್ನು ಮಾಡಿ, ಇದು ರಣಯಜ್ಞದಲ್ಲಿ ದೀಕ್ಷೆ ಎಂದು ಭಾವಿಸಿ, ಕುಶಚೀರಗಳನ್ನು ಹಿಡಿದು ವಿಚಿತ್ರವಾದ ಕವಚಗಳನ್ನು ಧರಿಸಿದರು.
ತೇ ಚ ಬದ್ಧತನುತ್ರಾಣಾ ಘೃತಾಕ್ತಾಃ ಕುಶಚೀರಿಣಃ |
ಮೌರ್ವೀಮೇಖಲಿನೋ ವೀರಾಃ ಸಹಸ್ರಶತದಕ್ಷಿಣಾಃ ॥ 23 ॥
ಯಜ್ವಾನಃ ಪುತ್ರಿಣಃ ಸರ್ವೇ ಕೃತಕೃತ್ಯಾಸ್ತನುತ್ಯಜಃ |
ಯೋಕ್ಷ್ಯಮಾಣಾಸ್ತದಾಽಽತ್ಮಾನಂ ಯಶಸಾ ವಿಜಯೇನ ಚ ॥ 24 ॥
ಬ್ರಹ್ಮಚರ್ಯಶ್ರುತಿಮುಖಾಃ ಕ್ರತುಭಿಶ್ಚಾಪ್ತದಕ್ಷಿಣೈಃ |
ಪ್ರಾಪ್ಯ ಲೋಕಾನ್ ಸುಯುದ್ಧೇನ ಕ್ಷಿಪ್ರಮೇವ ಯಿಯಾಸವಃ ॥ 25 ॥
ಆ ವೀರರು ಕವಚಗಳನ್ನು ಧರಿಸಿ, ಘೃತದಿಂದ ಲೇಪಿತರಾಗಿ, ಕುಶಚೀರಗಳನ್ನು ಹಿಡಿದು, ಹೆದೆಯಮೇಖಲವನ್ನು ಧರಿಸಿ, ಶತಸಹಸ್ರ ದಕ್ಷಿಣೆಯನ್ನು ನೀಡಿ (ಪ್ರತಿಜ್ಞೆಯನ್ನು ಮಾಡಲು ಅಣಿಯಾದರು). ಎಲ್ಲರೂ ಯಜ್ಞವನ್ನು ಮಾಡಿದವರು, ಪುತ್ರರನ್ನು ಹೊಂದಿದವರು, ಜೀವನದಲ್ಲಿ ಕೃತಕೃತ್ಯರಾದವರು, ದೇಹವನ್ನು ಬಿಡಲು ಸಿದ್ಧರಾದವರು, ತಮ್ಮನ್ನು ಕೀರ್ತಿಯಿಂದಲೂ, ದಿವ್ಯದಿಂದಲೂ ಸಂಯೋಜಿಸಲು ಬಯಸುವವರು, ಬ್ರಹ್ಮಚರ್ಯ ಮತ್ತು ವೇದಗಳನ್ನು ಮೂಲವಾಗಿ ಹೊಂದಿದವರು, ಬಹಳ ದಕ್ಷಿಣೆಗಳನ್ನು ನೀಡಿ ಮಾಡಿದ ಯಜ್ಞಗಳಿಂದ ಹೊಂದಲು ಯೋಗ್ಯವಾದ ಲೋಕಗಳನ್ನು ಯುದ್ಧವನ್ನು ಮಾಡಿ ಕ್ಷಿಪ್ರವಾಗಿಯೇ ಹೊಂದಲು ಬಯಸುವವರು.
ಬ್ರಾಹ್ಮಣಾಂಸ್ತರ್ಪಯಿತ್ವಾ ಚ ನಿಷ್ಕಂ ದತ್ವಾ ಪೃಥಕ್ ಪೃಥಕ್ |
ಗಾಶ್ಚ ವಾಸಾಂಸಿ ಚ ಪುನಃ ಸಮಾಭಾಷ್ಯ ಪರಸ್ಪರಮ್ ॥ 26 ॥
ದ್ವಿಜಮುಖ್ಯೈಃ ಸಮುದಿತೈಃ ಕೃತಸ್ವಸ್ತ್ಯಯನಾಶಿಷಃ |
ಮುದಿತಾಶ್ಚ ಪ್ರಹೃಷ್ಟಾಶ್ಚ ಜಲಂ ಸಂಸ್ಪೃಶ್ಯ ನಿರ್ಮಲಮ್ ॥ 27 ॥
ಅವರು ಒಬ್ಬೊಬ್ಬರೂ ಬ್ರಾಹ್ಮಣರಿಗೆ ಬೇರೆ ಬೇರೆಯಾಗಿ ಒಂದು ನಿಷ್ಕವನ್ನು ನೀಡಿ ತೃಪ್ತಿಪಡಿಸಿ, ಗೋವುಗಳನ್ನೂ, ವಸ್ತ್ರಗಳನ್ನೂ ದಾನ ಮಾಡಿ, ಪರಸ್ಪರವಾಗಿ ಪುನಃ ಮಾತನಾಡಿ, ಅಲ್ಲಿ ಬಂದು ಸೇರಿದ ಶ್ರೇಷ್ಠ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನೂ, ಆಶೀರ್ವಚನವನ್ನೂ ಪಡೆದು, ಸಂತೋಷಗೊಂಡು ನಿರ್ಮಲವಾದ ಜಲವನ್ನು ಸ್ಪರ್ಶಮಾಡಿ;
ತೇ ಜ್ವಾಲಯಿತ್ವಾ ಜ್ವಲನಮ್ ಉಪಾಗಮ್ಯ ರಣವ್ರತಮ್ |

ತಸ್ಮಿನ್ನಗ್ನೌ ತತಶ್ಚಕ್ರುಃ ಪ್ರತಿಜ್ಞಾಂ ದೃಢನಿಶ್ಚಯಾಮ್ ॥ 28 ॥
ಶೃಣ್ವತಾಂ ಸರ್ವಭೂತಾನಾಮುಚ್ಚೈರ್ವಾಕ್ಯಮೀರಯನ್ |
ಧೃತ್ಯಾಽರ್ಜುನವಧೇ ಶೂರಾಃ ಪ್ರತಿಜ್ಞಾಮಥ ಚಕ್ರಿರೇ ॥ 29 ॥
ಅಗ್ನಿಯನ್ನು ಪ್ರಜ್ವಲಿಸಿ, ರಣವ್ರತದಲ್ಲಿ ದೀಕ್ಷಿತರಾಗಿ, ಆ ಅಗ್ನಿಯ ಎದುರಿಗೆ ಎಲ್ಲರೂ ಕೇಳುವಂತೆ ಗಟ್ಟಿಯಾದ ಸ್ವರದಲ್ಲಿ ಶೂರರಾದ ಅವರು ಅರ್ಜುನನ ವಧೆಯ ವಿಷಯದಲ್ಲಿ ಧೈರ್ಯದಿಂದ ದೃಢವಾದ ಪ್ರತಿಜ್ಞೆಯನ್ನು ಮಾಡಿದರು.
ಸಂಶಪ್ತಕಾಃ
ಅನೃತಸ್ಯ ಚ ಯೇ ಲೋಕಾ ಯೇ ಲೋಕಾ ಬ್ರಹ್ಮಘಾತಿನಾಮ್ |
ಪಾನಪಸ್ಯ ಚ ಯೇ ಲೋಕಾ ಗುರುದಾರರತಸ್ಯ ಚ ॥ 30 ॥
ಬ್ರಹ್ಮಸ್ವಹಾರಿಣಾಂ ಚೈವ ರಾಜಪಿಂಡಾಪಹಾರಿಣಾಮ್ |
ಶರಣಾಗತಂ ಚ ತ್ಯಜತಾಂ ಯಾಚಮಾನಾಭಿಘಾತಿನಾಮ್ ॥ 31 ॥
ಸಂಶಪ್ತಕರು ಸುಳ್ಳು ಮಾತನಾಡುವವರಿಗೆ ಯಾವ ಲೋಕಗಳಿವೆಯೋ, ಬ್ರಹ್ಮಹತ್ಯೆ ಮಾಡುವವರಿಗೆ ಯಾವ ಲೋಕಗಳೋ, ಮದ್ಯಪಾನ ಮಾಡುವವರಿಗೆ ಯಾವ ಲೋಕಗಳೋ, ಗುರುಪತ್ನೀ ಗಮನವನ್ನು ಮಾಡುವವರಿಗೆ ಯಾವ ಲೋಕಗಳೋ, ಬ್ರಹ್ಮಸ್ವವನ್ನು ಅಪಹಾರ ಮಾಡುವವರಿಗೆ, ರಾಜಸ್ವವನ್ನು ಅಪಹಾರ ಮಾಡುವವರಿಗೆ, ಶರಣಾಗತರನ್ನು ಪರಿತ್ಯಾಗ ಮಾಡುವವರಿಗೆ, ಬೇಡಲು ಬಂದವನನ್ನು ಹೊಡೆಯುವವರಿಗೆ;
ಅಗಾರದಾಹಿನಾಂ ಚಾಪಿ ಯೇ ಚ ಗಾಂ ನಿಘ್ನತಾಮಪಿ |
ಅಭಿಚಾರಿಣಾಂ ಚ ಯೇ ಲೋಕಾ ಯೇ ಚ ಬ್ರಹ್ಮದ್ವಿಷಾಮಪಿ ॥ 32 ॥
ಭಾರ್ಯಾಂ ಚಾಪ್ಯ ೃತುಕಾಲೇಷು ಯೇ ಲೋಕಾ ನಾಭಿಗಚ್ಛತಾಮ್ |
ಶ್ರಾದ್ಧಸಂಗತಿಕಾನಾಂ ಚ ಯೇ ಚಾಪ್ಯಾತ್ಮಾಪಹಾರಿಣಾಮ್ ॥ 33 ॥
ಮನೆಗೆ ಬೆಂಕಿಯನ್ನು ಕೊಡುವವರಿಗೆ, ಗೋಹತ್ಯೆಯನ್ನು ಮಾಡುವವರಿಗೆ, ಮಾಟಗಳನ್ನು ಮಾಡುವವರಿಗೆ, ಬ್ರಹ್ಮದ್ವೇಷಿಗಳಿಗೆ, ಋತುಕಾಲದಲ್ಲಿ ಪತ್ನಿಯ ಸಮಾಗಮವನ್ನು ಮಾಡದವರಿಗೆ, ಶ್ರಾದ್ಧದಲ್ಲಿ ಮಾತ್ರ ಭೋಜನ ಮಾಡುವವರಿಗೆ, ಆತ್ಮಹತ್ಯೆಯನ್ನು ಮಾಡಿಕೊಳ್ಳುವವರಿಗೆ;
ಕ್ಲೀಬೇನ ಸಾಂತ್ವ್ಯಮಾನಾನಾಂ ಯೇ ದೀನಾನುಸಾರಿಣಾಮ್ |
ನ್ಯಾಸಾಪಹಾರಿಣಾಂ ಯೇ ಚ ಶ್ರುತಂ ನಾಶಯತಾಂ ಚ ಯೇ ॥ 34 ॥
ನಾಸ್ತಿಕಾನಾಂ ಚ ಯೇ ಲೋಕಾ ಯೇಽಗ್ನಿಮಾತೃಪಿತೃತ್ಯಜಾಮ್ |
ಸಸ್ಯಮಾಕ್ರಮತಾಂ ಯೇ ಚ ಪ್ರತ್ಯಾದಿತ್ಯಂ ಪ್ರಮೇಹತಾಮ್ |
ತಾನಾಪ್ನುಯಾಮಹೇ ಲೋಕಾನ್ ಯೇ ಚ ಪಾಪಕೃತಾಮಪಿ ॥ 35 ॥
ನಪುಂಸಕನಿಂದ ಸಮಾಧಾನ ಪಡಿಸಿಕೊಳ್ಳುವವರಿಗೆ, ಧನವಿದ್ದರೂ ದಾರಿದ್ರ್ಯವನ್ನು ತೋರಿಸುವವರಿಗೆ, ತಮ್ಮಲ್ಲಿ ನ್ಯಾಸವಾಗಿಟ್ಟ ವಸ್ತುಗಳನ್ನು ಅಪಹಾರ ಮಾಡುವವರಿಗೆ, ಕಲಿತವಿದ್ಯೆಯನ್ನು ನಾಶಮಾಡುವವರಿಗೆ, ನಾಸ್ತಿಕರಿಗೆ, ಅಗ್ನಿ, ಮಾತೃ-ಪಿತರನ್ನು ಪರಿತ್ಯಾಗ ಮಾಡುವವರಿಗೆ, ಸಸ್ಯಗಳನ್ನು ತುಳಿಯುವವರಿಗೆ, ಸೂರ್ಯನ ಎದುರಾಗಿ ಮೂತ್ರವಿಸರ್ಜನೆಯನ್ನು ಮಾಡುವವರಿಗೆ ಮತ್ತು ಪಾಪ ಕರ್ಮಗಳನ್ನು ಮಾಡುವವರಿಗೆ ಯಾವ ಲೋಕಗಳು ಉಂಟಾಗುತ್ತವೆಯೋ ಅವುಗಳನ್ನು ನಾವು ಹೊಂದುವಂತಾಗಲಿ.
ಯದ್ಯಹತ್ವಾ ನಿವರ್ತೇಮ ವಯಂ ಸಂಖ್ಯೇ ಧನಂಜಯಮ್ |
ತೇನ ಚಾಭ್ಯರ್ದಿತಾಸತ್ರಸಾದ್ ಯದ್ಯಾಸ್ಯಾಮ ಪರಾಙ್ಮುಖಾಃ ॥ 36 ॥
ನಾವು ಯುದ್ಧದಲ್ಲಿ ಅರ್ಜುನನನ್ನು ಕೊಲ್ಲದೆ ಹಿಂದಿರುಗಿದರೆ ಅಥವಾ ಅವನಿಂದ ಪೀಡಿತರಾಗಿ ಭಯದಿಂದ ಹಿಂದಿರುಗಿದರೆ (ಹಿಂದೆ ಹೇಳಿದ ಲೋಕಗಳನ್ನು ಹೊಂದೋಣ).
ಯದ್ಯಪ್ಯಸುಕರಂ ಕರ್ಮ ಲೋಕೇ ಕುರ್ಯಾಮ ಸಂಯುಗೇ |
ಇಷ್ಟಾನ್ ಪುಣ್ಯಕೃತಾನ್ ಲೋಕಾನ್ ಪ್ರಾಪ್ನುಯಾಮ ಸುವರ್ಚಸಃ ॥37॥
ಒಂದು ಪಕ್ಷ ಯುದ್ಧದಲ್ಲಿ ನಾವು ದುಷ್ಕರವಾದ ಕಾರ್ಯವನ್ನು ಮಾಡಿದರೆ ನಮಗೆ ಇಷ್ಟವಾದ ಪುಣ್ಯವನ್ನು ಮಾಡಿದವರು ಹೊಂದುವ ಲೋಕಗಳನ್ನು ಕಾಂತಿಯುಕ್ತರಾಗಿ ಹೊಂದೋಣ.
ಸಂಜಯಃ
ಏವಮುಕತತ್ವ ತತೋ ರಾಜನ್ ತೇಽಭ್ಯವರ್ತಂತ ಸಂಯುಗಮ್ |
ಆಹ್ವಯಂತೋಽರ್ಜುನಂ ವೀರಾಃ ಪಿತೃಜುಷ್ಟಾಂ ದಿಶಂ ಪ್ರತಿ ॥ 38 ॥
ಸಂಜಯ ರಾಜನೇ, ಹೀಗೆ ಹೇಳಿ ಆ ವೀರರು ಅರ್ಜುನನನ್ನು ಪಿತೃಸೇವಿತವಾದ ದಕ್ಷಿಣ ದಿಕ್ಕಿಗೆ ಆಹ್ವಾನ ಮಾಡುತ್ತಾ ಯುದ್ಧಕ್ಕೆ ಹೊರಟರು.
ಆಹೂತಸ್ತೈರ್ನರವ್ಯಾಘ್ರಃ ಪಾರ್ಥಃ ಪರಪುರಂಜಯಃ |
ಧರ್ಮರಾಜಮಿದಂ ವಾಕ್ಯಮಪದಾಂತರಮಬ್ರವೀತ್ ॥ 39 ॥
ನರಶ್ರೇಷ್ಠನಾದ, ಪರಪುರಂಜಯನಾದ ಅರ್ಜುನನು ಅವರಿಂದ ಆಹ್ವಾನಿಸಲ್ಪಟ್ಟು ಧರ್ಮರಾಜನನ್ನು ಕುರಿತು, ಅವನ ಪ್ರತ್ಯುತ್ತರಕ್ಕೆ ಅವಕಾಶವನ್ನು ನೀಡದಂತೆ ಈ ಮಾತನ್ನು ಆಡಿದನು.
ಏಷ ವೈ ಭ್ರಾತೃಭಿಃ ಸಾರ್ಧಂ ಸುಶರ್ಮಾಽಽಹ್ವಯತೇ ರಣೇ |
ವಧಾಯ ಸಗಣಸ್ಯಾಸ್ಯ ಮಾಮನುಜ್ಞಾತುಮರ್ಹಸಿ ॥ 40 ॥
ಈ ಸುಶರ್ಮನು ತನ್ನ ಸಹೋದರರ ಜೊತೆಯಲ್ಲಿ ಪರಿವಾರ ಸಹಿತನಾದ ಅವನ ವಧೆಗಾಗಿ ನನ್ನನ್ನು ಆಹ್ವಾನಿಸುತ್ತಿದ್ದಾನೆ. ನನಗೆ

ಅನುಮತಿಯನ್ನು ನೀಡು.
ಆಹೂತೋ ನ ನಿವರ್ತೇಯಮಿತಿ ಮೇ ವ್ರತಮಾಹಿತಮ್ |
ಸಂಶಪ್ತಕಾಶ್ಚ ತೇ ರಾಜನ್ನಾಹ್ವಯಂತೇ ಮಹಾಮೃಧೇ ॥ 41 ॥
ಆಹ್ವಾನ ಮಾಡಿದರೆ ನಾನು ಹಿಂದಿರುಗುವುದಿಲ್ಲವೆಂಬುದು ನಾನು ಧರಿಸಿದ ವ್ರತ. ರಾಜನೇ, ದೊಡ್ಡ ಯುದ್ಧದಲ್ಲಿ ಸಂಶಪ್ತಕರು ನನ್ನನ್ನು ಆಹ್ವಾನಿಸುತ್ತಿದ್ದಾರೆ.
ನ ಶಕ್ನೋಮಿ ಚ ಸಂಸೋಢುಮಾಹ್ವಾನಂ ಭರತರ್ಷಭ |
ಸತ್ಯಂ ತೇ ಪ್ರತಿಜಾನೇಽಹಂ ಹತಾನ್ ವಿದ್ಧಿ ಪರಾನ್ ಯುಧಿ ॥ 42 ॥
ಎಲೈ ಭರತಶ್ರೇಷ್ಠನೇ, ಸುಮ್ಮನಿದ್ದು ಆಹ್ವಾನವನ್ನು ಸಹಿಸಲು ನನಗೆ ಸಾಧ್ಯವಿಲ್ಲ. ನಿನಗೆ ಸತ್ಯಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ. ಈ ದಿನ ಯುದ್ಧದಲ್ಲಿ ಶತ್ರುಗಳಾದ ಅವರು ಹತರಾದರೆಂದು ತಿಳಿ.
ನ ಹ್ಯರ್ಜುನೋ ರಣೇ ರಾಜನ್ ಮಿಥ್ಯಾ ಕಿಂಚಿತ್ ಪ್ರವಕ್ಷ್ಯತಿ |
ಹತಾಂಸ್ತ್ರಿಗರ್ತಕಾನ್ ಪಶ್ಯ ಮಾ ಸ್ಮ ತೇ ಕಶ್ಮಲಂ ಭವೇತ್ ॥ 43 ॥
ರಾಜನೇ, ಅರ್ಜುನನು ಯುದ್ಧದ ವಿಷಯದಲ್ಲಿ ಎಂದೂ ಸುಳ್ಳು ಮಾತನಾಡುವುದಿಲ್ಲ. ನೀನು ಹತರಾದ ತ್ರಿಗರ್ತರನ್ನು ನೋಡುವಿ. ಬೇಸರವನ್ನು ಮಾಡಿಕೊಳ್ಳಬೇಡ (ಎಂದು ಹೇಳಿದನು).
ಯುಧಿಷ್ಠಿರಃ
ಅಶ್ರೌಷೀಸ್ತಾತ ತತ್ ಪ್ರೋಕ್ತಂ ಯದ್ ದ್ರೋಣಸ್ಯ ಚಿಕೀರ್ಷಿತಮ್ |
ಯಥಾಽನೃತಂ ತಸ್ಯ ಭವೇತ್ ತಥಾ ನೀತಿರ್ವಿಧೀಯತಾಮ್ ॥ 44 ॥
ಯುಧಿಷ್ಠಿರ ಎಲೈ ಪ್ರೀತಿಪಾತ್ರನೇ, ದ್ರೋಣರು ಏನು ಮಾಡಲು ಬಯಸುತ್ತಾರೆಂಬುದನ್ನು ನೀನು ಕೇಳಿದ್ದೀಯೆ. ಅವರ ಆಸೆಯು ಸುಳ್ಳಾಗುವಂತೆ ನೀತಿಯನ್ನು ನಿರೂಪಿಸು.
ದ್ರೋಣೋ ಹಿ ಬಲವಾನ್ ಶೂರಃ ಕೃತಾಸ್ತ್ರಶ್ಚ ಜಿತಶ್ರಮಃ |
ಪ್ರತಿಜ್ಞಾತಂ ಚ ತಸ್ಯೈತದ್ ಗ್ರಹಣಂ ಮೇ ಮಹಾರಥ ॥ 45 ॥
ಎಲೈ ಮಹಾರಥನೇ, ದ್ರೋಣರು ಶೂರರು, ಬಲಿಷ್ಠರು, ಅಸ್ತ್ರಪಾರಂಗತರು ಮತ್ತು ಶ್ರಮವನ್ನು ಮೀರಿದವರು. ಅವರು ನನ್ನ ಗ್ರಹಣವನ್ನು ಪ್ರತಿಜ್ಞೆ ಮಾಡಿದ್ದಾರೆ.
ಅರ್ಜುನಃ
ಸರ್ವಥಾ ನ ನಿವರ್ತೇಯಮಾಹೂತೋಽಹಂ ಪರಂತಪ |
ತ್ರಿಗರ್ತೋರ್ ಭ್ರಾತೃಭಿಃ ಸಾರ್ಧಂ ಸ ಮಾಮಾಹ್ವಯತೇ ಭೃಶಮ್ ॥46॥
ಅರ್ಜುನ ಎಲೈ ಪರಂತಪನೇ, ಆಹ್ವಾನ ಮಾಡಲ್ಪಟ್ಟ ನಾನು ಯಾವ ಕಾರಣದಿಂದಲೂ ಹಿಂದಿರುಗುವುದಿಲ್ಲ. ಆ ತ್ರಿಗರ್ತನು ತನ್ನ ಸಹೋದರರ ಜೊತೆಯಲ್ಲಿ ನನ್ನನ್ನು ಬಹಳವಾಗಿ ಆಹ್ವಾನಿಸುತಿತದ್ದಾನೆ.
ತವಾಪಿ ತು ರಣೇ ರಕ್ಷಾ ವಿಹಿತಾ ಮೇ ಜನಾಧಿಪ |
ನಿರಪೇಕ್ಷೋ ಗಮಿಷ್ಯಾಮಿ ವಧಾಯೈಷಾಂ ದುರಾತ್ಮನಾಮ್ ॥ 47 ॥
ಜನಾಧಿಪನೇ, ನಿನಗೂ ನಾನು ರಕ್ಷಣೆಯ ವ್ಯವಸ್ಥೆಯನ್ನು ಮಾಡಿದ್ದೇನೆ. ಯಾವ ಆತಂಕವೂ ಇಲ್ಲದೆ ಈ ದುರಾತ್ಮರ ವಧೆಗಾಗಿ ನಾನು ಯುದ್ಧಕ್ಕೆ ಹೋಗುವೆನು.
ಏಷ ವೈ ಸತ್ಯಜಿದ್ ರಾಜನ್ನದ್ಯ ತ್ವಾಂ ರಕ್ಷಿತಾ ಯುಧಿ |
ಧ್ರಿಯಮಾಣೇ ಚ ಪಾಂಚಾಲ್ಯೇ ನಾಚಾರ್ಯಃ ಕಾಮಮಾಪ್ಸ್ಯತಿ ॥48॥
ರಾಜನೇ, ಈ ಸತ್ಯಜಿತ್ ರಾಜನು ಈ ದಿನ ನಿನ್ನನ್ನು ಯುದ್ಧದಲ್ಲಿ ರಕ್ಷಿಸುವನು. ಧೃಷ್ಟದ್ಯುಮ್ನನು ಬದುಕಿರುವವರೆಗೆ ಆಚಾರ್ಯರು ತಮ್ಮ ಆಸೆಯನ್ನು ಈಡೇರಿಸಿಕೊಳ್ಳುವುದಿಲ್ಲ.
ಹತೇ ತು ಪುರುಷವ್ಯಾಘ್ರೇ ಸತ್ಯಜಿತ್ಯನಿವರ್ತಿನಿ |
ಸರ್ವೈರಪಿ ಸಮೇತ್ಯೈರ್ವಾ ನ ಸ್ಥಾತವ್ಯಂ ಕಥಂಚನ ॥ 49 ॥
ಪುರುಷವ್ಯಾಘ್ರನಾದ, ಯುದ್ಧದಿಂದ ಹಿಮ್ಮೆಟ್ಟದಿರುವ ಸತ್ಯಜಿತ್‌ರಾಜನು ಏನಾದರೂ ಹತನಾದರೆ ನಾವು ಯಾರೂ ರಣರಂಗದಲ್ಲಿ ನಿಂತಿರಬಾರದು.
ಸಂಜಯಃ
ಅನುಜ್ಞಾತಸ್ತತೋ ರಾಜ್ಞಾ ಪರಿಷ್ವಕ್ತಶ್ಚ ಫಲ್ಗುನಃ |
ಪ್ರೇಮ್ಣಾ ದೃಷ್ಟಶ್ಚ ಬಹುಧಾ ಆಶಿಷಾ ಚೈವ ಯೋಜಿತಃ ॥ 50 ॥
ವಧಾಯೈವ ತತಃ ಪಾರ್ಥಸ್ತ್ರಿಗರ್ತಾನಾಂ ಬಲಂ ಯಯೌ |
ಕ್ಷುಧಿತಃ ಕ್ಷುದ್ವಿಘಾತಾರ್ಥಂ ಸಿಂಹೋ ಮೃಗಗಣಾನಿವ ॥ 51 ॥
ಸಂಜಯ ಆಗ ರಾಜನಿಂದ ಅನುಮತಿಯನ್ನು ಸ್ವೀಕರಿಸಿದವನಾಗಿ, ಪುನಃ ಪುನಃ ಆಲಿಂಗಿಸಲ್ಪಟ್ಟು, ಪ್ರೀತಿಯಿಂದ ಅನೇಕ ಬಾರಿ ನೋಡಲ್ಪಟ್ಟು, ಅನೇಕ ರೀತಿ ಆಶೀರ್ವಾದದಿಂದ ಸಂಯೋಜಿಸಲ್ಪಟ್ಟು ಅರ್ಜುನನು ಹಸಿದ ಸಿಂಹವು ಹಸಿವೆಯ ನಿವಾರಣೆಗಾಗಿ ಜಿಂಕೆಗಳ ಸಮೂಹವನ್ನು ಪ್ರವೇಶಿಸಿದಂತೆ ತ್ರಿಗರ್ತರ ವಧೆಗಾಗಿಯೇ ತ್ರಿಗರ್ತರ ಸೈನ್ಯವನ್ನು ಕುರಿತು ಹೊರಟನು.
ತತೋ ದೌರ್ಯೋಧನಂ ಸೈನ್ಯಂ ಮುದಾ ಪರಮಯಾ ಯುತಮ್ |
ಗ್ರಹಣೇ ಧರ್ಮರಾಜಸ್ಯ ಕೃತೋತ್ಸಾಹಂ ಮಹಾಮೃಧೇ ॥ 52 ॥
ಆಗ ದುರ್ಯೋಧನನ ಸೈನ್ಯವು ದೊಡ್ಡ ಯುದ್ಧದಲ್ಲಿ ಯುಧಿಷ್ಠಿರನ ಗ್ರಹಣದ ವಿಷಯದಲ್ಲಿ ಉತ್ಸಾಹವನ್ನು ಹೊಂದಿ ಬಹಳ

ಹರ್ಷದಿಂದ ಕೂಡಿತು.
ತತೋಽನ್ಯೋನ್ಯಂ ತು ತೇ ಸೇನೇ ಸಮಾಜಗ್ಮತುರಂಜಸಾ |
ವೇಗೇನ ಶಂಖಾನಾಪೂರ್ಯ ಹರ್ಷಯುಕ್ತೇ ಮಹಾಸ್ವನೇ |
ಗಂಗಾಸರಯ್ವೌ ವೇಗೇನ ಪ್ರಾವೃಷೀವೋಲ್ಬಣೋದಕೇ ॥ 53 ॥
ಅನಂತರ ಆ ಎರಡು ಸೈನ್ಯಗಳು ಶೀಘ್ರವಾಗಿ ಶಂಖಗಳನ್ನು ಊದಿ, ಸಂತೋಷಯುಕ್ತಗಳಾಗಿ ಮಹಾನಾದವನ್ನು ಮಾಡುತ್ತಾ, ಮಳೆಗಾಲದಲ್ಲಿ ಉಲ್ಬಣವಾದ ಉದಕವನ್ನು ಹೊಂದಿದ ಗಂಗಾ-ಸರಯೂ ನದಿಗಳ ವೇಗದಂತೆ ವೇಗವನ್ನು ಹೊಂದಿ ಪರಸ್ಪರವಾಗಿ ಸಂಧಿಸಿದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷೋಡಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಸಂಶಪ್ತಕರ ಜೊತೆಯಲ್ಲಿ ಅರ್ಜುನನ ಯುದ್ಧ.
ಸಂಜಯಃ
ತತಃ ಸಂಶಪ್ತಕಾ ರಾಜನ್ ಸಮೇ ದೇಶೇ ವ್ಯವಸ್ಥಿತಾಃ |
ವ್ಯೂಢಾನೀಕೈ ರಥೈರೇವ ಚಂದ್ರಾರ್ಧಾಖ್ಯೈರ್ಮುದಾ ಯುತಾಃ ॥ 1 ॥
ಸಂಜಯ ಎಲೈ ರಾಜನೇ, ಅನಂತರ ಸಂಶಪ್ತಕರು ಸಮತಟ್ಟಾದ ಪ್ರದೇಶದಲ್ಲಿ ಅರ್ಧಚಂದ್ರಾಕಾರದಲ್ಲಿ ರಥಗಳ ಸಮೂಹವನ್ನು ವ್ಯೂಹಗೊಳಿಸಿ, ಸಂತೋಷದಿಂದ ಕೂಡಿದವರಾಗಿ ನಿಂತರು.
ತೇ ಕಿರೀಟಿನಮಾಯಾಂತಂ ದೃಷ್ಟ್ವಾ ಹರ್ಷೇಣ ಮಾರಿಷ |
ಅತೀವ ಸಂಪ್ರಹೃಷ್ಟಾಸ್ತೇ ಹ್ಯುಪಲಕ್ಷ್ಯ ಧನಂಜಯಮ್ |
ಉದಕ್ರೋಶನ್ ನರವ್ಯಾಘ್ರಾಃ ಶಬ್ದೇನಾಪೂರಯನ್ ದಿಶಃ ॥ 2 ॥
ಎಲೈ ಪೂಜ್ಯನೇ, ನರವ್ಯಾಘ್ರರಾದ ಅವರು ಅರ್ಜುನನು ಸಂತೋಷದಿಂದ ಬರುತ್ತಿರುವುದನ್ನು ನೋಡಿ, ಬಹಳ ಸಂತೋಷದಿಂದ ಕೂಡಿದವರಾಗಿ, ಸಿಂಹನಾದವನ್ನು ಮಾಡಿ ತಮ್ಮ ಶಬ್ದಗಳಿಂದ ದಿಕ್ಕುಗಳನ್ನು ತುಂಬಿದರು.
ಸ ದಿಶಃ ಪ್ರದಿಶಃ ಸರ್ವಾ ನಭಶ್ಚೈವ ಸಮಾವೃಣೋತ್ |
ಆವೃತತ್ವಾಚ್ಚ ಲೋಕಸ್ಯ ಮಹಾನಾಸೀತ್ ಪ್ರತಿಸ್ವನಃ ॥ 3 ॥
ಆ ಶಬ್ದವು ಎಲ್ಲ ದಿಕ್ಕು-ವಿದಿಕ್ಕುಗಳನ್ನು ಮತ್ತು ಆಕಾಶವನ್ನು ತುಂಬಿತು. ಆವೃತವಾದ ಕಾರಣದಿಂದ ಲೋಕದಲ್ಲಿ ದೊಡ್ಡ ಪ್ರತಿಧ್ವನಿಯುಂಟಾಯಿತು.
ಅತೀವ ಸಂಪ್ರಹೃಷ್ಟಾಂಸ್ತಾನ್ ಜ್ಞಾತ್ವಾ ತತ್ರ ಧನಂಜಯಃ |
ಕಿಂಚಿದಭ್ಯುತ್ಸ್ಮಯನ್ ಕೃಷ್ಣಮಿದಂ ವಚನಮಬ್ರವೀತ್ ॥ 4 ॥
ಅವರು ಬಹಳ ಸಂತೋಷದಿಂದಿರುವುದನ್ನು ತಿಳಿದು ಅಲ್ಲಿ ಅರ್ಜುನನು ಸ್ವಲ್ಪ ನಗುತ್ತಾ ಕೃಷ್ಣನನ್ನು ಕುರಿತು ಈ ಮಾತನ್ನು ಆಡಿದನು.
ದೇವಕೀಪುತ್ರ ಪಶ್ಯೇಮಾನ್ ಮುಮೂರ್ಷೂನದ್ಯ ಸಂಯುಗೇ |
ಭ್ರಾತೄಂಸ್ತ್ರೈಗರ್ತಕಾನೇತಾನ್ ರೋದಿತವ್ಯೇ ಪ್ರಹೃಷ್ಯತಃ ॥ 5 ॥
ದೇವಕೀಪುತ್ರನೇ, ಈ ದಿನ ಯುದ್ಧದಲ್ಲಿ ಮರಣ ಹೊಂದಲಿರುವ, ಅಳಬೇಕಾದ ಸಂದರ್ಭದಲ್ಲಿ ಸಂತೋಷಪಡುತ್ತಿರುವ ಈ ತ್ರಿಗರ್ತದೇಶದ ಸಹೋದರರನ್ನು ನೋಡು.
ಅಥವಾ ಹರ್ಷಕಾಲೋಽಯಂ ತ್ರೈಗರ್ತಾನಾಂ ನ ಸಂಶಯಃ |
ಕುನರೈರ್ದುರವಾಪಾನ್ ಹಿ ಲೋಕಾನ್ ಪ್ರಾಪ್ಸ್ಯಂತಿ ಸಂಯುಗೇ |
ಮಯಾ ಹತಾ ಹಿ ಸಂಗ್ರಾಮೇ ಲೋಕಾನ್ ಪ್ರಾಪ್ಸ್ಯಂತಿ ಪುಷ್ಕಳಾನ್ ॥
ಅಥವಾ ಇದು ತ್ರಿಗರ್ತರಿಗೆ ಸಂತೋಷದ ಕಾಲ ಎಂಬುದರಲ್ಲಿ ಸಂಶಯವಿಲ್ಲ. ಯುದ್ಧದಲ್ಲಿ ಕುಜನರು ಹೊಂದಲಾರದ ಲೋಕವನ್ನು ಹೊಂದುವರು. ಯುದ್ಧದಲ್ಲಿ ನನ್ನಿಂದ ಹತರಾಗಿ ಪುಷ್ಕಳವಾದ ಲೋಕವನ್ನು ಹೊಂದುವರು.
ಏವಮುಕ್ತ್ವಾ ಹೃಷೀಕೇಶಂ ಮಹಾಬಾಹುಸ್ತತೋಽರ್ಜುನಃ |
ಆಸಸಾದ ರಣೇ ವ್ಯೂಢಾಂ ತ್ರೈಗರ್ತಾನಾಮನೀಕಿನೀಮ್ ॥ 7 ॥
ಮಹಾಬಾಹುವಾದ ಅರ್ಜುನನು ಹೃಷೀಕೇಶನನ್ನು ಕುರಿತು ಹೀಗೆ ಹೇಳಿ, ರಣರಂಗದಲ್ಲಿ ವ್ಯೂಹಗೊಂಡ ತ್ರಿಗರ್ತರ ಸೈನ್ಯವನ್ನು ಸಮೀಪಿಸಿದರು.
ಸ ದೇವದತ್ತಮಾದಾಯ ಶಂಖಂ ಹೇಮಪರಿಷ್ಕೃತಮ್ |
ದಧ್ಮೌ ವೇಗೇನ ಮಹತಾ ಘೋಷೇಣಾಪೂರಯನ್ ದಿಶಃ ॥ 8 ॥
ಅವನು ಸುವರ್ಣ ಪರಿಷ್ಕೃತವಾದ ದೇವದತ್ತ ಶಂಖವನ್ನು ತೆಗೆದುಕೊಂಡು, ಬಹಳ ವೇಗದಿಂದ ಊದಿ, ಆ ನಾದದಿಂದ ದಿಕ್ಕುಗಳನ್ನು ತುಂಬಿದನು.
ತೇನ ಶಬ್ದೇನ ವಿತ್ರಸ್ತಾ ಸಂಶಪ್ತಕವರೂಥಿನೀ |

ನಿಶ್ಚೇಷ್ಟಾಽವಸ್ಥಿತಾ ಸಂಖ್ಯೇ ಅಶ್ಮಸಾರಮಯೀ ಯಥಾ ॥ 9 ॥
ಆ ಶಬ್ದದಿಂದ ಹೆದರಿದ ಸಂಶಪ್ತಕ ಸೇನೆಯು ರಣರಂಗದಲ್ಲಿ ಕಲ್ಲಿನಿಂದ ಮಾಡಿದ ಪ್ರತಿಮೆಗಳಂತೆ ನಿಶ್ಚೇಷ್ಟವಾಗಿ ನಿಂತಿತು.
ಸಾ ಸೇನಾ ಭರತಶ್ರೇಷ್ಠ ನಿಶ್ಚೇಷ್ಟಾ ಶುಶುಭೇ ತದಾ |
ಚಿತ್ರೇ ಪಟೇ ಯಥಾ ನ್ಯಸ್ತಾ ಕುಶಲೈಃ ಶಿಲ್ಪಿಭಿರ್ನರೈಃ ॥ 10 ॥
ಭರತಶ್ರೇಷ್ಠನೇ, ನಿಶ್ಚೇಷ್ಟವಾದ ಆ ಸೈನ್ಯವು ಆಗ ಚಿತ್ರಪಟದಲ್ಲಿ ಕುಶಲರಾದ ಶಿಲ್ಪಿಗಳಾದ ನರರು ಬಿಡಿಸಿದ ಚಿತ್ರದಂತೆ ಶೋಭಿಸುತ್ತಿದ್ದಿತು.
ಸ್ವನೇನ ತೇನ ಸೈನ್ಯಾನಾಂ ದಿವಮಾವೃಣ್ವತಾ ತದಾ |
ಸಸ್ವನಾ ಪೃಥಿವೀ ಸರ್ವಾ ತಥೈವ ಚ ಮಹೋದಧಿಃ ॥ 11 ॥
ಆಕಾಶವನ್ನು ಆವರಿಸುವ ಸೈನ್ಯದ ಆ ನಾದದಿಂದ ಸಮಗ್ರವಾದ ಭೂಮಿಯೂ ಮತ್ತು ಸಮುದ್ರವೂ ಹಾಗೆಯೇ ಶಬ್ದವುಳ್ಳದ್ದಾಯಿತು.
ವ್ಯೂಢಾನೀಕಾಶ್ಚ ಯೇ ಸರ್ವೇ ಪೃಥಿವ್ಯಾಂ ಸಮರಾರ್ಣವೇ |
ಸ್ವನೇನ ಸರ್ವಸೈನ್ಯಾನಾಂ ಕರ್ಣಾಸ್ತು ಬಧಿರೀಕೃತಾಃ ॥ 12 ॥
ಆ ರಣರಂಗದಲ್ಲಿ ಸೈನ್ಯವನ್ನು ವ್ಯೂಹ ಮಾಡಿ ನಿಂತಿದ್ದ ಸರ್ವಸೈನಿಕರ ಕಿವಿಗಳು ಆ ನಾದದಿಂದ ಕಿವುಡಾದವು.
ವಾಹಾಸ್ತೇಷಾಂ ವಿವೃತ್ತಾಕ್ಷಾಃ ಸ್ತಬ್ಧಕರ್ಣಶಿರೋಧರಾಃ |
ವಿಷ್ಟಬ್ಧಚರಣಾ ಮೂತ್ರಂ ರುಧಿರಂ ಚ ಪ್ರಸುಸ್ರುವುಃ |
ತತೋ ವ್ಯಪಾರಮಚ್ಛಬ್ದಃ ಪ್ರಹೃಷ್ಟಾಸ್ತೇ ತತೋಽಭವನ್ ॥ 13 ॥
ಅವರ ವಾಹನಗಳು ಕಣ್ಣುಗಳನ್ನರಳಿಸಿ ಕತ್ತು ಮತ್ತು ಕಿವಿಗಳನ್ನು ಅಲ್ಲಾಡಿಸದೆ, ಪಾದಗಳು ಸ್ತಂಭಿತವಾಗಿ ರಕ್ತ-ಮೂತ್ರಗಳನ್ನು ಸುರಿಸಿದವು. ಅನಂತರ ಆ ಶಬ್ದವು ಶಾಂತವಾಯಿತು. ತ್ರಿಗರ್ತಯೋಧರು ಸಂತೋಷಗೊಂಡರು.
ಉಪಲಭ್ಯ ತತಃ ಸಂಜ್ಞಾಂ ಪರ್ಯವಸ್ಥಾಪ್ಯ ವಾಹಿನೀಮ್ |
ಯುಗಪತ್ ಪಾಂಡುಪುತ್ರಾಯ ಚಿಕ್ಷಿಪುಃ ಕಂಕಪತ್ರಿಣಃ ॥ 14 ॥
ಪುನಃ ತಮ್ಮ ಚಟುವಟಿಕೆಗಳನ್ನು ಹೊಂದಿ, ತಮ್ಮ ಸೈನ್ಯವನ್ನು ಸರಿಯಾಗಿ ನಿಲ್ಲಿಸಿ, ಪಾಂಡುಪುತ್ರನಾದ ಅರ್ಜುನನ ಮೇಲೆ ಎಲ್ಲರೂ ಒಟ್ಟಿಗೆ ಕಂಕಪತ್ರಗಳನ್ನು ಹೊಂದಿದ್ದ ಬಾಣಗಳನ್ನು ಪ್ರಯೋಗಿಸಿದರು.
ತತೋಽರ್ಜುನಃ ಸಹಸ್ರಾಣಿ ದಶ ಪಂಚೈವ ಚಾಶುಗಾನ್ |
ಅನಾಗತಾನೇವ ಶರೈಃ ಚಿಚ್ಛೇದಾಶುಪರಾಕ್ರಮಃ ॥ 15 ॥
ಆಗ ಶೀಘ್ರ ಪರಾಕ್ರಮವುಳ್ಳ ಅರ್ಜುನನು ತನ್ನ ಹತ್ತಿರಕ್ಕೆ ಬರುವುದಕ್ಕಿಂತ ಮುಂಚೆಯೇ ಆ ಬಾಣಗಳನ್ನು ಸಹಸ್ರ ಚೂರುಗಳಾಗಿ, ಹತ್ತು ಚೂರುಗಳಾಗಿ ಮತ್ತು ಐದು ಚೂರುಗಳಾಗಿಯೇ ಕತ್ತರಿಸಿದನು (ಯಾವುದನ್ನೂ ಎರಡು, ಮೂರು ಅಥವಾ ನಾಲ್ಕು ಭಾಗಗಳಾಗಿ ಕತ್ತರಿಸಲಿಲ್ಲ ಎಂದು ಅಭಿಪ್ರಾಯ).
ತತೋಽರ್ಜುನಂ ಶಿತೈರ್ಬಾಣೈಃ ದಶಭಿರ್ದಶಭಿಃ ಪುನಃ |
ಪ್ರತ್ಯವಿಧ್ಯತ ಪಾರ್ಥಸ್ತಾನವಿಧ್ಯತ ತ್ರಿಭಿಸ್ತ್ರಿಭಿಃ ॥ 16 ॥
ಅನಂತರ ಅರ್ಜುನನು ಹರಿತವಾದ ಹತ್ತು-ಹತ್ತು ಬಾಣಗಳಿಂದ ಅವರನ್ನು ಹೊಡೆದು, ಪುನಃ ಮೂರು-ಮೂರು ಬಾಣಗಳನ್ನು ಅವರ ಮೇಲೆ ಪ್ರಯೋಗಿಸಿದನು.
ಏಕೈಕಸ್ತು ತತಃ ಪಾರ್ಥಂ ರಾಜನ್ ವಿವ್ಯಾಧ ಪಂಚಭಿಃ |
ಸ ಚ ತಾನಪಿ ವಿವ್ಯಾಧ ದ್ವಾಭ್ಯಾಂ ದ್ವಾಭ್ಯಾಂ ಪರಾಕ್ರಮೀ ॥17॥
ರಾಜನೇ, ಅವರಲ್ಲಿ ಪ್ರತಿಯೊಬ್ಬರೂ ಅರ್ಜುನನನ್ನು ಐದೈದು ಬಾಣಗಳಿಂದ ಹೊಡೆದರು. ಪರಾಕ್ರಮಶಾಲಿಯಾದ ಅರ್ಜುನನು ಅವರ ಮೇಲೆ ಎರಡೆರಡು ಬಾಣಗಳನ್ನು ಪ್ರಯೋಗಿಸಿದನು.
ಭೂಯ ಏವ ತು ಸಂರಬ್ಧಾಃ ತೇಽರ್ಜುನಂ ಸಹಕೇಶವಮ್ |
ಆಪೂರಯನ್ ಶರೈಸ್ತೀಕ್ಷ್ಣೈಃ ತಟಾಕಮಿವ ವೃಷ್ಟಿಭಿಃ ॥ 18 ॥
ಅವರು ಇನ್ನೂ ಕ್ರೋಧಯುಕ್ತರಾಗಿ ಕೃಷ್ಣನಿಂದ ಕೂಡಿದ ಅರ್ಜುನನನ್ನು ಮಳೆಯಿಂದ ಕೆರೆಯನ್ನು ತುಂಬುವಂತೆ ತೀಕ್ಷ್ಣವಾದ ಬಾಣಗಳಿಂದ ತುಂಬಿದರು.
ತತಃ ಶರಸಹಸ್ರಾಣಿ ಪ್ರಪತಂತ್ಯರ್ಜುನಂ ಪ್ರತಿ |
ಭ್ರಮರಾಣಾಮಿವ ವ್ರಾತಾಃ ಫುಲ್ಲದ್ರುಮಗಣಾನ್ ವನೇ ॥ 19 ॥
ಆಗ ಕಾಡಿನಲ್ಲಿ ಹೂವರಳಿದ ವೃಕ್ಷಕ್ಕೆ ಭ್ರಮರಗಳ ಸಮೂಹವೇ ಬಂದಂತೆ ಅರ್ಜುನನ ಮೇಲೆ ಸಹಸ್ರಾರು ಬಾಣಗಳು ಬಿದ್ದವು.
ತತಃ ಸುಬಾಹುಸ್ತ್ರಿಂಶದ್ಭಿಃ ಅದ್ರಿಸಾರಮಯೈರ್ದೃಢೈಃ |
ಅವಿಧ್ಯದಿಷುಭಿರ್ಗಾಢಂ ಕಿರೀಟೇ ಸವ್ಯಸಾಚಿನಃ ॥ 20 ॥
ಅನಂತರ ಸುಬಾಹುವು ಅಗ್ನಿಸಾರಮಯವಾದ ದೃಢವಾದ ಮೂವತ್ತು ಬಾಣಗಳಿಂದ ಅರ್ಜುನನ ಕಿರೀಟವನ್ನು ಗಾಢವಾಗಿ ಹೊಡೆದನು.
ತೈಃ ಕಿರೀಟೀ ಕಿರೀಟಸ್ಥೈ ರುಗ್ಮಪುಂಖೈರಜಿಹ್ಮಗೈಃ |
ಶಾತಕುಂಭಮಯಾಪೀಡೋ ಬಭೌ ಯೂಪ ಇವೋಚ್ಛ್ರಿತಃ ॥ 21 ॥
ತನ್ನ ಕಿರೀಟದಲ್ಲಿ ನಾಟಿದ ಆ ಬಾಣಗಳಿಂದ ಅರ್ಜುನನು ಸುವರ್ಣಮಯವಾದ ಶಿರೋಭೂಷಣವನ್ನು ಹೊಂದಿ ಎತ್ತರವಾದ ಯೂಪದಂತೆ ಶೋಭಿಸಿದನು.
ಹಸ್ತಾವಾಪಂ ಸುಬಾಹೋಸ್ತು ಸ ತು ಭಲ್ಲೇನ ಪಾಂಡವಃ |

ಚಿಚ್ಛೇದ ತಂ ಚೈವ ಪುನಃ ಶರವರ್ಷೈರವಾಕಿರತ್ ॥ 22 ॥
ಪಾಂಡವನಾದ ಅರ್ಜುನನು ಭಲ್ಲದಿಂದ ಸುಬಾಹುವಿನ ಬತ್ತಳಿಕೆಯನ್ನು ಕತ್ತರಿಸಿ, ಪುನಃ ಅವನ ಮೇಲೆ ಬಾಣಗಳ ಮಳೆಯನ್ನು ಕರೆದನು.
ತತಃ ಸುಶರ್ಮಾ ದಶಭಿಃ ಸುರಥಶ್ಚ ಕಿರೀಟಿನಮ್ |
ಸುಧರ್ಮಾ ಚ ಸುಧನುಶ್ಚ ಸುಬಾಹುಶ್ಚ ಸಮರ್ಪಯನ್ ॥ 23 ॥
ಅನಂತರ ಸುಶರ್ಮನು, ಸುರಥ, ಸುಧರ್ಮ, ಸುಧನು, ಸುಬಾಹು ಇವರು ಅರ್ಜುನನನ್ನು ಹತ್ತು ಬಾಣಗಳಿಂದ ಹೊಡೆದರು.
ತಾಂಶ್ಚ ಸರ್ವಾನ್ ಪೃಥಗ್ ಬಾಣೈಃ ವಾನರಪ್ರವರಧ್ವಜಃ |
ಪ್ರತ್ಯವಿಧ್ಯದ್ ಧ್ವಜಾಂಸ್ತೇಷಾಂ ಭಲ್ಲೈಶ್ಚಿಚ್ಛೇದ ಕಾಂಚನಾನ್ ॥ 24 ॥
ಕಪಿಧ್ವಜನಾದ ಅರ್ಜುನನು ಅವರೆಲ್ಲರನ್ನೂ ಬೇರೆ ಬೇರೆ ಬಾಣಗಳಿಂದ ಹೊಡೆದು, ಅವರ ಸುವರ್ಣಮಯವಾದ ಧ್ವಜಗಳನ್ನು ಭಲ್ಲಗಳಿಂದ ಕತ್ತರಿಸಿದನು.
ಸುಧನ್ವನೋ ಧನುಶ್ಛಿತ್ತ್ವಾ ಹಯಾಂಶ್ಚ ಜವನಾನ್ ಶರೈಃ |
ಅಥಾಸ್ಯ ಸಶಿರಸ್ತ್ರಾಣಂ ಶಿರಃ ಕಾಯಾದಪಾಹರತ್ ॥ 25 ॥
ಸುಧರ್ಮನ ಧನುಸ್ಸನ್ನು ಕತ್ತರಿಸಿ, ವೇಗಶಾಲಿಯಾದ ಅವನ ಅಶ್ವಗಳನ್ನು ಬಾಣಗಳಿಂದ ಸಂಹರಿಸಿ, ಶಿರಸ್ತ್ರಾಣದಿಂದ ಕೂಡಿದ ಅವನ ಶಿರಸ್ಸನ್ನು ದೇಹದಿಂದ ಬೇರ್ಪಡಿಸಿದನು.
ಜಘಾನ ಪಾರ್ಥಃ ಸೈನ್ಯೇಷು ಸಹಸ್ರೇ ದ್ವೇ ಚ ಯೋಧಿನಾಮ್ |
ತಸ್ಮಿನ್ ನಿಪತಿತೇ ವೀರೇ ತ್ರಸ್ತಾಸ್ತಸ್ಯ ಪದಾನುಗಾಃ ॥ 26 ॥
ಅರ್ಜುನನು ಅವರ ಸೈನ್ಯದಲ್ಲಿ ಎರಡು ಸಹಸ್ರ ಯೋಧರನ್ನು ಕೊಂದನು. ವೀರನಾದ ಸುಬಾಹುವು ಹತನಾಗುತ್ತಿರಲು ಅವನ ಅನುಯಾಯಿಗಳು ಹೆದರಿದರು.
ಭೂಯಿಷ್ಠಂ ಪ್ರತಿರುದ್ಧಾ ಯೇಽಹತ್ಯೈರ್ಯೋಧೈರ್ಯಶಸ್ವಿನಃ |
ವಿದುದ್ರುವುಸ್ತದಾ ಯೋಧಾ ಯತ್ರ ದೌರ್ಯೋಧನಂ ಬಲಮ್ ॥
ಶರಘಾತಕ್ಕೆ ಒಳಗಾಗದೆ ಭಲ್ಲದಿಂದ ಬಹಳವಾಗಿ ತಡೆಯಲ್ಪಟ್ಟ, ಯಶಸ್ವಿಗಳಾದ ತ್ರಿಗರ್ತಯೋಧ ದುರ್ಯೋಧನನ ಸೈನ್ಯಕ್ಕೆ ಓಡಿಹೋದರು.
ತತೋ ಜಘಾನ ಸಂಕ್ರುದ್ಧೋ ವಾಸವಿಸ್ತಾಂ ಮಹಾಚಮೂಮ್ |
ಶರಜಾಲೈರವಿಚ್ಛಿನ್ನೈಃ ತಮಃ ಸೂರ್ಯ ಇವಾಂಶುಭಿಃ ॥ 28 ॥
ಆಗ ಇಂದ್ರಪುತ್ರನಾದ ಅರ್ಜುನನು ಸೂರ್ಯನು ತನ್ನ ಕಿರಣಗಳಿಂದ ತಮಸ್ಸನ್ನು ನಾಶಗೊಳಿಸಿದಂತೆ, ಬಹಳ ಕೋಪಗೊಂಡು ಸತತವಾದ ತನ್ನ ಬಾಣದ ಜಾಲಗಳಿಂದ ಆ ದೊಡ್ಡ ಸೈನ್ಯವನ್ನು ಹೊಡೆದನು.
ತತೋ ಬಾಣೈರ್ಬಲೇ ತಸ್ಮಿನ್ ಪ್ರವಿಲೀನೇ ಸಮಂತತಃ |
ಸವ್ಯಸಾಚಿನಿ ಸಂಕ್ರುದ್ಧೇ ತ್ರೈಗರ್ತಾನ್ ಮೃತ್ಯುರಾವಿಶತ್ ॥ 29 ॥
ಅರ್ಜುನನ ಬಾಣಗಳಿಂದ ಆ ಸೈನ್ಯವು ಎಲ್ಲ ಕಡೆಯಲ್ಲಿಯೂ ಲಯವನ್ನು ಹೊಂದುತ್ತಿರಲು ಅರ್ಜುನನು ಕೋಪಗೊಂಡಿರಲು ತ್ರಿಗರ್ತರನ್ನು ಮೃತ್ಯುವು ಆವರಿಸಿತು.
ತೇ ಹನ್ಯಮಾನಾಃ ಪಾರ್ಥೇನ ಶರೈಃ ಸನ್ನತಪರ್ವಭಿಃ |
ಅಮುಹ್ಯಂಸ್ತತ್ರ ತತ್ರೈವ ತ್ರಸ್ತಾ ಮೃಗಗಣಾ ಇವ ॥ 30 ॥
ಬಾಗಿದ ತುದಿಯುಳ್ಳ ಬಾಣಗಳಿಂದ ಅರ್ಜುನನಿಂದ ಹೊಡೆಯಲ್ಪಡುತ್ತಿದ್ದ ಅವರು ಹೆದರಿದ ಜಿಂಕೆಗಳ ಸಮೂಹದಂತೆ ಅಲ್ಲಲ್ಲಿಯೇ ಮೋಹಕ್ಕೆ ಒಳಗಾದರು.
ತತಸ್ತ್ರಿಗರ್ತರಾಟ್ ಕ್ರುದ್ಧಃ ತಾನುವಾಚ ಮಹಾರಥಾನ್ ॥ 31 ॥
ಆಗ ಕೋಪಗೊಂಡ ತ್ರಿಗರ್ತರಾಜನು ಆ ಮಹಾರಥರನ್ನು ಕುರಿತು ಮಾತನಾಡಿದನು.
ಅಲಂ ದ್ರುತೇನ ವಃ ಶೂರಾ ನ ಭಯಂ ಕರ್ತುಮರ್ಹಥ ॥ 31 ॥
ಶೂರರೇ, ಪಲಾಯನ ಮಾಡಬೇಡಿ. ನೀವು ಭಯಪಡುವುದು ಉಚಿತವಲ್ಲ.
ಶಪಿತ್ವಾ ಚ ಶಪಥಾನ್ ಘೋರಾನ್ ಸರ್ವಸೈನ್ಯಸ್ಯ ಪಶ್ಯತಃ |
ಗತ್ವಾ ದೌರ್ಯೋಧನಂ ಸೈನ್ಯಂ ಕಿಂ ನು ವಕ್ಷ್ಯಥ ಸಂಗತಾಃ ॥ 32 ॥
ಎಲ್ಲ ಸೈನ್ಯದ ಎದುರಿಗೆ ಅನೇಕ ಘೋರವಾದ ಶಪಥಗಳನ್ನು ಮಾಡಿ, ಈಗ ದುರ್ಯೋಧನನ ಸೈನ್ಯವನ್ನು ಹೋಗಿ ಸೇರಿ ಏನು ಹೇಳುವಿರಿ?
ನಾಪಹಾಸ್ಯಾಃ ಕಥಂ ಲೋಕೇ ಕರ್ಮಣಾಽನೇನ ಸಂಯುಗೇ |
ಭವೇಮ ಸಹಿತಾಃ ಸರ್ವೇ ನಿವರ್ತಧ್ವಂ ಮಹಾರಥಾಃ ॥ 33 ॥
ನಿಮ್ಮ ಈ ಕರ್ಮದಿಂದ ನಾವು ರಣರಂಗದಲ್ಲಿ ಲೋಕದಲ್ಲಿ ಅಪಹಾಸಕ್ಕೆ ಈಡಾಗುವುದು ಬೇಡ. ಎಲೈ ಮಹಾರಥರೇ, ಹಿಂದಿರುಗಿ (ಎಂದು ಹೇಳಿದನು).
ಏವಮುಕ್ತಾಸ್ತತೋ ರಾಜನ್ ವಿಕ್ರೋಶಂತೋ ಮುಹುರ್ಮುಹುಃ |
ಶಂಖಾನ್ ಪ್ರದಧ್ಮಿರೇ ವೀರಾ ಹರ್ಷಯಂತಃ ಪರಸ್ಪರಮ್ ॥ 34 ॥
ಎಲೈ ರಾಜನೇ, ಹೀಗೆ ಹೇಳಲ್ಪಟ್ಟ ವೀರರಾದ ಅವರು ಪುನಃ ಪುನಃ ನಾದವನ್ನು ಮಾಡುತ್ತಾ, ಪರಸ್ಪರವಾಗಿ ಸಂತೋಷಪಡಿಸುತ್ತಾ ತಮ್ಮ ಶಂಖಗಳನ್ನು ಊದಿದರು.

ತತಸ್ತೇ ಸನ್ನ್ಯವರ್ತಂತ ಸಂಶಪ್ತಕಗಣಾಃ ಪುನಃ |
ನಾರಾಯಣಾಶ್ಚ ಗೋಪಾಲಾ ಕೃತ್ವಾ ಮೃತ್ಯುಂ ನಿವರ್ತನಮ್ ॥ 35 ॥
ಅನಂತರ ಸಂಶಪ್ತಕ ಗಣಗಳು ಮತ್ತು ಗೋಪಾಲಕರ ನಾರಾಯಣ ಸೇನೆಯು ಮೃತ್ಯುವನ್ನು ಹಿಂದೆ ಹಾಕಿ ಪುನಃ ರಣರಂಗಕ್ಕೆ ಬಂದರು.
ಗೋಪಾಲರೆಂದರೆ ಗೋಪಸ್ತ್ರೀಯರಲ್ಲಿ ಕೃಷ್ಣನಿಂದ ಜನಿಸಿದ ಕುಮಾರರು. ಅವರೆಲ್ಲರಿಗೂ ನಾರಾಯಣರೆಂದೇ ಹೆಸರು. ಅವರ ಸೈನ್ಯಕ್ಕೆ ನಾರಾಯಣ ಸೇನೆ ಎಂದು ಹೆಸರು - ಲಕ್ಷಾಲಂಕಾರ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತದಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಸಂಶಪ್ತಕರ ಜೊತೆಯಲ್ಲಿ ಮುಂದುವರಿದ ಅರ್ಜುನನ ಯುದ್ಧ.
ಸಂಜಯಃ
ದೃಷ್ಟ್ವಾ ಚ ಸನ್ನಿವೃತ್ತಾಂಸ್ತಾನ್ ಸಂಶಪ್ತಕಗಣಾನ್ ಪುನಃ |
ವಾಸುದೇವಂ ಮಹಾತ್ಮಾನಮರ್ಜುನಃ ಪ್ರತ್ಯಭಾಷತ ॥ 1 ॥
ಸಂಜಯ ಸಂಶಪ್ತಕರ ಗಣಗಳು ಹಿಂದಿರುಗಿದುದನ್ನು ನೋಡಿ, ಮಹಾತ್ಮನಾದ ಕೃಷ್ಣನನ್ನು ಕುರಿತು ಅರ್ಜುನನು ಹೇಳಿದನು.
ಚೋದಯಾಶ್ವಾನ್ ಹೃಷೀಕೇಶ ಸಂಶಪ್ತಕಗಣಾನ್ ಪ್ರತಿ |
ನೈತೇ ಹಾಸ್ಯಂತಿ ಸಂಗ್ರಾಮಂ ಜೀವಂತ ಇತಿ ಮೇ ಮತಿಃ ॥ 2 ॥
ಹೃಷೀಕೇಶನೇ, ಸಂಶಪ್ತಕರ ಗಣಗಳ ಕಡೆಗೆ ಅಶ್ವಗಳನ್ನು ಚೋದಿಸು. ಅವರು ಬದುಕಿರುವವರೆಗೆ ಯುದ್ಧವನ್ನು ತೊರೆಯುವುದಿಲ್ಲವೆಂದು ನನ್ನ ಅಭಿಪ್ರಾಯ.
ಪಶ್ಯ ಮೇಽಸ್ತ್ರಬಲಂ ಘೋರಂ ಬಾಹ್ವೋರಿಷ್ವಸನಸ್ಯ ಚ |
ಅದ್ಯ ಹ್ಯೇಕೋ ಗಣಾನೇತಾನ್ ಹನ್ಯಾಂ ರುದ್ರಃ ಪಶೂನಿವ ॥ 3 ॥
ಘೋರವಾದ ನನ್ನ ಅಸ್ತ್ರಬಲವನ್ನೂ, ಬಾಹುಬಲವನ್ನೂ ಮತ್ತು ಧನುಸ್ಸಿನ ಬಲವನ್ನೂ ನೋಡು. ರುದ್ರನು ಪಶುಗಳನ್ನು ಕೊಂದಂತೆ ಈ ದಿನ ನಾನೊಬ್ಬನೇ ಈ ಗಣಗಳನ್ನು ಕೊಲ್ಲುವೆನು.
ತತಃ ಕೃಷ್ಣಃ ಸ್ಮಿತಂ ಕೃತ್ವಾ ಪ್ರತಿನಂದ್ಯ ಶಿವೇನ ತಮ್ |
ಏವಂ ಬ್ರುವಾಣಂ ಬೀಭತ್ಸುಂ ಕೇಶವಃ ಶತ್ರುವಾಹಿನೀಮ್ |
ಪ್ರಾವೇಶಯತ ದುರ್ಧರ್ಷೋ ಯತ್ರ ಯತ್ರೈಚ್ಛದರ್ಜುನಃ ॥ 4 ॥
ಆಗ ಕೃಷ್ಣನು ಮಂದಹಾಸವನ್ನು ಬೀರಿ ಅವನಿಗೆ ಮಂಗಳವನ್ನು ಅಭಿನಂದಿಸಿ, ಹೀಗೆ ಮಾತನಾಡಿದ ಅವನನ್ನು ದುರ್ಧರ್ಷನಾದ ಅವನು ಬಯಸಿದ ಕಡೆಗೆ ಕರೆದುಕೊಂಡು ಹೋದನು.
ಸ ರಥೋ ಭ್ರಾಜತೇಽತ್ಯರ್ಥಮುಹ್ಯಮಾನೋ ಮಹಾಹಯೈಃ |
ಉಹ್ಯಮಾನಮಿವಾಕಾಶೇ ವಿಮಾನಂ ಪಾಂಡರೈರ್ಘನೈಃ ॥ 5 ॥
ಶ್ರೇಷ್ಠವಾದ ಅಶ್ವಗಳಿಂದ ಎಳೆಯಲ್ಪಡುವ ಆ ರಥವು ಆಕಾಶದಲ್ಲಿ ಬಿಳಿಯ ಮೋಡಗಳಿಂದ ಎಳೆಯಲ್ಪಡುವ ವಿಮಾನದಂತೆ ಬಹಳವಾಗಿ ಶೋಭಿಸಿತು.
ಮಂಡಲಾನಿ ತತಶ್ಚಕ್ರೇ ಗತಪ್ರತ್ಯಾಗತಾನಿ ಚ |
ಯಥಾ ಶಕ್ರರಥೋ ರಾಜನ್ ಯುದ್ಧೇ ದೇವಾಸುರೇ ಪುರಾ ॥ 6 ॥
ರಾಜನೇ, ಹಿಂದೆ ದೇವಾಸುರರ ಯುದ್ಧದಲ್ಲಿ ಇಂದ್ರನ ರಥವು ಸಂಚರಿಸಿದಂತೆ ಮುಂಭಾಗದಲ್ಲಿ ಮತ್ತು ಹಿಂಭಾಗದಲ್ಲಿ, ಮಂಡಲಗಳಲ್ಲಿ ರಥವನ್ನು ತಿರುಗಿಸಿದನು.
ಅಥ ನಾರಾಯಣಾಃ ಕ್ರುದ್ಧಾ ವಿವಿಧಾಯುಧಪಾಣಯಃ |
ಛಾದಯಂತಃ ಶರವ್ರಾತೈಃ ಪರಿವವ್ರುರ್ಧನಂಜಯಮ್ ॥ 7 ॥
ಆಗ ನಾರಾಯಣರು ಕೈಯಲ್ಲಿ ವಿವಿಧ ಆಯುಧಗಳನ್ನು ಹಿಡಿದು, ಕ್ರುದ್ಧರಾಗಿ ತಮ್ಮ ಬಾಣಸಮೂಹಗಳಿಂದ ಅರ್ಜುನನನ್ನು ಮುಚ್ಚುತ್ತಾ ಅವನನ್ನು ಸುತ್ತುವರಿದರು.
ಅದೃಶ್ಯಂ ತಂ ಮುಹೂರ್ತೇನ ಚಕ್ರುಸ್ತೇ ಭರತರ್ಷಭ |
ಕೃಷ್ಣೇನ ಸಹಿತಂ ಯುದ್ಧೇ ಕುಂತೀಪುತ್ರಂ ಧನಂಜಯಮ್ ॥ 8 ॥
ಎಲೈ ಭರತಶ್ರೇಷ್ಠನೇ, ಅವರು ರಣರಂಗದಲ್ಲಿ ಕೃಷ್ಣನಿಂದ ಸಹಿತನಾದ, ಕುಂತೀಪುತ್ರನಾದ ಅರ್ಜುನನನ್ನು ಒಂದು ಮುಹೂರ್ತದಲ್ಲಿ ಅದೃಶ್ಯನನ್ನಾಗಿ ಮಾಡಿದರು.
ಕ್ರುದ್ಧಸ್ತು ಫಲ್ಗುನಃ ಸಂಖ್ಯೇ ದ್ವಿಗುಣೀಕೃತವಿಕ್ರಮಃ |
ಗಾಂಡೀವಮನುಸಮ್ಮೃಜ್ಯ ತೂಣೀ ಸಂಸ್ಪೃಶ್ಯ ಚಾಹವೇ ॥ 9 ॥
ಸ ಬದ್ಧ್ವಾ ಭ್ರುಕುಟಿಂ ವಕ್ತ್ರೇ ಕ್ರೋಧಸ್ಯ ಪ್ರತಿಲಕ್ಷಣಮ್ |
ದೇವದತ್ತಂ ಮಹಾಶಂಖಂ ಪೂರಯಾಮಾಸ ಪಾಂಡವಃ ॥ 10 ॥

ಅರ್ಜುನನು ಕೋಪಗೊಂಡು ಇಮ್ಮಡಿಯಾದ ಪರಾಕ್ರಮವನ್ನು ಹೊಂದಿ, ಗಾಂಡೀವವನ್ನು ನೇವರಿಸಿ, ಬತ್ತಳಿಕೆಗಳನ್ನು ಸ್ಪರ್ಶಿಸಿ, ಕ್ರೋಧದ ಲಕ್ಷಣವಾದ ಹುಬ್ಬುಗಳನ್ನು ಗಂಟಿಕ್ಕಿ, ದೇವದತ್ತ ಮಹಾಶಂಖವನ್ನು ಊದಿದನು.
ತತೋಽಸ್ತ್ರಮರಿಸಂಘಘ್ನಂ ತ್ವಾಷ್ಟ್ರಮಭ್ಯಸ್ಯದರ್ಜುನಃ |
ತತೋ ರೂಪಸಹಸ್ರಾಣಿ ಪ್ರಾದುರಾಸನ್ ಪೃಥಕ್ ಪೃಥಕ್ ॥ 11 ॥
ಅನಂತರ ಶತ್ರುಗಳ ಸಮೂಹವನ್ನು ನಾಶಮಾಡುವ ತ್ವಾಷ್ಟ್ರಾಸ್ತ್ರವನ್ನು ಅರ್ಜುನನು ಪ್ರಯೋಗಿಸಿದನು. ಆಗ ಅರ್ಜುನನ ಸಹಸ್ರಾರು ರೂಪಗಳು ಬೇರೆ ಬೇರೆಯಾಗಿ ಪ್ರಾದುರ್ಭವಿಸಿದವು.
ಅರ್ಜುನಪ್ರತಿರೂಪೈಸ್ತೈಃ ನಾನಾರೂಪೈರ್ವಿಮೋಹಿತಾಃ |
ಅನ್ಯೋನ್ಯಮರ್ಜುನಂ ಮತ್ವಾ ಸ್ವಮಾತ್ಮಾನಂ ಚ ಜಘ್ನಿರೇ ॥ 12 ॥
ಅರ್ಜುನನ ಪ್ರತಿಬಿಂಬಗಳಾದ ಆ ಅನೇಕ ರೂಪಗಳಿಂದ ವಿಮೋಹಿತರಾದ ಸಂಶಪ್ತಕ ಯೋಧರು ಪರಸ್ಪರವಾಗಿ ಅರ್ಜುನನೆಂದು ತಿಳಿದುಕೊಂಡು ತಮ್ಮನ್ನು ಮತ್ತು ತಮ್ಮವರನ್ನು ಕೊಂದುಕೊಂಡರು.
ಅಯಮರ್ಜುನೋಽಯಂ ಗೋವಿಂದ ಇಮೌ ಯಾದವಪಾಂಡವೌ |
ಇತಿ ಬ್ರುವಾಣಾಃ ಸಮ್ಮೂಢಾ ಜಘ್ನುರನ್ಯೋನ್ಯಮಂಜಸಾ ॥ 13 ॥
ಇವನು ಅರ್ಜುನ, ಇವನು ಗೋವಿಂದ, ಇವರು ಕೃಷ್ಣಾರ್ಜುನರು ಎಂದು ಹೇಳುತ್ತಾ ಸಮ್ಮೂಢರಾಗಿ ಒಬ್ಬರನ್ನೊಬ್ಬರು ಕೊಂದರು.
ಅನ್ಯೋನ್ಯಂ ಸಮರೇ ಜಘ್ನುಃ ತಾವಕಾ ಭರತರ್ಷಭ |
ಮೋಹಿತಾಃ ಪರಮಾಸ್ತ್ರೇಣ ಪಾಂಡವೇನ ಮಹಾತ್ಮನಾ ॥ 14 ॥
ಅಶೋಭಂತ ರಣೇ ಯೋಧಾಃ ಪುಷ್ಪಿತಾ ಇವ ಕಿಂಶುಕಾಃ ॥ 15 ॥|
ಎಲೈ ಭರತಶ್ರೇಷ್ಠನೇ, ನಿನ್ನವರಾದ ಅವರು ಮಹಾತ್ಮನಾದ ಪಾಂಡವನ ಶ್ರೇಷ್ಠವಾದ ಅಸ್ತ್ರದಿಂದ ಮೋಹಿತರಾಗಿ ರಣರಂಗದಲ್ಲಿ ಪರಸ್ಪರವಾಗಿ ಹೊಡೆದರು. ಯೋಧರು ರಣರಂಗದಲ್ಲಿ ಪುಷ್ಪಿತವಾದ ಮುತ್ತುಗದ ಮರಗಳಂತೆ ಶೋಭಿಸಿದರು.
ರುಧಿರೋತ್ಪೀಡನಾಸ್ತೇ ತು ರುಧಿರೇಣ ಸಮುಕ್ಷಿತಾಃ |
ಚಂದನಸ್ಯ ರಸೇನೇವ ವ್ಯಭ್ರಾಜಂತ ರಣಾಜಿರೇ ॥ 16 ॥
ರಕ್ತದ ಶಿರೋಭೂಷಣವನ್ನು ಹೊಂದಿ, ಚಂದನದ ರಸದಿಂದ ಲೇಪಿತವಾದಂತೆ, ರಕ್ತದಿಂದ ಶರೀರವು ತೊಯ್ದು ಅವರು ರಣರಂಗದಲ್ಲಿ ಶೋಭಿಸಿದರು.
ತತಃ ಪ್ರಹಸ್ಯ ಬೀಭತ್ಸುಃ ವ್ಯಾಕ್ಷಿಪದ್ ಗಾಂಡಿವಂ ಭೃಶಮ್ |
ನ್ಯಹನತ್ ತಾನ್ ಶರೈಸ್ತೀಕ್ಷ್ಣೈ ರ್ಣ್ಯಃ ತಮಃ ಸೂರ್ಯ ಇವಾಂಶುಭಿಃ ॥17॥
ಆಗ ಅರ್ಜುನನು ನಕ್ಕು ಗಾಂಡೀವ ಧನುಸ್ಸನ್ನು ಬಹಳವಾಗಿ ಎಳೆದು ತೀಕ್ಷ್ಣವಾದ ಬಾಣಗಳಿಂದ ಸೂರ್ಯನು ತನ್ನ ಕಿರಣಗಳಿಂದ ಕತ್ತಲೆಯನ್ನು ನಾಶಮಾಡುವಂತೆ ಅವರನ್ನು ಕೊಂದನು.
ಹತಾವಶಿಷ್ಟಾಸ್ತೇ ಭೂಯಃ ಪರಿವಾರ್ಯ ಧನಂಜಯಮ್ |
ಸಾಶ್ವಧ್ವಜರಥಂ ಚಕ್ರುರದೃಶ್ಯಂ ಶರವೃಷ್ಟಿಭಿಃ ॥ 18 ॥
ಹತರಾಗಿ ಉಳಿದ ಅವರು ಪುನಃ ಅರ್ಜುನನನ್ನು ಸುತ್ತುವರಿದು, ಅಶ್ವ-ಧ್ವಜ- ರಥಗಳಿಂದ ಕೂಡಿದ ಅವನನ್ನು ತಮ್ಮ ಬಾಣಗಳ ಮಳೆಯಿಂದ ಅದೃಶ್ಯನನ್ನಾಗಿ ಮಾಡಿದರು.
ತತಃ ಶರಸಹಸ್ರಾಣಿ ತೈರ್ವಿಮುಕ್ತಾನಿ ಭಸ್ಮಸಾತ್ |
ಕೃತ್ವಾ ತತಸ್ತು ತಾನ್ ವೀರಾನನಯದ್ ಯಮಸಾದನಮ್ ॥ 19 ॥
ಆಗ ಅರ್ಜುನನು ಅವರು ಪ್ರಯೋಗಿಸಿದ ಸಹಸ್ರಾರು ಬಾಣಗಳನ್ನು ಭಸ್ಮ ಮಾಡಿ ಆ ವೀರರನ್ನು ಯಮಲೋಕಕ್ಕೆ ಕಳುಹಿಸಿದನು.
ತತಃ ಪ್ರಹಸ್ಯ ಬೀಭತ್ಸುರ್ಲಲಿಂಧ್ರಾನ್ ಮಾಲವಾನಪಿ |
ಮಚ್ಚಿಲ್ಲಕಾಂಸ್ತ್ರಿಗರ್ತಾಂಶ್ಚ ಯೌಧೇಯಾಂಶ್ಚಾರ್ದಯಚ್ಛರೈಃ ॥ 20 ॥
ಅನಂತರ ಅರ್ಜುನನು ನಕ್ಕು, ಲಿಲಿಂಧ್ರರನ್ನೂ, ಮಾಲವರನ್ನೂ, ಮಚ್ಚಿಲಕರನ್ನೂ, ತ್ರಿಗರ್ತರನ್ನೂ ಮತ್ತು ಯೋಧೇಯರನ್ನು ತನ್ನ ಬಾಣಗಳಿಂದ ಪೀಡಿಸಿದನು.
ತೇ ಹನ್ಯಮಾನಾ ವೀರೇಣ ಕ್ಷತ್ರಿಯಾಃ ಕಾಲಚೋದಿತಾಃ |
ವ್ಯಸೃಜನ್ ಶರವರ್ಷಾಣಿ ಪಾರ್ಥೇ ನಾನಾವಿಧಾನಿ ಚ ॥ 21 ॥
ವೀರನಾದ ಅರ್ಜುನನಿಂದ ಹೊಡೆಯಲ್ಪಟ್ಟ ಕಾಲಚೋದಿತರಾದ ಆ ಕ್ಷತ್ರಿಯರು ಅರ್ಜುನನ ಮೇಲೆ ನಾನಾವಿಧವಾದ ಬಾಣಗಳ ಮಳೆಯನ್ನು ಸುರಿಸಿದರು.
ತತೋ ನೈವಾರ್ಜುನಸ್ತತ್ರ ನ ರಥೋ ನಾಪಿ ಕೇಶವಃ |
ಪ್ರತ್ಯದೃಶ್ಯಂತ ಘೋರೇಣ ಶರವರ್ಷೇಣ ಸಂವೃತಾಃ ॥ 22 ॥
ಆಗ ಘೋರವಾದ ಬಾಣಗಳ ಮಳೆಯಿಂದ ಮುಚ್ಚಲ್ಪಟ್ಟು, ಅಲ್ಲಿ ಅರ್ಜುನನಾಗಲೀ, ಅವನ ರಥವಾಗಲೀ ಅಥವಾ ಕೃಷ್ಣನಾಗಲೀ ಕಾಣಲಿಲ್ಲ.
ತತಸ್ತೇ ಲಬ್ಧಲಕ್ಷ್ಯತ್ವಾದನ್ಯೋನ್ಯಮಭಿಚುಕ್ರುಶುಃ |
ಹತೌ ಕೃಷ್ಣಾವಿತಿ ಪ್ರೀತಾಃ ವಾಸಾಂಸ್ಯಾದುಧುವುಸ್ತದಾ ॥ 23 ॥
ಆಗ ಅವರು ಗುರಿಯನ್ನು ತಪ್ಪದ ಕಾರಣದಿಂದ ಪರಸ್ಪರವಾಗಿ ಕಿರುಚುತ್ತಾ ಕೃಷ್ಣಾರ್ಜುನರು ಹತರಾದರು ಎಂದು ಸಂತೋಷದಿಂದ ತಮ್ಮ ಉತ್ತರೀಯಗಳನ್ನು ಬೀಸಿದರು.
ಭೇರೀಮೃದಂಗಶಂಖಾಂಶ್ಚ ದಧ್ಮುರ್ವೀರಾಃ ಸಹಸ್ರಶಃ |

ಸಿಂಹನಾದರವಾಂಶ್ಚೋಗ್ರಾನ್ ಪ್ರಚಕ್ರುಸ್ತತ್ರ ಮಾರಿಷ ॥ 24 ॥
ಸಹಸ್ರಸಂಖ್ಯೆಯಲ್ಲಿ ಭೇರಿ, ಮೃದಂಗಗಳನ್ನು ಬಾರಿಸಿ, ವೀರರಾದ ಅವರು ಶಂಖಗಳನ್ನು ಊದಿದರು. ಪೂಜ್ಯನೇ, ಅಲ್ಲಿ ಅವರು ಉಗ್ರವಾದ ಸಿಂಹನಾದಗಳನ್ನೂ ಮಾಡಿದರು.
ತತಃ ಪ್ರಸಿಷ್ವಿದೇ ಕೃಷ್ಣಃ ಖಿನ್ನಶ್ಚಾರ್ಜುನಮಬ್ರವೀತ್ |
ಕ್ವಾಸಿ ಪಾರ್ಥ ನ ಪಶ್ಯಾಮಿ ಕಚ್ಚಿಜ್ಜೀವಸಿ ಶತ್ರುಹನ್ ॥ 25 ॥|
ಆಗ ಕೃಷ್ಣನು ಬೆವರಿ ಅರ್ಜುನನನ್ನು ಕುರಿತು `ಅರ್ಜುನನೇ, ನಿನ್ನನ್ನು ಕಾಣುತ್ತಿಲ್ಲ, ಎಲ್ಲಿದ್ದೀಯೆ? ಶತ್ರುಸೂದನನೇ, ಬದುಕಿದ್ದೀಯಷ್ಟೆ?' ಎಂದು ಕೇಳಿದನು.
ತಸ್ಯ ತನ್ಮಾನುಷಂ ಭಾವಂ ಭಾವಜ್ಞೋಽಜ್ಞಾಯ ಪಾಂಡವಃ |
ವಾಯವ್ಯಾಸ್ತ್ರೇಣ ತೈರಸ್ತಾಂ ಶರವೃಷ್ಟಿಮಪಾವಹತ್ ॥ 26 ॥
ಅರ್ಜುನನು ಮನುಷ್ಯರಂತೆ ವಿಡಂಬನೆಯನ್ನು ಮಾಡುವ ಕೃಷ್ಣ ಅಭಿಪ್ರಾಯವನ್ನು ತಿಳಿದು, ವಾಯವ್ಯಾಸ್ತ್ರದಿಂದ ಶತ್ರುಗಳು ಪ್ರಯೋಗಿಸಿದ ಬಾಣಗಳ ಮಳೆಯನ್ನು ಹಾರಿಸಿದನು.
ಸಂಶಪ್ತಕರಥವ್ರಾತಾನ್ ಸಾಶ್ವದ್ವಿಪರಥಾಯುತಾನ್ |
ಉವಾಹ ಭಗವಾನ್ ವಾಯುಃ ಶುಷ್ಕಪರ್ಣಚಯಾನಿವ ॥ 27 ॥
ಪೂಜ್ಯನಾದ ವಾಯುವು ಅಶ್ವ-ಗಜ-ರಥಗಳಿಂದ ಕೂಡಿದ ಸಂಶಪ್ತಕರ ರಥಗಳ ಸಮೂಹಗಳನ್ನು ಒಣಗಿದ ಎಲೆಗಳ ಸಮೂಹದಂತೆ ಹಾರಿಸಿದನು.
ಉಹ್ಯಮಾನಾಸ್ತು ತೇ ರಾಜನ್ ಬಹ್ವಶೋಭಂತ ವಾಯುನಾ |
ಪ್ರಡೀನಾಃ ಪಕ್ಷಿಣಃ ಕಾಲೇ ವೃಕ್ಷೇಭ್ಯ ಇವ ಮಾರಿಷ ॥ 28 ॥
ರಾಜನೇ, ವಾಯುವಿನಿಂದ ಹಾರಿಸಲ್ಪಡುವ ಅವರು ಎಲ್ಲೈ ಪೂಜ್ಯನೇ, ಆ ಕಾಲದಲ್ಲಿ ಮರಗಳಿಂದ ಹಾರುವ ಪಕ್ಷಿಗಳಂತೆ ಕಂಡುಬಂದರು.
ತಾಂಸ್ತಥಾ ವ್ಯಾಕುಲೀಕೃತ್ಯ ತ್ವರಮಾಣೋ ಧನಂಜಯಃ |
ಜಘಾನ ನಿಶಿತೈರ್ಬಾಣೈಃ ಸಹಸ್ರಾಣಿ ಶತಾನಿ ಚ ॥ 29 ॥
ಅವರನ್ನು ಆ ರೀತಿಯಲ್ಲಿ ವ್ಯಾಕುಲಗೊಳಿಸಿ ಅರ್ಜುನನು ತ್ವರೆಮಾಡುತ್ತಾ ತನ್ನ ನಿಶಿತವಾದ ಬಾಣಗಳಿಂದ ಅವರನ್ನು ನೂರರ ಸಂಖೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಕೊಂದನು.
ಶಿರಾಂಸಿ ಭಲ್ಲೈರಹರದ್ ಬಾಹೂನಪಿ ಚ ಸಾಯುಧಾನ್ |
ಹಸ್ತಿಹಸ್ತೋಪಮಾಂಶ್ಚೋರೂಃ ಶರೈರುರ್ವ್ಯಾಮಪಾತಯತ್ ॥ 30 ॥
ಅವನು ಭಲ್ಲಗಳಿಂದ ಅವರ ಶಿರಸ್ಸುಗಳನ್ನು ಮತ್ತು ಆಯುಧಸಹಿತವಾದ ಬಾಹುಗಳನ್ನು ಕತ್ತರಿಸಿದನು. ಆನೆಯ ಸೊಂಡಿಲುಗಳಂತಿದ್ದ ಅವರ ತೊಡೆಗಳನ್ನು ಬಾಣಗಳಿಂದ ಕತ್ತರಿಸಿ ಭೂಮಿಯ ಮೇಲೆ ಕೆಡವಿದನು.
ಪೃಷ್ಠಚ್ಛಿನ್ನಾನ್ ವಿಚರಣಾನ್ ವಿಮಸ್ತಿಷ್ಕೇಕ್ಷಣಾಂಗುಲೀನ್ |
ನಾನಾಂಗಾವಯವೈರ್ಹೀನಾಂಶ್ಚಕಾರಾರೀನ್ ಧನಂಜಯಃ ॥ 31 ॥
ಅರ್ಜುನನು ತನ್ನ ಶತ್ರುಗಳನ್ನು ಬೆನ್ನಿನಲ್ಲಿ ಕತ್ತರಿಸಲ್ಪಟ್ಟವರನ್ನಾಗಿ, ಪಾದಹೀನರನ್ನಾಗಿ, ಶಿರೋಹೀನರನತನಗಿ, ಕಣ್ಣು ಮತ್ತು ಬೆರಳುಗಳಿಂದ ಹೀನರನ್ನಾಗಿ- ಹೀಗೆ ಅನೇಕ ಅಂಗ-ಪ್ರತ್ಯಂಗಗಳಿಂದ ಹೀನರನ್ನಾಗಿ ಮಾಡಿದನು.
ಗಂಧರ್ವನಗರಾಕಾರಾನ್ ವಿಧಿವತ್ ಕಲ್ಪಿತಾನ್ ರಥಾನ್ |
ಶರೈರ್ವಿಶಕಲೀಕುರ್ವಂಶ್ಚಕ್ರೇ ವ್ಯಶ್ವರಥಧ್ವಜಾನ್ ॥ 32 ॥
ಗಂಧರ್ವನಗರದಂತೆ ಶಾಸೊತ್ರೀಕ್ತವಾಗಿ ಸಿದ್ಧಪಡಿಸಿದ ಅವರ ರಥಗಳನ್ನು ತನ್ನ ಬಾಣಗಳಿಂದ ಪುಡಿಮಾಡುತ್ತಾ, ಆ ಯೋಧರನ್ನು ಅಶ್ವ-ರಥ-ಧ್ವಜಹೀನರನ್ನಾಗಿ ಮಾಡಿದನು.
ಮುಂಡತಾಳವನಾನೀವ ತತ್ರ ತತ್ರ ಚಕಾಶಿರೇ |
ಛಿನ್ನಧ್ವಜರಥವ್ರಾತಾಃ ಕೇಚಿದ್ ಯೋಧಾಃ ಕ್ವಚಿತ್ ಕ್ವಚಿತ್ ॥33॥
ಮೇಲ್ಭಾಗವನ್ನು ಕತ್ತರಿಸಿದ ತಾಳವೃಕ್ಷಗಳಂತೆ ಸಂಶಪ್ತಕ ಯೋಧರು ಅಲ್ಲಲ್ಲಿ ತೋರಿಬಂದರು. ಅಲ್ಲಲ್ಲಿ ಯೋಧರ ಛಿನ್ನವಾದ ಧ್ವಜ-ರಥ ಸಮೂಹಗಳು ಕಂಡುಬಂದವು.
ಸೋತ್ತರಾಯುಧಿನೋ ನಾಗಾಃ ಸಪತಾಕಾಂಕುಶಾಯುಧಾಃ |
ಪೇತುಃ ಶಕ್ರಾಶನಿಹತಾ ದ್ರುಮವಂತ ಇವಾಚಲಾಃ ॥ 34 ॥
ಗಜಾರೋಹಿಗಳಿಂದಲೂ, ಪತಾಕಾಂಕುಶಾಯುಧಗಳಿಂದಲೂ ಸಹಿತವಾದ ಗಜಗಳು ಇಂದ್ರನ ವಜ್ರಾಯುಧದ ಪ್ರಹಾರಕ್ಕೆ ಸಿಲುಕಿದ ವೃಕ್ಷ ಸಹಿತವಾದ ಪರ್ವತಗಳಂತೆ ಬಿದ್ದವು.
ಚಾಮರಾಪೀಡಕವಚಾಃ ಸ್ರಸ್ತಾಂತ್ರನಯನಾಸವಃ |
ಸಾರೋಹಾಸ್ತುರಗಾಃ ಪೇತುಃ ಪಾರ್ಥಬಾಣಹತಾಃ ಕ್ಷಿತೌ ॥ 35 ॥
ಅರ್ಜುನನ ಬಾಣಗಳಿಂದ ಹತವಾದ ಅಶ್ವಗಳು ತಮ್ಮ ಕರುಳು, ಕಣ್ಣು ಮತ್ತು ಪ್ರಾಣಗಳನ್ನು ಕಳೆದುಕೊಂಡು ಚಾಮರ, ಶಿರೋಭೂಷಣ ಮತ್ತು ಕವಚದಿಂದ ಕೂಡಿದ ಅಶ್ವಾರೋಹಿಗಳ ಜೊತೆಯಲ್ಲಿ ಭೂಮಿಯಲ್ಲಿ ಬಿದ್ದವು.
ವಿಪ್ರವಿದ್ಧಾಸಿನಾರಾಚಾಃ ಛಿನ್ನವರ್ಮರ್ಷ್ಟಿಶಕ್ತಯಃ |
ಪತ್ತಯಶ್ಛಿನ್ನವರ್ಮಾಣಃ ಕೃಪಣಂ ಶೇರತೇ ಹತಾಃ ॥ 36 ॥
ತಮ್ಮ ಖಡ್ಗ, ನಾರಾಚಗಳನ್ನು ಎಸೆದು, ಕವಚಗಳು, ಋಷ್ಟಿಗಳು ಮತ್ತು ಶಕ್ತಿಗಳು, ಭಿನ್ನವಾದ ಪದಾತಿಗಳು ಹತರಾಗಿ,

ಕರುಣಾಜನಕವಾಗಿ ಭೂಮಿಯ ಮೇಲೆ ಮಲಗಿದರು.
ತೈರ್ಹತೈರ್ಹನ್ಯಮಾನೈಶ್ಚ ಪತದ್ಭಿಃ ಪತಿತೈರಪಿ |
ಕೂಜದ್ಭಿರ್ನಿಷ್ಟನದ್ಭಿಶ್ಚ ಕ್ರೂರಮಾಯೋಧನಂ ಬಭೌ ॥ 37 ॥
ಹತರಾದ ಮತ್ತು ಹತರಾಗುತ್ತಿರುವ, ಬಿದ್ದ ಮತ್ತು ಬೀಳುತ್ತಿರುವ, ಪದಾತಿಗಳ ನೋವಿನ ನಾದದಿಂದ ಮತ್ತು ಗರ್ಜನೆಯಿಂದ ರಣರಂಗವು ಕ್ರೂರವಾಗಿ ಶೋಭಿಸಿತು.
ರಜಶ್ಚ ಸುಮಹದ್ ಭೂತಂ ಶಾಂತಂ ಶೋಣಿತವೃಷ್ಟಿಭಿಃ |
ಮಹೀ ಚಾಪ್ಯಭವದ್ ದುರ್ಗಾ ಕಬಂಧಾಯುತಸಂಕುಲಾ ॥ 38 ॥
ಬಹಳವಾಗಿ ಎದ್ದ ಭೂಮಿಯ ಧೂಳು ರಕ್ತಪ್ರವಾಹದಿಂದ ಅಡಗಿತು. ಮೃತ ದೇಹಗಳಿಂದ ನಿಬಿಡವಾದ ರಣಭೂಮಿಯು ತಿರುಗಾಡಲು ಅಸಾಧ್ಯವಾಯಿತು.
ತದ್ ಬಭೌ ರೌದ್ರಬೀಭತ್ಸಂ ಬೀಭತ್ಸೋರ್ಯಾನಮಾಹವೇ |
ಆಕ್ರೀಡ ಇವ ರುದ್ರಸ್ಯ ಘ್ನತಃ ಕಾಲಾತ್ಯಯೇ ಪಶೂನ್ ॥ 39 ॥
ರಣರಂಗದಲ್ಲಿ ಅರ್ಜುನನ ರಥವು ಪ್ರಳಯ ಕಾಲದಲ್ಲಿ ಪಶುಗಳನ್ನು ಸಂಹರಿಸುವ ರುದ್ರನ ವಿಹಾರ ಭೂಮಿಯಂತೆ ರುದ್ರಬೀಭತ್ಸವಾಗಿ ತೋರಿತು.
ತೇ ವಧ್ಯಮಾನಾಃ ಪಾರ್ಥೇನ ವ್ಯಾಕುಲಾಶ್ವರಥಾ ದ್ವಿಪಾಃ |
ತಮೇವಾಭಿಮುಖಾಃ ಕ್ಷೀಣಾಃ ಶಕ್ರಸ್ಯಾತಿಥಿತಾಂ ಗತಾಃ ॥ 40 ॥
ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟ ಅಶ್ವ-ರಥ-ಗಜಗಳು ಭ್ರಾಂತಗಳಾಗಿ, ಅವನ ಎದುರಾಗಿಯೇ ಸಾರಿ ಮರಣವನ್ನು ಹೊಂದಿ ಇಂದ್ರನ ಅತಿಥಿಗಳಾದವು.
ಸಾ ಭೂಮಿರ್ಭರತಶ್ರೇಷ್ಠ ನಿಹತೈಸ್ತೈರ್ಮಹಾರಥೈಃ |
ಆಸ್ತೀರ್ಣಾ ಸಂಬಭೌ ಸರ್ವಾ ಪ್ರೇತೈರಿವ ಸಚೇತನೈಃ ॥ 41 ॥
ಎಲೈ ಭರತಶ್ರೇಷ್ಠನೇ, ಹತರಾದ ಮಹಾರಥರಿಂದ ಹರಡಲ್ಪಟ್ಟ ಆ ರಣಭೂಮಿಯೆಲ್ಲವೂ ಜೀವಿಸಿರುವ ಪ್ರೇತಗಳಿಂದ ತುಂಬಿದಂತೆ ಕಂಡುಬಂದಿತು.
ಏತಸ್ಮಿನ್ನಂತರೇ ಚೈವ ಪ್ರಮತ್ತೇ ಸವ್ಯಸಾಚಿನಿ |
ವ್ಯೂಢಾನೀಕಸ್ತತೋ ದ್ರೋಣೋ ಯುಧಿಷ್ಠಿರಮಭಿದ್ರವತ್ ॥ 42 ॥
ಈ ಮಧ್ಯದಲ್ಲಿ ಅರ್ಜುನನು ಸಂಶಪ್ತಕರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಪ್ರಮತ್ತನಾಗಿರಲು ದ್ರೋಣರು ತಮ್ಮ ಸೈನ್ಯವನ್ನು ವ್ಯೂಹ ಮಾಡಿ ಯುಧಿಷ್ಠಿರನ ಕಡೆಗೆ ಮುನ್ನುಗ್ಗಿದರು.
ಪ್ರತ್ಯಗೃಹ್ಣಂಸ್ತ್ವರಿಗಣಾನ್ ವ್ಯೂಢಾನೀಕಾಂಶ್ಚ ಪಾಂಡವಾಃ |
ತಂ ಪ್ರತ್ಯಗೃಹ್ಣಂಸ್ತ್ವರಿತಾ ವ್ಯೂಢಾನೀಕಾಃ ಪ್ರಹಾರಿಣಃ |
ಯುಧಿಷ್ಠಿರಂ ಪರೀಪ್ಸಂತಸ್ತದಾಽಽಸೀತ್ ತುಮುಲಂ ಮಹತ್ ॥ 43 ॥
ಆಗ ಪ್ರಹಾರಿಗಳಾದ ಪಾಂಡವರು ತಮ್ಮ ಸೈನ್ಯವನ್ನು ವ್ಯೂಹವನ್ನು ಮಾಡಿ ಯುಧಿಷ್ಠಿರನನ್ನು ರಕ್ಷಿಸಲು ಬಯಸಿ, ಶತ್ರುಸಮೂಹವನ್ನು ಎದುರಿಸಿ ಸ್ವೀಕರಿಸಿದರು. ಆಗ ತೀವ್ರವಾದ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಾದಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ
ಸಂಕುಲಯುದ್ಧ
ಸಂಜಯಃ
ಪರಿಣಾಮ್ಯ ನಿಶಾಂ ತಾಂ ತು ಭಾರದ್ವಾಜೋ ಮಹಾರಥಃ |
ಬಹುಧೋಕತ್ವಾ ತತೋ ರಾಜನ್ ವಚನಂ ವೈ ಸುಯೋಧನಮ್ ॥ 1 ॥
ವಿಧಾಯ ಯೋಗಂ ಪಾರ್ಥೇನ ಸಂಶಪ್ತಕಗಣೈಃ ಸಹ |
ನಿಷ್ಕ್ರಾಂತೇ ಚ ರಣಂ ಪಾರ್ಥೇ ಸಂಶಪ್ತಕವಧಂ ಪ್ರತಿ ॥ 2 ॥
ವ್ಯೂಢಾನೀಕಸ್ತತೋ ದ್ರೋಣಃ ಪಾಂಡವಾನಾಂ ಮಹಾಚಮೂಮ್ |
ಅಭ್ಯಯಾದ್ ಭರತಶ್ರೇಷ್ಠ ಧರ್ಮರಾಜಜಿಘೃಕ್ಷಯಾ ॥ 3 ॥
ಸಂಜಯ ಮಹಾರಥರಾದ ದ್ರೋಣರು ಆ ರಾತ್ರಿಯನ್ನು ಕಳೆದು ದುರ್ಯೋಧನನ ಜೊತೆಯಲ್ಲಿ ಬಹಳವಾಗಿ ಮಾತನಾಡಿ, ಅರ್ಜುನನ ಜೊತೆಯಲ್ಲಿ ಸಂಶಪ್ತಕರ ಸಮೂಹಗಳು ಯುದ್ಧದಲ್ಲಿ ಸಂಯೋಗವನ್ನು ಹೊಂದುವಂತೆ ಮಾಡಿ, ಸಂಶಪ್ತಕ ವಧೆಗಾಗಿ ಅರ್ಜುನನು ಹೊರಟ ಮೇಲೆ, ತಮ್ಮ ದೊಡ್ಡ ಸೈನ್ಯವನ್ನು ವ್ಯೂಹಗೊಳಿಸಿ, ಎಲೈ ಭರತಶ್ರೇಷ್ಠನೇ, ಧರ್ಮರಾಜನನ್ನು ಹಿಡಿಯಲು ಬಯಸಿ ರಣರಂಗಕ್ಕೆ ಹೊರಟರು.
ವ್ಯೂಢಾಂ ದೃಷ್ಟ್ವಾ ಸುಪರ್ಣೇನ ಭಾರದ್ವಾಜಸ್ಯ ತಾಂ ಚಮೂಮ್ |
ಮಂಡಲಾರ್ಧೇನ ತಂ ವ್ಯೂಹಂ ಪ್ರತ್ಯವ್ಯೂಹದ್ ಯುಧಿಷ್ಠಿರಃ ॥ 4 ॥

ಭರದ್ವಾಜರು ತಮ್ಮ ಸೈನ್ಯವನ್ನು ಅರ್ಧಮಂಡಲದ ಗರುಡವ್ಯೂಹದಂತೆ ರಚಿಸಿರುವುದನ್ನು ನೋಡಿ, ಯುಧಿಷ್ಠಿರನು ಅದಕ್ಕೆ ಪ್ರತಿಯಾಗಿ ತನ್ನ ಸೈನ್ಯವನ್ನು ವ್ಯೂಹಗೊಳಿಸಿದನು.
ಮುಖಂ ಚಾಸೀತ್ ಸುಪರ್ಣಸ್ಯ ಭಾರದ್ವಾಜೋ ಮಹಾರಥಃ |
ಶಿರೋ ದುರ್ಯೋಧನೋ ರಾಜಾ ಸೋದರ್ಯೈಃ ಸಾನುಗೈರ್ವೃತಃ ||
ಮಹಾರಥರಾದ ಭಾರದ್ವಾಜರು ಆ ಗರುಡನ ಮುಖವಾಗಿದ್ದರು. ತನ್ನ ತಮ್ಮಂದಿರಿಂದ ಪರಿವೃತನಾದ, ರಾಜನಾದ ದುರ್ಯೋಧನನು ಶಿರಸ್ಸಾಗಿದ್ದನು.
ಚಕ್ಷುಷೀ ಕೃತವರ್ಮಾ ಚ ಗೌತಮಶ್ಚಾಸ್ಯತಾಂ ವರಃ |
ಭೂತವರ್ಮಾ ಕ್ಷೇಮಶರ್ಮಾ ಕರಮರ್ಷಶ್ಚ ವೀರ್ಯವಾನ್ || 6 ||
ಕಳಿಂಗಾಃ ಸಿಂಹಳಾಃ ಪ್ರಾಚ್ಯಾಃ ಶೂರಾ ಭೀರಾಃ ಕಶೇರುಕಾಃ |
ಶಕಾ ಯವನಕಾಂಬೋಜಾಸ್ತಥಾ ಹಂಸಪದಾಶ್ಚ ಯೇ || 7 ||
ಗ್ರೀವಾಯಾಂ ಶೂರಸೇನಾಶ್ಚ ದರದಾ ಮದ್ರಕೇಕಯಾಃ |
ರಥಾಶ್ವಗಜಪತ್ತ್ಯಯಃ ತಸ್ಥುಃ ಪರಮದಂಸಿತಾಃ || 8 ||
ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಕೃತವರ್ಮ ಮತ್ತು ಕೃಪರು ಎರಡು ಕಣ್ಣುಗಳಾಗಿದ್ದರು. ಭೂತವರ್ಮ, ಕ್ಷೇಮಶರ್ಮ, ಪರಾಕ್ರಮಶಾಲಿಯಾದ ಕರಮರ್ಷ, ಕಳಿಂಗರು, ಸಿಂಹಳರು, ಪ್ರಾಚ್ಯರು, ಶೂರರು, ವೀರರು, ಕಶೇರುಕರು, ಶಕರು, ಯವನರು, ಕಾಂಬೋಜರು, ಹಂಸಪದರು, ಶೂರಸೇನರು, ದರದರು, ಮದ್ರರು, ಕೇಕಯರು, ರಥಾಶ್ವ-ಗಜ-ಪದಾತಿ ಸಮೂಹಗಳು- ಎಲ್ಲರೂ ಕವಚಗಳನ್ನು ಮತ್ತು ಆಯುಧಗಳನ್ನು ಧರಿಸಿ ಕತ್ತಿನ ಪ್ರದೇಶದಲ್ಲಿ ನಿಂತರು.
ಭೂರಿಶ್ರವಾಃ ಶಲಃ ಶಲ್ಯಃ ಸೋಮದತ್ತೋಽಥ ಬಾಹ್ಲಿಕಃ |
ಅಕ್ಷೋಹಿಣ್ಯಾ ವೃತಾಃ ಶೂರಾ ದಕ್ಷಿಣಂ ಪಕ್ಷಮಾಶ್ರಿತಾಃ || 9 ||
ಶೂರರಾದ ಭೂರಿಶ್ರವ, ಶಲ, ಶಲ್ಯ, ಸೋಮದತ್ತ ಮತ್ತು ಬಾಹ್ಲಿಕರು ಒಂದು ಅಕ್ಷೋಹಿಣಿ ಸೈನ್ಯದಿಂದ ಕೂಡಿ ಸುಪರ್ಣದ ಬಲಭಾಗದ ರೆಕ್ಕೆಯ ಸ್ಥಾನದಲ್ಲಿದ್ದರು.
ವಿಂದಾನುವಿಂದಾವಾವಂತ್ಯೌ ಕಾಂಬೋಜಶ್ಚ ಸುದಕ್ಷಿಣಃ |
ವಾಮಂ ಪಕ್ಷಂ ಸಮಾಶ್ರಿತ್ಯ ಸ್ಥಿತಾ ದ್ರೋಣಸುತಾಗ್ರಗಾಃ || 10 ||
ಅವಂತಿದೇಶದ ವಿಂದಾನುವಿಂದರು ಮತ್ತು ಕಾಂಬೋಜದೇಶದ ಸುದಕ್ಷಿಣ ಇವರು ಅಶ್ವತ್ಥಾಮರ ಮುಂಭಾಗದಲ್ಲಿ ಸುಪರ್ಣದ ಎಡರೆಕ್ಕೆಯನ್ನು ಆಶ್ರಯಿಸಿ ನಿಂತರು.
ಪೃಷ್ಠೇ ಕಳಿಂಗಾಃ ಸಾಂಬಷ್ಠಾ ಮಾಗಧಾಃ ಪೌಂಡ್ರಮದ್ರಕಾಃ |
ಗಾಂಧಾರಾಃ ಶಾಕುನಾಃ ಪ್ರಾಚ್ಯಾಃ ಪಾರ್ವತೀಯಾ ವಸಾತಯಃ ||11||
ಹಿಂಭಾಗದಲ್ಲಿ ಕಳಿಂಗರು, ಅಂಬಷ್ಠರು, ಮಗಧರು, ಪೌಂಡ್ರರು, ಮದ್ರಕರು, ಗಾಂಧಾರರು, ಶಾಕುನರು, ಪ್ರಾಚ್ಯರು, ಪರ್ವತೀಯರು ಮತ್ತು ವಸಾತಿಗಳು ನಿಂತರು.
ಪುಚ್ಛೇ ವೈಕರ್ತನಃ ಕರ್ಣಃ ಸಪುತ್ರಜ್ಞಾತಿಬಾಂಧವಃ |
ಮಹತ್ಯಾ ಸೇನಯಾ ತಸ್ಥೌ ನಾನಾಧ್ವಜಸಮುತ್ಥಯಾ || 12 ||
ಗರುಡನ ಹಿಂದಿನ ಗರಿಗಳ ಸ್ಥಾನದಲ್ಲಿ (ಬಾಲದ ಸ್ಥಾನದಲ್ಲಿ) ವೈಕರ್ತನನಾದ ಕರ್ಣನು ಪುತ್ರ-ದಾಯಾದಿ-ಬಾಂಧವರಿಂದ ಒಡಗೂಡಿ, ನಾನಾ ಧ್ವಜಗಳಿಂದ ಕೂಡಿದ ದೊಡ್ಡ ಸೈನ್ಯದ ಜೊತೆಯಲ್ಲಿ ನಿಂತನು.
ಜಯದ್ರಥೋ ಭೀಮರಥಃ ಸಂಯಾತಿಃ ಸಂಜಯೋ ಜಯಃ |
ಭೂಮಿಂಜಯಶ್ಚ ವೃಷಕೋ ನೈಷಧಶ್ಚ ಮಹಾಬಲಃ || 13 ||
ವೃತಾ ಬಲೇನ ಮಹತಾ ಬ್ರಹ್ಮಲೋಕಪುರಸ್ಕೃತಾಃ |
ವ್ಯೂಹಸ್ಯ ಪರಿತೋ ರಾಜನ್ ಸ್ಥಿತಾ ಯುದ್ಧವಿಶಾರದಾಃ || 14 ||
ಎಲೈ ರಾಜನೇ, ಯುದ್ಧ ವಿಶಾರದರಾದ ಜಯದ್ರಥ, ಭೀಮರಥ, ಸಂಯಾತಿ, ಸಂಜಯ, ಜಯ, ಭೂಮಿಂಜಯ, ವೃಷಕ, ಮಹಾಬಲನಾದ ನೈಷಧ ಇವರು ಬ್ರಾಹ್ಮಣರ ಆಶೀರ್ವಾದಗಳಿಂದ ಸತ್ಕೃತರಾಗಿ ದೊಡ್ಡ ಸೈನ್ಯದ ಜೊತೆಯಲ್ಲಿ ವ್ಯೂಹದ ಸುತ್ತಲೂ ನಿಂತರು.
ದ್ರೋಣೇನ ವಿಹಿತೋ ವ್ಯೂಹಃ ಪದಾತ್ಯಶ್ವರಥದ್ವಿಪೈಃ |
ವಾತೋದ್ಧೂತಾರ್ಣವಾಕಾರಃ ಪ್ರವೃತ್ತ ಇವ ಲಕ್ಷ್ಯತೇ || 15 ||
ದ್ರೋಣರಿಂದ ವ್ಯೂಹಿತವಾದ ಪದಾತಿ-ಅಶ್ವ-ರಥ-ಗಜಗಳಿಂದ ಕೂಡಿದ ವ್ಯೂಹವು ಚಲಿಸುವ ವಾಯುವಿನಿಂದ ಕ್ಷೋಭೆಗೊಂಡ ಸಮುದ್ರದ ಆಕಾರವನ್ನು ಹೊಂದಿದಂತೆ ಕಾಣುತ್ತಿದ್ದಿತು.
ತಸ್ಯ ಪಕ್ಷಪ್ರಪಕ್ಷೇಭ್ಯೋ ನಿಷ್ಪ್ರಾಮಂತಿ ಯುಯುತ್ಸವಃ |
ಸವಿದ್ಯುತ್ಸ್ತನಿತಾ ಮೇಘಾ ದಿವಿ ದಿಗ್ಭ್ಯ ಇವೋಷ್ಣಗೇ || 16 ||
ಉಷ್ಣಕಾಲವು ಕಳೆದು ಮಳೆಗಾಲವು ಬಂದಾಗ ದಿಕ್ಕು-ದಿಕ್ಕುಗಳಿಂದ ಗುಡುಗು, ಮಿಂಚುಗಳಿಂದ ಸಹಿತವಾದ ಮೋಡಗಳು ಬಂದಂತೆ ಯೋಧರು ಆ ವ್ಯೂಹದ ಪಕ್ಷ-ಪ್ರಪಕ್ಷಗಳಿಂದ ಹೊರಗೆ ಬರುತಿತದ್ದರು.
ತಸ್ಯ ಪ್ರಾಗ್ಜ್ಯೋತಿಷೋ ಮಧ್ಯೇ ವಿಧಿವತ್ ಕಲ್ಪಿತಂ ಗಜಮ್ |
ಆಸ್ಥಿತೋಽಭೂತ್ ಸ ಭಗವಾನ್ ಅಂಶುಮಾನುದಯಂ ಯಥಾ ||17||
ಆ ವ್ಯೂಹದ ಮಧ್ಯದಲ್ಲಿ ಪ್ರಾಗ್ಜ್ಯೋತಿಷನು ಪೂಜ್ಯನಾದ ಸೂರ್ಯನು ಉದಯ ಪರ್ವತವನ್ನು ಏರಿದಂತೆ ಶಾಸೊತ್ರೇಕ್ತ ರೀತಿಯಲ್ಲಿ

ಸಿದ್ಧಪಡಿಸಿದ ಸುಪ್ರತೀಕ ಗಜವನ್ನು ಏರಿ ಸಿದ್ಧನಾದನು.
ಮಾಲ್ಯದಾಮವತಾ ರಾಜನ್ ಶ್ವೇತಚ್ಛತ್ರೇಣ ಧಾರ್ಯತಾ |
ಕೃತ್ತಿಕಾಯೋಗಯುಕ್ತೇನ ಪೌರ್ಣಮಾಸ್ಯಾಮಿವೇಂದುನಾ ॥ 18 ॥
ಎಲೈ ರಾಜನೇ, ಹೂವಿನ ಮಾಲೆಗಳಿಂದ ಅಲಂಕರಿಸಿದ ಶ್ವೇತಚ್ಛತ್ರವನ್ನು ಧರಿಸಿಕೊಂಡಿದ್ದ ಅವನು ಹುಣ್ಣಿಮೆಯ ರಾತ್ರಿಯಲ್ಲಿ ಕೃತ್ತಿಕಾ ನಕ್ಷತ್ರಯೋಗವುಳ್ಳ ಚಂದ್ರನಂತೆ ಶೋಭಿಸಿದನು.
ನೀಲಾಂಜನಚಯಪ್ರಖ್ಯೋ ಮದಾಂಧೋ ದ್ವಿರದೋ ಬಭೌ |
ಅಭಿವೃಷ್ಟ್ಯಾ ಮಹಾಮೇಘೈಃ ಯಥಾ ಸ್ಯಾತ್ ಪರ್ವತೋ ಮಹಾನ್ ॥
ಕಪ್ಪುಕಾಡಿಗೆಯ ರಾಶಿಯಂತೆ ಇದ್ದ ಅವನ ಮದಾಂಧವಾದ ಗಜವು ಮಹಾಮೇಘಗಳಿಂದ ಮಳೆಯು ಸುರಿಸಲ್ಪಟ್ಟ ದೊಡ್ಡ ಪರ್ವತದಂತೆ ಶೋಭಿಸಿತು.
ನಾನಾನೃಪತಿಭಿರ್ವೀರೈಃ ವಿವಿಧಾಯುಧಭೂಷಣೈಃ |
ಸಮನ್ವಿತಃ ಪಾರ್ವತೀಯೈಃ ಶಕ್ರೋ ದೇವಗಣೈರಿವ ॥ 20 ॥
ವಿವಿಧವಾದ ಆಯುಧಗಳನ್ನು ಹಿಡಿದ, ವಿವಿಧ ಭೂಷಣಗಳಿಂದ ಅಲಂಕೃತರಾದ, ವೀರರಾದ ನಾನಾ ರಾಜರಿಂದಲೂ ಮತ್ತು ಪರ್ವತ ಪ್ರದೇಶದ ವೀರರಿಂದಲೂ ದೇವಗಣಗಳಿಂದ ಕೂಡಿದ ಇಂದ್ರನಂತೆ ಸಮನ್ವಿತವಾದ ಆ ವ್ಯೂಹವು ಬಹಳವಾಗಿ ಶೋಭಿಸಿತು.
ತತೋ ಯುಧಿಷ್ಠಿರಃ ಪ್ರೇಕ್ಷ್ಯ ೆಯ ವ್ಯೂಹಂ ತಮತಿಮಾನುಷಮ್ |
ಅಜಯ್ಯಮರಿಭಿಃ ಸಂಖ್ಯೇ ಪಾರ್ಷತಂ ವಾಕ್ಯಮಬ್ರವೀತ್ ॥ 21 ॥
ಆಗ ಯುಧಿಷ್ಠಿರನು ಅತಿಮಾನುಷವಾದ, ಶತ್ರುಗಳಿಂದ ಜಯಿಸಲು ಅಸಾಧ್ಯವಾದ ಆ ವ್ಯೂಹವನ್ನು ನೋಡಿ, ರಣರಂಗದಲ್ಲಿ ಧೃಷ್ಟದ್ಯುಮ್ನನನ್ನು ಕುರಿತು ಹೇಳಿದನು.
ಬ್ರಾಹ್ಮಣಸ್ಯ ವಶಂ ನಾದ್ಯ ಗಚ್ಛೇಯಂ ಪುರುಷರ್ಷಭ |
ಪಾರಾವತಸವರ್ಣಾಶ್ವ ತಥಾ ನೀತಿರ್ವಿಧೀಯತಾಮ್ ॥ 22 ॥
ಪುರುಷಶ್ರೇಷ್ಠನೇ, ಪಾರಿವಾಳದ ಬಣ್ಣದ ಅಶ್ವವನ್ನು ಹೊಂದಿದವನೇ, ಈ ದಿನ ನಾನು ಬ್ರಾಹ್ಮಣರಾದ ದ್ರೋಣರ ವಶಕ್ಕೆ ಸಿಲುಕದಂತೆ ಯುದ್ಧನೀತಿಯನ್ನು ನಿರೂಪಿಸು (ಎಂದು ಹೇಳಿದನು).
ಧೃಷ್ಟದ್ಯುಮ್ನಃ
ದ್ರೋಣಸ್ಯ ಯುದ್ಧ್ಯಮಾನಸ್ಯ ವಶಂ ನೈಷ್ಯಸಿ ಸುವ್ರತ |
ಅಹಮಾವಾರಯಿಷ್ಯಾಮಿ ದ್ರೋಣಮದ್ಯ ಸಹಾನುಗಃ ॥ 23 ॥
ಧೃಷ್ಟದ್ಯುಮ್ನ ಎಲೈ ಸುವ್ರತನೇ, ನೀನು ಯುದ್ಧಮಾಡುವ ದ್ರೋಣರಿಗೆ ವಶನಾಗುವುದಿಲ್ಲ. ಈ ದಿನ ನಾನು ನನ್ನ ಅನುಯಾಯಿಗಳೊಂದಿಗೆ ದ್ರೋಣರನ್ನು ತಡೆಯುವೆನು.
ಮಯಿ ಜೀವತಿ ಕೌಂತೇಯ ನೋದ್ವೇಗಂ ಕರ್ತುಮರ್ಹಸಿ |
ನ ಹಿ ದ್ರೋಣೋ ರಣೇ ಶಕ್ತೋ ವಿಜೇತುಂ ಮಾಂ ಕಥಂಚನ ॥ 24 ॥
ಎಲೈ ಕೌಂತೇಯನೇ, ನಾನು ಬದುಕಿರುವಾಗ ನೀನು ಉದ್ವೇಗವನ್ನು ಹೊಂದುವ ಕಾರಣವಿಲ್ಲ. ದ್ರೋಣರು ಯಾವ ರೀತಿಯಿಂದಲೂ ಯುದ್ಧದಲ್ಲಿ ನನ್ನನ್ನು ಗೆಲ್ಲಲು ಶಕ್ತರಲ್ಲ.
ಸಂಜಯಃ
ಏವಮುಕತ್ವ ಕಿರನ್ ಬಾಣಾನ್ ದ್ರುಪದಸ್ಯ ಸುತೋ ಬಲೀ |
ಪಾರಾವತಸವರ್ಣಾಶ್ವಃ ಸ್ವಯಂ ದ್ರೋಣಮಭಿದ್ರುವತ್ ॥ 25 ॥
ಸಂಜಯ ಹೀಗೆ ಹೇಳಿ ದ್ರುಪದನ ಪುತ್ರನೂ, ಬಲಿಷ್ಠನೂ, ಪಾರಾವತವರ್ಣದ ಅಶ್ವವನ್ನು ಹೊಂದಿದವನೂ ಆದ ಧೃಷ್ಟದ್ಯುಮ್ನನು ಬಾಣಗಳನ್ನು ಪ್ರಯೋಗಿಸುತ್ತಾ ಸ್ವತಃ ದ್ರೋಣರ ಕಡೆಗೆ ಮುನುನಗ್ಗಿದನು.
ಅನಿಷ್ಟದರ್ಶನಂ ದೃಷ್ಟ್ವಾ ಧೃಷ್ಟದ್ಯುಮ್ನಮುಪಸ್ಥಿತಮ್ |
ಕ್ಷಣೇನೈವಾಭವದ್ ದ್ರೋಣೋ ನಾತಿಹೃಷ್ಟಮನಾ ಇವ ॥ 26 ॥
ಧೃಷ್ಟದ್ಯುಮ್ನನನ್ನು ನೋಡಿ ತಮಗೆ ಅನಿಷ್ಟದರ್ಶನವೆಂದು ತಿಳಿದು ಒಂದು ಕ್ಷಣದಲ್ಲಿ ದ್ರೋಣರು ವಿಷಾದಗೊಂಡವರಂತೆ ಆದರು.
ಸ ಹಿ ಜಾತೋ ಮಹಾರಾಜ ದ್ರೋಣಸ್ಯ ನಿಧನಂ ಪ್ರತಿ |
ಮರ್ತ್ಯಧರ್ಮತಯಾ ತಸ್ಮಾದ್ ಭಾರದ್ವಾಜೋ ವ್ಯಮುಹ್ಯತ |
ನಾಶಕತ್ ತತ್ರ ತಂ ಕಿಂಚಿದನೀಕಂ ಪ್ರತಿವೀಕ್ಷಿತುಮ್ ॥ 27 ॥
ಎಲೈ ಮಹಾರಾಜನೇ, ಧೃಷ್ಟದ್ಯುಮ್ನನು ದ್ರೋಣರ ಮರಣಕ್ಕಾಗಿ ಜನಿಸಿದವನಷ್ಟೆ? ಆದ್ದರಿಂದ ದ್ರೋಣರು ಮೃತ್ಯುಧರ್ಮವನ್ನು ಹೊಂದಿದವರಾದ್ದರಿಂದ ಮೋಹಕ್ಕೆ ಒಳಗಾದರು. ಅವರಿಗೆ ಆ ಸೈನ್ಯವನ್ನು ನೋಡಲು ಸಾಧ್ಯವಾಗಲಿಲ್ಲ.
ತತಃ ಕಿರನ್ನಿಷೂಂಸ್ತೀಕ್ಷ್ಣಾನ್ ದ್ರುಪದಸ್ಯ ವರೂಥಿನೀಮ್ |
ಭಾರದ್ವಾಜೋ ಯಯೌ ತೂರ್ಣಂ ಪಾರ್ಷತಂ ವರ್ಜಯನ್ ಯುಧಿ ॥
ಆಗ ದ್ರೋಣರು ಧೃಷ್ಟದ್ಯುಮ್ನನನ್ನು ಬಿಟ್ಟು ಯುದ್ಧದಲ್ಲಿ ದ್ರುಪದನ ಸೈನ್ಯದ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಶೀಘ್ರವಾಗಿ ಮುಂದೆ ಸಾಗಿದರು.
ದ್ರುಪದಸ್ಯ ಮಹತ್ ಸೈನ್ಯಂ ವಾರಯಾಮಾಸ ಬ್ರಾಹ್ಮಣಃ ॥ 29 ॥ |
ತಂ ತು ಸಂಪ್ರೇಕ್ಷ್ಯ ತೇ ಪುತ್ರೋ ದುರ್ಮುಖಃ ಶತ್ರುಕರ್ಶನಃ |
ಪ್ರಿಯಂ ಚಿಕೀರ್ಷುರ್ದ್ರೋಣಸ್ಯ ಧೃಷ್ಟದ್ಯುಮ್ನಮವಾರಯತ್ ॥ 30 ॥

ಬ್ರಾಹ್ಮಣರಾದ ಅವರು ದ್ರುಪದನ ದೊಡ್ಡ ಸೈನ್ಯವನ್ನು ನಿವಾರಿಸಿದರು. ಅದನ್ನು ನೋಡಿ ನಿನ್ನ ಪುತ್ರನಾದ, ಶತ್ರುಕರ್ಶನನಾದ ದುರ್ಮುಖನು ದ್ರೋಣರಿಗೆ ಪ್ರಿಯವನ್ನುಂಟು ಮಾಡಲು ಬಯಸಿ ಧೃಷ್ಟದ್ಯುಮ್ನನನ್ನು ತಡೆದನು.
ಸ ಸಂಪ್ರಹಾರಸ್ತುಮುಲಃ ಸುಘೋರಃ ಸಮಪದ್ಯತ |
ಪಾರ್ಷತಸ್ಯ ಚ ಶೂರಸ್ಯ ದುರ್ಮುಖಸ್ಯ ಚ ಸಂಯುಗೇ ॥ 31 ॥
ಧೃಷ್ಟದ್ಯುಮ್ನನಿಗೂ ಮತ್ತು ಶೂರನಾದ ದುರ್ಮುಖನಿಗೂ ನಡೆದ ಯುದ್ಧವು ತೀವ್ರವೂ ಮತ್ತು ಅತ್ಯಂತ ಘೋರವೂ ಆಗಿದ್ದಿತು.
ಪಾರ್ಷತಃ ಶರಜಾಲೇನ ಕ್ಷಿಪ್ರಂ ಪ್ರಚ್ಛಾದ್ಯ ದುರ್ಮುಖಮ್ |
ಭಾರದ್ವಾಜಂ ಶರೌಘೇಣ ಮಹತಾ ಸಮವಾರಯತ್ ॥ 32 ॥
ಧೃಷ್ಟದ್ಯುಮ್ನನು ತನ್ನ ಬಾಣಸಮೂಹದಿಂದ ಶೀಘ್ರವಾಗಿ ದುರ್ಮುಖನನ್ನು ಆಚ್ಛಾದಿಸಿ, ದೊಡ್ಡ ಬಾಣಗಳ ಸಮೂಹದಿಂದ ದ್ರೋಣರನ್ನು ತಡೆದನು.
ದ್ರೋಣಮಾವಾರಿತಂ ದೃಷ್ಟ್ವಾ ಭೃಶಂ ಯತ್ತಸ್ತವಾತ್ಮಜಃ |
ನಾನಾಲಿಂಗೈಃ ಶರವ್ರಾತೈಃ ಪಾರ್ಷತಂ ಸಮಮೋಹಯತ್ ॥ 33 ॥
ದ್ರೋಣರು ತಡೆಯಲ್ಪಟ್ಟುದನ್ನು ನೋಡಿ ನಿನ್ನ ಪುತ್ರನು ಬಹಳ ಪ್ರಯತ್ನಪಟ್ಟು ಅನೇಕ ಆಕಾರಗಳನ್ನು ಹೊಂದಿದ ಬಾಣಗಳ ಸಮೂಹದಿಂದ ಧೃಷ್ಟದ್ಯುಮ್ನನಿಗೆ ಮೋಹವನ್ನುಂಟು ಮಾಡಿದನು.
ತಯೋರ್ವಿಷಕ್ತಯೋಃ ಸಂಖ್ಯೇ ಪಾಂಚಾಲಕುರುಮುಖ್ಯಯೋಃ ॥ 34 ॥
ದ್ರೋಣೋ ಯೌಧಿಷ್ಠಿರಂ ಸೈನ್ಯಂ ವ್ಯಧಮದ್ ಬಹುಧಾ ಶರೈಃ |
ಅನಿಲೇನ ಯಥಾಽಭ್ರಾಣಿ ವಿಚ್ಛಿನ್ನಾನಿ ಸಮಂತತಃ |
ತಥಾ ಸೈನ್ಯಾನಿ ಪಾಂಡೂನಾಂ ದೃಶ್ಯಂತೇ ಸ್ಮ ಕ್ವಚಿತ್ ಕ್ವಚಿತ್ ॥ 35 ॥
ಪಾಂಚಾಲ-ಕುರುಮುಖ್ಯರಾದ ಅವರಿಬ್ಬರೂ ಯುದ್ಧದಲ್ಲಿ ಪರಸ್ಪರವಾಗಿ ಸಂಸಕ್ತರಾಗಿರಲು, ದ್ರೋಣರು ಯುಧಿಷ್ಠಿರನ ಸೈನ್ಯವನ್ನು ತಮ್ಮ ಬಾಣಗಳಿಂದ ಬಹುರೀತಿಯಲ್ಲಿ ಚದುರಿಸಿದರು. ವಾಯುವಿನಿಂದ ಮೋಡಗಳು ಚದುರಿಹೋದಂತೆ ಪಾಂಡವರ ಸೈನ್ಯಗಳು ಅಲ್ಲಲ್ಲಿ ಕಂಡುಬಂದವು.
ಮುಹೂರ್ತಮಿವ ತದ್ ಯುದ್ಧಮಾಸೀನ್ಮಧುರದರ್ಶನಮ್ |
ತತ ಉನ್ಮತ್ತವದ್ ರಾಜನ್ ನಿರ್ಮರ್ಯಾದಮವರ್ತತ ॥ 36 ॥
ರಾಜನೇ, ಒಂದುಮುಹೂರ್ತದ ಕಾಲ ಆ ಯುದ್ಧವು ನೋಡಲು ಮಧುರವಾಗಿದ್ದಿತು. ಅನಂತರ ಹುಚ್ಚರಂತೆ ಎಲ್ಲೆಯನ್ನು ಮೀರಿದ ಯುದ್ಧವು ನಡೆಯಿತು.
ನೈವ ಖಂ ನ ದಿಶೋ ಭೂಮಿರ್ಬಭಾಸೇ ನ ಚ ಭಾಸ್ಕರಃ |
ನೈವ ಸ್ವೇ ನ ಪರೇ ರಾಜನ್ ವ್ಯಜ್ಞಾಯಂತ ಪರಸ್ಪರಮ್ ॥ 37 ॥
ಅನುಮಾನೇನ ಸಂಜ್ಞಾಭಿರ್ಯುದ್ಧಂ ತತ್ ಸಮವರ್ತತ ॥ 38 ॥
ಭೂಮಿಯಾಗಲೀ, ಆಕಾಶವಾಗಲೀ, ದಿಕ್ಕುಗಳಾಗಲೀ, ಸೂರ್ಯನಾಗಲೀ ಕಾಣಿಸುತ್ತಿರಲಿಲ್ಲ. ತಮ್ಮವರಾಗಲೀ, ಶತ್ರುಗಳಾಗಲೀ ಪರಸ್ಪರವಾಗಿ ತಿಳಿದು ಬರುತ್ತಿರಲಿಲ್ಲ. ಊಹೆಗಳಿಂದ ಮತ್ತು ಸಂಜ್ಞೆಗಳಿಂದ ಯುದ್ಧವು ನಡೆಯಿತು.
ಚೂಡಾಮಣಿಷು ನಿಷ್ಕೇಷು ಭೂಷಣೇಷ್ವಸಿಚರ್ಮಸು |
ತೇಷಾಮಾದಿತ್ಯವರ್ಣಾಭಾ ಮರೀಚ್ಯಃ ಪ್ರಚಕಾಶಿರೇ ॥ 39 ॥
ಶಿರೋಭೂಷಣಗಳಲ್ಲಿ, ನಿಷ್ಕಗಳಲ್ಲಿ, ಉಳಿದ ಭೂಷಣಗಳಲ್ಲಿ, ಖಡ್ಗ ಚರ್ಮಗಳಲ್ಲಿ ಸೂರ್ಯವರ್ಣದ ಕಿರಣಗಳು ಮಾತ್ರ ಪ್ರಕಾಶಿಸಿದವು.
ತತ್ ಪ್ರಕೀರ್ಣಪತಾಕಾನಾಂ ರಥವಾಜಿನೃಹಸ್ತಿನಾಮ್ |
ಬಲಾಕಾಸದೃಶಾಭ್ರಂ ತದ್ ದದೃಶೇ ರೂಪಮಾಹವೇ ॥ 40 ॥
ಚೆಲ್ಲಾಡಿದ ಪತಾಕೆಗಳ ಮತ್ತು ರಥ-ಅಶ್ವ-ಪದಾತಿ-ಗಜಗಳ ಶರೀರಗಳಿಂದ ಕೂಡಿದ ರಣರಂಗದ ರೂಪವು ಬಲಾಕಪಕ್ಷಿಗಳಿಂದ ಕೂಡಿದ ಮೋಡಗಳಂತೆ ಕಂಡುಬಂದಿತು.
ನರಾನೇವ ನರಾ ಜಘ್ನುಃ ಜಘ್ನುರುಗ್ರಾ ಹಯಾ ಹಯಾನ್ |
ರಥಿನೋ ರಥಿನೋ ಜಘ್ನುರ್ವಾರಣಾ ವರವಾರಣಾನ್ ॥ 41 ॥
ಪದಾತಿಗಳನ್ನೇ ಪದಾತಿಗಳು ಕೊಂದರು. ಉಗ್ರವಾದ ಹಯಗಳು ಹಯಗಳನ್ನು ಕೊಂದವು. ರಥಿಕರು ರಥಿಕರನ್ನು, ಗಜಗಳು ಶ್ರೇಷ್ಠ ಗಜಗಳನ್ನು ಕೊಂದವು.
ಸಮುಚ್ಛ್ರಿತಪತಾಕಾನಾಂ ದ್ವಿಪಾನಾಂ ಪರಮದ್ವಿಪೈಃ |
ಕ್ಷಣೇನ ತುಮುಲೋ ಘೋರಃ ಸಂಗ್ರಾಮಃ ಸಮಜಾಯತ ॥ 42 ॥
ಪತಾಕೆಗಳನ್ನು ಎತ್ತಿಹಿಡಿದ ಗಜಗಳಿಗೆ ಪ್ರತಿಗಜಗಳ ಜೊತೆಯಲ್ಲಿ ಒಂದು ಕ್ಷಣದಲ್ಲಿ ತೀವ್ರವೂ, ಘೋರವೂ ಆದ ಯುದ್ಧವು ಉಂಟಾಯಿತು.
ತೇಷಾಂ ಸಂಸಕ್ತಗಾತ್ರಾಣಾಂ ಕರ್ಷತಾಮಿತರೇತರಮ್ |
ದಂತಸಂಘಾತಸಂಘರ್ಷಾತ್ ಸಧೂಮೋಽಗ್ನಿರಜಾಯತ ॥ 43 ॥
ಅವು ತಮ್ಮ ಶರೀರಗಳನ್ನು ಪರಸ್ಪರವಾಗಿ ಉಜ್ಜಿ, ಪರಸ್ಪರವಾಗಿ ಎಳೆಯುವಾಗ ಅವುಗಳ ದಂತಗಳ ಸಂಘರ್ಷದಿಂದ ಧೂಮಸಹಿತವಾದ ಅಗ್ನಿಯು ಉಂಟಾಯಿತು.
ವಿಪ್ರಕೀರ್ಣಪತಾಕಾಸ್ತೇ ವಿಷಾಣಜನಿತಾಗ್ನಯಃ |

ಬಭುರಾಕಾಶಮಾವಾರ್ಯ ಸವಿದ್ಯುತ ಇವಾಂಬುದಾಃ ॥ 44 ॥
ಪತಾಕೆಗಳು ಅಸ್ತವ್ಯಸ್ತವಾಗಿ ದಂತಗಳಿಂದ ಅಗ್ನಿಯನ್ನು ಸೃಷ್ಟಿಸುತ್ತಿದ್ದ ಆ ಗಜಗಳು ಆಕಾಶವನ್ನು ಆವರಿಸಿ ಮಿಂಚಿನಿಂದ ಕೂಡಿದ ಮೋಡಗಳಂತೆ ಶೋಭಿಸಿದವು.
ವಿಕ್ಷರದ್ಭಿರ್ನದದ್ಭಿಶ್ಚ ನಿಪತದ್ಭಿಶ್ಚ ವಾರಣೈಃ |
ಸಂಬಭೂವ ಮಹೀ ಕೀರ್ಣಾ ಮೇಘೈರ್ದ್ಯೌರಿವ ವಾರ್ಷಿಕೀ ॥ 45 ॥
ರಕ್ತವನ್ನು ಸುರಿಸುತ್ತಾ, ಗರ್ಜಿಸುತ್ತಾ ಬಿದ್ದ ಗಜಗಳಿಂದ ತುಂಬಿ ಹೋದ ಭೂಮಿಯು ಮಳೆಗಾಲದಲ್ಲಿ ಮೇಘಗಳಿಂದ ಆವೃತವಾದ ಆಕಾಶದಂತಾಯಿತು.
ತೇಷಾಮಾಹನ್ಯಮಾನಾನಾಂ ಬಾಣತೋಮರವೃಷ್ಟಿಭಿಃ |
ವಾರಣಾನಾಂ ರವೋ ಜಜ್ಞೇ ಮೇಘಾನಾಮಿವ ಸಂಪ್ಲವಃ ॥ 46 ॥
ಬಾಣ, ತೋಮರಗಳ ಮಳೆಯಿಂದ ಹೊಡೆಯಲ್ಪಡುವ ಆ ಗಜಗಳ ನಾದವು ಮೇಘಗಳ ಸಮೂಹದ ನಾದದಂತೆ ಇದ್ದಿತು.
ತೋಮರಾಭಿಹತಾಃ ಕೇಚಿದ್ ಬಾಣೈಶ್ಚ ಪರಮದ್ವಿಪಾಃ |
ವಿತ್ರಸ್ತಾಃ ಸರ್ವಶಬ್ದಾನಾಂ ಶಬ್ದಮೇವಾಪರೇಽಸೃಜನ್ ॥ 47 ॥
ತೋಮರಗಳಿಂದ ಹೊಡೆಯಲ್ಪಟ್ಟ ಕೆಲವು ಗಜಗಳು, ಬಾಣಗಳಿಂದ ಹೊಡೆಯಲ್ಪಟ್ಟ ಶ್ರೇಷ್ಠ ಗಜಗಳು ಮತ್ತು ಹೆದರಿದ ಕೆಲವು ಗಜಗಳು ಎಲ್ಲ ಶಬ್ದಗಳಿಂದಲೂ ಮಿಗಿಲಾದ ಗರ್ಜನೆಗಳನ್ನೇ ಮಾಡಿದವು.
ವಿಷಾಣಾಭಿಹತಾಃ ಕೇಚಿತ್ ಕೇಚಿತ್ ತತ್ರ ಗಜಾ ಗಜೈಃ |
ಚಕ್ರುರಾರ್ತಸ್ವರಂ ಘೋರಮುತ್ಪಾತಜಲದಾ ಇವ ॥ 48 ॥
ಪ್ರತಿಗಜಗಳ ದಂತದಿಂದ ಹೊಡೆಯಲ್ಪಟ್ಟ ಕೆಲವು ಗಜಗಳು ಉತ್ಪಾತಕಾಲದ ಮೋಡಗಳಂತೆ ಘೋರವಾದ ಆರ್ತಸ್ವರವನ್ನು ಮಾಡಿದವು.
ಪ್ರತೀಪಂ ಹ್ರಿಯಮಾಣಾಶ್ಚ ವಾರಣಾ ವರವಾರಣೈಃ |
ಉನ್ಮಥ್ಯ ಪುನರಾಜಹ್ರುಃ ಪ್ರೇಷಿತಾಃ ಪರಮಾಂಕುಶೈಃ ॥ 49 ॥
ಶ್ರೇಷ್ಠವಾದ ಗಜಗಳಿಂದ ಶತ್ರುಗಳ ಸಮೀಪಕ್ಕೆ ಎಳೆದೊಯ್ಯಲ್ಪಡುತ್ತಿದ್ದ ಗಜಗಳು ಶ್ರೇಷ್ಠವಾದ ಅಂಕುಶಗಳಿಂದ ಪ್ರೇರಿತವಾಗಿ ಪ್ರತಿಗಜಗಳನ್ನು ಮರ್ದಿಸಿ ಅವುಗಳನ್ನು ಹಿಂದಕ್ಕೆ ಎಳೆತಂದವು.
ಮಹಾಮಾತ್ರಾ ಮಹಾಮಾತ್ರೈಃ ತಾಡಿತಾಃ ಶರತೋಮರೈಃ |
ಗಜೇಭ್ಯಃ ಪೃಥಿವೀಂ ಜಗ್ಮುಃ ಮುಕ್ತಪ್ರಹರಣಾಂಕುಶಾಃ ॥ 50 ॥
ಗಜಾರೋಹಿಗಳು ಗಜಾರೋಹಿಗಳಿಂದ, ಶರ-ತೋಮರಗಳಿಂದ ಹೊಡೆಯಲ್ಪಟ್ಟು ಆಯುಧ ಮತ್ತು ಅಂಕುಶಗಳನ್ನು ತ್ಯಜಿಸಿ, ಗಜಗಳಿಂದ ಭೂಮಿಯ ಮೇಲೆ ಬಿದ್ದರು.
ನಿರ್ಮನುಷ್ಯಾಶ್ಚ ಮಾತಂಗಾ ವಿನದಂತಸ್ತತಸ್ತತಃ |
ಛಿನ್ನಾಭ್ರಾಣೀವ ಸಂಪೇತುಃ ಸಂಪ್ರಮಥ್ಯ ಪರಸ್ಪರಮ್ ॥ 51 ॥
ಗಜಾರೋಹಿಗಳಿಂದ ರಹಿತವಾದ ಗಜಗಳು ಅಲ್ಲಲ್ಲಿ ನಾದವನ್ನು ಮಾಡುತ್ತಾ, ಪರಸ್ಪರವಾಗಿ ಮರ್ದಿಸಿ, ಕತ್ತರಿಸಲ್ಪಟ್ಟ ಮೋಡಗಳಂತೆ ಬಿದ್ದವು.
ಹತಾಃ ಪರಿಪತಂತಿ ಸ್ಮ ಯಂತ್ರಿತಾಃ ಪತಿತಾ ಭುವಿ |
ದಿಶೋ ಜಗ್ಮುರ್ಮಹಾನಾಗಾ ವಾಯುನಾ ಖಚರಾ ಇವ ॥ 52 ॥
ಮೃತವಾಗಿ ಕೆಲವು ಗಜಗಳು ಬಿದ್ದವು. ಯಂತ್ರವನ್ನು ಹೊಂದಿದ ಕೆಲವು ಗಜಗಳು ಬಿದ್ದವು. ವಾಯುವೇಗಕ್ಕೆ ಮೋಡಗಳು ಹೋದಂತೆ ಕೆಲವು ದೊಡ್ಡ ಗಜಗಳು ದಿಕ್ಕು- ದಿಕ್ಕುಗಳಿಗೆ ಓಡಿದವು.
ತಾಡಿತಾಸ್ತಾಡ್ಯಮಾನಾಶ್ಚ ತೋಮರರ್ಷ್ಟಿಪರಶ್ವಧೈಃ |
ಪೇತುರಾರ್ತಸ್ವನಂ ಕೃತ್ವಾ ತದಾ ವಿಶಸನೇ ಗಜಾಃ ॥ 53 ॥
ಆಗ ರಣರಂಗದಲ್ಲಿ ತೋಮರ-ಋಷ್ಟಿ-ಪರಶ್ವಧಗಳಿಂದ ಹೊಡೆಯಲ್ಪಟ್ಟ ಮತ್ತು ಹೊಡೆಯಲ್ಪಡುತಿತರುವ ಗಜಗಳು ಆರ್ತಧ್ವನಿಯನ್ನು ಮಾಡಿ ಬಿದ್ದವು.
ತೇಷಾಂ ಶೈಲೋಪಮೈಃ ಕಾಯೈರ್ನಿಪತದ್ಭಿಃ ಸಮಂತತಃ |
ಆಹತಾ ಸಹಸಾ ಭೂಮಿಃ ಚಕಂಪೇ ಚ ನನಾದ ಚ ॥ 54 ॥
ಕೆಳಗೆ ಬೀಳುವ ಪರ್ವತಪ್ರಾಯವಾದ ಅವುಗಳ ಶರೀರಗಳಿಂದ ಎಲ್ಲ ಕಡೆಯಲ್ಲಿಯೂ ಹೊಡೆಯಲ್ಪಟ್ಟ ಭೂಮಿಯು ತಕ್ಷಣ ನಡುಗಿ ಗುಡುಗಿತು.
ಸಾದಿತೈಃ ಸಗಜಾರೋಹೈಃ ಸಪತಾಕೈಃ ಸತೋಮರೈಃ |
ತೈರ್ಗಜೈಃ ಶುಶುಭೇ ಭೂಮಿರ್ವಿಕೀರ್ಣೈರಿವ ಪರ್ವತೈಃ ॥ 55 ॥
ಗಜಾರೋಹಿಗಳಿಂದ ಕೂಡಿ, ಪತಾಕೆ ಮತ್ತು ತೋಮರಗಳಿಂದ ಕೂಡಿ ಮೃತವಾಗಿ ಬಿದ್ದ ಆ ಗಜಗಳಿಂದ ಭೂಮಿಯು ಚೆಲ್ಲಾಡಿದ ಪರ್ವತಗಳಿಂದ ಕೂಡಿದ ಭೂಮಿಯಂತೆ ಕಂಗೊಳಿಸಿತು.
ಗಜೈರ್ಗಾತ್ರವರೈಃ ಕ್ಷುಣ್ಣಾ ವಿಷಾಣೈಶ್ಚ ನಿಪಾತಿತಾಃ |
ಗಜಾ ನಿಪತಿತಾರೋಹಾ ವಿಕೀರ್ಣಾಂಕುಶತೋಮರಾಃ ॥ 56 ॥
ಗಜಗಳ ಶ್ರೇಷ್ಠ ಶರೀರಗಳಿಂದ ಪುಡಿಮಾಡಲ್ಪಟ್ಟ, ದಂತಗಳಿಂದ ಕೆಡವಲ್ಪಟ್ಟ ಪ್ರತಿಗಜಗಳು ಗಜಾರೋಹಿಗಳು ಕೆಳಗೆ ಬಿದ್ದು, ಅಂಕುಶ, ಧ್ವಜ ತೋಮರಗಳೂ ಚೆಲ್ಲಾಡಿ ಅವೂ ಭೂಮಿಯ ಮೇಲೆ ಬಿದ್ದವು.

ಗಜಸ್ಥಾಶ್ಚ ಮಹಾಮಾತ್ರಾ ನಿರ್ಭಿನ್ನಹೃದಯಾ್ರಣೇ |
ರಥಿಭಿಃ ಪತಿತಾ ಭಲ್ಲೈಃ ವಿಕೀರ್ಣಾಂಕುಶತೋಮರೈಃ ॥ 57 ॥
ಗಜಗಳನ್ನು ಏರಿದ ಮಹಾಮಾತ್ರರು ರಥಿಕರಿಂದ ಭಲ್ಲಗಳಿಂದ ಹೊಡೆಯಲ್ಪಟ್ಟು ರಣರಂಗದಲ್ಲಿ ನಿರ್ಭಿನ್ನ ಹೃದಯರಾಗಿ ಅಂಕುಶ, ತೋಮರಗಳನ್ನು ತ್ಯಜಿಸಿ ನೆಲದ ಮೇಲೆ ಬಿದ್ದರು.
ಕ್ರೌಂಚವನ್ನಿನದಂತೋಽನ್ಯೇ ನಾರಾಚಾಭಿಹತಾ ಗಜಾಃ |
ಪರಾನ್ ಸ್ವಾಂಶ್ಚಾಪಿ ಮೃದ್ನಂತಃ ಪರಿಪೇತುರ್ದಿಶೋ ದಶ ॥ 58 ॥
ನಾರಾಚಗಳಿಂದ ಹೊಡೆಯಲ್ಪಟ್ಟ ಕೆಲವು ಗಜಗಳು ಕ್ರೌಂಚಪಕ್ಷಿಯಂತೆ ನಾದವನ್ನು ಮಾಡುತ್ತಾ, ತಮ್ಮವರನ್ನೂ ಮತ್ತು ಶತ್ರುಗಳನ್ನೂ ಮರ್ದಿಸುತ್ತಾ, ಹತ್ತು ದಿಕ್ಕುಗಳಲ್ಲಿಯೂ ಓಡಿಹೋದವು.
ಗಜಾಶ್ವರಥಸಂಘಾನಾಂ ಶರೀರೌಘೈಃ ಸಮಾವೃತಾ |
ಬಭೂವ ಪೃಥಿವೀ ರಾಜನ್ ಮಾಂಸಶೋಣಿತಕರ್ದಮಾ ॥ 59 ॥
ರಾಜನೇ, ಗಜಾಶ್ವ-ರಥ ಸಮೂಹಗಳ ಶರೀರಗಳಿಂದ ಆವೃತವಾದ ಭೂಮಿಯು ಮಾಂಸ-ರಕ್ತಗಳ ಕೆಸರುಳ್ಳದ್ದಾಯಿತು.
ಪ್ರಮಥ್ಯ ಚ ವಿಷಾಣಾಗ್ರೈಃ ಸಮುತ್ಕ್ಷಿಪ್ಯ ಚ ವಾರಣೈಃ |
ಸಚಕ್ರಾಶ್ಚ ವಿಚಕ್ರಾಶ್ಚ ರಥೈರೇವ ರಥಾ ಹತಾಃ ॥ 60 ॥
ಗಜಗಳು ತಮ್ಮ ದಂತದ ತುದಿಗಳಿಂದ ಮರ್ದಿಸಿ, ಚಕ್ರಸಹಿತವಾದ ಮತ್ತು ಚಕ್ರರಹಿತವಾದ ರಥಗಳನ್ನು ಎತ್ತಿ ಅವುಗಳಿಂದ ರಥಗಳನ್ನೇ ಹೊಡೆದವು.
ರಥಾಶ್ಚ ರಥಿಭಿರ್ಹೀನಾ ನಿರ್ಮನುಷ್ಯಾಶ್ಚ ವಾಜಿನಃ |
ಹತಾರೋಹಾಶ್ಚ ಮಾತಂಗಾ ದಿಶೋ ಜಗ್ಮುಃ ಶರಾತುರಾಃ ॥ 61 ॥
ರಥಿಕರಿಂದ ಹೀನವಾದ ರಥಗಳೂ, ಅಶ್ವಾರೋಹಿಗಳಿಂದ ರಹಿತವಾದ ಅಶ್ವಗಳೂ, ಗಜಾರೋಹಿಗಳಿಂದ ರಹಿತವಾದ ಗಜಗಳೂ ಬಾಣದ ವೇದನೆಯಿಂದ ದಿಕ್ಕು- ದಿಕ್ಕುಗಳಿಗೆ ಓಡಿಹೋದವು.
ಜಘಾನ ಪಿತರಂ ಪುತ್ರಃ ಪಿತಾ ಪುತ್ರಮತಾಡಯತ್ |
ಇತ್ಯಾಸೀತ್ ತುಮುಲಂ ಯುದ್ಧಂ ನ ಪ್ರಾಜ್ಞಾಯತ ಕಿಂಚನ ॥ 62 ॥
ಪುತ್ರನು ತಂದೆಯನ್ನು ಹೊಡೆದನು, ತಂದೆಯು ಪುತ್ರನನ್ನು ಹೊಡೆದನು. ಹೀಗೆ ತೀವ್ರವಾದ ಯುದ್ಧವು ನಡೆಯಿತು. ಯಾವುದೂ ತಿಳಿಯಲಿಲ್ಲ.
ಆಗುಲ್ಫೇಭ್ಯಶ್ಚ ಸೀದಂತಿ ನರಾ ಲೋಹಿತಕರ್ದಮೇ |
ದೀಪ್ಯಮಾನೈಃ ಪರಿಕ್ಷಿಪ್ತಾ ದಾವೈರಿವ ಮಹಾದ್ರುಮಾಃ ॥ 63 ॥
ಮಾಂಸದ ಕೆಸರುಳ್ಳ ರಣಭೂಮಿಯಲ್ಲಿ ಯೋಧರು ಪಾದದ ಮಣಿಗಂಟಿನವರೆಗೂ ಒದ್ದೆಯಾಗುತಿತದ್ದರು. ರಣರಂಗವು ದಾವಾಗ್ನಿಯಿಂದ ಸುಟ್ಟು ಚೆಲ್ಲಾಡಲ್ಪಟ್ಟ ಮಹಾವೃಕ್ಷಗಳಂತೆ ಇದ್ದಿತು.
ಶೋಣಿತೈಃ ಸಿಚ್ಯಮಾನಾನಿ ಶಸತ್ರಣಿ ಕವಚಾನಿ ಚ |
ಛತ್ರಾಣಿ ಚ ಪತಾಕಾಶ್ಚ ಸರ್ವಂ ರಕ್ತಮದೃಶ್ಯತ ॥ 64 ॥
ರಕ್ತದಿಂದ ಚುಮುಕಿಸಲ್ಪಟ್ಟ ಶಸ್ತ್ರಗಳು, ಕವಚಗಳು, ಛತ್ರಗಳು ಮತ್ತು ಪತಾಕೆಗಳೆಲ್ಲವೂ ಕೆಂಪುಬಣ್ಣದಿಂದ ಕೂಡಿದುದಾಗಿದ್ದವು.
ಹಯೌಘಾಶ್ಚ ರಥೌಘಾಶ್ಚ ಗಜೌಘಾಶ್ಚ ನಿಪಾತಿತಾಃ |
ನಿಕೃತ್ತಾಃ ಪುನರುತ್ಪತ್ಯ ತುರಗಾ ರಥನೇಮಿಭಿಃ ॥ 65 ॥
ಅಶ್ವಸಮೂಹಗಳು, ರಥಸಮೂಹಗಳು, ಗಜಸಮೂಹಗಳು ಶರ-ತೋಮರಗಳ ಏಟನ್ನು ತಿಂದು ಕತ್ತರಿಸಲ್ಪಟ್ಟವು. ಅಂತಹ ಅಶ್ವಗಳು ಎದ್ದು ಪುನಃ ರಥಚಕ್ರಗಳಿಂದ ಕತ್ತರಿಸಲ್ಪಟ್ಟವು.
ಸ ಗಜೌಘಮಹಾವೇಗಃ ಪರಾಸುನರಶೈವಲಃ |
ರಥೌಘತುರಗಾವರ್ತಃ ಪ್ರಬಭೌ ಸೈನ್ಯಸಾಗರಃ ॥ 66 ॥
ಗಜಸಮೂಹಗಳ ಮಹಾವೇಗವುಳ್ಳ, ಮೃತರಾದ ಯೋಧರೆಂಬ ಶೈವಲ (ಹಾವಸೆಪಾಚಿ) ಉಳ್ಳ, ರಥಸಮೂಹ ಮತ್ತು ಅಶ್ವಗಳೆಂಬ ಸುಳಿಗಳನ್ನುಳ್ಳ ಸೈನ್ಯಸಾಗರವು ಶೋಭಿಸಿತು.
ಶರವರ್ಷಾಭಿವೃಷ್ಟೇಷು ಯೋಧೇಷ್ವಾಹವಲಕ್ಷ ್ಮಸು |
ನ ತೇಷ್ವಾಚಿತತಾಂ ಲೇಭೇ ಕಶ್ಚಿದಾಹವಲಕ್ಷಣಃ ॥ 67 ॥
ಯುದ್ಧೋಚಿತಗಳಾದ ಚಿಹ್ನೆಗಳನ್ನು ಧರಿಸಿರುವ ರಣರಂಗದಲ್ಲಿ ಬಾಣಗಳ ಮಳೆಯಿಂದ ಯೋಧರು ತಾಡಿತರಾಗುತ್ತಿರಲು ಎಲ್ಲವನ್ನೂ ಗಮನಿಸುವ ವಿವೇಕಿಯಾದ ಒಬ್ಬ ಯೋಧನು (ದ್ರೋಣನು) ಬಾಣಗಳ ಸ್ಪರ್ಶಕ್ಕೆ ಗುರಿಯಾಗಲಿಲ್ಲ.
ವರ್ತಮಾನೇ ಮಹಾಯುದ್ಧೇ ಘೋರರೂಪೇ ಭಯಾನಕೇ |
ಮೋಹಯಿತ್ವಾ ಪರಾನ್ ದ್ರೋಣೋ ಯುಧಿಷ್ಠಿರಮಭಿದ್ರುವತ್ ॥68॥
ಅಂತಹ ಘೋರವೂ ಮತ್ತು ಭಯಂಕರವೂ ಆದ ಮಹಾಯುದ್ಧವು ನಡೆಯುತ್ತಿರಲು ದ್ರೋಣರು ಶತ್ರುಗಳನ್ನು ಮೋಹಗೊಳಿಸಿ ಯುಧಿಷ್ಠಿರನ ಕಡೆಗೆ ಮುನ್ನುಗ್ಗಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ಇಪ್ಪತ್ತನೆಯ ಅಧ್ಯಾಯ

ಯುಧಿಷ್ಠಿರನನ್ನು ಹಿಡಿಯಲು ಬಯಸಿದ ದ್ರೋಣರಿಗೆ

ಸತ್ಯಜಿತನಿಂದ ವಿರೋಧ. ಯುಧಿಷ್ಠಿರನ ಅಪಯಾನ.

ದ್ರೋಣರಿಂದ ಪಾಂಚಾಲಯೋಧರ ವಧೆ.

ಸಂಜಯಃ

ತತೋ ಯುಧಿಷ್ಠಿರೋ ದ್ರೋಣಂ ದೃಷ್ಟ್ವಾಽಂತಿಕಮುಪಾಗತಮ್ |
ಮಹತಾ ಶರವರ್ಷೇಣ ಪ್ರತ್ಯಗೃಹ್ಣಾದಭೀತವತ್ ॥ 1 ॥

ಸಂಜಯ ಆಗ ಯುಧಿಷ್ಠಿರನು ಸಮೀಪಕ್ಕೆ ಬಂದ ದ್ರೋಣರನ್ನು ನೋಡಿ ನಿರ್ಭೀತನಾಗಿ ದೊಡ್ಡ ಬಾಣಗಳ ಮಳೆಯಿಂದ ಅವರನ್ನು ಸ್ವೀಕರಿಸಿದನು.

ತತೋ ಹಲಹಲಾಶಬ್ದ ಆಸೀದ್ ಯೌಧಿಷ್ಠಿರೇ ಬಲೇ |
ಜಿಘೃಕ್ಷತಿ ಮಹಾಸಿಂಹೇ ಗಜಾನಾಮಿವ ಯೂಥಪಮ್ ॥ 2 ॥

ಆನೆಗಳ ಸಲಗದಂತಿದ್ದ ಯುಧಿಷ್ಠಿರನನ್ನು ಮಹಾಸಿಂಹದಂತಹ ದ್ರೋಣರು ಹಿಡಿಯಲು ಬಯಸಿದಾಗ ಯುಧಿಷ್ಠಿರನ ಸೈನ್ಯದಲ್ಲಿ ದೊಡ್ಡ ಕೋಲಾಹಲ ಶಬ್ದವುಂಟಾಯಿತು.

ದೃಷ್ಟ್ವಾ ದ್ರೋಣಂ ತಥಾ ವೀರಃ ಸತ್ಯಜಿತ್ ಸತ್ಯವಿಕ್ರಮಃ |
ಯುಧಿಷ್ಠಿರಂ ಪರಿಪ್ರೇಪ್ಸುರಾಚಾರ್ಯಂ ಸಮುಪಾದ್ರವತ್ ॥ 3 ॥
ತತ ಆಚಾರ್ಯಪಾಂಚಾಲೌ ಯುಯುಧಾತೇ ಪರಸ್ಪರಮ್ |
ವಿಕ್ಷೋಭಯಂತೌ ತೌ ಸೇನೇ ಇಂದ್ರವೈರೋಚನಾವಿವ ॥ 4 ॥

ವೀರನೂ, ಸತ್ಯವಿಕ್ರಮನೂ ಆದ ಸತ್ಯಜಿತನು ದ್ರೋಣರನ್ನು ಆ ರೀತಿಯಲ್ಲಿ ನೋಡಿ, ಯುಧಿಷ್ಠಿರನನ್ನು ರಕ್ಷಿಸಲು ಬಯಸಿ ದ್ರೋಣರ ಮೇಲೆ ಎರಗಿದನು. ಆಗ ಪಾಂಚಾಲನಾದ ಸತ್ಯಜಿತನು ಮತ್ತು ದ್ರೋಣಾಚಾರ್ಯರು ಇಂದ್ರ-ಬಲಿಗಳಂತೆ ಶತ್ರುಸೈನ್ಯವನ್ನು ಕ್ಷೋಭೆಗೊಳಿಸುತ್ತಾ ಯುದ್ಧವನ್ನು ಮಾಡಿದರು.

ತತಃ ಸ ಸತ್ಯಜಿತ್ ತೀಕ್ಷ್ಣೈಃ ದಶಭಿರ್ಮರ್ಮಭೇದಿಭಿಃ |
ಅವಿಧ್ಯಚ್ಛೀಘ್ರಮಾಚಾರ್ಯಂ ಛಿತ್ತ್ವಾಽಸ್ಯ ಸಶರಂ ಧನುಃ ॥ 5 ॥
ತತೋ ದ್ರೋಣಂ ಮಹೇಷ್ವಾಸೋ ಪರಮಾಸ್ತ್ರಂ ವಿದರ್ಶಯನ್ |
ತಥಾಸ್ಯ ಸಾರಥೇಃ ಪಂಚಶರಾನ್ ಸರ್ಪವಿಷೋಪಮಾನ್ |
ಅಮುಂಚದಂತಕಪ್ರಖ್ಯಾನ್ ಸಮ್ಮುಮೋಹಾಸ್ಯ ಸಾರಥಿಃ ॥ 6 ॥

ಆಗ ಸತ್ಯಜಿತನು ಮರ್ಮಭೇದಿಗಳಾದ ತೀಕ್ಷ್ಣವಾದ ಹತ್ತುಬಾಣಗಳಿಂದ ದ್ರೋಣರನ್ನು ಹೊಡೆದು, ಶೀಘ್ರವಾಗಿ ಅವರ ಧನುಸ್ಸು ಮತ್ತು ಬಾಣಗಳನ್ನು ಕತ್ತರಿಸಿದನು. ಅನಂತರ ತನ್ನ ಮಹಾಸ್ತ್ರಗಳನ್ನು ದ್ರೋಣರಿಗೆ ತೋರಿಸುವವನಾಗಿ ಅವನು ದ್ರೋಣರ ಸಾರಥಿಯ ಮೇಲೆ ಸರ್ಪವಿಷದಂತಿದ್ದ, ಯಮನಂತಿದ್ದ ಐದು ಬಾಣಗಳನ್ನು ಪ್ರಯೋಗಿಸಿದನು. ಆಗ ಸಾರಥಿಯು ಮೂರ್ಛೆ ಹೋದನು.

ಅಥಾಸ್ಯ ತರಸಾಽವಿಧ್ಯತ್ ಧ್ವಯಾನ್ ದಶಭಿರಾಶುಗೈಃ |
ದಶಭಿಃ ದಶಭಿಃ ಕ್ರುದ್ಧ ಉಭೌ ತೌ ಪಾರ್ಷ್ಣಿಸಾರಥೀ ॥ 7 ॥

ಅನಂತರ ಕೋಪಗೊಂಡ ಅವನು ದ್ರೋಣರ ಇಬ್ಬರು ಪಕ್ಷಸಾರಥಿಗಳನ್ನು ವೇಗಶಾಲಿಗಳಾದ ಹತುತ-ಹತ್ತು ಬಾಣಗಳಿಂದ ಹೊಡೆದನು.

ಮಂಡಲಂ ತು ಸಮಾವೃತ್ಯ ವಿಚರನ್ ಪೃತನಾಮುಖೇ |
ಧ್ವಜಂ ಚಿಚ್ಛೇದ ಸಂಕ್ರುದ್ಧೋ ದ್ರೋಣಸ್ಯಾಮಿತ್ರಕರ್ಶನಃ ॥ 8 ॥

ಸೈನ್ಯಮುಖದಲ್ಲಿ ಮಂಡಲಮಾರ್ಗಗಳಲ್ಲಿ ತಿರುಗುತ್ತಾ, ಶತ್ರುಕರ್ಶನನಾದ ಅವನು ಕ್ರುದ್ಧನಾಗಿ ದ್ರೋಣರ ಧ್ವಜವನ್ನು ಕತ್ತರಿಸಿದನು.

ದ್ರೋಣಶ್ಚ ತತ್ ಸಮಾಲೋಕ್ಯ ಚರಿತಂ ತಸ್ಯ ಸಂಯುಗೇ |
ಮನಸಾ ಚಿಂತಯಾಮಾಸ ಪ್ರಾಪ್ತಕಾಲಮರಿಂದಮಃ ॥ 9 ॥

ದ್ರೋಣರು ಯುದ್ಧದಲ್ಲಿ ಅವನ ಚರಿತೆಯನ್ನು ನೋಡಿ, ಅರಿಂದಮರಾದ ಅವರು ಆ ಕಾಲದಲ್ಲಿ ಮಾಡಬೇಕಾದ ಯೋಗ್ಯವಾದ ಕಾರ್ಯವನ್ನು ಮನಸ್ಸಿನಲ್ಲಿ ಚಿಂತಿಸಿದರು.

ಆಚಾರ್ಯಸ್ತಸ್ಯ ವೈ ಚಾಪಂ ಚಿಚ್ಛೇದ ತ್ರಿಭಿರಾಶುಗೈಃ ॥ 10 ॥|
ಸ ಶೀಘ್ರತರಮಾದಾಯ ಧನುರನ್ಯತ್ ಪ್ರತಾಪವಾನ್ |
ದ್ರೋಣಮಭ್ಯಹನದ್ ಭಲ್ಲೈಃ ತ್ರಿಂಶದ್ಭಿರ್ಕಂಕಪತ್ರಿಭಿಃ ॥ 11 ॥

ಆಚಾರ್ಯರು ಅವನ ಧನುಸ್ಸನ್ನು ವೇಗಶಾಲಿಗಳಾದ ಮೂರು ಬಾಣಗಳಿಂದ ಕತ್ತರಿಸಿದರು. ಪ್ರತಾಪಶಾಲಿಯಾದ ಅವನು ಬಹಳ ಶೀಘ್ರವಾಗಿ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು, ಕಂಕಪತ್ರಗಳನ್ನು ಹೊಂದಿದ್ದ ಮೂವತ್ತು ಭಲ್ಲಗಳಿಂದ ದ್ರೋಣರನ್ನು ಹೊಡೆದನು.

ಜ್ಞಾತ್ವಾ ಸತ್ಯಜಿತಂ ದ್ರೋಣಂ ಗ್ರಸಮಾನಮಿವಾಹವೇ |
ವೃಕಃ ಶರಶತೈಸ್ತೀಕ್ಷ್ಣೈಃ ಪಾಂಚಾಲ್ಯೋ ದ್ರೋಣಮಾರ್ದಯತ್ ॥ 12 ॥

ದ್ರೋಣರು ಯುದ್ಧದಲ್ಲಿ ಸತ್ಯಜಿತನನ್ನು ನುಂಗುತ್ತಿರುವಂತೆ ಇರುವುದನ್ನು ನೋಡಿ ಪಾಂಚಾಲ ದೇಶದ ವೃಕನು ತೀಕ್ಷ್ಣವಾದ ನೂರು ಬಾಣಗಳಿಂದ ದ್ರೋಣರನ್ನು ಪೀಡಿಸಿದನು.

ಸಂಭಾದ್ಯಮಾನಂ ಸಮರೇ ದ್ರೋಣಂ ದೃಷ್ಟ್ವಾ ಮಹಾರಥಮ್ |
ಚುಕ್ರುಶುಃ ಪಾಂಡವಾ ರಾಜನ್ ವಸಾಂಸಿ ದುಧುವುಶ್ಚ ಹ ॥ 13 ॥
ಮಹಾರಥರಾದ ದ್ರೋಣರು ಯುದ್ಧದಲ್ಲಿ ಬಾಣಗಳಿಂದ ಮುಚ್ಚಲ್ಪಡುವುದನ್ನು ನೋಡಿ ಪಾಂಡವರು ಪರಸ್ಪರ ಆಹ್ವಾನವನ್ನು ಮಾಡಿ ತಮ್ಮ ಉತ್ತರೀಯವನ್ನು ಹಾರಿಸಿದರು.
ವೃಕಸ್ತು ಪರಮಕ್ರುದ್ಧೋ ದ್ರೋಣಂ ಷಷ್ಟ್ಯಾ ಸ್ತನಾಂತರೇ |
ವಿವ್ಯಾಧ ಬಲವದ್ ರಾಜಂಸ್ತದದ್ಭುತಮಿವಾಭವತ್ ॥ 14 ॥
ರಾಜನೇ, ಬಹಳ ಕೋಪಗೊಂಡ ವೃಕನಾದರೋ ದ್ರೋಣರನ್ನು ಅರವತ್ತು ಬಾಣಗಳಿಂದ ಅವರ ಸ್ತನಗಳ ಮಧ್ಯದಲ್ಲಿ ಬಲವಾಗಿ ಹೊಡೆದನು. ಅದು ಅದ್ಭುತವಾಗಿದ್ದಿತು.
ದ್ರೋಣಸ್ತು ಶರವರ್ಷೇಣ ಚ್ಛಾದ್ಯಮಾನೋ ಮಹಾರಥಃ |
ವೇಗಂ ಚಕ್ರೇ ಮಹಾವೇಗಃ ಕ್ರೋಧಾದುದ್ವೃತ್ಯ ಚಕ್ಷುಷೀ ॥ 15 ॥
ಮಹಾವೇಗವುಳ್ಳ, ಮಹಾರಥರಾದ ದ್ರೋಣರು ಬಾಣಗಳ ಮಳೆಯಿಂದ ಮುಚ್ಚಲ್ಪಡುತ್ತಾ, ಕೋಪದಿಂದ ತಮ್ಮ ಕಣ್ಣುಗಳನ್ನು ಅರಳಿಸಿ ತಮ್ಮ ವೇಗವನ್ನು ಹೆಚ್ಚಿಸಿದರು.
ತತಃ ಸತ್ಯಜಿತಶ್ಚಾಪಂ ಛಿತ್ತ್ವಾ ದ್ರೋಣೋ ವೃಕಸ್ಯ ಚ |
ಷಡ್ಭಿಃ ಸಸೂತಂ ಸಹಯಂ ಶರೈರ್ದ್ರೋಣೋಽವಧೀದ್ ವೃಕಮ್ ॥16॥
ಆಗ ದ್ರೋಣರು ಸತ್ಯಜಿತ ಮತ್ತು ವೃಕನ ಧನುಸ್ಸುಗಳನ್ನು ಕತ್ತರಿಸಿ, ಆರು ಬಾಣಗಳಿಂದ ಸತ್ಯಜಿತನ ಅಶ್ವಗಳನ್ನು ಮತ್ತು ಸೂತನನ್ನು ಕೊಂದು, ವೃಕನನ್ನು ಕೊಂದರು.
ಅಥಾನ್ಯದ್ ಧನುರಾದಾಯ ಸತ್ಯಜಿದ್ ವೇಗವತ್ತರಮ್ |
ಸಾಶ್ವಂ ಸಸೂತಂ ವಿಶಿಖೈರ್ದ್ರೋಣಂ ವಿವ್ಯಾಧ ಸಧ್ವಜಮ್ ॥ 17 ॥
ಅನಂತರ ಸತ್ಯಜಿತನು ಬಹಳ ವೇಗವುಳ್ಳ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅಶ್ವ-ಸೂತ-ಧ್ವಜಗಳಿಂದ ಸಹಿತರಾದ ದ್ರೋಣರನ್ನು ಬಾಣಗಳಿಂದ ಹೊಡೆದನು.
ಸ ತನ್ನ ಮಮೃಷೇ ದ್ರೋಣಃ ಪಾಂಚಾಲ್ಯೇನಾರ್ದನಂ ರಣೇ |
ತತಸ್ತಸ್ಯ ವಿನಾಶಾಯ ಸತ್ವರಂ ವ್ಯಸೃಜಚ್ಛರಾನ್ ॥ 18 ॥
ದ್ರೋಣರು ಪಾಂಚಾಲರಿಂದ ತಾವು ಹೀಗೆ ಅರ್ದಿಸಲ್ಪಡುವುದನ್ನು ರಣರಂಗದಲ್ಲಿ ಸಹಿಸಲಿಲ್ಲ. ಆದ್ದರಿಂದ ಅವರು ಅವನ ವಿನಾಶಕ್ಕಾಗಿ ತ್ವರೆಯಿಂದ ಬಾಣಗಳನ್ನು ಪ್ರಯೋಗಿಸಿದರು.
ಹಯಾನ್ ಧ್ವಜಂ ಧನುರ್ಮುಷ್ಟಿಮುಭೌ ಚ ಪಾರ್ಷ್ಣಿಸಾರಥೀ |
ಅವಾಕಿರತ್ ತತೋ ದ್ರೋಣಃ ಶರೈಃ ಶತಸಹಸ್ರಶಃ ॥ 19 ॥
ದ್ರೋಣರು ಸಹಸ್ರಾರು ಬಾಣಗಳನ್ನು ಅವನ ಅಶ್ವಗಳ ಮೇಲೆಯೂ, ಧ್ವಜ- ಧನುಸ್ಸಿನ ಹಿಡಿಯ ಮೇಲೆಯೂ ಮತ್ತು ಪಕ್ಷ-ಸಾರಥಿಗಳ ಮೇಲೆಯೂ ಸುರಿಸಿದರು.
ತಥಾ ಸಂಛಿದ್ಯಮಾನೇಷು ಕಾರ್ಮುಕೇಷು ಪುನಃಪುನಃ |
ಪಾಂಚಾಲ್ಯಃ ಪರಮಾಸ್ತ್ರಜ್ಞಃ ಶೋಣಾಶ್ವಂ ಸಮಯೋಧಯತ್ ॥ 20 ॥
ತನ್ನ ಧನುಸ್ಸುಗಳು ಪುನಃ ಪುನಃ ಕತ್ತರಿಸಲ್ಪಡುತ್ತಿರಲು ಪರಮಾಸ್ತ್ರಜ್ಞನಾದ, ಪಾಂಚಾಲ್ಯನಾದ ಸತ್ಯಜಿತನು ಶೋಣಾಶ್ವರಾದ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸ ಸತ್ಯಜಿತಮಾಲೋಕ್ಯ ತತೋಽದೀರ್ಣಂ ಮಹಾಹವೇ |
ಅರ್ಧಚಂದ್ರೇಣ ಚಿಚ್ಛೇದ ಶಿರಸ್ತಸ್ಯ ಮಹಾತ್ಮನಃ ॥ 21 ॥
ದ್ರೋಣರು ಸತ್ಯಜಿತನು ದೊಡ್ಡ ರಣದಲ್ಲಿ ಗಾಯಗೊಳ್ಳದೆ ಇರುವುದನ್ನು ನೋಡಿ ಅರ್ಧಚಂದ್ರದಿಂದ ಆ ಮಹಾತ್ಮನ ಶಿರಸ್ಸನ್ನು ಕತ್ತರಿಸಿದರು.
ತಸ್ಮಿನ್ ಹತೇ ಮಹಾಮಾತ್ರೇ ಪಾಂಚಾಲಾನಾಂ ರಥರ್ಷಭೇ |
ಅಪಾಯಾಜ್ಜವನೈರಶ್ವೈರ್ದ್ರೋಣಾದ್ ಭೀತೋ ಯುಧಿಷ್ಠಿರಃ ॥ 22 ॥
ಪಾಂಚಾಲರಲ್ಲಿ ಪ್ರಧಾನನೂ, ರಥಶ್ರೇಷ್ಠನೂ ಆದ ಅವನು ವಧೆ ಮಾಡಲ್ಪಡುತ್ತಿರಲು ದ್ರೋಣರಿಗೆ ಹೆದರಿದ ಯುಧಿಷ್ಠಿರನು ವೇಗಶಾಲಿಗಳಾದ ಅಶ್ವಗಳಿಂದ ಅವರಿಂದ ದೂರ ಹೋದನು.
ಪಾಂಚಾಲಾಃ ಕೇಕಯಾ ಮತ್ಸ್ಯಾಃ ಚೇದಿಕಾರೂಷಕೋಸಲಾಃ |
ಯುಧಿಷ್ಠಿರಮಭೀಪ್ಸಂತೋ ದೃಷ್ಟ್ವಾ ದ್ರೋಣಮುಪಾದ್ರವನ್ ॥ 23 ॥
ಪಾಂಚಾಲರೂ, ಕೇಕಯರೂ, ಮತ್ಸ್ಯರೂ, ಚೇದಿಗಳೂ, ಕಾರೂಷರೂ ಮತ್ತು ಕೋಸಲರೂ ಯುಧಿಷ್ಠಿರನನ್ನು ರಕ್ಷಿಸಲು ಬಯಸುತ್ತಾ, ದ್ರೋಣರನ್ನು ನೋಡಿ ಅವರ ಕಡೆಗೆ ನುಗ್ಗಿದರು.
ತತೋ ಯುಧಿಷ್ಠಿರಂ ಪ್ರೇಪ್ಸುರಾಚಾರ್ಯಃ ಶತ್ರುಪೂಗಹಾ |
ವ್ಯಧಮತ್ ತಾನ್ಯನೀಕಾನಿ ತೂಲರಾಶಿಮಿವಾನಲಃ ॥ 24 ॥
ಆಗ ಯುಧಿಷ್ಠಿರನನ್ನು ಹಿಡಿಯಲು ಬಯಸಿದ, ಶತ್ರುಸಮೂಹಘಾತಕರಾದ ಆಚಾರ್ಯ ದ್ರೋಣರು ಆ ಸೈನ್ಯಗಳನ್ನು ಅಗ್ನಿಯು ಹತ್ತಿಯ ರಾಶಿಯನ್ನು ಭಸ್ಮ ಮಾಡುವಂತೆ ಭಸ್ಮ ಮಾಡಿದರು.
ನಿರ್ದಹಂತಮನೀಕಾನಿ ತಾನಿ ತಾನಿ ಪುನಃಪುನಃ |
ದ್ರೋಣಂ ಮಾತ್ಸ್ಯಾದವರಜಃ ಶತಾನೀಕೋಽಭ್ಯವರ್ತತ ॥ 25 ॥

ದ್ರೋಣರು ಆಯಾ ಸೈನ್ಯಗಳನ್ನು ಪುನಃ ಪುನಃ ದಹಿಸುತ್ತಿರುವುದನ್ನು ನೋಡಿ ಮತ್ಸ್ಯರಾಜನ ತಮ್ಮನಾದ ಶತಾನೀಕನು ದ್ರೋಣರ ಮೇಲೆ ನುಗ್ಗಿದನು.
ಸೂರ್ಯರಶ್ಮಿಪ್ರತೀಕಾಶೈಃ ಕರ್ಮಾರಪರಿಮಾರ್ಜಿತೈಃ |
ಷಡ್ಭಿಃ ಸಸೂತಂ ಸಹಯಂ ದ್ರೋಣಂ ವಿದ್ಧ್ವಾ ನನಾದ ಚ ॥ 26 ॥
ಸೂರ್ಯರಶ್ಮಿಗಳಂತೆ ಹೊಳೆಯುವ, ಕಮ್ಮಾರರಿಂದ ಚೆನ್ನಾಗಿ ಸಿದ್ಧಪಡಿಸಲ್ಪಟ್ಟ ಆರುಬಾಣಗಳಿಂದ ಅಶ್ವ-ಸೂತರಿಂದ ಸಹಿತರಾದ ದ್ರೋಣರನ್ನು ಹೊಡೆದು ಸಿಂಹನಾದವನ್ನು ಮಾಡಿದನು.
ಕ್ರೂರಾಯ ಕರ್ಮಣೇ ಯುಕ್ತಶ್ಚಿಕೀರ್ಷುಃ ಕರ್ಮ ದುಷ್ಕರಮ್ |
ಅವಾಕಿರಚ್ಛರವ್ರಾತೈಃ ಭಾರದ್ವಾಜಂ ಮಹಾರಥಮ್ ॥ 27 ॥
ಕ್ರೂರಕರ್ಮವನ್ನು ಮಾಡುವುದಕ್ಕಾಗಿಯೇ ಜನಿಸಿದ ಅವನು, ದುಷ್ಕರವಾದ ಕರ್ಮವನ್ನು ಮಾಡಲು ಬಯಸಿ, ತನ್ನ ಬಾಣಸಮೂಹಗಳಿಂದ ಮಹಾರಥರಾದ ದ್ರೋಣರನ್ನು ಹೊಡೆದನು.
ತಸ್ಯ ನಾನದತೋ ದ್ರೋಣಃ ಶಿರಃ ಕಾಯಾತ್ ಸಕುಂಡಲಮ್ |
ಕ್ಷುರೇಣೈವಾಹರದ್ ದ್ರೋಣಸ್ತತೋ ಮತ್ಸ್ಯಾಃ ಪ್ರದುದ್ರುವುಃ ॥ 28 ॥
ದ್ರೋಣರು ಪುನಃ ಪುನಃ ನಾದವನ್ನು ಮಾಡುತ್ತಿದ್ದ, ಅವನ ಕುಂಡಲಸಹಿತವಾದ ಶಿರಸ್ಸನ್ನು ಕ್ಷುರದಿಂದ ಕತ್ತರಿಸಿದರು. ಆಗ ಮತ್ಸ್ಯರು ಓಡಿಹೋದರು.
ಮತ್ಸ್ಯಾನ್ ಜಿತ್ವಾಽಜಯಚ್ಚೇದೀನ್ ಕಾರೂಷಾನ್ ಕೇಕಯಾನಪಿ |
ಪಾಂಚಾಲಾನ್ ಸೃಂಜಯಾನ್ ಪಾಂಡೂನ್ ಭಾರದ್ವಾಜಃ ಪುನಃಪುನಃ ॥
ಮತ್ಸ್ಯರನ್ನು ಗೆದ್ದು ದ್ರೋಣರು ಚೇದಿಗಳನ್ನೂ, ಕಾರೂಷರನ್ನೂ ಮತ್ತು ಕೇಕಯರನ್ನೂ ಗೆದ್ದರು. ಅವರು ಪುನಃ ಪುನಃ ಪಾಂಚಾಲರನ್ನೂ, ಸೃಂಜಯರನ್ನೂ, ಪಾಂಡುಗಳನ್ನೂ ಗೆದ್ದರು.
ತಂ ದಹಂತಮನೀಕಾನಿ ಕ್ರುದ್ಧಮಗ್ನಿಂ ಯಥಾ ವನಮ್ |
ದೃಷ್ಟ್ವಾ ರುಗ್ಮರಥಂ ವೀರಂ ಸಮಕಂಪಂತ ಸೃಂಜಯಾಃ ॥ 30 ॥
ಅಗ್ನಿಯು ವನವನ್ನು ಸುಡುವಂತೆ ಕ್ರುದ್ಧರಾದ ಅವರು ತಮ್ಮ ಸೈನ್ಯವನ್ನು ಸುಡುತ್ತಿರುವ, ರುಗ್ಮರಥರಾದ ದ್ರೋಣರನ್ನು ನೋಡಿ ಸೃಂಜಯರು ನಡುಗಿದರು.
ಉಭಾಭ್ಯಾಂ ಸಂದಧಾನಸ್ಯ ಧನುಷೋಽಸ್ಯಾಶುಕಾರಿಣಃ |
ಜ್ಯಾಘೋಷೋ ನಿಘ್ನತೋಽಮಿತ್ರಾನ್ ದಿಕ್ಷು ಸರ್ವಾಸು ಶುಶ್ರುವೇ ॥
ಎರಡು ಕೈಗಳಿಂದಲೂ ಬಾಣಗಳನ್ನು ಪ್ರಯೋಗಿಸುವ, ಶೀಘ್ರಕಾರಿಗಳಾದ, ಶತ್ರುಗಳನ್ನು ಸಂಹರಿಸುವ, ಅವರ ಧನುಸ್ಸಿನ ಹೆದೆಯ ಘೋಷವು ಎಲ್ಲ ದಿಕ್ಕುಗಳಲ್ಲಿಯೂ ಕೇಳಿ ಬರುತ್ತಿದ್ದಿತು.
ನಾಗಾನಶ್ವಾನ್ ಪದಾತೀಂಶ್ಚ ರಥಿನೋ ಗಜಸಾದಿನಃ |
ರೌದ್ರಾ ಹಸ್ತವತಾ ಮುಕ್ತಾಃ ಪ್ರಮಥ್ನಂತಿ ಸ್ಮ ಸಾಯಕಾಃ ॥ 32 ॥
ಪಳಗಿದ ಕೈಯುಳ್ಳ ಅವರಿಂದ ಪ್ರಯೋಗಿಸಲ್ಪಟ್ಟ ಭಯಂಕರವಾದ ಬಾಣಗಳು ಗಜಗಳನ್ನೂ, ಅಶ್ವಗಳನ್ನೂ, ಪದಾತಿಗಳನ್ನೂ, ರಥಿಗಳನ್ನೂ ಮತ್ತು ಗಜಾರೋಹಿಗಳನ್ನೂ ಮರ್ದಿಸಿದವು.
ನಾನದ್ಯಮಾನಃ ಪರ್ಜನ್ಯೋ ವಿಶ್ವಗ್ವಾತೋ ಹಿಮಾತ್ಯಯೇ |
ಅಶ್ಮವರ್ಷಮಿವಾವರ್ಷತ್ ಪರೇಷಾಂ ಭಯಮಾದಧತ್ ॥ 33 ॥
ಪರ್ಜನ್ಯನು ಹಿಮಗಾಲವು ಕಳೆದ ಮೇಲೆ ಸುಂಟರಗಾಳಿಗಳನ್ನು ಸೃಷ್ಟಿಸಿ, ಪುನಃ ಪುನಃ ನಾದವನ್ನು ಮಾಡುತ್ತಾ ಕಲ್ಲಿನ ಮಳೆಯನ್ನು ಸುರಿಸುವಂತೆ ದ್ರೋಣರು ಬಾಣಗಳ ಮಳೆಯನ್ನು ಸುರಿಸಿ ಶತ್ರುಗಳಿಗೆ ಭಯವನ್ನುಂಟು ಮಾಡಿದರು.
ಸರ್ವಾ ದಿಶಃ ಸಮಚರತ್ ಸೇನಾಂ ವಿಕ್ಷೋಭಯನ್ನಿವ |
ಬಲೀ ಶೂರೋ ಮಹೇಷ್ವಾಸೋ ಮಿತ್ರಾಣಾಮಭಯಂಕರಃ ॥ 34 ॥
ತಸ್ಯ ವಿದ್ಯುದಿವಾಭ್ರೇಷು ಚಾಪಂ ಹೇಮಪರಿಷ್ಕೃತಮ್ |
ದಿಕ್ಷು ಸರ್ವಾಸ್ವಪಶ್ಯಾಮ ದ್ರೋಣಸ್ಯಾಮಿತ್ರಘಾತಿನಃ ॥ 35 ॥
ಮಿತ್ರರಿಗೆ ಭಯಗ್ರಸ್ತರಿಗೆ ಅಭಯವನ್ನು ಕೊಡುವ ಮಹಾಧನುರ್ಧಾರಿಗಳೂ, ಬಲಿಷ್ಠರೂ, ಶೂರರೂ ಆದ ಅವರು ಶತ್ರುಸೇನೆಯನ್ನು, ವಿಕ್ಷೋಭೆಗೊಳಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಿದರು. ಶತ್ರುಘಾತಿಗಳಾದ ದ್ರೋಣರ ಸುವರ್ಣಾಲಂಕೃತವಾದ ಧನುಸ್ಸನ್ನು ಮೋಡಗಳಲ್ಲಿ ಮಿಂಚುಗಳಂತೆ ನಾವು ಎಲ್ಲ ದಿಕ್ಕುಗಳಲ್ಲಿಯೂ ನೋಡಿದೆವು.
ಶೋಭಮಾನಾಂ ಧ್ವಜೇ ಚಾಸ್ಯ ವೇದಿಮದ್ರಾಕ್ಷ್ಮ ಭಾರತ |
ಹಿಮವಚ್ಛಿಖರಾಕಾರಂ ಚರತಃ ಸಂಯುಗೇ ಭೃಶಮ್ ॥ 36 ॥
ಎಲೈ ಭಾರತನೇ, ಯುದ್ಧದಲ್ಲಿ ಬಹಳವಾಗಿ ಸಂಚರಿಸುವ ಅವರ ಹಿಮಾಲಯದ ಶಿಖರದ ಆಕಾರವನ್ನು ಹೊಂದಿದ ವೇದಿಧ್ವಜವನ್ನು ನೋಡಿದೆವು (ಧ್ವಜದಲ್ಲಿ ವೇದಿಯನ್ನು ನೋಡಿದೆವು).
ದ್ರೋಣಸ್ತು ಪಾಂಡವಾನೀಕೇ ಚಕಾರ ಕದನಂ ಮಹತ್ |
ಯಥಾ ದೈತ್ಯಗಣೈಃ ವಿಷ್ಣುಃ ಸುರಾಸುರನಮಸ್ಕೃತಃ ॥ 37 ॥
ಸುರಾಸುರ ನಮಸ್ಕೃತನಾದ ವಿಷ್ಣುವು ದೈತ್ಯಗಣಗಳ ಜೊತೆಯಲ್ಲಿ ಯುದ್ಧ ಮಾಡಿದಂತೆ ದ್ರೋಣರು ಪಾಂಡವರ ಸೈನ್ಯದಲ್ಲಿ ದೊಡ್ಡ ಯುದ್ಧವನ್ನು ಮಾಡಿದರು.
ಸ ಶೂರಃ ಸತ್ವವಾನ್ ಪ್ರಾಜ್ಞೋ ಬಲವಾನ್ ಸತ್ಯವಿಕ್ರಮಃ |

ಮಹಾನುಭಾವಃ ಕಾಲಾಂತೇ ರೌದ್ರೀಂ ಪ್ರಾವರ್ತಯನ್ನದೀಮ್ ॥ 38 ॥
ಶೂರರೂ, ಧೈರ್ಯಶಾಲಿಗಳೂ, ಪ್ರಾಜ್ಞರೂ, ಬಲಿಷ್ಠರೂ, ಸತ್ಯಪರಾಕ್ರಮರೂ, ಮಹಾನುಭಾವರೂ ಆದ ಅವರು ಕಾಲಾಂತದಲ್ಲಿಯೋ ಎಂಬಂತೆ ಭಯಂಕರವಾದ ನದಿಯನ್ನು ಹರಿಸಿದರು.
ಕವಚೋರ್ಮಿರಥಾವರ್ತಾಂ ಮರ್ತ್ಯಕೂಲಾಪಹಾರಿಣೀಮ್ ।
ಗಜಾಶ್ವಮಕರಾಕೀರ್ಣಾಮ್ ಅಸಿಮೀನಾಂ ದುರಾಸದಾಮ್ ॥ 39 ॥
ವೀರಾಸ್ಥಿಶರ್ಕರಾಂ ರೌದ್ರಾಂ ಭೇರೀಮುರಜಕಚ್ಛಪಾಮ್ ।
ಚರ್ಮವರ್ಮಪ್ಲವಾಂ ಘೋರಾಂ ಕೇಶಶೈವಲಶಾದ್ವಲಾಮ್ ॥ 40 ॥
ಕವಚಗಳೆಂಬ ತರಂಗಗಳುಳ್ಳ, ರಥಗಳೆಂಬ ಸುಳಿಗಳುಳ್ಳ, ಮೃತ ಶರೀರಗಳೆಂಬ ತೀರವನ್ನು ಕೊಚ್ಚಿಕೊಂಡು ಹೋಗುವ, ಗಜಾಶ್ವಗಳೆಂಬ ಮೊಸಳೆಗಳಿಂದ ನಿಬಿಡವಾದ, ಖಡ್ಗಗಳೆಂಬ ಮೀನುಗಳಿಂದ ಕೂಡಿದ, ಸಮೀಪಿಸಲು ಅಸಾಧ್ಯವಾದ, ವೀರರ ಅಸ್ಥಿಗಳೆಂಬ ಮರಳುಗಳಿಂದ ಕೂಡಿದ, ಭಯಂಕರವಾದ, ಭೇರಿ- ಮೃದಂಗಗಳೆಂಬ ಆಮೆಗಳಿಂದ ಕೂಡಿದ, ಗುರಾಣಿ ಮತ್ತು ಕವಚಗಳೆಂಬ ದೋಣಿಗಳಿಂದ ಕೂಡಿದ, ಕೇಶಗಳೆಂಬ ಮೃದು ಪ್ರದೇಶಗಳಿಂದ ಕೂಡಿದ ಘೋರವಾದ ನದಿಯನ್ನು ಹರಿಸಿದರು.
ಶರೌಘಿಣೀಂ ಧನುಃಸ್ರೋತಾಂ ಬಾಹುಪನ್ನಗಸಂಕುಲಾಮ್ ।
ಮನುಷ್ಯಶೀರ್ಷಪಾಷಾಣಾಂ ಶಕ್ತಿಮೀನಾಂ ಗದೋಡುಪಾಮ್ ।
ರಣಭೂಮಿವಹಾಂ ತೀವ್ರಾಂ ಕುರುಸೃಂಜಯವಾಹಿನೀಮ್ ॥ 41 ॥
ಉಷ್ಣೀಷಫೇನವಿತತಾಂ ನಿಷ್ಕೀರ್ಣಾಂತ್ರಸರೀಸೃಪಾಮ್ ।
ವೀರಾಪಹಾರಿಣೀಂ ರೌದ್ರಾಂ ಮಾಂಸಶೋಣಿತಕರ್ದಮಾಮ್ ॥ 42 ॥
ಬಾಣಗಳ ಪ್ರವಾಹವುಳ್ಳ, ಧನುಸ್ಸುಗಳ ಮೂಲಸ್ಥಾನವನ್ನು ಹೊಂದಿದ, ಬಾಹುಗಳೆಂಬ ಸರ್ಪಗಳಿಂದ ನಿಬಿಡವಾದ, ಮನುಷ್ಯರ ತಲೆಗಳೆಂಬ ಪಾಷಾಣದಿಂದ ಕೂಡಿದ, ಶಕ್ತಿಗಳೆಂಬ ಮೀನುಗಳಿಂದಲೂ ಮತ್ತು ಗದೆಗಳೆಂಬ ದೋಣಿಗಳಿಂದಲೂ ಕೂಡಿದ ರಣರಂಗದಲ್ಲಿ ಹರಿಯುವ, ಕುರು-ಸೃಂಜಯರನ್ನು ಕೊಚ್ಚಿಕೊಂಡು ಹೋಗುವ, ತೀವ್ರವಾದ ಉಷ್ಣೀಷಗಳೆಂಬ ವಿಸ್ತಾರವಾದ ನೊರೆಯನ್ನು ಹೊಂದಿದ, ಹೊರಗೆ ಬಂದ ಕರುಳುಗಳೆಂಬ ಸರ್ಪಗಳನ್ನು ಹೊಂದಿದ, ಮಾಂಸ-ರಕ್ತಗಳೆಂಬ ಕೆಸರನ್ನು ಹೊಂದಿದ, ವೀರರನ್ನು ಕೊಚ್ಚಿಕೊಂಡು ಹೋಗುವ ಭಯಂಕರವಾದ (ನದಿಯನ್ನು ಹರಿಸಿದರು).
ಹಸ್ತಿಗ್ರಾಹಾಂ ಕೇತುವೃಕ್ಷಾಂ ಕ್ಷತ್ರಿಯಾಣಾಂ ನಿಮಜ್ಜನೀಮ್ ।
ಕ್ರೂರಾಂ ಶರೀರಸಂಘಾತಾಂ ಸಾದಿನಕ್ರಾಂ ದುರತ್ಯಯಾಮ್ ॥ 43 ॥
ದ್ರೋಣಃ ಪ್ರಾವರ್ತಯತ್ ತತ್ರ ನದೀಮಂತಕಗಾಮಿನೀಮ್ ।
ತೇ ದ್ರೋಣಂ ಸಹಿತಾಃ ಶೂರಾಃ ಸರ್ವತಃ ಪ್ರತ್ಯವಾರಯನ್ ।
ಗಭಸ್ತಿಭಿರಿವಾದಿತ್ಯಂ ತಪಂತಂ ಭುವನೇ ಜನಾನ್ ॥ 44 ॥
ಅಲ್ಲಿ ದ್ರೋಣರು ಗಜಗಳೆಂಬ ಮೊಸಳೆಗಳುಳ್ಳ, ಧ್ವಜಗಳೆಂಬ ವೃಕ್ಷಗಳನ್ನು ಹೊಂದಿದ, ಕ್ಷತ್ರಿಯರನ್ನು ಮುಳುಗಿಸುವ, ಮೃತಶರೀರಗಳೆಂಬ ಕಲ್ಲುಗಳಿಂದ ಕೂಡಿದ, ಅಶ್ವಾರೋಹಿಗಳೆಂಬ ನಕ್ರಗಳಿಂದ ಕೂಡಿದ, ದಾಟಲು ಅಸಾಧ್ಯವಾದ, ಕ್ರೂರವಾದ, ಯಮನ ಬಳಿಗೆ ಹೋಗುವ ನದಿಯನ್ನು ಪ್ರವರ್ತಿಸಿದರು. ಪಾಂಡವರ ಆ ಶೂರರೆಲ್ಲರೂ ಒಟ್ಟುಗೂಡಿ ಎಲ್ಲ ಕಡೆಗಳಿಂದಲೂ ಮುತ್ತಿದರೂ ತನ್ನ ಕಿರಣಗಳಿಂದ ಭೂಮಿಯ ಜನರನ್ನು ತಾಪಗೊಳಿಸುವ ಸೂರ್ಯನಂತಿದ್ದ ಅವರನ್ನು ತಡೆದರು.
ತಂ ದಹಂತಮನೀಕಾನಿ ರಥೋದಾರಾಃ ಪ್ರಗಲ್ಭವತ್ ।
ಸರ್ವತೋಽಭ್ಯದ್ರುವನ್ ದ್ರೋಣಂ ಕುಂತೀಪುತ್ರಪುರೋಗಮಾಃ ॥ 45 ॥
ಬಹಳ ಕೌಶಲದಿಂದ ಪಾಂಡವರ ಸೈನ್ಯಗಳನ್ನು ದಹಿಸುತ್ತಿದ್ದ ದ್ರೋಣರನ್ನು ರಥಶ್ರೇಷ್ಠರಾದ ಕುಂತೀಪುತ್ರ ಮೊದಲಾದವರು ಎಲ್ಲ ಕಡೆಗಳಿಂದಲೂ ವೇಗವಾಗಿ ಸಮೀಪಿಸಿದರು.
ತಾಂಸ್ತು ಶೂರಾನ್ ಮಹೇಷ್ವಾಸಾನ್ ತಾವಕಾಽಭ್ಯುದ್ಯತಾಯುಧಾಃ ।
ರಾಜಾನೋ ರಾಜಪುತ್ರಾಶ್ಚ ಸಮಂತಾತ್ ಪರ್ಯವಾರಯನ್ ॥ 46 ॥
ಶೂರರೂ ಮತ್ತು ಮಹಾಧನುರ್ಧಾರಿಗಳೂ ಆದ ಅವರನ್ನು ನಿನ್ನವರಾದ ರಾಜರು ಮತ್ತು ರಾಜಪುತ್ರರು ತಮ್ಮ ಆಯುಧಗಳನ್ನು ಎತ್ತಿಹಿಡಿದು ಎಲ್ಲ ಕಡೆಗಳಲ್ಲಿಯೂ ತಡೆದರು.
ಶಿಖಂಡೀ ತು ತತೋ ದ್ರೋಣಂ ಪಂಚಭಿರ್ನತಪರ್ವಭಿಃ ।
ಕ್ಷೇಮಧನ್ವಾ ಚ ವಿಂಶತ್ಯಾ ವಸುದಾನಶ್ಚ ಪಂಚಭಿಃ ॥ 47 ॥
ಉತ್ತಮೌಜಾಸ್ತ್ರಿಭಿಃ ಬಾಣೈಃ ಕ್ಷತ್ರದೇವಶ್ಚ ಸಪ್ತಭಿಃ ।
ಸಾತ್ಯಕಿಶ್ಚ ಶತೈರಾರ್ಯೈಃ ಯುಧಾಮನ್ಯುಸ್ತಥಾಷ್ಟಭಿಃ ॥ 48 ॥
ಯುಧಿಷ್ಠಿರೋ ದ್ವಾದಶಭಿಃ ದ್ರೋಣಂ ವಿವ್ಯಾಧ ಸಾಯಕೈಃ ।
ಧೃಷ್ಟದ್ಯುಮ್ನಶ್ಚ ದಶಭಿಶ್ಚೇಕಿತಾನಸ್ತ್ರಿಭಿಃ ಶರೈಃ ॥ 49 ॥
ಆಗ ಶಿಖಂಡಿಯು ಬಾಗಿದ ತುದಿಯುಳ್ಳ ಐದು ಬಾಣಗಳಿಂದಲೂ, ಕ್ಷೇಮಧನ್ವನು ಇಪ್ಪತ್ತು ಬಾಣಗಳಿಂದಲೂ, ವಸುದಾನನು ಐದು ಬಾಣಗಳಿಂದಲೂ, ಉತ್ತಮೌಜನು ಮೂರು ಬಾಣಗಳಿಂದಲೂ, ಕ್ಷತ್ರದೇವನು ಏಳು ಬಾಣಗಳಿಂದಲೂ, ಸಾತ್ಯಕಿಯು ಶ್ರೇಷ್ಠವಾದ ನೂರು ಬಾಣಗಳಿಂದಲೂ, ಹಾಗೆಯೇ ಯುಧಾಮನ್ಯುವು ಎಂಟು ಬಾಣಗಳಿಂದಲೂ, ಯುಧಿಷ್ಠಿರನು ಹನ್ನೆರಡು ಬಾಣಗಳಿಂದಲೂ, ಧೃಷ್ಟದ್ಯುಮ್ನನು ಹತ್ತು ಬಾಣಗಳಿಂದಲೂ, ಚೇಕಿತಾನನು ಮೂರು ಬಾಣಗಳಿಂದಲೂ ದ್ರೋಣರನ್ನು ಹೊಡೆದರು.
ಸ ಸತ್ಯಸಂಧಃ ಶೋಣಾಶ್ವಃ ಪ್ರಭಿನ್ನ ಇವ ಕುಂಜರಃ ।
ಅಭ್ಯತೀತ್ಯ ರಥಾನೀಕಂ ವೃಷಸೇನಂ ಸಮಭ್ಯಯಾತ್ ॥ 50 ॥

ಸತ್ಯಸಂಧರಾದ ಆ ದ್ರೋಣರು ಮದಿಸಿದ ಆನೆಯಂತೆ ಆ ರಥಸಮೂಹವನ್ನು ದಾಟಿ ವೃಷಸೇನನ ಮೇಲೆ ಎರಗಿದರು.
ತತೋ ರಾಜಾನಮಾಸಾದ್ಯ ಪ್ರಹರಂತಮಭೀತವತ್ |
ಅವಿಧ್ಯನ್ನವಭಿಃ ಕ್ಷೇಮಂ ಸ ಹತಃ ಪ್ರಾಪತದ್ ರಥಾತ್ ॥ 51 ॥
ಅನಂತರ ನಿರ್ಭಯನಾಗಿ ಪ್ರಹಾರವನ್ನು ಮಾಡುತ್ತಿದ್ದ ಕ್ಷೇಮಧನ್ವ ರಾಜನನ್ನು ಸಮೀಪಿಸಿ, ಒಂಬತ್ತು ಬಾಣಗಳಿಂದ ಅವನನ್ನು ಹೊಡೆದರು. ಅವನು ಮೃತನಾಗಿ ರಥದಿಂದ ಬಿದ್ದನು.
ಸ ಮಧ್ಯಂ ಪ್ರಾಪ್ಯ ಸೈನ್ಯಾನಾಂ ಸರ್ವಾಃಸುವ್ಯಚರದ್ ದಿಶಃ |
ತ್ರಾತಾ ಹ್ಯಭವದನ್ಯೇಷಾಂ ನ ತ್ರಾತವ್ಯಃ ಪರಂತಪಃ ॥ 52 ॥
ಅವರು ಪಾಂಡವರ ಸೈನ್ಯದ ಮಧ್ಯದಲ್ಲಿ ತಲುಪಿ ಎಲ್ಲ ದಿಕ್ಕುಗಳಲ್ಲಿಯೂ ಚೆನ್ನಾಗಿ ಸಂಚರಿಸಿದರು. ಅವರು ಬೇರೆಯವರಿಗೆ ರಕ್ಷಕರಾದರು. ಪರಂತಪರಾದ ಅವರು ಯಾರಿಂದಲೂ ರಕ್ಷಿಸಲ್ಪಡಬೇಕಾದ ಪ್ರಸಂಗವಿರಲಿಲ್ಲ.
ಶಿಖಂಡಿನಂ ದ್ವಾದಶಭಿರ್ವಿಂಶತ್ಯಾ ಚೋತ್ತಮೌಜಸಮ್ |
ವಸುದಾನಂ ತು ಭಲ್ಲೇನ ರಥನೀಡಾದಪಾಹರತ್ ॥ 53 ॥
ಅವರು ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜನನ್ನು ಇಪ್ಪತ್ತು ಬಾಣಗಳಿಂದಲೂ ಹೊಡೆದು, ವಸುದಾನನನ್ನು ಭಲ್ಲದಿಂದ ಹೊಡೆದು ರಥದ ನೀಡದಿಂದ (ರಥವೀರರಿಂದ) ಉರುಳಿಸಿದರು.
ಅಶೀತ್ಯಾ ಕ್ಷತ್ರವರ್ಮಾಣಂ ಷಡ್ವಿಂಶತ್ಯಾ ಸುದಕ್ಷಿಣಮ್ |
ಜಲಸಂಧಂ ತು ಭಲ್ಲೇನ ರಥನೀಡಾದಪಾತಯತ್ ॥ 54 ॥
ಕ್ಷತ್ರವರ್ಮನನ್ನು ಎಂಬತ್ತು ಬಾಣಗಳಿಂದಲೂ, ಸುದಕ್ಷಿಣನನ್ನು ಇಪ್ಪತ್ತಾರು ಬಾಣಗಳಿಂದಲೂ, ಜಲಸಂಧನನ್ನು ಭಲ್ಲದಿಂದಲೂ ರಥದಿಂದ ಉರುಳಿಸಿದರು.
ಯುಧಾಮನ್ಯುಂ ಚತುಃಷಷ್ಟ್ಯಾ ಸಾತ್ಯಕಿಂ ತ್ರಿಂಶತಾ ಶರೈಃ |
ವಿದ್ಧ್ವಾ ರುಗ್ಮರಥಂ ತೂರ್ಣಂ ಕುಂತೀಪುತ್ರಂ ಯುಧಿಷ್ಠಿರಮ್ ॥ 55 ॥
ಯುಧಾಮನ್ಯುವನ್ನು ಅರವತ್ನಾಲ್ಕು ಬಾಣಗಳಿಂದಲೂ, ಸಾತ್ಯಕಿಯನ್ನು ಮೂವತ್ತು ಬಾಣಗಳಿಂದಲೂ ಹೊಡೆದು, ಅನಂತರ ಸುವರ್ಣಮಯವಾದ ರಥದಲ್ಲಿದ್ದ ಕುಂತೀಪುತ್ರನಾದ ಯುಧಿಷ್ಠಿರನ ಬಳಿಗೆ ಶೀಘ್ರವಾಗಿ ಸಾಗಿದರು.
ತತೋ ಯುಧಿಷ್ಠಿರಃ ಕ್ಷಿಪ್ರಂ ಗುರುತೋ ರಾಜಸತ್ತಮಃ |
ಅಪಾಯಾಜ್ಜವನೈರಶ್ವೈಃ ಪಾಂಚಾಲ್ಯೋ ದ್ರೋಣಮಭ್ಯಯಾತ್ ॥ 56 ॥
ಎಲೈ ರಾಜಶ್ರೇಷ್ಠನೇ, ಆಗ ಯುಧಿಷ್ಠಿರನು ವೇಗವಾದ ಅಶ್ವಗಳಿಂದ ಆಚಾರ್ಯರಿಂದ ಅಪಯಾನವನ್ನು ಮಾಡಿದನು.ಪಾಂಚಾಲದೇಶದ ವೀರನು ದ್ರೋಣರನ್ನು ಎದುರಿಸಿದನು.
ತಂ ದ್ರೋಣಃ ಸಧನುಷ್ಕಂ ತು ಸಾಶ್ವಯಂತಾರಮಕ್ಷಿಣೋತ್ |
ಸ ಹತಃ ಪ್ರಾಪತದ್ ಭೂಮೌ ರಥಾಜ್ಜ್ಯೋತಿರಿವಾಂಬರಾತ್ ॥ 57 ॥
ದ್ರೋಣರು ಧನುಸ್ಸಿನಿಂದಲೂ, ಅಶ್ವ-ಸಾರಥಿಗಳಿಂದಲೂ ಸಹಿತನಾದ ಅವನನ್ನು ನಾಶಗೊಳಿಸಿದರು. ಅವನು ಮೃತನಾಗಿ ಆಕಾಶದಿಂದ ಜ್ಯೋತಿಯು ಬಿದ್ದಂತೆ ರಥದಿಂದ ಭೂಮಿಯ ಮೇಲೆ ಬಿದ್ದನು.
ತಾವಕಾಸ್ತು ಮಹಾರಾಜ ಜಯಂ ಲಬ್ಧ್ವಾ ಮಹಾರಣೇ |
ಪಾಂಡವೇಯಾನ್ ರಣೇ ಜಘ್ನುರ್ದ್ರವತಸ್ತಾನ್ ಸಮಂತತಃ ॥ 58 ॥
ವಾರ್ಧಕ್ಷೇಮಿಸ್ತು ವಾರ್ಷ್ಣೇಯೋ ದ್ರೋಣಂ ವಿದ್ಧ್ವಾ ಶರೋತ್ತಮೈಃ |
ನವಭಿಶ್ಚಾವನೀಪಾಲಃ ಪುನರ್ವಿವ್ಯಾಧ ಪಂಚಭಿಃ ॥ 59 ॥
ಎಲೈ ಮಹಾರಾಜನೇ, ನಿನ್ನವರು ಯುದ್ಧದಲ್ಲಿ ಜಯವನ್ನು ಹೊಂದಿ, ಎಲ್ಲ ಕಡೆಗಳಲ್ಲಿಯೂ ಓಡುತ್ತಿದ್ದ ಪಾಂಡವಯೋಧರನ್ನು ಬಾಣಗಳಿಂದ ಹೊಡೆದರು. ವಾರ್ಷ್ಣೇಯನಾದ ವಾರ್ಧಕ್ಷೇಮಿ ರಾಜನು ದ್ರೋಣರನ್ನು ಶ್ರೇಷ್ಠವಾದ ಒಂಬತ್ತು ಬಾಣಗಳಿಂದ ಹೊಡೆದು, ಪುನಃ ಐದು ಬಾಣಗಳಿಂದ ಹೊಡೆದನು.
ಚಿತ್ರಸೇನಸ್ತತೋ ದ್ರೋಣಂ ಪಾಂಚಾಲಸ್ತ್ವರ್ದಯಚ್ಛರೈಃ |
ಪುನರ್ವಿವ್ಯಾಧ ಸಂಕ್ರುದ್ಧಃ ಸೇನಾಬಿಂದುಶ್ಚ ಪಂಚಭಿಃ ॥ 60 ॥
ಅನಂತರ ಪಾಂಚಾಲದೇಶದ ಚಿತ್ರಸೇನನು ದ್ರೋಣರನ್ನು ತನ್ನ ಬಾಣದಿಂದ ಪೀಡಿಸಿದನು. ಪುನಃ ಬಹಳ ಕೋಪಗೊಂಡ ಸೇನಾಬಿಂದುವು ಐದು ಬಾಣಗಳಿಂದ ದ್ರೋಣರನ್ನು ಹೊಡೆದನು.
ಸುವರ್ಮಾ ಪಂಚಭಿಶ್ಚೈವ ಧೃಷ್ಟದ್ಯುಮ್ನಶ್ಚ ಪಂಚಭಿಃ |
ಶಿಖಂಡೀ ನವಭಿರ್ಬಾಣೈಃ ಚೇಕಿತಾನಶ್ಚ ಪಂಚಭಿಃ ॥ 61 ॥
ಸಾತ್ಯಕಿಶ್ಚ ಚತುಃಷಷ್ಟ್ಯಾ ರಾಜನ್ ವಿವ್ಯಾಧ ಸಾಯಕೈಃ |
ಸುಚಿತ್ರೋ ದಶಭಿರ್ಬಾಣೈಃ ದ್ರೋಣಂ ವಿದ್ಧ್ವಾಽನದದ್ ಬಲೀ ॥62॥
ಸುವರ್ಮನು ಐದು ಬಾಣಗಳಿಂದಲೂ, ಧೃಷ್ಟದ್ಯುಮ್ನನು ಐದು ಬಾಣಗಳಿಂದಲೂ, ಶಿಖಂಡಿಯು ಒಂಬತ್ತು ಬಾಣಗಳಿಂದಲೂ, ಚೇಕಿತಾನನು ಐದು ಬಾಣಗಳಿಂದಲೂ, ಸಾತ್ಯಕಿಯು ಅರವತ್ನಾಲ್ಕು ಬಾಣಗಳಿಂದಲೂ ದ್ರೋಣರನ್ನು ಹೊಡೆದರು. ಎಲೈ ರಾಜನೇ, ಬಲಿಷ್ಠನಾದ ಸುಚಿತ್ರನು ಹತ್ತು ಬಾಣಗಳಿಂದ ದ್ರೋಣರನ್ನು ಹೊಡೆದು ಸಿಂಹನಾದವನ್ನು ಮಾಡಿದನು.
ತಂ ದ್ರೋಣಃ ಸಮರೇ ರಾಜನ್ ಶರವರ್ಷೈರವಾಕಿರತ್ |
ಅಪಾತಯತ್ ತತೋ ದ್ರೋಣಃ ಸುಚಿತ್ರಂ ಸಹಸಾರಥಿಮ್ ॥ 63 ॥
ರಾಜನೇ, ದ್ರೋಣರು ರಣರಂಗದಲ್ಲಿ ಸುಚಿತ್ರನ ಮೇಲೆ ಬಾಣಗಳ ಮಳೆಯನ್ನು ಸುರಿಸಿ, ಸಾರಥಿಯಿಂದ ಸಹಿತನಾದ ಸುಚಿತ್ರನನ್ನು

ರಥದಿಂದ ಉರುಳಿಸಿದರು.
ಸಾಶ್ವಶ್ಚ ಸಮರೇ ರಾಜನ್ ಹತೋ ವೈ ಪ್ರಾಪತತ್ ಕ್ಷಿತೌ |
ಪಾತ್ಯಮಾನೋ ಮಹಾರಾಜ ಬಭೌ ಜ್ಯೋತಿರಿವಾಂಬರಾತ್ ॥ 64 ॥
ರಾಜನೇ, ಮೃತನಾದ ಅವನು ರಣರಂಗದಲ್ಲಿ ತನ್ನ ಅಶ್ವಗಳ ಜೊತೆಯಲ್ಲಿ ಭೂಮಿಯ ಮೇಲೆ ಬಿದ್ದನು. ಮಹಾರಾಜನೇ, ಬೀಳುತ್ತಾ ಅವನು ಆಕಾಶದಿಂದ ಬೀಳುವ ಜ್ಯೋತಿಯಂತೆ ಶೋಭಿಸಿದನು.
ತಸ್ಮಿನ್ ಹತೇ ರಾಜಪುತ್ರೇ ಪಾಂಚಾಲಾನಾಂ ರಥರ್ಷಭೇ |
ಘ್ನತ ದ್ರೋಣಂ ಘ್ನತ ದ್ರೋಣಮಿತ್ಯಾಸೀನ್ನಿಸ್ವನೋ ಮಹಾನ್ ॥ 65 ॥
ಪಾಂಚಾಲದೇಶದ ರಾಜಕುಮಾರನು ಮತ್ತು ರಥಶ್ರೇಷ್ಠನೂ ಆದ ಸುಚಿತ್ರನು ದ್ರೋಣರಿಂದ ಹತನಾಗುತ್ತಿರಲು ದ್ರೋಣರನ್ನು ಕೊಲ್ಲಿ, ದ್ರೋಣರನ್ನು ಕೊಲ್ಲಿ ಎಂಬ ದೊಡ್ಡ ಶಬ್ದವು ಆ ಸೈನ್ಯದಲ್ಲಿ ಕೇಳಿಬಂದಿತು.
ತಾಂಸ್ತಥಾ ಭೃಶಸಂವಿಗ್ನಾನ್ ಪಾಂಚಾಲಾನ್ ಮತ್ಸ್ಯಕೇಕಯಾನ್ |
ಸೃಂಜಯಾನ್ ಪಾಂಡವೇಯಾಂಶ್ಚ ದ್ರೋಣೋ ವ್ಯಕ್ಷೋಭಯದ್ ಬಲಾತ್ ॥
ಆ ರೀತಿಯಲ್ಲಿ ಬಹಳ ವೇದನೆಗೊಳಗಾದ ಪಾಂಚಾಲರನ್ನೂ, ಮತ್ಸ್ಯರನ್ನೂ, ಕೇಕಯರನ್ನೂ, ಸೃಂಜಯರನ್ನೂ, ಪಾಂಡವೇಯರನ್ನೂ ದ್ರೋಣರು ತಮ್ಮ ಬಲದಿಂದ ಕ್ಷೋಭೆಗೊಳಿಸಿದರು.
ಸಾತ್ಯಕಿಂ ಚೇಕಿತಾನಂ ಚ ಧೃಷ್ಟದ್ಯುಮ್ನಶಿಖಂಡಿನೌ |
ವಾರ್ಧಕ್ಷೇಮಿಂ ಚಿತ್ರಸೇನಂ ಸೇನಾಬಿಂದುಂ ಸುವರ್ಚಸಮ್ ॥ 67 ॥
ಏತಾಂಶ್ಚಾನ್ಯಾಂಶ್ಚ ಸುಬಹೂನ್ ನಾನಾಜನಪದೇಶ್ವರಾನ್ |
ಸರ್ವಾನ್ ದ್ರೋಣೋಽಜಯದ್ ಯುದ್ಧೇ ಕುರುಭಿಃ ಪರಿವಾರಿತಃ ॥
ಕುರುಗಳಿಂದ ಪರಿವಾರಿತರಾದ ದ್ರೋಣರು ಸಾತ್ಯಕಿ, ಚೇಕಿತಾನ, ಧೃಷ್ಟದ್ಯುಮ್ನ, ಶಿಖಂಡಿ, ವಾರ್ಧಕ್ಷೇಮಿ, ಚಿತ್ರಸೇನ, ಸೇನಾಬಿಂದು, ಸುವರ್ಚಸ ಇವರೆಲ್ಲರನ್ನೂ ಮತ್ತು ಇನ್ನೂ ನಾನಾ ದೇಶದ ಅನೇಕ ರಾಜರನ್ನೂ ಯುದ್ಧದಲ್ಲಿ ಗೆದ್ದರು.
ತೇ ದಾನವಾ ಇವೇಂದ್ರೇಣ ವಧ್ಯಮಾನಾ ಮಹಾತ್ಮನಾ |
ಪಾಂಚಾಲಾಃ ಕೇಕಯಾ ಮಾತ್ಸ್ಯಾಃ ಸಮಕಂಪಂತ ಭಾರತ ॥ 69 ॥
ಎಲೈ ಭಾರತನೇ, ಮಹಾತ್ಮನಾದ ಇಂದ್ರನಿಂದ ಕೊಲ್ಲಲ್ಪಡುವ ದಾನವರಂತೆ ಆ ಪಾಂಚಾಲರೂ, ಕೇಕಯರೂ, ಮಾತ್ಸ್ಯರು ನಡುಗಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತನೇಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ದ್ರೋಣರ ಪರಾಕ್ರಮವನ್ನು ನೋಡಿ ದುರ್ಯೋಧನನಿಂದ ಕರ್ಣನನ್ನು ಕುರಿತು ಭೀಮಾದಿಗಳ ಅವಹೇಳನ. ಭೀಮಾದಿಗಳನ್ನು ಪ್ರಶಂಸಿಸಿ ಕರ್ಣನಿಂದ ಅದರ ನಿಷೇಧ.
ಧೃತರಾಷ್ಟ್ರಃ
ಭಾರದ್ವಾಜೇನ ಭಗ್ನೇಷು ಪಾಂಡವೇಷು ಮಹಾತ್ಮಸು |
ಪಾಂಚಾಲೇಷು ಚ ಸರ್ವೇಷು ಕಚ್ಚಿನ್ನಾನ್ಯೋ ನ್ಯವರ್ತತ ॥ 1 ॥
ಅಸೇವಿತಾಂ ಕಾಪುರುಷೈಃ ಸೇವಿತಾಂ ಪುರುಷರ್ಷಭೈಃ |
ಯೋದ್ಧುಂ ಯುದ್ಧೇ ಮತಿಂ ಕೃತ್ವಾ ಕ್ಷತ್ರಿಯಾಣಾಂ ಯಶಸ್ಕರೀಮ್ ॥2॥
ಧೃತರಾಷ್ಟ್ರ, ಮಹಾತ್ಮರಾದ ಪಾಂಡವರೂ, ಪಾಂಚಾಲರೂ ಮತ್ತು ಎಲ್ಲರೂ ದ್ರೋಣರಿಂದ ಭಗ್ನರಾಗಿ, ಕಾಪುರುಷರಿಂದ ಅಸೇವಿತವಾದ, ಪುರುಷಶ್ರೇಷ್ಠರಿಂದ ಸೇವಿತವಾದ ಕ್ಷತ್ರಿಯರಿಗೆ ಯಶಸ್ಕರವಾದ ಶ್ರೇಷ್ಠ ಅಭಿಪ್ರಾಯವನ್ನು ಹೊಂದಿ ಯುದ್ಧವನ್ನು ಮಾಡಲು (ಯಾರೂ ಹಿಂದಿರುಗಲಿಲ್ಲವೇ?)
ಸ ಏಷ ಪುರುಷವ್ಯಾಘ್ರೋ ಯೋ ಭಗ್ನೇಷು ನಿವರ್ತತೇ |
ಅಹೋ ನಾಸೀತ್ ಪುಮಾನ್ ಕಶ್ಚಿದ್ ದ್ರೋಣಂ ದೃಷ್ಟ್ವಾ ವ್ಯವಸ್ಥಿತಮ್ ॥
ಸೈನ್ಯವು ಭಗ್ನವಾದಾಗ ಯಾವನು ಹಿಂದಿರುಗುವನೋ ಅವನೇ ಪುರುಷವ್ಯಾಘ್ರ. ದ್ರೋಣರು ರಣರಂಗದಲ್ಲಿ ವ್ಯವಸ್ಥಿತವಾಗಿರುವುದನ್ನು ನೋಡಿ ಅಂತಹ ಪುರುಷನು ಯಾವನೂ ಇರಲಿಲ್ಲವೇ?
ಜೃಂಭಮಾಣಮಿವ ವ್ಯಾಘ್ರಂ ಪ್ರಭಿನ್ನಮಿವ ಕುಂಜರಮ್ |
ತ್ಯಜಂತಮಾಹವೇ ಪ್ರಾಣಾನ್ ಸನ್ನದ್ಧಂ ಚಿತ್ರಯೋಧಿನಮ್ ॥ 4 ॥
ಮಹೇಷ್ವಾಸಂ ನರವ್ಯಾಘ್ರಂ ದ್ವಿಷತಾಂ ಭಯವರ್ಧನಮ್ |
ಕೃತಜ್ಞಂ ಸತ್ಯನಿರತಂ ದುರ್ಯೋಧನಹಿತೈಷಿಣಮ್ ॥ 5 ॥
ಭಾರದ್ವಾಜಂ ರಥಾನೀಕೇ ಶೂರಂ ದೃಷ್ಟ್ವಾ ವ್ಯವಸ್ಥಿತಮ್ |
ಕೇ ವೀರಾಃ ಸನ್ನ್ಯವರ್ತಂತ ತನ್ಮಮಾಚಕ್ಷ್ವ ಸಂಜಯ ॥ 6 ॥

ಆಕಳಿಸುವ ವ್ಯಾಘ್ರದಂತೆ, ಮದಿಸಿದ ಗಜದಂತೆ, ಯುದ್ಧದಲ್ಲಿ ಪ್ರಾಣವನ್ನು ಬಿಡಲು ಸಿದ್ಧರಾದ, ಶಸ್ತ್ರ-ಕವಚಗಳಿಂದ ಸನ್ನದ್ಧರಾದ, ವಿಚಿತ್ರವಾಗಿ ಯುದ್ಧವನ್ನು ಮಾಡುವ, ಮಹಾಧನುರ್ಧಾರಿಗಳಾದ, ಶತ್ರುಗಳಿಗೆ ಭಯವನ್ನು ಹೆಚ್ಚಿಸುವ ಕೃತಜ್ಞರೂ, ಸತ್ಯನಿರತರೂ, ದುರ್ಯೋಧನನ ಹಿತೈಷಿಗಳೂ ಆದ, ಶೂರರಾದ, ನರವ್ಯಾಘ್ರರಾದ ದ್ರೋಣರು ರಥಸಮೂಹದಲ್ಲಿ ನಿಂತಿರುವುದನ್ನು ನೋಡಿ, ಎಲೈ ಸಂಜಯನೇ, ಯಾವ ವೀರರು ಹಿಂದಿರುಗಿದರು ಎಂಬುದನ್ನು ನನಗೆ ಹೇಳು.
ಸಂಜಯಃ
ತಾನ್ ದೃಷ್ಟ್ವಾ ಚಲಿತಾನ್ ಸಂಖೇ ಪ್ರಣುನ್ನಾನ್ ದ್ರೋಣಸಾಯಕೈಃ |
ಪಾಂಚಾಲಾನ್ ಪಾಂಡವಾನ್ ಮಾತ್ಸ್ಯಾನ್ ಸೃಂಜಯಾಂಶ್ಚ ಸಕೇಕಯಾನ್ ||
ದ್ರೋಣಚಾಪಪ್ರಮುಕ್ತೇನ ಶರೌಘೇಣಾಸುಹಾರಿಣಾ |
ಸಿಂಧೋರಿವ ಮಹೌಘೇನ ಹ್ರಿಯಮಾಣಾನ್ ಯಥಾ ಪ್ಲವಾನ್ || 8 ||
ಕೌರವಾಃ ಸಿಂಹನಾದೇನ ನಾನಾವಾದ್ಯರವೇಣ ಚ |
ರಥದ್ವಿಪನರಾಶ್ಚೈವ ಸರ್ವತಃ ಪರ್ಯವಾರಯನ್ || 9 ||
ಸಂಜಯ ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಪ್ರಾಣಾಂತಕವಾದ ರಣಸಮೂಹದ ಯುದ್ಧದಲ್ಲಿ ಪೀಡಿಸಲ್ಪಟ್ಟು ಸಿಂಧುನದಿಯ ಮಹಾಪ್ರವಾಹದಿಂದ ಕೊಚ್ಚಿಕೊಂಡು ಹೋಗುವ ದೋಣಿಗಳಂತೆ ರಣರಂಗದಿಂದ ಹೋಗುತ್ತಿದ್ದ ಪಾಂಚಾಲರನ್ನೂ, ಪಾಂಡವರನ್ನೂ, ಮತ್ಸ್ಯರನ್ನೂ, ಸೃಂಜಯರನ್ನೂ ಮತ್ತು ಕೇಕಯರನ್ನೂ ಕೌರವರು ನಾನಾ ವಾದ್ಯ ಘೋಷಗಳಿಂದಲೂ, ಸಿಂಹನಾದಗಳಿಂದಲೂ, ರಥ-ಗಜ-ಪದಾತಿಗಳಿಂದಲೂ ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ತಾನ್ ಪಶ್ಯನ್ ಸೈನ್ಯಮಧ್ಯಸ್ಥೋ ರಾಜಾ ಸ್ವಜನನಿರ್ಜಿತಾನ್ |
ದುರ್ಯೋಧನೋಽಬ್ರವೀತ್ ಕರ್ಣಂ ಪ್ರಹೃಷ್ಟಃ ಪ್ರಹಸನ್ನಿವ || 10 ||
ತನ್ನವರಿಂದ ನಿರ್ಜಿತರಾದ ಅವರನ್ನು ನೋಡಿ ಸೈನ್ಯದ ಮಧ್ಯದಲ್ಲಿದ್ದ ರಾಜನಾದ ದುರ್ಯೋಧನನು ಸಂತೋಷಗೊಂಡು ನಗುತ್ತಾ ಕರ್ಣನನ್ನು ಕುರಿತು ಹೇಳಿದನು.
ಪಶ್ಯ ರಾಧೇಯ ಪಾಂಚಾಲಾನ್ ಪ್ರಣುನ್ನಾನ್ ದ್ರೋಣಸಾಯಕೈಃ |
ಸಿಂಹೇನೇವ ಮೃಗಾನಸ್ತ್ರೈಃ ತ್ರಾಸಿತಾನ್ ದೃಢಧನ್ವನಾ || 11 ||
ಎಲೈ ರಾಧೇಯನೇ, ಸಿಂಹದಿಂದ ಮೃಗಗಳು ಹೆದರಿದಂತೆ ದೃಢ ಧನುಸ್ಸುಳ್ಳ ದ್ರೋಣರ ಬಾಣಗಳಿಂದ ಮತ್ತು ಅಸ್ತ್ರಗಳಿಂದ ಪೀಡಿಸಲ್ಪಟ್ಟು ಭಯಪಡುತ್ತಿರುವ ಪಾಂಚಾಲರನ್ನು ನೋಡು.
ನೈತೇ ಜಾತು ಪುನರ್ಯೋದ್ಧುಮೀಹಿಷ್ಯಂತೀತಿ ಮೇ ಮತಿಃ |
ತಥಾ ಹಿ ಭಗ್ನಾ ದ್ರೋಣೇನ ವಾತೇನೇವ ಮಹಾದ್ರುಮಾಃ || 12 ||
ಇವರು ಇನ್ನೊಂದು ಬಾರಿ ಪುನಃ ಯುದ್ಧವನ್ನು ಮಾಡಲು ಪ್ರಯತ್ನ ಪಡುವುದಿಲ್ಲವೆಂದು ನನ್ನ ಅಭಿಪ್ರಾಯ. ವಾಯುವಿನಿಂದ ಭಗ್ನವಾದ ಮಹಾವೃಕ್ಷಗಳಂತೆ ದ್ರೋಣರಿಂದ ಆ ರೀತಿಯಲ್ಲಿ ಭಗ್ನರಾಗಿದ್ದಾರೆ.
ಅರ್ದ್ಯಮಾನಾಃ ಶರೈರೇತೇ ರುಗ್ಮಪುಂಖೈರ್ಮಹಾತ್ಮನಾ |
ಪಥಾ ನೈಕೇನ ಗಚ್ಛಂತಿ ಘೂರ್ಣಮಾನಾ ಇತಸ್ತತಃ || 13 ||
ಮಹಾತ್ಮರಾದ ದ್ರೋಣರ ರುಗ್ಮಪುಂಖಗಳನ್ನು ಹೊಂದಿದ ಬಾಣಗಳಿಂದ ಪೀಡಿಸಲ್ಪಡುವ ಇವರು ವೇದನೆಯಿಂದ ನಾದವನ್ನು ಮಾಡುತ್ತಾ ಇಲ್ಲಿಂದಲ್ಲಿಗೆ ಅನೇಕ ಮಾರ್ಗಗಳಿಂದ ಹೋಗುತ್ತಿದ್ದಾರೆ.
ಸನ್ನಿರುದ್ಧಾಶ್ಚ ಕೌರವ್ಯೈಃ ದ್ರೋಣೇನ ಚ ಮಹಾತ್ಮನಾ |
ಏತೇಽನ್ಯೇ ಮಂಡಲೀಭೂತಾಃ ಪಾವಕೇನೇವ ಕುಂಜರಾಃ || 14 ||
ಇವರು ಮಹಾತ್ಮರಾದ ದ್ರೋಣರಿಂದಲೂ ಮತ್ತು ಕೌರವ ಸೈನ್ಯದಿಂದಲೂ ತಡೆಯಲ್ಪಟ್ಟಿದ್ದಾರೆ. ಉಳಿದವರು ಅಗ್ನಿಯಿಂದ ಸುತ್ತುವರಿಯಲ್ಪಟ್ಟ ಗಜಗಳಂತೆ ಸುತ್ತುವರಿಯಲ್ಪಟ್ಟಿದ್ದಾರೆ.
ಭ್ರಮರೈರಿವ ಚಾವಿಷ್ಟಾ ದ್ರೋಣಸ್ಯ ನಿಶಿತೈಃ ಶರೈಃ |
ಅನ್ಯೋನ್ಯಮವಲೀಯಂತೇ ಪಲಾಯನಪರಾಯಣಾಃ || 15 ||
ಭ್ರಮರಗಳನ್ನು ಹೋಲುವ ದ್ರೋಣರ ನಿಶಿತವಾದ ಬಾಣಗಳಿಂದ (ಶರೀರದಲ್ಲಿ) ತುಂಬಿಹೋಗಿದ್ದಾರೆ. ಪಲಾಯನಪರಾಯಣರಾದ ಇವರು ಒಬ್ಬರಲ್ಲೊಬ್ಬರು ಅಡಗಿಕೊಳ್ಳುತ್ತಿದ್ದಾರೆ.
ಏಷ ಭೀಮೋ ದೃಢಕ್ರೋಧೋಽಹೀನಃ ಪಾಂಡವಸೃಂಜಯೈಃ || 16 ||
ದೃಢಕ್ರೋಧವುಳ್ಳ ಈ ಭೀಮನಾದರೋ ಪಾಂಡವರಿಂದಲೂ ಮತ್ತು ಸೃಂಜಯರಿಂದಲೂ ಸಹಿತನಾಗಿದ್ದಾನೆ.
ಸಂಜಯಃ
ತತ್ರ ನಾದೋ ಮಹಾನಾಸೀದ್ ಏಕಂ ದ್ರೋಣಂ ಜಿಘಾಂಸತಾಮ್ |
ಪಾಂಡವಾನಾಂ ನಿವೃತ್ತಾನಾಂ ನಾನಾವರ್ಣೈರ್ಹಯೋತ್ತಮೈಃ || 17 ||
ಸಂಜಯ ಆಗ ಒಬ್ಬ ದ್ರೋಣರನ್ನು ಕೊಲ್ಲಲು ಬಯಸಿ ನಾನಾ ವರ್ಣಗಳುಳ್ಳ ಶ್ರೇಷ್ಠ ಹಯಗಳನ್ನು ಏರಿ ನಿವೃತ್ತರಾದ ಪಾಂಡವರಿಂದ ದೊಡ್ಡ ನಾದವುಂಟಾಯಿತು.
ಕರ್ಣಃ
ನೈಷ ಜಾತು ಮಹಾಬಾಹುಃ ಜೀವನ್ನಾಹವಮುತ್ಸೃಜೇತ್ |
ನ ಚೇಮಾನ್ ಪುರುಷವ್ಯಾಘ್ರಃ ಸಿಂಹನಾದಾನ್ ಸಹಿಷ್ಯತೇ || 18 ||
ಕರ್ಣ ಮಹಾಬಾಹುವಾದ ಈ ಭೀಮಸೇನನು ಬದುಕಿರುವವರೆಗೆ ಎಂದೂ ರಣರಂಗವನ್ನು ಬಿಡುವುದಿಲ್ಲ. ಪುರುಷವ್ಯಾಘ್ರನಾದ

ಅವನು ಈ ಸಿಂಹನಾದಗಳನ್ನು ಸಹಿಸುವುದಿಲ್ಲ.
ನ ಚಾಪಿ ಪಾಂಡವಾ ಯುದ್ಧೇ ಭಜ್ಯೇರನ್ನಿತಿ ಮೇ ಮತಿಃ |
ಶೂರಾಶ್ಚ ಬಲವಂತಶ್ಚ ಕೃತಾಸತ್ರಾ ಯುದ್ಧದುರ್ಮದಾಃ ॥ 19 ॥
ಪಾಂಡವರಾದರೂ ಯುದ್ಧದಲ್ಲಿ ಭಗ್ನಗೊಳ್ಳಲಾರರೆಂದು ನನ್ನ ಅಭಿಪ್ರಾಯ. ಅವರು ಶೂರರೂ, ಬಲಿಷ್ಠರೂ, ಅಸ್ತ್ರಪಾರಂಗತರೂ ಮತ್ತು ಯುದ್ಧ ದುರ್ಮದರಾದವರು.
ವಿಷಾಗ್ನಿದ್ಯೂತಸಂಕ್ಲೇಶಾನ್ ವನವಾಸಂ ಚ ಪಾಂಡವಾಃ |
ಸ್ಮರಮಾಣಾ ನ ಹಾಸ್ಯಂತಿ ಸಂಗ್ರಾಮಮಿತಿ ಮೇ ಮತಿಃ ॥ 20 ॥
ವಿಷಾಗ್ನಿ, ದ್ಯೂತಗಳಿಂದ ಉಂಟಾದ ಕಷ್ಟಗಳನ್ನೂ, ವನವಾಸವನ್ನೂ ಸ್ಮರಿಸುತ್ತಾ ಪಾಂಡವರು ರಣರಂಗವನ್ನು ಬಿಡುವುದಿಲ್ಲವೆಂದು ನನ್ನ ಅಭಿಪ್ರಾಯ.
ಆವೃತೋಽಪಿ ಮಹಾಬಾಹುರಮಿತೌಜಾ ವೃಕೋದರಃ |
ವರಾನ್ ವರಾನ್ ಹಿ ಕೌಂತೇಯೋ ರಥೋದಾರಾನ್ ವಧಿಷ್ಯತಿ ॥21॥
ಮಹಾಬಾಹುವೂ, ಅಮಿತಸಾಮರ್ಥ್ಯವುಳ್ಳವನೂ ಆದ ವೃಕೋದರನು ಕೌರವ ಸೇನೆಯಿಂದ ಸುತುತವರಿಯಲ್ಪಟ್ಟಿದ್ದರೂ ಕೌರವ ಸೇನೆಯಲ್ಲಿ ಶ್ರೇಷ್ಠರಾದ ರಥರನ್ನು ಆರಿಸಿ, ಆರಿಸಿ ಕೊಲ್ಲುವನು.
ಅಸಿನಾ ಧನುಷಾ ಶಕ್ತ್ಯಾ ರಥೈರ್ನಾಗೈರ್ಹಯೈರ್ನರೈಃ |
ಆಯಸೇನ ಚ ದಂಡೇನ ಪ್ರಾಪ್ತಾನ್ ಪ್ರಾಪ್ತಾನ್ ಹನಿಷ್ಯತಿ ॥ 22 ॥
ಅವನು ಖಡ್ಗದಿಂದಲೂ, ಧನುಸ್ಸಿನಿಂದಲೂ, ಶಕ್ತಿಯಿಂದಲೂ, ರಥಗಳಿಂದಲೂ, ಗಜಗಳಿಂದಲೂ, ಅಶ್ವಗಳಿಂದಲೂ, ಪದಾತಿಗಳಿಂದಲೂ, ಕಬ್ಬಿಣದ ದಂಡದಿಂದಲೂ ಸಮೀಪಕ್ಕೆ ಬಂದಬಂದವರನ್ನು ಕೊಲ್ಲುವನು.
ತ ಇಮೇ ವಿನಿವರ್ತಂತೇ ಸಾತ್ಯಕಿಪ್ರಮುಖಾ ರಥಾಃ |
ಪಾಂಚಾಲಾಃ ಕೇಕಯಾ ಮತ್ಸ್ಯಾಃ ಪಾಂಡವಾಶ್ಚ ವಿಶೇಷತಃ ॥23॥
ಇಗೋ ಈ ಸಾತ್ಯಕಿ ಮೊದಲಾದ ಪಾಂಡವರ ಮಹಾರಥರು ಹಿಂದಿರುಗುತ್ತಿದ್ದಾರೆ. ಪಾಂಚಾಲರೂ, ಕೇಕಯರೂ, ಮತ್ಸ್ಯರೂ ಮತ್ತು ವಿಶೇಷವಾಗಿ ಪಾಂಡವರೂ ಹಿಂದಿರುಗುತ್ತಿದ್ದಾರೆ.
ಶೂರಾಶ್ಚ ಬಲವಂತಶ್ಚ ವಿಕ್ರಾಂತಾಶ್ಚ ಮಹಾರಥಾಃ |
ವಿಶೇಷತಶ್ಚ ಭೀಮೇನ ಸಂರಬ್ಧೇನಾಭಿಚೋದಿತಾಃ ॥ 24 ॥
ಶೂರರೂ, ಬಲಿಷ್ಠರೂ, ಪರಾಕ್ರಮಶಾಲಿಗಳೂ ಆದ ಮಹಾರಥರು ಕೋಪಗೊಂಡ ಭೀಮನಿಂದ ವಿಶೇಷವಾಗಿ ಪ್ರಚೋದಿಸಲ್ಪಡುತ್ತಿದ್ದಾರೆ.
ತಂ ದ್ರೋಣಮಭಿವರ್ತಂತೇ ಸಿಂಹಂ ಮೋಹಾನ್ಮೃಗಾ ಇವ |
ವೃಕೋದರಂ ಪರೀಪ್ಸಂತಃ ಸೂರ್ಯಂ ಕೃಷ್ಣಘನಾ ಇವ ॥ 25 ॥
ವೃಕೋದರನನ್ನು ರಕ್ಷಿಸುವ ಆಸೆಯನ್ನು ಹೊಂದಿ, ಮೋಹದಿಂದ ಜಿಂಕೆಗಳು ಸಿಂಹದ ಮೇಲೆ ಬಿದ್ದಂತೆ, ಕಪ್ಪು ಮೋಡಗಳು ಸೂರ್ಯನನ್ನು ಆವರಿಸಿದಂತೆ ದ್ರೋಣರ ಮೇಲೆ ಸಾಗುತ್ತಿದ್ದಾರೆ.
ಸಮರೇಷು ತು ನಿರ್ದಿಷ್ಟಾಃ ಪಾಂಡವಾಃ ಕೃಷ್ಣಬಾಂಧವಾಃ |
ಪಾಂಚಾಲಾಃ ಕೇಕಯಾ ಮತ್ಸ್ಯಾಃ ಪಾಂಡವೇಯಾಶ್ಚ ಸರ್ವಶಃ ॥ 26 ॥
ಶೂರಾಶ್ಚ ಬಲವಂತಶ್ಚ ವಿಕ್ರಾಂತಾಶ್ಚ ಮಹಾರಥಾಃ |
ಹ್ರೀಮಂತಃ ಶತ್ರುಮರಣೇ ನಿಪುಣಾಃ ಪುಣ್ಯಲಕ್ಷಣಾಃ ॥ 27 ॥
ಕೃಷ್ಣ ಬಾಂಧವರಾದ ಪಾಂಡವರೂ, ಪಾಂಚಾಲರೂ, ಕೇಕಯರೂ, ಮತ್ಸ್ಯರೂ, ಪಾಂಡುಪುತ್ರರೂ ಎಲ್ಲರೂ ಶೂರರೂ, ಬಲಿಷ್ಠರೂ, ಪರಾಕ್ರಮಶಾಲಿಗಳೂ, ಮಹಾರಥರೂ, ನಾಚಿಕೆಯುಳ್ಳವರೂ, ಶತ್ರುವಧೆಯಲ್ಲಿ ನಿಪುಣರಾದವರೂ, ಪುಣ್ಯಲಕ್ಷಣವುಳ್ಳವರೂ ಆಗಿ ಯುದ್ಧಗಳಲ್ಲಿ ನಿರ್ದೇಶಿಸಲ್ಪಟ್ಟಿದ್ದಾರೆ.
ಬಹವಃ ಪಾರ್ಥಿವಾ ರಾಜನ್ ತೇಷಾಂ ವಶಗತಾ ರಣೇ |
ಮಾಽವಮಂಸ್ಥಾಃ ಪಾಂಡವಾಂಸ್ತ್ವಂ ನಾರಾಯಣಪುರೋಗಮಾನ್ ॥
ಎಲೈ ರಾಜನೇ, ಅನೇಕ ರಾಜರು ಯುದ್ಧದಲ್ಲಿ ಅವರಿಗೆ ವಶರಾಗಿದ್ದಾರೆ. ನಾರಾಯಣನನ್ನು ನಾಯಕನಾಗಿ ಉಳ್ಳ ಪಾಂಡವರನ್ನು ನೀನು ಅವಮಾನಗೊಳಿಸಬೇಡ.
ಏಕಾಯನಗತಾಸ್ತ್ವೇತೇ ಪೀಡಯೇಯುರ್ಯತವ್ರತಮ್ |
ಅರಕ್ಷ್ಯಮಾಣಂ ಶಲಭಾ ಯಥಾ ದೀಪಂ ಮುಮೂರ್ಷವಃ ॥ 29 ॥
ಇವರು ಒಂದೇ ವಾಹನದಲ್ಲಿ ಕುಳಿತು, ರಕ್ಷಣೆಯಿಲ್ಲದ, ನಿಯತವ್ರತನಾದ ದ್ರೋಣರನ್ನು ಮರಣವನ್ನು ಹೊಂದಲಿರುವ ಪತಂಗಗಳು ದೀಪದ ಮೇಲೆ ಬಿದ್ದಂತೆ ಪೀಡಿಸಬಹುದು.
ಅಸಂಶಯಂ ಕೃತಾಸತ್ರಾಶ್ಚ ಪರ್ಯಾಪ್ತಾಶ್ಚಾರಿನಿಗ್ರಹೇ |
ಅತಿಭಾರಂ ತ್ವಿಮಂ ಮನ್ಯೇ ಭಾರದ್ವಾಜೇ ಸಮಾಹಿತಮ್ ॥ 30 ॥
ನಿಸ್ಸಂಶಯವಾಗಿ ಅವರು ಅಸ್ತ್ರಪಾರಂಗತರಾದವರು ಮತ್ತು ಶತ್ರುಗಳನ್ನು ನಿಗ್ರಹ ಮಾಡಲು ಸಮರ್ಥರಾದವರು. ಆದರೂ ದ್ರೋಣರ ಮೇಲೆ ಬಿದ್ದಿರುವ ಈ ಭಾರವು ಬಹಳ ದೊಡ್ಡದೆಂದು ನಾನು ಭಾವಿಸುತ್ತೇನೆ.
ತೇ ಶೀಘ್ರಮನುಗಚ್ಛಾಮೋ ಯತ್ರ ದ್ರೋಣೋ ವ್ಯವಸ್ಥಿತಃ |
ಕಾಕಾ ಇವ ಮಹಾನಾಗಂ ಮಾ ಚ ಹನ್ಯುರ್ಮಹಾರಥಮ್ ॥ 31 ॥

ಅಂತಹ ನಾವು ಶೀಘ್ರವಾಗಿ ದ್ರೋಣರು ಇರುವ ಕಡೆಗೆ ಹೋಗೋಣ. ಕಾಗೆಗಳು ಮಹಾಸರ್ಪವನ್ನು ಕೊಂದಂತೆ ಮಹಾರಥರಾದ ಅವರು ಮರಣಕ್ಕೆ ಈಡಾಗುವುದು ಬೇಡ.
ಸಂಜಯಃ
ಕರ್ಣಸ್ಯ ತು ವಚಃ ಶ್ರುತ್ವಾ ರಾಜಾ ದುರ್ಯೋಧನಸ್ತಥಾ |
ಭ್ರಾತೃಭಿಃ ಸಹಿತೋ ವೀರೈಃ ಪ್ರಾಯಾದ್ ದ್ರೋಣರಥಂ ಪ್ರತಿ ॥ 32 ॥
ಸಂಜಯ ಕರ್ಣನ ಮಾತುಗಳನ್ನು ಕೇಳಿ ರಾಜನಾದ ದುರ್ಯೋಧನನು ವೀರರಾದ ಸಹೋದರರಿಂದ ಸಹಿತನಾಗಿ ದ್ರೋಣರ ರಥದ ಕಡೆಗೆ ಹೊರಟನು.
ತತ್ರ ನಾದೋ ಮಹಾನಾಸೀದೇಕಂ ದ್ರೋಣಂ ಜಿಘಾಂಸತಾಮ್ |
ಪಾಂಡವಾನಾಂ ನಿವೃತ್ತಾನಾಂ ನಾನಾವರ್ಣೈರ್ಹಯೋತ್ತಮೈಃ ॥ 33 ॥
ಅಲ್ಲಿ ಒಬ್ಬ ದ್ರೋಣರನ್ನು ಕೊಲ್ಲಲು ಬಯಸಿ ನಾನಾ ಬಣ್ಣದ ಶ್ರೇಷ್ಠ ಅಶ್ವಗಳನ್ನು ಏರಿ ಹಿಂದಿರುಗಿದ ಪಾಂಡವರಿಂದ ದೊಡ್ಡ ನಾದವು ಉಂಟಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಸಂಜಯನಿಂದ ರಥಗಳ, ಅಶ್ವಗಳ ಮತ್ತು ಧ್ವಜಗಳ ವರ್ಣನೆ
ಧೃತರಾಷ್ಟ್ರಃ
ಸರ್ವೇಷಾಮೇವ ಮೇ ಬ್ರೂಹಿ ರಥಚಿಹ್ನಾನಿ ಸಂಜಯ |
ತಾನಹಂ ಶ್ರೋತುಮಿಚ್ಛಾಮಿ ವಿಸ್ತರೇಣ ಪೃಥಕ್ ಪೃಥಕ್ |
ಯೇ ದ್ರೋಣಮಭಿವರ್ತಂತ ಕ್ರುದ್ಧಾ ಭೀಮಪರಾಕ್ರಮಾಃ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಎಲ್ಲರ ರಥಗಳ ಲಕ್ಷಣಗಳನ್ನು ಹೇಳು. ನಾನು ಅವುಗಳನ್ನು ವಿಸ್ತತರವಾಗಿ ಬೇರೆ ಬೇರೆಯಾಗಿ ಕೇಳಲು ಬಯಸುತ್ತೇನೆ. ಭಯಂಕರ ಪರಾಕ್ರಮವುಳ್ಳ ವೃದ್ದರಾದ ಯಾರು-ಯಾರು ದ್ರೋಣರನ್ನು ಎದುರಿಸಿದರೋ ಅವರ ರಥಗಳ ಚಿಹ್ನೆಗಳನ್ನು ಹೇಳು.
ದೂಯತೇ ಮೇ ಮನಸ್ತಾತ ದ್ರೋಣಂ ಪ್ರತಿ ಪರಂತಪ |
ಶ್ರುತ್ವಾ ಭೀಷ್ಮಸ್ಯ ನಿಧನಂ ತದ್ವದೇತದ್ ಭವಿಷ್ಯತಿ ॥ 2 ॥
ಎಲೈ ಪರಂತಪನೇ, ಪ್ರೀತಿಪಾತ್ರನೇ, ಭೀಷ್ಮರ ನಿಧನವನ್ನು ಕೇಳಿ ಅದರಂತೆಯೇ ದ್ರೋಣರಿಗೂ ಆಗುವುದು ಎಂದು ಭಾವಿಸಿ ನನ್ನ ಮನಸ್ಸು ದ್ರೋಣರ ವಿಷಯದಲ್ಲಿ ದುಃಖವನ್ನು ಹೊಂದುತ್ತಿದೆ.
ಸಂಜಯಃ
ಋಶ್ಯವರ್ಣಾನ್ ಹಯಾನ್ ದೃಷ್ಟ್ವಾ ವ್ಯಾಯಚ್ಛಂತಂ ವೃಕೋದರಮ್ |
ರಜತಾಶ್ವಸ್ತತಃ ಶೂರಃ ಶೈನೇಯಃ ಸನ್ನ್ಯವರ್ತತ ॥ 3 ॥
ಸಂಜಯ ಜಿಂಕೆಯ ವರ್ಣದ ಅಶ್ವಗಳನ್ನು ನಿಯಂತ್ರಿಸುತ್ತಿರುವ ವೃಕೋದರನನ್ನು ನೋಡಿ, ರಜತವರ್ಣದ ಅಶ್ವವನ್ನು ಹೊಂದಿದ್ದ ಶೂರನಾದ ಸಾತ್ಯಕಿಯು ಹಿಂದಿರುಗಿದನು.
ದರ್ಶನೀಯಾಸ್ತು ಕಾಂಬೋಜಾಃ ಶುಕಪತ್ರತನುಚ್ಛದಾಃ |
ವಹಂತೋ ನಕುಲಂ ಯುದ್ಧೇ ತಾವಕಾನ್ ಶೀಘ್ರಮಭ್ಯಯುಃ ॥ 4 ॥
ಸುಂದರವಾದ, ಗಿಣಿಯ ರೆಕ್ಕೆಯ ಬಣ್ಣವನ್ನು ಹೊಂದಿದ ಕಾಂಬೋಜ ದೇಶದ ಕುದುರೆಗಳು ರಣರಂಗದಲ್ಲಿ ನಕುಲನನ್ನು ಎಳೆಯುತ್ತಾ ನಿನ್ನವರ ಕಡೆಗೆ ಶೀಘ್ರವಾಗಿ ಬಂದವು.
ಕೃಷ್ಣಾಸ್ತು ಮೇಘಸಂಕಾಶಾಃ ಸಹದೇವಂ ಹಯೋತ್ತಮಾಃ |
ಭೀಮವೇಗಾ ನರವ್ಯಾಘ್ರಮವಹನ್ ಪಾಂಡವಂ ಹಯಾಃ ॥ 5 ॥
ಮೇಘಗಳಂತೆ ಕಪ್ಪು ಬಣ್ಣವನ್ನು ಹೊಂದಿದ್ದ, ಭಯಂಕರ ವೇಗವುಳ್ಳ ಶ್ರೇಷ್ಠವಾದ ಅಶ್ವಗಳು ನರವ್ಯಾಘ್ರನಾದ, ಪಾಂಡುಪುತ್ರನಾದ ಸಹದೇವನನ್ನು ಎಳೆದವು.
ಹೇಮೋತ್ತಮಪ್ರತಿಚ್ಛನ್ನೈರ್ಹಯೈರ್ವಾತಸಮೈರ್ಜವೇ |
ಅಭ್ಯವರ್ತಂತ ಸೈನ್ಯಾನಿ ಸರ್ವಾಣ್ಯೇವ ಯುಧಿಷ್ಠಿರಮ್ ॥ 6 ॥
ಉತ್ತಮವಾದ ಸುವರ್ಣಾಭರಣಗಳಿಂದ ಕೂಡಿದ, ವೇಗದಲ್ಲಿ ವಾಯುವಿಗೆ ಸಮವಾದ ಅಶ್ವಗಳಿಂದ ಎಲ್ಲ ಸೈನ್ಯಗಳೂ ಯುಧಿಷ್ಠಿರನ ಬಳಿಗೆ ಬಂದವು.
ರಾಜ್ಞಸ್ತ್ವನಂತರಂ ರಾಜಾ ಪಾಂಚಾಲ್ಯೋ ದ್ರುಪದೋಽಭವತ್ |
ಜಾತರೂಪಮಯಚ್ಛತ್ ಸ ಸರ್ವೈಸ್ತೈರಭಿರಕ್ಷಿತಃ ॥ 7 ॥
ರಾಜನ ಅನಂತರದಲ್ಲಿ ಪಾಂಚಾಲರಾಜನಾದ ದ್ರುಪದನಿದ್ದನು. ಅವನು ಆ ಎಲ್ಲರಿಂದಲೂ ರಕ್ಷಿತನಾಗಿ ಸುವರ್ಣವರ್ಣದ ಅಶ್ವಗಳನ್ನು ನಿಯಂತ್ರಿಸುತ್ತಿದ್ದನು.

ಲಲಾಮೈರ್ಹರಿಭಿರ್ಯುಕ್ತಃ ಸರ್ವಶಬ್ದಕ್ಷಮೈರ್ಯುಧಿ |
ರಾಜಮಧ್ಯೇ ಮಹೇಷ್ವಾಸಃ ಶಾಂತಭೀರಭ್ಯವರ್ತತ ॥ 8 ॥
ತಂ ವಿರಾಟೋಽನ್ವಯಾತ್ ಪಶ್ಚಾತ್ ಸಹ ಶೂರೈರ್ಮಹಾರಥೈಃ ॥ 9 ॥
ಯುದ್ಧದಲ್ಲಿ ಎಲ್ಲ ಶಬ್ದಗಳನ್ನು ಸಹಿಸುವ ಶ್ರೇಷ್ಠವಾದ ಅಶ್ವಗಳಿಂದ ಕೂಡಿದವನಾಗಿ ಮಹಾಧನುರ್ಧಾರಿಯಾದ ಅವನು ನಿರ್ಭಯವಾಗಿ ರಾಜರ ಮಧ್ಯದಲ್ಲಿ ಬಂದು ನಿಂತನು. ಅವನನ್ನು ಶೂರರಾದ ಮಹಾರಥರಿಂದ ಕೂಡಿದ ವಿರಾಟನು ಹಿಂಬಾಲಿಸಿ ಅವನ ಹಿಂದೆ ನಿಂತನು.
ಕೇಕಯಾಶ್ಚ ಶಿಖಂಡೀ ಚ ಧೃಷ್ಟಕೇತುಸ್ತಥೈವ ಚ |
ಸ್ವೈಃ ಸ್ವೈಃ ಸೈನ್ಯೈಃ ಪರಿವೃತಾ ಮತ್ಸ್ಯರಾಜಾನಮನ್ವಯುಃ ॥ 10 ॥
ಕೇಕಯರೂ, ಶಿಖಂಡಿ ಮತ್ತು ಧೃಷ್ಟಕೇತು ಇವರೂ ತಮ್ಮ ತಮ್ಮ ಸೇನೆಗಳಿಂದ ಪರಿವೃತರಾಗಿ ಮತ್ಸ್ಯರಾಜನಾದ ವಿರಾಟನನ್ನು ಹಿಂಬಾಲಿಸಿದರು.
ತಸ್ಯ ಪಾಟಲಪುಷ್ಪಾಣಾಂ ತುಲ್ಯವರ್ಣಾ ಹಯೋತ್ತಮಾಃ |
ವಹಂತಃ ಸಮಶೋಭಂತ ಮಾತ್ಸ್ಯಸ್ಯಾಮಿತ್ರಘಾತಿನಃ ॥ 11 ॥
ಶತ್ರುಘಾತಿಯಾದ ವಿರಾಟನ ಪಾಟಲ (ಗುಲಾಬಿ) ಪುಷ್ಪಗಳಿಗೆ ಸಮಾನವಾದ ವರ್ಣವುಳ್ಳ ಶ್ರೇಷ್ಠವಾದ ಅಶ್ವಗಳು ಅವನ ರಥವನ್ನು ಎಳೆಯುತ್ತಾ ಶೋಭಿಸಿದವು.
ಇಂದ್ರಗೋಪಕವರ್ಣಾಶ್ಚ ಭ್ರಾತರಃ ಪಂಚ ಕೇಕಯಾಃ |
ಜಾತರೂಪಾ ಇವಾಭಾಂತಿ ತೇ ಸರ್ವೇ ಲೋಹಿತಧ್ವಜಾಃ ॥ 12 ॥
ಸಹೋದರರಾದ ಐವರು ಕೇಕಯರು ಇಂದ್ರಗೋಪದಂತೆ ಕೆಂಪುವರ್ಣದ ಅಶ್ವಗಳಿಂದ ಕೂಡಿದವರು. ಆ ಅಶ್ವಗಳು ಸುವರ್ಣದಂತೆ ಹೊಳೆಯುತ್ತಿದ್ದವು. ಕೇಕಯರೆಲ್ಲರೂ ಕೆಂಪು ಧ್ವಜವುಳ್ಳವರು.
ತೇ ಹೇಮಮಾಲಿನಃ ಶೂರಾಃ ಸರ್ವೇ ಯುದ್ಧವಿಶಾರದಾಃ |
ವರ್ಷಂತ ಇವ ಜೀಮೂತಾಃ ಪ್ರತ್ಯದೃಶ್ಯಂತ ದಂಸಿತಾಃ ॥ 13 ॥
ಹೇಮಮಾಲೆಯನ್ನು ಧರಿಸಿದವರೂ, ಶೂರರೂ, ಯುದ್ಧವಿಶಾರದರೂ, ಮೋಡಗಳಂತೆ ಬಾಣಗಳನ್ನು ಸುರಿಸುವವರೂ ಆದ ಅವರು ಕವಚಾದಿಗಳಿಂದ ಸನ್ನದ್ಧರಾಗಿ ಕಂಡುಬಂದರು.
ಆಮ್ರಪಲ್ಲವವರ್ಣಾಸ್ತು ಸುಧನ್ವಾನಂ ಮಹೌಜಸಮ್ |
ದಾಂತಾಸ್ತಾಮ್ರಾರುಣಾ ಯುಕ್ತಾಃ ಶಿಖಂಡಿನಮುದಾವಹನ್ ॥ 14 ॥
ಮಹಾಸಾಮರ್ಥ್ಯವುಳ್ಳ ಸುಧನ್ವನನ್ನು ಮಾವಿನ ಚಿಗುರಿನ ಬಣ್ಣದ ಅಶ್ವಗಳೂ, ಶಿಖಂಡಿಯನ್ನು ತಾಮ್ರದಂತೆ ಕೆಂಪಾದ ಚೆನ್ನಾಗಿ ಪಳಗಿಸಲ್ಪಟ್ಟ ಅಶ್ವಗಳೂ ಎಳೆದವು.
ತಥಾ ದ್ವಾದಶಸಾಹಸ್ರಾಃ ಪಾಂಚಾಲಾನಾಂ ಮಹಾರಥಾಃ |
ತೇಷಾಂ ತು ಷಟ್ಸಹಸ್ರಾಣಿ ಯೇ ಶಿಖಂಡಿನಮನ್ವಯುಃ ॥ 15 ॥
ಹಾಗೆಯೇ ಪಾಂಚಾಲಮಹಾರಥರು ಹನ್ನೆರಡು ಸಾವಿರ ಮಂದಿ. ಅವರಲ್ಲಿ ಶಿಖಂಡಿಯನ್ನು ಹಿಂಬಾಲಿಸಿದವರು ಆರು ಸಾವಿರ.
ಪುತ್ರಂ ತು ಶಿಶುಪಾಲಸ್ಯ ನರಸಿಂಹಸ್ಯ ಮಾರಿಷ |
ಆಕ್ರೀಡಂತೋ ವಹಂತಿ ಸ್ಮ ಸಾರಂಗಶಬಲಾ ಹಯಾಃ ॥ 16 ॥
ಎಲೈ ಪೂಜ್ಯನೇ, ನರಶ್ರೇಷ್ಠನಾದ ಶಿಶುಪಾಲನ ಪುತ್ರನನ್ನು ಸಾರಂಗದಂತೆ (ಜಿಂಕೆಯಂತೆ) ಅನೇಕ ವರ್ಣಗಳಿಂದ ಕೂಡಿದ ಅಶ್ವಗಳು ಆಟವಾಡುತ್ತಾ ಎಳೆದವು.
ಧೃಷ್ಟಕೇತುಸ್ತು ಚೇದೀನಾಮೃಷಭೋಽತಿಬಲಾನ್ವಿತಃ |
ಕಾಂಬೋಜೈಃ ಶಬಲೈರಶ್ವೈರಭ್ಯವರ್ತತ ದುರ್ಜಯಃ ॥ 17 ॥
ಬಹಳ ಬಲಿಷ್ಠನಾದ, ಚೇದಿಗಳಲ್ಲಿ ಶ್ರೇಷ್ಠನಾದ, ದುರ್ಜಯನಾದ ಧೃಷ್ಟಕೇತುವು ಶಬಲವರ್ಣದಿಂದ ಕೂಡಿದ ಕಾಂಬೋಜದೇಶದ ಅಶ್ವಗಳಿಂದ ಮುಂದೆ ಬಂದನು.
ಬೃಹತ್ಕ್ಷತ್ರಂ ತು ಕೈಕೇಯಂ ಸುಕುಮಾರಂ ಹಯೋತ್ತಮಾಃ |
ಪಲಾಲಧೂಮಸಂಕಾಶಾಃ ಸೈಂಧವಾಸ್ತಮುದಾವಹನ್ ॥ 18 ॥
ಕೇಕಯ ದೇಶದ ಸುಕುಮಾರನಾದ ಬೃಹತ್ಕ್ಷತ್ರನನ್ನು ತೃಣಗಳಿಂದ ಉಂಟಾದ ಧೂಮವರ್ಣದ ಸಿಂಧುದೇಶದ ಕುದುರೆಗಳು ಎಳೆದು ತಂದವು.
ಮಲ್ಲಿಕಾಕ್ಷಾಃ ಪದ್ಮವರ್ಣಾ ಬಾಹ್ಲಿಜಾತಾಃ ಸ್ವಲಂಕೃತಾಃ |
ಶೂರಂ ಶಿಖಂಡಿನಃ ಪುತ್ರಂ ಕ್ಷತ್ರದೇವಮುದಾವಹನ್ ॥ 19 ॥
ಮಲ್ಲಿಗೆಯಂತೆ ಕಣ್ಣುಗಳನ್ನು ಹೊಂದಿದ, ಪದ್ಮವರ್ಣದ, ಬಾಹ್ಲಿಕ ದೇಶದಲ್ಲಿ ಜನಿಸಿದ, ಚೆನ್ನಾಗಿ ಅಲಂಕರಿಸಲ್ಪಟ್ಟ ಕುದುರೆಗಳು ಶಿಖಂಡಿಯ ಪುತ್ರನಾದ, ಶೂರನಾದ ಕ್ಷತ್ರದೇವನನ್ನು ಎಳೆದವು.
ರುಗ್ಮಭಾಂಡೈಃ ಪ್ರತಿಚ್ಛನ್ನಾಃ ಕೌಶೇಯಸದೃಶಾ ಹಯಾಃ |
ಕ್ಷಮಾವಂತೋಽವಹನ್ ಯುದ್ಧೇ ಸೇನಾಬಿಂದುಂ ಮಹಾಧ್ವಜಮ್ ॥
ಸುವರ್ಣಾಭರಣಗಳಿಂದ ಮುಚ್ಚಲ್ಪಟ್ಟ, ರೇಷ್ಮೆಯ ಬಣ್ಣವನ್ನು ಹೊಂದಿದ, ಶಾಂತವಾದ ಅಶ್ವಗಳು ಯುದ್ಧದಲ್ಲಿ ಮಹಾಧ್ವಜವನ್ನು ಹೊಂದಿದ ಸೇನಾಬಿಂದುವನ್ನು ಎಳೆದವು.
ಯುವಾನಮವಹನ್ ಯುದ್ಧೇ ಕ್ರೌಂಚವರ್ಣಾ ಹಯೋತ್ತಮಾಃ |

ಕಾಶ್ಯಸ್ಯಾಭಿಭುವಃ ಪುತ್ರಂ ಸುಕುಮಾರಂ ಯಶಸ್ವಿನಮ್ ॥ 21 ॥
ಶತ್ರುಗಳನ್ನು ಪರಾಭವಗೊಳಿಸುವ ಕಾಶಿರಾಜನ ಪುತ್ರನಾದ, ಕೀರ್ತಿವಂತನಾದ, ಯುವಕನಾದ ಸುಕುಮಾರನನ್ನು ಯುದ್ಧದಲ್ಲಿ ಕ್ರೌಂಚವರ್ಣದ ಶ್ರೇಷ್ಠವಾದ ಅಶ್ವಗಳು ಎಳೆದವು.
ಶ್ವೇತಾಸ್ತು ಪ್ರತಿವಿಂಧ್ಯಂ ತಂ ಕೃಷ್ಣಗ್ರೀವಾ ಹಯೋತ್ತಮಾಃ |
ಯುವಾನಮವಹನ್ ಯುದ್ಧೇ ಯಂತುಃ ಪ್ರೇಷ್ಯಕರಾ ಹಯಾಃ ॥22॥
ಶ್ವೇತವರ್ಣದ, ಕತ್ತಿನಲ್ಲಿ ಮಾತ್ರ ಕಪ್ಪು ಬಣ್ಣವುಳ್ಳ, ಸಾರಥಿಯ ಆಜ್ಞೆಯನ್ನು ಪಾಲಿಸುವ, ಶ್ರೇಷ್ಠವಾದ ಅಶ್ವಗಳು ಯುದ್ಧದಲ್ಲಿ ಯುವಕನಾದ ಪ್ರತಿವಿಂಧ್ಯನನ್ನು ಎಳೆದವು.
ಸುತಸೋಮಂ ತು ಯೋಧಾಗ್ರ್ಯಂ ಭೀಮಪುತ್ರಂ ಮಹಾಬಲಮ್ |
ಸುತಸೋಮಂ ತು ದ್ರೌಪದ್ಯಾಂ ಪಾರ್ಥಃ ಪುತ್ರಮಜೀಜನತ್ |
ಮಾಷಪುಷ್ಪಸವರ್ಣಾಸ್ತಮವಹನ್ ವಾಜಿನೋ ರಣೇ ॥ 23 ॥
ಭೀಮಸೇನನು ದ್ರೌಪದಿಯಲ್ಲಿ ಸುತಸೋಮ ಎಂಬ ಪುತ್ರನನ್ನು ಪಡೆದನು. ಮಹಾಬಲನಾದ ಭೀಮಪುತ್ರನಾದ, ಶ್ರೇಷ್ಠ ಯೋಧನಾದ ಸುತಸೋಮನನ್ನು ಮಾಷಪುಷ್ಪಗಳ (ಉದ್ದಿನ ಗಿಡದ ಹೂವುಗಳು) ವರ್ಣಕ್ಕೆ ಸಮವಾದ ಬಣ್ಣವನ್ನು ಹೊಂದಿದ ಅಶ್ವಗಳು ರಣರಂಗದಲ್ಲಿ ಎಳೆದವು.
ಸಹಸ್ರಸೋಮಪ್ರತಿಮೋ ಬಭೂವ
ಪುರೇ ಕುರೂಣಾಮುದಯೇಂದುನಾಮ್ನಿ |
ತಸ್ಮಿನ್ ಜಾತಃ ಸೋಮಸಂಕ್ರಂದಮಧ್ಯೇ
ಯಸ್ಮಾತ್ತಸ್ಮಾತ್ಸುತಸೋಮೋಽಭವತ್ ಸಃ ॥ 24 ॥|
ಕುರುಗಳ ಪಟ್ಟಣದಲ್ಲಿ ಸೋಮನಾಮಕವಾದ ಸಹಸ್ರ ಸೋಮಯಾಗಗಳನ್ನು ಮಾಡಿದಾಗ ಸೋಮಾಭಿಷವದ ಮಧ್ಯದಲ್ಲಿ ಸಹಸ್ರ ಚಂದ್ರನ ಕಾಂತಿಯನ್ನು ಹೊಂದಿದವನಾಗಿ ಜನಿಸಿದ ಕಾರಣದಿಂದ ಅವನಿಗೆ ಸುತಸೋಮ ಎಂಬ ಹೆಸರು ಬಂದಿತು.
ಸಹಸ್ರಸೋಮಪ್ರತಿಮಾ ಹಯಾಃ ಕನಕಭೂಷಣಾಃ |
ವೀರಂ ತಮವಹನ್ ಯುದ್ಧೇ ಹೇಷಮಾಣಾಃ ಸಮಂತತಃ ॥ 25 ॥
ಸಹಸ್ರಚಂದ್ರರ ಕಾಂತಿಯನ್ನು ಹೊಂದಿದ, ಕನಕಭೂಷಣವನ್ನು ಹೊಂದಿದ ಅಶ್ವಗಳು ಕೆನೆಯುತ್ತಾ ಯುದ್ಧದಲ್ಲಿ ಎಲ್ಲ ಕಡೆಗಳಲ್ಲಿ ಆ ವೀರನನ್ನು ಎಳೆದವು.
ನಾಕುಲಂ ತು ಶತಾನೀಕಂ ಸಾಲಪುಷ್ಪಸಮಾ ಹಯಾಃ |
ಆದಿತ್ಯತರುಣಪ್ರಖ್ಯಾ ಶ್ಲಾಘನೀಯಮುದಾವಹನ್ ॥ 26 ॥
ನಕುಲನ ಪುತ್ರನಾದ, ಶ್ಲಾಘನೀಯನಾದ ಶತಾನೀಕನನ್ನು ಸಾಲವೃಕ್ಷದ ಪುಷ್ಪಗಳಿಗೆ ಸಮಾನವಾದ ಬಣ್ಣವನ್ನು ಹೊಂದಿದ, ಉದಯಿಸಿದ ಸೂರ್ಯನಂತಿರುವ ಅಶ್ವಗಳು ಎಳೆದವು.
ಕಾಂಚನಾಪೀಡನೈರ್ಗಾತ್ರೈಃ ಮಾಯೂರಗ್ರೀವಸನ್ನಿಭಾಃ |
ದ್ರೌಪದೇಯಂ ನರವ್ಯಾಘ್ರಂ ಶ್ರುತಕರ್ಮಾಣಮಾವಹನ್ ॥ 27 ॥
ಸುವರ್ಣಮಯವಾದ ಶಿರಸ್ಸಿನ ಆಭರಣವನ್ನು ಹೊಂದಿದ ಶರೀರದಿಂದ ಕೂಡಿದವುಗಳಾಗಿ, ನವಿಲಿನ ಕತ್ತಿನ ಬಣ್ಣವುಳ್ಳ ಅಶ್ವಗಳು ದ್ರೌಪದಿಯ ಪುತ್ರನೂ, ನರವ್ಯಾಘ್ರನೂ ಆದ ಶ್ರುತಕರ್ಮನನ್ನು ಎಳೆದವು.
ಶ್ರುತಕೀರ್ತಿಂ ಶ್ರುತನಿಧಿಂ ದ್ರೌಪದೇಯಂ ಹಯೋತ್ತಮಾಃ |
ಊಹುಃ ಪಾರ್ಥಸಮಂ ಯುದ್ಧೇ ಚಾಷಪತ್ರನಿಭಾ ಹಯಾಃ ॥ 28 ॥
ವಿದ್ಯಾನಿಧಿಯಾದ, ದ್ರೌಪದಿಯ ಪುತ್ರನಾದ, ಅರ್ಜುನನಿಗೆ ಸಮನಾದ, ಶ್ರುತಕೀರ್ತಿಯನ್ನು ಚಾಷಪಕ್ಷಿಯ (ಕರಿ ಹಕ್ಕಿ) ಸಮನಾದ ಬಣ್ಣವುಳ್ಳ ಅಶ್ವಗಳು ಎಳೆದವು.
ಯಮಾಹುರಧ್ಯರ್ಧಗುಣಂ ಪಾರ್ಥಾತ್ ಕೃಷ್ಣಾಚ್ಚ ಸಂಯುಗೇ |
ಸೋಽಭಿಮನ್ಯುಃ ಪಿಶಂಗೈಸ್ತು ಭೃಶಮಶ್ವೈರ್ನ್ಯವರ್ತತ ॥ 29 ॥
ಯಾವನನ್ನು ಕೃಷ್ಣನಿಗಿಂತಲೂ ಮತ್ತು ಅರ್ಜುನನಿಗಿಂತಲೂ ಒಂದೂವರೆಯಷ್ಟು ಹೆಚ್ಚು ಗುಣವುಳ್ಳವನು ಎಂದು ಹೇಳುತ್ತಾರೆಯೋ ಅಂತಹ ಅಭಿಮನ್ಯುವು ಪಿಶಂಗ (ಕಂದು) ಬಣ್ಣದ ಅಶ್ವಗಳಿಂದ ರಣರಂಗಕ್ಕೆ ಶೀಘ್ರವಾಗಿ ಹಿಂದಿರುಗಿದನು.
ಪಲಾಲಕಾಂಡವರ್ಣಾಸ್ತು ವಾರ್ಧಕ್ಷೇಮಿಂ ತರಸ್ವಿನಮ್ |
ಊಹುಃ ಸುತುಮುಲೇ ಯುದ್ಧೇ ಹಯಾ ಹೃಷ್ಟಾಃ ಸ್ವಲಂಕೃತಾಃ ॥ 30 ॥
ವೇಗಶಾಲಿಯಾದ ವಾರ್ಧಕ್ಷೇಮಿಯನ್ನು ಪಲಾಲ ಸಸ್ಯದ ಕಾಂಡಕ್ಕೆ ಸಮಾನವಾದ ವರ್ಣವುಳ್ಳ ಅಶ್ವಗಳು ಚೆನ್ನಾಗಿ ಅಲಂಕೃತವಾಗಿ ಸಂತೋಷದಿಂದ ತೀವ್ರವಾದ ಯುದ್ಧದಲ್ಲಿ ಎಳೆದವು.
ಕುಮಾರಂ ಶಿತಿಪಾದಾಸ್ತು ರುಗ್ಮಚಿತ್ರೈರುರಶ್ಛದೈಃ |
ಸೌಚಿತ್ತಿಮವಹನ್ ಯುದ್ಧೇ ಯಂತುಃ ಪ್ರೇಷ್ಯಕರಾ ಹಯಾಃ ॥ 31 ॥
ಬಿಳಿಯ ಪಾದಗಳಿಂದ ಕೂಡಿದ, ಸುವರ್ಣಗಳಿಂದ ವಿಚಿತ್ರವಾಗಿ ಕಾಣುವ ಎದೆಯ ಕವಚದಿಂದ ಕೂಡಿದ, ಸಾರಥಿಗೆ ವಶವಾದ ಅಶ್ವಗಳು ಕುಮಾರನಾದ ಸೌಚಿತ್ತಿಯನ್ನು ರಣರಂಗದಲ್ಲಿ ಎಳೆದವು.
ರುಗ್ಮಪುಷ್ಪಾವಕೀರ್ಣಾಸ್ತು ಕೌಶೇಯಸದೃಶಾ ಹಯಾಃ |
ಸುವರ್ಣಮಾಲಿನಃ ಕ್ಷಾಂತಾಃ ಶ್ರೇಣಿಮಂತಮುದಾವಹನ್ ॥ 32 ॥
ಸುವರ್ಣಮಯವಾದ ಪುಷ್ಪಗಳಿಂದ ತುಂಬಿದ, ರೇಷ್ಮೆಯ ಬಣ್ಣಕ್ಕೆ ಸದೃಶವಾದ, ಸುವರ್ಣಮಾಲೆಗಳನ್ನು ಧರಿಸಿದ ಪಳಗಿದ ಅಶ್ವಗಳು

ಶ್ರೇಣಿಮಂತನನ್ನು ಎಳೆದವು.
ರುಗ್ಮಮಾಲಾಧರಾಃ ಶುಭ್ರಾ ಹೇಮವರ್ಣಾಃ ಸ್ವಲಂಕೃತಾಃ |
ಕಾಶಿರಾಜಂ ಹಯಶ್ರೇಷ್ಠಾಃ ಶ್ಲಾಘನೀಯಮುದಾವಹನ್ ॥ 33 ॥
ಸುವರ್ಣಮಾಲೆಗಳನ್ನು ಧರಿಸಿದ, ಚೆನ್ನಾಗಿ ಅಲಂಕರಿಸಲ್ಪಟ್ಟ, ಶುಭ್ರವಾದ, ಸುವರ್ಣವರ್ಣದ ಶ್ರೇಷ್ಠ ಅಶ್ವಗಳು ಶ್ಲಾಘನೀಯನಾದ ಕಾಶಿರಾಜನನ್ನು ಎಳೆದವು.
ಯೋಽಶ್ರೂಯತ ಧನುರ್ವೇದೇ ಬ್ರಾಹ್ಮೇ ವೇದೇ ಚ ಪಾರಗಃ |
ಹ್ರೀಮಾನ್ ಸತ್ಯಧೃತಿಃ ಶೂರೋ ದ್ರೋಣಂ ಪ್ರೇಪ್ಸುಃ ಪರಂತಪಃ ॥34॥
ಯಃ ಸ ಪಾಂಚಾಲಸೈನ್ಯಾನಾಂ ದ್ರೋಣಮಂಶಮಕಲ್ಪಯತ್ |
ಪಾರಾವತಸವರ್ಣಾಶ್ವಾ ಧೃಷ್ಟದ್ಯುಮ್ನಮುದಾವಹನ್ ॥ 35 ॥
ಯಾವನು ಪರಂತಪನಾಗಿ ಧನುರ್ವೇದದಲ್ಲಿಯೂ, ಬ್ರಾಹ್ಮವೇದದಲ್ಲಿಯೂ ಪಾರಂಗತನಾಗಿ, ನಾಚಿಕೆಯುಳ್ಳವನೂ, ಸತ್ಯವಾದ ಧೈರ್ಯವುಳ್ಳವನೂ, ಶೂರನೂ ಆಗಿ ದ್ರೋಣರನ್ನು ಕೊಲ್ಲಲು ಬಯಸಿದನೋ, ಪಾಂಚಾಲ ಸೈನ್ಯದಲ್ಲಿ ಯಾವನು ದ್ರೋಣರನ್ನು ತನ್ನಿಂದ ವಧಿಸಲ್ಪಡಬೇಕಾದ ಭಾಗವೆಂದು ಕಲ್ಪಿಸಿದನೋ ಅಂತಹ ಧೃಷ್ಟದ್ಯುಮ್ನನನ್ನು ಪಾರಿವಾಳದ ಬಣ್ಣದ ಅಶ್ವಗಳು ಎಳೆದವು.
ತಮನ್ವಯಾತ್ ಸತ್ಯಧೃತಿಃ ಸೌವಿಂದೋ ಯುದ್ಧದುರ್ಮದಃ |
ಶ್ರೇಣಿಮಾನ್ ವಸುದಾನಶ್ಚ ಪುತ್ರಃ ಕಾಶ್ಯಸ್ಯ ಚಾಭಿಭೂಃ ॥ 36 ॥
ಅವನನ್ನು ಸತ್ಯಧೃತಿ, ಯುದ್ಧದುರ್ಮದನಾದ ಸೌವಿಂದ, ಶ್ರೇಣಿಮಾನ್, ವಸುದಾನ ಮತ್ತು ಶತ್ರುಸಂಹಾರಕನಾದ ಕಾಶಿರಾಜನ ಪುತ್ರ ಎಲ್ಲರೂ ಹಿಂಬಾಲಿಸಿದರು.
ಯಯುಃ ಪರಮಕಾಂಬೋಜೈರ್ಜವನೈರ್ಹೇಮಮಾಲಿಭಿಃ |
ಭೀಷಯಂತೋ ದ್ವಿಷತ್ಸೈನ್ಯಂ ಯಮವೈಶ್ರವಣೋಪಮಾಃ ॥ 37 ॥
ಯಮನಿಗೂ ಮತ್ತು ಕುಬೇರನಿಗೂ ಸದೃಶರಾದ ಅವರು ಹೇಮಮಾಲೆಗಳನ್ನು ಧರಿಸಿದ, ವೇಗಶಾಲಿಗಳಾದ ಕಾಂಬೋಜ ದೇಶದ ಅಶ್ವಗಳಿಂದ ಶತ್ರುಸೈನ್ಯವನ್ನು ಭಯಪಡಿಸುತ್ತಾ ಹೊರಟರು.
ಯೇ ತು ಪುಷ್ಕರಸಾರಸ್ಯ ತುಲ್ಯವರ್ಣಾ ಹಯೋತ್ತಮಾಃ |
ಜವೇ ಶ್ಯೇನಸಮಾಶ್ಚಿತ್ರಾಃ ಸುದಾಮಾನಮುದಾವಹನ್ ॥ 38 ॥
ಕಮಲ ಕೇಸರ ಬಣ್ಣಕ್ಕೆ ಸಮವಾದ ಬಣ್ಣವುಳ್ಳ, ವೇಗದಲ್ಲಿ ಶ್ಯೇನಕ್ಕೆ ಸಮವಾದ ವೇಗವುಳ್ಳ, ವಿಚಿತ್ರವಾದ ಮತ್ತು ಶ್ರೇಷ್ಠವಾದ ಅಶ್ವಗಳು ಸುದಾಮನನ್ನು ಎಳೆದವು.
ಶಶಲೋಹಿತವರ್ಣಾಸ್ತು ಪಾಂಡರೋದ್ಗತರಾಜಯಃ |
ಪಾಂಚಾಲ್ಯಂ ಗೋಪತೇಃ ಪುತ್ರಂ ಸಿಂಹಸೇನಮುದಾವಹನ್ ॥ 39 ॥
ಮೊಲದ ರಕ್ತದ ವರ್ಣಕ್ಕೆ ಸಮವಾದ ವರ್ಣವುಳ್ಳ, ಕತ್ತಿನ ಮೇಲೆ ಬಿಳಿಯ ರೋಮರಾಜಿಗಳನ್ನುಳ್ಳ ಅಶ್ವಗಳು ಪಾಂಚಾಲ ರಾಜಕುಮಾರನಾದ ಸಿಂಹಸೇನನನ್ನು ಎಳೆದವು.
ಇಂದ್ರಾಯುಧಸವರ್ಣಾಸ್ತು ಕುಂತಿಭೋಜಮುದಾವಹನ್ |
ಆಪತ್ಸು ನ ವಿಷೀದಂತೋ ಮಾತುಲಂ ಸವ್ಯಸಾಚಿನಃ ॥ 40 ॥
ಅರ್ಜುನನ ಸೋದರಮಾವನಾದ ಕುಂತಿಭೋಜನನ್ನು ಸಂಕಟದಲ್ಲಿ ವಿಷಾದವನ್ನು ಹೊಂದದ ಕಾಮನಬಿಲ್ಲಿಗೆ ಸಮವಾದ ಬಣ್ಣವುಳ್ಳ ಅಶ್ವಗಳು ಎಳೆದವು.
ಅಂತರಿಕ್ಷಸವರ್ಣಾಸ್ತು ತಾರಕಾಭಿಶ್ಚಿತಾ ಇವ |
ರಾಜಾನಂ ರೋಚಮಾನಂ ತೇ ಹಯಾಃ ಶಂಖಮುದಾವಹನ್ ॥41॥
ಅಂತರಿಕ್ಷಕ್ಕೆ ಸಮಾನವಾದ ವರ್ಣವುಳ್ಳ, ನಕ್ಷತ್ರದಿಂದ ತುಂಬಿದಂತೆ ಕಾಣುವ ಅಶ್ವಗಳು ರೋಚಮಾನನಾದ ಶಂಖರಾಜನನ್ನು ಎಳೆದವು.
ಕರ್ಬುರಾಃ ಶಿತಿಪಾದಾಸ್ತು ಹೇಮಜಾಲಪರಿಚ್ಛದಾಃ |
ಜಾರಾಸಂಧಿಂ ಹಯಶ್ರೇಷ್ಠಾಃ ಸಹದೇವಮುಪಾವಹನ್ ॥ 42 ॥
ದೇಹವೆಲ್ಲವೂ ಮಿಶ್ರವರ್ಣದಿಂದ ಕೂಡಿ, ಬಿಳಿಯ ಪಾದವನ್ನು ಹೊಂದಿ, ಸುವರ್ಣಜಾಲಗಳಿಂದ ಅಲಂಕೃತವಾದ ಶ್ರೇಷ್ಠವಾದ ಅಶ್ವಗಳು ಜರಾಸಂಧನ ಪುತ್ರನಾದ ಸಹದೇವನನ್ನು ಎಳೆದವು.
ಪುಭದ್ರಕಾಸ್ತು ಪಾಂಚಾಲಾಃ ಷಟ್ಸಹಸ್ರಾ ಉದಾಯುಧಾಃ |
ನಾನಾವರ್ಣೈರ್ಹಯ್ಯೈಃ ಶ್ರೇಷ್ಠೈರ್ಹೇಮರೂಪ್ಯಮಣಿಧ್ವಜೈಃ ॥ 43 ॥
ಶರವ್ರಾತೈರ್ನಿರುಂಧಂತಃ ಶತ್ರೂನ್ ವಿತತಕಾರ್ಮುಕಾಃ |
ಸಮಾನಮೃತ್ಯವೋ ಭೂತ್ವಾ ಧೃಷ್ಟದ್ಯುಮ್ನಂ ಸಮನ್ವಯುಃ ॥ 44 ॥
ಪಾಂಚಾಲ ದೇಶದ ಪುಭದ್ರಕರು ಆರು ಸಹಸ್ರ ಯೋಧರು ಆಯುಧಗಳನ್ನು ಎತ್ತಿಹಿಡಿದು ನಾನಾಬಣ್ಣಗಳಿಂದ ಕೂಡಿದ ಅಶ್ವಗಳಿಂದಲೂ ಮತ್ತು ಸುವರ್ಣ-ರಜತ-ಮರಕತಾದಿಗಳಿಂದ ಶೋಭಿಸುವ ಧ್ವಜಗಳಿಂದಲೂ ಕೂಡಿದವರಾಗಿ ಬಿಲ್ಲನ್ನು ಎಳೆದು ಬಾಣಗಳ ಸಮೂಹದಿಂದ ಶತ್ರುಗಳನ್ನು ತಡೆಯುತ್ತಾ ಸಮಾನ ಮೃತ್ಯುವನ್ನು ಹೊಂದುವವರಾಗಿ ಧೃಷ್ಟದ್ಯುಮ್ನನನ್ನು ಹಿಂಬಾಲಿಸಿದರು.
ಬಭ್ರುಕೌಶೇಯವರ್ಣಾಸ್ತು ಸುವರ್ಣವರಮಾಲಿನಃ |
ಊಹುರಗ್ಲಾನಮನಸಃ ಚೇಕಿತಾನಂ ಹಯೋತ್ತಮಾಃ ॥ 45 ॥

ಬಭ್ರುಕೌಶೇಯ ವರ್ಣವನ್ನು ಹೊಂದಿದ (ಕಂದು ಮತ್ತು ಬಿಳಿಯ ಬಣ್ಣದಿಂದ ಕೂಡಿದ) ಶ್ರೇಷ್ಠವಾದ ಸುವರ್ಣಮಾಲೆಗಳನ್ನು ಧರಿಸಿದ ಕುಗ್ಗದ ಮನಸ್ಸುಳ್ಳ ಶ್ರೇಷ್ಠವಾದ ಅಶ್ವಗಳು ಚೇಕಿತಾನನ ರಥವನ್ನು ಎಳೆದವು.

ಪಾಂಚಾಲಾನಾಂ ರಥಶ್ರೇಷ್ಠೋ ನಿವೃತ್ತೋ ಜನಮೇಜಯಃ |
ತಸ್ಯ ಸರ್ಷಪಪುಷ್ಪಾಣಾಂ ತುಲ್ಯವರ್ಣಾ ಹಯೋತ್ತಮಾಃ || 46 ||
ಮಾಷವರ್ಣಾಸ್ತು ಜವನಾ ಬೃಹಂತೋ ಹೇಮಮಾಲಿನಃ |
ದಧಿಪೃಷ್ಠಾಶ್ಚಂದ್ರಮುಖಾಃ ಪಾಂಚಾಲಮವಹನ್ ಹಯಾಃ || 47 ||

ಪಾಂಚಾಲರ ಶ್ರೇಷ್ಠ ರಥನಾದ ಜನಮೇಜಯನು ಹಿಂದಿರುಗಿದನು. ಅವನ ಶ್ರೇಷ್ಠವಾದ ಅಶ್ವಗಳು ಸಾಸಿವೆಯ ಹೂವಿನ ಬಣ್ಣಕ್ಕೆ ಸಮಾನವಾದ ಬಣ್ಣವುಳ್ಳವು. ಉದ್ದಿನ ಬಣ್ಣದ (ಮಾಸಲು ಕಪ್ಪು ಬಣ್ಣದ), ವೇಗಶಾಲಿಗಳಾದ, ಹೇಮಮಾಲೆಯನ್ನು ಧರಿಸಿದ, ಮೊಸರಿನ ಬಣ್ಣದ ಹಿಂಭಾಗವನ್ನೂ, ಚಂದ್ರುವಣರ್ದ ಮುಖವನ್ನೂ ಧರಿಸಿದ ದೊಡ್ಡ ಅಶ್ವಗಳು ಪಾಂಚಾಲನ ರಥವನ್ನು ಎಳೆದವು. ಗೋಧ, ಮದ್ರುಕ ದೇಶದ, ಬಾಣದ ದಂಡದಂತೆ ನೇರವಾದ ಅಶ್ವಗಳು ದಂಡಧಾರನ ರಥವನ್ನು ಎಳೆದವು.

ಹೇಮಮಾಲಾಸ್ತು ಬಿಭ್ರಾಣಾಃ ಚಕ್ರವಾಕೋದರೋಪಮಾಃ |
ಕೋಸಲಾಧಿಪತೇಃ ಪುತ್ರಂ ಸುಕ್ಷತ್ರಂ ವಾಜಿನೋಽವಹನ್ || 48 ||

ಕೋಸಲಾಧಿಪತಿಯ ಪುತ್ರನಾದ ಸುಕ್ಷತ್ರನನ್ನು ಚಿನ್ನದ ಮಾಲೆಗಳನ್ನು ಧರಿಸಿದ, ಚಕ್ರವಾಕ ಪಕ್ಷಿಯ ಉದರದಂತೆ ಸ್ವಲ್ಪ ಬಿಳಿಯ ಬಣ್ಣದಿಂದ ಕೂಡಿದ ಅಶ್ವಗಳು ಎಳೆದವು.

ಶಬಲಾಸ್ತೇ ಬೃಹಂತೋಽಶ್ವಾ ದಾಂತಾ ಜಾಂಬೂನದಸ್ರುಜಃ |
ಯುದ್ಧೇ ಸತ್ಯಧೃತಿಂ ಕ್ಷೇಮಿಮವಹನ್ನತಿಶೋಭನಾಃ || 49 ||

ಕ್ಷೇಮರಾಜನ ಪುತ್ರನಾದ ಸತ್ಯಧೃತಿಯನ್ನು ಬಹಳ ಸುಂದರವಾದ, ಅನೇಕ ವರ್ಣಗಳಿಂದ ಕೂಡಿದ, ಚೆನ್ನಾಗಿ ಪಳಗಿದ, ಚಿನ್ನದ ಮಾಲೆಯನ್ನು ಧರಿಸಿದ ದೊಡ್ಡ ಅಶ್ವಗಳು ಎಳೆದವು.

ಏಕವರ್ಣೇನ ಸರ್ವೇಣ ಧ್ವಜೇನ ಕವಚೇನ ಚ |
ಅಶ್ವೈಶ್ಚ ಧನುಷಾ ಚೈವ ಶುಕ್ಲೈಃ ಶುಕ್ಲೋ ನ್ಯವರ್ತತ || 50 ||

ಧ್ವಜ-ಕವಚ-ಅಶ್ವಗಳು-ಧನುಸ್ಸು ಎಲ್ಲವೂ ಒಂದೇ ಶುಕ್ಲ ವರ್ಣದಿಂದ ಕೂಡಿದವುಗಳಾಗಿ ಶುಕ್ಲರಾಜನನ್ನು ರಣರಂಗಕ್ಕೆ ಹಿಂದಕ್ಕೆ ಕರೆತಂದವು.

ಸಮುದ್ರಸೇನಪುತ್ರಂ ತು ಸಮುದ್ರಾರುಣಸಪ್ರಭಮ್ |
ಅಶ್ವಾಃ ಶಶಾಂಕಸದೃಶಾಃ ಚಂದ್ರದೇವಮುದಾವಹನ್ || 51 ||

ಸಮುದ್ರಸೇನನ ಪುತ್ರನಾದ, ಸಮುದ್ರದಂತೆ ಅರುಣವರ್ಣೋಪೇತನಾದ ಚಂದ್ರದೇವನನ್ನು ಚಂದ್ರವರ್ಣದ ಅಶ್ವಗಳು ಎಳೆದವು.

ನೀಲೋತ್ಪಲಸವರ್ಣಾಶ್ಚ ತಪನೀಯವಿಭೂಷಿತಾಃ |
ಶೈಬ್ಯಂ ಚಿತ್ರರಥಂ ಯುದ್ಧೇ ಚಿತ್ರಮಾಲಾಽವಹನ್ ಹಯಾಃ || 52 ||

ಸುವರ್ಣಾಲಂಕೃತಗಳಾದ, ನೀಲೋತ್ಪಲ ವರ್ಣವನ್ನು ಹೊಂದಿದ, ವಿಚಿತ್ರ ಮಾಲೆಗಳನ್ನು ಧರಿಸಿದ ಅಶ್ವಗಳು ಶಿಬಿಯ ವಂಶದಲ್ಲಿ ಬಂದ ಚಿತ್ರರಥರನ್ನು ಯುದ್ಧದಲ್ಲಿ ಎಳೆದವು.

ಕಲಾಯಪುಷ್ಪವರ್ಣಾಸ್ತು ಶ್ವೇತಲೋಹಿತರಾಜಯಃ |
ರಥಸೇನಂ ಹಯಶ್ರೇಷ್ಠಾಃ ಸಮೂಹುರ್ಯುದ್ಧದುರ್ಮದಮ್ || 53 ||

ಕಲಾಯ ಪುಷ್ಪದಂತೆ ಮಿಶ್ರವಾದ ಕಪ್ಪುಬಣ್ಣದಿಂದ ಕೂಡಿ, ಕತ್ತಿನ ಮೇಲೆ ಮುತ್ತು ಮತ್ತು ಹವಳಗಳನ್ನು ಹೋಲುವ ರಾಜಿಗಳಿಂದ ಕೂಡಿದ ಶ್ರೇಷ್ಠವಾದ ಅಶ್ವಗಳು ಯುದ್ಧ ದುರ್ಮದನಾದ ರಥಸೇನನನ್ನು ಎಳೆದವು.

ಯಂ ತು ಸರ್ವಮನುಷ್ಯೇಷು ಪ್ರಾಹುಃ ಶೂರತರಂ ಬುಧಾಃ |
ತಂ ಪಟಚ್ಚರಹಂತಾರಂ ಶುಕವರ್ಣಾಽವಹನ್ ಹಯಾಃ || 54 ||

ಯಾವನನ್ನು ಜ್ಞಾನಿಗಳು ಎಲ್ಲ ಮನುಷ್ಯರಲ್ಲಿಯೂ ಅತ್ಯಂತ ಶೂರನಾದವನೆಂದು ಹೇಳುತ್ತಾರೆಯೋ, ಅಂತಹ ಪಟಚ್ಚರ ದೈತ್ಯರನ್ನು ಸಂಹರಿಸಿದ ಸಮುದ್ರರಾಜನನ್ನು ಗಿಣಿಯ ಬಣ್ಣದ ಅಶ್ವಗಳು ಎಳೆದವು.

ಚಿತ್ರಾಯುಧಂ ಚಿತ್ರಮಾಲ್ಯಂ ಚಿತ್ರವರ್ಮರಥಧ್ವಜಮ್ |
ಊಹುಃ ಕಿಂಶುಕಪುಷ್ಪಾಣಾಂ ತುಲ್ಯವರ್ಣಾ ಹಯೋತ್ತಮಾಃ || 55 ||

ವಿಚಿತ್ರವಾದ ಕವಚ-ರಥ-ಧ್ವಜಗಳನ್ನು ಹೊಂದಿದ, ವಿಚಿತ್ರವಾದ ಮಾಲೆಯನ್ನು ಧರಿಸಿದ, ಚಿತ್ರಾಯುಧನನ್ನು ಮುತ್ತುಗದ ಹೂವಿನ ಬಣ್ಣದ ಶ್ರೇಷ್ಠವಾದ ಅಶ್ವಗಳು ಎಳೆದವು.

ಏಕವರ್ಣೇನ ಸರ್ವೇಣ ಧ್ವಜೇನ ಕವಚೇನ ಚ |
ಧನುಷಾ ರಥವಾಹೈಶ್ಚ ನೀಲೈರ್ನೀಲೋಽಭ್ಯವರ್ತತ || 56 ||

ತನ್ನ ಧ್ವಜ, ಕವಚ, ಧನುಸ್ಸು, ಅಶ್ವಗಳು ಎಲ್ಲವೂ ಒಂದೇ ಕಪ್ಪು ಬಣ್ಣದಿಂದ ಕೂಡಿದ ನೀಲನು ರಣರಂಗಕ್ಕೆ ಹಿಂದಿರುಗಿದನು.

ಯೇ ತು ಪುಷ್ಕರಪರ್ಣಸ್ಯ ತುಲ್ಯವರ್ಣಾ ಹಯೋತ್ತಮಾಃ |
ತೇ ರೋಚಮಾನಸ್ಯ ಸುತಂ ಹೇಮರೂಪಮುದಾವಹನ್ || 57 ||

ಕಮಲದ ಪತ್ರಕ್ಕೆ ಸಮಾನವಾದ ವರ್ಣವುಳ್ಳ ಶ್ರೇಷ್ಠವಾದ ಅಶ್ವಗಳು ರೋಚಮಾನನ ಪುತ್ರನಾದ ಹೇಮರೂಪನನ್ನು ಎಳೆದವು.

ನಾನಾರೂಪೈ ರತ್ನಚಿತ್ರೈರ್ವರೂಥಧ್ವಜಕಾರ್ಮುಕೈಃ |
ವಾಜಿಭಿಶ್ಚ ಪತಾಕಾಭಿಃ ಚಿತ್ರೈಶ್ಚಿತ್ರೋ ನ್ಯವರ್ತತ || 58 ||

ನಾನಾರೂಪಗಳನ್ನು ಹೊಂದಿದ ರತ್ನಗಳು, ರಕ್ಷಣೆಯ ವಸ್ತುಗಳು ಧ್ವಜ-ಧನುಸ್ಸುಗಳು, ಅಶ್ವಗಳು ಮತ್ತು ಪತಾಕೆಗಳು ಇವುಗಳಿಂದ

ಸಹಿತನಾಗಿ ಚಿತ್ರನು ಹಿಂದಿರುಗಿದನು.
ಗೋಧಾಶ್ಚ ಮದ್ರುಕಾಶ್ಚೈವ ಶರಕಾಂಡನಿಭಾ ಹಯಾಃ |
ನಿಶ್ರುತಾಂಗಾಃ ಕುಟಂಗಾಶ್ಚ ದಂಡಧಾರಮುದಾವಹನ್ ॥ 59 ॥
ಗೋಧ, ಮದ್ರುಕ, ನಿಶ್ರುತಾಂಗ, ಕುಟಂಗ ಈ ದೇಶದ ಬಾಣದ ಕಾಂಡದಂತಹ ಎದೆಯುಳ್ಳ (ಬಿಳಿಯ ಬಣ್ಣದ ಬೆನ್ನನ್ನು ಹೊಂದಿದ) ಅಶ್ವಗಳು ದಂಡಧಾರನನ್ನು ಎಳೆದವು.
ಆರಕೂಟಕವರ್ಣಾಭಾ ರಾಂಕವಾಸ್ತರಣಾಃ ಪೃಥಕ್ |
ಅವಹನ್ ಯೋಧಮುಖ್ಯಾನಾಮಯುತಾನಿ ಚತುರ್ದಶ ॥ 60 ॥
ಕಂಚಿನ ಬಣ್ಣದಿಂದ ಕೂಡಿದ, ರಾಂಕವಚರ್ಮಗಿಗಳನ್ನು ಹೊಂದಿದ ಅಶ್ವಗಳು ಹದಿನಾಲ್ಕು ಅಯುತ (ಹತ್ತು ಸಹಸ್ರ) ಯೋಧರನ್ನು ಎಳೆದವು.
ನಾನಾರೂಪೇಣ ರೂಪೇಣ ನಾನಾಮುಖಮುಖಾ ಹಯಾಃ |
ರಥಚ್ಛತ್ರಧ್ವಜಂ ವೀರಂ ಘಟೋತ್ಕಚಮುದಾವಹನ್ ॥ 61 ॥
ಅನೇಕ ವರ್ಣಗಳನ್ನು ಹೊಂದಿದ, ಅನೇಕ ವಿಧವಾದ ಮುಖಗಳನ್ನು ಹೊಂದಿದ ಅಶ್ವಗಳು, ರಥ-ಛತ್ರ-ಧ್ವಜಗಳಿಂದ ಕೂಡಿದ ವೀರನಾದ ಘಟೋತ್ಕಚನನ್ನು ಎಳೆದವು.
ಭಾರತಾನಾಂ ಸಮೇತಾನಾಮುತ್ಸ ೃಜ್ಯೈಕೋ ಬಲಾನಿ ಯಃ |
ಗತೋ ಯುಧಿಷ್ಠಿರಂ ಭಕ್ತ್ಯಾ ತ್ಯಕತ್ವ ಸರ್ವಸ್ವಮೀಪ್ಸಿತಮ್ ॥62॥
ಲೋಹಿತಾಕ್ಷಂ ಮಹಾಬಾಹುಂ ಯುಯುತ್ಸುಂ ಮಕರಧ್ವಜಮ್ |
ಮಹಾಸತತತ್ವ ವಹಂತ್ಯಶ್ವಾ ಸೌವರ್ಣೇ ಸ್ಯಂದನೇ ಸ್ಥಿತಮ್ ॥63॥
ಯಾವನು ಒಂದುಗೂಡಿದ ಕೌರವ ಸೇನೆಯನ್ನು ಬಿಟ್ಟು ಒಬ್ಬನೇ ತನ್ನ ಸರ್ವಸ್ವವನ್ನು ತ್ಯಾಗ ಮಾಡಿ, ಭಕೆತಯಿಂದ ಯುಧಿಷ್ಠಿರನ ಬಳಿಗೆ ಹೋದನೋ. ಅಂತಹ ಮಕರಧ್ವಜನಾದ, ಲೋಹಿತಾಕ್ಷನಾದ, ಮಹಾಬಾಹುವಾದ, ಸುವರ್ಣಮಯವಾದ ರಥದಲ್ಲಿ ಕುಳಿತ ಯುಯುತ್ಸುವನ್ನು ಮಹಾಬಲಶಾಲಿಗಳಾದ ಅಶ್ವಗಳು ಎಳೆದವು.
ಸರ್ವವರ್ಣಾಸ್ತು ಧರ್ಮಜ್ಞಮನೀಕಸ್ಥಂ ಯುಧಿಷ್ಠಿರಮ್ |
ರಾಜಶ್ರೇಷ್ಠಂ ಹಯಶ್ರೇಷ್ಠಾ ಹೃಷ್ಯಂತಃ ಪೃಷ್ಠತೋ ಯಯುಃ ॥ 64 ॥
ಧರ್ಮಜ್ಞನೂ, ಯುದ್ಧದಲ್ಲಿ ಸ್ಥಿರನಾದವನೂ ಆದ ಲೋಹಿತಾಕ್ಷನನ್ನು ಶ್ರೇಷ್ಠವಾದ ಅಶ್ವಗಳು ಸಂತೋಷದಿಂದ ಹಿಂಭಾಗದಲ್ಲಿ ಎಳೆದವು.
ವರ್ಣೈಶ್ಚೋಚ್ಚಾವಚಪ್ರಖ್ಯೈಃ ಸದಶ್ವಾನಾಂ ಪ್ರಭದ್ರಕಾಃ |
ಸನ್ನ್ಯವರ್ತಂತ ಯುದ್ಧಾಯ ಬಹವೋ ದೇವರೂಪಿಣಃ ॥ 65 ॥
ದೇವತೆಗಳ ರೂಪವನ್ನು ಹೊಂದಿದ, ಅನೇಕ ಪ್ರಭದ್ರಕರು (ಪಾಂಚಾಲ ದೇಶದ ಯೋಧರು) ಬೇರೆ ಬೇರೆ ಬಣ್ಣಗಳನ್ನು ಹೊಂದಿದ ಒಳ್ಳೆಯ ಅಶ್ವಗಳನ್ನು ಏರಿ ಯುದ್ಧಕ್ಕೆ ಹಿಂದಿರುಗಿದರು.
ತೇ ಯತ್ತಾ ಭೀಮಸೇನೇನ ಸಹಿತಾಃ ಕಾಂಚನಪ್ರಭಾಃ |
ಪ್ರತ್ಯದೃಶ್ಯಂತ ರಾಜೇಂದ್ರ ಸೇಂದ್ರಾ ಇವ ದಿವೌಕಸಃ॥ 66 ॥
ಎಲೈ ರಾಜೇಂದ್ರನೇ, ಪ್ರಭದ್ರಕರ ಅಧಿಪತಿಯಿಂದ ನಿಯಂತ್ರಿಸಲ್ಪಟ್ಟ, ಸುವರ್ಣಕಾಂತಿಯುಳ್ಳ ಅವರು ಇಂದ್ರನಿಂದ ಕೂಡಿದ ದೇವತೆಗಳಂತೆ ಕಂಡುಬಂದರು.
ಅತ್ಯರೋಚತ ತಾನ್ ಸರ್ವಾನ್ ಧೃಷ್ಟದ್ಯುಮ್ನಃ ಸಮಾಗತಾನ್ |
ಅತಿಸರ್ವಾಣಿ ಸೈನ್ಯಾನಿ ಭಾರದ್ವಾಜೋ ವ್ಯರೋಚತ ॥ 67 ॥
ಹಿಂದಿರುಗಿದ ಎಲ್ಲರಿಗಿಂತಲೂ ಧೃಷ್ಟದ್ಯುಮ್ನನು ಬಹಳವಾಗಿ ಶೋಭಿಸಿದನು. ಎರಡು ಸೈನ್ಯಗಳಲ್ಲಿಯೂ ದ್ರೋಣರು ಬಹಳವಾಗಿ ಶೋಭಿಸಿದರು.
ಅತೀವ ಶುಶುಭೇ ಯಸ್ಯ ಧ್ವಜಃ ಕೃಷ್ಣಾಜಿನೋತ್ತರಃ |
ಕಮಂಡಲುರ್ಮಹಾರಾಜ ಜಾತರೂಪಮಯಃ ಶುಭಃ ॥ 68 ॥
ಎಲೈ ಮಹಾರಾಜನೇ, ಸುವರ್ಣಮಯವಾದ, ಪವಿತ್ರವಾದ ಕೃಷ್ಣಾಜಿನ ಮತ್ತು ಕಮಂಡಲವನ್ನು ಹೊಂದಿದ ದ್ರೋಣರ ಧ್ವಜವು ಬಹಳವಾಗಿ ಶೋಭಿಸಿತು.
ಧ್ವಜಂ ತು ಭೀಮಸೇನಸ್ಯ ವೈಡೂರ್ಯಮಣಿರೋಚನಮ್ |
ಭ್ರಾಜಮಾನಂ ಮಹಾಸಿಂಹಂ ರಾಜತಂ ದೃಷ್ಟವಾನಹಮ್ ॥ 69 ॥
ವೈಡೂರ್ಯಮಣಿಗಳಿಂದ ಅಲಂಕೃತವಾದ, ರಜತಮಯವಾದ, ಶೋಭಿಸುವ, ಮಹಾಸಿಂಹದಿಂದ ಕೂಡಿದ ಭೀಮಸೇನನ ಧ್ವಜವನ್ನು ನಾನು ನೋಡಿದೆನು.
ಧ್ವಜಂ ತು ಕುರುರಾಜಸ್ಯ ಪಾಂಡವಸ್ಯ ಮಹಾತ್ಮನಃ |
ದೃಷ್ಟವಾನಸ್ಮಿ ಸೌವರ್ಣಂ ಸೋಮಂ ಗ್ರಹಗಣಾನ್ವಿತಮ್ ॥ 70 ॥
ಕುರುರಾಜನೂ, ಮಹಾತ್ಮನೂ, ಪಾಂಡವನೂ ಆದ ಧರ್ಮರಾಜನ ಸುವರ್ಣಮಯವಾದ, ಗ್ರಹಗಳಿಂದ ಅನ್ವಿತನಾದ ಚಂದ್ರನಿಂದ ಕೂಡಿದ ಧ್ವಜವನ್ನು ನೋಡಿದೆನು.
ವಿಷ್ವಗ್ ಲೋಹಿತಚರ್ಮಾಣೌ ದಿವ್ಯೌ ನಂದೋಪನಂದಕೌ |
ಯಂತ್ರೇಣಾಹನ್ಯಮಾನೌ ಚ ಸುಸ್ವನೌ ಹರ್ಷವರ್ಧನೌ ॥ 71 ॥

ಆ ರಥದಲ್ಲಿಯೇ ಕೆಂಪುಬಣ್ಣದ ಚರ್ಮದಿಂದ ಬಿಗಿಯಲ್ಪಟ್ಟ, ಯಂತ್ರದಿಂದ ಬಾರಿಸಲ್ಪಟ್ಟ, ಸಂತೋಷದಾಯಕವಾದ, ಒಳ್ಳೆಯ ಸ್ವರದಿಂದ ಕೂಡಿದ, ನಂದ ಮತ್ತು ಉಪನಂದ ಎಂಬ ಭೇರಿಗಳನ್ನು ನೋಡಿದೆನು.
ಶರಭಂ ಮೃಷ್ಟಸೌವರ್ಣಂ ನಕುಲಸ್ಯ ಮಹಾಧ್ವಜಮ್ |
ಅಪಶ್ಯಾಮ ರಣೇ ವ್ಯಾಘ್ರಂ ಭೀಷಯಾನಮವಸ್ಥಿತಮ್ ॥ 72 ॥
ನಕುಲನ ಮಹಾಧ್ವಜದಲ್ಲಿ ಪುಟವಿಟ್ಟ ಚಿನ್ನದಿಂದ ಮಾಡಿದ ಶರಭವನ್ನು ನಾವು ನೋಡಿದೆವು. ಭಯಂಕರವಾದ ರಥವನ್ನು ಏರಿದ ಅವನ ರಥದಲ್ಲಿ ವ್ಯಾಘ್ರವನ್ನು ಭಯಗೊಳಿಸುವ ಶರಭ ಧ್ವಜವನ್ನು ನೋಡಿದೆವು.
ಹಂಸಸ್ತು ರಾಜತಃ ಶ್ರೀಮಾನ್ ಧ್ವಜೇ ಘಂಟಾಪತಾಕವಾನ್ |
ಸಹದೇವಸ್ಯ ದುರ್ಧರ್ಷೋ ದ್ವಿಷತಾಂ ಶೋಕವರ್ಧನಃ ॥ 73 ॥
ಸಹದೇವನ ರಥದ ಧ್ವಜದಲ್ಲಿ ಘಂಟೆ ಪತಾಕೆಗಳಿಂದ ಕೂಡಿದ, ಕಾಂತಿಯುಕ್ತವಾದ, ರಜತಮಯವಾದ, ಶತ್ರುಗಳಿಗೆ ಶೋಕವನ್ನುಂಟು ಮಾಡುವ, ಸೋಲಿಸಲು ಅಸಾಧ್ಯವಾದ ಹಂಸವಿದೆ.
ಪಂಚಾನಾಂ ದ್ರೌಪದೇಯಾನಾಂ ಪ್ರತಿಮಾ ರಥಭೂಷಣಾಃ |
ಧರ್ಮಮಾರುತಶಕ್ರಾಣಾಮಶ್ವಿನೋಶ್ಚ ಮಹಾತ್ಮನೋಃ ॥ 74 ॥
ಮಹಾತ್ಮರಾದ ದ್ರೌಪದಿಯ ಐವರು ಪುತ್ರರ ರಥದಲ್ಲಿ ಕ್ರಮವಾಗಿ ಯಮ, ವಾಯು, ಇಂದ್ರ ಮತ್ತು ಅಶ್ವಿನಿಗಳ ಪ್ರತಿಮೆಗಳು ಧ್ವಜವಾಗಿವೆ.
ಅಭಿಮನ್ಯೋಃ ಕುಮಾರಸ್ಯ ಶಾರ್ಙ್ಗಪಕ್ಷೀ ಹಿರಣ್ಮಯಃ |
ರಥೋದ್ಧತರಜೋಲೋಲಜ್ಜೈತ್ರಚಾಮೀಕರೋಲ್ಬಣಃ ॥ 75 ॥
ಕುಮಾರನಾದ ಅಭಿಮನ್ಯುವಿನ ರಥದ ಧ್ವಜದಲ್ಲಿ, ಸುವರ್ಣಮಯವಾದ ರಥದ ಸಂಚಾರದಿಂದ ಎದ್ದ ಧೂಳಿನ ಜೊತೆಯಲ್ಲಿ, ಓಲಾಡುವ ದೀಪ್ತವಾದ ಚಿನ್ನದಂತೆ ಉಲ್ಬಣವಾದ ಶಾರ್ಙ್ಗ ಪಕ್ಷಿಯು ಇದೆ.
ಘಟೋತ್ಕಚಸ್ಯ ರಾಜೇಂದ್ರ ರಥೇ ಗೃಧ್ರೋ ವ್ಯರೋಚತ |
ಅಶ್ವಾಶ್ಚ ರೋಮಶಾಸ್ತಸ್ಯ ರಾವಣಸ್ಯ ಪುರಾ ಯಥಾ ॥ 76 ॥
ಎಲೈ ರಾಜೇಂದ್ರನೇ, ಘಟೋತ್ಕಚನ ರಥದಲ್ಲಿ ಹದ್ದು ಧ್ವಜವಾಗಿ ಶೋಭಿಸುತ್ತಿದೆ. ಅವನ ಅಶ್ವಗಳೂ ಸಹ ಹಿಂದೆ ರಾವಣನ ಅಶ್ವಗಳಂತೆ ಬಹಳ ರೋಮದಿಂದ ಕೂಡಿವೆ.
ಮಾಹೇಂದ್ರಂ ತು ಧನುರ್ದಿವ್ಯಂ ಧರ್ಮರಾಜೇ ಯುಧಿಷ್ಠಿರೇ |
ವಾಯವ್ಯಂ ಭೀಮಸೇನಸ್ಯ ಧನುರ್ದಿವ್ಯಮಭೂನ್ಮಹತ್ ॥ 77 ॥
ಧರ್ಮರಾಜನಾದ ಯುಧಿಷ್ಠಿರನಲ್ಲಿ ದಿವ್ಯವಾದ ಮಹೇಂದ್ರನ ಧನುಸ್ಸು ಇದೆ. ಭೀಮಸೇನನ ಬಳಿ ದಿವ್ಯವೂ, ದೊಡ್ಡದೂ ಆದ ವಾಯುದೇವರ ಧನುಸ್ಸಿದೆ.
ತ್ರೈಲೋಕ್ಯರಕ್ಷಣಾರ್ಥಾಯ ಬ್ರಹ್ಮಣಾ ಸೃಷ್ಟಮದ್ಭುತಮ್ |
ಯದ್ ದಿವ್ಯಮಕ್ಷಯಂ ಚೈವ ಗಾಂಡೀವಂ ಫಲ್ಗುನಸ್ಯ ಚ ॥ 78 ॥
ಮೂರುಲೋಕಗಳ ರಕ್ಷಣೆಗಾಗಿ ಬ್ರಹ್ಮದೇವರು ಸೃಷ್ಟಿಸಿದ ಅದ್ಭುತವೂ, ದಿವ್ಯವೂ, ಅಕ್ಷಯವೂ ಆದ ಗಾಂಡೀವ ಧನುಸ್ಸು ಅರ್ಜುನನ ಬಳಿ ಇದೆ.
ವೈಷ್ಣವಂ ನಕುಲಸ್ಯಾಥ ಸಹದೇವಸ್ಯ ಚಾಶ್ವಿನಮ್ |
ಘಟೋತ್ಕಚಸ್ಯ ಪೌಲಸ್ತ್ಯಂ ಧನುರ್ದಿವ್ಯಂ ಭಯಾನಕಮ್ ॥ 79 ॥
ನಕುಲನ ಬಳಿ ವೈಷ್ಣವ ಧನುಸ್ಸು, ಸಹದೇವನ ಬಳಿ ಅಶ್ವಿನಿದೇವತೆಗಳ ಧನುಸ್ಸು ಇದೆ. ಘಟೋತ್ಕಚನ ಬಳಿ ಭಯಂಕರವೂ, ದಿವ್ಯವೂ ಆದ ಪುಲಸ್ತ್ಯರ ಧನುಸ್ಸಿದೆ.
ರೌದ್ರಂ ಕೌಬೇರಮಾಗ್ನೇಯಂ ಯಾಮ್ಯಂ ಗಿರಿಶಮೇವ ಚ |
ಪಂಚಾನಾಂ ದ್ರೌಪದೇಯಾನಾಂ ಧನೂರತ್ನಂ ಮಹತ್ತರಮ್ ॥ 80 ॥
ದ್ರೌಪದಿಯ ಐವರು ಪುತ್ರರ ಬಳಿ ರುದ್ರ, ಕುಬೇರ, ಅಗ್ನಿ, ಯಮ ಮತ್ತು ಶಂಕರರ ಶ್ರೇಷ್ಠವಾದ ಧನುಸ್ಸುಗಳಿವೆ.
ರೌದ್ರಂ ಧನುರ್ವರಶ್ರೇಷ್ಠಂ ಯಲ್ಲೇಭೇ ರೋಹಿಣೀಸುತಃ |
ತತ್ತುಷ್ಟಃ ಪ್ರದದೌ ರಾಮಃ ಸೌಭದ್ರಾಯ ಮಹಾತ್ಮನೇ ॥ 81 ॥
ರೋಹಿಣಿ ಸುತನಾದ ಬಲರಾಮನು ಯಾವ ಶ್ರೇಷ್ಠವಾದ ರುದ್ರಧನುಸ್ಸನ್ನು ಪಡೆದನೋ ಅದನ್ನು ಅವನು ಸಂತೋಷದಿಂದ ಮಹಾತ್ಮನಾದ ಅಭಿಮನ್ಯುವಿಗೆ ಕೊಟ್ಟನು.
ಏತಾಂಶ್ಚಾನ್ಯಾಂಶ್ಚ ಸುಬಹೂನ್ ಧ್ವಜಾಂಶ್ಚಾಪಾಂಶ್ಚ ತೋಷಿತಾಃ |
ದದೃಶುಸ್ತತ್ರ ಶೂರಾಣಾಂ ದ್ವಿಷತಾಂ ಶೋಕವರ್ಧನಾನ್ ॥ 82 ॥
ಅಲ್ಲಿ ಸಂತೋಷಗೊಂಡ ಜನರು ಶತ್ರುಗಳ ಶೋಕವನ್ನು ಹೆಚ್ಚಿಸುವ ಇವುಗಳನ್ನು ಮತ್ತು ಇನ್ನೂ ಅನೇಕ ಶೂರರ ಧ್ವಜಗಳನ್ನೂ ಮತ್ತು ಧನುಸ್ಸುಗಳನ್ನೂ ಅಲ್ಲಿ ನೋಡಿದರು.
ತದಭೂತ್ ಧ್ವಜಸಂಬಾಧಂ ಮಹಾಪುರುಷಸೇವಿತಮ್ |
ದ್ರೋಣಾನೀಕಂ ಮಹಾರಾಜ ಪಟೇ ಚಿತ್ರಮಿವಾರ್ಪಿತಮ್ ॥ 83 ॥
ಎಲೈ ಮಹಾರಾಜನೇ, ಮಹಾಪುರುಷರಿಂದ ಕೂಡಿದ, ಧ್ವಜಗಳಿಂದ ನಿಬಿಡವಾದ, ದ್ರೋಣರ ಆ ಸೇನೆಯು ಬಟ್ಟೆಯ ಮೇಲೆ ಬಿಡಿಸಿದ ಚಿತ್ರದಂತೆ ಇದ್ದಿತು.
ಶ್ರೂಯಂತೇ ನಾಮಗೋತ್ರಾಣಿ ಶೂರಾಣಾಂ ಸಂಯುಗೇ ತದಾ |

ದ್ರೋಣಮಾದ್ರವತಾಂ ರಾಜನ್ ಸ್ವಯಂವರ ಇವಾಹವೇ ॥ 84 ॥
ಯುದ್ಧದಲ್ಲಿ ದ್ರೋಣರ ಮೇಲೆ ಎರಗುವ ಶೂರರ ನಾಮ- ಗೋತ್ರಗಳು ಸ್ವಯಂವರದಲ್ಲಿ ಕೇಳಿ ಬರುವಂತೆ ಆಗ ಕೇಳಿಬರುತ್ತಿದ್ದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಾವಿಂಶೋಧ್ಯಾಯಃ ॥
॥ ದ್ರೋಣಾಭಿಷೇಕಪರ್ವಣಿ ಸಪ್ತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ಮೂರನೆಯಅಧ್ಯಾಯ
ಪುತ್ರನನ್ನು ಕುರಿತು ಶೋಕಪಡುತ್ತಾ ಯುದ್ಧವನ್ನು ವರ್ಣಿಸುವಂತೆ
ಸಂಜಯನಿಗೆ ಧೃತರಾಷ್ಟ್ರನ ಪ್ರಾರ್ಥನೆ.
ಧೃತರಾಷ್ಟ್ರಃ
ವ್ಯಥಯೇಯುರಿಮೇ ಸೇನಾಂ ದೇವಾನಾಮಪಿ ಸಂಜಯ |
ಆಹವೇ ಯೇ ನ್ಯವರ್ತಂತ ವೃಕೋದರಪುರೋಗಮಾಃ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ರಣರಂಗದಲ್ಲಿ ಹಿಂದಿರುಗಿದ ಭೀಮಸೇನ ಮೊದಲಾದವರು ದೇವತೆಗಳ ಸೈನ್ಯವನ್ನೂ
ವ್ಯಥೆಗೊಳಿಸಿಯಾರು!
ಸಂಪ್ರಯುಕ್ತಃ ಕಿಲೈವಾಯಂ ದಿಷ್ಟೈ ಭವತಿ ಪೂರುಷಃ |
ತಸ್ಮಿನ್ನೇವ ಚ ಸರ್ವಾರ್ಥಾ ದೃಶ್ಯಂತೇಽರ್ಥಾಃ ಪೃಥಗ್ವಿಧಾಃ ॥ 2 ॥
ಮನುಷ್ಯನು ವಿಧಿನೀತಿಯಂತೆ ನಡೆಯುತ್ತಾನಷ್ಟೆ? ವಿಧವಿಧವಾದ ಎಲ್ಲ ಅರ್ಥಗಳೂ ಆ ವಿಧಿಯನ್ನೇ ಅವಲಂಬಿಸಿವೆ.
ದೀರ್ಘಂ ವಿಪ್ರೋಷಿತಃ ಕಾಲಮರಣ್ಯೇಷು ಜಟಾಜಿನೀ |
ಅಜ್ಞಾತಶ್ಚೈವ ಲೋಕಸ್ಯ ವಿಜಹಾರ ಯುಧಿಷ್ಠಿರಃ ॥ 3 ॥
ದೀರ್ಘಕಾಲದವರೆಗೆ ಜಟಾಜಿನವನ್ನು ಧರಿಸಿ, ಅರಣ್ಯದಲ್ಲಿ ವಾಸಮಾಡಿ, ಅನಂತರ ಲೋಕಕ್ಕೆ ತಿಳಿಯದಂತೆ ವಾಸವನ್ನು ಮಾಡಿ
(ಅಜ್ಞಾತವಾಸ) ಯುಧಿಷ್ಠಿರನು ಕಾಲವನ್ನು ಕಳೆದಿದ್ದಾನೆ.
ಸ ಏವ ಮಹತೀಂ ಸೇನಾಂ ಸಮಾವರ್ತಯದಾಹವೇ |
ಕಿಮನ್ಯದ್ ದೈವಸಂಯೋಗಾನ್ಮಮ ಪುತ್ರಾಭವಾಯ ಚ ॥ 4 ॥
ಅನಂತರ ಅವನೇ ದೊಡ್ಡ ಸೈನ್ಯವನ್ನು ಸೇರಿಸಿ ಈಗ ನನ್ನ ಪುತ್ರರ ನಾಶಕ್ಕಾಗಿ ಯುದ್ಧಕ್ಕೆ ತಂದಿದ್ದಾನೆ. ಇದು ವಿಧಿಯ
ಸಂಯೋಗವಲ್ಲದೆ ಮತ್ತೇನು?
ಯುಕ್ತ ಏವ ಹಿ ಭಾಗ್ಯೇನ ಧ್ರುವಮುತ್ಪದ್ಯತೇ ನರಃ |
ಸ ತಥಾಽಽಕೃಷ್ಯತೇ ತೇನ ನ ಯಥಾ ಸ್ವಯಮಿಚ್ಛತಿ ॥ 5 ॥
ಭಾಗ್ಯದಿಂದ ಯುಕ್ತನಾಗಿಯೇ ಮನುಷ್ಯನು ಖಂಡಿತವಾಗಿ ಜನಿಸುತ್ತಾನೆ. ತಾನು ಸ್ವತಃ ಬಯಸದಿದ್ದರೂ ವಿಧಿಯಿಂದ ಆ ಭಾಗ್ಯದಿಂದ
ರಹಿತನಾಗುತ್ತಾನೆ.
ದ್ಯೂತವ್ಯಸನಮಾಸಾದ್ಯ ಕ್ಲೇಶಿತೋ ಹಿ ಯುಧಿಷ್ಠಿರಃ |
ಸ ಪುನರ್ಭಾಗಧೇಯೇನ ಸಹಾಯಾನುಪಲಬ್ಧವಾನ್ ॥ 6 ॥
ಯುಧಿಷ್ಠಿರನು ದ್ಯೂತವ್ಯಸನಕ್ಕೆ ಸಿಲುಕಿ ಕ್ಲೇಶಗಳನ್ನು ಅನುಭವಿಸಿದನಷ್ಟೆ? ಅವನೇ ಪುನಃ ದೈವಯೋಗದಿಂದ ಸಹಾಯರನ್ನು
ಪಡೆದಿದ್ದಾನೆ.
ಅರ್ಧಂ ಮೇ ಕೇಕಯಾ ಲಬ್ಧಾಃ ಕಾಶಯಃ ಕೋಸಲಾಸ್ತಥಾ ॥|
ಚೇದಯಶ್ಚಾಪರೇ ವಂಗಾ ಮಾಮೇವ ಸಮುಪಾಶ್ರಿತಾಃ ॥ 7 ॥
ಕೇಕಯರಲ್ಲಿ ಅರ್ಧಭಾಗವೂ, ಕಾಶಿಗಳೂ, ಕೋಸಲರೂ, ಚೇದಿಗಳೂ, ವಂಗರೂ ನನ್ನನ್ನೇ ಬಂದು ಸೇರಿದ್ದಾರೆ.
ಪೃಥಿವೀ ಭೂಯಸೀ ತಾತ ಮಮ ಪಾರ್ಥಸ್ಯ ನೋ ತಥಾ |
ಇತಿ ಮಾಮಬ್ರವೀತ್ ಸೂತ ಮಂದೋ ದುರ್ಯೋಧನಸ್ತಥಾ ॥ 8 ॥
ಎಲೈ ಸೂತನೇ, ನನ್ನ ಪುತ್ರನಾದ, ಮಂದನಾದ ದುರ್ಯೋಧನನು, ತಂದೆಯೇ, ನನ್ನ ಭೂಮಿಯು ಶ್ರೇಷ್ಠವಾಗಿದೆ, ಯುಧಿಷ್ಠಿರನದು
ಅಲ್ಲ ಎಂದು ನನಗೆ ಹೇಳಿದನು.
ತಸ್ಯ ಸೇನಾಸಮೂಹಸ್ಯ ಮಧ್ಯೇ ದ್ರೋಣಃ ಸುರಕ್ಷಿತಃ |
ನಿಹತಃ ಪಾರ್ಷತೇನಾಜೌ ಕಿಮನ್ಯದ್ ಭಾಗಧೇಯತಃ ॥ 9 ॥
ಅಂತಹ ಸೈನ್ಯ ಸಮೂಹದ ಮಧ್ಯದಲ್ಲಿ ಸುರಕ್ಷಿತರಾದ ದ್ರೋಣರು ರಣರಂಗದಲ್ಲಿ ಧೃಷ್ಟದ್ಯುಮ್ನನಿಂದ ಹತರಾದರು. ಇದು
ವಿಧಿಯಲ್ಲದೆ ಮತ್ತೇನು?
ಮಧ್ಯೇ ರಾಜ್ಞಾಂ ಮಹಾಬಾಹುಂ ಸದಾ ಯುದ್ಧಾಭಿನಂದಿನಮ್ |
ಬ್ರಹ್ಮಾಸ್ತ್ರವಿದುಷಂ ದ್ರೋಣಂ ಕಥಂ ಮೃತ್ಯುರುಪೇಯಿವಾನ್ ॥ 10 ॥
ರಾಜರ ಮಧ್ಯದಲ್ಲಿ ಮಹಾಬಾಹುಗಳೂ, ಯುದ್ಧವನ್ನು ಅಭಿನಂದಿಸುವವರೂ, ಬ್ರಹ್ಮಾಸ್ತ್ರವನ್ನು ತಿಳಿದವರೂ ಆದ ದ್ರೋಣರನ್ನು
ಮೃತ್ಯುವು ಹೇಗೆ ಸಮೀಪಿಸಿತು?
ಸಮನುಪ್ರಾಪ್ತಕೃಚ್ಛ್ರೋಽಹಂ ಸಮ್ಮೋಹಂ ಪರಮಂ ಗತಃ |

ಭೀಷ್ಮದ್ರೋಣೌ ಹತೌ ಶ್ರುತ್ವಾ ನಾಹಂ ಜೀವಿತುಮುತ್ಸಹೇ ॥ 11 ॥
ನಾನು ಸಂಕಟಕ್ಕೂ, ತೀವ್ರವಾದ ಸಮ್ಮೋಹಕ್ಕೂ ಸಿಲುಕಿದ್ದೇನೆ. ಭೀಷ್ಮ-ದ್ರೋಣರು ಹತರಾದುದನ್ನು ಕೇಳಿ ನಾನು ಬದುಕಲು ಬಯಸುವುದಿಲ್ಲ.
ಯನ್ಮಾಂ ಕ್ಷತ್ತಾಽಬ್ರವೀತ್ ತಾತ ಪ್ರಪಶ್ಯನ್ ಪುತ್ರಗೃದ್ಧಿನಮ್ |
ದುರ್ಯೋಧನೇನ ತತ್ ಪ್ರಾಪ್ತಂ ಸರ್ವಂ ಸೂತ ಮಯಾ ಸಹ ॥12॥
ಎಲೈ ಪ್ರೀತಿಪಾತ್ರನೇ, ಸೂತನೇ, ನನ್ನನ್ನು ಪುತ್ರರಲ್ಲಿ ಪಕ್ಷಪಾತವನ್ನು ಹೊಂದಿದವನು ಎಂದು ತಿಳಿದು, ವಿದುರನು ಏನು ಹೇಳಿದನೋ ಅದೆಲ್ಲವನ್ನೂ ದುರ್ಯೋಧನನು ಮತ್ತು ನಾನು ಪಡೆದು, ಈಗ ಅನುಭವಿಸುತ್ತಿದ್ದೇವೆ.
ನೃಶಂಸಂ ತು ಪರಂ ತಾತ ತ್ಯಕ್ತತ್ವ ದುರ್ಯೋಧನಂ ಯದಿ |
ಪುತ್ರಶೇಷಸ್ತು ರಕ್ಷ ್ಯಯಃ ಸ್ಯಾನ್ನ ಸರ್ವಮರಣಂ ಭವೇತ್ ॥ 13 ॥
ಪ್ರೀತಿಪಾತ್ರನೇ, ಕ್ರೂರಿಯಾದ ದುರ್ಯೋಧನನನ್ನು ಪರಿತ್ಯಜಿಸಿ, ನಾನು ಉಳಿದ ಪುತ್ರರನ್ನು ರಕ್ಷಿಸಿದ್ದರೆ ಈ ಸರ್ವಮರಣವು ಉಂಟಾಗುತ್ತಿರಲಿಲ್ಲ.
ಯೋ ಹಿ ಧರ್ಮಂ ಪರಿತ್ಯಜ್ಯ ಭವತ್ಯರ್ಥಪರೋ ನರಃ |
ಅಸ್ಮಾಚ್ಚ ಹೀಯತೇ ಲೋಕಾತ್ ಕ್ಷುದ್ರಭಾವಂ ಚ ಗಚ್ಛತಿ ॥ 14 ॥
ಯಾವ ಮನುಷ್ಯನು ಧರ್ಮವನ್ನು ಪರಿತ್ಯಜಿಸಿ, ಅರ್ಥದಲ್ಲಿ ದೃಷ್ಟಿಯುಳ್ಳವನಾಗುತ್ತಾನೆಯೋ ಅವನು ಈ ಲೋಕವನ್ನೂ ಕಳೆದುಕೊಳ್ಳುತ್ತಾನೆ ಮತ್ತು ಕ್ಷುದ್ರತೆಯನ್ನೂ ಹೊಂದುತ್ತಾನೆ.
ಅದ್ಯ ಚಾಪ್ಯಸ್ಯ ರಾಷ್ಟ್ರಸ್ಯ ಕೃತೋತ್ಸೇಧಸ್ಯ ಸಂಜಯ |
ಅವಶೇಷಂ ನ ಪಶ್ಯಾಮಿ ಕುರೂಣಾಮೀದೃಶೇ ಸತಿ ॥ 15 ॥
ಇಂದಿನ ಈ ಪರಿಸ್ಥಿತಿಯಲ್ಲಿ ನಾನು ಎಲೈ ಸಂಜಯನೇ, ಒಂದು ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿದ್ದ ಈ ನಮ್ಮ ಕುರುರಾಷ್ಟ್ರಕ್ಕೆ ಯಾವ ಅವಶೇಷವನ್ನೂ ಕಾಣುವುದಿಲ್ಲ.
ಕಥಂ ಸ್ಯಾದವಶೇಷೋ ಹಿ ಧುರ್ಯಯೋರಪ್ಯತೀತಯೋಃ |
ಯೌ ನಿತ್ಯಮುಪಜೀವಾಮಃ ಕ್ಷಮಿಣೌ ಪುರುಷರ್ಷಭೌ ॥ 16 ॥
ಮಹಾನಾಯಕರೂ, ಸಹನಶೀಲರೂ, ಕುರುಶ್ರೇಷ್ಠರೂ ಆದ ಯಾವ ಭೀಷ್ಮ-ದ್ರೋಣರನ್ನು ನಾವು ಯಾವಾಗಲೂ ಉಪಜೀವಿಸಿದ್ದೇವೆಯೋ ಅಂತಹ ಅವರು ಹೋದಮೇಲೆ ಅವಶೇಷವು ಹೇಗೆ ಉಂಟಾಗುತ್ತದೆ? (ಏನು ಉಳಿಯುತ್ತದೆ?)
ವ್ಯಕ್ತಮೇತದ್ಧಿ ಮೇ ಶಂಸ ಯಥಾ ಯುದ್ಧಮವರ್ತತ |
ಕೇಽಯುಧ್ಯನ್ ಕೇ ಹ್ಯಪಾಕರ್ಷನ್ ಕೇ ಕ್ಷುದ್ರಾಃ ಪ್ರಾದ್ರವನ್ ಭಯಾತ್ ॥
ಹೇಗೆ ಯುದ್ಧವು ನಡೆಯಿತೆಂದು ನನಗೆ ಸ್ಪಷ್ಟವಾಗಿ ಹೇಳು. ಯಾರು ಯುದ್ಧವನ್ನು ಮಾಡಿದರು? ಯಾರು ಹಿಂದೆ ಸರಿದರು? ಯಾವ ಕ್ಷುದ್ರರು ಭಯದಿಂದ ಓಡಿದರು?
ಧನಂಜಯಂ ಚ ಮೇ ಶಂಸ ಯದ್ಯಚ್ಚಕ್ರೇ ರಥರ್ಷಭಃ |
ತಸ್ಮಾದ್ ಭಯಂ ನೋ ಭೂಯಿಷ್ಠಂ ಭ್ರಾತೃವ್ಯಾಣಾಂ ಭಯಂಕರಾತ್ ॥
ರಥಶ್ರೇಷ್ಠನಾದ ಅರ್ಜುನನು ಏನೇನು ಮಾಡಿದನೆಂದು ನನಗೆ ಹೇಳು. ಭಯಂಕರನಾದ ಅವನಿಂದ ಅವನ ಶತ್ರುಗಳಾದ ನಮಗೆ ದೊಡ್ಡ ಭಯವಿದೆ.
ಯದಾಸೀತ್ ಸನ್ನಿವೃತ್ತೇಷು ಪಾಂಡವೇಷು ಚ ಸಂಜಯ |
ಮಮ ಸೇನಾವಶೇಷಸ್ಯ ಸನ್ನಿಪಾತಃ ಸುದಾರುಣಃ |
ಮಾಮಕಾನಾಂ ಚ ಯೇ ಶೂರಾಃ ತತ್ರ ತಾನ್ ಸಮವಾರಯನ್ ॥
ಎಲೈ ಸಂಜಯನೇ, ಪಾಂಡವರು ಹಿಂದಿರುಗಿದ ಮೇಲೆ ಏನು ನಡೆಯಿತು? ನನ್ನ ಉಳಿದ ಸೈನ್ಯದ ತೀವ್ರವಾದ ಸಂಘರ್ಷವು ಹೇಗೆ ಉಂಟಾಯಿತು? ನನ್ನ ಸೈನ್ಯದ ಯಾವ ಶೂರರು ಅಲ್ಲಿ ಅವರನ್ನು ತಡೆದರು?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ತ್ರಯೋವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ದ್ವಂದ್ವಯುದ್ಧಗಳು
ಸಂಜಯಃ
ಮಹದ್ ಭೈರವಮಾಸೀನ್ನಃ ಸನ್ನಿವೃತ್ತೇಷು ಪಾಂಡುಷು |
ದೃಷ್ಟ್ವಾ ದ್ರೋಣಂ ಛಾದ್ಯಮಾನಂ ತೈರ್ಭಾಸ್ಕರಮಿವಾಂಬುದೈಃ ॥ 1 ॥
ಪಾಂಡವರು ಹಿಂದಿರುಗಿದ ಮೇಲೆ ಸೂರ್ಯನನ್ನು ಮೋಡಗಳು ಮುಚ್ಚುವಂತೆ ದ್ರೋಣರು ಮುಚ್ಚಲ್ಪಟ್ಟುದನ್ನು ನೋಡಿ ದೊಡ್ಡ ಭೈರವ ನಾದವು ಉಂಟಾಯಿತು.
ತೈಶ್ಚೋದ್ಧೂತಂ ರಜಸ್ತೀವ್ರಮವಚಕ್ರೇ ಚಮೂಂ ತವ |
ತತೋ ಹತಮಮನ್ಯಾಮ ದ್ರೋಣಂ ದೃಷ್ಟಿಪಥೇ ಹತೇ ॥ 2 ॥

ಹಿಂದಿರುಗಿದ ಪಾಂಡವರ ಸೈನ್ಯದಿಂದ ಮೇಲೆದ್ದ ತೀವ್ರವಾದ ಧೂಳು ನಿನ್ನ ಸೈನ್ಯವನ್ನು ಆವರಿಸಿತು.ದ್ರೋಣರು ಕಣ್ಣಿಗೆ ಕಾಣದಾಗುತ್ತಿರಲು ಆಗ ಅವರು ಹತರಾದರೆಂದು ತಿಳಿದೆವು.

ತಾಂಸ್ತು ಶೂರಾನ್ ಮಹೇಷ್ವಾಸಾನ್ ಕ್ರೂರಂ ಕರ್ಮ ಚಿಕೀರ್ಷತಃ |
ದೃಷ್ಟ್ವಾ ದುರ್ಯೋಧನಸ್ತೂರ್ಣಂ ಸ್ವಸೈನ್ಯಂ ಸಮಚೂಚುದತ್ ॥ 3 ॥

ಕ್ರೂರವಾದ ಕರ್ಮವನ್ನು ಮಾಡಲು ಬಯಸಿ ಹಿಂದಿರುಗಿದ ಮಹಾಧನುರ್ಧಾರಿಗಳಾದ ಆ ಶೂರರನ್ನು ನೋಡಿ ದುರ್ಯೋಧನನು ಶೀಘ್ರವಾಗಿ ತನ್ನ ಸೈನ್ಯವನ್ನು ಪ್ರಚೋದಿಸಿದನು.

ದುರ್ಯೋಧನಃ

ಯಥಾಶಕ್ತಿ ಯಥೋತ್ಸಾಹಂ ಯಥಾಸತ್ತ್ವಂ ನರಾಧಿಪಾಃ |
ವಾರಯಧ್ವಂ ಯಥಾಯೋಗಂ ಪಾಂಡವಾನಾಮನೀಕಿನೀಮ್ ॥ 4 ॥

ದುರ್ಯೋಧನ ಎಲ್ಲೈ ರಾಜರೇ, ನಿಮ್ಮ ಶಕ್ತಿಗೆ, ಉತ್ಸಾಹಕ್ಕೆ ಮತ್ತು ಬಲಕ್ಕೆ ಅನುಗುಣವಾಗಿ ಮತ್ತು ನಿಮ್ಮ ಯುದ್ಧೋಪಾಯಕ್ಕನುಗುಣವಾಗಿ ಪಾಂಡವರ ಸೈನ್ಯವನ್ನು ತಡೆಯಿರಿ.

ಸಂಜಯಃ

ತತೋ ದುರ್ಮರ್ಷಣೋ ಭೀಮಮಭ್ಯಯಾತ್ ತನಯಸ್ತವ |
ಆರಾದ್ ದೃಷ್ಟ್ವಾ ಕಿರನ್ ಬಾಣೈರಿಚ್ಛನ್ ದ್ರೋಣಸ್ಯ ಜೀವಿತಮ್ ॥5॥

ಸಂಜಯ ಆಗ ನಿನ್ನ ಪುತ್ರನಾದ ದುರ್ಮರ್ಷಣನು ದೂರದಿಂದಲೇ ಭೀಮಸೇನನನ್ನು ನೋಡಿ, ದ್ರೋಣರ ಜೀವಿತವನ್ನು ಬಯಸಿ, ಭೀಮಸೇನನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾ ಅವನ ಕಡೆಗೆ ಸಾಗಿದನು.

ತಂ ಬಾಣೈರವತಸ್ತಾರ ಕ್ರುದ್ಧೋ ಮೃತ್ಯುರಿವಾಹವೇ |
ತಂ ಚ ಭೀಮೋಽರ್ದಯದ್ ಬಾಣೈಃ ತದಾಽಽಸೀತ್ ತುಮುಲಂ ಮಹತ್

ಅವನು ಮೃತ್ಯುವಿನಂತೆ ರಣರಂಗದಲ್ಲಿ ಕ್ರುದ್ಧನಾಗಿ ಬಾಣಗಳಿಂದ ಭೀಮನ ಶರೀರವನ್ನು ಹರಡಿದನು. ಭೀಮನೂ ಸಹ ಬಾಣಗಳಿಂದ ಅವನನ್ನು ಪೀಡಿಸಿದನು. ಆಗ ದೊಡ್ಡ, ತೀವ್ರವಾದ ಯುದ್ಧವು ನಡೆಯಿತು.

ತ ಈಶ್ವರಸಮಾದಿಷ್ಟಾಃ ಪ್ರಾಜ್ಞಾಃ ಶೂರಾಃ ಪ್ರಹಾರಿಣಃ |
ಬಾಹ್ಯಂ ಕೃತ್ವಾ ಮೃತ್ಯುಭಯಂ ಯುಯುಧುಃ ಪಾಂಡವೈಃ ಸಹ ॥ 7 ॥

ಪ್ರಭುವಾದ ದುರ್ಯೋಧನನಿಂದ ಆಜ್ಞಪ್ತರಾದ ಪ್ರಾಜ್ಞರೂ, ಪ್ರಹಾರಶೀಲರೂ, ಶೂರರೂ ಆದ ಆ ರಾಜರು ಮೃತ್ಯುಭಯವನ್ನು ದೂರಮಾಡಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.

ಕೃತವರ್ಮಾ ಶಿನೇಃ ಪುತ್ರಂ ದ್ರೋಣಂ ಪ್ರೇಪ್ಸುಂ ವಿಶಾಂಪತೇ |
ಪರ್ಯವಾರಯದಾಯಾಂತಂ ಶೂರಂ ಸಮರಶೋಭಿನಮ್ ॥ 8 ॥

ಎಲ್ಲೈ ರಾಜನೇ, ದ್ರೋಣರನ್ನು ಸಮೀಪಿಸಲು ಬಯಸಿ ಬರುತ್ತಿರುವ ಸಮರಶೋಭಿಯಾದ, ಶೂರನಾದ ಸಾತ್ಯಕಿಯನ್ನು ಕೃತವರ್ಮನು ತಡೆದನು.

ತಂ ಶೈನೇಯಃ ಶರವ್ರಾತೈಃ ಕ್ರುದ್ಧಃ ಕ್ರುದ್ಧಂ ತದಾಽಕಿರತ್ |
ಕೃತವರ್ಮಾ ಚ ಶೈನೇಯಂ ಮತ್ತೋ ಮತ್ತಮಿವ ದ್ವಿಪಮ್ ॥ 9 ॥

ಕ್ರುದ್ಧನಾದ ಸಾತ್ಯಕಿಯು ಕ್ರುದ್ಧನಾದ ಕೃತವರ್ಮನನ್ನು ಬಾಣಗಳ ಸಮೂಹದಿಂದ ಹೊಡೆದನು. ಕೃತವರ್ಮನೂ ಸಹ ಸಾತ್ಯಕಿಯನ್ನು ಒಂದು ಮದಗಜವು ಇನ್ನೊಂದು ಮದಗಜವನ್ನು ಪೀಡಿಸುವಂತೆ ಪೀಡಿಸಿದನು.

ಸೈಂಧವಃ ಕ್ಷತ್ರಧರ್ಮಾಣಮಾಪತಂತಂ ಶರೌಘಿಣಮ್ |
ಉಗ್ರಧನ್ವಾ ಮಹೇಷ್ವಾಸಂ ಯತ್ತೋ ದ್ರೋಣಾದವಾರಯತ್ ॥ 10 ॥

ದೊಡ್ಡ ಧನುಸ್ಸನ್ನು ಹೊಂದಿದ ಸೈಂಧವನು ಶರಸಮೂಹವನ್ನು ಸುರಿಸುತ್ತಿದ್ದ, ಮಹಾಧನುರ್ಧಾರಿಯಾದ, ಮುಂದೆ ಬರುತ್ತಿದ್ದ ಕ್ಷತ್ರಧರ್ಮನನ್ನು ಪ್ರಯತ್ನಪಟ್ಟು ದ್ರೋಣರಿಂದ ನಿವಾರಿಸಿದನು.

ಕ್ಷತ್ರಧರ್ಮಾ ಸಿಂಧುಪತೇಃ ಛಿತ್ತ್ವಾ ಕೇತನಕಾರ್ಮುಕೇ |
ನಾರಾಚೈರ್ದಶಭಿಃ ಕ್ರುದ್ಧಃ ಸರ್ವಮರ್ಮಸ್ವತಾಡಯತ್ ॥ 11 ॥

ಕ್ಷತ್ರಧರ್ಮನು ಕೋಪಗೊಂಡು ಸೈಂಧವನ ಧ್ವಜ-ಧನುಸ್ಸುಗಳನ್ನು ಕತ್ತರಿಸಿ, ಕತ್ತಿ, ನಾರಾಚಗಳಿಂದ ಅವನನ್ನು ಎಲ್ಲ ಮರ್ಮಸ್ಥಳಗಳಲ್ಲಿಯೂ ಹೊಡೆದನು.

ಅಥಾನ್ಯದ್ಧನುರಾದಾಯ ಸೈಂಧವಃ ಕೃತಹಸ್ತವತ್ |
ವಿವ್ಯಾಧ ಕ್ಷತ್ರಧರ್ಮಾಣಂ ಮನೋಗತಿಭಿರಾಶುಗೈಃ ॥ 12 ॥

ಆಗ ಸುಶಿಕ್ಷಿತನಾದ ಸೈಂಧವನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಮನೋವೇಗದಂತೆ ಶೀಘ್ರಗತಿಯನ್ನು ಹೊಂದಿದ್ದ ಬಾಣಗಳಿಂದ ಕ್ಷತ್ರಧರ್ಮನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ಯುಯುತ್ಸುಂ ಪಾಂಡವಾರ್ಥಾಯ ಯತಮಾನಂ ಮಹಾರಥಮ್ |
ಸುಬಾಹುರ್ಭ್ರಾತರಂ ಶೂರಂ ಯಾಂತಂ ದ್ರೋಣಾದವಾರಯತ್ ॥

ಪಾಂಡವರ ಸಲುವಾಗಿ ಪ್ರಯತ್ನಪಡುತ್ತಿದ್ದ ಮಹಾರಥನಾದ, ಶೂರನಾದ, ದ್ರೋಣರ ಬಳಿಗೆ ಬರುತ್ತಿದ್ದ ತನ್ನ ಸಹೋದರನಾದ ಯುಯುತ್ಸುವನ್ನು ಸುಬಾಹುವು ದ್ರೋಣರಿಂದ ತಡೆದನು.

ಸುಬಾಹೋಃ ಸಧನುರ್ಬಾಣಾವಸ್ಯತಃ ಪರಿಘೋಪಮೌ |
ಯುಯುತ್ಸುಃ ಶಿತಪೀತಾಭ್ಯಾಂ ಕ್ಷುರಾಭ್ಯಾಮಚ್ಛಿನದ್ ಭುಜೌ ॥ 14 ॥

ಯುಯುತ್ಸುವು ಹರಿತವೂ, ನೀರನ್ನು ಕುಡಿಸಿ ಹದಮಾಡಿದವೂ ಆದ ಎರಡು ಕ್ಷುರಗಳಿಂದ ಬಾಣವನ್ನು ಪ್ರಯೋಗಿಸಲು ಹೊರಟಿದ್ದ, ಒನಕೆಯಂತಿದ್ದ, ಧನುರ್ಬಾಣ ಸಹಿತವಾದ ಸುಬಾಹುವಿನ ಎರಡು ಭುಜಗಳನ್ನು ಕತ್ತರಿಸಿದನು.

ರಾಜಾನಂ ಪಾಂಡವಶ್ರೇಷ್ಠಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ವೇಲೇವ ಸಾಗರಂ ಕ್ಷುಬ್ಧಂ ಮದ್ರುರಾಟ್ ಸಮವಾರಯತ್ ॥ 15 ॥
ತಂ ಧರ್ಮರಾಜೋ ಬಹುಭಿರ್ಮರ್ಮಭಿದ್ಭಿರವಾಕಿರತ್ |
ಮದ್ರೇಶಸ್ತಂ ಚತುಃಷಷ್ಟ್ಯಾ ಶರೈರ್ವಿದ್ಧ್ವಾನದದ್ ಭೃಶಮ್ ॥ 16 ॥

ಧರ್ಮಾತ್ಮನೂ, ಪಾಂಡವಶ್ರೇಷ್ಠನೂ ಆದ ಯುಧಿಷ್ಠಿರರಾಜನನ್ನು ಮದ್ರರಾಜನಾದ ಶಲ್ಯನು ಕ್ಷುಬ್ಧ ಸಾಗರವನ್ನು ತೀರವು ತಡೆದಂತೆ ತಡೆದನು. ಯುಧಿಷ್ಠಿರನು ಅವನನ್ನು ಮರ್ಮಭೇದಕವಾದ ಅನೇಕ ಬಾಣಗಳಿಂದ ಹೊಡೆದನು. ಶಲ್ಯನು ಯುಧಿಷ್ಠಿರನನ್ನು ಅರವತ್ನಾಲ್ಕು ಬಾಣಗಳಿಂದ ಹೊಡೆದು ತೀವ್ರವಾದ ನಾದವನ್ನು ಮಾಡಿದನು.

ತಸ್ಯ ನಾನದತಃ ಕೇತುಮುಚ್ಚಕರ್ತ ಸಕಾರ್ಮುಕಮ್ |
ಕ್ಷುರಾಭ್ಯಾಂ ಪಾಂಡವಶ್ರೇಷ್ಠಃ ತತ ಉಚ್ಚುಕ್ರುಶುರ್ಜನಾಃ ॥ 17 ॥

ಪಾಂಡವಶ್ರೇಷ್ಠನಾದ ಯುಧಿಷ್ಠಿರನು ಹಾಗೆ ನಾದವನ್ನು ಮಾಡುತ್ತಿದ್ದ ಶಲ್ಯನ ಧ್ವಜ ಮತ್ತು ಧನುಸ್ಸುಗಳನ್ನು ಎರಡು ಕ್ಷುರಗಳಿಂದ ಕತ್ತರಿಸಿದನು. ಆಗ ಪಾಂಡವ ಸೇನೆಯ ಯೋಧರು ಹರ್ಷನಾದವನ್ನು ಮಾಡಿದರು.

ತಥೈವ ರಾಜಾ ರಾಜಾನಂ ಬಾಹ್ಲಿಕೋ ದ್ರುಪದಂ ಶರೈಃ |
ಆದ್ರವಂತಂ ಸಹಾನೀಕಂ ಸಹಾನೀಕೋ ನ್ಯವಾರಯತ್ ॥ 18 ॥

ಹಾಗೆಯೇ, ತನ್ನ ಸೈನ್ಯದಿಂದ ಕೂಡಿದ ಬಾಹ್ಲಿಕರಾಜನು ತನ್ನ ಸೈನ್ಯದ ಜೊತೆಯಲ್ಲಿ ಧಾವಿಸಿ ಬರುತ್ತಿದ್ದ ದ್ರುಪದರಾಜನನ್ನು ಬಾಣಗಳಿಂದ ತಡೆದನು.

ತದ್ ಯುದ್ಧಮಭವದ್ ಘೋರಂ ಕ್ರುದ್ಧಯೋಃ ಸಹಸೇನಯೋಃ |
ಯಥಾ ಮಹಾಯೂಥಪಯೋರ್ದ್ವಿಪಯೋಃ ಸಂಪ್ರಭಿನ್ನಯೋಃ ॥ 19 ॥

ಮದೋದಕವನ್ನು ಸ್ರವಿಸುವ ಎರಡು ಮಹಾಗಜಗಳಿಗೆ (ಸಲಗಗಳಿಗೆ) ನಡೆಯುವಂತೆ ಸೈನ್ಯದಿಂದ ಕೂಡಿ ಕ್ರುದ್ಧರಾದ ಅವರಿಬ್ಬರಿಗೆ ಘೋರವಾದ ಯುದ್ಧವು ನಡೆಯಿತು.

ವಿಂದಾನುವಿಂದಾವಾವಂತ್ಯೌ ವಿರಾಟಂ ಮಾತ್ಸ್ಯಮಾರ್ಚ್ಛತಾಮ್ |
ಸಹಸೇನಂ ಯಥೇಂದ್ರಾಗ್ನೀ ಪುರಾ ಬಲಿಮಿವಾಧ್ವರೇ ॥ 20 ॥

ಅವಂತಿದೇಶದ ವಿಂದಾನುವಿಂದರು ಹಿಂದೆ ಇಂದ್ರಾಗ್ನಿಗಳು ಯಜ್ಞದಲ್ಲಿ ಬಲಿಯನ್ನು ಸಮೀಪಿಸಿದಂತೆ ಸೈನ್ಯದಿಂದ ಕೂಡಿದ ಮತ್ಸ್ಯರಾಜನಾದ ವಿರಾಟನನ್ನು ಸಮೀಪಿಸಿದರು.

ತದುತ್ಪಿಂಜಲಕಂ ಯುದ್ಧಮಾಸೀದ್ ದೇವಾಸುರೋಪಮಮ್ |
ಮತ್ಸ್ಯಾನಾಂ ಕೇಕಯೈಃ ಸಾರ್ಧಮಭೀತಾಶ್ವರಥದ್ವಿಪಮ್ ॥ 21 ॥

ಮತ್ಸ್ಯರಿಗೂ ಮತ್ತು ಕೇಕಯರಿಗೂ ನಿರ್ಭಯವಾದ ಅಶ್ವ-ರಥ-ಗಜಗಳಿಂದ ಕೂಡಿದ, ದೇವಾಸುರರ ಯುದ್ಧದಂತಿದ್ದ, ಕೋಲಾಹಲಕಾರಿಯಾದ ಯುದ್ಧವು ನಡೆಯಿತು.

ನಾಕುಲಂ ತು ಶತಾನೀಕಂ ಭೂತಕರ್ಮಾ ಸಭಾಪತಿಃ |
ಅಸ್ಯಂತಮಿಷುಸಂಘಾನಿ ಯಾಂತಂ ದ್ರೋಣಾದವಾರಯತ್ ॥ 22 ॥

ಸಭಾಪತಿಯಾದ ಭೂತಕರ್ಮನು ಬಾಣಸಮೂಹಗಳನ್ನು ಪ್ರಯೋಗಿಸುತ್ತಾ ಬರುತ್ತಿದ್ದ ನಕುಲ ಪುತ್ರನಾದ ಶತಾನೀಕನನ್ನು ದ್ರೋಣರ ಆಜ್ಞೆಯಿಂದ ತಡೆದನು.

ತತೋ ನಕುಲದಾಯಾದಃ ತ್ರಿಭಿರ್ಭಲ್ಲೈಃ ಸಮಾಹಿತೈಃ |
ಚಕ್ರೇ ವಿಬಾಹುಶಿರಸಂ ಭೂತಕರ್ಮಾಣಮಾಹವೇ ॥ 23 ॥

ಆಗ ನಕುಲಪುತ್ರನಾದ ಶತಾನೀಕನು ಚೆನ್ನಾಗಿ ಪ್ರಯೋಗಿಸಲ್ಪಟ್ಟ ಮೂರು ಭಲ್ಲಗಳಿಂದ ರಣರಂಗದಲ್ಲಿ ಭೂತಕರ್ಮನ ಬಾಹುಗಳನ್ನು ಮತ್ತು ಶಿರಸ್ಸನ್ನು ಕತ್ತರಿಸಿದನು.

ಸುತಸೋಮಂ ತು ಭೈಮೇಯಮಾಪತಂತಂ ಶರೌಘಿಣಮ್ |
ದ್ರೋಣಾಯಾಭಿಮುಖಂ ಯಾಂತಂ ವಿವಿಂಶತಿರವಾರಯತ್ ॥ 24 ॥

ಬಾಣಗಳ ಸಮೂಹವನ್ನು ಪ್ರಯೋಗಿಸುತ್ತಾ ದ್ರೋಣರಿಗೆ ಅಭಿಮುಖವಾಗಿ ಬರುತ್ತಿದ್ದ ಭೀಮಪುತ್ರನಾದ ಶ್ರುತಸೋಮನನ್ನು ವಿವಿಂಶತಿಯು ತಡೆದನು.

ಸುತಸೋಮಸ್ತು ಸಂಕ್ರುದ್ಧಃ ಸ್ವಪಿತೃವ್ಯಮಜಿಹ್ಮಗೈಃ |
ವಿವಿಂಶತಿಂ ಶರೈರ್ವಿದ್ಧ್ವಾ ನ ನ್ಯವರ್ತತ ದಂಸಿತಃ ॥ 25 ॥

ಯುದ್ಧ ಸನ್ನದ್ಧನಾದ ಸುತಸೋಮನು ಬಹಳ ಕೋಪಗೊಂಡು ನೇರವಾಗಿ ಸಾಗುವ ಬಾಣಗಳಿಂದ ತನ್ನ ಚಿಕ್ಕಪ್ಪನಾದ ವಿವಿಂಶತಿಯನ್ನು ಹೊಡೆದು ರಣರಂಗದಿಂದ ಹಿಂದೆ ಸರಿಯಲಿಲ್ಲ.

ಸಾಲ್ವೋ ಭೀಮರಥಃ ಶೂರಂ ಶ್ರುತಸೇನಂ ಮಹಾಹವೇ |
ದ್ರೋಣಾಯಾಭಿಮುಖಂ ಯಾಂತಂ ಶರೌಘೇಣ ನ್ಯವಾರಯತ್ ॥26॥

ಸಾಲ್ವದೇಶದ ಭೀಮರಥನು ದೊಡ್ಡ ಯುದ್ಧದಲ್ಲಿ ದ್ರೋಣರಿಗೆ ಎದುರಾಗಿ ಬರುತ್ತಿದ್ದ ಶೂರನಾದ ಸುತಸೇನನನ್ನು ಬಾಣಗಳ ಸಮೂಹದಿಂದ ತಡೆದನು.

ಸ ತು ಭೀಮರಥಂ ಸಾಲ್ವಂ ಮನೋಗತಿಭಿರಾಯಸೈಃ |

ಷಡ್ಭಿಃ ಸಾಶ್ವನಿಯಂತಾರಮನಯದ್ ಯಮಸಾದನಮ್ ॥ 27 ॥
ಶ್ರುತಸೇನನು ಸಾಲ್ವದೇಶದ ಭೀಮರಥನನ್ನು ಮನೋವೇಗವುಳ್ಳ, ಅಯಸ್ಮಯವಾದ (ಕಬ್ಬಿಣದ) ಆರು ಬಾಣಗಳಿಂದ ಅವನ ಅಶ್ವ-ಸಾರಥಿಗಳ ಜೊತೆಯಲ್ಲಿ ಯಮಲೋಕಕ್ಕೆ ಕಳುಹಿಸಿದನು.
ತಂ ಶತಾನೀಕಮಾಯಾಂತಂ ಮಯೂರಸದೃಶೈರ್ಹಯೈಃ |
ಚಿತ್ರಸೇನೋ ಮಹಾರಾಜ ತವ ಪುತ್ರೋ ನ್ಯವಾರಯತ್ ॥ 28 ॥
ಎಲೈ ಮಹಾರಾಜನೇ, ಮಯೂರದ ಬಣ್ಣಕ್ಕೆ ಸದೃಶವಾದ ಅಶ್ವಗಳಿಂದ ಮುಂದೆ ಬರುತ್ತಿದ್ದ ಶತಾನೀಕನನ್ನು ನಿನ್ನ ಪುತ್ರನಾದ ಚಿತ್ರಸೇನನು ತಡೆದನು.
ತಮಾರ್ಜುನಿಃ ಶರೈಶ್ಚಕ್ರೇ ಪಿತೃವ್ಯಂ ಜರ್ಝರಚ್ಛವಿಮ್ |
ಶರೈಶ್ಚ ದ್ರೌಪದೀಪುತ್ರಃ ಚಿತ್ರಸೇನಂ ಸಮಾವೃಣೋತ್ ॥ 29 ॥
ಅರ್ಜುನ ಮತ್ತು ದ್ರೌಪದಿಯರ ಪುತ್ರನಾದ ಶ್ರುತಕರ್ಮನು ತನ್ನ ಬಾಣಗಳಿಂದ ಚಿಕ್ಕಪ್ಪನಾದ ಚಿತ್ರಸೇನನನ್ನು ಜರ್ಝರೀತ ಶರೀರವುಳ್ಳವನನ್ನಾಗಿ ಮಾಡಿ ಅವನ ಶರೀರವನ್ನು ಬಾಣಗಳಿಂದ ತುಂಬಿದನು.
ಕಿರಂತಂ ಶರಜಾಲಾನಿ ಪ್ರಭಿನ್ನಮಿವ ಕುಂಜರಮ್ |
ಶ್ರುತಕರ್ಮಾಣಮಾಯಾಂತಂ ದೌಃಶಾಸನಿರವಾರಯತ್ ॥ 30 ॥
ಬಾಣ ಸಮೂಹಗಳನ್ನು ಪ್ರಯೋಗಿಸುತ್ತಾ ಮದಗಜದಂತೆ ಮುಂದೆ ಬರುತ್ತಿದ್ದ ಶ್ರುತಕರ್ಮನನ್ನು ದುಶ್ಶಾಸನನ ಪುತ್ರನು ತಡೆದನು.
ತೌ ಪೇತತುಶ್ಚ ದುರ್ಧರ್ಷೌ ಪರಸ್ಪರವಧೈಷಿಣೌ |
ಪಿತ್ರ್ಯಾಣಾಮರ್ಥಸಿದ್ಧ್ಯರ್ಥಂ ಚಕ್ರಾತೇ ಯುದ್ಧಮುತ್ತಮಮ್ ॥ 31 ॥
ಪರಸ್ಪರ ವಧೆಯನ್ನು ಬಯಸಿದ ದುರ್ಧರ್ಷರಾದ ಅವರಿಬ್ಬರೂ ಬಿದ್ದರು. ಅನಂತರ ತಮ್ಮ ತಂದೆಗಳ ಅರ್ಥಸಿದ್ಧಿಗಾಗಿ ಶ್ರೇಷ್ಠವಾದ ಯುದ್ಧವನ್ನು ಮಾಡಿದರು.
ತಿಷ್ಠಂತಂ ತು ಪಿತುಃ ಶಾಸ್ತ್ರೇ ಪ್ರತಿವಿಂಧ್ಯಂ ತಮಾಯಸೈಃ |
ದ್ರೌಣಿರ್ಮಾನಂ ಪಿತುಃ ಕುರ್ವನ್ ಮಾರ್ಗಣೈಃ ಸಮವಾರಯತ್ ॥
ತಂದೆಯ ಆದೇಶದಂತೆ ನಡೆದುಕೊಳ್ಳುವ ಪ್ರತಿವಿಂಧ್ಯನನ್ನು ಅಶ್ವತ್ಥಾಮರು ಯುಧಿಷ್ಠಿರನಿಗೆ ಮರ್ಯಾದೆಯನ್ನು ಕೊಡುತ್ತಾ ಕಬ್ಬಿಣದ ಬಾಣಗಳಿಂದ ಅವನನ್ನು ತಡೆದರು.
ತಂ ಕ್ರುದ್ಧಂ ಪ್ರತಿವಿವ್ಯಾಧ ಪ್ರತಿವಿಂಧ್ಯಃ ಶಿತೈಃ ಶರೈಃ |
ಸಿಂಹಲಾಂಗೂಲಲಕ್ಷ್ಮಾಣಂ ಪಿತುರರ್ಥೇ ವ್ಯವಸ್ಥಿತಮ್ ॥ 33 ॥
ಕ್ರುದ್ಧನಾದ ಪ್ರತಿವಿಂಧ್ಯನು ನಿಶಿತವಾದ ಬಾಣಗಳಿಂದ ಸಿಂಹಲಾಂಗೂಲ ಧ್ವಜವುಳ್ಳ ತಮ್ಮ ತಂದೆಯ ಸಲುವಾಗಿ ಯುದ್ಧವನ್ನು ಮಾಡುತ್ತಿದ್ದ ಅಶ್ವತ್ಥಾಮರನ್ನು ಹೊಡೆದನು.
ಪ್ರವಪನ್ನಿವ ಬೀಜಾನಿ ಬೀಜಕಾಲೇ ಕೃಷೀವಲಃ |
ದ್ರೌಣಾಯನಿರ್ದ್ರೌಪದೇಯಂ ಶರಜಾಲೈರವಾಕಿರತ್ ॥ 34 ॥
ಕೃಷೀವಲನು ಬೀಜವನ್ನು ಬಿತ್ತುವ ಕಾಲದಲ್ಲಿ ಬೀಜಗಳನ್ನು ಸುರಿಸಿದಂತೆ ದ್ರೋಣ ಪುತ್ರರಾದ ಅಶ್ವತ್ಥಾಮರು ದ್ರೌಪದಿಯ ಪುತ್ರನ ಮೇಲೆ ಬಾಣಗಳ ಸಮೂಹವನ್ನು ಸುರಿಸಿದರು.
ಸಾರ್ಜುನಿಂ ಶ್ರುತಕೀರ್ತಿಂ ತು ದ್ರೌಪದೇಯಂ ಮಹಾರಥಮ್ |
ದ್ರೋಣಾಯಾಭಿಮುಖಂ ಯಾಂತಂ ದೌಶ್ಶಾಸನಿರವಾರಯತ್ ॥ 35 ॥
ಅರ್ಜುನನ ಪುತ್ರನಾದ ಅಭಿಮನ್ಯುವಿನ ಜೊತೆಯಲ್ಲಿ ಬರುತ್ತಿದ್ದ ಮಹಾರಥನಾದ, ದ್ರೌಪದಿಯ ಪುತ್ರನಾದ, ದ್ರೋಣರಿಗೆ ಅಭಿಮುಖವಾಗಿ ಬರುತ್ತಿದ್ದ ಶ್ರುತಕೀರ್ತಿಯನ್ನು ದುಶ್ಶಾಸನನ ಪುತ್ರನು ತಡೆದನು.
ತಸ್ಯ ಕೃಷ್ಣಸಮಃ ಕಾರ್ಷ್ಣಿಃ ತ್ರಿಭಿರ್ಭಲ್ಲೈಃ ಸುಸಂಧಿತೈಃ
ಧನುರ್ಧ್ವಜಂ ಚ ಸೂತಂ ಚ ಛಿತ್ತ್ವಾ ದ್ರೋಣಾಂತಿಕಂ ಯಯೌ ॥36॥
ಅರ್ಜುನನಿಗೆ ಸಮನಾದ ಅಭಿಮನ್ಯುವು ಚೆನ್ನಾಗಿ ಹೂಡಿದ ಮೂರು ಭಲ್ಲಗಳಿಂದ ಅವನ ಧನುಸ್ಸನ್ನೂ, ಧ್ವಜವನ್ನೂ ಮತ್ತು ಸೂತನನ್ನೂ ಕತ್ತರಿಸಿ ದ್ರೋಣರ ಸಮೀಪಕ್ಕೆ ಹೋದನು.
ಯಸ್ತು ಶೂರತಮೋ ರಾಜನ್ನುಭಯೋಃ ಸೇನಯೋಃ ಸ್ಮೃತಃ |
ತಂ ಪಟಚ್ಚರಹಂತಾರಂ ಲಕ್ಷ್ಮಣಃ ಸಮವಾರಯತ್ ॥ 37 ॥
ಎಲೈ ರಾಜನೇ, ಯಾವನನ್ನು ಎರಡು ಸೇನೆಗಳಲ್ಲಿಯೂ ಅತ್ಯಂತ ಶೂರನೆಂದು ಹೇಳುತ್ತಾರೆಯೋ ಅಂತಹ ಪಟಚ್ಚರ ರಾಜನನ್ನು (ಸಮೂಹವನ್ನು)ಕೊಂದ ಅಭಿಮನ್ಯುವನ್ನು ದುರ್ಯೋಧನನ ಪುತ್ರನಾದ ಲಕ್ಷ್ಮಣನು ತಡೆದನು.
ಲಕ್ಷ್ಮಣೇಷ್ವಸನಂ ಛಿತ್ತ್ವಾ ಲಕ್ಷ್ಮಣಂ ಚಾಪಿ ಮಾರಿಷ |
ಲಕ್ಷ್ಮಣೇ ಶರಜಾಲಾನಿ ವಿಸೃಜನ್ ಬಹ್ವಶೋಭತ ॥ 38 ॥
ಎಲೈ ಪೂಜ್ಯನೇ, ಅಭಿಮನ್ಯುವು ಲಕ್ಷ್ಮಣನ ಧನುಸ್ಸನ್ನು ಕತ್ತರಿಸಿ, ಅವನ ಮೇಲೆ ಬಾಣಗಳ ಸಮೂಹವನ್ನು ಪ್ರಯೋಗಿಸುತ್ತಾ ಬಹಳವಾಗಿ ಶೋಭಿಸಿದನು.
ತತೋಽಭಿಮನ್ಯುಃ ಕರ್ಮಾಣಿ ಕುರ್ವಂತಂ ಚಿತ್ರಯೋಧಿನಮ್ |
ಆರ್ಜುನಿಃ ಕೃತಿನಂ ಶೂರಂ ಲಕ್ಷ್ಮಣಂ ಸಮಯೋಧಯತ್ ॥ 39 ॥
ಅನಂತರ ಅರ್ಜುನನ ಪುತ್ರನಾದ ಅಭಿಮನ್ಯುವು ಶೂರನೂ, ಕುಶಲನೂ, ವಿಚಿತ್ರವಾಗಿ ಯುದ್ಧವನ್ನು ಮಾಡುವವನೂ, ರಣರಂಗದಲ್ಲಿ ಅನೇಕ ಕರ್ಮಗಳನ್ನು ಮಾಡುವವನೂ ಆದ ಲಕ್ಷ್ಮಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ಸ ಸಂಪ್ರಹಾರಸ್ತುಮುಲಃ ತಯೋರಾಸೀನ್ಮಹಾತ್ಮನೋಃ |
ಶ್ರೋತೄಣಾಮೀಕ್ಷಿತೄಣಾಂ ಚ ಭೃಶಂ ಪ್ರೀತಿವಿವರ್ಧನಃ ॥ 40 ॥
ಕೇಳುವವರಿಗೂ ಮತ್ತು ನೋಡುವವರಿಗೂ ಬಹಳ ಸಂತೋಷವನ್ನುಂಟು ಮಾಡುವಂತೆ ಮಹಾತ್ಮರಾದ ಅವರಿಬ್ಬರಿಗೆ ತೀವ್ರವಾದ ಯುದ್ಧವು ನಡೆಯಿತು.
ತವ ಪೌತ್ರೌ ಚ ದುರ್ಧರ್ಷೌ ಪರಸ್ಪರವಧೈಷಿಣೌ |
ಪಿತೄಣಾಮರ್ಥಸಿದ್ಧ್ಯರ್ಥಂ ಚಕ್ರಾತೇ ಯುದ್ಧಮದ್ಭುತಮ್ ॥ 41 ॥
ಪರಸ್ಪರ ವಧೆಯನ್ನು ಬಯಸಿದ ದುರ್ಧರ್ಷರಾದ ನಿನ್ನ ಮೊಮ್ಮಕ್ಕಳಿಬ್ಬರೂ ತಂದೆಗಳ ಕಾರ್ಯಸಿದ್ದಿಗಾಗಿ ಅದ್ಭುತವಾದ ಯುದ್ಧವನ್ನು ಮಾಡಿದರು.
ವಿಕರ್ಣಸ್ತು ಮಹಾಪ್ರಾಜ್ಞೋ ಯಾಜ್ಞಸೇನಿಂ ಶಿಖಂಡಿನಮ್ |
ಪರ್ಯವಾರಯದಾಯಾಂತಂ ಯುವಾನಂ ಸಮರೇ ಯುವಾ ॥ 42 ॥
ಯುವಕನೂ, ಮಹಾಪ್ರಾಜ್ಞನೂ ಆದ ವಿಕರ್ಣನು ಯುವಕನಾದ, ದ್ರುಪದ ಪುತ್ರನಾದ, ದ್ರೋಣರ ಬಳಿಗೆ ಬರುತ್ತಿದ್ದ ಶಿಖಂಡಿಯನ್ನು ರಣರಂಗದಲ್ಲಿ ತಡೆದನು.
ತತಸ್ತಮಿಷುಜಾಲೇನ ಯಾಜ್ಞಸೇನಿಃ ಸಮಾವೃಣೋತ್ |
ವಿಧೂಯ ತದ್ ಬಾಣಜಾಲಂ ಬಭೌ ತವ ಸುತೋ ಬಲೀ ॥ 43 ॥
ಆಗ ಶಿಖಂಡಿಯು ಅವನನ್ನು ಬಾಣಗಳ ಸಮೂಹದಿಂದ ಮುಚ್ಚಿದನು. ಬಲಿಷ್ಠನಾದ ನಿನ್ನ ಸುತನು ಬಾಣಗಳ ಸಮೂಹವನ್ನು ವಿನಾಶ ಮಾಡಿ ಶೋಭಿಸಿದನು.
ಅಂಗದೋಽಭಿಮುಖಃ ಶೂರಮುತ್ತಮೌಜಸಮಾಹವೇ |
ದ್ರೋಣಾಯಾಭಿಮುಖಂ ಯಾಂತಂ ವತ್ಸದಂತೈರವಾಕಿರತ್ |
ಅಂಗದೋ ನಿಶಿತೈರ್ಬಾಣೈಃ ಪುನರೇನಮವಾಕಿರತ್॥ 44 ॥
ಅಂಗದನು ದ್ರೋಣರ ಎದುರಿಗೆ ಸಾಗುತ್ತಿದ್ದ ಶೂರನಾದ ಉತ್ತಮೌಜನನ್ನು ಅವನಿಗೆ ಎದುರಾಗಿ ನಿಂತು ಅವನ ಮೇಲೆ ವತ್ಸದಂತಗಳನ್ನು ಪ್ರಯೋಗಿಸಿದನು. ಪುನಃ ಅಂಗದನು ಅವನ ಮೇಲೆ ಹರಿತವಾದ ಬಾಣಗಳನ್ನು ಪ್ರಯೋಗಿಸಿದನು.
ಸ ಸಂಪ್ರಹಾರಸ್ತುಮುಲಸ್ತಯೋರಾಸೀನ್ಮಹಾತ್ಮನೋಃ |
ಶ್ರೋತೄಣಾಮೀಕ್ಷಿತೄಣಾಂ ಚ ತಯೋಶ್ಚ ಪ್ರೀತಿವರ್ಧನಃ ॥ 45 ॥
ಮಹಾತ್ಮರಾದ ಅವರಿಬ್ಬರಿಗೆ ತೀವ್ರವಾದ ಮತ್ತು ನೋಡುವವರಿಗೂ, ಕೇಳುವವರಿಗೂ ಮತ್ತು ಅವರಿಗೂ ಸಂತೋಷದಾಯಕವಾದ ಯುದ್ಧವು ನಡೆಯಿತು.
ಅಂಗದಂ ಪಂಚಭಿರ್ಬಾಣೈರವಿಧ್ಯತ್ ಸ ಪರಂತಪಃ |
ತತಃ ಸಮಭವದ್ ಯುದ್ಧಮನ್ಯೋನ್ಯಮಿತರೇತರಮ್ |
ವೀರಾಣಾಂ ಜಯಕಾಂಕ್ಷಾಣಾಮತೀವ ಬಲಪೌರುಷಾತ್ ॥ 46 ॥
ಪರಂತಪನಾದ ಉತ್ತಮೌಜನು ಅಂಗದನನ್ನು ಐದು ಬಾಣಗಳಿಂದ ಹೊಡೆದನು. ಅನಂತರ ಜಯವನ್ನು ಬಯಸುವ ವೀರರಿಗೆ ಬಲ ಮತ್ತು ಪೌರುಷಗಳಿಂದ ಕೂಡಿದ ಪರಸ್ಪರವಾದ ಅನ್ಯೋನ್ಯ ಯುದ್ಧವು ಉಂಟಾಯಿತು.
ದುರ್ಮುಖಸ್ತು ಮಹೇಷ್ವಾಸೋ ವೀರಂ ಪುರುಜಿತಂ ಬಲೀ |
ದ್ರೋಣಾಯಾಭಿಮುಖಂ ಯಾಂತಂ ಕುಂತಿಭೋಜಮವಾರಯತ್ ॥
ಮಹಾಧನುರ್ಧಾರಿಯೂ, ಬಲಿಷ್ಠನೂ ಆದ ದುರ್ಮುಖನು ದ್ರೋಣರ ಎದುರಾಗಿ ಹೋಗುವ ಕುಂತಿಭೋಜನಾದ ಪುರುಜಿತ್ ರಾಜನನ್ನು ತಡೆದನು.
ಸ ದುರ್ಮುಖಂ ಭ್ರುವೋರ್ಮಧ್ಯೇ ನಾರಾಚೇನಾಹನದ್ ಭೃಶಮ್ |
ತಸ್ಯ ತದ್ ವಿಬಭೌ ವಕ್ತ್ರಂ ಸನಾಳಮಿವ ಪಂಕಜಮ್ ॥ 48 ॥
ಪುರುಜಿತನು ದುರ್ಮುಖನನ್ನು ನಾರಾಚದಿಂದ ಅವನ ಭ್ರೂ ಮಧ್ಯದಲ್ಲಿ ಬಲವಾಗಿ ಹೊಡೆದನು. ದುರ್ಮುಖನ ಮುಖವು ಆಗ ನಾಳದಿಂದ ಕೂಡಿದ ಪದ್ಮದಂತೆ ಶೋಭಿಸಿತು.
ಕರ್ಣಸ್ತು ಕೇಕಯಾನ್ ಭ್ರಾತೄನ್ ಪಂಚ ಲೋಹಿತಕಧ್ವಜಾನ್ |
ದ್ರೋಣಾಯಾಭಿಮುಖಂ ಯಾತಃ ಶರೌಘೇಣ ನ್ಯವಾರಯತ್ ॥ 49 ॥
ಕರ್ಣನು ಲೋಹಿತ ಧ್ವಜವುಳ್ಳ, ದ್ರೋಣರಿಗೆ ಅಭಿಮುಖವಾಗಿ ಹೋಗುವ, ಐವರು ಕೇಕಯ ಸಹೋದರರನ್ನು ಬಾಣಗಳ ಸಮೂಹದಿಂದ ತಡೆದನು.
ತ ಏತಂ ಭೃಶಸಂಕ್ರುದ್ಧಾಃ ಶರವ್ರಾತೈರವಾಕಿರನ್ |
ಸ ಏತಾಂಶ್ಛಾದಯಾಮಾಸ ಶರಜಾಲೈಃ ಪುನಃಪುನಃ ॥ 50 ॥
ಅವರು ಬಹಳ ಕೋಪಗೊಂಡು ಕರ್ಣನ ಮೇಲೆ ಬಾಣಗಳ ಸಮೂಹವನ್ನು ಸುರಿಸಿದರು. ಕಣನರ್ಾದರೂ ಅವರನ್ನು ಪುನಃ ಪುನಃ ತನ್ನ ಬಾಣಗಳ ಸಮೂಹದಿಂದ ಮುಚ್ಚಿಹಾಕಿದನು.
ನ ವೈ ಕರ್ಣೋ ನ ತೇ ಪಂಚ ದದೃಶುಃ ಶರಸಂವೃತಾಃ |
ಸಾಶ್ವಸೂತಧ್ವಜರಥಾಃ ಪರಸ್ಪರಶರಾಚಿತಾಃ ॥ 51 ॥
ಕರ್ಣನಾಗಲೀ, ಪಂಚ ಕೇಕಯರಾಗಲೀ, ಶರಸಂವೃತರಾದ್ದರಿಂದ ಯಾರೂ ಕಾಣಲಿಲ್ಲ. ಇಬ್ಬರ ಅಶ್ವ-ಸೂತ-ಧ್ವಜ-ರಥಗಳು ಪರಸ್ಪರ ಬಾಣಗಳಿಂದ ತುಂಬಿ ಹೋದವು.

ಪುತ್ರಾಸ್ತೇ ದುರ್ಜಯಶ್ಚೈವ ಜಯಶ್ಚ ವಿಜಯಶ್ಚ ಹ |
ನೀಲಕಾಶ್ಯಜಯಾನ್ ಶೂರಾನ್ ತ್ರಯಸ್ತ್ರೀನ್ ಸಮವಾರಯನ್ ॥52॥
ನಿನ್ನ ಪುತ್ರರಾದ ದುರ್ಜಯ, ಜಯ ಮತ್ತು ವಿಜಯರು ಶೂರರಾದ ನೀಲ, ಕಾಶ್ಯ ಮತ್ತು ಜಯ ಈ ಮೂವರನ್ನು ಕ್ರಮವಾಗಿ ತಡೆದರು.
ತದ್ ಯುದ್ಧಮಭವದ್ ಘೋರಂ ವೀಕ್ಷಿತೃಪ್ರೀತಿವರ್ಧನಮ್ |
ಸಿಂಹವ್ಯಾಘ್ರತರಕ್ಷೂಣಾಂ ಯಥೇಭಮಹಿಷರ್ಷಭೈಃ ॥ 53 ॥
ಸಿಂಹ-ವ್ಯಾಘ್ರ-ತರಕ್ಷು (ಚಿರತೆ)ಗಳಿಗೆ ಗಜ-ಮಹಿಷ (ಕೋಣ) ಮತ್ತು ವೃಷಭಗಳ ಜೊತೆಯಲ್ಲಿ ನಡೆದಂತೆ, ನೋಡುವವರಿಗೆ ಸಂತೋಷದಾಯಕವಾದ ಘೋರವಾದ ಯುದ್ಧವು ನಡೆಯಿತು.
ಕ್ಷೇಮಧೂರ್ತಿಬೃಹಂತೌ ತು ಭ್ರಾತರೌ ಸಾತ್ವತಂ ಯುಧಿ |
ದ್ರೋಣಾಯಾಭಿಮುಖಂ ಯಾಂತಂ ಶರೈಸ್ತೀಕ್ಷ್ಣೈರ್ಣ್ಯಸ್ತತಕ್ಷತುಃ ॥ 54 ॥
ಸಹೋದರರಾದ ಕ್ಷೇಮಧೂರ್ತಿ ಮತ್ತು ಬೃಹಂತರು ದ್ರೋಣರಿಗೆ ಅಭಿಮುಖವಾಗಿ ಹೋಗುವ ಸಾತ್ಯಕಿಯನ್ನು ರಣರಂಗದಲ್ಲಿ ತೀಕ್ಷ್ಣವಾದ ಬಾಣಗಳಿಂದ ಗಾಯಗೊಳಿಸಿದರು.
ತಯೋಃ ಸಮೇತಯೋರ್ಯುದ್ಧಮತ್ಯದ್ಭುತಮಿವಾಭವತ್ |
ಸಿಂಹಸ್ಯ ದ್ವಿಪಮುಖ್ಯಾಭ್ಯಾಂ ಪ್ರಭಿನ್ನಾಭ್ಯಾಂ ಯಥಾ ವನೇ ॥ 55 ॥
ಕಾಡಿನಲ್ಲಿ ಸಿಂಹಕ್ಕೂ ಮತ್ತು ಎರಡು ಶ್ರೇಷ್ಠ ಮದಗಜಗಳಿಗೂ ನಡೆದಂತೆ ಅವರಿಬ್ಬರಿಗೆ ಅದ್ಭುತವಾದ ಯುದ್ಧವು ನಡೆಯಿತು.
ರಾಜಾನಂ ತು ತಥಾಽಂಬಷ್ಠಮೇಕಂ ಯುದ್ಧಾಭಿನಂದಿನಮ್ |
ಚೇದಿರಾಜಃ ಸ್ವಯಾ ಶಕ್ತ್ಯಾ ಕ್ರುದ್ಧೋ ದ್ರೋಣಾದವಾರಯತ್ ॥ 56 ॥
ಯುದ್ಧವನ್ನು ಆಶಿಸುವ ಅಂಬಷ್ಠರಾಜನನ್ನು ಕೋಪಗೊಂಡ ಚೇದಿರಾಜನು ತನ್ನ ಶಕ್ತಿಯಿಂದ ದ್ರೋಣರ ಕಡೆಗೆ ಹೋಗದಂತೆ ತಡೆದನು.
ತಮಂಬಷ್ಠೋಽಸ್ಥಿಭೇದಿನ್ಯಾ ನಿರವಿಧ್ಯಚ್ಛಲಾಕಯಾ |
ಸ ತ್ಯಕ್ತ್ವಾ ಸಶರಂ ಚಾಪಂ ರಥಾದ್ ಭೂಮೌ ಪಪಾತ ಹ ॥ 57 ॥
ಅಂಬಷ್ಠನು ಅವನನ್ನು ಮೂಳೆಯನ್ನು ಮುರಿಯುವ ಸಲಾಕೆಯಿಂದ ಹೊಡೆದನು. ಚೇದಿರಾಜನು ಧನುರ್ಬಾಣಗಳನ್ನು ಬಿಟ್ಟು ರಥದಿಂದ ಭೂಮಿಯ ಮೇಲೆ ಬಿದ್ದನು.
ವಾರ್ಧಕ್ಷೇಮಿಂ ತು ವಾರ್ಷ್ಣೇಯಂ ಕೃಪಃ ಶಾರದ್ವತಃ ಶರೈಃ |
ಅಕ್ಷುದ್ರಃ ಕ್ಷುದ್ರಕೈರ್ಬಾಣೈಃ ಕ್ರುದ್ಧರೂಪಮವಾರಯತ್ ॥ 58 ॥
ಅಕ್ಷುದ್ರರಾದ ಶಾರದ್ವತರಾದ ಕೃಪರು ವೃದ್ಧಕ್ಷೇಮನ ಪುತ್ರನಾದ ವಾರ್ಷ್ಣೇಯನಾದ ಕೋಪಗೊಂಡ ಸಾತ್ಯಕಿಯನ್ನು ಕ್ಷುದ್ರಕಗಳೆಂಬ ಸಣ್ಣಬಾಣಗಳಿಂದ ದ್ರೋಣರಿಂದ ತಡೆದರು.
ಯುಧ್ಯಂತೌ ಕೃಪವಾರ್ಷ್ಣೇಯೌ ಯೇಽಪಶ್ಯಂಶ್ಚಿತ್ರಯೋಧಿನೌ |
ತೇ ಯುದ್ಧಸಕ್ತಮನಸೋ ನಾನ್ಯಾ ಬುಬುಧಿರೇ ಕ್ರಿಯಾಃ ॥ 59 ॥
ವಿಚಿತ್ರವಾಗಿ ಯುದ್ಧವನ್ನು ಮಾಡುವ ಕೃಪ-ವಾರ್ಷ್ಣೇಯರನ್ನು ಯಾರು ನೋಡಿದರೋ ಅವರು ಆ ಯುದ್ಧದಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಬೇರೆ ಯಾವ ಕ್ರಿಯೆಯನ್ನೂ ನೋಡಲಿಲ್ಲ.
ಸೌಮದತ್ತಿಸ್ತು ರಾಜಾನಂ ಮಣಿಮಂತಮತಂದ್ರಿತಮ್ |
ಪರ್ಯವಾರಯದಾಯಾಂತಂ ಯಶೋ ದ್ರೋಣಸ್ಯ ವರ್ಧಯನ್ ॥
ಸೋಮದತ್ತನ ಪುತ್ರನಾದ ಯೂಪಕೇತುವು (ಭೂರಿಶ್ರವನು)ದ್ರೋಣರ ಕೀರ್ತಿಯನ್ನು ಹೆಚ್ಚಿಸುತ್ತಾ ಆಲಸ್ಯವಿಲ್ಲದೆ ದ್ರೋಣರ ಕಡೆಗೆ ಹೋಗುತ್ತಿದ್ದ ಮಣಿಮಂತ ರಾಜನನ್ನು ತಡೆದನು.
ಸ ಸೌಮದತ್ತೇಸ್ತ್ವರಿತಂ ಛಿತ್ತ್ವಾ ಕೇತನಕಾರ್ಮುಕೇ |
ಪುನಃ ಪತಾಕಾಂ ಸೂತಂ ಚ ಛತ್ರಂ ಚಾಪಾತಯದ್ ರಥಾತ್ ॥ 61 ॥
ಅವನು ಸೋಮದತ್ತ ಪುತ್ರನ ಧ್ವಜ-ಧನುಸ್ಸುಗಳನ್ನು ಕತ್ತರಿಸಿ ಪುನಃ ಪತಾಕೆಯನ್ನೂ, ಸೂತನನ್ನೂ ಮತ್ತು ಛತ್ರವನ್ನೂ ರಥದಿಂದ ಕೆಡವಿದನು.
ಅವಪ್ಲುತ್ಯ ರಥಾತ್ ತೂರ್ಣಂ ಯೂಪಕೇತುರರಿಂದಮಃ |
ಸಾಶ್ವಸೂತಧ್ವಜಂ ಚೈವ ನಿಚಕರ್ತ ವರಾಸಿನಾ ॥ 62 ॥
ಅರಿಂದಮನಾದ ಯೂಪಕೇತುವು ಶೀಘ್ರವಾಗಿ ರಥದಿಂದ ಕೆಳಗೆ ಹಾರಿ, ಅಶ್ವ-ಸೂತ-ಧ್ವಜಗಳ ಜೊತೆಯಲ್ಲಿ ಮಣಿಮಂತನನ್ನು ತನ್ನ ಶ್ರೇಷ್ಠವಾದ ಖಡ್ಗದಿಂದ ಕತ್ತರಿಸಿದನು.
ಅಥ ಸ್ವರಥಮಾಸ್ಥಾಯ ಧನುರಾದಾಯ ಚಾಪರಮ್ |
ಸ್ವಯಂ ಯಚ್ಛನ್ ಹಯಾನ್ ರಾಜನ್ ವ್ಯಧಮತ್ ಪಾಂಡುವಾಹಿನೀಮ್ ॥
ಎಲೈ ರಾಜನೇ, ಪುನಃ ತನ್ನ ರಥಕ್ಕೆ ಬಂದು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತನ್ನ ಅಶ್ವಗಳನ್ನು ತಾನೇ ನಿಯಂತ್ರಿಸುತ್ತಾ ಪಾಂಡವರ ಸೇನೆಯನ್ನು ವಿನಾಶಗೊಳಿಸಿದನು.
ತತೋ ವೃಕೋದರಃ ಪಾರ್ಥೋ ಬಾಹುವೀರ್ಯೇಣ ಚಾನ್ವಿತಃ |
ಅಭಿನತ್ತಂ ಶರಾನೀಕಮಚಿರೇಣೈವ ಮಾರಿಷ ॥ 64 ॥
ಎಲೈ ಪೂಜ್ಯನೇ, ಆಗ ಬಾಹುಬಲದಿಂದ ಕೂಡಿದ, ಕುಂತೀಪುತ್ರನಾದ ವೃಕೋದರನು ಆ ಶರಸಮೂಹವನ್ನು ಶೀಘ್ರವಾಗಿ ವಿನಾಶಗೊಳಿಸಿದನು.

ತೇ ಗಜಾ ಗಿರಿಸಂಘಾಭಾಃ ಕ್ಷರಂತಃ ಸರ್ವತೋ ಮದಮ್ |
ಭೀಮಸೇನಸ್ಯ ನಾರಾಚೈರ್ವಿಮುಖಾ ವಿದಲೀಕೃತಾಃ ॥ 65 ॥
ಪರ್ವತವನ್ನು ಹೋಲುತ್ತಿದ್ದ, ಎಲ್ಲ ಕಡೆಗಳಲ್ಲಿಯೂ ಮದಧಾರೆಯನ್ನು ಸುರಿಸುತ್ತಿದ್ದ ಗಜಗಳು ಭೀಮಸೇನನ ನಾರಾಚಗಳಿಂದ ಕತ್ತರಿಸಲ್ಪಟ್ಟು ಯುದ್ಧ ವಿಮುಖವಾದವು.
ವಿಚಲೇದಭ್ರಜಾಲಾನಿ ಯಥಾ ವಾಯುಃ ಸಮುದ್ಧತಃ |
ವ್ಯಧಮತ್ತಾನ್ಯನೀಕಾನಿ ತಥೈವ ಪವನಾತ್ಮಜಃ ॥ 66 ॥
ತೀವ್ರವಾಗಿ ಎದ್ದ ವಾಯುವು ಮೋಡ ಸಮೂಹಗಳನ್ನು ಚದುರಿಸಿದಂತೆ ಪವನಾತ್ಮಜನಾದ ಭೀಮಸೇನನು ಆ ಸೈನ್ಯಗಳನ್ನು ನಾಶಗೊಳಿಸಿದನು.
ಸ ತೇಷು ವಿಸೃಜನ್ ಬಾಣಾನ್ ಭೀಮೋ ನಾಗೇಷ್ವಶೋಭತ |
ಭುವನೇಷ್ವಿವ ಸರ್ವೇಷು ಗಭಸ್ತಿಚಯಮಂಶುಮಾನ್ ॥ 67 ॥
ಆ ಗಜಗಳ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಿದ್ದ ಭೀಮನು ಎಲ್ಲ ಲೋಕಗಳಲ್ಲಿಯೂ ತನ್ನ ಕಿರಣಸಮೂಹವನ್ನು ಚೆಲ್ಲುವ ಸೂರ್ಯನಂತೆ ಶೋಭಿಸಿದನು.
ಮುಸಲೈರ್ಮುದ್ಗರೈಶ್ಚಕ್ರೈರ್ಭಿಂಡಿಪಾಲೈಃ ಪರಶ್ವಧೈಃ |
ಪಾಂಸುವಾತಾಗ್ನಿಸಲಿಲೈರ್ಭಸ್ಮಲೋಷ್ಟತೃಣದ್ರುಮೈಃ ॥ 68 ॥
ಆರುಜನ್ ಪ್ರರುಜನ್ ಭಂಜನ್ ನಿಘ್ನನ್ ವಿದ್ರಾವಯನ್ ಕ್ಷಿಪನ್ |
ಸೇನಾಂ ವಿಭೀಷಣೋಽಭ್ಯೇತಿ ದ್ರೋಣಪ್ರೇಪ್ಸುರ್ಘಟೋತ್ಕಚಃ ॥ 69 ॥
ಕೌರವ ಸೈನ್ಯವನ್ನು ಮುಸಲಗಳಿಂದಲೂ, ಮುದ್ಗರಗಳಿಂದಲೂ, ಚಕ್ರಗಳಿಂದಲೂ, ಭಿಂಡಿಪಾಲಗಳಿಂದಲೂ, ಪರಶ್ವಧಗಳಿಂದಲೂ, ಕಲ್ಲುಗಳಿಂದಲೂ, ಅಗ್ನಿ-ಜಲಗಳಿಂದಲೂ, ಧೂಳಿನ ಮಳೆಯಿಂದಲೂ, ಮಣ್ಣು-ಹೆಂಟೆಗಳಿಂದಲೂ, ತೃಣ-ದ್ರುಮಗಳಿಂದಲೂ ಎಲ್ಲ ಕಡೆಗಳಲ್ಲಿಯೂ ಚೆನ್ನಾಗಿ ಹಿಂಸಿಸುತ್ತಾ, ಭಗ್ನಗೊಳಿಸುತ್ತಾ, ಸಂಹರಿಸುತ್ತಾ, ಓಡಿಸುತ್ತಾ, ಎಸೆಯುತ್ತಾ ಭಯಂಕರನಾದ ಘಟೋತ್ಕಚನು ದ್ರೋಣರನ್ನು ಹಿಡಿಯುವ ಸಲುವಾಗಿ ಮುಂದೆ ಬಂದನು.
ತಂ ತು ನಾನಾಪ್ರಹರಣೈರ್ನಾನಾಯುದ್ಧವಿಶೇಷಣೈಃ |
ರಾಕ್ಷಸೋ ರಾಕ್ಷಸಂ ಕ್ರುದ್ಧಂ ಕ್ರುದ್ಧೋಽಭ್ಯಘ್ನದಲಂಬುಸಃ ॥ 70 ॥
ತಯೋಸ್ತದಭವದ್ ಯುದ್ಧಂ ರಕ್ಷೋಗ್ರಾಮಣಿಮುಖ್ಯಯೋಃ |
ತಾದೃಗ್ ಯಾದೃಕ್ ಪುರಾವೃತ್ತಂ ಶಂಬರಾಮರರಾಜಯೋಃ ॥ 71 ॥
ರಾಕ್ಷಸನೂ, ಕ್ರುದ್ಧನೂ ಆದ ಅವನನ್ನು, ಸ್ವತಃ ರಾಕ್ಷಸನಾದ, ಕ್ರುದ್ಧನಾದ ಯುದ್ಧದಲ್ಲಿ ಅತಿಶಯವನ್ನು ಕೊಡುವ ಅನೇಕ ಆಯುಧಗಳಿಂದ ಕೂಡಿದ ಅಲಂಬುಸನು ಚೆನ್ನಾಗಿ ಹೊಡೆದನು. ಆಗ ಹಿಂದೆ ಶಂಬರ ಮತ್ತು ದೇವೇಂದ್ರರಿಗೆ ನಡೆದಂತೆ ರಾಕ್ಷಸಮುಖ್ಯನಿಗೂ, ಗ್ರಾಮಣಿಮುಖ್ಯನಿಗೂ ತೀವ್ರವಾದ ಯುದ್ಧವು ನಡೆಯಿತು.
ಭಾರದ್ವಾಜಸ್ತು ಸೇನಾನ್ಯಂ ಧೃಷ್ಟದ್ಯುಮ್ನಂ ಮಹಾರಥಮ್ |
ತಮೇವ ರಾಜನ್ನಾಯಾಂತಮತಿಕ್ರಮ್ಯ ಪರಾನ್ ರಿಪೂನ್ ॥ 72 ॥
ಮಹತಾ ಶರಜಾಲೇನ ಕಿರಂತಂ ಶತ್ರುವಾಹಿನೀಮ್ |
ಅವಾರಯನ್ ಮಹಾರಾಜ ಸಾಮಾತ್ಯಂ ಸಪದಾನುಗಮ್ ॥ 73 ॥
ಎಲೈ ಮಹಾರಾಜನೇ, ಭರದ್ವಾಜರಾದರೋ ಸೇನಾನಿಯೂ, ಮಹಾರಥನೂ ಉಳಿದ ಶತ್ರುಗಳನ್ನು ದಾಟಿ, ಅಮಾತ್ಯರ ಮತ್ತು ಪದಾತಿಗಳ ಜೊತೆಯಲ್ಲಿ ತಮ್ಮ ಕಡೆಗೆ ಬರುತ್ತಿದ್ದವನೂ, ಶತ್ರುಗಳ ಮೇಲೆ ಬಾಣದ ಮಳೆಯನ್ನು ಸುರಿಸುತ್ತಿದ್ದವನೂ, ಆದ ಧೃಷ್ಟದ್ಯುಮ್ನನನ್ನು  ಬಾಣಗಳ ದೊಡ್ಡ ಸಮೂಹದಿಂದ ತಡೆದರು.
ಅಥಾನ್ಯೇ ಪಾರ್ಥಿವಾ ರಾಜನ್ ಬಹುತ್ವಾನ್ನಾತಿಕೀರ್ತಿತಾಃ |
ಸಮಸಜ್ಜಂತ ಸರ್ವೇ ತೇ ಯಥಾಯೋಗಂ ಯಥಾಬಲಮ್ ॥ 74 ॥
ಎಲೈ ರಾಜನೇ, ಉಳಿದ ರಾಜರು ಬಹುಸಂಖ್ಯಾತರಾದ್ದರಿಂದ ಅವರನ್ನು ನಾನು ಹೇಳಲಿಲ್ಲ. ಅವರು ತಮ್ಮ ವಿದ್ಯೆಗೆ ಮತ್ತು ತಮ್ಮ ಬಲಕ್ಕೆ ಅನುಗುಣವಾಗಿ ಶತ್ರುಗಳ ಜೊತೆಯಲ್ಲಿ ಸಂಸಕ್ತರಾದರು.
ಹಯೈರ್ಹಯಾಸ್ತಥಾ ಜಗ್ಮುಃ ಕುಂಜರೈರೇವ ಕುಂಜರಾಃ |
ಪದಾತಯಃ ಪದಾತೀಭೀ ರಥೈರೇವ ಮಹಾರಥಾಃ ॥ 75 ॥
ಅಶ್ವಗಳ ಜೊತೆಯಲ್ಲಿ ಅಶ್ವಗಳೂ, ಗಜಗಳ ಜೊತೆಯಲ್ಲಿ ಗಜಗಳೂ, ಪದಾತಿಗಳ ಜೊತೆಯಲ್ಲಿ ಪದಾತಿಗಳೂ, ರಥಗಳ ಜೊತೆಯಲ್ಲಿ ಮಹಾರಥರೂ ಯುದ್ಧದಲ್ಲಿ ತೊಡಗಿದವು.
ಅಕುರ್ವನ್ನಾರ್ಯಕರ್ಮಾಣಿ ತತ್ರೈವ ಪುರುಷರ್ಷಭಾಃ |
ಕುಲವೀರ್ಯಾನುರೂಪಾಣಿ ಸಂಸ್ಪೃಷ್ಟಾಶ್ಚ ಪರಸ್ಪರಮ್ ॥ 76 ॥
ಹೀಗೆ ಪರಸ್ಪರ ಸಂಸಕ್ತರಾದ ಆ ಪುರುಷಶ್ರೇಷ್ಠರು ತಮ್ಮ ಕುಲ, ವೀರ್ಯಗಳಿಗೆ ಅನುಗುಣವಾದ ಉದಾತ್ತವಾದ ಕರ್ಮಗಳನ್ನು ಮಾಡಿದರು.
ಏವಂ ದ್ವಂದ್ವಶತಾನ್ಯಾಸನ್ ರಥವಾರಣವಾಜಿನಾಮ್ |
ಪದಾತೀನಾಂ ಚ ಭದ್ರಂ ತೇ ತವ ತೇಷಾಂ ಚ ಸಂಕುಲೇ ॥ 77 ॥
ನಿನಗೆ ಮಂಗಳವಾಗಲಿ. ಹೀಗೆ ನಿನ್ನವರಿಗೆ ಮತ್ತು ಅವರಿಗೆ ಸಂಕುಲಯುದ್ಧವು ನಡೆದಾಗ ರಥಗಳ, ಗಜಗಳ, ಅಶ್ವಗಳ, ಪದಾತಿಗಳ ನೂರಾರು ದ್ವಂದ್ವ ಯುದ್ಧಗಳು ನಡೆದವು.

ನೈತಾದೃಶೋ ದೃಷ್ಟಪೂರ್ವಃ ಸಂಗ್ರಾಮೋ ನೈವ ಚ ಶ್ರುತಃ |
ದ್ರೋಣಸ್ಯಾಭಾವಭಾವೇ ತು ಪ್ರಸಕ್ತಾನಾಂ ಪರಸ್ಪರಮ್ ॥ 78 ॥
ದ್ರೋಣರ ಅಭಾವದಲ್ಲಿ ಪ್ರಸಕ್ತರಾದ ಪಾಂಡವರಿಗೂ, ದ್ರೋಣರನ್ನು ಉಳಿಸಿಕೊಳ್ಳಲು ಪ್ರಸಕ್ತರಾದ ಕೌರವರಿಗೂ ಪರಸ್ಪರವಾಗಿ ಎಂತಹ ಯುದ್ಧವು ನಡೆಯಿತೋ ಅಂತಹ ಯುದ್ಧವನ್ನು ಹಿಂದೆ ಯಾರೂ ನೋಡಿರಲಿಲ್ಲ ಅಥವಾ ಕೇಳಿರಲಿಲ್ಲ.
ಇದಂ ಘೋರಮಿದಂ ಚಿತ್ರಮಿದಂ ರೌದ್ರಮಿತಿ ಪ್ರಭೋ |
ತತ್ರ ಯುದ್ಧಾನ್ಯವರ್ತಂತ ಪೃತನಾನಾಂ ಬಹೂನಿ ಚ ॥ 79 ॥
ಎಲೈ ಪ್ರಭುವೇ, ಇದು ಘೋರವಾಗಿದೆ, ಇದು ವಿಚಿತ್ರವಾಗಿದೆ, ಇದು ಭಯಂಕರವಾಗಿದೆ ಎಂದು ಹೇಳುತ್ತಾ ಅನೇಕ ಸೈನ್ಯಗಳು ಆ ಯುದ್ಧದಿಂದ ಹಿಂದೆ ಸರಿದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರ್ವಿಂಶೋಽಧ್ಯಾಯಃ ॥
॥ ಸಂಶಪ್ತಕಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಭಗದತ್ತನ ಪರಾಕ್ರಮ.
ಧೃತರಾಷ್ಟ್ರಃ
ತೇಷ್ವೇವಂ ಸನ್ನಿವೃತ್ತೇಷು ಪ್ರತ್ಯುದ್ಯಾತೇಷು ಭಾಗಶಃ |
ಕಥಂ ಯುಯುಧಿರೇ ಪಾರ್ಥಾ ಮಾಮಕಾಶ್ಚ ತರಸ್ವಿನಃ ॥ 1 ॥
ಧೃತರಾಷ್ಟ್ರ, ಪಾಂಡವರಲ್ಲಿ ಕೆಲವರು ಹಿಂದೆ ಹೋಗಿ, ಇನ್ನು ಕೆಲವರು ಹಿಂದಿರುಗಿದ ಮೇಲೆ ಪಾಂಡವರೂ ಮತ್ತು ವೇಗಶಾಲಿಗಳಾದ ನನ್ನವರೂ ಹೇಗೆ ಯುದ್ಧವನ್ನು ಮಾಡಿದರು?
ಕಿಮರ್ಜುನಶ್ಚಾಪ್ಯಕರೋತ್ ತತ್ರ ತಾತ ಪ್ರತಾಪವಾನ್ |
ಸಂಶಪ್ತಕಾ ವಾ ಪಾರ್ಥಸ್ಯ ಕಿಮಕುರ್ವತ ಸಂಜಯ ॥ 2 ॥
ಎಲೈ ಪ್ರೀತಿಪಾತ್ರನೇ, ಪ್ರತಾಪಶಾಲಿಯಾದ ಅರ್ಜುನನಾದರೂ ಅಲ್ಲಿ ಏನು ಮಾಡಿದನು? ಅಥವಾ ಸಂಶಪ್ತಕರು ಅರ್ಜುನನಿಗೆ ಏನು ಮಾಡಿದರು?
ಸಂಜಯಃ
ತಥಾ ತೇಷು ನಿವೃತ್ತೇಷು ಪ್ರತ್ಯುದ್ಯಾತೇಷು ಭಾಗಶಃ |
ಸ್ವಯಮಭ್ಯದ್ರವದ್ ಭೀಮಂ ನಾಗಾನೀಕೇನ ತೇ ಸುತಃ ॥ 3 ॥
ಸಂಜಯ ಹೊರಗೆ ಹೋದವರು ಪುನಃ ಹಿಂದಿರುಗಿ ಬಂದ ಮೇಲೆ ನಿನ್ನ ಪುತ್ರನಾದ ಸುಯೋಧನನು ಗಜಸೇನೆಯಿಂದ ಸಹಿತನಾಗಿ ಸ್ವತಃ ಭೀಮನ ಮೇಲೆ ಧಾವಿಸಿದನು.
ಸ ನಾಗ ಇವ ನಾಗೇನ ಗೋವೃಷೇಣೇವ ಗೋವೃಷಃ |
ಸಮಾಹೂತಃ ಸ್ವಯಂ ರಾಜನ್ ನಾಗಾನೀಕಮುಪಾದ್ರವತ್ ॥ 4 ॥
ಎಲೈ ರಾಜನೇ, ಆಹ್ವಾನ ಮಾಡಲ್ಪಟ್ಟ ಭೀಮನು ಗಜದ ಜೊತೆಯಲ್ಲಿ ಗಜದಂತೆ, ಗೋವೃಷದ ಜೊತೆಯಲ್ಲಿ ಗೋವೃಷದಂತೆ ಸ್ವತಃ ಗಜಸೇನೆಯ ಕಡೆಗೆ ಧಾವಿಸಿ ಬಂದನು.
ಸ ಯುದ್ಧಕುಶಲಃ ಪಾರ್ಥೋ ಬಾಹುವೀರ್ಯೇಣ ಚಾತ್ಮನಃ |
ಅಭಿನತ್ ಕುಂಜರಾನೀಕಮಚಿರೇಣೈವ ಪಾಂಡವಃ ॥ 5 ॥
ಪಾಂಡುಪುತ್ರನೂ, ಕುಂತೀಪುತ್ರನೂ ಆದ ಯುದ್ಧಕುಶಲನಾದ ಭೀಮಸೇನನು ತನ್ನ ಬಾಹುಬಲದಿಂದ ಗಜಸೇನೆಯನ್ನು ಅಲ್ಪಕಾಲದಲ್ಲಿಯೇ ಭಗ್ನಗೊಳಿಸಿದನು.
ತೇ ಗಜಾ ಗಿರಿಸಂಕಾಶಾಃ ಕ್ಷರಂತಃ ಸರ್ವತೋ ಮದಮ್ |
ಭೀಮಸೇನಸ್ಯ ನಾರಾಚೈರ್ವಿಮದಾ ವಿಮುಖೀಕೃತಾಃ ॥ 6 ॥
ಪರ್ವತವನ್ನು ಹೋಲುತ್ತಿದ್ದ, ಎಲ್ಲ ಕಡೆಯಲ್ಲಿಯೂ ಮದೋದಕವನ್ನು ಸುರಿಸುತ್ತಿದ್ದ ಆ ಗಜಗಳು ಭೀಮಸೇನನ ನಾರಾಚಗಳಿಂದ ಮದವನ್ನು ಕಳೆದುಕೊಂಡು ಯುದ್ಧ ವಿಮುಖವಾದವು.
ವಿಧಮೇದಭ್ರಜಾಲಾನಿ ಯಥಾ ವಾಯುಃ ಸಮುದ್ಧತಃ |
ವ್ಯಧಮತ್ ತಾನ್ಯನೀಕಾನಿ ನಾಗಾನಾಂ ಮಾರುತಿಃ ಶರೈಃ ॥ 7 ॥
ಮೇಘಮಾಲೆಗಳನ್ನು ಸಮುದ್ಧತವಾದ ವಾಯುವು ಹೇಗೆ ನಾಶಪಡಿಸುತ್ತದೆಯೋ ಅದರಂತೆ ಮರುತ್ಪುತ್ರನಾದ ಭೀಮಸೇನನು ತನ್ನ ಬಾಣಗಳಿಂದ ಆ ಗಜಸೇನೆಗಳನ್ನು ನಾಶಪಡಿಸಿದನು.
ಸ ತೇಷು ವಿಸೃಜನ್ ಬಾಣಾನ್ ಭೀಮೋ ನಾಗೇಷ್ವಶೋಭತ |
ಭುವನೇಷ್ವಿವ ಸರ್ವೇಷು ಗಭಸ್ತೀನುದಿತೋ ರವಿಃ ॥ 8 ॥
ಆ ಗಜಗಳ ಮೇಲೆ ಬಾಣಗಳನ್ನು ಪ್ರಯೋಗಿಸುವ ಭೀಮನು ಎಲ್ಲ ಭೂಮಿಯ ಮೇಲೆ ತನ್ನ ಕಿರಣಗಳನ್ನು ಸೂಸುವ ರವಿಯಂತೆ ಕಂಗೊಳಿಸಿದನು.
ತೇ ಭೀಮಬಾಣೈಃ ಶತಶಃ ಸಂಸ್ಯೂತಾ ವಿಬಭುರ್ಗಜಾಃ |

ಗಭಸ್ತಿಭಿರಿವಾರ್ಕಸ್ಯ ವ್ಯೋಮ್ನಿ ನಾನಾಬಲಾಹಕಾಃ ॥ 9 ॥
ಭೀಮನ ನೂರಾರು ಬಾಣಗಳು ತಮ್ಮ ಶರೀರದಲ್ಲಿ ನಾಟಿದ ಆ ಗಜಗಳು ಆಕಾಶದಲ್ಲಿ ಸೂರ್ಯಕಿರಣಗಳಿಂದ ಕೂಡಿದ ಅನೇಕ ಮೇಘಗಳಂತೆ ಕಂಡುಬಂದವು.
ತದಾ ಗಜಾನಾಂ ಕದನಂ ಕುರ್ವಾಣಮನಿಲಾತ್ಮಜಮ್ |
ಕ್ರುದ್ಧೋ ದುರ್ಯೋಧನೋಽಭ್ಯೇತ್ಯ ಪ್ರತ್ಯವಿಧ್ಯಚ್ಛಿತೈಃ ಶರೈಃ ॥ 10 ॥
ಆಗ ಗಜಗಳ ಜೊತೆಯಲ್ಲಿ ಕದನವನ್ನು ಮಾಡುತ್ತಿದ್ದ ಅನಿಲಪುತ್ರನಾದ ಭೀಮಸೇನನನ್ನು ಕ್ರುದ್ಧನಾದ ದುರ್ಯೋಧನನು ಸಮೀಪಿಸಿ ಹರಿತವಾದ ಬಾಣಗಳಿಂದ ಅವನಿಗೆ ಹೊಡೆದನು.
ತತಃ ಕ್ಷಣೇನ ಕ್ಷಿತಿಪಂ ಕ್ಷತಜಪ್ರತಿಮೇಕ್ಷಣಮ್ |
ಕ್ಷಯಂ ನಿನೀಷುರ್ನಿಶಿತೈರ್ಭೀಮೋ ವಿವ್ಯಾಧ ಪತ್ರಿಭಿಃ ॥ 11 ॥
ಆಗ ಕೋಪದಿಂದ ರಕ್ತದಂತಿದ್ದ ಕಣ್ಣುಳ್ಳ ರಾಜನಾದ ದುರ್ಯೋಧನನನ್ನು ಒಂದು ಕ್ಷಣದಲ್ಲಿ ವಿನಾಶ ಮಾಡಲು ಬಯಸಿ ಭೀಮಸೇನನು ಪತ್ರಗಳನ್ನು ಹೊಂದಿದ್ದ ನಿಶಿತವಾದ ಬಾಣಗಳಿಂದ ಅವನನ್ನು ಹೊಡೆದನು.
ಸ ಶರಾಚಿತಸರ್ವಾಂಗಃ ಕ್ರುದ್ಧೋ ವಿವ್ಯಾಧ ಪಾಂಡವಮ್ |
ನಾರಾಚೈರರ್ಕರಶ್ಮ್ಯಾಭೈರ್ಭೀಮಸೇನಂ ಸ್ಮಯನ್ನಿವ ॥ 12 ॥
ದುರ್ಯೋಧನನು ತನ್ನ ಮೈಯಲ್ಲೆಲ್ಲಾ ಭೀಮನ ಬಾಣಗಳು ನೆಟ್ಟರೂ ಕ್ರುದ್ಧನಾಗಿ ನಗುತ್ತಲೇ ಪಾಂಡುಪುತ್ರನಾದ ಭೀಮಸೇನನನ್ನು ಸೂರ್ಯನ ಕಿರಣಗಳನ್ನು ಹೋಲುವ ನಾರಾಚಗಳಿಂದ ಹೊಡೆದನು.
ತಸ್ಯ ನಾಗಂ ಮಣಿಮಯಂ ರತ್ನಚಿತ್ರಧ್ವಜೇ ಸ್ಥಿತಮ್ |
ಭಲ್ಲಾಭ್ಯಾಂ ಕಾರ್ಮುಕಂ ಚೈವ ಕ್ಷಿಪ್ರಂ ಚಿಚ್ಛೇದ ಪಾಂಡವಃ ॥ 13 ॥
ಪಾಂಡುಪುತ್ರನಾದ ಭೀಮಸೇನನು ರತ್ನಗಳಿಂದ ವಿಚಿತ್ರವಾದ ಅವನ ಧ್ವಜದಲ್ಲಿದ್ದ ಮಣಿಮಯವಾದ ಸರ್ಪವನ್ನು ಮತ್ತು ಧನುಸ್ಸನ್ನು ಎರಡು ಭಲ್ಲಗಳಿಂದ ಶೀಘ್ರವಾಗಿ ಕತ್ತರಿಸಿದನು.
ದುರ್ಯೋಧನಂ ಪೀಡ್ಯಮಾನಂ ದೃಷ್ಟ್ವಾ ಭೀಮೇನ ಮಾರಿಷ |
ಚುಕ್ಷೋಭಯಿಷುರಭ್ಯಾಗಾದಂಗೋ ಮಾತಂಗಮಾಸ್ಥಿತಃ ॥ 14 ॥
ಎಲೈ ಪೂಜ್ಯನೇ, ದುರ್ಯೋಧನನು ಭೀಮನಿಂದ ಪೀಡಿಸಲ್ಪಡುತ್ತಿರುವುದನ್ನು ನೋಡಿ ಅವನನ್ನು ಕ್ಷೋಭೆಗೊಳಿಸಲು ಬಯಸಿ ಅಂಗನು ಗಜವನ್ನೇರಿ ಭೀಮನ ಬಳಿಗೆ ಬಂದನು.
ತಮಾಪತಂತಂ ಮಾತಂಗಮಂಬುದಪ್ರತಿಮಸ್ವನಮ್ |
ಕುಂಭಾಂತರೇ ಭೀಮಸೇನೋ ನಾರಾಚೇನಾರ್ದಯದ್ ಭೃಶಮ್ ॥
ತಸ್ಯ ಕಾಯಂ ವಿನಿರ್ಭಿದ್ಯ ನ್ಯಮಜ್ಜದ್ ಧರಣೀತಳೇ |
ತತಃ ಪಪಾತ ದ್ವಿರದೋ ವಜ್ರಾಹತ ಇವಾಚಲಃ ॥ 16 ॥
ಮೇಘಗರ್ಜನೆಯಂತೆ ಗರ್ಜನೆಯುಳ್ಳ, ಎರಗಿ ಬರುತ್ತಿದ್ದ ಆ ಗಜವನ್ನು ಭೀಮಸೇನನು ನಾರಾಚದಿಂದ ಕುಂಭಸ್ಥಳದ ಮಧ್ಯದಲ್ಲಿ ಬಲವಾಗಿ ಪೀಡಿಸಿದನು. ನಾರಾಚವು ಆನೆಯ ಶರೀರವನ್ನು ಭೇದಿಸಿ ಭೂಮಿಯಲ್ಲಿ ಇಳಿಯಿತು. ಆಗ ವಜ್ರದಿಂದ ತಾಡಿತವಾದ ಪರ್ವತದಂತೆ ಗಜವು ಬಿದ್ದಿತು.
ತಸ್ಯಾವರ್ಜಿತನಾಗಸ್ಯ ಮ್ಲೇಚ್ಛಸ್ಯಾತಿಪತಿಷ್ಯತಃ |
ಶಿರಶ್ಚಿಚ್ಛೇದ ಭಲ್ಲೇನ ಕ್ಷಿಪ್ರಕಾರೀ ವೃಕೋದರಃ ॥ 17 ॥
ತನ್ನ ಗಜವನ್ನು ಕಳೆದುಕೊಂಡು ತನ್ನೆಡೆಗೆ ಬರುತ್ತಿದ್ದ ಆ ಮ್ಲೇಚ್ಛನ ಶಿರಸ್ಸನ್ನು ಕ್ಷಿಪ್ರಕಾರಿಯಾದ ವೃಕೋದರನು ಭಲ್ಲದಿಂದ ಕತ್ತರಿಸಿದನು.
ತಸ್ಮಿನ್ ನಿಪತಿತೇ ವೀರೇ ಸಂಪ್ರಾದ್ರವತ ಸಾ ಚಮೂಃ |
ಸಂಭ್ರಾಂತಾಶ್ವದ್ವಿಪರಥಾ ಪದಾತೀನವಮೃದ್ನತೀ ॥ 18 ॥
ವೀರನಾದ ಅವನು ಹತನಾಗುತ್ತಿರಲು ಸಂಭ್ರಾಂತವಾದ ಅಶ್ವ-ಗಜ-ರಥಗಳಿಂದ ಕೂಡಿದ ಆ ಸೈನ್ಯವು ತಮ್ಮ ಪದಾತಿಗಳನ್ನೇ ತುಳಿಯುತ್ತಾ ಓಡಿಹೋಯಿತು.
ತೇಷ್ವನೀಕೇಷು ಸರ್ವೇಷು ವಿದ್ರವತ್ಸು ಸಮಂತತಃ |
ಪ್ರಾಗ್ಜ್ಯೋತಿಷಸ್ತತೋ ಭೀಮಂ ಕುಂಜರೇಣ ಸಮಾದ್ರವತ್ ॥ 19 ॥
ಆ ಸೈನ್ಯಗಳೆಲ್ಲವೂ ಎಲ್ಲ ಕಡೆಗಳಲ್ಲಿಯೂ ಓಡಿಹೋದ ಮೇಲೆ ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು ತನ್ನ ಸುಪ್ರತೀಕ ಗಜದಿಂದ ಭೀಮಸೇನನ ಕಡೆಗೆ ಧಾವಿಸಿದನು.
ಯೇನ ನಾಗೇನ ಮಘವಾ ವಿಜಿಗ್ಯೇ ದೈತ್ಯದಾನವಾನ್ |
ತದನ್ವಯೇನ ನಾಗೇನ ಭೀಮಸೇನಮುಪಾದ್ರವತ್ ॥ 20 ॥
ಯಾವ ಐರಾವತ ಗಜದಿಂದ ಇಂದ್ರನು ದೈತ್ಯ-ದಾನವರನ್ನು ಗೆದ್ದನೋ, ಆ ವಂಶಕ್ಕೆ ಸೇರಿದ ಗಜದಿಂದ ಭೀಮಸೇನನ ಕಡೆಗೆ ಧಾವಿಸಿದನು.
ಶ್ರವಣಾಭ್ಯಾಮಥೋಭಾಭ್ಯಾಮಾಯತೇನ ಕರೇಣ ಚ |
ವ್ಯಾವೃತ್ತನಯನಃ ಕ್ರುದ್ಧಃ ಸಮ್ಯಗ್ ಯಂತ್ರಾ ವಿಚೋದಿತಃ ॥ 21 ॥
ವೃಕೋದರರಥಂ ಸಾಶ್ವಮವಿಶೇಷಮಚೂರ್ಣಯತ್ |
ಪದ್ಭ್ಯಾಂ ಭೀಮಸ್ತಮಾಪ್ಲೋಥ್ಯ ತಸ್ಯ ಗಾತ್ರೇಷು ಲೀಯತ ॥ 22 ॥

ಕಣ್ಣುಗಳನ್ನು ಅರಳಿಸಿ ಕ್ರೋಧಗೊಂಡ ಆ ಗಜವು ಸಾರಥಿಯಿಂದ ಚೆನ್ನಾಗಿ ಪ್ರೇರಿಸಲ್ಪಟ್ಟು ತನ್ನ ಎರಡು ಪಾದಗಳಿಂದಲೂ, ವಿಸ್ತಾರವಾದ ಸೊಂಡಿಲಿನಿಂದಲೂ ಅಶ್ವಸಹಿತವಾದ ಭೀಮಸೇನನ ರಥವನ್ನು ಪುಡಿಪುಡಿ ಮಾಡಿತು. ಭೀಮನು ಆ ಗಜವನ್ನು ಕಾಲಿನಿಂದ ಒದ್ದು ಅದರ ಶರೀರದಲ್ಲಿ ಅಡಗಿಕೊಂಡನು.
ಜಾನಂಸ್ತಸ್ಯ ಮಹಾವೇಗಂ ನಾಪಕ್ರಾಮತ ಪಾಂಡವಃ |
ಗಾತ್ರಾಭ್ಯಂತರಗೋ ಭೂತ್ವಾ ಕರೇಣಾತಾಡಯನ್ಮುಹುಃ ॥ 23 ॥
ಆ ಗಜದ ದೊಡ್ಡ ವೇಗವನ್ನು ತಿಳಿದ ಭೀಮಸೇನನು ಅಲ್ಲಿಂದ ಹೊರಬರಲಿಲ್ಲ. ದೇಹದ ಒಳಗೆ (ನಾಲ್ಕು ಪಾದಗಳ ಮಧ್ಯದೊಳಗೆ) ನಿಂತು ತನ್ನ ಹಸ್ತದಿಂದ ಪುನಃ ಪುನಃ ಅದನ್ನು ಹೊಡೆದನು.
ಕಾಲಯಾಮಾಸ ತಂ ನಾಗಂ ವಧಾಕಾಂಕ್ಷಿಣಮವ್ಯಯಮ್ |
ಕುಲಾಲಚಕ್ರವನ್ನಾಗಸ್ತದಾ ತೂರ್ಣಮಥಾಭ್ರಮತ್ ॥ 24 ॥
ತನ್ನನ್ನು ವಧೆ ಮಾಡಲು ಬಯಸಿದ ಆ ಅವ್ಯಯವಾದ ಗಜವನ್ನು ಭೀಮಸೇನನು ಬಹಳ ಸಂಕಟಕ್ಕೆ ಗುರಿ ಮಾಡಿದನು. ಆಗ ಆ ಗಜವು ಕುಂಬಾರನ ಚಕ್ರದಂತೆ ಶೀಘ್ರವಾಗಿ ತಿರುಗಿತು.
ನಾಗಾಯುತಬಲೀ ಶ್ರೀಮಾನ್ ಕಾಲಯಾನೋ ವೃಕೋದರಮ್ |
ಭೀಮೋಽಥ ನಿಷ್ಕ್ರಮ್ಯ ತತಃ ಸುಪ್ರತೀಕಾಗ್ರತೋಽಭವತ್ ॥ 25 ॥
ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿದ, ಕಾಂತಿಯುಕ್ತವಾದ ಆ ಗಜವು ಭೀಮಸೇನನನ್ನು ಘಾಸಿಗೊಳಿಸಲು ಪ್ರಯತ್ನಿಸಿತು. ಭೀಮಸೇನನು ಸುಪ್ರತೀಕವನ್ನು ಸಂಕಟಪಡಿಸುತ್ತಾ ಅದರ ದೇಹದಿಂದ ಹೊರಗೆ ಬಂದು ಅದರ ಮುಂದೆ ನಿಂತನು.
ಭೀಮಃ ಕರೇಣಾವನಮ್ಯ ಜಾನುಭ್ಯಾಮಭ್ಯಪಾತಯತ್ |
ಗ್ರೀವಾಯಾಂ ವೈ ಗೃಹೀತ್ವೈನಂ ಸಗಜೋ ಹಂತುಮೈಚ್ಛತ ॥ 26 ॥
ಭೀಮನು ಆ ಗಜವನ್ನು ತನ್ನ ಕೈಯಿಂದ ಬಗ್ಗಿಸಿ ಅದನ್ನು ಒದ್ದು ಮಂಡಿಗಳ ಮೇಲೆ ಕೆಡವಿದನು. ಆ ಗಜವು ಭೀಮಸೇನನನ್ನು ಕತ್ತಿನಲ್ಲಿ ಹಿಡಿದು ಅವನನ್ನು ಕೊಲ್ಲಲು ಬಯಸಿತು.
ಕಂಠೇ ವಿಷ್ಟಂಭಿತಸ್ತೇನ ಭ್ರಮಂ ಕೃತ್ವಾಽಥ ಮೋಚಯತ್ |
ಪುನರ್ಗಾತ್ರಾಣಿ ನಾಗಸ್ಯ ಪ್ರವಿವೇಶ ವೃಕೋದರಃ ॥ 27 ॥
ಕಂಠದಲ್ಲಿ ಹಿಡಿಯಲ್ಪಟ್ಟ ಭೀಮನು ತಿರುಗಿ ಅದರಿಂದ ಬಿಡಿಸಿಕೊಂಡು ಪುನಃ ಅದರ ಶರೀರದಲ್ಲಿ ಪ್ರವೇಶಿಸಿದನು.
ಯಥಾ ತಂ ಪ್ರತಿಗೃಹ್ಣೀಯಾತ್ ತಥಾ ತಂ ಸಮವೈಕ್ಷತ |
ಭೀಮೋಽಥ ನಾಗಗಾತ್ರೇಭ್ಯೋ ವಿನಿಃಸೃತ್ಯಾಪಯಾಜ್ಜವಾತ್ ॥ 28 ॥
ಸುಪ್ರತೀಕವು ಆ ವೇಳೆಗೆ ಬಂದ ಪ್ರತಿಗಜವನ್ನು ಹಿಡಿಯುವಂತೆ ಅದನ್ನು ನೋಡಿತು. ಅಷ್ಟರಲ್ಲಿ ಭೀಮಸೇನನು ಗಜದ ಶರೀರದಿಂದ ಹೊರಬಂದು ವೇಗದಿಂದ ಬೇರೆ ಕಡೆಗೆ ಹೋದನು.
ತತಃ ಸರ್ವಸ್ಯ ಸೈನ್ಯಸ್ಯ ನಾದಃ ಸಮಭವನ್ಮಹಾನ್ |
ಹಾ ಹಾ ವಿನಿಹತೋ ಭೀಮಃ ಕುಂಜರೇಣೇತಿ ಮಾರಿಷ ॥ 29 ॥
ಎಲೈ ಪೂಜ್ಯನೇ, ಆಗ ಆಹಾ ಭೀಮನು ಸುಪ್ರತೀಕದಿಂದ ಹತನಾದನು ಎಂದು ಸರ್ವಸೈನ್ಯದಲ್ಲಿ ದೊಡ್ಡ ನಾದವು ಉಂಟಾಯಿತು.
ತೇನ ನಾದೇನ ವಿತ್ರಸ್ತಾ ಪಾಂಡವಾನಾಮನೀಕಿನೀ |
ಸಹಸಾಽಭ್ಯದ್ರುವದ್ ರಾಜನ್ ತತ್ರ ಯತ್ರ ವೃಕೋದರಃ ॥ 30 ॥
ಆ ನಾದವನ್ನು ಕೇಳಿ ಹೆದರಿದ ಪಾಂಡವರ ಸೈನ್ಯವು ಎಲೈ ರಾಜನೇ, ವೃಕೋದರನಿದ್ದಲ್ಲಿಗೆ ಶೀಘ್ರವಾಗಿ ಓಡಿ ಬಂದಿತು.
ತತೋ ಯುಧಿಷ್ಠಿರೋ ರಾಜಾ ಹತಂ ಮತ್ವಾ ವೃಕೋದರಮ್ |
ಭಗದತ್ತಂ ಸಪಾಂಚಾಲಃ ಸರ್ವತಃ ಸಮವಾರಯತ್ ॥ 31 ॥
ಆಗ ರಾಜನಾದ ಯುಧಿಷ್ಠಿರನು ಭೀಮಸೇನನು ಹತನಾದನೆಂದು ತಿಳಿದು ಪಾಂಚಾಲಸಹಿತನಾಗಿ ಭಗದತ್ತನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದನು.
ತಂ ರಥೈ ರಥಿನಾಂ ಶ್ರೇಷ್ಠಾ ಪರಿವಾರ್ಯ ಸಮಂತತಃ |
ಅವಾಕಿರನ್ ಶರೈಸ್ತೀಕ್ಷ್ಣೈಃ ಶತಶೋಽಥ ಸಹಸ್ರಶಃ ॥ 32 ॥
ರಥಿಶ್ರೇಷ್ಠರಾದ ಅವರು ಭಗದತ್ತನನ್ನು ತಮ್ಮ ರಥಗಳಿಂದ ಎಲ್ಲ ಕಡೆಗಳಲ್ಲಿಯೂ ಸುತ್ತುವರಿದು ಶತಸಂಖ್ಯೆಯಲ್ಲಿ ಮತ್ತು ಸಹಸ್ರಸಂಖ್ಯೆಯಲ್ಲಿ ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದರು.
ಸ ವಿಘಾತಂ ಪೃಷತ್ಕಾನಾಮಂಕುಶೇನ ಸಮಾಚರನ್ |
ಗಜೇನ ಪಾಂಡುಪಾಂಚಾಲಾನ್ ವ್ಯಧಮತ್ ಪರ್ವತೇಶ್ವರಃ ॥ 33 ॥
ಪರ್ವತೇಶ್ವರನಾದ ಭಗದತ್ತನು ಅಂಕುಶದಿಂದ ಆ ಬಾಣಗಳನ್ನು ವಿನಾಶಗೊಳಿಸುತ್ತಾ ತನ್ನ ಗಜದಿಂದ ಪಾಂಡು-ಪಾಂಚಾಲರನ್ನು ಚದುರಿಸಿದನು.
ತದದ್ಭುತಮಪಶ್ಯಾಮ ಭಗದತ್ತಸ್ಯ ಸಂಯುಗೇ |
ತಥಾ ವಿದಗ್ಧಚರಿತಂ ಕುಂಜರೇಣ ವಿಶಾಂಪತೇ ॥ 34 ॥
ಎಲೈ ರಾಜನೇ, ಆನೆಯಿಂದ ರಣರಂಗದಲ್ಲಿ ಅಂತಹ ಜಾಣತನದ ಕಾರ್ಯವನ್ನು ಮಾಡುವ ಭಗದತ್ತನ ಅದ್ಭುತವಾದ ಚರ್ಯೆಯನ್ನು ನಾವು ನೋಡಿದೆವು.
ತತೋ ರಾಜಾ ದಶಾರ್ಣಾನಾಂ ಪ್ರಾಗ್ಜ್ಯೋತಿಷಮುಪಾದ್ರವತ್ |
ಗಿರಿಪ್ರಖ್ಯೇನ ನಾಗೇನ ಸಮದೇನಾಶುಗಾಮಿನಾ ॥ 35 ॥

ಆಗ ದಶಾರ್ಣಾಧಿಪತಿಯು ಪರ್ವತದಂತಿದ್ದ, ಮದಿಸಿದ, ಶೀಘ್ರಗಾಮಿಯಾದ ತನ್ನ ಗಜದಿಂದ ಸಹಿತನಾಗಿ ಭಗದತ್ತನ ಕಡೆಗೆ ಧಾವಿಸಿದನು.
ತಯೋರ್ಯುದ್ಧಂ ಸಮಭವನ್ನಾಗಯೋರ್ಭೀಮರೂಪಯೋಃ |
ಸಪಕ್ಷಯೋಃ ಸುದ್ರುಮಯೋರ್ಯಥಾ ಪರ್ವತಯೋರಿವ ॥ 36 ॥
ಭಯಂಕರವಾದ ಆಕಾರವನ್ನು ಹೊಂದಿದ ಆ ಎರಡು ಗಜಗಳಿಗೆ ಒಳ್ಳೆಯ ಮರಗಳನ್ನು ಹೊಂದಿದ, ರೆಕ್ಕೆಗಳಿಂದ ಸಹಿತವಾದ ಎರಡು ಪರ್ವತಗಳಿಗೋ ಎಂಬಂತೆ ಯುದ್ಧವು ನಡೆಯಿತು.
ಪ್ರಾಗ್ಜ್ಯೋತಿಷಪತೇರ್ನಾಗಃ ಸನ್ನಿಪತ್ಯಾವಮೃದ್ಯ ಚ |
ಪಾರ್ಶ್ವೇ ದಶಾರ್ಣಾಧಿಪತೇರ್ಭಿತ್ತ್ವಾ ನಾಗಮಪಾತಯತ್ ॥ 37 ॥
ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನ ಸುಪ್ರತೀಕಗಜವು ದಶಾರ್ಣಾಧಿಪತಿಯ ಗಜದ ಮೇಲೆ ಬಿದ್ದು, ಅದನ್ನು ತುಳಿದು, ಅದರ ಪಾರ್ಶ್ವವನ್ನು ಭೇದಿಸಿ ಅದನ್ನು ಕೆಡವಿತು.
ತೋಮರೈಃ ಸೂರ್ಯರಶ್ಮ್ಯಾಭೈರ್ಭಗದತ್ತೋ ಹಿ ಸಪ್ತಭಿಃ |
ಜಘಾನ ದ್ವಿರದಭ್ರಷ್ಟಂ ಶತ್ರುಂ ಪ್ರಚಲಿತಾಸನಮ್ ॥ 38 ॥
ಗಜದಿಂದ ಜಾರಿ ತನ್ನ ಆಸನವನ್ನೂ ಕಳೆದುಕೊಂಡ ಶತ್ರುವಾದ ದಶಾರ್ಣಾಧಿಪತಿಯನ್ನು ಭಗದತ್ತನು ಸೂರ್ಯರಶ್ಮಿಯ ಕಾಂತಿಯನ್ನು ಹೊಂದಿದ್ದ ಏಳು ತೋಮರಗಳಿಂದ ಹೊಡೆದನು.
ವ್ಯವಚ್ಛಿದ್ಯ ತು ರಾಜಾನಂ ಭಗದತ್ತಂ ಯುಧಿಷ್ಠಿರಃ |
ರಥಾನೀಕೇನ ಮಹತಾ ಸರ್ವತಃ ಸಮವಾರಯತ್ ॥ 39 ॥
ಯುಧಿಷ್ಠಿರನು ದಶಾರ್ಣಾಧಿಪತಿಯನ್ನು ಭಗದತ್ತನಿಂದ ಬಿಡಿಸಿ, ದೊಡ್ಡ ರಥ ಸಮೂಹದಿಂದ ಭಗದತ್ತನನ್ನು ಎಲ್ಲ ಕಡೆಗಳಲ್ಲಿಯೂ ಸುತ್ತುವರಿದನು.
ಸ ಕುಂಜರಸ್ಥೋ ರಥಿಭಿಃ ಶುಶುಭೇ ಸರ್ವತೋ ವೃತಃ |
ಕಿರನ್ನಿಷುಸಹಸ್ರಾಣಿ ರಶ್ಮೀನಿವ ದಿವಾಕರಃ ॥ 40 ॥
ಎಲ್ಲ ಕಡೆಗಳಲ್ಲಿಯೂ ಮಹಾರಥರಿಂದ ಸುತ್ತುವರಿಯಲ್ಪಟ್ಟು ಗಜಾರೂಢನಾಗಿದ್ದ ಅವನು ಸಹಸ್ರಾರು ಬಾಣಗಳನ್ನು ಪ್ರಯೋಗಿಸುತ್ತಾ ಎಲ್ಲ ಕಡೆಗಳಲ್ಲಿಯೂ ತನ್ನ ರಶ್ಮಿಗಳನ್ನು ಚೆಲ್ಲುವ ದಿವಾಕರನಂತೆ ಶೋಭಿಸಿದನು.
ಮಂಡಲಂ ಸರ್ವತಃ ಶ್ಲಿಷ್ಟಂ ರಥಿನಾಮುಗ್ರಧನ್ವಿನಾಮ್ |
ಕಿರತಾಂ ಶರವರ್ಷಾಣಿ ಸ ನಾಗಃ ಪರ್ಯವರ್ತತ ॥ 41 ॥
ಉಗ್ರಧನುರ್ಧಾರಿಗಳಾದ ರಥಿಕರು ಎಲ್ಲ ಕಡೆಗಳಲ್ಲಿಯೂ ಸೇರಿ ಬಾಣಗಳ ಮಳೆಯನ್ನು ಕರೆಯುತಿತರಲು ಆ ಗಜವು ವೃತ್ತಾಕಾರವಾಗಿ ತಿರುಗಿತು.
ತತಃ ಪ್ರಾಗ್ಜ್ಯೋತಿಷೋ ರಾಜಾ ಪರಿಗೃಹ್ಯ ಗಜೋತ್ತಮಮ್ |
ಪ್ರೇಷಯಾಮಾಸ ಸಹಸಾ ಯುಯುಧಾನರಥಂ ಪ್ರತಿ ॥ 42 ॥
ಆಗ ಪ್ರಾಗ್ಜ್ಯೋತಿಷ ರಾಜನು ತನ್ನ ಶ್ರೇಷ್ಠ ಗಜವನ್ನು ಹಿಡಿದು ಅದನ್ನು ಶೀಘ್ರವಾಗಿ ಯುಯುಧಾನನ ರಥದ ಮೇಲೆ ಹಾಯಿಸಿದನು.
ಆಪತಂತಂ ತು ಸಂಪ್ರೇಕ್ಷ ೆಯ ನಾಗಂ ಸಾತ್ವತಪುಂಗವಃ |
ಅವಿಧ್ಯತ್ ಪಂಚಭಿರ್ಬಾಣೈಃ ಶಿತೈರಾಶೀವಿಷೋಪಮೈಃ ॥ 43 ॥
ಸಾತ್ವತ ಪುಂಗವನಾದ ಸಾತ್ಯಕಿಯು ತನ್ನ ಮೇಲೆ ಎರಗುತ್ತಿದ್ದ ಆ ಗಜವನ್ನು ನೋಡಿ, ಸರ್ಪವಿಷದಂತಿದ್ದ ನಿಶಿತವಾದ ಐದು ಬಾಣಗಳಿಂದ ಅದನ್ನು ಹೊಡೆದನು.
ಶಿನೇಃ ಪುತ್ರಸ್ಯ ತು ರಥಂ ಪರಿಗೃಹ್ಯ ಮಹಾದ್ವಿಪಃ |
ಸಮಾಚಿಕ್ಷೇಪ ವೇಗೇನ ಯುಯುಧಾನಸ್ತು ಪುಪ್ಲುವೇ ॥ 44 ॥
ಆ ಮಹಾಗಜವು ಸಾತ್ಯಕಿಯ ರಥವನ್ನು ಹಿಡಿದು ವೇಗದಿಂದ ಎಸೆಯಿತು. ಯುಯುಧಾನನು ಅದರಿಂದ ಹಾರಿದನು.
ಬೃಹತಃ ಸೈಂಧವಾನ್ ದಾಂತಾನ್ ಸಮುತ್ಥಾಪ್ಯ ತು ಸಾರಥಿಃ |
ತಸ್ಥೌ ಸಾತ್ಯಕಿಮಾಸಾದ್ಯ ಸೋಽಧ್ಯತಿಷ್ಠದ್ ರಥಂ ಪುನಃ ॥ 45 ॥
ಸಾತ್ಯಕಿಯ ಸಾರಥಿಯು ಸಿಂಧುದೇಶದ ಪಳಗಿದ ಆ ದೊಡ್ಡ ಕುದುರೆಗಳನ್ನು ಎಬ್ಬಿಸಿ, ಸಾತ್ಯಕಿಯ ಬಳಿಗೆ ಬಂದು ನಿಂತನು. ಸಾತ್ಯಕಿಯು ಪುನಃ ರಥವನ್ನು ಏರಿದನು.
ಸ ತು ಲಬ್ಧ್ವಾಽಂತರಂ ನಾಗಃ ತ್ವರಿತೋ ರಥಮಂಡಲಾತ್ |
ನಿಷ್ಪತನ್ ಸತತಂ ಸರ್ವಾನ್ ಪರಿಚಿಕ್ಷೇಪ ಪಾರ್ಥಿವಾನ್ ॥ 46 ॥
ಸ್ವಲ್ಪ ಅವಕಾಶವನ್ನು ಪಡೆದ ಆ ಗಜವು ಶೀಘ್ರವಾಗಿ ಆ ರಥಮಂಡಲದಿಂದ ಹೊರಗೆ ಹೋಗುತ್ತಾ ಆ ಎಲ್ಲ ರಾಜರನ್ನೂ ಹಿಡಿದು ಎಸೆಯಿತು.
ತೇ ತ್ವಾಶುಗತಿನಾ ತೇನ ಪ್ರಾಸ್ಯಮಾನಾ ರಥರ್ಷಭಾಃ |
ತಮೇಕಂ ದ್ವಿರದಂ ಸಂಖ್ಯೇ ಮೇನಿರೇ ಶತಶೋ ಗಜಾನ್ ॥ 47 ॥
ಶೀಘ್ರಗಾಮಿಯಾದ ಆ ಗಜದಿಂದ ಎಸೆಯಲ್ಪಟ್ಟ ಆ ರಥಶ್ರೇಷ್ಠರು ರಣರಂಗದಲ್ಲಿ ಅದೊಂದೇ ಗಜವನ್ನು ನೂರಾರು ಗಜಗಳೆಂದು ತಿಳಿದರು.
ತೇ ಗಜಸ್ಥೇನ ಕಾಲ್ಯಂತೇ ಭಗದತ್ತೇನ ಪಾಂಡವಾಃ |
ಐರಾವತಸ್ಥೇನ ಯಥಾ ದೇವರಾಜೇನ ದಾನವಾಃ ॥ 48 ॥

ಐರಾವತವನ್ನು ಏರಿದ ಇಂದ್ರನಿಂದ ದಾನವರು ಚದುರಿಸಲ್ಪಟ್ಟಂತೆ ಗಜವನ್ನೇರಿದ ಭಗದತ್ತನಿಂದ ಪಾಂಡವರು ಚದುರಿಸಲ್ಪಟ್ಟರು.
ತೇಷಾಂ ಪ್ರದ್ರವತಾಂ ಸಂಖ್ಯೇ ಪಾಂಚಾಲಾನಾಮಿತಸ್ತತಃ ।
ಗಜವಾಜಿಕೃತಃ ಶಬ್ದಃ ಸುಮಹಾನ್ ಸಮಜಾಯತ ॥ 49 ॥
ರಣರಂಗದಲ್ಲಿ ಅಲ್ಲಿಂದಿಲ್ಲಿಗೆ ಓಡುವ ಪಾಂಚಾಲರ ಅಶ್ವ-ಗಜಗಳಿಂದ ಬಹಳ ದೊಡ್ಡ ಶಬ್ದವು ಉಂಟಾಯಿತು.
ಭಗದತ್ತೇನ ಸಮರೇ ಕಾಲ್ಯಮಾನೇಷು ಪಾಂಡುಷು ।
ಪ್ರಾಗ್ಜ್ಯೋತಿಷಮಭಿಕ್ರುದ್ಧಃ ಪುನರ್ಭೀಮಃ ಸಮಭ್ಯಯಾತ್ ॥ 50 ॥
ಪಾಂಡವರ ಸೇನೆಯು ರಣರಂಗದಲ್ಲಿ ಭಗದತ್ತನಿಂದ ಚದುರಿಸಲ್ಪಡುತ್ತಿರಲು ಕೋಪಗೊಂಡ ಭೀಮನು ಪುನಃ ಪ್ರಾಗ್ಜ್ಯೋತಿಷನ ಮೇಲೆ ಎರಗಿದನು.
ತಸ್ಯಾಭಿದ್ರವತೋ ವಾಹಾನ್ ಹಸ್ತಮುಕ್ತೇನ ವಾರಿಣಾ ।
ಸಿಕ್ತಾತ್ವ ವ್ಯತ್ರಾಸಯನ್ನಾಗಃ ತೇ ಪಾರ್ಥಮವಹನ್ ಹಯಾಃ ॥ 51 ॥
ಹೀಗೆ ತನ್ನ ಕಡೆಗೆ ಧಾವಿಸುತ್ತಿದ್ದ ಭೀಮನ ರಥದ ಅಶ್ವಗಳನ್ನು ಸುಪ್ರತೀಕವು ತನ್ನ ಸೊಂಡಿಲಿನಿಂದ ಮುಕ್ತವಾದ ಜಲದಿಂದ ಅವುಗಳನ್ನು ತೋಯಿಸಿ ಹೆದರಿಸಿತು. ಆ ಅಶ್ವಗಳು ಭೀಮಸೇನನನ್ನು ಬೇರೆ ಕಡೆಗೆ ಕೊಂಡೊಯ್ದವು.
ತತಃ ಸಮಭ್ಯಯಾತ್ ತೂರ್ಣಂ ಸುಪರ್ವಾ ಪಾರ್ವತೀಸುತಃ ।
ಸ ಮುಂಚನ್ ಶರವರ್ಷಾಣಿ ರಥಸ್ಥೋಽಂತಕಸನ್ನಿಭಃ ॥ 52 ॥
ಆಗ ಪಾರ್ವತೀ ಸುತನಾದ ಸುಪರ್ವನು ಯಮನ ಕಾಂತಿಯನ್ನು ಹೊಂದಿ ರಥದಲ್ಲಿ ಕುಳಿತು ಬಾಣಗಳ ಮಳೆಯನ್ನು ಸುರಿಸುತ್ತಾ ಶೀಘ್ರವಾಗಿ ಬಂದನು.
ಸಶಸ್ತ್ರಂ ತಂ ಸುಪರ್ವಾಣಂ ಶರೇಣಾನತಪರ್ವಣಾ ।
ಜಘಾನ ಪರ್ವತಪತಿಃ ಪ್ರೇಷಯನ್ ವೈ ಯಮಕ್ಷಯಮ್ ॥ 53 ॥
ಪರ್ವತಪತಿಯಾದ ಭಗದತ್ತನು ಬಾಗಿದ ತುದಿಯುಳ್ಳ ಬಾಣದಿಂದ ಶಸ್ತ್ರ ಸಹಿತನಾದ ಸುಪರ್ವನನ್ನು ಹೊಡೆದು ಅವನನ್ನು ಯಮಲೋಕಕ್ಕೆ ಕಳುಹಿಸಿದನು.
ತಸ್ಮಿನ್ ನಿಪತಿತೇ ವೀರೇ ಸೌಭದ್ರೋ ದ್ರೌಪದೀಸುತಃ ।
ಚೇಕಿತಾನೋ ಧೃಷ್ಟಕೇತುರ್ಯುಯುತ್ಸುಶ್ಚಾರ್ದಯನ್ ಶರೈಃ ॥ 54 ॥
ವೀರನಾದ ಸುಪರ್ವನು ಹತನಾಗುತ್ತಿರಲು ಅಭಿಮನ್ಯುವೂ ದ್ರೌಪದಿಯ ಪುತ್ರನೂ, ಚೇಕಿತಾನನೂ, ಧೃಷ್ಟಕೇತುವೂ ಮತ್ತು ಯುಯುತ್ಸುವೂ ಭಗದತ್ತನನ್ನು ತಮ್ಮ ಬಾಣಗಳಿಂದ ಪೀಡಿಸಿದರು.
ತ ಏನಂ ಶರಧಾರಾಭಿರ್ಧಾರಾಭಿರಿವ ತೋಯದಾಃ ।
ವವರ್ಷುರ್ಭೈರವಂ ನಾದಂ ವಿನದಂತೋ ಜಿಘಾಂಸವಃ ॥ 55 ॥
ಜಲಧಾರೆಗಳಿಂದ ಮೋಡಗಳು ತೋಯಿಸಿದಂತೆ ಅವರು ಈ ಭಗದತ್ತನನ್ನು ಕೊಲ್ಲಲು ಬಯಸಿ ಭೈರವ ನಾದಗಳನ್ನು ಮಾಡುತ್ತಾ ಅವನ ಮೇಲೆ ತಮ್ಮ ಬಾಣಗಳ ಮಳೆಯನ್ನು ಸುರಿಸಿದರು.
ತತಃ ಪಾರ್ಷ್ಣ್ಯಂಕುಶಾಂಗುಷ್ಠೈಃ ಕೃತಿನಾ ಚೋದಿತೋ ದ್ವಿಪಃ ।
ಪ್ರಸಾರಿತಕರಃ ಪ್ರಾಯಾತ್ ಸ್ತಬ್ಧಕರ್ಣೇಕ್ಷಣೋ ದ್ರುತಮ್ ॥ 56 ॥
ಸೋಽಧಿಷ್ಠಾಯ ಪದಾ ವಾಹಾನ್ ಯುಯುತ್ಸೋಃ ಸೂತಮಾರುಜತ್ ।
ಯುಯುತ್ಸುಸ್ತು ರಥಾದ್ ರಾಜನ್ನಪಾಕ್ರಾಮತ್ ತ್ವರಾನ್ವಿತಃ ॥ 57 ॥
ಆಗ ಕುಶಲನಾದ ಭಗದತ್ತನಿಂದ ಅಂಕುಶ, ಅಂಗುಷ್ಠ ಹಿಮ್ಮಡಿಗಳಿಂದ ಪ್ರಚೋದಿಸಲ್ಪಟ್ಟ ಆ ಗಜವು ತನ್ನ ಸೊಂಡಿಲನ್ನು ಚಾಚಿ ಅಲುಗಾಡದ ಕಿವಿಗಳು ಮತ್ತು ಕಣ್ಣುಗಳೊಂದಿಗೆ ಶೀಘ್ರವಾಗಿ ಮುಂದೆ ಸಾಗಿತು.
ತತಃ ಪಾಂಡವಯೋಧಾಸ್ತಂ ನಾಗರಾಜಂ ಶರೈರ್ದ್ರುತಮ್ ॥ 57 ॥
ಅದು ಯುಯುತ್ಸುವಿನ ಅಶ್ವಗಳನ್ನು ತುಳಿದು ಸಾರಥಿಯನ್ನು ಕೊಂದಿತು. ಎಲೈ ರಾಜನೇ, ಯುಯುತ್ಸುವಾದರೋ ರಥದಿಂದ ಶೀಘ್ರವಾಗಿ ಕೆಳಗೆ ಇಳಿದನು.
ಸಿಷಿಚುರ್ಭೈರವಾನ್ನಾದಾನ್ ವಿನದಂತೋ ಜಿಘಾಂಸವಃ ।
ಪುತ್ರಸ್ತು ತವ ಸಂಭ್ರಾಂತಃ ಸೌಭದ್ರಸ್ಯಾಪ್ಲುತೋ ರಥಮ್ ॥ 58 ॥
ಆಗ ಪಾಂಡವಯೋಧರು ಆ ಗಜವನ್ನು ಕೊಲ್ಲಲು ಬಯಸಿ, ಭೈರವನಾದಗಳನ್ನು ಮಾಡುತ್ತಾ ಶೀಘ್ರವಾಗಿ ಆ ಗಜರಾಜನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ನಿನ್ನ ಪುತ್ರನಾದ ಯುಯುತ್ಸುವು ಗಾಬರಿಗೊಂಡವನಾಗಿ ಅಭಿಮನ್ಯುವಿನ ರಥಕ್ಕೆ ಹಾರಿದನು.
ಸ ಕುಂಜರಸ್ಥೋ ವಿಸೃಜನ್ ಶರಾನರಿಷು ಪಾರ್ಥಿವಃ ।
ಬಭೌ ರಶ್ಮೀನಿವಾದಿತ್ಯೋ ಭುವನೇಷು ಸಮುತ್ಸ ೃಜನ್ ॥ 59 ॥
ಆನೆಯ ಮೇಲೆ ಕುಳಿತು ಶತ್ರುಗಳ ಮೇಲೆ ಬಾಣಗಳನ್ನು ಪ್ರಯೋಗಿಸುವ ಆ ರಾಜನು ಭೂಮಿಯಲ್ಲಿ ತನ್ನ ರಶ್ಮಿಯನ್ನು ಚೆಲ್ಲುವ ಸೂರ್ಯನಂತೆ ಕಂಗೊಳಿಸಿದನು.
ತಮಾರ್ಜುನಿರ್ದ್ವಾದಶಭಿರ್ಯುಯುತ್ಸುರ್ದಶಭಿಃ ಶರೈಃ ।
ತ್ರಿಭಿಸ್ತ್ರಿಭಿರ್ದ್ರೌಪದೇಯಾ ಧೃಷ್ಟಕೇತುಶ್ಚ ವಿವ್ಯಧುಃ ॥ 60 ॥
ಅವನನ್ನು ಅಭಿಮನ್ಯುವು ಹನ್ನೆರಡು ಬಾಣಗಳಿಂದಲೂ, ಯುಯುತ್ಸುವು ಹತ್ತು ಬಾಣಗಳಿಂದಲೂ, ದ್ರೌಪದಿಯ ಪುತ್ರರು ಮೂರು-ಮೂರು ಬಾಣಗಳಿಂದಲೂ, ಧೃಷ್ಟಕೇತುವು ಮೂರು ಬಾಣಗಳಿಂದಲೂ ಹೊಡೆದರು.
ಚೇಕಿತಾನಶ್ಚತುಃಷಷ್ಟ್ಯಾ ಸೋಽಂತರಾ ಯುಧಿ ತಂ ಪುನಃ ।

ಪ್ರತ್ಯವಿಧ್ಯಚ್ಚರೈಃ ಸರ್ವಾನ್ ಭಗದತ್ತಸ್ತ್ರಿಭಿಸ್ತ್ರಿಭಿಃ ॥ 61 ॥
ಈ ಮಧ್ಯದಲ್ಲಿ ಚೇಕಿತಾನನು ಪುನಃ ರಣರಂಗದಲ್ಲಿ ಅವನನ್ನು ಅರವತ್ನಾಲ್ಕು ಬಾಣಗಳಿಂದ ಹೊಡೆದನು. ಭಗದತ್ತನು ಅದಕ್ಕೆ ಪ್ರತಿಯಾಗಿ ಅವರೆಲ್ಲರನ್ನೂ ಮೂರು- ಮೂರು ಬಾಣಗಳಿಂದ ಹೊಡೆದನು.
ಸೋಽಪಿ ವೀರಾರ್ಪಿತೈರ್ಬಾಣೈರಾಚಿತೋ ದ್ವಿರದೋ ಬಭೌ |
ಸಂಸ್ಯೂತ ಇವ ಸೂರ್ಯಸ್ಯ ರಶ್ಮಿಭಿರ್ಜಲದೋ ಮಹಾನ್ ॥ 62 ॥
ವೀರರು ಪ್ರಯೋಗಿಸಿದ ಬಾಣಗಳು ನಾಟಿದ ಆ ಗಜವು ಸೂರ್ಯನ ರಶ್ಮಿಗಳಿಂದ ಚೆನ್ನಾಗಿ ಸಂಸಕ್ತವಾದ ಮಹಾಮೋಡದಂತೆ ಕಂಗೊಳಿಸಿತು.
ನಿಯಂತುಃ ಶಿಲ್ಪಯತ್ನಾಭ್ಯಾಂ ಪ್ರೇಷಿತೋಽರಿಶರಾಹತಃ |
ಪರಿಚಿಕ್ಷೇಪ ತಾನ್ ನಾಗಃ ಸರಿಪೂನ್ ಸವ್ಯದಕ್ಷಿಣಮ್ ॥ 63 ॥
ತನ್ನನ್ನು ನಿಯಂತ್ರಿಸುವ ಭಗದತ್ತನ ಪೌರುಷ ಮತ್ತು ಪ್ರಯತ್ನಗಳಿಂದ ಮುಂದೆ ಸಾಗಿದ ಆ ಗಜವು ಶತ್ರುಗಳ ಬಾಣಗಳಿಂದ ಪೀಡಿತವಾದರೂ, ಶತ್ರುಗಳಿಂದ ಸಹಿತವಾದ ಅವರ ರಥಗಳನ್ನು ಅದು ಎಡ-ಬಲ ಭಾಗಳಲ್ಲಿ ತೆಗೆದು ಎಸೆಯಿತು.
ಗೋಪಾಲ ಇವ ದಂಡೇನ ಯಥಾ ಪಶುಗಣಾನ್ ವನೇ |
ಸಂಕಾಲಯತಿ ತಾಂ ಸೇನಾಂ ಭಗದತ್ತಸ್ತಥಾ ಮುಹುಃ ॥ 64 ॥
ಗೋಪಾಲಕನು ಅರಣ್ಯದಲ್ಲಿ ದಂಡವನ್ನು ಹಿಡಿದು ಪಶುಸಮೂಹಗಳನ್ನು ಚದುರಿಸುವಂತೆ ಭಗದತ್ತನು ಪಾಂಡವರ ಆ ಸೈನ್ಯವನ್ನು ಪುನಃ ಚದುರಿಸಿದನು.
ಕ್ಷಿಪ್ರಂ ಶ್ಯೇನಾಭಿಪನ್ನಾನಾಂ ವಾಯಸಾನಾಮಿವ ಸ್ವನಃ |
ಬಭೂವ ಪಾಂಡವೇಯಾನಾಂ ತಥಾ ವಿದ್ರವತಾಂ ಸ್ವನಃ ॥ 65 ॥
ಗಿಡುಗವು ಎರಗಿದ ವಾಯಸಗಳ (ಕಾಗೆಗಳ) ಧ್ವನಿಯಂತೆ ರಣರಂಗದಿಂದ ಓಡುವ ಪಾಂಡವ ಸೈನ್ಯದ ನಾದವು ಉಂಟಾಯಿತು.
ರಜಶ್ಚ ಸುಮಹದ್ ರಾಜನ್ನಂತರಿಕ್ಷಂ ಸಮಾಚಿನೋತ್ |
ಅಭಿಧಾವೇತಿ ಕೌಂತೇಯಂ ಸಂಚೋದಯದಿವಾರ್ಜುನಮ್ ॥ 66 ॥
`ಓಡಿ ಬಾ' ಎಂದು ಕೌಂತೇಯನಾದ ಅರ್ಜುನನನ್ನು ಪ್ರಚೋದಿಸುವಂತೆ ಎಲ್ಲೈ ರಾಜನೇ, ಸೈನ್ಯದಿಂದ ಎದ್ದ ಧೂಳು ಅಂತರಿಕ್ಷವನ್ನು ಆವರಿಸಿತು.
ಸ ನಾಗರಾಟ್ ಪ್ರಬಲಬಲೋದ್ಧತೋ ದ್ರುತಂ
ಪುರಾ ಸಪಕ್ಷಾದ್ರಿವರೋ ಯಥಾಽದ್ರವತ್ |
ಭಯಂ ಮಹದ್ ರಿಪುಷು ಸಮಾದಧದ್ ಭೃಶಂ
ವಣಿಗ್ಗಣಾನಾಂ ಕ್ಷುಭಿತೋ ಯಥಾರ್ಽಣವಃ ॥ 67 ॥|
ಪ್ರಬಲವಾದ ಬಲದಿಂದ ಕೂಡಿ ಅಹಂಕಾರವನ್ನು ಹೊಂದಿದ ಆ ಶ್ರೇಷ್ಠವಾದ ಗಜವು ಹಿಂದೆ ಪಕ್ಷಗಳನ್ನು ಹೊಂದಿದ್ದ ಶ್ರೇಷ್ಠ ಪರ್ವತದಂತೆ, ವರ್ತಕಸಮೂಹಕ್ಕೆ ಕ್ಷೋಭೆಗೊಂಡ ಸಮುದ್ರವು ಭಯ ಉಂಟುಮಾಡುವಂತೆ, ಶತ್ರುಗಳಿಗೆ ದೊಡ್ಡ ಭಯವನ್ನುಂಟು ಮಾಡುತ್ತಾ ಶೀಘ್ರವಾಗಿ ಓಡಿತು.
ತಥಾ ಧ್ವನಿರ್ದ್ವಿರದರಥಾಶ್ವಮಾನವೈಃ
ಭಯಾದ್ ದ್ರವದ್ಭಿರ್ಜನಿತೋಽತಿಭೈರವಃ |
ಕ್ಷಿತಿಂ ವಿಯದ್ ದ್ಯಾಂ ಪ್ರದಿಶೋ ದಿಶಸ್ತಥಾ
ಸಮಾವೃಣೋತ್ ಪಾರ್ಥಿವ ಸಂಯುಗೇ ತದಾ ॥ 68 ॥
ಎಲ್ಲೈ ರಾಜನೇ, ಆಗ ಸುಪ್ರತೀಕದ ಭಯದಿಂದ ಓಡುವ ಗಜಗಳಿಂದ, ರಥಗಳಿಂದ, ಅಶ್ವಗಳಿಂದ ಮತ್ತು ಪದಾತಿಗಳಿಂದ ಉಂಟಾದ ಅತಿಭಯಂಕರವಾದ ಧ್ವನಿಯು ಭೂಮಿಯನ್ನೂ, ಆಕಾಶವನ್ನೂ, ದಿಕ್ಕು-ವಿದಿಕ್ಕುಗಳನ್ನೂ, ಅಂತರಿಕ್ಷವನ್ನೂ ಆವರಿಸಿತು.
ಸ ತೇನ ನಾಗಪ್ರವರೇಣ ಪಾರ್ಥಿವೋ
ಭೃಶಂ ಜಗಾಹೇ ದ್ವಿಷತಾಂ ವರೂಥಿನೀಮ್ |
ಪುರಾಽಭಿಗುಪ್ತಾಂ ವಿಬುಧೈರ್ಮಹಾಹವೇ
ವಿರೋಚನೋ ದೇವವರೂಥಿನೀಮಿವ ॥ 69 ॥
ಆ ಭಗದತ್ತರಾಜನು ಶ್ರೇಷ್ಠವಾದ ಸುಪ್ರತೀಕ ಗಜದ ಜೊತೆಯಲ್ಲಿ ಹಿಂದೆ ಮಹಾಯುದ್ಧದಲ್ಲಿ ದೇವತೆಗಳಿಂದ ರಕ್ಷಿತವಾದ ದೇವಸೇನೆಯನ್ನು ವಿರೋಚನನು ಪ್ರವೇಶಿಸಿದಂತೆ ಶತ್ರುಸೈನ್ಯವನ್ನು ಪ್ರವೇಶಿಸಿದನು.
ಭೃಶಂ ವವೌ ಜ್ವಲನಸಖೋ ವಿಯದ್ರಜಃ
ಸಮಾವೃಣೋನ್ಮುಹುರಭಿತಶ್ಚ ಸೈನಿಕಾನ್ |
ತಮೇಕನಾಗಂ ಶತಶೋ ಯಥಾ ಗಜಾನ್
ಸಮಂತತೋ ದ್ರುತಮಥ ಮೇನಿರೇ ಜನಾಃ ॥ 70 ॥|
ಅಗ್ನಿಸಖನಾದ ವಾಯುವು ಕಟುವಾಗಿ ಬೀಸಿತು. ಧೂಳು ಆಕಾಶವನ್ನು ಮತ್ತು ಸೈನಿಕರನ್ನು ಪುನಃ ಮುಚ್ಚಿತು. ಜನರು ಅದೊಂದೇ ಗಜವನ್ನು ಎಲ್ಲ ಕಡೆಯಲ್ಲಿಯೂ ಓಡಾಡುವ ನೂರಾರು ಗಜಗಳೆಂದು ತಿಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ದಶಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಅರ್ಜುನನಿಂದ ಸಂಶಪ್ತಕರ ವಧೆ
ಸಂಜಯಃ
ಯನ್ಮಾಂ ಪಾರ್ಥಸ್ಯ ಕರ್ಮಾಣಿ ಸಂಗ್ರಾಮೇ ಪರಿಪೃಚ್ಛಸಿ |
ಶೃಣು ರಾಜನ್ ಯಥಾ ಪಾರ್ಥಶ್ಚಕಾರ ಕದನಂ ಮಹತ್ ॥ 1 ॥
ಸಂಜಯ ಎಲೈ ರಾಜನೇ, ನೀನು ಯುದ್ಧದಲ್ಲಿ ಅರ್ಜುನನು ಮಾಡಿದ ಕಾರ್ಯಗಳನ್ನು ಕೇಳುತಿತರುವಿಯಷ್ಟೆ? ಅರ್ಜುನನು ಹೇಗೆ ದೊಡ್ಡ ಯುದ್ಧವನ್ನು ಮಾಡಿದನೆಂದು ಕೇಳು.
ರಜೋ ದೃಷ್ಟ್ವಾ ಸಮುದ್ಧೂತಂ ಶ್ರುತ್ವಾ ಚ ಜನನಿಸ್ವನಮ್ |
ಭಗದತ್ತೇ ವಿಕುರ್ವಾಣೇ ಕೌಂತೇಯಃ ಕೃಷ್ಣಮಬ್ರವೀತ್ ॥ 2 ॥
ಮೇಲೆದ್ದ ಧೂಳನ್ನು ನೋಡಿ, ಯೋಧರ ಮಹಾನಾದವನ್ನು ಕೇಳಿ ಭಗದತ್ತನು ಪಾಂಡವರ ಸೇನೆಗೆ ಅಪಕಾರವನ್ನು ಮಾಡುತ್ತಿರುವಾಗ ಅರ್ಜುನನು ಕೃಷ್ಣನನ್ನು ಕುರಿತು ಹೇಳಿದನು.
ಯಥಾ ಪ್ರಾಗ್ಜ್ಯೋತಿಷೋ ರಾಜಾ ಗಜೇನ ಮಧುಸೂದನ |
ತ್ವರಮಾಣೋ ಹ್ಯತಿಕ್ರಾಂತೋ ಧ್ರುವಂ ತಸ್ಯೈಷ ನಿಸ್ವನಃ ॥ 3 ॥
ಎಲೈ ಮಧುಸೂದನನೇ, ಪ್ರಾಗ್ಜ್ಯೋತಿಷರಾಜನು ತ್ವರೆಯಿಂದ ನನ್ನನ್ನು ದಾಟಿ ಹೋದುದನ್ನು ಗಮನಿಸಿದರೆ ಈ ದೊಡ್ಡ ಶಬ್ದವು ಖಂಡಿತವಾಗಿ ಅವನದೇ ಆಗಿದೆ.
ಇಂದ್ರಾದನವಮಃ ಸಂಖ್ಯೇ ಗಜಯಾನವಿಶಾರದಃ |
ಪ್ರಥಮೋ ವಾ ದ್ವಿತೀಯೋ ವಾ ಪೃಥಿವ್ಯಾಮಿತಿ ಮೇ ಮತಿಃ ॥ 4 ॥
ಯುದ್ಧದಲ್ಲಿ ಇಂದ್ರನಿಗಿಂತ ಕಡಿಮೆಯಿಲ್ಲದ ಗಜಯಾನ ವಿಶಾರದನಾದ ಅವನು ಗಜಯಾನದಲ್ಲಿ ಭೂಮಿಯಲ್ಲಿ ಮೊದಲನೆಯವನು ಅಥವಾ ಎರಡನೆಯನವನು ಎಂದು ನನ್ನ ಅಭಿಪ್ರಾಯ.
ಸ ಚಾಪಿ ದ್ವಿರದಶ್ರೇಷ್ಠಃ ಸದಾಽಪ್ರತಿಗಜೋ ಯುಧಿ |
ಸರ್ವಶಸ್ತ್ರಾತಿಗಃ ಸಂಖ್ಯೇ ಕೃತವರ್ಮಾ ಜಿತಕ್ಲಮಃ ॥ 5 ॥
ಆ ಶ್ರೇಷ್ಠ ಗಜವಾದರೂ ಕೂಡ ಯುದ್ಧದಲ್ಲಿ ಪ್ರತಿಸ್ಪರ್ಧಿಯಾದ ಗಜರಹಿತವಾಗಿದೆ. ಕವಚವನ್ನು ಧರಿಸಿ ಶ್ರಮರಹಿತವಾದ ಆ ಗಜವು ಯುದ್ಧದಲ್ಲಿ ಎಲ್ಲ ಶಸ್ತ್ರಗಳನ್ನೂ ಮೀರಿದುದು.
ಸೋಢಾ ಶಸ್ತ್ರನಿಪಾತಾನಾಮಗ್ನಿಸ್ಪರ್ಶಸ್ಯ ಚಾನಘ |
ಸ ಪಾಂಡವಬಲಂ ವ್ಯಕ್ತಮದ್ಯೈಕೋ ನಾಶಯಿಷ್ಯತಿ ॥ 6 ॥
ಎಲೈ ಅನಘನೇ, ಅದು ಶಸ್ತ್ರಘಾತವನ್ನು ಮತ್ತು ಅಗ್ನಿಸ್ಪರ್ಶವನ್ನು ಸಹಿಸುವಂತಹದು. ಅದೊಂದೇ ಈ ದಿನ ಪಾಂಡವ ಸೈನ್ಯವನ್ನು ಸ್ಪಷ್ಟವಾಗಿ ನಾಶಮಾಡುವುದು.
ಸಿಂಹನಾದಂ ಮಹತ್ ಕೃತ್ವಾ ಧನುರ್ಬಾಣರವೈಃ ಸಹ |
ವಿದ್ರಾವ್ಯಮಾಣಂ ಸಂಪಶ್ಯ ಹತಭೂಯಿಷ್ಠನಾಯಕಮ್ |
ದೃಷ್ಟ್ವಾ ವಿನದ್ಯ ಸಹಸಾ ಮಮ ಸೇನಾಂ ಪ್ರಮೃದ್ನತಿ ॥ 7 ॥
ಭಗದತ್ತನು ಧನುಸ್ಸು-ಬಾಣಗಳ ಶಬ್ದದ ಜೊತೆಯಲ್ಲಿ ಸಿಂಹನಾದವನ್ನು ಮಾಡಿ, ನನ್ನ ಸೈನ್ಯದಲ್ಲಿ ಪ್ರಧಾನರಾದವರನ್ನು ಕೊಂದು, ಉಳಿದವರನ್ನು ಓಡಿಸುತ್ತಿರುವುದನ್ನು ನೋಡು. ಆ ಗಜವು ನನ್ನ ಸೇನೆಯನ್ನು ನೋಡಿ ಗರ್ಜಿಸಿ ತಕ್ಷಣ ನಾಶಮಾಡುತ್ತಿದೆ.
ನ ಚಾವಾಭ್ಯಾಂ ಪುಮಾನನ್ಯಃ ಶಕ್ತಃ ಸಂಪ್ರತಿಬಾಧಿತುಮ್ |
ತ್ವರಮಾಣಸ್ತತೋ ಯಾಹಿ ಯತ್ರ ಪ್ರಾಗ್ಜ್ಯೋತಿಷೋ ನೃಪಃ ॥ 8 ॥
ನಮ್ಮಿಬ್ಬರನ್ನು ಬಿಟ್ಟು ಬೇರೆ ಯಾವ ಪುರುಷನೂ ಅದನ್ನು ಮತ್ತು ಅವನನ್ನು ಬಾಧಿಸಲು ಶಕ್ತನಲ್ಲ. ಆದ್ದರಿಂದ ತ್ವರೆಯಿಂದ ಪ್ರಾಗ್ಜ್ಯೋತಿಷ ರಾಜನು ಇರುವಲ್ಲಿಗೆ ಹೋಗು.
ಶಕ್ರಸಖ್ಯಾದ್ ದ್ವಿಪಬಲಾದ್ ವಯಸಾ ಚಾಪಿ ವಿಸ್ಮಿತಮ್ |
ಅದ್ಯೈವ ಪ್ರೇಷಯಿಷ್ಯಾಮಿ ಬಲಹಂತುಃ ಪ್ರಿಯಾತಿಥಿಮ್ ॥ 9 ॥
ಇಂದ್ರನ ಸ್ನೇಹದಿಂದಲೂ, ಸುಪ್ರತೀಕನ ಬಲದಿಂದಲೂ ಮತ್ತು ತನ್ನ ವಯಸ್ಸಿನಿಂದಲೂ ಅಹಂಕಾರಿಯಾಗಿರುವ ಅವನನ್ನು ಈ ದಿನವೇ ಇಂದ್ರನ ಪ್ರಿಯಾತಿಥಿಯನ್ನಾಗಿ ಕಳುಹಿಸುವೆನು.
ಸಂಜಯಃ
ಕೃಷ್ಣಸ್ತು ವಚನಾತ್ ತಸ್ಯ ಪ್ರಯಯೌ ಯತ್ರ ತದ್ಬಲಮ್ |
ಕಾಲ್ಯಂತೇ ಭಗದತ್ತೇನ ಪಾಂಚಾಲಾಃ ಸಹ ಪಾಂಡವೈಃ ॥ 10 ॥
ಸಂಜಯ ಕೃಷ್ಣನಾದರೋ ಅರ್ಜುನನ ವಚನದಂತೆ ಭಗದತ್ತನು ಪಾಂಚಾಲರನ್ನು ಮತ್ತು ಪಾಂಡವರನ್ನು ಚದುರಿಸುತ್ತಿದ್ದ ಸೈನ್ಯದ ಕಡೆಗೆ ಹೊರಟನು.
ತಂ ಪ್ರಯಾಂತಂ ತತಃ ಪಶ್ಚಾದಾಹ್ವಯಂತೋ ಮಹಾರಥಾಃ |
ಸಂಶಪ್ತಕಾಃ ಸಮಾರೋಹನ್ ಸಹಸ್ರಾಣಿ ಚತುರ್ದಶ ॥ 11 ॥
ಆಗ ಅಲ್ಲಿಂದ ಹೊರಟ ಅರ್ಜುನನನ್ನು ಮಹಾರಥರಾದ ಹದಿನಾಲ್ಕು ಸಾವಿರ ಸಂಶಪ್ತಕರು ಹಿಂಭಾಗದಿಂದ ಅವನನ್ನು ಯುದ್ಧಕ್ಕೆ

ಆಹ್ವಾನಿಸಿದರು.
ದಶೈವ ತು ಸಹಸ್ರಾಣಿ ತ್ರಿಗರ್ತಾನಾಂ ನರಾಧಿಪ |
ಚತ್ವಾರಿಂಶತ್ ಸಹಸ್ರಾಣಿ ವಾಸುದೇವಸ್ಯ ಧೇನುಪಾಃ ॥ 12 ॥
ಎಲೈ ರಾಜನೇ, ತ್ರಿಗರ್ತರ ಹತ್ತುಸಾವಿರ ಸೈನಿಕರು ಮತ್ತು ಕೃಷ್ಣನ ಪುತ್ರರಾದ ನಾರಾಯಣ ಸೇನೆಯ ನಲವತ್ತು ಸಾವಿರ ಗೋಪಾಲರು (ಅರ್ಜುನನನ್ನು ಆಹ್ವಾನಿಸಿದರು).
ದೀರ್ಯಮಾಣಾಂ ಚಮೂಂ ದೃಷ್ಟ್ವಾ ಭಗದತ್ತೇನ ಮಾರಿಷ |
ಆಹೂಯಮಾನಸ್ಯ ಚ ತೈರಭವದ್ ವೈ ಮನೋ ದ್ವಿಧಾ ॥ 13 ॥
ಎಲೈ ಪೂಜ್ಯನೇ, ಒಂದು ಕಡೆ ಭಗದತ್ತನಿಂದ ಭಗ್ನಗೊಳಿಸಲ್ಪಡುತ್ತಿದ್ದ ತನ್ನ ಸೈನ್ಯವನ್ನು ನೋಡಿ, ಇನ್ನೊಂದೆಡೆ ಸಂಶಪ್ತಕರಿಂದ ತ್ರಿಗರ್ತರಿಂದ ಮತ್ತು ಗೋಪಾಲರಿಂದ ಆಹ್ವಾನಿಸಲ್ಪಟ್ಟು ಅರ್ಜುನನ ಮನಸ್ಸು ಎರಡು ರೀತಿಯಾಯಿತು.
ಕಿನ್ನು ಶ್ರೇಯಸ್ಕರಂ ಕೃತ್ಯಂ ಭವೇದತ್ರೇತ್ಯಚಿಂತಯತ್ |
ನ ಚೈವ ವಿನಿವರ್ತೇಯಂ ಪಾಲಯೇಯಂ ಚ ಪಾಂಡವಾನ್ ॥ 14 ॥
ಈಗ ಏನು ಮಾಡಿದರೆ ಶ್ರೇಯಸ್ಸುಂಟಾಗುತ್ತದೆ ಎಂದು ಅವನು ಚಿಂತಿಸಿದನು. ಹಿಂದಿರುಗಿ ಬಂದು ಪಾಂಡವರನ್ನು ರಕ್ಷಿಸಲಾರೆ (ಎಂದು ಚಿಂತಿಸಿದನು).
ತಥಾ ಬುದ್ಧ್ಯಾ ವಿಚಾರ್ಯೈತದಸಕೃತ್ ಕುರುನಂದನಃ |
ಅಕರೋತ್ ಪರಮಾಂ ಬುದ್ಧಿಂ ಸಂಶಪ್ತಕವಧೇ ಸ್ಥಿರಾಮ್ ॥ 15 ॥
ಕುರುನಂದನನಾದ ಅರ್ಜುನನು ಹೀಗೆ ಅನೇಕ ಬಾರಿ ತನ್ನ ಬುದ್ಧಿಯಿಂದ ವಿಚಾರ ಮಾಡಿ ಸಂಶಪ್ತಕರ ವಧೆಯನ್ನೇ ಮಾಡುವುದೆಂದು ಸ್ಥಿರವಾದ ಮತ್ತು ಶ್ರೇಷ್ಠವಾದ ಬುದ್ಧಿಯನ್ನು ಹೊಂದಿದನು.
ಸ ಸನ್ನಿವೃತ್ತಃ ಸಹಸಾ ಕಪಿಪ್ರವರಕೇತನಃ |
ಏಕೋ ರಥಸಹಸ್ರಾಣಾಂ ನಿಹಂತುಂ ವಾಸವೀ ರಣೇ ॥ 16 ॥
ಕಪಿಪ್ರವರಧ್ವಜನಾದ ಅರ್ಜುನನೊಬ್ಬನೇ ಸಹಸ್ರರಥರನ್ನು ಕೊಲ್ಲಲು ರಣರಂಗದಲ್ಲಿ ಸಂಶಪ್ತಕರ ಕಡೆಗೆ ಬಂದನು.
ಸಾ ಹಿ ದುರ್ಯೋಧನಸ್ಯಾಸೀನ್ಮತಿಃ ಕರ್ಣಸ್ಯ ಚೋಭಯೋಃ |
ಅರ್ಜುನಸ್ಯ ವಧೋಪಾಯೇ ತೇನ ದ್ವೈಧಮಕಲ್ಪಯತ್ ॥ 17 ॥
ದುರ್ಯೋಧನ ಮತ್ತು ಕರ್ಣರ ಚಿಂತನೆಯು ಅರ್ಜುನನನ್ನು ಕೊಲ್ಲುವ ವಿಷಯದಲ್ಲಿ ಅರ್ಜುನನಿಗೆ ಇಂತಹ ಇಬ್ಬಗೆಯನ್ನು ಕಲ್ಪಿಸಬೇಕೆಂಬುದಾಗಿ ಇದ್ದಿತು. ಆದ್ದರಿಂದ ಧರ್ಮರಾಜನಿಗೆ ತನ್ನ ಸಂಕಟ ಕಾಲದಲ್ಲಿಯೂ ಅರ್ಜುನನು ತನ್ನ ಬಳಿಗೆ ಬರಲಿಲ್ಲವೆಂಬ ಭಾವನೆಯನ್ನು ಉಂಟುಮಾಡುವುದಕ್ಕಾಗಿ ಅರ್ಜುನನಿಗೆ ಇಂತಹ ಪರಿಸ್ಥಿತಿಯನ್ನು ಉಂಟುಮಾಡಿದರು.
ಸ ತು ಸಂವರ್ತಯಾಮಾಸ ದ್ವೈಧೀಭಾವೇನ ಪಾಂಡವಃ |
ವಧೇ ಸಂಶಪ್ತಕಾಖ್ಯಾನಾಮಕರೋತ್ ತಾಂ ಮೃಷಾ ತದಾ ॥ 18 ॥
ಪಾಂಡವನಾದ ಅರ್ಜುನನು ಆ ದ್ವೈಧೀಭಾವದಿಂದ ಹೊರಗೆ ಬಂದು, ಸಂಶಪ್ತಕರ ವಧೆಯನ್ನು ಮಾಡುವುದಾಗಿಯೇ ನಿಶ್ಚಯಿಸಿ, ಕರ್ಣ-ದುರ್ಯೋಧನರ ಆ ಆಸೆಯನ್ನು ವ್ಯರ್ಥವನ್ನಾಗಿ ಮಾಡಿದನು.
ತತಃ ಶರಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ವ್ಯಸೃಜನ್ನರ್ಜುನೇ ಕ್ರುದ್ಧಾಃ ಸಂಶಪ್ತಕರಥರ್ಷಭಾಃ ॥ 19 ॥
ಅನಂತರ ಸಂಶಪ್ತಕರ ಶ್ರೇಷ್ಠ ರಥರು ಕ್ರುದ್ಧರಾಗಿ ಅರ್ಜುನನ ಮೇಲೆ ಹತ್ತಾರು ಸಾವಿರ ಬಾಣಗಳನ್ನು ಪ್ರಯೋಗಿಸಿದರು.
ತತೋ ನೈವಾರ್ಜುನೋಽಪೇಂದ್ರೌ ನ ರಥಃ ಸಾಶ್ವಕೇತನಃ |
ದೃಶ್ಯತೇ ಶರವರ್ಷೇಣ ಪ್ರಬಲೇನ ಸಮಾವೃತಃ ॥ 20 ॥
ಆಗ ಪ್ರಬಲವಾದ ಬಾಣಗಳ ಮಳೆಯಿಂದ ಮುಚ್ಚಲ್ಪಟ್ಟು ಅರ್ಜುನನಾಗಲೀ, ಕೃಷ್ಣನಾಗಲೀ, ಅಶ್ವ-ಧ್ವಜಗಳಿಂದ ಕೂಡಿದ ಅರ್ಜುನನ ರಥವಾಗಲೀ ಕಾಣಲಿಲ್ಲ.
ತತಸ್ತೇನ ಶರೌಘೇಣ ಮಹತಾ ಚ ಸಮಾವೃತಃ |
ನಾಶಕನ್ನಾಮ ಬೀಭತ್ಸುರಮಿತ್ರಾನ್ ಪ್ರತಿಬಾಧಿತುಮ್ ॥ 21 ॥
ಆಗ ಆ ದೊಡ್ಡ ಬಾಣಗಳ ಮಳೆಯಿಂದ ಮುಚ್ಚಲ್ಪಟ್ಟ ಅರ್ಜುನನು ಶತ್ರುಗಳನ್ನು ಬಾಧಿಸಲು ಸಮರ್ಥನಾಗಲಿಲ್ಲ.
ಯದಾ ಮೋಹಮಿವ ಪ್ರಾಪ್ತಃ ಪ್ರಸ್ವಿನ್ನಶ್ಚಾಚ್ಯುತೋಽಭವತ್ |
ತತೋ ಜನಾರ್ದನಃ ಪಾರ್ಥಂ ಪ್ರತ್ಯುವಾಚ ಹಸನ್ನಿವ ॥ 22 ॥
ವಜ್ರಮಸ್ತ್ರಂ ತು ಸಂಧಾಯ ಜಹಿ ಸಂಶಪ್ತಕಾನಿಹ |
ತತಸ್ತಾನಹಿತಾನ್ ಪಾರ್ಥೋ ವಜ್ರೇಣಾಸ್ತ್ರೇಣ ಜಘ್ನಿವಾನ್ ॥ 23 ॥
ಮೋಹಾವಸ್ಥೆಯನ್ನು ಹೊಂದಿದವನಂತೆ ಅವಸ್ಥೆಯನ್ನು ಹೊಂದಿ, ಅವನು ಬೆವರುತ್ತಿದ್ದಾಗ ಜನಾರ್ದನನಾದ ಕೃಷ್ಣನು ಅವನನ್ನು ಕುರಿತು ನಗುತ್ತಾ, ವಜ್ರಾಸ್ತ್ರವನ್ನು ಪ್ರಯೋಗಿಸಿ, ಈಗ ಈ ಸಂಶಪ್ತಕರನ್ನು ನಾಶಮಾಡು ಎಂದು ಹೇಳಿದನು. ಆಗ ಅರ್ಜುನನು ಆ ಶತ್ರುಗಳನ್ನು ವಜ್ರಾಸ್ತ್ರದಿಂದ ಸಂಹರಿಸಿದನು.
ಶತಶಃ ಪಾಣಯಃ ಛಿನ್ನಾಃ ಸೇಷುಜ್ಯಾತಳಕಾರ್ಮುಕಾಃ |
ಕೇತನಾನಿ ಹಯಾಃ ಸೂತಾ ರಥಿನಶ್ಚಾಪತನ್ ಕ್ಷಿತೌ ॥ 24 ॥
ಧನುಸ್ಸು, ಹೆದೆಗಳನ್ನು ಮತ್ತು ಬಾಣಗಳನ್ನು ಹಿಡಿದ ನೂರಾರು ಹಸ್ತಗಳು ಕತ್ತರಿಸಲ್ಪಟ್ಟವು. ಧ್ವಜಗಳು, ಅಶ್ವಗಳು, ಸಾರಥಿಗಳು ಮತ್ತು ರಥಿಕರು ಭೂಮಿಯ ಮೇಲೆ ಬಿದ್ದರು.

ದ್ರುಮಾಚಲಾಗ್ರಾಂಬುಧರೈಃ ಸಮರೂಪಾಃ ಸುಕಲ್ಪಿತಾಃ |
ಹತಾರೋಹಾಃ ಕ್ಷಿತೌ ಪೇತುರ್ದ್ವಿಪಾಃ ಪಾರ್ಥಶರಾಹತಾಃ ॥ 25 ॥
ವೃಕ್ಷಗಳಿಗೆ, ಪರ್ವತಗಳಿಗೆ, ಮೋಡಗಳಿಗೆ ಸಮಾನವಾದ ರೂಪವನ್ನು ಹೊಂದಿದ್ದ, ಚೆನ್ನಾಗಿ ಅಣಿಗೊಳಿಸಿದ ಗಜಗಳು ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟು ಗಜಾರೋಹಿಗಳ ಸಹಿತವಾಗಿ ಬಿದ್ದವು.
ವಿಪ್ರವಿದ್ಧಕಶಾವಲ್ಗಾಃ ಛಿನ್ನಭಾಂಡಪ್ರಕೀರ್ಣಕಾಃ |
ಸಾರೋಹಾಸ್ತುರಗಾಃ ಪೇತುರ್ಮಥಿತಾಃ ಪಾರ್ಥಮಾರ್ಗಣೈಃ ॥ 26 ॥
ಅರ್ಜುನನ ಬಾಣಗಳಿಂದ ಮರ್ದಿಸಲ್ಪಟ್ಟ ಅಶ್ವಗಳು ಚಾವಟಿಗಳನ್ನು ಮತ್ತು ಕೋಲುಗಳನ್ನು ಎಸೆದ, ಕತ್ತರಿಸಲ್ಪಟ್ಟ ಆಭರಣಗಳನ್ನು ಮತ್ತು ಜೀನುಗಳನ್ನುಳ್ಳ ಅಶ್ವಾರೋಹಿಗಳ ಸಹಿತವಾಗಿ ನೆಲದ ಮೇಲೆ ಬಿದ್ದವು.
ಸಋಷ್ಟಿಚರ್ಮಾಸಿನಖರಾಃ ಸಮುದ್ಗರಪರಶ್ವಧಾಃ |
ಸಂಛಿನ್ನಾ ಬಾಹವಃ ಪೇತುರ್ನೃಣಾಂ ಭಲ್ಲೈಃ ಕಿರೀಟಿನಾ ॥ 27 ॥
ಅರ್ಜುನನಿಂದ ಭಲ್ಲಗಳಿಂದ ಕತ್ತರಿಸಲ್ಪಟ್ಟು ಋಷ್ಟಿ-ಚರ್ಮ-ಖಡ್ಗ-ನಖರಗಳನ್ನು ಹಿಡಿದು, ಮುದ್ಗರ-ಪಥಶ್ವರಗಳನ್ನು ಹಿಡಿದ ಯೋಧರ ಬಾಹುಗಳು ಭೂಮಿಯ ಮೇಲೆ ಬಿದ್ದವು.
ಬಾಲಾದಿತ್ಯಾಂಬುಜೇಂದೂನಾಂ ತುಲ್ಯರೂಪಾಣಿ ಮಾರಿಷ |
ಸಂಛಿನ್ನಾನ್ಯರ್ಜುನಶರೈಃ ಶಿರಾಂಸ್ಯುರ್ವೀಂ ಪ್ರಪೇದಿರೇ ॥ 28 ॥
ಎಲೈ ಪೂಜ್ಯನೇ, ಎಳೆಯ ಸೂರ್ಯನಿಗೆ, ಪದ್ಮಗಳಿಗೆ, ಚಂದ್ರನಿಗೆ ಸಮಾನವಾದ ರೂಪವನ್ನು ಹೊಂದಿದ ಶಿರಸ್ಸುಗಳು ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದವು.
ಜಜ್ವಾಲಾಲಂಕೃತೈಃ ಸೈನ್ಯೈಃ ಪತ್ರಿಭಿಃ ಪ್ರಾಣಭೋಜನೈಃ |
ನಾನಾಲಿಂಗೈಃ ಸದಾಽಮಿತ್ರಾನ್ ಕ್ರುದ್ಧೇ ನಿಘ್ನತಿ ಫಲ್ಗುನೇ |
ಶಿರಾಂಸಿ ವಿಚಕರ್ತಾಽಥ ಯೋಧಾನಾಂ ಹಿ ಸಹಸ್ರಶಃ ॥ 29 ॥
ಕ್ರೋಧಗೊಂಡ ಅರ್ಜುನನು ಅನೇಕ ವಿಧವಾದ ಪ್ರಾಣಗಳನ್ನು ಹೀರುವ ಬಾಣಗಳಿಂದ ಶತ್ರುಗಳನ್ನು ಕೊಲ್ಲುತ್ತಿರಲು ಅಲಂಕೃತವಾದ ಶತ್ರುಸೈನ್ಯವು ಹೊತ್ತಿ ಉರಿಯಿತು. ಅನಂತರ ಸಹಸ್ರ ಸಂಖ್ಯೆಯಲ್ಲಿ ಅರ್ಜುನನು ಯೋಧರ ಶಿರಸ್ಸುಗಳನ್ನು ಕತ್ತರಿಸಿದನು.
ಕ್ಷೋಭಯಂತಂ ತದಾ ಸೇನಾಂ ದ್ವಿರದಂ ನಳಿನೀಮಿವ |
ಧನಂಜಯಂ ಭೂತಗಣಾಃ ಸಾಧು ಸಾಧ್ವಿತ್ಯಪೂಜಯನ್ ॥ 30 ॥
ಆನೆಯು ಪದ್ಮಸರೋವರವನ್ನು ಕಲಕಿದಂತೆ ಕೌರವಸೇನೆಯನ್ನು ಕ್ಷೋಭೆಗೊಳಿಸುತ್ತಿದ್ದ ಅರ್ಜುನನನ್ನು ಕುರಿತು ಭೂತಗಣಗಳು `ಸಾಧು-ಸಾಧು' ಎಂದು ಹೇಳಿ ಅವನನ್ನು ಪೂಜಿಸಿದವು.
ದೃಷ್ಟ್ವಾ ತು ಕರ್ಮ ಪಾರ್ಥಸ್ಯ ವಾಸವಸ್ಯೇವ ಮಾಧವಃ |
ವಿಸ್ಮಯಂ ಪರಮಂ ಗತ್ವಾ ತಳಮಾಹತ್ಯ ಪೂಜಯತ್ ॥ 31 ॥
ಕೃಷ್ಣನು ಇಂದ್ರನ ಕರ್ಮದಂತಿರುವ ಅರ್ಜುನನ ಕರ್ಮವನ್ನು ನೋಡಿ ಬಹಳ ವಿಸ್ಮಯಗೊಂಡು ಚಪ್ಪಾಳೆಯನ್ನು ತಟ್ಟಿ ಅರ್ಜುನನನ್ನು ಪೂಜಿಸಿದನು.
ಕರ್ಮೈತತ್ ಪಾರ್ಥ ಶಕ್ರೇಣ ಯಮೇನ ಧನದೇನ ಚ |
ದುಷ್ಕರಂ ಸಮರೇ ಯತ್ತೇ ಕೃತಮದ್ಯೇತಿ ಮೇ ಮತಿಃ ॥ 32 ॥
ಎಲೈ ಅರ್ಜುನನೇ, ಈ ದಿನ ಯುದ್ಧದಲ್ಲಿ ನೀನು ಮಾಡಿದ ಕರ್ಮವನ್ನು ಇಂದ್ರನಾಗಲೀ, ಯಮನಾಗಲೀ, ಕುಬೇರನಾಗಲೀ, ವರುಣನಾಗಲೀ ಮಾಡಲು ಸಾಧ್ಯವಿಲ್ಲ ಎಂದು ನನ್ನ ಅಭಿಪ್ರಾಯ.
ಯುಗಪಚ್ಚೈವ ಸಂಗ್ರಾಮೇ ಶತಶೋಽಥ ಸಹಸ್ರಶಃ |
ಪತಿತಾ ಏವ ಮೇ ದೃಷ್ಟಾಃ ಸಂಶಪ್ತಕಮಹಾರಥಾಃ ॥ 33 ॥
ಸಂಶಪ್ತಕರ ಮಹಾರಥರು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಯುದ್ಧದಲ್ಲಿ ಒಂದೇ ಬಾರಿಗೆ ಕತ್ತರಿಸಲ್ಪಟ್ಟು ಬೀಳುವುದನ್ನು ನಾನು ನೋಡಿದೆನು (ಎಂದು ಹೇಳಿದನು).
ತತಃ ಸಂಶಪ್ತಕಾನ್ ಹತ್ವಾ ಭೂಯಿಷ್ಠಂ ಯೇ ವ್ಯವಸ್ಥಿತಾಃ |
ಭಗದತ್ತಾಯ ಯಾಹೀತಿ ವಾಸುದೇವಮಚೋದಯತ್ ॥ 34 ॥
ಅನಂತರ ರಣರಂಗದಲ್ಲಿ ನಿಂತಿದ್ದ ಸಂಶಪ್ತಕರ ಬಹುಭಾಗವನ್ನು ಕೊಂದು ಅರ್ಜುನನು ಭಗದತ್ತನ ಕಡೆಗೆ ಹೋಗು ಎಂದು ಕೃಷ್ಣನನ್ನು ಪ್ರೇರಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಡ್ವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಭಗದತ್ತ ಮತ್ತು ಅರ್ಜುನರ ಸಂಘರ್ಷ
ಸಂಜಯಃ
ಯಿಯಾಸತಃ ತತಃ ಕೃಷ್ಣಃ ಪಾರ್ಥಸ್ಯಾಶ್ವಾನ್ ಮನೋಜವಾನ್ |

ಅಪ್ರೈಷೀದ್ವೇಮಸಂಛನ್ನಾನ್ ದ್ರೋಣಾನೀಕಾಯ ಪಾಂಡರಾನ್॥ 1 ॥
ಸಂಜಯ ಅಲ್ಲಿಂದ ಹೊರಡಲು ಬಯಸಿದ ಅರ್ಜುನನ ಮನೋವೇಗವುಳ್ಳ, ಸುವರ್ಣಾಭರಣಭೂಷಿತವಾದ ಶ್ವೇತಾಶ್ವಗಳನ್ನು ಕೃಷ್ಣನು ದ್ರೋಣರ ಸೈನ್ಯದ ಕಡೆಗೆ ಪ್ರಚೋದಿಸಿದನು.
ತಂ ಪ್ರಯಾಂತಂ ಕುರುಶ್ರೇಷ್ಠ ಸ್ವಾಂಸ್ತಾತ್ರಾತುಂ ದ್ರೋಣತಾಪಿತಾನ್ |
ಸುಶರ್ಮಾ ಭ್ರಾತೃಭಿಃ ಸಾರ್ಧಂ ಯುದ್ಧಾರ್ಥೀ ಪೃಷ್ಠತೋಽನ್ವಯಾತ್ |
ತತಃ ಶ್ವೇತಹಯಃ ಕೃಷ್ಣಮಬ್ರವೀತ್ ಸಮಿತಿಂಜಯಃ ॥ 2 ॥
ಎಲೈ ಕುರುಶ್ರೇಷ್ಠನೇ, ದ್ರೋಣರಿಂದ ಪೀಡಿಸಲ್ಪಟ್ಟ ತನ್ನವರನ್ನು ರಕ್ಷಿಸಲು ಅರ್ಜುನನು ಹೋಗುತ್ತಿದ್ದಾಗ, ಸುಶರ್ಮನು ತನ್ನ ಸಹೋದರರ ಜೊತೆಯಲ್ಲಿ ಯುದ್ಧಾರ್ಥಿಯಾಗಿ ಅವನನ್ನು ಹಿಂಬಾಲಿಸಿದನು. ಆಗ ಶ್ವೇತಾಶ್ವನೂ ಯುದ್ಧದಲ್ಲಿ ಜಯಶೀಲನೂ ಆದ ಅರ್ಜುನನು ಕೃಷ್ಣನನ್ನು ಕುರಿತು ಮಾತನಾಡಿದನು.
ಏಷ ಮಾಂ ಭ್ರಾತೃಭಿಃ ಸಾರ್ಧಂ ಸುಶರ್ಮಾಽಽಹ್ವಯತೇಽಚ್ಯುತ |
ದೀರ್ಯತೇ ಚೋತ್ತರೇಣೈವ ಸೈನ್ಯಂ ನಃ ಶತ್ರುಸೂದನ ॥ 3 ॥
ಎಲೈ ಅಚ್ಯುತನೇ, ಈ ಸುಶರ್ಮನು ಸಹೋದರರ ಜೊತೆಯಲ್ಲಿ ನನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದಾನೆ. ಎಲೈ ಶತ್ರುಸೂದನನೇ, ಉತ್ತರ ದಿಕ್ಕಿನಲ್ಲಿ ನನ್ನ ಸೈನ್ಯವು ಭಗ್ನವಾಗುತ್ತಿದೆ.
ದ್ವೈಧೀಭೂತಂ ಮನೋ ಮೇಽದ್ಯ ಕೃತಂ ಸಂಶಪ್ತಕೈರಿದಮ್ ॥ 4 ॥
ಕಿನ್ನು ಸಂಶಪ್ತಕಾನ್ ಹನ್ಮಿ ಸ್ವಾನ್ ವಾ ರಕ್ಷಾಮಿ ಚಾರ್ದಿತಾನ್ |
ಇತಿ ವೇತ್ಥ ಹೃದಿ ದ್ವೈಧಂ ತತ್ರ ಕಿಂ ಸುಕೃತಂ ಭವೇತ್ ॥ 5 ॥
ನನ್ನ ಮನಸ್ಸನ್ನು ಈ ದಿನ ಸಂಶಪ್ತಕರು ಹೀಗೆ ಎರಡು ಭಾಗವನ್ನಾಗಿ ಮಾಡಿದ್ದಾರೆ. ಸಂಶಪ್ತಕರನ್ನು ಕೊಲ್ಲಲೇ ಅಥವಾ ಪೀಡಿತರಾದ ನನ್ನವರನ್ನು ರಕ್ಷಿಸಲೇ ಎಂಬ ನನ್ನ ಮನಸ್ಸಿನಲ್ಲಿರುವ ತೊಳಲಾಟವನ್ನು ನೀನು ತಿಳಿದಿದ್ದೀಯೆ. ಏನು ಮಾಡಿದರೆ ಒಳ್ಳೆಯದಾದೀತು?
ಸಂಜಯಃ
ಏವಮುಕ್ತಸ್ತು ದಾಶಾರ್ಹಃ ಸ್ಯಂದನಂ ಪರ್ಯವರ್ತಯತ್ |
ಯೇನ ತ್ರಿಗರ್ತಾಧಿಪತಿಃ ಪಾಂಡವಂ ಪ್ರತಿ ಚಾಹ್ವಯತ್ ॥ 6 ॥
ತತೋಽರ್ಜುನಃ ಸುಶರ್ಮಾಣಂ ವಿದ್ಧ್ವಾ ಸಪ್ತಭಿರಾಶುಗೈಃ |
ತಸ್ಯ ಧ್ವಜಂ ಧನುಶ್ಚೈವ ಕ್ಷುರಾಭ್ಯಾಂ ಸಮಕೃಂತತ॥ 7 ॥
ಸಂಜಯ ಹೀಗೆ ಹೇಳಲ್ಪಟ್ಟ ಕೃಷ್ಣನು ತ್ರಿಗರ್ತಾಧಿಪತಿಯಾದ ಸುಶರ್ಮನು ಅರ್ಜುನನನ್ನು ಆಹ್ವಾನಿಸಿದ ಕಡೆಗೆ ರಥವನ್ನು ತಿರುಗಿಸಿದನು. ಅನಂತರ ಅರ್ಜುನನು ಸುಶರ್ಮನನ್ನು ವೇಗಶಾಲಿಗಳಾದ ಏಳು ಬಾಣಗಳಿಂದ ಹೊಡೆದು, ಅವನ ಧ್ವಜವನ್ನು ಮತ್ತು ಧನುಸ್ಸನ್ನು ಎರಡು ಕ್ಷುರಗಳಿಂದ ಕತ್ತರಿಸಿದನು.
ತತಃ ತ್ರಿಗರ್ತಾಧಿಪತೇಃ ಭ್ರಾತರಂ ಷಡ್ಭಿರಾಯಸೈಃ |
ಸಾಶ್ವಂ ಸಸೂತಂ ತ್ವರಿತಃ ಪ್ರೈಷಯದ್ವೈ ಯಮಕ್ಷಯಮ್ ॥ 8 ॥
ಅನಂತರ ತ್ರಿಗರ್ತಾಧಿಪತಿಯಾದ ಸುಶರ್ಮನ ಸಹೋದರನನ್ನು ಆರು ಕಬ್ಬಿಣದ ಬಾಣಗಳಿಂದ ಹೊಡೆದು,
ಅಶ್ವ-ಸಾರಥಿ-ಧ್ವಜಸಹಿತನಾದ ಅವನನ್ನು ಶೀಘ್ರವಾಗಿ ಯಮಲೋಕಕ್ಕೆ ಕಳುಹಿಸಿದನು.
ನಿರ್ಮುಕ್ತೋರಗಸಂಕಾಶಾಂ ಸುಶರ್ಮಾ ಶಕ್ತಿಮಾಯಸೀಮ್ |
ಚಿಕ್ಷೇಪಾರ್ಜುನಮುದ್ದಿಶ್ಯ ವಾಸುದೇವಂ ಚ ತೋಮರಮ್ ॥ 9 ॥
ಸುಶರ್ಮನು ಪೊರೆಯನ್ನು ಕಳಚಿದ ಸರ್ಪದಂತಿರುವ ಕಬ್ಬಿಣದ ಒಂದು ಶಕ್ತ್ಯಾಯುಧವನ್ನು ಅರ್ಜುನನ ಮೇಲೆ ಎಸೆದು ಕೃಷ್ಣನನ್ನು ಉದ್ದೇಶಿಸಿ ತೋಮರವನ್ನು ಎಸೆದನು.
ಶಕ್ತಿಂ ತ್ರಿಭಿಃ ಶರೈಶ್ಛಿತ್ತ್ವಾ ತೋಮರಂ ತ್ರಿಭಿರರ್ಜುನಃ |
ಸುಶರ್ಮಾಣಂ ಶರವ್ರಾತೈರ್ಮೋಹಯಿತ್ವಾ ನ್ಯವರ್ತತ ॥ 10 ॥
ಅರ್ಜುನನು ಶಕ್ತಿಯನ್ನು ಮೂರು ಬಾಣಗಳಿಂದಲೂ, ತೋಮರವನ್ನೂ ಮೂರು ಬಾಣಗಳಿಂದಲೂ ಕತ್ತರಿಸಿ, ಬಾಣಗಳ ಸಮೂಹದಿಂದ ಸುಶರ್ಮನನ್ನು ಮೋಹಗೊಳಿಸಿ ಹಿಂದಿರುಗಿದನು.
ತಂ ವಾಸವಮಿವಾಯಾಂತಂ ವಾಸವಿಂ ಭೂರಿವರ್ಷಿಣಮ್ |
ರಾಜಂಸ್ತಾವಕಸೈನ್ಯಾನಾಂ ನೋಗ್ರಂ ಕಶ್ಚಿನ್ನ್ಯವಾರಯತ್ ॥ 11 ॥
ಎಲೈ ರಾಜನೇ, ಇಂದ್ರನಂತೆ ಬಾಣದ ಮಳೆಯನ್ನು ಸುರಿಸುತ್ತಾ ಬರುತ್ತಿರುವ ಉಗ್ರನಾದ ಅರ್ಜುನನನ್ನು ನಿನ್ನ ಸೈನ್ಯದಲ್ಲಿ ಯಾವನೂ ತಡೆಯಲಿಲ್ಲ.
ತತೋ ಧನಂಜಯೋ ಬಾಣೈಃ ತ್ವದೀಯಾನ್ ರಥಸತ್ತಮಾನ್ |
ಪ್ರಾಯಾದ್ ವಿನಿಘ್ನನ್ ಕೌರವ್ಯಾನ್ ದಹನ್ ಕಕ್ಷಮಿವಾನಲಃ ॥12॥
ಆಗ ಅರ್ಜುನನು ತನ್ನ ಬಾಣಗಳಿಂದ ನಿನ್ನವರಾದ ರಥಶ್ರೇಷ್ಠರನ್ನು ಕೊಲ್ಲುತ್ತಾ, ಹುಲ್ಲುಗಾವಲನ್ನು ಅಗ್ನಿಯು ಸುಡುವಂತೆ ಕೌರವಸೈನ್ಯವನ್ನು ಸುಡುತ್ತಾ ಮುಂದೆ ಸಾಗಿದನು.
ತಸ್ಯ ವೇಗಮಸಹ್ಯಂ ತು ಕುಂತೀಪುತ್ರಸ್ಯ ಧೀಮತಃ |
ನಾಶಕ್ನುವಂಸ್ತೇ ಸಂಸೋಢುಂ ಸ್ಪರ್ಶಮಗ್ನೇರಿವ ಪ್ರಜಾಃ ॥ 13 ॥
ಮೇಧಾವಿಯಾದ ಕುಂತೀಪುತ್ರನ ಅಗ್ನಿಸ್ಪರ್ಶದಂತಿದ್ದ ವೇಗವನ್ನು ಸಹಿಸಲು ಯಾವ ಯೋಧರಿಗೂ ಸಾಧ್ಯವಾಗಲಿಲ್ಲ.
ಸಂವೇಷ್ಟ್ಯಯನ್ನನೀಕಾನಿ ಶರವರ್ಷೇಣ ಪಾಂಡವಃ |

ಸುಪರ್ಣ ಇವ ನಾಗೇಂದ್ರಮಾಯಾತ್ ಪ್ರಾಗ್ಜ್ಯೋತಿಷಂ ಪ್ರತಿ ॥ 14 ॥
ಅರ್ಜುನನು ತನ್ನ ಬಾಣಗಳ ಮಳೆಯಿಂದ ನಿನ್ನ ಸೈನ್ಯಗಳನ್ನು ಗರುಡನು ಸರ್ಪಗಳನ್ನು ಮುದುರುವಂತೆ ಚಾಪೆಯಂತೆ ಸುತ್ತುತ್ತಾ ಪ್ರಾಗ್ಜ್ಯೋತಿಷನ ಕಡೆಗೆ ಬಂದನು.
ನಾಸೀತ್ ತಥಾಗತೇ ಜಿಷ್ಣೌ ಭಾರತಾನಾಮನಾಮಯಮ್ |
ಸ್ವೇಷಾಂ ಕ್ಷೇಮಕರೇ ಸಂಖ್ಯೇ ದ್ವಿಷತಾಮಘವರ್ಧನೇ ॥ 15 ॥
ತಥೈವ ತವ ಪುತ್ರಸ್ಯ ರಾಜನ್ ದುರ್ದ್ಯೂತದೇವಿನಃ |
ಕೃತೇ ಕ್ಷತ್ರಿಯನಾಶಾಯ ಧನುರಾದಾಯ ಚಾರ್ಜುನಃ ॥ 16 ॥
ಎಲೈ ರಾಜನೇ, ಕೆಟ್ಟ ದ್ಯೂತವನ್ನು ಆಡಿದ ನಿನ್ನ ಪುತ್ರನ ನಿಮಿತ್ತದಿಂದಾಗಿ ಧನುಸ್ಸನ್ನು ತೆಗೆದುಕೊಂಡು ಕ್ಷತ್ರಿಯ ನಾಶವನ್ನು ಮಾಡಲು ತನ್ನವರಿಗೆ ಕ್ಷೇಮವನ್ನೂ, ಶತ್ರುಗಳಿಗೆ ಅಪಚಾರವನ್ನೂ ಮಾಡಲು ಅರ್ಜುನನು ಹಾಗೆ ಮುಂದೆ ಬರುತ್ತಿರಲು (ನಿನ್ನ) ಭಾರತ ಸೈನ್ಯದಲ್ಲಿ ಯಾರಿಗೂ ಕ್ಷೇಮವಿರಲಿಲ್ಲ.
ತತೋ ವಿಕ್ಷೋಭ್ಯಮಾಣಾ ಸಾ ಪುತ್ರಸ್ಯ ತವ ವಾಹಿನೀ |
ವ್ಯದೀರ್ಯತ ತದಾ ರಾಜನ್ ನೌರಿವಾಸಾದ್ಯ ಪರ್ವತಮ್ ॥ 17 ॥
ಆಗ ಅರ್ಜುನನಿಂದ ಕ್ಷೋಭೆಗೆ ಒಳಗಾದ ನಿನ್ನ ಪುತ್ರನ ಸೈನ್ಯವು ನೌಕೆಯು ಪರ್ವತಕ್ಕೆ ಹೊಡೆದು ಭಗ್ನವಾದಂತೆ ಭಗ್ನವಾಯಿತು.
ತತೋ ರಥಸಹಸ್ರಾಣಿ ನ್ಯವರ್ತಂತ ಧನುಷ್ಮತಾಮ್ |
ಮರಣಾಯ ಮತಿಂ ಕೃತ್ವಾ ಆತ್ಮನೋ ವಾಽರ್ಜುನಸ್ಯ ವಾ ॥ 18 ॥
ಆಗ ಧನುರ್ಧಾರಿಗಳಾದ ಯೋಧರ ಹತ್ತು ಸಹಸ್ರ ರಥಗಳು ತಮ್ಮ ಅಥವಾ ಅರ್ಜುನನ ಮರಣವನ್ನು ನಿಶ್ಚಯಿಸಿ ಹಿಂದೆ ಬಂದವು.
ವ್ಯಪೇತಹೃದಯತ್ರಾಸಮ್ ಆಪದ್ಧರ್ಮಾರ್ಥಕೋವಿದಃ |
ಅಬ್ರ್ಹ್ವತ್ ಪಾರ್ಥೋ ಗುರುಂ ಭಾರಂ ಸರ್ವಭಾರಸಹೋ ಯುಧಿ ॥
ಆಪದ್ಧರ್ಮಾರ್ಥ ಕೋವಿದನಾದ, ಯುದ್ಧದಲ್ಲಿ ಎಲ್ಲ ಭಾರವನ್ನು ಸಹಿಸುವ ಅರ್ಜುನನು ಅಂತಹ ಗುರುತರವಾದ ಭಾರವನ್ನು ನಿರ್ಭಯನಾಗಿ ಹೊತ್ತನು.
ಯಥಾ ನಲವನಂ ನಾಗಃ ಪ್ರಭಿನ್ನಃ ಷಷ್ಟಿಹಾಯನಃ |
ಮೃದ್ನೀಯಾತ್ ತದ್ವದಾಯತ್ತಃ ಪಾರ್ಥೋಽಮೃದ್ನಾಚ್ಚಮೂಂ ತವ ॥20॥
ಅರವತ್ತು ವರ್ಷ ಪ್ರಾಯದ ಮದಿಸಿದ ಆನೆಯು ಕಮಲವನವನ್ನು ತುಳಿದು ನಾಶ ಮಾಡುವಂತೆ ಅರ್ಜುನನು ಎಚ್ಚರಿಕೆಯಿಂದ (ಪ್ರಯತ್ನಪೂರ್ವಕವಾಗಿ) ನಿನ್ನ ಸೈನ್ಯವನ್ನು ಮರ್ದಿಸಿದನು.
ತಸ್ಮಿನ್ ಪ್ರಮಥಿತೇ ಸೈನ್ಯೇ ಭಗದತ್ತೋ ನರಾಧಿಪಃ |
ತೇನ ನಾಗೇನ ಸಹಸಾ ಧನಂಜಯಮುಪಾದ್ರವತ್ ॥ 21 ॥
ನಿನ್ನ ಸೈನ್ಯವು ಹಾಗೆ ಮರ್ದಿಸಲ್ಪಡುತ್ತಿರಲು ರಾಜನಾದ ಭಗದತ್ತನು ಆ ಸುಪ್ರತೀಕ ಗಜದ ಜೊತೆಯಲ್ಲಿ ತಕ್ಷಣ ಅರ್ಜುನನ ಕಡೆಗೆ ಧಾವಿಸಿದನು.
ತಂ ರಥೇನ ನರವ್ಯಾಘ್ರಃ ಪ್ರತ್ಯಗೃಹ್ಣಾದಥಾರ್ಜುನಃ |
ಸ ಸನ್ನಿಪಾತಸ್ತುಮುಲೋ ಬಭೂವ ರಥನಾಗಯೋಃ ॥ 22 ॥
ನರವ್ಯಾಘ್ರನಾದ ಅರ್ಜುನನು ಅವನನ್ನು ತನ್ನ ರಥದಲ್ಲಿ ನಿಂತು ಸ್ವೀಕರಿಸಿದನು. ರಥ ಮತ್ತು ಗಜಗಳ ನಡುವೆ ನಡೆದ ಆ ಸಂಘರ್ಷವು ಬಹಳ ತೀವ್ರವಾಗಿದ್ದಿತು.
ಕಲ್ಪಿತಾಭ್ಯಾಂ ಯಥಾಶಾಸ್ತ್ರಂ ರಥೇನ ಚ ಗಜೇನ ಚ |
ಸಂಗ್ರಾಮೇ ಚೇರತುರ್ವೀರೌ ಭಗದತ್ತಧನಂಜಯೌ ॥ 23 ॥
ಶಾಸ್ತೋಕ್ತ ರೀತಿಯಲ್ಲಿ ಸಿದ್ಧಪಡಿಸಿದ ಗಜ ಮತ್ತು ರಥಗಳಿಂದ ವೀರರಾದ ಭಗದತ್ತ ಮತ್ತು ಧನಂಜಯರು ರಣರಂಗದಲ್ಲಿ ಸಂಚರಿಸಿದರು.
ತತೋ ಜೀಮೂತಸಂಕಾಶಾನ್ನಾಗಾದಿಂದ್ರ ಇವಾಭಿಭೂಃ |
ಅಭ್ಯವರ್ಷಚ್ಛರೌಘೇಣ ಭಗದತ್ತೋ ಧನಂಜಯಮ್ ॥ 24 ॥
ಆಗ ಶತ್ರುಪರಿಭಾವಕನಾದ ಇಂದ್ರನಂತೆ ಭಗದತ್ತನು ಮೋಡದ ರಾಶಿಯಂತಿದ್ದ ಆ ಆನೆಯ ಮೇಲಿನಿಂದ ಧನಂಜಯನ ಮೇಲೆ ಬಾಣಗಳ ಸಮೂಹದ ಮಳೆಯನ್ನು ಕರೆದನು.
ತತಸ್ತು ಶರವರ್ಷಂ ತಂ ಶರವರ್ಷೇಣ ವಾಸವಿಃ |
ಅಪ್ರಾಪ್ತಮೇವ ಚಿಚ್ಛೇದ ಭಗದತ್ತಸ್ಯ ವೀರ್ಯವಾನ್ ॥ 25 ॥
ಆಗ ಪರಾಕ್ರಮಶಾಲಿಯಾದ ಅರ್ಜುನನು ಭಗದತ್ತನ ಶರವರ್ಷವನ್ನು ತನ್ನ ಬಳಿಗೆ ಬರುವುದಕ್ಕಿಂತ ಮುಂಚೆಯೇ ತನ್ನ ಶರವರ್ಷದಿಂದ ಕತ್ತರಿಸಿದನು.
ತತಃ ಪ್ರಾಗ್ಜ್ಯೋತಿಷೋ ರಾಜಾ ಶರವರ್ಷೇ ನಿವಾರಿತೇ |
ಸಂರಕ್ತನಯನೋ ರೋಷಾತ್ ಪಾರ್ಥಂ ಪುನರವಾಕಿರತ್ |
ಶರೈರ್ಜಘ್ನೇ ಮಹಾಬಾಹುಂ ಪಾರ್ಥಂ ಕೃಷ್ಣಂ ಚ ಮಾರಿಷ ॥ 26 ॥
ಎಲೈ ಪೂಜ್ಯನೇ, ಪ್ರಾಗ್ಜ್ಯೋತಿಷರಾಜನು ತನ್ನ ಶರವರ್ಷವು ನಿವಾರಿಸಲ್ಪಡುತ್ತಿರಲು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಪುನಃ ತನ್ನ ಬಾಣಗಳನ್ನು ಸುರಿಸಿ ಮಹಾಬಾಹುವಾದ ಅರ್ಜುನನನ್ನು ಮತ್ತು ಕೃಷ್ಣನನ್ನು ಹೊಡೆದನು.
ಸ ತಥಾ ಶರವರ್ಷೇಣ ಪಾರ್ಥಂ ಸಮಭಿಹತ್ಯ ವೈ |

ಚೋದಯಾಮಾಸ ತಂ ನಾಗಂ ವಧಾಯಾಚ್ಯುತಪಾರ್ಥಯೋಃ ॥27॥
ಅವನು ಆ ರೀತಿಯಲ್ಲಿ ಶರವರ್ಷದಿಂದ ಅರ್ಜುನನನ್ನು ಹೊಡೆದು ಕೃಷ್ಣಾರ್ಜುನರ ವಧೆಗಾಗಿ ಆ ಗಜವನ್ನು ಪ್ರಚೋದಿಸಿದನು.
ತಮಾಪತಂತಂ ದ್ವಿರದಂ ದೃಷ್ಟ್ವಾ ಕ್ರುದ್ಧಮಿವಾಂತಕಮ್ |
ಚಕ್ರೇಽಪಸವ್ಯಂ ತ್ವರಿತಂ ಸ್ಯಂದನೇನ ಜನಾರ್ದನಃ ॥ 28 ॥
ಕೋಪಗೊಂಡ ಯಮನಂತೆ ತಮ್ಮ ಕಡೆಗೆ ಬರುತ್ತಿದ್ದ ಆ ಗಜವನ್ನು ನೋಡಿ ಜನಾರ್ದನನು ತನ್ನ ರಥವನ್ನು ತ್ವರಿತವಾಗಿ ಎಡಗಡೆಗೆ ತಿರುಗಿಸಿದನು.
ಸಂಪ್ರಾಪ್ತಮಪಿ ನೇಯೇಷ ಪರಾವೃತ್ತಂ ಮಹಾದ್ವಿಪಮ್ |
ಸಾರೋಹಂ ಮೃತ್ಯುಸಾತ್ಕರ್ತುಂ ಸ್ಮರನ್ ಧರ್ಮಂ ಧನಂಜಯಃ ॥29॥
ಹಿಂದಿರುಗಿ ತನ್ನ ಕಡೆಗೆ ಬರುತ್ತಿದ್ದರೂ ಅರ್ಜುನನು ಧರ್ಮವನ್ನು ಸ್ಮರಿಸಿ ಗಜಾರೋಹಿ ಸಹಿತವಾದ ಆ ಗಜವನ್ನು ವಧೆ ಮಾಡಲು ಬಯಸಲಿಲ್ಲ.
ಸ ತು ನಾಗೋ ದ್ವಿಪರಥಾನ್ ಹಯಾಂಶ್ಚಾರುಜ್ಯ ಮಾರಿಷ |
ಪ್ರಾಹಿಣೋನ್ಮ ೃತ್ಯುಲೋಕಾಯ ತತಶ್ಚುಕ್ರೋಧ ಫಲ್ಗುನಃ ॥ 30 ॥
ಎಲೈ ಪೂಜ್ಯನೇ, ಆ ಗಜವು ಗಜಗಳನ್ನೂ, ರಥಗಳನ್ನೂ ಮತ್ತು ಅಶ್ವಗಳನ್ನೂ ಮರ್ದಿಸಿ ಮೃತ್ಯುಲೋಕಕ್ಕೆ ಕಳುಹಿಸಿತು. ಆಗ ಅರ್ಜುನನು ಕೋಪಗೊಂಡನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಅರ್ಜುನನಿಂದ ಭಗದತ್ತನ ಮತ್ತು ಸುಪ್ರತೀಕದ ವಧೆ.
ಧೃತರಾಷ್ಟ್ರಃ
ತಥಾ ಕ್ರುದ್ಧಃ ಕಿಮಕರೋದ್ ಭಗದತ್ತಸ್ಯ ಪಾಂಡವಃ |
ಪ್ರಾಗ್ಜ್ಯೋತಿಷೋ ವಾ ಪಾರ್ಥಸ್ಯ ತನ್ಮೇ ಶಂಸ ಯಥಾತಥಮ್ ॥ 1 ॥
ಧೃತರಾಷ್ಟ್ರ ಹಾಗೆ ಕೋಪಗೊಂಡ ಅರ್ಜುನನು ಭಗದತ್ತನಿಗೆ ಏನು ಮಾಡಿದನು? ಭಗದತ್ತನಾದರೂ ಅರ್ಜುನನಿಗೆ ಏನು ಮಾಡಿದನು? ಎಂಬುದನ್ನು ನನಗೆ ಸರಿಯಾಗಿ ಹೇಳು.
ಸಂಜಯಃ
ಪ್ರಾಗ್ಜ್ಯೋತಿಷೇಣ ಸಂಸಕ್ತಾವುಭೌ ದಾಶಾರ್ಹಪಾಂಡವೌ |
ಮೃತ್ಯೋರಿವಾಂತಿಕಂ ಪ್ರಾಪ್ತೌ ಸರ್ವಭೂತಾನಿ ಮೇನಿರೇ ॥ 2 ॥
ಸಂಜಯ ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನಿಂದ ಕೃಷ್ಣಾರ್ಜುನರಿಬ್ಬರೂ ಸಂಸಕ್ತರಾದಾಗ ಕೃಷ್ಣಾರ್ಜುನರು ಮೃತ್ಯುವಿನ ಸಮೀಪಕ್ಕೆ ಪ್ರಾಪ್ತರಾದರು ಎಂದು ಎಲ್ಲ ಭೂತಗಳೂ ತಿಳಿದವು.
ಮಹತಾ ಶರವರ್ಷೇಣ ವವರ್ಷ ಬಲವಾನ್ ರಣೇ |
ಭಗದತ್ತೋ ದ್ವಿಪಸ್ಕಂಧಾತ್ ಕೃಷ್ಣಯೋಃ ಸ್ಯಂದನಸ್ಥಯೋಃ ॥ 3 ॥
ಬಲಿಷ್ಠನಾದ ಭಗದತ್ತನು ಆನೆಯ ಭುಜದಲ್ಲಿ ಕುಳಿತು, ರಥದಲ್ಲಿದ್ದ ಕೃಷ್ಣಾರ್ಜುನರ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಸುರಿಸಿದನು.
ಅಥ ಕಾರ್ಷ್ಣಾಯಸೈರ್ಬಾಣೈಃ ಪೂರ್ಣಕಾರ್ಮುಕನಿಃಸೃತೈಃ |
ಅವಿದ್ಧ್ಯದ್ ದೇವಕೀಪುತ್ರಂ ಹೇಮಪುಂಖೈಃ ಶಿಲಾಶಿತೈಃ ॥ 4 ॥
ಅನಂತರ ಬಿಲ್ಲನ್ನು ಪೂರ್ಣವಾಗಿ ಎಳೆದು ಪ್ರಯೋಗಿಸಿದ, ಹೇಮಪುಂಖವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಕಬ್ಬಿಣದ ಬಾಣಗಳಿಂದ ದೇವಕೀಪುತ್ರನನ್ನು ಹೊಡೆದನು.
ಅಗ್ನಿಸ್ಪರ್ಶಸಮಾಸ್ತೀಕ್ಷ್ಣಾ ಭಗದತ್ತೇನ ಚೋದಿತಾಃ |
ನಿರ್ಭಿದ್ಯ ದೇವಕೀಪುತ್ರಂ ತೇ ಸುಪುಂಖಾ ಯಯುಃ ಕ್ಷಿತಿಮ್ ॥ 5 ॥
ಭಗದತ್ತನಿಂದ ಪ್ರೇರಿತವಾದ, ಅಗ್ನಿಸ್ಪರ್ಶಕ್ಕೆ ಸಮಾನವಾದ ತೀಕ್ಷ್ಣತೆಯುಳ್ಳ, ಭವ್ಯ ಪುಂಖವನ್ನು ಧರಿಸಿದ ಬಾಣಗಳು ದೇವಕೀಪುತ್ರನನ್ನು ಭೇದಿಸಿ ಭೂಮಿಯನ್ನು ಹೊಕ್ಕವು.
ತಸ್ಯ ಪಾರ್ಥೋ ಧನುಶ್ಛಿತ್ತ್ವಾ ಪರಿವಾಪಂ ನಿಹತ್ಯ ಚ |
ಲಾಲಯನ್ನಿವ ರಾಜಾನಂ ಭಗದತ್ತಮಯೋಧಯತ್ ॥ 6 ॥
ಅರ್ಜುನನು ಅವನ ಧನುಸ್ಸನ್ನು ಮತ್ತು ಬತ್ತಳಿಕೆಯನ್ನು ಕತ್ತರಿಸಿ, ಅವನನ್ನು ಲಾಲಿಸುವವನಂತೆ ಭಗದತ್ತನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸೋಽರ್ಕರಶ್ಮಿನಿಭಾಂಸ್ತೀಕ್ಷ್ಣಾಂಸ್ತೋಮರಾಣಿ ಚತುರ್ದಶ |
ಪ್ರೇಷಿತಾನಿ ಚ ಬೀಭತ್ಸುಃ ತ್ರಿಧೈಕೈಕಮಶಾತಯತ್ ॥ 7 ॥
ಅರ್ಜುನನು ತನ್ನ ಮೇಲೆ ಪ್ರಯೋಗಿಸಿದ ಸೂರ್ಯನ ರಶ್ಮಿಯ ಕಾಂತಿಯನ್ನು ಹೊಂದಿದ ತೀಕ್ಷ್ಣವಾದ ಹದಿನಾಲ್ಕು ತೋಮರಗಳನ್ನು

ಒಂದೊಂದನ್ನೂ ಮೂರು ಭಾಗವಾಗಿ ಕತ್ತರಿಸಿದನು.
ತತೋ ನಾಗಸ್ಯ ತದ್ ವರ್ಮ ವ್ಯಧಮತ್ ಪಾಕಶಾಸನಿಃ|
ಶರಜಾಲೇನ ಮಹತಾ ತದ್ ವ್ಯಶೀರ್ಯತ ಭೂತಲೇ ॥ 8 ॥
ಅನಂತರ ಅರ್ಜುನನು ಬಾಣಗಳ ದೊಡ್ಡ ಸಮೂಹದಿಂದ ಸುಪ್ರತೀಕ ಗಜದ ಕವಚವನ್ನು ಹಾರಿಸಿದನು. ಕವಚವು ಭೂತಳದಲ್ಲಿ ಪುಡಿಪುಡಿಯಾಗಿ ಬಿದ್ದಿತು.
ವಿಶೀರ್ಣವರ್ಮಾ ಸ ಗಜಃ ತದಾ ಸುಭೃಶತಾಡಿತಾಃ |
ಶರಜಾಲೇನ ಸ ಬಭೌ ವ್ಯಭ್ರಃ ಪರ್ವತರಾಡಿವ ॥ 9 ॥
ಆಗ ಶರಸಮೂಹಗಳಿಂದ ಚೆನ್ನಾಗಿ ಹೊಡೆಯಲ್ಪಟ್ಟ ಕವಚ ರಹಿತವಾದ ಆ ಗಜವು ಮೋಡವು ಚದುರಿದ ಶ್ರೇಷ್ಠ ಪರ್ವತದಂತೆ ಶೋಭಿಸಿತು.
ತತಃ ಪ್ರಾಗ್ಜ್ಯೋತಿಷಃ ಶಕ್ತಿಂ ಹೇಮದಂಡಾಮಯಸ್ಮಯೀಮ್ |
ವ್ಯಸೃಜದ್ ವಾಸುದೇವಾಯ ತ್ರಿಧಾ ತಾಮರ್ಜುನೋಽಚ್ಛಿನತ್ ॥ 10 ॥
ಅನಂತರ ಪ್ರಾಗ್ಜ್ಯೋತಿಷನು ಹೇಮದಂಡವನ್ನು ಹೊಂದಿದ್ದ, ಅಯಸ್ಮಯವಾದ (ಕಬ್ಬಿಣದ) ಶಕಿತಯನ್ನು ಕೃಷ್ಣನ ಮೇಲೆ ಎಸೆದನು. ಅರ್ಜುನನು ಅದನ್ನು ಮೂರು ಭಾಗವಾಗಿ ಕತ್ತರಿಸಿದನು.
ತತಶ್ಛತ್ರಂ ಧ್ವಜಂ ಚೈವ ಚ್ಛಿತ್ತ್ವಾ ರಾಜ್ಞೋಽರ್ಜುನಃ ಶರೈಃ |
ವಿವ್ಯಾಧ ದಶಭಿಸ್ತೂರ್ಣಮುತ್ಸ್ಮಯನ್ ಪರ್ವತಾಧಿಪಮ್ ॥ 11 ॥
ಅರ್ಜುನನು ಪರ್ವತರಾಜನಾದ ಭಗದತ್ತನ ಛತ್ರ-ಧ್ವಜಗಳನ್ನು ಬಾಣದಿಂದ ಕತ್ತರಿಸಿ, ನಗುತ್ತಾ ಶೀಘ್ರವಾಗಿ ಅವನ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿದನು.
ಸೋಽತಿವಿದ್ಧೋಽರ್ಜುನಶರೈಃ ಸುಪುಂಖೈಃ ಕಂಕಪತ್ರಿಭಿಃ |
ಭಗದತ್ತಸ್ತು ಸಂಕ್ರುದ್ಧಃ ಪಾಂಡವಸ್ಯ ನರಾಧಿಪಃ ॥ 12 ॥
ವ್ಯಸೃಜತ್ ತೋಮರಂ ಮೂರ್ಧ್ನಿ ಶ್ವೇತಾಶ್ವಸ್ಯೋನ್ನನಾದ ಚ |
ತೇನಾರ್ಜುನಸ್ಯ ಸಮರೇ ಕಿರೀಟಂ ಪರಿವರ್ತಿತಮ್ ॥ 13 ॥
ಕಂಕಪತ್ರವನ್ನೂ, ಸುಪುಂಖವನ್ನೂ ಹೊಂದಿದ್ದ ಅರ್ಜುನನ ಆ ಬಾಣಗಳಿಂದ ಬಹಳವಾಗಿ ಪೀಡಿಸಲ್ಪಟ್ಟ ರಾಜನಾದ ಭಗದತ್ತನು ಅರ್ಜುನನ ತಲೆಯ ಮೇಲೆ ತೋಮರವನ್ನು ಎಸೆದು ಸಿಂಹನಾದವನ್ನು ಮಾಡಿದನು. ಅದರಿಂದ ಅರ್ಜುನನ ಶಿರಸ್ಸಿನ ಮೇಲಿದ್ದ ಕಿರೀಟವು ತಿರುಗಿತು.
ಪರಿವೃತ್ತಂ ಕಿರೀಟಂ ತಂ ವ್ಯಥಯನ್ನೈವ ಫಲ್ಗುನಮ್ |
ಸುದೃಷ್ಟಃ ಕ್ರಿಯತಾಂ ಲೋಕ ಇತಿ ರಾಜಾನಮಬ್ರವೀತ್ ॥ 14 ॥
ಕಿರೀಟವು ತಿರುಗಿದಾಗ ಅದು ಅರ್ಜುನನಿಗೆ ಯಾವ ವ್ಯಥೆಯನ್ನೂ ಉಂಟು ಮಾಡಲಿಲ್ಲ. ಜನರು ಚೆನ್ನಾಗಿ ನೋಡಲಿ ಎಂದು ಅವನು ಭಗದತ್ತನಿಗೆ ಹೇಳಿದನು.
ಏವಮುಕ್ತಸ್ತು ಸಂಕ್ರುದ್ಧಃ ಶರವರ್ಷೇಣ ಪಾರ್ಥಿವಃ |
ಅಭ್ಯವರ್ಷತ್ ಸ ಗೋವಿಂದಂ ಧನುರಾದಾಯ ಭಾಸ್ವರಮ್ ॥ 15 ॥
ಹೀಗೆ ಹೇಳಲ್ಪಟ್ಟ ಭಗದತ್ತ ರಾಜನು ಕೋಪಗೊಂಡು ಪ್ರಕಾಶಮಾನವಾದ ಧನುಸ್ಸನ್ನು ತೆಗೆದುಕೊಂಡು ಗೋವಿಂದನ ಮೇಲೆ ಶರವರ್ಷವನ್ನು ಸುರಿಸಿದನು.
ತಸ್ಯ ಪಾರ್ಥೋ ಧನುಶ್ಛಿತ್ತ್ವಾ ತೂಣೀರಾನ್ ಸನ್ನಿಕೃತ್ಯ ಚ |
ತ್ವರಮಾಣೋ ದ್ವಿಸಪ್ತತ್ಯಾ ಸರ್ವಮರ್ಮಸ್ವತಾಡಯತ್ ॥ 16 ॥
ಅರ್ಜುನನು ಅವನ ಧನುಸ್ಸನ್ನು ಮತ್ತು ಬತ್ತಳಿಕೆಗಳನ್ನು ಕತ್ತರಿಸಿ, ಶೀಘ್ರವಾಗಿ ಎಪ್ಪತ್ತೆರಡು ಬಾಣಗಳಿಂದ ಅವನನ್ನು ಎಲ್ಲ ಮರ್ಮಗಳಲ್ಲಿಯೂ ಹೊಡೆದನು.
ವಿದ್ಧಸ್ತತೋಽತಿವ್ಯಥಿತೋ ವೈಷ್ಣವಾಸ್ತ್ರಮುದೀರಯನ್ |
ಅಭಿಮಂತ್ರ್ಯಾಂಕುಶಂ ಕ್ರುದ್ಧೋ ವ್ಯಸೃಜತ್ ಪಾಂಡವೋರಸಿ ॥ 17 ॥
ಹೀಗೆ ಹೊಡೆಯಲ್ಪಟ್ಟ ಭಗದತ್ತನು ಬಹಳ ವ್ಯಥೆಯಿಂದ ಕೂಡಿ ವೈಷ್ಣವಾಸ್ತ್ರವನ್ನು ಪ್ರಯೋಗಿಸಲು ಬಯಸಿ, ಕೋಪಗೊಂಡು ತನ್ನ ಅಂಕುಶದಲ್ಲಿ ಅಭಿಮಂತ್ರಿಸಿ ಅದನ್ನು ಅರ್ಜುನನ ಎದೆಯಲ್ಲಿ ಪ್ರಯೋಗಿಸಿದನು.
ವಿಸೃಷ್ಟಂ ಭಗದತ್ತೇನ ತದಸ್ತ್ರಂ ಸರ್ವಘಾತಕಮ್ |
ಉರಸಾ ಪ್ರತಿಜಗ್ರಾಹ ಪಾರ್ಥಂ ಸಂಛಾದ್ಯ ಕೇಶವಃ ॥ 18 ॥
ಭಗದತ್ತನು ಪ್ರಯೋಗಿಸಿದ ಸರ್ವಘಾತಕವಾದ ಆ ಅಸ್ತ್ರವನ್ನು ಕೇಶವನು ಪಾರ್ಥನನ್ನು ಮರೆಮಾಡಿ ತನ್ನ ಎದೆಯ ಮೇಲೆ ಸ್ವೀಕರಿಸಿದನು.
ವೈಜಯಂತ್ಯಭವನ್ಮಾಲಾ ತದಸ್ತ್ರಂ ಕೇಶವೋರಸಿ |
ಪದ್ಮಕೋಶವಿಚಿತ್ರಾ ಚ ಸರ್ವರ್ತುಕುಸುಮಾಕುಲಾ ॥ 19 ॥
ಆ ಅಸ್ತ್ರವು ಕೇಶವನ ವಕ್ಷಸ್ಸ್ಥಲದಲ್ಲಿ ಪದ್ಮಕೋಶಗಳಿಂದ ರಚಿತವಾಗಿ ವಿಚಿತ್ರವಾದ, ಸರ್ವ ಕುಸುಮದಿಂದ ನಿಬಿಡವಾದ ವೈಜಯಂತಿ ಮಾಲೆಯಾಯಿತು.
ತಯಾ ಪದ್ಮಾಭಿಶೋಭಿನ್ಯಾ ವಾಸಕಂಪಿತಲೋಲಯಾ |
ಶೋಭತೇಽಭ್ಯಧಿಕಂ ಶೌರಿರತಸೀಪುಷ್ಪಸನ್ನಿಭಃ ॥ 20 ॥

ಪದ್ಮಗಳಿಂದ ಬಹಳವಾಗಿ ಶೋಭಿಸುವ, ಸುವಾಸನೆಯಿಂದ ಕಂಪಿಸುತ್ತಾ ಒಲಾಡುವ ಆ ಮಾಲೆಯಿಂದ ಅತಶಿಪುಷ್ಪದ ಕಾಂತಿಯುಳ್ಳ ಕೃಷ್ಣನು ಬಹಳ ಹೆಚ್ಚಾಗಿ ಶೋಭಿಸಿದನು.
ಕೇಶವಃ ಕೇಶಿಮಥನಃ ಶಾರ್ಙ್ಗಧನ್ವಾಽರಿಮರ್ದನಃ |
ಸಂಧ್ಯಾಭ್ರೈರಿವ ಸಂಛನ್ನಃ ಪ್ರಾವೃಟ್ಕಾಲೇ ನಗೋತ್ತಮಃ ॥ 21 ॥
ಕೇಶಿಮರ್ದನನೂ, ಶಾರ್ಙ್ಗಧನುರ್ಧಾರಿಯೂ, ಶತ್ರುಮರ್ದನನೂ ಆದ ಕೇಶವನು ಮಳೆಗಾಲದಲ್ಲಿ ಸಂಧ್ಯಾಕಾಲದ ಮೋಡಗಳಿಂದ ಆವರಿಸಲ್ಪಟ್ಟ ಶ್ರೇಷ್ಠ ಪರ್ವತದಂತೆ ತೋರಿದನು.
ತಮರ್ಜುನಃ ಕ್ಲಾಂತಮನಾಃ ಕೇಶವಂ ಪ್ರತ್ಯಭಾಷತ |
ಅಯುದ್ಧ್ಯಮಾನಸ್ತುರಗಾನ್ ಸಂಯಂತಾಸ್ಮಿ ಜನಾರ್ದನ |
ಇತ್ಯುಕ್ತಃ ಪುಂಡರೀಕಾಕ್ಷ ಪ್ರತಿಜ್ಞಾಂ ತ್ವಂ ನ ರಕ್ಷಸಿ ॥ 22 ॥
ಆಗ ಅರ್ಜುನನು ಮನಸ್ಸಿನಲ್ಲಿ ಬೇಸರಗೊಂಡು ಕೇಶವನನ್ನು ಕುರಿತು ಜನಾರ್ದನನೇ, ಯುದ್ಧವನ್ನು ಮಾಡದೆ ಅಶ್ವಗಳನ್ನು ನಿಯಂತ್ರಿಸುತ್ತೇನೆ ಎಂದು ಹೇಳಿದ್ದೀಯೆ. ಪುಂಡರೀಕಾಕ್ಷನೇ, ನೀನು ನಿನ್ನ ಪ್ರತಿಜ್ಞೆಯನ್ನು ಪಾಲಿಸುತ್ತಿಲ್ಲ ಎಂದು ಹೇಳಿದನು.
ಯದ್ಯಹಂ ವ್ಯಸನೀ ಹಿ ಸ್ಯಾಮಶಕ್ತಃ ಪ್ರತಿವಾರಣೇ |
ತತಸ್ತ್ವಯೈವ ಕಾರ್ಯಂ ಸ್ಯಾನ್ನ ತು ಕಾರ್ಯಂ ಮಯಿ ಸ್ಥಿತೇ ॥ 23 ॥
ನಾನು ಒಂದು ಪಕ್ಷ ಸಂಕಟಕ್ಕೆ ಸಿಲುಕಿದರೆ ಅಥವಾ ಆ ಅಸ್ತ್ರವನ್ನು ನಿವಾರಿಸಿಕೊಳ್ಳಲು ಅಶಕ್ತನಾದರೆ ನೀನು ಹಾಗೆ ಮಾಡಬೇಕಾಗಿದ್ದಿತು. ನಾನು ಬದುಕಿರುವಾಗ ನೀನು ಹಾಗೆ ಮಾಡಬಾರದಾಗಿದ್ದಿತು.
ಸಬಾಣಃ ಸಧನುಶ್ಚಾಹಂ ಸಸುರಾಸುರಮಾನವಾನ್ |
ಶಕ್ತೋ ಲೋಕಾನಿಮಾನ್ ಜೇತುಂ ತವ್ಯೈವ ವಿದಿತಂ ಹಿ ತತ್ ॥ 24 ॥
ಧನುರ್ಬಾಣಗಳಿಂದ ಸಹಿತನಾದ ನಾನು ಸುರಾಸುರ ಮನುಷ್ಯರಿಂದ ಸಹಿತವಾದ ಈ ಲೋಕವನ್ನೆಲ್ಲಾ ಗೆಲ್ಲಲು ಸಮರ್ಥನಾಗಿದ್ದೇನೆ. ಅದು ನಿನಗೇ ತಿಳಿದಿದೆ (ಎಂದು ಹೇಳಿದನು).
ಸಂಜಯಃ
ತತೋಽರ್ಜುನಂ ವಾಸುದೇವಃ ಪ್ರತ್ಯುವಾಚಾರ್ಥವದ್ ವಚಃ |
ಶೃಣು ಗುಹ್ಯಮಿದಂ ಪಾರ್ಥ ಯಥಾವೃತ್ತಂ ಪುರಾನಘ ॥ 25 ॥
ಸಂಜಯ ಆಗ ಕೃಷ್ಣನು ಅರ್ಜುನನನ್ನು ಕುರಿತು ಅರ್ಥಪೂರ್ಣವಾದ ಈ ಮಾತುಗಳನ್ನು ಆಡಿದನು. ಎಲೈ ಅರ್ಜುನನೇ, ಅನಘನೇ, ಹಿಂದೆ ನಡೆದ ರಹಸ್ಯವಾದ ಈ ವಿಷಯವನ್ನು ಕೇಳು.
ಯೇಯಂ ಲೋಕಧರಾ ದೇವೀ ಸರ್ವಭೂತಧರಾ ಧರಾ |
ಸಕಾಮಾ ಲೋಕಕರ್ತಾರಂ ನಾರಾಯಣಮುಪಸ್ಥಿತಾ ॥ 26 ॥
ಲೋಕಧಾರಕಳಾದ, ಸರ್ವಪ್ರಾಣಿಗಳನ್ನೂ ಧರಿಸುವ ಈ ಭೂದೇವಿಯು ಒಂದು ಆಸೆಯಿಂದ ಕೂಡಿದವಳಾಗಿ ಲೋಕಪತಿಯಾದ ನಾರಾಯಣನ ಬಳಿಗೆ ಹೋದಳು.
ಸ ಸಂಗಮ್ಯ ತಯಾ ಸಾರ್ಧಂ ಪ್ರೀತಸ್ತಸ್ಯೈ ವರಂ ದದೌ |
ಸಾ ವವ್ರೇ ವಿಷ್ಣುಸದೃಶಂ ಪುತ್ರಮಸ್ತ್ರಂ ಚ ವೈಷ್ಣವಮ್ ॥ 27 ॥
ನಾರಾಯಣನು ಅವಳ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಸಂತುಷ್ಟನಾಗಿ ಅವನಿಗೆ ವರವನ್ನು ನೀಡಿದನು. ಅವಳು ವಿಷ್ಣುಸದೃಶನಾದ ಪುತ್ರನನ್ನೂ ಮತ್ತು ವೈಷ್ಣವಾಸ್ತ್ರವನ್ನೂ ಬೇಡಿದಳು.
ಬಭೂವ ಚ ಸುತಸ್ತಸ್ಯಾಂ ನರಕೋ ನಾಮ ವಿಶ್ರುತಃ |
ಅಸ್ತ್ರಂ ಚ ವೈಷ್ಣವಂ ತಸ್ಮೈ ದದೌ ನಾರಾಯಣಃ ಸ್ವಯಮ್ ॥ 28 ॥
ಅವಳಿಗೆ ನರಕನೆಂಬ ಪ್ರಖ್ಯಾತನಾದ ಪುತ್ರನು ಜನಿಸಿದನು. ನಾರಾಯಣನು ಅವಳಿಗೆ ಸ್ವತಃ ವೈಷ್ಣವಾಸ್ತ್ರವನ್ನು ನೀಡಿದನು.
ತದೇತನ್ನರಕಸ್ಯಾಸೀದಸ್ತ್ರಂ ಸರ್ವಾಹಿತಾಂತಕಮ್ |
ಅಸ್ಮಾತ್ ಪ್ರಾಗ್ಜ್ಯೋತಿಷಂ ಪ್ರಾಪ್ತಂ ಸರ್ವಶಸ್ತ್ರವಿಘಾತನಮ್ ॥ 29 ॥
ಸರ್ವಶತ್ರುಗಳನ್ನೂ ಸಂಹರಿಸುವ ಈ ಅಸ್ತ್ರವು ನರಕನ ಬಳಿ ಇದ್ದಿತು. ಸರ್ವಶಸ್ತ್ರ ವಿನಾಶಕವಾದ ಈ ಅಸ್ತ್ರವು ನರಕನಿಂದ ಪ್ರಾಗ್ಜ್ಯೋತಿಷನಿಗೆ ಬಂದಿತು.
ನಾಸ್ಯಾವಧ್ಯೋಽಸ್ತಿ ಲೋಕೇಽಸ್ಮಿನ್ ಮದನ್ಯಃ ಕಶ್ಚಿದರ್ಜುನ |
ತಸ್ಮಾನ್ಮಯಾ ಕೃತಂ ಹ್ಯೇತನ್ಮಾ ತೇಽಭೂದ್ ಬುದ್ಧಿರನ್ಯಥಾ ॥ 30 ॥
ಎಲೈ ಅರ್ಜುನನೇ, ಈ ಅಸ್ತ್ರಕ್ಕೆ ನನ್ನನ್ನು ಬಿಟ್ಟು ಈ ಲೋಕದಲ್ಲಿ ಬೇರೆ ಯಾರೂ ಅವಧ್ಯರಲ್ಲ. ಆದ್ದರಿಂದ ನಾನು ಈ ಕಾರ್ಯವನ್ನು ಮಾಡಿದೆನು. ನೀನು ತಪ್ಪಾಗಿ ತಿಳಿಯುವುದು ಬೇಡ (ಎಂದು ಹೇಳಿದನು).
ಅನುನೀಯ ತು ದಾಶಾರ್ಹಃ ಪಾಂಡವಂ ತ್ವರಿತೋಽಬ್ರವೀತ್ |
ಜಹಿ ಪ್ರಾಗ್ಜ್ಯೋತಿಷಂ ಕ್ಷಿಪ್ರಂ ವಾಕ್ಯಶೇಷಂ ಚ ಮೇ ಶೃಣು ॥ 31 ॥
ಕೃಷ್ಣನು ಹೀಗೆ ಅರ್ಜುನನನ್ನು ಸಮಾಧಾನಪಡಿಸಿ ಪುನಃ ಭಗದತ್ತನನ್ನು ಶೀಘ್ರವಾಗಿ ಸಂಹರಿಸು. ನನ್ನ ವಾಕ್ಯದ ಉಳಿದ ಭಾಗವನ್ನು ಕೇಳು ಎಂದು ಹೇಳಿದನು.
ಚತುರ್ಮೂರ್ತಿರಹಂ ಪಾರ್ಥ ಲೋಕತ್ರಾಣಾರ್ಥಮುದ್ಯತಃ |
ಆತ್ಮಾನಂ ಪ್ರವಿಭಜ್ಯೇಹ ವಿಧಾನಮಿದಮಾದಧೇ ॥ 32 ॥
ಎಲೈ ಅರ್ಜುನನೇ, ನಾನು ನಾಲ್ಕು ರೂಪಗಳಿಂದ ಲೋಕವನ್ನು ರಕ್ಷಿಸುವುದಕ್ಕೆ ಉದ್ಯುಕ್ತನಾಗಿದ್ದೇನೆ. ನನ್ನನ್ನು ನಾನೇ

ಚತುರ್ಭಾಗವನ್ನಾಗಿ ಮಾಡಿಕೊಂಡು ಈ ವಿಧಾನವನ್ನು ಅನುಸರಿಸಿದ್ದೇನೆ.
ಏಕಾ ಮೂರ್ತಿಸ್ತಪಶ್ಚರ್ಯಾಂ ಕುರುತೇ ಮೇ ಭುವಿ ಸ್ಥಿತಾ |
ಅಪರಾ ಪಶ್ಯತಿ ಜಗತ್ ಕುರ್ವಾಣಂ ಸಾಧ್ವಸಾಧು ಚ ॥ 33 ॥
ನನ್ನ ಒಂದು ಮೂರ್ತಿಯು ಭೂಮಿಯಲ್ಲಿದ್ದು ತಪಶ್ಚರ್ಯೆಯನ್ನು ಮಾಡುತ್ತದೆ. ಇನ್ನೊಂದು ಮೂರ್ತಿಯು ಜಗತ್ತು ಮಾಡುವ ಶುಭಾಶುಭ ಕರ್ಮವನ್ನು ನೋಡುತ್ತದೆ.
ಅಪರಾ ಕರ್ಮ ಕುರುತೇ ಮಾನುಷಂ ಲೋಕಮಾಶ್ರಿತಾ |
ಶೇತೇ ಚತುರ್ಥಮೂರ್ತಿಸ್ತು ನಿದ್ರಾಂ ವರ್ಷಸಹಸ್ರಿಕಾಮ್ ॥ 34 ॥
ಇನ್ನೊಂದು ಮೂರ್ತಿಯು ಲೋಕದಲ್ಲಿದ್ದು ಮನುಷ್ಯರು ಮಾಡುವ ಕರ್ಮವನ್ನು ಮಾಡುತ್ತದೆ. ನಾಲ್ಕನೆಯ ಮೂರ್ತಿಯು ವರ್ಷಸಹಸ್ರದವರೆಗೆ ನಿದ್ದೆಯನ್ನು ಮಾಡುತ್ತದೆ.
ಯಾಽಸೌ ವರ್ಷಸಹಸ್ರಾಂತೇ ಮೂರ್ತಿರುತ್ತಿಷ್ಠತೇ ಮಮ |
ವರಾಹಾರ್ಯ ವರಾನ್ ಶ್ರೇಷ್ಠಾನ್ ತಸ್ಮಿನ್ ಕಾಲೇ ದದಾತಿ ಸಾ ॥35॥
ವರ್ಷಸಹಸ್ರಾನಂತರದಲ್ಲಿ ಯಾವ ನನ್ನ ರೂಪವು ಎಚ್ಚರಗೊಳ್ಳುವುದೋ ಅದು ಎದ್ದು ಆ ಕಾಲದಲ್ಲಿ ವರವನ್ನು ಸ್ವೀಕರಿಸಲು ಯೋಗ್ಯರಾದವರಿಗೆ ಶ್ರೇಷ್ಠವಾದ ವರಗಳನ್ನು ಕೊಡುತ್ತದೆ.
ತಂ ತು ಕಾಲಮನುಪ್ರಾಪ್ತಂ ವಿದಿತ್ವಾ ಪೃಥಿವೀ ಪುರಾ |
ಪ್ರಾಯಾಚತ ವರಂ ಪಾರ್ಥ ನರಕಾರ್ಥಾಯ ತಚ್ಛೃಣು ॥ 36 ॥
ಭೂದೇವಿಯು ಅಂತಹ ಕಾಲವು ಒದಗಿದೆ ಎಂದು ತಿಳಿದು, ಎಲೈ ಅರ್ಜುನನೇ, ನರಕನ ಸಲುವಾಗಿ ನನ್ನನ್ನು ವರವನ್ನು ಬೇಡಿದಳು. ಅದನ್ನು ಕೇಳು.
ದೇವಾನಾಮಸುರಾಣಾಂ ಚಾಪ್ಯವಧ್ಯಸ್ತನಯೋಽಸ್ತು ಮೇ |
ಏವಂ ವರಂ ವೃಣೇ ದೇವ ತವ ನಾಥ ಮಮಾತಿತ್ವತಿ ॥ 37 ॥
ನನ್ನ ಪುತ್ರನು ದೇವತೆಗಳಿಗೂ ಮತ್ತು ಅಸುರರಿಗೂ ಅವಧ್ಯನಾಗಿರಬೇಕು. ಎಲೈ ದೇವನೇ, ನಾಥನೇ, ಅಂತಹ ಪುತ್ರನು ನನಗಿರಲಿ ಎಂದು ನಿನ್ನನ್ನು ವರವನ್ನು ಬೇಡುತ್ತಿದ್ದೇನೆ.
ಏವಂ ವರಮಹಂ ಶ್ರುತ್ವಾ ಜಗತ್ಯಾ ಭರತರ್ಷಭ |
ಅಮೋಘಮಸ್ತ್ರಂ ಪ್ರಾಯಚ್ಛಂ ಪರಮಂ ವೈಷ್ಣವಂ ಪುರಾ ॥ 38 ॥
ಎಲೈ ಭರತಶ್ರೇಷ್ಠನೇ, ಭೂದೇವಿಯ ಈ ವರವನ್ನು ಕೇಳಿ ನಾನು ಹಿಂದೆ ಅಮೋಘವಾದ ಮತ್ತು ಶ್ರೇಷ್ಠವಾದ ವೈಷ್ಣವಾಸ್ತ್ರವನ್ನು ಅವಳಿಗೆ ನೀಡಿದೆನು.
ಏತದಸ್ತ್ರಮಮೋಘಂ ಮೇ ಭವಿಷ್ಯತಿ ವಸುಂಧರೇ |
ನರಕಸ್ಯಾಭಿರಕ್ಷಾರ್ಥಂ ನೈನಂ ಕಶ್ಚಿದ್ ವಧಿಷ್ಯತಿ ॥ 39 ॥
ಎಲೌ ವಸುಂಧರೆಯೇ, ನರಕನನ್ನು ರಕ್ಷಿಸುವ ವಿಷಯದಲ್ಲಿ ಈ ಅಸ್ತ್ರವು ಅಮೋಘವಾಗುವುದು. ಅವನನ್ನು ಯಾರೂ ಕೊಲ್ಲುವುದಿಲ್ಲ.
ಅನೇನಾಸ್ತ್ರೇಣ ತೇ ಗುಪ್ತಃ ಸುತಃ ಪರಬಲಾರ್ದನಃ |
ಭವಿಷ್ಯತಿ ದುರಾಧರ್ಷಃ ಸರ್ವಲೋಕೇಷು ಸರ್ವದಾ ॥ 40 ॥
ಈ ಅಸ್ತ್ರದಿಂದ ರಕ್ಷಿತನಾದ ನಿನ್ನ ಪುತ್ರನು ಶತ್ರುಸೈನ್ಯಘಾತಕನೂ, ಲೋಕದಲ್ಲಿ ಸರ್ವಥಾ ಸರ್ವವೀರರು ಸೋಲಿಸಲ್ಪಡದವನೂ ಆಗುತ್ತಾನೆ ಎಂದು ಹೇಳಿದೆನು.
ತಥೇತ್ಯುಕತ್ವಾ ತು ಸಾ ದೇವೀ ಕೃತಕಾರ್ಯಾ ವಸುಂಧರಾ |
ಸ ಚಾಪ್ಯಾಸೀದ್ ದುರಾಧರ್ಷೋ ನರಕಃ ಶತ್ರುತಾಪನಃ ॥ 41 ॥
ಹಾಗೆಯೇ ಆಗಲಿ ಎಂದು ಹೇಳಿ ಭೂದೇವಿಯು ಕೃತಜ್ಞಳಾದಳು. ಆ ನರಕನೂ ಕೂಡ ಶತ್ರುತಾಪಕನೂ ಮತ್ತು ದುರಾಧರ್ಷನೂ ಆದನು.
ತಸ್ಮಾತ್ ಪ್ರಾಗ್ಜ್ಯೋತಿಷಂ ಪ್ರಾಪ್ತಂ ತದಸ್ತ್ರಂ ವೇತ್ಥ ಮಾಮಕಮ್ |
ನಾಸ್ಯಾವಧ್ಯೋಽಸ್ತಿ ಲೋಕೇಽಸ್ಮಿನ್ ಮದನ್ಯಃ ಕಶ್ಚಿದರ್ಜುನ ॥42॥
ಆ ನನ್ನ ಅಸ್ತ್ರವು ಆ ನರಕನಿಂದ ಪ್ರಾಗ್ಜ್ಯೋತಿಷನಿಗೆ ಬಂದಿತು ಎಂದು ತಿಳಿ. ಅರ್ಜುನನೇ, ಈ ಅಸ್ತ್ರಕ್ಕೆ ನನ್ನನ್ನು ಬಿಟ್ಟು ಬೇರೆ ಯಾರೂ ಅವಧ್ಯರಲ್ಲ.
ತನ್ಮಯಾ ತ್ವತ್ಕೃತೇ ಹ್ಯೇತದನ್ಯಥೈವೋಪಪನಿರ್ಮಿತಮ್ |
ವಿಯುಕ್ತಂ ಪರಮಾಸ್ತ್ರೇಣ ಜಹಿ ಪಾರ್ಥ ಮಹಾಸುರಮ್ ॥ 43 ॥
ನಿನ್ನ ಸಲುವಾಗಿ ನಾನು ಈ ಅಸ್ತ್ರವನ್ನು ಬೇರೆ ರೀತಿಯಾಗಿಯೇ ನಿರ್ವಹಿಸಿದೆನು. ಪಾರ್ಥನೇ, ಪರಮಾಸ್ತ್ರದಿಂದ ವಿಯುಕ್ತನಾದ ಮಹಾಸುರನನ್ನು ಈಗ ಕೊಲ್ಲು.
ಅವಧ್ಯೋಽಯಂ ಮಹಾಸ್ತ್ರೇಣ ಭಗದತ್ತಃ ಸುರಾಸುರೈಃ |
ಯಥಾಽಹಂ ನರಕಂ ಲೋಕಹಿತಾರ್ಥಮಹನಂ ಪುರಾ ॥ 44 ॥
ಈ ಮಹಾಸ್ತ್ರದ ಬಲದಿಂದ ಭಗದತ್ತನು ಸುರಾಸುರರಿಂದ ಅವಧ್ಯನಾಗಿದ್ದಾನೆ. ನಾನು ಹಿಂದೆ ಲೋಕಹಿತಕ್ಕಾಗಿ ನರಕನನ್ನು ಕೊಂದಂತೆ (ಈಗ ನೀನು ಭಗದತ್ತನನ್ನು ಕೊಲ್ಲು).
ಸಂಜಯಃ

ಏವಮುಕ್ತಸ್ತತಃ ಪಾರ್ಥಃ ಕೇಶವೇನ ಮಹಾತ್ಮನಾ |
ಭಗದತ್ತಂ ಶಿತೈರ್ಬಾಣೈಃ ಸಹಸಾ ಸಮವಾಕಿರತ್ ॥ 45 ॥
ಸಂಜಯ ಮಹಾತ್ಮನಾದ ಕೇಶವನಿಂದ ಹೀಗೆ ಹೇಳಲ್ಪಟ್ಟ ಅರ್ಜುನನು ತಕ್ಷಣ ಹರಿತವಾದ ಬಾಣಗಳಿಂದ ಭಗದತ್ತನನ್ನು ಪೀಡಿಸಿದನು.
ತತಃ ಸಂಧಾಯ ವಿಶಿಖಂ ದೀಪ್ಯಮಾನಮಿವಾನಲಮ್ |
ಅವಿದ್ಧ್ಯದರ್ಜುನೋ ನಾಗಂ ತಂ ಕುಂಭಯೋರಂತರೇ ಭೃಶಮ್ ॥46॥
ಅನಂತರ ಅಗ್ನಿಯಂತೆ ಜ್ವಲಿಸುವ ಬಾಣವನ್ನು ಧನುಸ್ಸಿನಲ್ಲಿ ಹೂಡಿ, ಅರ್ಜುನನು ಆ ಗಜವನ್ನು ಕುಂಭಗಳ ಮಧ್ಯದಲ್ಲಿ ತೀವ್ರವಾಗಿ ಹೊಡೆದನು.
ಸ ಸಮಾಸಾದ್ಯ ನಾಗಂ ಬಾಣೋ ವಜ್ರ ಇವಾಚಲಮ್ |
ಅಭ್ಯಗಾತ್ ಸ ಶರೋಽತ್ಯುಗ್ರೋ ವಲ್ಮೀಕಮಿವ ಪನ್ನಗಃ ॥ 47 ॥
ವಜ್ರಾಯುಧವು ಪರ್ವತವನ್ನು ಸೇರಿದಂತೆ ಆ ಬಾಣವು ಆ ಗಜವನ್ನು ಸಮೀಪಿಸಿ, ಸರ್ಪವು ಹುತ್ತದೊಳಗೆ ಇಳಿಯುವಂತೆ ಅದರ ಶರೀರದಲ್ಲಿ ಇಳಿಯಿತು.
ಸ ಕರೀ ಭಗದತ್ತೇನ ಪ್ರೇರ್ಯಮಾಣೋ ಮುಹುರ್ಮುಹುಃ |
ನ ಕರೋತಿ ವಚಸ್ತಸ್ಯ ದರಿದ್ರಸ್ಯೇವ ಯೋಷಿತಃ ॥ 48 ॥
ಆ ಗಜವು ಭಗದತ್ತನಿಂದ ಪುನಃ ಪುನಃ ಪ್ರಚೋದಿಸಲ್ಪಟ್ಟರೂ ದರಿದ್ರನ ಮಾತುಗಳನ್ನು ಸ್ತ್ರೀಯರು ಕೇಳದಿರುವಂತೆ ಅದು ಅವನ ಆದೇಶಗಳನ್ನು ಅನುಸರಿಸಲಿಲ್ಲ.
ಸ ತು ವಿಷ್ಟಭ್ಯ ಗಾತ್ರಾಣಿ ದಂತಾಭ್ಯಾಮವನೀಂ ಗತಃ |
ನದನ್ನಾರ್ತಸ್ವನಂ ಪ್ರಾಣಾನುತ್ಸಸರ್ಜ ಮಹಾದ್ವಿಪಃ ॥ 49 ॥
ಆ ಮಹಾಗಜವು ತನ್ನ ಶರೀರವನ್ನು ಸ್ಥಿರವಾಗಿ ನಿಲ್ಲಿಸಿ, ದಂತಗಳಿಂದ ಭೂಮಿಯ ಮೇಲೆ ಬಿದ್ದು, ಆರ್ತಸ್ವರವನ್ನು ಮಾಡುತ್ತಾ ಪ್ರಾಣಗಳನ್ನು ತ್ಯಜಿಸಿತು.
ತತಶ್ಚಂದ್ರಾರ್ಧತುಲ್ಯೇನ ಶರೇಣಾಮಿತ್ರಕರ್ಶನಃ |
ಬಿಭೇದ ಹೃದಯಂ ರಾಜ್ಞೋ ಭಗದತ್ತಸ್ಯ ಪಾಂಡವಃ ॥ 50 ॥
ಅನಂತರ ಶತ್ರುಕರ್ಶನನಾದ ಅರ್ಜುನನು ಅರ್ಧಚಂದ್ರಾಕಾರವುಳ್ಳ ಬಾಣದಿಂದ ಭಗದತ್ತನ ಹೃದಯವನ್ನು ದೃಢವಾಗಿ ಭೇದಿಸಿದನು.

ಸ ಭಿನ್ನಹೃದಯೋ ರಾಜಾ ಭಗದತ್ತಃ ಕಿರೀಟಿನಾ |
ಮುಕಶತ್ವ ಶರಾಸನಂ ಬಾಹೂ ಪ್ರಸಾರ್ಯಾನ್ವಪತದ್ ಗಜಾತ್ ॥ 51 ॥
ಅರ್ಜುನನಿಂದ ಗಾಢವಾಗಿ ಹೊಡೆಯಲ್ಪಟ್ಟು ಭಿನ್ನಹೃದಯನಾದ ಭಗದತ್ತ ರಾಜನು ಕೈಯಲ್ಲಿದ್ದ ಧನುಸ್ಸನ್ನು ತ್ಯಜಿಸಿ, ಬಾಹುಗಳನ್ನು ಚಾಚಿ ಗಜದಿಂದ ಕೆಳಗೆ ಬಿದ್ದನು.
ಪಪಾತ ಪತತಸ್ತಸ್ಯ ಶಿರಸಃ ಪೂರ್ವಮಂಶುಕಮ್ |
ನಾಲತಾಡನವಿಭ್ರಷ್ಟಂ ಪಲಾಶಂ ನಿಲನಾದಿವ ॥ 52 ॥
ಅವನು ಕೆಳಗೆ ಬೀಳುವಾಗ ನಾಳವನ್ನು ಕಳೆದುಕೊಂಡು ಬಿದ್ದ ಪಲಾಶವು ಮೇಲಿನಿಂದ ಬೀಳುವಂತೆ ಅಂಶುಕವು (ಶಿರಸಾತ್ರಣವು) ಬಿದ್ದಿತು.
ಸ ಹೇಮಮಾಲೀ ತಪನೀಯಭಾಂಡಾತ್
ಪಪಾತ ನಾಗಾದ್ ಗಿರಿಸನ್ನಿಕಾಶಾತ್ |
ಸುಪುಷ್ಪಿತೋ ಮಾರುತವೇಗಭಗ್ನೋ
ಮಹೀಧರಾಗ್ರಾದಿವ ಕರ್ಣಿಕಾರಃ ॥ 53 ॥
ಹೇಮಮಾಲೆಯನ್ನು ಧರಿಸಿದ ಅವನು ಪರ್ವತಪ್ರಾಯವಾಗಿದ್ದ ಸ್ವರ್ಣಾಲಂಕಾರದಿಂದ ಭೂಷಿತವಾದ ಆ ಗಜದಿಂದ ವಾಯುವೇಗದಿಂದ ಭಗ್ನವಾದ ಪುಷ್ಪಿತವಾದ ಕರ್ಣಿಕಾರ ವೃಕ್ಷವು ಪರ್ವತದ ತುದಿಯಿಂದ ಬಿದ್ದಂತೆ ಬಿದ್ದನು.
ನಿಹತ್ಯ ತಂ ನರಪತಿಮಿಂದ್ರವಿಕ್ರಮಂ
ಸಹಾಯಮಿಂದ್ರಸ್ಯ ಸ ಇಂದ್ರಸಂಭವಃ |
ತತೋಽಪರಾಂಸ್ತವ ಜಯಕಾಂಕ್ಷಿಣೋ ರಣೇ
ಬಭಂಜ ವಾಯುರ್ಬಲವಾನಿವ ದ್ರುಮಾನ್ ॥ 54 ॥
ಇಂದ್ರಪುತ್ರನಾದ ಅರ್ಜುನನು ಇಂದ್ರನಂತೆ ಪರಾಕ್ರಮವನ್ನು ಹೊಂದಿದ, ಇಂದ್ರನ ಸಖನಾದ ಆ ರಾಜನನ್ನು ಕೊಂದು ರಣರಂಗದಲ್ಲಿ ನಿನ್ನ ಜಯವನ್ನು ಬಯಸುವ ಉಳಿದವರನ್ನೂ ಬಲಿಷ್ಠವಾದ ವಾಯುವು ವೃಕ್ಷವು ಭಗ್ನಗೊಳಿಸುವಂತೆ ಭಗ್ನಗೊಳಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *

ಇಪ್ಪತ್ತೊಂಬತ್ತನೆಯ ಅಧ್ಯಾಯ
ಅರ್ಜುನನ ಯುದ್ದದ ವರ್ಣನೆ
ಸಂಜಯಃ
ಪ್ರಿಯಮಿಂದ್ರಸ್ಯ ಸತತಂ ಸಖಾಯಮಮಿತೌಜಸಮ್ |
ಹತ್ವಾ ಪ್ರಾಗ್ಜ್ಯೋತಿಷಂ ಪಾರ್ಥಃ ಪ್ರದಕ್ಷಿಣಮವರ್ತತ ॥ 1 ॥
ಸಂಜಯ ಇಂದ್ರನಿಗೆ ಪ್ರಿಯನಾದವನೂ, ಸತತವಾಗಿ ಅವನಿಗೆ ಸ್ನೇಹಿತನಾದವನೂ ಮತ್ತು ಅಮಿತಪರಾಕ್ರಮಿಯೂ ಆದ ಭಗದತ್ತನನ್ನು ಕೊಂದು ಅರ್ಜುನನು ದಕ್ಷಿಣ ಭಾಗಕ್ಕೆ ಬಂದನು.
ತತೋ ಗಾಂಧಾರರಾಜಸ್ಯ ಪುತ್ರೌ ಪರಪುರಂಜಯೌ |
ಅಭ್ಯೇತಾಮರ್ಜುನಂ ಸಂಖ್ಯೇ ಭ್ರಾತರೌ ವೃಷಕಾಚಲೌ ॥ 2 ॥
ಆಗ ಗಾಂಧಾರರಾಜನ ಪುತ್ರರಾದ, ಪರಪುರಂಜಯರಾದ, ಸಹೋದರರಾದ ವೃಷಕ ಮತ್ತು ಅಚಲರು ರಣರಂಗದಲ್ಲಿ ಅರ್ಜುನನ ಕಡೆಗೆ ಧಾವಿಸಿದರು.
ತೌ ಸಮೇತ್ಯಾರ್ಜುನಂ ವೀರೌ ಪೂರ್ವಂ ಪಶ್ಚಾಚ್ಚ ಧನ್ವಿನೌ |
ಅವಿಧ್ಯೇತಾಂ ಮಹಾವೇಗೈರ್ನಿಶಿತೈರಾಶುಗೈರ್ಭೃಶಮ್ ॥ 3 ॥
ಧನುರ್ಧಾರಿಗಳೂ ಮತ್ತು ವೀರರೂ ಆದ ಅವರು ಅರ್ಜುನನನ್ನು ಹಿಂಭಾಗದಿಂದ ಮತ್ತು ಮುಂಭಾಗದಿಂದ ಸಂಧಿಸಿ, ಮಹಾವೇಗಶಾಲಿಗಳಾದ ನಿಶಿತಗಳಾದ, ಶೀಘ್ರಗಾಮಿಗಳಾದ ಬಾಣಗಳಿಂದ ಅವನನ್ನು ತೀವ್ರವಾಗಿ ಹೊಡೆದರು.
ವೃಷಕಸ್ಯ ಹಯಾನ್ ಸೂತಂ ಧನುಶ್ಛತ್ರಂ ರಥಂ ಧ್ವಜಮ್ |
ತಿಲಶೋ ವ್ಯಧಮತ್ ಪಾರ್ಥಃ ಸೌಬಲಸ್ಯ ಶಿತೈಃ ಶರೈಃ ॥ 4 ॥
ಅರ್ಜುನನು ನಿಶಿತವಾದ ಶರಗಳಿಂದ ಶಕುನಿಯ ಪುತ್ರನಾದ ವೃಷಕನ ಅಶ್ವಗಳನ್ನೂ, ಸೂತನನ್ನೂ, ಧನುಸ್ಸನ್ನೂ, ಛತ್ರವನ್ನೂ ಕತ್ತರಿಸಿದನು.
ತತೋಽರ್ಜುನಃ ಶರವ್ರಾತೈರ್ನಾನಾಪ್ರಹರಣಾನ್ ಯುಧಿ |
ಗಾಂಧಾರಾನಾಕುಲೀಕುರ್ವನ್ ಸೌಬಲಪ್ರಮುಖಾನ್ ಪುನಃ ॥ 5 ॥
ಅನಂತರ ಅರ್ಜುನನು ತನ್ನ ಬಾಣಸಮೂಹದಿಂದ ರಣರಂಗದಲ್ಲಿ ನಾನಾ ಆಯುಧಗಳನ್ನು ಧರಿಸಿದ ಶಕುನಿಯೇ ಮೊದಲಾದ ಗಾಂಧಾರರನ್ನು ಪುನಃ ಆಕುಲಗೊಳಿಸಿದನು.
ತತಃ ಪಂಚಶತಾನ್ ವೀರಾನ್ ಗಾಂಧಾರಾನುದ್ಯತಾಯುಧಾನ್ |
ಪ್ರಾಹಿಣೋನ್ಮ ೃತ್ಯುಲೋಕಾಯ ಕ್ರುದ್ಧೋ ಬಾಣೈರ್ಧನಂಜಯಃ ॥ 6 ॥
ಅನಂತರ ಕ್ರುದ್ಧನಾದ ಧನಂಜಯನು ತನ್ನ ಬಾಣಗಳಿಂದ ಎತ್ತಿದ ಆಯುಧಗಳನ್ನು ಧರಿಸಿದ ಗಾಂಧಾರರ ಐದುನೂರು ವೀರರನ್ನು ಮೃತ್ಯುಲೋಕಕ್ಕೆ ಕಳುಹಿಸಿದನು.
ಹತಾಶ್ವಾತ್ ತು ರಥಾತ್ ತೂರ್ಣಮವತೀರ್ಯ ಮಹಾಮತಿಃ |
ಆರುರೋಹ ರಥಂ ಭ್ರಾತುಃ ಚಾನ್ಯದಾದಾಯ ಕಾರ್ಮುಕಮ್ ॥ 7 ॥
ಮೇಧಾವಿಯಾದ ವೃಷಕನು ಅಶ್ವಗಳು ಮೃತವಾದ ತನ್ನ ರಥದಿಂದ ಶೀಘ್ರವಾಗಿ ಇಳಿದು, ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತನ್ನ ಸಹೋದರನ ರಥವನ್ನು ಏರಿದನು.
ತಾವೇಕರಥಮಾರೂಢೌ ಭ್ರಾತರೌ ವೃಷಕಾಚಲೌ |
ಶರವರ್ಷೇಣ ಬೀಭತ್ಸುಮವಿಧ್ಯೇತಾಂ ಪುನಃಪುನಃ ॥ 8 ॥
ಒಂದು ರಥವನ್ನು ಏರಿದ ಸಹೋದರರಾದ ವೃಷಕ ಮತ್ತು ಅಚಲರು ಅರ್ಜುನನನ್ನು ಶರವರ್ಷದಿಂದ ಪುನಃ ಪುನಃ ಹೊಡೆದರು.
ಸ್ಯಾಲೌ ತವ ಮಹಾತ್ಮಾನೌ ರಾಜಾನೌ ವೃಷಕಾಚಲೌ |
ಭೃಶಂ ವಿಜಘ್ನತುಃ ಪಾರ್ಥಮಿಂದ್ರಂ ವೃತ್ರಬಲಾವಿವ ॥ 9 ॥
ನಿನ್ನ ಭಾವಮೈದುನರೂ, ರಾಜರೂ, ಮಹಾತ್ಮರೂ ಆದ ವೃಷಕಾಚಲರು ಇಂದ್ರನನ್ನು ವೃತ್ರ ಮತ್ತು ಬಲಾಸುರರು ಹೊಡೆದಂತೆ ಅರ್ಜುನನನ್ನು ತೀವ್ರವಾಗಿ ಹೊಡೆದರು.
ಲಬ್ದಲಕ್ಷೌ ತು ಗಾಂಧಾರೌ ಜಘ್ನತುಃ ಪಾಂಡವಂ ಪುನಃ |
ನೈದಾಘವಾರ್ಷಿಕೌ ಮಾಸೌ ಲೋಕಂ ಘರ್ಮಾಂಬುಭಿರ್ಯಥಾ ॥10॥
ಲಕ್ಷ್ಯವನ್ನು ಭೇದಿಸುವ ಆ ಇಬ್ಬರು ಗಾಂಧಾರರು ಬೇಸಿಗೆ ಮತ್ತು ಮಳೆಗಾಲಗಳ ಮಾಸಗಳು ಲೋಕಗಳನ್ನು ಬಿಸಿಲು ಮತ್ತು ಮಳೆಗಳಿಂದ ಹೊಡೆದಂತೆ ಪುನಃ ಅರ್ಜುನನನ್ನು ಹೊಡೆದರು.
ತೌ ಶ್ಯಾಲೌ ತವ ದುರ್ಧರ್ಷೌ ಸಮಾನೇ ಸ್ಯಂದನೇ ಸ್ಥಿತೌ |
ಸಂಸ್ಪ ೃಶಂತೌ ತದಾಽನ್ಯೋನ್ಯಂ ಜಘಾನೈಕೇಷುಣಾಽರ್ಜುನಃ ॥ 11 ॥
ಆಗ ಅರ್ಜುನನು ನಿನ್ನ ಭಾವಮೈದುನರಾದ, ದುರ್ಧರ್ಷರಾದ, ಒಂದೇ ರಥದಲ್ಲಿದ್ದ, ಒಬ್ಬರನ್ನೊಬ್ಬರು ಸ್ಪರ್ಶಿಸುತ್ತಿದ್ದ ವೃಷಕಾಚಲರನ್ನು ಒಂದು ಬಾಣದಿಂದ ಹೊಡೆದನು.
ತೌ ರಥಾತ್ ಸಹಸಾ ವೀರೌ ಲೋಹಿತಾಕ್ಷೌ ಮಹಾಭುಜೌ |
ನಿಹತೌ ಪೇತತುರ್ಭೂಮೌ ಸೋದರ್ಯಾವೇಕಲಕ್ಷಣೌ ॥ 12 ॥
ಸಹೋದರರೂ, ಒಂದೇ ಲಕ್ಷಣವುಳ್ಳವರೂ, ಮಹಾಭುಜರೂ, ಲೋಹಿತಾಕ್ಷರೂ, ವೀರರೂ ಆದ ಅವರು ಅರ್ಜುನನಿಂದ ನಿಹತರಾಗಿ ತಕ್ಷಣ ಭೂಮಿಯಲ್ಲಿ ಬಿದ್ದರು.

ತಯೋರ್ದೇಹೌ ರಥಾದ್ ಭೂಮಿಂ ಗತೌ ಬಂಧುಜನವ್ಯಥೌ |
ಯಶೋ ದಶ ದಿಶಃ ಪುಣ್ಯಂ ವಿಕಿರಂತೌ ಖಮುತ್ತಮಮ್ ॥ 13 ॥
ಅವರ ದೇಹಗಳು ರಥದಿಂದ ಭೂಮಿಗೆ ಬೀಳುತ್ತಾ ಬಂಧುಜನರಿಗೆ ವ್ಯಥೆಯನ್ನುಂಟು ಮಾಡುವವುಗಳಾಗಿ ಹತ್ತು ದಿಕ್ಕುಗಳಲ್ಲಿ ಮತ್ತು ಆಕಾಶದಲ್ಲಿ ಅರ್ಜುನನ ಕೀರ್ತಿಯನ್ನು ಹರಡುವವುಗಳಾಗಿ (ಬಿದ್ದವು).
ದೃಷ್ಟ್ವಾ ವಿನಿಹತೌ ಸಂಖೇ ಮಾತುಲಾವಪಲಾಯಿನೌ |
ಸರ್ವೇ ಮುಮುಚುರಶ್ರೂಣಿ ಪುತ್ರಾಸ್ತವ ವಿಶಾಂಪತೇ ॥ 14 ॥
ಎಲೈ ರಾಜನೇ, ಯುದ್ಧದಿಂದ ಹಿಮ್ಮೆಟ್ಟದಿರುವ ತಮ್ಮ ಇಬ್ಬರು ಸೋದರ- ಮಾವಂದಿರು ಯುದ್ಧದಲ್ಲಿ ಹತರಾದುದನ್ನು ನೋಡಿ ನಿನ್ನ ಪುತ್ರರೆಲ್ಲರೂ ಕಣ್ಣೀರನ್ನು ಸುರಿಸಿದರು.
ತೌ ಹತೌ ಭ್ರಾತರೌ ದೃಷ್ಟ್ವಾ ಮಾಯಾಶತವಿಶಾರದಃ |
ಕೃಷ್ಣೌ ಸಮ್ಮೋಹಯನ್ ಮಾಯಾಂ ವಿದಧೇ ಶಕುನಿಸ್ತತಃ ॥ 15 ॥
ಹತರಾದ ಆ ಸಹೋದರರನ್ನು ನೋಡಿ, ಮಾಯೆಗಳಲ್ಲಿ ನಿಪುಣನಾದ ಶಕುನಿಯು ಆಗ ಕೃಷ್ಣಾರ್ಜುನರನ್ನು ಮೋಹಗೊಳಿಸುವವನಾಗಿ ಮಾಯೆಯನ್ನು ಸೃಷ್ಟಿಸಿದನು.
ಅಸಂಖ್ಯೇಯಾ ಘನಾಶ್ಮಾನಃ ಶತಘ್ನೀಶ್ಚ ಸಕಿಂಕಿಣೀಃ |
ಗದಾಪರಿಘನಿಸ್ತ್ರಿಂಶಶೂಲಮುದ್ಗರಪಟ್ಟಸಾಃ ॥ 16 ॥
ಶಕ್ತ್ಯೃಷ್ಟಿಪ್ರಾಸನಖರಾ ಮುಸಲಾನಿ ಪರಶ್ವಧಾಃ |
ಕ್ಷುರಾಃ ಕ್ಷುರಪ್ರನಾಲೀಕಾ ವತ್ಸದಂತಾಸ್ತ್ರಿಸಂಧಯಃ ॥ 17 ॥
ಕುಂತಪ್ರಾಸಮಹಾಶಕ್ತ್ಯ ವಿವಿಧಾನ್ಯಾಯುಧಾನಿ ಚ |
ಆಪೇತುಃ ಸರ್ವತೋ ದಿಗ್ಭ್ಯಃ ಪ್ರದಿಗ್ಭ್ಯಶ್ಚಾರ್ಜುನಂ ಪ್ರತಿ ॥ 18 ॥
ಅಸಂಖ್ಯಾತವಾದ ಗಟ್ಟಿ ಬಂಡೆಗಳೂ, ಕಿಂಕಿಣಿಗಳಿಂದ ಸಹಿತವಾದ ಶತಘ್ನಿಗಳು, ಗದಾ-ಪರಿಘ-ಖಡ್ಗಗಳೂ, ಶೂಲ-ಮುದ್ಗರ-ಪಟ್ಟಸಗಳೂ, ಶಕ್ತಿ-ಋಷ್ಟಿ- ಪ್ರಾಸ-ನಖರ-ಮುಸಲ-ಪರಿಶ್ವಧಗಳೂ, ಕ್ಷುರಗಳೂ, ಕ್ಷುರಪ್ರಣಾಳಿಗಳೂ, ವತ್ಸ ದಂತಗಳೂ, ತ್ರಿಸಂಧಿಗಳೂ, ಕುಂತಗಳೂ, ಪ್ರಾಸಗಳೂ, ಮಹಾಶಕ್ತಿಗಳೂ ಮತ್ತು ವಿವಿಧವಾದ ಆಯುಧಗಳೂ ಎಲ್ಲ ದಿಕ್ಕುಗಳಿಂದ ಅರ್ಜುನನ ಮೇಲೆ ಬಿದ್ದವು.
ಖರೋಷ್ಟ್ರಮಹಿಷಾಃ ಸಿಂಹಾ ವ್ಯಾಘ್ರಾಃ ಸೃಮರಭಲ್ಲುಕಾಃ |
ಋಕ್ಷಾಃ ಸಾಲಾವೃಕಾ ಗೃಧ್ರಾಃ ಕಪಿಶ್ವಾನಸರೀಸೃಪಾಃ ॥ 19 ॥
ವಿವಿಧಾನಿ ಚ ರಕ್ಷಾಂಸಿ ವಿಕ್ಷಿಪ್ತಾನ್ಯರ್ಜುನಂ ಪ್ರತಿ |
ಸಂಕ್ರುದ್ಧಾನ್ಯಭಿಧಾವಂತಿ ವಿವಿಧಾನಿ ವಯಾಂಸಿ ಚ ॥ 20 ॥
ಕತ್ತೆಗಳೂ, ಒಂಟೆಗಳೂ ಮತ್ತು ಕೋಣಗಳೂ, ಸಿಂಹಗಳೂ, ವ್ಯಾಘ್ರಗಳೂ, ಕಸ್ತೂರಿ ಮೃಗಗಳೂ, ಕರಡಿಗಳೂ, ಋಕ್ಷಗಳೂ, ಸಾಲಾವೃಕಗಳೂ, ಹದ್ದುಗಳೂ, ಕಪಿ-ನಾಯಿ ಮತ್ತು ಸರ್ಪಗಳೂ ಮತ್ತು ವಿವಿಧವಾದ ರಾಕ್ಷಸರೂ ಇವು ಅರ್ಜುನನ ಮೇಲೆ ಎಸೆಯಲ್ಪಟ್ಟವು. ವಿಧ-ವಿಧವಾದ ಪಕ್ಷಿಗಳು ಕೋಪಗೊಂಡು ಅರ್ಜುನನ ಕಡೆಗೆ ಹಾರಿಬಂದವು.
ತತೋ ದಿವ್ಯಾಸ್ತ್ರವಿಚ್ಛೂರಃ ಕುಂತೀಪುತ್ರೋ ಧನಂಜಯಃ |
ವಿಸೃಜನ್ನಿಷುಜಾಲಾನಿ ಪ್ರಹಸಂಸ್ತಾನ್ಯತಾಡಯತ್ ॥ 21 ॥
ಆಗ ದಿವ್ಯಾಸ್ತ್ರಜ್ಞಾನಿಯೂ, ಶೂರನೂ ಆದ ಕುಂತೀಪುತ್ರನಾದ ಧನಂಜಯನು ನಗುತ್ತಾ, ಬಾಣಸಮೂಹಗಳನ್ನು ಪ್ರಯೋಗಿಸುತ್ತಾ ಅವುಗಳನ್ನು ಹೊಡೆದನು.
ತೇ ಹನ್ಯಮಾನಾಃ ಶೂರೇಣ ಪ್ರವರೈಃ ಸಾಯಕೈರ್ದೃಢೈಃ |
ವಿರುವಂತೋ ಮಹಾರಾವಾನ್ ವಿನೇಶುಃ ಸರ್ವತೋ ಹತಾಃ ॥ 22 ॥
ಶೂರನಾದ ಅರ್ಜುನನಿಂದ ಶ್ರೇಷ್ಠವಾದ ಮತ್ತು ದೃಢವಾದ ಬಾಣಗಳಿಂದ ಹೊಡೆಯಲ್ಪಟ್ಟ ಅವು ಮಹಾನಾದಗಳನ್ನು ಮಾಡುತ್ತಾ ಎಲ್ಲ ಕಡೆಗಳಲ್ಲಿಯೂ ವಿನಾಶವನ್ನು ಹೊಂದಿದವು.
ತತಸ್ತಮಃ ಪ್ರಾದುರಭೂದ್ ಅರ್ಜುನಸ್ಯಾಭಿತೋ ರಥಮ್ |
ತಸ್ಮಾಚ್ಚ ತಮಸೋ ವಾಚಃ ಕ್ರೂರಾಃ ಪಾರ್ಥಮಭರ್ತ್ಸಯನ್ ॥ 23 ॥
ಅನಂತರ ಅರ್ಜುನನ ರಥದ ಸುತ್ತಲೂ ಅಂಧಕಾರವು ಪ್ರಾದುರ್ಭವಿಸಿತು. ಆ ಅಂಧಕಾರದಿಂದ ಅರ್ಜುನನನ್ನು ಹೆದರಿಸುವ ಕ್ರೂರವಾದ ಮಾತುಗಳು ಕೇಳಿಬಂದವು.
ತತ್ತಮೋಽಸ್ತ್ರೇಣ ಮಹತಾ ಜ್ಯೌತಿಷೇಣಾರ್ಜುನೋಽವಧೀತ್ |
ಹತೇ ತಸ್ಮಿನ್ ಜಲೌಘಾಸ್ತು ಪ್ರಾದುರಾಸನ್ ಭಯಾನಕಾಃ ॥ 24 ॥
ಅಂಭಸಸ್ತಸ್ಯ ನಾಶಾರ್ಥಮಾದಿತ್ಯಾಸ್ತ್ರಮಥಾರ್ಜುನಃ |
ಪ್ರಾಯುಂಕ್ತಾಂಭಸ್ತಥಾಸ್ತ್ರೇಣ ಪ್ರಾಶುಷ್ಯತ್ ತೇನ ಶೋಷಿತಮ್ ॥ 25 ॥
ಅರ್ಜುನನು ದೊಡ್ಡದಾದ ಜ್ಯೌತಿಷಾಸ್ತ್ರದಿಂದ ಆ ತಮಸ್ಸನ್ನು ನಾಶಗೊಳಿಸಿದನು. ತಮಸ್ಸು ನಾಶವನ್ನು ಹೊಂದುತ್ತಿರಲು, ಭಯಂಕರವಾದ ಜಲಪ್ರವಾಹಗಳು ಪ್ರಾದುರ್ಭವಿಸಿದವು. ಆ ಜಲವನ್ನು ನಾಶಮಾಡಲು ಅರ್ಜುನನು ಆದಿತ್ಯಾಸ್ತ್ರವನ್ನು ಪ್ರಯೋಗಿಸಿದನು. ಆ ಆದಿತ್ಯಾಸ್ತ್ರದಿಂದ ಆ ಜಲವು ಒಣಗಿತು.
ಏವಂ ಬಹುವಿಧಾ ಮಾಯಾಃ ಸೌಬಲಸ್ಯ ಕೃತಾಃ ಕೃತಾಃ |
ಜಘಾನಾಸ್ತ್ರಬಲೇನಾಶು ಪ್ರಹಸನ್ನರ್ಜುನೋಽಬ್ರವೀತ್ ॥ 26 ॥

ಹೀಗೆ ಶಕುನಿಯು ಸೃಷ್ಟಿಸಿದ, ಸೃಷ್ಟಿಸಿದ ಬಹುವಿಧವಾದ ಮಾಯೆಗಳನ್ನು ಅರ್ಜುನನು ನಗುತ್ತಾ ತನ್ನ ಅಸ್ತ್ರಬಲದಿಂದ ಶೀಘ್ರವಾಗಿ ವಿನಾಶಗೊಳಿಸಿ ಶಕುನಿಯನ್ನು ಕುರಿತು ಹೇಳಿದನು.
ದುರ್ದ್ಯೂತದೇವಿನ್ ಗಾಂಧಾರೇ ನಾಕ್ಷಾನ್ ಕ್ಷಿಪತಿ ಗಾಂಡಿವಮ್ |
ಜ್ವಲಿತಾನ್ನಿಶಿತಾಂಸ್ತೀಕ್ಷ್ಣಾನ್ ಶರಾನ್ ಕ್ಷಿಪತಿ ಗಾಂಡಿವಮ್ ॥ 27 ॥
ದುರ್ದ್ಯೂತವನ್ನು ಆಡುವ ಗಾಂಧಾರನೇ, ಗಾಂಡೀವ ಧನುಸ್ಸು ದಾಳಗಳನ್ನು ಉರುಳಿಸುವುದಿಲ್ಲ. ಅದು ಜ್ವಲಿಸುವ, ತೀಕ್ಷ್ಣವಾದ, ನಿಶಿತವಾದ ಬಾಣಗಳನ್ನು ಎಸೆಯುತ್ತದೆ (ಎಂದು ಹೇಳಿದನು).
ಸಂಜಯಃ
ತಥಾ ಹತಾಸು ಮಾಯಾಸು ತ್ರಸ್ತೋಽರ್ಜುನಶರಾಹತಃ |
ಅಪಾಯಾಜ್ಜವನೈರಶ್ವೈಃ ಶಕುನಿಃ ಪ್ರಾಕೃತೋ ಯಥಾ ॥ 28 ॥
ಸಂಜಯ ಆ ರೀತಿಯಲ್ಲಿ ತನ್ನ ಮಾಯೆಗಳು ಅರ್ಜುನನ ಬಾಣಗಳಿಂದ ವಿನಾಶಗೊಳಿಸಲ್ಪಡುತಿತರಲು ಹೆದರಿದ ಶಕುನಿಯು ಪ್ರಾಕೃತ ಮನುಷ್ಯನಂತೆ ವೇಗಶಾಲಿಗಳಾದ ಅಶ್ವಗಳಿಂದ ರಣರಂಗವನ್ನು ಬಿಟ್ಟು ಹೊರಟನು.
ತತೋಽರ್ಜುನೋಽಸ್ತ್ರವಿಚ್ಚ್ರೈರ್ಯಂ ದರ್ಶಯನ್ನಾತ್ಮನೋಽರಿಷು |
ಅಭ್ಯವರ್ಷಚ್ಛರೌಘೇಣ ಕೌರವಾಣಾಮನೀಕಿನೀಮ್ ॥ 29 ॥
ಅನಂತರ ಅರ್ಜುನನು ಶತ್ರುಗಳ ಮೇಲೆ ತನ್ನ ಶೌರ್ಯವನ್ನು ಪ್ರದರ್ಶಿಸುತ್ತಾ, ಕೌರವರ ಸೈನ್ಯದ ಮೇಲೆ ತನ್ನ ಶರಸಮೂಹಗಳಿಂದ ಬಾಣಗಳ ಮಳೆಯನ್ನು ಸುರಿಸಿದನು.
ಸಾ ವಧ್ಯಮಾನಾ ಪಾರ್ಥೇನ ಪುತ್ರಸ್ಯ ತವ ವಾಹಿನೀ |
ದ್ವೈಧೀಭೂತಾ ಮಹಾರಾಜ ಗಂಗೇವಾಸಾದ್ಯ ಪರ್ವತಮ್ ॥ 30 ॥
ಎಲೈ ಮಹಾರಾಜನೇ, ಪಾರ್ಥನಿಂದ ಹೊಡೆಯಲ್ಪಟ್ಟ ನಿನ್ನ ಸೈನ್ಯವು ಗಂಗೆಯು ಪರ್ವತವನ್ನು ಸೇರಿ ಎರಡು ಕವಲಾದಂತೆ ಎರಡು ಭಾಗವಾಯಿತು.
ದ್ರೋಣಮೇವಾನ್ವಪದ್ಯಂತ ಕೇಚಿತ್ ತತ್ರ ನರರ್ಷಭಾಃ |
ಕೇಚಿದ್ ದುರ್ಯೋಧನಂ ರಾಜನ್ ತಾಡ್ಯಮಾನಾಃ ಕಿರೀಟಿನಾ ॥31॥
ಅದರಲ್ಲಿ ಕೆಲವು ನರಶ್ರೇಷ್ಠರು ದ್ರೋಣರ ಬಳಿಗೆ ಹೋದರು. ಎಲೈ ರಾಜನೇ, ಇನ್ನು ಕೆಲವರು ಅರ್ಜುನನಿಂದ ಹೊಡೆಯಲ್ಪಟ್ಟು ದುರ್ಯೋಧನನ ಬಳಿಗೆ ಹೋದರು.
ತತ ಏನಂ ನ ಪಶ್ಯಾಮಿ ತೀವ್ರೇಣ ರಜಸಾ ವೃತೇ |
ಗಾಂಡೀವಸ್ಯ ಚ ನಿರ್ಘೋಷಃ ಶ್ರುತೋ ದಕ್ಷಿಣತೋ ಮಯಾ ॥ 32 ॥
ಅನಂತರ ತೀವ್ರವಾದ ಧೂಳಿನಿಂದ ಆವೃತವಾದ ರಣರಂಗದಲ್ಲಿ ನಾನು ಅರ್ಜುನನನ್ನು ಕಾಣಲಿಲ್ಲ. ದಕ್ಷಿಣ ಭಾಗದಲ್ಲಿ ಗಾಂಡೀವ ನಿರ್ಘೋಷವನ್ನು ನಾನು ಕೇಳಿದೆನು.
ಶಂಖದುಂದುಭಿನಿರ್ಘೋಷಂ ವಾದಿತ್ರಾಣಾಂ ಚ ನಿಸ್ವನಮ್ |
ಗಾಂಡೀವಸ್ಯ ತು ನಿರ್ಘೋಷೋ ವ್ಯತಿಕ್ರಮ್ಯಾಸ್ಪ ೃಶದ್ ದಿವಮ್ ॥33॥
ಗಾಂಡೀವದ ನಿರ್ಘೋಷವು ಶಂಖ-ದುಂದುಭಿಗಳ ಘೋಷವನ್ನೂ, ವಾದಿತ್ರಗಳ ಘೋಷವನ್ನೂ ಮೀರಿ ಆಕಾಶವನ್ನು ಮುಟ್ಟಿತು.
ತತಃ ಪುನರ್ದಕ್ಷಿಣತಃ ಸಂಗ್ರಾಮೇ ಚಿತ್ರಯೋಧಿನಃ |
ಸುಯುದ್ಧಮರ್ಜುನಸ್ಯಾಸೀದ್ ಅಹಂ ಚ ದ್ರೋಣಮನ್ವಗಾಮ್ |
ಯೌಧಿಷ್ಠಿರಾಣ್ಯನೀಕಾನಿ ಪ್ರಹರಂತಿ ತತಸ್ತತಃ ॥ 34 ॥
ಅನಂತರ ದಕ್ಷಿಣ ದಿಕ್ಕಿನಲ್ಲಿ ರಣರಂಗದಲ್ಲಿ ವಿಚಿತ್ರವಾಗಿ ಯುದ್ಧವನ್ನು ಮಾಡುವ ಅರ್ಜುನನ ಶ್ರೇಷ್ಠವಾದ ಯುದ್ಧವು ಮುಂದುವರಿಯಿತು. ನಾನು ದ್ರೋಣರನ್ನು ಹಿಂಬಾಲಿಸಿದೆನು. ಯುಧಿಷ್ಠಿರನ ಸೈನ್ಯಗಳು ನಮ್ಮನ್ನು ಭಲ್ಲದಿಂದ ಹೊಡೆದವು.
ನಾನಾವಿಧಾನ್ಯನೀಕಾನಿ ತ್ವದೀಯಾನಿ ವಿಶಾಂಪತೇ |
ಅರ್ಜುನೋ ವ್ಯಧಮತ್ ಕಾಲೇ ದಿವ್ಯಾಭ್ರಾಣೀವ ಮಾರುತಃ ॥ 35 ॥
ಎಲೈ ರಾಜನೇ, ನಿನ್ನ ನಾನಾ ವಿಧವಾದ ಸೈನ್ಯಗಳನ್ನು ಅರ್ಜುನನು ಮಳೆಗಾಲದಲ್ಲಿ ಮಾರುತನು ಆಕಾಶದಲ್ಲಿ ಮೋಡಗಳನ್ನು ನಾಶಪಡಿಸುವಂತೆ ನಾಶಪಡಿಸಿದನು.
ತಂ ವಾಸವಮಿವಾಯಾಂತಂ ಭೂರಿವರ್ಷಂ ಶರೌಘಿಣಮ್ |
ಮಹೇಷ್ವಾಸಂ ನರವ್ಯಾಘ್ರಂ ನೋಗ್ರಂ ಕಶ್ಚಿದವಾರಯತ್ ॥ 36 ॥
ಇಂದ್ರನಂತೆ ಬಾಣಗಳ ದೊಡ್ಡ ಮಳೆಯನ್ನು ಸುರಿಸುತ್ತಾ ಬರುತ್ತಿದ್ದ ಮಹಾಧನುರ್ಧಾರಿಯೂ, ನರಶ್ರೇಷ್ಠನೂ, ಉಗ್ರನೂ ಆದ ಅವನನ್ನು ನಿನ್ನ ಸೈನ್ಯದಲ್ಲಿ ಯಾವನೂ ತಡೆಯಲಿಲ್ಲ.
ತೇ ಹನ್ಯಮಾನಾಃ ಪಾರ್ಥೇನ ತ್ವದೀಯಾ ವ್ಯಥಿತಾ ಭೃಶಮ್ |
ಸ್ವಾನೇವ ಬಹವೋ ಜಘ್ನುರ್ವಿದ್ರವಂತಸ್ತತಸ್ತತಃ ॥ 37 ॥
ಪಾರ್ಥನಿಂದ ಹೊಡೆಯಲ್ಪಟ್ಟು ಬಹಳ ವ್ಯಥಿತರಾದ ನಿನ್ನ ಅನೇಕ ಯೋಧರು ಅಲ್ಲಲ್ಲಿಂದ ಓಡುತ್ತಾ ತಮ್ಮವರನ್ನೇ ಕೊಂದರು.
ಅರ್ಜುನೇನೇಷವೋ ಮುಕ್ತಾಃ ಕಂಕಪತ್ರಾಸ್ತನುಚ್ಛಿದಃ |
ಶಲಭಾ ಇವ ಸಂಪೇತುಃ ಸಂವೃಣ್ವಾನಾ ದಿಶೋ ದಶ ॥ 38 ॥
ಅರ್ಜುನನು ಪ್ರಯೋಗಿಸಿದ ಕಂಕಪತ್ರಗಳನ್ನು ಧರಿಸಿದ, ಶರೀರ ಭೇದಕವಾದ ಬಾಣಗಳು ಹತ್ತು ದಿಕ್ಕುಗಳನ್ನೂ ಆವರಿಸಿ ಪತಂಗಗಳಂತೆ ಎಲ್ಲ ಕಡೆಯಲ್ಲಿಯೂ ಹಾರಿದವು.

ತುರಗಂ ರಥಿನಂ ನಾಗಂ ಪದಾತಿಮಪಿ ಮಾರಿಷ |
ವಿನಿರ್ಭಿದ್ಯ ಕ್ಷಿತಿಂ ಜಗ್ಮುಃ ಸುಪುಂಖಾಃ ಕರ್ದಮಂ ಯಥಾ ॥ 39 ॥
ಎಲೈ ಪೂಜ್ಯನೇ, ಒಳ್ಳೆಯ ಪುಂಖಗಳನ್ನು ಹೊಂದಿದ ಆ ಬಾಣಗಳು ಅಶ್ವವನ್ನೂ, ರಥಿಕನನ್ನೂ, ಗಜವನ್ನೂ, ಪದಾತಿಯನ್ನೂ ಭೇದಿಸಿ ಕೆಸರಿನೊಳಗೆ ಇಳಿದಂತೆ ಭೂಮಿಯಲ್ಲಿ ಇಳಿದವು.
ನ ಚ ದ್ವಿತೀಯಂ ವ್ಯಸೃಜತ್ ಕುಂಜರಾಶ್ವನರೇಷು ಸಃ |
ವ್ಯಕ್ತಮೇಕಶರಾರುಗ್ಣಾ ನಿಪೇತುಸ್ತೇ ಗತಾಸವಃ ॥ 40 ॥
ಅರ್ಜುನನು ಗಜಾಶ್ವ-ಪದಾತಿಗಳಲ್ಲಿ ಎರಡನೆಯ ಬಾಣಗಳನ್ನು ಪ್ರಯೋಗಿಸಲಿಲ್ಲ. ಸ್ಪಷ್ಟವಾಗಿ ಒಂದು ಬಾಣದಿಂದಲೇ ಅವರು ಪೀಡಿತರಾಗಿ ಪ್ರಾಣಗಳನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದರು.
ಹತೈರ್ಮನುಷ್ಯೈಸ್ತುರಗೈಶ್ಚ ಸರ್ವತಃ
ಶರಾಭಿಮೃಷ್ಟೈಶ್ಚ ಗಜೈರ್ನಿಪಾತಿತೈಃ |
ಸೃಗಾಲಗೋಮಾಯುಬಲಾಭಿನಾದಿತಂ
ವಿಚಿತ್ರಮಾಯೋಧಶಿರೋ ಬಭೂವ ಹ ॥ 41 ॥
ಹತರಾದ ಮನುಷ್ಯರಿಂದಲೂ, ಮೃಗಗಳಿಂದಲೂ, ಎಲ್ಲ ಕಡೆಯಲ್ಲಿಯೂ ಬಿದ್ದ ಬಾಣಗಳಿಂದ ಹೊಡೆಯಲ್ಪಟ್ಟ ಗಜಗಳಿಂದಲೂ ಮತ್ತು ನರಿ, ಬಲ ಮೊದಲಾದ ಮಾಂಸಾಹಾರಿ ಪ್ರಾಣಿಗಳನಾದದಿಂದಲೂ ಕೂಡಿದ ಆ ರಣಭೂಮಿಯು ವಿಚಿತ್ರವಾಗಿದ್ದಿತು.
ಪಿತಾ ಸುತಂ ತ್ಯಜತಿ ಸಖಾ ಸಖಾಯಂ |
ತಥೈವ ಪುತ್ರಃ ಪಿತರಂ ಶರಾತುರಮ್ |
ಸ್ವರಕ್ಷಣೇ ಕೃತಮನಸಸ್ತದಾ ನರಾಃ
ತ್ಯಜಂತಿ ವಾಹಾನಪಿ ಪಾರ್ಥಪೀಡಿತಾಃ॥ 42 ॥
ತಂದೆಯು ಮಗನನ್ನು ತ್ಯಜಿಸಿದನು, ಮಿತ್ರನು ಮಿತ್ರನನ್ನು ತ್ಯಜಿಸಿದನು. ಹಾಗೆಯೇ, ಶರಾತುರನಾದ ತಂದೆಯನ್ನು ಮಗನು ತ್ಯಜಿಸಿದನು. ಆಗ ಪಾರ್ಥ ಪೀಡಿತರಾದ ಯೋಧರು ತಮ್ಮ ರಕ್ಷಣೆಯಲ್ಲಿ ಆಸಕ್ತರಾಗಿ ತಮ್ಮ ವಾಹನಗಳನ್ನೂ ತೊರೆದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಅಶ್ವತ್ಥಾಮರಿಂದ ನೀಲನ ವಧೆ.
ಧೃತರಾಷ್ಟ್ರಃ
ತೇಷ್ವನೀಕೇಷು ಭಗ್ನೇಷು ಪಾಂಡುಪುತ್ರೇಣ ಸಂಜಯ |
ಚಲಿತಾನಾಂ ದ್ರುತಾನಾಂ ಚ ಕಥಮಾಸೀನ್ಮನಾಂಸಿ ವಃ ॥ 1 ॥
ಧೃತರಾಷ್ಟ್ರ, ಎಲೈ ಸಂಜಯನೇ, ಪಾಂಡುಪುತ್ರನಾದ ಅರ್ಜುನನಿಂದ ಆ ಸೈನ್ಯಗಳು ಭಗ್ನವಾಗುತ್ತಿರಲು ಅಲ್ಲಿಂದ ಓಡಿಹೋದ ನಿಮ್ಮ ಮನಸ್ಸುಗಳು ಹೇಗಿದ್ದವು?
ಅನೀಕಾನಾಂ ಪ್ರಭಗ್ನಾನಾಮಧಿಷ್ಠಾನಮಪಶ್ಯತಾಮ್ |
ದುಷ್ಕರಂ ಪ್ರತಿಸಂಧಾನಂ ತನ್ಮಮಾಚಕ್ಷ್ವ ಸಂಜಯ ॥ 2 ॥
ಒಂದು ಆಶ್ರಯವನ್ನು ಕಾಣದೆ ಭಗ್ನಗೊಂಡ ಸೈನ್ಯಗಳನ್ನು ಪುನಃ ಒಂದುಗೂಡಿಸುವುದು ಕಷ್ಟಕರವಾದ ಕೆಲಸ. ಸಂಜಯನೇ, ಅದನ್ನು ನನಗೆ ಹೇಳು.
ಸಂಜಯಃ
ತೇ ತಥಾ ಹತಭೂಯಿಷ್ಠಾಸ್ತವ ಪ್ರಿಯಹಿತೈಷಿಣಃ |
ಯಶಃ ಪ್ರವೀರಾ ಲೋಕೇಷು ರಕ್ಷಂತೋ ದ್ರೋಣಮನ್ವಯುಃ ॥ 3 ॥
ಸಂಜಯ ಆ ರೀತಿಯಲ್ಲಿ ಹೆಚ್ಚಾಗಿ ಹತರಾಗಿ ಉಳಿದ ನಿನ್ನ ಪ್ರಿಯ ಹಿತೈಷಿಗಳಾದ, ಶ್ರೇಷ್ಠರಾದ ವೀರರು ಲೋಕದಲ್ಲಿ ತಮ್ಮ ಕೀರ್ತಿಯನ್ನು ರಕ್ಷಿಸಿಕೊಳ್ಳುತ್ತಾ ದ್ರೋಣರನ್ನು ಹಿಂಬಾಲಿಸಿದರು.
ಸಮುದ್ಯತೇಷು ಶಸ್ತ್ರೇಷು ಸಂಪ್ರಾಪ್ತೇ ಚ ಯುಧಿಷ್ಠಿರೇ |
ಅಕುರ್ವನ್ನಾರ್ಯಕರ್ಮಾಣಿ ಭೈರವೇ ಸತ್ಯವಿಕ್ರಮಾಃ ॥ 4 ॥
ಯುಧಿಷ್ಠಿರನು ಯುದ್ಧವನ್ನು ಮಾಡಲು ಸಂಪ್ರಾಪ್ತನಾಗಿ ಅವನಿಂದ ಶಸ್ತ್ರಗಳು ಎತ್ತಿ ಹಿಡಿಯಲ್ಪಡುತಿತರಲು ಸತ್ಯಪರಾಕ್ರಮವುಳ್ಳ ಆ ವೀರರು ಭೀಕರವಾದ ರಣರಂಗದಲ್ಲಿ ಉದಾತ್ತವಾದ ಕರ್ಮಗಳನ್ನು ಮಾಡಿದರು.
ಅಂತರಂ ಭೀಮಸೇನಸ್ಯ ಪ್ರಾಪತನ್ನಮಿತೌಜಸಃ |
ಸಾತ್ಯಕಸ್ಯ ಚ ವೀರಸ್ಯ ಧೃಷ್ಟದ್ಯುಮ್ನಸ್ಯ ಪಾರ್ಥಿವಾಃ ॥ 5 ॥
ಅಮಿತ ಪರಾಕ್ರಮಿಗಳಾದ ರಾಜರು ಭೀಮಸೇನನ, ಸಾತ್ಯಕಿಯ ಮತ್ತು ಧೃಷ್ಟದ್ಯುಮ್ನನ ನಡುವಿನ ಅಂತರದಲ್ಲಿ ಮುಂದೆ ಸಾಗಿದರು.
ದ್ರೋಣಂ ದ್ರೋಣಮಿತಿ ಕ್ರುದ್ಧಾಃ ಪಾಂಚಾಲಾಃ ಸಮಚೋದಯನ್ |

ಮಾ ದ್ರೋಣಮಿತಿ ತೇ ಪುತ್ರಾಃ ಸ್ವಸೈನ್ಯಂ ಸಮಚೋದಯನ್ ॥ 6 ॥
ಕೋಪಗೊಂಡ ಪಾಂಚಾಲರು ದ್ರೋಣರನ್ನು ಹೊಡೆಯಿರಿ, ದ್ರೋಣರನ್ನು ಹೊಡೆಯಿರಿ ಎಂದು ತಮ್ಮ ಯೋಧರನ್ನು ಪ್ರಚೋದಿಸಿದರು.
ನಿನ್ನ ಪುತ್ರರು ದ್ರೋಣರನ್ನು ಹೊಡೆಯುವುದು ಬೇಡ (ಅವರನ್ನು ರಕ್ಷಿಸಿರಿ) ಎಂದು ತಮ್ಮ ಸೈನ್ಯವನ್ನು ಪ್ರಚೋದಿಸಿದರು.
ಪಾಂಡವಾ ದ್ರೋಣಮಿತ್ಯೇವಂ ಮಾ ದ್ರೋಣಮಿತಿ ಚಾಪರೇ |
ಪಾಂಡವಾನಾಂ ಕುರೂಣಾಂ ಚ ದ್ರೋಣದ್ಯೂತಮವರ್ತತ ॥ 7 ॥
ಪಾಂಡವರು ದ್ರೋಣರನ್ನು ಎಂದೂ, ಉಳಿದವರು ದ್ರೋಣರಲ್ಲವೆಂದೂ ಹೇಳುತ್ತಾ ಪಾಂಡವರಿಗೆ ಮತ್ತು ಕೌರವರಿಗೆ ದ್ರೋಣರನ್ನು ಪಣವಾಗಿಟ್ಟ ದ್ಯೂತವು ಜರುಗಿತು.
ಯಂ ಯಂ ಪ್ರಮಥತೇ ದ್ರೋಣಃ ಪಾಂಡವಾನಾಂ ರಥವ್ರಜಮ್ |
ತತ್ರ ತತ್ರ ಸ ಪಾಂಚಾಲ್ಯೋ ಧೃಷ್ಟದ್ಯುಮ್ನೋ ವಿಧೀಯತೇ ॥ 8 ॥
ದ್ರೋಣರು ಪಾಂಡವರ ರಥಸಮೂಹದಲ್ಲಿ ಯಾವ ಯಾವನನ್ನು ಮರ್ದಿಸುತ್ತಾರೆಯೋ ಅಲ್ಲಲ್ಲಿ ಪಾಂಚಾಲನಾದ ಧೃಷ್ಟದ್ಯುಮ್ನನು ಕಳುಹಿಸಲ್ಪಟ್ಟನು.
ತೇಷಾಂ ಭಾಗ್ಯವಿಪರ್ಯಾಸೇ ಸಂಗ್ರಾಮೇ ಭೈರವೇ ಸತಿ |
ವೀರಾಃ ಸಮಾಸದನ್ ವೀರಾನ್ ನಾಗಚ್ಛನ್ ಭೀರವಃ ಪರಾನ್ ॥ 9 ॥
ಅವರ ಭಾಗ್ಯಗಳು ವ್ಯತ್ಯಾಸಗೊಂಡು ಭಯಂಕರವಾದ ಯುದ್ಧವು ನಡೆಯುತ್ತಿರುವಾಗ ವೀರರು ವೀರರನ್ನು ಸಮೀಪಿಸಿ ಎದುರಿಸಿದರು. ಹೇಡಿಗಳು ಶತ್ರುಗಳ ಬಳಿಗೆ ಹೋಗಲೇ ಇಲ್ಲ.
ಅಕಂಪನೀಯಾಃ ಶತ್ರೂಣಾಮಭವಂಸ್ತತ್ರ ಪಾಂಡವಾಃ |
ಅಕಂಪಯನ್ನನೀಕಾನಿ ಸ್ಮರಂತಃ ಕ್ಲೇಶಮಾತ್ಮನಃ ॥ 10 ॥
ಶತ್ರುಗಳಿಂದ ಅಲುಗಾಡಿಸಲ್ಪಡಲು ಸಾಧ್ಯವಿಲ್ಲದ ಪಾಂಡವರು ಅಲ್ಲಿ ತಮ್ಮ ಹಿಂದಿನ ಕ್ಲೇಶಗಳನ್ನು ಸ್ಮರಿಸುತ್ತಾ ನಿನ್ನ ಸೈನ್ಯಗಳನ್ನು ನಡುಗಿಸಿದರು.
ತೇ ಹ್ಯಮರ್ಷವಶಂ ಪ್ರಾಪ್ತಾ ಹ್ರೀಮಂತಃ ಸತ್ತ್ವಚೋದಿತಾಃ |
ತ್ಯಕ್ತತ್ವಾ ಪ್ರಾಣಾನವರ್ತಂತ ನಿಘ್ನಂತೋ ದ್ರೋಣಮಾಹವೇ ॥ 11 ॥
ನಾಚಿಕೆಯುಳ್ಳವರೂ, ತಮ್ಮ ಧೈರ್ಯದಿಂದ ಪ್ರೇರಿತರಾದವರೂ ಆದ ಅವರು ರೋಷಕ್ಕೆ ವಶರಾಗಿ ತಮ್ಮ ಪ್ರಾಣಗಳನ್ನು ಲೆಕ್ಕಿಸದೆ ರಣರಂಗದಲ್ಲಿ ದ್ರೋಣರನ್ನು ಹೊಡೆದರು.
ಅಯಸಾಮಿವ ಸಂಘಾತಃ ಶಿಲಾನಾಮಿವ ಚಾಭವತ್ |
ದೀವ್ಯತಾಂ ತುಮುಲೇ ಯುದ್ಧೇ ಪ್ರಾಣೈರಮಿತತೇಜಸಾಮ್ ॥ 12 ॥
ತೀವ್ರವಾದ ಯುದ್ಧದಲ್ಲಿ ಪ್ರಾಣಗಳಿಂದ ದ್ಯೂತವನ್ನಾಡುವ, ಅಮಿತ ತೇಜಸ್ವಿಗಳಾದ ಅವರ ಸಂಘರ್ಷವು ಶಿಲೆಗಳ ಸಂಘರ್ಷದಂತೆ, ಕಬ್ಬಿಣದ ಸಂಘಾತಗಳಂತೆ ಇದ್ದಿತು.
ನಾನುಸ್ಮರಂತಿ ಸಂಗ್ರಾಮಂ ವೃದ್ಧಾಶ್ಚಾಪಿ ತಥಾವಿಧಮ್ |
ಯೇ ಪೂರ್ವದೇವೈರ್ದೇವಾನಾಮಪಶ್ಯನ್ ಪೂರ್ವಮದ್ಭುತಮ್ |
ದೃಷ್ಟಪೂರ್ವಂ ನ ವೈ ರಾಜನ್ ಶ್ರುತಪೂರ್ವಮಥಾಪಿ ವಾ ॥ 13 ॥
ಯಾವ ವೃದ್ಧರು ಅಸುರರಿಗೂ ಮತ್ತು ದೇವತೆಗಳಿಗೂ ಹಿಂದೆ ನಡೆದ ಅದ್ಭುತವಾದ ಯುದ್ಧವನ್ನು ನೋಡಿದ್ದರೋ ಅವರೂ ಸಹ ಕುರು-ಪಾಂಡವರಿಗೆ ನಡೆಯುತ್ತಿರುವ ಸಂಗ್ರಾಮದಂತಹ ಸಂಗ್ರಾಮವನ್ನು ಸ್ಮರಿಸಲಿಲ್ಲ.
ಎಲೈ ರಾಜನೇ, ಇಂತಹ ಯುದ್ಧವನ್ನು ಹಿಂದೆ ನೋಡಿಯೂ ಇರಲಿಲ್ಲ ಅಥವಾ ಕೇಳಿಯೂ ಇರಲಿಲ್ಲ.
ಪ್ರಕಂಪತೇ ಚ ಪೃಥಿವೀ ತತ್ರ ವೀರಾವಸಾದನೇ |
ವಿವರ್ತತಾ ಜನೌಘೇನ ಮಹತಾ ಭಾರಪೀಡಿತಾ ॥ 14 ॥
ಎಲ್ಲ ವೀರರೂ ಒಂದುಗೂಡಿದ ಕಡೆಯಲ್ಲಿ ಭೂಮಿಯು ಯೋಧರ ಸಮೂಹದ ಮಹಾಭಾರದಿಂದ ಪೀಡಿತವಾಗಿ ನಡುಗಿತು.
ಬಲೌಘಸ್ಯ ಚ ಭೀಮಸ್ಯ ದಿವಂ ಸ್ತಬ್ಧ್ವೇವ ನಿಸ್ವನಃ |
ಅಜಾತಶತ್ರೋಃ ಕ್ರುದ್ಧಸ್ಯ ಪುತ್ರಸ್ಯ ತವ ಚಾಭವತ್ ॥ 15 ॥
ಕ್ರುದ್ಧನಾದ ಅಜಾತಶತ್ರುವಿನ ಮತ್ತು ನಿನ್ನ ಪುತ್ರನ ಭಯಂಕರವಾದ ಸೈನ್ಯ ಸಮೂಹದಿಂದ ಉಂಟಾದ ದೊಡ್ಡ ನಾದವು ಆಕಾಶವನ್ನು ಸ್ತಬ್ಧಗೊಳಿಸುವವಂತೆ ಇದ್ದಿತು.
ಸಮಾಸಾದ್ಯ ಚ ಪಾಂಡೂನಾಮನೀಕಾನಿ ಸಹಸ್ರಶಃ |
ದ್ರೋಣೇನ ಚರತಾ ಸಂಖ್ಯೇ ಪ್ರಭಗ್ನಾನಿ ಶಿತೈಃ ಶರೈಃ ॥ 16 ॥
ದ್ರೋಣರು ಯುದ್ಧದಲ್ಲಿ ಸಂಚರಿಸುತ್ತಾ ಪಾಂಡವರ ಸೈನ್ಯಗಳನ್ನು ಸಮೀಪಿಸಿ ತಮ್ಮ ಬಾಣಗಳಿಂದ ಸಹಸ್ರ ಸಂಖ್ಯೆಯಲ್ಲಿ ಅವುಗಳನ್ನು ಭಗ್ನಗೊಳಿಸಿದರು.
ತೇಷು ಪ್ರಮಥ್ಯಮಾನೇಷು ದ್ರೋಣೇನಾದ್ಭುತಕರ್ಮಣಾ |
ಪರ್ಯವಾರಯದಾಸಾದ್ಯ ದ್ರೋಣಂ ಸೇನಾಪತಿಃ ಸ್ವಯಮ್ ॥ 17 ॥
ಅದ್ಭುತ ಕಾರ್ಯವನ್ನು ಮಾಡುವ ದ್ರೋಣರಿಂದ ಸೈನ್ಯವು ಮರ್ದಿಸಲ್ಪಡುತ್ತಿರಲು ಸೇನಾಪತಿಯಾದ ಧೃಷ್ಟದ್ಯುಮ್ನನು ಸ್ವತಃ ಬಂದು ದ್ರೋಣರನ್ನು ಎಲ್ಲ ಕಡೆಗಳಿಂದ ತಡೆದನು.
ತದ್ ಯುದ್ಧಮಭವದ್ ಘೋರಂ ದ್ರೋಣಪಾಂಚಾಲ್ಯಯೋಸ್ತದಾ |

ನೈವ ತಸ್യೋಪಮಾ ಕಾಚಿದಿತಿ ಮೇ ನಿಶ್ಚಿತಾ ಮತಿಃ ॥ 18 ॥
ದ್ರೋಣ-ಪಾಂಚಾಲರಿಗೆ ಆಗ ಘೋರವಾದ ಯುದ್ಧವು ಉಂಟಾಯಿತು. ಆ ಯುದ್ಧಕ್ಕೆ ಯಾವ ದೃಷ್ಟಾಂತವೂ ಇಲ್ಲವೆಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ತತೋ ನೀಲೋಽನಲಪ್ರಖ್ಯಃ ದದಾಹ ಕುರುವಾಹಿನೀಮ್ |
ಶರಸ್ಫುಲಿಂಗಶ್ಚಾಪಾರ್ಚಿಃ ಶುಷ್ಕಕಕ್ಷಮಿವಾನಲಃ ॥ 19 ॥
ಆಗ ನೀಲನು (ಇವನು ಒಬ್ಬ ಪಾಂಚಾಲ ರಾಜ) ಶರಗಳೆಂಬ ಕಿಡಿಗಳಿಂದಲೂ, ಚಾಪವೆಂಬ ಜ್ವಾಲೆಯಿಂದಲೂ ಕೂಡಿದವನಾಗಿ ಅಗ್ನಿಯನ್ನು ಹೋಲುತ್ತಾ, ಅಗ್ನಿಯು ಒಣಗಿದ ಹುಲ್ಲುಗಾವಲನ್ನು ಸುಡುವಂತೆ ಕೌರವರ ಸೈನ್ಯವನ್ನು ದಹಿಸಿದನು.
ತಂ ದಹಂತಮನೀಕಾನಿ ದ್ರೋಣಪುತ್ರಃ ಪ್ರತಾಪವಾನ್ |
ಪೂರ್ವಾಭಿಭಾಷೀ ಸುಶ್ಲಕ್ಷ್ಣಂ ಸ್ಮಯಮಾನೋಽಭ್ಯಭಾಷತ ॥ 20 ॥
ಸೈನ್ಯವನ್ನು ಸುಡುತ್ತಿದ್ದ ಅವನನ್ನು ಕುರಿತು ಪ್ರತಾಪಶಾಲಿಯಾದ, ದ್ರೋಣ ಪುತ್ರರಾದ ಅಶ್ವತ್ಥಾಮರು ನಗುತ್ತಾ ಮೊದಲೇ ಮಾತನಾಡಿಸುವ ಅವರು ಮಧುರವಾಗಿ ಮಾತನಾಡಿದರು.
ನೀಲ ಕಿಂ ಬಹುಭಿರ್ದಗ್ಧೈಸ್ತವ ಯೋಧೈಃ ಶರಾರ್ಚಿಷಾ |
ಮಯೈಕೇನೈವ ಯುದ್ಧ್ಯಸ್ವ ಕ್ರುದ್ಧಃ ಪ್ರಹರ ಚಾಶುಗೈಃ ॥ 21 ॥
ಎಲೈ ನೀಲನೇ, ನಿನ್ನ ಬಾಣದ ಜ್ವಾಲೆಗಳಿಂದ ಬಹಳ ಯೋಧರನ್ನು ದಹಿಸುವುದರಿಂದ ಏನು ಪ್ರಯೋಜನ? ನನ್ನೊಬ್ಬನ ಜೊತೆಯಲ್ಲಿಯೇ ಯುದ್ಧವನ್ನು ಮಾಡು. ಕೋಪಗೊಂಡು ಶೀಘ್ರಗಾಮಿಗಳಾದ ಬಾಣಗಳಿಂದ ನನ್ನನ್ನು ಹೊಡೆ (ಎಂದು ಹೇಳಿದರು).
ಸಂಜಯಃ
ತಂ ಪದ್ಮನಿಕರಾಕಾರಂ ಪದ್ಮಪತ್ರನಿಭೇಕ್ಷಣಮ್ |
ವ್ಯಾಕೋಶಪದ್ಮಾಭಮುಖಂ ನೀಲೋ ವಿವ್ಯಾಧ ಪತ್ರಿಭಿಃ ॥ 22 ॥
ಸಂಜಯ ನೀಲನು ಪದ್ಮಸಮೂಹದ ಆಕಾರವನ್ನು ಹೊಂದಿದ್ದ, ಪದ್ಮದಳದಂತಹ ಕಣ್ಣುಗಳನ್ನು ಹೊಂದಿದ, ಅರಳಿದ ಪದ್ಮದಂತಹ ಮುಖವನ್ನು ಹೊಂದಿದ ಅಶ್ವತ್ಥಾಮರನ್ನು ಬಾಣಗಳಿಂದ ಹೊಡೆದರು.
ತೇನಾತಿವಿದ್ಧಃ ಸಹಸಾ ದ್ರೌಣಿರ್ಭಲ್ಲೈಸ್ತ್ರಿಭಿಃ ಶಿತೈಃ |
ಧನುರ್ಧ್ವಜಂ ಚ ಛತ್ರಂ ಚ ದ್ವಿಷತಃ ಸನ್ನ್ಯಕೃಂತತ ॥ 23 ॥
ಅವನಿಂದ ಬಹಳವಾಗಿ ಹೊಡೆಯಲ್ಪಟ್ಟ ಅಶ್ವತ್ಥಾಮರು ತಕ್ಷಣ ಮೂರು ಹರಿತವಾದ ಭಲ್ಲಗಳಿಂದ ಶತ್ರುವಾದ ಅವನ ಧನುಸ್ಸನ್ನೂ, ಧ್ವಜವನ್ನೂ ಮತ್ತು ಛತ್ರವನ್ನೂ ಚೆನ್ನಾಗಿ ಕತ್ತರಿಸಿದರು.
ಸೋತ್ಪ್ಲುತ್ಯ ಸ್ಯಂದನಾತ್ ತಸ್ಮಾನ್ನೀಲಶ್ಚರ್ಮವರಾಸಿಧೃಕ್ |
ದ್ರೌಣಾಯನೇಃ ಶಿರಃ ಕಾಯಾದ್ಧರ್ತುಮೈಚ್ಛತ್ ಪತತ್ರಿವತ್ ॥ 24 ॥
ನೀಲನು ಖಡ್ಗ-ಚರ್ಮಗಳನ್ನು ಹಿಡಿದು ಪಕ್ಷಿಯಂತೆ ತನ್ನ ರಥದಿಂದ ಮೇಲಕ್ಕೆ ಹಾರಿ, ಅಶ್ವತ್ಥಾಮರ ಶಿರಸ್ಸನ್ನು ಅವರ ದೇಹದಿಂದ ಕತ್ತರಿಸಲು ಬಯಸಿದನು.
ತಸ್ಯೋದ್ಯತಾಸೇಶ್ಚರತಃ ಶಿರಃ ಕಾಯಾತ್ ಸಕುಂಡಲಮ್ |
ಭಲ್ಲೇನಾಪಾಹರದ್ ದ್ರೌಣಿಃ ಸ್ಮಯಮಾನ ಇವಾನಘ ॥ 25 ॥
ಎಲೈ ಅನಘನೇ, ಅಶ್ವತ್ಥಾಮರು ಕತ್ತಿಯನ್ನು ಎತ್ತಿ ತಿರುಗುವ ಅವನ ಕುಂಡಲ ಸಹಿತವಾದ ಶಿರಸ್ಸನ್ನು ಭಲ್ಲದಿಂದ ನಗುತ್ತಲೇ ಅವನ ಶರೀರದಿಂದ ಕತ್ತರಿಸಿದರು.
ಸಂಪೂರ್ಣಚಂದ್ರಾಭಮುಖಃ ಪದ್ಮಪತ್ರನಿಭೇಕ್ಷಣಃ |
ಪ್ರಾಂಶುರುತ್ಪಲಪತ್ರಾಭೋ ನಿಹತೋ ನ್ಯಪತದ್ ಭುವಿ ॥ 26 ॥
ಪೂರ್ಣಚಂದ್ರನಂತಹ ಮುಖವುಳ್ಳವನೂ, ಪದ್ಮದಳದಂತಹ ಕಣ್ಣುಳ್ಳವನೂ, ಉನ್ನತನಾದವನೂ, ಉತ್ಪಲ ಪತ್ರದ ಕಾಂತಿಯುಳ್ಳವನೂ ಆದ ನೀಲನು ಹತನಾಗಿ ಭೂಮಿಯ ಮೇಲೆ ಬಿದ್ದನು.
ತತಃ ಪ್ರವಿವ್ಯಥೇ ಸೇನಾ ಪಾಂಡವೀ ಭೃಶಮಾಕುಲಾ |
ಆಚಾರ್ಯಪುತ್ರೇಣ ಹತೇ ನೀಲೇ ಜ್ವಲಿತತೇಜಸಿ ॥ 27 ॥
ಆಚಾರ್ಯಪುತ್ರರಾದ ಅಶ್ವತ್ಥಾಮರಿಂದ ಜ್ವಲಿಸುವ ತೇಜಸ್ಸುಳ್ಳ ನೀಲನು ಹತನಾಗುತ್ತಿರಲು ಪಾಂಡವರ ಸೇನೆಯು ಆಕುಲಗೊಂಡು ಬಹಳವಾಗಿ ವ್ಯಥೆಯನ್ನು ಹೊಂದಿತು.
ಅಚಿಂತಯಂಶ್ಚ ತೇ ಸರ್ವೇ ಪಾಂಡವಾನಾಂ ಮಹಾರಥಾಃ |
ಕಥಂ ನೋ ವಾಽಸ್ವಸ್ತಿ ನಾಯಾತ್ ಶತ್ರುಭ್ಯ ಇತಿ ಮಾರಿಷ ॥28॥
ಎಲೈ ಪೂಜ್ಯನೇ, ಮಹಾರಥರಾದ ಎಲ್ಲ ಪಾಂಡವರು ಶತ್ರುಗಳಿಂದ ನಮಗೆ ಹೇಗೆ ಅನಿಷ್ಟವು ಉಂಟಾಗಲಾರದು ಎಂದು ಚಿಂತಿಸಿದರು.

ದಕ್ಷಿಣೇನ ತು ಸೇನಾಯಾಃ ಕುರುತೇ ಕದನಂ ಬಲೀ |
ಸಂಶಪ್ತಕಾವಶೇಷಸ್ಯ ನಾರಾಯಣಬಲಸ್ಯ ಚ ॥ 29 ॥
ಸೈನ್ಯದ ದಕ್ಷಿಣ ಭಾಗದಲ್ಲಿ ಬಲಿಷ್ಠನಾದ ಅರ್ಜುನನು ಉಳಿದ ಸಂಶಪ್ತಕರ ಮತ್ತು ನಾರಾಯಣಸೇನೆಯ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ (ಎಂದು ಚಿಂತಿಸಿದರು).
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿಂಶೋಽಧ್ಯಾಯಃ ॥

॥ ಸಂಶಪ್ತಕವಧಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಸಂಕುಲ ಯುದ್ಧ ವರ್ಣನೆ. ದ್ರೋಣರ ಸೇನಾಪತ್ಯದಲ್ಲಿ
ಎರಡನೆಯ ದಿವಸದ ಸೇನಾವಹಾರ.
ಸಂಜಯಃ
ಪ್ರತಿಘಾತಂ ತು ಸೈನ್ಯಾನಾಂ ನಾಮೃಷ್ಯತ ವೃಕೋದರಃ |
ಅಭಿನದ್ ಬಾಹ್ಲಿಕಂ ಷಷ್ಟ್ಯಾ ಕರ್ಣಂ ಚ ದಶಭಿಃ ಶರೈಃ ॥ 1 ॥
ಸಂಜಯ ತನ್ನ ಸೈನ್ಯದ ಪ್ರತಿಘಾತವನ್ನು ವೃಕೋದರನು ಸಹಿಸಲಿಲ್ಲ. ಅವನು ಬಾಹ್ಲಿಕನನ್ನು ಅರವತ್ತು ಬಾಣಗಳಿಂದಲೂ, ಕರ್ಣನನ್ನು ಹತ್ತು ಬಾಣಗಳಿಂದಲೂ ಭೇದಿಸಿದನು.
ತಸ್ಯ ದ್ರೋಣಃ ಶಿತೈರ್ಬಾಣೈಸ್ತೀಕ್ಷ್ಣಧಾರೈಃ ಸುತೇಜನೈಃ |
ಜೀವಿತಾಂತಮಭಿಪ್ರೇಪ್ಸುರ್ಮರ್ಮಣ್ಯಭ್ಯಹನದ್ ಬಲೀ ॥ 2 ॥
ಬಲಿಷ್ಠರಾದ ದ್ರೋಣರು ವೃಕೋದರನನ್ನು ವಧೆ ಮಾಡಲು ಬಯಸಿ ತೀಕ್ಷ್ಣವಾದ ಅಲುಗುಗಳುಳ್ಳ ವೇಗಶಾಲಿಗಳಾದ ನಿಶಿತವಾದ ಬಾಣಗಳಿಂದ ಭೀಮಸೇನನ ಮರ್ಮಗಳಲ್ಲಿ ಹೊಡೆದರು.
ಕರ್ಣೋ ದ್ವಾದಶಭಿರ್ಬಾಣೈರಶ್ವತ್ಥಾಮಾ ಚ ಸಪ್ತಭಿಃ |
ಷಷ್ಟ್ಯಾ ದುರ್ಯೋಧನೋ ರಾಜಾ ತ ಏನಂ ಸಮವಾರಯನ್ ॥ 3 ॥
ಕರ್ಣನು ಹನ್ನೆರಡು ಬಾಣಗಳಿಂದಲೂ, ಅಶ್ವತ್ಥಾಮರು ಏಳು ಬಾಣಗಳಿಂದಲೂ, ರಾಜನಾದ ದುರ್ಯೋಧನನು ಅರವತ್ತು ಬಾಣಗಳಿಂದಲೂ ಭೀಮಸೇನನನ್ನು ತಡೆದರು.
ಭೀಮಸೇನೋಽಪಿ ತಾನ್ ಸರ್ವಾನ್ ಪ್ರತ್ಯವಿದ್ಧ್ಯನ್ಮಹಾಬಲಃ |
ದ್ರೋಣಂ ಪಂಚಾಶತಾ ಭಲ್ಲೈಃ ಕರ್ಣಂ ಚ ದಶಭಿಃ ಶರೈಃ ॥ 4 ॥
ದುರ್ಯೋಧನಂ ದ್ವಾದಶಭಿರ್ದ್ರೌಣಿಮಷ್ಟಭಿರಾಶುಗೈಃ |
ಆರಾವಂ ತುಮುಲಂ ಕುರ್ವನ್ನಭ್ಯವರ್ತತ ತಾನ್ ರಣೇ ॥ 5 ॥
ಮಹಾಬಲನಾದ ಭೀಮಸೇನನು ಅವರೆಲ್ಲರನ್ನೂ ಬಾಣಗಳಿಂದ ಹೊಡೆದನು. ದ್ರೋಣರನ್ನು ಐವತ್ತು ಭಲ್ಲಗಳಿಂದಲೂ, ಕರ್ಣನನ್ನು ಹತ್ತು ಬಾಣಗಳಿಂದಲೂ, ದುರ್ಯೋಧನನನ್ನು ಹನ್ನೆರಡು ಬಾಣಗಳಿಂದಲೂ, ಅಶ್ವತ್ಥಾಮರನ್ನು ವೇಗಶಾಲಿಗಳಾದ ಎಂಟು ಬಾಣಗಳಿಂದಲೂ ಹೊಡೆದು ತೀವ್ರವಾದ ನಾದವನ್ನು ಮಾಡುತ್ತಾ ಅವರ ಕಡೆಗೆ ನುಗ್ಗಿದನು.
ತಸ್ಮಿನ್ ಸಂತ್ಯಜತಿ ಪ್ರಾಣಾನ್ ಮೃತ್ಯುಸಾಧಾರಣಂ ಗತೇ |
ಅಜಾತಶತ್ರುಃ ಸ್ವಾನ್ ಯೋಧಾನ್ ಭೀಮಂ ತ್ರಾತೇತ್ಯಚೋದಯತ್ ॥
ಭೀಮಸೇನನು ಅವರ ಪ್ರಹಾರಗಳಿಂದ ಮರಣದಂತಹ ಅವಸ್ಥೆಯನ್ನು ಹೊಂದುತ್ತಿರಲು ಯುಧಿಷ್ಠಿರನು ತನ್ನ ಯೋಧರನ್ನು ಕುರಿತು ಭೀಮನನ್ನು ರಕ್ಷಿಸಿ ಎಂದು ಪ್ರಚೋದಿಸಿದನು.
ತೇ ಯಯುರ್ಭೀಮಸೇನಸ್ಯ ಸಮೀಪಮಮಿತೌಜಸಃ |
ಸೌಭದ್ರೋ ಯುಯುಧಾನಶ್ಚ ಮಾದ್ರೀಪುತ್ರೌ ಚ ಪಾಂಡವೌ ॥ 7 ॥
ಅಮಿತಪರಾಕ್ರಮಿಗಳಾದ ಅಭಿಮನ್ಯು, ಸಾತ್ಯಕಿ ಮತ್ತು ಪಾಂಡುಪುತ್ರರಾದ ನಕುಲ-ಸಹದೇವರು ಭೀಮಸೇನನ ಬಳಿಗೆ ಹೋದರು.
ತೇ ಸಮೇತ್ಯ ತು ಸಂರಬ್ಧಾಃ ಸಹಿತಾಃ ಪುರುಷರ್ಷಭಾಃ |
ಮಹೇಷ್ವಾಸವರೈರ್ಗುಪ್ತಂ ದ್ರೋಣಾನೀಕಂ ಬಿಭಿತ್ಸವಃ ॥ 8 ॥
ಸಮಾಪೇತುರ್ಮಹಾವೀರ್ಯಾ ಭೀಮಪ್ರಭೃತಯೋ ರಥಾಃ |
ತಾನ್ ಪ್ರತ್ಯಗೃಹ್ಣಾದವ್ಯಗ್ರೋ ದ್ರೋಣೋಽಪಿ ರಥಿನಾಂ ವರಃ ॥ 9 ॥
ಕೋಪಗೊಂಡ ಆ ಪುರುಷಶ್ರೇಷ್ಠರಾದ, ಮಹಾಪರಾಕ್ರಮಶಾಲಿಗಳಾದ ಭೀಮ ಮೊದಲಾದ ಮಹಾರಥರು ಒಟ್ಟಾಗಿ ಮಹಾಧನುರ್ಧಾರಿಗಳಿಂದ ರಕ್ಷಿತವಾದ ದ್ರೋಣರ ಸೈನ್ಯವನ್ನು ಭಗ್ನಗೊಳಿಸಲು ಬಯಸಿ ಅದರ ಮೇಲೆ ಎರಗಿದರು. ರಥಿಶ್ರೇಷ್ಠರಾದ ದ್ರೋಣರೂ ಸಹ ಯಾವ ಗಡಿಬಿಡಿಯಿಲ್ಲದೆ ಅವರನ್ನು ಸ್ವೀಕರಿಸಿದರು.
ಪ್ರತ್ಯದೃಶ್ಯಂತ ಪಾರ್ಥಾನಾಂ ಸ್ವೇಷಾಮಪಿ ಮಹಾರಥಾಃ |
ತೇ ವೈ ಹ್ಯತಿಬಲಾ ವೀರಾ ಶೂರಾಃ ಸಮರಯೋಧಿನಃ |
ಬಾಹ್ಯಂ ಮೃತ್ಯುಭಯಂ ಕೃತ್ವಾ ತಾವಕಾನ್ ಪಾಂಡವಾ ಯಯುಃ ॥10॥
ಪಾಂಡವರ ಮತ್ತು ಕೌರವರ ಮಹಾರಥರು ಮುಂದೆ ಬಂದರು. ಅವರು ಅತಿಬಲಿಷ್ಠರು, ವೀರರು, ಶೂರರು ಮತ್ತು ಒಳ್ಳೆಯ ಯುದ್ಧವನ್ನು ಮಾಡುವವರು. ಪಾಂಡವರು ಮೃತ್ಯುಭಯರಹಿತರಾಗಿ ನಿನ್ನವರನ್ನು ಸಮೀಪಿಸಿದರು.
ಸಾದಿನಃ ಸಾದಿನೋಽಭ್ಯಘ್ನನ್ನಭ್ಯಘ್ನನ್ ರಥಿನೋ ರಥಾನ್ |
ಅಸಿಶಕ್ತ್ಯೃಷ್ಟಿ ಸಂಘಾತೈರ್ಯುದ್ಧಮಾಸೀತ್ ಪರಶ್ವಧೈಃ |
ಪ್ರವೃದ್ಧಮಾಸೀತ್ ತದ್ ಯುದ್ಧಂ ಪ್ರತತಂ ರೋಮಹರ್ಷಣಮ್ ॥
ಅಶ್ವಾರೋಹಿಗಳು ಅಶ್ವಾರೋಹಿಗಳನ್ನು ಕೊಂದರು. ರಥಿಕರು ರಥರನ್ನು ಕೊಂದರು. ಖಡ್ಗಗಳಿಂದ, ಶಕ್ತಿ-ಋಷ್ಟಿಸಮೂಹಗಳಿಂದ ಮತ್ತು ಪರಶ್ವಧಗಳಿಂದ ಯುದ್ಧವು ನಡೆಯಿತು. ರೋಮಾಂಚಕಾರಿಯಾದ ಆ ಯುದ್ಧವು ವಿಸ್ತಾರವಾಗಿ ಬೆಳೆಯಿತು.

ಕುಂಜರಾಣಾಂ ತು ಸಂಪಾತೇ ಯುದ್ಧಮಾಸೀತ್ ಸುದಾರುಣಮ್ |
ಪ್ರಹೃಷ್ಟಮಸಿಯುದ್ಧಂ ಚ ಬಭೂವ ಕಟುಕೋದಯಮ್ ॥ 12 ॥
ಗಜಗಳಿಗೂ ಸಂಘರ್ಷವುಂಟಾಗಿ ದಾರುಣವಾದ ಯುದ್ಧವು ನಡೆಯಿತು. ಭೀಕರವಾದ ಫಲವನ್ನು ಹೊಂದಿದ, ಸಂತೋಷದಿಂದ ಕೂಡಿದ ಖಡ್ಗಯುದ್ಧವೂ ನಡೆಯಿತು.
ಅಪತನ್ ಕುಂಜರಾದನ್ಯೇ ಹಯಾದನ್ಯೇ ಪ್ರದುದ್ರುವುಃ |
ನರಾ ಬಾಣೇನ ಸಂವಿದ್ಧಾ ರಥಾದನ್ಯೇಽಪತನ್ ಕ್ಷಿತೌ ॥ 13 ॥
ಬಾಣದಿಂದ ಹೊಡೆಯಲ್ಪಟ್ಟ ಮನುಷ್ಯರಲ್ಲಿ ಕೆಲವರು ಗಜಗಳಿಂದ ಬಿದ್ದರು. ಕೆಲವರು ಕುದುರೆಯಿಂದ ಇಳಿದು ಓಡಿ ಹೋದರು. ಇನ್ನು ಕೆಲವರು ರಥಗಳಿಂದ ಭೂಮಿಯ ಮೇಲೆ ಬಿದ್ದರು.
ಸಮ್ಮಮರ್ದ ರಥಾಚ್ಚಾಪಿ ಪತಿತಸ್ಯಾಪಿ ವರ್ತ್ಮನಿ |
ಶಿರಃ ಪ್ರಧ್ವಂಸಯಾಮಾಸ ವಕ್ಷಸ್ಯಾಕ್ರಮ್ಯ ಕುಂಜರಃ ॥ 14 ॥
ರಥಗಳಿಂದ ಭೂಮಿಯ ಮೇಲೆ ಬಿದ್ದು ತಮ್ಮ ಮಾರ್ಗದಲ್ಲಿ ಸಿಲುಕಿದ ಯೋಧರನ್ನು ಆನೆಗಳು ಅವರ ಎದೆಯನ್ನು ತುಳಿದು ಶಿರಸ್ಸನ್ನು ಪುಡಿ ಮಾಡಿದವು.
ಅಪರೇಽಪ್ಯಪರಾನ್ ಮೃದ್ನನ್ ವಾರಣಾಃ ಪತಿತಾನ್ ನರಾನ್ |
ವಿಷಾಣೈರ್ಧರಣೀಂ ಗತ್ವಾ ವ್ಯಭಿಂದನ್ ರಥಿನೋ ಬಹೂನ್ ॥ 15 ॥
ಇನ್ನು ಕೆಲವು ಗಜಗಳು ಭೂಮಿಯ ಮೇಲೆ ಬಿದ್ದ ಯೋಧರನ್ನು ತುಳಿದು ಮರ್ದಿಸಿದವು. ತಮ್ಮ ದಂತಗಳಿಂದ ಭೂಮಿಯನ್ನು ತಿವಿದು ಅನೇಕ ರಥಿಕರನ್ನು ಭಗ್ನಗೊಳಿಸಿದವು.
ನರಾನನ್ಯೇ ವಿಷಾಣಾಗ್ರೈರ್ಲಗ್ನಾಸೃಗ್ಭಿಃ ಕ್ಷತೈಃ ಪರೈಃ |
ಬಭ್ರಮೂ ರುಷಿತಾ ನಾಗಾ ಮೃದ್ನಂತಃ ಶತಶೋ ನರಾನ್ ॥ 16 ॥
ಇನ್ನೊಬ್ಬರನ್ನು ತಿವಿಯುವುದರಿಂದ ಉಂಟಾದ ಗಾಯಗಳಿಂದ ರಕ್ತಸಿಕ್ತವಾದ ವಿಷಾಣಾಗ್ರಗಳಿಂದ ಗಜಗಳು ಯೋಧರನ್ನು ಮರ್ದಿಸಿದವು. ಕೋಪಗೊಂಡ ಗಜಗಳು ಯೋಧರನ್ನು ನೂರರ ಸಂಖ್ಯೆಯಲ್ಲಿ ಮರ್ದಿಸುತ್ತಾ ರಣರಂಗದಲ್ಲಿ ತಿರುಗಾಡಿದವು.
ಕಾಂಸ್ಯಾಯಸತನುತ್ರಾಣಾನ್ ನರಾಶ್ವರಥಕುಂಜರಾನ್ |
ಪತಿತಾನ್ ಪೋಥಯಾಂಚಕ್ರುಃ ದ್ವಿಪಾಶ್ಚ ನಳಿನೀಮಿವ ॥ 17 |
ಆನೆಗಳು ಪದ್ಮಸರೋವರವನ್ನು ನಾಶಗೊಳಿಸಿದಂತೆ ಕಂಚಿನ ಮತ್ತು ಕಬ್ಬಿಣದ ಕವಚಗಳನ್ನು ಧರಿಸಿದ ನೆಲದ ಮೇಲೆ ಬಿದ್ದಯೋಧರನ್ನೂ, ಅಶ್ವ-ರಥ-ಗಜಗಳನ್ನೂ ಆನೆಗಳು ಮರ್ದಿಸಿದವು.
ಗೃಧ್ರಪತ್ರಾಧಿವಾಸಾಂಸಿ ಶಯನಾನ್ಯತ್ರ ಪಾರ್ಥಿವಾಃ |
ಹ್ರೀಮಂತಃ ಕಾಲಸಂಪ್ರಾಪ್ತಾಃ ಸುದುಃಖಮಧಿಶೇರತೇ ॥ 18 ॥
ನಾಚಿಕೆಯುಳ್ಳ ರಾಜರು ಮರಣಕ್ಕೆ ಸಮೀಪರಾಗಿ ಬಾಣಗಳ ಗೃಧ್ರಪತ್ರಗಳ ಶಯನದಲ್ಲಿ ದುಃಖದಿಂದ ಮಲಗಿದರು.
ಹಂತಿ ಸ್ಮಾಥ ಪಿತಾ ಪುತ್ರಂ ರಥೇನ ಹ್ಯತಿವರ್ತಿನಾ |
ಪುತ್ರಸ್ತು ಪಿತರಂ ಮೋಹಾನ್ನಿರ್ಮರ್ಯಾದಮವರ್ತತ ॥ 19 ॥
ಅಕ್ಷೋ ಭಗ್ನೋ ಧ್ವಜಶ್ಛಿನ್ನಃ ಛತ್ರಮುರ್ವ್ಯಾಂ ನಿಪಾತಿತಮ್ |
ಯುಗಾರ್ಧಂ ಛಿನ್ನಮಾದಾಯ ಪ್ರಾದ್ರವಂತ ಹಯಾಃ ಕ್ವಚಿತ್ ॥ 20 ॥
ವೇಗವಾಗಿ ದಾಟಿಹೋಗುವ ರಥದಿಂದ ತಂದೆಯು ಮಗನನ್ನು ಕೊಂದನು. ಮೌಢ್ಯದಿಂದ ಪುತ್ರನು ತಂದೆಯನ್ನು ಕೊಂದನು. ಯುದ್ಧವು ಎಲ್ಲೆಯನ್ನು ಮೀರಿ ನಡೆಯಿತು. ರಥಗಳ ಅಕ್ಷವು ಭಗ್ನವಾಯಿತು. ಧ್ವಜವು ಕತ್ತರಿಸಲ್ಪಟ್ಟಿತು. ಛತ್ರವು ಭೂಮಿಯಲ್ಲಿ ಬಿದ್ದಿತು. ಕತ್ತರಿಸಲ್ಪಟ್ಟ ಅರ್ಧನೊಗವನ್ನು ಹೊತ್ತು ಅಶ್ವಗಳು ಓಡಿಹೋದವು.
ಸಾಸಿರ್ನಿಪತಿತೋ ಬಾಹುಃ ಶಿರಶ್ಛಿನ್ನಂ ಸಕುಂಡಲಮ್ |
ಗಜೇನಾಕ್ಷಿಪ್ಯ ಬಲಿನಾ ರಥಃ ಸಂಚೂರ್ಣಿತಃ ಕ್ಷಿತೌ ॥ 21 ॥
ಖಡ್ಗ ಸಹಿತವಾದ ಬಾಹುಗಳು ಕತ್ತರಿಸಲ್ಪಟ್ಟವು. ಕುಂಡಲ ಸಹಿತವಾದ ಶಿರಸ್ಸು ಕತ್ತರಿಸಲ್ಪಟ್ಟಿತು. ಬಲಿಷ್ಠವಾದ ಗಜವು ರಥವನ್ನು ಎಸೆದು, ತುಳಿದು ಭೂಮಿಯಲ್ಲಿ ಅದನ್ನು ಪುಡಿಮಾಡಿತು.
ರಥಿನಾ ತಾಡಿತೋ ನಾಗೋ ನಾರಾಚೇನಾಪತತ್ ಕ್ಷಿತೌ |
ಸಾರೋಹಃ ಪತಿತೋ ವಾಜೀ ಗಜೇನಾಪೀಡಿತೋ ಭೃಶಮ್ |
ನಿರ್ಮರ್ಯಾದಂ ಮಹದ್ ಯುದ್ಧಂ ಪ್ರಾವರ್ತತ ಸುದಾರುಣಮ್ ॥
ರಥಿಕನಿಂದ ನಾರಾಚದಿಂದ ಹೊಡೆಯಲ್ಪಟ್ಟ ಗಜವು ಭೂಮಿಯ ಮೇಲೆ ಬಿದ್ದಿತು. ಗಜದಿಂದ ಬಹಳವಾಗಿ ಪೀಡಿತವಾದ ಅಶ್ವವು ಅಶ್ವಾರೋಹಿಯ ಜೊತೆಯಲ್ಲಿ ನೆಲಕ್ಕೆ ಬಿದ್ದಿತು. ಎಲ್ಲೆಯನ್ನು ಮೀರಿದ, ಬಹಳ ದಾರುಣವಾದ ದೊಡ್ಡ ಯುದ್ಧವು ನಡೆಯಿತು.
ಹಾ ತಾತ ಹಾ ಪುತ್ರ ಸಖೇ ಕ್ವಾಸಿ ತಿಷ್ಠ ಕ್ವ ಧಾವಸಿ |
ಪ್ರಹರಾಹರ ಹಂತಾಸ್ಮಿ ನದಕ್ಷ್ವೇಳಿತಗರ್ಜಿತೈಃ ॥ 23 ॥
ಇತ್ಯೇವಮುಚ್ಚೈರತ್ಯರ್ಥಂ ಶ್ರೂಯಂತೇ ವಿವಿಧಾ ಗಿರಃ ॥ 24 ॥
ಸಿಂಹನಾದಗಳಿಂದಲೂ, ಗರ್ಜನೆಗಳಿಂದಲೂ, ಯುದ್ಧನಾದಗಳಿಂದಲೂ ಮಿಶ್ರಿತವಾದ `ಅಯ್ಯೋ ತಂದೆಯೇ! ಅಯ್ಯೋ ಪುತ್ರನೇ! ಸ್ನೇಹಿತನೇ! ಎಲ್ಲಿದ್ದೀಯೆ? ನಿಲ್ಲು, ಎಲ್ಲಿಗೆ ಹೋಗುತ್ತಿದ್ದೀಯೆ? ಹೊಡೆ, ಎಳೆದು ತಾ, ಕೊಲ್ಲುವೆನು' ಮೊದಲಾದ ವಿಧವಿಧವಾದ ಗಟ್ಟಿಯಾದ ಮಾತುಗಳು ಕೇಳಿಬಂದವು.
ನರಸ್ಯಾಶ್ವಸ್ಯ ನಾಗಸ್ಯ ಸಮಸಜ್ಜತ ಶೋಣಿತಮ್ |

ಉಪಾಶಾಮ್ಯದ್ ರಜೋ ಭೌಮಂ ಭೀರೂನ್ ಕಶ್ಮಲಮಾವಿಶತ್ ॥25॥
ಪದಾತಿಗಳ, ಅಶ್ವಗಳ ಮತ್ತು ಗಜಗಳ ರಕ್ತಗಳು ಮಿಶ್ರಿತವಾದವು. ಭೂಮಿಯ ಧೂಳು ಅಡಗಿತು. ಹೇಡಿಗಳನ್ನು ಭಯವು ಆವರಿಸಿತು.
ಆಸೀತ್ ಕೇಶಪರಾಮರ್ಶೋ ಮುಷ್ಟಿಯುದ್ಧಂ ಚ ದಾರುಣಮ್ |
ನಖೈರ್ದಂತೈಶ್ಚ ಶೂರಾಣಾಮದ್ವಿಪೈರ್ದ್ವಿಪಮಿಚ್ಛತಾಮ್ ॥ 26 ॥
ಕೇಶಪರಾಮರ್ಶವೂ ದಾರುಣವಾದ ಮುಷ್ಟಿ ಯುದ್ಧವೂ ಉಂಟಾಯಿತು. ಶೂರರ ನಖ-ದಂತಗಳಿಂದಲೂ ಯುದ್ಧವು ಜರುಗಿತು.
ತಮ್ಮ ಗಜಗಳನ್ನು ಕಳೆದುಕೊಂಡ ಗಜಾರೋಹಿಗಳು ಪದಾತಿಗಳಾಗಿ ಶತ್ರುಗಜವನ್ನು ಕೊಲ್ಲಲು ಬಯಸಿದರು.
ತತ್ರಾಚ್ಛಿದ್ಯತ ಶೂರಸ್ಯ ಸಖಡ್ಗೋ ಬಾಹುರುದ್ಯತಃ |
ಸಧನುಶ್ಚಾಪರಸ್ಯಾಪಿ ಸಶರಃ ಸಾಂಕುಶಸ್ತಥಾ ॥ 27 ॥
ಶೂರನ ಖಡ್ಗಸಹಿತವಾಗಿ ಎತ್ತಿದ ಬಾಹುವು ಕತ್ತರಿಸಲ್ಪಟ್ಟಿತು. ಧನುಸ್ಸನ್ನು ಹಿಡಿದ, ಬಾಣವನ್ನು ಹಿಡಿದ, ಅಂಕುಶವನ್ನು ಹಿಡಿದ ಬೇರೆ ಯೋಧರ ಬಾಹುಗಳೂ ಕತ್ತರಿಸಲ್ಪಟ್ಟವು.
ಪ್ರಾಕ್ರೋಶದನ್ಯಮನ್ಯತ್ರ ತಥಾನ್ಯೋಽಭಿಮುಖೋಽದ್ರವತ್ |
ತತಃ ಪ್ರಾಪ್ತಃ ಸ ಚಾಪ್ಯನ್ಯಃ ಶಿರಃ ಕಾಯಾದಪಾಹರತ್ ॥ 28 ॥
ಒಬ್ಬ ವೀರನು ಇನ್ನೊಬ್ಬನನ್ನು ನೋಡಿ ಕಿರುಚಿದನು. ಮೂರನೆಯವನು ಮೊದಲನೆಯವನಿಗೆ ಅಭಿಮುಖವಾಗಿ ಬಂದನು. ಆಗ ಅಲ್ಲಿಗೆ ಬಂದ ಇನ್ನೊಬ್ಬ ನಾಲ್ಕನೆಯವನು ಮೊದಲನೆಯವನ ಶಿರಸ್ಸನ್ನು ಕತ್ತರಿಸಿದನು.
ಭೀತಶ್ಚಾನ್ಯ ಉದಕ್ರೋಶದ್ ಅನ್ಯೋ ಭೀತ ಉಪಾದ್ರವತ್ |
ಅಸಂಪ್ರಾಪ್ತಸ್ಯ ತಂ ದೇಶಮನ್ಯೋ ಜೀವಿತಮಾದದೇ ॥ 29 ॥
ಒಬ್ಬನು ಭಯದಿಂದ ಕಿರುಚಿದನು. ಭೀತನಾದ ಇನ್ನೊಬ್ಬನು ಅಲ್ಲಿಗೆ ಓಡಿ ಬಂದನು. ಅವನು ಆ ಪ್ರದೇಶವನ್ನು ತಲುಪುವುದಕ್ಕಿಂತ ಮೊದಲೇ ಇನ್ನೊಬ್ಬನು ಅವನನ್ನು ಕೊಂದನು.
ಸ ಶಬ್ದಮಕರೋಚ್ಚಾನ್ಯಃ ಶಬ್ದಾದನ್ಯೋಽತ್ರಸದ್ ಭೃಶಮ್ |
ತಾನನ್ಯೋಽಥ ಪರಾನನ್ಯೋ ಜಘಾನ ನಿಶಿತೈಃ ಶರೈಃ ॥ 30 ॥
ಒಬ್ಬನು ದೊಡ್ಡ ಶಬ್ದವನ್ನು ಮಾಡಿದನು. ಅದರಿಂದ ಇನ್ನೊಬ್ಬನು ಬಹಳವಾಗಿ ಹೆದರಿದನು. ಅವರನ್ನು ಇನ್ನೊಬ್ಬನು, ಶತ್ರುಗಳನ್ನು ಮತ್ತೊಬ್ಬನು ಹರಿತವಾದ ಬಾಣಗಳಿಂದ ಕೊಂದನು.
ಗಿರಿಶೃಂಗೋಪಮಶ್ಚಿತ್ರೋ ಬಾಣೈಶ್ಚಿತ್ರೈರ್ನಿಪಾತಿತಃ |
ಮಾತಂಗೋ ನ್ಯಪತದ್ ಭೂಮೌ ನದೀರೋಧ ಇವೋಷ್ಣಗೇ ॥ 31 ॥
ಪರ್ವತಶಿಖರದಂತಿದ್ದ ವಿಚಿತ್ರವಾದ ಗಜವು ವಿಚಿತ್ರವಾದ ಬಾಣಗಳಿಂದ ಭೂಮಿಯ ಮೇಲೆ ಮಳೆಗಾಲದಲ್ಲಿ ನದಿಯ ತೀರದಂತೆ ಬಿದ್ದಿತು.
ತಥೈವ ರಥಿನಂ ನಾಗಃ ಕ್ಷರನ್ ಗಿರಿರಿವಾರುಜತ್ |
ಅವಾತಿಷ್ಠತ್ ಪದಾ ಭೂಮೌ ಸಹಾಶ್ವಂ ಸಹಸಾರಥಿಮ್ ॥ 32 ॥
ಹಾಗೆಯೇ, ರಥಿಕರನ್ನು ಧಾತುವನ್ನು ಸುರಿಸುವ ಪರ್ವತದಂತಿದ್ದ ಗಜವು ಹಿಂಸಿಸಿತು. ಅಶ್ವ ಸಹಿತನಾದ ಸಾರಥಿಯನ್ನು ಭೂಮಿಯಲ್ಲಿ ತನ್ನ ಪಾದದಿಂದ ತುಳಿಯಿತು.
ಶೂರಾನ್ ಪ್ರಹರತೋ ದೃಷ್ಟ್ವಾ ಕೃತಾಸ್ತ್ರಾನ್ ರುಧಿರೋಕ್ಷಿತಾನ್ |
ಬಹೂನತ್ಯಾವಿಶನ್ಮೋಹೋ ಭೀರೂನ್ ಹೃದಯದುರ್ಬಲಾನ್ ॥ 33 ॥
ಅಸ್ತ್ರಸಂಪನ್ನರೂ, ರಕ್ತಸಿಕ್ತರೂ ಆದ ಶೂರರು ಪ್ರಹಾರ ಮಾಡುವುದನ್ನು ನೋಡಿ ಹೃದಯ ದುರ್ಬಲರಾದ ಅನೇಕ ಭೀರುಗಳಿಗೆ ಮೂರ್ಛೆಯುಂಟಾಯಿತು.
ಸರ್ವಮಾವಿಗ್ನಮಭವನ್ನ ಪ್ರಾಜ್ಞಾಯತ ಕಿಂಚನ |
ಸೈನ್ಯೇನ ರಜಸಾ ಗ್ರಸ್ತೇ ನಿರ್ಮರ್ಯಾದಮವರ್ತತ ॥ 34 ॥
ಸೈನ್ಯದಿಂದ ಎದ್ದ ಧೂಳಿನಿಂದ (ರಣರಂಗವು) ಆವೃತವಾಗಿರಲು ಎಲ್ಲವೂ ಬಹಳ ಮಿಶ್ರಿತವಾಯಿತು. ಯಾವುದೂ ಸರಿಯಾಗಿ ತಿಳಿದುಬರಲಿಲ್ಲ. ಎಲ್ಲೆಯನ್ನು ಮೀರಿದ ಯುದ್ಧವು ನಡೆಯಿತು.
ತತಃ ಸೇನಾಪತಿಃ ಶೀಘ್ರಮಯಂ ಕಾಲ ಇತಿ ಬ್ರುವನ್ |
ನಿತ್ಯಾಭಿತ್ವರಿತಾನೇವ ತ್ವರಯಾಮಾಸ ಪಾಂಡವಾನ್ ॥ 35 ॥
ಸೇನಾಪತಿಯಾದ ಧೃಷ್ಟದ್ಯುಮ್ನನು ಶೀಘ್ರವಾಗಿ ಇದು ಸರಿಯಾದ ಕಾಲವೆಂದು ಹೇಳುತ್ತಾ, ಯಾವಾಗಲೂ ತ್ವರೆಯಿಂದ ಕೂಡಿದ ಪಾಂಡವರನ್ನು ಇನ್ನೂ ತ್ವರೆಗೊಳಿಸಿದನು.
ಕುರ್ವಂತಃ ಶಾಸನಂ ತಸ್ಯ ಪಾಂಡವಾ ಬಾಹುಶಾಲಿನಃ |
ಸರೋ ಹಂಸಾ ಇವಾಪೇತುರ್ಘ್ನಂತೋ ದ್ರೋಣರಥಂ ಪ್ರತಿ ॥36॥
ಸೇನಾಪತಿಯ ಶಾಸನವನ್ನು ಪಾಲಿಸುತ್ತಾ, ಬಾಹುಶಾಲಿಗಳಾದ ಪಾಂಡವರು ಹಂಸಗಳು ಸರೋವರಕ್ಕೆ ಇಳಿದಂತೆ ಬಾಣಪ್ರಯೋಗವನ್ನು ಮಾಡುತ್ತಾ ದ್ರೋಣರ ರಥದ ಮೇಲೆ ಎರಗಿದರು.
ಪ್ರತಿಗೃಹ್ಣೀತ ಜಹಿ ತಚ್ಛಿಂಧಿ ಭಿಂಧಿ ಹತಾಹತ |
ಇತಿ ಶಬ್ದೋ ಮಹಾನಾಸೀದಾಚಾರ್ಯಸ್ಯ ರಥಂ ಪ್ರತಿ ॥ 37 ॥
ಹಿಡಿ, ಕೊಲ್ಲು, ಅದನ್ನು ಕತ್ತರಿಸು, ಭಗ್ನಗೊಳಿಸು, ಹೊಡೆ- ಮೊದಲಾದ ದೊಡ್ಡ ಶಬ್ದಗಳು ದ್ರೋಣರ ರಥದ ಬಳಿ ಕೇಳಿಬಂದವು.
ತತೋ ದ್ರೋಣಃ ಕೃಪಃ ಕರ್ಣಃ ಸ ಚ ರಾಜಾ ಜಯದ್ರಥಃ |

ವಿಂದಾನುವಿಂದಾವಾವಂತ್ಯೌ ಶಲ್ಯಶ್ಚೈತಾನವಾರಯನ್ ॥ 38 ॥
ಆಗ ದ್ರೋಣರು, ಕೃಪರು, ಕರ್ಣ, ರಾಜನಾದ ಜಯದ್ರಥ, ಅವಂತಿ ದೇಶದ ವಿಂದಾನುವಿಂದರು ಮತ್ತು ಶಲ್ಯ ಇವರು ಪಾಂಡವರನ್ನು ತಡೆದರು.
ಅವಾರ್ಯಕರ್ಮಸಂರಬ್ಧಾ ದುರ್ನಿವಾರ್ಯಾ ನಿವಾರಿತಾಃ।
ಶೂರತ್ವಾನ್ನ ಜಹುರ್ದ್ರೋಣಂ ಪಾಂಚಾಲಾಃ ಸಹ ಪಾಂಡವೈಃ ॥ 39 ॥
ನಿವಾರಿಸಲಾರದ ಕರ್ಮದಲ್ಲಿ ಪ್ರವೃತ್ತರಾದವರೂ, ಬಹಳ ಕೋಪಗೊಂಡವರೂ, ನಿವಾರಿಸಲು ಕಷ್ಟಸಾಧ್ಯರೂ ಆದ ಪಾಂಡವರು ಮತ್ತು ಪಾಂಚಾಲರು ಹೀಗೆ ತಡೆಯಲ್ಪಟ್ಟರೂ ಶೂರರಾದ ಕಾರಣದಿಂದ ದ್ರೋಣರನ್ನು ಬಿಡಲಿಲ್ಲ.
ತತೋ ದ್ರೋಣಃ ಭೃಶಂ ಕ್ರುದ್ಧೋ ವ್ಯಸೃಜಚ್ಛತಶಃ ಶರಾನ್।
ಚೇದಿಪಾಂಚಾಲಪಾಂಡೂನಾಂ ಕುರ್ವನ್ ವಿಶಸನಂ ಮಹತ್ ॥ 40 ॥
ಆಗ ದ್ರೋಣರು ಬಹಳ ಕ್ರುದ್ಧರಾಗಿ ಚೇದಿ-ಪಾಂಚಾಲ-ಪಾಂಡುಗಳನ್ನು ಬಹಳವಾಗಿ ಹಿಂಸಿಸುತ್ತಾ ನೂರಾರು ಸಂಖ್ಯೆಯಲ್ಲಿ ಬಾಣಗಳನ್ನು ಪ್ರಯೋಗಿಸಿದರು.
ತಸ್ಯ ಜ್ಯಾತಳನಿರ್ಘೋಷಃ ಶುಶ್ರುವೇ ದಿಕ್ಷು ಮಾರಿಷ।
ವಜ್ರಸಂಕಾಶನಿರ್ಹ್ರಾದಃ ತ್ರಾಸಯನ್ ಸೃಂಜಯಾನ್ ಬಹೂನ್ ॥41॥
ಎಲೈ ಪೂಜ್ಯನೇ, ಅವರ ಜ್ಯಾತಳದ ನಿರ್ಘೋಷವು ವಜ್ರಸಂಘರ್ಷದ ನಾದದಂತೆ ಅನೇಕ ಸೃಂಜಯರನ್ನು ಭಯಗೊಳಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಕೇಳಿ ಬಂದಿತು.
ಏತಸ್ಮಿನ್ನಂತರೇ ಜಿಷ್ಣುರ್ಹತ್ವಾ ಸಂಶಪ್ತಕಾನ್ ಪುನಃ।
ಅಭ್ಯಯಾತ್ ತತ್ರ ಯತ್ರ ಸ್ಮ ದ್ರೋಣಃ ಪಾಂಡೂನ್ ಪ್ರಮರ್ದತಿ ॥
ಈ ಮಧ್ಯದಲ್ಲಿ ಅರ್ಜುನನು ಸಂಶಪ್ತಕರನ್ನು ಕೊಂದು ದ್ರೋಣರು ಪಾಂಡವರನ್ನು ಮರ್ದಿಸುವ ಸ್ಥಳಕ್ಕೆ ಬಂದನು.
ತಾಂ ಶರೌಘಮಹಾವರ್ತಾಂ ಶೋಣಿತೌಘವಹಾಂ ನದೀಮ್।
ತೀರ್ಣಃ ಸಂಶಪ್ತಕಾನ್ ಹತ್ವಾ ಪ್ರತ್ಯದೃಶ್ಯತ ಫಲ್ಗುನಃ ॥ 43 ॥
ಬಾಣಗಳ ಸಮೂಹಗಳೆಂಬ ಮಹಾಸುಳಿಯನ್ನುಳ್ಳ, ರಕ್ತ ಜಲಪ್ರವಾಹವುಳ್ಳ ಆ ನದಿಯನ್ನು ದಾಟಿ ಸಂಶಪ್ತಕರನ್ನು ಕೊಂದ ಅರ್ಜುನನು ಕಂಡುಬಂದನು.
ತಸ್ಯ ಕೀರ್ತಿಮತೋ ಲಕ್ಷ್ಮ ಸೂರ್ಯಪ್ರತಿಮತೇಜಸಃ।
ದೀಪ್ಯಮಾನಮಪಶ್ಯಾಮ ತೇಜಸಾ ವಾನರಧ್ವಜಮ್ ॥ 44 ॥
ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ, ಕೀರ್ತಿವಂತನಾದ ಅವನ ಚಿಹ್ನೆಯಾದ ಅವನ ರಥದ ತೇಜಸ್ಸಿನಿಂದ ಬೆಳಗುವ ವಾನರ ಧ್ವಜವನ್ನು ನೋಡಿದೆವು.
ಸಂಶಪ್ತಕಸಮುದ್ರಂ ತಮುಚ್ಛೋಷ್ಯಾಸ್ತ್ರಗಭಸ್ತಿಭಿಃ।
ಸ ಪಾಂಡವಯುಗಾಂತಾರ್ಕಃ ಕುರೂನಭ್ಯಾಗಮಜ್ಜವಾತ್ ॥ 45 ॥
ಸಂಶಪ್ತಕರೆಂಬ ಸಮುದ್ರವನ್ನು ತನ್ನ ಅಸ್ತ್ರಗಳೆಂಬ ಕಿರಣಗಳಿಂದ ಒಣಗಿಸಿ ಅರ್ಜುನನೆಂಬ ಆ ಯುಗಾಂತ ಸೂರ್ಯನು ಕುರುಗಳ ಬಳಿಗೆ ಶೀಘ್ರವಾಗಿ ಬಂದನು.
ಸ ದದಾಹ ಕುರೂನ್ ಸರ್ವಾನರ್ಜುನಃ ಶಸ್ತ್ರತೇಜಸಾ।
ಯುಗಾಂತೇ ಸರ್ವಭೂತಾನಿ ಧೂಮಕೇತುರಿವೋತ್ಥಿತಃ ॥ 46 ॥
ಯುಗಾಂತಕಾಲದಲ್ಲಿ ಸಮೃದ್ಧವಾದ ಅಗ್ನಿಯು ಎಲ್ಲ ಪ್ರಾಣಿಗಳನ್ನೂ ದಹಿಸುವಂತೆ ಅರ್ಜುನನು ತನ್ನ ಶಸ್ತ್ರತೇಜಸ್ಸಿನಿಂದ ಎಲ್ಲ ಕುರುಗಳನ್ನೂ ದಹಿಸಿದನು.
ತೇನ ಬಾಣಸಹಸ್ರೌಘೈರ್ಗಜಾಶ್ವರಥಯೋಧಿನಃ।
ತಾಡ್ಯಮಾನಾಃ ಕ್ಷಿತಿಂ ಜಗ್ಮುರ್ಮುಕ್ತಶಸ್ತ್ರಶರಾಸನಾಃ ॥ 47 ॥
ಅವನಿಂದ ಸಹಸ್ರಾರು ಬಾಣಗಳ ಸಮೂಹದಿಂದ ಹೊಡೆಯಲ್ಪಟ್ಟ ಗಜಾಶ್ವ-ರಥ ಯೋಧರು ತಮ್ಮ ಶಸ್ತ್ರಗಳನ್ನೂ, ಧನುಸ್ಸುಗಳನ್ನೂ ಬಿಟ್ಟು ಭೂಮಿಯ ಮೇಲೆ ಬಿದ್ದರು.
ಕೇಚಿದಾರ್ತಸ್ವರಂ ಚಕ್ರುರ್ವಿನೇದುರಪರೇ ಪುನಃ।
ಪಾರ್ಥಬಾಣಹತಾಃ ಕೇಚಿನ್ನಿಪೇತುಶ್ಚ ಗತಾಸವಃ ॥ 48 ॥
ಅರ್ಜುನನ ಬಾಣದಿಂದ ಹತರಾದ ಕೆಲವರು ಆರ್ತಸ್ವರವನ್ನು ಮಾಡಿದರು, ಕೆಲವರು ವೀರನಾದವನ್ನು ಮಾಡಿದರು, ಇನ್ನು ಕೆಲವರು ಮೃತರಾಗಿ ಭೂಮಿಯ ಮೇಲೆ ಬಿದ್ದರು.
ತೇಷಾಮುತ್ಪತಿತಾನ್ ಕಾಂಶ್ಚಿತ್ ಪತಿತಾಂಶ್ಚ ಪರಾಙ್ಮುಖಾನ್।
ನ ಜಘಾನಾರ್ಜುನೋ ಯೋಧಾನ್ ಯೋಧವ್ರತಮನುಸ್ಮರನ್ ॥49॥
ಅವರಲ್ಲಿ ಪಲಾಯಿತರಾದ ಕೆಲವರನ್ನು, ಭೂಮಿಯ ಮೇಲೆ ಬಿದ್ದ ಕೆಲವರನ್ನು ಮತ್ತು ಯುದ್ಧ ವಿಮುಖರಾದ ಕೆಲವರನ್ನು ಯೋಧವ್ರತವನ್ನು ಸ್ಮರಿಸಿದ ಅರ್ಜುನನು ಕೊಲ್ಲಲಿಲ್ಲ.
ತೇ ಚ ಜೀರ್ಣರಥಾಶ್ವೇಭಾಃ ಪ್ರಾಯಶಶ್ಚ ಪರಾಙ್ಮುಖಾಃ।
ಕುರವಃ ಕರ್ಣ ಕರ್ಣೇತಿ ಹಾ ಹಾ ಚೇತಿ ವಿಚುಕ್ರುಶುಃ॥ 50 ॥
ಆ ಕುರುಗಳು ರಥಾಶ್ವ-ಗಜಗಳನ್ನು ಕಳೆದುಕೊಂಡು ಪ್ರಾಯಶಃ ಯುದ್ಧ ಪರಾಙ್ಮುಖರಾಗಿ `ಕಣರ್ನೇ-ಕರ್ಣನೇ, ಅಯ್ಯೋ-ಅಯ್ಯೋ!' ಎಂದು ಕಿರುಚಿದರು.

ತಮಾಧಿರಥಿರಾಕ್ರಂದಂ ವಿಜ್ಞಾಯ ಶರಣೈಷಿಣಾಮ್ |
ಮಾ ಭೈಷ್ಟೇತಿ ಪ್ರತಿಶ್ರುತ್ಯ ಯಯಾವಭಿಮುಖೋಽರ್ಜುನಮ್ ॥51॥
ತನ್ನಿಂದ ರಕ್ಷಣೆಯನ್ನು ಬಯಸುವ ಅವರ ಆಕ್ರಂದನವನ್ನು ಕೇಳಿ ಕರ್ಣನು ಹೆದರಬೇಡಿ ಎಂದು ಗಟ್ಟಿಯಾಗಿ ಹೇಳಿ ಅರ್ಜುನನಿಗೆ ಅಭಿಮುಖವಾಗಿ ಹೋದನು.
ಸ ಭಾರತರಥಶ್ರೇಷ್ಠಃ ಸರ್ವಭಾರತಹರ್ಷಣಃ |
ಪ್ರಾದುಶ್ಚಕ್ರೇ ತದಾಽಽಗ್ನೇಯಮಸ್ತ್ರಮಸ್ತ್ರವಿದಾಂ ವರಃ ॥ 52 ॥
ಭಾರತ ಸೈನ್ಯದಲ್ಲಿ ಶ್ರೇಷ್ಠನಾದ ರಥನಾದ, ಸರ್ವಸೈನ್ಯವನ್ನು ಹರ್ಷಗೊಳಿಸುವ, ಅಸ್ತ್ರಜ್ಞಾನಿಗಳಲ್ಲಿ ಶ್ರೇಷ್ಠನಾದ, ಅವನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು.
ತಸ್ಯ ದೀಪ್ತಶರೌಘಸ್ಯ ದೀಪ್ತಚಾಪರಥಸ್ಯ ಚ |
ವಾರುಣೇನ ತದಸ್ತ್ರೇಣ ವಿದುಧಾವ ಧನಂಜಯಃ |
ಅಸ್ತ್ರಮಸ್ತ್ರೇಣ ಸಂವಾರ್ಯ ಪ್ರಾಣದದ್ ವಿಸೃಜನ್ ಶರಾನ್ ॥ 53 ॥
ಪ್ರಕಾಶಮಾನವಾದ ಬಾಣಸಮೂಹಗಳನ್ನು, ಧನುಸ್ಸು ಮತ್ತು ರಥಗಳನ್ನು ಹೊಂದಿದ ಅವನ ಅಸ್ತ್ರವನ್ನು ಅರ್ಜುನನು ವಾರುಣಾಸ್ತ್ರದಿಂದ ನಿವಾರಿಸಿ ಬಾಣಗಳನ್ನು ಪ್ರಯೋಗಿಸುತ್ತಾ ಸಿಂಹನಾದವನ್ನು ಮಾಡಿದನು.
ಧೃಷ್ಟದ್ಯುಮ್ನಶ್ಚ ಭೀಮಶ್ಚ ಸಾತ್ಯಕಿಶ್ಚ ಮಹಾರಥಃ |
ವಿವ್ಯಧುಃ ಕರ್ಣಮಾಸಾದ್ಯ ತ್ರಿಭಿಸ್ತ್ರಿಭಿರಜಿಹ್ಮಗೈಃ ॥ 54 ॥
ಧೃಷ್ಟದ್ಯುಮ್ನ, ಭೀಮ ಮತ್ತು ಮಹಾರಥನಾದ ಸಾತ್ಯಕಿ ಇವರು ಕರ್ಣನ ಸಮೀಪಕ್ಕೆ ಬಂದು, ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ಅವನನ್ನು ಹೊಡೆದರು.
ಅರ್ಜುನಾಸ್ತ್ರಂ ತು ರಾಧೇಯಃ ಸಂವಾರ್ಯ ಶರವೃಷ್ಟಿಭಿಃ |
ತೇಷಾಂ ತ್ರಯಾಣಾಂ ಚಾಪಾನಿ ಚಿಚ್ಛೇದ ವಿಶಿಖೈಸ್ತ್ರಿಭಿಃ ॥ 55 ॥
ಕರ್ಣನು ಅರ್ಜುನನ ಅಸ್ತ್ರವನ್ನು ಬಾಣಗಳ ಮಳೆಯಿಂದ ನಿವಾರಿಸಿ, ಆ ಮೂವರ ಧನುಸ್ಸುಗಳನ್ನು ಮೂರು ಬಾಣಗಳಿಂದ ಕತ್ತರಿಸಿದನು.
ತೇ ನಿಕೃತ್ತಾಯುಧಾಃ ಶೂರಾ ನಿರ್ವಿಷಾ ಇವ ಪನ್ನಗಾಃ |
ಅಥ ಶಕ್ತೀಃ ಸಮುತ್ಕ್ಷಿಪ್ಯ ಭುಜೈಃ ಸಿಂಹಾ ಇವಾನದನ್ ॥ 56 ॥
ಆ ಶೂರರು ತಮ್ಮ ಆಯುಧಗಳು ಕತ್ತರಿಸಲ್ಪಡುತ್ತಿರಲು ವಿಷರಹಿತವಾದ ಸರ್ಪಗಳಂತೆ ತಮ್ಮ ಭುಜಗಳಿಂದ ಶಕ್ತಿಗಳನ್ನು ಎತ್ತಿ ಹಿಡಿದು ಸಿಂಹಗಳಂತೆ ನಾದವನ್ನು ಮಾಡಿದರು.
ತಾ ಭುಜಾಗ್ರೈರ್ವಿನಿರ್ಮುಕ್ತಾ ನಿರ್ಮುಕ್ತಭುಜಗೋಪಮಾಃ |
ದೀಪ್ಯಮಾನಾ ಮಹಾಶಕ್ತ್ಯ ಜಗ್ಮುರಾಧಿರಥಿಂ ಪ್ರತಿ ॥ 57 ॥
ಅವರ ಶ್ರೇಷ್ಠವಾದ ಭುಜಗಳಿಂದ ಪ್ರಯೋಗಿಸಲ್ಪಟ್ಟ, ಪೊರೆಯನ್ನು ಕಳಚಿದ ಸರ್ಪದಂತಿದ್ದ, ಪ್ರಕಾಶಮಾನವಾದ ಆ ಮಹಾಶಕ್ತಿಗಳು ಕರ್ಣನ ಕಡೆಗೆ ಬಂದವು.
ತಾ ನಿಕೃತ್ಯ ಶರೈಸ್ತೀಕ್ಷ್ಣೈ ರ್ಣ್ಯಃ ಸಿಂಹನಾದಂ ಚಕಾರ ಹ |
ನನಾದ ಬಲವಾನ್ ಕರ್ಣಃ ಪಾರ್ಥಾಯ ವಿಸೃಜನ್ ಶರಾನ್ ॥ 58 ॥
ಬಲಿಷ್ಠನಾದ ಕರ್ಣನು ಅವುಗಳನ್ನು ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿ, ಅರ್ಜುನನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾ ಸಿಂಹನಾದವನ್ನು ಮಾಡಿದನು.
ಅರ್ಜುನಶ್ಚಾಪಿ ರಾಧೇಯಂ ವಿದ್ಧ್ವಾ ಸಪ್ತಭಿರಾಶುಗೈಃ |
ಕರ್ಣಾದವರಜಂ ಬಾಣೈರ್ಜಘಾನ ನಿಶಿತೈಸ್ತ್ರಿಭಿಃ ॥ 59 ॥
ಅರ್ಜುನನೂ ಸಹ ಶೀಘ್ರಗಾಮಿಗಳಾದ ಏಳು ಬಾಣಗಳಿಂದ ಕರ್ಣನನ್ನು ಹೊಡೆದು, ಕರ್ಣನ ತಮ್ಮನನ್ನು ಹರಿತವಾದ ಮೂರು ಬಾಣಗಳಿಂದ ಕೊಂದನು.
ತತಃ ಶತ್ರುಂಜಯಂ ಹತ್ವಾ ಪಾರ್ಥಃ ಷಡ್ಭಿರಜಿಹ್ಮಗೈಃ |
ಜಹಾರ ಸದ್ಯೋ ಭಲ್ಲೇನ ದ್ವಿಧಾ ತಸ್ಯ ಶಿರೋ ರಥಾತ್ ॥ 60 ॥
ಅನಂತರ ಅರ್ಜುನನು ನೇರವಾಗಿ ಸಾಗುವ ಆರು ಬಾಣಗಳಿಂದ ಶತ್ರುಂಜಯನನ್ನು ಹೊಡೆದು, ಭಲ್ಲದಿಂದ ಅವನ ಶಿರಸ್ಸನ್ನು ಎರಡು ಭಾಗವಾಗಿ ಕಡಿದು ರಥದಿಂದ ಉರುಳಿಸಿದನು.
ಪಶ್ಯತಾಂ ಧಾರ್ತರಾಷ್ಟ್ರಾಣಾಮೇವಮೇತೇ ಕಿರೀಟಿನಾ |
ಪ್ರಮುಖೇ ಸೂತಪುತ್ರಸ್ಯ ಸೋದರ್ಯಾ ನಿಹತಾಸ್ತ್ರಯಃ ॥ 61 ॥
ದುರ್ಯೋಧನಾದಿಗಳು ನೋಡುತ್ತಿರುವಂತೆಯೇ ಮತ್ತು ಕರ್ಣನ ಎದುರಿನಲ್ಲಿಯೇ ಅರ್ಜುನನಿಂದ ಅವನ ಈ ಮೂರು ಸಹೋದರರರು ಕೊಲ್ಲಲ್ಪಟ್ಟರು.
ತತೋ ಭೀಮಃ ಸಮುತ್ಪತ್ಯ ಸ್ವರಥಾದ್ ವೈನತೇಯವತ್ |
ಜಘಾನ ಸೂತಪುತ್ರಸ್ಯ ಬಾಂಧವಾನ್ ದಶ ಪಂಚ ಚ ॥ 62 ॥
ಆಗ ಭೀಮನು ತನ್ನ ರಥದಿಂದ ಗರುಡನಂತೆ ಹಾರಿ ಕರ್ಣನ ಹದಿನೈದು ಬಂಧುಗಳನ್ನು ಕೊಂದನು.
ಪುನಃ ಸ್ವರಥಮಾಸ್ಥಾಯ ಧನುರಾದಾಯ ವೀರ್ಯವಾನ್ |
ವಿವ್ಯಾಧ ದಶಭಿಃ ಕರ್ಣಂ ಸೂತಮಶ್ವಾಂಶ್ಚ ಪಂಚಭಿಃ ॥ 63 ॥

ಪುನಃ ಅಲ್ಲಿಂದ ತನ್ನ ರಥಕ್ಕೆ ಹಾರಿ ಧನುಸ್ಸನ್ನು ತೆಗೆದುಕೊಂಡು ಪರಾಕ್ರಮಶಾಲಿಯಾದ ಅವನು ಹತ್ತು ಬಾಣಗಳಿಂದ ಕರ್ಣನನ್ನೂ, ಅವನ ಸಾರಥಿ ಮತ್ತು ಅಶ್ವಗಳನ್ನು ಐದು ಬಾಣಗಳಿಂದಲೂ ಹೊಡೆದನು.
ಧೃಷ್ಟದ್ಯುಮ್ನೋಽಪ್ಯಸಿವರಂ ಚರ್ಮ ಚಾದಾಯ ಭಾಸ್ವರಮ್ |
ಜಘಾನ ಚಂದ್ರವರ್ಮಾಣಂ ಬೃಹತ್ಕ್ಷತ್ರಂ ಚ ನೈಷಧಮ್ ॥ 64 ॥
ಧೃಷ್ಟದ್ಯುಮ್ನನೂ ಸಹ ಶ್ರೇಷ್ಠವಾದ, ಪ್ರಕಾಶಮಾನವಾದ, ಖಡ್ಗ-ಚರ್ಮಗಳನ್ನು ತೆಗೆದುಕೊಂಡು ನಿಷಧದೇಶದ ಚಂದ್ರವರ್ಮ ಮತ್ತು ಬೃಹತ್ಕ್ಷತ್ರನನ್ನು ಸಂಹರಿಸಿದನು.
ತತಃ ಸ್ವರಥಮಾಸ್ಥಾಯ ಪಾಂಚಾಲ್ಯೋಽನ್ಯಚ್ಚರಾಸನಮ್ |
ಆದಾಯ ಕರ್ಣಂ ವಿವ್ಯಾಧ ತ್ರಿಸಪ್ತತ್ಯಾ ನದನ್ ಶರೈಃ ॥ 65 ॥
ಅನಂತರ ಪಾಂಚಾಲ್ಯನಾದ ಧೃಷ್ಟದ್ಯುಮ್ನನು ತನ್ನ ರಥಕ್ಕೆ ಬಂದು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು, ಎಪ್ಪತ್ಮೂರು ಬಾಣಗಳಿಂದ ಕರ್ಣನನ್ನು ಹೊಡೆದು ಸಿಂಹನಾದವನ್ನು ಮಾಡಿದನು.
ಶೈನೇಯೋಽಪ್ಯನ್ಯದಾದಾಯ ಧನುರಿಂದ್ರಸಮದ್ಯುತಿಃ |
ಸೂತಪುತ್ರಂ ಚತುಃಷಷ್ಟ್ಯಾ ವಿದ್ಧ್ವಾ ಸಿಂಹ ಇವೋನ್ನದತ್ ॥ 66 ॥
ಇಂದ್ರನಿಗೆ ಸಮಾನವಾದ ತೇಜಸ್ಸುಳ್ಳ ಸಾತ್ಯಕಿಯೂ ಸಹ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅರವತ್ನಾಲ್ಕು ಬಾಣಗಳಿಂದ ಕರ್ಣನನ್ನು ಹೊಡೆದು ಸಿಂಹದಂತೆ ನಾದವನ್ನು ಮಾಡಿದನು.
ಭಲ್ಲಾಭ್ಯಾಂ ಸಾಧು ಮುಕ್ತಾಭ್ಯಾಂ ಛಿತ್ತ್ವಾ ಕರ್ಣಸ್ಯ ಕಾರ್ಮುಕಮ್ |
ಪುನಃ ಕರ್ಣಂ ತ್ರಿಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ ॥ 67 ॥
ಚೆನ್ನಾಗಿ ಪ್ರಯೋಗಿಸಿದ ಎರಡು ಭಲ್ಲಗಳಿಂದ ಕರ್ಣನ ಧನುಸ್ಸನ್ನು ಕತ್ತರಿಸಿ, ಪುನಃ ಕರ್ಣನ ಬಾಹುಗಳಲ್ಲಿ ಮತ್ತು ಎದೆಯಲ್ಲಿ ಮೂರು ಬಾಣಗಳನ್ನು ಅರ್ಪಿಸಿದನು.
ತತೋ ದುರ್ಯೋಧನೋ ರಾಜಾ ದ್ರೋಣಶ್ಚೈವ ಜಯದ್ರಥಃ |
ನಿಮಜ್ಜಮಾನಂ ರಾಧೇಯಮುಜ್ಜಹ್ರುಃ ಸಮರಾರ್ಣವಾತ್ ॥ 68 ॥
ಆಗ ರಾಜನಾದ ದುರ್ಯೋಧನನೂ, ದ್ರೋಣ ಮತ್ತು ಜಯದ್ರಥರೂ ಸಮರಾರ್ಣವದಲ್ಲಿ ಮುಳುಗುತ್ತಿದ್ದ ಕರ್ಣನನ್ನು ಮೇಲಕ್ಕೆತ್ತಿದರು.
ಧೃಷ್ಟದ್ಯುಮ್ನಶ್ಚ ಭೀಮಶ್ಚ ಸೌಭದ್ರೋಽರ್ಜುನ ಏವ ಚ |
ನಕುಲಃ ಸಹದೇವಶ್ಚ ಸಾತ್ಯಕಿಂ ಜುಗುಪೂ ರಣೇ ॥ 69 ॥
ಧೃಷ್ಟದ್ಯುಮ್ನ, ಭೀಮ, ಅಭಿಮನ್ಯು, ಅರ್ಜುನ, ನಕುಲ ಮತ್ತು ಸಹದೇವರು ಯುದ್ಧದಲ್ಲಿ ಸಾತ್ಯಕಿಯನ್ನು ರಕ್ಷಿಸಿದರು.
ಪತ್ತ್ಯಶ್ವರಥಮಾತಂಗಾಸ್ತ್ವದೀಯಾಃ ಶತಶೋಽಪರೇ |
ಕರ್ಣಮೇವಾಭ್ಯಧಾವಂತ ತ್ರಾಸ್ಯಮಾನಾ ಪ್ರಹಾರಿಣಃ ॥ 70 ॥
ನಿನ್ನ ಸೈನ್ಯದ ಪದಾತಿ-ಅಶ್ವ-ರಥ-ಗಜಗಳು ನೂರಾರು ಸಂಖ್ಯೆಯಲ್ಲಿ ಪ್ರಹಾರಶೀಲರಾದ ಶತ್ರುಗಳಿಂದ ತ್ರಾಸಕ್ಕೆ ಒಳಗಾದರೂ ಕರ್ಣನ ಕಡೆಗೇ ಧಾವಿಸಿದವು.
ಏವಮೇಷ ಮಹಾರೌದ್ರಃ ಕ್ಷಯಾರ್ಥಂ ಸರ್ವಧನ್ವಿನಾಮ್ |
ತಾವಕಾನಾಂ ಪರೇಷಾಂ ಚ ತ್ಯಕ್ತ್ವಾ ಪ್ರಾಣಾನಭೂದ್ ರಣಃ ॥ 71 ॥
ಹೀಗೆ ಸರ್ವಧನುರ್ಧಾರಿಗಳ ಕ್ಷಯಕ್ಕಾಗಿ ಪ್ರಾಣವನ್ನು ತ್ಯಜಿಸಿ ಹೋರಾಡುವ ನಿನ್ನವರಿಗೂ ಮತ್ತು ಶತ್ರುಗಳಿಗೂ ಮಹಾಭಯಂಕರವಾದ ಯುದ್ಧವು ನಡೆಯಿತು.
ಪದಾತಿರಥನಾಗಾಶ್ವೈರ್ಗಜಾಶ್ವರಥಪತ್ತಯಃ |
ರಥಿನೋ ನಾಗಪತ್ತ್ಯಶ್ವೈರ್ಗಜಾ ಪತ್ತಿರಥದ್ವಿಪೈಃ ॥ 72 ॥
ಅಶ್ವೈರಶ್ವಾ ಗಜೈರ್ನಾಗಾ ರಥಿನೋ ರಥಿಭಿಃ ಸಹ |
ಸಂಪನ್ನಾಃ ಸಮದೃಶ್ಯಂತ ಪತ್ತಯಶ್ಚಾಪಿ ಪತ್ತಿಭಿಃ ॥ 73 ॥
ಪದಾತಿ-ರಥ-ಗಜ-ಅಶ್ವಗಳಿಂದ ಗಜಾಶ್ವ-ರಥ-ಪದಾತಿಗಳೂ, ಗಜ- ಪದಾತಿ-ಅಶ್ವಗಳಿಂದ ರಥಿಕರೂ, ಪದಾತಿ-ರಥ-ಗಜಗಳಿಂದ ಗಜಗಳೂ, ಅಶ್ವಗಳಿಂದ ಅಶ್ವಗಳೂ, ಗಜಗಳಿಂದ ಗಜಗಳೂ, ರಥಿಕರಿಂದ ರಥಿಕರೂ, ಪದಾತಿಗಳಿಂದ ಪದಾತಿಗಳೂ ಯುದ್ಧದಲ್ಲಿ ಸಂಸಕ್ತರಾಗಿರುವುದು ಕಂಡುಬಂದಿತು.
ಏವಂ ಸುಕಲಿಲಂ ಯುದ್ಧಮಾಸೀತ್ ಕ್ರವ್ಯಾದಹರ್ಷಣಮ್ |
ಸಹ ಭೀತೈರಭೀತಾನಾಂ ಯಮರಾಷ್ಟ್ರವಿವರ್ಧನಮ್ ॥ 74 ॥
ಸಂರಂಭೇಣಾಭಿಸಂಸೃಜ್ಯ ನಿಘ್ನತಾಮಿತರೇತರಮ್ |
ಕುರೂಣಾಂ ಪಾಂಡವಾನಾಂ ಚ ದ್ರೋಣಾರ್ಜುನಸಮಾಗಮೇ ॥75॥
ಹೀಗೆ ನಿರ್ಭಯರಾದವರ ಮತ್ತು ನಿರ್ಭಯರಾದವರಿಗೆ ಭಯಗೊಂಡವರ ಜೊತೆಯಲ್ಲಿ ಯಮರಾಷ್ಟ್ರವಿವರ್ಧನವಾದ, ಮಾಂಸಾಹಾರಿ ಪ್ರಾಣಿಗಳಿಗೆ ಹರ್ಷದಾಯಕವಾದ, ಬಹಳ ಘೋರವಾದ ಯುದ್ಧವು ನಡೆಯಿತು. ದ್ರೋಣಾರ್ಜುನರ ಸಮಾಗಮ ಕಾಲದಲ್ಲಿ ಕೋಪದಿಂದ ಒಬ್ಬರನ್ನೊಬ್ಬರು ಎದುರಿಸಿ, ಪರಸ್ಪರವಾಗಿ ಕೊಲ್ಲುವ ಕೌರವರಿಗೆ ಮತ್ತು ಪಾಂಡವರಿಗೆ (ಇಂತಹ ಘೋರವಾದ ಯುದ್ಧವು ನಡೆಯಿತು).
ತತೋ ಹತಾ ನರರಥವಾಜಿಕುಂಜರೈ-
ರನೇಕಶೋ ದ್ವಿಪರಥಪತ್ತಿವಾಜಿನಃ |

ಗಜೈರ್ಗಜಾ ರಥಿಭಿರುದಾಯುಧಾ ರಥಾಃ
ಹಯೈರ್ಹಯಾಃ ಪತ್ತಿಗಣಾಶ್ಚ ಪತ್ತಿಭಿಃ ॥ 76 ॥
ಆಗ ಪದಾತಿ-ರಥ-ಅಶ್ವ-ಗಜಗಳಿಂದ ಅನೇಕ ಗಜ-ರಥಾಶ್ವ-ಪದಾತಿಗಳು ಕೊಲ್ಲಲ್ಪಟ್ಟವು. ಗಜಗಳಿಂದ ಗಜಗಳೂ, ರಥಿಕರಿಂದ ಆಯುಧಧಾರಿಗಳಾದ ರಥಿಕರೂ, ಅಶ್ವಗಳಿಂದ ಅಶ್ವಗಳೂ, ಪದಾತಿಗಳಿಂದ ಪದಾತಿಗಳೂ ಕೊಲ್ಲಲ್ಪಟ್ಟವು.
ರಥೈರ್ದ್ವಿಪಾ ದ್ವಿರದವರೈರ್ಮಹಾರಥಾಃ
ಹಯೈರ್ನರಾ ವರರಥಿಭಿಶ್ಚ ವಾಜಿನಃ ।
ನಿಷೂದಿತಾ ಗಜಹಯಪಾದತಾಡನೈಃ
ಭೃಶಾಕುಲಾ ರಥಮುಖನೇಮಿಭಿರ್ಹಯಾಃ ॥ 77 ॥
ರಥರಿಂದ ಗಜಗಳೂ, ಶ್ರೇಷ್ಠಗಜಗಳಿಂದ ಮಹಾರಥರೂ, ಅಶ್ವಗಳಿಂದ ಯೋಧರೂ, ಶ್ರೇಷ್ಠ ರಥಿಕರಿಂದ ಅಶ್ವಗಳೂ ಕೊಲ್ಲಲ್ಪಟ್ಟರು. ಗಜಗಳ ಮತ್ತು ಅಶ್ವಗಳ ಪಾದತಾಡನದಿಂದ, ರಥದ ಮುಂಭಾಗ ಮತ್ತು ಚಕ್ರದ ತುದಿಗಳಿಂದ ಹೊಡೆಯಲ್ಪಟ್ಟ ಅಶ್ವಗಳು ಬಹಳವಾಗಿ ಆಕುಲಗೊಂಡವು.
ತಥಾ ವರೈರ್ಬಹುಕರಣೈರ್ವರಾಯುಧೈಃ
ಹತಾ ಗಜಾಃ ಪ್ರತಿಭಯದರ್ಶನಾಃ ಕ್ಷಿತಿಮ್ ।
ನಿರಸ್ತಜಿಹ್ವಾದಶನೇಕ್ಷಣಾಃ ಕ್ಷಿತೌ
ಕ್ಷಯಂ ಗತಾಃ ಖಂಡಿತವರ್ಮಭೂಷಣಾಃ ॥ 78 ॥
ಹಾಗೆಯೇ, ಶ್ರೇಷ್ಠವಾದ ಅನೇಕ ಉಪಕರಣಗಳಿಂದ ಮತ್ತು ಆಯುಧಗಳಿಂದ ಹೊಡೆಯಲ್ಪಟ್ಟ, ನೋಡಲು ಭಯಂಕರವಾಗಿದ್ದ ಗಜಗಳು ನಾಲಿಗೆ, ದಂತಗಳು ಮತ್ತು ಕಣ್ಣುಗಳನ್ನು ಕಳೆದುಕೊಂಡು, ತಮ್ಮ ಕವಚಗಳನ್ನೂ ಮತ್ತು ಭೂಷಣಗಳನ್ನೂ ಕಳೆದುಕೊಂಡು ಭೂಮಿಯ ಮೇಲೆ ಬಿದ್ದು, ಭೂಮಿಯಲ್ಲಿ ನಾಶವನ್ನು ಹೊಂದಿದವು.
ಪ್ರಮೋದನೇ ಶ್ವಾಪದಪಕ್ಷಿರಕ್ಷಸಾಂ
ಜನಕ್ಷಯೇ ವರ್ತತಿ ತತ್ರ ದಾರುಣೇ ।
ಮಹಾಬಲಾಸ್ತೇ ಕುಪಿತಾಃ ಪರಸ್ಪರಂ
ನಿಷೂದಯಂತಃ ಪ್ರಚರಂತ್ಯುದಾಯುಧಾಃ ॥ 79 ॥
ಮಾಂಸಾಹಾರಿ ಪ್ರಾಣಿಗಳಿಗೂ, ಪಕ್ಷಿಗಳಿಗೂ ಮತ್ತು ರಾಕ್ಷಸರಿಗೂ ಪ್ರಮೋದ ಜನಕವಾದ, ದಾರುಣವಾದ ಜನಕ್ಷಯವು ಅಲ್ಲಿ ಉಂಟಾಗುತ್ತಿರಲು ಮಹಾಬಲರಾದ ಅವರು ಕುಪಿತರಾಗಿ ಕೈಯಲ್ಲಿ ಆಯುಧಗಳನ್ನು ಹಿಡಿದು, ಪರಸ್ಪರವಾಗಿ ಕೊಲ್ಲುತ್ತಾ ರಣರಂಗದಲ್ಲಿ ಸಂಚರಿಸಿದರು.
ಮಹಾಬಲೇ ಕ್ಷುಬ್ಧಮಹಾರ್ಣವೋಪಮೇ
ಮಹೇಂದ್ರಸದ್ಮಾತಿಥಿತಾಂ ಯಿಯಾಸವಃ ।
ತಥಾ ಬಲೇ ಭೃಶಲುಲಿತೇ ಪರಸ್ಪರಂ
ನಿರೀಕ್ಷಮಾಣೇ ರುಧಿರೌಘಸಂಪ್ಲುತೇ ॥ 80 ॥
ಕ್ಷೋಭೆಗೊಂಡ ದೊಡ್ಡ ಸಾಗರಕ್ಕೆ ಸದೃಶವಾದ ಮಹಾಸೈನ್ಯದಲ್ಲಿ ಮಹೇಂದ್ರ ಭವನದಲ್ಲಿ ಅತಿಥಿಗಳಾಗಿ ಹೋಗಲು ಬಯಸಿದ ವೀರರು, ಹಾಗೆಯೇ ಸೈನ್ಯಗಳು ಪರಸ್ಪರ ವಿನಾಶವನ್ನು ಹೊಂದುತ್ತಾ ರಕ್ತಸಮೂಹದಿಂದ ತೊಯ್ದು ಒಬ್ಬರನ್ನೊಬ್ಬರು ಪರಸ್ಪರವಾಗಿ ನೋಡುತ್ತಿರುವಾಗ (ವೀರರು ಆಯುಧಗಳನ್ನು ಎತ್ತಿಹಿಡಿದು ರಣರಂಗದಲ್ಲಿ ಸಂಚರಿಸಿದರು).
ದಿವಾಕರೇಽಸ್ತಂ ಗಿರಿಮಾಸ್ಥಿತೇ ಶನೈಃ ।
ಉಭೇ ಪ್ರಯಾತೇ ಶಿಬಿರಾಯ ಭಾರತ ॥ 81 ॥
ಎಲೈ ಭಾರತನೇ, ದಿವಾಕರನು ಅಸ್ತಪರ್ವತವನ್ನು ಸೇರುತ್ತಿರಲು ಎರಡು ಸೈನ್ಯಗಳೂ ನಿಧಾನವಾಗಿ ಶಿಬಿರಕ್ಕೆ ಹಿಂದಿರುಗಿದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕತ್ರಿಂಶೋಽಧ್ಯಾಯಃ ॥
॥ ಸಂಶಪ್ತಕವಧಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
ದ್ರೋಣಯುದ್ಧದಲ್ಲಿ ಎರಡನೆಯ ದಿನದ ಅವಹಾರವು ಮುಗಿಯಿತು.

॥ ಸಂಶಪ್ತಕವಧಪರ್ವ ಮುಗಿಯಿತು ॥
* * * * *
3. ಅಭಿಮನ್ಯು ವಧ ಪರ್ವ
ಮಹಾಭಾರತತಾತ್ಪರ್ಯನಿರ್ಣಯ (ಅಧ್ಯಾಯ-26)
ಪಾರ್ಥೇ ಗತೇ ಶ್ವೋ ನೃಪತಿಂ ಗ್ರಹೀಷ್ಯೇ
ನಿಹನ್ಮಿ ವಾ ತತ್ಸದೃಶಂ ತದೀಯಮ್ ।
ಇತಿ ಪ್ರತಿಜ್ಞಾಂ ಸ ವಿಧಾಯ ಭೂಯಃ
ಪ್ರಾತರ್ಯಯೌ ಯುದ್ಧಮಾಕಾಂಕ್ಷಮಾಣಃ ॥

ನಾಳೆ ಅರ್ಜುನನು ದೂರ ಹೋದಾಗ ನಾನು ಧರ್ಮರಾಜನನ್ನು ಸೆರೆ ಹಿಡಿಯುವೆನು. ಅಥವಾ ಸಮಾನನಾದ ಅವನ ಕಡೆಯ ಒಬ್ಬನನ್ನು ಕೊಲ್ಲುವೆನು. ಹೀಗೆ ದ್ರೋಣರು ಪುನಃ ಪ್ರತಿಜ್ಞೆ ಮಾಡಿ ಬೆಳಿಗ್ಗೆ ಯುದ್ಧವನ್ನು ಮಾಡಲು ಇಚ್ಛಿಸಿ ಹೊರಟರು.
ಪದ್ಮವ್ಯೂಹಂ ವ್ಯೂಹ್ಯ ಪರೈರಭೇದ್ಯಂ
ವರಾದ್ ವಿಷ್ಣೋಸ್ತಸ್ಯ ಮಂತ್ರಂ ಹ್ಯಜಪಾತ್ತ್ವ |
ಪಾರ್ಥಾಶ್ಚ ತಂ ಪ್ರಾಪುರ್ ಋತೇSರ್ಜುನೇನ
ಸಂಶಪ್ತಕೈರ್ಯಯುಧೇ ಸೋSಪಿ ವೀರಃ ॥
ವಿಷ್ಣುವಿನ ವರದಿಂದ, ವಿಷ್ಣುಮಂತ್ರ ಜಪಿಸದೆ ಅನ್ಯರಿಂದ ಭೇದಿಸಲಾಗದ ಪದ್ಮವ್ಯೂಹವನ್ನು ದ್ರೋಣರು ರಚಿಸಿ ಯುದ್ಧಕ್ಕೆ ನಿಂತರು. ಅರ್ಜುನನ ಹೊರತು ಎಲ್ಲ ಪಾಂಡವರೂ ವ್ಯೂಹವನ್ನು ಸಮೀಪಿಸಿದರು. ವೀರ ಅರ್ಜುನನು ಸಂಶಪ್ತಕರೊಡನೆ ಹೋರಾಡಿದನು.
ಪಾರ್ಥಾ ವ್ಯೂಹಂ ತು ತಂ ಪ್ರಾಪ್ಯ ನಾಶಕನ್ ಭೇತ್ತುಮುದ್ಯತಾಃ |
ಜಾನಂಶ್ಚ ಪ್ರತಿಭಾಯೋಗಾತ್ ಕಾಮ್ಯಂ ನೈವಾಜಪನ್ಮನುಮ್ ॥
ಭೀಮೋ ಯುಧಿಷ್ಠಿರಸ್ತತ್ರ ತಜ್ಞಂ ಸೌಭದ್ರಮಬ್ರವೀತ್ |
ಭಿಂಧಿ ವ್ಯೂಹಮಿಮಂ ತಾತ ವಯಂ ತ್ವಾಮನುಯಾಮಹೇ ॥
ಪಾಂಡವರು ವ್ಯೂಹದ ಬಳಿಗೆ ಹೋಗಿ ಅದನ್ನು ಭೇದಿಸಲು ಯತ್ನಿಸಿದರೂ ಶಕ್ತರಾಗಲಿಲ್ಲ. ಭೀಮ ಪ್ರತಿಭಾ ಬಲದಿಂದ ತಿಳಿದಿದ್ದರೂ ಕಾಮ್ಯವಾದ್ದರಿಂದ ಮಂತ್ರವನ್ನು ಜಪಿಸಲೇ ಇಲ್ಲ. ಅದನ್ನು ತಿಳಿದಿದ್ದ ಅಭಿಮನ್ಯುವಿಗೆ ಯುಧಿಷ್ಠಿರ ಹೇಳಿದನು, `ಮಗು, ನೀನು ಈ ವ್ಯೂಹವನ್ನು ಭೇದಿಸು. ನಾವು ನಿನ್ನ ಬೆನ್ನ ಹಿಂದೆ ಬರುತ್ತೇವೆ' ಎಂದು.
ಸ ಏವಮುಕ್ತೋ ರಥಿನಾಂ ಪ್ರಬರ್ಹೋ
ವಿವೇಶ ಭಿತ್ವಾತ್ವದ್ವಿಷತಾಂ ಚಮೂಂ ತಾಮ್ |
ಅನ್ವೇವ ತಂ ವಾಯುಸುತಾದಯಶ್ಚ
ವಿವಿಕ್ಷವಃ ಸೈಂಧವೇನೈವ ರುದ್ಧಾಃ ॥
ವರೇಣ ರುದ್ರಸ್ಯ ನಿರುದ್ಧ್ಯಮಾನೋ
ಜಯದ್ರಥೇನಾತ್ರ ವೃಕೋದರಸ್ತು |
ವಿಷ್ಣೋರಭೀಷ್ಟಂ ವಧಮಾರ್ಜುನೇಸ್ತದಾ
ವಿಜ್ಞಾಯ ಶಕ್ತೋSನಪಿ ನ ಚಾತ್ಯವರ್ತತ ॥
ಧರ್ಮರಾಜ ಹೀಗೆ ಹೇಳಿದಾಗ ರಥಿಕರಲ್ಲಿ ಶ್ರೇಷ್ಠನಾದ ಅಭಿಮನ್ಯು ಶತ್ರುಸೈನ್ಯವನ್ನು ಭೇದಿಸಿ ಹೊಕ್ಕನು. ಅವನ ಹಿಂದಿನಿಂದಲೇ ಪ್ರವೇಶಿಸಲು ಬಯಸಿದ್ದ ಭೀಮ ಮುಂತಾದವರನ್ನು ರುದ್ರನ ವರದಿಂದ ಸೈಂಧವನು ತಡೆದ. ಜಯದ್ರಥನು ತಡೆದಾಗ ಭೀಮ ಅಭಿಮನ್ಯುವಿನ ವಧೆಯಾಗುವುದು ಶ್ರೀಕೃಷ್ಣನ ಸಂಕಲ್ಪವೆಂದು ಅರಿತು, ಶಕ್ತನಾಗಿದ್ದರೂ ಜಯದ್ರಥನನ್ನು ಅತಿಕ್ರಮಿಸಿ ಒಳಗೆ ಹೋಗಲಿಲ್ಲ.
ಜಯದ್ರಥಸ್ಥೇನ ವೃಷಧ್ವಜೇನ
ಪ್ರಯುದ್ಧ್ಯ ಮಾನೇಷು ವೃಕೋದರಾದಿಷು |
ಪ್ರವಿಶ್ಯ ವೀರಃ ಸ ಧನಂಜಯಾತ್ಮಜೋ
ವಿಲೋಡಯಾಮಾಸ ಪರೋರುಸೇನಾಮ್ ॥
ಜಯದ್ರಥನಲ್ಲಿ ಆವಿಷ್ಟನಾದ ರುದ್ರ ಭೀಮ ಮುಂತಾದವರನ್ನು ಯುದ್ಧದಲ್ಲಿ ತೊಡಗಿಸಿದಾಗ ವೀರ ಅಭಿಮನ್ಯು ವ್ಯೂಹದ ಒಳಗೆ ಪ್ರವೇಶಿಸಿ ಶತ್ರುಗಳ ಮಹಾಸೈನ್ಯವನ್ನು ಕದಡಿದನು.
ಸ ದ್ರೋಣದುರ್ಯೋಧನಕರ್ಣಶಲ್ಯ
ದ್ರೌಣ್ಯಗ್ರಣೀಭಿಃ ಕೃತವರ್ಮಯುಕ್ತೈಃ |
ರುದ್ಧಶ್ಚರಾರಾರಿಬಲೇಷ್ವಭೀತಃ
ಶಿರಾಂಸಿ ಕೃಂತಂಸ್ತದನುವ್ರತಾನಾಮ್ ॥
ದ್ರೋಣ, ದುರ್ಯೋಧನ, ಕರ್ಣ, ಶಲ್ಯ, ಅಶ್ವತ್ಥಾಮ, ಕೃತವರ್ಮ ಮುಂತಾದವರು ತಡೆದರೂ ಅಭಿಮನ್ಯು ನಿರ್ಭಯವಾಗಿ ಶತ್ರುಸೈನ್ಯಗಳಲ್ಲಿ ಅವರ ಕಡೆಯವರ ರುಂಡಗಳನ್ನು ಕತ್ತರಿಸುತ್ತಾ ಸಂಚರಿಸಿದನು.
ಸ ಲಕ್ಷಣಂ ರಾಜಸುತಂ ಪ್ರಸಹ್ಯ
ಪಿತುಃ ಸಮೀಪೇSನಯದಾಶು ಮೃತ್ಯವೇ |
ಬೃಹದ್ಬಲಂ ಚೋತ್ತಮವೀರ್ಯಕರ್ಮಾ
ವರಂ ರಥಾನಾಮಯುತಂ ಚ ಪತ್ರಿಭಿಃ ॥
ಉತ್ತಮ ವೀರ್ಯಕರ್ಮಗಳುಳ್ಳ ಅಭಿಮನ್ಯು ದುರ್ಯೋಧನನ ಮಗನಾದ ಲಕ್ಷಣನನ್ನು ದುರ್ಯೋಧನನ ಸಮಕ್ಷಮದಲ್ಲಿ ಬಲಾತ್ಕಾರವಾಗಿ ಯಮನಿಗೆ ಕಳಿಸಿಕೊಟ್ಟನು. ಹಾಗೇ ಬೃಹದ್ಬಲನನ್ನೂ ಮಹಾಬಲಿಷ್ಠರಾದ ಹತ್ತು ಸಾವಿರ ಶ್ರೇಷ್ಠ ರಥಿಕರನ್ನೂ ಬಾಣಗಳಿಂದ ಯಮನಿಗೆ ಕಳಿಸಿಕೊಟ್ಟನು.
ದ್ರೋಣಾದಯಸ್ತಂ ಹರಿಕೋಪಭೀತಾಃ
ಪ್ರತ್ಯಕ್ಷತೋ ಹಂತುಮಶಕ್ನುವಂತಃ |
ಸಮ್ಮಂತ್ರ್ಯ ಕರ್ಣಂ ಪುರತೋ ನಿಧಾಯ
ಚಕ್ರುರ್ವಿಚಾಪಾಶ್ವರಥಂ ಕ್ಷಣೇನ ॥

ದ್ರೋಣರು ಮುಂತಾದವರು ಕೃಷ್ಣನ ಕೋಪಕ್ಕೆ ಹೆದರಿ ಅಭಿಮನ್ಯುವನ್ನು ಪ್ರತ್ಯಕ್ಷ ಕೊಲ್ಲಲು ಶಕ್ತರಾಗದೆ ಕರ್ಣನನ್ನು ಮುಂದೆ ಮಾಡಿಕೊಂಡು ವಿಚಾರ ಮಾಡಿ ಕ್ಷಣದಲ್ಲಿ ಅವನನ್ನು ಧನುಸ್ಸು ಕುದುರೆ ರಥಗಳಿಂದ ರಹಿತನನ್ನಾಗಿ ಮಾಡಿದರು.

ಕರ್ಣೋ ಧನುಸ್ತಸ್ಯ ಕೃಪಶ್ಚ ಸಾರಥಿಂ
ದ್ರೋಣೋ ಹಯಾನಾಶು ವಿಧೂಯ ಸಾಯಕೈಃ |
ಸಚರ್ಮಖಡ್ಗಂ ರಥಚಕ್ರಮಸ್ಯ
ಪ್ರಣುದ್ಯ ಹಸ್ತಸ್ಥಿತಮೇವ ಚಕ್ರುಃ ॥

ಅಭಿಮನ್ಯುವಿನ ಧನುಸ್ಸನ್ನು ಕರ್ಣನೂ ಸಾರಥಿಯನ್ನು ಕೃಪರೂ ಕುದುರೆಗಳನ್ನು ದ್ರೋಣರೂ ಬೇಗನೆ ನಾಶಮಾಡಿ ಅವನ ಕತ್ತಿ ಗುರಾಣಿಗಳನ್ನೂ ಚಕ್ರವನ್ನೂಛೇದಿಸಿ ಅವನನ್ನು ಬರಿ ಗೈಯಲ್ಲಿ ನಿಲ್ಲುವಂತೆ ಮಾಡಿದರು.

ಭೀತೇಷು ಕೃಷ್ಣಾದಥ ತದ್ವಧಾಯ
ತೇಷ್ವಾಸಸಾದಾऽಶು ಗದಾಯುಧಂ ಗದೀ |
ದೌಃಶಾಸನಿಸ್ತೌ ಯುಗಪಚ್ಚ ಮಮೃತು
ರ್ಗದಾಭಿಘಾತೇನ ಮಿಥೋऽತಿಪೌರುಷೌ ॥

ದ್ರೋಣ ಮುಂತಾದವರು ಅಭಿಮನ್ಯುವನ್ನು ಕೊಲ್ಲಲು ಕೃಪರಿಗೆ ಹೆದರಿದಾಗ ಗದಾಧಾರಿಯಾದ ದುಶ್ಶಾಸನನ ಪುತ್ರ ಗದಾಧಾರಿ ಅಭಿಮನ್ಯುವನ್ನು ಎದುರಿಸಿದನು. ಅತ್ಯಂತ ಪೌರುಷಶಾಲಿಗಳಾದ ಅವರಿಬ್ಬರೂ ಪರಸ್ಪರರ ಗದೆ ಏಟಿನಿಂದ ಜೊತೆಗೇ ಮಡಿದರು.

ತಸ್ಮಿನ್ ಹತೇ ಶತ್ರುರವಂ ನಿಶಮ್ಯ
ಹರ್ಷೋದ್ಭವಂ ಮಾರುತಿರುಗ್ರವಿಕ್ರಮಃ |
ವಿಜಿತ್ಯ ಸರ್ವಾನಪಿ ಸೈಂಧವಾದೀನ್
ಯುಧಿಷ್ಠಿರಸ್ಯಾನುಮತೇ ನ್ಯಷೀದತ್ ॥

ಅಭಿಮನ್ಯು ಹತನಾದಾಗ ಶತ್ರುಗಳ ಹರ್ಷಧ್ವನಿಯನ್ನು ಕೇಳಿ ಭಯಂಕರ ಪರಾಕ್ರಮಿಯಾದ ಭೀಮ ಸೈಂಧವಾದಿಗಳೆಲ್ಲರನ್ನೂ ಪರಾಭವಗೊಳಿಸಿ ಧರ್ಮರಾಜನ ಬಳಿಯಲ್ಲಿ ಕುಳಿತ.

ವ್ಯಾಸಸ್ತದಾ ತಾನಮಿತಾತ್ಮವೈಭವೋ
ಯುಧಿಷ್ಠಿರಾದೀನ್ ಗ್ಲಪಿತಾನಬೋಧಯತ್ |
ವಿಜಿತ್ಯ ಸಂಶಪ್ತಕಪೂಗಮುಗ್ರೋ
ನಿಶಾಗಮೇ ವಾಸವಿರಾಪ ಸಾಚ್ಯುತಃ ॥

ಅಮಿತ ಸ್ವರೂಪಭೂತ ಜ್ಞಾನಾನಂದಾದಿ ಸಂಪತ್ತುಳ್ಳ ವೇದವ್ಯಾಸರು ಆಗ ದುಃಖಿತರಾಗಿದ್ದ ಧರ್ಮರಾಜ ಮುಂತಾದವರನ್ನು ಸಂತೈಸಿದರು. ಉಗ್ರಪ್ರತಾಪಿ ಅರ್ಜುನ ಸಂಶಪ್ತಕರ ಸಮೂಹವನ್ನು ಗೆದ್ದು ರಾತ್ರಿ ಸಮಯ ಬಂದಾಗ ಕೃಷ್ಣನೊಂದಿಗೆ ಹಿಂತಿರುಗಿ ಬಂದ.

ನಿಶಮ್ಯ ಪುತ್ರಸ್ಯ ವಧಂ ಭೃಶಾರ್ತಃ ಪ್ರತಿಶ್ರವಂ
ಸೋऽಥ ಚಕಾರ ವೀರಃ |
ಜಯದ್ರಥಸ್ಯೈವ ವಧೇ ನಿಶಾಯಾಂ
ಸ್ವಪ್ನೇऽನಯತ್ ತಂ ಗಿರಿಶಾಂತಿಕಂ ಹರಿಃ ॥

ಮಗನ ಹತ್ಯೆಯನ್ನು ಕೇಳಿ ಬಹಳ ದುಃಖಿತನಾದ ವೀರ ಅರ್ಜುನ ಜಯದ್ರಥನ ಸಂಹಾರದ ಪ್ರತಿಜ್ಞೆ ಮಾಡಿದ. ರಾತ್ರಿಯಲ್ಲಿ ಸ್ವಪ್ನದಲ್ಲಿ ಶ್ರೀಕೃಷ್ಣ ಅರ್ಜುನನನ್ನು ರುದ್ರನ ಬಳಿಗೆ ಒಯ್ದನು.

* * * * *

ಮೂವತ್ತೆರಡನೆಯ ಅಧ್ಯಾಯ

ಯುಧಿಷ್ಠಿರನನ್ನು ಹಿಡಿಯದಿದ್ದುದ್ದಕ್ಕಾಗಿ ದುರ್ಯೋಧನನಿಂದ ದ್ರೋಣರ ನಿಂದನೆ. ಪಾಂಡವರ ಯಾರಾದರೂ ಒಬ್ಬ ಮಹಾರಥರನ್ನು ಕೊಲ್ಲುವುದಾಗಿ ದ್ರೋಣರ ಪ್ರತಿಜ್ಞೆ. ಸಂಕ್ಷೇಪವಾಗಿ ಅಭಿಮನ್ಯುವಿನ ವಧೆಯ ಕಥನ.

ಸಂಜಯಃ
ಪೂರ್ವಮಸ್ಮಾಸು ಭಗ್ನೇಷು ಫಲ್ಗುನೇನಾಮಿತೌಜಸಾ |
ದ್ರೋಣೇ ಚ ಮೋಘಸಂಕಲ್ಪೇ ರಕ್ಷಿತೇ ಚ ಯುಧಿಷ್ಠಿರೇ ॥ 1 ॥
ಸರ್ವೇ ವಿಶಸ್ತ್ರಕವಚಾಸ್ತಾವಕಾ ಯುಧಿ ನಿರ್ಜಿತಾಃ |
ರಜಸ್ವಲಾ ಭೃಶೋದ್ವಿಗ್ನಾ ವೀಕ್ಷಮಾಣಾ ದಿಶೋ ದಶ ॥ 2 ॥
ಅಪಹಾರಂ ಶನೈಃ ಕೃತ್ವಾ ಭಾರದ್ವಾಜಸ್ಯ ಸಮ್ಮತೇ |
ಲಬ್ಧಲಕ್ಷ್ಯೈಃ ಪರೈರ್ಭಿನ್ನಾ ಭೃಶಾವಹಸಿತಾ ರಣೇ ॥ 3 ॥

ಸಂಜಯ ಅಮಿತಪರಾಕ್ರಮಿಯಾದ ಅರ್ಜುನನಿಂದ ಮೊದಲು ನಾವು ಭಗ್ನವಾಗುತ್ತಿರಲು ದ್ರೋಣರು ಭಗ್ನಸಂಕಲ್ಪರಾಗಿ ಯುಧಿಷ್ಠಿರನು ರಕ್ಷಿಸಲ್ಪಡುತ್ತಿರಲು ಯುದ್ಧದಲ್ಲಿ ಪರಾಜಿತರಾದ ನಿನ್ನ ಯೋಧರೆಲ್ಲರೂ ಶಸ್ತ್ರ-ಕವಚಗಳನ್ನು ತೆಗೆದು, ಧೂಳಿನಿಂದ ಕೂಡಿ, ಬಹಳ ಉದ್ವಿಗ್ನರಾಗಿ, ಹತ್ತುದಿಕ್ಕುಗಳನ್ನೂ ನೋಡುತ್ತಾ ಭರದ್ವಾಜರ ಸಮ್ಮತಿಯಿಂದ ಸೈನ್ಯಾವಹಾರವನ್ನು ಮಾಡಿ ಲಕ್ಷ್ಯವನ್ನು ತಪ್ಪದ ಶತ್ರುಗಳಿಂದ ಬಹಳವಾಗಿ ಪೀಡಿಸಲ್ಪಟ್ಟು, ಯುದ್ಧದಲ್ಲಿ ಅಪಹಾಸ್ಯಕ್ಕೆ ಈಡಾದರು.

ಶ್ಲಾಘಮಾನೇಷು ಭೂತೇಷು ಫಲ್ಗುನಸ್ಯಾಮಿತಾನ್ ಗುಣಾನ್ |
ಕೇಶವಸ್ಯ ತು ಸೌಹಾರ್ದೇ ಕೀರ್ತ್ಯಮಾನೇऽರ್ಜುನಂ ಪ್ರತಿ |

ಅಭಿಶಸ್ತಾ ಇವಾಭಾಂತಿ ಧ್ಯಾನಮೂಕತ್ವಮಾಗತಾಃ ॥ 4 ॥
ಎಲ್ಲ ಪ್ರಾಣಿಗಳೂ ಅರ್ಜುನನ ಅಮಿತಗುಣಗಳನ್ನು ಹೊಗಳುತ್ತಿರಲು, ಅರ್ಜುನನ ಮೇಲೆ ಕೃಷ್ಣನಿಗಿರುವ ಪ್ರೀತಿಯನ್ನೂ ಹೇಳುತ್ತಿರಲು ಮೃತರಾದಂತೆ ನಿನ್ನ ಯೋಧರು ಧ್ಯಾನ ಮೌನವನ್ನು ವಹಿಸಿದರು.
ತತೋ ಪ್ರಭಾತಸಮಯೇ ದ್ರೋಣಂ ದುರ್ಯೋಧನೋಽಬ್ರವೀತ್ ॥
ಅನಂತರ ಪ್ರಭಾತ ಸಮಯದಲ್ಲಿ ದುರ್ಯೋಧನನು ದ್ರೋಣರನ್ನು ಕುರಿತು ಮಾತನಾಡಿದನು.
ಪ್ರಣಯಾದಭಿಮಾನಾಚ್ಚ ದ್ವಿಷದ್ವ ೃದ್ಧ್ಯಾ ಚ ದುರ್ಮನಾಃ |
ಶೃಣ್ವತಾಂ ಸರ್ವಸೈನ್ಯಾನಾಂ ಸಂರಬ್ಧೋ ದ್ರೋಣಮಬ್ರವೀತ್ ॥ 6 ॥
ಶತ್ರುಗಳ ಅಭಿವೃದ್ಧಿಯಿಂದ ವ್ಯಥೆಗೊಂಡ ಅವನು ದ್ರೋಣರ ಮೇಲಿನ ಸ್ನೇಹ, ಗೌರವಗಳಿಂದ, ಕೋಪದಿಂದ ದ್ರೋಣರನ್ನು ಕುರಿತು ಹೇಳಿದನು.
ನೂನಂ ವಯಂ ವಧ್ಯಪಕ್ಷೇ ಭವತೋ ಬ್ರಹ್ಮವಿತ್ತಮ |
ತಥಾ ಹಿ ನಾಗ್ರಹೀಃ ಪ್ರಾಪ್ತಂ ಸಮೀಪೇಽದ್ಯ ಯುಧಿಷ್ಠಿರಮ್ ॥ 7 ॥
ಬ್ರಹ್ಮಜ್ಞಾನಿಶ್ರೇಷ್ಠರೇ, ನಾವು ಖಂಡಿತವಾಗಿ ನಿಮ್ಮ ಶತ್ರುಪಕ್ಷದಲ್ಲಿದ್ದೇವೆ. ಏಕೆಂದರೆ ನೀವು ಯುಧಿಷ್ಠಿರನು ಸಮೀಪಕ್ಕೆ ಬಂದರೂ ಅವನನ್ನು ಹಿಡಿಯಲಿಲ್ಲ.
ಇಚ್ಛತೋ ನಹಿ ಮುಚ್ಯೇತ ಚಕ್ಷುರ್ವಿಷಯಗೋ ರಿಪುಃ |
ಜಿಘೃಕ್ಷತೋ ರಕ್ಷ ್ಯಮಾಣಃ ಸಸುರೈರಪಿ ಪಾಂಡವೈಃ ॥ 8 ॥
ನೀವು ಬಯಸಿದರೆ ನಿಮ್ಮ ದೃಷ್ಟಿಗೆ ಗೋಚರನಾದ ಶತ್ರುವು ದೇವತೆಗಳಿಂದ ಸಹಿತರಾದ ಪಾಂಡವರಿಂದ ರಕ್ಷಿಸಲ್ಪಟ್ಟರೂ ಅವನನ್ನು ಹಿಡಿಯಲು ಇಚ್ಛಿಸುವ ನಿಮ್ಮಿಂದ ತಪ್ಪಿಸಿಕೊಳ್ಳಲಾರ.
ವರಂ ದತ್ವಾ ಮಮ ಪ್ರೀತಃ ಪಶ್ಚಾದ್ ವಿಕೃತವಾನಸಿ |
ಆಶಾಭಂಗಂ ನ ಕುರ್ವಂತಿ ಭಕ್ತಸ್ಯಾರ್ಯಾಃ ಕಥಂಚನ ॥
ನೀವು ಪ್ರೀತಿಯಿಂದ ವರವನ್ನು ಕೊಟ್ಟು ಅನಂತರ ಅದನ್ನು ವ್ಯರ್ಥಗೊಳಿಸಿದ್ದೀರಿ. ಆರ್ಯರಾದವರು ಶರಣಾಗತರಾದವರ ಆಶಾಭಂಗವನ್ನು ಎಂದೂ ಮಾಡುವುದಿಲ್ಲ (ಎಂದು ಹೇಳಿದನು).
ಸಂಜಯಃ
ತತೋಽಪ್ರೀತಸ್ತಥೋಕ್ತಸ್ತು ಭಾರದ್ವಾಜೋಽಬ್ರವೀದ್ ನೃಪಮ್ |
ನಾರ್ಹಸೇ ಮಾಽನ್ಯಥಾ ಜ್ಞಾತುಂ ಘಟಮಾನಂ ತವ ಪ್ರಿಯೇ ॥ 10 ॥
ಸಂಜಯ ಅವನ ಮಾತುಗಳಿಂದ ಅಸಮಾಧಾನಗೊಂಡ ದ್ರೋಣರು ಅವನನ್ನು ಕುರಿತು ಹೇಳಿದರು- ನಿನ್ನ ಹಿತಕ್ಕಾಗಿ ಶ್ರಮಪಡುತ್ತಿರುವ ನನ್ನನ್ನು ನೀನು ಅನ್ಯಥಾ ಭಾವಿಸಬಾರದು.
ಸಸುರಾಸುರಗಂಧರ್ವಾಃ ಸಯಕ್ಷೋರಗರಾಕ್ಷಸಾಃ |
ನಾಲಂ ಲೋಕಾ ರಣೇ ಜೇತುಂ ಪಾಲ್ಯಮಾನಂ ಕಿರೀಟಿನಾ ॥ 11 ॥
ಸುರಾಸುರ-ಗಂಧರ್ವರೆಲ್ಲರಿಂದಲೂ, ಯಕ್ಷ-ರಾಕ್ಷಸ ವರ್ಗಗಳಿಂದಲೂ ಕೂಡಿದ ಲೋಕಗಳು ಅರ್ಜುನನಿಂದ ರಕ್ಷಿಸಲ್ಪಡುವವನನ್ನು ಯುದ್ಧದಲ್ಲಿ ಗೆಲ್ಲಲು ಶಕ್ತವಾಗುವುದಿಲ್ಲ.
ವಿಶ್ವಸೃಗ್ ಯತ್ರ ಗೋವಿಂದಃ ಪೃತನಾಯಾಂ ತಥಾಽರ್ಜುನಃ |
ತತ್ರ ಕಸ್ತದ್ಬಲಂ ಕ್ರಾಮೇದ್ ಅನ್ಯತ್ರ ತ್ರ್ಯಂಬಕಾತ್ ಪ್ರಭೋಃ ॥ 12 ॥
ಯಾವ ಸೈನ್ಯದಲ್ಲಿ ವಿಶ್ವಕರ್ತನಾದ ಗೋವಿಂದನೂ ಮತ್ತು ಅರ್ಜುನನೂ ಇರುತ್ತಾರೆಯೋ ಅದನ್ನು ಪ್ರಭುವಾದ ಈಶ್ವರನೊಬ್ಬನನ್ನು ಬಿಟ್ಟು ಬೇರೆ ಯಾವನು ಸೋಲಿಸಬಹುದು?
ಸತ್ಯಂ ತು ತೇ ಬ್ರವೀಮ್ಯದ್ಯ ನ ತೇ ಜಾತ್ವನ್ಯಥಾ ಭವೇತ್ |
ಅದ್ಯೈಷಾಂ ಪ್ರವರಂ ವೀರಂ ಪಾತಯಿಷ್ಯೇ ಮಹಾರಥಮ್ ॥ 13 ॥
ನಿನಗೆ ಈ ದಿನ ಸತ್ಯವನ್ನು ಹೇಳುತ್ತಿದ್ದೇನೆ. ಅದು ಎಂದೂ ಬೇರೆ ರೀತಿಯಾಗುವುದಿಲ್ಲ. ನಾನು ಈ ದಿನ ಪಾಂಡವರಲ್ಲಿ ಶ್ರೇಷ್ಠನಾದ, ವೀರನಾದ ಮಹಾರಥನೊಬ್ಬನನ್ನು ಉರುಳಿಸುವೆನು.
ತಂ ಚ ವ್ಯೂಹಂ ವಿಧಾಸ್ಯಾಮಿ ಅಭೇದ್ಯಂ ತ್ರಿದಶೈರಪಿ |
ಯೋಗೇನ ಕೇನಚಿತ್ ರಾಜನ್ ಸೋಽರ್ಜುನಸ್ತ್ವಪನೀಯತಾಮ್ ॥
ನಾನು ದೇವತೆಗಳಿಂದಲೂ ಅಭೇದ್ಯವಾದ ವ್ಯೂಹವನ್ನು ರಚಿಸುವೆನು. ಎಲೈ ರಾಜನೇ, ಯಾವುದಾದರೂ ಉಪಾಯದಿಂದ ಆ ಅರ್ಜುನನನ್ನು ದೂರಕ್ಕೆ ಕರೆದುಕೊಂಡು ಹೋಗುವವನಾಗು.
ಅಜಿತಂ ನ ಚ ನಾಸಹ್ಯಂ ತಸ್ಯ ಯುದ್ಧೇಽಸ್ತಿ ಕಿಂಚನ |
ತೇನ ಹ್ಯವಾಪ್ತಂ ಸಕಲಮಸ್ತ್ರಗ್ರಾಮಂ ಸಮಂತತಃ ॥ 15 ॥
ಅವನಿಂದ ಪರಾಜಿತವಾಗದುದು ಅಥವಾ ಯುದ್ಧದಲ್ಲಿ ಅವನಿಗೆ ಸಾಧ್ಯವಾಗದುದು ಯಾವುದೂ ಇಲ್ಲ. ಅವನು ಎಲ್ಲ ಅಸ್ತ್ರಜ್ಞಾನವನ್ನೂ ಸಂಪೂರ್ಣವಾಗಿ ಪಡೆದಿದ್ದಾನೆ (ಎಂದು ಹೇಳಿದರು).
ದ್ರೋಣೇನ ವ್ಯಾಹೃತೇ ತ್ವೇವಂ ಸಂಶಪ್ತಕಗಣಾಃ ಪುನಃ |
ಆಹ್ವಯನ್ನರ್ಜುನಂ ಸಂಖ್ಯೇ ದಕ್ಷಿಣಾಮಭಿತೋ ದಿಶಮ್ ॥ 16 ॥
ದ್ರೋಣರು ಹೀಗೆ ಹೇಳುತ್ತಿರಲು ಸಂಶಪ್ತಕ ಗಣಗಳು ಪುನಃ ದಕ್ಷಿಣದಿಕ್ಕಿನಲ್ಲಿ ಯುದ್ಧಕ್ಕಾಗಿ ಅರ್ಜುನನನ್ನು ಆಹ್ವಾನಿಸಿದವು.
ತತ್ರಾರ್ಜುನಸ್ಯಾಥ ಪರೈಃ ಸಾರ್ಧಂ ಸಮಭವದ್ ರಣಃ |

ತಾದೃಶೋ ಯಾದೃಶೋ ನಾನ್ಯಃ ಶ್ರುತೋ ದೃಷ್ಟೋಽಪಿ ವಾ ಪುನಃ ॥
ಅಲ್ಲಿ ಅರ್ಜುನನಿಗೂ ಮತ್ತು ಅವರಿಗೂ ಹಿಂದೆ ಎಂದೂ ನೋಡದಿದ್ದಂತಹ ಅಥವಾ ಕೇಳದಿದ್ದಂತಹ ಯುದ್ಧವು ನಡೆಯಿತು.
ತತ್ರ ದ್ರೋಣೇನ ವಿಹಿತೋ ವ್ಯೂಹೋ ರಾಜನ್ ವ್ಯರೋಚತ |
ಚರನ್ ಮಧ್ಯಂದಿನೇ ಸೂರ್ಯೋ ನಿರ್ದಹನ್ನಿವ ದೃಗ್ದ ೃಶಃ ॥ 18 ॥
ಇತ್ತ ಕಡೆ ಎಲೈ ರಾಜನೇ, ದ್ರೋಣರಿಂದ ವಿಹಿತವಾದ ವ್ಯೂಹವು ಮಧ್ಯಂದಿನ ಗತನಾದ ಸೂರ್ಯನು ನೋಡುವವರ ಕಣ್ಣನ್ನು ದಹಿಸುವಂತೆ ಶೋಭಿಸಿತು.
ತಂ ಚಾಭಿಮನ್ಯುರ್ವಚನಾತ್ ಪಿತುರ್ಜ್ಯೇಷ್ಠಸ್ಯ ಧರ್ಮವಿತ್ |
ಬಿಭೇದ ದುರ್ಭಿದಂ ಸಂಖ್ಯೇ ಚಕ್ರವ್ಯೂಹಮಭೀತವತ್ ॥ 19 ॥
ಧರ್ಮಜ್ಞನಾದ ಅಭಿಮನ್ಯುವು ತನ್ನ ದೊಡ್ಡಪ್ಪನ ಆದೇಶದಿಂದ ದುರ್ಭೇದ್ಯವಾದ ಆ ಚಕ್ರವ್ಯೂಹವನ್ನು ನಿರ್ಭಯವಾಗಿ ರಣರಂಗದಲ್ಲಿ ಭೇದಿಸಿದನು.
ಸ ಕೃತ್ವಾ ದುಷ್ಕರಂ ಕರ್ಮ ಹತ್ವಾ ವೀರಾನ್ ಸಹಸ್ರಶಃ |
ರಾಜಪುತ್ರಶತಂ ಹತ್ವಾ ಕೌಸಲ್ಯಂ ಚ ಬೃಹದ್ಬಲಮ್ ॥ 20 ॥
ಮಹಾರಥಂ ಶಲ್ಯಪುತ್ರಂ ಲಕ್ಷಣಂ ಚ ತವ ಪ್ರಿಯಮ್ |
ಷಡ್ಭಿರ್ವೀರೈಃ ಸುಸಂಯುಕ್ತೋ ದೌಃಶಾಸನಿವಶಂ ಗತಃ ॥ 21 ॥
ಅವನು ಯುದ್ಧದಲ್ಲಿ ದುಷ್ಕರವಾದ ಕರ್ಮವನ್ನು ಮಾಡಿ ವೀರರನ್ನು ಸಹಸ್ರಸಂಖ್ಯೆಯಲ್ಲಿ ಕೊಂದು, ನೂರು ರಾಜಪುತ್ರರನ್ನು ಕೊಂದು ಕೋಸಲಾಧಿಪತಿಯಾದ ಬೃಹದ್ಬಲನನ್ನೂ, ಮಹಾರಥನಾದ ಶಲ್ಯಪುತ್ರನನ್ನೂ ಮತ್ತು ನಿನಗೆ ಪ್ರಿಯನಾದ ಲಕ್ಷಣನನ್ನೂ ಕೊಂದು, ಆರು ವೀರರಿಂದ ಸುತ್ತುವರಿಯಲ್ಪಟ್ಟು ದುಶ್ಯಾಸನನ ಪುತ್ರನ ವಶನಾದನು.
ನಿಹತಃ ಪುರುಷವ್ಯಾಘ್ರಃ ಸುತೋ ಗಾಂಡೀವಧನ್ವನಃ |
ಸೌಭದ್ರಃ ಪೃಥಿವೀಪಾಲ ಜಹೌ ಪ್ರಾಣಾನ್ ಪರಂತಪ ॥ 22 ॥
ಎಲೌ ಪೃಥಿವೀಪಾಲನೇ, ಪರಂತಪನೇ, ಗಾಂಡೀವ,ಧನುರ್ಧಾರಿಯಾದ, ಅರ್ಜುನನ ಪುತ್ರನಾದ, ಪುರುಷವ್ಯಾಘ್ರನಾದ ಅಭಿಮನ್ಯುವು ಅವನಿಂದ ಹೊಡೆಯಲ್ಪಟ್ಟು ಪ್ರಾಣಗಳನ್ನು ತ್ಯಜಿಸಿದನು.
ವಯಂ ಪರಮಸಂಹೃಷ್ಟಾಃ ಪಾಂಡವಾಃ ಶೋಕಕರ್ಶಿತಾಃ |
ಸೌಭದ್ರೇ ನಿಹತೇ ರಾಜನ್ನವಹಾರಮಕುರ್ವತ ॥ 23 ॥
ಎಲೈ ರಾಜನೇ, ಅಭಿಮನ್ಯುವು ಹತನಾಗುತ್ತಿರಲು ನಾವು ಬಹಳ ಸಂತೋಷಗೊಂಡೆವು. ಪಾಂಡವರು ಶೋಕಕರ್ಶಿತರಾಗಿ ಸೈನ್ಯಾವಹಾರವನ್ನು ಮಾಡಿದರು.
ಧೃತರಾಷ್ಟ್ರಃ
ಪುತ್ರಂ ಪುರುಷಸಿಂಹಸ್ಯ ಸಂಜಯಾಪ್ರಾಪ್ತಯೌವನಮ್ |
ರಣೇ ವಿನಿಹತಂ ಶ್ರುತ್ವಾ ಭೃಶಂ ವೈ ದೀರ್ಯತೇ ಮನಃ ॥ 24 ॥
ಧೃತರಾಷ್ಟ್ರ ಪುರುಷಸಿಂಹನಾದ ಅರ್ಜುನನ ಪುತ್ರನಾದ, ಇನ್ನೂ ಯೌವನವನ್ನು ಹೊಂದದ ಅಭಿಮನ್ಯುವು ರಣರಂಗದಲ್ಲಿ ಹತನಾದುದನ್ನು ಕೇಳಿ ಎಲೈ ಸಂಜಯನೇ, ನನ್ನ ಹೃದಯವು ಬಿರಿದು ಹೋಗುತ್ತಿದೆ.
ದಾರುಣಃ ಕ್ಷತ್ರಧರ್ಮೋಽಯಂ ವಿಹಿತೋ ಧರ್ಮಕರ್ತೃಭಿಃ |
ಯತ್ರ ರಾಜ್ಯೇಪ್ಸವಃ ಶೂರಾ ಬಾಲೇ ಶಸ್ತ್ರಮಪಾತಯನ್ ॥ 25 ॥
ಧರ್ಮಕರ್ತೃಗಳಾದವರು ಕ್ಷತ್ರಿಯರಿಗೆ ಈ ಭಯಂಕರವಾದ ಧರ್ಮವನ್ನು ವಿಧಿಸಿದ್ದಾರೆ. ಆದ್ದರಿಂದ ರಾಜ್ಯವನ್ನು ಬಯಸುವ ಶೂರರು ಬಾಲಕನಲ್ಲಿ ಶಸ್ತ್ರಪಾತವನ್ನು ಮಾಡಿದರು.
ಬಾಲಮತ್ಯಂತಸುಖಿನಂ ವಿಚರಂತಮಭೀತವತ್ |
ಕೃತಾಸ್ತ್ರಾ ಬಹವೋ ಜಘ್ನುಃ ಬ್ರೂಹಿ ಗಾವಲ್ಗಣೇ ಕಥಮ್ ॥ 26 ॥
ಎಲೈ ಗಾವಲ್ಗಣಿಯೇ, ಬಾಲನೂ, ಅತ್ಯಂತ ಸುಖಿಯೂ, ನಿರ್ಭಯವಾಗಿ ಸಂಚರಿಸುವವನೂ ಆದ ಅವನನ್ನು ಅಸ್ತ್ರಪಾರಂಗತರಾದ ಅನೇಕರು ಹೇಗೆ ಕೊಂದರೆಂದು ಹೇಳು.
ಬಿಭಿತ್ಸತಾ ರಥಾನೀಕಂ ಸೌಭದ್ರೇಣಾಮಿತೌಜಸಾ |
ವಿಕ್ರೀಡಿತಂ ಯಥಾ ಸಂಖ್ಯೇ ತನ್ಮಮಾಚಕ್ಷ ್ವ ಸಂಜಯ ॥ 27 ॥
ಅಮಿತಸಾಮರ್ಥ್ಯವುಳ್ಳ ಅಭಿಮನ್ಯುವು ರಥಸಮೂಹವನ್ನು ಭಗ್ನಗೊಳಿಸಲು ಬಯಸಿ, ರಣರಂಗದಲ್ಲಿ ಹೇಗೆ ಆಟವನ್ನು ಆಡಿದನು ಎಂಬುದನ್ನು ಸಂಜಯನೇ ನನಗೆ ಹೇಳು.
ಸಂಜಯಃ
ಯನ್ಮಾಂ ಪೃಚ್ಛಸಿ ರಾಜೇಂದ್ರ ಸೌಭದ್ರಸ್ಯ ನಿಪಾತನಮ್ |
ತತ್ತೇ ಕಾರ್ತ್ಸ್ನ್ಯೇನ ವಕ್ಷ್ಯಾಮಿ ಶೃಣು ರಾಜನ್ ಸಮಾಹಿತಃ ॥ 28 ॥
ಸಂಜಯ ರಾಜೇಂದ್ರನೇ, ಅಭಿಮನ್ಯುವಿನ ಯಾವ ನಿಪಾತವನ್ನು ನೀನು ಕೇಳುತ್ತಿದ್ದೀಯೋ ಅದನ್ನು ಸಮಗ್ರವಾಗಿ ಹೇಳುವೆನು. ರಾಜನೇ, ಸಮಾಧಾನದಿಂದ ಅದನ್ನು ಕೇಳು.
ವಿಕ್ರೀಡಿತಂ ಕುಮಾರೇಣ ಯಥಾನೀಕಂ ಬಿಭಿತ್ಸತಾ |
ಆರುಗ್ಣಾಶ್ಚ ಭಯಾದ್ ವೀರಾಃ ದುಃಖಾವಾಸಾನ್ ಸಹಿಷ್ಣವಃ ॥29॥
ಶತ್ರುಸೈನ್ಯವನ್ನು ಭೇದಿಸಲು ಇಚ್ಛಿಸಿದ ಕುಮಾರನಿಂದ ಹೇಗೆ ಆಟವಾಡಲ್ಪಟ್ಟಿತು? ದುಃಖವನ್ನು ಸಹಿಸುವ ವೀರರು ಹೇಗೆ ಭಯದಿಂದ

ನಾಶವನ್ನು ಹೊಂದಿದರು?
ದಾವಾಗ್ನ್ಯಭಿಪರೀತಾನಾಂ ಭೂರಿ ಗುಲ್ಮತೃಣದ್ರುಮೇ |
ವನೌಕಸಾಮಿವಾರಣ್ಯೇ ತ್ವದೀಯಾನಾಮಭೂತ್ ಕ್ಷಯಃ ॥ 30 ॥
ದಾವಾಗ್ನಿಯಿಂದ ಸುತ್ತುವರಿಯಲ್ಪಟ್ಟ ಬಹಳ ಲತಾ-ವೃಕ್ಷಗಳು ಇರುವ ಅರಣ್ಯದಲ್ಲಿ ವಾಸಿಸುವವರಿಗೆ ಉಂಟಾದಂತೆ ನಿನ್ನವರಿಗೆ ಹೇಗೆ ವಿನಾಶವುಂಟಾಯಿತು (ಎಂಬುದನ್ನು ಹೇಳುತ್ತೇನೆ, ಸಮಾಧಾನದಿಂದ ಕೇಳು).
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ಸಂಜಯನಿಂದ ಪಾಂಡವರ ಮತ್ತು ಅಭಿಮನ್ಯುವಿನ ಪ್ರಶಂಸೆ. ಧೃತರಾಷ್ಟ್ರನಿಂದ ಅಭಿಮನ್ಯುವಿನ ವಧೆಯನ್ನು ವಿಸ್ತಾರವಾಗಿ ಹೇಳುವಂತೆ ಸಂಜಯನಿಗೆ ಪ್ರಶ್ನೆ.
ಜನಮೇಜಯಃ
ಸಮರೇ ತೂಗ್ರಕರ್ಮಾಣಃ ಕರ್ಮಭಿರ್ವ್ಯಂಜಿತಶ್ರಮಾಃ |
ಸಕೃಷ್ಣಾಃ ಪಾಂಡವಾಃ ಪಂಚ ದೇವೈರಪಿ ದುರಾಸದಾಃ ॥ 1 ॥
ಸಂಜಯ ಯುದ್ಧದಲ್ಲಿ ಉಗ್ರಕರ್ಮವನ್ನು ಮಾಡಿ ಅದರಿಂದ ಅಭಿವ್ಯಕ್ತವಾದ ಶ್ರಮವುಳ್ಳ (ಜಿತೇಂದ್ರಿಯರಾದ) ಕೃಷ್ಣ ಸಹಿತರಾದ ಪಂಚಪಾಂಡವರು ದೇವತೆಗಳಿಗೂ ಸೋಲುವವರಲ್ಲ.
ಶಶ್ವತ್ ಕರ್ಮಾನ್ವಯೈರ್ಬುದ್ಧ್ಯಾ ಪ್ರಕೃತ್ಯಾ ಯಶಸಾ ಶ್ರಿಯಾ |
ನ ಭೂತೋ ಭವಿತಾ ವಾಽಪಿ ಕೃಷ್ಣಸ್ಯ ಸದೃಶಃ ಪುಮಾನ್ ॥ 2 ॥
ಸತತವಾಗಿ ಅವನು ಮಾಡುವ ಕರ್ಮಗಳು, ಅವನ ಬುದ್ಧಿ, ಸ್ವಭಾವ, ಕೀರ್ತಿ ಮತ್ತು ಕಾಂತಿಗಳಿಂದ ಕೃಷ್ಣನಿಗೆ ಸದೃಶನಾದ ಪುರುಷನು ಹಿಂದೆ ಇರಲಿಲ್ಲ ಮತ್ತು ಮುಂದೆ ಇರುವುದಿಲ್ಲ.
ಸತ್ಯಧರ್ಮತಪೋದಾನೈರ್ವಿಪ್ರಪೂಜಾದಿಭಿರ್ಗುಣೈಃ |
ಸದೇಹಸ್ತ್ರಿದಿವಂ ಪ್ರಾಪ್ತೋ ರಾಜಾ ಕಿಲ ಯುಧಿಷ್ಠಿರಃ ॥ 3 ॥
ಸತ್ಯ-ಧರ್ಮ-ತಪೋ-ದಾನಗಳಿಂದಲೂ, ಬ್ರಾಹ್ಮಣರ ಪೂಜೆ ಮೊದಲಾದ ಗುಣಗಳಿಂದಲೂ ರಾಜನಾದ ಯುಧಿಷ್ಠಿರನು ಸಶರೀರನಾಗಿ ಸ್ವರ್ಗಕ್ಕೆ ಹೋದನಷ್ಟೆ?
ಯುಗಾಂತೇ ಚಾಂತಕೋ ರಾಜನ್ ಜಾಮದಗ್ನ್ಯಶ್ಚ ಕೀರ್ತಿಮಾನ್ |
ರಣಸ್ಥೋ ಭೀಮಸೇನಶ್ಚ ಕಥ್ಯಂತೇ ಸದೃಶಾಸ್ತ್ರಯಃ॥ 4 ॥
ಎಲೈ ರಾಜನೇ, ಯುಗಾಂತಕಾಲದ ಯಮ, ಕೀರ್ತಿಶಾಲಿಯಾದ ಪರಶುರಾಮ ಮತ್ತು ರಣರಂಗದಲ್ಲಿ ಇರುವ ಭೀಮಸೇನ, ಈ ಮೂರು ಜನರು ಸದೃಶರೆಂದು (ಸಮಾನರೆಂದು) ಹೇಳಲ್ಪಡುತ್ತಾರೆ.
ಪ್ರತಿಜ್ಞಾಕರ್ಮದಕ್ಷಸ್ಯ ರಣೇ ಗಾಂಡೀವಧನ್ವನಃ |
ಉಪಮಾಂ ನಾಧಿಗಚ್ಛಾಮಿ ಪಾರ್ಥಸ್ಯ ಸದೃಶೀಂ ಕ್ಷಿತೌ ॥ 5 ॥
ಗಾಂಡೀವ ಧನುರ್ಧಾರಿಯಾದ ಅರ್ಜುನನಿಗೆ ಅವನ ಪ್ರತಿಜ್ಞೆಯನ್ನು ಪೂರೈಸುವ ದಕ್ಷತೆಯ ವಿಷಯದಲ್ಲಿ ಭೂಮಿಯಲ್ಲಿ ಸದೃಶವಾದ ಯಾವ ಉಪಮಾನವನ್ನೂ ನಾನು ಕಾಣುವುದಿಲ್ಲ.
ಗುರುವಾತ್ಸಲ್ಯಮತ್ಯಂತಂ ನೈಭೃತ್ಯಂ ವಿನಯೋ ದಮಃ |
ನಕುಲೇ ಪ್ರಾತಿರೂಪ್ಯಂ ಚ ಶೌರ್ಯಂ ಚ ನಿಯತಾನಿ ಷಟ್ ॥ 6 ॥
ನಕುಲನಲ್ಲಿ ಗುರುಭಕ್ತಿ, ಅಪ್ರಮಾದ, ವಿನಯ, ಇಂದ್ರಿಯನಿಗ್ರಹ, ಸೌಂದರ್ಯ ಮತ್ತು ಶೌರ್ಯ- ಈ ಆರು ಗುಣಗಳು ನಿಯತವಾಗಿವೆ.
ಶ್ರುತಗಾಂಭೀರ್ಯಮಾಧುರ್ಯಸತ್ತ್ವರೂಪಪರಾಕ್ರಮೈಃ |
ಸದೃಶೋ ದೇವಯೋರ್ವೀರಃ ಸಹದೇವಃ ಕಿಲಾಶ್ವಿನೋಃ ॥ 7 ॥
ವಿದ್ಯೆ, ಗಾಂಭೀರ್ಯ, ಮಾಧುರ್ಯ, ಧೈರ್ಯ, ರೂಪ, ಪರಾಕ್ರಮಗಳು - ಇವುಗಳಿಂದ ವೀರನಾದ ಸಹದೇವನು ಅಶ್ವಿನೀದೇವತೆಗಳಿಗೆ ಸದೃಶನಾಗಿದ್ದಾನೆ.
ಯೇ ಚ ಕೃಷ್ಣೇ ಗುಣಾಃ ಸ್ಫೀತಾಃ ಪಾಂಡವೇಯೇಷು ಯೇ ಗುಣಾಃ |
ಅಭಿಮನ್ಯೌ ಕಿಲೈಕಸ್ಥಾ ದೃಶ್ಯಂತೇ ತೇ ಗುಣಾಃ ಶುಭಾಃ ॥ 8 ॥
ಕೃಷ್ಣನಲ್ಲಿ ಪರಿಶುದ್ಧವಾದ ಯಾವ ಗುಣಗಳಿವೆಯೋ ಮತ್ತು ಪಾಂಡವರಲ್ಲಿ ಯಾವ ಗುಣಗಳಿವೆಯೋ ಆ ಎಲ್ಲ ಶುಭಗುಣಗಳೂ ಅಭಿಮನ್ಯುವಿನಲ್ಲಿ ಒಬ್ಬನಲ್ಲಿಯೇ ನೆಲೆಸಿರುವುದು ಕಂಡುಬರುತ್ತವೆ.
ಯುಧಿಷ್ಠಿರಸ್ಯ ಧೈರ್ಯೇಣ ಕೃಷ್ಣಸ್ಯ ಚರಿತೇನ ಚ |
ಕರ್ಮಣಾ ಭೀಮಸೇನಸ್ಯ ಸದೃಶಂ ಭೀಮಕರ್ಮಣಃ ॥ 9 ॥
ಧೈರ್ಯದಿಂದ ಯುಧಿಷ್ಠಿರನಿಗೂ, ತನ್ನ ಕಾರ್ಯದಿಂದ ಕೃಷ್ಣನಿಗೂ, ತನ್ನ ಕರ್ಮಗಳಿಂದ ಭಯಂಕರ ಕರ್ಮವನ್ನು ಮಾಡುವ ಭೀಮಸೇನನಿಗೂ ಅವನು ಸದೃಶನಾದವನು.

ಧನಂಜಯಸ್ಯ ರೂಪೇಣ ವಿಕ್ರಮೇಣ ಶ್ರುತೇನ ಚ |
ವಿನಯೇ ಸಹದೇವಸ್ಯ ಸದೃಶಂ ನಕುಲಸ್ಯ ಚ ॥ 10 ॥
ರೂಪ, ಪರಾಕ್ರಮ ಮತ್ತು ವಿದ್ಯೆಗಳಲ್ಲಿ ಧನಂಜಯನಿಗೂ, ವಿನಯದಲ್ಲಿ ನಕುಲ- ಸಹದೇವರಿಗೂ ಸದೃಶನಾದವನು.
ಅಭಿಮನ್ಯುಂ ದ್ವಿಜಶ್ರೇಷ್ಠ ಸೌಭದ್ರಮಪರಾಜಿತಮ್ |
ಶ್ರೋತುಮಿಚ್ಛಾಮಿ ಕಾರ್ತ್ಸ್ನ್ಯೇನ ಕಥಮಾಯೋಧನೇ ಹತಃ ॥ 11 ॥
ಜನಮೇಜಯ ಎಲೈ ಬ್ರಾಹ್ಮಣಶ್ರೇಷ್ಠರೇ, ಅಪರಾಜಿತನಾದ, ಸುಭದ್ರಾಪುತ್ರನಾದ ಅಭಿಮನ್ಯುವು ರಣರಂಗದಲ್ಲಿ ಹೇಗೆ ಹತನಾದನೆಂದು ಪೂರ್ಣವಾಗಿ ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಅಭಿಮನ್ಯುಂ ಹತಂ ಶ್ರುತ್ವಾ ಧೃತರಾಷ್ಟ್ರೋ ಜನೇಶ್ವರಃ |
ವಿಸ್ತರೇಣ ಮಹಾರಾಜ ಪರ್ಯಪೃಚ್ಛತ್ ಸ ಸಂಜಯಮ್ ॥ 12 ॥
ವೈಶಂಪಾಯನ ಎಲೈ ಮಹಾರಾಜನೇ, ಅಭಿಮನ್ಯುವು ಹತನಾದುದನ್ನು ಕೇಳಿ ಜನೇಶ್ವರನಾದ ಧೃತರಾಷ್ಟ್ರನು ಸಂಜಯನನ್ನು ವಿಸ್ತಾರವಾಗಿ ಹೇಳುವಂತೆ ಕೇಳಿದನು.
ಧೃತರಾಷ್ಟ್ರ
ಅಭಿಮನ್ಯುಂ ಹತಂ ಸೂತ ಸೌಭದ್ರಮಪರಾಜಿತಮ್ |
ಶ್ರೋತುಮಿಚ್ಛಾಮಿ ಕಾರ್ತ್ಸ್ನ್ಯೇನ ಕಥಮಾಯೋಧನ್ಯೇ ಹತಃ ॥ 13 ॥
ಧೃತರಾಷ್ಟ್ರ ಎಲೈ ಸೂತನೇ, ಅಪರಾಜಿತನಾದ ಅಭಿಮನ್ಯುವು ಹತನಾದನೆಂದು ಹೇಳುತ್ತಿದ್ದೀಯೆ. ಅವನು ರಣರಂಗದಲ್ಲಿ ಹೇಗೆ ಹತನಾದನೆಂದು ವಿಸ್ತಾರವಾಗಿ ಕೇಳಲು ಬಯಸುತ್ತೇನೆ (ಎಂದು ಹೇಳಿದನು).
ಸಂಜಯಃ
ಸ್ಥಿರೋ ಭವ ಮಹಾರಾಜ ಶೋಕಂ ಧಾರಯ ದುರ್ಧರಮ್ |
ಮಹಾಂತಂ ಬಂಧುನಾಶಂ ತೇ ಕಥಯಿಷ್ಯಾಮಿ ತಚ್ಛೃಣು ॥ 14 ॥
ಸಂಜಯ ಮಹಾರಾಜನೇ, ಸ್ಥಿರವಾಗಿರು. ಸಹಿಸಲು ಅಸಾಧ್ಯವಾದ ಶೋಕವನ್ನು ತಡೆದುಕೊ. ದೊಡ್ಡ ಬಂಧುನಾಶವನ್ನು ಏನು ಹೇಳುವೆನೋ ಅದನ್ನು ಕೇಳು.
ಪುತ್ರಂ ಪುರುಷಸಿಂಹಸ್ಯ ಸಂಜಯಾಪ್ರಾಪ್ತಯೌವನಮ್ |
ರಣೇ ನಿಪತಿತಂ ಶ್ರುತ್ವಾ ದೃಢಂ ಮೇ ದೂಯತೇ ಮನಃ ॥ 15 ॥
ದಾರುಣಃ ಕ್ಷತ್ರಧರ್ಮೋಽಯಂ ವಿಹಿತೋ ಧರ್ಮಕರ್ತೃಭಿಃ |
ಯತ್ರ ರಾಜ್ಯೇಪ್ಸವಃ ಶೂರಾ ಬಾಲೇ ಶಸ್ತ್ರಮಪಾತಯನ್ ॥ 16 ॥
ಧರ್ಮಕರ್ತೃಗಳಾದವರು ಕ್ಷತ್ರಿಯರಿಗೆ ಈ ಭಯಂಕರವಾದ ಧರ್ಮವನ್ನು ವಿಧಿಸಿದ್ದಾರೆ. ಆದ್ದರಿಂದ ರಾಜ್ಯವನ್ನು ಬಯಸುವ ಶೂರರು ಬಾಲಕನಲ್ಲಿ ಶಸ್ತ್ರಪಾತವನ್ನು ಮಾಡಿದ್ದಾರೆ.
ಬಾಲಮತ್ಯಂತಸುಖಿನಂ ಪ್ರಹರಂತಮಭೀತವತ್ |
ಕೃತಾಸ್ತ್ರಾ ಬಹವೋ ಜಘ್ನುರ್ಬ್ರೂಹಿ ಗಾವಲ್ಗಣೇ ಕಥಮ್ ॥ 17 ॥
ಎಲೈ ಗಾವಲ್ಗಣಿಯೇ, ಬಾಲನೂ, ಅತ್ಯಂತ ಸುಖಿಯೂ, ನಿರ್ಭಯವಾಗಿ ಸಂಚರಿಸುವವನೂ ಆದ ಅವನನ್ನು ಅಸ್ತ್ರಪಾರಂಗತರಾದ ಅನೇಕರು ಹೇಗೆ ಕೊಂದರೆಂದು ಹೇಳು.
ಬಿಭಿತ್ಸತಾ ತದಾಽನೀಕಂ ಸೌಭದ್ರೇಣಾಮಿತೌಜಸಾ |
ಚಿಕ್ರೀಡಿತಂ ಯಥಾ ಸಂಖ್ಯೇ ತನ್ಮಮಾಚಕ್ಷ್ವ ಸಂಜಯ ॥ 18 ॥
ಅಮಿತಸಾಮರ್ಥ್ಯವುಳ್ಳ ಅಭಿಮನ್ಯುವು ರಥಸಮೂಹವನ್ನು ಭಗ್ನಗೊಳಿಸಲು ಬಯಸಿ, ರಣರಂಗದಲ್ಲಿ ಹೇಗೆ ಆಟವನ್ನು ಆಡಿದನು ಎಂಬುದನ್ನು ಸಂಜಯನೇ, ನನಗೆ ಹೇಳು.
ಸಂಜಯಃ
ಯನ್ಮಾಂ ಪೃಚ್ಛಸಿ ಸಂಗ್ರಾಮೇ ಸೌಭದ್ರಂ ವಿನಿಪಾತಿತಮ್ |
ತತ್ ತೇಽಹಂ ಸಂಪ್ರವಕ್ಷ್ಯಾಮಿ ಶೃಣು ರಾಜನ್ ಸಮಾಹಿತಃ |
ವಿಕ್ರೀಡಿತಂ ಕುಮಾರಸ್ಯ ಯಥಾಽನೀಕಂ ಬಿಭಿತ್ಸತಃ ॥ 19 ॥
ಸಂಜಯ ರಾಜೇಂದ್ರನೇ, ಅಭಿಮನ್ಯುವಿನ ಯಾವ ನಿಪಾತವನ್ನು ನೀನು ನನ್ನನ್ನು ಕೇಳುತ್ತಿದ್ದೀಯೋ ಅದನ್ನು ಸಮಗ್ರವಾಗಿ ಹೇಳುವೆನು. ರಾಜನೇ, ಸಮಾಧಾನದಿಂದ ಅದನ್ನು ಕೇಳು.
ಶತ್ರುಸೈನ್ಯವನ್ನು ಭೇದಿಸಲು ಇಚ್ಛಿಸಿದ ಕುಮಾರನಿಂದ ಹೇಗೆ ಆಟವಾಡಲ್ಪಟ್ಟಿತು? ದುಃಖವನ್ನು ಸಹಿಸುವ ವೀರರು ಹೇಗೆ ಭಯದಿಂದ ನಾಶವನ್ನು ಹೊಂದಿದರು?
ದಾವಾಗ್ನ್ಯಭಿಪರೀತಾನಾಂ ಭೂರಿಗುಲ್ಮತೃಣದ್ರುಮೇ |
ವನೌಕಸಾಮಿವಾರಣ್ಯೇ ತ್ವದೀಯಾನಾಮಭೂದ್ ಭಯಮ್ ॥ 20 ॥
ದಾವಾಗ್ನಿಯಿಂದ ಸುತ್ತುವರಿಯಲ್ಪಟ್ಟ ಬಹಳ ಲತಾ-ವೃಕ್ಷಗಳು ಇರುವ ಅರಣ್ಯದಲ್ಲಿ ವಾಸಿಸುವವರಿಗೆ ಉಂಟಾದಂತೆ ನಿನ್ನವರಿಗೆ ಹೇಗೆ ವಿನಾಶವುಂಟಾಯಿತು (ಎಂಬುದನ್ನು ಹೇಳುತ್ತೇನೆ, ಸಮಾಧಾನದಿಂದ ಕೇಳು).
॥ ಇತೀ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥

॥ ಅಭಿಮನ್ಯುವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ನಾಲ್ಕನೆಯ ಅಧ್ಯಾಯ
ದ್ರೋಣರಿಂದ ಪದ್ಮವ್ಯೂಹ ರಚನೆ. ಆ ವ್ಯೂಹವನ್ನು ಭೇದಿಸುವಂತೆ ಯುಧಿಷ್ಠಿರನಿಂದ ಅಭಿಮನ್ಯುವಿಗೆ ಪ್ರಚೋದನೆ.
ಸಂಜಯಃ
ಪದ್ಮವ್ಯೂಹೋ ಮಹಾರಾಜ ಆಚಾರ್ಯೇಣ ರಣೇ ಕೃತಃ |
ತತ್ರ ಪದ್ಮೋಪಮಾಃ ಸರ್ವೇ ರಾಜಾನಃ ಸ್ಮ ನಿವೇಶಿತಾಃ ॥ 1 ॥
ಸಂಜಯ ಎಲೈ ಮಹಾರಾಜನೇ, ರಣರಂಗದಲ್ಲಿ ದ್ರೋಣಾಚಾರ್ಯರು ಪದ್ಮವ್ಯೂಹವನ್ನು ರಚಿಸಿದರು. ಅಲ್ಲಿ ದಳಗಳ ಸ್ಥಾನದಲ್ಲಿ ಎಲ್ಲ ರಾಜರೂ ನಿಲ್ಲಿಸಲ್ಪಟ್ಟರು.
ಕೇಸರಾಣಿ ಚ ಪದ್ಮಸ್ಯ ಸುಕುಮಾರಾಣಿ ಭಾರತ |
ಕುಮಾರಾ ರಾಜಲೋಕಸ್ಯ ನಿಕ್ಷಿಪ್ತಾಃ ಕೇಸರೋಪಮಾಃ ॥ 2 ॥
ಕರ್ಣಿಕಾಸ್ಥೋ ಮಹಾರಾಜ ತಸ್ಯ ದುರ್ಯೋಧನೋಽಭವತ್ |
ಕರ್ಣದುಃಶಾಸನಕೃಪೈರ್ವೃತೋ ರಾಜಾ ಮಹಾರಥೈಃ ॥ 3 ॥
ಎಲೈ ಭಾರತನೇ, ಕೇಸರಸದೃಶರಾದ ರಾಜಕುಮಾರರು ಪದ್ಮದ ಸುಕುಮಾರ ಕೇಸರಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟರು. ಮಹಾರಾಜನೇ, ಮಹಾರಥರಾದ ಕರ್ಣ- ದುಶ್ಯಾಸನ-ಕೃಪರಿಂದ ಸಹಿತನಾದ ದುರ್ಯೋಧನನು ಕರ್ಣಿಕಾ ಸ್ಥಾನದಲ್ಲಿದ್ದನು.
ದೇವರಾಜೋಪಮಃ ಶ್ರೀಮಾನ್ ಶ್ವೇತಚ್ಛತ್ರಾಭಿಸಂವೃತಃ|
ಚಾಮರವ್ಯಜನೋತ್ಕ್ಷೇಪೈಃ ಸಮುದ್ಯನ್ನಿವ ಭಾಸ್ಕರಃ ॥ 4 ॥
ಪ್ರಮುಖೇ ತಸ್ಯ ಶೂರಸ್ಯ ದ್ರೋಣೋಽವಸ್ಥಿತಸಾಯಕಃ|
ಸಿಂಧುರಾಜಸ್ತಥಾಽತಿಷ್ಠದ್ ಗಿರಿರ್ಮೇರುರಿವಾಚಲಃ ॥ 5 ॥
ದೇವರಾಜನಂತೆ ಕಾಂತಿಯುಕ್ತನಾಗಿ ಶ್ವೇತಚ್ಛತ್ರದಿಂದ ಸಂವೃತನಾಗಿ, ಚಾಮರ-ವ್ಯಜನಗಳ ಬೀಸುವಿಕೆಯಿಂದ ಕೂಡಿದವನಾಗಿ ಜ್ವಲಿಸುವ ಸೂರ್ಯನಂತೆ (ಕರ್ಣಿಕಾ ಸ್ಥಾನದಲ್ಲಿ ಇದ್ದನು). ಆ ಶೂರನ ಮುಂಭಾಗದಲ್ಲಿ ದ್ರೋಣರು ಬಾಣವನ್ನು ಹಿಡಿದು ನಿಂತರು. ಸಿಂಧುರಾಜನು ಅಚಲವಾದ ಮೇರುಪರ್ವತದಂತೆ ನಿಂತನು.
ಸಿಂಧುರಾಜಸ್ಯ ಪಾರ್ಶ್ವಸ್ಥಾ ಅಶ್ವತ್ಥಾಮಪುರೋಗಮಾಃ |
ಸುತಾಸ್ತವ ಮಹಾರಾಜ ತ್ರಿಂಶತ್ ತ್ರಿದಶವಿಕ್ರಮಾಃ ॥ 6 ॥
ಎಲೈ ಮಹಾರಾಜನೇ, ಸಿಂಧುರಾಜನ ಪಾರ್ಶ್ವಗಳಲ್ಲಿ ಅಶ್ವತ್ಥಾಮರೇ ಮೊದಲಾದ ದೇವತೆಗಳ ವಿಕ್ರಮವನ್ನು ಹೊಂದಿದ ನಿನ್ನ ಮೂವತ್ತು ಪುತ್ರರು ಇದ್ದರು.
ಶಕುನಿಃ ಕೃತವರ್ಮಾ ಚ ಶಲ್ಯೋ ಭೂರಿಶ್ರವಾಃ ಶಲಃ |
ಪಾರ್ಶ್ವತಃ ಸಿಂಧುರಾಜಸ್ಯ ವ್ಯರಾಜಂತ ಮಹಾರಥಾಃ ॥ 7 ॥
ಮಹಾರಥರಾದ ಶಕುನಿ, ಕೃತವರ್ಮ, ಶಲ್ಯ, ಭೂರಿಶ್ರವ, ಶಲ ಇವರು ಸಿಂಧುರಾಜನ ಇನ್ನೊಂದು ಪಾರ್ಶ್ವದಲ್ಲಿದ್ದರು.
ಸಂಘಾತಾ ರಾಜಪುತ್ರಾಣಾಂ ಸರ್ವೇಷಾಮಭವಂಸ್ತದಾ |
ಕೃತಾಭಿಸಮಯಾಶ್ಶ್ಯಸನ್ ಸುವರ್ಣಕವಚಧ್ವಜಾಃ ॥ 8 ॥
ಆಗ ಎಲ್ಲ ರಾಜಪುತ್ರರ ಸಮುದಾಯವು ಉಂಟಾಯಿತು. ಅವರು ಸುವರ್ಣ- ಕವಚ-ಧ್ವಜಗಳನ್ನು ಧರಿಸಿ ಪ್ರತಿಜ್ಞೆಗಳನ್ನು ಮಾಡಿ ನಿಂತರು.
ರಕ್ತಾಂಬರಧರಾಃ ಸರ್ವೇ ಸರ್ವೇ ಕನಕಭೂಷಣಾಃ |
ಸರ್ವೇ ರಕ್ತಪತಾಕಾಶ್ಚ ಸರ್ವೇ ಕನಕಮಾಲಿನಃ ॥ 9 ॥
ಚಂದನಾಗರುದಿಗ್ಧಾಂಗಾಃ ಸ್ರಗ್ವಿಣಃ ಸೂಕ್ಷ್ಮವಾಸಸಃ |
ಸಹಿತಾಃ ಪರ್ಯಧಾವಂತ ಕಾರ್ಷ್ಣಿಂ ಪ್ರತಿ ಯುಯುತ್ಸವಃ ॥ 10 ॥
ರಕ್ತವಸ್ತ್ರವನ್ನು ಧರಿಸಿ, ಎಲ್ಲರೂ ಸುವರ್ಣಭೂಷಿತರಾಗಿ, ರಕ್ತಪತಾಕೆಗಳನ್ನು ಹೊಂದಿ, ಕನಕಮಾಲೆಗಳನ್ನು ಧರಿಸಿ, ಚಂದನಾಗರು ಲೇಪಿತವಾದ ಶರೀರವುಳ್ಳವರಾಗಿ, ಹೂಮಾಲೆಗಳನ್ನು ಧರಿಸಿ, ತೆಳುವಾದ ವಸ್ತ್ರಗಳನ್ನು ಧರಿಸಿ, ಯುದ್ಧಮಾಡಲು ಬಯಸಿ ಎಲ್ಲರೂ ಒಟ್ಟಾಗಿ ಅಭಿಮನ್ಯುವಿನ ಕಡೆಗೆ ಧಾವಿಸಿದರು.
ತೇಷಾಂ ದಶಸಹಸ್ರಾಣಿ ಬಭೂವೂ ರಥಧನ್ವಿನಾಮ್ |
ಪೌತ್ರಂ ತವ ಪುರಸ್ಕೃತ್ಯ ಲಕ್ಷಣಂ ಪ್ರಿಯದರ್ಶನಮ್ ॥ 11 ॥
ನಿನ್ನ ಪೌತ್ರನಾದ, ಸುಂದರನಾದ ಲಕ್ಷಣನನ್ನು ಮುಂದೆಮಾಡಿಕೊಂಡ, ರಥ- ಧನುಸ್ಸುಗಳನ್ನು ಹೊಂದಿದ ಆ ರಾಜಕುಮಾರರು ಹತ್ತುಸಾವಿರ ಮಂದಿ ಇದ್ದರು.
ಅನ್ಯೋನ್ಯಸಮದುಃಖಾಸ್ತೇ ಅನ್ಯೋನ್ಯಸಮಸಾಹಸಾಃ |
ಅನ್ಯೋನ್ಯಮನ್ವವರ್ತಂತ ಅನ್ಯೋನ್ಯಕೃತನಿಶ್ರಮಾಃ ॥ 12 ॥
ಅವರೆಲ್ಲರೂ ಪರಸ್ಪರವಾಗಿ ಸಮಾನ ದುಃಖವುಳ್ಳವರೂ, ಸಮಾನವಾದ ಸಾಹಸದಲ್ಲಿ ತೊಡಗುವವರೂ, ಪರಸ್ಪರ ಹಿತದಲ್ಲಿ ರತರಾದವರೂ ಮತ್ತು ಪರಸ್ಪರವಾಗಿ ಹಿಂಬಾಲಿಸುವವರೂ ಆಗಿದ್ದರು.

ತದನೀಕಮನಾಧೃಷ್ಯಂ ಭಾರದ್ವಾಜೇನ ರಕ್ಷಿತಮ್ |
ಪಾರ್ಥಾಃ ಸಮಭ್ಯಧಾವಂತ ಭೀಮಸೇನಪುರೋಗಮಾಃ ॥ 13 ॥
ಸೋಲಿಸಲು ಅಸಾಧ್ಯವಾದ, ದ್ರೋಣರಿಂದ ರಕ್ಷಿತವಾದ ಆ ಸೈನ್ಯದ ಕಡೆಗೆ ಭೀಮಸೇನ ಮೊದಲಾದ ಪಾಂಡವರು ಮುನ್ನುಗ್ಗಿದರು.
ಸಾತ್ಯಕಿಃ ಸಾತ್ವತಶ್ಚೈವ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಕುಂತಿಭೋಜಶ್ಚ ವಿಕ್ರಾಂತೋ ದ್ರುಪದಶ್ಚ ಮಹಾರಥಃ ॥ 14 ॥
ದುರ್ಜಯಃ ಕ್ಷತ್ರಧರ್ಮಾ ಚ ಬೃಹತ್ಕ್ಷತ್ರಶ್ಚ ವೀರ್ಯವಾನ್ |
ಚೇದಿಪೋ ಧೃಷ್ಟಕೇತುಶ್ಚ ಮಾದ್ರೀಪುತ್ರೌ ಘಟೋತ್ಕಚಃ ॥ 15 ॥
ಯುಧಾಮನ್ಯುಶ್ಚ ಪಾಂಚಾಲ್ಯಃ ಶಿಖಂಡೀ ಚಾಪರಾಜಿತಃ |
ಉತ್ತಮೌಜಾಶ್ಚ ದುರ್ಧರ್ಷೋ ವಿರಾಟಶ್ಚ ಮಹಾರಥಃ ॥ 16 ॥
ದ್ರೌಪದೇಯಾಶ್ಚ ದುರ್ಧರ್ಷಾಃ ಶೈಶುಪಾಲಿಶ್ಚ ವೀರ್ಯವಾನ್ |
ಕೇಕಯಾಶ್ಚ ಮಹಾವೀರ್ಯಾಃ ಸೃಂಜಯಾಶ್ಚ ಸಹಸ್ರಶಃ ॥ 17 ॥
ಏತೇ ಚಾನ್ಯೇ ಚ ಬಹವಃ ಸಗಣಾಃ ಯುದ್ಧದುರ್ಮದಾಃ |
ಸಹಸಾ ಸ್ಯಾಭ್ಯವರ್ತಂತ ಭಾರದ್ವಾಜಯುಯುತ್ಸವಃ ॥ 18 ॥
ಸಾತ್ವತನಾದ ಸಾತ್ಯಕಿ, ಪಾರ್ಷ್ವತನಾದ ಧೃಷ್ಟದ್ಯುಮ್ನ, ವಿಕ್ರಮಶಾಲಿಯಾದ ಕುಂತಿಭೋಜ, ಮಹಾರಥನಾದ ದ್ರುಪದ, ಜಯಿಸಲು ಕಷ್ಟಸಾಧ್ಯನಾದ ಕ್ಷತ್ರಧರ್ಮ, ಪರಾಕ್ರಮಶಾಲಿಯಾದ ಬೃಹತ್ಕ್ಷತ್ರ, ಚೇದಿರಾಜನಾದ ಧೃಷ್ಟಕೇತು, ಮಾದ್ರೀಪುತ್ರರಾದ ನಕುಲ-ಸಹದೇವರು, ಘಟೋತ್ಕಚ, ಪಾಂಚಾಲ ದೇಶದ ಯುಧಾಮನ್ಯು, ಅಪರಾಜಿತನಾದ ಶಿಖಂಡಿ ಮತ್ತು ಸೋಲಿಸಲು ಕಷ್ಟಸಾಧ್ಯನಾದ ಉತ್ತಮೌಜ, ಮಹಾರಥನಾದ ವಿರಾಟ, ದುರ್ಧರ್ಷರಾದ ದ್ರೌಪದಿಯ ಪುತ್ರರು, ವೀರ್ಯಶಾಲಿಯಾದ ಶೈಶುಪಾಲಿಯು, ಮಹಾಪರಾಕ್ರಮಿಗಳಾದ ಕೇಕಯರು ಮತ್ತು ಸಹಸ್ರ ಸಂಖ್ಯೆಯಲ್ಲಿದ್ದ ಸೃಂಜಯರು- ಇವರೂ, ಇನ್ನೂ ತಮ್ಮ ಗಣಗಳಿಂದ ಸಹಿತರಾದ ಅನೇಕ ಯುದ್ಧದುರ್ಮದರೂ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಶೀಘ್ರವಾಗಿ ಅವರ ಕಡೆಗೆ ಸಾಗಿದರು.
ಸಮೀಪೇ ವರ್ತಮಾನಾಂಸ್ತಾನ್ ಭಾರದ್ವಾಜೋಽಪಿ ವೀರ್ಯವಾನ್ |
ಅಸಂಭ್ರಾಂತಃ ಶರೌಘೇಣ ಮಹತಾ ಪ್ರತ್ಯವಾರಯತ್ ॥ 19 ॥
ಸಮೀಪದಲ್ಲಿ ಬಂದ ಅವರನ್ನು ಪರಾಕ್ರಮಶಾಲಿಯಾದ ದ್ರೋಣರು ಯಾವ ಗಾಬರಿಯೂ ಇಲ್ಲದೆ ತಮ್ಮ ಮಹತ್ತಾದ ಶರವರ್ಷದಿಂದ ತಡೆದರು.
ಮಹೌಘಃ ಸಲಿಲಸ್ಯೇವ ಗಿರಿಮಾಸಾದ್ಯ ದುರ್ಭಿದಮ್ |
ತಂ ತು ತೇ ನಾಭ್ಯವರ್ತಂತ ವೇಲಾಮಿವ ಜಲಾಶಯಾಃ ॥ 20 ॥
ವೀರರ ಮಹಾಪ್ರವಾಹವು ನಿರ್ಭೇದ್ಯವಾದ ಪರ್ವತತಳವನ್ನು ತಲುಪಿ ನಿಂತಂತೆ, ಜಲಾಶಯಗಳು ದಡವನ್ನು ತಲುಪಿ ನಿಂತಂತೆ ಅವರು ದ್ರೋಣರನ್ನು ದಾಟಲು ಸಾಧ್ಯವಾಗಲಿಲ್ಲ.
ಪೀಡ್ಯಮಾನಾಃ ಶರೈಸ್ತೀಕ್ಷ್ಣೈರ್ದ್ರೋಣಚಾಪವಿನಿಃಸೃತೈಃ |
ನಾಶಕ್ನುವನ್ ಮುಖೇ ಸ್ಥಾತುಂ ಭಾರದ್ವಾಜಸ್ಯ ಪಾಂಡವಾಃ ॥ 21 ॥
ದ್ರೋಣರ ಧನುಸ್ಸಿನಿಂದ ಹೊರಟ ತೀಕ್ಷ್ಣವಾದ ಬಾಣಗಳಿಂದ ಪೀಡಿಸಲ್ಪಟ್ಟ ಪಾಂಡವರು ಅವರ ಎದುರಿನಲ್ಲಿ ನಿಲ್ಲಲು ಸಮರ್ಥರಾಗಲಿಲ್ಲ.
ತದದ್ಭುತಮಪಶ್ಯಾಮ ದ್ರೋಣಸ್ಯ ಭುಜಯೋರ್ಬಲಮ್ |
ಯದೇನಂ ನಾಭ್ಯವರ್ತಂತ ಪಾಂಚಾಲಾಃ ಪಾಂಡವೈಃ ಸಹ ॥ 22 ॥
ಪಾಂಚಾಲರು ಮತ್ತು ಪಾಂಡವರು, ಅವರನ್ನು ಮೀರಲು ಸಾಧ್ಯವಾಗದಿದ್ದಂತಹ ದ್ರೋಣರ ಅದ್ಭುತ ಭುಜಬಲವನ್ನು ನಾವು ನೋಡಿದೆವು.
ತಮಾಯಾಂತಮಭಿಕ್ರುದ್ಧೋ ದ್ರೋಣಂ ದೃಷ್ಟ್ವಾ ಯುಧಿಷ್ಠಿರಃ |
ಬಹುಧಾ ಚಿಂತಯಾಮಾಸ ದ್ರೋಣಸ್ಯ ಪ್ರತಿವಾರಣಮ್ ॥ 23 ॥
ಮುಂದೆ ಬರುತ್ತಿದ್ದ ದ್ರೋಣರನ್ನು ನೋಡಿ ಕ್ರೋಧಗೊಂಡ ಯುಧಿಷ್ಠಿರನು ದ್ರೋಣರನ್ನು ತಡೆಯುವ ಬಗೆಯನ್ನು ಬಹುಪ್ರಕಾರದಲ್ಲಿ ಚಿಂತಿಸಿದನು.
ಅಶಕ್ಯಂ ತು ತದಾಽನ್ಯೇನ ಭೇತ್ತುಂ ಮತ್ವಾ ಯುಧಿಷ್ಠಿರಃ |
ಅವಿಷಹ್ಯಂ ಗುರುಂ ಭಾರಂ ಸೌಭದ್ರೇ ಸಮವಾಸೃಜತ್ ॥ 24 ॥
ಆಗ ಇನ್ನೊಬ್ಬನು ಆ ವ್ಯೂಹವನ್ನು ಭೇದಿಸಲು ಸಮರ್ಥನಾಗುವುದಿಲ್ಲ ಎಂದು ತಿಳಿದ ಯುಧಿಷ್ಠಿರನು ಸಹಿಸಲು ಅಸಾಧ್ಯವಾದ ಆ ದೊಡ್ಡ ಭಾರವನ್ನು ಅಭಿಮನ್ಯುವಿನ ಮೇಲೆ ಹೊರಿಸಿದನು.
ವಾಸುದೇವಾದನವಮಂ ಫಲ್ಗುನಾಚ್ಚಾಮಿತೌಜಸಮ್ |
ಅಬ್ರವೀತ್ ಪರವೀರಘ್ನಮಭಿಮನ್ಯುಮಿದಂ ವಚಃ ॥ 25 ॥
ವಾಸುದೇವನಿಗಿಂತ ಕಡಿಮೆಯಲ್ಲದವನೂ, ಅರ್ಜುನನಿಗಿಂತ ಹೆಚ್ಚು ಪರಾಕ್ರಮವುಳ್ಳವನೂ, ಪರವೀರಹರನೂ ಆದ ಅಭಿಮನ್ಯುವನ್ನು ಕುರಿತು ಈ ಮಾತನ್ನು ಆಡಿದನು.
ಏತ್ಯ ನೋ ನಾರ್ಜುನೋ ಗರ್ಹೇದ್ ಯಥಾ ತಾತ ತಥಾ ಕುರು |
ದ್ರೋಣಾನೀಕಸ್ಯ ನ ವಯಂ ವಿದ್ಮೋ ಭೇದಂ ಕಥಂಚನ ॥ 26 ॥

ಪ್ರೀತಿಪಾತ್ರನೇ, ಅರ್ಜುನನು ಹಿಂದಿರುಗಿ ಬಂದು ನಮ್ಮನ್ನು ನಿಂದಿಸದಂತೆ ಮಾಡು. ನಾವು ಯಾರೂ ದ್ರೋಣರು ರಚಿಸಿರುವ ವ್ಯೂಹವನ್ನು ಭೇದಿಸುವುದನ್ನು ತಿಳಿದಿಲ್ಲ.
ತ್ವಂ ವಾಽರ್ಜುನೋ ವಾ ಕೃಷ್ಣೋ ವಾ ಭಿಂದ್ಯಾತ್ ಪ್ರದ್ಯುಮ್ನ ಏವ ವಾ |
ದ್ರೋಣಾನೀಕಂ ಮಹಾಬಾಹೋ ಪಂಚಮೋಽನ್ಯೋ ನ ವಿದ್ಯತೇ ॥ 27 ॥
ನೀನಾಗಲೀ, ಅರ್ಜುನನಾಗಲೀ, ಕೃಷ್ಣನಾಗಲೀ ಅಥವಾ ಪ್ರದ್ಯುಮ್ನನಾಗಲೀ ದ್ರೋಣಾನೀಕವನ್ನು ಭೇದಿಸಬಹುದು. ಎಲೈ ಮಹಾಬಾಹುವೇ, ಐದನೆಯವನು ಇನ್ನೊಬ್ಬನು ಇಲ್ಲ.
ಅಭಿಮನ್ಯೋ ವರಂ ತಾತ ಯಾಚೇ ತ್ವಾಂ ದಾತುಮರ್ಹಸಿ |
ಪಿತೃಭ್ಯೋ ಮಾತುಲೇಭ್ಯಶ್ಚ ಸೈನ್ಯೇಭ್ಯಶ್ಚೈವ ಭಾರತ ॥ 28 ॥
ಪ್ರೀತಿಪಾತ್ರನಾದ ಅಭಿಮನ್ಯುವೇ, ನಾನು ನಿನ್ನನ್ನು ಒಂದು ವರವನ್ನು ಕೇಳುತ್ತಿದ್ದೇನೆ. ಎಲೈ ಭಾರತನೇ, ನಿನ್ನ ತಂದೆಯರಿಗೂ, ಸೋದರಮಾವಂದಿರಿಗೂ ಮತ್ತು ಸೈನ್ಯಗಳಿಗೂ ಆ ವರವನ್ನು ಕೊಡಬೇಕು.
ಧನಂಜಯೋ ಹಿ ನಸ್ತಾತ ಗರ್ಹಯೇದೇತ್ಯ ಸಂಯುಗಾತ್ |
ಕ್ಷಿಪ್ರಮಸ್ತ್ರಂ ಸಮಾದಾಯ ದ್ರೋಣಾನೀಕಂ ವಿಶಾತಯ ॥ 29 ॥
ಎಲೈ ಪ್ರೀತಿಪಾತ್ರನೇ, ಧನಂಜಯನು ಯುದ್ಧದಿಂದ ಹಿಂದಿರುಗಿ ಬಂದು ನಮ್ಮನ್ನು ನಿಂದಿಸಿಯಾನು. ಶೀಘ್ರವಾಗಿ ರಥವನ್ನು ತೆಗೆದುಕೊಂಡು ದ್ರೋಣರ ಸೈನ್ಯವನ್ನು ಭೇದಿಸುವವನಾಗು.
ಅಭಿಮನ್ಯುಃ
ದ್ರೋಣಸ್ಯ ದೃಢಮವ್ಯಗ್ರಮನೀಕಪ್ರವರಂ ಮಹತ್ |
ಪಿತೄಣಾಂ ಸಿದ್ಧಿಮನ್ವಿಚ್ಛನ್ನವಗಾಹೇ ಭಿನದ್ಮಿ ಚ ॥ 30 ॥
ಅಭಿಮನ್ಯು ದೃಢವೂ, ಏಕಾಗ್ರವೂ, ದೊಡ್ಡದೂ ಆದ ದ್ರೋಣರ ಶ್ರೇಷ್ಠವಾದ ಸೈನ್ಯವನ್ನು ಪಿತೃಗಳ ಕಾರ್ಯಸಿದ್ಧಿಯನ್ನು ಬಯಸುತ್ತಾ ನಾನು ಪ್ರವೇಶಿಸಿ ಭೇದಿಸುತ್ತೇನೆ.
ಉಪದಿಷ್ಟೋ ಹಿ ಮೇ ಪಿತ್ರಾ ಯೋಗೋಽನೀಕಸ್ಯ ಭೇದನೇ |
ನೋತ್ಸಹೇ ಪ್ರತಿನಿರ್ಗಂತುಮಹಂ ಕಸ್ಯಾಂಚಿದಾಪದಿ ॥ 31 ॥
ಈ ವ್ಯೂಹವನ್ನು ಭೇದಿಸುವ ಉಪಾಯವು ತಂದೆಯಿಂದ ನನಗೆ ಉಪದೇಶಿಸಲ್ಪಟ್ಟಿದೆ. ಒಳಗೆ ಏನಾದರೂ ವಿಪತ್ತು ಸಂಭವಿಸಿದರೆ ನನಗೆ ಹೊರಗೆ ಬರಲು ಸಾಧ್ಯವಿಲ್ಲ.
ಯುಧಿಷ್ಠಿರಃ
ಭಿಂಧಿ ವ್ಯೂಹಂ ಯುಧಿಶ್ರೇಷ್ಠ ದ್ವಾರಂ ಸಂಜನಯಸ್ವ ನಃ |
ವಯಂ ತ್ವಾಽನುಗಮಿಷ್ಯಾಮೋ ಯೇನ ತ್ವಂ ಪುತ್ರ ಯಾಸ್ಯಸಿ ॥ 32 ॥
ಯುಧಿಷ್ಠಿರ ಯುದ್ಧದಲ್ಲಿ ಶ್ರೇಷ್ಠನಾದವನೇ, ವ್ಯೂಹವನ್ನು ಭೇದಿಸಿ ನಮಗೆ ಒಂದು ದ್ವಾರವನ್ನು ಉಂಟುಮಾಡಿ ಕೊಡು. ಎಲೈ ಪುತ್ರನೇ, ನೀನು ಹೋಗುವ ಮಾರ್ಗದಲ್ಲಿ ನಾವು ನಿನ್ನನ್ನು ಹಿಂಬಾಲಿಸುವೆವು.
ಧನಂಜಯಸ್ಯ ಪ್ರತಿಮಂ ತ್ವಾ ಯಾಂತಂ ತಾತ ಸಂಯುಗೇ |
ಪ್ರಣಿಧಾಯಾಗ್ರತಃ ಸರ್ವೇ ಅನುಯಾಸ್ಯಾಮ ಪೃಷ್ಠತಃ ॥ 33 ॥
ಪ್ರೀತಿಪಾತ್ರನೇ, ಅರ್ಜುನನಿಗೆ ಸದೃಶನಾದ, ಯುದ್ಧದಲ್ಲಿ ಸಾಗುವ ನಿನ್ನನ್ನು ಮುಂದೆ ಮಾಡಿಕೊಂಡು ನಾವೆಲ್ಲರೂ ಹಿಂದಿನಿಂದ ನಿನ್ನನ್ನು ಹಿಂಬಾಲಿಸುವೆವು.
ಧನಂಜಯಸಮ ದ್ವಂದ್ವಯುದ್ಧೇ ಯಾಂತಂ ಹಿ ಸಂಯುಗೇ |
ಪ್ರಣಿಧಾಯಾನುಯಾಸ್ಯಾಮೋ ರಕ್ಷಂತಃ ಸರ್ವತೋಮುಖಾಃ ॥ 34 ॥
ದ್ವಂದ್ವ ಯುದ್ಧದಲ್ಲಿ ಅರ್ಜುನನಿಗೆ ಸಮನಾದ ಎಲೈ ಅಭಿಮನ್ಯುವೇ, ನೀನು ರಣರಂಗದಲ್ಲಿ ಹೋದಂತೆ ನಿನ್ನನ್ನು ಮುಂದೆ ಮಾಡಿಕೊಂಡು ಎಲ್ಲ ಕಡೆಗಳಿಂದಲೂ ನಿನ್ನನ್ನು ರಕ್ಷಿಸುತ್ತಾ ನಾವು ಹಿಂಬಾಲಿಸುವೆವು.
ಭೀಮಃ
ಅಹಂ ತ್ವಾಮನುಯಾಸ್ಯಾಮಿ ಧೃಷ್ಟದ್ಯುಮ್ನಶ್ಚ ಸಾತ್ಯಕಿಃ |
ಪಾಂಚಾಲಾಃ ಕೇಕಯಾ ಮತ್ಸ್ಯಾಃ ತಥಾ ಸರ್ವೇ ಪ್ರಭದ್ರಕಾಃ ॥ 35 ॥
ಭೀಮ ನಾನು ನಿನ್ನನ್ನು ಹಿಂಬಾಲಿಸುವೆನು. ಧೃಷ್ಟದ್ಯುಮ್ನನೂ, ಸಾತ್ಯಕಿಯೂ, ಪಾಂಚಾಲರೂ, ಕೇಕಯರೂ, ಮತ್ಸ್ಯರೂ ಮತ್ತು ಎಲ್ಲ ಪ್ರಭದ್ರಕರೂ ನಿನ್ನನ್ನು ಹಿಂಬಾಲಿಸುವರು.
ಸಕೃದ್ಭಿನ್ನಂ ತ್ವಯಾ ವ್ಯೂಹಂ ತತ್ರ ತತ್ರ ತ್ವಯಾ ಸಹ |
ವಯಂ ಪ್ರಧ್ವಂಸಯಿಷ್ಯಾಮೋ ನಿಘ್ನಮಾನಾಃ ಪರಾನ್ ವರಾನ್ ॥36॥
ಒಂದು ಬಾರಿ ನಿನ್ನಿಂದ ಭಿನ್ನವಾದ ವ್ಯೂಹವನ್ನು ನಾವು ನಿನ್ನ ಜೊತೆಯಲ್ಲಿ ಪ್ರವೇಶಿಸಿ ಅಲ್ಲಲ್ಲಿ ಶತ್ರುಗಳಲ್ಲಿ ಶ್ರೇಷ್ಠರಾದವರನ್ನು ಹೊಡೆಯುತ್ತಾ ಸೈನ್ಯವನ್ನು ನಾಶಪಡಿಸುವೆವು.
ಅಭಿಮನ್ಯುಃ
ಅಹಮೇಕಃ ಪ್ರವೇಕ್ಷ್ಯಾಮಿ ದ್ರೋಣಾನೀಕಂ ಸುದುರ್ಭಿದಮ್ |
ಪತಂಗ ಇವ ಸಂಕ್ರುದ್ಧೋ ಜ್ವಲಂತಂ ಜಾತವೇದಸಮ್ ॥ 37 ॥
ಅಭಿಮನ್ಯು ಅತ್ಯಂತ ದುರ್ಭೇದ್ಯವಾದ ದ್ರೋಣರ ಸೈನ್ಯವನ್ನು, ಕ್ರೋಧಗೊಂಡ ಪತಂಗವು ಜ್ವಲಿಸುವ ಅಗ್ನಿಯನ್ನು ಪ್ರವೇಶಿಸುವಂತೆ ನಾನೊಬ್ಬನೇ ಪ್ರವೇಶಿಸುವೆನು.

ತತ್ ಕರ್ಮಾದ್ಯ ಕರಿಷ್ಯಾಮಿ ಹಿತಂ ಯದ್ ವಂಶಯೋರ್ದ್ವಯೋಃ |
ಮಾತುಲಸ್ಯ ಚ ಯಾ ಪ್ರೀತಿಃ ಭವಿಷ್ಯತಿ ಪಿತುಶ್ಚ ಮೇ ॥ 38 ॥
ಈ ದಿನ ನಾನು ತಂದೆ-ತಾಯಿಗಳ ವಂಶಕ್ಕೆ ಹಿತವುಂಟಾಗುವಂತೆ, ಸೋದರ ಮಾವನಾದ ಕೃಷ್ಣನಿಗೂ ಮತ್ತು ತಂದೆಯಾದ ಅರ್ಜುನನಿಗೂ ಸಂತೋಷ ಉಂಟಾಗುವಂತೆ ಅಂತಹ ಕರ್ಮವನ್ನು ಮಾಡುವೆನು.
ಶಿಶುನೈಕೇನ ಸಂಗ್ರಾಮೇ ದ್ವಿಷತ್ಸೈನ್ಯಾನಿ ವೈ ಮಯಾ |
ಅದ್ಯ ದ್ರಕ್ಷ್ಯಂತಿ ರಾಜಾನಃ ಕಾಲ್ಯಮಾನಾನಿ ಸಂಘಶಃ ॥ 39 ॥
ಈ ದಿನ ಒಬ್ಬ ಶಿಶುವಾದ ನನ್ನಿಂದ ಶತ್ರುಸೈನ್ಯಗಳು ರಣರಂಗದಲ್ಲಿ ಸಮೂಹಗಳಲ್ಲಿ ಕಲಕಾಡಲ್ಪಡುವುದನ್ನು ರಾಜರು ನೋಡುವರು.
ಯುಧಿಷ್ಠಿರಃ
ಏವಂ ತೇ ಭಾಷಮಾಣಸ್ಯ ಬಲಂ ಸೌಭದ್ರ ವರ್ಧತಾಮ್ |
ಯಸ್ತ್ವಮುತ್ಸಹಸೇ ಭೇತ್ತುಂ ದ್ರೋಣಾನೀಕಂ ಸುದುರ್ಭಿದಮ್ ॥40॥
ರಕ್ಷಿತಂ ಪುರುಷವ್ಯಾಘ್ರೈರ್ಮಹೇಷ್ವಾಸೈರ್ಮಹಾರಥೈಃ |
ಸಾಧ್ಯರುದ್ರಮರುತ್ಕಲ್ಪೈರ್ವಸ್ವಗ್ನ್ಯಾದಿತ್ಯವಿಕ್ರಮೈಃ ॥ 41 ॥
ಯುಧಿಷ್ಠಿರ ಅಭಿಮನ್ಯುವೇ, ಹೀಗೆ ಮಾತನಾಡುವ ನಿನ್ನ ಬಲವು ಅಭಿವೃದ್ಧಿಯನ್ನು ಹೊಂದಲಿ. ಏಕೆಂದರೆ ಅತ್ಯಂತ ಸುದುರ್ಭೇದ್ಯವಾದ, ಸಾಧ್ಯ-ರುದ್ರ-ಮರುತ್ತುಗಳಿಗೆ ಸದೃಶರಾದ, ವಸು-ಅಗ್ನಿ ಮತ್ತು ಸೂರ್ಯರ ಪರಾಕ್ರಮವನ್ನು ಹೊಂದಿದ, ಮಹಾಧನುರ್ಧಾರಿಗಳಾದ, ಮಹಾರಥರಾದ, ಪುರುಷವ್ಯಾಘ್ರರಿಂದ ರಕ್ಷಿಸಲ್ಪಡುತ್ತಿರುವ ದ್ರೋಣರ ಸೈನ್ಯವನ್ನು ಭೇದಿಸಲು ನೀನು ಉತ್ಸುಕನಾಗಿದ್ದೀಯೆ.
ಸಂಜಯಃ
ತಸ್ಯ ತದ್ ವಚನಂ ಶ್ರುತ್ವಾ ಸ ಯಂತಾರಮಚೋದಯತ್ |
ಸುಮಿತ್ರಾಶ್ವಾನ್ ರಣೇ ಕ್ಷಿಪ್ರಂ ದ್ರೋಣಾನೀಕಾಯ ಚೋದಯ ॥ 42 ॥
ಸಂಜಯ ಯುಧಿಷ್ಠಿರನ ಆ ಮಾತುಗಳನ್ನು ಕೇಳಿ ಅಭಿಮನ್ಯುವು ತನ್ನ ಸಾರಥಿಯಾದ ಸುಮಿತ್ರನನ್ನು ಕುರಿತು- `ಸುಮಿತ್ರನೇ, ನನ್ನ ರಥದ ಅಶ್ವಗಳನ್ನು ಶೀಘ್ರವಾಗಿ ರಣರಂಗದಲ್ಲಿ ದ್ರೋಣರ ಸೈನ್ಯದ ಕಡೆಗೆ ಪ್ರಚೋದಿಸು' ಎಂದು ಹೇಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ಅಭಿಮನ್ಯುವಿನ ಯುದ್ಧದ ವರ್ಣನೆ.
ಸಂಜಯಃ
ಸೌಭದ್ರಸ್ತು ವಚಃ ಶ್ರುತ್ವಾ ಧರ್ಮರಾಜಸ್ಯ ಧೀಮತಃ |
ಅಚೋದಯಚ್ಚ ಯಂತಾರಂ ದ್ರೋಣಾನೀಕಾಯ ಮಾರಿಷ ॥ 1 ॥
ಸಂಜಯ ಎಲೈ ಪೂಜ್ಯನೇ, ಮೇಧಾವಿಯಾದ ಧರ್ಮರಾಜನ ಮಾತುಗಳನ್ನು ಕೇಳಿ ಅಭಿಮನ್ಯುವು ದ್ರೋಣರ ಸೈನ್ಯದ ಕಡೆಗೆ ಅಶ್ವಗಳನ್ನು ಪ್ರಚೋದಿಸುವಂತೆ ಸಾರಥಿಗೆ ಹೇಳಿದನು.
ತೇನ ಸಂಚೋದ್ಯಮಾನಸ್ತು ಯಾಹಿ ಯಾಹೀತಿ ಸಾರಥಿಃ |
ಪ್ರತ್ಯುವಾಚ ತತೋ ರಾಜನ್ನಭಿಮನ್ಯುಮಿದಂ ವಚಃ ॥ 2 ॥
`ಹೋಗು-ಹೋಗು' ಎಂದು ಅವನಿಂದ ಪ್ರಚೋದಿಸಲ್ಪಟ್ಟ ಸಾರಥಿಯು, ಎಲೈ ರಾಜನೇ, ಅಭಿಮನ್ಯುವನ್ನು ಕುರಿತು ಈ ಮಾತನ್ನು ಆಡಿದನು.
ಅತಿಭಾರೋಽಯಮಾಯುಷ್ಮನ್ನಾಹಿತಸ್ತ್ವಯಿ ಪಾಂಡವೈಃ |
ಸಂಪ್ರಧಾರ್ಯಾಸಕೃದ್ ಬುದ್ಧ್ಯಾ ತತಸ್ತ್ವಂ ಯೋದ್ಧುಮರ್ಹಸಿ ॥ 3 ॥
ಚಿರಂಜೀವಿಯೇ, ಪಾಂಡವರು ನಿನ್ನ ಮೇಲೆ ದೊಡ್ಡ ಭಾರವನ್ನು ಹೇರಿದ್ದಾರೆ. ಬುದ್ಧಿಯಿಂದ ಚೆನ್ನಾಗಿ ನಿರ್ಧಾರ ಮಾಡಿ ಅನಂತರ ನೀನು ಯುದ್ಧವನ್ನು ಮಾಡಬೇಕು.
ದ್ರೋಣೋ ಹಿ ಕೃತವಾನ್ ಯತ್ನಂ ಶಸ್ತ್ರೇಷ್ವಸ್ತ್ರಕೃತಶ್ರಮಃ |
ತ್ವಂ ತು ಬಾಲಃ ಸ ಬಲವಾನ್ ಸಂಗ್ರಾಮಾಣಾಮಕೋವಿದಃ ॥
ಶಸ್ತ್ರಾಸ್ತ್ರದಲ್ಲಿ ಬಹಳ ಪರಿಣತಿಯನ್ನು ಪಡೆದಿರುವ ದ್ರೋಣರು ದೊಡ್ಡ ಪ್ರಯತ್ನವನ್ನು ಮಾಡಿದ್ದಾರೆ. ನೀನು ಯುದ್ಧದ ಪರಿಶ್ರಮವಿಲ್ಲದ ಬಾಲಕ, ದ್ರೋಣರು ಬಲಿಷ್ಠರಾದವರು.
ಸಂಜಯಃ
ತತೋಽಭಿಮನ್ಯುಃ ಪ್ರಹಸನ್ ತಂ ಸಾರಥಿಮಥಾಬ್ರವೀತ್ ॥ 4 ॥
ಸಂಜಯ ಆಗ ಅಭಿಮನ್ಯುವು ನಗುತ್ತಾ ಆ ಸಾರಥಿಯನ್ನು ಕುರಿತು ಹೇಳಿದನು.
ವಿಸ್ಮಯಃ ಕೋ ಹಿ ಮೇ ದ್ರೋಣೇ ಸಮಗ್ರೇ ಕ್ಷತ್ರ ಏವ ವಾ |

ವ್ಯವಸಾಯೋ ಹಿ ಮೇ ಯೋದ್ಧುಂ ರಣೋತ್ಸವಸಮುದ್ಯತಃ ॥ 5 ॥
ದ್ರೋಣರ ಎದುರಿಗೆ ಅಥವಾ ಸಮಗ್ರವಾಗಿ ಇರುವ ಕ್ಷತ್ರಿಯರ ಎದುರಿಗೆ ನನಗೆ ಯಾವ ಗಾಬರಿಯು? ರಣೋತ್ಸವದಲ್ಲಿ ಪಾಲ್ಗೊಂಡು ದೊಡ್ಡ ಯುದ್ಧವನ್ನು ಮಾಡುವುದಕ್ಕೆ ನಾನು ನಿರ್ಧರಿಸಿದ್ದೇನೆ.
ಐರಾವತಗತಂ ಶಕ್ರಂ ಸಹಾಮರಗಣಂ ರಣೇ |
ಅಥವಾ ರುದ್ರಮೀಶಾನಂ ಸರ್ವಭೂತಗಣೈರಹಮ್ ॥ 6 ॥
ಯುದ್ಧ್ಯೇಯಮದ್ಯ ಸಮರೇ ನ ಮೇ ಕ್ಷತ್ರೇಽಸ್ತಿ ವಿಸ್ಮಯಃ ॥ 7 ॥
ಅಮರಗಣಗಳಿಂದ ಸಹಿತವಾದ ಐರಾವತಗತನಾದ ಇಂದ್ರನ ಜೊತೆಯಾಗಲೀ, ಸರ್ವಭೂತಗಣಗಳಿಂದ ಸಹಿತನಾದ ಈಶಾನನಾದ ರುದ್ರನ ಜೊತೆಯಾಗಲೀ ನಾನು ಈ ದಿನ ಯುದ್ಧವನ್ನು ಮಾಡಿಯೇನು. ಯುದ್ಧದಲ್ಲಿ ಕ್ಷತ್ರಿಯರ ಎದುರಿಗೆ ನನಗೆ ಯಾವ ಚಿಂತೆಯೂ ಇಲ್ಲ.
ಯಚ್ಚೈತತ್ ಪಶ್ಯಸೇ ಸೂತ ಸಯೋಧಾಶ್ವರಥದ್ವಿಪಮ್ |
ತನ್ಮಮಾದ್ಯ ದ್ವಿಷತ್ಸೈನ್ಯಂ ಕಲಾಂ ನಾರ್ಹತಿ ಷೋಡಶೀಮ್ ॥ 8 ॥
ಎಲೈ ಸೂತನೇ, ನೀನು ಯೋಧಾಶ್ವ-ರಥ-ಗಜಗಳಿಂದ ಸಹಿತವಾದ ಯಾವ ಶತ್ರುಸೈನ್ಯವನ್ನು ನೋಡುತ್ತಿದ್ದೀಯೋ ಅದು ನನ್ನ ಸಾಮರ್ಥ್ಯದ ಹದಿನಾರನೆಯ ಒಂದಂಶಕ್ಕೂ ಅರ್ಹವಾದುದಲ್ಲ.
ಅಪಿ ವಿಶ್ವಜಿತಂ ವಿಷ್ಣುಂ ಮಾತುಲಂ ಪ್ರಾಪ್ಯ ಸೂತಜ |
ಪಿತರಂ ಚಾರ್ಜುನಂ ಯುದ್ಧೇ ನ ಭೀರ್ಮಾಮುಪಸರ್ಪತಿ ॥ 9 ॥
ಎಲೈ ಸೂತಜನೇ, ಮತ್ತು ವಿಶ್ವಜಯಶೀಲನಾದ ವಿಷ್ಣುವನ್ನು ಸೋದರಮಾವನನ್ನಾಗಿ ಹೊಂದಿರುವ, ಅರ್ಜುನನನ್ನು ತಂದೆಯನ್ನಾಗಿ ಹೊಂದಿರುವ ನನಗೆ ಯುದ್ಧದಲ್ಲಿ ಯಾವ ಭಯವೂ ಸಮೀಪಕ್ಕೂ ಬರುವುದಿಲ್ಲ.
ನಾಹಂ ಪಾರ್ಥೇನ ಜಾತಸ್ತು ನ ಚ ಜಾತಃ ಸುಭದ್ರಯಾ |
ಯದಿ ಮೇ ಸಂಯುಗೇ ಕಶ್ಚಿತ್ ಜೀವಮಾನಸ್ಯ ಜೀವತಿ ॥ 10 ॥
ನಾನು ಬದುಕಿರುವಾಗ ಈ ದಿನ ಶತ್ರುಸೈನ್ಯದಲ್ಲಿ ಯಾರಾದರೂ ಯುದ್ಧದಲ್ಲಿ ಜೀವಸಹಿತವಾಗಿ ಉಳಿದರೆ ನಾನು ಅರ್ಜುನನಿಂದ ಜನಿಸಿದವನೂ ಅಲ್ಲ, ಸುಭದ್ರೆಯಿಂದ ಜನಿಸಿದವನೂ ಅಲ್ಲ.
ಯದಿ ಚೈಕರಥೇನಾಹಂ ಸಮಗ್ರಂ ಕ್ಷತ್ರಮಂಡಲಮ್ |
ನ ಕುರ್ಮಿ ಶತಧಾ ಯುದ್ಧೇ ನ ಭವಾಮ್ಯರ್ಜುನಾತ್ಮಜಃ ॥ 11 ॥
ಒಂದು ರಥದಿಂದ ನಾನು ಈ ದಿನ ಸಮಗ್ರವಾದ ಕ್ಷತ್ರಿಯಸಮೂಹವನ್ನು ಯುದ್ಧದಲ್ಲಿ ನೂರು ಭಾಗವಾಗಿ ಭೇದಿಸದಿದ್ದರೆ ನಾನು ಅರ್ಜುನ ಪುತ್ರನಲ್ಲ.
ಸಂಜಯಃ
ಏವಮುಪ್ಯಚ್ಯಮಾನಃ ಸ ಸಾರಥಿಸ್ತಂ ಪುನಃಪುನಃ |
ವೀರ ತೇ ತೇನ ಮಾ ಯುದ್ಧಮಿತಿ ಸೌಭದ್ರಮಬ್ರವೀತ್ ॥ 12 ॥
ಸಂಜಯ ಸಾರಥಿಯನ್ನು ಕುರಿತು ಹೀಗೆ ಹೇಳುತ್ತಿದ್ದರೂ ಸಾರಥಿಯು ಪುನಃ ಪುನಃ ಅಭಿಮನ್ಯುವನ್ನು ಕುರಿತು- `ಅಭಿಮನ್ಯುವೇ, ಶತ್ರುಸೈನ್ಯದ ಜೊತೆಯಲ್ಲಿ ನಿನಗೆ ಯುದ್ಧವು ಬೇಡ' ಎಂದು ಹೇಳಿದನು.
ಅಭಿಮನ್ಯುಸ್ತು ತಾಂ ವಾಚಂ ಕದರ್ಥೀಕೃತ್ಯ ಸಾರಥೇಃ |
ಯಾಹೀತ್ಯೇವಾಬ್ರವೀದೇನಂ ದ್ರೋಣಾನೀಕಾಯ ಮಾಚಿರಮ್ ॥ 13 ॥
ಅಭಿಮನ್ಯುವಾದರೋ ಸಾರಥಿಯ ಆ ಮಾತುಗಳನ್ನು ತಿರಸ್ಕರಿಸಿ, ದ್ರೋಣರ ಸೇನೆಯ ಕಡೆಗೆ ಶೀಘ್ರವಾಗಿ ಹೋಗು ಎಂದೇ ಅವನನ್ನು ಕುರಿತು ಹೇಳಿದನು.
ತತಃ ಸಂಚೋದಯಾಮಾಸ ಹಯಾನಾಶು ತ್ರಿಹಾಯನಾನ್ |
ನಾತಿಹೃಷ್ಟಮನಾಃ ಸೂತೋ ಹೇಮಭಾಂಡಪರಿಚ್ಛದಾನ್ ॥ 14 ॥
ಆಗ ಸೂತನು ಬಹಳ ಸಂತೋಷಗೊಳ್ಳದ ಮನಸ್ಸಿನಿಂದ, ಸುವರ್ಣಾಭರಣ ಭೂಷಿತವಾದ, ಮೂರು ವರ್ಷ ವಯಸ್ಸಿನ ಆ ಅಶ್ವಗಳನ್ನು ಶೀಘ್ರವಾಗಿ ಪ್ರಚೋದಿಸಿದನು.
ತೇ ಪ್ರೇಷಿತಾಃ ಸುಮಿತ್ರೇಣ ದ್ರೋಣಾನೀಕಾಯ ವಾಜಿನಃ |
ದ್ರೋಣಮಭ್ಯದ್ರವನ್ ರಾಜನ್ ಮಹಾವೇಗಾ ಮಹಾಬಲಾಃ ॥ 15 ॥
ಎಲೈ ರಾಜನೇ, ಸುಮಿತ್ರನಿಂದ ಪ್ರಚೋದಿಸಲ್ಪಟ್ಟ ಮಹಾವೇಗವನ್ನೂ ಮತ್ತು ಮಹಾಬಲವನ್ನೂ ಹೊಂದಿದ ಆ ಅಶ್ವಗಳು ದ್ರೋಣರ ಸೇನೆಯ ಕಡೆಗೆ ಮತ್ತು ದ್ರೋಣರ ಕಡೆಗೆ ವೇಗದಿಂದ ಸಾಗಿದವು.
ತಂ ತು ದೃಷ್ಟ್ವಾ ಪ್ರಯಾಂತಂ ತು ಸರ್ವೇ ದ್ರೋಣಮುಖಾ ರಥಾಃ |
ಅಭ್ಯವರ್ತಂತ ಕೌರವ್ಯಾಃ ಪಾಂಡವಾಶ್ಚ ತಮನ್ವಯುಃ ॥ 16 ॥
ಅವನು ಬರುತ್ತಿರುವುದನ್ನು ನೋಡಿ ದ್ರೋಣರೇ ಮೊದಲಾದ ಎಲ್ಲ ಮಹಾರಥರು ಮತ್ತು ಕೌರವರು ಅವನ ಕಡೆಗೆ ಬಂದರು. ಪಾಂಡವರೂ ಅವನನ್ನು ಹಿಂಬಾಲಿಸಿದರು.
ಸಕರ್ಣಿಕಾರಪ್ರವರೋಚ್ಛ್ರಿತಧ್ವಜಃ
ಸುವರ್ಣವರ್ಮಾಽಽರ್ಜುನಿರರ್ಜುನಾದ್ ವರಃ |
ಯುಯುತ್ಸಯಾ ದ್ರೋಣಮುಖಾನ್ ಮಹಾರಥಾನ್
ಸಮಾಸದತ್ ಸಿಂಹಶಿಶುರ್ಯಥಾ ದ್ವಿಪಾನ್ ॥ 17 ॥

ಕರ್ಣಿಕಾರ ವೃಕ್ಷದ ಶ್ರೇಷ್ಠವಾದ ಮತ್ತು ಉನ್ನತವಾದ ಧ್ವಜವನ್ನು ಹೊಂದಿದ, ಸುವರ್ಣಕವಚದಿಂದ ಸಹಿತನಾದ, ಅರ್ಜುನನಿಗಿಂತಲೂ ಶ್ರೇಷ್ಠನಾದ ಅಭಿಮನ್ಯುವು ದ್ರೋಣರೇ ಮೊದಲಾದ ಮಹಾರಥರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಸಿಂಹದ ಮರಿಯು ಗಜಗಳ ಮೇಲೆ ಎರಗಿದಂತೆ ಅವರನ್ನು ಸಮೀಪಿಸಿದನು.
ತೇ ವಿಂಶತಿಪದೇ ಯತ್ತಾಃ ಸಂಪ್ರಹಾರಮಕುರ್ವತ |
ಆಸೀದ್ ಗಾಂಗ ಇವಾವರ್ತೋ ಮುಹೂರ್ತಮುದಧೇರಿವ ॥ 18 ॥
ಅವರು ಇಪ್ಪತ್ತು ಹೆಜ್ಜೆಗಳಷ್ಟು ದೂರದಲ್ಲಿದ್ದಾಗ ಅವರೆಲ್ಲರೂ ಪ್ರಯತ್ನ- ಪೂರ್ವಕವಾಗಿ ಅವನ ಮೇಲೆ ಸಂಪ್ರಹಾರವನ್ನು ಮಾಡಿದರು. ಒಂದು ಮುಹೂರ್ತದ ಕಾಲ ಗಂಗೆಯ ಸುಳಿಯಂತೆ ಮತ್ತು ಸಮುದ್ರದ ಸುಳಿಯಂತೆ ಯುದ್ಧವು ನಡೆಯಿತು.
ಶೂರಾಣಾಂ ಯುದ್ಧ್ಯಮಾನಾನಾಂ ನಿಘ್ನತಾಮಿತರೇತರಮ್ |
ಸಂಗ್ರಾಮಸ್ತುಮುಲೋ ರಾಜನ್ ಪ್ರಾವರ್ತತ ಸುದಾರುಣಃ ॥ 19 ॥
ರಾಜನ್, ಪರಸ್ಪರವಾಗಿ ಕೊಲ್ಲುತ್ತಾ ಯುದ್ಧವನ್ನು ಮಾಡುವ ಶೂರರಿಗೆ ಬಹಳ ದಾರುಣವಾದ, ತೀವ್ರವಾದ ಯುದ್ಧವು ನಡೆಯಿತು.
ಪ್ರವರ್ತಮಾನೇ ಸಂಗ್ರಾಮೇ ತಸ್ಮಿನ್ನತಿಭಯಂಕರೇ |
ದ್ರೋಣಸ್ಯ ಮಿಷತೋ ವ್ಯೂಹಂ ಭಿತ್ತ್ವಾ ಪ್ರಾವಿಶದಾರ್ಜುನಿಃ ॥ 20 ॥
ಅಂತಹ ಭಯಂಕರವಾದ ಯುದ್ಧವು ನಡೆಯುತ್ತಿರುವಾಗ ದ್ರೋಣರು ನೋಡುತ್ತಿರುವಂತೆಯೇ ಅಭಿಮನ್ಯುವು ಅವರ ವ್ಯೂಹವನ್ನು ಭೇದಿಸಿ ಒಳಗೆ ಪ್ರವೇಶಿಸಿದನು.
ತದಭೇದ್ಯಮನಾಧೃಷ್ಯಂ ದ್ರೋಣಾನೀಕಂ ಸುದುರ್ಜಯಮ್ |
ಭಿತ್ತ್ವಾಽಽರ್ಜುನಿರಸಂಭ್ರಾಂತೋ ವಿವೇಶಾಚಿಂತ್ಯವಿಕ್ರಮಃ ॥ 21 ॥
ಅಚಿಂತ್ಯ ಪರಾಕ್ರಮವನ್ನು ಹೊಂದಿದ್ದ ಅಭಿಮನ್ಯುವು ಸೋಲಿಸಲು ಅಸಾಧ್ಯವಾದ, ಜಯಿಸಲು ಅಸಾಧ್ಯವಾದ ದ್ರೋಣರ ಆ ಸೈನ್ಯವನ್ನು ಭೇದಿಸಿ ಯಾವ ಗಾಬರಿಯೂ ಇಲ್ಲದೆ ಒಳಗೆ ಪ್ರವೇಶಿಸಿದನು.
ತಂ ಪ್ರವಿಷ್ಟಮರಾತಿಘ್ನಂ ಜಿಘಾಂಸಂತಃ ಸಹಸ್ರಶಃ |
ಹಸ್ತ್ಯಶ್ವರಥ ಪತ್ತ್ಯೌಘಾಃ ಪರಿವವ್ರುರುದಾಯುಧಾಃ ॥ 22 ॥
ಪ್ರವೇಶಿಸಿದ ಶತ್ರುಘಾತಕನಾದ ಅವನನ್ನು ಕೊಲ್ಲಲು ಬಯಸಿ ಆಯುಧಗಳನ್ನು ಧರಿಸಿದ ಹಸ್ತ್ಯಶ್ವ-ರಥ-ಪದಾತಿಗಳು ಸಹಸ್ರ ಸಂಖ್ಯೆಯಲ್ಲಿ ಅವನನ್ನು ಸುತ್ತುವರಿದರು.
ತತೋ ವಾದಿತ್ರನಿನದೈಃ ಕ್ಷ್ವೇಡಿತೋತ್ಕ್ರುಷ್ಟಗರ್ಜಿತೈಃ |
ಫೀಟ್ಕಾರೈಃ ಸಿಂಹನಾದೈಶ್ಚ ತಿಷ್ಠ ತಿಷ್ಠೇತಿ ನಿಸ್ವನೈಃ ॥ 23 ॥
ಘೋರೈರ್ಹಲಹಲಾಶಬ್ದೈರ್ಮಾ ಗಾಸ್ತಿಷ್ಠೈಹಿ ಮಾಮಿತಿ |
ಅಸಾವಹಮಮುಷ್ಯೇತಿ ಪ್ರವದಂತೋ ಮಹೀಕ್ಷಿತಃ ॥ 24 ॥
ಬೃಂಹಿತೈಃ ಶಿಂಜಿತೈರ್ಹಾಸೈಃ ಖುರನೇಮಿಸ್ವನೈರಪಿ |
ತೇ ನಾದಯಂತೋ ವಸುಧಾಂ ಹ್ಯಭಿದುದ್ರುವುರಾರ್ಜುನಿಮ್ ॥ 25 ॥
ಆಗ ವಾದಿತ್ರ ನಾದಗಳಿಂದಲೂ, ಸಿಂಹನಾದ ಮತ್ತು ಯುದ್ಧ ಗರ್ಜನೆಗಳಿಂದಲೂ, ಹಸ್ತತಳ ಮತ್ತು ಭುಜದ ಆಸ್ಫೋಟಗಳಿಂದಲೂ, ಸಿಂಹನಾದಗಳಿಂದಲೂ, ದೊಡ್ಡ ಶಬ್ದಗಳಿಂದಲೂ `ಹೋಗಬೇಡ, ಇಲ್ಲಿಯೇ ಇರು, ನನ್ನ ಬಳಿಗೆ ಬಾ' ಮುಂತಾದ ಘೋರವಾದ ಹಲಹಲಾ ಶಬ್ದಗಳಿಂದಲೂ, `ನಾನು ಇಂತಹವನು, ನಾನು ಇಂತಹವನ ಪುತ್ರನು' ಮೊದಲಾದ ಮಾತುಗಳನ್ನು ಆಡುತ್ತಾ ಗಜಗಳ ಬೃಂಹಣದಿಂದಲೂ, ಆಭರಣಗಳ ಝೇಂಕಾರದಿಂದಲೂ, ನಗುವಿನ ಶಬ್ದಗಳಿಂದಲೂ, ಅಶ್ವಖುರಪುಟಗಳ ಶಬ್ದಗಳಿಂದಲೂ ಸಹಿತರಾದ ಆ ರಾಜರು ಭೂಮಿಯನ್ನು ಪ್ರತಿಧ್ವನಿಸುತ್ತಾ ಅಭಿಮನ್ಯುವಿನ ಕಡೆಗೆ ಓಡಿದರು.
ತೇಷಾಮಾಪತತಾಂ ವೀರಃ ಶೀಘ್ರಂ ಶೀಘ್ರಮಥೋ ದೃಢಮ್ |
ಕ್ಷಿಪ್ರಂ ತಾನಹನದ್ ಯಾತಾನ್ ಮರ್ಮಜ್ಞೋ ಮರ್ಮಭೇದಿಭಿಃ ॥
ತನ್ನ ಕಡೆಯೇ ಶೀಘ್ರವಾಗಿ ಬರುತ್ತಿದ್ದ ಅವರನ್ನು ವೀರನಾದ, ಮರ್ಮಜ್ಞನಾದ ಅಭಿಮನ್ಯುವು ಶೀಘ್ರವಾಗಿ ಮತ್ತು ದೃಢವಾಗಿ ಮರ್ಮಭೇದಿಗಳಾದ ಬಾಣಗಳಿಂದ ಹೊಡೆದನು.
ತೇ ಹನ್ಯಮಾನಾ ಹಿ ತಥಾ ನಾನಾಲಿಂಗೈಃ ಶಿತೈಃ ಶರೈಃ |
ಅಭಿಪೇತುಸ್ತಮೇವಾಜೌ ಶಲಭಾ ಇವ ಪಾವಕಮ್ ॥ 27 ॥
ಅವರು ಅಭಿಮನ್ಯುವಿನ ನಾನಾಕಾರವೂ, ಹರಿತವೂ ಆದ ಬಾಣಗಳಿಂದ ಹೊಡೆಯಲ್ಪಡುತ್ತಿದ್ದರೂ ಪತಂಗಗಳು ಅಗ್ನಿಯ ಮೇಲೆ ಎರಗಿದಂತೆ ರಣರಂಗದಲ್ಲಿ ಅವನ ಮೇಲೆಯೇ ಎರಗಿದರು.
ತತಸ್ತೇಷಾಂ ಶರೀರೈಶ್ಚ ಶರೀರಾವಯವೈಶ್ಚ ಸಃ |
ಸಂತಸ್ತಾರ ಕ್ಷಿತಿಂ ಕ್ಷಿಪ್ರಂ ಕುಶೈರ್ವೇದಿಮಿವಾಧ್ವರೇ ॥ 28 ॥
ಆಗ ಅವನು ಅವರ ಶರೀರಗಳಿಂದಲೂ, ಶರೀರಾವಯವಗಳಿಂದಲೂ, ಯಜ್ಞವೇದಿಯನ್ನು ಕುಶಗಳಿಂದ ಹರಡಿದಂತೆ ಭೂಮಿಯನ್ನು ಶೀಘ್ರವಾಗಿ ಹರಡಿದನು.
ಬದ್ಧಗೋಧಾಂಗುಲತ್ರಾಣಾನ್ ಸಶರಾಸನಸಾಯಕಾನ್ |
ಸಾಸಿಚರ್ಮಾಂಕುಶಾಭೀಶೂನ್ ಸತೋಮರಪರಶ್ವಧಾನ್ ॥ 29 ॥
ಗದಾಖಡ್ಗಹುಲಪ್ರಾಸಾನ್ ಸಷ್ಟಿರ್ತೋಮರಪಟ್ಟಿಸಾನ್ |
ಸಭಿಂಡಿಪಾಲಪರಿಘಾನ್ ಸಶಕ್ತಿನಖರಾನ್ ಪರಾನ್ ॥ 30 ॥
ಸಪ್ರತೋದಮಹಾಶಂಖಾನ್ ಸಕುಂತಾನ್ ಸಕಚಗ್ರಹಾನ್ |

ಸಮುದ್ಗರಕ್ಷೇಪಣೀಯಾನ್ ಸಪಾಶಾನ್ ಪರಿಘೋಪಮಾನ್ ॥ 31 ॥
ಸಕೇಯೂರಾಂಗದಾನ್ ಬಾಹೂನ್ ಪುಣ್ಯಗಂಧಾನುಲೇಪನಾನ್ ।
ಸಂಚಿಚ್ಛೇದಾಽಽರ್ಜುನಿರ್ವೃತ್ತಾನ್ ತ್ವದೀಯಾನಾಂ ಸಹಸ್ರಶಃ ॥ 32 ॥
ಗೋಧಾಂಗುಲಿತ್ರಾಣಗಳನ್ನು ಹೊಂದಿದ, ಧನುರ್ಬಾಣಗಳನ್ನು ಹಿಡಿದ, ಖಡ್ಗ-ಚರ್ಮ-ಅಂಕುಶಗಳನ್ನು ಹಿಡಿದ, ತೋಮರ-ಪರಶ್ವಧಗಳಿಂದ ಸಹಿತವಾದ, ಹುಲ-ಖಡ್ಗ-ಗದಾ-ಪ್ರಾಸಗಳನ್ನು ಧರಿಸಿದ, ಖುಷ್ಟಿ-ತೋಮರ-ಪಟ್ಟಸಗಳನ್ನು ಧರಿಸಿದ, ಭಿಂಡಿಪಾಲ-ಪರಿಘಗಳನ್ನು ಹಿಡಿದ, ಶಕ್ತಿ-ನಖಗಳನ್ನು ಹಿಡಿದ, ಚಾವಟಿ ಮತ್ತು ಶಂಖಗಳನ್ನು ಹಿಡಿದ, ಕುಂತಗಳನ್ನು ಮತ್ತು ಕಚಗ್ರಹಗಳನ್ನು ಹಿಡಿದ, ಮುದ್ಗರಕ್ಷೇಪಣಿಗಳನ್ನೂ, ಪರಿಘಗಳಂತಿರುವ ಪಾಶಗಳನ್ನೂ ಹಿಡಿದ, ಕೇಯೂರಾಂಗ ಭೂಷಿತವಾದ, ಪುಣ್ಯಗಂಧಗಳಿಂದ ಲಿಪ್ತವಾದ ನಿನ್ನವರ ಬಾಹುಗಳನ್ನು ಅಭಿಮನ್ಯುವು ಸಹಸ್ರ ಸಂಖ್ಯೆಯಲ್ಲಿ ಕತ್ತರಿಸಿದನು.
ತೈಃ ಸ್ಫುರದ್ಭಿರ್ಮಹೀ ಭಾತಿ ಬೃಹದ್ಭಿರ್ಲೋಹಿತೋಕ್ಷಿತೈಃ ।
ಪಂಚಾಸ್ಯೈಃ ಪನ್ನಗೈಶ್ಛಿನ್ನೈರ್ಗರುಡೇನೇವ ಮಾರಿಷ ॥ 33 ॥
ಎಲೈ ಪೂಜ್ಯನೇ, ರಕ್ತಸಿಕ್ತವಾದ ದೊಡ್ಡದಾದ ಅವುಗಳು ಭೂಮಿಯ ಮೇಲೆ ಬಿದ್ದು, ಅವುಗಳಿಂದ ಭೂಮಿಯು ಸಿಂಹದಿಂದ ಛಿನ್ನವಾದ ಪ್ರಾಣಿಗಳಿಂದ, ಗರುಡನಿಂದ ಛಿನ್ನವಾದ ಸರ್ಪಗಳಿಂದ ಹರಡಿರುವಂತೆ ತೋರಿತು.
ಸುನಾಸಾನನಕೇಶಾಂತೈರವ್ರಣೈಶ್ಚಾರುಕುಂಡಲೈಃ ।
ಸಂದಷ್ಟೌಷ್ಠಪುಟೈಃ ಕ್ರೋಧಾದ್ ಅಸೃಗಾಕ್ತೈಃ ಸಮಂತತಃ ॥ 34 ॥
ಚಾರುಸ್ರಜ್ಮುಕುಟೋಷ್ಣೀಷೈರ್ಮಣಿರತ್ನವಿರಾಜಿತೈಃ ।
ವಿನಾಳನಳಿನಾಕಾರೈರ್ದಿವಾಕರಶಶಿಪ್ರಭೈಃ ॥ 35 ॥
ಹಿತಪ್ರಿಯಂವದೈಃ ಕಾಲೇ ಬಹುಭಿಃ ಪುಣ್ಯಗಂಧಿಭಿಃ ।
ದ್ವಿಷಚ್ಛಿರೋಭಿರ್ಜಗತೀಮವತಸ್ತಾರ ಫಾಲ್ಗುನಿಃ ॥ 36 ॥
ಅಭಿಮನ್ಯುವು ಒಳ್ಳೆಯ ನಾಸಾಮುಖ ಮತ್ತು ಕೇಶಾಂತವವನ್ನು ಹೊಂದಿದ, ಗಾಯಗೊಳ್ಳದ, ಸುಂದರವಾದ ಕುಂಡಲಗಳನ್ನು ಧರಿಸಿದ, ಕೋಪದಿಂದ ಹಲ್ಲುಮುಡಿಗಳನ್ನು ಕಚ್ಚಿದ, ಎಲ್ಲ ಕಡೆಯಲ್ಲಿಯೂ ರಕ್ತದಿಂದ ತೋಯ್ದ, ಒಳ್ಳೆಯ ಹೂಮಾಲೆಗಳನ್ನು, ಕಿರೀಟಗಳನ್ನು ಮತ್ತು ಉಷ್ಣೀಷಗಳನ್ನು ಧರಿಸಿದ, ಮಣಿರತ್ನಗಳಿಂದ ವಿರಾಜಿತವಾದ, ನಾಳವಿಲ್ಲದ ಪದ್ಮಗಳನ್ನು ಹೋಲುವ, ಸೂರ್ಯ-ಚಂದ್ರರ ಕಾಂತಿಯಿಂದ ಕೂಡಿದ, ಯೋಗ್ಯವಾದ ಕಾಲದಲ್ಲಿ ಹಿತವಾದ ಮತ್ತು ಪ್ರಿಯವಾದ ವಚನಗಳಿಂದ ಕೂಡಿದ, ಅನೇಕ ಸುಗಂಧದಿಂದ ಯುಕ್ತವಾದ, ಶತ್ರುಗಳ ಶಿರಸ್ಸಿನಿಂದ ಭೂಮಿಯನ್ನು ಹರಡಿದನು.
ಗಂಧರ್ವನಗರಾಕಾರಾನ್ ವಿಧಿವತ್ ಕಲ್ಪಿತಾನ್ ರಥಾನ್ ।
ಸಮಾಸ್ಥಿತಾನ್ ಯೋಧವರ್ಯೈರ್ದಾಂತಾಶ್ವಾನ್ ಸಾಧುಸಾರಥೀನ್ ॥37॥
ವಿಪತಾಕಾಧ್ವಜಚ್ಛತ್ರಾನ್ ವಿತೂಣೀರಾಯುಧಾನಪಿ ।
ವಿಸೂತಾಶ್ವರಥಾಭೀಶೂನ್ ವಿಶಮ್ಯಾಯೋಕ್ತ್ರದಂಡಕಾನ್ ॥ 38 ॥
ವೀಷಾಮುಖಾನ್ ವಿತ್ರಿದಂಡಾನ್ ಧ್ವಸ್ತಾವಸ್ಕರಬಂಧುರಾನ್ ।
ವಿಜಂಘಕೂಬರಾಕ್ಷಾಂಶ್ಚ ವಿನೇಮೀಂಶ್ಚ ವ್ಯರಾನಪಿ ॥ 39 ॥
ವಿಚಕ್ರೋಪಸ್ಕರೋಪಸ್ಥಾನ್ ಭಗ್ನೋಪಕರಣಾನಪಿ ।
ಪ್ರಶಾತಿತೋಪಕರಣಾನ್ ಹತಯೋಧಾನ್ ಸಹಸ್ರಶಃ ।
ಶರೈರ್ವಿಶಕಲೀಕುರ್ವನ್ ದಿಕ್ಷು ಸರ್ವಾಸ್ವದೃಶ್ಯತ ॥ 40 ॥
ಗಂಧರ್ವನಗರದಂತಿರುವ, ಶಾಸ್ತ್ರೋಕ್ತ ರೀತಿಯಲ್ಲಿ ಸಿದ್ಧಪಡಿಸಿದ, ಯೋಧಶ್ರೇಷ್ಠರಿಂದ ಅಧಿಷ್ಠಿತವಾದ, ಪಳಗಿದ ಅಶ್ವಗಳನ್ನು ಹೊಂದಿದ, ಪರಿಣತರಾದ ಸಾರಥಿಗಳನ್ನು ಹೊಂದಿದ ರಥಗಳನ್ನು ಪತಾಕ-ಧ್ವಜ-ಛತ್ರ ಹೀನಗಳನ್ನಾಗಿ, ಬತ್ತಳಿಕೆ- ಆಯುಧಗಳಿಂದ ರಹಿತಗಳನ್ನಾಗಿ, ಸೂತಾಶ್ವ-ರಥ-ಗಜಗಳಿಂದ ಹೀನಗಳನ್ನಾಗಿ, ಕಡಾಣಿ-ಯೋಕ್ತ್ರ ಮತ್ತು ದಂಡಗಳಿಂದ ರಹಿತರನ್ನಾಗಿ, ಮೂಕಿಗಳಿಂದ ಮತ್ತು ತ್ರಿದಂಡಗಳಿಂದ ರಹಿತಗಳನ್ನಾಗಿ, ಮುರಿಯಲ್ಪಟ್ಟ ಅವಸ್ಕರ ಮತ್ತು ಬಂಧುಗಳಿಂದ ಕೂಡಿದುವುಗಳನ್ನಾಗಿ, ಜಂಘ-ಕೂಬರ-ತೂಬುಗಳಿಂದ ರಹಿತಗಳನ್ನಾಗಿ, ಚಕ್ರಗಳ ಪರಿಧಿಯಿಂದಲೂ ಮತ್ತು ಅರಗಳಿಂದಲೂ ರಹಿತಗಳನ್ನಾಗಿ, ಚಕ್ರಗಳ ಸಮೀಪದ ಉಪಕರಣಗಳಿಂದ ರಹಿತಗಳನ್ನಾಗಿ, ಭಗ್ನವಾದ ಇತರ ಉಪಕರಣಗಳನ್ನು ಹೊಂದಿದವುಗಳನ್ನಾಗಿ, ಹತರಾದ ಯೋಧರನ್ನು ಉಳ್ಳವುಗಳನ್ನಾಗಿ ಮಾಡಿ, ಅಭಿಮನ್ಯುವು ತನ್ನ ಬಾಣಗಳಿಂದ ಸಹಸ್ರ ಸಂಖ್ಯೆಯಲ್ಲಿ ಅವುಗಳನ್ನು ಪುಡಿ ಮಾಡುವವನಾಗಿ ಎಲ್ಲ ದಿಕ್ಕುಗಳಲ್ಲಿಯೂ ಕಂಡುಬಂದನು.
ಪುನರ್ದ್ವಿಪಾನ್ ದ್ವಿಪಾರೋಹಾನ್ ವೈಜಯಂತ್ಯಂಕುಶಧ್ವಜಾನ್ ।
ತೂಣೀನ್ ವರ್ಮಾಣ್ಯಥೋ ಕಕ್ಷ್ಯಾ ಗ್ರೈವೇಯಾನ್ ರಕ್ತಕಂಬಲಾನ್ ॥
ಘಂಟಾಕರ್ಣಾನ್ ವಿಷಾಣಾಗ್ರಾನ್ ಕ್ಷುರಮಾಲಾಃ ಪದಾನುಗಾನ್ ।
ಶರೈರ್ನಿಕೃತ್ಯ ಸೌಭದ್ರಃ ಶಾತ್ರವಾಣಾಮಶಾತಯತ್ ॥ 42 ॥
ಪುನಃ ಗಜಗಳನ್ನೂ, ಗಜಾರೋಹಿಗಳನ್ನೂ, ಗಜಗಳ ವೈಜಯಂತಿ ಮಾಲೆ, ಅಂಕುಶ ಮತ್ತು ಧ್ವಜಗಳನ್ನೂ, ಬತ್ತಳಿಕೆಗಳನ್ನೂ, ಕವಚಗಳನ್ನೂ, ಸರಪಣಿಗಳನ್ನೂ, ಕಂಠಹಾರಗಳನ್ನೂ, ರಕ್ತಕಂಬಳಿಗಳನ್ನೂ, ಕರ್ಣಘಂಟೆಗಳನ್ನೂ, ದಂತದ ತುದಿಗಳನ್ನೂ, ಕ್ಷುರಮಾಲೆಗಳನ್ನೂ ಮತ್ತು ಗಜಾನುಯಾಯಿಗಳನ್ನೂ ಅಭಿಮನ್ಯುವು ತನ್ನ ಬಾಣಗಳಿಂದ ಕತ್ತರಿಸಿ ಶತ್ರುಗಳನ್ನು ವಿನಾಶಗೊಳಿಸಿದನು.
ವನಾಯುಜಾನ್ ಪಾರ್ವತೀಯಾನ್ ಕಾಂಬೋಜಾರಟ್ಟಬಾಹ್ಲಿಕಾನ್ ।
ಸ್ಥಿರವಾಲಧಿಕರ್ಣಾಕ್ಷಾನ್ ಜವನಾನ್ ಸಾಧುವಾಹಿನಃ ॥ 43 ॥

ಸ್ವಾರೂಢಾನ್ ಶಿಕ್ಷಿತೈರ್ಯೋಧೈಃ ಶಕ್ತ್ಯೃಷ್ಟಿ ಪ್ರಾಸಯೋಧಿಭಿಃ |
ವಿಧ್ವಸ್ತಚಾಮರಕುಥಾನ್ ವಿಪ್ರವಿದ್ಧಪ್ರಕೀರ್ಣಕಾನ್ ॥ 44 ॥
ನಿರಸ್ತಜಿಹ್ವಾದಶನಾನ್ ನಿಷ್ಕೀರ್ಣಾಂತ್ರಯಕೃದ್ಘನಾನ್ |
ಹತಾರೋಹಾನ್ ಭಿನ್ನಭಾಂಡಾನ್ ಕ್ರವ್ಯಾದಗಣಮೋದನಾನ್ ॥45॥
ನಿಕೃತ್ತವರ್ಮಕವಚಾನ್ ಶಕೃನ್ಮೂತ್ರಾಸೃಗಾಪ್ಲುತಾನ್ |
ನಿಪಾತಯನ್ನಶ್ವವರಾನ್ ತಾವಕಾನ್ ಸೋಽತ್ಯರೋಚತ ॥ 46 ॥
ವನಾಯುದೇಶದಲ್ಲಿ ಜನಿಸಿದ, ಪರ್ವತದೇಶದಲ್ಲಿ ಜನಿಸಿದ, ಕಾಂಬೋಜ- ಅರಟ್ಟ-ಬಾಹ್ಲಿಕ ದೇಶದಲ್ಲಿ ಜನಿಸಿದ, ಸ್ಥಿರವಾದ-ವಾಲಧಿ-ಕರ್ಣ ಮತ್ತು ಕಣ್ಣುಗಳನ್ನು ಹೊಂದಿದ, ವೇಗಶಾಲಿಗಳಾದ ಚೆನ್ನಾಗಿ ರಥವನ್ನು ಎಳೆಯುವ, ಶಕ್ತಿ-ಋಷ್ಟಿ-ಪ್ರಾಸಗಳಿಂದ ಯುದ್ಧವನ್ನು ಮಾಡುವ ಶಿಕ್ಷಿತರಾದ ಒಳ್ಳೆಯ ಯೋಧರಿಂದ ಚೆನ್ನಾಗಿ ಆರೂಢಗಳಾದ ಅಶ್ವಗಳನ್ನು, ಅವುಗಳ ಚಾಮರ ಮತ್ತು ಕಂಬಳಿಗಳನ್ನು ವಿಧ್ವಂಸ ಮಾಡಿ, ಅವುಗಳ ಇತರ ಸಲಕರಣೆಗಳನ್ನೂ ಭಗ್ನಗೊಳಿಸಿ, ಅವುಗಳನ್ನು ಜಿಹ್ವಾ-ದಂತಗಳಿಂದ ಹೀನಗಳನ್ನಾಗಿ ಮಾಡಿ, ಅವುಗಳ ಕರುಳು ಮೊದಲಾದವುಗಳು ಹೊರಗೆ ಬರುವಂತೆ ಮಾಡಿ, ಆರೋಹಿಗಳನ್ನು ಕೊಂದು, ಸುವರ್ಣಾಭರಣಗಳನ್ನು ಭೇದಿಸಿ, ಅವುಗಳ ಕವಚಗಳನ್ನು ಭೇದಿಸಿ, ಮಲ-ಮೂತ್ರ-ರಕ್ತ ಆವೃತವಾದ, ಮಾಂಸಾಹಾರಿ ಪ್ರಾಣಿಗಣಕ್ಕೆ ಸಂತೋಷವನ್ನು ಕೊಡುವ ನಿನ್ನ ಸೈನ್ಯದ ಶ್ರೇಷ್ಠವಾದ ಅಶ್ವಗಳನ್ನು ಹೊಡೆದುರುಳಿಸುತ್ತಾ ಅಭಿಮನ್ಯುವು ಬಹಳವಾಗಿ ಶೋಭಿಸಿದನು.
ಏಕೋ ವಿಷ್ಣುರಿವಾಚಿಂತ್ಯಃ ಕೃತವಾನ್ ಕರ್ಮ ದುಷ್ಕರಮ್ ॥47॥
ತಥಾ ವಿಮಥಿತಂ ತೇನ ಚತುರಂಗಬಲಂ ಮಹತ್ |
ನ್ಯಹನತ್ ತಾನ್ ಪದಾತ್ಯೋಘಾನ್ ತ್ವದೀಯಾನೇವ ಭಾರತ ॥48॥
ಸರ್ವೋತ್ತಮನಾದ ವಿಷ್ಣುವಿನಂತೆ ಅಚಿಂತ್ಯನಾದ ಅವನು ದುಷ್ಕರವಾದ ಕರ್ಮವನ್ನು ಮಾಡಿದನು. ಅವನಿಂದ ಆ ರೀತಿಯಲ್ಲಿ ಮರ್ದಿಸಲ್ಪಟ್ಟ ದೊಡ್ಡ ಚದುರಂಗ ಬಲವು ಓಡುತ್ತಾ ನಿನ್ನ ಪದಾತಿ ಸಮೂಹಗಳನ್ನೇ ಕೊಂದಿತು.
ಯಥಾಽಸುರಬಲಂ ಘೋರಂ ತ್ರ್ಯಂಬಕೇಣಾಮಿತೌಜಸಾ |
ಕೃತ್ವಾ ಕರ್ಮ ರಣೇಽಸಹ್ಯಂ ಪರೈರಾರ್ಜುನಿರಾಹವೇ ॥ 49 ॥
ಘೋರವಾದ ಅಸುರಸೇನೆಯನ್ನು ಅಮಿತಪರಾಕ್ರಮಿಯಾದ ಈಶ್ವರನು ಮರ್ದಿಸಿದಂತೆ ಅಭಿಮನ್ಯುವು ಯುದ್ಧದಲ್ಲಿ ಶತ್ರುಗಳು ಸಹಿಸಲು ಸಾಧ್ಯವಾಗದಂತಹ ಕರ್ಮವನ್ನು ಮಾಡಿದನು.
ಏವಮೇಕೇನ ತೇ ಸೇನಾಂ ಸೌಭದ್ರೇಣ ಶಿತೈಃ ಶರೈಃ |
ಭೃಶಂ ವಿಪ್ರಹತಾಂ ದೃಷ್ಟ್ವಾ ಸ್ಕಂದೇನೇವಾಸುರೀಂ ಚಮೂಮ್ ॥ 50 ॥
ತ್ವದೀಯಾಸ್ತವ ಪುತ್ರಾಶ್ಚ ವೀಕ್ಷಮಾಣಾ ದಿಶೋ ದಶ |
ಸಂಶುಷ್ಕಾಸ್ಯಾಶ್ಚಲನ್ನೇತ್ರಾಃ ಪ್ರಸ್ವಿನ್ನಾ ಲೋಮಹರ್ಷಣಾಃ ॥ 51 ॥
ಪಲಾಯನಕೃತೋತ್ಸಾಹಾ ನಿರುತ್ಸಾಹಾ ದ್ವಿಷಜ್ಜಯೇ |
ಗೋತ್ರನಾಮಭಿರನ್ಯೋನ್ಯಂ ಕ್ರಂದಂತೋ ಜೀವಿತೈಷಿಣಃ ॥ 52 ॥
ಹತಾನ್ ಭ್ರಾತೄನ್ ಪಿತೄನ್ ಪುತ್ರಾನ್ ಪ್ರಿಯಾನ್ ಸಂಬಂಧಿಬಾಂಧವಾನ್|
ಉತ್ಸ ೃಜ್ಯೋತ್ಸ ೃಜ್ಯ ಗಚ್ಛಂತಿ ಸೌಭದ್ರಶರಪೀಡಿತಾಃ |
ಪ್ರಾತಿಷ್ಠಂತ ಸಮುತ್ಸ ೃಜ್ಯ ತ್ವರಯಂತೋ ರಥದ್ವಿಪಾನ್ ॥ 53 ॥
ಸ್ಕಂಧನು ಅಸುರ ಸೇನೆಯನ್ನು ನಾಶಪಡಿಸಿದಂತೆ ಒಬ್ಬ ಅಭಿಮನ್ಯುವಿನಿಂದ ಹರಿತವಾದ ಬಾಣಗಳಿಂದ ಚೆನ್ನಾಗಿ ಹತವಾದ ನಿನ್ನ ಸೈನ್ಯವನ್ನು ನೋಡಿ ನಿನ್ನ ಯೋಧರು ಮತ್ತು ನಿನ್ನ ಪುತ್ರರು ಹತ್ತುದಿಕ್ಕುಗಳನ್ನು ನೋಡುತ್ತಾ, ಒಣಗಿದ ಮುಖವುಳ್ಳವರಾಗಿ, ಚಂಚಲ ದೃಷ್ಟಿಯುಳ್ಳವರಾಗಿ, ಬೆವರಿ, ರೋಮಾಂಚನಗೊಂಡು, ಶತ್ರುಗಳನ್ನು ಜಯಿಸುವುದರಲ್ಲಿ ಉತ್ಸಾಹವನ್ನು ಕಳೆದುಕೊಂಡು, ಪಲಾಯನ ಮಾಡುವುದರಲ್ಲಿ ಉತ್ಸಾಹಭರಿತರಾಗಿ, ಬದುಕಲು ಬಯಸಿ, ಗೋತ್ರ-ನಾಮಗಳಿಂದ ಪರಸ್ಪರವಾಗಿ ಕರೆಯುತ್ತಾ ಹೊಡೆಯಲ್ಪಟ್ಟ (ಹತರಾದ) ಸಹೋದರರನ್ನು, ಪಿತೃಗಳನ್ನು, ಪುತ್ರರನ್ನು, ಪ್ರಿಯರನ್ನು, ಸಂಬಂಧಿಬಾಂಧವರನ್ನು ಬಿಟ್ಟು-ಬಿಟ್ಟು ಅಭಿಮನ್ಯುವಿನ ಶರಪೀಡಿತರಾಗಿ ತಮ್ಮ ರಥ-ಗಜಗಳನ್ನು ತೊರೆಯುತ್ತಾ ರಣರಂಗದಿಂದ ಪಲಾಯನ ಮಾಡಿದರು.
ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತಾರನೆಯ ಅಧ್ಯಾಯ
ಅಭಿಮನ್ಯುವಿನ ಪರಾಕ್ರಮದ ವರ್ಣನೆ.
ಸಂಜಯಃ
ತಾಂ ಪ್ರಭಗ್ನಾಂ ಚಮೂಂ ದೃಷ್ಟ್ವಾ ಸೌಭದ್ರೇಣಾಮಿತೌಜಸಾ |
ದುರ್ಯೋಧನೋ ಭೃಶಂ ಕ್ರುದ್ಧಃ ಸ್ವಯಂ ಸೌಭದ್ರಮಭ್ಯಯಾತ್ ॥ 1 ॥
ಸಂಜಯ ಅಮಿತ ಸಾಮರ್ಥ್ಯವುಳ್ಳ ಅಭಿಮನ್ಯುವಿನಿಂದ ಭಗ್ನಗೊಳಿಸಲ್ಪಟ್ಟ ತನ್ನ ಸೈನ್ಯವನ್ನು ನೋಡಿ ದುರ್ಯೋಧನನು ಬಹಳ ಕೋಪಗೊಂಡು ತಾನೇ ಅಭಿಮನ್ಯುವಿನ ಮೇಲೆ ಎರಗಿದನು.

ತತೋ ರಾಜಾನಮಾವೃತ್ತಂ ಸೌಭದ್ರೇಣ ಯುಯುತ್ಸಯಾ |
ದ್ರೋಣೋ ದೃಷ್ಟ್ವಾಽಬ್ರವೀದ್ ವೀರಾನ್ ಪರ್ಯಾಪ್ನುತ ನರಾಧಿಪಮ್ ॥
ಆಗ ಅಭಿಮನ್ಯುವಿನ ಜೊತೆಯಲ್ಲಿ ಯುದ್ಧಮಾಡಲು ಇಚ್ಛಿಸಿ, ಅವನ ಕಡೆಗೆ ಹೊರಟ ರಾಜನನ್ನು ನೋಡಿ ದ್ರೋಣರು ವೀರರನ್ನು ಕುರಿತು ರಾಜನನ್ನು ಸುತ್ತುವರಿಯಿರಿ ಎಂದು ಹೇಳಿದರು.
ಪುರಾಽಭಿಮನ್ಯುರ್ಲಕ್ಷಂ ನಃ ಪಶ್ಯತಾಂ ಹಂತಿ ವೀರ್ಯವಾನ್ |
ತಮಾದ್ರವತ ಮಾ ಭೈಷ್ಟ ಕ್ಷಿಪ್ರಂ ರಕ್ಷತ ಕೌರವಮ್ ॥ 3 ॥
ಪರಾಕ್ರಮಶಾಲಿಯಾದ ಅಭಿಮನ್ಯುವು ನಮ್ಮಲ್ಲಿ ಲಕ್ಷ ಯೋಧರನ್ನು ಕೊಲ್ಲುವುದಕ್ಕಿಂತ ಮುಂಚೆಯೇ ಅವನ ಮೇಲೆ ಧಾವಿಸಿ. ಹೆದರಬೇಡಿ, ಶೀಘ್ರವಾಗಿ ದುರ್ಯೋಧನನನ್ನು ರಕ್ಷಿಸಿ (ಎಂದು ಹೇಳಿದರು).
ತತಃ ಕೃತಜ್ಞಾ ಬಲಿನಃ ಸುಹೃದೋ ಜಿತಕಾಶಿನಃ |
ತ್ರಾಯಮಾಣಾ ಭಯಾದ್ ವೀರಾಃ ಪರಿವವ್ರುಸ್ತವಾತ್ಮಜಮ್ ॥ 4 ॥
ಆಗ ಕೃತಜ್ಞರೂ, ಬಲಿಷ್ಠರೂ, ಸುಹೃದರೂ, ಜಯಾಕಾಂಕ್ಷಿಗಳೂ ಆದ ವೀರರು ಭಯದಿಂದ ನಿನ್ನ ಪುತ್ರನನ್ನು ರಕ್ಷಿಸುತ್ತಾ ಅವನನ್ನು ಸುತ್ತುವರಿದರು.
ದ್ರೋಣೋ ದ್ರೌಣಿಃ ಕೃಪಃ ಕರ್ಣಃ ಕೃತವರ್ಮಾ ಚ ಸೌಬಲಃ |
ಬೃಹದ್ಬಲೋ ಮದ್ರರಾಜೋ ಭೂರಿರ್ಭೂರಿಶ್ರವಾಃ ಶಲಃ ॥ 5 ॥
ಪೌರವೋ ವೃಷಸೇನಶ್ಚ ವಿಸೃಜಂತಃ ಶರಾನ್ ಶಿತಾನ್ |
ಸೌಭದ್ರಂ ಶರವರ್ಷೇಣ ಮಹತಾ ಸಮವಾರಯನ್ ॥ 6 ॥
ದ್ರೋಣರು, ಅಶ್ವತ್ಥಾಮರು, ಕೃಪರು, ಕರ್ಣ, ಕೃತವರ್ಮ, ಶಕುನಿ, ಬೃಹದ್ಬಲ, ಶಲ್ಯ, ಭೂರಿ, ಭೂರಿಶ್ರವ, ಶಲ, ಪೌರವ, ವೃಷಸೇನ ಇವರು ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ, ತಮ್ಮ ಬಾಣಗಳ ದೊಡ್ಡ ಮಳೆಯಿಂದ ಅಭಿಮನ್ಯುವನ್ನು ತಡೆದರು.
ಸಮ್ಮೋಹಯಿತ್ವಾ ತಮಥ ದುರ್ಯೋಧನಮಮೋಚಯನ್ |
ಆಸ್ಯಾದ್ ಗ್ರಾಸಮಿವಾಕ್ಷಿಪ್ತಂ ಮಮೃಷೇ ನಾರ್ಜುನಾತ್ಮಜಃ ॥ 7 ॥
ಅವರು ಅಭಿಮನ್ಯುವನ್ನು ಮರುಳುಗೊಳಿಸಿ ಬಾಣದ ಮಳೆಯಿಂದ ಬಾಯಲ್ಲಿ ಹಾಕಿದ ತುತ್ತಿನಂತೆ ಸಿಕ್ಕಿಬಿದ್ದಿದ್ದ ದುರ್ಯೋಧನನನ್ನು ಬಿಡಿಸಿದರು. ಅದನ್ನು ಅಭಿಮನ್ಯುವು ಸಹಿಸಲಿಲ್ಲ.
ತಾನ್ ಶರೌಘೇಣ ಮಹತಾ ಸಾಶ್ವಸೂತಾನ್ ಮಹಾರಥಾನ್ |
ವಿಮುಖೀಕೃತ್ಯ ಸೌಭದ್ರಃ ಸಿಂಹನಾದಮಥಾನದತ್ ॥ 8 ॥
ಅಶ್ವ-ಸೂತರಿಂದ ಸಹಿತರಾದ ಆ ಮಹಾರಥರನ್ನು ತನ್ನ ಬಾಣದ ದೊಡ್ಡ ಸಮೂಹದಿಂದ ವಿಮುಖರನ್ನಾಗಿ ಮಾಡಿ ಅಭಿಮನ್ಯುವು ಸಿಂಹನಾದವನ್ನು ಮಾಡಿದನು.
ತದ್ದೈನಂ ಕೋಷ್ಠಕೀಕೃತ್ಯ ರಥವಂಶೇನ ಮಾರಿಷ |
ವ್ಯಸೃಜನ್ನಿಷುಜಾಲಾನಿ ನಾನಾಲಿಂಗಾನಿ ಸಂಘಶಃ ॥ 9 ॥
ಆಗ ಅವರು ಅಭಿಮನ್ಯುವನ್ನು ಕೋಣೆಯಲ್ಲಿ ಕೂಡಿಹಾಕಿದಂತೆ ರಥಸಮೂಹದಿಂದ ಅವನನ್ನು ಸುತ್ತುವರಿದು ನಾನಾ ವಿಧವಾದ ಬಾಣ ಸಮೂಹಗಳನ್ನು ಅವನ ಮೇಲೆ ಗುಂಪು ಗುಂಪಾಗಿ ಪ್ರಯೋಗಿಸಿದರು.
ತಾನ್ಯಂತರಿಕ್ಷೇ ಚಿಚ್ಛೇದ ಪೌತ್ರಸ್ತವ ಶಿತೈಃ ಶರೈಃ |
ತಾಂಶ್ಚೈವ ಪ್ರತಿವಿವ್ಯಾಧ ತದದ್ಭುತಮಿವಾಭವತ್ ॥ 10 ॥
ನಿನ್ನ ಪೌತ್ರನಾದ ಅಭಿಮನ್ಯುವು ಹರಿತವಾದ ಬಾಣಗಳಿಂದ ಅವುಗಳನ್ನು ಅಂತರಿಕ್ಷದಲ್ಲಿಯೇ ಕತ್ತರಿಸಿದನು. ಮತ್ತು ಪ್ರತಿಯಾಗಿ ಆ ಮಹಾರಥರನ್ನು ಹೊಡೆದನು. ಅದು ಅದ್ಭುತವಾಗಿದ್ದಿತು.
ತತೋ ರಥಾಃ ಪದಾತ್ಯೋಘಾಃ ಕುಂಜರಾಃ ಸಾದಿನಶ್ಚ ಹ |
ಕೋಪಿತಾಸ್ತೇನ ಶೂರೇಣ ಶರೈರಾಶೀವಿಷೋಪಮೈಃ ॥ 11 ॥
ಪರಿವವ್ರುರ್ಜಿಘಾಂಸಂತಃ ಸೌಭದ್ರಮಪಲಾಯಿನಮ್ ॥ 12 ॥
ಆಗ ರಥರೂ, ಪದಾತಿ ಸಮೂಹಗಳೂ, ಗಜಗಳೂ, ಅಶ್ವಾರೋಹಿಗಳೂ, ದೃಷ್ಟಿ ವಿಷವುಳ್ಳ ಸರ್ಪಗಳಿಗೆ ಸಮವಾದ ಬಾಣಗಳಿಂದ ಆ ಶೂರನಿಂದ ಹೊಡೆಯಲ್ಪಟ್ಟು, ಕೋಪಗೊಂಡವರಾಗಿ ಯುದ್ಧದಲ್ಲಿ ಹಿಮ್ಮೆಟ್ಟದ ಅಭಿಮನ್ಯುವನ್ನು ಕೊಲ್ಲಲು ಬಯಸಿ ಅವನನ್ನು ಸುತ್ತುವರಿದರು.
ಸಮುದ್ರವದಪರ್ಯಂತಂ ತ್ವದೀಯಂ ತದ್ ಬಲಾರ್ಣವಮ್ |
ದಧಾರೈಕೋಽರ್ಜುನಿರ್ಬಾಣೈರ್ವೇಲೇವ ಮಕರಾಲಯಮ್ ॥ 13 ॥
ಸಮುದ್ರದಂತೆ ಪಾರವೇ ಇಲ್ಲದಿದ್ದ ನಿನ್ನ ಸೈನ್ಯ ಸಾಗರವನ್ನು ಅರ್ಜುನ ಪುತ್ರನೊಬ್ಬನೇ ತನ್ನ ಬಾಣಗಳಿಂದ ತೀರವು ಸಮುದ್ರವನ್ನು ತಡೆದಂತೆ ತಡೆದನು.
ಧೀರಾಣಾಂ ಯುದ್ಧ್ಯಮಾನಾನಾಂ ನಿಘ್ನತಾಮಿತರೇತರಮ್ |
ಅಭಿಮನ್ಯೋಃ ಪರೇಷಾಂ ಚ ನಾಸೀತ್ ಕಶ್ಚಿತ್ ಪರಾಙ್ಮುಖಃ ॥14॥
ಅಭಿಮನ್ಯುವೂ ಮತ್ತು ಅವನ ಶತ್ರುಗಳಾದ ಧೀರರೂ, ಪರಸ್ಪರವಾಗಿ ಬಾಣವನ್ನು ಪ್ರಯೋಗ ಮಾಡುವವರೂ ಆದ ನಿನ್ನವರೂ ಯುದ್ಧವನ್ನು ಮಾಡುವಾಗ ಯಾರೂ ಹಿಮ್ಮೆಟ್ಟಲಿಲ್ಲ.
ತಸ್ಮಿನ್ ಸುಘೋರೇ ಸಂಗ್ರಾಮೇ ವರ್ತಮಾನೇ ಭಯಂಕರೇ |
ದುಸ್ಸಹೋ ನವಭಿರ್ಬಾಣೈರಭಿಮನ್ಯುಮವಿದ್ಧ್ಯತ ॥ 15 ॥

ಆ ಘೋರವಾದ ಮತ್ತು ಭಯಂಕರವಾದ ಯುದ್ಧವು ನಡೆಯುತ್ತಿರುವಾಗ ನಿನ್ನ ಪುತ್ರನಾದ ದುಸ್ಸಹನು ಒಂಬತ್ತು ಬಾಣಗಳಿಂದ ಅಭಿಮನ್ಯುವನ್ನು ಹೊಡೆದನು.
ದುಃಶಾಸನೋ ದ್ವಾದಶಭಿಃ ಕೃಪಃ ಶಾರದ್ವತಸ್ತ್ರಿಭಿಃ |
ದ್ರೋಣಸ್ತು ಸಪ್ತದಶಭಿಃ ಶರೈರಾಶೀವಿಷೋಪಮೈಃ ॥ 16 ॥
ವಿವಿಂಶತಿಸ್ತು ವಿಂಶತ್ಯಾ ಕೃತವರ್ಮಾ ಚ ಸಪ್ತಭಿಃ |
ಬೃಹದ್ಬಲಸ್ತಥಾಽಷ್ಟಾಭಿರಶ್ವತ್ಥಾಮಾ ಚ ಪಂಚಭಿಃ ॥ 17 ॥
ಭೂರಿಶ್ರವಾಸ್ತ್ರಿಭಿರ್ಬಾಣೈರ್ಮದ್ರೇಶಃ ಷಡ್ಭಿರಾಶುಗೈಃ |
ದ್ವಾಭ್ಯಾಂ ಶರಾಭ್ಯಾಂ ಶಕುನಿಃ ತ್ರಿಭಿರ್ದುರ್ಯೋಧನೋ ನೃಪಃ ॥ 18 ॥
ದುಶ್ಶಾಸನನು ಹನ್ನೆರಡು ಬಾಣಗಳಿಂದಲೂ, ಶಾರದ್ವತರಾದ ಕೃಪರು ಮೂರು ಬಾಣಗಳಿಂದಲೂ, ದ್ರೋಣರು ಆಶೀವಿಷ ಸರ್ಪಗಳಿಗೆ ಸದೃಶವಾದ ಹದಿನೇಳು ಬಾಣಗಳಿಂದಲೂ, ವಿವಿಂಶತಿಯು ಇಪ್ಪತ್ತು ಬಾಣಗಳಿಂದಲೂ, ಕೃತವರ್ಮನು ಏಳು ಬಾಣಗಳಿಂದಲೂ, ಬೃಹದ್ಬಲನು ಎಂಟು ಬಾಣಗಳಿಂದಲೂ, ಅಶ್ವತ್ಥಾಮರು ಐದು ಬಾಣಗಳಿಂದಲೂ, ಭೂರಿಶ್ರವನು ಮೂರು ಬಾಣಗಳಿಂದಲೂ, ಶಲ್ಯನು ಶೀಘ್ರಗಾಮಿಯಾದ ಆರು ಬಾಣಗಳಿಂದಲೂ, ಶಕುನಿಯು ಎರಡು ಬಾಣಗಳಿಂದಲೂ, ದುರ್ಯೋಧನನು ಮೂರು ಬಾಣಗಳಿಂದಲೂ ಅವನನ್ನು ಹೊಡೆದರು.
ಸ ತು ತಾನ್ ಪ್ರತಿವಿವ್ಯಾಧ ತ್ರಿಭಿಸ್ತ್ರಿಭಿರಜಿಹ್ಮಗೈಃ |
ನೃತ್ಯನ್ನಿವ ಮಹಾರಾಜ ಚಾಪಹಸ್ತೋ ಪ್ರತಾಪವಾನ್ ॥ 19 ॥
ಎಲೈ ಮಹಾರಾಜನೇ, ಪರಾಕ್ರಮಶಾಲಿಯಾದ ಅವನು ಕೈಯಲ್ಲಿ ಧನುಸ್ಸನ್ನು ಹಿಡಿದು ನರ್ತನವನ್ನು ಮಾಡುವವನಂತೆ ಅವರಲ್ಲಿ ಪ್ರತಿಯೊಬ್ಬರನ್ನೂ ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ಹೊಡೆದನು.
ತತೋಽಭಿಮನ್ಯುಃ ಸಂಕ್ರುದ್ಧಃ ತ್ರಾಸ್ಯಮಾನಸ್ತವಾತ್ಮಜೈಃ |
ವಿದರ್ಶಯಿಷ್ಯನ್ ಸುಮಹಚ್ಛಿಕ್ಷಾಬಲಕೃತಂ ಬಲಮ್ ॥ 20 ॥
ಗರುಡಾನಿಲರಂಹೋಭಿರ್ಯಂತುಃ ಪ್ರೇಷ್ಯಕರೈರ್ಹಯೈಃ |
ಅಭ್ಯದ್ರುವತ ತಂ ಕಾರ್ಷ್ಣಿರಶ್ಮಕೇಂದ್ರಂ ಕೃತತ್ವರಃ ॥ 21 ॥
ಆಗ ಅಭಿಮನ್ಯುವು ನಿನ್ನ ಪುತ್ರರಿಂದ ಪೀಡಿಸಲ್ಪಟ್ಟವನಾಗಿ, ಕೋಪಗೊಂಡು, ತನ್ನ ದೊಡ್ಡ ಶಿಕ್ಷಾಬಲವನ್ನು ಮತ್ತು ದೇಹಬಲವನ್ನು ತೋರಿಸುವವನಾಗಿ, ಗರುಡವೇಗ ಮತ್ತು ವಾಯುವೇಗವುಳ್ಳ ಸಾರಥಿಗೆ ಸರ್ವಥಾ ವಶವರ್ತಿಗಳಾದ ಕುದುರೆಗಳಿಂದ ಕೂಡಿದ ರಥದಲ್ಲಿ ತ್ವರೆಯಿಂದ ಅಶ್ಮಕರಾಜನನ್ನು ಕುರಿತು ಧಾವಿಸಿದನು.
ಅಶ್ವಾಂಶ್ಚಾಶ್ಮಕದಾಯಾದಸ್ತ್ವರಮಾಣೋಽಭ್ಯವಾರಯತ್ |
ವಿವ್ಯಾಧ ಚೈನಂ ದಶಭಿರ್ಬಾಣೈಸ್ತಿಷ್ಠೇತಿ ಚಾಬ್ರವೀತ್ ॥ 22 ॥
ತಸ್ಯಾಭಿಮನ್ಯುರ್ದಶಭಿರ್ಬಾಣೈಃ ಸೂತಂ ಹಯಾನ್ ಧ್ವಜಮ್ |
ಬಾಹೂ ಧನುಃ ಶಿರಶ್ಚೋರ್ವ್ಯಾಂ ಸ್ಮಯಮಾನೋಽಭ್ಯಪಾತಯತ್ ॥
ಅಶ್ಮಕಪುತ್ರನು ತ್ವರೆಮಾಡಿ ಅವನ ಅಶ್ವಗಳನ್ನು ತಡೆದು, ಅವನ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿ `ನಿಲ್ಲು-ನಿಲ್ಲು' ಎಂದು ಹೇಳಿದನು. ಅಭಿಮನ್ಯುವು ಹತ್ತು ಬಾಣಗಳನ್ನು ಪ್ರಯೋಗಿಸಿ, ಅವನ ಸೂತನನ್ನೂ, ಅಶ್ವಗಳನ್ನೂ, ಧ್ವಜವನ್ನೂ, ಬಾಹುಗಳನ್ನೂ, ಧನುಸ್ಸನ್ನೂ, ಶಿರಸ್ಸನ್ನೂ ನಗುತ್ತಲೇ ಭೂಮಿಯ ಮೇಲೆ ಕೆಡವಿದನು.
ತತಸ್ತಸ್ಮಿನ್ ಹತೇ ವೀರೇ ಸೌಭದ್ರೇಣಾಶ್ಮಕೇಶ್ವರೇ |
ಸಂಚಚಾಲ ಬಲಂ ಸರ್ವಂ ಪಲಾಯನಪರಾಯಣಮ್ ॥ 24 ॥
ವೀರನಾದ ಆ ಅಶ್ಮಕರಾಜನು ಅಭಿಮನ್ಯುವಿನಿಂದ ಹತನಾಗುತ್ತಿರಲು ಸೈನ್ಯವೆಲ್ಲವೂ ಕ್ಷೋಭೆಗೊಂಡು ಪಲಾಯನ ಮಾಡುವ ಬುದ್ಧಿಯನ್ನು ಹೊಂದಿತು.
ತತಃ ಕರ್ಣಃ ಕೃಪೋ ದ್ರೋಣೋ ದ್ರೌಣಿರ್ಗಾಂಧಾರರಾಟ್ ಶಲಃ |
ಶಲ್ಯೋ ಭೂರಿಶ್ರವಾಃ ಕ್ರಾಥಃ ಸೋಮದತ್ತೋ ವಿವಿಂಶತಿಃ ॥ 25 ॥
ವೃಷಸೇನಃ ಸುಷೇಣಶ್ಚ ಕುಂಡಭೇದೀ ಪ್ರತರ್ದನಃ |
ವೃಂದಾರಕೋ ಸಲಿಲೀಂಧ್ರಶ್ಚ ಪ್ರಬಾಹುರ್ದೀರ್ಘಲೋಚನಃ ॥ 26 ॥
ದುರ್ಯೋಧನಶ್ಚ ಸಂಕ್ರುದ್ಧಃ ಶರವರ್ಷೈರವಾಕಿರನ್ ॥ 27 ॥
ಆಗ ಕರ್ಣ, ಕೃಪರು, ದ್ರೋಣರು, ಅಶ್ವತ್ಥಾಮರು, ಶಕುನಿ, ಶಲ, ಶಲ್ಯ, ಭೂರಿಶ್ರವ, ಕ್ರಾಥ, ಸೋಮದತ್ತ, ವಿವಿಂಶತಿ, ವೃಷಸೇನ, ಸುಷೇಣ, ಕುಂಡಭೇದಿ, ಪ್ರತರ್ದನ, ವೃಂದಾರಕ, ಲಿಲೀಂಧ್ರ, ಪ್ರಬಾಹು, ದೀರ್ಘಲೋಚನ, ದುರ್ಯೋಧನ- ಇವರೆಲ್ಲರೂ ಕೋಪಗೊಂಡು ಅಭಿಮನ್ಯುವಿನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ಸೋಽತಿವಿದ್ಧೋ ಮಹೇಷ್ವಾಸೈರಭಿಮನ್ಯುರಜಿಹ್ಮಗೈಃ |
ಶರಮಾದತ್ತ ಕರ್ಣಾಯ ಪರಕಾಯಾವಭೇದನಮ್ ॥ 28 ॥
ಮಹಾಧನುರ್ಧಾರಿಗಳಿಂದ ನೇರವಾಗಿ ಸಾಗುವ ಬಾಣಗಳಿಂದ ಅತಿಯಾಗಿ ಪೀಡಿಸಲ್ಪಟ್ಟ ಅಭಿಮನ್ಯುವು ಕರ್ಣನನ್ನು ಉದ್ದೇಶಿಸಿ ಶರೀರಭೇದಕವಾದ ಒಂದು ಬಾಣವನ್ನು ತೆಗೆದುಕೊಂಡನು.
ತಸ್ಯ ಭಿತ್ತ್ವಾ ತನುತ್ರಾಣಂ ಕರ್ಣಂ ನಿರ್ಭಿದ್ಯ ಚಾಶುಗಃ |
ಪ್ರಾವಿಶದ್ ಧರಣೀಂ ರಾಜನ್ ವಲ್ಮೀಕಮಿವ ಪನ್ನಗಃ ॥ 29 ॥
ಶೀಘ್ರಗಾಮಿಯಾದ ಆ ಬಾಣವು ಕರ್ಣನ ಕವಚವನ್ನು ಭೇದಿಸಿ, ಕರ್ಣನನ್ನೂ ಭೇದಿಸಿ ಎಲೈ ರಾಜನೇ, ಸರ್ಪವು ಹುತ್ತದೊಳಗೆ

ಹೋಗುವಂತೆ ಭೂಮಿಯನ್ನು ಪ್ರವೇಶಿಸಿತು.
ಸ ತೇನಾತಿಪ್ರಹಾರೇಣ ವ್ಯಥಿತೋ ವಿಹ್ವಲನ್ನಿವ |
ಸಂಚಚಾಲ ತಥಾ ಕರ್ಣಃ ಕ್ಷಿತಿಕಂಪೇ ಯಥಾಽಚಲಃ ॥ 30 ॥
ಆ ಗಾಢವಾದ ಪ್ರಹಾರದಿಂದ ವ್ಯಥೆಯನ್ನು ಹೊಂದಿ ವಿಹ್ವಲನಾದ ಕರ್ಣನು ಭೂಕಂಪದ ಸಮಯದಲ್ಲಿ ಪರ್ವತವು ಅಲ್ಲಾಡುವಂತೆ ತನ್ನ ರಥದಲ್ಲಿ ಅಲ್ಲಾಡಿದನು.
ಅಥಾನ್ಯೈರ್ನಿಶಿತೈರ್ಬಾಣೈಃ ಸುಷೇಣಂ ದೀರ್ಘಲೋಚನಮ್ |
ಕುಂಡಭೇದಿಂ ಚ ಸಂಕ್ರುದ್ಧಃ ತ್ರಿಭಿಸ್ತ್ರೀನವಧೀದ್ ಬಲೀ ॥ 31 ॥
ಅನಂತರ ನಿಶಿತವಾದ ಬೇರೆಯ ಮೂರು ಬಾಣಗಳನ್ನು ತೆಗೆದುಕೊಂಡು ಕೋಪಗೊಂಡ ಬಲಿಷ್ಠನಾದ ಅಭಿಮನ್ಯುವು ಸುಷೇಣ, ದೀರ್ಘಲೋಚನ, ಕುಂಡಭೇದಿ ಇವರನ್ನು ಕೊಂದನು.
ಕರ್ಣಸ್ತು ಪಂಚವಿಂಶತ್ಯಾ ನಾರಾಚಾನಾಂ ಸಮರ್ಪಯತ್ |
ಅಶ್ವತ್ಥಾಮಾ ಚ ಸಪ್ತತ್ಯಾ ಕೃತವರ್ಮಾ ಚ ಸಪ್ತಭಿಃ ॥ 32 ॥
ಸ ಶರಾಚಿತಸರ್ವಾಂಗಃ ಕ್ರುದ್ಧಃ ಶಕ್ರಾತ್ಮಜಾತ್ಮಜಃ |
ವಿಚರನ್ ದೃಶ್ಯತೇ ಸೈನ್ಯೇ ಪಾಶಹಸ್ತ ಇವಾಂತಕಃ ॥ 33 ॥
ಕರ್ಣನು ಅಭಿಮನ್ಯುವಿನ ಮೇಲೆ ಇಪ್ಪತ್ತೈದು ನಾರಾಚಗಳನ್ನೂ, ಅಶ್ವತ್ಥಾಮರು ಎಪ್ಪತ್ತು ಬಾಣಗಳನ್ನೂ, ಕೃತವರ್ಮನು ಏಳು ಬಾಣಗಳನ್ನೂ ಪ್ರಯೋಗಿಸಿದರು. ದೇಹದಲ್ಲೆಲ್ಲಾ ಬಾಣಗಳು ನಾಟಿ ಕೋಪಗೊಂಡಇಂದ್ರಪುತ್ರನ ಪುತ್ರನಾದ ಅಭಿಮನ್ಯುವು ರಣರಂಗದಲ್ಲಿ ಸಂಚರಿಸುತ್ತಾ ಹಸ್ತದಲ್ಲಿ ಪಾಶವನ್ನು ಹಿಡಿದ ಯಮನಂತೆ ಕಂಡನು.
ಸ ಶಲ್ಯಂ ಶರವರ್ಷೇಣ ಸಮೀಪಸ್ಥಮುವಾಕಿರತ್ |
ಉದಕ್ರೋಶನ್ಮಹಾಬಾಹುಃ ತವ ಸೈನ್ಯಾನಿ ಭೀಷಯನ್ ॥ 34 ॥
ಅವನು ಸಮೀಪದಲ್ಲಿದ್ದ ಶಲ್ಯನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಮಹಾಬಾಹುವಾದ ಅವನು ನಿನ್ನ ಸೈನ್ಯಗಳಿಗೆ ಭಯವನ್ನುಂಟು ಮಾಡುತ್ತಾ ಸಿಂಹನಾದವನ್ನು ಮಾಡಿದನು.
ತತಃ ಸ ವಿದ್ಧೋಽಸ್ತ್ರವಿದಾ ಮರ್ಮಭೇದಿಭಿರಾಶುಗೈಃ |
ಶಲ್ಯೋ ರಾಜನ್ ರಥೋಪಸ್ಥೇ ನಿಷಸಾದ ಮುಮೋಹ ಚ ॥ 35 ॥
ಎಲೈ ರಾಜನೇ, ಆಗ ಅಸ್ತ್ರಜ್ಞನಾದ ಅಭಿಮನ್ಯುವಿನಿಂದ ಮರ್ಮಭೇದಿಗಳಾದ, ಶೀಘ್ರಗಾಮಿಗಳಾದ ಬಾಣಗಳಿಂದ ಹೊಡೆಯಲ್ಪಟ್ಟ ಶಲ್ಯನು ರಥದ ಮಧ್ಯಭಾಗದಲ್ಲಿ ಕುಸಿದು ಮೂರ್ಛೆಯನ್ನು ಹೊಂದಿದನು.
ತಂ ಹಿ ದೃಷ್ಟ್ವಾ ತಥಾ ವಿದ್ಧಂ ಸೌಭದ್ರೇಣ ಯಶಸ್ವಿನಾ |
ಸಂಪ್ರಾದ್ರವಚ್ಚಮೂಃ ಸರ್ವಾ ಭಾರದ್ವಾಜಸ್ಯ ಪಶ್ಯತಃ ॥ 36 ॥
ಕೀರ್ತಿವಂತನಾದ ಅಭಿಮನ್ಯುವಿನಿಂದ ಹಾಗೆ ಹೊಡೆಯಲ್ಪಟ್ಟು ಮೂರ್ಛೆ ಹೊಂದಿದ ಶಲ್ಯನನ್ನು ನೋಡಿ, ದ್ರೋಣರು ನೋಡುತ್ತಿರುವಂತೆಯೇ ಸೈನ್ಯವೆಲ್ಲವೂ ಓಡಿಹೋಯಿತು.
ಪ್ರೇಕ್ಷಂತಸ್ತಂ ಮಹಾಬಾಹುಂ ರುಗ್ಮಪುಂಖೈಃ ಸಮಾವೃತಮ್ |
ತ್ವದೀಯಾ ಪ್ರಪಲಾಯಂತ ಮೃಗಾಃ ಸಿಂಹಾರ್ದಿತಾ ಇವ ॥ 37 ॥
ಸೌಭದ್ರಶರನಿರ್ಭಿನ್ನಾಃ ಸಮರೇಽಮರವಿಕ್ರಮಾಃ |
ಏವಂ ಶಲ್ಯೋ ವಿಮೃದಿತಃ ತವ ಪೌತ್ರೇಣ ಭಾರತ ॥ 38 ॥
ರುಗ್ಮಪುಂಖಗಳುಳ್ಳ ಬಾಣಗಳಿಂದ ಸಮಾವೃತನಾದ ಶಲ್ಯನನ್ನು ನೋಡುತ್ತಾ, ಯುದ್ಧದಲ್ಲಿ ದೇವತೆಗಳ ವಿಕ್ರಮವನ್ನು ಹೊಂದಿದ್ದರೂ ಅಭಿಮನ್ಯುವಿನ ಬಾಣಗಳಿಂದ ಭೇದಿಸಲ್ಪಟ್ಟ ನಿನ್ನವರು ಸಿಂಹದಿಂದ ಪೀಡಿತವಾದ ಜಿಂಕೆಗಳಂತೆ ಓಡಿಹೋದರು. ಎಲೈ ಭಾರತನೇ, ನಿನ್ನ ಪೌತ್ರನಿಂದ ಶಲ್ಯನು ಹೀಗೆ ಮರ್ದಿಸಲ್ಪಟ್ಟನು.
ವಿಪುಲಬಲಯಶಾಃ ಸುಪೂಜ್ಯಮಾನಃ
ಸುರಮುನಿಚಾರಣಸಿದ್ಧಸಾಧ್ಯಸಂಘೈಃ |
ಅವನಿತಳಗತೈಶ್ಚ ಭೂತಸಂಘೈಃ
ಅತಿವಿಬಭೌ ಹುತಭುಗ್ ಯಥಾಽಽಜ್ಯಸಿಕ್ತಃ ॥ 39 ॥
ವಿಪುಲವಾದ ಬಲ ಮತ್ತು ಕೀರ್ತಿಯನ್ನು ಹೊಂದಿ, ಸುರ-ಋಷಿ-ಚಾರಣ- ಸಿದ್ಧ ಸಮೂಹಗಳಿಂದ ಪೂಜಿಸಲ್ಪಟ್ಟು, ಭೂತಳದಲ್ಲಿ ಇರುವ ಭೂತಸಂಘಗಳಿಂದಲೂ ಪೂಜಿಸಲ್ಪಟ್ಟು ಅಭಿಮನ್ಯುವು ಆಜ್ಯಸಿಕ್ತವಾದ ಅಗ್ನಿಯಂತೆ ಬಹಳವಾಗಿ ಶೋಭಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೇಳನೆಯ ಅಧ್ಯಾಯ
ಅಭಿಮನ್ಯುವಿನ ಪರಾಕ್ರಮದ ವರ್ಣನೆ.
ಧೃತರಾಷ್ಟ್ರಃ
ತಥಾ ಪ್ರಮಥಮಾನಂ ತಂ ಮಹೇಷ್ವಾಸಮಜಿಹ್ಮಗೈಃ |

ಆರ್ಜುನಿಂ ಮಾಮಕಾಃ ಸಂಖ್ಯೇ ಕೇ ತತ್ರ ಸಮವಾರಯನ್ ॥ 1 ॥
ಧೃತರಾಷ್ಟ್ರ ಆ ರೀತಿಯಲ್ಲಿ ನೇರವಾಗಿ ಸಾಗುವ ಬಾಣಗಳಿಂದ ನನ್ನ ಸೈನ್ಯವನ್ನು ಮರ್ದಿಸುತ್ತಿದ್ದ ಮಹಾಧನುರ್ಧಾರಿಯಾದ ಅಭಿಮನ್ಯುವನ್ನು ನನ್ನವರು ಯಾರು ಯುದ್ಧದಲ್ಲಿ ತಡೆದರು?
ಸಂಜಯಃ
ಶೃಣು ರಾಜನ್ ಕುಮಾರಸ್ಯ ರಣೇ ವಿಕ್ರೀಡಿತಂ ಮಹತ್ |
ಬಿಭಿತ್ಸತೋ ರಥಾನೀಕಂ ಭಾರದ್ವಾಜೇನ ರಕ್ಷಿತಮ್ ॥ 2 ॥
ಸಂಜಯ ರಾಜನೇ, ದ್ರೋಣರಿಂದ ರಕ್ಷಿತವಾದ ರಥಸಮೂಹವನ್ನು ಭೇದಿಸಲು ಬಯಸಿದ ಕುಮಾರನಾದ ಅಭಿಮನ್ಯುವು ರಣರಂಗದಲ್ಲಿ ಮಾಡಿದ ದೊಡ್ಡ ಲೀಲೆಯನ್ನು ಕೇಳು.
ಮದ್ರೇಶಂ ಸಾದಿತಂ ದೃಷ್ಟ್ವಾ ಸೌಭದ್ರೇಣಾಶುಗೈಃ ಶರೈಃ |
ಶಲ್ಯಾದವರಜಃ ಕ್ರುದ್ಧಃ ಕಿರನ್ ಬಾಣಾನ್ ಸಮಭ್ಯಯಾತ್ ॥ 3 ॥
ಶಲ್ಯನು ಶೀಘ್ರಗಾಮಿಗಳಾದ ಬಾಣಗಳಿಂದ ಪೀಡಿಸಲ್ಪಟ್ಟಿದ್ದನ್ನು ನೋಡಿ ಕ್ರುದ್ಧನಾದ ಅವನ ತಮ್ಮನು ಬಾಣಗಳನ್ನು ಪ್ರಯೋಗಿಸುತ್ತಾ ಅಭಿಮನ್ಯುವನ್ನು ಸಮೀಪಿಸಿದನು.
ಆರ್ಜುನಿಂ ದಶಭಿರ್ವಿದ್ಧ್ವಾ ಸಾಶ್ವಯಂತಾರಮಾಶುಗೈಃ |
ಉದಕ್ರೋಶನ್ಮಹಾಶಬ್ದಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 4 ॥
ಅವನು ಅಶ್ವ-ಸಾರಥಿ ಸಹಿತನಾದ ಅಭಿಮನ್ಯುವನ್ನು ಶೀಘ್ರಗಾಮಿಗಳಾದ ಹತ್ತು ಬಾಣಗಳಿಂದ ಹೊಡೆದು ಮಹಾನಾದವನ್ನು ಮಾಡಿ `ನಿಲ್ಲು-ನಿಲ್ಲು' ಎಂದು ಹೇಳಿದನು.
ತಸ್ಯಾರ್ಜುನಿಃ ಶಿರೋಗ್ರೀವಂ ಪಾಣಿಪಾದಂ ಧನುರ್ಹಯಾನ್ |
ಛತ್ರಂ ಧ್ವಜಂ ನಿಯಂತಾರಂ ತ್ರಿವೇಣುಂ ಶಮ್ಯುಪಸ್ಕರಮ್ ॥ 5 ॥
ಚಕ್ರೇ ಯುಗೇಷಾಂ ತೂಣೀರಾನ್ ಅನುಕರ್ಷಂ ಚ ಸಾಯಕೈಃ |
ಪತಾಕಾಂ ಚಕ್ರಗೋಪ್ತಾರೌ ಸರ್ವೋಪಕರಣಾನಿ ಚ |
ವ್ಯಧಮಲ್ಲಾಘವಾತ್ ತಸ್ಯ ದದೃಶೇ ನಾತ್ರ ಕಶ್ಚನ ॥ 6 ॥
ಅಭಿಮನ್ಯುವು ಅವನ ಶಿರಸ್ಸು, ಕತ್ತು, ಪಾಣಿ-ಪಾದಗಳು, ಧನುಸ್ಸು, ಅಶ್ವಗಳು, ಛತ್ರ, ಧ್ವಜ, ಸಾರಥಿ, ರಥದ ತ್ರಿವೇಣು, ಕಡಗೂಟ ಮೊದಲಾದ ಉಪಕರಣಗಳು, ಚಕ್ರಗಳು, ನೊಗ, ಮೂಕಿ, ಬತ್ತಳಿಕೆಗಳು, ಸಣ್ಣನೊಗಗಳು, ಪತಾಕೆ, ಚಕ್ರರಕ್ಷಕರು, ಉಳಿದ ಉಪಕರಣಗಳು ಎಲ್ಲವನ್ನೂ ತನ್ನ ಬಾಣಗಳಿಂದ ನಾಶಗೊಳಿಸಿದನು. ಅವನ ಕ್ಷಿಪ್ರತನದಿಂದ ಅವನಲ್ಲಿ ಯಾರೂ ಕಾಣಲಿಲ್ಲ.
ಸ ಪಪಾತ ಕ್ಷಿತೌ ಕ್ಷೀಣಃ ಪ್ರವಿದ್ಧಾಭರಣಾಂಬರಃ |
ವಾಯುನೇವ ಮಹಾಚೈತ್ಯಃ ಸಮೂಲಶ್ಚೋರುವೇದಿಕಃ ॥ 7 ॥
ಶಲ್ಯನ ತಮ್ಮನು ತನ್ನ ವಸತ್ರಭರಣಗಳು ಅಸ್ತವ್ಯಸ್ತವಾಗಿ ಮೃತನಾಗಿ, ದೊಡ್ಡ ವೇದಿಕೆಯ ಮೇಲೆ ನಿಂತ ಮಹಾಪೂಜ್ಯ ವೃಕ್ಷವು ವಾಯುವಿನಿಂದ ಉರುಳುವಂತೆ ಭೂಮಿಯ ಮೇಲೆ ಬಿದ್ದನು.
ಅನುಗಾಶ್ಚಾಸ್ಯ ವಿತ್ರಸ್ತಾ ವಿದ್ರುತಾಃ ಸರ್ವತೋದಿಶಮ್ ॥ 8 ॥
ಅವನ ಅನುಯಾಯಿಗಳಾದರೋ ಹೆದರಿ ಎಲ್ಲ ದಿಕ್ಕುಗಳಲ್ಲಿಯೂ ಓಡಿ ಹೋದರು.
ತತ್ ತು ಕರ್ಮಾರ್ಜುನೇರ್ದೃಷ್ಟ್ವಾ ಪ್ರಣೇದುಃ ಸರ್ವತೋದಿಶಮ್ |
ನಾದೇನ ಸರ್ವಭೂತಾನಿ ಸಾಧು ಸಾಧ್ವಿತಿ ಭಾರತ ॥ 9 ॥
ಎಲೈ ಭಾರತನೇ, ಅಭಿಮನ್ಯುವಿನ ಆ ಕರ್ಮವನ್ನು ನೋಡಿ ಎಲ್ಲ ದಿಕ್ಕುಗಳಲ್ಲಿಯೂ ಎಲ್ಲ ಭೂತಗಳು `ಸಾಧು-ಸಾಧು' ಎಂದು ಹೇಳುತ್ತಾ ದೊಡ್ಡ ನಾದವನ್ನು ಮಾಡಿದವು.
ಶಲ್ಯಭ್ರಾತರ್ಯಥಾರುಗ್ಣೇ ಹತಾಶ್ವಾಸ್ತವ ಸೈನಿಕಾಃ |
ಕುಲಾಧಿವಾಸನಾಮಾನಿ ಶ್ರಾವಯಂತೋಽರ್ಜುನಾತ್ಮಜಮ್ ॥ 10 ॥
ಅಭ್ಯದ್ರವನ್ ಸುಸಂಕ್ರುದ್ಧಾ ವಿವಿಧಾಯುಧಪಾಣಯಃ |
ರಥೈರಶ್ವೈರ್ಗಜೈರನ್ಯೈಃ ಪಾದಾತಾಶ್ಚ ಮದೋತ್ಕಟಾಃ ॥ 11 ॥
ಶಲ್ಯನ ತಮ್ಮನು ಹಾಗೆ ಹಿಂಸಿಸಲ್ಪಡಲು ಅಶ್ವಗಳನ್ನು ಕಳೆದುಕೊಂಡ ನಿನ್ನ ಸೈನಿಕರು ತಮ್ಮ ಕುಲಗಳ ಮತ್ತು ಕುಲ ವಾಸಸ್ಥಾನದ ಹೆಸರನ್ನು ಹೇಳುತ್ತಾ ವಿವಿಧ ಆಯುಧಗಳನ್ನು ಹಸ್ತದಲ್ಲಿ ಹಿಡಿದು, ಬಹಳ ಕೋಪಗೊಂಡವರಾಗಿ, ರಥಗಳಿಂದಲೂ, ಅಶ್ವಗಳಿಂದಲೂ, ಗಜಗಳಿಂದಲೂ, ಬೇರೆ ವಾಹನಗಳಿಂದಲೂ ಅಭಿಮನ್ಯುವಿನ ಕಡೆಗೆ ಓಡಿದರು. ಮದೋತ್ಕಟರಾದ ಪದಾತಿಗಳೂ ಅಭಿಮನ್ಯುವಿನ ಕಡೆಗೆ ನುಗ್ಗಿದರು.
ಬಾಣಶಬ್ದೇನ ಮಹತಾ ಖುರನೇಮಿಸ್ವನೇನ ಚ |
ಹುಂಕಾರೈಃ ಕ್ಷ್ವೇಡಿತೋತ್ಕ್ರುಷ್ಟೈಃ ಸಿಂಹನಾದೈಃ ಸಗರ್ಜಿತೈಃ ॥ 12 ॥
ಜ್ಯಾತಳತ್ರಸ್ವನೈಶ್ಚೈವ ಗರ್ಜಂತೋಽರ್ಜುನನಂದನಮ್ |
ಬ್ರುವಾಣಾಶ್ಚ ನ ನೋ ಜೀವನ್ ಮೋಕ್ಷ್ಯಸೇ ಜೀವತಾಮಿತಿ ॥ 13 ॥
ದೊಡ್ಡ ಬಾಣಶಬ್ದಗಳಿಂದಲೂ, ಅಶ್ವಗಳ ಮತ್ತು ರಥಗಳ ಖುರ-ನೇಮಿ ಶಬ್ದಗಳಿಂದಲೂ, ಹುಂಕಾರಗಳಿಂದಲೂ, ಸಿಂಹನಾದಗಳಿಂದಲೂ, ಗರ್ಜನೆಗಳಿಂದಲೂ, ಉಚ್ಚಸ್ವರದ ಮಾತುಗಳಿಂದಲೂ, ಹೆದೆ ಮತ್ತು ಹಸ್ತರಕ್ಷಣೆಯ ಶಬ್ದಗಳಿಂದಲೂ ಕೂಡಿ ಅಭಿಮನ್ಯುವನ್ನು ಕುರಿತು ನಾವು ಜೀವಿಸಿರುವಾಗ ನೀನು ನಮ್ಮಿಂದ ಬಿಡುಗಡೆಯನ್ನು ಹೊಂದುವುದಿಲ್ಲ ಎಂದು ಹೇಳುತ್ತಾ (ಅವನ ಮೇಲೆ ನುಗ್ಗಿದರು).

ತಾಂಸ್ತಥಾ ಬ್ರುವತೋ ದೃಷ್ಟ್ವಾ ಸೌಭದ್ರಃ ಪ್ರಹಸನ್ನಿವ |
ಯೋ ಯೋಽಸೌ ಪ್ರಹರತ್ ಪೂರ್ವಂ ತಂ ತಂ ವಿವ್ಯಾಧ ಪತ್ರಿಭಿಃ ||
ಹಾಗೆ ಹೇಳುವವರನ್ನು ನೋಡಿ ನಗುತ್ತಾ, ಅಭಿಮನ್ಯುವು ಯಾರು ಯಾರು ಮೊದಲು ಬಾಣಗಳನ್ನು ಪ್ರಯೋಗಿಸಿದರೋ ಅವರವರನ್ನು ತನ್ನ ಬಾಣಗಳಿಂದ ಹೊಡೆದನು.
ಸಂದರ್ಶಯಿಷ್ಯನ್ನಸ್ತ್ರಾಣಿ ಚಿತ್ರಾಣಿ ಚ ಲಘೂನಿ ಚ |
ಆರ್ಜುನಿಃ ಸಮರೇ ಶೂರೋ ಮೃದುಪೂರ್ವಮಯುದ್ಧ್ಯತ || 15 ||
ತನ್ನ ಕ್ಷಿಪ್ರವಾದ ಮತ್ತು ವಿಚಿತ್ರವಾದ ಅಸ್ತ್ರಗಳನ್ನು ಪ್ರದರ್ಶಿಸುತ್ತಾ, ಶೂರನಾದ ಅಭಿಮನ್ಯುವು ಯುದ್ಧದಲ್ಲಿ ಮೊದಲು ಮೃದುವಾಗಿಯೇ ಯುದ್ಧವನ್ನು ಮಾಡಿದನು.
ವಾಸುದೇವಾದುಪಾದತ್ತಂ ಯದಸ್ತ್ರಂ ಯದ್ ಧನಂಜಯಾತ್ |
ಸರ್ವಂ ಸಂದರ್ಶಯತ್ ಕಾರ್ಷ್ಣಿಃ ಕೃಷ್ಣಾಭ್ಯಾಮವಿಶೇಷತಃ || 16 ||
ಕೃಷ್ಣನಿಂದ ಪಡೆದ ಮತ್ತು ಅರ್ಜುನನಿಂದ ಪಡೆದ ಎಲ್ಲ ಅಸ್ತ್ರಗಳನ್ನೂ ಅಭಿಮನ್ಯುವು ಕೃಷ್ಣಾರ್ಜುನರಿಗಿಂತ ಯಾವ ವ್ಯತ್ಯಾಸವೂ ಇಲ್ಲದಂತೆ ಪ್ರದರ್ಶಿಸಿದನು.
ದೂರಮಸ್ಯ ಗುರುಂ ಭಾರಂ ಸಾಧ್ವಸಂ ಚ ಪುನಃಪುನಃ |
ಸಂದಧದ್ ವಿಸೃಜಂಶ್ಚೇಷೂನ್ ನಿರ್ವಿಶೇಷಮದೃಶ್ಯತ || 17 ||
ಅವನ ದೊಡ್ಡ ಭಾರವನ್ನು ಮತ್ತು ಭಯವನ್ನು ದೂರ ಸರಿಸಿ, ಧನುಸ್ಸಿನಲ್ಲಿ ಬಾಣವನ್ನು ಹೂಡಿ ಪ್ರಯೋಗಿಸುತ್ತಾ, ಕೃಷ್ಣಾರ್ಜುನರಿಗೆ ಸಮಾನನಾಗಿ ಕಂಡುಬಂದನು.
ಚಾಪಮಂಡಲಮೇವಾಸ್ಯ ಸ್ಫುರದೇವ ಪ್ರಕಾಶತೇ |
ತಮೋ ಘ್ನತಃ ಸುದೀಪ್ತಸ್ಯ ಸವಿತುರ್ಮಂಡಲಂ ಯಥಾ || 18 ||
ಅವನ ಧನುಸ್ಸು ಯಾವಾಗಲೂ ಮಂಡಲಾಕಾರವಾಗಿ ಅಂಧಕಾರವನ್ನು ನಾಶಮಾಡುವ ಸುದೀಪ್ತವಾದ ಸವಿತೃಮಂಡಲದಂತೆ ಮಂಡಲಾಕಾರವಾಗಿ ಪ್ರಕಾಶಿಸುತ್ತಿದ್ದಿತು.
ಜ್ಯಾಶಬ್ದಃ ಶುಶ್ರುವೇ ತಸ್ಯ ತಳಶಬ್ದಶ್ಚ ಭಾರತ |
ಮಹಾಶನಿಮುಚಃ ಕಾಲೇ ಪಯೋದಸ್ಯೇವ ನಿಸ್ವನಃ|| 19 ||
ಎಲ್ಲೈ ಭಾರತನೇ, ಅವನ ಜ್ಯಾ ಶಬ್ದವೂ ಮತ್ತು ಹಸ್ತತಳ ಶಬ್ದವೂ ದೊಡ್ಡ ಸಿಡಿಲುಗಳನ್ನು ಉಂಟುಮಾಡುವ ಮೋಡಗಳ ಶಬ್ದದಂತೆ ಕೇಳಿಬರುತ್ತಿದ್ದಿತು.
ಹ್ರೀಮಾನಮರ್ಷೀ ಸೌಭದ್ರೋ ಮಾನಕೃತ್ ಪ್ರಿಯದರ್ಶನಃ |
ಸಮ್ಮಿಮಾನಯಿಷುರ್ವೀರಾನ್ ಇಷ್ವಾಸಾಂಶ್ಚಾಪ್ಯಯುದ್ಧ್ಯತ || 20 ||
ನಾಚಿಕೆಯುಳ್ಳವನೂ, ಕೋಪಶೀಲನೂ, ಪ್ರಿಯದರ್ಶನನೂ, ಇನ್ನೊಬ್ಬರಿಗೆ ಮರ್ಯಾದೆಯನ್ನು ಕೊಡುವವನೂ ಆದ ಅಭಿಮನ್ಯುವು ವೀರರಿಗೂ ಮತ್ತು ಅವರ ಧನುಸ್ಸುಗಳಿಗೂ ಮರ್ಯಾದೆಯನ್ನು ಕೊಡುತ್ತಾ ಯುದ್ಧವನ್ನು ಮಾಡಿದನು.
ಮೃದುರ್ಭೂತ್ವಾ ಮಹಾರಾಜ ದಾರುಣಃ ಸಮಪದ್ಯತ |
ವರ್ಷಾವ್ಯತೀತೋ ಭಗವಾನ್ ಶರದೀವ ದಿವಾಕರಃ || 21 ||
ಮಹಾರಾಜನೇ, ಅವನು ಮೊದಲು ಮೃದುವಾಗಿ ಆರಂಭಿಸಿ, ಕ್ರಮವಾಗಿ ಮಳೆಗಾಲವನ್ನು ದಾಟಿದ ಪೂಜ್ಯನಾದ ಸೂರ್ಯನು ಶರತ್ಕಾಲದಲ್ಲಿ ದಾರುಣನಾಗುವಂತೆ ದಾರುಣನಾದನು.
ಶರಾನ್ ವಿಪಾಠಾನ್ ವಿಶಿಖಾನ್ ಸ್ವರ್ಣಪುಂಖಾನ್ ಶಿಲಾಶಿತಾನ್ |
ಸಹಸ್ರಶೋಽಮುಚತ್ ಕ್ರುದ್ಧೋ ಗಭಸ್ತೀನಿವ ಭಾಸ್ಕರಃ || 22 ||
ಅವನು ಕ್ರುದ್ಧನಾಗಿ ಸೂರ್ಯನು ಕಿರಣಗಳನ್ನು ಚೆಲ್ಲುವಂತೆ ಬಾಣಗಳನ್ನೂ, ಸ್ವರ್ಣಪುಂಖಗಳನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ವಿಶಿಖಗಳನ್ನೂ ಸಹಸ್ರ ಸಂಖ್ಯೆಯಲ್ಲಿ ಪ್ರಯೋಗಿಸಿದನು.
ಕ್ಷುರಪ್ರೈರ್ವತ್ಸದಂತೈಶ್ಚ ವಿಪಾಠೈಶ್ಚ ಮಹಾಯಶಾಃ |
ನಾರಾಚೈರರ್ಧನಾರಾಚೈರ್ಭಲ್ಲೈರಂಜಲಿಕೈರಪಿ |
ಅವಾಕಿರದ್ ರಥಾನೀಕಂ ಭಾರದ್ವಾಜಸ್ಯ ಪಶ್ಯತಃ || 23 ||
ಮಹಾಕೀರ್ತಿವಂತನಾದ ಅವನು ದ್ರೋಣರು ನೋಡುತ್ತಿರುವಂತೆಯೇ ಅವರ ರಥಸಮೂಹಗಳ ಮೇಲೆ ಕ್ಷುರಪ್ರಗಳ, ವತ್ಸದಂತಗಳ, ವಿಪಾಠಗಳ, ನಾರಾಚಗಳ, ಅರ್ಧನಾರಾಚಗಳ, ಭಲ್ಲಗಳ, ಅಂಜಲಿಗಳ ಮಳೆಯನ್ನು ಸುರಿಸಿದನು.
ತತ್ ಸೈನ್ಯಮಭವತ್ ಸರ್ವಂ ವಿಮುಖಂ ಶರಪೀಡಿತಮ್ || 24 |||
ಬಾಣ ಪೀಡಿತವಾದ ಆ ಸೈನ್ಯವೆಲ್ಲವೂ ಯುದ್ಧವಿಮುಖವಾಯಿತು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಸಪ್ತತ್ರಿಂಶೋಽಧ್ಯಾಯಃ ||
|| ಅಭಿಮನ್ಯುವಧಪರ್ವಣಿ ಷಷ್ಠೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆಂಟನೆಯ ಅಧ್ಯಾಯ
ಅಭಿಮನ್ಯು-ದುಶ್ಶಾಸನರ ಸಮಾಗಮ.

ಧೃತರಾಷ್ಟ್ರಃ
ದ್ವೈಧೀಭವತಿ ಮೇ ಚಿತ್ತಂ ಹ್ರಿಯಾ ತುಷ್ಟ್ಯಾ ಚ ಸಂಜಯ |
ಯತ್ ಸೈನ್ಯಂ ಮಮ ಪುತ್ರಸ್ಯ ಸೌಭದ್ರಃ ಪ್ರತ್ಯವಾರಯತ್ ॥ 1 ॥
ಧೃತರಾಷ್ಟ್ರ ಎಲ್ಲೈ ಸಂಜಯನೇ, ನನ್ನ ಪುತ್ರನ ಸೈನ್ಯವು ಅಭಿಮನ್ಯುವಿನಿಂದ ನಿವಾರಿಸಲ್ಪಟ್ಟುದನ್ನು ಕೇಳಿ ನನ್ನ ಮನಸ್ಸು ನಾಚಿಕೆಯಿಂದಲೂ ಮತ್ತು ಸಂತೋಷದಿಂದಲೂ ಎರಡು ಭಾಗವಾಗುತ್ತಿದೆ.
ವಿಸ್ತರೇಣೈವ ಮೇ ಶಂಸ ಸರ್ವಂ ಗಾವಲ್ಗಣೇ ಕಥಮ್ |
ವಿಕ್ರೀಡಿತಂ ಕುಮಾರಸ್ಯ ಸ್ಕಂದಸ್ಯೇವಾಸುರೈಃ ಸಹ ॥ 2 ॥
ಎಲ್ಲೈ ಗಾವಲ್ಗಣಿಯೇ, ಷಣ್ಮುಖನು ಅಸುರರ ಜೊತೆಯಲ್ಲಿ ಕ್ರೀಡಿಸಿದಂತೆ ಕುಮಾರನಾದ ಅಭಿಮನ್ಯುವು ಯುದ್ಧದಲ್ಲಿ ಹೀಗೆ ಕ್ರೀಡಿಸಿದನೆಂದು ಎಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.
ಸಂಜಯಃ
ಹಂತ ತೇ ಸಂಪ್ರವಕ್ಷ್ಯಾಮಿ ವಿಮರ್ದಮತಿದಾರುಣಮ್ |
ಏಕಸ್ಯ ಚ ಬಹೂನಾಂ ಚ ರಣೇ ಚಿಕ್ರೀಡಿತಂ ಮಹತ್ ॥ 3 ॥
ಸಂಜಯ ಸಂತೋಷ. ಒಬ್ಬನಿಗೂ ಮತ್ತು ಅನೇಕರಿಗೂ ನಡೆದ ಅತಿ ದಾರುಣವಾದ ಮತ್ತು ದೊಡ್ಡದಾದ ಯುದ್ಧದಲ್ಲಿ ಅಭಿಮನ್ಯುವು ಹೇಗೆ ಕ್ರೀಡಿಸಿದನೆಂದು ನಿನಗೆ ಹೇಳುವೆನು.
ಅಭಿಮನ್ಯುಃ ಕೃತೋತ್ಸಾಹಃ ಕೃತೋತ್ಸಾಹಾನರಿಂದಮಾನ್ |
ರಥಸ್ಥೋ ರಥಿನಃ ಸರ್ವಾಂಸ್ತಾವಕಾನಭ್ಯಧಾವತ ॥ 4 ॥
ಉತ್ಸಾಹಯುಕ್ತನಾದ, ರಥಸ್ಥನಾದ ಅಭಿಮನ್ಯುವು ಉತ್ಸಾಹಯುಕ್ತರಾದ, ಶತ್ರುಗಳಾದ ನಿನ್ನವರಾದ ಎಲ್ಲಾ ರಥಿಕರನ್ನು ಉದ್ದೇಶಿಸಿ ಧಾವಿಸಿದನು.
ದ್ರೋಣಂ ಕರ್ಣಂ ಕೃಪಂ ಶಲ್ಯಂ ದ್ರೌಣಿಂ ಭೋಜಂ ಬೃಹದ್ಬಲಮ್ |
ದುರ್ಯೋಧನಂ ಸೌಮದತ್ತಿಂ ಶಕುನಿಂ ಸುಬಲಾತ್ಮಜಮ್ ॥ 5 ॥
ನಾನಾನೃಪಾನ್ ನೃಪಸುತಾನ್ ಸೈನ್ಯಾನಿ ವಿವಿಧಾನಿ ಚ |
ಅಲಾತಚಕ್ರವತ್ ಸರ್ವಾಂಶ್ಚರನ್ ಬಾಣೈರವಾಕಿರತ್ ॥ 6 ॥
ದ್ರೋಣರು, ಕರ್ಣ, ಕೃಪರು, ಶಲ್ಯ, ಅಶ್ವತ್ಥಾಮರು, ಕೃತವರ್ಮ, ಬೃಹದ್ಬಲ, ದುರ್ಯೋಧನ, ಭೂರಿಶ್ರವ, ಸುಬಲಪುತ್ರನಾದ ಶಕುನಿ, ನಾನಾ ರಾಜರು, ರಾಜಕುಮಾರರು, ವಿವಿಧ ಸೈನ್ಯಗಳು ಎಲ್ಲರನ್ನೂ ಅಲಾತಚಕ್ರದಂತೆ ತಿರುಗುತ್ತಾ ಬಾಣಗಳಿಂದ ಹೊಡೆದನು.
ನಿಘ್ನನ್ನಮಿತ್ರಾನ್ ಸೌಭದ್ರಃ ಪರಮಾಸ್ತ್ರಃ ಪ್ರತಾಪವಾನ್ |
ಪ್ರತ್ಯದೃಶ್ಯತ ತೇಜಸ್ವೀ ದಿಕ್ಷು ಸರ್ವಾಸು ಭಾರತ ॥ 7 ॥
ಪ್ರತಾಪಶಾಲಿಯೂ, ಪರಮಾಸ್ತ್ರಗಳನ್ನು ಹೊಂದಿದವನೂ, ತೇಜಸ್ವಿಯೂ ಆದ ಅಭಿಮನ್ಯುವು ಎಲ್ಲೈ ಭಾರತನೇ, ಶತ್ರುಗಳನ್ನು ಕೊಲ್ಲುತ್ತಾ ಸರ್ವದಿಕ್ಕುಗಳಲ್ಲಿಯೂ ಕಾಣಿಸಿದನು.
ತದ್ ದೃಷ್ಟ್ವಾ ಚರಿತಂ ತಸ್ಯ ಸೌಭದ್ರಸ್ಯಾಮಿತೌಜಸಃ |
ಸಮಕಂಪಂತ ಸೈನ್ಯಾನಿ ತ್ವದೀಯಾನಾಂ ಪುನಃಪುನಃ ॥ 8 ॥
ಅಮಿತಪರಾಕ್ರಮಿಯಾದ ಅಭಿಮನ್ಯುವಿನ ಆ ಕರ್ಮವನ್ನು ನೋಡಿ ನಿನ್ನವರ ಸೈನ್ಯಗಳೆಲ್ಲವೂ ಪುನಃ ಪುನಃ ನಡುಗಿದವು.
ಅಥಾಬ್ರವೀನ್ಮಹಾಪ್ರಾಜ್ಞೋ ಭಾರದ್ವಾಜೋ ಪ್ರತಾಪವಾನ್ |
ಹರ್ಷೇಣೋತ್ಫುಲ್ಲನಯನಃ ಕೃಪಮಾಭಾಷ್ಯ ಸಸ್ಮಿತಮ್ ॥ 9 ॥
ಘಟ್ಟಯನ್ನಿವ ಮರ್ಮಾಣಿ ಪುತ್ರಸ್ಯ ತವ ಭಾರತ |
ಅಭಿಮನ್ಯುಂ ತದಾ ದೃಷ್ಟ್ವಾ ರಣೇ ವೀರಂ ಕೃತವ್ರತಮ್ ॥ 10 ॥
ಆಗ ಮಹಾಪ್ರಾಜ್ಞರೂ, ಪ್ರತಾಪಶಾಲಿಗಳೂ ಆದ ದ್ರೋಣರು ಸಂತೋಷದಿಂದ ಅರಳಿದ ಕಣ್ಣುಳ್ಳವರಾಗಿ ಎಲ್ಲೈ ಭಾರತನೇ, ನಿನ್ನ ಪುತ್ರನ ಮರ್ಮಸ್ಥಾನಗಳನ್ನು ಕುಟ್ಟುವವರಂತೆ ವೀರನೂ, ದೃಢವ್ರತನೂ ಆದ ಅಭಿಮನ್ಯುವನ್ನು ನೋಡಿ ಕೃಪರನ್ನು ಕುರಿತು ಮಂದಹಾಸ ಪೂರ್ವಕವಾಗಿ ಮಾತನಾಡಿದರು.
ಏಷ ಗಚ್ಛತಿ ಸೌಭದ್ರಃ ಪಾರ್ಥಾನಾಮಗ್ರತೋ ಯುವಾ |
ನಂದಯನ್ ಸುಹೃದಃ ಸರ್ವಾನ್ ರಾಜಾನಂ ಚ ಯುಧಿಷ್ಠಿರಮ್ ॥
ನಕುಲಂ ಸಹದೇವಂ ಚ ಭೀಮಸೇನಂ ಚ ಪಾಂಡವಮ್ |
ಸಂಬಂಧಿಬಾಂಧವಾಂಶ್ಚಾನ್ಯಾನ್ ಮಧ್ಯಸ್ಥಾನ್ ಸುಹೃದಸ್ತಥಾ ॥12॥
ಈ ಯುವಕನಾದ ಅಭಿಮನ್ಯುವು ಪಾರ್ಥರ ಮುಂಭಾಗದಲ್ಲಿ ಎಲ್ಲ ಸುಹೃದರನ್ನೂ, ರಾಜನಾದ ಯುಧಿಷ್ಠಿರನನ್ನೂ, ನಕುಲ-ಸಹದೇವರನ್ನೂ, ಪಾಂಡುಪುತ್ರನಾದ ಭೀಮಸೇನನನ್ನೂ, ಉಳಿದ ಸಂಬಂಧಿ ಬಾಂಧವರನ್ನೂ, ಮಧ್ಯಸ್ಥರನ್ನೂ ಸಂತೋಷಪಡಿಸುತ್ತಾ ಹೋಗುತ್ತಿದ್ದಾನೆ.
ನಾಸ್ಯ ಯುದ್ಧೇ ಸಮಂ ಮನ್ಯೇ ಕಂಚಿದನ್ಯಂ ಧನುರ್ಧರಮ್ |
ಇಚ್ಛನ್ ಹನ್ಯಾದಿಮಾಂ ಸೇನಾಂ ಕಿಮರ್ಥಮಿಹ ನೇಚ್ಛತಿ ॥ 13 ॥
ಇವನಿಗೆ ಯುದ್ಧದಲ್ಲಿ ಸಮಾನನಾದ ಇನ್ನೊಬ್ಬ ಧನುರ್ಧರನು ಇಲ್ಲವೆಂದು ಭಾವಿಸುತ್ತೇನೆ. ಇವನು ಬಯಸಿದರೆ ಈ ಸೈನ್ಯವನ್ನೇ ಕೊಂದಾನು. ಆದರೆ ಏಕೆ ಹಾಗೆ ಬಯಸುತ್ತಿಲ್ಲ?
ಸಂಜಯಃ

ದ್ರೋಣಸ್ಯಾಪ್ರಿಯಸಂಯುಕ್ತಂ ಶ್ರುತ್ವಾ ವಾಕ್ಯಂ ತವಾತ್ಮಜಃ |
ಆರ್ಜುನಿಂ ಪ್ರತಿ ಸಂಕ್ರುದ್ಧೋ ದ್ರೋಣಂ ದೃಷ್ಟ್ವಾ ಸ್ಮಯನ್ನಿವ ॥ 14 ॥
ತತೋ ದುರ್ಯೋಧನಃ ಕರ್ಣಮಬ್ರವೀದ್ ಬಾಹ್ಲಿಕಂ ನೃಪಮ್ |
ದುಃಶಾಸನಂ ಮದ್ರರಾಜಂ ತಾಂಸ್ತಾಂಶ್ಚಾನ್ಯಾನ್ ಮಹಾರಥಾನ್ ॥
ಸಂಜಯ ನಿನ್ನ ಪುತ್ರನಾದ ದುರ್ಯೋಧನನು ತನಗೆ ಅಪ್ರಿಯವಾದ ದ್ರೋಣರ ಮಾತುಗಳನ್ನು ಕೇಳಿ ಬಹಳ ಕೋಪಗೊಂಡು ದ್ರೋಣರನ್ನು ನೋಡುತ್ತಾ ನಗುವವನಂತೆ ಕರ್ಣ, ಬಾಹ್ಲಿಕರಾಜ, ದುಶ್ಶಾಸನ, ಶಲ್ಯ ಮತ್ತು ಉಳಿದ ಮಹಾರಥರನ್ನು ಕುರಿತು ಮಾತನಾಡಿದನು.
ದುರ್ಯೋಧನಃ
ಸರ್ವಮೂರ್ಧಾವಸಿಕ್ತಾನಾಮಾಚಾರ್ಯೋ ಬ್ರಹ್ಮವಿತ್ತಮಃ |
ಅರ್ಜುನಸ್ಯ ಸುತಂ ಮೂಢಂ ನ ಹಿನಸ್ತಿ ನ ಚೇಚ್ಛತಿ ॥ 16 ॥
ದುರ್ಯೋಧನ ಎಲ್ಲ ಪಟ್ಟಾಭಿಷಿಕ್ತ ರಾಜರುಗಳಿಗೂ ಆಚಾರ್ಯರಾದ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ದ್ರೋಣರು ಮೂಢನಾದ ಅರ್ಜುನನ ಸುತನನ್ನು ಕೊಲ್ಲುವುದಿಲ್ಲ ಮತ್ತು ಕೊಲ್ಲಲು ಬಯಸುವುದಿಲ್ಲ.
ನ ಹ್ಯಸ್ಯ ಸಮರೇ ಮುಚ್ಯೇದಂತಕೋಽಪ್ಯಾತತಾಯಿನಃ |
ಕಿಮಂಗ ಪುನರೇವಾನ್ಯೋ ಮರ್ತ್ಯಃ ಸತ್ಯಂ ಬ್ರವೀಮಿ ವಃ ॥ 17 ॥
ಶಸ್ತ್ರಧಾರಿಗಳಾದ ದ್ರೋಣರ ಮುಂದೆ ಯಮನೂ ಕೂಡ ತಪ್ಪಿಸಿಕೊಳ್ಳಲಾರ. ಪ್ರೀತಿಪಾತ್ರನೇ, ಇನ್ನು ಮರಣಶೀಲನಾದ ಇನ್ನೊಬ್ಬನು ಹೇಗೆ ತಪ್ಪಿಸಿಕೊಂಡಾನು? ನಿಮಗೆ ನಾನು ಸತ್ಯವನ್ನು ಹೇಳುತ್ತಿದ್ದೇನೆ.
ಅರ್ಜುನಸ್ಯ ಸುತಂ ಹ್ಯೇಷ ಶಿಷ್ಯತ್ವಾದಭಿರಕ್ಷತಿ |
ಪುತ್ರಾಃ ಶಿಷ್ಯಾಶ್ಚ ದಯಿತಾಸ್ತದಪತ್ಯಂ ಚ ಧರ್ಮಿಣಾಮ್ ॥ 18 ॥
ಅರ್ಜುನನು ಶಿಷ್ಯನಾದುದರಿಂದ ಆಚಾರ್ಯರು ಇವನನ್ನು ರಕ್ಷಿಸುತ್ತಿದ್ದಾರೆ. ಧರ್ಮಶೀಲರಾದವರಿಗೆ ಪುತ್ರರೂ, ಶಿಷ್ಯರೂ ಮತ್ತು ಶಿಷ್ಯರ ಪುತ್ರರೂ ಪ್ರೀತಿಪಾತ್ರರಾದವರು.
ಸಂರಕ್ಷ್ಯಮಾಣೋ ದ್ರೋಣೇನ ಮನ್ಯತೇ ವೀರ್ಯಮಾತ್ಮನಃ |
ಆತ್ಮಸಂಭಾವಿತಂ ಮೂಢಂ ಸಂಪ್ರಮಥ್ನೀತ ಮಾಚಿರಮ್ ॥ 19 ॥
ಇವನು ದ್ರೋಣರಿಂದ ಸಂರಕ್ಷಿತನಾಗಿ ತನ್ನನ್ನು ಪರಾಕ್ರಮಿ ಎಂದು ಭಾವಿಸಿದ್ದಾನೆ. ಆತ್ಮಸಂಭಾವಿತನಾದ ಈ ಮೂಢನನ್ನು ಶೀಘ್ರವಾಗಿ ಮರ್ದಿಸಿ (ಎಂದು ಹೇಳಿದನು).
ಸಂಜಯಃ
ಏವಮುಕ್ತಾಸ್ತು ರಾಜಾನಃ ಸಾತ್ವತೀಪುತ್ರಮಭ್ಯಯುಃ |
ಸಂರಬ್ಧಾಸ್ತಂ ಜಿಘಾಂಸಂತೋ ಭಾರದ್ವಾಜಸ್ಯ ಪಶ್ಯತಃ ॥ 20 ॥
ಸಂಜಯ ಹೀಗೆ ಹೇಳಲ್ಪಟ್ಟ ರಾಜರು ಕೋಪಗೊಂಡು ಆ ಅಭಿಮನ್ಯುವನ್ನು ಕೊಲ್ಲಲು ಬಯಸಿ ದ್ರೋಣರು ನೋಡುತ್ತಿರುವಂತೆಯೇ ಅವನ ಕಡೆಗೆ ಧಾವಿಸಿದರು.
ದುಃಶಾಸನಸ್ತು ಸಂರಬ್ಧಂ ಜ್ಞಾತ್ವಾ ಭ್ರಾತರಮಗ್ರಜಮ್ |
ತಾನ್ ನಿವರ್ತ್ಯ ರಥೋದಾರಾನಥ ಭ್ರಾತರಮಬ್ರವೀತ್ ॥ 21 ॥
ಅಹಮೇನಂ ಹನಿಷ್ಯಾಮಿ ರಾಜನ್ ಸತ್ಯಂ ಬ್ರವೀಮಿ ತೇ |
ಮಿಷತಾಂ ಪಾಂಡವೇಯಾನಾಂ ಪಾಂಚಾಲಾನಾಂ ಚ ಪಶ್ಯತಾಮ್ |
ಗ್ರಸಿಷ್ಯಾಮ್ಯದ್ಯ ಸೌಭದ್ರಂ ಸ್ವರ್ಭಾನುರಿವ ಭಾಸ್ಕರಮ್ ॥ 22 ॥
ದುಶ್ಶಾಸನನಾದರೋ ತನ್ನ ಅಣ್ಣನು ಕೋಪಗೊಂಡಿರುವುದನ್ನು ತಿಳಿದು ಆ ರಥಶ್ರೇಷ್ಠರಾದ ರಾಜರನ್ನು ನಿವಾರಿಸಿ, ಸಹೋದರನನ್ನು ಕುರಿತು- ರಾಜನೇ, ನಾನು ಇವನನ್ನು ಕೊಲ್ಲುವೆನು. ನಿನಗೆ ಸತ್ಯವನ್ನು ಹೇಳುತ್ತಿದ್ದೇನೆ. ಪಾಂಡವರು ಮತ್ತು ಪಾಂಚಾಲರು ನೋಡುತ್ತಿರುವಂತೆಯೇ ರಾಹುವು ಸೂರ್ಯನನ್ನು ನುಂಗಿದಂತೆ ಈ ದಿನ ನಾನು ಅಭಿಮನ್ಯುವನ್ನು ನುಂಗುವೆನು ಎಂದು ಹೇಳಿದನು.
ಸಂಜಯಃ
ಉತ್ಕ್ರುಶ್ಯ ಚಾಬ್ರವೀದ್ ರಾಜನ್ ಕುರುರಾಜಮಿದಂ ವಚಃ ॥ 23 ॥
ಶ್ರುತ್ವಾ ಕೃಷ್ಣೌ ಮಯಾ ಗ್ರಸ್ತಂ ಸೌಭದ್ರಮತಿಮಾನಿನೌ |
ಗಮಿಷ್ಯತಃ ಪ್ರೇತಲೋಕಂ ಜೀವಲೋಕಾನ್ನ ಸಂಶಯಃ ॥ 24 ॥
ಸಂಜಯ ಎಲೈ ರಾಜನೇ, ಗಟ್ಟಿಯಾದ ಸ್ವರದಲ್ಲಿ ಕುರುರಾಜನಾದ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದನು- ಅತಿಮಾನಿಗಳಾದ ಕೃಷ್ಣಾರ್ಜುನರು ನನ್ನಿಂದ ಅಭಿಮನ್ಯುವು ಹತನಾದುದನ್ನು ಕೇಳಿ ಜೀವಲೋಕವನ್ನು ತೊರೆದು ಪ್ರೇತಲೋಕಕ್ಕೆ ಹೋಗುವರು. ಇದರಲ್ಲಿ ಸಂಶಯವಿಲ್ಲ.
ತೌ ಶ್ರುತ್ವಾ ತು ಮೃತೌ ವ್ಯಕ್ತಂ ಪಾಂಡೋಃ ಕ್ಷೇತ್ರೋದ್ಭವಾಃ ಸುತಾಃ |
ಸುಹೃದ್ಗಣಾಸ್ತದೇಕಾಗ್ರಾಃ ಕ್ಲೈಬ್ಯಾತ್ ತ್ಯಕ್ಷ್ಯಂತಿ ಜೀವಿತಮ್ ॥25॥
ಅವರು ಮೃತರಾದುದನ್ನು ಕೇಳಿ ಪಾಂಡುವಿನ ಪತ್ನಿಯಲ್ಲಿ ಜನಿಸಿದ ಪುತ್ರರೂ, ಸುಹೃದ್ಗಣಗಳೂ, ಅವರಲ್ಲೇ ನಿಶ್ಚಯವುಳ್ಳವರೂ ಹೆದರಿಕೆಯಿಂದ ಖಂಡಿತವಾಗಿ ಪ್ರಾಣಗಳನ್ನು ಬಿಡುವರು.
ತಸ್ಮಾದಸ್ಮಿನ್ ಹತೇ ಶತ್ರೌ ಹತಾಃ ಸರ್ವೇಽಹಿತಾಸ್ತವ |
ಶಿವೇನ ಧ್ಯಾಹಿ ಮಾಂ ರಾಜನ್ನೇಷ ಹನ್ಮಿ ರಿಪುಂ ತವ ॥ 26 ॥

ಆದ್ದರಿಂದ ಶತ್ರುವಾದ ಇವನು ಹತನಾದರೆ ನಿನ್ನ ಶತ್ರುಗಳೆಲ್ಲರೂ ಹತರಾದಂತೆಯೇ. ನನಗೆ ಶುಭವನ್ನು ಹಾರೈಸು. ರಾಜನೇ, ಈ ನಾನು ನಿನ್ನ ಶತ್ರುವನ್ನು ಕೊಲ್ಲುತ್ತೇನೆ (ಎಂದು ಹೇಳಿದನು).
ಸಂಜಯಃ
ಏವಮುಕತ್ವ ತತೋ ರಾಜನ್ ಪುತ್ರೋ ದುಃಶಾಸನಸ್ತವ |
ಸೌಭದ್ರಮಭ್ಯಯಾತ್ ಕ್ರುದ್ಧಃ ಶರವರ್ಷೈರವಾಕಿರತ್ ॥ 27 ॥
ಸಂಜಯ ಎಲೈ ರಾಜನೇ, ನಿನ್ನ ಪುತ್ರನಾದ ದುಶ್ಶಾಸನನು ಹೀಗೆ ಹೇಳಿ ಕೋಪಗೊಂಡು ಅಭಿಮನ್ಯುವನ್ನು ಕುರಿತು ಧಾವಿಸಿ ಅವನ ಮೇಲೆ ಬಾಣಗಳ ಮಳೆಯನ್ನು ಕರೆದನು.
ತಮಭಿಕ್ರುದ್ಧಮಾಯಾಂತಂ ತವ ಪುತ್ರಮರಿಂದಮಮ್ |
ಅಭಿಮನ್ಯುಃ ಶರೈಸ್ತೀಕ್ಷ್ಣೈ ಣ್ಯಃ ಷಡ್ವಿಂಶತ್ಯಾ ಸಮರ್ಪಯತ್ ॥ 28 ॥
ಬಹಳ ಕೋಪಗೊಂಡು ತನ್ನ ಕಡೆಗೆ ಬರುತ್ತಿದ್ದ ಅರಿಂದಮನಾದ ನಿನ್ನ ಪುತ್ರನನ್ನು ನೋಡಿ ಅಭಿಮನ್ಯುವು ಇಪ್ಪತ್ತಾರು ತೀಕ್ಷ್ಣವಾದ ಬಾಣಗಳಿಂದ ಅವನನ್ನು ಹೊಡೆದನು.
ದುಃಶಾಸನಸ್ತು ಸಂಕ್ರುದ್ಧಃ ಪ್ರಭಿನ್ನ ಇವ ಕುಂಜರಃ |
ಆಯೋಧಯತ ಚ ಸೌಭದ್ರಮಭಿಮನ್ಯುಶ್ಚ ತಂ ರಣೇ ॥ 29 ॥
ಕೋಪಗೊಂಡ ದುಶ್ಶಾಸನನು ಮದಿಸಿದ ಗಜದಂತೆ ಅಭಿಮನ್ಯುವಿನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಅಭಿಮನ್ಯುವೂ ಸಹ ರಣರಂಗದಲ್ಲಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತೌ ಮಂಡಲಾನಿ ಚಿತ್ರಾಣಿ ರಥಾಭ್ಯಾಂ ಸವ್ಯದಕ್ಷಿಣಮ್ |
ಚರಮಾಣಾವಯುದ್ಯೇತಾಂ ರಥಶಿಕ್ಷಾವಿಶಾರದೌ ॥ 30 ॥
ಅಥ ಪಣವಮೃದಂಗದುಂದುಭೀನಾಂ
ಕೃಕಚಮಹಾನಕಭೇರಿಝರ್ಝರೀಣಾಮ್ |
ನಿನದಮತಿಭೃಶಂ ನರಾಃ ಪ್ರಚಕ್ರುಃ
ಲವಣಜಲೋದ್ಭವಸಿಂಹನಾದಮಿಶ್ರಮ್ ॥ 31 ॥
ರಥಶಿಕ್ಷಾ ವಿಶಾರದರಾದ ಅವರಿಬ್ಬರೂ ತಮ್ಮ ರಥಗಳಿಂದ ವಿಚಿತ್ರವಾದ, ಸವ್ಯದಕ್ಷಿಣ ಮಾರ್ಗದಲ್ಲಿ ಸಂಚರಿಸುತ್ತಾ ಯುದ್ಧವನ್ನು ಮಾಡಿದರು. ಆಗ ಜನರು ಶಂಖಧ್ವನಿ ಮತ್ತು ಸಿಂಹನಾದಗಳಿಂದ ಮಿಶ್ರಿತವಾದ, ಪಣವ-ಮೃದಂಗ- ದುಂದುಭಿಗಳ, ಕೃಕಚ-ಮಹಾನಕ-ಭೇರಿ-ಝರ್ಝರಿಗಳ ಮಹಾನಾದವನ್ನು ತೀವ್ರವಾಗಿ ಮಾಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಮುವತ್ತೊಂಬತ್ತನೆಯ ಅಧ್ಯಾಯ
ಅಭಿಮನ್ಯುವಿನಿಂದ ಕರ್ಣ-ದುಶ್ಶಾಸನರ ಪರಾಜಯ
ಸಂಜಯಃ
ತತಃ ಸಮಭವದ್ ಯುದ್ಧಂ ತಯೋಃ ಪುರುಷಸಿಂಹಯೋಃ |
ತಸ್ಮಿನ್ ಕಾಲೇ ಮಹಾಬಾಹುಃ ಸೌಭದ್ರಃ ಪರವೀರಹಾ ॥ 1 ॥
ಸಶರಂ ಕಾರ್ಮುಕಂ ಛಿತತ್ವ ಲಾಘವೇನ ನ್ಯಪಾತಯತ್ |
ದುಃಶಾಸನಂ ಶರೈರ್ಘೋರೈಃ ಸಂತತಕ್ಷ ಸಮಂತತಃ ॥ 2 ॥
ಸಂಜಯ ಅನಂತರ ಆ ಪುರುಷಸಿಂಹರಿಗೆ ಯುದ್ಧವು ನಡೆಯಿತು. ಆ ಕಾಲದಲ್ಲಿ ಪರವೀರಘಾತಕನಾದ, ಮಹಾಬಾಹುವಾದ ಅಭಿಮನ್ಯುವು ದುಶ್ಶಾಸನನ ಬಾಣ ಸಹಿತವಾದ ಧನುಸ್ಸನ್ನು ಕತ್ತರಿಸಿ ಕ್ಷಿಪ್ರವಾಗಿ ಕೆಳಗೆ ಉರುಳಿಸಿ ದುಶ್ಶಾಸನನನ್ನು ಘೋರವಾದ ಬಾಣಗಳಿಂದ ಎಲ್ಲ ಕಡೆಗಳಲ್ಲಿಯೂ ಹಿಂಸಿಸಿದನು.
ಶರವಿಕ್ಷತಗಾತ್ರಂ ತು ಪ್ರತ್ಯಮಿತ್ರಮವಸ್ಥಿತಮ್ |
ಅಭಿಮನ್ಯುರ್ಮಹಾರಾಜ ದುಃಶಾಸನಮಥಾಬ್ರವೀತ್ ॥ 3 ॥
ಬಾಣಗಳಿಂದ ಗಾಯಗೊಂಡ ಶರೀರವುಳ್ಳವನಾಗಿ ಎದುರಿಗೆ ನಿಂತಿದ್ದ ಶತ್ರುವಾದ ದುಶ್ಶಾಸನನನ್ನು ಕುರಿತು ಅಭಿಮನ್ಯುವು ಮಾತನಾಡಿದನು.
ದಿಷ್ಟ್ಯಾ ಪಶ್ಯಾಮಿ ಸಂಗ್ರಾಮೇ ಮಾನಿನಂ ಶತ್ರುಮಾಗತಮ್ |
ನಿಷ್ಠುರಂ ತ್ಯಕ್ತಧರ್ಮಾಣಮಾಕ್ರೋಶನಪರಾಯಣಮ್ ॥ 4 ॥
ಅಹಂಕಾರಿಯೂ, ನಿಷ್ಠುರಿಯೂ, ಧರ್ಮವನ್ನು ತ್ಯಜಿಸಿದವನೂ, ಆಕ್ರೋಶವನ್ನು ಮಾಡುವುದರಲ್ಲಿ ಶೂರನೂ ಆದ, ಶತ್ರುವಾದ ನಿನ್ನನ್ನು ದೇವರ ದಯೆಯಿಂದ ಯುದ್ಧದಲ್ಲಿ ನೋಡುತ್ತಿದ್ದೇನೆ.
ಯತ್ ಸಭಾಯಾಂ ತ್ವಯಾ ರಾಜ್ಞೋ ಧೃತರಾಷ್ಟ್ರಸ್ಯ ಶೃಣ್ವತಃ |
ಕೋಪಿತಃ ಪರುಷೈರ್ವಾಕ್ಯೈರ್ಧರ್ಮರಾಜೋ ಯುಧಿಷ್ಠಿರಃ ॥ 5 ॥

ಜಯೋನ್ಮಾದೇನ ಭೀಮಶ್ಚ ಬಹ್ವಬದ್ಧಂ ಪ್ರಭಾಷಿತಮ್ ।
ಅಕ್ಷಕೂಟಂ ಸಮಾಶ್ರಿತ್ಯ ಸೌಬಲೇನ ದುರಾತ್ಮನಾ ॥ 6 ॥
ಪರವಿತ್ತಾಪಹಾರಸ್ಯ ಕ್ರೋಧಸ್ಯಾಪ್ರಶಮಸ್ಯ ಚ ॥ 7 ॥
ಪಿತೄಣಾಂ ಮಮ ರಾಜ್ಯಸ್ಯ ದುರ್ಜಯಸ್ಯೋಗ್ರಧನ್ವಿನಾಮ್ ।
ತತ್ ತ್ವಾಮಿದಮನುಪ್ರಾಪ್ತಂ ತಸ್ಯ ಕೋಪಾನ್ಮಹಾತ್ಮನಃ ॥ 8 ॥
ಧೃತರಾಷ್ಟ್ರನು ಕೇಳುವಂತೆ ಸಭೆಯಲ್ಲಿ ಉಗ್ರವಾಕ್ಯದಿಂದ ಧರ್ಮರಾಜನಾದ ಯುಧಿಷ್ಠಿರನನ್ನು ಏನು ಕೋಪಗೊಳಿಸಿದೆಯೋ, ಜಯದ ಉನ್ಮಾದದಿಂದ ಕೂಡಿ ಭೀಮನನ್ನು ಕುರಿತು ಎಷ್ಟು ಅಬದ್ಧವಾದ ಮಾತುಗಳನ್ನು ಆಡಿದ್ದೀಯೋ, ದುರಾತ್ಮನಾದ ಶಕುನಿಯನ್ನು ಆಶ್ರಯಿಸಿ ಮೋಸದ ದ್ಯೂತವನ್ನು ಮಾಡಿ ಪರವಿತ್ತವನ್ನು ಏನು ಅಪಹರಿಸಿದ್ದೀಯೋ, ಉಗ್ರ ಧನುರ್ಧಾರಿಗಳಿಂದಲೂ ಜಯಿಸಲು ಅಸಾಧ್ಯರಾದ ನನ್ನ ಪಿತೃಗಳ ರಾಜ್ಯವನ್ನು ಏನು ಅಪಹರಿಸಿದ್ದಿಯೋ ಮತ್ತು ನಮ್ಮ ಮೇಲೆ ಯಾವ ಕ್ರೋಧವನ್ನು ಮತ್ತು ಅಸಮಾಧಾನವನ್ನು ಹೊಂದಿದ್ದೀಯೋ ಅವೆಲ್ಲದರ ಫಲವಾಗಿ ಮಹಾತ್ಮನಾದ ಯುಧಿಷ್ಠಿರ ಕೋಪದಿಂದ ಇದು ಈ ದಿನ ನಿನಗೆ ಪ್ರಾಪ್ತವಾಗಿದೆ.
ಸದ್ಯಃ ಕೃತಸ್ಯಾಧರ್ಮಸ್ಯ ಫಲಮಾಪ್ಸ್ಯಸಿ ದುರ್ಮತೇ ।
ಪಾತಿತಾಸ್ಮ್ಯದ್ಯ ಪಾಪ ತ್ವಾಂ ಸರ್ವಸೈನ್ಯಸ್ಯ ಪಶ್ಯತಃ ।
ಅದ್ಯಾಹಮನೃಣಸ್ತಸ್ಯ ಕೋಪಸ್ಯ ಭವಿತಾ ರಣೇ ॥ 9 ॥
ಎಲೈ ದುರ್ಮತಿಯೇ, ನೀನು ಮಾಡಿದ ಅಧರ್ಮಗಳ ಫಲವನ್ನು ಈಗಲೇ ಹೊಂದುವಿ. ಎಲೈ ಪಾಪಿಯೇ, ಎಲ್ಲ ಸೈನ್ಯಗಳೂ ನೋಡುವಂತೆ ಈ ದಿನ ನಾನು ನಿನ್ನನ್ನು ಹೊಡೆದು ಉರುಳಿಸುವೆನು. ಈ ದಿನ ರಣರಂಗದಲ್ಲಿ ನಾನು ಆ ಕೋಪದ ಋಣವನ್ನು ತೀರಿಸುವೆನು.
ಅಮರ್ಷಿತಾಯಾಃ ಕೃಷ್ಣಾಯಾಃ ಕಾಂಕ್ಷಿತಸ್ಯ ಚ ಮೇ ಪಿತುಃ ।
ಅದ್ಯ ತಾತಸ್ಯ ಭೀಮಸ್ಯ ಭವಿತಾಸ್ಮ್ಯನೃಣೋ ಭುವಿ ॥ 10 ॥
ನಹಿ ಮೇ ಮೋಕ್ಷ ್ಯಸೇ ಜೀವನ್ ಯದಿ ನೋತ್ಸ ೃಜಸೇ ರಣಮ್ ॥
ಕೋಪಗೊಂಡ ದ್ರೌಪದಿಯಿಂದ, ನನ್ನ ತಂದೆಯಿಂದ, ದೊಡ್ಡಪ್ಪನಾದ ಭೀಮನಿಂದ ಕಾಂಕ್ಷಿತವಾದ ಕಾರ್ಯವನ್ನು ಮಾಡಿ ಈ ದಿನ ಭೂಮಿಯಲ್ಲಿ ಋಣ ಮುಕ್ತನಾಗುವೆನು. ನೀನು ರಣರಂಗವನ್ನು ತೊರೆಯದಿದ್ದರೆ ಜೀವ ಸಹಿತವಾಗಿ ನನ್ನಿಂದ ಬಿಡುಗಡೆಯನ್ನು ಹೊಂದಲಾರೆ (ಎಂದು ಹೇಳಿದನು).
ಸಂಜಯಃ
ಏವಮುಕತ್ವ ಮಹಾಬಾಹುರ್ಬಾಣಂ ದುಃಶಾಸನಾಂತಕಮ್ ।
ಸಂದಧೇ ಪರವೀರಘ್ನಃ ಕಾಲಾಗ್ನಿಸಮವರ್ಚಸಮ್ ॥ 12 ॥
ಸಂಜಯ ಹೀಗೆ ಹೇಳಿ ಮಹಾಬಾಹುವೂ, ಪರವೀರಘಾತಕನೂ ಆದ ಅಭಿಮನ್ಯುವು ಕಾಲಾಗ್ನಿಗೆ ಸಮಾನವಾದ ಕಾಂತಿಯುಳ್ಳ ಬಾಣವನ್ನು ಬಿಲ್ಲಿನಲ್ಲಿ ಹೂಡಿದನು.
ತೇನ ತಂ ಜತ್ರುದೇಶೇ ವೈ ವಿದ್ಧ್ವಾ ಪರಪುರಂಜಯಃ ।
ಅಥೈನಂ ಪಂಚವಿಂಶತ್ಯಾ ಪುನರನ್ಯೈಃ ಸಮರ್ಪಯತ್ ॥ 13 ॥
ಪರಪುರಂಜಯನಾದ ಅವನು ಆ ಬಾಣದಿಂದ ದುಶ್ಶಾಸನನನ್ನು ಭುಜಸಂಧಿ ದೇಶದಲ್ಲಿ ಹೊಡೆದು ಪುನಃ ಅವನಿಗೆ ಇಪ್ಪತ್ತೈದು ಬಾಣಗಳನ್ನು ಅರ್ಪಿಸಿದನು.
ಶರೈರಗ್ನಿಸಮಸ್ಪರ್ಶೈರಾಕರ್ಣಸಮಚೋದಿತೈಃ ।
ಸ ಗಾಢವಿದ್ಧೋ ವ್ಯಥಿತಃ ಸ್ಯಂದನೋಪಸ್ಥ ಆವಿಶತ್ ।
ದುಃಶಾಸನೋ ಮಹಾರಾಜ ಕಶ್ಮಲೋಪಹತೋ ಭೃಶಮ್ ॥ 14 ॥
ಎಲೈ ಮಹಾರಾಜನೇ, ಕಿವಿಯವರೆಗೂ ಎಳೆದು ಪ್ರಯೋಗಿಸಿದ ಅಗ್ನಿಗೆ ಸಮಾನವಾದ ಸ್ಪರ್ಶವುಳ್ಳ ಆ ಬಾಣಗಳಿಂದ ಗಾಢವಾಗಿ ಹೊಡೆಯಲ್ಪಟ್ಟು, ವ್ಯಥೆಯಿಂದ ಕೂಡಿ, ರಥದ ಮಧ್ಯಭಾಗದಲ್ಲಿ ತೀವ್ರವಾದ ದುಃಖಕ್ಕೆ ಒಳಗಾಗಿ (ಮೂರ್ಛೆ ಹೊಂದಿದವನಾಗಿ) ದುಶ್ಶಾಸನನು ಕುಸಿದನು.
ಸಾರಥಿಸ್ತ್ವರಮಾಣಸ್ತು ದುಃಶಾಸನಮಚೇತನಮ್ ।
ರಣಮಧ್ಯಾದಪೋವಾಹ ಸೌಭದ್ರಶರಪೀಡಿತಮ್ ॥ 15 ॥
ಅವನ ಸಾರಥಿಯು ಶೀಘ್ರವಾಗಿ ಅಭಿಮನ್ಯುವಿನ ಬಾಣಗಳಿಂದ ಪೀಡಿತನಾದ, ಪ್ರಜ್ಞಾಶೂನ್ಯನಾದ ದುಶ್ಶಾಸನನನ್ನು ರಣಮಧ್ಯದಿಂದ ಹೊರಗೆ ಕರೆದುಕೊಂಡು ಹೋದನು.
ಪಾಂಡವಾ ದ್ರೌಪದೇಯಾಶ್ಚ ವಿರಾಟಃ ಸಹ ಸೃಂಜಯೈಃ ।
ಪಾಂಚಾಲಾಃ ಕೇಕಯಾಶ್ಚೈವ ಸಿಂಹನಾದಮಥಾನದನ್ ॥ 16 ॥
ಪಾಂಡವರು, ದ್ರೌಪದಿಯ ಪುತ್ರರು, ಸೃಂಜಯರಿಂದ ಸಹಿತನಾದ ವಿರಾಟ, ಪಾಂಚಾಲರು, ಕೇಕಯರು ಆಗ ಸಿಂಹನಾದವನ್ನು ಮಾಡಿದರು.
ವಾದಿತ್ರಾಣಿ ಚ ಸರ್ವಾಣಿ ನಾನಾಲಿಂಗಾನಿ ಸರ್ವಶಃ ।
ಪ್ರಾವಾದಯಂತ ಸಂಹೃಷ್ಟಾಃ ಪಾಂಡೂನಾಂ ತತ್ರ ಸೈನಿಕಾಃ ॥ 17 ॥
ಸಂತೋಷಗೊಂಡ ಪಾಂಡವರ ಸೈನಿಕರು ಆಗ ನಾನಾವಿಧವಾದ ಎಲ್ಲ ವಾದ್ಯಗಳನ್ನು ಎಲ್ಲ ಕಡೆಗಳಲ್ಲಿಯೂ ಭಾರಿಸಿದರು.
ಸ್ಮಯಮಾನಾಃ ಸ್ಮ ಪಶ್ಯಂತಿ ಸೌಭದ್ರಸ್ಯ ವಿಚೇಷ್ಟಿತಮ್ ।

ಅತ್ಯಂತವೈರಿಣಂ ದೃಷ್ಟ್ವಾ ದೃಪ್ತಂ ಶತ್ರುಂ ಪರಾಜಿತಮ್ ॥ 18 ॥
ಧರ್ಮಮಾರುತಶಕ್ರಾಣಾಂ ಪ್ರತಿಮಾಶ್ಚಾಶ್ವಿನೋಃ ಶುಭಾಃ |
ಧಾರಯಂತೋ ಧ್ವಜಾಗ್ರೇಷು ದ್ರೌಪದೇಯಾ ಮಹಾರಥಾಃ ॥ 19 ॥
ದ್ರೌಪದಿಯ ಪುತ್ರರಾದ ಮಹಾರಥರು ಅತ್ಯಂತ ವೈರಿಯಾದ, ದರ್ಪಿಷ್ಟನಾದ ಶತ್ರುವು ಪರಾಜಿತನಾದುದನ್ನು ನೋಡಿ ಧರ್ಮ, ವಾಯು, ಇಂದ್ರ ಮತ್ತು ಅಶ್ವಿನಿಗಳ ಶುಭಪ್ರತಿಮೆಗಳನ್ನು ಧ್ವಜಾಗ್ರಗಳಲ್ಲಿ ಧರಿಸಿ ಅಭಿಮನ್ಯುವಿನ ಕಾರ್ಯಗಳನ್ನು ನೋಡಿದರು.
ಸಾತ್ಯಕಿಶ್ಚೇಕಿತಾನಶ್ಚ ಧೃಷ್ಟದ್ಯುಮ್ನಶಿಖಂಡಿನೌ |
ಕೇಕಯಾ ಧೃಷ್ಟಕೇತುಶ್ಚ ಪಾಂಚಾಲಾ ಮತ್ಸ್ಯಸೃಂಜಯಾಃ ॥ 20 ॥
ಪಾಂಡವಾಶ್ಚ ಮುದಾ ಯುಕ್ತಾ ಯುಧಿಷ್ಠಿರಪುರೋಗಮಾಃ |
ಅಭ್ಯದ್ರವಂತ ಸಂಹೃಷ್ಟಾ ದ್ರೋಣಾನೀಕಂ ಬಿಭಿತ್ಸವಃ ॥ 21 ॥
ಸಾತ್ಯಕಿ, ಚೇಕಿತಾನ, ಧೃಷ್ಟದ್ಯುಮ್ನ, ಶಿಖಂಡಿ, ಕೇಕಯರು, ಧೃಷ್ಟಕೇತು, ಪಾಂಚಾಲರು, ಮತ್ಸ್ಯ-ಸೃಂಜಯರು, ಪಾಂಡವರು ಎಲ್ಲರೂ ಯುಧಿಷ್ಠಿರನನ್ನು ಮುಂದೆ ಮಾಡಿಕೊಂಡು, ಸಂತೋಷದಿಂದ ಕೂಡಿದವರಾಗಿ ದ್ರೋಣಾನೀಕವನ್ನು ಭೇದಿಸಲು ಬಯಸಿ ಮುನ್ನುಗ್ಗಿದರು.
ಅಥಾಭವನ್ಮಹದ್ ಯುದ್ಧಂ ತ್ವದೀಯಾನಾಂ ಪರೈಃ ಸಹ |
ಜಯಮಾಕಾಂಕ್ಷಮಾಣಾನಾಂ ಶೂರಾಣಾಮನಿವರ್ತಿನಾಮ್ ॥ 22 ॥
ಅನಂತರ ಶೂರರೂ, ಯುದ್ಧದಿಂದ ಹಿಮ್ಮೆಟ್ಟದವರೂ, ಜಯಾಭಿಲಾಷಿಗಳೂ ಆದ ನಿನ್ನವರಿಗೂ ಮತ್ತು ಶತ್ರುಗಳಿಗೂ ದೊಡ್ಡ ಯುದ್ಧವು ನಡೆಯಿತು.
ತಥಾ ವೈ ವರ್ತಮಾನೇ ತು ಸಂಗ್ರಾಮೇಽತಿಭಯಂಕರೇ|
ಅಥ ದುರ್ಯೋಧನೋ ರಾಜಾ ರಾಧೇಯಮಿದಮಬ್ರವೀತ್ ॥ 23 ॥
ಸೌಭದ್ರಮಭಿತಸ್ಸತ್ರತುಮ್ ಅಭಿಧಾವಂತಿ ಪಾಂಡವಾಃ ॥ 24 ॥
ಅತಿಭಯಂಕರವಾದ ಯುದ್ಧವು ಆಗ ನಡೆಯುತ್ತಿರಲು ರಾಜನಾದ ದುರ್ಯೋಧನನು ಕರ್ಣನನ್ನು ಕುರಿತು, ಅಭಿಮನ್ಯುವನ್ನು ಎಲ್ಲ ಕಡೆಯಿಂದಲೂ ರಕ್ಷಿಸಲು ಪಾಂಡವರು ಓಡಿ ಬರುತ್ತಿದ್ದಾರೆ ಎಂದು ಹೇಳಿದನು.
ಸಂಜಯಃ
ತತಃ ಕರ್ಣಃ ಶರೈಸ್ತೀಕ್ಷ್ಣೈರಭಿಮನ್ಯುಂ ದುರಾಸದಮ್ |
ಅಭ್ಯವರ್ಷತ್ ಸುಸಂಕ್ರುದ್ಧಃ ಪುತ್ರಸ್ಯ ಪ್ರಿಯಕೃತ್ ತವ ॥ 25 ॥
ಸಂಜಯ ಅನಂತರ ಕರ್ಣನು ನಿನ್ನ ಪುತ್ರನಿಗೆ ಪ್ರಿಯವನ್ನು ಉಂಟುಮಾಡುವವನಾಗಿ, ಬಹಳ ಕೋಪಗೊಂಡು, ಸಮೀಪಿಸಲೂ ಅಸಾಧ್ಯನಾದ ಅಭಿಮನ್ಯುವಿನ ಮೇಲೆ ತೀಕ್ಷ್ಣವಾದ ಬಾಣಗಳ ಮಳೆಯನ್ನು ಸುರಿಸಿದನು.
ತಸ್ಯ ಚಾನುಚರಾಂಸ್ತೀಕ್ಷ್ಣೈರ್ವಿಷ್ವಭ್ಯ ಪರಮೇಷುಭಿಃ |
ಅವಜ್ಞಾಪೂರ್ವಕಂ ಕರ್ಣಃ ಸೌಭದ್ರಂ ಪ್ರತ್ಯವಿದ್ಧ್ಯತ ॥ 26 ॥
ಕರ್ಣನು ಅವನ ಅನುಚರರನ್ನು ತೀಕ್ಷ್ಣವಾದ ಶ್ರೇಷ್ಠ ಬಾಣಗಳಿಂದ ತಡೆದು ತಿರಸ್ಕಾರ ಪೂರ್ವಕವಾಗಿ ಅಭಿಮನ್ಯುವನ್ನು ಹೊಡೆದನು.
ಅಭಿಮನ್ಯುಸ್ತು ರಾಧೇಯಂ ತ್ರಿಸಪ್ತತ್ಯಾ ಶಿಲೀಮುಖೈಃ |
ಅವಿದ್ಧ್ಯತ್ ತ್ವರಿತೋ ರಾಜನ್ ದ್ರೋಣಂ ಪ್ರೇಪ್ಸುರ್ಮಹಾಮನಾಃ ॥
ಅಭಿಮನ್ಯುವಾದರೂ ದ್ರೋಣರ ಸಮೀಪಕ್ಕೆ ಹೋಗಲು ಬಯಸಿದವನಾಗಿ ಎಪ್ಪತ್ಮೂರು ಬಾಣಗಳಿಂದ ಶೀಘ್ರವಾಗಿ ಕರ್ಣನನ್ನು ಹೊಡೆದನು.
ತಂ ತದಾ ನಾಶಕತ್ ಕಶ್ಚಿದ್ ದ್ರೋಣಾದ್ ವಾರಯಿತುಂ ರಣೇ |
ಆರುಜಂತಂ ರಥಶ್ರೇಷ್ಠಾನ್ ವಜ್ರಹಸ್ತಮಿವಾಸುರಾನ್ ॥ 28 ॥
ಆಗ ವಜ್ರಹಸ್ತನಾದ ಇಂದ್ರನು ಅಸುರರನ್ನು ಪೀಡಿಸಿದಂತೆ, ರಥಶ್ರೇಷ್ಠರನ್ನು ಪೀಡಿಸುತ್ತಿದ್ದ ಅಭಿಮನ್ಯುವನ್ನು ರಣರಂಗದಲ್ಲಿ ಯಾವನೂ ದ್ರೋಣರ ಕಡೆಗೆ ಹೋಗದಂತೆ ತಡೆಯಲು ಶಕ್ತನಾಗಲಿಲ್ಲ.
ತತಃ ಕರ್ಣೋ ಜಯಪ್ರೇಪ್ಸುರ್ಮಾನೀ ಸರ್ವಧನುರ್ಭೃತಾಮ್ |
ಸೌಭದ್ರಂ ಶತಶೋಽವಿದ್ಧ್ಯತ್ ಉತ್ತಮಾಸ್ತ್ರಾಣಿ ದರ್ಶಯನ್ ॥ 29 ॥
ಆಗ ಜಯಾಭಿಲಾಷಿಯೂ, ಸರ್ವಧನುರ್ಧಾರಿಗಳಲ್ಲಿ ಅಹಂಕಾರಿಯೂ ಆದ ಕರ್ಣನು ಉತ್ತಮಾಸ್ತ್ರಗಳನ್ನು ಪ್ರದರ್ಶಿಸುತ್ತಾ ಅಭಿಮನ್ಯುವನ್ನು ನೂರಾರು ಬಾಣಗಳಿಂದ ಹೊಡೆದನು.
ಸೋಽಸ್ತ್ರೈರಸ್ತ್ರವಿದಾಂ ಶ್ರೇಷ್ಠೋ ರಾಮಶಿಷ್ಯಃ ಪ್ರತಾಪವಾನ್ |
ಸಮೇತ್ಯ ಶತ್ರುಂ ದುರ್ಧರ್ಷಮಭಿಮನ್ಯುಮಪೀಡಯತ್ ॥ 30 ॥
ಪ್ರತಾಪಶಾಲಿಯೂ, ಪರಶುರಾಮನ ಶಿಷ್ಯನೂ, ಅಸ್ತ್ರವೇತ್ತರಲ್ಲಿ ಶ್ರೇಷ್ಠನೂ ಆದ ಅವನು ಶತ್ರುವೂ, ದುರ್ಧರ್ಷನೂ ಆದ ಅಭಿಮನ್ಯುವನ್ನು ಎದುರಿಸಿ ಅಸ್ತ್ರಗಳಿಂದ ಅವನನ್ನು ಪೀಡಿಸಿದನು.
ಸ ತಥಾ ಪೀಡ್ಯಮಾನಸ್ತು ರಾಧೇಯೇನಾಸ್ತ್ರವೃಷ್ಟಿಭಿಃ |
ಸಮರೇಽಮರಸಂಕಾಶಃ ಸೌಭದ್ರೋ ನ ವಿಷೀದತಿ ॥ 31 ॥
ರಣರಂಗದಲ್ಲಿ ಕರ್ಣನ ಅಸ್ತ್ರವೃಷ್ಟಿಗಳಿಂದ ಆ ರೀತಿಯಲ್ಲಿ ಪೀಡಿಸಲ್ಪಟ್ಟ ದೇವತಾಕಾಂತಿಯುಳ್ಳ ಆ ಅಭಿಮನ್ಯುವು ವಿಷಾದವನ್ನು ಹೊಂದಲಿಲ್ಲ.

ತತಃ ಶಿಲಾಶಿತೈಸ್ತೀಕ್ಷ್ಣೈರ್ಭಲ್ಲೈಃ ಸನ್ನತಪರ್ವಭಿಃ |
ಛಿತ್ತ್ವಾ ಧನೂಂಷಿ ವೀರಾಣಾಮಾರ್ಜುನಿಃ ಕರ್ಣಮರ್ದಯತ್ ||32||
ಧನುರ್ಮಂಡಲನಿರ್ಮುಕ್ತೈಃ ಶರೈರಾಶೀವಿಷೋಪಮೈಃ |
ಸಧ್ವಜಚ್ಛತ್ರಯಂತಾರಂ ಸಾಶ್ವಮಾಶು ಸ್ಮಯನ್ನಿವ || 33 ||
ಅನಂತರ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಬಾಗಿದ ಅಲುಗುಗಳನ್ನು ಹೊಂದಿದ, ತೀಕ್ಷ್ಣವಾದ ಭಲ್ಲಗಳಿಂದ ವೀರರ ಧನುಸ್ಸುಗಳನ್ನು ಕತ್ತರಿಸಿ, ಅಭಿಮನ್ಯುವು ಧ್ವಜ-ಛತ್ರ-ಸಾರಥಿ ಮತ್ತು ಅಶ್ವ ಸಹಿತನಾದ ಕರ್ಣನನ್ನು ನಗುತ್ತಾ ಧನುರ್ಮಂಡಲದಿಂದ ಹೊರಹೊಮ್ಮಿದ, ಸರ್ಪಗಳಂತೆ ತೀಕ್ಷ್ಣವಾದ ಬಾಣಗಳಿಂದ ಅರ್ದಿಸಿದನು (ಪೀಡಿಸಿದನು).
ಕರ್ಣಃ ಪಂಚಾಸ್ಯ ಚಿಕ್ಷೇಪ ಬಾಣಾನ್ ಸನ್ನತಪರ್ವಣಃ |
ಅಸಂಭ್ರಾಂತಶ್ಚ ತಾನ್ ಸರ್ವಾನಗೃಹ್ಣಾತ್ ಫಲ್ಗುನಾತ್ಮಜಃ || 34 ||
ಕರ್ಣನು ಅವನ ಮೇಲೆ ಬಾಗಿದ ತುದಿಗಳನ್ನುಳ್ಳ ಐದು ಬಾಣಗಳನ್ನು ಪ್ರಯೋಗಿಸಿದನು. ಅರ್ಜುನನ ಪುತ್ರನು ಯಾವ ಗಾಬರಿಯೂ ಇಲ್ಲದೆ ಅವೆಲ್ಲವನ್ನೂ ಸ್ವೀಕರಿಸಿದನು.
ತತೋ ಮುಹೂರ್ತಾತ್ ಕರ್ಣಸ್ಯ ಬಾಣೇನೈಕೇನ ವೀರ್ಯವಾನ್ |
ಸ ಧ್ವಜಂ ಕಾರ್ಮುಕಂ ಚಾಸ್ಯ ಛಿತ್ತ್ವಾ ಭೂಮೌ ನ್ಯಪಾತಯತ್ ||35||
ಅನಂತರ ಒಂದು ಮುಹೂರ್ತದಲ್ಲಿ ಪರಾಕ್ರಮಶಾಲಿಯಾದ ಅಭಿಮನ್ಯುವು ಒಂದು ಬಾಣದಿಂದ ಕರ್ಣನ ಧ್ವಜವನ್ನೂ, ಧನುಸ್ಸನ್ನೂ ಕತ್ತರಿಸಿ ಭೂಮಿಯಲ್ಲಿ ಕೆಡವಿದನು.
ತತಃ ಕೃಚ್ಛ್ರಗತಂ ದೃಷ್ಟ್ವಾ ಕರ್ಣಂ ಕರ್ಣಾದನಂತರಃ |
ಸೌಭದ್ರಮಭ್ಯಯಾತ್ ತೂರ್ಣಂ ದೃಢಮಾಯಮ್ಯ ಕಾರ್ಮುಕಮ್ ||
ಕರ್ಣನು ಸಂಕಟಕ್ಕೆ ಸಿಲುಕಿದುದನ್ನು ನೋಡಿ ಕರ್ಣನ ತಮ್ಮನು ತನ್ನ ಧನುಸ್ಸನ್ನು ದೃಢವಾಗಿ ಬಗ್ಗಿಸಿ ಶೀಘ್ರವಾಗಿ ಅಭಿಮನ್ಯುವಿನ ಕಡೆಗೆ ಧಾವಿಸಿದನು.
ತತ ಉಚ್ಚುಕ್ರುಶುಃ ಸರ್ವೇ ಪಾರ್ಥಾಃ ಸಾನುಚರಾಸ್ತಥಾ |
ವಾದಿತ್ರಾಣ್ಯಥ ಸಂಜಘ್ನುಃ ಸೌಭದ್ರಂ ಚಾಪಿ ತುಷ್ಟುವುಃ || 37 ||
ಆಗ ಎಲ್ಲ ಪಾರ್ಥರೂ ಮತ್ತು ಅವನ ಅನುಚರರೂ ಸಂತೋಷದ ನಾದವನ್ನು ಮಾಡಿದರು. ವಾದ್ಯಗಳನ್ನು ಬಾರಿಸಿದರು ಮತ್ತು ಅಭಿಮನ್ಯುವನ್ನು ಹೊಗಳಿದರು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ||
|| ಅಭಿಮನ್ಯುವಧಪರ್ವಣಿ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

## ನಲವತ್ತನೆಯ ಅಧ್ಯಾಯ

ಅಭಿಮನ್ಯುವಿನ ಪರಾಕ್ರಮದ ವರ್ಣನೆ.
ಸಂಜಯಃ
ಸೋಽತಿಗರ್ಜನ್ ಧನುಷ್ಪಾಣಿರ್ಜ್ಯಾಂ ವಿಕರ್ಷನ್ ಪುನಃಪುನಃ |
ತಯೋರ್ಮಹಾತ್ಮನೋಸ್ತೂರ್ಣಂ ರಥೋಽಂತರಮವಾಪತತ್ || 1 ||
ಅಭಿಮನ್ಯುವು ಧನುಸ್ಸನ್ನು ಹಿಡಿದು ಪುನಃ ಪುನಃ ಹೆದೆಯನ್ನು ಎಳೆಯುತ್ತಾ, ಬಹಳವಾಗಿ ಗರ್ಜಿಸುತ್ತಾ, ಮಹಾತ್ಮರಾದ ಕರ್ಣ ಮತ್ತು ಅವನ ತಮ್ಮನ ಮಧ್ಯದಲ್ಲಿ ಶೀಘ್ರವಾಗಿ ತನ್ನ ರಥವನ್ನು ಪ್ರವೇಶಿಸಿದನು.
ಸೋಽವಿದ್ಧ್ಯದ್ ದಶಭಿರ್ಬಾಣೈರಭಿಮನ್ಯುಂ ದುರಾಸದಮ್ |
ಸಚ್ಛತ್ರಧ್ವಜಯಂತಾರಂ ಸಾಶ್ವಮಾಶು ಸ್ಮಯನ್ನಿವ || 2 ||
ಕರ್ಣನ ಸಹೋದರನು ನಗುತ್ತಾ, ಹತ್ತು ಬಾಣಗಳಿಂದ ಛತ್ರ-ಧ್ವಜ-ಸಾರಥಿ-ಅಶ್ವ ಸಹಿತನಾದ ಸಮೀಪಿಸಲು ದುಸ್ಸಾಧ್ಯನಾದ ಅಭಿಮನ್ಯುವನ್ನು ಶೀಘ್ರವಾಗಿ ಹೊಡೆದನು.
ಪಿತೃಪೈತಾಮಹಂ ಕರ್ಮ ಕುರ್ವಾಣಮತಿಮಾನುಷಮ್ |
ದೃಷ್ಟ್ವಾಽರ್ದಿತಂ ಶರೈಃ ಕಾರ್ಷ್ಣಿಂ ತ್ವದೀಯಾ ಹೃಷಿತಾಽಭವನ್ || 3 ||
ಅತಿಮಾನುಷವಾದ ಪಿತೃಕರ್ಮವನ್ನು ಮಾಡುವ ಅಭಿಮನ್ಯುವು ಬಾಣಗಳಿಂದ ಪೀಡಿತನಾದುದನ್ನು ನೋಡಿ ನಿನ್ನವರು ಸಂತುಷ್ಟರಾದರು.
ತಸ್ಯಾಭಿಮನ್ಯುರಾಯಮ್ಯ ಸ್ಮಯನ್ನೇಕೇನ ಪತ್ರಿಣಾ |
ಶಿರಃ ಪ್ರಚ್ಯಾವಯಾಮಾಸ ಸ ರಥಾತ್ ಪ್ರಾಪತದ್ ಭುವಿ || 4 ||
ಅಭಿಮನ್ಯುವು ನಗುತ್ತಾ, ಒಂದು ಬಾಣದಿಂದ ಧನುಸ್ಸನ್ನು ಎಳೆದು ಅವನ ಶಿರಸ್ಸನ್ನು ಉರುಳಿಸಿದನು. ಕರ್ಣನ ಸಹೋದರನು ರಥದಿಂದ ಭೂಮಿಯ ಮೇಲೆ ಬಿದ್ದನು.
ಕರ್ಣಿಕಾರಮಿವೋದ್ಧೂತಂ ವಾತೇನ ಪಾತಿತಂ ನಗಾತ್ |
ಕರ್ಣಾನುಜಂ ಚ ಸಂಪ್ರೇಕ್ಷ್ಯ ತಾವಕಾ ವ್ಯಥಿತಾಽಭವನ್ |
ಭ್ರಾತರಂ ನಿಹತಂ ದೃಷ್ಟ್ವಾ ರಾಜನ್ ಕರ್ಣೋ ವ್ಯಥಾಂ ಯಯೌ ||5||

ವಾಯುವೇಗದಿಂದ ಪರ್ವತದಿಂದ ಬೀಳಿಸಲ್ಪಟ್ಟ ಕರ್ಣಿಕಾರ ವೃಕ್ಷದಂತಿದ್ದ ಕರ್ಣನ ತಮ್ಮನನ್ನು ನೋಡಿ ನಿನ್ನವರು ವ್ಯಥೆಗೊಂಡರು. ರಾಜನೇ, ತಮ್ಮನು ಹತನಾದುದನ್ನು ನೋಡಿ ಕರ್ಣನೂ ವ್ಯಥೆಪಟ್ಟನು.
ವಿಮುಖೀಕೃತ್ಯ ಕರ್ಣಂ ತು ಸೌಭದ್ರಃ ಕಂಕಪತ್ರಿಭಿಃ |
ಅನ್ಯಾಂಶ್ಚ ಪರಮೇಷ್ವಾಸಾನ್ ತೂರ್ಣಂ ಕರ್ಣಮುಪಾದ್ರವತ್ ॥ 6 ॥
ಅಭಿಮನ್ಯುವು ಕಂಕಪತ್ರವುಳ್ಳ ಬಾಣಗಳಿಂದ ಕರ್ಣನನ್ನು ವಿಮುಖನನ್ನಾಗಿ ಮಾಡಿ, ಉಳಿದ ಧನುರ್ಧಾರಿಗಳನ್ನೂ ವಿಮುಖರನ್ನಾಗಿ ಮಾಡಿ, ಶೀಘ್ರವಾಗಿ ಕರ್ಣನ ಮೇಲೆ ಎರಗಿದನು.
ತತಸ್ತದ್ ವಿತತಂ ಜಾಲಂ ಹಸ್ತ್ಯಶ್ವರಥಪತ್ತಿಮತ್ |
ಝುಷಃ ಕ್ರುದ್ಧ ಇವಾಭಿಂದದಭಿಮನ್ಯುರ್ಮಹಾಯಶಾಃ ॥ 7 ॥
ಅನಂತರ ಗಜಾಶ್ವ-ರಥ-ಪದಾತಿಗಳಿಂದ ಕೂಡಿದ ವಿಸ್ತಾರವಾದ ಕೌರವರ ಸೈನ್ಯ ಸಮೂಹವನ್ನು ಮೊಸಳೆಯಂತೆ ಕ್ರೋಧಗೊಂಡ, ಮಹಾಕೀರ್ತಿವಂತನಾದ ಅಭಿಮನ್ಯುವು ಭೇದಿಸಿದನು.
ಕರ್ಣಸ್ತು ಬಹುಭಿರ್ಬಾಣೈರರ್ದ್ಯಮಾನೋಽಭಿಮನ್ಯುನಾ |
ಅಪಾಯಾಜ್ಜವನೈರಶ್ವೈಸ್ತತೋಽನೀಕಮಭಿದ್ಯತ ॥ 8 ॥
ಕರ್ಣನಾದರೋ ಅಭಿಮನ್ಯುವಿನಿಂದ ಅನೇಕ ಬಾಣಗಳಿಂದ ಪೀಡಿತನಾಗಿ ವೇಗಶಾಲಿಗಳಾದ ಅಶ್ವಗಳಿಂದ ರಣರಂಗವನ್ನು ಬಿಟ್ಟು ಹೋದನು. ಅನಂತರ ಕೌರವ ಸೈನ್ಯವು ಭಗ್ನವಾಯಿತು.
ತಿಷ್ಠ ಕರ್ಣ ಮಹೇಷ್ವಾಸ ಕೃಪ ದುರ್ಯೋಧನೇತಿ ಚ |
ದ್ರೋಣಸ್ಯ ಕ್ರೋಶತೋ ರಾಜನ್ ತದನೀಕಮಭಜ್ಯತ ॥ 9 ॥
ರಾಜನೇ, ದ್ರೋಣರು `ಮಹಾಧನುರ್ಧಾರಿಯಾದ ಕರ್ಣನೇ ನಿಲ್ಲು, ಕೃಪ- ದುರ್ಯೋಧನರೇ ನಿಲ್ಲಿ' ಎಂದು ಕಿರುಚುತ್ತಿದ್ದರೂ ಆ ಸೈನ್ಯವು ಭಗ್ನವಾಯಿತು.
ಶಲಭೈರಿವ ಚಾಕಾಶಂ ಧಾರಾಭಿರಿವ ಸಂವೃತಮ್ |
ಅಭಿಮನ್ಯೋಃ ಶರೈಶ್ಛನ್ನಂ ನ ಪ್ರಾಜ್ಞಾಯತ ಕಿಂಚನ ॥ 10 ॥
ಪತಂಗಗಳಿಂದ ಆಕಾಶವು ತುಂಬಿದಂತೆ ಅಭಿಮನ್ಯುವಿನ ಶರಧಾರೆಗಳಿಂದ ಎಲ್ಲವೂ ತುಂಬಿ ಆಚ್ಛಾದಿತವಾಯಿತು. ಯಾವುದೂ ತಿಳಿಯಲಿಲ್ಲ.
ತಾವಕಾನಾಂ ತು ಯೋಧಾನಾಂ ವಧ್ಯತಾಂ ನಿಶಿತೈಃ ಶರೈಃ |
ನಾನ್ಯತ್ರ ಸೈಂಧವಾದ್ ರಾಜನ್ ಕಶ್ಚಿತ್ ತತ್ರಾವತಿಷ್ಠತಿ ॥ 11 ॥
ರಾಜನೇ, ನಿನ್ನ ಸೈನಿಕರು ನಿಶಿತವಾದ ಬಾಣಗಳಿಂದ ವಧಿಸಲ್ಪಡುತ್ತಿದ್ದಾಗ ಸೈಂಧವನನ್ನು ಬಿಟ್ಟು ಬೇರೆ ಯಾರೂ ಅಲ್ಲಿ ನಿಲ್ಲಲಿಲ್ಲ.
ಸೌಭದ್ರಸ್ತು ತತಃ ಶಂಖಂ ಪ್ರಧ್ಮಾಯ ರಣಮೂರ್ಧ್ನಿ |
ಶೀಘ್ರಮಭ್ಯಪತತ್ ಸೇನಾಂ ಭಾರತೀಂ ಪಿತೃನಂದನಃ ॥ 12 ॥
ಪಿತೃನಂದನನಾದ ಅಭಿಮನ್ಯುವು ಶ್ರೇಷ್ಠವಾದ ಆ ಯುದ್ಧದಲ್ಲಿ ಆಗ ಶಂಖವನ್ನು ಊದಿ ಶೀಘ್ರವಾಗಿ ಕೌರವ ಸೇನೆಯ ಮೇಲೆ ಎರಗಿದನು.
ಸ ಕಕ್ಷೇಽಗ್ನಿರಿವೋತ್ಸ ೃಷ್ಟೋ ನಿರ್ದಹಂಸ್ತರಸಾ ರಿಪೂನ್ |
ಮಧ್ಯೇ ಭಾರತಸೈನ್ಯಾನಾಮಾರ್ಜುನಿಃ ಪರ್ಯವರ್ತತ ॥ 13 ॥
ಅವನು ಹುಲ್ಲುಗಾವಲಿನಲ್ಲಿ ವಿಸರ್ಜನೆ ಮಾಡಿದ ಅಗ್ನಿಯಂತೆ ಶತ್ರುಗಳನ್ನು ಶೀಘ್ರವಾಗಿ ಸ್ವೀಕರಿಸುತ್ತಾ ಕೌರವ ಸೈನ್ಯದ ಮಧ್ಯದಲ್ಲಿ ಸಂಚರಿಸಿದನು.
ರಥಾಶ್ವನಾಗಮನುಜಾನ್ ನಿರ್ದಹನ್ ನಿಶಿತೈಃ ಶರೈಃ |
ಸಂಪ್ರವಿಶ್ಯಾಕರೋದ್ ಭೂಮಿಂ ಕಬಂಧಗಣಸಂಕುಲಾಮ್ ॥ 14 ॥
ಕೌರವ ಸೈನ್ಯವನ್ನು ಪ್ರವೇಶಿಸಿ, ತನ್ನ ಹರಿತವಾದ ಬಾಣಗಳಿಂದ ರಥಾಶ್ವ-ಗಜ- ಮನುಷ್ಯರನ್ನು ದಹಿಸುತ್ತಾ, ರಣಭೂಮಿಯನ್ನು ರುಂಡಗಳ ಸಮೂಹದಿಂದ ನಿಬಿಡವನ್ನಾಗಿ ಮಾಡಿದನು.
ಸೌಭದ್ರಚಾಪಪ್ರಭವೈರ್ನಿಕೃತ್ತಾಃ ಪರಮೇಷುಭಿಃ |
ಸ್ವಾನೇವಾಭಿಮುಖಾನ್ ಘ್ನಂತಃ ಪ್ರಾದ್ರವನ್ ಜೀವಿತಾರ್ಥಿನಃ ॥ 15 ॥
ಅಭಿಮನ್ಯುವಿನ ಬಿಲ್ಲಿನಿಂದ ಹೊರಹೊಮ್ಮಿದ ಶ್ರೇಷ್ಠ ಬಾಣಗಳಿಂದ ಕತ್ತರಿಸಲ್ಪಟ್ಟ ನಿನ್ನ ಯೋಧರು ಜೀವಿತವನ್ನು ಬಯಸಿ ತಮ್ಮ ಸೇನೆಗೆ ಅಭಿಮುಖವಾಗಿಯೇ ಅವರನ್ನೇ ಕೊಲ್ಲುತ್ತಾ ಓಡಿದರು.
ತೇ ಘೋರಾ ರೌದ್ರಕರ್ಮಾಣೋ ವಿಪಾಠಾ ಪೃಥವಃ ಶಿತಾಃ |
ನಿಘ್ನಂತೋ ರಥನಾಗಾಶ್ವಾನ್ ಜಗ್ಮುರಾಶು ವಸುಂಧರಾಮ್ ॥ 16 ॥
ಅಭಿಮನ್ಯುವು ಪ್ರಯೋಗಿಸಿದ ಘೋರವಾದ, ಭಯಂಕರ ಕರ್ಮವನ್ನು ಮಾಡುವ, ವಿಸ್ತಾರವಾದ ಮತ್ತು ನಿಶಿತವಾದ ವಿಪಾಠಗಳು ರಥ-ಗಜಾಶ್ವಗಳನ್ನು ಕೊಲ್ಲುತ್ತಾ ಶೀಘ್ರವಾಗಿ ಭೂಮಿಯನ್ನು ಸೇರಿದವು.
ಸಾಯುಧಾಃ ಸಾಂಗುಲತ್ರಾಣಾಃ ಸಖಡ್ಗಾಃ ಸಾಂಗದಾ ರಣೇ |
ದೃಶ್ಯಂತೇ ಬಾಹವಶ್ಛಿನ್ನಾ ಹೇಮಾಭರಣಭೂಷಿತಾಃ ॥ 17 ॥
ರಣರಂಗದಲ್ಲಿ ಆಯುಧಗಳನ್ನು ಹಿಡಿದ, ಅಂಗುಲಿತ್ರಾಣಗಳನ್ನು ಧರಿಸಿದ, ಖಡ್ಗವನ್ನು ಧರಿಸಿದ, ಅಂಗದ ಭೂಷಿತವಾದ, ಸುವರ್ಣಾಭರಣ ಭೂಷಿತವಾದ ಕತ್ತರಿಸಲ್ಪಟ್ಟ ಬಾಹುಗಳು ಕಂಡುಬಂದವು.

ಖುಷ್ಟ್ಯಶ್ಚಾಪಾನಿ ಖಡ್ಗಾಶ್ಚ ಶರೀರಾಣಿ ಶಿರಾಂಸಿ ಚ |
ಸಕುಂಡಲಾನಿ ಸ್ರಗ್ವೀಣಿ ಭೂಮಾವಾಸನ್ ಸಹಸ್ರಶಃ ॥ 18 ॥
ಭೂಮಿಯ ಮೇಲೆ ಖುಷ್ಟಿಗಳು, ಬಿಲ್ಲುಗಳು, ಖಡ್ಗಗಳು, ಶರೀರಗಳು, ಕುಂಡಲ ಮತ್ತು ಮಾಲೆಗಳನ್ನು ಧರಿಸಿದ ಶಿರಸ್ಸುಗಳು ಸಹಸ್ರ ಸಂಖ್ಯೆಯಲ್ಲಿ ಇದ್ದವು.
ಅವಸ್ಕರೈರಧಿಷ್ಠಾನೈರೀಷಾದಂಡಕಬಂಧುರೈಃ |
ಅಕ್ಷೈರ್ವಿಮಥಿತೈಶ್ಚಕ್ರೈರ್ಭಗ್ನೈಶ್ಚ ಬಹುಧಾ ರಥೈಃ ॥ 19 ॥
ಶಕ್ತಿಚಾಪಾಯುಧೈಶ್ಚಾನ್ಯೈಃ ಪತಿತೈಶ್ಚ ಮಹಾಧ್ವಜೈಃ |
ವರ್ಮಚಾಪಶರೈಶ್ಚೈವ ವ್ಯವಕೀರ್ಣೈಃ ಸಮಂತತಃ |
ನಿಹತೈಃ ಕ್ಷತ್ರಿಯೈರಶ್ವೈಃ ಕುಂಜರೈಶ್ಚ ವಿಶಾಂಪತೇ ॥ 20 ॥
ಅಗಮ್ಯಕಲ್ಪಾ ಪೃಥಿವೀ ವೀಕ್ಷಿತಾಽಽಸೀತ್ ಸುದಾರುಣಾ ॥21॥
ಎಲೈ ರಾಜನೇ, ಭಗ್ನಗೊಂಡ ರಥಗಳ ಅವಸ್ಕರಗಳಿಂದಲೂ, ಅಧಿಷ್ಠಾನದಿಂದಲೂ, ಈಷಾ-ದಂಡದಿಂದಲೂ, ಅಶ್ವಯುಗಗಳಿಂದಲೂ, ಅಕ್ಷಗಳಿಂದಲೂ, ಚಕ್ರಗಳಿಂದಲೂ, ಬಹಳ ರೀತಿಯಲ್ಲಿ ಭಗ್ನವಾದ ರಥಗಳಿಂದಲೂ, ನೆಲದ ಮೇಲೆ ಬಿದ್ದ ಶಕ್ತಿ-ಚಾಪ ಮೊದಲಾದ ಆಯುಧಗಳಿಂದಲೂ, ಮಹಾಧ್ವಜಗಳಿಂದಲೂ, ಕವಚ-ಧನುಸ್ಸು ಮತ್ತು ಶರಗಳಿಂದಲೂ, ಹತರಾದ ಕ್ಷತ್ರಿಯರಿಂದಲೂ, ಅಶ್ವಗಳಿಂದಲೂ, ನಾಗಗಳಿಂದಲೂ ಎಲ್ಲ ಕಡೆಯಲ್ಲಿಯೂ ಹರಡಲ್ಪಟ್ಟ ರಣಭೂಮಿಯು ಮುಂದೆ ಹೋಗಲು ಅಸಾಧ್ಯವಾದುದಾಗಿ ನೋಡಲು ಬಹಳ ಭಯಂಕರವಾಗಿದ್ದಿತು.
ವಧ್ಯತಾಂ ರಾಜಪುತ್ರಾಣಾಂ ಕ್ರಂದತಾಮಿತರೇತರಮ್ |
ಪ್ರಾದುರಾಸೀನ್ಮಹಾಶಬ್ದಃ ಭೀರೂಣಾಂ ಭಯವರ್ಧನಃ ॥ 22 ॥
ವಧಿಸಲ್ಪಡುವ ಪರಸ್ಪರವಾಗಿ ಆಕ್ರಂದಿಸುವ ರಾಜಪುತ್ರರ, ಭೀರುಗಳಿಗೆ ಭಯಜನಕವಾದ ದೊಡ್ಡ ನಾದವು ಉಂಟಾಯಿತು.
ಸ ಶಬ್ದಃ ಖಂ ನರವ್ಯಾಘ್ರ ಸಹಸಾಽಭಿವ್ಯನಾದಯತ್ |
ಕ್ಷಿಪ್ರಮಭ್ಯಪತತ್ ಸೈನ್ಯಂ ನಿಘ್ನನ್ನಶ್ವರಥದ್ವಿಪಾನ್ ॥ 23 ॥
ಎಲೈ ನರವ್ಯಾಘ್ರನೇ, ಆ ಶಬ್ದವು ಆಕಾಶಾದಿ ಎಲ್ಲ ಕಡೆಯಲ್ಲಿಯೂ ಪ್ರತಿಧ್ವನಿಸಿ, ಅಶ್ವ-ರಥ- ಗಜಗಳನ್ನು ಕೊಲ್ಲುತ್ತಾ, ಕ್ಷಿಪ್ರವಾಗಿ ಸೈನ್ಯದಲ್ಲಿ ಹರಡಿತು.
ಕಕ್ಷಮಗ್ನಿರಿವೋತ್ಸ ೃಷ್ಟೋ ನಿರ್ದಹನ್ನರಿವಾಹಿನೀಮ್ |
ಮಧ್ಯೇ ಭಾರತಸೈನ್ಯಾನಾಮಾರ್ಜುನಿಃ ಪ್ರತ್ಯದೃಶ್ಯತ ॥ 24 ॥
ಹುಲ್ಲುಗಾವಲಿನಲ್ಲಿ ವಿಸರ್ಜಿತವಾದ ಅಗ್ನಿಯಂತೆ ಶತ್ರುಸೈನ್ಯವನ್ನು ಸುಡುತ್ತಾ ಅಭಿಮನ್ಯುವು ಕೌರವರ ಸೈನ್ಯದ ಮಧ್ಯದಲ್ಲಿ ಕಾಣಿಸಿದನು.
ಸ ದಿಶೋ ವಿಚರನ್ ಸರ್ವಾಃ ಪ್ರದಿಶಶ್ಚಾಹಿತಾನ್ ರುಜನ್ |
ತಂ ತದಾ ನಾನುಪಶ್ಯಾಮಃ ಸ್ವಸೈನ್ಯೇ ರಜಸಾಽಽವೃತೇ ॥ 25 ॥
ಅವನು ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಾ, ಶತ್ರುಗಳನ್ನು ಮರ್ದಿಸುತ್ತಿರುವಾಗ ಅವನು ಸೈನ್ಯದಿಂದ ಉಂಟಾದ ಧೂಳಿನಿಂದ ಆವೃತನಾಗಿರಲು ಆಗ ಅವನನ್ನು ನಾವು ನೋಡಲಿಲ್ಲ.
ಆದದಾನಂ ಗಜಾಶ್ವಾನಾಂ ನೃಣಾಮಾಯೂಂಷಿ ಭಾರತ |
ಕ್ಷಣೇನ ಚಾಭಿಪಶ್ಯಾಮಃ ಸೂರ್ಯಂ ಮಧ್ಯಂದಿನೇ ಯಥಾ |
ಅಭಿಮನ್ಯುಂ ಮಹಾರಾಜ ಪ್ರತಪಂತಂ ದ್ವಿಷದ್ಗಣಾನ್ ॥ 26 ॥
ಎಲೈ ಭಾರತನೇ, ಮಹಾರಾಜನೇ, ಒಂದು ಕ್ಷಣದಲ್ಲಿ ಮಧ್ಯಂದಿನದ ಸೂರ್ಯನಂತೆ ಗಜಾಶ್ವ-ಪದಾತಿಗಳ ಆಯುಸ್ಸನ್ನು ಅಪಹರಿಸುವ, ಶತ್ರುಸಮೂಹವನ್ನು ಸಂತಾಪಗೊಳಿಸುವ ಆ ಅಭಿಮನ್ಯುವನ್ನು ನೋಡಿದೆವು.
ಸ ವಾಸವಸಮಃ ಸಂಖ್ಯೇ ವಾಸವಸ್ಯಾತ್ಮಜಾತ್ಮಜಃ |
ಅಭಿಮನ್ಯುರ್ಮಹಾರಾಜ ಸೇನಾಮಧ್ಯೇ ವ್ಯರೋಚತ ॥ 27 ॥
ಯಥಾ ಪುರಾ ವಹ್ನಿಸುತಃ ಸುರಸೈನ್ಯೇಷು ವೀರ್ಯವಾನ್ ॥ 28 ॥|
ವಾಸವಪುತ್ರನ ಪುತ್ರನಾದ, ವಾಸವನಿಗೆ ಸಮಾನನಾದ ಅಭಿಮನ್ಯುವು ಮಹಾರಾಜನೇ, ಹಿಂದೆ ಅಗ್ನಿಪುತ್ರನಾದ, ಪರಾಕ್ರಮಶಾಲಿಯಾದ ಷಣ್ಮುಖನು ಸುರಸೇನೆಯಲ್ಲಿ ಶೋಭಿಸಿದಂತೆ ಶೋಭಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂದನೆಯ ಅಧ್ಯಾಯ
ಸಂಜಯನಿಂದ ರುದ್ರದೇವರ ವರಬಲದಿಂದ ಸೈಂಧವನಿಂದ
ಪಾಂಡವರ ನಿರೋಧದ ಕಥನ.
ಧೃತರಾಷ್ಟ್ರಃ
ಬಾಲಮತ್ಯಂತಸುಖಿನಂ ಸ್ವಬಾಹುಬಲದರ್ಪಿತಮ್ |

ಯುದ್ಧೇಷ್ವಕುಶಲಂ ವೀರಂ ಕುಲಪುತ್ರಂ ತನುತ್ಯಜಮ್ ॥ 1 ॥
ಗಾಹಮಾನಮನೀಕಾನಿ ಕಿಶೋರಾಶ್ವೈಸ್ತ್ರಿಹಾಯನೈಃ।
ಅಪಿ ಯೌಧಿಷ್ಠಿರಾತ್ ಸೈನ್ಯಾದೇಕೋಽಪ್ಯನುಪತನ್ ರಥೀ ॥ 2 ॥
ಧೃತರಾಷ್ಟ್ರ, ಬಾಲಕನೂ, ಅತ್ಯಂತ ಸುಖಿಯೂ, ತನ್ನ ಬಾಹುಬಲದಿಂದ ದರ್ಪಿತನಾದವನೂ, ಯುದ್ಧದಲ್ಲಿ ಕುಶಲನಲ್ಲದವನೂ, ವೀರನೂ, ಕುರುಪುತ್ರನೂ, ತನುತ್ಯಜನೂ, ಕಿಶೋರ ವಯಸ್ಸಿನ ಅಶ್ವಗಳಿಂದ ಶತ್ರುಗಳ ಸೈನ್ಯವನ್ನು ಪ್ರವೇಶಿಸುವವನೂ ಆದ ಅಭಿಮನ್ಯುವನ್ನು ಯುಧಿಷ್ಠಿರನ ಸೈನ್ಯದಿಂದ ಒಬ್ಬ ರಥಿಯೂ ಹಿಂಬಾಲಿಸಲಿಲ್ಲವೇ?
ಸಂಜಯಃ
ಯುಧಿಷ್ಠಿರೋ ಭೀಮಸೇನಃ ಶಿಖಂಡೀ ಸಾತ್ಯಕಿರ್ಯಮೌ।
ಧೃಷ್ಟದ್ಯುಮ್ನೋ ವಿರಾಟಶ್ಚ ದ್ರುಪದಃ ಕೇಕಯಾಸ್ತಥಾ ॥ 3 ॥
ಧೃಷ್ಟಕೇತುಶ್ಚ ಸಂರಬ್ಧಾ ಮತ್ಸ್ಯಾಶ್ಚಾನ್ವಪತನ್ ರಣೇ।
ತೇನೈವ ತು ಪಥಾ ಯಾತಾಃ ಪಿತರೋ ಮಾತುಲೈಃ ಸಹ ॥ 4 ॥
ಸಂಜಯ ಯುಧಿಷ್ಠಿರ, ಭೀಮಸೇನ, ಶಿಖಂಡಿ, ಸಾತ್ಯಕಿ, ನಕುಲ- ಸಹದೇವರು, ಧೃಷ್ಟದ್ಯುಮ್ನ, ವಿರಾಟ, ದ್ರುಪದ, ಕೇಕಯರು, ಧೃಷ್ಟಕೇತು, ಮತ್ಸ್ಯರು ಎಲ್ಲರೂ ಕೋಪದಿಂದ ಕೂಡಿದವರಾಗಿ ಅಭಿಮನ್ಯುವು ಹೋದ ಮಾರ್ಗದಿಂದಲೇ ಅವನ ಪಿತೃಗಳೂ, ಸೋದರಮಾವಂದಿರ ಜೊತೆಯಲ್ಲಿ ಹೊರಟರು.
ಅನ್ವಧಾವನ್ ಪರೀಪ್ಸಂತೋ ವ್ಯೂಢಾನೀಕಾಃ ಪ್ರಹಾರಿಣಃ।
ತಾನ್ ದೃಷ್ಟ್ವಾ ದ್ರವತಃ ಶೂರಾಂಸ್ತ್ವದೀಯಾ ವಿಮುಖಾಽಭವನ್ ॥5॥
ತಮ್ಮ ಸೈನ್ಯವನ್ನು ವ್ಯೂಹಗೊಳಿಸಿ, ಪ್ರಹಾರವನ್ನು ಮಾಡುವವರಾಗಿ, ಅಭಿಮನ್ಯುವನ್ನು ರಕ್ಷಿಸಲು ಬಯಸಿ ಅವನ ಹಿಂದೆ ಧಾವಿಸಿದರು. ಓಡಿ ಬರುತ್ತಿರುವ ಆ ಶೂರರನ್ನು ನೋಡಿ ನಿನ್ನ ಯೋಧರು ವಿಮುಖರಾದರು.
ತತಸ್ತದ್ ವಿಮುಖಂ ದೃಷ್ಟ್ವಾ ತವ ಸೂನೋರ್ಮಹದ್ ಬಲಮ್।
ಜಾಮಾತಾ ತವ ತೇಜಸ್ವೀ ವಿಷ್ಟಂಭಯಿಷುರಾದ್ರವತ್ ॥ 6 ॥
ಆಗ ನಿನ್ನ ಪುತ್ರನ ದೊಡ್ಡ ಸೈನ್ಯವು ವಿಮುಖವಾದುದನ್ನು ನೋಡಿ ಪರಾಕ್ರಮಶಾಲಿಯಾದ ನಿನ್ನ ಅಳಿಯನು ಧರ್ಮರಾಜಾದಿಗಳನ್ನು ತಡೆಯಲು ಓಡಿಬಂದನು.
ಸೈಂಧವಸ್ಯ ತು ಯೋ ರಾಜ್ಞಃ ಪುತ್ರೋ ರಾಜಾ ಜಯದ್ರಥಃ।
ಸ ಪುತ್ರಗೃದ್ಧಿನಃ ಪಾರ್ಥಾನ್ ಸಹಸೈನ್ಯಾನವಾರಯತ್ ॥ 7 ॥
ಸೈಂಧವರಾಜನಾದ ವೃದ್ಧಕ್ಷತ್ರನ ಪುತ್ರನಾದ ರಾಜನಾದ ಜಯದ್ರಥನು ತಮ್ಮ ಪುತ್ರನನ್ನು ರಕ್ಷಿಸಲು ಹೊರಟ ಪಾಂಡವರನ್ನು ಅವರ ಸೈನ್ಯದ ಜೊತೆಯಲ್ಲಿ ತಡೆದನು.
ಉಗ್ರಧನ್ವಾ ಮಹೇಷ್ವಾಸೋ ದಿವ್ಯಮಸ್ತ್ರಮುದೀರಯನ್।
ವಾರ್ಧಕ್ಷತ್ರಿರವಾಸೇಧತ್ ಪ್ರಭಿನ್ನಾನಿವ ಕುಂಜರಾನ್ ॥ 8 ॥
ಉಗ್ರಧನ್ವನೂ, ಮಹಾಧನುರ್ಧಾರಿಯೂ ಆದ, ವೃದ್ಧಕ್ಷತ್ರಪುತ್ರನಾದ ಜಯದ್ರಥನು ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ಮದಿಸಿದ ಆನೆಗಳಂತಿದ್ದ (ಪಾಂಡವರನ್ನು) ತಡೆದನು.
ಧೃತರಾಷ್ಟ್ರಃ
ಅತಿಭಾರಮಹಂ ಮನ್ಯೇ ಸೈಂಧವೇ ಸಂಜಯಾಹಿತಮ್।
ಯದೇಕಃ ಪಾಂಡವಾನ್ ಕ್ರುದ್ಧಾನ್ ಪುತ್ರಗೃದ್ಧೀನವಾರಯತ್ ॥ 9 ॥
ಧೃತರಾಷ್ಟ್ರ, ಸಂಜಯನೇ, ಪುತ್ರನನ್ನು ರಕ್ಷಿಸಲು ಬಯಸಿದ ಕ್ರುದ್ಧರಾದ ಪಾಂಡವರನ್ನು ಸೈಂಧವನು ತಡೆದನೆಂದರೆ, ಸೈಂಧವನ ಮೇಲೆ ಬಹಳ ಭಾರವು ಬಿದ್ದಿದೆ ಎಂದು ನಾನು ತಿಳಿಯುತ್ತೇನೆ.
ಅತ್ಯದ್ಭುತಮಹಂ ಮನ್ಯೇ ಬಲಂ ಶೌರ್ಯಂ ಚ ಸೈಂಧವೇ।
ತಸ್ಯ ಪ್ರಬ್ರೂಹಿ ಮೇ ವೀರ್ಯಂ ಕರ್ಮ ಚೋಗ್ರಂ ಮಹಾತ್ಮನಃ ॥10॥
ಸೈಂಧವನ ಬಲವೂ ಮತ್ತು ಪರಾಕ್ರಮವೂ ಅತ್ಯದ್ಭುತವೆಂದು ನಾನು ಭಾವಿಸುತ್ತೇನೆ. ಮಹಾತ್ಮನಾದ ಅವನ ಪರಾಕ್ರಮವನ್ನು ಮತ್ತು ಉಗ್ರಕರ್ಮವನ್ನು ನನಗೆ ಹೇಳು.
ಕಿಂ ದತ್ತಂ ಹುತಮಿಷ್ಟಂ ವಾ ಸ್ವಧೀತಮಥವಾ ತಪಃ।
ದಮೋ ವಾ ಬ್ರಹ್ಮಚರ್ಯಂ ವಾ ಸೂತ ಯಚ್ಚಾಸ್ಯ ಸತ್ತಮ ॥ 11 ॥
ಅವನು ಯಾವ ದಾನವನ್ನು ಅಥವಾ ಹೋಮವನ್ನು ಅಥವಾ ತಟಾಕಾದಿ ನಿರ್ಮಾಣವನ್ನು ಅಥವಾ ಅಧ್ಯಯನವನ್ನು ಅಥವಾ ತಪಸ್ಸನ್ನು ಮಾಡಿದ್ದಾನೊ ಅದನ್ನು ನನಗೆ ಹೇಳು. ಸಜ್ಜನರಲ್ಲಿ ಶ್ರೇಷ್ಠನಾದ ಸೂತನೇ, ಅವನ ಇಂದ್ರಿಯನಿಗ್ರಹವನ್ನು ಅಥವಾ ಬ್ರಹ್ಮಚರ್ಯವನ್ನು ನನಗೆ ಹೇಳು.
ದೇವಂ ಕತಮಮಾರಾಧ್ಯ ವಿಷ್ಣುಮೀಶಾನಮಗ್ನಿಜಮ್।
ಸಿಂಧುರಾಟ್ ತನಯೇ ಸಕ್ತಾನ್ ಕ್ರುದ್ಧಃ ಪಾರ್ಥಾನವಾರಯತ್ ॥12॥
ವಿಷ್ಣು-ಶಿವ ಮತ್ತು ಷಣ್ಮುಖರಲ್ಲಿ ಯಾವ ದೇವತೆಯನ್ನು ಆರಾಧಿಸಿ ಸೈಂಧವನು ತನ್ನ ಪುತ್ರರಲ್ಲಿ ಆಸಕ್ತರಾಗಿದ್ದ ಪಾರ್ಥರನ್ನು ಕ್ರೋಧಗೊಂಡು ತಡೆದನು?
ನೈವಂ ಕೃತಂ ಮಹತ್ ಕರ್ಮ ಭೀಷ್ಮೇಣಾಜ್ಞಾಸಿಷಂ ತಥಾ।
ಸಿಂಧುರಾಟ್ತನಯಸ್ತ್ವೇಕೋ ಯಥಾ ಪಾರ್ಥಾನವಾರಯತ್ ॥ 13 ॥

ಸಿಂಧುರಾಜನ ಪುತ್ರನು ಒಬ್ಬನು ಹೇಗೆ ಪಾಂಡವರನ್ನು ತಡೆದನೋ ಅಂತಹ ದೊಡ್ಡ ಕಾರ್ಯವನ್ನು ಭೀಷ್ಮರು ಮಾಡಿದ ಕಾರ್ಯವನ್ನು ನಾನು ತಿಳಿಯಲಿಲ್ಲ (ಕೇಳಲಿಲ್ಲ).
ಸಂಜಯಃ
ದ್ರೌಪದೀಹರಣೇ ಯತ್ ತದ್ ಭೀಮಸೇನೇನ ನಿರ್ಜಿತಃ |
ಮಾನಾತ್ ಸ ತಪ್ತವಾನ್ ರಾಜನ್ ವರಾರ್ಥೀ ಸುಮಹತ್ ತಪಃ ||
ಸಂಜಯ ವನವಾಸ ಕಾಲದಲ್ಲಿ ಅವನು ದ್ರೌಪದಿಯನ್ನು ಅಪಹರಿಸಿದಾಗ ಭೀಮಸೇನನಿಂದ ಅವಮಾನಿತನಾದ ಅವನು ಎಲೈ ರಾಜನೇ, ಆ ಅವಮಾನದಿಂದ ಬೆಂದು ಹೋಗುತ್ತಾ ವರವನ್ನು ಬಯಸಿ ದೊಡ್ಡ ತಪಸ್ಸನ್ನು ಮಾಡಿದನು.
ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ಪ್ರಿಯೇಭ್ಯಃ ಸನ್ನಿವರ್ತ್ಯ ಸಃ |
ಕ್ಷುತ್ಪಿಪಾಸಾತಪಸಹಃ ಕೃಶೋ ಧಮನಿಸಂತತಃ || 15 ||
ದೇವಮಾರಾಧಯಚ್ಛರ್ವಂ ಗೃಣನ್ ಬ್ರಹ್ಮ ಸನಾತನಮ್ |
ಭಕ್ತಾನುಕಂಪೀ ಭಗವಾಂಸ್ತಸ್ಮಿಂಶ್ಚಕ್ರೇ ತತೋ ದಯಾಮ್ || 16 ||
ಇಂದ್ರಿಯಗಳನ್ನು ತಮ್ಮ ವಿಷಯಗಳಿಂದ ಹಿಂದೆ ತಿರುಗಿಸಿ, ಹಸಿವು- ನೀರಡಿಕೆ-ಬಿಸಿಲುಗಳನ್ನು ತಡೆದು ಕೃಶನಾಗಿ, ಧಮನಿ ಸಂತತನಾಗಿ, ಸನಾತನವಾದ ವೇದವನ್ನು ಪಠಿಸುತ್ತಾ, ದೇವನಾದ ಈಶ್ವರನನ್ನು ಆರಾಧಿಸಿದನು. ಭಕ್ತಾನುಕಂಪಿಯಾದ ಪೂಜ್ಯನಾದ ಈಶ್ವರನು ಅವನಲ್ಲಿ ದಯೆಯನ್ನು ಮಾಡಿದನು.
ತಸ್ಯ ಚಾಲ್ಪೇನ ಕಾಲೇನ ನಿಯಮೇನ ಸುತೋಷಿತಃ |
ಪ್ರೀತೋ ಮಹೇಶ್ವರಸ್ತಸ್ಮೈ ವರಂ ಚೇಮಂ ದದೌ ತಥಾ || 17 ||
ಅವನ ಅಲ್ಪಕಾಲದ ತಪಸ್ಸಿನಿಂದಲೇ ಸಂತುಷ್ಟನಾದ ಮಹೇಶ್ವರನು ಪ್ರೀತಿಯಿಂದ ಅವನಿಗೆ ಈ ವರವನ್ನು ನೀಡಿದನು.
ಸ್ವಪ್ನಾಂತೇಽಥ ಯಯಾವೇನಂ ಹರಃ ಸಿಂಧುಪತೇಃ ಸುತಮ್ |
ವರಂ ವೃಣೀಷ್ವ ಪ್ರೀತೋಽಸ್ಮಿ ಜಯದ್ರಥ ಕಿಮಿಚ್ಛಸಿ || 18 ||
ಜಯದ್ರಥನ ಸ್ವಪ್ನದಲ್ಲಿ ಈಶ್ವರನು ಅವನ ಬಳಿಗೆ ಹೋದನು. ಜಯದ್ರಥನೇ, ಸಂತುಷ್ಟನಾಗಿದ್ದೇನೆ, ವರವನ್ನು ಕೇಳು, ಏನು ಬಯಸುವಿ? (ಎಂದು ಕೇಳಿದನು).
ಏವಮುಕ್ತಸ್ತು ಶರ್ವೇಣ ಸಿಂಧುರಾಜೋ ಜಯದ್ರಥಃ |
ಉವಾಚ ಪ್ರಣತೋ ರುದ್ರಃ ಪ್ರಾಂಜಲಿರ್ನಿಯತಾತ್ಮವಾನ್ || 19 ||
ಈಶ್ವರನಿಂದ ಹೀಗೆ ಹೇಳಲ್ಪಟ್ಟ ಸಿಂಧುರಾಜನಾದ ಜಯದ್ರಥನು ಮನಸ್ಸನ್ನು ನಿಗ್ರಹಿಸಿ, ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ರುದ್ರನನ್ನು ಕುರಿತು ಹೀಗೆ ಹೇಳಿದನು.
ಪಾಂಡವೇಯಾನಹಂ ಸಂಖ್ಯೇ ಭೀಮವೀರ್ಯಪರಾಕ್ರಮಾನ್ |
ವಾರಯೇಯಂ ರಥೇನೈಕಃ ಸಮಸ್ತಾನಿತಿ ಭಾರತ || 20 ||
ಏವಮುಕ್ತಸ್ತು ದೇವೇಶೋ ಜಯದ್ರಥಮಥಾಬ್ರವೀತ್ || 21 ||
ಎಲೈ ಭಾರತನೇ, `ಭಯಂಕರ ಸಾಮರ್ಥ್ಯ-ಪರಾಕ್ರಮವನ್ನು ಹೊಂದಿದ ಪಾಂಡವರೆಲ್ಲರನ್ನೂ ನಾನು ಯುದ್ಧದಲ್ಲಿ ಒಂದು ರಥದಿಂದ ನಿರೋಧಿಸಬೇಕು' ಎಂದು ಕೇಳಿದನು. ಹೀಗೆ ಕೇಳಲ್ಪಟ್ಟ ದೇವೇಶನಾದ ಶಂಭುವು ಜಯದ್ರಥನನ್ನು ಕುರಿತು ಹೀಗೆ ಹೇಳಿದನು.
ದದಾಮಿ ತೇ ವರಂ ಸೌಮ್ಯ ವಿನಾ ಪಾರ್ಥಂ ಜಯದ್ರಥ |
ವಾರಯಿಷ್ಯಸಿ ಸಂಗ್ರಾಮೇ ಚತುರಃ ಪಾಂಡುನಂದನಾನ್ || 22 ||
ಜಯದ್ರಥನೇ, `ಸೌಮ್ಯನೇ, ನಾನು ನಿನಗೆ ವರವನ್ನು ಕೊಡುತ್ತೇನೆ. ನೀನು ಅರ್ಜುನನನ್ನು ಬಿಟ್ಟು ನಾಲ್ಕು ಜನ ಪಾಂಡುನಂದನರನ್ನು ಯುದ್ಧದಲ್ಲಿ ತಡೆಯುವಿ' (ಎಂದು ಹೇಳಿದನು).
ಸಂಜಯಃ
ಏವಮಸ್ತ್ವಿತಿ ದೇವೇಶಮುಕ್ತ್ವಾಽಽಗಾತ್ ಸ್ವಪುರಂ ತದಾ |
ತೇನೋಕ್ತಸ್ತಮೃತೇ ಪಾರ್ಥಂ ಜಯಂ ತಸ್ಮೈ ವರಂ ದದೌ |
ಏಕಾಹಮಿತಿ ರಾಜೇಂದ್ರ ತತ್ರೈವಾದರ್ಶನಂ ಯಯೌ || 23 ||
ಸಂಜಯ ಹಾಗೆಯೇ ಆಗಲಿ ಎಂದು ರುದ್ರನಿಗೆ ಹೇಳಿ ಜಯದ್ರಥನು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಅವನು ಕೇಳಿದುದಕ್ಕೆ ಪ್ರತಿಯಾಗಿ ಪಾರ್ಥನನ್ನು ಬಿಟ್ಟು ಉಳಿದವರ ಜಯರೂಪವಾದ ವರವನ್ನು ಅವನಿಗೆ ಕೊಟ್ಟನು. ರಾಜೇಂದ್ರನೇ, ಈ ಪಾಂಡವರ ನಿರೋಧವು ಒಂದು ದಿನ ಮಾತ್ರ ಎಂದು ಹೇಳಿ ರುದ್ರನು ಅದೃಶ್ಯನಾದನು.
ಸ ತೇನ ವರದಾನೇನ ಪರಮಾಸ್ತ್ರಬಲೇನ ಚ |
ಏಕಃ ಸಂವಾರಯಾಮಾಸ ಪಾಂಡವಾನಾಮನೀಕಿನೀಮ್ || 24 ||
ಜಯದ್ರಥನು ಆ ವರದಾನದ ಬಲದಿಂದಲೂ, ಪರಮಾಸ್ತ್ರದ ಬಲದಿಂದಲೂ ಒಬ್ಬನೇ ಪಾಂಡವರ ಸೈನ್ಯವನ್ನು ತಡೆದನು.
ತಸ್ಯ ಜ್ಯಾತಳಘೋಷೇಣ ಕ್ಷತ್ರಿಯಾನ್ ಭಯಮಾವಿಶತ್ |
ಪರೇಷಾಂ ತವ ಸೈನ್ಯಸ್ಯ ಹರ್ಷಃ ಪರಮಕೋಽಭವತ್ || 25 ||
ಅವನ ಜ್ಯಾತಳ ಘೋಷದಿಂದ ಶತ್ರುಗಳ ಸೈನಿಕರಿಗೆ ಭಯವುಂಟಾಯಿತು. ನಿನ್ನ ಸೈನ್ಯಕ್ಕೆ ಪರಮ ಹರ್ಷವುಂಟಾಯಿತು.
ದೃಷ್ಟ್ವಾ ತಂ ಕ್ಷತ್ರಿಯಾ ಭಾರಂ ಸೈಂಧವೇ ಮಹದರ್ಪಿತಮ್ |
ಉತ್ಕ್ರುಶ್ಯಾಭ್ಯದ್ರವನ್ ರಾಜನ್ ಯೇನ ಯೌಧಿಷ್ಠಿರಂ ಬಲಮ್ || 26 ||
ರಾಜನೇ, ಕ್ಷತ್ರಿಯರು ಸೈಂಧವನ ಮೇಲೆ ಅರ್ಪಿತವಾದ ದೊಡ್ಡ ಭಾರವನ್ನು ನೋಡಿ ಸಿಂಹನಾದವನ್ನು ಮಾಡುತ್ತಾ ಯುಧಿಷ್ಠಿರನ

ಸೈನ್ಯವಿದ್ದ ಕಡೆಗೆ ಓಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತೆರಡನೆಯ ಅಧ್ಯಾಯ
ರುದ್ರನ ವರಬಲದಿಂದ ಜಯದ್ರಥನಿಂದ ಪಾಂಡವರ ನಿರೋಧ.
ಸಂಜಯಃ
ಯನ್ಮಾಂ ಪೃಚ್ಛಸಿ ಸೌಹಾರ್ದಾತ್ ಸಿಂಧುರಾಜಸ್ಯ ವಿಕ್ರಮಮ್ |
ಶೃಣು ತತ್ ಸ ಯಥಾ ರಾಜನ್ ಕ್ರುದ್ಧಾನ್ ಪಾರ್ಥಾನವಾರಯತ್ ॥
ಸಂಜಯ ರಾಜನೇ, ಸೈಂಧವನ ಮೇಲಿನ ಸ್ನೇಹದಿಂದ ನೀನು ಅವನ ಪರಾಕ್ರಮವನ್ನು ಕೇಳುತ್ತಿದ್ದೀಯಷ್ಟೇ? ಅವನು ಹೇಗೆ
ಕ್ರುದ್ಧರಾದ ಪಾಂಡವರನ್ನು ತಡೆದನೆಂದು ಕೇಳು.
ತಮೂಹುಃ ಸಾರಥೇರ್ವಶ್ಯಾಃ ಸೈಂಧವಂ ಸಾಧುವಾಹಿನಃ |
ವಿಕುರ್ವಾಣಾ ಬೃಹಂತೋಽಶ್ವಾಃ ಶ್ವಸನೋಪಮರಂಹಸಃ ॥ 2 ॥
ಅವನನ್ನು ಸಾರಥಿಗೆ ವಶವರ್ತಿಗಳಾದ, ವಿಧವಿಧವಾದ ಕಾರ್ಯಗಳನ್ನು ಮಾಡುವ, ವಾಯುವೇಗವನ್ನು ಹೊಂದಿದ, ಚೆನ್ನಾಗಿ
ರಥವನ್ನು ಎಳೆಯುವ ಸೈಂಧವ ದೇಶದ ದೊಡ್ಡ ಅಶ್ವಗಳು ಎಳೆದುಕೊಂಡು ಹೋದವು.
ಗಂಧರ್ವನಗರಾಕಾರಂ ವಿಧಿವತ್ ಕಲ್ಪಿತಂ ರಥಮ್ |
ತಸ್ಯ ತ್ವಶೋಭಯತ್ ಕೇತುರ್ವಾರಾಹೋ ರಾಜತೋ ಮಹಾನ್ ॥3॥
ಗಂಧರ್ವನಗರದಂತೆ ಶಾಸ್ತ್ರೋಕ್ತವಾಗಿ ಸಿದ್ಧಪಡಿಸಿದ ಅವನ ರಥವನ್ನು ರಜತಮಯವಾದ ದೊಡ್ಡ ವರಾಹಧ್ವಜವು
ಶೋಭೆಗೊಳಿಸಿತು.
ಶ್ವೇತಚ್ಛತ್ರಪತಾಕಾಭಿಃ ಚಾಮರವ್ಯಜನೇನ ಚ |
ಸ ಬಭೌ ಯುದ್ಧಲಿಂಗೈಸ್ತೈಸ್ತಾರಾಪತಿರಿವಾಂಬರೇ ॥ 4 ॥
ಯುದ್ಧ ಚಿಹ್ನೆಗಳಾದ ಶ್ವೇತಚ್ಛತ್ರ-ಪತಾಕೆಗಳಿಂದಲೂ, ಚಾಮರ ವ್ಯಜನಗಳಿಂದಲೂ ಸಹಿತನಾದ ಅವನು ಆಕಾಶದಲ್ಲಿ
ನಕ್ಷತ್ರ-ಪತಿಯಾದ ಚಂದ್ರನಂತೆ ಶೋಭಿಸಿದನು.
ಮುಕ್ತಾವಜ್ರೈಃ ಸಮಣಿಭಿರ್ಭೂಷಿತಂ ತದಯಸ್ಮಯಮ್ |
ವರೂಥಂ ವಿಬಭೌ ತಸ್ಯ ಜ್ಯೋತಿರ್ಭಿಃ ಖಮಿವಾಚಿತಮ್ ॥ 5 ॥
ಮುತ್ತು-ವಜ್ರಗಳಿಂದಲೂ, ಶ್ರೇಷ್ಠ ಮಣಿಗಳಿಂದಲೂ ಭೂಷಿತವಾದ ಅವನ ಅಯಸ್ಮಯವಾದ ಕವಚವು ಜ್ಯೋತಿಗಳಿಂದ ಖಚಿತವಾದ
ಆಕಾಶದಂತೆ ಶೋಭಿಸಿತು.
ಸ ವಿಸ್ಫಾರ್ಯ ಮಹಚ್ಚಾಪಂ ಕಿರನ್ನಿಷುಗಣಾನ್ ಬಹೂನ್ |
ತತ್ಖಂಡಂ ಪೂರಯಾಮಾಸ ಯದಾರ್ಜುನಿರದಾರಯತ್ ॥ 6 ॥
ಅವನು ತನ್ನ ದೊಡ್ಡ ಧನುಸ್ಸನ್ನು ಎಳೆದು ಬಾಣಸಮೂಹಗಳನ್ನು ಸೃಷ್ಟಿಸುತ್ತಾ ಅಭಿಮನ್ಯುವು ಉಂಟುಮಾಡಿದ್ದ ಭಗ್ನವಾದ
ಪ್ರದೇಶವನ್ನು ತುಂಬಿದನು.
ಸ ಸಾತ್ಯಕಿಂ ತ್ರಿಭಿರ್ಬಾಣೈರಷ್ಟಭಿಶ್ಚ ವೃಕೋದರಮ್ |
ಧೃಷ್ಟದ್ಯುಮ್ನಂ ಪುನಃ ಷಷ್ಟ್ಯಾ ವಿರಾಟಂ ದಶಭಿಃ ಶರೈಃ ॥ 7 ॥
ದ್ರುಪದಂ ಪಂಚಭಿಸ್ತೀಕ್ಷ್ಣೈರ್ದಶಭಿಶ್ಚ ಶಿಖಂಡಿನಮ್ |
ಕೇಕಯಾನ್ ಪಂಚವಿಂಶತ್ಯಾ ದ್ರೌಪದೇಯಾಂಸ್ತ್ರಿಭಿಸ್ತ್ರಿಭಿಃ ॥ 8 ॥
ಯುಧಿಷ್ಠಿರಂ ತು ಸಪ್ತತ್ಯಾ ವಿದ್ಧ್ವಾ ಶೇಷಾನಪಾನುದತ್ |
ಇಷುಜಾಲೇನ ಮಹತಾ ತದದ್ಭುತಮಿವಾಭವತ್ ॥ 9 ॥
ಅವನು ಸಾತ್ಯಕಿಯನ್ನು ಮೂರು ಬಾಣಗಳಿಂದಲೂ, ಭೀಮಸೇನನನ್ನು ಎಂಟು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಪುನಃ
ಅರವತ್ತು ಬಾಣಗಳಿಂದಲೂ, ವಿರಾಟನನ್ನು ಹತ್ತು ಬಾಣಗಳಿಂದಲೂ, ದ್ರುಪದನನ್ನು ಐದು ತೀಕ್ಷ್ಣವಾದ ಬಾಣಗಳಿಂದಲೂ,
ಶಿಖಂಡಿಯನ್ನು ಹತ್ತು ಬಾಣಗಳಿಂದಲೂ, ಕೇಕಯರನ್ನು ಇಪ್ಪತ್ತೈದು ಬಾಣಗಳಿಂದಲೂ, ದ್ರೌಪದಿಯ ಪುತ್ರರನ್ನು ಮೂರು-ಮೂರು
ಬಾಣಗಳಿಂದಲೂ, ಯುಧಿಷ್ಠಿರನನ್ನು ಎಪ್ಪತ್ತು ಬಾಣಗಳಿಂದಲೂ ಹೊಡೆದು ಉಳಿದವರನ್ನು ತನ್ನ ಬಾಣಗಳ ದೊಡ್ಡ
ಸಮೂಹದಿಂದ ದೂರ ಓಡಿಸಿದನು. ಅದು ಅದ್ಭುತವಾಗಿದ್ದಿತು.
ಅಥಾಸ್ಯ ಶಿತಪೀತೇನ ಭಲ್ಲೇನೋದ್ದಿಶ್ಯ ಕಾರ್ಮುಕಮ್ |
ಚಿಚ್ಛೇದ ಪ್ರಹಸನ್ ರಾಜಾ ಧರ್ಮಪುತ್ರಃ ಪ್ರತಾಪವಾನ್ ॥ 10 ॥
ಆಗ ಪ್ರತಾಪಶಾಲಿಯಾದ ಧರ್ಮರಾಜನು ನಗುತ್ತಾ, ಹರಿತವಾದ ಮತ್ತು ನೀರನ್ನು ಕುಡಿಸಿ ಹದ ಮಾಡಿದ ಅವನ ಭಲ್ಲದಿಂದ
ಜಯದ್ರಥನ ಧನುಸ್ಸನ್ನು ಕತ್ತರಿಸಿದನು.
ಅಕ್ಷ್ಣೋರ್ನಿಮೇಷಮಾತ್ರಾತ್ ತು ಸೋಽನ್ಯದಾದಾಯ ಕಾರ್ಮುಕಮ್ |

ವಿವ್ಯಾಧ ದಶಭಿಃ ಪಾರ್ಥಂ ತಾಂಶ್ಚೈವಾನ್ಯಾಂಸ್ತ್ರಿಭಿಸ್ತ್ರಿಭಿಃ ॥ 11 ॥
ಕಣ್ಣುಗಳನ್ನು ಮುಚ್ಚಿ ಬಿಡುವಷ್ಟರಲ್ಲಿ ಜಯದ್ರಥನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಯುಧಿಷ್ಠಿರನನ್ನು ಹತ್ತು ಬಾಣಗಳಿಂದಲೂ, ಉಳಿದವರನ್ನು ಮೂರು- ಮೂರು ಬಾಣಗಳಿಂದಲೂ ಹೊಡೆದನು.
ತಸ್ಯ ತಲ್ಲಾಘವಂ ಜ್ಞಾತ್ವಾ ಭೀಮೋ ಭಲ್ಲೈಸ್ತ್ರಿಭಿಸ್ತ್ರಿಭಿಃ ।
ಧನುರ್ಧ್ವಜಂ ಚ ಚ್ಛತ್ರಂ ಚ ಕ್ಷಿತೌ ಕ್ಷಿಪ್ರಮಪಾತಯತ್ ॥ 12 ॥
ಅವನ ಆ ಕ್ಷಿಪ್ರತೆಯನ್ನು ನೋಡಿ ಭೀಮನು ಮೂರು-ಮೂರು ಭಲ್ಲಗಳಿಂದ ಅವನ ಧನುಸ್ಸನೂಶನ-ಧ್ವಜವನ್ನೂ ಮತ್ತು ಛತ್ರವನ್ನೂ ಭೂಮಿಯಲ್ಲಿ ಶೀಘ್ರವಾಗಿ ಕೆಡವಿದನು.
ಸೋಽನ್ಯದಾದಾಯ ಬಲವತ್ ಸಜ್ಯಂ ಕೃತ್ವಾ ತು ಕಾರ್ಮುಕಮ್ ।
ಭೀಮಸ್ಯೋನ್ಮಾಥಯತ್ ಕೇತುಂ ಧನುರಶ್ವಾಂಶ್ಚ ಮಾರಿಷ ॥ 13 ॥
ಎಲೈ ಪೂಜ್ಯನೇ, ಅವನು ಇನ್ನೊಂದು ದೃಢವಾದ ಧನುಸ್ಸನ್ನು ತೆಗೆದುಕೊಂಡು ಹೆದೆಯೇರಿಸಿ ಭೀಮಸೇನನ ಅಶ್ವಗಳನ್ನೂ ಮತ್ತು ಧನುಸ್ಸನ್ನೂ ವಿನಾಶಗೊಳಿಸಿದನು.
ಸ ಹತಾಶ್ವಾದವಪ್ಲುತ್ಯ ಚ್ಛಿನ್ನಧನ್ವಾ ರಥೋತ್ತಮಾತ್ ।
ಸತ್ಯಕಸ್ಯಾಪ್ಲುತೋ ಯಾನಂ ಗಿರ್ಯಗ್ರಮಿವ ಕೇಸರೀ ॥ 14 ॥
ಧನುಸ್ಸು ಕತ್ತರಿಸಲ್ಪಟ್ಟ ಭೀಮಸೇನನು ಅಶ್ವಗಳು ಮೃತವಾದ ತನ್ನ ಶ್ರೇಷ್ಠ ರಥದಿಂದ ಸಾತ್ಯಕಿಯ ರಥಕ್ಕೆ ಸಿಂಹವು ಗಿರಿಶಿಖರಕ್ಕೆ ಹಾರುವಂತೆ ಹಾರಿದನು.
ತತಸ್ತ್ವದೀಯಾಃ ಸಂಹೃಷ್ಟಾಃ ಸಾಧು ಸಾಧ್ವಿತಿ ಚುಕ್ರುಶುಃ ।
ಸಿಂಧುರಾಜಸ್ಯ ತತ್ ಕರ್ಮ ಪ್ರೇಕ್ಷ ಿಯ ಶ್ರದ್ಧೇಯಮುತ್ತಮಮ್ ॥ 15 ॥
ಸೈಂಧವನ ನಂಬಲು ಅರ್ಹವಾದ ಶ್ರೇಷ್ಠವಾದ ಆ ಕರ್ಮವನ್ನು ನೋಡಿ ನಿನ್ನವರು `ಸಾಧು-ಸಾಧು' ಎಂದು ಕಿರುಚಿದರು.
ಸಂಕ್ರುದ್ಧಾನ್ ಪಾಂಡವಾನೇಕೋ ಯದ್ ದಧಾರಾಸ್ತ್ರತೇಜಸಾ ।
ತತ್ ತಸ್ಯ ಕರ್ಮ ಭೂತಾನಿ ಸರ್ವಾಣ್ಯೇವಾಭ್ಯಪೂಜಯನ್ ॥ 16 ॥
ಸಂಕ್ರುದ್ಧರಾದ ಪಾಂಡವರನ್ನು ಒಬ್ಬನೇ ತನ್ನ ಅಸ್ತ್ರತೇಜಸ್ಸಿನಿಂದ ಹಿಡಿದು ನಿವಾರಿಸಿದುದನ್ನು ನೋಡಿ ಅವನ ಆ ಕರ್ಮವನ್ನು ಎಲ್ಲ ಭೂತಗಳೂ ಪೂಜಿಸಿದವು.
ಸೌಭದ್ರೇಣ ಹತೈಃ ಪೂರ್ವಂ ಸೋತ್ತರಾಯುಧಿಭಿರ್ದ್ವಿಪೈಃ ।
ಪಾಂಡೂನಾಮಾವೃತಃ ಪಂಥಾಃ ಸೈಂಧವೇನ ಚ ವಾರಿತಃ ॥ 17 ॥
ಮೊದಲು ಅಭಿಮನ್ಯುವಿನಿಂದ ಹತವಾದ ಆಯುಧಧಾರಿಗಳಾದ ಗಜಾರೋಹಿಗಳಿಂದ ಸಹಿತವಾದ ಗಜಗಳಿಂದ ಆವೃತವಾಗಿದ್ದ ಪಾಂಡವರ ಮಾರ್ಗವು ಸೈಂಧವನಿಂದಲೂ ತಡೆಯಲ್ಪಟ್ಟಿತು.
ಯತಮಾನಾಸ್ತು ತೇ ವೀರಾಃ ಪಾಂಚಾಲಾ ಮತ್ಸ್ಯಕೇಕಯಾಃ ।
ಪಾಂಡವಾಶ್ಚಾನ್ವಪದ್ಯಂತ ಪ್ರತಿಶೇಕುರ್ನ ಸೈಂಧವಮ್ ॥ 18 ॥
ವೀರರಾದ ಪಾಂಚಾಲರೂ, ಮತ್ಸ್ಯರೂ, ಕೇಕಯರೂ ಮತ್ತು ಪಾಂಡವರು ಪ್ರಯತ್ನಪಟ್ಟು ಸೈಂಧವನ ಬಳಿಗೆ ಬಂದರು. ಆದರೆ ಯಾರೂ ಅವನನ್ನು ದಾಟಿ ಹೋಗಲು ಸಮರ್ಥರಾಗಲಿಲ್ಲ.
ಯೋ ಯೋ ಹಿ ಯತತೇ ಭೇತ್ತುಂ ದ್ರೋಣಾನೀಕಂ ತವಾಹಿತಃ ।
ತಂ ತಂ ದೇವಾದ್ ವರಂ ಪ್ರಾಪ್ಯ ಸೈಂಧವಃ ಪ್ರತ್ಯವಾರಯತ್ ॥ 19 ॥
ಯಾವ ಯಾವ ನಿನ್ನ ಶತ್ರುವು ದ್ರೋಣರ ವ್ಯೂಹವನ್ನು ಭೇದಿಸಲು ಪ್ರಯತ್ನಪಡುತ್ತಾನೆಯೋ, ಆಯಾ ಯೋಧನನ್ನು ಈಶ್ವರನಿಂದ ಪಡೆದ ವರಬಲದಿಂದ ಸೈಂಧವನು ತಡೆದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ಮೂರನೆಯ ಅಧ್ಯಾಯ
ಅಭಿಮನ್ಯುವಿನ ಪರಾಕ್ರಮದ ವರ್ಣನೆ.
ಸಂಜಯಃ
ಸೈಂಧವೇನ ನಿರುದ್ಧೇಷು ಜಯಗೃದ್ಧಿಷು ಪಾಂಡುಷು ।
ಸುಘೋರಮಭವದ್ ಯುದ್ಧಂ ತ್ವದೀಯಾನಾಂ ಪರೈಃ ಸಹ ॥ 1 ॥
ಸಂಜಯ ಜಯಾಕಾಂಕ್ಷಿಗಳಾದ ಪಾಂಡವರು ಸೈಂಧವನಿಂದ ತಡೆಯಲ್ಪಡುತ್ತಿರಲು ನಿನ್ನವರಿಗೂ ಮತ್ತು ಶತ್ರುಗಳಿಗೂ ಘೋರವಾದ ಯುದ್ಧವು ನಡೆಯಿತು.
ಪ್ರವಿಶ್ಯ ತ್ವಾರ್ಜುನಿಃ ಸೇನಾಂ ಸತ್ಯಸಂಧೋ ದುರಾಸದಾಮ್ ।
ವ್ಯಕ್ಷೋಭಯತ ತೇಜಸ್ವೀ ಸಾಗರಂ ಮಕರೋ ಯಥಾ ॥ 2 ॥
ಸತ್ಯಸಂಧನೂ, ತೇಜಸ್ವಿಯೂ ಆದ ಅಭಿಮನ್ಯುವು ದುರಾಸದವಾದ ಕೌರವ ಸೈನ್ಯವನ್ನು ಪ್ರವೇಶಿಸಿ, ಮೊಸಳೆಯು ಸಾಗರವನ್ನು ಕ್ಷೋಭೆಗೊಳಿಸುವಂತೆ ಕ್ಷೋಭೆಗೊಳಿಸಿದನು.

ತಂ ತಥಾ ಶರಜಾಲೇನ ಚ್ಛಾದಯಂತಮರಿಂದಮಮ್ |
ಯಥಾಪ್ರಧಾನಾಃ ಸೌಭದ್ರಮಭ್ಯಯುಃ ಕುರುಸತ್ತಮಾಃ ॥ 3 ॥
ಆ ರೀತಿಯಲ್ಲಿ ಬಾಣಸಮೂಹಗಳಿಂದ ಎಲ್ಲವನ್ನೂ ಮುಚ್ಚುತ್ತಿರುವ ಅರಿಂದಮನಾದ ಅಭಿಮನ್ಯುವನ್ನು ಪ್ರಧಾನರಿಗೆ ಅನುಗುಣವಾಗಿ ಕುರುಶ್ರೇಷ್ಠರು ಸಮೀಪಿಸಿದರು.
ತೇಷಾಂ ತಸ್ಯ ಚ ಸಮ್ಮರ್ದೋ ದಾರುಣಃ ಸಮಪದ್ಯತ |
ಸೃಜತಾಂ ಶರವರ್ಷಾಣಿ ಸಂಸಕ್ತಮಮಿತೌಜಸಾಮ್ ॥ 4 ॥
ಅಮಿತಪರಾಕ್ರಮಿಗಳಾಗಿ, ಪರಸ್ಪರ ಸಂಸಕ್ತವಾಗಿ ಬಾಣವರ್ಷವನ್ನು ಸೃಷ್ಟಿಸುವ ಅವರಿಗೂ ಮತ್ತು ಅಭಿಮನ್ಯುವಿಗೂ ದಾರುಣವಾದ ಸಂಘರ್ಷವು ಉಂಟಾಯಿತು.
ರಥವ್ರಾತೇನ ಸಂಯುಕ್ತಃ ತೈರಮಿತ್ರೈರಥಾರ್ಜುನಿಃ |
ವೃಷಸೇನಸ್ಯ ಯಂತಾರಂ ಹತ್ವಾ ಚಿಚ್ಛೇದ ಕಾರ್ಮುಕಮ್ ॥ 5 ॥
ಶತ್ರುಗಳ ರಥಸಮೂಹದಿಂದ ಸಂಯುಕ್ತನಾದ ಅಭಿಮನ್ಯುವು ವೃಷಸೇನನ ಸಾರಥಿಯನ್ನು ಕೊಂದು ಅವನ ಧನುಸ್ಸನ್ನು ಕತ್ತರಿಸಿದನು.
ತಂ ಚ ವಿವ್ಯಾಧ ಬಲವಾಂಸ್ತಸ್ಯ ಚಾಶ್ವಾನಜಿಹ್ಮಗೈಃ |
ವಾತಾಯಮಾನೈಸ್ತೈರಶ್ವೈರ್ನಿಸ್ಸಂಜ್ಞೋಽಪಹೃತೋ ರಣಾತ್ ॥ 6 ॥
ಬಲಿಷ್ಠನಾದ ಅಭಿಮನ್ಯುವು ಅವನನ್ನೂ ಹೊಡೆದು ನೇರವಾಗಿ ಸಾಗುವ ಬಾಣಗಳಿಂದ ಅವನ ಅಶ್ವಗಳನ್ನೂ ಹೊಡೆದನು. ವಾಯುವೇಗವನ್ನು ಹೊಂದಿದ ಅವನ ಅಶ್ವಗಳು ಪ್ರಜ್ಞಾಹೀನನಾದ ಅವನನ್ನು ರಣರಂಗದಿಂದ ಹೊರಗೆ ಕರೆದುಕೊಂಡು ಹೋದವು.
ತೇನಾಂತರೇಣಾಭಿಮನ್ಯೋರ್ಯಂತಾ ನಿಃಸಾರಯದ್ ರಥಮ್ |
ರಥವ್ರಜಾಸ್ತತೋ ಹೃಷ್ಟಾಃ ಸಾಧು ಸಾಧ್ವಿತಿ ಚುಕ್ರುಶುಃ ॥ 7 ॥
ಈ ಮಧ್ಯದಲ್ಲಿ ಅಭಿಮನ್ಯುವಿನ ಸಾರಥಿಯು ಅವನ ರಥವನ್ನು ಸ್ವಲ್ಪ ಹಿಂದೆ ಸರಿಸಿದನು. ಆಗ ರಥಸಮೂಹಗಳು ಸಂತೋಷಗೊಂಡು `ಸಾಧು-ಸಾಧು' ಎಂದು ಕಿರುಚಿದವು.
ತಂ ತು ಸಿಂಹಮಿವ ಕ್ರುದ್ಧಂ ಪ್ರಮಥ್ನಂತಂ ಶರೈರರೀನ್ |
ಆರಾದಾಯಾಂತಮಾಲೋಕ್ಯ ವಸಾತಿಃ ಸೋಽಭ್ಯಯಾದ್ ದ್ರುತಮ್ ॥
ಕೋಪಗೊಂಡ ಸಿಂಹದಂತೆ ಬಾಣಗಳಿಂದ ಶತ್ರುಗಳನ್ನು ಮರ್ದಿಸುತ್ತಿರುವ ಅಭಿಮನ್ಯುವು ದೂರದಿಂದ ಬರುತ್ತಿರುವುದನ್ನು ನೋಡಿ ವಸಾತಿ ರಾಜನು ಶೀಘ್ರವಾಗಿ ಬಂದನು.
ಸೋಽಭಿಮನ್ಯುಂ ಶರೈಃ ಷಷ್ಟ್ಯಾ ರುಗ್ಮಪುಂಖೈರವಾಕಿರತ್ |
ಅಬ್ರವೀಚ್ಚ ನ ಮೇ ಜೀವನ್ ಜೀವತೋ ಯುಧಿ ಮೋಕ್ಷ್ಯಸೇ ॥ 9 ॥
ಅವನು ಅಭಿಮನ್ಯುವನ್ನು ರುಗ್ಮಪುಂಖಗಳನ್ನು ಹೊಂದಿದ್ದ ಅರವತ್ತು ಬಾಣಗಳಿಂದ ಹೊಡೆದು, ನಾನು ಬದುಕಿರುವಾಗ ನೀನು ಜೀವಸಹಿತವಾಗಿ ನನ್ನಿಂದ ಹೋಗುವುದಿಲ್ಲ ಎಂದು ಹೇಳಿದನು.
ತಮಯಸ್ಮಯವರ್ಮಾಣಮಿಷುಣಾ ತ್ವಾಶುಪಾತಿನಾ |
ಹೃದಿ ವಿವ್ಯಾಧ ಸೌಭದ್ರಃ ಸ ಪಪಾತ ವ್ಯಸುಃ ಕ್ಷಿತೌ ॥ 10 ॥
ಅಭಿಮನ್ಯುವು ಕಬ್ಬಿಣದ ಕವಚವನ್ನು ಧರಿಸಿದ ಅವನನ್ನು ಶೀಘ್ರವಾದ ಬಾಣದಿಂದ ಹೃದಯದಲ್ಲಿ ಹೊಡೆದನು. ಅವನು ಮೃತನಾಗಿ ಭೂಮಿಯ ಮೇಲೆ ಬಿದ್ದನು.
ವಸಾತಿಂ ನಿಹತಂ ದೃಷ್ಟ್ವಾ ಕ್ರುದ್ಧಾಃ ಕ್ಷತ್ರಿಯಪುಂಗವಾಃ |
ಪರಿವವ್ರುಸ್ತದಾ ರಾಜನ್ ತವ ಪೌತ್ರಂ ಜಿಘಾಂಸವಃ ॥ 11 ॥
ವಿಷ್ಫಾರಯಂತಶ್ಚಾಪಾನಿ ನಾನಾರೂಪಾಣ್ಯನೇಕಶಃ |
ತದ್ ಯುದ್ಧಮಭವದ್ ರೌದ್ರಂ ಸೌಭದ್ರಸ್ಯಾರಿಭಿಃ ಸಹ ॥ 12 ॥
ವಸಾತಿಯು ನಿಹತನಾದುದನ್ನು ನೋಡಿ ಕೋಪಗೊಂಡ ಕ್ಷತ್ರಿಯ ಶ್ರೇಷ್ಠರು ತಮ್ಮ ನಾನಾ ವಿಧವಾದ ಧನುಸ್ಸುಗಳನ್ನು ಅನೇಕ ರೀತಿಯಲ್ಲಿ ಎಳೆಯುತ್ತಾ ನಿನ್ನ ಪೌತ್ರನನ್ನು ಕೊಲ್ಲಲು ಬಯಸಿ ಅವನನ್ನು ಸುತ್ತುವರಿದರು. ಅಭಿಮನ್ಯುವಿಗೂ ಮತ್ತು ಅವನ ಶತ್ರುಗಳಿಗೂ ಘೋರವಾದ ಯುದ್ಧವು ನಡೆಯಿತು.
ತೇಷಾಂ ಶರಾನ್ ಸೇಷ್ವಸನಾನ್ ಶರೀರಾಣಿ ಶಿರಾಂಸಿ ಚ |
ಸಕುಂಡಲಾನಿ ಸ್ರಗ್ವೀಣಿ ಕ್ರುದ್ಧಶ್ಚಿಚ್ಛೇದ ಫಾಲ್ಗುನಿಃ ॥ 13 ॥
ಕೋಪಗೊಂಡ ಅಭಿಮನ್ಯುವು ಅವರ ಧನುರ್ಬಾಣಗಳನ್ನೂ, ಶರೀರಗಳನ್ನೂ, ಹೂಮಾಲೆಯನ್ನು ಧರಿಸಿದ ಅವರ ಕುಂಡಲ ಸಹಿತವಾದ ಶಿರಸ್ಸುಗಳನ್ನೂ ಕತ್ತರಿಸಿದನು.
ಸಖಡ್ಗಾಃ ಸಾಂಗುಲತ್ರಾಣಾಃ ಸಪಟ್ಟಿಸಪರಶ್ವಧಾಃ |
ಅದೃಶ್ಯಂತ ಭುಜಾಶ್ಛಿನ್ನಾ ನಾನಾಭರಣಭೂಷಿತಾಃ ॥ 14 ॥
ಖಡ್ಗಸಹಿತವಾದ, ಅಂಗುಲಿತ್ರಾಣ ಸಹಿತವಾದ, ಪಟ್ಟಿಸ-ಪರಶ್ವಧಗಳನ್ನು ಹಿಡಿದ, ನಾನಾಭರಣ ಭೂಷಿತವಾದ ಭುಜಗಳು ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಿರುವುದು ಕಂಡುಬಂದವು.
ಸ್ರಗ್ಭಿರಾಭರಣೈರ್ವಸ್ತ್ರೈಃ ಪತಿತೈರ್ವಿವಿಧೈರ್ಧ್ವಜೈಃ |
ವರ್ಮಭಿಶ್ಚರ್ಮಭಿರ್ಹಾರೈರ್ಮುಕುಟೈಶ್ಛತ್ರಚಾಮರೈಃ ॥ 15 ॥

ಅವಸ್ಕರೈರಧಿಷ್ಠಾನೈರೀಷಾದಂಡಕಬಂಧುರೈಃ |
ಚಕ್ರೈರ್ವಿಮಥಿತೈರಕ್ಷೈರ್ಭಗ್ನೈಶ್ಚ ಬಹುಧಾ ರಥೈಃ ॥ 16 ॥
ಪಾದಾತೈರನುಕರ್ಷೈಶ್ಚ ರಥಿಸಾರಥಿವಾಜಿಭಿಃ |
ರಥೈಶ್ಚ ಭಗ್ನೈರ್ನಾಗೈಶ್ಚ ಪಾದಾತೈಶ್ಚಾಸ್ತೃತಾ ಮಹೀ ॥ 17 ॥
ಭೂಮಿಯ ಮೇಲೆ ಬಿದ್ದ ಹೂಮಾಲೆಗಳು, ಆಭರಣಗಳು, ವಸ್ತ್ರಗಳು, ವಿಧವಿಧವಾದ ಧ್ವಜಗಳು, ಕವಚಗಳು, ಗುರಾಣಿಗಳು, ಮಾಲೆಗಳು, ಮುಕುಟಗಳು, ಛತ್ರ-ಚಾಮರಗಳು, ರಥದ ಅವಸ್ಕಾರಗಳು, ಅಧಿಷ್ಠಾನಗಳು, ಈಷಾದಂಡಗಳು, ಮುಖ್ಯ ಮರಗಳು, ನೊಗಗಳು, ಭಗ್ನವಾದ ಚಕ್ರಗಳು, ಭಗ್ನವಾದ ಅಕ್ಷಗಳು, ಇವುಗಳನ್ನು ಹೊಂದಿದ ಬಹುವಿಧವಾದ ರಥಗಳು, ಪದಾತಿಗಳು, ಅನುಕರ್ಷಗಳು, ರಥಿ-ಸಾರಥಿ- ಅಶ್ವಗಳು, ಭಗ್ನವಾದ ರಥಗಳು, ಭಗ್ನವಾದ ಗದೆಗಳು ಮತ್ತು ಪದಾತಿಗಳು ಇವುಗಳಿಂದ ರಣಭೂಮಿಯು ಹರಡಲ್ಪಟ್ಟಿತು.
ನಿಹತೈಃ ಕ್ಷತ್ರಿಯೈಃ ಶೂರೈರ್ನಾನಾಜನಪದೇಶ್ವರೈಃ |
ಜಯಗೃದ್ಧೈರ್ಹತೈರ್ಭೂಮಿರ್ದಾರುಣಾ ಸಮಪದ್ಯತ ॥ 18 ॥
ಜಯವನ್ನು ಅಪೇಕ್ಷಿಸಿದ ಹತರಾದ ಕ್ಷತ್ರಿಯರಿಂದ ಮತ್ತು ನಾನಾ ದೇಶದ ಶೂರರಾದ ರಾಜರುಗಳಿಂದ ಆವೃತವಾದ ಭೂಮಿಯು ದಾರುಣವಾಗಿ ಪರಿಣತವಾಯಿತು.
ದಿಶೋ ವಿಚರತಸ್ತಸ್ಯ ಸರ್ವಾಶ್ಚ ಪ್ರದಿಶಸ್ತಥಾ |
ರಣೇಽಭಿಮನ್ಯೋಃ ಕ್ರುದ್ಧಸ್ಯ ರೂಪಮಂತರಧೀಯತ ॥ 19 ॥
ಎಲ್ಲ ದಿಕ್ಕು-ವಿದಿಕ್ಕುಗಳಲ್ಲಿಯೂ ಸಂಚರಿಸುವ ಕ್ರುದ್ಧನಾದ ಅಭಿಮನ್ಯುವಿನ ರೂಪವು (ಸ್ವಲ್ಪ ಕಾಲ) ಅಂತರ್ಧಾನವನ್ನು ಹೊಂದಿತು.
ಕಾಂಚನಂ ಯದ್ಧಿ ತಸ್ಯಾಸೀದ್ ವರ್ಮ ಚಾಭರಣಾನಿ ಚ |
ಧನುಷಶ್ಚ ಶರಾಣಾಂ ಚ ತದಪಶ್ಯಾಮ ಕೇವಲಮ್ ॥ 20 ॥
ಸುವರ್ಣಮಯವಾದ ಅವನ ಕವಚ, ಆಭರಣಗಳು, ಧನುಸ್ಸಿನ ಮತ್ತು ಬಾಣಗಳ ಆಭರಣಗಳು ಮಾತ್ರ ನಮಗೆ ಕಂಡವು.
ತಂ ತದಾ ನಾಶಕದ್ ದ್ರಷ್ಟುಂ ಚಕ್ಷುರ್ಭ್ಯಾಂ ಕಶ್ಚಿದಾಹವೇ |
ಆದದಾನಂ ಶರೈರ್ಯೋಧಾನ್ ಮಧ್ಯೇ ಸೂರ್ಯಮಿವ ಸ್ಥಿತಮ್ ॥
ಆಕಾಶದ ಮಧ್ಯದಲ್ಲಿರುವ ಸೂರ್ಯನಂತಿದ್ದ, ಬಾಣಗಳಿಂದ ಯೋಧರನ್ನು ಸಂಹರಿಸುತ್ತಿದ್ದ ಅವನನ್ನು ರಣರಂಗದಲ್ಲಿ ತಮ್ಮ ಕಣ್ಣುಗಳಿಂದ ನೋಡಲು ಯಾವನೂ ಸಮರ್ಥನಾಗಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ನಾಲ್ಕನೆಯ ಅಧ್ಯಾಯ
ಅಭಿಮನ್ಯುವಿನಿಂದ ದುರ್ಯೋಧನನ ಪರಾಜಯ.
ಸಂಜಯಃ
ಆದದಾನಸ್ತು ಶೂರಾಣಾಮಾಯೂಂಷ್ಯಭವದಾರ್ಜುನಿಃ |
ಅಂತಕಃ ಸರ್ವಭೂತಾನಾಂ ಪ್ರಾಣಾನ್ ಕಾಲ ಇವಾಗತಃ ॥ 1 ॥
ಸಂಜಯ ಅಭಿಮನ್ಯುವು ಶೂರರ ಆಯುಸ್ಸನ್ನು ಅಪಹರಿಸುತ್ತಾ, ಮೃತ್ಯುಕಾಲ ಒದಗಿದಾಗ ಸರ್ವಭೂತಗಳ ಪ್ರಾಣಗಳನ್ನು ಅಪಹರಿಸುವ ಯಮನಂತೆ ಮುಂದೆ ಬಂದನು.
ಸ ಶಕ್ರಸಮವಿಕ್ರಾಂತಃ ಶಕ್ರಸೂನೋಃ ಸುತೋ ಬಲೀ |
ಅಭಿಮನ್ಯುಸ್ತದಾಽನೀಕಂ ಲೋಲಯನ್ ಬಹ್ವಶೋಭತ ॥ 2 ॥
ಬಲಿಷ್ಠನೂ, ಇಂದ್ರ ಪುತ್ರನ ಮಗನೂ ಆದ ಅಭಿಮನ್ಯುವು ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನಾಗಿ ಶತ್ರುಸೇನೆಯನ್ನು ಕಲಕುತ್ತಾ ಬಹಳವಾಗಿ ಶೋಭಿಸಿದನು.
ಪ್ರವಿಶ್ಯೈವ ತು ರಾಜೇಂದ್ರ ಕ್ಷತ್ರಿಯೇಂದ್ರಾಂತಕೋಪಮಃ |
ಸತ್ಯಶ್ರವಸಮಾದತ್ತ ವ್ಯಾಘ್ರೋ ಮೃಗಮಿವೋಲ್ಬಣಮ್ ॥ 3 ॥
ಕ್ಷತ್ರಿಯಶ್ರೇಷ್ಠರಿಗೆ ಯಮನಂತಿದ್ದ ಅವನು ಪ್ರವೇಶಿಸಿ, ಎಲೈ ರಾಜೇಂದ್ರನೇ, ವ್ಯಾಘ್ರವು ಉಲ್ಬಣವಾದ ಜಿಂಕೆಯನ್ನು ಸಂಹರಿಸುವಂತೆ ಸತ್ಯಶ್ರವನನ್ನು ಸಂಹರಿಸಿದನು.
ಸತ್ಯಶ್ರವಸಿ ಚಾಕ್ಷಿಪ್ತೇ ತ್ವರಮಾಣಾ ಮಹಾರಥಾಃ |
ಪ್ರಗೃಹ್ಯ ವಿವಿಧಂ ಶಸ್ತ್ರಮಭಿಮನ್ಯುಮುಪಾದ್ರವನ್ ॥ 4 ॥
ಸತ್ಯಶ್ರವನು ಹತನಾಗುತ್ತಿರಲು ಮಹಾರಥರು ತ್ವರೆಯನ್ನು ಮಾಡಿ ವಿವಿಧವಾದ ಶಸ್ತ್ರಗಳನ್ನು ಹಿಡಿದು ಅಭಿಮನ್ಯುವಿನ ಮೇಲೆ ಎರಗಿದರು.
ಅಹಂಪೂರ್ವಮಹಂಪೂರ್ವಮಿತಿ ಕ್ಷತ್ರಿಯಪುಂಗವಾಃ |
ಸ್ಪರ್ಧಮಾನಾ ಇವಾಜಗ್ಮುಃ ಜಿಘಾಂಸಂತೋಽರ್ಜುನಾತ್ಮಜಮ್ ॥ 5 ॥

ಕ್ಷತ್ರಿಯಶ್ರೇಷ್ಠರು ನಾನು ಮೊದಲು, ನಾನು ಮೊದಲು ಎಂದು ಸ್ಪರ್ಧೆಯನ್ನು ಮಾಡುವವರಂತೆ ಅರ್ಜುನಪುತ್ರನನ್ನು ಕೊಲ್ಲಲು ಬಯಸಿ ಬಂದರು.
ಕ್ಷತ್ರಿಯಾಣಾಮನೀಕಾನಿ ಪ್ರದ್ರುತಾನ್ಯಭಿಧಾವತಾಮ್ |
ಅಗ್ರಸತ್ ತಿಮಿರಾಸಾದ್ಯ ಕ್ಷುದ್ರಮತ್ಸ್ಯಾನಿವಾರ್ಣವೇ ॥ 6 ॥
ಅಭಿಮನ್ಯುವು ತನ್ನ ಕಡೆಗೆ ಓಡಿ ಬರುತ್ತಿದ್ದ ಕ್ಷತ್ರಿಯರ ಸೈನ್ಯಗಳನ್ನು ಸಮುದ್ರದಲ್ಲಿ ತಿಮಿಂಗಿಲಗಳು ಸಣ್ಣ ಮೀನುಗಳನ್ನು ನುಂಗುವಂತೆ ನುಂಗಿದನು.
ಯೇ ಯೇ ಸಮಾಗತಾಸ್ತಸ್ಯ ಸಮೀಪಮಪಲಾಯಿನಃ |
ನ ತೇ ಪ್ರತಿನಿವರ್ತಂತೇ ಸಮುದ್ರಾದಿವ ಸಿಂಧವಃ ॥ 7 ॥
ಯುದ್ಧದಲ್ಲಿ ಪಲಾಯನವನ್ನು ಮಾಡದ ಯಾರು ಯಾರು ಅವನ ಸಮೀಪಕ್ಕೆ ಬಂದರೋ ಅವರು ಸಮುದ್ರದಿಂದ ನದಿಗಳು ಹಿಂದಿರುಗದಂತೆ ಹಿಂದಿರುಗಲಿಲ್ಲ.
ಮಹಾಗ್ರಾಹಗೃಹೀತೇವ ವಾತವೇಗಭಯಾರ್ದಿತಾ |
ಸಮಕಂಪತ ಸಾ ಸೇನಾ ನೌರಿವಾಸೀನ್ಮಹಾರ್ಣವೇ ॥ 8 ॥
ದೊಡ್ಡ ಮೊಸಳೆಯ ಬಾಯಿಗೆ ಸಿಲುಕಿದಂತೆ, ವಾಯುವೇಗದ ಭಯದಿಂದ ಮಹಾರ್ಣವದಲ್ಲಿ ಪೀಡಿತವಾದ ನೌಕೆಯಂತೆ, ಕೌರವರ ಆ ಸೇನೆಯು ನಡುಗಿತು.
ಅಥ ರುಗ್ಮರಥೋ ನಾಮ ಮದ್ರೇಶ್ವರಸುತೋ ಬಲೀ |
ತ್ರಸ್ತಾಮಾಶ್ವಾಸಯನ್ ಸೇನಾಮ್ ಅತ್ರಸ್ತೋ ವಾಕ್ಯಮಬ್ರವೀತ್ ॥ 9 ॥
ಆಗ ಮದ್ರೇಶ್ವರನಾದ, ಶಲ್ಯನ ಪುತ್ರನಾದ, ಬಲಿಷ್ಠನಾದ ರುಗ್ಮರಥನೆಂಬುವನು ಹೆದರಿದ ಆ ಸೈನ್ಯವನ್ನು ಸಮಾಧಾನಪಡಿಸುತ್ತಾ, ನಿರ್ಭಯನಾಗಿ ಈ ಮಾತನ್ನು ಆಡಿದನು.
ಅಲಂ ತ್ರಾಸೇನ ವಃ ಶೂರಾಃ ಸ ಮಾಮೇಷೋಽಭಿವರ್ತತೇ |
ಅಹಮೇನಂ ಗ್ರಹೀಷ್ಯಾಮಿ ಜೀವಗ್ರಾಹಂ ನ ಸಂಶಯಃ ॥ 10 ॥
ಶೂರರೇ, ಹೆದರಬೇಡಿ. ಅವನು ನನ್ನ ಕಡೆಗೆ ಬರುತ್ತಿದ್ದಾನೆ. ನಾನು ಅವನನ್ನು ಜೀವ ಸಹಿತವಾಗಿ ಸೆರೆ ಹಿಡಿಯುವೆನು. ಇದರಲ್ಲಿ ಸಂಶಯವಿಲ್ಲ.
ಏವಮುಕ್ತ್ವಾ ಸ ಸೌಭದ್ರಮ್ ಅಭಿದುದ್ರಾವ ವೀರ್ಯವಾನ್ |
ಸುಕಲ್ಪಿತೇನೋಹ್ಯಮಾನಃ ಸ್ಯಂದನೇನ ವಿರಾಜತಾ ॥ 11 ॥
ಹೀಗೆ ಹೇಳಿ ಪರಾಕ್ರಮಶಾಲಿಯಾದ ಅವನು ಚೆನ್ನಾಗಿ ಅಣಿಮಾಡಿದ, ಶೋಭಿಸುವ ರಥದಿಂದ ಸಾಗುತ್ತಾ ಅಭಿಮನ್ಯುವಿನ ಕಡೆಗೆ ಓಡಿಬಂದನು.
ಸೋಽಭಿಮನ್ಯುಂ ತ್ರಿಭಿರ್ಬಾಣೈರ್ವಿದ್ಧ್ವಾ ವಕ್ಷಸ್ಯಥಾನದತ್ |
ತ್ರಿಭಿಶ್ಚ ದಕ್ಷಿಣೇ ಬಾಹೌ ಸವ್ಯೇ ಚ ನಿಶಿತೈಸ್ತ್ರಿಭಿಃ ॥ 12 ॥
ಅವನು ಅಭಿಮನ್ಯುವನ್ನು ಎದೆಯಲ್ಲಿ ಮೂರು ಬಾಣಗಳಿಂದ ಹೊಡೆದು ಸಿಂಹನಾದವನ್ನು ಮಾಡಿದನು. ಪುನಃ ದಕ್ಷಿಣ ಬಾಹುಗಳಲ್ಲಿ ಮೂರು ಬಾಣಗಳನ್ನೂ, ಸವ್ಯಬಾಹುವಿನಲ್ಲಿ ನಿಶಿತವಾದ ಮೂರು ಬಾಣಗಳನ್ನೂ ಪ್ರಯೋಗಿಸಿದನು.
ಸೋಽಭಿಮನ್ಯುಸ್ತತಸ್ತಸ್ಯ ವಿದ್ಧೋ ಬಾಣೈರ್ಭೃಶಂ ಬಲೀ |
ತಸ್ಯ ಸೇಷ್ವಸನಂ ಸವ್ಯಂ ದಕ್ಷಿಣಂ ಚ ಸಸಾಯಕಮ್ |
ಭುಜೌ ಶಿರಶ್ಚ ಸ್ವಕ್ಷಿಭ್ರು ಕ್ಷಿತೌ ಕ್ಷಿಪ್ರಮಪಾತಯತ್ ॥ 13 ॥
ಆ ಬಲಿಷ್ಠನಾದ ಅಭಿಮನ್ಯುವು ಅವನ ಬಾಣಗಳಿಂದ ಹೊಡೆಯಲ್ಪಟ್ಟವನಾಗಿ, ಅವನ ಧನುಸ್ಸನ್ನು ಹಿಡಿದ ಎಡಭುಜವನ್ನೂ, ಬಾಣವನ್ನು ಹಿಡಿದ ಬಲಭುಜವನ್ನೂ ಒಳ್ಳೆಯ ಅಕ್ಷಿ ಮತ್ತು ಹುಬ್ಬುಗಳನ್ನು ಹೊಂದಿದ ಶಿರಸ್ಸನ್ನೂ ಶೀಘ್ರವಾಗಿ ಭೂಮಿಯಲ್ಲಿ ಕೆಡವಿದನು.
ದೃಷ್ಟ್ವಾ ರುಗ್ಮರಥಂ ರುಗ್ಣಂ ಪುತ್ರಂ ಶಲ್ಯಸ್ಯ ಮಾನಿನಮ್ |
ಜೀವಗ್ರಾಹಂ ಜಿಘೃಕ್ಷಂತಂ ಸೌಭದ್ರೇಣ ಯಶಸ್ವಿನಾ ॥ 14 ॥
ಸಂಗ್ರಾಮದುರ್ಮದಾ ರಾಜನ್ ರಾಜಪುತ್ರಾಃ ಪ್ರಹಾರಿಣಃ |
ವಯಸ್ಯಾಃ ಶಲ್ಯಪುತ್ರಸ್ಯ ಸುವರ್ಣವಿಕೃತಧ್ವಜಾಃ ॥ 15 ॥
ತಾಳಮಾತ್ರಾಣಿ ಚಾಪಾನಿ ವಿಕರ್ಷಂತೋ ಮಹಾರಥಾಃ |
ಆರ್ಜುನಿಂ ಶರವರ್ಷೇಣ ಸಮಂತಾತ್ ಪರ್ಯವಾರಯನ್ ॥ 16 ॥
ಅಭಿಮನ್ಯುವನ್ನು ಜೀವ ಸಹಿತವಾಗಿ ಸೆರೆಹಿಡಿಯಲು ಹೊರಟ ಅಹಂಕಾರಿಯಾದ ಶಲ್ಯಪುತ್ರನಾದ ರುಗ್ಮರಥನು ಕೀರ್ತಿವಂತನಾದ ಅಭಿಮನ್ಯುವಿನಿಂದ ಹತನಾದುದನ್ನು ನೋಡಿ, ಎಲೈ ರಾಜನೇ, ಸಂಗ್ರಾಮದುರ್ಮದರೂ, ಪ್ರಹಾರಶೀಲರೂ, ಸುವರ್ಣಭೂಷಿತವಾದ ಧ್ವಜವನ್ನುಳ್ಳವರೂ, ರಾಜಕುಮಾರರೂ, ಆದ ಶಲ್ಯಪುತ್ರನ ಸ್ನೇಹಿತರು ತಾಳಪ್ರಮಾಣದ ಧನುಸ್ಸನ್ನು ಎಳೆಯುತ್ತಾ ಅಭಿಮನ್ಯುವನ್ನು ತಮ್ಮ ಬಾಣಗಳ ಮಳೆಯಿಂದ ಹೊಡೆಯುತ್ತಾ ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಶೂರೈಃ ಶಿಕ್ಷಾಬಲೋಪೇತೈಃ ತರುಣೈರತ್ಯಮರ್ಷಿಭಿಃ |
ದೃಷ್ಟ್ವೈಕಂ ಸಮರೇ ಶೂರಂ ಸೌಭದ್ರಂ ಪರಿವಾರಿತಮ್ ॥ 17 ॥
ಛಾದ್ಯಮಾನಂ ಶರವ್ರಾತೈರ್ಹೃಷ್ಟೋ ದುರ್ಯೋಧನೋಽಭವತ್ |
ವೈವಸ್ವತಸ್ಯ ಭವನಂ ಗತಮೇನಮಮನ್ಯತ ॥ 18 ॥

ಶಿಕ್ಷಾ-ಬಲಗಳಿಂದ ಕೂಡಿದ, ಮಹಾರೋಷವನ್ನು ಹೊಂದಿದ ಶೂರರಿಂದ ರಣರಂಗದಲ್ಲಿ ಶೂರನಾದ, ಏಕಾಕಿಯಾದ ಅಭಿಮನ್ಯುವು ಸುತ್ತುವರಿಯಲ್ಪಟ್ಟುದನ್ನೂ ಮತ್ತು ಅವರ ಬಾಣಗಳ ಮಳೆಯಿಂದ ಆಚ್ಛಾದಿಸಲ್ಪಡುವುದನ್ನೂ ನೋಡಿ ದುರ್ಯೋಧನನು ಸಂತುಷ್ಟನಾದನು. ಅವನು ಯಮಲೋಕವನ್ನು ಹೊಂದಿದ್ದಾನೆ ಎಂದೇ ತಿಳಿದನು.
ಸುವರ್ಣಪುಂಖೈರಿಷುಭಿರ್ನಾನಾಲಿಂಗೈಸ್ತ್ರಿಭಿಸ್ತ್ರಿಭಿಃ |
ಅದೃಶ್ಯಮಾರ್ಜುನಿಂ ಚಕ್ರುರ್ನಿಮೇಷಾತ್ ತೇ ನೃಪಾತ್ಮಜಾಃ ॥ 19 ॥
ಆ ರಾಜಕುಮಾರರು ಒಂದು ನಿಮಿಷದಲ್ಲಿ ಸುವರ್ಣಪುಂಖವನ್ನು ಧರಿಸಿದ, ನಾನಾ ರೂಪವಾದ ಮೂರು-ಮೂರು ಬಾಣಗಳಿಂದ ಅಭಿಮನ್ಯುವನ್ನು ಅದೃಶ್ಯನನ್ನಾಗಿ ಮಾಡಿದರು.
ಸಸೂತಾಶ್ವಧ್ವಜಂ ತಸ್ಯ ಸ್ಯಂದನಂ ತಂ ಚ ಮಾರಿಷ |
ಆಚಿತಂ ಪ್ರತ್ಯಪಶ್ಯಾಮ ಶ್ವಾವಿಡಂ ಶಲಲೈರಿವ ॥ 20 ॥
ಅವನ ಸಾರಥಿ, ಅಶ್ವ-ಧ್ವಜಗಳಿಂದ ಕೂಡಿದ ಅವನ ರಥ ಮತ್ತು ಅವನು ಎಲ್ಲರೂ ನಾಟಿದ ಬಾಣಗಳನ್ನು ಉಳ್ಳವರಾಗಿ ಮುಳ್ಳುಗಳಿಂದ ಕೂಡಿದ ಮುಳ್ಳುಹಂದಿಯಂತೆ ಇರುವುದನ್ನು ಎಲೈ ಪೂಜ್ಯನೇ, ನಾವು ನೋಡಿದೆವು.
ಸ ಗಾಢಮಿಷುಭಿರ್ವಿದ್ಧಃ ತೋತ್ತ್ರೈರ್ಗಜ ಇವಾರ್ದಿತಃ |
ಗಾಂಧರ್ವೀಮಸ್ತ್ರಮಾಯಾಂ ಚ ರಥಮಾಯಾಂ ಚ ಯೋಜಯನ್ ॥
ಅಂಕುಶದಿಂದ ಪೀಡಿಸಲ್ಪಟ್ಟ ಗಜದಂತೆ ಬಾಣಗಳಿಂದ ಗಾಢವಾಗಿ ಹೊಡೆಯಲ್ಪಟ್ಟ ಅವನು ಗಾಂಧರ್ವಾಸ್ತ್ರವನ್ನೂ ಮತ್ತು ರಥಾಸ್ತ್ರವನ್ನೂ ಪ್ರಯೋಗಿಸಿದನು.
ಯೇಽರ್ಜುನೇನ ತಪಸ್ತಪ್ತ್ವಾ ಗಂಧರ್ವೇಭ್ಯಃ ಸಮಾಹೃತೇ |
ತುಂಬುರುಪ್ರಮುಖೈರ್ದತ್ತೇ ತಾಭ್ಯಾಂ ತಾನ್ ಮೋಹಯದ್ ರಿಪೂನ್ ॥
ಅರ್ಜುನನು ತಪಸ್ಸನ್ನು ಮಾಡಿ ಗಂಧರ್ವರಿಂದ ಪಡೆದ, ತುಂಬುರು ಮೊದಲಾದವರು ಕೊಟ್ಟ ಆ ಎರಡು ಅಸ್ತ್ರಗಳಿಂದ ಅವನು ಶತ್ರುಗಳನ್ನು ಮೋಹಗೊಳಿಸಿದನು.
ಏಕಸ್ತು ಶತಧಾ ರಾಜನ್ ದೃಶ್ಯತೇ ಸ್ಮ ಸಹಸ್ರಧಾ |
ಅಲಾತಚಕ್ರವತ್ ಸಂಖ್ಯೇ ಭ್ರಮನ್ನಸ್ತ್ರಾಣ್ಯದರ್ಶಯತ್ ॥ 23 ॥
ಎಲೈ ರಾಜನೇ, ಒಬ್ಬನೇ ಆದ ಅವನು ನೂರರಂತೆ, ಸಾವಿರದಂತೆ ಕಂಡು ಅಲಾತಚಕ್ರದಂತೆ ತಿರುಗುತ್ತಾ ರಣರಂಗದಲ್ಲಿ ತನ್ನ ಅಸ್ತ್ರಗಳನ್ನು ಪ್ರದರ್ಶಿಸಿದನು.
ರಥಚರ್ಯಾಸ್ತ್ರಮಾಯಾಭ್ಯಾಂ ಮೋಹಯಿತ್ವಾ ಪರಂತಪಃ |
ಬಿಭೇದ ಶತಧಾಽನೀಕಂ ಕ್ಷತ್ರಿಯಾಣಾಂ ಭಯಂ ದಧತ್ ॥ 24 ॥
ತನ್ನ ರಥಚರ್ಯದಿಂದಲೂ, ಅಸ್ತ್ರಗಳ ಸಾಮರ್ಥ್ಯದಿಂದಲೂ ಪರಂತಪನಾದ ಅವನು ಶತ್ರುಗಳನ್ನು ಭ್ರಾಂತಿಗೊಳಿಸಿ, ಕ್ಷತ್ರಿಯರಿಗೆ ಭಯವನ್ನುಂಟು ಮಾಡುತ್ತಾ, ಶತ್ರುಸೈನ್ಯವನ್ನು ನೂರು ರೀತಿಯಲ್ಲಿ ಭಗ್ನಗೊಳಿಸಿದನು.
ಭಿನ್ನಾನೀಕಾಶ್ಚ ದಿಙ್ಮೂಢಾ ಭೂಯಃ ಸಂತ್ರಸ್ತಚೇತಸಃ |
ಭಲ್ಲೈರುತ್ಕೃತ್ತಶಿರಸಃ ಪರಲೋಕಮಥಾವಿಶನ್ ॥ 25 ॥
ಸೈನ್ಯಗಳು ಭಗ್ನವಾಗಿ ದಿಙ್ಮೂಢರಾಗಿ, ಹೆದರಿದ ಮನಸ್ಸುಳ್ಳ ಅವರ ಶಿರಸ್ಸುಗಳು ಭಲ್ಲಗಳಿಂದ ಕತ್ತರಿಸಲ್ಪಟ್ಟು ಅವರು ಪರಲೋಕವನ್ನು ಪ್ರವೇಶಿಸಿದರು.
ಪ್ರಾಣಾಃ ಪ್ರಾಣಭೃತಾಂ ಸಂಖ್ಯೇ ಪ್ರೇಷಿತಾ ನಿಶಿತೈಃ ಶರೈಃ |
ರಾಜನ್ ಪ್ರಯಾಂತ್ಯಮುಂ ಲೋಕಂ ಶರೀರಾಣ್ಯವನಿಂ ಯಯುಃ ॥
ಎಲೈ ರಾಜನೇ, ಅವನ ನಿಶಿತವಾದ ಬಾಣಗಳಿಂದ ರಣರಂಗದಿಂದ ಕಳುಹಿಸಿಕೊಡಲ್ಪಟ್ಟ ಜೀವರ ಪ್ರಾಣಗಳು ಪರಲೋಕಕ್ಕೆ ಹೋದವು. ಅವರ ಶರೀರಗಳು ಭೂಮಿಯ ಮೇಲೆ ಬಿದ್ದವು.
ಧನೂಂಷ್ಯಶ್ವಾನ್ ನಿಯಂತ್ರೂಂಶ್ಚ ಧ್ವಜಾನ್ ಬಾಹೂಂಶ್ಚ ಸಾಂಗದಾನ್ |
ಶಿರಾಂಸಿ ಚ ಶಿತೈರ್ಭಲ್ಲೈಃ ತೇಷಾಂ ಚಿಚ್ಛೇದ ಫಾಲ್ಗುನಿಃ ॥ 27 ॥
ಅಭಿಮನ್ಯುವು ಅವರ ಧನುಸ್ಸುಗಳನ್ನೂ, ಅಶ್ವಗಳನ್ನೂ, ಸಾರಥಿಗಳನ್ನೂ, ಧ್ವಜಗಳನ್ನೂ, ಅಂಗದ ಸಹಿತವಾದ ಬಾಹುಗಳನ್ನೂ ಮತ್ತು ಶಿರಸ್ಸುಗಳನ್ನೂ ನಿಶಿತವಾದ ಭಲ್ಲಗಳಿಂದ ಕತ್ತರಿಸಿದನು.
ಚೂತಾರಾಮೋ ಯಥಾ ಭಗ್ನಃ ಪಂಚವರ್ಷಃ ಫಲೋಪಗಃ |
ರಾಜಪುತ್ರಶತಂ ತದ್ವತ್ ಸೌಭದ್ರೇಣಾಪತದ್ ಹತಮ್ ॥ 28 ॥
ಐದು ವರ್ಷದ ಫಲ ಸಮೀಪದಲ್ಲಿರುವ ಮಾವಿನ ತೋಟವು ಭಗ್ನವಾದಂತೆ ನೂರು ರಾಜಪುತ್ರರು ಅಭಿಮನ್ಯುವಿನಿಂದ ಹತರಾಗಿ ಭೂಮಿಯ ಮೇಲೆ ಬಿದ್ದರು.
ಕ್ರುದ್ಧಾಶೀವಿಷಸಂಕಾಶಾನ್ ಸುಕುಮಾರಾನ್ ಸುಖೋಚಿತಾನ್ |
ಏಕೇನ ನಿಹತಾನ್ ದೃಷ್ಟ್ವಾ ಭೀತೋ ದುರ್ಯೋಧನೋಽಭವತ್ ॥
ಕೋಪಗೊಂಡ ಸರ್ಪದ ಹೋಲಿಕೆಯನ್ನು ಹೊಂದಿದ್ದ, ಸುಖೋಚಿತರಾದ, ಸುಕುಮಾರರಾದ ಅವರು ಒಬ್ಬನಿಂದಲೇ ಹತರಾದುದನ್ನು ನೋಡಿ ದುರ್ಯೋಧನನು ಭೀತನಾದನು.
ರಥಿನಃ ಕುಂಜರಾನಶ್ವಾನ್ ಪದಾತೀಂಶ್ಚಾವಮರ್ದಿತಾನ್ |
ದೃಷ್ಟ್ವಾ ದುರ್ಯೋಧನಃ ಕ್ಷಿಪ್ರಮುಪಾಯಾತ್ ತಮಮರ್ಷಿತಃ ॥ 30 ॥
ಅವನಿಂದ ಮರ್ದಿಸಲ್ಪಟ್ಟ ರಥಿಕರನ್ನೂ, ಗಜಗಳನ್ನೂ, ಅಶ್ವಗಳನ್ನೂ, ಪದಾತಿಗಳನ್ನೂ ನೋಡಿ ದುರ್ಯೋಧನನು ಕೋಪಗೊಂಡು

ಶೀಘ್ರವಾಗಿ ಅವನ ಬಳಿಗೆ ಬಂದನು.
ತಯೋಃ ಕ್ಷಣಮಿವಾಪೂರ್ವಃ ಸಂಗ್ರಾಮಃ ಸಮಭೂನ್ನ ೃಪ |
ಅಥಾಭವತ್ ತೇ ವಿಮುಖಃ ಪುತ್ರಃ ಶರಶತಾರ್ದಿತಃ ॥ 31 ॥
ಎಲೈ ರಾಜನೇ, ಅವರಿಬ್ಬರಿಗೆ ಒಂದು ಕ್ಷಣ ಅಪೂರ್ವವಾದ ಯುದ್ಧವು ನಡೆಯಿತು. ಅನಂತರ ಅವನ ಬಾಣಗಳಿಂದ ಪೀಡಿತನಾದ ನಿನ್ನ ಪುತ್ರನು ಯುದ್ಧ ವಿಮುಖನಾದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೈದನೆಯ ಅಧ್ಯಾಯ
ಅಭಿಮನ್ಯುವಿನಿಂದ ಲಕ್ಷಣನ ವಧೆ.
ಧೃತರಾಷ್ಟ್ರಃ
ಯಥಾ ವದಸಿ ಮೇ ಸೂತ ಏಕಸ್ಯ ಬಹುಭಿಃ ಸಹ |
ಸಂಗ್ರಾಮಂ ತುಮುಲಂ ಘೋರಂ ಜಯಂ ಚೈವ ಮಹಾತ್ಮನಃ ॥ 1 ॥
ಅಶ್ರದ್ಧೇಯಮಿವಾಶ್ಚರ್ಯಂ ಸೌಭದ್ರಸ್ಯಾಥ ವಿಕ್ರಮಮ್ |
ಕಿಂತು ನಾತ್ಯದ್ಭುತಂ ತೇಷಾಂ ಧರ್ಮೋ ಯೇಷಾಂ ವ್ಯಪಾಶ್ರಯಃ ॥2॥
ಧೃತರಾಷ್ಟ್ರ ಎಲೈ ಸೂತನೇ, ಒಬ್ಬನಿಗೆ ಅನೇಕರ ಜೊತೆಯಲ್ಲಿ ನಡೆದ ತೀವ್ರವೂ, ಘೋರವೂ ಆದ ಯುದ್ಧವನ್ನೂ ಮಹಾತ್ಮನಾದ ಆ ಅಭಿಮನ್ಯುವಿನ ಜಯವನ್ನೂ ನೀನು ಹೇಳುತ್ತಿರುವಂತೆ ಆಶ್ಚರ್ಯಕರವಾದ ಅವನ ಪರಾಕ್ರಮವು ನಂಬಲು ಸಾಧ್ಯವಿಲ್ಲದುದು ಎಂದು ತೋರುತ್ತದೆ. ಆದರೆ ಯಾರು ಧರ್ಮವನ್ನು ಆಶ್ರಯಿಸಿದ್ದಾರೆಯೋ ಅವರಿಗೆ ಇದು ಅದ್ಭುತವಲ್ಲ.
ದುರ್ಯೋಧನೇ ತು ವಿಮುಖೇ ರಾಜಪುತ್ರಶತೇ ಹತೇ |
ಸೌಭದ್ರೇ ಪ್ರತಿಪತ್ತಿಂ ಕಾಂ ಪ್ರತ್ಯಪದ್ಯಂತ ಮಾಮಕಾಃ ॥ 3 ॥
ದುರ್ಯೋಧನನು ವಿಮುಖನಾಗಿ ನೂರು ರಾಜಕುಮಾರರು ಹತರಾಗುತ್ತಿರಲು ನನ್ನವರು ಅಭಿಮನ್ಯುವಿನ ವಿಷಯದಲ್ಲಿ ಯಾವ ನಿಲುವನ್ನು ತಾಳಿದರು?
ಸಂಜಯಃ
ಸಂಶುಷ್ಕಾಸ್ಯಾಶ್ಚಲನ್ನೇತ್ರಾಃ ಪ್ರಸ್ವಿನ್ನಾ ರೋಮಹರ್ಷಿಣಃ |
ಪಲಾಯನಕೃತೋತ್ಸಾಹಾ ನಿರುತ್ಸಾಹಾ ದ್ವಿಷಜ್ಜಯೇ ॥ 4 ॥
ಸಂಜಯ ಒಣಗಿದ ಮುಖವುಳ್ಳವರಾಗಿ, ಚಂಚಲದೃಷ್ಟಿಯುಳ್ಳವರಾಗಿ, ರೋಮಾಂಚಗೊಂಡು, ಬೆವರಿ, ಶತ್ರುಜಯದಲ್ಲಿ ಉತ್ಸಾಹವನ್ನು ಕಳೆದುಕೊಂಡು ಪಲಾಯನ ಮಾಡುವುದರಲ್ಲಿ ಉತ್ಸಾಹವನ್ನು ಹೊಂದಿದರು.
ಹತಾನ್ ಭ್ರಾತೄನ್ ಪಿತೄನ್ ಪುತ್ರಾನ್ ಸಂಬಂಧೀನ್ ಬಾಂಧವಾನಪಿ |
ಉತ್ಸ ೃಜ್ಯೋತ್ಸ ೃಜ್ಯ ಗಚ್ಛಂತಿ ತ್ವರಯಂತೋ ಹಯದ್ವಿಪಾನ್ ॥ 5 ॥
ಹತರಾದ ಸಹೋದರರರನ್ನೂ, ಪಿತೃಗಳನ್ನೂ, ಪುತ್ರರನ್ನೂ, ಸಂಬಂಧಿ ಬಾಂಧವರನ್ನೂ ಬಿಟ್ಟು ಗಜಾಶ್ವಗಳನ್ನು ತ್ವರೆಗೊಳಿಸುತ್ತಾ ಹೊರಟರು.
ತಾಂ ಪ್ರಭಗ್ನಾಂ ಚಮೂಂ ದೃಷ್ಟ್ವಾ ದ್ರೋಣೋ ದ್ರೌಣಿರ್ಬೃಹದ್ಬಲಃ |
ಕೃಪೋ ದುರ್ಯೋಧನಃ ಕರ್ಣಃ ಕೃತವರ್ಮಾಽಥ ಸೌಬಲಿಃ |
ಅಭಿದ್ರುತಾಃ ಸುಸಂಕ್ರುದ್ಧಾಃ ಸೌಭದ್ರಮಪರಾಜಿತಮ್ ॥ 6 ॥
ಚೆನ್ನಾಗಿ ಭಗ್ನವಾದ ಆ ಸೈನ್ಯವನ್ನು ನೋಡಿ ದ್ರೋಣರು, ಅಶ್ವತ್ಥಾಮರು, ಬೃಹದ್ಬಲ, ಕೃಪರು, ದುರ್ಯೋಧನ, ಕರ್ಣ, ಕೃತವರ್ಮ, ಶಕುನಿ- ಇವರು ಬಹಳ ಕೋಪಗೊಂಡು ಅಪರಾಜಿತನಾದ ಅಭಿಮನ್ಯುವಿನ ಕಡೆಗೆ ಓಡಿ ಬಂದರು.
ತೇಽಪಿ ಪೌತ್ರೇಣ ತೇ ರಾಜನ್ ಪ್ರಾಯಶೋ ವಿಮುಖೀಕೃತಾಃ |
ಸೌಭದ್ರೇಣ ಮಹಾರಾಜ ಶಕ್ರಪ್ರತಿಮತೇಜಸಾ ॥ 7 ॥
ಎಲೈ ಮಹಾರಾಜನೇ, ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ನಿನ್ನ ಪೌತ್ರನಾದ ಅಭಿಮನ್ಯುವಿನಿಂದ ಅವರೂ ಪ್ರಾಯಶಃ ಯುದ್ಧವಿಮುಖರಾಗಿ ಮಾಡಲ್ಪಟ್ಟರು.
ಏಕಸ್ತು ಸುಖಸಂವೃದ್ಧೋ ಬಾಲ್ಯಾದ್ ದರ್ಪಾಚ್ಚ ನಿರ್ಭಯಃ |
ಇಷ್ವಸ್ತ್ರಕುಶಲಃ ಶೂರೋ ಲಕ್ಷಣೋಽರ್ಜುನಿಮಭ್ಯಯಾತ್ ॥ 8 ॥
ಆದರೆ ಸುಖವಾಗಿ ಬೆಳೆದ, ಬಾಲ್ಯದಿಂದಲೂ ಮತ್ತು ದರ್ಪದಿಂದಲೂ ನಿರ್ಭಯನಾದ, ಶಸತ್ರಸ್ತ್ರ ಕುಶಲನಾದ, ಶೂರನಾದ ಲಕ್ಷಣನು (ದುರ್ಯೋಧನ ಪುತ್ರನು) ಅಭಿಮನ್ಯುವಿನ ಕಡೆಗೆ ಧಾವಿಸಿದನು.
ತಮನ್ವಗೇವಾಸ್ಯ ಪಿತಾ ಪುತ್ರಗರ್ಧ್ಯನ್ವವರ್ತತ |
ಅನುದುರ್ಯೋಧನಂ ಚಾನ್ಯೇ ಸನ್ನಿವೃತ್ತಾ ಮಹಾರಥಾಃ ॥ 9 ॥
ಅವನ ಹಿಂದೆಯೇ ಅವನ ಕ್ಷೇಮವನ್ನು ಬಯಸುವ ಅವನ ತಂದೆಯು ಬಂದನು. ದುರ್ಯೋಧನನು ಹೋದುದನ್ನು ನೋಡಿ ಉಳಿದ ಮಹಾರಥರೂ ಹಿಂದಿರುಗಿ ಬಂದರು.

ತಂ ತೇಽಭಿಷಿಷಿಚುರ್ಬಾಣೈಃ ಮೇಘಾ ಗಿರಿಮಿವಾಂಬುಭಿಃ |
ಸ ಚ ತಾನ್ ಪ್ರಮಮಾಥೈಕೋ ವಿಷ್ವಗ್ವಾತೋ ಯಥಾಽಂಬುದಾನ್ ||
ಮೋಡಗಳು ಪರ್ವತವನ್ನು ಜಲಧಾರೆಗಳಿಂದ ಅಭಿಷೇಕ ಮಾಡುವಂತೆ ಅವರು ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಆದರೆ ಸುಂಟರಗಾಳಿ ಮೇಘಗಳನ್ನು ಹಾರಿಸುವಂತೆ ಏಕಾಕಿಯಾದ ಅವನು ಅವರೆಲ್ಲರನ್ನೂ ಮರ್ದಿಸಿದನು.
ಪೌತ್ರಂ ತು ತವ ದುರ್ಧರ್ಷಂ ಲಕ್ಷಣಂ ಪ್ರಿಯದರ್ಶನಮ್ |
ಪಿತುಃ ಸಮೀಪೇ ತಿಷ್ಠಂತಂ ಶೂರಮುದ್ಯತಕಾರ್ಮುಕಮ್ || 11 ||
ಅತ್ಯಂತಸುಖಸಂವೃದ್ಧಂ ಧನೇಶ್ವರಸುತೋಪಮಮ್ |
ಆಸಸಾದ ರಣೇ ಕಾರ್ಷ್ಣಿರ್ಮತ್ತೋ ಮತ್ತಮಿವ ದ್ವಿಪಮ್ || 12 ||
ಅಭಿಮನ್ಯುವು ಒಂದು ಮದಗಜವು ಇನ್ನೊಂದು ಮದಗಜದೆಡೆಗೆ ಧಾವಿಸಿದಂತೆ, ನಿನ್ನ ಪೌತ್ರನೂ, ಸೋಲಿಸಲು ಕಷ್ಟಸಾಧ್ಯನಾದವನೂ, ಪ್ರಿಯದರ್ಶನನೂ, ತಂದೆಯ ಸಮೀಪದಲ್ಲಿರುವವನೂ, ಶೂರನೂ, ಧನುಸ್ಸನ್ನು ಎತ್ತಿಹಿಡಿದವನೂ, ಅತ್ಯಂತ ಸುಖದಿಂದ ಬೆಳೆದವನೂ, ಕುಬೇರನ ಪುತ್ರನಿಗೆ ಸದೃಶನಾದವನೂ ಆದ ಲಕ್ಷಣನನ್ನು ಸಮೀಪಿಸಿದನು.
ಸಿಂಹಶಾವೋ ವನೇ ಯದ್ವತ್ ಪುಂಡರೀಕಶಿಶುಂ ಯಥಾ || 13 ||
ಲಕ್ಷಣೇನ ತು ಸಂಗಮ್ಯ ಸೌಭದ್ರಃ ಪರವೀರಹಾ |
ಶರೈಃ ಸ ನಿಶಿತೈಸ್ತೀಕ್ಷ್ಣೈಃ ಬಾಹ್ವೋರುರಸಿ ಚಾರ್ಪಯತ್ || 14 ||
ಸಿಂಹದ ಮರಿಯು ಹುಲಿಯ ಮರಿಯ ಜೊತೆಯಲ್ಲಿ ಸೆಣೆಸಿದಂತೆ, ಶತ್ರುಘಾತಕನಾದ ಅಭಿಮನ್ಯುವು ಲಕ್ಷಣನ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಅವನ ಬಾಹುಗಳಲ್ಲಿಯೂ, ಎದೆಯಲ್ಲಿಯೂ ತೀಕ್ಷ್ಣವಾದ, ಹರಿತವಾದ ಬಾಣಗಳನ್ನು ಪ್ರಯೋಗಿಸಿದನು.
ಸಮಕ್ರುದ್ಧ್ಯನ್ಮಹಾಬಾಹುರ್ದಂಡಾಹತ ಇವೋರಗಃ |
ಪೌತ್ರಸ್ತವ ಮಹಾಬಾಹುಸ್ತವ ಪೌತ್ರಮಭಾಷತ || 15 ||
ಮಹಾಬಾಹುವಾದ ಲಕ್ಷಣನು ದಂಡದಿಂದ ಹೊಡೆದ ಸರ್ಪದಂತೆ ಬಹಳ ಕ್ರೋಧಗೊಂಡನು. ಮಹಾಬಾಹುವಾದ ನಿನ್ನ ಪೌತ್ರನಾದ ಅಭಿಮನ್ಯುವು ಪೌತ್ರನಾದ ಲಕ್ಷಣನನ್ನು ಕುರಿತು ಮಾತನಾಡಿದನು.
ಅಭಿಮನ್ಯುಃ
ಸುದೃಷ್ಟಃ ಕ್ರಿಯತಾಂ ಲೋಕೋ ಯಮಲೋಕಂ ಗಮಿಷ್ಯಸಿ |
ಪಶ್ಯತಾಂ ಬಾಂಧವಾನಾಂ ತ್ವಾಂ ನಯಾಮಿ ಯಮಸಾದನಮ್ ||16||
ಅಭಿಮನ್ಯು ಈ ಲೋಕವನ್ನು ಚೆನ್ನಾಗಿ ನೋಡು. ನೀನು ಯಮಲೋಕಕ್ಕೆ ಹೋಗುವಿ. ನಿನ್ನ ಬಂಧುಗಳು ನೋಡುತ್ತಿರುವಂತೆಯೇ ನಿನ್ನನ್ನು ಯಮಲೋಕಕ್ಕೆ ಕಳುಹಿಸುತ್ತೇನೆ.
ಸಂಜಯಃ
ಏವಮುಕ್ತ್ವಾ ತತೋ ಭಲ್ಲಂ ಸೌಭದ್ರಃ ಪರವೀರಹಾ |
ಉದ್ವಬರ್ಹ ಮಹಾಬಾಹುರ್ನಿರ್ಮುಕ್ತೋರಗಸನ್ನಿಭಮ್ || 17 ||
ಸಂಜಯ ಹೀಗೆ ಮಾತನಾಡಿ ಶತ್ರುಘಾತಕನೂ, ಮಹಾಬಾಹುವೂ ಆದ ಅಭಿಮನ್ಯುವು ಪೊರೆಯನ್ನು ಬಿಟ್ಟ ಸರ್ಪದಂತಿದ್ದ ಒಂದು ಭಲ್ಲವನ್ನು ಕೋಶದಿಂದ ತೆಗೆದನು.
ಸ ತಸ್ಯ ಭುಜನಿರ್ಮುಕ್ತೋ ಲಕ್ಷಣಸ್ಯ ಸುದರ್ಶನಮ್ |
ಸುನಾಸಂ ಸುಭ್ರು ಕೇಶಾಂತಂ ಶಿರೋಽಹಾರ್ಷೀತ್ ಸಕುಂಡಲಮ್ ||
ಅವನ ಭುಜದಿಂದ ನಿರ್ಮುಕ್ತವಾದ ಆ ಭಲ್ಲವು ಸುಂದರವಾದ, ಒಳ್ಳೆಯ ನಾಸಿಕೆ, ಹುಬ್ಬುಗಳು, ಬೈತಲೆ, ಕುಂಡಲಗಳನ್ನು ಹೊಂದಿದ ಸುದರ್ಶನನ ಶಿರಸ್ಸನ್ನು ಕತ್ತರಿಸಿತು.
ಪೌತ್ರಸ್ತು ತವ ದುರ್ಧರ್ಷಂ ಲಕ್ಷಣಂ ಪ್ರಿಯದರ್ಶನಮ್ |
ಪಿತುಃ ಸಮೀಪೇ ತಿಷ್ಠಂತಂ ಪ್ರಾಹಿಣೋದ್ ಯಮಸಾದನಮ್ ||
ನಿನ್ನ ಪೌತ್ರನಾದ ಅಭಿಮನ್ಯುವು ದುರ್ಧರ್ಷನೂ, ಪ್ರಿಯದರ್ಶನನೂ ಮತ್ತು ತಂದೆಯ ಸಮೀಪದಲ್ಲಿಯೇ ಇದ್ದವನೂ ಆದ ಲಕ್ಷಣನನ್ನು ಯಮಲೋಕಕ್ಕೆ ಕಳುಹಿಸಿದನು.
ಅತ್ಯಂತಸುಖಸಂವೃದ್ಧಂ ಧನೇಶ್ವರಸುತೋಪಮಮ್ |
ಲಕ್ಷಣಂ ನಿಹತಂ ದೃಷ್ಟ್ವಾ ಹಾಹೇತ್ಯುಚ್ಚುಕ್ರುಶುರ್ಜನಾಃ || 20 ||
ಬಹಳ ಸುಖದಿಂದ ಬೆಳೆದ, ಕುಬೇರನ ಪುತ್ರನಂತಿದ್ದ ಲಕ್ಷಣನು ಹತನಾದುದನ್ನು ನೋಡಿ ಜನರು ಹಾಹಾಕಾರವನ್ನು ಮಾಡಿದರು.
ತತೋ ದುರ್ಯೋಧನಃ ಕ್ರುದ್ಧಃ ಪ್ರಿಯೇ ಪುತ್ರೇ ನಿಪಾತಿತೇ |
ಘ್ನತೈನಮಿತಿ ಚುಕ್ರೋಶ ಕ್ಷತ್ರಿಯಾನ್ ಕ್ಷತ್ರಿಯರ್ಷಭಃ || 21 ||
ಆಗ ತನ್ನ ಪ್ರಿಯಪುತ್ರನು ಹತನಾಗುತ್ತಿರಲು ಕೋಪಗೊಂಡ ಕ್ಷತ್ರಿಯ ಶ್ರೇಷ್ಠನಾದ ದುರ್ಯೋಧನನು ಕ್ಷತ್ರಿಯರನ್ನು ಕುರಿತು ಈ ಅಭಿಮನ್ಯುವನ್ನು ಕೊಲ್ಲಿ ಎಂದು ಕಿರುಚಿದನು.
ತತೋ ದ್ರೋಣಃ ಕೃಪಃ ಕರ್ಣೋ ದ್ರೋಣಪುತ್ರೋ ಬೃಹದ್ಬಲಃ |
ಕೃತವರ್ಮಾ ಚ ಹಾರ್ದಿಕ್ಯಃ ಷಡ್ರಥಾಃ ಪರ್ಯವಾರಯನ್ || 22 ||
ಆಗ ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮರು, ಬೃಹದ್ಬಲ, ಹಾರ್ದಿಕ್ಯನಾದ ಕೃತವರ್ಮ- ಈ ಆರು ಮಹಾರಥರು ಅಭಿಮನ್ಯುವನ್ನು ಸುತ್ತುವರಿದರು.
ಸ ತಾನ್ ವಿದ್ಧ್ವಾ ಶಿತೈರ್ಬಾಣೈರ್ವಿಮುಖೀಕೃತ್ಯ ಚಾರ್ಜುನಿಃ |

ವೇಗೇನಾಭ್ಯದ್ರವತ್ ಕ್ರುದ್ಧಃ ಸೈಂಧವಂ ಚ ಮಹಾಬಲಮ್ ॥ 23 ॥
ಅರ್ಜುನಪುತ್ರನಾದ ಅಭಿಮನ್ಯುವು ಅವರನ್ನು ಹರಿತವಾದ ಬಾಣಗಳಿಂದ ಹೊಡೆದು ಯುದ್ಧವಿಮುಖರನ್ನಾಗಿ ಮಾಡಿ ವೇಗದಿಂದ ಮಹಾಬಲನಾದ ಸೈಂಧವನ ಕಡೆಗೆ ಕೋಪದಿಂದ ಸಾಗಿದನು.
ಆವವ್ರುಸ್ತಸ್ಯ ಪಂಥಾನಂ ಗಜಾನೀಕೇನ ದಂಸಿತಾಃ |
ಕಳಿಂಗಾಶ್ಚ ನಿಷಾದಾಶ್ಚ ಕ್ರಾಥಪುತ್ರಶ್ಚ ವೀರ್ಯವಾನ್ ॥ 24 ॥
ಕವಚ ಸನ್ನದ್ಧರಾದ ಕಳಿಂಗರೂ, ನಿಷಾದರೂ ಮತ್ತು ಪರಾಕ್ರಮಶಾಲಿಯಾದ ಕ್ರಾಥ ಪುತ್ರನೂ ಅವನು ಹೋಗುವ ಮಾರ್ಗವನ್ನು ಗಜಸೇನೆಯಿಂದ ತಡೆದನು.
ತೈರ್ನದದ್ಭಿರ್ಯಥಾಽಽದಿತ್ಯೋ ಘನಾಚ್ಛನ್ನೋ ವಿಶಾಂಪತೇ |
ತತ್ ಪುತಪ್ತಮಿವಾತ್ಯರ್ಥಂ ಯುದ್ಧಮಾಸೀದ್ ವಿಶಾಂಪತೇ ॥ 25 ॥
ಎಲೈ ರಾಜನೇ, ಮೋಡಗಳಿಂದ ಮುಚ್ಚಲ್ಪಡದಿರುವ ಸೂರ್ಯನು ಜಗತ್ತನ್ನು ತಾಪಗೊಳಿಸುವಂತೆ ಸಿಂಹನಾದಗಳನ್ನು ಮಾಡುವ ಅವರಿಗೂ ಮತ್ತು ಅಭಿಮನ್ಯುವಿಗೂ ಬಹಳ ತಾಪಕಾರಿಯಾದ ಯುದ್ಧವು ಉಂಟಾಯಿತು.
ತತಸ್ತತ್ ಕುಂಜರಾನೀಕಂ ವ್ಯಧಮದ್ ಧೃಷ್ಣಮಾರ್ಜುನಿಃ |
ಯಥಾಽಖಿಲಾನ್ ನಿತ್ಯಗತಿರ್ಜಲದಾನ್ ಶತಶೋಽಂಬರೇ ॥ 26 ॥
ಉದ್ಧತವಾದ ಆ ಗಜಸೇನೆಯನ್ನು ಅಭಿಮನ್ಯುವು ವಾಯುವು ಆಕಾಶದಲ್ಲಿ ನೂರಾರು ಸಂಖ್ಯೆಯಲ್ಲಿರುವ ಮೋಡಗಳನ್ನು ಹಾರಿಸುವಂತೆ ಹಾರಿಸಿದನು.
ತತಃ ಕ್ರಾಥಂ ಶರವ್ರಾತೈರಾರ್ಜುನಿಃ ಸಮವಾರಯತ್ |
ಅಥೇತರೇ ಸನ್ನಿವೃತ್ತಾಃ ಪುನರ್ದ್ರೋಣಮುಖಾ ರಥಾಃ ॥ 27 ॥
ಪರಮಾಸತ್ರಣಿ ಧುನ್ವಾನಾಃ ಸೌಭದ್ರಮಭಿದುದ್ರುವುಃ ॥ 28 ॥
ಅನಂತರ ಅಭಿಮನ್ಯುವು ಬಾಣಗಳ ಸಮೂಹದಿಂದ ಕ್ರಾಥ ಪುತ್ರನನ್ನು ತಡೆದನು. ಉಳಿದ ದ್ರೋಣ ಮೊದಲಾದ ಮಹಾರಥರು ರಣಭೂಮಿಗೆ ಹಿಂದಿರುಗಿ ಪರಮಾಸ್ತ್ರಗಳನ್ನು ಪ್ರಯೋಗಿಸುತ್ತಾ ಅಭಿಮನ್ಯುವಿನ ಮೇಲೆ ನುಗ್ಗಿದರು.
ತಾನ್ ನಿವಾರ್ಯಾರ್ಜುನಿರ್ಬಾಣೈಃ ಕ್ರಾಥಪುತ್ರಮಥಾರ್ದಯತ್ |
ಶರೌಘೇಣಾಪ್ರಮೇಯೇಣ ತ್ವರಮಾಣೋ ಜಿಘಾಂಸಯಾ ॥ 29 ॥
ಅಭಿಮನ್ಯುವು ಅವರನ್ನು ತನ್ನ ಬಾಣಗಳಿಂದ ನಿವಾರಿಸಿ ಕ್ರಾತ ಪುತ್ರನನ್ನು ಕೊಲ್ಲಲು ಬಯಸಿ ತ್ವರೆಯಿಂದ ಅಪ್ರಮೇಯವಾದ ಬಾಣಸಮೂಹಗಳಿಂದ ಅವನನ್ನು ಮರ್ದಿಸಿದನು.
ಸಧನುರ್ಬಾಣಕೇಯೂರೌ ಬಾಹೂ ಸಮಕುಟಂ ಶಿರಃ |
ಛತ್ರಂ ಧ್ವಜಂ ನಿಯಂತಾರಮಶ್ವಾಂಶ್ಚಾಸ್ಯ ನ್ಯಪಾತಯತ್ ॥ 30 ॥
ಅವನ ಧನುರ್ಬಾಣಕೇಯೂರಗಳಿಂದ ಸಹಿತವಾದ ಬಾಹುಗಳನ್ನೂ, ಕಿರೀಟ ಸಹಿತವಾದ ಶಿರಸ್ಸನ್ನೂ, ಛತ್ರ-ಧ್ವಜ-ಸಾರಥಿಗಳನ್ನೂ ಮತ್ತು ರಥದ ಅಶ್ವಗಳನ್ನೂ ಹೊಡೆದು ಉರುಳಿಸಿದನು.
ಕುಲಶೀಲಶ್ರುತಧನೈಃ ಕೀರ್ತ್ಯಾ ಚಾಸ್ತ್ರಬಲೇನ ಚ |
ಯುಕ್ತೇ ತಸ್ಮಿನ್ ಹತೇ ವೀರಾಃ ಪ್ರಾಯಶೋ ವಿಮುಖಾಽಭವನ್ ॥
ಕುಲ-ಶೀಲಗಳಿಂದಲೂ, ವಿದ್ಯಾ-ಧನಗಳಿಂದಲೂ, ಕೀರ್ತಿ ಮತ್ತು ಅಸ್ತ್ರಬಲದಿಂದಲೂ ಸಹಿತನಾದ ಅವನು ಹತನಾಗುತ್ತಿರಲು ವೀರರು ಹೆಚ್ಚಾಗಿ ಯುದ್ಧ ವಿಮುಖರಾದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *

ನಲವತ್ನಾರನೆಯ ಅಧ್ಯಾಯ
ಅಭಿಮನ್ಯುವಿನ ಪರಾಕ್ರಮದ ವರ್ಣನೆ.
ಧೃತರಾಷ್ಟ್ರಃ
ತಥಾ ಪ್ರವಿಷ್ಟಂ ತರುಣಂ ಸೌಭದ್ರಂ ರಥಿನಾಂ ವರಮ್ |
ಕುಲಾನುರೂಪಕರ್ಮಾಣಂ ಸಂಗ್ರಾಮೇಷ್ವಪಲಾಯಿನಮ್ ॥ 1 ॥
ಆಜಾನೇಯೈಃ ಸುಬಹುಭಿರ್ಯಾಂತಮಶ್ವೈಸ್ತ್ರಿಹಾಯನೈಃ |
ಪ್ಲವಮಾನಮಿವಾಕಾಶೇ ಕೇ ವೀರಾಃ ಪರ್ಯವಾರಯನ್ ॥ 2 ॥
ಧೃತರಾಷ್ಟ್ರ ಹಾಗೆ ಪ್ರವಿಷ್ಟನಾದ ಅಭಿಮನ್ಯುವು ಶ್ರೇಷ್ಠ ರಥನೂ, ಕುಲಕ್ಕೆ ಅನುಗುಣವಾದ ಕರ್ಮವನ್ನು ಮಾಡುವವನೂ, ಯುದ್ಧದಲ್ಲಿ ಹಿಮ್ಮೆಟ್ಟದವನೂ, ಮೂರು ವರ್ಷ ಪ್ರಾಯದ ಒಳ್ಳೆಯ ಅಶ್ವಗಳನ್ನು ಹೂಡಿದ ರಥದಲ್ಲಿ ಆಕಾಶದಲ್ಲಿ ತೇಲಿದಂತೆ ಹೋಗುವವನೂ ಆದ ಅಭಿಮನ್ಯುವನ್ನು ಯಾವ ವೀರರು ತಡೆದರು?
ಸಂಜಯಃ
ಅಭಿಮನ್ಯುಃ ಪ್ರವಿಶ್ಯೈವ ತಾವಕಾನ್ ನಿಶಿತೈಃ ಶರೈಃ |
ಅಕರೋದ್ ವಿಮುಖಾನ್ ಸರ್ವಾನ್ ಬಲವಾನ್ ಪಾಂಡವಾತ್ಮಜಃ ॥

ಸಂಜಯ ಬಲಿಷ್ಠನೂ, ಅರ್ಜುನ ಪುತ್ರನೂ ಆದ ಅಭಿಮನ್ಯುವು ನಿನ್ನ ಸೈನ್ಯವನ್ನು ಪ್ರವೇಶಿಸಿ ನಿಶಿತವಾದ ಬಾಣಗಳಿಂದ ಎಲ್ಲರನ್ನೂ ಯುದ್ಧವಿಮುಖರನ್ನಾಗಿ ಮಾಡಿದನು.
ತಂ ತು ದ್ರೋಣಃ ಕೃಪಃ ಕರ್ಣೋ ದ್ರೌಣಿಃ ಸಹಬೃಹದ್ಬಲಃ |
ಕೃತವರ್ಮಾ ಚ ಹಾರ್ದಿಕ್ಯಃ ಷಡ್ರಥಾಃ ಪರ್ಯವಾರಯನ್ ॥ 4 ॥
ಅವನನ್ನು ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮ, ಬೃಹದ್ಬಲ ಮತ್ತು ಹಾರ್ದಿಕ್ಯನಾದ ಕೃತವರ್ಮ- ಈ ಆರು ರಥರು ತಡೆದರು.
ದೃಷ್ಟ್ವಾ ತು ಸೈಂಧವೇ ಭಾರಮತಿಮಾತ್ರಂ ಸಮಾಹಿತಮ್ |
ಸೈನ್ಯಂ ತವ ಮಹಾರಾಜ ಯುಧಿಷ್ಠಿರಮುಪಾದ್ರವತ್ ॥ 5 ॥
ಸೈಂಧವನ ಮೇಲೆ ಬಹಳ ದೊಡ್ಡ ಭಾರವು ಬಿದ್ದುದನ್ನು ತಿಳಿದ ನಿನ್ನ ಸೈನ್ಯವು ಎಲೈ ಮಹಾರಾಜನೇ, ಯುಧಿಷ್ಠಿರನ ಕಡೆಗೆ ಧಾವಿಸಿತು.
ಸೌಭದ್ರಮಿತರೇ ವೀರಾ ರಥವ್ಯಾಘ್ರಾಸ್ತ್ವಯೋಧಯನ್ |
ತಾಳಮಾತ್ರಾಣಿ ಚಾಪಾನಿ ವಿಕರ್ಷಂತೋ ವಧೈಷಿಣಃ ॥ 6 ॥
ಉಳಿದ ವೀರರು ತಾಳದಷ್ಟು ಎತ್ತರವಾದ ತಮ್ಮ ಧನುಸ್ಸುಗಳನ್ನು ಎಳೆಯುತ್ತಾ, ಅಭಿಮನ್ಯುವನ್ನು ಕೊಲ್ಲಲು ಬಯಸಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತಾಂಸ್ತು ಸರ್ವಾನ್ ಮಹೇಷ್ವಾಸಾನ್ ಸರ್ವವಿದ್ಯಾಸು ನಿಷ್ಠಿತಾನ್ |
ವ್ಯಷ್ಟಂಭಯದ್ ರಣೇ ಬಾಣೈಃ ಸೌಭದ್ರಃ ಪರವೀರಹಾ ॥ 7 ॥
ಶತ್ರುಘಾತಕನಾದ ಅಭಿಮನ್ಯುವು ಎಲ್ಲ ವಿದ್ಯೆಗಳಲ್ಲಿಯೂ ಪಾರಂಗತರಾದ, ಮಹಾಧನುರ್ಧಾರಿಗಳಾದ ಅವರನ್ನು ರಣರಂಗದಲ್ಲಿ ತನ್ನ ಬಾಣಗಳಿಂದ ತಡೆದು ನಿಲ್ಲಿಸಿದನು.
ದ್ರೋಣಂ ಪಂಚಾಶತಾ ವಿದ್ಧ್ವಾ ವಿಂಶತ್ಯಾ ಚ ಬೃಹದ್ಬಲಮ್ |
ಅಶೀತ್ಯಾ ಕೃತವರ್ಮಾಣಂ ಕೃಪಂ ಷಷ್ಟ್ಯಾ ಶಿತೈಃ ಶರೈಃ ॥ 8 ॥
ರುಗ್ಮಪುಂಖೈಃ ಪ್ರಸನ್ನಾಗ್ರೈರಾಕರ್ಣಮಭಿನಿಃಸೃತೈಃ |
ಅವಿದ್ಧ್ಯದ್ ದಶಭಿರ್ಬಾಣೈರಶ್ವತ್ಥಾಮಾನಮಾರ್ಜುನಿಃ ॥ 9 ॥
ಕರ್ಣಂ ಚ ಕರ್ಣಿನಾ ಕರ್ಣೇ ಪೀತೇನ ನಿಶಿತೇನ ಚ |
ಫಾಲ್ಗುನಿರ್ದ್ವಿಷತಾಂ ಮಧ್ಯೇ ವಿವ್ಯಾಧ ಪರಮೇಷುಣಾ ॥ 10 ॥
ದ್ರೋಣರನ್ನು ಐವತ್ತು ಬಾಣಗಳಿಂದ ಹೊಡೆದು, ಇಪ್ಪತ್ತು ಬಾಣಗಳಿಂದ ಬೃಹದ್ಬಲನನ್ನೂ, ಎಂಬತ್ತು ಬಾಣಗಳಿಂದ ಕೃತವರ್ಮನನ್ನೂ, ಅರವತ್ತು ಬಾಣಗಳಿಂದ ಕೃಪರನ್ನೂ, ಕಿವಿಯವರೆಗೂ ಎಳೆದು ವಿಸರ್ಜಿಸಿದ ಸುವರ್ಣಪುಂಖವುಳ್ಳ, ಹರಿತವಾದ ತುದಿಯುಳ್ಳ ಹತ್ತು ಬಾಣಗಳಿಂದ ಅಶ್ವತ್ಥಾಮರನ್ನೂ ಹೊಡೆದನು ಮತ್ತು ಶತ್ರುಗಳ ಮಧ್ಯದಲ್ಲಿ ಅಭಿಮನ್ಯುವು ಕರ್ಣನ ಕಿವಿಯನ್ನು ನೀರನ್ನು ಕುಡಿಸಿ ಹದಮಾಡಿದ, ಹರಿತವಾದ ಕರ್ಣಿ ಎಂಬ ಶ್ರೇಷ್ಠ ಬಾಣದಿಂದ ಹೊಡೆದನು.
ಪಾತಯಿತ್ವಾ ಕೃಪಸ್ಯಾಶ್ವಾಂಸ್ತಥೋಭೌ ಪಾರ್ಷ್ಣಿಸಾರಥೀ |
ಅಥೈನಂ ದಶಭಿರ್ಬಾಣೈಃ ಪ್ರತ್ಯವಿದ್ಧ್ಯತ್ ಸ್ತನಾಂತರೇ ॥ 11 ॥
ಕೃಪರ ಅಶ್ವಗಳನ್ನು ಕೆಡವಿ, ಹಾಗೆ ಅವರ ಇಬ್ಬರು ಪಕ್ಷ ಸಾರಥಿಯನ್ನೂ ಕೆಡವಿ ಅನಂತರ ಹತ್ತು ಬಾಣಗಳಿಂದ ಕೃಪರನ್ನು ಅವರ ಸ್ತನಗಳ ಮಧ್ಯದಲ್ಲಿ ಹೊಡೆದನು.
ತತೋ ವೃಂದಾರಕಂ ವೀರಂ ಕುರೂಣಾಂ ಕೀರ್ತಿವರ್ಧನಮ್ |
ಪುತ್ರಾಣಾಂ ತವ ವೀರಾಣಾಂ ಪಶ್ಯತಾಮವಧೀತ್ ಬಲೀ ॥ 12 ॥
ಅನಂತರ ಬಲಿಷ್ಠನಾದ ಅಭಿಮನ್ಯುವು ಕುರುಗಳ ಕೀರ್ತಿವರ್ಧನನಾದ, ವೀರನಾದ ವೃಂದಾರಕನನ್ನು, ವೀರರಾದ ನಿನ್ನ ಪುತ್ರರು ನೋಡುತ್ತಿರುವಂತೆಯೇ ಕೊಂದನು.
ತಂ ದ್ರೌಣಿಃ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮರ್ಪಯತ್ |
ವರಂ ವರಮಮಿತ್ರಾಣಾಮಾರುಜಂತಮಭೀತವತ್ ॥ 13 ॥
ಶತ್ರುಗಳಲ್ಲಿ ಶ್ರೇಷ್ಠರನ್ನು ಆರಿಸಿ, ಆರಿಸಿ ನಿರ್ಭಯವಾಗಿ ಮರ್ದಿಸುತ್ತಿದ್ದ ಅವನ ಮೇಲೆ ಅಶ್ವತ್ಥಾಮರು ಇಪ್ಪತ್ತೈದು ಕ್ಷುದ್ರಕಗಳನ್ನು (ಸಣ್ಣ ಬಾಣಗಳನ್ನು) ಪ್ರಯೋಗಿಸಿದರು.
ಸ ತು ಬಾಣೈಃ ಶಿತೈಸ್ತೂರ್ಣಂ ಪ್ರತ್ಯವಿದ್ಧ್ಯತ ಮಾರಿಷ |
ಪಶ್ಯತಾಂ ಧಾರ್ತರಾಷ್ಟ್ರಾಣಾಮಶ್ವತ್ಥಾಮಾನಮಾರ್ಜುನಿಃ ॥ 14 ॥
ಎಲೈ ಪೂಜ್ಯನೇ, ಅಭಿಮನ್ಯುವು ದುರ್ಯೋಧನಾದಿಗಳು ನೋಡುತ್ತಿರುವಂತೆಯೇ ಅವರನ್ನು ತನ್ನ ಹರಿತವಾದ ಬಾಣಗಳಿಂದ ಪ್ರತಿಯಾಗಿ ಹೊಡೆದನು.
ಷಷ್ಟ್ಯಾ ಶರಾಣಾಂ ತಂ ದ್ರೌಣಿಸ್ತಿಕ್ಷ್ಣಧಾರೈಃ ಸುತೇಜನೈಃ |
ಉಗ್ರೈರ್ನಾಕಂಪಯದ್ ವಿದ್ಧ್ವಾ ಮೈನಾಕಮಿವ ಪರ್ವತಮ್ ॥ 15 ॥
ಅಶ್ವತ್ಥಾಮರು ತೀಕ್ಷ್ಣಧಾರೆಗಳನ್ನುಳ್ಳ ತೇಜಸ್ವಿಗಳಾದ ಘೋರವಾದ ಅರವತ್ತು ಬಾಣಗಳಿಂದ ಅವನನ್ನು ಹೊಡೆದರೂ ಅವನು ಮೈನಾಕ ಪರ್ವತದಂತೆ ಅಲುಗಾಡಲಿಲ್ಲ.
ಸ ತು ದ್ರೌಣಿಂ ತ್ರಿಸಪ್ತತ್ಯಾ ತೀಕ್ಷ್ಣಧಾರೈರ್ಮಹಾಯಶಾಃ |
ಪ್ರತ್ಯವಿದ್ಧ್ಯನ್ಮಹಾರಂಗೇ ಬಲವಾನಪಕಾರಿಣಾಮ್ ॥ 16 ॥
ಮಹಾಕೀರ್ತಿವಂತನಾದ ಅವನು ತೀಕ್ಷ್ಣ ಧಾರೆಗಳನ್ನುಳ್ಳ ಎಪ್ಪತ್ತೂಮೂರು ಬಾಣಗಳಿಂದ ಶತ್ರುಗಳ ಮಧ್ಯದಲ್ಲಿ ಬಲಿಷ್ಠರಾದ

ಅಶ್ವತ್ಥಾಮರನ್ನು ಮಹಾರಣರಂಗದಲ್ಲಿ ಹೊಡೆದನು.
ತಸ್ಮಿನ್ ದ್ರೋಣೋ ಬಾಣಶತಂ ಪುತ್ರಗೃಧ್ನುರ್ನ್ಯಪಾತಯತ್ |
ಅಶ್ವತ್ಥಾಮಾ ಪುನಃ ಷಷ್ಟಿಂ ಪರೀಪ್ಸನ್ ಪಿತರಂ ರಣೇ ॥ 17 ॥
ಪುತ್ರನ ಕ್ಷೇಮವನ್ನು ಬಯಸಿದ ದ್ರೋಣರು ಅವನ ಮೇಲೆ ನೂರು ಬಾಣಗಳನ್ನು ಪ್ರಯೋಗಿಸಿದರು. ಅಶ್ವತ್ಥಾಮರೂ ಸಹ ತಂದೆಯನ್ನು ರಕ್ಷಿಸುವವರಾಗಿ ರಣರಂಗದಲ್ಲಿ ಅರವತ್ತು ಬಾಣಗಳನ್ನು ಅವನ ಮೇಲೆ ಹೊಡೆದರು.
ಕರ್ಣೋ ದ್ವಾತ್ರಿಂಶತಂ ಭಲ್ಲಾನ್ ಕೃತವರ್ಮಾ ಚತುರ್ದಶ |
ಬೃಹದ್ಬಲಸ್ತು ಪಂಚಾಶತ್ ಕೃಪಃ ಶಾರದ್ವತೋ ದಶ ॥ 18 ॥
ಕರ್ಣನು ಮೂವತ್ತೆರಡು ಭಲ್ಲಗಳನ್ನೂ, ಕೃತವರ್ಮನು ಹದಿನಾಲ್ಕು ಭಲ್ಲಗಳನ್ನೂ, ಬೃಹದ್ಬಲನು ಐವತ್ತು ಭಲ್ಲಗಳನ್ನೂ, ಶಾರದ್ವತರಾದ ಕೃಪರು ಹತ್ತು ಭಲ್ಲಗಳನ್ನು ಅವನ ಮೇಲೆ ಪ್ರಯೋಗಿಸಿದರು.
ತಾಂಸ್ತು ಪ್ರತ್ಯವಧೀತ್ ಸರ್ವಾನ್ ದಶಭಿರ್ದಶಭಿಃ ಶರೈಃ |
ವಧ್ಯಮಾನಃ ಸ ಸೌಭದ್ರೋ ರುದ್ರಃ ಕ್ರುದ್ಧಃ ಪಶೂನಿವ ॥ 19 ॥
ಅವರಿಂದ ಹೀಗೆ ಹಿಂಸಿಸಲ್ಪಡುತ್ತಿದ್ದ ಅಭಿಮನ್ಯುವು ಕ್ರುದ್ಧನಾದ ರುದ್ರನು ಪಶುಗಳನ್ನು ಕೊಂದಂತೆ ಅವರಲ್ಲಿ ಪ್ರತಿಯೊಬ್ಬರ ಮೇಲೆಯೂ ಹತ್ತು- ಹತ್ತು ಬಾಣಗಳನ್ನು ಪ್ರಯೋಗಿಸಿದನು.
ತಂ ಕೋಸಲಾನಾಮಧಿಪಂ ಕರ್ಣಿನಾऽತಾಡಯತ್ ಹೃದಿ |
ತಸ್ಯಾಶ್ವಾನಾರ್ಜುನಿಶ್ಚಾಪಂ ಸೂತಂ ಚಾಪಾತಯತ್ ಕ್ಷಿತೌ ॥ 20 ॥
ಕೋಸಲ ರಾಜನನ್ನು ಅವನ ಎದೆಯಲ್ಲಿ ಒಂದು ಕರ್ಣಿಯಿಂದ ಹೊಡೆದು ಅವನ ಅಶ್ವಗಳನ್ನೂ, ಧನುಸ್ಸನ್ನೂ ಮತ್ತು ಸಾರಥಿಯನ್ನೂ ಭೂಮಿಯ ಮೇಲೆ ಕೆಡವಿದನು.
ಕೋಸಲಾನಾಮಧಿಪತಿರ್ವಿರಥಃ ಖಡ್ಗಚರ್ಮಧೃತ್ |
ಇಯೇಷ ಫಾಲ್ಗುನೇಃ ಕಾಯಾಚ್ಚಿರೋ ಹರ್ತುಂ ಸಕುಂಡಲಮ್ ॥
ಕೋಸಲ ರಾಜನು ತನ್ನ ರಥವನ್ನು ಕಳೆದುಕೊಂಡು ಖಡ್ಗ-ಚರ್ಮಗಳನ್ನು ಹಿಡಿದು ಅಭಿಮನ್ಯುವಿನ ದೇಹದಿಂದ ಕುಂಡಲ ಸಹಿತವಾದ ಅವನ ಶಿರಸ್ಸನ್ನು ಕತ್ತರಿಸಲು ಬಯಸಿದನು.
ಕೋಸಲಾನಾಂ ತು ಭರ್ತಾರಂ ರಾಜಪುತ್ರಂ ಬೃಹದ್ಬಲಮ್ |
ಹೃದ್ಯವಿದ್ಧ್ಯತ್ ಪೃಷತ್ಕೇನ ಸ ಭಿನ್ನಹೃದಯೋऽಪತತ್ ॥ 22 ॥
ಆಗ ಅಭಿಮನ್ಯುವು ಕೋಸಲ ರಾಜಪುತ್ರನಾದ ಬೃಹದ್ಬಲನನ್ನು ಒಂದು ಬಾಣದಿಂದ ಅವನ ಎದೆಯಲ್ಲಿ ಹೊಡೆದನು. ಅವನು ಎದೆಯು ಬಿರಿದು ಭೂಮಿಯ ಮೇಲೆ ಬಿದ್ದನು.
ಬಭಂಜ ಚ ಸಹಸ್ರಾಣಿ ದಶ ರಾಜನ್ ಮಹಾತ್ಮನಾಮ್ |
ಸೃಜತಾಮಶಿವಾ ವಾಚಃ ಖಡ್ಗಕಾರ್ಮುಕಧಾರಿಣಾಮ್ ॥ 23 ॥
ರಾಜನೇ, ಅಭಿಮನ್ಯುವು ಧನುಸ್ಸು-ಖಡ್ಗಗಳನ್ನು ಹಿಡಿದು, ಕ್ರೂರವಾದ ಮಾತುಗಳನ್ನು ಆಡುವ ನಿನ್ನ ಹದಿನಾಲ್ಕು ಸಾವಿರ ಶ್ರೇಷ್ಠ ಸೈನಿಕರನ್ನು ಕೊಂದನು.
ತಥಾ ಬೃಹದ್ಬಲಂ ಹತ್ವಾ ಸೌಭದ್ರೋ ವ್ಯಚರದ್ ರಣೇ |
ವ್ಯಷ್ಟಂಭಯನ್ಮಹೇಷ್ವಾಸಾನ್ ಮೋಹಯನ್ನಿವ ಭಾರತ ॥ 24 ॥
ಎಲೈ ಭಾರತನೇ, ಅಭಿಮನ್ಯುವು ಆ ರೀತಿಯಲ್ಲಿ ಬೃಹದ್ಬಲನನ್ನು ಕೊಂದು, ಮಹಾಧನುರ್ಧಾರಿಗಳನ್ನು ತಡೆದು ಮೋಹಗೊಳಿಸುವವನಂತೆ ರಣರಂಗದಲ್ಲಿ ಸಂಚರಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಷಟ್ಚತ್ವಾರಿಂಶೋऽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಪಂಚದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೇಳನೆಯ ಅಧ್ಯಾಯ
ದ್ರೋಣಾದಿ ಷಡ್ರಥರಿಂದ ಅಭಿಮನ್ಯುವಿನ ರಥದ ನಾಶ
ಮತ್ತು ಅಭಿಮನ್ಯುವಿನ ವಧೆ.
ಸಂಜಯಃ
ತತಃ ಕರ್ಣಂ ಸಮಾಸಾದ್ಯ ರಣೇ ವಿವ್ಯಾಧ ಫಾಲ್ಗುನಿಃ |
ಶರೈಃ ಪಂಚಾಶತಾ ಚೈನಮವಿಧ್ಯತ್ ಕೋಪಯನ್ನಿವ ॥ 1 ॥
ಸಂಜಯ ಅನಂತರ ಅಭಿಮನ್ಯುವು ರಣರಂಗದಲ್ಲಿ ಕರ್ಣನನ್ನು ಸಮೀಪಿಸಿ, ಅವನನ್ನು ಕೋಪಗೊಳಿಸುವವನಂತೆ ಐವತ್ತು ಬಾಣಗಳಿಂದ ಹೊಡೆದನು.
ಪ್ರತಿವಿವ್ಯಾಧ ರಾಧೇಯಸ್ತಾವದ್ಭಿರಥ ತಂ ಪುನಃ |
ಸ ತೈರಾಚಿತಸರ್ವಾಂಗೋ ಬಹ್ವಶೋಭತ ಭಾರತ ॥ 2 ॥
ರಾಧಾ ಪುತ್ರನಾದ ಕರ್ಣನೂ ಸಹ ಅವನನ್ನು ಅಷ್ಟೇ ಬಾಣಗಳಿಂದ ಹೊಡೆದನು. ಎಲೈ ಭಾರತನೇ, ಆ ಬಾಣಗಳೆಲ್ಲವೂ ತನ್ನ ಶರೀರದಲ್ಲಿ ನಾಟಿದ ಅಭಿಮನ್ಯುವು ಬಹಳವಾಗಿ ಶೋಭಿಸಿದನು.

ಕರ್ಣಂ ಚಾಪ್ಯಕರೋದ್ ಯುದ್ಧೇ ರುಧಿರೌಘಪರಿಪ್ಲುತಮ್ |
ಕರ್ಣಸ್ತು ವಿಬಭೌ ಶೂರಃ ಶರೈಶ್ಚಿತ್ರೈರಭಿಪ್ಲುತಃ |
ಸಂಧ್ಯಾನುಗತಪರ್ಯಂತಃ ಶರದೀವ ದಿವಾಕರಃ ॥ 3 ॥
ಅವನು ಕರ್ಣನನ್ನೂ ಸಹ ರಕ್ತ ಪ್ರವಾಹದಿಂದ ಲೇಪಿತನನ್ನಾಗಿ ಮಾಡಿದನು. ಶೂರನಾದ ಕರ್ಣನು ಶರತ್ಕಾಲದಲ್ಲಿ ಸಂಧ್ಯಾಕಾಲದ ಸೂರ್ಯನಂತೆ ಆ ವಿಚಿತ್ರಬಾಣಗಳಿಂದ ಶೋಭಿಸಿದನು.
ಅಥ ಕರ್ಣಸ್ಯ ಸಚಿವಾನ್ ಷಡ್ರಥಾಂಶ್ಚಿತ್ರಯೋಧಿನಃ |
ಸಾಶ್ವಸೂತಧ್ವಜರಥಾನ್ ಸೌಭದ್ರೋ ಹ್ಯಹನದ್ ಬಲೀ ॥ 4 ॥
ಅನಂತರ ಅಭಿಮನ್ಯುವು ಕರ್ಣನ ಸಚಿವರಾದ ಚಿತ್ರಯೋಧಿಗಳಾದ ಆರು ಮಹಾರಥರನ್ನು ಅವರ ಅಶ್ವ-ಸೂತ-ಗಜಗಳ ಸಹಿತವಾಗಿ ಕೊಂದನು.
ಅಥೇತರಾನ್ ಮಹೇಷ್ವಾಸಾನ್ ದಶಭಿರ್ದಶಭಿಃ ಶರೈಃ |
ಪ್ರತ್ಯವಿದ್ಧ್ಯದವಿತ್ರಸ್ತಃ ತದದ್ಭುತಮಿವಾಭವತ್ ॥ 5 ॥
ಇತರ ಮಹಾಧನುರ್ಧಾರಿಗಳನ್ನು ಅವನು ನಿರ್ಭಯವಾಗಿ ಹತ್ತು-ಹತ್ತು ಬಾಣಗಳಿಂದ ಹೊಡೆದನು. ಅದು ಅದ್ಭುತವಾಗಿದ್ದಿತು.
ಮಾಗಧಸ್ಯ ಪುನಃ ಪುತ್ರಂ ಹತ್ವಾ ಷಡ್ಭಿರಜಿಹ್ಮಗೈಃ |
ಸಾಶ್ವಂ ಸಸೂತಂ ತರುಣಮ್ ಅಶ್ವಕೇತುಮಪಾತಯತ್ ॥ 6 ॥
ಮಗಧರಾಜನ ಪುತ್ರನಾದ, ತರುಣನಾದ ಅಶ್ವಕೇತುವನ್ನು ನೇರವಾಗಿ ಸಾಗುವ ಆರು ಬಾಣಗಳಿಂದ ಅವನ ಅಶ್ವ-ಸಾರಥಿಗಳ ಜೊತೆಯಲ್ಲಿ ಕೊಂದನು.
ಮಾರ್ತಿಕಾವತಕಾಂಬೋಜಂ ತತಃ ಕುಂಜರಕೇತನಮ್ |
ಕ್ಷುರಪ್ರೇಣ ಸಮುನ್ಮಥ್ಯ ನನಾದ ವಿಸೃಜನ್ ಶರಾನ್ ॥ 7 ॥
ಏಕಚಕ್ರನಗರದ ಗಜಧ್ವಜವುಳ್ಳ ಕಾಂಬೋಜನನ್ನು ಕ್ಷುರಪ್ರದಿಂದ ಮರ್ದಿಸಿ, ಬಾಣಗಳನ್ನು ಪ್ರಯೋಗಿಸುತ್ತಾ ನಾದವನ್ನು ಮಾಡಿದನು.
ತಸ್ಯ ದೌಃಶಾಸನಿರ್ವಿದ್ಧ್ವಾ ಚತುರ್ಭಿಶ್ಚತುರೋ ಹಯಾನ್ |
ಸೂತಮೇಕೇನ ವಿವ್ಯಾಧ ದಶಭಿಶ್ಚಾರ್ಜುನಾತ್ಮಜಮ್ ॥ 8 ॥
ದುಶ್ಶಾಸನ ಪುತ್ರನು ಅಭಿಮನ್ಯುವಿನ ನಾಲ್ಕು ಅಶ್ವಗಳನ್ನು ನಾಲ್ಕು ಬಾಣಗಳಿಂದ ಕೊಂದು, ಅವನ ಸಾರಥಿಯನ್ನು ಒಂದು ಬಾಣದಿಂದ ಕೊಂದು, ಹತ್ತು ಬಾಣಗಳಿಂದ ಅಭಿಮನ್ಯುವನ್ನು ಹೊಡೆದನು.
ತತೌ ದೌಃಶಾಸನಿಂ ಕಾರ್ಷ್ಣಿರ್ವಿದ್ಧ್ವಾ ಸಪ್ತಭಿರಾಶುಗೈಃ |
ಸಂರಂಭರಕ್ತನಯನೋ ವಾಕ್ಯಮುಚ್ಚೈರಥಾಬ್ರವೀತ್ ॥ 9 ॥
ಪಿತಾ ತವಾಹವಂ ತ್ಯಕ್ತ್ವಾ ಗತಃ ಕಾಪುರುಷೋ ಯಥಾ |
ದಿಷ್ಟ್ಯಾ ತ್ವಮಪಿ ಜಾನೀಷೇ ಯೋದ್ಧುಂ ನ ತ್ವದ್ಯ ಮೋಕ್ಷ್ಯಸೇ ॥10॥
ಆಗ ಅಭಿಮನ್ಯುವು ದುಶ್ಶಾಸನಪುತ್ರನನ್ನು ಶೀಘ್ರಗಾಮಿಗಳಾದ ಏಳು ಬಾಣಗಳಿಂದ ಹೊಡೆದು, ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಅವನನ್ನು ಕುರಿತು `ನಿನ್ನ ತಂದೆಯು ಕೆಟ್ಟ ಪುರುಷನಂತೆ ರಣರಂಗವನ್ನು ತ್ಯಜಿಸಿ ಹೋಗಿದ್ದಾನೆ. ದೇವರ ದಯೆಯಿಂದ ನಿನಗೂ ಯುದ್ಧ ಮಾಡಲು ಬರುತ್ತದೆ, ಆದರೆ ನನ್ನಿಂದ ನೀನು ಬಿಡುಗಡೆಯನ್ನು ಹೊಂದುವುದಿಲ್ಲ' ಎಂದು ಹೇಳಿದನು.
ಸಂಜಯಃ
ಏತಾವದುಕ್ತ್ವಾ ವಚನಂ ಕರ್ಮಾರಪರಿಮಾರ್ಜಿತಮ್ |
ನಾರಾಚಂ ವಿಸಸರ್ಜಾಸ್ಮೈ ತಂ ದ್ರೌಣಿಸ್ತ್ರಿಭಿರಚ್ಛಿನತ್ ॥ 11 ॥
ಸಂಜಯ ಇಷ್ಟು ಮಾತನ್ನು ಹೇಳಿ ಕಮ್ಮಾರನಿಂದ ಚೆನ್ನಾಗಿ ಸಿದ್ಧಪಡಿಸಲ್ಪಟ್ಟ ನಾರಾಚವನ್ನು ದುಶ್ಶಾಸನನ ಪುತ್ರನ ಮೇಲೆ ಎಸೆದನು. ಅದನ್ನು ಅಶ್ವತ್ಥಾಮರು ಮೂರು ಬಾಣಗಳಿಂದ ಕತ್ತರಿಸಿದರು.
ತಸ್ಯಾರ್ಜುನಿರ್ಧನುಶ್ಛಿತ್ತ್ವಾ ಶಲ್ಯಂ ತ್ರಿಭಿರತಾಡಯತ್ |
ತಂ ಶಲ್ಯೋ ನವಭಿರ್ಬಾಣೈರ್ಗೃಧ್ರಪತ್ರೈರತಾಡಯತ್ |
ಹೃದ್ಯಸಂಭ್ರಾಂತವದ್ ರಾಜಂಸ್ತದದ್ಭುತಮಿವಾಭವತ್ ॥ 12 ॥
ಅಭಿಮನ್ಯುವು ಅಶ್ವತ್ಥಾಮರ ಧನುಸ್ಸನ್ನು ಕತ್ತರಿಸಿ, ಶಲ್ಯನನ್ನು ಮೂರು ಬಾಣಗಳಿಂದ ಹೊಡೆದನು. ಶಲ್ಯನು ಗೃಧ್ರಪತ್ರಗಳನ್ನು ಹೊಂದಿದ್ದ ಒಂಬತ್ತು ಬಾಣಗಳಿಂದ ಅಭಿಮನ್ಯುವನ್ನು ಹೊಡೆದನು. ಎಲೈ ರಾಜನೇ, ಅಭಿಮನ್ಯುವು ಮನಸ್ಸಿನಲ್ಲಿ ಗಾಬರಿಗೊಳ್ಳದೆ ಶಲ್ಯನನ್ನು ಹೊಡೆದುದು ಅದ್ಭುತವಾಗಿದ್ದಿತು.
ತಸ್ಯಾರ್ಜುನಿರ್ಧನುಶ್ಛಿತ್ತ್ವಾ ಹತ್ವಾ ಚ ಪಾರ್ಷ್ಣಿಸಾರಥೀ |
ತಂ ವಿವ್ಯಾಧಾಯಸೈಃ ಷಡ್ಭಿಃ ಸೋಪಕ್ರಾಮದ್ ರಥಾಂತರಮ್ ॥ 13 ॥
ಅಭಿಮನ್ಯುವು ಅವನ ಧನುಸ್ಸನ್ನು ಕತ್ತರಿಸಿ, ಅವನ ಇಬ್ಬರು ಪಾರ್ಷ್ಣಿ-ಸಾರಥಿಗಳನ್ನು ಕೊಂದು, ಅವನ ಮೇಲೆ ಆರು ಕಬ್ಬಿಣದ ಬಾಣಗಳನ್ನು ಪ್ರಯೋಗಿಸಿದನು. ಶಲ್ಯನು ಇನ್ನೊಂದು ರಥಕ್ಕೆ ಹೋದನು.
ಶತ್ರುಂಜಯಂ ಚಂದ್ರಕೇತುಂ ಮೇಘವೇಗಂ ಸುವರ್ಚಸಮ್ |
ಸೂರ್ಯಭಾಸಂ ಚ ಪಂಚೈತಾನ್ ಹತ್ವಾ ವಿವ್ಯಾಧ ಸೌಬಲಮ್ ॥14॥
ಅಭಿಮನ್ಯುವು ಶತ್ರುಂಜಯ, ಚಂದ್ರಕೇತು, ಮೇಘವೇಗ, ಸುವರ್ಚಸ, ಸೂರ್ಯಭಾಸ- ಎಂಬ ಈ ಐದು ರಾಜರನ್ನು ಕೊಂದು

ಶಕುನಿಯನ್ನು ಬಾಣಗಳಿಂದ ಹೊಡೆದನು.
ತಂ ಸೌಬಲಸ್ತ್ರಿಭಿರ್ವಿದ್ಧ್ವಾ ದುರ್ಯೋಧನಮಥಾಬ್ರವೀತ್ |
ಸರ್ವ ಏನಂ ಪ್ರಮಥ್ನೀಮಃ ಪುರೈಕೈಕಂ ಹಿನಸ್ತಿ ನಃ ॥ 15 ॥
ಶಕುನಿಯು ಅವನನ್ನು ಮೂರು ಬಾಣಗಳಿಂದ ಹೊಡೆದು ದುರ್ಯೋಧನನನ್ನು ಕುರಿತು `ಇವನು ನಮ್ಮಲ್ಲಿ ಒಬ್ಬೊಬ್ಬರನ್ನೂ ಹಿಡಿದು ಕೊಲ್ಲುತ್ತಿದ್ದಾನೆ. ಎಲ್ಲರೂ ಸೇರಿ ಇವನನ್ನು ನಾಶ ಮಾಡೋಣ' ಎಂದು ಹೇಳಿದನು.
ಅಥಾಬ್ರವೀತ್ ತತೋ ದ್ರೋಣಂ ಕರ್ಣೋ ವೈಕರ್ತನೋ ರಣೇ |
ಪುರಃ ಸರ್ವಾನ್ ಪ್ರಮಥ್ನಾತಿ ಬ್ರೂಹ್ಯಸ್ಯ ವಧಮಾಶು ನಃ ॥ 16 ॥
ಅನಂತರ ವೈಕರ್ತನನಾದ ಕರ್ಣನು ರಣರಂಗದಲ್ಲಿ ದ್ರೋಣರನ್ನೂ ಕುರಿತು `ಅವನು ಎದುರಿಗೇ ಎಲ್ಲರನ್ನೂ ಕೊಲ್ಲುತ್ತಿದ್ದಾನೆ. ನಮಗೆ ಅವನ ವಧೋಪಾಯವನ್ನು ಶೀಘ್ರವಾಗಿ ಹೇಳಿ' ಎಂದು ಹೇಳಿದನು.
ತತೋ ದ್ರೋಣೋ ಮಹೇಷ್ವಾಸಃ ಸರ್ವಾಂಸ್ತಾನ್ ಪ್ರತ್ಯಭಾಷತ ॥17॥
ನಾಸ್ಯಾಣ್ವಂತರಂ ಕಶ್ಚಿತ್ ಕುಮಾರಸ್ಯ ಪ್ರಪಶ್ಯತಿ |
ಅನ್ವಸ್ಯ ಪಿತರಂ ಪಶ್ಯ ಚರತಃ ಸರ್ವತೋದಿಶಮ್ ॥ 18 ॥
ಆಗ ಮಹಾಧನುರ್ಧಾರಿಗಳಾದ ದ್ರೋಣರು ಅವರೆಲ್ಲರನ್ನೂ ಕುರಿತು `ಕುಮಾರನು ಸ್ವಲ್ಪವೂ ಅವಕಾಶವನ್ನು ಕೊಡುತ್ತಿಲ್ಲ. ಅವನು ತನ್ನ ತಂದೆಯನ್ನು ತ್ಯಜಿಸಿ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತಿತರುವುದನ್ನು ನೋಡು' ಎಂದು ಹೇಳಿದರು.
ಶೀಘ್ರತಾಂ ನರಸಿಂಹಸ್ಯ ಪಾಂಡವಸ್ಯೇವ ಪಶ್ಯತ |
ಧನುರ್ಮಂಡಲಮೇವಾಸ್ಯ ರಥಮಾರ್ಗೇಷು ದೃಶ್ಯತೇ ॥ 19 ॥
ನರಸಿಂಹನಾದ ಅರ್ಜುನನಿಗೆ ಇರುವಂತಹ ಅವನ ಶೀಘ್ರತೆಯನ್ನು ನೋಡಿ. ರಥಮಾರ್ಗಗಳಲ್ಲಿ ಅವನ ಧನುಸ್ಸು ಯಾವಾಗಲೂ ಮಂಡಲಾಕಾರವಾಗಿಯೇ ಕಾಣುತ್ತಿದೆ.
ಸಂದಧಾನಸ್ಯ ವಿಶಿಖಾನ್ ಶೀಘ್ರಂ ಚೈವ ವಿಮುಂಚತಃ |
ಆರುಜನ್ನಿವ ಮೇ ಪ್ರಾಣಾನ್ ಮೋಹಯನ್ನಿವ ಸೈನಿಕಾನ್ ॥ 20 ॥
ಪ್ರಹರ್ಷಯತಿ ಮಾಂ ವೀರಃ ಸೌಭದ್ರಃ ಪರವೀರಹಾ |
ಅತಿಮಾನಂ ದಧಾತ್ಯೇಷ ಸೌಭದ್ರೋ ವಿಚರನ್ ರಣೇ ॥ 21 ॥
ಧನುಸ್ಸಿನಲ್ಲಿ ಬಾಣಗಳನ್ನು ಹೂಡಿ, ಶೀಘ್ರವಾಗಿ ಪ್ರಯೋಗಿಸಿ, ನನ್ನ ಪ್ರಾಣಗಳನ್ನು ಹಿಂಸಿಸುವವನಂತೆ, ನನ್ನ ಸೈನಿಕರನ್ನು ಮೋಹಗೊಳಿಸುವವನಂತೆ ಇರುವ ಶತ್ರುಘಾತಕನೂ, ವೀರನೂ ಆದ ಅಭಿಮನ್ಯುವು ನನಗೆ ಹರ್ಷವನ್ನುಂಟು ಮಾಡುತ್ತಿದ್ದಾನೆ. ಅಭಿಮನ್ಯುವು ರಣರಂಗದಲ್ಲಿ ಸಂಚರಿಸುತ್ತಾ ಅತಿಶಯವನ್ನು ಹೊಂದಿದವನಾಗಿದ್ದಾನೆ.
ಅಂತರಂ ಯಸ್ಯ ಸಂರಬ್ಧಾ ನ ಪಶ್ಯಂತಿ ಮಹಾರಥಾಃ |
ಅಸ್ಯತೋ ಲಘುಹಸ್ತಸ್ಯ ದಿಶಃ ಸರ್ವಾ ಮಹೇಷುಭಿಃ |
ನ ವಿಶೇಷಂ ಪ್ರಪಶ್ಯಾಮಿ ರಣೇ ಗಾಂಡೀವಧನ್ವನಃ ॥ 22 ॥
ಮಹಾರಥರು ಅವನ ಕರ್ಮದಲ್ಲಿ ಸ್ವಲ್ಪ ಅಂತರವನ್ನೂ ಕಾಣುತ್ತಿಲ್ಲ. ಅವನು ಕ್ಷಿಪ್ರಹಸ್ತದಿಂದ ದೊಡ್ಡ ಬಾಣಗಳನ್ನು ಎಲ್ಲ ದಿಕ್ಕುಗಳಲ್ಲಿಯೂ ಪ್ರಯೋಗಿಸುವುದನ್ನು ನೋಡಿದರೆ ಯುದ್ಧದಲ್ಲಿ ಅರ್ಜುನನಿಗೂ, ಅವನಿಗೂ ನಾನು ಯಾವ ವ್ಯತ್ಯಾಸವನ್ನೂ ಕಾಣುವುದಿಲ್ಲ (ಎಂದು ಹೇಳಿದರು).
ಸಂಜಯಃ
ಅಥ ಕರ್ಣಃ ಪುನರ್ದ್ರೋಣಮಾಹಾರ್ಜುನಿಶರಾರ್ದಿತಃ |
ಸ್ಥಾತವ್ಯಮಿತಿ ತಿಷ್ಠಾಮಿ ಪೀಡ್ಯಮಾನೋಽಭಿಮನ್ಯುನಾ ॥ 23 ॥
ಸಂಜಯ ಆಗ ಅಭಿಮನ್ಯುವಿನ ಬಾಣಗಳಿಂದ ವ್ಯಥೆಗೊಂಡ ಕರ್ಣನು ಪುನಃ ದ್ರೋಣರನ್ನು ಕುರಿತು- ಅಭಿಮನ್ಯುವಿನಿಂದ ಪೀಡಿಸಲ್ಪಟ್ಟು ನಾನು ರಣರಂಗದಲ್ಲಿ ನಿಲ್ಲಬೇಕು ಎಂಬ ಕಾರಣದಿಂದ ಮಾತ್ರ ನಿಂತಿದ್ದೇನೆ.
ತೇಜಸ್ವಿನಃ ಕುಮಾರಸ್ಯ ಶರಾಃ ಪರಮದಾರುಣಾಃ |
ಕ್ಷಿಣ್ವಂತಿ ಹೃದಯಂ ಮೇಽದ್ಯ ತೋತ್ರಾಸ್ತು ದ್ವಿರದಂ ಯಥಾ ॥ 24 ॥
ತಮಾಚಾರ್ಯೋಽಬ್ರವೀತ್ ಕರ್ಣಂ ಶನಕೈಃ ಪ್ರಹಸನ್ನಿವ |
ಅಭೇದ್ಯಂ ಕವಚಂ ಚಾಸ್ಯ ಯುವಾ ಚ ಲಘುವಿಕ್ರಮಃ ॥ 25 ॥
ತೇಜಸ್ವಿಯಾದ, ಕುಮಾರನ ಪರಮದಾರುಣವಾದ ಬಾಣಗಳು ಅಂಕುಶಗಳು ಗಜವನ್ನು ಹಿಂಸಿಸಿದಂತೆ ಈ ದಿನ ನನ್ನ ಹೃದಯವನ್ನು ನಾಶಪಡಿಸುತ್ತಿವೆ ಎಂದು ಹೇಳಿದನು. ಆಚಾರ್ಯರು ಆ ಕರ್ಣನನ್ನು ಕುರಿತು ನಗುತ್ತಾ ನಿಧಾನವಾಗಿ ಅವನ ಕವಚವು ಅಭೇದ್ಯವಾದುದು. ಅವನು ಯುವಕನೂ ಮತ್ತು ಶೀಘ್ರವಾದ ಪರಾಕ್ರಮವುಳ್ಳವನೂ ಆಗಿದ್ದಾನೆ.
ಉಪದಿಷ್ಟಂ ಮಯಾಽಪ್ಯಸ್ಯ ಪಿತುಃ ಕವಚಧಾರಣಮ್ |
ತದೇಷ ನಿಖಿಲಂ ವೇತ್ತಿ ಯುವಾ ಪರಪುರಂಜಯಃ ॥ 26 ॥
ಶಕ್ಯಂ ನಾಸ್ಯ ಧನುಶ್ಛೇತ್ತುಂ ಜ್ಯಾಂ ವಾ ಬಾಣೈಃ ಸಮಾಹಿತೈಃ |
ಅಸ್ಯತೋ ಲಘುಹಸ್ತಸ್ಯ ತಥೋಭೌ ಪಾರ್ಷ್ಣಿಸಾರಥೀ ॥ 27 ॥
ನಾನು ಅಂತಹ ಕವಚಧಾರಣೆಯನ್ನು ಅವನ ತಂದೆಗೆ ಉಪದೇಶ ಮಾಡಿದ್ದೇನೆ. ಯುವಕನೂ, ಶತ್ರುಘಾತಕನೂ ಆದ ಇವನು ಅದೆಲ್ಲವನ್ನೂ ತಿಳಿದಿದ್ದಾನೆ. ಬಾಣಗಳಿಂದ ಎಷ್ಟು ಹೊಡೆದರೂ ಕ್ಷಿಪ್ರವಾಗಿ ಬಾಣಗಳನ್ನು ಪ್ರಯೋಗಿಸುವ ಅವನ ಧನುಸ್ಸನ್ನಾಗಲೀ, ಹೆದೆಯನ್ನಾಗಲೀ ಅಥವಾ ಅವನ ಪಾರ್ಷ್ಣಿ-ಸಾರಥಿಗಳನ್ನಾಗಲೀ ಕತ್ತರಿಸಲು ಸಾಧ್ಯವಿಲ್ಲ.

ಏತತ್ ಕುರು ಮಹೇಷ್ವಾಸ ರಾಧೇಯ ಯದಿ ಶಕ್ಯತೇ |
ಅಥೈನಂ ವಿಮುಖೀಕೃತ್ಯ ಪಶ್ಚಾತ್ ಪ್ರಹರಣಂ ಕುರು ॥ 28 ॥
ಸಧನುಷ್ಕೋ ನ ಶಕ್ಯೋಽಯಮಪಿ ಜೇತುಂ ಸುರಾಸುರೈಃ |
ವಿರಥಂ ವಿಧನುಷ್ಕಂ ಚ ಕುರುಷ್ವೈನಂ ಯದೀಚ್ಛಸಿ ॥ 29 ॥
ಪುರಃ ಸ್ಥಿತೇನ ಕೇನಾಪಿ ದುಃಶಕೋ ಜೇತುಮಾರ್ಜುನಿಃ ॥ 30 ॥
ಎಲೈ ಮಹಾಧನುರ್ಧಾರಿಯಾದ ಕರ್ಣನೇ, ಸಾಧ್ಯವಾದರೆ ಈ ಕಾರ್ಯವನ್ನು ಮಾಡು. ಇವನನ್ನು ವಿಮುಖನನ್ನಾಗಿ ಮಾಡಿ ಹಿಂದಿನಿಂದ ಪ್ರಹಾರವನ್ನು ಮಾಡು. ಧನುಸ್ಸನ್ನು ಹಿಡಿದ ಇವನನ್ನು ಸುರಾಸುರರೂ ಗೆಲ್ಲಲು ಸಾಧ್ಯವಿಲ್ಲ. ನೀನು ಅವನನ್ನು ಕೊಲ್ಲಲು ಬಯಸಿದರೆ ಅವನನ್ನು ರಥಹೀನನನ್ನಾಗಿ, ಧನುರ್ಹೀನನನ್ನಾಗಿ ಮಾಡು. ಅವನ ಎದುರಿಗೆ ಬಂದ ಯಾವನಿಂದಲೂ ಅಭಿಮನ್ಯುವನ್ನು ಗೆಲ್ಲಲು ಸಾಧ್ಯವಿಲ್ಲ ಎಂದು ಹೇಳಿದರು.
ಸಂಜಯಃ
ತದಾಚಾರ್ಯವಚಃ ಶ್ರುತ್ವಾ ಕರ್ಣೋ ವೈಕರ್ತನಸ್ತ್ವರನ್ |
ಅಸ್ಯತೋ ಲಘುಹಸ್ತಸ್ಯ ಪೃಷ್ಠತೋ ಧನುರಚ್ಛಿನತ್ ॥ 31 ॥
ಆಚಾರ್ಯರ ಆ ಮಾತುಗಳನ್ನು ಕೇಳಿ ವೈಕರ್ತನನಾದ ಕರ್ಣನು ತ್ವರೆ ಮಾಡಿ, ಕ್ಷಿಪ್ರಹಸ್ತನಾದ ಅವನು ಬಾಣಗಳನ್ನು ಪ್ರಯೋಗಿಸುತ್ತಿರಲು ಹಿಂಭಾಗದಿಂದ ಅವನ ಧನುಸ್ಸನ್ನು ಕತ್ತರಿಸಿದನು.
ಅಶ್ವಾನಸ್ಯಾವಧೀದ್ ದ್ರೋಣೋ ಗೌತಮಃ ಪಾರ್ಷ್ಣಿಸಾರಥೀ |
ಶೇಷಾಸ್ತಂ ಚ್ಛಿನ್ನಧನ್ವಾನಂ ಶರವರ್ಷೈರವಾಕಿರನ್ ॥ 32 ॥
ದ್ರೋಣರು ಅವನ ಅಶ್ವಗಳನ್ನು ಕೊಂದರು. ಕೃಪರು ಅವನ ಪಾರ್ಷ್ಣಿ-ಸಾರಥಿಗಳನ್ನು ಕೊಂದರು. ಉಳಿದವರು ಧನುರ್ಹೀನನಾದ ಅವನ ಮೇಲೆ ಬಾಣಗಳ ಮಳೆಯನ್ನು ಕರೆದರು.
ತ್ವರಮಾಣಾಸ್ತದಾ ಕಾಲೇ ವಿರಥಂ ಷಣ್ಮಹಾರಥಾಃ |
ಶರವರ್ಷೇಣ ಮಹತಾ ಬಾಲಮೇಕಮವಾಕಿರನ್ ॥ 33 ॥
ಆ ಕಾಲದಲ್ಲಿ ಆರು ಮಹಾರಥರು ವಿರಥನಾದ ಆ ಬಾಲನೂ, ಏಕಾಕಿಯೂ ಆದ ಅವನ ಮೇಲೆ ತ್ವರೆ ಮಾಡಿ ಬಾಣಗಳ ದೊಡ್ಡ ಮಳೆಯನ್ನು ಸುರಿಸಿದರು.
ಸ ಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಖಡ್ಗಚರ್ಮಧರಃ ಶ್ರೀಮಾನ್ ಉತ್ಪಪಾತ ವಿಹಾಯಸಮ್ ॥ 34 ॥
ಬಲಲಾಘವಶಿಕ್ಷಾಭಿಃ ಕೈಶಿಕಾನಾಂ ಚ ಶಿಕ್ಷಯಾ |
ಭೃಶಂ ಕ್ರುದ್ಧೋಽರ್ಜುನಿರ್ವ್ಯೋಮ್ನಿ ವ್ಯಚರತ್ ಪಕ್ಷಿರಾಡಿವ ॥ 35 ॥
ತನ್ನ ಧನುಸ್ಸು ಕತ್ತರಿಸಲ್ಪಟ್ಟು, ರಥಹೀನನಾಗಿ, ಅಶ್ವಗಳು ಮತ್ತು ಸಾರಥಿಯು ಮೃತವಾಗಿರಲು ಕಾಂತಿಯುಕ್ತನಾದ ಅಭಿಮನ್ಯುವು ಖಡ್ಗ-ಚರ್ಮವನ್ನು ಹಿಡಿದು ಬಲ, ಕ್ಷಿಪ್ರತನ, ಅಭ್ಯಾಸಬಲದಿಂದ ಮತ್ತು ಕೈಶಿಕರ ಶಿಕ್ಷಣದಿಂದಲೂ ಆಕಾಶಕ್ಕೆ ಹಾರಿದನು. ಅಭಿಮನ್ಯುವು ಕೋಪಗೊಂಡು ಪಕ್ಷಿರಾಜನಾದ ಗರುಡನಂತೆ ಆಕಾಶದಲ್ಲಿ ಸಂಚರಿಸಿದನು.
ಮಯ್ಯೇವ ನಿಪತೇದೇಷ ಸಾಸಿರಿತ್ಯೂರ್ಧ್ವದೃಷ್ಟಯಃ |
ವಿವ್ಯಧುಸ್ತಂ ಮಹೇಷ್ವಾಸಂ ಸಮರೇ ಚ್ಛಿದ್ರದರ್ಶಿನಃ ॥ 36 ॥
ಅವನ ಛಿದ್ರವನ್ನು ಹುಡುಕುತ್ತಿದ್ದ ವೀರರು ಅವನ ಕೈಯಲ್ಲಿರುವ ಈ ಕತ್ತಿಯು ನನ್ನ ಮೇಲೆಯೇ ಬೀಳುತ್ತದೆ ಎಂದು ಯೋಚಿಸುತ್ತಾ, ಮಹಾಧನುರ್ಧಾರಿಯಾದ ಅವನನ್ನು ಬಾಣಗಳಿಂದ ಹೊಡೆದರು.
ತಸ್ಯ ದ್ರೋಣೋಽಚ್ಛಿನನ್ಮುಷ್ಟೌ ಖಡ್ಗಂ ಮಣಿಮಯತ್ಸರುಮ್ |
ರಾಧೇಯೋ ನಿಶಿತೈರ್ಬಾಣೈರ್ವ್ಯಧಮಚ್ಚರ್ಮ ಸುಪ್ರಭಮ್ ॥ 37 ॥
ದ್ರೋಣರು ಮಣಿಮಯವಾದ ಹಿಡಿಯಿದ್ದ ಅವನ ಖಡ್ಗವನ್ನು ಮುಷ್ಟಿದೇಶದಲ್ಲಿ ಕತ್ತರಿಸಿದರು. ಕರ್ಣನು ಹರಿತವಾದ ಬಾಣಗಳಿಂದ ಪ್ರಕಾಶಮಾನವಾದ ಅವನ ಗುರಾಣಿಯನ್ನು ನಾಶ ಮಾಡಿದನು.
ವ್ಯಸಿಚರ್ಮೇಷುಪೂರ್ಣಾಂಗಃ ಸೋಽಂತರಿಕ್ಷಾತ್ ಪುನಃ ಕ್ಷಿತಿಮ್ |
ಆಸ್ಥಿತಶ್ಚಕ್ರಮುದ್ಯಮ್ಯ ದ್ರೋಣಂ ಕ್ರುದ್ಧೋಽಭ್ಯಧಾವತ ॥ 38 ॥
ತನ್ನ ಖಡ್ಗ-ಚರ್ಮಗಳನ್ನೂ, ಬಾಣಗಳನ್ನೂ ಕಳೆದುಕೊಂಡು, ಶರೀರದಲ್ಲೆಲ್ಲಾ ಬಾಣಗಳು ನೆಟ್ಟಿರಲು, ಅವನು ಅಂತರಿಕ್ಷದಿಂದ ಪುನಃ ಭೂಮಿಯಲ್ಲಿ ಇಳಿದು ಚಕ್ರವನ್ನು ಹಿಡಿದು ಎತ್ತಿ ಕ್ರುದ್ಧನಾಗಿ ದ್ರೋಣರ ಕಡೆಗೆ ಓಡಿದನು.
ಸ ಚಕ್ರಪಾಣಿರ್ಬಲದೀಪ್ತಗಾತ್ರೋ
ಬಭಾವತೀವೋನ್ನತಪತ್ರಿಣಾಂ ಸಹಃ |
ರಣೇಽಭಿಮನ್ಯುರ್ಬಲವಾನ್ ಸುಭದ್ರಜಃ
ಸ ವಾಸುದೇವಾನುಕೃತಿಂ ಪ್ರಕುರ್ವನ್ ॥ 39 ॥
ಶ್ರೇಷ್ಠವಾದ ಬಾಣಗಳ ಪ್ರಹಾರವನ್ನು ಸಹಿಸುವ ಸುಭದ್ರಾ ಪುತ್ರನಾದ, ಬಲಿಷ್ಠನಾದ ಆ ಅಭಿಮನ್ಯುವು ಕೈಯಲ್ಲಿ ರಥದ ಚಕ್ರವನ್ನು ಹಿಡಿದು ತನ್ನ ಬಲದಿಂದ ಶೋಭಿಸುವ ಶರೀರವುಳ್ಳವನಾಗಿ, ಕೃಷ್ಣನ ಅನುಕರಣೆಯನ್ನು ಮಾಡುವವನಾಗಿ ಅವನು ಬಹಳವಾಗಿ ಶೋಭಿಸಿದನು.
ಸ್ರುತರುಧಿರಕೃತಾಂಗರಾಗವಕ್ತ್ರಂ
ಭ್ರುಕುಟಿಪುಟಾಕುಟಿಲಾತಿಸಿಂಹನಾದಮ್ |

ವಪುರಮಿತಬಲಂ ರಣೇऽಭಿಮನ್ಯೋಃ
ನೃಪವರಮಧ್ಯಗತಂ ವಿಜಯತೇ ಸ್ಮ ॥ 40 ॥
ಸುರಿಯುವ ರಕ್ತರೂಪವಾದ ಅಂಗರಾಗದಿಂದ ಸಹಿತವಾದ ಮುಖವನ್ನುಳ್ಳ, ಹುಬ್ಬುಗಳನ್ನು ಗಂಟಿಕ್ಕಿ ಬಹಳ ಸಿಂಹನಾದವನ್ನು ಮಾಡುತ್ತಿದ್ದ, ಅಮಿತ ಬಲವುಳ್ಳ ಅಭಿಮನ್ಯುವಿನ ದೇಹವು ರಣರಂಗದಲ್ಲಿ ಶ್ರೇಷ್ಠ ರಾಜರ ಮಧ್ಯದಲ್ಲಿ ಉತ್ಕೃಷ್ಟವಾಗಿ ತೋರಿತು.
ವಿಷ್ಣೋಃ ಸ್ವಸಾನಂದಕರಃ ಸ ವಿಷ್ಣ್ವಾಯುಧಭೂಷಿತಃ |
ರರಾಜಾತಿರಥೋ ರಂಗೇ ಸ ವಿಷ್ಣುರಿವ ಫಾಲ್ಗುನಿಃ ॥ 41 ॥
ವಿಷ್ಣುವಿನ (ಕೃಷ್ಣನ) ತಂಗಿಗೆ ಆನಂದವನ್ನು ಉಂಟು ಮಾಡುವವನೂ, ವಿಷ್ಣುವಿನ ಆಯುಧವಾದ ಚಕ್ರದಿಂದ ಭೂಷಿತನಾದವನೂ ಆದ ಅತಿರಥನಾದ ಆ ಅಭಿಮನ್ಯುವು ವಿಷ್ಣುವಿನಂತೆ ರಣರಂಗದಲ್ಲಿ ಶೋಭಿಸಿದನು.
ಮಾರುತೋದ್ಧೂತಕೇಶಾಂತಮ್ ಉದ್ಯತಾರಿವರಾಯುಧಮ್ |
ಅಭಿಮನ್ಯೋರ್ವಪುರ್ಯುದ್ಧೇ ಸುರೈರಪಿ ನಿರೀಕ್ಷಿತಮ್ ॥ 42 ॥
ವಾಯುವಿನಿಂದ ಚದುರಿದ ಕೇಶಗಳನ್ನುಳ್ಳ, ಚಕ್ರರೂಪವಾದ ಆಯುಧವನ್ನು ಎತ್ತಿಹಿಡಿದ ಅಭಿಮನ್ಯುವಿನ ದೇಹವನ್ನು ಯುದ್ಧದಲ್ಲಿ ದೇವತೆಗಳೂ ನೋಡಿದರು.
ಯದಿ ಪಾಣಿತಳಾದೇತಚ್ಚಕ್ರಂ ಮುಂಚೇತ ಫಾಲ್ಗುನಿಃ |
ವರದಾನಾನ್ಮಾತುಲಸ್ಯ ವಿಷ್ಣೋಶ್ಚಕ್ರಮಿವಾಪತೇತ್ ॥ 43 ॥
ತಚ್ಚಕ್ರಂ ಭೃಶಮುದ್ವಿಗ್ನಾಃ ಸಂಚಿಚ್ಛಿದುರನೇಕಧಾ |
ಸ್ವರಥಾತ್ ತುಮುಲಾತ್ ಕಾರ್ಷ್ಣಿಃ ಸಂಜಗ್ರಾಹ ಪುನರ್ಗದಾಮ್ ॥44॥
ಅಭಿಮನ್ಯುವು ಒಂದು ಪಕ್ಷ ತನ್ನ ಹಸ್ತದಲ್ಲಿರುವ ಈ ಚಕ್ರವನ್ನು ಪ್ರಯೋಗಿಸುವುದಾದರೆ ಅದು ಅವನ ಸೋದರಮಾವನ ವರದಾನದಿಂದ ವಿಷ್ಣು ಚಕ್ರದಂತೆ ನಮ್ಮ ಮೇಲೆ ಎರಗೀತು ಎಂದು ಬಹಳವಾಗಿ ಉದ್ವಿಗ್ನರಾದ ಕೌರವವೀರರು ಆ ಚಕ್ರವನ್ನು ಬಹುವಾಗಿ ಕತ್ತರಿಸಿದರು. ಮಹಾರಥನಾದ ಅಭಿಮನ್ಯುವು ಆಗ ಪುನಃ ತನ್ನ ರಥದಿಂದ ಗದೆಯನ್ನು ತೆಗೆದುಕೊಂಡನು.
ವಿಧನುಃಸ್ಯಂದನಾಸಿಸ್ತೈರ್ವಿಚಕ್ರಶ್ಚಾರಿಭಿಃ ಕೃತಃ |
ಅಭಿಮನ್ಯುರ್ಗದಾಪಾಣಿರಶ್ವತ್ಥಾಮಾನಮಭ್ಯಯಾತ್ ॥ 45 ॥
ಶತ್ರುಗಳಿಂದ ಧನುಸ್ಸಿನಿಂದಲೂ, ರಥದಿಂದಲೂ, ಖಡ್ಗದಿಂದಲೂ, ಚಕ್ರದಿಂದಲೂ ಹೀನನಾಗಿ ಮಾಡಲ್ಪಟ್ಟ ಅಭಿಮನ್ಯುವು ಕೈಯಲ್ಲಿ ಗದೆಯನ್ನು ಹಿಡಿದು ಅಶ್ವತ್ಥಾಮರ ಕಡೆಗೆ ನುಗ್ಗಿದನು.
ಸ ಗದಾಮುದ್ಯತಾಂ ದೃಷ್ಟ್ವಾ ಜ್ವಲಂತೀಮಶನೀಮಿವ |
ಅಪಾಕ್ರಾಮದ್ ರಥೋಪಸ್ಥಾದ್ ವಿಕ್ರಮಾಂಸ್ತ್ರೀನ್ ರಥರ್ಷಭಃ ॥ 46 ॥
ರಥಶ್ರೇಷ್ಠರಾದ ಅಶ್ವತ್ಥಾಮರು ಜ್ವಲಿಸುವ ಸಿಡಿಲಿನಂತಿದ್ದ ಆ ಎತ್ತಿದ ಗದೆಯನ್ನು ನೋಡಿ, ರಥದ ಮಧ್ಯಭಾಗದಿಂದ ಮೂರು ಹೆಜ್ಜೆ ಹಿಂದೆ ಸರಿದರು.
ತಸ್ಯಾಶ್ವಾನ್ ಗದಯಾ ಹತ್ವಾ ತಥೋಭೌ ಪಾರ್ಷ್ಣಿಸಾರಥೀ |
ಶರಾಚಿತಾಂಗಃ ಸೌಭದ್ರಃ ಶ್ವಾವಿಡ್ವತ್ ಸಮದೃಶ್ಯತ ॥ 47 ॥
ಅವರ ಅಶ್ವಗಳನ್ನು ಗದೆಯಿಂದ ಕೊಂದು, ಹಾಗೆಯೇ ಇಬ್ಬರು ಪಾರ್ಷ್ಣಿ- ಸಾರಥಿಗಳನ್ನು ಗದೆಯಿಂದ ಕೊಂದು, ತನ್ನ ಶರೀರದಲ್ಲ ಬಾಣಗಳು ನಾಟಿದ ಅಭಿಮನ್ಯುವು ಮುಳ್ಳುಹಂದಿಯಂತೆ ಕಂಡುಬಂದನು.
ತತಃ ಸುಬಲದಾಯಾದಂ ಕೋಪವೇಗಮಪೋಥಯತ್ |
ಜಘಾನ ಚಾಸ್ಯಾನುಚರಾನ್ ಗಾಂಧಾರಾನ್ ಸಪ್ತವಿಂಶತಿಮ್ ॥ 48 ॥
ಅನಂತರ ಕೋಪವನ್ನೇ ವೇಗವಾಗಿ ಹೊಂದಿದ ಸುಬಲಪುತ್ರನನ್ನು ಕೊಂದನು ಮತ್ತು ಅವನ ಅನುಚರರಾದ ಇಪ್ಪತ್ತೇಳು ಗಾಂಧಾರರನ್ನೂ ಕೊಂದನು.
ಪುನರ್ಬಹೂನ್ ವಸಾತೀಯಾನ್ ಜಘಾನಾತಿರಥಾನ್ ದಶ |
ಕೇಕಯಾನಾಂ ರಥಾನ್ ಸಪ್ತ ಹತ್ವಾ ದಶ ಸ ಕುಂಜರಾನ್ ॥ 49 ॥
ದೌಃಶಾಸನೇ ರಥಂ ಸಾಶ್ವಂ ಗದಯಾ ಸಮಪೋಥಯತ್ ॥ 50 ॥
ಪುನಃ ಅನೇಕ ವಸಾತಿಗಳನ್ನೂ, ಹತ್ತು ಅತಿರಥರನ್ನೂ ಕೊಂದನು. ಕೇಕಯರ ಏಳು ರಥರನ್ನು ಕೊಂದು, ಹತ್ತು ಗಜಗಳನ್ನು ಕೊಂದು ಅವನು ಅಶ್ವದಿಂದ ಕೂಡಿದ ದುಶ್ಶಾಸನ ಪುತ್ರನ ರಥವನ್ನು ಗದೆಯಿಂದ ನಾಶಗೊಳಿಸಿದನು.
ತತೋ ದೌಃಶಾಸನಿಃ ಕ್ರುದ್ಧೋ ಗದಾಮುದ್ಯಮ್ಯ ಮಾರಿಷ |
ಅಭಿದುದ್ರಾವ ಸೌಭದ್ರಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 51 ॥
ಎಲೈ ಪೂಜ್ಯನೇ, ಆಗ ದುಶ್ಶಾಸನನ ಪುತ್ರನು ಕ್ರುದ್ಧನಾಗಿ ಗದೆಯನ್ನು ಎತ್ತಿ ಅಭಿಮನ್ಯುವಿನ ಕಡೆಗೆ ಓಡಿ ಬಂದು `ನಿಲ್ಲು-ನಿಲ್ಲು' ಎಂದು ಹೇಳಿದನು.
ತಾವುದ್ಯತಗದೌ ವೀರಾವನ್ಯೋನ್ಯವಧಕಾಂಕ್ಷಿಣೌ |
ಭ್ರಾತೃವ್ಯೌ ಸಂಪ್ರಜಹ್ರಾತೇ ಪುರೇವ ತ್ರ್ಯಂಬಕಾಂತಕೌ ॥ 52 ॥
ಎತ್ತಿದ ಗದೆಯುಳ್ಳವರೂ, ಪರಸ್ಪರ ವಧೆಯನ್ನು ಬಯಸುವವರೂ, ವೀರರೂ ಆದ ಆ ಸಹೋದರರು ಹಿಂದೆ ರುದ್ರ ಮತ್ತು ಯಮನಂತೆ ಪರಸ್ಪರವಾಗಿ ಸಂಪ್ರಹಾರವನ್ನು ಮಾಡಿದರು.
ತಾವನ್ಯೋನ್ಯಂ ಗದಾಗ್ರಾಭ್ಯಾಂ ತಾಡಿತೌ ಪತಿತೌ ಕ್ಷಿತೌ |
ಇಂದ್ರಧ್ವಜಾವಿವೋತ್ಸ ೃಷ್ಟೌ ಶತ್ರುಮಧ್ಯೇ ಪರಂತಪೌ ॥ 53 ॥

ಪರಸ್ಪರವಾಗಿ ಶ್ರೇಷ್ಠ ಗದೆಗಳಿಂದ ಹೊಡೆಯಲ್ಪಟ್ಟ ಪರಂತಪರಾದ ಅವರಿಬ್ಬರೂ ಬಂಧನವನ್ನು ಕಳಚಿ ಬಿಟ್ಟ ಇಂದ್ರಧ್ವಜದಂತೆ ಶತ್ರುಗಳ ಮಧ್ಯದಲ್ಲಿ ಭೂಮಿಯ ಮೇಲೆ ಬಿದ್ದರು.
ತಾಪಯಿತ್ವಾ ಮಹೀಪಾಲಾನ್ ಕುರೂಣಾಂ ಕೀರ್ತಿವರ್ಧನಃ |
ದೇವಕಲ್ಪೋ ಮಹೇಷ್ವಾಸಃ ಕ್ಷತ್ರಂ ದಗ್ಧ್ವಾ ಮಹಾಯಶಾಃ ॥ 54 ॥
ಗದಾವೇಗೇನ ಮಹತಾ ವ್ಯಾಯಾಮೇನ ಚ ಮೋಹಿತಃ |
ವಿಚೇತಾ ನ್ಯಪತದ್ ಭೂಮೌ ಸೌಭದ್ರಃ ಪರವೀರಹಾ ॥ 55 ॥
ಕುರುವಂಶದ ಕೀರ್ತಿವರ್ಧನನಾದ, ದೇವತೆಗಳಂತೆ ಇದ್ದ, ಮಹಾಧನುರ್ಧಾರಿಯಾದ, ಕೀರ್ತಿವಂತನಾದ ಅಭಿಮನ್ಯುವು ಕ್ಷತ್ರಿಯರನ್ನು ದಹಿಸಿ, ರಾಜರನ್ನು ಸಂತಾಪಗೊಳಿಸಿ, ದೊಡ್ಡ ಗದೆಯ ಅಭಿಘಾತದಿಂದಲೂ ತನ್ನ ಅತಿಯಾದ ಆಯಾಸದಿಂದಲೂ ಸಂಜ್ಞೆಯನ್ನು ಕಳೆದುಕೊಂಡು ಶತ್ರುಘಾತಕನಾದ ಅವನು ಭೂಮಿಯ ಮೇಲೆ ಬಿದ್ದನು.
ಅಭಿಮನ್ಯುರ್ಹತೋ ರಾಜನ್ನೇಕೋ ಬಹುಭಿರಾಹವೇ |
ಕ್ಷೋಭಯಿತ್ವಾ ಚಮೂಂ ಸರ್ವಾಂ ನಳಿನೀಮಿವ ಕುಂಜರಃ ॥ 56 ॥
ಅಶೇತ ನಿಹತೋ ವೀರೋ ವ್ಯಾಧೈರ್ವನಗಜೋ ಯಥಾ ॥ 57 ॥
ಎಲೈ ರಾಜನೇ, ಒಬ್ಬ ಅಭಿಮನ್ಯುವು ರಣರಂಗದಲ್ಲಿ ಅನೇಕರಿಂದ ಹೊಡೆಯಲ್ಪಟ್ಟು, ಗಜವು ಕಮಲಸರೋವರವನ್ನು ಕಲಕಾಡುವಂತೆ ಶತ್ರುಗಳನ್ನು ಕಲಕಾಡಿ ಹತನಾಗಿ, ವ್ಯಾಧರಿಂದ ಹತವಾದ ವನಗಜದಂತೆ ಭೂಮಿಯ ಮೇಲೆ ಮಲಗಿದನು.
ತಂ ತಥಾ ಪತಿತಂ ವೀರಂ ತಾವಕಾಃ ಪರ್ಯವಾರಯನ್ |
ವನಂ ದಗ್ಧ್ವಾ ಯಥಾ ಶಾಂತಂ ಪಾವಕಂ ಶಿಶಿರಾತ್ಯಯೇ ॥ 58 ॥
ಶಿಶಿರ ಋತುವು ಕಳೆದ ಮೇಲೆ ವನವನ್ನು ಸುಟ್ಟು ಶಾಂತವಾದ ಅಗ್ನಿಯಂತಿದ್ದ, ಪತಿತನಾದ ಆ ವೀರನನ್ನು ನಿನ್ನವರು ಸುತ್ತುವರಿದರು.
ವಿಮೃದ್ಯ ತರುಶೃಂಗಾಣಿ ಸನ್ನಿವೃತ್ತಮಿವಾನಿಲಮ್ |
ಅಸ್ತಂ ಗತಮಿವಾದಿತ್ಯಂ ತಪತ್ವಾ ಭಾರತವಾಹಿನೀಮ್ ॥ 59 ॥
ಉಪಪ್ಲುತಂ ಯಥಾ ಸೋಮಂ ಸಂಶುಷ್ಕಮಿವ ಸಾಗರಮ್ |
ಪೂರ್ಣಚಂದ್ರಾಭವದನಂ ಕಾಕಪಕ್ಷವೃತಾಲಕಮ್ ॥ 60 ॥
ತಂ ಭೂಮೌ ಪತಿತಂ ದೃಷ್ಟ್ವಾ ತಾವಕಾಸ್ತೇ ಮಹಾರಥಾಃ |
ಮುದಾ ಪರಮಯಾ ಯುಕ್ತಾಃ ಸಿಂಹವದ್ ವ್ಯನದನ್ ಮುಹುಃ ॥
ವೃಕ್ಷಗಳನ್ನೂ ಮತ್ತು ಪರ್ವತ ಶಿಖರಗಳನ್ನೂ ಕೆಡವಿ ಶಾಂತವಾದ ಅನಿಲದಂತೆ, ಮುಳುಗಿದ ಸೂರ್ಯನಂತೆ, ಕೌರವರ ಸೇನೆಯನ್ನು ಸಂತಾಪಗೊಳಿಸಿ, ಗ್ರಹಣ ಹಿಡಿದ ಚಂದ್ರನಂತೆ, ಒಣಗಿದ ಸಮುದ್ರದಂತೆ, ಪೂರ್ಣಚಂದ್ರ ಮುಖವುಳ್ಳ, ಶಿರಸ್ಸಿನಲ್ಲಿ ಕೂದಲುಗಳನ್ನು ಬಾಚಿ ಕಾಕಪಕ್ಷಗಳನ್ನು ಧರಿಸಿದ ಅವನು ಭೂಮಿಯಲ್ಲಿ ಬಿದ್ದಿರುವುದನ್ನು ನೋಡಿ ನಿನ್ನ ಆ ಮಹಾರಥರು ಬಹಳ ಸಂತೋಷದಿಂದ ಕೂಡಿದವರಾಗಿ ಪುನಃ ಪುನಃ ಸಿಂಹನಾದವನ್ನು ಮಾಡಿದರು.
ಆಸೀತ್ ಪರಮಕೋ ಹರ್ಷಃ ತಾವಕಾನಾಂ ವಿಶಾಂಪತೇ |
ಇತರೇಷಾಂ ತು ವೀರಾಣಾಂ ನೇತ್ರೇಭ್ಯಃ ಪ್ರಾಪತಜ್ಜಲಮ್ ॥ 62 ॥
ಎಲೈ ರಾಜನೇ, ನಿನ್ನವರಿಗೆ ಬಹಳ ಹರ್ಷವುಂಟಾಯಿತು. ಇತರ ವೀರರಿಗೆ ಕಣ್ಣುಗಳಿಂದ ನೀರು ಸುರಿದವು.
ಅತಿಕ್ರೋಶಂತಿ ಭೂತಾನಿ ಹ್ಯಂತರಿಕ್ಷೇ ವಿಶಾಂಪತೇ |
ತಂ ದೃಷ್ಟ್ವಾ ಪತಿತಂ ವೀರಂ ಚ್ಯುತಂ ಚಂದ್ರಮಿವಾಂಬರಾತ್ ॥ 63 ॥
ದ್ರೋಣಕರ್ಣಮುಖೈಃ ಷಡ್ಭಿರ್ಧಾರ್ತರಾಷ್ಟ್ರೈರ್ಮಹಾರಥೈಃ |
ಏಕೋಽಯಂ ನಿಹತಃ ಸಂಖ್ಯೇ ನೈತದ್ ಧರ್ಮ್ಯಂ ಮತಂ ಹಿ ನಃ ॥
ಆಕಾಶದಿಂದ ಬಿದ್ದ ಚಂದ್ರನಂತೆ ಭೂಮಿಯ ಮೇಲೆ ಮಲಗಿದ ಆ ವೀರನನ್ನು ನೋಡಿ ಅಂತರಿಕ್ಷದಲ್ಲಿ ಸಂಚರಿಸುವ ಭೂತಗಳು ದ್ರೋಣ-ಕರ್ಣ ಮೊದಲಾದ ಕೌರವರ ಆರು ಮಹಾರಥರಿಂದ ಒಬ್ಬ ಅಭಿಮನ್ಯುವು ಯುದ್ಧದಲ್ಲಿ ಹತನಾಗಿದ್ದಾನೆ. ಇದು ಧರ್ಮಕ್ಕೆ ಅನುಗುಣವಾಗಿಲ್ಲ ಎಂದು ನಮ್ಮ ಅಭಿಪ್ರಾಯ ಎಂದು ಕಿರುಚಿದವು.
ತಸ್ಮಿಂಸ್ತು ನಿಹತೇ ವೀರೇ ಬಹ್ವಶೋಭತ ಮೇದಿನೀ |
ದ್ಯೌರ್ಯಥಾ ಪೂರ್ಣಚಂದ್ರೇಣ ನಕ್ಷತ್ರಗಣಮಾಲಿನೀ ॥ 65 ॥
ಮೃತನಾಗಿ ಭೂಮಿಯ ಮೇಲೆ ಬಿದ್ದ ಆ ವೀರನಿಂದ ಭೂಮಿಯು ನಕ್ಷತ್ರಗಣ ಸಹಿತವಾದ ಪೂಣರ್ಚಂದ್ರನಿಂದ ಆಕಾಶವು ಶೋಭಿಸುವಂತೆ ಬಹಳವಾಗಿ ಶೋಭಿಸಿತು.
ರುಗ್ಮಪುಂಖೈಶ್ಚ ಸಂಸ್ತೀರ್ಣಾ ರುಧಿರೌಘಪರಿಪ್ಲುತಾ |
ಉತ್ತಮಾಂಗೈಶ್ಚ ವೀರಾಣಾಂ ಭ್ರಾಜಮಾನೈಃ ಸಕುಂಡಲೈಃ ॥ 66 ॥
ವಿಚಿತ್ರೈಶ್ಚ ಪರಿಸ್ತೋಮೈಃ ಪತಾಕಾಭಿಶ್ಚ ಸಂವೃತಾ |
ಚಾಮರೈಶ್ಚ ಕಶಾಭಿಶ್ಚ ಪ್ರವಿದ್ಧೈಶ್ಚಾಂಬರೋತ್ತಮೈಃ ॥ 67 ॥
ರಥಾಶ್ವನರನಾಗಾನಾಮಲಂಕಾರೈಶ್ಚ ಸುಪ್ರಭೈಃ |
ಖಡ್ಗೈಃ ಸುನಿಶಿತೈಃ ಪೀತೈರ್ನಿರ್ಮುಕ್ತೈರ್ಭುಜಗೈರಿವ ॥ 68 ॥
ಚಾಪೈಶ್ಚ ಬಹುಭಿಶ್ಛಿನ್ನೈಃ ಶಕ್ತ್ಯೃಷ್ಟಿಪ್ರಾಸ ತೋಮರೈಃ |
ವಿವಿಧೈರಾಯುಧೈಶ್ಚಾನ್ಯೈಃ ಸಂವೃತಾ ಭೂರಶೋಭತ ॥ 69 ॥

ಸುವರ್ಣಪುಂಖಗಳುಳ್ಳ ಬಾಣಗಳಿಂದ ಹರಡಲ್ಪಟ್ಟು, ರಕ್ತಪ್ರವಾಹದಿಂದ ತೊಯ್ದು, ವೀರರ ಕುಂಡಲಸಹಿತವಾದ ಶೋಭಿಸುವ ಶಿರಸ್ಸುಗಳಿಂದಲೂ, ವಿಚಿತ್ರವಾದ ಕಂಬಳಿಗಳಿಂದಲೂ ಮತ್ತು ಪತಾಕೆಗಳಿಂದಲೂ ಹರಡಲ್ಪಟ್ಟು, ಚಾಮರಗಳಿಂದಲೂ, ಚಾವಟಿಗಳಿಂದಲೂ, ಎಸೆದ ಶ್ರೇಷ್ಠ ವಸ್ತ್ರಗಳಿಂದಲೂ, ರಥಾಶ್ವ-ಗಜ-ನರರ ಕಾಂತಿಯುಕ್ತವಾದ ಅಲಂಕಾರಗಳಿಂದಲೂ, ಪೊರೆಯನ್ನು ಕಳಚಿದ ಸರ್ಪಗಳಂತಿದ್ದ ಹರಿತವಾದ ಖಡ್ಗಗಳಿಂದಲೂ, ಅನೇಕರಿಂದ ಕತ್ತರಿಸಲ್ಪಟ್ಟ ಧನುಸ್ಸುಗಳಿಂದಲೂ, ಶಕ್ತಿ-ಋಷ್ಟಿ-ಪ್ರಾಸ-ತೋಮರಗಳಿಂದಲೂ, ಇನ್ನೂ ಅನೇಕ ವಿಧವಿಧವಾದ ಆಯುಧಗಳಿಂದಲೂ ಹರಡಲ್ಪಟ್ಟ ಭೂಮಿಯು ಬಹಳವಾಗಿ ಶೋಭಿಸಿತು.

ನಿಷ್ಟನದ್ಭಿರತೀವಾರ್ತೈರುದ್ವಮದ್ರುಧಿರಸ್ರವೈಃ |
ನರೈಃ ಪತದ್ಭಿಃ ಪತಿತೈರ್ಹೇಮಭಾಂಡಪರಿಚ್ಛದೈಃ ॥ 70 ॥
ವಾಜಿಭಿಶ್ಚಾಪಿ ನಿರ್ಜೀವೈಃ ಶ್ವಸದ್ಭಿಃ ಶೋಣಿತೋಕ್ಷಿತೈಃ |
ಸಾರೋಹೈರ್ವಿಷಮಾ ಭೂಮಿಃ ಸೌಭದ್ರೇಣ ನಿಪಾತಿತೈಃ ॥ 71 ॥

ಯುದ್ಧದಲ್ಲಿ ಪೀಡಿತವಾಗಿ ದೀರ್ಘವಾದ ಉಸಿರನ್ನು ಬಿಡುವ, ಉಕ್ಕಿ ಬರುವ ರಕ್ತವನ್ನು ಸುರಿಸುವ ಮನುಷ್ಯರಿಂದಲೂ, ಬಿದ್ದ ಮತ್ತು ಬೀಳುತ್ತಿರುವ ಉಸಿರಾಡುವ ಸುವರ್ಣಾಲಂಕಾರ ಸಹಿತವಾದ ಅಶ್ವಗಳಿಂದಲೂ, ಮೃತರಾದ ಅಶ್ವಾರೋಹಿಗಳ ಸಹಿತವಾದ ಅಭಿಮನ್ಯುವಿನಿಂದ ಕೆಡವಲ್ಪಟ್ಟ ರಕ್ತದಿಂದ ತೊಯ್ದ ಅಶ್ವಗಳಿಂದಲೂ ಯುದ್ಧಭೂಮಿಯು ವಿಷಮವಾಯಿತು.

ಸಾಂಕುಶೈಃ ಸಮಹಾಮಾತ್ರೈಃ ಸವರ್ಮಾಯುಧಕೇತುಭಿಃ |
ಪರ್ವತೈರಿವ ವಿಧ್ವಸ್ತೈರ್ವಿಶಿಖೋನ್ಮಥಿತೈರ್ಗಜೈಃ ॥ 72 ॥
ಪೃಥಿವ್ಯಾಮನುಕೀರ್ಣೈಶ್ಚ ವ್ಯಶ್ವಸಾರಥಿಯೋಧಿಭಿಃ |
ಹ್ರದೈರಿವ ಪ್ರಕ್ಷುಭಿತೈರ್ಹತನಾಗೈ ರಥೋತ್ತಮೈಃ ॥ 73 ॥
ಪದಾತಿಸಂಘೈಶ್ಚ ಹತೈರ್ವಿವಿಧಾಯುಧಭೂಷಣೈಃ |
ಭೀರೂಣಾಂ ತ್ರಾಸಜನನೀ ಘೋರರೂಪಾಽಭವನ್ಮಹೀ ॥ 74 ॥

ಅಂಕುಶವನ್ನು ಹಿಡಿದ ಗಜಗಳ ಮಹಾಮಾತ್ರರಿಂದಲೂ, ಕವಚ- ಆಯುಧ-ಧ್ವಜಗಳಿಂದಲೂ, ಬಾಣಗಳಿಂದ ಹೊಡೆಯಲ್ಪಟ್ಟು ನಾಶಗೊಳಿಸಲ್ಪಟ್ಟ ಪರ್ವತಪ್ರಾಯವಾದ ಗಜಗಳಿಂದಲೂ, ಭೂಮಿಯಲ್ಲಿ ಹರಡಿದ ಅಶ್ವ-ಸಾರಥಿ- ಯೋಧರಿಂದ ಹೀನವಾದ ಕ್ಷುಬ್ಧವಾದ ಸರೋವರದಂತೆ ಗಜಗಳಿಂದ ಭಗ್ನವಾದ ಶ್ರೇಷ್ಠವಾದ ರಥಗಳಿಂದಲೂ, ವಿವಿಧವಾದ ಆಯುಧಗಳನ್ನೂ, ಭೂಷಣಗಳನ್ನೂ ಹೊಂದಿದ ಮೃತರಾದ ಪದಾತಿ ಸಮೂಹಗಳಿಂದಲೂ, ಭೂಮಿಯು ಭೀರುಗಳಿಗೆ ಭಯಜನಕವೂ ಮತ್ತು ಘೋರವೂ ಆಯಿತು.

ತಂ ದೃಷ್ಟ್ವಾ ಪತಿತಂ ಭೂಮೌ ಚಂದ್ರಾರ್ಕಸದೃಶದ್ಯುತಿಮ್ |
ತಾವಕಾನಾಂ ಪರಾ ಪ್ರೀತಿರಾಸೀತ್ ಪಾಂಡುಷು ಚ ವ್ಯಥಾ ॥ 75 ॥

ಸೂರ್ಯ-ಚಂದ್ರರಿಗೆ ಸದೃಶವಾದ ಕಾಂತಿಯನ್ನು ಹೊಂದಿದ ಅವನು ಭೂಮಿಯ ಮೇಲೆ ಬಿದ್ದಿರುವುದನ್ನು ನೋಡಿ ನಿನ್ನವರಿಗೆ ಬಹಳ ಸಂತೋಷವಾಯಿತು. ಪಾಂಡವರಿಗೆ ವ್ಯಥೆಯಾಯಿತು.

ಅಭಿಮನ್ಯೌ ಹತೇ ರಾಜನ್ ಶಿಶುಕೇಽಪ್ರಾಪ್ತಯೌವನೇ |
ಸಂಪ್ರಾದ್ರವಚ್ಚಮೂಃ ಸರ್ವಾ ಧರ್ಮರಾಜಸ್ಯ ಪಶ್ಯತಃ ॥ 76 ॥

ರಾಜನೇ, ಶಿಶುವೂ, ಯೌವನವನ್ನು ಹೊಂದದವನೂ ಆದ ಅಭಿಮನ್ಯುವು ಹತನಾಗುತ್ತಿರಲು ಧರ್ಮರಾಜನು ನೋಡುತ್ತಿರುವಂತೆಯೇ ಅವನ ಎಲ್ಲ ಸೈನ್ಯವೂ ಓಡಿಹೋಯಿತು.

ದೀರ್ಯಮಾಣಂ ಬಲಂ ದೃಷ್ಟ್ವಾ ಸೌಭದ್ರೇ ವಿನಿಪಾತಿತೇ |
ಅಜಾತಶತ್ರುಃ ಸ್ವಾನ್ ವೀರಾನಿದಂ ವಚನಮಬ್ರವೀತ್ ॥ 77 ॥
ಸ್ವರ್ಗಮೇಷ ಗತಃ ಶೂರೋ ಯೋ ಹತೋ ನಪರಾಙ್ಮುಖಃ |
ಸಂಸ್ತಂಭಯತ ಮಾ ಭೈಷ್ಟ ಜೇಷ್ಯಾಮೋ ವೈ ವಯಂ ಪರಾನ್ ॥ 78 ॥

ಅಭಿಮನ್ಯುವು ಮೃತನಾಗುತ್ತಿರಲು ಭಗ್ನವಾಗುತ್ತಿದ್ದ ತನ್ನ ಸೈನ್ಯವನ್ನು ನೋಡಿ ಅಜಾತಶತ್ರುವು ತನ್ನ ವೀರರನ್ನು ಕುರಿತು `ಯಾವ ಈ ವೀರನು ಶತ್ರುಗಳಿಗೆ ಪರಾಙ್ಮುಖನಾಗದೆ ಯುದ್ಧದಲ್ಲಿ ಹತನಾದನೋ ಅಂತಹ ಅವನು ಸ್ವರ್ಗಕ್ಕೆ ಹೋಗಿದ್ದಾನೆ. ಸ್ಥಿರವಾಗಿ ನಿಲ್ಲಿ, ಹೆದರಬೇಡಿ, ನಾವು ಶತ್ರುಗಳನ್ನು ಜಯಿಸುವೆವು' ಎಂಬ ಈ ಮಾತುಗಳನ್ನು ಆಡಿದನು.

ಇತ್ಯೇವಂ ಸುಮಹಾತೇಜಾ ದುಃಖಿತೇಭ್ಯೋ ಮಹಾಮತಿಃ |
ಧರ್ಮರಾಜೋ ಯುಧಿಶ್ರೇಷ್ಠೋ ಬ್ರುವನ್ ದುಃಖಮಪಾನುದತ್ ॥

ಮಹಾತೇಜಸ್ವಿಯೂ, ಮಹಾಮತಿಯೂ, ಯುದ್ಧದಲ್ಲಿ ಶ್ರೇಷ್ಠನೂ ಆದ ಧರ್ಮರಾಜನು ಈ ರೀತಿ ಮಾತನಾಡುತ್ತಾ ದುಃಖಗೊಂಡವರ ದುಃಖವನ್ನು ಪರಿಹರಿಸಿದನು.

ಯುದ್ಧೇ ಹ್ಯಾಶೀವಿಷಾಕಾರಾನ್ ರಾಜಪುತ್ರಾನ್ ಬಹೂನ್ ರಣೇ |
ಪೂರ್ವಂ ನಿಹತ್ಯ ಸಂಗ್ರಾಮೇ ಪಶ್ಚಾದಾರ್ಜುನಿರನ್ವಗಾತ್ ॥ 80 ॥

ಯುದ್ಧದಲ್ಲಿ ಸರ್ಪದಂತಿದ್ದ ಅನೇಕ ರಾಜಪುತ್ರರನ್ನು ಕೊಂದು ಅಭಿಮನ್ಯುವು ಅನಂತರ ತಾನು ಹೋಗಿದ್ದಾನೆ.

ಹತ್ವಾ ದಶಸಹಸ್ರಾಣಿ ಕೌಸಲ್ಯಂ ಚ ಮಹಾರಥಮ್ |
ಕೃಷ್ಣಾರ್ಜುನಸಮಃ ಕಾರ್ಷ್ಣಿಃ ಶಕ್ರಸದ್ಮ ಗತೋ ಧ್ರುವಮ್ ॥ 81 ॥

ಹತ್ತು ಸಹಸ್ರ ಯೋಧರನ್ನು ಮತ್ತು ಕೋಸಲಾಧಿಪತಿಯಾದ ಮಹಾರಥರನ್ನು ಕೊಂದು ಕೃಷ್ಣಾರ್ಜುನರಿಗೆ ಸಮನಾದ ಅಭಿಮನ್ಯುವು ಇಂದ್ರಭವನಕ್ಕೆ ಖಂಡಿತವಾಗಿ ಹೋಗಿದ್ದಾನೆ.

ನರಾಶ್ವರಥಮಾತಂಗಾನ್ ನಿಹತ್ಯ ಚ ಸಹಸ್ರಶಃ |
ಅತೃಪ್ಯನ್ನೇವ ಸಂಗ್ರಾಮಾದಗಚ್ಛತ್ ಪುಣ್ಯಲೋಕಜಿತ್ ॥ 82 ॥
ನರಾಶ್ವ-ರಥ-ಗಜಗಳನ್ನು ಸಹಸ್ರ ಸಂಖ್ಯೆಯಲ್ಲಿ ಕೊಂದು, ಯುದ್ಧದಲ್ಲಿ ತೃಪ್ತಿಯನ್ನೇ ಹೊಂದದೆ ಪುಣ್ಯಲೋಕವನ್ನು ಜಯಿಸಿದ ಅವನು ಹೋಗಿದ್ದಾನೆ (ಎಂದು ಧರ್ಮರಾಜನು ದುಃಖಿತರನ್ನು ಸಮಾಧಾನ ಪಡಿಸಿದನು).
ಸಂಜಯಃ
ವಯಂ ತು ಪ್ರವರಾನ್ ಹತ್ವಾ ತೇಷಾಂ ತೈಃ ಶರಪೀಡಿತಾಃ |
ನಿವೇಶಾಯಾಭ್ಯುಪಾಯಾಮಃ ಸಾಯಾಹ್ನೇ ರುಧಿರೋಕ್ಷಿತಾಃ ॥ 83 ॥
ಸಂಜಯ ನಾವು ಅವರಲ್ಲಿ ಶ್ರೇಷ್ಠರಾದವರನ್ನು ಕೊಂದು, ಅವರ ಬಾಣಗಳಿಂದ ಪೀಡಿತರಾಗಿ, ಸಾಯಂಕಾಲದ ವೇಳೆಗೆ ರಕ್ತದಿಂದ ಲೇಪಿತರಾಗಿ ನಮ್ಮ ಶಿಬಿರಗಳಿಗೆ ಹೋದೆವು.
ನಿರೀಕ್ಷಮಾಣಾಸ್ತು ವಯಂ ಪರಸ್ಯಾಯೋಧನಂ ಶನೈಃ |
ಅಪಾಯಾಮ ಮಹಾರಾಜ ಗ್ಲಾನಿಂ ಪ್ರಾಪ್ತಾ ವಿಚೇತಸಃ ॥ 84 ॥
ಮಹಾರಾಜನೇ, ಪಾಂಡವರ ರಣಭೂಮಿಯನ್ನು ನಿಧಾನವಾಗಿ ನೋಡುತ್ತಾ ನಾವು ಗ್ಲಾನಿಯನ್ನು ಹೊಂದಿ, ಪ್ರಜ್ಞಾಶೂನ್ಯರಾಗಿ ಅಲ್ಲಿಂದ ಹೊರಟೆವು.
ತತೋ ನಿಶಾಯಾ ದಿವಸಸ್ಯ ಚಾಶಿವಃ
ಶಿವಾರುತೈಃ ಸಂಧಿರವರ್ತತಾದ್ಭುತಃ |
ಕುಶೇಶಯಾಪೀಡನಿಭೇ ದಿವಾಕರೇ
ವಿಲಂಬಮಾನೋಽಸ್ತಮುಪೇತ್ಯ ಪರ್ವತಮ್ ॥ 85 ॥
ಪದ್ಮರೂಪವಾದ ಆಭರಣದಂತಿದ್ದ ಸೂರ್ಯನು ಅಸ್ತಪರ್ವತವನ್ನು ಸೇರಿ ಜಾರುತ್ತಿರಲು, ಆಗ ನರಿಗಳ ರೋಧನಗಳಿಂದ ಕೂಡಿದ ಹಗಲು-ರಾತ್ರಿಗಳ ಅಮಂಗಳವಾದ ಅದ್ಭುತವಾದ ಸಂಧಿಕಾಲವು ಉಂಟಾಯಿತು.
ವರಾಸಿ ಶಕ್ತ್ಯೃಷ್ಟಿ ವರೂಢಚರ್ಮಣಾಂ
ವಿಭೂಷಣಾನಾಂ ಚ ಸಮಾಕ್ಷಿಪನ್ ಪ್ರಭಾಮ್
ದಿವಂ ಚ ಭೂಮಿಂ ಚ ಸಮಾನಯನ್ನಿವ
ಪ್ರಿಯಾಂ ತನುಂ ಸ್ವಾಂ ರವಿರೇತಿ ಪಾವಕೀಮ್ ॥ 86 ॥
ಶ್ರೇಷ್ಠವಾದ ಖಡ್ಗ-ಶಕ್ತಿ-ಋಷ್ಟಿ-ಕವಚ-ಚರ್ಮಗಳು ಮತ್ತು ವಿಭೂಷಣಗಳು ಇವುಗಳ ಕಾಂತಿಯನ್ನು ಪರಿಹರಿಸುತ್ತಾ ಭೂಮಿಯನ್ನು ಮತ್ತು ಅಂತರಿಕ್ಷವನ್ನು ಸಮಾನವನ್ನಾಗಿ ಮಾಡುವವನಾಗಿ ಸೂರ್ಯನು ತನಗೆ ಪ್ರಿಯವಾದ ಅಗ್ನಿ ಶರೀರವನ್ನು ಪ್ರವೇಶಿಸಿದನು.
ಮಹಾಭ್ರಕೂಟಾಚಲಶೃಂಗಸನ್ನಿಭೈಃ
ಅನೀಕಪೈರ್ವಜ್ರಹತೈರಿವಾದ್ರಿಭಿಃ |
ಸವೈಜಯಂತ್ಯಂಕುಶವರ್ಮಯಂತೃಭಿಃ
ನಿಪಾತಿತೈರ್ನಿಷ್ಟನತೀವ ಗೌಶ್ಚಿತಾ ॥ 87 ॥
ಮಹಾಮೇಘಕೂಟಗಳ ಮತ್ತು ಪರ್ವತ ಶಿಖರಗಳ ಕಾಂತಿಯನ್ನು ಹೋಲುವ, ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತಿದ್ದ ಸೇನಾಪತಿಗಳಿಂದಲೂ, ಭೂಮಿಯ ಮೇಲೆ ಬಿದ್ದ ವೈಜಯಂತಿ, ಅಂಕುಶ, ಕವಚಸಹಿತರಾದ ಸಾರಥಿಗಳಿಂದಲೂ ತುಂಬಿದ ಭೂಮಿಯು ಗರ್ಜಿಸುವಂತೆ ಇದ್ದಿತು.
ಹತೇಶ್ವರೈಶ್ಚೂರ್ಣಿತಚಕ್ರಕೂಬರೈಃ
ಹತಾಶ್ವಸೂತೈರ್ವಿಪತಾಕಕೇತುಭಿಃ |
ಮಹಾರಥೈರ್ಭೂಃ ಶುಶುಭೇ ವಿಚೂರ್ಣಿತೈಃ
ಪುರೈರಿವಾಮಿತ್ರಹತೈರ್ನರಾಧಿಪ ॥ 88 ॥
ಎಲೈ ರಾಜನೇ, ಪ್ರಭುಗಳು ಹತರಾಗಿ, ಚಕ್ರ-ಕೂಬರಗಳು ಪುಡಿ ಮಾಡಲ್ಪಟ್ಟು, ಅಶ್ವ-ಸಾರಥಿಗಳನ್ನು ಕಳೆದುಕೊಂಡು, ಪತಾಕ-ಧ್ವಜ ಹೀನಗಳಾಗಿ, ಪುಡಿ ಮಾಡಲ್ಪಟ್ಟು ಭೂಮಿಯ ಮೇಲೆ ಬಿದ್ದ ಮಹಾರಥಗಳಿಂದ ತುಂಬಿದ ಭೂಮಿಯು ಶತ್ರುಗಳಿಂದ ಧ್ವಂಸ ಮಾಡಲ್ಪಟ್ಟ ನಗರಗಳಂತೆ ಶೋಭಿಸಿತು.
ಗಜಾಶ್ವವೃಂದೈಃ ಸಹಸಾದಿಭಿರ್ಹತೈಃ
ಪ್ರವಿದ್ಧಭಾಂಡಾಭರಣೈಃ ಪೃಥಗ್ವಿಧೈಃ |
ನಿರಸ್ತಜಿಹ್ವಾದಶನಾಂತ್ರಲೋಚನೈಃ
ಧರಾ ಬಭೌ ಘೋರವಿರೂಪದರ್ಶನಾ ॥ 89 ॥
ಮೃತವಾದ ಆರೋಹಿಗಳಿಂದ ಸಹಿತವಾದ ಗಜಾಶ್ವ ಸಮೂಹಗಳಿಂದಲೂ, ಹೊಡೆದು ಪುಡಿ ಮಾಡಲ್ಪಟ್ಟ ವಿಧವಿಧವಾದ ಉಪಕರಣಗಳು ಮತ್ತು ಅಲಂಕಾರಗಳಿಂದಲೂ, ನಾಲಿಗೆ-ದಂತಗಳು-ಕರುಳು ಮತ್ತು ಕಣ್ಣುಗಳನ್ನು ಕಳೆದುಕೊಂಡ (ವಾಹನಗಳಿಂದಲೂ ಮತ್ತು ಯೋಧರಿಂದಲೂ) ತುಂಬಿದ ಭೂಮಿಯು ಘೋರವೂ ಮತ್ತು ಭಯಂಕರ ದರ್ಶನವುಳ್ಳದ್ದೂ ಆಯಿತು.
ಪ್ರವಿದ್ಧವರ್ಮಾಭರಣಾಯುಧಾಂಬರಾ
ವಿಪನ್ನಹಸ್ತ್ಯಶ್ವರಥಾನುಗಾ ನರಾಃ |
ಮಹಾರ್ಹಶಯ್ಯಾಸ್ತರಣೋಚಿತಾಃ ಸದಾ
ಕ್ಷಿತಾವನಾಥಾ ಇವ ಶೇರತೇ ಹತಾಃ ॥ 90 ॥

ತಮ್ಮ ಕವಚಗಳು, ಆಭರಣಗಳು, ಆಯುಧಗಳು ಮತ್ತು ವಸ್ತ್ರಗಳು ಭಗ್ನವಾಗಿ ಮೃತವಾದ ಗಜ-ಅಶ್ವ-ರಥ-ಪದಾತಿಗಳನ್ನು ಹೊಂದಿದ, ಒಳ್ಳೆಯ ಶಯನ ಮತ್ತು ಆಸನಗಳಿಗೆ ಸದಾ ಯೋಗ್ಯರಾದ ಯೋಧರು ಹತರಾಗಿ ಭೂಮಿಯ ಮೇಲೆ ಅನಾಥರಂತೆ ಮಲಗಿದರು.

ಅತೀವಹೃಷ್ಟಾ ಶ್ವಸೃಗಾಲವಾಯಸಾ
ಬಲಾಃ ಸುಪರ್ಣಾಶ್ಚ ವೃಕಾಸ್ತರಕ್ಷವಃ |
ವಯಾಂಸ್ಯಸೃಕ್ಪಾಸ್ತ್ವಥ ರಕ್ಷಸಾಂ ಗಣಾಃ
ಪಿಶಾಚಸಂಘಾಶ್ಚ ನದಂತಿ ಭೈರವಮ್ ॥ 91 ॥

ನಾಯಿಗಳು, ನರಿಗಳು, ಕಾಗೆಗಳು, ಬಲಪಕ್ಷಿಗಳು, ಗರುಡಗಳು, ತೋಳಗಳು, ಚಿರತೆಗಳು ಎಲ್ಲವೂ ಬಹಳ ಸಂತೋಷಗೊಂಡವು. ರಕ್ತಪಾನವನ್ನು ಮಾಡುವ ಪಕ್ಷಿಗಳು, ರಾಕ್ಷಸರ ಸಮೂಹಗಳು, ಪಿಶಾಚಿಗಳ ಸಮೂಹಗಳು ಭೈರವ ನಾದವನ್ನು ಮಾಡಿದವು.

ತ್ವಚೋ ವಿನಿರ್ಭಿದ್ಯ ಪಿಬಂತ್ಯಸೃಗ್ವಸಾಂ
ವಮಂತಿ ಮಜ್ಜಾಂ ಪಿಶಿತಾನ್ಯದಂತಿ ಚ |
ವಪಾ ವಿಲುಂಪಂತಿ ಹಸಂತಿ ಗಾಂತಿ ಚ
ಪ್ರಕರ್ಷಮಾಣಾಃ ಕುಣಪಾನ್ಯನೇಕಶಃ ॥ 92 ॥

ಅವು ಶವಗಳನ್ನು ಅನೇಕ ರೀತಿಯಲ್ಲಿ ಎಳೆದಾಡುತ್ತಾ, ಅವುಗಳ ಚರ್ಮವನ್ನು ಕಿತ್ತು, ರಕ್ತ ಮತ್ತು ಕೊಬ್ಬುಗಳನ್ನು ಕುಡಿದು, ಮಜ್ಜೆಗಳನ್ನು ವಾಂತಿ ಮಾಡಿದವು, ಮಾಂಸಗಳನ್ನು ತಿಂದವು, ವಪೆಗಳನ್ನು ಹರಿದವು. ನಕ್ಕವು ಮತ್ತು ಗಾನವನ್ನು ಮಾಡಿದವು.

ಶರೀರಸಂಘಾಟವಹಾ ಹ್ಯಸೃಗ್ಜಲಾ
ರಥೋಡುಪಾ ಕುಂಜರಶೈಲಸಂಕಟಾ |
ಮನುಷ್ಯಶೀರ್ಷೋಪಲಮಾಂಸಕರ್ದಮಾ
ಪ್ರವಿದ್ಧನಾನಾವಿಧಶಸ್ತ್ರಮಾಲನೀ ॥ 93 ॥
ಭಯಾವಹಾ ವೈತರಣೀವ ದುಸ್ತರಾ
ಪ್ರವರ್ತಿತಾ ಯೋಧವರೈಸ್ತದಾ ನದೀ |
ಉವಾಹ ಮಧ್ಯೇನ ರಣಾಜಿರಂ ಭೃಶಂ
ಭಯಾನಕಾ ದೀನಮೃತಪ್ರವಾಹಿನೀ ॥ 94 ॥

ಮೃತ ಶರೀರಗಳೆಂಬ ಸಣ್ಣಕಲ್ಲುಗಳನ್ನು ಕೊಚ್ಚಿಕೊಂಡು ಹೋಗುವ ರಕ್ತದ ಜಲವುಳ್ಳ, ರಥಗಳೆಂಬ ದೋಣಿಗಳುಳ್ಳ, ಕುಂಜರಗಳೆಂಬ ಶೈಲಗಳಿಂದ ಕೂಡಿದ, ಮನುಷ್ಯರ ಶಿರಸ್ಸೆಂಬ ಕಲ್ಲುಗಳಿಂದಲೂ, ಮಾಂಸವೆಂಬ ಕೆಸರಿನಿಂದಲೂ ಕೂಡಿದ, ಭಗ್ನಗೊಂಡ ನಾನಾವಿಧವಾದ ಶಸ್ತ್ರಗಳ ಮಾಲೆಯನ್ನು ಧರಿಸಿದ, ಭಯಂಕರವಾದ, ವೈತರಣಿಯಂತೆ ದಾಟಲು ಅಸಾಧ್ಯವಾದ, ಶ್ರೇಷ್ಠರಾದ ಯೋಧರಿಂದ ಪ್ರವರ್ತಿತವಾದ ಆ ನದಿಯು ರಣಭೂಮಿಯ ಮಧ್ಯದಲ್ಲಿ ಬಹಳ ಭಯವನ್ನುಂಟು ಮಾಡುತ್ತಾ ದೀನರನ್ನು ಮತ್ತು ಮೃತರನ್ನು ಕೊಚ್ಚಿಕೊಂಡು ಹೋಯಿತು.

ಪಿಬಂತಿ ಚ ಸ್ನಾಂತಿ ಚ ತತ್ರ ದುರ್ದೃಶಾಃ
ಪಿಶಾಚಸಂಘಾ ವಿವಿಧಾಃ ಸುಭೈರವಾಃ |
ಸುನಂದಿತಾಃ ಪ್ರಾಣಭೃತಾಂ ಭಯಂಕರಾಃ
ಸಮಾನಭಕ್ಷಾಃ ಶ್ವಸೃಗಾಲಪಕ್ಷಿಣಃ ॥ 95 ॥

ಕ್ರೂರ ದೃಷ್ಟಿಯುಳ್ಳ ವಿವಿಧವಾದ, ಭಯಂಕರವಾದ ಪಿಶಾಚ ಸಮೂಹಗಳು ಆ ಜಲವನ್ನು ಕುಡಿದು ಅಲ್ಲಿಯೇ ಸ್ನಾನವನ್ನು ಮಾಡಿದವು. ಸಮಾನವಾದ ಆಹಾರವನ್ನು ಸೇವಿಸುವ ಭಯಂಕರವಾದ ನಾಯಿ-ನರಿ ಮತ್ತು ಪಕ್ಷಿಗಳು ಆ ದೇಹಗಳನ್ನು ನೋಡಿ ಬಹಳ ಸಂತೋಷಗೊಂಡವು.

ತಥಾ ತದಾಯೋಧನಮುಗ್ರದರ್ಶನಂ
ನಿಶಾಮುಖೇ ಪಿತೃಪತಿರಾಷ್ಟ್ರಸನ್ನಿಭಮ್ |
ನಿರೀಕ್ಷಮಾಣಾಃ ಶನಕೈರ್ಮುಹುರ್ನರಾಃ
ಸಮುತ್ಥಿತಾ ರುಂಡಗಣಾಭಿಸಂಕುಲಮ್ ॥ 96 ॥

ಆ ರಣಭೂಮಿಯು ಸಂಧ್ಯಾಕಾಲದಲ್ಲಿ ಯಮನ ರಾಷ್ಟ್ರದಂತೆ ರುದ್ರದರ್ಶನವನ್ನು ಹೊಂದಿದಾಗಿ ಹಿಂದಿರುಗುವ ಯೋಧರು ಭೂತಗಣಗಳಿಂದ ನಿಬಿಡವಾದ ಆ ರಣಭೂಮಿಯನ್ನು ನೋಡುತ್ತಾ ಅಲ್ಲಿಂದ ಎದ್ದು ಹೊರಟರು.

ಅಪೇತವಿಧ್ವಸ್ತಮಹಾರ್ಹಭೂಷಣಂ
ನಿಪಾತಿತಂ ಶಕ್ರಸಮಂ ಮಹಾರಥಮ್ |
ರಣೇಽಭಿಮನ್ಯುಂ ದದೃಶುಸ್ತದಾ ಜನಾ
ವ್ಯಪೋಢಹವ್ಯಂ ಸದಸೀವ ಪಾವಕಮ್ ॥ 97 ॥

ಮಹಾಬೆಲೆ ಬಾಳುವ ಭೂಷಣಗಳಿಂದ ರಹಿತನಾಗಿ ಅಥವಾ ಅಂತಹ ಭೂಷಣಗಳು ಭಗ್ನವಾಗಿ ನೆಲದ ಮೇಲೆ ಬಿದ್ದ, ಇಂದ್ರನಿಗೆ ಸಮನಾದ ಮಹಾರಥನಾದ ಹವಿಸ್ಸಿಲ್ಲದೆ ವೇದಿಕೆಯಲ್ಲಿ ಶಾಂತನಾದ ಅಗ್ನಿಯಂತಿದ್ದ ಅಭಿಮನ್ಯುವನ್ನು ಆ ಜನರು ನೋಡಿದರು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.

* * * * *

नलवत्तेंटनेय अध्याय

ಅಭಿಮನ್ಯುವನ್ನು ಕುರಿತು ಶೋಕಿಸುತ್ತಾ ಯುಧಿಷ್ಠಿರನ ಪ್ರಲಾಪ.
ಸಂಜಯಃ
ತಸ್ಮಿಂಸ್ತು ನಿಹತೇ ವೀರಾಃ ಸೌಭದ್ರೇ ರಥಯೂಥಪೇ |
ವಿಮುಕ್ತರಥಸನ್ನಾಹಾಃ ಸರ್ವೇ ನಿಕ್ಷಿಪ್ತಕಾರ್ಮುಕಾಃ ॥ 1 ॥
ಉಪೋಪವಿಷ್ಟಾ ರಾಜಾನಃ ಪರಿವಾರ್ಯ ಯುಧಿಷ್ಠಿರಮ್ |
ತದೇವ ದುಃಖಂ ಧ್ಯಾಯಂತಃ ಸೌಭದ್ರಗತಮಾನಸಾಃ ॥ 2 ॥
ಸಂಜಯ ರಥಸಮೂಹದ ನಾಯಕನಾದ ಅಭಿಮನ್ಯುವು ಹತನಾಗುತ್ತಿರಲು ಎಲ್ಲ ಪಾಂಡವರು ತಮ್ಮ ರಥ ಸನ್ನಾಹಗಳನ್ನು ಕಳಚಿ, ಧನುಸ್ಸುಗಳನ್ನು ಇಟ್ಟು, ಯುಧಿಷ್ಠಿರನನ್ನು ಸುತ್ತುವರಿದು ಅಭಿಮನ್ಯುವಿನಲ್ಲೇ ನೆಟ್ಟ ಮನಸ್ಸುಳ್ಳವರಾಗಿ ಅದೇ ದುಃಖವನ್ನು ಚಿಂತಿಸುತ್ತಾ ಸಮೀಪದಲ್ಲಿ ಕುಳಿತರು.
ತತೋ ಯುಧಿಷ್ಠಿರೋ ರಾಜಾ ವಿಲಲಾಪ ಸುದುಃಖಿತಃ |
ಅಭಿಮನ್ಯೌ ಹತೇ ವೀರೇ ಭ್ರಾತುಃ ಪುತ್ರೇ ಮಹಾರಥೇ ॥ 3 ॥
ಆಗ ತನ್ನ ಸಹೋದರರನ ಪುತ್ರನಾದ, ಮಹಾರಥನಾದ, ವೀರನಾದ ಅಭಿಮನ್ಯುವು ಹತನಾಗುತ್ತಿರಲು ಬಹಳ ದುಃಖದಿಂದ ಕೂಡಿದ ಯುಧಿಷ್ಠಿರನು ವಿಲಾಪವನ್ನು ಮಾಡಿದನು.
ಯುಧಿಷ್ಠಿರಃ
ಏಷ ಜಿತ್ವಾ ಕೃಪಂ ಶಲ್ಯಂ ರಾಜಾನಂ ಚ ಸುಯೋಧನಮ್ |
ದ್ರೋಣಂ ದ್ರೌಣಿಂ ಮಹೇಷ್ವಾಸಂ ತಥೈವಾನ್ಯಾನ್ ಮಹಾರಥಾನ್ ॥
ದ್ರೋಣಾನೀಕಮಸಂಬಾಧಂ ಮಮ ಪ್ರಿಯಚಿಕೀರ್ಷಯಾ |
ಭಿತ್ತ್ವಾ ಶತ್ರುಗಣಾನ್ ವೀರಾನ್ ಏಷ ಶೇತೇ ನಿಪಾತಿತಃ ॥ 5 ॥
ಯುಧಿಷ್ಠಿರ ಇವನು ಕೃಪರನ್ನೂ, ಶಲ್ಯನನ್ನೂ, ರಾಜನಾದ ಸುಯೋಧನನನ್ನೂ, ದ್ರೋಣರನ್ನೂ, ಮಹಾಧನುರ್ಧಾರಿಗಳಾದ ಅಶ್ವತ್ಥಾಮರನ್ನೂ, ಹಾಗೆಯೇ ಉಳಿದ ಮಹಾರಥರನ್ನೂ ಗೆದ್ದು ನನಗೆ ಹಿತವನ್ನು ಉಂಟುಮಾಡಲು ನಿಬಿಡವಲ್ಲದ ದ್ರೋಣರ ಸೈನ್ಯವನ್ನು ಪ್ರವೇಶಿಸಿ ಶತ್ರುಸಮೂಹದ ವೀರರನ್ನು ಕೊಂದು ಹತನಾಗಿ ಮಲಗಿದ್ದಾನೆ.
ಕೃತಾಸ್ತ್ರಾನ್ ಯುದ್ಧಕುಶಲಾನ್ ಮಹೇಷ್ವಾಸಾನ್ ಮಹಾರಥಾನ್ |
ಕುಲಶೀಲಗುಣೈರ್ಯುಕ್ತಾನ್ ಶೂರಾನ್ ವಿಖ್ಯಾತಪೌರುಷಾನ್ ॥ 6 ॥
ಅಸ್ತ್ರಜ್ಞರಾದ, ಯುದ್ಧ ಕುಶಲರಾದ, ಕುಲಶೀಲಗುಣಗಳಿಂದ ಯುಕ್ತರಾದ, ಪ್ರಖ್ಯಾತ ಪೌರುಷವುಳ್ಳ, ಮಹಾಧನುರ್ಧಾರಿಗಳೂ, ಮಹಾರಥರೂ, ಶೂರರೂ ಆದ ಶತ್ರುಗಳನ್ನು ಕೊಂದು ಮಲಗಿದ್ದಾನೆ.
ದ್ರೋಣೇನ ವಿಹಿತಂ ವ್ಯೂಹಮಭೇದ್ಯಮಮರೈರಪಿ |
ಅದೃಷ್ಟಪೂರ್ವಮಸ್ಮಾಭಿಃ ಪದ್ಮಂ ಚಕ್ರಾಯುಧಪ್ರಿಯಃ |
ಭಿತ್ತ್ವಾಽನೀಕಂ ಪ್ರವಿಷ್ಟೋಽಸೌ ಗೋಮಧ್ಯಮಿವ ಕೇಸರೀ ॥ 7 ॥
ದ್ರೋಣರು ರಚಿಸಿದ ವ್ಯೂಹವು ದೇವತೆಗಳಿಗೂ ಅಭೇದ್ಯವಾಗಿದ್ದಿತು. ಅಂತಹ ಪದ್ಮವ್ಯೂಹವನ್ನು ನಾವು ಹಿಂದೆ ನೋಡಿರಲಿಲ್ಲ. ಚಕ್ರಾಯುಧನಾದ ಕೃಷ್ಣನಿಗೆ ಪ್ರಿಯನಾದ ಅಭಿಮನ್ಯುವು ಅಂತಹ ವ್ಯೂಹವನ್ನು ಭೇದಿಸಿ ಗೋವುಗಳ ಮಧ್ಯದಲ್ಲಿ ಸಿಂಹವು ಪ್ರವೇಶಿಸಿದಂತೆ ಶತ್ರುಸಮೂಹವನ್ನು ಪ್ರವೇಶಿಸಿದನು.
ವಿಕ್ರೀಡಿತಂ ರಣೇ ತೇನ ನಿಘ್ನತಾ ವೈ ಪರಾನ್ ವರಾನ್ ॥ 8 ॥
ಅವನು ಶತ್ರುಗಳ ಸೈನ್ಯದಲ್ಲಿ ಶ್ರೇಷ್ಠರಾದವರನ್ನು ರಣರಂಗದಲ್ಲಿ ಕೊಲ್ಲುತ್ತಾ ಆಟವಾಡಿದನು.
ಯಸ್ಯ ಶೂರಾ ಮಹೇಷ್ವಾಸಾ ಪ್ರತ್ಯನೀಕಗತಾ ರಣೇ |
ಪ್ರಭಗ್ನಾ ವಿನಿವರ್ತಂತೇ ಕೃತಾಸ್ತ್ರ ಯುದ್ಧದುರ್ಮದಾಃ ॥ 9 ॥
ಯುದ್ಧ ದುರ್ಮದರೂ, ಅಸ್ತ್ರಜ್ಞರೂ, ಮಹಾಧನುರ್ಧಾರಿಗಳೂ ಆದ ಶತ್ರು ಪಕ್ಷದ ಶೂರರು ಇವನನ್ನು ಎದುರಿಸಿ ಭಗ್ನರಾಗಿ ಹಿಂದಿರುಗುತ್ತಿದ್ದರು.
ಅತ್ಯಂತವೈರೀ ಚಾಸ್ಮಾಕಂ ಯೇನ ದುಃಶಾಸನಃ ಶರೈಃ |
ಕ್ಷಿಪನ್ನಭಿಮುಖಃ ಸಂಖೇ ನಿಃಸಂಜ್ಞೋ ವಿಮುಖೀಕೃತಃ ॥ 10 ॥
ನಮಗೆ ಅತ್ಯಂತ ವೈರಿಯಾದ, ಎದುರಿನಿಂದ ಬಾಣಗಳನ್ನು ಪ್ರಯೋಗಿಸುತ್ತಿದ್ದ ದುಶ್ಶಾಸನನು ರಣರಂಗದಲ್ಲಿ ಮೂರ್ಛೆಯನ್ನು ಹೊಂದಿ, ಯುದ್ಧವಿಮುಖನಾಗಿ ಮಾಡಲ್ಪಟ್ಟನು.
ಸ ಕಥಂ ಪ್ರಾಪ್ಯ ದುಷ್ಪ್ರಾಪಂ ದ್ರೋಣಾನೀಕಮಹಾರ್ಣವಮ್ |
ಶೂರಗ್ರಾಹಾಕುಲಂ ಭೀಮಂ ತೀರ್ತ್ವಾ ಚೈನಮಭೀತವತ್ |
ಪ್ರಾಪ್ತೋ ದೌಃಶಾಸನಿಂ ಪಾಪಂ ಯಾತೋ ವೈವಸ್ವತಕ್ಷಯಮ್ ॥ 11 ॥
ಅಂತಹ ಇವನು ದಡವೇ ಇಲ್ಲದ ದ್ರೋಣರ ಸೇನೆಯೆಂಬ ಶೂರರಾದ ಮೊಸಳೆಗಳಿಂದ ಆವೃತವಾದ, ಭಯಂಕರವಾದ ಮಹಾಸಾಗರವನ್ನು ನಿರ್ಭಯವಾಗಿ ದಾಟಿ, ಪಾಪಿಯಾದ ದುಶ್ಶಾಸನನ ಪುತ್ರನನ್ನು ಸಮೀಪಿಸಿ ಯಮಲೋಕಕ್ಕೆ ಹೋಗಿದ್ದಾನೆ.
ಕಿಂಸ್ವಿದ್ ವಕ್ಷ್ಯಾಮಿ ಕೌಂತೇಯಂ ಸೌಭದ್ರೇ ನಿಹತೇಽರ್ಜುನಮ್ ॥12॥
ಕಿಂ ವಾ ಸುಭದ್ರಾಂ ವಕ್ಷ್ಯಾಮಿ ಪ್ರಿಯಂ ಪುತ್ರಮಪಶ್ಯತೀಮ್ |

ಹತವತ್ಸಾಂ ಯಥಾ ಧೇನುಂ ತದ್ದರ್ಶನಕೃತೋನ್ಮುಖೀಮ್ ॥ 13 ॥
ಅಭಿಮನ್ಯುವು ಹತನಾಗುತ್ತಿರಲು ಅರ್ಜುನನಿಗೆ ನಾನು ಏನು ಹೇಳಲಿ? ತನ್ನ ಪ್ರಿಯ ಪುತ್ರನನ್ನು ಕಾಣದೆ ಅವನನ್ನು ನೋಡಲು ಉತ್ಕಟವಾದ ಆಸೆಯುಳ್ಳ ಕರುವನ್ನು ಕಳೆದುಕೊಂಡ ಹಸುವಿನಂತಿರುವ ಸುಭದ್ರೆಗೆ ಏನು ಹೇಳಲಿ?
ಕಿಂಸ್ವಿದ್ ವಕ್ಷ್ಯಾಮ್ಯಪೇತಾರ್ಥಮಕ್ಲಿಷ್ಟಮಸಮಂಜಸಮ್ |
ತಾವುಭೌ ಪ್ರತಿವಕ್ಷ್ಯಾಮಿ ಪ್ರಿಯಂ ಪುತ್ರಮಪಶ್ಯತೌ ॥ 14 ॥
ತಮ್ಮ ಪ್ರಿಯಪುತ್ರನನ್ನು ಕಾಣದ ಅವರಿಬ್ಬರನ್ನು ಕುರಿತು ನಾನು ನಿರರ್ಥಕವಾದ, ಅಸಂಗತವಾದ, ಕ್ಲೇಶದಾಯಕವಲ್ಲದ ಎಂತಹ ಮಾತುಗಳನ್ನು ಆಡಲಿ?
ಅಹಂ ಹ್ಯೇವಂ ಸುಭದ್ರಾಯಾಃ ಕೇಶವಾರ್ಜುನಯೋರಪಿ |
ಪ್ರಿಯಕಾಮೋ ಜಯಾಕಾಂಕ್ಷೀ ಕೃತವಾನಿದಮಪ್ರಿಯಮ್ ॥ 15 ॥
ನಾನೇ ಸುಭದ್ರೆಗೂ, ಕೇಶವಾರ್ಜುನರಿಗೂ ಪ್ರಿಯವನ್ನು ಮಾಡಲು ಬಯಸಿ, ಜಯವನ್ನು ಆಶಿಸಿ ಇಂತಹ ಅಪ್ರಿಯವಾದ ಕಾರ್ಯವನ್ನು ಮಾಡಿದೆನು.
ನ ಲುಬ್ಧೋ ಬುಧ್ಯತೇ ದೋಷಾನ್ ಮೋಹಾಲ್ಲೋಭಾತ್ ಪ್ರವರ್ತತೇ|
ಮಧು ಲಿಪ್ಸುರ್ಹಿ ನಾದ್ರಾಕ್ಷಂ ಪ್ರಪಾತಮಿದಮೀದೃಶಮ್ ॥ 16 ॥
ಲೋಭಿಯಾದವನಿಗೆ ದೋಷಗಳು ಕಾಣಿಸುವುದಿಲ್ಲ. ಮೋಹದಿಂದಲೂ, ಲೋಭದಿಂದಲೂ ಪ್ರವೃತ್ತನಾಗುತ್ತಾನೆ. ಜೇನುತುಪ್ಪವನ್ನು ಪಡೆಯಲು ಬಯಸಿದ ನಾನು ಇಂತಹ ಪ್ರಪಾತವು ಇರುವುದನ್ನು ನೋಡಲಿಲ್ಲ.
ಯೋಽಸೌ ಭೋಜ್ಯೇ ಪುರಸ್ಕಾರ್ಯೋ ಯಾನೇಷು ವಸನೇಷು ಚ |
ಭೂಷಣೇಷು ಚ ಸೋಽಸ್ಮಾಭಿರ್ಬಾಲೋ ಯುಧಿ ಪುರಸ್ಕೃತಃ ॥ 17 ॥
ಯಾವ ಬಾಲಕನಾದ ಇವನನ್ನು ಭಕ್ಷ್ಯ-ಭೋಜ್ಯಗಳಲ್ಲಿ, ಯಾನಗಳಲ್ಲಿ, ವಸ್ತ್ರಗಳಲ್ಲಿ, ಆಭರಣಗಳಲ್ಲಿ ನಾವು ಪುರಸ್ಕರಿಸಬೇಕಾಗಿದ್ದಿತೋ ಅಂತಹ ಬಾಲನಾದ ಅವನನ್ನು ನಾವು ಯುದ್ಧದಲ್ಲಿ ಪುರಸ್ಕರಿಸಿದೆವು.
ಕಥಂ ಹಿ ಬಾಲಸ್ತರುಣೋ ಯುದ್ಧಾನಾಮವಿಶಾರದಃ |
ಸದಶ್ವ ಇವ ಸಂಬಾಧೇ ವಿಷಮೇ ಕ್ಷೇಮಮರ್ಹತಿ ॥ 18 ॥
ಬಾಲಕನೂ, ತರುಣನೂ, ಯುದ್ಧವಿಶಾರದನಲ್ಲದವನೂ ಆದ ಅವನು ಘೋರವಾದ ಪ್ರಸಂಗದಲ್ಲಿ ಸಿಲುಕಿದ ಒಳ್ಳೆಯ ಅಶ್ವದಂತೆ ಹೇಗೆ ಕ್ಷೇಮವನ್ನು ಹೊಂದುವನು?
ನೋ ಚೇದ್ಧಿ ವಯಮಪ್ಯೇವಂ ಮಹೀಮನುಶಯೀಮಹಿ |
ಬೀಭತ್ಸೋಃ ಕೋಪದೀಪ್ತಸ್ಯ ದಗ್ಧಾಃ ಕೃಪಣಚಕ್ಷುಷಾ ॥ 19 ॥
ಇಲ್ಲದಿದ್ದರೆ ಅರ್ಜುನನ ಕೋಪದೀಪ್ತವಾದ, ಕ್ರೂರವಾದ ದೃಷ್ಟಿಯಿಂದ ದಗ್ಧರಾಗಿ ನಾವೂ ಹೀಗೆ ಭೂಮಿಯ ಮೇಲೆ ಮಲಗುತ್ತೇವೆ.
ಅಲುಬ್ಧೋ ಮತಿಮಾನ್ ಶ್ರೀಮಾನ್ ಕ್ಷಮಾವಾನ್ ರೂಪವಾನ್ ಬಲೀ |
ವಪುಷ್ಮಾನ್ ನಯಕೃದ್ ವೀರಃ ಪ್ರಿಯಃ ಸತ್ಯಪರಾಕ್ರಮಃ ॥ 20 ॥
ಅರ್ಜುನನು ಲೋಭರಹಿತನಾದವನು, ಮೇಧಾವಿ, ಕಾಂತಿಯುಕ್ತನಾದವನು, ಕ್ಷಮೆಯನ್ನೂ-ರೂಪವನ್ನೂ-ಬಲವನ್ನೂ ಹೊಂದಿದವನು. ಒಳ್ಳೆಯ ದೇಹವನ್ನು ಹೊಂದಿ ರಾಜನೀತಿಯನ್ನು ತಿಳಿದ ವೀರ. ಸತ್ಯಪರಾಕ್ರಮಿಯಾದ ಅವನು ನಮಗೆ ಪ್ರಿಯನಾದವನು.
ಶ್ಲಾಘಂತೇ ಯಸ್ಯ ವಿಬುಧಾಃ ಕರ್ಮಭಿರ್ಭೀಮಕರ್ಮಣಃ |
ನಿವಾತಕವಚಾನ್ ಜಘ್ನೇ ಕಾಲಕೇಯಾಂಶ್ಚ ವೀರ್ಯವಾನ್ ॥ 21 ॥
ಭಯಂಕರ ಕಾರ್ಯವನ್ನು ಮಾಡುವ ಅವನ ಕಾರ್ಯಗಳನ್ನು ದೇವತೆಗಳೂ ಹೊಗಳುತ್ತಾರೆ. ಪರಾಕ್ರಮಶಾಲಿಯಾದ ಅವನು ನಿವಾತ-ಕವಚರನ್ನೂ ಮತ್ತು ಕಾಲಕೇಯರನ್ನೂ ಸಂಹರಿಸಿದನು.
ಮಹೇಂದ್ರಶತ್ರವೋ ಯೇನ ಹಿರಣ್ಯಪುರವಾಸಿನಃ |
ಅಕ್ಷ್ಣೋರ್ನಿಮೇಷಮಾತ್ರೇಣ ಪೌಲೋಮಾಃ ಸಗಣಾ ಹತಾಃ ॥ 22 ॥
ಹಿರಣ್ಯಪುರವಾಸಿಗಳಾದ, ಮಹೇಂದ್ರಶತ್ರುಗಳಾದ ಪೌಲೋಮರು ತಮ್ಮ ಗಣಗಳ ಸಹಿತರಾಗಿ ಕಣ್ಣನ್ನು ಮುಚ್ಚಿ ಬಿಡುವಷ್ಟು ಶೀಘ್ರ ಕಾಲದಲ್ಲಿ ಅವನಿಂದ ಹತರಾದರು.
ಪರೇಭ್ಯೋ ಹ್ಯಭಯಾರ್ಥಿಭ್ಯೋ ಯೋ ದದ್ಯಾದಭಯಂ ವಿಭುಃ |
ತಸ್ಯಾಸ್ಮಾಭಿರ್ನ ಚ ಕೃತಂ ತ್ರಾಣಮದ್ಯಾತ್ಮನೋ ಭಯಾತ್ ॥ 23 ॥
ಯಾವ ಪ್ರಭುವಾದ ಅವನು ಅಭಯವನ್ನು ಯಾಚಿಸುವ ಇನ್ನೊಬ್ಬರಿಗೆ ಅಭಯವನ್ನು ಕೊಡುತ್ತಾನೆಯೋ, ಅಂತಹ ಅವನ ಪುತ್ರನ ರಕ್ಷಣೆಯನ್ನು ಭಯದಿಂದ ಕೂಡಿದ ನಾವು ಈ ದಿನ ಮಾಡಲಿಲ್ಲ.
ಭಯಂ ತು ಸುಮಹತ್ ಪ್ರಾಪ್ತಂ ಧಾರ್ತರಾಷ್ಟ್ರಬಲಂ ಮಹತ್ |
ಪಾರ್ಥಃ ಪುತ್ರವಧಾತ್ ಕ್ರುದ್ಧಃ ಕೌರವಾನ್ ಸಂಹರಿಷ್ಯತಿ ॥ 24 ॥
ದುರ್ಯೋಧನನ ದೊಡ್ಡ ಸೇನೆಗೆ ದೊಡ್ಡ ಭಯವು ಪ್ರಾಪ್ತವಾಗಿದೆ. ಪುತ್ರನ ವಧೆಯಿಂದ ಕೋಪಗೊಂಡ ಅರ್ಜುನನು ಶತ್ರುಗಳನ್ನು ನಾಶಗೊಳಿಸುವನು.
ಕ್ಷುದ್ರಃ ಕ್ಷುದ್ರಸಹಾಯಶ್ಚ ಸ್ವಪಕ್ಷಕ್ಷಯಮಾತುರಃ |
ವ್ಯಕ್ತಂ ದುರ್ಯೋಧನೋ ದೃಷ್ಟ್ವಾ ಶೋಚನ್ ಹಾಸ್ಯತಿ ಜೀವಿತಮ್ ॥
ಕ್ಷುದ್ರನೂ, ಕ್ಷುದ್ರರ ಸಹಾಯವುಳ್ಳವನೂ, ಆತುರನೂ ಆದ ದುರ್ಯೋಧನನು ಈ ದಿನ ತನ್ನ ಪಕ್ಷದ ವಿನಾಶವನ್ನು ಸ್ಪಷ್ಟವಾಗಿ

ನೋಡಿ ಶೋಕಪಡುತ್ತಾ ಜೀವಿತವನ್ನು ತೊರೆಯುವನು.
ನ ಮೇ ಜಯಃ ಪ್ರೀತಿಕರೋ ನ ರಾಜ್ಯಂ
ನ ಚಾಮರತ್ವಂ ನ ಸುರೈಃ ಸಲೋಕತಾ |
ಇಮಂ ಸಮೀಕ್ಷ್ಯಾಪ್ರತಿವಾರ್ಯಪೌರುಷಂ
ನಿಪಾತಿತಂ ದೇವವರಾತ್ಮಜಾತ್ಮಜಮ್ ॥ 26 ॥
ಅಪ್ರತಿಮ ಪೌರುಷವುಳ್ಳ ಈ ದೇವರಾಜನಾದ ಇಂದ್ರನ ಪುತ್ರನ ಪುತ್ರನಾದ ಅಭಿಮನ್ಯುವು ಬಿದ್ದಿರುವುದನ್ನು ನೋಡುವ ನನಗೆ ಯುದ್ಧದಲ್ಲಿ ಜಯವು ಸಂತೋಷವನ್ನುಂಟು ಮಾಡುವುದಿಲ್ಲ. ರಾಜ್ಯವಾಗಲೀ, ದೇವತ್ವವೇ ಆಗಲೀ, ದೇವತೆಗಳ ಸಾಲೋಕ್ಯವಾಗಲೀ ಸಂತೋಷವನ್ನು ಉಂಟು ಮಾಡುವುದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂಬತ್ತನೆಯ ಅಧ್ಯಾಯ
ಯುಧಿಷ್ಠಿರನನ್ನು ಸಮಾಧಾನ ಪಡಿಸಲು ವ್ಯಾಸರ ಆಗಮನ. ಅಕಂಪನೋಪಾಖ್ಯಾನ ಕಥನ ಪ್ರಾರಂಭ.
ಸಂಜಯಃ
ಏವಂ ವಿಲಪಮಾನೇ ತು ಕುಂತೀಪುತ್ರೇ ಯುಧಿಷ್ಠಿರೇ |
ಕೃಷ್ಣದ್ವೈಪಾಯನಸ್ತತ್ರ ಪ್ರಾದುರ್ಭೂತೋ ಮಹಾನೃಷಿಃ ॥ 1 ॥
ಸಂಜಯ ಕುಂತೀಪುತ್ರನಾದ ಯುಧಿಷ್ಠಿರನು ಹೀಗೆ ವಿಲಾಪವನ್ನು ಮಾಡುತ್ತಿರಲು ಮಹರ್ಷಿಗಳಾದ ಕೃಷ್ಣದ್ವೈಪಾಯನರು ಅಲ್ಲಿ ಪ್ರತ್ಯಕ್ಷರಾದರು.
ಅಥ ದೃಷ್ಟ್ವಾ ಮಹಾತ್ಮಾನಂ ಪಾಂಡುಪುತ್ರೋ ಯುಧಿಷ್ಠಿರಃ |
ಮುಕ್ತ್ವಾಸನೋ ದೀನಮನಾಃ ಪೂಜಾಂ ಚಕ್ರೇ ಮಹಾಮನಾಃ ॥ 2 ॥
ಪಾಂಡುಪುತ್ರನಾದ ಯುಧಿಷ್ಠಿರನು ಮಹಾತ್ಮರಾದ ಅವನನ್ನು ನೋಡಿ, ದೀನ ಮನಸ್ಸಿನಿಂದ ತನ್ನ ಆಸನದಿಂದ ಎದ್ದು, ಒಳ್ಳೆಯ ಮನಸ್ಸಿನಿಂದ ಅವರ ಪೂಜೆಯನ್ನು ಮಾಡಿದನು.
ತಂ ಸಮರ್ಚ್ಯ ಯಥಾನ್ಯಾಯಮುಪಾತಿಷ್ಠದ್ ಯುಧಿಷ್ಠಿರಃ |
ಅಬ್ರವೀಚ್ಛೋಕಸಂತಪ್ತೋ ಭ್ರಾತುಃ ಪುತ್ರವಧೇನ ಸಃ ॥ 3 ॥
ಶಾಸ್ತ್ರೋಕ್ತವಾಗಿ ಪೂಜಿಸಿ, ಅವರ ಸಮೀಪದಲ್ಲಿ ಕುಳಿತು, ಯುಧಿಷ್ಠಿರನು ತಮ್ಮನ ಪುತ್ರನ ವಧೆಯಿಂದಾಗಿ ಶೋಕಸಂತಪ್ತನಾಗಿ ಮಾತನಾಡಿದನು.
ಯುಧಿಷ್ಠಿರಃ
ಅಧರ್ಮಯುದ್ಧೇ ಬಹುಭಿಃ ಪರಿವಾರ್ಯ ಮಹಾರಥೈಃ |
ಯುಧ್ಯಮಾನೋ ಮಹೇಷ್ವಾಸೈಃ ಸೌಭದ್ರೋ ನಿಹತೋ ರಣೇ ॥ 4 ॥
ಯುಧಿಷ್ಠಿರ ಅಧರ್ಮ ಯುದ್ಧದಲ್ಲಿ ಅನೇಕ ಮಹಾರಥರಿಂದ ಮತ್ತು ಮಹಾಧನುರ್ಧಾರಿಗಳಿಂದ ಸುತ್ತುವರಿಯಲ್ಪಟ್ಟು ಅಭಿಮನ್ಯುವು ಯುದ್ಧವನ್ನು ಮಾಡುತ್ತಾ ರಣರಂಗದಲ್ಲಿ ಹತನಾದನು.
ಬಾಲಶ್ಚಾಬಾಲಬುದ್ಧಿಶ್ಚ ವೀರಶ್ಚ ಪರವೀರಹಾ |
ಅನುಪಾಯೇನ ಸಂಗ್ರಾಮೇ ಯುಧ್ಯಮಾನೋ ವಿನಾಶಿತಃ ॥ 5 ॥
ಬಾಲನಾದರೂ ಅಗಾಧ ಬುದ್ಧಿಯುಳ್ಳವನು ಮತ್ತು ವೀರನಾಗಿ ಪರವೀರರನ್ನು ಸಂಹರಿಸುವವನಾದ ಅವನು ರಣರಂಗದಲ್ಲಿ ಉಪಾಯವಿಲ್ಲದೆ ಯುದ್ಧವನ್ನು ಮಾಡುತ್ತಾ ವಿನಾಶವನ್ನು ಹೊಂದಿದನು.
ಮಯಾಽಪಿ ಚೋಕ್ತಃ ಸಂಗ್ರಾಮೇ ದ್ವಾರಂ ಸಂಜನಯಸ್ವ ನಃ |
ಪ್ರವಿಷ್ಟೇ ಚ ಪರಾಂಸ್ತಸ್ಮಿನ್ ಸೈಂಧವೇನ ಸ್ಮ ವಾರಿತಾಃ ॥ 6 ॥
ನಾನೂ ಸಹ ಅವನಿಗೆ ನಮಗೆ ಒಂದು ದ್ವಾರವನ್ನು ಮಾಡಿಕೊಡು ಎಂದು ಹೇಳಿದೆ. ಅವನು ಶತ್ರುಸೈನ್ಯವನ್ನು ಪ್ರವೇಶಿಸಿದ ಮೇಲೆ ಸೈಂಧವನು ನಮ್ಮನ್ನು ತಡೆದನು.
ನನು ನಾಮ ಸಮಂ ಯುದ್ಧಮೇಷ್ಟವ್ಯಂ ಯುದ್ಧಜೀವಿನಾ |
ಇದಂ ಚ ವಿಷಮಂ ಯುದ್ಧಮೀದೃಶಂ ಬಹುಭಿಃ ಕೃತಮ್ ॥ 7 ॥
ಯುದ್ಧದಿಂದ ಜೀವಿಸುವವನು ಸಮವಾದ ಯುದ್ಧವನ್ನು ಬಯಸಬೇಕಷ್ಟೇ? ಅನೇಕರಿಂದ ಮಾಡಲ್ಪಟ್ಟ ಇಂತಹ ಈ ಯುದ್ಧವು ವಿಷಮವಾದುದು.
ತೇನಾಸ್ಮಿ ಭೃಶಸಂತಪ್ತಃ ಶೋಕಬಾಷ್ಪಸಮಾಕುಲಃ |
ಶಮಂ ನೈವಾಧಿಗಚ್ಛಾಮಿ ಚಿಂತಯಾನಃ ಪುನಃಪುನಃ ॥ 8 ॥
ಆದ್ದರಿಂದ ನಾನು ಶೋಕಬಾಷ್ಪಗಳಿಂದ ಕೂಡಿದವನಾಗಿ ಬಹಳ ಸಂತಾಪವನ್ನು ಹೊಂದುತ್ತಿದ್ದೇನೆ. ಪುನಃ ಪುನಃ ಚಿಂತಿಸಿದರೂ ಸಮಾಧಾನವು ಉಂಟಾಗುತ್ತಿಲ್ಲ.
ಸಂಜಯಃ

ತಂ ತಥಾ ವಿಲಪಂತಂ ವೈ ಶೋಕೋಪಹತಚೇತಸಮ್ |
ಉವಾಚ ಭಗವಾನ್ ವ್ಯಾಸೋ ಯುಧಿಷ್ಠಿರಮಿದಂ ವಚಃ ॥ 9 ॥
ಸಂಜಯ ಶೋಕದಿಂದ ಪೀಡಿತವಾದ ಮನಸ್ಸಿನಿಂದ ಆ ರೀತಿಯಲ್ಲಿ ವಿಲಾಪವನ್ನು ಮಾಡುತ್ತಿದ್ದ ಯುಧಿಷ್ಠಿರನನ್ನು ಕುರಿತು ಪೂಜ್ಯರಾದ ವ್ಯಾಸರು ಈ ಮಾತುಗಳನ್ನು ಆಡಿದರು.
ಯುಧಿಷ್ಠಿರ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ವ್ಯಸನೇಷು ನ ಮುಹ್ಯಂತಿ ತ್ವಾದೃಶಾಃ ಪುರುಷರ್ಷಭ ॥ 10 ॥
ಮಹಾಪ್ರಾಜ್ಞನಾದ, ಸರ್ವಶಾಸ್ತ್ರ ವಿಶಾರದನಾದ, ಪುರುಷಶ್ರೇಷ್ಠನಾದ ಯುಧಿಷ್ಠಿರನೇ, ನಿನ್ನಂತಹವರು ಕಷ್ಟ ಒದಗಿದಾಗ ಮೋಹಕ್ಕೆ ಒಳಗಾಗಬಾರದು.
ಸ್ವರ್ಗಮೇಷ ಗತಃ ಶೂರಃ ಶತ್ರೂನ್ ಹತ್ವಾ ರಣೇ ಬಹೂನ್ |
ಅಬಾಲಸದೃಶಂ ಕರ್ಮ ಕೃತ್ವಾ ವೈ ಪುರುಷರ್ಷಭಃ ॥ 11 ॥
ಪುರುಷಶ್ರೇಷ್ಠನೂ, ಶೂರನೂ ಆದ ಅವನು ಬಾಲಕರಿಗೆ ಮೀರಿದ ಕರ್ಮಗಳನ್ನು ಮಾಡಿ, ರಣರಂಗದಲ್ಲಿ ಅನೇಕ ಶತ್ರುಗಳನ್ನು ಕೊಂದು ಸ್ವರ್ಗವನ್ನು ಸೇರಿದ್ದಾನೆ.
ಅನತಿಕ್ರಮಣೀಯೋ ಹಿ ವಿಧಿರೇಷ ಸನಾತನಃ |
ದೇವದಾನವಗಂಧರ್ವಾ ಮೃತ್ಯುಂ ಗಚ್ಛಂತಿ ಭಾರತ ॥ 12 ॥
ಎಲೈ ಭಾರತನೇ, ಇದು ಅನಾದಿಕಾಲದಿಂದಲೂ ನಡೆದುಕೊಂಡು ಬಂದ, ಮೀರಲು ಸಾಧ್ಯವಿಲ್ಲದ ಒಂದು ವಿಧಿ.
ದೇವ-ದಾನವ-ಗಂಧರ್ವರೂ ಮೃತ್ಯುವನ್ನು ಹೊಂದುತ್ತಾರೆ.
ಯುಧಿಷ್ಠಿರಃ
ಯ ಇಮೇ ಪೃಥಿವೀಪಾಲಾಃ ಶೇರತೇ ಪೃಥಿವೀತಳೇ |
ನಿಹತಾಃ ಪೃತನಾಮಧ್ಯೇ ಮೃತಸಂಜ್ಞಾ ಮಹಾಬಲಾಃ ॥ 13 ॥
ದೃಢಂ ನಾಗಬಲಾಶ್ಚಾನ್ಯೇ ಸರ್ವೇ ಯುದ್ಧವಿಶಾರದಾಃ |
ತ ಏತೇ ನಿಹತಾಃ ಸಂಖ್ಯೇ ತುಲ್ಯರೂಪೈರ್ನರೈರ್ನರಾಃ ॥ 14 ॥
ಯುಧಿಷ್ಠಿರ ಭೂತಳದಲ್ಲಿ ಯಾವ ಈ ಮಹಾಬಲರಾದ ರಾಜರು ರಣರಂಗದ ಮಧ್ಯದಲ್ಲಿ ಮೃತರು ಎಂಬ ಸಂಜ್ಞೆಯನ್ನು ಪಡೆದು ಮಲಗಿದ್ದಾರೆಯೋ ಅವರಲ್ಲಿ ಕೆಲವರು ಆನೆಯ ಬಲವುಳ್ಳವರು, ಉಳಿದವರೆಲ್ಲರೂ ಯುದ್ದ ವಿಶಾರದರಾದವರು. ಅಂತಹ ಇವರು ರಣರಂಗದಲ್ಲಿ ಸಮಾನ ರೂಪವುಳ್ಳ ನರರಿಂದ ಹತರಾಗಿದ್ದಾರೆ.
ಏಕೈಕಶೋ ಭೀಮಬಲಾ ನಾಗಾಯುತಶತೋಪಮಾಃ |
ಇಷುವೇಗಬಲಾಶ್ಚಾನ್ಯೇ ವಾಯುವೇಗಬಲಾಸ್ತಥಾ |
ನೈಷಾಂ ಪಶ್ಯಾಮಿ ಹಂತಾರಂ ಪ್ರಾಣಿನಾಂ ಸಂಯುಗೇ ಕ್ವಚಿತ್ ॥ 15 ॥
ಒಬ್ಬೊಬ್ಬರೂ ಭಯಂಕರವಾದ ಬಲವನ್ನೂ, ಹತ್ತು ಸಹಸ್ರ ಆನೆಗಳ ಬಲವನ್ನೂ ಹೊಂದಿದವರು. ಇನ್ನು ಕೆಲವರು ಬಾಣಗಳ ವೇಗದಂತಹ ಮತ್ತು ವಾಯು ವೇಗದಂತಹ ಬಲವನ್ನು ಹೊಂದಿದವರು. ಇಂತಹ ಪ್ರಾಣಿಗಳನ್ನು ಯುದ್ದದಲ್ಲಿ ಸಂಹಾರ ಮಾಡುವ ಯಾವನನ್ನೂ ನಾನು ಕಾಣುವುದಿಲ್ಲ.
ವಿಕ್ರಮೇಣೋಪಪನ್ನಾ ಹಿ ತೇಜೋಬಲಸಮನ್ವಿತಾಃ |
ಜೇತವ್ಯಮಿತಿ ಚಾನ್ಯೋನ್ಯಂ ನಿತ್ಯಂ ಯೇಷಾಂ ಹೃದಿ ಸ್ಥಿತಃ |
ಅಥ ಚೇಮೇ ಮಹಾಪ್ರಾಜ್ಞಾಃ ಶೇರತೇ ಚ ಗತಾಯುಷಃ ॥ 16 ॥
ಇವರೆಲ್ಲರೂ ಪರಾಕ್ರಮದಿಂದಲೂ, ತೇಜೋಬಲದಿಂದಲೂ ಕೂಡಿದವರು. ಅವರ ಮನಸ್ಸಿನಲ್ಲಿ ಯಾವಾಗಲೂ ನಾವು ಪರಸ್ಪರವಾಗಿ ಜಯಿಸಬೇಕು ಎಂಬ ಭಾವನೆಯಿದ್ದಿತು. ಆದರೆ ಈಗ ಮಹಾಪ್ರಾಜ್ಞರೆಲ್ಲರೂ ಆಯುಸ್ಸನ್ನು ಕಳೆದುಕೊಂಡು ಭೂಮಿಯ ಮೇಲೆ ಮಲಗಿದ್ದಾರೆ.
ಮೃತಾ ಇತಿ ಚ ಶಬ್ದೋಽಯಂ ವರ್ತತೇ ಚ ಗತಾಯುಷಾಮ್ |
ಇಮೇ ಮೃತಾ ಮಹೀಪಾಲಾಃ ಪ್ರಾಯಶೋ ಭೀಮವಿಕ್ರಮಾಃ ॥17॥
ಆಯುಸ್ಸನ್ನು ಕಳೆದುಕೊಂಡವರಿಗೆ ಮೃತರು ಎಂಬ ಶಬ್ದವು ರೂಢಿಯಲ್ಲಿದೆ. ಹೆಚ್ಚಾಗಿ ಭಯಂಕರ ಪರಾಕ್ರಮವುಳ್ಳ ಈ ರಾಜರು ಮೃತರಾಗಿದ್ದಾರೆ.
ರಾಜಪುತ್ರಾಶ್ಚ ಸಂರಬ್ಧಾ ವೈಶ್ವಾನರಸಮಪ್ರಭಾಃ |
ನಿಶ್ಚೇಷ್ಟಾಃ ನಿರಭಿಮಾನಾಃ ಶೂರಾಃ ಶತ್ರುವಶಂ ಗತಾಃ ॥ 18 ॥
ಅಗ್ನಿಗೆ ಸಮಾನವಾದ ತೇಜಸ್ಸುಳ್ಳ, ಶೂರರಾದ ರಾಜಪುತ್ರರೂ ಸಹ ಅಭಿಮಾನವನ್ನು ತೊರೆದು, ಶತ್ರುಗಳಿಗೆ ವಶರಾಗಿ ನಿಶ್ಚೇಷ್ಟರಾಗಿ ಬಿದ್ದಿದ್ದಾರೆ.
ತತ್ರ ಮೇ ಸಂಶಯಃ ಪ್ರಾಪ್ತಃ ಕುತಃ ಸಂಜ್ಞಾ ಮೃತಾ ಇತಿ |
ಕಸ್ಯ ಮೃತ್ಯುಃ ಕುತೋ ಮೃತ್ಯುಃ ಕೇನ ಮೃತ್ಯುರಿಮಾಃ ಪ್ರಜಾಃ |
ಹರತ್ಯಮರಸಂಕಾಶ ತನ್ಮೇ ಬ್ರೂಹಿ ಪಿತಾಮಹ ॥ 19 ॥
ಅದರಲ್ಲಿ ನನಗೆ ಮೃತರು ಎಂಬ ಹೆಸರು ಹೇಗೆ ಉಂಟಾಗುತ್ತದೆ ಎಂದು ಸಂಶಯವುಂಟಾಗಿದೆ. ಯಾರಿಗೆ ಮೃತ್ಯು? ಏಕೆ ಮೃತ್ಯು? ಯಾವ ಕಾರಣದಿಂದ ಮೃತ್ಯುವು ಈ ಪ್ರಜೆಗಳನ್ನು ತೆಗೆದುಕೊಂಡು ಹೋಗುತ್ತಾನೆ? ಎಲೈ ದೇವಸಂಕಾಶರೇ, ಪಿತಾಮಹರೇ, ಅದನ್ನು ನನಗೆ ಹೇಳಿ.

ಸಂಜಯಃ
ತಂ ತಥಾ ಪರಿಪೃಚ್ಛಂತಂ ಕುಂತೀಪುತ್ರಂ ಯುಧಿಷ್ಠಿರಮ್ |
ಆಶ್ವಾಸನಮಿದಂ ವಾಕ್ಯಮುವಾಚ ಭಗವಾನೃಷಿಃ ॥ 20 ॥
ಸಂಜಯ ಹಾಗೆ ಪ್ರಶ್ನೆಯನ್ನು ಮಾಡುತ್ತಿದ್ದ ಕುಂತೀಪುತ್ರನಾದ ಯುಧಿಷ್ಠಿರನನ್ನು ಸಮಾಧಾನಪಡಿಸುತ್ತಾ ಪೂಜ್ಯರಾದ ವ್ಯಾಸರು ಈ ಮಾತುಗಳನ್ನು ಆಡಿದರು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಕಂಪನಸ್ಯ ಕಥಿತಂ ನಾರದೇನ ಪುರಾ ನೃಪ ॥ 21 ॥
ಎಲೈ ರಾಜನೇ, ಈ ವಿಷಯದಲ್ಲಿ ಹಿಂದೆ ಅಂಕಪನ ರಾಜನಿಗೆ ನಾರದರು ಹೇಳಿದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಸ ಚಾಪಿ ರಾಜಾ ರಾಜೇಂದ್ರ ಪುತ್ರವ್ಯಸನಮುತ್ತಮಮ್ |
ಅಪ್ರಸಹ್ಯತಮಂ ಲೋಕೇ ಪ್ರಾಪ್ತವಾನಿತಿ ನಃ ಶ್ರುತಮ್ ॥ 22 ॥
ಎಲೈ ರಾಜೇಂದ್ರನೇ, ಆ ರಾಜನೂ ಸಹ ಲೋಕದಲ್ಲಿ ಸಹಿಸಲು ಅಸಾಧ್ಯವಾದ ಪುತ್ರವ್ಯಸನವನ್ನು ಹೊಂದಿದನು ಎಂದು ನಾವು ಕೇಳಿದ್ದೇವೆ.
ತತ್ ತೇಽಹಂ ಸಂಪ್ರವಕ್ಷ್ಯಾಮಿ ಮೃತ್ಯೋಃ ಪ್ರಭವಮುತ್ತಮಮ್ |
ತತಸ್ತ್ವಂ ಮೋಕ್ಷ ೆಯಸೇ ದುಃಖಾದ್ ಸ್ನೇಹಬಂಧನಸಂಶ್ರಯಾತ್ ॥ 23 ॥
ನಾನು ನಿನಗೆ ಆ ಮೃತ್ಯುವಿನ ಶ್ರೇಷ್ಠವಾದ ಉತ್ಪತ್ತಿಯನ್ನು ಹೇಳುವೆನು. ಆಗ ನೀನು ಸ್ನೇಹಬಂಧನದಿಂದ ಉಂಟಾದ ದುಃಖದಿಂದ ಬಿಡುಗಡೆಯನ್ನು ಹೊಂದುವಿ.
ಪುರಾವೃತ್ತಮಿದಂ ತಾತ ಮಮ ಕೀರ್ತಯತಃ ಶೃಣು |
ಧರ್ಮ್ಯಮಾಖ್ಯಾನಮಾಯುಷ್ಯಂ ಶೋಕಘ್ನಂ ಪುಷ್ಟಿವರ್ಧನಮ್ ॥24॥
ಪವಿತ್ರಮರಿಸಂಘಘ್ನಂ ಮಂಗಳಾನಾಂ ಚ ಮಂಗಳಮ್ |
ಯಥೈವ ವೇದಾಧ್ಯಯನಮುಪಾಖ್ಯಾನಮಿದಂ ತಥಾ ॥ 25 ॥
ಎಲೈ ಪ್ರೀತಿಪಾತ್ರನೇ, ಹಿಂದೆ ನಡೆದ ಈ ಘಟನೆಯನ್ನು ಹೇಳುವ ನನ್ನಿಂದ ನೀನು ಕೇಳುವವನಾಗು. ಈ ಆಖ್ಯಾನವು ಧರ್ಮಪ್ರದವಾದುದು, ಆಯುಷ್ಯಪ್ರದವಾದುದು, ಶೋಕವನ್ನು ಪರಿಹಾರ ಮಾಡುವಂತಹದು ಮತ್ತು ಪುಷ್ಟಿಯನ್ನು ಕೊಡುವಂತಹದು. ಇದು ಪವಿತ್ರವಾದುದು, ಶತ್ರುಸಮೂಹವನ್ನು ನಾಶಮಾಡುವಂತಹದು ಮತ್ತು ಮಂಗಳಗಳಲ್ಲಿ ಮಂಗಳವಾದುದು.
ಶ್ರವಣೀಯಂ ಮಹಾರಾಜ ಪ್ರಾತರ್ನಿತ್ಯಂ ನೃಪೋತ್ತಮೈಃ |
ಪುತ್ರಾನಾಯುಷ್ಮತೋ ರಾಜ್ಯಮೀಹಮಾನೈಃ ಶ್ರಿಯಂ ತಥಾ ॥ 26 ॥
ವೇದಾಧ್ಯಯನವು ಹೇಗೆಯೋ ಈ ಉಪಾಖ್ಯಾನವೂ ಹಾಗೆಯೇ. ಎಲೈ ಮಹಾರಾಜನೇ, ಆಯುಷ್ಯವಂತನಾದ ಪುತ್ರನನ್ನೂ, ಸಂಪತ್ತನ್ನೂ ಬಯಸುವ ಶ್ರೇಷ್ಠರಾದ ರಾಜರು ನಿತ್ಯವೂ ಪ್ರಾತಃಕಾಲದಲ್ಲಿ ಇದನ್ನು ಕೇಳಬೇಕು.
ಪುರಾ ಕೃತಯುಗೇ ತಾತ ರಾಜಾ ಹ್ಯಾಸೀದಕಂಪನಃ |
ಸ ಶತ್ರುವಶಮಾಪನ್ನೋ ಮಧ್ಯೇ ಸಂಗ್ರಾಮಮೂರ್ಧನಿ ॥ 27 ॥
ಪ್ರೀತಿಪಾತ್ರನೇ, ಹಿಂದೆ ಕೃತಯುಗದಲ್ಲಿ ಅಕಂಪನನೆಂಬ ರಾಜನಿದ್ದನು. ಅವನು ತೀವ್ರವಾದ ಸಂಗ್ರಾಮ ನಡೆಯುತ್ತಿದ್ದಾಗ ಶತ್ರುಗಳಿಗೆ ವಶನಾದನು.
ತಸ್ಯ ಪುತ್ರೋ ಹರಿರ್ನಾಮ ನಾರಾಯಣಸಮದ್ಯುತಿಃ |
ಶ್ರೀಮಾನ್ ಕೃತಾಸೊತ್ರೇ ಮೇಧಾವೀ ಯುಧಿ ಶಕ್ರಸಮೋ ಬಲೀ ॥ 28 ॥
ಅವನಿಗೆ ಹರಿ ಎಂಬ ನಾರಾಯಣನಿಗೆ ಸಮಾನವಾದ ಕಾಂತಿಯುಳ್ಳ ಪುತ್ರನಿದ್ದನು. ಅವನು ಕಾಂತಿಯುಕ್ತನೂ, ಅಸ್ತ್ರವೇತ್ತನೂ, ಮೇಧಾವಿಯೂ, ಯುದ್ಧದಲ್ಲಿ ಇಂದ್ರನಿಗೆ ಸಮಾನವಾದ ಬಲವುಳ್ಳವನೂ ಆಗಿದ್ದನು.
ಸ ಶತ್ರುಭಿಃ ಪರಿವೃತೋ ಬಹುಧಾ ರಣಮೂರ್ಧನಿ |
ಯೋಧಯಾಮಾಸ ತಾನ್ ಸರ್ವಾನ್ ಸರ್ವಾಸ್ತ್ರಕುಶಲೋ ಬಲೀ ॥29॥
ಸರ್ವಾಸ್ತ್ರ ಕುಶಲನೂ, ಬಲಿಷ್ಠನೂ ಆದ ಅವನು ಯುದ್ಧದಲ್ಲಿ ಅನೇಕ ರೀತಿಯಲ್ಲಿ ಶತ್ರುಗಳಿಂದ ಸುತುತವರಿಯಲ್ಪಟ್ಟು ಅವರೆಲ್ಲರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ವರ್ಷನ್ ಬಾಣಸಹಸ್ರಾಣಿ ಶತ್ರುಷ್ವಮಿತವಿಕ್ರಮಃ |
ಪದಾತಿರಥನಾಗಾಶ್ವಾನ್ ಪ್ರಮಮಾಥ ಮಹಾಬಲಃ ॥ 30 ॥
ಅಮಿತ ಪರಾಕ್ರಮಿಯೂ, ಮಹಾಬಲನೂ ಆದ ಅವನು ಶತ್ರುಗಳ ಮೇಲೆ ಸಹಸ್ರಾರು ಬಾಣಗಳನ್ನು ಪ್ರಯೋಗಿಸುತ್ತಾ, ಪದಾತಿ-ರಥ-ಗಜಾಶ್ವಗಳನ್ನು ಮರ್ದಿಸಿದನು.
ಸ ಕರ್ಮ ದುಷ್ಕರಂ ಕೃತ್ವಾ ಸಂಗ್ರಾಮೇ ಶತ್ರುತಾಪನಃ |
ತದುದೀರ್ಣಂ ಬಲಂ ಸರ್ವಂ ಹತ್ವಾಽರೀನರಿಸೂದನಃ |
ಸ ಶತ್ರುವಶಮಾಪನ್ನೋ ಮಧ್ಯೇ ಸಂಗ್ರಾಮಮೂರ್ಧನಿ ॥ 31 ॥
ಶತ್ರುತಾಪನಾದ ಅವನು ಯುದ್ಧದಲ್ಲಿ ದುಷ್ಕರವಾದ ಕಾರ್ಯವನ್ನು ಮಾಡಿ, ಸಮೃದ್ಧವಾದ ಆ ಸೈನ್ಯವನೆನಲ್ಲ ಕೊಂದು, ಯುದ್ಧರಂಗದಲ್ಲಿ ಶತ್ರುಗಳಿಗೆ ವಶನಾದನು.
ಸ ದೃಷ್ಟ್ವಾ ಪಿತರಂ ಯುದ್ಧೇ ತದವಸ್ಥಂ ಮಹಾದ್ಯುತಿಃ |

ಅಚಿಂತಯಿತ್ವಾ ಮರಣಂ ಶತ್ರುಮಧ್ಯೇಽವಿಶತ್ ಸುತಃ ॥ 32 ॥
ಮಹಾದ್ಯುತಿಯುಳ್ಳ ಅವನ ಪುತ್ರನು ತನ್ನ ತಂದೆಯು ಅಂತಹ ಪರಿಸ್ಥಿತಿಯನ್ನು ಹೊಂದಿದುದನ್ನು ನೋಡಿ ತನ್ನ ಮರಣವನ್ನು ಲೆಕ್ಕಿಸದೆ ಶತ್ರುಗಳ ಮಧ್ಯದಲ್ಲಿ ಪ್ರವೇಶಿಸಿದನು.
ಸ ಶರೈರಾಯಸೈಶ್ಚಕ್ರೈಃ ಗದಾಭಿರ್ಮುಸಲೈರಪಿ |
ಮೃದ್ನನ್ ರಥಿಸಹಸ್ರಾಣಿ ರಥಾಂಶ್ಚ ಹಯವಾರಣಾನ್ ॥ 33 ॥
ಪರಾನೀಕಂ ವಿಭಿದ್ಯಾಜೌ ಮೋಕ್ಷಯಿತ್ವಾ ಚ ತಂ ನೃಪಮ್ |
ಪುನರೇವಾಕರೋದ್ ಯುದ್ಧಂ ಶತ್ರುಮಧ್ಯಗತೋ ಬಲೀ ॥ 34 ॥
ಅವನು ಕಬ್ಬಿಣದ ಬಾಣಗಳಿಂದಲೂ, ಚಕ್ರಗಳಿಂದಲೂ, ಗಜಗಳಿಂದಲೂ, ಅಸ್ತ್ರಗಳಿಂದಲೂ ಗಜಾಶ್ವಗಳನ್ನು, ರಥಗಳನ್ನು, ಸಹಸ್ರಾರು ರಥಿಕರನ್ನು ಮರ್ದಿಸಿದನು. ಬಲಿಷ್ಠನಾದ ಅವನು ಶತ್ರುಸೈನ್ಯವನ್ನು ಭಗ್ನಗೊಳಿಸಿ, ತನ್ನ ತಂದೆಯನ್ನು ಬಿಡಿಸಿ ಪುನಃ ಶತ್ರುಸೈನ್ಯದ ಮಧ್ಯಗತನಾಗಿ ಯುದ್ಧವನ್ನು ಮಾಡಿದನು.
ತತಸ್ತೇ ರಥಿನಃ ಸರ್ವೇ ಸಮೇತ್ಯ ಪುನರಾಹವೇ |
ಜಘ್ನುಸ್ತಂ ಪರಿವಾರ್ಯೈಕಂ ತೋಮರೈರಿವ ಕುಂಜರಮ್ ॥ 35 ॥
ಅನಂತರ ಆ ರಥರೆಲ್ಲರೂ ಪುನಃ ರಣರಂಗದಲ್ಲಿ ಒಂದುಗೂಡಿ, ಒಂಟಿಯಾದ ಅವನನ್ನು ಸುತ್ತುವರಿದು, ತೋಮರಗಳಿಂದ ಗಜವನ್ನು ಕೊಲ್ಲುವಂತೆ ಅವನನ್ನು ಕೊಂದರು.
ಸ ಕರ್ಮ ದುಷ್ಕರಂ ಕೃತ್ವಾ ಸಂಗ್ರಾಮೇ ಶತ್ರುತಾಪನಃ |
ಶತ್ರುಭಿರ್ನಿಹತಃ ಶೇತೇ ಪೃತನಾಯಾಂ ಯುಧಿಷ್ಠಿರ ॥ 36 ॥
ಎಲೈ ಯುಧಿಷ್ಠಿರನೇ, ಶತ್ರುತಾಪನನಾದ ಅವನು ಯುದ್ಧದಲ್ಲಿ ದುಷ್ಕರವಾದ ಕರ್ಮವನ್ನು ಮಾಡಿ, ಶತ್ರುಗಳಿಂದ ಕೊಲ್ಲಲ್ಪಟ್ಟು ಸೇನೆಯಲ್ಲಿ ಮಲಗಿದನು.
ದ್ವಿಷದ್ಭಿರ್ನಿಹತಂ ದೃಷ್ಟ್ವಾ ಪ್ರಿಯಂ ಪುತ್ರಮಕಂಪನಃ |
ಅಮರ್ಷಜನಿತಕ್ರೋಧ ಆಹವಾತ್ ಸಹಸಾಽಽಗತಃ ॥ 37 ॥
ತನ್ನ ಪ್ರೀತಿಯ ಪುತ್ರನು ಶತ್ರುಗಳಿಂದ ಹತನಾದುದನ್ನು ನೋಡಿ ಕೋಪದಿಂದ ಕೂಡಿದವನಾಗಿ ಅಕಂಪನನನು ಯುದ್ಧದಿಂದ ತಕ್ಷಣ ಅಲ್ಲಿಗೆ ಬಂದನು.
ಸ ರಾಜಾ ಪ್ರೇತಕೃತ್ಯಾನಿ ತಸ್ಯ ಕೃತ್ವಾ ಶುಚಾಽನ್ವಿತಃ |
ಶೋಚನ್ನಹನಿ ರಾತ್ರೌ ಚ ನ ಲೇಭೇ ಸುಖಮಾತ್ಮನಃ ॥ 38 ॥
ಆ ರಾಜನು ತನ್ನ ಪುತ್ರನಿಗೆ ಪ್ರೇತಕಾರ್ಯಗಳನ್ನು ಮಾಡಿ ಶೋಕದಿಂದ ಕೂಡಿದವನಾಗಿ, ಹಗಲೂ-ರಾತ್ರಿಯೂ ಶೋಕಪಡುತ್ತಾ ಸಮಾಧಾನವನ್ನೇ ಹೊಂದಲಿಲ್ಲ.
ತಸ್ಯ ಶೋಕಂ ವಿದಿತ್ವಾ ತು ಪುತ್ರವ್ಯಸನಸಂಭವಮ್ |
ಅಥಾಜಗಾಮ ದೇವರ್ಷಿರ್ನಾರದೋಽಸ್ಯ ಸಮೀಪತಃ ॥ 39 ॥
ಪುತ್ರವ್ಯಸನದಿಂದ ಅವನಿಗೆ ಉಂಟಾದ ಶೋಕವನ್ನು ತಿಳಿದು ಆಗ ದೇವರ್ಷಿಗಳಾದ ನಾರದರು ಅವನ ಸಮೀಪಕ್ಕೆ ಬಂದರು.
ಸ ತು ರಾಜಾ ಮಹಾಭಾಗೋ ದೃಷ್ಟ್ವಾ ದೇವರ್ಷಿಮಾಗತಮ್ |
ಪೂಜಯಿತ್ವಾ ಯಥಾನ್ಯಾಯಂ ಕಥಾಮಕಥಯತ್ ತದಾ ॥ 40 ॥
ಮಹಾನುಭಾವನಾದ ರಾಜನು ಅಲ್ಲಿಗೆ ಬಂದ ದೇವರ್ಷಿಗಳನ್ನು ನೋಡಿ ಶಾಸ್ತ್ರೋಕ್ತವಾಗಿ ಅವರನ್ನು ಪೂಜಿಸಿ ಆಗ ತನ್ನ ಕಥೆಯನ್ನು ಹೇಳಿದನು.
ತದಸ್ಮೈ ಸರ್ವಮಾಚಷ್ಟ ಯಥಾವೃತ್ತಂ ಯುಧಿಷ್ಠಿರ |
ಶತ್ರುಭಿರ್ನಿರ್ಜಿತಂ ಸಂಖ್ಯೇ ಪುತ್ರಸ್ಯ ಚ ವಧಂ ತಥಾ ॥ 41 ॥
ಎಲೈ ಯುಧಿಷ್ಠಿರನೇ, ಅವನು ಯುದ್ಧದಲ್ಲಿ ಶತ್ರುಗಳಿಂದ ಹತನಾದ ತನ್ನ ಪುತ್ರನ ವಿಷಯದಲ್ಲಿ ನಡೆದುದೆಲ್ಲವನ್ನೂ ಅವರಿಗೆ ಹೇಳಿದನು.
ಅಕಂಪನಃ
ಮಮ ಪುತ್ರೋ ಮಹಾವೀರ್ಯ ಇಂದ್ರವಿಷ್ಣುಸಮದ್ಯುತಿಃ |
ಶತ್ರುಭಿರ್ಬಹುಭಿಃ ಸಂಖ್ಯೇ ಪರಾಕ್ರಮ್ಯ ಹತೋ ಯುಧಿ ॥ 42 ॥
ಅಕಂಪನ ಇಂದ್ರ-ವಿಷ್ಣುಗಳಿಗೆ ಸಮಾನವಾದ ತೇಜಸ್ಸುಳ್ಳ ಮಹಾಪರಾಕ್ರಮ- ಶಾಲಿಯಾದ ನನ್ನ ಪುತ್ರನು ಅನೇಕ ಶತ್ರುಗಳಿಂದ ರಣರಂಗದಲ್ಲಿ ಆಕ್ರಮಿಸಲ್ಪಟ್ಟು ಯುದ್ಧದಲ್ಲಿ ಹತನಾದನು.
ಶೃಣೋಮಿ ಪ್ರಾಣಿನಾಂ ಚಾಪಿ ಮೃತ್ಯುಃ ಪ್ರಭವತೇ ಕಿಲ |
ಕ ಏಷ ಬಲವಾನ್ ಮೃತ್ಯುಃ ಕಿಂವೀರ್ಯಬಲಪೌರುಷಃ |
ಏತದಿಚ್ಛಾಮಿ ತತ್ತ್ವೇನ ಕಥಿತಂ ದ್ವಿಜಸತ್ತಮ ॥ 43 ॥
ಪ್ರಾಣಿಗಳನ್ನು ಮೃತ್ಯುವು ಆವರಿಸುತ್ತದೆ ಎಂಬ ಮಾತನ್ನು ನಾನು ಕೇಳಿದ್ದೇನಷ್ಟೆ? ಅಂತಹ ಪ್ರಬಲವಾದ ಈ ಮೃತ್ಯುವು ಯಾವುದು? ಅದರ ಪರಾಕ್ರಮ, ಬಲ, ಪೌರುಷಗಳು ಎಂತಹವು? ದ್ವಿಜಶ್ರೇಷ್ಠರೇ, ನಾನು ಇದನ್ನು ಯಥಾರ್ಥವಾಗಿ ತಿಳಿಯಲು ಇಚ್ಛಿಸುತ್ತೇನೆ.
ವ್ಯಾಸಃ
ತಸ್ಯ ತದ್ ವಚನಂ ಶ್ರುತ್ವಾ ನಾರದೋ ಭಗವಾನ್ ಋಷಿಃ |
ಆಖ್ಯಾನಮಿದಮಾಚಷ್ಟ ಪುತ್ರಶೋಕಾಪಹಂ ಮಹತ್ ॥ 44 ॥

ವ್ಯಾಸರು ಅವನ ಆ ಮಾತುಗಳನ್ನು ಕೇಳಿ ಪೂಜ್ಯರಾದ, ಋಷಿಗಳಾದ ನಾರದರು ಪುತ್ರಶೋಕವನ್ನು ಪರಿಹರಿಸಲು ಈ ದೊಡ್ಡ ಕಥೆಯನ್ನು ಹೇಳಿದರು.
ರಾಜನ್ ಶೃಣು ಮಮೇದಂ ತ್ವಮಾಖ್ಯಾನಂ ಬಹುವಿಸ್ತರಮ್ |
ಯಥಾವೃತ್ತಂ ಶ್ರುತಂ ಚೈವ ಮಯಾಽಪಿ ವಸುಧಾಧಿಪ ॥ 45 ॥
ರಾಜನೇ, ನಾನು ಕೇಳಿದಂತೆ ಹಿಂದೆ ನಡೆದಂತೆ ಇರುವ ಈ ಬಹುವಿಸ್ತರವಾದ ನಾನು ಹೇಳುವ ಆಖ್ಯಾನವನ್ನು ಕೇಳು.
ಪ್ರಜಾಃ ಸೃಷ್ಟ್ವಾ ಮಹಾರಾಜ ಪ್ರಜಾಸರ್ಗೇ ಪಿತಾಮಹಃ |
ಅಸಂಹೃತಂ ಮಹಾತೇಜಾ ದೃಷ್ಟ್ವಾ ಜಗದಿದಂ ಪ್ರಭುಃ ॥ 46 ॥
ತಸ್ಯ ಚಿಂತಾ ಸಮುತ್ಪನ್ನಾ ಸಂಹಾರಂ ಪ್ರತಿ ಪಾರ್ಥಿವ |
ಚಿಂತಯನ್ ನಾಸಸಾದೈವ ಸಂಹಾರಂ ವಸುಧಾಧಿಪ ॥ 47 ॥
ಎಲೈ ಮಹಾರಾಜನೇ, ಪ್ರಭುವಾದ ಪಿತಾಮಹನು ಪ್ರಜೆಗಳನ್ನು ಸೃಷ್ಟಿಸುವ ಕಾಲದಲ್ಲಿ ಪ್ರಜೆಗಳನ್ನು ಸೃಷ್ಟಿ ಮಾಡಿ, ವಿನಾಶವನ್ನು ಹೊಂದದಿದ್ದ ಈ ಪ್ರಪಂಚವನ್ನು ನೋಡಿ, ಎಲೈ ರಾಜನೇ, ಮಹಾತೇಜಸ್ವಿಯಾದ ಅವನಿಗೆ ಸಂಹಾರದ ವಿಷಯದಲ್ಲಿ ದೊಡ್ಡ ಚಿಂತೆಯುಂಟಾಯಿತು. ಎಲೈ ರಾಜನೇ, ಚಿಂತಿಸಿದರೂ ಅವನಿಗೆ ಸಂಹಾರದ ಉಪಾಯವು ತಿಳಿಯಲಿಲ್ಲ.
ತಸ್ಯ ರೋಷಾನ್ಮಹಾರಾಜ ಮುಖೇಭ್ಯೋಽಗ್ನಿರಜಾಯತ |
ತೇನ ಸರ್ವಾ ದಿಶೋ ವ್ಯಾಪ್ತಾಃ ಸರ್ವಾನ್ ದೇಶಾನ್ ದಿಧಕ್ಷತಾ ॥48॥
ಆಗ ಅವನಿಗೆ ಉಂಟಾದ ರೋಷದಿಂದ ಅವನ ಮುಖದಿಂದ ಅಗ್ನಿಯು ಉತ್ಪನ್ನವಾಯಿತು. ಎಲ್ಲ ದೇಶಗಳನ್ನೂ ದಹಿಸಲು ಬಯಸಿದ ಅಗ್ನಿಯಿಂದ ಎಲ್ಲ ದಿಕ್ಕುಗಳೂ ಆವರಿಸಲ್ಪಟ್ಟವು.
ತತೋ ಭುವಂ ದಿವಂ ಚೈವ ಸರ್ವಂ ಜ್ವಾಲಾಭಿರಾವೃತಮ್ |
ಚರಾಚರಂ ಜಗತ್ ಸರ್ವಂ ದದಾಹ ಭಗವಾನ್ ಪ್ರಭುಃ|
ಮಹತಾ ಕೋಪವೇಗೇನ ತ್ರಾಸಯನ್ನಿವ ವೀರ್ಯವಾನ್ ॥ 49 ॥
ಆಗ ಭೂಮಿ, ಸ್ವರ್ಗ ಎಲ್ಲವೂ ಜ್ವಾಲೆಗಳಿಂದ ಆವರಿಸಲ್ಪಟ್ಟವು. ಪೂಜ್ಯನೂ ಪ್ರಭುವೂ, ಪರಾಕ್ರಮಶಾಲಿಯೂ ಆದ ಅಗ್ನಿಯು ಮಹಾಕೋಪವೇಗದಿಂದ ಜಗತ್ತನ್ನು ಸಂಕಟಪಡಿಸುತ್ತಾ, ಚರಾಚರವಾದ ಸರ್ವ ಜಗತ್ತನ್ನೂ ದಹಿಸಿದನು.
ಕೋಪೋ ದಹತಿ ಭೂತಾನಿ ಜಂಗಮಾನಿ ಧ್ರುವಾಣಿ ಚ |
ತಥಾ ಹತಾನಿ ಭೂತಾನಿ ತ್ರಸಾನಿ ಸ್ಥಾವರಾಣಿ ಚ ॥ 50 ॥
ತತೋ ಹರೋ ಜಟೀ ಸ್ಥಾಣುರ್ನಿಶಾಚರಪತಿಃ ಶಿವಃ |
ಜಗಾಮ ಶರಣಂ ದೇವಂ ಬ್ರಹ್ಮಾಣಂ ಪರವೀರಹನ್ ॥ 51 ॥
ಕೋಪವು ಸ್ಥಾವರ-ಜಂಗಮ ಪ್ರಾಣಿಗಳನ್ನು ದಹಿಸುತ್ತದೆ. ಆ ರೀತಿಯಲ್ಲಿ ಸ್ಥಾವರ- ಜಂಗಮ ಪ್ರಾಣಿಗಳು ಹತವಾದವು. ಎಲೈ ಶತ್ರುಘಾತಕನೇ, ಆಗ ನಿಶಾಚರ ಪತಿಯಾದ, ಜಟಾಧಾರಿಯಾದ, ಸ್ಥಾಣುವೆನಿಸಿಕೊಂಡ ಶಿವನು ಬ್ರಹ್ಮದೇವರಿಗೆ ಶರಣಾಗತನಾದನು.
ತಸ್ಮಿನ್ನುಪಸ್ಥಿತೇ ಸ್ಥಾಣೌ ಪ್ರಜಾನಾಂ ಹಿತಕಾಮ್ಯಯಾ |
ಅಬ್ರವೀತ್ ಪರಮೋ ದೇವೋ ಜ್ವಲನ್ನಿವ ಮಹಾದ್ಯುತಿಃ ॥ 52 ॥
ಪ್ರಜೆಗಳ ಹಿತವನ್ನು ಬಯಸಿ ರುದ್ರನು ಸಮೀಪಕ್ಕೆ ಬಂದಿರಲು ಉತ್ತಮ ದೇವತೆಯಾದ ಬ್ರಹ್ಮದೇವರು ಮಹಾಕಾಂತಿಯಿಂದ ಬೆಳಗುವವರಾಗಿ ಅವನನ್ನು ಕುರಿತು ಹೇಳಿದರು.
ಬ್ರಹ್ಮಾ
ಕಿಂ ಕುರ್ಮಿ ಕಾಮಂ ಕಾಮಾರೇ ಕಾಮಾಜ್ಜಾತೋಽಸಿ ಪುತ್ರಕ |
ಕರಿಷ್ಯಾಮಿ ಪ್ರಿಯಂ ಸರ್ವಂ ಬ್ರೂಹಿ ಸ್ಥಾಣೋ ಯದಿಚ್ಛಸಿ ॥ 53 ॥
ಬ್ರಹ್ಮಾ ಎಲೈ ಕಾಮಶತ್ರುವೇ, ಪುತ್ರನೇ, ನಿನ್ನ ಯಾವ ಆಸೆಯನ್ನು ಪೂರ್ಣ ಮಾಡಬೇಕು? ನೀನು ಕಾಮದಿಂದ ಜನಿಸಿದ್ದೀಯೆ. ಎಲೈ ಸ್ಥಾಣುವೇ, ನೀನು ಏನು ಬಯಸುವಿ ಎಂದು ಹೇಳು. ಅವೆಲ್ಲವನ್ನೂ ನಾನು ಮಾಡುವೆನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಪಂಚಾಶತ್ತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತನೆಯ ಅಧ್ಯಾಯ
ಬ್ರಹ್ಮ-ರುದ್ರರ ಸಂವಾದ. ಮೃತ್ಯುದೇವತೆಯ ಉತ್ಪತ್ತಿ.
ಸ್ಥಾಣುಃ
ಪ್ರಜಾಸರ್ಗನಿಮಿತ್ತತ್ವಾತ್ ಕೃತೋ ಯತ್ನಸ್ತ್ವಯಾ ಪ್ರಭೋ |
ತ್ವಯಾ ವಿಸೃಷ್ಟಾ ವೃದ್ಧಾಸ್ತು ಭೂತಗ್ರಾಮಾಃ ಪೃಥಗ್ವಿಧಾಃ ॥ 1 ॥
ತಾಸ್ತಥೈವೇಹ ಪುನಃ ಕ್ರೋಧಾತ್ ಪ್ರಜಾ ನಶ್ಯಂತಿ ಸರ್ವಶಃ |
ತಾ ದೃಷ್ಟ್ವಾ ಮಮ ಕಾರುಣ್ಯಂ ಪ್ರಸೀದ ಭಗವನ್ ಪ್ರಭೋ ॥ 2 ॥
ಸ್ಥಾಣು ಎಲೈ ಪ್ರಭುವೇ, ಪ್ರಜೆಗಳನ್ನು ಸೃಷ್ಟಿಸುವ ಉದ್ದೇಶದಿಂದ ನೀನು ಪ್ರಯತ್ನವನ್ನು ಮಾಡಿದ್ದೀಯೆ. ನೀನು ಸೃಷ್ಟಿಸಿದ ವಿಧವಿಧವಾದ ಭೂತಗ್ರಾಮಗಳು (ಪ್ರಜಾ ಸಮೂಹಗಳು) ಅಭಿವೃದ್ಧಿಯನ್ನು ಹೊಂದಿವೆ. ಆ ಪ್ರಜೆಗಳು ನಿನ್ನ ಕೋಪದಿಂದ ಹಾಗೆಯೇ

ಎಲ್ಲ ಕಡೆಗಳಲ್ಲಿಯೂ ನಾಶವನ್ನು ಹೊಂದುತಿತದ್ವಾರೆ. ಅವರನ್ನು ನೋಡಿ ನನಗೆ ಕರುಣೆಯುಂಟಾಗಿದೆ. ಎಲೈ ಪ್ರಭುವೇ, ಪೂಜ್ಯನೇ, ನೀನು ಪ್ರಸನ್ನನಾಗು.
ಬ್ರಹ್ಮಾ
ನ ಕ್ರುದ್ಧ್ಯೇ ನ ಚ ಮೇ ಕಾಮ ಏತದೇವಂ ಭವೇದಿತಿ |
ಪೃಥಿವ್ಯಾ ಹಿತಕಾಮಾತ್ ತು ತತೋ ಮಾಂ ಮೃತ್ಯುರಾವಿಶತ್ ॥ 3 ॥
ಬ್ರಹ್ಮಾ ನಾನು ಸಿಟ್ಟು ಮಾಡುವುದಿಲ್ಲ. ಹೀಗೆ ಆಗಬೇಕೆಂದು ನನ್ನ ಅಭಿಪ್ರಾಯವೂ ಇಲ್ಲ. ಪೃಥಿವಿಗೆ ಹಿತ ಮಾಡಲು ಬಯಸಿ ಮೃತ್ಯುವು ನನ್ನನ್ನು ಸಮೀಪಿಸಿತು.
ಇಯಂ ಸನ್ನಾ ಸದಾ ದೇವೀ ಭಾರಾರ್ತಾ ಮಾಮಚೂಚುದತ್ |
ಸಂಹಾರಾರ್ಥಂ ಮಹಾದೇವ ಭಾರೇಣಾಭಿಹತಾ ಸತೀ ॥ 4 ॥
ಎಲೈ ಮಹಾದೇವನೇ, ಪ್ರಜೆಗಳ ಭಾರದಿಂದ ಪೀಡಿತಳಾದ ಈ ಭೂದೇವಿಯು ಭಾರದಿಂದ ಪೀಡಿತಳಾಗಿ ಸಂಹಾರದ ಸಲುವಾಗಿ ನನ್ನನ್ನು ಪ್ರೇರಿಸಿದಳು.
ತತೋ ವೈ ನಾಧಿಗಚ್ಛಾಮಿ ಬುದ್ಧ್ಯಾ ಬಹು ವಿಚಾರಯನ್ |
ಸಂಹಾರಮಪ್ರಮೇಯಾತ್ಮನ್ ತತೋ ಮಾಂ ಮನ್ಯುರಾವಿಶತ್ ॥ 5 ॥
ಅಪ್ರಮೇಯ ಸ್ವರೂಪನೇ, ನಾನು ಎಷ್ಟು ವಿಚಾರ ಮಾಡಿದರೂ ಅವಳ ದುಃಖವನ್ನು ಪರಿಹಾರ ಮಾಡುವ ಉಪಾಯವು ನನ್ನ ಬುದ್ಧಿಗೆ ಹೊಳೆಯಲಿಲ್ಲ. ಆಗ ನನಗೆ ಕೋಪವುಂಟಾಯಿತು.
ಸ್ಥಾಣುಃ
ಸಂಹಾರಾರ್ಥಂ ಪ್ರಸೀದಸ್ವ ಮಾ ಕ್ರುಧೋ ವಿಬುಧಾಧಿಪ |
ಮಾ ಪ್ರಜಾಃ ಸ್ಥಾವರಾಶ್ಚೈವ ಜಂಗಮಾಶ್ಚ ವ್ಯನೀನಶಃ ॥ 6 ॥
ಸ್ಥಾಣು ಎಲೈ ದೇವಶ್ರೇಷ್ಠನೇ, ಸಂಹಾರದ ವಿಷಯದಲ್ಲಿ ಪ್ರಸನ್ನನಾಗು. ಕ್ರೋಧವನ್ನು ಮಾಡಬೇಡ. ಸ್ಥಾವರ-ಜಂಗಮ ಪ್ರಾಣಿಗಳನ್ನು ಮತ್ತು ಪ್ರಜೆಗಳನ್ನು ವಿನಾಶಗೊಳಿಸಬೇಡ.
ತವ ಪ್ರಸಾದಾದ್ ಭಗವನ್ನಿದಂ ಜಾತಂ ತ್ರಿಧಾ ಜಗತ್ |
ಅನಾಗತಮತೀತಂ ಚ ಯಚ್ಚ ಸಂಪ್ರತಿ ವರ್ತತೇ ॥ 7 ॥
ಪೂಜ್ಯನೇ, ನಿನ್ನ ಅನುಗ್ರಹದಿಂದ ಭೂತ-ವರ್ತಮಾನ-ಭವಿಷ್ಯತ್ ಎಂಬ ಮೂರು ವಿಧವಾದ ಈ ಜಗತ್ತು ಜನಿಸುತ್ತದೆ.
ಭಗವನ್ ಕ್ರೋಧಸಂದೀಪ್ತಃ ಕ್ರೋಧಾದಗ್ನಿಃ ಸಮುತ್ಥಿತಃ |
ಸ ದಹತ್ಯಶ್ಮಕೂಟಾನಿ ದ್ರುಮಾಂಶ್ಚ ಸರಿತಸ್ತಥಾ ॥ 8 ॥
ಪಲ್ವಲಾನಿ ಚ ಸರ್ವಾಣಿ ಸರ್ವಂ ಚೈವ ತೃಣೋಪಲಮ್ |
ಸ್ಥಾವರಂ ಜಂಗಮಂ ಚೈವ ನಿಃಶೇಷಂ ಕುರುತೇ ಜಗತ್ ॥ 9 ॥
ಪೂಜ್ಯನೇ, ಕ್ರೋಧವಿಶಿಷ್ಟನಾದ ನಿನ್ನ ಕ್ರೋಧದಿಂದ ಅಗ್ನಿಯು ಜನಿಸಿತು. ಅದು ಕಲ್ಲುಬಂಡೆಯನ್ನೂ, ವೃಕ್ಷಗಳನ್ನೂ, ಪ್ರಜೆಗಳನ್ನೂ, ಜಾಗು ಪ್ರದೇಶಗಳನ್ನೂ, ಎಲ್ಲಾ ತೃಣಗಳನ್ನೂ ಮತ್ತು ಎಲ್ಲಾ ಸ್ಥಾವರ-ಜಂಗಮಗಳನ್ನೂ ದಹಿಸಿ ಜಗತ್ತನ್ನು ನಿಶ್ಶೇಷಗೊಳಿಸುತ್ತಿದೆ.
ತದೇತದ್ ಭಸ್ಮಸಾದ್ಭೂತಂ ಸರ್ವಂ ಜಗದನಾವಿಲಮ್ |
ಪ್ರಸೀದ ಭಗವನ್ ದೇವ ರೋಷೋ ನ ಸ್ಯಾದ್ ವರೋ ಮಮ ॥10॥
ಯಾವ ಉಪದ್ರವಕ್ಕೂ ಒಳಗಾಗದಿದ್ದ ಈ ಸರ್ವಜಗತ್ತು ಭಸ್ಮವಾಗುತ್ತಿದೆ. ಪೂಜ್ಯನಾದ ದೇವನೇ ಪ್ರಸನ್ನನಾಗು. ನಿನಗೆ ರೋಷವು ಉಂಟಾಗದಿರಲಿ. ಇದು ನಾನು ಕೇಳುವ ವರ.
ಸರ್ವೇ ವಿನಷ್ಟಾಸ್ತಪ್ಯಂತೇ ಸರ್ವೇ ದೇವಾಃ ಕಥಂಚನ |
ತಸ್ಮಾನ್ನಿವರ್ತತಾಂ ತೇಜಸ್ತ್ವಯಿ ವೈತತ್ ಪ್ರಲೀಯತಾಮ್ ॥ 11 ॥
ವಿನಷ್ಟರಾದ ಎಲ್ಲ ದೇವತೆಗಳು ಯಾವುದಾದರೂ ರೀತಿಯಲ್ಲಿ ಸಂತಾಪ ಪಡುತ್ತಾರೆ. ಆದ್ದರಿಂದ ನೀನು ಸೃಷ್ಟಿಸಿದ ಈ ತೇಜಸ್ಸು ನಿನ್ನಲ್ಲಿಯೇ ಲಯವನ್ನು ಹೊಂದಲಿ.
ಉಪಾಯಮನ್ಯಂ ಸಂಪಶ್ಯ ಪ್ರಜಾನಾಂ ಹಿತಕಾಮ್ಯಯಾ |
ಯಥೇಮೇ ಪ್ರಾಣಿನಃ ಸರ್ವೇ ನಿವರ್ತೇರಂಸ್ತಥಾ ಕುರು ॥ 12 ॥
ಪ್ರಜೆಗಳ ಹಿತದೃಷ್ಟಿಯಿಂದ ಬೇರೆ ಯಾವುದಾದರೂ ಉಪಾಯವನ್ನು ನೋಡು. ಎಲ್ಲ ಪ್ರಾಣಿಗಳೂ ಹಿಂದಿರುಗಿ ಬರುವಂತೆ ಮಾಡು.
ಅಭಾವಂ ನೈವ ಗಚ್ಛೇಯುರುತ್ಪನ್ನಪ್ರಜನಾಃ ಪ್ರಜಾಃ |
ಭವತಾ ಹಿ ನಿಯುಕ್ತೋಽಹಂ ಪ್ರಜಾನಾಂ ಪಾಲನೇ ಪ್ರಭೋ |
ದಯಾ ತೇನ ಮಮೋತ್ಪನ್ನಾ ಪ್ರಜಾಸು ವಿಬುಧೇಶ್ವರ ॥ 13 ॥
ಉತ್ಪನ್ನರಾದ ಪ್ರಜೆಗಳು ವಿನಾಶವನ್ನು ಹೊಂದಬಾರದು. ಪ್ರಭುವೇ, ನೀನಾದರೂ ನನ್ನನ್ನು ಪ್ರಜೆಗಳ ಪಾಲನೆಯಲ್ಲಿ ಯೋಜಿಸಿದ್ದೀಯೆ. ವಿಬುಧೇಶ್ವರನೇ, ಆದ್ದರಿಂದ ನನಗೆ ಪ್ರಜೆಗಳಲ್ಲಿ ದಯೆಯುಂಟಾಗಿದೆ.
ಮಾ ವಿನಶ್ಯೇದ್ ಜಗನ್ನಾಥ ಜಗತ್ ಸ್ಥಾವರಜಂಗಮಮ್ |
ಪ್ರಪದ್ಯೇ ಹಿ ಗುರುಂ ದೇವಂ ತಸ್ಮಾದೇತದ್ ಬ್ರವೀಮ್ಯಹಮ್ ॥ 14 ॥
ಜಗನ್ನಾಥನೇ, ಸ್ಥಾವರ-ಜಂಗಮವಾದ ಈ ಜಗತ್ತು ವಿನಾಶ ಹೊಂದದಿರಲಿ. ಗುರುವೂ, ದೇವನೂ ಆದ ನಿನಗೆ ನಾನು ಶರಣಾಗತನಾಗಿದ್ದೇನೆ. ಆದ್ದರಿಂದ ಈ ಮಾತನ್ನು ಆಡುತ್ತಿದ್ದೇನೆ.
ನಾರದಃ

ಶ್ರುತ್ವಾ ತು ವಚನಂ ಸ್ಥಾಣೋರ್ನಿತ್ಯಂ ನಿಹತಪಾಪ್ಮನಃ |
ತೇಜಃ ಸಂವೇಷ್ಟಯಾಮಾಸ ಪುನರೇವಾಂತರಾತ್ಮನಿ ॥ 15 ॥
ತತೋಽಗ್ನಿಮುಪಸಂಹೃತ್ಯ ಭಗವಾಲ್ಲೋಕಸತ್ಕೃತಃ |
ಪ್ರವೃತ್ತಿಂ ಚ ನಿವೃತ್ತಿಂ ಚ ಕಲ್ಪಯಾಮಾಸ ವೈ ಪ್ರಭುಃ ॥ 16 ॥
ನಾರದರು ನಿತ್ಯವೂ ಪಾಪದೂರನಾದ ರುದ್ರನ ಮಾತುಗಳನ್ನು ಕೇಳಿ ಬ್ರಹ್ಮನು ಆ ತೇಜಸ್ಸನ್ನು ಪುನಃ ತನ್ನ ದೇಹದೊಳಗೆ ಹಿಂತೆಗೆದುಕೊಂಡನು. ಅಗ್ನಿಯನ್ನು ಉಪಶಮಗೊಳಿಸಿ, ಲೋಕಸತ್ಕೃತನಾದ ಪೂಜ್ಯನಾದ, ಪ್ರಭುವಾದ ಬ್ರಹ್ಮನು ಪ್ರಜೆಗಳ ಪ್ರವೃತ್ತಿ ಮತ್ತು ನಿವೃತ್ತಿಗಳನ್ನು ಕಲ್ಪಿಸಿದನು.
ಉಪಸಂಹೃತವಾನ್ ಬ್ರಹ್ಮಾ ತಮಗ್ನಿಂ ರೋಷಜಂ ತಥಾ |
ಪ್ರಾದುರ್ಬಭೂವ ವಿಶ್ವೇಭ್ಯಃ ಖೇಭ್ಯೋ ನಾರೀ ಮಹಾಮನಾಃ ॥ 17 ॥
ಬ್ರಹ್ಮನು ತನ್ನ ರೋಷದಿಂದ ಉಂಟಾದ ಆ ಅಗ್ನಿಯನ್ನು ಆ ರೀತಿಯಲ್ಲಿ ಶಮನಗೊಳಿಸಿದನು. ಆಗ ಅವನ ಎಲ್ಲ ಇಂದ್ರಿಯಗೋಳಕಗಳಿಂದ ಶ್ರೇಷ್ಠವಾದ ಮನಸ್ಸನ್ನು ಹೊಂದಿದ ಒಬ್ಬ ನಾರಿಯು ಪ್ರಾದುರ್ಭೂತಳಾದಳು.
ಕೃಷ್ಣರಕ್ತಾಂಬರಧರಾ ರಕ್ತಜಿಹ್ವಾಸ್ಯಲೋಚನಾ |
ಕುಂಡಲಾಭ್ಯಾಂ ಚ ರಾಜೇಂದ್ರ ತಪ್ತಾಭ್ಯಾಂ ಸಮಲಂಕೃತಾ ॥ 18 ॥
ಎಲೈ ರಾಜೇಂದ್ರನೇ, ಕಪ್ಪು-ಕೆಂಪು ಬಣ್ಣದ ವಸ್ತ್ರವನ್ನು ಧರಿಸಿ, ಕೆಂಪಾದ ನಾಲಿಗೆ ಮುಖ ಮತ್ತು ಕಣ್ಣುಗಳಿಂದ ಯುಕ್ತಳಾಗಿ ತಪ್ತಕುಂಡಲಗಳಿಂದಲೂ, ಅವಳು ಅಲಂಕೃತಳಾಗಿದ್ದಳು.
ಸಾ ವಿನಿರ್ಗತ್ಯ ವೈ ಖೇಭ್ಯೋ ದಕ್ಷಿಣಾಂ ದಿಶಮಾಶ್ರಯತ್ |
ಸ್ಮಯಮಾನೇವ ಚಾವೈಕ್ಷದ್ ದೇವೌ ವಿಶ್ವೇಶ್ವರಾವುಭೌ ॥ 19 ॥
ಅವಳು ಬ್ರಹ್ಮದೇವರ ದೇಹದ ವಿವರಗಳಿಂದ ಹೊರಬಂದು ದಕ್ಷಿಣ ದಿಕ್ಕನ್ನು ಆಶ್ರಯಿಸಿದಳು. ನಗುತ್ತಾ ವಿಶ್ವೇಶ್ವರರಾದ ಆ ಇಬ್ಬರು ದೇವತೆಗಳನ್ನು ನೋಡಿದಳು.
ತಾಮಾಹ್ವಯತ್ ತದಾಽಚಿಂತ್ಯೋ ಲೋಕಾದಿನಿಧನೇಶ್ವರಃ |
ತಾಂ ತು ತತ್ರ ತದಾ ದೇವೀಂ ಬ್ರಹ್ಮಾ ಲೋಕಪಿತಾಮಹಃ ॥ 20 ॥
ಲೋಕದ ಸ್ಥಿತಿ-ಸಂಹಾರಗಳಿಗೆ ಕಾರಣನಾದ, ಸರ್ವಲೋಕ ಪಿತಾಮಹನಾದ, ಅಚಿಂತ್ಯ ಶಕ್ತಿಯುಳ್ಳ ಬ್ರಹ್ಮನು ಆಗ ಆ ದೇವಿಯನ್ನು ಆಹ್ವಾನಿಸಿದನು.
ಉಕ್ತವಾನ್ ಮಧುರಂ ವಾಕ್ಯಂ ಸಾಂತ್ವಯಿತ್ವಾ ಪುನಃಪುನಃ |
ಮೃತ್ಯೋ ಇತಿ ಮಹೀಪಾಲ ಜಹಿ ಚೇಮಾಃ ಪ್ರಜಾ ಇತಿ ॥ 21 ॥
ಎಲೈ ರಾಜನೇ, ಅವಳನ್ನು ಮೃತ್ಯು ಎಂದು ಸಂಬೋಧಿಸಿ ಪುನಃ ಪುನಃ ಸಮಾಧಾನ ಪಡಿಸಿ, ವಿವಿಧವಾದ ಮಾತುಗಳನ್ನು ಆಡಿ ಈ ಪ್ರಜೆಗಳನ್ನು ಸಂಹಾರ ಮಾಡು ಎಂದು ಹೇಳಿದನು.
ಪ್ರಾದುರ್ಭೂತಾ ಮಯಾ ರೋಷಾತ್ ತ್ವಂ ಹಿ ಸಂಹಾರಬುದ್ಧಿನಾ |
ತಸ್ಮಾತ್ ಸಂಹರ ಸರ್ವಾಸ್ತ್ವಂ ಪ್ರಜಾಃ ಸಜಡಪಂಡಿತಾಃ ॥ 22 ॥
ಸಂಹಾರವನ್ನು ಚಿಂತಿಸಿದ ನನ್ನ ರೋಷದಿಂದ ನೀನು ಜನಿಸಿದ್ದೀಯೆ. ಆದ್ದರಿಂದ ಎಲ್ಲ ಪಾಮರ ಪಂಡಿತಾದಿ ಪ್ರಜೆಗಳನ್ನು ನೀನು ಸಂಹರಿಸು.
ಅವಿಶೇಷೇಣ ಚೈವ ತ್ವಂ ಪ್ರಜಾಃ ಸಂಹರ ಭಾಮಿನಿ |
ಮಮ ತ್ವಂ ಹಿ ನಿಯೋಗೇನ ತತ್ರ ಶ್ರೇಯೋ ಹ್ಯವಾಪ್ಸ್ಯಸಿ ॥ 23 ॥
ಎಲೌ ಭಾಮಿನಿಯೇ, ನೀನು ಎಲ್ಲ ಪ್ರಜೆಗಳನ್ನೂ ನನ್ನ ಆಜ್ಞೆಯಿಂದ ಸಮಾನವಾಗಿ ಸಂಹರಿಸು. ಆದ್ದರಿಂದ ನಿನಗೆ ಶ್ರೇಯಸ್ಸು ಉಂಟಾಗುವುದು (ಎಂದು ಹೇಳಿದನು).
ನಾರದಃ
ಏವಮುಕ್ತಾ ತು ಸಾ ತೇನ ಮೃತ್ಯುಃ ಕಮಲಲೋಚನಾ |
ದಧ್ಯೌ ಚಾತ್ಯರ್ಥಮಬಲಾ ಪ್ರಾಪತಂಶ್ಚಾಶ್ರುಬಿಂದವಃ ॥ 24 ॥
ಬ್ರಹ್ಮದೇವರಿಂದ ಹೀಗೆ ಹೇಳಲ್ಪಟ್ಟ ಕಮಲಲೋಚನೆಯೂ, ಅಬಲೆಯೂ ಆದ ಆ ಮೃತ್ಯುವು ಬಹಳವಾಗಿ ಧ್ಯಾನ ಮಾಡಿದಳು. ಆಗ ಅವಳ ಕಣ್ಣುಗಳಿಂದ ಅಶ್ರುಬಿಂದುಗಳು ಹೊರಗೆ ಬಂದವು.
ಪಾಣಿಭ್ಯಾಂ ಪ್ರತಿಜಗ್ರಾಹ ತಾನ್ಯಶ್ರೂಣಿ ಪಿತಾಮಹಃ |
ಸರ್ವಭೂತಹಿತಾರ್ಥಾಯ ತಾಂ ಚಾಪ್ಯನ್ವನಯದ್ ಭೃಶಮ್ ॥ 25 ॥
ಪಿತಾಮಹರಾದ ಬ್ರಹ್ಮದೇವರು ಸರ್ವಪ್ರಾಣಿಗಳ ಹಿತಕ್ಕೋಸ್ಕರವಾಗಿ ಆ ಅಶ್ರುಬಿಂದುಗಳನ್ನು ತಮ್ಮ ಕೈಗಳಿಂದ ಹಿಡಿದರು ಮತ್ತು ಅವಳನ್ನು ತೀವ್ರವಾಗಿ ಸಮಾಧಾನಪಡಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಪಂಚಾಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂದನೆಯ ಅಧ್ಯಾಯ

ಮೃತ್ಯು-ಬ್ರಹ್ಮರ ಸಂವಾದವನ್ನು ಕೇಳಿಸಿ ನಾರದರಿಂದ ಅಕಂಪನನ ಶೋಕ ಪರಿಹಾರ. ವ್ಯಾಸರಿಂದ ಯುಧಿಷ್ಠಿರನ ಶೋಕಪರಿಹಾರ.
ನಾರದಃ
ವಿನೀಯ ದುಃಖಮಬಲಾ ಆತ್ಮನ್ಯೇವ ಪ್ರಜಾಪತಿಮ್ ।
ಉವಾಚ ಪ್ರಾಂಜಲಿರ್ಭೂತ್ವಾ ಲತೇವಾನಿಲಕಂಪಿತಾ ॥ 1 ॥
ನಾರದರು ಆ ಮೃತ್ಯುವನಿತೆಯು ತನ್ನ ದುಃಖವನ್ನು ತನ್ನಲ್ಲಿಯೇ ನುಂಗಿಕೊಂಡು ಬ್ರಹ್ಮದೇವರನ್ನು ಕುರಿತು ವಾಯುವಿನಿಂದ ಕಂಪಿತವಾದ ಲತೆಯಂತೆ ನಡುಗುತ್ತಾ ಕೈಗಳನ್ನು ಮುಗಿದು ಮಾತನಾಡಿದಳು.
ತ್ವಯಾ ಸೃಷ್ಟಾ ಕಥಂ ನಾರೀ ಮಾದೃಶೀ ವದತಾಂ ವರ ।
ಕ್ರೂರಂ ಕರ್ಮಾಹಿತಂ ಕುರ್ಯಾಂ ಮೂಢೇವ ಕಿಮು ಜಾನತೀ ॥ 2 ॥
ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ, ನಿನ್ನಿಂದ ಜನಿಸಿದ ನನ್ನಂತಹ ನಾರಿಯು ಎಲ್ಲವನ್ನೂ ತಿಳಿದರೂ ಏನೂ ತಿಳಿಯದ ಮೂಢಳಂತೆ ಹೇಗೆ ಕ್ರೂರವೂ ಮತ್ತು ಅಹಿತವೂ ಆದ ಕರ್ಮವನ್ನು ಮಾಡಿಯೇನು?
ಬಿಭೇಮ್ಯಹಮಧರ್ಮಾಯ ಪ್ರಸೀದ ಭಗವನ್ ಪ್ರಭೋ ।
ಪೂಜ್ಯನಾದ ಪ್ರಭುವೇ, ನಾನು ಅಧರ್ಮಕ್ಕೆ ಹೆದರುತ್ತೇನೆ. ಆದ್ದರಿಂದ ನೀನು ಪ್ರಸನ್ನನಾಗು.
ಪ್ರಿಯಾನ್ ಪುತ್ರಾನ್ ವಯಸ್ಯಾಂಶ್ಚ ಭ್ರಾತೄನ್ ಮಾತೄಃ ಪಿತೄನ್ ಪತೀನ್॥
ಅನುಧ್ಯಾಸ್ಯಂತಿ ಯೇ ದೇವ ಮೃತಾಂಸ್ತೇಷಾಂ ಬಿಭೇಮ್ಯಹಮ್ ।
ಕೃಪಣಾಶ್ರುಪರಿಕ್ಲೇದಾತ್ ಪತೇಯಂ ಶಾಶ್ವತೀಃ ಸಮಾಃ ॥ 3 ॥
ಮೃತರಾದ, ಪ್ರಿಯರಾದ ಪುತ್ರರನ್ನೂ, ಸ್ನೇಹಿತರನ್ನೂ, ಸಹೋದರರರನ್ನೂ, ತಾಯಿಯರನ್ನೂ, ತಂದೆಗಳನ್ನೂ, ಪತಿಗಳನ್ನೂ ಉಳಿದವರು ಅನಂತರ ಯಾವಾಗಲೂ ಧ್ಯಾನ ಮಾಡುತ್ತಾರೆ. ಎಲೈ ದೇವನೇ, ಅಂತಹವರಿಗೆ ನಾನು ಹೆದರುತ್ತೇನೆ. ದುಃಖಗೊಂಡ ಅವರ ಅಶ್ರುಪಾತದಿಂದ ನಾನು ಬಹುಕಾಲದವರೆಗೆ ನರಕದಲ್ಲಿ ಬಿದ್ದೇನು!
ತೇಭ್ಯೋಽತಿಬಲವದ್ ಭೀತಾ ಶರಣಂ ತ್ವಾಽಹಮಾಗತಾ ।
ಯಮಸ್ಯ ಸದನಂ ದೇವ ನ ಗಚ್ಛೇಯಂ ಸುರೋತ್ತಮ ॥ 4 ॥
ಅವರಿಗೆ ಬಹಳವಾಗಿ ಹೆದರಿ ನಾನು ನಿನಗೆ ಶರಣಾಗತಳಾಗಿದ್ದೇನೆ. ಎಲೈ ಸುರೋತ್ತಮನೇ, ದೇವನೇ, ನಾನು ಯಮನ ಮನೆಗೆ ಹೋಗಲಾರೆ.
ಪ್ರಸಾದಯೇ ತ್ವಾ ವರದ ಮೂರ್ಧ್ನಾ ದೇವವರ ಪ್ರಭೋ ।
ಏಕಮಿಚ್ಛಾಮಿ ಮೇ ಕಾಮಂ ತ್ವತ್ತೋ ಲೋಕಪಿತಾಮಹ ॥ 5 ॥
ವರಪ್ರದನೇ, ದೇವಶ್ರೇಷ್ಠನೇ, ಪ್ರಭುವೇ, ನಾನು ನಿನಗೆ ತಲೆಯನ್ನು ಬಗ್ಗಿಸಿ ನಮಸ್ಕರಿಸಿ, ಪ್ರಸನ್ನನಾಗು ಎಂದು ಬೇಡುತ್ತಿದ್ದೇನೆ. ಎಲೈ ಲೋಕಪಿತಾಮಹನೇ, ನಿನ್ನಿಂದ ನಾನು ಒಂದು ಆಸೆಯನ್ನು ಬಯಸುತೆತೇನೆ.
ಇಚ್ಛೇಯಂ ತ್ವತ್ಪ್ರಸಾದಾದ್ ವೈ ತಪಸ್ತಪ್ತುಂ ಪ್ರಜೇಶ್ವರ ।
ಪ್ರದಿಶೇಮಂ ವರಂ ದೇವ ತ್ವಂ ಮಹ್ಯಂ ಭಗವನ್ ಪ್ರಭೋ ॥ 6 ॥
ಎಲೈ ಪ್ರಜೇಶ್ವರನೇ, ನಿನ್ನ ಅನುಗ್ರಹದಿಂದ ನಾನು ತಪಸ್ಸನ್ನು ಮಾಡಲು ಇಚ್ಛಿಸುತ್ತೇನೆ. ಎಲೈ ದೇವನೇ, ಪೂಜ್ಯನೇ, ಪ್ರಭುವೇ, ನೀನು ನನಗೆ ಈ ವರವನ್ನು ಕೊಡು.
ತ್ವಯೋಕ್ತಾಽಹಂ ಗಮಿಷ್ಯಾಮಿ ಧೇನುಕಾಶ್ರಮಮುತ್ತಮಮ್ ।
ತತ್ರ ತಪ್ಸ್ಯೇ ತಪಸ್ತೀವ್ರಂ ತವೈವಾರಾಧನೇ ರತಾ ॥ 7 ॥
ನಿನ್ನ ಅನುಮತಿಯನ್ನು ಪಡೆದು ನಾನು ಶ್ರೇಷ್ಠವಾದ ಧೇನುಕಾಶ್ರಮಕ್ಕೆ ಹೋಗುವೆನು. ಅಲ್ಲಿ ನಿನ್ನ ಆರಾಧನೆಯಲ್ಲಿಯೇ ನಿರತಳಾಗಿ ತೀವ್ರವಾದ ತಪಸ್ಸನ್ನು ಆಚರಿಸುವೆನು.
ನಹಿ ಶಕ್ಷ್ಯಾಮಿ ದೇವೇಶ ಪ್ರಾಣಾನ್ ಪ್ರಾಣಭೃತಾಂ ಪ್ರಿಯಾನ್ ।
ಹರ್ತುಂ ವಿಲಪಮಾನಾನಾಮಧರ್ಮಾದಭಿರಕ್ಷ ಮಾಮ್ ॥ 8 ॥
ಎಲೈ ದೇವೇಶನೇ, ದೇಹಿಗಳು ಅಳುತ್ತಿರುವಾಗ ಅವರಿಗೆ ಪ್ರಿಯವಾದ ಪ್ರಾಣಗಳನ್ನು ಅಪಹರಿಸಲು ನನಗೆ ಸಾಧ್ಯವಿಲ್ಲ. ಅಧರ್ಮದಿಂದ ನನ್ನನ್ನು ರಕ್ಷಿಸು.
ಬ್ರಹ್ಮಾ
ಮೃತ್ಯೋ ಸಂಕಲ್ಪಿತಾ ಮೇ ತ್ವಂ ಪ್ರಜಾಸಂಹರಣೇ ತು ವೈ ।
ಗಚ್ಛ ಸಂಹರ ಸರ್ವಾಸ್ತ್ವಂ ಪ್ರಜಾ ಮಾ ತೇ ವಿಚಾರಣಾ ॥ 9 ॥
ಎಲೌ ಮೃತ್ಯುವೇ, ನಾನು ನಿನ್ನನ್ನು ಪ್ರಜಾಸಂಹಾರ ಕಾರ್ಯಕ್ಕಾಗಿ ಸಂಕಲ್ಪಿಸಿದ್ದೇನೆ. ನೀನು ಹೋಗಿ ಎಲ್ಲ ಪ್ರಜೆಗಳನ್ನೂ ಸಂಹರಿಸು. ವಿಚಾರ ಮಾಡಬೇಡ.
ಭವಿತಾ ತ್ವೇತದೇವಂ ಹಿ ನೈತಜ್ಜಾತ್ವನ್ಯಥಾ ಭವೇತ್ ।
ಭವ ತ್ವನಿಂದಿತಾ ಲೋಕೇ ಕುರುಷ್ವ ವಚನಂ ಮಮ ॥ 10 ॥
ಅದು ಹೀಗೆಯೇ ಆಗುವುದೇ ಹೊರತು ಬೇರೆ ರೀತಿ ಆಗಲಾರದು. ಲೋಕದಲ್ಲಿ ನೀನು ಅನಿಂದಿತಳಾಗು ಮತ್ತು ನನ್ನ ಮಾತನ್ನು ನಡೆಸು.
ನಾರದಃ
ಏವಮುಕ್ತಾ ಭಗವತಾ ಪ್ರಾಂಜಲಿಶ್ಚಾಪ್ಯವಾಙ್ಮುಖೀ ।
ಸಂಹಾರೇ ನಾಕರೋದ್ ಬುದ್ಧಿಂ ಪ್ರಜಾನಾಂ ಹಿತಕಾಮ್ಯಯಾ ॥ 11 ॥
ನಾರದರು ಪೂಜ್ಯನಾದ ಬ್ರಹ್ಮನಿಂದ ಹೀಗೆ ಹೇಳಲ್ಪಟ್ಟ ಮೃತ್ಯುವು ಕೈಗಳನ್ನು ಮುಗಿದು, ತಲೆಯನ್ನು ತಗ್ಗಿಸಿ, ಪ್ರಜೆಗಳ

ಹಿತಕಾಮನೆಯಿಂದ ಸಂಹಾರ ಮಾಡುವ ಬುದ್ಧಿಯನ್ನು ಹೊಂದಲಿಲ್ಲ.
ತೂಷ್ಣೀಮಾಸೀತ್ ತದಾ ದೇವಃ ಪ್ರಜಾನಾಮೀಶ್ವರೇಶ್ವರಃ |
ಪ್ರಸಾದಂ ಚಾಗಮತ್ ಕ್ಷಿಪ್ರಮಾತ್ಮನ್ಯೇವ ಪಿತಾಮಹಃ ॥ 12 ॥
ಆಗ ಪ್ರಜೆಗಳ ಪ್ರಭುಗಳಿಗೆ ಪ್ರಭುವಾದ ಆ ದೇವನು ಸುಮ್ಮನಾದನು ಮತ್ತು ಕ್ಷಿಪ್ರವಾಗಿ ಪಿತಾಮಹನಾದ ಅವನು ತನ್ನಲ್ಲಿಯೇ ಸಮಾಧಾನವನ್ನು ತಂದುಕೊಂಡನು.
ಸ್ಮಯಮಾನಶ್ಚ ದೇವೇಶೋ ಲೋಕಾನ್ ಸರ್ವಾನವೈಕ್ಷತ |
ಲೋಕಾಶ್ಚಾಸನ್ ಯಥಾಪೂರ್ವಂ ದೃಷ್ಟಾಸ್ತೇನಾಪಮನ್ಯುನಾ ॥ 13 ॥
ದೇವೇಶನಾದ ಅವನು ನಗುತ್ತಾ ಎಲ್ಲ ಲೋಕಗಳನ್ನೂ ನೋಡಿದನು. ಕ್ರೋಧ ರಹಿತನಾದ ಅವನಿಂದ ನೋಡಲ್ಪಟ್ಟ ಎಲ್ಲ ಲೋಕಗಳೂ ಮೊದಲಿನಂತೆಯೇ ಆದವು.
ನಿವೃತ್ತರೋಷೇ ತಸ್ಮಿಂಸ್ತು ಭಗವತ್ಯಪರಾಜಿತೇ |
ಸಾ ಕನ್ಯಾಽಪಿ ಜಗಾಮಾಥ ಸಮೀಪಾತ್ ತಸ್ಯ ಧೀಮತಃ ॥14॥
ಅಪರಾಜಿತನೂ, ಪೂಜ್ಯನೂ ಆದ ಬ್ರಹ್ಮನು ರೋಷಹೀನನಾಗುತ್ತಿರಲು ಆ ಕನ್ಯೆಯೂ ಸಹ ಮೇಧಾವಿಯಾದ ಅವನ ಸಮೀಪದಿಂದ ಹೊರಟಳು.
ಅಪಸೃತ್ಯಾಪ್ರತಿಶ್ರುತ್ಯ ಪ್ರಜಾಸಂಹರಣಂ ತಥಾ |
ತ್ವರಮಾಣಾ ಚ ರಾಜೇಂದ್ರ ಮೃತ್ಯುರ್ಧೇನುಕಮಭ್ಯಯಾತ್ ॥ 15 ॥
ಎಲೈ ರಾಜೇಂದ್ರನೇ, ಮೃತ್ಯುವು ಪ್ರಜಾಸಂಹಾರವನ್ನು ಮಾಡುತ್ತೇನೆ ಎಂದು ವಾಗ್ದಾನ ಮಾಡದೆ, ಅಲ್ಲಿಂದ ಹೊರಟು ತ್ವರೆಯನ್ನು ಮಾಡುತ್ತಾ, ಧೇನುಕರ ಬಳಿಗೆ ಹೋದಳು.
ಸಾ ತತ್ರ ಪರಮಂ ತೀವ್ರಂ ಚಚಾರ ತಪ ಉತ್ತಮಮ್ |
ಸಮಾನಾಮೇಕಪಾದೇನ ತಸ್ಥೌ ಪದ್ಮಾನಿ ಷೋಡಶ ॥ 16 ॥
ಅವಳು ಅಲ್ಲಿ ಶ್ರೇಷ್ಠವೂ, ತೀವ್ರವೂ ಆದ ಉತ್ತಮವಾದ ತಪಸ್ಸನ್ನು ಮಾಡಿದಳು. ಹದಿನಾರು ಪದ್ಮವರ್ಷಗಳವರೆಗೆ ಒಂದು ಕಾಲಿನ ಮೇಲೆ ನಿಂತಳು (ದಶಲಕ್ಷ, ಕೋಟಿ, ಅರ್ಜುನ, ನ್ಯರ್ಬುದ, ಶಂಖ, ಮಹಾಶಂಖ, ಪದ್ಮ, ಮಹಾಪದ್ಮ, ಖರ್ವ, ನಿಖರ್ವ ಹೀಗೆ ಹತ್ತು ಗುಣಕದಿಂದ ಹೆಚ್ಚಾಗಿ ಸಂಖ್ಯೆಗಳ ಗಣನೆ ಇದೆ).
ಪಂಚ ಚಾನ್ಯಾನಿ ಕಾರುಣ್ಯಾತ್ ಪ್ರಜಾನಾಮಭಯೈಷಿಣೀ |
ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ಪ್ರಿಯೇಭ್ಯಃ ಸನ್ನಿವಾರ್ಯ ಸಾ ॥17॥
ಪ್ರಜೆಗಳಿಗೆ ಅಭಯವನ್ನು ಬಯಸಿ, ಪ್ರಜೆಗಳ ಮೇಲಿನ ಕರುಣೆಯಿಂದ ಅವಳು ತನ್ನ ಇಂದ್ರಿಯಗಳನ್ನು ಅವುಗಳ ಪ್ರಿಯವಸ್ತುಗಳಿಂದ ಹಿಂದೆ ಸೆಳೆದು ಬೇರೆ ಐದು ಪದ್ಮವರ್ಷಗಳವರೆಗೆ ತಪಸ್ಸನ್ನು ಮಾಡಿದಳು.
ತತಸ್ತ್ವೇಕಪದೇನೈವ ಪುನರನ್ಯಾನಿ ಸಪ್ತ ವೈ |
ತಸ್ಥೌ ಪದ್ಮಾನಿ ಷಟ್ ಚೈವ ಸಪ್ತ ಪಂಚೈವ ವೈ ನೃಪ |
ತತೋ ವರ್ಷಾಯುತಂ ತಾತ ಮೃಗೈಃ ಸಹ ಚಚಾರ ಸಾ ॥ 18 ॥
ಅನಂತರ ಒಂದು ಪಾದದ ಮೇಲೆ ನಿಂತು ಅವಳು ಪುನಃ ಏಳು, ಆರು, ಏಳು ಮತ್ತು ಐದು ಪದ್ಮವರ್ಷಗಳ ಕಾಲ ತಪಸ್ಸನ್ನು ಮಾಡಿದಳು. ಎಲೈ ರಾಜನೇ, ಪ್ರೀತಿಪಾತ್ರನೇ, ಅನಂತರ ಹತ್ತು ಸಾವಿರ ವರ್ಷಗಳ ಕಾಲ ಅವಳು ಮೃಗಗಳ ಜೊತೆಯಲ್ಲಿ ಸಂಚರಿಸಿದಳು.
ಪುನರ್ಗತ್ವಾ ತತೋ ಗಂಗಾಂ ಪುಣ್ಯಾಂ ಶೀತಜಲಾಂ ಶಿವಾಮ್ |
ಅಷ್ಟವರ್ಷಸಹಸ್ರಾಣಿ ಸಪ್ತ ಚೈಕಂ ಚ ಸಾಽವಸತ್ ॥ 19 ॥
ಪುನಃ ಅವಳು ಪುಣ್ಯಪ್ರದವೂ, ಶೀತ ಜಲವುಳ್ಳದ್ದೂ ಆದ, ಮಂಗಳವಾದ ಗಂಗೆಗೆ ಹೋಗಿ ಎಂಟು ಸಹಸ್ರ ವರ್ಷಗಳ ಕಾಲ ನೀರಿನಲ್ಲಿ ವಾಸ ಮಾಡಿದಳು.
ತಂ ಪಾರಯಿತ್ವಾ ನಿಯಮಂ ಗಂಗಾಯಾಂ ವೀತಕಲ್ಮಷಾ |
ಸಾ ಪುನಃ ಕೌಶಿಕೀಂ ಪುಣ್ಯಾಂ ಜಗಾಮ ನಿಯಮೈರ್ಯುತಾ ॥ 20 ॥
ಗಂಗೆಯಲ್ಲಿ ಆ ನಿಯಮವನ್ನು ಪೂರ್ಣಗೊಳಿಸಿ, ಕಲ್ಮಷದೂರಳಾದ ಅವಳು ಪುನಃ ನಿಯಮದಿಂದ ಕೂಡಿದವಳಾಗಿ ಪವಿತ್ರವಾದ ಕೌಶಿಕೀ ನದಿಗೆ ಹೋದಳು.
ತತ್ರ ವಾಯುಜಲಾಹಾರಾ ಚಚಾರ ನಿಯತಂ ಪುನಃ|
ಪಂಚಗಂಗೇ ಚ ಸಾ ಪುಣ್ಯೇ ಕಾಶ್ಯಾಂ ವೈತರಣೀಷು ಚ |
ತಪೋವಿಶೇಷೈರ್ವಿವಿಧೈಃ ಕರ್ಶಯದ್ ದೇಹಮಾತ್ಮನಃ ॥ 21 ॥|
ಅಲ್ಲಿ ಕೇವಲ ವಾಯು-ಜಲಗಳನ್ನು ಸೇವಿಸಿ, ಪುನಃ ನಿಯತವಾದ ತಪಸ್ಸನ್ನು ಆಚರಿಸಿದಳು. ಪಂಚಗಂಗಾ ಕ್ಷೇತ್ರದಲ್ಲಿಯೂ, ಕಾಶಿಯಲ್ಲಿಯೂ, ವೈತರಣಿಯಲ್ಲಿಯೂ, ವಿವಿಧವಾದ ವಿಶೇಷ ತಪಸ್ಸುಗಳನ್ನು ಮಾಡಿ ತನ್ನ ದೇಹವನ್ನು ಶೋಷಿಸಿದಳು.
ತತೋ ಗತ್ವಾ ಮಹಾಭಾಗ ಮಹಾಮೇರುಂ ಚ ಕೇವಲಮ್ |
ತಸ್ಥಾವಶ್ಮೇವ ನಿಶ್ಚೇಷ್ಟಾ ಪ್ರಾಣಾಯಾಮಪರಾಯಣಾ ॥ 22 ॥
ಎಲೈ ಮಹಾನುಭಾವನೇ, ಅವಳು ಅನಂತರ ಮಹಾಮೇರು ಪರ್ವತಕ್ಕೆ ಹೋಗಿ, ಕೇವಲ ಪ್ರಾಣಾಯಾಮ ಪರಾಯಣಳಾಗಿ (ಯಾವ ಆಹಾರವನ್ನೂ ತೆಗೆದುಕೊಳ್ಳದೆ) ಕಲ್ಲಿನಂತೆ ನಿಶ್ಚೇಷ್ಟಳಾಗಿ ನಿಂತಳು.
ತತೋ ಹಿಮವತೋ ಮೂರ್ಧ್ನಿ ಯತ್ರ ದೇವಾಃ ಪುರಾಽಯಜನ್ |

ತತ್ರಾಂಗುಷ್ಠೇನ ಸಾ ತಸ್ಥೌ ನಿಖರ್ವಂ ಪರಮಂಗನಾ ॥ 23 ॥
ಅನಂತರ ಹಿಮಾಲಯದ ಶಿಖರದಲ್ಲಿ, ಹಿಂದೆ ದೇವತೆಗಳು ಯಾಗ ಮಾಡಿದ ಸ್ಥಳದಲ್ಲಿ ಆ ಶ್ರೇಷ್ಠ ವನಿತೆಯು ತನ್ನ ಪಾದಾಂಗುಷ್ಠದ ಮೇಲೆ ನಿಖರ್ವ ವರ್ಷಗಳವರೆಗೆ ನಿಂತಳು.
ಪುಷ್ಕರೇಷ್ವಥ ಗೋಕರ್ಣೇ ನೈಮಿಶೇ ಮಲಯೇ ತಥಾ |
ಅಕರ್ಶಯತ್ ಸ್ವಕಂ ದೇಹಂ ನಿಯಮೈರ್ಮನಸಃ ಪ್ರಿಯೈಃ ॥ 24 ॥
ಅವಳು ತನ್ನ ಮನಸ್ಸಿಗೆ ಪ್ರಿಯವಾದ ನಿಯಮಗಳಿಂದ ಪುಷ್ಕರಗಳಲ್ಲಿಯೂ, ಗೋಕರ್ಣದಲ್ಲಿಯೂ, ನೈಮಿಶಾರಣ್ಯದಲ್ಲಿಯೂ, ಮಲಯ ಪರ್ವತದಲ್ಲಿಯೂ ಹಾಗೆಯೇ ತನ್ನ ದೇಹವನ್ನು ಶೋಷಿಸಿದಳು.
ಅನನ್ಯದೇವತಾ ನಿತ್ಯಂ ದೃಢಭಕ್ತಾ ಪಿತಾಮಹೇ |
ತಸ್ಥೌ ಪಿತಾಮಹಂ ಚೈವ ತೋಷಯಾಮಾಸ ಯತ್ನತಃ ॥ 25 ॥
ತತಸ್ತಾಮಬ್ರವೀತ್ ಪ್ರೀತೋ ಲೋಕಾನಾಂ ಪ್ರಭವೋऽಪ್ಯಯಃ |
ಸೌಮ್ಯೇನ ಮನಸಾ ರಾಜನ್ ಪ್ರೀತಃ ಪ್ರೀತಮನಾಸ್ತದಾ ॥ 26 ॥
ಎಲೈ ರಾಜನೇ, ಬೇರೆ ಯಾವ ದೇವತೆಯನ್ನೂ ಚಿಂತಿಸದೆ, ಬ್ರಹ್ಮನಲ್ಲಿಯೇ ದೃಢಭಕ್ತಿಯನ್ನು ಹೊಂದಿ, ಯಾವಾಗಲೂ ನಿಂತ ಅವಳು ತನ್ನ ಪ್ರಯತ್ನದಿಂದ ಬ್ರಹ್ಮನನ್ನು ಸಂತೋಷಪಡಿಸಿದಳು. ಆಗ ಲೋಕಗಳ ಪ್ರಭವ ಮತ್ತು ವಿನಾಶಕ್ಕೆ ಕಾರಣನಾದ ಬ್ರಹ್ಮನು ಪ್ರೀತನಾಗಿ, ಸೌಮ್ಯ ಮನಸ್ಸಿನಿಂದ ಕೂಡಿ, ಸಂತೋಷಗೊಂಡ ಮನಸ್ಸಿನಿಂದ ಅವಳಿಗೆ ಹೇಳಿದನು.
ಮೃತ್ಯೋ ಕಿಮಿದಮತ್ಯರ್ಥಂ ತಪಾಂಸಿ ಚರಸೀತಿ ಹ |
ತತೋऽಬ್ರವೀತ್ ಪುನರ್ಮೃತ್ಯುಃ ಭಗವಂತಂ ಪಿತಾಮಹಮ್ ॥ 27 ॥
ಎಲೌ ಮೃತ್ಯುವೇ, ಇದೇನು ಇಷ್ಟು ತೀವ್ರವಾದ ತಪಸ್ಸುಗಳನ್ನು ಆಚರಿಸುತ್ತಿದ್ದೀಯೆ? ಎಂದು ಕೇಳಿದನು. ಆಗ ಮೃತ್ಯುವು ಪೂಜ್ಯನಾದ ಪಿತಾಮಹನನ್ನು ಕುರಿತು ಪುನಃ ಮಾತನಾಡಿದಳು.
ನಾಹಂ ಹನ್ಯಾಂ ಪ್ರಜಾ ದೇವ ಸ್ವಸ್ಥಾಶ್ಚ ಕ್ರೋಶತೀಃ ಪ್ರಭೋ |
ಏತದಿಚ್ಛಾಮಿ ಸರ್ವೇಶ ತ್ವತ್ತೋ ವರಮಹಂ ಪ್ರಭೋ ॥ 28 ॥
ಎಲೈ ದೇವನೇ, ಪ್ರಭುವೇ, ನಾನು ಸ್ವಸ್ಥರಾಗಿ ವಿಲಾಪ ಮಾಡುತ್ತಿರುವ ಪ್ರಜೆಗಳನ್ನು ಕೊಲ್ಲಲಾರೆ. ಎಲೈ ಪ್ರಭುವೇ, ಸರ್ವೇಶನೇ, ನಾನು ನಿನ್ನಿಂದ ಈ ವರವನ್ನು ಬಯಸುತ್ತೇನೆ.
ಅಧರ್ಮಭಯಭೀತಾऽಸ್ಮಿ ತತೋऽಹಂ ತಪ ಆಸ್ಥಿತಾ |
ಭೀತಾಯಾ ಮೇ ಮಹಾಭಾಗ ಪ್ರದೇಹಿ ವರಮವ್ಯಯಮ್ |
ಆರ್ತಾ ಚಾನಾಗಸೀ ಚ ತ್ವಾ ಯಾಚಾಮಿ ಭವ ಮೇ ಗತಿಃ ॥29॥|
ಅಧರ್ಮದ ಭಯದಿಂದ ಕೂಡಿದವಳಾಗಿದ್ದೇನೆ. ಆದ್ದರಿಂದ ನಾನು ತಪಸ್ಸನ್ನು ಮಾಡುತ್ತಿದ್ದೇನೆ. ಎಲೈ ಮಹಾನುಭಾವನೇ, ಭೀತಳಾದ ನನಗೆ ಶಾಶ್ವತ ವರವನ್ನು ಕೊಡು. ಆರ್ತಳೂ, ನಿರಪರಾಧಿಯೂ ಆದ ನಾನು ನಿನ್ನನ್ನು ಬೇಡುತ್ತಿದ್ದೇನೆ. ನನಗೆ ಗತಿಯಾಗು.
ನಾರದಃ
ತಾಮಬ್ರವೀತ್ ತತೋ ದೇವೋ ಭೂತಭವ್ಯಭವಿಷ್ಯಕೃತ್ |
ಅಧರ್ಮೋ ನಾಸ್ತಿ ತೇ ಮೃತ್ಯೋ ಸಂಹರಂತ್ಯಾ ಇಮಾಃ ಪ್ರಜಾಃ |
ಮಯಾ ಚೋಕ್ತಂ ಮೃಷಾ ಭದ್ರೇ ಭವಿತಾ ನ ಕಥಂಚನ ॥ 30 ॥|
ನಾರದರು ಆಗ ಭೂತ-ವರ್ತಮಾನ-ಭವಿಷ್ಯತ್ ಲೋಕಗಳ ಸೃಷ್ಟಿಕರ್ತನಾದ ಬ್ರಹ್ಮದೇವನು ಅವಳನ್ನು ಕುರಿತು ಹೇಳಿದನು- `ಎಲೌ ಮೃತ್ಯುವೇ, ಈ ಪ್ರಜೆಗಳನ್ನು ಸಂಹಾರ ಮಾಡುವುದರಿಂದ ನಿನಗೆ ಅಧರ್ಮವು ಉಂಟಾಗುವುದಿಲ್ಲ. ಎಲೌ ಮಂಗಳ ಸ್ವರೂಪಳೇ, ನನ್ನ ಮಾತು ಎಂದೂ ಸುಳ್ಳಾಗುವುದಿಲ್ಲ.
ತಸ್ಮಾತ್ ಸಂಹರ ಕಲ್ಯಾಣಿ ಪ್ರಜಾಃ ಸರ್ವಾಶ್ಚತುರ್ವಿಧಾಃ |
ಧರ್ಮಃ ಸನಾತನಶ್ಚ ತ್ವಾಂ ಸರ್ವಥಾऽನುಪ್ರವೇಕ್ಷ್ಯತಿ ॥ 31 ॥
ಆದ್ದರಿಂದ ಎಲೌ ಕಲ್ಯಾಣಿಯೇ, ಚತುರ್ವಿಧರಾದ ಎಲ್ಲ ಪ್ರಜೆಗಳನ್ನೂ ಸಂಹರಿಸು. ವೇದೋಕ್ತವಾದ ಧರ್ಮವು ನಿನ್ನನ್ನು ಬಂದು ಸೇರುವುದು.
ಶರ್ವಃ ಕಾಲೋ ಯಮಶ್ಚೈವ ಸಹಾಯಾ ವ್ಯಾಧಯಶ್ಚ ತೇ |
ಅಹಂ ಚ ವಿಬುಧಾಶ್ಚೈವ ಪುನರ್ದಾಸ್ಯಾಮ ತೇ ವರಾನ್ |
ಯೈಸ್ತ್ವಂ ಯುಕ್ತಾ ಭಯಾನ್ಮುಕ್ತಾ ವಿರಜಾಃ ಖ್ಯಾತಿಮೇಷ್ಯಸಿ ॥32॥
ರುದ್ರ, ಕಾಲ, ಯಮ ಮತ್ತು ವ್ಯಾಧಿಗಳು ನಿನಗೆ ಸಹಾಯ ಮಾಡುವವು. ನಾನು ಮತ್ತು ದೇವತೆಗಳು ನಿನಗೆ ಪುನಃ ವರಗಳನ್ನು ಕೊಟ್ಟೇವು. ಆ ವರಗಳಿಂದ ಯುಕ್ತಳಾದ ನೀನು ಭಯದಿಂದ ಮುಕ್ತಳಾಗಿ, ದೋಷ ದೂರಳಾಗಿ ಶಾಂತಿಯನ್ನು ಹೊಂದುವಿ.
ಸೈವಮುಕ್ತಾ ಮಹಾರಾಜ ಕೃತಾಂಜಲಿರಿದಂ ಪ್ರಭುಮ್ |
ಪುನರೇವಾಬ್ರವೀದ್ ವಾಕ್ಯಂ ಪ್ರಸಾದ್ಯ ಶಿರಸಾ ತದಾ ॥ 33 ॥
ಎಲೈ ಮಹಾರಾಜನೇ, ಹೀಗೆ ಹೇಳಲ್ಪಟ್ಟ ಅವಳು ಕೈಗಳನ್ನು ಜೋಡಿಸಿ, ಶಿರಸಾ ನಮಸ್ಕರಿಸಿ, ಪ್ರಸನ್ನಗೊಳಿಸಿ, ಪ್ರಭುವಾದ ಅವನನ್ನು ಕುರಿತು ಪುನಃ ಮಾತನಾಡಿದಳು.
ಯದ್ಯೇತದೇವಂ ಕರ್ತವ್ಯಂ ಧರ್ಮತೋ ನಾಸ್ತಿಯೇ ಭಯಮ್ |
ತವಾಜ್ಞಾ ಮೂರ್ಧ್ನಿ ಮೇ ನ್ಯಸ್ತಾ ಯತ್ ತು ವಕ್ಷ್ಯಾಮಿ ತಚ್ಛೃಣು ॥
ಇದನ್ನು ಹೀಗೆಯೇ ಮಾಡಬೇಕಾದರೆ ಮತ್ತು ಧರ್ಮದ ದೃಷ್ಟಿಯಿಂದ ಯಾವ ಭಯವೂ ಇಲ್ಲದಿದ್ದರೆ ನಿನ್ನ ಆಜ್ಞೆಯನ್ನು ನಾನು

ಶಿರಸ್ಸಿನಲ್ಲಿ ಧರಿಸಿದ್ದೇನೆ. ನಾನು ಹೇಳುವ ಮಾತುಗಳನ್ನು ಕೇಳು.
ಲೋಭಃ ಕ್ರೋಧೋ ಹ್ಯಸೂಯೇರ್ಷ್ಯಾ
ಮೋಹೋ ದ್ರೋಹಶ್ಚ ದೇಹಿನಾಮ್ |
ಅಪ್ರಿಯಾನ್ಯೋನ್ಯಜನಿತಾ ದೇಹಾನ್ ಭಿಂದ್ಯುಃ ಪೃಥಗ್ವಿಧಾಃ ||35||
ಲೋಭ, ಕ್ರೋಧ, ಅಸೂಯೆ, ಮಾತ್ಸರ್ಯ, ಮೋಹ, ದ್ರೋಹ- ಜೀವರಿಗೆ ಅಪ್ರಿಯವನ್ನು ಮಾಡುವ ವಿಧವಿಧವಾದ ಈ ದೋಷಗಳು ದೇಹಗಳನ್ನು ನಾಶ ಮಾಡಲಿ.
ಬ್ರಹ್ಮಾ
ತಥಾ ಭವಿಷ್ಯತೇ ಮೃತ್ಯೋ ಸಾಧು ಸಂಹರ ವೈ ಪ್ರಜಾಃ |
ಅಧರ್ಮಸ್ತೇ ನ ಭವಿತಾ ತಥಾ ದಾಸ್ಯಾಮಿ ತೇಽಭಯಮ್ || 36 ||
ಬ್ರಹ್ಮ ಎಲೌ ಮೃತ್ಯುವೇ, ಹಾಗೆಯೇ ಆಗುವುದು. ನೀನು ಪ್ರಜೆಗಳನ್ನು ಚೆನ್ನಾಗಿ ಸಂಹರಿಸು. ನಿನಗೆ ಅಧರ್ಮವು ಉಂಟಾಗುವುದಿಲ್ಲ. ನಾನು ನಿನಗೆ ಹಾಗೆ ಅಭಯವನ್ನು ಕೊಡುವೆನು.
ಯಾನ್ಯಶ್ರುಬಿಂದೂನಿ ಕರೇ ತವಾಸನ್ |
ತೇ ವ್ಯಾಧಯಃ ಪ್ರಾಣಿನಾಂ ದೇಹಜಾಃ ಸ್ಯುಃ |
ತೇ ಮಾರಯಿಷ್ಯಂತಿ ನರಾನ್ ಗತಾಸೂನ್
ನಾಧರ್ಮಸ್ತೇ ಭವಿತಾ ಮಾ ಸ್ಮ ಭೈಷೀಃ || 37 ||
ಯಾವ ಅಶ್ರುಬಿಂದುಗಳು ನಿನ್ನ ಹಸ್ತದಲ್ಲಿ ಬಿದ್ದವೋ ಅವು ಪ್ರಾಣಿಗಳ ದೇಹದಿಂದ ಜನಿಸಿದ ವ್ಯಾಧಿಗಳಾಗುವವು. ಅವು ಆಯುಸ್ಸು ಮುಗಿದ ಮನುಷ್ಯರನ್ನು ಕೊಲ್ಲುವವು. ನಿನಗೆ ಅಧರ್ಮವು ಉಂಟಾಗುವುದಿಲ್ಲ. ಹೆದರಬೇಡ.
ಧರ್ಮೋ ಮೃತ್ಯೋ ಮಾರಣೇ ಪ್ರಾಣಿನಾಂ ತೇ
ತ್ವಂ ವೈ ಧರ್ಮಸ್ತ್ವಂ ಹಿ ಸರ್ವಸ್ಯ ಚೇಶಾ |
ಧರ್ಮೋ ಭೂತ್ವಾ ಧರ್ಮನಿತ್ಯಾ ಧರಿತ್ರೀ
ತಸ್ಮಾತ್ ಪ್ರಾಣಾನ್ ಸರ್ವಥೇಮಾನ್ ನಿಯಚ್ಛ || 38 ||
ಎಲೌ ಮೃತ್ಯುವೇ, ಪ್ರಾಣಿಗಳನ್ನು ಕೊಲ್ಲುವುದರಿಂದ ನಿನಗೆ ಧರ್ಮವೇ ಉಂಟಾಗುತ್ತದೆ. ನೀನು ಧರ್ಮರೂಪಳಾದವಳು. ಎಲ್ಲದಕ್ಕೂ ಒಡೆಯಳಾದವಳು. ಧರ್ಮಸ್ವರೂಪಳಾಗಿ, ನಿತ್ಯವೂ ಧರ್ಮಾಚರಣೆಯನ್ನು ಮಾಡುವವಳಾಗಿ ನೀನು ಎಲ್ಲವನ್ನೂ ಧರಿಸಿದ್ದೀಯೆ. ಆದ್ದರಿಂದ ಈ ಎಲ್ಲ ಪ್ರಾಣಿಗಳನ್ನು ಸ್ವತಃ ಸಂಹಾರ ಮಾಡುವವಳಾಗು.
ಪಾಪ್ಮಾ ತಥಾ ನೋ ಭವಿತಾ ಕದಾಚಿದ್
ಏವಂ ಮಯಾ ವೈ ವಿನಿಯುಜ್ಯಸೇ ತ್ವಮ್ |
ಸರ್ವೇಷಾಂ ವೈ ಪ್ರಾಣಿನಾಂ ಕಾಮರೋಷೌ
ಸಂತ್ಯಜ್ಯ ತ್ವಂ ಸಂಹರ ಸರ್ವಜೀವಾನ್ || 39 ||
ನಿನಗೆ ಹಾಗೆ ಎಂದೂ ಪಾಪವುಂಟಾಗುವುದಿಲ್ಲ. ಹೀಗೆ ನಾನು ನಿನ್ನನ್ನು ಆಜ್ಞಾಪಿಸುತ್ತಿದ್ದೇನೆ. ನಿನ್ನ ಕಾಮ-ರೋಷಗಳನ್ನು ತ್ಯಜಿಸಿ, ಸರ್ವಪ್ರಾಣಿಗಳ ಸರ್ವಜೀವಿತವನ್ನು ಸಂಹಾರ ಮಾಡು.
ಯೇಷಾಂ ಧರ್ಮಾಸ್ತೇ ಭವಿಷ್ಯಂತ್ಯನಂತಾಃ
ಮಿಥ್ಯಾವೃತ್ತಾನ್ ಮಾರಯಿಷ್ಯತ್ಯಧರ್ಮಃ |
ತೇನಾತ್ಮಾನಂ ಪ್ಲಾವಯಸ್ವ ವ್ಯಪೇಕ್ಷಂ
ಪಾಪಾತ್ಮನೋ ಮಜ್ಜಯಿಷ್ಯಂತ್ಯಧರ್ಮಾಃ || 40 ||
ಯಾರಿಗೆ ಧರ್ಮವಿದೆಯೋ ಅವರು ಅನಂತರಾಗುತ್ತಾರೆ (ನಾಶವನ್ನು ಹೊಂದುವುದಿಲ್ಲ). ಮಿಥ್ಯಾಚಾರ ನಿರತರಾದವರನ್ನು ಅಧರ್ಮವು ಕೊಲ್ಲುವುದು. ಅದರಿಂದ ನಿನ್ನನ್ನು ನೀನು ಸಮರ್ಥವಾಗಿ ಪಾಪದಿಂದ ದೂರ ಇಟ್ಟುಕೊಳ್ಳುವವಳಾಗು. ಪಾಪಾತ್ಮರಾದವರನ್ನು ಅಧರ್ಮವೇ ಮುಳುಗಿಸುತ್ತದೆ.
ತಸ್ಮಾತ್ ಕಾಮಂ ರೋಷಮಪ್ಯಾಗತಂ ತ್ವಂ
ಸಂತ್ಯಜ್ಯೋಭೌ ಸಂಹರ ಸರ್ವಜೀವಾನ್ || 41 ||
ಆದ್ದರಿಂದ ನಿನಗೆ ಉಂಟಾದ ಕಾಮ, ರೋಷ ಇವೆರಡನ್ನೂ ಪರಿತ್ಯಜಿಸಿ ಸರ್ವಜೀವರನ್ನು ಸಂಹಾರ ಮಾಡು.
ನಾರದಃ
ಸಾ ಚೈವಮುಕ್ತಾ ಮೃತ್ಯುಸಂಜ್ಞಾಪದೇಶಾತ್
ಶಾಪಾದ್ ಭೀತಾ ಬಾಢಮಿತ್ಯಬ್ರವೀತ್ ತಮ್ |
ಸಾ ಚ ಪ್ರಾಣಾನ್ ಪ್ರಾಣಿನಾಂ ಪ್ರಾಯಣಾಂತೇ
ಕಾಮಕ್ರೋಧೌ ಸಂಹರತ್ಯೇವ ಹಿತ್ವಾ || 42 ||
ನಾರದರು ಹೀಗೆ ಹೇಳಲ್ಪಟ್ಟ ಅವಳು ಮೃತ್ಯು ಎಂಬ ಹೆಸರು ಇರುವ ಕಾರಣದಿಂದ ಶಾಪಕ್ಕೆ ಹೆದರಿ, ಹಾಗೆಯೇ ಆಗಲಿ ಎಂದು ಬ್ರಹ್ಮದೇವರಿಗೆ ಹೇಳಿದಳು. ಅವಳು ಪ್ರಾಣಿಗಳ ಮರಣಕಾಲದಲ್ಲಿ ಕಾಮ-ಕ್ರೋಧಗಳನ್ನು ಬಿಟ್ಟು ಎಲ್ಲರನ್ನೂ ಸಂಹಾರ ಮಾಡುತ್ತಾಳೆ.
ಮೃತ್ಯುಸ್ತ್ವೇಷಾಂ ವ್ಯಾಧಯಸ್ತತ್ಪ್ರಸೂತಾ
ವ್ಯಾಧೀ ರೋಗೈರ್ಯುಜ್ಯತೇ ಯೇನ ದೇಹಃ || 43 ||
ವ್ಯಾಧಿಗಳಿಂದ ರೋಗವು ಗ್ರಸ್ತವಾಗುವ ಕಾರಣದಿಂದ ಮೃತ್ಯುದೇವತೆಯ ಕಣ್ಣೀರಿನಿಂದ ಹುಟ್ಟಿದ ವ್ಯಾಧಿಗಳೇ ಈ ಪ್ರಜೆಗಳಿಗೆ

ಮೃತ್ಯುವಾಗುತ್ತವೆ.
ಸರ್ವೇಷಾಂ ಚ ಪ್ರಾಣಿನಾಂ ಪ್ರಾಯಣಾಂತೇ
ಪ್ರಾಣಾ ಗತ್ವಾ ಸನ್ನಿವೃತ್ತಾಸ್ತಥೈವ |
ಏವಂ ಸರ್ವೇ ಪ್ರಾಣಿನಸ್ತತ್ರ ಗತ್ವಾ
ಭೂತ್ವಾ ದೇಹಂ ಮರ್ತ್ಯಂ ಯಾಂತಿ ಭೂಯಃ ॥ 44 ॥
ಎಲ್ಲ ಪ್ರಾಣಿಗಳಿಗೂ ಮರಣಕಾಲದಲ್ಲಿ ಪ್ರಾಣಗಳು ಬೇರೆ ಕಡೆಗೆ ಹೋಗಿ ಪುನಃ ಜನ್ಮವನ್ನು ಪಡೆದಾಗ ಹಿಂದಿರುಗಿ ಬರುತ್ತವೆ. ಹೀಗೆ ಎಲ್ಲ ಪ್ರಾಣಿಗಳು ಪರಲೋಕಕ್ಕೆ ಹೋಗಿ ಪುನಃ ದೇಹವನ್ನು ಹೊಂದಿ ಈ ಮರ್ತ್ಯಲೋಕಕ್ಕೆ ಬರುತ್ತವೆ.
ಏವಂ ಸರ್ವೇ ಪ್ರಾಣಿನಸ್ತತ್ರ ಗತ್ವಾ
ವೃತ್ತಾ ದೇವಾ ಮರ್ತ್ಯವದ್ ರಾಜಸಿಂಹ ॥ 45 ॥
ಎಲೈ ರಾಜೇಂದ್ರನೇ, ಹೀಗೆ ಎಲ್ಲ ದೇವತೆಗಳೂ ಸಹ ಪರಲೋಕಕ್ಕೆ ಹೋಗಿ ಮತ್ತೆ ಹಿಂದೆ ಬರುತ್ತಾರೆ.
ದೇಹಗಳಿಗೆ ಮಾತ್ರ ನಾಶ. ಜೀವಸ್ವರೂಪಕ್ಕೆ ನಾಶವಿಲ್ಲ. ಆದ್ದರಿಂದ ಶೋಕ ಪಡಬಾರದು ಎಂದು ಅಭಿಪ್ರಾಯ.
ವಾಯುರ್ಭೀಮೋ ಭೀಮನಾದೋ ಮಹೌಜಾಃ
ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ |
ಅನಾವೃತ್ತಿರ್ದೇಹಿನಾಂ ದೇಹಪಾತೇ
ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ ॥ 46 ॥|
ವಾಯುದೇವರು ಮಹಾಸಾಮರ್ಥ್ಯವುಳ್ಳವರು, ಭಯಂಕರವಾದ ನಾದವುಳ್ಳವರು. ಆದ್ದರಿಂದ ಅಸುರರಿಗೆ ಭಯಂಕರಾದವರು. ಅವರು ಎಲ್ಲಾ ಪ್ರಾಣಿಗಳಿಗೂ ಚೇಷ್ಟಾದಿಪ್ರದರು. ದೇಹಗಳ ಮರಣಕ್ಕೆ ದೇಹದಲ್ಲಿ ಪ್ರಾಣದೇವರು ಇಲ್ಲದಿರುವುದು ಕಾರಣ ಅಥವಾ ದೇಹಗಳಿಗೆ ದೇಹದ ಅನಾವೃತಿತಯು ಎಂದರೆ ಮೋಕ್ಷವು ವಾಯುದೇವರ ಅನುಗ್ರಹದಿಂದ ಆಗುತ್ತದೆ. ಆದ್ದರಿಂದ ದೇವದೇವರಾದ ವಾಯುದೇವರು ಸರ್ವೋತ್ಕೃಷ್ಟರಾದವರು.
ಸರ್ವೇ ದೇವಾ ಮರ್ತ್ಯಸಂಜ್ಞಾವಿಶಿಷ್ಟಃ
ಸರ್ವೇ ಮರ್ತ್ಯಾ ದೇವಸಂಜ್ಞಾವಿಶಿಷ್ಟಾಃ |
ತಸ್ಮಾತ್ ಪುತ್ರಂ ಮಾ ಶುಚೋ ರಾಜಸಿಂಹ
ಸ್ವರ್ಗಂ ಪ್ರಾಪ್ತೋ ಮೋದತೇ ತ್ವತ್ತನೂಜಃ ॥ 47 ॥
ಎಲ್ಲ ದೇವತೆಗಳೂ ಮರ್ತ್ಯಸಂಜ್ಞೆಯನ್ನು ಹೊಂದಿದ್ದಾರೆ. ಎಲ್ಲ ಮರ್ತ್ಯರೂ ದೇವಸಂಜ್ಞೆಯಿಂದ ಕೂಡಿದ್ದಾರೆ. ಆದ್ದರಿಂದ ಎಲೈ ರಾಜಸಿಂಹನೇ, ಪುತ್ರನನ್ನು ಕುರಿತು ಶೋಕವನ್ನು ಪಡಬೇಡ. ನಿನ್ನ ಪುತ್ರನು ಸ್ವರ್ಗವನ್ನು ಸೇರಿ ಸಂತೋಷದಿಂದಿದ್ದಾನೆ.
ನಿತ್ಯಂ ರಮ್ಯಾನ್ ವೀರಲೋಕಾನವಾಪ್ಯ
ತ್ಯಕ್ತ್ವಾ ದುಃಖಂ ಸಂಗತಃ ಪುಣ್ಯಕೃದ್ಭಿಃ |
ಏಷಾ ಮೃತ್ಯುರ್ದೇವಸೃಷ್ಟಾ ಪ್ರಜಾನಾಂ
ಕಾಲೇ ಪ್ರಾಪ್ತೇ ಸಂಹರತ್ಯೇವ ಜಂತೂನ್ ॥ 48 ॥
ನಿತ್ಯವೂ ಮನೋಹರವಾದ ವೀರಲೋಕವನ್ನು ಹೊಂದಿ, ದುಃಖವನ್ನು ತ್ಯಜಿಸಿ, ಪುಣ್ಯವಂತರಿಂದ ಸಮಾಗಮವನ್ನು ಹೊಂದಿದ್ದಾನೆ. ದೇವಸೃಷ್ಟವಾದ ಈ ಮೃತ್ಯುವಾದರೂ ಮರಣಕಾಲವು ಪ್ರಾಪ್ತವಾದಾಗ ಜಂತುಗಳನ್ನು ಸಂಹಾರ ಮಾಡಿಯೇ ತೀರುತ್ತದೆ.
ರೋಗಾ ಹ್ಯೇತೇ ವ್ಯಾಧಯೋ ದೇಹಜಾಶ್ಚ
ಸ್ವಯಂ ಕೃತಾಃ ಪ್ರಾಣಹರಾಃ ಪ್ರಜಾನಾಮ್ |
ಆತ್ಮಾನಂ ವೈ ದೇಹಿನೋ ಘ್ನಂತಿ ಸರ್ವೇ
ನೈತಾನ್ ಮೃತ್ಯುರ್ದಂಡಪಾಣಿರ್ಹಿನಸ್ತಿ ॥ 49 ॥
ದೇಹಜನ್ಯವಾದ ಈ ವ್ಯಾಧಿಗಳೇ ರೋಗಗಳು. ಇವು ಪ್ರಜೆಗಳಿಂದ ಸ್ವಯಂ ಸಂಪಾದಿಸಲ್ಪಟ್ಟು ಪ್ರಾಣಹರವಾಗುತ್ತವೆ. ಈ ಎಲ್ಲವೂ ದೇಹಗಳ ದೇಹವನ್ನು ಮಾತ್ರ ಸಂಹಾರ ಮಾಡುತ್ತವೆ. ಈ ದೇಹಗಳನ್ನು ದಂಡಪಾಣಿಯಾದ ಮೃತ್ಯುವು ಸಂಹರಿಸುವುದಿಲ್ಲ.
ತಸ್ಮಾನ್ಮೃತಾನ್ ನಾನುಶೋಚಂತಿ ಧೀರಾಃ
ತತ್ತ್ವಂ ಜ್ಞಾತ್ವಾ ನಿಶ್ಚಯಂ ಬ್ರಹ್ಮಕ್ಲೃಪ್ತಮ್ |
ಏವಂ ಮೃತ್ಯುಂ ದೇವಕ್ಲೃಪ್ತಂ ವಿದಿತ್ವಾ
ಪುತ್ರಾನ್ನಷ್ಟಾನ್ ಶೋಕಮಾಶು ತ್ಯಜ ತ್ವಮ್ ॥ 50 ॥|
ಆದ್ದರಿಂದ ಬ್ರಹ್ಮದೇವರು ವಿಧಿಸಿದ ತತ್ತ್ವ-ನಿಯಮಗಳನ್ನು ತಿಳಿದು ಧೀರರಾದವರು ಮೃತರಾದವರ ವಿಷಯದಲ್ಲಿ ಶೋಕಪಡುವುದಿಲ್ಲ. ವಿಧಿಯ ನೀತಿಯನ್ನು ಮೀರಲು ಸಾಧ್ಯವಿಲ್ಲದಿರುವುದರಿಂದಲೂ, ಜೀವಸ್ವರೂಪವು ನಿತ್ಯವಾದುದರಿಂದಲೂ ದೇಹನಾಶ ಉಂಟಾದರೂ ಹೆದರಬೇಕಾದ ಕಾರಣವಿಲ್ಲ ಎಂದು ಅಭಿಪ್ರಾಯ.
ಹೀಗೆ ಮೃತ್ಯುವು ದೇವಸೃಷ್ಟವಾದುದು ಎಂದು ತಿಳಿದು ನೀನು ನಷ್ಟರಾದ ಪುತ್ರರ ವಿಷಯದಲ್ಲಿ ಶೀಘ್ರವಾಗಿ ಶೋಕವನ್ನು ತ್ಯಜಿಸು.
ವ್ಯಾಸಃ
ಏತಚ್ಛ್ರುತ್ವಾರ್ಥವದ್ವಾಕ್ಯಂ ನಾರದೇನ ಪ್ರಭಾಷಿತಮ್ |
ಉವಾಚಾಕಂಪನೋ ರಾಜಾ ಸಖಾಯಂ ನಾರದಂ ತದಾ ॥ 51 ॥
ವ್ಯಾಸರು ನಾರದರು ಆಡಿದ ಈ ಅರ್ಥಪೂರ್ಣ ಮಾತುಗಳನ್ನು ಕೇಳಿ ರಾಜನಾದ ಅಕಂಪನನು ತನ್ನ ಮಿತ್ರರಾದ ನಾರದರನ್ನು ಕುರಿತು ಆಗ ಮಾತನಾಡಿದನು.

ವ್ಯಪೇತಶೋಕಃ ಪ್ರೀತೋಽಸ್ಮಿ ಭಗವನ್ನ ೃಷಿಸತ್ತಮ |
ಶ್ರುತ್ವೇತಿಹಾಸಂ ತ್ವತ್ತೋಽದ್ಯ ಕೃತಾರ್ಥೋಽಸ್ಮ್ಯಭಿವಾದಯೇ ॥ 52 ॥
ಪೂಜ್ಯರೇ, ಋಷಿಶ್ರೇಷ್ಠರೇ, ನಾನು ಶೋಕವನ್ನು ಕಳೆದುಕೊಂಡು ಪ್ರಸನ್ನನಾಗಿದ್ದೇನೆ. ಈ ದಿನ ನಿಮ್ಮಿಂದ ಈ ಇತಿಹಾಸವನ್ನು ಕೇಳಿ ಕೃತಾರ್ಥನಾಗಿದ್ದೇನೆ. ನಿಮಗೆ ನಮಸ್ಕರಿಸುತ್ತೇನೆ ಎಂದು ಹೇಳಿದನು.
ತಥೋಕ್ತೋ ನಾರದಸ್ತೇನ ರಾಜ್ಞಾ ದೇವರ್ಷಿಸತ್ತಮಃ |
ಜಗಾಮ ನಂದನಂ ಶೀಘ್ರಮಶೋಕವನಮಾತ್ಮನಃ ॥ 53 ॥
ಆ ರಾಜನಿಂದ ಹೀಗೆ ಹೇಳಲ್ಪಟ್ಟ ದೇವರ್ಷಿಶ್ರೇಷ್ಠರಾದ ನಾರದರು ಶೀಘ್ರವಾಗಿ ಸಂತೋಷಕರವಾದ ಅಶೋಕವನಕ್ಕೆ ಹೋದರು.
ಪುಣ್ಯಂ ಯಶಸ್ಯಮಾಯುಷ್ಯಂ ಸ್ವರ್ಗೀಯಂ ಧರ್ಮ್ಯಮೇವ ಚ |
ಅಸ್ಯೇತಿಹಾಸಸ್ಯ ಸದಾ ಶ್ರವಣಂ ಶ್ರಾವಣಂ ತಥಾ ॥ 54 ॥
ಈ ಇತಿಹಾಸದ ಶ್ರವಣ ಮತ್ತು ಶ್ರಾವಣಗಳು ಯಾವಾಗಲೂ ಪುಣ್ಯಪ್ರದವಾದವುಗಳು, ಕೀರ್ತಿಪ್ರದವಾದವುಗಳು, ಆಯುಷ್ಯಪ್ರದವಾದವುಗಳು, ಸ್ವರ್ಗಪ್ರಾಪಕವಾದ ಧರ್ಮಪ್ರದವಾದವುಗಳು.
ಏವಮರ್ಥಂ ಹಿ ಸಂಶ್ರುತ್ಯ ಜ್ಞಾತ್ವಾ ಚೈವ ಸ ಪಾಂಡವ |
ಕ್ಷತ್ರಧರ್ಮಂ ಚ ವಿಜ್ಞಾಯ ಶೂರಾಣಾಂ ಚ ಪರಾಂ ಗತಿಮ್ |
ಸಂಪ್ರಾಪ್ತೋ ಹಿ ಮಹಾವೀರ್ಯಃ ಸ್ವರ್ಗಲೋಕಂ ಮಹಾರಥಃ ॥ 55 ॥
ಎಲೈ ಪಾಂಡವನೇ, ಈ ಅರ್ಥವನ್ನು ಚೆನ್ನಾಗಿ ಕೇಳಿ, ತಿಳಿದು, ಕ್ಷತ್ರಿಯಧರ್ಮವನ್ನು ತಿಳಿದು, ಶೂರರಿಗೆ ಉಂಟಾಗುವ ಶ್ರೇಷ್ಠ ಗತಿಯನ್ನು ತಿಳಿದು, ಮಹಾಪರಾಕ್ರಮಿಯೂ, ಮಹಾರಥನೂ ಆದ ಅಭಿಮನ್ಯುವು ಸ್ವರ್ಗಲೋಕವನ್ನು ಸೇರಿದ್ದಾನೆ.
ಅಭಿಮನ್ಯುಃ ಪರಾನ್ ಹತ್ವಾ ಪ್ರಮುಖೇ ಸರ್ವಧನ್ವಿನಾಮ್ |
ಯುದ್ಧ್ಯಮಾನೋ ಮಹೇಷ್ವಾಸಃ ತ್ಯಕ್ತಾತ್ಮಾಽಭಿಮುಖೋ ರಣೇ ॥56॥
ಅಸಿನಾ ಗದಯಾ ಶಕ್ತ್ಯಾ ಧನುಷಾ ಚ ಮಹಾರಥಃ |
ವಿರಜಾಃ ಸೋಮಸೂನುಃ ಸ ಪುನಸ್ತತ್ರ ಪ್ರಲೀಯತ ॥ 57 ॥
ಮಹಾಧನುರ್ಧಾರಿಯಾದ ಅಭಿಮನ್ಯುವು ಎಲ್ಲ ಧನುರ್ಧಾರಿಗಳ ಎದುರಿನಲ್ಲಿ ನಿಂತು ರಣರಂಗದಲ್ಲಿ,ಯುದ್ಧವನ್ನು ಮಾಡುತ್ತಾ, ಜೀವಿತದ ಹಂಗನ್ನು ತೊರೆದು ಶತ್ರುಗಳನ್ನು ಕೊಂದಿದ್ದಾನೆ. ಆ ಮಹಾರಥನೂ, ಚಂದ್ರನ ಪುತ್ರನೂ ಆದ ಅವನು ಖಡ್ಗದಿಂದ, ಗದೆಯಿಂದ, ಶಕ್ತಿಯಿಂದ, ಧನುಸ್ಸಿನಿಂದ ಹೊಡೆಯಲ್ಪಟ್ಟು, ಎಲ್ಲ ದೋಷಗಳನ್ನೂ ಕಳೆದುಕೊಂಡು ಪುನಃ ಆ ಚಂದ್ರನಲ್ಲಿಯೇ ಹೋಗಿ ಸೇರಿದ್ದಾನೆ.
ತಸ್ಮಾತ್ ಪರಾಂ ಧೃತಿಂ ಕೃತ್ವಾ ಭ್ರಾತೃಭಿಃ ಸಹ ಪಾಂಡವ |
ಅಪ್ರಮತ್ತಃ ಸುಸಂರಬ್ಧೋ ರಾಜನ್ ಯುದ್ಧ್ಯಸ್ವ ಶತ್ರುಭಿಃ ॥ 58 ॥|
ಎಲೈ ಪಾಂಡವನೇ, ಆದ್ದರಿಂದ ಸಹೋದರರ ಜೊತೆಯಲ್ಲಿ ಉತ್ತಮವಾದ ಧೈರ್ಯವನ್ನು ಆಶ್ರಯಿಸಿ, ಎಚ್ಚರಿಕೆಯಿಂದ ಕೂಡಿದವನಾಗಿ, ಕೋಪದಿಂದ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಏಕಪಂಚಾಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೆರಡನೆಯ ಅಧ್ಯಾಯ
ವ್ಯಾಸರಿಂದ ಯುಧಿಷ್ಠಿರನನ್ನು ಕುರಿತು ಷೋಡಶ ರಾಜರ ಉಪಾಖ್ಯಾನದ ಪ್ರಾರಂಭ. ಅದರಲ್ಲಿ ಮರುತ್ತ ರಾಜನ ಚರಿತೆ.
ಸಂಜಯಃ
ಶ್ರುತ್ವಾ ಮೃತ್ಯೋಃ ಸಮುತ್ಪತ್ತಿಂ ಕರ್ಮಾಣ್ಯನುಪಮಾನಿ ಚ |
ಧರ್ಮರಾಜಃ ಪುನರ್ವ್ಯಾಸಂ ಪ್ರಸಾದ್ಯೇನಮಥಾಬ್ರವೀತ್ ॥ 1 ॥
ಸಂಜಯ ಮೃತ್ಯುವಿನ ಉತ್ಪತ್ತಿಯನ್ನೂ ಮತ್ತು ಅಸದೃಶವಾದ ಕರ್ಮಗಳನ್ನೂ ಕೇಳಿ, ಧರ್ಮರಾಜನು ವ್ಯಾಸರನ್ನು ಪ್ರಸನ್ನಗೊಳಿಸಿ, ಪುನಃ ಅವರನ್ನು ಕುರಿತು ಮಾತನಾಡಿದನು.
ಸುರುಚಃ ಪುಣ್ಯಕರ್ಮಾಣಃ ಶಕ್ರಪ್ರತಿಮವಿಕ್ರಮಾಃ |
ಪೂರ್ವಂ ರಾಜರ್ಷಯೋ ಬ್ರಹ್ಮನ್ ಕಿಯಂತೋ ಮೃತ್ಯುನಾ ಹತಾಃ ॥
ಎಲೈ ಬ್ರಾಹ್ಮಣರೇ, ಒಳ್ಳೆಯ ಕಾಂತಿಯುಕ್ತರೂ, ಪುಣ್ಯಕರ್ಮಗಳನ್ನು ಮಾಡಿದವರೂ, ಇಂದ್ರನಿಗೆ ಸಮಾನವಾದ ಪರಾಕ್ರಮಶಾಲಿಗಳೂ ಆದ ಎಷ್ಟು ಜನ ರಾಜರ್ಷಿಗಳು ಹಿಂದೆ ಮೃತ್ಯುವಿನಿಂದ ಹತರಾಗಿದ್ದಾರೆ?
ಭೂಯ ಏವ ತು ಮಾ ತಥ್ಯೈರ್ವಚೋಭಿರುಪಬೃಂಹಯ |
ರಾಜರ್ಷೀಣಾಂ ಪುರಾಣಾನಾಂ ಸಮಾಶ್ವಾಸಯ ಕರ್ಮಭಿಃ ॥ 3 ॥
ನನಗೆ ಪುನಃ ಯಥಾರ್ಥವಾದ ಉಪದೇಶವನ್ನು ಕೊಟ್ಟು, ನನ್ನ ಜ್ಞಾನವನ್ನು ಅಭಿವೃದ್ಧಿಪಡಿಸಿ. ಪ್ರಾಚೀನ ಕಾಲದ ರಾಜರ್ಷಿಗಳ ಶ್ರೇಷ್ಠ ಕರ್ಮಗಳನ್ನು ಹೇಳಿ ನನ್ನನ್ನು ಸಮಾಧಾನಗೊಳಿಸಿ.
ಕಿಯಂತ್ಯೋ ದಕ್ಷಿಣಾ ದತ್ತಾಃ ಕಾಶ್ಚ ದತ್ತಾ ಮಹಾತ್ಮಭಿಃ |
ರಾಜರ್ಷಿಭಿಃ ಪುಣ್ಯಕೃದ್ಭಿಸ್ತದ್ಭವಾನ್ ಪ್ರಬ್ರವೀತು ಮೇ ॥ 4 ॥

ಮಹಾತ್ಮರೂ, ಪುಣ್ಯಕರ್ಮವನ್ನು ಮಾಡಿದವರೂ ಆದ ಆ ರಾಜರ್ಷಿಗಳು ಎಷ್ಟು ದಕ್ಷಿಣೆಯನ್ನು ಕೊಟ್ಟರು, ಎಂತಹ ದಕ್ಷಿಣೆಯನ್ನು ಕೊಟ್ಟರು ಎಂದು ತಾವು ನನಗೆ ಹೇಳಿ.
ವ್ಯಾಸಃ
ಅನ್ಯೇಽಪಿ ಯಜ್ವನಾಂ ಲೋಕಾ ಅನ್ಯೇ ಚಾಪಿ ತಪಸ್ವಿನಾಮ್ |
ಕ್ಷಮಾವತಾಂ ಚ ತ್ರೀಂಲ್ಲೋಕಾನ್ ಶೂರಾ ಗಚ್ಛಂತಿ ಭಾರತ ॥ 5 ॥
ವ್ಯಾಸರು ಯಾಗವನ್ನು ಮಾಡಿದವರ ಲೋಕಗಳು ಬೇರೆ. ತಪಸ್ಸನ್ನು ಮಾಡಿದವರ ಲೋಕಗಳು ಬೇರೆ. ಕ್ಷಮಾದಿ ಗುಣಗಳನ್ನು ಉಳ್ಳವರ ಲೋಕಗಳು ಬೇರೆ. ಎಲೈ ಭಾರತನೇ, ಶೂರರಾದವರು ಆ ಮೂರು ಲೋಕಗಳನ್ನೂ ಹೊಂದುತ್ತಾರೆ.
ಕ್ಷತ್ರಿಯಸ್ಯ ತು ಸಂಗ್ರಾಮೇ ಶತ್ರೂನ್ ಹತ್ವಾ ಹತಸ್ಯ ವಾ |
ಫಲಮತ್ಯಂತಮಿತ್ಯಾಹುರ್ಧರ್ಮಶಾಸ್ತ್ರವಿದೋ ಜನಾಃ ॥ 6 ॥
ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವ ಅಥವಾ ತಾನೂ ಹತನಾಗುವ ಕ್ಷತ್ರಿಯನಿಗೆ ಅತ್ಯಂತ ಶ್ರೇಷ್ಠವಾದ ಫಲವಿದೆ ಎಂದು ಧರ್ಮಶಾಸ್ತ್ರವನ್ನು ತಿಳಿದ ಜನರು ಹೇಳುತ್ತಾರೆ.
ವೇದವಿದ್ಯಾವ್ರತಸ್ನಾತಾ ಯಜ್ವಾನಃ ಪುತ್ರಿಣಶ್ಚ ಯೇ |
ತೇಭ್ಯಃ ಪರಾರ್ಘ್ಯಾ ಯಜ್ವಾನೋ ಯಜ್ವಭ್ಯಶ್ಚ ತನುತ್ಯಜಃ ॥ 7 ॥
ವೇದವಿದ್ಯಾಪಾರಂಗತರಾದವರು, ಯಾಗವನ್ನು ಮಾಡಿದವರು, ಪುತ್ರವಂತರಾದವರು ಈ ಮೂವರಲ್ಲಿ ಯಾಗವನ್ನು ಮಾಡುವವರು ಶ್ರೇಷ್ಠರಾದವರು. ಆದರೆ ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವ ಕ್ಷತ್ರಿಯರು ಅವರಿಗಿಂತ ಶ್ರೇಷ್ಠರಾದವರು.
ಸ ವೀರೋ ಯಜ್ವನೋ ನಿತ್ಯಂ ಕ್ಷತ್ರಿಯಾನಾರ್ಜುನಿರ್ಗತಃ |
ಲೋಕಾನ್ ಪುಣ್ಯತಮಾನಿಷ್ಟಾನಿತಿ ವಿದ್ಧಿ ವಿಶಾಂಪತೇ ॥ 8 ॥
ಎಲೈ ರಾಜನೇ, ಅರ್ಜುನಪುತ್ರನಾದ, ವೀರನಾದ ಅಭಿಮನ್ಯುವು ಅತ್ಯಂತ ಪುಣ್ಯರೂಪವೂ, ಇಷ್ಟವೂ ಆದ ಯಾಗ ಮಾಡುವವರ ಲೋಕವನ್ನು ಹೊಂದಿದ್ದಾನೆಂದು ತಿಳಿ.
ಸರ್ವೇಷಾಂ ನೃಪಸಿಂಹಾನಾಂ ಶೃಣು ಯಜ್ಞಾನ್ ನೃಪೋತ್ತಮ |
ತಾನತಿಕ್ರಮ್ಯ ಗಚ್ಛಂತಿ ಸ್ವರ್ಗಕಾಮಾಸ್ತನುತ್ಯಜಃ ॥ 9 ॥
ಎಲೈ ರಾಜಶ್ರೇಷ್ಠನೇ, ಎಲ್ಲ ಶ್ರೇಷ್ಠರಾದ ರಾಜರುಗಳು ಮಾಡಿದ ಯಜ್ಞಗಳನ್ನು ಕೇಳು. ಸ್ವರ್ಗದ ಆಸೆಯಿಂದ ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವ ಕ್ಷತ್ರಿಯರು ಅವರೆಲ್ಲರನ್ನೂ ಮೀರಿ ಉನ್ನತ ಸ್ಥಾನಕ್ಕೆ ಹೋಗುತ್ತಾರೆ.
ಯುಧಿಷ್ಠಿರಃ
ಸರ್ವೇಷಾಂ ಯಜ್ವನಾಂ ಯಜ್ಞಾನ್ ಶ್ರೋತುಮಿಚ್ಛಾಮಿ ಸುವ್ರತ |
ದಕ್ಷಿಣಾಶ್ಚಾನುರೂಪೇಭ್ಯೋ ದತ್ತಾ ರಾಜರ್ಷಿಸತ್ತಮೈಃ ॥ 10 ॥
ಯುಧಿಷ್ಠಿರ ಎಲೈ ಒಳ್ಳೆಯ ವ್ರತಶಾಲಿಗಳೇ, ರಾಜರ್ಷಿಶ್ರೇಷ್ಠರು ಮಾಡಿದ ಎಲ್ಲಾ ಯಾಗಗಳನ್ನೂ ಮತ್ತು ಯೋಗ್ಯರಾದ ಪಾತ್ರರಲ್ಲಿ ಅವರು ಮಾಡಿದ ಅನುರೂಪವಾದ ದಾನ-ದಕ್ಷಿಣೆಗಳನ್ನೂ ಕೇಳಲು ಇಷ್ಟಪಡುತ್ತೇನೆ.
ವ್ಯಾಸಃ
ಶೈಬ್ಯಸ್ಯ ನೃಪತೇಃ ಪುತ್ರಃ ಸೃಂಜಯೋ ನಾಮ ಭೂಮಿಪಃ |
ಸಖಾಯೌ ತಸ್ಯ ಚಾಭೂತಾಮ್ ಋಷೀ ಪರ್ವತನಾರದೌ ॥ 11 ॥
ವ್ಯಾಸರು ಶೈಬ್ಯರಾಜನಿಗೆ ಸೃಂಜಯನೆಂಬ ಪುತ್ರನಿದ್ದನು. ಋಷಿಗಳಾದ ಪರ್ವತ ಮತ್ತು ನಾರದರು ಅವನಿಗೆ ಸ್ನೇಹಿತರಾಗಿದ್ದರು.
ತೌ ಕದಾಚಿದ್ ಗೃಹಂ ತಸ್ಯ ಪ್ರವಿಷ್ಟೌ ತದ್ದಿದೃಕ್ಷಯಾ |
ವಿಧಿವಚ್ಚಾರ್ಚಿತೌ ತೇನ ಪ್ರೀತೌ ತತ್ರೋಷತುಃ ಸುಖಮ್ ॥ 12 ॥
ಒಮ್ಮೆ ಅವರು ಅವನನ್ನು ನೋಡಲು ಬಯಸಿ ಅವನ ಅರಮನೆಗೆ ಬಂದರು. ಅವನಿಂದ ವಿಧಿವತ್ತಾಗಿ ಪೂಜಿಸಲ್ಪಟ್ಟು ಸಂತೋಷಗೊಂಡು ಸುಖವಾಗಿ ಅಲ್ಲಿಯೇ ವಾಸ ಮಾಡಿದರು.
ತಂ ಕದಾಚಿತ್ ಸುಖಾಸೀನಂ ತಾಭ್ಯಾಂ ಸಹ ಶುಚಿಸ್ಮಿತಾ |
ದುಹಿತಾಽಭ್ಯಾಗಮತ್ ಕನ್ಯಾ ಸೃಂಜಯಂ ವರವರ್ಣಿನೀ ॥ 13 ॥
ತಯಾಭಿವಾದಿತಂ ಕನ್ಯಾಮಭ್ಯನಂದದ್ ಯಥಾವಿಧಿ
ತತ್ಸಲಿಂಗಾಭಿರಾಶೀರ್ಭಿರಿಷ್ಟಾಭಿರಭಿತಸ್ತಥಾ |
ತಾಂ ನಿರೀಕ್ಷ್ಯಾಬ್ರವೀದ್ ವಾಕ್ಯಂ ನಾರದಃ ಪ್ರಹಸನ್ನಿವ ॥ 14 ॥
ಒಮ್ಮೆ ಆ ಇಬ್ಬರು ಋಷಿಗಳ ಜೊತೆಯಲ್ಲಿ ಸೃಂಜಯನು ಸುಖವಾಗಿ ಕುಳಿತಿರಲು ಶುಚಿಸ್ಮಿತೆಯೂ, ಸುಂದರಿಯೂ ಆದ ಸೃಂಜಯನ ಮಗಳು ಅಲ್ಲಿಯೇ ಬಂದಳು. ನಮಸ್ಕರಿಸಿದ ಅವಳನ್ನು ನೋಡಿ ನಾರದರು ವಿಧಿವತ್ತಾಗಿ ಅವಳಿಗೆ ಇಷ್ಟವಾದ ಅನೇಕ ಆಶೀರ್ವಾದಗಳನ್ನು ಮಾಡಿ, ಅವಳನ್ನು ನೋಡಿ ನಗುತ್ತಾ ಮಾತನಾಡಿದರು.
ಕಸ್ಯೇಯಂ ತ್ವಾಯತಾಪಾಂಗೀ ಸರ್ವಲಕ್ಷಣಸಂಯುತಾ |
ಉಷಾ ಸ್ವಿದ್ಭಾಸ್ವಿದರ್ಕಸ್ಯ ಜ್ವಲನಸ್ಯ ಶಿಖಾ ತ್ವಿಯಮ್ |
ಹ್ರೀಃ ಶ್ರೀಃ ಕೀರ್ತಿರ್ಧೃತಿಃ ಸಿದ್ಧಿಃ ತುಷ್ಟಿಶ್ಚಂದ್ರಮಸಃ ಪ್ರಭಾ ॥॥15
(ಎಲೈ ರಾಜನೇ) ವಿಶಾಲನೇತ್ರೆಯೂ, ಸರ್ವಲಕ್ಷಣ ಸಂಪನ್ನಳೂ ಆದ ಇವಳು ಯಾರ ಪುತ್ರಿ? ಇವಳೇನು ಉಷಾದೇವಿಯೋ ಅಥವಾ ಸೂರ್ಯನ ಪ್ರಭೆಯೋ ಅಥವಾ ಅಗ್ನಿಯ ಶಿಖೆಯೋ ಅಥವಾ ಹ್ರೀ, ಶ್ರೀ, ಕೀರ್ತಿ, ಧೃತಿ, ಸಿದ್ಧಿ, ಪುಷ್ಟಿ ಮೊದಲಾದ ಲಕ್ಷ್ಮಿಯ ರೂಪವೋ ಅಥವಾ ಚಂದ್ರನ ಪ್ರಭೆಯೋ?

ಏವಂ ಬ್ರುವಾಣಂ ದೇವರ್ಷಿಂ ನೃಪತಿಃ ಸೃಂಜಯೋಽಬ್ರವೀತ್ |
ಮಮೇಯಂ ಭಗವನ್ ವತ್ಸಾ ವರ್ಯಾ ವರಮಭೀಪ್ಸತಿ ॥ 16 ॥
ಹೀಗೆ ಹೇಳುತ್ತಿದ್ದ ದೇವರ್ಷಿಗಳಾದ ನಾರದರನ್ನು ಕುರಿತು ರಾಜನಾದ ಸೃಂಜಯನು ಪೂಜ್ಯರೇ, ಇವಳು ನನ್ನ ಪುತ್ರಿ. ವರನನ್ನು ಬಯಸುತ್ತಾಳೆ ಎಂದು ಹೇಳಿದನು.
ನಾರದಸ್ತ್ವಬ್ರವೀದೇನಂ ದೇಹಿ ಮಹ್ಯಮಿಮಾಂ ನೃಪ |
ಭಾರ್ಯಾರ್ಥೇ ತ್ವಂ ಮಹಚ್ಛ್ರೇಯಃ ಪ್ರಾಪ್ತುಂ ಚೇದಿಚ್ಛಸೇಽನಘ ॥17॥
ನಾರದರು ಅವನನ್ನು ಕುರಿತು ರಾಜನೇ, ಇವಳನ್ನು ನನಗೆ ಪತ್ನಿಯಾಗಿ ಕೊಟ್ಟುಬಿಡು. ಎಲೈ ಅನಘನೇ, ನಿನಗೆ ದೊಡ್ಡಶ್ರೇಯಸ್ಸು ಉಂಟಾಗಬೇಕಾದರೆ ಹೀಗೆ ಮಾಡು ಎಂದು ಹೇಳಿದರು.
ದದಾನೀತ್ಯೇವ ಸುಪ್ರೀತಃ ಪ್ರಾಂಜಲಿಃ ಪ್ರಾಹ ನಾರದಮ್ ॥ 18 ॥
ರಾಜನು ಸಂತೋಷಗೊಂಡು ಕೈಮುಗಿದು, ನಾರದರನ್ನು ಕುರಿತು ಕೊಡುವೆನು ಎಂದೇ ಹೇಳಿದನು.
ಏವಮುಕ್ತೇ ನೃಪತಿನಾ ಕ್ರೋಧಪರ್ಯಾಕುಲೇಕ್ಷಣಃ |
ಪರ್ವತಸ್ತು ಸುಸಂಕ್ರುದ್ಧೋ ನಾರದಂ ವಾಕ್ಯಮಬ್ರವೀತ್ ॥ 19 ॥
ರಾಜನು ಹೀಗೆ ಹೇಳುತ್ತಿರಲು ಪರ್ವತರು ಬಹಳ ಕೋಪಗೊಂಡು, ಕೋಪದಿಂದ ಜ್ವಲಿಸುವ ನೇತ್ರವುಳ್ಳವರಾಗಿ ನಾರದರನ್ನು ಕುರಿತು ಮಾತನಾಡಿದರು.
ಪೂರ್ವಂ ಮಮೇಮಾಂ ಮನಸಾ ವಿದ್ಧಿ ಭಾರ್ಯಾಂ ವೃತಾಮೃಷೇ |
ಯಸ್ಮಾದಪಾಚರಸ್ತಸ್ಮಾತ್ ಸ್ವರ್ಗಮಾರ್ಗಂ ನ ಗಚ್ಛಸಿ |
ಏವಮುಕ್ತೋ ನಾರದಸ್ತಂ ಪ್ರತ್ಯುವಾಚೋತ್ತರಂ ವಚಃ ॥ 20 ॥
ಎಲೈ ಋಷಿಯೇ, ಇವಳನ್ನು ನಾನು ಮೊದಲೇ ನನ್ನ ಮನಸ್ಸಿನಲ್ಲಿ ಭಾರ್ಯೆ ಎಂದು ವರಿಸಿದ್ದೇನೆ. ಅವಳನ್ನು ನೀನು ನನ್ನಿಂದ ವಿಮೋಚಿಸಿದ ಕಾರಣದಿಂದ ನೀನು ಸ್ವರ್ಗ ಮಾರ್ಗದಲ್ಲಿ ಹೋಗುವುದಿಲ್ಲ (ಎಂದು ಹೇಳಿದರು). ಈ ಮಾತುಗಳನ್ನು ಕೇಳಿದ ನಾರದರು ಅದಕ್ಕೆ ಉತ್ತರ ರೂಪವಾಗಿ ಮಾತನಾಡಿದರು.
ಮನೋವಾಗ್ಬುದ್ಧಿಸಂಭಾಷಾಃ ಸತ್ಯಂ ತೋಯಮಥಾಗ್ನಯಃ |
ಪಾಣಿಗ್ರಹಣಮಂತ್ರಾಶ್ಚ ಪ್ರಥಿತಂ ದಾರಲಕ್ಷಣಮ್ ॥ 21 ॥
ಮನೋ-ವಾಕ್-ಬುದ್ಧಿಗಳ ಸಾಮರಸ್ಯ, ಸಂಭಾಷಣೆ, ಕನ್ಯಾದಾನ ಪ್ರತಿಜ್ಞೆ, ಧಾರೋದಕ ಪೂರ್ವಕವಾಗಿ ದಾನ, ಅಗ್ನಿಯ ಸಮ್ಮುಖದಲ್ಲಿ ಪಾಣಿಗ್ರಹಣ, ವೇದಮಂತ್ರಗಳು- ಇವು ವಿವಾಹದ ಅಂಗಗಳೆಂದು ಪ್ರಸಿದ್ಧವಾಗಿವೆ.
ನ ತ್ವೇಷಾಂ ನಿಶ್ಚಿತಾ ನಿಷ್ಠಾ ತ್ವಯಾ ಸಾ ಮನಸಾ ಸ್ಮ ೃತಾ |
ಇವುಗಳಲ್ಲಿ ಯಾವ ಒಂದನ್ನೂ ಇಲ್ಲಿ ಅನುಸರಿಸಿಲ್ಲ. ನೀನು ಕೇವಲ ಮನಸ್ಸಿನಿಂದ ಅವಳನ್ನು ಸ್ಮರಿಸಿದ್ದೀಯಷ್ಟೆ?
ಏವಂ ವಿದ್ವಾಂಸ್ತು ಮಾಂ ಯಸ್ಮಾದ್ ಅನುವ್ಯಾಹೃತವಾನಸಿ ॥ 22 ॥
ತಸ್ಮಾತ್ ತ್ವಮಪಿ ನ ಸ್ವರ್ಗಂ ಗಮಿಷ್ಯಸಿ ಮಯಾ ವಿನಾ |
ಅನ್ಯೋನ್ಯಮೇವಮುಕತ್ವ ತು ಯಥಾಸತ್ಕೃತಮೂಷತುಃ ॥ 23 ॥
ಇದು ತಿಳಿದಿದ್ದರೂ ಸಹ ನೀನು ನನ್ನನ್ನು ಕುರಿತು ಹೀಗೆ ಶಾಪರೂಪವಾದ ಮಾತನ್ನು ಆಡಿದುದರಿಂದ ನೀನೂ ಸಹ ನನ್ನ ಜೊತೆಯಿಲ್ಲದೆ ಸ್ವರ್ಗಕ್ಕೆ ಹೋಗುವುದಿಲ್ಲ. ಹೀಗೆ ಪರಸ್ಪರವಾಗಿ ಹೇಳಿಕೊಂಡು, ಸೃಂಜಯನ ಸತ್ಕಾರವನ್ನು ಸ್ವೀಕರಿಸಿ, ಅಲ್ಲಿಯೇ ವಾಸ ಮಾಡಿದರು.
ಸೃಂಜಯೋಽಹರ್ಷಯದ್ ವಿಪ್ರಾನ್ ಸ್ನಾನಾಚ್ಛಾದನಭೋಜನೈಃ |
ಪುತ್ರಕಾಮಃ ಪರಂ ಶಕ್ತ್ಯಾ ಯತ್ನೇನಾಹರಹಃ ಶುಚಿಃ ॥ 24 ॥
ಪುತ್ರಕಾಮನಾದ ಸೃಂಜಯನು ಪ್ರತಿದಿನವೂ ಬಹಳ ಪ್ರಯತ್ನಪಟ್ಟು ಶುಚಿಯಾಗಿ ಬ್ರಾಹ್ಮಣರನ್ನು ಸಶನನ-ವಸ್ತ್ರ-ಭೋಜನಗಳಿಂದ ಸಂತೋಷಪಡಿಸಿದನು.
ತಸ್ಯ ಪ್ರಸನ್ನಾ ವಿಪ್ರೇಂದ್ರಾಃ ಕದಾಚಿತ್ ಪುತ್ರದರ್ಶಿನಃ |
ತಪಃಸ್ವಾಧ್ಯಾಯನಿರತಾ ವೇದವೇದಾಂಗಪಾರಗಾಃ ॥ 26 ॥
ಸಹಿತಾ ನಾರದಂ ಪ್ರಾಹುರ್ದೇಹ್ಯಸ್ಮೈ ವರಮೀಪ್ಸಿತಮ್ |
ತಥೇತ್ಯುಕತ್ವ ದ್ವಿಜೇಭ್ಯಶ್ಚ ಸೃಂಜಯಂ ನಾರದೋಽಬ್ರವೀತ್ |
ವರಂ ವೃಣೀಷ್ವ ಭದ್ರಂ ತೇ ಯಾದೃಶಂ ಪುತ್ರಮಿಚ್ಛಸಿ ॥ 27 ॥
ಅವನಿಗೆ ಪುತ್ರಫಲ ಇರುವುದೆಂದು ನಿರೀಕ್ಷಿಸಿದ, ಪ್ರಸನ್ನರಾದ, ವೇದವೇದಾಂಗ ಪಾರಂಗತರೂ, ತಪಃಸ್ವಾಧ್ಯಾಯ ನಿರತರೂ ಆದ ಬ್ರಾಹ್ಮಣಶ್ರೇಷ್ಠರು ಜೊತೆಯಲ್ಲಿ ಬಂದು ನಾರದರನ್ನು ಕುರಿತು ಈ ರಾಜನಿಗೆ ಇಷ್ಟವಾದ ವರವನ್ನು ಕೊಡಿ ಎಂದು ಕೇಳಿದರು. ನಾರದರು ಬ್ರಾಹ್ಮಣರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ, ಸೃಂಜಯನನ್ನು ಕುರಿತು `ನಿನಗೆ ಮಂಗಳವಾಗಲಿ, ವರವನ್ನು ಕೇಳು, ಎಂತಹ ಪುತ್ರನನ್ನು ಬಯಸುತ್ತೀಯೆ?' ಎಂದು ಕೇಳಿದರು.
ತಥೋಕ್ತಃ ಪ್ರಾಂಜಲೀ ರಾಜಾ ಪುತ್ರಂ ವವ್ರೇ ಗುಣಾನ್ವಿತಮ್ |
ಯಶಸ್ವಿನಂ ಕೀರ್ತಿಮಂತಂ ದರ್ಶನೀಯಮನಿಂದಿತಮ್ ॥ 28 ॥
ಯಸ್ಯ ಮೂತ್ರಂ ಪುರೀಷಂ ಚ ಸ್ವೇದಃ ಕ್ಲೇದಶ್ಚ ಕಾಂಚನಮ್ |
ಸರ್ವಂ ಭವೇತ್ಪ್ರಸಾದಾದ್ ವೈ ತಾದೃಶಂ ತನಯಂ ವೃಣೇ ॥ 29 ॥
ಹೀಗೆ ಹೇಳಲ್ಪಟ್ಟ ರಾಜನು ಕೈಗಳನ್ನು ಮುಗಿದು, ತನಗೆ ಗುಣವಂತನೂ, ಯಶಸ್ವಿಯೂ, ಕೀರ್ತಿವಂತನೂ, ಸುಂದರನೂ,

ಅನಿಂದಿತನೂ ಆದ ಪುತ್ರನು ಬೇಕು. ಅವನ ಮೂತ್ರ-ಮಲ-ಬೆವರು ಎಲ್ಲವೂ ನಿಮ್ಮ ಅನುಗ್ರಹದಿಂದ ಸುವರ್ಣಮಯ- ವಾಗಿರಬೇಕು. ಅಂತಹ ಪುತ್ರನನ್ನು ಬೇಡುತ್ತೇನೆ ಎಂದು ಹೇಳಿದನು.
ವ್ಯಾಸಃ
ತಥಾ ಭವಿಷ್ಯತೀತ್ಯುಕ್ತೇ ಜಜ್ಞೇ ತಸ್ಯೇಪ್ಸಿತಃ ಸುತಃ |
ಕಾಂಚನಸ್ಯಾಕರಃ ಶ್ರೀಮಾನ್ ಪ್ರಸಾದಾಚ್ಚ ಸುಕಾಂಕ್ಷಿತಃ ॥ 30 ॥
ವ್ಯಾಸರು ನಾರದರು ಹಾಗೆಯೇ ಆಗುವುದು ಎಂದು ಹೇಳುತ್ತಿರಲು, ಸೃಂಜಯನಿಗೆ ಅವನು ಬಯಸಿದಂತಹ ಕಾಂತಿಮಂತನೂ, ಎಲ್ಲರಿಂದಲೂ ಅಪೇಕ್ಷಿಸಲ್ಪಡುವವನೂ, ಸುವರ್ಣಕ್ಕೆ ಆಶ್ರಯನಾದವನೂ ಆದ ಇಷ್ಟನಾದ ಪುತ್ರನು ನಾರದರ ಅನುಗ್ರಹದಿಂದ ಜನಿಸಿದನು.
ಅಪತತ್ ತಸ್ಯ ನೇತ್ರಾಭ್ಯಾಂ ರುದತಸ್ತಸ್ಯ ನೇತ್ರಜಮ್ |
ಮೂತ್ರಂ ಪುರೀಷಂ ಸ್ವೇದಶ್ಚ ಸರ್ವಂ ಭವತಿ ಕಾಂಚನಮ್ |
ಸುವರ್ಣಷ್ಠೀವಿರಿತ್ಯೇವ ತಸ್ಯ ನಾಮಾಽಭವತ್ ಕೃತಮ್ ॥ 31 ॥
ಅವನು ರೋದನ ಮಾಡುವಾಗ ಬಿದ್ದ ಕಣ್ಣೀರು, ಮೂತ್ರ, ಮಲ, ಬೆವರು ಎಲ್ಲವೂ ಸುವರ್ಣವಾಗುತಿತದ್ದಿತು. ಆದ್ದರಿಂದ ಅವನಿಗೆ ಸುವರ್ಣಷ್ಠೀವಿ ಎಂದೇ ಹೆಸರಾಯಿತು.
ತಸ್ಮಿನ್ ವರಪ್ರದಾನೇನ ಪ್ರವೃದ್ಧಸ್ತ್ವಮಿತೈರ್ಧನೈಃ |
ಕಾರಯಾಮಾಸ ನೃಪತಿಃ ಸೌವರ್ಣಂ ಸರ್ವಮೀಪ್ಸಿತಮ್ ॥ 32 ॥
ಋಷಿಗಳ ವರಪ್ರದಾನದಿಂದ ರಾಜನಿಗೆ ಅಪರಿಮಿತವಾಗಿ ಧನವು ಅಭಿವೃದ್ಧಿ ಹೊಂದಿತು. ರಾಜನು ತನ್ನ ಪುತ್ರನಿಗೆ ಬೇಕಾದುದೆಲ್ಲವನ್ನೂ ಸುವರ್ಣದಿಂದಲೇ ಮಾಡಿಸಿದನು.
ಗೃಹಪ್ರಾಕಾರದುರ್ಗಾಣಿ ಬ್ರಾಹ್ಮಣಾವಸಥಾನ್ಯಪಿ |
ಶಯ್ಯಾಸನಾನಿ ಯಾನಾನಿ ಸ್ಥಾಲೀಪಿಠರಭಾಜನಮ್ ॥ 33 ॥
ತಸ್ಯ ಸ್ಮ ರಾಜ್ಞಸ್ತದ್ ವೇಶ್ಮ ಬಾಹ್ಯಾಶ್ಚಾಭ್ಯಂತರಾಶ್ಚ ಯೇ |
ಸರ್ವಂ ತತ್ ಕಾಂಚನಮಯಂ ಕಾಲೇನ ಪರಿವರ್ಧಿತಮ್ ॥ 34 ॥
ಅವನ ಮನೆ, ಕೋಟೆ, ಕೊತ್ತಲಗಳು, ಬ್ರಾಹ್ಮಣರ ಆವಾಸಗೃಹಗಳು, ಶಯ್ಯಾಸನಗಳು, ವಾಹನಗಳು, ಯಜ್ಞ ಮತ್ತು ಅಡುಗೆ ಮನೆಯ ಪಾತ್ರೆಗಳು, ರಾಜನ ಮನೆಯ ಒಳಗೆ-ಹೊರಗೆ ಎಲ್ಲವೂ ಸುವಣರ್ಮಯವಾಗಿ ಕಾಲಕ್ರಮದಲ್ಲಿ ಅಭಿವೃದ್ಧಿಯನ್ನು ಹೊಂದಿತು.
ಅಥ ದಸ್ಯುಗಣಾಃ ಶ್ರುತ್ವಾ ದೃಷ್ಟ್ವಾ ಚೈವ ತಥಾವಿಧಮ್ |
ಅಶುಭಂ ತಸ್ಯ ನೃಪತೇಃ ಸಮಾರಬ್ಧಾಶ್ಚಿಕೀರ್ಷಿತುಮ್ ॥ 35 ॥
ಅನಂತರ ಕಳ್ಳರ ಸಮೂಹಗಳು ರಾಜನ ಅಂತಹ ಐಶ್ವರ್ಯವನ್ನು ನೋಡಿ ಅವನಿಗೆ ಅಹಿತವನ್ನು ಮಾಡಲು ಉಪಕ್ರಮಿಸಿದರು.
ಕಶ್ಚಿತ್ ತತ್ರಾಬ್ರುವೀದ್ ರಾಜ್ಞಃ ಪುತ್ರಂ ಗೃಹ್ಣೀಮ ವೈ ವಯಮ್ |
ಸೋಽಸ್ಯಾಕರಃ ಕಾಂಚನಸ್ಯ ತಸ್ಮಿನ್ ಯತ್ನಂ ಚ ಕುರ್ಮಹೇ ॥ 36 ॥
ರಾಜನ ಎಲ್ಲ ಸುವರ್ಣ ಸಂಪತ್ತಿಗೆ ಅವನ ಪುತ್ರನೇ ಕಾರಣ. ಆದ್ದರಿಂದ ನಾಮ ರಾಜಪುತ್ರನನ್ನು ಸೆರೆಹಿಡಿಯೋಣ. ಆ ವಿಷಯದಲ್ಲಿ ಪ್ರಯತ್ನವನ್ನು ಮಾಡೋಣ ಎಂದು ಅವರಲ್ಲಿ ಒಬ್ಬನು ಹೇಳಿದನು.
ತತಸ್ತೇ ದಸ್ಯವೋ ಲುಬ್ಧಾಃ ಪ್ರವಿಷ್ಟಾ ನೃಪತೇರ್ಗೃಹಮ್ |
ರಾಜಪುತ್ರಂ ತತೋ ಜಹ್ರುಃ ಸುವರ್ಣಷ್ಠೀವಿನಂ ಬಲಾತ್ ॥ 37 ॥
ಅನಂತರ ಹಣದ ಆಸೆಯುಳ್ಳ ಆ ಕಳ್ಳರು ಒಂದು ದಿನ ರಾಜನ ಅರಮನೆಯನ್ನು ಪ್ರವೇಶಿಸಿ, ರಾಜಪುತ್ರನಾದ ಸುವರ್ಣಷ್ಠೀವಿಯನ್ನು ಅಪಹರಿಸಿದರು.
ಗೃಹ್ಯೈನಮನುಪಾಯಜ್ಞಾ ನಯಿತ್ವಾಽಥ ವನಂ ತತಃ |
ಹತ್ವಾ ವಿಶಸ್ಯ ನಾಪಶ್ಯನ್ ಸುಲುಬ್ಧಾ ವಸು ಕಿಂಚನ ॥ 38 ॥
ಸುವರ್ಣವನ್ನು ಪಡೆಯುವ ಉಪಾಯವನ್ನು ತಿಳಿಯದ ಅವರು ಅವನನ್ನು ಹಿಡಿದು, ಅನಂತರ ಕಾಡಿಗೆ ಕರೆದುಕೊಂಡು ಹೋಗಿ, ಅವನನ್ನು ಕೊಂದು ಶರೀರವನ್ನು ಭಾಗಗಳನ್ನಾಗಿ ಮಾಡಿದರೂ ಅಲ್ಲಿ ಅವರಿಗೆ ಯಾವ ಸುವರ್ಣವೂ ಕಾಣಲಿಲ್ಲ.
ತಸ್ಯ ಪ್ರಾಣೈರ್ವಿಯುಕ್ತಸ್ಯ ನಷ್ಟಂ ತತ್ ಕಾಂಚನಂ ವರಮ್ |
ದಸ್ಯವಶ್ಚ ತದಾಽನ್ಯೋನ್ಯಂ ಜಗ್ಮುಸ್ತ್ಯಕತ್ವ ವಿಚೇತಸಃ ॥ 39 ॥
ಸುವರ್ಣಷ್ಠೀವಿಯ ಪ್ರಾಣವಿಯೋಗವಾದ ಮೇಲೆ ಅವನ ಜೊತೆಯಲ್ಲಿ ಬಂದಿದ್ದ ಸುವರ್ಣದ ವರವು ಹೊರಟು ಹೋಯಿತು. ಕಳ್ಳರು ಮೂಢರಾಗಿ ಆ ಶರೀರವನ್ನು ಅಲ್ಲಿಯೇ ಬಿಟ್ಟು ಹೊರಟುಹೋದರು.
ಹತ್ವಾ ಪರಸ್ಪರಂ ಕ್ರುಷ್ಟಾಃ ಕುಮಾರಂ ಚಾದ್ಭುತಪ್ರಭಮ್ |
ಅಸಂಭಾವ್ಯಂ ಗತಾ ಘೋರಂ ನರಕಂ ಮೋಘಕಾರಿಣಃ ॥ 40 ॥
ಅದ್ಭುತವಾದ ಕಾಂತಿಯನ್ನು ಹೊಂದಿದ್ದ ಕುಮಾರನನ್ನು ಕೊಂದು ಆ ಕಳ್ಳರು ಪರಸ್ಪರವಾಗಿ ಬೈದುಕೊಳ್ಳುತ್ತಾ, ವ್ಯರ್ಥವಾದ ಮತ್ತು ನಿಂದ್ಯವಾದ ಕಾರ್ಯವನ್ನು ಮಾಡಿದ ಕಾರಣದಿಂದ ಬಹಳ ಘೋರವಾದ ನರಕಕ್ಕೆ ಹೋದರು.
ತಂ ದೃಷ್ಟ್ವಾ ನಿಹತಂ ಪುತ್ರಂ ವರದತ್ತಂ ಮಹಾತಪಾಃ |
ವಿಲಲಾಪ ಸುದುಃಖಾರ್ತೋ ಬಹುಧಾ ಕರುಣಂ ನೃಪಃ ॥ 41 ॥
ಋಷಿಗಳ ವರದಾನದಿಂದ ಜನಿಸಿದ ಪುತ್ರನು ಹತನಾದುದನ್ನು ನೋಡಿ ಮಹಾತಪಸ್ವಿಯಾದ ಸೃಂಜಯನು ಬಹಳ ದುಃಖದಿಂದ ಕೂಡಿ, ಕರುಣಾಜನಕವಾಗಿ ಅನೇಕ ರೀತಿಯಲ್ಲಿ ವಿಲಾಪವನ್ನು ಮಾಡಿದನು.

ವಿಲಪಂತಂ ನಿಶಮ್ಯಾಥ ಪುತ್ರಶೋಕಹತಂ ನೃಪಮ್ |
ಪ್ರತ್ಯದೃಶ್ಯತ ದೇವರ್ಷಿರ್ನಾರದೋ ನೃಪಸನ್ನಿಧೌ ॥ 42 ॥
ಪುತ್ರಶೋಕದಿಂದ ಅಭಿಹತನಾಗಿ ವಿಲಾಪವನ್ನು ಮಾಡುತ್ತಿದ್ದ ರಾಜನನ್ನು ನೋಡಿ ದೇವರ್ಷಿಗಳಾದ ನಾರದರು ರಾಜನ ಸನ್ನಿಧಿಯಲ್ಲಿ ಕಾಣಿಸಿಕೊಂಡರು.
ಉವಾಚ ಚೈನಂ ದುಃಖಾರ್ತಂ ವಿಲಪಂತಮಚೇತಸಮ್ |
ಸೃಂಜಯಂ ನಾರದೋ ಯದ್ಯತ್ ತನ್ನಿಬೋಧ ಯುಧಿಷ್ಠಿರ ॥43॥
ಎಲೈ ಯುಧಿಷ್ಠಿರನೇ, ಪ್ರಜ್ಞಾಶೂನ್ಯನಾಗಿ ದುಃಖಾರ್ತನಾಗಿ ವಿಲಾಪವನ್ನು ಮಾಡುತ್ತಿದ್ದಂತಹ ಸೃಂಜಯರನ್ನು ಕುರಿತು ನಾರದರು ಏನೇನು ಹೇಳಿದರೋ ಅದನ್ನು ಕೇಳುವವನಾಗು.
ತ್ಯಜ ಶೋಕಂ ಮಹಾರಾಜ ವೈಕ್ಲವ್ಯಂ ತ್ಯಜ ಬುದ್ಧಿಮನ್ |
ನ ಮೃತಃ ಶೋಚತೋ ಜೀವೇನ್ನುಹ್ಯತೋ ವಾ ಜನಾಧಿಪ ॥ 44 ॥
ಎಲೈ ಮಹಾರಾಜನೇ, ಶೋಕವನ್ನು ಬಿಡು. ಎಲೈ ಮೇಧಾವಿಯೇ, ಬುದ್ಧಿಯ ವೈಕಲ್ಯವನ್ನು ತ್ಯಜಿಸು. ಎಲೈ ರಾಜನೇ, ಎಷ್ಟು ಕಾಲ ಶೋಕವನ್ನು ಮಾಡಿದರೂ ಅಥವಾ ಪ್ರಜ್ಞಾಶೂನ್ಯನಾಗಿದ್ದರೂ ಮೃತನಾದವನು ಹಿಂದಕ್ಕೆ ಬರಲಾರ.
ತ್ಯಜ ಮೋಹಂ ನೃಪಶ್ರೇಷ್ಠ ನಹಿ ಮುಹ್ಯಂತಿ ತ್ವದ್ವಿಧಾಃ |
ಧೀರೋ ಭವ ಮಹಾರಾಜ ಜ್ಞಾನವೃದ್ಧೋಽಸಿ ಮೇ ಮತಃ ॥ 45 ॥
ಎಲೈ ರಾಜಶ್ರೇಷ್ಠನೇ, ಮೋಹವನ್ನು ಬಿಡು. ನಿನ್ನಂತಹವರು ಮೋಹಕ್ಕೆ ಒಳಗಾಗಬಾರದು. ಎಲೈ ಮಹಾರಾಜನೇ, ಧೀರನಾಗು. ನೀನು ಜ್ಞಾನವೃದ್ಧನೆಂದು ನನ್ನ ಅಭಿಪ್ರಾಯ.
ಕಾಮಾನಾಮವಿತೃಪ್ತಸ್ತ್ವಂ ಸೃಂಜಯೇಹ ಮರಿಷ್ಯಸಿ |
ಯಸ್ಯ ತೇ ಯೇ ವಯಂ ಗೇಹೇ ಅಶನಾದಾ ಉಪಾಸ್ಮಹೇ ॥ 46 ॥
ಎಲೈ ರಾಜನೇ, ಯಾವ ನಿನ್ನ ಮನೆಯಲ್ಲಿ ನಾವು ಭೋಜನವನ್ನು ಮಾಡಿಕೊಂಡು ನಿನ್ನ ಸಮೀಪದಲ್ಲಿದ್ದೇವೆಯೋ ಅಂತಹ ನೀನು ಹೀಗೆ ಮಾಡಿದರೆ ಎಲೈ ಸೃಂಜಯನೇ, ಇಡೇರದ ಬಯಕೆಗಳನ್ನು ಹೊಂದಿ ನೀನು ಇಲ್ಲಿಯೇ ಮೃತನಾಗುವಿ.
ಆವಿಕ್ಷಿತಂ ಮರುತ್ತಂ ಚ ಮೃತಂ ಸೃಂಜಯ ಶುಶ್ರುಮಃ |
ಸಂವರ್ತೋ ಯಾಜಯಾಮಾಸ ಸ್ಪರ್ಧಯಾ ಯಂ ಬೃಹಸ್ಪತೇಃ ॥ 47 ॥
ಎಲೈ ಸೃಂಜಯನೇ, ಅವಿಕ್ಷಿತ್‌ರಾಜನ ಮಗನಾದ ಮರುತ್ತನೂ ಮೃತನಾದನೆಂದು ಕೇಳಿದ್ದೇವೆ. ಬೃಹಸ್ಪತಿಗಳ ಮೇಲಿನ ಸ್ಪರ್ಧೆಯಿಂದ ಸಂವರ್ತಋಷಿಗಳು ಅವನಿಗೆ ಯಾಗವನ್ನು ಮಾಡಿಸಿದರು.
ಯಸ್ಮೈ ರಾಜರ್ಷಯೇ ಪ್ರಾದಾತ್ ಸುಪ್ರೀತೋ ಭಗವಾನ್ ಭವಃ |
ಹೈಮಂ ಹಿಮವತಃ ಪಾದೇ ಯಿಯಕ್ಷೋರ್ವಿವಿಧೈಃ ಸವೈಃ ॥ 48 ॥
ಅನೇಕ ಯಾಗಗಳನ್ನು ಮಾಡಲು ಬಯಸಿದ ಆ ರಾಜರ್ಷಿಗೆ ಹಿಮಾಲಯ ಪರ್ವತದ ತಪಲ್ಲಿನಲ್ಲಿ ಪೂಜ್ಯರಾದ ರುದ್ರದೇವರು ಬಹಳ ಪ್ರಸನ್ನರಾಗಿ ಅಪರಿಮಿತವಾದ ಸುವರ್ಣವನ್ನು ಕೊಟ್ಟರು.
ಯಸ್ಯ ಸೇಂದ್ರಾಃ ಸವರುಣಾ ಬೃಹಸ್ಪತಿಪುರೋಗಮಾಃ |
ದೇವಾ ವಿಶ್ವಸೃಜಃ ಸರ್ವೇ ಯಜ್ಞಾನೂಹುರ್ಮಹಾತ್ಮನಃ ॥ 49 ॥
ಇಂದ್ರಸಹಿತರಾದ, ವರುಣಸಹಿತರಾದ, ಬೃಹಸ್ಪತಿಯೇ ಮೊದಲಾದ ದೇವತೆಗಳೂ ಮತ್ತು ಎಲ್ಲಾ ಪ್ರಜಾಪತಿಗಳೂ ಆ ಮಹಾತ್ಮನ ಯಜ್ಞದ ಸಲಕರಣೆಗಳನ್ನು ಹೊತ್ತರು.
ಯಜ್ಞವಾಟಶ್ಚ ಸೌವರ್ಣಾಃ ಸರ್ವೇ ಚಾನ್ಯೇ ಪರಿಚ್ಛದಾಃ ॥ 50 ॥
ಮಹಾನಸೇಷು ಯಸ್ಯಾನ್ನಂ ಮನೋಭಿಪ್ರಾಯಗಂ ಶುಚಿ |
ಕಾಮಂ ಬುಭುಜಿರೇ ವಿಪ್ರಾಃ ಸರ್ವೇ ಚಾನ್ನಾರ್ಥಿನೋ ಜನಾಃ |
ಪಯೋ ದಧಿ ಘೃತಂ ಕ್ಷೌದ್ರಂ ಭಕ್ಷ್ಯಂ ಭೋಜ್ಯಂ ಚ ಶೋಭನಮ್ ॥51॥
ಯಜ್ಞಶಾಲೆಯೂ, ಯಜ್ಞದ ಎಲ್ಲಾ ಸಲಕರಣೆಗಳೂ ಸುವರ್ಣಮಯವಾಗಿದ್ದವು. ಅವರವರ ಮನಸ್ಸಿಗೆ ಒಪ್ಪುವ ಶುಚಿಯಾದ ಅನ್ನವು ಪಾಕಶಾಲೆಯಲ್ಲಿ ಸಿದ್ಧವಾಗುತ್ತಿದ್ದಿತು. ವಿಪ್ರರೂ ಮತ್ತು ಅನ್ನಾರ್ಥಿಗಳಾದ ಜನರೂ ಕ್ಷೀರ, ದಧಿ, ಘೃತ, ಮಧು, ಭಕ್ಷ್ಯ, ಭೋಜ್ಯಗಳು-ಇವುಗಳಿಂದ ಕೂಡಿದ ಒಳ್ಳೆಯ ಭೋಜನವನ್ನು ಮಾಡಿದರು.
ಯಸ್ಯ ಯಜ್ಞೇಷು ಸರ್ವೇಷು ವಾಸಾಂಸ್ಯಾಭರಣಾನಿ ಚ |
ಈಪ್ಸಿತಾನ್ಯುಪತಿಷ್ಠಂತಿ ಪ್ರಹೃಷ್ಟಾನ್ ವೇದಪಾರಗಾನ್ ॥ 52 ॥
ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ ಗೃಹೇ |
ಆವಿಕ್ಷಿತಸ್ಯ ಕ್ಷತ್ತಾಽಗ್ನಿರ್ವಿಶ್ವೇದೇವಾಃ ಸಭಾಸದಃ ॥ 53 ॥
ಅವನ ಎಲ್ಲಾ ಯಜ್ಞಗಳಲ್ಲಿ ಸಂತೋಷಯುಕ್ತರಾದ, ವೇದಪಾರಂಗತರಾದ ಬ್ರಾಹ್ಮಣರಿಗೆ ಅವರು ಬಯಸಿದ ವಸ್ತ್ರಗಳು ಮತ್ತು ಆಭರಣಗಳು ದೊರೆಯುತ್ತಿದ್ದವು. ಮರುತ್ತನ ಮನೆಯಲ್ಲಿ ಮರುದ್ಗಣಗಳು ಊಟವನ್ನು ಬಡಿಸುವವರಾಗಿದ್ದರು. ಅಗ್ನಿಯು ಪಾಚಕನೂ ಮತ್ತು ವಿಶ್ವೇದೇವತೆಗಳು ಸಭಾಸದರೂ ಆಗಿದ್ದರು.
ಯಸ್ಯ ವೀರ್ಯವತೋ ರಾಜನ್ ಸುವೃಷ್ಟ್ಯಾ ಸಸ್ಯಸಂಪದಃ |
ಹವಿರ್ಭಿಸ್ತರ್ಪಿತಾ ಯೇನ ಸಮ್ಯಕ್ ತೃಪ್ತಾ ದಿವೌಕಸಃ ॥ 54 ॥
ಎಲೈ ರಾಜನೇ, ಪರಾಕ್ರಮಶಾಲಿಯಾದ ಅವನು ಮಾಡಿದ ಯಜ್ಞಗಳಲ್ಲಿ ಹವಿರ್ಭಾಗಗಳಿಂದ ತೃಪ್ತರಾದ ದೇವತೆಗಳು ಅವನ ರಾಜ್ಯದಲ್ಲಿ ಸುವೃಷ್ಟಿಯನ್ನು ಮತ್ತು ಒಳ್ಳೆಯ ಸಸ್ಯ ಸಂಪತ್ತಿಯನ್ನು ಉಂಟುಮಾಡಿದರು.

ಋಷೀಣಾಂ ಚ ಪಿತ್ರೂಣಾಂ ಚ ದೇವಾನಾಮುಪಜೀವಿನಾಮ್ |
ಬ್ರಹ್ಮಚರ್ಯಶ್ರುತಸುತೈರ್ಧರ್ಮೈರ್ದಾನೇನ ಚಾನೃಣಃ ॥ 55 ॥
ಬ್ರಹ್ಮಚರ್ಯದಿಂದಲೂ, ವೇದವಿದ್ಯೆಯಿಂದಲೂ, ಯಜ್ಞದಿಂದಲೂ, ದಾನ- ಧರ್ಮಗಳಿಂದಲೂ ಅವನು ಋಷಿಗಳ ಋಣವನ್ನೂ, ದೇವತೆಗಳ ಋಣವನ್ನೂ ಮತ್ತು ಉಪಜೀವಿಸಿಕೊಂಡವರ ಋಣವನ್ನೂ ಸೇವಿಸಿದನು.
ಶಯನಾಸನಯಾನಾನಿ ಸ್ವರ್ಣರಾಶೀಂಶ್ಚ ದುಸ್ತ್ಯಜಾನ್ |
ತತ್ ಸರ್ವಮಮಿತಂ ವಿತ್ತಂ ದತ್ವಾ ವಿಪ್ರೇಭ್ಯ ಈಪ್ಸಿತಮ್ ॥ 56 ॥
ಬ್ರಾಹ್ಮಣರಿಗೆ ಇಷ್ಟವಾದ ಶಯ್ಯಾಸನ, ಯಾನಗಳನ್ನೂ, ಕೊಡಲು ಅಸಾಧ್ಯವಾದ ಸುವರ್ಣಮಯ ರಾಶಿಗಳನ್ನೂ ಮತ್ತು ಅಪರಿಮಿತವಾದ ಧನವನ್ನೂ ದಾನ ಮಾಡಿದನು.
ಸ್ಪರ್ಧಮಾನಃ ಸ ಶಕ್ರೇಣ ಪ್ರಜಾಃ ಕೃತ್ವಾ ನಿರಾಮಯಾಃ |
ಶ್ರದ್ಧಯಾ ನಿರ್ಜಿತಾಲ್ಲೋಕಾನ್ ಗತಃ ಕಾಮದುಹೋಽಕ್ಷಯಾನ್ ॥
ಸಪ್ರಜಃ ಸನೃಪಾಮಾತ್ಯಃ ಸದಾರಾಪತ್ಯಬಾಂಧವಃ |
ಯೌವನೇನ ಸಹಸ್ರಾಬ್ದಂ ಮರುತ್ತೋ ರಾಜ್ಯಮನ್ವಶಾತ್ ॥ 58 ॥
ಅವನು ಇಂದ್ರನ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತಾ, ಪ್ರಜೆಗಳಿಗೆ ಯಾವ ಉಪದ್ರವವೂ ಉಂಟಾಗದಂತೆ ಪಾಲನೆಯನ್ನು ಮಾಡಿ, ತನ್ನ ಶ್ರದ್ಧೆಯಿಂದ ಸಂಪಾದಿಸಿದ, ಕೇಳಿದ ವಸ್ತುಗಳನ್ನು ಕೊಡುವ ಅಕ್ಷಯವಾದ ಲೋಕಗಳನ್ನು ಕುರಿತು ಪ್ರಯಾಣ ಮಾಡಿದನು. ಅವನ ಪ್ರಜೆಗಳ, ಸಾಮಂತರಾಜರ, ಅಮಾತ್ಯರ, ತನ್ನ ಪತ್ನೀ-ಪುತ್ರ-ಬಾಂಧವ ಪರಿವಾರದ ಮತ್ತು ಜೊತೆಯಲ್ಲಿ ಪೂರ್ಣ ಯೌವನದಿಂದ ಕೂಡಿದವನಾಗಿ ಒಂದು ಸಹಸ್ರ ವರ್ಷಗಳ ಕಾಲ ರಾಜ್ಯವನ್ನು ಆಳಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ|
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 60 ॥
ಎಲೈ ಸೃಂಜಯನೇ, ಅವನು ನಿನಗಿಂತಲೂ ನಾಲ್ಕು ಪಟ್ಟು ಶ್ರೇಷ್ಠನಾಗಿದ್ದವನು ಮತ್ತು ಅವನ ಪುತ್ರನಾದರೂ ನಿನ್ನ ಪುತ್ರನಿಗಿಂತಲೂ ನಾಲ್ಕು ಪಟ್ಟು ಶ್ರೇಷ್ಠನಾದವನು. ಆದ್ದರಿಂದ ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದ, ದಕ್ಷಿಣೆಯನ್ನು ಕೊಡದ, ನಿನ್ನ ಪುತ್ರನ ವಿಷಯದಲ್ಲಿ ಶೋಕಪಡಬೇಡ (ಎಂದು ಹೇಳಿದರು).
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ದ್ರೋಣಪರ್ವಣಿ ದ್ವಿಪಂಚಾಶತ್ತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಐವತ್ಮೂರನೆಯ ಅಧ್ಯಾಯ
ಷೋಡಶ ರಾಜೋಪಾಖ್ಯಾನದಲ್ಲಿ ಸುಹೋತ್ರ ಚರಿತ.
ನಾರದಃ
ಸುಹೋತ್ರಂ ಪಾರ್ಥಿವಂ ಚಾಪಿ ಮೃತಂ ಸೃಂಜಯ ಶುಶ್ರುಮ |
ಏಕವೀರಮನಾಧೃಷ್ಯಮಮಿತ್ರಗಣಮರ್ದನಮ್ ॥ 1 ॥
ನಾರದರು ಎಲೈ ಸೃಂಜಯನೇ, ಶ್ರೇಷ್ಠನಾದ ವೀರನೂ, ಶತ್ರುಗಳು ಸಮೀಪಿಸಲಾರದವನೂ, ಶತ್ರುಮರ್ದನನೂ ಆದ ಸುಹೋತ್ರರಾಜನೂ ಮೃತನಾದನೆಂದು ಕೇಳಿದ್ದೇವೆ.
ಯಃ ಪ್ರಾಪ್ಯ ರಾಜ್ಯಂ ಧರ್ಮೇಣ ಋತ್ವಿಙ್ಮಂತ್ರಿಪುರೋಹಿತಾನ್ |
ಸಮ್ಮಾನ್ಯ ಚಾತ್ಮನಃ ಶ್ರೇಯಃ ಪೃಷ್ಟ್ವಾ ತೇಷಾಂ ಮತೇ ಸ್ಥಿತಃ ॥ 2 ॥
ಅವನು ಧರ್ಮದಿಂದ ರಾಜ್ಯವನ್ನು ಪಡೆದು, ಋತ್ವಿಜರು, ಮಂತ್ರಿಗಳು ಮತ್ತು ಪುರೋಹಿತರನ್ನು ಸನ್ಮಾನಿಸಿ, ಅವರಿಂದ ತನ್ನ ಶ್ರೇಯಸ್ಸನ್ನು ಪ್ರಶ್ನೆ ಮಾಡಿ ತಿಳಿದು ಅವರ ಅಭಿಪ್ರಾಯದಂತೆ ನಡೆದುಕೊಂಡನು.
ಪ್ರಜಾನಾಂ ಪಾಲನಂ ಧರ್ಮೋ ದಾನಮಿಜ್ಯಾ ದ್ವಿಷಜ್ಜಯಃ |
ಏತತ್ ಸುಹೋತ್ರೋ ವಿಜ್ಞಾಯ ಧರ್ಮ್ಯಮೈಚ್ಛದ್ ಧನಾಗಮಮ್ ॥
ಪ್ರಜಾಪಾಲನೆ, ದಾನ-ಧರ್ಮಾಚರಣೆ, ಯಾಗಾಚರಣೆ, ಶತ್ರುಜಯ- ಇದನ್ನು ತನ್ನ ಧರ್ಮವೆಂದು ತಿಳಿದ ಸುಹೋತ್ರನು ಧರ್ಮದಿಂದ ಧನವನ್ನು ಪಡೆಯಲು ಇಚ್ಛಿಸಿದನು.
ಧರ್ಮೇಣಾರಾಧಯದ್ ದೇವಾನ್ ಬಾಣೈಃ ಶತ್ರೂನಜೀಜಯತ್ |
ಸರ್ವಾಣ್ಯಪಿ ಚ ಭೂತಾನಿ ಸ್ವಗುಣೈರನ್ವರಂಜಯತ್ ॥ 4 ॥
ದೇವತೆಗಳನ್ನು ಧರ್ಮದಿಂದ ಸಂತೋಷಪಡಿಸಿದನು. ಶತ್ರುಗಳನ್ನು ಬಾಣಗಳಿಂದ ಜಯಿಸಿದನು ಮತ್ತು ಎಲ್ಲರನ್ನೂ ತನ್ನ ಗುಣಗಳಿಂದ ಸಂತೋಷಪಡಿಸಿದನು.
ಸೋಽಭುಂಕ್ತೇಮಾಂ ವಸುಮತೀಂ ಮ್ಲೇಚ್ಛಾಟವಿಕವರ್ಜಿತಾಮ್ |
ತಸ್ಮೈ ವವರ್ಷ ಪರ್ಜನ್ಯೋ ಹಿರಣ್ಯಂ ಪರಿವತ್ಸರಮ್ |
ಹಿರಣ್ಯೋದಾಸ್ತಥಾ ನದ್ಯಃ ಸುಹೋತ್ರಸ್ಯ ಮಹಾತ್ಮನಃ |
ಹೈರಣ್ಯಾಸ್ತತ್ರ ವಾಹಿನ್ಯಃ ಸ್ವೈರಿಣ್ಯೋ ಹ್ಯವಹನ್ ಪುರಾ ॥ 5 ॥

ಅವನು ಮ್ಲೇಚ್ಛಪ್ರದೇಶ ಮತ್ತು ಅರಣ್ಯಪ್ರದೇಶಗಳನ್ನು ಬಿಟ್ಟು ಉಳಿದ ಎಲ್ಲಾ ಭೂಮಿಯನ್ನೂ ಆಳಿದನು. ಅವನಿಗೆ ಪರ್ಜನ್ಯನು ಪ್ರತಿವರ್ಷವೂ ಸುವರ್ಣದ ಮಳೆಯನ್ನು ಸುರಿಸುತ್ತಿದ್ದನು. ಮಹಾತ್ಮನಾದ ಸುಹೋತ್ರನ ಆಳ್ವಿಕೆಯಲ್ಲಿ ನದಿಗಳು ಸ್ವವರ್ಣದಿಂದ ಕೂಡಿದ ನೀರನ್ನು ಹೊಂದಿದವುಗಳಾಗಿ ಸ್ವರ್ಣವಾಹಿನಿಗಳಾಗಿದ್ದವು.
ಯಸ್ಮಿನ್ ಕೂರ್ಮಾನ್ ಕರ್ಕಟಕಾನ್ ಮತ್ಸ್ಯಾಂಶ್ಚ ವಿವಿಧಾನ್ ಬಹೂನ್ |
ಕಾಮಾನ್ ವರ್ಷತಿ ಪರ್ಜನ್ಯೋ ರೂಪ್ಯಾಣಿ ವಿವಿಧಾನಿ ಚ ॥ 6 ॥
ಸೌವರ್ಣಾನ್ಯಪ್ರಮೇಯಾನಿ ವಾಪ್ಯಃ ಕ್ರೋಶಸುಸಮ್ಮಿತಾಃ ॥ 7 ॥
ಅವುಗಳಲ್ಲಿ ಪರ್ಜನ್ಯನು ಸುವರ್ಣಮಯವಾದ ಕೂರ್ಮಗಳನ್ನು, ಚೇಳುಗಳನ್ನು, ಅನೇಕ ವಿಧವಾದ ಮತ್ಸ್ಯಗಳನ್ನು ಮತ್ತು ರಜತಮಯವಾದ ಅನೇಕ ವಸ್ತುಗಳನ್ನು ಮಳೆಗರೆಯುತ್ತಿದ್ದನು. ಒಂದು ಕ್ರೋಶದಷ್ಟು ಆಳವಾದ ಅವನ ಕಾಲದ ಬಾವಿಗಳು ಅಗಾಧವಾದ ಸುವರ್ಣದಿಂದ ತುಂಬಿರುತ್ತಿದ್ದವು.
ಸ ತತ್ರ ಶತಸಾಹಸ್ರಾನ್ ನಕ್ರಾನ್ ಮಕರಕಚ್ಛಪಾನ್ |
ಸೌವರ್ಣಾನ್ ಪತಿತಾನ್ ದೃಷ್ಟ್ವಾ ತತೋಽಸ್ಮಯತ ವೈ ಮಿಥಃ ॥ 8 ॥
ಆ ಬಾವಿಗಳಲ್ಲಿ ಸುವರ್ಣಮಯವಾದ ಶತಸಹಸ್ರ ಸಂಖ್ಯೆಯ ಮತ್ಸ್ಯ- ಕೂರ್ಮಾದಿಗಳು ಬೀಳುವುದನ್ನು ನೋಡಿ ಜನರು ವಿಸ್ಮಯಗೊಂಡರು.
ತದ್ ಹಿರಣ್ಯಮಪರ್ಯಂತಂ ರಾಜರ್ಷಿಃ ಕುರುಜಾಂಗಲೇ |
ಈಜಾನೋ ವಿತತೇ ಯಜ್ಞೇ ಬ್ರಾಹ್ಮಣೇಭ್ಯೋ ಹ್ಯಮನ್ಯತ ॥ 9 ॥
ರಾಜರ್ಷಿಯಾದ ಅವನು ಇಂತಹ ಅಪರ್ಯಂತವಾದ ಹಿರಣ್ಯರಾಶಿಯನ್ನು ಕುರುಜಾಂಗಲದಲ್ಲಿ ಯಜ್ಞಗಳನ್ನು ಮಾಡಿ, ಯಜ್ಞದಲ್ಲಿ ದಕ್ಷಿಣೆಯಾಗಿ ಬ್ರಾಹ್ಮಣರಿಗೆ ನೀಡಿದನು.
ಸೋಽಶ್ವಮೇಧಸಹಸ್ರೇಣ ರಾಜಸೂಯಶತೇನ ಚ |
ಪುಣ್ಯೈಃ ಕ್ಷತ್ರಿಯಯಜ್ಞೈಶ್ಚ ಪ್ರಭೂತವರದಕ್ಷಿಣೈಃ |
ಕಾಮ್ಯನೈಮಿತ್ತಿಕಾಜಸ್ರೈರಿಷ್ಟ್ವೇಷ್ಟಾಂ ಗತಿಮಾಪ್ತವಾನ್ ॥ 10 ॥
ಅವನು ಒಂದು ಸಹಸ್ರ ಅಶ್ವಮೇಧ ಯಾಗಗಳನ್ನೂ, ನೂರು ರಾಜಸೂಯ ಯಾಗಗಳನ್ನೂ, ಬಹಳ ಶ್ರೇಷ್ಠವಾದ ದಕ್ಷಿಣೆಗಳಿಂದ ಕೂಡಿದ, ಕ್ಷತ್ರಿಯರಿಗೆ ಯೋಗ್ಯವಾದ ಪುಣ್ಯಪ್ರದವಾದ, ನಿತ್ಯನೈಮಿತ್ತಿಕ ಕಾಮ್ಯ ಯಜ್ಞಗಳನ್ನೂ ಆಚರಿಸಿ ಇಷ್ಟವಾದ ಗತಿಯನ್ನು ಪಡೆದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ ॥ 11 ॥
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 12 ॥|
ಎಲೈ ಸಂಜಯನೇ, ಅವನು ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾದವನು. ಅವನ ಪುತ್ರನೂ ನಿನ್ನ ಪುತ್ರನಿಗಿಂತ ಬಹಳ ಶ್ರೇಷ್ಠನಾದವನು. ಹೀಗಿರುವಾಗ ಎಲೈ ಜ್ಞಾನಿಗಳಲ್ಲಿ ಶ್ರೇಷ್ಠನಾದವನೇ, ಯಜ್ಞಗಳನ್ನು ಮಾಡದಿರುವ, ದಕ್ಷಿಣೆಗಳನ್ನು ಕೊಡದಿರುವ ನಿನ್ನ ಪುತ್ರನ ವಿಷಯದಲ್ಲಿ ಸಂತಾಪ ಪಡಬೇಡ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ತ್ರಿಪಂಚಾಶತ್ತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಐವತ್ನಾಲ್ಕನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ಅಂಗರಾಜನ ಚರಿತೆ
ನಾರದಃ
ಅಂಗಂ ಚ ಪೌರವಂ ವೀರಂ ಮೃತಂ ಸೃಂಜಯ ಶುಶ್ರುಮ |
ಯಃ ಸಹಸ್ರಂ ಸಹಸ್ರಾಣಾಂ ಶ್ವೇತಾನಶ್ವಾನವಾಸೃಜತ್ |
ತಸ್ಯಾಶ್ವಮೇಧೇ ರಾಜರ್ಷೇಃ ಸರ್ವೇ ದೇವಾಃ ಸಮಾಯಯುಃ ॥ 1 ॥
ಶಿಕ್ಷಾಕ್ಷರವಿಧಿಜ್ಞಾನಾಂ ನಾಸೀತ್ ಸಂಖ್ಯಾ ವಿಪಶ್ಚಿತಾಮ್ ॥2॥
ನಾರದರು ಎಲೈ ಸೃಂಜಯನೇ, ಕುರುವಂಶದಲ್ಲಿ ಜನಿಸಿದ ಅಂಗರಾಜನು ಮೃತನಾದನೆಂದು ಕೇಳಿದ್ದೇವೆ. ಅವನು ತಾನು ಮಾಡಿದ ಸಹಸ್ರ-ಸಹಸ್ರ ಅಶ್ವಮೇಧ ಯಾಗಗಳಲ್ಲಿ ಅಷ್ಟೇ ಸಂಖ್ಯೆಯ ಶ್ವೇತಾಶ್ವಗಳನ್ನು ಸಂಚರಿಸಲು ಬಿಟ್ಟಿದ್ದನು. ರಾಜರ್ಷಿಯಾದ ಅವನ ಅಶ್ವಮೇಧ ಯಾಗಗಳಲ್ಲಿ ಎಲ್ಲ ದೇವತೆಗಳೂ ಬಂದು ನೆರೆದರು. ಶಿಕ್ಷಾ, ವ್ಯಾಕರಣ, ಮೀಮಾಂಸಾದಿ ಶಾಸ್ತ್ರ ಪಾರಂಗತರಾದ ವಿದ್ವಾಂಸರಿಗೆ ಸಂಖ್ಯೆಯೇ ಇರಲಿಲ್ಲ.
ವೇದವಿದ್ಯಾವ್ರತಸ್ನಾತಾ ವದಾನ್ಯಾಃ ಪ್ರಿಯದರ್ಶನಾಃ |
ಸುಭಕ್ಷ್ಯಾಚ್ಛಾದನಗೃಹಾಃ ಸುಶಯ್ಯಾಸನವಾಹನಾಃ ॥ 3 ॥
ನಟನರ್ತಕಗಂಧರ್ವೈಃ ಪ್ಲವಕೈರ್ವರ್ಧಮಾನಕೈಃ |
ನಿಯೋಧಕೈಶ್ಚ ಕ್ರೀಡಂತಃ ತತ್ರೋಷುಃ ಪರಮಾರ್ಚಿತಾಃ |
ಯಜ್ಞೇ ಯಜ್ಞೇ ಯಥಾಕಾಲಂ ದಕ್ಷಿಣಾಃ ಸೋಽತ್ಯಕಾಲಯತ್ ॥ 4 ॥

ವೇದವಿದ್ಯಾಅವಭೃಥ ಸ್ನಾನವನ್ನು ಮಾಡಿದವರೂ, ಧರ್ಮಿಷ್ಠರೂ, ಉದಾರಿಗಳೂ, ಪ್ರಿಯದರ್ಶನರೂ ಆದ ಅವನ ಸಭಾಸದರು ಒಳ್ಳೆಯ ಅಶನ-ವಸನ, ಗೃಹಗಳನ್ನು ಹೊಂದಿ, ಒಳ್ಳೆಯ ಶಯ್ಯಾಸನ ವಾಹನಗಳಿಂದ ಕೂಡಿದವರಾಗಿ, ರಾಜನಿಂದ ಬಹಳವಾಗಿ ಸತ್ಕರಿಸಲ್ಪಟ್ಟು, ನಟ-ನರ್ತನ-ಗಾಯಕರ ಜೊತೆಯಲ್ಲಿಯೂ, ಕ್ರೀಡಾಪಟುಗಳ ಮತ್ತು ಕುಸ್ತಿಯ ಪಟುಗಳ ಜೊತೆಯಲ್ಲಿಯೂ ವಿನೋದವನ್ನು ಮಾಡುತ್ತಾ ಅಲ್ಲಿ ವಾಸವನ್ನು ಮಾಡಿದರು. ಪ್ರತಿಯೊಂದು ಯಜ್ಞದಲ್ಲಿಯೂ ರಾಜನು ದಕ್ಷಿಣಾಕಾಲದಲ್ಲಿ ಬಹಳವಾದ ದಕ್ಷಿಣೆಯನ್ನು ನೀಡಿದನು.
ದ್ವಿಪಾನ್ ದಶಸಹಸ್ರಾಖ್ಯಾನ್ ಅದದಾತ್ ಕಾಂಚನಾವೃತಾನ್ |
ಸಧ್ವಜಾನ್ ಸಪತಾಕಾಂಶ್ಚ ಸವರೂಥಾನ್ ಸುಕಲ್ಪಿತಾನ್ ॥ 5 ॥
ಅವನು ಧ್ವಜ-ಪತಾಕೆಗಳಿಂದ ಕೂಡಿದ, ಸುವರ್ಣಾಲಂಕೃತವಾದ, ಗಜ- ರಕ್ಷಕರಿಂದ ಕೂಡಿದ, ಸುಸಜ್ಜಿತವಾದ ಹತ್ತು ಸಹಸ್ರ ಗಜಗಳನ್ನು ದಾನ ಮಾಡಿದನು.
ಸಹಸ್ರಂ ಚ ಸಹಸ್ರಾಣಾಂ ಕನ್ಯಾ ಹೇಮವಿಭೂಷಿತಾಃ |
ಚತುರ್ಯುಜರಥಾರೂಢಾಃ ಸಗೃಹಕ್ಷೇತ್ರಗೋಧನಾಃ ॥ 6 ॥
ಸುವರ್ಣಾಲಂಕೃತರಾದ ಹತ್ತು ಲಕ್ಷ ಕನ್ಯೆಯರನ್ನು ನಾಲ್ಕು ಕುದುರೆಯನ್ನು ಹೂಡಿದ ರಥದಲ್ಲಿ ಕುಳ್ಳಿರಿಸಿ, ಗೃಹ-ಕ್ಷೇತ್ರ-ಗೋ-ಧನ ಸಹಿತವಾಗಿ ದಾನವನ್ನು ಮಾಡಿದನು.
ಶತಂ ಶತಸಹಸ್ರಾಣಿ ಸ್ವರ್ಣಮಾಲಾನಥರ್ಷಭಾನ್ |
ಗವಾಂ ಸಹಸ್ರಾನುಚರಾನ್ ದಕ್ಷಿಣಾಃ ಸೋಽತ್ಯಕಾಲಯತ್ ॥ 7 ॥
ಹೇಮಶೃಂಗ್ಯೋ ರೌಪ್ಯಖುರಾಃ ಸವತ್ಸಾಃ ಕಾಂಸ್ಯದೋಹನಾಃ |
ದಾಸೀದಾಸಖರೋಷ್ಟ್ರಂ ಚ ಪ್ರಾದಾಚ್ಛಾಗಾವಿಕಂ ಬಹು ॥ 8 ॥
ಸ್ವರ್ಣಮಾಲೆಗಳಿಂದ ಅಲಂಕರಿಸಲ್ಪಟ್ಟ ಹತ್ತು ಲಕ್ಷ ವೃಷಭಗಳನ್ನು ದಾನ ಮಾಡಿದನು. ಒಂದೊಂದು ವೃಷಭದ ಜೊತೆಯಲ್ಲಿಯೂ ಹೇಮಶೃಂಗವನ್ನೂ, ಬೆಳ್ಳಿಯ ಖುರ (ಗೊರಸು)ಗಳನ್ನೂ ಹೊಂದಿದ್ದ ವತ್ಸ ಸಹಿತವಾದ ಸಹಸ್ರ ಗೋವುಗಳನ್ನು ಕಂಚಿನ ಪಾತ್ರೆಗಳ ಜೊತೆಯಲ್ಲಿ ದಾನ ಮಾಡಿದನು.
ರತ್ನಾನಾಂ ವಿವಿಧಾನ್ ಕೂಟಾನ್ ವಿವಿಧಾನನ್ನಪರ್ವತಾನ್ |
ತತ್ ಸರ್ವಂ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ ॥ 9 ॥
ಬಹಳ ಸಂಖ್ಯೆಯ ದಾಸಿಯರು, ದಾಸರು, ಕತ್ತೆಗಳು, ಒಂಟೆಗಳು, ಆಡುಗಳು ಮತ್ತು ಕುರಿಗಳನ್ನು ದಾನ ಮಾಡಿದನು. ವಿಸ್ತಾರವಾದ ತನ್ನ ಯಜ್ಞಗಳಲ್ಲಿ ವಿವಿಧವಾದ ರತ್ನಗಳ ರಾಶಿಗಳನ್ನೂ, ವಿವಿಧವಾದ ಅನ್ನಪರ್ವತಗಳನ್ನೂ ಅವನು ದಕ್ಷಿಣೆಯಾಗಿ ಕೊಟ್ಟು ವ್ಯಯ ಮಾಡಿದನು.
ಅತ್ರಾಪಿ ಗಾಥಾ ಗಾಯಂತಿ ತೇ ಪುರಾಣವಿದೋ ಜನಾಃ |
ಅಂಗಸ್ಯ ಯಜಮಾನಸ್ಯ ಅಪಿ ವಿಷ್ಣುಪದೇ ವಯಮ್ ॥ 10 ॥
ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ |
ದೇವಮಾನುಷಗಂಧರ್ವಾಃ ಚಾತ್ಯರೋಚಂತ ದಕ್ಷಿಣಾಃ ॥ 11 ॥
ಪುರಾಣವನ್ನು ತಿಳಿದ ಜನರು ಅಂಗನು ಯಾಗವನ್ನು ಮಾಡುವಾಗ ನಾವು ಎಲ್ಲಿಯಾದರೂ ಅಲ್ಲಿಯೇ ಆಕಾಶದಲ್ಲಾದರೂ ಇರಬೇಕಾಗಿದ್ದಿತು ಎಂದು ಗಾನವನ್ನು ಮಾಡುತ್ತಾರೆ. ಅವನ ಯಾಗದಲ್ಲಿ ಇಂದ್ರನು ಸೋಮರಸದಿಂದ ಸಂತೋಷಗೊಂಡನು. ಬ್ರಾಹ್ಮಣರು ದಕ್ಷಿಣೆಗಳಿಂದ ಸಂತೋಷಗೊಂಡರು. ದೇವತೆಗಳು, ಮನುಷ್ಯರು, ಗಂಧರ್ವರು ಮತ್ತು ದಕ್ಷಿಣೆಗಳು ಬಹಳವಾಗಿ ಶೋಭಿಸಿದವು.
ಅಂಗಸ್ಯ ಯಜಮಾನಸ್ಯ ಸ್ವಧರ್ಮಾನುಗತಾಃ ಶುಭಾಃ |
ಗುಣೋತ್ತರಾಸ್ತೇ ಕ್ರತವಃ ತತ್ರಾಸನ್ ಸರ್ವಕಾಮದಾಃ ॥ 12 ॥
ಅಂಗಮಹಾರಾಜನು ಮಾಡಿದ ಅವನ ಧರ್ಮಕ್ಕೆ ಅನುಗುಣವಾದ ಒಂದಕ್ಕಿಂತಲೂ ಒಂದು ಶ್ರೇಷ್ಠವಾದ ಯಜ್ಞಗಳು ಸರ್ವಕಾಮಪ್ರದವಾಗಿದ್ದವು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 13 ॥
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 14 ॥
ಎಲೈ ಸೃಂಜಯನೇ, ಅವನು ನಿನಗಿಂತಲೂ ನಾಲ್ಕುಪಟ್ಟು ಶ್ರೇಷ್ಠನಾಗಿದ್ದನು. ಅವನ ಪುತ್ರನೂ ಸಹ ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾಗಿದ್ದನು. ಎಲೈ ಜ್ಞಾನಿಶ್ರೇಷ್ಠನೇ, ಯಜ್ಞವನ್ನು ಮಾಡದ, ದಕ್ಷಿಣೆಯನ್ನು ಕೊಡದ ನಿನ್ನ ಪುತ್ರನನ್ನು ಚಿಂತಿಸಿ ದುಃಖಪಡಬೇಡ ಎಂದು ನಾರದರು ಸೃಂಜಯನನ್ನು ಕುರಿತು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಚತುಃಪಂಚಾಶತ್ತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೈದನೆಯ ಅಧ್ಯಾಯ
ಷೋಡಶ ರಾಜೋಪಾಖ್ಯಾನದಲ್ಲಿ ಶಿಬಿಯ ಚರಿತೆ

ನಾರದಃ
ಶಿಬಿಮೌಶೀನರಂ ಚಾಪಿ ಮೃತಂ ಸೃಂಜಯ ಶುಶ್ರುಮ |
ಯ ಇಮಾಂ ಪೃಥಿವೀಂ ಸರ್ವಾಂ ಚರ್ಮವತ್ ಪರ್ಯವೇಷ್ಟಯತ್ |
ಸಾದ್ರಿದ್ವೀಪಾರ್ಣವವನಾಂ ರಥಘೋಷೇಣ ನಾದಯನ್ ॥ 1 ॥
ನಾರದರು ಎಲೈ ಸೃಂಜಯನೇ, ಔಶೀನರನಾದ ಶಿಬಿಯೂ ಸಹ ಮೃತನಾದನೆಂದು ಕೇಳಿದ್ದೇವೆ. ಅವನು ತನ್ನ ರಥಘೋಷದಿಂದ ಭೂಮಿಯನ್ನು ಪ್ರತಿಧ್ವನಿಸುತ್ತಾ, ಪರ್ವತ, ಸಮುದ್ರ, ದ್ವೀಪ ಸಹಿತವಾದ ಈ ಎಲ್ಲ ಭೂಮಿಯನ್ನೂ ಚರ್ಮದಂತೆ ಸುತ್ತಿದನು.
ಸ ಶಿಬಿರ್ಯಶ ಅನ್ವಿಚ್ಛನ್ ಮುಖ್ಯಃ ಸರ್ವಸಪತ್ನಜಿತ್ ॥ 2 ॥
ಯಜ್ಞೈರ್ಬಹುವಿಧೈರಿಷ್ಟ್ವಂ ತೇನಾಪರ್ಯಾಪ್ತದಕ್ಷಿಣೈಃ |
ಅವಿಹಿಂಸ್ಯ ಜನಾನನ್ಯಾನವಾಪ ವಸು ಪುಷ್ಕಳಮ್ ॥ 3 ॥
ಶ್ರೇಷ್ಠನೂ, ಸರ್ವಶತ್ರು ಪರಾಭವಕಾರಿಯೂ ಆದ ಅವನು ಯಶಸ್ಸನ್ನು ಬಯಸಿ ಅಪರ್ಯಾಪ್ತವಾದ ದಕ್ಷಿಣೆಯುಳ್ಳ ಬಹುವಿಧವಾದ ಯಜ್ಞಗಳನ್ನು ಆಚರಿಸಿದನು. ಪ್ರಜೆಗಳಿಗೆ ಹಿಂಸೆಯನ್ನು ಕೊಡದೆ ಪುಷ್ಕಳವಾದ ಧನವನ್ನು ಗಳಿಸಿದನು.
ಸರ್ವಮೂರ್ಧಾವಸಿಕ್ತಾನಾಂ ಸಮ್ಮತಃ ಸೋಽಭವದ್ ಯುಧಿ |
ಅಯಜಚ್ಚಾಶ್ವಮೇಧೈರ್ಯೋ ವಿಜಿತ್ಯ ಪೃಥಿವೀಮಿಮಾಮ್ ॥ 4 ॥
ಅವನು ಭೂಮಿಯಲ್ಲಿ ಮೂರ್ಧಾಭಿಷಿಕ್ತರಾದ ರಾಜರೆಲ್ಲರಿಗೂ ಸಮ್ಮತನಾಗಿದ್ದನು. ಈ ಭೂಮಿಯನ್ನು ಗೆದ್ದು ಅಶ್ವಮೇಧ ಯಾಗಗಳನ್ನು ಮಾಡಿದನು.
ನಿರರ್ಗಲಾಂಸಜಾರೂಥ್ಯಾನ್ ನಿಷ್ಕಕೋಟಿಂ ಸಹಸ್ರಶಃ |
ಬಿಭರ್ತಿ ದಕ್ಷಿಣಾ ಯಸ್ಯ ಗಂಗಾಯಾಃ ಸ್ರೋತ ಆವೃಣೋತ್ ॥ 5 ॥
ಅವನು ಕೊಟ್ಟ ಸಹಸ್ರಾರು ನಿಷ್ಕಕೋಟಿಗಳ ದಕ್ಷಿಣೆಯು ಗಂಗಾನದಿಯಲ್ಲಿ ತುಂಬಿ ಗಂಗೆಯ ಪ್ರವಾಹವನ್ನು ತಡೆಯಿತು.
ಹಸ್ತ್ಯಶ್ವಪಶುಭಿರ್ಧಾನ್ಯೈರ್ಮೃಗೈರ್ಗೋಜಾವಿಭಿಸ್ತಥಾ |
ವಿವಿಧೈಃ ಪೃಥಿವೀಂ ಪೂರ್ಣಾಂ ಶಿಬಿರ್ಬ್ರಾಹ್ಮಣಸಾತ್ಕರೋತ್ ॥ 6 ॥
ಅಶ್ವ-ಗಜ ಮೊದಲಾದ ಪಶುಗಳಿಂದಲೂ, ಧಾನ್ಯಗಳಿಂದಲೂ, ಗೋವುಗಳಿಂದಲೂ, ಆಡು-ಕುರಿ ಮೊದಲಾದ ಪ್ರಾಣಿಗಳಿಂದಲೂ ಪೂರ್ಣವಾಗಿ ತುಂಬಿದ ಈ ಭೂಮಿಯನ್ನು ಶಿಬಿಯು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.
ಯಾವಂತ್ಯೋ ವರ್ಷತೋ ಧಾರಾ ಯಾವಂತ್ಯೋ ದಿವಿ ತಾರಕಾಃ |
ತಾವತೀರದದಾದ್ ಗಾ ವೈ ಶಿಬಿರೌಶೀನರೋಽಧ್ವರೇ ॥ 7 ॥
ಮಳೆಯ ಹನಿಗಳು ಎಷ್ಟು ಬೀಳುತ್ತವೆಯೋ, ಆಕಾಶದಲ್ಲಿ ಎಷ್ಟು ನಕ್ಷತ್ರಗಳಿವೆಯೋ ಅಷ್ಟು ಗೋವುಗಳನ್ನು ಔಶೀನರ ಶಿಬಿಯು ತನ್ನ ಯಜ್ಞಗಳಲ್ಲಿ ದಾನ ಮಾಡಿದನು. ಗಂಗೆಯ ಪಾತ್ರದಲ್ಲಿ ಎಷ್ಟು ಮರಳು ಕಣಗಳಿವೆಯೋ, ಮೇರು ಪರ್ವತದಲ್ಲಿ ಎಷ್ಟು ಶಿಲೆಗಳಿವೆಯೋ, ಸಾಗರದಲ್ಲಿ ಎಷ್ಟು ಪ್ರಾಣಿಗಳು ಮತ್ತು ರತ್ನಗಳು ಇವೆಯೋ ಅಷ್ಟು ಗೋವುಗಳನ್ನು ದಾನ ಮಾಡಿದನು.
ಯಾವತ್ಯಃ ಸಿಕತಾ ಗಾಂಗ್ಯೋ ಯಥಾ ಮೇರೌ ಮಹೋಪಲಾಃ |
ಉದನ್ವತಿ ಚ ಯಾವಂತಿ ರತ್ನಾನಿ ಪ್ರಾಣಿನೋಽಪಿ ಚ ॥ 8 ॥
ನೋದ್ಯಂತಾರಂ ಧುರಂ ತಸ್ಯ ಕಿಂಚಿದನ್ಯಂ ಪ್ರಜಾಪತಿಃ |
ಭೂತಂ ಭವ್ಯಂ ಭವಿಷ್ಯಂ ವಾ ಹ್ಯಧ್ಯಗಚ್ಛನ್ನರೇಶ್ವರಮ್ ॥ 9 ॥
ಅವನು ಮಾಡಿದ ಕಾರ್ಯಕ್ಕೆ ಸಮಾನವಾದ ಕಾರ್ಯವನ್ನು ಮಾಡುವ ಇನ್ನೊಬ್ಬ ರಾಜನನ್ನು ಭೂತಕಾಲದಲ್ಲಿಯಾಗಲೀ, ವರ್ತಮಾನಕಾಲದಲ್ಲಾಗಲೀ ಅಥವಾ ಭವಿಷ್ಯಕಾಲದಲ್ಲಾಗಲೀ ಪ್ರಜಾಪತಿಯಾದ ಬ್ರಹ್ಮದೇವರು ಕಾಣಲಿಲ್ಲ.
ತಸ್ಯಾಸನ್ ವಿವಿಧಾ ಯಜ್ಞಾಃ ಸರ್ವಕಾಮ್ಯೈಃ ಸಮನ್ವಿತಾಃ |
ಹೇಮಯೂಪಾಸನಗೃಹಾ ಹೇಮಪ್ರಾಕಾರತೋರಣಾಃ ॥ 10 ॥
ಅವನ ಬಹುವಿಧವಾದ ಯಜ್ಞಗಳು ಎಲ್ಲ ಭೋಗಪದಾರ್ಥಗಳಿಂದಲೂ ಪೂರ್ಣವಾಗಿ, ಸುವಣರ್ಮಯವಾದ ಯೂಪಸ್ತಂಭಗಳಿಂದಲೂ, ಆಸನಗಳಿಂದಲೂ, ಗೃಹಗಳಿಂದಲೂ ಕೂಡಿದ್ದು, ಸುವಣರ್ಮಯವಾದ ಪ್ರಾಕಾರಗಳನ್ನು ಮತ್ತು ತೋರಣಗಳನ್ನು ಹೊಂದಿದ್ದವು.
ಶುಚಿಸ್ವಾದ್ವನ್ನಪಾನಾಶ್ಚ ಬ್ರಾಹ್ಮಣಾಃ ಪ್ರಯುತಾಯುತಾಃ |
ನಾನಾಭಕ್ಷ್ಯೈಶ್ಚಯತಟಾಃ ಪಯೋದಧಿಮಧುಹ್ರದಾಃ ॥ 11 ॥
ತಸ್ಯಾಸನ್ ಯಜ್ಞವಾಟೇಷು ನದ್ಯಃ ಶುಭ್ರಾನ್ನಪರ್ವತಾಃ |
ಪಿಬತಾಶ್ನತ ಖಾದಧ್ವಮಿತಿ ಯತ್ರೋಚ್ಯತೇ ಜನೈಃ ॥ 12 ॥
ಶುಚಿಯೂ ಮತ್ತು ರುಚಿಕರವೂ ಆದ ಅನ್ನ-ಪಾನಗಳನ್ನು ಲಕ್ಷ-ಲಕ್ಷ ಸಂಖ್ಯೆಯ ಬ್ರಾಹ್ಮಣರು ಸೇವಿಸಿದರು. ಅವನ ಯಜ್ಞಶಾಲೆಯ ಸಮೀಪದಲ್ಲಿ ಭಕ್ಷ್ಯ- ಭೋಜ್ಯಗಳ ನದಿಯನ್ನು ಹೊಂದಿದ ಕ್ಷೀರ-ದಧಿ-ಮಧು ಸರೋವರಗಳೂ, ಅಂತಹ ನದಿಗಳೂ, ಶುಭ್ರವಾದ ಅನ್ನಪರ್ವತಗಳೂ ಇದ್ದವು. ಅಲ್ಲಿ ಜನರು ಪಾನವನ್ನು ಮಾಡಿ, ಭೋಜನವನ್ನು ಮಾಡಿ ಎಂಬ ಮಾತುಗಳನ್ನು ಆಡುತ್ತಿದ್ದರು.
ತಸ್ಮೈ ಪ್ರಾದಾದ್ ವರಾನ್ ರುದ್ರಃ ತುಷ್ಟಃ ಪುಣ್ಯೇನ ಕರ್ಮಣಾ |
ಅಕ್ಷಯಂ ಚ ದದೌ ವಿತ್ತಂ ಶ್ರದ್ಧಾಂ ಕೀರ್ತಿಂ ತತೋಽವ್ಯಯಾಮ್ |
ಯಥಾರ್ಥಮೇವಂ ಭೂತಾನಾಂ ಪ್ರಿಯತ್ವಂ ಸ್ವರ್ಗಮುತ್ತಮಮ್ ॥
ಅವನ ಪುಣ್ಯಕರ್ಮಗಳಿಂದ ಸಂತುಷ್ಟರಾದ ರುದ್ರದೇವರು ಅವನಿಗೆ ಅಕ್ಷಯವಾದ ಧನವನ್ನೂ, ಶ್ರದ್ಧೆಯನ್ನೂ ಮತ್ತು ಶಾಶ್ವತವಾದ ಕೀರ್ತಿಯನ್ನೂ ವರಗಳನ್ನಾಗಿ ಕೊಟ್ಟರು. ನಿಶ್ಚಯವಾಗಿ ಎಲ್ಲ ಪ್ರಜೆಗಳ ಪ್ರೀತಿಪಾತ್ರತ್ವವನ್ನು ಮತ್ತು ಶ್ರೇಷ್ಠವಾದ ಸ್ವರ್ಗವನ್ನು

(ರುದ್ರದೇವರು ವರವನ್ನಾಗಿ ಕೊಟ್ಟರು).
ಏತಾಂಲ್ಲಬ್ಧ್ವಾ ವರಾನಿಷ್ಟಾನ್ ಶಿಬಿಃ ಕಾಲೇ ದಿವಂ ಗತಃ |
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 14 ॥
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 15 ॥
ಇಂತಹ ಇಷ್ಟವಾದ ವರವನ್ನು ಪಡೆದು ಕಾಲಕ್ರಮದಲ್ಲಿ ಸ್ವರ್ಗಸ್ಥನಾದನು. ಎಲೈ ಸೃಂಜಯನೇ, ಅವನು ನಿನಗಿಂತಲೂ ನಾಲ್ಕುಪಟ್ಟು ಶ್ರೇಷ್ಠನಾಗಿದ್ದನು. ಅವನ ಪುತ್ರನು ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದವನು. ಎಲೈ ಜ್ಞಾನಿಶ್ರೇಷ್ಠನೇ, ಯಾಗಗಳನ್ನು ಮಾಡದ, ದಕ್ಷಿಣೆಯನ್ನು ಕೊಡದ ನಿನ್ನ ಪುತ್ರನನ್ನು ಕುರಿತು ಸಂತಾಪಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಪಂಚಪಂಚಾಶತ್ತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತಾರನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ರಾಮಮಹಿಮೆಯ ಕಥನ
ನಾರದಃ
ರಾಮಂ ದಾಶರಥಿಂ ಚಾಪಿ ಗತಂ ಸೃಂಜಯ ಶುಶ್ರುಮ |
ಯಂ ಪ್ರಜಾ ಅನ್ವಮೋದಂತ ಮಾತಾ ಪುತ್ರಮಿವೌರಸಮ್ |
ಅಸಂಖ್ಯೇಯಾ ಗುಣಾ ಯಸ್ಮಿನ್ನಾಸನ್ನಮಿತತೇಜಸಿ ॥ 1 ॥
ನಾರದರು ಎಲೈ ಸೃಂಜಯನೇ, ದಶರಥಪುತ್ರನಾದ ರಾಮನೂ ಸ್ವರ್ಗಸ್ಥನಾದನೆಂದು ಕೇಳಿದ್ದೇವೆ. ತಾಯಿಯು ಔರಸ ಪುತ್ರನನ್ನು ಮೆಚ್ಚುವಂತೆ ಅವನನ್ನು ಪ್ರಜೆಗಳು ಮೆಚ್ಚಿದರು. ಅಮಿತ ತೇಜಸ್ವಿಯಾದ ಅವನಲ್ಲಿ ಸಂಖ್ಯೆಯಿಲ್ಲದಷ್ಟು ಗುಣಗಳಿದ್ದವು.
ಯಶ್ಚತುರ್ದಶವರ್ಷಾಣಿ ನಿದೇಶಾತ್ ಪಿತುರಚ್ಯುತಃ |
ವನೇ ವನಿತಯಾ ಸಾರ್ಧಮ್ ಅವಸಲ್ಲಕ್ಷ್ಮಣಾನುಗಃ ॥ 2 ॥
ಅವನು ತನ್ನ ಗುಣಗಳಿಂದ ಚ್ಯುತನಾಗದೆ, ತಂದೆಯ ಆಜ್ಞೆಯಂತೆ ಹದಿನಾಲ್ಕು ವರ್ಷಗಳ ಕಾಲ ಸೀತಾ-ಲಕ್ಷ್ಮಣರ ಜೊತೆಯಲ್ಲಿ ವನವಾಸವನ್ನು ಮಾಡಿದನು.
ಜಘಾನ ಚ ಜನಸ್ಥಾನೇ ರಾಕ್ಷಸಾನ್ ಮನುಜಾಧಿಪಃ |
ತಪಸ್ವಿಜನರಕ್ಷಾರ್ಥಂ ಸಹಸ್ರಾಣಿ ಚತುರ್ದಶ ॥ 3 ॥
ಪುರುಷಶ್ರೇಷ್ಠನಾದ ಅವನು ತಪಸ್ವಿಜನರ ರಕ್ಷಣೆಗೋಸ್ಕರ ಜನಸ್ಥಾನದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರನ್ನು ಸಂಹರಿಸಿದನು.
ತತ್ರೈವ ವಸತಸ್ತಸ್ಯ ರಾವಣೋ ನಾಮ ರಾಕ್ಷಸಃ |
ಜಹಾರ ಭಾರ್ಯಾಂ ವೈದೇಹೀಂ ಸಮ್ಮೋಹ್ಯೈನಂ ಸಹಾನುಜಮ್ ॥4॥
ಅವನು ಅಲ್ಲಿಯೇ ವಾಸ ಮಾಡುತ್ತಿದ್ದಾಗ ರಾವಣನೆಂಬ ರಾಕ್ಷಸನು ಅವನನ್ನೂ ಮತ್ತು ಅವನ ತಮ್ಮನಾದ ಲಕ್ಷ್ಮಣನನ್ನೂ ಮರುಳುಗೊಳಿಸಿ, ಅವನ ಪತ್ನಿಯಾದ ಜಾನಕಿಯನ್ನು ಅಪಹರಿಸಿದನು.
ರಾಮಾಂ ಹೃತಾಂ ರಾಕ್ಷಸೇನ ಭಾರ್ಯಾಂ ಶ್ರುತ್ವಾ ಜಟಾಯುಷಃ |
ಆತುರಃ ಶೋಕಸಂತಪ್ತೋಽಗಚ್ಛದ್ ರಾಮೋ ಹರೀಶ್ವರಮ್ ॥ 5 ॥
ತನ್ನ ಪತ್ನಿಯು ರಾಕ್ಷಸನಿಂದ ಅಪಹರಿಸಲ್ಪಟ್ಟಳೆಂಬ ವಾರ್ತೆಯನ್ನು ಜಟಾಯುವಿನಿಂದ ಕೇಳಿ, ಶೋಕಸಂತಪ್ತನೂ, ಆತುರನೂ ಆದ ರಾಮನು ಕಪಿರಾಜನಾದ ಸುಗ್ರೀವನ ಬಳಿಗೆ ಹೋದನು.
ತೇನ ರಾಮಃ ಸುಸಂಗಮ್ಯ ವಾನರೈಶ್ಚ ಮಹಾಬಲೈಃ |
ಆಜಗಾಮೋದಧೇಃ ಪಾರಂ ಸೇತುಂ ಕೃತ್ವಾ ಮಹಾರ್ಣವೇ ॥ 6 ॥
ಅವನ ಜೊತೆಯಲ್ಲಿ ಒಳ್ಳೆಯ ಸ್ನೇಹವನ್ನು ಸಂಪಾದಿಸಿ, ಮಹಾಬಲಿಷ್ಠರಾದ ವಾನರರ ಜೊತೆಯಲ್ಲಿ ಸಮುದ್ರದ ತೀರಕ್ಕೆ ಬಂದು, ಮಹಾಸಮುದ್ರದಲ್ಲಿ ಸೇತುವೆಯನ್ನು ನಿರ್ಮಿಸಿ ಇನ್ನೊಂದು ದಡವನ್ನು ತಲುಪಿದನು.
ತತ್ರ ಹತ್ವಾ ತು ಪೌಲಸ್ತ್ಯಾನ್ ಸಸುಹೃದ್ಗಣಬಾಂಧವಾನ್ |
ಮಾಯಾವಿನಂ ಮಹಾಘೋರಂ ರಾವಣಂ ಲೋಕಕಂಟಕಮ್ ॥ 7 ॥
ಸುರಾಸುರೈರವಧ್ಯಂ ತಂ ದೇವಬ್ರಾಹ್ಮಣಕಂಟಕಮ್ |
ಜಘಾನ ಸ ಮಹಾಬಾಹುಃ ಪೌಲಸ್ತ್ಯಂ ಸಗಣಂ ರಣೇ ॥ 8 ॥
ಅಲ್ಲಿ ಮಹಾಬಾಹುವಾದ ಅವನು ಸುಹೃದ್ಬಾಂಧವಸಹಿತರಾದ ಪುಲಸ್ತ್ಯ ವಂಶದವರನ್ನು ಸಂಹರಿಸಿ, ಮಾಯಾವಿಯೂ, ಮಹಾಘೋರನೂ, ಲೋಕಕಂಟಕನೂ, ಸುರಾಸುರರಿಂದ ಅವಧ್ಯನಾದವನೂ, ದೇವ-ಬ್ರಾಹ್ಮಣ ಕಂಟಕನೂ ಆದ, ಪೌಲಸ್ತ್ಯನಾದ ರಾವಣನನ್ನು ಯುದ್ಧದಲ್ಲಿ ಅವನ ಪರಿವಾರಸಹಿತವಾಗಿ ಸಂಹರಿಸಿದನು.
ತಮಾಗಸ್ಕಾರಿಣಂ ರಾಮಃ ಪೌಲಸ್ತ್ಯಮಜಿತಂ ಪರೈಃ |
ಜಘಾನ ಸಮರೇ ಕ್ರುದ್ಧಃ ಪುರೇವ ತ್ರ್ಯಂಬಕೋಽಂಧಕಮ್ ॥ 9 ॥
ಪೌಲಸ್ತ್ಯ ಕುಲದಲ್ಲಿ ಜನಿಸಿ, ಲೋಕಕ್ಕೆ ಅಪಕಾರವನ್ನು ಮಾಡಿ, ಪರರಿಂದ ಅಜಿತನಾದ ಆ ಪೌಲಸ್ತ್ಯ ರಾವಣನನ್ನು ರಾಮನು

ಯುದ್ಧದಲ್ಲಿ ಕ್ರುದ್ಧನಾಗಿ, ತ್ರಿನೇತ್ರರಾದ ರುದ್ರದೇವರು ಹಿಂದೆ ಅಂಧಕಾಸುರನನ್ನು ಸಂಹಾರ ಮಾಡಿದಂತೆ ಸಂಹಾರ ಮಾಡಿದನು.
ಹತ್ವಾ ತತ್ರ ರಿಪುಂ ಸಂಖ್ಯೇ ಭಾರ್ಯಯಾ ಸಹ ಸಂಗತಃ |
ಲಂಕೇಶ್ವರಂ ಚ ಚಕ್ರೇ ಸ ಧರ್ಮಾತ್ಮಾನಂ ವಿಭೀಷಣಮ್ ॥ 10 ॥
ಅಲ್ಲಿ ಯುದ್ಧದಲ್ಲಿ ಶತ್ರುವನ್ನು ಕೊಂದು, ಭಾರ್ಯೆಯ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಧರ್ಮಾತ್ಮನಾದ ವಿಭೀಷಣನನ್ನು ಲಂಕಾಧಿಪತಿಯನ್ನಾಗಿ ಮಾಡಿದನು.
ಭಾರ್ಯಯಾ ಸಹ ಸಂಯುಕ್ತಃ ತತೋ ವಾನರಸೇನಯಾ |
ಅಯೋಧ್ಯಾಮಾಗತೋ ವೀರಃ ಪುಷ್ಪಕೇಣ ವಿರಾಜತಾ ॥ 11 ॥
ಅನಂತರ ಶೋಭಿಸುವ ಪುಷ್ಪಕವಿಮಾನದಲ್ಲಿ ಕುಳಿತು, ಭಾರ್ಯೆಯಿಂದಲೂ, ವಾನರಸೇನೆಯಿಂದಲೂ ಸಹಿತನಾಗಿ ವೀರನಾದ ಅವನು ಅಯೋಧ್ಯೆಗೆ ಹಿಂದಿರುಗಿದನು.
ತತ್ರ ರಾಜನ್ ಪ್ರವಿಷ್ಟಃ ಸ ಅಯೋಧ್ಯಾಯಾಂ ಮಹಾಯಶಾಃ |
ಮಾತೄಾರ್ವಯಸ್ಯಾನ್ ಸಚಿವಾನ್ ಋತ್ವಿಜಃ ಸಪುರೋಹಿತಾನ್ ॥ 12 ॥
ಶುಶ್ರೂಷಮಾಣಃ ಸತತಂ ಮಂತ್ರಿಭಿಶ್ಚಾಭಿಷೇಚಿತಃ |
ಎಲೈ ರಾಜನೇ, ಮಹಾಕೀರ್ತಿವಂತನಾದ ಅವನು ಅಯೋಧ್ಯೆಯನ್ನು ಪ್ರವೇಶಿಸಿ, ತಾಯಿಯರನ್ನೂ, ಋತ್ವಿಜರನ್ನೂ, ಪುರೋಹಿತರನ್ನೂ, ಸಚಿವರನ್ನೂ ಸತತವಾಗಿ ಸಮ್ಮಾನಿಸಿ, ಮಂತ್ರಿಗಳಿಂದ ಅಭಿಷೇಕ ಮಾಡಲ್ಪಟ್ಟನು.
ವಿಸೃಜ್ಯ ಹರಿರಾಜಾನಂ ಹನುಮಂತಂ ಸಹಾಂಗದಮ್ ॥ 13 ॥
ಭ್ರಾತರಂ ಭರತಂ ವೀರಂ ಶತ್ರುಘ್ನಂ ಚೈವ ಲಕ್ಷ್ಮಣಮ್ |
ಪೂಜಯನ್ ಪರಯಾ ಪ್ರೀತ್ಯಾ ವೈದೇಹ್ಯಾ ಚಾಭಿಪೂಜಿತಃ ॥ 14 ॥
ಕಪಿರಾಜನಾದ ಸುಗ್ರೀವನನ್ನೂ, ಅಂಗದ ಸಹಿತನಾದ ಹನುಮಂತನನ್ನೂ ಕಳುಹಿಸಿಕೊಟ್ಟು, ತಮ್ಮಂದಿರಾದ ಭರತ-ಶತ್ರುಘ್ನ-ಲಕ್ಷ್ಮಣರನ್ನು ಸಮ್ಮಾನಿಸಿ, ಜಾನಕಿಯಿಂದ ಬಹಳ ಪ್ರೀತಿಯಿಂದ ಪೂಜಿಸಲ್ಪಟ್ಟನು.
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ |
ಚತುಃಸಾಗರಪರ್ಯಂತಾಂ ಪೃಥಿವೀಮನ್ವಶಾಸತ ॥ 15 ॥
ಹತ್ತು ಸಾವಿರ ವರ್ಷಗಳ ಕಾಲ ಮತ್ತು ಒಂದು ಸಾವಿರ ವರ್ಷದ ಕಾಲ ಅವನು ಚತುಸ್ಸಾಗರ ಪರ್ಯಂತವಾದ ಭೂಮಿಯನ್ನು ಆಳಿದನು.
ಸ ಪ್ರಜಾನುಗ್ರಹಂ ಕೃತ್ವಾ ತ್ರಿದಶೈರಭಿಪೂಜಿತಃ |
ವ್ಯಾಪ್ಯ ಕೃತ್ಸ್ನಂ ಜಗತ್ ಕೀರ್ತ್ಯಾ ನರರ್ಷಿಗಣಸೇವಿತಃ |
ಅಶ್ವಮೇಧಶತೈರೀಜೇ ಕ್ರತುಭಿರ್ಭೂರಿದಕ್ಷಿಣೈಃ ॥ 16 ॥
ಅವನು ಪ್ರಜೆಗಳಿಗೆ ಅನುಗ್ರಹವನ್ನು ಮಾಡಿ, ದೇವತೆಗಳಿಂದ ಪೂಜಿಸಲ್ಪಟ್ಟು, ಜಗತ್ತೆಲ್ಲವನ್ನೂ ತನ್ನ ಕೀರ್ತಿಯಿಂದ ವ್ಯಾಪಿಸಿ, ಮನುಷ್ಯರಿಂದಲೂ ಮತ್ತು ಋಷಿ ಗಣಗಳಿಂದಲೂ ಸೇವಿಸಲ್ಪಟ್ಟನು. ಬಹಳ ದಕ್ಷಿಣೆಯನ್ನು ದಾನ ಮಾಡಿ ನೂರು ಅಶ್ವಮೇಧ ಯಾಗಗಳನ್ನು ಆಚರಿಸಿದನು.
ಯಶ್ಚ ವಿಪ್ರಪ್ರಸಾದೇನ ಸರ್ವಕಾಮಾನವಾಪ್ಯ ಚ ॥ 17 ॥
ಸಂಪ್ರಾಪ್ಯ ವಿಧಿವದ್ ರಾಜ್ಯಂ ಸರ್ವಭೂತಾನುಕಂಪನಃ |
ಸರ್ವದ್ವೀಪಾನವಷ್ಟಭ್ಯ ಪ್ರಜಾ ಧರ್ಮೇಣ ಪಾಲಯನ್ ॥ 18 ॥
ಸ ನಿರರ್ಗಲಜಾನ್ ಮುಖ್ಯಾನ್ ಅಶ್ವಮೇಧಶತಂ ಪ್ರಭುಃ |
ಆಜಹಾರಾಮರೇಶಸ್ಯ ಹವಿಷಾಽರ್ಚಾಂ ಚ ಸರ್ವದಾ ॥ 19 ॥
ಅನ್ಯೈಶ್ಚ ವಿವಿಧೈರ್ಯಜ್ಞೈರ್ದಕ್ಷಿಣಾನುಗುಣೋದಿತೈಃ ॥ 20 ॥
ಯಾವ ರಾಮನು ಬ್ರಾಹ್ಮಣರ ಅನುಗ್ರಹದಿಂದ ಎಲ್ಲ ಕಾಮಗಳನ್ನೂ ಪಡೆದು, ವಿಧಿಪ್ರಕಾರವಾಗಿ ರಾಜ್ಯವನ್ನು ಪಡೆದು, ಸರ್ವಭೂತಗಳಲ್ಲಿ ದಯೆಯನ್ನು ಹೊಂದಿದವನಾಗಿ, ಎಲ್ಲ ದ್ವೀಪಗಳನ್ನೂ ತನ್ನ ಪ್ರಭಾವದಿಂದ ವ್ಯಾಪಿಸಿ, ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಾ, ಯಾವ ಅಡ್ಡಿಯೂ ಇಲ್ಲದಂತೆ ಶ್ರೇಷ್ಠವಾದ ನೂರು ಅಶ್ವಮೇಧ ಯಾಗಗಳನ್ನು ಮಾಡಿ, ದೇವೇಶನಾದ ಇಂದ್ರನನ್ನು ಸರ್ವದಾ ಹವಿಸ್ಸುಗಳಿಂದ ಪೂಜಿಸಿದನೋ ಪ್ರಭುವಾದ ಅವನು ಪ್ರಭೂತವಾದ ದಕ್ಷಿಣೆಯನ್ನು ಹೊಂದಿದ, ಗುಣಯುಕ್ತವಾದ, ಇನ್ನೂ ಅನೇಕ ವಿಧವಾದ ಯಜ್ಞಗಳನ್ನು ಆಚರಿಸಿದನು.
ಕ್ಷುತ್ಪಿಪಾಸೇಽವಧೀದ್ ರಾಮಃ ಸರ್ವರೋಗಾಂಶ್ಚ ದೇಹಿನಾಮ್ ॥21॥
ಸತತಂ ಗುಣಸಂಪನ್ನೋ ದೀಪ್ಯಮಾನಃ ಸ್ವತೇಜಸಾ |
ಅತಿ ಸರ್ವಾಣಿ ಭೂತಾನಿ ರಾಮೋ ದಾಶರಥಿರ್ಬಭೌ ॥ 22 ॥
ರಾಮನು ತನ್ನ ಆಳ್ವಿಕೆಯಲ್ಲಿ ಎಲ್ಲ ಪ್ರಾಣಿಗಳಿಗೂ ಹಸಿವು-ನೀರಡಿಕೆಗಳನ್ನೂ ಮತ್ತು ಎಲ್ಲ ರೋಗಗಳನ್ನೂ ಪರಿಹರಿಸಿದನು. ಸತತವಾಗಿ ಗುಣಪೂರ್ಣನಾಗಿದ್ದು, ತನ್ನ ತೇಜಸ್ಸಿನಿಂದ ಬೆಳಗುತ್ತಾ ದಾಶರಥಿ ರಾಮನು ಎಲ್ಲ ಸ್ಥಾವರ-ಜಂಗಮ ಪ್ರಾಣಿಗಳಿಗಿಂತ ಅತಿಶಯವಾಗಿ ಮೆರೆದನು.
ಋಷೀಣಾಂ ದೇವತಾನಾಂ ಚ ಮಾನುಷಾಣಾಂ ಚ ಸರ್ವಶಃ |
ಪೃಥಿವ್ಯಾಂ ಸಹ ವಾಸೋಽಭೂದ್ ರಾಮೇ ರಾಜ್ಯಂ ಪ್ರಶಾಸತಿ ॥23॥
ರಾಮನು ರಾಜ್ಯವಾಳುತ್ತಿದ್ದಾಗ ಭೂಮಿಯಲ್ಲಿ ಋಷಿಗಳು, ದೇವತೆಗಳು ಮತ್ತು ಮನುಷ್ಯರೆಲ್ಲರೂ ಒಟ್ಟಿಗೆ ವಾಸ ಮಾಡುತ್ತಿದ್ದರು.
ನಾಹೀಯಂತ ತದಾ ಪ್ರಾಣಾಃ ಪ್ರಾಣಿನಾಂ ನ ತದಾ ವ್ಯಥಾ |

ಪ್ರಾಣಾಪಾನೌ ಸಮಾವಾಸ್ತಾಂ ರಾಮೇ ರಾಜ್ಯಂ ಪ್ರಶಾಸತಿ |
ಪರ್ಯದೀಪ್ಯಂತ ತೇಜಾಂಸಿ ತಥಾನರ್ಥಶ್ಚ ನಾಭವತ್ ॥ 24 ॥
ಆಗ ಪ್ರಜೆಗಳಿಗೆ ಅಕಾಲದಲ್ಲಿ ಮರಣವು ಉಂಟಾಗುತ್ತಿರಲಿಲ್ಲ. ವ್ಯಥೆಯು ಉಂಟಾಗುತ್ತಿರಲಿಲ್ಲ. ರಾಮನು ರಾಜ್ಯವಾಳುತ್ತಿದ್ದಾಗ ಎಲ್ಲ ಪ್ರಾಣಿಗಳಿಗೂ ಪ್ರಾಣಾಪಾನಗಳು ಸಮವಾಗಿದ್ದವು. ಎಲ್ಲ ಸೂರ್ಯಾದಿ ತೇಜಸ್ಸುಗಳು ಚೆನ್ನಾಗಿ ಪ್ರಕಾಶಿಸುತ್ತಿದ್ದವು ಮತ್ತು ಯಾವ ಅನರ್ಥವೂ ಇರಲಿಲ್ಲ.
ದೀರ್ಘಾಯುಷಃ ಪ್ರಜಾಃ ಸರ್ವಾ ಯುವಾನೋ ನ ಮೃತಾಸ್ತದಾ |
ವೇದೈಶ್ಚತುರ್ಭಿಃ ಸಂಪನ್ನಾಃ ಪ್ರಾಪ್ನುವಂತಿ ದಿವಂ ದ್ವಿಜಾಃ |
ಹವ್ಯಂ ಕವ್ಯಂ ಚ ವಿಧಿವತ್ ಪೂರ್ತಾನಿ ಹುತಮೇವ ಚ ॥ 25 ॥
ಎಲ್ಲ ಪ್ರಜೆಗಳೂ ದೀರ್ಘಾಯುಷ್ಯವುಳ್ಳವರಾಗಿದ್ದರು. ಯುವಕರು ಮೃತರಾಗುತ್ತಿರಲಿಲ್ಲ. ದ್ವಿಜರು ನಾಲ್ಕು ವೇದಗಳಿಂದ ಸಂಪನ್ನರಾಗಿ ಸ್ವರ್ಗವನ್ನು ಪಡೆಯುತ್ತಿದ್ದರು. ಹವ್ಯ-ಕವ್ಯಗಳು, ಇಷ್ಟಾಪೂರ್ತಗಳು ವಿಧಿಗೆ ಅನುಗುಣವಾಗಿ ನಡೆಯುತ್ತಿದ್ದವು.
ಅದಂಶಮಶಕಾ ದೇಶಾ ನಷ್ಟವ್ಯಾಲಸರೀಸೃಪಾಃ |
ನಾಪ್ಸು ಪ್ರಾಣಭೃತೋ ಮಗ್ನಾ ನಾಕಾಲೇ ಜ್ವಲನೋಽದಹತ್ ॥ 26 ॥
ದೇಶದಲ್ಲಿ ನೊಣಗಳಾಗಲೀ, ಸೊಳ್ಳೆಗಳಾಗಲೀ ಇರಲಿಲ್ಲ. ಸರ್ಪಗಳಾಗಲೀ, ಮಹಾಸರ್ಪಗಳಾಗಲೀ ಇರಲಿಲ್ಲ. ಪ್ರಜೆಗಳು ನೀರಿನಲ್ಲಿ ಮುಳುಗಿ ಮರಣ ಹೊಂದುತ್ತಿರಲಿಲ್ಲ. ಅಕಾಲದಲ್ಲಿ ಅಗ್ನಿಯು ದಹಿಸುತ್ತಿರಲಿಲ್ಲ.
ಅಧರ್ಮರುಚಯೋ ಲುಬ್ಧಾ ಮೂರ್ಖಾ ವಾ ನಾಭವಂಸ್ತದಾ |
ಶಿಷ್ಟೇಷ್ವಜುಷ್ಟಕರ್ಮಾಣಃ ಸರ್ವೇ ವರ್ಣಾಸ್ತದಾಽಭವನ್ ॥ 27 ॥
ಆಗ ಅಧರ್ಮದಲ್ಲಿ ಆಸಕ್ತರಾಗದವರಾಗಲೀ, ಲೋಭಿಗಳಾಗಲೀ, ಮೂರ್ಖರಾಗಲಿ ಇರಲಿಲ್ಲ. ಎಲ್ಲ ವರ್ಣಗಳವರೂ ತಮಗೆ ಅನುಗುಣವಾದ, ಪ್ರಿಯವಾದ ಕರ್ಮಗಳನ್ನು ಮಾಡುತ್ತಿದ್ದರು.
ಸ್ವಧಾಮೂರ್ಜಂ ಚ ರಕ್ಷೋಭಿರ್ಜನಸ್ಥಾನೇ ಪ್ರಣಾಶಿತೇ |
ಪ್ರಾದಾನ್ನಿಹತ್ಯ ರಕ್ಷಾಂಸಿ ಪಿತೃದೇವೇಭ್ಯ ಈಶ್ವರಃ ॥ 28 ॥
ಜನಸ್ಥಾನದಲ್ಲಿ ರಾಕ್ಷಸರನ್ನು ವಿನಾಶಗೊಳಿಸಿದ ಮೇಲೆ ಈಶ್ವರನಾದ ರಾಮನು ಪಿತೃಗಳಿಗೂ ಮತ್ತು ದೇವತೆಗಳಿಗೂ ಸ್ವಧಾರೂಪವಾದ ಮತ್ತು ಊರ್ಜರೂಪವಾದ ಅನ್ನವನ್ನು ಕೊಟ್ಟನು.
ಅಪ್ಯತ್ರ ಗಾಥಾ ಗಾಯಂತಿ ಯೇ ಪುರಾಣವಿದೋ ಜನಾಃ ॥ 29 ॥
ಸಹಸ್ರಪುತ್ರಾಃ ಪುರುಷಾ ದಶವರ್ಷಶತಾಯುಷಃ |
ನಚ ಜ್ಯೇಷ್ಠಾಃ ಕನಿಷ್ಠೇಭ್ಯಸ್ತದಾ ಶ್ರಾದ್ಧಾನಿ ಕುರ್ವತೇ ॥ 30 ॥
ಪುರಾಣವನ್ನು ತಿಳಿದ ಜನರು ಆ ಕಾಲದಲ್ಲಿ ಪುರುಷರು ಸಹಸ್ರ ಪುತ್ರರನ್ನು, ಸಹಸ್ರ ವರ್ಷ ಆಯುಷ್ಯವನ್ನು ಹೊಂದಿರುತ್ತಿದ್ದರು ಎಂದು ಗೀತೆಯನ್ನು ಹಾಡುತ್ತಾರೆ. ಆಗ ದೊಡ್ಡವರು ಚಿಕ್ಕವರಿಗೆ ಶ್ರಾದ್ಧವನ್ನು ಮಾಡುವ ಪ್ರಸಂಗವಿರಲಿಲ್ಲ.
ನ ತಸ್ಕರಾ ವಾ ವ್ಯಾಧಿರ್ವಾ ವಿವಿಧೋಪದ್ರವಾಃ ಕ್ವಚಿತ್ |
ಅನಾವೃಷ್ಟಿಭಯಂ ಚಾತ್ರ ದುರ್ಭಿಕ್ಷೋ ವ್ಯಾಧಯಃ ಕ್ವಚಿತ್ ॥ 31 ॥
ಆಗ ಕಳ್ಳರಾಗಲೀ, ವ್ಯಾಧಿಗಳಾಗಲೀ, ಅನೇಕ ಉಪದ್ರವಗಳಾಗಲೀ, ಅನಾವೃಷ್ಟಿ ಭಯವಾಗಲೀ, ದುರ್ಭಿಕ್ಷವಾಗಲೀ ಅಥವಾ ಮೋಸವಾಗಲೀ ಇರಲಿಲ್ಲ.
ಸರ್ವಂ ಪ್ರಸನ್ನಮೇವಾಸೀದ್ ಅತ್ಯಂತಸುಖಸಂಯುತಮ್ |
ಏವಂ ಲೋಕೋಽಭವತ್ ಸರ್ವೋ ರಾಮೇ ರಾಜ್ಯಂ ಪ್ರಶಾಸತಿ ॥32॥
ಎಲ್ಲವೂ ಪ್ರಸನ್ನವಾಗಿದ್ದಿತು. ಎಲ್ಲರೂ ಸುಖದಿಂದ ಕೂಡಿರುತ್ತಿದ್ದರು. ರಾಮನು ರಾಜ್ಯವಾಳುತ್ತಿದ್ದಾಗ ಎಲ್ಲ ಲೋಕವೂ ಹೀಗಿದ್ದಿತು.
ಶ್ಯಾಮೋ ಯುವಾ ಲೋಹಿತಾಕ್ಷೋ ಮಾತಂಗಾನಾಮಿವರ್ಷಭಃ |
ಆಜಾನುಬಾಹುಃ ಸುಮುಖಃ ಸಿಂಹಸ್ಕಂಧೋ ಮಹಾಭುಜಃ ॥ 33 ॥
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ |
ಸರ್ವಭೂತಮನಃಕಾಂತೋ ರಾಮೋ ರಾಜ್ಯಮಕಾರಯತ್ ॥ 34 ॥
ಶ್ಯಾಮವರ್ಣನೂ, ಯುವಕನೂ, ಲೋಹಿತಾಕ್ಷನೂ, ಗಜರಾಜನ ರೀತಿಯುಳ್ಳವನೂ, ಆಜಾನುಬಾಹುವೂ, ಸುಂದರಮುಖವುಳ್ಳವನೂ, ಸಿಂಹಸ್ಕಂಧನೂ ಮಹಾಭುಜನೂ ಆದ ರಾಮನು ಸರ್ವಪ್ರಾಣಿಗಳ ಮತ್ತು ಮನುಷ್ಯರ ಮನಸ್ಸಿಗೆ ಪ್ರಿಯವಾಗಿ ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯವನ್ನು ಆಳಿದನು.
ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ |
ರಾಮಭೂತಂ ಜಗದಭೂದ್ ರಾಮೇ ರಾಜ್ಯಂ ಪ್ರಶಾಸತಿ ॥ 35 ॥
ರಾಮ, ರಾಮ, ರಾಮ ಎಂದೇ ಪ್ರಜೆಗಳು ಮಾತನಾಡುತ್ತಿದ್ದರು. ರಾಮನು ರಾಜ್ಯವಾಳುತ್ತಿದ್ದಾಗ ಜಗತ್ತೆಲ್ಲವೂ ರಾಮಮಯವಾಗಿದ್ದಿತು.
ಚತುರ್ವಿಧಾಃ ಪ್ರಜಾಃ ರಾಮಃ ಸ್ವರ್ಗಂ ನೀತ್ವಾ ದಿವಂ ಗತಃ |
ಆತ್ಮೇಚ್ಛಯಾ ಪ್ರತಿಷ್ಠಾಪ್ಯ ರಾಜವಂಶಾನಿಹಾಷ್ಟಧಾ |
ರಾಮನು ತನ್ನ ಇಚ್ಛೆಯಿಂದಲೇ ರಾಜವಂಶವನ್ನು ಎಂಟು ವಿಧವಾಗಿ ಪ್ರತಿಷ್ಠೆ ಮಾಡಿ ಜರಾಯುಜ, ಸ್ವೇದಜ, ಉದ್ಭಿಜ ಮತ್ತು ಅಂಡಜ ರೂಪವಾದ ನಾಲ್ಕು ವಿಧವಾದ ಪ್ರಾಣಿಗಳನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 36 ॥
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |

ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 37 ॥
ಎಲ್ಲ ಸೃಂಜಯನೇ, ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾದ ಅವನೂ ಮತ್ತು ನಿನ್ನ ಪುತ್ರನಿಗಿಂತ ಶ್ರೇಷ್ಠನಾದ ಅವನ ಪುತ್ರನೂ ಮರಣ ಹೊಂದಿದರೆಂದ ಮೇಲೆ ಎಲ್ಲ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದಿರುವ, ದಕ್ಷಿಣೆಯನ್ನು ಕೊಡದಿರುವ ನಿನ್ನ ಪುತ್ರನ ವಿಷಯದಲ್ಲಿ ನೀನು ಸಂತಾಪಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ದ್ರೋಣಪರ್ವಣಿ ಷಟ್ಪಂಚಾಶತ್ತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ಐವತ್ತೇಳನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ಭಗೀರಥನ ಚರಿತೆ
ನಾರದಃ
ಭಗೀರಥಂ ಚ ರಾಜಾನಂ ಮೃತಂ ಸೃಂಜಯ ಶುಶ್ರುಮ |
ಪರಿತ್ರಾಣಾಯ ಪೂರ್ವೇಷಾಂ ಯೇನ ಗಂಗಾಽವತಾರಿತಾ ॥ 1 ॥
ನಾರದರು ಎಲ್ಲ ಸೃಂಜಯನೇ, ತನ್ನ ಪೂರ್ವಜರನ್ನು ರಕ್ಷಿಸಲು ಗಂಗೆಯನ್ನು ಕೆಳಗೆ ತಂದ ಭಗೀರಥ ರಾಜನೂ ಮೃತನಾದನೆಂದು ಕೇಳಿದ್ದೇವೆ.
ಯಸ್ಯೇಂದ್ರೋ ಬಾಹುವೀರ್ಯೇಣ ಪ್ರೀತೋ ರಾಜ್ಞೋ ಮಹಾತ್ಮನಃ |
ಸೋಽಶ್ವಮೇಧಶತೈರೀಜೇ ಸಮಾಪ್ತವರದಕ್ಷಿಣೈಃ |
ಹವಿರ್ಮಂತ್ರಾನ್ನಸಂಪನ್ನೈರ್ದೇವಾನಾಮಾದಧಾನ್ಮುದಮ್ ॥ 2 ॥
ಯಾವ ಮಹಾತ್ಮನಾದ, ಬಾಹುವೀರ್ಯನಾದ ರಾಜನನ್ನು ನೋಡಿ ಇಂದ್ರನೂ ಸಂತೋಷಪಟ್ಟನೋ ಅಂತಹವನು ಶ್ರೇಷ್ಠವಾದ ದಕ್ಷಿಣೆಗಳಿಂದ ಕೂಡಿದ, ಹವಿಸ್ಸು, ಮಂತ್ರಗಳು ಮತ್ತು ಅನ್ನದಾನಗಳಿಂದ ಕೂಡಿದ ನೂರು ಅಶ್ವಮೇಧ ಯಾಗಗಳನ್ನು ಮಾಡಿ ದೇವತೆಗಳಿಗೆ ಸಂತೋಷವನ್ನುಂಟು ಮಾಡಿದನು.
ಯಃ ಸಹಸ್ರಂ ಸಹಸ್ರಾಣಾಂ ಕನ್ಯಾ ಹೇಮವಿಭೂಷಿತಾಃ |
ರಾಜನ್ಯಾನ್ ರಾಜಪುತ್ರ್ಯಶ್ಚ ಬ್ರಾಹ್ಮಣೇಭ್ಯೋ ಹ್ಯಮನ್ಯತ ॥ 3 ॥
ಅವನು ಹತ್ತು ಲಕ್ಷ ಸಂಖ್ಯೆಯ ಸುವರ್ಣಾಲಂಕೃತರಾದ ಕನ್ಯೆಯರನ್ನೂ, ರಾಜಪುತ್ರರನ್ನೂ ಮತ್ತು ರಾಜಪುತ್ರಿಯರನ್ನೂ ಬ್ರಾಹ್ಮಣರಿಗೆ ದಾನ ಮಾಡಿದನು.
ಸರ್ವಾ ರಥಗತಾಃ ಕನ್ಯಾ ರಥಾಃ ಸರ್ವೇ ಚತುರ್ಯುಜಃ |
ರಥೇ ರಥೇ ಶತಂ ನಾಗಾಃ ಪದ್ಮಿನೋ ಹೇಮಮಾಲಿನಃ ॥ 4 ॥
ಆ ಎಲ್ಲ ಕನ್ಯೆಯರೂ ನಾಲ್ಕು ಅಶ್ವಗಳನ್ನು ಹೂಡಿದ ರಥಗಳಲ್ಲಿ ಕುಳಿತು ಪ್ರತಿ ರಥವೂ ಹೇಮಮಾಲೆಗಳನ್ನು, ಪದ್ಮಮಾಲೆಗಳನ್ನು ಧರಿಸಿದ ನೂರು ನೂರು ಗಜಗಳಿಂದ ಹಿಂಬಾಲಿಸಲ್ಪಟ್ಟರು.
ಸಹಸ್ರಮಶ್ವಾಶ್ಚೈಕೈಕಂ ಗಜಾನಾಂ ಪೃಷ್ಠತೋಽನ್ವಯುಃ |
ಅಶ್ವೇಽಶ್ವೇ ಗೋಸಹಸ್ರಂ ತು ತಥೈವ ಚ ಅಜಾವಿಕಮ್ ॥ 5 ॥
ಪ್ರತಿಯೊಂದು ಗಜದ ಹಿಂದೆಯೂ ಅವುಗಳನ್ನು ಸಹಸ್ರ ಅಶ್ವಗಳು ಹಿಂಬಾಲಿಸಿದವು. ಪ್ರತಿಯೊಂದು ಅಶ್ವದ ಹಿಂದೆಯೂ ಸಹಸ್ರ ಗೋವುಗಳು, ಆಡುಗಳು ಮತ್ತು ಕುರಿಗಳು ಇದ್ದವು.
ತೇನ ಕ್ರಾಂತಾ ಜನೌಘೇನ ದಕ್ಷಿಣಾಭಿಶ್ಚ ಭೂಯಸೀ |
ಉಪಹ್ವರೇಽತಿವ್ಯಥಿತಾ ತಸ್ಯಾಂಕೇ ನಿಷಸಾದ ಹ ॥ 6 ॥
ತತೋ ಭಾಗೀರಥೀ ಗಂಗಾ ಹ್ಯೂರ್ಧ್ವಗಾ ಹ್ಯಭವತ್ ಪುರಾ |
ದುಹಿತೃತ್ವಂ ಗತಾ ರಾಜ್ಞಃ ಪುತ್ರೀವಚ್ಚೋಪಪಾದಿತಾ ॥ 7 ॥
ಅವನು ಕೊಟ್ಟ ಬಹಳ ದಕ್ಷಿಣೆಗಳಿಂದಲೂ ಮತ್ತು ಆ ಜನ ಸಮುದಾಯದಿಂದಲೂ ಭೂಮಿಯೆಲ್ಲವೂ ತುಂಬಿ ಹೋಯಿತು. ಪರ್ವತಗಳನ್ನು ಭೇದಿಸಿ, ದಣಿದು ಕೆಳಗೆ ಬಂದ ಗಂಗೆಯು ಪ್ರವಾಹರೂಪದಿಂದ ಅವನ ಮುಂದೆ ಮುಂದೆ ಹೋಗುತ್ತಾ ಮೊದಲು ಅವನ ತೊಡೆಯ ಮೇಲೆ ಕುಳಿತಳು. ರಾಜನು ಅವಳನ್ನು ತನ್ನ ಮಗಳಾಗಿ ಕಲ್ಪಿಸಿಕೊಂಡನು.
ತತ್ರ ಗಾಥಾಂ ಜಗುಃ ಪ್ರೀತಾ ಗಂಧರ್ವಾಃ ಸೂರ್ಯವರ್ಚಸಃ |
ಪಿತೃದೇವಮನುಷ್ಯಾಣಾಂ ಶೃಣ್ವತಾಂ ವಲ್ಗುವಾದಿನಃ ॥ 8 ॥
ಭಗೀರಥಂ ಯಾಜಮಾನಮೈಕ್ಷ್ವಾಕಂ ಭೂರಿದಕ್ಷಿಣಮ್ |
ಗಂಗಾ ಸಮುದ್ರಗಾ ದೇವೀ ವವ್ರೇ ಪಿತರಮೀಶ್ವರಮ್ ॥ 9 ॥
ಸೂರ್ಯಕಾಂತಿಯುಳ್ಳ ಗಂಧರ್ವರು ಸಂತೋಷಗೊಂಡು ಪಿತೃ-ದೇವ- ಮನುಷ್ಯರು ಕೇಳುವಂತೆ ಮಧುರವಾದ ಕಂಠದಿಂದ, ಬಹಳ ದಕ್ಷಿಣೆಯಿಂದ ಕೂಡಿದ ಯಾಗವನ್ನು ಮಾಡುವ ಇಕ್ಷ್ವಾಕು ವಂಶದ, ಪ್ರಭುವಾದ ಭಗೀರಥರಾಜನನ್ನು ಸಮುದ್ರಗಾಮಿನಿಯಾದ ಗಂಗಾದೇವಿಯು ತಂದೆಯಾಗಿ ಸ್ವೀಕರಿಸಿದಳು ಎಂಬ ಗೀತೆಯನ್ನು ಹಾಡಿದರು.
ಸೇಂದ್ರೈಃ ಸವರುಣೈರ್ದೇವೈರ್ಯಸ್ಯ ಯಜ್ಞಾಃ ಸ್ವಲಂಕೃತಾಃ |
ಸಮ್ಯಕ್ ಪರಿಗೃಹೀತಾಶ್ಚ ಶಾಂತವಿಘ್ನಾ ನಿರಾಮಯಾಃ ॥ 10 ॥

ಅವನ ಯಜ್ಞಗಳು ವರುಣನೇ ಮೊದಲಾದ ದೇವತೆಗಳಿಂದ ಚೆನ್ನಾಗಿ ಸ್ವೀಕರಿಸಲ್ಪಟ್ಟು ಯಾವ ತೊಂದರೆಗಳಾಗಲೀ, ಲೋಪದೋಷಗಳಾಗಲೀ ಇಲ್ಲದಂತೆ ನಡೆದವು.
ಯೋ ಯದ್ಯದಿಚ್ಛತೇ ವಿಪ್ರೋ ಯಚ್ಚ ಯಸ್ಯಾತ್ಮನಃ ಪ್ರಿಯಮ್ |
ತತ್ತದ್ ಭಗೀರಥಃ ಪ್ರಾದಾತ್ ತತ್ರ ತತ್ರಾನಘೋ ವಶೀ ॥ 11 ॥
ಯಾವ ಯಾವ ವಿಪ್ರನು ಏನನ್ನು ಬಯಸುತ್ತಾನೆಯೋ ಅಥವಾ ಅವನಿಗೆ ಪ್ರಿಯವಾದುದು ಯಾವುದಿದೆಯೋ ಅವೆಲ್ಲವನ್ನೂ ಅನಘನೂ, ಪ್ರಭುವೂ ಆದ ಭಗೀರಥನು ಅವರಿಗೆ ಕೊಟ್ಟನು.
ನಾದೇಯಂ ಬ್ರಾಹ್ಮಣೇಷ್ವಾಸೀದಸ್ಯ ಕಿಂಚಿತ್ ಪ್ರಿಯಂ ಧನಮ್ |
ಯಶ್ಚ ವಿಪ್ರಪ್ರಸಾದೇನ ಬ್ರಹ್ಮಲೋಕಂ ಗತೋ ನೃಪಃ ॥ 12 ॥
ಬ್ರಾಹ್ಮಣರಿಗೆ ಕೊಡಲಾಗದ ಪ್ರಿಯವಾದ ಧನವು ಅವನ ಬಳಿ ಯಾವುದೂ ಇರಲಿಲ್ಲ. ಆ ರಾಜನು ಬ್ರಾಹ್ಮಣರ ಅನುಗ್ರಹದಿಂದ ಬ್ರಹ್ಮಲೋಕಕ್ಕೆ ಹೋದನು.
ಯೇನ ಯಾತಾಸ್ತ್ವಭಿಮುಖಾ ದಿಶಮದ್ಯಾಪಿ ಪಾದಪಾಃ |
ಆನತಾಸ್ತಸ್ಥುರಿಚ್ಛಂತಃ ತಮನ್ವಾಗಂತುಮೀಶ್ವರಮ್ ॥ 13 ॥
ಪ್ರಭುವಾದ ಅವನು ಹೋದ ದಿಕ್ಕಿನಲ್ಲಿ ತಾವೂ ಹೋಗಲು ಬಯಸಿ ಮರಗಳು ಅವನ ಮಾರ್ಗದ ಕಡೆಗೆ ಬಾಗಿರುವುದನ್ನು ಈಗಲೂ ನೋಡಬಹುದು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 14 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕುಪಟ್ಟು ಶ್ರೇಷ್ಠನಾದ ಅವನೂ ಮತ್ತು ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮರಣಹೊಂದಿದ ಮೇಲೆ ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದಿರುವ, ದಕ್ಷಿಣೆಯನ್ನು ಕೊಡದಿರುವ ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಪಂಚಾಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೆಂಟನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ದಿಲೀಪನ ಚರಿತೆ
ನಾರದಃ
ದಿಲೀಪಂ ಚಾಪಿ ರಾಜೇಂದ್ರ ಮೃತಂ ಸೃಂಜಯ ಶುಶ್ರುಮ |
ಯಸ್ಯ ಯಜ್ಞಶತೇಷ್ವಾಸನ್ ಪ್ರಯುತಾಯುತಶೋ ದ್ವಿಜಾಃ ॥ 1 ॥
ವೇದವೇದಾಂಗತತ್ತ್ವಜ್ಞಾ ಯಜ್ವಾನಃ ಪುತ್ರಪೌತ್ರಿಣಃ |
ಸ್ವಚ್ಛಂದಾಃ ಪುಣ್ಯಗಂಧಾಶ್ಚ ಸುಭಕ್ಷಾ ಹೇಮಮಾಲಿನಃ |
ಯಸ್ಯ ಕರ್ಮಾಣಿ ಭೂರೀಣಿ ಕಥಯಂತಿ ಮನೀಷಿಣಃ ॥ 2 ॥
ನಾರದರು ಎಲೈ ರಾಜೇಂದ್ರನೇ, ಸೃಂಜಯನೇ, ದಿಲೀಪನೂ ಸಹ ಮೃತನಾದನೆಂದು ನಾವು ಕೇಳಿದ್ದೇವೆ. ಅವನ ನೂರು ಯಜ್ಞಗಳಲ್ಲಿ ಪುತ್ರ-ಪೌತ್ರರಿಂದ ಕೂಡಿದವರೂ, ಯಜ್ಞಶೀಲರೂ, ವೇದವೇದಾಂಗ ಪಾರಂಗತರೂ ಆದ ದ್ವಿಜರು ಲಕ್ಷ-ಲಕ್ಷ ಸಂಖ್ಯೆಯಲ್ಲಿ ಇರುತ್ತಿದ್ದರು. ಅವರು ತಮಗೆ ಇಷ್ಟವಾದಂತೆ ಒಳ್ಳೆಯ ಗಂಧಗಳನ್ನೂ, ಒಳ್ಳೆಯ ಭಕ್ಷಗಳನ್ನೂ ಸೇವಿಸಿ ಹೇಮಮಾಲೆಗಳನ್ನು ಧರಿಸಿರುತಿತದ್ದರು. ಇಂಥ ದಿಲೀಪನ ಶ್ರೇಷ್ಠವಾದ ಕರ್ಮಗಳನ್ನು ಜ್ಞಾನಿಗಳು ಕೊಂಡಾಡುತ್ತಾರೆ.
ಯ ಇಮಾಂ ಪೃಥಿವೀಂ ಪೂರ್ಣಾಂ ವಸುಧಾಂ ವಸುಧಾಧಿಪಃ |
ಈಜಾನೋ ವಿತತೇ ಯಜ್ಞೇ ಬ್ರಾಹ್ಮಣೇಭ್ಯೋಽಭ್ಯುಪಾಹರತ್ ॥ 3 ॥
ಭೂಪತಿಯಾದ ಅವನು ವಿಸ್ತಾರವಾದ ಯಜ್ಞದಲ್ಲಿ ದೇವತೆಗಳನ್ನು ಸಂತೋಷಪಡಿಸುತ್ತಾ ಈ ಪೂಣರ್ವಾದ ಭೂಮಿಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.
ಯಸ್ಯ ವೈ ಯಜಮಾನಸ್ಯ ಯಜ್ಞೇ ಯಜ್ಞೇ ಪುರೋಹಿತಃ |
ಸಹಸ್ರಂ ವಾರಣಾನ್ ಹೈಮಾನ್ ದಕ್ಷಿಣಾ ಅತ್ಯಕಾಲಯತ್ ॥ 4 ॥
ಅವನು ಯಜ್ಞವನ್ನು ಮಾಡುವಾಗ ಅವನ ಪುರೋಹಿತರು ಪ್ರತಿಯಜ್ಞದಲ್ಲಿಯೂ ಸುವಣರ್ಮಯವಾದ ಸಹಸ್ರ ಗಜಗಳನ್ನು ದಕ್ಷಿಣೆಯಾಗಿ ಕೊಟ್ಟರು.
ದಿಲೀಪಸ್ಯ ಚ ಯಜ್ಞೇಷು ಕೃತಃ ಪಂಥಾ ಹಿರಣ್ಮಯಃ |
ಸೌವರ್ಣಂ ಚಾಭವತ್ ಸರ್ವಂ ಸದಾ ಪರಮಭಾಸ್ವರಮ್ ॥ 5 ॥
ದಿಲೀಪನ ಯಜ್ಞಗಳಲ್ಲಿ ಯಜ್ಞಕ್ಕೆ ಹೋಗುವ ಮಾರ್ಗವೂ ಸಹ ಸುವರ್ಣಮಯವಾಗಿದ್ದಿತು. ಎಲ್ಲವೂ ಸದಾ ಪ್ರಕಾಶಮಾನವಾದ ಸುವರ್ಣ- ಮಯವಾಗಿದ್ದಿತು.
ರಸಾನಾಂ ಚಾಭವನ್ ಕುಲ್ಯಾಃ ಕಂಠದಧ್ನಾಃ ಸಮಂತತಃ |

ಸಹಸ್ರಾಯಾಮಕಾ ಯೂಪಾಃ ತಸ್ಯ ಚಾಸನ್ ಹಿರಣ್ಮಯಾಃ ॥ 6 ॥
ರಸಗಳ ಸರೋವರಗಳು ಎಲ್ಲ ಕಡೆಗಳಲ್ಲಿಯೂ ಕಂಠದಷ್ಟು ಆಳವಾಗಿದ್ದವು. ಅವನ ಯಜ್ಞದ ಯೂಪಗಳು ಸಹಸ್ರಯಾಮದಷ್ಟು ವ್ಯಾಪ್ತಿಯನ್ನು ಹೊಂದಿ ಸುವರ್ಣಮಯವಾಗಿದ್ದವು.
ತತ್ ಕರ್ಮ ಬಹು ಕುರ್ವಾಣಾಃ ಸೇಂದ್ರಾ ದೇವಾಃ ಸಮುಚ್ಛ್ರಯನ್ |
ಚಷಾಲಪ್ರಚಷಾಲೌ ಚ ಯಸ್ಯ ಯೂಪೇ ಹಿರಣ್ಮಯೌ ॥ 7 ॥
ಅವನ ಕರ್ಮಗಳನ್ನು ಬಹುಮಾನಿಸುತ್ತಾ ಇಂದ್ರಾದಿ ದೇವತೆಗಳು ಯೂಪಕ್ಕೆ ಹಾಕುವ ಸುವಣರ್ಮಯವಾದ ದೊಡ್ಡ ಮತ್ತು ಚಿಕ್ಕ ಬಳೆಗಳನ್ನು ಮೇಲಕ್ಕೆತ್ತಿದರು.
ನೃತ್ಯಂತ್ಯಪ್ಸರಸೋ ಯತ್ರ ಷಟ್ಸಹಸ್ರಾಣಿ ಸಪ್ತ ಚ ॥ 8 ॥
ಅವಾದಯಚ್ಚ ತತ್ರಾಸ್ಯ ಪ್ರೀತ್ಯಾ ವಿಶ್ವಾವಸುಃ ಸ್ವಯಮ್ |
ಸರ್ವಭೂತಾನ್ಯಮೋದಂತ ಮಮ ವಾದಯತೀತಿ ತಮ್ ॥ 9 ॥
ಅವನ ಯಜ್ಞಗಳಲ್ಲಿ ಹದಿಮೂರು ಸಾವಿರ ಅಪ್ಸರೆಯರು ನರ್ತನವನ್ನು ಮಾಡಿದರು. ವಿಶ್ವಾವಸು ಗಂಧರ್ವನು ಪ್ರೀತಿಯಿಂದ ಸ್ವತಃ ಬಂದು ವಾದ್ಯಗಳನ್ನು ನುಡಿಸಿದನು. ಆ ಗೀತೆಗಳನ್ನು ಕೇಳಿದ ಎಲ್ಲ ಪ್ರಾಣಿಗಳೂ ನಮಗೆ ಪ್ರಿಯವನ್ನು ನುಡಿಸುತ್ತಿದ್ದಾನೆ ಎಂದು ತಿಳಿದವು.
ಇತ್ಥಂ ದಿಲೀಪಸ್ಯ ನೃಪಾ ಯಜ್ವಾನ್ ನಾನ್ಯೇಽನುಚಕ್ರಿರೇ |
ಯದ್ರೋಷಾ ಹೇಮಸಂಛನ್ನಾ ಮರ್ತ್ಯಾ ಪಥಿಷು ಶೇರತೇ |
ತದೇವ ಚಾದ್ಭುತಂ ಮನ್ಯೇ ಅನ್ಯೈರಸದೃಶಂ ನೃಪೈಃ ॥ 10 ॥
ಹೀಗೆ ದಿಲೀಪನು ಮಾಡಿದ ಯಜ್ಞಗಳನ್ನು ಬೇರೆ ಯಾವ ರಾಜರೂ ಅನುಕರಿಸಲು ಸಾಧ್ಯವಿಲ್ಲ. ಬೇರೆ ರಾಜರು ಮಾಡಲು ಸಾಧ್ಯವಲ್ಲದ ವಿಷಯವೆಂದರೆ ರಾತ್ರಿಯ ಕಾಲದಲ್ಲಿ ಸುವರ್ಣಾಲಂಕೃತರಾದ ಮನುಷ್ಯರು ಬೀದಿಗಳಲ್ಲಿ ಮಲಗುತ್ತಿದ್ದರು. ಇದೇ ಅದ್ಭುತವೆಂದು ತಿಳಿಯುತ್ತೇನೆ.
ಯಸ್ಯಾಪ್ಸು ಯುದ್ಧ್ಯಮಾನಸ್ಯ ಚಕ್ರೇ ನ ಪರಿಪೇತತುಃ ॥ 11 ॥
ಅವನು ಯುದ್ಧ ಮಾಡುವಾಗ, ನೀರಿನಲ್ಲಿ ಹೋಗುವಾಗ, ಅವನ ರಥದ ಮುಂದಿನ ಚಕ್ರಗಳು ನೀರಿನಲ್ಲಿ ಮುಳುಗುತ್ತಿರಲಿಲ್ಲ (ಇದು ಅದ್ಭುತವಾದುದು).
ರಾಜಾನಂ ಚೋಗ್ರಧನ್ವಾನಂ ದಿಲೀಪಂ ಸತ್ಯವಾದಿನಮ್ |
ಯೇಽಪಶ್ಯನ್ ಭೂರಿದಕ್ಷಿಣ್ಯಂ ತೇಽಪಿ ಸ್ವರ್ಗಮಿತೋ ಗತಾಃ ॥ 12 ॥
ಯಾರು ಉಗ್ರವಾದ ಧನುಸ್ಸುಳ್ಳ, ಸತ್ಯವಾದಿಯಾದ, ಯಜ್ಞಗಳಲ್ಲಿ ಬಹಳ ದಕ್ಷಿಣೆಯನ್ನು ಕೊಡುವ ದಿಲೀಪರಾಜನನ್ನು ನೋಡಿದರೋ ಅವರೂ ಸಹ ಇಲ್ಲಿಂದ ಸ್ವರ್ಗಕ್ಕೆ ಹೋದರು.
ಇಮೇ ಶಬ್ದಾ ನ ಜೀರ್ಯಂತೇ ದಿಲೀಪಸ್ಯ ನಿವೇಶನೇ |
ಸ್ವಾಧ್ಯಾಯಶಬ್ದೋ ಜ್ಯಾಶಬ್ದಃ ಪಿಬತಾಶ್ನೀತ ಖಾದತ |
ದಿಲೀಪನ ಅರಮನೆಯಲ್ಲಿ ವೇದಾಧ್ಯಯನ ಶಬ್ದ, ಜ್ಯಾ ಶಬ್ದ ಮತ್ತು ತಿನ್ನಿರಿ, ಕುಡಿಯಿರಿ ಎಂಬ ಶಬ್ದಗಳು ಎಂದೂ ನಾಶವನ್ನು ಹೊಂದುತ್ತಿರಲಿಲ್ಲ.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 13 ॥
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 14 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮೃತರಾದನೆಂದ ಮೇಲೆ ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದಿರುವ, ದಕ್ಷಿಣೆಯನ್ನು ಕೊಡದಿರುವ ನಿನ್ನ ಪುತ್ರನ ವಿಷಯದಲ್ಲಿ ಸಂತಾಪ ಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ - 26ನೇ ಅಧ್ಯಾಯ
ಸ್ವಯಮೇವಾಖಿಲಜಗದ್ರಕ್ಷಾದ್ಯಮಿತಶಕ್ತಿಮಾನ್ |
ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ ॥
ಜ್ಞಾಪಯನ್ ಫಲ್ಗುನಸ್ಯಾಸ್ತ್ರಗುರುಂ ಗಿರಿಶಮಂಜಸಾ |
ಪ್ರಾಪಯಿತ್ವೈನಮೇವೈತ ತ್ಪ್ರಸಾದಾದಸ್ತ್ರಮುಲ್ಬಣಮ್ |
ಚಕ್ರೇ ತದರ್ಥಮೇವಾಸ್ಯ ರಕ್ಷಾಂ ಚಕ್ರೇ ತದಾತ್ಮಿಕಾಮ್ ॥
ಶ್ರೀಕೃಷ್ಣ ತಾನೆ ಸಕಲ ಲೋಕ ರಕ್ಷಣೆ ಮುಂತಾದ ವಿಷಯಗಳಲ್ಲಿ ಅಮಿತಶಕ್ತಿ ಉಳ್ಳವನಾದರೂ ತಾನು ಗುರುವಿನ ಮೂಲಕವೇ ಅನುಗ್ರಹ ಮಾಡುವವನೆಂದು ತೋರುವುದಕ್ಕಾಗಿ ಅರ್ಜುನನನ್ನು ಅವನ ಅಸ್ತ್ರಗುರುವಾದ ಶಿವನ ಬಳಿಗೇ ಒಯ್ದು ಶಿವನ ಅನುಗ್ರಹದಿಂದ ಅವನ ಪಾಶುಪತಾಸ್ತ್ರ ಬಲಿಷ್ಠವಾಗುವಂತೆ ಮಾಡಿದ. ಅವನಿಗೆ ಶಿವನ ರಕ್ಷೆಯೂ ಸಿಗುವಂತೆ ಮಾಡಿದ.

ಸಾಂತ್ವಯಿತ್ವಾ ಸುಭದ್ರಾಂ ಚ ಗತ್ವೋಪಪ್ಲಾವ್ಯಮಚ್ಯುತಃ |
ಯೋಜಯಿತ್ವಾ ರಥಂ ಪ್ರಾತಃ ಸಾರ್ಜುನೋ ಯುದ್ಧಮಭ್ಯಯಾತ್ ||
ಶ್ರೀಕೃಷ್ಣ ಬೆಳಿಗ್ಗೆ ಉಪಪ್ಲಾವ್ಯಕ್ಕೆ ಹೋಗಿ ಸುಭದ್ರೆಯನ್ನು ಸಂತೈಸಿ ರಥವನ್ನು ಕಟ್ಟಿ ಯುದ್ಧ ಮಾಡಲು ಅರ್ಜುನನೊಂದಿಗೆ ತೆರಳಿದ.
ಶ್ರುತ್ವಾ ಪ್ರತಿಜ್ಞಾಂ ಪುರುಹೂತಸೂನೋ
ದುರ್ಯೋಧನೇನಾರ್ಥಿತಃ ಸಿಂಧುರಾಜಮ್ |
ತ್ರಾತಾಸ್ಮ್ಯಹಂ ಸರ್ವಥೇತಿ ಪ್ರತಿಜ್ಞಾಂ
ಕೃತ್ವಾ ದ್ರೋಣೋ ವ್ಯೂಹಮಭೇದ್ಯಮಾತನೋತ್ ||
ಅರ್ಜುನನ ಪ್ರತಿಜ್ಞೆಯನ್ನು ಕೇಳಿ ದುರ್ಯೋಧನನಿಂದ ಪ್ರಾರ್ಥಿತನಾದ ದ್ರೋಣ ನಾನು ಎಲ್ಲ ರೀತಿಯಿಂದಲೂ ಜಯದ್ರಥನನ್ನು ರಕ್ಷಿಸುವೆನೆಂದು ಪ್ರತಿಜ್ಞೆ ಮಾಡಿ ಅಭೇದ್ಯವಾದ ವ್ಯೂಹವನ್ನು ರಚಿಸಿದ.
* * * * *
ಐವತ್ತೊಂಬತ್ತನೆಯ ಅಧ್ಯಾಯ
ಚತುರ್ದಶ ರಾಜೋಪಾಖ್ಯಾನದಲ್ಲಿ ಮಾಂಧಾತೃ ಚರಿತೆ
ನಾರದಃ
ಮಾಂಧಾತಾ ಚೇದ್ ಯೌವನಾಶ್ವಃ ತ್ರೈಲೋಕ್ಯವಿಜಯೀ ಮೃತಃ |
ದೇವಾಸುರಮನುಷ್ಯಾಣಾಂ ತ್ರಿಲೋಕ್ಯಸ್ಯ ಜಯೀ ನೃಪಃ |
ಯಂ ದೇವಾವಶ್ವಿನೌ ಗರ್ಭೇ ಪಿತುಃ ಪಾರ್ಶ್ವಾನ್ನಿರೂಹತುಃ || 1 ||
ನಾರದರು ಯುವನಾಶ್ವನ ಪುತ್ರನಾದ, ತ್ರಿಲೋಕ ಜಯಶಾಲಿಯಾದ, ದೇವಾಸುರ-ಮನುಷ್ಯರನ್ನು ಜಯಿಸಿದ, ಅಶ್ವಿನೀದೇವತೆಗಳಿಂದ ತಂದೆಯ ಗರ್ಭದಿಂದ ಹೊರಗೆ ತರಲ್ಪಟ್ಟ ಮಾಂಧಾತೃವೂ ಸಹ ಮೃತನಾದನು.
ತಾಯಿಯ ಶರೀರವನ್ನು ಪ್ರವೇಶಿಸದೆ ತಂದೆಯ ಶರೀರದಿಂದಲೇ ಹೊರಬಂದವನು ಎಂದು ಅಭಿಪ್ರಾಯ.
ಮೃಗಯಾಂ ವಿಚರನ್ ರಾಜಾ ತೃಷಿತಃ ಶ್ರಾಂತವಾಹನಃ |
ಧೂಮಂ ದೃಷ್ಟ್ವಾಽಗಮತ್ ಸತ್ರಂ ಪೃಷದಾಜ್ಯಮವಾಪ ಸಃ || 2 ||
ಬೇಟೆಗೆ ಹೊರಟು ತಿರುಗಾಡಿದ ಯುವನಾಶ್ವ ರಾಜನು ತನ್ನ ವಾಹನವು ದಣಿದು, ತಾನೂ ಬಾಯಾರಿಕೆಯಿಂದ ಬಳಲಿ, ದೂರದಲ್ಲಿ ಧೂಮವನ್ನು ನೋಡಿ ಸಮೀಪಕ್ಕೆ ಹೋಗಿ ಅಲ್ಲಿ ನಡೆಯುತಿತದ್ದ ಸತ್ರಯಾಗದಲ್ಲಿ ಘೃತಮಿಶ್ರಿತವಾದ ಹೋಮಾನ್ನವನ್ನು ಸ್ವೀಕರಿಸಿದನು.
ತಂ ದೃಷ್ಟ್ವಾ ಯುವನಾಶ್ವಸ್ಯ ಜಠರೇ ರವಿಸನ್ನಿಭಮ್ |
ಗರ್ಭಂ ನಿರೂಹತುರ್ದೇವಾವಶ್ವಿನೌ ಭಿಷಜಾಂ ವರೌ || 3 ||
ವೈದ್ಯಶ್ರೇಷ್ಠರೂ, ದೇವತೆಗಳೂ ಆದ ಅಶ್ವಿನಿಗಳು ಯುವನಾಶ್ವನ ಜಠರದಲ್ಲಿ ಸೂರ್ಯನ ಕಾಂತಿಯಿಂದ ಬೆಳಗುತ್ತಿದ್ದ ಗರ್ಭವನ್ನು ನೋಡಿ ತಮ್ಮ ಕೌಶಲದಿಂದ ಆ ಶಿಶುವನ್ನು ಹೊರಗೆ ತೆಗೆದರು.
ತಂ ದೃಷ್ಟ್ವಾ ಪಿತುರುತ್ಸಂಗೇ ಶಯಾನಂ ದೇವವರ್ಚಸಮ್ |
ಅನ್ಯೋನ್ಯಮಬ್ರುವನ್ ದೇವಾಃ ಕಮಯಂ ಧಾಸ್ಯತೀತಿ ವೈ || 4 |||
ಮಮೈವಾಯಂ ಧಯತ್ವಂಗಮಿತಿ ಹ ಸ್ಮಾಹ ವಾಸವಃ |
ದೇವೇಂದ್ರಸ್ಯ ತತೋಽಂಗುಷ್ಠಾತ್ ಪ್ರಾದುರಾಸೀತ್ ಪಯೋಽಮೃತಮ್ ||
ತಂದೆಯ ಮೇಲೆ ಮಲಗಿದ್ದ, ದೇವತಾ ಕಾಂತಿಯನ್ನು ಹೊಂದಿದ ಆ ಶಿಶುವನ್ನು ನೋಡಿ ದೇವತೆಗಳು ಇವನು ಯಾರ ಸ್ತನವನ್ನು ಪಾನ ಮಾಡುವನು ಎಂದು ಪರಸ್ಪರವಾಗಿ ಮಾತನಾಡಿಕೊಂಡರು. ಇಂದ್ರನು ನನ್ನ ಅವಯವವನ್ನೇ ಇವನು ಪಾನ ಮಾಡಲಿ ಎಂದು ಹೇಳಿದನು. ಆಗ ದೇವೇಂದ್ರನ ಅಂಗುಷ್ಠದಿಂದ ಅಮೃತಪ್ರಾಯವಾದ ಕ್ಷೀರವು ಪ್ರಾದುರ್ಭೂತವಾಯಿತು.
ತದಭೂತ್ ತೇನ ನಾಮ್ನಾಽಸ್ಯ ಮಾಂಧಾತೇತಿ ಪ್ರಚಕ್ರಿರೇ || 6 ||
ಮಾಂ ಧಾಸ್ಯತೀತಿ ಕಾರುಣ್ಯಾದ್ ಯದಿಂದ್ರೋಽಪ್ಯನ್ವಕಂಪತ |
ತಸ್ಮಾನ್ಮಾಂಧಾತರಿತ್ಯೇವಂ ನಾಮ ತಸ್ಯಾಭವತ್ ಕೃತಮ್ || 7 ||
ಹಾಗೆ ಪಾನವನ್ನು ಮಾಡಿದ ಕಾರಣದಿಂದ ಅವನಿಗೆ ಮಾಂಧಾತೃ ಎಂದೇ ನಾಮಕರಣ ಮಾಡಿದರು. ಇಂದ್ರನು ತನ್ನ ಮನಸ್ಸು ಕರಗಿ ಅವನಿಗೆ ಉಪಕಾರವನ್ನು ಮಾಡಲು ನನ್ನನ್ನೇ ಪಾನ ಮಾಡುವನು ಎಂದು ಹೇಳಿದ ಕಾರಣದಿಂದ ಅವನಿಗೆ ಮಾಂಧಾತೃ ಎಂದೇ ನಾಮಕರಣವಾಯಿತು.
ತತಃ ಸ ಧಾರಾಂ ಪಯಸೋ ಘೃತಸ್ಯ ಚ ಮಹಾತ್ಮನಃ |
ತಸ್ಯಾಸ್ಯೇ ಯೌವನಾಶ್ವಸ್ಯ ಪಾಣಿರಿಂದ್ರಸ್ಯ ಚಾಸ್ರುವತ್ || 8 ||
ಅನಂತರ ಇಂದ್ರನ ಪಾಣಿಯು ಮಹಾತ್ಮನಾದ ಯುವನಾಶ್ವನ ಪುತ್ರನಾದ ಮಾಂಧಾತೃವಿನ ವದನದಲ್ಲಿ ಘೃತ ಮತ್ತು ಕ್ಷೀರಗಳ ಧಾರೆಯನ್ನು ಸುರಿಸಿತು.
ಸ ಪಿಬನ್ ಪಾಣಿಮಿಂದ್ರಸ್ಯ ಸಮಮಹ್ನಾ ಚ ವರ್ಧತೇ |
ಸೋಽಭವದ್ ದ್ವಾದಶಸಮೋ ದ್ವಾದಶಾಹೇನ ವೀರ್ಯವಾನ್ || 9 ||
ಅವನು ಇಂದ್ರನ ಪಾಣಿಯನ್ನು ಪಾನ ಮಾಡುತ್ತಾ, ಒಂದು ದಿನದಲ್ಲಿ ಒಂದು ವರ್ಷದ ಬೆಳವಣಿಗೆಯನ್ನು ಪಡೆದನು.
ಪರಾಕ್ರಮಶಾಲಿಯಾದ ಅವನು ಹನ್ನೆರಡು ದಿವಸಗಳಲ್ಲಿ ಹನ್ನೆರಡು ವರ್ಷಗಳ ಬೆಳವಣಿಗೆಯನ್ನು ಪಡೆದನು.
ಇಮಾಂ ಚ ಪೃಥಿವೀಂ ಕೃತ್ಸ್ನಾಮೇಕಾಹ್ನಾಽಪ್ಯಜಯಚ್ಚ ಸಃ |

ಧರ್ಮಾತ್ಮಾ ಧೃತಿಮಾನ್ ವೀರಃ ಸತ್ಯಸಂಧೋ ಜಿತೇಂದ್ರಿಯಃ ॥10॥
ಧರ್ಮಾತ್ಮನೂ, ಧೈರ್ಯಶಾಲಿಯೂ, ವೀರನೂ, ಸತ್ಯಸಂಧನೂ, ಜಿತೇಂದ್ರಿಯನೂ ಆದ ಅವನು ಈ ಸಮಗ್ರವಾದ ಭೂಮಿಯನ್ನು ಒಂದು ದಿವಸದಲ್ಲಿ ಜಯಿಸಿದನು.
ಜನಮೇಜಯಂ ಸುಧನ್ವಾನಂ ಗಯಂ ಪೂರುಂ ಬೃಹದ್ರಥಮ್ ।
ಅಸಿತಂ ಚೈವ ನಾಭಾಗಂ ಮಾಂಧಾತಾ ಮಾನವೋಽಜಯತ್ ॥ 11 ॥
ಮನುವಿನ ವಂಶದಲ್ಲಿ ಜನಿಸಿದ ಮಾಂಧಾತೃವು ಜನಮೇಜಯನನ್ನೂ, ಸುಧನ್ವನನ್ನೂ, ಗಯ-ಪೂರು-ಬೃಹದ್ರಥರನ್ನೂ, ಅಸಿತನನ್ನೂ ಮತ್ತು ನಾಭಾಗನನ್ನೂ ಮೀರಿದನು.
ಯಾವತ್ ಸೂರ್ಯ ಉದೇತಿ ಸ್ಮ ಯಾವಚ್ಚ ಪ್ರತಿತಿಷ್ಠತಿ ।
ತತ್ ಸರ್ವಂ ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥ 12 ॥
ಸೂರ್ಯನು ಉದಯಿಸಿ ಸಂಚರಿಸುವಷ್ಟು ಪ್ರದೇಶವೆಲ್ಲವೂ ಮಾಂಧಾತೃವಿನ ರಾಜ್ಯವಾಗಿದ್ದಿತು.
ಸೋಽಶ್ವಮೇಧಶತೇನೇಷ್ಟ್ವಾ ರಾಜಸೂಯಶತೇನ ಚ ।
ಅದದಾದ್ ರೋಹಿತಾನಶ್ವಾನ್ ಬ್ರಾಹ್ಮಣೇಭ್ಯೋ ವಿಶಾಂಪತಿಃ ।
ಹೈರಣ್ಯಾನ್ ಯೋಜನೋತ್ಸೇಧಾನ್ ಆಯತಾನ್ ದಶಯೋಜನಮ್ ॥
ರಾಜನಾದ ಅವನು ನೂರು ಅಶ್ವಮೇಧ ಯಾಗಗಳನ್ನೂ, ನೂರು ರಾಜಸೂಯಗಳನ್ನೂ ಮಾಡಿ ಲೋಹಿತವರ್ಣದ ಅಶ್ವಗಳನ್ನು ರಾಜರುಗಳಿಗೆ ನೀಡಿದನು. ಹತ್ತು ಯೋಜನ ವಿಸ್ತಾರ ಮತ್ತು ಒಂದು ಯೋಜನ ಎತ್ತರವಿದ್ದ ಸುವರ್ಣದ ರಾಶಿಯನ್ನು ಬ್ರಾಹ್ಮಣರಿಗೆ ನೀಡಿದನು.
ಬಹುಪ್ರಕಾರಾನ್ ಸುಸ್ವಾದೂನ್ ಭಕ್ಷ್ಯಭೋಜ್ಯಾನ್ನಪರ್ವತಾನ್ ।
ಅತಿರಿಕ್ತಾನ್ ಬ್ರಾಹ್ಮಣೇಭ್ಯೋ ಭುಂಜತೇ ಸ್ಮೇತರೇ ಜನಾಃ ॥ 14 ॥
ಭಕ್ಷ್ಯಾನ್ನಪಾನನಿಚಯಾನ್ ಸುಶುಚೀನನ್ನಪರ್ವತಾನ್ ॥ 15 ॥
ಬ್ರಾಹ್ಮಣರು ಊಟ ಮಾಡಿದ ಮೇಲೆ ಉಳಿದ ಅತ್ಯಂತ ರುಚಿಕರವಾದ, ಬಹುಪ್ರಕಾರವಾದ, ಭಕ್ಷ್ಯ-ಭೋಜ್ಯ-ಅನ್ನ ರಾಶಿಗಳನ್ನೂ ಶುಚಿಯಾದ ಪಾನಗಳನ್ನೂ ಉಳಿದವರು ಭುಂಜಿಸುತ್ತಿದ್ದರು.
ಘೃತಹ್ರದಾಃ ಸೂಪಪಂಕಾ ದಧಿಫೇನಾ ಗುಡೋಚ್ಚಯಾಃ ।
ತಾ ಊಹುಃ ಸರ್ವತೋ ನದ್ಯೋ ದಧಿಕ್ಷೀರವಹಾಃ ಶಿವಾಃ ॥ 16 ॥
ದಧಿ-ಕ್ಷೀರಗಳನ್ನು ಹರಿಸುವ ಮಂಗಳಪ್ರದವಾದ ಅವನ ನದಿಗಳು ಘೃತ ಸರೋವರಗಳನ್ನೂ, ಸೂಪದ ಕೆಸರನ್ನೂ, ಮೊಸರಿನ ನೊರೆಯನ್ನೂ ಮತ್ತು ಗುಡ ಪರ್ವತಗಳನ್ನೂ ಹೊಂದಿದ್ದವು.
ದೇವಾಸುರಾ ನರಾ ಯಕ್ಷಾ ಗಂಧರ್ವೋರಗರಾಕ್ಷಸಾಃ ।
ವಿಪ್ರಾಶ್ಚೈವಾಮಿತಗುಣಾ ಯಸ್ಯ ಯಜ್ಞಾನುಪಾವಸನ್ ॥ 17 ॥
ಅವನ ಯಜ್ಞಗಳಲ್ಲಿ ದೇವತೆಗಳೂ, ಅಸುರರೂ, ಮನುಷ್ಯರೂ, ಯಕ್ಷರೂ, ಗಂಧರ್ವೋರಗ ರಾಕ್ಷಸರೂ, ಅಮಿತ ಗುಣವುಳ್ಳ ವಿಪ್ರರೂ ಎಲ್ಲರೂ ಪಾಲ್ಗೊಂಡರು.
ಬ್ರಹ್ಮಣೇ ಬ್ರಹ್ಮಪುತ್ರಾಯ ಪ್ರಾದಾದ್ ಯೋಽತಿವಿಪಶ್ಚಿತೇ ।
ಸಮುದ್ರಾಂತಾಂ ವಸುಮತೀಂ ವಸುಪೂರ್ಣಾಂ ಮಹಾಮತಿಃ ।
ಸ ತಾಂ ಬ್ರಾಹ್ಮಣಸಾತ್ಕೃತ್ವಾ ಜಗಾಮ ಸ್ವಾನ್ ಗೃಹಾನ್ ಪ್ರತಿ ॥ 18 ॥
ಮಹಾಮತಿಯಾದ ಅವನು ಅತ್ಯಂತ ಜ್ಞಾನಿಗಳಾದ, ಬ್ರಹ್ಮಪುತ್ರರಾದ ಕಾಶ್ಯಪರಿಗೆ ವಸುಪೂರ್ಣವಾದ ಸಮುದ್ರಾಂತವಾದ ಭೂಮಿಯನ್ನು ಕೊಟ್ಟನು. ಅವನು ಅಷ್ಟು ಭೂಮಿಯನ್ನು ಬ್ರಾಹ್ಮಣರಿಗೆ ದಾನ ಮಾಡಿ ತನ್ನ ಮನೆಗೆ ಹಿಂದಿರುಗಿದನು.
ರಾಜಾ ಹಿ ವಿವಿಧೈರಿಷ್ಟ್ವಾ ಯಜ್ಞೈರ್ವಿವಿಧದಕ್ಷಿಣೈಃ ।
ಗತಃ ಪುಣ್ಯತಮಾಲ್ಲೋಕಾನ್ ಪ್ರಾಪ್ಯಾತಿಯಶಸಾ ದಿಶಃ ॥ 19 ॥
ಆ ರಾಜನು ವಿಧವಿಧವಾದ ದಕ್ಷಿಣೆಗಳನ್ನು ಹೊಂದಿದ, ವಿಧವಿಧವಾದ ಯಜ್ಞಗಳಿಂದ ದೇವತೆಗಳನ್ನು ಪ್ರಸನ್ನಗೊಳಿಸಿ, ಇಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ತನ್ನ ಕೀರ್ತಿಗಳನ್ನು ಹರಡಿ ಅತ್ಯಂತ ಪುಣ್ಯತಮವಾದ ಲೋಕಗಳನ್ನು ಹೊಂದಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ।
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ ।
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 20 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕುಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಪುಣ್ಯತಮನಾದ ಅವನ ಪುತ್ರನೂ ಮೃತರಾದ ಮೇಲೆ, ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದಿದ್ದ, ದಕ್ಷಿಣೆಯನ್ನು ಕೊಡದಿದ್ದ ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಪಡಬೇಡ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತನೆಯ ಅಧ್ಯಾಯ

ಷೋಡಶ ರಾಜೋಪಾಖ್ಯಾನದಲ್ಲಿ ಯಯಾತಿಯ ಚರಿತೆ
ನಾರದಃ
ಯಯಾತಿಂ ನಾಹುಷಂ ಚಾಪಿ ಮೃತಂ ಸೃಂಜಯ ಶುಶ್ರುಮ |
ಯ ಇಮಾಂ ಪೃಥಿವೀಂ ಜಿತ್ವಾ ಸಸಮುದ್ರಾಂ ಸಪರ್ವತಾಮ್ |
ಶಮ್ಯಾಪ್ರಾಸೇನ ನಿರ್ಮಾಯ ವೇದೀಃ ಸನ್ನತದಕ್ಷಿಣಾಃ ॥ 1 ॥
ಈಜಾನಃ ಕ್ರತುಭಿಃ ಪುಣ್ಯೈಃ ಪರ್ಯಗಚ್ಛತ್ ಪ್ರದಕ್ಷಿಣಮ್ ॥ 2 ॥
ನಾರದರು ಎಲೈ ಸೃಂಜಯನೇ, ನಹುಷಪುತ್ರನಾದ ಯಯಾತಿಯೂ ಮರಣವನ್ನು ಹೊಂದಿದನೆಂದು ಕೇಳಿದ್ದೇವೆ. ಅವನು ಸಮುದ್ರದಿಂದ ಸುತ್ತುವರಿಯಲ್ಪಟ್ಟ, ಪರ್ವತ ಸಹಿತವಾದ ಈ ಭೂಮಿಯನ್ನು ಗೆದ್ದು ಶಮ್ಯಾಪ್ರಾಸದಿಂದ ವೇದಿಗಳನ್ನು ನಿರ್ಮಿಸಿ, ಬಹಳ ದಕ್ಷಿಣೆಯುಳ್ಳ ಪವಿತ್ರವಾದ ಯಜ್ಞಗಳಿಂದ ದೇವತೆಗಳನ್ನು ಅರ್ಚಿಸುವವನಾಗಿ ಭೂಮಿಯ ಪ್ರದಕ್ಷಿಣೆಯನ್ನು ಮಾಡಿದನು.
ಇಷ್ಟ್ವಾ ಕ್ರತುಸಹಸ್ರೇಣ ಹಯಮೇಧಶತೇನ ಚ |
ಪೌಂಡರೀಕಸಹಸ್ರೇಣ ವಾಜಪೇಯಶತೇನ ಚ ॥ 3 ॥
ಅತಿರಾತ್ರಸಹಸ್ರೇಣ ಚಾತುರ್ಮಾಸ್ಯೈಶ್ಚ ಕಾಮತಃ |
ಅಗ್ನಿಷ್ಟೋಮೈಶ್ಚ ವಿವಿಧೈಃ ಸತ್ರೈರ್ನಿತ್ಯಾಪ್ರದಕ್ಷಿಣೈಃ ॥ 4 ॥
ಅಬ್ರಾಹ್ಮಣಾನಾಂ ವಿತ್ತಂ ಯತ್ ಪೃಥಿವ್ಯಾಮಸ್ತಿ ಕಿಂಚನ |
ತತ್ ಸರ್ವಂ ಪರಿಸಂಖ್ಯಾಯ ಸ ತದ್ ಬ್ರಾಹ್ಮಣಸಾತ್ ಕರೋತ್ ॥
ಅವನು ಪೂರ್ಣವಾದ ದಕ್ಷಿಣೆಯನ್ನು ಹೊಂದಿದ್ದ ಸಹಸ್ರ ಸತ್ರಗಳಿಂದಲೂ, ನೂರು ಅಶ್ವಮೇಧ ಯಾಗಗಳಿಂದಲೂ, ಸಹಸ್ರ ಪುಂಡರೀಕ ಯಾಗಗಳಿಂದಲೂ, ನೂರು ವಾಜಪೇಯ ಯಾಗಗಳಿಂದಲೂ, ಸಹಸ್ರ ಅತಿರಾತ್ರ ಯಾಗಗಳಿಂದಲೂ, ಚಾತುರ್ಮಾಸ್ಯ ಯಾಗಗಳಿಂದಲೂ, ಅಗ್ನಿಷ್ಟೋಮ ಯಾಗಗಳಿಂದಲೂ, ವಿಧವಿಧವಾದ ಸತ್ರಗಳಿಂದಲೂ ದೇವತೆಗಳನ್ನು ಅರ್ಚಿಸಿ, ಭೂಮಿಯಲ್ಲಿ ಬ್ರಾಹ್ಮಣೇತರರ ಬಳಿ ಇದ್ದ ಎಲ್ಲ ಧನಗಳನ್ನು ಪರಿಗಣನೆ ಮಾಡಿ, ಅದನ್ನು ಬ್ರಾಹ್ಮಣರ ವಶವನ್ನಾಗಿ ಮಾಡಿದನು.
ಸರಸ್ವತೀ ಪುಣ್ಯತಮಾ ನದೀನಾಂ
ತಥಾ ಸಮುದ್ರಾಃ ಸರಿತೋಽದ್ರಯಶ್ಚ |
ಈಜಾನಾಯ ಪುಣ್ಯತಮಾಯ ರಾಜ್ಞೇ
ಘೃತಂ ಪಯೋ ದುದುಹುರ್ನಾಹುಷಾಯ ॥ 6 ॥
ನದಿಗಳಲ್ಲಿ ಪವಿತ್ರವಾದ ಸರಸ್ವತೀ ನದಿ, ಸಮುದ್ರಗಳು, ಹಾಗೆಯೇ ಸಣ್ಣ ನದಿ ಮತ್ತು ಪರ್ವತಗಳು, ಯಜ್ಞವನ್ನು ಮಾಡುವ, ಪುಣ್ಯ ಪುರುಷನಾದ ನಹುಷ ಪುತ್ರನಾದ ಯಯಾತಿ ರಾಜನಿಗೆ ಘೃತ-ಕ್ಷೀರಗಳನ್ನು ತಂದು ಸುರಿಸಿದವು.
ವ್ಯೂಢೇ ದೇವಾಸುರೇ ಯುದ್ಧೇ ಜಿತ್ವಾ ದೈತ್ಯಾನ್ ಸದಾನವಾನ್ |
ವರ್ಣೇಭ್ಯೋ ವ್ಯಭಜತ್ ಸರ್ವಾಂ ಚತುರ್ಭ್ಯಃ ಪೃಥಿವೀಮಿಮಾಮ್ ॥
ದೇವಾಸುರರ ಯುದ್ಧದಲ್ಲಿ ವ್ಯೂಹಗಳು ರಚಿಸಲ್ಪಡುತ್ತಿರಲು ಅವನು ದೈತ್ಯರನ್ನೂ ಮತ್ತು ದಾನವರನ್ನೂ ಗೆದ್ದು ಈ ಸಮಗ್ರವಾದ ಭೂಮಿಯನ್ನು ನಾಲ್ಕು ವರ್ಣದವರಿಗೂ ಹಂಚಿದನು.
ಯಜ್ಞೈರ್ಬಹುವಿಧೈರಿಷ್ಟ್ವಾ ಪ್ರಜಾಮುತ್ಪಾದ್ಯ ಚೋತ್ತಮಾಮ್ |
ದೇವಯಾನ್ಯಾಂ ಚೌಶನಸ್ಯಾಂ ಶರ್ಮಿಷ್ಠಾಯಾಂ ಚ ಧರ್ಮತಃ ॥ 8 ॥
ದೇವಾರಣ್ಯೇಷು ರಮ್ಯೇಷು ವಿಜಹಾರ ಸಹಪ್ರಿಯಃ |
ಆತ್ಮನಃ ಕಾಮಚಾರೇಣ ದ್ವಿತೀಯ ಇವ ವಾಸವಃ ॥ 9 ॥
ಅನೇಕ ವಿಧವಾದ ಯಜ್ಞಗಳಿಂದ ದೇವತೆಗಳನ್ನು ಅರ್ಚಿಸಿ, ಶುಕ್ರಾಚಾರ್ಯರ ಮಗಳಾದ ದೇವಯಾನಿಯ ಜೊತೆಯಲ್ಲಿ ಮತ್ತು ಶರ್ಮಿಷ್ಠೆಯ ಜೊತೆಯಲ್ಲಿ ಸುಂದರವಾದ ದೇವಾರಣ್ಯಗಳಲ್ಲಿ ವಿಹಾರವನ್ನು ಮಾಡಿ, ಧರ್ಮದಿಂದಲೇ ಶ್ರೇಷ್ಠವಾದ ಸಂತಾನವನ್ನು ಪಡೆದು, ತನ್ನ ವ್ಯಾಪಾರದಿಂದ ಎರಡನೆಯ ಇಂದ್ರನಂತೆ ಮೆರೆದನು.
ಯದಾ ನಾಧ್ಯಗಮಚ್ಛಾಂತಿಂ ಕಾಮಾನಾಂ ಸರ್ವಧರ್ಮವಿತ್ |
ತತೋ ಗಾಥಾಮಿಮಾಂ ಗೀತ್ವಾ ಸದಾರಃ ಪ್ರಾವಿಶದ್ ವನಮ್ ॥10॥
ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ |
ನಾಲಮೇಕಸ್ಯ ತತ್ ಸರ್ವಂ ಸಂತೋಷಂ ಪರಮಂ ಸುಖಮ್ ॥11॥
ಯಾವಾಗ ತನ್ನ ಇಬ್ಬರು ಪತ್ನಿಯರಿಂದ ಅವನು ಕಾಮದಲ್ಲಿ ಅಲಂಬುದ್ಧಿಯನ್ನು ಹೊಂದಲಿಲ್ಲವೋ ಆಗ ಸರ್ವಧರ್ಮಜ್ಞನಾದ ಅವನು ಈ ಗೀತೆಯನ್ನು ಗಾನ ಮಾಡಿ ಪತ್ನಿಯರ ಜೊತೆಯಲ್ಲಿ ವನಕ್ಕೆ ತೆರಳಿದನು. ಭೂಮಿಯಲ್ಲಿ ಎಷ್ಟು ಧನ-ಧಾನ್ಯಗಳೂ, ಸುವರ್ಣವೂ, ಪಶುಗಳು ಮತ್ತು ಸ್ತ್ರೀಯರೂ ಇದ್ದಾರೆಯೋ ಅವರೆಲ್ಲರೂ ಒಬ್ಬನಿಗೆ ಸಾಕಾಗುವುದಿಲ್ಲ. ಆದ್ದರಿಂದ ತೃಪ್ತಿಯೇ ಪರಮ ಸುಖ ಎಂದು ಹಾಡಿದನು.
ಏವಂ ಕಾಮಾನ್ ಪರಿತ್ಯಜ್ಯ ಯಯಾತಿರ್ಧೃತಿಮಾನಥ |
ಪೂರುಂ ರಾಜ್ಯೇ ಪ್ರತಿಷ್ಠಾಪ್ಯ ಪ್ರವಿಷ್ಟೋ ವನಮೀಶ್ವರಃ ॥ 12 ॥
ಧೈರ್ಯಶಾಲಿಯಾದ ಯಯಾತಿಯು ಹೀಗೆ ತನ್ನ ಕಾಮಗಳನ್ನು ಪರಿತ್ಯಜಿಸಿ, ಪುರುವಿಗೆ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿ, ಪ್ರಭುವಾದ ಅವನು ಕಾಡಿಗೆ ಹೋದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ|
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |

ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 13 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕುಪಟ್ಟು ಮಂಗಳಕರನಾಗಿದ್ದ ಅವನೂ, ನಿನ್ನ ಪುತ್ರನಿಗಿಂತಲೂ ಪುಣ್ಯತಮನಾದ ಅವನ ಪುತ್ರನೂ ಮರಣವನ್ನು ಹೊಂದಿದ ಮೇಲೆ, ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದೆ ದಕ್ಷಿಣೆಯನ್ನು ಕೊಡದಿದ್ದ ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂದನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ಅಂಬರೀಶನ ಚರಿತೆ
ನಾರದಃ
ನಾಭಾಗಮಂಬರೀಷಂ ಚ ಮೃತಂ ಸೃಂಜಯ ಶುಶ್ರುಮ |
ಯಂ ಸಹಸ್ರಂ ಸಹಸ್ರಾಣಾಂ ರಾಜ್ಞಾಮಯುತಯೋಧಿನಾಮ್ |
ಜಿಗೀಷಮಾಣಾಃ ಸಂಗ್ರಾಮೇ ಸಮಂತಾದ್ ವೈರಿಣೋಽಭ್ಯಯುಃ ॥
ನಾರದರು ಎಲೈ ಸೃಂಜಯನೇ, ನಾಭಾಗ ಕುಲದಲ್ಲಿ ಜನಿಸಿದ ಅಂಬರೀಷನೂ ಮೃತನಾದನೆಂದು ಕೇಳಿದ್ದೇವೆ. ಅವನನ್ನು ಗೆಲ್ಲಲು ಸಹಸ್ರ, ಸಹಸ್ರ ಶತ್ರುರಾಜರು ಸಹಸ್ರಾರು ಸೈನಿಕರ ಜೊತೆಯಲ್ಲಿ ಯುದ್ಧಕ್ಕೆ ಬಂದರು.
ಶಸ್ತ್ರಮುಚ್ಚಾವಚಂ ಘೋರಂ ಸೃಜಂತಶ್ಚಾಶಿವಾ ಗಿರಃ ॥ 2 ॥
ಬಲಲಾಘವಶಿಕ್ಷಾಭಿಃ ತೇಷಾಂ ಶಸ್ತ್ರಬಲೇನ ಚ |
ಛಿತ್ತ್ವಾಽಯುತಗಜಾನ್ ಜಿತ್ವಾ ನಾಭಾಗಸ್ತು ಗತವ್ಯಥಃ ॥ 3 ॥
ಕ್ರೂರವಾದ ಮಾತುಗಳನ್ನು ಆಡಿ, ಉಚ್ಚ ನೀಚವಾದ, ಘೋರವಾದ ಶಸ್ತ್ರವನ್ನು ಪ್ರಯೋಗಿಸಿ ಯುದ್ಧವನ್ನು ಮಾಡಿದರು. ನಾಭಾಗನಾದರೂ ಯಾವ ಚಿಂತೆಯೂ ಇಲ್ಲದೆ, ತನ್ನ ಶಸ್ತ್ರ, ಬಲದಿಂದಲೂ, ತನ್ನ ಕ್ಷಿಪ್ರತೆ ಮತ್ತು ಅಭ್ಯಾಸದ ಬಲದಿಂದಲೂ, ಅವರ ಗಜ-ರಥಾದಿಗಳನ್ನು ಕತ್ತರಿಸಿದನು.
ತ ಏನಂ ಮುಕ್ತಸನ್ನಾಹಾ ನಾಥಂತೇ ಜೀವಿತೈಷಿಣಃ |
ಶರಣ್ಯಮೀಯುಃ ಶರಣಂ ತವ ಸ್ಮ ಇತಿ ವಾದಿನಃ ॥ 4 ॥
ಅವರು ತಮ್ಮ ಯುದ್ಧಕವಚಾದಿಗಳನ್ನು ಬಿಚ್ಚಿ, ತಮ್ಮ ಜೀವನವನ್ನು ಬೇಡುತ್ತಾ, ನಾವು ನಿನಗೆ ದಾಸರಾಗಿದ್ದೇವೆ ಎಂದು ಹೇಳುತ್ತಾ ಅವನಿಗೆ ಶರಣಾಗತರಾದರು.
ಸ ತು ತಾನ್ ವಶಗಾನ್ ಕೃತ್ವಾ ಜಿತ್ವಾ ಚೇಮಾಂ ವಸುಂಧರಾಮ್ |
ಈಜೇ ಯಜ್ಞಶತೈರಿಷ್ಟೈರ್ಯಥಾ ಶಕ್ರಸ್ತಥಾಽನಘ ॥ 5 ॥
ಎಲೈ ಅನಘನೇ, ಅವನು ಆ ರಾಜರನ್ನು ವಶಪಡಿಸಿಕೊಂಡು, ಈ ಭೂಮಿಯನ್ನು ಗೆದ್ದು, ಇಂದ್ರನಂತೆ ಇಷ್ಟವಾದ ನೂರು ಯಾಗಗಳನ್ನು ಮಾಡಿದನು.
ತಸ್ಯ ಯಜ್ಞೇಷು ವಿಪ್ರೇಂದ್ರಾಃ ಪ್ರಹೃಷ್ಟಾಃ ಪರಮಾರ್ಚಿತಾಃ |
ಬುಭುಜುಃ ಸರ್ವಸಂಪನ್ನಮನ್ನಮನ್ಯೇ ಜನಾಸ್ತಥಾ ॥ 6 ॥
ಅವನ ಯಜ್ಞಗಳಲ್ಲಿ ವಿಪ್ರಶ್ರೇಷ್ಠರು ಬಹಳ ಸನ್ಮಾನಿತರಾಗಿ ಸಂತೋಷಗೊಂಡು ಸರ್ವಸಂಪನ್ನವಾದ ಅನ್ನವನ್ನು ಭುಂಜಿಸಿದರು. ಉಳಿದವರೂ ಸಹ ಅಂತಹ ಅನ್ನವನ್ನೇ ಭುಂಜಿಸಿದರು.
ಮೋದಕಾನ್ ಕಾರಿಕಾಪೂಪಾನ್ ಧಾನಾ ವಟಕಶಷ್ಕುಲೀಃ |
ಕರಂಭಾನ್ ಪೃಥುಕಾಮಂಧಾನನ್ಯಾನಿ ಸುಕೃತಾನಿ ಚ ॥ 7 ॥
ಸೂಪಾಢ್ಯೋರಂಡ್ರಕಾನ್ ಯೂಷಾನ್ ರಾಗಷಾಡಬಪಾನಕಾನ್ |
ನಿಭೃತಾನಿ ಸುಯುಕ್ತಾನಿ ಸ್ವಾದೂನಿ ಸುರಭೀಣಿ ಚ ॥ 8 ॥
ಘೃತಂ ಮಧು ಪಯಸ್ತೋಯಂ ದಧೀನಿ ರಸವಂತಿ ಚ |
ಫಲಂ ಮೂಲಂ ಚ ಸುಸ್ವಾದು ದ್ವಿಜಾಸ್ತತ್ರೋಪಭುಂಜತೇ ॥ 9 ॥
ಕಡುಬುಗಳು, ಗಾರಿಗೆ, ಅಪೂಪ, ದೋಸೆ, ಚಕ್ಕುಲಿ ಮೊದಲಾದ ಭಕ್ಷ್ಯಗಳನ್ನೂ, ತೊವ್ವೆ ಮೊದಲಾದ ಭೋಜ್ಯಗಳನ್ನೂ, ಪಾನಕ ಮೊದಲಾದ ಪೇಯಗಳನ್ನೂ, ಚೆನ್ನಾಗಿ ಬಡಿಸಿದ ದಿವ್ಯ-ಗಂಧಯುಕ್ತವಾದ, ರುಚಿಕರವಾದ ಘೃತ-ಮಧು-ಹಾಲು-ಮೊಸರು-ನೀರು-ಫಲಮೂಲಗಳು ಮುಂತಾದವುಗಳನ್ನೂ ದ್ವಿಜರು ಅಲ್ಲಿ ಭುಂಜಿಸಿದರು.
ಮದನೀಯಾನಿ ಪಾನಾನಿ ವಿದಂಶಾನಾತ್ಮನಃ ಪ್ರಿಯಾನ್ |
ಪಪುಸ್ತತ್ರ ಯಥಾಕಾಮಂ ಪಾನಕಾಃ ಶೀತಕಾಃ ಪರಮ್ ॥ 10 ॥
ಸಂತೋಷವನ್ನು ಕೊಡುವ, ತಮಗೆ ಪ್ರಿಯವಾದ, ಅಗಿಯುವ ಪದಾರ್ಥವಿಲ್ಲದಿರುವ ಶೀತಲವಾದ ಪಾನಕಗಳನ್ನು ತಮಗೆ ಇಷ್ಟ ಬಂದಂತೆ ಪಾನ ಮಾಡಿದರು.
ತತ್ರ ಸ್ಮ ಗಾಥಾ ಗಾಯಂತಿ ಕ್ಷೀಬಾ ಹೃಷ್ಟಾಃ ಪಠಂತಿ ಚ |
ನಾಭಾಗಸ್ತವಸಂಯುಕ್ತಾ ನನೃತುಶ್ಚ ಸಹಸ್ರಶಃ ॥ 11 ॥

ಅಂತಹ ಭೋಜನ, ಪಾನಗಳಿಂದ ಸಂತೋಷಗೊಂಡ ಗಾಯಕರು ನಾಭಾಗನ ಪ್ರಶಂಸಾ ರೂಪವಾದ ಗೀತೆಗಳನ್ನು ಹಾಡಿದರು. ಜನರು ಸಹಸ್ರಾರು ಸಂಖ್ಯೆಯಲ್ಲಿ ನರ್ತನವನ್ನು ಮಾಡಿದರು.
ತೇಷು ಯಜ್ಞೇಷು ನಾಭಾಗೋ ದಕ್ಷಿಣಾ ಅತ್ಯಕಾಲಯತ್ |
ರಾಜ್ಞಾಂ ಶತಸಹಸ್ರಾಣಿ ಪ್ರಯುತಾಯುತವಾಜಿನಾಮ್ ॥ 12 ॥
ಆ ಯಜ್ಞಗಳಲ್ಲಿ ಅಂಬರೀಷನು ಒಂದು ಲಕ್ಷ ರಾಜರನ್ನು ಮತ್ತು ಲಕ್ಷ-ಲಕ್ಷ ಕುದುರೆಗಳನ್ನು ದಕ್ಷಿಣೆಯಾಗಿ ನೀಡಿದನು.
ಹಿರಣ್ಯಕವಚಾನ್ ಸರ್ವಾನ್ ಸರ್ವಾಂಶ್ಚೋತ್ತಮಧನ್ವಿನಃ |
ಹಿರಣ್ಯಸ್ಯಂದನಾರೂಢಾನ್ ಸಾನುಯಾತ್ರಪರಿಚ್ಛದಾನ್ |
ಈಜಾನೋ ವಿತತೇ ಯಜ್ಞೇ ದಕ್ಷಿಣಾ ಅತ್ಯಕಾಲಯತ್ ॥ 13 ॥
ಹಿರಣ್ಯಕವಚವನ್ನು ಧರಿಸಿದ, ಉತ್ತಮ ಧನುರ್ಧಾರಿಗಳಾದ, ಹಿರಣ್ಯ ರಥದಲ್ಲಿ ಕುಳಿತ ತಮ್ಮ ಸೇವಕವರ್ಗದಿಂದ ಸಹಿತರಾದ ರಾಜರನ್ನು ತನ್ನ ವಿಸ್ತಾರವಾದ ಯಜ್ಞದಲ್ಲಿ ಅವನು ದಕ್ಷಿಣೆಯಾಗಿ ಕಲ್ಪಿಸಿದನು.
ಮೂರ್ಧಾವಸಿಕ್ತಾಂಶ್ಚ ನೃಪಾನ್ ರಾಜಪುತ್ರಶತಾನಿ ಚ |
ಸದಂಡಕೋಶವಿಷಯಾನ್ ಬ್ರಾಹ್ಮಣೇಭ್ಯೋ ಹ್ಯಮಂಸತ ॥ 14 ॥
ಮೂರ್ಧಾಭಿಷಿಕ್ತರಾದ ರಾಜರನ್ನೂ ಮತ್ತು ನೂರು ಜನ ರಾಜಕುಮಾರರನ್ನೂ ಅವರ ದಂಡ-ಕೋಶ-ರಾಜ್ಯ ಸಹಿತವಾಗಿ ಬ್ರಾಹ್ಮಣರಿಗೆ ದಾನವನ್ನು ಮಾಡಿದನು.
ನೇಹ ಪೂರ್ವೇ ತಥಾ ಚಕ್ರುಃ ಕರ್ತಾರೋ ವಾ ನ ಚಾಪರೇ |
ಯದಂಬರೀಷೋ ನೃಪತಿಃ ಕರೋತ್ಯಮಿತದಕ್ಷಿಣಃ ॥ 15 ॥
ಅಪರಿಮಿತವಾದ ದಕ್ಷಿಣೆಯನ್ನು ನೀಡಿದ ಅಂಬರೀಷ ರಾಜನು ಮಾಡಿದ ಕಾರ್ಯವನ್ನು ಹಿಂದಿನವರು ಯಾರೂ ಮಾಡಲಿಲ್ಲ, ಮುಂದೆ ಬರುವವರು ಯಾರೂ ಮಾಡುವುದಿಲ್ಲ.
ಇತ್ಯೇವಮನ್ವಮೋದಂತ ಪ್ರೀತಾಃ ಸುರಮಹರ್ಷಯಃ |
ಹೀಗೆ ಚಿಂತಿಸಿ ದೇವತೆಗಳು ಮತ್ತು ಋಷಿಗಳು ಅವನ ಕಾರ್ಯವನ್ನು ಅನುಮೋದಿಸಿದರು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 16 ॥
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 17 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮರಣವನ್ನು ಹೊಂದಿದ ಮೇಲೆ, ಯಾಗಗಳನ್ನು ಮಾಡದ, ದಕ್ಷಿಣೆಯನ್ನು ಕೊಡದ ನಿನ್ನ ಪುತ್ರನ ವಿಷಯದಲ್ಲಿ, ಎಲೈ ಜ್ಞಾನಿಶ್ರೇಷ್ಠನೇ, ಶೋಕಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಏಕಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ಷೋಡಶ ರಾಜೋಪಾಖ್ಯಾನದಲ್ಲಿ ಶಶಿ(ಶಶ)ಬಿಂದು ಚರಿತೆ
ನಾರದಃ
ಶಶಿಬಿಂದುಂ ಚ ರಾಜೇಂದ್ರಂ ಮೃತಂ ಸೃಂಜಯ ಶುಶ್ರುಮ |
ಯ ಈಜೇ ವಿವಿಧೈರ್ಯಜ್ಞೈಃ ಶ್ರೀಮಾನ್ ಸತ್ಯಪರಾಕ್ರಮಃ |
ತಸ್ಯ ಭಾರ್ಯಾಸಹಸ್ರಾಣಾಂ ಶತಮಾಸೀನ್ಮಹಾತ್ಮನಃ ॥ 1 ॥
ನಾರದರು ಎಲೈ ಸೃಂಜಯನೇ, ರಾಜಶ್ರೇಷ್ಠನಾದ ಶಶಿಬಿಂದುವೂ ಸಹ ಮೃತನಾದನೆಂದು ಕೇಳಿದ್ದೇವೆ. ಸತ್ಯಪರಾಕ್ರಮನೂ, ಸಂಪದ್ಯುಕ್ತನೂ ಆದ ಅವನು ವಿಧವಿಧವಾದ ಯಜ್ಞದಿಂದ ದೇವತೆಗಳನ್ನು ಅರ್ಚಿಸಿದನು. ಆ ಮಹಾತ್ಮನಿಗೆ ಒಂದು ಲಕ್ಷ ಭಾರ್ಯೆಯರಿದ್ದರು.
ಏಕೈಕಸ್ಯಾಂ ಚ ಭಾರ್ಯಾಯಾಂ ಪುತ್ರಜನ್ಮ ತಥಾಽಭವತ್ |
ಸಹಸ್ರಂ ತು ಸಹಸ್ರಂ ತು ತಸ್ಯಾಂ ತಸ್ಯಾಂ ಮಹಾತ್ಮನಃ ॥ 2 ॥
ಮಹಾತ್ಮನಾದ ಅವನಿಗೆ ಒಬ್ಬೊಬ್ಬ ಪತ್ನಿಯಲ್ಲಿಯೂ ಸಹಸ್ರ ಸಹಸ್ರ ಪುತ್ರರು ಜನಿಸಿದರು.
ಶಶಿಬಿಂದುಕುಮಾರಾಸ್ತೇ ಸರ್ವೇ ನಿಯುತದಕ್ಷಿಣಾಃ |
ರಾಜಾನಃ ಕ್ರತುಭಿರ್ಮುಖ್ಯೈರೀಜಾನಾ ವೇದಪಾರಗಾಃ ॥ 3 ॥
ಶಶಬಿಂದುವಿನ ಆ ಕುಮಾರರೆಲ್ಲರೂ ನಿಯುತ ಸಂಖ್ಯೆಯ ದಕ್ಷಿಣೆಯನ್ನು ಕೊಡುವವರು, ರಾಜರು, ಶ್ರೇಷ್ಠವಾದ ಯಜ್ಞವನ್ನು ಮಾಡಿದವರು ಮತ್ತು ವೇದಪಾರಂಗತರು.
ಹಿರಣ್ಯಕವಚಾಃ ಸರ್ವೇ ಸರ್ವೇ ಚೋತ್ತಮಧನ್ವಿನಃ |
ಸರ್ವೇಽಶ್ವಮೇಧೈರೀಜಾನಾಃ ಕುಮಾರಾಃ ಶಶಿಬಿಂದವಾಃ ॥ 4 ॥
ಶಶಿಬಿಂದುವಿನ ಕುಮಾರರೆಲ್ಲರೂ ಶ್ರೇಷ್ಠ ಧನುರ್ಧಾರಿಗಳು, ಸುವರ್ಣಕವಚವನ್ನು ಧರಿಸಿದವರು ಮತ್ತು ಅಶ್ವಮೇಧ ಯಾಗವನ್ನು

ಮಾಡಿದರು.
ತಾನಶ್ವಮೇಧೇ ಯಜ್ಞೇಂದ್ರೋ ಬ್ರಾಹ್ಮಣೇಭ್ಯೋಽದದಾತ್ ಪಿತಾ |
ಶತಂ ಶತಂ ರಥಗತಾ ಏಕೈಕಂ ಪೃಷ್ಠತೋಽನ್ವಯುಃ ॥ 5 ॥
ಅಂತಹ ಕುಮಾರರನ್ನು ಶಶಬಿಂದುವು ಶ್ರೇಷ್ಠವಾದ ಅಶ್ವಮೇಧ ಯಾಗದಲ್ಲಿ ಒಬ್ಬೊಬ್ಬ ಬ್ರಾಹ್ಮಣರಿಗೂ ನೂರು ನೂರು ಪುತ್ರರಂತೆ ದಕ್ಷಿಣೆಯಾಗಿ ಕೊಟ್ಟನು. ಅವರು ಬ್ರಾಹ್ಮಣರನ್ನು ಹಿಂಬಾಲಿಸಿ ಹೋದರು.
ರಾಜಪುತ್ರಾಂಸ್ತದಾ ಕನ್ಯಾ ರಮಣೀಯಾಃ ಸ್ವಲಂಕೃತಾಃ |
ಕನ್ಯಾಂ ಕನ್ಯಾಂ ಶತಂ ನಾಗಾ ನಾಗೇ ನಾಗೇ ಶತಂ ರಥಾಃ ॥ 6 ॥
ರಥೇ ರಥೇ ಶತಂ ಚಾಶ್ವಾ ಜವಿನೋ ಹೇಮಮಾಲಿನಃ |
ಅಶ್ವೇ ಹ್ಯಶ್ವೇ ಗೋಸಹಸ್ರಂ ಗವಾಂ ಪಂಚಾಪ್ಯಜಾವಿಕಮ್ ॥ 7 ॥
ಏತದ್ಧನಮಪರ್ಯಂತಮಶ್ವಮೇಧಮಹಾಮಖೇ |
ಶಶಿಬಿಂದುರ್ಮಹಾಭಾಗೋ ಬ್ರಾಹ್ಮಣೇಭ್ಯೋಽನ್ವಮಂಸತ ॥ 8 ॥
ಆ ರಾಜಪುತ್ರರ ಹಿಂದೆ ಚೆನ್ನಾಗಿ ಅಲಂಕೃತರಾದ, ಸುಂದರಿಯರಾದ ಕನ್ಯೆಯರೂ, ಒಬ್ಬೊಬ್ಬ ಕನ್ಯೆಯ ಹಿಂದೆಯೂ ನೂರು ಗಜಗಳು, ಒಂದೊಂದು ಗಜದ ಹಿಂದೆಯೂ ನೂರು ರಥಗಳೂ, ಒಂದೊಂದು ರಥದ ಹಿಂದೆಯೂ ವೇಗಶಾಲಿಯಾದ, ಸುವರ್ಣ ಮಾಲೆಯನ್ನು ಧರಿಸಿದ ನೂರು ಅಶ್ವಗಳೂ, ಒಂದೊಂದು ಅಶ್ವದ ಹಿಂದೆಯೂ ಸಹಸ್ರ ಗೋವುಗಳು, ಒಂದೊಂದು ಗೋವಿನ ಹಿಂದೆಯೂ ಐದೈದು ಆಡು ಮತ್ತು ಕುರಿಗಳು, ಇಂತಹ ಅಪರ್ಯಾಪ್ತ ಧನವನ್ನು ಮಹಾನುಭಾವನಾದ ಶಶಬಿಂದುವು ಅಶ್ವಮೇಧ ಮಹಾಯಾಗದಲ್ಲಿ ಬ್ರಾಹ್ಮಣರಿಗೆ ವಶವಾಗಿ ಮಾಡಿದನು.
ವೃಕ್ಷಾಶ್ಚ ಯೂಪಾ ಯಾವಂತ ಅಶ್ವಮೇಧೇ ಹಿ ಶಬ್ದಿತಾಃ |
ತೇ ತಥೈವ ಪುನಶ್ಚಾನ್ಯೇ ತಾವಂತಃ ಕಾಂಚನಾಽಭವನ್ ॥ 9 ॥
ಅಶ್ವಮೇಧ ಯಾಗದಲ್ಲಿ ಎಷ್ಟು ವೃಕ್ಷಗಳ ಯೂಪಗಳು (ಬಲಿಗಂಬ) ವಿಹಿತವಾಗಿವೆಯೋ ಅಷ್ಟೇ ಸುವರ್ಣಮಯವಾದ ಯೂಪಗಳನ್ನು ಮಾಡಿಸಿದನು.
ಭಕ್ಷ್ಯಾನ್ನಪಾನನಿಚಯಾಃ ಪರ್ವತಾಃ ಕ್ರೋಶಮುಚ್ಛ್ರಿತಾಃ |
ತಸ್ಯಾಶ್ವಮೇಧೇ ನಿರ್ವೃತ್ತೇ ರಾಜ್ಞಃ ಶಿಷ್ಟಾಸ್ತ್ರಯೋದಶ ॥ 10 ॥
ಆ ರಾಜನ ಅಶ್ವಮೇಧಯಾಗವು ಪೂರ್ಣವಾದ ಮೇಲೆ ಒಂದು ಕ್ರೋಶದಷ್ಟು ಎತ್ತರವಾಗಿದ್ದ ಭಕ್ಷ್ಯ-ಅನ್ನ-ಪಾನಗಳ ಪರ್ವತದಂತಹ ರಾಶಿಗಳು ಹದಿಮೂರು ಉಳಿದವು.
ತುಷ್ಟಪುಷ್ಟಜನಾಕೀರ್ಣಾಂ ಶಾಂತವಿಘ್ನಾಂ ನಿರಾಮಯಾಮ್ |
ಶಶಿಬಿಂದುರಿಮಾಂ ಭೂಮಿಂ ಚಿರಂ ಭುಕತ್ತ್ವ ದಿವಂ ಗತಃ ॥ 11 ॥
ಸಂತುಷ್ಟರಾದ ಮತ್ತು ಪುಷ್ಟರಾದ ಜನರಿಂದ ಕೂಡಿದ, ಯಾವ ಈತಿ ಬಾಧೆಗಳಿಲ್ಲದ, ಶತ್ರುಭಯವಿಲ್ಲದ ಈ ಭೂಮಿಯನ್ನು ಶಶಬಿಂದುವು ಬಹಳ ಕಾಲ ಆಳಿ ಸ್ವರ್ಗಕ್ಕೆ ಹೋದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 12 ॥
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 13 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮರಣವನ್ನು ಹೊಂದಿದ ಮೇಲೆ, ಎಲೈ ಜ್ಞಾನಿಶ್ರೇಷ್ಠನೇ, ಯಾಗಗಳನ್ನು ಮಾಡದಿರುವ, ದಕ್ಷಿಣೆಯನ್ನು ಕೊಡದ ನಿನ್ನ ಪುತ್ರನ ವಿಷಯದಲ್ಲಿ ಶೋಕಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವಿಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ಷೋಡಶ ರಾಜೋಪಾಖ್ಯಾನದಲ್ಲಿ ಗಯನ ಚರಿತೆ
ನಾರದಃ
ಗಯಂ ಚಾಧೂರ್ತರಜಸಂ ಮೃತಂ ಸೃಂಜಯ ಶುಶ್ರುಮ |
ಯೋ ವೈ ವರ್ಷಶತಂ ರಾಜಾ ಹುತಶಿಷ್ಟಾಶನೋಽಭವತ್ |
ತಸ್ಮೈ ಹ್ಯಗ್ನಿರ್ವರಂ ಪ್ರಾದಾತ್ ತತೋ ವವ್ರೇ ವರಂ ಗಯಃ ॥ 1 ॥
ತಪಸಾ ಬ್ರಹ್ಮಚರ್ಯೇಣ ವ್ರತೇನ ಚ ದಮೇನ ಚ |
ಗುರೂಣಾಂ ಚ ಪ್ರಸಾದೇನ ವೇದಾನಿಚ್ಛಾಮಿ ವೇದಿತುಮ್ ॥ 2 ॥
ಸ್ವಧರ್ಮಮವಿಹಿಂಸಾಂ ಚ ಧರ್ಮಮಿಚ್ಛಾಮಿ ಚಾಕ್ಷಯಮ್ ॥ 3 ॥
ಪಾತ್ರೇಷು ದದತಃ ಸಾ ಮೇ ಶ್ರದ್ಧಾ ಭವತು ನಿತ್ಯಶಃ |

ಅನನ್ಯಾಸು ಸವರ್ಣಾಸು ಸುಪ್ರಜಸ್ತ್ವಂ ಚ ಮೇ ಭವೇತ್ ॥ 4 ॥
ನಾರದರು ಅವನು ನೂರು ವರ್ಷಗಳ ಕಾಲ ಪ್ರತಿದಿನವೂ ಹೋಮಶೇಷವನ್ನು ಭುಂಜಿಸಿದನು. ಸಂತುಷ್ಟನಾದ ಅಗ್ನಿಯು ಅವನಿಗೆ ವರವನ್ನು ಕೊಟ್ಟನು. ಆಗ ಗಯನು ಬ್ರಹ್ಮಚರ್ಯದಿಂದಲೂ, ತಪಸ್ಸಿನಿಂದಲೂ, ಇಂದ್ರಿಯಗಳ ನಿಗ್ರಹದಿಂದಲೂ, ವ್ರತಾನುಷ್ಠಾನದಿಂದಲೂ, ಗುರುಗಳ ಅನುಗ್ರಹದಿಂದಲೂ ವೇದದ ಜ್ಞಾನವನ್ನು ಪಡೆಯಲು ಬಯಸುತ್ತೇನೆ. ನನ್ನ ಸ್ವಧರ್ಮವಾದ ಅಹಿಂಸೆಯನ್ನು ಮತ್ತು ಅಕ್ಷಯವಾದ ಧರ್ಮವನ್ನು ಬಯಸುತ್ತೇನೆ. ಪಾತ್ರರಿಗೆ ದಾನ ಮಾಡಿದಂತೆ ನಿತ್ಯವೂ ನನ್ನ ಶ್ರದ್ಧೆಯು ಅಭಿವೃದ್ಧಿಯನ್ನು ಹೊಂದಬೇಕು. ಪತಿವ್ರತೆಯರಾದ ನನ್ನ ಕ್ಷತ್ರಿಯ ಪತ್ನಿಯರಲ್ಲಿ ನಾನು ಒಳ್ಳೆಯ ಮಕ್ಕಳನ್ನು ಪಡೆಯಬೇಕು.
ಅನ್ನಂ ಸ್ವಾದು ದುಹೇನ್ಮಹ್ಯಂ ಧರ್ಮೇ ಮೇ ರಮತಾಂ ಮನಃ |
ಅವಿಘ್ನಂ ಚಾಸ್ತು ಮೇ ನಿತ್ಯಂ ಧರ್ಮಕಾರ್ಯೇಷು ಪಾವಕ |
ತಥಾ ಭವಿಷ್ಯತೀತ್ಯುಕತ್ವ ತತ್ರೈವಾಂತರಧೀಯತ ॥ 5 ॥
ಎಲೈ ಅಗ್ನಿಯೇ, ನನಗೆ ಭೂಮಿಯು ರುಚಿಕರವಾದ ಅನ್ನವನ್ನು ನೀಡಬೇಕು. ನನ್ನ ಮನಸ್ಸು ಧರ್ಮದಲ್ಲಿಯೇ ಸಂತೋಷ ಪಡಬೇಕು. ನಾನು ಮಾಡುವ ಧರ್ಮಕಾರ್ಯಗಳಿಗೆ ಯಾವ ವಿಘ್ನವೂ ಬರಬಾರದು ಎಂದು ಬೇಡಿದನು. ಅಗ್ನಿಯು ಹಾಗೆಯೇ ಆಗುವುದು ಎಂದು ಹೇಳಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಗಯೋ ಹ್ಯವಾಪ್ಯ ತತ್ ಸರ್ವಂ ಧರ್ಮೇಣಾರಾಧಯನ್ ಜಗತ್ |
ಸ ದರ್ಶಪೂರ್ಣಮಾಸಾಭ್ಯಾಂ ಕಾಲೇಷ್ವಾಗ್ರಯಣೇನ ಚ ॥ 6 ॥
ಚಾತುರ್ಮಾಸ್ಯೈಶ್ಚ ವಿಧಿವದ್ ಇಷ್ಟಿಭಿಶ್ಚಾಪ್ತದಕ್ಷಿಣೈಃ |
ಅಯಜಚ್ಛ್ರದ್ದಯಾ ರಾಜಾ ಪರಿಸಂವತ್ಸರಾನ್ ಶತಮ್ ॥ 7 ॥
ಗಯನು ಆ ಎಲ್ಲ ವರಗಳನ್ನೂ ಪಡೆದು ಧರ್ಮದಿಂದ ಪ್ರಜೆಗಳನ್ನು ಸಂತೋಷಪಡಿಸುತ್ತಾ, ಯೋಗ್ಯವಾದ ಕಾಲಗಳಲ್ಲಿ ದರ್ಶಪೂರ್ಣಮಾಸಗಳೂ, ಆಗ್ರಯಣೇಷ್ಟ, ಚಾತುರ್ಮಾಸ್ಯ ಯಾಗಗಳು ಮೊದಲಾದವುಗಳನ್ನು ವಿಧಿಗೆ ಅನುಗುಣವಾಗಿ ಬಹಳ ದಕ್ಷಿಣೆಯಿಂದ ಕೂಡಿದವುಗಳನ್ನಾಗಿ ಮಾಡಿ, ಶ್ರದ್ಧೆಯಿಂದ ನೂರು ವರ್ಷಗಳ ಕಾಲ ಪ್ರತಿವರ್ಷವೂ ಆಚರಿಸಿದನು.
ದಶನಾಗಸಹಸ್ರಾಣಿ ಶತಮಶ್ವಶತಾನಿ ಚ |
ಶತಂ ನಿಷ್ಕಸಹಸ್ರಾಣಿ ಗವಾಂ ಚಾಪ್ಯಯುತಾನಿ ಷಟ್ ॥ 8 ॥
ಉತ್ಥಾಯೋತ್ಥಾಯ ಸಂಪ್ರಾದಾತ್ ಪರಿಸಂವತ್ಸರಾನ್ ಶತಮ್ ॥ 9 ॥
ಅವನು ಪ್ರತಿದಿನವೂ ಎದ್ದು ಪ್ರಾತಃಕಾಲದಲ್ಲಿ ಹತ್ತು ಸಹಸ್ರ ಗಜಗಳು, ಒಂದು ಲಕ್ಷ ಅಶ್ವಗಳು, ಒಂದು ಲಕ್ಷ ನಿಷ್ಕಗಳು ಮತ್ತು ಅರವತ್ತು ಸಾವಿರ ಗೋವುಗಳನ್ನು ನೂರು ವರ್ಷದವರೆಗೂ ದಾನ ಮಾಡಿದನು.
ನಕ್ಷತ್ರೇಷು ಚ ಸರ್ವೇಷು ದದನ್ನಕ್ಷತ್ರದಕ್ಷಿಣಾಃ |
ಈಜೇ ಚ ವಿವಿಧೈರ್ಯಜ್ಞೈರ್ಯಥಾ ಶರ್ವೋಽಂಗಿರಾ ಯಥಾ ॥ 10 ॥
ಪ್ರತಿಯೊಂದು ನಕ್ಷತ್ರದಲ್ಲಿಯೂ ಆಯಾ ನಕ್ಷತ್ರದಕ್ಷಿಣೆಗಳನ್ನು ಕೊಟ್ಟು, ರುದ್ರದೇವರಂತೆ ಮತ್ತು ಅಂಗಿರಸರಂತೆ ವಿಧವಿಧವಾದ ಯಜ್ಞಗಳನ್ನು ಮಾಡಿದನು.
ಸೌವರ್ಣಾಂ ಪೃಥಿವೀಂ ಕೃತ್ವಾ ಯ ಇಮಾಂ ಮಣಿಶರ್ಕರಾಮ್ |
ಬ್ರಾಹ್ಮಣೇಭ್ಯೋಽದದಾದ್ ರಾಜಾ ಸೋಽಶ್ವಮೇಧೇ ಮಹಾಮಖೇ ॥
ಈ ಭೂಮಿಯ ಸುವರ್ಣಮಯವಾದ ಪ್ರತಿಕೃತಿಯನ್ನು ಮಾಡಿ, ಅದರಲ್ಲಿ ಮರಳಿನ ಸ್ಥಾನದಲ್ಲಿ ಮಣಿಗಳನ್ನು ಸೇರಿಸಿ ರಾಜನು ಅಶ್ವಮೇಧ ಮಹಾಯಾಗದಲ್ಲಿ ಬ್ರಾಹ್ಮಣರಿಗೆ ದಾನವನ್ನು ಮಾಡಿದನು.
ಜಾಂಬೂನದಮಯಾ ಯೂಪಾಃ ಸರ್ವೇ ಚಾನ್ಯೇ ಪರಿಚ್ಛದಾಃ |
ಗಯಸ್ಯಾಸನ್ ವರಪ್ರಾಪ್ತ್ಯಾ ಸರ್ವಭೂತಮನೋಹರಾಃ ॥ 12 ॥
ಅಗ್ನಿಯು ಕೊಟ್ಟ ವರದ ಪ್ರಭಾವದಿಂದಾಗಿ ಗಯನ ಯಜ್ಞಗಳಲ್ಲಿ ಎಲ್ಲ ಯೂಪಗಳು ಮತ್ತು ಎಲ್ಲ ಸಲಕರಣೆಗಳು ಸುವರ್ಣಮಯವಾಗಿದ್ದು ಸರ್ವಮನೋಹರವಾಗಿದ್ದವು.
ಸರ್ವಕಾಮಸಮೃದ್ಧಂ ಚ ಪ್ರಾದಾದನ್ನಂ ಗಯಸ್ತದಾ |
ಬ್ರಾಹ್ಮಣೇಭ್ಯಃ ಪಿತೃಭ್ಯಶ್ಚ ಸರ್ವಭೂತೇಭ್ಯ ಏವ ಚ ॥ 13 ॥
ಆಗ ಗಯನು ಬ್ರಾಹ್ಮಣರಿಗೂ, ಪಿತೃಗಳಿಗೂ ಮತ್ತು ಎಲ್ಲ ಪ್ರಾಣಿಗಳಿಗೂ ಅವರಿಗೆ ಇಷ್ಟವಾದ ಸಮೃದ್ಧವಾದ ಅನ್ನವನ್ನು ನೀಡಿದನು.
ಸಮುದ್ರದ್ವೀಪಶೈಲೇಷು ನದೀನದವನೇಷು ಚ |
ನಗರೇಷು ಚ ರಾಷ್ಟ್ರೇಷು ದಿವಿ ವ್ಯೋಮನಿ ಯೋಽವಸತ್ ॥ 14 ॥
ಅವನು ಸಮುದ್ರ-ದ್ವೀಪ-ಪರ್ವತಗಳಲ್ಲಿಯೂ, ನದೀ-ವನಗಳಲ್ಲಿಯೂ, ನಗರಗಳಲ್ಲಿಯೂ, ರಾಷ್ಟ್ರಗಳಲ್ಲಿಯೂ, ಆಕಾಶದಲ್ಲಿಯೂ, ಅಂತರಿಕ್ಷದಲ್ಲಿಯೂ ವಾಸಮಾಡಿದನು.
ಭೂತಗ್ರಾಮಾ ಬಹುವಿಧಾ ವಿಸ್ಮಿತಾ ಯಜ್ಞಸಂಪದಾ |
ಗಯಸ್ಯ ಸದೃಶೋ ಯಜ್ವಾ ನಾಸ್ತ್ಯನ್ಯ ಇತಿ ತೇಽಬ್ರುವನ್ ॥ 15 ॥
ಅವನ ಯಜ್ಞದ ವೈಭವವನ್ನು ನೋಡಿ ಬಹುವಿಧವಾದ ಜೀವರೆಲ್ಲರೂ ಆಶ್ಚರ್ಯಗೊಂಡರು. ಗಯನಿಗೆ ಸದೃಶನಾದ ಯಜಮಾನನು ಇನ್ನೊಬ್ಬನು ಇಲ್ಲ ಎಂದು ಅವರು ಮಾತನಾಡಿದರು.
ಷಟ್ತ್ರಿಂಶದ್ಯೋಜನಾಯಾಮಾ ತ್ರಿಂಶದ್ಯೋಜನವಿಸ್ತೃತಾ |
ಪಶ್ಚಾತ್ ಪುರಶ್ಚತುರ್ವಿಂಶದ್ ವೇದಿಕಾಽಽಸೀದ್ ಹಿರಣ್ಮಯೀ |
ಗಯಸ್ಯ ಯಜಮಾನಸ್ಯ ಮುಕ್ತಾವಜ್ರಮಣಿಸ್ತೃತಾ ॥ 16 ॥

ಗಯನು ಯಾಗವನ್ನು ಮಾಡುವಾಗ ನಗರದ ಹೊರಭಾಗದಲ್ಲಿ ಅವನ ಯಜ್ಞ ವೇದಿಕೆಯು ಮೂವತ್ತಾರು ಯೋಜನ ಉದ್ದ ಮತ್ತು ಮೂವತ್ತು ಯೋಜನ ಅಗಲವಾಗಿ ಸುವರ್ಣಮಯವಾಗಿದ್ದು, ಮುತ್ತು-ವಜ್ರ ಮೊದಲಾದ ಮಣಿಗಳಿಂದ ತುಂಬಲ್ಪಟ್ಟಿದ್ದಿತು.
ತಾಂ ಪ್ರಾದಾದ್ ಬ್ರಾಹ್ಮಣೇಭ್ಯೋ ವೈ ವಾಸಾಂಸ್ಯಾಭರಣಾನಿ ಚ |
ಯಥೋಕ್ತಾ ದಕ್ಷಿಣಾಶ್ಚಾನ್ಯಾ ವಿಪ್ರೇಭ್ಯೋ ಭೂರಿದಕ್ಷಿಣಃ ॥ 17 ॥
ಅವನು ಆ ವೇದಿಕೆಯನ್ನು, ವಸ್ತ್ರ ಮತ್ತು ಆಭರಣಗಳನ್ನು ಬ್ರಾಹ್ಮಣರಿಗೆ ದಾನವನ್ನು ಮಾಡಿದನು. ಬಹಳ ದಕ್ಷಿಣೆಯನ್ನು ಕೊಡುವ ಅವನು ಬ್ರಾಹ್ಮಣರಿಗೆ ಶಾಸ್ತ್ರವಿಹಿತವಾದ ಬೇರೆ ದಕ್ಷಿಣೆಯನ್ನೂ ಕೊಟ್ಟನು.
ಯತ್ರ ಭೋಜನಶಿಷ್ಟಸ್ಯ ಪರ್ವತಾಃ ಪಂಚವಿಂಶತಿಃ |
ಕುಲ್ಯಾಶ್ಚ ಕ್ಷೀರವಾಹಿನ್ಯೋ ರಸಾನಾಂ ಚಾಭವಂಸ್ತದಾ ॥ 18 ॥
ವಸಾತ್ರಭರಣಗಂಧಾನಾಂ ರಾಶಯಶ್ಚ ಪೃಥಗ್ವಿಧಾಃ ॥ 19 ॥
ಅವನು ಯಜ್ಞವನ್ನು ಮಾಡಿದ ಮೇಲೆ, ಎಲ್ಲರ ಭೋಜನವಾದ ಮೇಲೆ ಉಳಿದ ಪರ್ವತಪ್ರಾಯವಾದ ಭಕ್ಷ್ಯಾದಿ ರಾಶಿಗಳು ಇಪ್ಪತ್ತೈದು ಇದ್ದವು. ಅಲ್ಲಿ ಕ್ಷೀರ ಮೊದಲಾದವುಗಳನ್ನು ಹೊಂದಿದ ನದಿಗಳು ಮತ್ತು ಸರೋವರಗಳು ಇದ್ದವು. ವಸಾತ್ರಭರಣ ಪರಿಮಳ ದ್ರವ್ಯಗಳ ರಾಶಿಗಳು ಬೇರೆ ಇದ್ದವು.
ಯಸ್ಯ ಪ್ರಸಾದಾಚ್ಚ ಗಯಸ್ತ್ರಿಷು ಲೋಕೇಷು ವಿಶ್ರುತಃ |
ವಟಶ್ಚಾಕ್ಷಯ್ಯಕರಣಃ ಪುಣ್ಯಂ ಬ್ರಹ್ಮಸರಶ್ಚ ತತ್ ॥ 20 ॥
ಅಗ್ನಿದೇವನ ಪ್ರಸಾದದಿಂದ ಗಯನು ಮೂರು ಲೋಕಗಳಲ್ಲಿಯೂ ವಿಶ್ರುತವಾದ ಅಕ್ಷಯವಟವನ್ನೂ ಮತ್ತು ಪವಿತ್ರವಾದ ಬ್ರಹ್ಮಸರೋವರವನ್ನೂ ಪಡೆದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 21 ॥
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಭಿಶ್ವೈತ್ಯೇತ್ಯುದಾಹರತ್ ॥ 22 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮರಣವನ್ನು ಹೊಂದಿದ ಮೇಲೆ, ಎಲೈ ಜ್ಞಾನಿಶ್ರೇಷ್ಠನೇ, ಯಾಗಗಳನ್ನು ಮಾಡದಿರುವ, ದಕ್ಷಿಣೆಯನ್ನು ಕೊಡದ ನಿನ್ನ ಪುತ್ರನ ವಿಷಯದಲ್ಲಿ ಶೋಕಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ತ್ರಿಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ನಾಲ್ಕನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ರಂತಿದೇವನ ಚರಿತೆ
ನಾರದಃ
ಸಾಂಕೃತಿಂ ರಂತಿದೇವಂ ಚ ಮೃತಂ ಸೃಂಜಯ ಶುಶ್ರುಮ |
ಯಸ್ಯ ವಿಂಶತಿಸಾಹಸ್ರಾ ಆಸನ್ ಸೂದಾ ಮಹಾತ್ಮನಃ ॥ 1 ॥
ನಾರದರು ಎಲೈ ಸೃಂಜಯನೇ, ಸಂಕೃತಿಪುತ್ರನಾದ ರಂತಿದೇವನೂ ಮರಣ ಹೊಂದಿದನೆಂದು ನಾವು ಕೇಳಿದ್ದೇವೆ. ಮಹಾತ್ಮನಾದ ಅವನ ಅಡುಗೆಯ ಮನೆಯಲ್ಲಿ ಇಪ್ಪತ್ತು ಸಾವಿರ ಪಾಚಕರಿದ್ದರು.
ಗೃಹಾನಭ್ಯಾಗತಾನ್ ವಿಪ್ರಾನತಿಥೀನ್ ಪರಿವೇಷಕಾಃ |
ಪಕ್ವಂ ಪಕ್ವಂ ದಿವಾರಾತ್ರಂ ವರಾನ್ನಮಮೃತೋಪಮಮ್ ॥ 2 ॥
ಮನೆಗೆ ಬಂದ ಅತಿಥಿಗಳಿಗೆ ಮತ್ತು ಬ್ರಾಹ್ಮಣರಿಗೆ ಬಡಿಸುವವರು ಅಮೃತದಂತಹ ಶ್ರೇಷ್ಠವಾದ ಪಕ್ವಾನ್ನವನ್ನು ಬಡಿಸುತ್ತಿದ್ದರು.
ನ್ಯಾಯೇನಾಧಿಗತಂ ವಿತ್ತಂ ಯೇನಾಕ್ಷಯ್ಯಂ ನಗೋಪಮಮ್ |
ವೇದಾನಧೀತ್ಯ ಧರ್ಮೇಣ ಯಶ್ಚಕ್ರೇ ದ್ವಿಜತಾವಶೇ ॥ 3 ॥
ಅವನು ನ್ಯಾಯ ಮಾರ್ಗದಿಂದಲೇ ಪರ್ವತದಂತೆ ಉನ್ನತವಾದ, ಅಕ್ಷಯವಾದ ಧನರಾಶಿಯನ್ನು ಸಂಪಾದಿಸಿದನು. ವೇದಗಳನ್ನು ಅಧ್ಯಯನ ಮಾಡಿ ಆ ಧನರಾಶಿ ಎಲ್ಲವನ್ನೂ ಬ್ರಾಹ್ಮಣರ ವಶವನ್ನಾಗಿ ಮಾಡಿದನು.
ಉಪಸ್ಥಿತಾಶ್ಚ ಪಶವಃ ಸ್ವಯಂ ಯಂ ಸಂಶಿತವ್ರತಮ್ |
ಬಹವಃ ಸ್ವರ್ಗಮಿಚ್ಛಂತೋ ವಿಧಿವತ್ ಸತ್ರಯಾಜಿನಮ್ ॥ 4 ॥
ಒಳ್ಳೆಯ ವ್ರತಶೀಲನಾದ ಅವನು ಸತ್ರಾದಿ ಯಾಗವನ್ನು ವಿಧಿಪೂರ್ವಕವಾಗಿ ಮಾಡುವಾಗ ಸ್ವರ್ಗವನ್ನು ಬಯಸಿದ ಪಶುಗಳು ತಾವಾಗಿಯೇ ಬಂದು ನಿಲ್ಲುತ್ತಿದ್ದವು.
ನದೀ ಮಹಾನಸಾದ್ಯಸ್ಯ ಪ್ರವೃತ್ತಾ ಚರ್ಮರಾಶಿಭಿಃ |
ತಸ್ಮಾಚ್ಚರ್ಮಣ್ವತೀ ನಾಮ ಖ್ಯಾತಾ ಪುಣ್ಯಾ ಸರಿದ್ವರಾ ॥ 5 ॥
ಮಹಾನಸದಿಂದ (ಅಡುಗೆ ಮನೆಯಿಂದ) ಹೊರಟ ಪ್ರಾಣಿಗಳ ಚರ್ಮಗಳ ರಾಶಿಯು ನದಿಯಾಗಿ ಹರಿದು ಚರ್ಮಣ್ವತೀ ಎಂಬ ಪುಣ್ಯಪ್ರದವಾದ ಶ್ರೇಷ್ಠವಾದ ನದಿಯಾಯಿತು. ಬ್ರಾಹ್ಮಣರಿಗೆ ಸುವರ್ಣನಿಷ್ಕಗಳನ್ನು ದಾನ ಮಾಡಿದನು.
ಬ್ರಾಹ್ಮಣೇಭ್ಯೋಽದದಾನ್ನಿಷ್ಕಾನ್ ಬ್ರಾಹ್ಮಣೇಭ್ಯಃ ಪ್ರತಾಮ್ಯತಿ |

ತುಭ್ಯಂ ನಿಷ್ಕಂ ತವ ನಿಷ್ಕಮಿತಿ ಸಂಪ್ರತಿಭಾಷತೇ ॥ 6 ॥
ಬ್ರಾಹ್ಮಣರಿಗೆ ದುಃಖವಾದರೆ ಸಂತಾಪಪಡುತ್ತಿದ್ದನು. ನಿನಗೆ ಈ ನಿಷ್ಕ, ನಿನಗೆ ಈ ನಿಷ್ಕ ಎಂದು ಹೇಳುತ್ತಾ ಸುವರ್ಣನಿಷ್ಕಗಳನ್ನು ಕೊಡುತ್ತಿದ್ದನು.
ತುಭ್ಯಂ ತುಭ್ಯಮಿತಿ ಪ್ರಾದಾನ್ನಿಷ್ಕಾನ್ ನಿಷ್ಕಾನ್ ಸಹಸ್ರಶಃ |
ತತಃ ಪುನಃ ಸಮಾಶ್ವಾಸ್ಯ ನಿಷ್ಕಾನೇವ ಪ್ರಯಚ್ಛತಿ ॥ 7 ॥
ನಿನಗೆ, ನಿನಗೆ ಎಂದು ಹೇಳಿ ಸಹಸ್ರ ಸಂಖ್ಯೆಯ ನಿಷ್ಕಗಳನ್ನು ಕೊಟ್ಟನು. ಸ್ವಲ್ಪ ಸುಧಾರಿಸಿಕೊಂಡು ಪುನಃ ನಿಷ್ಕಗಳನ್ನು ಕೊಡುತ್ತಿದ್ದನು.
ಅಲ್ಪಂ ದತ್ತಂ ಮಯಾಽದ್ಯೇತಿ ನಿಷ್ಕಕೋಟಿಂ ಪ್ರದಾಯ ಸಃ |
ಏಕಾಹ್ನಾ ತಾಮ್ಯತಿ ತತಃ ಕ್ವಾದ್ಯ ವಿಪ್ರಾ ಇತಿ ಬ್ರುವನ್ ॥ 8 ॥
ದ್ವಿಜಪಾಣಿವಿಯೋಗೇನ ದುಃಖಂ ಮೇ ಶಾಶ್ವತಂ ಮಹತ್ |
ಭವಿಷ್ಯತಿ ನ ಸಂದೇಹ ಏವಂ ರಾಜಾ ದದದ್ ವಸು ॥ 9 ॥
ಒಂದು ದಿನದಲ್ಲಿ ಒಂದು ಕೋಟಿ ನಿಷ್ಕಗಳನ್ನು ಕೊಟ್ಟು, ಈ ದಿನ ನಾನು ಅಲ್ಪವನ್ನೇ ಕೊಟ್ಟಿದ್ದೇನೆ ಎಂದು ಸಂತಾಪಪಡುತ್ತಿದ್ದನು. ಅನಂತರವೂ ಈ ದಿನ ಪ್ರತಿಗ್ರಹಿಸುವ ಬ್ರಾಹ್ಮಣರು ಎಲ್ಲಿ ಎಂದು ಕೇಳುತ್ತಿದ್ದನು. ದ್ವಿಜರ ಪಾಣಿಯ ಮೇಲೆ ಪಾಣಿಯಿಟ್ಟು ದಾನ ಮಾಡದಿದ್ದರೆ ನನಗೆ ಶಾಶ್ವತವಾದ ದೊಡ್ಡ ದುಃಖವುಂಟಾಗುವುದರಲ್ಲಿ ಸಂದೇಹವಿಲ್ಲ ಎಂದು ಹೇಳುತ್ತಾ ರಾಜನು ಧನವನ್ನು ಕೊಡುತಿತದ್ದನು.
ಸಹಸ್ರಶಶ್ಚ ಸೌವರ್ಣಾನ್ ವೃಷಭಾನ್ ಗೋಶತಾನುಗಾನ್ |
ಅರ್ಧ್ಯರ್ಧಮಾಸಮದದಾದ್ ಬ್ರಾಹ್ಮಣೇಭ್ಯಃ ಶತಂ ಸಮಾಃ ॥ 10 ॥
ಅವನು ನಲವತ್ತೈದು ದಿವಸಗಳ ಒಂದು ಕಾಲಪರಿಮಿತಿಯನ್ನು ಇಟ್ಟುಕೊಂಡು ಸುವರ್ಣಾಲಂಕೃತವಾದ ವೃಷಭಗಳನ್ನೂ, ಒಂದೊಂದು ವೃಷಭದ ಹಿಂದೆ ನೂರು ಗೋವುಗಳನ್ನೂ ಬ್ರಾಹ್ಮಣರಿಗೆ ನೂರು ವರ್ಷಗಳ ಕಾಲ ದಾನ ಮಾಡಿದನು.
ಅಗ್ನಿಹೋತ್ರೋಪಕರಣಂ ದ್ರವ್ಯೋಪಕರಣಂ ಚ ಯತ್ |
ಪಾತ್ರಂ ಶರಾವಕಂ ಭಾಂಡಂ ಸ್ಥಾಲೀಃ ಪಿಠರಮೇವ ಚ ॥ 11 ॥
ಶಯನಾಸನಯಾನಾನಿ ಪ್ರಾಸಾದಾಂಶ್ಚ ಗೃಹಾಣಿ ಚ |
ಸೂಕ್ಷ ೆಮಭಾಂಡಾಶ್ಚ ವಿವಿಧಾ ದೃಶ್ಯಾನ್ಯನುಪಮಾನಿ ಚ |
ಸರ್ವಂ ಸೌವರ್ಣಮೇವಾಸೀದ್ ರಂತಿದೇವಸ್ಯ ಧೀಮತಃ ॥ 12 ॥
ಅಗ್ನಿಹೋತ್ರದ ಸಲಕರಣೆಗಳು, ಯಜ್ಞದ ಸಲಕರಣೆಗಳು, ಮಡಕೆ ಮುಂತಾದ ಪಾತ್ರೆಗಳು, ಚರುವನ್ನು ಮಾಡುವ ಸ್ಥಾಲಿ-ಪಿಠರ ಮುಂತಾದ ಪಾತ್ರೆಗಳು, ಶಯನಾಸನ ವಾಹನಗಳು, ಮನೆಗಳು, ಉಪ್ಪರಿಗೆಗಳು, ಸಣ್ಣ ಪಾತ್ರೆಗಳು, ಅಸದೃಶವಾದ ವಿವಿಧವಾದ ಅಲಂಕಾರ ಸಾಮಗ್ರಿಗಳು ಎಲ್ಲವೂ ಮೇಧಾವಿಯಾದ ರಂತಿದೇವನಿಗೆ ಸುವರ್ಣಮಯವೇ ಆಗಿದ್ದಿತು.
ತತ್ರ ಸ್ಮ ಗಾಥಾ ಗಾಯಂತಿ ಯೇ ಪುರಾಣವಿದೋ ಜನಾಃ |
ರಂತಿದೇವಸ್ಯ ತಾಂ ದೃಷ್ಟ್ವಾ ಸಮೃದ್ಧಿಮತಿಮಾನುಷೀಮ್ ॥ 13 ॥
ನೈತಾದೃಶಂ ದೃಷ್ಟಪೂರ್ವಂ ಕುಬೇರಸದನೇಷ್ವಪಿ |
ಧನಂ ಚಾಪೂರ್ಯಮಾಣಂ ತತ್ ಕಿಂ ಪುನರ್ಮಾನುಷೇಷ್ವಿತಿ ॥ 14 ॥
ಪುರಾಣವನ್ನು ತಿಳಿದ ಜನರು ರಂತಿದೇವನ ಅತಿಮಾನುಷವಾದ ಸಂಪತ್ತನ್ನು ನೋಡಿ, ಈ ವಿಷಯದಲ್ಲಿ ಕುಬೇರನ ಮನೆಯಲ್ಲಿಯೂ ಇಂತಹ ಸಂಪತ್ತು ಹರಿದು ಬರುವುದನ್ನು ಹಿಂದೆ ನೋಡಲಿಲ್ಲ. ಇನ್ನು ಮನುಷ್ಯರಲ್ಲಿ ಇಂತಹ ಸಂಪತ್ತು ಎಲ್ಲಿಂದ ಬರಬೇಕು ಎಂದು ಗಾನವನ್ನು ಮಾಡುತ್ತಾರೆ.
ವ್ಯಕ್ತಂ ವಸ್ವೋಕಸಾರೇಯಮಿತ್ಯೂಚುಸ್ತಸ್ಯ ವಿಸ್ಮಿತಾಃ ॥ 15 ॥
ವಿಸ್ಮಿತರಾದ ಜನರು ಇದು ಸ್ಪಷ್ಟವಾಗಿ ವಸ್ವೋಕಸಾರ ಎಂದು ಹೇಳುತ್ತಿದ್ದರು.
ಸಾಂಕೃತೇ ರಂತಿದೇವಸ್ಯ ಯಾಂ ರಾತ್ರಿಮತಿಥಿರ್ವಸೇತ್ |
ಆಲಭ್ಯಂತ ತದಾ ಗಾವಃ ಸಹಸ್ರಾಣ್ಯೇಕವಿಂಶತಿಃ ॥ 16 ॥
ರಂತಿದೇವನ ಮನೆಯಲ್ಲಿ ಅತಿಥಿಗಳು ವಾಸವನ್ನು ಮಾಡಿದರೆ ಆ ರಾತ್ರಿಯಲ್ಲಿ ಇಪ್ಪತ್ತೊಂದು ಸಾವಿರ ಪಶುಗಳು ವಧಿಸಲ್ಪಡುತ್ತಿದ್ದವು.

ತತ್ರ ಸ್ಮ ಸೂದಾಃ ಕ್ರೋಶಂತಿ ಸುಮೃಷ್ಟಮಣಿಕುಂಡಲಾಃ |
ಸೂಪಭೂಯಿಷ್ಠಮಶ್ನೀತ ನಾದ್ಯ ಮಾಂಸಂ ಯಥಾಪುರಮ್ ॥ 17 ॥
ಅಲ್ಲಿ ಒಳ್ಳೆಯ ಮಣಿಕುಂಡಲವನ್ನು ಧರಿಸಿದ ಪಾಚಕರು ಈ ದಿನ ಸೂಪಭೂಯಿಷ್ಠವಾದ ಭೋಜನವಿದೆ. ಹಿಂದಿನಂತೆ ಮಾಂಸವಿಲ್ಲ ಎಂದು ಗಟ್ಟಿಯಾಗಿ ಕಿರುಚುತ್ತಿದ್ದರು.
ರಂತಿದೇವಸ್ಯ ಯತ್ ಕಿಂಚಿತ್ ಸೌವರ್ಣಮಭವತ್ ತದಾ |
ತತ್ ಸರ್ವಂ ವಿತತೇ ಯಜ್ಞೇ ಬ್ರಾಹ್ಮಣೇಭ್ಯೋ ಹ್ಯಮನ್ಯತ ॥ 18 ॥
ರಂತಿದೇವನ ಬಳಿಯಲ್ಲಿ ಏನು ಸುವರ್ಣವಿದ್ದಿತೋ ಅದೆಲ್ಲವನ್ನೂ ವಿಸ್ತಾರವಾದ ಯಜ್ಞದಲ್ಲಿ ಬ್ರಾಹ್ಮಣರಿಗೆ ದಾನ ಮಾಡಿದನು.
ಪ್ರತ್ಯಕ್ಷಂ ತಸ್ಯ ಹವ್ಯಾನಿ ಪ್ರತಿಗೃಹ್ಣಂತಿ ದೇವತಾಃ |
ಕವ್ಯಾನಿ ಪಿತರಃ ಕಾಲೇ ಸರ್ವಾನ್ ಕಾಮಾನ್ ದ್ವಿಜೋತ್ತಮಾಃ |
ಅವನು ಯಜ್ಞದಲ್ಲಿ ಕೊಟ್ಟ ಹವಿಸ್ಸನ್ನು ದೇವತೆಗಳು ಪ್ರತ್ಯಕ್ಷವಾಗಿ ಸ್ವೀಕರಿಸುತ್ತಿದ್ದರು. ಶ್ರಾದ್ಧಕಾಲದಲ್ಲಿ ಕವ್ಯಗಳನ್ನು ಪಿತೃಗಳು

ಪ್ರತ್ಯಕ್ಷವಾಗಿ ಸ್ವೀಕರಿಸುತ್ತಿದ್ದರು. ಬ್ರಾಹ್ಮಣಶ್ರೇಷ್ಠರು ತಮ್ಮ ಎಲ್ಲಾ ಕಾಮಗಳನ್ನೂ ಹೊಂದಿದರು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 19 ॥
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ ।
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 20 ॥
ಎಲೈ ಸಂಜಯನೇ, ನಿನಗಿಂತ ನಾಲ್ಕುಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮರಣವನ್ನು ಹೊಂದಿದರು ಎಂದ ಮೇಲೆ, ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದ, ದಕ್ಷಿಣೆಗಳನ್ನು ಕೊಡದ ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುಃಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ತ್ರಯಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೈದನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ಭರತನ ಚರಿತೆ
ನಾರದಃ
ದೌಷ್ಯಂತಿಂ ಭರತಂ ಚಾಪಿ ಮೃತಂ ಸೃಂಜಯ ಶುಶ್ರುಮ ।
ಕರ್ಮಾಣ್ಯಸುಕರಾಣ್ಯನ್ಯೈಃ ಕೃತವಾನ್ ಯಃ ಶಿಶುರ್ವನೇ ॥ 1 ॥
ನಾರದರು ಎಲೈ ಸೃಂಜಯನೇ, ದುಷ್ಯಂತನ ಮಗನಾದ ಭರತ ಚಕ್ರವರ್ತಿಯೂ ಮೃತನಾದನೆಂದು ನಾವು ಕೇಳಿದ್ದೇವೆ. ಅವನು ಕಾಡಿನಲ್ಲಿ ಬೇರೆಯವರು ಮಾಡಲು ಅಸಾಧ್ಯವಾದ ಕಾರ್ಯಗಳನ್ನು ಶಿಶುವಾಗಿದ್ದಾಗಲೇ ಮಾಡಿದನು.
ಹಿಮಾವದಾತಾನ್ ಯಃ ಸಿಂಹಾನ್ ನಖದಂಷ್ಟ್ರಾಯುಧಾನ್ ಬಲೀ ।
ನಿರ್ವೀರ್ಯಾಂಸ್ತರಸಾ ಕೃತ್ವಾ ವಿಚಕರ್ಷ ಬಬಂಧ ಚ ॥ 2 ॥
ಹಿಂಸಾಶೀಲವಾದ (ಹಿಮದಂತೆ ಬಿಳಿಯ ಬಣ್ಣವುಳ್ಳ) ನಖದಂಷ್ಟ್ರಾಯುಧಗಳುಳ್ಳ ಸಿಂಹಗಳನ್ನು ಬಲಿಷ್ಠನಾದ ಅವನು ಶೀಘ್ರವಾಗಿ ಸಾಮರ್ಥ್ಯಹೀನಗಳನ್ನಾಗಿ ಮಾಡಿ ಎಳೆದಾಡಿ ಬಂಧಿಸಿದನು.
ಕ್ರೂರಾಂಶ್ಚೋಗ್ರಬಲಾನ್ ವ್ಯಾಘ್ರಾನ್ ದಮಯಿತ್ವಾಽಕರೋದ್ ವಶೇ ।
ಮನಃಶಿಲಾಸಮಾಯುಕ್ತಾನ್ ಸ್ವಾನ್ ಕೃತ್ವಾಽಂಜನಕಾಶಿನಃ ॥ 3 ॥
ಕ್ರೂರವಾದ ಮತ್ತು ಉಗ್ರವಾದ ಬಲವುಳ್ಳ ವ್ಯಾಘ್ರಗಳನ್ನು ಪಳಗಿಸಿ ವಶಪಡಿಸಿಕೊಂಡು ಅವುಗಳಿಗೆ ಧಾತು ರಸಗಳನ್ನೂ ಮತ್ತು ಅಂಜನಗಳನ್ನೂ ಬಳಿದು ತನ್ನವುಗಳನ್ನಾಗಿ ಮಾಡಿಕೊಂಡನು.
ವ್ಯಾಲಾನ್ ದ್ವಿಪಾಂಶ್ಚಾತಿಬಲಾನ್ ತ್ರಿಪ್ರಭಿನ್ನಾನ್ ಘನೋಪಮಾನ್ ।
ಕ್ರೀಡಮಾನಃ ಸುಸಂಕ್ರುದ್ಧೋ ದಮಯಿತ್ವಾ ವಿಮುಂಚತಿ ॥ 4 ॥
ಅತಿಬಲಿಷ್ಠವಾದ ಮೇಘ ರಾಶಿಯಂತೆ ತೋರುತ್ತಿದ್ದ ಗಜಗಳನ್ನೂ ಮತ್ತು ಮೂರು ಧಾರೆಗಳಲ್ಲಿ ಮದೋದಕವನ್ನು ಸುರಿಸುವ ಮದಗಜಗಳನ್ನೂ ಹಿಡಿದು ಆಟವಾಡುತ್ತಾ ಕ್ರೋಧದಿಂದ ಅವುಗಳನ್ನು ಪಳಗಿಸಿ ಪುನಃ ಬಿಡುತ್ತಿದ್ದನು.
ಸುವರ್ಷ್ಮಣಾಂ ಮನ್ಯುಮತಾಂ ಬಲಿನಾಂ ಯುದ್ಧಶಾಲಿನಾಮ್ ।
ಮಹಿಷಾಣಾಂ ಸುಶೃಂಗಾಣಾಂ ಶತಾನ್ಯದಮಯದ್ ಬಲಾತ್ ॥ 5 ॥
ಒಳ್ಳೆಯ ದೇಹವನ್ನು ಹೊಂದಿದ, ಸಿಟ್ಟಿನಿಂದ ಕೂಡಿದ, ಹೋರಾಟದಲ್ಲಿ ನಿರತವಾದ, ಒಳ್ಳೆಯ ಕೊಂಬುಗಳನ್ನು ಹೊಂದಿದ, ಬಲಿಷ್ಠವಾದ ನೂರು ಕಾಡು ಕೋಣಗಳನ್ನು ತನ್ನ ಸಾಮರ್ಥ್ಯದಿಂದ ಪಳಗಿಸಿದನು.
ಶರಭಾನ್ ಸೃಮರಾನ್ ಖಡ್ಗಾನ್ ನಾನಾಸತತ್ತ್ವಾನಿ ಚಾಪ್ಯಥ ।
ಕೃಚ್ಛ್ರಪ್ರಾಣಾನ್ ವನೇ ಬದ್ಧ್ವಾ ದಮಯಿತ್ವಾಽಪ್ಯವಾಸೃಜತ್ ।
ತಂ ಸರ್ವದಮನೇತ್ಯಾಹುಃ ತದ್ವಿದಸ್ತೇನ ಕರ್ಮಣಾ ॥ 6 ॥
ಶರಭಗಳು, ಚಮರಿ ಮೃಗಗಳು, ಖಡ್ಗ ಮೃಗಗಳು ಮೊದಲಾದ ನಾನಾ ವಿಧ ಪ್ರಾಣಿಗಳನ್ನು ಅವುಗಳಿಗೆ ಪ್ರಾಣಸಂಕಟ ಉಂಟಾಗುವವರೆಗೆ ಕಾಡಿನಲ್ಲಿ ಬಂಧಿಸಿ, ಪಳಗಿಸಿ ಅನಂತರ ಬಿಡುತ್ತಿದ್ದನು. ಅದನ್ನು ತಿಳಿದವರು ಅವನು ಮಾಡುತ್ತಿದ್ದ ಕಾರ್ಯಗಳ ನಿಮಿತ್ತದಿಂದಾಗಿ ಅವನನ್ನು ಸರ್ವದಮನ ಎಂದು ಕರೆದರು.
ತಂ ಪ್ರತ್ಯಷೇಧಜ್ಜನನೀ ಮಾ ಸತತ್ತ್ವಾನಿ ವ್ಯನೀನಶಃ ॥ 7 ॥
ಅವನ ತಾಯಿಯು, ಪ್ರಾಣಿಗಳನ್ನು ಹೀಗೆ ನಾಶಗೊಳಿಸಬೇಡ ಎಂದು ಅವನನ್ನು ಪ್ರತಿಷೇಧಿಸಿದಳು.
ಸೋಽಶ್ವಮೇಧಶತೇನೇಜೇ ಯಮುನಾಮನು ವೀರ್ಯವಾನ್ ।
ತ್ರಿಂಶತಾ ಚ ಸರಸ್ವತ್ಯಾ ಗಂಗಾಮನು ಚತುಃಶತೈಃ ॥ 8 ॥
ಪರಾಕ್ರಮಶಾಲಿಯಾದ ಅವನು ಯಮುನಾದಡದಲ್ಲಿ ನೂರು ಅಶ್ವಮೇಧ ಯಾಗಗಳನ್ನು ಮಾಡಿದನು. ಸರಸ್ವತಿ ನದಿಯ ಸಮೀಪದಲ್ಲಿ ಮೂವತ್ತು ಅಶ್ವಮೇಧ ಯಾಗಗಳನ್ನೂ, ಗಂಗೆಯ ಸಮೀಪದಲ್ಲಿ ನಾಲ್ಕುನೂರು ಅಶ್ವಮೇಧ ಯಾಗಗಳನ್ನೂ ಮಾಡಿದನು.
ಸೋಽಶ್ವಮೇಧಸಹಸ್ರೇಣ ರಾಜಸೂಯಶತೇನ ಚ ।
ಪುನರೀಜೇ ಮಹಾಯಜ್ಞೈಃ ಸಮಾಪ್ತವರದಕ್ಷಿಣೈಃ ॥ 9 ॥

ಅವನು ಪುನಃ ಮಹಾದಕ್ಷಿಣೆಯುಳ್ಳ ಸಹಸ್ರ ಅಶ್ವಮೇಧ ಯಾಗಗಳೂ, ನೂರು ರಾಜಸೂಯ ಯಾಗಗಳೂ ಮತ್ತು ಇನ್ನೂ ಅನೇಕ ಯಾಗಗಳನ್ನೂ ಮಾಡಿದನು.
ಅಗ್ನಿಷ್ಟೋಮಾತಿರಾತ್ರಾಣಾಮುಕ್ಥ್ಯವಿಶ್ವಜಿತಾಂ ಚ ಸಃ |
ಚಾತುರ್ಮಾಸ್ಯೇಷ್ಟಿಸತ್ರಾಣಾಂ ಸಹಸ್ರೈಶ್ಚ ಸುಸಮೃತೈಃ ॥ 10 ॥
ಅಗ್ನಿಷ್ಟೋಮ, ಅತಿರಾತ್ರ, ಉಕ್ಥ್ಯ, ವಿಶ್ವಜಿತ್, ಚಾತುರ್ಮಾಸ್ಯ, ಸತ್ರ ಮೊದಲಾದ ಇಷ್ಟಿಗಳನ್ನು ಮತ್ತು ಯಾಗಗಳನ್ನು ಶಾಸ್ತ್ರ ಸಮ್ಮತವಾದ ರೀತಿಯಲ್ಲಿ ಸಹಸ್ರ ಸಂಖ್ಯೆಯಲ್ಲಿ ಮಾಡಿದನು.
ಇಷ್ಟ್ವಾ ಶಾಕುಂತಲೋ ರಾಜಾ ತರ್ಪಯಿತ್ವಾ ದ್ವಿಜಾನ್ ಧನೈಃ |
ಸಹಸ್ರಂ ಯತ್ರ ಪದ್ಮಾನಾಂ ಕಣ್ವಾಯ ಭರತೋ ದದೌ |
ಜಾಂಬೂನದಸ್ಯ ಶುದ್ಧಸ್ಯ ಕನಕಸ್ಯ ಮಹಾಯಶಾಃ ॥ 11 ॥
ಶಕುಂತಲೆಯ ಪುತ್ರನಾದ ಭರತ ಚಕ್ರವರ್ತಿಯು ಹೀಗೆ ಯಾಗವನ್ನು ಮಾಡಿ, ದ್ವಿಜರನ್ನು ದಕ್ಷಿಣೆಗಳಿಂದ ಸಂತೋಷಪಡಿಸಿ, ಮಹಾಕೀರ್ತಿವಂತನಾದ ಅವನು ಕಣ್ವರಿಗೆ ಶುದ್ಧಚಿನ್ನದಿಂದ ಮಾಡಿದ ಸಹಸ್ರ ಪದ್ಮನಿಷ್ಕಗಳನ್ನು ದಾನ ಮಾಡಿದನು.
ಯಸ್ಯ ಯೂಪಾಃ ಶತವ್ಯಾಮಾಃ ಪರಿಣಾಹೇನ ಕಾಂಚನಾಃ |
ಸಹಸ್ರವ್ಯಾಮಮುದ್ವಿದ್ಧಾಃ ಸೈಂದ್ರೈರ್ದೇವೈಃ ಸಮುಚ್ಛ್ರಿತಾಃ ॥ 12 ॥
ಅವನ ಯಾಗದ ಸುವರ್ಣಮಯವಾದ ಯೂಪಗಳು (ಬಲಿಗಂಬಗಳು) ನೂರು ಮಾರು ಸುತ್ತಳತೆಯನ್ನು ಹೊಂದಿ, ಒಂದು ಸಾವಿರ ಮಾರಿನಷ್ಟು ಎತ್ತರವಾಗಿದ್ದು, ಇಂದ್ರಾದಿ ದೇವತೆಗಳಿಂದ ಮೇಲಕ್ಕೆ ಎತ್ತಲ್ಪಟ್ಟವು.
ಸ್ವಲಂಕೃತಾನ್ ಭ್ರಾಜಮಾನಾನ್ ಸರ್ವರತ್ನಮನೋರಮಾನ್ |
ಹಿರಣ್ಮಯಾಂಶ್ಚ ದ್ವಿರದಾನ್ ಉಷ್ಟ್ರಾನಶ್ವಾನಜಾವಿಕಾನ್ ॥ 13 ॥
ಚೆನ್ನಾಗಿ ಅಲಂಕೃತವಾದ, ಶೋಭಿಸುವ, ಸರ್ವರತ್ನಗಳಿಂದ ಮನೋಹರವಾದ, ಸುವರ್ಣಮಯವಾದ ಆನೆಗಳನ್ನೂ, ಒಂಟೆಗಳನ್ನೂ, ಅಶ್ವಗಳನ್ನೂ, ಆಡು-ಕುರಿಗಳನ್ನೂ (ಬ್ರಾಹ್ಮಣರಿಗೆ ದಾನ ಮಾಡಿದನು).
ದಾಸೀದಾಸಂ ಧನಂ ಧಾನ್ಯಂ ಗಾಃ ಸವತ್ಸಾಃ ಪಯಸ್ವಿನೀಃ |
ಗ್ರಾಮಾನ್ ಗೃಹಾಣಿ ಕ್ಷೇತ್ರಾಣಿ ವಿವಿಧಾಂಶ್ಚ ಪರಿಚ್ಛದಾನ್ ॥14॥
ಕೋಟೀಶತಾಯುತಂ ಚೈವ ಬ್ರಾಹ್ಮಣೇಭ್ಯೋ ಹ್ಯಮಂಸತ |
ಚಕ್ರವರ್ತೀ ಹ್ಯದೀನಾತ್ಮಾ ಜೇತಾ ಯುದ್ಧೇಽಜಿತಃ ಪರೈಃ ॥ 15 ॥
ದಾಸಿಯರು, ದಾಸರು, ಧನ-ಧಾನ್ಯಗಳು, ಹಾಲು ಕರೆಯುವ ವತ್ಸ ಸಹಿತವಾದ ಗೋವುಗಳು, ಗ್ರಾಮಗಳು, ಗೃಹಗಳು, ಕ್ಷೇತ್ರಗಳು, ವಿವಿಧವಾದ ವಸ್ತ್ರಗಳು ಇವುಗಳನ್ನು ಯುದ್ಧದಲ್ಲಿ ಪರಾಜಿತನಾಗದ, ಎಲ್ಲರನ್ನೂ ಜಯಿಸುವ, ಉನ್ನತವಾದ ಮನಸ್ಸುಳ್ಳ ಚಕ್ರವರ್ತಿಯಾದ ಭರತನು ನೂರಾರು ಕೋಟಿಯ ಸಂಖ್ಯೆಯಲ್ಲಿ ಬ್ರಾಹ್ಮಣರ ಅಧೀನವನ್ನಾಗಿ ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ ॥ 16 ॥
ಪುತ್ರಾತ್ ಪುಣ್ಯತರಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 17 ॥
ಎಲೈ ಸೃಂಜಯನೇ, ನಿನಗಿಂತ ನಾಲ್ಕುಪಟ್ಟು ಶ್ರೇಷ್ಠನಾದ ಅವನೂ, ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ ಮರಣವನ್ನು ಹೊಂದಿದರು ಎಂದ ಮೇಲೆ, ಎಲೈ ಜ್ಞಾನಿಶ್ರೇಷ್ಠನೇ, ಯಾಗವನ್ನು ಮಾಡದ, ದಕ್ಷಿಣೆಗಳನ್ನು ಕೊಡದ ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತಾರನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ಪೃಥುಚರಿತೆ
ನಾರದಃ
ವೈನ್ಯಂ ಪೃಥುಂ ಚ ರಾಜಾನಂ ಮೃತಂ ಸೃಂಜಯ ಶುಶ್ರುಮ |
ಯಮಭ್ಯಷಿಂಚನ್ ಸಮ್ಮಂತ್ರ್ಯ ರಾಜಸೂಯೇ ಮಹರ್ಷಯಃ ॥ 1 ॥
ನಾರದರು ಎಲೈ ಸೃಂಜಯನೇ, ವೇನಪುತ್ರನಾದ ಪೃಥುರಾಜನೂ ಮೃತನಾದನೆಂದು ಕೇಳಿದ್ದೇವೆ. ಮಹರ್ಷಿಗಳು ಮಂತ್ರಾಲೋಚನೆಯನ್ನು ಮಾಡಿ ರಾಜಸೂಯಯಾಗದಲ್ಲಿ ಅವನಿಗೆ ಅಭಿಷೇಕವನ್ನು ಮಾಡಿದರು.
ಅಯಂ ನಃ ಪ್ರಥಯಿಷ್ಯೇತ ಸರ್ವಾನಿತ್ಯಭವತ್ ಪೃಥುಃ |
ಕ್ಷತಾನ್ನಸ್ತ್ರಾಸ್ಯತೇ ನಿತ್ಯಮ್ ಇತಿ ಚ ಕ್ಷತ್ರಿಯೋಽಭವತ್ ॥ 2 ॥
ಇವನು ನಮ್ಮೆಲ್ಲರನ್ನೂ ವಿಸ್ತಾರಗೊಳಿಸುತ್ತಾನೆ ಎಂಬ ವಿವಕ್ಷೆಯಿಂದ ಅವನು ಪೃಥುವೆನಿಸಿದನು. ಗಾಯದಿಂದ (ಕಷ್ಟಗಳಿಂದ) ನಮ್ಮನ್ನು ಯಾವಾಗಲೂ ರಕ್ಷಿಸುವನು ಎಂಬ ಕಾರಣದಿಂದ ಅವನು ಕ್ಷತ್ರಿಯನೆನಿಸಿದನು.
ಪೃಥುಂ ವೈನ್ಯಂ ಪ್ರಜಾ ದೃಷ್ಟ್ವಾ ರಕ್ತಾಃ ಸ್ಮೇತಿ ಯದಬ್ರುವನ್ |
ತತೋ ರಾಜೇತಿ ನಾಮಾಸ್ಯ ಅನುರಾಗಾದಜಾಯತ ॥ 3 ॥

ವೇನಪುತ್ರನಾದ ಪೃಥುವನ್ನು ನೋಡಿ ಪ್ರಜೆಗಳು, ನಾವು ನಿನ್ನಲ್ಲಿ ಪ್ರೀತಿಯಿಂದ ಇದ್ದೇವೆ ಎಂದು ಹೇಳಿದರು. ಪ್ರಜೆಗಳ ಅನುರಾಗದಿಂದಾಗಿ ಅವನಿಗೆ ರಾಜ ಎಂಬ ಹೆಸರಾಯಿತು.
ಅಕೃಷ್ಟಪಚ್ಯಾ ಪೃಥಿವೀ ಹ್ಯಾಸೀದ್ ವೈನ್ಯಸ್ಯ ಕಾಮಧುಕ್ |
ಸರ್ವಾಃ ಕಾಮದುಘಾ ಗಾವಃ ಪುಟಕೇ ಪುಟಕೇ ಮಧು ॥ 4 ॥
ಪೃಥುಚಕ್ರವರ್ತಿಯ ಕಾಲದಲ್ಲಿ ಭೂಮಿಯು ಉಳದೆಯೇ ಎಲ್ಲಾ ಧಾನ್ಯಗಳನ್ನು ಕೊಡುವುದಾಗಿದ್ದಿತು. ವೃಕ್ಷಗಳ ಎಲ್ಲ ಪೊಟರೆಗಳಲ್ಲಿಯೂ ಜೇನು ತುಂಬಿರುತ್ತಿದ್ದಿತು. ಗೋವುಗಳು ಕೇಳಿದುದನ್ನೆಲ್ಲ ಕೊಡುತಿತದ್ದವು.
ಆಸನ್ ಹಿರಣ್ಮಯಾ ವೃಕ್ಷಾಃ ಸುಖಸ್ಪರ್ಶಾಃ ಸುಗಂಧಿನಃ |
ತೇಷಾಂ ಚೀರಾಣಿ ಸಂವೀತಾಃ ಪ್ರಜಾಸ್ತೇಷ್ವೇವ ಶೇರತೇ ॥ 5 ॥
ವೃಕ್ಷಗಳು ಒಳ್ಳೆಯ ಗಂಧದಿಂದ ಮತ್ತು ಸುಖಸ್ಪರ್ಶದಿಂದಲೂ ಕೂಡಿ ಸುವರ್ಣಮಯವಾಗಿದ್ದವು. ಅವುಗಳು ನಾರುಮಡಿಗಳನ್ನು ಸುತ್ತುಕೊಂಡಿರುತ್ತಿದ್ದವು. ಪ್ರಜೆಗಳು ಅವುಗಳಲ್ಲಿಯೇ ಮಲಗುತ್ತಿದ್ದರು.
ಫಲಾನ್ಯಮೃತಕಲ್ಪಾನಿ ಮೂಲಾನಿ ಚ ಮಧೂನಿ ಚ |
ತೇಷಾಮಾಸೀತ್ ತದಾಽಽಹಾರೋ ನಿರಾಹಾರೋಽಪಿ ನಾಭವತ್ ॥
ಫಲಗಳೂ, ಮೂಲಗಳೂ ಮತ್ತು ಮಧುವೂ ಅಮೃತಪ್ರಾಯವಾಗಿದ್ದವು. ಪ್ರಜೆಗಳಿಗೆ ಆಗ ಅವೇ ಆಹಾರವಾಗಿದ್ದವು. ನಿರಾಹಾರರಾದವರು ಯಾರೂ ಇರಲಿಲ್ಲ.
ಅರೋಗಾಃ ಸರ್ವಸಿದ್ಧಾರ್ಥಾ ಮನುಷ್ಯಾ ಅಕುತೋಭಯಾಃ |
ನಿವಸಂತಿ ಯಥಾಕಾಮಂ ವೃಕ್ಷೇಷು ಚ ಗೃಹೇಷು ಚ ॥ 7 ॥
ಮನುಷ್ಯರು ಯಾವ ಭಯವೂ ಇಲ್ಲದೆ ಸರ್ವಾಭೀಷ್ಟಗಳೂ ಪೂರ್ಣವಾಗಿ, ಯಾವ ರೋಗವೂ ಇಲ್ಲದೆ ತಮ್ಮ ಮನಸ್ಸಿಗೆ ಬಂದಂತೆ ವೃಕ್ಷಗಳಲ್ಲಿ ಮತ್ತು ಗುಹೆಗಳಲ್ಲಿ ವಾಸಿಸುತ್ತಿದ್ದರು.
ಪ್ರವಿಭಾಗೋ ನ ರಾಷ್ಟ್ರಾಣಾಂ ಪುರಾಣಾಮಭವತ್ ತದಾ |
ಯಥಾಸುಖಂ ಯಥಾರಮ್ಯಂ ತಥೈವ ಮುದಿತಾಃ ಪ್ರಜಾಃ ॥ 8 ॥
ಆಗ ರಾಷ್ಟ್ರಗಳು, ಪಟ್ಟಣಗಳು ಎಂಬ ವಿಭಾಗವಿರಲಿಲ್ಲ. ತಮಗೆ ಅನುಕೂಲವಾದಂತೆ, ತಮ್ಮ ಮನಸ್ಸಿಗೆ ಹಿತವಾದಂತೆ ಪ್ರಜೆಗಳು ವಾಸಿಸುತ್ತಾ ಸುಖವಾಗಿದ್ದರು.
ತಸ್ಯ ಸಂಸ್ತಂಭಯನ್ನಾಪಃ ಸಮುದ್ರಮಭಿಯಾಸ್ಯತಃ |
ಪರ್ವತಾಶ್ಚಾವಲೀಯಂತ ಧ್ವಜಭಂಗಶ್ಚ ನಾಭವತ್ ॥ 9 ॥
ಸಮುದ್ರದ ಕಡೆಗೆ ಹೊರಟ ಅವನಿಗೆ ಅನುಕೂಲ ಮಾಡಲು ಪರ್ವತಗಳು ನೀರುಗಳನ್ನು ತಡೆದು ಮಳೆಯಾದವು. ಅವನ ರಥದ ಧ್ವಜವು ಭಗ್ನವಾಗಲಿಲ್ಲ.
ತಂ ವನಸ್ಪತಯಃ ಶೈಲಾಃ ದೇವಾಸುರನರೋರಗಾಃ |
ಸಪ್ತರ್ಷಯಃ ಪುಣ್ಯಜನಾ ಗಂಧರ್ವಾಪ್ಸರಸೋಽಪಿ ಚ |
ಪಿತರಶ್ಚ ಸುಖಾಸೀನಮಭಿಗಮ್ಯೇದಮಬ್ರುವನ್ ॥ 10 ॥
ಸುಖವಾಗಿ ಆಸೀನನಾದ ಅವನ ಬಳಿಗೆ ವನಸ್ಪತಿಗಳು, ಪರ್ವತಗಳು, ದೇವಾಸುರರು, ಮನುಷ್ಯರು, ಸರ್ಪಗಳು, ಸಪ್ತರ್ಷಿಗಳು, ಪುಣ್ಯಜನರು, ಗಂಧರ್ವರು, ಅಪ್ಸರೆಯರು, ಪಿತೃಗಳು ಎಲ್ಲರೂ ಬಂದು ಹೀಗೆ ಮಾತನಾಡಿದರು.
ಸಮ್ರಾಡಸಿ ಕ್ಷತ್ರಿಯೋಽಸಿ ರಾಜಾ ಗೋಪ್ತಾಽಸಿ ಪಾಹಿ ನಃ |
ದೇಹ್ಯಸ್ಮಭ್ಯಂ ಮಹಾರಾಜ ಪ್ರಭುಃ ಸನ್ನೀಪ್ಸಿತಾನ್ ವರಾನ್ ॥ 11 ॥
ಯೈರ್ವಯಂ ಶಾಶ್ವತಂ ತೃಪ್ತಾ ವರ್ತಯಿಷ್ಯಾಮಹೇ ಸುಖಮ್ ॥
ನೀನು ಚಕ್ರವರ್ತಿಯಾಗಿದ್ದೀಯೆ. ಕ್ಷತ್ರಿಯನಾಗಿದ್ದೀಯೆ. ರಾಜನಾಗಿದ್ದೀಯೆ. ರಕ್ಷಕನಾಗಿದ್ದೀಯೆ. ನಮ್ಮನ್ನು ರಕ್ಷಿಸು. ಎಲೈ ಮಹಾರಾಜನೇ, ಪ್ರಭುವಾದ ನೀನು ನಮಗೆ ಅಭೀಷ್ಟವಾದ ವರವನ್ನು ಕೊಡು. ಅದರಿಂದ ನಾವು ಶಾಶ್ವತವಾಗಿ, ಸಂತುಷ್ಟರಾಗಿ ಸುಖವಾಗಿ ಜೀವಿಸುವೆವು (ಎಂದು ಹೇಳಿದರು).
ವಿಜ್ಞಾಪಿತಃ ಪ್ರಜಾಭಿಸ್ತು ಪ್ರಜಾನಾಂ ಹಿತಕಾಮ್ಯಯಾ |
ತಥೇತ್ಯುಕತ್ವ ಧನುರ್ಗೃಹ್ಯ ವಸುಧಾಮಾದ್ರವದ್ ಬಲೀ ॥ 13 ॥
ಪ್ರಜೆಗಳಿಂದ ಹೀಗೆ ವಿಜ್ಞಾಪಿಸಲ್ಪಟ್ಟ ಪೃಥುವು, ಪ್ರಜೆಗಳಿಗೆ ಹಿತವನ್ನು ಮಾಡಲು ಬಯಸಿ, ಹಾಗೆಯೇ ಆಗಲಿ ಎಂದು ಧನುಸ್ಸನ್ನು ತೆಗೆದುಕೊಂಡು ಭೂಮಿಯನ್ನು ಬೆನ್ನಟ್ಟಿ ಹೋದನು.
ತತೋ ವೈನ್ಯಭಯಾದ್ ರಾಜನ್ ಗೌರ್ಭೂತ್ವಾ ಪ್ರಾದ್ರವನ್ಮಹೀ |
ತಾಂ ಪೃಥುರ್ಧನುರಾದಾಯ ದ್ರವಂತೀಮನ್ವಸಾರಯತ್ ॥ 14 ॥
ಎಲೈ ರಾಜನೇ, ಆಗ ಭೂಮಿಯು ಪೃಥುಚಕ್ರವರ್ತಿಯ ಭಯದಿಂದ ಗೋರೂಪವನ್ನು ಧರಿಸಿ ಓಡಿಹೋದಳು. ಪೃಥುವಾದರೂ ಕೈಯಲ್ಲಿ ಧನುಸ್ಸನ್ನು ಹಿಡಿದು ಓಡುತ್ತಿದ್ದ ಅವಳನ್ನು ಹಿಂಬಾಲಿಸಿದನು.
ಸಾ ಲೋಕಾನ್ ಬ್ರಹ್ಮಲೋಕಾದೀನ್ ಗತ್ವಾ ವೈನ್ಯಭಯಾರ್ದಿತಾ |
ಸಾ ದದರ್ಶಾಗ್ರತೋ ವೈನ್ಯಂ ಕಾರ್ಮುಕೋದ್ಯತಪಾಣಿನಮ್ ॥ 15 ॥
ಭೂಮಿಯು ವೈನ್ಯನ ಭಯದಿಂದ ವ್ಯಥೆಗೊಂಡು, ಬ್ರಹ್ಮಲೋಕಾದಿ ಸಮಸ್ತ ಲೋಕಗಳಿಗೆ ಹೋದರೂ ಕೈಯಲ್ಲಿ ಧನುಸ್ಸನ್ನು ಹಿಡಿದ ವೈನ್ಯನನ್ನು ಎದುರಿಗೇ ನೋಡುತ್ತಿದ್ದಳು.
ಜ್ವಲದ್ಭಿರ್ವಿಶಿಖೈರ್ಬಾಣೈರ್ದೀಪ್ತತೇಜಃಸಮದ್ಯುತಿಮ್ |

ಮಹಾಯೋಗಂ ಮಹಾತ್ಮಾನಂ ದುರ್ಧರ್ಷಮಮರ್ತ್ಯೈರಪಿ ॥ 16 ॥
ಜ್ವಲಿಸುವ ಬಾಣಗಳನ್ನು ಕೈಯಲ್ಲಿ ಹಿಡಿದಿರುವ, ದೀಪ್ತವಾದ ಅಗ್ನಿಗೆ ಸಮಾನವಾದ ಕಾಂತಿಯುಳ್ಳ, ಮಹಾಯೋಗಶಾಲಿಯಾದ, ದೇವತೆಗಳಿಂದಲೂ ಸೋಲಿಸಲು ಅಸಾಧ್ಯನಾದ, ಮಹಾತ್ಮನಾದ ಅವನನ್ನು (ಎದುರಿಗೇ ನೋಡುತ್ತಿದ್ದಳು).
ಅಲಭಂತೀ ಪರಿತ್ರಾಣಂ ವೈನ್ಯಮೇವಾನ್ವಪದ್ಯತ |
ಕೃತಾಂಜಲಿಪುಟಾ ರಾಜನ್ ಪೂಜ್ಯಂ ಲೋಕೈಸ್ತ್ರಿಭಿಸ್ತದಾ ॥ 17 ॥
ಬೇರೆ ಎಲ್ಲಿಯೂ ರಕ್ಷಣೆ ಸಿಗದೆ ಅವಳು ಎಲೈ ರಾಜನೇ, ಮೂರುಲೋಕ- ಗಳಿಂದಲೂ ಪೂಜ್ಯನಾದ ವೈನ್ಯನಿಗೆ ಶರಣಾಗತಳಾಗಿ ಕೈಗಳನ್ನು ಮುಗಿದು ಹೇಳಿದಳು.
ಉವಾಚ ಚೈನಂ ನಾಧರ್ಮ್ಯಂ ಸ್ತ್ರೀವಧಂ ಕರ್ತುಮರ್ಹಸಿ |
ಕಥಂ ಧಾರಯಿತಾ ಚಾಸಿ ಪ್ರಜಾ ರಾಜನ್ ಮಯಾ ವಿನಾ ॥ 18 ॥
ಅಧರ್ಮವಾದ ಸ್ತ್ರೀವಧೆಯನ್ನು ನೀನು ಮಾಡಬಾರದು. ನಾನು ಇಲ್ಲದಿದ್ದರೆ ನೀನು ಪ್ರಜೆಗಳನ್ನು ಹೇಗೆ ಧರಿಸುವಿ ಎಂದು ಕೇಳಿದಳು.
ಪೃಥುಃ
ಏಕಸ್ಯಾರ್ಥಾಯ ಯೋ ಹನ್ಯಾದ್ ಆತ್ಮನೋ ವಾ ಪರಸ್ಯ ವಾ |
ಏಕಂ ಪ್ರಾಣಾನ್ ಬಹೂನ್ ವಾಽಪಿ ಪ್ರಾಣಿನಾಂ ನಾಸ್ತಿ ಪಾತಕಮ್ ॥
ಯಸ್ಮಿಂಸ್ತು ನಿಹತೇ ಭದ್ರೇ ಬಹವಃ ಸುಖಮೇಧತೇ |
ಯಸ್ಮಿನ್ ಹತೇ ಸುಖಂ ನಾಸ್ತಿ ಪಾತಕಂ ಸೋಪಭುಜ್ಯತೇ ॥ 20 ॥
ಪೃಥು ಯಾವನನ್ನು ಕೊಂದರೆ ಬಹಳ ಜನರು ಸುಖವನ್ನು ಹೊಂದುತ್ತಾರೆಯೋ ಅಂತಹ ವ್ಯಕಿತಯನ್ನು ತನ್ನ ಸಲುವಾಗಿಯೇ ಆಗಲಿ ಅಥವಾ ಪರರ ಸಲುವಾಗಿಯೇ ಆಗಲಿ ಒಂದು ಪ್ರಾಣಿಯನ್ನು ಕೊಂದರೂ ಅನೇಕ ಪ್ರಾಣಿಗಳನ್ನು ಕೊಂದರೂ ಅದರಿಂದ ಪಾಪವು ಬರುವುದಿಲ್ಲ. ಯಾವನನ್ನು ಕೊಂದರೆ ಲೋಕಕ್ಕೆ ಸುಖವುಂಟಾಗುವುದಿಲ್ಲವೋ ಅಂತಹ ವ್ಯಕ್ತಿಯನ್ನು ಕೊಂದವನು ಮಾತ್ರ ಪಾಪಕ್ಕೆ ಗುರಿಯಾಗುತ್ತಾನೆ.
ಸೋಽಹಂ ಪಾಲನಿಮಿತ್ತತ್ವಾದ್ ವಧಿಷ್ಯಾಮಿ ವಸುಂಧರೇ |
ಯದಿ ಚೇದ್ ವಚನಾದದ್ಯ ನ ಕರಿಷ್ಯಸಿ ಮೇ ಪ್ರಿಯಮ್ ॥ 21 ॥
ಎಲೌ ಭೂಮಿಯೇ, ನೀನು ನನ್ನ ಮಾತನ್ನು ಕೇಳಿ, ಈ ದಿನ ನನಗೆ ಪ್ರಿಯವನ್ನು ಮಾಡದಿದ್ದರೆ ಪ್ರಜಾಪಾಲನೆಯ ನಿಮಿತ್ತದಿಂದಾಗಿ ನಾನು ನಿನ್ನನ್ನು ವಧಿಸುವೆನು.
ತ್ವಾಂ ನಿಹತ್ಯ ತು ಬಾಣೇನ ಮಚ್ಛಾಸನಪರಾಙ್ಮುಖೀಮ್ |
ಆತ್ಮಾನಂ ಪ್ರಥಯಿತ್ವಾಽಹಂ ಪ್ರಜಾ ಧಾರಯಿತಾ ಸ್ವಯಮ್ ॥ 22 ॥
ನನ್ನ ಶಾಸನವನ್ನು ಮೀರಿದ ನಿನ್ನನ್ನು ನನ್ನ ಬಾಣದಿಂದ ಸಂಹರಿಸಿ, ನನ್ನನ್ನೇ ವಿಸ್ತಾರ ಮಾಡಿಕೊಂಡು ನಾನೇ ಪ್ರಜೆಗಳನ್ನು ಧರಿಸುವೆನು.
ಸುಖಂ ವಚನಮಾಸ್ಥಾಯ ಮಮ ಧರ್ಮಭೃತಾಂ ವರೇ |
ಸಂಜೀವಯ ಪ್ರಜಾ ನಿತ್ಯಂ ಶಕ್ತಾ ಹ್ಯಸಿ ವಸುಂಧರೇ ॥ 23 ॥
ಎಲೌ ಭೂಮಿಯೇ, ಧರ್ಮಿಷ್ಠರಲ್ಲಿ ಶ್ರೇಷ್ಠಳಾದವಳೇ, ನನ್ನ ಮಾತುಗಳನ್ನು ಪಾಲಿಸಿ ಈ ಪ್ರಜೆಗಳನ್ನು ಯಾವಾಗಲೂ ಸಂಜೀವನಗೊಳಿಸು. ನೀನು ಹಾಗೆ ಮಾಡಲು ಶಕ್ತಳಾಗಿದ್ದೀಯೆ.
ದುಹಿತೃತ್ವಂ ಚ ಮೇ ಗಚ್ಛ ಏವಮೇತನ್ಮಹಾಶರಮ್ |
ನಿಯಚ್ಛೇಯಂ ತ್ವದರ್ಥಾಯ ಉದ್ಯತಂ ಘೋರದರ್ಶನಮ್ ॥ 24 ॥
ನೀನು ನನ್ನ ಮಗಳಾಗು. ಹಾಗೆ ಮಾಡಿದರೆ ಮಾತ್ರ ನಿನ್ನ ಮೇಲೆ ಪ್ರಯೋಗಿಸಲು ಉದ್ಯುಕ್ತವಾದ, ಈ ಘೋರವಾಗಿ ಕಾಣುತ್ತಿರುವ ಬಾಣವನ್ನು ಹಿಂದಕ್ಕೆ ತೆಗೆದುಕೊಂಡೇನು.
ಭೂಮಿಃ
ಸರ್ವಮೇತನ್ಮಹಾರಾಜ ವಿಧಾಸ್ಯಾಮಿ ಪರಂತಪ |
ವತ್ಸಂ ತ್ವಂ ಪಶ್ಯ ರಾಜನ್ ವೈ ಕ್ಷರೇಯಂ ಯೇನ ವತ್ಸಲಾ ॥ 25 ॥
ಭೂಮಿ ಎಲೈ ಪರಂತಪನಾದ ಮಹಾರಾಜನೇ, ನೀನು ಹೇಳಿದ ಎಲ್ಲವನ್ನೂ ಮಾಡುತ್ತೇನೆ. ಎಲೈ ರಾಜನೇ, ನನಗೆ ಒಂದು ವತ್ಸವನ್ನು ಹುಡುಕು. ಹಾಗೆ ಮಾಡಿದರೆ ವತ್ಸಪ್ರಿಯಳಾದ ನಾನು ಕ್ಷೀರರೂಪದಲ್ಲಿ ಎಲ್ಲವನ್ನೂ ಸುರಿಸುವೆನು.
ಸಮಾಂ ಚ ಕುರು ಸರ್ವತ್ರ ಮಾಂ ವೈ ಧರ್ಮಭೃತಾಂ ವರ |
ಯಥಾ ವಿಷ್ಯಂದಮಾನಂ ವೈ ಕ್ಷೀರಂ ಸರ್ವತ್ರ ಭಾವಯೇ ॥ 26 ॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಹರಿಯುವ ನೀರು ಹರಿದು ಹೋಗದಂತೆ ಉಬ್ಬು- ತಗ್ಗುಗಳಿರುವ ನನ್ನನ್ನು ನೀರು ನಿಲ್ಲುವಂತೆ ಸಮವಾಗಿ ಮಾಡು.
ನಾರದಃ
ತತ ಉತ್ಸಾರಯಾಮಾಸ ಶಿಲಾಜಾಲಾನಿ ಸರ್ವಶಃ |
ಪೃಥುರ್ವೈನ್ಯಸ್ತದಾ ರಾಜಾ ತೇನ ಶೈಲಾ ವಿವರ್ಧಿತಾಃ ॥ 27 ॥
ನಾರದರು ಆಗ ವೈನ್ಯನಾದ ಪೃಥುವು ಅಲ್ಲಲ್ಲಿದ್ದ ಶಿಲಾಜಾಲಗಳನ್ನು ಪಕ್ಕಕ್ಕೆ ಸರಿಸಿದನು. ಅವುಗಳನ್ನು ಪರ್ವತದ ಮೇಲಿಟ್ಟ ಕಾರಣದಿಂದ ಪರ್ವತಗಳು ಎತ್ತರವಾದವು.
ನ ಹಿ ಪೂರ್ವನಿಸರ್ಗೇ ವೈ ವಿಷಮೇ ವಸುಧಾತಳೇ |

ಪ್ರವಿಭಾಗಃ ಪುರಾಣಾಂ ವಾ ಗ್ರಾಮಾಣಾಂ ವಾ ಮಹೀಪತೇ ॥ 28 ॥
ಎಲೈ ರಾಜನೇ, ಹಿಂದೆ ಭೂಮಿಯು ಉಬ್ಬು-ತಗ್ಗುಗಳಿಂದ ಕೂಡಿದ್ದಾಗ ಪಟ್ಟಣಗಳು ಮತ್ತು ಗ್ರಾಮಗಳು ಎಂಬ ವಿಭಾಗವಿರಲಿಲ್ಲ.
ನ ಸಸ್ಯಾನಿ ನ ಗೋರಕ್ಷ ್ಯಯಂ ನ ಕೃಷಿರ್ನ ವಣಿಕ್ಪಥಃ |
ವೈನ್ಯಾತ್ ಪ್ರಭೃತಿ ರಾಜೇಂದ್ರ ಸರ್ವಸ್ಯೈತಸ್ಯ ಸಂಭವಃ ॥ 29 ॥
ಆಗ ಸಸ್ಯಗಳಾಗಲೀ, ಗೋರಕ್ಷೆಯಾಗಲೀ, ಕೃಷಿಯಾಗಲೀ, ವಾಣಿಜ್ಯ ಮಾರ್ಗಗಳಾಗಲೀ ಇರಲಿಲ್ಲ. ಎಲೈ ರಾಜನೇ, ಪೃಥುಚಕ್ರವರ್ತಿಯ ಕಾಲದಿಂದ ಇವೆಲ್ಲವೂ ಉಂಟಾದವು.
ಯತ್ರ ಯತ್ರ ಚ ಸಾಮ್ಯಂ ತು ಭೂಮಾವಾಸೀತ್ ಕಿಲಾನಘ |
ತತ್ರ ತತ್ರ ಪ್ರಜಾಸ್ತಾತ ನಿವಾಸಮಭಿರೋಚಯನ್ |
ಕೃಚ್ಛ್ರೇಣೈವ ಮಹಾರಾಜ ಇತ್ಯೇವಮನುಶುಶ್ರುಮ ॥ 30 ॥
ಅದಕ್ಕಿಂತ ಮೊದಲು ಎಲೈ ಅನಘನೇ, ಭೂಮಿಯಲ್ಲಿ ಎಲ್ಲಲ್ಲಿ ಸ್ವಲ್ಪ ಸಮತಟ್ಟಾದ ಪ್ರದೇಶವಿದ್ದಿತೋ ಅಲ್ಲಲ್ಲಿ ಪ್ರಜೆಗಳು ಬಹಳ ಕಷ್ಟದಿಂದ ವಾಸವನ್ನು ಮಾಡುತ್ತಿದ್ದರು ಎಂದು ನಾವು ಕೇಳಿದ್ದೇವೆ.
ತಥೇತ್ಯುಕತ್ವ ಪುನರ್ವೈನ್ಯೋ ಗೃಹೀತ್ವಾSSಜಗವಂ ಧನುಃ |
ಶರಾಂಶ್ಚಾಪ್ರತಿಮಾನ್ ಘೋರಾಂಶ್ಚಿಂತಯಿತ್ವಾSಬ್ರವೀನ್ಮಹೀಮ್ ॥31॥
ಹಾಗೆಯೇ ಆಗಲಿ ಎಂದು ಹೇಳಿದ ವೈನ್ಯನು ಪುನಃ ತನ್ನ ಅಜಗವ ಧನುಸ್ಸನ್ನು, ತನ್ನ ಅಸದೃಶವಾದ ಘೋರವಾದ ಬಾಣಗಳನ್ನು ತೆಗೆದುಕೊಂಡು ಚಿಂತಿಸಿ ಭೂಮಿಯನ್ನು ಕುರಿತು ಹೇಳಿದನು.
ಏಹ್ಯೇಹಿ ವಸುಧೇ ಕ್ಷಿಪ್ರಂ ಕ್ಷರೈಭ್ಯಃ ಕಾಂಕ್ಷಿತಂ ಪಯಃ |
ಮಚ್ಛಾಸನಾತಿಗಾಂ ವೈ ತ್ವಾಂ ಪ್ರಮಥಿಷ್ಯಾಮ್ಯಹಂ ಶರೈಃ ॥ 32 ॥
ಭೂಮಿಯೇ ಬಾ ಬಾ, ಬೇಗ ಈ ಪ್ರಜೆಗಳಿಗೆ ಅವರಿಗೆ ಅಭೀಷ್ಟವಾದ ಕ್ಷೀರವನ್ನು ಸುರಿಸು. ಇಲ್ಲದಿದ್ದರೆ ನನ್ನ ಶಾಸನವನ್ನು ಮೀರಿದ ನಿನ್ನನ್ನು ನನ್ನ ಬಾಣಗಳಿಂದ ವಿನಾಶಗೊಳಿಸುವೆನು.
ನಾರದಃ
ತಥೋಕ್ತಾ ಸಾSತ್ಮನಃ ಶ್ರೇಯಃ ಚಿಂತಯಿತ್ವಾSಬ್ರವೀತ್ ಪೃಥುಮ್ ॥
ವತ್ಸಂ ಪಾತ್ರಾಣಿ ದೋಗ್ಧ್ರ್ಯಾಂಶ್ಚ ಕ್ಷೀರಾಣಿ ಚ ಸಮಾದಿಶ |
ತತೋ ದಾಸ್ಯಾಮ್ಯಹಂ ಭದ್ರ ಸರ್ವಂ ಯಸ್ಯ ಯಥೇಪ್ಸಿತಮ್ |
ದುಹಿತೃತ್ವೇ ಚ ಮಾಂ ವೀರ ಸಂಕಲ್ಪಯಿತುಮರ್ಹಸಿ ॥ 34 ॥
ನಾರದರು ಹಾಗೆ ಹೇಳಲ್ಪಟ್ಟ ಭೂಮಿಯು ತನ್ನ ಶ್ರೇಯಸ್ಸನ್ನು ಚಿಂತಿಸಿ, ಪ್ರಭುವಾದ ಪೃಥುವನ್ನು ಕುರಿತು `ನನಗೆ ವತ್ಸಗಳನ್ನು, ಹಾಲು ಕರೆಯುವವರನ್ನು, ಹಾಲನ್ನು ಆದೇಶಿಸು. ಎಲೈ ಮಂಗಳಸ್ವರೂಪನೇ, ಆಗ ನಾನು ಅವರವರಿಗೆ ಅವರಿಗೆ ಇಷ್ಟವಾದ ಕ್ಷೀರವನ್ನು ಕೊಡುವೆನು. ಎಲೈ ವೀರನೇ, ನನ್ನನ್ನೂ ಸಹ ನಿನ್ನ ಮಗಳನ್ನಾಗಿ ಕಲ್ಪನೆ ಮಾಡು'.
ನಾರದಃ
ತಥೇತ್ಯುಕತ್ವ ಪೃಥುಃ ಸರ್ವಂ ವಿಧಾನಮಕರೋದ್ ವಶೀ |
ತತೋ ಭೂತನಿಕಾಯಾಸ್ತೇ ವಸುಧಾಂ ದುದುಹುಸ್ತದಾ ॥ 35 ॥
ಹಾಗೆಯೇ ಆಗಲಿ ಎಂದು ಸಮರ್ಥನಾದ ಪೃಥುವು ಎಲ್ಲ ವ್ಯವಸ್ಥೆಯನ್ನೂ ಮಾಡಿದನು. ಆಗ ಎಲ್ಲ ಪ್ರಾಣಿಗಳು ಭೂಮಿಯಿಂದ ತಮಗೆ ಬೇಕಾದ ಕ್ಷೀರವನ್ನು ಕರೆದುಕೊಂಡವು.
ತಾಂ ವನಸ್ಪತಯಃ ಪೂರ್ವಮುಪತಸ್ಥುರ್ದುಧುಕ್ಷವಃ |
ಸಾSತಿಷ್ಠದ್ ವತ್ಸಲಾ ವತ್ಸಂ ದೋಗ್ಧ್ರ್ಯಾನ್ ಪಾತ್ರಾಣಿ ಚೇಚ್ಛತೀ ॥ 36 ॥
ಮೊದಲು ವನಸ್ಪತಿಗಳು ಭೂಮಿಯನ್ನು ಕರೆಯಲು ಬಯಸಿ ಅವಳ ಸಮೀಪಕ್ಕೆ ಬಂದವು. ವತ್ಸಪ್ರಿಯಳಾದ ಭೂಮಿಯು ವತ್ಸವನ್ನೂ, ದೋಗ್ಧ್ರುವನ್ನೂ (ಹಾಲು ಕರೆಯುವವನನ್ನೂ), ಪಾತ್ರೆಯನ್ನೂ ನಿರೀಕ್ಷಿಸುತ್ತಾ ಸುಮ್ಮನೆ ನಿಂತಳು.
ವತ್ಸೋSಭೂತ್ ಪುಷ್ಪಿತಃ ಸಾಲಃ ಪ್ಲಕ್ಷೋ ದೋಗ್ಧಾ ದ್ವಿಜದ್ರುಮಃ |
ಛಿನ್ನಪ್ರರೋಹಣಂ ದುಗ್ಧಂ ಪಾತ್ರಮೌದುಂಬರಂ ಶುಭಮ್ ॥ 37 ॥
ಆಗ ಪುಷ್ಪಭರಿತವಾದ ಸಾಲವೃಕ್ಷವು ವತ್ಸವಾಯಿತು. ಪ್ಲಕ್ಷವೃಕ್ಷವು ದೋಗ್ಧ್ರುವಾಯಿತು. ಛಿನ್ನಪ್ರರೋಹಣ (ಕತ್ತರಿಸಿದ ಕಡೆಯಲ್ಲಿ ಚಿಗುರುವುದು) ಎಂಬ ಶುಭವಾದ ಕ್ಷೀರವನ್ನು ಔದುಂಬರ ಪಾತ್ರೆಯಲ್ಲಿ ಕರೆಯಲಾಯಿತು.
ಉದಯಃ ಪರ್ವತೋ ವತ್ಸೋ ಮೇರುರ್ದೋಗ್ಧಾ ಮಹಾಗಿರಿಃ |
ರತ್ನಾನ್ಯೋಷಧಯೋ ದುಗ್ಧಂ ಪಾತ್ರಮಶ್ಮಮಯಂ ತಥಾ ॥ 38 ॥
ಉದಯ ಪರ್ವತವು ವತ್ಸ, ಮಹಾಪರ್ವತವಾದ ಮೇರುವು ದೋಗ್ಧ್ರು, ರತ್ನ ಮತ್ತು ಓಷಧಿಗಳು ಕ್ಷೀರ, ಶಿಲಾಮಯವಾದುದು ಪಾತ್ರೆಯಾಯಿತು.
ದೇವಾನಾಂ ವತ್ಸ ಇಂದ್ರೋSಭೂತ್ ಪಾತ್ರಂ ದಾರುಮಯಂ ತಥಾ |
ದೋಗ್ಧಾ ಚ ಸವಿತಾ ದೇವೋ ದುಗ್ಧಮೂರ್ಜಸ್ಕರಂ ಪ್ರಿಯಮ್ ॥39॥
ಇಂದ್ರನು ದೇವತೆಗಳಿಗೆ ವತ್ಸನಾದನು, ದಾರುಮಯವಾದುದು ಪಾತ್ರೆಯಾಯಿತು, ಸವಿತೃವು ದೋಗ್ಧ್ರುವಾದನು. ದೇವತೆಗಳಿಗೆ ಪ್ರಿಯವಾದ ಅನ್ನ ವಸ್ತುವು ಕ್ಷೀರವಾಯಿತು.
ಅಸುರಾ ದುದುಹುರ್ಮಾಯಾಮಯಃಪಾತ್ರೇ ತು ತಾಮಥ |
ದೋಗ್ಧಾ ದ್ವಿಮೂರ್ಧಾ ತು ತದಾ ವತ್ಸಶ್ಚಾಸೀದ್ ವಿರೋಚನಃ ॥ 40 ॥

ಅಸುರರು ಕಬ್ಬಿಣದ ಪಾತ್ರೆಯಲ್ಲಿ ಮಾಯಾ ಎಂಬ ಕ್ಷೀರವನ್ನು ಕರೆದರು. ಆಗ ದ್ವಿಮೂರ್ಧನು ದೋಗ್ಧೃವಾದನು ಮತ್ತು ವಿರೋಚನನು ವತ್ಸವಾದನು.
ಕೃಷಿಂ ಚ ಸಸ್ಯಂ ಚ ನರಾ ದುದುಹುರ್ಧರಣೀತಳೇ |
ಸ್ವಾಯಂಭುವೋ ಮನುರ್ವತ್ಸಃ ತೇಷಾಂ ದೋಗ್ಧಾಽಭವತ್ ಪೃಥುಃ ||
ಮನುಷ್ಯರು ಭೂತಳ ಎಂಬ ಪಾತ್ರೆಯಲ್ಲಿ, ಕೃಷಿ ಮತ್ತು ಸಸ್ಯಸಂಪತ್ತು ಎಂಬ ಹಾಲನ್ನು ಕರೆದರು. ಸ್ವಾಯಂಭುವ ಮನುವು ವತ್ಸವಾದನು, ಅವರಿಗೆ ಪೃಥು ಚಕ್ರವರ್ತಿಯೇ ದೋಗ್ಧೃವಾದನು.
ಅಲಾಬುಪಾತ್ರೇಷು ವಿಷಂ ನಾಗೈರ್ದುಗ್ಧಾ ವಸುಂಧರಾ |
ಧೃತರಾಷ್ಟ್ರೋಽಭವದ್ ದೋಗ್ಧಾ ತೇಷಾಂ ವತ್ಸಸ್ತು ತಕ್ಷಕಃ || 42 ||
ಸರ್ಪಗಳು ಅಲಾಬು ಪಾತ್ರೆಗಳಲ್ಲಿ (ಸೋರೆ ಬುರುಡೆಗಳಲ್ಲಿ) ಭೂಮಿಯಿಂದ ವಿಷರೂಪವಾದ ಕ್ಷೀರವನ್ನು ಕರೆದವು. ಅವುಗಳಿಗೆ ಧೃತರಾಷ್ಟ್ರನು ದೋಗ್ಧೃವಾಗಿದ್ದನು, ತಕ್ಷಕನು ವತ್ಸವಾದನು.
ಸಪ್ತರ್ಷಿಭಿರ್ಬ್ರಹ್ಮ ದುಗ್ಧಂ ತಪಶ್ಚಾಕ್ಲಿಷ್ಟಕರ್ಮಭಿಃ |
ದೋಗ್ಧಾ ಬೃಹಸ್ಪತಿಃ ಪಾತ್ರಂ ಛಂದೋ ವತ್ಸಸ್ತು ಸೋಮರಾಟ್ || 43 ||
ಅಕ್ಲಿಷ್ಟಕಾರಿಗಳಾದ ಸಪ್ತರ್ಷಿಗಳು ವೇದ ಎಂಬ ಕ್ಷೀರವನ್ನು ಕರೆದರು. ಬೃಹಸ್ಪತಿಯು ದೋಗ್ಧೃವೂ, ಛಂದಸ್ಸುಗಳು ಪಾತ್ರೆಯೂ ಮತ್ತು ಚಂದ್ರನು ವತ್ಸನೂ ಆದನು.
ಅಂತರ್ಧಾನಂ ಚಾಮಪಾತ್ರೇ ದುಗ್ಧಂ ಪುಣ್ಯಜನೈರ್ವಿರಾಟ್ |
ದೋಗ್ಧಾ ವೈಶ್ರವಣಸ್ತೇಷಾಂ ವತ್ಸ ಆಸೀತ್ ಕುಬೇರಕಃ || 44 ||
ಆಮಪಾತ್ರೆಯಲ್ಲಿ ಪುಣ್ಯಜನರು ಅಂತರ್ಧಾನವಿದ್ಯೆ ಎಂಬ ಹಾಲನ್ನು ಕರೆದರು. ವಿಶೇಷವಾಗಿ ಪ್ರಕಾಶಮಾನನಾದ ವೈಶ್ರವಣನು ದೋಗ್ಧೃವಾಗಿದ್ದನು. ಕುಬೇರನು ವತ್ಸವಾದನು.
ಪುಣ್ಯಗಂಧಂ ಪದ್ಮಪಾತ್ರೇ ಗಂಧರ್ವಾಪ್ಸರಸೋಽದುಹನ್ |
ವತ್ಸಶ್ಚಿತ್ರರಥಸ್ತೇಷಾಂ ದೋಗ್ಧಾ ವಸುರಪಿ ಪ್ರಭುಃ || 45 ||
ಗಂಧರ್ವಾಪ್ಸರಸರು ಪದ್ಮಪಾತ್ರೆಯಲ್ಲಿ ಶುಭಗಂಧವನ್ನು ಕ್ಷೀರವನ್ನಾಗಿ ಕರೆದರು. ಅವರಿಗೆ ಚಿತ್ರರಥನು ವತ್ಸನೂ ಮತ್ತು ಪ್ರಭುವಾದ ವಸುವು ದೋಗ್ಧೃವೂ ಆದನು.
ಸ್ವಧಾಂ ರಜತಪಾತ್ರೇಷು ದುದುಹುಃ ಪಿತರಃ ಸ್ಮ ತಾಮ್ |
ವತ್ಸೋಽತ್ರ ವತ್ಸರಸ್ತೇಷಾಂ ಯಮೋ ದೋಗ್ಧಾ ತಥಾಽಂತಕಃ || 46 ||
ಪಿತೃಗಳು ರಜತಪಾತ್ರೆಯಲ್ಲಿ ಸ್ವಧಾರೂಪವಾದ ಅನ್ನವನ್ನು ಭೂಮಿಯಿಂದ ಕರೆದರು. ವತ್ಸರವು ಅವರಿಗೆ ವತ್ಸವಾಯಿತು ಮತ್ತು ಸಂಹಾರಕನಾದ ಯಮನು ದೋಗ್ಧೃವಾದನು.
ಏವಂ ನಿಕಾಯೈಸ್ತೈರ್ದುಗ್ಧಾ ಪಯಾಂಸೀಷ್ಟಾನಿ ಸಾ ವಿರಾಟ್ |
ಯೈರ್ವರ್ತಯಂತಿ ತೇ ಹ್ಯದ್ಯ ಪಾತ್ರೈರ್ವತ್ಸಾಶ್ಚ ನಿತ್ಯಶಃ || 47 ||
ಹೀಗೆ ವಿಶೇಷವಾಗಿ ಶೋಭಿಸುತ್ತಿದ್ದ ಆ ಭೂಮಿಯಿಂದ ಪ್ರಜೆಗಳು ಗುಂಪು- ಗುಂಪಾಗಿ ತಮಗೆ ಇಷ್ಟವಾದ ಕ್ಷೀರಗಳನ್ನು ಕರೆದುಕೊಂಡರು. ಈಗಲೂ ಅವರು ಯಾವಾಗಲೂ ಅದೇ ಪಾತ್ರೆಗಳಿಂದಲೂ ಮತ್ತು ವತ್ಸಗಳಿಂದಲೂ ಜೀವಿಸುತ್ತಾರೆ.
ಸ ಯಜ್ಞೈರ್ವಿವಿಧೈರಿಷ್ಟ್ವಾ ಪೃಥುರ್ವೈನ್ಯಃ ಪ್ರತಾಪವಾನ್ |
ಸಂತರ್ಪಯಿತ್ವಾ ಭೂತಾನಿ ಸರ್ವಕಾಮೈರ್ಮನಃಪ್ರಿಯೈಃ || 48 ||
ಅಂತಹ ವೇನಪುತ್ರನಾದ, ಪ್ರತಾಪಶಾಲಿಯಾದ ಪೃಥುಚಕ್ರವರ್ತಿಯು ವಿವಿಧವಾದ ಯಜ್ಞಗಳಿಂದ ದೇವತೆಗಳನ್ನು ಅರ್ಚಿಸಿ, ಎಲ್ಲಾ ಪ್ರಜೆಗಳಿಗೂ ಮತ್ತು ಪ್ರಾಣಿಗಳಿಗೂ ಇಷ್ಟವಾದ ವಸ್ತುಗಳಿಂದ ಅವರನ್ನು ತೃಪ್ತಿಪಡಿಸಿದನು.
ಹೈರಣ್ಯಾನಕರೋದ್ ರಾಜಾ ಯೇ ಕೇಚಿತ್ ಪಾರ್ಥಿವಾ ಭುವಿ |
ತಾನ್ ಬ್ರಾಹ್ಮಣೇಭ್ಯಃ ಪ್ರಾಯಚ್ಛದ್ ಅಶ್ವಮೇಧೇ ಮಹಾಮಖೇ ||49||
ರಾಜನಾದ ಅವನು ಯಜ್ಞಗಳಲ್ಲಿ ಉಪಯೋಗಿಸುವ ಎಲ್ಲ ಪಾತ್ರೆಗಳನ್ನೂ ಸುವರ್ಣದಿಂದಲೇ ಮಾಡಿಸಿ, ಅವುಗಳನ್ನು ಅಶ್ವಮೇಧ ಮಹಾಯಾಗದಲ್ಲಿ ಬ್ರಾಹ್ಮಣರಿಗೆ ದಾನವನ್ನು ಮಾಡಿದನು.
ಸ ಷಷ್ಟಿಂ ಗೋಸಹಸ್ರಾಣಿ ಷಷ್ಟಿಂ ನಾಗಶತಾನಿ ಚ |
ಸೌವರ್ಣಾನಕರೋದ್ ರಾಜಾ ಬ್ರಾಹ್ಮಣೇಭ್ಯಶ್ಚ ತಾನ್ ದದೌ || 50 ||
ಅವನು ಸುವರ್ಣಮಯವಾದ ಅರವತ್ತು ಸಾವಿರ ಗೋವುಗಳನ್ನೂ, ಆರು ಸಾವಿರ ಗಜಗಳನ್ನೂ ಮಾಡಿಸಿ, ಅವುಗಳನ್ನು ಬ್ರಾಹ್ಮಣರಿಗೆ ಕೊಟ್ಟನು.
ಯ ಇಮಾಂ ಪೃಥಿವೀಂ ಸರ್ವಾಂ ಮಣಿರತ್ನವಿಭೂಷಿತಾಮ್ |
ಕೃತ್ವಾ ಹಿರಣ್ಮಯೀಂ ರಾಜಾ ಬ್ರಾಹ್ಮಣೇಭ್ಯೋ ಹ್ಯಮಂಸತ || 51 ||
ರಾಜನಾದ ಅವನು ಈ ಭೂಮಿಯನ್ನೆಲ್ಲಾ ಮಣಿರತ್ನಗಳಿಂದ ಅಲಂಕರಿಸಿ, ಹಿರಣ್ಮಯವನ್ನಾಗಿ ಮಾಡಿ ಬ್ರಾಹ್ಮಣರಿಗೆ ದಾನ ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತಮಸ್ತುಭ್ಯಂ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಭಿಚೈತ್ಯೇತ್ಯುದಾಹರತ್ || 52 ||
ಎಲೈ ಸೃಂಜಯನೇ, ನಿನಗಿಂತ ನಾಲ್ಕುಪಟ್ಟು ಶ್ರೇಷ್ಠನಾದ ಅವನೂ ಮತ್ತು ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ ಪುತ್ರನೂ

ಮೃತರಾದಮೇಲೆ ಎಲೈ ಜ್ಞಾನಿಶ್ರೇಷ್ಠನೇ, ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಮಾಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್ಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೇಳನೆಯ ಅಧ್ಯಾಯ
ಷೋಡಶರಾಜೋಪಾಖ್ಯಾನದಲ್ಲಿ ಪರಶುರಾಮ ಚರಿತೆ
ನಾರದಃ
ರಾಮೋ ಮಹಾತಪಾಃ ಶೂರೋ ವೀರೋ ಲೋಕನಮಸ್ಕೃತಃ |
ಜಾಮದಗ್ನ್ಯೋ ಮಹಾರಾಜ ಅವಿತೃಪ್ತೋ ಮರಿಷ್ಯತಿ ॥ 1 ॥
ನಾರದರು ಎಲೈ ಮಹಾರಾಜನೇ, ಲೋಕನಮಸ್ಕೃತನೂ, ಶೂರನೂ, ವೀರನೂ, ಮಹಾತಪಸ್ವಿಯೂ ಆದ ಜಮದಗ್ನಿ ಪುತ್ರನಾದ ಪರಶುರಾಮನೂ ತೃಪ್ತನಾಗದೆಯೇ ಮರಣವನ್ನು ಹೊಂದುವವನು.
ಯಶ್ಚಾಸ್ತ್ರಮನುಪರ್ಯೇತಿ ಭೂಮಿಂ ಕುರ್ವನ್ನಪಾಂಸುಲಾಮ್ |
ನ ಚಾಸೀದ್ ವಿಕ್ರಿಯಾ ಯಸ್ಯ ಪ್ರಾಪ್ಯ ಶ್ರಿಯಮನುತ್ತಮಾಮ್ |
ಜಾಮದಗ್ನ್ಯೋ ನ ತೇ ರಾಜನ್ ಕಚ್ಚಿಚ್ಛ್ರೋತ್ರಮುಪಾಗತಃ ॥ 2 ॥
ಅವನು ಭೂಮಿಯನ್ನು ನಿರ್ದುಷ್ಟವನ್ನಾಗಿ ಮಾಡುವವನಾಗಿ, ತನ್ನ ಅಸ್ತ್ರದ ಜೊತೆಯಲ್ಲಿ ಭೂಮಿಯೆಲ್ಲವನ್ನೂ ತಿರುಗುತ್ತಾನೆ. ಬಹಳ ಸಂಪತ್ತನ್ನು ಹೊಂದಿದರೂ ಅವನಿಗೆ ಯಾವ ವಿಕಾರವೂ ಉಂಟಾಗಲಿಲ್ಲ. ಎಲೈ ರಾಜನೇ, ಅಂತಹ ಪರಶುರಾಮನ ವಾರ್ತೆಯು ನಿನ್ನ ಕಿವಿಯ ಮೇಲೆ ಏನಾದರೂ ಬಿದ್ದಿದೆಯೇ?
ಯೇನೈಕೇನ ಪುರಾ ರಾಜನ್ ಕ್ರುದ್ಧೇನ ಹತಬಂಧುನಾ |
ಭೃಗುಭಿಸ್ತ್ರಾಮ್ಯಮಾನೇನ ತ್ರಾಹಿ ರಾಮೇತಿ ವಿಸ್ವರಮ್ ॥ 3 ॥
ತ್ರಿಃಸಪ್ತಕೃತ್ವೋ ಭೂಮಿರ್ಯತ್ ಕೃತಾ ನಿಃಕ್ಷತ್ರಿಯಾ ಪುರಾ ॥ 4 ॥
ಭೃಗುವಂಶದವರು ಪರಶುರಾಮನೇ ಕಾಪಾಡು ಎಂದು ಅಪಸ್ವರದಲ್ಲಿ ಕಿರುಚಿದಾಗ ಸಂತಾಪಗೊಂಡು ತಂದೆಯನ್ನು ಕಳೆದುಕೊಂಡು ಕ್ರುದ್ಧನಾದ ಅವನೊಬ್ಬನೇ ಎಲೈ ರಾಜನೇ, ಹಿಂದೆ ಇಪ್ಪತ್ತೊಂದು ಬಾರಿ ಭೂಮಿಯನ್ನು ಸುತ್ತಿ, ಕ್ಷತ್ರಿಯರಹಿತವನ್ನಾಗಿ ಮಾಡಿದನು.
ಯಃ ಕ್ಷತ್ರಿಯಪರಾಮೃಷ್ಟೇ ವತ್ಸೇ ಪಿತರಿ ಚುಕ್ರುಧೇ |
ತತೋಽವಧೀತ್ ಕಾರ್ತವೀರ್ಯಮಜಿತಂ ಸಮರೇ ಪರೈಃ ॥ 5 ॥
ಅವನು ಕಾಮಧೇನು ವತ್ಸವೂ ತನ್ನ ತಂದೆಯಾದ ಜಮದಗ್ನಿಯೂ ಕ್ಷತ್ರಿಯರಿಂದ ಕೈ ಮಾಡಲ್ಪಡುತಿತರಲು ಕೋಪಗೊಂಡು ಯುದ್ಧದಲ್ಲಿ ಅಜೇಯನಾಗಿದ್ದ ಕಾರ್ತವೀರ್ಯನನ್ನು ಕೊಂದನು.
ಕ್ಷತ್ರಿಯಾಣಾಂ ಚತುಃಷಷ್ಟಿಮ್ ಅಯುತಾನ್ಯರಿಸಂಘಹಾ |
ಸರಸ್ವತ್ಯಾಂ ಸಮೇತಾನಿ ಏಕೇನ ಧನುಷಾಽವಧೀತ್ ॥ 6 ॥
ಶತ್ರುಸೂದನನಾದ ಅವನು ಸರಸ್ವತೀನದಿಯ ಸಮೀಪದಲ್ಲಿ ಒಟ್ಟಿಗೆ ಸೇರಿದ ಅರವತ್ನಾಲ್ಕು ದಶಸಹಸ್ರ ಕ್ಷತ್ರಿಯರನ್ನು ಒಂದೇ ಧನುಸ್ಸಿನಿಂದ ಸಂಹರಿಸಿದನು.
ಬ್ರಹ್ಮದ್ವಿಷಾಂ ವಧೇ ಯಸ್ಮಿನ್ ಸರಾಷ್ಟ್ರಾಣಿ ಚತುರ್ದಶ |
ಪುನರನ್ಯಾನಿ ಜಗ್ರಾಹ ಕುಠಾರೇಣ ಜಘಾನ ಹ ॥ 7 ॥
ಬ್ರಹ್ಮದ್ವೇಷಿಗಳ ವಧೆಯನ್ನು ಮಾಡಲು ಅವನು ಮೊದಲು ಹದಿನಾಲ್ಕು ರಾಷ್ಟ್ರಗಳನ್ನು ಆರಿಸಿ, ಪುನಃ ಬೇರೆ ದೇಶಗಳನ್ನು ಆರಿಸಿ, ತನ್ನ ಕುಠಾರದಿಂದ (ಕೊಡಲಿ) ಕ್ಷತ್ರಿಯರನ್ನು ಸಂಹರಿಸಿದನು.
ಸಹಸ್ರಂ ಮುಸಲೇನಾಘ್ನತ್ ಸಹಸ್ರಮಸಿನಾಽವಧೀತ್ |
ಉದ್ಬಂಧಿತಂ ಸಹಸ್ರಂ ಚ ಸಹಸ್ರಮುದಕೇ ಕೃತಮ್ ॥ 8 ॥
ಸಹಸ್ರ ಕ್ಷತ್ರಿಯರನ್ನು ಮುಸಲದಿಂದಲೂ (ಒನಕೆ), ಸಹಸ್ರ ಕ್ಷತ್ರಿಯರನ್ನು ಖಡ್ಗದಿಂದಲೂ, ಸಹಸ್ರ ಕ್ಷತ್ರಿಯರನ್ನು ನೇಣು ಹಾಕುವುದರಿಂದಲೂ, ಸಹಸ್ರ ಕ್ಷತ್ರಿಯರನ್ನು ನೀರಿನಲ್ಲಿ ಮುಳುಗಿಸುವುದರಿಂದಲೂ ಸಂಹರಿಸಿದನು.
ದಂತಾನ್ ಭಂಕ್ತ್ವಾ ಸಹಸ್ರಂ ಚ ಭಿನ್ನಕರ್ಣಾಂಸ್ತಥಾಽಕರೋತ್ |
ತತಃ ಸಪ್ತಸಹಸ್ರಾಣಿ ಕಟಧೂಮಮಪಾಯಯತ್ |
ಶಿಷ್ಟಾನ್ ಬದ್ಧ್ವಾ ಚ ಹತ್ವಾ ಚ ತೇಷಾಂ ಮೂರ್ಧ್ನಾಽಭಿಷಿಚ್ಯ ಚ ॥9॥
ಸಹಸ್ರ ಕ್ಷತ್ರಿಯರನ್ನು ಹಲ್ಲುಗಳನ್ನು ಮುರಿದು, ಕರ್ಣಗಳನ್ನು ಭೇದಿಸಿ, ಅನಂತರ ಸಪ್ತ ಸಹಸ್ರ ಕ್ಷತ್ರಿಯರನ್ನು ಕಟತೃಣಧೂಮವನ್ನು ಪಾನ ಮಾಡುವಂತೆ ಮಾಡಿ ಸಂಹರಿಸಿದನು. ಉಳಿದವರನ್ನು ಬಂಧಿಸಿ ಸಂಹರಿಸಿ, ಅವರ ಶಿರಃಕಪಾಲಗಳಿಂದ ಪಿತೃಗಳಿಗೆ ತರ್ಪಣವನ್ನು ನೀಡಿದನು.
ಗುಣಾವತೀಮುತ್ತರೇಣ ಪಾರ್ಥಿವಾಂ ದಕ್ಷಿಣೇನ ಚ |
ಶೇರತೇ ಶತಸಾಹಸ್ರಾ ಹೈಹಯಾಃ ಸಮರೇ ಹತಾಃ ॥ 10 ॥
ಗುಣವತೀ ನದಿಯ ಉತ್ತರಭಾಗದಲ್ಲಿ, ಪಾರ್ಥಿವನದಿಯ ದಕ್ಷಿಣ ಭಾಗದಲ್ಲಿ ಹತ್ತು ಸಹಸ್ರ ಹೈಹಯರನ್ನು ಸಂಹರಿಸಿ ಮಲಗಿಸಿದನು.
ಪಿತುರ್ವಧಾಮರ್ಷಿತೇನ ಜಾಮದಗ್ನ್ಯೇನ ಧೀಮತಾ |

ಸಗಜಾಃ ಸರಥಾ ವೀರಾ ರಾಮೇಣೈಕೇನ ನಿರ್ಜಿತಾಃ ॥ 11 ॥
ತಂದೆಯ ವಧೆಯಿಂದ ಕೋಪಗೊಂಡ ಮೇಧಾವಿಯಾದ ಪರಶುರಾಮನು ಒಬ್ಬನೇ ಗಜ-ರಥ ಸಹಿತರಾದ ಅನೇಕ ವೀರರನ್ನು ಜಯಿಸಿದನು.
ರಾಮ ರಾಮೇತ್ಯಭಿಕ್ರುಷ್ಟೋ ಬ್ರಾಹ್ಮಣೈಃ ಕ್ಷತ್ರಿಯಾರ್ದಿತೈಃ |
ನಿಜಘ್ನೇ ಶತಸಾಹಸ್ರಾನ್ ರಾಮಃ ಪರಶುನಾ ತದಾ ॥ 12 ॥
ಕ್ಷತ್ರಿಯರ ಉಪದ್ರವಕ್ಕೆ ಒಳಗಾದ ಬ್ರಾಹ್ಮಣರು `ರಾಮ-ರಾಮ' ಎಂದು ಕಿರುಚಿದ ತಕ್ಷಣ ಪರಶುರಾಮನು ಹೋಗಿ ತನ್ನ ಪರಶುವಿನಿಂದ ಹತ್ತು ಸಹಸ್ರ ಕ್ಷತ್ರಿಯರನ್ನು ಕೊಂದನು.
ನಾಮೃಷ್ಯತ ವಚಸ್ತತ್ರಹೀತ್ಯಾರ್ತೈರ್ಭೃಶಮುದೀರಿತಮ್ |
ಭೃಗೋ ರಾಮಾಭಿಧಾವೇತಿ ಯದಾऽऽಕ್ರಂದನ್ ದ್ವಿಜೋತ್ತಮಾಃ ॥13॥
ಬ್ರಾಹ್ಮಣೋತ್ತಮರು ಕ್ಷತ್ರಿಯರ ಉಪದ್ರವಕ್ಕೆ ಒಳಗಾಗಿ `ಭೃಗುವಂಶೋತ್ಪನ್ನನಾದ ಪರಶುರಾಮನೇ ಓಡಿ ಬಾ' ಎಂದು ಆರ್ತನಾದವನ್ನು ಮಾಡಿದಾಗ ಆರ್ತರ ತ್ರಾಹಿ ಎಂಬ ಮಾತುಗಳನ್ನು ಕೇಳಿ ಅವನಿಗೆ ತಡೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.
ತತಃ ಕಾಶ್ಮೀರದರದಾನ್ ಕುಂತಿಕ್ಷುದ್ರಕಮಾಲವಾನ್ |
ಅಂಗವಂಗಕಳಿಂಗೇಂದ್ರಾನ್ ವಿದೇಹಾಂಸ್ತಾಮ್ರಲಿಪ್ತಕಾನ್ ॥ 14 ॥
ಆಹಾವಾಹಾನ್ ವೀತಿಹೋತ್ರಾನ್ ತ್ರಿಗರ್ತಾನ್ ಮಾರ್ತಿಕಾಯನಾನ್ |
ಶಿಬೀನನ್ಯಾಂಶ್ಚ ರಾಜೇಂದ್ರ ದೇಶೇ ದೇಶೇ ಸಹಸ್ರಶಃ |
ನಿಜಘಾನ ಶಿತೈರ್ಬಾಣೈರ್ಜಾಮದಗ್ನ್ಯಃ ಪ್ರತಾಪವಾನ್ ॥ 15 ॥
ಎಲೈ ರಾಜೇಂದ್ರನೇ, ಅನಂತರ ಪ್ರತಾಪಶಾಲಿಯಾದ ಪರಶುರಾಮನು ಕಾಶ್ಮೀರರನ್ನೂ, ದರದರನೂಹನ, ಕುಂತಿಗಳನ್ನೂ, ಕ್ಷುದ್ರಕ-ಮಾಲವರನ್ನೂ, ಅಂಗ-ವಂಗ-ಕಳಿಂಗ ಕ್ಷತ್ರಿಯರನ್ನೂ, ವಿದೇಹರನ್ನೂ, ತಾಮ್ರಲಿಪ್ತಕರನ್ನೂ, ಆಹಾವಾಹರನ್ನೂ, ವೀತಿಹೋತ್ರರನ್ನೂ, ತ್ರಿಗರ್ತರನ್ನೂ, ಮಾರ್ತಿಕಾಯನರನೂಹನ, ಶಿಬಿಗಳನ್ನೂ ಮತ್ತು ಉಳಿದವರನ್ನೂ ದೇಶ-ದೇಶದಲ್ಲಿ ತನ್ನ ಹರಿತವಾದ ಬಾಣಗಳಿಂದ ಸಹಸ್ರ ಸಂಖ್ಯೆಯಲ್ಲಿ ಸಂಹರಿಸಿದನು.
ಕೋಟೀಶತಸಹಸ್ರಾಣಿ ಕ್ಷತ್ರಿಯಾಣಾಮಥಾವಧೀತ್ ॥ 16 ॥
ಇಂದ್ರಗೋಪಕವರ್ಣಸ್ಯ ಬಂಧುಜೀವನಿಭಸ್ಯ ಚ |
ರುಧಿರಸ್ಯ ಪರೀವಾಹೈಃ ಪೂರಯಿತ್ವಾ ಸರಾಂಸಿ ಚ ॥ 17 ॥
ಅವನು ಶತಸಹಸ್ರ ಕೋಟಿ ಕ್ಷತ್ರಿಯರನ್ನು ಸಂಹಾರ ಮಾಡಿ, ಇಂದ್ರಗೋಪ ಹುಳುವಿನಂತೆ, ಬಂಧೂಕ ಪುಷ್ಪದಂತೆ ಕೆಂಪಾದ ರಕ್ತದ ಧಾರೆಗಳಿಂದ ಸರೋವರಗಳನ್ನು ತುಂಬಿದನು.
ಸರ್ವಾನಷ್ಟಾದಶ ದ್ವೀಪಾನ್ ವಶಮಾನೀಯ ಭಾರ್ಗವಃ |
ಈಜೇ ಕ್ರತುಶತೈಃ ಪುಣ್ಯೈಃ ಸಮಾಪ್ತವರದಕ್ಷಿಣೈಃ ॥ 18 ॥
ಭಾರ್ಗವನಾದ ಪರಶುರಾಮನು ಎಲ್ಲಾ ಹದಿನೆಂಟು ದ್ವೀಪಗಳನ್ನೂ ವಶಪಡಿಸಿಕೊಂಡು, ಶ್ರೇಷ್ಠವಾದ, ಬಹಳ ದಕ್ಷಿಣೆಗಳಿಂದ ಕೂಡಿದ ಪವಿತ್ರವಾದ ನೂರಾರು ಯಾಗಗಳನ್ನು ಮಾಡಿದನು.
ವೇದೀಮಷ್ಟತಳೋತ್ಸೇಧಾಂ ಸೌವರ್ಣಾಂ ವಿಧಿನಿರ್ಮಿತಾಮ್ |
ಸರ್ವರತ್ನಶತೈಃ ಪೂರ್ಣಾಂ ಪತಾಕಾಧ್ವಜಮಾಲಿನೀಮ್ ॥ 19 ॥
ಎಂಟು ಹಸ್ತತಳದಷ್ಟು ಎತ್ತರವಾದ, ಸುವರ್ಣಮಯವಾದ ವೇದಿಯನ್ನು ಶಾಸೊತ್ರೀಕ್ತ ರೀತಿಯಲ್ಲಿ ನಿರ್ಮಿಸಿ, ಅದನ್ನು ನೂರಾರು ರತ್ನಗಳಿಂದ ಪೂರ್ಣವಾಗಿ ತುಂಬಿ, ಪತಾಕೆ-ಧ್ವಜ ಮತ್ತು ಮಾಲೆಗಳಿಂದ ಅಲಂಕರಿಸಿ (ಕಾಶ್ಯಪರಿಗೆ ಕೊಟ್ಟನು).
ಗ್ರಾಮ್ಯಾರಣ್ಯೈಃ ಪಶುಗಣೈಃ ಸಂಪೂರ್ಣಾಂ ಚ ಮಹೀಮಿಮಾಮ್ |
ಶತಂ ಶತಸಹಸ್ರಾಣಿ ದ್ವಿಪೇಂದ್ರಾನ್ ಹೇಮಭೂಷಿತಾನ್ |
ರಾಮಸ್ಯ ಜಾಮದಗ್ನ್ಯಸ್ಯ ಪ್ರತಿಜಗ್ರಾಹ ಕಾಶ್ಯಪಃ ॥ 20 ॥
ಈ ಭೂಮಿಯನ್ನು ಗ್ರಾಮ್ಯ ಮತ್ತು ಅರಣ್ಯ ಪಶುಸಮೂಹದಿಂದ ಪೂರ್ಣವಾಗಿ ತುಂಬಿ, ಒಂದು ಕೋಟಿ ಶ್ರೇಷ್ಠ ಗಜಗಳನ್ನು ಸುವರ್ಣಾಲಂಕೃತಗಳನ್ನಾಗಿ ಮಾಡಿ, ಜಾಮದಗ್ನ್ಯನಾದ ಪರಶುರಾಮನು ಕಾಶ್ಯಪರಿಗೆ ನೀಡಿದನು.
ನಿರ್ದಸ್ಯುಂ ಪೃಥಿವೀಂ ಕೃತ್ವಾ ಶಿಷ್ಟೇಷ್ಟಜನವತ್ಸಲಃ |
ಕಾಶ್ಯಪಾಯ ದದೌ ರಾಮೋ ಹಯಮೇಧೇ ಮಹಾಮಖೇ ॥ 21 ॥
ಶಿಷ್ಟವತ್ಸಲನೂ ಮತ್ತು ಇಷ್ಟಜನವತ್ಸಲನೂ ಆದ ಪರಶುರಾಮನು ಈ ಭೂಮಿಯನ್ನು ದಸ್ಯುರಹಿತವನಾಿನಗಿ ಮಾಡಿ ಅಶ್ವಮೇಧ ಮಹಾಯಾಗದಲ್ಲಿ ಕಾಶ್ಯಪರಿಗೆ ದಾನವಾಗಿ ಕೊಟ್ಟನು.
ತ್ರಿಃಸಪ್ತಕೃತ್ವಃ ಪೃಥಿವೀ ಯೇನ ನಿಃಕ್ಷತ್ರಿಯಾ ಕೃತಾ |
ಇಷ್ಟ್ವಾ ಕ್ರತುಶತೈಸ್ತೈಸ್ತೈಃ ಬ್ರಾಹ್ಮಣೇಭ್ಯೋ ಹ್ಯಮಂಸತ ॥ 22 ॥
ಅವನು ಇಪ್ಪತ್ತೊಂದು ಬಾರಿ ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿ, ನೂರಾರು ಯಾಗಗಳನ್ನು ಮಾಡಿ ಎಲ್ಲವನ್ನೂ ಬ್ರಾಹ್ಮಣರಿಗೆ ವಶವನ್ನಾಗಿ ಮಾಡಿದನು.
ಸಪ್ತದ್ವೀಪಾಂ ವಸುಮತೀಂ ಮಾರೀಚೋ ಗೃಹ್ಯ ತು ದ್ವಿಜಃ |
ರಾಮಂ ಪ್ರೋವಾಚ ನಿರ್ಗಚ್ಛ ವಸುಧಾತೋ ಮಮಾಜ್ಞಯಾ ॥ 23 ॥
ಮರೀಚಿಗಳ ಪುತ್ರರಾದ ಕಶ್ಯಪರು ಸಪ್ತದ್ವೀಪವತಿಯಾದ ಭೂಮಿಯನ್ನು ದಾನವನ್ನಾಗಿ ತೆಗೆದುಕೊಂಡು `ಎಲೈ ಪರಶುರಾಮನೇ, ನನ್ನ ಅಪ್ಪಣೆಯಂತೆ ನನ್ನ ಭೂಮಿಯಿಂದ ಹೊರಗೆ ಹೋಗು' ಎಂದು ಹೇಳಿದರು.

ಸ ಕಾಶ್ಯಪಸ್ಯ ವಚನಾದ್ ಉತ್ಸಾರ್ಯ ಸರಿತಾಂ ಪತಿಮ್ |
ಇಷುಣೇಷುಮತಾಂ ಶ್ರೇಷ್ಠೋ ಮಹೇಂದ್ರಗಿರಿಮಾವಿಶತ್ ॥ 24 ॥
ಬಾಣಧಾರಿಗಳಲ್ಲಿ ಶ್ರೇಷ್ಠನಾದ ಅವನು ಒಂದು ಬಾಣದಿಂದ ಸಮುದ್ರವನ್ನು ದೂರಕ್ಕೆ ತಳ್ಳಿ, ಅನಂತರ ಮಹೇಂದ್ರ ಪರ್ವತದಲ್ಲಿ ವಾಸವನ್ನು ಮಾಡಿದನು.
ಬ್ರಾಹ್ಮಣೋ ಬ್ರಾಹ್ಮಣಶ್ರೇಷ್ಠಃ ಕುರ್ವನ್ ಬ್ರಾಹ್ಮಣಶಾಸನಮ್ |
ಅಧ್ಯಾವಸದ್ ಗಿರಿಶ್ರೇಷ್ಠಂ ಮಹೇಂದ್ರಮಕುತೋಭಯಃ ॥ 25 ॥
ಸ್ವತಃ ಬ್ರಾಹ್ಮಣನೂ, ಬ್ರಾಹ್ಮಣಶ್ರೇಷ್ಠನೂ ಆದ, ಬ್ರಾಹ್ಮಣರ ಅಪ್ಪಣೆಯನ್ನು ಪಾಲಿಸುವ ಅವನು ಶ್ರೇಷ್ಠವಾದ ಮಹೇಂದ್ರಪರ್ವತದಲ್ಲಿ ನಿರ್ಭಯವಾಗಿ ವಾಸವನ್ನು ಮಾಡಿದನು.
ಏವಂ ಗುಣಶತೈರ್ಯುಕ್ತೋ ಭೃಗೂಣಾಂ ಕೀರ್ತಿವರ್ಧನಃ |
ಜಾಮದಗ್ನ್ಯೋ ಹ್ಯತಿಯಶಾಃ ಚತುರ್ಭದ್ರತರಸ್ತ್ವಯಾ ॥ 26 ॥
ಹೀಗೆ ನೂರಾರು ಗುಣಗಳಿಂದ ಕೂಡಿದ, ಭೃಗುವಂಶದ ಕೀರ್ತಿವರ್ಧನನಾದ, ಜಮದಗ್ನಿ ಪುತ್ರನಾದ ಪರಶುರಾಮನು ಬಹಳ ಕೀರ್ತಿವಂತನಾಗಿ, ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠನಾಗಿದ್ದನು.
ಪುತ್ರಾತ್ ಪುಣ್ಯತರಸ್ತುಭ್ಯಮ್ ಮಾ ಪುತ್ರಮನುತಪ್ಯಥಾಃ |
ಅಯಜ್ವಾನಮದಕ್ಷಿಣ್ಯಮಧಿಚೈತ್ಯೇತ್ಯುದಾಹರತ್ ॥ 27 ॥
ಅವನ ಪುತ್ರನೂ ಸಹ ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದವನು. ಹೀಗಿರುವಾಗ ಯಾಗವನ್ನು ಮಾಡದ, ದಾನವನ್ನು ಕೊಡದ ನಿನ್ನ ಪುತ್ರನ ವಿಷಯದಲ್ಲಿ ಸಂತಾಪವನ್ನು ಪಡಬೇಡ ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಸಪ್ತಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಷಟ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆಂಟನೆಯ ಅಧ್ಯಾಯ
ಯುಧಿಷ್ಠಿರನನ್ನು ಸಮಾಧಾನಗೊಳಿಸಿ ವ್ಯಾಸರ ಅಂತರ್ಧಾನ
ವ್ಯಾಸಃ
ಪುಣ್ಯಂ ಯಶಸ್ಯಮಾಖ್ಯಾನಂ ಶ್ರುತ್ವಾ ಷೋಡಶರಾಜಕಮ್ |
ಅವ್ಯಾಹರನ್ ನರಪತಿಃ ತೂಷ್ಣೀಮಾಸೀತ್ ಸ ಸೃಂಜಯಃ ॥ 1 ॥
ವ್ಯಾಸರು ಪುಣ್ಯಪ್ರದವೂ, ಕೀರ್ತಿಪ್ರದವೂ ಆದ ಷೋಡಶರಾಜರ ಕಥೆಗಳನ್ನು ಕೇಳಿ ರಾಜನಾದ ಸೃಂಜಯನು ಏನೂ ಮಾತನಾಡದೆ ಸುಮ್ಮನಿದ್ದನು.
ತಮಬ್ರವೀತ್ ತದಾ ದೀನಂ ನಾರದೋ ಭಗವಾನೃಷಿಃ |
ಕಚ್ಚಿನ್ಮಯಾ ವ್ಯಾಹೃತಂ ಯದ್ ಹೃದಯೇ ತತ್ ಸ್ಥಿತಂ ತವ |
ಆಹೋಸ್ವಿದಂತತೋ ನಷ್ಟಂ ಶ್ರಾದ್ಧಂ ಶೂದ್ರಪತಾವಿವ ॥ 2 ॥
ಆಗ ದೀನನಾದ ಅವನನ್ನು ಕುರಿತು ಪೂಜ್ಯರಾದ ನಾರದ ಋಷಿಗಳು ನಾನು ಮಾತನಾಡಿದುದೆಲ್ಲವೂ ನಿನ್ನ ಮನಸ್ಸಿನಲ್ಲಿ ಸ್ಥಿರವಾಗಿ ಉಳಿದಿದೆಯೇ? ಅಥವಾ ಶೂದ್ರಸ್ತ್ರೀ ಪತಿಗೆ ಕೊಟ್ಟ ಶ್ರಾದ್ಧದಾನದಂತೆ ಎಲ್ಲವೂ ನಷ್ಟವಾಗಿದೆಯೇ ಎಂದು ಕೇಳಿದರು.
ಸ ಏವಮುಕ್ತಃ ಪ್ರತ್ಯಾಹ ಪ್ರಾಂಜಲಿಃ ಸೃಂಜಯಸ್ತದಾ ॥ 3 ॥
ಪುತ್ರಶೋಕಾಪಹಂ ಶ್ರುತ್ವಾ ಧನ್ಯಮಾಖ್ಯಾನಮುತ್ತಮಮ್ |
ರಾಜರ್ಷೀಣಾಂ ಪುರಾಣಾನಾಂ ಯಜ್ವನಾಂ ದಕ್ಷಿಣಾವತಾಮ್ ॥ 4 ॥
ವಿಸ್ಮಯೇನ ಹತೇ ಶೋಕೇ ತಮಸೀವಾರ್ಕತೇಜಸಾ |
ವಿಪಾಪ್ಮಾಽಸ್ಮ್ಯನು ಮಾಂ ಶಾಧಿ ಯದಾತ್ಥ ಕರವಾಣಿ ತತ್ ॥ 5 ॥
ಹೀಗೆ ಕೇಳಲ್ಪಟ್ಟ ಸೃಂಜಯನು, ಆಗ ಕೈಗಳನ್ನು ಮುಗಿದು ಪ್ರಾಚೀನರಾದ, ಯಜ್ಞಶೀಲರಾದ, ದಕ್ಷಿಣಾಶೂರರಾದ ರಾಜರ ಶ್ರೇಷ್ಠವಾದ, ಧನ್ಯವಾದ, ಪುತ್ರಶೋಕವನ್ನು ನಿವಾರಿಸುವ ಆಖ್ಯಾನಗಳನ್ನು ಕೇಳಿ, ಸೂರ್ಯನ ತೇಜಸ್ಸಿನಿಂದ ಅಂಧಕಾರವು ನಾಶವಾಗುವಂತೆ ವಿಸ್ಮಯದಿಂದ ನನ್ನ ಶೋಕವು ನಾಶವನ್ನು ಹೊಂದಿದೆ. ನಾನು ಪಾಪರಹಿತನಾಗಿದ್ದೇನೆ. ನನಗೆ ಅಪ್ಪಣೆಯನ್ನು ಕೊಡಿ. ನೀವು ಹೇಳಿದಂತೆ ನಾನು ಮಾಡುವೆನು ಎಂದು ಹೇಳಿದನು.
ನಾರದಃ
ದಿಷ್ಟ್ಯಾಽಪಹತಶೋಕಸ್ತ್ವಂ ವೃಣೀಷ್ವ ಯದಿಹೇಚ್ಛಸಿ |
ತತ್ ತೇ ಸಂಪತ್ಸ್ಯತೇ ಸರ್ವಂ ನ ಮೃಷಾವಾದಿನೋ ವಯಮ್ ॥6॥
ನಾರದರು ದೇವರ ದಯದಿಂದ ನೀನು ಶೋಕವನ್ನು ಕಳೆದುಕೊಂಡಿದ್ದೀಯೆ. ನಿನಗೆ ಬೇಕಾದ ವರವನ್ನು ಕೇಳು. ಅವೆಲ್ಲವೂ ನಿನಗೆ ನೆರವೇರುವುದು. ನಾವು ಸುಳ್ಳು ಮಾತಾಡುವವರಲ್ಲ.
ಸೃಂಜಯಃ
ಪಾವಿತೋಽಹಮನೇನೈವ ಪ್ರಸನ್ನೋ ಯದ್ ಭವಾನ್ ಮಮ |
ಪ್ರಸನ್ನೋ ಯಸ್ಯ ಭಗವಾನ್ ನ ತಸ್ಯಾಸ್ತೀಹ ದುರ್ಲಭಮ್ ॥ 7 ॥

ಸೃಂಜಯ ನೀವು ನನ್ನ ಮೇಲೆ ಪ್ರಸನ್ನರಾಗಿದ್ದರೆ ನಾನು ಅದರಿಂದಲೇ ಪವಿತ್ರನಾಗಿದ್ದೇನೆ. ಪೂಜ್ಯರಾದ ಭಗವತ್ಸ್ವರೂಪರಾದ ತಾವು ಪ್ರಸನ್ನರಾದ ಮೇಲೆ ಮನುಷ್ಯನಿಗೆ ದುರ್ಲಭವಾದುದು ಯಾವುದಿದೆ?
ನಾರದಃ
ಪುನರ್ದದಾಮಿ ತೇ ಪುತ್ರಂ ದಸ್ಯುಭಿರ್ನಿಹತಂ ವೃಥಾ |
ಉದ್ಧೃತ್ಯ ನರಕಾತ್ ಕಷ್ಟಾತ್ ಪಶುವತ್ ಪ್ರೋಕ್ಷಿತಂ ಯಥಾ ॥ 8 ॥
ನಾರದರು ದಸ್ಯುಗಳಿಂದ ವ್ಯರ್ಥವಾಗಿ ಹತನಾದ ನಿನ್ನ ಪುತ್ರನನ್ನು ನರಕ ಕಷ್ಟದಿಂದ ಮೇಲಕ್ಕೆ ತಂದು, ಪ್ರೋಕ್ಷಿತವಾದ ಪಶುವಿನಂತೆ ನಿನಗೆ ಪುನಃ ಕೊಡುತ್ತೇನೆ.
ವ್ಯಾಸಃ
ಪ್ರಾದುರಾಸೀತ್ ತತಃ ಪುತ್ರಃ ಸೃಂಜಯಸ್ಯಾದ್ಭುತಪ್ರಭಃ |
ದತ್ತಃ ಪ್ರಸನ್ನೇನ ತದಾ ಋಷಿಣಾ ದಿವ್ಯವರ್ಚಸಾ ॥ 9 ॥
ವ್ಯಾಸರು ಆಗ ಪ್ರಸನ್ನರಾದ, ದಿವ್ಯವರ್ಚಸ್ಸುಳ್ಳ ಋಷಿಗಳಿಂದ ಕೊಡಲ್ಪಟ್ಟ ಸೃಂಜಯನ ಪುತ್ರನು ಅದ್ಭುತ ಕಾಂತಿಯುಳ್ಳವನಾಗಿ ಅಲ್ಲಿ ಪ್ರಾದುರ್ಭೂತನಾದನು.
ತತಃ ಸಂಗಮ್ಯ ಪುತ್ರೇಣ ಪ್ರೀತಿಮಾನಭವನ್ನೃಪಃ |
ಈಜೇ ಚ ಕ್ರತುಭಿರ್ಮುಖ್ಯೈಃ ಸಮಾಪ್ತವರದಕ್ಷಿಣೈಃ ॥ 10 ॥
ಅನಂತರ ಸೃಂಜಯನು ತನ್ನ ಪುತ್ರನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ಸಂತೋಷಗೊಂಡನು ಮತ್ತು ಪೂರ್ಣವಾದ ದಕ್ಷಿಣೆಗಳನ್ನು ಹೊಂದಿದ ಶ್ರೇಷ್ಠವಾದ ಯಾಗವನ್ನು ಮಾಡಿದನು.
ಅಕೃತಾಸ್ತ್ರಶ್ಚ ಹೀನಶ್ಚ ನಚ ಸನ್ನಾಹಕೋವಿದಃ |
ಅಯಜ್ವಾ ಚಾನಪತ್ಯಶ್ಚ ತತೋಽಪಿ ತನಯಃ ಪುನಃ ॥ 11 ॥
ಶೂರೋ ವೀರಃ ಕೃತಾಸ್ತ್ರಶ್ಚ ಪ್ರಮಥ್ಯಾರೀನ್ ಸಹಸ್ರಶಃ |
ಅಭಿಮನ್ಯುರ್ಗತಃ ಸ್ವರ್ಗಂ ಸಂಗ್ರಾಮೇಽಭಿಮುಖೋ ಹತಃ ॥ 12 ॥
ಅವನ ಪುತ್ರನಾದರೂ ಶಸ್ತ್ರಾಭ್ಯಾಸ ಮಾಡದವನು, ಹೀನನಾದವನು, ಯುದ್ಧವಿಶಾರದನಲ್ಲದವನು, ಯಾಗವನ್ನು ಮಾಡದವನು ಮತ್ತು ಪುತ್ರರಹಿತನಾದವನು. ಅವನಿಗಿಂತಲೂ ನಿನ್ನ ಪುತ್ರನಾದ ಅಭಿಮನ್ಯುವು ಶೂರನೂ, ವೀರನೂ ಮತ್ತು ಅಸ್ತ್ರಪಾರಂಗತನೂ ಆದವನು. ಅಭಿಮನ್ಯುವು ಸಹಸ್ರ ಸಂಖ್ಯೆಯಲ್ಲಿ ಶತ್ರುಗಳನ್ನು ಮರ್ದಿಸಿ, ಯುದ್ಧದಲ್ಲಿ ಶತ್ರುಗಳಿಗೆ ಅಭಿಮುಖವಾಗಿ ನಿಂತು ಹತನಾಗಿ ಸ್ವರ್ಗಕ್ಕೆ ಹೋಗಿದ್ದಾನೆ.
ಬ್ರಹ್ಮಚರ್ಯೇಣ ಯಾಲ್ಲೋಕಾನ್ ಪ್ರಜಯಾ ಚ ಶ್ರುತೇನ ಚ |
ಇಷ್ಟೈಶ್ಚ ಕ್ರತುಭಿರ್ಯಾಂತಿ ತಾನ್ ಸೌಭದ್ರೋ ಗತೋಽಕ್ಷಯಾನ್ ॥13॥
ಬ್ರಹ್ಮಚರ್ಯದಿಂದಲೂ, ಸತ್ಪ್ರಜೆಗಳಿಂದಲೂ, ವಿದ್ಯೆಯಿಂದಲೂ, ಇಷ್ಟಾಪೂರ್ತಗಳಿಂದಲೂ ಮತ್ತು ಯಾಗಗಳಿಂದಲೂ ಯಾವ ಲೋಕಗಳನ್ನು ಹೊಂದುತ್ತಾರೆಯೋ ಅಭಿಮನ್ಯುವು ಅಂತಹ ಅಕ್ಷಯವಾದ ಲೋಕವನ್ನು ಪಡೆದಿದ್ದಾನೆ.
ವಿದ್ವಾಂಸಃ ಕರ್ಮಭಿಃ ಪುಣ್ಯೈಃ ಲಭಂತೇ ಸ್ವರ್ಗಮುತ್ತಮಮ್ |
ನತು ಸ್ವರ್ಗಾದಯಂ ಲೋಕಃ ಕಾಮ್ಯತೇ ಸ್ವರ್ಗವಾಸಿಭಿಃ ॥ 14 ॥
ವಿದ್ವಾಂಸರು ಪುಣ್ಯಕರ್ಮಗಳನ್ನು ಮಾಡಿ ಶ್ರೇಷ್ಠವಾದ ಸ್ವರ್ಗವನ್ನು ಪಡೆಯುತ್ತಾರೆ. ಸ್ವರ್ಗವಾಸಿಯಾದವನು ಸ್ವರ್ಗದಲ್ಲಿದ್ದು, ಸ್ವರ್ಗಕ್ಕಿಂತಲೂ ಶ್ರೇಷ್ಠವಾದುದೆಂದು ಈ ಲೋಕವನ್ನು ಬಯಸುವುದಿಲ್ಲ.
ತಸ್ಮಾತ್ ಸ್ವರ್ಗಂ ಗತೋ ರಾಜನ್ನರ್ಜುನಸ್ಯ ಸುತೋ ವಶೀ |
ನ ಚೇಹಾನಯಿತುಂ ಶಕ್ಯಃ ಕಿಂಚಿದಪ್ರಾಪ್ಯಮೀಹತಾಮ್ ॥ 15 ॥
ಅಸಾಧ್ಯವಾದ ಕೆಲಸವನ್ನು ಮಾಡಲು ಪ್ರಯತ್ನಪಟ್ಟರೆ ಅದು ಸಾಧ್ಯವಾಗುವುದಿಲ್ಲ. ಸೃಂಜಯಪುತ್ರನು ನರಕದಲ್ಲಿ ಬಿದ್ದುದರಿಂದ ನಾರದರಿಂದ ಕರೆತರಲ್ಪಟ್ಟನು. ಅಭಿಮನ್ಯುವು ಸ್ವರ್ಗಸುಖವನ್ನು ಅನುಭವಿಸುತ್ತಿರುವುದರಿಂದ ನನಗೆ ಸಾಮರ್ಥ್ಯವಿದ್ದರೂ ಅವನನ್ನು ಇಲ್ಲಿಗೆ ಕರೆತರುವುದು ಯೋಗ್ಯವಲ್ಲ.
ಯಾಂ ಯೋಗಿನೋ ಧ್ಯಾನವಿವಿಕ್ತದರ್ಶಿನಃ
ಪ್ರಯಾಂತಿ ಯಾಂ ಚೋತ್ತಮಯಜ್ವಿನೋ ಜನಾಃ |
ತಪೋಭಿರುಗ್ರೈರನುಯಂತಿ ಯಾಂ ತಥಾ
ತಾಮಕ್ಷಯಾಂ ತೇ ತನಯೋ ಗತೋ ಗತಿಮ್ ॥ 16 ॥
ಧ್ಯಾನಾಸಕ್ತರಾಗಿ ವಿವಿಕ್ತ ಜ್ಞಾನವನ್ನು ಹೊಂದಿದ ಯೋಗಿಗಳು ಯಾವ ಗತಿಯನ್ನು ಪಡೆಯುತ್ತಾರೆಯೋ, ಶ್ರೇಷ್ಠವಾದ ಯಾಗವನ್ನು ಮಾಡಿದವರು ಯಾವ ಗತಿಯನ್ನು ಪಡೆಯುತ್ತಾರೆಯೋ, ಉಗ್ರವಾದ ತಪಸ್ಸನ್ನು ಆಚರಿಸಿದವರು ಯಾವ ಗತಿಯನ್ನು ಪಡೆಯುತ್ತಾರೆಯೋ ಅಂತಹ ಅಕ್ಷಯವಾದ ಗತಿಯನ್ನು ನಿನ್ನ ಪುತ್ರನಾದ ಅಭಿಮನ್ಯುವು ಪಡೆದಿದ್ದಾನೆ.
ಏವಂ ಜ್ಞಾತ್ವಾ ಸ್ಥಿರೋ ಭೂತ್ವಾ ಮಾ ಶುಚೋ ಧೈರ್ಯಮಾಪ್ನುಹಿ |
ಜೀವನ್ ಹಿ ಪುರುಷಃ ಶೋಚ್ಯೋ ನ ತು ಸ್ವರ್ಗಂ ಗತೋಽನಘ ॥17॥
ಎಲೈ ಅನಘನೇ, ಹೀಗೆ ತಿಳಿದು ಸ್ಥೈರ್ಯವನ್ನು ಹೊಂದಿ, ಶೋಕವನ್ನು ಬಿಟ್ಟು ಧೈರ್ಯವನ್ನು ತಂದುಕೊ. ಜೀವಿಸಿರುವ ಪುರುಷರ ವಿಷಯದಲ್ಲಿ (ಅವನು ಕಷ್ಟಕ್ಕೆ ಸಿಲುಕಿದರೆ) ಶೋಕವನ್ನು ಪಡಬೇಕು, ಸ್ವರ್ಗವನ್ನು ಹೊಂದಿದವನ ವಿಷಯದಲ್ಲಿ ಅಲ್ಲ.
ಸ ಶೋಚಾನೋ ಹ್ಯಘಾಯುಶ್ಚ ಅಘಮೇವಾನುವರ್ತತೇ |
ತಸ್ಮಾಚ್ಛೋಕಂ ಪರಿತ್ಯಜ್ಯ ಶ್ರೇಯಸಿ ಪ್ರಯತೇದ್ ಬುಧಃ ॥ 18 ॥

ಶೋಕವನ್ನು ಪಡುವವನು ವ್ಯರ್ಥವಾದ ಮತ್ತು ಪಾಪಕರವಾದ ಆಯುಸ್ಸುಳ್ಳವನಾಗಿ ಪಾಪವನ್ನೇ ಅಭಿವೃದ್ಧಿಪಡಿಸಿಕೊಳ್ಳುತ್ತಾನೆ. ಆದ್ದರಿಂದ ವಿವೇಕಿಯಾದವನು ಶೋಕವನ್ನು ಬಿಟ್ಟು ಶ್ರೇಯಸ್ಸಾಧನದಲ್ಲಿ ತೊಡಗಬೇಕು.
ಪ್ರಹರ್ಷಂ ಪ್ರೀತಿಮಾನಂದಂ ಸುಖಮುತ್ಸಿಕ್ತಚಿತ್ತತಾಮ್ |
ಏತದಾಹುರ್ಬುಧಾಃ ಶೌಚಮಶೌಚಂ ಶೋಕ ಉಚ್ಯತೇ ॥ 19 ॥
ಒಳ್ಳೆಯ ಹರ್ಷ, ಮನಸ್ಸಿನ ಪ್ರೀತಿ, ಆನಂದ, ಸುಖ, ಚಿತ್ತದ ಉನ್ನತಿ ಇವುಗಳನ್ನು ಬುಧರು ಶೌಚವೆಂದು ಕರೆಯುತ್ತಾರೆ. ಶೋಕವು ಅಶೌಚವೆನಿಸುತ್ತದೆ.
ಏವಂ ವಿದ್ವಾನ್ ಸಮುತ್ತಿಷ್ಠ ಸುಮನಾ ಭವ ಮಾ ಶುಚಃ |
ಶ್ರುತಸ್ತೇ ಸಂಭವೋ ಮೃತ್ಯೋಃ ತಪಾಂಸ್ಯನುಪಮಾನಿ ಚ ॥ 20 ॥
ಹೀಗೆ ತಿಳಿದು ಎದ್ದೇಳು. ಒಳ್ಳೆಯ ಮನಸ್ಸುಳ್ಳವನಾಗು. ಶೋಕವನ್ನು ಪಡಬೇಡ. ಮೃತ್ಯುವಿನ ಉತ್ಪತ್ತಿತಯನ್ನೂ ಮತ್ತು ಅಸದೃಶವಾದ ತಪಸ್ಸುಗಳನ್ನೂ ನೀನು ಕೇಳಿದ್ದೀಯೆ.
ಸರ್ವಭೂತಸಮತ್ವಂ ಚ ಬ್ರಹ್ಮಣಾ ಚಾಪಿ ಚೋದಿತಮ್ |
ಸೃಂಜಯಸ್ಯ ತು ಪುತ್ರೋಽಸೌ ಮೃತಃ ಸಂಜೀವಿತಃ ಶ್ರುತಃ |
ಏವಂ ವಿದ್ವನ್ ಮಹಾರಾಜ ಮಾ ಶುಚಃ ಸಾಧಯಾಮ್ಯಹಮ್ ॥21॥
ಸರ್ವಭೂತಗಳಲ್ಲಿ ಸಮತ್ವವನ್ನು ಹೊಂದಿರಬೇಕೆಂದು ಬ್ರಹ್ಮದೇವರು ಹೇಳಿದ್ದಾರೆ. ಮೃತನಾದ ಸೃಂಜಯಪುತ್ರನಾದರೂ ನಾರದರಿಂದ ಪುನಃ ಜೀವಿಸಿರುವಂತೆ ಮಾಡಲ್ಪಟ್ಟನು. ಎಲೈ ಮಹಾರಾಜನೇ, ಹೀಗೆ ತಿಳಿದು ಶೋಕವನ್ನು ಬಿಡು. ನಾನು ಹೋಗಿ ಬರುತ್ತೇನೆ.
ಸಂಜಯಃ
ಏತಾವದುಕತ್ವ ಭಗವಾಂಸ್ತತ್ರೈವಾಂತರಧೀಯತ ॥ 22 ॥
ಸಂಜಯ ಇಷ್ಟು ಹೇಳಿ ಪೂಜ್ಯರಾದ ವ್ಯಾಸರು ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು.
ವಾಗೀಶಾನೇ ಭಗವತಿ ವ್ಯಾಸೇಽವ್ಯಕ್ತನಭಃಪ್ರಭೇ |
ಗತೇ ಮತಿಮತಾಂ ಶ್ರೇಷ್ಠೇ ಸಮಾಶ್ವಾಸ್ಯ ಯುಧಿಷ್ಠಿರಮ್ ॥ 23 ॥
ಸರ್ವೇಷಾಂ ಪಾರ್ಥಿವೇಂದ್ರಾಣಾಂ ಮಹೇಂದ್ರಪ್ರತಿಮೌಜಸಾಮ್ |
ನ್ಯಾಯಾಧಿಗತವಿತ್ತಾನಾಂ ಶ್ರುತ್ವಾ ಯಜ್ಞೇಷು ಸಂಪದಃ ॥ 24 ॥
ಸಂಪೂಜ್ಯ ಮನಸಾ ವಿದ್ವಾನ್ ನಿಃಶೋಕೋಽಭೂದ್ ಯುಧಿಷ್ಠಿರಃ |
ಪುನಶ್ಚಾಚಿಂತಯದ್ ದೀನಃ ಕಿಂಸ್ವಿದ್ ವಕ್ಷ್ಯೇ ಧನಂಜಯಮ್ ॥25॥
ವಾಚಸ್ಪತಿಗಳಾದ, ಅವ್ಯಾಕೃತಾಕಾಶ ಸದೃಶವಾದ ಜ್ಞಾನವುಳ್ಳ, ಮೇಧಾವಿಗಳಲ್ಲಿ ಶ್ರೇಷ್ಠರಾದ, ಪೂಜ್ಯರಾದ ವ್ಯಾಸರು ಯುಧಿಷ್ಠಿರನನ್ನು ಸಮಾಧಾನಗೊಳಿಸಿ ಹೊರಟು ಹೋಗುತ್ತಿರಲು, ಮಹೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ಎಲ್ಲ ರಾಜರ ಯಜ್ಞಗಳಲ್ಲಿ ನ್ಯಾಯದಿಂದ ಗಳಿಸಿದ ಸಂಪತ್ತಿನ ವೈಭವಗಳನ್ನು ಕೇಳಿ, ಅದನ್ನು ಮನಸ್ಸಿನಲ್ಲಿಯೇ ಸಮ್ಮಾನಿಸಿ, ಮೇಧಾವಿಯಾದ ಯುಧಿಷ್ಠಿರನು ಶೋಕವನ್ನು ಕಳೆದುಕೊಂಡನು. ಪುನಃ ದೀನನಾಗಿ ಅರ್ಜುನನಿಗೆ ನಾನು ಏನು ಹೇಳುವೆನು ಎಂದು ಚಿಂತಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಷಷ್ಟಿತಮೋಽಧ್ಯಾಯಃ ॥
॥ ಅಭಿಮನ್ಯುವಧಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
ದ್ರೋಣರ ಸೇನಾಪತ್ಯದಲ್ಲಿ ಮೂರನೆಯ ದಿನದ ಯುದ್ಧದ ಸಮಾಪ್ತಿ.

॥ ಸಮಾಪ್ತಮಭಿಮನ್ಯುವಧಪರ್ವ ॥
* * * * *
ಮಹಾಭಾರತ
ದ್ರೋಣಪರ್ವ
4. ಪ್ರತಿಜ್ಞಾಪರ್ವ
ಅರವತ್ತೊಂಬತ್ತನೆಯ ಅಧ್ಯಾಯ
ಅಭಿಮನ್ಯುವಿನ ವಿಷಯದಲ್ಲಿ ಅರ್ಜುನನ ಶಂಕೆ. ಯುಧಿಷ್ಠಿರನಿಂದ ಅವನ ವಧೆಯ ಪ್ರಕಾರವನ್ನು ತಿಳಿದು ಜಯದ್ರಥವಧೆಯ ಶಪಥಪೂರ್ವಕ ಪ್ರತಿಜ್ಞೆ.
ಧೃತರಾಷ್ಟ್ರಃ
ಅಥ ಸಂಶಪ್ತಕೈಃ ಸಾರ್ಧಂ ಯುಧ್ಯಮಾನೇ ಧನಂಜಯೇ |
ಅಭಿಮನ್ಯೌ ಹತೇ ಚಾಪಿ ಬಾಲೇ ಬಲವತಾಂ ವರೇ ॥ 1 ॥
ಮಹರ್ಷಿಸತ್ತಮೇ ಯಾತೇ ಯುಧಿಷ್ಠಿರಪುರೋಗಮಾಃ |
ಪಾಂಡವಾಃ ಕಿಮಥಾಽಕಾರ್ಷುಃ ಶೋಕೇನ ಹತಚೇತಸಃ ॥ 2 ॥
ಧೃತರಾಷ್ಟ್ರ, ಅರ್ಜುನನು ಸಂಶಪ್ತಕರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿರುವಾಗ, ಬಲಿಷ್ಠರಲ್ಲಿ ಶ್ರೇಷ್ಠನಾದ, ಬಾಲಕನಾದ ಅಭಿಮನ್ಯುವು ಹತನಾಗಿ, ಮಹರ್ಷಿ ಶ್ರೇಷ್ಠರಾದ ವ್ಯಾಸರು ಹೊರಟುಹೋಗುತ್ತಿರಲು, ಶೋಕದಿಂದ ಕೂಡಿದ ಮನಸ್ಸುಳ್ಳ ಯುಧಿಷ್ಠಿರ

ಮೊದಲಾದ ಪಾಂಡವರು ಅನಂತರ ಏನು ಮಾಡಿದರು?
ಕಥಂ ಸಂಶಪ್ತಕೇಭ್ಯೋ ವಾ ನಿವೃತ್ತೋ ವಾನರಧ್ವಜಃ |
ಕೇನ ವಾ ಕಥಿತಸ್ತಸ್ಯ ಪ್ರಶಾಂತಃ ಸುತಪಾವಕಃ |
ಏತನ್ಮೇ ಶಂಸ ತತ್ತ್ವೇನ ಸರ್ವಮೇವೇಹ ಸಂಜಯ ॥ 3 ॥
ಕಪಿಧ್ವಜನಾದ ಅರ್ಜುನನು ಸಂಶಪ್ತಕರಿಂದ ಹೇಗೆ ಹಿಂದಿರುಗಿದನು? ಅವನ ಪುತ್ರನೆಂಬ ಅಗ್ನಿಯು ಶಾಂತವಾಯಿತು ಎಂದು ಅವನಿಗೆ ಯಾರು ಹೇಳಿದರು? ಎಲೈ ಸಂಜಯನೇ, ಇದೆಲ್ಲವನ್ನೂ ನನಗೆ ಯಥಾರ್ಥವಾಗಿ ಹೇಳು.
ಸಂಜಯಃ
ಶೃಣು ರಾಜನ್ ಯಥಾ ತೇಭ್ಯೋ ನಿವೃತ್ತಃ ಕೃಷ್ಣಸಾರಥಿಃ |
ತತಃ ಸರ್ವಾಣಿ ಸೈನ್ಯಾನಿ ದಹನ್ ಕೃಷ್ಣಗತಿರ್ಯಥಾ ॥ 4 ॥
ಸಂಜಯ ಎಲೈ ರಾಜನೇ, ಕೃಷ್ಣ ಸಾರಥಿಯಾದ ಅರ್ಜುನನು ಅಗ್ನಿಯಂತೆ ಎಲ್ಲ ಸೈನ್ಯವನ್ನು ಸುಡುತ್ತಾ ಹೇಗೆ ಹಿಂದಿರುಗಿದನೆಂದು ಕೇಳು.
ಸಂಪ್ರಯಾತೇಽಸ್ತಮಾದಿತ್ಯೇ ಸಂಧ್ಯಾಕಾಲ ಉಪಸ್ಥಿತೇ |
ಆಯಾಂತಮಾತ್ಮಶಿಬಿರಂ ನಿಮಿತ್ತೈರಘಶಂಸಿಭಿಃ ॥ 5 ॥
ಯಚ್ಚಾಸೀನ್ಮಾನಸಂ ತಸ್ಯ ಯಚ್ಚ ಕೃಷ್ಣೇನ ಭಾಷಿತಮ್ |
ಯಥಾ ಚ ಕಥಿತಸ್ತಸ್ಯ ನಿಹತಃ ಸುತಪಾವಕಃ ॥ 6 ॥
ವಿಸ್ತರೇಣೈವ ಮೇ ಸರ್ವಂ ಬ್ರುವತಃ ಶೃಣು ಮಾರಿಷ ॥ 7 ॥
ಸೂರ್ಯನು ಅಸ್ತಪರ್ವತದ ಕಡೆಯಲ್ಲಿ ಹೋಗುತ್ತಾ, ಸಂಧ್ಯಾಕಾಲವು ಸಮೀಪಿಸುತ್ತಿರಲು, ತನ್ನ ಶಿಬಿರಕ್ಕೆ ಹಿಂದಿರುಗುವ ಅರ್ಜುನನಿಗೆ ಪಾಪ ಸೂಚಕವಾದ ಅಪಶಕುನಗಳನ್ನು ನೋಡಿ ಮನಸ್ಸಿನಲ್ಲಿ ಏನಾಯಿತು? ಕೃಷ್ಣನು ಏನು ಮಾತನಾಡಿದನು? ತನ್ನ ಸುತನೆಂಬ ಅಗ್ನಿಯು ಹತನಾದನೆಂದು ಹೇಗೆ ಕೇಳಿದನು? ಎಲೈ ಪೂಜ್ಯನೇ, ಇವೆಲ್ಲವನ್ನೂ ವಿಸ್ತಾರವಾಗಿ ಹೇಳುವೆನು, ಅದನ್ನು ಕೇಳು.
ತಸ್ಮಿನ್ನಹನಿ ನಿರ್ವೃತ್ತೇ ಘೋರೇ ಪ್ರಾಣಭೃತಾಂ ಕ್ಷಯೇ |
ಆದಿತ್ಯೇಽಸ್ತಂ ಗತೇ ಶ್ರೀಮಾನ್ ಸಂಧ್ಯಾಕಾಲ ಉಪಸ್ಥಿತೇ ॥ 8 ॥
ವ್ಯಪಯಾತೇಷು ಸೈನ್ಯೇಷು ವಾಸಾಯ ಭರತರ್ಷಭಃ |
ಹತ್ವಾ ಸಂಶಪ್ತಕವ್ರಾತಾನ್ ದಿವ್ಯೈರಸ್ತ್ರೈಃ ಕಪಿಧ್ವಜಃ |
ಆಯಾತ್ ಸ್ವಶಿಬಿರಂ ಜಿಷ್ಣುರ್ಜೈತ್ರಮಾಸ್ಥಾಯ ತಂ ರಥಮ್ ॥ 9 ॥
ಗಚ್ಛನ್ನೇವ ಚ ಗೋವಿಂದಂ ಸನ್ನಕಂಠೋಽಭ್ಯಭಾಷತ ॥ 10 ॥
ದೇಹಧಾರಿಗಳು ವಿನಾಶವನ್ನು ಹೊಂದಿದ ಆ ಹಗಲು ಸಂಪನ್ನಗೊಂಡು, ಆದಿತ್ಯನು ಅಸ್ತಂಗತನಾಗಿ, ಕಾಂತಿಯುಕ್ತವಾದ ಸಂಧ್ಯಾಕಾಲವು ಉಪಸ್ಥಿತವಾಗಿರಲು ಎಲ್ಲ ಸೈನ್ಯಗಳೂ ವಿಶ್ರಾಂತಿಗಾಗಿ ಹಿಂದಿರುಗಿದವು. ಭರತಶ್ರೇಷ್ಠನಾದ, ಕಪಿಧ್ವಜನಾದ ಅರ್ಜುನನು ತನ್ನ ದಿವ್ಯಾಸ್ತ್ರಗಳಿಂದ ಸಂಶಪ್ತಕಗಣಗಳನ್ನು ಕೊಂದು ಜೈತ್ರರಥವನ್ನು ಏರಿ ತನ್ನ ಶಿಬಿರದ ಕಡೆಗೆ ಬಂದನು. ಶಿಬಿರದ ಕಡೆಗೆ ಹೋಗುತ್ತಲೇ ಅವನು ಉಡುಗಿ ಹೋದ ಕಂಠದಿಂದ ಕೃಷ್ಣನ ಜೊತೆಗೆ ಮಾತನಾಡಿದನು.
ಕಿನ್ನು ಮೇ ಹೃದಯಂ ತ್ರಸ್ತಂ ವಾಕ್ಯಂ ಸಜ್ಜತಿ ಕೇಶವ |
ಸ್ಪಂದಂತೇಽಂಗಾನ್ಯನಿಷ್ಟಾನಿ ಗಾತ್ರೈಃ ಸೀದಾಮಿ ಚಾಚ್ಯುತ ॥ 11 ॥
ಅನಿಷ್ಟಂ ಚೈವ ಮೇ ಶ್ಲಿಷ್ಟಂ ಹೃದಯಾನ್ನಾಪಸರ್ಪತಿ |
ಭೂಮ್ಯಾಂ ದಿವಿ ತಥಾಽತ್ಯುಗ್ರಾ ಉತ್ಪಾತಾಸ್ತ್ರಾಸಯಂತಿ ಮಾಮ್ |
ಬಹುಪ್ರಕಾರಾ ದೃಶ್ಯಂತೇ ಸರ್ವ ಏವಾಘಶಂಸಿನಃ ॥ 12 ॥
ಅಪಿ ಸ್ವಸ್ತಿ ಭವೇದ್ ರಾಜ್ಞಃ ಸಾಮಾತ್ಯಸ್ಯ ಗುರೋರ್ಮಮ ॥ 13 ॥
ಎಲೈ ಕೇಶವನೇ, ಏಕೆ ನನ್ನ ಧ್ವನಿಯು ಗಾಬರಿಗೊಂಡಿದೆ? ಮಾತು ಏಕೆ ಉಡುಗಿ ಹೋಗುತ್ತಿದೆ? ಅಂಗಗಳು ಏಕೆ ಅದರುತ್ತಿವೆ? ಅಚ್ಯುತನೇ, ಎಲ್ಲ ದೇಹವೂ ಕುಸಿಯುತ್ತಿದೆ. ನನ್ನ ಮನಸ್ಸನ್ನು ಅಂಟಿಕೊಂಡಿರುವ ಅನಿಷ್ಟ ಭಾವನೆಗಳು ನನ್ನನ್ನು ಬಿಟ್ಟು ಹೋಗುತ್ತಿಲ್ಲ. ಭೂಮಿಯಲ್ಲಿ ಮತ್ತು ಅಂತರಿಕ್ಷದಲ್ಲಿ ಕಾಣುವ ಕ್ರೂರವಾದ ಅಪಶಕುನಗಳು ನನಗೆ ಭಯವನ್ನುಂಟು ಮಾಡುತ್ತಿವೆ. ಅವೆಲ್ಲವೂ ದೊಡ್ಡ ಅಪಚಾರವನ್ನು ಬಹುವಿಧವಾಗಿ ಸೂಚಿಸುತ್ತಿವೆ. ನನ್ನ ಹಿರಿಯನಾದ, ಅಮಾತ್ಯಸಹಿತನಾದ ಧರ್ಮರಾಜನಿಗೆ ಕ್ಷೇಮವಷ್ಟೆ?
ವಾಸುದೇವಃ
ವ್ಯಕ್ತಂ ಶಿವಂ ಸಹಭ್ರಾತುಃ ಸಾಮಾತ್ಯಸ್ಯ ಭವಿಷ್ಯತಿ |
ಮಾ ಶುಚಃ ಕಿಂಚಿದೇವಾನ್ಯತ್ ತತ್ರಾನಿಷ್ಟಂ ಭವಿಷ್ಯತಿ ॥ 14 ॥
ವಾಸುದೇವ ಅಮಾತ್ಯರಿಂದ ಮತ್ತು ತಮ್ಮಂದಿರಿಂದ ಒಡಗೂಡಿದ ನಿನ್ನ ಅಣ್ಣನಿಗೆ ಖಂಡಿತವಾಗಿ ಮಂಗಳವಾಗುವುದು. ಶೋಕಪಡಬೇಡ. ಬೇರೆ ಯಾವುದೋ ಅಲ್ಪವಾದ ಅನಿಷ್ಟವು ಸಂಭವಿಸಿದೆ.
ಸಂಜಯಃ
ತತಃ ಸಂಧ್ಯಾಮುಪಾಸ್ಯೈವ ವೀರೌ ವೀರಾವಸಾದನೇ |
ಕಥಯಂತೌ ರಣೇ ವೃತ್ತಂ ಪ್ರಯಾತೌ ರಥಮಾಸ್ಥಿತೌ ॥ 15 ॥
ಸಂಜಯ ಅನಂತರ ಶತ್ರುವೀರರನ್ನು ವಿನಾಶಪಡಿಸಿದ ಅವರಿಬ್ಬರೂ ಸಂಧ್ಯೋಪಾಸನೆಯನ್ನು ಮಾಡಿ, ಯುದ್ದದಲ್ಲಿ ನಡೆದ ವೃತ್ತಾಂತವನ್ನು ಹೇಳಿಕೊಳ್ಳುತ್ತಾ ರಥವನ್ನೇರಿ ಹೊರಟರು.

ತತಃ ಸ್ವಶಿಬಿರಂ ಪ್ರಾಪ್ತೌ ಹತಾಮಿತ್ರೌ ಹತದ್ವಿಷೌ |
ವಾಸುದೇವಾರ್ಜುನೌ ಚೈವ ಕೃತ್ವಾ ಕರ್ಮ ಸುದುಷ್ಕರಮ್ ॥ 16 ॥
ವಾಸುದೇವಾರ್ಜುನರು ಅತ್ಯಂತ ದುಷ್ಕರವಾದ ಕರ್ಮವನ್ನು ಮಾಡಿ ತಮ್ಮ ಶತ್ರುಗಳನ್ನೂ ಮತ್ತು ದ್ವೇಷಿಗಳನ್ನೂ ಕೊಂದು ತಮ್ಮ ಶಿಬಿರವನ್ನು ಸೇರಿದರು.
ಧ್ವಸ್ತಾಕಾರಂ ಸಮಾಲಕ್ಷ್ಯ ಸಂವೀಕ್ಷ್ಯ ಪರವೀರಹಾ |
ಬೀಭತ್ಸುರಬ್ರವೀತ್ ಕೃಷ್ಣಮಸ್ವಸ್ಥಹೃದಯಸ್ತದಾ ॥ 17 ॥
ಆಗ ಪರವೀರಘಾತಕನಾದ ಅರ್ಜುನನು ಕಾಂತಿಹೀನವಾಗಿದ್ದ ತನ್ನ ಶಿಬಿರವನ್ನು ಗಮನಿಸಿ ಚೆನ್ನಾಗಿ ನೋಡಿ ಅಸ್ವಸ್ಥವಾದ ಮನಸ್ಸುಳ್ಳವನಾಗಿ ಕೃಷ್ಣನನ್ನು ಕುರಿತು ಹೇಳಿದನು.
ನಾದ್ಯ ನರ್ದಂತಿ ತೂರ್ಯಾಣಿ ಮಂಗಲಾನಿ ಜನಾರ್ದನ |
ಮಿಶ್ರಾ ದುಂದುಭಿನಿರ್ಘೋಷೈಃ ಶಂಖಾ ಆಡಂಬರೈಃ ಸಹ ॥ 18 ॥
ಎಲೈ ಜನಾರ್ದನನೇ, ಈ ದಿವಸ ಶಂಖಧ್ವನಿಗಳಿಂದ ಮಿಶ್ರಿತವಾದ, ದುಂದುಭಿ ಘೋಷಗಳಿಂದಲೂ ಮಿಶ್ರಿತವಾದ ಮಂಗಳವಾದ್ಯಗಳು ಮೊಳಗುತ್ತಿಲ್ಲ.
ವೀಣಾ ನ ಸಾಧು ವಾದ್ಯಂತೇ ಶಮ್ಯಾತಾಳರವೈಃ ಸಹ |
ಮಂಗಲಾನಿ ಚ ಗೀತಾನಿ ನಾದ್ಯ ಗಾಂತಿ ಪಠಂತಿ ಚ ॥ 19 ॥
ತಾಳಶಬ್ದಗಳ ಜೊತೆಯಲ್ಲಿ ವೀಣೆಗಳು ಸರಿಯಾಗಿ ನುಡಿಸಲ್ಪಡುತ್ತಿಲ್ಲ. ಮಂಗಳ ಗೀತೆಗಳನ್ನು ಯಾರೂ ಹಾಡುತ್ತಿಲ್ಲ ಮತ್ತು ಪಠಿಸುತ್ತಿಲ್ಲ.
ಸ್ತುತಿಮಂಗಲಸಂಯುಕ್ತಾ ಮಮಾನೀಕೇಷು ವಂದಿನಃ |
ಯೋಧಾಶ್ಚಾಪಿ ಚ ಮಾಂ ದೃಷ್ಟ್ವಾ ನಿವರ್ತಂತೇ ಹ್ಯಧೋಮುಖಾಃ |
ಕರ್ಮಾಣಿ ಚ ಯಥಾಪೂರ್ವಂ ಕೃತ್ವಾ ನಾಭಿವದಂತಿ ಮಾಮ್ ॥ 20 ॥
ನನ್ನ ಸೈನ್ಯದಲ್ಲಿರುವ ಮಂಗಳಸಹಿತವಾದ ಸ್ತುತಿಗಳನ್ನು ಮಾಡುವ ವಂಧಿಗಳು ಮತ್ತು ಯೋಧರೂ ಸಹ ನನ್ನನ್ನು ನೋಡಿ ಮುಖವನ್ನು ತಗ್ಗಿಸಿ ಹೊರಟು ಹೋಗುತ್ತಿದ್ದಾರೆ. ಮೊದಲಿನಂತೆ ಕರ್ಮಗಳನ್ನು ಮಾಡಿ ನನ್ನನ್ನು ಮಾತನಾಡಿಸುತ್ತಿಲ್ಲ.
ಅಪಿ ಸ್ವಸ್ತಿ ಭವೇದದ್ಯ ಭ್ರಾತೃಭ್ಯೋ ಮಮ ಮಾಧವ ॥ 21 ॥
ನ ಹಿ ಶುದ್ಧ್ಯತಿ ಮೇ ಭಾವೋ ದೃಷ್ಟ್ವಾ ಸ್ವಜನಮಾಕುಲಮ್ |
ಅಪಿ ಪಾಂಚಾಲರಾಜಸ್ಯ ವಿರಾಟಸ್ಯ ಚ ಮಾನದ |
ಸರ್ವೇಷಾಂ ಚೈವ ಯೋಧಾನಾಂ ಸಾಮಗ್ರ್ಯಂ ಸ್ಯಾನ್ಮಮಾಚ್ಯುತ ॥22॥
ಎಲೈ ಮಾಧವನೇ, ಈ ದಿವಸ ನನ್ನ ಸಹೋದರರಿಗೆ ಕ್ಷೇಮವಷ್ಟೆ?ಸ್ವಜನರು ದುಃಖಾತುರರಾಗಿರುವುದನ್ನು ನೋಡಿ ನನ್ನ ಮನಸ್ಸಿಗೆ ಸಮಾಧಾನವಾಗುತ್ತಿಲ್ಲ. ಎಲೈ ಅಚ್ಯುತನೇ, ಮಾನದನೇ, ಪಾಂಚಾಲರಾಜನಿಗೆ, ವಿರಾಟರಾಜನಿಗೆ ಮತ್ತು ಎಲ್ಲ ಯೋಧರಿಗೆ ಕ್ಷೇಮವಷ್ಟೆ? (ಯಾವ ಹಾನಿಯೂ ಆಗಿಲ್ಲವಷ್ಟೆ?)
ನ ಚ ಮಾಽಭ್ಯೇತಿ ಸೌಭದ್ರಃ ಪ್ರಹೃಷ್ಟೈರ್ಭ್ರಾತೃಭಿಃ ಸಹ |
ರಣಾದಾಯಾಂತಮುಚಿತಂ ಪ್ರತ್ಯುದ್ಯಾತಿ ಹಸನ್ನಿವ ॥ 23 ॥
ಯುದ್ಧದಿಂದ ಹಿಂದಿರುಗಿದ ನನ್ನನ್ನು ಎದುರುಗೊಳ್ಳಲು ಯೋಗ್ಯವಾದ ರೀತಿಯಲ್ಲಿ ಮುಗುಳ್ನಗುತ್ತಾ ಸಹೋದರರ ಜೊತೆಯಲ್ಲಿ ಈ ದಿನ ಅಭಿಮನ್ಯುವು ನನ್ನೆಡೆಗೆ ಬರುತ್ತಿಲ್ಲ.
ಸಂಜಯಃ
ಏವಂ ಸಂಕಥಯಂತೌ ತೌ ಪ್ರವಿಷ್ಟೌ ಶಿಬಿರಂ ಸ್ವಕಮ್ |
ದದೃಶಾತೇ ಭೃಶಾಸ್ವಸ್ಥಾನ್ ಪಾಂಡವಾನ್ ನಷ್ಟಚೇತಸಃ ॥ 24 ॥
ಸಂಜಯ ಹೀಗೆ ಮಾತನಾಡಿಕೊಳ್ಳುತ್ತಾ ಅವರು ತಮ್ಮ ಶಿಬಿರಕ್ಕೆ ಬಂದು, ಬಹಳ ಅಸ್ವಸ್ಥರಾಗಿ ನಷ್ಟಪ್ರಜ್ಞರಾಗಿದ್ದ ಪಾಂಡವರನ್ನು ನೋಡಿದರು.
ದೃಷ್ಟ್ವಾ ಭ್ರಾತೄಂಶ್ಚ ಪುತ್ರಾಂಶ್ಚ ವಿಮನಾ ವಾನರಧ್ವಜಃ |
ಅಪಶ್ಯಂಸ್ತತ್ರ ಸೌಭದ್ರಮಿದಂ ವಚನಮಬ್ರವೀತ್ ॥ 25 ॥
ಕಪಿಧ್ವಜನಾದ ಅರ್ಜುನನು ಸಹೋದರರನ್ನೂ ಮತ್ತು ಪುತ್ರರನ್ನೂ ನೋಡಿ ಅಭಿಮನ್ಯುವನ್ನು ಕಾಣದೆ ಖೇದದಿಂದ ಕೂಡಿದ ಮನಸ್ಸಿನಿಂದ ಅಲ್ಲಿ ಈ ಮಾತನ್ನು ಆಡಿದನು.
ಮುಖವರ್ಣೋಽಪ್ರಸನ್ನೋ ವಃ ಸರ್ವೇಷಾಮೇವ ದೃಶ್ಯತೇ |
ನ ಚಾಭಿಮನ್ಯುಂ ಪಶ್ಯಾಮಿ ನಚ ಮಾಮಭಿನಂದಥ ॥ 26 ॥
ನಿಮ್ಮೆಲ್ಲರ ಮುಖಕಾಂತಿಯು ಕುಂದಿಹೋಗಿರುವುದು ಕಂಡು ಬರುತ್ತಿದೆ. ಅಭಿಮನ್ಯುವನ್ನು ನಾನು ಕಾಣುತ್ತಿಲ್ಲ ಮತ್ತು ನೀವು ನನ್ನನ್ನು ಅಭಿನಂದಿಸುತ್ತಿಲ್ಲ.
ಶ್ರುತೋ ಯಥಾ ಮೇ ದ್ರೋಣೇನ ಪದ್ಮವ್ಯೂಹೋ ವಿನಿರ್ಮಿತಃ |
ನ ಚ ವಸ್ತಸ್ಯ ಭೇತ್ತಾಽಸ್ತಿ ಅಭಿಮನ್ಯುಮೃತೇ ಶಿಶುಮ್ ॥ 27 ॥
ದ್ರೋಣರು ಪದ್ಮವ್ಯೂಹವನ್ನು ರಚಿಸಿದ್ದಾರೆಂದು ನಾನು ಕೇಳಿದೆನು. ಮಗುವಾದ ಅಭಿಮನ್ಯುವೊಬ್ಬನನ್ನು ಬಿಟ್ಟು ಅದನ್ನು ಭೇದಿಸುವವರು ನಿಮ್ಮಲ್ಲಿ ಯಾರೂ ಇಲ್ಲ.
ನೋಪದಿಷ್ಟಶ್ಚ ಮೇ ತಸ್ಯ ಭಿತಶತ್ವಽನೀಕಸ್ಯ ನಿರ್ಗಮಃ |

ಕಚ್ಚಿನ್ನ ಬಾಲೋ ಯುಷ್ಮಾಭಿಃ ಪರಾನೀಕಂ ಪ್ರವೇಶಿತಃ ॥ 28 ॥
ನಾನು ಅವನಿಗೆ ಪದ್ಮವ್ಯೂಹವನ್ನು ಭೇದಿಸಿ ಹೊರಗೆ ಬರುವ ರೀತಿಯನ್ನು ಉಪದೇಶಿಸಿಲ್ಲ. ನೀವೆಲ್ಲರೂ ಸೇರಿ ಆ ಬಾಲಕನನ್ನು ಶತ್ರುಸೈನ್ಯವನ್ನು ಪ್ರವೇಶ ಮಾಡುವಂತೆ ಮಾಡಿಲ್ಲವಷ್ಟೆ?
ಭಿತ್ತ್ವಾಽನೀಕಂ ನರವ್ಯಾಘ್ರಃ ಪರೇಷಾಂ ಬಹುಭಿರ್ಯುಧಿ |
ಕಚ್ಚಿನ್ನ ನಿಹತಃ ಶೇತೇ ಸೌಭದ್ರಃ ಪರವೀರಹಾ ॥ 29 ॥
ನರವ್ಯಾಘ್ರನೂ, ಪರವೀರಘಾತಕನೂ ಆದ ಅಭಿಮನ್ಯುವು ಶತ್ರುಗಳ ವ್ಯೂಹವನ್ನು ಭೇದಿಸಿ, ಬಹಳ ಯೋಧರಿಂದ ಸುತ್ತುವರಿಯಲ್ಪಟ್ಟು ಹತನಾಗಿ ಮಲಗಿಲ್ಲವಷ್ಟೆ?
ಲೋಹಿತಾಕ್ಷಂ ಮಹಾಬಾಹುಂ ಜಾತಂ ಸಿಂಹಮಿವಾದ್ರಿಷು |
ಉಪೇಂದ್ರಸದೃಶಂ ಬ್ರೂತ ಕಥಮಾಯೋಧನೇ ಹತಃ ॥ 30 ॥
ಅರುಣಾಕ್ಷನೂ, ಮಹಾಬಾಹುವೂ, ಪರ್ವತದಲ್ಲಿ ಸಿಂಹದಂತೆ ಜನಿಸಿದವನೂ, ಕೃಷ್ಣಸದೃಶನೂ ಆದ ಅವನು ಯುದ್ಧದಲ್ಲಿ ಹೇಗೆ ಹತನಾದನು ಎಂದು ಹೇಳಿ.
ಸುಕುಮಾರಂ ಮಹೋತ್ಸಾಹಂ ವಾಸವಸ್ಯಾತ್ಮಜಾತ್ಮಜಮ್ |
ಸದಾ ಮಮ ಪ್ರಿಯಂ ಬ್ರೂತ ಕಥಮಾಯೋಧನೇ ಹತಃ ॥ 31 ॥
ಸುಕುಮಾರನೂ, ಮಹೋತ್ಸಾಹವುಳ್ಳವನೂ, ಇಂದ್ರನ ಪುತ್ರನ ಪುತ್ರನೂ, ನನಗೆ ಯಾವಾಗಲೂ ಪ್ರಿಯನಾದವನೂ ಆದ ಅವನು ಹೇಗೆ ಯುದ್ಧದಲ್ಲಿ ಹತನಾದನು ಎಂದು ಹೇಳಿ.
ವಾರ್ಷ್ಣೇಯದಯಿತಂ ಶೂರಂ ಮಯಾ ಸತತಲಾಲಿತಮ್ |
ಅಂಬಾಯಾಶ್ಚ ಪ್ರಿಯಂ ನಿತ್ಯಂ ಕೋಽವಧೀತ್ ಕಾಲಚೋದಿತಃ ॥32॥
ಕೃಷ್ಣನಿಗೆ ಬಹಳ ಪ್ರಿಯನಾದ, ಶೂರನಾದ, ನನ್ನಿಂದ ಯಾವಾಗಲೂ ಲಾಲಿಸಲ್ಪಟ್ಟ, ತಾಯಿಗೂ ಪ್ರಿಯನಾದ ಅವನನ್ನು ಮೃತ್ಯುಗ್ರಸ್ತನಾದ ಯಾವನು ಸಂಹರಿಸಿದನು?
ಸದೃಶೋ ವೃಷ್ಣಿಸಿಂಹಸ್ಯ ಕೇಶವಸ್ಯ ಮಹಾತ್ಮನಃ |
ವಿಕ್ರಮಶ್ರುತಮಾಹಾತ್ಮ್ಯೈಃ ಕಥಮಾಯೋಧನೇ ಹತಃ ॥ 33 ॥
ಪರಾಕ್ರಮ, ವಿದ್ಯೆ ಮತ್ತು ಮಹಿಮೆಗಳಲ್ಲಿ ಮಹಾತ್ಮನಾದ, ವೃಷ್ಣಿಸಿಂಹನಾದ ಕೇಶವನಿಗೆ ಸದೃಶನಾದ ಅವನು ಯುದ್ಧದಲ್ಲಿ ಹೇಗೆ ಕೊಲ್ಲಲ್ಪಟ್ಟನು?
ಸುಭದ್ರಾಯಾಃ ಪ್ರಿಯಂ ನಿತ್ಯಂ ದ್ರೌಪದ್ಯಾಃ ಕೇಶವಸ್ಯ ಚ |
ಯದಿ ಪುತ್ರಂ ನ ಪಶ್ಯಾಮಿ ಯಾಸ್ಯಾಮಿ ಯಮಸಾದನಮ್ ॥ 34 ॥
ಸುಭದ್ರೆಗೂ, ದ್ರೌಪದಿಗೂ, ಕೇಶವನಿಗೂ ಯಾವಾಗಲೂ ಪ್ರಿಯನಾದ ನನ್ನ ಪುತ್ರನನ್ನು ನೋಡದಿದ್ದರೆ ನಾನು ಯಮಪಟ್ಟಣಕ್ಕೆ ಹೋಗುವೆನು.
ಮಹೋತ್ಸಾಹಂ ಮಹಾವೀರ್ಯಂ ದೀರ್ಘರಾಜೀವಲೋಚನಮ್ |
ಯದಿ ಪುತ್ರಂ ನ ಪಶ್ಯಾಮಿ ಯಾಸ್ಯಾಮಿ ಯಮಸಾದನಮ್ ॥ 35 ॥
ಮಹೋತ್ಸಾಹವುಳ್ಳವನೂ, ಮಹಾವೀರ್ಯನೂ, ದೀರ್ಘಪದ್ಮನೇತ್ರನೂ ಆದ ನನ್ನ ಪುತ್ರನನ್ನು ನೋಡದಿದ್ದರೆ ನಾನು ಯಮಪಟ್ಟಣಕ್ಕೆ ಹೋಗುವೆನು.
ಮೃದುಕುಂಚಿತಕೇಶಾಂತಂ ಬಾಲಂ ಬಾಲಮೃಗೇಕ್ಷಣಮ್ |
ಮತ್ತದ್ವಿರದವಿಕ್ರಾಂತಂ ಸಾಲಪೋತಮಿವೋದ್ಗತಮ್ ॥ 36 ॥
ಸ್ಮಿತಾಭಿಭಾಷಿಣಂ ದಾಂತಂ ಗುರುಪ್ರೇಷ್ಯಕರಂ ಸದಾ |
ಬಾಲಂ ಚಾಬಾಲಕರ್ಮಾಣಂ ಪ್ರಿಯೋದ್ಯಂ ವೀತಮತ್ಸರಮ್ ॥ 37 ॥
ಭಕ್ತಾನುಕಂಪಿನಂ ದಾಂತಂ ನ ಚ ದೀನಾನುಸಾರಿಣಮ್ |
ಕೃತಜ್ಞಂ ಜ್ಞಾನಸಂಪನ್ನಂ ಕೃತಾಸ್ತ್ರಮನಿವರ್ತಿನಮ್ ॥ 38 ॥
ಯುದ್ಧಾಭಿನಂದಿನಂ ನಿತ್ಯಂ ದ್ವಿಷತಾಮಘವರ್ಧನಮ್ |
ಸ್ವೇಷಾಂ ಪ್ರಿಯಹಿತೇ ಯುಕ್ತಂ ಪಿತೄಣಾಂ ಜಯಗೃದ್ಧಿನಮ್ ॥ 39 ॥
ನ ಚ ಪೂರ್ವಪ್ರಹರ್ತಾರಂ ಸಂಗ್ರಾಮೇ ನಷ್ಟಸಂಭ್ರಮಮ್ |
ಯದಿ ಪುತ್ರಂ ನ ಪಶ್ಯಾಮಿ ಯಾಸ್ಯಾಮಿ ಯಮಸಾದನಮ್ ॥ 40 ॥
ಮೃದುವಾದ ಗುಂಗರುಕೂದಲುಳ್ಳವನೂ, ಬಾಲನೂ, ಎಳೆಯ ಜಿಂಕೆಯ ಕಣ್ಣುಳ್ಳವನೂ, ಮದಗಜದ ಪರಾಕ್ರಮವುಳ್ಳವನೂ, ಸಾಲವೃಕ್ಷದ ಮರಿಯಂತೆ ಎತ್ತರವಾಗಿದ್ದವನೂ, ಮಂದಹಾಸಪೂರ್ವಕವಾಗಿ ಮಾತನಾಡುವವನೂ, ಇಂದ್ರಿಯ ನಿಗ್ರಹವುಳ್ಳವನೂ, ಯಾವಾಗಲೂ ಹಿರಿಯರ ಮಾತನ್ನು ನಡೆಸಿಕೊಡುವವನೂ, ಬಾಲನಾಗಿದ್ದರೂ ಬಾಲರಿಗೆ ಮೀರಿದ ಕರ್ಮವನ್ನು ಮಾಡುವವನೂ, ಪ್ರಿಯವಾದ ಸಂಭಾಷಣೆಯುಳ್ಳವನೂ, ಮತ್ಸರವನ್ನು ತೊರೆದವನೂ, ಭಕ್ತಾನುಕಂಪಿಯೂ, ದೀನರನ್ನು ಅನುಸರಿಸದವನೂ, ಕೃತಜ್ಞನಾದವನೂ, ಜ್ಞಾನಸಂಪನ್ನನಾದವನೂ, ಅಸ್ತ್ರಪಾರಂಗತನಾದವನೂ, ಯುದ್ಧದಲ್ಲಿ ಹಿಮ್ಮೆಟ್ಟದವನೂ, ಯಾವಾಗಲೂ ಯುದ್ಧವನ್ನು ಬಯಸುವವನೂ, ಶತ್ರುಗಳಿಗೆ ಮಹಾನಾಶವನ್ನು ಉಂಟುಮಾಡುವವನೂ, ತನ್ನವರಿಗೆ ಪ್ರಿಯಚಿತ್ತವನ್ನು ಮಾಡುವುದರಲ್ಲಿ ರತನಾದವನೂ, ಪಿತೃಗಳ ಜಯವನ್ನು ಬಯಸುವವನೂ, ಯುದ್ಧದಲ್ಲಿ ಮೊದಲು ಪ್ರಹಾರ ಮಾಡದಿದ್ದವನೂ, ಗಾಬರಿಗೊಳ್ಳದವನೂ ಆದ ನನ್ನ ಪುತ್ರನನ್ನು ನೋಡದಿದ್ದರೆ ನಾನು ಯಮಪಟ್ಟಣಕ್ಕೆ ಹೋಗುವೆನು.
ಸುನಸಂ ಸುಲಲಾಟಂ ತಂ ಸುಭ್ರ್ವಕ್ಷಿದಶನಚ್ಛದಮ್ |

ಅಪಶ್ಯತಸ್ತದ್ವದನಂ ಕಾ ಶಾಂತಿರ್ಹೃದಯಸ್ಯ ಮೇ ॥ 41 ॥
ಒಳ್ಳೆಯ ನಾಸಿಕವನ್ನೂ, ಹಣೆಯನ್ನೂ, ಕಣ್ಣು ಮತ್ತು ತುಟಿಗಳನ್ನು ಹೊಂದಿದವನೂ ಆದ ಅವನ ಮುಖವನ್ನು ನೋಡದಿದ್ದರೆ ನನ್ನ ಮನಸ್ಸಿಗೆ ಹೇಗೆ ಶಾಂತಿಯಾದೀತು?
ತಂತ್ರೀಸ್ವನಸುಖಂ ರಮ್ಯಂ ಪುಂಸ್ಕೋಕಿಲಸಮಧ್ವನಿಮ್ |
ಅಶೃಣ್ವತಃ ಸ್ವನಂ ತಸ್ಯ ಕಾ ಶಾಂತಿರ್ಹೃದಯಸ್ಯ ಮೇ ॥ 42 ॥
ತಂತಿಯ ನಾದದಂತೆ ಸುಖಕರವಾದ ನಾದವುಳ್ಳವನೂ, ಮನೋಹರನಾದವನೂ, ಪುಂಸ್ಕೋಕಿಲಕ್ಕೆ ಸಮವಾದ ಧ್ವನಿಯುಳ್ಳವನೂ ಆದ ನನ್ನ ಪುತ್ರನ ಧ್ವನಿಯನ್ನು ಕೇಳದಿದ್ದರೆ ನನ್ನ ಹೃದಯಕ್ಕೆ ಹೇಗೆ ಶಾಂತಿಯಾದೀತು?
ರೂಪಂ ಚಾಪ್ರತಿರೂಪಂ ತತ್ ತ್ರಿದಶೈರಪಿ ದುರ್ಲಭಮ್ |
ಅಪಶ್ಯತೋ ಹಿ ವೀರಸ್ಯ ಕಾ ಶಾಂತಿರ್ಹೃದಯಸ್ಯ ಮೇ ॥ 43 ॥
ದೇವತೆಗಳಿಗೂ ದುರ್ಲಭವಾದ ಅಪ್ರತಿಮವಾದ ರೂಪವನ್ನು ಹೊಂದಿದ್ದ ವೀರನಾದ ನನ್ನ ಪುತ್ರನನ್ನು ನೋಡದಿದ್ದರೆ ನನ್ನ ಹೃದಯಕ್ಕೆ ಹೇಗೆ ಶಾಂತಿಯಾದೀತು?
ಅಭಿವಾದನದಕ್ಷಂ ತಂ ಪಿತೄಣಾಂ ವಚನೇ ರತಮ್ |
ನಹ್ಯಹಂ ಯದಿ ಪಶ್ಯಾಮಿ ಕಾ ಶಾಂತಿರ್ಹೃದಯಸ್ಯ ಮೇ ॥ 44 ॥
ಹಿರಿಯರನ್ನು ನಮಸ್ಕರಿಸುವುದರಲ್ಲಿ ಚತುರನಾದ, ಪಿತೃಗಳ ವಚನವನ್ನು ಪಾಲಿಸುವುದರಲ್ಲಿ ನಿರತನಾದ ಅವನನ್ನು ನೋಡದಿದ್ದರೆ ನನ್ನ ಹೃದಯಕ್ಕೆ ಹೇಗೆ ಶಾಂತಿಯಾದೀತು?
ಸುಕುಮಾರಃ ಸದಾ ವೀರೋ ಮಹಾರ್ಹಶಯನೋಚಿತಃ |
ಭೂಮಾವನಾಥವಚ್ಛೇತೇ ನೂನಂ ನಾಥವತಾಂ ವರಃ ॥ 45 ॥
ಸುಕುಮಾರನೂ, ವೀರನೂ, ಯಾವಾಗಲೂ ಶ್ರೇಷ್ಠವಾದ ಶಯನಗಳಿಗೆ ಯೋಗ್ಯನಾದವನೂ, ಸನಾಥರಲ್ಲಿ ಶ್ರೇಷ್ಠನಾದವನೂ ಆದ ಅವನು ಈ ದಿನ ಭೂಮಿಯ ಮೇಲೆ ಅನಾಥನಾಗಿ ಬಿದ್ದಿದ್ದಾನೆ.
ಶಯಾನಂ ಸಮುಪಾಸಂತೇ ಯಂ ಪುರಾ ಪರಮಸ್ತ್ರಿಯಃ |
ತಮದ್ಯ ವಿಪ್ರವಿದ್ಧಾಂಗಮ್ ಉಪಾಸಂತೇಽಶಿವಾಃ ಶಿವಾಃ ॥ 46 ॥
ಯಾವನ ಶಯನವನ್ನು ಹಿಂದೆ ಸುಂದರಿಯರಾದ ಸ್ತ್ರೀಯರು ಸೇವಿಸುತ್ತಿದ್ದರೋ ಅಂತಹ ಅವನು ಈ ದಿನ ಅಂಗಗಳಲ್ಲಿ ಗಾಯಗೊಂಡು ಅಮಂಗಳವಾದ ನರಿಗಳಿಂದ ಉಪಾಸಿಸಲ್ಪಡುತ್ತಿದ್ದಾನೆ.
ಯಃ ಪುರಾ ಬೋಧ್ಯತೇ ಸುಪ್ತಃ ಸೂತಮಾಗಧವಂದಿಭಿಃ |
ತಮದ್ಯ ಬೋಧಯಿಷ್ಯಂತಿ ಶ್ವಾಪದಾ ವಿಕೃತೈಃ ಸ್ವರೈಃ ॥ 47 ॥
ಮಲಗಿ ನಿದ್ರಿಸುತ್ತಿದ್ದ ಯಾವ ಅವನನ್ನು ಸೂತ-ಮಾಗಧ-ವಂದಿಗಳು ಎಬ್ಬಿಸುತ್ತಿದ್ದರೋ ಅಂತಹ ಅವನು ಈ ದಿನ ಮಾಂಸಾಹಾರಿ ಪ್ರಾಣಿಗಳ ವಿಕೃತ ಸ್ವರಗಳಿಂದ ಎಚ್ಚರಿಸಲ್ಪಡುವನು.
ಛತ್ರಚ್ಛಾಯಾಸಮುಚಿತಂ ತಸ್ಯ ತದ್ ವದನಂ ಶುಭಮ್ |
ನೂನಮದ್ಯ ರಜೋಧ್ವಸ್ತಂ ರಣೇ ರೇಣುಃ ಕರಿಷ್ಯತಿ ॥ 48 ॥
ಛತ್ರಚ್ಛಾಯೆಗೆ ಯೋಗ್ಯವಾದ ಅವನ ಸುಂದರವಾದ ಮುಖವನ್ನು ಈ ದಿನ ಧೂಳುಗಳು ರಣರಂಗದಲ್ಲಿ ಮಲಿನವನ್ನಾಗಿ ಮಾಡುತ್ತವೆ.
ಹಾ ಪುತ್ರಕಾವಿತೃಪ್ತಸ್ಯ ಸತತಂ ಪುತ್ರದರ್ಶನೇ |
ಮಂದಪುಣ್ಯಸ್ಯ ಕಾಲೇನ ಯಥಾ ಮೇ ನೀಯಸೇ ಬಲಾತ್ ॥ 49 ॥
ಅಯ್ಯೋ ಪುತ್ರನೇ, ನಿನ್ನ ದರ್ಶನದಲ್ಲಿ ತೃಪ್ತಿಯನ್ನೇ ಹೊಂದದ ಮಂದಭಾಗ್ಯನಾದ ನನ್ನಿಂದ ಮೃತ್ಯುವು ನಿನ್ನನ್ನು ಬಲಾತ್ಕಾರದಿಂದ ಎಳೆದೊಯ್ಯುತ್ತಿದ್ದಾನೆ!
ಸಾಽದ್ಯ ಸಂಯಮನೀ ನೂನಂ ಸತಾಂ ಸುಕೃತಿನಾಂ ಗತಿಃ |
ಸ್ವಭಾಭಿರ್ಮಂಡಿತಾ ರಮ್ಯಾ ತ್ವಯಾಽತ್ಯರ್ಥಂ ವಿರಾಜಿತಾ ॥ 50 ॥
ಈ ದಿನ ನಿನ್ನ ಕಾಂತಿಯಿಂದ ಅಲಂಕೃತವಾಗಿ ಬಹಳವಾಗಿ ಶೋಭಿಸುವ ಮನೋಹರವಾದ ಯಮಪುರವಾದ ಸಂಯಮನಿಯು ಪುಣ್ಯವನ್ನು ಮಾಡಿದ ಸಜ್ಜನರಿಗೆ ಗತಿಯಾಗಿದೆ.
ನೂನಂ ವೈವಸ್ವತಶ್ಚ ತ್ವಾಂ ವರುಣಶ್ಚ ಪ್ರಿಯಾತಿಥಿಮ್ |
ಶತಕ್ರತುರ್ಧನೇಶಶ್ಚ ಪ್ರಾಪ್ತಮರ್ಚಂತ್ಯಭೀರುಕಮ್ ॥ 51 ॥
ಖಂಡಿತವಾಗಿ ಪ್ರಿಯಾತಿಥಿಯಾಗಿ ಬಂದ ನಿರ್ಭಯನಾದ ನಿನ್ನನ್ನು ಯಮನೂ, ವರುಣನೂ, ಇಂದ್ರನೂ, ಕುಬೇರನೂ ಅರ್ಚಿಸುತ್ತಾರೆ.
ಸಂಜಯಃ
ಏವಂ ವಿಲಪ್ಯ ಬಹುಲಂ ಭಿನ್ನಪೋತೋ ವಣಿಗ್ ಯಥಾ |
ದುಃಖೇನ ಮಹತಾಽಽವಿಷ್ಟೋ ಯುಧಿಷ್ಠಿರಮಪೃಚ್ಛತ ॥ 52 ॥
ಸಂಜಯ ಹೀಗೆ ನಾವೆಯು ಒಡೆದುಹೋದ ವರ್ತಕನಂತೆ ಬಹಳವಾಗಿ ವಿಲಾಪವನ್ನು ಮಾಡಿ, ಬಹಳ ದುಃಖದಿಂದ ಕೂಡಿದವನಾಗಿ ಯುಧಿಷ್ಠಿರನನ್ನು ಪ್ರಶ್ನೆ ಮಾಡಿದನು.
ಕಥಂ ತ್ವಯಿ ಚ ಭೀಮೇ ಚ ಧೃಷ್ಟದ್ಯುಮ್ನೇ ಚ ಜೀವತಿ |
ಸಾತ್ಯಕೇ ಶಕ್ರವಿಕ್ರಾಂತೇ ಸೌಭದ್ರೋ ನಿಹತಃ ಪರೈಃ ॥ 53 ॥
ನೀನೂ, ಭೀಮನೂ, ಧೃಷ್ಟದ್ಯುಮ್ನನೂ, ಇಂದ್ರಪರಾಕ್ರಮವುಳ್ಳ ಸಾತ್ಯಕಿಯೂ ಜೀವಿಸಿರುವಾಗ ಅಭಿಮನ್ಯುವು ಶತ್ರುಗಳಿಂದ ಹೇಗೆ ಹತನಾದನು?

ಕಂಚಿತ್ ಸ ಕದನಂ ಕೃತ್ವಾ ಪರೇಷಾಂ ಪಾಂಡುನಂದನಃ |
ಸ್ವರ್ಗತೋಽಭಿಮುಖಃ ಸಂಖ್ಯೇ ಯುದ್ಧ್ಯಮಾನೋ ಮಹಾರಥೈಃ ॥54॥
ಪಾಂಡುನಂದನನಾದ ಅವನು ರಣರಂಗದಲ್ಲಿ ಮಹಾರಥರ ಜೊತೆಯಲ್ಲಿ ಯುದ್ಧವನ್ನು ಮಾಡಿ, ಶತ್ರುಗಳಿಗೆ ಅಭಿಮುಖವಾಗಿಯೇ ಯುದ್ಧವನ್ನು ಮಾಡುತ್ತಾ ಸ್ವರ್ಗಕ್ಕೆ ಹೋದನಷ್ಟೆ?
ಸ ನೂನಂ ಬಹುಭಿರ್ಯುಕ್ತೈರ್ಯುದ್ಧ್ಯಮಾನೋ ನರರ್ಷಭೈಃ |
ಅಸಹಾಯಃ ಸಹಾಯಾರ್ಥಂ ಮಾಮನುಧ್ಯಾತವಾನ್ ಧ್ರುವಮ್ ॥
ಖಂಡಿತವಾಗಿ ಅವನು ಅನೇಕ ನರಶ್ರೇಷ್ಠರಾದ ಶತ್ರುಗಳ ಜೊತೆಯಲ್ಲಿ ಅಸಹಾಯವಾಗಿ ಯುದ್ಧವನ್ನು ಮಾಡುತ್ತಾ, ಸಹಾಯವನ್ನು ಅಪೇಕ್ಷಿಸಿ ನನ್ನನ್ನು ಚಿಂತಿಸಿರುತ್ತಾನೆ.
ಪೀಡ್ಯಮಾನಃ ಶರೈರ್ಬಾಲಃ ತಾತ ಸಾಧ್ವಭಿಧಾವ ಮಾಮ್ |
ಇತಿ ವಿಪ್ರಲಪನ್ ಮನ್ಯೇ ನೃಶಂಸೈರ್ಬಹುಭಿರ್ಹತಃ ॥ 56 ॥
ಶತ್ರುಗಳ ಬಾಣದಿಂದ ಪೀಡಿತನಾದ ಬಾಲಕನು ಅಪ್ಪ ನನ್ನ ಬಳಿಗೆ ಓಡಿ ಬಾ ಎಂದು ಕಿರುಚುತಿತರುವಾಗಲೇ ಕ್ರೂರರಾದ ಅನೇಕರು ಸೇರಿ ಅವನನ್ನು ಕೊಂದಿದ್ದಾರೆ ಎಂದು ತಿಳಿಯುತ್ತೇನೆ.
ಅಥವಾ ಮತ್ಪ್ರಸೂತಶ್ಚ ಸ್ವಸ್ರೀಯೋ ಮಾಧವಸ್ಯ ಚ |
ಸುಭದ್ರಾಯಾಂ ಚ ಸಂಭೂತಃ ಸ ನೈವಂ ವಕ್ತುಮರ್ಹತಿ ॥ 57 ॥
ಅಥವಾ ನನ್ನಿಂದ ಜನಿಸಿದ, ಕೃಷ್ಣನ ಸೋದರಳಿಯನಾದ, ಸುಭದ್ರೆಯ ಮಗನಾದ ಅವನು ಹಾಗೆ ಕಿರುಚಿರಲಾರ!
ವಜ್ರಾಯಸಾಶ್ಮಭಿಸ್ತುಲ್ಯಂ ಹೃದಯಂ ಸುದೃಢಂ ಮಮ |
ಅಪಶ್ಯತೋ ದೀರ್ಘಬಾಹುಂ ರಕ್ತಾಕ್ಷಂ ಯನ್ನ ದೀರ್ಯತೇ ॥ 58 ॥
ದೀರ್ಘಬಾಹುವೂ, ರಕ್ತನೇತ್ರನೂ ಆದ ಅವನನ್ನು ನೋಡದೆ ಬಿರಿದು ಹೋಗದಿರುವ ನನ್ನ ಹೃದಯವು ವಜ್ರದಂತೆ, ಕಬ್ಬಿಣದಂತೆ, ಕಲ್ಲುಬಂಡೆಯಂತೆ ಅತ್ಯಂತ ಕಠಿಣವಾದುದು.
ಕಥಂ ಬಾಲೇ ಮಹೇಷ್ವಾಸೇ ನೃಶಂಸಾ ಮರ್ಮಭೇದಿನಃ |
ಸ್ವಸ್ರೀಯೇ ವಾಸುದೇವಸ್ಯ ಮಮ ಪುತ್ರೇಽಕ್ಷಿಪನ್ ಶರಾನ್ ॥ 59 ॥
ನೃಶಂಸರೂ, ಮರ್ಮಭೇದಿಗಳೂ ಆದ ಶತ್ರುಗಳು ಬಾಲಕನೂ, ವಾಸುದೇವನ ಸೋದರಳಿಯನೂ ಆದ ನನ್ನ ಪುತ್ರನ ಮೇಲೆ ಹೇಗೆ ಬಾಣಪ್ರಯೋಗವನ್ನು ಮಾಡಿದರು?
ಯೋ ಮಾಂ ನಿತ್ಯಮದೀನಾತ್ಮಾ ಪ್ರತ್ಯುದ್ಗಮ್ಯಾಭಿನಂದತಿ |
ಉಪಯಾಂತಂ ರಿಪೂನ್ ಹತ್ವಾ ಸೋಽದ್ಯ ಮಾಂ ಕಿಂ ನ ಪಶ್ಯತಿ ॥60॥
ಯಾವನು ಯುದ್ಧದಿಂದ ಹಿಂದಿರುಗುವ ನನ್ನನ್ನು ಸಂತೋಷದಿಂದ ಎದುರುಗೊಂಡು ಅಭಿನಂದಿಸುತಿತದ್ದನೋ ಅಂತಹ ಅಭಿಮನ್ಯುವು ಶತ್ರುಗಳನ್ನು ಕೊಂದು ಹಿಂದಿರುಗುತ್ತಿರುವ ನನ್ನನ್ನು ಈ ದಿನ ಏಕೆ ನೋಡುತ್ತಿಲ್ಲ?
ನೂನಂ ಸ ಪಾತಿತಃ ಶೇತೇ ಧರಣ್ಯಾಂ ರುಧಿರೋಕ್ಷಿತಃ |
ಶೋಭಯನ್ ಮೇದಿನೀಂ ಗಾತ್ರೈಃ ಆದಿತ್ಯ ಇವ ಪಾತಿತಃ ॥ 61 ॥
ಈ ದಿನ ಅವನು ರಕ್ತಸಿಕ್ತನಾಗಿ ಭೂಮಿಯ ಮೇಲೆ ಬಿದ್ದ ಸೂರ್ಯನಂತೆ ತನ್ನ ಶರೀರದಿಂದ ಭೂಮಿಗೆ ಕಾಂತಿಯನ್ನು ನೀಡುತ್ತಾ ಭೂಮಿಯ ಮೇಲೆ ಬಿದ್ದಿದ್ದಾನೆ.
ಸುಭದ್ರಾಮಭಿಶೋಚಾಮಿ ಯಾ ಪುತ್ರಮಪಲಾಯಿನಮ್ |
ರಣೇ ವಿನಿಹತಂ ಶ್ರುತ್ವಾ ಶೋಕಾರ್ತಾ ಚಾತಿನಂಕ್ಷ್ಯತಿ ॥ 62 ॥
ಯುದ್ಧದಲ್ಲಿ ಹಿಮ್ಮೆಟ್ಟದಿರುವ ತನ್ನ ಪುತ್ರನು ಯುದ್ಧದಲ್ಲಿ ಹತನಾದನೆಂಬ ವಾರ್ತೆಯನ್ನು ಕೇಳಿ ಶೋಕಾರ್ತವಾಗಿ ಬಹಳವಾಗಿ ನಾಶವನ್ನು ಹೊಂದುವ ಸುಭದ್ರೆಯನ್ನು ಕುರಿತು ನಾನು ಶೋಕಪಡುತೆತೇನೆ.
ಶ್ರುತ್ವಾ ನಿಪತಿತಂ ಶೂರಮ್ ಅನಘಂ ಕೃತಲಾಘವಮ್ |
ಸುಭದ್ರಾ ವಕ್ಷ್ಯತೇ ಕಿಂ ಮಾಮಭಿಮನ್ಯುಮಪಶ್ಯತೀ |
ದ್ರೌಪದೀಂ ಚಾಪಿ ದುಃಖಾರ್ತಾಂ ಕಿಂ ವಾ ವಕ್ಷ್ಯಾಮಿ ತಾಮಹಮ್ ॥
ಶೂರನೂ, ದೋಷರಹಿತನೂ, ಕ್ಷಿಪ್ರಹಸ್ತನೂ ಆದ ಪುತ್ರನನ್ನು ಕಾಣದೆ ಅವನು ಹತನಾಗಿದ್ದಾನೆಂದು ಕೇಳಿ ಸುಭದ್ರೆಯು ನನಗೆ ಏನು ಹೇಳುವಳು? ದುಃಖಾರ್ತಳಾದ ದ್ರೌಪದಿಗಾದರೂ ನಾನು ಏನು ಹೇಳಲಿ?
ಹೃಷ್ಟಾನಾಂ ಧಾರ್ತರಾಷ್ಟ್ರಾಣಾಂ ಸಿಂಹನಾದೋ ಮಯಾ ಶ್ರುತಃ |
ಯುಯುತ್ಸುಶ್ಚಾಪಿ ಕೃಷ್ಣೇನ ಶ್ರುತೋ ವೀರಾನುಪಾಲಭನ್ ॥ 65 ॥
ಸಂತೋಷಗೊಂಡ ದುರ್ಯೋಧನಾದಿಗಳ ಸಿಂಹನಾದವನ್ನು ನಾನು ಕೇಳಿದೆನು. ಕೃಷ್ಣನೂ ಸಹ ಯುಯುತ್ಸುವು ಕೌರವವೀರರನ್ನು ನಿಂದಿಸುವುದನ್ನು ಕೇಳಿದನು.
ಅಶಕ್ನುವಂತಃ ಪಾರ್ಥಸ್ಯ ಬಾಲಂ ಹತ್ವಾ ಮಹಾರಥಾಃ |
ಕಿನ್ನ ಲಜ್ಜಂತ್ಯಧರ್ಮಜ್ಞಾಃ ಪಾರ್ಥಿವಾ ದೃಶ್ಯತಾಂ ಬಲಮ್ ॥ 66 ॥
ಅರ್ಜುನನನ್ನು ಎದುರಿಸಲು ಸಾಮರ್ಥ್ಯವಿಲ್ಲದ ಅಧರ್ಮಜ್ಞರಾದ ಶತ್ರುಮಹಾರಥರು ಬಾಲಕನನ್ನು ಕೊಂದು ನಾಚಿಕೆಪಡುವುದಿಲ್ಲವೇ? ಎಲೈ ರಾಜರೇ (ಕೌರವ ರಾಜರೇ), ನನ್ನ ಬಲವನ್ನು ನೋಡಿ.
ಕಿಂ ತಯೋರ್ವಿಪ್ರಿಯಂ ಕೃತ್ವಾ ಕೇಶವಾರ್ಜುನಯೋರ್ಮೃಧೇ |
ಸಿಂಹವನ್ನದತ ಪ್ರೀತಾಃ ಶೋಕಕಾಲ ಉಪಸ್ಥಿತೇ ॥ 67 ॥

ಯುದ್ಧದಲ್ಲಿ ಕೃಷ್ಣಾರ್ಜುನರಿಗೆ ಅಪ್ರಿಯವನ್ನುಂಟು ಮಾಡಿ, ನಿಮಗೆ ಶೋಕಕಾಲವು ಪ್ರಾಪ್ತವಾಗಿರುವಾಗ ಏಕೆ ಸಂತೋಷದಿಂದ ಸಿಂಹದಂತೆ ಗರ್ಜಿಸುತ್ತಿದ್ದೀರಿ?
ಆಗಮಿಷ್ಯತಿ ವಃ ಕ್ಷಿಪ್ರಂ ಫಲಂ ಪಾಪಸ್ಯ ಕರ್ಮಣಃ |
ಅಧರ್ಮೋ ಹಿ ಕೃತಸ್ತೀವ್ರಃ ಕಥಂ ಸ್ಯಾದಫಲಶ್ಚಿರಮ್ ॥ 68 ॥
ನೀವು ಮಾಡಿದ ಪಾಪಕರ್ಮದ ಫಲವು ಶೀಘ್ರವಾಗಿಯೇ ನಿಮಗೆ ಬರಲಿದೆ. ತೀವ್ರವಾದ ಅಧರ್ಮದ ಫಲವು ಹೇಗೆ ಬಹುಕಾಲ ಬರದಿರಲು ಸಾಧ್ಯ?
ಸಂಜಯಃ
ಇತಿ ತಾನ್ ಪರಿಭಾಷನ್ ವೈ ಕುಂತ್ಯಾಃ ಪುತ್ರೋ ಮಹಾದ್ಯುತಿಃ |
ಅಪಾಯಾಚ್ಛಸ್ತ್ರಮುತ್ಸ ೃಜ್ಯ ಕೋಪಾದ್ ದುಃಖಸಮನ್ವಿತಃ ॥ 69 ॥
ಸಂಜಯ ಕುಂತೀಪುತ್ರನೂ, ಮಹಾದ್ಯುತಿಯೂ ಆದ ಅರ್ಜುನನು ಕೌರವರಾಜರನ್ನು ಕುರಿತು ಹೀಗೆ ಮಾತನಾಡುತ್ತಾ ಕೋಪದಿಂದಲೂ, ದುಃಖದಿಂದಲೂ ಕೂಡಿದವನಾಗಿ ಶಸ್ತ್ರವನ್ನು ಎಸೆದು ಅಲ್ಲಿಂದ ಹೊರಟನು.
ಶ್ರೀಭಗವಾನ್
ಕಿಮರ್ಥಮೇತನ್ನಾಖ್ಯಾತಂ ತ್ವಯಾ ಪಾರ್ಥ ರಣೇ ಮಮ |
ಅಧಕ್ಷ ್ಯಯಂ ತಾನಹಂ ಸರ್ವಾಂಸ್ತತ್ರ ಕ್ರೂರಾನ್ ಮಹಾರಥಾನ್ ॥ 70 ॥
ಶ್ರೀಭಗವಾನ್ ಎಲೈ ಪಾರ್ಥನೇ (ಯುಧಿಷ್ಠಿರನೇ), ಈ ವಿಷಯವನ್ನು ನೀನು ಮೊದಲೇ ನನಗೆ ಏಕೆ ಹೇಳಲಿಲ್ಲ? ನಾನು ಆ ಕ್ರೂರರಾದ ಮಹಾರಥರೆಲ್ಲರನ್ನೂ ಆಗಲೇ ಕೊಂದುಬಿಡುತ್ತಿದ್ದೆ.
ಸಂಜಯಃ
ಪುತ್ರಶೋಕಾರ್ದಿತಂ ಪಾರ್ಥಂ ಧ್ಯಾಯಂತಂ ಸಾಶ್ರುಲೋಚನಮ್ |
ನಿಗೃಹ್ಯ ವಾಸುದೇವಸ್ತಂ ಪುತ್ರಾಧಿಭಿರಭಿಪ್ಲುತಮ್ |
ಮೈವಮಿತ್ಯಬ್ರವೀತ್ ಕೃಷ್ಣಃ ತೀವ್ರಶೋಕಸಮನ್ವಿತಮ್ ॥ 71 ॥
ಸಂಜಯ ಪುತ್ರಶೋಕದಿಂದ ಪೀಡಿತನಾದವನೂ, ಅವನನ್ನೇ ಚಿಂತಿಸಿ ಅಶ್ರುಲೋಚನನೂ ಆದ ಅರ್ಜುನನನ್ನು ತಡೆದು, ತೀವ್ರಶೋಕಸಮನ್ವಿತನಾಗಿ ಪುತ್ರನ ಚಿಂತೆಯಿಂದ ಪೂರ್ಣವಾಗಿ ತುಂಬಿದ ಮನಸ್ಸುಳ್ಳ ಅವನನ್ನು ಕುರಿತು ಹೀಗೆ ಮಾಡಬೇಡ ಎಂದು ಹೇಳಿದನು.
ಶ್ರೀಭಗವಾನ್
ಸರ್ವೇಷಾಮೇವ ಪಂಥಾ ವೈ ಶೂರಾಣಾಂ ಕುರುನಂದನ |
ಕ್ಷತ್ರಿಯಾಣಾಂ ವಿಶೇಷೇಣ ಯೇಷಾಂ ನಃ ಶಸ್ತ್ರಜೀವಿಕಾ ॥ 72 ॥
ಶ್ರೀಭಗವಾನ್ ಎಲೈ ಕುರುನಂದನನೇ, ಇದು ಎಲ್ಲರೂ ಹೋಗುವ ಮಾರ್ಗ. ವಿಶೇಷವಾಗಿ ಶಸ್ತ್ರವನ್ನು ಹಿಡಿದು ಜೀವಿಸುವ ಕ್ಷತ್ರಿಯರಾದ ನಮ್ಮ ಮಾರ್ಗ.
ಏಷಾ ವೈ ಯುದ್ಧ್ಯಮಾನಾನಾಂ ಶೂರಾಣಾಂ ಕುರುನಂದನ |
ವಿಹಿತಾ ಧರ್ಮಶಾಸ್ತ್ರಗರ್ತಿರ್ಮತಿಮತಾಂ ವರ ॥ 73 ॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನೇ, ಕುರುನಂದನನೇ, ಯುದ್ಧವನ್ನು ಮಾಡುವ ಶೂರರು ಹೋಗಬೇಕಾದುದು ಇದೇ ಮಾರ್ಗದಲ್ಲಿ ಎಂದು ಧರ್ಮಶಾಸ್ತ್ರವನ್ನು ತಿಳಿದವರು ವಿಧಾನ ಮಾಡಿದ್ದಾರೆ.
ಧ್ರುವಂ ಯುದ್ಧೇ ಹಿ ಮರಣಂ ಶೂರಾಣಾಮನಿವರ್ತಿನಾಮ್ |
ಗತಃ ಪುಣ್ಯಕೃತಾಂ ಲೋಕಾನ್ ಅಭಿಮನ್ಯುರ್ನ ಸಂಶಯಃ ॥ 74 ॥
ಯುದ್ಧದಲ್ಲಿ ಹಿಮ್ಮೆಟ್ಟದಿರುವ ಶೂರರಿಗೆ ಮರಣವು ನಿಶ್ಚಿತವಾದುದು. ಅಭಿಮನ್ಯುವು ಪುಣ್ಯವಂತರು ಪಡೆಯುವ ಲೋಕಗಳಿಗೆ ಹೋಗಿದ್ದಾನೆ. ಇದರಲ್ಲಿ ಸಂಶಯವಿಲ್ಲ.
ಏತದ್ ವೈ ಸರ್ವವೀರಾಣಾಂ ಕಾಂಕ್ಷಿತಂ ಭರತರ್ಷಭ |
ಸಂಗ್ರಾಮೇಽಭಿಮುಖಾ ಮೃತ್ಯುಂ ಪ್ರಾಪ್ನುಯಾಮೇತಿ ಮಾನದ ॥ 75 ॥
ಎಲೈ ಭರತಶ್ರೇಷ್ಠನೇ, ಇದು ಎಲ್ಲ ವೀರರು ಅಪೇಕ್ಷಿಸುವಂತಹದು. ಎಲೈ ಮಾನದನೇ, ಯುದ್ಧದಲ್ಲಿ ಶತ್ರುಗಳಿಗೆ ಅಭಿಮುಖವಾಗಿ ಮೃತ್ಯುವನ್ನು ಹೊಂದೋಣ ಎಂಬುದೇ ಸರ್ವವೀರರ ಆಸೆ.
ಸ ತು ವೀರಾನ್ ರಣೇ ಹತ್ವಾ ರಾಜಪುತ್ರಾನ್ ಮಹಾಬಲಾನ್ |
ವೀರಾಣಾಂ ಕಾಂಕ್ಷಿತಂ ಮೃತ್ಯುಂ ಸಂಪ್ರಾಪ್ತೋಽಭಿಮುಖೋ ರಣೇ ॥
ಅಭಿಮನ್ಯುವಾದರೂ ಯುದ್ಧದಲ್ಲಿ ವೀರರಾದ, ಮಹಾಬಲಿಷ್ಠರಾದ ರಾಜಪುತ್ರರನ್ನು ಕೊಂದು ಶತ್ರುಗಳಿಗೆ ಅಭಿಮುಖವಾಗಿ ವೀರರು ಬಯಸುವ ಮೃತ್ಯುವನ್ನು ಹೊಂದಿದ್ದಾನೆ.
ಮಾ ಶುಚೋ ಪುರುಷವ್ಯಾಘ್ರ ಪೂರ್ವೈರೇಷ ಸನಾತನಃ |
ಧರ್ಮಕೃದ್ಭಿಃ ಕೃತೋ ಧರ್ಮಃ ಕ್ಷತ್ರಿಯಾಣಾಂ ರಣೇ ಕ್ಷಯಃ ॥ 77 ॥
ಎಲೈ ಪುರುಷವ್ಯಾಘ್ರನೇ, ಶೋಕಪಡಬೇಡ. ಇದು ವೇದವಿಹಿತವಾದ ಪೂರ್ವದಿಂದಲೂ ನಡೆದುಕೊಂಡು ಬಂದ ಧರ್ಮ. ಕ್ಷತ್ರಿಯರಿಗೆ ಯುದ್ಧದಲ್ಲಿ ವಿನಾಶವೆಂಬುದು ಧರ್ಮವನ್ನು ತಿಳಿದವರು ಕ್ಲೃಪ್ತಿ ಮಾಡಿರುವ ಧರ್ಮಮಾರ್ಗ.
ಇಮೇ ತೇ ಭ್ರಾತರಃ ಸರ್ವೇ ದೀನಾ ವೈ ಭ್ರಾತೃವತ್ಸಲಾಃ |
ತ್ವಯಿ ಶೋಕಸಮಾವಿಷ್ಟೇ ನೃಪಾಶ್ಚ ಸುಹೃದಸ್ತವ ॥ 78 ॥

ನೀನು ಶೋಕದಿಂದ ಕೂಡಿರಲು ಭ್ರಾತೃವತ್ಸಲರಾದ ಈ ನಿನ್ನ ಎಲ್ಲ ಸಹೋದರರು, ರಾಜರು ಮತ್ತು ಸುಹೃದರು ದೈನ್ಯದಿಂದ ಕೂಡಿದ್ದಾರೆ.
ಏತಾನ್ ವೈ ವಚಸಾ ಸಾಮ್ನಾ ಸಮಾಶ್ವಾಸಯ ಮಾನದ |
ವಿದಿತಂ ವೇದಿತವ್ಯಂ ತೇ ನ ಶೋಕಂ ಕರ್ತುಮರ್ಹಸಿ ॥ 79 ॥
ಎಲೈ ಮಾನದನೇ, ಇವರನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸು. ತಿಳಿಯಬೇಕಾದುದನ್ನು ತಿಳಿದುದಾಯಿತು. ಶೋಕವನ್ನು ಪಡುವುದು ಉಚಿತವಲ್ಲ.
ಸಂಜಯಃ
ಏವಮಾಶ್ವಾಸಿತಃ ಪಾರ್ಥಃ ಕೃಷ್ಣೇನಾದ್ಭುತಕರ್ಮಣಾ |
ತತೋಽಬ್ರವೀತ್ ತದಾ ಭ್ರಾತೄನ್ ಸರ್ವಾನ್ ಪಾರ್ಥಃ ಸಗದ್ಗದಮ್ ॥
ಸಂಜಯ ಹೀಗೆ ಅದ್ಭುತ ಕರ್ಮವನ್ನು ಮಾಡುವ ಕೃಷ್ಣನಿಂದ ಸಮಾಧಾನ ಪಡಿಸಲ್ಪಟ್ಟ ಅರ್ಜುನನು ಆಗ ತನ್ನ ಎಲ್ಲ ಸಹೋದರರನ್ನೂ ಕುರಿತು ಗದ್ಗದವಾದ ಕಂಠದಿಂದ ಮಾತನಾಡಿದನು.
ಸ ದೀರ್ಘಬಾಹುಃ ಪೃಥ್ವಂಸೋ ದೀರ್ಘರಾಜೀವಲೋಚನಃ |
ಅಭಿಮನ್ಯುರ್ಯಥಾವೃತ್ತಃ ಶ್ರೋತುಮಿಚ್ಛಾಮ್ಯಹಂ ತಥಾ ॥ 81 ॥
ದೀರ್ಘಬಾಹುವೂ, ವಿಶಾಲವಕ್ಷಸ್ಸ್ಥಲವುಳ್ಳವನೂ, ದೀರ್ಘವಾದ ಪದ್ಮದಳದಂತಿದ್ದ ನೇತ್ರವನ್ನುಳ್ಳವನೂ ಆದ ಅಭಿಮನ್ಯುವು ಯುದ್ಧದಲ್ಲಿ ಹೇಗೆ ನಡೆದುಕೊಂಡನು ಎಂಬುದನ್ನು ನಾನು ಕೇಳಲು ಬಯಸುತೆತೇನೆ.
ಸನಾಗಸ್ಯಂದನಹಯಾನ್ ಸಂಗ್ರಾಮೇ ನಿಹತಾನ್ ಮಯಾ |
ಕ್ಷಿಪ್ರಂ ದ್ರಕ್ಷ್ಯಯಂತಿ ತೇ ನೂನಂ ಮಮ ಪುತ್ರಸ್ಯ ವೈರಿಣಃ ॥ 82 ॥
ನನ್ನ ಪುತ್ರನಿಗೆ ಶತ್ರುಗಳಾದವರು ಯುದ್ಧದಲ್ಲಿ ಅವರ ರಥಾಶ್ವ-ಗಜಗಳ ಜೊತೆಯಲ್ಲಿ ಅವರು ನನ್ನಿಂದ ಹತರಾಗುವುದನ್ನು ಶೀಘ್ರದಲ್ಲಿಯೇ ನೋಡುವರು.
ಕಥಂ ಚ ವಃ ಕೃತಾಸತ್ರಾಣಾಂ ಸರ್ವೇಷಾಂ ಶಸ್ತ್ರಪಾಣಿನಾಮ್ |
ಸೌಭದ್ರೋ ನಿಧನಂ ಗಚ್ಛೇದ್ ವಜ್ರಿಣಾಽಪಿ ಸಮಾಗತಃ ॥ 83 ॥
ಅಸ್ತ್ರಪಾರಂಗತರೂ, ಶಸ್ತ್ರಧಾರಿಗಳೂ ಆದ ನೀವೆಲ್ಲರೂ ಇರುವಾಗ ಇಂದ್ರನೇ ಬಂದರೂ ಸಹ ಅಭಿಮನ್ಯುವು ಹೇಗೆ ನಿಧನವನ್ನು ಹೊಂದಿಯಾನು?
ಯದ್ಯೇವಮಹಮಜ್ಞಾಸ್ಯಮ್ ಅಶಕ್ತಾನ್ ಮಮ ರಕ್ಷಣೇ |
ಪುತ್ರಸ್ಯ ಪಾಂಡುಪಾಂಚಾಲಾ ಮಯಾಗುಪ್ತೋ ಭವೇತ್ತು ಸಃ ॥ 84 ॥
ಪಾಂಡು-ಪಾಂಚಾಲರು ನನ್ನ ಪುತ್ರನನ್ನು ರಕ್ಷಿಸಲು ಅಸಮರ್ಥರು ಎಂದು ತಿಳಿದಿದ್ದರೆ ನಾನೇ ಅವನನ್ನು ರಕ್ಷಿಸುತ್ತಿದ್ದೆ.
ಕಥಂ ಚ ವೋ ರಥಸ್ಥಾನಾಂ ಶರವರ್ಷಾಣಿ ಮುಂಚತಾಮ್ |
ಸೌಭದ್ರೋ ನಿಧನಂ ನೀತಃ ಕದರ್ಥೀಕೃತ್ಯ ವಃ ಪರೈಃ ॥ 85 ॥
ರಥದಲ್ಲಿ ಕುಳಿತು ನೀವು ಬಾಣಗಳ ಮಳೆಯನ್ನು ಕರೆಯುತ್ತಿರುವಾಗ ನಿಮ್ಮನ್ನು ತುಚ್ಛೀಕರಿಸಿ ಹೇಗೆ ಶತ್ರುಗಳಿಂದ ಅಭಿಮನ್ಯುವು ಹತನಾದನು?
ಅಹೋ ವಃ ಪೌರುಷಂ ನಾಸ್ತಿ ನ ಚ ವೋಽಸ್ತಿ ಪರಾಕ್ರಮಃ |
ಯತ್ರಾಭಿಮನ್ಯುಃ ಸಮರೇ ಪಶ್ಯತಾಂ ವೋ ನಿಪಾತಿತಃ ॥ 86 ॥
ನಿಮ್ಮ ಕಣ್ಣೆದುರಿಗೇ ಅಭಿಮನ್ಯುವು ಯುದ್ಧದಲ್ಲಿ ಹತನಾದನೆಂದ ಮೇಲೆ ನಿಮಗೆ ಪೌರುಷವಾಗಲೀ, ಪರಾಕ್ರಮವಾಗಲೀ ಇಲ್ಲ.
ಆತ್ಮಾನಮೇವ ಗರ್ಹೇಯಂ ಯದಹಂ ವೈ ಸುದುರ್ಬಲಾನ್ |
ಯುಷ್ಮಾನಾಜ್ಞಾಯ ನಿರ್ಯಾತೋ ಭೀರೂನಕೃತನಿಶ್ರಮಾನ್ ॥ 87 ॥
ಅತ್ಯಂತ ದುರ್ಬಲರೂ, ಭಯಗ್ರಸ್ತರೂ, ಯುದ್ಧ ಪರಿಶ್ರಮವಿಲ್ಲದವರೂ ಆದ ನಿಮ್ಮನ್ನು ನಂಬಿ ನಾನು ಯುದ್ಧಕ್ಕೆ ಹೊರಟುದರಿಂದ ನಾನು ನನ್ನನ್ನೇ ನಿಂದಿಸಿಕೊಳ್ಳುತ್ತೇನೆ.
ಆಹೋಸ್ವಿದ್ ಭೂಷಣಾರ್ಥಾನಿ ವರ್ಮಚಾಸತ್ರಯುಧಾನಿ ವಃ |
ವಾಚಶ್ಚ ವದತಾಂ ಸತ್ಸು ಮಮ ಪುತ್ರಮರಕ್ಷತಾಮ್ ॥ 88 ॥
ಅಥವಾ ನನ್ನ ಪುತ್ರನನ್ನು ರಕ್ಷಿಸದ ನಿಮ್ಮ ಕವಚಗಳು, ಆಯುಧಗಳು ಮತ್ತು ಸಜ್ಜನರ ಮುಂದೆ ಆಡುವ ನಿಮ್ಮ ಒಳ್ಳೆಯ ಮಾತುಗಳು ಎಲ್ಲವೂ ಅಲಂಕಾರಕ್ಕಾಗಿ ಮಾತ್ರ ಇವೆಯೇ?
ಸಂಜಯಃ
ಏವಮುಕತ್ವ ತತೋ ವಾಕ್ಯಮತಿಷ್ಠದ್ ವೈ ವರಾಸಿಮಾನ್ |
ನ ಸ್ಮಾಶಕ್ಯತ ಬೀಭತ್ಸುಂ ಕೇನಚಿತ್ ಪ್ರಸಮೀಕ್ಷಿತುಮ್ ॥89॥
ಸಂಜಯ ಶ್ರೇಷ್ಠ ಖಡ್ಗಧಾರಿಯಾದ ಅರ್ಜುನನು ಹೀಗೆ ಮಾತನಾಡಿ ಅನಂತರ ಎದ್ದು ನಿಂತನು. ಆಗ ಅರ್ಜುನನನ್ನು ನೋಡಲು ಯಾರೂ ಶಕ್ತರಾಗಲಿಲ್ಲ.
ತಮಂತಕಮಿವ ಕ್ರುದ್ಧಂ ನಿಃಶ್ವಸಂತಂ ಪುನಃಪುನಃ |
ಮಹೇಂದ್ರಮಿವ ತಿಷ್ಠಂತಂ ವಜ್ರೋದ್ಯತಮಹಾಭುಜಮ್ ॥ 90 ॥
ಪುತ್ರಶೋಕಾಭಿಸಂತಪ್ತಮಶ್ರುಪೂರ್ಣಮುಖಂ ತದಾ |
ನ ಭಾಷಿತುಂ ಶಕ್ನುವಂತಿ ದ್ರಷ್ಟುಂ ವಾಽಪಿ ತದಾಽರ್ಜುನಮ್ |

ಅನ್ಯತ್ರ ವಾಸುದೇವಾದ್ವಿ ಜ್ಯೇಷ್ಠಾದ್ ವೈ ಪಾಂಡುನಂದನಾತ್ ॥ 91 ॥
ಯಮನಂತೆ ಕ್ರುದ್ಧನಾದ, ಪುನಃ ಪುನಃ ನಿಟ್ಟುಸಿರನ್ನು ಬಿಡುವ, ಕೈಯಲ್ಲಿ ಎತ್ತಿಹಿಡಿದ ವಜ್ರವನ್ನು ಧರಿಸಿದ ಮಹಾಭುಜನಾದ ಮಹೇಂದ್ರನಂತೆ ಇರುವ, ಪುತ್ರಶೋಕ ಸಂತಪ್ತನೂ, ಕಣ್ಣೀರಿನಿಂದ ಕೂಡಿದ ಮುಖವುಳ್ಳವನೂ ಆದ ಅರ್ಜುನನನ್ನು ನೋಡಲು ಅಥವಾ ಅವನೊಡನೆ ಮಾತನಾಡಲು ಕೃಷ್ಣನನ್ನು ಮತ್ತು ಜ್ಯೇಷ್ಠ ಪಾಂಡುನಂದನನಾದ ಧರ್ಮರಾಜನನ್ನು ಬಿಟ್ಟು ಬೇರೆ ಯಾರಿಗೂ ಶಕ್ತಿ ಇರಲಿಲ್ಲ.
ಸರ್ವಾವಸ್ಥಾಸ್ವಪಿ ಹಿತಾವರ್ಜುನಸ್ಯ ಮನೋನುಗೌ |
ಬಹುಮಾನಾತ್ ಪ್ರಿಯತ್ವಾಚ್ಚ ತಾವೇನಂ ವಕ್ತುಮರ್ಹತಃ ॥ 92 ॥
ಎಲ್ಲ ಅವಸ್ಥೆಗಳಲ್ಲಿಯೂ ಅರ್ಜುನನ ಮನಸ್ಸಿಗೆ ಅನುಸಾರವಾಗಿ ಅವನ ಮೇಲೆ ಬಹುಮಾನದಿಂದಲೂ, ಪ್ರೀತಿಯಿಂದಲೂ ಅವನ ಹಿತವನ್ನು ನುಡಿಯುವ ಯುಧಿಷ್ಠಿರ-ಕೃಷ್ಣರಿಬ್ಬರೇ ಅವನ ಜೊತೆಯಲ್ಲಿ ಮಾತನಾಡಲು ಸಮರ್ಥರಾಗುತ್ತಾರೆ.
ತತಸ್ತಂ ಪುತ್ರಶೋಕೇನ ಭೃಶಂ ಪೀಡಿತಮಾನಸಮ್ |
ರಾಜೀವಲೋಚನಂ ಕ್ರುದ್ಧಂ ರಾಜಾ ವಚನಮಬ್ರವೀತ್ ॥ 93 ॥
ಆಗ ಪುತ್ರಶೋಕದಿಂದ ಬಹಳವಾಗಿ ಪೀಡಿತವಾದ ಮನಸ್ಸುಳ್ಳ ರಾಜೀವ ಲೋಚನನಾದ, ಕ್ರುದ್ಧನಾದ ಅರ್ಜುನನನ್ನು ಕುರಿತು ಧರ್ಮರಾಜನು ಮಾತನಾಡಿದನು.
ತ್ವಯಿ ಯಾತೇ ಮಹಾಬಾಹೋ ಸಂಶಪ್ತಕವಧಂ ಪ್ರತಿ |
ಯತತೇ ರಾಜಭಿಃ ಸಾರ್ಧಮಾಚಾರ್ಯೋ ಗ್ರಹಣೇ ಮಮ ॥ 94 ॥
ಎಲೈ ಮಹಾಬಾಹುವೇ, ನೀನು ಸಂಶಪ್ತಕರ ವಧೆಗಾಗಿ ಹೊರಟು ಹೋಗುತ್ತಿರಲು ದ್ರೋಣಾಚಾರ್ಯರು ಉಳಿದ ರಾಜರ ಸಹಾಯದಿಂದ ನನ್ನನ್ನು ಹಿಡಿಯುವ ಪ್ರಯತ್ನವನ್ನು ಮಾಡಿದರು.
ವ್ಯೂಢಾನೀಕಂ ತತೋ ದ್ರೋಣಂ ಯತಮಾನಂ ಮಹಾಮೃಧೇ |
ಪ್ರತಿವ್ಯೂಹ್ಯ ಸಹಾನೀಕಾಃ ಪ್ರತ್ಯರುಂದ್ಧ್ಮ ವಯಂ ಬಲಮ್ ॥ 95 ॥
ತಮ್ಮ ಸೈನ್ಯವನ್ನು ವ್ಯೂಹಗೊಳಿಸಿ ರಣರಂಗದಲ್ಲಿ ಪ್ರಯತ್ನವನ್ನು ಪಡುತ್ತಿದ್ದ ದ್ರೋಣರಿಗೆ ಎದುರಾಗಿ ನಾವು ಪ್ರತಿವ್ಯೂಹವನ್ನು ರಚಿಸಿ ನಮ್ಮ ಸೈನ್ಯದ ಜೊತೆಯಲ್ಲಿ ನಾವು ಅವರ ಸೈನ್ಯವನ್ನು ತಡೆದೆವು.
ಸ ವಾರ್ಯಮಾಣಃ ಸಂಗ್ರಾಮೇ ಮಯಿ ಚಾಪಿ ಸುರಕ್ಷಿತೇ |
ಅಸ್ಮಾನಪ್ಯಹನತ್ ಕ್ರುದ್ಧಃ ಪೀಡಯನ್ ನಿಶಿತೈಃ ಶರೈಃ ॥ 96 ॥
ಹೀಗೆ ತಡೆಯಲ್ಪಟ್ಟ ದ್ರೋಣರು ನಾನೂ ಸುರಕ್ಷಿತವಾಗಿರುತ್ತಿರಲು ಕೋಪಗೊಂಡು ನನ್ನವರನ್ನು ಬಾಣಗಳಿಂದ ಪೀಡಿಸುತ್ತಾ ಸಂಹಾರ ಮಾಡಿದರು.
ತೇ ಪೀಡ್ಯಮಾನಾ ದ್ರೋಣೇನ ದ್ರೋಣಾನೀಕಂ ನ ಶಕ್ನುಮಃ |
ಪ್ರತಿವೀಕ್ಷಿತುಮಪ್ಯಾಜೌ ಭೇತ್ತುಂ ಹಿ ಕುತ ಏವ ನಃ ॥ 97 ॥
ದ್ರೋಣರಿಂದ ಹೀಗೆ ಪೀಡಿಸಲ್ಪಟ್ಟ ನಾವು ದ್ರೋಣರ ಸೈನ್ಯವನ್ನು ನೋಡಲೂ ಸಾಧ್ಯವಾಗಲಿಲ್ಲ. ಇನ್ನು ಆ ಸೈನ್ಯವನ್ನು ಭೇದಿಸಲು ಸಾಮರ್ಥ್ಯವು ಎಲ್ಲಿಂದ ಬರಬೇಕು?
ವಯಂ ತ್ವಪ್ರತಿಮಂ ವೀರ್ಯೇ ಸರ್ವೇ ಸೌಭದ್ರಮಾತ್ಮಜಮ್ |
ದ್ರೋಣಾನೀಕಮಿದಂ ಭಿಂಧಿ ದ್ವಾರಂ ಸಂಜನಯಸ್ವ ನಃ ॥ 98 ॥
ನಾವೆಲ್ಲರೂ ಪರಾಕ್ರಮದಲ್ಲಿ ಅಪ್ರತಿಮನಾದ, ಶಿಶುವಾದ ಅಭಿಮನ್ಯುವನ್ನು ಕುರಿತು ಈ ದ್ರೋಣರ ಸೈನ್ಯವನ್ನು (ವ್ಯೂಹವನ್ನು) ಭೇದಿಸಿ ನಮಗೆ ಒಂದು ದ್ವಾರವನ್ನು ಉಂಟು ಮಾಡಿಕೊಡು ಎಂದು ಹೇಳಿದೆವು.
ಸ ತಥಾ ಚೋದಿತೋಽಸ್ಮಾಭಿಃ ಸದಶ್ವ ಇವ ವೀರ್ಯವಾನ್ |
ಅಸಹ್ಯಮಪಿ ತಂ ಭಾರಂ ವೋಢುಮೇವೋಪಚಕ್ರಮೇ ॥ 99 ॥
ಹೀಗೆ ನಮ್ಮಿಂದ ಪ್ರೇರಿಸಲ್ಪಟ್ಟ ಅವನು ಪರಾಕ್ರಮಶಾಲಿಯಾದ ಒಳ್ಳೆಯ ಅಶ್ವದಂತೆ ತನಗೆ ಮೀರಿದ್ದರೂ ಸಹ ಆ ಭಾರವನ್ನು ಹೊರಲು ಉಪಕ್ರಮಿಸಿದನು.
ತವ ಚೈವೋಪದೇಶೇನ ವೀರ್ಯೇಣ ಚ ಸಮನ್ವಿತಃ |
ಪ್ರಾವಿಶತ್ ತದ್ ಬಲಂ ಬಾಲಃ ಸುಪರ್ಣ ಇವ ಸಾಗರಮ್ ॥100॥
ನಿನ್ನ ಉಪದೇಶದಿಂದಲೂ ಮತ್ತು ತನ್ನ ಪರಾಕ್ರಮದಿಂದಲೂ ಯುಕ್ತನಾದ ಬಾಲಕನಾದ ಅವನು ಗರುಡನು ಸಾಗರವನ್ನು ಪ್ರವೇಶಿಸಿದಂತೆ ಶತ್ರುಸೈನ್ಯವನ್ನು ಪ್ರವೇಶಿಸಿದನು.
ತೇಽನ್ವಯಾಮ ವಯಂ ವೀರಂ ಸಾತ್ವತೀಪುತ್ರಮಾಹವೇ |
ಪ್ರವೇಷ್ಟುಕಾಮಾಸ್ತೇನೈವ ಯೇನ ಸ ಪ್ರಾವಿಶಚ್ಚಮೂಮ್ ॥ 101 ॥
ನಾವು ರಣರಂಗದಲ್ಲಿ ಸುಭದ್ರೆಯ ಪುತ್ರನಾದ ಆ ವೀರನನ್ನು ಹಿಂಬಾಲಿಸಿದೆವು ಮತ್ತು ಅವನು ಹೋದ ದ್ವಾರದಿಂದಲೇ ಆ ಸೈನ್ಯವನ್ನು ಪ್ರವೇಶಿಸಲು ಬಯಸಿದೆವು.
ತತಃ ಸೈಂಧವಕೋ ರಾಜಾ ಕ್ಷುದ್ರಸ್ತಾತ ಜಯದ್ರಥಃ |
ವರದಾನೇನ ರುದ್ರಸ್ಯ ಸರ್ವಾನ್ ನಃ ಪ್ರತ್ಯವಾರಯತ್ ॥ 102 ॥
ಆಗ ಪ್ರೀತಿಪಾತ್ರನೇ, ಸಿಂಧುದೇಶದ ರಾಜನಾದ ಕ್ಷುದ್ರನಾದ ಜಯದ್ರಥನು ರುದ್ರದೇವರಿಂದ ಪಡೆದ ವರದ ಬಲದಿಂದ ನಮ್ಮೆಲ್ಲರನ್ನೂ ತಡೆದನು.
ತತೋ ದ್ರೋಣಃ ಕೃಪಃ ಕರ್ಣೋ ದ್ರೌಣಿಶ್ಚ ಸಬೃಹದ್ಬಲಃ |

ಕೃತವರ್ಮಾ ಚ ತಂ ವೀರಂ ಷಡ್ರಥಾಃ ಪರ್ಯವಾರಯನ್ ॥ 103 ॥
ಆಗ ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮರು, ಬೃಹದ್ಬಲ ಮತ್ತು ಕೃತವರ್ಮ ಈ ಆರು ಮಹಾರಥರು ವೀರನಾದ ಅಭಿಮನ್ಯುವನ್ನು ಸುತ್ತುವರಿದರು.
ಪರಿವಾರ್ಯ ಚ ತೈಃ ಕ್ಷುದ್ರೈಃ ಯುಧಿ ಬಾಲೋ ಮಹಾರಥೈಃ |
ಯತಮಾನಃ ಪರಂ ಶಕ್ತ್ಯಾ ಬಹುಭಿರ್ವಿರಥೀಕೃತಃ ॥ 104 ॥
ಮಹಾರಥರಾದ ಮತ್ತು ಕ್ಷುದ್ರರಾದ ಅವರೆಲ್ಲರೂ ಯುದ್ಧದಲ್ಲಿ ಬಾಲಕನನ್ನು ಸುತ್ತುವರಿದ ಮೇಲೆ ಅವನು ಶಕ್ತಿಯನ್ನು ಮೀರಿ ಪ್ರಯತ್ನಪಟ್ಟರೂ ಆ ಅನೇಕರು ಅವನ ರಥವನ್ನು ನಾಶಗೊಳಿಸಿದರು.
ತತೋ ದೌಃಶಾಸನಿಃ ಪಾಪಃ ತಥಾ ತೈರ್ವಿರಥೀಕೃತಮ್ |
ಸಂಶಯಂ ಪರಮಂ ಪ್ರಾಪ್ತಂ ದಿಷ್ಟಾಂತೇನಾಭ್ಯಯೋಜಯತ್ ॥105॥
ಅನಂತರ ಪಾಪಿಯಾದ ದುಶ್ಶಾಸನನ ಪುತ್ರನು, ಅವರು ವಿರಥನನ್ನಾಗಿ ಮಾಡಿ ಪ್ರಾಣ ಸಂಶಯಕ್ಕೆ ಒಳಗಾಗಿಸಿದ ಅಭಿಮನ್ಯುವನ್ನು ಮರಣ ಹೊಂದಿಸಿದನು.
ಗದಾಹಸ್ತೋಽಭ್ಯಯಾತ್ ತೂರ್ಣಂ ಜಿಘಾಂಸುರಪರಾಜಿತಮ್ ॥
ಗದಿನಂ ತ್ವಥ ತಂ ದೃಷ್ಟ್ವಾ ವಾಸವಸ್ಯಾತ್ಮಜಾತ್ಮಜಃ |
ಸ ಜಗ್ರಾಹ ಗದಾಂ ವೀರೋ ಗದಾಯುದ್ಧವಿಶಾರದಃ॥ 107 ॥
ದುಶ್ಶಾಸನ ಪುತ್ರನು ಕೈಯಲ್ಲಿ ಗದೆಯನ್ನು ಹಿಡಿದು ಶೀಘ್ರವಾಗಿ ಅಪರಾಜಿತನಾದ ಅವನನ್ನು ಕೊಲ್ಲಲು ಬಯಸಿ ಅವನ ಕಡೆಗೆ ಧಾವಿಸಿದನು. ಕೈಯಲ್ಲಿ ಗದೆಯನ್ನು ಹಿಡಿದ ದುಶ್ಶಾಸನ ಪುತ್ರನನ್ನು ನೋಡಿ, ಗದಾಯುದ್ಧವಿಶಾರದನೂ, ವೀರನೂ, ಇಂದ್ರನ ಮಗನ ಮಗನೂ ಆದ ಅಭಿಮನ್ಯುವು ತಾನೂ ಕೈಯಲ್ಲಿ ಗದೆಯನ್ನು ಹಿಡಿದನು.
ಗದಾಮಂಡಲಮಾರ್ಗಸ್ಥೌ ಸರ್ವಕ್ಷತ್ರಸ್ಯ ಪಶ್ಯತಃ |
ತೌ ಸಂಪ್ರಜಹ್ರತುರ್ವೀರಾವನ್ಯೋನ್ಯಸ್ಯಾಂತರೈಷಿಣೌ ॥ 108 ॥
ಗದಾಮಂಡಲಗಳ ಮಾರ್ಗಗಳಲ್ಲಿ ಪರಿಣತರಾದ ಅವರು ಎಲ್ಲ ಕ್ಷತ್ರಿಯರು ನೋಡುತ್ತಿರುವಂತೆಯೇ ಪರಸ್ಪರರ ದೌರ್ಬಲ್ಯವನ್ನು ಅನ್ವೇಷಿಸುತ್ತಾ, ಪರಸ್ಪರವಾಗಿ ಹೊಡೆದಾಡಿದರು.
ತಾವನ್ಯೋನ್ಯಂ ಗದಾಗ್ರಾಭ್ಯಾಂ ತಾಡಿತೌ ಯುದ್ಧದುರ್ಮದೌ |
ಇಂದ್ರಧ್ವಜಾವಿವೋತ್ಸ ೃಷ್ಟೌ ಗತಸತ್ತೌತ್ವ ಮಹೀಂ ಗತೌ ॥ 109 ॥
ಯುದ್ಧದುರ್ಮದರಾದ ಅವರಿಬ್ಬರೂ ಶ್ರೇಷ್ಠವಾದ ಗದೆಗಳಿಂದ ಪರಸ್ಪರವಾಗಿ ಹೊಡೆಯಲ್ಪಟ್ಟು, ಹಗ್ಗವನ್ನು ಬಿಚ್ಚಿಬಿಟ್ಟ ಇಂದ್ರಧ್ವಜಗಳಂತೆ ಪ್ರಾಣಗಳನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದರು.
ಸ ತು ಹತ್ವಾ ಸಹಸ್ರಾಣಿ ದ್ವಿಪಾಶ್ವರಥಪತ್ತಿನಾಮ್ |
ರಾಜಪುತ್ರಶತಂ ಚಾಗ್ರ್ಯಂ ವೀರಾಂಶ್ಚಾಲಕ್ಷಿತಾನ್ ಬಹೂನ್ ॥ 110 ॥
ಅಷ್ಟೌ ರಥಸಹಸ್ರಾಣಿ ನವದಂತಿಶತಾನಿ ಚ |
ಬೃಹದ್ಬಲಂ ಚ ರಾಜಾನಂ ಸ್ವರ್ಗೇಣ ಸಮಯೋಜಯತ್ ॥ 111 ॥
ಅಭಿಮನ್ಯುವಾದರೂ ಸಹಸ್ರ ಗಜಾಶ್ವ-ರಥ ಪದಾತಿಗಳನ್ನೂ ಶ್ರೇಷ್ಠರಾದ, ನೂರು ರಾಜಕುಮಾರರನೊಡನೆ, ಅನಾಮಧೇಯರಾದ ಇನ್ನೂ ಅನೇಕ ವೀರರನ್ನೂ ಕೊಂದು, ಎಂಟು ಸಹಸ್ರ ರಥಗಳನ್ನೂ, ಒಂಭೈನೂರು ಗಜಗಳನ್ನೂ ಮತ್ತು ಬೃಹದ್ಬಲರಾಜನನ್ನೂ ಸ್ವರ್ಗಕ್ಕೆ ಕಳುಹಿಸಿದನು.
ಗತಃ ಸುಕೃತಿನಾಂ ಲೋಕಾನ್ ಯೇ ಚ ಸ್ವರ್ಗಜಿತಾಂ ಶುಭಾಃ |
ಅದೀನಸ್ತ್ರಾಸಯನ್ ಶತ್ರೂನ್ ನಂದಯಿತ್ವಾ ಚ ಬಾಂಧವಾನ್॥112॥
ಯುದ್ಧದಲ್ಲಿ ದೀನನಾಗದೆ, ಬಂಧುಗಳನ್ನು ಹೆದರಿಸಿ, ಬಾಂಧವರಿಗೆ ಸಂತೋಷವನ್ನುಂಟು ಮಾಡಿ, ಪುಣ್ಯವಂತರು ಹೊಂದುವ ಶುಭವಾದ ಸ್ವರ್ಗಲೋಕವನ್ನು ಅವನು ಹೊಂದಿದ್ದಾನೆ.
ಅಸಕೃನ್ನಾಮ ವಿಶ್ರಾವ್ಯ ಪಿತೄಣಾಂ ಮಾತುಲಸ್ಯ ಚ |
ವೀರೋ ದಿಷ್ಟಾಂತಮಾಪನ್ನಃ ಶೋಚಯನ್ ಬಾಂಧವಾನ್ ಬಹೂನ್ ॥
ವೀರನಾದ ಅವನು ಪಿತೃಗಳ ಮತ್ತು ಸೋದರ ಮಾವನ ಹೆಸರನ್ನು ಅನೇಕ ಬಾರಿ ಘೋಷಿಸುತ್ತಾ, ಅನೇಕ ಬಂಧುಗಳಿಗೆ ಶೋಕವನ್ನುಂಟು ಮಾಡುತ್ತಾ ಮರಣವನ್ನು ಹೊಂದಿದನು.
ತತಃ ಸ್ಮ ಶೋಕಸಂತಪ್ತಾ ಭವತಾಽದ್ಯ ಸಮೇಯುಷಃ ॥114॥
ಏತಾವದೇವ ನಿರ್ವೃತ್ತಮಸ್ಮಾಕಂ ಶೋಕವರ್ಧನಮ್ |
ಸ ಚೈವಂ ಪುರುಷವ್ಯಾಘ್ರಃ ಸ್ವರ್ಗಲೋಕಮವಾಪ್ತವಾನ್ ॥ 115 ॥
ಎಲೈ ಪುರುಷವ್ಯಾಘ್ರನೇ, ಆದ್ದರಿಂದ ನಾವೂ ಸಹ ಶೋಕಸಂತಪ್ತರಾಗಿ ಈಗ ನಿನ್ನ ಸಮಾಗಮವನ್ನು ಹೊಂದಿದ್ದೇವೆ. ನಮ್ಮ ಶೋಕಕ್ಕೆ ಕಾರಣವಾದ ವಿಷಯವು ಇಷ್ಟು ಮಾತ್ರ ನಡೆಯಿತು. ಆ ಪುರುಷವ್ಯಾಘ್ರನಾದ ಅಭಿಮನ್ಯುವಾದರೂ ಸ್ವರ್ಗಲೋಕವನ್ನು ಹೊಂದಿದನು.
ಸಂಜಯಃ
ತತೋಽರ್ಜುನೋ ವಚಃ ಶ್ರುತ್ವಾ ಧರ್ಮರಾಜೇನ ಭಾಷಿತಮ್ |
ಹಾ ಪುತ್ರ ಇತಿ ನಿಃಶ್ವಸ್ಯ ವ್ಯಥಿತೋ ನ್ಯಪತದ್ ಭುವಿ ॥116॥
ಸಂಜಯ ಆಗ ಅರ್ಜುನನು ಧರ್ಮರಾಜನು ಆಡಿದ ಮಾತುಗಳನ್ನು ಕೇಳಿ ಅಯ್ಯೋ ಪುತ್ರನೇ ಎಂದು ನಿಟ್ಟುಸಿರನ್ನು ಬಿಟ್ಟು

ವ್ಯಥೆಯಿಂದ ಭೂಮಿಯ ಮೇಲೆ ಬಿದ್ದು ಮೂರ್ಛೆ ಹೋದನು.
ವಿಷಣ್ಣವದನಾಃ ಸರ್ವೇ ಪರಿಗೃಹ್ಯ ಧನಂಜಯಮ್ |
ನೇತ್ರೈರನಿಮಿಷೈರ್ದೀನಾಃ ಪ್ರತ್ಯವೇಕ್ಷನ್ ಪರಸ್ಪರಮ್ ॥117॥
ವಿಷಣ್ಣ ಮುಖವುಳ್ಳ ಎಲ್ಲರೂ ಅರ್ಜುನನನ್ನು ಹಿಡಿದುಕೊಂಡು, ರೆಪ್ಪೆಯನ್ನು ಮುಚ್ಚದೆ ದೈನ್ಯದಿಂದ ಒಬ್ಬರನ್ನೊಬ್ಬರು ನೋಡಿದರು.
ಪ್ರತಿಲಭ್ಯ ತತಃ ಸಂಜ್ಞಾಂ ವಾಸವಿಃ ಕ್ರೋಧಮೂರ್ಚ್ಛಿತಃ |
ಕಂಪಮಾನೋ ಜ್ವರೇಣೇವ ನಿಃಶ್ವಸಂಶ್ಚ ಪುನಃಪುನಃ ॥118॥
ಪಾಣಿಂ ಪಾಣೌ ವಿನಿಷ್ಪಿಷ್ಯ ದಂತಾನ್ ಕಟಕಟಾಪ್ಯ ಚ |
ತ್ರಿಶಿಖಾಂ ಭ್ರುಕುಟೀಂ ಕೃತ್ವಾ ಕ್ರೋಧಸಂರಕ್ತಲೋಚನಃ |
ಉನ್ಮತ್ತ ಇವ ರೋಷೇಣ ಸ್ಮಯನ್ ವಚನಮಬ್ರವೀತ್ ॥119॥
ಸ್ವಲ್ಪ ಹೊತ್ತಿನ ಮೇಲೆ ಅರ್ಜುನನು ಪ್ರಜ್ಞೆಯನ್ನು ಮರಳಿ ಪಡೆದು, ಕ್ರೋಧ ಮೂರ್ಛಿತನಾಗಿ, ಜ್ವರದಿಂದಲೋ ಎಂಬಂತೆ ನಡುಗುತ್ತಾ, ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಾ, ಕೈಯಿಂದ ಕೈಯನ್ನು ಉಜ್ಜುತ್ತಾ, ದಂತಗಳನ್ನು ಕಡಿಯುತ್ತಾ, ಹುಬ್ಬುಗಳನ್ನು ಗಂಟಿಕ್ಕಿ, ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ, ಹುಚ್ಚನಂತೆ ರೋಷದಿಂದ ನಗುತ್ತಾ ಮಾತನಾಡಿದನು.
ಸತ್ಯಂ ವಃ ಪ್ರತಿಜಾನಾಮಿ ಶ್ವೋ ಹಂತಾಸ್ಮಿ ಜಯದ್ರಥಮ್ |
ನ ಚೇದ್ ವಧಭಯಾತ್ ತ್ರಸ್ತೋ ಧಾರ್ತರಾಷ್ಟ್ರಾನ್ ಪ್ರಹಾಸ್ಯತಿ ॥
ವಧೆಗೆ ಹೆದರಿ ಜಯದ್ರಥನು ನಾಳೆ ಒಂದು ಪಕ್ಷ ದುರ್ಯೋಧನಾದಿಗಳನ್ನು ತ್ಯಜಿಸದಿದ್ದರೆ ನಾಳೆ ಅವನನ್ನು ಕೊಲ್ಲುವೆನು ಎಂದು ಸತ್ಯಪ್ರತಿಜ್ಞೆಯನ್ನು ನಿಮ್ಮೆದುರಿಗೆ ಮಾಡುತ್ತಿದ್ದೇನೆ.
ನ ಚ ಮಾಂ ಶರಣಂ ಗಚ್ಛೇತ್ ಕೃಷ್ಣಂ ವಾ ಪುರುಷೋತ್ತಮಮ್ |
ಭವಂತಂ ವಾ ಮಹಾರಾಜ ಶ್ವೋ ಹಂತಾಸ್ಮಿ ಜಯದ್ರಥಮ್ ॥121॥
ನನಗಾಗಲೀ, ಪುರುಷೋತ್ತಮನಾದ ಕೃಷ್ಣನಿಗಾಗಲೀ, ಎಲೈ ಮಹಾರಾಜನೇ ಅಥವಾ ನಿನಗಾಗಲೀ ಶರಣಾಗದಿದ್ದರೆ ನಾಳೆ ಜಯದ್ರಥನನ್ನು ಕೊಲ್ಲುವೆನು.
ಮಯಿ ವಿಸ್ಮ ೃತಸೌಹಾರ್ದಂ ದುರ್ಯೋಧನಹಿತೇ ರತಮ್ |
ಪಾಪಂ ಬಾಲವಧೇ ಹೇತುಂ ಶ್ವೋ ಹಂತಾಸ್ಮಿ ಜಯದ್ರಥಮ್ ॥122॥
ನನ್ನ ಸ್ನೇಹವನ್ನು ಮರೆತು ದುರ್ಯೋಧನನ ಹಿತದಲ್ಲಿ ರತನಾಗಿ ಬಾಲವಧೆಗೆ ಕಾರಣನಾದ ಪಾಪಿಯಾದ ಜಯದ್ರಥನನ್ನು ನಾಳೆ ಕೊಲ್ಲುವೆನು.
ರಕ್ಷಮಾಣಾಶ್ಚ ತಂ ಸಂಖ್ಯೇ ಯೇ ಮಾಂ ಯೋತ್ಸ್ಯಂತಿ ಕೇಚನ |
ರಾಜನ್ ದ್ರೋಣಮುಖಾಂಸ್ತಾಂಸ್ತಾನ್ ವಾರಯಿಷ್ಯಾಮ್ಯಹಂ ಶರೈಃ ॥
ಎಲೈ ರಾಜನೇ, ಅವನನ್ನು ರಕ್ಷಿಸುತ್ತಾ ನನ್ನ ಜೊತೆಯಲ್ಲಿ ಯಾರು ಯುದ್ಧವನ್ನು ಮಾಡುವರೋ ಅಂತಹ ದ್ರೋಣ ಮೊದಲಾದವರೆಲ್ಲರನ್ನೂ ನನ್ನ ಬಾಣಗಳಿಂದ ತಡೆಯುವೆನು.
ಏವಂ ಯದಿ ನ ಸಂಗ್ರಾಮೇ ಕುರ್ಯಾಂ ಶ್ವಃ ಪುರುಷೋತ್ತಮ |
ಮಾ ಸ್ಮ ಪುಣ್ಯಕೃತಾಂ ಲೋಕಾನ್ ಪ್ರಾಪ್ನುಯಾಂಶೂರಸಮ್ಮತಾನ್ ॥
ಎಲೈ ಪುರುಷೋತ್ತಮನೇ, ನಾಳೆ ಯುದ್ಧದಲ್ಲಿ ನಾನು ಈ ಕಾರ್ಯವನ್ನು ಮಾಡದಿದ್ದರೆ ಶೂರರಿಗೆ ಸಮ್ಮತವಾದ ಪುಣ್ಯವಂತರ ಲೋಕವು ನನಗೆ ದೊರೆಯುವುದು ಬೇಡ.
ಯೇ ಲೋಕಾ ಮಾತೃಘಾತಿನಾಂ ಯೇ ಲೋಕಾಃ ಪಿತೃಘಾತಿನಾಮ್ |
ಯೇ ಗುರೋರ್ದಾರಗಾಮೀನಾಂ ಪಿಶುನಾನಾಂ ಚ ಯಾ ಗತಿಃ ॥
ಪಾಯಸಂ ಪಯಸಾಽನ್ನಂ ವಾ ಶಾಕಂ ಕೃಸರಮೇವ ವಾ |
ಸಂಯಾವಾಪೂಪಮಾಂಸಾನಿ ಯೇ ಚ ಲೋಕಾ ವೃಥಾಽಶ್ನತಾಮ್ ॥
ಸಾಧೂನ್ ನಿಂದಯತಾಂ ಚಾಪಿ ಯೇ ಚಾಪಿ ಪರಿವಾದಿನಾಮ್ |
ಯೇ ಚ ನಿಕ್ಷೇಪಹಾರೀಣಾಂ ಯೇ ಚ ವಿಶ್ವಾಸಘಾತಿನಾಮ್ ॥127॥
ಭುಕ್ತಪೂರ್ವಾಂ ಸ್ತ್ರಿಯಂ ಚಾಪಿ ನಿಂದತಾಮಘಶಂಸಿನಾಮ್ |
ಬ್ರಾಹ್ಮಣಾನ್ ನಿಘ್ನತಾಂ ಯೇ ಚ ಯೇ ಚ ಗೋಘಾತಿನಾಮಪಿ ॥
ಅದತ್ವಾ ದೇವತಾಭ್ಯಶ್ಚ ಅತಿಥಿಭ್ಯಸ್ತಥೈವ ಚ |
ತಾನಿಹೈವೋಪಗಚ್ಛೇಯಂ ನ ಚೇದ್ ಹನ್ಯಾಂ ಜಯದ್ರಥಮ್ ॥129॥
ತಾಯಿಯನ್ನು ಕೊಂದವರಿಗೆ ಯಾವ ಲೋಕವೋ; ತಂದೆಯನ್ನು ಕೊಂದವರಿಗೆ ಯಾವ ಲೋಕವೋ; ಗುರುಪತ್ನಿಯನ್ನು ಗಮನ ಮಾಡಿದವರಿಗೆ ಯಾವ ಲೋಕವೋ; ಚಾಡಿಕೋರರಿಗೆ ಯಾವ ಗತಿಯೋ; ಪಾಯಸವನ್ನಾಗಲೀ, ಕ್ಷೀರಾನ್ನವನ್ನಾಗಲೀ, ಶಾಕವನ್ನಾಗಲೀ, ಯಜ್ಞ ಹವಿಸ್ಸನ್ನಾಗಲೀ, ಗಂಜಿ-ಅಪೂಪ ಅಥವಾ ಮಾಂಸವನ್ನಾಗಲೀ ವ್ಯರ್ಥವಾಗಿ ಭುಂಜಿಸುವವರಿಗೆ ಯಾವ ಲೋಕಗಳೋ; ಸಜ್ಜನರನ್ನು ನಿಂದಿಸುವವರಿಗೆ ಸಜ್ಜನರ ಜೊತೆಯಲ್ಲಿ ಜಗಳವಾಡುವವರಿಗೆ, ವಿಶ್ವಾಸ ಘಾತಕರಿಗೆ, ರಕ್ಷಣೆಗಿಟ್ಟ ವಸ್ತುವನ್ನು ಅಪಹಾರ ಮಾಡುವವರಿಗೆ ಯಾವ ಲೋಕಗಳೋ; ಹಿಂದೆ ಭೋಗಿಸಿದ ಸ್ತ್ರೀಯನ್ನು ನಿಂದಿಸುವವರಿಗೆ, ಇನ್ನೊಬ್ಬರಿಗೆ ಕೇಡನ್ನು ಬಯಸುವವರಿಗೆ, ಬ್ರಾಹ್ಮಣರನ್ನು ಕೊಲ್ಲುವವರಿಗೆ, ಗೋಹತ್ಯೆಯನ್ನು ಮಾಡುವವರಿಗೆ ಯಾವ ಲೋಕಗಳೋ; ದೇವತೆಗಳಿಗೆ ಮತ್ತು ಋಷಿಗಳಿಗೆ ನೀಡದೆ ಭುಂಜಿಸುವವರಿಗೆ ಯಾವ ಲೋಕಗಳೋ, ಜಯದ್ರಥನನ್ನು ಕೊಲ್ಲದಿದ್ದರೆ ನನಗೆ ಇಲ್ಲಿಯೇ ಅಂತಹ

ಲೋಕಗಳು ದೊರೆಯಲಿ.
ವೇದಾಧ್ಯಯನಮತ್ಯರ್ಥಂ ಶಾಸಿತಂ ದ್ವಿಜಸತ್ತಮಃ |
ಕಾಲದ್ರವ್ಯಮಿತಿಂ ಕೃತ್ವಾ ಯೋಽಧ್ಯಾಪಯತಿ ಮೂಢಧೀಃ ||130||
ಭೃತಕಃ ಸ ತು ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ |
ತಸ್ಯ ಯಾ ಗತಿರುದ್ದಿಷ್ಟಾ ತತ್ಪಂಕ್ತ್ಯಾ ಭುಂಜತಸ್ತದಾ || 131 ||
ಅವಮನ್ಯಮಾನೋ ಯಾನ್ ಯಾತಿ ವೃದ್ಧಾನ್ ಸಾಧೂನ್ ಗುರೂಂಸ್ತಥಾ |
ಸಂಸ್ಪ ೃಶನ್ ಬ್ರಾಹ್ಮಣಂ ಗಾಂ ಚ ಪದಾಽಗ್ನಿಂ ಚಾಪಿ ಯೋ ವ್ರಜೇತ್ ||
ಯೋಽಪ್ಸು ಮೂತ್ರಂ ಪುರೀಷಂ ವಾ ಶ್ಲೇಷ್ಮಾಣಂ ವಾಽಪಿ ಮುಂಚತಿ |
ಗಚ್ಛೇಯಂ ತಾಂ ಗತಿಂ ಕೃಚ್ಛ್ರಾಂ ನ ಚೇದ್ಧನ್ಮಿ ಜಯದ್ರಥಮ್ ||133||
ಗುರುಗಳಿಂದ ಅಧ್ಯಯನ ಮಾಡಿದ ವೇದವನ್ನು ಯಾವ ಮೂಢನಾದ ಬ್ರಾಹ್ಮಣನು ಕಾಲ-ದ್ರವ್ಯ ಮಿತಿಯನ್ನು ಇಟ್ಟುಕೊಂಡು ಅಧ್ಯಾಪನ ಮಾಡಿಸುತ್ತಾನೆಯೋ ಅವನನ್ನು ಭೃತಕ ಎಂದು ತಿಳಿಯಬೇಕು. ಅವನು ಎಲ್ಲ ಸತ್ಕರ್ಮದಿಂದಲೂ ಬಹಿಷ್ಕೃತನಾದವನು. ಅವನಿಗೆ ಎಂತಹ ಗತಿಯೋ; ಅವನ ಸಹಪಂಕ್ತಿಯಲ್ಲಿ ಭೋಜನ ಮಾಡುವವರಿಗೆ ಎಂತಹ ಗತಿಯೋ; ಹಿರಿಯರನ್ನೂ, ಸಜ್ಜನರನ್ನೂ ಮತ್ತು ಗುರುಗಳನ್ನೂ ಅವಮಾನ ಮಾಡುತ್ತಾ ಹೋಗುವವನಿಗೆ ಯಾವ ಗತಿಯೋ; ಬ್ರಾಹ್ಮಣನನ್ನು, ಗೋವನ್ನು, ಅಗ್ನಿಯನ್ನು ಪಾದದಿಂದ ಸ್ಪರ್ಶ ಮಾಡುತ್ತಾ ನಡೆಯುವವನಿಗೆ ಯಾವ ಗತಿಯೋ; ಜಲದಲ್ಲಿ ಮಲ-ಮೂತ್ರ-ಶ್ಲೇಷ್ಮಗಳನ್ನು ವಿಸರ್ಜಿಸುವವನಿಗೆ ಯಾವ ಗತಿಯೋ, ನಾಳೆ ಜಯದ್ರಥನನ್ನು ಕೊಲ್ಲದಿದ್ದರೆ ಅಂತಹ ದುರ್ಗತಿಯನ್ನು ನಾನು ಹೊಂದಿಯೇನು!
ನಗ್ನಸ್ಯ ಸ್ನಾಯಮಾನಸ್ಯ ಯಾ ಚ ವಂಧ್ಯಾತಿಥೇರ್ಗತಿಃ |
ಉತ್ಕ್ರೋಶಕಾನೃತಾನಾಂ ಚ ವಂಚಕಾನಾಂ ಚ ಯಾ ಗತಿಃ || 134 ||
ಸೂಚಕಾತ್ಮಾಪಹಾರೀಣಾಂ ಯಾ ಚ ಮಿಥ್ಯಾಭಿಶಂಸಿನಾಮ್ |
ಭೃತ್ಯೈಃ ಸಂದೃಶ್ಯಮಾನಾನಾಂ ಪುತ್ರದಾರಾಶ್ರಿತೈಸ್ತಥಾ || 135 ||
ಅಸಂವಿಭಜ್ಯ ಕ್ಷುದ್ರಾಣಾಂ ಯಾ ಗತಿರ್ಮೃಷ್ಟಮಶ್ನತಾಮ್ |
ತಾಂ ಗಚ್ಛೇಯಂ ಗತಿಂ ಘೋರಾಂ ನ ಚೇದ್ಧನ್ಮಿ ಜಯದ್ರಥಮ್ ||136||
ನಗ್ನವಾಗಿ ಸ್ನಾನ ಮಾಡುವವನಿಗೆ, ಅತಿಥಿಯನ್ನು ವ್ಯರ್ಥವಾಗಿ ಕಳುಹಿಸುವವನಿಗೆ, ಕಿರುಚಿ ಹಿರಿಯರನ್ನು ನಿಂದಿಸುವವನಿಗೆ, ಸುಳ್ಳು ಮಾತನಾಡುವವನಿಗೆ ಮತ್ತು ವಂಚಕರಿಗೆ ಯಾವ ಗತಿಯೋ; ಚಾಡಿಕೋರರಿಗೆ, ಆತ್ಮಘಾತಕರಿಗೆ, ಮಿಥ್ಯಾರೂಪವನ್ನು ಮಾಡುವವರಿಗೆ, ಭೃತ್ಯರನ್ನು ಪತ್ನಿ-ಪುತ್ರರನ್ನು ಅವಲಂಬಿಸಿ ಜೀವಿಸುವವರಿಗೆ, ಮೃಷ್ಟಾನ್ನವನ್ನು ವಿಭಾಗವನ್ನು ಮಾಡಿ ಹಂಚದೆ ಭುಂಜಿಸುವ ಕ್ಷುದ್ರರಿಗೆ ಯಾವ ಘೋರವಾದ ಗತಿಯು ಆಗುತ್ತದೆಯೋ ನಾಳೆ ಜಯದ್ರಥನನ್ನು ಕೊಲ್ಲದಿದ್ದರೆ ಆ ಗತಿಯು ನನಗಾಗಲಿ.
ಸಂಶ್ರಿತಂ ಚಾಪಿ ಯಸ್ತ್ಯಕ್ತ್ವಾ ಸಾಧುಸದ್ವಚನೇ ರತಮ್ |
ನೈನಂ ಭರತಿ ದುಷ್ಟಾತ್ಮಾ ನಿಂದತೇ ಚೋಪಕಾರಿಣಮ್ || 137 ||
ಅರ್ಹತೇ ಪ್ರಾತಿವೇಶ್ಯಾಯ ಶ್ರಾದ್ಧಂ ಯೋ ನ ದದಾತಿ ಹ |
ಅನರ್ಹತೇ ಚ ಯೋ ದದ್ಯಾದ್ ವೃಷಲೀಪತಯೇಽಪಿ ಚ || 138 ||
ಮದ್ಯಪೋ ಭಿನ್ನಮರ್ಯಾದಃ ಕೃತಘ್ನೋ ಭರ್ತೃನಿಂದಕಃ |
ತೇಷಾಂ ಗತಿಮಿಯಾಂ ಕ್ಷಿಪ್ರಂ ನ ಚೇದ್ಧನ್ಮಿ ಜಯದ್ರಥಮ್ || 139 ||
ತನ್ನನ್ನು ಆಶ್ರಯಿಸಿದ ತನ್ನ ಮಾತನ್ನು ಪಾಲಿಸುವ ಸಜ್ಜನನಾದ ವ್ಯಕ್ತಿಯನ್ನು ಪರಿತ್ಯಜಿಸಿ ಪೋಷಿಸದ ದುಷ್ಟಾತ್ಮನಿಗೆ ಯಾವ ಗತಿಯೋ; ಉಪಕಾರವನ್ನು ಮಾಡಿದವನನ್ನು ನಿಂದಿಸುವವನಿಗೆ ಯಾವ ಗತಿಯೋ; ಯೋಗ್ಯನಾದ ಕುಟುಂಬಿಯಾದ ಬ್ರಾಹ್ಮಣನಿಗೆ ಶ್ರಾದ್ಧವನ್ನು ಕೊಡದವನಿಗೆ ಯಾವ ಗತಿಯೋ; ಅನರ್ಹನಾದ ವೃಷಲೀಪತಿಗೆ ಶ್ರಾದ್ಧವನ್ನು ಕೊಡುವವನಿಗೆ ಯಾವ ಗತಿಯೋ; ಮದ್ಯಪಾನ ಮಾಡುವವನಿಗೆ, ನೀತಿಯ ಎಲ್ಲೆಯನ್ನು ಮೀರಿದವನಿಗೆ, ಕೃತಘ್ನನಾದವನಿಗೆ, ಸ್ವಾಮಿಯನ್ನು ನಿಂದಿಸುವವನಿಗೆ ಯಾವ ಗತಿಯೋ ಅವೆಲ್ಲವೂ ಜಯದ್ರಥನನ್ನು ಕೊಲ್ಲದಿದ್ದರೆ ನನಗೆ ಶೀಘ್ರವಾಗಿ ಆಗಲಿ.
ಧರ್ಮಾದಪೇತಾ ಯೇ ಚಾನ್ಯೇ ಯೇ ಚಾತ್ರಾಪರಿಕೀರ್ತಿತಾಃ |
ಯೇ ಮಯಾ ಕೀರ್ತಿತಾಶ್ಚಾತ್ರ ತೇಷಾಂ ಗತಿಮವಾಪ್ನುಯಾಮ್ ||140||
ನಾನು ಇಲ್ಲಿ ಹೇಳದ ಧರ್ಮಭ್ರಷ್ಟರಾದ ಪುರುಷರಿಗೆ ಯಾವ ಗತಿಯೋ; ನಾನು ಹೇಳಿದ ಪುರುಷರಿಗೆ ಯಾವ ಗತಿಯೋ ಅಂತಹ ಗತಿಯು ನನಗಾಗಲಿ.
ಯದಿ ವ್ಯುಷ್ಟಾಮಿಮಾಂ ರಾತ್ರಿಂ ಶ್ವೋ ನ ಹನ್ಯಾಂ ಜಯದ್ರಥಮ್ |
ಇಮಾಂ ಚಾಪ್ಯಪರಾಂ ಭೂಯಃ ಪ್ರತಿಜ್ಞಾಂ ಮೇ ನಿಬೋಧತ ||141||
ಈ ರಾತ್ರಿಯು ಕಳೆದ ಮೇಲೆ ನಾಳೆ ಜಯದ್ರಥನನ್ನು ಕೊಲ್ಲದಿದ್ದರೆ ನೀವೆಲ್ಲರೂ ಈ ನನ್ನ ಇನ್ನೊಂದು ಪ್ರತಿಜ್ಞೆಯನ್ನು ತಿಳಿಯಿರಿ.
ಇಹೈವಂ ಚ ಪ್ರವೇಕ್ಷ್ಯಾಮಿ ಜ್ವಲಿತಂ ಜಾತವೇದಸಮ್ |
ಗಾಂಡೀವಹಸ್ತೋ ರಾಜ್ಞಾಂ ಚ ಸಮಕ್ಷಂ ಪೃಥಿವೀಪತೇ || 142 ||
ಅನಸ್ತಮಿತ ಆದಿತ್ಯೇ ನ ಚೇದ್ ಹನ್ಮಿ ಜಯದ್ರಥಮ್ |
ಯದ್ಯಸ್ಮಿನ್ನಹತೇ ಪಾಪೇ ಸೂರ್ಯಾಸ್ತಮುಪಯಾಸ್ಯತಿ || 143 ||
ಸೂರ್ಯನು ಮುಳುಗುವುದರೊಳಗೆ ಜಯದ್ರಥನನ್ನು ಕೊಲ್ಲದಿದ್ದರೆ, ಜಯದ್ರಥನನ್ನು ಕೊಲ್ಲದೆ ಸೂರ್ಯನು ಮುಳುಗಿದರೆ, ಎಲೈ ರಾಜನೇ, ಇಲ್ಲಿಯೇ ರಾಜರ ಎದುರಿನಲ್ಲಿ ಗಾಂಡೀವವನ್ನು ಹಿಡಿದು ಜ್ವಲಿಸುವ ಅಗ್ನಿಯನ್ನು ಪ್ರವೇಶ ಮಾಡುವೆನು.
ಅಸುರಸುರಮನುಷ್ಯಾಃ ಪಕ್ಷಿಣೋ ವೋರಗಾ ವಾ

ಪಿತೃರಜನಿಚರಾ ವಾ ಬ್ರಹ್ಮದೇವರ್ಷಯೋ ವಾ |
ಚರಮಚರಮಪೀದಂ ಯತ್ ಪರಂ ಚಾಪಿ ತಸ್ಮಾತ್
ತದಪಿ ಮಮ ರಿಪುಂ ತಂ ರಕ್ಷಿತುಂ ನೇಹ ಶಕ್ತಾಃ ॥ 144 ॥
ಸುರಾಸುರ-ಮನುಷ್ಯರಾಗಲೀ, ಪಕ್ಷಿಗಳು-ಸರ್ಪಗಳು-ಪಿತೃಗಳು- ರಾಕ್ಷಸರಾಗಲೀ, ಬ್ರಹ್ಮಋಷಿಗಳು-ದೇವರ್ಷಿಗಳಾಗಲೀ, ಈ ಚರಾಚರ ಜಗತ್ತೇ ಆಗಲೀ, ಅದಕ್ಕಿಂತ ಶ್ರೇಷ್ಠವಾದುದೇ ಆಗಲೀ ಯಾರೂ ಸಹ ನನ್ನ ಶತ್ರುವನ್ನು ರಕ್ಷಿಸಲು ಸಮರ್ಥರಾಗುವುದಿಲ್ಲ.
ಯದಿ ವಿಶತಿ ರಸಾತಳಂ ತದಗ್ರ್ಯಂ
ವಿಯದಪಿ ದೇವಪುರಂ ದಿತೇಃ ಪುರಂ ವಾ |
ನಿಶಿತಶರವರೈರಹಂ ಪ್ರಸಹ್ಯ
ಶೃಣುತ ಹಿ ಸಿಂಧುಪತೇಃ ಶಿರೋ ಹರಿಷ್ಯೇ ॥ 145 ॥
ಜಯದ್ರಥನು ಶ್ರೇಷ್ಠವಾದ ರಸಾತಳ ಲೋಕವನ್ನು ಹೊಕ್ಕರೂ, ಅಂತರಿಕ್ಷವನ್ನು, ದೇವಪುರವನ್ನು ಅಥವಾ ದೈತ್ಯಪುರವನ್ನು ಪ್ರವೇಶ ಮಾಡಿದರೂ ನನ್ನ ನಿಶಿತವಾದ ಶ್ರೇಷ್ಠವಾದ ಬಾಣಗಳಿಗೆ ವಶಪಡಿಸಿ ಸಿಂಧುಪತಿಯ ಶಿರಸ್ಸನ್ನು ಕತ್ತರಿಸುವೆನು. ಈ ಪ್ರತಿಜ್ಞೆಯನ್ನು ಎಲ್ಲರೂ ಕೇಳಿ.
ಸಂಜಯಃ
ಏವಮುಕತ್ವ ವಿಚಿಕ್ಷೇಪ ಗಾಂಡೀವಂ ಸವ್ಯದಕ್ಷಿಣಮ್ |
ತಸ್ಯ ಸರ್ವಮತಿಕ್ರಮ್ಯ ಧನುಃಶಬ್ದೋಽಸ್ಪ ೃಶದ್ ದಿವಮ್ ॥ 146 ॥
ಸಂಜಯ ಹೀಗೆ ಹೇಳಿ ಅರ್ಜುನನು ಗಾಂಡೀವವನ್ನು ಬಲಭಾಗದಲ್ಲಿ ಮತ್ತು ಎಡಭಾಗದಲ್ಲಿ ಹಿಡಿದು ಎಳೆದನು. ಅದರಿಂದ ಉಂಟಾದ ಶಬ್ದವು ಉಳಿದೆಲ್ಲ ಶಬ್ದಗಳನ್ನೂ ಮೀರಿ ಅಂತರಿಕ್ಷವೆಲ್ಲವನ್ನೂ ವ್ಯಾಪಿಸಿತು.
ಅರ್ಜುನೇನ ಪ್ರತಿಜ್ಞಾತೇ ಪಾಂಚಜನ್ಯಂ ಜನಾರ್ದನಃ |
ಪ್ರದಧ್ಮೌ ತತ್ರ ಸಂಕ್ರುದ್ಧೋ ದೇವದತ್ತಂ ಧನಂಜಯಃ ॥ 147 ॥
ಅರ್ಜುನನು ಹೀಗೆ ಪ್ರತಿಜ್ಞೆ ಮಾಡುತ್ತಿರಲು ಕೃಷ್ಣನು ಪಾಂಚಜನ್ಯ ಶಂಖವನ್ನು ಊದಿದನು. ಆಗ ಧನಂಜಯನು ಕೋಪದಿಂದ ದೇವದತ್ತ ಶಂಖವನ್ನು ಊದಿದನು.
ಸ ಪಾಂಚಜನ್ಯೋಽಚ್ಯುತವಕ್ತ್ರವಾಯುನಾ
ಭೃಶಂ ಸುಪೂರ್ಣೋದರನಿಃಸೃತಧ್ವನಿಃ |
ಜಗತ್ ಸಪಾತಾಳವಿಯದ್ದಿಗೀಶ್ವರಂ
ಪ್ರಕಂಪಯಾಮಾಸ ಯುಗಾತ್ಯಯೇ ಯಥಾ ॥ 148 ॥
ಕೃಷ್ಣನ ಮುಖದಿಂದ ಹೊರಟ ವಾಯುವಿನಿಂದ ಪೂರ್ಣವಾಗಿ ತುಂಬಿದ ಪಾಂಚಜನ್ಯ ಶಂಖದಿಂದ ಹೊರಟ ಶ್ರೇಷ್ಠವಾದ ಧ್ವನಿಯು ಪಾತಾಳ, ಅಂತರಿಕ್ಷ, ದಿಕ್ಪಾಲಕರು ಇವರಿಂದ ಸಹಿತವಾದ ಎಲ್ಲ ಲೋಕಗಳನ್ನೂ ಯುಗಾವಸಾನದಲ್ಲಿಯೋ ಎಂಬಂತೆ ನಡುಗಿಸಿತು.
ತತೋ ವಾದಿತ್ರನಿರ್ಘೋಷಾಃ ಪ್ರಾದುರಾಸನ್ ಸಹಸ್ರಶಃ |
ಸಿಂಹನಾದಾಶ್ಚ ಪಾಂಡೂನಾಂ ಪ್ರತಿಜ್ಞಾತೇ ಮಹಾತ್ಮನಾ ॥ 149 ॥
ಅನಂತರ ಸಹಸ್ರ ಸಂಖ್ಯೆಯಲ್ಲಿ ವಾದ್ಯಘೋಷಗಳು ಉಂಟಾದವು. ಮಹಾತ್ಮನಾದ ಅರ್ಜುನನು ಪ್ರತಿಜ್ಞೆಯನ್ನು ಮಾಡುತ್ತಿರಲು ಪಾಂಡವರ ಸಿಂಹನಾದಗಳೂ ಉಂಟಾದವು.
ಅನೃತ್ಯದಿವ ಗಾಂಡೀವಂ ಶರಾಸ್ತೂಣೀಗತಾ ಮುದಾ |
ನಿರಾಕ್ರಾಮನ್ನಿವ ತದಾ ಸ್ವಯಮೇವ ಮೃಧೈಷಿಣಃ ॥ 150 ॥
ಗಾಂಡೀವ ಧನುಸ್ಸು ಕುಣಿಯುವಂತೆ ತೋರಿತು. ಬತ್ತಳಿಕೆಯಲ್ಲಿದ್ದ ಬಾಣಗಳು ಯುದ್ಧವನ್ನು ಬಯಸಿ ಸಂತೋಷದಿಂದ ತಾವೇ ಹೊರಗೆ ಬರುತ್ತಿರುವಂತೆ ತೋರಿದವು.
ಭೀಮಸೇನಸ್ತು ಸಂಹೃಷ್ಟಃ ಪ್ರತ್ಯಭಾಷತ ಭಾರತ |
ಧನಂಜಯಮಭಿಪ್ರೇಕ್ಷ್ಯ ಹರ್ಷಗದ್ಗದಯಾ ಗಿರಾ ॥ 151 ॥
ಪ್ರತಿಜ್ಞೋದ್ಭವಶಬ್ದೇನ ಕೃಷ್ಣಶಂಖಸ್ವನೇನ ಚ |
ನಿಹತೋ ಧಾರ್ತರಾಷ್ಟ್ರೋಽಯಂ ಸಾನುಬಂಧಃ ಸುಯೋಧನಃ ॥152॥
ಎಲೈ ಭಾರತನೇ, ಸಂತೋಷಗೊಂಡ ಭೀಮಸೇನನಾದರೂ ಧನಂಜಯನನ್ನು ನೋಡಿ, ಹರ್ಷಗದ್ಗದವಾದ ಮಾತುಗಳಿಂದ, ನಿನ್ನ ಪ್ರತಿಜ್ಞಾ ವಾಕ್ಯದಿಂದ ಉಂಟಾದ ಶಬ್ದದಿಂದಲೂ ಮತ್ತು ಕೃಷ್ಣನ ಶಂಖಧ್ವನಿಯಿಂದಲೂ ಪರಿವಾರ ಸಹಿತನಾದ, ಧೃತರಾಷ್ಟ್ರ ಪುತ್ರನಾದ ಸುಯೋಧನನು ಹತನಾಗಿದ್ದಾನೆ ಎಂದು ಹೇಳಿದನು.
ಅಥ ಮೃದಿತತಮಾಗ್ರ್ಯದಾಮಮಾಲ್ಯಂ
ತವ ಸುತಶೋಕಮಯಂ ಚ ರೋಷಜಾತಮ್ |
ವ್ಯಪನುದತಿ ಮಹಾಪ್ರಭಾವಮೇತನ್-
ನರವರ ವಾಕ್ಯಮಿದಂ ಮಹಾರ್ಥಮಿಷ್ಟಮ್ ॥ 153 ॥
ಎಲೈ ಪುರುಷಶ್ರೇಷ್ಠನೇ, ದುರ್ಯೋಧನನ ರೋಷದಿಂದ ಉಂಟಾದ ನಿನ್ನ ಸುತನ ಶೋಕಕ್ಕೆ ಕಾರಣವಾದ, ಗಂಧಮಾಲ್ಯಗಳನ್ನು ನಾಶಮಾಡುವ, ಮಹಾಪ್ರಭಾವ- ಶಾಲಿಯಾದ ಈ ವಾಕ್ಯಗಳು ನಿನ್ನ ಶತ್ರುಗಳದೊಡ್ಡ ಇಷ್ಟಾರ್ಥವನ್ನು ನಾಶ ಮಾಡುತ್ತವೆ (ಎಂದು ಭೀಮಸೇನನು ಹೇಳಿದನು).
ಸಂಜಯಃ

ಅಥ ಶಂಖೈಶ್ಚ ಭೇರೀಭಿಃ ಪಣವೈಃ ಸೈನಿಕಾಸ್ತಥಾ |
ಸಸೂತಮಾಗಧಾ ಜಿಷ್ಣುಂ ಸ್ತುತಿಭಿಃ ಸಮಪೂಜಯನ್ ॥ 154 ॥
ಸಂಜಯ ಆಗ ಶಂಖ-ಭೇರಿ-ಪಣವಗಳಿಂದ ಸಹಿತರಾದ ಸೈನಿಕರೂ, ಸೂತ-ಮಾಗಧರೂ ಸಹ ಸ್ತೋತ್ರಗಳಿಂದ ಅರ್ಜುನನನ್ನು ಪೂಜಿಸಿದರು.
ತದಾ ಭೀಮಂ ಬಲಂ ಸರ್ವಂ ತೇನ ನಾದೇನ ಮೋಹಿತಮ್ |
ತಾವಕಂ ತನ್ಮಹಾರಾಜ ವಿಷಣ್ಣಂ ಸಮಪದ್ಯತ ॥ 155 ॥
ಎಲೈ ಮಹಾರಾಜನೇ, ಆಗ ನಿನ್ನ ಭಯಂಕರವಾದ ಸೈನ್ಯವೆಲ್ಲವೂ ಆ ನಾದದಿಂದ ಮೋಹಿತವಾಗಿ ವಿಷಾದವನ್ನು ಹೊಂದಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತನೆಯ ಅಧ್ಯಾಯ
ಅರ್ಜುನನ ಪ್ರತಿಜ್ಞೆಯನ್ನು ಕೇಳಿ ಚಕಿತನಾದ ಸೈಂಧವನಿಗೆ ದ್ರೋಣ-ದುರ್ಯೋಧನರಿಂದ ಆಶ್ವಾಸನೆ.
ಸಂಜಯಃ
ಶ್ರುತ್ವಾ ತು ತಂ ಮಹಾಶಬ್ದಂ ಪಾಂಡೂನಾಂ ಪುತ್ರಗೃದ್ಧಿನಾಮ್ |
ಚಾರೈಃ ಪ್ರವೇದಿತಸ್ತ್ರಸ್ತಃ ಸಮುತ್ಥಾಯ ಜಯದ್ರಥಃ ॥ 1 ॥
ಸಂಜಯ ಪುತ್ರನನ್ನು ಹಂಬಲಿಸುವ ಪಾಂಡವರ ಮಹಾಶಬ್ದವನ್ನು ಕೇಳಿ ಎದ್ದು ನಿಂತು ಚಾರರಿಂದ ವಿಷಯವನ್ನು ತಿಳಿದು ಜಯದ್ರಥನು ಹೆದರಿದನು.
ಶೋಕಸಮ್ಮೂಢಹೃದಯೋ ದುಃಖೇನಾಭ್ಯಾಹತೋ ಭೃಶಮ್ |
ಮಜ್ಜಮಾನ ಇವಾಗಾಧೇ ವಿಪುಲೇ ಶೋಕಸಾಗರೇ |
ಜಗಾಮ ಸಮಿತಿಂ ರಾಜ್ಞಾಂ ಸೈಂಧವೋ ವಿಮೃಶನ್ ಬಹು ॥ 2 ॥
ಶೋಕದಿಂದ ತುಂಬಿದ ಹೃದಯವುಳ್ಳವನಾಗಿ, ಬಹಳ ದುಃಖಪೀಡಿತನಾಗಿ ಅಗಾಧವೂ, ವಿಸ್ತಾರವೂ ಆದ ಶೋಕಸಾಗರದಲ್ಲಿ ಮುಳುಗುವವನಂತೆ ಸೈಂಧವನು ಬಹಳ ಯೋಚನೆಯನ್ನು ಮಾಡುತ್ತಾ ರಾಜರ ಸಮುದಾಯವಿದ್ದಲ್ಲಿಗೆ ಹೋದನು.
ಸ ತೇಷಾಂ ನರದೇವಾನಾಂ ಸಕಾಶೇ ಪರ್ಯದೇವಯತ್ |
ಅಭಿಮನ್ಯುಪಿತುರ್ಭೀತಃ ಸವ್ರೀಡೋ ವಾಕ್ಯಮಬ್ರವೀತ್ ॥ 3 ॥
ಅವನು ಆ ರಾಜರ ಎದುರಿನಲ್ಲಿ ಗೋಳಾಡಿದನು. ಅಭಿಮನ್ಯುವಿನ ತಂದೆಗೆ ಹೆದರಿ ನಾಚಿಕೆಯಿಂದ ಮಾತನಾಡಿದನು.
ಪಾಂಡೋಃ ಕ್ಷೇತ್ರೇ ಯಸ್ತು ಜಾತಃ ಶಕ್ರೇಣ ಕಿಲ ಕಾಮಿನಾ |
ಸ ನಿನೀಷತಿ ದುರ್ಬುದ್ಧಿರ್ಮಾಂ ಕಿಲೈಕಂ ಯಮಕ್ಷಯಮ್ ॥ 4 ॥
ಸ್ವಸ್ತಿ ವೋಽಸ್ತು ಗಮಿಷ್ಯಾಮಿ ಸ್ವಗೃಹಂ ಜೀವಿತೇಪ್ಸಯಾ ॥ 5 ॥
ಪಾಂಡುವಿನ ಪತ್ನಿಯಲ್ಲಿ ಕಾಮಿಯಾದ ಇಂದ್ರನಿಂದ ಜನಿಸಿದ ದುರ್ಬುದ್ಧಿಯುಳ್ಳ ಪುತ್ರನು ನನ್ನೊಬ್ಬನನ್ನು ಯಮಲೋಕಕ್ಕೆ ಕಳುಹಿಸಲು ಬಯಸುತ್ತಾನೆ. ನಿಮಗೆ ಕ್ಷೇಮವಾಗಲಿ. ಜೀವವನ್ನು ಉಳಿಸಿಕೊಳ್ಳಲು ನಾನು ಮನೆಗೆ ಹೋಗುವೆನು.
ಅಥವಾ ಸ್ಥ ಪ್ರತಿಬಲಾಃ ತ್ರಾತುಂ ಮಾಂ ಕ್ಷತ್ರಿಯರ್ಷಭಾಃ |
ಪಾರ್ಥೇನ ಪಾರ್ಥಿವಾ ವೀರಾಸ್ತದ್ ದದಧ್ವಂ ಮಮಾಭಯಮ್ ॥6॥
ಅಥವಾ ವೀರರೂ, ಕ್ಷತ್ರಿಯಶ್ರೇಷ್ಠರೂ ಆದ ನೀವು ಪಾರ್ಥನಿಗೆ ಎದುರಾಗಿ ನಿಂತು ನನ್ನನ್ನು ರಕ್ಷಣೆಯನ್ನು ಮಾಡುವುದಾದರೆ ನನಗೆ ಅಭಯವನ್ನು ಕೊಡಿ.
ದ್ರೋಣದುರ್ಯೋಧನಕೃಪಾಃ ಕರ್ಣಮದ್ರೇಶಬಾಹ್ಲಿಕಾಃ |
ದುಃಶಾಸನಾದಯಃ ಶಕ್ತಾಃ ತ್ರಾತುಮಪ್ಯಂತಕಾರ್ದಿತಮ್ ॥ 7 ॥
ದ್ರೋಣ-ದುರ್ಯೋಧನ-ಕೃಪರೂ, ಕರ್ಣ-ಶಲ್ಯ-ಬಾಹ್ಲಿಕರೂ, ದುಶ್ಯಾಸನ ಮೊದಲಾದವರೂ ಯಮನ ಹಿಡಿತಕ್ಕೆ ಸಿಕ್ಕಿದವರನ್ನೂ ರಕ್ಷಿಸಲು ಸಮರ್ಥರಾದವರು.
ಕಿಮಂಗಾಃ ಪುನರೇಕೇನ ಫಲ್ಗುನೇನ ಜಿಘಾಂಸತಾ |
ನ ತ್ರಾಸ್ಯಂತಿ ಭವಂತೋ ಮಾಂ ಸಮಸ್ತಾಃ ಪತಯಃ ಕ್ಷಿತೇಃ ॥ 8 ॥
ಎಲೈ ಪ್ರೀತಿಪಾತ್ರರೇ, ಹೀಗಿರುವಾಗ ಕೊಲ್ಲಲು ಬಯಸುವ ಒಬ್ಬ ಅರ್ಜುನನಿಂದ ಕ್ಷಿತಿಪತಿಗಳಾದ ನೀವೆಲ್ಲರೂ ಸೇರಿ ನನ್ನನ್ನು ರಕ್ಷಿಸಲಾರಿರಾ?
ಪ್ರತಿಜ್ಞಾಂ ಪಾಂಡವೇಯಾನಾಂ ಶ್ರುತ್ವಾ ಮಮ ಮಹದ್ ಭಯಮ್ |
ಸೀದಂತಿ ಮಮ ಗಾತ್ರಾಣಿ ಮುಮೂರ್ಷೋರಿವ ಪಾರ್ಥಿವಾಃ ॥ 9 ॥
ಪಾಂಡವರ ಪ್ರತಿಜ್ಞೆಯನ್ನು ಕೇಳಿ ನನಗೆ ದೊಡ್ಡ ಭಯವುಂಟಾಗಿದೆ. ಎಲೈ ರಾಜರೇ, ಮರಣವು ಸನ್ನಿಹಿತವಾದ ಮನುಷ್ಯನಂತೆ ನನ್ನ ಅಂಗಾಂಗಗಳು ಕುಸಿಯುತ್ತಿವೆ.
ವಧೋ ನೂನಂ ಪ್ರತಿಜ್ಞಾತೋ ಮಮ ಗಾಂಡೀವಧನ್ವನಾ |

ತಥಾ ಹಿ ಹೃಷ್ಟಾಃ ಕ್ರೋಶಂತಿ ಶೋಕಕಾಲೇಽಪಿ ಪಾಂಡವಾಃ ॥ 10 ॥
ಶೋಕಕಾಲದಲ್ಲಿಯೂ ಪಾಂಡವರು ಸಂತೋಷದಿಂದ ಕಿರುಚುತ್ತಿದ್ದಾರೆ. ಆದ್ದರಿಂದ ಗಾಂಡೀವ ಧನುರ್ಧಾರಿಯಾದ ಅರ್ಜುನನು ನನ್ನ ವಧೆಯನ್ನು ಪ್ರತಿಜ್ಞೆ ಮಾಡಿದ್ದಾನೆಂಬುದು ನಿಶ್ಚಿತವಾಗುತ್ತದೆ.
ತನ್ನ ದೇವಾ ನ ಗಂಧರ್ವಾ ನಾಸುರಾ ನ ಚ ರಾಕ್ಷಸಾಃ |
ಶಕ್ನುವಂತ್ಯನ್ಯಥಾಕರ್ತುಂ ಕುತ ಏವ ನರಾಧಿಪಾಃ ॥ 11 ॥
ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ ಅಥವಾ ರಾಕ್ಷಸರಾಗಲೀ ಅರ್ಜುನನ ಪ್ರತಿಜ್ಞೆಯನ್ನು ವ್ಯತ್ಯಾಸ ಮಾಡಲಾರರು. ಇನ್ನು ರಾಜರುಗಳು ಹೇಗೆ ಮಾಡಿಯಾರು?
ತಸ್ಮಾನ್ಮಾಮನುಜಾನೀಧ್ವಂ ಭದ್ರಂ ವೋಽಸ್ತು ನರಾಧಿಪಾಃ |
ಅದರ್ಶನಂ ಗಮಿಷ್ಯಾಮಿ ನ ಮಾಂ ದ್ರಕ್ಷ್ಯಂತಿ ಪಾಂಡವಾಃ ॥ 12 ॥
ಆದ್ದರಿಂದ ನನಗೆ ಅನುಮತಿಯನ್ನು ಕೊಡಿ. ರಾಜರೇ ನಿಮಗೆ ಕ್ಷೇಮವಾಗಲಿ. ಪಾಂಡವರು ನನ್ನನ್ನು ಕಾಣದಂತೆ ನಾನು ಎಲ್ಲಾದರೂ ಅದೃಶ್ಯನಾಗುವೆನು.
ಸಂಜಯಃ
ಏವಂ ವಿಲಪಮಾನಂ ತಂ ಭಯವ್ಯಾಕುಲಚೇತಸಮ್ |
ಆತ್ಮಕಾರ್ಯಗರೀಯಸ್ತ್ವಾದ್ ರಾಜಾ ದುರ್ಯೋಧನೋಽಬ್ರವೀತ್ ॥
ಸಂಜಯ ಭಯದಿಂದ ವ್ಯಾಕುಲವಾದ ಮನಸ್ಸಿನಿಂದ ಹೀಗೆ ವಿಲಾಪವನ್ನು ಮಾಡುತ್ತಿದ್ದ ಸೈಂಧವನನ್ನು ಕುರಿತು ತನ್ನ ಕಾರ್ಯವು ದೊಡ್ಡದಾದುದರಿಂದ ರಾಜನಾದ ದುರ್ಯೋಧನನು ಮಾತನಾಡಿದನು.
ನ ಭೇತವ್ಯಂ ನರವ್ಯಾಘ್ರ ಕೋ ಹಿ ತ್ವಾ ಪುರುಷರ್ಷಭ |
ಮಧ್ಯೇ ಕ್ಷತ್ರಿಯವೀರಾಣಾಂ ತಿಷ್ಠಂತಂ ಪ್ರಾರ್ಥಯೇತ್ ಪುಮಾನ್ ॥
ಎಲೈ ನರವ್ಯಾಘ್ರನೇ, ಹೆದರಬೇಡ. ಎಲೈ ಪುರುಷಶ್ರೇಷ್ಠನೇ, ಕ್ಷತ್ರಿಯವೀರರ ಮಧ್ಯೆ ಇರುವ ನಿನ್ನನ್ನು ಯಾವ ಮನುಷ್ಯನು ಯುದ್ಧಕ್ಕಾಗಿ ಆಹ್ವಾನಿಸುವನು?
ಏಷಾಂ ಹಿ ನರದೇವಾನಾಂ ಮತ್ತಮಾತಂಗಗಾಮಿನಾಮ್ |
ಸಂಘಾತಮುಪಯಾತಾನಾಮಪಿ ಬಿಭ್ಯೇತ್ ಪುರಂದರಃ ॥ 15 ॥
ಮತ್ತಗಜಗಾಮಿಗಳಾದ ಈ ರಾಜರ ಸಮುದಾಯಕ್ಕೆ ಬಂದು ಸೇರಿದವರನ್ನು ಕಂಡು ಇಂದ್ರನೂ ಹೆದರಿಯಾನು!
ಅಹಂ ವೈಕರ್ತನಃ ಕರ್ಣಃ ಚಿತ್ರಸೇನೋ ವಿವಿಂಶತಿಃ |
ಭೂರಿಶ್ರವಾಃ ಶಲಃ ಶಲ್ಯೋ ವೃಷಸೇನೋ ದುರಾಸದಃ ॥ 16 ॥
ಪುರುಮಿತ್ರೋ ಜಯೋ ಭೋಜಃ ಕಾಂಬೋಜೋ ಬಾಹ್ಲಿಕಃ ಕೃಪಃ |
ಸತ್ಯವ್ರತೋ ಮಹಾಬಾಹುರ್ವಿಕರ್ಣೋ ದುರ್ಮುಖಃ ಸಹಃ ॥ 17 ॥
ದುಃಶಾಸನಃ ಸುಬಾಹುಶ್ಚ ಕಳಿಂಗಶ್ಚಾಪ್ಯುದಾಯುಧಃ |
ವಿಂದಾನುವಿಂದಾವಾವಂತ್ಯೌ ದ್ರೌಣಿಶ್ಚ ಸಹಸೌಬಲಃ ॥ 18 ॥
ಏತೇ ಚಾನ್ಯೇ ಚ ಬಹವೋ ನಾನಾಜನಪದೇಶ್ವರಾಃ |
ಸಸೈನ್ಯಾಸ್ತ್ವಾಭಿಯಾಸ್ಯಂತಿ ವ್ಯೇತು ತೇ ಮಾನಸೋ ಜ್ವರಃ ॥19॥
ನಾನು, ವೈಕರ್ತನನಾದ ಕರ್ಣ, ಚಿತ್ರಸೇನ, ವಿವಿಂಶತಿ, ಭೂರಿಶ್ರವ, ಶಲ, ಶಲ್ಯ, ಶತ್ರುಗಳಿಂದ ಸೋಲಿಸಲು ಅಸಾಧ್ಯನಾದ ವೃಷಸೇನ, ಪುರುಮಿತ್ರ, ಜಯ, ಭೋಜ, ಕಾಂಬೋಜ ರಾಜ, ಬಾಹ್ಲಿಕ, ಕೃಪ, ಸತ್ಯವ್ರತ, ಮಹಾಬಾಹುವಾದ ವಿಕರ್ಣ, ದುರ್ಮುಖ, ಸಹ, ದುಶ್ಶಾಸನ, ಸುಬಾಹು, ಕಳಿಂಗ ರಾಜನಾದ ಉದಾಯುಧ, ಅವಂತಿದೇಶದ ವಿಂದಾನುವಿಂದರು, ಶಕುನಿಯಿಂದ ಕೂಡಿದ ಅಶ್ವತ್ಥಾಮರು, ಇನ್ನೂ ನಾನಾ ದೇಶದ ರಾಜರಾದ ಅನೇಕರೂ ಸಹ ತಮ್ಮ ಸೈನ್ಯದ ಜೊತೆಯಲ್ಲಿ ನಿನ್ನ ಜೊತೆಯಲ್ಲಿ ಬರುವರು. ನಿನ್ನ ಮನಸ್ಸಿನ ಆತಂಕವು ನಾಶವಾಗಲಿ.
ಮಾಯಾವೀ ಬಲವಾನ್ ಶೂರೋ ರಾಕ್ಷಸಶ್ಚಾಪ್ಯಲಂಬುಸಃ |
ಇಮೇ ಚ ತ್ವಾಽಭಿಗೋಪ್ಸ್ಯಂತಿ ಸೈನ್ಯೇನ ಮಹತಾ ವೃತಾಃ ॥ 20 ॥
ಮಾಯಾವಿಯೂ, ಬಲಿಷ್ಠನೂ, ಶೂರನೂ, ರಾಕ್ಷಸನೂ ಆದ ಅಲಂಬುಸನು ಮತ್ತು ದೊಡ್ಡ ಸೈನ್ಯದಿಂದ ಕೂಡಿದ ರಾಜರು ನಿನ್ನನ್ನು ರಕ್ಷಿಸುವರು.
ತ್ವಂ ಚಾಪಿ ರಥಿನಾಂ ಶ್ರೇಷ್ಠಃ ಸ್ವಯಂ ಶೂರೋಽಸಿ ಪಾರ್ಥಿವ |
ಕಥಂಚ ಪಾಂಡವೇಯೇಭ್ಯೋ ಭಯಂ ಪಶ್ಯಸಿ ಸೈಂಧವ ॥ 21 ॥
ಎಲೈ ಪಾರ್ಥಿವನೇ, ನೀನೂ ಸಹ ಶ್ರೇಷ್ಠನಾದ ರಥನೂ ಮತ್ತು ಶೂರನೂ ಆಗಿದ್ದೀಯೆ. ಎಲೈ ಸೈಂಧವನೇ, ನೀನಾದರೂ ಪಾಂಡವರಿಗೆ ಏಕೆ ಹೆದರುವಿ?
ಅಕ್ಷೋಹಿಣ್ಯೋ ಮಹಾವೀರ್ಯ ಮದೀಯಾಸ್ತವ ರಕ್ಷಣೇ |
ಯತ್ತಾ ಯೋತ್ಸ್ಯಂತಿ ಮಾ ಭೈಷೀಃ ಸೈಂಧವ ವ್ಯೇತು ತೇ ಭಯಮ್ ॥
ಎಲೈ ಸೈಂಧವನೇ, ಮಹಾಪರಾಕ್ರಮಿಯೇ, ನನ್ನ ಅಕ್ಷೋಹಿಣಿ ಪರಿಮಿತವಾದ ಸೈನ್ಯಗಳು ನಿನ್ನನ್ನು ರಕ್ಷಣೆ ಮಾಡಲು ಎಚ್ಚರಿಕೆಯಿಂದ ಯುದ್ಧ ಮಾಡುವವು. ನಿನ್ನ ಭಯವು ದೂರವಾಗಲಿ.
ಸಂಜಯಃ
ಏವಮಾಶ್ವಾಸಿತೋ ರಾಜ್ಞಾ ಪುತ್ರೇಣ ತವ ಸೈಂಧವಃ |

ದುರ್ಯೋಧನೇನ ಸಹಿತೋ ದ್ರೋಣಂ ರಾತ್ರಾವುಪಾಗಮತ್ ॥ 23 ॥
ಸಂಜಯ ಹೀಗೆ ನಿನ್ನ ಪುತ್ರನಿಂದ ಸಮಾಧಾನಗೊಳಿಸಲ್ಪಟ್ಟ ಸೈಂಧವನು ರಾತ್ರಿಯಲ್ಲಿ ದುರ್ಯೋಧನನ ಜೊತೆಯಲ್ಲಿ ದ್ರೋಣರ ಬಳಿಗೆ ಹೋದನು.
ಉಪಸಂಗೃಹ್ಯ ಚರಣೌ ದ್ರೋಣಸ್ಯ ಚ ವಿಶಾಂಪತಿಃ |
ಉಪೋಪವಿಶ್ಯ ಪ್ರಣತಃ ಪರ್ಯಪೃಚ್ಛದಿದಂ ತದಾ |
ಅರ್ಜುನಸ್ಯಾತ್ಮನಶ್ಚಾರ್ಥೇ ವಿಶೇಷಂ ಪರ್ಯಪೃಚ್ಛತ ॥ 24 ॥
ರಾಜನಾದ ದುರ್ಯೋಧನನು ದ್ರೋಣರ ಪಾದಗಳನ್ನು ಹಿಡಿದು ನಮಸ್ಕಾರ ಮಾಡಿ, ಸಮೀಪದಲ್ಲಿ ಕುಳಿತುಕೊಂಡು ಅರ್ಜುನನಿಗೂ ಮತ್ತು ತನಗೂ ಇರುವ ವಿಶೇಷವನ್ನು ಪ್ರಶ್ನೆ ಮಾಡಿದನು.
ದುರ್ಯೋಧನಃ
ನಿಮಿತ್ತೇ ದೂರಪಾತಿತ್ವೇ ಲಘುತ್ವೇ ದೃಢವೇಧನೇ |
ಬ್ರವೀತು ಭಗವಾನ್ ಮಹ್ಯಂ ವಿಶೇಷಂ ಫಲ್ಗುನಸ್ಯ ಚ ॥ 25 ॥
ದುರ್ಯೋಧನ ದೂರಪ್ರಯೋಗವನ್ನು ಮಾಡುವುದರಲ್ಲಿ, ಕ್ಷಿಪ್ರಕಾರಿತ್ವ ವಿಷಯದಲ್ಲಿ, ದೃಢವಾಗಿ ಗಾಯಗೊಳಿಸುವ ವಿಷಯದಲ್ಲಿ ಪೂಜ್ಯರಾದ ನೀವು ನನಗೂ ಮತ್ತು ಅರ್ಜುನನಿಗೂ ಇರುವ ವ್ಯತ್ಯಾಸವನ್ನು ಹೇಳಬೇಕು.
ವಿದ್ಯಾವಿಶೇಷಮಾಚಾರ್ಯ ಜ್ಞಾತುಮಿಚ್ಛಾಮಿ ತತ್ತ್ವತಃ |
ಅರ್ಜುನಸ್ಯಾತ್ಮನಶ್ಚೈವ ಯಥಾತತ್ತ್ವಂ ಬ್ರವೀಹಿ ಮೇ ॥ 26 ॥
ಎಲೈ ಆಚಾರ್ಯರೇ, ವಿಶೇಷ ವಿದ್ಯೆಯ ವಿಷಯದಲ್ಲಿ ಅರ್ಜುನನಿಗೂ ಮತ್ತು ನನಗೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಲು ಬಯಸುತ್ತೇನೆ. ನೀವು ಅದನ್ನು ಯಥಾರ್ಥವಾಗಿ ಹೇಳಬೇಕು.
ದ್ರೋಣಃ
ಸಮಮಾಚಾರ್ಯಕಂ ತಾತ ತವ ಚೈವಾರ್ಜುನಸ್ಯ ಚ |
ಯೋಗಾದ್ ದುಃಖೋಚಿತತ್ವಾಚ್ಚ ತಸ್ಮಾತ್ ತ್ವದಧಿಕೋಽರ್ಜುನಃ ॥27॥
ದ್ರೋಣ ಪ್ರೀತಿಪಾತ್ರನೇ, ನಿನಗೂ ಮತ್ತು ಅರ್ಜುನನಿಗೂ ನಾನು ಸಮಾನವಾಗಿ ಗುರುವಾಗಿದ್ದೇನೆ. ಹಗಲೂ-ರಾತ್ರಿಯೂ ಅಭ್ಯಾಸವನ್ನು ಮಾಡುವುದರಿಂದಲೂ ಮತ್ತು ದುಃಖವನ್ನು ಸಹಿಸುವ ಸ್ವಭಾವವುಳ್ಳವನಾದ್ದರಿಂದಲೂ ಅರ್ಜುನನು ನಿನಗಿಂತ ಶ್ರೇಷ್ಠನಾದವನು.
ನ ತು ತೇ ಯುಧಿ ಸಂತ್ರಾಸಃ ಪಾರ್ಥಾತ್ ಕಾರ್ಯಃ ಕಥಂಚನ |
ಅಹಂ ಹಿ ರಕ್ಷಿತಾ ತಾತ ಭಯಾತ್ ತ್ವಾಂ ಶ್ವೋ ನ ಸಂಶಯಃ ॥28॥
ನೀನು ಅರ್ಜುನನಿಗೆ ಹೆದರಿ ಯುದ್ಧದಲ್ಲಿ ಭಯಪಡುವ ಅವಶ್ಯಕತೆ ಇಲ್ಲ. ಏಕೆಂದರೆ ಎಲೈ ಪ್ರೀತಿಪಾತ್ರನೇ, ನಾಳೆಯ ದಿವಸ ನಾನು ನಿನ್ನನ್ನು ಭಯದಿಂದ ರಕ್ಷಿಸುವೆನು. ಇದರಲ್ಲಿ ಸಂಶಯವಿಲ್ಲ.
ನ ಹಿ ಮದ್ಬಾಣಗುಪ್ತಸ್ಯ ಪ್ರಭವಂತ್ಯಮರಾ ಅಪಿ |
ವ್ಯೂಹಿಷ್ಯಾಮಿ ಚ ತಂ ವ್ಯೂಹಂ ಯಂ ಪಾರ್ಥೋ ನ ತರಿಷ್ಯತಿ ॥29॥
ನನ್ನ ಬಾಣಗಳಿಂದ ರಕ್ಷಿತನಾದವನ ಮೇಲೆ ದೇವತೆಗಳೂ ಕೈಮಾಡಲಾರರು. ಅರ್ಜುನನು ದಾಟಲು ಸಾಧ್ಯವಾಗದಂತೆ ನಾಳೆ ವ್ಯೂಹವನ್ನು ರಚಿಸುವೆನು.
ತಸ್ಮಾದ್ ಯುದ್ಧ್ಯಸ್ವ ಮಾ ಭೈಸ್ತ್ವಂ ಸ್ವಧರ್ಮಮನುಪಾಲಯ |
ಪಿತೃಪೈತಾಮಹಂ ಮಾರ್ಗಮನುಯಾಹಿ ಮಹಾರಥ ॥ 30 ॥
ಆದ್ದರಿಂದ ಎಲೈ ಮಹಾರಥನೇ, ಯುದ್ಧವನ್ನು ಮಾಡು, ಹೆದರಬೇಡ. ನಿನ್ನ ಧರ್ಮವನ್ನು ಪಾಲಿಸು. ಪಿತೃ-ಪಿತಾಮಹರ ಮಾರ್ಗದಲ್ಲಿ ನಡೆಯುವವನಾಗು.
ಅಧೀತಾ ವಿಧಿವದ್ ವೇದಾ ಅಗ್ನಯಃ ಸುಹುತಾಸ್ತ್ವಯಾ |
ಇಷ್ಟಂ ಚ ಬಹುಭಿರ್ಯಜ್ಞೈರ್ನ ತೇ ಮೃತ್ಯುಭವಂ ಭಯಮ್ ॥ 31 ॥
ಶಾಸ್ತ್ರೋಕ್ತ ರೀತಿಯಲ್ಲಿ ವೇದಗಳನ್ನು ಅಧ್ಯಯನ ಮಾಡಿದ್ದೀಯೆ. ಅಗ್ನಿಗಳಲ್ಲಿ ಚೆನ್ನಾಗಿ ಹೋಮವನ್ನು ಮಾಡಿದ್ದೀಯೆ. ಅನೇಕ ವಿಧವಾದ ಯಜ್ಞಗಳನ್ನು ಮಾಡಿದ್ದೀಯೆ. ನೀನು ಮರಣಕ್ಕೆ ಹೆದರಬೇಕಾದ ಕಾರಣವಿಲ್ಲ.
ದುರ್ಲಭಂ ಮಾನುಷೈರ್ಮಂದೈರ್ಮಹಾಭಾಗ್ಯಮವಾಪ್ಯ ತು |
ಭುಜವೀರ್ಯಾರ್ಜಿತಾಲ್ಲೋಕಾನ್ ದಿವ್ಯಾನ್ ಪ್ರಾಪ್ಸ್ಯಸ್ಯನುತ್ತಮಾನ್ ॥
ಮನುಷ್ಯರಿಗೆ ದುರ್ಲಭವಾದ ಮಹಾಭಾಗ್ಯವನ್ನು ಹೊಂದಿ, ನಿನ್ನ ಭುಜಬಲದಿಂದ ಗಳಿಸಿದ ದಿವ್ಯವಾದ ಲೋಕಗಳನ್ನು ಹೊಂದುವಿ.
ಕುರವಃ ಪಾಂಡವಾಶ್ಚೈವ ವೃಷ್ಣಯೋಽನ್ಯೇ ಚ ಮಾನವಾಃ |
ಅಹಂ ಚ ಸಹ ಪುತ್ರೇಣ ಅಧ್ರುವಾ ಇತಿ ಚಿಂತ್ಯತಾಮ್ ॥ 33 ॥
ಕುರುಗಳೂ, ಪಾಂಡವರೂ, ವೃಷ್ಣಿಗಳೂ, ಉಳಿದ ಮನುಷ್ಯರೂ, ನಾನೂ, ನನ್ನ ಪುತ್ರನೂ ಎಲ್ಲರೂ ನಶ್ವರರೆಂದು ತಿಳಿಯುವವನಾಗು.
ಪರ್ಯಾಯೇಣ ವಯಂ ಸರ್ವೇ ಕಾಲೇನ ಬಲಿನಾ ಹತಾಃ |
ಪರಲೋಕಂ ಗಮಿಷ್ಯಾಮಃ ಸ್ವೈಃ ಸ್ವೈಃ ಕರ್ಮಭಿರನ್ವಿತಾಃ ॥ 34 ॥
ಬಲಿಷ್ಠವಾದ ಮೃತ್ಯುವು ನಮ್ಮೆಲ್ಲರನ್ನೂ ಪರ್ಯಾಯ ಕ್ರಮದಿಂದ ಕೊಲ್ಲುವುದು. ನಮ್ಮ ನಮ್ಮ ಕರ್ಮಗಳ ಜೊತೆಯಲ್ಲಿ ನಾವು ಪರಲೋಕಕ್ಕೆ ಹೋಗುವೆವು.
ತಪಸ್ತಪ್ತ್ವಾ ತು ಯಾಲ್ಲೋಕಾನ್ ಪ್ರಾಪ್ನುವಂತಿ ಯಶಸ್ವಿನಃ |

ಕ್ಷತ್ರಧರ್ಮಾಶ್ರಿತಾ ವೀರಾಃ ಕ್ಷತ್ರಿಯಾಃ ಪ್ರಾಪ್ನುವಂತಿ ತಾನ್ ॥ 35 ॥
ಕೀರ್ತಿವಂತರಾದವರು ತಪಸ್ಸನ್ನು ಮಾಡಿ ಯಾವ ಲೋಕಗಳನ್ನು ಹೊಂದುತ್ತಾರೆಯೋ, ಕ್ಷತ್ರಿಯ ಧರ್ಮವನ್ನು ಪಾಲಿಸುವ ವೀರರಾದ ಕ್ಷತ್ರಿಯರು ಆ ಲೋಕಗಳನ್ನು ಹೊಂದುತ್ತಾರೆ.
ಸಂಜಯಃ
ಏವಮಾಶ್ವಾಸಿತೋ ರಾಜಾ ಭಾರದ್ವಾಜೇನ ಸೈಂಧವಃ |
ವ್ಯಪಾನುದದ್ ಭಯಂ ಪಾರ್ಥಾದ್ ಯುದ್ಧಾಯ ಚ ಮನೋ ದಧೇ ॥
ಸಂಜಯ ಹೀಗೆ ದ್ರೋಣರಿಂದ ಆಶ್ವಾಸನೆಗೊಳಿಸಲ್ಪಟ್ಟ ಸೈಂಧವನು ತನ್ನ ಅರ್ಜುನನ ಭಯವನ್ನು ಕಳೆದುಕೊಂಡು ಯುದ್ಧವನ್ನು ಮಾಡುವುದಾಗಿ ನಿಶ್ಚಯಿಸಿದನು.
ತತಃ ಪ್ರಹರ್ಷಃ ಸೈನ್ಯಾನಾಂ ತಸ್ಯ ಚಾಸೀದ್ ವಿಶಾಂಪತೇ |
ವಾದಿತ್ರಾಣಾಂ ಧ್ವನಿಶ್ಚೋಗ್ರಃ ಸಿಂಹನಾದರವೈಃ ಸಹ ॥ 37 ॥
ಎಲೈ ರಾಜನೇ, ಅನಂತರ ಅವನ ಸೈನ್ಯಕ್ಕೆ ಬಹಳ ಹರ್ಷವುಂಟಾಯಿತು. ವೀರರ ಸಿಂಹನಾದಗಳಿಂದ ಸಹಿತವಾದ ವಾದ್ಯಗಳ ಶ್ರೇಷ್ಠವಾದ ಧ್ವನಿಯು ಉಂಟಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂದನೆಯ ಅಧ್ಯಾಯ
ಕೃಷ್ಣನಿಂದ ಅರ್ಜುನನಿಗೆ, ಜಯದ್ರಥನಿಗೆ ದ್ರೋಣಾದಿಗಳ ಆಶ್ವಾಸನೆಯ ಕಥನ ಮತ್ತು ಅರ್ಜುನನಿಂದ ತನ್ನ ಸಾಮರ್ಥ್ಯದ ಕಥನ.
ಸಂಜಯಃ
ಪ್ರತಿಜ್ಞಾತೇ ತು ಪಾರ್ಥೇನ ಸಿಂಧುರಾಜವಧೇ ತದಾ |
ವಾಸುದೇವೋ ಮಹಾಬುದ್ಧಿರ್ಧನಂಜಯಮಭಾಷತ ॥ 1 ॥
ಸಂಜಯ ಅರ್ಜುನನು ಸಿಂಧುರಾಜನ ವಧೆಯನ್ನು ಪ್ರತಿಜ್ಞೆ ಮಾಡುತ್ತಿರಲು ಮಹಾಬುದ್ಧಿವಂತನಾದ ಕೃಷ್ಣನು ಅರ್ಜುನನನ್ನು ಕುರಿತು ಹೇಳಿದನು.
ಭ್ರಾತೃಣಾಂ ಪಾರ್ಥಿವಾನಾಂ ಚ ತ್ವಯಾ ಮಧ್ಯೇ ಪ್ರತಿಶ್ರುತಮ್ |
ಸೈಂಧವಂ ಶ್ವೋಽಸ್ಮಿ ಹಂತೇತಿ ತತ್ ಸಾಹಸಮಿದಂ ಕೃತಮ್ ॥ 2 ॥
ಸಹೋದರರ ಮತ್ತು ರಾಜರ ಮಧ್ಯದಲ್ಲಿ ನೀನು ನಾಳೆಯ ದಿವಸ ಸೈಂಧವನನ್ನು ಕೊಲ್ಲುವೆನು ಎಂದು ಪ್ರತಿಜ್ಞೆಯನ್ನು ಮಾಡಿದ್ದೀಯೆ. ಇದು ಸಾಹಸದ ಕೆಲಸ.
ಅಸಮ್ಮಂತ್ರ್ಯ ಮಯಾ ಸಾರ್ಧಮತಿಭಾರೋಽಯಮುದ್ಯತಃ |
ಕಥಂ ಸರ್ವಸ್ಯ ಲೋಕಸ್ಯ ನಾಪಹಾಸ್ಯಾ ಭವೇಮಹಿ ॥ 3 ॥
ನನ್ನ ಜೊತೆಯಲ್ಲಿ ಸಮಾಲೋಚನೆಯನ್ನು ಮಾಡದೆ ನೀನು ದೊಡ್ಡ ಭಾರವನ್ನು ಹೊರಲು ನಿರ್ಧರಿಸಿದ್ದೀಯೆ. ನಾವು ನಾಳೆ ಎಲ್ಲ ಲೋಕಕ್ಕೂ ಹೇಗೆ ಹಾಸ್ಯಾಸ್ಪದರಾಗಲಾರೆವು?
ಧಾರ್ತರಾಷ್ಟ್ರಸ್ಯ ಶಿಬಿರೇ ಯೇ ತು ಪ್ರಣಿಹಿತಾಶ್ಚರಾಃ |
ತ ಇಮೇ ಸಮನುಪ್ರಾಪ್ತಾಃ ಪ್ರವೃತ್ತಿಂ ಕಥಯಂತಿ ನಃ ॥ 4 ॥
ದುರ್ಯೋಧನನ ಶಿಬಿರಕ್ಕೆ ಹೋಗಿದ್ದ ನಮ್ಮ ಈ ಗೂಢಚಾರರು ಹಿಂದಿರುಗಿ ಬಂದು ಅಲ್ಲಿ ನಡೆದ ವಾರ್ತೆಯನ್ನು ಹೇಳುತ್ತಿದ್ದಾರೆ.
ಸಂಶ್ರುತೇ ಸಿಂಧುರಾಜಸ್ಯ ವಧೇ ಗಾಂಡೀವಧನ್ವನಾ |
ಸಿಂಹನಾದಃ ಸವಾದಿತ್ರಃ ಸುಮಹಾನಿಹ ತೈಃ ಶ್ರುತಃ ॥ 5 ॥
ಅರ್ಜುನನು ಸೈಂಧವನ ವಧೆಯನ್ನು ಪ್ರತಿಜ್ಞೆ ಮಾಡಿದಾಗ ಇಲ್ಲಿ ಉಂಟಾದ ದೊಡ್ಡ ಸಿಂಹನಾದವನ್ನು ಮತ್ತು ವಾದ್ಯಘೋಷವನ್ನು ಅವರು ಕೇಳಿದ್ದಾರೆ.
ತೇನ ಶಬ್ದೇನ ವಿತ್ರಸ್ತಾ ಧಾರ್ತರಾಷ್ಟ್ರಾಃ ಸಬಾಂಧವಾಃ |
ನಾಕಸ್ಮಾತ್ ಸಿಂಹನಾದೋಽಯಮಿತಿ ಸರ್ವೇ ವ್ಯವಸ್ಥಿತಾಃ ॥ 6 ॥
ಈ ಸಿಂಹನಾದವು ನಿಷ್ಕಾರಣವಾಗಿರಲು ಸಾಧ್ಯವಿಲ್ಲ ಎಂದು ನಿಶ್ಚಯಿಸಿ, ಆ ಶಬ್ದದಿಂದ ಬಂಧುಗಳಿಂದ ಸಹಿತರಾದ ದುರ್ಯೋಧನಾದಿಗಳು ಹೆದರಿದ್ದಾರೆ.
ಸುಮಹಾಂಶ್ಚಾತ್ರ ಸಂಬಾಧಃ ಕೌರವಾಣಾಂ ಮಹಾಭುಜ |
ಆಸೀನ್ನರಾಶ್ವಪತ್ತೀನಾಂ ರಥಘೋಷಶ್ಚ ಭೈರವಃ ॥ 7 ॥
ಎಲೈ ಮಹಾಭುಜನೇ, ಆಗ ಕೌರವ ರಥಾಶ್ವ-ಗಜಗಳ ಭಯಂಕರವಾದ ದೊಡ್ಡ ಸಮಾಗಮವುಂಟಾಯಿತು. ರಥಘೋಷವೂ ಉಂಟಾಯಿತು.
ಅಭಿಮನ್ಯೋರ್ವಧಂ ಶ್ರುತ್ವಾ ಧ್ರುವಮಾರ್ತೋ ಧನಂಜಯಃ |
ರಾತ್ರೌ ನಿರ್ಯಾಸ್ಯತಿ ಕ್ರೋಧಾದಿತಿ ಸರ್ವೇ ವ್ಯವಸ್ಥಿತಾಃ ॥ 8 ॥
ಅಭಿಮನ್ಯುವಿನ ವಧೆಯನ್ನು ಕೇಳಿ ಅರ್ಜುನನು ಆರ್ತನಾಗಿ ಕ್ರೋಧದಿಂದ ರಾತ್ರಿಯೇ ಇಲ್ಲಿಗೆ ಹೊರಟು ಬರುವನು ಎಂದು

ಅವರೆಲ್ಲರೂ ನಿಶ್ಚಯಿಸಿದರು.
ತೈಶ್ಚಾರೇಭ್ಯ ಇಯಂ ಕೃತ್ಸ್ನಾ ಶ್ರುತಾ ಸತ್ಯವತಸ್ತವ |
ತೈರ್ಯತದ್ಭಿರಿಯಂ ಸತ್ಯಾ ನಾಸತ್ಯಾ ವದತಸ್ತವ |
ಪ್ರತಿಜ್ಞಾ ಸಿಂಧುರಾಜಸ್ಯ ವಧೇ ರಾಜೀವಲೋಚನ ॥ 9 ॥
ಎಲೈ ರಾಜೀವಲೋಚನನೇ, ಅವರೂ ಸಹ ತಮ್ಮ ಚಾರರಿಂದ ನಮ್ಮ ಶಿಬಿರದಲ್ಲಿ ನಡೆದ ಎಲ್ಲವನ್ನೂ ಸತ್ಯವಂತನಾದ ನೀನು ಭೀಮಾದಿಗಳ ಸಹಾಯದಿಂದ ಮಾಡಲು ಹೊರಟಿರುವ, ಎಂದೂ ಅಸತ್ಯವಾಗದ ನಿನ್ನ ಸತ್ಯಪ್ರತಿಜ್ಞೆಯನ್ನೂ ಅವರು ತಿಳಿದರು.
ತತೋ ವಿಮನಸಃ ಸರ್ವೇ ತ್ರಸ್ತಾಃ ಕ್ಷುಭಿತಮಾನಸಾಃ |
ಆಸನ್ ಸುಯೋಧನಾಮಾತ್ಯಾಃ ಸ ಚ ರಾಜಾ ಜಯದ್ರಥಃ ॥ 10 ॥
ಆಗ ದುರ್ಯೋಧನನ ಅಮಾತ್ಯರು ಮತ್ತು ರಾಜನಾದ ಆ ಸೈಂಧವನು ಮನಸ್ಸಿನಲ್ಲಿ ಕ್ಷೋಭೆಗೊಂಡು, ಹೆದರಿ ಉತ್ಸಾಹರಹಿತರಾದರು.

ಅಥೋತ್ಥಾಯ ಸಹಾಮಾತ್ಯೈಃ ದೀನಃ ಸ್ವಶಿಬಿರಾತ್ ಕಿಲ |
ಆಯಾತ್ ಸೌವೀರಸಿಂಧೂನಾಮೀಶ್ವರೋ ಭೃಶದುಃಖಿತಃ ॥ 11 ॥
ಅನಂತರ ಸಿಂಧುಸೌವೀರರಾಜನಾದ ಜಯದ್ರಥನು ಬಹಳ ದುಃಖಗೊಂಡು ತನ್ನ ಅಮಾತ್ಯರ ಜೊತೆಯಲ್ಲಿ ದೀನನಾಗಿ ಎದ್ದು ತನ್ನ ಶಿಬಿರದಿಂದ ಹೊರಟು ಬಂದನು.
ಸಮ್ಮಂತ್ರ್ಯ ಕಾಲೇ ಸಾಮಾತ್ಯಃ ಸರ್ವಾನ್ನೈಃಶ್ರೇಯಸೀಂ ಕ್ರಿಯಾಮ್ |
ಸುಯೋಧನಮಿದಂ ವಾಕ್ಯಮುಕ್ತವಾನ್ ರಾಜಸಂಸದಿ ॥ 12 ॥
ಅವನು ತನ್ನ ಅಮಾತ್ಯರ ಜೊತೆಯಲ್ಲಿ ತನಗೆ ಕ್ಷೇಮವನ್ನುಂಟು ಮಾಡುವ ಮಾರ್ಗವನ್ನು ಮಂತ್ರಾಲೋಚನೆ ಮಾಡಿ ರಾಜರ ಸಮುದಾಯದಲ್ಲಿ ಸುಯೋಧನನನ್ನು ಕುರಿತು ಈ ಮಾತನ್ನು ಆಡಿದನು.
ಮಾಮಸೌ ಪುತ್ರಹಂತೇತಿ ಶ್ವೋಽಭಿಯಾತಾ ಧನಂಜಯಃ |
ಪ್ರತಿಜ್ಞಾತೋ ಹಿ ಸೇನಾಯಾ ಮಧ್ಯೇ ತೇನ ವಧೋ ಮಮ ॥ 13 ॥
ನಾನು ಅಭಿಮನ್ಯುವನ್ನು ಕೊಂದಿದ್ದೇನೆಂಬ ಕಾರಣದಿಂದ ನಾಳೆ ಧನಂಜಯನು ನನ್ನ ಮೇಲೆ ಎರಗಲಿದ್ದಾನೆ. ಅವನ ಸೈನ್ಯದ ಮಧ್ಯದಲ್ಲಿ ನನ್ನ ವಧೆಯನ್ನು ಪ್ರತಿಜ್ಞೆ ಮಾಡಿದ್ದಾನೆ.
ತನ್ನ ದೇವಾ ನ ಗಂಧರ್ವಾ ನಾಸುರೋರಗರಾಕ್ಷಸಾಃ |
ಉತ್ಸಹಂತೇಽನ್ಯಥಾಕರ್ತುಂ ಯದುಕ್ತಂ ಸವ್ಯಸಾಚಿನಾ ॥ 14 ॥
ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ವ್ಯತ್ಯಾಸ ಮಾಡಲು ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರ-ಉರಗ-ರಾಕ್ಷಸರಾಗಲಿ ಪ್ರಯತ್ನಪಡಲಾರರು.
ತೇ ಮಾಂ ರಕ್ಷತ ಸಂಗ್ರಾಮೇ ಮೂರ್ಧ್ನಿ ಮಾ ವೋ ಧನಂಜಯಃ |
ಪಾದಂ ಕೃತ್ವಾಽಽಪ್ನುಯಾಲ್ಲಕ್ಷ್ಮೀಮೇಂ ಯುಕ್ತಂ ಪ್ರತಿವಿಧೀಯತಾಮ್ ॥15॥
ಅಂತಹ ನೀವು ಯುದ್ಧದಲ್ಲಿ ನನ್ನನ್ನು ರಕ್ಷಿಸಿ. ನಿಮ್ಮ ಶಿರಸ್ಸಿನ ಮೇಲೆ ತನ್ನ ಕಾಲನ್ನು ಊರಿ ಅರ್ಜುನನು ವಿಜಯಲಕ್ಷ್ಮಿಯನ್ನು ಹೊಂದುವುದು ಬೇಡ. ಈ ವಿಷಯದಲ್ಲಿ ಯೋಗ್ಯವಾದ ಕಾರ್ಯವನ್ನು ಮಾಡುವವರಾಗಿ.
ಅಥ ರಕ್ಷಾ ನ ಮೇ ಸಮ್ಯಕ್ ಕ್ರಿಯತೇ ಕುರುನಂದನ |
ಅನುಜಾನೀಹಿ ಮಾಂ ರಾಜನ್ ಯಾಸ್ಯಾಮಿ ಸ್ವಗೃಹಾನಹಮ್ ॥ 16 ॥
ಅಥವಾ ಕುರುನಂದನನಾದ ದುರ್ಯೋಧನನೇ, ಸರಿಯಾಗಿ ನನ್ನ ರಕ್ಷಣೆಯನ್ನು ಮಾಡಲು ಸಾಧ್ಯವಾಗದಿದ್ದರೆ ನನಗೆ ಅನುಮತಿಯನ್ನಾದರೂ ಕೊಡು. ಎಲೈ ರಾಜನೇ, ನಾನು ನನ್ನ ಮನೆಗೆ ಹಿಂದಿರುಗುವೆನು.
ಶ್ರೀಭಗವಾನ್
ಅವಾಕ್ಶಿರಾಸ್ತ್ವೇವಮುಕ್ತೋ ವಿಮನಾಃ ಸ ಸುಯೋಧನಃ |
ಶ್ರುತ್ವಾಭಿಶಪ್ತವಂತಂ ತಂ ಧ್ಯಾನಮೇವಾನ್ವಪದ್ಯತ ॥ 17 ॥
ಶ್ರೀಭಗವಾನ್ ಹೀಗೆ ಹೇಳಲ್ಪಟ್ಟ ಸುಯೋಧನನು ತಲೆಯನ್ನು ತಗ್ಗಿಸಿ, ಉತ್ಸಾಹ ಹೀನನಾಗಿ, ಶಾಪಕ್ಕೆ ಒಳಗಾದ (ಪ್ರತಿಜ್ಞೆಗೆ ವಿಷಯನಾದ) ಸೈಂಧವನನ್ನು ತಿಳಿದು ಯೋಚನಾ ಪರವಶನಾದನು.
ತಮಾರ್ತಮಭಿಸಂಪ್ರೇಕ್ಷ್ಯ ರಾಜಾ ಸ ಕಿಲ ಸೈಂಧವಃ |
ಸಾಮ್ಮ್ಯೈವಾತ್ಮಹಿತಂ ವಾಕ್ಯಂ ಸಾಕ್ಷೇಪಮಿದಮುಕ್ತವಾನ್ ॥ 18 ॥
ದುರ್ಯೋಧನನು ಆರ್ತನಾಗಿರುವುದನ್ನು ಗಮನಿಸಿ ರಾಜನಾದ ಸೈಂಧವನು ಮೃದುವಾಗಿಯೇ ಆತ್ಮಹಿತವನ್ನು ಸಾಧಿಸುವ ಈ ಆಕ್ಷೇಪಕರವಾದ ಮಾತುಗಳನ್ನು ಆಡಿದನು.
ನಾಹಂ ಪಶ್ಯಾಮಿ ಭವತಾಂ ತಥಾವೀರ್ಯಂ ಧನುರ್ಧರಮ್ |
ಯೋಽರ್ಜುನಸ್ಯಾಸ್ತ್ರಮಸ್ತ್ರೇಣ ಪ್ರತಿಹನ್ಯಾನ್ಮಹಾಮೃಧೇ ॥ 19 ॥
ದೊಡ್ಡ ಯುದ್ಧದಲ್ಲಿ ಅರ್ಜುನನ ಅಸ್ತ್ರವನ್ನು ತನ್ನ ಅಸ್ತ್ರದಿಂದ ನಿವಾರಿಸುವಂತಹ ಅರ್ಜುನನಂತಹ ಪರಾಕ್ರಮವುಳ್ಳ ಯಾವ ಧನುರ್ಧಾರಿಯನ್ನೂ ನಾನು ನಿಮ್ಮಲ್ಲಿ ಕಾಣುತ್ತಿಲ್ಲ.
ವಾಸುದೇವಸಹಾಯಸ್ಯ ಗಾಂಡೀವಂ ಧುನ್ವತೋ ರಣೇ |
ಅರ್ಜುನಸ್ಯಾಗ್ರತೋ ಯೋದ್ಧುಂ ಬಿಭಿಯಾದಪಿ ದೇವರಾಟ್ ॥ 20 ॥
ವಾಸುದೇವನ ಸಹಾಯವನ್ನು ಹೊಂದಿ ಯುದ್ಧದಲ್ಲಿ ಗಾಂಡೀವ ಧನುಸ್ಸನ್ನು ತೂಗಾಡಿಸುವ ಅರ್ಜುನನ ಎದುರಿಗೆ ಯುದ್ಧವನ್ನು

ಮಾಡಲು ದೇವೇಂದ್ರನೂ ಸಹ ಹೆದರಿಯಾನು!
ಮಹೇಶ್ವರೋಽಪಿ ಪಾರ್ಥೇನ ಶ್ರೂಯತೇ ಯುಧಿ ತೋಷಿತಃ |
ಪದಾತಿನಾ ಮಹಾವೀರ್ಯೋ ಗಿರೌ ಹೈಮವತೇ ತದಾ ॥ 21 ॥
ಅರ್ಜುನನು ಹಿಮಾಲಯಪರ್ವತದಲ್ಲಿ ಬರಿಗಾಲಿನಲ್ಲಿ ನಿಂತು ಮಹಾಪರಾಕ್ರಮಿಯಾದ ರುದ್ರನನ್ನೂ ಯುದ್ಧದಲ್ಲಿ ಸಂತೋಷಪಡಿಸಿದನೆಂದು ಕೇಳಿದ್ದೇನೆ.
ದಾನವಾನಾಂ ಸಹಸ್ರಾಣಿ ಹಿರಣ್ಯಪುರವಾಸಿನಾಮ್ |
ಜಘಾನೈಕರಥೇನೈವ ದೇವರಾಜಪ್ರಚೋದಿತಃ ॥ 22 ॥
ಇಂದ್ರನಿಂದ ಪ್ರೇರಿತನಾಗಿ ಅರ್ಜುನನು ಒಂದು ರಥದಲ್ಲಿ ಹೋಗಿ ಹಿರಣ್ಯಪುರ ವಾಸಿಗಳಾದ ಸಹಸ್ರಾರು ದಾನವರನ್ನು ಸಂಹರಿಸಿದನು.
ಸಮಾಯುಕ್ತೋ ಹಿ ಕೌಂತೇಯೋ ವಾಸುದೇವೇನ ಧೀಮತಾ |
ಸಾಮರಾನಪಿ ಲೋಕಾಂಸ್ತ್ರೀನ್ ನಿಹನ್ಯಾದಿತಿ ಮೇ ಮತಿಃ ॥ 23 ॥
ಕುಂತೀಪುತ್ರನಾದ ಅರ್ಜುನನು ಮೇಧಾವಿಯಾದ ಕೃಷ್ಣನ ಜೊತೆಯಲ್ಲಿ ಸಮಾಗಮವನ್ನು ಹೊಂದಿದರೆ ದೇವತೆಗಳಿಂದ ಸಹಿತವಾದ ಮೂರುಲೋಕಗಳನ್ನೂ ಕೊಂದಾನು ಎಂದು ನನ್ನ ಅಭಿಪ್ರಾಯ.
ಸೋಽಹಮಿಚ್ಛಾಮ್ಯನುಜ್ಞಾತುಂ ರಕ್ಷಿತುಂ ವಾ ಮಹಾಭುಜ |
ದ್ರೋಣೇನ ಸಹಪುತ್ರೇಣ ವೀರೇಣ ಯದಿ ಮನ್ಯಸೇ ॥ 24 ॥
ಎಲೈ ಮಹಾಭುಜನೇ, ಆದ್ದರಿಂದ ನಾನು ನಿನ್ನ ಒಪ್ಪಿಗೆ ಇದ್ದರೆ ಪುತ್ರಸಹಿತರಾದ ವೀರರಾದ ದ್ರೋಣರಿಂದ ರಕ್ಷಿಸಲ್ಪಡಲು ಅಥವಾ ಮನೆಗೆ ಹೋಗಲು ಅನುಮತಿಯನ್ನು ಬಯಸುತ್ತಿದ್ದೇನೆ.
ಶ್ರೀಭಗವಾನ್
ಸ ರಾಜ್ಞಾ ಸ್ವಯಮಾಚಾರ್ಯೋ ಭೃಶಮಾಕ್ರಂದಿತೋಽರ್ಜುನ |
ಸಂವಿಧಾನಂ ಚ ವಿಹಿತಂ ಮಂತ್ರಯಿತ್ವಾ ನರರ್ಷಭೈಃ ॥ 25 ॥
ಶ್ರೀಭಗವಾನ್ ಎಲೈ ಅರ್ಜುನನೇ, ಹೀಗೆ ದ್ರೋಣರ ಎದುರಿನಲ್ಲಿ ರಾಜನಾದ ಸೈಂಧವನು ಸ್ವತಃ ಗೋಳಾಡಿದುದನ್ನು ನೋಡಿ ದ್ರೋಣರು ರಾಜರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಅದಕ್ಕೆ ಪ್ರತಿಕ್ರಿಯೆಯನ್ನು ವಿಧಾನ ಮಾಡಿದರು.
ಕರ್ಣೋ ಭೂರಿಶ್ರವಾ ದ್ರೌಣಿರ್ವೃಷಸೇನಶ್ಚ ದುರ್ಜಯಃ |
ಕೃಪಶ್ಚ ಮದ್ರರಾಜಶ್ಚ ಷಡೇತೇಽಸ್ಯ ಪುರೋಗಮಾಃ ॥ 26 ॥
ಕರ್ಣ, ಭೂರಿಶ್ರವ, ಅಶ್ವತ್ಥಾಮರು, ದುರ್ಜಯನಾದ ವೃಷಸೇನ, ಕೃಪರು ಮತ್ತು ಮದ್ರರಾಜನಾದ ಶಲ್ಯ- ಈ ಆರು ಮಹಾರಥರು ಸೈಂಧವನ ಮುಂದಿರುತ್ತಾರೆ.
ಶಕಟಃ ಪದ್ಮಪಶ್ಚಾರ್ಧೋ ವ್ಯೂಹೋ ದ್ರೋಣೇನ ಕಲ್ಪಿತಃ |
ಪದ್ಮಕರ್ಣಿಕಮಧ್ಯಸ್ಥಃ ಸೂಚೀಪಾರ್ಶ್ವೇ ಜಯದ್ರಥಃ |
ಸ್ಥಾಸ್ಯತೇ ರಕ್ಷಿತೋ ವೀರೈಃ ಸಿಂಧುರಾಡ್ ಯುದ್ಧದುರ್ಮದೈಃ ॥ 27 ॥
ಹಿಂಭಾಗದ ಅರ್ಧಭಾಗದಲ್ಲಿ ಪದ್ಮವ್ಯೂಹವಿರುವ ಶಕಟವ್ಯೂಹವನ್ನು ದ್ರೋಣರು ಚಿಂತಿಸಿದರು. ಆ ಪದ್ಮಕರ್ಣಿಕೆಯ ಮಧ್ಯದಲ್ಲಿ ಸೂಜಿಯ ಸಮುದಾಯದಂತಿರುವ ರಾಜರುಗಳ ಮಧ್ಯದಲ್ಲಿ ಸಿಂಧುರಾಜನಾದ ಜಯದ್ರಥನು ಯುದ್ಧ ದುರ್ಮದರಾದ ವೀರರಿಂದ ರಕ್ಷಿಸಲ್ಪಟ್ಟು ನಿಲ್ಲುವನು (ಎಂದು ದ್ರೋಣರ ಯೋಜನೆ).
ಧನುಷ್ಯಸ್ತ್ರೇ ಚ ವೀರ್ಯೇ ಚ ಪ್ರಾಣೇ ಚೈವ ತಥೋರಸಿ |
ಅವಿಷಹ್ಯತಮಾಸ್ತ್ವೇತೇ ನಿಶ್ಚಿತಾಃ ಪಾರ್ಥ ಷಡ್ರಥಾಃ ॥ 28 ॥
ಏತಾನಜಿತ್ವಾ ಸಗಣಾನ್ ನೈವ ಪ್ರಾಪ್ಯೋ ಜಯದ್ರಥಃ ॥ 29 ॥
ಎಲೈ ಪಾರ್ಥನೇ, ಈ ಆರು ಮಹಾರಥರು ಧನುಸ್ಸಿನಲ್ಲಿಯೂ, ಅಸ್ತ್ರದಲ್ಲಿಯೂ, ಪರಾಕ್ರಮದಲ್ಲಿಯೂ, ಪ್ರಾಣಶಕ್ತಿಯಲ್ಲಿಯೂ, ಹಾಗೆಯೇ ಔರಸಶಕ್ತಿಯಿಂದಲೂ ತಡೆಯಲು ಅಸಾಧ್ಯರಾದವರು. ಪರಿವಾರಸಹಿತರಾದ ಇವರನ್ನು ಗೆಲ್ಲದೆ ಜಯದ್ರಥನನ್ನು ಸಮೀಪಿಸಲು ಸಾಧ್ಯವಿಲ್ಲ.
ತೇಷಾಮೇಕೈಕಶೋ ವೀರ್ಯಂ ಷಣ್ಣಾಂ ತ್ವಮನುಚಿಂತಯ |
ಸಹಿತಾ ಹಿ ನರವ್ಯಾಘ್ರಾ ನ ಶಕ್ಯಾ ಜೇತುಮಂಜಸಾ ॥ 30 ॥
ಅವರಲ್ಲಿ ಒಬ್ಬೊಬ್ಬರ ಪರಾಕ್ರಮವನ್ನೂ ನೀನು ಆಲೋಚಿಸು. ಈ ಎಲ್ಲ ನರವ್ಯಾಘ್ರರು ಸೇರಿದರೆ ಅವರನ್ನು ಗೆಲ್ಲುವುದು ಸಾಧ್ಯವಾಗುವುದಿಲ್ಲ.
ಮಂತ್ರಯಿಷ್ಯಾಮ ಭೂಯಸ್ತು ನೀತಿಮಾತ್ಮಹಿತಾಯ ವೈ |
ಮಂತ್ರಜ್ಞೈಃ ಸಚಿವೈಃ ಸಾರ್ಧಂ ಸುಹೃದ್ಭಿಃ ಕಾರ್ಯಸಿದ್ಧಯೇ ॥ 31 ॥
ಮಂತ್ರವನ್ನು ತಿಳಿದ ಸಚಿವರಿಂದಲೂ, ಸುಹೃದರಿಂದಲೂ ಕೂಡಿಕೊಂಡು ನಮ್ಮ ಕಾರ್ಯಸಿದ್ಧಿಗಾಗಿ ಮತ್ತು ಆತ್ಮಹಿತಕ್ಕಾಗಿ ಅನುಸರಿಸಬೇಕಾದ ರೀತಿಯನ್ನು ನಾವು ಆಲೋಚಿಸೋಣ.
ಅರ್ಜುನಃ
ಷಡ್ ರಥಾನ್ ಧಾರ್ತರಾಷ್ಟ್ರೇಷು ಮನ್ಯಸೇ ಯಾನ್ ಬಲಾಧಿಕಾನ್ |
ತೇಷಾಂ ವೀರ್ಯಂ ಮಮಾರ್ಧೇನ ನ ತುಲ್ಯಮಿತಿ ಮೇ ಮತಿಃ ॥32॥
ಅರ್ಜುನ ನೀನು ದುರ್ಯೋಧನಸೈನ್ಯದ ಯಾವ ಆರು ಮಹಾರಥರನ್ನು ಬಹಳ ಬಲಾಢ್ಯರು ಎಂದು ತಿಳಿಯುವಿಯೋ ಅವರೆಲ್ಲರ

ಪರಾಕ್ರಮವು ಸೇರಿದರೂ ನನ್ನ ಸಾಮರ್ಥ್ಯದ ಅರ್ಧದಷ್ಟಾಗುವುದಿಲ್ಲ ಎಂದು ನನ್ನ ಅಭಿಪ್ರಾಯ.
ಅಸ್ತ್ರೈರಸ್ತ್ರಾಣ್ಯಹಂ ತೇಷಾಂ ಮಿಷತಾಂ ಮಧುಸೂದನ |
ಪಶ್ಯತಸ್ತೇ ನಿಹಂತಾಸ್ಮಿ ಯದಿ ತೇ ವಜ್ರಧಾರಿಣಃ ॥ 33 ॥
ಎಲೈ ಮಧುಸೂದನನೇ, ಅವರು ನೋಡುತ್ತಿರುವಂತೆಯೇ ಮತ್ತು ನಿನ್ನ ಕಣ್ಣೆದುರಿಗೆ ಅವರು ವಜ್ರಧಾರಿಯಾದ ಇಂದ್ರನೇ ಆದರೂ ಅವರ ಅಸ್ತ್ರಗಳನ್ನು ನನ್ನ ಅಸ್ತ್ರಗಳಿಂದ ವಿನಾಶಗೊಳಿಸುವೆನು.
ದ್ರೋಣಸ್ಯ ಮಿಷತಶ್ಚಾಹಂ ಸಗಣಸ್ಯ ವಿಪಶ್ಚಿತಃ |
ಮೂರ್ಧಾನಂ ಸಿಂಧುರಾಜಸ್ಯ ಪಾತಯಿಷ್ಯಾಮಿ ಭೂತಳೇ ॥ 34 ॥
ಜ್ಞಾನಿಗಳಾದ ದ್ರೋಣರು ಪರಿವಾರದ ಜೊತೆಯಲ್ಲಿ ನೋಡುತ್ತಿರುವಂತೆಯೇ ಸಿಂಧುರಾಜನ ಶಿರಸ್ಸನ್ನು ಭೂತಳದಲ್ಲಿ ಕೆಡವುವೆನು.
ಯದಿ ಸಾಧ್ಯಾಶ್ಚ ರುದ್ರಾಶ್ಚ ವಸವಶ್ಚ ಸಹಾಶ್ವಿನಃ |
ಮರುತಶ್ಚ ಮಹೇಂದ್ರೇಣ ವಿಶ್ವೇದೇವಾಸ್ತಥಾಽಸುರಾಃ ॥ 35 ॥
ಪಿತರಃ ಸಿದ್ಧಗಂಧರ್ವಾಃ ಸುಪರ್ಣಾಃ ಸಾಗರಾದ್ರಯಃ |
ದ್ಯೌರ್ವಿಯತ್ ಪೃಥಿವೀ ಚೈವ ದಿಶಶ್ಚ ಸದಿಗೀಶ್ವರಾಃ ॥ 36 ॥
ಗ್ರಾಮ್ಯಾರಣ್ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ತ್ರಾತಾರಃ ಸಿಂಧುರಾಜಸ್ಯ ಭವಿಷ್ಯಂತಿ ಜನಾರ್ದನ ॥ 37 ॥
ಏಭಿರ್ಬಾಣೈಶ್ಚ ನಿಹತಂ ಮಯಾ ದ್ರಕ್ಷ್ಯಸಿ ಸಂಯುಗೇ |
ಸತ್ಯೇನ ತೇ ಶಪೇ ಕೃಷ್ಣ ತಥೈವ ಧನುರಾಲಭೇ ॥ 38 ॥
ಎಲೈ ಜನಾರ್ದನನೇ, ಸಾಧ್ಯರು, ರುದ್ರರು, ಅಶ್ವಿನೀದೇವತೆಗಳಿಂದ ಸಹಿತರಾದ ವಸುಗಳು, ಮರುತ್ತುಗಳು, ಮಹೇಂದ್ರನಿಂದ ಸಹಿತರಾದ ಭೂತಗಳು, ವಿಶ್ವೇದೇವತೆಗಳು, ಅಸುರರು, ಪಿತೃಗಳು, ಸಿದ್ಧ-ಗಂಧರ್ವರು, ಸುಪರ್ಣಾದಿ ಪಕ್ಷಿಗಳು, ಸಾಗರಗಳು ಮತ್ತು ಪರ್ವತಗಳು, ಅಂತರಿಕ್ಷ-ಆಕಾಶ-ಪೃಥಿವಿಗಳು, ದಿಕ್ಕುಗಳು ಮತ್ತು ದಿಗೀಶ್ವರರು, ಗ್ರಾಮದ ಮತ್ತು ಅರಣ್ಯದ ಭೂತಗಳು, ಸ್ಥಾವರ-ಜಂಗಮ ಪ್ರಾಣಿಗಳು ಸೈಂಧವನ ರಕ್ಷಣೆಗಾಗಿ ಬಂದರೂ ಈ ನನ್ನ ಹರಿತವಾದ ಬಾಣಗಳಿಂದ ಯುದ್ಧದಲ್ಲಿ ಸೈಂಧವನು ಹತನಾಗುವುದನ್ನು ನೀನು ನೋಡುವಿ. ಕೃಷ್ಣನೇ, ಧನುಸ್ಸನ್ನು ಹಿಡಿದು ಸತ್ಯ ಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ.
ಯಸ್ಯ ಗೋಪ್ತಾ ಮಹೇಷ್ವಾಸೋ ದ್ರೋಣಃ ಪಾಪಸ್ಯ ದುರ್ಮತೇಃ |
ತಮೇವ ಪ್ರಥಮಂ ದ್ರೋಣಮಭಿಯಾಸ್ಯಾಮಿ ಸಂಯುಗೇ ॥ 39 ॥
ಪಾಪಿಯೂ, ದುರ್ಮತಿಯೂ ಆದ ಅವನಿಗೆ ಮಹಾಧನುರ್ಧಾರಿಯಾದ ದ್ರೋಣರು ರಕ್ಷಕರಾದರೆ ಮೊದಲು ಯುದ್ಧದಲ್ಲಿ ಆ ದ್ರೋಣರ ಮೇಲೆಯೇ ಎರಗುವೆನು.
ತಸ್ಮಿನ್ ಯುದ್ಧಮಿದಂ ಬದ್ಧಂ ಮನ್ಯತೇ ಯತ್ ಸುಯೋಧನಃ |
ತಸ್ಮಾತ್ ತಸ್ಯೈವ ಸೇನಾಗ್ರಂ ಭಿತ್ತ್ವಾ ಯಾಸ್ಯಾಮಿ ಸೈಂಧವಮ್ ॥40॥
ಸುಯೋಧನನು ಈ ಯುದ್ಧವು ದ್ರೋಣರಲ್ಲಿಯೇ ಕೇಂದ್ರೀಕೃತವಾಗಿದೆ ಎಂದು ತಿಳಿಯುವುದರಿಂದ ದ್ರೋಣರ ಸೇನೆಯನ್ನೇ ಭೇದಿಸಿ ನಾನು ಸೈಂಧವನ ಬಳಿಗೆ ಹೋಗುವೆನು.
ದ್ರಷ್ಟಾ ಶ್ವೋಽಸಿ ಮಹೇಷ್ವಾಸಾನ್ ರಥಿನಸ್ತಿಗ್ಮಚೇತಸಃ |
ಮಯಾ ನಿಪಾತಿತಾನ್ ಸಂಖ್ಯೇ ವಜ್ರೈರಿವ ಗಿರಿವ್ರಜಾನ್ ॥ 41 ॥
ಮಹಾಧನುರ್ಧಾರಿಗಳೂ, ತೀಕ್ಷ್ಣಪರಾಕ್ರಮವುಳ್ಳ ರಥರೂ ನಾಳೆಯ ದಿವಸ ಯುದ್ಧದಲ್ಲಿ ವಜ್ರಾಯುಧದಿಂದ ಪರ್ವತಸಮೂಹಗಳು ಬಿದ್ದಂತೆ ನನ್ನಿಂದ ಬೀಳಿಸಲ್ಪಡುವುದನ್ನು ನೀನು ನಾಳೆ ನೋಡುವಿ.
ನರನಾಗಾಶ್ವದೇಹೇಭ್ಯೋ ವಿಸ್ರವಿಷ್ಯತಿ ಶೋಣಿತಮ್ |
ಪತದ್ಭ್ಯಃ ಪತಿತೇಭ್ಯಶ್ಚ ಮಯಾ ನ್ಯಸ್ತೈಃ ಶಿತೈಃ ಶರೈಃ ॥ 42 ॥
ನಾನು ಪ್ರಯೋಗಿಸಿದ ಹರಿತವಾದ ಬಾಣಗಳಿಂದ ಹೊಡೆಯಲ್ಪಟ್ಟು ಬಿದ್ದಿರುವ ಮತ್ತು ಬೀಳುತ್ತಿರುವ ನರ-ಗಜಾಶ್ವ ದೇಹಗಳಿಂದ ನಾಳೆ ರಕ್ತವು ಸುರಿಯುವುದು.
ಗಾಂಡೀವಪ್ರಭವಾ ಬಾಣಾ ಮನೋಽನಿಲಸಮಾ ಜವೇ |
ನೃನಾಗಾಶ್ವಾನ್ ವಿದೇಹಾಸೂನ್ ಕರ್ತಾರಶ್ಚ ಸಹಸ್ರಶಃ ॥ 43 ॥
ಗಾಂಡೀವ ಧನುಸ್ಸಿನಿಂದ ಹೊರಹೊಮ್ಮುವ ಮನೋವೇಗ ಮತ್ತು ವಾಯುವೇಗಕ್ಕೆ ಸಮಾನವೇಗವುಳ್ಳ ಬಾಣಗಳು ಸಹಸ್ರ ಸಂಖ್ಯೆಯಲ್ಲಿ ನರ-ಗಜಾಶ್ವರಗಳನ್ನು ಪ್ರಾಣ ವಿಹೀನರನ್ನಾಗಿ ಮಾಡುವವು.
ಶಕ್ರಾದ್ ಭೀಷ್ಮಾತ್ ಕೃಪಾದ್ ದ್ರೋಣಾದ್
ದೇವಾದ್ ರುದ್ರಾಚ್ಚ ಯನ್ಮಯಾ |
ಉಪಾತ್ತಮಸ್ತ್ರಂ ತದ್ ಘೋರಂ ದ್ರಷ್ಟಾರೋ ಯುಧಿ ಶತ್ರವಃ ॥ 44 ॥
ನಾನು ಇಂದ್ರನಿಂದಲೂ, ಭೀಷ್ಮರಿಂದಲೂ, ಕೃಪರಿಂದಲೂ, ದ್ರೋಣರಿಂದಲೂ, ರುದ್ರದೇವನಿಂದಲೂ ಪಡೆದ ಘೋರವಾದ, ಉತ್ತಮವಾದ ಅಸ್ತ್ರಗಳನ್ನು ನಾಳೆ ಯುದ್ಧದಲ್ಲಿ ಶತ್ರುಗಳು ನೋಡುವರು.
ಬ್ರಾಹ್ಮೇಣಾಸ್ತ್ರೇಣ ಚಾಸ್ತ್ರಾಣಿ ಹನ್ಯಮಾನಾನಿ ಸಂಯುಗೇ |
ಮಯಾ ದ್ರಕ್ಷ್ಯಸಿ ಸರ್ವೇಷಾಂ ಶಿರೋಭಿಶ್ಚಾರುಕುಂಡಲೈಃ ॥ 45 ॥
ಶತ್ರುಗಳ ಅಸ್ತ್ರವು ನನ್ನ ಬ್ರಹ್ಮಾಸ್ತ್ರದಿಂದ ವಿನಾಶಗೊಳಿಸಲ್ಪಟ್ಟು ಯುದ್ಧದಲ್ಲಿ ಶತ್ರುಗಳ ಸುಂದರವಾದ ಕುಂಡಲಗಳನ್ನು ಧರಿಸಿದ ಶಿರಸ್ಸುಗಳ ಜೊತೆಯಲ್ಲಿ ಕೆಳಗೆ ಉರುಳುವುದನ್ನು ನೀನು ನೋಡುವಿ.

ಶರವೇಗಸಮುತ್ಕೃತ್ತೈಃ ಶಿರೋಭಿಶ್ಚಾರುಕುಂಡಲೈಃ |
ಮಯಾ ದ್ರಕ್ಷ್ಯಸಿ ವಿಸ್ತೀರ್ಣಾಂ ಕೀರ್ಯಮಾಣಾಂ ಚ ಮೇದಿನೀಮ್ ||
ನನ್ನ ಬಾಣಗಳ ವೇಗಕ್ಕೆ ಸಿಲುಕಿ ಕತ್ತರಿಸಲ್ಪಟ್ಟ ಚಾರುಕುಂಡಲಗಳಿಂದ ಧರಿಸಲ್ಪಟ್ಟ ಮನೋಹರವಾದ ಶಿರಸ್ಸುಗಳಿಂದ ಹರಡಿರುವುದನ್ನು ನೀನು ನೋಡುವಿ.
ಕ್ರವ್ಯಾದಾಂಸ್ತರ್ಪಯಿಷ್ಯಾಮಿ ದ್ರಾವಯಿಷ್ಯಾಮಿ ಶಾತ್ರವಾನ್ |
ಸುಹೃದೋ ನಂದಯಿಷ್ಯಾಮಿ ಕ್ಷುದ್ರಂ ಹತ್ವಾ ಜಯದ್ರಥಮ್ || 47 ||
ನಾನು ಕ್ಷುದ್ರನಾದ ಜಯದ್ರಥನನ್ನು ಕೊಂದು ಮಾಂಸಾಹಾರಿ ಪ್ರಾಣಿಗಳನ್ನು ಸಂತೋಷಪಡಿಸುವೆನು. ಶತ್ರುಗಳನ್ನು ಓಡಿಸುವೆನು ಮತ್ತು ಸುಹೃಜ್ಜನರನ್ನು ಸಂತೋಷ ಪಡಿಸುವೆನು.
ಬಹ್ವಾಗಸ್ಕೃತ್ ಕುಸಂಬಂಧೀ ಪಾಪದೇಶಸಮುದ್ಭವಃ |
ಮಯಾ ಸೈಂಧವಕೋ ರಾಜಾ ಹತಃ ಸ್ವಾಂಸ್ತ್ರಾಸಯಿಷ್ಯತಿ || 48 ||
ಬಹಳ ಅಪರಾಧವನ್ನು ಮಾಡಿದವನೂ, ಕೆಟ್ಟ ಸಂಬಂಧಿಕನೂ, ಪಾಪದೇಶದಲ್ಲಿ ಹುಟ್ಟಿದವನೂ ಆದ ಆ ಕ್ರೂರಿ ಸೈಂಧವ ರಾಜನು ನಾಳೆ ಹತನಾಗಿ ತನ್ನವರೆಲ್ಲರಿಗೂ ಭಯವನ್ನುಂಟು ಮಾಡುವನು.
ಸರ್ವೇ ಕ್ಷೀರಾನ್ನಭೋಕ್ತಾರಃ ಪಾಪಾಚಾರಾ ನರಾಧಮಾಃ |
ಮಯಾ ಸರಾಜಕಾ ಬಾಣೈಃ ಛಿನ್ನಾ ನಶ್ಯಂತಿ ಸೈಂಧವಾಃ ||49||
ಸೈಂಧವ ದೇಶದ ಪಾಪಾಚಾರವುಳ್ಳ, ಕ್ಷೀರಾನ್ನ ಭೋಜಿಗಳಾದ, ಎಲ್ಲ ನರಾಧಮರೂ ರಾಜನ ಜೊತೆಯಲ್ಲಿ ನನ್ನ ಬಾಣಗಳಿಂದ ಕತ್ತರಿಸಲ್ಪಟ್ಟು ನಾಶವನ್ನು ಹೊಂದುತ್ತಾರೆ.
ತಥಾ ಪ್ರಭಾತೇ ಕರ್ತಾಸ್ಮಿ ಯಥಾ ಕೃಷ್ಣ ಸುಯೋಧನಃ |
ನಾನ್ಯಂ ಧನುರ್ಧರಂ ಲೋಕೇ ಮಂಸ್ಯತೇ ಮತ್ಸಮಂ ಯುಧಿ || 50 ||
ನಾನು ನಾಳೆ ಯುದ್ಧದಲ್ಲಿ ನನ್ನನ್ನು ಬಿಟ್ಟು ನನಗೆ ಸಮನಾದ ಇನ್ನೊಬ್ಬ ಧನುರ್ಧಾರಿಯು ಲೋಕದಲ್ಲಿ ಇಲ್ಲ ಎಂದು ಸುಯೋಧನನು ತಿಳಿಯುವಂತೆ ಕಾರ್ಯವನ್ನು ಮಾಡುವೆನು.
ಗಾಂಡೀವಂ ಚ ಧನುರ್ದಿವ್ಯಂ ಯೋದ್ಧಾರಂ ಚ ಧನಂಜಯಮ್ |
ಯಂತಾರಂ ಚ ಹೃಷೀಕೇಶಂ ಕೋಽತಿವರ್ತೇತ ಸಂಯುಗೇ || 51 ||
ದಿವ್ಯವಾದ ಗಾಂಡೀವ ಧನುಸ್ಸು, ಯೋಧನಾದ ಧನಂಜಯ ಮತ್ತು ಸಾರಥಿಯಾದ ಹೃಷೀಕೇಶ ಇವರನ್ನು ಯುದ್ಧದಲ್ಲಿ ಯಾವನು ದಾಟಿಯಾನು?
ಯಥಾ ಹಿ ಲಕ್ಷ್ಮ ವೈ ಚಂದ್ರೇ ಸಮುದ್ರೇ ಚ ಯಥಾ ಜಲಮ್ |
ಏವಮೇತಾಂ ಪ್ರತಿಜ್ಞಾಂ ಮೇ ಸತ್ಯಂ ವಿದ್ಧಿ ಜನಾರ್ದನ || 52 ||
ಎಲೈ ಜನಾರ್ದನನೇ, ಚಂದ್ರನಲ್ಲಿರುವ ಚಿಹ್ನೆಯಂತೆ, ಸಮುದ್ರದ ಜಲದಂತೆ ಈ ನನ್ನ ಪ್ರತಿಜ್ಞೆಯನ್ನು ಸತ್ಯವಾದುದೆಂದು ತಿಳಿ.
ಮಾಽವಮಂಸ್ಥಾ ಮಮಾಸ್ತ್ರಾಣಿ ಮಾಽವಮಂಸ್ಥಾಶ್ಚ ಗಾಂಡಿವಮ್ |
ಮಾಽವಮಂಸ್ಥಾ ಇಮೌ ಬಾಹೂ ಮಾಽವಮಂಸ್ಥಾ ಧನಂಜಯಮ್ ||
ನನ್ನ ಅಸ್ತ್ರಗಳನ್ನು ಕಡೆಗಣಿಸಬೇಡ. ಗಾಂಡೀವ ಧನುಸ್ಸನ್ನು ಅವಮಾನಗೊಳಿಸಬೇಡ. ಈ ನನ್ನ ಬಾಹುಗಳನ್ನು ಅವಮಾನಗೊಳಿಸಬೇಡ. ಧನಂಜಯನಾದ ನನ್ನನ್ನು ಅವಮಾನಗೊಳಿಸಬೇಡ.
ಗಾಂಡೀವಂ ಚ ಧನುರ್ದಿವ್ಯಂ ಯೋದ್ಧಾ ಚಾಹಂ ಜನಾರ್ದನ |
ತ್ವಂ ತು ಯಂತಾ ಹೃಷೀಕೇಶ ಕಿನ್ನು ಸ್ಯಾದಜಿತಂ ಮಯಾ || 54 ||
ತವ ಪ್ರಸಾದಾದ್ ಭಗವನ್ ಕಿಮಿವಾಸ್ತಿ ರಣೇ ಮಮ |
ಅವಿಷಹ್ಯಂ ಹೃಷೀಕೇಶ ಕಿಂ ಜಾನನ್ ಮಾಂ ವಿಗರ್ಹಸೇ || 55 ||
ಎಲೈ ಜನಾರ್ದನನೇ, ಧನುಸ್ಸು ದಿವ್ಯವಾದ ಗಾಂಡೀವರೂಪವಾದುದು. ಯೋಧನಾದವನು ನಾನು ಮತ್ತು ಹೃಷೀಕೇಶನೇ ಸಾರಥಿಯಾಗಿರುವವನು ನೀನು. ನಾನು ಏನನ್ನು ಗೆಲ್ಲಲು ಸಾಧ್ಯವಿಲ್ಲ? ಎಲೈ ಭಗವಂತನಾದ ಹೃಷೀಕೇಶನೇ, ನಿನ್ನ ಅನುಗ್ರಹದಿಂದ ನನಗೆ ಯುದ್ಧದಲ್ಲಿ ಅಸಾಧ್ಯವಾದುದು ಯಾವುದಿದೆ? ಎಲ್ಲವನ್ನೂ ತಿಳಿದರೂ ಏಕೆ ನನ್ನನ್ನು ಹೀಯಾಳಿಸುತ್ತಿದ್ದೀಯೆ?
ಯಥಾ ಹಿ ಯಾತ್ವಾ ಸಂಗ್ರಾಮಂ ನ ಜಿತೋ ವೈ ಜಯಾಮಿ ಚ |
ತೇನ ಸತ್ಯೇನ ಸಂಗ್ರಾಮೇ ಹತಂ ವಿದ್ಧಿ ಜಯದ್ರಥಮ್ || 56 ||
ನಾನು ಇದುವರೆಗೆ ಯುದ್ಧಕ್ಕೆ ಹೋಗಿ ಪರಾಜಿತನಾಗದೆ ಜಯವನ್ನೇ ಗಳಿಸಿದ್ದರೆ ಆ ಸತ್ಯದಿಂದ ಯುದ್ಧದಲ್ಲಿ ಸೈಂಧವನು ಹತನಾಗಿದ್ದಾನೆಂದು ತಿಳಿ.
ಧ್ರುವಂ ವೈ ಬ್ರಾಹ್ಮಣೇ ಸತ್ಯಂ ಧ್ರುವಂ ಸಾಧುಷು ಸನ್ನತಿಃ |
ಶ್ರೀರ್ಧ್ರುವಾಽಪಿ ಚ ದಕ್ಷೇಷು ಧ್ರುವೋ ನಾರಾಯಣೇ ಜಯಃ ||57||
ಬ್ರಾಹ್ಮಣರಲ್ಲಿ ಸತ್ಯವು ನಿತ್ಯವಾದುದು. ಸಜ್ಜನರಲ್ಲಿ ವಿನಯವು ನಿತ್ಯವಾದುದು. ದಕ್ಷರಾದವರಲ್ಲಿ ಸಂಪತ್ತು ನಿತ್ಯವಾದುದು. ನಾರಾಯಣನಲ್ಲಿ ಜಯವು ನಿತ್ಯವಾದುದು.
ತ್ವಂ ಚ ಮಾಧವ ಸರ್ವಂ ತತ್ ತಥಾ ಪ್ರತಿವಿಧಾಸ್ಯಸಿ |
ಯಥಾ ರಿಪೂಣಾಂ ಮಿಷತಾಂ ಪ್ರಮಥಿಷ್ಯಾಮಿ ಸೈಂಧವಮ್ || 58 ||
ಎಲೈ ಮಾಧವನೇ, ನಾನು ಶತ್ರುಗಳು ನೋಡುತ್ತಿರುವಂತೆಯೇ ಸೈಂಧವನನ್ನು ನಾಶ ಮಾಡುವಂತೆ ನೀನು ಎಲ್ಲವನ್ನೂ ವ್ಯವಸ್ಥೆ ಮಾಡುವಿ.

ಸಂಜಯಃ
ಏವಮುಕತ್ತ್ವ ಹೃಷೀಕೇಶಂ ಸ್ವಯಮಾತ್ಮಾನಮಾತ್ಮನಾ |
ಸಂದಿದೇಶಾರ್ಜುನೋ ನರ್ದನ್ ವಾಸವಿಃ ಕೇಶವಂ ಪ್ರಭುಮ್ ॥59॥
ಯಥಾ ಪ್ರಭಾತಾಂ ರಜನೀಂ ಕಲ್ಪಿತಃ ಸ್ಯಾದ್ ರಥೋತ್ತಮಃ |
ತಥಾ ಕಾರ್ಯಂ ತ್ವಯಾ ಕೃಷ್ಣ ಪ್ರತಿಜ್ಞಾ ಸ್ಯಾದ್ ಯಥಾ ಧ್ರುವಾ ॥60॥
ಸಂಜಯ ಕೃಷ್ಣನನ್ನು ಕುರಿತು ಹೀಗೆ ಹೇಳಿ, ತನ್ನ ಸಾಮರ್ಥ್ಯವನ್ನು ತಾನೇ ಪ್ರಕಟನೆ ಮಾಡುತ್ತಾ, ಸಿಂಹನಾದವನ್ನು ಮಾಡುತ್ತಾ ಇಂದ್ರಪುತ್ರನಾದ ಅರ್ಜುನನು ಪ್ರಭುವಾದ ಕೇಶವನನ್ನು ಕುರಿತು ಎಲೈ ಕೃಷ್ಣನೇ, ರಾತ್ರಿಯು ಕಳೆದು ನಾಳೆಯ ಪ್ರಾತಃಕಾಲದಲ್ಲಿ ನನ್ನ ಪ್ರತಿಜ್ಞೆಯು ನೆರವೇರುವಂತೆ ರಥವನ್ನು ಹೇಗೆ ಅಣಿಗೊಳಿಸಬೇಕೋ ಹಾಗೆ ನೀನು ಮಾಡಬೇಕು ಎಂದು ಆದೇಶವನ್ನು ನೀಡಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಏಕಸಪ್ತತಿತಮೋऽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ತೃತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆರಡನೆಯ ಅಧ್ಯಾಯ
ಕೃಷ್ಣನಿಂದ ಸುಭದ್ರೆಯ ಸಮಾಶ್ವಾಸನೆ.
ಸಂಜಯಃ
ತಾಂ ನಿಶಾಂ ಭೃಶಶೋಕಾರ್ತೌ ನಿಃಶ್ವಸಂತಾವಿವೋರಗೌ |
ವಾಸುದೇವಾರ್ಜುನೌ ವೀರೌ ನ ಸ್ವಪ್ನಮುಪಲೇಭತುಃ ॥ 1 ॥
ಬಹಳ ಶೋಕದಿಂದ ಕೂಡಿದ, ವೀರರಾದ ಕೃಷ್ಣಾರ್ಜುನರು ಸರ್ಪಗಳಂತೆ ಉಸಿರು ಬಿಡುತ್ತಾ ಆ ರಾತ್ರಿ ನಿದ್ರೆಯನ್ನು ಮಾಡಲಿಲ್ಲ.
ನರನಾರಾಯಣೌ ಕ್ರುದ್ಧೌ ಜ್ಞಾತ್ವಾ ದೇವಾಃ ಸವಾಸವಾಃ |
ವ್ಯಥಿತಾಶ್ಚಿಂತಯಾಮಾಸುಃ ಕಿಂಸ್ವಿದೇತದ್ ಭವಿಷ್ಯತಿ ॥ 2 ॥
ನರನಾರಾಯಣರು ಕ್ರೋಧಗೊಂಡಿರುವುದನ್ನು ತಿಳಿದು ಇಂದ್ರಸಹಿತರಾದ ದೇವತೆಗಳು ವ್ಯಥೆಯಿಂದ ಕೂಡಿ ಏನಾಗುವುದೋ ಎಂದು ಚಿಂತಿಸಿದರು.
ವವುಶ್ಚ ದಾರುಣಾ ವಾತಾ ರೂಕ್ಷಾ ಘೋರಾಭಿಶಂಸಿನಃ |
ಸಕಬಂಧಸ್ತಥಾऽऽದಿತ್ಯೇ ಪರಿಘಃ ಸಮದೃಶ್ಯತ ॥ 3 ॥
ವಾಯುಗಳು ದಾರುಣವಾಗಿ ಮತ್ತು ಒರಟಾಗಿ ಘೋರಫಲವನ್ನು ಸೂಚಿಸುತ್ತಾ ಬೀಸಿದವು. ಸೂರ್ಯನ ಸುತ್ತಲೂ ಕಬಂಧ (ನೀರು) ಸಹಿತವಾದ ಪರಿಘವು (ವರ್ತುಲವು) ಕಾಣಿಸಿಕೊಂಡಿತು.
ಉಲ್ಕಾಶನ್ಯಶ್ಚ ನಿಷ್ಪೇತುಃ ಸನಿರ್ಘಾತಾಃ ಸವಿದ್ಯುತಃ |
ಚಚಾಲ ಚಾಪಿ ಪೃಥಿವೀ ಸಶೈಲವನಕಾನನಾ ॥ 4 ॥
ಸಿಡಿಲಿನಂತಹ ಉಲ್ಕೆಗಳು ಮಿಂಚು ಮತ್ತು ಸಿಡಿಲುಗಳೊಡನೆ ಬಿದ್ದವು. ವನ, ಪರ್ವತ ಸಹಿತವಾದ ಪೃಥಿವಿಯು ನಡುಗಿತು.
ಚುಕ್ಷುಭುಶ್ಚ ಮಹಾರಾಜ ಸಾಗರಾ ಮಕರಾಲಯಾಃ |
ಪ್ರತಿಸ್ರೋತಃಪ್ರವೃತ್ತಾಸ್ತು ಗಂತುಂ ವೈ ನಿಮ್ನಗಾಸ್ತದಾ ॥ 5 ॥
ಮಹಾರಾಜನೇ, ಮಕರಾದಿಗಳಿಗೆ ಆಶ್ರಯವಾದ ಸಾಗರಗಳು ಕ್ಷೋಭೆಗೊಂಡವು. ನದಿಗಳು ವಿರುದ್ಧ ದಿಕ್ಕಿನಲ್ಲಿ ಹರಿಯಲು ಪ್ರಾರಂಭಿಸಿದವು.
ಗಜಾಶ್ವನರನಾಶಾರ್ಥಂ ಪ್ರವೃತ್ತಮಧರೋತ್ತರಮ್ |
ಕ್ರವ್ಯಾದಾನಾಂ ಪ್ರಮೋದಾರ್ಥಂ ಯಮರಾಷ್ಟ್ರವಿವೃದ್ಧಯೇ ॥ 6 ॥
ಗಜಾಶ್ವ-ನರಗಳ ವಿನಾಶಕ್ಕಾಗಿ, ಮಾಂಸಾಹಾರಿ ಪ್ರಾಣಿಗಳ ಸಂತೋಷಕ್ಕಾಗಿ, ಯಮರಾಷ್ಟ್ರದ ಅಭಿವೃದ್ಧಿಗಾಗಿ ಎಲ್ಲವೂ ತಲೆಕೆಳಗಾಯಿತು.
ವಾಹನಾನಿ ಶಕೃನ್ಮೂತ್ರಂ ಮುಮುಚೂ ರುರುದುಶ್ಚ ಹ |
ದೀನಾಶ್ಚ ಪಾರ್ಥಿವಾಃ ಸರ್ವೇ ನಾಶಂಸುರ್ಜಯಮಾತ್ಮನಃ |
ತಾನ್ ದೃಷ್ಟ್ವಾ ದಾರುಣಾನ್ ಸರ್ವಾನಮಾತ್ಯಾ ಲೋಮಹರ್ಷಣಾನ್ ॥
ಸರ್ವೇ ತೇ ವ್ಯಥಿತಾ ಸೇನಾ ತ್ವದೀಯಾ ಭರತರ್ಷಭ |
ಶ್ರುತ್ವಾ ಮಹಾಬಲಸ್ಯೋಗ್ರಾಂ ಪ್ರತಿಜ್ಞಾಂ ಸವ್ಯಸಾಚಿನಃ |
ಅಶ್ವಾದಿ ವಾಹನಗಳು ಮಲ-ಮೂತ್ರಗಳನ್ನು ಸ್ರವಿಸಿದವು ಮತ್ತು ರೋದಿಸಿದವು. ರಾಜರೆಲ್ಲರೂ ದೈನ್ಯದಿಂದ ಕೂಡಿ ತಮ್ಮ ಜಯದ ಆಸೆಯನ್ನು ತೊರೆದರು. ಆ ರೋಮಾಂಚಕಾರಿಯಾದ, ದಾರುಣವಾದ ಎಲ್ಲ ಅಪಶಕುನಗಳನ್ನೂ ನೋಡಿ ನಿನ್ನ ಎಲ್ಲ ಅಮಾತ್ಯರೂ ವ್ಯಥೆಗೊಂಡರು. ಮಹಾಬಲಿಷ್ಠನಾದ ಅರ್ಜುನನ ಪ್ರತಿಜ್ಞೆಯನ್ನು ಕೇಳಿ ಎಲೈ ಭರತರ್ಷಭನೇ, ನಿನ್ನ ಸೇನೆ ಎಲ್ಲವೂ ವ್ಯಥೆಗೊಂಡಿತು.
ಅಥ ಕೃಷ್ಣಂ ಮಹಾಬಾಹುರಬ್ರವೀತ್ ಪಾಕಶಾಸನಿಃ ॥ 8 ॥
ಆಶ್ವಾಸಯ ಸುಭದ್ರಾಂ ತ್ವಂ ಭಗಿನೀಂ ಸ್ನುಷಯಾ ಸಹ |
ಶ್ವಶ್ರೂಸ್ನುಷೇ ಭೃಶಾಯಸ್ತೇ ವಿಶೋಕೇ ಕುರು ಮಾಧವ ॥ 9 ॥
ಸಾಮ್ನಾ ಸತ್ಯೇನ ಯುಕ್ತೇನ ವಚಸಾऽऽಶ್ವಾಸಯ ಪ್ರಭೋ ॥ 10 ॥
ಆಗ ಮಹಾಬಾಹುವಾದ ಪಾಕಶಾಸನಿಯಾದ ಅರ್ಜುನನು ಕೃಷ್ಣನನ್ನು ಕುರಿತು ಮಾಧವನೇ, ಸೊಸೆಯಾದ ಉತ್ತರೆಯಿಂದ ಕೂಡಿದ

ನಿನ್ನ ತಂಗಿಯಾದ ಸುಭದ್ರೆಯನ್ನು ಸಮಾಧಾನಗೊಳಿಸು. ಅತ್ತೆ-ಸೊಸೆಯರಿಬ್ಬರೂ ಬಹಳವಾಗಿ ದುಃಖಿತರಾಗಿದ್ದಾರೆ. ಅವರ ಶೋಕವನ್ನು ಪರಿಹರಿಸು. ಎಲೈ ಪ್ರಭುವೇ, ಮೃದುವಾದ ಸತ್ಯವಚನದಿಂದ ಅವರನ್ನು ಸಮಾಧಾನಗೊಳಿಸು ಎಂದು ಹೇಳಿದನು.
ಸಂಜಯಃ
ತತೋಽರ್ಜುನಗೃಹಂ ಗತ್ವಾ ವಾಸುದೇವಃ ಸುದುರ್ಮನಾಃ |
ಭಗಿನೀಂ ಶೋಕಸಂತಪ್ತಾಮಾಶ್ವಾಸಯತ ದುಃಖಿತಾಮ್ ॥ 11 ॥
ಸಂಜಯ ಅನಂತರ ವಾಸುದೇವನು ಬಹಳ ಬೇಸರಗೊಂಡ ಮನಸ್ಸಿನಿಂದ ಅರ್ಜುನನ ಮನೆಗೆ ಹೋಗಿ ಶೋಕ ಸಂತಪ್ತಳಾಗಿ, ದುಃಖಿತಳಾಗಿದ್ದ ತನ್ನ ತಂಗಿಯನ್ನು ಸಮಾಧಾನಗೊಳಿಸಿದನು.
ವಾರ್ಷ್ಣೇಯಿ ಶೋಕಂ ಮಾ ಕಾರ್ಷೀಃ ಕುಮಾರಂ ಪ್ರತಿ ಸಸ್ನುಷಾ |
ಸರ್ವೇಷಾಂ ಪ್ರಾಣಿನಾಂ ಭೀರು ನಿಷ್ಠೈಷಾ ಕಾಲನಿರ್ಮಿತಾ ॥ 12 ॥
ಎಲೌ ವಾರ್ಷ್ಣೇಯಿಯೇ, ಸೊಸೆಯಿಂದ ಸಹಿತಳಾದ ನೀನು ಕುಮಾರನ ವಿಷಯದಲ್ಲಿ ಶೋಕಪಡಬೇಡ. ಎಲೌ ಭೀರುವೇ, ಎಲ್ಲ ಪ್ರಾಣಿಗಳಿಗೂ ಇಂತಹ ಒಂದು ಅವಸಾನವು ಕಾಲನಿರ್ಮಿತವಾದುದು.
ಕುಲೇ ಜಾತಸ್ಯ ವೀರಸ್ಯ ಕ್ಷತ್ರಿಯಸ್ಯ ವಿಶೇಷತಃ |
ಸದೃಶಂ ಮರಣಂ ಹ್ಯೇತತ್ ತವ ಪುತ್ರಸ್ಯ ಮಾ ಶುಚಃ ॥ 13 ॥
ನಿನ್ನ ಪುತ್ರನ ಮರಣವು ಸತ್ಕುಲದಲ್ಲಿ, ಅದರಲ್ಲೂ ವಿಶೇಷವಾಗಿ ಕ್ಷತ್ರಿಯ ಕುಲದಲ್ಲಿ ಪ್ರಸೂತನಾದ ವೀರನಿಗೆ ಉಚಿತವಾದುದು. ಶೋಕಪಡಬೇಡ.
ದಿಷ್ಟ್ಯಾ ಮಹಾರಥೋ ವೀರಃ ಪಿತುಸ್ತುಲ್ಯಪರಾಕ್ರಮಃ |
ಕ್ಷಾತ್ರೇಣ ವಿಧಿನಾ ಪ್ರಾಪ್ತೋ ವೀರಾಭಿಲಷಿತಾಂ ಗತಿಮ್ ॥ 14 ॥
ದೇವರ ದಯದಿಂದ ನಿನ್ನ ಪುತ್ರನು ವೀರನೂ, ಮಹಾರಥನೂ, ತಂದೆಗೆ ಸದೃಶವಾದ ಪರಾಕ್ರಮವುಳ್ಳವನೂ ಆಗಿ, ಕ್ಷತ್ರಿಯ ಸಂಪ್ರದಾಯದಂತೆ ವೀರರು ಬಯಸುವ ಗತಿಯನ್ನು ಹೊಂದಿದ್ದಾನೆ.
ಜಿತ್ವಾ ಚ ಬಹುಶಃ ಶತ್ರೂನ್ ಪ್ರೇಷಯಿತ್ವಾ ಚ ಮೃತ್ಯವೇ |
ಗತಃ ಪುಣ್ಯಕೃತಾಂ ಲೋಕಾನ್ ಸರ್ವಕಾಮದುಹೋಽಕ್ಷಯಾನ್ ॥15॥
ಅನೇಕ ಶತ್ರುಗಳನ್ನು ಗೆದ್ದು, ಅವರನ್ನು ಯಮಲೋಕಕ್ಕೆ ಕಳುಹಿಸಿ, ಪುಣ್ಯವಂತರು ಪಡೆಯುವ ಸರ್ವಕಾಮ ಪರಿಪೂರ್ಣವಾದ ಅಕ್ಷಯಲೋಕಗಳನ್ನು ಹೊಂದಿದ್ದಾನೆ.
ತಪಸಾ ಬ್ರಹ್ಮಚರ್ಯೇಣ ಪ್ರಜ್ಞಯಾ ಚ ಶ್ರುತೇನ ಚ |
ಸಂತೋ ಯಾಂ ಗತಿಮಿಚ್ಛಂತಿ ಪ್ರಾಪ್ತಸ್ತಾಂ ತವ ಪುತ್ರಕಃ ॥ 16 ॥
ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ಪ್ರಜ್ಞೆಯಿಂದಲೂ, ವಿದ್ಯೆಯಿಂದಲೂ ಸಜ್ಜನರು ಯಾವ ಗತಿಯನ್ನು ಪಡೆಯಲು ಬಯಸುತ್ತಾರೆಯೋ ನಿನ್ನ ಚಿಕ್ಕ ವಯಸ್ಸಿನ ಮಗನು ಅಂತಹ ಗತಿಯನ್ನು ಹೊಂದಿದ್ದಾನೆ.
ವೀರಸೂರ್ವೀರಪತ್ನೀ ತ್ವಂ ವೀರಶ್ವಶುರಬಾಂಧವಾ |
ಮಾ ಶುಚಸ್ತನಯಂ ಭದ್ರೇ ಗತಃ ಸ ಪರಮಾಂ ಗತಿಮ್ ॥ 17 ॥
ನೀನು ವೀರಪುತ್ರನನ್ನು ಪಡೆದವಳು. ವೀರನ ಪತ್ನಿ. ವೀರರಾದ ಮಾವಂದಿರನ್ನು ಮತ್ತು ಬಂಧುಗಳನ್ನು ಹೊಂದಿದವಳು. ಎಲೌ ಮಂಗಳಸ್ವರೂಪಳಾದವಳೇ, ಮಗನನ್ನು ಕುರಿತು ಶೋಕಪಡಬೇಡ, ಅವನು ಶ್ರೇಷ್ಠವಾದ ಗತಿಯನ್ನು ಹೊಂದಿದ್ದಾನೆ.
ಸ್ವಾಧ್ಯಾಯಯುಕ್ತಂ ಬ್ರಾಹ್ಮಣೀ ಯಾಚಿತಾರಂ
ಗೌರ್ವೋಢಾರಂ ಶೀಘ್ರಗಂತಾರಮಶ್ವಾ |
ದಾಸಂ ಶೂದ್ರಾ ಕರ್ಮಕರಂ ತು ವೈಶ್ಯಾ
ಶೂರಂ ಸೂತೇ ತ್ವದ್ವಿಧಾ ರಾಜಪುತ್ರೀ ॥ 18 ॥
ಬ್ರಾಹ್ಮಣ ವನಿತೆಯು ಭಿಕ್ಷೆಯಿಂದ ಜೀವನ ಮಾಡುವ ಸ್ವಾಧ್ಯಾಯಶೀಲ ಮಗನನ್ನು ಪ್ರಸವಿಸುತ್ತಾಳೆ. ಗೋವು ಭಾರವನ್ನು ಹೊರುವ ಕರುವನ್ನೂ, ಅಶ್ವವು ಶೀಘ್ರವಾಗಿ ನಡೆಯುವ ಮರಿಯನ್ನೂ, ಶೂದ್ರಳು ಸೇವೆ ಮಾಡುವ ದಾಸನನ್ನೂ, ವೈಶ್ಯರು ಕರ್ಮ ಕುಶಲನಾದ ಪುತ್ರನನ್ನೂ ಪಡೆಯುತ್ತಾಳೆ. ನಿನ್ನಂತಹ ರಾಜಕುಮಾರಿಯು ಶೂರನನ್ನು ಪ್ರಸವಿಸುತ್ತಾಳೆ.
ಧ್ರುವಂ ಪ್ರಾಪ್ಸ್ಯತ್ಯಸೌ ಪಾಪಃ ಸೈಂಧವೋ ಬಾಲಘಾತಕಃ |
ಅಸ್ಯಾವಲೇಪಸ್ಯ ತು ಫಲಂ ಸಸುಹೃದ್ಗಣಬಾಂಧವಃ ॥ 19 ॥
ಬಾಲಘಾತಕನಾದ, ಪಾಪಿಯಾದ ಸೈಂಧವನು ತನ್ನ ಸುಹೃದ್ಗಣ, ಬಾಂಧವರ ಜೊತೆಯಲ್ಲಿ ಇಂತಹ ದುಷ್ಕಾರ್ಯಕ್ಕೆ ಯೋಗ್ಯವಾದ ಫಲವನ್ನು ಖಂಡಿತವಾಗಿ ಹೊಂದುವನು.
ಅಸ್ಯಾಂ ನಿಶಾಯಾಂ ವ್ಯುಷ್ಟಾಯಾಂ ನಿರ್ದಯಃ ಪಾಪಕರ್ಮಕೃತ್ |
ಮೋಕ್ಷ ್ಯತೇ ನ ಹಿ ಪಾರ್ಥಸ್ಯ ಪ್ರವಿಷ್ಟೋಽಪ್ಯಮರಾವತೀಮ್ ॥ 20 ॥
ಈ ರಾತ್ರಿಯು ಕಳೆದ ಮೇಲೆ ನಿರ್ದಯನೂ, ಪಾಪಕರ್ಮವನ್ನು ಮಾಡಿದವನೂ ಆದ ಸೈಂಧವನು ಅಮರಾವತಿಯನ್ನೇ ಹೊಕ್ಕರೂ ಅರ್ಜುನನ ಬಾಣಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.
ಶ್ವಃ ಶಿರಃ ಪಾದಮೂಲಂ ತೇ ಸೈಂಧವಸ್ಯಾಹೃತಂ ಧ್ರುವಮ್ |
ಪದ್ಭ್ಯಾಂ ಪ್ರಮಥಿತಾಸಿ ತ್ವಂ ವಿಶೋಕಾ ಭವ ಮಾ ರುದಃ ॥ 21 ॥
ನಾಳೆಯ ದಿವಸ ನಿನ್ನ ಪಾದಮೂಲಕ್ಕೆ ತಂದೊಪ್ಪಿಸುವ ಸೈಂಧವನ ಶಿರಸ್ಸನ್ನು ನೀನು ಪಾದದಿಂದ ಮರ್ದಿಸುವಿ. ಶೋಕವನ್ನು ಬಿಡು, ಅಳಬೇಡ.

ಕ್ಷತ್ರಧರ್ಮಂ ಪುರಸ್ಕೃತ್ಯ ಗತಃ ಶೂರಃ ಸತಾಂ ಗತಿಮ್ |
ವಯಂ ಚ ಪ್ರಾಪ್ನುಯಾಮೇಹ ಯೇ ಚಾನ್ಯೇ ಶಸ್ತ್ರಜೀವಿನಃ ॥ 22 ॥
ನಾವು ಮತ್ತು ಉಳಿದ ಶಸ್ತ್ರಜೀವಿಗಳು ಯಾವ ಸದ್ಗತಿಯನ್ನು ಪಡೆಯುವೆವೋ ಅಂತಹ ಸದ್ಗತಿಯನ್ನು ಕ್ಷತ್ರಿಯ ಧರ್ಮವನ್ನು ಅನುಸರಿಸಿದ, ಶೂರನಾದ ನಿನ್ನ ಪುತ್ರನು ಪಡೆದಿದ್ದಾನೆ.
ವ್ಯೂಢೋರಸ್ಕೋ ಮಹಾಬಾಹುರನಿವರ್ತೀ ರಿಪುಪ್ರಣುತ್ |
ಗತಸ್ತವ ವರಾರೋಹೇ ಪುತ್ರಃ ಸ್ವರ್ಗಂ ಜಹಿ ಜ್ವರಮ್ ॥ 23 ॥
ಎಲೌ ಸುಂದರಿಯೇ, ವಿಸ್ತಾರವಾದ ವಕ್ಷಸ್ಸ್ಥಲವನ್ನು ಹೊಂದಿ, ಮಹಾಬಾಹುವಾದ ನಿನ್ನ ಪುತ್ರನು ಯುದ್ಧದಿಂದ ಹಿಮ್ಮೆಟ್ಟದೆ, ಶತ್ರುಗಳನ್ನು ಮರ್ದಿಸಿ ಸ್ವರ್ಗಕ್ಕೆ ಹೋಗಿದ್ದಾನೆ. ನಿನ್ನ ಮನಸ್ಸಿನ ತಾಪವನ್ನು ಬಿಡು.
ಅನುಜಾತಃ ಪಿತುಃ ಪಕ್ಷಂ ಮಾತೃಪಕ್ಷಂ ಚ ವೀರ್ಯವಾನ್ |
ಸಹಸ್ರಶೋ ರಿಪೂನ್ ಹತ್ವಾ ಹತಃ ಶೂರೋ ಮಹಾರಥಃ ॥ 24 ॥
ಪರಾಕ್ರಮಶಾಲಿಯಾದ ಅವನು ತಂದೆಯ ವಂಶಕ್ಕೆ ಮತ್ತು ತಾಯಿಯ ವಂಶಕ್ಕೆ ಅನುಗುಣವಾಗಿ ಜನಿಸಿ, ಮಹಾರಥನಾಗಿ, ಸಹಸ್ರಾರು ಶತ್ರುಗಳನ್ನು ಕೊಂದು ಶೂರನಾಗಿ ತಾನೂ ಹತನಾಗಿದ್ದಾನೆ.
ಆಶ್ವಾಸಯ ಸ್ನುಷಾಂ ದೀನಾಂ ಮಾ ಶುಚಃ ಕ್ಷತ್ರಿಯಾ ಹ್ಯಸಿ |
ಶ್ವಃ ಪ್ರಿಯಂ ಸುಮಹಚ್ಛ್ರುತ್ವಾ ವಿಶೋಕಾ ಭವಿತಾಸಿ ಹಿ ॥ 25 ॥
ದೀನಳಾಗಿರುವ ಸೊಸೆಯಾದ ಉತ್ತರೆಯನ್ನು ಸಮಾಧಾನ ಮಾಡು. ಶೋಕ ಪಡಬೇಡ. ನೀನು ಕ್ಷತ್ರಿಯಳಾಗಿದ್ದೀಯಷ್ಟೆ? ನಾಳೆಯ ದಿವಸ ನೀನು ದೊಡ್ಡ ಪ್ರಿಯ ವಾರ್ತೆಯನ್ನು ಕೇಳಿ ಶೋಕರಹಿತಳಾಗುವಿ.
ಯತ್ ಪಾರ್ಥೇನ ಪ್ರತಿಜ್ಞಾತಂ ತತ್ ತಥಾ ನ ತದನ್ಯಥಾ |
ಚಿಕೀರ್ಷಿತಂ ಹಿ ತೇ ಭರ್ತುರ್ನ ಭವೇಜ್ಜಾತು ನಿಷ್ಫಲಮ್ ॥ 26 ॥
ಅರ್ಜುನನು ಏನು ಪ್ರತಿಜ್ಞೆ ಮಾಡಿದ್ದಾನೆಯೋ ಅದು ಹಾಗೆಯೇ ಆಗುತ್ತದೆ. ಬೇರೆ ರೀತಿ ಆಗುವುದಿಲ್ಲ. ನಿನ್ನ ಪತಿಯ ಉದ್ದೇಶವು ಎಂದೂ ವ್ಯರ್ಥವಾಗುವುದಿಲ್ಲ.
ಯದಿ ಸಮನುಜಪನ್ನಗಾಃ ಪಿಶಾಚಾ
ರಜನಿಚರಾಃ ಸಗಣಾಃ ಸುರಾಸುರಾಶ್ಚ |
ರಣಗತಮಭಿಯಾಂತಿ ಸಿಂಧುರಾಜಂ
ನ ಸ ಭವಿತಾ ಸಹ ತೈರಪಿ ಪ್ರಭಾತೇ ॥ 27 ॥
ನಾಳೆಯ ದಿವಸ ಮನುಷ್ಯ-ಸರ್ಪ-ಪಿಶಾಚಿಗಳೂ, ಗಣಸಹಿತರಾದ ರಾಕ್ಷಸರೂ, ಸುರಾಸುರರೂ, ಯುದ್ಧಗತನಾದ ಸೈಂಧವನ ಜೊತೆಯಲ್ಲಿ ಅವನ ಸಹಾಯಕ್ಕೆ ಬಂದರೂ ಅವರ ಜೊತೆಯಲ್ಲಿ ಅವನೂ ಸಹ ಉಳಿಯುವುದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಿಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ಮೂರನೆಯ ಅಧ್ಯಾಯ
ಕೃಷ್ಣನ ಮಾತುಗಳನ್ನು ಕೇಳಿ ಸುಭದ್ರೆಯ ವಿಲಾಪ. ಕೃಷ್ಣನ ಸಮಾಧಾನ. ರಾತ್ರಿಯಲ್ಲಿ ಅರ್ಜುನನಿಂದ ಶಿವಪೂಜೆ, ಕೃಷ್ಣ-ದಾರುಕರ ಸಂಭಾಷಣೆ.
ಸಂಜಯಃ
ಏತಚ್ಛ್ರುತ್ವಾ ವಚಸ್ತಸ್ಯ ಕೇಶವಸ್ಯ ಮಹಾತ್ಮನಃ |
ಸುಭದ್ರಾ ಪುತ್ರಶೋಕಾರ್ತಾ ವಿಲಲಾಪ ಸುದುಃಖಿತಾ ॥ 1 ॥
ಸಂಜಯ ಮಹಾತ್ಮನಾದ ಆ ಕೇಶವನ ಈ ಮಾತುಗಳನ್ನು ಕೇಳಿ, ಪುತ್ರ ಶೋಕಾರ್ತಳಾದ ಸುಭದ್ರೆಯು ಬಹಳ ದುಃಖದಿಂದ ವಿಲಾಪವನ್ನು ಮಾಡಿದಳು.
ಹಾ ಪುತ್ರ ಮಮ ಮಂದಾಯಾಃ ಕಥಂ ಸಂಯುಗಮೇಯಿವಾನ್ |
ನಿಧನಂ ಪ್ರಾಪ್ತವಾಂಸ್ತಾತ ಪಿತುಸ್ತುಲ್ಯಪರಾಕ್ರಮಃ ॥ 2 ॥
ಅಯ್ಯೋ ಮಂದಭಾಗ್ಯಳಾದ ನನ್ನ ಪುತ್ರನೇ, ಪ್ರೀತಿಪಾತ್ರನೇ, ತಂದೆಗೆ ಸಮಾನವಾದ ಪರಾಕ್ರಮವುಳ್ಳವನೇ, ಯುದ್ಧಕ್ಕೆ ಹೋಗಿ ನೀನು ಹೇಗೆ ಮರಣವನ್ನು ಹೊಂದಿದೆ?
ಕಥಮಿಂದೀವರಶ್ಯಾಮಂ ಸುದಂಷ್ಟ್ರಂ ಚಾರುಲೋಚನಮ್ |
ಮುಖಂ ತೇ ದೃಶ್ಯತೇ ವತ್ಸ ಕುಂಠಿತಂ ರಣರೇಣುನಾ ॥ 3 ॥
ಇಂದೀವರದಂತೆ (ನೀಲಕಮಲ) ಶ್ಯಾಮವರ್ಣದಿಂದ ಕೂಡಿದ, ಮನೋಹರವಾದ ದಂತಗಳನ್ನು ಮತ್ತು ಕಣ್ಣುಗಳನ್ನು ಹೊಂದಿದ ನಿನ್ನ ಮುಖವು ಎಲೈ ವತ್ಸನೇ, ರಣರಂಗದ ಧೂಳಿನಿಂದ ಆವೃತವಾಗಿ ಹೇಗೆ ಕಾಣುತ್ತದೆ?
ನೂನಂ ಶೂರಂ ನಿಪತಿತಂ ತ್ವಾಂ ಪಶ್ಯಂತ್ಯನಿವರ್ತಿನಮ್ |
ಸುಶಿರೋಗ್ರೀವಬಾಹ್ವಂಸಂ ವ್ಯೂಢೋರಸ್ಕಂ ತನೂದರಮ್ ॥ 4 ॥
ಚಾರೂಪಚಿತಸರ್ವಾಂಗಂ ಸ್ವಕ್ಷಂ ಶಸ್ತ್ರಕ್ಷತಾಚಿತಮ್ |

ಭೂತಾನಿ ತ್ವಾಂ ನಿರೀಕ್ಷಂತೇ ಭೂಮೌ ಚಂದ್ರಮಿವೋದಿತಮ್ ॥ 5 ॥
ಶೂರನೇ, ವಿಸ್ತಾರವಾದ ವಕ್ಷಸ್ಸುಳ್ಳವನೂ, ಕೃಶವಾದ ಉದರವುಳ್ಳವನೂ, ಒಳ್ಳೆಯ ಶಿರಸ್ಸು, ಕತ್ತು, ಬಾಹು ಮತ್ತು ಭುಜವುಳ್ಳವನೂ, ಚೆನ್ನಾಗಿ ಬೆಳೆದ ಸರ್ವಾವಯವ- ಗಳುಳ್ಳವನೂ, ಒಳ್ಳೆಯ ನೇತ್ರವುಳ್ಳವನೂ ಆದ ನೀನು ಶಸ್ತ್ರದಿಂದ ಉಂಟಾದ ಗಾಯಗಳಿಂದ ತುಂಬಿದವನಾಗಿ ಉದಯಿಸಿದ ಚಂದ್ರನು ಭೂಮಿಯ ಮೇಲೆ ಬಿದ್ದಂತೆ ಬಿದ್ದಿರುವುದನ್ನು ಭೂತಗಳು ನೋಡುತ್ತವೆ.
ಶಯನೀಯಂ ಪುರಾ ಯಸ್ಯ ಸ್ಪರ್ಧ್ಯಾಸ್ತರಣಸಂವೃತಮ್ ।
ಭೂಮಾವದ್ಯ ಕಥಂ ಶೇಷೇ ವಿಪ್ರವಿದ್ಧಃ ಸುಖೋಚಿತಃ ॥ 6 ॥
ಯಾವನ ಹಾಸಿಗೆಯ ಹಿಂದೆ ಒಳ್ಳೆಯ ಹೊದಿಕೆಗಳಿಂದ ಕೂಡಿದ್ದಿತೋ ಅಂತಹ ಸುಖೋಚಿತನಾದ ನೀನು ಈ ದಿನ ಭೂಮಿಯ ಮೇಲೆ ಎಸೆಯಲ್ಪಟ್ಟು ಹೇಗೆ ಮಲಗಿದ್ದೀಯೆ?
ಯೋಽನ್ವಾಸ್ಯತ್ ಪುರಾ ವೀರೋ ವರಸ್ತ್ರೀಭಿರ್ಮಹಾಭುಜಃ ।
ಕಥಮನ್ವಾಸ್ಯಸೇ ಸೋಽದ್ಯ ಶಿವಾಭಿಃ ಪತಿತೋ ಮೃಧೇ ॥ 7 ॥
ಮಹಾಭುಜನಾದ, ವೀರನಾದ ನಿನ್ನನ್ನು ಹಿಂದೆ ಶಯನದಲ್ಲಿ ಸುಂದರಿ ಸ್ತ್ರೀಯರು ಉಪಾಸನೆ ಮಾಡುತ್ತಿದ್ದರು. ಅಂತಹ ನೀನು ನೆಲದ ಮೇಲೆ ಬಿದ್ದು ನರಿಗಳಿಂದ ಹೇಗೆ ಸುತ್ತುವರಿಯಲ್ಪಟ್ಟಿದ್ದೀಯೆ?
ಯಃ ಸ್ತೂಯಸೇ ಪುರಾ ಹೃಷ್ಟೈಃ ಸೂತಮಾಗಧವಂದಿಭಿಃ ।
ಸೋಽದ್ಯ ಕ್ರವ್ಯಾದ್ಗಣೈರ್ಘೋರೈರ್ವಿನದದ್ಭಿರುಪಾಸ್ಯಸೇ ॥ 8 ॥
ಯಾವ ನಿನ್ನನ್ನು ಹಿಂದೆ ಸೂತ-ಮಾಗಧ-ವಂದಿಗಳು ಸಂತೋಷದಿಂದ ಸ್ತೋತ್ರ ಮಾಡುತ್ತಿದ್ದರೋ ಅಂತಹ ನೀನು ಈ ದಿನ ನಿನ್ನ ಸುತ್ತಲೂ ನಿಂತಿರುವ ಘೋರವಾದ ಮಾಂಸಾಹಾರಿ ಪ್ರಾಣಿಗಳ ಗಣದಿಂದ ಕಿರುಚಲ್ಪಡುತ್ತಿದ್ದೀಯೆ.
ಪಾಂಡವೇಷು ಚ ನಾಥೇಷು ವೃಷ್ಣಿವೀರೇಷು ಚಾಭಿಭೋ ।
ಪಾಂಚಾಲೇಷು ಚ ವೀರೇಷು ಹತಃ ಕೇನಾಸ್ಯನಾಥವತ್ ।
ಯತ್ರ ತ್ವಂ ಕೇಶವೇ ನಾಥೇ ಸತ್ಯನಾಥೋ ಯಥಾ ಹತಃ ॥ 9 ॥
ಎಲೈ ಶತ್ರುಜಯಶೀಲನೇ, ಪಾಂಡವರು, ವೃಷ್ಣಿವೀರರು, ಪಾಂಚಾಲ ವೀರರು ನಾಥರಾಗಿರುವಾಗ, ಕೇಶವನು ನಾಥನಾಗಿರುವಾಗ, ಅನಾಥನಂತೆ ಹೇಗೆ ಹತನಾಗಿದ್ದೀಯೆ?
ಅತೃಪ್ತದರ್ಶನಾ ಪುತ್ರ ದರ್ಶನಸ್ಯ ತವಾನಘ ।
ಮಂದಭಾಗ್ಯಾ ಗಮಿಷ್ಯಾಮಿ ವ್ಯಕ್ತಮದ್ಯ ಯಮಕ್ಷಯಮ್ ॥ 10 ॥
ಪುತ್ರನೇ, ಅನಘನೇ, ನಿನ್ನ ದರ್ಶನದಿಂದ ನನಗೆ ತೃಪ್ತಿಯೇ ಆಗಿಲ್ಲ. ಮಂದಭಾಗ್ಯಳಾದ ನಾನೂ ಈ ದಿನ ಯಮಪಟ್ಟಣಕ್ಕೆ ಹೋಗುವೆನು.
ವಿಶಾಲಾಕ್ಷಂ ಸುಕೇಶಾಂತಂ ಚಾರುಹಾಸಂ ಸುಗಂಧಿ ಚ ।
ತವ ಪುತ್ರ ಕದಾ ವಕ್ತ್ರಂ ಭೂಯೋ ದ್ರಕ್ಷ್ಯಾಮಿ ನಿರ್ವ್ರಣಮ್ ॥ 11 ॥
ವಿಶಾಲವಾದ ಕಣ್ಣುಳ್ಳ, ಒಳ್ಳೆಯ ಬೈತಲೆಯುಳ್ಳ, ಸುಂದರವಾದ ಮುಗುಳ್ನಗೆಯುಳ್ಳ, ಒಳ್ಳೆಯ ಗಂಧವುಳ್ಳ, ವ್ರಣರಹಿತವಾದ ನಿನ್ನ ಮುಖವನ್ನು ಎಲೈ ಪುತ್ರನೇ, ನಾನು ಇನ್ನೊಮ್ಮೆ ಯಾವಾಗ ನೋಡುವೆನು?
ಧಿಗ್ ಬಲಂ ಭೀಮಸೇನಸ್ಯ ಧಿಕ್ ಪಾರ್ಥಸ್ಯ ಧನುಷ್ಮತಃ ।
ಧಿಗ್ ಬಲಂ ವೃಷ್ಣಿವೀರಾಣಾಂ ಪಾಂಚಾಲಾನಾಂ ಚ ಧಿಗ್ ಬಲಮ್ ॥
ಧಿಕ್ ಕೇಕಯಾಂಸ್ತಥಾ ಮತ್ಸ್ಯಾನ್ ಚೇದಿಪಾಂಡವಸೃಂಜಯಾನ್ ।
ಯೇ ತ್ವಾಂ ರಣಗತಂ ವೀರಂ ನಾರಕ್ಷನ್ ವಿನಿಪಾತಿತಮ್ ॥ 13 ॥
ರಣರಂಗಗತನಾದ ನಿನ್ನನ್ನು ನಿನ್ನ ನಿಪಾತವು ಉಂಟಾದರೆ ರಕ್ಷಿಸದ ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ. ಧನುರ್ಧಾರಿಯಾದ ಅರ್ಜುನನ ಬಲಕ್ಕೆ ಧಿಕ್ಕಾರವಿರಲಿ. ವೃಷ್ಣಿವೀರರ ಬಲಕ್ಕೆ ಧಿಕ್ಕಾರವಿರಲಿ. ಪಾಂಚಾಲರಿಗೆ ಧಿಕ್ಕಾರವಿರಲಿ. ಕೇಕಯರಿಗೆ, ಮತ್ಸ್ಯರಿಗೆ, ಚೇದಿಗಳಿಗೆ, ಪಾಂಡವರಿಗೆ ಮತ್ತು ಸೃಂಜಯರಿಗೆ ಧಿಕ್ಕಾರವಿರಲಿ.
ಸ್ವಸ್ರೀಯಂ ವಾಸುದೇವಸ್ಯ ಗೃಧ್ರಾಸ್ತ್ವಂ ಪರ್ಯುಪಾಸತೇ ।
ಕಥಂ ತ್ವಾಽತಿರಥಂ ವೀರಂ ಪಶ್ಯಾಮ್ಯದ್ಯ ನಿಪಾತಿತಮ್ ॥ 14 ॥
ವಾಸುದೇವನ ಸೋದರಳಿಯನನ್ನು ಈ ದಿನ ಹದ್ದುಗಳು ಸುತ್ತುವರಿದಿವೆ. ಅತಿರಥನೂ, ವೀರನೂ ಆದ ಅವನು ಬಿದ್ದಿರುವುದನ್ನು ನಾನು ಈ ದಿನ ಹೇಗೆ ನೋಡಲಿ?
ಅದ್ಯ ಪಶ್ಯಾಮಿ ಪೃಥಿವೀಂ ಶೂನ್ಯಾಮಿವ ಗತತ್ವಿಷಮ್ ।
ಅಭಿಮನ್ಯುಮಪಶ್ಯಂತೀ ಶೋಕವ್ಯಾಕುಲಲೋಚನಾ ॥ 15 ॥
ಅಭಿಮನ್ಯುವನ್ನು ಕಾಣದೆ ಶೋಕದಿಂದ ತುಂಬಿದ ಕಣ್ಣುಳ್ಳ ನನಗೆ ಈ ದಿನ ಭೂಮಿಯು ಕಾಂತಿಹೀನವಾಗಿ ಶೂನ್ಯವಾದಂತೆ ಕಾಣುತ್ತಿದೆ.
ಸಾಕ್ಷಾನ್ಮಘವತಃ ಪೌತ್ರಂ ಪುತ್ರಂ ಗಾಂಡೀವಧನ್ವನಃ ।
ಸ್ವಸ್ರೀಯಂ ವಾಸುದೇವಸ್ಯ ತಂ ಗೃಧ್ರಾಃ ಪರ್ಯುಪಾಸತೇ ॥ 16 ॥
ಇಂದ್ರನ ಸಾಕ್ಷಾತ್ ಮೊಮ್ಮಗನನ್ನು, ಗಾಂಡೀವಧಾರಿಯಾದ ಅರ್ಜುನನ ಮಗನನ್ನು, ಕೃಷ್ಣನ ಸೋದರಳಿಯನನ್ನು ಹದ್ದುಗಳು ಸುತ್ತುವರಿದಿವೆ!
ಹಾ ದೃಷ್ಟೋ ವೀರ ನಷ್ಟಶ್ಚ ರಮ್ಯಸ್ವಪ್ನ ಇವಾಸಿ ಮೇ ।
ಅಹೋ ಹ್ಯನಿತ್ಯಂ ಮಾನುಷ್ಯಂ ಜಲಬುದ್ಬುದವಚ್ಚಲಮ್ ॥ 17 ॥

ಅಯ್ಯೋ ಪುತ್ರನೇ, ಸ್ವಲ್ಪ ಕಾಲ ನಿನ್ನನ್ನು ನೋಡಿ ಕಳೆದುಕೊಂಡ ಮೇಲೆ ಈಗ ನೀನು ನಷ್ಟವಾದ ಸುಂದರವಾದ ಸ್ವಪ್ನದಂತೆ ತೋರುತ್ತಿದ್ದೀಯೆ. ಅಯ್ಯೋ ಮನುಷ್ಯ ಜೀವನವು ನೀರಿನ ಗುಳ್ಳೆಯಂತೆ ಅನಿತ್ಯವಾದುದು ಮತ್ತು ಚಂಚಲವಾದುದು!
ಇಮಾಂ ತೇ ತರುಣೀಂ ಭಾರ್ಯಾಂ ಪುತ್ರಾಧಿಭಿರಭಿಪ್ಲುತಾಮ್ |
ಉತ್ತರಾಮುತ್ತಮಾಂ ಜಾತ್ಯಾ ಸುಶೀಲಾಂ ಪ್ರಿಯಭಾಷಿಣೀಮ್ ॥ 18 ॥
ಶನಕೈಃ ಪರಿರಭ್ಯೈನಾಂ ಸ್ನುಷಾಂ ಮಮ ಯಶಸ್ವಿನೀಮ್ |
ಸುಕುಮಾರೀಂ ವಿಶಾಲಾಕ್ಷೀಂ ಪೂರ್ಣಚಂದ್ರನಿಭಾನನಾಮ್ ॥ 19 ॥
ಬಾಲಪಲ್ಲವತನ್ವಂಗೀಂ ಮತ್ತಮಾತಂಗಗಾಮಿನೀಮ್ |
ಬಿಂಬಾಧರೋಷ್ಠೀಮಬಲಾಮಭಿಮನ್ಯೋ ಪ್ರಹರ್ಷಯ ॥ 20 ॥
ಈ ನಿನ್ನ ಭಾರ್ಯೆಯೂ, ತರುಣಿಯೂ, ಉದರದಲ್ಲಿರುವ ಗರ್ಭದ ಚಿಂತೆಯಿಂದ ಕೂಡಿದವಳೂ, ಶ್ರೇಷ್ಠಳಾದವಳೂ, ಸ್ವಾಭಾವಿಕವಾಗಿಯೇ ಸುಶೀಲಳಾದವಳೂ, ಪ್ರಿಯಭಾಷಿಣಿಯಾದವಳೂ, ಕೀರ್ತಿವಂತಳೂ, ಸುಕುಮಾರಿಯೂ, ವಿಶಾಲಾಕ್ಷಿಯೂ, ಪೂರ್ಣಚಂದ್ರನಂತಹ ಮುಖವುಳ್ಳವಳೂ, ಎಳೆಯ ಚಿಗುರಿನಂತೆ ಕೋಮಲವಾದ ಶರೀರವುಳ್ಳವಳೂ, ಮದಗಜದ ನಡಿಗೆಯನ್ನು ಹೊಂದಿದವಳೂ, ಬಿಂಬಾಧರೆಯೂ, ಅಬಲೆಯೂ ಆದ ಉತ್ತರೆಯನ್ನು ಎಲೈ ಅಭಿಮನ್ಯುವೇ, ಮೆಲ್ಲನೆ ಆಲಿಂಗಿಸಿ ಸಂತೋಷಗೊಳಿಸು.
ತ್ವಯಾ ವಿನಾ ಕಥಂ ಪುತ್ರ ಜೀರ್ಣಾಂ ಪತಿತಮಾನಸಾಮ್ |
ಇಮಾಂ ಸಂಧಾರಯಿಷ್ಯಾಮಿ ವಿವತ್ಸಾಮಿವ ಧೇನುಕಾಮ್ ॥ 21 ॥
ಎಲೈ ಪುತ್ರನೇ, ವತ್ಸವನ್ನು ಕಳೆದುಕೊಂಡ ಧೇನುವಂತಿರುವ ನಾನು ನೀನಿಲ್ಲದೆ ಬಸವಳಿದು, ಮನೋಗ್ಲಾನಿಗೆ ಒಳಗಾದ ಇವಳನ್ನು ಹೇಗೆ ಪೋಷಿಸುವೆನು?
ಅಹೋ ಹ್ಯಕಾಲೇ ಪ್ರಸ್ಥಾನಂ ಕೃತವಾನಸಿ ಪುತ್ರಕ |
ವಿಹಾಯ ಫಲಕಾಲೇ ಮಾಂ ಸುಗೃದ್ಧಾಂ ತವ ದರ್ಶನೇ ॥ 22 ॥
ಎಲೈ ಪುತ್ರನೇ, ಯಾವಾಗಲೂ ನಿನ್ನ ದರ್ಶನವನ್ನು ಬಯಸುವ ನನ್ನನ್ನು ಫಲಕಾಲದಲ್ಲಿ ತೊರೆದು ಅಕಾಲದಲ್ಲಿ ಪ್ರಯಾಣವನ್ನು ಮಾಡಿದ್ದೀಯೆ.
ನೂನಂ ಗತಿಃ ಕೃತಾಂತಸ್ಯ ಪ್ರಾಜ್ಞೈರಪಿ ಸುದುಸ್ತರಾ |
ಯತ್ರ ತ್ವಂ ಕೇಶವೇ ನಾಥೇ ಸತ್ಯನಾಥೋ ಯಥಾ ಹತಃ ॥ 23 ॥
ಕೃತಾಂತನ ನಿಯಮವನ್ನು ಖಂಡಿತವಾಗಿಯೂ ಪ್ರಾಜ್ಞರೂ ದಾಟಲಾರರು. ಏಕೆಂದರೆ ಕೇಶವನು ನಾಥನಾಗಿದ್ದರೂ ನೀನು ಅನಾಥನಂತೆ ಮೃತನಾಗಿದ್ದೀಯೆ.
ಯಜ್ವನಾಂ ದಾನಶೀಲಾನಾಂ ಬ್ರಾಹ್ಮಣಾನಾಂ ಕೃತಾತ್ಮನಾಮ್ |
ಚರಿತಬ್ರಹ್ಮಚರ್ಯಾಣಾಂ ಪುಣ್ಯತೀರ್ಥಾವಗಾಹಿನಾಮ್ ॥ 24 ॥
ಕೃತಜ್ಞಾನಾಂ ವದಾನ್ಯಾನಾಂ ಗುರುಶುಶ್ರೂಷಿಣಾಮಪಿ |
ಸಹಸ್ರದಕ್ಷಿಣಾನಾಂ ಚ ಯಾ ಗತಿಸ್ತಾಮವಾಪ್ನುಹಿ ॥ 25 ॥
ಯಾಗವನ್ನು ಮಾಡುವವರಿಗೆ, ದಾನಶೀಲರಾದವರಿಗೆ, ಜಿತೇಂದ್ರಿಯರಾದ ಬ್ರಾಹ್ಮಣರಿಗೆ, ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡಿದವರಿಗೆ, ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿದವರಿಗೆ, ಕೃತಜ್ಞರಾದವರಿಗೆ, ಉದಾರಿಗಳಾದವರಿಗೆ, ಗುರುಶುಶ್ರೂಷೆಯನ್ನು ಮಾಡಿದವರಿಗೆ, ಸಹಸ್ರ ದಕ್ಷಿಣೆಯನ್ನು ಕೊಟ್ಟವರಿಗೆ ಯಾವ ಗತಿಯಾಗುತ್ತದೆಯೋ ಅಂತಹ ಗತಿಯನ್ನು ಹೊಂದುವವನಾಗು.
ಯಾ ಗತಿರ್ಯುಧ್ಯಮಾನಾನಾಂ ಶೂರಾಣಾಮನಿವರ್ತಿನಾಮ್ |
ಅಪರಾಙ್ಮುಖಾನಾಂ ಸಮರೇ ತಾಂ ಗತಿಂ ವ್ರಜ ಪುತ್ರಕ ॥ 26 ॥
ಯುದ್ಧದಲ್ಲಿ ಹಿಮ್ಮೆಟ್ಟದೆ ಶೂರರಿಗೆ, ಯುದ್ಧವನು ಮಾಡುವ ಯಾವ ಗತಿಯಾಗುತ್ತದೆಯೋ ಎಲೈ ಪುತ್ರನೇ, ಅಂತಹ ಗತಿಯನ್ನು ಹೊಂದುವವನಾಗು.
ಗೋಸಹಸ್ರಪ್ರದಾತೄಣಾಂ ಕ್ರತುದಾನಾಂ ಚ ಯಾ ಗತಿಃ |
ವೈದೇಶಿಕಾನಾಂ ಚಾಭಿಮತಂ ದದತಾಂ ಯಾ ಗತಿರ್ಭವೇತ್ ॥ 27 ॥
ಬ್ರಹ್ಮಚರ್ಯೇಣ ಯಾಂ ಯಾಂತಿ ಮುನಯಃ ಸಂಶಿತವ್ರತಾಃ |
ಏಕಪತ್ನ್ಯಶ್ಚ ಯಾಂ ಯಾಂತಿ ತಾಂ ಗತಿಂ ವ್ರಜ ಪುತ್ರಕ ॥ 28 ॥
ಸಹಸ್ರ ಗೋದಾನ ಮಾಡಿದವರಿಗೆ, ಯಜ್ಞದಲ್ಲಿ ಅನ್ನಾದಿಗಳನ್ನು ದಾನ ಮಾಡಿದವರಿಗೆ, ಉಪದೇಶವನ್ನು ಮಾಡಿದವರಿಗೆ, ದಾನವನ್ನು ಮಾಡಿದವರಿಗೆ ಅಭಿಮತವಾದ ಯಾವ ಗತಿಯೋ, ಬ್ರಹ್ಮಚರ್ಯ ಪಾಲಿಸಿದ, ವ್ರತಶೀಲರಾದ ಮುನಿಗಳು ಯಾವ ಗತಿಯನ್ನು ಹೊಂದುತ್ತಾರೆಯೋ, ಪತಿವ್ರತೆಯರು ಯಾವ ಗತಿಯನ್ನು ಹೊಂದುತ್ತಾರೆಯೋ, ಎಲೈ ಪುತ್ರನೇ, ಅಂತಹ ಗತಿಯನ್ನು ಹೊಂದುವವನಾಗು.
ರಾಜ್ಞಾಂ ಸುಚರಿತೈರ್ಯಾ ಚ ಗತಿರ್ಭವತಿ ಶಾಶ್ವತೀ |
ಯಾ ಗತಿರ್ನ್ಯಸ್ತದಂಡಾನಾಂ ತಾಂ ಗತಿಂ ವ್ರಜ ಪುತ್ರಕ |
ಚತುರಾಶ್ರಮಿಣಾಂ ಪುಣ್ಯೈಃ ಪಾವಿತಾನಾಂ ಸುರಕ್ಷಿತೈಃ ॥ 29 ॥
ಶುಭಾಚಾರವುಳ್ಳ ರಾಜರಿಗೆ ಯಾವ ಶಾಶ್ವತವಾದ ಗತಿಯಾಗುವುದೋ, ನ್ಯಸ್ತದಂಡರಾದ ಸಂನ್ಯಾಸಿಗಳಿಗೆ ಯಾವ ಗತಿಯಾಗುವುದೋ, ಪವಿತ್ರರಾದ ಚತುರಾಶ್ರಮಿಗಳು ಸಂಪಾದಿಸಿ ರಕ್ಷಿಸಿದ ಪುಣ್ಯಗಳಿಂದ ಯಾವ ಗತಿಯಾಗುವುದೋ ಅಂತಹ ಗತಿಯನ್ನು ಹೊಂದುವವನಾಗು.

ದೀನಾನುಕಂಪಿನಾಂ ಯಾ ಚ ಸತತಂ ಸಂವಿಭಾಗಿನಾಮ್ |
ಪೈಶುನ್ಯಾಚ್ಚ ನಿವೃತ್ತಾನಾಂ ತಾಂ ಗತಿಂ ವ್ರಜ ಪುತ್ರಕ ॥ 30 ॥
ದೀನರ ಮೇಲೆ ದಯೆಯನ್ನು ತೋರಿಸುವವರಿಗೆ, ಸತತವಾಗಿ ಅನ್ನದಾನವನ್ನು ಮಾಡಿ ಭುಂಜಿಸುವವರಿಗೆ, ಚಾಡಿಯನ್ನು ಹೇಳುವುದರಿಂದ ನಿವೃತ್ತರಾದವರಿಗೆ ಯಾವ ಗತಿಯೋ, ಎಲ್ಲೈ ಪುತ್ರನೇ, ಅಂತಹ ಗತಿಯನ್ನು ಹೊಂದುವವನಾಗು.
ವ್ರತಿನಾಂ ಧರ್ಮಶೀಲಾನಾಂ ಗುರುಶುಶ್ರೂಷಿಣಾಮಪಿ |
ಅಮೋಘಾತಿಥೀನಾಂ ಯಾ ಚ ತಾಂ ಗತಿಂ ವ್ರಜ ಪುತ್ರಕ ॥ 31 ॥
ಕೃಚ್ಛ್ರೇಷು ಯಾ ಧಾರಯತಾಮಾತ್ಮಾನಂ ವ್ಯಸನೇಷು ಚ |
ಗತಿಃ ಶೋಕಾಗ್ನಿದಗ್ಧಾನಾಂ ತಾಂ ಗತಿಂ ವ್ರಜ ಪುತ್ರಕ ॥ 32 ॥
ಮಾತಾಪಿತ್ರೋಶ್ಚ ಶುಶ್ರೂಷಾಂ ಕಲ್ಪಯಂತೀಹ ಯೇ ಸದಾ |
ಸ್ವದಾರನಿರತಾನಾಂ ಚ ಯಾ ಗತಿಸ್ತಾಮವಾಪ್ನುಹಿ ॥ 33 ॥
ವ್ರತಾನುಷ್ಠಾನ ಮಾಡಿದವರಿಗೆ, ಧರ್ಮಶೀಲರಾದವರಿಗೆ, ಗುರುಶುಶ್ರೂಷೆಯನ್ನು ಮಾಡಿದವರಿಗೆ, ಅತಿಥಿಗಳನ್ನು ಎಂದೂ ನಿರಾಶೆ ಮಾಡದವರಿಗೆ ಯಾವ ಗತಿಯೋ; ಕಷ್ಟ ಬಂದಾಗ, ವ್ಯಸನ ಉಂಟಾದಾಗ ಯಾರು ಧೈರ್ಯದಿಂದ ಅದನ್ನು ಧರಿಸುತ್ತಾರೆಯೋ ಅಂತಹವರಿಗೆ, ಶೋಕಾಗ್ನಿದಗ್ಧರಾದರೂ ಆತ್ಮಸಂಯಮ ಉಳ್ಳವರಿಗೆ ಯಾವ ಗತಿಯೋ; ಯಾವಾಗಲೂ ತಂದೆ-ತಾಯಿಗಳ ಸೇವೆಯನ್ನು ಮಾಡುವವರಿಗೆ, ತನ್ನ ಪತ್ನಿಯಲ್ಲಿಯೇ ನಿರತರಾದವರಿಗೆ ಯಾವ ಗತಿಯೋ, ಎಲ್ಲೈ ಪುತ್ರನೇ, ಅಂತಹ ಗತಿಯನ್ನು ಹೊಂದುವವನಾಗು.
ಋತುಕಾಲೇ ಸ್ವಕಾಂ ಪತ್ನೀಂ ಗಚ್ಛತಾಂ ಯಾ ಮನೀಷಿಣಾಮ್ |
ಅನನ್ಯದಾರಸೇವೀನಾಂ ತಾಂ ಗತಿಂ ವ್ರಜ ಪುತ್ರಕ ॥ 34 ॥
ಎಲ್ಲೈ ಪುತ್ರನೇ, ಋತುಕಾಲದಲ್ಲಿ ತಮ್ಮ ಪತ್ನಿಯನ್ನು ಭೋಗಿಸುವ ವಿವೇಕಿಗಳಿಗೆ ಯಾವ ಗತಿಯೋ, ಅನ್ಯರ ಪತ್ನಿಯನ್ನು ಸೇವಿಸದವರಿಗೆ ಯಾವ ಗತಿಯೋ, ಅಂತಹ ಗತಿಯನ್ನು ಹೊಂದುವವನಾಗು.
ಸಾಮ್ನಾ ಯೇ ಸರ್ವಭೂತಾನಿ ಗಚ್ಛಂತಿ ಗತಮತ್ಸರಾಃ |
ನಾರುಂತುದಾನಾಂ ಕ್ಷಮಿಣಾಂ ಯಾ ಗತಿಸ್ತಾಮವಾಪ್ನುಹಿ ॥ 35 ॥
ಮಾತ್ಸರ್ಯರಹಿತವಾಗಿ ಯಾರು ಎಲ್ಲ ಪ್ರಾಣಿಗಳನ್ನೂ ಮಾರ್ದವದಿಂದ ನೋಡಿಕೊಳ್ಳುತ್ತಾರೆಯೋ, ಮರ್ಮಭೇದಕವಾದ ಮಾತುಗಳನ್ನು ಆಡುವುದಿಲ್ಲವೋ, ಕ್ಷಮಾಶೀಲರೋ ಅವರಿಗೆ ಉಂಟಾಗುವ ಗತಿಯು ನಿನಗಾಗಲಿ.
ಮಧುಮಾಂಸನಿವೃತ್ತಾನಾಂ ಮದಾದ್ ಡಂಭಾತ್ ತಥಾಽನೃತಾತ್ |
ಪರೋಪತಾಪಾದನ್ಯಾಯಾತ್ ತಾಂ ಗತಿಂ ವ್ರಜ ಪುತ್ರಕ ॥ 36 ॥
ಮಧುಮಾಂಸಗಳನ್ನು ತ್ಯಜಿಸಿದವರಿಗೆ, ಮದದಿಂದಲೂ ದರ್ಪದಿಂದಲೂ ಮತ್ತು ಅನೃತದಿಂದಲೂ ನಿವೃತ್ತರಾದವರಿಗೆ, ಅನ್ಯಾಯದಿಂದ ಇನ್ನೊಬ್ಬರನ್ನು ಹಿಂಸಿಸುವುದರಿಂದಲೂ ನಿವೃತ್ತರಾದವರಿಗೆ ಉಂಟಾಗುವ ಗತಿಯು ನಿನಗಾಗಲಿ.
ಯಜ್ವಾನಃ ಸರ್ವಧರ್ಮಜ್ಞಾ ಜ್ಞಾನತೃಪ್ತಾ ಜಿತೇಂದ್ರಿಯಾಃ |
ಯಾಂ ಗತಿಂ ಸಾಧವೋ ಯಾಂತಿ ತಾಂ ಗತಿಂ ವ್ರಜ ಪುತ್ರಕ ॥ 37 ॥
ಎಲ್ಲೈ ಪುತ್ರನೇ, ಯಾಗವನ್ನು ಮಾಡುವ, ಸರ್ವಧರ್ಮಗಳನ್ನು ತಿಳಿದ, ಜ್ಞಾನತೃಪ್ತರಾದ, ಜಿತೇಂದ್ರಿಯರಾದ ಸಜ್ಜನರಿಗೆ ಯಾವ ಗತಿಯೋ ಅಂತಹ ಗತಿಯು ನಿನಗಾಗಲಿ.
ಸಂಜಯಃ
ಏವಂ ವಿಲಪತೀಂ ದೀನಾಂ ಸುಭದ್ರಾಂ ಶೋಕಕರ್ಶಿತಾಮ್ |
ಉಪಾಗಚ್ಛತ ಪಾಂಚಾಲೀ ಉತ್ತರಾಸಹಿತಾ ತದಾ ॥ 38 ॥
ಸಂಜಯ ಹೀಗೆ ಶೋಕಕರ್ಶಿತಳಾಗಿ ವಿಲಾಪವನ್ನು ಮಾಡುತ್ತಿದ್ದ ಸುಭದ್ರೆಯು ಇದ್ದಲ್ಲಿಗೆ ಉತ್ತರಾ ಸಹಿತಳಾದ ದ್ರೌಪದಿಯು ಬಂದಳು.
ಸಾ ಪ್ರಕಾಮಂ ರುದಿತ್ವಾ ಚ ವಿಲಪ್ಯ ಚ ಸುದುಃಖಿತಾ |
ಉನ್ಮತ್ತವತ್ ತದಾ ರಾಜನ್ ವಿಸಂಜ್ಞಾ ಪತಿತಾ ಕ್ಷಿತೌ ॥ 39 ॥
ಅವಳು (ಸುಭದ್ರೆಯು) ಬಹಳವಾಗಿ ಅತ್ತು ದುಃಖದಿಂದ ಕೂಡಿ ಹುಚ್ಚಳಂತೆ ವಿಲಾಪವನ್ನು ಮಾಡಿ, ಎಲ್ಲೈ ರಾಜನೇ, ಮೂರ್ಛೆಯನ್ನು ಹೊಂದಿ ಭೂಮಿಯ ಮೇಲೆ ಬಿದ್ದಳು.
ಸೋಪಚಾರಸ್ತು ಕೃಷ್ಣಸ್ತಾಂ ದುಃಖಿತಾಂ ಭೃಶದುಃಖಿತಃ |
ಸಿಕ್ತ್ವಾಽಂಭಸಾ ಸಮಾಶ್ವಾಸ್ಯ ತತ್ತದುಕ್ತ್ವಾ ಹಿತಂ ವಚಃ ॥ 40 ॥
ವಿಸಂಜ್ಞಕಲ್ಪಾಂ ರುದತೀಮಪವಿದ್ಧಾಂ ಪ್ರವೇಪತೀಮ್ |
ಭಗಿನೀಂ ಪುಂಡರೀಕಾಕ್ಷ ಇದಂ ವಚನಮಬ್ರವೀತ್ ॥ 41 ॥
ಕೃಷ್ಣನು ದುಃಖಿತಳಾದ ಅವಳನ್ನು ನೋಡಿ, ತಾನೂ ಬಹಳ ದುಃಖಿತನಾಗಿ ಅವಳಿಗೆ ಉಪಚಾರಪೂರ್ವಕವಾಗಿ ನೀರನ್ನು ಚುಮುಕಿಸಿ, ಸಮಾಧಾನವನ್ನು ಮಾಡಿ, ಆ ಕಾಲಕ್ಕೆ ಹಿತವಾದ ಮಾತುಗಳನ್ನು ಆಡಿ, ಮೂರ್ಛೆ ಹೋದಂತಿದ್ದು ಅಳುತ್ತಾ ನಡುಗುತ್ತಾ ನೆಲದ ಮೇಲೆ ಬಿದ್ದಿದ್ದ ತನ್ನ ತಂಗಿಯನ್ನು ಕುರಿತು ಪುಂಡರೀಕಾಕ್ಷನು ಮಾತನಾಡಿದನು.
ಮಾನುಶೋಚೀಃ ಸುಭದ್ರೇ ತ್ವಂ ಸ್ನುಷಾಂ ಚಾಶ್ವಾಸಯೋತ್ತರಾಮ್ |
ಗತೋಽಭಿಮನ್ಯುಃ ಪ್ರಥಿತಾಂ ಗತಿಂ ಕ್ಷತ್ರಿಯಪುಂಗವಃ ॥ 42 ॥
ಎಲೌ ಸುಭದ್ರೆಯೇ, ಶೋಕವನ್ನು ಪಡಬೇಡ. ನಿನ್ನ ಸೊಸೆಯಾದ ಉತ್ತರೆಯನ್ನು ಸಮಾಧಾನಗೊಳಿಸು. ಕ್ಷತ್ರಿಯ ಶ್ರೇಷ್ಠನಾದ ಅಭಿಮನ್ಯುವು ಶ್ರೇಷ್ಠವಾದ, ಪ್ರಖ್ಯಾತವಾದ ಗತಿಯನ್ನು ಹೊಂದಿದ್ದಾನೆ.

ಯೇ ಚಾನ್ಯೇ ಚ ಕುಲೇ ಸಂತಃ ಪುರುಷಾಣಾಂ ವರಾನನೇ |
ಸರ್ವೇ ತೇ ತಾಂ ಗತಿಂ ಯಾಂತಿ ಯಾಽಭಿಮನ್ಯೋರ್ಯಶಸ್ವಿನಃ ॥43॥
ಎಲೌ ಸುಂದರಮುಖಿಯೇ, ಸತ್ಪುರುಷರ ಕುಲದಲ್ಲಿ ಜನಿಸಿದ ಎಲ್ಲ ಸಜ್ಜನರೂ ಸಹ ಕೀರ್ತಿವಂತನಾದ ಅಭಿಮನ್ಯುವು ಪಡೆದ ಗತಿಯನ್ನೇ ಹೊಂದುತ್ತಾರೆ.
ಕುರ್ಯಾಮ ತದ್ ವಯಂ ಕರ್ಮ ಕ್ರಿಯಾಸುಃ ಸುಹೃದಶ್ಚ ನಃ |
ಕೃತವಾನ್ ಯಾದೃಗದ್ಯೈಕಃ ತವ ಪುತ್ರೋ ಮಹಾರಥಃ ॥ 44 ॥
ಮಹಾರಥನಾದ ನಿನ್ನ ಪುತ್ರನು ಒಬ್ಬನೇ ಎಂತಹ ಕಾರ್ಯವನ್ನು ಮಾಡಿದನೋ ಅಂತಹ ಕಾರ್ಯವನ್ನು ನಾವು ಮಾಡೋಣ. ನಮ್ಮ ಬಂಧುಗಳೂ ಮತ್ತು ಸುಹೃದರೂ ಮಾಡಲಿ.
ಸಂಜಯಃ
ಏವಮಾಶ್ವಾಸ್ಯ ಭಗಿನೀಂ ದ್ರೌಪದೀಮಪಿ ಚೋತ್ತರಾಮ್ |
ಪಾರ್ಥಸ್ಯೈವ ಮಹಾಬಾಹುಃ ಪಾರ್ಶ್ವಮಾಯಾದರಿಂದಮಃ ॥ 45 ॥
ಸಂಜಯ ಅರಿಂದಮನೂ, ಮಹಾಬಾಹುವೂ ಆದ ಕೃಷ್ಣನು ಹೀಗೆ ತಂಗಿಯನ್ನೂ, ದ್ರೌಪದಿಯನ್ನೂ ಮತ್ತು ಉತ್ತರೆಯನ್ನೂ ಸಮಾಧಾನಗೊಳಿಸಿ ಅರ್ಜುನನ ಪಾರ್ಶ್ವಕ್ಕೆ ಬಂದನು.
ತತೋಽಭ್ಯನುಜ್ಞಾಯ ಗೃಹಂ ಕೃಷ್ಣಂ ಚಾನ್ಯಾಂಶ್ಚ ಪಾರ್ಥಿವಾನ್ |
ವಿವೇಶಾಂತಃಪುರಂ ರಾಜಾ ತೇಽಪಿ ಜಗ್ಮುಃ ಸ್ವಮಾಲಯಮ್ ॥ 46 ॥
ಅನಂತರ ಧರ್ಮರಾಜನು ಕೃಷ್ಣನ ಅನುಜ್ಞೆಯನ್ನು ಪಡೆದು, ಉಳಿದ ರಾಜರ ಅನುಜ್ಞೆಯನ್ನೂ ಪಡೆದು ತನ್ನ ಶಿಬಿರದಲ್ಲಿ ಅಂತಃಪುರಕ್ಕೆ ಹೋದನು. ಉಳಿದ ರಾಜರು ತಮ್ಮ ಶಿಬಿರಗಳಿಗೆ ಹೋದರು.
ತತೋಽರ್ಜುನಸ್ಯ ಶಿಬಿರಂ ಪ್ರವಿಶ್ಯಾಪ್ರತಿಮಂ ಭುವಿ |
ಸ್ಪೃಷ್ಟ್ವಾಽಂಭಃ ಪುಂಡರೀಕಾಕ್ಷಃ ಸ್ಥಂಡಿಲೇ ಶುಭಲಕ್ಷಣೇ ॥ 47 ॥
ಸಂತಸ್ತಾರ ಶುಭಾಂ ಶಯ್ಯಾಂ ದರ್ಭೈರ್ವೈದೂರ್ಯಸನ್ನಿಭೈಃ ॥ 48 ॥
ಅನಂತರ ಪುಂಡರೀಕಾಕ್ಷನು ಭೂಮಿಯಲ್ಲಿ ಅಸದೃಶವಾದ ಅರ್ಜುನನ ಶಿಬಿರವನ್ನು ಪ್ರವೇಶಿಸಿ, ಹಸ್ತಗಳನ್ನು ತೊಳೆದು, ಶುಭಲಕ್ಷಣವುಳ್ಳ ಭೂಮಿಯ ಮೇಲೆ ವೈಡೂರ್ಯದಿಂದ ಹೊಳೆಯುವ ದರ್ಭೆಗಳಿಂದ ಶುಭವಾದ ಶಯ್ಯೆಯನ್ನು ಹರಡಿದನು.
ತತೋ ಮಾಲ್ಯೇನ ವಿಧಿವಲ್ಲಾಜೈರ್ಗಂಧೈಃ ಸುಮಂಗಲೈಃ |
ಅಲಂಚಕಾರ ತಾಂ ಶಯ್ಯಾಂ ಪರಿವಾರ್ಯಾಯುಧೋತ್ತಮೈಃ ॥ 49 ॥
ಅನಂತರ ಮಾಲ್ಯಗಳಿಂದಲೂ, ಅತ್ಯಂತ ಮಂಗಳಕರವಾದ ಅರಳುಗಳು ಮತ್ತು ಸುಗಂಧಗಳಿಂದಲೂ ವಿಧಿಗೆ ಅನುಸಾರವಾಗಿ ಆ ಶಯ್ಯೆಯನ್ನು ಅಲಂಕರಿಸಿ ಅದರ ಸುತ್ತಲೂ ಶ್ರೇಷ್ಠವಾದ ಆಯುಧಗಳನ್ನು ಇರಿಸಿದನು.
ತತಃ ಸ್ಪೃಷ್ಟೋದಕಂ ಪಾರ್ಥಂ ವಿನೀತಪರಿಚಾರಕಮ್ |
ನೈತ್ಯಕಂ ದರ್ಶಯಾಂಚಕ್ರೇ ನೈಶಂ ತ್ರೈಯಂಬಕಂ ಬಲಿಮ್ ॥ 50 ॥
ಅನಂತರ ವಿನಯಶಾಲಿಗಳಾದ ಪರಿಚಾರಕರನ್ನು ಹೊಂದಿದ ಅರ್ಜುನನು ಹಸ್ತ ಪಾದಗಳನ್ನು ತೊಳೆದ ಮೇಲೆ ದಿನವೂ ರಾತ್ರಿಯ ಸಮಯದಲ್ಲಿ ಮಾಡಬೇಕಾದ ರುದ್ರದೇವರ ಪೂಜೆಯನ್ನು ಸೂಚಿಸಿದನು.
ತತಃ ಪ್ರೀತಮನಾಃ ಪಾರ್ಥೋ ಗಂಧೈರ್ಮಾಲ್ಯೈಶ್ಚ ಮಾಧವಮ್ |
ಅಲಂಕೃತ್ಯೋಪಹಾರಂ ಚ ಶಯ್ಯಾಮಸ್ಮೈ ನ್ಯವೇದಯತ್ |
ಅನಂತರ ಸಂತೋಷಗೊಂಡ ಅರ್ಜುನನು ಗಂಧ-ಮಾಲ್ಯಗಳಿಂದ ಮಾಧವನನ್ನು ಅಲಂಕರಿಸಿ, ಪೂಜೆಯನ್ನು ಸಮರ್ಪಿಸಿ ಆ ಶಯನವನ್ನು ಅವನಿಗೆ ನಿವೇದಿಸಿದನು.
ಸಾಧು ಸಾಧ್ವಿತಿ ಗೋವಿಂದಃ ಫಲ್ಗುನಂ ವಾಕ್ಯಮಬ್ರವೀತ್ ॥ 51 ॥
ಸುಪ್ಯತಾಂ ಪಾರ್ಥ ಭದ್ರಂ ತೇ ಕಲ್ಯಾಣಾಯ ವ್ರಜಾಮ್ಯಹಮ್ ॥52॥
ಗೋವಿಂದನು ಒಳ್ಳೆಯದು, ಒಳ್ಳೆಯದು ಎಂದು ಹೇಳುತ್ತಾ, ಅರ್ಜುನನನ್ನು ಕುರಿತು- `ಅರ್ಜುನನೇ, ನಿನಗೆ ಮಂಗಳವಾಗಲಿ. ನೀನು ಮಲಗು. ನಿನ್ನ ಕಲ್ಯಾಣಕ್ಕಾಗಿ ನಾನು ಹೋಗಿಬರುತ್ತೇನೆ' ಎಂದು ಹೇಳಿದನು.
ಸ್ಥಾಪಯಿತ್ವಾ ತತೋ ದ್ವಾಃಸ್ಥಾನಾಪ್ತಾನ್ ನಾನಾಯುಧಾನ್ ನರಾನ್ |
ದಾರುಕಾನುಗತಃ ಶ್ರೀಮಾನ್ ವಿವೇಶ ಶಿಬಿರಂ ಸ್ವಕಮ್ |
ಶಿಶ್ಯೇ ಚ ಶಯನೇ ಶುಭ್ರೇ ಬಹುಕಾರ್ಯಂ ವಿಚಿಂತಯನ್ ॥ 53 ॥
ಅನಂತರ ಆಪ್ತರಾದ ದ್ವಾರಪಾಲಕರನ್ನು ನಾನಾ ವಿಧವಾದ ಆಯುಧಗಳನ್ನು ಧರಿಸಿರುವಂತೆ ನಿಲ್ಲಿಸಿ, ದಾರುಕನಿಂದ ಹಿಂಬಾಲಿಸಲ್ಪಟ್ಟು, ಕಾಂತಿಯುಕ್ತನಾದ ಮಾಧವನು ತನ್ನ ಶಿಬಿರವನ್ನು ಪ್ರವೇಶಿಸಿದನು. ಮಾಡಬೇಕಾದ ಅನೇಕ ಕಾರ್ಯಗಳನ್ನು ಚಿಂತಿಸುತ್ತಾ ತನ್ನ ಶುಭ್ರವಾದ ಶಯನದಲ್ಲಿ ಮಲಗಿದನು.
ನ ಪಾಂಡವಾನಾಂ ಶಿಬಿರೇ ಕಶ್ಚಿತ್ ಸುಷ್ವಾಪ ತಾಂ ನಿಶಾಮ್ |
ಪ್ರಜಾಗರಃ ಸರ್ವಜನಂ ಹ್ಯಾವಿವೇಶ ವಿಶಾಂಪತೇ ॥ 54 ॥
ಪಾಂಡವರ ಶಿಬಿರದಲ್ಲಿ ಆ ರಾತ್ರಿ ಯಾರೂ ನಿದ್ರೆ ಮಾಡಲಿಲ್ಲ. ಎಲೈ ರಾಜನೇ, ಸರ್ವರನ್ನೂ ಜಾಗರಣೆಯು ಆವರಿಸಿತು.
ಪುತ್ರಶೋಕಾಭಿಭೂತೇನ ಪ್ರತಿಜ್ಞಾತಂ ಮಹಾತ್ಮನಾ |
ಶ್ವಃ ಸಿಂಧುರಾಜಸ್ಯ ವಧಃ ಕಾರ್ಯೋ ಗಾಂಡೀವಧನ್ವನಾ ॥ 55 ॥
ತತ್ ಕಥಂ ನು ಮಹಾಬಾಹುರ್ವಾಸವಿಃ ಪರವೀರಹಾ |

ಪ್ರತಿಜ್ಞಾಂ ಸಫಲಾಂ ಕುರ್ಯಾದಿತಿ ತೇ ಸಮಚಿಂತಯನ್ ॥ 56 ॥
ಪುತ್ರಶೋಕದಿಂದ ಕೂಡಿದ ಮಹಾತ್ಮನಾದ ಅರ್ಜುನನು ಪ್ರತಿಜ್ಞೆಯನ್ನು ಮಾಡಿದ್ದಾನೆ. ಗಾಂಡೀವ ಧನುರ್ಧಾರಿಯಾದ ಅವನು ನಾಳೆ ಸೈಂಧವನ ವಧೆಯನ್ನು ಮಾಡಬೇಕು. ಪರವೀರಘಾತಕನೂ, ಮಹಾಬಾಹುವೂ, ಇಂದ್ರನ ಪುತ್ರನೂ ಆದ ಅವನು ತನ್ನ ಪ್ರತಿಜ್ಞೆಯನ್ನು ಹೇಗೆ ಸಫಲಗೊಳಿಸುವನು ಎಂದು ಅವರು ಚಿಂತಿಸಿದರು.
ಜನಾಃ
ಕಷ್ಟಂ ಹೀದಂ ವ್ಯವಸಿತಂ ಪಾಂಡವೇನಾಮಿತೌಜಸಾ |
ಪುತ್ರಶೋಕಾಭಿಭೂತೇನ ಪ್ರತಿಜ್ಞಾ ಮಹತೀ ಕೃತಾ ॥ 57 ॥
ಜನರು ಅಮಿತ ಪರಾಕ್ರಮಿಯಾದ ಪಾಂಡವನು ಕಷ್ಟಕರವಾದ ಈ ನಿರ್ಧಾರವನ್ನು ಮಾಡಿದ್ದಾನೆ. ಪುತ್ರಶೋಕದಿಂದ ಅಭಿಭೂತನಾದ ಅವನು ದೊಡ್ಡ ಪ್ರತಿಜ್ಞೆಯನ್ನು ಮಾಡಿದ್ದಾನೆ.
ಭ್ರಾತರಶ್ಚಾಪಿ ಭೂಯಿಷ್ಠಾ ಬಲಾನಿ ವಿಪುಲಾನಿ ಚ |
ಧೃತರಾಷ್ಟ್ರಸ್ಯ ಪುತ್ರೇಣ ಸರ್ವತಃ ಸನ್ನಿವೇಶಿತಾಃ ॥ 58 ॥
ದುರ್ಯೋಧನ ಅನೇಕ ಬಲಿಷ್ಠರಾದ ಸಹೋದರರಿದ್ದಾರೆ. ಅವನ ಸೈನ್ಯವೂ ವಿಪುಲವಾಗಿದೆ. ದುರ್ಯೋಧನನು ಅವರನ್ನು ಎಲ್ಲ ಕಡೆಯಲ್ಲಿಯೂ ನಿಲ್ಲಿಸಿರುತ್ತಾನೆ.
ಸ ಹತ್ವಾ ಸೈಂಧವಂ ಸಂಖ್ಯೇ ಪುನರೇತು ಜಯೀ ಸುಖೀ |
ಸ ಹತ್ವಾಽರಿಗಣಂ ಸಂಖ್ಯೇ ಪಾರಯಿತ್ವಾ ಮಹಾವ್ರತಮ್ ॥ 59 ॥
ಅರ್ಜುನನು ಯುದ್ಧದಲ್ಲಿ ಸೈಂಧವನನ್ನು ಕೊಂದು, ತನ್ನ ಮಹಾವ್ರತವನ್ನು ಪೂರೈಸಿ, ಶತ್ರುಸಮೂಹವನ್ನು ಕೊಂದು ಜಯವನ್ನು ಪಡೆದು ಸುಖವಾಗಿ ಹಿಂದಿರುಗಲಿ.
ಯದ್ಯಸ್ತಿ ಸುಕೃತಂ ಕಿಂಚಿದಸ್ಮಾಕಂ ಹಂತು ಸೈಂಧವಮ್ |
ಜಿತ್ವಾ ಸರ್ವಾನ್ ರಿಪೂನ್ ಪಾರ್ಥಃ
ತ್ರಾತುಂ ನೋಽಸ್ಮಾನ್ ಮಹಾಭಯಾತ್ ॥ 60 ॥
ನಾವು ಮಾಡಿದ ಏನಾದರೂ ಸತ್ಕರ್ಮವಿದ್ದರೆ ಈ ದೊಡ್ಡ ಭಯದಿಂದ ನಮ್ಮನ್ನು ರಕ್ಷಿಸಲು ಎಲ್ಲ ಶತ್ರುಗಳನ್ನೂ ಕೊಂದು ಅರ್ಜುನನು ಸೈಂಧವನನ್ನು ಕೊಲ್ಲಲಿ.
ಸಂಜಯಃ
ಏವಮಾಶಂಸಮಾನಾಸ್ತೇ ಕೇಚಿತ್ ತಸ್ಥುರುಪಶ್ರುತಿಮ್ |
ಶ್ರುತ್ವಾ ಚೇಷ್ಟಂ ಸುಮನಸೋ ವ್ಯಕ್ತಮಾಶಂಸಿರೇ ಜಯಮ್ ॥ 61 ॥
ಸಂಜಯ ಹೀಗೆ ಆಶಿಸುತ್ತಿದ್ದ ಅವರಲ್ಲಿ ಕೆಲವರು ಶುಭ ಶಕುನವನ್ನು ಗಮನಿಸಿದರು. ಅಂತಹ ಶಕುನವನ್ನು ಕೇಳಿ ಪ್ರಸನ್ನ ಮನಸ್ಕರಾಗಿ ಅರ್ಜುನನಿಗೆ ಸ್ಪಷ್ಟವಾಗಿ ಜಯವನ್ನು ಹಾರೈಸಿದರು.
ಭವಿತಾ ನಃ ಕಥಂ ಕೃತ್ಯಮಿದಮಿತ್ಯಬ್ರುವನ್ ಜನಾಃ ॥ 62 ॥
ಇಂತಹ ಕಾರ್ಯವು ಹೇಗೆ ಆಗುವುದು ಎಂದು ಜನರು ಮಾತನಾಡಿಕೊಂಡರು.
ಅಹತ್ವಾ ಸಿಂಧುರಾಜಂ ಹಿ ಧೂಮಕೇತುಂ ಪ್ರವೇಕ್ಷ ್ಯತಿ |
ನ ಶಕ್ಯಮನೃತಾಂ ಕರ್ತುಂ ಪ್ರತಿಜ್ಞಾಂ ವಿಜಯೇನ ಹಿ |
ಮಹದ್ಧಿ ಸಾಹಸಂ ಪಾರ್ಥಃ ಕೃತವಾನ್ ಶೋಕಮೋಹಿತಃ ॥ 63 ॥
ಸಿಂಧುರಾಜನನ್ನು ಕೊಲ್ಲದಿದ್ದರೆ ಅರ್ಜುನನು ಅಗ್ನಿಪ್ರವೇಶವನ್ನು ಮಾಡುವನು. ಅರ್ಜುನನು ತಾನು ಮಾಡಿದ ಪ್ರತಿಜ್ಞೆಯನ್ನು ಬದಲಾಯಿಸಲು ಸಾಧ್ಯವಿಲ್ಲ. ಶೋಕ ಮೋಹಿತನಾದ ಅರ್ಜುನನು ದೊಡ್ಡ ಸಾಹಸವನ್ನು ಮಾಡಿದ್ದಾನೆ.
ಧರ್ಮಪುತ್ರಃ ಕಥಂ ರಾಜಾ ಕರಿಷ್ಯತಿ ಸಹಾನುಗಃ |
ಅರ್ಜುನೇ ಹಿ ಜಯಸ್ತೇಷಾಮಾಯತ್ತೋ ಜೀವಿತಾನಿ ಚ ॥ 64 ॥
ರಾಜನಾದ ಯುಧಿಷ್ಠಿರನಾದರೂ ಅವನ ಪರಿವಾರದ ಜೊತೆಯಲ್ಲಿ ಏನು ಮಾಡುವನು? ಅವರ ಜಯವೂ ಮತ್ತು ಜೀವಿತವೂ ಅರ್ಜುನನನ್ನು ಅವಲಂಬಿಸಿದೆ.
ಯದಿ ನಃ ಸುಕೃತಂ ಕಿಂಚಿದ್ ಯದಿ ದತ್ತಮಥೋ ಹುತಮ್ |
ಫಲೇನ ತಸ್ಯ ಸರ್ವಸ್ಯ ಸವ್ಯಸಾಚೀ ಜಯತ್ವರೀನ್ ॥ 65 ॥
ನಾವು ಸ್ವಲ್ಪವಾದರೂ ಪುಣ್ಯಕಾರ್ಯವನ್ನು ಮಾಡಿದ್ದರೆ, ದಾನವನ್ನು ಕೊಟ್ಟಿದ್ದರೆ ಅಥವಾ ಹೋಮವನ್ನು ಮಾಡಿದ್ದರೆ ಅವೆಲ್ಲದರ ಫಲವಾಗಿ ಅರ್ಜುನನು ಶತ್ರುಗಳನ್ನು ಗೆಲ್ಲಲಿ.
ಏವಂ ಕಥಯತಾಂ ತೇಷಾಂ ಜಯಮಾಶಂಸತಾಮಪಿ |
ಕೃಚ್ಛ್ರೇಣ ಸಾ ಮಹಾರಾಜ ರಜನೀ ಹ್ಯತ್ಯವರ್ತತ ॥ 66 ॥
ಎಲೈ ಮಹಾರಾಜನೇ, ಹೀಗೆ ಮಾತನಾಡುತ್ತಾ ಅರ್ಜುನನಿಗೆ ಜಯವನ್ನು ಹಾರೈಸುವ ಅವರಿಗೆ ಆ ರಾತ್ರಿಯು ಕಷ್ಟದಿಂದ ಕಳೆಯಿತು.
ರಜನ್ಯಾಮರ್ಧಯಾಮಾಯಾಂ ಪ್ರತಿಬುದ್ಧೋ ಜನಾರ್ದನಃ |
ಸ್ಮ ೃತ್ವಾ ಪ್ರತಿಜ್ಞಾಂ ಪಾರ್ಥಸ್ಯ ದಾರುಕಂ ಪ್ರತ್ಯಭಾಷತ ॥ 67 ॥
ರಾತ್ರಿಯು ಅರ್ಧಯಾಮ ಕಳೆದಿರುವಾಗ ಜನಾರ್ದನನು ಎಚ್ಚರಗೊಂಡು ಅರ್ಜುನನ ಪ್ರತಿಜ್ಞೆಯನ್ನು ನೆನೆದು ದಾರುಕನನ್ನು ಕುರಿತು ಮಾತನಾಡಿದನು.
ಅರ್ಜುನೇನ ಪ್ರತಿಜ್ಞಾತಂ ಪಾರ್ಥೇನ ಹತಬಂಧುನಾ |

ಜಯದ್ರಥಮಹಂ ಹಂತಾ ಶ್ವೋಭೂತ ಇತಿ ದಾರುಕ ॥ 68 ॥
ಎಲೈ ದಾರುಕನೇ, ತನ್ನ ಪುತ್ರನನ್ನು ಕಳೆದುಕೊಂಡ ಅರ್ಜುನನು ನಾಳೆ ಜಯದ್ರಥನನ್ನು ಕೊಲ್ಲುವೆನು ಎಂದು ಪ್ರತಿಜ್ಞೆಯನ್ನು ಮಾಡಿದ್ದಾನೆ.
ತತೋ ದುರ್ಯೋಧನಃ ಶ್ರುತ್ವಾ ಮಂತ್ರಯಿಷ್ಯತಿ ಮಂತ್ರಿಭಿಃ |
ಯಥಾ ಜಯದ್ರಥಂ ಪಾರ್ಥೋ ನ ಹನ್ಯಾದಿತ್ಯಸಂಶಯಮ್ ॥ 69 ॥
ಅದರಿಂದ ಅದನ್ನು ಕೇಳಿದ ದುರ್ಯೋಧನನು ತನ್ನ ಮಂತ್ರಿಗಳ ಜೊತೆಯಲ್ಲಿ ಅರ್ಜುನನು ಜಯದ್ರಥನನ್ನು ಕೊಲ್ಲದಂತೆ ನಿಸ್ಸಂಶಯವಾಗಿ ಮಂತ್ರಾಲೋಚನೆಯನ್ನು ಮಾಡುತ್ತಾನೆ.
ಅಕ್ಷೋಹಿಣ್ಯಶ್ಚ ತಾಃ ಸರ್ವಾ ರಕ್ಷಿಷ್ಯಂತಿ ನ ಸಂಶಯಃ |
ದ್ರೋಣಶ್ಚ ಸಹಪುತ್ರೇಣ ಯೇ ಚಾನ್ಯೇ ಪ್ರವರಾ ರಥಾಃ ॥ 70 ॥
ಆ ಉಳಿದ ಎಲ್ಲ ಅಕ್ಷೋಹಿಣಿ ಸೈನ್ಯಗಳೂ, ಅಶ್ವತ್ಥಾಮರಿಂದ ಸಹಿತರಾದ ದ್ರೋಣರೂ ಮತ್ತು ಉಳಿದ ಶ್ರೇಷ್ಠರಾದ ರಥರೂ ಜಯದ್ರಥರನ್ನು ರಕ್ಷಿಸುವರು. ಇದರಲ್ಲಿ ಸಂಶಯವಿಲ್ಲ.
ಮಹಾವೀರ್ಯಃ ಸಹಸ್ರಾಕ್ಷೋ ದೈತ್ಯದಾನವಸಂಘಜಿತ್ |
ಸೋಽಪ್ಯೇನಂ ನೋತ್ಸಹೇದ್ ಹಂತುಂ ಸಂಖ್ಯೇ ದ್ರೋಣೇನ ರಕ್ಷಿತಮ್ ॥
ದ್ರೋಣರಿಂದ ರಕ್ಷಿತನಾದ ಈ ಜಯದ್ರಥನನ್ನು ಮಹಾವೀರ್ಯಶಾಲಿಯೂ, ದೈತ್ಯ-ದಾನವಸಂಘಗಳನ್ನು ಗೆದ್ದವನೂ ಆದ ಸಹಸ್ರಾಕ್ಷನೂ (ಇಂದ್ರನು) ಕೂಡ ಯುದ್ಧದಲ್ಲಿ ಗೆಲ್ಲಲು ಸಾಧ್ಯವಾಗಲಾರದು.
ಅಹಂ ತು ಶ್ವಸ್ತಥಾ ಕರ್ತಾ ಯಥಾ ಕುಂತೀಸುತೋಽರ್ಜುನಃ |
ಅಪ್ರಾಪ್ತೇಽಸ್ತಂ ಯಥಾಽಽದಿತ್ಯೇ ಹಂತಾ ಪಾಪಂ ಜಯದ್ರಥಮ್ ॥
ಕುಂತೀಪುತ್ರನಾದ ಅರ್ಜುನನು ನಾಳೆ ಸೂರ್ಯನು ಅಸ್ತಂಗತನಾಗುವುದರೊಳಗೆ ಪಾಪಿಯಾದ ಜಯದ್ರಥನನ್ನು ಕೊಲ್ಲುವಂತೆ ನಾನು ಮಾಡುವೆನು.
ನ ಹಿ ದಾರಾ ನ ಮಿತ್ರಾಣಿ ನ ಪುತ್ರಜ್ಞಾತಯೋಽಪಿ ವಾ |
ನಾನ್ಯಃ ಕಶ್ಚಿತ್ ಪ್ರಿಯತರೋ ಮರ್ತ್ಯಃ ಪಾರ್ಥಾದ್ಧನಂಜಯಾತ್ ॥73॥
ನನ್ನ ಪತ್ನಿಯರಾಗಲೀ, ಮಿತ್ರರಾಗಲೀ, ಪುತ್ರರಾಗಲೀ, ಜ್ಞಾತಿಗಳಾಗಲೀ, ಬೇರೆ ಯಾವ ಪ್ರಿಯತರವಾದ ಮನುಷ್ಯರಾಗಲೀ ನನಗೆ ಅರ್ಜುನನಿಗಿಂತ ಪ್ರಿಯರಾದವರು ಯಾರೂ ಇಲ್ಲ.
ವಿನಾಽರ್ಜುನಮಿಮಂ ಲೋಕಂ ಮುಹೂರ್ತಮಪಿ ದಾರುಕ |
ನೋತ್ಸಹೇ ವೀಕ್ಷಿತುಂ ಸೂತ ಸತ್ಯಮೇವ ಬ್ರವೀಮಿ ತೇ ॥ 74 ॥
ಎಲೈ ದಾರುಕನೇ, ಅರ್ಜುನನಿಲ್ಲದ ಈ ಲೋಕವನ್ನು ನಾನು ಒಂದು ಮುಹೂರ್ತದ ಕಾಲವೂ ನೋಡಲಾರೆ. ಈ ಮಾತನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಅಹಂ ತು ಧ್ವಜಿನೀಃ ಸರ್ವಾಃ ಸಹಯಾಃ ಸರಥದ್ವಿಪಾಃ |
ಅರ್ಜುನಾರ್ಥಂ ಹನಿಷ್ಯಾಮಿ ಸಕರ್ಣಾಃ ಸಸುಯೋಧನಾಃ ॥ 75 ॥
ಅರ್ಜುನನ ಸಲುವಾಗಿ ನಾನು ಕರ್ಣ-ಸುಯೋಧನರಿಂದಲೂ, ಅಶ್ವ-ರಥ- ಗಜಗಳಿಂದಲೂ ಸಹಿತವಾದ ಎಲ್ಲ ಸೈನ್ಯವನ್ನೂ ಕೊಲ್ಲುವೆನು.
ಶ್ವೋ ನಿರೀಕ್ಷಂತು ಮೇ ವೀರ್ಯಂ ತ್ರಯೋ ಲೋಕಾ ಮಹಾಹವೇ |
ಧನಂಜಯಾರ್ಥಂ ಸಮರೇ ಪರಾಕ್ರಾಂತಸ್ಯ ದಾರುಕ ॥ 76 ॥
ಎಲೈ ದಾರುಕನೇ, ಅರ್ಜುನನ ಸಲುವಾಗಿ ಯುದ್ಧದಲ್ಲಿ ಪರಾಕ್ರಮವನ್ನು ತೋರಿಸುವ ನನ್ನ ಮಹಾಯುದ್ಧದ ಸಾಮರ್ಥ್ಯವನ್ನು ನಾಳೆಯ ದಿವಸ ಮೂರು ಲೋಕಗಳೂ ನೋಡಲಿ.
ಶ್ವೋ ನರೇಂದ್ರಸಹಸ್ರಾಣಿ ರಾಜಪುತ್ರಶತಾನಿ ಚ |
ಸಾಶ್ವದ್ವಿಪರಥಾನ್ಯಾಜೌ ವಿದ್ರವಿಷ್ಯಂತಿ ದಾರುಕ ॥ 77 ॥
ಎಲೈ ದಾರುಕನೇ, ನಾಳೆಯ ದಿವಸ ಸಹಸ್ರ ರಾಜರೂ, ನೂರಾರು ರಾಜಕುಮಾರರೂ ತಮ್ಮ ಅಶ್ವ-ಗಜ-ರಥಗಳ ಜೊತೆಯಲ್ಲಿ ಯುದ್ಧದಲ್ಲಿ ಓಡಿ ಹೋಗುವರು.
ಶ್ವಸ್ತಾಂ ಚಕ್ರಪ್ರಮಥಿತಾಂ ದ್ರಕ್ಷ್ಯಯಸಿ ನೃಪವಾಹಿನೀಮ್ |
ಮಯಾ ಕ್ರುದ್ಧೇನ ಸಮರೇ ಪಾಂಡವಾರ್ಥೇ ನಿಪಾತಿತಾಮ್ ॥ 78 ॥
ಪಾಂಡವರ ಸಲುವಾಗಿ ಕೋಪಗೊಂಡ ನಾನು ಯುದ್ಧದಲ್ಲಿ ನನ್ನ ಚಕ್ರದಿಂದ ಹೊಡೆದು ಉರುಳಿಸಿದ ದುರ್ಯೋಧನನ ಸೈನ್ಯವನ್ನು ನಾಳೆ ನೋಡುವಿ.
ಅದ್ಯ ಜ್ಞಾಸ್ಯಂತಿ ತ್ರಿದಶಾಃ ಸಾಸುರಾಃ ಸಚರಾಚರಾಃ |
ವಾಸುದೇವಸ್ಯ ತಾಂ ಪ್ರೀತಿಂ ಪಾಂಡವೇಷ್ವನಪಾಯಿನೀಮ್ ॥ 79 ॥
ಈ ದಿನ ದೇವತೆಗಳು, ಅಸುರರು, ಚರಾಚರ ಜಗತ್ತೂ ಸಹ ಕೃಷ್ಣನಿಗೆ ಅರ್ಜುನನಲ್ಲಿರುವ, ಎಂದೂ ವಿನಾಶವನ್ನು ಹೊಂದದ ಪ್ರೀತಿಯನ್ನು ತಿಳಿಯುವರು.
ಯಸ್ತಾನ್ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತಾನನು ಸ ಮಾಮನು |
ಇತಿ ಸಂಕಲ್ಪ್ಯತಾಂ ಬುದ್ಧ್ಯಾ ಶರೀರಾರ್ಧಂ ಮಮಾರ್ಜುನಃ ॥ 80 ॥
ಯಾವನು ಪಾಂಡವರನ್ನು ದ್ವೇಷಿಸುತ್ತಾನೆಯೋ ಅವನು ನನ್ನನ್ನು ದ್ವೇಷಿಸುತ್ತಾನೆ. ಯಾವನು ಅವನಿಗೆ

ಅನುಕೂಲನಾಗಿದ್ದಾನೆಯೋ, ಅವನು ನನಗೂ ಅನುಕೂಲನಾದವನು ಎಂದು ಬುದ್ಧಿಯಿಂದ ತಿಳಿಯುವವನಾಗು. ಅರ್ಜುನನು ನನ್ನ ಅರ್ಧ ಶರೀರನಾದವನು.
ಯಥಾ ತು ತ್ವಂ ಪ್ರಭಾತಾಯಾಮಸ್ಯಾಂ ನಿಶಿ ರಥೋತ್ತಮಮ್ |
ಕಲ್ಪಯಿತ್ವಾ ಸಮೀಪಂ ಮೇ ಆಗಚ್ಛಸಿ ತಥಾ ಕುರು ॥ 81 ॥
ಈ ರಾತ್ರಿ ಕಳೆದು ಬೆಳಗಾಗುವ ವೇಳೆಗೆ ನೀನು ನನ್ನ ಶ್ರೇಷ್ಠವಾದ ರಥವನ್ನು ಚೆನ್ನಾಗಿ ಸಜ್ಜುಗೊಳಿಸಿ, ನನ್ನ ಬಳಿಗೆ ಬರುವಂತೆ ವ್ಯವಸ್ಥೆ ಮಾಡುವವನಾಗು.
ಗದಾಂ ಕೌಮೋದಕೀಂ ದಿವ್ಯಾಂ ಶಕ್ತಿಂ ಚಕ್ರಂ ಧನುಃಶರಾನ್ |
ಆರೋಪಯ ರಥೇ ಸೂತ ಸರ್ವೋಪಕರಣಾನಿ ಚ ॥ 82 ॥
ಎಲೈ ಸೂತನೇ, ರಥದಲ್ಲಿ ಕೌಮೋದಕೀ ಗದೆಯನ್ನೂ, ಶಕ್ತ್ಯಾಯುಧವನ್ನೂ, ಸುದರ್ಶನ ಚಕ್ರವನ್ನೂ, ಶಾರ್ಙ್ಗಧನುಸ್ಸು ಮತ್ತು ಬಾಣಗಳನ್ನೂ ಮತ್ತು ಎಲ್ಲ ಉಪಕರಣಗಳನ್ನೂ ಇಡುವವನಾಗು.
ಸ್ಥಾನಂ ಚ ಕಲ್ಪ್ಯತಾಂ ತತ್ರ ರಥೋಪಸ್ಥೇ ಧ್ವಜಸ್ಯ ಮೇ |
ವೈನತೇಯಸ್ಯ ವೀರಸ್ಯ ಸಮರೇಷ್ವಭಿಶೋಭಿನಃ ॥ 83 ॥
ಆ ನನ್ನ ರಥದಲ್ಲಿ ಯುದ್ಧದಲ್ಲಿ ಶೋಭಿಸುವ ವೀರನಾದ ಗರುಡನ ಧ್ವಜಕ್ಕೆ ಒಂದು ಸ್ಥಾನವನ್ನು ಕಲ್ಪಿಸುವವನಾಗು.
ಛನ್ನಾನ್ ಜಾಂಬೂನದೈರ್ಮಾಲ್ಯೈರರ್ಕಜ್ವಲನಸನ್ನಿಭೈಃ |
ವಿಶ್ವಕರ್ಮಕೃತೈರ್ದಿವ್ಯೈರಶ್ವಾನಪಿ ಚ ಭೂಷಯ ॥ 84 ॥
ನನ್ನ ಅಶ್ವಗಳನ್ನೂ ಸಹ ವಿಶ್ವಕರ್ಮ ನಿರ್ಮಿತವಾದ, ಸೂರ್ಯಪ್ರಕಾಶವನ್ನು ಹೊಂದಿದ, ದಿವ್ಯವಾದ, ಸುವರ್ಣಮಯವಾದ ಮಾಲೆಗಳಿಂದ ಅಲಂಕರಿಸು.
ಬಲಾಹಕಂ ಮೇಘಪುಷ್ಪಂ ಸೈನ್ಯಂ ಸುಗ್ರೀವಮೇವ ಚ |
ಯುಕ್ತತ್ವ ವಾಜಿವರಾಂಸ್ತತ್ರ ಕವಚೀ ತಿಷ್ಠ ದಾರುಕ ॥ 85 ॥
ಎಲೈ ದಾರುಕನೇ, ನನ್ನ ಶ್ರೇಷ್ಠ ಅಶ್ವಗಳಾದ ಸೈನ್ಯ-ಸುಗ್ರೀವ-ಮೇಘಪುಷ್ಪ- ಬಲಾಹಕಗಳನ್ನು ರಥದಲ್ಲಿ ಹೂಡಿ, ಕವಚವನ್ನು ಧರಿಸಿ ಸಿದ್ಧನಾಗಿರು.
ಪಾಂಚಜನ್ಯಸ್ಯ ನಿರ್ಘೋಷಂ ಪರ್ಜನ್ಯನಿನದೋಪಮಮ್ |
ಶ್ರುತ್ವಾ ಭೈರವಮತ್ಯರ್ಥಂ ಜವೇನೈವೋಪಯಾಹಿ ಮಾಮ್ ॥ 86 ॥
ಪರ್ಜನ್ಯ ಘೋಷದಂತಿರುವ, ಭಯಂಕರವಾದ ಪಾಂಚಜನ್ಯದ ಘೋಷವನ್ನು ಕೇಳಿ ಶೀಘ್ರವಾಗಿ ನನ್ನ ಸಮೀಪಕ್ಕೆ ಬಾ.
ಶ್ವಃ ಸದೇವಾಃ ಸಗಂಧರ್ವಾಃ ಸತ್ರ್ಯಕ್ಷಾಪ್ಸರಸೋಽಸುರಾಃ |
ಜ್ಞಾಸ್ಯಂತಿ ಲೋಕಾಃ ಸರ್ವೇ ಮಾಂ ಸುಹೃದಂ ಸವ್ಯಸಾಚಿನಃ ॥ 87 ॥
ನಾಳೆಯ ದಿವಸ ದೇವತೆಗಳಿಂದಲೂ, ಗಂಧರ್ವರಿಂದಲೂ, ರುದ್ರ-ಅಪ್ಸರೆಯರು ಮತ್ತು ಅಸುರರಿಂದಲೂ ಸಹಿತವಾದ ಜನರು ನಾನು ಅರ್ಜುನನಿಗೆ ಬಹಳ ಪ್ರಿಯನಾದವನು ಎಂದು ತಿಳಿಯುವರು.
ಏಕಾಹ್ನಾಽಹಮಮರ್ಷಾಚ್ಚ ಸರ್ವದುಃಖಾನಿ ಚಾಭಿಭೋ |
ಭ್ರಾತುಃ ಪೈತೃಷ್ವಸೇಯಸ್ಯ ವ್ಯಪನೇಷ್ಯಾಮಿ ದಾರುಕ ॥ 88 ॥
ಎಲೈ ಶತ್ರು ಸಂಹಾರಕನಾದ ದಾರುಕನೇ, ನಾನು ಒಂದೇ ದಿವಸದಲ್ಲಿ ಕೋಪದಿಂದ ಕೂಡಿದವನಾಗಿ, ನನ್ನ ಸೋದರತ್ತೆಯ ಮಗನಾದ ಅರ್ಜುನನ ಅಣ್ಣನಿಗೆ ಒದಗಿರುವ ಎಲ್ಲ ದುಃಖಗಳನ್ನೂ ಪರಿಹಾರ ಮಾಡುವೆನು.
ಸರ್ವೋಪಾಯೈರ್ಯತಿಷ್ಯಾಮಿ ಯಥಾ ಬೀಭತ್ಸುರಾಹವೇ |
ಪಶ್ಯತಾಂ ಧಾರ್ತರಾಷ್ಟ್ರಾಣಾಂ ಹನಿಷ್ಯತಿ ಜಯದ್ರಥಮ್ ॥ 89 ॥
ಧೃತರಾಷ್ಟ್ರನ ಪುತ್ರರು ನೋಡುತ್ತಿರುವಂತೆಯೇ ಅರ್ಜುನನು ಯುದ್ಧದಲ್ಲಿ ಜಯದ್ರಥನನ್ನು ಕೊಲ್ಲುವಂತೆ ಎಲ್ಲ ಉಪಾಯಗಳಿಂದಲೂ ಪ್ರಯತ್ನ ಪಡುವೆನು.
ಯಸ್ಯ ಯಸ್ಯ ಚ ಬೀಭತ್ಸುರ್ವಧೇ ಯತ್ನಂ ಕರಿಷ್ಯತಿ |
ಆಶಂಸೇ ಸ ರಣೇ ತಂ ತಂ ತತ್ರ ತತ್ರ ಹನಿಷ್ಯತಿ ॥ 90 ॥
ಅರ್ಜುನನು ಯಾರ ಯಾರ ವಧೆಯಲ್ಲಿ ಪ್ರಯತ್ನ ಮಾಡುವನೋ, ಯುದ್ಧದಲ್ಲಿ ಅವರವರನ್ನು ಕೊಲ್ಲುವನು ಎಂದು ನಾನು ಹಾರೈಸುತ್ತೇನೆ.
ದಾರುಕಃ
ಧ್ರುವ ಏವ ಜಯಸ್ತಸ್ಯ ನ ತಸ್ಯಾಸ್ತಿ ಪರಾಜಯಃ |
ಯಸ್ಯ ತ್ವಂ ಪುರುಷವ್ಯಾಘ್ರ ಸಾರಥ್ಯಮುಪಜಗ್ಮಿವಾನ್ ॥ 91 ॥
ದಾರುಕ ಎಲೈ ಪುರುಷವ್ಯಾಘ್ರನೇ, ಯಾರಿಗೆ ನೀನು ಸಾರಥ್ಯವನ್ನು ವಹಿಸಿದ್ದೀಯೋ ಅಂತಹ ವ್ಯಕ್ತಿಗೆ ಜಯವೇ ನಿಶ್ಚಿತವಾದುದು. ಅವನಿಗೆ ಎಂದೂ ಪರಾಭವವಿಲ್ಲ.
ಕೃಷ್ಣಃ
ಏವಂ ಚೈತತ್ ಕರಿಷ್ಯಾಮಿ ಯಥಾ ಮಾಮನುಭಾಷಸೇ |
ಸುಪ್ರಭಾತಮಿಮಾಂ ರಾತ್ರಿಂ ಜಯಾರ್ಥಂ ವಿಜಯಸ್ಯ ಚ ॥ 92 ॥
ಕೃಷ್ಣ ಈ ರಾತ್ರಿಯು ಕಳೆದು ಸುಪ್ರಭಾತವಾದ ಮೇಲೆ ಅರ್ಜುನನ ಜಯಕ್ಕಾಗಿ ನೀನು ನನಗೆ ಹೇಳುತಿತರುವಂತೆಯೇ ನಾನು ಮಾಡುವೆನು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ನಾಲ್ಕನೆಯ ಅಧ್ಯಾಯ
ಸ್ವಪ್ನದಲ್ಲಿ ಕೃಷ್ಣನು ಅರ್ಜುನನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಿ
ಶಿವನಿಂದ ಪಾಶುಪತಾಸ್ತ್ರವನ್ನು ಕೊಡಿಸುವುದು.
ಸಂಜಯಃ
ಧಾರ್ತರಾಷ್ಟ್ರಸ್ಯ ತಂ ಮಂತ್ರಂ ಸ್ಮರನ್ನೇವ ಧನಂಜಯಃ |
ಪ್ರತಿಜ್ಞಾಮಾತ್ಮನೋ ರಕ್ಷನ್ ಮುಮೋಹಾಚಿಂತ್ಯವಿಕ್ರಮಃ ॥ 1 ॥
ಸಂಜಯ ಅಚಿಂತ್ಯವಿಕ್ರಮನಾದ ಅರ್ಜುನನು ದುರ್ಯೋಧನನ ಮಂತ್ರಾಲೋಚನೆಯನ್ನು ಸ್ಮರಿಸುತ್ತಾ ತನ್ನ ಪ್ರತಿಜ್ಞೆಯನ್ನು ರಕ್ಷಿಸುವ ಸಲುವಾಗಿ ಮೋಹಕ್ಕೆ ಒಳಗಾದನು.
ತಂ ತು ಶೋಕೇನ ಸಂತಪ್ತಂ ಸ್ವಪ್ನೇ ಕಪಿವರಧ್ವಜಮ್ |
ಆಸಸಾದ ಮಹಾತೇಜಾ ಜ್ವಲನ್ ವೈ ಗರುಡಧ್ವಜಃ ॥ 2 ॥
ಶೋಕಕ್ಕೆ ಸಂತಪ್ತನಾದ, ಕಪಿವರಧ್ವಜನಾದ ಅರ್ಜುನನನ್ನು ಮಹಾತೇಜಸ್ಸಿನಿಂದ ಜ್ವಲಿಸುವ ಗರುಡಧ್ವಜನಾದ ಕೃಷ್ಣನು ಸ್ವಪ್ನದಲ್ಲಿ ಸಮೀಪಿಸಿದನು.
ಪ್ರತ್ಯುತ್ಥಾನಂ ತು ಕೃಷ್ಣಸ್ಯ ಸರ್ವಾವಸ್ಥಾಸು ಫಲ್ಗುನಃ |
ನ ಲೋಪಯತಿ ಧರ್ಮಾತ್ಮಾ ಭಕ್ತ್ಯಾ ಪ್ರೇಮ್ಣಾ ಚ ನಿತ್ಯಶಃ ॥ 3 ॥
ಧರ್ಮಾತ್ಮನಾದ ಅರ್ಜುನನು ತನ್ನ ಭಕ್ತಿಯಿಂದಲೂ ಮತ್ತು ಪ್ರೇಮದಿಂದಲೂ ಯಾವ ಅವಸ್ಥೆಯಲ್ಲಿಯೂ ಕೃಷ್ಣನನ್ನು ಕಂಡು ಎದ್ದು ನಿಲ್ಲುವುದನ್ನಾಗಲೀ ಅಥವಾ ನಮಸ್ಕಾರ ಮಾಡುವುದನ್ನಾಗಲೀ ಲೋಪಗೊಳಿಸುವುದಿಲ್ಲ.
ಪ್ರತ್ಯುತ್ಥಾಯ ಸ ಗೋವಿಂದಂ ಸ್ವಂ ತಸ್ಮೈ ಚಾಸನಂ ದದೌ |
ನಾಸನೇ ಚ ತಥಾ ಬುದ್ಧಿಂ ಬೀಭತ್ಸುರ್ವ್ಯದಧಾತ್ ಸ್ವಯಮ್ ॥ 4 ॥
ಅವನು ಎದ್ದು ನಿಂತು ಗೋವಿಂದನಿಗೆ ತನ್ನ ಆಸನವನ್ನು ನೀಡಿದನು. ಅರ್ಜುನನು ತಾನು ಕುಳಿತುಕೊಳ್ಳುವ ಬುದ್ಧಿಯನ್ನು ಮಾಡಲಿಲ್ಲ.
ತತಃ ಕೃಷ್ಣೋ ಮಹಾತೇಜಾ ಜಾನನ್ ಲೋಕಸ್ಯ ನಿಶ್ಚಯಮ್ |
ಕುಂತೀಪುತ್ರಮಿದಂ ವಾಕ್ಯಮಾಸೀನಃ ಸ್ಥಿತಮಬ್ರವೀತ್ ॥ 5 ॥
ಆಗ ಮಹಾತೇಜಸ್ವಿಯಾದ ಕೃಷ್ಣನು ಆಸನದಲ್ಲಿ ಕುಳಿತು, ಎಲ್ಲರ ಮನಸ್ಸಿನ ಅಭಿಪ್ರಾಯವನ್ನು ತಿಳಿದಿದ್ದರೂ ನಿಂತಿದ್ದ ಕುಂತೀಪುತ್ರನನ್ನು ಕುರಿತು ಮಾತನಾಡಿದನು.
ಮಾ ವಿಷಾದೇ ಮನಃ ಪಾರ್ಥ ಕೃಥಾಃ ಕಾಲೋ ಹಿ ದುರ್ಜಯಃ |
ಕಾಲಃ ಸರ್ವಾಣಿ ಭೂತಾನಿ ನಿಯಚ್ಛತಿ ಭವಾಭವೇ ॥ 6 ॥
ಎಲೈ ಪಾರ್ಥನೇ, ಮನಸ್ಸಿನಲ್ಲಿ ವಿಷಾದವನ್ನು ಹೊಂದಬೇಡ. ಕಾಲವನ್ನು ಯಾರೂ ಜಯಿಸಲಾರರು. ಕಾಲವು ಎಲ್ಲ ಪ್ರಾಣಿಗಳನ್ನೂ, ಸಂಪತ್ತು ಮತ್ತು ವಿಪತ್ತುಗಳನ್ನೂ ನಿಯಂತ್ರಿಸುತ್ತದೆ.
ಕಿಮರ್ಥಂ ಚ ವಿಷಾದಸ್ತೇ ತದ್ ಬ್ರೂಹಿ ದ್ವಿಪದಾಂ ವರ |
ನ ಶೋಚ್ಯಂ ವಿದುಷಾಂ ಶ್ರೇಷ್ಠ ಶೋಕಃ ಕಾರ್ಯವಿನಾಶನಃ ॥ 7 ॥
ಎಲೈ ನರಶ್ರೇಷ್ಠನೇ, ನಿನ್ನ ವಿಷಾದಕ್ಕೆ ಕಾರಣವೇನು ಎಂದು ನನಗೆ ಹೇಳು. ವಿದ್ವಾಂಸರಲ್ಲಿ ಶ್ರೇಷ್ಠನಾದವನೇ, ಶೋಕ ಮಾಡಬಾರದು. ಶೋಕವು ಕಾರ್ಯವನ್ನು ನಾಶ ಮಾಡುತ್ತದೆ.
ಶೋಚನ್ ನಂದಯತೇ ಶತ್ರೂನ್ ಕರ್ಶಯತ್ಯಪಿ ಬಾಂಧವಾನ್ |
ಯಸ್ತು ಕಾರ್ಯೋ ಭವೇತ್ ಕಾರ್ಯಃ ಕರ್ಮಣಾ ತತ್ ಸಮಾಚರ |
ಹೀನಚೇಷ್ಟಸ್ಯ ಯಃ ಶೋಕಃ ಸ ಹಿ ಶತ್ರುರ್ಧನಂಜಯ |
ಕ್ಷೀಯತೇ ಚ ನರಸ್ತಸ್ಮಾನ್ನ ತ್ವಂ ಶೋಚಿತುಮರ್ಹಸಿ ॥ 8 ॥
ಶೋಕ ಪಡುವವನು ಶತ್ರುಗಳಿಗೆ ಸಂತೋಷವನ್ನುಂಟು ಮಾಡುತ್ತಾನೆ. ಬಾಂಧವರನ್ನು ಕ್ಲೇಶಗೊಳಿಸುತ್ತಾನೆ. ಯಾವ ಕಾರ್ಯವನ್ನು ಮಾಡಬೇಕಾಗಿದೆಯೋ ಅದನ್ನು ಕೃತಿಯಿಂದ ಮಾಡುವವನಾಗು. ಎಲೈ ಧನಂಜಯನೇ, ಯಾವ ಕಾರ್ಯವನ್ನೂ ಮಾಡದೆ ಪಡುವ ಶೋಕವೇ ಶತ್ರುವಷ್ಟೆ? ಅದರಿಂದ ಮನುಷ್ಯನು ವಿನಾಶವನ್ನು ಹೊಂದುತ್ತಾನೆ. ಆದ್ದರಿಂದ ನೀನು ಶೋಕ ಪಡಬೇಡ.
ಸಂಜಯಃ
ತಥೋಕ್ತೋ ವಾಸುದೇವೇನ ಬೀಭತ್ಸುರಪರಾಜಿತಃ |
ಬಭಾಷೇ ಹಿ ತದಾ ವಿದ್ವಾನ್ ಇದಂ ವಚನಮರ್ಥವತ್ ॥ 9 ॥
ಸಂಜಯ ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಅಪರಾಜಿತನೂ, ವಿದ್ವಾಂಸನೂ ಆದ ಅರ್ಜುನನು ಆಗ ಕೃಷ್ಣನನ್ನು ಕುರಿತು ಅರ್ಥವತ್ತಾದ ಈ ಮಾತುಗಳನ್ನು ಆಡಿದನು.
ಮಯಾ ಪ್ರತಿಜ್ಞಾ ಮಹತೀ ಜಯದ್ರಥವಧೇ ಕೃತಾ |

ಶ್ವೋ ಹಂತಾಸ್ಮಿ ದುರಾತ್ಮಾನಂ ಪುತ್ರಘ್ನಮಿತಿ ಕೇಶವ ॥ 10 ॥
ಕೇಶವನೇ, ನಾನು ಜಯದ್ರಥನ ವಧೆಯ ವಿಷಯದಲ್ಲಿ ದುರಾತ್ಮನೂ, ನನ್ನ ಪುತ್ರಹಂತಕನೂ ಆದ ಅವನನ್ನು ನಾಳೆ ಕೊಲ್ಲುವೆನು ಎಂದು ದೊಡ್ಡ ಪ್ರತಿಜ್ಞೆಯನ್ನು ಮಾಡಿದ್ದೇನೆ.
ಮತ್ಪ್ರತಿಜ್ಞಾವಿಘಾತಾರ್ಥಂ ಧಾರ್ತರಾಷ್ಟ್ರೈಃ ಕಿಲಾಚ್ಯುತ |
ಪೃಷ್ಠತಃ ಸೈಂಧವಃ ಕಾರ್ಯಃ ಸರ್ವೈರ್ಗುಪ್ತೋ ಮಹಾರಥೈಃ ॥ 11 ॥
ಎಲೈ ಅಚ್ಯುತನೇ, ನನ್ನ ಪ್ರತಿಜ್ಞೆಯನ್ನು ಭಂಗಗೊಳಿಸಲು ದುರ್ಯೋಧನಾದಿಗಳು ಎಲ್ಲ ಮಹಾರಥರಿಂದಲೂ ರಕ್ಷಿಸಲ್ಪಟ್ಟ ಸೈಂಧವನನ್ನು ಸೈನ್ಯದ ಹಿಂಭಾಗದಲ್ಲಿ ನಿಲ್ಲಿಸುತ್ತಾರೆ.
ದಶ ಚೈಕಾ ತಥಾ ಕೃಷ್ಣ ಅಕ್ಷೋಹಿಣ್ಯಃ ಸುದುರ್ಜಯಾಃ |
ಹತಾವಶೇಷಾಸ್ತತ್ರೇಮಾ ದಶಮಾಶ್ಚೈವ ಸಂಖ್ಯಯಾ ॥ 12 ॥
ತಾಭಿಃ ಪರಿವೃತಃ ಸಂಖೇ ಸರ್ವೈಶ್ಚೈವ ಮಹಾರಥೈಃ |
ಕಥಂ ಶಕ್ಯೇತ ಸಂದ್ರಷ್ಟುಂ ದುರಾತ್ಮಾ ಕೃಷ್ಣ ಸೈಂಧವಃ ॥ 13 ॥
ಪ್ರತಿಜ್ಞಾಪಾರಣಂ ಚಾಪಿ ನ ಭವಿಷ್ಯತಿ ಕೇಶವ |
ಪ್ರತಿಜ್ಞಾಯಾಂ ಚ ಹೀನಾಯಾಂ ಕಥಂ ಜೀವೇತ ಮದ್ವಿಧಃ ॥ 14 ॥
ಎಲೈ ಕೃಷ್ಣನೇ, ಅವರ ಒಟ್ಟು ಸೈನ್ಯ ಹನ್ನೊಂದು ಅಕ್ಷೋಹಿಣಿ ಸಂಖ್ಯಾಕವಾದುದು. ಅದರ ಹತ್ತನೆಯ ಒಂದು ಭಾಗದಷ್ಟು ಸೈನ್ಯವು ಈಗ ಉಳಿದಿದೆ. ಎಲೈ ಕೃಷ್ಣನೇ, ಆ ಮಹಾರಥರೆಲ್ಲರಿಂದಲೂ ರಕ್ಷಿಸಲ್ಪಟ್ಟರೆ ದುರಾತ್ಮನಾದ ಸೈಂಧವನು ನೋಡಲಾದರೂ ಹೇಗೆ ಸಾಧ್ಯ? ಎಲೈ ಕೇಶವನೇ, ಆಗ ನನ್ನ ಪ್ರತಿಜ್ಞೆಯನ್ನು ಪೂರೈಸಲು ಸಾಧ್ಯವಾಗುವುದಿಲ್ಲ. ಪ್ರತಿಜ್ಞೆಯು ಭಗ್ನವಾದರೆ ನನ್ನಂತಹವನು ಹೇಗೆ ಜೀವಿಸಲು ಸಾಧ್ಯ?
ದುಃಖಾಪಾಯಸ್ಯ ಮೇ ವೀರ ವಿಕಾಂಕ್ಷಾ ಪರಿವರ್ತತೇ |
ದ್ರುತಂ ಚ ಯಾತಿ ಸವಿತಾ ತತ ಏತದ್ ಬ್ರವೀಮ್ಯಹಮ್ ॥ 15 ॥
ಎಲೈ ವೀರನೇ, ದುಃಖ ಪರಿಹಾರಕ್ಕೆ ವಿರುದ್ಧವಾದ ದಿಕ್ಕಿನಲ್ಲಿ ನನ್ನ ಆಸೆಯಿದೆ. ಸೂರ್ಯನಾದರೂ ಬೇಗ ಬೇಗ ಹೋಗುತ್ತಿದ್ದಾನೆ. ಆದ್ದರಿಂದ ನಿನಗೆ ಈ ವಿಷಯವನ್ನು ಹೇಳುತ್ತಿದ್ದೇನೆ.
ಸಂಜಯಃ
ಶೋಕಸ್ಥಾನಂ ತು ತದ್ ಬುದ್ಧ್ವಾ ಪಾರ್ಥಸ್ಯ ದ್ವಿಜಕೇತನಃ |
ಸಂಸ್ಪೃಶ್ಯಾಂಭಸ್ತತಃ ಕೃಷ್ಣಃ ಪ್ರಾಙ್ಮುಖಃ ಸಮವಸ್ಥಿತಃ ॥ 16 ॥
ಸಂಜಯ ಗರುಡಧ್ವಜನಾದ ಕೃಷ್ಣನು ಅರ್ಜುನನ ಶೋಕಕಾರಣವನ್ನು ತಿಳಿದು, ಹಸ್ತಪಾದಗಳನ್ನು ತೊಳೆದು ಪೂರ್ವಾಭಿಮುಖವಾಗಿ ಕುಳಿತುಕೊಂಡನು.
ಇದಂ ವಾಕ್ಯಂ ಮಹಾತೇಜಾ ಬಭಾಷೇ ಪುಷ್ಕರೇಕ್ಷಣಃ |
ಹಿತಾರ್ಥಂ ಪಾಂಡುಪುತ್ರಸ್ಯ ಸೈಂಧವಸ್ಯ ವಧೇ ಧೃತಃ ॥ 17 ॥
ಪುಷ್ಕರಾಕ್ಷನೂ, ಮಹಾತೇಜಸ್ವಿಯೂ ಆದ ಅವನು ಸೈಂಧವನ ವಧೆಯನ್ನು ನಿರ್ಧರಿಸಿ, ಪಾಂಡುಪುತ್ರನ ಹಿತವನ್ನು ಉದ್ದೇಶಿಸಿ ಈ ಮಾತನ್ನು ಆಡಿದನು.
ಪಾರ್ಥ ಪಾಶುಪತಂ ನಾಮ ಮಹಾಸ್ತ್ರಂ ತತ್ ಸನಾತನಮ್ |
ಯೇನ ದೈತ್ಯಾ ಮೃಧೇ ಸರ್ವೇ ನಿಹತಾಃ ಶೂಲಪಾಣಿನಾ |
ಯದಿ ತದ್ ವಿದಿತಂ ತೇಽದ್ಯ ಶ್ವೋ ಹಂತಾಸಿ ಜಯದ್ರಥಮ್ ॥18॥
ಎಲೈ ಪಾರ್ಥನೇ, ಪಾಶುಪತವೆಂಬ ಸನಾತನವಾದ ಮಹಾಸ್ತ್ರವಿದೆ. ಅದರಿಂದ ಶೂಲಪಾಣಿಯಾದ ಶಿವನು ಯುದ್ಧದಲ್ಲಿ ಎಲ್ಲ ದೈತ್ಯರನ್ನೂ ಸಂಹರಿಸಿದನು. ನಿನಗೆ ಈ ದಿನ ಅದು ತಿಳಿದಿದ್ದರೆ ನಾಳೆ ನೀನು ಜಯದ್ರಥನನ್ನು ಕೊಲ್ಲುವಿ.
ಅಥ ಜ್ಞಾತುಂ ಪ್ರಪದ್ಯಸ್ವ ಮನಸಾ ವೃಷಭಧ್ವಜಮ್ |
ತಂ ದೇವಂ ಮನಸಾ ಧ್ಯಾಯನ್ ಜೋಷಮಾಸ್ಸ್ವ ಧನಂಜಯ ॥19॥
ತತಸ್ತಸ್ಯ ಪ್ರಸಾದಾತ್ ತ್ವಂ ಭಕ್ತ್ಯಾ ಪ್ರಾಪ್ಸ್ಯಸಿ ತನ್ಮಹತ್ ॥ 20 ॥
ಅದನ್ನು ತಿಳಿದುಕೊಳ್ಳಲು (ಪಡೆಯಲು) ಮನಸ್ಸಿನಿಂದಲೇ ವೃಷಭಧ್ವಜನಾದ ಶಿವನಿಗೆ ಶರಣಾಗತನಾಗು. ಎಲೈ ಧನಂಜಯನೇ, ಆ ದೇವನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮೌನವಾಗಿ ಕುಳಿತುಕೊ. ಆಗ ನಿನ್ನ ಭಕ್ತಿಗೆ ಮೆಚ್ಚಿ ಅವನ ಅನುಗ್ರಹದಿಂದ ಆ ದೊಡ್ಡ ಅಸ್ತ್ರವನ್ನು ಪಡೆಯುವಿ.
ಸಂಜಯಃ
ತತಃ ಕೃಷ್ಣವಚಃ ಶ್ರುತ್ವಾ ಸಂಸ್ಪೃಶ್ಯಾಂಭೋ ಧನಂಜಯಃ |
ಭೂಮಾವಾಸೀತ್ ಸಮಾಪನ್ನೋ ಜಗಾಮ ಮನಸಾ ಶಿವಮ್ ॥ 21 ॥
ಸಂಜಯ ಆಗ ಕೃಷ್ಣನ ಮಾತನ್ನು ಕೇಳಿ ಅರ್ಜುನನು ಹಸ್ತ-ಪಾದಗಳನ್ನು ತೊಳೆದು ನೆಲದ ಮೇಲೆ ಕುಳಿತು ಮನಸ್ಸಿನಲ್ಲಿಯೇ ಶಿವನನ್ನು ಧ್ಯಾನ ಮಾಡಿದನು.
ತತಃ ಪ್ರಣಿಹಿತೇ ಬ್ರಾಹ್ಮೇ ಮುಹೂರ್ತೇ ಶುಭಲಕ್ಷಣೇ |
ಆತ್ಮಾನಮರ್ಜುನೋಽಪಶ್ಯದ್ ಗಗನೇ ಸಹಕೇಶವಮ್ |
ಜ್ಯೋತಿರ್ಭಿಶ್ಚ ಸಮಾಕೀರ್ಣಂ ಸಿದ್ಧಗಂಧರ್ವಸೇವಿತಮ್ ॥ 22 ॥
ಅವನು ಹಾಗೆ ಧ್ಯಾನ ಮಾಡುತ್ತಿರಲು ಶುಭಲಕ್ಷಣವುಳ್ಳ ಬ್ರಾಹ್ಮೀ ಮುಹೂರ್ತದಲ್ಲಿ ಅರ್ಜುನನು ತಾನು ಕೇಶವನ ಜೊತೆಯಲ್ಲಿ

ಆಕಾಶದಲ್ಲಿರುವುದನ್ನೂ, ಜ್ಯೋತಿಃಪುಂಜಗಳಿಂದ ಸುತುತವರಿಯಲ್ಪಟ್ಟಿರುವುದನ್ನೂ, ಸಿದ್ಧ-ಗಂಧರ್ವರಿಂದ ಪೂಜಿಸಲ್ಪಡುತ್ತಿರುವುದನ್ನೂ ನೋಡಿದನು.

ವಾಯುವೇಗಗತಿಃ ಪಾರ್ಥಃ ಖಂ ಭೇಜೇ ಸಹಮಾಧವಃ ॥ 23 ॥
ಕೇಶವೇನ ಗೃಹೀತಃ ಸ ದಕ್ಷಿಣೇ ವಿಭುನಾ ಭುಜೇ |
ಪ್ರೇಕ್ಷಮಾಣೋ ಬಹೂನ್ ಭಾವಾನ್ ಜಗಾಮಾದ್ಭುತದರ್ಶನಾನ್ |
ಉದೀಚ್ಯಾಂ ದಿಶಿ ಧರ್ಮಾತ್ಮಾ ಸೋಽಪಶ್ಯಚ್ಚ್ವೇತಪರ್ವತಮ್ ॥ 24 ॥

ವಾಯುವೇಗ ಗತಿಯುಳ್ಳ ಪಾರ್ಥನು ಕೃಷ್ಣನ ಜೊತೆಯಲ್ಲಿ ಬೇಗ ಆಕಾಶವನ್ನು ಸೇರಿದನು. ವಿಭುವಾದ ಕೃಷ್ಣನು ಅವನನ್ನು ಅವನ ಬಲಭುಜದಲ್ಲಿ ಹಿಡಿದಿದ್ದನು. ಅದ್ಭುತವಾದ ಅನೇಕ ಪದಾರ್ಥಗಳನ್ನು ನೋಡುತ್ತಾ ಧರ್ಮಾತ್ಮನಾದ ಅರ್ಜುನನು ಉತ್ತರ ದಿಕ್ಕಿನಲ್ಲಿ ಶ್ವೇತಪರ್ವತವನ್ನು ನೋಡಿದನು.

ಕುಬೇರಸ್ಯ ವಿಹಾರಂ ಚ ನಳಿನೀಂ ಪದ್ಮಭೂಷಿತಾಮ್ |
ಸರಿಚ್ಛ್ರೇಷ್ಠಾಂ ಚ ತಾಂ ಗಂಗಾಂ ವೀಕ್ಷಮಾಣೋ ಬಹೂದಕಾಮ್ ॥

ಕುಬೇರನ ವಿಹಾರ ಸ್ಥಾನವನ್ನೂ, ಪದ್ಮಗಳಿಂದ ಭೂಷಿತವಾದ ಸರೋವರಗಳನ್ನೂ, ಶ್ರೇಷ್ಠ ನದಿಯಾದ ಬಹಳ ನೀರಿನಿಂದ ಕೂಡಿರುವ ಗಂಗೆಯನ್ನೂ ನೋಡುತ್ತಾ ಅವನು ಸಾಗಿದನು.

ಸದಾ ಪುಷ್ಪಫಲೈರ್ವೃಕ್ಷೈರುಪೇತಾಂ ಸ್ಫಟಿಕೋದಕಾಮ್ |
ಸಿಂಹವ್ಯಾಘ್ರಸಮಾಕೀರ್ಣಾಂ ನಾನಾಮೃಗಗಣಾಕುಲಾಮ್ ॥ 26 ॥
ಪುಣ್ಯಾಶ್ರಮವತೀಂ ರಮ್ಯಾಂ ಮನೋಜ್ಞಾಂ ದ್ವಿಜಶೋಭಿತಾಮ್ |

ದಡದಲ್ಲಿರುವ ಪುಷ್ಪ-ಫಲಭರಿತವಾದ ಮರಗಳಿಂದ ಕೂಡಿದ, ಸ್ಫಟಿಕದಂತೆ ಸ್ವಚ್ಛವಾದ ಜಲವುಳ್ಳ, ಸಿಂಹ-ವ್ಯಾಘ್ರಗಳಿಂದಲೂ ಅನೇಕ ಮೃಗ ಸಮೂಹಗಳಿಂದಲೂ ಕೂಡಿರುವ, ತೀರದಲ್ಲಿ ಪವಿತ್ರವಾದ ಆಶ್ರಮಗಳನ್ನು ಹೊಂದಿದ್ದ, ಮನೋಹರವಾದ, ಬ್ರಾಹ್ಮಣರಿಂದ ಶೋಭಿತವಾದ (ಗಂಗಾನದಿಯನ್ನು ನೋಡಿದನು).

ಮಂದರಸ್ಯ ಪ್ರದೇಶಾಂಶ್ಚ ಕಿನ್ನರೋದ್ಗೀತನಾದಿತಾನ್ ॥ 27 ॥
ಹೇಮರೂಪ್ಯಮಯೈಃ ಶೃಂಗೈರ್ನಾನೌಷಧಿವಿಭೂಷಿತಾನ್ |
ತಥಾ ಮಂದಾರವೃಕ್ಷೈಶ್ಚ ಪುಷ್ಪಿತೈರುಪಶೋಭಿತಾನ್ ॥ 28 ॥

ಹೇಮ-ರಜತಮಯವಾದ ಶೃಂಗಗಳಿಂದ ಕೂಡಿದ, ನಾನಾ ವಿಧವಾದ ಓಷಧಿಗಳಿಂದ ವಿಭೂಷಿತವಾದ, ಹೂವರಳಿದ ಮಂದಾರ ವೃಕ್ಷಗಳಿಂದ ಶೋಭಿತವಾದ, ಕಿನ್ನರ ಶ್ರೇಷ್ಠರ ಗಾನದಿಂದ ಕೂಡಿದಂತಹ ಮಂದರ ಪರ್ವತದ ಪ್ರದೇಶಗಳನ್ನು ನೋಡಿದನು.

ಸ್ನಿಗ್ಧಾಂಜನಚಯಾಕಾರಂ ಸಂಪ್ರಾಪ್ತಃ ಕಾಳಪರ್ವತಮ್ |
ಪುಣ್ಯಂ ಹಿಮವತಃ ಪಾದಂ ಮಣಿಮಂತಂ ಚ ಪರ್ವತಮ್ ॥ 29 ॥

ಸಾಂದ್ರವಾದ ಕಾಡಿಗೆಯ ಬಣ್ಣವನ್ನು ಹೊಂದಿದ ಕಾಳಪರ್ವತವನ್ನು ಸೇರಿ, ಹಿಮಾಲಯದ ಪಾದದ ಬಳಿ ಇರುವ ಪವಿತ್ರವಾದ ಮಣಿಮಂತ ಪರ್ವತವನ್ನೂ ನೋಡಿದನು.

ಬ್ರಹ್ಮತುಂಗನದೀಂ ಚಾನ್ಯಾಂ ನಾನಾಜನಪದಾನಪಿ |
ಸುಶೃಂಗಂ ಶತಶೃಂಗಂ ಚ ಶರ್ಯಾನಾಗಂ ತಥೈವ ಚ ॥ 30 ॥
ಪುಣ್ಯಮಶ್ವಶಿರಃಸ್ಥಾನಂ ಸ್ಥಾನಮಾಥರ್ವಣಸ್ಯ ಚ |
ವೃಷದಂಶಂ ಚ ಶೈಲೇಂದ್ರಂ ಮಹಾಮಂದರಮೇವ ಚ ॥ 31 ॥
ಅಪ್ಸರೋಭಿಃ ಸಮಾಕೀರ್ಣಂ ಕಿನ್ನರೈಶ್ಚೋಪಶೋಭಿತಮ್ |
ತಾಂಶ್ಚ ಶೈಲಾನ್ ವ್ರಜನ್ ಪಾರ್ಥಃ ಪ್ರೇಕ್ಷತೇ ಸಹಕೇಶವಃ ॥ 32 ॥

ಬ್ರಹ್ಮತುಂಗಾ ನದಿ, ಬೇರೆ ಬೇರೆ ಪ್ರದೇಶಗಳು, ಸುಶೃಂಗ, ಶತಶೃಂಗ ಮತ್ತು ಶರ್ಯಾನಾಗ ಎಂಬ ಪರ್ವತಗಳು, ಅಥರ್ವಣರು ಅಶ್ವಶಿರಸ್ಸನ್ನು (ನಾರಾಯಣ ವರ್ಮವನ್ನು) ಉಪದೇಶ ಮಾಡಿದ ಸ್ಥಾನ, ವೃಷದಂಶ ಪರ್ವತ, ಮಹಾಮಂದರ ಪರ್ವತ, ಅಪ್ಸರೆಯರಿಂದ ತುಂಬಿ ಕಿನ್ನರರಿಂದ ಶೋಭಿತವಾದ ಉಳಿದ ಪರ್ವತಗಳು ಎಲ್ಲವನ್ನೂ ಕೃಷ್ಣನ ಜೊತೆಯಲ್ಲಿ ಹೋಗುತ್ತಾ ಅರ್ಜುನನು ನೋಡಿದನು.

ಶುಭೈಃ ಪ್ರಸ್ರವಣೈರ್ಜುಷ್ಟಾಂ ಹೇಮಧಾತುವಿಭೂಷಿತಾಮ್ |
ಚಂದ್ರರಶ್ಮಿಪರೀತಾಂಗೀಂ ಪೃಥಿವೀಂ ಪುರಮಾಲಿನೀಮ್ ॥ 33 ॥

ಪವಿತ್ರವಾದ ನದಿಗಳಿಂದ ಕೂಡಿದ, ಸುವರ್ಣ ಮತ್ತು ಧಾತುಗಳಿಂದ ವಿಭೂಷಿತವಾದ, ಅನೇಕ ಪಟ್ಟಣಗಳ ಮಾಲೆಯನ್ನು ಹೊಂದಿದ, ಚಂದ್ರನ ಬೆಳದಿಂಗಳು ತುಂಬಿರುವ ಭೂಮಿಯನ್ನು ನೋಡಿದನು.

ಸಮುದ್ರಾಂಶ್ಚಾದ್ಭುತಾಕಾರಾನ್ ಪಶ್ಯನ್ ಸುಬಹುಲಾದ್ಭುತಾನ್ |
ವಿಯದ್ ದ್ಯಾಂ ಪೃಥಿವೀಂ ಚೈವ ಪಶ್ಯನ್ ವಿಷ್ಣುಪದೇ ವ್ರಜನ್ ॥34॥
ವಿಸ್ಮಿತಃ ಸಹ ಕೃಷ್ಣೇನ ಕ್ಷಿಪ್ತೋ ಬಾಣ ಇವಾತ್ಯಗಾತ್ ॥ 35 ॥

ಅರ್ಜುನನು ಆಕಾಶದಲ್ಲಿ ಹೋಗುತ್ತಾ ಅದ್ಭುತಾಕಾರವುಳ್ಳ ಸಮುದ್ರಗಳನ್ನೂ, ಇನ್ನೂ ಅನೇಕ ಅದ್ಭುತವಾದ ವಸ್ತುಗಳನ್ನೂ ಭೂಮಿ, ಅಂತರಿಕ್ಷ ಮತ್ತು ಆಕಾಶಗಳನ್ನೂ ನೋಡುತ್ತಾ ಸಾಗಿದನು. ಕೃಷ್ಣನ ಜೊತೆಯಲ್ಲಿ ಹೋಗುತ್ತಾ ಅವನು ಧನುಸ್ಸಿನಿಂದ ಪ್ರಯೋಗಿಸಿದ ಬಾಣದಂತೆ ಎಲ್ಲವನ್ನೂ ದಾಟಿ ಹೋದನು.

ಗ್ರಹನಕ್ಷತ್ರಸೋಮಾನಾಂ ಸೂರ್ಯಾಗ್ನ್ಯೋಶ್ಚ ಸಮತ್ವಿಷಮ್ |
ಅಪಶ್ಯತ ತದಾ ಪಾರ್ಥೋ ಜ್ವಲಂತಮಿವ ಪರ್ವತಮ್ ॥ 36 ॥

ಹಾಗೆ ಹೋಗುತ್ತಾ ಗ್ರಹ-ನಕ್ಷತ್ರ-ಚಂದ್ರ-ಸೂರ್ಯಾಗ್ನಿಗಳಿಗೆ ಸಮಾನವಾದ ಕಾಂತಿಯುಳ್ಳ ಅಂತಹ ಕಾಂತಿಯಿಂದ ಜ್ವಲಿಸುವಂತೆ ತೋರುವ ಪರ್ವತವನ್ನು ನೋಡಿದನು.
ಸಮಾಪನ್ನಸ್ತು ತಂ ದೇಶಂ ಶೈಲಾಗ್ರೇ ಸಮವಸ್ಥಿತಮ್ |
ತಪೋನಿತ್ಯಂ ಮಹಾತ್ಮಾನಮಪಶ್ಯದ್ ವಾನರಧ್ವಜಃ ॥ 37 ॥
ವಾನರಧ್ವಜನಾದ ಅರ್ಜುನನು ಆ ದೇಶಕ್ಕೆ ಬಂದು, ಪರ್ವತದಲ್ಲಿ ಕುಳಿತಿದ್ದ ತಪಶ್ಶೀಲನಾದ ಒಬ್ಬ ಮಹಾತ್ಮನನ್ನು ಶೈಲಾಗ್ರದಲ್ಲಿ ನೋಡಿದನು.
ಸಹಸ್ರಮಿವ ಸೂರ್ಯಾಣಾಂ ದೀಪ್ಯಮಾನಂ ಸ್ವತೇಜಸಾ |
ಶೂಲಿನಂ ಜಟಿಲಂ ಶೀರ್ಣವಲ್ಕಲಾಜಿನವಾಸಸಮ್ ॥ 38 ॥
ತನ್ನ ತೇಜಸ್ಸಿನಿಂದ ಸಹಸ್ರ ಸೂರ್ಯರಂತೆ ಬೆಳಗುವ ಜಟಾಧಾರಿಯೂ, ಜಟಿಲನೂ, ಹರಿದ ನಾರುಮಡಿಯ ಮತ್ತು ಕೃಷ್ಣಾಜಿನದ ವಸ್ತ್ರವುಳ್ಳವನೂ ಆದ ಆ ಪುರುಷನನ್ನು ನೋಡಿದನು.
ನಯನಾನಾಂ ಸಹಸ್ರೈಶ್ಚ ವಿಚಿತ್ರಾಂಗಂ ಮಹೌಜಸಮ್ |
ಪಾರ್ವತ್ಯಾ ಸಹಿತಂ ದೇವಂ ಭೂತಸಂಘೈಶ್ಚ ಭಾಸ್ವರಮ್ ॥ 39 ॥
ಸಹಸ್ರಾರು ಕಣ್ಣುಗಳಿಂದ ಕೂಡಿದಂತಹ, ವಿಚಿತ್ರವಾದ ಅಂಗಗಳುಳ್ಳ, ಭೂತಸಂಘಗಳಿಂದ ಸುತುತವರಿಯಲ್ಪಟ್ಟ, ಪಾರ್ವತಿಯಿಂದ ಸಹಿತನಾದ ತೇಜೋ ಮೂರ್ತಿಯನ್ನು ನೋಡಿದನು.
ಗೀತವಾದಿತ್ರಸಂವಾದ್ಯೈಃ ತಾಳನರ್ತನಲಾಸಿತೈಃ |
ವಲ್ಗಿತಾಸ್ಫೋಟಿತೋತ್ಕೃಷ್ಟೈಃ ಪುಣ್ಯೈರ್ಗಂಧೈಶ್ಚ ಸೇವಿತಮ್ ॥ 40 ॥
ಗೀತ-ವಾದಿತ್ರಸಂವಾದದಿಂದಲೂ, ತಾಳಸಹಿತವಾದ ಲಾಸ್ಯಾದಿ ನರ್ತನಗಳಿಂದಲೂ, ಉತ್ಕೃಷ್ಟವಾದ ಜಯಶಬ್ದಗಳಿಂದಲೂ, ಒಳ್ಳೆಯ ಸುಗಂಧದಿಂದಲೂ ಸೇವಿಸಲ್ಪಡುತ್ತಿದ್ದ (ಅವನನ್ನು ನೋಡಿದನು).
ಸ್ತೂಯಮಾನಂ ಸ್ತವೈರ್ದಿವ್ಯೈ ಋಷಿಭಿರ್ಬ್ರಹ್ಮವಾದಿಭಿಃ |
ಗೋಪ್ತಾರಂ ಸರ್ವಭೂತಾನಾಮಿಷ್ವಾಸವರಮಚ್ಯುತಮ್ ॥ 41 ॥
ವೇದವಾದಿಗಳಾದ ಋಷಿಗಳಿಂದ, ದಿವ್ಯವಾದ ಸ್ತೋತ್ರಗಳಿಂದ ಸ್ತೋತ್ರ ಮಾಡಲ್ಪಡುತ್ತಿದ್ದಂತಹ, ಎಲ್ಲ ಪ್ರಾಣಿಗಳಿಗೂ ರಕ್ಷಣೆಯನ್ನು ನೀಡುವ ಶ್ರೇಷ್ಠವಾದ ಧನುರ್ಧಾರಿಯಾದ, ತನ್ನ ಗುಣಗಳಿಂದ ಚ್ಯುತನಾಗದ ಶಿವನನ್ನು ನೋಡಿದನು.
ವಾಸುದೇವಸ್ತು ತಂ ದೃಷ್ಟ್ವಾ ಜಗಾಮ ಶಿರಸಾ ಕ್ಷಿತಿಮ್ |
ಪಾರ್ಥೇನ ಸಹ ಧರ್ಮಾತ್ಮಾ ಗೃಣನ್ ಬ್ರಹ್ಮ ಸನಾತನಮ್ ॥ 42 ॥
ಧರ್ಮಾತ್ಮನಾದ ಕೃಷ್ಣನಾದರೂ ಅವನನ್ನು ನೋಡಿ, ಅರ್ಜುನನ ಜೊತೆಯಲ್ಲಿ ಸನಾತನವಾದ ವೇದವನ್ನು ಜಪಿಸುತ್ತಾ ಭೂಮಿಯ ಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.
ಲೋಕಾದಿಂ ವಿಶ್ವಕರ್ಮಾಣಮಜಮೀಶಾನಮವ್ಯಯಮ್ |
ತಮಸಃ ಪರಮಂ ಜ್ಯೋತಿಃ ಖಂ ವಾಯುಜ್ಯೋರ್ತಿಷಾಂ ಗತಿಮ್ ॥
ಲೋಕಕ್ಕೆ ಕಾರಣನಾದವನೂ, ಎಲ್ಲವನ್ನೂ ಮಾಡುವವನೂ, ಈಶಾನನೂ, ಅವ್ಯಯನೂ ಆದವನೂ, ತಮಸ್ಸಿಗೆ ಕಾರಣನಾದವನೂ, ಆಕಾಶಾದಿ ಭೂತಗಳಿಗೆ ಪತಿಯಾದವನೂ;
ಸ್ರಷ್ಟಾರಂ ವಾರಿಧಾರಾಣಾಂ ಭುವಶ್ಚ ಪ್ರಕೃತಿಂ ಪರಾಮ್ |
ದೇವದಾನವಯಕ್ಷಾಣಾಂ ಮನುಷ್ಯಾಣಾಂ ಚ ಸಾದನಮ್ ॥ 44 ॥
ನದಿಗಳ ಮತ್ತು ಭೂಮಿಯ ಸೃಷ್ಟಿಕರ್ತನಾದವನೂ, ಶ್ರೇಷ್ಠ ಪ್ರಕೃತಿಯಾದವನೂ, ದೇವ-ದಾನವ-ಯಕ್ಷರಿಗೂ, ಮನುಷ್ಯರಿಗೂ ಸಂಹಾರಕನಾದವನೂ;
ಯೋಗಿನಾಂ ಪರಮಂ ಬ್ರಹ್ಮ ವ್ಯಕ್ತಂ ಬ್ರಹ್ಮವಿದಾಂ ನಿಧಿಮ್ |
ಪರಾವರಸ್ಯ ಸ್ರಷ್ಟಾರಂ ಪ್ರತಿಹರ್ತಾರಮೇವ ಚ ॥ 45 ॥
ಯೋಗಿಗಳಿಗೆ ಪರಬಹ್ಮನಾದವನೂ, ಬ್ರಹ್ಮಜ್ಞಾನಿಗಳಿಗೆ ಶ್ರೇಷ್ಠವಾದ ನಿಧಿಯಾದವನೂ, ಉಚ್ಚ-ನೀಚಪ್ರಾಣಿಗಳ ಸೃಷ್ಟಿ-ಸಂಹಾರ ಕರ್ತನಾದವನೂ;
ಕಾಲಕೋಪಂ ಮಹಾತ್ಮಾನಂ ಶಕ್ರಸೂರ್ಯಗುಣೋದಯಮ್ |
ವವಂದತುಸ್ತದಾ ಕೃಷ್ಣೌ ವಾಙ್ಮನೋಬುದ್ಧಿಕರ್ಮಭಿಃ ॥ 46 ॥
ಪ್ರಳಯಕಾಲದಲ್ಲಿ ಕೋಪವನ್ನು ತೋರಿಸುವವನೂ, ಮಹಾತ್ಮನಾದವನೂ, ಇಂದ್ರ- ಸೂರ್ಯ ಮೊದಲಾದವರ ಗುಣಗಳಿಗೆ ಕಾರಣನಾದವನೂ ಆದ ಆ ಶಿವನನ್ನು ಆಗ ಕೃಷ್ಣಾರ್ಜುನರು ವಾಙ್ಮನೋ-ಬುದ್ಧಿ-ಶರೀರಗಳಿಂದ ನಮಸ್ಕರಿಸಿದರು.
ಯಂ ಪ್ರಪಶ್ಯಂತಿ ವಿದ್ವಾಂಸಃ ಸೂಕ್ಷ್ಮಾಧ್ಯಾತ್ಮನಿದರ್ಶನಾತ್ |
ತಮಜಂ ಕಾರಣಾತ್ಮಾನಂ ಜಗ್ಮತುಃ ಶರಣಂ ಭವಮ್ ॥ 47 ॥
ಯಾವನನ್ನು ಸೂಕ್ಷ್ಮವಾದ ಅಧ್ಯಾತ್ಮ ಯೋಗವುಳ್ಳ ಮಹಾತ್ಮರು ನೋಡುತ್ತಾರೆಯೋ ಅಂತಹ ಅಜನಾದ, ಕಾರಣಸ್ವರೂಪನಾದ ಭವನಿಗೆ ಶರಣಾಗತರಾದರು.
ಅರ್ಜುನಶ್ಚಾಪಿ ತಂ ದೇವಂ ಭೂಯೋ ಭೂಯೋಽಪ್ಯವಂದತ |
ಜ್ಞಾತ್ವೈಕಂ ಸರ್ವಲೋಕಾದಿಂ ಭೂತಭವ್ಯಭವತ್ಪ್ರಭುಮ್ ॥ 48 ॥
ಅರ್ಜುನನೂ ಕೂಡ ಅವನನ್ನು ಸರ್ವಲೋಕಾದಿ ಎಂದೂ ಮುಖ್ಯನಾದ ಭೂತ- ವರ್ತಮಾನ-ಭವಿಷ್ಯ ವಸ್ತುಗಳ ಪ್ರಭುವೆಂದೂ ತಿಳಿದು ಆ ದೇವನನ್ನು ಪುನಃ ಪುನಃ ನಮಸ್ಕರಿಸಿದನು.

ಶರಣ್ಯಂ ಶರಣಂ ದೇವಮೀಶಾನಂ ಪರಮೇಶ್ವರಮ್ |
ಜಗಾಮ ಜಗತಾಂ ನಾಥಮರ್ಜುನಃ ಸಜನಾರ್ದನಃ ॥ 49 ॥
ಕೃಷ್ಣ ಸಹಿತನಾದ ಅರ್ಜುನನು ಶರಣು ಹೊಂದುವುದಕ್ಕೆ ಯೋಗ್ಯನೂ, ದೇವನೂ, ಈಶಾನನೂ, ಪರಮೇಶ್ವರನೂ, ಜಗನ್ನಾಥನೂ ಆದ ಅವನಿಗೆ ಶರಣಾಗತನಾದನು.
ತತಸ್ತಾವಾಗತೌ ದೃಷ್ಟ್ವಾ ನರನಾರಾಯಣಾವುಭೌ |
ಸುಪ್ರಸನ್ನಮನಾಃ ಶರ್ವ ಉವಾಚ ಪ್ರಹಸನ್ನಿವ ॥ 50 ॥
ಅನಂತರ ನರ-ನಾರಾಯಣರಿಬ್ಬರೂ ತನ್ನ ಬಳಿಗೆ ಬಂದುದನ್ನು ನೋಡಿ, ಬಹಳ ಸಂತೋಷಗೊಂಡ ಮನಸ್ಸುಳ್ಳವನಾಗಿ ಶರ್ವನು (ಶಿವನು) ನಗುತ್ತಾ ಮಾತನಾಡಿದನು.
ಸ್ವಾಗತಂ ವಾಂ ನರಶ್ರೇಷ್ಠೌ ವಿಕ್ಲವಂ ಚ ನ ತಿಷ್ಠತಾಮ್ |
ಕಿಂಚ ವಾಮೀಪ್ಸಿತಂ ವೀರೌ ಮನಸಾ ಕ್ಷಿಪ್ರಮುಚ್ಯತಾಮ್ ॥ 51 ॥
ಎಲೈ ನರಶ್ರೇಷ್ಠರೇ, ನಿಮ್ಮಿಬ್ಬರಿಗೂ ಸ್ವಾಗತ. ಮನಸ್ಸಿನಲ್ಲಿ ವೈಕ್ಲವ್ಯವನ್ನು ಹೊಂದಬೇಡಿ. ಎಲೈ ವೀರರೇ, ನೀವು ಮನಸ್ಸಿನಲ್ಲಿ ಏನು ಬಯಸಿದ್ದೀರಿ? ಬೇಗ ಹೇಳಿ.
ಕೇನ ಕಾರ್ಯೇಣ ಸಂಪ್ರಾಪ್ತೌ ಯುವಾಂ ತತ್ಸಾಧನೇ ರತೌ |
ವ್ರಿಯತಾಮಾತ್ಮನಃ ಶ್ರೇಯಃ ತತ್ ಸರ್ವಂ ಚ ದದಾನಿ ವಾಮ್ ॥52॥
ಯಾವ ಕಾರ್ಯವನ್ನು ಉದ್ದೇಶಿಸಿ ಅದನ್ನು ಸಾಧಿಸುವುದರಲ್ಲಿ ನಿರತರಾಗಿ ನೀವಿಬ್ಬರೂ ಇಲ್ಲಿಗೆ ಬಂದಿದ್ದೀರಿ? ಯಾವುದು ನಿಮಗೆ ಶ್ರೇಯಸ್ಸೆಂದು ತಿಳಿದು ವರವನ್ನು ಕೇಳಿ. ಅವೆಲ್ಲವನ್ನೂ ನಾನು ಕೊಡುವೆನು.
ಸಂಜಯಃ
ತತಸ್ತದ್ ವಚನಂ ಶ್ರುತ್ವಾ ಪ್ರತ್ಯುತ್ಥಾಯ ಕೃತಾಂಜಲೀ |
ವಾಸುದೇವಾರ್ಜುನೌ ಶರ್ವಂ ತುಷ್ಟುವಾತೇ ಮಹಾಮತೀ ॥ 53 ॥
ಸಂಜಯ ಅವನ ಆ ಮಾತುಗಳನ್ನು ಕೇಳಿ ಮಹಾಬುದ್ಧಿಯುಳ್ಳ ಕೃಷ್ಣಾರ್ಜುನರು ಎದ್ದು ನಿಂತು, ಕೈಗಳನ್ನು ಮುಗಿದು ಶಿವನನ್ನು ಸ್ತೋತ್ರ ಮಾಡಿದರು.
ನಮೋ ಭವಾಯ ಶರ್ವಾಯ ರುದ್ರಾಯ ವರದಾಯ ಚ |
ಪಶೂನಾಂ ಪತಯೇ ನಿತ್ಯಮ್ ಉಗ್ರಾಯ ಚ ಕಪರ್ದಿನೇ ॥ 54 ॥
ಭವನೂ, ಶರ್ವನೂ, ರುದ್ರನೂ, ವರದನೂ, ಪಶುಪತಿಯೂ, ಉಗ್ರನೂ, ಕಪರ್ದಿಯೂ ಆದ ನಿನಗೆ ಯಾವಾಗಲೂ ನಮಸ್ಕಾರ.
ಕುಮಾರಗುರವೇ ನಿತ್ಯಂ ನೀಲಗ್ರೀವಾಯ ವೇಧಸೇ |
ವಿಲೋಹಿತಾಯ ಧೂಮ್ರಾಯ ವ್ಯಾಲಯಜ್ಞೋಪವೀತಿನೇ ॥ 55 ॥
ಕುಮಾರಗುರುವಾದ, ಯಾವಾಗಲೂ ನೀಲಕಂಠನಾದ, ಭಕ್ತಾಭೀಷ್ಟಪ್ರದನಾದ, ಲೋಹಿತ ವಣರ್ದಿಂದ ಕೂಡಿದ, ಧೂಮ್ರವರ್ಣನಾದ, ಸರ್ಪಯಜ್ಞೋಪವೀತನಾದ ನಿನಗೆ ನಮಸ್ಕಾರ.
ಮಹಾದೇವಾಯ ಭೀಮಾಯ ತ್ರ್ಯಂಬಕಾಯ ಶಿವಾಯ ಚ |
ಈಶಾನಾಯ ಮಖಘ್ನಾಯ ನಮೋಽಸ್ತ್ವಂಧಕಘಾತಿನೇ ॥ 56 ॥
ಮಹಾದೇವನಾದ, ಭೀಮನಾದ, ತ್ರಿನೇತ್ರನಾದ, ಶಿವನಾದ, ಈಶಾನನಾದ, ದಕ್ಷಯಜ್ಞಭಂಜಕನಾದ, ಅಂಧಕಾಸುರ ಸಂಹಾರಕನಾದ ನಿನಗೆ ನಮಸ್ಕಾರ.
ನಿತ್ಯಂ ನೀಲಶಿಖಂಡಾಯ ಶೂಲಿನೇ ದೈತ್ಯಘಾತಿನೇ |
ಹಂತ್ರೇ ಗೋಪ್ತ್ರೇ ತ್ರಿನೇತ್ರಾಯ ವ್ಯಾಧಾಯ ವಸುರೇತಸೇ ॥ 57 ॥
ಯಾವಾಗಲೂ ಕೃಷ್ಣವರ್ಣದ ಕೇಶಗಳನ್ನು ಹೊಂದಿರುವ, ತ್ರಿಶೂಲಧಾರಿಯಾದ, ದೈತ್ಯ ಸಂಹಾರಕನಾದ, ಜಗತ್ಸಂಹಾರಕನಾದ, ಜಗದ್ರಕ್ಷಕನಾದ, ತ್ರಿನೇತ್ರನಾದ, ವ್ಯಾಧನಿಗೆ ಅನುಗ್ರಹವನ್ನು ಮಾಡಿದ, ಸುವರ್ಣರೇತಸ್ಕನಾದ ನಿನಗೆ ನಮಸ್ಕಾರ.
ಅಚಿಂತ್ಯಾಯಾಂಬಿಕಾಭರ್ತ್ರೇ ಸರ್ವದೇವಸ್ತುತಾಯ ಚ |
ವೃಷಧ್ವಜಾಯ ಮುಂಡಾಯ ಜಟಿನೇ ಬ್ರಹ್ಮಚಾರಿಣೇ ॥ 58 ॥
ಅಚಿಂತ್ಯನಾದ, ಅಂಬಿಕಾಪತಿಯಾದ, ಸರ್ವದೇವಸ್ತುತನಾದ, ವೃಷಧ್ವಜನಾದ, ಮುಂಡನಾದ, ಜಟೆಯನ್ನು ಧರಿಸಿದ, ಬ್ರಹ್ಮಚಾರಿಯಾದ ನಿನಗೆ ನಮಸ್ಕಾರ.
ತಪಸೇ ತಪ್ಯಮಾನಾಯ ಬ್ರಹ್ಮಣ್ಯಾಯಾಜಿತಾಯ ಚ |
ವಿಶ್ವಾತ್ಮನೇ ವಿಶ್ವಸೃಜೇ ವಿಶ್ವಮಾವೃತ್ಯ ತಿಷ್ಠತೇ ॥ 59 ॥
ಯಾವಾಗಲೂ ತಪಸ್ಸನ್ನು ಮಾಡುವ (ನೀರಿನಲ್ಲಿ ತಪಸ್ಸನ್ನು ಮಾಡುವ), ಬ್ರಾಹ್ಮಣ ವತ್ಸಲನಾದ, ಎಂದೂ ಪರಾಜಿತನಾಗದ, ವಿಶ್ವಾತ್ಮನಾದ, ವಿಶ್ವಸೃಷ್ಟಿಕರ್ತನಾದ ನಿನಗೆ ನಮಸ್ಕಾರ.
ನಮೋ ನಮಸ್ತೇ ವ್ಯಾಸಾಯ ಭೂತಾನಾಂ ಪ್ರಭವೇ ಸದಾ |
ಅಭಿಗಮ್ಯಾಯ ಕಾಮ್ಯಾಯ ಸ್ತುತ್ಯಾಯಾರ್ಯಾಯ ಸರ್ವದಾ ॥ 60 ॥
ಎಲ್ಲವನ್ನೂ ವಿಸ್ತರಿಸುವ ನಿನಗೆ ನಮಸ್ಕಾರ. ಎಲ್ಲ ಭೂತಗಳ ಪ್ರಭುವಾದ ನಿನಗೆ ನಮಸ್ಕಾರ. ಯಾವಾಗಲೂ ಗಮ್ಯನಾದವನೂ, ಕಾಮ್ಯನಾದವನೂ, ಸ್ತುತ್ಯನಾದವನೂ, ಆರ್ಯನಾದವನೂ ಆದ ನಿನಗೆ ನಮಸ್ಕಾರ.
ಬ್ರಹ್ಮವಕ್ತ್ರಾಯ ಕಾಂತಾಯ ಶಂಕರಾಯ ಶಿವಾಯ ಚ |
ನಮೋಽಸ್ತು ವಾಚಸ್ಪತಯೇ ಪ್ರಜಾನಾಂ ಪತಯೇ ನಮಃ ॥ 61 ॥

ವೇದಮುಖನಾದ, ಮನೋಹರನಾದ, ಮಂಗಳಕರನಾದ, ಮಂಗಳರೂಪನಾದ, ವಾಚಸ್ಪತಿಯಾದ, ಪ್ರಜಾಪತಿಯಾದ ನಿನಗೆ ನಮಸ್ಕಾರ.
ನಮೋ ವಿಶ್ವಸ್ಯ ಪತಯೇ ಮಹತಾಂ ಪತಯೇ ನಮಃ |
ನಮಃ ಸಹಸ್ರಶಿರಸೇ ಸಹಸ್ರಭುಜಮನ್ಯವೇ ॥ 62 ॥
ವಿಶ್ವಕ್ಕೆ ಪತಿಯಾದ, ಮಹಾತ್ಮನಾದ, ಸಹಸ್ರ ಶಿರಸ್ಸುಗಳುಳ್ಳ, ಸಹಸ್ರಭುಜಗಳನ್ನುಳ್ಳ, ಮನ್ಯುಸ್ವರೂಪನಾದ ನಿನಗೆ ನಮಸ್ಕಾರ.
ಸಹಸ್ರನೇತ್ರಪಾದಾಯ ನಮೋಽಸಂಖ್ಯೇಯಕರ್ಮಣೇ |
ನಮೋ ಹಿರಣ್ಯಗರ್ಭಾಯ ಹಿರಣ್ಯಕವಚಾಯ ಚ ॥ 63 ॥
ಸಹಸ್ರ ನೇತ್ರ-ಪಾದಗಳುಳ್ಳ, ಎಣಿಸಲಾರದಷ್ಟು ಕರ್ಮವನ್ನು ಮಾಡುವ, ಹಿರಣ್ಯ ಗರ್ಭನಾದ, ಹಿರಣ್ಯಕವಚನಾದ ನಿನಗೆ ನಮಸ್ಕಾರ.
ನಮೋಽಸ್ತು ದೇವದೇವಾಯ ಮಹಾಭೂತಧರಾಯ ಚ |
ಭಕ್ತಾನುಕಂಪಿನೇ ನಿತ್ಯಂ ಸಿದ್ಧ್ಯತಾಂ ನೋ ವರಃ ಪ್ರಭೋ ॥ 64 ॥
ದೇವದೇವನಾದ, ಮಹಾಭೂತಧಾರಕನಾದ, ಭಕ್ತಾನುಕಂಪಿಯಾದ ನಿನಗೆ ನಿತ್ಯವೂ ನಮಸ್ಕಾರ. ಎಲೈ ಪ್ರಭುವೇ, ನಮಗೆ ನೀನು ನೀಡುವ ವರವು ಸಿದ್ಧಿಸಲಿ.
ಸಂಜಯಃ
ಏವಂ ಸ್ತುತ್ವಾ ಮಹಾದೇವಂ ವಾಸುದೇವಃ ಸಹಾರ್ಜುನಃ |
ಪ್ರಸಾದಯಾಮಾಸ ಭವಂ ತದಾ ಹ್ಯಸ್ತ್ರೋಪಲಬ್ಧಯೇ |
ಅರ್ಜುನಾಯ ದದೌ ಬುದ್ಧಿಂ ತಸ್ಮಿನ್ನಸ್ತ್ರೇ ಯದೀಪ್ಸಿತಮ್ ॥ 65 ॥
ಸಂಜಯ ಕೃಷ್ಣನು ಅರ್ಜುನನ ಜೊತೆಯಲ್ಲಿ ಮಹಾದೇವನನ್ನು ಹೀಗೆ ಸ್ತೋತ್ರವನ್ನು ಮಾಡಿ, ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಡುವಂತೆ ಶಿವನನ್ನು ಒಲಿಸಿದನು. ಅರ್ಜುನನಿಗೂ ಆ ಅಸ್ತ್ರವನ್ನು ತೆಗೆದುಕೊಳ್ಳುವುದಕ್ಕೆ ಯೋಗ್ಯವಾದ ಬುದ್ಧಿಯನ್ನು ಆ ಕಾಲದಲ್ಲಿ ನೀಡಿದನು.
ತತಃ ಪಾರ್ಥಃ ಪ್ರಸನ್ನಾತ್ಮಾ ಪ್ರಾಂಜಲಿರ್ವೃಷಭಧ್ವಜಮ್ |
ದದರ್ಶೋತ್ಫುಲ್ಲನಯನಃ ಸಮಸ್ತಂ ತೇಜಸಾಂ ನಿಧಿಮ್ ॥ 66 ॥
ಆಗ ಪ್ರಸನ್ನ ಮನಸ್ಕನಾದ ಅರ್ಜುನನು ಕೈಗಳನ್ನು ಮುಗಿದು ತೇಜೋನಿಧಿಯಾದ ವೃಷಭಧ್ವಜನನ್ನು ಪೂರ್ಣವಾಗಿ ಅರಳಿದ ಕಣ್ಣಿನಿಂದ ನೋಡಿದನು.
ತಂ ಚೋಪಹಾರಂ ಸ್ವಕೃತಂ ನೈಶಂ ನೈತ್ಯಕಮಾತ್ಮನಃ |
ದದರ್ಶ ತ್ರ್ಯಂಬಕಾಭ್ಯಾಶೇ ವಾಸುದೇವೇ ನಿವೇದಿತಮ್ ॥ 67 ॥
ತಾನು ಪ್ರತಿನಿತ್ಯದಂತೆ ರಾತ್ರಿಯ ಕಾಲದಲ್ಲಿ ಮಾಡಿದ ಪೂಜೆಯಲ್ಲಿ ಕೃಷ್ಣನಿಗೆ ಮತ್ತು ಶಿವನಿಗೆ ನಿವೇದಿಸಿದ ಆ ಪೂಜಾದ್ರವ್ಯಗಳು ಶಿವನ ಸಮೀಪದಲ್ಲಿ ಇದ್ದುದನ್ನು ನೋಡಿದನು.
ತತೋಽಭಿಪೂಜ್ಯ ಮನಸಾ ಕೃಷ್ಣಂ ಶರ್ವಂ ಚ ಪಾಂಡವಃ |
ಇಚ್ಛಾಮ್ಯಹಂ ದಿವ್ಯಮಸ್ತ್ರಮಿತ್ಯಭಾಷತ ಶಂಕರಮ್ ॥ 68 ॥
ಆಗ ಅರ್ಜುನನು ಮನಸ್ಸಿನಲ್ಲಿಯೇ ಕೃಷ್ಣನನ್ನು ಮತ್ತು ಶಿವನನ್ನು ಪೂಜಿಸಿ, ಶಂಕರನನ್ನು ಕುರಿತು, ನಾನು ದಿವ್ಯವಾದ ಪಾಶುಪತಾಸ್ತ್ರವನ್ನು ಪಡೆಯಲು ಇಚ್ಛಿಸುತ್ತೇನೆ ಎಂದು ಹೇಳಿದನು.
ತತಃ ಪಾರ್ಥಸ್ಯ ವಿಜ್ಞಾಯ ವರಾರ್ಥಂ ವಚನಂ ವಿಭುಃ |
ವಾಸುದೇವಾರ್ಜುನೌ ದೇವಃ ಸ್ಮಯಮಾನೋಽಭ್ಯಭಾಷತ ॥ 69 ॥
ಸ್ವಾಗತಂ ವಾಂ ನರಶ್ರೇಷ್ಠೌ ವಿಜ್ಞಾತಂ ಮನಸೇಪ್ಸಿತಮ್
ಯೇನ ಕಾಮೇನ ಸಂಪ್ರಾಪ್ತೌ ಭವದ್ಭ್ಯಾಂ ತಂ ದದಾಮ್ಯಹಮ್ ॥70॥
ಆಗ ಪಾರ್ಥನ ವರದ ಅಭಿಪ್ರಾಯವನ್ನು ತಿಳಿದ ವಿಭುವಾದ ಶಿವದೇವನು ನಗುತ್ತಾ ಕೃಷ್ಣಾರ್ಜುನರನ್ನು ಕುರಿತು ನರಶ್ರೇಷ್ಠರೇ ನಿಮಗೆ ಸ್ವಾಗತ. ನಿಮ್ಮ ಮನೋಭೀಷ್ಟವು ತಿಳಿಯಿತು. ಯಾವ ಇಚ್ಛೆಯಿಂದ ಇಲ್ಲಿಗೆ ಬಂದಿದ್ದೀರೋ ಅದನ್ನು ನಾನು ಕೊಡುವೆನು ಎಂದು ಹೇಳಿದನು.
ಸರೋಽಮೃತಮಯಂ ದಿವ್ಯಮಭ್ಯಾಶೇ ಶತ್ರುಸೂದನೌ |
ತತ್ರ ಮೇ ತದ್ಧನುರ್ದಿವ್ಯಂ ಶರಾಶ್ಚ ನಿಹಿತಾಃ ಪುರಾ ॥ 71 ॥
ಎಲೈ ಶತ್ರುಸಂಹಾರಕರೇ, ಇಲ್ಲಿ ಸಮೀಪದಲ್ಲಿಯೇ ಅಮೃತಮಯವಾದ ಜಲವಿರುವ ಸರೋವರವಿದೆ. ಅಲ್ಲಿ ನನ್ನ ದಿವ್ಯವಾದ ಧನುಸ್ಸನ್ನು ಮತ್ತು ಬಾಣಗಳನ್ನು ಮೊದಲೇ ಇಟ್ಟಿದ್ದೇನೆ.
ಯೇನ ದೇವಾರಯಃ ಸರ್ವೇ ಮಯಾ ಯುಧಿ ನಿಪಾತಿತಾಃ |
ಯುವಾಮೇತದ್ ದ್ವಯಂ ಕೃಷ್ಣೌ ತದಿಹಾನಯತ ದ್ರುತಮ್ ॥ 72 ॥
ಎಲೈ ಕೃಷ್ಣಾರ್ಜುನರೇ, ಯಾವ ಧನುಸ್ಸಿನಿಂದ ನಾನು ಎಲ್ಲ ದೇವಶತ್ರುಗಳನ್ನೂ ಯುದ್ಧದಲ್ಲಿ ಸಂಹಾರ ಮಾಡಿದೆನೋ ಅಂತಹ ಧನುಸ್ಸನ್ನು ನೀವಿಬ್ಬರೂ ಇಲ್ಲಿಗೆ ಶೀಘ್ರವಾಗಿ ತನ್ನಿ (ಎಂದು ಹೇಳಿದನು).
ಸಂಜಯಃ
ತಥೇತ್ಯುಕ್ತ್ವಾ ತು ತೌ ವೀರೌ ಶರ್ವಂ ಪಾರಿಷದೈಃ ಸಹ |
ಪ್ರಸ್ಥಿತೌ ತತ್ ಸರೋ ದಿವ್ಯಂ ದಿವ್ಯಾಶ್ಚರ್ಯಶತಾಯುತಮ್ ॥ 73 ॥
ಸಂಜಯ ಈಶ್ವರನನ್ನೂ ಮತ್ತು ಈಶ್ವರನ ಪಾರ್ಷದರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ, ಅಲ್ಲಿಂದ ನೂರಾರು

ಆಶ್ಚರ್ಯಗಳಿಂದ ಕೂಡಿದ ಆ ದಿವ್ಯವಾದ ಸರೋವರಕ್ಕೆ ಹೊರಟರು.
ನಿರ್ದಿಷ್ಟಂ ಯದ್ ವೃಷಾಂಕೇಣ ಪುಣ್ಯಂ ಸರ್ವಾರ್ಥಸಾಧಕಮ್ |
ತಜ್ಜಗ್ಮತುರಸಂಭ್ರಾಂತೌ ನರನಾರಾಯಣಾವೃಷೀ ॥ 74 ॥
ಋಷಿಗಳಾದ ನರ-ನಾರಾಯಣರು ಯಾವ ಗಾಬರಿಯೂ ಇಲ್ಲದೆ ವೃಷಧ್ವಜನು ನಿರ್ದೇಶ ಮಾಡಿದ, ಸರ್ವಾರ್ಥಸಾಧಕವಾದ ಪುಣ್ಯ ಸರೋವರವನ್ನು ತಲುಪಿದರು.
ತತಸ್ತೌ ತತ್ ಸರೋ ಗತ್ವಾ ಸೂರ್ಯಮಂಡಲಸನ್ನಿಭಮ್ |
ನಾಗಮಂತರ್ಜಲೇ ಘೋರಂ ದದೃಶಾತೇಽಚ್ಯುತಾರ್ಜುನೌ ॥ 75 ॥
ಅನಂತರ ಅವರು ಆ ಸರೋವರದ ಸಮೀಪಕ್ಕೆ ಹೋಗಿ, ಸೂರ್ಯಮಂಡಲ ಕಾಂತಿಯನ್ನು ಹೊಂದಿದ್ದ, ಒಂದು ಘೋರವಾದ ಸರ್ಪವನ್ನು ಜಲದಲ್ಲಿ ನೋಡಿದರು.
ದ್ವಿತೀಯಂ ಚಾಪರಂ ನಾಗಂ ಸಹಸ್ರಶಿರಸಂ ವರಮ್ |
ವಮಂತಂ ವಿಪುಲಾಂ ಜ್ವಾಲಾಂ ದದೃಶಾತೇಽಗ್ನಿವರ್ಚಸಮ್ ॥ 76 ॥
ಇನ್ನೊಂದು ಸರ್ಪವು ಸಹಸ್ರ ಶಿರಸ್ಸುಗಳಿಂದ ಕೂಡಿದ್ದು, ಅಗ್ನಿಯ ಕಾಂತಿಯನ್ನು ಹೊಂದಿದ್ದು, ಮುಖದಿಂದ ವಿಪುಲವಾದ ಜ್ವಾಲೆಗಳನ್ನು ಹೊರಸೂಸುತ್ತಿರುವುದನ್ನೂ ಅವರು ನೋಡಿದರು.
ತತಃ ಕೃಷ್ಣಶ್ಚ ಪಾರ್ಥಶ್ಚ ಸಂಸ್ಪೃಶ್ಯಾಂಭಃ ಕೃತಾಂಜಲೀ |
ತೌ ನಾಗಾವುಪತಸ್ಥಾತೇ ನಮಸ್ಯಂತೌ ವೃಷಧ್ವಜಮ್ ॥ 77 ॥
ಆಗ ಕೃಷ್ಣಾರ್ಜುನರು ನೀರನ್ನು ಸ್ಪರ್ಶಮಾಡಿ (ಶುದ್ಧರಾಗಿ), ಕೈಗಳನ್ನು ಮುಗಿದು, ಈಶ್ವರನಿಗೆ ನಮಸ್ಕಾರವನ್ನು ಮಾಡಿ ಆ ಸರ್ಪಗಳನ್ನು ಸ್ತೋತ್ರ ಮಾಡಿದರು.
ಗೃಣಂತೌ ವೇದವಿದುಷೌ ತದ್ ಬ್ರಹ್ಮ ಶತರುದ್ರಿಯಮ್ |
ಅಪ್ರಮೇಯಪ್ರಮಾಣಂ ತೌ ಗತ್ವಾ ಸರ್ವಾತ್ಮನಾ ಭವಮ್ ॥ 78 ॥
ವೇದವಿದ್ವಾಂಸರಾದ ಅವರು ಅಪ್ರಮೇಯಾನುಭಾವನಾದ ಈಶ್ವರನನ್ನು ಸರ್ವಾತ್ಮನಾ ಮನಸ್ಸಿನಲ್ಲಿ ಸ್ಮರಿಸಿ, ಶತರುದ್ರಿಯ ವೇದಭಾಗವನ್ನು ಪಠಿಸುತ್ತಾ (ಶಿವನನ್ನು ಸ್ಮರಿಸಿದರು).
ತತಸ್ತೌ ರುದ್ರಮಾಹಾತ್ಮ್ಯಾದ್ ಹಿತ್ವಾ ರೂಪಂ ಮಹೋರಗೌ |
ಧನುರ್ಬಾಣಶ್ಚ ಶತ್ರುಘ್ನೌ ತದ್ ದ್ವಂದ್ವಂ ಸಮಪದ್ಯತ ॥ 79 ॥
ಆ ಎರಡು ಸರ್ಪಗಳು ರುದ್ರದೇವರ ಮಹಿಮೆಯಿಂದ ಸರ್ಪರೂಪವನ್ನು ತ್ಯಜಿಸಿ ಶತ್ರುಸಂಹಾರಕವಾದ ಧನುರ್ಬಾಣಗಳಾದವು.
ತತೋ ಜಗೃಹತುಃ ಪ್ರೀತೌ ಧನುರ್ಬಾಣಂ ಚ ಸುಪ್ರಭಮ್ |
ಜಗ್ಮತುಶ್ಚ ಮಹಾತ್ಮಾನೌ ದದೃಶುಶ್ಚ ಮಹಾತ್ಮನೇ ॥ 80 ॥
ಆಗ ಪ್ರಸನ್ನರಾದ, ಮಹಾತ್ಮರಾದ ಅವರಿಬ್ಬರೂ ಒಳ್ಳೆಯ ಕಾಂತಿಯಿಂದ ಕೂಡಿದ ಆ ಧನುರ್ಬಾಣಗಳನ್ನು ತೆಗೆದುಕೊಂಡು ಹೋಗಿ, ಮಹಾತ್ಮನಾದ ಶಿವನಿಗೆ ತೋರಿಸಿದರು.
ತತಃ ಪಾರ್ಶ್ವೇ ವೃಷಾಂಕಸ್ಯ ಬ್ರಹ್ಮಚಾರೀ ವ್ಯವರ್ತತ |
ಪಿಂಗಾಕ್ಷಸ್ತಪಸಾ ಶ್ರೇಷ್ಠೋ ಬಲವಾನ್ನೀಲಲೋಹಿತಃ ॥ 81 ॥
ಆಗ ವೃಷಧ್ವಜನ ಪಾರ್ಶ್ವದಲ್ಲಿ ಪಿಂಗಾಕ್ಷನೂ, ಶ್ರೇಷ್ಠ ತಪಸ್ವಿಯೂ, ಬಲಿಷ್ಠನೂ ಮತ್ತು ನೀಲಲೋಹಿತನೂ ಆದ ಒಬ್ಬ ಬ್ರಹ್ಮಚಾರಿಯು ಕಾಣಿಸಿಕೊಂಡನು (ಇದ್ದನು).
ಸ ಸಂಗೃಹ್ಯ ಧನುರ್ಘೋರಂ ತಸ್ಥೌ ಸ್ಥಾನಂ ಸಮಾಹಿತಃ |
ವ್ಯಪಾಕರ್ಷಚ್ಚ ವಿಧಿವತ್ ಸಶರಂ ಧನುರುತ್ತಮಮ್ ॥ 82 ॥
ಆ ಘೋರವಾದ ಧನುಸ್ಸನ್ನು ತೆಗೆದುಕೊಂಡು, ತನ್ನ ಸ್ಥಾನದಲ್ಲಿಯೇ ನಿಂತು ವಿಧಿಗೆ ಅನುಗುಣವಾಗಿ, ಬಾಣದಿಂದ ಕೂಡಿದ ಶ್ರೇಷ್ಠವಾದ ಧನುಸ್ಸನ್ನು ಎಳೆದನು.
ತಸ್ಯ ಮೌರ್ವೀಂ ಚ ಮುಷ್ಟಿಂ ಚ ಸ್ಥಾನಂ ಚಾಲಕ್ಷ್ಯ ಪಾಂಡವಃ |
ಶ್ರುತ್ವಾ ಮಂತ್ರಂ ಭವಪ್ರೋಕ್ತಂ ಜಗ್ರಾಹಾಚಿಂತ್ಯವಿಕ್ರಮಃ ॥ 83 ॥
ಅದರ ಹೆದೆಯನ್ನೂ, ಮುಷ್ಟಿಯನ್ನೂ, ಸ್ಥಾನವನ್ನೂ ಗಮನಿಸಿ, ಅರ್ಜುನನು ಈಶ್ವರನು ಹೇಳಿದ ಮಂತ್ರವನ್ನು ಕೇಳಿ, ಅಚಿಂತ್ಯ ಪರಾಕ್ರಮಿಯಾದ ಅವನು ಅದನ್ನು ತೆಗೆದುಕೊಂಡನು.
ಸ ಸರಸ್ಯೇವ ತಂ ಬಾಣಂ ಮುಮೋಚಾತಿಬಲಃ ಪ್ರಭುಃ |
ಚಿಕ್ಷೇಪ ಚ ಪುನರ್ವೀರಃ ತಸ್ಮಿನ್ ಸರಸಿ ತದ್ ಧನುಃ ॥ 84 ॥
ಅತಿಬಲನೂ, ಪ್ರಭುವೂ, ವೀರನೂ ಆದ ಅವನು ಆ ಬಾಣವನ್ನು ಆ ಸರೋವರದಲ್ಲಿಯೇ ಪ್ರಯೋಗಿಸಿದನು ಮತ್ತು ಆ ಧನುಸ್ಸನ್ನು ಸರೋವರದಲ್ಲಿಯೇ ಎಸೆದನು.
ಶಿವನಿಗೆ ಸೇರಿದ ಧನುರ್ಬಾಣಗಳನ್ನು ಹಸ್ತದಿಂದ ಸ್ಪರ್ಶ ಮಾಡುವ ಮಾತ್ರದಿಂದ ಅರ್ಜುನನ ಎಡಗೈಯಲ್ಲಿ ಧನುಸ್ಸಿನ ಸನ್ನಿಧಾನವು, ಬಲಗೈಯಲ್ಲಿ ಬಾಣದ ಸನ್ನಿಧಾನವು ಉಂಟಾಯಿತು. ಆದ್ದರಿಂದ ಉದ್ದೇಶ ಸಿದ್ಧವಾದುದರಿಂದ ಅವೆರಡನ್ನೂ ಸರೋವರದಲ್ಲಿಯೇ ಇಟ್ಟನು ಎಂದು ಅಭಿಪ್ರಾಯ - ಲಕ್ಷಾಲಂಕಾರ.
ತತಃ ಪ್ರೀತಂ ಭವಂ ಜ್ಞಾತ್ವಾ ಪ್ರೀತಿಮಾನರ್ಜುನಸ್ತದಾ |
ವರಮಾರಣ್ಯಕೇ ದತ್ತಂ ಶಂಕರಸ್ಯ ಚ ದರ್ಶನಮ್ |
ಮನಸಾ ಚಿಂತಯಾಮಾಸ ತನ್ಮೇ ಸಂಪದ್ಯತಾಂ ಭವ ॥ 85 ॥

ಸಂತೋಷಗೊಂಡ ಈಶ್ವರನನ್ನು ನೋಡಿ ಅರ್ಜುನನೂ ಸಂತುಷ್ಟನಾಗಿ, ಅರಣ್ಯವಾಸದ ಸಮಯದಲ್ಲಿ ಕೊಟ್ಟ ಶಂಕರನ ದರ್ಶನವನ್ನೂ, ಅವನ ವರವನ್ನೂ ಮನಸ್ಸಿನಲ್ಲಿಯೇ ಚಿಂತಿಸಿ, ಎಲೈ ಶಿವನೇ, ಅದು ನನಗೆ ಸಿದ್ಧವಾಗಲಿ ಎಂದು ಕೇಳಿದನು. ವನವಾಸದ ಸಮಯದಲ್ಲಿ ಇಂದ್ರಕೀಲ ಪರ್ವತದಲ್ಲಿ ಸುಖಕರನಾದ ಶಂಕರನ ದರ್ಶನ ಮತ್ತು ವರಗಳು ಮತ್ತು ಇಂದಿನ ಅವನ ದರ್ಶನ ಮತ್ತು ವರಗಳು ಎರಡು ಬಾರಿ ಪ್ರಾಪ್ತವಾದುದರಿಂದ ಇದು ನನಗೆ ಬಹಳ ಬಲಿಷ್ಠವಾಗಲಿ ಎಂದು ಮನಸ್ಸಿನಲ್ಲಿ ಯೋಚಿಸಿದನು ಎಂದು ಅಭಿಪ್ರಾಯ - ಲಕ್ಷಾಲಂಕಾರ.
ತಸ್ಯ ತನ್ಮತಮಾಜ್ಞಾಯ ಪ್ರೀತಃ ಪ್ರಾದಾದ್ ವರಂ ಭವಃ ॥ 86 ॥
ಸಂಹೃಷ್ಟರೋಮಾ ದುರ್ಧರ್ಷಃ ಕೃತಂ ಕಾರ್ಯಮಮನ್ಯತ |
ತತಃ ಪಾಶುಪತಂ ದಿವ್ಯಮವಾಪ್ಯ ಪುನರೀಶ್ವರಾತ್ ॥ 87 ॥
ತತೋಽರ್ಜುನಹೃಷೀಕೇಶೌ ಪುನಃ ಪುನರರಿಂದಮೌ |
ವವಂದತುಶ್ಚ ಸಂಹೃಷ್ಟೌ ಶಿರೋಭ್ಯಾಂ ತೌ ಮಹೇಶ್ವರಮ್ ॥ 88 ॥
ಅವನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ಶಿವನು ಪ್ರಸನ್ನನಾಗಿ ವರವನ್ನು ನೀಡಿದನು. ದುರ್ಧರ್ಷನಾದ ಅರ್ಜುನನು ರೋಮಾಂಚಿತನಾಗಿ ತನ್ನ ಕಾರ್ಯವು ಸಿದ್ಧಿಸಿತೆಂದು ಭಾವಿಸಿದನು. ಅನಂತರ ದಿವ್ಯವಾದ ಪಾಶುಪತಾಸ್ತ್ರವನ್ನು ಪಡೆದು, ಶತ್ರುಘಾತಕರಾದ ಕೃಷ್ಣಾರ್ಜುನರಿಬ್ಬರೂ ಸಂತೋಷದಿಂದ ಮಹೇಶ್ವರನಿಗೆ ಶಿರಸ್ಸಹಿತವಾದ ಅಷ್ಟಾಂಗ ನಮಸ್ಕಾರವನ್ನು ಮಾಡಿದರು.
ಅನುಜ್ಞಾತೌ ಕ್ಷಣೇ ತಸ್ಮಿನ್ ಭವೇನಾರ್ಜುನಕೇಶವೌ |
ಪ್ರಾಪ್ತೌ ಸ್ವಶಿಬಿರಂ ವೀರೌ ಮುದಾ ಪರಮಯಾ ಯುತೌ ॥ 89 ॥
ಶಿವನಿಂದ ಅನುಮತಿಯನ್ನು ಪಡೆದವರಾಗಿ ಆ ಕ್ಷಣದಲ್ಲಿಯೇ ವೀರರಾದ ಕೃಷ್ಣಾರ್ಜುನರು ಬಹಳ ಸಂತೋಷದಿಂದ ಕೂಡಿದವರಾಗಿ ತಮ್ಮ ಶಿಬಿರಕ್ಕೆ ಹಿಂದಿರುಗಿದರು.
ತಥಾ ಭವೇನಾನುಮತೌ ಮಹಾಸುರನಿಪಾತಿನೌ |
ಇಂದ್ರಾವಿಷ್ಣೂ ಯಥಾ ಪ್ರೀತೌ ಜಂಭಸ್ಯ ವಧಕಾಂಕ್ಷಿಣೌ ॥ 90 ॥
ಜಂಭನ ವಧೆಯನ್ನು ಬಯಸಿದ ಇಂದ್ರ ಮತ್ತು ವಿಷ್ಣುವು ಹೇಗೆ ಪ್ರಸನ್ನರಾಗಿದ್ದರೋ ಹಾಗೆ ಮಹಾಸುರರ ಘಾತಕರಾದ ಅವರಿಬ್ಬರೂ ಶಿವನಿಂದ ಅನುಜ್ಞಾತರಾಗಿ ಸಂತುಷ್ಟರಾದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಚತುಃಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೈದನೆಯ ಅಧ್ಯಾಯ
ಪ್ರಾತರಾಹ್ನಿಕವನ್ನು ಪೂರೈಸಿದ ಯುಧಿಷ್ಠಿರನ ಬಳಿಗೆ ಕೃಷ್ಣನ ಆಗಮನ ಮತ್ತು ಜಯದ್ರಥನ ವಧೆಯ ವಿಷಯದಲ್ಲಿ ಅವನಿಗೆ ಸಮಾಶ್ವಾಸನ.
ಸಂಜಯಃ
ತಯೋಃ ಸಂವದತೋರೇವ ಕೃಷ್ಣದಾರುಕಯೋಸ್ತದಾ |
ಸಾಽತ್ಯಗಾದ್ ರಜನೀ ರಾಜನ್ನಥ ರಾಜಾ ಸ್ಮ ಬೋಧ್ಯತೇ ॥ 1 ॥
ಸಂಜಯ ಎಲೈ ರಾಜನೇ, ಕೃಷ್ಣ-ದಾರುಕರು ಹೀಗೆ ಮಾತನಾಡುವುದರಲ್ಲಿಯೇ ರಾತ್ರಿಯು ಕಳೆಯಿತು. ಅನಂತರ ಯುಧಿಷ್ಠಿರನನ್ನು ಎಬ್ಬಿಸಿದರು.
ಪಠಂತಿ ಪಾಣಿಧ್ವನಿಕಾ ಮಾಗಧಾಃ ಸ್ತವಗಾಯಕಾಃ |
ವೈತಾಲಿಕಾಶ್ಚ ಸೂತಾಶ್ಚ ಸ್ತುವಂತಿ ಪುರುಷರ್ಷಭಮ್ ॥ 2 ॥
ಹಸ್ತದಿಂದ ಶಬ್ದವನ್ನು ಮಾಡಿ ಎಬ್ಬಿಸುವವರೂ, ಸೂತ-ಮಾಗಧರೂ (ಆ ವಂಶದ ಹಿಂದಿನ ರಾಜರುಗಳ ಗುಣಗಳನ್ನು ಹೇಳುವವರು ಸೂತರು, ವರ್ತಮಾನ ರಾಜನ ಗುಣಗಳನ್ನು ಹೇಳುವವರು ಮಾಗಧರು) ಮತ್ತು ವೈತಾಲಿಕರು (ನಿದ್ರೆಯಿಂದ ಎಬ್ಬಿಸುವವರು) ಪುರುಷಶ್ರೇಷ್ಠನಾದ ಧರ್ಮರಾಜನನ್ನು ಸ್ತೋತ್ರ ಮಾಡಿದರು.
ನರ್ತಕಾಶ್ಚಾಪಿ ನೃತ್ಯಂತಿ ಗಾಂತಿ ಗೀತಾನಿ ಗಾಯಕಾಃ |
ಕುರುವಂಶಸ್ತವಾರ್ಥಾನಿ ಮಧುರಂ ರಕ್ತಕಂಠಿನಃ ॥ 3 ॥
ನರ್ತಕರು ನೃತ್ಯವನ್ನು ಮಾಡಿದರು. ಗಾಯಕರು ಅನುರಾಗಯುಕ್ತವಾದ ಕಂಠದಿಂದ ಮಧುರವಾಗಿ ಕುರುವಂಶವನ್ನು ಸ್ತೋತ್ರ ಮಾಡಿದರು, ಗೀತೆಯನ್ನು ಹಾಡಿದರು.
ಮೃದಂಗಝರ್ಝರೀಭೇರ್ಯಃ ಪಣವಾನಕಗೋಮುಖಾಃ |
ಆಡಂಬರಾಣಿ ಶಂಖಾಶ್ಚ ದುಂದುಭ್ಯಶ್ಚ ಮಹಾಸ್ವನಾಃ ॥ 4 ॥
ಏವಮೇತಾನಿ ಸರ್ವಾಣಿ ತಥಾಽನ್ಯಾನ್ಯಪಿ ಭಾರತ |
ವಾದಯಂತಿ ಸ್ಮ ಗಂಭೀರಂ ಕುಶಲಾಃ ಸಾಧುಶಿಕ್ಷಿತಾಃ ॥ 5 ॥
ಎಲೈ ಭಾರತನೇ, ಮೃದುಂಗ, ಝುರ್ಝುರಿ, ಭೇರಿ, ಪಣವ, ಆನಕ, ಗೋಮುಖ, ಆಡಂಬರ, ಶಂಖ, ಮಹಾನಾದವುಳ್ಳ ದುಂದುಭಿಗಳು- ಈ ಎಲ್ಲ ವಾದ್ಯಗಳು ಮತ್ತು ಬೇರೆ ವಾದ್ಯಗಳೂ ಸಹ ಕುಶಲರಾದ ವಾದಕರಿಂದ ಗಂಭೀರವಾಗಿ ವಾದಿಸಲ್ಪಟ್ಟವು.

ಸ ಮೇಘಸಮನಿರ್ಘೋಷೋ ಮಹಚ್ಛಬ್ದೋಽಸ್ಪೃಶದ್ ದಿವಮ್ |
ಪಾರ್ಥಿವಪ್ರವರಂ ಸುಪ್ತಂ ಯುಧಿಷ್ಠಿರಮಬೋಧಯತ್ ॥ 6 ॥
ಮೇಘಘೋಷಕ್ಕೆ ಸಮವಾದ ಆ ದೊಡ್ಡಶಬ್ದವು ಅಂತರಿಕ್ಷವನ್ನು ಮುಟ್ಟಿ, ಶ್ರೇಷ್ಠರಾಜನಾದ ಯುಧಿಷ್ಠಿರನನ್ನು ನಿದ್ದೆಯಿಂದ ಎಚ್ಚರಿಸಿತು.
ಪ್ರತಿಬುದ್ಧಃ ಸುಖಂ ಸುಪ್ತೋ ಮಹಾರ್ಹೇ ಶಯನೋತ್ತಮೇ |
ಉತ್ಥಾಯಾವಶ್ಯಕಾರ್ಯಾಣಿ ಕೃತ್ವಾ ಸ್ನಾನಗೃಹಂ ಯಯೌ ॥ 7 ॥
ಶ್ರೇಷ್ಠವಾದ, ಮಹಾಬೆಲೆಬಾಳುವ ಶಯನದಲ್ಲಿ ಸುಖವಾಗಿ ಮಲಗಿ ಎದ್ದ ಯುಧಿಷ್ಠಿರನು ಅವಶ್ಯ ಕರ್ಮವನ್ನು ಮಾಡಿ, ಸ್ನಾನಗೃಹಕ್ಕೆ ಹೋದನು.
ಶುಕ್ಲಾಂಬರಧರಾಃ ಸ್ನಾತಾಃ ತರುಣಾಷ್ಟೋತ್ತರಂ ಶತಮ್ |
ಸ್ನಾಪಕಾಃ ಕಾಂಚನೈಃ ಕುಂಭೈಃ ಪೂರ್ಣೈಃ ಸಮುಪತಸ್ಥಿರೇ ॥ 8 ॥
ಸ್ನಾನವನ್ನು ಮಾಡಿ, ಶುಭ್ರವಸ್ತ್ರವನ್ನು ಧರಿಸಿದ, ಸ್ನಾನವನ್ನು ಮಾಡಿಸುವ ನೂರೆಂಟು ತರುಣರು ನೀರಿನಿಂದ ಪೂರ್ಣವಾದ ಸುವರ್ಣ ಕುಂಭಗಳನ್ನು ಹಿಡಿದು ಅವನ ಸಮೀಪಕ್ಕೆ ಬಂದರು.
ಭದ್ರಾಸನೇ ಸೂಪವಿಷ್ಟಃ ಪರಿಧಾಯಾಂಬರಂ ಲಘು |
ಉತ್ಸಾರಿತಃ ಕಷಾಯೇಣ ಬಲವದ್ಭಿಃ ಸುಶಿಕ್ಷಿತೈಃ |
ಸಸ್ನೌ ಚಂದನಸಂಯುಕ್ತೈಃ ಸ್ನಾನೀಯೈರಭಿಮಂತ್ರಿತೈಃ ॥ 9 ॥
ತೆಳುವಾದ ವಸ್ತ್ರವನ್ನು ಹೊಂದಿದ್ದು, ಮಂಗಳಮಯವಾದ ಆಸನದಲ್ಲಿ ಚೆನ್ನಾಗಿ ಕುಳಿತ ಯುಧಿಷ್ಠಿರನಿಗೆ ಬಲಿಷ್ಠರಾದವರೂ ಮತ್ತು ಸುಶಿಕ್ಷಿತರಾದವರೂ ಆದ ಸೇವಕರು ಪರಿಮಳಯುಕ್ತವಾದ ಸ್ನಾನಚೂರ್ಣದಿಂದ ಉಜ್ಜಿ, ಅವನ ದೇಹವನ್ನು ಶುದ್ಧಗೊಳಿಸಿದರು. ಅನಂತರ ಅವನು ಅಭಿಮಂತ್ರಿತವಾದ ಚಂದನಯುಕ್ತವಾದ ಜಲದಿಂದ ಸ್ನಾನ ಮಾಡಿದನು.
ಆಪ್ಲುತಃ ಸಾಧಿವಾಸೇನ ಜಲೇನ ಸಸುಗಂಧಿನಾ |
ರಾಜಹಂಸನಿಭಂ ಗೃಹ್ಯ ಉಷ್ಣೀಷಂ ಶಿಥಿಲಾರ್ಪಿತಮ್ ॥ 10 ॥
ಜಲಕ್ಷಯನಿಮಿತ್ತಂ ವೈ ವೇಷ್ಟಯಾಮಾಸ ಮೂರ್ಧನಿ ॥ 11 ॥
ಪರಿಮಳ ದ್ರವ್ಯದಿಂದ ಕೂಡಿ, ಸುಗಂಧಯುಕ್ತವಾದ ಜಲದಿಂದ ಸ್ನಾನವನ್ನು ಮಾಡಿ ತಲೆಯ ನೀರನ್ನು ಒಣಗಿಸಲು ರಾಜಹಂಸದಂತೆ ಶುಭ್ರವಾದ, ತೆಳುವಾದ ಸೇವಕರು ಕೊಟ್ಟ ಒಂದು ಉಷ್ಣೀಷವನ್ನು ತಲೆಗೆ ಸುತ್ತಿಕೊಂಡನು.
ಹರಿಣಾ ಚಂದನೇನಾಂಗಮುಪಲಿಪ್ಯ ಮಹಾಭುಜಃ |
ಸ್ರಗ್ವೀ ಚಾಕ್ಲಿಷ್ಟವಸನಃ ಪ್ರಾಂಜಲಿಃ ಪ್ರಾಙ್ಮುಖಃ ಸ್ಥಿತಃ ॥ 12 ॥
ಮಹಾಭುಜನಾದ ಅವನು ಹರಿಚಂದನದಿಂದ ತನ್ನ ದೇಹವನ್ನು ಲೇಪಿಸಿಕೊಂಡು, ಮಾಲೆಯನ್ನು ಧರಿಸಿ, ಸುಲಭವಾದ ವಸ್ತ್ರವನ್ನು ಧರಿಸಿ, ಪೂರ್ವಾಭಿಮುಖವಾಗಿ ಕೈಗಳನ್ನು ಮುಗಿದು ಕುಳಿತನು.
ಕೃತ್ವೇಂದ್ರಿಯಾಣಾಮೈಕಾಗ್ರ್ಯಂ ಮನಸಶ್ಚ ಮಹಾಮನಾಃ |
ಜಜಾಪ ಜಪ್ಯಂ ಕೌಂತೇಯಃ ಸತಾಂ ಮಾರ್ಗಮನುಷ್ಠಿತಃ |
ತತೋಽಗ್ನಿಶರಣಂ ದೀಪ್ತಂ ಪ್ರವಿವೇಶ ಸಮಾಹಿತಃ ॥ 13 ॥
ಧೈರ್ಯಶಾಲಿಯಾದ ಕೌಂತೇಯನಾದ ಯುಧಿಷ್ಠಿರನು ಇಂದ್ರಿಯಗಳನ್ನು ಮತ್ತು ಮನಸ್ಸನ್ನು ಏಕಾಗ್ರಗೊಳಿಸಿ, ಸಜ್ಜನರ ಮಾರ್ಗವನ್ನು ಅನುಸರಿಸಿ, ಜಪಿಸಬೇಕಾದ ಜಪವನ್ನು ಮಾಡಿದನು. ಅನಂತರ ಸಮಾಧಾನಚಿತ್ತದಿಂದ ಕೂಡಿದವನಾಗಿ ಶೋಭಿಸುವ ಅಗ್ನಿಗೃಹವನ್ನು ಪ್ರವೇಶಿಸಿದನು.
ಸಮಿದ್ಭಿಃ ಸಪವಿತ್ರಾಭಿರಗ್ನಿಮಾಹುತಿಭಿಸ್ತಥಾ |
ಮಂತ್ರಪೂತಾಭಿರರ್ಚಿತ್ವಾ ನಿಶ್ಚಕ್ರಾಮ ಗೃಹಾತ್ತತಃ ॥ 14 ॥
ಪವಿತ್ರವನ್ನು ಧರಿಸಿ, ಸಮಿತ್ತುಗಳಿದಿಂದಲೂ, ಅಭಿಮಂತ್ರಿತವಾದ ಆಹುತಿಗಳಿಂದಲೂ ಅಗ್ನಿಯನ್ನು ಅರ್ಚಿಸಿ ಅಗ್ನಿಗೃಹದಿಂದ ಹೊರಗೆ ಬಂದನು.
ದ್ವಿತೀಯಾಂ ಚ ನರವ್ಯಾಘ್ರ ಕಕ್ಷ್ಯಾಂ ನಿಷ್ಕ್ರಮ್ಯ ಪಾಂಡವಃ |
ತತ್ರ ವೇದವಿದೋ ವಿದ್ವಾನಪಶ್ಯದ್ ಬ್ರಾಹ್ಮಣರ್ಷಭಾನ್ ॥ 15 ॥
ಎಲೈ ನರವ್ಯಾಘ್ರನೇ, ಪಾಂಡವನಾದ ಅವನು ಎರಡನೆಯ ಕಕ್ಷೆಯಿಂದ ಹೊರಗೆ ಬಂದು ಅಲ್ಲಿ ವೇದವಿದ್ವಾಂಸರಾದ ಶ್ರೇಷ್ಠ ಬ್ರಾಹ್ಮಣರನ್ನು ನೋಡಿದನು.
ದಾಂತಾನ್ ವೇದವ್ರತಸ್ನಾತಾನ್ ಸ್ನಾತಾನವಭೃಥೇಷು ಚ |
ಅಷ್ಟೌ ಚೈಷಾಂ ಸಹಸ್ರಂ ಚ ಸಹಸ್ರಾನುಚರಾನ್ ನೃಪ ॥ 16 ॥
ಅಕ್ಷತೈಃ ಸುಮನೋಭಿಶ್ಚ ಸ್ವಸ್ತಿ ವಾಚ್ಯಾಥ ಮೋದಕೈಃ |
ತಾನ್ ದ್ವಿಜಾನ್ ದಧಿಸರ್ಪಿರ್ಭ್ಯಾಂ ಫಲೈಶ್ಚೇಷ್ಟೈಃ ಸುಮಂಗಲೈಃ ॥17 ॥
ಇಂದ್ರಿಯನಿಗ್ರಹವುಳ್ಳವರೂ, ವೇದವ್ರತವನ್ನು ಪೂರೈಸಿದವರೂ, ಗುರುಕುಲ ವಾಸವನ್ನು ಮುಗಿಸಿ ಸಾಧಕರಾದವರೂ, ಯಜ್ಞದಲ್ಲಿ ಅವಭೃಥ ಸ್ನಾನವನ್ನು ಮಾಡಿದವರೂ ಆದ ಸಹಸ್ರಾನುಚರರಿಂದ ಕೂಡಿದ ಎಂಟು ಸಹಸ್ರ ಬ್ರಾಹ್ಮಣ ಶ್ರೇಷ್ಠರನ್ನು ಅಕ್ಷತೆಗಳಿಂದ ಮತ್ತು ಪುಷ್ಪಗಳಿಂದ ಅರ್ಚಿಸಿ, ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು ಅವರನ್ನು ಮೋದಕಗಳಿಂದಲೂ, ದಧಿ-ಆಜ್ಯಗಳಿಂದಲೂ, ಇಷ್ಟವಾದ ಮಂಗಲಗಳಿಂದಲೂ ಅರ್ಚಿಸಿದನು.
ಪ್ರಾದಾತ್ ಕಾಂಚನಮೇಕೈಕಂ ನಿಷ್ಕಂ ವಿಪ್ರಾಯ ಪಾಂಡವಃ |

ಅಲಂಕೃತಂ ಚಾಶ್ವಶತಂ ವಾಸಾಂಸೀಷ್ಟಾಶ್ಚ ದಕ್ಷಿಣಾಃ ॥ 18 ॥
ಪಾಂಡವನು ಪ್ರತಿಯೊಬ್ಬ ಬ್ರಾಹ್ಮಣನಿಗೂ ಒಂದೊಂದು ಸುವರ್ಣನಿಷ್ಕವನ್ನೂ ಅಲಂಕೃತವಾದ ನೂರು ಅಶ್ವಗಳನ್ನೂ, ವಸ್ತ್ರಗಳನ್ನೂ ಮತ್ತು ಅಭೀಷ್ಟವಾದ ದಕ್ಷಿಣೆಗಳನ್ನೂ ನೀಡಿದನು.
ತಥಾ ಗಾಃ ಕಪಿಲಾ ದೋಗ್ಧ್ರೀಃ ಸರ್ಷಭಾಃ ಪಾಂಡುನಂದನಃ |
ಹೇಮಶೃಂಗಾ ರೂಪ್ಯಖುರಾ ದತ್ತ್ವಾ ಚಕ್ರೇ ಪ್ರದಕ್ಷಿಣಮ್ ॥ 19 ॥
ಹಾಗೆಯೇ ಹಾಲನ್ನು ಕರೆಯುವ, ವತ್ಸ ಸಹಿತವಾದ, ಹೇಮಶೃಂಗಗಳನ್ನು ಮತ್ತು ರೂಪ್ಯಖುರಗಳನ್ನು ಹೊಂದಿದ ಕಪಿಲಾ ಗೋವುಗಳನ್ನು ಪ್ರದಕ್ಷಿಣೆ ಮಾಡಿ ಅವುಗಳನ್ನೂ ದಾನವಾಗಿ ನೀಡಿದನು.
ಸ್ವಸ್ತಿಕಾನ್ ವರ್ಧಮಾನಾಂಶ್ಚ ನಂದ್ಯಾವರ್ತಾಂಶ್ಚ ಕಾಂಚನಾನ್ |
ಸುಮನೋಲಾಜಕುಂಭಾಂಶ್ಚ ಜ್ವಲಿತಂ ಚ ಹುತಾಶನಮ್ ॥ 20 ॥
ಪೂರ್ಣಾನ್ಯಕ್ಷತಪಾತ್ರಾಣಿ ರುಚಕಾನ್ ರೋಚನಾಂಸ್ತಥಾ |
ಸ್ವಲಂಕೃತಾಃ ಶುಭಾಃ ಕನ್ಯಾ ದಧಿಸರ್ಪಿರ್ಮಧೂದಕಮ್ ॥ 21 ॥
ಮೃಗಪಕ್ಷಿಪಶೂನ್ ಪುಣ್ಯಾನ್ ತತ್ರ ಮಂಗಲಪೂಜಿತಾನ್ |
ದೃಷ್ಟ್ವಾ ಸ್ಪೃಷ್ಟ್ವಾ ಚ ಕೌಂತೇಯಃ ಕಕ್ಷ್ಯಾಂ ಬಾಹ್ಯಾಂ ವಿನಿರ್ಯಯೌ ॥
ಸ್ವಸ್ತಿಕಗಳು, ವರ್ಧಮಾನಗಳು, ಕಾಂಚನಮಯವಾದ ನಂದ್ಯಾವರ್ತಗಳು, ಪುಷ್ಪಗಳು, ಅರಳು, ಪೂರ್ಣಕುಂಭಗಳು, ಜ್ವಲಿತವಾದ ಅಗ್ನಿ, ಪೂರ್ಣವಾದ ನಕ್ಷತ್ರ ಪಾತ್ರೆಗಳು, ಮಾತುಲಂಗ ಮತ್ತು ಬೇರೆಯ ಮಂಗಳಫಲಗಳು, ಅಲಂಕೃತರಾದ ಶ್ರೇಷ್ಠ ಕನ್ಯೆಯರು, ಹಾಲು-ತುಪ್ಪ, ಜೇನುತುಪ್ಪ ಉದಕಗಳು, ಮಂಗಳದ್ರವ್ಯದಿಂದ ಪೂಜಿತವಾದ ಪವಿತ್ರವಾದ ಮೃಗ-ಪಕ್ಷಿಗಳು, ಇವುಗಳಲ್ಲಿ ಕೆಲವನ್ನು ನೋಡಿ, ಕೆಲವನ್ನು ಸ್ಪರ್ಶಿಸಿ ಕುಂತೀಪುತ್ರನಾದ ಅವನು ಹೊರಗಿನ ಕಕ್ಷೆಗೆ ಬಂದನು.
ತತಸ್ತಸ್ಯ ಮಹಾಭಾಗಾಃ ತಿಷ್ಠತಃ ಪರಿಚಾರಕಾಃ |
ಸೌವರ್ಣಂ ಸರ್ವತೋಭದ್ರಂ ಮುಕ್ತಾವೈಡೂರ್ಯಮಂಡಿತಮ್ ॥23॥
ಪರಾರ್ಧ್ಯಾಸ್ತರಣಾಸ್ತೀರ್ಣಂ ಸೋತ್ತರಚ್ಛದಮೃದ್ಧಿಮತ್ |
ವಿಶ್ವಕರ್ಮಕೃತಂ ದಿವ್ಯಮುಪಜಹ್ರುರ್ವರಾಸನಮ್ ॥ 24 ॥
ಹಾಗೆ ಬಂದು ಅಲ್ಲಿ ನಿಂತ ಅವನಿಗೆ ಪರಿಚಾರಕರಾದ ಮಹಾನುಭಾವರು, ಮುತ್ತು ವೈಡೂರ್ಯದಿಂದ ಅಲಂಕೃತವಾದ, ಬೆಲೆಬಾಳುವ ಕಂಬಳಿಯನ್ನು ಹೊದ್ದಿಸಿದ ಸಂಪದ್ಯುಕ್ತವಾದ, ಮಂಗಳಕರವಾದ, ವಿಶ್ವಕರ್ಮನಿಂದ ಮಾಡಲ್ಪಟ್ಟ ದಿವ್ಯವೂ ಶ್ರೇಷ್ಠವೂ ಆದ ಆಸನವನ್ನು ತಂದರು.
ತತ್ರ ತಸ್ಯೋಪವಿಷ್ಟಸ್ಯ ಭೂಷಣಾನಿ ಮಹಾತ್ಮನಃ |
ಉಪಜಹ್ರುರ್ಮಹಾರ್ಹಾಣಿ ಪ್ರೇಷ್ಯಾಃ ಶುಭ್ರಾಶ್ಚ ಸರ್ವಶಃ ॥ 25 ॥
ಅಲ್ಲಿ ಆಸನದಲ್ಲಿ ಕುಳಿತ ಆ ಮಹಾನುಭಾವನಿಗೆ ಸೇವಕರು ಎಲ್ಲ ಕಡೆಯಿಂದಲೂ ಶುಭ್ರವಾದ ಮತ್ತು ಬೆಲೆಬಾಳುವ ಆಭರಣಗಳನ್ನು ತಂದರು.
ಯುಕ್ತಾಭರಣವೇಷಸ್ಯ ಕೌಂತೇಯಸ್ಯ ಮಹಾತ್ಮನಃ |
ರೂಪಮಾಸೀನ್ಮಹಾರಾಜ ದ್ವಿಷತಾಂ ಶೋಕವರ್ಧನಮ್ ॥ 26 ॥
ಎಲೈ ಮಹಾರಾಜನೇ, ಯೋಗ್ಯವಾದ ವಸತತ್ರಭರಣವನ್ನು ಧರಿಸಿದ ಮಹಾತ್ಮನಾದ ಯುಧಿಷ್ಠಿರನ ರೂಪವು ಶತ್ರುಗಳಿಗೆ ಶೋಕವರ್ಧನವಾಗಿದ್ದಿತು.
ಪಾಂಡರೈಶ್ಚಂದ್ರರಶ್ಮ್ಯಾಭೈರ್ಹೇಮದಂಡೈಶ್ಚ ಚಾಮರೈಃ |
ದೋಧೂಯಮಾನಃ ಶುಶುಭೇ ವಿದ್ಯುದ್ಭಿರಿವ ತೋಯದಃ ॥ 27 ॥
ಚಂದ್ರರಶ್ಮಿಯನ್ನು ಹೋಲುವ, ಹೇಮದಂಡ ಸಹಿತವಾದ ಶ್ವೇತ ಚಾಮರಗಳಿಂದ ಬೀಸಲ್ಪಡುವ ಅವನು ಮಿಂಚಿನಿಂದ ಕೂಡಿದ ಮೋಡದಂತೆ ಶೋಭಿಸಿದನು.
ಸಂಸ್ತೂಯಮಾನಃ ಸೂತೈಶ್ಚ ವಂದ್ಯಮಾನಶ್ಚ ವಂದಿಭಿಃ |
ಉದ್ಗೀಯಮಾನೋ ಗಂಧರ್ವೈರಾಸ್ತೇ ಸ್ಮ ಕುರುನಂದನಃ ॥ 28 ॥
ಸೂತರಿಂದ ಸ್ತೋತ್ರ ಮಾಡಲ್ಪಟ್ಟು, ವಂದಿಗಳಿಂದ ನಮಸ್ಕರಿಸಲ್ಪಟ್ಟು, ಗಂಧರ್ವರಿಂದ ಗಾನ ಮಾಡಲ್ಪಟ್ಟು ಕುರುನಂದನನಾದ ಯುಧಿಷ್ಠಿರನು ಆಸನದಲ್ಲಿ ಕುಳಿತಿದ್ದನು.
ತತೋ ಮುಹೂರ್ತಮಾಸೀಚ್ಚ ವಂದಿನಾಂ ನಿನದೋ ಮಹಾನ್ |
ರಥಾನಾಂ ನೇಮಿಘೋಷಾಶ್ಚ ಖುರಘೋಷಶ್ಚ ವಾಜಿನಾಮ್ ॥ 29 ॥
ಹ್ರಾದಶ್ಚ ಗಜಘಂಟಾನಾಂ ಶಂಖಾನಾಂ ಚ ರವೋ ಮಹಾನ್ |
ನರಾಣಾಂ ಪದಶಬ್ದಶ್ಚ ಕಂಪತೀವ ಸ್ಮ ಮೇದಿನೀಮ್ ॥ 30 ॥
ಅನಂತರ ಒಂದು ಮುಹೂರ್ತದವರೆಗೆ ವಂದಿಗಳ ದೊಡ್ಡ ನಿನಾದವೂ, ರಥಗಳ ಚಕ್ರದ ಘೋಷವೂ, ಅಶ್ವಗಳ ಖುರಘೋಷವೂ, ಗಜಘಂಟೆಗಳ ನಾದವೂ, ದೊಡ್ಡ ಶಂಖನಾದವೂ, ಪದಾತಿಗಳ ಪದಶಬ್ದವೂ ಭೂಮಿಯನ್ನು ನಡುಗಿಸುವಂತೆ ಉಂಟಾಯಿತು.
ತತಃ ಕ್ಷತ್ತಾ ಸಮಾಸಾದ್ಯ ಜಾನುಭ್ಯಾಂ ಭೂತಳೇ ಸ್ಥಿತಃ |
ಶಿರಸಾ ವಂದನೀಯಂ ತಮಭಿವಾದ್ಯ ಜಗತ್ಪತಿಮ್ ॥ 31 ॥
ಕುಂಡಲೀ ಬದ್ಧನಿಸ್ತ್ರಿಂಶಃ ಸನ್ನದ್ಧಃ ಪ್ರಾಂಜಲಿರ್ಯುವಾ |
ನ್ಯವೇದಯದ್ ಹೃಷೀಕೇಶಮುಪಾಯಾತಂ ಮಹಾತ್ಮನೇ ॥ 32 ॥

ಅಭಿಪ್ರಣಮ್ಯ ಶಿರಸಾ ದ್ವಾಃಸ್ಥೋ ಧರ್ಮಾತ್ಮಜಾಯ ತು |
ಅನಂತರ ಸಾರಥಿಯು ಅವನನ್ನು ಸಮೀಪಿಸಿ, ಭೂಮಿಯ ಮೇಲೆ ಮಂಡಿಗಳನ್ನು ಊರಿ, ಜಗತ್ಪತಿಯೂ ವಂದನೀಯನೂ ಆದ ಅವನನ್ನು ಶಿರಸಾ ವಂದಿಸಿ, ಕುಂಡಲಗಳನ್ನು ಧರಿಸಿ, ಸೊಂಟಕ್ಕೆ ಖಡ್ಗವನ್ನು ಕಟ್ಟಿ ಸನ್ನದ್ಧನಾದ ಯುವಕನಾದ ಅವನು ಕೈಗಳನ್ನು ಮುಗಿದು, ಕೃಷ್ಣನು ಬಂದಿದ್ದಾನೆಂದು ಆ ಮಹಾತ್ಮನಿಗೆ ತಿಳಿಸಿದನು. ದ್ವಾರ ಪಾಲಕನೂ ಸಹ ಬಂದು ಯುಧಿಷ್ಠಿರನಿಗೆ ನಮಸ್ಕರಿಸಿ ಕೃಷ್ಣನ ಆಗಮನವನ್ನು ತಿಳಿಸಿದನು.
ತಮಬ್ರವೀತ್ ತತೋ ರಾಜಾ ಸ್ವಾಗತೇನೈವ ಮಾಧವಃ ॥ 33 ॥
ಪ್ರವೇಶ್ಯತಾಂ ಸಮೀಪಂ ಮೇ ಕಿಮರ್ಥಂ ಪ್ರವಿಲಂಬಸೇ |
ಅರ್ಘ್ಯಂ ಚೈವಾಸನಂ ತಸ್ಮೈ ದೀಯತಾಂ ಪರಮಾರ್ಚಿತಮ್ ॥ 34 ॥
ರಾಜನು ಅವನನ್ನು ಕುರಿತು, ಏಕೆ ತಡ ಮಾಡುತ್ತಿದ್ದೀಯೆ? ಸ್ವಾಗತಪೂರ್ವಕವಾಗಿ ಮಾಧವನನ್ನು ನನ್ನ ಬಳಿಗೆ ಕರೆದುಕೊಂಡು ಬಾ. ಅವನಿಗೆ ಬಹಳ ಶ್ರೇಷ್ಠವಾದ ಅರ್ಘ್ಯ ಮತ್ತು ಆಸನವನ್ನು ಕೊಡುವವರಾಗಿ ಎಂದು ಹೇಳಿದನು.
ಸಂಜಯಃ
ತತಃ ಪ್ರವೇಶ್ಯ ವಾರ್ಷ್ಣೇಯಮುಪವೇಶ್ಯ ವರಾಸನೇ |
ಸತ್ಕೃತ್ಯ ಸತ್ಕೃತಸ್ತೇನ ಪರ್ಯಪೃಚ್ಛದ್ ಯುಧಿಷ್ಠಿರಃ ॥ 35 ॥
ತತೋ ಯುಧಿಷ್ಠಿರೋ ರಾಜಾ ಪ್ರತಿನಂದ್ಯ ಜನಾರ್ದನಮ್ |
ಉವಾಚ ಪರಮಃ ಪ್ರೀತಃ ಕೌಂತೇಯೋ ದೇವಕೀಸುತಮ್ ॥ 36 ॥
ಸಂಜಯ ಅನಂತರ ಕೃಷ್ಣನು ಒಳಗೆ ಬರುವಂತೆ ಮಾಡಿ, ಅವನನ್ನು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ, ಅವನನ್ನು ಸತ್ಕರಿಸಿ, ತಾನೂ ಅವನಿಂದ ಸತ್ಕೃತನಾಗಿ ಯುಧಿಷ್ಠಿರನು ಕುಶಲ ಪ್ರಶ್ನೆಯನ್ನು ಮಾಡಿದನು. ಯುಧಿಷ್ಠಿರನು ಜನಾರ್ದನನನ್ನು ಅಭಿನಂದಿಸಿ, ಬಹಳ ಸಂತೋಷದಿಂದ ಕೂಡಿದವನಾಗಿ, ದೇವಕೀಪುತ್ರನನ್ನು ಕುರಿತು ಮಾತನಾಡಿದನು.
ಸುಖೇನ ರಜನೀ ವ್ಯುಷ್ಟಾ ಕಚ್ಚಿತ್ ತೇ ಮಧುಸೂದನ |
ಕಚ್ಚಿತ್ ಜ್ಞಾನಾನಿ ಸರ್ವಾಣಿ ಪ್ರಸನ್ನಾನಿ ಮಹಾಮತೇ ॥ 37 ॥
ಎಲೈ ಮಧುಸೂದನನೇ, ರಾತ್ರಿಯು ನಿನಗೆ ಸುಖವಾಗಿ ಕಳೆಯಿತಷ್ಟೆ? ಎಲೈ ಮಹಾಮತಿಯೇ, ನಿನ್ನ ಎಲ್ಲ ಇಂದ್ರಿಯಗಳೂ ಪ್ರಸನ್ನವಾಗಿವೆಯಷ್ಟೆ? (ಎಂದು ಕೇಳಿದನು).
ವಾಸುದೇವೋಽಪಿ ತದ್ ಯುಕ್ತಂ ಪರ್ಯಪೃಚ್ಛದ್ ಯುಧಿಷ್ಠಿರಮ್ |
ದರ್ಶನಾದೇವ ತೇ ಸೌಮ್ಯ ನ ಕಿಂಚಿದಶುಭಂ ಮಮ ॥ 38 ॥
ಕೃಷ್ಣನೂ ಸಹ ಆ ಸಮಯಕ್ಕೆ ಯೋಗ್ಯವಾಗಿ ಎಲೈ ಸೌಮ್ಯನೇ, ನಿನ್ನ ದರ್ಶನದಿಂದಲೇ ನನಗೆ ಎಲ್ಲ ಅಶುಭವೂ ನಷ್ಟವಾಗಿದೆ ಎಂದು ಹೇಳಿ, ಆ ಸಮಯಕ್ಕೆ ಯೋಗ್ಯವಾದ ಕುಶಲ ಪ್ರಶ್ನೆಯನ್ನು ಮಾಡಿದನು.
ತತೋ ವೈ ಪ್ರಕೃತೀಃ ಸರ್ವಾ ನ್ಯವೇದಯದುಪಸ್ಥಿತಾಃ |
ಅನುಜ್ಞಾತಶ್ಚ ರಾಜ್ಞಾ ಸ ಪ್ರಾವೇಶಯತ ತಂ ಜನಮ್ ॥ 39 ॥
ಅನಂತರ ಎಲ್ಲ ಪ್ರಜೆಗಳೂ ಬಂದಿದ್ದಾರೆಂದು ರಾಜನಿಗೆ ನಿವೇದಿಸಲಾಯಿತು. ರಾಜನ ಅನುಮತಿಯನ್ನು ಪಡೆದು ಅವರೆಲ್ಲರನ್ನೂ ಒಳಗೆ ಕರೆತಂದರು.
ವಿರಾಟಂ ಭೀಮಸೇನಂ ಚ ಧೃಷ್ಟದ್ಯುಮ್ನಂ ಚ ಸಾತ್ಯಕಿಮ್ |
ಶಿಖಂಡಿನಂ ಚೇಕಿತಾನಂ ಧೃಷ್ಟಕೇತುಂ ಯಮಾವಪಿ ॥ 40 ॥
ಕೇಕಯಾನ್ ಸೃಂಜಯಾನ್ ಮಾತ್ಸ್ಯಾನ್ ಪಾಂಚಾಲಾಂಶ್ಚಾಪಿ ರಾಜಕಾನ್ |
ಯುಯುತ್ಸುಂ ಚೈವ ಕೌರವ್ಯಂ ದ್ರೌಪದೇಯಾನ್ ಘಟೋತ್ಕಚಮ್ ॥ 41 ॥
ಏತಾಂಶ್ಚ ಸುಹೃದಶ್ಚಾನ್ಯಾನ್ ದರ್ಶಯಾಮಾಸ ಪಾಂಡವಮ್ ॥ 42 ॥
ವಿರಾಟ, ಭೀಮಸೇನ, ಧೃಷ್ಟದ್ಯುಮ್ನ, ಸಾತ್ಯಕಿ, ಶಿಖಂಡಿ, ಚೇಕಿತಾನ, ಧೃಷ್ಟಕೇತು, ನಕುಲ-ಸಹದೇವರು, ಕೇಕಯರು, ಸೃಂಜಯರು, ಮಾತ್ಸ್ಯರು, ಪಾಂಚಾಲರು (ಮೊದಲಾದ ರಾಜರನ್ನೂ), ಕುರುವಂಶದ ಯುಯುತ್ಸು, ದ್ರೌಪದಿಯ ಪುತ್ರರು, ಘಟೋತ್ಕಚ ಇವರನ್ನೂ ಮತ್ತು ಇನ್ನೂ ಅನೇಕ ಸುಹೃದರನ್ನೂ ಯುಧಿಷ್ಠಿರನಿಗೆ ತೋರಿಸಿ ನಿವೇದಿಸಿದರು.
ಅನುಜ್ಞಾತಾಶ್ಚ ಪಾರ್ಥೇನ ಸ್ವಾಸೀನಾ ಆಸನೇಷು ತೇ |
ಸರ್ವೇಷ್ವಥ ಪರಾರ್ಘ್ಯೇಷು ಯಥಾರ್ಹಂ ವಂದ್ಯ ಪಾಂಡವಮ್॥43॥
ಯುಧಿಷ್ಠಿರನಿಂದ ಅನುಜ್ಞೆಯನ್ನು ಪಡೆದು ಅವರು ಯುಧಿಷ್ಠಿರನನ್ನು ವಂದಿಸಿ, ತಮ ತಮಗೆ ಯೋಗ್ಯವಾದ ಶ್ರೇಷ್ಠವಾದ ಆಸನಗಳಲ್ಲಿ ಕುಳಿತುಕೊಂಡರು.
ಏಕಸ್ಮಿನ್ನಾಸನೇ ವೀರಾವುಪವಿಷ್ಟೌ ಮಹಾಬಲೌ |
ಕೃಷ್ಣಶ್ಚ ಯುಯುಧಾನಶ್ಚ ವೇದ್ಯಾಮಿವ ಹುತಾಶನೌ ॥ 44 ॥
ವೀರರಾದ, ಮಹಾಬಲರಾದ ಕೃಷ್ಣ ಮತ್ತು ಸಾತ್ಯಕಿಯರು ಒಂದೇ ವೇದಿಯಲ್ಲಿ ಇರುವ ಎರಡು ಅಗ್ನಿಗಳಂತೆ ಒಂದೇ ಆಸನದಲ್ಲಿ ಕುಳಿತುಕೊಂಡರು.
ತತೋ ಯುಧಿಷ್ಠಿರಸ್ತೇಷಾಂ ಶೃಣ್ವತಾಂ ಮಧುಸೂದನಮ್ |
ಅಬ್ರವೀತ್ ಪುಂಡರೀಕಾಕ್ಷಂ ಸತ್ಯಂ ಪಥ್ಯಂ ಪ್ರಿಯಂ ವಚಃ ॥ 45 ॥
ಅನಂತರ ಯುಧಿಷ್ಠಿರನು ಅವರೆಲ್ಲರೂ ಕೇಳುವಂತೆಯೇ ಪುಂಡರೀಕಾಕ್ಷನನ್ನು ಕುರಿತು ಸತ್ಯವೂ, ಪಥ್ಯವೂ ಮತ್ತು ಹಿತವೂ ಆದ ಮಾತನ್ನು ಆಡಿದನು.

ಭವಂತಂ ವಯಮಾಶ್ರಿತ್ಯ ಸಹಸ್ರಾಕ್ಷಮಿವಾಮರಾಃ |
ಪ್ರಾರ್ಥಯಾಮೋ ಜಯಂ ಚೈವ ಶಾಶ್ವತಾನಿ ಸುಖಾನಿ ಚ ॥ 46 ॥
ದೇವತೆಗಳು ಇಂದ್ರನನ್ನು ಆಶ್ರಯಿಸಿದಂತೆ ನಾವು ನಿನ್ನನ್ನು ಆಶ್ರಯಿಸಿ ಯುದ್ಧದಲ್ಲಿ ಜಯವನ್ನು ಮತ್ತು ಶಾಶ್ವತವಾದ ಸುಖವನ್ನು ಆಶಿಸುತ್ತೇವೆ.
ತ್ವಂ ಹಿ ರಾಜ್ಯವಿನಾಶಂ ಚ ದ್ವಿಷದ್ಭಿಶ್ಚ ನಿರಾಕ್ರಿಯಾಮ್ |
ಕ್ಲೇಶಾಂಶ್ಚ ವಿವಿಧಾನ್ ಕೃಷ್ಣ ಸರ್ವಂ ತದುಪವೇತ್ಥ ನಃ ॥ 47 ॥
ಎಲೈ ಕೃಷ್ಣನೇ, ನೀನು ನಾವು ರಾಜ್ಯವನ್ನು ಕಳೆದುಕೊಂಡ ರೀತಿಯನ್ನೂ, ಶತ್ರುಗಳಿಂದ ನಮಗೆ ಉಂಟಾದ ತಿರಸ್ಕಾರವನ್ನೂ ಮತ್ತು ನಾವು ಅನುಭವಿಸಿದ ವಿವಿಧ ಕ್ಲೇಶವೆಲ್ಲವನ್ನೂ ತಿಳಿದಿದ್ದೀಯೆ.
ತ್ವಯಿ ಸರ್ವೇಶ ಸರ್ವೇಷಾಮಸ್ಮಾಕಂ ಭಕ್ತವತ್ಸಲ |
ಸುಖಮಾಯತ್ತಮತ್ಯಂತಂ ಶತ್ರೂಣಾಂ ಚ ಪರಾಜಯಃ ॥ 48 ॥
ಎಲೈ ಸರ್ವೇಶನೇ, ಭಕ್ತವತ್ಸಲನೇ, ನಮ್ಮ ಅತ್ಯಂತ ಸುಖ ಮತ್ತು ಶತ್ರುಗಳ ಪರಾಜಯ ಎಲ್ಲವೂ ನಿನ್ನನ್ನು ಅವಲಂಬಿಸಿದೆ.
ಸ ತಥಾ ಕುರು ವಾರ್ಷ್ಣೇಯ ಯಥಾ ತ್ವಯಿ ಮತಂ ಮಮ |
ಅರ್ಜುನಸ್ಯ ಯಥಾ ಸತ್ಯಾ ಪ್ರತಿಜ್ಞಾ ಚ ಚಿಕೀರ್ಷಿತಾ ॥ 49 ॥
ಎಲೈ ವಾರ್ಷ್ಣೇಯನೇ, ನನ್ನ ಮನಸ್ಸಿನಲ್ಲಿ ಹೇಗಿದೆಯೋ ಅದರಂತೆ ಎಲ್ಲವನ್ನೂ ಮಾಡು. ಅರ್ಜುನನ ಪ್ರತಿಜ್ಞೆಯು ಸತ್ಯವಾಗುವಂತೆ ಮಾಡು.
ಸ ಭವಾಂಸ್ತಾರಯತ್ವಸ್ಮಾದ್ ದುಃಖಾಮರ್ಷಮಹಾರ್ಣವಾತ್ |
ಪಾರಂ ತಿತೀರ್ಷತಾಮದ್ಯ ಪ್ಲವೋಽಸ್ಮಾಕಂ ಭವಾಚ್ಯುತ ॥ 50 ॥
ನಮ್ಮನ್ನು ಈ ದುಃಖ-ರೋಷ ಮಹಾಸಾಗರದಿಂದ ಪಾರು ಮಾಡು. ಎಲೈ ಅಚ್ಯುತನೇ, ಈ ಸಾಗರವನ್ನು ದಾಟಲು ಇಚ್ಛಿಸುವ ನಮಗೆ ನೀನು ದೋಣಿಯಾಗು.
ನಹಿ ತತ್ ಕುರುತೇ ಯೋದ್ಧಃ ಕಾರ್ತವೀರ್ಯಸಮೋಽಪಿ ಯಃ |
ಯುಧಿ ಯತ್ ಕುರುಷೇ ಕೃಷ್ಣ ಸಾರಥ್ಯಂ ತ್ವಂ ಸಮಾಸ್ಥಿತಃ ॥ 51 ॥
ಎಲೈ ಕೃಷ್ಣನೇ, ನೀನು ಸಾರಥ್ಯವನ್ನು ವಹಿಸಿ ಎಂತಹ ಕಾರ್ಯವನ್ನು ಮಾಡುತ್ತೀಯೋ ಅಂತಹ ಕಾರ್ಯವನ್ನು ಕಾರ್ತವೀರ್ಯನಿಗೆ ಸಮನಾದ ಯೋಧನೂ ಮಾಡಲಾರ.
ಯಥಾ ವೈ ಕುರುತೇ ಕೃಷ್ಣ ಸಾರಥಿರ್ಯತ್ನಮಾಸ್ಥಿತಃ |
ಯಥೈವ ಸರ್ವಾಸ್ವಾಪತ್ಸು ಪಾಸಿ ವೃಷ್ಣೀನ್ ಜನಾರ್ದನ ॥ 52 ॥
ತಥೈವಾಸ್ಮಾನ್ ಮಹಾಬಾಹೋ ವೃಜಿನಾತ್ ತ್ರಾತುಮರ್ಹತಿ |
ತ್ವಮಗಾಧೇ ಪ್ಲವೇ ಮಗ್ನಾನ್ ಪಾಂಡವಾನ್ ಕುರುಸಾಗರೇ |
ತಾರಯಾದ್ಯಾಗ್ರತೋ ಭೂತ್ವಾ ಶಂಖಚಕ್ರಗದಾಧರ ॥ 53 ॥
ಎಲೈ ಕೃಷ್ಣನೇ, ಹೇಗೆ ಪ್ರಯತ್ನಪೂರ್ವಕವಾಗಿ ಸಾರಥ್ಯವನ್ನು ನೀನು ಮಾಡುವಿಯೋ, ಎಲೈ ಜನಾರ್ದನನೇ, ಹಾಗೆಯೇ ವೃಷ್ಣಿಗಳನ್ನು ಎಲ್ಲ ಆಪತ್ತುಗಳಿಂದ ರಕ್ಷಿಸುತ್ತೀಯೆ. ಎಲೈ ಮಹಾಬಾಹುವೇ, ಹಾಗೆಯೇ ನಮ್ಮನ್ನೂ ಸಹ ಈ ಕಷ್ಟದಿಂದ ರಕ್ಷಿಸಬೇಕು. ಎಲೈ ಶಂಖಚಕ್ರಗದಾಧರನೇ, ಅಗಾಧವಾದ ಮತ್ತು ನೌಕಾರಹಿತವಾದ ಕುರುಸಾಗರದಲ್ಲಿ ಮುಳುಗಿದ ಪಾಂಡವರಾದ ನಮ್ಮನ್ನು ನೀನು ಮುಂದೆ ನಿಂತು ದಾಟಿಸುವವನಾಗು.
ನಮಸ್ತೇ ದೇವದೇವೇಶ ಸನಾತನ ವಿಶಾತನ |
ವಿಷ್ಣೋ ಜಿಷ್ಣೋ ಹೃಷೀಕೇಶ ವೈಕುಂಠ ಪುರುಷೋತ್ತಮ ॥ 54 ॥
ನಾರದಸತ್ವಂ ಸಮಾಚಖ್ಯೌ ಪುರಾಣಮೃಷಿಸತ್ತಮಮ್ |
ವರದಂ ಶಾರ್ಙ್ಗಿಣಂ ದೇವಂ ತತ್ ಸತ್ಯಂ ಕುರು ಮಾಧವ ॥ 55 ॥
ಎಲೈ ದೇವದೇವೇಶನೇ, ಸನಾತನನೇ, ಶತ್ರುಸಂಹಾರಕನೇ, ವಿಷ್ಣುವೇ, ಜಯಶೀಲನೇ, ಹೃಷೀಕೇಶನೇ, ವೈಕುಂಠನೇ, ಪುರುಷೋತ್ತಮನೇ, ನಿನಗೆ ನಮಸ್ಕಾರ. ನಾರದರು ನೀನು ಸನಾತನನಾದ ಶ್ರೇಷ್ಠ ಋಷಿ ಎಂದೂ, ವರದನೆಂದೂ, ಶಾರ್ಙ್ಗ ಧನುರ್ಧಾರಿಯಾದ ದೇವನೆಂದೂ ಹೇಳಿದ್ದಾರೆ. ಎಲೈ ಮಾಧವನೇ, ಅವರ ಮಾತನ್ನು ಸತ್ಯವನ್ನಾಗಿ ಮಾಡು.
ಸಂಜಯಃ
ಇತ್ಯುಕ್ತಃ ಪುಂಡರೀಕಾಕ್ಷೋ ಧರ್ಮರಾಜೇನ ಸಂಸದಿ |
ತತೋ ಮೇಘಸ್ವನೋ ವಾಗ್ಮೀ ಪ್ರತ್ಯುವಾಚ ಯುಧಿಷ್ಠಿರಮ್ ॥ 56 ॥
ಸಂಜಯ ಹೀಗೆ ಧರ್ಮರಾಜನಿಂದ ಸಭೆಯಲ್ಲಿ ಹೇಳಲ್ಪಟ್ಟ ವಾಗ್ಮಿಯಾದ ಪುಂಡರೀಕಾಕ್ಷನು ಯುಧಿಷ್ಠಿರನನ್ನು ಕುರಿತು ಮೇಘಗಂಭೀರವಾದ ತನ್ನ ಸ್ವರದಿಂದ ಉತ್ತರವನ್ನು ಕೊಟ್ಟನು.
ಸಮಗ್ರೇಷ್ವಪಿ ಲೋಕೇಷು ನ ಹ್ಯನ್ಯೋಽಸ್ತಿ ತಥಾವಿಧಃ |
ಶರಾಸನಧರಃ ಕಶ್ಚಿತ್ ಸತ್ಯಂ ಯಾದೃಗ್ ಧನಂಜಯಃ ॥ 57 ॥
ಎಲ್ಲ ಲೋಕಗಳಲ್ಲಿಯೂ ಧನಂಜಯನಿಗೆ ಸದೃಶನಾದ ಧನುರ್ಧಾರಿಯಾದವನು ಇನ್ನೊಬ್ಬನು ಇಲ್ಲ. ಇದು ಸತ್ಯವಾದುದು.
ವೀರ್ಯವಾನಸ್ತ್ರಸಂಪನ್ನಃ ಪರಾಕ್ರಾಂತೋ ಮಹಾಬಲಃ |
ಯುದ್ಧಶೌಂಡಃ ಸದಾಽಮರ್ಷೀ ತೇಜಸ್ವೀ ವಿಗತಕ್ಲಮಃ ॥ 58 ॥
ಅರ್ಜುನನು ವೀರ್ಯವಂತನು, ಅಸ್ತ್ರಸಂಪನ್ನನಾದವನು, ಪರಾಕ್ರಮಶಾಲಿ- ಯಾದವನು, ಮಹಾಬಲವುಳ್ಳವನು,

ಯುದ್ಧಕುಶಲನಾದವನು, ಶತ್ರುಗಳ ಮೇಲೆ ಸದಾ ರೋಷವುಳ್ಳವನು, ತೇಜಸ್ವಿಯಾದವನು ಮತ್ತು ಶ್ರಮರಹಿತನಾದವನು.
ಸ ಯುವಾ ವೃಷಭಸ್ಕಂಧೋ ದೀರ್ಘಬಾಹುರ್ಮಹಾಧನುಃ |
ಸಿಂಹದ್ವಿರದವಿಕ್ರಾಂತೋ ದ್ವಿಷತಃ ಪ್ರಮಥಿಷ್ಯತಿ ॥ 59 ॥
ಯುವಕನೂ, ವೃಷಭಸ್ಕಂಧನೂ, ದೀರ್ಘಬಾಹುವೂ, ಮಹಾಧನುರ್ಧಾರಿಯೂ, ಸಿಂಹಗಜವಿಕ್ರಮವನ್ನು ಹೊಂದಿದವನೂ ಆದ ಅವನು ಶತ್ರುಗಳನ್ನು ವಿನಾಶಗೊಳಿಸುವನು.
ಅಹಂ ಚ ತತ್ ಕರಿಷ್ಯಾಮಿ ಯಥಾ ಕುಂತೀಸುತೋಽರ್ಜುನಃ |
ಧಾರ್ತರಾಷ್ಟ್ರಸ್ಯ ಸೈನ್ಯಾನಿ ಧಕ್ಷ್ಯತ್ಯಗ್ನಿರಿವಾಶ್ರಯಮ್ ॥ 60 ॥
ಅದ್ಯ ತಂ ಪಾಪಕರ್ಮಾಣಂ ಕ್ಷುದ್ರಂ ಸೌಭದ್ರಘಾತಿನಮ್ |
ಅಪುನರ್ದರ್ಶನಂ ಮಾರ್ಗಮಿಷುಭಿಃ ಕ್ಷೇಪ್ಸ್ಯತೇಽರ್ಜುನಃ ॥ 61 ॥
ಕುಂತೀಸುತನಾದ ಅರ್ಜುನನು ಅಗ್ನಿಯು ತನ್ನ ಆಶ್ರಯವನ್ನು ದಹಿಸಿದಂತೆ ದುರ್ಯೋಧನನ ಸೈನ್ಯವನ್ನು ದಹಿಸುವಂತೆ ನಾನು ಮಾಡುವೆನು. ಈ ದಿನ ಸುಭದ್ರೆಯ ಮಗನಾದ ಅಭಿಮನ್ಯುವನ್ನು ಕೊಂದು ಪಾಪಕರ್ಮವನ್ನು ಮಾಡಿದ, ಕ್ಷುದ್ರನಾದ ಸೈಂಧವನನ್ನು ತನ್ನ ಬಾಣಗಳಿಂದ ಅರ್ಜುನನು ಪುನರ್ದರ್ಶನವಿಲ್ಲದಂತಹ ಮಾರ್ಗದಲ್ಲಿ ಕಳುಹಿಸುವನು.
ಅತ್ಯಂತಂ ಪಾಪಕರ್ಮಾಣಂ ರೌದ್ರಂ ಸೈಂಧವಕಂ ನೃಪ |
ಶರೈರ್ಗಾಂಡೀವನಿರ್ಮುಕ್ತೈರ್ನಿಶಿತೈರ್ಧಕ್ಷ್ಯತೇಽರ್ಜುನಃ ॥ 62 ॥
ಎಲೈ ರಾಜನೇ, ಅತ್ಯಂತ ಪಾಪಕರ್ಮವನ್ನು ಮಾಡಿದವನೂ, ಭೀಕರನೂ ಆದ ಕೆಟ್ಟ ಸೈಂಧವನನ್ನು ಅರ್ಜುನನು ಗಾಂಡೀವದಿಂದ ನಿರ್ಮುಕ್ತವಾದ ಹರಿತವಾದ ಬಾಣಗಳಿಂದ ದಹಿಸುವನು.
ಅದ್ಯ ಕಾಕಾಶ್ಚ ಗೃಧ್ರಾಶ್ಚ ಶ್ಯೇನಾ ಗೋಮಾಯವೋ ಬಲಾಃ |
ಭಕ್ಷಯಿಷ್ಯಂತಿ ಮಾಂಸಾನಿ ಯೇ ಚಾನ್ಯೇ ಪುರುಷಾದಕಾಃ ॥ 63 ॥
ಈ ದಿನ ಕಾಗೆಗಳು, ಹದ್ದುಗಳು, ಗಿಡಗಗಳು, ನರಿಗಳು, ಬಲಗಳು ಮತ್ತು ಉಳಿದ ಅನೇಕ ರಾಕ್ಷಸಾದಿಗಳು ಅವನ ಮಾಂಸವನ್ನು ಭಕ್ಷಿಸುವವು.
ಯದ್ಯಸ್ಯ ಲೋಕಾ ಗೋಪ್ತಾರಃ ಸಸುರಾಸುರಮಾನವಾಃ |
ರಾಜಧಾನೀಂ ಯಮಸ್ಯಾದ್ಯ ಹತೋ ಯಾಸ್ಯತಿ ದುರ್ಮತಿಃ ॥ 64 ॥
ಈ ದಿನ ಅವನಿಗೆ ಸುರಾಸುರ ಮಾನವರಿಂದ ಸಹಿತವಾದ ಮೂರು ಲೋಕಗಳು ರಕ್ಷಣೆಗಾಗಿ ಬಂದರೂ ದುರ್ಮತಿಯಾದ ಅವನು ಯಮನ ರಾಜಧಾನಿಗೆ ಹೋಗುವನು.
ನಿಹತ್ಯ ಸೈಂಧವಂ ಜಿಷ್ಣುರದ್ಯ ತ್ವಾಮನುಯಾಸ್ಯತಿ |
ವಿಶೋಕೋ ವಿಜ್ವರೋ ರಾಜನ್ ಭವ ಭೂತಿಪುರಸ್ಕೃತಃ ॥ 65 ॥
ಎಲೈ ರಾಜನೇ, ಅರ್ಜುನನು ಈ ದಿನ ಸೈಂಧವನನ್ನು ಕೊಂದು ನಿನ್ನ ಬಳಿಗೆ ಬರುವನು. ಶೋಕವನ್ನು ಮತ್ತು ಆತಂಕವನ್ನು ತೊರೆದು ಸಂಪದ್ಯುಕ್ತನಾಗಿರು (ಎಂದು ಹೇಳಿದನು).
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತಾರನೆಯ ಅಧ್ಯಾಯ
ಸೈಂಧವನ ಬಳಿ ಹೋಗುವ ಅರ್ಜುನನಿಂದ ಸಾತ್ಯಕಿಯನ್ನು ಕುರಿತು
ಯುಧಿಷ್ಠಿರನ ರಕ್ಷಣೆಯ ಆದೇಶ.
ಸಂಜಯಃ
ತಥಾ ಸಂಭಾಷತಾಂ ತೇಷಾಂ ಪ್ರಾದುರಾಸೀದ್ ಧನಂಜಯಃ |
ದಿದೃಕ್ಷುರ್ಭರತಶ್ರೇಷ್ಠಂ ರಾಜಾನಂ ಸಸುಹೃದ್ಗಣಮ್ ॥ 1 ॥
ಸಂಜಯ ಅವನು ಹಾಗೆ ಮಾತನಾಡುತ್ತಿರುವಾಗ ಭರತಶ್ರೇಷ್ಠನಾದ ರಾಜನನ್ನು ಮತ್ತು ಅವನ ಸುಹೃದ್ಗಣವನ್ನು ನೋಡಲು ಬಯಸಿ ಅರ್ಜುನನು ಬಂದನು.
ತಂ ಪ್ರವಿಷ್ಟಂ ಶುಭಾಂ ಕಕ್ಷ್ಯಾಮಭಿವಂದ್ಯಾಗ್ರತಃ ಸ್ಥಿತಮ್ |
ಸಮುತ್ಥಾಯಾಸನಾತ್ ಪ್ರೇಮ್ಣಾ ಸಸ್ವಜೇ ಪಾಂಡವೋಽರ್ಜುನಮ್ ॥2॥
ಶುಭವಾದ ಬಾಹ್ಯಕಕ್ಷೆಯನ್ನು ಪ್ರವೇಶಿಸಿ, ನಮಸ್ಕರಿಸಿ ಎದುರಿಗೆ ನಿಂತ ಅರ್ಜುನನನ್ನು ಯುಧಿಷ್ಠಿರನು ತನ್ನ ಆಸನದಿಂದ ಎದ್ದು ಪ್ರೀತಿಯಿಂದ ಆಲಿಂಗಿಸಿದನು.
ಮೂರ್ಧ್ನಿ ಚೈನಮುಪಾಘ್ರಾಯ ಪರಿಮೃಜ್ಯ ಚ ಪಾಣಿನಾ |
ಆಶಿಷಃ ಪರಮಾಃ ಪ್ರೋಚ್ಯ ಸ್ಮಯಮಾನೋಽಭ್ಯಭಾಷತ ॥ 3 ॥
ಅವನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ, ತನ್ನ ಹಸ್ತದಿಂದ ಅವನನ್ನು ನೇವರಿಸಿ, ಶ್ರೇಷ್ಠವಾದ ಆಶೀರ್ವಾದದ ಮಾತುಗಳನ್ನು ಆಡಿ ನಗುತ್ತಾ ಅವನನ್ನು ಕುರಿತು ಮಾತನಾಡಿದನು.
ವ್ಯಕ್ತಮರ್ಜುನ ಸಂಗ್ರಾಮೇ ಧ್ರುವಸ್ತವ ಜಯೋ ಮಹಾನ್ |

ತಾದೃಗ್ರೂಪಾ ಹಿ ತ್ವಚ್ಛಾಯಾ ಪ್ರಸನ್ನಶ್ಚ ಜನಾರ್ದನಃ ॥ 4 ॥
ಎಲೈ ಅರ್ಜುನನೇ, ಯುದ್ಧದಲ್ಲಿ ನಿನಗೆ ಉಂಟಾಗಲಿರುವ ದೊಡ್ಡ ಜಯವು ಸ್ಪಷ್ಟವಾಗಿ ತೋರುತ್ತಿದೆ. ಏಕೆಂದರೆ ನಿನ್ನ ಕಾಂತಿಯು ಆ ರೀತಿಯಿದೆ ಮತ್ತು ಕೃಷ್ಣನು ಪ್ರಸನ್ನನಾಗಿದ್ದಾನೆ.
ಸಂಜಯಃ
ತಮಬ್ರುವೀತ್ ತತೋ ಜಿಷ್ಣುರ್ಮಹದಾಶ್ಚರ್ಯಮುತ್ತಮಮ್ ।
ದೃಷ್ಟವಾನಸ್ಮಿ ಭದ್ರಂ ತೇ ಕೇಶವಸ್ಯ ಪ್ರಸಾದಜಮ್ ॥ 5 ॥
ಸಂಜಯ ಆಗ ಅರ್ಜುನನು ಅವನನ್ನು ಕುರಿತು, ನಿನಗೆ ಮಂಗಳವಾಗಲಿ. ಕೃಷ್ಣನ ಅನುಗ್ರಹದಿಂದ ನಾನು ಬಹಳ ಮಹತ್ವದ ಮತ್ತು ಶ್ರೇಷ್ಠವಾದ ಆಶ್ಚರ್ಯವನ್ನು ನೋಡಿದೆನು ಎಂದು ಹೇಳಿದನು.
ತತಸ್ತತ್ ಕಥಯಾಮಾಸ ಯಥಾದೃಷ್ಟಂ ಧನಂಜಯಃ ।
ಆಶ್ವಾಸನಾರ್ಥಂ ಸುಹೃದಾಂ ತ್ರ್ಯಂಬಕೇಣ ಸಮಾಗಮಮ್ ॥ 6 ॥
ಅನಂತರ ಅರ್ಜುನನು ತನ್ನ ಸುಹೃದರ ಆಶ್ವಾಸನೆಗಾಗಿ ತನಗೆ ಸ್ವಪ್ನದಲ್ಲಿ ಉಂಟಾದ ರುದ್ರದೇವರ ಸಮಾಗಮವನ್ನು ನಿರೂಪಿಸಿದನು.
ತತಃ ಶಿರೋಭಿರವನಿಂ ಸ್ಪೃಷ್ಟ್ವಾ ಸರ್ವೇ ಸುವಿಸ್ಮಿತಾಃ ।
ನಮಸ್ಕೃತ್ಯ ವೃಷಾಂಕಾಯ ಸಾಧು ಸಾಧ್ವಿತ್ಯಥಾಬ್ರುವನ್ ॥ 7 ॥
ಆಗ ಎಲ್ಲರೂ ಬಹಳ ಆಶ್ಚರ್ಯಗೊಂಡು ತಮ್ಮ ಶಿರಸ್ಸನ್ನು ಭೂಮಿಗೆ ಮುಟ್ಟಿಸಿ, ರುದ್ರದೇವರಿಗೆ ನಮಸ್ಕಾರವನ್ನು ಮಾಡಿ ಒಳ್ಳೆಯದು, ಒಳ್ಳೆಯದು ಎಂದು ಹೇಳಿದರು.
ಅನುಜ್ಞಾತಾಸ್ತತಃ ಸರ್ವೇ ಸುಹೃದೋ ಧರ್ಮಸೂನುನಾ ।
ತ್ವರಮಾಣಾಃ ಸುಸನ್ನದ್ಧಾಃ ತುಷ್ಟಾ ಯುದ್ಧಾಯ ನಿರ್ಯಯುಃ ॥ 8 ॥
ಅನಂತರ ಯುಧಿಷ್ಠಿರನಿಂದ ಅನುಮತಿಯನ್ನು ಪಡೆದ ಎಲ್ಲ ಸುಹೃದರೂ ಸಂತುಷ್ಟರಾಗಿ ತ್ವರೆಯಿಂದ ಯುದ್ಧ ಸನ್ನದ್ಧರಾಗಿ ಯುದ್ಧಕ್ಕೆ ಹೊರಟರು.
ಅಭಿವಾದ್ಯ ತು ರಾಜಾನಂ ಯುಯುಧಾನಾಚ್ಯುತಾರ್ಜುನಾಃ ।
ಹೃಷ್ಟಾ ವಿನಿರ್ಯಯುಸ್ತೇ ವೈ ಯುಧಿಷ್ಠಿರನಿವೇಶನಾತ್ ॥ 9 ॥
ಯುಯುಧಾನ, ಕೃಷ್ಣ ಮತ್ತು ಅರ್ಜುನರು ಯುಧಿಷ್ಠಿರನನ್ನು ನಮಸ್ಕರಿಸಿ, ಯುಧಿಷ್ಠಿರನ ಬಿಡಾರದಿಂದ ಸಂತೋಷದಿಂದ ಹೊರಗೆ ಬಂದರು.
ರಥೇನೈಕೇನ ದುರ್ಧರ್ಷೌ ಯುಯುಧಾನಜನಾರ್ದನೌ ।
ಜಗ್ಮತುಃ ಸಹಿತೌ ವೀರಾವರ್ಜುನಸ್ಯ ನಿವೇಶನಮ್ ॥ 10 ॥
ಸೋಲಿಸಲು ಅಸಾಧ್ಯರಾದ, ವೀರರಾದ ಕೃಷ್ಣ ಮತ್ತು ಸಾತ್ಯಕಿಯರು ಒಂದೇ ರಥದಲ್ಲಿ ಕುಳಿತು ಅರ್ಜುನನ ಶಿಬಿರಕ್ಕೆ ಬಂದರು.
ತತ್ರ ಗತ್ವಾ ಹೃಷೀಕೇಶಃ ಕಲ್ಪಯಾಮಾಸ ಶಾಸ್ತ್ರವಿತ್ ।
ರಥಂ ಮಹಾರಥಸ್ಯಾಜೌ ವಾನರರ್ಷಭಲಕ್ಷಣಮ್ ॥ 11 ॥
ಕೃಷ್ಣನು ಅಲ್ಲಿಗೆ ಹೋಗಿ, ಶಾಸ್ತ್ರವಿಧಿಗೆ ಅನುಸಾರವಾಗಿ ಕಪಿಶ್ರೇಷ್ಠ ಧ್ವಜವುಳ್ಳ ಮಹಾರಥವನ್ನು ಸಿದ್ಧಪಡಿಸಿದನು.
ಸ ಮೇಘಸಮನಿರ್ಘೋಷಃ ತಪ್ತಕಾಂಚನಭೂಷಣಃ ।
ಬಭೌ ರಥವರಃ ಕ್ಲ ೃಪ್ತಃ ಶಶೀ ದಿವಸಕೃದ್ ಯಥಾ ॥ 12 ॥
ಮೇಘಘೋಷಕ್ಕೆ ಸಮವಾದ ಘೋಷವನ್ನು ಹೊಂದಿದ, ಪುಟವಿಟ್ಟ ಚಿನ್ನದ ಅಲಂಕಾರದಿಂದ ಸಿದ್ಧಗೊಳಿಸಲ್ಪಟ್ಟ ಶ್ರೇಷ್ಠವಾದ ರಥವು ಸುಹೃದರಿಗೆ ಚಂದ್ರನಂತೆ ಶಾಂತವಾಗಿಯೂ, ಶತ್ರುಗಳಿಗೆ ಸೂರ್ಯನಂತೆ ಉಗ್ರವಾಗಿಯೂ ಶೋಭಿಸಿತು.
ತತಃ ಪುರುಷಶಾರ್ದೂಲಃ ಸಜ್ಜಂ ಸರ್ವಂ ನ್ಯವೇದಯತ್ ।
ರಥಂ ಪುರುಷಸಿಂಹಸ್ಯ ಸಧ್ವಜಂ ಸಪತಾಕಿನಮ್ ॥ 13 ॥
ಅನಂತರ ಪುರುಷಶಾರ್ದೂಲನಾದ ಕೃಷ್ಣನು ಪುರುಷಸಿಂಹನಾದ ಅರ್ಜುನನಿಗೆ ಧ್ವಜಪತಾಕೆಗಳಿಂದ ಕೂಡಿದ ರಥವು ಪೂರ್ಣವಾಗಿ ಸಿದ್ಧವಾಗಿದೆ ಎಂದು ಹೇಳಿದನು.
ಸ ತು ಲೋಕೇ ವರಃ ಪುಂಸಾಂ ಕಿರೀಟೀ ಹೇಮವರ್ಮಧೃಕ್ ।
ಬಾಣೀ ಬಾಣಾಸನೀ ವಾಹಂ ಪ್ರದಕ್ಷಿಣಮವರ್ತತ ॥ 14 ॥
ಲೋಕದಲ್ಲಿ ಪುರುಷಶ್ರೇಷ್ಠನಾದ ಅರ್ಜುನನು ಸುವರ್ಣಕವಚವನ್ನು ಧರಿಸಿ, ಕೈಯಲ್ಲಿ ಧನುಸ್ಸು ಮತ್ತು ಬಾಣಗಳನ್ನು ಹಿಡಿದು ರಥಕ್ಕೆ ಪ್ರದಕ್ಷಿಣೆಯನ್ನು ಮಾಡಿದನು.
ಅಥ ವಿದ್ಯಾವಯೋವೃದ್ಧೈಃ ಕ್ರಿಯಾವದ್ಭಿರ್ಜಿತೇಂದ್ರಿಯೈಃ ।
ಸ್ತೂಯಮಾನೋ ಜಯಾಶೀರ್ಭಿರಾರುರೋಹಾರ್ಜುನೋ ರಥಮ್ ॥
ಅನಂತರ ವಿದ್ಯಾವಂತರೂ, ಸತ್ಕರ್ಮನಿರತರೂ, ಜಿತೇಂದ್ರಿಯರೂ ಆದ ವೃದ್ಧರಿಂದ ಜಯಾಶೀರ್ವಚನಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಅವನು ರಥವನ್ನು ಏರಿದನು.
ಜೈತ್ರೈಃ ಸಾಂಗ್ರಾಮಿಕೈರ್ಮಂತ್ರೈಃ ಪೂರ್ವಮೇವ ರಥೋತ್ತಮಮ್ ।
ಅಭಿಮಂತ್ರಿತಮರ್ಚಿಷ್ಮಾನುದಯಂ ಭಾಸ್ಕರೋ ಯಥಾ ॥ 16 ॥
ಆ ಶ್ರೇಷ್ಠವಾದ ರಥವು ಮೊದಲೇ ಜಯಪ್ರಾಪಕವಾದ ವೇದಮಂತ್ರಗಳಿಂದ ಅಭಿಮಂತ್ರಿತವಾಗಿದ್ದು, ಅರ್ಜುನನು ಏರಿದಾಗ ಕಾಂತಿಯುಕ್ತನಾದ ಸೂರ್ಯನು ಉದಯಪರ್ವತವನ್ನು ಏರಿದಂತೆ ತೋರಿತು.

ಸ ರಥೇ ರಥಿನಾಂ ಶ್ರೇಷ್ಠಃ ಕಾಂಚನೇ ಕಾಂಚನಾವೃತಃ |
ವಿಬಭೌ ಬಹುಲಾರ್ಚಿಷ್ಮಾನ್ ಮೇರಾವಿವ ದಿವಾಕರಃ ॥ 17 ॥
ಸುವರ್ಣಾಲಂಕೃತನಾದ, ರಥಿಶ್ರೇಷ್ಠನಾದ ಅರ್ಜುನನು ಬಹಳ ಕಾಂತಿಯಿಂದ ಕೂಡಿದವನಾಗಿ ಮೇರುಪರ್ವತದಲ್ಲಿನ ಸೂರ್ಯನಂತೆ ಆ ಸುವರ್ಣರಥದಲ್ಲಿ ಬಹಳವಾಗಿ ಶೋಭಿಸಿದನು.
ಅನ್ವಾರೂಢೌ ತತಃ ಪಾರ್ಥಂ ತತ್ರ ಗೋವಿಂದಸಾತ್ಯಕೌ |
ಶರ್ಯಾತಿಯಜ್ಞಂ ಗಚ್ಛಂತಂ ಯಥಾ ಚ್ಯವನಮಶ್ವಿನೌ ॥ 18 ॥
ಅನಂತರ ಶರ್ಯಾತಿಯ ಯಜ್ಞಕ್ಕೆ ಚ್ಯವನರ ಜೊತೆಯಲ್ಲಿ ಹೊರಡುವ ಅಶ್ವಿನಿಗಳಂತೆ ಕೃಷ್ಣ ಮತ್ತು ಸಾತ್ಯಕಿಯರು ಪಾರ್ಥನ ಅನಂತರ ಆ ರಥವನ್ನು ಏರಿದರು.
ಅಥ ಜಗ್ರಾಹ ಗೋವಿಂದೋ ರಥರಶ್ಮೀನ್ ರಥರ್ಷಭಃ |
ಮಾತಲಿರ್ವಾಸವಸ್ಯೇವ ವೃತ್ರಂ ಹಂತುಂ ಪ್ರಯಾಸ್ಯತಃ ॥ 19 ॥
ಅನಂತರ ವೃತ್ರಸಂಹಾರಕ್ಕೆ ಹೋಗುವ ಇಂದ್ರನ ರಥದ ಅಶ್ವಗಳ ಕಡಿವಾಣವನ್ನು ಮಾತಲಿಯು ಹಿಡಿದಂತೆ ರಥಶ್ರೇಷ್ಠನಾದ ಗೋವಿಂದನು ಅರ್ಜುನನ ರಥದ ಅಶ್ವಗಳ ಕಡಿವಾಣವನ್ನು ಹಿಡಿದನು.
ಸ ತಾಭ್ಯಾಂ ಶುಶುಭೇ ಪಾರ್ಥೋ ರಥಪ್ರವರಮಾಸ್ಥಿತಃ |
ಸಹಿತೋ ಬುಧಶುಕ್ರಾಭ್ಯಾಂ ತಮೋ ನಿಘ್ನನ್ ಯಥಾ ಶಶೀ ॥ 20 ॥
ಕೃಷ್ಣ-ಸಾತ್ಯಕಿಯರ ಜೊತೆಯಲ್ಲಿ ಶ್ರೇಷ್ಠ ರಥವನ್ನು ಏರಿದ ಅರ್ಜುನನು ಬುಧ- ಶುಕ್ರರಿಂದ ಸಹಿತನಾದ, ಅಂಧಕಾರಸಂಹಾರಕನಾದ ಚಂದ್ರನಂತೆ ಕಂಗೊಳಿಸಿದನು.
ಸೈಂಧವಸ್ಯ ವಧಪ್ರೇಪ್ಸುಃ ಪ್ರಯಾತಃ ಶತ್ರುಪೂಗಹಾ |
ಸಹಾಂಬುಪತಿಮಿತ್ರಾಭ್ಯಾಂ ಯಥೇಂದ್ರಸ್ತಾರಕಾಮಯೇ ॥ 21 ॥
ತಾರಕಾಮಯವಾದ ಯುದ್ಧದಲ್ಲಿ ಇಂದ್ರನು ಮಿತ್ರ-ವರುಣರ ಜೊತೆಯಲ್ಲಿ ಹೊರಟಂತೆ, ಶತ್ರುಸಂಹಾರವನ್ನು ನಾಶಮಾಡುವ ಅರ್ಜುನನು ಸೈಂಧವನ ವಧೆಯನ್ನು ಬಯಸಿ ಹೊರಟನು.
ತತೋ ವಾದಿತ್ರಘೋಷೈಶ್ಚ ಮಂಗಲ್ಯೈಶ್ಚ ಶುಭೈಃ ಸ್ತವೈಃ |
ಪ್ರಯಾಂತಮರ್ಜುನಂ ಸೂತಾ ಮಾಗಧಾಶ್ಚಾಪಿ ತುಷ್ಟುವುಃ ॥ 22 ॥
ಆಗ ಯುದ್ಧಕ್ಕೆ ಹೊರಡುವ ಅರ್ಜುನನನ್ನು ಸೂತ-ಮಾಗಧರು ಮಂಗಳ ವಾದ್ಯಘೋಷಗಳಿಂದಲೂ, ಶುಭಸ್ತೋತ್ರಗಳಿಂದಲೂ ಕೂಡಿ ಸ್ತೋತ್ರ ಮಾಡಿದರು.
ಸಜಯಾಶೀಃ ಸುಪುಣ್ಯಾಹಃ ಸೂತಮಾಗಧನಿಸ್ವನೈಃ |
ಯುಕ್ತೋ ವಾದಿತ್ರಘೋಷೇಣ ತೇಷಾಂ ಪ್ರೀತಿಕರೋಽಭವತ್ ॥ 23 ॥
ಜಯಾಶೀರ್ವಾದಗಳಿಂದಲೂ, ಬ್ರಾಹ್ಮಣರ ಪುಣ್ಯಾಹವಾಚನಗಳಿಂದಲೂ, ಸೂತ-ಮಾಗಧರ ಸ್ತೋತ್ರ ಘೋಷದಿಂದಲೂ ಮತ್ತು ವಾದ್ಯಗಳ ಘೋಷದಿಂದಲೂ ಕೂಡಿದ ಅರ್ಜುನನು ಅವರಿಗೆ ಸಂತೋಷವನ್ನುಂಟು ಮಾಡಿದನು.
ತಮನುಪ್ರವಣೋ ವಾಯುಃ ಪುಣ್ಯಗಂಧಃ ಶಿವಃ ಶುಚಿಃ |
ವವೌ ಸಂಹರ್ಷಯನ್ ಪಾರ್ಥಂ ದ್ವಿಷತಶ್ಚಾಪಿ ಶೋಷಯನ್ ॥ 24 ॥
ಒಳ್ಳೆಯ ಸುಗಂಧಯುಕ್ತವಾದ, ಮಂಗಳವೂ, ಶುಚಿಯೂ ಆದ ವಾಯುವು ಅರ್ಜುನನನ್ನು ಸಂತೋಷಪಡಿಸುತ್ತಾ, ಶತ್ರುಗಳಿಗೆ ಶೋಕವನ್ನುಂಟು ಮಾಡುತ್ತಾ, ಅವನ ಹಿಂದುಗಡೆಯಿಂದ ಬೀಸಿತು.
ಪ್ರಾದುರಾಸನ್ನಿಮಿತ್ತಾನಿ ಬಹೂನಿ ವಿಜಯಾಯ ಚ |
ಪಾಂಡವಾನಾಂ ತ್ವದೀಯಾನಾಂ ವಿಪರೀತಾನಿ ಮಾರಿಷ ॥ 25 ॥
ಎಲೈ ಪೂಜ್ಯನೇ, ಪಾಂಡವರಿಗೆ ಅವರ ವಿಜಯಸೂಚಕವಾದ ಅನೇಕ ಶಕುನಗಳು ಉಂಟಾದವು. ನಿನ್ನವರಿಗೆ ವಿಪರೀತವಾದ ಅಪಶಕುನಗಳು ಉಂಟಾದವು.
ದೃಷ್ಟ್ವಾರ್ಜುನೋ ನಿಮಿತ್ತಾನಿ ವಿಜಯಸ್ಯ ಪ್ರದಕ್ಷಿಣಮ್ |
ಸೈನ್ಯೇಷು ಸಾತ್ಯಕಂ ಸತ್ಯಮಿದಂ ವಚನಮಬ್ರವೀತ್ ॥ 26 ॥
ಅರ್ಜುನನು ವಿಜಯಕ್ಕೆ ಅನುಕೂಲವಾದ ಶುಭ ಶಕುನಗಳನ್ನು ನೋಡಿ ಸೈನ್ಯದಲ್ಲಿದ್ದ ಸಾತ್ಯಕಿಯನ್ನು ಕುರಿತು ಈ ಸತ್ಯವಾದ ಮಾತನ್ನು ಆಡಿದನು.
ಯಥೈವ ಚ ಪರಂ ಕೃತ್ಯಂ ಸೈಂಧವಸ್ಯ ವಧೇ ಧೃತಮ್ |
ತಥೈವ ಹಿ ಪರಂ ಕೃತ್ಯಂ ಧರ್ಮರಾಜಸ್ಯ ರಕ್ಷಣಮ್ ॥ 27 ॥
ಸೈಂಧವನ ವಧೆಯು ಹೇಗೆ ಮಾಡಬೇಕಾದ ದೊಡ್ಡ ಕಾರ್ಯವಾಗಿದೆಯೋ ಹಾಗೆಯೇ ಯುಧಿಷ್ಠಿರನ ರಕ್ಷಣೆಯೂ ಸಹ ಮಾಡಬೇಕಾದ ದೊಡ್ಡ ಕಾರ್ಯವಾಗಿದೆ.
ಸ ತ್ವಮದ್ಯ ಮಹಾಬಾಹೋ ರಾಜಾನಂ ಪರಿಪಾಲಯ |
ಯಥೈವ ಹಿ ಮಯಾ ಗುಪ್ತಃ ತ್ವಯಾ ಗುಪ್ತಸ್ತಥಾ ಭವೇತ್ ॥ 28 ॥
ಎಲೈ ಮಹಾಬಾಹುವೇ, ಈ ದಿನ ನೀನು ರಾಜನನ್ನು ರಕ್ಷಿಸುವವನಾಗು. ನೀನು ರಕ್ಷಣೆ ಮಾಡಿದರೆ ನಾನು ರಕ್ಷಣೆ ಮಾಡಿದಂತೆಯೇ ಆಗುವುದು.
ತ್ವಯಿ ಚಾಹಂ ಪರಾಶ್ವಸ್ತಃ ಪ್ರದ್ಯುಮ್ನೇ ವಾ ಮಹಾರಥೇ |
ಶಕ್ನುಯಾಂ ಸೈಂಧವಂ ಹಂತುಮನಪೇಕ್ಷೋ ನರರ್ಷಭ ॥ 29 ॥

ಮಹಾರಥನಾದ ಪ್ರದ್ಯುಮ್ನನಲ್ಲಿ ನನಗೆ ಹೇಗೆ ನಂಬಿಕೆಯಿದೆಯೋ ಹಾಗೆ ನಿನ್ನಲ್ಲೂ ನಂಬಿಕೆಯಿದೆ. ಎಲೈ ನರಶ್ರೇಷ್ಠನೇ, ನೀನು ರಾಜನನ್ನು ರಕ್ಷಿಸಿದರೆ ನಾನು ನಿಶ್ಚಿಂತೆಯಿಂದ ಸೈಂಧವನನ್ನು ಕೊಂದೇನು.
ಮಯ್ಯಪೇಕ್ಷಾ ನ ಕರ್ತವ್ಯಾ ಗೋಪ್ತಾಽಯಂ ಮಮ ಕೇಶವಃ |
ರಾಜ್ಞ ಏವ ಪರಾ ಗುಪ್ತಿಃ ಕಾರ್ಯಾ ಸಾತ್ಯಕ ಸರ್ವದಾ ॥ 30 ॥
ನನ್ನ ರಕ್ಷಣೆಯ ವಿಷಯದಲ್ಲಿ ಚಿಂತಿಸುವುದು ಬೇಡ. ಕೃಷ್ಣನು ನನಗೆ ರಕ್ಷಕನಾಗಿದ್ದಾನೆ. ಎಲೈ ಸಾತ್ಯಕಿಯೇ, ಯಾವಾಗಲೂ ಯುಧಿಷ್ಠಿರನನ್ನೇ ಚೆನ್ನಾಗಿ ರಕ್ಷಣೆ ಮಾಡಬೇಕು.
ನ ಹಿ ಯತ್ರ ಮಹಾಬಾಹುರ್ವಾಸುದೇವೋ ವ್ಯವಸ್ಥಿತಃ |
ಕಿಂಚಿದ್ ವ್ಯಾಪದ್ಯತೇ ತತ್ರ ಯತ್ರಾಹಮಪಿ ಚ ಧ್ರುವಮ್ ॥ 31 ॥
ಎಲ್ಲಿ ಮಹಾಬಾಹುವಾದ ವಾಸುದೇವನು ಇದ್ದಾನೆಯೋ ಮತ್ತು ನಾನೂ ಇರುತ್ತೇನೆಯೋ ಅಲ್ಲಿ ಖಂಡಿತವಾಗಿ ಯಾವ ವಿಪತ್ತೂ ಉಂಟಾಗುವ ಸಂದರ್ಭವಿಲ್ಲ.
ಏವಮುಕ್ತಸ್ತು ಪಾರ್ಥೇನ ಸಾತ್ಯಕಃ ಪರವೀರಹಾ |
ತಥೇತ್ಯುಕ್ತ್ವಾಽಗಮತ್ ತತ್ರ ಯತ್ರ ರಾಜಾ ಯುಧಿಷ್ಠಿರಃ ॥ 32 ॥
ಅರ್ಜುನನಿಂದ ಹೀಗೆ ಹೇಳಲ್ಪಟ್ಟ, ಪರವೀರಘಾತಕನಾದ ಸಾತ್ಯಕಿಯು ಹಾಗೆಯೇ ಆಗಲಿ ಎಂದು ಹೇಳಿ ಯುಧಿಷ್ಠಿರನಿದ್ದ ಸ್ಥಳಕ್ಕೆ ಹೊರಟನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್ಸಪ್ತತಿತಮೋಽಧ್ಯಾಯಃ ॥
॥ ಪ್ರತಿಜ್ಞಾಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.

॥ ಪ್ರತಿಜ್ಞಾಪರ್ವ ಸಂಪೂರ್ಣಮ್ ॥
* * * * *
5. ಜಯದ್ರಥವಧಪರ್ವ
ಮಹಾಭಾರತತಾತ್ಪರ್ಯನಿರ್ಣಯ 26ನೇ ಅಧ್ಯಾಯ
ಸ ದಿವ್ಯಮಗ್ರ್ಯಂ ಶಕಟಾಬ್ಜಚಕ್ರಂ
ಕೃತ್ವಾ ಸ್ವಯಂ ವ್ಯೂಹಮುಖೇ ವ್ಯವಸ್ಥಿತಃ
ಪೃಷ್ಠೇ ಕರ್ಣದ್ರೌಣಿಕೃಪೈಃ ಸಶಲ್ಯೈ
ರ್ಜಯದ್ರಥಂ ಗುಪ್ತಮಧಾತ್ ಪರೈಶ್ಚ ॥
ದಿವ್ಯವಾದ ಉತ್ತಮವಾದ ಶಕಟಾಬ್ಜ ಚಕ್ರವ್ಯೂಹವನ್ನು ಮಾಡಿ ದ್ರೋಣ ಸ್ವತಃ ವ್ಯೂಹದ ದ್ವಾರದಲ್ಲಿ ನಿಂತ. ಬೆನ್ನ ಹಿಂದೆ ಕರ್ಣ ಅಶ್ವತ್ಥಾಮ ಕೃಪ ಶಲ್ಯರ ಮತ್ತು ಇತರ ರಕ್ಷಣೆಯಲ್ಲಿ ಜಯದ್ರಥನನ್ನು ನಿಲ್ಲಿಸಿದ.
ಅಥಾರ್ಜುನೋ ದಿವ್ಯರಥೋಪರಿಸ್ಥಿತಃ
ಸುರಕ್ಷಿತಃ ಕೇಶವೇನಾವ್ಯಯೇನ |
ವಿಜಿತ್ಯ ದುರ್ಮರ್ಷಣಮಗ್ರತೋಽಭ್ಯಯಾದ್
ದ್ರೋಣಂ ಸುಧನ್ವಾ ಗುರುಮುಗ್ರಪೌರುಷಃ ॥
ಬಳಿಕ ಭಯಂಕರ ಪೌರುಷಶಾಲಿ ಉತ್ತಮ ಧನುರ್ಧಾರಿ ಅರ್ಜುನ ದಿವ್ಯರಥದ ಮೇಲೆ ನಿಂತು ಅವ್ಯಯನಾದ ಶ್ರೀಕೃಷ್ಣನಿಂದ ರಕ್ಷಿತನಾಗಿ ಮೊದಲಿಗೆ ದುರ್ಮರ್ಷಣನನ್ನು ಪರಾಭವಗೊಳಿಸಿ ಗುರುದ್ರೋಣನನ್ನು ಸಮೀಪಿಸಿದ.
ಪ್ರದಕ್ಷಿಣೀಕೃತ್ಯ ತಮಾಶ್ವಗಾತ್ ತತಃ
ಕಾಲಾತ್ಯಯಂ ತ್ವೇವ ವಿಶಂಕಮಾನಃ |
ರಥಂ ಮನೋವೇಗಮಥಾನಯದ್ಧರಿ-
ರ್ಯಥಾ ಶರಾಃ ಪೇತುರಮುಷ್ಯ ಪೃಷ್ಠತಃ ॥
ಕಾಲಾತಿಕ್ರಮವನ್ನು ಶಂಕಿಸುತ್ತ ಅರ್ಜುನ ಬೇಗನೆ ದ್ರೋಣನಿಗೆ ಪ್ರದಕ್ಷಿಣೆ ಮಾಡಿ ಅಲ್ಲಿಂದ ಹೊರಟು ಹೋದ. ಶ್ರೀಕೃಷ್ಣ ಅವನ ಮನೋವೇಗದ ರಥವನ್ನು ಅವನ ಬಾಣಗಳು ಅವನ ಬೆನ್ನ ಹಿಂದೆ ಹಾರಿಬರುವಂತೆ ವೇಗವಾಗಿ ನಡೆಸಿದ.
ವಿಜಿತ್ಯ ಹಾರ್ದಿಕ್ಯಮಥಾಪ್ರಯತ್ನತಃ
ಸ ಇಂದ್ರಸೂನುಃ ಪ್ರವಿವೇಶ ತದ್ ಬಲಮ್ |
ವಿಲೋಡಯಾಮಾಸ ಚ ಸಾಯಕೋತ್ತಮೈ-
ರ್ಯಥಾ ಗಜೇಂದ್ರೋ ನಲಿನೀಂ ಬಲೋದ್ಧತಃ ॥
ಅರ್ಜುನ ಅಪ್ರಯತ್ನವಾಗಿ ಕೃತವರ್ಮನನ್ನು ಗೆದ್ದು ಕೌರವ ಸೈನ್ಯವನ್ನು ಪ್ರವೇಶಿಸಿದ. ಬಲದಿಂದ ಉದ್ಧತವಾದ ಮದ್ದಾನೆ ಕೊಳವನ್ನು ಹೇಗೋ ಹಾಗೆ ಉತ್ತಮ ಬಾಣಗಳಿಂದ ಶತ್ರುಸೈನ್ಯವನ್ನು ಕದಡಿದ.
ಸ ಉಚ್ಚಕಾಶೇಽತಿರಥೋ ರಥೋತ್ತಮೇ
ಸವಾಸುದೇವೋ ಹರಿಣಾ ಯಥೇಂದ್ರಃ |
ಚರ್ತುಚೇಗ್ರೋ ದ್ವಿಷತಾಂ ಶಿರಾಂಸಿ

ಶರೈಃ ಶರೀರಾಂತಕರೈಃ ಸಮಂತತಃ ॥
ಅತಿರಥನಾದ ಅರ್ಜುನ ಉತ್ತಮ ರಥದಲ್ಲಿ ಶ್ರೀಕೃಷ್ಣನೊಂದಿಗೆ ಉಪೇಂದ್ರನ ಜೊತೆಗಿರುವ ಇಂದ್ರನಂತೆ ಶೋಭಿಸಿದ.
ಶತ್ರುಭಯಂಕರನಾದ ಆತ ಶರೀರ ನಾಶಕರವಾದ ಬಾಣಗಳಿಂದ ಎಲ್ಲೆಡೆ ಶತ್ರುಗಳ ರುಂಡಗಳನ್ನು ಕತ್ತರಿಸಿದ.
ದೃಢಾಯುಮಚ್ಯುತಾಯಂ ಚ ಹತ್ವಾ ವಿಂದಾನುವಿಂದಕೌ |
ಶರಾಭ್ಯಾಂ ಪ್ರೇಷಯಾಮಾಸ ಯಮಾಯ ವಿಜಯೋ ಯುಧಿ ॥
ಅರ್ಜುನ ಯುದ್ಧದಲ್ಲಿ ದೃಢಾಯು ಅಚ್ಯುತಾಯುಗಳನ್ನೂ ವಿಂದ ಅನುವಿಂದರನ್ನೂ ಎರಡೆರಡು ಬಾಣಗಳಿಂದ ಹೊಡೆದು
ಯಮನ ಬಳಿ ಕಳುಹಿಸಿಕೊಟ್ಟ.
ಸುದಕ್ಷಿಣಂ ಚ ಕಾಂಬೋಜಂ ನಿಹತ್ಯಾಂಬಷ್ಠಮೇವ ಚ |
ಶ್ರುತಾಯುಧಂ ನದೀಜಾತಂ ವರುಣಾದಾಸಸಾದ ಹ ॥
ಅರ್ಜುನನು ಕಾಂಬೋಜದ ರಾಜಕುಮಾರನಾದ ಸುದಕ್ಷಿಣನನ್ನೂ ಅಂಬಷ್ಠರಾಜನನ್ನೂ ಕೊಂದು ವರುಣನಿಂದ ಪರ್ಣಾಶಾ
ನದಿಯಲ್ಲಿ ಜನಿಸಿದ ಶ್ರುತಾಯುಧನನ್ನೂ ಎದುರಿಸಿದನು.
ಯಸ್ಯಾದಾದ್ ವರುಣೋ ದಿವ್ಯಾಮಮೋಘಾಂ ಮಹತೀಂ ಗದಾಮ್ |
ಸ ತು ತೇನ ಶರೈಸ್ತೀಕ್ಷ್ಣೈರರ್ಪಿತೋ ವಿರಥಂ ಕ್ಷಣಾತ್ ॥
ಚಕಾರ ಪಾರ್ಥಸ್ಯ ರಥಮಾರುಹ್ಯಾರಿಧರಾಯ ತಾಮ್ |
ಗದಾಂ ಚಿಕ್ಷೇಪ ಸಾ ತಸ್ಯ ವಾರುಣೇಃ ಶಿರ ಏವ ತು |
ಬಿಭೇದ ಶತಧಾ ಶೀರ್ಣಮಸ್ತಿಷ್ಕಃ ಸೋಽಪತದ್ ಭುವಿ ॥
ಶ್ರುತಾಯುಧನಿಗೆ ವರುಣನು ದಿವ್ಯವೂ ಅಮೋಘವೂ ಆದ ಮಹಾಗದೆಯನ್ನು ಕೊಟ್ಟಿದ್ದನು. ಆ ಶ್ರುತಾಯುಧನು ಅರ್ಜುನನನ್ನು
ತೀಕ್ಷ್ಣವಾದ ಬಾಣಗಳಿಂದ ಪೀಡಿಸಿದಾಗ ಅರ್ಜುನನು ಅವನನ್ನು ಕ್ಷಣದಲ್ಲಿ ವಿರಥನನ್ನಾಗಿ ಮಾಡಿದನು. ಕೂಡಲೆ ಅವನು ಅರ್ಜುನನ
ರಥವೇರಿ ಕೃಷ್ಣನ ಮೇಲೆ ಗದೆಯನ್ನು ಹಾಕಿದನು. ಆದರೆ ಆ ಗದೆ ಅವನ ತಲೆಯನ್ನೇ ಭೇದಿಸಿತು. ನೂರು ಹೋಳುಗಳಾಗಿ ತಲೆ ಒಡೆದು
ಸತ್ತು ನೆಲದ ಮೇಲೆ ಬಿದ್ದನು.
ಅಯುದ್ಧ್ಯಂತಂ ಸ್ವಗದಯಾ ಯದಿ ತಾಡಯಸಿ ಸ್ವಯಮ್ |
ತಯಾ ವಿಶೀರ್ಣಮಸ್ತಿಷ್ಕೋ ಮರಿಷ್ಯಸಿ ನ ಸಂಶಯಃ ॥
ಯುದ್ಧ ಮಾಡದಿರುವವನನ್ನು ನಿನ್ನ ಗದೆಯಿಂದ ಹೊಡೆದಿಯಾದರೆ ಆ ಗದೆಯಿಂದ ನಿನ್ನ ತಲೆಯೇ ಒಡೆದು ಸಾಯುವಿ, ಅದರಲ್ಲಿ
ಸಂಶಯವಿಲ್ಲ.
ಅಮೋಘಾ ಚಾನ್ಯಥಾ ಸೇಯಂ ಗದಾ ತವ ಭವಿಷ್ಯತಿ ॥
ಇಲ್ಲದಿದ್ದರೆ ಈ ನಿನ್ನ ಗದೆ ಅಮೋಘವಾಗಿರುವುದು.
ಇತ್ಯಬ್ರುವೀತ್ ತಂ ವರುಣಃ ಪುರಾ ತೇನ ಸ ಕೇಶವೇ |
ಅಯುದ್ಧ್ಯತಿ ಗದಾಕ್ಷೇಪಾತ್ ತಯಾ ಶೀರ್ಣಶಿರಾ ಅಭೂತ್ ॥
ಹೀಗೆ ವರುಣ ಹಿಂದೆ ಅವನಿಗೆ ಹೇಳಿದ್ದನು. ಅದರಿಂದ ಯುದ್ಧ ಮಾಡದಿದ್ದ ಕೃಷ್ಣನ ಮೇಲೆ ಗದೆಯನ್ನು ಎಸೆದುದರಿಂದ
ಗದೆಯಿಂದಲೇ ಅವನ ತಲೆ ಹೋಳಾಯಿತು.
ಹತೇಷು ವೀರೇಷು ನಿಜೇಷು ಸಂಘಶೋ
ವಿದ್ರಾವಿತೇಷ್ವಾಲುಲಿತೇ ಚ ಸೈನ್ಯೇ |
ದುರ್ಯೋಧನೋ ದ್ರೋಣಮುಪೇತ್ಯ ದೀನ-
ಮುವಾಚ ಹಾ ಪಾರ್ಥ ಉಪೇಕ್ಷಿತಸ್ತ್ವಯಾ ॥
ತನ್ನ ಕಡೆಯ ವೀರರು ಹತರಾದಾಗ, ಗುಂಪುಗುಂಪಾಗಿ ಓಡಿಸಲ್ಪಟ್ಟಾಗ, ಸೈನ್ಯ ಚೂರು ಚೂರಾದಾಗ, ದುರ್ಯೋಧನ ದ್ರೋಣನ ಬಳಿಗೆ
ಬಂದು ದೈನ್ಯದಿಂದ ಹೇಳಿದನು, `ಅಯ್ಯೋ, ನೀವು ಅರ್ಜುನನನ್ನು ತಡೆಯದೆ ಉಪೇಕ್ಷೆ ಮಾಡಿದಿರಿ' ಎಂದು.
ಇತೀರಿತೋಽಭೇದ್ಯಮಮುಷ್ಯ ವರ್ಮ
ಬದ್ಧ್ವಾಮಹಾಮಂತ್ರಬಲಾತ್ ಸ ವಿಪ್ರಃ |
ಜಗಾದ ಯೇನೈವ ಬಲೇನ ಪಾರ್ಥೈ-
ರ್ವಿರುದ್ಧ್ಯಸೇ ತೇನ ಹಿ ಯಾಹಿ ಫಲ್ಗುನಮ್ ॥
ದುರ್ಯೋಧನನು ಹೀಗೆ ಹೇಳಿದಾಗ ದ್ರೋಣರು ಅವನಿಗೆ ಮಹಾಮಂತ್ರದ ಬಲದಿಂದ ಅಭೇದ್ಯವಾದ ಕವಚವನ್ನು ತೊಡಿಸಿ
ಹೇಳಿದರು `ಎಲ್ಲ ಪಾಂಡವರೊಡನೆ ಎಷ್ಟು ಬಲದಿಂದ ಹೋರಾದುವಿಯೋ ಅಷ್ಟು ಬಲದಿಂದ ಒಬ್ಬ ಅರ್ಜುನನೊಡನೆ
ಹೋರಾಡು' ಎಂದು.
ಇತೀರಿತೋ ಧಾರ್ತರಾಷ್ಟ್ರಃ ಸ ಚಾಪ-
ಮಾದಾಯ ಸೌವರ್ಣರಥೋಪರಿಸ್ಥಃ |
ಜಗಾಮ ಪಾರ್ಥಂ ತಮವಾರಯಚ್ಚ
ಶರೈರನೇಕೈರನಲಪ್ರಕಾಶೈಃ ॥
ದ್ರೋಣರು ಹೀಗೆ ಹೇಳಿದಾಗ ದುರ್ಯೋಧನನು ಬಿಲ್ಲನ್ನೆತ್ತಿಕೊಂಡು ಬಂಗಾರದ ರಥದ ಮೇಲೆ ಹತ್ತಿ ನಿಂತು, ಅರ್ಜುನನ ಬಳಿಗೆ
ಹೋದನು. ಬೆಂಕಿಯಂತೆ ಹೊಳೆವ ಅನೇಕ ಬಾಣಗಳಿಂದ ಅವನನ್ನು ತಡೆದನು.
ವಿವ್ಯಾಧ ಪಾರ್ಥೋಽಪಿ ತಮುಗ್ರವೇಗೈಃ

ಶರೈರ್ನ ತೇ ತಸ್ಯ ಚ ಮರ್ಮಭೇದನಮ್ |
ಚಕ್ರುಸ್ತತೋ ವಾಸವಿರ್ದಿವ್ಯಮಸ್ತ್ರಂ
ತದ್ವರ್ಮಭೇದಾಯ ಸಮಾದದೇ ರುಷಾ ॥
ಅರ್ಜುನನೂ ಭಯಂಕರ ವೇಗವುಳ್ಳ ಬಾಣಗಳಿಂದ ದುರ್ಯೋಧನನನ್ನು ಹೊಡೆದನು. ಆದರೆ ಆ ಬಾಣಗಳು ಅವನ ಕವಚ ಭೇದನ ಮಾಡಲಿಲ್ಲ. ಬಳಿಕ ಅರ್ಜುನನ ಕೋಪದಿಂದ ಅವನ ಕವಚ ಭೇದಕ್ಕಾಗಿ ದಿವ್ಯಾಸ್ತ್ರವನ್ನು ಎತ್ತಿಕೊಂಡನು.
ಸಂಧೀಯಮಾನಂ ತು ಗುರೋಃ ಸುತಸ್ತ-
ಚ್ಚಿಚ್ಛೇದ ಪಾರ್ಥೋಽಥ ಸುಯೋಧನಾಶ್ವಾನ್ |
ಹತ್ವಾ ತಲೇಽವಿದ್ಧ್ಯದಥೈನಮುಗ್ರೈ-
ರ್ದ್ರೌಣಿಃ ಶರೈಃ ಪಾರ್ಥಮವಾರಯದ್ ಯುಧಿ ॥
ಅರ್ಜುನನು ಬಾಣದಲ್ಲಿ ಆ ದಿವ್ಯಾಸ್ತ್ರವನ್ನು ಹೂಡುವಷ್ಟರಲ್ಲಿ ಅದನ್ನು ಅಶ್ವತ್ಥಾಮರು ಕತ್ತರಿಸಿದರು. ಅರ್ಜುನನು ದುರ್ಯೋಧನನ ಕುದುರೆಗಳನ್ನು ಕೊಂದು ಅವನನ್ನು ನೆಲದ ಮೇಲೆ ನಿಲ್ಲಿಸಿ ಅಂಗೈಗೆ ಬಾಣಗಳಿಂದ ಹೊಡೆದನು. ಅಶ್ವತ್ಥಾಮರು ಭಯಂಕರ ಬಾಣಗಳಿಂದ ಯುದ್ಧದಲ್ಲಿ ಅರ್ಜುನನನ್ನು ತಡೆದರು.
ಸ ದ್ರೌಣಿಕರ್ಣಪ್ರಮುಖೈರ್ಧನಂಜಯೋ
ಯುಯೋಧ ತೇ ಚೈನಮವಾರಯನ್ ಶರೈಃ |
ಬಭೂವ ಯುದ್ಧಂ ತದತುಲ್ಯಮದ್ಭುತಂ
ಜಯದ್ರಥಾರ್ಥೇಽದ್ಭುತವೀರ್ಯಕರ್ಮಣಾಮ್ ॥
ಅರ್ಜುನನು ಅಶ್ವತ್ಥಾಮ, ಕರ್ಣ ಮುಂತಾದವರೊಡನೆ ಯುದ್ಧ ಮಾಡಿದನು. ಅವರು ಅರ್ಜುನನನ್ನು ಬಾಣಗಳಿಂದ ತಡೆದರು. ಅದ್ಭುತ ವೀರ್ಯ ಕರ್ಮಗಳುಳ್ಳ ಅಶ್ವತ್ಥಾಮ ಮುಂತಾದವರು ಅರ್ಜುನನೊಡನೆ ಜಯದ್ರಥನ ಸಲುವಾಗಿ ಮಾಡಿದ ಆ ಯುದ್ಧ ಅಸದೃಶವಾಗಿತ್ತು, ಅದ್ಭುತವಾಗಿತ್ತು.
ಪಾರ್ಥೇ ಪ್ರವಿಷ್ಟೇ ಕುರುಸೈನ್ಯಮಧ್ಯಂ
ದ್ರೋಣೋಽವಿಶತ್ ಪಾಂಡವಸೈನ್ಯಮಾಶು |
ಸ ತದ್ರಥಾನೀಕಮುದಾರವೇಗೈಃ
ಶರೈರ್ವಿಧೂಯ ನ್ಯಹನಚ್ಚ ವೀರಾನ್ ॥
ಅರ್ಜುನ ಕೌರವ ಸೈನ್ಯವನ್ನು ಪ್ರವೇಶಿಸಿದಾಗ ದ್ರೋಣರು ಪಾಂಡವ ಸೈನ್ಯವನ್ನು ಪ್ರವೇಶಿಸಿದರು. ಮಹಾವೇಗವುಳ್ಳ ಬಾಣಗಳಿಂದ ಪಾಂಡವರ ರಥಸೈನ್ಯವನ್ನು ಓಡಿಸಿ ವೀರರನ್ನು ಸಂಹರಿಸಿದರು.
ಸ ವೀರವರ್ಯಃ ಸ್ಥವಿರೋಽಪಿ ಯೂನಾಂ
ಯವೇವ ಮಧ್ಯೇ ಪ್ರಚಚಾರ ಧನ್ವಿನಾಮ್ |
ಪ್ರಪಾತಯನ್ ವೀರಶಿರಾಂಸಿ ಬಾಣೈ-
ರ್ಯುಧಿಷ್ಠಿರಂ ಚಾಽಸದದುಗ್ರವೀರ್ಯಃ ॥
ವೀರರಲ್ಲಿ ಅಗ್ರಗಣ್ಯರಾದ ದ್ರೋಣರು ವೃದ್ಧರಾದರೂ ಯುವಕರಿಗೆ ಯುವಕನಂತೆ ಆ ಧನುರ್ಧಾರಿಗಳ ಮಧ್ಯದಲ್ಲಿ ಸಂಚರಿಸಿದರು. ಭಯಂಕರ ಪರಾಕ್ರಮಿಯಾದ ಅವರು ವೀರರ ರುಂಡಗಳನ್ನು ಬಾಣಗಳಿಂದ ಉರುಳಿಸುತ್ತ ಯುಧಿಷ್ಠಿರನನ್ನು ಎದುರಿಸಿದರು.
ನೃಪಗ್ರಹೇಚ್ಛುಂ ತಮವೇತ್ಯ ಸತ್ಯಜಿ-
ನ್ನ್ಯವಾರಯದ್ ದ್ರೌಪದಿರಾಶು ವೀರ್ಯವಾನ್ |
ನಿವಾರಿತಸ್ತೇನ ಶಿರಃ ಶರೇಣ
ಚಕರ್ತ ಪಾಂಚಾಲಸುತಸ್ಯ ವಿಪ್ರಃ ॥
ದ್ರೋಣರು ಯುಧಿಷ್ಠಿರನನ್ನು ಸೆರೆ ಹಿಡಿಯಲು ಬಯಸಿದುದನ್ನು ತಿಳಿದ ಪರಾಕ್ರಮಿಯಾದ ದ್ರುಪದಪುತ್ರ ಸತ್ಯಜಿತ್ ಬೇಗನೆ ಅವರನ್ನು ತಡೆದನು. ಅವನು ತಡೆದಾಗ ದ್ರೋನರು ಬಾಣದಿಂದ ಅವನ ತಲೆಯನ್ನು ಕತ್ತರಿಸಿದರು.
ನಿಹತ್ಯ ತಂ ವೀರತಮೋ ರಣೋತ್ಕಟಂ
ಯುಧಿಷ್ಠಿರಂ ಬಾಣಗಣೈಃ ಸಮಾರ್ದಯತ್ ॥
ಮಹಾವೀರರಾದ ದ್ರೋಣರು ಯುದ್ಧನಿಪುಣನಾದ ಸತ್ಯಜಿತನನ್ನು ಸಂಹರಿಸಿ ಬಾಣ ಸಮೂಹಗಳಿಂದ ಯುಧಿಷ್ಠಿರನನ್ನು ಪೀಡಿಸಿದರು.
ಸ ಶಕ್ತಿತಸ್ತೇನ ವಿಧಾಯ ಸಂಗರಂ
ನಿರಾಯುಧೋ ವ್ಯಶ್ವರಥಃ ಕೃತಃ ಕ್ಷಣಾತ್ |
ಸ ಊರ್ಧ್ವಬಾಹುರ್ಭುವಿ ಸಂಸ್ಥಿತೋಽಪಿ
ಗೃಹೀತುಮಜೌ ಗುರುಣಾಽಭಿಪನ್ನಃ |
ಮಾದ್ರೀಸುತಸ್ಯಾವರಜಸ್ಯ ಯಾನ
ಮಾರುಹ್ಯ ವೇಗಾದಜಗ್ಮಿವಾಂಸ್ತತಃ ॥
ಯುಧಿಷ್ಠಿರನು ದ್ರೋಣರೊಡನೆ ತನ್ನ ಶಕ್ತಿ ಇದ್ದಷ್ಟು ಯುದ್ಧವನ್ನು ಮಾಡಿ ಕ್ಷಣದಲ್ಲಿ ಆಯುಧ, ಕುದುರೆ, ರಥಗಳನ್ನು ಕಳೆದುಕೊಂಡು ನೆಲದ ಮೇಲೆ ಕೈಗಳೆತ್ತಿ ನಿಂತನು. ಆದರೂ ಅವನನ್ನು ಯುದ್ಧದಲ್ಲಿ ಸೆರೆ ಹಿಡಿಯಲು ದ್ರೋಣರು ಮುಂದೆ ಬಂದರು. ಒಡನೆ ಯುಧಿಷ್ಠಿರನು ಸಹದೇವನ ರಥವನ್ನೇರಿ ವೇಗವಾಗಿ ಅಲ್ಲಿಂದ ದೂರ ಹೊರಟು ಹೋದನು.

ದ್ರೋಣ ತತಃ ಶೈಶುಪಾಲಿಃ ಸುಪುತ್ರೋ
ಜಾರಾಸಂಧಿಃ ಕಾಶಿರಾಜಃ ಸಶೈಬಃ |
ಸಮಾಸದನ್ ಕೇಕಯಾಶ್ಚೈವ ಪಂಚ
ಸಮಾರ್ದಯನ್ ಬಾಣಗಣೈಶ್ಚ ಸರ್ವಶಃ ॥
ಬಳಿಕ ಶಿಶುಪಾಲ ಪುತ್ರನಾದ ಧೃಷ್ಟಕೇತು ಅವನ ಮಕ್ಕಳು, ಜರಾಸಂಧಪುತ್ರರು, ಕಾಶಿರಾಜ, ಶೈಬ್ಯ, ಬೃಹತ್‌ಕ್ಷತ್ರ ಮುಂತಾದ ಕೇಕಯರು ಎಲ್ಲರೂ ದ್ರೋಣರನ್ನು ಮುತ್ತಿದರು. ಬಾಣಸಮೂಹಗಳಿಂದ ಎಲ್ಲೆಡೆಗಳಿಂದ ಪೀಡಿಸಿದರು.
ಸ ತಾನ್ ಕ್ರಮೇಣೈವ ನಿಕೃತ್ತಕಂದಧಾನ್
ಶರೋತ್ತಮೈರತ್ರ ವಿಧಾಯ ವಿಪ್ರಃ |
ನಿನಾಯ ಲೋಕಂ ಪರಮರ್ಕಮಂಡಲಂ
ವ್ರಜಂತಿ ನಿರ್ಭಿದ್ಯ ಯಮೂರ್ಧ್ವರೇತಸಃ ॥
ದ್ರೋಣರು ಉತ್ತಮ ಬಾಣಗಳಿಂದ ಕ್ರಮವಾಗಿ ಅವರೆಲ್ಲರ ಶಿರಶ್ಛೇದ ಮಾಡಿ ಅವರನ್ನು ನೈಷ್ಟಿಕ ಬ್ರಹ್ಮಚರ್ಯನಿಷ್ಠರೂ ಸೂರ್ಯಮಂಡಲವನ್ನು ಭೇದಿಸಿ ಯಾವ ಉತ್ತಮ ಲೋಕವನ್ನು ಹೊಂದುವರೋ ಆ ಲೋಕಕ್ಕೆ ಕಳುಹಿಸಿದರು.
ವಿಧೂಯಮಾನೇ ಗುರುಣೋರುಸೈನ್ಯೇ
ಪೃಥಾಸುತಾನಾಂ ಪೃತನಾಃ ಪರೇಷಾಮ್ |
ಪ್ರಾಯೋ ರಣೇ ಮಾರುತಸೂನುನೈವ
ಹತಪ್ರವೀರಾ ಮೃದಿತಾಃ ಪರಾದ್ರವನ್ ॥
ಪಾಂಡವರ ಮಹಾಸೈನ್ಯ ದ್ರೋನರಿಂದ ನಾಶವಾಗುತ್ತಿದ್ದಾಗ ಕೌರವ ಸೇನೆಯ ಮಹಾವೀರರು ಪ್ರಾಯಃ ಎಲ್ಲರೂ ರಣರಂಗದಲ್ಲಿ ಭೀಮನಿಂದ ಹತರಾದರು. ಕೌರವರ ಸೇನೆಗಳು ಪರಾಭವಗೊಂಡು ಓಡಿಹೋದವು.
ಅಲಂಬುಸೋ ನಾಮ ತದೈವ ರಾಕ್ಷಸಃ
ಸಮಾಸದನ್ಮಾರುತಿಮುಗ್ರಪೌರುಷಮ್ |
ಸ ಪೀಡಿತಸೇನ ಶರೈಃ ಸುತೇಜನೈಃ
ಕ್ಷಣಾದದೃಶ್ಯತ್ವಮವಾಪ ಮಾಯಯಾ ॥
ಆಗಲೇ ಅಲಂಬುಸನೆಂಬ ರಾಕ್ಷಸ ಮಹಾಪೌರುಷಶಾಲಿಯಾದ ಭೀಮನನ್ನು ಎದುರಿಸಿದನು. ಒಳ್ಳೆಯ ತೇಜಸ್ಸುಳ್ಳ ಭೀಮನ ಬಾಣಗಳಿಂದ ಪೀಡಿತನಾಗಿ ಕ್ಷಣದಲ್ಲಿ ಮಾಯೆಯಿಂದ ಅದೃಶ್ಯನಾದನು.
ಸೋಽದೃಶ್ಯರೂಪೋಽನುಚರಾನಪೀಡಯದ್
ಭೀಮಸ್ಯ ತದ್ ವೀಕ್ಷ್ಯಚಕೋಪ ಮಾರುತಿಃ |
ಅಸ್ತ್ರಜ್ಞತಾಮಾತ್ಮನಿ ಕೇಶವಾಜ್ಞಯಾ
ಸಂದರ್ಶಯನ್ನಾಗತಧರ್ಮಸಂಕಟಃ ॥
ತ್ವಾಷ್ಟ್ರಾಸ್ತ್ರಮಾದತ್ತ ಸ ಕಾಮ್ಯಕರ್ಮ
ಹೀನೋಽಪಿ ಭೀಮಸ್ತತ ಉತ್ಥಿತಾಃ ಶರಾಃ |
ತೇ ಬಾಣವರ್ಯಾಸ್ತದದೃಶ್ಯವೇಧಿನೋ
ರಕ್ಷೋ ವಿದಾರ್ಯಾಽವಿವಿಶುರ್ಧರಾತಳಮ್ ॥
ಅಲಂಬುಸ ಅದೃಶ್ಯರೂಪನಾಗಿ ಭೀಮನ ಅನುಚರರನ್ನು ಪೀಡಿಸಿದನು. ಅದನ್ನು ಕಂಡು ಭೀಮನು ಕುಪಿತನಾದನು. ಅವನಿಗೆ ಧರ್ಮಸಂಕಟ ಒದಗಿ ಬಂದಿತು. ತಾನು ಕಾಮ್ಯಕರ್ಮ ಮಾಡದವನಾಗಿದ್ದರೂ ಭಗವಂತನ ಇಚ್ಛೆಯಿಂದ ತನ್ನ ಅಸ್ತ್ರಜ್ಞಾನವನ್ನು ತೋರುವುದಕ್ಕಾಗಿ ತ್ವಾಷ್ಟ್ರ ಅಸ್ತ್ರವನ್ನು ಎತ್ತಿಕೊಂಡನು. ಆ ಅಸ್ತ್ರದಿಂದ ಬಾಣಗಳು ಎದ್ದು ಬಂದವು. ಆ ಉತ್ತಮ ಬಾಣಗಳು ಅದೃಶ್ಯವಾಗಿಯೇ ಹಿಂಸಿಸುತ್ತ ಅಲಂಬುಸ ರಾಕ್ಷಸನನ್ನು ಸೀಳಿ ಭೂತಳವನ್ನು ಹೊಕ್ಕಿತು.
ತದ್ಧನ್ಯಮಾನಂ ಪ್ರವಿಹಾಯ ಭೀಮ-
ಮಪಾದ್ರವದದ್ ದೂರತರಂ ಸುಭೂತಮ್ |
ತತಸ್ತು ಭೀಮೋ ದ್ವಿಷತಾಂ ವರೂಥಿನೀಂ
ವಿದ್ರಾವಯಾಮಾಸ ಶರೈಃ ಸುಮುಕ್ತೈಃ ॥
ಭೀಮನು ಅಲಂಬುಸ ರಾಕ್ಷಸನನ್ನು ತ್ವಾಷ್ಟ್ರಾಸ್ತ್ರದ ಬಾಣಗಳಿಂದ ಹೊಡೆಯುತ್ತಿದ್ದಂತೆ ಆ ರಾಕ್ಷಸ ಬಲು ಭೀತನಾಗಿ ಭೀಮನನ್ನು ಬಿಟ್ಟು ಬಹಳ ದೂರಕ್ಕೆ ಪಲಾಯನ ಮಾಡಿದನು. ಬಳಿಕ ಭೀಮನು ಚೆನ್ನಾಗಿ ಬಾಣಪ್ರಯೋಗ ಮಾಡಿ ಶತ್ರುಗಳ ಸೈನ್ಯವನ್ನು ಓಡಿಸಿದನು.
ತದೈವ ಕೃಷ್ಣಾತನಯಾಃ ಸಮೇತಾ
ಜಘ್ನುಃ ಶಲಂ ಸಂಯತಿ ಸೌಮದತ್ತಿಮ್ |
ಅಲಂಬುಸಂ ಪ್ರಾಪ ತದಾ ಘಟೋತ್ಕಚಃ
ಪರಸ್ಪರಂ ತೌ ರಥಿನಾವಯುದ್ಧ್ಯತಾಮ್ ॥
ಆಗಲೇ ದ್ರೌಪದೀಪುತ್ರರು ಯುದ್ಧದಲ್ಲಿ ಸೋಮದತ್ತನ ಮಗನಾದ ಶಲನನ್ನು ಸುತ್ತುವರಿದು ಸಂಹರಿಸಿದರು. ಆಗಲೇ ಘಟೋತ್ಕಚ ಅಲಂಬುಸನನ್ನು ಎದುರಿಸಿದನು. ರಥವನ್ನೇರಿ ಅವರಿಬ್ಬರೂ ಪರಸ್ಪರ ಯುದ್ಧವನ್ನು ಮಾಡಿದರು.
ಘಟೋತ್ಕಚಸ್ತಂ ವಿರಥಂ ವಿಧಾಯ

ಖಸ್ಥಂ ಸ ಏವಾಭಿಯುಯೋಧ ಸಂಸ್ಥಿತಃ |
ತತಸ್ತು ತಂ ಭೀಮಸುತೋ ನಿಗೃಹ್ಯ
ನಿಪಾತ್ಯ ಭೂಮೌ ಪ್ರದದೌ ಪ್ರಹಾರಮ್ ||
ಪದಾ ಶಿರಸ್ಯೇವ ಸ ಪಿಷ್ಟಮಸ್ತಕೋ
ಮಮಾರ ಮಧ್ಯೇ ಪೃಥಿವೀಪತೀನಾಮ್ |
ತಸ್ಮಿನ್ ಹತೇ ಭೈಮಸೇನಿಃ ಕುರೂಣಾಂ
ವ್ಯದ್ರಾವಯದ್ ರಥವೃಂದಂ ಸಮಂತಾತ್ ||
ಘಟೋತ್ಕಚನು ಅಲಂಬುಸನನ್ನು ವಿರಥನನ್ನಾಗಿ ಮಾಡಿ ಅವನು ಆಕಾಶದಲ್ಲಿ ನಿಂತಾಗ ತಾನೂ ಆಕಾಶದಲ್ಲಿ ನಿಂತೇ ಯುದ್ಧವನ್ನು ಮಾಡಿದನು. ಬಳಿಕ ಅವನನ್ನು ಪರಾಭವಗೊಳಿಸಿ ನೆಲದಲ್ಲಿ ಕೆಡವಿ ತಲೆಗೆ ಪಾದ ಪ್ರಹಾರ ನೀಡಿದ. ಅವನ ತಲೆ ಪುಡಿಯಾಯಿತು ಆತ ಸತ್ತನು. ರಾಜರುಗಳ ನಡುವೆ ಹೀಗೆ ಅಲಂಬುಸ ಹತನಾದ ಬಳಿಕ ಘಟೋತ್ಕಚ ಕೌರವರ ರಥದ ಸೈನ್ಯವನ್ನು ಎಲ್ಲೆಡೆಗೂ ಓಡಿಸಿದನು.
ತದಾಽಽಸದತ್ ಕೃತವರ್ಮಾ ರಥೇನ
ಸೇನಾಂ ಪಾಂಡೂನಾಂ ಶರವರ್ಷಂ ಪ್ರಮುಂಚನ್ |
ದದೌ ವರಂ ತಸ್ಯ ಹಿ ಪೂರ್ವಮಚ್ಯುತಃ
ಪ್ರೀತಃ ಸ್ತುತ್ಯಾ ಸರ್ವಜಯಂ ಮುಹೂರ್ತೇ ||
ಆಗ ಕೃತವರ್ಮ ಬಾಣಗಳ ಮಳೆಗರೆಯುತ್ತ ರಥದಿಂದ ಪಾಂಡವರ ಸೈನ್ಯವನ್ನು ಎದುರಿಸಿದನು. ಹಿಂದೆ ಶ್ರೀಕೃಷ್ಣನು ಅವನ ಸ್ತೋತ್ರಕ್ಕೆ ಮೆಚ್ಚಿ ಅವನಿಗೆ ಒಂದು ಮುಹೂರ್ತದ ಕಾಲ ಎಲ್ಲರನ್ನೂ ಪರಾಭವಗೊಳಿಸುವಂತೆ ವರ ನೀಡಿದ್ದನು.
ಸ ತೇನ ಪಾಂಚಾಲಗಣಾನ್ ವಿಜಿಗ್ಯೇ
ಯಮೌ ಚ ಭೀಮಸ್ಯ ಪುರೋಽಥ ತಂ ಚ |
ವಿವ್ಯಾಧ ಬಾಣೇನ ಸ ವಾಸುದೇವ
ವರಂ ವಿಜಾನನ್ ನ ತದಾ ಸಮಭ್ಯಯಾತ್ ||
ಅದರಿಂದ ಕೃತವರ್ಮನು ಭೀಮನ ಎದುರಿನಲ್ಲಿಯೇ ಪಾಂಚಲ ಸೇನೆಗಳನ್ನು ಪರಾಭವಗೊಳಿಸಿದನು. ನಕುಲ-ಸಹದೇವರನ್ನೂ ಗೆದ್ದನು. ಬಳಿಕ ಭೀಮನನ್ನೂ ಬಾಣಗಳಿಂದ ಹೊಡೆದನು. ಶ್ರೀಕೃಷ್ಣನ ವರವನ್ನು ತಿಳಿದಿದ್ದ ಭೀಮನು ಆಗ ಕೃತವರ್ಮನನ್ನು ಎದುರಿಸಲಿಲ್ಲ.
* * * * *
ಎಪ್ಪತ್ತೇಳನೆಯ ಅಧ್ಯಾಯ
ಧೃತರಾಷ್ಟ್ರನ ವಿಲಾಪ ಮತ್ತು ಮುಂದಿನ ಯುದ್ಧಕಥನದ ಪ್ರಾರ್ಥನೆ.
ಧೃತರಾಷ್ಟ್ರಃ
ಶ್ವೋಭೂತೇ ಕಿಮಕುರ್ವಂತ ದುಃಖಶೋಕಸಮನ್ವಿತಾಃ |
ಅಭಿಮನ್ಯೌ ಹತೇ ತತ್ರ ಕೈರ್ವಾಽಯುಧ್ಯಂತ ಪಾಂಡವಾಃ || 1 ||
ಧೃತರಾಷ್ಟ್ರ ಅಭಿಮನ್ಯುವು ಹತನಾದ ಮೇಲೆ ಅಲ್ಲಿ ದುಃಖ-ಶೋಕ ಸಮನ್ವಿತರಾದ ಪಾಂಡವರು ಏನು ಮಾಡಿದರು? ಮರುದಿನ ಯಾರ ಜೊತೆಯಲ್ಲಿ ಯುದ್ಧವನ್ನು ಮಾಡಿದರು?
ಜಾನಂತಸ್ತಸ್ಯ ಕರ್ಮಾಣಿ ಕುರವಃ ಸವ್ಯಸಾಚಿನಃ |
ಕಥಂನು ಕಿಲ್ಬಿಷಂ ಕೃತ್ವಾ ನಿರ್ಭಯಾ ಬ್ರೂಹಿ ಮಾಮಕಾಃ || 2 ||
ಅರ್ಜುನನ ಅಸದೃಶ ಕರ್ಮವನ್ನು ತಿಳಿದ ಕೌರವರಾದ ನನ್ನವರು ಅವನಿಗೆ ಅಪಚಾರವನ್ನು ಮಾಡಿ ಹೇಗೆ ನಿರ್ಭಯವಾಗಿದ್ದರು ಎಂದು ಹೇಳು.
ಪುತ್ರಶೋಕಾಭಿಸಂತಪ್ತಂ ಕ್ರುದ್ಧಂ ಮೃತ್ಯುಮಿವಾಂತಕಮ್ |
ಆಯಾಂತಂ ಪುರುಷವ್ಯಾಘ್ರಂ ಕಥಂ ದದೃಶುರಾಹವೇ || 3 ||
ಪುತ್ರಶೋಕದಿಂದ ತಾಪಗೊಂಡು ಸಂಹಾರಕನಾದ ಮೃತ್ಯುವಿನಂತೆ ಕ್ರುದ್ಧನಾದ ಪುರುಷವ್ಯಾಘ್ರನು ಯುದ್ಧಕ್ಕೆ ಬರುತ್ತಿರುವುದನ್ನು ಹೇಗೆ ನೋಡಿದರು?
ಕಪಿರಾಜಧ್ವಜಂ ಕ್ರುದ್ಧಂ ಧೂನ್ವಾನಂ ಗಾಂಡಿವಂ ಧನುಃ |
ದೃಷ್ಟ್ವಾ ಪುತ್ರಪರೀದೂನಂ ಕಿಮಕುರ್ವತ ಮಾಮಕಾಃ || 4 ||
ಪುತ್ರಶೋಕ ಪರಿವೃತನಾದ, ಕಪಿಧ್ವಜನಾದ ಅರ್ಜುನನು ಗಾಂಡೀವ ಧನುಸ್ಸನ್ನು ತೂಗಾಡಿಕೊಂಡು ಯುದ್ಧಕ್ಕೆ ಬರುವುದನ್ನು ನೋಡಿ ನನ್ನವರು ಏನು ಮಾಡಿದರು?
ಕಿನ್ನು ಸಂಜಯ ಸಂಗ್ರಾಮೇ ವೃತ್ತಂ ದುರ್ಯೋಧನಂ ಪ್ರತಿ |
ಪರಿದೇವೋ ಮಹಾನದ್ಯ ಶ್ರೂಯತೇ ಹಿ ಗೃಹೇ ಗೃಹೇ || 5 ||
ಎಲೈ ಸಂಜಯನೇ, ಯುದ್ಧದಲ್ಲಿ ದುರ್ಯೋಧನನಿಗೆ ಇನ್ನು ಯಾವ ಅಪ್ರಿಯವು ಉಂಟಾಯಿತು? ಈ ದಿನ ಮನೆ ಮನೆಗಳಲ್ಲಿ ದೊಡ್ಡ ಗೋಳಾಟವು ಕೇಳಿ ಬರುತ್ತಿದೆ.
ಭೂಯಾನ್ ಶಬ್ದಾನತೀತ್ಯಾನ್ಯಾನ್ ಶಬ್ದಃ ಸೈಂಧವವೇಶ್ಮನಿ |
ಪೌರಾಣಿಕಾನಾಂ ತೂರ್ಯಾಣಾಂ ಶಂಖದುಂದುಭಿಘೋಷವಾನ್ ||6||
ಸೈಂಧವನ ಮನೆಯಲ್ಲಿ ಉಳಿದ ಎಲ್ಲ ಶಬ್ದಗಳನ್ನೂ ಮೀರಿ ಪೌರಾಣಿಕರ ಶಬ್ದಗಳು, ಶಂಖ-ದುಂದುಭಿ-ತೂರ್ಯಗಳ ಘೋಷಗಳು

ಕೇಳಿ ಬರುತ್ತಿವೆ.
ಸೂತಮಾಗಧವಂದೀನಾಂ ನರ್ತಕಾನಾಂ ಚ ನಿಸ್ವನಃ |
ಸೋಽದ್ಯ ನ ಶ್ರೂಯತೇ ಶಬ್ದಃ ಸೂತಪುತ್ರ ಯಥಾ ಪುರಮ್ ॥ 7 ॥
ಎಲೈ ಸೂತಪುತ್ರನೇ, ಹಿಂದಿನಂತೆ ಸೂತ-ಮಾಗಧ-ವಂದಿಗಳ ಶಬ್ದವಾಗಲೀ, ನರ್ತಕರ ಶಬ್ದವಾಗಲೀ ಈ ದಿನ ಕೇಳಿ ಬರುತ್ತಿಲ್ಲ.
ಶಬ್ದೋ ನಾನಾವಿಧೋಽಭೀಕ್ಷ್ಣಮಭವದ್ ಯತ್ರ ಮೇ ಶ್ರುತಃ |
ದೀನಾನಾಮದ್ಯ ತಂ ಶಬ್ದಂ ನ ಶೃಣೋಮಿ ಸಮೀರಿತಮ್ ॥ 8 ॥
ಹಿಂದೆ ನಾನಾ ವಿಧವಾದ ಶಬ್ದಗಳನ್ನು ಸತತವಾಗಿ ಎಲ್ಲಿ ಕೇಳಿದೆನೋ ಅಲ್ಲಿಯ ಜನರು ಈ ದಿನ ದೀನರಾಗಿದ್ದಾರೆ. ಅಂತಹ ಶಬ್ದವನ್ನು ನಾನು ಈಗ ಕೇಳುತ್ತಿಲ್ಲ.
ನಿವೇಶನೇ ಸತ್ಯಧೃತೇಃ ಸೋಮದತ್ತಸ್ಯ ಸಂಜಯ |
ಆಸೀನೋಽಹಂ ಪುರಾ ತಾತ ಶಬ್ದಮಶ್ರೌಷಮುತ್ತಮಮ್ ॥ 9 ॥
ಎಲೈ ಪ್ರೀತಿಪಾತ್ರನೇ, ಸಂಜಯನೇ, ನಾನು ಹಿಂದೆ ಸೋಮದತ್ತ ಮತ್ತು ಸತ್ಯಧೃತಿಯ ಮನೆಯಲ್ಲಿ ಇದ್ದು ಶ್ರೇಷ್ಠವಾದ ಶಬ್ದಗಳನ್ನು ಕೇಳಿದ್ದೆನು.
ತದದ್ಯ ಹೀನಪುಣ್ಯೋಽಹಂ ದೀನಸ್ವರವಿನಾದಿತಮ್ |
ನಿವೇಶನಂ ಹತೋತ್ಸಾಹಂ ವಿಕೃತಂ ತಾತ ಲಕ್ಷಯೇ ॥ 10 ॥
ಈ ದಿನ ಭಾಗ್ಯಹೀನನಾದ ನಾನು ದೀನಸ್ವರದಿಂದ ಕೂಡಿರುವ, ಉತ್ಸಾಹ ರಹಿತವಾದ, ವಿಕಾರವನ್ನು ಹೊಂದಿರುವ ಶಬ್ದಗಳನ್ನು ಕೇಳುತ್ತಿದ್ದೇನೆ.
ವಿವಿಂಶತೇರ್ದುರ್ಮುಖಸ್ಯ ಚಿತ್ರಸೇನವಿಕರ್ಣಯೋಃ |
ಅನ್ಯೇಷಾಂ ಚ ಸುತಾನಾಂ ಮೇ ತಥಾ ನ ಶ್ರೂಯತೇ ಧ್ವನಿಃ ॥ 11 ॥
ವಿವಿಂಶತಿ, ದುರ್ಮುಖ, ಚಿತ್ರಸೇನ, ವಿಕರ್ಣ ಮತ್ತು ಉಳಿದ ನನ್ನ ಪುತ್ರರು ಇವರ ಮನೆಯಲ್ಲಿಯೂ ಮೊದಲಿನಂತೆ ಧ್ವನಿಯು ಕೇಳಿ ಬರುತ್ತಿಲ್ಲ.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಯಂ ಶಿಷ್ಯಾಃ ಪರ್ಯುಪಾಸತೇ |
ದ್ರೋಣಪುತ್ರಂ ಮಹೇಷ್ವಾಸಂ ಪುತ್ರಾಣಾಂ ಮೇ ಪರಾಯಣಮ್ ॥
ವಿಮಂದ್ರಾಲಾಪಸಂಲಾಪೈಃ ದ್ರುತವಾದಿತ್ರವಾದಿತೈಃ |
ಗೀತೈಶ್ಚ ವಿವಿಧೈರಿಷ್ಟೈ ರಮತೇ ಯೋ ದಿವಾನಿಶಮ್ ॥ 13 ॥|
ಉಪಾಸ್ಯಮಾನೋ ಬಹುಭಿಃ ಕುರುಪಾಂಡವಸಾತ್ವತೈಃ |
ಶ್ಲಕ್ಷ್ಣಸ್ತಸ್ಯ ಗೃಹೇ ಶಬ್ದೋ ನಾದ್ಯ ದ್ರೌಣೇರ್ಯಥಾ ಪುರಾ ॥ 14 ॥
ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶಿಷ್ಯರು ನನ್ನ ಪುತ್ರನಿಗೆ ಪರಮಾಶ್ರಯರಾದ ಮಹಾಧನುರ್ಧಾರಿಗಳಾದ ಯಾವ ದ್ರೋಣಪುತ್ರರನ್ನು ಉಪಾಸನೆ ಮಾಡುತ್ತಿದ್ದರೋ, ಯಾವ ಅಶ್ವತ್ಥಾಮರು ವಿವಿಧವಾದ, ಇಷ್ಟವಾದ ಮಂತ್ರ ಸ್ವರದಿಂದ ಕೂಡಿದ ಸಂಭಾಷಣೆಗಳಿಂದಲೂ, ವಾದ್ಯ-ಸಂಗೀತಗಳಿಂದಲೂ, ಇಷ್ಟವಾದ ಗಾನಗಳಿಂದಲೂ ಹಗಲು-ರಾತ್ರಿಯೂ ಸಂತೋಷ ಪಡುತಿತದ್ದರೋ ಅಂತಹ ಅನೇಕ ಕುರು- ಪಾಂಡವ-ಸಾತ್ವತರಿಂದ ಉಪಾಸ್ಯಮಾನರಾದ ಅಶ್ವತ್ಥಾಮರ ಮನೆಯಲ್ಲಿ ಈ ದಿನ ಹಿಂದಿನಂತೆ ಮಧುರವಾದ ಶಬ್ದವು ಕೇಳಿ ಬರುತ್ತಿಲ್ಲ.
ದ್ರೋಣಪುತ್ರಂ ಮಹೇಷ್ವಾಸಂ ಗಾಯಕಾ ನರ್ತಕಾಶ್ಚ ಯೇ |
ಅತ್ಯರ್ಥಮುಪತಿಷ್ಠಂತಿ ತೇಷಾಂ ನ ಶ್ರೂಯತೇ ಧ್ವನಿಃ ॥ 15 ॥
ದ್ರೋಣಪುತ್ರರೂ, ಮಹಾಧನುರ್ಧಾರಿಗಳೂ ಆದ ಅವರ ಮನೆಯಲ್ಲಿ ಗಾಯಕರು ಮತ್ತು ನರ್ತಕರು ಅವರನ್ನು ವಿಶೇಷವಾಗಿ ಸ್ತೋತ್ರ ಮಾಡುತ್ತಿದ್ದರು. ಅವರ ಧ್ವನಿಯು ಕೇಳಿಬರುತ್ತಿಲ್ಲ.
ವಿಂದಾನುವಿಂದಯೋಶ್ಚಾಸ್ಮಿನ್ ಶಿಬಿರೇ ಯೋ ಮಹಾಧ್ವನಿಃ |
ಶ್ರೂಯತೇ ಸೋಽದ್ಯ ನ ತಥಾ ಕೇಕಯಾನಾಂ ಚ ವೇಶ್ಮನಿ ॥ 16 ॥
ವಿಂದಾನುವಿಂದರ ಶಿಬಿರದಲ್ಲಿ ಯಾವ ಧ್ವನಿಯು ಕೇಳಿ ಬರುತ್ತಿದ್ದಿತೋ, ಹಾಗೆಯೇ ಕೇಕಯರ ಶಿಬಿರದಲ್ಲಿ ಯಾವ ದೊಡ್ಡ ಧ್ವನಿಯು ಕೇಳಿ ಬರುತ್ತಿದ್ದಿತೋ, ಆ ಧ್ವನಿಯು ಈ ದಿನ ಕೇಳಿಬರುತ್ತಿಲ್ಲ.
ನಿತ್ಯಂ ಪ್ರಮುದಿತಾನಾಂ ಚ ತಾಳಗೀತಸ್ವನೋ ಮಹಾನ್ |
ನೃತ್ಯತಾಂ ಶ್ರೂಯತೇ ತಾತ ಗಣ್ಯಾನಾಂ ಸೋಽದ್ಯ ನ ಸ್ವನಃ ॥ 17 ॥
ನಿತ್ಯವೂ ಸಂತೋಷಗೊಂಡು ಚಪ್ಪಾಳೆ ಮತ್ತು ಗೀತ ಶಬ್ದದಿಂದ ನರ್ತನ ಮಾಡುವ ಗಣಿಕೆಯರ ಶಬ್ದವು ಈ ದಿನ ಕೇಳುತ್ತಿಲ್ಲ.
ಸಪ್ತತಂತೂನ್ ವಿತನ್ವಾನಾ ಯಮುಪಾಸಂತಿ ಯಾಜಕಾಃ |
ಸೌಮದತ್ತಿಂ ಶ್ರುತನಿಧಿಂ ತೇಷಾಂ ನ ಶ್ರೂಯತೇ ಧ್ವನಿಃ ॥ 18 ॥
ಯಜ್ಞಗಳನ್ನು ಮಾಡುವ ಯಾಜಕರು ಯಾವ ಜ್ಞಾನನಿಧಿಯಾದ ಭೂರಿಶ್ರವನನ್ನು ಉಪಾಸನೆ ಮಾಡುತ್ತಿದ್ದರೋ ಅಂತಹವರ ಧ್ವನಿಯು ಕೇಳಿ ಬರುತ್ತಿಲ್ಲ.
ಜ್ಯಾಘೋಷೋ ಬ್ರಹ್ಮಘೋಷಶ್ಚ ತೋಮರಾಸಿರಥಧ್ವನಿಃ |
ದ್ರೋಣಸ್ಯಾಸೀದವಿರತೋ ಗೃಹೇ ತಂ ನ ಶೃಣೋಮ್ಯಹಮ್ ॥ 19 ॥
ದ್ರೋಣರ ಮನೆಯಲ್ಲಿ (ಶಿಬಿರದಲ್ಲಿ) ಸತತವಾಗಿ ಹೆದೆಯ ಘೋಷ, ವೇದ ಘೋಷ ಮತ್ತು ತೋಮರ-ಖಡ್ಗಗಳ ಧ್ವನಿಯು ಕೇಳಿ ಬರುತ್ತಿದ್ದಿತು. ಈ ದಿನ ನಾನು ಅದನ್ನು ಕೇಳುತ್ತಿಲ್ಲ.

ನಾನಾದೇಶಸಮುತ್ಥಾನಾಂ ಗೀತಾನಾಂ ಯೋಽಭವತ್ ಸ್ವನಃ |
ವಾದಿತ್ರಘೋಷಿತಾನಾಂ ಚ ಸೋಽದ್ಯ ನ ಶ್ರೂಯತೇ ಧ್ವನಿಃ ॥ 20 ॥
ನಾನಾ ದೇಶದ ಗೀತೆಗಳ ಶಬ್ದವು, ಹಾಗೆ ವಾದ್ಯದ ಘೋಷವು ಯಾವ ಅವರ ಮನೆಯಲ್ಲಿ ಕೇಳಿ ಬರುತ್ತಿದ್ದಿತೋ ಅದು ಈ ದಿನ ಕೇಳುವುದಿಲ್ಲ.
ಯದಾಪ್ರಭೃತ್ಯುಪಪ್ಲವ್ಯಾತ್ ಶಾಂತಿಮಿಚ್ಛನ್ ಜನಾರ್ದನಃ |
ಆಗತಃ ಸರ್ವಭೂತಾನಾಮನುಕಂಪಾರ್ಥಮಚ್ಯುತಃ ॥ 21 ॥
ತತೋಽಹಮಬ್ರುವಂ ತಾತ ಮಂದಂ ದುರ್ಯೋಧನಂ ತದಾ |
ವಾಸುದೇವೇನ ತೀರ್ಥೇನ ತಾತ ಸಂಶಮ್ಯ ಪಾಂಡವೈಃ ॥ 22 ॥
ಕಾಲಪ್ರಾಪ್ತಮಹಂ ಮನ್ಯೇ ಮಾ ತ್ವಂ ದುರ್ಯೋಧನಾತಿಗಾಃ |
ಸಂಶಾಮ್ಯ ಭ್ರಾತೃಭಿಸ್ಸ್ವೈಸ್ತು ಕ್ಷತ್ರಿಯಾನಭಿಪಾಲಯ ॥ 23 ॥
ಶಮಂ ಚೇದ್ ಯಾಚಮಾನಂ ತ್ವಂ ಪ್ರತ್ಯಾಖ್ಯಾಸ್ಯಸಿ ಕೇಶವಮ್ |
ಹಿತಾರ್ಥಮಪಿ ಜಲ್ಪಂತಮವಾಪ್ಸ್ಯಸಿ ಪರಾಜಯಮ್ ॥ 24 ॥
ಕೃಷ್ಣನು ಸರ್ವಪ್ರಾಣಿಗಳ ಮೇಲಿನ ದಯೆಯಿಂದ ಶಾಂತಿಯನ್ನು ಬಯಸಿ ಉಪಪ್ಲಾವ್ಯ ನಗರದಿಂದ ಬಂದಾಗಲೇ ಎಲೈ ಪ್ರೀತಿಪಾತ್ರನೇ, ನಾನು ಮಂದನಾದ ದುರ್ಯೋಧನನನ್ನು ಕುರಿತು, ಪೂಜ್ಯನಾದ ವಾಸುದೇವನ ಜೊತೆಯಲ್ಲಿಯೂ, ಪಾಂಡವರ ಜೊತೆಯಲ್ಲಿಯೂ ಸಂಧಿಯನ್ನು ಮಾಡಿಕೊ. ಇದು ಈ ಕಾಲದಲ್ಲಿ ಮಾಡಲು ಯೋಗ್ಯವಾದುದು ಎಂದು ನಾನು ತಿಳಿಯುತ್ತೇನೆ. ದುರ್ಯೋಧನನೇ, ನನ್ನ ಮಾತನ್ನು ಮೀರಬೇಡ. ಸಹೋದರರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಂಡು ಕ್ಷತ್ರಿಯರನ್ನು ರಕ್ಷಿಸುವವನಾಗು. ನಿನ್ನ ಹಿತದ ಸಲುವಾಗಿ ಸಂಧಿಯನ್ನು ಬೇಡುತ್ತಾ ಮಾತನಾಡುತ್ತಿರುವ ಕೃಷ್ಣನನ್ನು ನಿರಾಕರಿಸಿದರೆ ನೀನು ಪರಾಜಯವನ್ನು ಹೊಂದುವಿ ಎಂದು ಹೇಳಿದೆನು.
ಪ್ರತ್ಯಾಚಷ್ಟ ಸ ದಾಶಾರ್ಹಮ್ ಋಷಭಂ ಸರ್ವಸಾತ್ತ್ವತಾಮ್ |
ಅನುನೀಯಾಭಿಜಲ್ಪಂತಮನಯಾನ್ನಾನ್ವಪದ್ಯತ ॥ 25 ॥
ಅವನು ಸಮಾಧಾನದಿಂದ ಮಾತನಾಡುತ್ತಿದ್ದ ಸಾತ್ವತಋಷಭನಾದ, ದಾಶಾರ್ಹನಾದ ಕೃಷ್ಣನನ್ನು ತನ್ನ ದುರ್ನೀತಿಯಿಂದಾಗಿ ನಿರಾಕರಿಸಿದನು. ಅವನ ಮಾತನ್ನು ಕೇಳಲಿಲ್ಲ.
ಕರ್ಣದುಃಶಾಸನಮತೇ ಸೌಬಲಸ್ಯ ಚ ದುರ್ಮತೇಃ |
ಪ್ರತ್ಯಾಖ್ಯಾತೋ ಮಹಾಬಾಹುಃ ಕುಲಾಂತಕರಣೇನ ಮೇ ॥ 26 ॥
ಕರ್ಣ-ದುಶ್ಶಾಸನರ ಅಭಿಪ್ರಾಯವನ್ನು ಮತ್ತು ದುರ್ಬುದ್ಧಿಯುಳ್ಳ ಶಕುನಿಯ ಅಭಿಪ್ರಾಯವನ್ನು ಆಶ್ರಯಿಸಿ, ನನ್ನ ಕುಲನಾಶಕನಾದ ಅವನು ಮಹಾಬಾಹುವಾದ ಕೃಷ್ಣನನ್ನು ನಿರಾಕರಿಸಿದನು.
ನಿತ್ಯಂ ದುಃಶಾಸನಸ್ಯೈವ ಕರ್ಣಸ್ಯ ಚ ಮತೇ ದ್ವಯೋಃ |
ಅನ್ವವರ್ತತ ಹಿತ್ವಾ ಮಾಂ ಕೃಷ್ಟಃ ಕಾಲೇನ ದುರ್ಮತಿಃ ॥ 27 ॥
ದುರ್ಮತಿಯಾದ ನನ್ನ ಪುತ್ರನು ಕಾಲಪಾಶದಿಂದ ಎಳೆಯಲ್ಪಟ್ಟು, ನನ್ನನ್ನು ಬಿಟ್ಟು ಯಾವಾಗಲೂ ಕರ್ಣ ಮತ್ತು ದುಶ್ಶಾಸನರ ಅಭಿಪ್ರಾಯವನ್ನೇ ಅನುಸರಿಸಿದನು.
ನ ಹ್ಯಹಂ ಯುದ್ಧಮಿಚ್ಛಾಮಿ ವಿದುರೋ ದ್ರೋಣ ಏವ ವಾ |
ಬಾಹ್ಲೀಕಃ ಸೋಮದತ್ತೋ ವಾ ಭೀಷ್ಮೋ ದ್ರೌಣಾಯನಿಸ್ತಥಾ ॥ 28 ॥
ಶಲ್ಯೋ ಭೂರಿಶ್ರವಾಶ್ಚೈವ ಪುರುಮಿತ್ರೋ ವಿವಿಂಶತಿಃ |
ಜಯಃ ಕೃಪೋ ವಾ ಧರ್ಮಾತ್ಮಾ ನ ಚಾನ್ಯೇ ಮಮ ಬಾಂಧವಾಃ ॥29॥
ನಾನಾಗಲೀ, ವಿದುರನಾಗಲೀ, ದ್ರೋಣರಾಗಲೀ, ಬಾಹ್ಲೀಕನಾಗಲೀ, ಸೋಮದತ್ತನಾಗಲೀ, ಭೀಷ್ಮರಾಗಲೀ, ದ್ರೋಣಪುತ್ರರಾದ ಅಶ್ವತ್ಥಾಮರಾಗಲೀ, ಶಲ್ಯನಾಗಲೀ, ಭೂರಿಶ್ರವನಾಗಲೀ, ಪುರುಮಿತ್ರನಾಗಲೀ, ವಿವಿಂಶತಿಯಾಗಲೀ, ಜಯನಾಗಲೀ, ಧರ್ಮಿಷ್ಠರಾದ ಕೃಪರಾಗಲೀ ಅಥವಾ ಉಳಿದ ನನ್ನ ಬಾಂಧವರಾಗಲೀ ಯುದ್ಧವನ್ನು ಬಯಸುವುದಿಲ್ಲ.
ಏತೇಷಾಂ ಮತಮಾಸ್ಥಾಯ ಯದಿ ವರ್ತ್ಸ್ಯತಿ ಪುತ್ರಕಃ |
ಸಜ್ಞಾತಿಮಿತ್ರಃ ಸುಸುಖಂ ಚಿರಂ ಜೀವೇದನಾಮಯಮ್ |
ಏತೇಭ್ಯಶ್ಚ ಮದೂರ್ಧ್ವಂ ಚ ಅಭೋಕ್ಷ್ ್ಯದ್ ವಸುಧಾಮಿಮಾಮ್ ॥30॥
ಇವರೆಲ್ಲರ ಅಭಿಪ್ರಾಯದಂತೆ ನನ್ನ ಪುತ್ರನು ನಡೆದುಕೊಂಡಿದ್ದರೆ ಬಂಧು-ಮಿತ್ರರ ಸಹಿತನಾಗಿ ಯಾವ ಉಪದ್ರವವೂ ಇಲ್ಲದೆ, ಇವರೆಲ್ಲರ ಅನಂತರವೂ ಮತ್ತು ನನ್ನ ಅನಂತರವೂ ಸುಖವಾಗಿ ಈ ಭೂಮಿಯನ್ನು ಭೋಗಿಸಿಕೊಂಡು ಇರುತ್ತಿದ್ದನು.
ಶುದ್ಧಾ ಮಧುರಸಂಭಾಷಾ ಜ್ಞಾತಿಮಧ್ಯೇ ಪ್ರಿಯಂವದಾಃ |
ಕುಲೀನಾಶ್ಚಾಭಿಜಾತಾಶ್ಚ ಸುಖಂ ಜೀವಂತಿ ಪಾಂಡವಾಃ ॥31॥
ಶುದ್ಧರು, ಮಧುರಸಂಭಾಷಣೆಯುಳ್ಳವರು, ಜ್ಞಾತಿಗಳಲ್ಲಿ ಪ್ರಿಯವಾಗಿ ಮಾತನಾಡುವವರು, ಕುಲೋಚಿತವಾದ ನಡತೆಯುಳ್ಳವರು, ಒಳ್ಳೆಯ ಕುಲದಲ್ಲಿ ಜನಿಸಿದವರೂ ಆದ ಪಾಂಡವರು ಸುಖವಾಗಿ ಜೀವಿಸುತ್ತಾರೆ.
ಧರ್ಮಾಪೇಕ್ಷೀ ನರಸ್ತಾತ ಸರ್ವತ್ರ ಲಭತೇ ಸುಖಮ್ |
ಪ್ರೇತ್ಯಭಾವೇ ಚ ಕಲ್ಯಾಣಂ ಪ್ರಸಾದಾತ್ ಪ್ರತಿಪದ್ಯತೇ ॥ 32 ॥
ಎಲೈ ಪ್ರೀತಿಪಾತ್ರನೇ, ಧರ್ಮವನ್ನು ಅಪೇಕ್ಷಿಸುವ ಮನುಷ್ಯನು ಎಲ್ಲಾ ಕಡೆಯಲ್ಲಿಯೂ ಸುಖವನ್ನೇ ಪಡೆಯುತ್ತಾನೆ. ಮೃತನಾದ ಮೇಲೆ ಭಗವದನುಗ್ರಹದಿಂದ ಬಹಳ ಕಲ್ಯಾಣವನ್ನು ಹೊಂದುತ್ತಾನೆ.

ಅಲಮರ್ಧಂ ಪೃಥಿವ್ಯಾಸ್ತೇ ಸಹಾಮಾತ್ಯಸ್ಯ ಮಾ ದ್ರುಹಃ |
ತೇಷಾಮಪಿ ಸಮುದ್ರಾಂತಾ ಪಿತೃಪೈತಾಮಹೀ ಮಹೀ ॥ 33 ॥
ನಿನಗೂ ಮತ್ತು ನಿನ್ನ ಮಂತ್ರಿಗಳಿಗೂ ಪೃಥಿವಿಯ ಅರ್ಧಭಾಗವು ಸಾಕು. ಪಾಂಡವರಿಗೆ ದ್ರೋಹವನ್ನು ಮಾಡಬೇಡ. ಸಮುದ್ರಾಂತವಾದ ಈ ಭೂಮಿಯು ಅವರಿಗೂ ಪಿತೃ-ಪಿತಾಮಹರಿಂದ ಬಂದ ಆಸಿತಯಾಗಿದೆ.
ನ ಚ ತ್ವಾಽಭಿಭವಿಷ್ಯಂತಿ ಹಿತ್ವಾ ಧರ್ಮಂ ಪೃಥಾತ್ಮಜಾಃ |
ನಿಯುಜ್ಯಮಾನಾಃ ಸ್ಥಾಸ್ಯಂತಿ ಪಾಂಡವಾ ಧರ್ಮವರ್ತ್ಮನಿ ॥34॥
ಕುಂತಿಯ ಪುತ್ರರು ಧರ್ಮವನ್ನು ಬಿಟ್ಟು ಎಂದೂ ನಿನ್ನನ್ನು ತಿರಸ್ಕರಿಸುವುದಿಲ್ಲ. ದೊಡ್ಡವರ ಆದೇಶಕ್ಕೆ ಅನುಗುಣವಾಗಿ ಪಾಂಡವರು ಧರ್ಮಮಾರ್ಗದಲ್ಲಿಯೇ ಇರುವರು.
ಸಂತಿ ನೋ ಜ್ಞಾತಯಸ್ತಾತ ಯೇಷಾಂ ಶ್ರೋಷ್ಯಂತಿ ಪಾಂಡವಾಃ |
ಶಲ್ಯಸ್ಯ ಸೋಮದತ್ತಸ್ಯ ಭೀಷ್ಮಸ್ಯ ಚ ಮಹಾತ್ಮನಃ ॥ 35 ॥
ದ್ರೋಣಸ್ಯಾಥ ವಿಕರ್ಣಸ್ಯ ಬಾಹ್ಲೀಕಸ್ಯ ಕೃಪಸ್ಯ ಚ |
ಅನ್ಯೇಷಾಂ ಚೈವ ವೃದ್ಧಾನಾಂ ಭರತಾನಾಂ ಮಹಾತ್ಮನಾಮ್ |
ತ್ವದರ್ಥಂ ಬ್ರುವತಾಂ ತಾತ ನ ಜಹುರ್ವಚನಾನಿ ತೇ ॥ 36 ॥
ಎಲೈ ಪ್ರೀತಿಪಾತ್ರನೇ, ಪಾಂಡವರು ಯಾರ ಮಾತನ್ನು ಕೇಳುವರೋ ಅಂತಹ ಬಂಧುಗಳು ನಮಗೆ ಇದ್ದಾರೆ. ಶಲ್ಯ, ಸೋಮದತ್ತ, ಮಹಾತ್ಮರಾದ ಭೀಷ್ಮರು, ದ್ರೋಣರು, ವಿಕರ್ಣ, ಬಾಹ್ಲೀಕ, ಕೃಪರು, ಬೇರೆ ಮಹಾತ್ಮರಾದ ಭರತವಂಶದ ವೃದ್ಧರು, ಎಲೈ ಪ್ರೀತಿಪಾತ್ರನೇ, ನಿನ್ನ ಹಿತವನ್ನು ನುಡಿಯುವ ಇವರೆಲ್ಲರ ಮಾತನ್ನು ಪಾಂಡವರು ಮೀರುವುದಿಲ್ಲ.
ಕಂ ವಾ ತ್ವಂ ಮನ್ಯಸೇ ತೇಷಾಂ ಯಸ್ತ್ವಾಂ ಬ್ರೂಯಾದತೋಽನ್ಯಥಾ |
ಕೃಷ್ಣೋ ಧರ್ಮಂ ನ ಸಂಜಹ್ಯಾತ್ ಸರ್ವ ಏತೇ ತದನ್ವಯಾಃ ॥ 37 ॥
ಅವರಲ್ಲಿ ಯಾರು ನಿನಗೆ ವಿರುದ್ಧವಾಗಿ ಮಾತನಾಡುವರೆಂದು ನೀನು ತಿಳಿದಿದ್ದೀಯೆ? ಕೃಷ್ಣನೂ ಧರ್ಮವನ್ನು ಬಿಡಲಾರ. ಇವರೆಲ್ಲರೂ ಅವನ ಮಾರ್ಗವನ್ನೇ ಅನುಸರಿಸುವವರು.
ಮಯಾಽಪಿ ಚೋಕ್ತಾಸ್ತೇ ವೀರಾ ವಚನಂ ಧರ್ಮಸಮ್ಮಿತಮ್ |
ನಾನ್ಯಥಾ ವೈ ಕರಿಷ್ಯಂತಿ ಧರ್ಮಾತ್ಮಾನೋ ಹಿ ಪಾಂಡವಾಃ ॥38॥
ಆ ವೀರರಿಗೆ ನಾನೂ ಸಹ ಧರ್ಮಸಮ್ಮತವಾದ ಮಾತುಗಳನ್ನು ಹೇಳಿದ್ದೇನೆ. ಧರ್ಮಾತ್ಮರಾದ ಪಾಂಡವರು ಬೇರೆ ರೀತಿಯಲ್ಲಿ ನಡೆದುಕೊಳ್ಳುವುದಿಲ್ಲ.
ಇತ್ಯಹಂ ವಿಲಪನ್ ಸೂತ ಬಹುಶಃ ಪುತ್ರಮುಕ್ತವಾನ್ |
ನಹಿ ಮೇ ಶ್ರುತವಾನ್ ಮೂಢೋ ಮನ್ಯೇ ಕಾಲಸ್ಯ ಪರ್ಯಯಮ್ ॥
ಎಲೈ ಸೂತನೇ, ನಾನು ಬಹಳವಾಗಿ ಗೋಳಾಡುತ್ತಾ ಹೀಗೆ ನನ್ನ ಪುತ್ರನಿಗೆ ಹೇಳಿದೆ. ಆದರೆ ಮೂಢನಾದ ಅವನು ನನ್ನ ಮಾತನ್ನು ಕೇಳಲಿಲ್ಲ. ಇದನ್ನು ಕಾಲಚಕ್ರದ ಗತಿ ಎಂದು ನಾನು ತಿಳಿದಿದ್ದೇನೆ.
ವೃಕೋದರಾರ್ಜುನೌ ಯತ್ರ ವೃಷ್ಣಿವೀರಶ್ಚ ಸಾತ್ಯಕಿಃ |
ಉತ್ತಮೌಜಾಶ್ಚ ಪಾಂಚಾಲ್ಯೋ ಯುಧಾಮನ್ಯುಶ್ಚ ದುರ್ಜಯಃ ॥ 40 ॥
ಧೃಷ್ಟದ್ಯುಮ್ನಶ್ಚ ದುರ್ಧರ್ಷಃ ಶಿಖಂಡೀ ಚಾಪರಾಜಿತಃ |
ಅಶ್ಮಕಾಃ ಕೇಕಯಾಶ್ಚೈವ ಕ್ಷತ್ರಧರ್ಮಾಽಥ ಸೌಮಕಿಃ ॥ 41 ॥
ಚೈದ್ಯಶ್ಚ ಚೇಕಿತಾನಶ್ಚ ಪುತ್ರಃ ಕಾಶ್ಯಸ್ಯ ಚಾಭಿಭೂಃ |
ದ್ರೌಪದೇಯಾ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ 42 ॥
ಯಮೌ ಚ ಪುರುಷವ್ಯಾಘ್ರೌ ಮಂತ್ರೀ ಚ ಮಧುಸೂದನಃ |
ಕ ಏತಾನ್ ಜಾತು ಯುಧ್ಯೇತ ಅಸ್ಮಿಲ್ಲೋಕೇ ಜಿಜೀವಿಷುಃ ॥ 43 ॥
ಎಲ್ಲಿ ಭೀಮಾರ್ಜುನರು, ವೃಷ್ಣಿವೀರನಾದ ಸಾತ್ಯಕಿಯು, ಪಾಂಚಾಲ ಯೋಧನಾದ ಉತ್ತಮೌಜನು, ದುರ್ಜಯನಾದ ಯುಧಾಮನ್ಯುವು, ದುರ್ಧರ್ಷನಾದ ಧೃಷ್ಟದ್ಯುಮ್ನನು, ಅಪರಾಜಿತನಾದ ಶಿಖಂಡಿಯು, ಅಶ್ಮಕರು, ಕೇಕಯರು, ಕ್ಷತ್ರಧರ್ಮನು, ಸೌಮಕನು, ಚೈದ್ಯನು, ಚೇಕಿತಾನನು, ಕಾಶಿರಾಜ ಪುತ್ರನಾದ ಸುದಕ್ಷಿಣನು, ದ್ರೌಪದಿಯ ಐವರು ಮಕ್ಕಳು, ವಿರಾಟನು, ಮಹಾರಥನಾದ ದ್ರುಪದನು, ಪುರುಷವ್ಯಾಘ್ರರಾದ ನಕುಲ- ಸಹದೇವರು, ಮಂತ್ರಿಯಾದ ಕೃಷ್ಣನು ಇದ್ದಾರೆಯೋ ಅಂತಹವರ ವಿರುದ್ಧವಾಗಿ ಬದುಕಲು ಬಯಸುವ ಯಾವನು ಈ ಲೋಕದಲ್ಲಿ ಯುದ್ಧವನ್ನು ಮಾಡಿಯಾನು?
ದಿವ್ಯಮಸ್ತ್ರಂ ವಿಕುರ್ವಾಣಾಃ ಸಂಹರೇಯುರರಿಂದಮಾಃ |
ಅನ್ಯಂ ದುರ್ಯೋಧನಾತ್ ಕರ್ಣಾಚ್ಛಕುನೇಶ್ಚಾಪಿ ಸೌಬಲಾತ್ ॥ 44 ॥
ದುಃಶಾಸನಚತುರ್ಥಾನಾಂ ನಾನ್ಯಂ ಪಶ್ಯಾಮಿ ಪಂಚಮಮ್ ॥ 45 ॥
ಅರಿಂದಮರಾದ ಪಾಂಡವರು ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ದುರ್ಯೋಧನ, ಕರ್ಣ, ಸೌಬಲನಾದ ಶಕುನಿ ಮತ್ತು ನಾಲ್ಕನೆಯವನಾದ ದುಶ್ಶಾಸನನನ್ನು ಬಿಟ್ಟು ಉಳಿದವರೆಲ್ಲರನ್ನೂ ಸಂಹರಿಸಿಯಾರು? ಉಳಿಯುವ ಐದನೆಯ ವ್ಯಕ್ತಿಯನ್ನು ನಾನು ಕಾಣುವುದಿಲ್ಲ.
ಯೇಷಾಂ ವಚನಕೃತ್ ಸ ಸ್ಯಾದ್ ವಿಷ್ವಕ್ಸೇನೋ ರಥೇ ಸ್ಥಿತಃ |
ಸನ್ನದ್ಧಶ್ಚಾರ್ಜುನೋ ಯೋದ್ಧಾ ತೇಷಾಂ ನಾಸ್ತಿ ಪರಾಜಯಃ ॥ 46 ॥
ವಿಷ್ವಕ್ಸೇನನಾದ ಕೃಷ್ಣನು ಯಾರ ರಥದಲ್ಲಿ ಕುಳಿತು ಪಾಂಡವರ ಮಾತನ್ನು ಕೇಳುತ್ತಾನೆಯೋ, ಯಾರಿಗೆ ಸನ್ನದ್ಧನಾದ ಅರ್ಜುನನು

ಯೋಧನಾಗಿದ್ದಾನೆಯೋ ಅವರಿಗೆ ಪರಾಜಯವಿಲ್ಲ.
ತೇಷಾಂ ಮಮ ವಿಲಾಪಾನಾಂ ನೇಹ ದುರ್ಯೋಧನಃ ಸ್ಮರೇತ್ |
ಹತೌ ಹಿ ಪುರುಷವ್ಯಾಘ್ರೌ ಭೀಷ್ಮದ್ರೋಣೌ ಸಮಾಹಿತೌ ॥ 47 ॥
ನನ್ನ ಆ ವಿಲಾಪದ ಮಾತುಗಳನ್ನು ಈಗ ದುರ್ಯೋಧನನು ಸ್ಮರಿಸಲಾರ. ಸಮಾಧಾನಚಿತ್ತರಾದ, ಪುರುಷವ್ಯಾಘ್ರರಾದ ಭೀಷ್ಮ-ದ್ರೋಣರೂ ಹತರಾದರು.
ತೇಷಾಂ ವಿದುರವಾಕ್ಯಾನಾಮುಕ್ತಾನಾಂ ದೀರ್ಘದರ್ಶನಾತ್ |
ದೃಷ್ಟ್ವೇಮಾಂ ಫಲನಿರ್ವೃತ್ತಿಂ ಮನ್ಯೇ ಶೋಚಂತಿ ಪುತ್ರಕಾಃ ॥ 48 ॥
ತನ್ನ ದೀರ್ಘದರ್ಶನದಿಂದ ವಿದುರನು ಹೇಳಿದ ಮಾತುಗಳ ಈ ಫಲಪಾಕವನ್ನು ನೋಡಿ ನನ್ನ ಪುತ್ರರು ಶೋಕಪಡುತ್ತಾರೆ ಎಂದು ಕಾಣಿಸುತ್ತದೆ.
ಸೇನಾಂ ದೃಷ್ಟ್ವಾಽಭಿಭೂತಾಂ ಮೇ ಶೈನೇಯೇನಾರ್ಜುನೇನ ಚ |
ಶೂನ್ಯಾನ್ ದೃಷ್ಟ್ವಾ ರಥೋಪಸ್ಥಾನ್ ಮನ್ಯೇ ಶೋಚಂತಿ ಪುತ್ರಕಾಃ ॥
ನನ್ನ ಸೈನ್ಯವು ಸಾತ್ಯಕಿ ಮತ್ತು ಅರ್ಜುನರಿಂದ ಪರಾಭವಗೊಂಡು ರಥದ ಪೀಠಗಳು ರಥಿಕರಿಲ್ಲದೆ ಶೂನ್ಯವಾಗಿರುವುದನ್ನು ನೋಡಿ ನನ್ನ ಪುತ್ರರು ಶೋಕ ಪಡುವರೆಂದು ಭಾವಿಸುತ್ತೇನೆ.
ಹಿಮಾತ್ಯಯೇ ಯಥಾ ಕಕ್ಷಂ ಶುಷ್ಕಂ ವಾತೇರಿತೋ ಮಹಾನ್ |
ಅಗ್ನಿರ್ದಹೇತ್ ತಥಾ ಸೇನಾಂ ಮಾಮಿಕಾಂ ಸ ಧನಂಜಯಃ ॥ 50 ॥
ಹಿಮಗಾಲವು ಕಳೆದ ಮೇಲೆ ಒಣಗಿದ ಹುಲ್ಲುಗಾವಲನ್ನು ವಾಯುವಿನಿಂದ ಪ್ರೇರಿತವಾದ ಮಹಾಗ್ನಿಯು ಸುಡುವಂತೆ ನನ್ನ ಸೈನ್ಯವನ್ನು ಅರ್ಜುನನು ಸುಡುವನು.
ಆಚಕ್ಷ್ವ ಮೇ ಪುನಃ ಸರ್ವಂ ಕುಶಲೋ ಹ್ಯಸಿ ಸಂಜಯ |
ಯದೋಪಯಾತಾಃ ಸಾಯಾಹ್ನೇ ಕೃತ್ವಾ ಪಾರ್ಥಸ್ಯ ಕಿಲ್ಬಿಷಮ್ |
ಅಭಿಮನ್ಯೌ ಹತೇ ತಾತ ಕಥಮಾಸೀನ್ಮನೋ ಹಿ ವಃ ॥ 51 ॥
ಎಲೈ ಸಂಜಯನೇ, ನನಗೆ ಪುನಃ ಎಲ್ಲವನ್ನೂ ಹೇಳು. ನೀನು ಯುದ್ಧವನ್ನು ವರ್ಣಿಸುವುದರಲ್ಲಿ ಕುಶಲನಾಗಿದ್ದೀಯೆ. ಎಲೈ ಪ್ರೀತಿಪಾತ್ರನೇ, ಅಭಿಮನ್ಯುವನ್ನು ಕೊಂದು ಅರ್ಜುನನಿಗೆ ಅಪಚಾರವನ್ನು ಮಾಡಿ, ಸಾಯಂಕಾಲದಲ್ಲಿ ಶಿಬಿರಕ್ಕೆ ಬಂದಾಗ ನಿಮ್ಮ ಮನಸ್ಸುಗಳು ಹೇಗಿದ್ದವು?
ವಿಜಾನಂಸ್ತಸ್ಯ ಕರ್ಮಾಣಿ ಯುಧಿ ಗಾಂಡೀವಧನ್ವನಃ |
ಅಪಕೃತ್ಯ ಮಹತ್ ತಾತ ಸೋಢುಂ ಶಕ್ಷ್ಯಂತಿ ಮಾಮಕಾಃ ॥ 52 ॥
ಎಲೈ ಪ್ರೀತಿಪಾತ್ರನೇ, ಗಾಂಡೀವ ಧನುರ್ಧಾರಿಯಾದ ಅವನು ಯುದ್ಧದಲ್ಲಿ ಮಾಡಿದ ಕಾರ್ಯವನ್ನು ನೋಡಿ, ಅವನಿಗೆ ದೊಡ್ಡ ಅಪಕಾರವನ್ನು ಮಾಡಿ ನನ್ನವರು ಅವನನ್ನು ಸಹಿಸಬಲ್ಲರೆ?
ಕಿನ್ನು ದುರ್ಯೋಧನಃ ಕೃತ್ಯಂ ಕಿಂ ಕರ್ಣಃ ಕೃತ್ಯಮಬ್ರವೀತ್ |
ದುಃಶಾಸನಃ ಸೌಬಲಶ್ಚ ತೇಷಾಮೇವಂಗತೇ ಸತಿ ॥ 53 ॥
ಪರಿಸ್ಥಿತಿಯು ಹೀಗಿರುವಾಗ ದುರ್ಯೋಧನನು ಏನು ಮಾಡಬೇಕೆಂದು ಹೇಳಿದನು? ಕರ್ಣನಾಗಲೀ, ದುಶ್ಶಾಸನನಾಗಲೀ, ಶಕುನಿಯಾಗಲೀ ಮುಂದೆ ಏನು ಮಾಡಬೇಕೆಂದು ಹೇಳಿದರು?
ಸರ್ವೇಷಾಂ ಸಮವೇತಾನಾಂ ಪುತ್ರಾಣಾಂ ಮಮ ಸಂಜಯ |
ಯದ್ ವೃತ್ತಂ ತಾತ ಸಂಗ್ರಾಮೇ ಮಂದಸ್ಯಾಪನಯೈರ್ಭೃಶಮ್ ॥54॥
ಲೋಭಾನುಗಸ್ಯ ದುರ್ಬುದ್ಧೇಃ ಕ್ರೋಧೇನ ವಿಕೃತಾತ್ಮನಃ |
ರಾಜ್ಯಕಾಮಸ್ಯ ಮೂಢಸ್ಯ ರಾಗೋಪಹತಚೇತಸಃ ॥ 55 ॥
ದುರ್ನೀತಂ ವಾ ಸುನೀತಂ ವಾ ತನ್ಮಮಾಚಕ್ಷ್ವ ಸಂಜಯ ॥ 56 ॥|
ಎಲೈ ಸಂಜಯನೇ, ಮಂದನಾದ, ಲೋಭಿಯಾದ, ದುರ್ಬುದ್ಧಿಯಾದ, ಕೋಪದಿಂದ ವಿಕಾರ ಹೊಂದಿದ ಮನಸ್ಸುಳ್ಳ, ರಾಜ್ಯಕಾಮನಾದ, ಮೂಢನಾದ, ಆಸೆಯಿಂದ ಪೂರ್ಣವಾದ ಮನಸ್ಸುಳ್ಳ ಅವನ ದುರ್ನಯದಿಂದ ಯುದ್ಧದಲ್ಲಿ ಉಳಿದು ಸೇರಿದ ನನ್ನ ಪುತ್ರರಿಗೆ ಏನು ಸಂಭವಿಸಿತು? ಅದು ದುರ್ನೀತಿಯಾಗಲಿ ಅಥವಾ ಸುನೀತಿಯಾಗಲಿ ಅದನ್ನು ನನಗೆ ಹೇಳುವವನಾಗು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆಂಟನೆಯ ಅಧ್ಯಾಯ
ಸಂಜಯನಿಂದ ಧೃತರಾಷ್ಟ್ರನಿಂದಾಪೂರ್ವಕವಾಗಿ ಯುದ್ಧಕಥನ.
ದ್ರೋಣರಿಂದ ಪದ್ಮಗರ್ಭವುಳ್ಳ ಶಕಟವ್ಯೂಹ ರಚನೆ.
ಸಂಜಯಃ
ಹಂತ ತೇ ಸಂಪ್ರವಕ್ಷ್ಯಾಮಿ ಸರ್ವಂ ಪ್ರತ್ಯಕ್ಷದರ್ಶಿವಾನ್ |
ಶುಶ್ರೂಷಸ್ವ ಸ್ಥಿರೋ ಭೂತ್ವಾ ತವ ಹ್ಯಪನಯೋ ಮಹಾನ್ ॥ 1 ॥

ಸಂಜಯ ಸಂತೋಷ. ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದ ನಾನು ನಿನಗೆ ಹೇಳುವೆನು. ದೃಢವಾಗಿದ್ದು ಕೇಳುವವನಾಗು. ನಿನ್ನ ಅಪಚಾರವೇ ದೊಡ್ಡದಾಗಿದೆಯಷ್ಟೆ?
ಗತೋದಕೇ ಸೇತುಬಂಧೋ ಯಾದೃಕ್ ತಾದೃಗಯಂ ತವ |
ವಿಲಾಪೋ ನಿಷ್ಫಲೋ ರಾಜನ್ ಮಾ ಶುಚೋ ಭರತರ್ಷಭ ॥ 2 ॥
ಅನತಿಕ್ರಮಣೀಯೋಽಯಂ ಕೃತಾಂತಸ್ಯಾದ್ಭುತೋ ವಿಧಿಃ |
ಮಾ ಶುಚೋ ಭರತಶ್ರೇಷ್ಠ ತವೈವಾಪನಯೋ ಮಹಾನ್ ॥ 3 ॥
ನೀರು ಹರಿದು ಹೋದಮೇಲೆ ಕಟ್ಟೆಯನ್ನು ಹಾಕಿದಂತೆ ಎಲೈ ರಾಜನೇ, ಈ ನಿನ್ನ ವಿಲಾಪವು ವಿಚಿತ್ರವಾಗಿದೆ. ಭರತಶ್ರೇಷ್ಠನೇ, ದುಃಖಪಡಬೇಡ. ಕೃತಾಂತನ ಅದ್ಭುತವಾದ ವಿಧಿಯನ್ನು ಯಾರೂ ದಾಟಲಾರರು. ಭರತಶ್ರೇಷ್ಠನೇ, ಶೋಕಪಡಬೇಡ. ನಿನ್ನ ಅಪಚಾರವೇ ದೊಡ್ಡದಾಗಿದೆ.
ಯದಿ ತ್ವಂ ಹಿ ಪುರಾ ದ್ಯೂತಾತ್ ಕುಂತೀಪುತ್ರಂ ಯುಧಿಷ್ಠಿರಮ್ |
ನ್ಯವಾರಯಿಷ್ಯಃ ಪುತ್ರಾಂಶ್ಚ ನಾಭವಿಷ್ಯಜ್ಜನಕ್ಷಯಃ ॥ 4 ॥
ಹಿಂದೆ ಕುಂತೀಪುತ್ರನಾದ ಯುಧಿಷ್ಠಿರನನ್ನು ಮತ್ತು ನಿನ್ನ ಪುತ್ರರನ್ನು ದ್ಯೂತದಿಂದ ವಿಮುಖರನ್ನಾಗಿ ಮಾಡಿದ್ದರೆ ಈ ಜನಕ್ಷಯವು ಆಗುತ್ತಿರಲಿಲ್ಲ.
ಯುದ್ಧಕಾಲೇ ಪುನಃ ಪ್ರಾಪ್ತೇ ತಥೈವ ಭರತರ್ಷಭ |
ನಿವರ್ತಯೇಥಾಃ ಪುತ್ರಾಂಶ್ಚ ನ ತ್ವಾಂ ವ್ಯಸನಮಾವ್ರಜೇತ್ ॥ 5 ॥
ಎಲೈ ಭರತಶ್ರೇಷ್ಠನೇ, ಹಾಗೆ ಯುದ್ಧಕಾಲವು ಪ್ರಾಪ್ತವಾದಾಗ ನಿನ್ನ ಪುತ್ರರನ್ನು ಯುದ್ಧದಿಂದ ವಿಮುಖರನ್ನಾಗಿ ಮಾಡಿದ್ದರೆ ನಿನಗೆ ಈ ವ್ಯಸನವು ಬರುತ್ತಿರಲಿಲ್ಲ.
ದುರ್ಯೋಧನಂ ಚಾವಿಧೇಯಂ ಬಧ್ನೀಯಾಸ್ತ್ವಂ ಪುರಾ ಯದಿ |
ಅವೇಕ್ಷ ್ಯ ಕೌರವಾನ್ ರಾಜನ್ ಪ್ರಾಪ್ಸ್ಯಸೇ ಸುಮಹದ್ ಯಶಃ |
ಕುರೂನಚೋದಯಿಷ್ಯಸ್ತ್ವಂ ನ ತ್ವಾಂ ವ್ಯಸನಮಾವ್ರಜೇತ್ ॥ 6 ॥
ಎಲೈ ರಾಜನೇ, ನೀನು ಹಿಂದೆಯೇ ಎಲ್ಲ ಕೌರವರ ಹಿತವನ್ನು ಗಮನಿಸಿ ಅವಿಧೇಯನಾದ ದುರ್ಯೋಧನನನ್ನು ಬಂಧಿಸಿದ್ದರೆ ನಿನಗೆ ಮಹಾಕೀರ್ತಿಯು ಬರುತ್ತಿದ್ದಿತು. ಹಾಗೆ ನೀನು ಕುರುಗಳಿಗೆ ಪ್ರಚೋದನೆಯನ್ನು ನೀಡಿದ್ದರೆ ನಿನಗೆ ವ್ಯಸನವು ಬರುತ್ತಿರಲಿಲ್ಲ.
ತತ್ ತೇ ಬುದ್ಧಿವ್ಯತೀಚಾರಮ್ ಉಪಲಪ್ಸ್ಯಂತಿ ತಂ ಜನಾಃ |
ಪಾಂಚಾಲಾ ವೃಷ್ಣಯಶ್ಚೈವ ಯೇ ಚಾನ್ಯೇಽಪಿ ಜನಾಧಿಪಾಃ ॥ 7 ॥
ಆ ನಿನ್ನ ಬುದ್ಧಿಯ ವ್ಯಭಿಚಾರದ ಫಲವನ್ನು ಈ ದಿನ ಪಾಂಚಾಲರೂ, ವೃಷ್ಣಿಗಳೂ, ಉಳಿದ ರಾಜರೂ ಮತ್ತು ಜನರೂ ಅನುಭವಿಸುವರು.
ಸ ಕೃತ್ವಾ ಪಿತೃಕರ್ಮ ತ್ವಂ ಪುತ್ರಂ ಸಂಸ್ಥಾಪ್ಯ ಸತ್ಪಥೇ |
ವರ್ತೇಥಾ ಯದಿ ಧರ್ಮೇಣ ನ ತ್ವಾಂ ವ್ಯಸನಮಾವ್ರಜೇತ್ ॥ 8 ॥
ತಂದೆಯು ಮಾಡಬೇಕಾದ ಕಾರ್ಯದಂತೆ ನಿನ್ನ ಪುತ್ರನನ್ನು ಸನ್ಮಾರ್ಗದಲ್ಲಿ ನಿಲ್ಲಿಸಿ, ನೀನು ಧರ್ಮದಿಂದ ನಡೆದುಕೊಂಡಿದ್ದರೆ ನಿನಗೆ ವ್ಯಸನವು ಬರುತ್ತಿರಲಿಲ್ಲ.
ತ್ವಂ ತು ಪ್ರಾಜ್ಞತಮೋ ಲೋಕೇ ಹಿತ್ವಾ ಧರ್ಮಂ ಸನಾತನಮ್ |
ದುರ್ಯೋಧನಸ್ಯ ಕರ್ಣಸ್ಯ ಶಕುನೇಶ್ಚಾನ್ವಗಾ ಮತಮ್ ॥ 9 ॥
ಲೋಕದಲ್ಲಿ ಅತ್ಯಂತ ಪ್ರಾಜ್ಞನಾದ ನೀನು ಸನಾತನ ಧರ್ಮವನ್ನು ಬಿಟ್ಟು ದುರ್ಯೋಧನನ ಮತ್ತು ಶಕುನಿಯ ಅಭಿಪ್ರಾಯವನ್ನು ಅನುಸರಿಸಿದೆ.
ತತ್ ತೇ ವಿಲಪಿತಂ ರಾಜನ್ ಮಯಾ ಸರ್ವಂ ನಿಶಾಮಿತಮ್ |
ಅರ್ಥೇ ನಿವಿಶಮಾನಸ್ಯ ವಿಷಮಿಶ್ರಂ ಯಥಾ ಮಧು ॥ 10 ॥
ಎಲೈ ರಾಜನೇ, ನಿನ್ನ ಎಲ್ಲ ವಿಲಾಪನ್ನೂ ನಾನು ಕೇಳಿದೆನು. ಸಂಪತ್ತಿನ ಆಸೆಯುಳ್ಳ ನಿನ್ನ ವಿಲಾಪವು ವಿಷಮಿಶ್ರಿತವಾದ ಮಧುವಿನಂತಿದೆ.
ನ ತಥಾ ಮನ್ಯತೇ ಕೃಷ್ಣೋ ನ ಚ ರಾಜಾ ಯುಧಿಷ್ಠಿರಃ |
ನ ಭೀಷ್ಮೋ ನೈವ ಚ ದ್ರೋಣೋ ಯಥಾ ತ್ವಂ ಮನ್ಯಸೇ ನೃಪ ॥11॥
ಎಲೈ ರಾಜನೇ, ನೀನು ಹೇಗೆ ತಿಳಿಯುತ್ತೀಯೋ ಹಾಗೆ ಕೃಷ್ಣನಾಗಲೀ, ರಾಜನಾದ ಯುಧಿಷ್ಠಿರನಾಗಲೀ, ಭೀಷ್ಮರಾಗಲೀ, ದ್ರೋಣರಾಗಲೀ ಭಾವಿಸುವುದಿಲ್ಲ.
ವ್ಯಜಾನಂತ ಯದಾ ತು ತ್ವಾಂ ಲುಬ್ಧಂ ಧರ್ಮಪ್ರವಾದಿನಮ್ |
ತದಾ ಪ್ರಭೃತಿ ಕೃಷ್ಣಸ್ತತ್ವಂ ನ ತಥಾ ಬಹು ಮನ್ಯತೇ ॥ 12 ॥
ನಿನ್ನನ್ನು ಸಂಪತ್ತಿನ ಆಸೆಯನ್ನು ಹೊಂದಿ, ಧರ್ಮದ ಮಾತನ್ನು ಆಡುವವನು ಎಂದು ತಿಳಿದಾಗಲಿಂದಲೂ ಕೃಷ್ಣನು ನಿನಗೆ ಮೊದಲಿನಂತೆ ಗೌರವವನ್ನು ಕೊಡುತ್ತಿಲ್ಲ.
ಪರುಷಾಣ್ಯುಚ್ಯಮಾನಾಂಸ್ತ್ವಂ ಪುರಾ ಪಾರ್ಥಾನುಪೇಕ್ಷಸೇ |
ತಸ್ಯಾನುಬಂಧಃ ಪ್ರಾಪ್ತಸ್ತತ್ವಂ ಪುತ್ರಾಣಾಂ ರಾಜ್ಯಕಾಮುಕಮ್ |
ಪಿತೃಪೈತಾಮಹಂ ರಾಜ್ಯಮಪವೃತ್ತಂ ತವಾನಘ ॥ 13 ॥
ಹಿಂದೆ ನಿನ್ನ ಪುತ್ರರು ಪಾಂಡವರನ್ನು ಉದ್ದೇಶಿಸಿ ಕ್ರೂರವಾದ ಮಾತುಗಳನ್ನು ಆಡಿದಾಗ ನೀನು ಉಪೇಕ್ಷಿಸಿದೆ. ಪುತ್ರರಿಗೆ ರಾಜ್ಯವನ್ನು

ಬಯಸಿದ ನಿನಗೆ ಅದರ ಫಲವು ಈಗ ಪ್ರಾಪ್ತವಾಗಿದೆ. ಎಲೈ ಅನಘನೇ, ಪಾಂಡವರಿಗೆ ಸೇರಬೇಕಾಗಿದ್ದ ಅವರ ಪಿತೃ-ಪಿತಾಮಹರ ರಾಜ್ಯವನ್ನು ನೀನು ಕಸಿದುಕೊಂಡೆ.
ಅಥ ಪಾರ್ಥೈರ್ಜಿತಾಂ ಕೃತ್ಸ್ನಾಂ ಪೃಥಿವೀಂ ಪ್ರತಿಪದ್ಯಥಾಃ |
ಪಾಂಡುನಾಽಧಿಷ್ಠಿತಂ ರಾಜ್ಯಂ ಕೌರವಾಣಾಂ ಯಶಸ್ತಥಾ ॥ 14 ॥
ಅನಂತರ ಪಾಂಡವರು ಸಂಪಾದಿಸಿದ ಸಮಸ್ತವಾದ ಪೃಥಿವಿಯನ್ನೂ, ಪಾಂಡುವಿನ ಅಧಿಷ್ಠಿತವಾದ ರಾಜ್ಯವನ್ನೂ ಮತ್ತು ಕೌರವರ ಕೀರ್ತಿಯನ್ನೂ ನೀನು ಪಡೆದೆ.
ಏತಚ್ಚಾಪ್ಯಧಿಕಂ ಭೂಯಃ ಪಾಂಡವೈರ್ಧರ್ಮಚಾರಿಭಿಃ ॥ 15 ॥
ತೇಷಾಂ ತತ್ ತಾದೃಶಂ ಕರ್ಮ ತ್ವಾಮಾಸಾದ್ಯ ಸುನಿಷ್ಫಲಮ್ |
ಪೈತ್ರ್ಯಾದ್ದಿ ಭ್ರಂಶಿತಾ ರಾಜ್ಯಾತ್ ತ್ವಯೈವಾಮಿಷಗೃದ್ಧಿನಾ ॥ 16 ॥
ಪಾಂಡುವು ಸಂಪಾದನೆ ಮಾಡಿದುದಕ್ಕಿಂತಲೂ ಹೆಚ್ಚಿನ ರಾಜ್ಯವನ್ನು ಸಂಪಾದನೆ ಮಾಡಿದರು. ಅಂತಹ ಪಾಂಡವರ ಕರ್ಮದ ಫಲವನ್ನು ನೀನು ಪಡೆದು ಸಂಪತ್ತಿನ ಲೋಭವುಳ್ಳ ನೀನು ವ್ಯರ್ಥವಾಗಿ ಪಾಂಡವರನ್ನು ಅವರ ಪಿತೃರಾಜ್ಯದಿಂದ ಭ್ರಷ್ಟರನ್ನಾಗಿ ಮಾಡಿದೆ.
ಯತ್ ಪುನರ್ಯುದ್ಧಕಾಲೇ ತು ಪುತ್ರಂ ಗರ್ಹಯಸೇ ನೃಪ |
ಬಹುಧಾ ವ್ಯಾಹರನ್ ದೋಷಾನ್ ನ ತದದ್ಯೋಪಪದ್ಯತೇ ॥ 17 ॥
ಎಲೈ ರಾಜನೇ, ಮತ್ತು ಈಗ ಯುದ್ಧಕಾಲದಲ್ಲಿ ಬಹಳ ಮಾತನಾಡುತ್ತಾ, ಪುತ್ರನ ದೋಷಗಳನ್ನು ಹೇಳಿ ಅವನನ್ನು ಏನು ನಿಂದಿಸುತ್ತಿದ್ದೀಯೋ ಅದು ಸರಿಯಾದುದಲ್ಲ.
ನಹಿ ರಕ್ಷಂತಿ ರಾಜಾನೋ ಸರ್ವಾರ್ಥಾನ್ ನೈವ ಜೀವಿತಮ್ |
ಚಮೂಂ ವಿಗಾಹ್ಯ ಪಾರ್ಥಾನಾಂ ಕ್ಷತ್ರಿಯಾ ಜಯಕಾಂಕ್ಷಿಣಃ ॥ 18 ॥
ರಾಜರು ಎಲ್ಲ ಸಂಪತ್ತನ್ನಾಗಲೀ, ಅಥವಾ ಜೀವಿತವನ್ನಾಗಲೀ ರಕ್ಷಿಸುವುದಿಲ್ಲ. ಕ್ಷತ್ರಿಯರು ಪಾಂಡವರ ಸೈನ್ಯವನ್ನು ಪ್ರವೇಶಿಸಿ ಜಯವನ್ನು ಬಯಸುತ್ತಾರೆ.
ಯಾಂ ತು ಕೃಷ್ಣಾರ್ಜುನೌ ಸೇನಾಂ ಸಸಾತ್ಯಕಿವೃಕೋದರೌ |
ಕೋಽತ್ರ ತಾಂ ಪ್ರತಿಯುದ್ಧ್ಯೇತ ಚಮೂಮನ್ಯತ್ರ ಕೌರವಾತ್ ॥ 19 ॥
ಕೃಷ್ಣಾರ್ಜುನರಿಂದಲೂ, ಸಾತ್ಯಕಿ-ವೃಕೋದರರಿಂದಲೂ ಸಹಿತವಾದ ಆ ಸೈನ್ಯವನ್ನು ದುರ್ಯೋಧನನೊಬ್ಬನನ್ನು ಬಿಟ್ಟು ಬೇರೆ ಯಾವನು ಯುದ್ಧದಲ್ಲಿ ಎದುರಿಸುವನು?
ಯೇಷಾಂ ಯೋದ್ಧಾ ಗುಡಾಕೇಶೋ ಯೇಷಾಂ ಮಂತ್ರೀ ಜನಾರ್ದನಃ |
ಯೇಷಾಂ ಚ ಸಾತ್ಯಕಿರ್ಗೋಪ್ತಾ ಯೇಷಾಂ ಗೋಪ್ತಾ ವೃಕೋದರಃ ॥
ಕೋ ಹಿ ತಾನ್ ವಿಷಹೇದ್ ಯೋದ್ಧುಂ ಮರ್ತ್ಯಧರ್ಮಾಧನುರ್ಧರಃ |
ಅನ್ಯತ್ರ ಕೌರವೇಯೇಭ್ಯೋ ಯೇ ವಾ ತೇಷಾಂ ಪದಾನುಗಾಃ ॥ 21 ॥
ಯಾರಿಗೆ ಅರ್ಜುನನು ಯೋಧನೋ, ಕೃಷ್ಣನು ಮಂತ್ರಿಯೋ, ಸಾತ್ಯಕಿ ಮತ್ತು ಭೀಮಸೇನರು ರಕ್ಷಕರೋ ಅಂತಹವರನ್ನು ನಿನ್ನ ಪುತ್ರರು ಮತ್ತು ಅವರ ಅನುಯಾಯಿಗಳನ್ನು ಬಿಟ್ಟು ಮರಣಶೀಲನಾದ ಯಾವ ಧನುರ್ಧಾರಿಯು ಯುದ್ಧದಲ್ಲಿ ತಡೆಯುತ್ತಾನೆ?
ಯಾವತ್ ತು ಶಕ್ಯತೇ ಕರ್ತುಮನುರಕ್ತೈರ್ಜನಾಧಿಪೈಃ |
ಕ್ಷತ್ರಧರ್ಮರತೈಃ ಶೂರೈಃ ತಾವತ್ ಕುರ್ವಂತಿ ಕೌರವೈಃ ॥ 22 ॥
ಅನುರಾಗವುಳ್ಳ ರಾಜರು ಎಷ್ಟು ಮಾಡಲು ಸಾಧ್ಯವೋ ಅಷ್ಟನ್ನು ಕ್ಷತ್ರಧರ್ಮ ರತರಾದ ಶೂರರು ನಿನ್ನ ಸೈನ್ಯದಲ್ಲಿ ಸೇರಿ ಮಾಡುತ್ತಾರೆ.
ಯಥಾ ತು ಪುರುಷವ್ಯಾಘ್ರೈರ್ಯುದ್ಧಂ ಪರಮಸಂಕಟಮ್ |
ಕುರೂಣಾಂ ಪಾಂಡವೈಃ ಸಾರ್ಧಂ ತತ್ ಸರ್ವಂ ಶೃಣು ತತ್ತ್ವತಃ ॥23॥
ಪುರುಷವ್ಯಾಘ್ರರಾದ ಪಾಂಡವರ ಜೊತೆಯಲ್ಲಿ ಕುರುಗಳಿಗೆ ಎಂತಹ ಸಂಕಟಪ್ರದವಾದ ಯುದ್ಧವು ನಡೆಯಿತೋ ಅದೆಲ್ಲವನ್ನೂ ಸರಿಯಾಗಿ ಹೇಳು.
ತಸ್ಯಾಂ ನಿಶಾಯಾಂ ವ್ಯುಷ್ಟಾಯಾಂ ದ್ರೋಣಃ ಶಸ್ತ್ರಭೃತಾಂ ವರಃ |
ಸ್ವಾನ್ಯನೀಕಾನಿ ಸರ್ವಾಣಿ ಪ್ರಾಕ್ರಾಮದ್ ವ್ಯೂಹಿತುಂ ತತಃ ॥ 24 ॥
ಆ ರಾತ್ರಿಯು ಕಳೆದ ಮೇಲೆ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ತಮ್ಮ ಸೈನ್ಯವನ್ನು ವ್ಯೂಹಗೊಳಿಸಲು ಎಲ್ಲ ಸೈನ್ಯದಲ್ಲೂ ತಿರುಗಾಡಿದರು.
ಶೂರಾಣಾಂ ಗರ್ಜತಾಂ ರಾಜನ್ ಪ್ರಕ್ರುದ್ಧಾನಾಮಮರ್ಷಿಣಾಮ್ |
ಶ್ರೂಯಂತೇ ಸ್ಮ ಗಿರಶ್ಚಿತ್ರಾಃ ಪರಸ್ಪರವಧೈಷಿಣಾಮ್ ॥ 25 ॥
ಎಲೈ ರಾಜನೇ, ಬಹಳ ಕೋಪ ಮತ್ತು ರೋಷಗಳಿಂದ ಕೂಡಿ ಪರಸ್ಪರ ವಧೆಯನ್ನು ಬಯಸಿ, ಗರ್ಜಿಸುವ ಶೂರರ ವಿಚಿತ್ರವಾದ ಮಾತುಗಳು ಕೇಳಿ ಬರುತ್ತಿದ್ದವು.
ವಿಷ್ಫಾರ್ಯ ಧನುರುದ್ಯಮ್ಯ ಕೇಯೂರಮವಮೃಜ್ಯ ಚ |
ವಿನಿಃಶ್ವಸಂತಃ ಪ್ರಾಕ್ರೋಶನ್ ಕ್ವೇದಾನೀಂ ಸ ಧನಂಜಯಃ ॥ 26 ॥
ಧನುಸ್ಸನ್ನು ಎತ್ತಿ, ಹೆದೆಯನ್ನು ಮೀಟಿ, ಭುಜಕೀರ್ತಿಯನ್ನು ಉಜ್ಜಿ, ನಿಟ್ಟುಸಿರನ್ನು ಬಿಡುತ್ತಾ, ಆ ಧನಂಜಯನು ಎಲ್ಲಿದ್ದಾನೆ ಎಂದು ಕಿರುಚುತ್ತಿದ್ದರು.

ವಿಕೋಶಾನ್ ಸುತ್ಸರೂನನ್ಯೇ ಕೃತಧಾರಾನ್ ಸಮಾಹಿತಾನ್ |
ಪೀತಾನಾಕಾಶಸಂಕಾಶಾನ್ ಅಸೀನುಚ್ಚಿಕ್ಷಿಪುರ್ಜನಾಃ ॥ 27 ॥
ಒರೆಯಿಂದ ತೆಗೆದ, ಒಳ್ಳೆಯ ಹಿಡಿಗಳನ್ನು ಹೊಂದಿದ, ಹರಿತವಾದ ಅಲುಗುಗಳನ್ನುಳ್ಳ, ನೀರನ್ನು ಕುಡಿಸಿ ಗಟ್ಟಿ ಮಾಡಿರುವುದರಿಂದ ಆಕಾಶದ ಕಾಂತಿಯನ್ನು ಹೊಂದಿದ ಖಡ್ಗಗಳನ್ನು ಯೋಧರು ಮೇಲಕ್ಕೆ ಎಸೆಯುತ್ತಿದ್ದರು.
ಚರಂತಸ್ತ್ವಸಿಮಾರ್ಗಾಂಶ್ಚ ರಥಮಾರ್ಗಾಂಶ್ಚ ಶಿಕ್ಷಿತಾಃ |
ದೃಶ್ಯಂತೇ ಕುಂಜರೈಶ್ಚಾನ್ಯೇಃ ವಾಜಿಭಿಶ್ಚ ಯುಯುತ್ಸವಃ |
ಸಂಗ್ರಾಮಮನಸಃ ಶೂರಾಃ ದೃಶ್ಯಂತೇ ಸ್ಮ ಸಹಸ್ರಶಃ ॥ 28 ॥
ಖಡ್ಗಯುದ್ಧದ ಮಾರ್ಗಗಳನ್ನು, ರಥಮಾರ್ಗಗಳನ್ನು ಅಭ್ಯಾಸ ಮಾಡುತ್ತಿರುವವರು, ಗಜಗಳಿಂದಲೂ ಮತ್ತು ಅಶ್ವಗಳಿಂದಲೂ ಕೂಡಿ ಯುದ್ಧವನ್ನು ಮಾಡುವ ಬಯಕೆ ಉಳ್ಳವರು, ಅಲ್ಲಿ ಕಂಡುಬಂದರು. ಯುದ್ಧವನ್ನು ಮಾಡಲು ಬಯಸಿದ ಶೂರರು ಸಹಸ್ರಾರು ಸಂಖ್ಯೆಯಲ್ಲಿ ಕಂಡುಬಂದರು.
ಸಘಂಟಾಶ್ಚಂದನಾದಿಗ್ಧಾಃ ಸ್ವರ್ಣವಜ್ರವಿಭೂಷಿತಾಃ |
ಸಮುತ್ಕ್ಷಿಪ್ಯ ಗದಾಶ್ಚಾನ್ಯೇ ಪರ್ಯಪೃಚ್ಛಂತ ಪಾಂಡವಮ್ ॥ 29 ॥
ಇನ್ನು ಕೆಲವರು ಘಂಟೆಗಳನ್ನು ಕಟ್ಟಿದ, ಚಂದನದಿಂದ ಲೇಪಿತವಾದ ಸ್ವರ್ಣ ವಜ್ರಗಳಿಂದ ಅಲಂಕರಿಸಲ್ಪಟ್ಟ ಗದೆಗಳನ್ನು ಮೇಲಕ್ಕೆತ್ತಿ ಅರ್ಜುನನು ಎಲ್ಲಿದ್ದಾನೆಂದು ಕೇಳುತ್ತಿದ್ದರು.
ಅನ್ಯೇ ಬಲಮದೋನ್ಮತ್ತಾಃ ಪರಿಘೈರ್ಬಾಹುಶಾಲಿನಃ |
ಚಕ್ರುಃ ಸಂಬಾಧಮಾಕಾಶಮ್ ಉಚ್ಛ್ರಿತೇಂದ್ರಧ್ವಜೋಪಮೈಃ ॥ 30 ॥
ಇನ್ನು ಬಲದಿಂದಲೂ, ಮದದಿಂದಲೂ ಉನ್ಮತ್ತರಾದ, ಒನಕೆಯಂತಹ ಬಾಹುಗಳುಳ್ಳ ಕೆಲವು ವೀರರು ಗದೆಗಳನ್ನು ಮೇಲೆತ್ತಿ ಎತ್ತಿದ ಇಂದ್ರಧ್ವಜದಂತಿದ್ದ ತಮ್ಮ ಗದೆಗಳಿಂದ ಆಕಾಶವನ್ನು ನಿಬಿಡವನ್ನಾಗಿ ಮಾಡಿದರು.
ನಾನಾಪ್ರಹರಣೈಶ್ಚಾನ್ಯೇ ವಿಚಿತ್ರಸ್ರಗಲಂಕೃತಾಃ |
ಸಂಗ್ರಾಮಮನಸಃ ಶೂರಾಃ ತತ್ರ ತತ್ರ ವ್ಯವಸ್ಥಿತಾಃ ॥ 31 ॥
ಇನ್ನು ಕೆಲವು ಶೂರರು ಯುದ್ಧದಲ್ಲೇ ಮನಸ್ಸುಳ್ಳವರಾಗಿ, ವಿಚಿತ್ರವಾದ ಮಾಲೆಗಳಿಂದ ಅಲಂಕೃತರಾಗಿ, ಅನೇಕ ಆಯುಧಗಳನ್ನು ಹಿಡಿದು ಅಲ್ಲಲ್ಲಿ ನಿಂತಿರುವುದು ಕಂಡುಬಂದಿತು.
ಕ್ವಾರ್ಜುನಃ ಕ್ವ ಚ ಗೋವಿಂದಃ ಕ್ವ ಚ ಮಾನೀ ವೃಕೋದರಃ |
ಕ್ವ ಚ ತೇ ಸುಹೃದಸ್ತೇಷಾಮ್ ಆಹ್ವಯಾನಾಸ್ತದಾ ರಣೇ ॥ 32 ॥
ಅರ್ಜುನನು ಎಲ್ಲಿ? ಗೋವಿಂದನು ಎಲ್ಲಿ? ಅಹಂಕಾರಿಯಾದ ಭೀಮನೆಲ್ಲಿ? ಅವರ ಸುಹೃದರು ಎಲ್ಲಿ? ಎಂದು ಅವರು ಯುದ್ಧಕ್ಕೆ ಆಹ್ವಾನಿಸುತ್ತಿದ್ದರು.
ತತಃ ಶಂಖಮುಪಾಧ್ಮಾಯ ತ್ವರಯನ್ ವಾಜಿನಃ ಸ್ವಯಮ್ |
ಇತಸ್ತತಸ್ತಾನ್ ರಚಯನ್ ದ್ರೋಣಶ್ಚರತಿ ವೇಗಿತಃ ॥ 33 ॥
ಆಗ ತಮ್ಮ ಶಂಖವನ್ನು ಊದಿ, ಅಶ್ವಗಳನ್ನು ತಾವಾಗಿಯೇ ತ್ವರೆಗೊಳಿಸುತ್ತಾ, ಅವುಗಳ ರಚನೆಯನ್ನು ಮಾಡುತ್ತಾ, ಇಲ್ಲಿಂದಲ್ಲಿಗೆ ದ್ರೋಣರು ವೇಗವಾಗಿ ಸಂಚರಿಸಿದರು.
ತೇಷ್ವನೀಕೇಷು ಸರ್ವೇಷು ಸ್ಥಿತೇಷ್ವಾಹವಶೋಭಿಷು |
ಭಾರದ್ವಾಜೋ ಮಹಾರಾಜ ಜಯದ್ರಥಮಥಾಬ್ರವೀತ್ ॥ 34 ॥
ಯುದ್ಧದಲ್ಲಿ ಶೋಭಿಸುವ ಆ ಎಲ್ಲ ಸೈನ್ಯಗಳು ಹಾಗಿರಲು ಎಲೈ ಮಹಾರಾಜನೇ, ದ್ರೋಣರು ಜಯದ್ರಥನನ್ನು ಕುರಿತು ಮಾತನಾಡಿದರು.
ತ್ವಂ ಚೈವ ಸೌಮದತ್ತಿಶ್ಚ ಕರ್ಣಶ್ಚೈವ ಮಹಾರಥಃ |
ಅಶ್ವತ್ಥಾಮಾ ಚ ಶಲ್ಯಶ್ಚ ವೃಷಸೇನಃ ಕೃಪಸ್ತಥಾ ॥ 35 ॥
ಶತಂ ಚಾಶ್ವಸಹಸ್ರಾಣಾಂ ರಥಾನಾಮಯುತಾನಿ ಷಟ್ |
ದ್ವಿರದಾನಾಂ ಪ್ರಭಿನ್ನಾನಾಂ ಸಹಸ್ರಾಣಿ ಚತುರ್ದಶ ॥ 36 ॥
ಪದಾತೀನಾಂ ಸಹಸ್ರಾಣಾಂ ಸಹಸ್ರಾಣ್ಯಪಿ ಪಂಚ ಚ |
ತ್ರಿಷು ಗವ್ಯೂತಿಮಾತ್ರೇಷು ಮಮ ಸೈನ್ಯಸ್ಯ ಪೃಷ್ಠತಃ ॥ 37 ॥
ತತ್ರಸ್ಥಂ ತ್ವಾಂ ನ ಸಂರೋದ್ದುಮಲಂ ಲೋಕಾಃ ಸದೇವತಾಃ |
ಕಿಂ ಪುನಃ ಪಾಂಡವಾಃ ಸರ್ವೇ ಸಮಾಶ್ವಸಿಹಿ ಸೈಂಧವ ॥ 38 ॥
ನೀನು, ಸೋಮದತ್ತ, ಮಹಾರಥನಾದ ಕರ್ಣ, ಅಶ್ವತ್ಥಾಮರು, ಶಲ್ಯ, ವೃಷಸೇನ ಮತ್ತು ಕೃಪರು ಒಂದು ಲಕ್ಷ ಅಶ್ವಗಳಿಂದ, ಅರವತ್ತು ಸಾವಿರ ರಥಗಳಿಂದ, ಹದಿನಾಲ್ಕು ಸಾವಿರ ಮದಗಜಗಳಿಂದ, ಐದು ಲಕ್ಷ ಪದಾತಿಗಳಿಂದ ಕೂಡಿ ನನ್ನ ಸೈನ್ಯದ ಹಿಂಭಾಗದಲ್ಲಿ ಮೂರು ಗಾವುದ ದೂರದಲ್ಲಿ ನಿಲ್ಲುವವನಾಗು. ಅಲ್ಲಿ ನಿಂತ ನಿನ್ನನ್ನು ದೇವತೆಗಳಿಂದ ಸಹಿತವಾದ ಲೋಕಗಳೂ ಸಹ ತಡೆಯಲು ಸಾಧ್ಯವಿಲ್ಲ. ಇನ್ನು ಪಾಂಡವರೆಲ್ಲರೂ ಏನು ಮಾಡಬಹುದು? ಆದ್ದರಿಂದ ಸೈಂಧವನೇ, ಸಮಾಧಾನದಿಂದಿರು.
ಸಂಜಯಃ
ಏವಮುಕ್ತಃ ಸಮಾಶ್ವಸ್ತಃ ಸಿಂಧುರಾಜೋ ಜಯದ್ರಥಃ |
ಸಂಪ್ರಾಯಾತ್ ಸಹ ಗಾಂಧಾರ್ಯೈರ್ವೃತಸ್ತೈಶ್ಚ ಮಹಾರಥೈಃ |
ವರ್ಮಿಭಿಃ ಸಾದಿಭಿರ್ಯತ್ತೈಃ ಪ್ರಾಸಪಾಣಿಭಿರಾಸ್ಥಿತೈಃ ॥ 39 ॥

ಸಂಜಯ ಹೀಗೆ ಹೇಳಲ್ಪಟ್ಟ ಸಿಂಧುರಾಜನಾದ ಜಯದ್ರಥನು ಸಮಾಧಾನವನ್ನು ಹೊಂದಿ, ಗಾಂಧಾರ ಸೈನ್ಯದಿಂದಲೂ ಮತ್ತು ಕವಚವನ್ನು ಧರಿಸಿ, ಕೈಯಲ್ಲಿ ಪ್ರಾಸಗಳನ್ನು ಹಿಡಿದು ಅಶ್ವಗಳನ್ನು ಏರಿದ ಅಶ್ವಾರೋಹಿಗಳಿಂದಲೂ ಮತ್ತು ಮಹಾರಥರಿಂದಲೂ ಸಹಿತನಾಗಿ ಅಲ್ಲಿಗೆ ಹೋದನು.
ಚಾಮರಾಪೀಡನಾಃ ಸರ್ವೇ ಜಾಂಬೂನದವಿಭೂಷಿತಾಃ |
ಜಯದ್ರಥಸ್ಯ ರಾಜೇಂದ್ರ ಯೋಧಾಃ ಸಾಧುಪ್ರಹಾರಿಣಃ ॥ 40 ॥
ತೇ ಚೈವ ಸಪ್ತಸಾಹಸ್ರಾಃ ದ್ವಿಸಾಹಸ್ರಾಶ್ಚ ಸೈಂಧವಾಃ ॥ 41 ॥
ಎಲೈ ರಾಜೇಂದ್ರನೇ, ಜಯದ್ರಥನ ಯೋಧರೆಲ್ಲರೂ ಚಾಮರಗಳನ್ನು (ಕುಚ್ಚುಗಳನ್ನು) ಧರಿಸಿದವರಾಗಿ, ಸುವರ್ಣಾಲಂಕೃತರಾಗಿ, ಚೆನ್ನಾಗಿ ಯುದ್ಧ ಮಾಡುವವರಾಗಿದ್ದರು. ಅಂತಹ ಅವರು ಏಳು ಸಾವಿರ ಯೋಧರು ಮತ್ತು ಸಿಂಧು ದೇಶದ ಯೋಧರು ಎರಡು ಸಾವಿರ ಇದ್ದರು.
ಮತ್ತಾನಾಮಧಿರೂಢಾನಾಂ ಹಸ್ತ್ಯಾರೋಹವಿಶಾರದೈಃ |
ನಾಗಾನಾಂ ಭೀಮರೂಪಾಣಾಂ ವರ್ಮಿಣಾಂ ರೌದ್ರಕರ್ಮಿಣಾಮ್ ॥
ಅಧ್ಯರ್ಧೇನ ಸಹಸ್ರೇಣ ಪುತ್ರೋ ದುರ್ಮರ್ಷಣಸ್ತವ |
ಅಗ್ರತಃ ಸರ್ವಸೈನ್ಯಾನಾಂ ಯೋತ್ಸ್ಯಮಾನೋ ವ್ಯವಸ್ಥಿತಃ ॥ 43 ॥
ಭಯಂಕರ ಆಕಾರವುಳ್ಳ ಗಜಗಳನ್ನು ಏರಿ, ಕವಚವನ್ನು ಧರಿಸಿ, ಭಯಂಕರ ಕರ್ಮವನ್ನು ಮಾಡುವ ಯುದ್ಧವಿಶಾರದರಾದ ಒಂದೂವರೆ ಸಾವಿರ ಯೋಧರ ಜೊತೆಯಲ್ಲಿ ನಿನ್ನ ಪುತ್ರನಾದ ದುರ್ಮರ್ಷಣನು ಎಲ್ಲ ಸೈನ್ಯದ ಮುಂಭಾಗದಲ್ಲಿ ಯುದ್ಧವನ್ನು ಮಾಡುವವನಾಗಿ ನಿಂತನು.
ತತೋ ದುಃಶಾಸನಶ್ಚೈವ ವಿಕರ್ಣಶ್ಚ ತವಾತ್ಮಜೌ |
ಸಿಂಧುರಾಜಾರ್ಥಸಿದ್ಧ್ಯರ್ಥಮಗ್ರಾನೀಕೇ ವ್ಯವಸ್ಥಿತೌ ॥ 44 ॥
ಅನಂತರ ನಿನ್ನ ಪುತ್ರರಾದ ದುಶ್ಶಾಸನ ಮತ್ತು ವಿಕರ್ಣರು ಸೈಂಧವನ ಹಿತವನ್ನು ರಕ್ಷಿಸುವುದಕ್ಕಾಗಿ ಸೈನ್ಯದ ಮುಂಭಾಗದಲ್ಲಿ ನಿಂತರು.
ದೀರ್ಘೋ ದ್ವಾದಶಗವ್ಯೂತಿಃ ಪಶ್ಚಾರ್ಧೇ ಪಂಚವಿಸ್ತೃತಃ |
ವ್ಯೂಹಃ ಸ ಚಕ್ರಶಕಟೋ ಭಾರದ್ವಾಜೇನ ನಿರ್ಮಿತಃ ॥ 45 ॥
ಮುಂದೆ ಹನ್ನೆರಡು ಯೋಜನ ಉದ್ದವೂ, ಹಿಂದೆ ಐದು ಯೋಜನ ಅಗಲವೂ ಆದ ಚಕ್ರವ್ಯೂಹ ಗರ್ಭಿತವಾದ ಶಕಟ ವ್ಯೂಹವು ದ್ರೋಣರಿಂದ ನಿರ್ಮಿಸಲ್ಪಟ್ಟಿತು.
ನಾನಾನೃಪತಿಭಿರ್ವೀರೈಃ ತತ್ರ ತತ್ರ ವ್ಯವಸ್ಥಿತೈಃ |
ರಥಾಶ್ವಗಜಪತ್ತ್ಯೌಘೈಃ ದ್ರೋಣೇನ ವಿಹಿತಃ ಸ್ವಯಮ್ ॥ 46 ॥
ಅಲ್ಲಲ್ಲಿ ವ್ಯವಸ್ಥಿತರಾದ, ವೀರರಾದ ಅನೇಕ ರಾಜರು, ರಥಾಶ್ವ-ಗಜ-ಪದಾತಿಗಳ ಸಮೂಹಗಳು ಇವುಗಳಿಂದ ದ್ರೋಣರೇ ಸ್ವತಃ ವ್ಯೂಹವನ್ನು ನಿರ್ಮಿಸಿದರು.
ಪಶ್ಚಾರ್ಧೇ ತಸ್ಯ ಪದ್ಮಸ್ತು ಗರ್ಭವ್ಯೂಹಃ ಸುದುರ್ಭಿದಃ |
ಸೂಚೀಪದ್ಮಸ್ಯ ಮಧ್ಯಸ್ಥೋ ದೃಢವ್ಯೂಹೋ ಜಯದ್ರಥಃ ॥ 47 ॥
ಆ ಶಕಟವ್ಯೂಹದ ಹಿಂದಿನ ಅರ್ಧಭಾಗದಲ್ಲಿ ಭೇದಿಸಲು ಅಸಾಧ್ಯವಾದ ಪದ್ಮಾಕಾರದ ಗರ್ಭವ್ಯೂಹವಿದ್ದಿತು (ಚಕ್ರವ್ಯೂಹವನ್ನೇ ಪದ್ಮವ್ಯೂಹವೆಂದು ಕರೆಯುತ್ತಾರೆ). ಆ ಪದ್ಮದ ಕರ್ಣಿಕೆಯ ಸುತ್ತಿನ ಕೇಸರಗಳ ಸ್ಥಾನದಲ್ಲಿ ಇರುವ ಸೂಜಿಗಳ ಮಧ್ಯದಲ್ಲಿ ದೃಢವಾದ ವ್ಯೂಹವನ್ನು ಹೊಂದಿದ ಜಯದ್ರಥನಿದ್ದನು.
ಏವಮೇತಂ ಮಹಾವ್ಯೂಹಂ ವ್ಯೂಹ್ಯ ದ್ರೋಣೋ ವ್ಯವಸ್ಥಿತಃ |
ಸೂಚೀಮುಖೇ ಮಹೇಷ್ವಾಸಃ ಕೃತವರ್ಮಾ ವ್ಯವಸ್ಥಿತಃ ॥ 48 ॥
ಹೀಗೆ ದ್ರೋಣರು ಆ ಮಹಾವ್ಯೂಹವನ್ನು ರಚಿಸಿ, ಸೂಚಿಯ ಮುಖದಲ್ಲಿ ಮಹಾಧನುರ್ಧಾರಿಯಾದ ಕೃತವರ್ಮನನ್ನು ನಿಲ್ಲಿಸಿದರು.
ಅನಂತರಂ ಚ ಕಾಂಬೋಜೋ ಜಲಸಂಧಶ್ಚ ವೀರ್ಯವಾನ್ |
ದುರ್ಯೋಧನಃ ಸಹಾಮಾತ್ಯಸ್ತದನಂತರಮೇವ ಚ ॥ 49 ॥
ಅವನ ಹಿಂದೆ ಕಾಂಬೋಜ ರಾಜ, ಪರಾಕ್ರಮಶಾಲಿಯಾದ ಜಲಸಂಧರು ಇದ್ದರು. ಅವರ ಹಿಂದೆ ಅವನ ಅಮಾತ್ಯರಿಂದ ಸಹಿತನಾದ ದುರ್ಯೋಧನನಿದ್ದನು.
ತತಃ ಶತಸಹಸ್ರಾಣಿ ಯೋಧಾನಾಮನಿವರ್ತಿನಾಮ್ |
ವ್ಯವಸ್ಥಿತಾನಿ ಸರ್ವಾಣಿ ಶಕಟೇ ಸೂಚಿರಕ್ಷಿಣಾಮ್ ॥ 50 ॥
ಅನಂತರ ಪದ್ಮವ್ಯೂಹದ ಮುಂಭಾಗದಲ್ಲಿ ಶಕಟವ್ಯೂಹದಲ್ಲಿ ಪದ್ಮವ್ಯೂಹದ ಸೂಚಿಗಳನ್ನು ರಕ್ಷಿಸುವ, ಯುದ್ಧದಿಂದ ಹಿಮ್ಮೆಟ್ಟದಿರುವ ಒಂದು ಲಕ್ಷ ಯೋಧರು ನಿಂತರು.
ತೇಷಾಂ ಪೃಷ್ಠಗತೋ ರಾಜನ್ ಬಲೇನ ಮಹತಾ ವೃತಃ |
ಜಯದ್ರಥಸ್ತತೋ ರಾಜಾ ಸೂಚೀಪಾರ್ಶ್ವೇ ವ್ಯವಸ್ಥಿತಃ ॥ 51 ॥
ಎಲೈ ರಾಜನೇ, ಅವರ ಹಿಂದೆ ತನ್ನ ದೊಡ್ಡ ಸೈನ್ಯದಿಂದ ಕೂಡಿದವನಾಗಿ ಜಯದ್ರಥನು ಆ ಸೂಚಿಗಳ ಪಾರ್ಶ್ವದಲ್ಲಿ ನಿಂತನು.
ಶಕಟಸ್ಯ ತು ರಾಜೇಂದ್ರ ಭಾರದ್ವಾಜೋ ಮುಖೇ ಸ್ಥಿತಃ |
ನಾತ್ರ ತಸ್ಯಾಭವದ್ ಭೇದೋ ಜುಗೋಪೈನಂ ತತಃ ಸ್ವಯಮ್ ॥ 52 ॥
ಎಲೈ ರಾಜೇಂದ್ರನೇ, ದ್ರೋಣರು ಶಕಟದ ಮುಂಭಾಗದಲ್ಲಿ ನಿಂತರು. ಅಲ್ಲಿ ಅವರನ್ನು ಯಾರೂ ಭೇದಿಸುವವರಿರಲಿಲ್ಲ. ಅವರು

ತಾವೇ ಆ ಶಕಟವನ್ನು ರಕ್ಷಿಸಿದರು.
ಶ್ವೇತವರ್ಮಾಂಬರೋಷ್ಣೀಷೋ ವ್ಯೂಢೋರಸ್ಕೋ ಮಹಾಭುಜಃ |
ಧನುರ್ವಿಷ್ಫಾರಯನ್ ದ್ರೋಣಃ ತಸ್ಥೌ ಕ್ರುದ್ಧ ಇವಾಂತಕಃ |
ತಸ್ಯ ಸೈನ್ಯಸ್ಯ ಸರ್ವಸ್ಯ ನೇತಾ ಗೋಪ್ತಾ ಚ ವೀರ್ಯವಾನ್ ॥ 53 ॥
ಶ್ವೇತವರ್ಣದ ಕವಚ, ವಸ್ತ್ರ ಮತ್ತು ಉಷ್ಣೀಷಗಳನ್ನು ಧರಿಸಿದ, ಮಹಾಭುಜರೂ, ವಿಶಾಲವಾದ ವಕ್ಷಸ್ಸ್ಥಲವುಳ್ಳವರೂ ಆದ ದ್ರೋಣರು ತಮ್ಮ ಧನುಸ್ಸನ್ನು ಮೀಟುತ್ತಾ, ಹಂತಕನಂತೆ ಕ್ರುದ್ಧರಾಗಿ ಆ ಸರ್ವಸೈನ್ಯದ ನಾಯಕರೂ ಮತ್ತು ರಕ್ಷಕರೂ ಆಗಿ ನಿಂತರು.
ಪತಾಕಿನಂ ಶೋಣಹಯಂ ವೇದೀಕೃಷ್ಣಾಜಿನಧ್ವಜಮ್ |
ದ್ರೋಣಸ್ಯ ರಥಮಾಲೋಕ್ಯ ಪ್ರಹೃಷ್ಟಾಃ ಕುರವೋಽಭವನ್ ॥ 54 ॥
ಪತಾಕೆಗಳಿಂದಲೂ, ಕೆಂಪು ವರ್ಣದ ಅಶ್ವಗಳಿಂದಲೂ, ಮತ್ತು ಯಜ್ಞವೇದಿ ಮತ್ತು ಕೃಷ್ಣಾಜಿನದ ಧ್ವಜದಿಂದ ಕೂಡಿದ ದ್ರೋಣರ ರಥವನ್ನು ನೋಡಿ ಕುರುಗಳು ಸಂತೋಷಗೊಂಡರು.
ಸಶೈಲಸಾಗರವನಾಂ ನಾನಾಜನಪದಾಕುಲಾಮ್ |
ಗ್ರಸೇದ್ ವ್ಯೂಹಃ ಕ್ಷಿತಿಂ ಸರ್ವಾಮಿತಿ ಭೂತಾನಿ ಮೇನಿರೇ ॥ 55 ॥
ಆ ವ್ಯೂಹವನ್ನು ನೋಡಿದ ಜನರು ಮತ್ತು ಭೂತಗಳು ಈ ವ್ಯೂಹವು ಪರ್ವತ ಸಾಗರ-ವನಗಳಿಂದಲೂ, ನಾನಾ ಜನಪದಗಳಿಂದಲೂ ತುಂಬಿದ ಈ ಭೂಮಿಯನ್ನೇ ನುಂಗಬಹುದು ಎಂದು ತಿಳಿದರು.
ಬಹುರಥಮನುಜಾಶ್ವಪತ್ತಿನಾಗಂ
ಪ್ರತಿಭಯನಿಸ್ವನಮದ್ಭುತಾಭ್ರರೂಪಮ್ |
ಅಹಿತಹೃದಯಭೇದಿನಂ ಮಹಾಂತಂ
ಶಕಟಮವೇಕ್ಷ್ಯ ಕೃತಂ ನನಂದ ರಾಜಾ ॥ 56 ॥
ಅನೇಕ ರಥಗಳಿಂದ, ಯೋಧರಿಂದ, ಅಶ್ವಗಳಿಂದ, ಪದಾತಿಗಳಿಂದ ಮತ್ತು ಗಜಗಳಿಂದ ಕೂಡಿದ, ಭಯಂಕರವಾದ ಘೋಷವನ್ನು ಮಾಡುತ್ತಿದ್ದ, ಅದ್ಭುತವಾದ ಮೋಡಗಳಂತೆ ತೋರುತ್ತಿದ್ದ, ಶತ್ರುಗಳ ಹೃದಯ ಭೇದಕವಾದ ಮಹಾಶಕಟವ್ಯೂಹವನ್ನು ನೋಡಿ ರಾಜನಾದ ದುರ್ಯೋಧನನು ಸಂತೋಷಪಟ್ಟನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂಬತ್ತನೆಯ ಅಧ್ಯಾಯ
ಅರ್ಜುನನ ರಣರಂಗಪ್ರವೇಶ ಮತ್ತು ಅವನ ಯುದ್ಧದ ವರ್ಣನೆ.
ಸಂಜಯಃ
ವ್ಯೂಢೇಷು ತವ ಸೈನ್ಯೇಷು ಸಮುತ್ಕೃಷ್ಟೇಷು ಮಾರಿಷ |
ನಾದ್ಯಮಾನಾಸು ಭೇರೀಷು ಮೃದಂಗೇಷ್ವಾನಕೇಷು ಚ ॥ 1 ॥
ಅನೀಕಾನಾಂ ಚ ಸಂಹ್ರಾದೇ ವಾದಿತ್ರಾಣಾಂ ಚ ನಿಸ್ವನೇ |
ಪ್ರಧ್ಮಾಪಿತೇಷು ಶಂಖೇಷು ಸನ್ನಾದೇ ರೋಮಹರ್ಷಣೇ ॥ 2 ॥
ಪ್ರಗೃಹೀತೇಷು ಶಸ್ತ್ರೇಷು ಭಾರತೇಷು ಯುಯುತ್ಸುಷು |
ರೌದ್ರೇ ಮುಹೂರ್ತೇ ಸಂಪ್ರಾಪ್ತೇ ಸವ್ಯಸಾಚೀ ವ್ಯದೃಶ್ಯತ ॥ 3 ॥
ಸಂಜಯ ಎಲೈ ಪೂಜ್ಯನೇ, ನಿನ್ನ ಸೈನ್ಯಗಳು ವ್ಯೂಹಗೊಂಡು ಕಿರುಚುತ್ತಿರಲು ಭೇರಿಗಳು, ಮೃದಂಗಗಳು ಮತ್ತು ಆನಕಗಳು ಬಾರಿಸಲ್ಪಡುತ್ತಿರಲು, ಸೈನ್ಯಗಳ ಘೋಷವು ಮತ್ತು ವಾದ್ಯಗಳ ಧ್ವನಿಯು ತುಂಬಿರಲು, ಶಂಖಗಳು ಊದಲ್ಪಡುತ್ತಿರಲು, ರೋಮಾಂಚಕರವಾದ ಯುದ್ಧವನ್ನು ಬಯಸಿ ಶಸ್ತ್ರಗಳನ್ನು ಹಿಡಿದಿರಲು ಆ ರೌದ್ರಮುಹೂರ್ತದಲ್ಲಿ ಅರ್ಜುನನು ಕಾಣಿಸಿಕೊಂಡನು.
ಬಲಾನಾಂ ವಾಯಸಾನಾಂ ಚ ಪುರಸ್ತಾತ್ ಸವ್ಯಸಾಚಿನಃ |
ಪಿಶಿತಾಸೃಗ್ಭುಜಾಂ ಸಂಘಾಃ ಪ್ರಲೀಯಂತೇ ಸಹಸ್ರಶಃ ॥ 4 ॥
ಅರ್ಜುನನ ಮುಂಭಾಗದಲ್ಲಿ ಮಾಂಸ-ರಕ್ತಭೋಜಿಗಳಾದ ಬಲ-ವಾಯಸ ಮೊದಲಾದ ಪಕ್ಷಿಗಳು ಸಹಸ್ರ ಸಂಖ್ಯೆಯಲ್ಲಿ (ನಮ್ಮ ಸೈನ್ಯದಲ್ಲಿ ಬಿದ್ದು) ಅದೃಶ್ಯವಾದವು.
ಮೃಗಾಶ್ಚ ಘೋರಸನ್ನಾದಾಃ ಶಿವಾಶ್ಚಾಶಿವದರ್ಶನಾಃ |
ದಕ್ಷಿಣೇನ ಪ್ರಯಾತಾನಾಮಸ್ಮಾಕಂ ನೇದುರಧ್ವನಿ ॥ 5 ॥
ದಕ್ಷಿಣಭಾಗದಿಂದ ಹೋಗುವ ನಮಗೆ ಘೋರನಾದವನ್ನು ಮಾಡುವ ಮೃಗಗಳೂ, ಅಮಂಗಳಕರವಾದ ನರಿಗಳೂ ಮಾರ್ಗದಲ್ಲಿ ಆರ್ತನಾದವನ್ನು ಮಾಡಿದವು.
ಲೋಕಕ್ಷಯೇ ಮಹಾರಾಜ ಯಾದೃಶಾಸ್ತಾದೃಶಾ ಹಿ ತೇ |
ಅಶಿವಾ ಧಾರ್ತರಾಷ್ಟ್ರಾಣಾಂ ಶಿವಾಃ ಪಾರ್ಥಸ್ಯ ಸಂಯುಗೇ ॥ 6 ॥
ಎಲೈ ಮಹಾರಾಜನೇ, ಲೋಕಕ್ಷಯದ ಕಾಲದಲ್ಲಿ ಹೇಗೋ ಹಾಗೆ ದುರ್ಯೋಧನಾದಿಗಳಿಗೆ ಅಮಂಗಳವಾದ ಶಕುನಗಳು, ಅರ್ಜುನನಿಗೆ ಶುಭ ಶಕುನಗಳು ಉಂಟಾದವು.

ಸನಿರ್ಘಾತಾ ಜ್ವಲಂತ್ಯಶ್ಚ ಪೇತುರುಲ್ಕಾಃ ಸಹಸ್ರಶಃ |
ಚಚಾಲ ಚ ಮಹೀ ಸರ್ವಾ ಭಯೇ ಘೋರೇ ಸಮುತ್ಥಿತೇ ॥ 7 ॥
ಉರಿಯುವ ಉಲ್ಕೆಗಳು ಸಿಡಿಲಿನ ಜೊತೆಯಲ್ಲಿ ಸಹಸ್ರಸಂಖ್ಯೆಯಲ್ಲಿ ಬಿದ್ದವು. ಘೋರವಾದ ಭಯವು ಉಪಸ್ಥಿತವಾಗಿರಲು ಭೂಮಿಯೆಲ್ಲವೂ ನಡುಗಿತು.
ವಿಷ್ವಗ್ವಾತಾಃ ಸನೀಹಾರಾ ನೀಚೈಃ ಶರ್ಕರವರ್ಷಿಣಃ |
ವವುರಾಯಾತಿ ಕೌಂತೇಯೇ ಸಂಗ್ರಾಮೇ ಸಮುಪಸ್ಥಿತೇ ॥ 8 ॥
ಅರ್ಜುನನು ಸಂಗ್ರಾಮವನ್ನು ಪ್ರವೇಶಿಸಿದಾಗ ಸುಂಟರಗಾಳಿಗಳು ಮಂಜಿನಿಂದ ಕೂಡಿ ಮರಳುಗಳನ್ನು ಎತ್ತಿಕೊಂಡು ನೆಲವನ್ನು ಹಿಡಿದು ಬೀಸಿದವು.
ನಾಕುಲಸ್ತು ಶತಾನೀಕೋ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಪಾಂಡವಾನಾಮನೀಕಾನಿ ಪ್ರಾಜ್ಞೌ ತೌ ವ್ಯೂಹತುಸ್ತದಾ ॥ 9 ॥
ಪ್ರಾಜ್ಞರಾದ ನಕುಲ ಪುತ್ರನಾದ ಶತಾನೀಕನು ಮತ್ತು ಪಾರ್ಷತನಾದ ಧೃಷ್ಟದ್ಯುಮ್ನನು ಪಾಂಡವರ ಸೈನ್ಯವನ್ನು ವ್ಯೂಹಗೊಳಿಸಿದರು.
ತತೋ ರಥಸಹಸ್ರೇಣ ದ್ವಿರದಾನಾಂ ಶತೇನ ಚ |
ತ್ರಿಭಿರಶ್ವಸಹಸ್ರೈಶ್ಚ ಪದಾತೀನಾಂ ಶತೈಃ ಶತೈಃ ॥ 10 ॥
ಅಧ್ಯರ್ಧಮಾತ್ರೇ ಧನುಷಾಂ ಸಹಸ್ರೇ ತನಯಸ್ತವ |
ಅಗ್ರತಃ ಸರ್ವಸೈನ್ಯಾನಾಂ ಸ್ಥಿತ್ವಾ ದುರ್ಮರ್ಷಣೋಽಬ್ರವೀತ್ ॥ 11 ॥
ಆಗ ಒಂದು ಸಹಸ್ರ ರಥಗಳು, ನೂರು ಆನೆಗಳು, ಮೂರು ಸಾವಿರ ಅಶ್ವಗಳು, ಹತ್ತು ಸಾವಿರ ಪದಾತಿಗಳು ಇವುಗಳನ್ನು ನಿನ್ನ ಪುತ್ರನಾದ ದುರ್ಮರ್ಷಣನು ಒಂದೂವರೆ ಸಾವಿರ ಧನುಸ್ಸಿನ ದೂರದಲ್ಲಿ ಅಲ್ಲಲ್ಲಿ ನಿಲ್ಲಿಸಿ, ಎಲ್ಲ ಸೈನ್ಯಗಳ ಮುಂದೆ ತಾನು ನಿಂತು ಮಾತನಾಡಿದನು.
ಅದ್ಯ ಗಾಂಡೀವಧನ್ವಾನಂ ತಪಂತಂ ಯುದ್ಧದುರ್ಮದಮ್ |
ಅಹಮಾವಾರಯಿಷ್ಯಾಮಿ ವೇಲೇವ ಮಕರಾಲಯಮ್ ॥ 12 ॥
ಈ ದಿನ ಯುದ್ಧದುರ್ಮದನೂ, ನಮ್ಮ ಸೈನ್ಯವನ್ನು ದಹಿಸುವವನೂ ಆದ, ಗಾಂಡೀವ ಧನುರ್ಧಾರಿಯಾದ ಅರ್ಜುನನನ್ನು ತೀರವು ಸಮುದ್ರವನ್ನು ತಡೆದಂತೆ ನಾನು ತಡೆಯುವೆನು.
ಅದ್ಯ ಪಶ್ಯಂತು ಸಂಗ್ರಾಮೇ ಧನಂಜಯಮಮರ್ಷಣಮ್ |
ವಿಷಕ್ತಂ ಮಯಿ ದುರ್ಧರ್ಷಂ ಭಿನ್ನಂ ಕುಂಭಮಿವಾಶ್ಮನಿ ॥ 13 ॥
ತಿಷ್ಠಧ್ವಂ ರಥಿನೋ ಯೂಯಂ ಸಂಗ್ರಾಮಮಭಿಕಾಂಕ್ಷಿಣಃ |
ಯುದ್ಧ್ಯಾಮಿ ಸಂಹತಾನೇತಾನ್ ಯಶೋ ಮಾನಂ ಚ ವರ್ಧಯನ್ ॥
ರೋಷಾವಿಷ್ಟನಾದ ಧನಂಜಯನು ಈ ದಿನ ಯುದ್ಧದಲ್ಲಿ ನನ್ನನ್ನು ಸೇರಿ ಮಡಕೆಯನ್ನು ಕಲ್ಲಿನ ಮೇಲೆ ಒಡೆದಂತೆ ಪುಡಿಯಾಗುವುದನ್ನು ರಥಿಕರೂ, ಯುದ್ಧಾಕಾಂಕ್ಷಿಗಳಾದ ನೀವೆಲ್ಲರೂ ನಿಂತು ನೋಡಿ. ನನ್ನ ಕೀರ್ತಿಯನ್ನು ಮತ್ತು ಗೌರವವನ್ನು ಹೆಚ್ಚಿಸಿಕೊಳ್ಳುತ್ತಾ ನಾನು ಅವರೆಲ್ಲರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು.
ಸಂಜಯಃ
ತತೋಽರ್ಜುನೋ ಮಹಾರಾಜ ಮಹಾತ್ಮಾ ಮಹತಾಂ ಪತಿಃ |
ಮಹೇಷ್ವಾಸೈಃ ವೃತೋ ರಾಜನ್ ಮಹೇಷ್ವಾಸೋ ವ್ಯವಸ್ಥಿತಃ ॥ 15 ॥
ಕಕ್ಷಾಗ್ನಿರಿವ ದುಃಸ್ಪರ್ಶಃ ಸವಜ್ರ ಇವ ವಾಸವಃ |
ದಂಡಪಾಣಿರಿವಾಸಹ್ಯೋ ಮೃತ್ಯುಃ ಕಾಲಪ್ರಚೋದಿತಃ ॥ 16 ॥
ಸಂಜಯ ಎಲೈ ಮಹಾರಾಜನೇ, ಅನಂತರ ಮಹಾತ್ಮರಿಗೊಡೆಯನಾದ, ಸ್ವತಃ ಮಹಾತ್ಮನಾದ, ಮಹಾಧನುರ್ಧಾರಿಗಳಿಂದ ಪರಿವೃತನಾದ, ಸ್ವತಃ ಮಹಾಧನುರ್ಧಾರಿಯಾದ, ಕಕ್ಷಾಗ್ನಿಯಂತೆ ಸ್ಪರ್ಶಿಸಲು ಅಸಾಧ್ಯನಾದ, ವಜ್ರಾಯುಧವನ್ನು ಹಿಡಿದ ಇಂದ್ರನಂತಿದ್ದ, ಕಾಲಪ್ರಚೋದಿತನಾದ ಮೃತ್ಯುವಿನಂತೆ ಸಹಿಸಲು ಅಸಾಧ್ಯನಾದ ಅರ್ಜುನನು ನಿಂತನು.
ಶೂಲಪಾಣಿರಿವಾಕ್ಷೋಭ್ಯೋ ವರುಣಃ ಪಾಶವಾನಿವ |
ಯುಗಾಂತಾಗ್ನಿರಿವಾರ್ಚಿಷ್ಮಾನ್ ದಿಧಕ್ಷುಃ ಸ್ಥಾಣುಜಂಗಮಮ್ ॥ 17 ॥
ಕ್ರೋಧಾಮರ್ಷಬಲೋಪೇತೋ ನಿವಾತಕವಚಾಂತಕಃ |
ಜಯೋ ಜೇತಾ ಸ್ಥಿತಃ ಸತ್ಯೇ ಪಾರಯಿಷ್ಯನ್ ಮಹಾವ್ರತಮ್ ॥18॥
ಅಲುಗಾಡಿಸಲು ಸಾಧ್ಯವಿಲ್ಲದ ಶೂಲಪಾಣಿಯಂತೆ, ಪಾಶವನ್ನು ಹಿಡಿದ ವರುಣನಂತೆ, ಸ್ಥಾವರ-ಜಂಗಮವನ್ನು ಸುಡುವ ಜ್ವಾಲೆಗಳಿಂದ ಕೂಡಿದ ಯುಗಾಂತ ಕಾಲದ ಅಗ್ನಿಯಂತೆ, ಕ್ರೋಧದಿಂದಲೂ, ರೋಷದಿಂದಲೂ ಮತ್ತು ಬಲದಿಂದಲೂ ಕೂಡಿದವನಾಗಿ ನಿವಾತ-ಕವಚಾಂತಕನೂ, ಗೆಲ್ಲುವ ಸ್ವಭಾವವುಳ್ಳವನೂ, ಸತ್ಯನಿಷ್ಠನೂ ಆದ ಅರ್ಜುನನು ತನ್ನ ದೊಡ್ಡ ಪ್ರತಿಜ್ಞೆಯನ್ನು ಪೂರೈಸುವವನಾಗಿ ನಿಂತನು.
ಆಮುಕ್ತಕವಚಃ ಖಡ್ಗೀ ಜಾಂಬೂನದಕಿರೀಟವಾನ್ |
ಶುಭ್ರವರ್ಮಾಂಬರಧರಸ್ತ್ವಂಗದೀ ಚಾರುಕುಂಡಲಃ ॥ 19 ॥
ರಥಪ್ರವರಮಾಸ್ಥಾಯ ನರೋ ನಾರಾಯಣಾನುಗಃ |
ವಿಧುನ್ವನ್ ಗಾಂಡಿವಂ ಸಂಖೇ ಬಭೌ ಸೂರ್ಯ ಇವೋದಿತಃ ॥ 20 ॥

ಕವಚವನ್ನು ಧರಿಸಿ, ಖಡ್ಗವನ್ನು ಧರಿಸಿ, ಸುವರ್ಣಮಯವಾದ ಕಿರೀಟವನ್ನು ಧರಿಸಿ, ಶುಭ್ರವಾದ ಕವಚ ಮತ್ತು ವಸ್ತ್ರಗಳನ್ನು ಧರಿಸಿ, ಭುಜಕೀರ್ತಿ ಮತ್ತು ಕರ್ಣ ಕುಂಡಲವನ್ನೂ ಧರಿಸಿ, ಶ್ರೇಷ್ಠವಾದ ರಥವನ್ನು ಏರಿ, ನಾರಾಯಣನ ಸಹಾಯವುಳ್ಳವನಾಗಿ ನರನಾದ ಅವನು, ಯುದ್ಧದಲ್ಲಿ ಗಾಂಡೀವ ಧನುಸ್ಸನ್ನು ತೂಗಾಡಿಸುತ್ತಾ ಉದಯಿಸಿದ ಸೂರ್ಯನಂತೆ ಶೋಭಿಸಿದನು.

ಅಗ್ರಾನೀಕಸ್ಯ ಸೋಽಧ್ಯರ್ಧ ಇಷುಪಾತೇ ಧನಂಜಯಃ।
ವ್ಯವಸ್ಥಾಪ್ಯ ರಥಂ ಸಜ್ಜಂ ಶಂಖಂ ಪ್ರಾಧ್ಮಾಪಯತ್ ಪ್ರಭುಃ ॥ 21 ॥
ಪ್ರಭುವಾದ ಧನಂಜಯನು ಕೌರವರ ಸೈನ್ಯದ ಮುಂಭಾಗದಲ್ಲಿ ಒಂದೂವರೆ ಬಾಣಪಾತದ ದೂರದಲ್ಲಿ ತನ್ನ ಸುಸಜ್ಜಿತವಾದ ರಥವನ್ನು ನಿಲ್ಲಿಸಿ ಶಂಖವನ್ನು ಊದಿದನು.

ಅಥ ಕೃಷ್ಣೋಽಪ್ಯಸಂಭ್ರಾಂತಃ ಪಾರ್ಥೇನ ಸಹ ವೀರ್ಯವಾನ್।
ಪ್ರಾಧ್ಮಾಪಯತ್ ಪಾಂಚಜನ್ಯಂ ಶಂಖಪ್ರವರಮೋಜಸಾ ॥ 22 ॥
ಆಗ ಕೃಷ್ಣನೂ ಸಹ ಯಾವ ಗಾಬರಿಯೂ ಇಲ್ಲದೆ ಅರ್ಜುನನ ಜೊತೆಯಲ್ಲಿ ತನ್ನ ಶ್ರೇಷ್ಠ ಶಂಖವಾದ ಪಾಂಚಜನ್ಯವನ್ನು ವೀರ್ಯಶಾಲಿಯಾದ ಅವನು ತನ್ನ ಸಾಮರ್ಥ್ಯದಿಂದ ಊದಿದನು.

ತಯೋಃ ಶಂಖಪ್ರಣಾದೇನ ತವ ಸೈನ್ಯಂ ವಿಶಾಂಪತೇ।
ಸಂಹೃಷ್ಟರೋಮಮುದ್ವಿಗ್ನಂ ಮಹದ್ ಭಯಮಭೂತ್ ತದಾ ॥23॥
ಎಲೈ ರಾಜನೇ, ಅವರಿಬ್ಬರ ಶಂಖನಾದದಿಂದ ನಿನ್ನ ಸೈನ್ಯವು ರೋಮಾಂಚಗೊಂಡು ಉದ್ವಿಗ್ನವಾಯಿತು. ಅದಕ್ಕೆ ದೊಡ್ಡ ಭಯವುಂಟಾಯಿತು.

ಯಥಾ ತ್ರಸ್ಯಂತಿ ಭೂತಾನಿ ಸರ್ವಾಣ್ಯಶನಿನಿಸ್ವನಾತ್।
ತಥಾ ಶಂಖಪ್ರಣಾದೇನ ವಿತ್ರೇಸುಸ್ತವ ಸೈನಿಕಾಃ ॥ 24 ॥
ಸಿಡಿಲಿನ ಶಬ್ದಕ್ಕೆ ಎಲ್ಲ ಪ್ರಾಣಿಗಳೂ ಹೆದರಿರುವ ನಿನ್ನ ಸೈನಿಕರು ಆ ಶಂಖನಾದಕ್ಕೆ ಹೆದರಿದರು.

ಪ್ರಸುಸ್ರುವುಃ ಶಕೃನ್ಮೂತ್ರಂ ವಾಹನಾನಿ ಚ ಸರ್ವಶಃ।
ತಥಾ ಪ್ರಬಲಮುದ್ವಿಗ್ನಂ ಮಹದ್ ಬಲಮಭೂತ್ ತವ ॥ 25 ॥
ನಿನ್ನ ಸೈನ್ಯದ ವಾಹನವೆಲ್ಲವೂ ಮಲಮೂತ್ರಗಳನ್ನು ಸುರಿಸಿದವು. ನಿನ್ನ ದೊಡ್ಡ ಸೈನ್ಯವು ಅಷ್ಟು ಪ್ರಬಲವಾಗಿ ಉದ್ವೇಗಗೊಂಡಿತು.

ಸೀದಂತಿ ಸ್ಮ ನರಾ ರಾಜನ್ ಶಂಖಶಬ್ದೇನ ಮಾರಿಷ।
ವಿಸಂಜ್ಞಾಶ್ಚಾಭವನ್ ಕೇಚಿತ್ ಕೇಚಿದ್ ರಾಜನ್ ವಿತತ್ರಸುಃ ॥ 26 ॥
ಎಲೈ ಪೂಜ್ಯನೇ, ರಾಜನೇ, ಶಂಖಶಬ್ದವನ್ನು ಕೇಳಿ ಕೆಲವು ಯೋಧರು ಕುಸಿದರು. ಕೆಲವರು ಮೂರ್ಛೆ ಹೊಂದಿದರು. ಕೆಲವರು ಹೆದರಿದರು.

ತತಃ ಕಪಿರ್ಮಹಾನಾದಂ ಸಹ ಭೂತೈರ್ಧ್ವಜಾಲಯೈಃ।
ಅಕರೋದ್ ವ್ಯಾದಿತಾಸ್ಯಶ್ಚ ಭೀಷಯಂಸ್ತವ ಸೈನಿಕಾನ್ ॥ 27 ॥
ಅನಂತರ ಧ್ವಜದಲ್ಲಿದ್ದ ಮಹಾಕಪಿಯು ಧ್ವಜನಿವಾಸಿಗಳಾದ ಭೂತಗಳ ಜೊತೆಯಲ್ಲಿ ಬಾಯಿ ತೆರೆದು ನಿನ್ನ ಸೈನಿಕರನ್ನು ಭಯಗೊಳಿಸುತ್ತಾ ಮಹಾನಾದವನ್ನು ಮಾಡಿತು.

ತತಃ ಶಂಖಾಶ್ಚ ಭೇರ್ಯಶ್ಚ ಮೃದಂಗಾಶ್ಚಾನಕೈಃ ಸಹ।
ಪುನರೇವಾಭ್ಯಹನ್ಯಂತ ತವ ಸೈನ್ಯಪ್ರಹರ್ಷಣಾಃ ॥ 28 ॥
ಅನಂತರ ನಿನ್ನ ಸೈನ್ಯದಲ್ಲಿ ನಿನ್ನ ಸೈನ್ಯಕ್ಕೆ ಸಂತೋಷವನ್ನು ಕೊಡುವ ಶಂಖಗಳು ಊದಲ್ಪಟ್ಟವು. ಭೇರಿ-ಮೃದಂಗ ಮತ್ತು ಆನಕಗಳು ಪುನಃ ಬಾರಿಸಲ್ಪಟ್ಟವು.

ನಾನಾವಾದಿತ್ರಸಂಹ್ರಾದೈಃ ಕ್ಷ್ವೇಡಿತಾಸ್ಫೋಟಿತಾಕುಲೈಃ।
ಸಿಂಹನಾದೈಃ ಸಮುತ್ಕೃಷ್ಟೈಃ ಸಮಾಹೂಯ ಪರಸ್ಪರಮ್ ॥ 29 ॥
ತಸ್ಮಿನ್ ಸುತುಮುಲೇ ಶಬ್ದೇ ಭೀರೂಣಾಂ ಭಯವರ್ಧನೇ।
ಅತೀವ ಹರ್ಷಾದ್ ದಾಶಾರ್ಹಮಬ್ರವೀತ್ ಪಾಕಶಾಸನಿಃ ॥ 30 ॥
ನಾನಾವಿಧವಾದ ವಾದ್ಯಘೋಷದಿಂದಲೂ, ಸಿಂಹನಾದಗಳಿಂದಲೂ, ಉತ್ಕೃಷ್ಟವಾದ ಕಿರುಚಾಟದಿಂದಲೂ, ಪರಸ್ಪರವಾಗಿ ಆಹ್ವಾನಿಸಿ ಕಿರುಚುವ ಶಬ್ದದಿಂದಲೂ, ಹಸ್ತತಳ ಶಬ್ದದಿಂದಲೂ ಕೂಡಿದ, ಭೀರುಗಳಿಗೆ ಭಯವನ್ನು ಹೆಚ್ಚಿಸುವ ತೀವ್ರ ಶಬ್ದ ಸಮೂಹದಲ್ಲಿ ಸಂತೋಷಗೊಂಡ ಅರ್ಜುನನು ಕೃಷ್ಣನನ್ನು ಕುರಿತು ಹೇಳಿದನು.

ಚೋದಯಾಶ್ವಾನ್ ಹೃಷೀಕೇಶ ಯತ್ರ ದುರ್ಮರ್ಷಣಃ ಸ್ಥಿತಃ।
ಏತದ್ ಭಿತ್ತ್ವಾ ಗಜಾನೀಕಂ ಪ್ರವೇಕ್ಷ್ಯಾಮ್ಯರಿವಾಹಿನೀಮ್ ॥ 31 ॥
ಎಲೈ ಹೃಷೀಕೇಶನೇ, ದುರ್ಮರ್ಷಣನು ಇದ್ದಲ್ಲಿಗೆ ನನ್ನ ಅಶ್ವಗಳನ್ನು ನಡೆಸು. ಅವನಿರುವ ಗಜಸೇನೆಯನ್ನು ಭೇದಿಸಿ ನಾನು ಶತ್ರುಸೇನೆಯನ್ನು ಪ್ರವೇಶಿಸುವೆನು.

ಸಂಜಯಃ
ಏವಮುಕ್ತೋ ಮಹಾಬಾಹುಃ ಕೇಶವಃ ಸವ್ಯಸಾಚಿನಾ।
ಅಚೋದಯದ್ ಹಯಾಂಸ್ತತ್ರ ಯತ್ರ ದುರ್ಮರ್ಷಣಃ ಸ್ಥಿತಃ ॥ 32 ॥
ಸಂಜಯ ಸವ್ಯಸಾಚಿಯಿಂದ ಹೀಗೆ ಹೇಳಲ್ಪಟ್ಟ ಮಹಾಬಾಹುವಾದ ಕೇಶವನು ದುರ್ಮರ್ಷಣನು ಇದ್ದಲ್ಲಿಗೆ ಅಶ್ವಗಳನ್ನು ಪ್ರಚೋದಿಸಿದನು.

ಸ ಸಂಪ್ರಹಾರಸ್ತುಮುಲಃ ಸಂಪ್ರವೃತ್ತಃ ಸುದಾರುಣಃ।

ಏಕಸ್ಯ ಚ ಬಹೂನಾಂ ಚ ರಥನಾಗನರಕ್ಷಯಃ ॥ 33 ॥
ಆಗ ಒಬ್ಬನಿಗೂ ಮತ್ತು ಅನೇಕರಿಗೂ ರಥ-ಗಜ-ಯೋಧ ಕ್ಷಯಕಾರಕವಾದ, ಅತ್ಯಂತ ದಾರುಣವಾದ ಮತ್ತು ತೀವ್ರವಾದ ಸಂಘರ್ಷವು ಉಂಟಾಯಿತು.
ತತಃ ಸಾಯಕವರ್ಷೇಣ ಪರ್ಜನ್ಯ ಇವ ವೃಷ್ಟಿಭಿಃ |
ಪರಾನವಾಕಿರತ್ ಪಾರ್ಥಃ ಪರ್ವತಾನಿವ ನೀರದಃ ॥ 34 ॥
ಆಗ ಅರ್ಜುನನು ಪರ್ಜನ್ಯನು ಮಳೆಯನ್ನು ಸುರಿಸುವಂತೆ, ಮೋಡಗಳು ಪರ್ವತವನ್ನು ತಮ್ಮ ನೀರಿನಿಂದ ಮುಚ್ಚುವಂತೆ ಶತ್ರುಸೈನ್ಯದ ಮೇಲೆ ಬಾಣಗಳ ಮಳೆಯನ್ನು ಕರೆದನು.
ತೇ ಚಾಪಿ ರಥಿನಃ ಸರ್ವೇ ತ್ವರಿತಾಃ ಕೃತಹಸ್ತವತ್ |
ಅವಾಕಿರನ್ ಬಾಣಜಾಲೈಃ ತತಃ ಕೃಷ್ಣಧನಂಜಯೌ ॥ 35 ॥
ಆಗ ಕೌರವರ ರಥಿಕರೂ ಸಹ ಕ್ಷಿಪ್ರಹಸ್ತವುಳ್ಳವರಾಗಿ, ತ್ವರೆಯಿಂದ ಕೂಡಿ ಕೃಷ್ಣಾರ್ಜುನರ ಮೇಲೆ ಬಾಣಗಳ ಸಮೂಹಗಳ ಮಳೆಯನ್ನು ಕರೆದರು.
ತತಃ ಕ್ರುದ್ಧೋ ಮಹಾಬಾಹುರ್ವಾರ್ಯಮಾಣಃ ಪರೈರ್ಯುಧಿ |
ಶಿರಾಂಸಿ ರಥಿನಾಂ ಪಾರ್ಥಃ ಕಾಯೇಭ್ಯೋಽಪಾತಯತ್ ಕ್ಷಿತೌ ॥ 36 ॥
ಅನಂತರ ಶತ್ರುಗಳಿಂದ ರಣರಂಗದಲ್ಲಿ ತಡೆಯಲ್ಪಟ್ಟ ಮಹಾಬಾಹುವಾದ ಪಾರ್ಥನು ಕೋಪಗೊಂಡು ರಥಿಕರ ಶಿರಸ್ಸುಗಳನ್ನು ಅವರ ದೇಹಗಳಿಂದ ಕತ್ತರಿಸಿ ಭೂಮಿಯ ಮೇಲೆ ಬೀಳಿಸಿದನು.
ಉದ್ಭ್ರಾಂತನಯನೈರ್ವಕ್ತ್ರೈರಮರ್ಷಾದ್ ಭ್ರುಕುಟೀಕೃತೈಃ |
ತಥೈವ ಕ್ರೋಧದಷ್ಟೋಷ್ಠೈರವಾಕೀರ್ಯತ ಮೇದಿನೀ ॥ 37 ॥
ಚಲಿಸುವ ಕಣ್ಣುಗಳಿಂದ ಕೂಡಿರುವ, ಹುಬ್ಬುಗಳನ್ನು ಗಂಟಿಕ್ಕಿ ರೋಷದಿಂದ ಕೂಡಿದ, ಕ್ರೋಧದಿಂದ ತುಟಿಗಳನ್ನು ಕಚ್ಚಿದ, ವೀರರ ಶಿರಸ್ಸುಗಳಿಂದ ಭೂಮಿಯು ತುಂಬಿ ಹೋಯಿತು.
ಪುಂಡರೀಕವನಾನೀವ ನಿರಸ್ತಾನಿ ಸಮಂತತಃ |
ವಿನಿಕೀರ್ಣಾನಿ ಯೋಧಾನಾಂ ವದನಾನಿ ಚಕಾಶಿರೇ ॥ 38 ॥
ಎಲ್ಲ ಕಡೆಗಳಲ್ಲಿಯೂ ಕೆಡವಲ್ಪಟ್ಟ ಭೂಮಿಯ ಮೇಲೆ ಬಿದ್ದ ಯೋಧರ ಮುಖಗಳು ಪದ್ಮವನಗಳಂತೆ ಶೋಭಿಸಿದವು.
ತಪನೀಯತನುತ್ರಾಣಾಃ ಸಂಸಿಕ್ತಾ ರುಧಿರೇಣ ಚ |
ಸಂಸಕ್ತಾ ಇವ ದೃಶ್ಯಂತೇ ಮೇಘಸಂಘಾಃ ಸವಿದ್ಯುತಃ ॥ 39 ॥
ಸುವರ್ಣಮಯವಾದ ಕವಚವನ್ನು ಧರಿಸಿದ, ರಕ್ತದಿಂದ ಸಿಕ್ತವಾದ ಶಿರಸ್ಸುಗಳು ಒಂದಕ್ಕೊಂದು ಸೇರಿಕೊಂಡು ಮಿಂಚಿನಿಂದ ಕೂಡಿದ ಮೋಡಗಳ ಸಮೂಹದಂತೆ ತೋರಿಬಂದವು.
ಶಿರಸಾಂ ಪತತಾಂ ರಾಜನ್ ಶಬ್ದೋಽಭೂತ್ ಪೃಥಿವೀತಳೇ |
ಕಾಲೇನ ಪರಿಪಕ್ವಾನಾಂ ತಾಳಾನಾಂ ಪತತಾಮಿವ ॥ 40 ॥
ಎಲೈ ರಾಜನೇ, ಭೂಮಿಯ ಮೇಲೆ ಬೀಳುವ ಶಿರಸ್ಸುಗಳ ಶಬ್ದವು ಕಾಲದಿಂದ ಪಕ್ವವಾಗಿ ನೆಲದ ಮೇಲೆ ಬೀಳುವ ತಾಳ ವೃಕ್ಷದ ಫಲಗಳ ಶಬ್ದವನ್ನು ಹೋಲುತ್ತಿದ್ದಿತು.
ಕಬಂಧ ಉತ್ಥಿತಃ ಕಶ್ಚಿದ್ ವಿಕ್ಷ್ಫಾರ್ಯ ಸಶರಂ ಧನುಃ |
ಕಶ್ಚಿತ್ ಸುನಿಶಿತಂ ಖಡ್ಗಂ ಭುಜೇನೋದ್ಯಮ್ಯ ತಿಷ್ಠತಿ |
ಗೃಹೀತ್ವಾಽನ್ಯಸ್ಯ ಕೇಶೇಷು ಶಿರೋ ನೃತ್ಯತಿ ಚಾಪರಃ ॥ 41 ॥
ಒಂದು ಕಡೆ ರುಂಡವು ಮಾತ್ರ ಕೈಯಲ್ಲಿ ಧನುಸ್ಸು, ಬಾಣಗಳನ್ನು ಹಿಡಿದು ಎಳೆದು ಮೇಲಕ್ಕೆದ್ದಿತು. ಇನ್ನೊಂದು ರುಂಡವು ಭುಜದಿಂದ ಹರಿತವಾದ ಖಡ್ಗವನ್ನು ಎತ್ತಿ ನಿಂತಿತು. ಇನ್ನೊಂದು ಕಡೆ ಶಿರಸ್ಸನ್ನು ಕೇಶಗಳಲ್ಲಿ ಹಿಡಿದು ಇನ್ನೊಂದು ರುಂಡವು ಕುಣಿಯುತ್ತಿದ್ದಿತು.
ಪತಿತಾನಿ ನ ಜಾನಂತಿ ಶಿರಾಂಸಿ ಪುರುಷರ್ಷಭಾಃ |
ಅಮೃಷ್ಯಮಾಣಾಃ ಕೌಂತೇಯಂ ಸಂಗ್ರಾಮೇ ಜಯಗರ್ದ್ಧಿನಃ ॥ 42 ॥
ಅರ್ಜುನನನ್ನು ಸಂಗ್ರಾಮದಲ್ಲಿ ನೋಡಿ ಸಹಿಸದೆ ಜಯವನ್ನು ಬಯಸುತ್ತಿದ್ದ ಪುರುಷಶ್ರೇಷ್ಠರಿಗೆ ತಮ್ಮ ಶಿರಸ್ಸುಗಳು ಕೆಳಗೆ ಬಿದ್ದುದೂ ತಿಳಿಯುತ್ತಿರಲಿಲ್ಲ.
ಹಯಾನಾಮುತ್ತಮಾಂಗೈಶ್ಚ ಹಸ್ತಿಹಸ್ತೈಶ್ಚ ಮೇದಿನೀ |
ಬಾಹುಭಿಶ್ಚ ಶಿರೋಭಿಶ್ಚ ವೀರಾಣಾಂ ಸಮಕೀರ್ಯತ ॥ 43 ॥
ಅಶ್ವಗಳ ಶಿರಸ್ಸುಗಳಿಂದಲೂ, ಗಜಗಳ ಸೊಂಡಿಲುಗಳಿಂದಲೂ, ವೀರರ ಬಾಹು ಮತ್ತು ಶಿರಸ್ಸಿನಿಂದಲೂ ಭೂಮಿಯು ಎಲ್ಲ ಕಡೆಯಲ್ಲಿಯೂ ಹರಡಲ್ಪಟ್ಟಿತು.
ಅಯಂ ಪಾರ್ಥಃ ಕುತಃ ಪಾರ್ಥಃ ಪಾರ್ಥೋಽಯಮಿತಿ ಸರ್ವಶಃ |
ತಿಷ್ಠ ಪಾರ್ಥೈಹಿ ಮಾಂ ಪಾರ್ಥ ಕ್ವ ಯಾಸೀತಿ ಚ ಜಲ್ಪತಾಮ್ ॥ 44 ॥
ತವ ಸೈನ್ಯಸ್ಥಯೋಧಾನಾಂ ಪಾರ್ಥಭೂತಮಿವಾಭವತ್ ॥ 45 ॥
ಇವನು ಅರ್ಜುನ, ಅರ್ಜುನನು ಎಲ್ಲಿ? ಇವನು ಅರ್ಜುನ, ಅರ್ಜುನನೇ ನಿಲ್ಲು, ಅರ್ಜುನ ನನ್ನ ಬಳಿಗೆ ಬಾ, ಎಲ್ಲಿಗೆ ಹೋಗುವಿ? ಎಂದು ಎಲ್ಲ ಕಡೆಯಲ್ಲಿಯೂ ಮಾತನಾಡುವ ನಿನ್ನ ಸೈನ್ಯದ ಯೋಧರಿಗೆ ಎಲ್ಲವೂ ಅರ್ಜುನಮಯವಾಗಿ ತೋರಿತು.
ಅನ್ಯೋನ್ಯಮಪಿ ಚಾಜಘ್ನುರಾತ್ಮಾನಮಪಿ ಚಾಪರೇ |
ಪಾರ್ಥಭೂತಮಮನ್ಯಂತ ಜನಾಃ ಕಾಲೇನ ಮೋಹಿತಾಃ ॥ 46 ॥

ಕಾಲದಿಂದ ಮೋಹಿತರಾದ ನಿನ್ನ ಯೋಧರು ಜಗತ್ತೆಲ್ಲ ಪಾರ್ಥಮಯವೆಂದು ತಿಳಿದು ತಮ್ಮವರನ್ನೇ ಕೊಂದರು. ಕೆಲವರು ತಮ್ಮನ್ನೇ ಕೊಂದುಕೊಂಡರು.
ನಿಷ್ಟನಂತೋ ವಿರುಧಿರಾ ವಿಸಂಜ್ಞಾ ಗಾಢವೇದನಾಃ |
ಶಯಾನಾ ಬಹವೋ ವೀರಾಃ ಕೀರ್ತಯಂತಶ್ಚ ಬಾಂಧವಾನ್ ॥ 47 ॥
ಸಭಿಂಡಿಪಾಲಾಃ ಸಪ್ರಾಸಾಃ ಸಮುದ್ಗರಪರಶ್ವಧಾಃ |
ಸನಿರ್ವ್ಯೂಹಾಃ ಸನಿಸಿತ್ರಿಂಶಾಃ ಸಶರಾಸನತೋಮರಾಃ ॥ 48 ॥
ಸಹಾಸಿಚರ್ಮಾವರಣಾಃ ಸಗದಾಃ ಸಾಂಗದಾ ರಣೇ |
ಗರ್ಜಿಸುತ್ತಾ, ರಕ್ತವನ್ನು ಸುರಿಸುತ್ತಾ, ಸಂಜ್ಞಾಹೀನರಾಗಿ ಗಾಢವೇದನೆಯನ್ನು ಅನುಭವಿಸುತ್ತಾ, ತಮ್ಮ ಬಂಧುಗಳ ಹೆಸರನ್ನು ಹೇಳುತ್ತಾ ಭೂಮಿಯ ಮೇಲೆ ಬಿದ್ದ ಅನೇಕ ವೀರರು ಕೈಯಲ್ಲಿ ಭಿಂಡಿಪಾಲಗಳನ್ನು, ಪ್ರಾಸಗಳನ್ನು, ಮುದ್ಗರ ಪರಶುಗಳನ್ನು, ನಿರ್ವ್ಯೂಹಗಳನ್ನು, ಖಡ್ಗಗಳನ್ನು, ಧನುಸ್ಸು ಮತ್ತು ತೋಮರಗಳನ್ನು, ಖಡ್ಗ- ಚರ್ಮಗಳನ್ನು, ಗದೆಗಳನ್ನು ಹಿಡಿದು ರಣರಂಗದಲ್ಲಿ ಬಿದ್ದಿರುವುದು ಕಂಡು ಬಂದಿತು.
ಮಹಾಭುಜಗಸಂಕಾಶಾ ಬಾಹವಃ ಪರಿಘೋಪಮಾಃ ॥ 49 ॥
ಉದ್ವೇಷ್ಟಂತಿ ವಿಚೇಷ್ಟಂತಿ ಸಂವೇಷ್ಟಂತಿ ಚ ಸರ್ವಶಃ |
ವೇಗಂ ಕುರ್ವಂತಿ ಸಂರಬ್ಧಾ ನಿಕೃತ್ತಾಃ ಪರಮೇಷುಭಿಃ ॥ 50 ॥
ಮಹಾಸರ್ಪಗಳ ಕಾಂತಿಯನ್ನು ಹೊಂದಿದ, ಶ್ರೇಷ್ಠ ಬಾಣಗಳಿಂದ ಕತ್ತರಿಸಲ್ಪಟ್ಟ ಒನಕೆಯಂತಿದ್ದ ಬಾಹುಗಳು ಎಲ್ಲ ಕಡೆಯಲ್ಲಿಯೂ ಭೂಮಿಯ ಮೇಲೆ ಬಿದ್ದು ಹೊರಳಾಡುತ್ತವೆ, ಸುತ್ತಿಕೊಳ್ಳುತ್ತವೆ, ವೇಗವನ್ನು ಹೊಂದುತ್ತವೆ.
ಯೋ ಯಃ ಸ್ಮ ಸಮರೇ ಪಾರ್ಥಂ ಪ್ರತಿಸಂರಭತೇ ನರಃ |
ತಸ್ಯ ತಸ್ಯಾಂತಕೋ ಬಾಣಃ ಶರೀರಮುಪಸರ್ಪತಿ ॥ 51 ॥
ಯುದ್ಧದಲ್ಲಿ ಯಾವ ಯಾವನು ಅರ್ಜುನನ ಮೇಲೆ ಕೋಪವನ್ನು ತೆಗೆದುಕೊಳ್ಳುತ್ತಾನೆಯೋ ಅಂತಹವನ ಶರೀರವನ್ನು ಪ್ರಾಣಾಂತಕವಾದ ಬಾಣವು ಪ್ರವೇಶಿಸುತ್ತಿದ್ದಿತು.
ನೃತ್ಯತೋ ರಥಮಾರ್ಗೇಷು ಧನುರ್ವ್ಯಾಯಚ್ಛತಸ್ತದಾ |
ನ ಕಶ್ಚಿತ್ ತತ್ರ ಪಾರ್ಥಸ್ಯ ದದರ್ಶಾಂತರಮಣ್ವಪಿ ॥ 52 ॥
ರಥಮಾರ್ಗದಲ್ಲಿ ನರ್ತನವನ್ನು ಮಾಡುತ್ತಾ, ಧನುಸ್ಸನ್ನು ಎಳೆದು ಪ್ರಯೋಗಿಸುವ ಅರ್ಜುನನ ಕ್ರಿಯೆಯಲ್ಲಿ ಯಾರಿಗೂ ಅಣುವಿನಷ್ಟು ಅಂತರವೂ ಕಾಣಲಿಲ್ಲ.
ಯತ್ ತಸ್ಯ ಯತಮಾನಸ್ಯ ಕ್ಷಿಪ್ರಮಾಕ್ಷಿಪತಃ ಶರಾನ್ |
ಲಾಘವಾತ್ ಪಾಂಡುಪುತ್ರಸ್ಯ ವ್ಯಸ್ಮಯಂತಾಪರೇ ಜನಾಃ ॥ 53 ॥
ಯುದ್ಧದಲ್ಲಿ ಪ್ರಯತ್ನಶೀಲನಾದ, ಪಾಂಡುಪುತ್ರನಾದ ಅರ್ಜುನನು ಬಾಣವನ್ನು ತೆಗೆದುಕೊಳ್ಳುವ, ಬಿಲ್ಲಿನಲ್ಲಿ ಹೂಡುವ ಮತ್ತು ಪ್ರಯೋಗಿಸುವ ಕ್ಷಿಪ್ರತೆಯನ್ನು ನೋಡಿ ಉಳಿದ ಜನರು ವಿಸ್ಮಯಗೊಂಡರು.
ಹಸ್ತಿನಂ ಹಸ್ತಿಯಂತಾರಮ್ ಅಶ್ವಮಶ್ವಪ್ರಯಾಯಿನಮ್ |
ರಥಿನಂ ಸಾರಥಿಂ ಪತ್ತಿಂ ಪಾರ್ಥಃ ಪ್ರಮಥತೇ ಶರೈಃ ॥ 54 ॥
ಗಜ ಮತ್ತು ಗಜಯೋಧರನ್ನು, ಅಶ್ವ ಮತ್ತು ಅಶ್ವಯೋಧರನ್ನು, ರಥಿಯನ್ನು ಮತ್ತು ಸಾರಥಿಯನ್ನು ಹಾಗೂ ಪದಾತಿಗಳನ್ನು ಅರ್ಜುನನು ಬಾಣಗಳಿಂದ ವಿನಾಶಗೊಳಿಸಿದನು.
ಆವರ್ತಮಾನಮಾವೃತ್ತಂ ಯುದ್ಧ್ಯಮಾನಂ ಚ ಪಾಂಡವಃ |
ಪ್ರಮುಖೇ ವರ್ತಮಾನಂ ಚ ನ ಕಂಚಿನ್ನ ಹಿನಸ್ತಿ ಸಃ ॥ 55 ॥
ತಿರುಗುತ್ತಿದ್ದ, ತಿರುಗಿದ ಮತ್ತು ಎದುರಿಗೆ ಇದ್ದು ಯುದ್ಧವನ್ನು ಮಾಡುವ ಯಾವನನ್ನೂ ಅರ್ಜುನನು ಬಿಡಲಿಲ್ಲ.
ಯಥೋದಯಾನಃ ಸಮಯೇ ಸೂರ್ಯೋ ಹಂತಿ ಮಹತ್ ತಮಃ |
ತಥಾಽರ್ಜುನೋ ಗಜಾನೀಕಂ ವ್ಯಧಮತ್ ಕಂಕಪತ್ರಿಭಿಃ ॥ 56 ॥
ಉದಯಕಾಲದಲ್ಲಿ ಸೂರ್ಯನು ದೊಡ್ಡ ಅಂಧಕಾರವನ್ನು ನಾಶ ಮಾಡುವಂತೆ, ಕಂಕಪತ್ರಗಳುಳ್ಳ ಬಾಣಗಳಿಂದ ಅರ್ಜುನನು ಗಜಸೇನೆಯನ್ನು ನಾಶಮಾಡಿದನು.
ಹಸ್ತಿಭಿಃ ಪತಿತೈರ್ಭಿನ್ನೈಃ ತವ ಸೈನ್ಯಮದೃಶ್ಯತ |
ಆದಿಕಾಲೇ ಯಥಾ ಭೂಮಿರ್ವಿನಿಕ್ಷಿಪ್ತಮಹೀಧರಾ ॥ 57 ॥
ದೇಹವು ಕತ್ತರಿಸಲ್ಪಟ್ಟು ಕೆಳಗೆ ಬಿದ್ದ ಗಜಗಳಿಂದ ಕೂಡಿದ ನಿನ್ನ ಸೈನ್ಯವು ಆದಿಕಾಲದಲ್ಲಿ ಪರ್ವತದಿಂದ ಹರಡಿದ ಭೂಮಿಯಂತೆ ಕಂಡುಬಂದಿತು.
ಯಥಾ ಮಧ್ಯಂದಿನೇ ಸೂರ್ಯೋ ದುಷ್ಪ್ರೇಕ್ಷ್ಯಃ ಪ್ರಾಣಿಭಿಃ ಸದಾ |
ತಥಾ ಧನಂಜಯಃ ಕ್ರುದ್ಧೋ ದುಷ್ಪ್ರೇಕ್ಷ್ಯೋ ಯುಧಿ ಶತ್ರುಭಿಃ ॥ 58 ॥
ಹೇಗೆ ಮಧ್ಯಾಹ್ನದ ಸಮಯದಲ್ಲಿ ಪ್ರಾಣಿಗಳು ಸೂರ್ಯನನ್ನು ನೋಡಲು ಸಾಧ್ಯವಿಲ್ಲವೋ ಅದರಂತೆ ಕೋಪಗೊಂಡ ಧನಂಜಯನು ರಣರಂಗದಲ್ಲಿ ಶತ್ರುಗಳಿಂದ ನೋಡಲು ಸಾಧ್ಯವಿಲ್ಲದವನಾದನು.
ತತ್ ತಥಾ ತವ ಪುತ್ರಸ್ಯ ಸೈನ್ಯಂ ಯುಧಿ ಪರಂತಪ |
ಪ್ರಭಗ್ನಂ ದ್ರುತಮಾವಿಗ್ನಮತೀವ ಶರಪೀಡಿತಮ್ ॥ 59 ॥
ಎಲೈ ಪರಂತಪನೇ, ಹಾಗೆ ನಿನ್ನ ಪುತ್ರನ ಸೈನ್ಯವು ರಣರಂಗದಲ್ಲಿ ಅರ್ಜುನನ ಬಾಣಗಳಿಂದ ಬಹಳ ಪೀಡಿತವಾಗಿ ದುಃಖಗೊಂಡು,

ಭಗ್ನವಾಗಿ ಓಡಿ ಹೋಯಿತು.
ಮಾರುತೇನೇವ ಮಹತಾ ಮೇಘಾನೀಕಮುದೀರಿತಮ್ |
ಪ್ರಕಾಲ್ಯಮಾನಂ ತತ್ ಸೈನ್ಯಂ ನಾಶಕತ್ ಪ್ರತಿವೀಕ್ಷಿತುಮ್ ॥60॥
ದೊಡ್ಡ ಬಿರುಗಾಳಿಯಿಂದ ಚದುರಿಸಲ್ಪಟ್ಟ ಮೋಡದ ಸಮೂಹದಂತೆ ಓಡಿ ಹೋಗುತ್ತಿದ್ದ ಆ ಸೈನ್ಯವು ಅರ್ಜುನನನ್ನು ನೋಡಲೂ ಸಹ ಶಕ್ತವಾಗಲಿಲ್ಲ.
ಪ್ರತೋದೈಶ್ಚಾಪಕೋಟೀಭಿಃ ಫೀಟ್ಕಾರೈಃ ಸಾಧುವಾದಿತೈಃ |
ಕಶಾಪಾರ್ಷ್ಣ್ಯಭಿಘಾತೈಶ್ಚ ವಾಗ್ಭಿರುಗ್ರಾಭಿರೇವ ಚ ॥ 61 ॥
ಚೋದಯಂತೋ ಹಯಾಂಸ್ತೂರ್ಣಂ ಪಲಾಯಂತೇ ಸ್ಮ ತಾವಕಾಃ |
ಸಾದಿನೋ ರಥಿನಶ್ಚೈವ ಪತ್ತಯಶ್ಚಾರ್ಜುನಾರ್ದಿತಾಃ ॥ 62 ॥
ನಿನ್ನ ಸೈನ್ಯದ ಅಶ್ವಾರೋಹಿಗಳು, ರಥಿಕರು ಮತ್ತು ಪದಾತಿಗಳು ಅರ್ಜುನನ ಬಾಣಗಳಿಂದ ಪೀಡಿತರಾಗಿ ಚಾವಟಿಗಳಿಂದಲೂ, ಧನುಸ್ಸಿನ ತುದಿಗಳಿಂದಲೂ ಚೆನ್ನಾಗಿ ನುಡಿದ ಫೀಟ್ಕಾರ ಶಬ್ದದಿಂದಲೂ (ಕುದುರೆಗಳನ್ನು ವೇಗವಾಗಿ ಓಡಿಸುವ ಶಬ್ದ), ಚಾವಟಿ ಮತ್ತು ಹಿಮ್ಮಡಿಗಳ ಏಟಿನಿಂದಲೂ, ಉಗ್ರವಾದ ಮಾತುಗಳಿಂದಲೂ ತಮ್ಮ ಅಶ್ವಗಳನ್ನು ಪ್ರಚೋದಿಸುತ್ತಾ ಓಡಿದರು.
ಪಾರ್ಷ್ಣ್ಯಂಗುಷ್ಠಾಂಕುಶೈರ್ನಾಗಂ ಚೋದಯಂತಸ್ತಥಾಽಪರೇ |
ಶರೈಃ ಸಮ್ಮೋಹಿತಾಶ್ಚಾನ್ಯೇ ತಮೇವಾಭಿಮುಖಾ ಯಯುಃ |
ತವ ಯೋಧಾ ಹತೋತ್ಸಾಹಾ ವಿಭ್ರಾಂತಮನಸಸ್ತದಾ ॥ 63 ॥
ಇನ್ನು ಕೆಲವರು ತಮ್ಮ ಹಿಮ್ಮಡಿಯಿಂದಲೂ, ಅಂಗುಷ್ಠದಿಂದಲೂ, ಅಂಕುಶದಿಂದಲೂ ಗಜವನ್ನು ಪ್ರೇರಿಸುತ್ತಾ, ಅರ್ಜುನನ ಬಾಣಗಳಿಂದ ಸಮ್ಮೋಹಿತರಾಗಿ ಅರ್ಜುನನ ಕಡೆಗೇ ನಡೆದರು. ನಿನ್ನ ಯೋಧರು ಆಗ ತಮ್ಮ ಉತ್ಸಾಹವನ್ನು ಕಳೆದುಕೊಂಡು ಭ್ರಾಂತಿಯಿಂದ ಕೂಡಿದ ಮನಸ್ಸುಳ್ಳವರಾದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಾಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ತನೆಯ ಅಧ್ಯಾಯ
ಅರ್ಜುನನಿಂದ ದುಶ್ಶಾಸನನ ಪರಾಜಯ. ದ್ರೋಣರ ಜೊತೆಯಲ್ಲಿ ಸ್ವಲ್ಪ ಯುದ್ಧವನ್ನು ಮಾಡಿ ಅನಂತರ ಅರ್ಜುನನ ವ್ಯೂಹ ಪ್ರವೇಶ.
ಧೃತರಾಷ್ಟ್ರಃ
ತಸ್ಮಿನ್ ಪ್ರಭಗ್ನೇ ಸೈನ್ಯಾಗ್ರೇ ಹನ್ಯಮಾನೇ ಕಿರೀಟಿನಾ |
ಕೋ ನು ತತ್ರಾರ್ಜುನಂ ಯುದ್ಧೇ ವೀರಃ ಪ್ರತ್ಯುದಿಯಾದ್ ರಥೀ ॥1॥
ಧೃತರಾಷ್ಟ್ರ ಅರ್ಜುನನಿಂದ ನಮ್ಮ ಸೈನ್ಯದ ಮುಂಭಾಗವು ಭಗ್ನವಾದಾಗ ಯಾವ ವೀರನಾದ ರಥಿಕನು ಅರ್ಜುನನಿಗೆ ಎದುರಾಗಿ ಹೋದನು?
ಆಹೋಸ್ವಿಚ್ಛಕಟವ್ಯೂಹಂ ಪ್ರವಿಷ್ಟಾ ಮೋಘನಿಶ್ಚಯಾಃ |
ದ್ರೋಣಮಾಶ್ರಿತ್ಯ ತಿಷ್ಠಂತಿ ಪ್ರಾಕಾರಮಕುತೋಭಯಾಃ ॥ 2 ॥
ಅಥವಾ ಶಕಟವ್ಯೂಹವನ್ನು ಪ್ರವೇಶಿಸಿ, ವ್ಯರ್ಥವಾದ ನಿಶ್ಚಯವುಳ್ಳ ಕೌರವರು ದ್ರೋಣರೆಂಬ ಕೋಟೆಯನ್ನು ಅವಲಂಬಿಸಿ ನಿರ್ಭಯರಾಗಿ ನಿಂತರೆ?
ಸಂಜಯಃ
ತಥಾಽರ್ಜುನೇನ ಸಂಭಗ್ನೇ ತಸ್ಮಿಂಸ್ತವ ಮಹಾಬಲೇ |
ಹತವೀರೇ ಹತೋತ್ಸಾಹೇ ಪಲಾಯನಕೃತಕ್ಷಣೇ ॥ 3 ॥
ಪಾಕಶಾಸನಿನಾಽಭೀಕ್ಷ್ಣಂ ವಧ್ಯಮಾನೇ ಶರೋತ್ತಮೈಃ |
ನ ಕಶ್ಚಿತ್ ತತ್ರ ಸಂಗ್ರಾಮೇ ಶಶಾಕಾರ್ಜುನಮೀಕ್ಷಿತುಮ್ ॥ 4 ॥
ಸಂಜಯ ನಿನ್ನ ಮಹಾಸೈನ್ಯವು ಅರ್ಜುನನಿಂದ ಆ ರೀತಿಯಲ್ಲಿ ಭಗ್ನವಾಗಿ ವೀರರನ್ನು ಕಳೆದುಕೊಂಡು ವೀರರು ಉತ್ಸಾಹವನ್ನು ಕಳೆದುಕೊಂಡು ಪಲಾಯನವನ್ನು ಮಾಡಲು ಹವಣಿಸುತಿತರಲು ಅರ್ಜುನನು ಶ್ರೇಷ್ಠವಾದ ಬಾಣಗಳಿಂದ ಸತತವಾಗಿ ನಿನ್ನ ಸೈನ್ಯವನ್ನು ಪೀಡಿಸುತ್ತಿರಲು ರಣರಂಗದಲ್ಲಿ ಯಾರೂ ಅರ್ಜುನನನ್ನು ನೋಡಲೂ ಸಾಧ್ಯವಾಗಲಿಲ್ಲ.
ತತಸ್ತವ ಸುತೋ ರಾಜನ್ ದೃಷ್ಟ್ವಾ ಸೈನ್ಯಂ ತಥಾಗತಮ್ |
ದುಃಶಾಸನೋ ಭೃಶಂ ಕ್ರುದ್ಧೋ ಯುದ್ಧಾಯಾರ್ಜುನಮಭ್ಯಯಾತ್ ॥5॥
ಎಲೈ ರಾಜನೇ, ಆಗ ನಿನ್ನ ಪುತ್ರನಾದ ದುಶ್ಶಾಸನನು ಸೈನ್ಯವು ಅಂತಹ ಅವಸ್ಥೆಯನ್ನು ಹೊಂದಿದುದನ್ನು ನೋಡಿ ಬಹಳ ಕೋಪಗೊಂಡು ಅರ್ಜುನನ ಮೇಲೆ ಯುದ್ಧಕ್ಕೆ ಹೊರಟನು.
ಸ ಕಾಂಚನವಿಚಿತ್ರೇಣ ಕವಚೇನ ಸಮಾವೃತಃ |
ಜಾಂಬೂನದಶಿರಸ್ತ್ರಾಣಃ ಶೂರಸ್ತೀವ್ರಪರಾಕ್ರಮಃ ॥ 6 ॥

ನಾಗಾನೀಕೇನ ಮಹತಾ ಗ್ರಸನ್ನಿವ ಮಹೀಮಿಮಾಮ್ |
ದುಃಶಾಸನೋ ಮಹಾರಾಜ ಸವ್ಯಸಾಚಿನಮಾವೃಣೋತ್ ॥ 7 ॥
ಎಲೈ ಮಹಾರಾಜನೇ, ವಿಚಿತ್ರವಾದ ಸುವರ್ಣಮಯವಾದ ಕವಚವನ್ನು ಧರಿಸಿ, ಸುವರ್ಣಮಯವಾದ ಶಿರಸ್ತ್ರಣವನ್ನೂ ಧರಿಸಿ, ಶೂರನೂ ಮಹಾಪರಾಕ್ರಮ- ಶಾಲಿಯೂ ಆದ ದುಶ್ಶಾಸನನು ಈ ಭೂಮಿಯನ್ನೇ ನುಂಗುವವನಂತೆ ತನ್ನ ಗಜಸೇನೆಯಿಂದ ಅರ್ಜುನನನ್ನು ಮುತ್ತಿದನು.
ಯುವರಾಜೋ ಬಲಶ್ಲಾಘೀ ಪಿಂಗಲಃ ಪ್ರಿಯದರ್ಶನಃ |
ಸ ಮುಹೂರ್ತಂ ಪ್ರತಿಭಯೋ ದಾರುಣಃ ಸಮಪದ್ಯತ ॥ 8 ॥
ಯುವರಾಜನೂ, ತನ್ನ ಬಲವನ್ನು ಪ್ರಶಂಸಿಸುವವನೂ, ಪಿಂಗಲವರ್ಣದವನೂ, ಪ್ರಿಯದರ್ಶನನೂ ಆದ ಅವನು ಒಂದು ಮುಹೂರ್ತದ ಕಾಲ ಯುದ್ಧದಲ್ಲಿ ಭಯಂಕರನೂ ಮತ್ತು ದಾರುಣನೂ ಆಗಿದ್ದನು.
ಹ್ರಾದೇನ ಗಜಘಂಟಾನಾಂ ಜ್ಯಾಕ್ಷೇಪನಿನದೇನ ಚ |
ಶಂಖತೂರ್ಯಪ್ರಣಾದೇನ ನಿನದೇನ ಚ ದಂತಿನಾಮ್ |
ದ್ಯಾವಾಪೃಥಿವ್ಯೋರ್ವಿವರಂ ಸಾಂತರ್ದೇಶಂ ಸಮಾವೃಣೋತ್ ॥ 9 ॥
ಗಜಗಳ ಘಂಟೆಗಳ ನಾದದಿಂದ, ಹೆದೆಯ ಆಕರ್ಷಣದ ನಾದದಿಂದ, ಶಂಖ- ತೂರ್ಯ ನಾದಗಳಿಂದ, ಗಜಗಳ ಬೃಂಹಣದಿಂದ ಅವನು ಭೂಮಿ ಮತ್ತು ಆಕಾಶದ ಮಧ್ಯಪ್ರದೇಶವನ್ನು ತುಂಬಿದನು.
ತಾನ್ ದೃಷ್ಟ್ವಾSSಪತತೋ ನಾಗಾನ್ ಶಿಕ್ಷಿತೈಃ ಸಾಧು ಚೋದಿತಾನ್ |
ಗೃಹೀತಹಸ್ತಾನ್ ಸಂರಬ್ಧಾನ್ ಸಪಕ್ಷಾನಿವ ಪರ್ವತಾನ್ ॥ 10 ॥
ಸಿಂಹನಾದೇನ ಮಹತಾ ನರಸಿಂಹೋ ಧನಂಜಯಃ |
ತಸ್ಯಾಚಲಘನಪ್ರಖ್ಯಂ ಪತಾಕಾಶತಸಂಕುಲಮ್ ॥ 11 ॥
ಗಜಾನೀಕಮಮಿತ್ರಾಣಾಮಭಿತೋ ವ್ಯಧಮಚ್ಛರೈಃ ॥ 12 ॥
ಸುಶಿಕ್ಷಿತರಾದ ಗಜಾರೋಹಿಗಳಿಂದ ಪ್ರೇರಿಸಲ್ಪಟ್ಟು, ತಮ್ಮ ಸೊಂಡಿಲುಗಳನ್ನು ಎತ್ತಿ, ರೆಕ್ಕೆಯುಳ್ಳ ಪರ್ವತಗಳಂತೆ ಸಿಟ್ಟಿನಿಂದ ಮೇಲೆ ಎರಗುತ್ತಿರುವ ಗಜಸೇನೆಯನ್ನು ನೋಡಿ, ನರಸಿಂಹನಾದ ಅರ್ಜುನನು ದೊಡ್ಡ ಸಿಂಹನಾದವನ್ನು ಮಾಡಿ ಪರ್ವತವನ್ನು ಮತ್ತು ಮೋಡವನ್ನು ಹೋಲುವ, ನೂರಾರು ಪತಾಕೆಗಳಿಂದ ನಿಬಿಡವಾದ ಶತ್ರುಗಳ ಆ ದುಶ್ಶಾಸನನ ಗಜಸೇನೆಯನ್ನು ಎಲ್ಲ ಕಡೆಗಳಿಂದಲೂ ತನ್ನ ಬಾಣಗಳಿಂದ ನಾಶಗೊಳಿಸಿದನು.
ಮಹೋರ್ಮಿಣಮಿವೋದ್ಧೂತಂ ಶ್ವಸನೇನ ಮಹಾರ್ಣವಮ್ |
ಕಿರೀಟೀ ತದ್ ಗಜಾನೀಕಂ ಪ್ರಾವಿಶನ್ಮಕರೋ ಯಥಾ ॥ 13 ॥
ದೊಡ್ಡ ಬಿರುಗಾಳಿಯಿಂದ ಎದ್ದ, ದೊಡ್ಡ ಅಲೆಗಳಿಂದ ಕೂಡಿದ ಮಹಾಸಾಗರವನ್ನು ಮೊಸಳೆಯು ಪ್ರವೇಶಿಸುವಂತೆ ಅರ್ಜುನನು ಆ ಗಜಸೇನೆಯನ್ನು ಪ್ರವೇಶಿಸಿದನು.
ಖಮಾಶ್ರಿತ ಇವಾದಿತ್ಯಃ ಪ್ರತಪನ್ ಯುಗಸಂಕ್ಷಯೇ |
ದದೃಶೇ ದಿಕ್ಷು ಸರ್ವಾಸು ಪಾರ್ಥಃ ಪರಪುರಂಜಯಃ ॥ 14 ॥
ಯುಗಸಂಕ್ಷಯದಲ್ಲಿ ಆಕಾಶದಲ್ಲಿ ಇದ್ದು ಪ್ರಜ್ವಲಿಸುವ ಸೂರ್ಯನಂತೆ ಶತ್ರುಗಳ ಪುರಂಜಯನಾದ ಅರ್ಜುನನು ಎಲ್ಲ ದಿಕ್ಕುಗಳಲ್ಲಿಯೂ ಕಂಡುಬಂದನು.
ಖುರಶಬ್ದೇನ ಚಾಶ್ವಾನಾಂ ನೇಮಿಶಬ್ದೇನ ತೇನ ಚ |
ತೇನ ಚೋತ್ಕೃಷ್ಟಶಬ್ದೇನ ಜ್ಯಾನಿನಾದೇನ ತೇನ ಚ ॥ 15 ॥
ನಾನಾವಾದಿತ್ರಶಬ್ದೇನ ಪಾಂಚಜನ್ಯಸ್ವನೇನ ಚ |
ದೇವದತ್ತಸ್ಯ ಘೋಷೇಣ ಗಾಂಡೀವನಿನದೇನ ಚ |
ಮಂದವೇಗತರಾ ನಾಗಾ ಬಭೂವುಃ ಸ್ರಸ್ತಚೇತಸಃ ॥ 16 ॥
ಅಶ್ವಗಳ ಖುರಶಬ್ದದಿಂದ, ರಥಗಳ ಚಕ್ರಗಳ ಶಬ್ದದಿಂದ, ಸಿಂಹನಾದ ಶಬ್ದಗಳಿಂದ, ಕಿರುಚುವ ಶಬ್ದಗಳಿಂದ, ಹೆದೆಗಳ ಶಬ್ದಗಳಿಂದ, ಅನೇಕ ವಾದ್ಯಗಳ ಶಬ್ದದಿಂದ, ಪಾಂಚಜನ್ಯದ ಶಬ್ದದಿಂದ, ದೇವದತ್ತ ಶಂಖದ ಘೋಷದಿಂದ ಮತ್ತು ಗಾಂಡೀವ ಧನುಸ್ಸಿನ ಶಬ್ದದಿಂದ ಆನೆಗಳು ಹೆದರಿ ಮಂದಗತಿಯುಳ್ಳವುಗಳಾದವು.
ಶರವ್ರಾತಮಯೇ ಸತ್ರೇ ವಿತತೇ ಸವ್ಯಸಾಚಿನಾ |
ತೇ ಗಜಾಃ ಸಮಸೀದಂತ ಮಗ್ನಾಃ ಪಂಕಾರ್ಣವೇಷ್ವಿವ ॥ 17 ॥
ಅರ್ಜುನನಿಂದ ವಿಸ್ತರಿಸಲ್ಪಟ್ಟ ಬಾಣ ಸಮೂಹಮಯವಾದ ಯಾಗದಲ್ಲಿ ಆ ಗಜಗಳು ಕೆಸರಿನ ಸಾಗರದಲ್ಲಿ ಮುಳುಗಿದಂತೆ ವಿಷಾದವನ್ನು ಹೊಂದಿದವು.
ಯುಗಪಚ್ಚ ಸಮಾವಿಷ್ಟೈಃ ಶರೈರ್ಗಾಂಡೀವಧನ್ವನಃ |
ಅನೇಕಶತಸಾಹಸ್ರೈರ್ದ್ರುಮಾ ಮಧುಕರೈರಿವ ॥ 18 ॥
ಪುಂಖಾವಶಿಷ್ಟೈರ್ಬಹುಭಿಃ ಶೋಣಿತೋತ್ಪೀಡವಾಹಿನಃ |
ಆರಾವಂ ಪರಮಂ ಕೃತ್ವಾ ಸಪತಾಕಾಯುಧಧ್ವಜಾಃ ॥ 19 ॥
ಸೋತ್ತರಾಯುಧಿನಃ ಪೇತುಃ ಛಿನ್ನಪಕ್ಷಾ ಇವಾದ್ರಯಃ ॥ 20 ॥
ಅನೇಕ ಶತಸಹಸ್ರ ದುಂಬಿಗಳು ಮರವನ್ನು ಮುಚ್ಚಿದಂತೆ ಏಕಕಾಲದಲ್ಲಿ ಬರುತ್ತಿದ್ದ ಅರ್ಜುನನ ಪುಂಖವನ್ನು ಬಿಟ್ಟು ಉಳಿದ ಭಾಗವು ಶರೀರವನ್ನು ಪ್ರವೇಶ ಮಾಡಿದ ಅನೇಕ ಬಾಣಗಳಿಂದ ರತ್ನದ ಅಲಂಕಾರವನ್ನು ಧರಿಸಿದ ಪತಾಕೆಗಳು, ಆಯುಧಗಳು ಮತ್ತು

ಧ್ವಜದಿಂದ ಕೂಡಿದ, ಆಯುಧವನ್ನು ಹಿಡಿದ, ಗಜಾರೋಹಿಗಳಿಂದ ಕೂಡಿದ ಗಜಗಳು ದೊಡ್ಡ ದುಃಖದ ನಾದವನ್ನು ಮಾಡಿ ರೆಕ್ಕೆಗಳು ಕತ್ತರಿಸಿದ ಪರ್ವತಗಳಂತೆ ಬಿದ್ದವು.
ಅಪರೇ ದಂತಮೂಲೋಷ್ಠಕುಂಭೇಷು ಚ ಕರೇಷು ಚ |
ಶರೈಃ ಸಮರ್ಪಿತಾ ನಾಗಾಃ ಕ್ರೌಂಚವದ್ ವ್ಯನದನ್ ಮುಹುಃ ॥ 21 ॥
ಇನ್ನು ಕೆಲವು ಗಜಗಳು ದಂತಮೂಲದಲ್ಲಿಯೂ, ತುಟಿಯಲ್ಲಿಯೂ, ಕುಂಭಸ್ಥಲದಲ್ಲಿಯೂ, ಸೊಂಡಿಲುಗಳಲ್ಲಿಯೂ ಬಾಣಗಳಿಂದ ಹೊಡೆಯಲ್ಪಟ್ಟ ಕ್ರೌಂಚ ಪಕ್ಷಿಗಳಂತೆ ವೇದನೆಯಿಂದ ಮತ್ತೆ ಮತ್ತೆ ನಾದವನ್ನು ಮಾಡಿದವು.
ಗಜಸ್ಕಂಧಗತಾನಾಂ ಚ ಪುರುಷಾಣಾಂ ಕಿರೀಟಿನಾ |
ಛಿದ್ಯಂತೇ ಚೋತ್ತಮಾಂಗಾನಿ ಭಲ್ಲೈಃ ಸನ್ನತಪರ್ವಭಿಃ ॥ 22 ॥
ಅರ್ಜುನನು ಗಜಸ್ಕಂಧದಲ್ಲಿದ್ದ ಪುರುಷರ ಶಿರಸ್ಸುಗಳನ್ನು ಬಾಗಿದ ತುದಿಯುಳ್ಳ ಭಲ್ಲಗಳಿಂದ ಕತ್ತರಿಸಿದನು.
ಸಕುಂಡಲಾನಾಂ ಪತತಾಂ ಶಿರಸಾಂ ಪೃಥಿವೀತಳೇ |
ಪದ್ಮಾನಾಮಿವ ಸಂಘಾತೈಃ ಪಾರ್ಥಶ್ಚಕ್ರೇ ನಿವೇದನಮ್ ॥ 23 ॥
ಭೂಮಿಯ ಮೇಲೆ ಬೀಳುತ್ತಿದ್ದ, ಕುಂಡಲಗಳನ್ನು ಧರಿಸಿದ ಶಿರಸ್ಸುಗಳಿಂದ ಅರ್ಜುನನು ಭೂಮಿಯನ್ನು ಪದ್ಮಗಳ ಸಮೂಹದಿಂದಲೋ ಎಂಬಂತೆ ಹರಡಿದನು.
ಯಂತ್ರಬದ್ಧಾ ವಿಕವಚಾ ವ್ಯಂಸಾಶ್ಚ ರುಧಿರೋಕ್ಷಿತಾಃ |
ಭ್ರಮಮಾಣೇಷು ನಾಗೇಷು ಮನುಷ್ಯಾ ವಿಲಲಂಬಿರೇ ॥ 24 ॥
ಯಂತ್ರಕ್ಕೆ ಸಿಲುಕಿದ, ಕವಚವನ್ನು ಕಳೆದುಕೊಂಡ, ಭುಜಗಳನ್ನು ಕಳೆದುಕೊಂಡ, ರಕ್ತಸಿಕ್ತರಾದ ಮನುಷ್ಯರು ಕೂಗುತ್ತಿದ್ದ ಗಜಗಳಲ್ಲಿ ನೇತಾಡುತ್ತಿದ್ದರು.
ಕೇಚಿದೇಕೇನ ಬಾಣೇನ ಸುಮುಕ್ತೇನ ಪತತ್ರಿಣಾ |
ದ್ವೌ ತ್ರಯಶ್ಚ ವಿನಿರ್ಭಿನ್ನಾ ನಿಪೇತುಃ ಪೃಥಿವೀತಳೇ ॥ 25 ॥
ಕೆಲವು ಗಜಗಳು ಚೆನ್ನಾಗಿ ಪ್ರಯೋಗಿಸಿದ ಪತ್ರವುಳ್ಳ ಒಂದೇ ಬಾಣದಿಂದ ಭೂತಳದಲ್ಲಿ ಬಿದ್ದವು. ಕೆಲವು ಬಾರಿ ಒಂದೇ ಬಾಣದಿಂದ ಎರಡು-ಮೂರು ಗಜಗಳು ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದವು.
ಅಪರೇ ಮದಸಂರಬ್ಧಾ ಮಾತಂಗಾಃ ಪರ್ವತೋಪಮಾಃ |
ಪೇತುಃ ಪೃಥಿವ್ಯಾಂ ನಿಹತಾ ವಜ್ರರುಗ್ಣಾ ಇವಾಚಲಾಃ ॥ 26 ॥
ಮದದಿಂದಲೂ ಮತ್ತು ಸಿಟ್ಟಿನಿಂದಲೂ ಕೂಡಿದಂತಹ ಪರ್ವತಸದೃಶವಾದ ಇನ್ನು ಕೆಲವು ಗಜಗಳು ವಜ್ರಾಯುಧದ ಹೊಡೆತಕ್ಕೆ ಸಿಲುಕಿದ ಪರ್ವತಗಳಂತೆ ಅರ್ಜುನನಿಂದ ಹೊಡೆಯಲ್ಪಟ್ಟು ಭೂಮಿಯ ಮೇಲೆ ಬಿದ್ದವು.
ಅತಿವಿದ್ಧಾಶ್ಚ ನಾರಾಚೈರ್ವಮಂತೋ ರುಧಿರಂ ಮುಖೈಃ |
ಸಾರೋಹಾ ನ್ಯಪತನ್ನುರ್ವ್ಯಾಂ ದ್ರುಮವಂತ ಇವಾಚಲಾಃ ॥ 27 ॥
ಅರ್ಜುನನ ನಾರಾಚಗಳಿಂದ ಗಾಢವಾಗಿ ಹೊಡೆಯಲ್ಪಟ್ಟು, ಮುಖಗಳಿಂದ ರಕ್ತವನ್ನು ಕಾರುತ್ತಾ, ಗಜಾರೋಹಿಗಳ ಸಹಿತವಾಗಿ ವೃಕ್ಷಸಹಿತವಾದ ಪರ್ವತಗಳಂತೆ ಭೂಮಿಯ ಮೇಲೆ ಬಿದ್ದವು.
ತತೋಽರ್ಜುನೋ ಭೃಶಂ ಕ್ರುದ್ಧಃ ಪ್ರದಹನ್ನಿವ ತೇಜಸಾ |
ವವರ್ಷ ಶರವರ್ಷಾಣಿ ಯೋಧಾನಾಮನಿವರ್ತಿನಾಮ್ ॥ 28 ॥
ಅನಂತರ ಅರ್ಜುನನು ಬಹಳ ಕೋಪಗೊಂಡು ತನ್ನ ತೇಜಸ್ಸಿನಿಂದ ಶತ್ರುಸೈನ್ಯವನ್ನು ಸುಡುವವನಂತೆ ಅನಿವರ್ತಿಗಳಾದ ಯೋಧರ ಮೇಲೆ ಬಾಣಗಳ ಮಳೆಯನ್ನು ಕರೆದನು.
ಮೌರ್ವೀಂ ಧನುರ್ಧ್ವಜಂ ಚೈವ ಯುಗಮಕ್ಷಮವಸ್ಕರಮ್ |
ರಥಿನಾಂ ಕುಟ್ಟಯಾಮಾಸ ಭಲ್ಲೈಃ ಸನ್ನತಪರ್ವಭಿಃ ॥ 29 ॥
ರಥಿಕರ ಹೆದೆಗಳು, ಧನುಸ್ಸುಗಳು, ಧ್ವಜಗಳು, ನೊಗಗಳು, ಅಕ್ಷಗಳು ಮತ್ತು ಅವಸ್ಕರ (ಸಲಕರಣೆ)ಗಳನ್ನು ಬಾಗಿದ ತುದಿಯುಳ್ಳ ಭಲ್ಲಗಳಿಂದ ಪುಡಿಮಾಡಿದನು.
ನ ಸಂದಧಾನಶ್ಚಾಪಸ್ಯ ನ ವಿಮುಂಚನ್ ನ ಚೋದ್ಧರನ್ |
ಮಂಡಲೇನೈವ ಧನುಷಾ ನೃತ್ಯನ್ ಪಾರ್ಥಃ ಸ್ಮ ದೃಶ್ಯತೇ ॥ 30 ॥
ಅವನು ಬತ್ತಳಿಕೆಯಿಂದ ಬಾಣವನ್ನು ಎತ್ತುವುದಾಗಲೀ, ಧನುಸ್ಸಿನಲ್ಲಿ ಹೂಡುವುದಾಗಲೀ, ಅದನ್ನು ಪ್ರಯೋಗಿಸುವುದಾಗಲೀ ಕಾಣುತ್ತಿರಲಿಲ್ಲ. ಯಾವಾಗಲೂ ಮಂಡಲಾಕಾರವಾದ ಅವನ ಧನುಸ್ಸು ಮತ್ತು ನರ್ತನ ಮಾಡುತ್ತಿದ್ದ ಅರ್ಜುನನು ಕಾಣುತ್ತಿದ್ದವು.
ಅತಿವಿದ್ಧಾಶ್ಚ ನಾರಾಚೈರ್ವಮಂತೋ ರುಧಿರಂ ಮುಖೈಃ |
ಮುಹೂರ್ತಾನ್ನ್ಯಪತನ್ನನ್ಯೇ ವಾರಣಾ ವಸುಧಾತಳೇ ॥ 31 ॥
ಇನ್ನು ಕೆಲವು ಗಜಗಳು ನಾರಾಚಗಳಿಂದ ಗಾಢವಾಗಿ ಹೊಡೆಯಲ್ಪಟ್ಟು, ಮುಖಗಳಿಂದ ರಕ್ತವನ್ನು ಕಾರುತ್ತಾ, ಒಂದು ಮುಹೂರ್ತದ ನಂತರ ಭೂತಳದಲ್ಲಿ ಬಿದ್ದವು.
ಉತ್ಥಿತಾನ್ಯಗಣೇಯಾನಿ ಕಬಂಧಾನಿ ಸಮಂತತಃ |
ಅದೃಶ್ಯಂತ ಮಹಾರಾಜ ತಸ್ಮಿನ್ ಪರಮಸಂಕುಲೇ ॥ 32 ॥
ಎಲೈ ಮಹಾರಾಜನೇ, ಆ ಪರಮಸಂಕುಲ ಯುದ್ಧದಲ್ಲಿ ಯೋಧರ ಅಸಂಖ್ಯಾತವಾದ ಕಬಂಧಗಳು (ರುಂಡಗಳು) ಎಲ್ಲ ಕಡೆಗಳಲ್ಲಿಯೂ ಉಂಟಾಗಿರುವುದು ಕಂಡು ಬರುತ್ತಿದ್ದಿತು.
ಸಚಾಪಾಃ ಸಾಂಗುಲತ್ರಾಣಾಃ ಸಖಡ್ಗಾಃ ಸಾಂಗದಾ ರಣೇ |

ಅದೃಶ್ಯಂತ ಭುಜಾಶ್ಛಿನ್ನಾ ಹೇಮಾಭರಣಭೂಷಿತಾಃ ॥ 33 ॥
ಬಾಣವನ್ನು ಹಿಡಿದ, ಹಸ್ತರಕ್ಷಣೆಯನ್ನು ಹೊಂದಿದ, ಖಡ್ಗವನ್ನು ಹಿಡಿದ, ಅಂಗದ ಸಹಿತವಾದ, ಹೇಮಾಭರಣದಿಂದ ಭೂಷಿತವಾದ ಯೋಧರ ಕತ್ತರಿಸಲ್ಪಟ್ಟ ಭುಜಗಳು ರಣರಂಗದಲ್ಲಿ ಕಂಡುಬಂದವು.
ಅವಸ್ಕರೈರಧಿಷ್ಠಾನೈರೀಷಾದಂಡಕಬಂಧುರೈಃ |
ಚಕ್ರೈರ್ವಿಮಥಿತೈರಕ್ಷೈರ್ಭಗ್ನೈಶ್ಚ ಬಹುಧಾ ಯುಗೈಃ ॥ 34 ॥
ಚರ್ಮಚಾಪಧರೈಶ್ಚೈವ ವ್ಯವಕೀರ್ಣೈಸ್ತತಸ್ತತಃ |
ಸ್ರಗ್ಭಿರಾಭರಣೈರ್ವಸ್ತ್ರೈಃ ಪತಿತೈಶ್ಚ ಮಹಾಧ್ವಜೈಃ ॥ 35 ॥
ನಿಹತೈರ್ವಾರಣೈರಶ್ವೈಃ ಕ್ಷತ್ರಿಯೈಶ್ಚ ನಿಪಾತಿತೈಃ |
ಅದೃಶ್ಯತ ಮಹೀ ತತ್ರ ದಾರುಣಾಪ್ರಿಯದರ್ಶನಾ ॥ 36 ॥
ರಥದ ಅವಸ್ಕರ ಭಾಗಗಳು, ಅಧಿಷ್ಠಾನಗಳು (ನಿಲ್ಲುವ ಸ್ಥಳಗಳು), ಮೂಕಿಗಳು, ಬಂದರುಗಳು, ಚಕ್ರಗಳು, ಅಕ್ಷಗಳು ಮತ್ತು ನೊಗಗಳು ಬಹಳವಾಗಿ ಭಗ್ನವಾಗಿ, ಚರ್ಮವನ್ನು ಮತ್ತು ಧನುಸ್ಸನ್ನು ಹಿಡಿದ, ಒಳ್ಳೆಯ ಮಾಲೆಗಳನ್ನು, ಆಭರಣವನ್ನು ಮತ್ತು ವಸ್ತ್ರವನ್ನು ಧರಿಸಿದ, ನೆಲದ ಮೇಲೆ ಬಿದ್ದ ಯೋಧರಿಂದಲೂ ಮತ್ತು ರಥದ ಮಹಾಧ್ವಜಗಳಿಂದಲೂ, ನಿಹತವಾದ ಗಜಾಶ್ವಗಳಿಂದಲೂ, ಕೆಳಗುರುಳಿದ ಕ್ಷತ್ರಿಯರಿಂದಲೂ ತುಂಬಿದ ಭೂಮಿಯು ದಾರುಣವೂ, ನೋಡಲು ಅಪ್ರಿಯವಾಗಿಯೂ ಕಂಡುಬಂದಿತು.
ದುಃಶಾಸನಬಲಂ ಸರ್ವಂ ವಧ್ಯಮಾನಂ ಕಿರೀಟಿನಾ |
ಸಂಪ್ರಾದ್ರವನ್ಮಹಾರಾಜ ವ್ಯಥಿತಂ ಹತನಾಯಕಮ್ ॥ 37 ॥
ಎಲೈ ಮಹಾರಾಜನೇ, ಅರ್ಜುನನಿಂದ ವಧಿಸಲ್ಪಡುತ್ತಿದ್ದ ದುಶ್ಶಾಸನ ಸೈನ್ಯವೆಲ್ಲವೂ ನಾಯಕರನ್ನು ಕಳೆದುಕೊಂಡು ವ್ಯಥೆಯಿಂದ ಓಡಿಹೋಯಿತು.
ಏವಂ ಬಲೇ ದ್ರುತೇ ಯಾತೇ ರಾಜಪುತ್ರಂ ಮಹಾರಥಮ್ |
ವಿವ್ಯಾಧ ದಶಭಿರ್ಬಾಣೈಃ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 38 ॥
ಹೀಗೆ ನಿನ್ನ ಬಲವೆಲ್ಲವೂ ಓಡಿಹೋಗುತ್ತಿರಲು ಅರ್ಜುನನು ರಾಜಪುತ್ರನೂ, ಮಹಾರಥನೂ ಆದ ದುಶ್ಶಾಸನನ ಮೇಲೆ ಹತ್ತುಬಾಣಗಳನ್ನು ಪ್ರಯೋಗಿಸಿ ನಿಲ್ಲು, ನಿಲ್ಲು ಎಂದು ಹೇಳಿದನು.
ಅರ್ಜುನಃ
ಜೀವಿತೇನ ಕಥಂ ಗಂತಾ ದುರುಕ್ತಂ ಯತ್ ತವಾದ್ಯ ಮೇ |
ತದ್ ವಾಕ್ಯಸದೃಶಂ ಕರ್ಮ ಕುರು ತ್ವಂ ಯದಿ ಮನ್ಯಸೇ ॥ 39 ॥
ಅರ್ಜುನ ನೀನು ಜೀವ ಸಹಿತವಾಗಿ ಹೇಗೆ ಹೋಗುವಿ? ನೀನು ಈ ದಿನ ಎಂತಹ ದುರ್ವಚನಗಳನ್ನು ಮಾತನಾಡಿದ್ದೀಯೋ ಅದಕ್ಕೆ ಸದೃಶವಾದ ಕಾರ್ಯವನ್ನು ನಿನಗೆ ಯೋಗ್ಯತೆ ಇದ್ದರೆ ಮಾಡು.
ಸಂಜಯಃ
ಏವಮುಕತ್ವ ತತೋ ರಾಜನ್ ಪಾರ್ಥಃ ಪಾರ್ಥಿವಮರ್ದನಃ |
ಭೃಶಂ ಕ್ರುದ್ಧೋ ಮಹಾರಾಜ ಅವಿದ್ಧ್ಯತ್ ತನಯಂ ತವ ॥ 40 ॥
ಸಂಜಯ ಎಲೈ ಮಹಾರಾಜನೇ, ಪಾರ್ಥಿವಮರ್ದನನಾದ ಪಾರ್ಥನು ಹೀಗೆ ಹೇಳಿ, ಬಹಳ ಕೋಪಗೊಂಡು ನಿನ್ನ ಪುತ್ರನನ್ನು ಬಾಣಗಳಿಂದ ಹೊಡೆದನು.
ತತೋ ದುಃಶಾಸನಸ್ತ್ರಸ್ತಃ ಸಹಾನೀಕಃ ಶರಾರ್ದಿತಃ |
ದ್ರೋಣಂ ತ್ರಾತಾರಮಾಕಾಂಕ್ಷನ್ ಶಕಟವ್ಯೂಹಮಭ್ಯಗಾತ್ ॥ 41 ॥
ಆಗ ಅರ್ಜುನನ ಬಾಣಗಳಿಂದ ಪೀಡಿತನಾದ ದುಶ್ಶಾಸನನು ಹೆದರಿ ದ್ರೋಣರಿಂದ ರಕ್ಷಣೆಯನ್ನು ಬಯಸುತ್ತಾ, ತನ್ನ ಸೈನ್ಯದ ಜೊತೆಯಲ್ಲಿ ಶಕಟವ್ಯೂಹಕ್ಕೆ ಹೊರಟು ಹೋದನು.
ದುಃಶಾಸನಬಲಂ ಹತ್ವಾ ಸವ್ಯಸಾಚೀ ಪರಂತಪಃ |
ಸಿಂಧುರಾಜಂ ಪರೀಪ್ಸನ್ ವೈ ದ್ರೋಣಾನೀಕಮುಪಾದ್ರವತ್ ॥ 42 ॥
ಪರಂತಪನಾದ ಸವ್ಯಸಾಚಿಯು ದುಶ್ಶಾಸನ ಸೈನ್ಯವನ್ನು ಕೊಂದು ಸೈಂಧವನನ್ನು ಹುಡುಕುತ್ತಾ ದ್ರೋಣರ ಸೇನೆಯ ಕಡೆಗೆ ಓಡಿದನು.

ಸ ತು ದ್ರೋಣಂ ಸಮಾಸಾದ್ಯ ವ್ಯೂಹಸ್ಯ ಪ್ರಮುಖೇ ಸ್ಥಿತಮ್ |
ಕೃತಾಂಜಲಿರಿದಂ ವಾಕ್ಯಂ ಕೃಷ್ಣಸ್ಯಾನುಮತೇಽಬ್ರವೀತ್ ॥ 43 ॥
ಅವನಾದರೂ ವ್ಯೂಹದ ಮುಂಭಾಗದಲ್ಲಿದ್ದ ದ್ರೋಣರನ್ನು ಸಮೀಪಿಸಿ, ಕೃಷ್ಣನ ಅಭಿಪ್ರಾಯದಂತೆ ಅವರಿಗೆ ಕೈಗಳನ್ನು ಮುಗಿದು ಈ ಮಾತನ್ನಾಡಿದನು.
ಶಿವೇನ ಧ್ಯಾಹಿ ಮಾಂ ಬ್ರಹ್ಮನ್ ಸ್ವಸ್ತಿ ಚೈವ ವದಸ್ವ ಮೇ |
ತವ ಪ್ರಸಾದಾದಿಚ್ಛಾಮಿ ಪ್ರವೇಷ್ಟುಂ ದುರ್ಭಿದಾಂ ಚಮೂಮ್ ॥ 44 ॥
ಬ್ರಾಹ್ಮಣರೇ, ನನಗೆ ಮಂಗಳವನ್ನು ಧ್ಯಾನ ಮಾಡಿ. ಶುಭವಾಗಲಿ ಎಂದು ಹೇಳಿ. ನಿಮ್ಮ ಅನುಗ್ರಹದಿಂದ ದುರ್ಭೇದ್ಯವಾದ ಈ ಸೈನ್ಯವನ್ನು ನಾನು ಪ್ರವೇಶಿಸಲು ಬಯಸುತ್ತೇನೆ.
ಭವಾನ್ ಪಿತೃಸಮೋ ಮಹ್ಯಂ ಧರ್ಮರಾಜಸಮೋಽಪಿ ಚ |
ಧೌಮ್ಯಕೃಷ್ಣಸಮಶ್ಚೈವ ಸತ್ಯಮೇತದ್ ಬ್ರವೀಮಿ ತೇ ॥ 45 ॥
ನೀವು ನನಗೆ ನನ್ನ ತಂದೆಗೆ ಸಮಾನರಾದವರು ಮತ್ತು ಧರ್ಮರಾಜನಿಗೆ ಸಮರಾದವರು. ಧೌಮ್ಯರಿಗೂ ಮತ್ತು ಕೃಷ್ಣರಿಗೂ

ಸಮರಾದವರು. ಈ ಮಾತನ್ನು ನಿಮಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಅಶ್ವತ್ಥಾಮಾ ಯಥಾ ತಾತ ರಕ್ಷಣೀಯಸ್ತವಾऽನಘ |
ತಥಾಹಮಪಿ ತೇ ರಕ್ಷ್ಯಃ ಸದೈವ ದ್ವಿಜಸತ್ತಮ ॥ 46 ॥
ಎಲೈ ತಂದೆಯೇ, ಅನಘರೇ, ಅಶ್ವತ್ಥಾಮರು ಹೇಗೆ ನಿಮ್ಮಿಂದ ರಕ್ಷಿಸಲ್ಪಡಬೇಕಾದವರೋ ಎಲೈ ದ್ವಿಜಶ್ರೇಷ್ಠರೇ, ಹಾಗೆಯೇ ನಾನೂ ಸಹ ನಿಮ್ಮಿಂದ ರಕ್ಷಿಸಲ್ಪಡಬೇಕಾದವನು.
ಭವತ್ಪ್ರಸಾದಾದಿಚ್ಛೇಯಂ ಸಿಂಧುರಾಜಾನಮಾಹವೇ |
ನಿಹಂತುಂ ದ್ವಿಪದಾಂ ಶ್ರೇಷ್ಠ ಪ್ರತಿಜ್ಞಾಂ ರಕ್ಷ ಮೇ ಪ್ರಭೋ ॥ 47 ॥
ನಿಮ್ಮ ಅನುಗ್ರಹದಿಂದ ನಾನು ಸೈಂಧವನನ್ನು ಯುದ್ಧದಲ್ಲಿ ಕೊಲ್ಲಲು ಬಯಸುತ್ತೇನೆ. ಎಲೈ ನರಶ್ರೇಷ್ಠರೇ, ಪ್ರಭುಗಳೇ, ನನ್ನ ಪ್ರತಿಜ್ಞೆಯನ್ನು ರಕ್ಷಿಸಿ.
ಸಂಜಯಃ
ಏವಮುಕ್ತಸ್ತದಾऽऽಚಾರ್ಯಃ ಪ್ರತ್ಯುವಾಚಾರ್ಜುನಂ ಸ್ಮಯನ್ |
ಮಾಮಜಿತ್ವಾ ನ ಬೀಭತ್ಸೋ ಶಕ್ಯಂ ಪ್ರಾಪ್ತುಂ ಜಯದ್ರಥಮ್ ॥ 48 ॥
ಸಂಜಯ ಹೀಗೆ ಹೇಳಲ್ಪಟ್ಟ ದ್ರೋಣಾಚಾರ್ಯರು ಅರ್ಜುನನನ್ನು ಕುರಿತು ನಗುತ್ತಾ- ಎಲೈ ಬೀಭತ್ಸುವೇ, ನನ್ನನ್ನು ಗೆಲ್ಲದೆ ನೀನು ಜಯದ್ರಥನನ್ನು ಸಮೀಪಿಸಲು ಸಾಧ್ಯವಿಲ್ಲ ಎಂದು ಹೇಳಿದರು.
ಸಂಜಯಃ
ಏತಾವದುಕ್ತ್ವಾ ತಂ ದ್ರೋಣಃ ಶರವ್ರಾತೈರವಾಕಿರತ್ |
ಸರಥಾಶ್ವಧ್ವಜಂ ಬಾಣೈಃ ಪ್ರಹಸನ್ ಸಹಸಾರಥಿಮ್ ॥ 49 ॥
ಸಂಜಯ ಈ ಮಾತನ್ನು ಹೇಳಿ ದ್ರೋಣರು ನಗುತ್ತಾ ರಥಾಶ್ವ-ಧ್ವಜಗಳಿಂದಲೂ ಸಾರಥಿಯಿಂದಲೂ ಸಹಿತನಾದ ಅರ್ಜುನನ ಮೇಲೆ ಬಾಣಗಳ ಸಮೂಹವನ್ನು ಸುರಿಸಿದರು.
ತತೋऽರ್ಜುನಃ ಶರವ್ರಾತಾನ್ ದ್ರೋಣಸ್ಯಾವಾರ್ಯ ಸಾಯಕೈಃ |
ದ್ರೋಣಮಭ್ಯರ್ದಯದ್ ಬಾಣೈರ್ಘೋರರೂಪೈರ್ಮಹತ್ತರೈಃ ॥ 50 ॥
ಆಗ ಅರ್ಜುನನು ತನ್ನ ಬಾಣಗಳಿಂದ ದ್ರೋಣರ ಬಾಣಸಮೂಹಗಳನ್ನು ನಿವಾರಿಸಿ ಘೋರರೂಪವಾದ ದೊಡ್ಡ ಬಾಣಗಳಿಂದ ದ್ರೋಣರನ್ನು ಅರ್ದಿಸಿದನು.
ವಿವ್ಯಾಧ ಚ ರಣೇ ದ್ರೋಣಮನುಮಾನ್ಯ ವಿಶಾಂಪತೇ |
ಕ್ಷತ್ರಧರ್ಮಂ ಸಮಾಸ್ಥಾಯ ನವಭಿಃ ಸಾಯಕೈಃ ಪುನಃ ॥ 51 ॥
ಎಲೈ ರಾಜನೇ, ರಣರಂಗದಲ್ಲಿ ದ್ರೋಣರಿಗೆ ಗೌರವವನ್ನು ಕೊಟ್ಟು, ಕ್ಷತ್ರಿಯ ಧರ್ಮವನ್ನು ಆಶ್ರಯಿಸಿದವನಾಗಿ, ಪುನಃ ಅವರ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ತಸ್ಯೇಷೂನಿಷುಭಿಶ್ಛಿತ್ತ್ವಾ ದ್ರೋಣೋ ವಿವ್ಯಾಧ ತಾವುಭೌ |
ವಿಷಾಗ್ನಿಜ್ವಲನಪ್ರಖ್ಯೈರಿಷುಭಿಃ ಕೃಷ್ಣಪಾಂಡವೌ |
ಇಯೇಷ ಪಾಂಡವಸ್ತಸ್ಯ ಛೇತ್ತುಂ ಬಾಣೈಃ ಶರಾಸನಮ್ ॥ 52 ॥
ದ್ರೋಣರು ಅರ್ಜುನನ ಬಾಣಗಳನ್ನು ತಮ್ಮ ಬಾಣಗಳಿಂದ ಕತ್ತರಿಸಿ, ಕೃಷ್ಣಾರ್ಜುನರಿಬ್ಬರನ್ನೂ ವಿಷಾಗ್ನಿ-ಜ್ವಾಲೆಗಳಿಗೆ ಸಮವಾದ ಬಾಣಗಳಿಂದ ಅರ್ದಿಸಿದರು. ಪಾಂಡವನಾದ ಅರ್ಜುನನು ಅವರ ಧನುಸ್ಸನ್ನು ತನ್ನ ಬಾಣಗಳಿಂದ ಕತ್ತರಿಸಲು ಇಚ್ಛಿಸಿದನು.
ತಸ್ಯ ಚಿಂತಯತಸ್ತ್ವೇವ ಫಲ್ಗುನಸ್ಯ ಮಹಾತ್ಮನಃ
ದ್ರೋಣಃ ಶರೈರಸಂಭ್ರಾಂತೋ ಜ್ಯಾಂ ಚಿಚ್ಛೇದಾಶು ವೀರ್ಯವಾನ್ ॥
ಮಹಾತ್ಮನಾದ ಅರ್ಜುನನು ಹಾಗೆ ಯೋಚಿಸುತ್ತಿರುವಾಗಲೇ ಪರಾಕ್ರಮಶಾಲಿಗಳಾದ ದ್ರೋಣರು ಯಾವ ಗಾಬರಿಯೂ ಇಲ್ಲದೆ ತಮ್ಮ ಬಾಣಗಳಿಂದ ಅರ್ಜುನನ ಧನುಸ್ಸಿನ ಹೆದೆಯನ್ನು ಶೀಘ್ರವಾಗಿ ಕತ್ತರಿಸಿದರು.
ವಿವ್ಯಾಧ ಚ ಹಯಾನಸ್ಯ ಧ್ವಜಂ ಸಾರಥಿಮೇವ ಚ |
ಅರ್ಜುನಂ ಚ ಶರೈರ್ದ್ರೋಣಃ ಸ್ಮಯಮಾನೋऽಭ್ಯವಾಕಿರತ್ ॥ 54 ॥
ದ್ರೋಣರು ನಗುತ್ತಲೇ ಅವನ ಅಶ್ವಗಳನ್ನು, ಧ್ವಜವನ್ನು, ಸಾರಥಿಯನ್ನು ಮತ್ತು ಅವನನ್ನು ತಮ್ಮ ಬಾಣಗಳಿಂದ ಹಿಂಸೆಗೊಳಿಸಿದರು.

ಏತಸ್ಮಿನ್ನಂತರೇ ಪಾರ್ಥಃ ಸಜ್ಯಂ ಕೃತ್ವಾ ಮಹದ್ಧನುಃ |
ವಿಶೇಷಯಿಷ್ಯನ್ನಾಚಾರ್ಯಂ ಸರ್ವಾಸ್ತ್ರವಿದುಷಾಂ ವರಮ್ ॥ 55 ॥
ಗೃಹೀತ್ವಾ ಷಟ್ಶತಾನ್ ಬಾಣಾನ್ ಮುಮೋಚೈಕಮಿವ ದ್ರುತಮ್ ॥56॥
ಈ ಮಧ್ಯದಲ್ಲಿಯೇ ಅರ್ಜುನನು ತನ್ನ ದೊಡ್ಡ ಧನುಸ್ಸಿಗೆ ಪುನಃ ಹೆದೆಯೇರಿಸಿ, ಸರ್ವಾಸ್ತ್ರವೇತ್ತರಲ್ಲಿ ಶ್ರೇಷ್ಠರಾದ ತನ್ನ ಗುರುಗಳನ್ನೂ ಮೀರಿಸುವವನಾಗಿ ಆರುನೂರು ಬಾಣಗಳನ್ನು ತೆಗೆದುಕೊಂಡು ಒಂದೇ ಬಾಣದಂತೆ ಶೀಘ್ರವಾಗಿ ಅದನ್ನು ದ್ರೋಣರ ಮೇಲೆ ಪ್ರಯೋಗಿಸಿದನು (ಗಾಂಡೀವ ಧನುಸ್ಸಿನ ಹೆದೆಯನ್ನು ಕತ್ತರಿಸಿದರೆ ಅದು ಪುನಃ ತಾನೇ ಬೆಳೆಯುತ್ತದೆ. ಮತ್ತೊಮ್ಮೆ ಕಟ್ಟುವುದಷ್ಟೇ ಕೆಲಸ - ವಾದಿರಾಜರು).
ಪುನಃ ಸಪ್ತಶತಾನನ್ಯಾನ್ ಸಹಸ್ರಂ ಚಾನಿವರ್ತಿನಾಮ್ |
ಚಿಕ್ಷೇಪಾಯುತಶಶ್ಚಾನ್ಯಾನ್ ತೇऽಘ್ನನ್ ದ್ರೋಣಸ್ಯ ತಾಂ ಚಮೂಮ್ ॥
ಪುನಃ ಹಿಂದಿರುಗದಿರುವ ಏಳು ನೂರು ಬಾಣಗಳನ್ನು, ಅನಂತರ ಸಹಸ್ರ ಬಾಣಗಳನ್ನು, ಅನಂತರ ಬೇರೆ ಹತ್ತು ಸಹಸ್ರ ಬಾಣಗಳನ್ನು

ಪ್ರಯೋಗಿಸಿದನು. ಅವು ದ್ರೋಣರ ಸೈನ್ಯವನ್ನು ಸಂಹಾರ ಮಾಡಿದವು.
ತೈಃ ಸಮ್ಯಗಸ್ತೈರ್ಬಲಿನಾ ಕೃತಿನಾ ಚಿತ್ರಯೋಧಿನಾ |
ಮನುಷ್ಯವಾಜಿಮಾತಂಗಾ ವಿದ್ಧಾಃ ಪೇತುರ್ಗತಾಸವಃ ॥ 58 ॥
ಬಲಿಷ್ಠನೂ, ಪಳಗಿದ ಹಸ್ತವುಳ್ಳವನೂ, ವಿಚಿತ್ರವಾಗಿ ಯುದ್ಧವನ್ನು ಮಾಡುವವನೂ ಆದ ಅವನಿಂದ ಚೆನ್ನಾಗಿ ಪ್ರಯೋಗಿಸಲ್ಪಟ್ಟ ಬಾಣಗಳಿಂದ ಮನುಷ್ಯ-ಗಜ-ಅಶ್ವಗಳು ಹೊಡೆಯಲ್ಪಟ್ಟು ಪ್ರಾಣಗಳನ್ನು ಕಳೆದುಕೊಂಡು ಬಿದ್ದವು.
ವಿಸೂತಾಶ್ವಧ್ವಜಾಃ ಪೇತುಃ ಸಂಛಿನ್ನಾಯುಧಜೀವಿತಾಃ |
ರಥಿನೋ ರಥಮುಖ್ಯೇಭ್ಯಃ ಸಹಸಾ ಬಾಣಪೀಡಿತಾಃ ॥ 59 ॥
ಸೂತ-ಅಶ್ವಗಳು-ಧ್ವಜಗಳನ್ನು ಕಳೆದುಕೊಂಡು ತಮ್ಮ ಆಯುಧಗಳು ಮತ್ತು ಜೀವಿತವು ಕತ್ತರಿಸಲ್ಪಟ್ಟು, ಅರ್ಜುನನ ಬಾಣಪೀಡಿತರಾದ ರಥಶ್ರೇಷ್ಠರು ತಮ್ಮ ಶ್ರೇಷ್ಠವಾದ ರಥಗಳಿಂದ ತಕ್ಷಣದಲ್ಲಿಯೇ ಬಿದ್ದರು.
ಚೂರ್ಣಿತಾಃ ಕ್ಷಿಪ್ತದಗ್ಧಾಂಗಾ ವಜ್ರಾನಿಲಹುತಾಶನೈಃ |
ತುಲ್ಯರೂಪಾ ದ್ವಿಪಾಃ ಪೇತುರ್ಗಿರ್ಯಗ್ರಾಂಬುದವರ್ಷ್ಮಣಃ ॥ 60 ॥
ವಜ್ರಾಯುಧ, ವಾಯು ಮತ್ತು ಅಗ್ನಿಗಳಿಗೆ ಸದೃಶವಾದ ಬಾಣಗಳಿಂದ ಚೂರ್ಣಿತವಾದ, ಪರ್ವತ ಮತ್ತು ಮೋಡದ ಕಾಂತಿಯುಳ್ಳ ಗಜಗಳು ರಕ್ತವನ್ನು ಸುರಿಸುವ ಅವಯವವುಳ್ಳವುಗಳಾಗಿ ಕತ್ತರಿಸಲ್ಪಟ್ಟು ಬಿದ್ದವು.
ಪೇತುರಶ್ವಸಹಸ್ರಾಣಿ ಪ್ರಹತಾನ್ಯರ್ಜುನೇಷುಭಿಃ |
ಹಂಸಾ ಹಿಮವತಃ ಪೃಷ್ಠೇ ವಾರಿವಿಪ್ರಹತಾ ಇವ ॥ 61 ॥
ಅರ್ಜುನನ ಬಾಣಗಳಿಂದ ಚೆನ್ನಾಗಿ ಹೊಡೆಯಲ್ಪಟ್ಟ ಸಹಸ್ರಾರು ಅಶ್ವಗಳು ಹಿಮಾಲಯದ ತಪ್ಪಲಿನಲ್ಲಿ ನೀರಿನ ಹೊಡೆತಕ್ಕೆ ಸಿಕ್ಕಿದ ಹಂಸಗಳಂತೆ ಬಿದ್ದವು.
ರಥಾಶ್ವದ್ವಿಪಪತ್ತ್ಯೌ ಸಲಿಲೌಘಾ ಇವಾದ್ಭುತಾಃ |
ಯುಗಾಂತಾದಿತ್ಯರಶ್ಮ್ಯಾಭೈಃ ಪಾಂಡವಾಸ್ತ್ರಶರೈರ್ಹತಾಃ ॥ 62 ॥
ಜನಪ್ರವಾಹದಂತೆ ಅದ್ಭುತವಾಗಿದ್ದ ರಥ-ಅಶ್ವ-ಗಜ ಮತ್ತು ಪದಾತಿಗಳ ಸಮೂಹಗಳು ಯುಗಾಂತಕಾಲದ ಸೂರ್ಯನ ರಶ್ಮಿಯನ್ನು ಹೋಲುವ ಪಾಂಡವಾಸ್ತ್ರಗಳಿಂದ ಮತ್ತು ಬಾಣಗಳಿಂದ ಹೊಡೆಯಲ್ಪಟ್ಟು ಮರಣವನ್ನು ಹೊಂದಿದವು.
ತತ್ ಪಾಂಡವಾದಿತ್ಯಶರಾಂಶುಜಾಲಂ
ಕುರುಪ್ರವೀರಾನ್ ಯುಧಿ ನಿಷ್ಟಪಂತಮ್ |
ಸ ದ್ರೋಣಮೇಘಃ ಶರವರ್ಷವೇಗೈಃ
ಪ್ರಾಚ್ಛಾದಯನ್ಮೇಘ ಇವಾರ್ಕರಶ್ಮೀನ್ ॥ 63 ॥
ಪಾಂಡವನೆಂಬ ಆದಿತ್ಯನ, ಬಾಣಗಳೆಂಬ ಕಿರಣಗಳ ಸಮೂಹವು ರಣರಂಗದಲ್ಲಿ ಕುರುಪ್ರವೀರರನ್ನು ಸುಡುತ್ತಿದ್ದಿತು. ಅದನ್ನು ದ್ರೋಣರೆಂಬ ಮೇಘವು, ತನ್ನ ಬಾಣಗಳ ಮಳೆಗಳ ವೇಗದಿಂದ ಮೋಡವು ಸೂರ್ಯಕಿರಣಗಳನ್ನು ಮುಚ್ಚಿದಂತೆ ಮುಚ್ಚಿಹಾಕಿತು.
ಅಥಾತ್ಯರ್ಥಂ ವಿಸೃಷ್ಟೇನ ದ್ವಿಷತಾಮಸುಭೋಜಿನಾ |
ಆಜಘ್ನೇ ವಕ್ಷಸಿ ದ್ರೋಣೋ ನಾರಾಚೇನ ಧನಂಜಯಮ್ ॥ 64 ॥
ನಂತರ ಬಹಳ ತೀಕ್ಷ್ಣವಾಗಿ ಪ್ರಯೋಗಿಸಿದ ಶತ್ರುಗಳ ಪ್ರಾಣವನ್ನು ಭುಂಜಿಸುವ ಒಂದು ನಾರಾಚದಿಂದ ದ್ರೋಣರು ಅರ್ಜುನನಿಗೆ ಅವನ ವಕ್ಷಸ್ಸ್ಥಲದಲ್ಲಿ ಗಾಢವಾಗಿ ಹೊಡೆದರು.
ಸ ವಿಹ್ವಲಿತಸರ್ವಾಂಗಃ ಕ್ಷಿತಿಕಂಪೇ ಯಥಾಽಚಲಃ |
ಧೈರ್ಯಮಾಸ್ಥಾಯ ಬೀಭತ್ಸುರ್ದ್ರೋಣಂ ವಿವ್ಯಾಧ ಪತ್ರಿಭಿಃ ॥ 65 ॥
ಭೂಕಂಪವಾದಾಗ ಪರ್ವತವು ನಡುಗುವಂತೆ ಅರ್ಜುನನ ಎಲ್ಲ ಅಂಗಗಳು ವಿಹ್ವಲಿತವಾದರೂ ಅವನು ಧೈರ್ಯವನ್ನು ಆಶ್ರಯಿಸಿ ದ್ರೋಣರ ಜೊತೆಯಲ್ಲಿ ಪತ್ರ ಸಹಿತವಾದ ಬಾಣಗಳಿಂದ ಯುದ್ಧವನ್ನು ಮಾಡಿದನು.
ದ್ರೋಣಸ್ತು ಪಂಚಭಿರ್ಬಾಣೈರ್ವಾಸುದೇವಮತಾಡಯತ್ |
ಅರ್ಜುನಂ ಚ ತ್ರಿಸಪ್ತತ್ಯಾ ಧ್ವಜಂ ಚಾಸ್ಯ ತ್ರಿಭಿಃ ಶರೈಃ ॥ 66 ॥
ದ್ರೋಣರಾದರೂ ಐದು ಬಾಣಗಳಿಂದ ಕೃಷ್ಣನನ್ನು ಹೊಡೆದರು. ಎಪ್ಪತ್ಮೂರು ಬಾಣಗಳಿಂದ ಅರ್ಜುನನನ್ನೂ, ಮೂರು ಬಾಣಗಳಿಂದ ಅವನ ಧ್ವಜವನ್ನೂ ಹೊಡೆದರು.
ವಿಶೇಷಯಿಷ್ಯನ್ ಶಿಷ್ಯಂ ಚ ದ್ರೋಣೋ ರಾಜನ್ ಪರಾಕ್ರಮೀ |
ಅದೃಶ್ಯಮರ್ಜುನಂ ಚಕ್ರೇ ನಿಮೇಷಾಚ್ಛರವೃಷ್ಟಿಭಿಃ ॥ 67 ॥
ಎಲೈ ರಾಜನೇ, ಪರಾಕ್ರಮಶಾಲಿಗಳಾದ ದ್ರೋಣರು ಶಿಷ್ಯನಿಗಿಂತಲೂ ಅತಿಶಯವನ್ನು ತೋರಿಸುವವರಾಗಿ ಒಂದು ನಿಮಿಷದಲ್ಲಿ ತಮ್ಮ ಬಾಣಗಳ ಮಳೆಯಿಂದ ಅರ್ಜುನನನ್ನು ಅದೃಶ್ಯನನ್ನಾಗಿ ಮಾಡಿದರು.
ಪ್ರಸಕ್ತಾನ್ ಗಚ್ಛತೋಽಪಶ್ಯನ್ ಭಾರದ್ವಾಜಸ್ಯ ಸಾಯಕಾನ್ |
ಮಂಡಲೀಕೃತಮೇವಾಸ್ಯ ಧನುಶ್ಚಾದೃಶ್ಯತಾದ್ಭುತಮ್ ॥ 68 ॥
ಯೋಧರು ದ್ರೋಣರ ಬಾಣಗಳು ಒಂದಕ್ಕೊಂದು ಸೇರಿಕೊಂಡು ಹೋಗುವುದನ್ನು ನೋಡುತ್ತಿದ್ದರು. ಅವರ ಧನುಸ್ಸು ಯಾವಾಗಲೂ ಅದ್ಭುತವಾಗಿ ಮಂಡಲಾಕಾರವಾಗಿಯೇ ಕಾಣುತ್ತಿದ್ದಿತು.
ತೇಽಭ್ಯಯುಃ ಸಮರೇ ರಾಜನ್ ವಾಸುದೇವಧನಂಜಯೌ |
ದ್ರೋಣಸೃಷ್ಟಾಃ ಸುಬಹವಃ ಕಂಕಪತ್ರಪರಿಚ್ಛದಾಃ ॥ 69 ॥
ಎಲೈ ರಾಜನೇ, ದ್ರೋಣರು ಪ್ರಯೋಗಿಸಿದ, ಕಂಕಪತ್ರಗಳನ್ನು ಹೊಂದಿದ ಅನೇಕ ಬಾಣಗಳು ಕೃಷ್ಣಾರ್ಜುನರ ಸಮೀಪಕ್ಕೆ ಬಂದವು.

ತತ್ರಾದ್ಭುತಮಪಶ್ಯಾಮ ಶಿಲಾನಾಮಿವ ಸರ್ಪಣಮ್ |
ಯದ್ ದ್ರೋಣಂ ತರಸಾ ಪಾರ್ಥೋ ವೃದ್ಧಂ ಬಾಲೋಽಪಿ ನಾತರತ್ ॥
ಅಲ್ಲಿ ಬಂಡೆಗಳು ಚಲಿಸಿದಂತೆ ಅದ್ಭುತವನ್ನು ನಾವು ನೋಡಿದೆವು. ಏಕೆಂದರೆ ಬಾಲಕನಾದ ಅರ್ಜುನನು ತನ್ನ ವೇಗದಿಂದಲೂ ವೃದ್ಧರಾದ ದ್ರೋಣರನ್ನು ದಾಟಲು ಸಾಧ್ಯವಾಗಲಿಲ್ಲ.
ತಂ ದೃಷ್ಟ್ವಾ ತಾದೃಶಂ ಯುದ್ಧಂ ದ್ರೋಣಪಾಂಡವಯೋಸ್ತದಾ |
ವಾಸುದೇವೋ ಮಹಾಬುದ್ಧಿಃ ಕಾರ್ಯಚಿಂತಾಮಚಿಂತಯತ್ ॥
ಚಿಂತಯಾಮಾಸ ವಾರ್ಷ್ಣೇಯೋ ದೃಷ್ಟ್ವಾ ದ್ರೋಣಸ್ಯ ವಿಕ್ರಮಮ್ |
ನಾತಿವರ್ತಿಷ್ಯತೇ ಹ್ಯೇನಂ ವೇಲಾಮಿವ ಮಹಾರ್ಣವಃ ॥ 71 ॥
ದ್ರೋಣಾರ್ಜುನರ ಅಂತಹ ಯುದ್ಧವನ್ನು ನೋಡಿ ಆಗ ಮಹಾಮೇಧಾವಿಯಾದ ವಾಸುದೇವನು ಮಾಡಬೇಕಾದ ಕಾರ್ಯವನ್ನು ಚಿಂತಿಸಿದನು. ದ್ರೋಣರ ಪರಾಕ್ರಮವನ್ನು ನೋಡಿ ಕೃಷ್ಣನು ಸಮುದ್ರವು ದಡವನ್ನು ಮೀರದಂತೆ ಅರ್ಜುನನು ದ್ರೋಣರನ್ನು ದಾಟಿ ಹೋಗಲಾರನೆಂದು ಚಿಂತಿಸಿದನು.
ತತಃ ಪಾರ್ಥಂ ಸಮುದ್ವಿಗ್ನಂ ಲಕ್ಷ ಿಯ ಚಿಂತಯತೇಽಚ್ಯುತಃ |
ದ್ರೋಣಸ್ಯ ಚಾಪಿ ವಿಕ್ರಾಂತಂ ದೃಷ್ಟ್ವಾ ಮಧುನಿಷೂದನಃ |
ಇತ್ಯಬ್ರವೀದ್ ವಾಸುದೇವೋ ಧನಂಜಯಮುದಾರಧೀಃ ॥ 72 ॥
ಅನಂತರ ಅರ್ಜುನನು ಉದ್ವೇಗಗೊಂಡಿರುವುದನ್ನು ಗಮನಿಸಿ, ದ್ರೋಣರ ಪರಾಕ್ರಮವನ್ನೂ ನೋಡಿ ಮಧುಸೂದನನಾದ ಅಚ್ಯುತನು ಚಿಂತಿಸಿ, ಉದಾರ ಬುದ್ಧಿಯುಳ್ಳ ಅವನು ಧನಂಜಯನನ್ನು ಕುರಿತು ಹೀಗೆ ಮಾತನಾಡಿದನು.
ಪಾರ್ಥ ಪಾರ್ಥ ಮಹಾಬಾಹೋ ನ ನಃ ಕಾಲಾತ್ಯಯೋ ಭವೇತ್ |
ದ್ರೋಣಮುತ್ಸ ೃಜ್ಯ ಗಚ್ಛಾಮೋ ಕೃತ್ಯಮೇತನ್ಮಹತ್ತರಮ್ ॥ 73 ॥
ಪಾರ್ಥನೇ, ಪಾರ್ಥನೇ, ಮಹಾಬಾಹುವೇ, ನಮಗೆ ಕಾಲವ್ಯಯವಾಗುವುದು ಬೇಡ. ಮಾಡಬೇಕಾದ ದೊಡ್ಡ ಕಾರ್ಯವಿದೆ. ದ್ರೋಣರನ್ನು ಬಿಟ್ಟು ಮುಂದೆ ಹೋಗೋಣ.
ಸಂಜಯಃ
ತಂ ಪಾರ್ಥಶ್ಚಾಬ್ರವೀತ್ ಕೃಷ್ಣಂ ಯಥೇಷ್ಟಮಿತಿ ಕೇಶವಮ್ ॥ 74 ॥
ಸಂಜಯ ಆಗ ಅರ್ಜುನನು ಕೇಶವನನ್ನು ಕುರಿತು, ನಿನ್ನಿಷ್ಟದಂತೆಯೇ ಮಾಡೋಣ ಎಂದು ಹೇಳಿದನು.
ತತಃ ಪ್ರದಕ್ಷಿಣಂ ಕೃತ್ವಾ ದ್ರೋಣಂ ಪ್ರಾಯಾನ್ಮಹಾಭುಜಃ |
ಪರಿವೃತ್ತಶ್ಚ ಬೀಭತ್ಸುರ್ಗಚ್ಛನ್ನಸ್ಯನ್ ಶಿತಾನ್ ಶರಾನ್ ॥ 75 ॥
ಆಗ ಮಹಾಭುಜನಾದ ಅರ್ಜುನನು ದ್ರೋಣರಿಗೆ ಪ್ರದಕ್ಷಿಣೆಯನ್ನು ಮಾಡಿ ತಿರುಗಿ ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಹೊರಟನು.
ತತೋಽಬ್ರವೀತ್ ಸ್ಮಯನ್ ದ್ರೋಣಃ ಕ್ವೇದಂ ಪಾಂಡವ ಗಮ್ಯತೇ |
ನನು ನಾಮ ರಣೇ ಶತ್ರೂನಜಿತ್ವಾ ನ ನಿವರ್ತಸೇ ॥ 76 ॥
ಆಗ ದ್ರೋಣರು ನಗುತ್ತಾ ಅವನನ್ನು ಕುರಿತು ಅರ್ಜುನನೇ ಎಲ್ಲಿ ಹೋಗುವಿ? ಯುದ್ಧದಲ್ಲಿ ಶತ್ರುವನ್ನು ಗೆಲ್ಲದೆ ನೀನು ಹಿಂದಿರುಗುವುದಿಲ್ಲವಷ್ಟೆ? ಎಂದು ಕೇಳಿದರು.
ಅರ್ಜುನಃ
ಗುರುರ್ಭವಾನ್ನ ಮೇ ಶತ್ರುಃ ಶಿಷ್ಯಃ ಪುತ್ರಸಮೋಽಸ್ಮಿ ತೇ |
ನ ಚಾಸ್ತಿ ಸ ಪುಮಾಲ್ಲೋಕೇ ಯಸ್ತ್ವಾಂ ಕ್ರುದ್ಧಮಭಿದ್ರವೇತ್ ॥ 77 ॥
ಅರ್ಜುನ ನೀವು ನನ್ನ ಗುರುಗಳು, ಶತ್ರುವಲ್ಲ. ನಾನು ನಿಮ್ಮ ಶಿಷ್ಯ, ಪುತ್ರನಿಗೆ ಸಮಾನನಾದವನು. ಕ್ರುದ್ಧರಾದ ನಿಮ್ಮ ಎದುರಿಗೆ ಯುದ್ಧ ಮಾಡುವ ವ್ಯಕ್ತಿಯು ಮೂರು ಲೋಕಗಳಲ್ಲಿಯೂ ಇಲ್ಲ.
ಸಂಜಯಃ
ಏವಂ ಬ್ರುವಾಣೋ ಬೀಭತ್ಸುರ್ಜಯದ್ರಥವಧೋತ್ಸುಕಃ |
ಅಭ್ಯದ್ರವತ ಸಂಕ್ರುದ್ಧಃ ತವ ಪುತ್ರಸ್ಯ ವಾಹಿನೀಮ್ ॥ 78 ॥
ಸಂಜಯ ಅರ್ಜುನನು ಹೀಗೆ ಮಾತನಾಡುತ್ತಾ, ಜಯದ್ರಥನ ವಧೆಯನ್ನು ಮಾಡಲು ಉತ್ಸುಕನಾಗಿ ಕೋಪದಿಂದ ನಿನ್ನ ಪುತ್ರನ ಸೈನ್ಯವನ್ನು ಕುರಿತು ಓಡಿದನು.
ತಂ ಚಕ್ರರಕ್ಷೌ ಪಾಂಚಾಲ್ಯೌ ಯುಧಾಮನ್ಯೂತ್ತಮೌಜಸೌ |
ಅನ್ವಯಾತಾಂ ಮಹಾತ್ಮಾನೌ ವಿಶಂತಂ ತಾವಕೀಂ ಚಮೂಮ್ ॥ 79 ॥
ನಿನ್ನ ಸೈನ್ಯವನ್ನು ಪ್ರವೇಶಿಸುವ ಅರ್ಜುನನನ್ನು ಅವನ ಚಕ್ರರಕ್ಷಕರಾದ ಪಾಂಚಾಲ ದೇಶದ ಮಹಾತ್ಮರಾದ ಯುಧಾಮನ್ಯು ಮತ್ತು ಉತ್ತಮೌಜರು ಹಿಂಬಾಲಿಸಿದರು.
ತತೋ ಜಯೋ ಮಹಾರಾಜ ಕೃತವರ್ಮಾ ಚ ಸಾತ್ತ್ವತಃ |
ಕಾಂಬೋಜಶ್ಚ ಶ್ರುತಾಯುಶ್ಚ ಧನಂಜಯಮವಾರಯನ್ ॥ 80 ॥
ಎಲೈ ಮಹಾರಾಜನೇ, ಆಗ ಜಯನೂ, ಸಾತ್ವತನಾದ ಕೃತವರ್ಮನೂ, ಕಾಂಬೋಜ ರಾಜನೂ ಮತ್ತು ಶ್ರುತಾಯುವೂ ಧನಂಜಯನನ್ನು ತಡೆದರು.
ತೇಷಾಂ ದಶಸಹಸ್ರಾಣಿ ರಥಾನಾಮನುಯಾಯಿನಾಮ್ |

ಅಭೀಷಾಹಾಃ ಶೂರಸೇನಾಃ ಶಿಬಯೋಽಥ ವಸಾತಯಃ ॥ 81 ॥
ಮಚ್ಚಿಲ್ಲಿಕಾ ಲಿಲಿಂಧ್ರಾಶ್ಚ ಕೇಕಯಾ ಮದ್ರಕಾಸ್ತಥಾ |
ನಾರಾಯಣಾಶ್ಚ ಗೋಪಾಲಾಃ ಕಾಂಬೋಜಾನಾಂ ಚ ಯೇ ಗಣಾಃ |
ಪರ್ಯೈರ್ನಚ ಜಿತಾ ರಾಜನ್ ಪುರಾ ತೇ ವೀರಸತ್ತಮಾಃ ॥ 82 ॥
ಕರ್ಣೇನ ವಿಜಿತಾಃ ಪೂರ್ವಂ ಸಂಗ್ರಾಮೇ ಶೂರಸಮ್ಮತಾಃ |
ಭಾರದ್ವಾಜಂ ಪುರಸ್ಕೃತ್ಯ ಹೃಷ್ಟಾತ್ಮಾನೋಽರ್ಜುನಂ ಪ್ರತಿ ॥ 83 ॥
ಪುತ್ರಶೋಕಾಭಿಸಂತಪ್ತಂ ಕ್ರುದ್ಧಂ ಮೃತ್ಯುಮಿವಾಂತಕಮ್ |
ತ್ಯಜಂತಂ ತುಮುಲೇ ಪ್ರಾಣಾನ್ ಸನ್ನದ್ಧಂ ಚಿತ್ರಯೋಧಿನಮ್ ॥ 84 ॥
ಗಾಹಮಾನಮನೀಕಾನಿ ಮಾತಂಗಮಿವ ಯೂಥಪಮ್ |
ಮಹೇಷ್ವಾಸಂ ಪರಾಕ್ರಾಂತಂ ನರವ್ಯಾಘ್ರಮವಾರಯನ್ ॥ 85 ॥
ಅವರನ್ನು ಹಿಂಬಾಲಿಸಿದ ಹತ್ತು ಸಹಸ್ರ ರಥಗಳು, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು, ಮಚ್ಚಿಲ್ಲಿಕರು, ಲಿಲಿಂಧ್ರರು, ಕೇಕಯರು, ಮದ್ರಕರು, ಗೋಪಾಲರಾದ ನಾರಾಯಣರು, ಕಾಂಬೋಜರ ರಥಸಮೂಹಗಳು- ರಾಜನೇ, ಈ ವೀರಶ್ರೇಷ್ಠರು ಯುದ್ಧದಲ್ಲಿ ಯಾರಿಗೂ ಸೋಲದವರು, ಹಿಂದೆ ಕರ್ಣನಿಂದ ಮಾತ್ರ ಶೂರಸಮ್ಮತರಾದ ಅವರು ಯುದ್ಧದಲ್ಲಿ ಪರಾಜಿತರಾಗಿದ್ದರು- ಇವರೆಲ್ಲರೂ ದ್ರೋಣರನ್ನು ಮುಂದೆ ಮಾಡಿಕೊಂಡು, ಸಂತೋಷದಿಂದ ಕೂಡಿದವರಾಗಿ ಪುತ್ರಶೋಕದಿಂದ ಕೂಡಿದ, ಕ್ರುದ್ಧನಾದ, ಸರ್ವಸಂಹಾರಕನಾದ ಮೃತ್ಯುವಿನಂತಿರುವ, ತೀವ್ರವಾದ ಯುದ್ಧದಲ್ಲಿ ಪ್ರಾಣವನ್ನು ತ್ಯಜಿಸಲು ಸಿದ್ಧನಾದ, ಯುದ್ಧಸನ್ನದ್ಧನಾದ, ವಿಚಿತ್ರವಾಗಿ ಯುದ್ಧವನ್ನು ಮಾಡುವ, ಗಜಗಳಿಗೆ ಪತಿಯಾದ ಸಲಗನಂತಿರುವ, ಶತ್ರುಸೈನ್ಯವನ್ನು ಪ್ರವೇಶಿಸುತ್ತಿರುವ ಪರಾಕ್ರಮಶಾಲಿಯಾದ, ಮಹಾಧನುರ್ಧಾರಿ- ಯಾದ, ನರವ್ಯಾಘ್ರನಾದ ಅರ್ಜುನನನ್ನು ತಡೆದರು.
ತತಃ ಪ್ರವವೃತೇ ಯುದ್ಧಂ ತುಮುಲಂ ರೋಮಹರ್ಷಣಮ್ |
ಅನ್ಯೋನ್ಯಂ ವೈ ಪ್ರಾರ್ಥಯತಾಂ ಯೋಧಾನಾಂ ಜಯಗರ್ದ್ಧಿನಾಮ್ ॥
ಅನಂತರ ಪರಸ್ಪರವಾಗಿ ಒಬ್ಬರನ್ನೊಬ್ಬರು ಗೆಲ್ಲಲು ಜಯಾಕಾಂಕ್ಷಿಗಳಾದ ಅವರಿಗೆ ತೀವ್ರವೂ ಮತ್ತು ರೋಮಾಂಚನಕಾರಿಯೂ ಆದ ಯುದ್ಧವು ನಡೆಯಿತು.
ಜಯದ್ರಥವಧಪ್ರೇಪ್ಸುಮಾಯಾಂತಂ ಪುರುಷರ್ಷಭಮ್ |
ನ್ಯವಾರಯಂತ ಸಹಿತಾಃ ಕ್ರಿಯಾ ವ್ಯಾಧಿಮಿವೋತ್ಥಿತಮ್ ॥ 87 ॥
ಜಯದ್ರಥನ ವಧೆಯನ್ನು ಮಾಡಲು ಬಯಸಿ, ಸಮೀಪಕ್ಕೆ ಬಂದ ಪುರುಷ ಶ್ರೇಷ್ಠನಾದ ಅರ್ಜುನನನ್ನು ಅವರೆಲ್ಲರೂ ಒಟ್ಟುಗೂಡಿ ಔಷಧಕ್ರಿಯೆಗಳು ದೇಹದಲ್ಲಿ ಉದ್ಭವಿಸಿದ ವ್ಯಾಧಿಯನ್ನು ತಡೆಯುವಂತೆ ಅವನನ್ನು ತಡೆದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂದನೆಯ ಅಧ್ಯಾಯ
ಅರ್ಜುನನಿಂದ ಶ್ರುತಾಯುಧ ಮತ್ತು ಸುದಕ್ಷಿಣರ ವಧೆ.
ಸಂಜಯಃ
ಸನ್ನಿರುದ್ಧಸ್ತು ತೈಃ ಪಾರ್ಥೋ ಮಹಾಬಲಪರಾಕ್ರಮೈಃ |
ದ್ರುತಂ ಸಮನುಯಾತಶ್ಚ ದ್ರೋಣೇನ ರಥಿನಾಂ ವರಃ ॥ 1 ॥
ಸಂಜಯ ಮಹಾಬಲ-ಪರಾಕ್ರಮವುಳ್ಳ ಅವರಿಂದ ಅರ್ಜುನನು ತಡೆಯಲ್ಪಟ್ಟನು. ರಥಿಶ್ರೇಷ್ಠನಾದ ಅವನು ದ್ರೋಣರಿಂದಲೂ ಶೀಘ್ರವಾಗಿ ಹಿಂಬಾಲಿಸಲ್ಪಟ್ಟನು.
ಕಿರನ್ನಿಷುಗಣಾಂಸ್ತೀಕ್ಷ್ಣಾನ್ ಸ್ವರಶ್ಮೀನಿವ ಭಾಸ್ಕರಃ |
ತಾಪಯಂಸ್ತವ ಸೈನ್ಯಾನಿ ದೇಹಾನ್ ವ್ಯಾಧಿಗಣೋ ಯಥಾ ॥ 2 ॥
ಸೂರ್ಯನು ತನ್ನ ಕಿರಣಗಳನ್ನು ಹರಡಿದಂತೆ ತೀಕ್ಷ್ಣವಾದ ಬಾಣಗಳನ್ನು ಎಲ್ಲ ಕಡೆಯಲ್ಲಿಯೂ ಪ್ರಯೋಗಿಸುತ್ತಾ ವ್ಯಾಧಿಗಳ ಸಮೂಹವು ದೇಹವನ್ನು ಪೀಡಿಸುವಂತೆ ನಿನ್ನ ಸೈನ್ಯವನ್ನು ಪೀಡಿಸುತ್ತಾ ಮುಂದೆ ಸಾಗಿದನು.
ಅಶ್ವೋ ವಿದ್ಧೋ ರಥೋ ವಿದ್ಧಃ ಸಾರೋಹಃ ಪಾತಿತೋ ಗಜಃ |
ಛತ್ರಾಣಿ ಚಾಪವಿದ್ಧಾನಿ ರಥಾಶ್ಚಕ್ರೈರ್ವಿನಾಕೃತಾಃ ॥ 3 ॥
ಅಶ್ವವು ಉರುಳಿತು, ರಥವು ಭಗ್ನವಾಯಿತು, ಯೋಧರಿಂದ ಸಹಿತವಾದ ಗಜಗಳು ಉರುಳಿದವು, ಛತ್ರಗಳು ಮುರಿಯಲ್ಪಟ್ಟವು, ರಥಗಳು ಚಕ್ರಗಳಿಂದ ಹೀನವಾದವು.
ವಿದ್ರುತಾನಿ ಚ ಸೈನ್ಯಾನಿ ಶರಾರ್ತಾನಿ ಸಮಂತತಃ |
ಇತ್ಯಾಸೀತ್ ತುಮುಲಂ ಯುದ್ಧಂ ನ ಪ್ರಾಜ್ಞಾಯತ ಕಿಂಚನ ॥ 4 ॥
ಬಾಣಗಳಿಂದ ಪೀಡಿಸಲ್ಪಟ್ಟ ಸೈನ್ಯಗಳು ಎಲ್ಲ ಕಡೆಗಳಲ್ಲಿಯೂ ಓಡಿಹೋದವು. ಹೀಗೆ ತೀವ್ರವಾದ ಯುದ್ಧವು ಸಂಭವಿಸಿತು. ಯಾವುದೂ ತಿಳಿಯಲಿಲ್ಲ.
ತೇಷಾಮಾಯಚ್ಛತಾಂ ಸಂಖೇ ಪರಸ್ಪರಮಜಿಹ್ಮಗೈಃ |

ಅರ್ಜುನೋ ಧ್ವಜಿನೀಂ ರಾಜನ್ನಭೀಕ್ಷ್ಣಂ ಸಮಕಂಪಯತ್ ॥ 5 ॥
ಎಲೈ ರಾಜನೇ, ನೇರವಾಗಿ ಸಾಗುವ ಬಾಣಗಳಿಂದ, ಪರಸ್ಪರವಾಗಿ ಹೊಡೆದಾಡುವ ಆ ಯುದ್ಧದಲ್ಲಿ ಅರ್ಜುನನು ಸತತವಾಗಿ ನಿನ್ನ ಸೈನ್ಯವನ್ನು ಅಲುಗಾಡಿಸಿದನು.
ಸತ್ಯಾಂ ಚಿಕೀರ್ಷಮಾಣಸ್ತು ಪ್ರತಿಜ್ಞಾಂ ಸತ್ಯಸಂಗರಃ |
ಅಭ್ಯದ್ರುವದ್ ರಥಶ್ರೇಷ್ಠಂ ಶೋಣಾಶ್ವಂ ಶ್ವೇತವಾಹನಃ ॥ 6 ॥
ಸತ್ಯಸಂಗರನಾದ ಶ್ವೇತವಾಹನನು ತನ್ನ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡಲು ಬಯಸಿ, ಶೋಣಾಶ್ವರಾದ, ರಥಶ್ರೇಷ್ಠರಾದ ದ್ರೋಣರ ಕಡೆಗೆ ಸಾಗಿದನು.
ತಂ ದ್ರೋಣಃ ಪಂಚವಿಂಶತ್ಯಾ ಮರ್ಮಜ್ಞೋ ಮರ್ಮಭೇದಿಭಿಃ |
ಅಂತೇವಾಸಿನಮಾಚಾರ್ಯಃ ಪಾಂಡವಂ ಸಮಪೀಡಯತ್ ॥ 7 ॥
ಮರ್ಮವನ್ನು ತಿಳಿದವರೂ, ಆಚಾರ್ಯರೂ ಆದ ದ್ರೋಣರು ಶಿಷ್ಯನಾದ ಅರ್ಜುನನನ್ನು ಮರ್ಮಭೇದಕವಾದ ಇಪ್ಪತ್ತೈದು ಬಾಣಗಳಿಂದ ಚೆನ್ನಾಗಿ ಪೀಡಿಸಿದರು.
ತಂ ತು ತೂರ್ಣತರಂ ಪಾರ್ಥೋ ದ್ರೋಣಂ ಶಸ್ತ್ರಭೃತಾಂ ವರಮ್ |
ಅಭ್ಯಧಾವದಿಷೂನಸ್ಯನ್ನಿಷುವೇಗವಿಘಾತಕಾನ್ ॥ 8 ॥
ಅರ್ಜುನನಾದರೋ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರ ಮೇಲೆ ಅತ್ಯಂತ ಶೀಘ್ರವಾಗಿ ಅವರ ಬಾಣಗಳ ವೇಗವನ್ನು ನಾಶ ಮಾಡುವ ಬಾಣಗಳನ್ನು ಪ್ರಯೋಗಿಸುತ್ತಾ ಅವರ ಕಡೆಗೆ ಸಾಗಿದನು.
ತಸ್ಯಾಶು ಕ್ಷಿಪತೋ ಭಲ್ಲಾನ್ ಭಲ್ಲೈಃ ಸನ್ನತಪರ್ವಭಿಃ |
ಪ್ರತ್ಯವಿದ್ಧ್ಯತ್ ಸ್ಮಯನ್ ದ್ರೋಣೋ ಬ್ರಾಹ್ಮಮಸ್ತ್ರಮುದೀರಯನ್ ॥9॥
ಅರ್ಜುನನು ಶೀಘ್ರವಾಗಿ ಪ್ರಯೋಗಿಸಿದ ಭಲ್ಲಗಳನ್ನು ದ್ರೋಣರು ನಗುತ್ತಾ ಬ್ರಹ್ಮಾಸ್ತ್ರವನ್ನು ಪ್ರಾದುರ್ಭವಿಸಿ ಬಾಗಿದ ತುದಿಯುಳ್ಳ ಭಲ್ಲಗಳಿಂದ ಪ್ರತಿಯಾಗಿ ಹೊಡೆದರು.
ತದದ್ಭುತಮಪಶ್ಯಾಮ ದ್ರೋಣಸ್ಯಾಚಾರ್ಯಕಂ ಯುಧಿ |
ಯತಮಾನೋ ಯುವಾ ನೈನಂ ಪ್ರತ್ಯವಿದ್ಧ್ಯದ್ ಯದರ್ಜುನಃ ॥10॥
ಯುದ್ಧದಲ್ಲಿ ದ್ರೋಣಾಚಾರ್ಯರ ಅದ್ಭುತವಾದ ಆಚಾರ್ಯತನವನ್ನು ನಾವು ನೋಡಿದೆವು. ಏಕೆಂದರೆ ಯುವಕನಾದ ಅರ್ಜುನನು ಪ್ರಯತ್ನಪಟ್ಟರೂ ಅವರಿಗೆ ಹೊಡೆಯಲು ಸಾಧ್ಯವಾಗಲಿಲ್ಲ.
ಕ್ಷರನ್ನಿವ ಮಹಾಮೇಘೋ ವಾರಿಧಾರಾಃ ಸಹಸ್ರಶಃ |
ದ್ರೋಣಮೇಘಃ ಪಾರ್ಥಶೈಲಂ ವವರ್ಷ ಶರವೃಷ್ಟಿಭಿಃ ॥ 11 ॥
ಮಹಾಮೇಘವು ಸಾವಿರಾರು ನೀರಿನ ಧಾರೆಯನ್ನು ಸುರಿಸುವಂತೆ ದ್ರೋಣರೆಂಬ ಮೇಘವು ಅರ್ಜುನನೆಂಬ ಪರ್ವತವನ್ನು ಬಾಣದ ಮಳೆಗಳಿಂದ ಮಳೆಗರೆಯಿತು.
ಅರ್ಜುನಃ ಶರವರ್ಷಂ ತತ್ ಶರವರ್ಷೇಣ ವೀರ್ಯವಾನ್ |
ಅವಾರಯದಸಂಭ್ರಾಂತೋ ನ ತ್ವಾಚಾರ್ಯಮಪೀಡಯತ್ ॥ 12 ॥
ಪರಾಕ್ರಮಶಾಲಿಯಾದ ಅರ್ಜುನನು ಯಾವ ಗಾಬರಿಯೂ ಇಲ್ಲದೆ ತನ್ನ ಶರವರ್ಷದಿಂದ ಆಚಾರ್ಯರ ಶರವರ್ಷವನ್ನು ನಿವಾರಿಸಿದನು. ಆದರೆ ಗುರುಗಳನ್ನು ಪೀಡಿಸಲಿಲ್ಲ.
ದ್ರೋಣಸ್ತು ಪಂಚವಿಂಶತ್ಯಾ ಶ್ವೇತವಾಹನಮರ್ದಯತ್ |
ವಾಸುದೇವಂ ಚ ಸಪ್ತತ್ಯಾ ಬಾಹ್ವೋರುರಸಿ ಚಾಶುಗೈಃ ॥ 13 ॥
ದ್ರೋಣರಾದರೂ ಅರ್ಜುನನ ಮೇಲೆ ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿದರು. ಕೃಷ್ಣನ ಬಾಹುಗಳಲ್ಲಿಯೂ ಮತ್ತು ವಕ್ಷಸ್ಸ್ಥಲದಲ್ಲಿಯೂ ಶೀಘ್ರಗಾಮಿಗಳಾದ ಎಪ್ಪತ್ತು ಬಾಣಗಳನ್ನು ಪ್ರಯೋಗಿಸಿದರು.
ಪಾರ್ಥಸ್ತು ಪ್ರಹಸನ್ ಧೀಮಾನ್ ಆಚಾರ್ಯಂ ಸ ಶರೌಘಿಣಮ್ |
ವಿಸೃಜಂತಂ ಸಿತಾನ್ ಬಾಣಾನ್ ನ್ಯವಾರಯತ ತಂ ಯುಧಿ ॥ 14 ॥
ಮೇಧಾವಿಯಾದ ಅರ್ಜುನನು ನಗುತ್ತಾ ಶ್ವೇತವರ್ಣದ ಬಾಣದ ಸಮೂಹವನ್ನು ಸುರಿಸುತ್ತಿದ್ದ ಶರಸಮೂಹ ಸಹಿತರಾದ ಆಚಾರ್ಯರನ್ನು ರಣರಂಗದಲ್ಲಿ ತಡೆದನು.
ಅಥ ತೌ ವಧ್ಯಮಾನೌ ತು ದ್ರೋಣೇನ ರಥಿಸತ್ತಮೌ |
ಅವರ್ಜಯೇತಾಂ ದುರ್ಧರ್ಷೌ ಯುಗಾಂತಾಗ್ನಿಮಿವೋತ್ಥಿತಮ್ ॥15॥
ರಥಿಶ್ರೇಷ್ಠರೂ, ದುರ್ಧರ್ಷರೂ ಆದ ಕೃಷ್ಣಾರ್ಜುನರು ಯುಗಾಂತ ಕಾಲದಲ್ಲಿ ಉತ್ಥಿತವಾದ ಅಗ್ನಿಯಂತಿರುವ ದ್ರೋಣರಿಂದ ಆ ರೀತಿಯಾಗಿ ಹೊಡೆಯಲ್ಪಟ್ಟು ದ್ರೋಣರನ್ನು ತಪ್ಪಿಸಿ ಮುಂದೆ ಸಾಗಿದರು.
ವರ್ಜಯನ್ನಿಶಿತಾನ್ ಬಾಣಾನ್ ದ್ರೋಣಚಾಪವಿನಿಃಸೃತಾನ್ |
ಕಿರೀಟಮಾಲೀ ತ್ವರಿತೋ ಭೋಜಾನೀಕಮಥಾವಿಶತ್ ॥ 16 ॥
ಕಿರೀಟಮಾಲಿಯಾದ ಅರ್ಜುನನು ದ್ರೋಣರ ಚಾಪದಿಂದ ಹೊರಹೊಮ್ಮಿದ ಹರಿತವಾದ ಬಾಣಗಳನ್ನು ನಿವಾರಿಸುತ್ತಾ, ಶೀಘ್ರವಾಗಿ ಭೋಜರ ಸೈನ್ಯವನ್ನು ಪ್ರವೇಶಿಸಿದನು.
ಸೋಽಂತರಾ ಕೃತವರ್ಮಾಣಂ ಕಾಂಬೋಜಂ ಚ ಸುದಕ್ಷಿಣಮ್ |
ಅಭ್ಯಯಾದ್ ವರ್ಜಯನ್ ದ್ರೋಣಂ ಮೈನಾಕಮಿವ ಪರ್ವತಮ್ ॥
ಅರ್ಜುನನು ಮೈನಾಕಪರ್ವತದಂತಿದ್ದ ದ್ರೋಣರನ್ನು ತ್ಯಜಿಸಿ, ಕೃತವರ್ಮನನ್ನು ಮತ್ತು ಕಾಂಬೋಜ ರಾಜಕುಮಾರನಾದ

ಸುದಕ್ಷಿಣನನ್ನು ಸಮೀಪಿಸಿದನು.
ತತೋ ಭೋಜೋ ನರವ್ಯಾಘ್ರಂ ದುರ್ಧರ್ಷಂ ಕುರುಸತ್ತಮಮ್ |
ಅವಿಧ್ಯತ್ ತೂರ್ಣಮವ್ಯಗ್ರೋ ದಶಭಿಃ ಕಂಕಪತ್ರಿಭಿಃ ॥ 18 ॥
ಆಗ ಭೋಜನಾದ ಕೃತವರ್ಮನು ಕುರುಶ್ರೇಷ್ಠನೂ, ದುರ್ಧರ್ಷನೂ, ನರವ್ಯಾಘ್ರನೂ ಆದ ಅರ್ಜುನನ ಮೇಲೆ ಶೀಘ್ರವಾಗಿ ಗಾಬರಿಗೊಳ್ಳದೆ ಕಂಕಪತ್ರವುಳ್ಳ ಹತ್ತು ಬಾಣಗಳನ್ನು ಪ್ರಯೋಗಿಸಿದನು.
ತಮರ್ಜುನಃ ಶಿತೇನಾಜೌ ರಾಜನ್ ವಿವ್ಯಾಧ ಪತ್ರಿಣಾ |
ಪುನರ್ಬಾಣೈಸ್ತ್ರಿಭಿಶ್ಚಾನ್ಯೈರ್ಮೋಹಯನ್ನಿವ ಸಾತ್ತ್ವತಮ್ ॥ 19 ॥
ಎಲೈ ರಾಜನೇ, ಅರ್ಜುನನು ಹರಿತವಾದ ಪತ್ರಸಹಿತವಾದ ಬಾಣಗಳಿಂದ ಅವುಗಳನ್ನು ಹೊಡೆದು, ಪುನಃ ಮೂರು ಬಾಣಗಳನ್ನು ಪ್ರಯೋಗಿಸಿ ಸಾತ್ವತನಾದ ಕೃತವರ್ಮನಿಗೆ ಮೋಹವನ್ನುಂಟು ಮಾಡಿದನು.
ಭೋಜಸ್ತು ಪ್ರಹಸನ್ ಪಾರ್ಥಂ ವಾಸುದೇವಂ ಚ ಮಾಧವಮ್ |
ಏಕೈಕಂ ಪಂಚವಿಂಶತ್ಯಾ ಸಾಯಕಾನಾಂ ಸಮಾರ್ಪಯತ್ ॥ 20 ॥
ಭೋಜನಾದರೋ ನಗುತ್ತಾ ಅರ್ಜುನ ಮತ್ತು ಕೃಷ್ಣರ ಮೇಲೆ ಪ್ರತ್ಯೇಕವಾಗಿ ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿದನು.
ತಸ್ಯಾರ್ಜುನೋ ಧನುಶ್ಛಿತ್ತ್ವಾ ವಿವ್ಯಾಧೈನಂ ತ್ರಿಸಪ್ತಭಿಃ |
ಶರೈರಗ್ನಿಶಿಖಾಕಾರೈಃ ಕ್ರುದ್ಧಾಶೀವಿಷಸನ್ನಿಭೈಃ ॥ 21 ॥
ಅರ್ಜುನನು ಅವನ ಧನುಸ್ಸನ್ನು ಕತ್ತರಿಸಿ ಕೋಪಗೊಂಡ ಸರ್ಪಗಳ ವಿಷದಂತೆ ಇದ್ದ, ಅಗ್ನಿಶಿಖೆಯನ್ನು ಹೋಲುವ, ಇಪ್ಪತ್ತೊಂದು ಬಾಣಗಳಿಂದ ಅವನನ್ನು ಪೀಡಿಸಿದನು.
ಅಥಾನ್ಯದ್ ಧನುರಾದಾಯ ಕೃತವರ್ಮಾ ಮಹಾರಥಃ |
ಪಂಚಭಿಃ ಸಾಯಕೈಸ್ತೂರ್ಣಂ ವಿವ್ಯಾಧೋರಸಿ ಭಾರತ |
ಪುನಶ್ಚ ನಿಶಿತೈರ್ಬಾಣೈಃ ಪಾರ್ಥಂ ವಿವ್ಯಾಧ ಪಂಚಭಿಃ ॥ 22 ॥
ತಂ ಪಾರ್ಥೋ ನವಭಿರ್ಬಾಣೈರಾಜಘಾನ ಸ್ತನಾಂತರೇ ॥ 23 ॥
ಅನಂತರ ಮಹಾರಥನಾದ ಕೃತವರ್ಮನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಐದು ಬಾಣಗಳಿಂದ ಶೀಘ್ರವಾಗಿ ಅರ್ಜುನನನ್ನು ಹೊಡೆದನು. ಎಲೈ ಭಾರತನೇ, ಪುನಃ ಐದು ಹರಿತವಾದ ಬಾಣಗಳನ್ನು ತೆಗೆದುಕೊಂಡು ಅವುಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು. ಅರ್ಜುನನು ಕೃತವರ್ಮನನ್ನು ಒಂಬತ್ತು ಬಾಣಗಳಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ವಿಷಕ್ತಂ ದೃಶ್ಯ ಕೌಂತೇಯಂ ಕೃತವರ್ಮರಥಂ ಪ್ರತಿ |
ಚಿಂತಯಾಮಾಸ ವಾರ್ಷ್ಣೇಯೋ ನ ನಃ ಕಾಲಾತ್ಯಯೋ ಭವೇತ್ ॥24॥
ಅರ್ಜುನನು ಕೃತವರ್ಮನ ರಥದ ಬಳಿ ಸಿಲುಕಿಕೊಂಡಿರುವುದನ್ನು ನೋಡಿ ಕೃಷ್ಣನು ನಮಗೆ ಕಾಲವು ಮೀರಿ ಹೋಗಬಾರದು ಎಂದು ಚಿಂತಿಸಿದನು.
ತತಃ ಕೃಷ್ಣೋಽಬ್ರವೀತ್ ಪಾರ್ಥಂ ಕೃತವರ್ಮಣಿ ಮಾ ದಯಾಮ್ |
ಕುರು ಸಂಬಂಧಕಂ ಕೃತ್ವಾ ಪ್ರಮಥ್ಯೈನಂ ವ್ರಜಾಹಿತಾನ್ ॥ 25 ॥
ಆಗ ಕೃಷ್ಣನು ಅರ್ಜುನನನ್ನು ಕುರಿತು, ಸಂಬಂಧಿ ಎಂಬ ಕಾರಣದಿಂದ ಕೃತವರ್ಮನ ಮೇಲೆ ದಯೆಯನ್ನು ತೋರಿಸಬೇಡ. ಅವನನ್ನು ಮರ್ದಿಸಿ ಶತ್ರುಗಳ ಕಡೆಗೆ ಸಾಗುವವನಾಗು ಎಂದು ಹೇಳಿದನು.
ತತಃ ಸ ಕೃತವರ್ಮಾಣಂ ಮೋಹಯಿತ್ವಾಽರ್ಜುನಃ ಶರೈಃ |
ಅಭ್ಯಯಾಜ್ಜವನೈರಶ್ವೈಃ ಕಾಂಬೋಜಾನಾಮನೀಕಿನೀಮ್ ॥ 26 ॥
ಆಗ ಅರ್ಜುನನು ತನ್ನ ಬಾಣಗಳಿಂದ ಕೃತವರ್ಮನಿಗೆ ಭ್ರಾಂತಿಯನ್ನುಂಟು ಮಾಡಿ ಶೀಘ್ರವಾದ ಅಶ್ವಗಳಿಂದ ಕಾಂಬೋಜರ ಸೈನ್ಯದ ಕಡೆಗೆ ಹೊರಟನು.
ಅಮರ್ಷಿತಸ್ತು ಹಾರ್ದಿಕ್ಯಃ ಪ್ರವಿಷ್ಟೇ ಶ್ವೇತವಾಹನೇ |
ವಿಧೂನ್ವನ್ ಸಶರಂ ಚಾಪಂ ಪಾಂಚಾಲಾಭ್ಯಾಂ ಸಮಾಗತಃ ॥ 27 ॥
ಅರ್ಜುನನು ಕಾಂಬೋಜಸೈನ್ಯವನ್ನು ಪ್ರವೇಶಿಸುತ್ತಿರಲು, ಕೋಪಗೊಂಡ ಕೃತವರ್ಮನು ಬಾಣ ಸಹಿತವಾದ ತನ್ನ ಬಿಲ್ಲನ್ನು ತೂಗಾಡಿಸುತ್ತಾ, ಪಾಂಚಾಲ ದೇಶದ ಯುಧಾಮನ್ಯು ಮತ್ತು ಉತ್ತಮೌಜರ ಜೊತೆಯಲ್ಲಿ ಸಂಸಕ್ತನಾದನು.
ಚಕ್ರರಕ್ಷೌ ತು ಪಾಂಚಾಲ್ಯಾವರ್ಜುನಸ್ಯ ಪದಾನುಗೌ |
ಪರ್ಯವಾರಯದಾಯಾಂತೌ ಕೃತವರ್ಮಾ ರಥೇಷುಭಿಃ ॥ 28 ॥
ಕೃತವರ್ಮನು ರಥಬಾಣಗಳೆಂಬ ಬಾಣವಿಶೇಷದಿಂದ ಅರ್ಜುನನ ಚಕ್ರ ರಕ್ಷಕರಾಗಿ ಅರ್ಜುನನನ್ನು ಹಿಂಬಾಲಿಸಿ ಬರುತ್ತಿದ್ದ ಪಾಂಚಾಲ ದೇಶದ ಅವರಿಬ್ಬರನ್ನೂ ತಡೆದನು.
ತಾವವಿಧ್ಯತ್ ತತೋ ಭೋಜಃ ಸರ್ವಪಾರಶವೈಃ ಶರೈಃ |
ತ್ರಿಭಿರೇವ ಯುಧಾಮನ್ಯುಂ ಚತುರ್ಭಿಶ್ಚೋತ್ತಮೌಜಸಮ್ ॥ 29 ॥
ಭೋಜನಾದ ಕೃತವರ್ಮನು ತೀಕ್ಷ್ಣವಾದ, ಅಯೋಮಯವಾದ ಬಾಣಗಳನ್ನು ತೆಗೆದುಕೊಂಡು ಮೂರು ಬಾಣಗಳಿಂದ ಯುಧಾಮನ್ಯುವನ್ನೂ, ನಾಲ್ಕು ಬಾಣಗಳಿಂದ ಉತ್ತಮೌಜನನ್ನೂ ಹೊಡೆದನು.
ತಾವಪ್ಯೇನಂ ವಿವ್ಯಧತುರ್ದಶಭಿರ್ದಶಭಿಃ ಶರೈಃ |
ಸಂಚಿಚ್ಛಿದತುರಪ್ಯಸ್ಯ ಧ್ವಜಂ ಕಾರ್ಮುಕಮೇವ ಚ |
ತ್ರಿಭಿರೇವ ಯುಧಾಮನ್ಯುರುತ್ತಮೌಜಾಸ್ತ್ರಿಭಿಸ್ತಥಾ ॥ 30 ॥

ಅವರಿಬ್ಬರೂ ಸಹ ಹತ್ತು-ಹತ್ತು ಬಾಣಗಳನ್ನು ಪ್ರಯೋಗಿಸಿ, ಕೃತವರ್ಮನ ಧ್ವಜ ಮತ್ತು ಧನುಸ್ಸುಗಳನ್ನು ಕತ್ತರಿಸಿದರು. ಯುಧಾಮನ್ಯುವು ಮೂರು ಬಾಣಗಳಿಂದಲೂ, ಹಾಗೆಯೇ ಉತ್ತಮೌಜನು ಮೂರು ಬಾಣಗಳಿಂದಲೂ (ಆ ಕಾರ್ಯವನ್ನು ಎಸಗಿದರು).
ಅಥಾನ್ಯದ್ ಧನುರಾದಾಯ ಹಾರ್ದಿಕ್ಯಃ ಕ್ರೋಧಮೂರ್ಚ್ಛಿತಃ |
ಕೃತ್ವಾ ವಿಧನುಷೌ ವೀರೌ ಶರವರ್ಷೈರವಾಕಿರತ್ ॥ 31 ॥
ಆಗ ಕ್ರೋಧಮೂರ್ಛಿತನಾದ ಹಾರ್ದಿಕ್ಯನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅವರಿಬ್ಬರ ಧನುಸ್ಸುಗಳನ್ನು ಕತ್ತರಿಸಿ ಅವರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಾವನ್ಯೇ ಧನುಷೀ ಸಜ್ಯೇ ಕೃತ್ವಾ ಭೋಜಂ ವಿದೇರತುಃ |
ತೇನಾಂತರೇಣ ಬೀಭತ್ಸುರ್ವಿವೇಶಾಮಿತ್ರವಾಹಿನೀಮ್ ॥ 32 ॥
ಅವರಿಬ್ಬರೂ ಬೇರೆ ಧನುಸ್ಸನ್ನು ತೆಗೆದುಕೊಂಡು ಹೆದೆ ಏರಿಸಿ ಭೋಜನನ್ನು ಗಾಯಗೊಳಿಸಿದರು. ಈ ಮಧ್ಯದಲ್ಲಿ ಅರ್ಜುನನು ಶತ್ರು ಸೈನ್ಯವನ್ನು ಪ್ರವೇಶಿಸಿದನು.
ನ ಲೇಭಾತೇ ತು ತೌ ದ್ವಾರಂ ವಾರಿತೌ ಕೃತವರ್ಮಣಾ |
ಧಾರ್ತರಾಷ್ಟ್ರೇಷ್ವನೀಕೇಷು ಯತಮಾನೌ ನರರ್ಷಭೌ ॥ 33 ॥
ಕೃತವರ್ಮನಿಂದ ತಡೆಯಲ್ಪಟ್ಟ ಆ ಇಬ್ಬರು ನರಶ್ರೇಷ್ಠರು ಪ್ರಯತ್ನಪಟ್ಟರೂ ದುರ್ಯೋಧನನ ಸೈನ್ಯವನ್ನು ಪ್ರವೇಶಿಸಲು ದ್ವಾರವನ್ನು ಪಡೆಯಲಿಲ್ಲ.
ಅನೀಕಾನಿ ತು ಸಮ್ಮೃದ್ನನ್ ತ್ವರಿತಃ ಶ್ವೇತವಾಹನಃ |
ನಾವಧೀತ್ ಕೃತವರ್ಮಾಣಂ ಪ್ರಾಪ್ತಮಪ್ಯರಿಸೂದನಃ ॥ 34 ॥
ಅರ್ಜುನನಾದರೋ ಉಳಿದ ಸೈನ್ಯವನ್ನು ಶೀಘ್ರವಾಗಿ ಮರ್ದಿಸುತ್ತಾ ಶತ್ರುಸೂದನನಾದ ಅವನು ಕೃತವರ್ಮನು ಸಮೀಪದಲ್ಲಿ ಸಿಕ್ಕಿದರೂ ಅವನನ್ನು ಕೊಲ್ಲಲಿಲ್ಲ.
ತಂ ತು ದೃಷ್ಟ್ವಾ ತಥಾಽಽಯಾಂತಂ ಶೂರೋ ರಾಜಾ ಶ್ರುತಾಯುಧಃ |
ಅಭ್ಯದ್ರವತ್ ಸುಸಂಕ್ರುದ್ಧೋ ವಿಧುನ್ವಾನೋ ಮಹದ್ಧನುಃ ॥ 35 ॥
ಹಾಗೆ ಬರುತ್ತಿರುವ ಅರ್ಜುನನನ್ನು ನೋಡಿ ರಾಜನೂ ಶೂರನೂ ಆದ ಶ್ರುತಾಯುಧನು ಬಹಳ ಕೋಪಗೊಂಡು ತನ್ನ ದೊಡ್ಡ ಧನುಸ್ಸನ್ನು ತೂಗಾಡಿಸುತ್ತಾ ಅರ್ಜುನನ ಕಡೆಗೆ ಓಡಿ ಬಂದನು.
ಸ ಪಾರ್ಥಂ ತ್ರಿಭಿರಾನರ್ಚ್ಛತ್ ಸಪ್ತತ್ಯಾ ಚ ಜನಾರ್ದನಮ್ |
ಕ್ಷುರಪ್ರೇಣ ಸುತೀಕ್ಷ್ಣೇನ ಪಾರ್ಥಕೇತುಮತಾಡಯತ್ ॥ 36 ॥
ಅವನು ಅರ್ಜುನನ ಮೇಲೆ ತೀಕ್ಷ್ಣವಾದ ಮೂರು ಕ್ಷುರಪ್ರಗಳನ್ನು, ಕೃಷ್ಣನ ಮೇಲೆ ಎಪ್ಪತ್ತು ಕ್ಷುರಪ್ರಗಳನ್ನು ಪ್ರಯೋಗಿಸಿ ಅರ್ಜುನನ ಧ್ವಜದ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.
ತಮರ್ಜುನೋ ನವತ್ಯಾ ತು ಶರಾಣಾಂ ನತಪರ್ವಣಾಮ್ |
ಆಜಘಾನ ಭೃಶಂ ಕ್ರುದ್ಧಃ ತೋತ್ತ್ರೈರಿವ ಮಹಾದ್ವಿಪಮ್ ॥ 37 ॥
ಅರ್ಜುನನು ಅಂಕುಶದಿಂದ ಮಹಾಗಜವನ್ನು ಹೊಡೆದಂತೆ ಬಹಳ ಕ್ರುದ್ಧನಾಗಿ ಬಾಗಿದ ತುದಿಯುಳ್ಳ ತೊಂಬತ್ತು ಬಾಣಗಳಿಂದ ಅವನನ್ನು ಹೊಡೆದನು.
ಸ ತನ್ನ ಮಮೃಷೇ ರಾಜಾ ಪಾಂಡವೇಯಸ್ಯ ವಿಕ್ರಮಮ್ |
ಅಥೈನಂ ಸಪ್ತಸಪ್ತತ್ಯಾ ನಾರಾಚಾನಾಂ ಸಮಾರ್ಪಯತ್ ॥ 38 ॥
ರಾಜನಾದ ಶ್ರುತಾಯುಧನು ಅರ್ಜುನನ ಪರಾಕ್ರಮವನ್ನು ನೋಡಿ ಸಹಿಸಲಿಲ್ಲ. ಆಗ ಅವನು ಅರ್ಜುನನ ಮೇಲೆ ಎಪ್ಪತ್ತೇಳು ನಾರಾಚಗಳನ್ನು ಪ್ರಯೋಗಿಸಿದನು.
ತಸ್ಯಾರ್ಜುನೋ ಧನುಶ್ಛಿತ್ತ್ವಾ ಶರಾವಾಪಂ ನಿಕೃತ್ಯ ಚ |
ಆಜಘಾನೋರಸಿ ಕ್ರುದ್ಧಃ ಸಪ್ತಭಿರ್ನತಪರ್ವಭಿಃ ॥ 39 ॥
ಅರ್ಜುನನು ಅವನ ಧನುಸ್ಸನ್ನು ಕತ್ತರಿಸಿ, ಬತ್ತಳಿಕೆಯನ್ನು ಕೆಡವಿ, ಬಾಗಿದ ತುದಿಯುಳ್ಳ ಏಳು ಬಾಣಗಳಿಂದ ಅವನ ವಕ್ಷಸ್ಸ್ಥಲಕ್ಕೆ ಹೊಡೆದನು.
ಅಥಾನ್ಯದ್ ಧನುರಾದಾಯ ಸ ರಾಜಾ ಕ್ರೋಧಮೂರ್ಚ್ಛಿತಃ |
ವಾಸವಿಂ ನವಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ ॥ 40 ॥
ಕ್ರೋಧಮೂರ್ಛಿತನಾದ ಶ್ರುತಾಯುಧರಾಜನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಇಂದ್ರಪುತ್ರನಾದ ಅರ್ಜುನನ ಬಾಹುಗಳಲ್ಲಿ ಮತ್ತು ವಕ್ಷಸ್ಸ್ಥಲದಲ್ಲಿ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ತತೋಽರ್ಜುನಃ ಸ್ಮಯನ್ನೇವ ಶ್ರುತಾಯುಧಮರಿಂದಮಮ್ |
ಶರೈರನೇಕಸಾಹಸ್ರೈಃ ಪೀಡಯಾಮಾಸ ಭಾರತ ॥ 41 ॥
ಎಲೈ ಭಾರತನೇ, ಆಗ ಅರ್ಜುನನು ನಗುತ್ತಲೇ ಅನೇಕ ಸಹಸ್ರ ಬಾಣಗಳಿಂದ ಅರಿಂದಮನಾದ ಶ್ರುತಾಯುಧನನ್ನು ಪೀಡಿಸಿದನು.
ಅಶ್ವಾಂಶ್ಚಾಸ್ಯಾವಧೀತ್ ತೂರ್ಣಂ ಸಾರಥಿಂ ಚ ಮಹಾಬಲಃ |
ವಿವ್ಯಾಧ ಚೈನಂ ಸಪ್ತತ್ಯಾ ನಾರಾಚಾನಾಂ ಮಹಾಬಲಃ ॥ 42 ॥
ಮಹಾಬಲನಾದ ಅರ್ಜುನನು ಶ್ರುತಾಯುಧನ ಅಶ್ವಗಳನ್ನು ಮತ್ತು ಸಾರಥಿಯನ್ನು ಕೊಂದನು ಮತ್ತು ಅವನ ಮೇಲೆ ಎಪ್ಪತ್ತು ನಾರಾಚಗಳನ್ನು ಪ್ರಯೋಗಿಸಿದನು.
ಹತಾಶ್ವಂ ರಥಮುತ್ಸೃಜ್ಯ ಸ ತು ರಾಜಾ ಶ್ರುತಾಯುಧಃ |

ಅಭ್ಯದ್ರುವದ್ ರಣೇ ಪಾರ್ಥಂ ಗದಾಮುದ್ಯಮ್ಯ ವೀರ್ಯವಾನ್ ॥43॥
ಅಶ್ವಗಳು ಮೃತವಾದ ಮೇಲೆ ರಾಜನೂ, ಪರಾಕ್ರಮಶಾಲಿಯೂ ಆದ ಶ್ರುತಾಯುಧನು ಆ ರಥವನ್ನು ತ್ಯಜಿಸಿ ಗದೆಯನ್ನು ಎತ್ತಿ ರಣರಂಗದಲ್ಲಿ ಅರ್ಜುನನ ಕಡೆಗೆ ಓಡಿದನು.
ವರುಣಸ್ಯಾತ್ಮಜೋ ವೀರಃ ಸ ತು ರಾಜಾ ಶ್ರುತಾಯುಧಃ |
ಪರ್ಣಾಶಾ ಜನನೀ ಯಸ್ಯ ಶೀತತೋಯಾ ಮಹಾನದೀ |
ತಸ್ಯ ಮಾತಾಽಬ್ರವೀದ್ ರಾಜನ್ ವರುಣಂ ಪುತ್ರಕಾರಣಾತ್ ॥ 44 ॥
ಅವಧ್ಯೋಽಯಂ ಭವೇಲ್ಲೋಕೇ ಶತ್ರೂಣಾಂ ತನಯೋ ಮಮ ॥45॥
ವೀರನಾದ ಶ್ರುತಾಯುಧ ರಾಜನಾದರೋ ವರುಣನ ಪುತ್ರ. ಶೀತೋದಕವನ್ನು ಹೊಂದಿದ ಮಹಾನದಿಯಾದ ಪರ್ಣಾಶೆಯು ತಾಯಿ. ಎಲೈ ರಾಜನೇ, ಪುತ್ರನ ವಿಷಯದಲ್ಲಿ ವರುಣನನ್ನು ಕುರಿತು- ಈ ನನ್ನ ಪುತ್ರನು ಲೋಕದಲ್ಲಿ ಅವಧ್ಯನಾಗಬೇಕು ಎಂದು ಕೇಳಿದಳು.
ಸಂಜಯಃ
ವರುಣಸ್ತ್ವಬ್ರವೀತ್ ಪ್ರೀತೋ ದದಾಮ್ಯಸ್ಮೈ ವರಂ ಹಿತಮ್ |
ದಿವ್ಯಮಸ್ತ್ರಂ ಸುತಸ್ತೇಽಯಂ ಯೇನಾವಧ್ಯೋ ಭವಿಷ್ಯತಿ ॥ 46 ॥
ಸಂಜಯ ವರುಣನು ಸಂತೋಷಗೊಂಡು ಅವನಿಗೆ ಹಿತವಾದ ವರವನ್ನು ಕೊಡುತ್ತೇನೆ. ದಿವ್ಯಾಸ್ತ್ರವನ್ನು ಕೊಡುತ್ತೇನೆ. ಅದರಿಂದ ನಿನ್ನ ಪುತ್ರನು ಅವಧ್ಯನಾಗುವನು ಎಂದು ಹೇಳಿದನು.
ನಾಸ್ತಿ ಚಾಪ್ಯಮರತ್ವಂ ವೈ ಮನುಷ್ಯಸ್ಯ ಕಥಂಚನ |
ಸರ್ವೇಣಾವಶ್ಯಮರ್ತವ್ಯಂ ಜಾತೇನ ಸರಿತಾಂವರೇ ॥ 47 ॥
ಮನುಷ್ಯನು ಮರಣಹೀನನಾಗಲು ಸಾಧ್ಯವೇ ಇಲ್ಲ. ಎಲೌ ಶ್ರೇಷ್ಠ ನದಿಯೇ, ಜನಿಸಿದವರೆಲ್ಲರೂ ಅವಶ್ಯವಾಗಿ ಮರಣವನ್ನು ಹೊಂದಲೇಬೇಕು.
ದುರ್ಧರ್ಷಸ್ತ್ವೇಷ ಶತ್ರೂಣಾಂ ರಣೇಷು ಭವಿತಾ ಸದಾ |
ಅಸ್ತ್ರಸ್ಯಾಸ್ಯ ಪ್ರಭಾವೇನ ವ್ಯೇತು ತೇ ಮಾನಸೋ ಜ್ವರಃ ॥ 48 ॥
ಈ ಅಸ್ತ್ರದ ಪ್ರಭಾವದಿಂದ ಅವನು ಯುದ್ಧದಲ್ಲಿ ಶತ್ರುಗಳಿಂದ ಸೋಲಿಸಲ್ಪಡಲು ಅಸಾಧ್ಯನಾಗುವನು. ನಿನ್ನ ಮನಸ್ಸಿನ ಚಿಂತೆಯನ್ನು ಬಿಡು.
ಇತ್ಯುಕತ್ವ ವರುಣಃ ಪ್ರಾದಾದ್ ಗದಾಂ ಮಂತ್ರಪುರಸ್ಕೃತಾಮ್ |
ಯಾಮಾಸಾದ್ಯ ದುರಾಧರ್ಷಃ ಸರ್ವಲೋಕೇ ಶ್ರುತಾಯುಧಃ ॥ 49 ॥
ಹೀಗೆ ಹೇಳಿ ವರುಣನು ಅಭಿಮಂತ್ರಿತವಾದ ಗದೆಯನ್ನು ಕೊಟ್ಟನು. ಅದನ್ನು ಹೊಂದಿ ಶ್ರುತಾಯುಧನು ಸರ್ವಲೋಕದಲ್ಲಿಯೂ ದುರಾಧರ್ಷನಾದನು.
ಉವಾಚ ಚೈನಂ ಭಗವಾನ್ ಪುನರೇವ ಜಲೇಶ್ವರಃ |
ಅಯುದ್ಧ್ಯತಿ ನ ಮೋಕ್ತವ್ಯಾ ತ್ವಯ್ಯೇವ ನಿಪತೇದಿತಿ |
ಹನ್ಯಾದೇಷಾ ಪ್ರತೀಪಂ ಹಿ ಪ್ರಯೋಕ್ತಾರಮಪಿ ಪ್ರಭೋ ॥ 50 ॥
ಪೂಜ್ಯನಾದ ಜಲೇಶ್ವರನು ಪುನಃ ಅವನನ್ನು ಕುರಿತು ಈ ಗದೆಯನ್ನು ಯುದ್ಧ ಮಾಡದಿರುವವನಲ್ಲಿ ಪ್ರಯೋಗಿಸಬಾರದು. ಎಲೈ ಪ್ರಭುವೇ, ಹಾಗೆ ಮಾಡಿದರೆ ಆ ಗದೆಯು ನಿನ್ನ ಮೇಲೆಯೇ ಬಂದು, ಪ್ರಯೋಗಿಸುವ ನಿನ್ನನ್ನೇ ಕೊಲ್ಲುವುದು ಎಂದು ಹೇಳಿದನು.
ನ ಚಾಕರೋತ್ ಸ ತದ್ ವಾಕ್ಯಂ ಕಾಲೇ ಪ್ರಾಪ್ತೇ ಶ್ರುತಾಯುಧಃ |
ಸ ತಯಾ ವೀರಘಾತಿನ್ಯಾ ಜನಾರ್ದನಮತಾಡಯತ್ ॥ 51 ॥
ಕಾಲವು ಪ್ರಾಪ್ತವಾದಾಗ ಶ್ರುತಾಯುಧನು ವರುಣನ ಆ ಮಾತನ್ನು ನಡೆಸಲಿಲ್ಲ. ಅವನು ವೀರಘಾತಿನಿಯಾದ ಆ ಗದೆಯನ್ನು ಕೃಷ್ಣನ ಮೇಲೆ ಪ್ರಯೋಗಿಸಿದನು.
ಪ್ರತಿಜಗ್ರಾಹ ತಾಂ ಕೃಷ್ಣಃ ಪೀನೇನಾಂಸೇನ ವೀರ್ಯವಾನ್ |
ನಾಕಂಪಯತ ಶೌರಿಂ ಸಾ ವಿಂಧ್ಯಂ ಗಿರಿಮಿವಾನಿಲಃ ॥ 52 ॥
ಪರಾಕ್ರಮಶಾಲಿಯಾದ ಕೃಷ್ಣನು ಆ ಗದೆಯನ್ನು ತನ್ನ ಉನ್ನತವಾದ ಭುಜದ ಮೇಲೆ ಸ್ವೀಕರಿಸಿದನು. ಗಾಳಿಯು ವಿಂಧ್ಯಪರ್ವತವನ್ನು ಅಲುಗಾಡಿಸಲು ಸಾಧ್ಯವಾಗದಂತೆ ಆ ಗದೆಯು ಕೃಷ್ಣನನ್ನು ಅಲುಗಾಡಿಸಲಿಲ್ಲ.
ತತೋಽರ್ಜುನಃ ಕ್ಷುರಪ್ರಾಭ್ಯಾಂ ಭುಜೌ ಪರಿಘಸನ್ನಿಭೌ |
ವಿವ್ಯಾಧ ಪಾಂಡವಃ ಶೀಘ್ರಂ ಜಲೇಶ್ವರಸುತಸ್ಯ ವೈ ॥ 53 ॥
ಆಗ ಅರ್ಜುನನು ಎರಡು ಕ್ಷುರಪ್ರಗಳಿಂದ ವರುಣಪುತ್ರನ ಒನಕೆಯಂತಹ ಭುಜಗಳನ್ನು ಶೀಘ್ರವಾಗಿ ಕತ್ತರಿಸಿದನು.
ಸಾ ಜ್ವಲಂತೀ ಮಹೋಲ್ಕೇವ ಸಮಾಸಾದ್ಯ ಜನಾರ್ದನಮ್ |
ಪ್ರತ್ಯಾಗತಾ ಮಹಾವೇಗಾ ಕೃತ್ಯೇವ ದುರಧಿಷ್ಠಿತಾ |
ಜಘಾನ ಚ ಸ್ಥಿತಂ ಸಂಖೇ ಶ್ರುತಾಯುಧಮಮರ್ಷಣಮ್ ॥ 54 ॥
ಆ ಗದೆಯಾದರೂ ದೊಡ್ಡ ಉಲ್ಕೆಯಂತೆ ಜ್ವಲಿಸುತ್ತಾ, ಕೃಷ್ಣನನ್ನು ಸಮೀಪಿಸಿ, ಮಹಾವೇಗದಿಂದ ತಪ್ಪಾಗಿ ಪ್ರಯೋಗಿಸಿದ ಕೃತ್ಯದಂತೆ (ಪಿಶಾಚಿಯಂತೆ) ಹಿಂದೆ ತಿರುಗಿ ರಣರಂಗದಲ್ಲಿದ್ದ ರೋಷಾವಿಷ್ಟನಾದ ಶ್ರುತಾಯುಧನನ್ನೇ ಹೊಡೆಯಿತು.
ಸ ಪಪಾತ ಹತೋ ಭೂಮೌ ವಿಶಿರಾ ವಿಭುಜೋ ಬಲೀ |
ಸಂಭಗ್ನ ಇವ ವಾತೇನ ಬಹುಶಾಖೋ ವನಸ್ಪತಿಃ ॥ 55 ॥
ಬಲಿಷ್ಠನಾದ ಶ್ರುತಾಯುಧನು ತನ್ನ ಭುಜಗಳನ್ನು, ಶಿರಸ್ಸನ್ನು ಕಳೆದುಕೊಂಡು ಬಿರುಗಾಳಿಗೆ ಸಿಕ್ಕಿ ಭೂಮಿಯ ಮೇಲೆ ಬಿದ್ದ ಅನೇಕ

ಕೊಂಬೆಗಳುಳ್ಳ ವೃಕ್ಷದಂತೆ ಭೂಮಿಯ ಮೇಲೆ ಬಿದ್ದನು.
ಸಾ ವಿಸ್ಫುರಂತೀ ಜ್ವಲಿತಾ ವಜ್ರವೇಗಸಮಾ ಗದಾ |
ಹತ್ವಾ ಶ್ರುತಾಯುಧಂ ಭೀಮಾ ಜಗತೀಮನ್ವಪದ್ಯತ |
ಗದಾಂ ನಿವರ್ತಿತಾಂ ದೃಷ್ಟ್ವಾ ನಿಹತಂ ಚ ಶ್ರುತಾಯುಧಮ್ ॥ 56 ॥
ಹಾಹಾಕಾರೋ ಮಹಾನಾಸೀತ್ ಸೈನ್ಯಾನಾಂ ತವ ಭಾರತ |
ಸ್ವೇನಾಸ್ತ್ರೇಣ ಹತಂ ದೃಷ್ಟ್ವಾ ಶ್ರುತಾಯುಧಮರಿಂದಮಮ್ ॥ 57 ॥
ವಜ್ರವೇಗಕ್ಕೆ ಸಮವಾದ ವೇಗವುಳ್ಳ, ಜ್ವಾಲೆಗಳಿಂದ ಕೂಡಿದ, ಪ್ರಕಾಶಮಾನವಾದ, ಭಯಂಕರವಾದ ಆ ಗದೆಯು ಶ್ರುತಾಯುಧನನ್ನು ಕೊಂದು ಭೂಮಿಯ ಮೇಲೆ ಬಿದ್ದಿತು. ಎಲೈ ಭಾರತನೇ, ಗದೆಯು ಹಿಂದಕ್ಕೆ ಬಂದುದನ್ನೂ, ಅರಿಂದಮನಾದ ಶ್ರುತಾಯುಧನು ತನ್ನ ಅಸ್ತ್ರದಿಂದಲೇ ಹತನಾದುದನ್ನೂ ನೋಡಿ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು.
ಅಯುದ್ಧ್ಯಮಾನಾಯ ಹಿ ಸಾ ಕೇಶವಾಯ ನರಾಧಿಪ |
ಕ್ಷಿಪ್ತಾ ಶ್ರುತಾಯುಧೇನಾಥ ತಸ್ಮಾತ್ ತಮವಧೀದ್ ಗದಾ ॥ 58 ॥
ಎಲೈ ರಾಜನೇ, ಯುದ್ಧವನ್ನು ಮಾಡದಿರುವ ಕೃಷ್ಣನ ಮೇಲೆ ಶ್ರುತಾಯುಧನು ಆ ಗದೆಯನ್ನು ಎಸೆದನು. ಆ ಕಾರಣದಿಂದ ಗದೆಯು ಅವನನ್ನೇ ಕೊಂದಿತು.
ಯಥೋಕ್ತಂ ವರುಣೇನಾಜೌ ತಥಾ ಸ ನಿಧನಂ ಗತಃ |
ವ್ಯಸುಶ್ಚಾಪ್ಯಪತದ್ ಭೂಮೌ ಪ್ರೇಕ್ಷತಾಂ ಸರ್ವಧನ್ವಿನಾಮ್ ॥ 59 ॥
ವರುಣನು ಹಿಂದೆ ಹೇಳಿದಂತೆಯೇ ಅವನು ನಿಧನವನ್ನು ಹೊಂದಿದನು. ಎಲ್ಲ ಧನುರ್ಧಾರಿಗಳೂ ನೋಡುತ್ತಿರುವಂತೆಯೇ ಅವನು ಮೃತನಾಗಿ ಭೂಮಿಯಲ್ಲಿ ಬಿದ್ದನು.
ಪತಮಾನಸ್ತು ಸ ಬಭೌ ಪರ್ಣಾಶಾಯಾಃ ಪ್ರಿಯಃ ಸುತಃ |
ಸಂಭಗ್ನ ಇವ ವಾತೇನ ಬಹುಶಾಖೋ ವನಸ್ಪತಿಃ ॥ 60 ॥
ಪರ್ಣಾಶೆಯ ಪ್ರಿಯಪುತ್ರನಾದ ಅವನು ಬೀಳುತ್ತಾ ಬಿರುಗಾಳಿಗೆ ಸಿಕ್ಕಿ ಭಗ್ನಗೊಂಡ ಅನೇಕ ಕೊಂಬೆಗಳುಳ್ಳ ವೃಕ್ಷದಂತೆ ಶೋಭಿಸಿದನು.
ತತಃ ಸರ್ವಾಣಿ ಸೈನ್ಯಾನಿ ಸೈನ್ಯಮುಖ್ಯಾಶ್ಚ ಸರ್ವಶಃ |
ಪ್ರಾದ್ರವಂತ ಹತಂ ದೃಷ್ಟ್ವಾ ಶ್ರುತಾಯುಧಮರಿಂದಮಮ್ ॥ 61 ॥
ಆಗ ಅರಿಂದಮನಾದ ಶ್ರುತಾಯುಧನು ಹತನಾದುದನ್ನು ನೋಡಿ ಎಲ್ಲ ಸೈನ್ಯಗಳೂ ಮತ್ತು ಸೈನ್ಯ ನಾಯಕರೂ ಎಲ್ಲ ಕಡೆಗಳಲ್ಲಿಯೂ ಓಡಿಹೋದರು.
ತತಃ ಕಾಂಬೋಜರಾಜಸ್ಯ ಪುತ್ರೋ ಶೂರಃ ಸುದಕ್ಷಿಣಃ |
ಅಭ್ಯಯಾಜ್ಜವನೈರಶ್ವೈಃ ಫಲ್ಗುನಂ ಶತ್ರುಸೂದನಮ್ ॥ 62 ॥
ಅನಂತರ ಕಾಂಬೋಜ ರಾಜಕುಮಾರನಾದ, ಶೂರನಾದ ಸುದಕ್ಷಿಣನು ವೇಗಶಾಲಿಯಾದ ಅಶ್ವಗಳಿಂದ ಶತ್ರುಸೂದನನಾದ ಅರ್ಜುನನ ಮೇಲೆ ಎರಗಿದನು.
ತಸ್ಯ ಪಾರ್ಥಃ ಶರಾನ್ ಸಪ್ತ ಪ್ರೇಷಯಾಮಾಸ ಭಾರತ |
ತೇ ತಂ ವೀರಂ ವಿನಿರ್ಭಿದ್ಯ ಪ್ರಾವಿಶನ್ ಧರಣೀತಳಮ್ ॥ 63 ॥
ಎಲೈ ಭಾರತನೇ, ಅರ್ಜುನನು ಅವನ ಮೇಲೆ ಏಳು ಬಾಣಗಳನ್ನು ಪ್ರಯೋಗಿಸಿದನು. ಅವು ಆ ವೀರನ ಶರೀರವನ್ನು ಭೇದಿಸಿ ಭೂಮಿಯನ್ನು ಪ್ರವೇಶಿಸಿದವು.
ಸೋಽತಿವಿದ್ಧಃ ಶರೈಸ್ತೀಕ್ಷ್ಣೈರ್ಗಾಂಡೀವಪ್ರೇಷಿತೈರ್ಮೃಧೇ |
ಅರ್ಜುನಂ ಪ್ರತಿವಿವ್ಯಾಧ ದಶಭಿಃ ಕಂಕಪತ್ರಿಭಿಃ ॥ 64 ॥
ವಾಸುದೇವಂ ತ್ರಿಭಿರ್ವಿದ್ಧ್ವಾ ಪುನಃ ಪಾರ್ಥಂ ಚ ಪಂಚಭಿಃ ॥ 65 ॥
ಗಾಂಡೀವ ಧನುಸ್ಸಿನಿಂದ ಹೊಮ್ಮಿದ ಅರ್ಜುನನ ಬಾಣಗಳಿಂದ ರಣರಂಗದಲ್ಲಿ ತೀವ್ರವಾಗಿ ಗಾಯಗೊಂಡ ಅವನು ಕಂಕಪತ್ರವನ್ನು ಹೊಂದಿದ್ದ ಹತ್ತು ಬಾಣಗಳಿಂದ ಅರ್ಜುನನನ್ನು ಪ್ರತಿಯಾಗಿ ಹೊಡೆದನು. ಅವನು ಕೃಷ್ಣನನ್ನು ಮೂರು ಬಾಣಗಳಿಂದ ಹೊಡೆದು, ಅರ್ಜುನನನ್ನು ಪುನಃ ಐದು ಬಾಣಗಳಿಂದ ಹೊಡೆದನು.
ತಸ್ಯ ಪಾರ್ಥೋ ಧನುಶ್ಛಿತ್ತ್ವಾ ಕೇತುಂ ಚಿಚ್ಛೇದ ಮಾರಿಷ |
ಭಲ್ಲಾಭ್ಯಾಂ ಪೃಥುತೀಕ್ಷ್ಣಾಭ್ಯಾಂ ತಂ ಚ ವಿವ್ಯಾಧ ಪಾಂಡವಃ |
ಸ ತು ಪಾರ್ಥಂ ತ್ರಿಭಿರ್ವಿದ್ಧ್ವಾ ಸಿಂಹನಾದಮಥಾನದತ್ ॥ 66 ॥
ಎಲೈ ಪೂಜ್ಯನೇ, ಅರ್ಜುನನು ಅಗಲವೂ, ತೀಕ್ಷ್ಣವೂ ಆದ ಎರಡು ಭಲ್ಲಗಳಿಂದ ಅವನ ಧನುಸ್ಸನ್ನು ಮತ್ತು ಧ್ವಜವನ್ನು ಕತ್ತರಿಸಿ, ಅವನ ಮೇಲೆಯೂ ಆಯುಧಗಳನ್ನು ಪ್ರಯೋಗಿಸಿದನು. ಅವನನಾದರೂ ಅರ್ಜುನನನ್ನು ಮೂರು ಬಾಣಗಳಿಂದ ಹೊಡೆದು ಸಿಂಹನಾದವನ್ನು ಮಾಡಿದನು.
ಸರ್ವಪಾರಶವೀಂ ಚೈವ ಶಕ್ತಿಂ ಶೂರಃ ಸುದಕ್ಷಿಣಃ |
ಸಘಂಟಾಂ ಪ್ರಾಹಿಣೋದ್ ಘೋರಾಂ ಕ್ರುದ್ಧೋ ಗಾಂಡೀವಧನ್ವನೇ ॥
ಶೂರನಾದ ಸುದಕ್ಷಿಣನು ಕ್ರುದ್ಧನಾಗಿ, ಪೂರ್ಣವಾಗಿ ಅಯೋಮಯವಾದ, ಘಂಟೆಗಳಿಂದ ಕೂಡಿದ, ಘೋರವಾದ ಶಕ್ತ್ಯಾಯುಧವನ್ನು ಅರ್ಜುನನ ಮೇಲೆ ಪ್ರಯೋಗಿಸಿದನು.
ಸಾ ಜ್ವಲಂತೀ ಮಹೋಲ್ಕೇವ ಸಮಾಸಾದ್ಯ ಮಹಾರಥಮ್ |
ಸವಿಷ್ಫುಲಿಂಗಾ ನಿರ್ಭಿದ್ಯ ನಿಪಪಾತ ಮಹೀತಳೇ ॥ 68 ॥

ಜ್ವಾಲೆಗಳಿಂದಲೂ, ಅಗ್ನಿಕಿಡಿಗಳಿಂದಲೂ ಕೂಡಿದ ಆ ಶಕ್ತ್ಯಾಯುಧವು ಮಹಾರಥನಾದ ಅರ್ಜುನನನ್ನು ಸಮೀಪಿಸಿ, ಅವನನ್ನು ಭೇದಿಸಿ ಭೂಮಿಯ ಮೇಲೆ ಬಿದ್ದಿತು.
ತಂ ಚತುರ್ದಶಭಿಃ ಪಾರ್ಥೋ ನಾರಾಚೈಃ ಕಂಕಪತ್ರಿಭಿಃ |
ಸಾಶ್ವಧ್ವಜಧನುಃಸೂತಂ ವಿವ್ಯಾಧಾಚಿಂತ್ಯವಿಕ್ರಮಃ ॥ 69 ॥
ರಥಂ ಚಾನ್ಯೈಃ ಸುಬಹುಭಿಃ ಚಕ್ರೇ ವಿಶಕಲಂ ಶರೈಃ ॥ 70 ॥
ಅಚಿಂತ್ಯ ಪರಾಕ್ರಮಿಯಾದ ಅರ್ಜುನನು ಅವನ ಮೇಲೆ ಕಂಕಪತ್ರವನ್ನು ಹೊಂದಿದ ಹದಿನಾಲ್ಕು ನಾರಾಚಗಳನ್ನು ಪ್ರಯೋಗಿಸಿ, ಅವನ ಅಶ್ವಗಳನ್ನೂ, ಧ್ವಜವನ್ನೂ, ಧನುಸ್ಸನ್ನೂ ಮತ್ತು ಸಾರಥಿಯನ್ನೂ ವಿನಾಶಗೊಳಿಸಿ, ಇನ್ನೂ ಅನೇಕ ಬಾಣಗಳಿಂದ ಅವನ ರಥವನ್ನು ಪುಡಿ-ಪುಡಿ ಮಾಡಿದನು.
ಸುದಕ್ಷಿಣಂ ಚ ಕಾಂಬೋಜಂ ಮೋಘಸಂಕಲ್ಪವಿಕ್ರಮಮ್ |
ಬಿಭೇದ ಹೃದಿ ಬಾಣೇನ ಪೃಥುಧಾರೇಣ ಪಾಂಡವಃ ॥ 71 ॥
ವ್ಯರ್ಥವಾದ ಸಂಕಲ್ಪವನ್ನು ಮತ್ತು ವಿಕ್ರಮವನ್ನು ಹೊಂದಿದ್ದ ಕಾಂಬೋಜ ದೇಶದ ಸುದಕ್ಷಿಣನ ಮೇಲೆ ಅರ್ಜುನನು ಅಗಲವಾದ ಧಾರೆಯುಳ್ಳ ಒಂದು ಬಾಣವನ್ನು ಪ್ರಯೋಗಿಸಿ ಅವನ ಹೃದಯವನ್ನು ಭೇದಿಸಿದನು.
ಸ ಭಿನ್ನವರ್ಮಾ ಸ್ರಸ್ತಾಂಗಃ ಪ್ರಭ್ರಷ್ಟಮುಕುಟಾಂಗದಃ |
ಪಪಾತಾಭಿಮುಖಃ ಶೂರೋ ಮುಕ್ತಯಂತ್ರ ಇವ ಧ್ವಜಃ ॥ 72 ॥
ಶೂರನಾದ ಸುದಕ್ಷಿಣನು ಕವಚವು ಕತ್ತರಿಸಲ್ಪಟ್ಟು, ದೇಹದ ಅವಯವಗಳೆಲ್ಲವೂ ಶಿಥಿಲಗೊಂಡು, ಕಿರೀಟ ಮತ್ತು ಅಂಗದಗಳು ಹರಿದು ಹೋಗಿ ಯಂತ್ರದಿಂದ ಮುಕ್ತವಾದ ಧ್ವಜದಂತೆ ಅರ್ಜುನನಿಗೆ ಅಭಿಮುಖವಾಗಿ ಬಿದ್ದನು.
ಗಿರೇಃ ಶಿಖರಜಃ ಶ್ರೀಮಾನ್ ಸುಶಾಖಃ ಸುಪ್ರತಿಷ್ಠಿತಃ |
ಸಂಭಗ್ನ ಇವ ವಾತೇನ ಕರ್ಣಿಕಾರೋ ಹಿಮಾತ್ಯಯೇ ॥ 73 ॥
ಹಿಮಗಾಲವು ಕಳೆದ ಮೇಲೆ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಪರ್ವತ ಶಿಖರದಿಂದ ಉರುಳಿದ, ಚೆನ್ನಾಗಿ ಬೇರೂರಿದ ಅನೇಕ ಕೊಂಬೆಗಳುಳ್ಳ ಕಾಂತಿಯುಕ್ತವಾದ ಕರ್ಣಿಕಾರ ವೃಕ್ಷದಂತೆ ಅವನು ಭಗ್ನನಾದನು.
ವಿಕೀರ್ಣಃ ಪತಿತೋ ರಾಜಾ ಪ್ರಸಾರ್ಯ ವಿಪುಲೌ ಭುಜೌ |
ಧಾರಯನ್ನಗ್ನಿಸಂಕಾಶಾಂ ಶಿರಸಾ ಕಾಂಚನೀಂ ಸ್ರಜಮ್ ॥ 74 ॥
ಅವನು ತನ್ನ ಭುಜಗಳನ್ನು ಹರಡಿ, ಅಗ್ನಿಯಂತೆ ಹೊಳೆಯುವ ಸುವರ್ಣಮಯವಾದ ಮಾಲೆಯನ್ನು ಶಿರಸ್ಸಿನಲ್ಲಿ ಧರಿಸಿ, ಭೂಮಿಯ ಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದನು.
ಶೇತೇ ವಿನಿಹತೋ ಭೂಮೌ ಕಾಂಬೋಜಸ್ತರುಣೋ ವಿಭುಃ |
ಸುದರ್ಶನೀಯಸ್ತಾಮ್ರಾಕ್ಷೋ ಭಿನ್ನೋ ಹಿಮಗಿರಿರ್ಯಥಾ |
ಮಹಾರ್ಹಾಭರಣೋಪೇತಃ ಸಾನುಮಾನಿವ ಪರ್ವತಃ ॥ 75 ॥
ಅರ್ಜುನನ ಬಾಣದಿಂದ ಹೊಡೆಯಲ್ಪಟ್ಟು ಕಾಂಬೋಜ ದೇಶದ ತರುಣನೂ, ಸುಂದರನೂ, ತಾಮ್ರಾಕ್ಷನೂ ಆದ ರಾಜನು ಬೆಲೆಬಾಳುವ ಆಭರಣದಿಂದ ಕೂಡಿದವನಾಗಿ, ಶಿಖರದಿಂದ ಕೂಡಿದ ಪರ್ವತದಂತೆ ಭೇದಿಸಲ್ಪಟ್ಟ ಹಿಮಾಲಯದಂತೆ ಭೂಮಿಯ ಮೇಲೆ ಮಲಗಿದನು.
ಪುತ್ರಃ ಕಾಂಬೋಜರಾಜಸ್ಯ ಪಾರ್ಥೇನ ವಿನಿಪಾತಿತಃ |
ಶೋಚಯನ್ ಸರ್ವಭೂತಾನಿ ಕೇಶವಂ ಚ ಸಹಾರ್ಜುನಮ್ |
ಅಶೋಭತ ಮಹಾಬಾಹುಃ ವ್ಯಸುರ್ಭೂಮೌ ನಿಪಾತಿತಃ ॥ 76 ॥
ಕಾಂಬೋಜರಾಜನ ಪುತ್ರನು ಅರ್ಜುನನಿಂದ ಭೂಮಿಯ ಮೇಲೆ ಕೆಡವಲ್ಪಟ್ಟು ಎಲ್ಲ ಯೋಧರಿಗೂ, ಕೇಶವಾದಿಗಳಿಗೂ ಶೋಕವನ್ನುಂಟು ಮಾಡುತ್ತಾ ಮಹಾಬಾಹುವಾದ ಅವನು ಮೃತನಾಗಿ ಭೂಮಿಯ ಮೇಲೆ ಶೋಭಿಸಿದನು.
ತತಃ ಸೈನ್ಯಾನಿ ಸರ್ವಾಣಿ ವ್ಯದ್ರವಂತ ಸುತಸ್ಯ ತೇ |
ಹತಂ ಶ್ರುತಾಯುಧಂ ದೃಷ್ಟ್ವಾ ಕಾಂಬೋಜಂ ಚ ಸುದಕ್ಷಿಣಮ್ ॥77॥
ಆಗ ಹತನಾದ ಶ್ರುತಾಯುಧನನ್ನು ಮತ್ತು ಕಾಂಬೋಜರಾಜನಾದ ಸುದಕ್ಷಿಣನನ್ನು ನೋಡಿ ನಿನ್ನ ಪುತ್ರನ ಸೈನ್ಯವೆಲ್ಲವೂ ಓಡಿ ಹೋಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಾಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ತೆರಡನೆಯ ಅಧ್ಯಾಯ
ಅರ್ಜುನನಿಂದ ಶ್ರುತಾಯು ಮೊದಲಾದವರ ವಧೆ.
ಸಂಜಯಃ
ಸುದಕ್ಷಿಣೇ ಹತೇ ರಾಜನ್ ವೀರೇ ಚೈವ ಶ್ರುತಾಯುಧೇ |
ಜವೇನಾಭ್ಯದ್ರುವನ್ ಪಾರ್ಥಂ ಕುಪಿತಾಃ ಸೈನಿಕಾಸ್ತವ ॥ 1 ॥

ಸಂಜಯ ಎಲ್ಯೆ ರಾಜನೇ, ಸುದಕ್ಷಿಣನು ಮತ್ತು ವೀರನಾದ ಶ್ರುತಾಯುಧನು ಹತನಾಗುತ್ತಿರಲು ನಿನ್ನ ಸೈನಿಕರು ಕೋಪದಿಂದ ಅರ್ಜುನನ ಮೇಲೆ ಎರಗಿದರು.
ಅಭೀಷಾಹಾಃ ಶೂರಸೇನಾಃ ಶಿಬಯೋಽಥ ವಸಾತಯಃ।
ಅಭ್ಯವರ್ಷಂಸ್ತತೋ ರಾಜನ್ ಶರವರ್ಷೈರ್ಧನಂಜಯಮ್ ॥ 2 ॥
ಎಲ್ಯೆ ರಾಜನೇ, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು ಬಾಣದ ಮಳೆಗಳನ್ನು ಧನಂಜಯನ ಮೇಲೆ ಸುರಿಸಿದರು.
ತೇಷಾಂ ಷಷ್ಟಿಶತಾನ್ ವರ್ಯಾನಹನತ್ ಪಾಂಡವಃ ಶರೈಃ।
ತೇ ಸ್ಮ ಭೀತಾಃ ಪಲಾಯಂತೇ ಸಿಂಹೇನೇವಾರ್ದಿತಾ ಗಜಾಃ ॥ 3 ॥
ಅವರಲ್ಲಿ ಶ್ರೇಷ್ಠರಾದ ಅರವತ್ತು ಸಾವಿರ ಯೋಧರನ್ನು ಅರ್ಜುನನು ತನ್ನ ಬಾಣಗಳಿಂದ ಕೊಂದನು. ಅವರು ಸಿಂಹದಿಂದ ಪೀಡಿಸಲ್ಪಟ್ಟ ಗಜಗಳಂತೆ ಭಯದಿಂದ ಪಲಾಯನ ಮಾಡಿದರು.
ತೇ ನಿವೃತ್ಯ ಪುನಃ ಪಾರ್ಥಂ ಸರ್ವತಃ ಪರ್ಯವಾರಯನ್।
ರಣೇ ಸಪತ್ನಾನ್ ನಿಘ್ನಂತಂ ವಜ್ರಹಸ್ತಮಿವಾಸುರಾಃ ॥ 4 ॥
ಅವರು ಎಲ್ಲ ಕಡೆಯಿಂದಲೂ ಪುನಃ ಹಿಂದಿರುಗಿ ಬಂದು ಅಸುರರು ವಜ್ರಹಸ್ತನಾದ ಇಂದ್ರನನ್ನು ಮುತ್ತಿದಂತೆ ಶತ್ರುಗಳನ್ನು ಸಂಹರಿಸುತ್ತಿದ್ದ ಅರ್ಜುನನನ್ನು ಸುತ್ತುವರಿದರು.
ತೇಷಾಮಾಪತತಾಂ ತೂರ್ಣಂ ಗಾಂಡೀವಪ್ರೇಷಿತೈಃ ಶರೈಃ।
ಉಚ್ಚಕರ್ತ ಶಿರಾಂಸ್ಯುಗ್ರೋ ನಾಳೇಭ್ಯ ಇವ ಪಂಕಜಾನ್।
ಶಿರೋಭಿಃ ಪತಿತೈಸ್ತತ್ರ ಭೂಮಿರಾಸೀನ್ನಿರಂತರಾ ॥ 5 ॥
ಅರ್ಜುನನು ತನ್ನ ಮೇಲೆ ಎರಗುತ್ತಿರುವ ಅವರ ಶಿರಸ್ಸುಗಳನ್ನು ಗಾಂಡೀವದಿಂದ ಹೊರಹೊಮ್ಮಿದ ಬಾಣಗಳಿಂದ ನಾಳಗಳಿಂದ ಕಮಲಗಳನ್ನು ಕತ್ತರಿಸಿದಂತೆ ಕತ್ತರಿಸಿದನು. ಹಾಗೆ ಬಿದ್ದ ಶಿರಸ್ಸುಗಳಿಂದ ಭೂಮಿಯು ನಿಬಿಡವಾಯಿತು.
ಶಿರೋಭಿಃ ಪ್ರಪತದ್ಭಿಸ್ತೈರಂತರಿಕ್ಷಂ ಸಮಾವೃತಮ್।
ಅಭ್ರಚ್ಛಾಯೇವ ತತ್ರಾಸೀದ್ ಧ್ವಾಂಕ್ಷಗೃಧ್ರಬಲೈಃ ಪುನಃ ॥ 6 ॥
ಶಿರಸ್ಸುಗಳು ಹಾಗೆ ಬೀಳುತ್ತಿರಲು ಅವುಗಳಿಂದ ಅಂತರಿಕ್ಷ ಪ್ರದೇಶವು ತುಂಬಿಹೋಯಿತು ಮತ್ತು ಅಂತರಿಕ್ಷದಲ್ಲಿ ಸಮಾವೇಶಗೊಂಡ ಹದ್ದು, ಕಾಗೆ, ಬಲ ಮುಂತಾದ ಪಕ್ಷಿಗಳಿಂದ ಭೂಮಿಯ ಮೇಲೆ ಮೋಡದಿಂದ ಉಂಟಾಗುವ ಛಾಯೆಯಂತೆ ಛಾಯೆ ಉಂಟಾಯಿತು.
ತೇಷು ತೂತ್ಸಾದ್ಯಮಾನೇಷು ಕ್ರೋಧಾಮರ್ಷಸಮನ್ವಿತೌ।
ಶ್ರುತಾಯುಶ್ಚಾಯುತಾಯುಶ್ಚ ಧನಂಜಯಮಯುದ್ಧ್ಯತಾಮ್ ॥ 7 ॥
ಕ್ರೋಧಾಮರ್ಷ ಸಮನ್ವಿತರಾದ ಅವರು ಸಂಹರಿಸಲ್ಪಡುತ್ತಿರಲು ಶ್ರುತಾಯು ಮತ್ತು ಅಯುತಾಯುಗಳು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಶ್ಲಾಘಿನೌ ಸ್ಪರ್ಧಿನೌ ವೀರೌ ಕುಲಜೌ ಬಾಹುಶಾಲಿನೌ।
ತಾವೇನಂ ಶರವರ್ಷಾಭ್ಯಾಂ ಸವ್ಯದಕ್ಷಿಣಮಸ್ಯತಾಮ್ ॥ 8 ॥
ಕೀರ್ತಿವಂತರೂ, ಸ್ಪರ್ಧಿಗಳೂ, ಬಾಹುಶಾಲಿಗಳೂ, ಒಳ್ಳೆಯ ಕುಲದಲ್ಲಿ ಜನಿಸಿದವರೂ, ವೀರರೂ ಆದ ಅವರು ಬಾಣದ ಮಳೆಗಳನ್ನು ಅರ್ಜುನನ ಎಡಭಾಗದಲ್ಲಿ ಮತ್ತು ಬಲಭಾಗದಲ್ಲಿ ಸುರಿಸಿದರು.
ತ್ವರಾಯುಕ್ತೌ ಮಹಾರಾಜ ಪ್ರಾರ್ಥಯಂತೌ ಮಹದ್ ಯಶಃ।
ಅರ್ಜುನಸ್ಯ ವಧಪ್ರೇಪ್ಸೂ ಪುತ್ರಾರ್ಥೇ ತವ ಧನ್ವಿನೌ ॥ 9 ॥
ತಾವರ್ಜುನಂ ಸಹಸ್ರೇಣ ಶರಾಣಾಂ ನತಪರ್ವಣಾಮ್।
ಪೂರಯಾಮಾಸತುಃ ಕ್ರುದ್ಧೌ ತಟಾಕಂ ಜಲದೋ ಯಥಾ ॥ 10 ॥
ಎಲ್ಯೆ ಮಹಾರಾಜನೇ, ಅವರು ತ್ವರೆಯಿಂದ ಕೂಡಿದವರಾಗಿ ಮಹಾಕೀರ್ತಿಯನ್ನು ಆಶಿಸುತ್ತಾ, ಅರ್ಜುನನ ವಧೆಯನ್ನು ಬಯಸಿ ನಿನ್ನ ಪುತ್ರನ ಸಲುವಾಗಿ ಧನುಸ್ಸನ್ನು ಹಿಡಿದು, ಮೋಡವು ನೀರಿನಿಂದ ಕೆರೆಯನ್ನು ತುಂಬಿದಂತೆ ಸಹಸ್ರಾರು ಬಾಣಗಳಿಂದ ಅರ್ಜುನನನ್ನು ತುಂಬಿದರು.
ಶ್ರುತಾಯುಸ್ತು ತತಃ ಕ್ರುದ್ಧಃ ತೋಮರೇಣ ಧನಂಜಯಮ್।
ಆಜಘಾನ ಸುತೀಕ್ಷ್ಣೇನ ಪೀತೇನ ನಿಶಿತೇನ ಚ ॥ 11 ॥
ಆಗ ಶ್ರುತಾಯುವು ಕ್ರುದ್ಧನಾಗಿ ತೀಕ್ಷ್ಣವಾದ, ನೀರನ್ನು ಕುಡಿಸಿ ಹದಮಾಡಿದ, ಹರಿತವಾದ, ತೋಮರದಿಂದ ಅರ್ಜುನನನ್ನು ಹೊಡೆದನು.
ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುಕರ್ಶನಃ।
ಜಗಾಮ ಪರಮಂ ಮೋಹಂ ಮೋಹಯನ್ ಕೇಶವಂ ರಣೇ ॥ 12 ॥
ಶತ್ರುಕರ್ಶನನಾದ ಅರ್ಜುನನು ಬಲಿಷ್ಠನಾದ ಶತ್ರುವಿನಿಂದ ಗಾಢವಾಗಿ ಹೊಡೆಯಲ್ಪಟ್ಟು, ರಣರಂಗದಲ್ಲಿ ಕೃಷ್ಣನಿಗೆ ಮೋಹವನ್ನುಂಟು ಮಾಡುವವನಾಗಿ ಮೂರ್ಛೆ ಹೋದನು.
ಏತಸ್ಮಿನ್ನೇವ ಕಾಲೇ ತು ಅಯುತಾಯುರ್ಮಹಾರಥಃ।
ಶೂಲೇನ ಭೃಶತೀಕ್ಷ್ಣೇನ ತಾಡಯಾಮಾಸ ಪಾಂಡವಮ್ ॥ 13 ॥
ಅದೇ ಸಮಯದಲ್ಲಿ ಮಹಾರಥನಾದ ಅಯುತಾಯುವು ಮಹಾತೀಕ್ಷ್ಣವಾದ ಶೂಲದಿಂದ ಅರ್ಜುನನನ್ನು ಹೊಡೆದನು.
ಕ್ಷತೇ ಕ್ಷಾರಂ ಹಿ ಸ ದದೌ ಪಾಂಡವಸ್ಯ ಮಹಾತ್ಮನಃ।
ಪಾರ್ಥೋಽಪಿ ಭೃಶಸಂವಿದ್ಧೋ ಧ್ವಜಯಷ್ಟಿಮಶಿಶ್ರಿಯತ್ ॥ 14 ॥

ಮಹಾತ್ಮನಾದ ಪಾಂಡವನಿಗೆ ಗಾಯದ ಮೇಲೆ ಉಪ್ಪನ್ನು ಹಾಕಿದಂತೆ ಮಾಡಿದನು. ಬಹಳ ಗಾಯಗೊಂಡ ಅರ್ಜುನನೂ ಸಹ ಧ್ವಜಯಷ್ಟಿಯನ್ನು ಆಶ್ರಯಿಸಿದನು.
ತತಃ ಸರ್ವಸ್ಯ ಸೈನ್ಯಸ್ಯ ತಾವಕಸ್ಯ ವಿಶಾಂಪತೇ |
ಸಿಂಹನಾದೋ ಮಹಾನಾಸೀದ್ಧತಂ ಮತ್ವಾ ಧನಂಜಯಮ್ ॥ 15 ॥
ಎಲೈ ರಾಜನೇ, ಆಗ ಧನಂಜಯನು ಹತನಾದನೆಂದು ತಿಳಿದು ನಿನ್ನ ಎಲ್ಲ ಸೈನ್ಯಕ್ಕೂ ದೊಡ್ಡ ಸಿಂಹನಾದ ಉಂಟಾಯಿತು.
ಕೃಷ್ಣಶ್ಚ ಭೃಶಸಂತಪ್ತೋ ದೃಷ್ಟ್ವಾ ಪಾರ್ಥಂ ವಿಚೇತಸಮ್ |
ಆಶ್ವಾಸಯತ ಹೃದ್ಯಾಭಿರ್ವಾಗ್ಭಿಸ್ತತ್ರ ಧನಂಜಯಮ್ ॥ 16 ॥
ಕೃಷ್ಣನೂ ಸಹ ಅರ್ಜುನನು ಸಂಜ್ಞಾಹೀನನಾಗಿರುವುದನ್ನು ನೋಡಿ, ಬಹಳ ಸಂತಾಪಗೊಂಡು ಮಧುರವಾದ ಮಾತುಗಳಿಂದ ಅವನನ್ನು ಸಮಾಧಾನ ಪಡಿಸಿದನು.
ತತಸ್ತೌ ರಥಿನಾಂ ಶ್ರೇಷ್ಠೌ ಲಬ್ಧಲಕ್ಷೌ ಧನಂಜಯಮ್ |
ವಾಸುದೇವಂ ಚ ವಾರ್ಷ್ಣೇಯಂ ಶರವರ್ಷೈಃ ಸಮಂತತಃ ॥ 17 ॥
ಸಚಕ್ರಕೂಬರರಥಂ ಸಾಶ್ವಧ್ವಜಪತಾಕಿನಮ್ |
ಅದೃಶ್ಯಂ ಚಕ್ರತುರ್ಯುದ್ಧೇ ತದದ್ಭುತಮಿವಾಭವತ್ ॥ 18 ॥
ಆಗ ತಮ್ಮ ಗುರಿಯನ್ನು ಸಾಧಿಸಿದ ರಥಿಶ್ರೇಷ್ಠರಾದ ಶ್ರುತಾಯು ಮತ್ತು ಅಯುತಾಯುಗಳು ಕೃಷ್ಣಾರ್ಜುನರ ಮೇಲೆ ಎಲ್ಲ ಕಡೆಗಳಿಂದಲೂ ಬಾಣ ಪ್ರಯೋಗ ಮಾಡಿ ಅವರ ಚಕ್ರ, ಕೂಬರದಿಂದ ಕೂಡಿದ, ಅಶ್ವ-ಧ್ವಜ-ಪತಾಕೆಗಳಿಂದ ಕೂಡಿದ ರಥವನ್ನೂ ಸಹ ಯುದ್ಧದಲ್ಲಿ ಅದೃಶ್ಯವನ್ನಾಗಿ ಮಾಡಿದರು. ಅದು ಅದ್ಭುತವಾಗಿದ್ದಿತು.
ಪ್ರತ್ಯಾಶ್ವಸ್ತಸ್ತು ಬೀಭತ್ಸುಃ ಶನಕೈರಿವ ಭಾರತ |
ಪ್ರೇತರಾಜಪುರಂ ಪ್ರಾಪ್ಯ ಪುನಃ ಪ್ರತ್ಯಾಗತೋ ಯಥಾ ॥ 19 ॥
ಎಲೈ ಭಾರತನೇ, ಯಮಪಟ್ಟಣಕ್ಕೆ ಹೋಗಿ ಹಿಂದಿರುಗಿದವನಂತೆ ಅರ್ಜುನನು ನಿಧಾನವಾಗಿ ಸಮಾಧಾನಗೊಂಡನು.
ಸಂಛನ್ನಂ ಶರಜಾಲೇನ ರಥಂ ದೃಷ್ಟ್ವಾ ಸಕೇಶವಮ್ |
ಶತ್ರೂ ಚ ಪ್ರಮುಖೇ ದೃಷ್ಟ್ವಾ ದೀಪ್ಯಮಾನಾವಿವಾನಲೌ ॥ 20 ॥
ಪ್ರಾದುಶ್ಚಕ್ರೇ ತತಃ ಪಾರ್ಥ ಐಂದ್ರಮಸ್ತ್ರಂ ಮಹಾರಥಃ |
ತಸ್ಮಾದಾಸನ್ ಸಹಸ್ರಾಣಿ ಶರಾಣಾಂ ನತಪರ್ವಣಾಮ್ |
ತೇ ಜಘ್ನುಸ್ತೌ ಮಹೇಷ್ವಾಸೌ ತಾಭ್ಯಾಂ ಮುಕ್ತಾಂಶ್ಚ ಸಾಯಕಾನ್॥21॥
ಕೇಶವನಿಂದ ಕೂಡಿದ ತನ್ನ ರಥವು ಶತ್ರುಗಳ ಬಾಣ ಸಮೂಹದಿಂದ ಮುಚ್ಚಲ್ಪಟ್ಟಿರುವುದನ್ನೂ, ತನ್ನ ಎದುರಿನಲ್ಲಿಯೇ ಉರಿಯುವ ಅಗ್ನಿಯಂತಿರುವ ಇಬ್ಬರು ಶತ್ರುಗಳನ್ನು ನೋಡಿ ಮಹಾರಥನಾದ ಅರ್ಜುನನು ಐಂದ್ರಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಬಾಗಿದ ತುದಿಯುಳ್ಳ ಸಹಸ್ರಾರು ಬಾಣಗಳು ಹೊರಹೊಮ್ಮಿದವು. ಅವು ಆ ಇಬ್ಬರು ಧನುರ್ಧಾರಿಗಳನ್ನೂ ಮತ್ತು ಅವರು ಪ್ರಯೋಗಿಸಿದ ಬಾಣಗಳನ್ನೂ ವಿನಾಶಗೊಳಿಸಿದವು.
ಹತ್ವಾ ತು ತೌ ಮಹೇಷ್ವಾಸೌ ತಾಭ್ಯಾಂ ಸೃಷ್ಟಾಂಶ್ಚ ಸಾಯಕಾನ್ |
ವಿಚೇರುರಾಕಾಶಗತಾಃ ಪಾರ್ಥಚಾಪವಿದಾರಿತಾಃ ॥ 22 ॥
ಅರ್ಜುನನ ಚಾಪದಿಂದ ಹೊರಹೊಮ್ಮಿದ ಬಾಣಗಳು ಧನುರ್ಧಾರಿಗಳಾದ ಅವರಿಬ್ಬರನ್ನೂ ಮತ್ತು ಅವರು ಪ್ರಯೋಗಿಸಿದ ಬಾಣಗಳನ್ನೂ ವಿನಾಶಗೊಳಿಸಿ ಆಕಾಶದಲ್ಲಿ ಸಂಚರಿಸಿದವು.
ಪ್ರತಿಹತ್ಯ ಶರಾಂಸ್ತೂರ್ಣಂ ಶರವೇಗೇನ ಪಾಂಡವಃ |
ಪ್ರತಸ್ಥೇ ತತ್ರ ತತ್ರೈವ ಯೋಧಯನ್ ವೈ ಮಹಾರಥಾನ್ ॥ 23 ॥
ಹೀಗೆ ಅರ್ಜುನನು ತನ್ನ ಶರಗಳ ವೇಗದಿಂದ ಅವರ ಶರಗಳನ್ನು ಪೂರ್ಣವಾಗಿ ನಾಶಗೊಳಿಸಿ ಮಹಾರಥರ ಜೊತೆಯಲ್ಲಿ ಅಲ್ಲಲ್ಲಿ ಯುದ್ಧವನ್ನು ಮಾಡುತ್ತಾ ಮುಂದೆ ಹೊರಟನು.
ತೌ ಚ ಫಲ್ಗುನಬಾಣೌಘೈರ್ವಿಬಾಹುಶಿರಸೌ ಕೃತೌ |
ವಸುಧಾಮನ್ವಪದ್ಯೇತಾಂ ವಾತನುನ್ನಾವಿವ ದ್ರುಮೌ ॥ 24 ॥
ಅರ್ಜುನನ ಬಾಣ ಸಮೂಹಗಳಿಂದ ಬಾಹುಗಳು ಮತ್ತು ಶಿರಸ್ಸುಗಳು ಕತ್ತರಿಸಲ್ಪಟ್ಟು ಅವರಿಬ್ಬರೂ ಬಿರುಗಾಳಿಗೆ ಸಿಲುಕಿದ ವೃಕ್ಷಗಳಂತೆ ಭೂಮಿಯ ಮೇಲೆ ಬಿದ್ದರು.
ಶ್ರುತಾಯುಷಶ್ಚ ನಿಧನಂ ವಧಶ್ಚೈವಾಯುತಾಯುಷಃ |
ಲೋಕವಿಸ್ಮಾಪನಮಭೂತ್ ಸಮುದ್ರಸ್ಯೇವ ಶೋಷಣಮ್ ॥ 25 ॥
ಶ್ರುತಾಯು ಮತ್ತು ಅಯುತಾಯುಗಳ ಮರಣವು ಸಮುದ್ರದ ಶೋಷಣೆಯಂತೆ ಲೋಕವಿಸ್ಮಯಕರವಾಯಿತು.
ತಯೋಃ ಪದಾನುಗಾನ್ ಹತ್ವಾ ಪುನಃ ಪಂಚಶತಾನ್ ರಥಾನ್ |
ಅತ್ಯಗಾದ್ ಭಾರತೀಂ ಸೇನಾಂ ನಿಘ್ನನ್ ಪಾರ್ಥೋ ರಥಾನ್ ವರಾನ್ ॥
ಅರ್ಜುನನು ಅವರ ಅನುಯಾಯಿಗಳಾದ ಐದುನೂರು ರಥಿಕರನ್ನು ಸಂಹರಿಸಿ, ಉಳಿದ ಶ್ರೇಷ್ಠರಾದ ರಥಿಕರನ್ನು ಕೊಲ್ಲುತ್ತಾ ಆ ಭಾರತ ಸೇನೆಯನ್ನು ದಾಟಿದನು.
ಶ್ರುತಾಯುಷಶ್ಚ ನಿಧನಂ ಪ್ರೇಕ್ಷ ಯ ಚೈವಾಯುತಾಯುಷಃ |
ನಿಯುತಾಯುರ್ಹಿ ಸಂಕ್ರುದ್ಧೋ ದೀರ್ಘಾಯುಶ್ಚೈವ ಭಾರತ ॥ 27 ॥
ಪುತ್ರೌ ತಯೋ ರಥಶ್ರೇಷ್ಠೌ ಕೌಂತೇಯಂ ಪ್ರತಿಜಗ್ಮತುಃ |

ಕಿರಂತೌ ವಿವಿಧಾನ್ ಬಾಣಾನ್ ಪಿತುರ್ವ್ಯಸನಕರ್ಶಿತೌ ॥ 28 ॥
ಎಲೈ ಭಾರತನೇ, ಶ್ರುತಾಯುವಿನ ಮತ್ತು ಅಯುತಾಯುವಿನ ವಧೆಯನ್ನು ನೋಡಿ ಅವರ ಮಕ್ಕಳಾದ ನಿಯುತಾಯು ಮತ್ತು ದೀರ್ಘಾಯುಗಳು ಕೋಪಗೊಂಡು, ತಂದೆಯ ಅಗಲಿಕೆಯಿಂದ ಶೋಕಕರ್ಶಿತರಾಗಿ ವಿವಿಧವಾದ ಬಾಣಗಳನ್ನು ಪ್ರಯೋಗಿಸುತ್ತಾ ಅರ್ಜುನನ ಕಡೆಗೆ ಬಂದರು.
ತಾವರ್ಜುನೋ ಮುಹೂರ್ತೇನ ಶರೈಃ ಸನ್ನತಪರ್ವಭಿಃ |
ಅಪ್ರೇಷಯತ್ ಸುಸಂಕ್ರುದ್ಧೋ ಯಮಸ್ಯ ಸದನಂ ಪ್ರತಿ ॥ 29 ॥
ಅರ್ಜುನನು ಬಹಳ ಕೋಪಗೊಂಡು ಅವರ ಜೊತೆಯಲ್ಲಿ ಒಂದು ಮುಹೂರ್ತದ ಕಾಲ ಯುದ್ಧವನ್ನು ಮಾಡಿ, ಬಾಗಿದ ತುದಿಯುಳ್ಳ ಬಾಣಗಳಿಂದ ಅವರನ್ನು ಯಮಲೋಕಕ್ಕೆ ಕಳುಹಿಸಿದನು.
ಲೋಡಯಂತಮನೀಕಾನಿ ದ್ವಿಪಂ ಪದ್ಮಸರೋ ಯಥಾ |
ನಾಶಕ್ನುವನ್ ವಾರಯಿತುಂ ಪಾರ್ಥಂ ಕ್ಷತ್ರಿಯಪುಂಗವಾಃ ॥ 30 ॥
ಆನೆಯು ಪದ್ಮಸರೋವರವನ್ನು ಕಲಕಿದಂತೆ ಶತ್ರುಸೈನ್ಯವನ್ನು ಕಲಕಾಡುತ್ತಿದ್ದ ಅರ್ಜುನನನ್ನು ನೋಡಲೂ ಸಹ ಕ್ಷತ್ರಿಯ ಶ್ರೇಷ್ಠರಿಗೆ ಸಾಧ್ಯವಾಗಲಿಲ್ಲ.
ಅಂಗಾಸ್ತು ಗಜಸಂಘೈಶ್ಚ ಪಾಂಡವಂ ಪ್ರತ್ಯವಾರಯನ್ |
ಕ್ರುದ್ಧಾಃ ಸಹಸ್ರಶೋ ಮ್ಲೇಚ್ಛಾಃ ಶಿಕ್ಷಿತಾಃ ಹಸ್ತಿಸಾದಿನಃ ॥ 31 ॥
ದುರ್ಯೋಧನಸಮಾದಿಷ್ಟಾಃ ಕುಂಜರೈಃ ಪರ್ವತೋಪಮೈಃ |
ಪ್ರಾಚ್ಯಾಶ್ಚ ದಾಕ್ಷಿಣಾತ್ಯಾಶ್ಚ ಕಳಿಂಗಪ್ರಮುಖಾ ನೃಪಾಃ ॥ 32 ॥
ಅಂಗದೇಶದ ಗಜಾರೋಹಿಗಳಾದ ಸುಶಿಕ್ಷಿತರಾದ ಮ್ಲೇಚ್ಛ ಯೋಧರು ಸಹಸ್ರ ಸಂಖ್ಯೆಯಲ್ಲಿ ಅರ್ಜುನನನ್ನು ಸುತ್ತುವರಿದರು. ಹಾಗೆಯೇ ದುರ್ಯೋಧನನಿಂದ ಆಜ್ಞಪ್ತರಾದ ಪರ್ವತದಂತಹ ಗಜಗಳಿಂದ ಸಹಿತರಾದ ಪೂರ್ವದಿಕ್ಕಿನ ಮತ್ತು ದಕ್ಷಿಣ ದಿಕ್ಕಿನ ಕಳಿಂಗ ಮೊದಲಾದ ರಾಜರು ಅವನನ್ನು ಸುತ್ತುವರಿದರು.
ತೇಷಾಮಾಪತತಾಂ ಶೀಘ್ರಂ ಗಾಂಡೀವಪ್ರೇಷಿತೈಃ ಶರೈಃ |
ನಿಚಕರ್ತ ಶಿರಾಂಸ್ಯುಗ್ರೈಃ ಬಾಹೂನಪಿ ಸುಭೂಷಣಾನ್ ॥ 33 ॥
ತನ್ನ ಮೇಲೆ ಎರಗಿಬರುತ್ತಿರುವ ಅವರ ಶಿರಸ್ಸುಗಳನ್ನು ಮತ್ತು ಭೂಷಣೋಪೇತವಾದ ಬಾಹುಗಳನ್ನು ಅರ್ಜುನನು ಗಾಂಡೀವದಿಂದ ಹೊರಹೊಮ್ಮಿದ ಬಾಣಗಳಿಂದ ಶೀಘ್ರವಾಗಿ ಕತ್ತರಿಸಿದನು.
ತೈಃ ಶಿರೋಭಿರ್ಮಹೀ ಕೀರ್ಣಾ ಬಾಹುಭಿಶ್ಚ ಸಹಾಂಗದೈಃ |
ಬಭೌ ಕನಕಪಾಷಾಣೈರುರಗೈರಿವ ಚಾವೃತಾ ॥ 34 ॥
ಅವರ ಶಿರಸ್ಸುಗಳಿಂದಲೂ ಮತ್ತು ಅಂಗದಸಹಿತವಾದ ಬಾಹುಗಳಿಂದಲೂ ತುಂಬಿ ಹೋದ ಭೂಮಿಯು ಸುವರ್ಣಗಳಿಂದ, ಮಣಿಗಳಿಂದ ಮತ್ತು ಸರ್ಪಗಳಿಂದ ಆವೃತವಾಗಿರುವಂತೆ ಶೋಭಿಸಿತು.
ಬಾಹವೋ ವಿಶಿಖೈಶ್ಛಿನ್ನಾಃ ಶಿರಾಂಸ್ಯುನ್ಮಥಿತಾನಿ ಚ |
ಚ್ಯವಮಾನಾನ್ಯದೃಶ್ಯಂತ ದ್ರುಮೇಭ್ಯ ಇವ ಪಕ್ಷಿಣಃ ॥ 35 ॥
ಬಾಣಗಳಿಂದ ಕತ್ತರಿಸಲ್ಪಟ್ಟು ಬೀಳುವ ಬಾಹುಗಳು ಮತ್ತು ಶಿರಸ್ಸುಗಳು ವೃಕ್ಷದಿಂದ ಬೀಳುವ ಪಕ್ಷಿಗಳಂತೆ ತೋರಿದವು.
ಶರೈಃ ಸಹಸ್ರಶೋ ವಿದ್ಧಾ ದ್ವಿಪಾಃ ಪ್ರಸ್ರುತಶೋಣಿತಾಃ |
ವ್ಯದೃಶ್ಯಂತಾದ್ರಯಃ ಕಾಲೇ ಗೈರಿಕಪ್ರಸ್ರುತಾ ಇವ ॥ 36 ॥
ಸಹಸ್ರ ಸಂಖ್ಯೆಯಲ್ಲಿದ್ದ ಗಜಗಳು ಬಾಣಗಳಿಂದ ಹೊಡೆಯಲ್ಪಟ್ಟು ರಕ್ತವನ್ನು ಸುರಿಸುತ್ತಾ ಗೈರಿಕ ಧಾತುವನ್ನು ಸ್ರವಿಸುವ ಪರ್ವತದಂತೆ ತೋರಿದವು.
ನಿಹತಾಃ ಶೇರತೇ ಸ್ಮಾನ್ಯೇ ಬೀಭತ್ಸೋರ್ನಿಶಿತೈಃ ಶರೈಃ |
ಗಜಪೃಷ್ಠಗತಾ ಮ್ಲೇಚ್ಛಾ ನಾನಾವಿಕೃತದರ್ಶನಾಃ ॥ 37 ॥
ಗಜಸ್ಕಂಧವನ್ನು ಏರಿದ, ನಾನಾರೂಪವನ್ನು ಹೊಂದಿದ ಮ್ಲೇಚ್ಛರು ಅರ್ಜುನನ ಹರಿತವಾದ ಬಾಣಗಳಿಂದ ಹೊಡೆಯಲ್ಪಟ್ಟು ಭೂಮಿಯ ಮೇಲೆ ಮಲಗಿದರು.
ನಾನಾವೇಷಧರಾ ರಾಜನ್ ನಾನಾಶಸ್ತ್ರೌಘಸಂವೃತಾಃ |
ರುಧಿರೇಣಾನುಲಿಪ್ತಾಂಗಾ ಭಾಂತಿ ಚಿತ್ರೈಃ ಶರೈರ್ಹತಾಃ ॥ 38 ॥
ಎಲೈ ರಾಜನೇ, ನಾನಾ ವೇಷಗಳನ್ನು ಧರಿಸಿದ, ನಾನಾ ಶಸ್ತ್ರಸಮೂಹಗಳನ್ನು ಹಿಡಿದ, ರಕ್ತದಿಂದ ತೊಯ್ದ ಶರೀರವುಳ್ಳ, ವಿಚಿತ್ರವಾದ ಬಾಣಗಳಿಂದ ಹತರಾದ ಅವರು ರಣಭೂಮಿಯಲ್ಲಿ ಶೋಭಿಸಿದರು.
ಶೋಣಿತಂ ನಿರ್ವಮಂತಿ ಸ್ಮ ದ್ವಿಪಾಃ ಪಾರ್ಥಶರಾಹತಾಃ |
ಸಹಸ್ರಶಶ್ಛಿನ್ನಗಾತ್ರಾಃ ಸಾರೋಹಾಃ ಸಪದಾನುಗಾಃ ॥ 39 ॥
ಗಜಾರೋಹಿಗಳಿಂದಲೂ ಮತ್ತು ಅವರ ಅನುಯಾಯಿಗಳಿಂದಲೂ ಸಹಿತವಾದ ಗಜಗಳು ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟು ಸಹಸ್ರ ಸಂಖ್ಯೆಯಲ್ಲಿ ತಮ್ಮ ಶರೀರಗಳು ಕತ್ತರಿಸಲ್ಪಟ್ಟು ರಕ್ತವನ್ನು ಕಾರುತ್ತಿದ್ದವು.
ಚುಕ್ರುಶುಶ್ಚ ನಿಪೇತುಶ್ಚ ಬಭ್ರಮುಶ್ಚಾಪರೇ ದಿಶಃ |
ಭೃಶಂ ತ್ರಸ್ತಾಶ್ಚ ಬಹುಧಾ ಸ್ವಾನೇವ ಮಮೃದುರ್ಗಜಾಃ ॥ 40 ॥
ಕೆಲವು ಗಜಗಳು ಕಿರುಚಿದವು. ಕೆಲವು ಬಿದ್ದವು. ಇನ್ನು ಕೆಲವು ದಿಕ್ಕು-ದಿಕ್ಕುಗಳಿಗೆ ಓಡಿದವು. ಕೆಲವು ಗಜಗಳು ಬಹಳ ಹೆದರಿ ತಮ್ಮವರನ್ನೇ ತುಳಿದವು.

ಸಾಂತರಾಯುಧಿಕಾ ಮತ್ತಾ ಯೇ ಚಾನ್ಯೇ ತೀಕ್ಷ್ಣಸಮ್ಮತಾಃ |
ವಸಂತ್ಯಸುರಮಾಯಾಂ ಯೇ ಸುಘೋರಾ ಘೋರಚಕ್ಷುಷಃ ॥ 41 ॥
ಯವನಾಃ ಪಾರದಾಶ್ಚೈವ ಶಕಾಶ್ಚೈವ ಸಹಸ್ರಶಃ |
ಗೋಯೋನಿಪ್ರಭವಾ ಮ್ಲೇಚ್ಛಾಃ ಕಾಲಕಲ್ಪಾಃ ಪ್ರಹಾರಿಣಃ ॥ 42 ॥
ಊರ್ಧ್ವಾಭಿಸಾರಾ ದರದಾಃ ಗರದಾಶ್ಚ ಸಬಾಹ್ಲಿಕಾಃ |
ತೇ ನ ಶಕ್ಯಾಃ ಸಮಾಖ್ಯಾತುಂ ವೃತಾಃ ಶತಸಹಸ್ರಶಃ |
ತೇಷಾಂ ವೃಷ್ಟಿಸ್ತಥಾಽಪ್ಯಾಸೀತ್ ಶಲಭಾನಾಮಿವಾಯತಿಃ ॥ 43 ॥
ಶ್ರೇಷ್ಠವಾದ ಆಯುಧಗಳನ್ನು ಹಿಡಿದ, ಮತ್ತರಾದ, ಕ್ರೂರರಿಂದ ಸಮ್ಮತರಾದ, ಅಸುರಮಾಯೆಗಳನ್ನು ಆಶ್ರಯಿಸಿದ, ಅತ್ಯಂತ ಘೋರರರೂ, ಘೋರವಾದ ದೃಷ್ಟಿಯುಳ್ಳವರೂ ಆದ ಯವನರೂ, ಪಾರದರೂ, ಶಕರೂ, ಕಾಮಧೇನುವಿನ ಯೋನಿಯಿಂದ ಜನಿಸಿದ ಕಪ್ಪು ಬಣ್ಣದ ಪ್ರಹಾರಶೀಲರಾದ ಸಹಸ್ರಾರು ಸಂಖ್ಯೆಯ ಮ್ಲೇಚ್ಛರೂ, ಊರ್ಧ್ವಭಿಸಾರರೂ, ದರದರೂ, ಗರದರೂ, ಬಾಹ್ಲೀಕರೂ- ಅವರುಗಳ ಸಂಖ್ಯೆಯನ್ನು ಎಣಿಸಲು ಸಾಧ್ಯವಿಲ್ಲ- ಅವರು ಲಕ್ಷಾವಧಿ ಸಂಖ್ಯೆಯಲ್ಲಿ ಪತಂಗಗಳ ಸಮೂಹದಂತೆ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಕರೆದರು.
ಅಭ್ರಚ್ಛಾಯಾಮಿವ ಶರೈಃ ಸೈನ್ಯೇ ಕೃತ್ವಾ ಧನಂಜಯಃ |
ಮುಂಡಾರ್ಧಮುಂಡಾನ್ ಜಟಿಲಾನಶುಚೀನ್ ನೀಲವಾಸಸಃ ॥ 44 ॥
ಮ್ಲೇಚ್ಛಾನಶಾತಯತ್ ಸರ್ವಾನ್ ಸಮೇತಾನಸ್ತ್ರತೇಜಸಾ |
ಅರ್ಜುನನು ತನ್ನ ಬಾಣಗಳನ್ನು ಪ್ರಯೋಗಿಸಿ, ಅವುಗಳಿಂದ ಮೋಡದಂತಹ ಛಾಯೆಯನ್ನು ಉಂಟು ಮಾಡಿ ತನ್ನ ಅಸ್ತ್ರಸಾಮರ್ಥ್ಯದಿಂದ, ಮುಂಡರನ್ನೂ, ಅರ್ಧಮುಂಡರನ್ನೂ, ಜಟಿಲರನ್ನೂ, ಕಪ್ಪುವಸ್ತ್ರವನ್ನು ಧರಿಸಿದವರನ್ನೂ ಮತ್ತು ಎಲ್ಲ ಮ್ಲೇಚ್ಛರನ್ನೂ ವಿನಾಶಗೊಳಿಸಿದನು.
ಅಭ್ಯವರ್ಷಂತ ತೇ ಸರ್ವೇ ಪಾಂಡವಂ ನಿಶಿತೈಃ ಶರೈಃ |
ಅವಾಕಿರಂಶ್ಚ ತೇ ಮ್ಲೇಚ್ಛಾ ನಾನಾಯುದ್ಧವಿಶಾರದಾಃ |
ತೇಷಾಮಪಿ ಸಸರ್ಜಾಶು ಶರವೃಷ್ಟಿಂ ಧನಂಜಯಃ ॥ 45 ॥
ಅವರು ಅರ್ಜುನನ ಮೇಲೆ ಹರಿತವಾದ ಬಾಣಗಳ ಮಳೆಯನ್ನು ಸುರಿಸಿದರು. ನಾನಾ ಯುದ್ಧ ವಿಶಾರದರಾದ ಆ ಮ್ಲೇಚ್ಛರು ಅರ್ಜುನನ ಮೇಲೆ ಆಯುಧಗಳ ಮಳೆಯನ್ನು ಸುರಿಸಿದರು. ಅರ್ಜುನನು ಅವರ ಮೇಲೆಯೂ ಶೀಘ್ರವಾಗಿ ತನ್ನ ಬಾಣಗಳ ಮಳೆಯನ್ನು ಉಂಟುಮಾಡಿದನು.
ಶರೈಸ್ತು ಶತಶೋ ವಿದ್ಧಾಃ ತೇ ಸಂಘಾಃ ಸಂಘಚಾರಿಣಃ |
ಪ್ರಾದ್ರವಂತ ರಣೇ ಭೀತಾ ಗಿರಿಗಹ್ವರವಾಸಿನಃ ॥ 46 ॥
ಪರ್ವತದ ಗುಹೆಗಳಲ್ಲಿ ವಾಸಿಸುವ, ಸಮೂಹದಲ್ಲಿ ಸಂಚರಿಸುವ ಅವರು ನೂರರ ಸಂಖ್ಯೆಯಲ್ಲಿ ಬಾಣಗಳಿಂದ ಹೊಡೆಯಲ್ಪಟ್ಟು ರಣರಂಗದಲ್ಲಿ ಹೆದರಿ ಓಡಿಹೋದರು.
ಗಜಾಶ್ವಸಾದಿನೋ ಮ್ಲೇಚ್ಛಾಃ ಪತ್ತಯಶ್ಚ ಶರೈರ್ಹತಾಃ |
ವಲಕಂಕವೃಕಾ ಭೂಮಾವಪಿಬನ್ ರುಧಿರಂ ಮುದಾ ॥ 47 ॥
ಅಶ್ವಾರೋಹಿಗಳೂ, ಗಜಗಳೂ, ಅಶ್ವಾರೋಹಿಗಳಾದ ಮ್ಲೇಚ್ಛರೂ ಮತ್ತು ಪದಾತಿಗಳೂ ಅರ್ಜುನನ ಬಾಣಗಳಿಂದ ಹತರಾದರು. ವಲ, ಕಂಕ ಮೊದಲಾದ ಪಕ್ಷಿಗಳೂ, ತೋಳಗಳೂ ಭೂಮಿಯಲ್ಲಿ ಸಂತೋಷದಿಂದ ರಕ್ತವನ್ನು ಪಾನ ಮಾಡಿದವು.
ಪತ್ತ್ಯಶ್ವಗಜ ಸಂಕೀರ್ಣಂ ಪ್ರಚ್ಛನ್ನಾಂ ರಥಸಂಕುಲಾಮ್ |
ಶರವರ್ಷಪ್ಲವಾಂ ಘೋರಾಂ ಕೇಶಶೈವಲಶಾದ್ವಲಾಮ್ ॥ 48 ॥
ಪ್ರಾವರ್ತಯನ್ನದೀಮುಗ್ರಾಂ ಶೋಣಿತೌಘತರಂಗಿಣೀಮ್ |
ಶಿರಸ್ತ್ರಾಣಕ್ಷುದ್ರಮತ್ಸ್ಯಾಂ ಯುಗಾಂತೇ ಕಾಲಸಮ್ಮಿತಾಮ್ ॥ 49 ॥
ಪದಾತಿಗಳಿಂದ, ಅಶ್ವಗಳಿಂದ, ಗಜಗಳಿಂದ ಮತ್ತು ರಥಗಳಿಂದ ತುಂಬಿದ, ಶರವರ್ಷಗಳೆಂಬ ದೋಣಿಗಳನ್ನು ಹೊಂದಿದ, ಕೇಶಗಳೆಂಬ ಹಾವಸೆ (ಪಾಚಿ)ಗಳನ್ನು ಮತ್ತು ಮೃದು ಪ್ರದೇಶಗಳನ್ನು ಹೊಂದಿದ ರಕ್ತ ಸಮೂಹದ ತರಂಗಗಳನ್ನು ಹೊಂದಿದ, ಶಿರಸ್ತ್ರಾಣಗಳೆಂಬ ಕ್ಷುದ್ರ ಮತ್ಸ್ಯಗಳನ್ನು ಹೊಂದಿದ, ಯುಗಾಂತ ಕಾಲದ ಮೃತ್ಯುವಿಗೆ ಸಮವಾದ, ಉಗ್ರವೂ ಮತ್ತು ಘೋರವೂ ಆದ ನದಿಯನ್ನು ಅರ್ಜುನನು ಹರಿಸಿದನು.
ಅಕರೋದ್ ಗಜಸಂಬಾಧಾಂ ನದೀಮುತ್ತರಶೋಣಿತಾಮ್ |
ದೇಹೇಭ್ಯೋ ರಾಜಪುತ್ರಾಣಾಂ ನಾಗಾಶ್ವರಥಸಾದಿನಾಮ್ ॥ 50 ॥
ರಾಜಪುತ್ರರ, ಗಜಾಶ್ವ-ಪದಾತಿಗಳ ದೇಹದಿಂದ ಹೊಮ್ಮಿದ, ಶ್ರೇಷ್ಠವಾದ ರಕ್ತವನ್ನು ಹೊಂದಿದ, ಗಜಶರೀರಗಳಿಂದ ಅಲ್ಲಲ್ಲಿ ತುಂಬಿದ, ನದಿಯನ್ನು ಅರ್ಜುನನು ಪ್ರವರ್ತಿಸಿದನು.
ಯಥಾ ಸ್ಥಲಂ ವಾ ನಿಮ್ನಂ ವಾ ನ ಸ್ಯಾದ್ ವರ್ಷತಿ ವಾಸವೇ |
ತಥಾಸೀದಾಪ್ಲುತಾ ಧಾತ್ರೀ ರುಧಿರೇಣ ಸಮುಕ್ಷಿತಾ ॥ 51 ॥
ಇಂದ್ರನು ಮಳೆಯನ್ನು ಸುರಿಸುವಾಗ ಹೇಗೆ ಭೂಮಿಯ ಉಬ್ಬುತಗ್ಗುಗಳು ತಿಳಿಯುವುದಿಲ್ಲವೋ ಅದರಂತೆ ರಕ್ತದಿಂದ ತುಂಬಿಹೋದ ರಣಭೂಮಿಯಲ್ಲಿ ಉಬ್ಬು- ತಗ್ಗುಗಳು ತಿಳಿಯುತ್ತಿರಲಿಲ್ಲ.
ಷಟ್ಸಹಸ್ರಾನ್ ವರಾನ್ ವೀರಾನ್ ಪುನರ್ದಶಶತಾನ್ ವರಾನ್ |
ಪ್ರಾಹಿಣೋನ್ಮೃತ್ಯುಲೋಕಾಯ ಕ್ಷತ್ರಿಯಾನ್ ಕ್ಷತ್ರಿಯರ್ಷಭಃ ॥ 52 ॥

ಕ್ಷತ್ರಿಯಶ್ರೇಷ್ಠನಾದ ಅರ್ಜುನನು ಆರು ಸಹಸ್ರ ಸಂಖ್ಯೆಯ ಶ್ರೇಷ್ಠರಾದ ಕ್ಷತ್ರಿಯ ವೀರರನ್ನು, ಪುನಃ ಒಂದು ಸಾವಿರ ಕ್ಷತ್ರಿಯ ವೀರರನ್ನು ಮೃತ್ಯುಲೋಕಕ್ಕೆ ಕಳುಹಿಸಿದನು.
ಶರೈಃ ಸಹಸ್ರಶೋ ವಿದ್ಧಾ ವಿಧಿವತ್ ಕಲ್ಪಿತಾ ದ್ವಿಪಾಃ |
ಶೇರತೇ ಭೂಮಿಮಾಸಾದ್ಯ ಶೈಲಾ ವಜ್ರಹತಾ ಇವ ॥ 53 ॥
ಶಾಸ್ತ್ರೋಕ್ತ ವಿಧಾನದಿಂದ ಸಿದ್ಧಗೊಳಿಸಲ್ಪಟ್ಟ ಗಜಗಳು ಸಹಸ್ರ ಸಂಖ್ಯೆಯಲ್ಲಿ ಬಾಣಗಳಿಂದ ಹೊಡೆಯಲ್ಪಟ್ಟು, ಭೂಮಿಯ ಮೇಲೆ ಬಿದ್ದು, ವಜ್ರಾಯುಧದಿಂದ ಭಗ್ನಗೊಂಡ ಪರ್ವತಗಳಂತೆ ಮಲಗಿದವು.
ಸ ವಾಜಿರಥಮಾತಂಗಾನ್ ನಿಘ್ನನ್ ವ್ಯಚರದರ್ಜುನಃ |
ಪ್ರಭಿನ್ನ ಇವ ಮಾತಂಗೋ ಮೃದ್ನನ್ ನಳವನಂ ಯಥಾ ॥ 54 ॥
ಅರ್ಜುನನು ಅಶ್ವ-ರಥ-ಗಜಗಳನ್ನು ಸಂಹರಿಸುತ್ತಾ, ಮದಿಸಿದ ಗಜವು ಪದ್ಮ ವನವನ್ನು ವಿನಾಶಗೊಳಿಸುವಂತೆ ತಿರುಗಾಡಿದನು.
ಭೂರಿದ್ರುಮಲತಾಗುಲ್ಮಂ ಶುಷ್ಕೇಂಧನತೃಣೋಪಲಮ್ |
ನಿರ್ದಹೇದನಲೋಽರಣ್ಯಂ ಯಥಾ ವಾಯುಸಮೀರಿತಃ ॥ 55 ॥
ಸೇನಾರಣ್ಯಂ ತವ ತಥಾ ಕೃಷ್ಣಾನಿಲಸಮೀರಿತಃ |
ಶರಾರ್ಚಿರದಹತ್ ಕ್ರುದ್ಧಃ ಪಾಂಡವೋಽಗ್ನಿರ್ಧನಂಜಯಃ ॥ 56 ॥
ವಾಯುವಿನಿಂದ ಬಲವನ್ನು ಪಡೆದ ಅಗ್ನಿಯು ಬಹಳ ಲತೆಗಳು ಮತ್ತು ದ್ರುಮಗಳು ಇರುವ, ಒಣಗಿದ ಕಟ್ಟಿಗೆಗಳಿರುವ, ತೃಣರಾಶಿ ಇರುವ ಅರಣ್ಯವನ್ನು ಸುಡುವಂತೆ ಕೃಷ್ಣನೆಂಬ ವಾಯುವಿನಿಂದ ಶಕ್ತಿಯನ್ನು ಪಡೆದ ಧನಂಜಯನೆಂಬ ಪಾಂಡವಾಗ್ನಿಯು ಕ್ರುದ್ಧನಾಗಿ ಬಾಣಗಳೆಂಬ ಜ್ವಾಲೆಗಳಿಂದ ನಿನ್ನ ಸೈನ್ಯವೆಂಬ ಅರಣ್ಯವನ್ನು ದಹಿಸಿದನು.
ಶೂನ್ಯಾನ್ ಕುರ್ವನ್ ರಥೋಪಸ್ಥಾನ್ ನಿಘ್ನನ್ ಪತ್ತ್ಯಶ್ವಹಸ್ತಿನಃ
ಪ್ರನೃತ್ಯನ್ನಿವ ಬೀಭತ್ಸುಃ ಚಾಪಹಸ್ತೋ ಧನಂಜಯಃ |
ವಜ್ರಕಲ್ಪೈಃ ಶರೈರ್ಭೂಮಿಂ ಕುರ್ವನ್ನುತ್ತರಶೋಣಿತಾಮ್ ॥ 57 ॥
ತತಃ ಪ್ರಾವರ್ತತ ನದೀ ಶೋಣಿತಸ್ಯ ತರಂಗಿಣೀ |
ನರಾಶ್ವದ್ವಿಪಕಾಯೇಭ್ಯಃ ಪರ್ವತೇಭ್ಯ ಇವಾಪಗಾ ॥ 58 ॥
ಕೈಯಲ್ಲಿ ಬಿಲ್ಲನ್ನು ಹಿಡಿದ ಧನಂಜಯನು ನೃತ್ಯವನ್ನು ಮಾಡುವವನಂತೆ ರಥದಲ್ಲಿ ರಥಿಕರು ಇರುವ ಪ್ರದೇಶವನ್ನು ಶೂನ್ಯವನ್ನಾಗಿ ಮಾಡುತ್ತಾ, ಪದಾತಿಗಳನ್ನು ಮತ್ತು ಅಶ್ವಗಳನ್ನೂ ಮತ್ತು ಗಜಗಳನ್ನು ಸಂಹರಿಸುತ್ತಾ, ವಜ್ರಕ್ಕೆ ಸಮಾನವಾದ ತನ್ನ ಬಾಣಗಳಿಂದ ಭೂಮಿಯನ್ನು ಶ್ರೇಷ್ಠ ರಕ್ತಯುಕ್ತವನ್ನಾಗಿ ಮಾಡಿದನು. ಆಗ ಪರ್ವತಗಳಿಂದ ನದಿಗಳು ಹರಿದಂತೆ ರಕ್ತದ ತರಂಗವುಳ್ಳ ಪದಾತಿ, ಗಜ, ಅಶ್ವಗಳ ರಕ್ತವನ್ನು ಹೊಂದಿದ ನದಿಯು ಪ್ರವೃತ್ತವಾಯಿತು.
ಅಸ್ಥಿಶರ್ಕರಸಂಬಾಧಾ ಧ್ವಜವೃಕ್ಷಾ ರಥಹ್ರದಾ |
ಸಂಭಿನ್ನಶೀರ್ಷಪಾಷಾಣಾ ಹಸ್ತಿಹಸ್ತಮಹಾಗ್ರಹಾ ॥ 59 ॥
ಮಾಂಸಮಜ್ಜಾಸ್ಥಿಪಂಕಾಢ್ಯಾ ಹತಾಶ್ವಮಕರಾಕುಲಾ |
ಯೋಧಗೋಮಾಯುಸಂಕೀರ್ಣಾ ಕಬಂಧಶತಸಂಕ್ರಮಾ ॥ 60 ॥
ಉಷ್ಣೀಷಫೇನಸಂಛನ್ನಾ ಶರಘೋರಝಷಾಕುಲಾ ॥ 61 ॥
ಅಸ್ಥಿಗಳೆಂಬ ಶರ್ಕರದಿಂದ ನಿಬಿಡವಾದ, ಧ್ವಜವೆಂಬ ವೃಕ್ಷಗಳಿಂದ ಕೂಡಿದ, ರಥವೆಂಬ ಮಡುವಿನಿಂದ ಕೂಡಿದ, ಕತ್ತರಿಸಲ್ಪಟ್ಟ ಶಿರಸ್ಸುಗಳೆಂಬ ಪಾಷಾಣದಿಂದ ಕೂಡಿದ, ಗಜಗಳ ಸೊಂಡಿಲುಗಳೆಂಬ ಮಹಾಮೊಸಳೆಗಳಿಂದ ಕೂಡಿದ, ಮಾಂಸ ಮಜ್ಜ ಮತ್ತು ಮೂಳೆಗಳೆಂಬ ಕೆಸರುಗಳಿಂದ ಕೂಡಿದ, ಮೃತವಾದ ಅಶ್ವಗಳೆಂಬ ಮೊಸಳೆಗಳಿಂದ ಕೂಡಿದ, ಯೋಧರೆಂಬ ನರಿಗಳಿಂದ ಕೂಡಿದ, ನೂರಾರು ರುಂಡಗಳನ್ನು ಹೊಂದಿರುವ, ಉಷ್ಣೀಷವೆಂಬ ನೊರೆಯಿಂದ ಕೂಡಿದ, ಬಾಣಗಳೆಂಬ ಘೋರವಾದ ಮೀನುಗಳಿಂದ ಕೂಡಿದ (ರಕ್ತ ನದಿಯು ಪ್ರವೃತ್ತವಾಯಿತು).
ರುದ್ರಸ್ಯಾಕ್ರೀಡಸದೃಶೀಂ ಭೂಮಿಂ ಕುರ್ವನ್ ವಿಭೀಷಣಾಮ್ |
ಪ್ರಾವಿಶದ್ ಭಾರತೀಂ ಸೇನಾಂ ಸಂಕ್ರುದ್ಧೋ ವೈ ಧನಂಜಯಃ |
ತಂ ಶ್ರುತಾಯುಸ್ತಥಾಽಂಬಷ್ಠೋ ವ್ರಜಮಾನಂ ನ್ಯವಾರಯತ್ ॥ 62 ॥
ಧನಂಜಯನು ಬಹಳ ಕೋಪಗೊಂಡು ರಣಭೂಮಿಯನ್ನು ರುದ್ರನ ವಿಹಾರ ಸ್ಥಾನವಾದ, ಭಯಂಕರವಾದ ಸ್ಮಶಾನ ಸ್ಥಾನಕ್ಕೆ ಸದೃಶವನ್ನಾಗಿ ಮಾಡಿ, ನಿನ್ನ ಭಾರತ ಸೇನೆಯನ್ನು ಪ್ರವೇಶಿಸಿದನು. ಶ್ರುತಾಯು ಮತ್ತು ಅಂಬಷ್ಠರು ಪ್ರವೇಶಿಸುತ್ತಿರುವ ಅವನನ್ನು ತಡೆದರು.
ತಸ್ಯಾರ್ಜುನಃ ಶರೈಸ್ತೀಕ್ಷ್ಣೈಃ ಕಂಕಪತ್ರಪರಿಚ್ಛದೈಃ |
ನ್ಯಪಾತಯದ್ ಹಯಾನ್ ಶೀಘ್ರಂ ಯತಮಾನಸ್ಯ ಮಾರಿಷ ॥ 63 ॥
ಧನುಶ್ಚಾಸ್ಯಾಪರೈಶ್ಛಿತ್ತ್ವಾ ಶರೈಃ ಪಾರ್ಥೋ ವಿಚಕ್ರಮೇ ॥ 64 ॥
ಎಲೈ ಪೂಜ್ಯನೇ, ಅರ್ಜುನನು ಕಂಕಪತ್ರಗಳನ್ನು ಹೊಂದಿದ ತನ್ನ ತೀಕ್ಷ್ಣವಾದ ಶರಗಳಿಂದ, ತನ್ನನ್ನು ತಡೆಯಲು ಪ್ರಯತ್ನಿಸುತ್ತಿದ್ದ ಶ್ರುತಾಯುವಿನ ಅಶ್ವಗಳನ್ನು ಶೀಘ್ರವಾಗಿ ಕೊಂದನು. ಬೇರೆ ಬಾಣಗಳಿಂದ ಅವನು ಶ್ರುತಾಯುವಿನ ಧನುಸ್ಸನ್ನು ಕತ್ತರಿಸಿ ಮುಂದೆ ಹೋಗಲು ಪ್ರಯತ್ನಿಸಿದನು.
ಅಂಬಷ್ಠಸ್ತು ಗದಾಂ ಗೃಹ್ಯ ಕ್ರೋಧಪರ್ಯಾಕುಲೇಕ್ಷಣಃ |
ಗದಾಪಾಣಿರ್ದ್ರುತಂ ಯಾತ್ವಾ ಪ್ರಗೃಹ್ಯ ಮಹತೀಂ ಗದಾಮ್ |
ಆಸಸಾದ ರಣೇ ಪಾರ್ಥಂ ಕೇಶವಂ ಚ ಮಹಾರಥಮ್ ॥ 65 ॥

ಅಂಬಷ್ಠನಾದರೋ ಕ್ರೋಧದಿಂದ ತಿರುಗುವ ಕಣ್ಣುಳ್ಳವನಾಗಿ, ಕೈಯಲ್ಲಿ ಗದೆಯನ್ನು ಹಿಡಿದು ಶೀಘ್ರವಾಗಿ ಮಹಾರಥರಾದ ಅರ್ಜುನ ಮತ್ತು ಕೇಶವನನ್ನು ರಣರಂಗದಲ್ಲಿ ಸಮೀಪಿಸಿದನು.
ತತಃ ಸ ಪ್ರಹಸನ್ ವೀರೋ ಗದಾಮುದ್ಯಮ್ಯ ಭಾರತ |
ರಥಮಾಲಂಬ್ಯ ಗದಯಾ ಕೇಶವಂ ಸಮತಾಡಯತ್ ॥ 66 ॥
ಎಲೈ ಭಾರತನೇ, ಆಗ ವೀರನಾದ ಅವನು ನಗುತ್ತಾ ಗದೆಯನ್ನು ಎತ್ತಿ, ರಥವನ್ನು ಹಿಡಿದು ಗದೆಯಿಂದ ಕೃಷ್ಣನನ್ನು ಹೊಡೆದನು.
ಗದಯಾ ತಾಡಿತಂ ದೃಷ್ಟ್ವಾ ಕೇಶವಂ ಪರವೀರಹಾ |
ಅರ್ಜುನೋ ಭೃಶಸಂಕ್ರುದ್ಧಃ ತ್ವಂಬಷ್ಠಂ ಪ್ರತಿ ಭಾರತ ॥ 67 ॥
ಎಲೈ ಭಾರತನೇ, ಕೃಷ್ಣನು ಗದೆಯಿಂದ ತಾಡಿತನಾದುದನ್ನು ನೋಡಿ, ಪರವೀರಘಾತಕನಾದ ಅರ್ಜುನನು ಅಂಬಷ್ಠನ ಮೇಲೆ ಬಹಳ ಕೋಪವನ್ನು ತಾಳಿದನು.
ಶರೈರನೇಕಸಾಹಸ್ರೈಃ ಸಗದಂ ಗದಿನಾಂ ವರಮ್ |
ಛಾದಯಾಮಾಸ ಸಮರೇ ಮೇಘಃ ಸೂರ್ಯಮಿವೋದಿತಮ್ ॥68॥
ಅವನು ಗದಾಧಾರಿಗಳಲ್ಲಿ ಶ್ರೇಷ್ಠನಾದ, ಗದೆಯನ್ನು ಹಿಡಿದ ಅಂಬಷ್ಠನನ್ನು ಮೋಡವು ಉದಯಿಸಿದ ಸೂರ್ಯನನ್ನು ಮುಚ್ಚುವಂತೆ ಅನೇಕ ಸಹಸ್ರ ಬಾಣಗಳಿಂದ ರಣರಂಗದಲ್ಲಿ ಮುಚ್ಚಿದನು.
ತಥಾಽಪರೈಃ ಶರೈಶ್ಚಾಪಿ ಗದಾಂ ತಸ್ಯ ಮಹಾತ್ಮನಃ |
ಅಚೂರ್ಣಯತ್ ತದಾ ಪಾರ್ಥಃ ತದದ್ಭುತಮಿವಾಭವತ್ ॥ 69 ॥
ಹಾಗೆಯೇ ಬೇರೆ ಬಾಣಗಳಿಂದ ಅರ್ಜುನನು ಮಹಾಪ್ರಯತ್ನಶೀಲನಾದ ಅವನ ಗದೆಯನ್ನು ಪುಡಿ ಮಾಡಿದನು. ಅದು ಅದ್ಭುತವಾಗಿದ್ದಿತು.
ಅಥ ತಾಂ ಪತಿತಾಂ ದೃಷ್ಟ್ವಾ ಗೃಹ್ಯಾನ್ಯಾಂ ಮಹತೀಂ ಗದಾಮ್ |
ಅರ್ಜುನಂ ವಾಸುದೇವಂ ಚ ಪುನಃ ಪುನರತಾಡಯತ್ ॥ 70 ॥
ಅಂಬಷ್ಠನು ತನ್ನ ಗದೆಯು ಬಿದ್ದುದನ್ನು ನೋಡಿ, ಇನ್ನೊಂದು ದೊಡ್ಡ ಗದೆಯನ್ನು ಎತ್ತಿಕೊಂಡು ಅರ್ಜುನನನ್ನು ಮತ್ತು ಕೃಷ್ಣನನ್ನು ಪುನಃ ಪುನಃ ಅದರಿಂದ ಹೊಡೆದನು.
ತಸ್ಯಾರ್ಜುನೋ ಕ್ಷುರಪ್ರಾಭ್ಯಾಂ ಸಗದಾವುದ್ಯತೌ ಭುಜೌ |
ಚಿಚ್ಛೇದೇಂದ್ರಧ್ವಜಾಕಾರೌ ಶಿರಶ್ಚಾನ್ಯೇನ ಪತ್ರಿಣಾ ॥ 71 ॥
ಅರ್ಜುನನು ಎರಡು ಕ್ಷುರಪ್ರಗಳಿಂದ ಇಂದ್ರಧ್ವಜದಂತಿದ್ದ ಗದೆಯನ್ನು ಎತ್ತಿಹಿಡಿದ ಅವನ ಎರಡು ಭುಜಗಳನ್ನೂ ಪತ್ರ ಸಹಿತವಾದ ಇನ್ನೊಂದು ಕ್ಷುರಪ್ರದಿಂದ ಅವನ ಶಿರಸ್ಸನ್ನೂ ಕತ್ತರಿಸಿದನು.
ಸ ಪಪಾತ ಹತೋ ರಾಜನ್ ವಸುಧಾಮನುನಾದಯನ್ |
ಇಂದ್ರಧ್ವಜ ಇವೋತ್ಸ ೃಷ್ಟೋ ಯಂತ್ರನಿರ್ಮುಕ್ತಬಂಧನಃ |
ಅಂಬಷ್ಠೇ ತು ತದಾ ಭಗ್ನೇ ತವ ಸೈನ್ಯಮಭಜ್ಯತ ॥ 72 ॥
ಎಲೈ ರಾಜನೇ, ಯಂತ್ರದಿಂದ ನಿರ್ಮುಕ್ತವಾದ ಬಂಧನವುಳ್ಳ ಇಂದ್ರಧ್ವಜದಂತೆ ಅವನು ದೊಡ್ಡ ಸದ್ದನ್ನು ಮಾಡುತ್ತಾ ಭೂಮಿಯ ಮೇಲೆ ಬಿದ್ದನು. ಅಂಬಷ್ಠನು ಹತನಾಗುತ್ತಿರಲು ನಿನ್ನ ಸೈನ್ಯವು ಭಗ್ನವಾಯಿತು.
ರಥಾನೀಕಾವಗಾಢಂ ಚ ವಾರಣಾಶ್ವನರೈರ್ವೃತಮ್ |
ಆದದಾನಂ ಶರೈಃ ಪ್ರಾಣಾನ್ ಗಜಾಶ್ವನರಸಾದಿನಾಮ್ ॥ 73 ॥
ನಾನ್ವಪಶ್ಯಾಮ ಬೀಭತ್ಸುಂ ಘನೈಃ ಸೂರ್ಯಮಿವಾವೃತಮ್ ॥ 74 ॥|
ಗಜಾಶ್ವ-ಪದಾತಿಗಳಿಂದ ಪರಿವೃತವಾದ ರಥಾನೀಕವನ್ನು ಪ್ರವೇಶಿಸಿ, ತನ್ನ ಬಾಣಗಳಿಂದ ಗಜಾಶ್ವ-ಪದಾತಿ-ಸಾದಿಗಳ ಪ್ರಾಣಗಳನ್ನು ಹೀರುತ್ತಿದ್ದ ಅರ್ಜುನನನ್ನು ಮೋಡಗಳಿಂದ ಮುಚ್ಚಿದ ಸೂರ್ಯನಂತೆ ನಾವು ನೋಡಲು ಸಾಧ್ಯವಾಗಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ಮೂರನೆಯ ಅಧ್ಯಾಯ
ದುರ್ಯೋಧನನಿಂದ ದ್ರೋಣರ ನಿಂದನೆ.
ದ್ರೋಣರಿಂದ ದುರ್ಯೋಧನನಿಗೆ ಕವಚಧಾರಣೆ.
ಸಂಜಯಃ
ತತಃ ಪ್ರವಿಷ್ಟೇ ಕೌಂತೇಯೇ ಸಿಂಧುರಾಜಜಿಘಾಂಸಯಾ |
ದ್ರೋಣಾನೀಕಂ ವಿನಿರ್ಭಿದ್ಯ ಭೋಜಾನೀಕಂ ಸುದುಸ್ತರಮ್ ॥ 1 ॥
ಕಾಂಬೋಜಸ್ಯ ಚ ದಾಯಾದೇ ಹತೇ ರಾಜನ್ ಸುದಕ್ಷಿಣೇ |
ಶ್ರುತಾಯುಷಿ ಚ ವಿಕ್ರಾಂತೇ ನಿಹತೇ ಸವ್ಯಸಾಚಿನಾ ॥ 2 ॥
ವಿಪ್ರದ್ರುತೇಷ್ವನೀಕೇಷು ವಿಧ್ವಸ್ತೇಷು ಸಮಂತತಃ |
ಪ್ರಭಗ್ನಂ ಸ್ವಬಲಂ ದೃಷ್ಟ್ವಾ ಪುತ್ರಸ್ತೇ ದ್ರೋಣಮಭ್ಯಯಾತ್ |

ತ್ವರನ್ನೇಕರಥೇನೈವ ಸಮೇತ್ಯ ದ್ರೋಣಮಬ್ರುವೀತ್ ॥ 3 ॥
ಸಂಜಯ ಕುಂತೀಪುತ್ರನಾದ ಅರ್ಜುನನು ದಾಟಲು ಅಸಾಧ್ಯವಾದ ದ್ರೋಣರ ಸೈನ್ಯವನ್ನು ಮತ್ತು ಭೋಜರ ಸೈನ್ಯವನ್ನು ಭೇದಿಸಿ, ಸೈಂಧವನನ್ನು ಕೊಲ್ಲುವ ಉದ್ದೇಶದಿಂದ ಪ್ರವೇಶಿಸಿ ಮುಂದೆ ಬರುತಿತರಲು ಕಾಂಬೋಜ ರಾಜಕುಮಾರನಾದ ಸುದಕ್ಷಿಣನೂ, ಪರಾಕ್ರಮಶಾಲಿಯಾದ ಶ್ರುತಾಯುವೂ ಅರ್ಜುನನಿಂದ ಹತನಾಗುತ್ತಿರಲು ಸೈನ್ಯಗಳೆಲ್ಲವೂ ಭಗ್ನವಾಗಿ ದಿಕ್ಕು-ದಿಕ್ಕಿಗೆ ಓಡುತ್ತಿರಲು, ನಿನ್ನ ಪುತ್ರನಾದ ದುರ್ಯೋಧನನು ಭಗ್ನವಾದ ನಿನ್ನ ಸೈನ್ಯವನ್ನು ನೋಡಿ, ಒಂದೇ ರಥದಿಂದ ದ್ರೋಣರ ಬಳಿಗೆ ಶೀಘ್ರವಾಗಿ ಹೋಗಿ ಅವರನ್ನು ಕುರಿತು ಮಾತನಾಡಿದನು.
ದುರ್ಯೋಧನಃ
ಗತಃ ಸ ಪುರುಷವ್ಯಾಘ್ರಃ ಪ್ರಮಥ್ಯೇಮಾಂ ಮಹಾಚಮೂಮ್ ॥ 4 ॥
ತತ್ರ ಕಾರ್ಯಂ ಸಮೀಕ್ಷಸ್ವ ಬ್ರಹ್ಮನ್ ನಿಃಶ್ರೇಯಸಂ ಹಿತಮ್ |
ಅರ್ಜುನಸ್ಯ ವಿಘಾತಾಯ ದಾರುಣೇಽಸ್ಮಿನ್ ಜನಕ್ಷಯೇ ॥ 5 ॥
ದುರ್ಯೋಧನ ಪುರುಷವ್ಯಾಘ್ರನಾದ ಅರ್ಜುನನು ಈ ನಮ್ಮ ದೊಡ್ಡ ಸೈನ್ಯವನ್ನು ಮರ್ದಿಸಿ ಮುಂದೆ ಹೋಗಿದ್ದಾನೆ. ಎಲೈ ಬ್ರಾಹ್ಮಣರೇ, ಈ ದಾರುಣವಾದ ಜನಕ್ಷಯದಲ್ಲಿ ಅರ್ಜುನನನ್ನು ವಿನಾಶಗೊಳಿಸಿ ನನ್ನ ಹಿತವನ್ನು ಮತ್ತು ಶ್ರೇಯಸ್ಸನ್ನು ಸಾಧಿಸಲು ಮಾಡಬೇಕಾದ ಕಾರ್ಯವನ್ನು ನೀವು ಆಲೋಚಿಸಿ.
ಯಥಾ ಸ ಪುರುಷವ್ಯಾಘ್ರೋ ನ ಹನ್ಯೇತ ಜಯದ್ರಥಃ |
ತಥಾ ವಿಧತ್ಸ್ವ ಭದ್ರಂ ತೇ ತ್ವಂ ಹಿ ನಃ ಪರಮಾ ಗತಿಃ ॥ 6 ॥
ಎಲೈ ಪುರುಷವ್ಯಾಘ್ರರೇ, ನಿಮಗೆ ಮಂಗಳವಾಗಲಿ. ಜಯದ್ರಥನು ಕೊಲ್ಲಲ್ಪಡದಂತೆ ವಿಧಾನವನ್ನು ಮಾಡಿ. ನೀವೇ ನಮಗೆ ಪರಮಗತಿಯಾದವರು.
ಅಸೌ ಧನಂಜಯಾಗ್ನಿರ್ಹಿ ಕೋಪಮಾರುತಚೋದಿತಃ |
ಸೇನಾಕಕ್ಷಂ ದಹತಿ ನಃ ಕಕ್ಷಮಗ್ನಿರಿವೋತ್ಥಿತಃ ॥ 7 ॥
ಕೋಪಮಾರುತದಿಂದ ಪ್ರೇರಿತವಾದ ಈ ಅರ್ಜುನಾಗ್ನಿಯು ಅಗ್ನಿಯು ಹುಲ್ಲುಗಾವಲನ್ನು ದಹಿಸುವಂತೆ ನಮ್ಮ ಸೈನ್ಯವೆಂಬ ಹುಲ್ಲುಗಾವಲನ್ನು ದಹಿಸುತ್ತಿದೆ.
ಅತಿಕ್ರಾಂತೇ ತು ಕೌಂತೇಯೇ ತವ ಸೈನ್ಯಂ ಪರಂತಪ |
ಜಯದ್ರಥಸ್ಯ ಗೋಪ್ತಾರಃ ಸಂಶಯಂ ಪರಮಂ ಗತಾಃ ॥ 8 ॥
ಎಲೈ ಪರಂತಪರೇ, ಕೌಂತೇಯನಾದ ಅರ್ಜುನನು ನಿಮ್ಮ ಸೈನ್ಯವನ್ನು ದಾಟಿ ಹೋದ ಮೇಲೆ ಜಯದ್ರಥನ ರಕ್ಷಕರು ಸಂಶಯಗ್ರಸ್ತರಾಗಿದ್ದಾರೆ.
ಸ್ಥಿರಾ ಬುದ್ಧಿರ್ನರೇಂದ್ರಾಣಾಮಾಸೀದ್ ಬ್ರಹ್ಮವಿದಾಂ ವರ |
ನಾತಿಕ್ರಮಿಷ್ಯತಿ ದ್ರೋಣಂ ಜಾತು ಜೀವನ್ ಧನಂಜಯಃ ॥ 9 ॥
ಎಲೈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರೇ, ಎಲ್ಲ ರಾಜರುಗಳಿಗೂ ಅರ್ಜುನನು ಬದುಕಿರುವವರೆಗೆ ದ್ರೋಣರನ್ನು ದಾಟಿ ಹೋಗಲಾರ ಎಂಬ ಬುದ್ಧಿಯು ಸ್ಥಿರವಾಗಿದ್ದಿತು.
ಯೋಽಸೌ ಪಾರ್ಥೋಽ ಹ್ಯತಿಕ್ರಾಂತೋ ಮಿಷತಸ್ತೇ ಮಹಾದ್ಯುತೇ |
ಸರ್ವಂ ಹ್ಯದ್ಯಾತುರಂ ಮನ್ಯೇ ನೇದಮಸ್ತಿ ಬಲಂ ಮಮ ॥ 10 ॥
ಎಲೈ ಮಹಾದ್ಯುತಿಯುಳ್ಳವರೇ, ನಿಮ್ಮ ಕಣ್ಣೆದುರಿಗೇ ಅರ್ಜುನನು ನಿಮ್ಮನ್ನು ದಾಟಿ ಹೋಗಿರುವಾಗ ನಮ್ಮ ಸೈನ್ಯವೆಲ್ಲವೂ ರೋಗಗ್ರಸ್ತವಾದಂತಿದೆ. ಈ ನನ್ನ ಸೈನ್ಯವು ಇಲ್ಲವೆಂದು ನಾನು ಭಾವಿಸುತ್ತೇನೆ.
ಜಾನಾಮಿ ತ್ವಾಂ ಮಹಾಭಾಗ ಪಾಂಡವಾನಾಂ ಹಿತೇ ರತಮ್ |
ತತೋ ಮುಹ್ಯಾಮಿ ಚ ಬ್ರಹ್ಮನ್ ಕಾರ್ಯವತ್ತಾಂ ವಿಚಿಂತಯನ್ ॥11॥
ಎಲೈ ಮಹಾನುಭಾವರೇ, ನೀವು ಪಾಂಡವರ ಹಿತದಲ್ಲಿ ನಿರತರಾದವರು ಎಂದು ನಾನು ತಿಳಿದಿದ್ದೇನೆ. ಆ ಕಾರಣದಿಂದ ಎಲೈ ಬ್ರಾಹ್ಮಣರೇ, ಮಾಡಬೇಕಾದ ಕಾರ್ಯವನ್ನು ಕುರಿತು ಚಿಂತಿಸುತ್ತಾ ನಾನು ಮೂಢನಾಗಿದ್ದೇನೆ.
ಯಥಾಶಕ್ತಿ ಚ ತೇ ಬ್ರಹ್ಮನ್ ವರ್ತಯನ್ ವೃತ್ತಿಮುತ್ತಮಾಮ್ |
ಪ್ರೀಣಾಮಿ ಚ ಯಥಾಶಕ್ತಿ ತಚ್ಚ ತ್ವಂ ನಾವಬುದ್ಧ್ಯಸೇ ॥ 12 ॥
ಎಲೈ ಬ್ರಾಹ್ಮಣರೇ, ನನ್ನ ಶಕ್ತಿ ಇದ್ದಷ್ಟು ನಿಮಗೆ ಶ್ರೇಷ್ಠವಾದ ಸೇವಾವೃತ್ತಿಯನ್ನು ಮಾಡಿದ್ದೇನೆ. ಶಕ್ತಿ ಇದ್ದಷ್ಟು ನಿಮ್ಮನ್ನು ಸಂತೋಷಪಡಿಸಿದ್ದೇನೆ. ಆದರೆ ನೀವು ಅದನ್ನು ಗಮನಿಸುತ್ತಿಲ್ಲ.
ಅಸ್ಮಾನ್ನ ತ್ವಂ ಸದಾ ಭಕ್ತಾನ್ ನೇಚ್ಛಸೇ ಶತ್ರುಕರ್ಶನ |
ಪಾಂಡವಾನ್ ಸತತಂ ಪ್ರೀಣಾಸ್ಯಸ್ಮಾಕಮಹಿತೇ ರತಾನ್ ॥ 13 ॥
ಎಲೈ ಶತ್ರುಕರ್ಶನರೇ, ನಿಮ್ಮಲ್ಲಿ ಯಾವಾಗಲೂ ಭಕ್ತಿಯನ್ನು ಹೊಂದಿರುವ ನಮ್ಮನ್ನು ನೀವು ಬಯಸುವುದಿಲ್ಲ. ನಮ್ಮ ಅಹಿತದಲ್ಲಿ ಆಸಕ್ತರಾದ ಪಾಂಡವರನ್ನು ಯಾವಾಗಲೂ ಸಂತೋಷಪಡಿಸುತಿತೀರಿ.
ನ ಹ್ಯಹಂ ತ್ವಾಂ ವಿಜಾನಾಮಿ ವಚಸಾ ಲಲಿತಂ ಸದಾ |
ಹೃದಯೇನ ಭೃಶಂ ತೀಕ್ಷ ್ಣಂ ಮಧುದಿಗ್ಧಮಿವ ಕ್ಷುರಮ್ ॥ 14 ॥
ಮಧುರವಾದ ಮಾತುಗಳನ್ನು ಆಡಿ ಹೃದಯದಲ್ಲಿ ಬಹಳ ಕ್ರೂರವಾದ ನಿಮ್ಮನ್ನು ಜೇನುತುಪ್ಪವನ್ನು ಸವರಿದ ಕತ್ತಿ ಎಂದು ನಾನು ತಿಳಿಯಲಿಲ್ಲ.
ಅಸ್ಮಾನೇವೋಪಜೀವಂಸ್ತ್ವಮಸ್ಮಾಕಂ ವಿಪ್ರಿಯೇ ರತಃ |

ನಹ್ಯಹಂ ತ್ವಾಂ ವಿಜಾನಾಮಿ ಸರ್ಪಂ ಮಂಡೂಕರಾವಿಣಮ್ ॥ 15 ॥
ನಮ್ಮನ್ನೇ ಉಪಜೀವಿಸಿಕೊಂಡಿರುವ ನೀವು ನಮ್ಮ ವಿಪ್ರಿಯದಲ್ಲಿ ನಿರತರಾಗಿದ್ದೀರಿ. ನೀವು ಕಪ್ಪೆಯಂತೆ ಶಬ್ದವನ್ನು ಮಾಡುವ ಸರ್ಪವೆಂದು ನಾನು ತಿಳಿಯಲಿಲ್ಲ.
ನಾದಾಸ್ಯಚ್ಛೇದ್ ವರಂ ಮಹ್ಯಂ ಭವಾನ್ ಪಾಂಡವನಿಗ್ರಹೇ ।
ನಾವಾರಯಿಷ್ಯಂ ಗಚ್ಛಂತಮಹಂ ಸಿಂಧುಪತಿಂ ಗೃಹಾನ್ ॥ 16 ॥
ನೀವು ಧರ್ಮರಾಜನನ್ನು ಸೆರೆಹಿಡಿಯುವೆನು ಎಂದು ನನಗೆ ವರವನ್ನು ಕೊಡದಿದ್ದರೆ ನಾನು ಮನೆಗೆ ಹೊರಟಿದ್ದ ಸೈಂಧವನನ್ನು ತಡೆಯುತ್ತಿರಲಿಲ್ಲ.
ಮಯಾ ತ್ವಾಶಂಸಮಾನೇನ ತ್ವತ್ತಸ್ತ್ರಾಣಮಬುದ್ಧಿನಾ ।
ಆಶ್ವಾಸಿತಃ ಸಿಂಧುಪತಿರ್ಮೋಹಾದ್ದತ್ತಶ್ಚ ಮೃತ್ಯವೇ ॥ 17 ॥
ಬುದ್ಧಿಯಿಲ್ಲದ ನಾನು ನಿಮ್ಮಿಂದ ರಕ್ಷಣೆಯನ್ನು ಆಶಿಸಿ ಮೂಢನಾಗಿ ಸೈಂಧವನಿಗೆ ಆಶ್ವಾಸನೆಯನ್ನು ನೀಡಿ ಅವನನ್ನು ಮೃತ್ಯುವಿಗೆ ಒಪ್ಪಿಸಿದೆನು.
ಯಮದಂಷ್ಟ್ರಾಂತರಂ ಪ್ರಾಪ್ತೋ ಹ್ಯಪಿ ಮುಚ್ಯೇತ ಮಾನವಃ ।
ನಾರ್ಜುನಸ್ಯ ವಶಂ ಪ್ರಾಪ್ತೋ ಮುಚ್ಯೇತ ಹಿ ಜಯದ್ರಥಃ ॥ 18 ॥
ಯಮನ ದಂತಗಳ ಸಂಧಿಯಲ್ಲಿ ಸಿಕ್ಕಿದ ಮನುಷ್ಯನಾದರೂ ಹಿಂದೆ ಬರಬಹುದು. ಆದರೆ ಅರ್ಜುನನಿಗೆ ವಶನಾದ ಜಯದ್ರಥನು ನಿರ್ಮುಕ್ತನಾಗಲಾರ.
ಸ ತಥಾ ಕುರು ಶೋಣಾಶ್ವ ಯಥಾ ಮುಚ್ಯೇತ ಸೈಂಧವಃ ।
ಮಮ ಚಾರ್ತಪ್ರಲಾಪಾನಾಂ ಮಾ ಕ್ರುಧಃ ಪಾಹಿ ಸೈಂಧವಮ್ ॥19॥
ಎಲೈ ಶೋಣಾಶ್ವರೇ, ಸೈಂಧವನು ಅರ್ಜುನನಿಂದ ಮುಕ್ತನಾಗುವಂತೆ ಮಾಡಿ. ನನ್ನ ಆರ್ತಪ್ರಲಾಪಗಳಿಂದ ಕೋಪಗೊಳ್ಳಬೇಡಿ. ಸೈಂಧವನನ್ನು ರಕ್ಷಿಸಿ.
ದ್ರೋಣಃ
ನಾಭ್ಯಸೂಯಾಮಿ ತೇ ವಾಕ್ಯಮಶ್ವತ್ಥಾಮ್ನಾಽಸಿ ಮೇ ಸಮಃ ।
ತಥ್ಯಂ ತು ತೇ ಪ್ರವಕ್ಷ್ಯಾಮಿ ತಜ್ಜುಷಸ್ವ ವಿಶಾಂಪತೇ ॥ 20 ॥
ದ್ರೋಣ ಎಲೈ ರಾಜನೇ, ನಿನ್ನ ಮಾತುಗಳನ್ನು ಕೇಳಿ ನಾನು ಅಸೂಯೆ ಪಡುವುದಿಲ್ಲ. ನೀನು ನನಗೆ ಅಶ್ವತ್ಥಾಮನಿಗೆ ಸಮನಾದವನು. ಸತ್ಯವಾದ ಮಾತನ್ನು ಹೇಳುವೆನು. ಅದನ್ನು ಸ್ವೀಕರಿಸುವವನಾಗು.
ಸಾರಥಿಪ್ರವರಃ ಕೃಷ್ಣಃ ಶೀಘ್ರಾಶ್ಚಾಸ್ಯ ಹಯೋತ್ತಮಾಃ ।
ಅಲ್ಪಂ ಚ ವಿವರಂ ಕೃತ್ವಾ ತೂರ್ಣಂ ಯಾತಿ ಧನಂಜಯಃ ॥ 21 ॥
ಸಾರಥಿ ಶ್ರೇಷ್ಠನಾದ ಕೃಷ್ಣ ಮತ್ತು ಅರ್ಜುನನ ಶ್ರೇಷ್ಠವಾದ ಕುದುರೆಗಳು ಬಹಳ ಶೀಘ್ರಗಾಮಿಗಳು. ಸ್ವಲ್ಪ ಅವಕಾಶ ಸಿಕ್ಕಿದರೂ ಅದನ್ನು ಉಪಯೋಗಿಸಿಕೊಂಡು ಅರ್ಜುನನು ಶೀಘ್ರವಾಗಿ ಮುಂದೆ ಸಾಗುತ್ತಾನೆ.
ಕಿನ್ನ ಪಶ್ಯಸಿ ಬಾಣೌಘಾನ್ ಕ್ರೋಶಮಾತ್ರೇ ಕಿರೀಟಿನಃ ।
ಪಶ್ಚಾದ್ ರಥಸ್ಯ ಪತಿತಾನ್ ಕ್ಷಿಪ್ತಾನ್ ಶೀಘ್ರಂ ಹಿ ಗಚ್ಛತಃ ॥22॥
ಅರ್ಜುನನು ಪ್ರಯೋಗಿಸಿದ ಬಾಣಗಳು ಅವನ ರಥದ ಹಿಂದೆ ಒಂದು ಕ್ರೋಶದ ದೂರದಲ್ಲಿ ಬೀಳುವುದನ್ನು ನೀನು ನೋಡುತ್ತಿಲ್ಲವೇ? ಅರ್ಜುನನ ರಥವು ಅವನ ಶೀಘ್ರವಾದ ಬಾಣಗಳಿಗಿಂತಲೂ ಶೀಘ್ರವಾಗಿ ಮುಂದೆ ಸಾಗುತ್ತದೆ.
ನ ಚಾಹಂ ಶೀಘ್ರಯಾನೇಽದ್ಯ ಸಮರ್ಥೋ ವಯಸಾನ್ವಿತಃ ।
ಸೇನಾಮುಖೇ ಚ ಪಾರ್ಥಾನಾಮೇತದ್ ಬಲಮುಪಸ್ಥಿತಮ್ ॥ 23 ॥
ವೃದ್ಧನಾದ ನಾನು ಈ ದಿನ ಅಂತಹ ಶೀಘ್ರಯಾನವನ್ನು ಮಾಡಲು ಶಕ್ತನಲ್ಲ. ಸೇನೆಯ ಮುಂಭಾಗದಲ್ಲಿ ಪಾಂಡವರಿಗೆ ಇಂತಹ ಬಲವಿದೆ.
ಯುಧಿಷ್ಠಿರಶ್ಚ ಮೇ ಗ್ರಾಹ್ಯೋ ಮಿಷತಾಂ ಸರ್ವಧನ್ವಿನಾಮ್ ।
ಏವಂ ಮಯಾ ಪ್ರತಿಜ್ಞಾತಂ ಕ್ಷತ್ರಮಧ್ಯೇ ಮಹಾಭುಜ ॥ 24 ॥
ಎಲೈ ಮಹಾಭುಜನೇ, ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆ ನಾನು ಯುಧಿಷ್ಠಿರನನ್ನು ಸೆರೆ ಹಿಡಿಯಬೇಕು. ಹೀಗೆ ನಾನು ಕ್ಷತ್ರಿಯರ ಮಧ್ಯದಲ್ಲಿ ಪ್ರತಿಜ್ಞೆಯನ್ನು ಮಾಡಿದ್ದೇನೆ.
ಧನಂಜಯೇನ ಚೋತ್ಸ ೃಷ್ಟಃ ಪ್ರಮುಖೇ ವರ್ತತೇ ಮಮ ।
ತಸ್ಮಾದ್ ವ್ಯೂಹಮುಖಂ ಹಿತ್ವಾ ನಾಹಂ ಯಾಸ್ಯಾಮಿ ಫಲ್ಗುನಮ್ ॥
ಯುಧಿಷ್ಠಿರನು ಅರ್ಜುನನಿಂದ ರಹಿತನಾಗಿ ನನ್ನ ಎದುರಿನಲ್ಲಿ ಇದ್ದಾನೆ. ಆದ್ದರಿಂದ ನಾನು ವ್ಯೂಹದ ಮುಂಭಾಗವನ್ನು ಬಿಟ್ಟು ಅರ್ಜುನನನ್ನು ಹಿಂಬಾಲಿಸುವುದಿಲ್ಲ.
ತುಲ್ಯಾಭಿಜನಕರ್ಮಾಣಂ ಶತ್ರುಮೇಕಂ ಸಹಾಯವಾನ್ ।
ಗತ್ವಾ ಯೋಧಯ ಮಾ ಭೈಸ್ತ್ವಂ ತ್ವಂ ಹ್ಯಸ್ಯ ಜಗತಃ ಪತಿಃ ॥26॥
ನಿನಗೆ ಸಮಾನವಾದ ಕುಲ ಮತ್ತು ಕರ್ಮಗಳನ್ನುಳ್ಳ ಶತ್ರುವಾದ ಒಬ್ಬ ಅರ್ಜುನನನ್ನು ಸಹಾಯಕರಿಂದ ಒಡಗೂಡಿ ಹೋಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡು. ಹೆದರಬೇಡ. ನೀನೇ ಜಗತ್ತಿಗೆ ಪತಿಯಷ್ಟೆ?
ರಾಜಾ ಶೂರಃ ಕೃತೀ ದಕ್ಷೋ ವೈರಮುತ್ಪಾದ್ಯ ಪಾಂಡವೈಃ ।
ವೀರಃ ಸ್ವಯಂ ಪ್ರಯಾಹ್ಯಾಶು ಯತ್ರ ಯಾತೋ ಧನಂಜಯಃ ॥ 27 ॥

ರಾಜನೂ, ಶೂರನೂ, ಅಭ್ಯಾಸಶೀಲನೂ, ದಕ್ಷನೂ, ವೀರನೂ ಆದ ನೀನು ಪಾಂಡವರ ಜೊತೆಯಲ್ಲಿ ವೈರವನ್ನು ಮಾಡಿದವನಾಗಿ ಸ್ವತಃ ಶೀಘ್ರವಾಗಿ ಅರ್ಜುನನು ಎಲ್ಲಿಗೆ ಹೋದನೋ ಅಲ್ಲಿಗೆ ಹೋಗುವವನಾಗು.

ದುರ್ಯೋಧನಃ

ಕಥಂ ತ್ವಾಮಪ್ಯತಿಕ್ರಾಂತಃ ಸರ್ವಶಸ್ತ್ರಭೃತಾಂ ವರಮ್ |
ಧನಂಜಯೋ ಮಯಾ ಶಕ್ಯ ಆಚಾರ್ಯ ಪ್ರತಿಬಾಧಿತುಮ್ ॥ 28 ॥

ದುರ್ಯೋಧನ ಆಚಾರ್ಯರೇ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ನಿಮ್ಮನ್ನೂ ದಾಟಿ ಹೋದ ಅರ್ಜುನನನ್ನು ನಾನು ಬಾಧಿಸಲು ಹೇಗೆ ಸಾಧ್ಯವಾಗುತ್ತದೆ?

ಅಪಿ ಶಕ್ಯೋ ರಣೇ ಜೇತುಂ ವಜ್ರಹಸ್ತಃ ಪುರಂದರಃ |
ನಾರ್ಜುನಃ ಸಮರೇ ಶಕ್ಯೋ ಜೇತುಂ ಪರಪುರಂಜಯಃ ॥ 29 ॥

ವಜ್ರಪಾಣಿಯಾದ ಪುರಂದರನನ್ನೂ ಒಂದು ಪಕ್ಷ ಯುದ್ಧದಲ್ಲಿ ಜಯಿಸಬಹುದು. ಆದರೆ ಪರಪುರಂಜಯನಾದ ಅರ್ಜುನನನ್ನು ಯುದ್ಧದಲ್ಲಿ ಜಯಿಸುವುದು ಸಾಧ್ಯವಿಲ್ಲ.

ಯೇನ ಭೋಜಶ್ಚ ಹಾರ್ದಿಕ್ಯೋ ಭವಾಂಶ್ಚ ತ್ರಿದಶೋಪಮಃ |
ಶಸ್ತ್ರಪ್ರತಾಪೇನ ಜಿತೌ ಶ್ರುತಾಯುಶ್ಚ ನಿಬರ್ಹಿತಃ ॥ 30 ॥
ಸುದಕ್ಷಿಣಶ್ಚ ನಿಹತಃ ಸ ಚ ರಾಜಾ ಶ್ರುತಾಯುಧಃ |
ಶ್ರುತಾಯುಶ್ಚಾಯುತಾಯುಶ್ಚ ಮ್ಲೇಚ್ಛಾಶ್ಚ ಬಹವೋ ಹತಾಃ ॥ 31 ॥
ತಂ ಕಥಂ ಪಾಂಡವಂ ಸಂಖೇ ದಹಂತಮಹಿತಾನ್ ಬಹೂನ್ |
ಪ್ರತಿಯೋತ್ಸ್ಯಾಮಿ ದುರ್ಧರ್ಷಂ ತನ್ಮಮಾಚಕ್ಷ್ವ ಸತ್ತಮ ॥ 32 ॥

ಯಾವ ಅರ್ಜುನನಿಂದ ಭೋಜನಾದ ಕೃತವರ್ಮನೂ, ದೇವತೆಗಳಿಗೆ ಸದೃಶರಾದ ನೀವೂ, ಪರಾಜಿತರಾದರೋ ಶ್ರುತಾಯುವು ನಾಶ ಮಾಡಲ್ಪಟ್ಟನೋ, ಸುದಕ್ಷಿಣನೂ, ರಾಜನಾದ ಶ್ರುತಾಯುಧನೂ ವಿನಾಶಗೊಳಿಸಲ್ಪಟ್ಟರೋ, ಶ್ರುತಾಯುವೂ, ಅಯುತಾಯುವೂ, ಅನೇಕ ಮ್ಲೇಚ್ಛರೂ ಹತರಾದರೋ, ಅಂತಹ ಯುದ್ಧದಲ್ಲಿ ಅನೇಕ ಶತ್ರುಗಳನ್ನು ದಹಿಸುವ, ದುರ್ಧರ್ಷನಾದ ಪಾಂಡವನಾದ ಅರ್ಜುನನನ್ನು ಎದುರಿಸಿ ನಾನು ಹೇಗೆ ಯುದ್ಧವನ್ನು ಮಾಡುವೆನು? ಸಜ್ಜನರಲ್ಲಿ ಶ್ರೇಷ್ಠರಾದವರೇ, ಅದನ್ನು ನನಗೆ ಹೇಳಿ.

ಕ್ಷಮಂ ಚೇನ್ಮನ್ಯಸೇ ಯುದ್ಧಂ ಮಮ ತೇನಾದ್ಯ ಶಾಧಿ ಮಾಮ್ |
ಪರವಾನಸ್ಮಿ ಭವತಃ ಪ್ರೇಷ್ಯಕೃದ್ ರಕ್ಷ ಮೇ ಯಶಃ ॥ 33 ॥

ನಾನು ಈ ದಿನ ಅವನ ಜೊತೆಯಲ್ಲಿ ಯುದ್ಧವನ್ನು ಮಾಡುವುದು ಯೋಗ್ಯವೆನಿಸಿದರೆ ನನಗೆ ಅದರ ವಿಧಾನವನ್ನು ಹೇಳಿ. ನಾನು ನೀವು ಹೇಳಿದಂತೆ ಕೇಳುವ ನಿಮ್ಮ ದಾಸನಾಗಿದ್ದೇನೆ. ನನ್ನ ಕೀರ್ತಿಯನ್ನು ರಕ್ಷಿಸಿ.

ದ್ರೋಣಃ

ಸತ್ಯಂ ವದಸಿ ಕೌರವ್ಯ ದುರಾಧರ್ಷೋ ಧನಂಜಯಃ |
ಅಹಂ ತು ತತ್ ಕರಿಷ್ಯಾಮಿ ಯಥೈನಂ ಪ್ರಸಹಿಷ್ಯಸಿ ॥ 34 ॥

ದ್ರೋಣ ಎಲೈ ಕೌರವ್ಯನೇ, ನೀನು ಸತ್ಯವನ್ನು ಮಾತನಾಡುತ್ತಿದ್ದೀಯೆ. ಅರ್ಜುನನು ಸೋಲಿಸಲು ಅಶಕ್ಯನಾದವನು. ನೀನು ಅವನ ವೇಗವನ್ನು ಸಹಿಸುವಂತೆ ನಾನು ಉಪಾಯವನ್ನು ಮಾಡುವೆನು.

ಅದ್ಭುತಂ ಚಾದ್ಯ ಪಶ್ಯಂತು ಲೋಕೇ ಸರ್ವಧನುರ್ಧರಾಃ |
ವಿಷಕ್ತಂ ತ್ವಯಿ ಕೌಂತೇಯಂ ವಾಸುದೇವಸ್ಯ ಪಶ್ಯತಃ ॥ 35 ॥

ಕೃಷ್ಣನು ನೋಡುತ್ತಿರುವಂತೆ ಅರ್ಜುನನ ಜೊತೆಯಲ್ಲಿ ಸೆಣೆಸಾಡುವ ನಿನ್ನನ್ನು ಲೋಕದಲ್ಲಿ ಎಲ್ಲ ಧನುರ್ಧರರೂ ಈ ದಿನ ಈ ಅದ್ಭುತವನ್ನು ನೋಡಲಿ.

ಏಷ ತೇ ಕವಚಂ ರಾಜನ್ ತಥಾ ಬಧ್ನಾಮಿ ಕಾಂಚನಮ್ |
ಯಥಾ ನ ಬಾಣಾ ನಾಸತ್ರಾಣಿ ಪ್ರಭವಿಷ್ಯಂತಿ ತೇ ರಣೇ ॥ 36 ॥

ಎಲೈ ರಾಜನೇ, ಬಾಣಗಳಾಗಲೀ, ಅಸ್ತ್ರಗಳಾಗಲೀ ನಿನ್ನ ಮೇಲೆ ಯುದ್ಧದಲ್ಲಿ ಪ್ರಭಾವವನ್ನು ಬೀರದಂತೆ ನಿನಗೆ ಈ ಸುವರ್ಣಮಯವಾದ ಕವಚವನ್ನು ತೊಡಿಸುತ್ತಿದ್ದೇನೆ.

ಯದಿ ತ್ವಾ ಸಾಸುರಗಣಾಃ ಸತ್ರ್ಯಕ್ಷೋರಗಪಕ್ಷಿಣಃ |
ಯೋಧಯಂತಿ ತ್ರಯೋ ಲೋಕಾಃ ಸನರಾ ನಾಸ್ತಿ ತೇ ಭಯಮ್ ॥37॥

ನಿನ್ನ ಎದುರಿಗೆ ರುದ್ರದೇವರಿಂದ ಸಹಿತರಾದ, ಅಸುರಗಣದಿಂದ ಸಹಿತರಾದ, ಯಕ್ಷೋರಗಪಕ್ಷಿಗಳಿಂದ, ಮನುಷ್ಯರಿಂದಲೂ ಕೂಡಿದ ಮೂರುಲೋಕಗಳು ಯುದ್ಧವನ್ನು ಮಾಡಿದರೂ ನಿನಗೆ ಭಯವಿಲ್ಲ.

ನ ಕೃಷ್ಣೋ ನ ಚ ಕೌಂತೇಯೋ ನ ಚಾನ್ಯಃ ಶಸ್ತ್ರಭೃದ್ ರಣೇ |
ಶರಾನರ್ಪಯಿತುಂ ಕಶ್ಚಿತ್ ಕವಚೇ ತವ ಕೌರವ ॥ 38 ॥

ಎಲೈ ಕೌರವನೇ, ಕೃಷ್ಣನಾಗಲೀ, ಅರ್ಜುನನಾಗಲೀ ಅಥವಾ ಬೇರೆ ಯಾವುದೇ ಶಸ್ತ್ರಧರನಾಗಲೀ ಯುದ್ಧದಲ್ಲಿ ನಿನ್ನ ಕವಚಕ್ಕೆ ಬಾಣಗಳನ್ನು ಪ್ರಯೋಗಿಸಲು ಸಾಧ್ಯವಿಲ್ಲ.

ಸ ತ್ವಂ ಕವಚಮಾಸ್ಥಾಯ ಕ್ರುದ್ಧಮದ್ಯ ರಣೇಽರ್ಜುನಮ್ |
ತ್ವರಮಾಣಃ ಸ್ವಯಂ ಯಾಹಿ ನ ತ್ವಾಽಸೌ ವಿಷಹಿಷ್ಯತಿ ॥ 39 ॥

ಅಂತಹ ನೀನು ಕವಚವನ್ನು ಧರಿಸಿ ಈ ದಿನ ಕ್ರುದ್ಧನಾದ ಅರ್ಜುನನ ಕಡೆ ಶೀಘ್ರವಾಗಿ ಸ್ವತಃ ಹೋಗುವವನಾಗು. ಈ ದಿನ ಅವನು ನಿನ್ನನ್ನು ತಡೆಯಲಾರ.

ಸಂಜಯಃ
ಏವಮುಕತ್ವ ತ್ವರನ್ ದ್ರೋಣಃ ಸ್ಪೃಷ್ಟ್ವಾಽಂಭೋ ವರ್ಮ ಭಾಸ್ವರಮ್|
ಆಬಬಂಧಾದ್ಭುತತಮಂ ಜಪನ್ ಮಂತ್ರಂ ಯಥಾವಿಧಿ ॥ 40 ॥
ಸಂಜಯ ದ್ರೋಣರು ಹೀಗೆ ಹೇಳಿ ಶೀಘ್ರವಾಗಿ ನೀರನ್ನು ಸ್ಪರ್ಶಿಸಿ ಪವಿತ್ರರಾಗಿ ಪ್ರಕಾಶಮಾನವಾದ, ಅದ್ಭುತತಮವಾದ ಕವಚವನ್ನು ವಿಧಿಪೂರ್ವಕವಾಗಿ, ಮಂತ್ರಜಪ ಪೂರ್ವಕವಾಗಿ ಅವನಿಗೆ ತೊಡಿಸಿದರು.
ರಣಾಯ ಮಹತೇ ರಾಜನ್ ವಿಜಯಾಯ ಸುತಸ್ಯ ತೇ |
ವಿಸಿಷ್ಮಾಪಯಿಷುರ್ಲೋಕಾನ್ ವಿದ್ಯಯಾ ಬ್ರಹ್ಮವಿತ್ತಮಃ ॥
ಎಲೈ ರಾಜನೇ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಅವರು ತಮ್ಮ ವಿದ್ಯೆಯ ಬಲದಿಂದ ಲೋಕವೆಲ್ಲವನ್ನೂ ವಿಸ್ಮಯಗೊಳಿಸುವವರಾಗಿ ನಿನ್ನ ಪುತ್ರನ ವಿಜಯದ ಸಲುವಾಗಿ ದೊಡ್ಡ ಯುದ್ಧದಲ್ಲಿ ಅವನನ್ನು ಸಮರ್ಥನನ್ನಾಗಿ ಮಾಡಲು ಆ ಕವಚವನ್ನು ಬಂಧಿಸಿದರು.
ದ್ರೋಣಃ
ಕರೋತು ಸ್ವಸ್ತಿ ತೇ ಬ್ರಹ್ಮಾ ಸ್ವಸ್ತಿ ಚಾಪಿ ದ್ವಿಜಾತಯಃ |
ಸರೀಸೃಪಾಶ್ಚ ಯೇ ಶ್ರೇಷ್ಠಾಃ ತೇಭ್ಯಸ್ತೇ ಸ್ವಸ್ತಿ ಭಾರತ ॥ 42 ॥
ದ್ರೋಣ ಬ್ರಹ್ಮದೇವರು ನಿನಗೆ ಕ್ಷೇಮವನ್ನು ಮಾಡಲಿ. ಬ್ರಾಹ್ಮಣವರ್ಗವು ನಿನಗೆ ಕ್ಷೇಮವನ್ನು ಮಾಡಲಿ. ಎಲೈ ಭಾರತನೇ, ಶ್ರೇಷ್ಠರಾದ ಸರ್ಪಗಳಿಂದ ನಿನಗೆ ಕ್ಷೇಮವಾಗಲಿ.
ಯಯಾತಿರ್ನಹುಷಶ್ಚೈವ ಧುಂಧುಮಾರೋ ಭಗೀರಥಃ |
ತುಭ್ಯಂ ರಾಜರ್ಷಯಃ ಸರ್ವೇ ಸ್ವಸ್ತಿ ಕುವಂತು ಸರ್ವತಃ ॥ 43 ॥
ಯಯಾತಿಯೂ, ನಹುಷನೂ, ಧುಂಧುಮಾರನೂ, ಭಗೀರಥನೂ, ಎಲ್ಲ ರಾಜರ್ಷಿಗಳೂ ನಿನಗೆ ಎಲ್ಲ ಕಡೆಯಿಂದಲೂ ಕ್ಷೇಮವನ್ನು ಮಾಡಲಿ.
ಸ್ವಸ್ತಿ ತೇಽಸ್ತ್ವೇಕಪಾದೇಭ್ಯೋ ಬಹುಪಾದೇಭ್ಯ ಏವ ಚ |
ಸ್ವಸ್ತ್ಯಸ್ತ್ವಪಾದಕೇಭ್ಯಶ್ಚ ನಿತ್ಯಂ ತವ ಮಹಾರಣೇ ॥ 44 ॥
ನಿನಗೆ ಯುದ್ಧದಲ್ಲಿ ಯಾವಾಗಲೂ ಏಕಪಾದ ಪ್ರಾಣಿಗಳಿಂದ, ಬಹುಪಾದ ಪ್ರಾಣಿಗಳಿಂದ, ಪಾದರಹಿತ ಪ್ರಾಣಿಗಳಿಂದ ಕ್ಷೇಮವಾಗಲಿ.
ಸ್ವಾಹಾ ಸ್ವಧಾ ಶಚೀ ಚೈವ ಸ್ವಸ್ತಿ ಕುವಂತು ತೇ ಸದಾ |
ಲಕ್ಷ್ಮೀರರುಂಧತೀ ಚೈವ ಕುರ್ಯಾತಾಂ ಸ್ವಸ್ತಿ ತೇಽನಘ ॥ 45 ॥
ಸ್ವಾಹಾ, ಸ್ವಧಾ, ಶಚೀದೇವಿಯರು ನಿನಗೆ ಯಾವಾಗಲೂ ಕ್ಷೇಮವನ್ನು ಮಾಡಲಿ. ಎಲೈ ಅನಘನೇ, ನಿನಗೆ ಲಕ್ಷ್ಮೀ ಮತ್ತು ಅರುಂಧತಿಯರು ಕ್ಷೇಮವನ್ನು ಮಾಡಲಿ.
ಅಸಿತೋ ದೇವಲಶ್ಚೈವ ವಿಶ್ವಾಮಿತ್ರಸ್ತಥಾಽಂಗಿರಾಃ |
ವಸಿಷ್ಠಃ ಕಶ್ಯಪಶ್ಚೈವ ಸ್ವಸ್ತಿ ಕುವಂತು ತೇ ನೃಪ ॥ 46 ॥
ಎಲೈ ರಾಜನೇ, ಅಸಿತರು, ದೇವಲರು, ವಿಶ್ವಾಮಿತ್ರರು, ಅಂಗಿರಸರು, ವಸಿಷ್ಠರು ಮತ್ತು ಕಶ್ಯಪರು ನಿನಗೆ ಕ್ಷೇಮವನ್ನು ಮಾಡಲಿ.
ಧಾತಾ ವಿಧಾತಾ ಲೋಕೇಶ ದಿಶಶ್ಚ ಸದಿಗೀಶ್ವರಾಃ |
ಸ್ವಸ್ತಿ ತೇಽದ್ಯ ಪ್ರಯಚ್ಛಂತು ಕಾರ್ತಿಕೇಯಶ್ಚ ಷಣ್ಮುಖಃ ॥ 47 ॥
ಯೇನ ದೇವಾಃ ಸಕೃದ್ ಭಗ್ನಾಃ ಸಂಗ್ರಾಮೇ ತಾರಕಾಮಯೇ |
ಧೃತಾಃ ಸ ಚಾಹತಃ ಶೂರೋ ಹ್ಯವಧ್ಯೋ ದೇವತಾಗಣೈಃ ॥ 48 ॥
ಧಾತೃ, ವಿಧಾತೃ, ದಿಕ್ಕುಗಳು, ದಿಕ್ಪಾಲಕರು ಎಲೈ ಲೋಕೇಶನೆ, ನಿನಗೆ ಕ್ಷೇಮವನ್ನು ಮಾಡಲಿ. ಯಾವ ಕಾರ್ತಿಕೇಯನಾದ ಷಣ್ಮುಖನು ತಾರಕಾಮಯವಾದ ಯುದ್ಧದಲ್ಲಿ ಒಂದು ಸಲ ಭಗ್ನರಾದ ದೇವತೆಗಳನ್ನು ಒಂದುಗೂಡಿಸಿ ತಾನು ಅವಧ್ಯನಾಗಿ ಶೂರನಾಗಿ ದೇವತಾಗಣಗಳನ್ನು ಧರಿಸಿದನೋ ಅಂತಹ ಷಣ್ಮುಖನು ನಿನಗೆ ಕ್ಷೇಮವನ್ನುಂಟು ಮಾಡಲಿ.
ವಿವಸ್ವಾನ್ ಕುರುತಾಂ ಸ್ವಸ್ತಿ ತಥಾ ವೈವಸ್ವತೋ ಯಮಃ |
ಪಾರ್ಷದಾ ವಶಗಾ ಯಸ್ಯ ಸ್ವಸ್ತಿ ತುಭ್ಯಂ ಪ್ರಯಚ್ಛತು ॥ 49 ॥
ವಿವಸ್ವಾನ್ ಸೂರ್ಯನು ನಿನಗೆ ಕ್ಷೇಮವನ್ನು ಮಾಡಲಿ. ವೈವಸ್ವತನಾದ ಯಮನು ನಿನಗೆ ಕ್ಷೇಮವನ್ನು ಮಾಡಲಿ. ಅವನ ಅಧೀನರಾದ ಪಾರ್ಷದರು ನಿನಗೆ ಕ್ಷೇಮವನ್ನುಂಟು ಮಾಡಲಿ.
ದಿಗ್ಗಜಾಶ್ಚಾಪಿ ಚತ್ವಾರಃ ಕ್ಷಿತಿಃ ಖಂ ಗಗನಂ ಗ್ರಹಾಃ |
ದಿಶಶ್ಚ ವಿದಿಶಶ್ಚೈವ ಸಿದ್ಧಾ ಲೋಕಹಿತೇ ರತಾಃ |
ಸ್ವಸ್ತಿ ಕುರ್ವಂತು ತೇ ಸತ್ಯಂ ಮಂತ್ರೇಣಾನೇನ ಸಂಸ್ತುತಾಃ ॥ 50 ॥
ನಾಲ್ಕು ದಿಗ್ಗಜಗಳು, ಭೂಮಿ, ಅಂತರಿಕ್ಷ, ಆಕಾಶ, ಗ್ರಹಗಳು, ದಿಕ್ಕುಗಳು, ವಿದಿಕ್ಕುಗಳು, ಲೋಕಹಿತದಲ್ಲಿ ರತರಾದ ಸಿದ್ಧರು ಈ ಮಂತ್ರದಿಂದ ಸ್ತೋತ್ರ ಮಾಡಲ್ಪಟ್ಟು ನಿನಗೆ ಸತ್ಯವಾದ ಕ್ಷೇಮವನ್ನುಂಟು ಮಾಡಲಿ.
ಅಧಸ್ತಾದ್ ಧರಣೀಂ ಯೋಽಸೌ ಸದಾ ಧಾರಯತೇ ನೃಪ |
ಸ ಶೇಷಃ ಪನ್ನಗಶ್ರೇಷ್ಠಃ ಸ್ವಸ್ತಿ ತುಭ್ಯಂ ಪ್ರಯಚ್ಛತು ॥ 51 ॥
ಎಲೈ ರಾಜನೇ, ಈ ಭೂಮಿಯ ಕೆಳಗೆ ಯಾವಾಗಲೂ ಭೂಮಿಯನ್ನು ಧರಿಸಿರುವ ಸರ್ಪಶ್ರೇಷ್ಠನಾದ ಶೇಷನು ನಿನಗೆ ಕ್ಷೇಮವನ್ನು ನೀಡಲಿ.
ಗಾಂಧಾರೇ ಯುಧಿ ವಿಕ್ರಮ್ಯ ನಿರ್ಜಿತಾಃ ಸುರಸತ್ತಮಾಃ |
ಪುರಾ ವೃತ್ರೇಣ ದೈತ್ಯೇನ ಭಿನ್ನದೇಹಾಃ ಸಹಸ್ರಶಃ ॥ 52 ॥

ಎಲೈ ಗಾಂಧಾರಿ ಪುತ್ರನೇ, ಹಿಂದೆ ದೈತ್ಯನಾದ ವೃತ್ರನು ದೇವಶ್ರೇಷ್ಠರನ್ನು ತನ್ನ ಪರಾಕ್ರಮದಿಂದ ಸೋಲಿಸಿ ಅವರನ್ನು ಸಹಸ್ರ ಸಂಖ್ಯೆಯಲ್ಲಿ ಭಿನ್ನದೇಹರನ್ನಾಗಿ ಮಾಡಿದನು.
ವಿಹ್ವಲಾ ಹೃತವೀರ್ಯಾಶ್ಚ ಸಹೇಂದ್ರಾ ವಿಬುಧಾ ದ್ರುತಮ್ |
ಬ್ರಹ್ಮಾಣಂ ಶರಣಂ ಜಗ್ಮುಃ ವೃತ್ರಾದ್ ಭೀತಾ ಮಹಾಸುರಾತ್ ॥ 53 ॥
ವಿಹ್ವಲರೂ, ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡವರೂ ಆದ ಇಂದ್ರ ಸಹಿತರಾದ ದೇವತೆಗಳು ಮಹಾಸುರನಾದ ವೃತ್ರನಿಗೆ ಹೆದರಿ ಬ್ರಹ್ಮದೇವರಿಗೆ ಶರಣಾಗತರಾದರು.
ದೇವಾಃ
ಪ್ರಮರ್ದಿತಾನಾಂ ವೃತ್ರೇಣ ದೇವಾನಾಂ ದೇವಸತ್ತಮ |
ಗತಿರ್ಭವ ಸುರಶ್ರೇಷ್ಠ ಪಾಹಿ ನೋ ಮಹತೋ ಭಯಾತ್ ॥ 54 ॥
ದೇವತೆಗಳು ಎಲೈ ದೇವತೆಗಳಿಗೂ ಶ್ರೇಷ್ಠನಾದ ದೇವತೆಯೇ, ವೃತ್ರನಿಂದ ಮರ್ದಿಸಲ್ಪಟ್ಟ ನಮಗೆ ಗತಿಯಾಗು. ಎಲೈ ಸುರಶ್ರೇಷ್ಠನೇ, ನಮ್ಮನ್ನು ದೊಡ್ಡ ಭಯದಿಂದ ರಕ್ಷಿಸು.
ದ್ರೋಣಃ
ಅಥ ಪಾರ್ಶ್ವೇ ಸ್ಥಿತಂ ವಿಷ್ಣುಂ ಶಕ್ರಾದೀಂಶ್ಚ ಸುರೋತ್ತಮಾನ್ |
ಬ್ರಹ್ಮಾ ಪಥ್ಯಮಿದಂ ವಾಕ್ಯಂ ಜಗಾದ ಜಗತಾಂ ಪತಿಃ ॥ 55 ॥
ದ್ರೋಣ ಆಗ ಬ್ರಹ್ಮದೇವರು ಪಕ್ಕದಲ್ಲಿಯೇ ಇದ್ದ ವಿಷ್ಣುವನ್ನೂ ಮತ್ತು ಶಕ್ರಾದಿ ಸುರಶ್ರೇಷ್ಠರನ್ನೂ ನೋಡಿ ಜಗತ್ಪತಿಗಳಾದ ಅವರು ಹಿತವಾದ ಈ ಮಾತುಗಳನ್ನು ಆಡಿದರು.
ಬ್ರಹ್ಮಾ
ರಕ್ಷ್ಯಾ ಹಿ ಸತತಂ ದೇವಾಃ ಸಹೇಂದ್ರಾಃ ಸದ್ವಿಜಾತಯಃ |
ತ್ವಷ್ಟುಃ ಸುದುರ್ಧರಂ ತೇಜಃ ಯೇನ ವೃತ್ರೋ ವಿನಿರ್ಮಿತಃ ॥ 56 ॥
ಬ್ರಹ್ಮಾ ಎಲೈ ದೇವತೆಗಳೇ, ಇಂದ್ರನಿಂದ ಮತ್ತು ಬ್ರಾಹ್ಮಣರಿಂದ ಸಹಿತರಾದ ನೀವು ಯಾವಾಗಲೂ ರಕ್ಷಿಸಲ್ಪಡಬೇಕಾದವರು. ತ್ವಷ್ಟೃವಿನ ಧರಿಸಲು ಅಸಾಧ್ಯವಾದ ತೇಜಸ್ಸಿನಿಂದ ವೃತ್ರನು ನಿರ್ಮಾಣ ಮಾಡಲ್ಪಟ್ಟಿದ್ದಾನೆ.
ತ್ವಷ್ಟ್ರಾ ಪುರಾ ತಪಸ್ತಪ್ತ್ವಾ ವರ್ಷಾಯುತಶತಂ ತದಾ |
ವೃತ್ರೋ ವಿನಿರ್ಮಿತೋ ದೇವಾಃ ಪ್ರಾಪ್ಯಾನುಜ್ಞಾಂ ಮಹೇಶ್ವರಾತ್ ॥
ಎಲೈ ದೇವತೆಗಳೇ, ತ್ವಷ್ಟೃವು ಹಿಂದೆ ರುದ್ರದೇವನನ್ನು ಕುರಿತು ಹತ್ತು ಲಕ್ಷ ವರ್ಷಗಳ ಕಾಲ ತಪಸ್ಸನ್ನು ಮಾಡಿ ಅವನ ಅನುಗ್ರಹವನ್ನು ಪಡೆದು ವೃತ್ರನನ್ನು ಸೃಷ್ಟಿಸಿದ್ದಾನೆ.
ಶಂಕರಸ್ಯ ಪ್ರಸಾದಾದ್ ವೈ ಹನ್ಯಾದ್ ದೇವರಿಪುರ್ಬಲೀ |
ನಾಗತ್ವಾ ಶಂಕರಸ್ಥಾನಂ ಭಗವಾನ್ ದೃಶ್ಯತೇ ಹರಃ ॥ 58 ॥
ದೇವಶತ್ರುವೂ, ಬಲಿಷ್ಠನೂ ಆದ ವೃತ್ರನು ಶಂಕರನ ಅನುಗ್ರಹದಿಂದ ನಿಮ್ಮನ್ನು ಕೊಂದಾನು! ಶಂಕರನ ನಿವಾಸ ಸ್ಥಾನಕ್ಕೆ ಹೋಗದೆ ಪೂಜ್ಯನಾದ ಹರನು ನಿಮ್ಮಿಂದ ನೋಡಲ್ಪಡಲು ಸಾಧ್ಯವಿಲ್ಲ.
ವೃತ್ರಂ ಹನಿಷ್ಯಥ ಸುರಾಃ ಕ್ಷಿಪ್ರಂ ಗಚ್ಛೇಮ ಮಂದಿರಮ್ |
ಯತ್ರಾಸ್ತೇ ತಪಸಾಂ ಯೋನಿಃ ದಕ್ಷಯಜ್ಞವಿನಾಶನಃ ॥ 59 ॥
ಪಿನಾಕೀ ಸರ್ವಭೂತೇಶೋ ಭಗನೇತ್ರನಿಪಾತನಃ ॥ 60 ॥
ಎಲೈ ದೇವತೆಗಳೇ, ನೀವು ವೃತ್ರನನ್ನು ಕೊಲ್ಲುವಿರಿ. ನಾವು ದಕ್ಷಯಜ್ಞ ವಿನಾಶವನ್ನು ಮಾಡಿದ ತಪಸ್ಸಿಗೆ ಯೋನಿಯಾದ, ಪಿನಾಕವನ್ನು ಧರಿಸಿದ, ಸರ್ವಭೂತಪತಿಯಾದ, ಭಗನೇತ್ರನಿಪಾತನನಾದ ಶಂಕರನು ಇರುವ ಮಂದರ ಪರ್ವತಕ್ಕೆ ಶೀಘ್ರವಾಗಿ ಹೋಗೋಣ.
ದ್ರೋಣಃ
ತಂ ದೇವಾಃ ಸಹಿತಾ ಗತ್ವಾ ಬ್ರಹ್ಮಣಾ ಸಹ ಮಂದರಮ್ |
ಅಪಶ್ಯಂಸ್ತಪಸೋ ರಾಶಿಂ ಸೂರ್ಯಕೋಟಿಸಮಪ್ರಭಮ್ ॥ 61 ॥
ದ್ರೋಣ ದೇವತೆಗಳು ಬ್ರಹ್ಮದೇವರಿಂದ ಕೂಡಿಕೊಂಡು ಮಂದರ ಪರ್ವತಕ್ಕೆ ಹೋಗಿ ತಪೋರಾಶಿಯೂ, ಸೂರ್ಯಕೋಟಿ ತೇಜಸ್ಸುಳ್ಳವನೂ ಆದ ಶಂಕರನನ್ನು ನೋಡಿದರು.
ಸೋಽಬ್ರವೀತ್ ಸ್ವಾಗತಂ ದೇವಾ ಬ್ರೂತ ಕಿಂ ಕರವಾಣ್ಯಹಮ್ |
ಅಮೋಘಂ ದರ್ಶನಂ ಮಹ್ಯಂ ಕಾಮಪ್ರಾಪ್ತಿರತೋಽಸ್ತು ವಃ |
ಏವಮುಕ್ತಾಸ್ತು ತೇ ಸರ್ವೇ ಪ್ರತ್ಯೂಚುಸ್ತಂ ದಿವೌಕಸಃ ॥ 62 ॥
ಶಂಕರನು ಅವರನ್ನು ಕುರಿತು, ದೇವತೆಗಳೇ ನಿಮಗೆ ಸ್ವಾಗತ. ನಾನು ಏನು ಮಾಡಬೇಕೆಂದು ಹೇಳಿ. ನನ್ನ ದರ್ಶನವು ಎಂದೂ ವ್ಯರ್ಥವಾಗುವುದಿಲ್ಲ. ಅದರಿಂದ ನಿಮಗೆ ಅಭೀಷ್ಟ ಪ್ರಾಪ್ತಿಯಾಗಲಿ ಎಂದು ಹೇಳಿದನು. ಹೀಗೆ ಹೇಳಲ್ಪಟ್ಟ ದೇವತೆಗಳೆಲ್ಲರೂ ಶಂಕರನನ್ನು ಕುರಿತು ಮಾತನಾಡಿದರು.
ದೇವಾಃ
ಹೃತೌಜಸಾಂ ನೋ ವೃತ್ರೇಣ ಗತಿರ್ಭವ ದಿವೌಕಸಾಮ್ |
ಮೂರ್ತಿಮೀಕ್ಷಸ್ವ ನೋ ದೇವ ಪ್ರಹಾರೈರ್ಜರ್ಝರೀಕೃತಾಮ್ ॥ 63 ॥
ಶರಣಂ ತ್ವಾಂ ಪ್ರಪನ್ನಾಃ ಸ್ಮ ಗತಿರ್ಭವ ಮಹೇಶ್ವರ ॥ 64 ॥

ದೇವಾ ಎಲೈ ದೇವನೇ, ವೃತ್ರನ ಉಪದ್ರುವದಿಂದ ಸಾಮರ್ಥ್ಯವನ್ನು ಕಳೆದುಕೊಂಡ ನಮಗೆ ನೀನು ಗತಿಯಾಗು. ವೃತ್ರನ ಪ್ರಹಾರಗಳಿಂದ ಜರ್ಝರಿತವಾದ ನಮ್ಮ ಶರೀರಗಳನ್ನು ನೋಡು. ಮಹೇಶ್ವರನೇ, ನಿನಗೆ ಶರಣಾಗತರಾಗಿದ್ದೇವೆ. ನಮಗೆ ಗತಿಯಾಗು.
ಈಶ್ವರಃ
ವಿದಿತಂ ಮೇ ಯಥಾ ದೇವಾಃ ಕೃತ್ಯೇಯಂ ಸುಮಹಾಬಲಾ |
ತ್ವಷ್ಟುಸ್ತೇಜೋದ್ಭವಾ ಘೋರಾ ದುರ್ನಿವಾರ್ಯಾऽಕೃತಾತ್ಮಭಿಃ |
ಅವಶ್ಯಂ ತು ಮಯಾ ಕಾರ್ಯಂ ಸಾಹ್ಯಂ ಸರ್ವದಿವೌಕಸಾಮ್ ॥65॥
ಈಶ್ವರ ಎಲೈ ದೇವತೆಗಳೇ, ಈ ಕೃತ್ಯವು (ಭೂತವು) ತ್ವಷ್ಟೃವಿನ ತೇಜಸ್ಸಿನಿಂದ ಜನಿಸಿ, ಮಹಾಬಲವನ್ನು ಹೊಂದಿದುದಾಗಿ, ಘೋರವಾಗಿ, ಮನೋಜಯವಿಲ್ಲ- ದವರಿಂದ ನಿವಾರಿಸಲು ಅಸಾಧ್ಯವಾಗಿ ಹೇಗೆ ಇದೆ ಎಂದು ನಾನು ತಿಳಿದಿದ್ದೇನೆ. ನಾನು ಎಲ್ಲ ದೇವತೆಗಳಿಗೂ ಅವಶ್ಯವಾಗಿ ಸಹಾಯವನ್ನು ಮಾಡಲೇಬೇಕು.
ಮಮೇದಂ ಗಾತ್ರಜಂ ಶಕ್ರ ಕವಚಂ ಗೃಹ್ಯ ಭಾಸ್ವರಮ್ |
ಬಧಾನೈನಂ ತು ಮಂತ್ರೇಣ ಮಾನಸೇನ ಸುರೇಶ್ವರ ॥ 66 ॥
ಎಲೈ ಇಂದ್ರನೇ, ನನ್ನ ದೇಹದಿಂದ ಉದ್ಭವಿಸಿದ ಈ ಪ್ರಕಾಶಮಾನವಾದ ಕವಚವನ್ನು ಧರಿಸುವವನಾಗು. ಎಲೈ ಸುರೇಶ್ವರನೇ, ಈ ಮಂತ್ರವನ್ನು ಮನಸ್ಸಿನಲ್ಲಿ ಧರಿಸಿ ಕವಚವನ್ನು ಧರಿಸು.
ದ್ರೋಣಃ
ಇತ್ಯುಕತ್ವ ವರದಃ ಪ್ರಾದಾದ್ ವರ್ಮ ತನ್ಮಂತ್ರಮೇವ ಚ |
ಸ ತೇನ ವರ್ಮಣಾ ಗುಪ್ತಃ ಪ್ರಾಯಾದ್ ವೃತ್ರಚಮೂಂ ಪ್ರತಿ ॥ 67 ॥
ದ್ರೋಣ ಹೀಗೆ ಹೇಳಿದ ವರದನಾದ ಮಹೇಶ್ವರನು ಆ ಕವಚವನ್ನು ಮತ್ತು ಆ ಮಂತ್ರವನ್ನು ಶಕ್ರನಿಗೆ ನೀಡಿದನು. ಆ ಕವಚದಿಂದ ರಕ್ಷಿತನಾಗಿ ಇಂದ್ರನು ವೃತ್ರ ಸೇನೆಯ ಜೊತೆಯಲ್ಲಿ ಯುದ್ಧವನ್ನು ಮಾಡಲು ಹೊರಟನು.
ನಾನಾವಿಧೈಸ್ತು ಶಸೌತ್ರಘೈಃ ಪಾತ್ಯಮಾನೈಃ ಸಹಸ್ರಶಃ |
ನ ಸಂಧಿಃ ಶಕ್ಯತೇ ಭೇತ್ತುಂ ವರ್ಮಬಂಧಸ್ಯ ತಸ್ಯ ತು ॥ 68 ॥
ನಾನಾ ವಿಧವಾದ ಶಸ್ತ್ರ ಸಮೂಹಗಳನ್ನು ಸಹಸ್ರ ಸಂಖ್ಯೆಯಲ್ಲಿ ಪ್ರಯೋಗ ಮಾಡಿದರೂ ಇಂದ್ರನು ಧರಿಸಿದ ಕವಚಗಳ ಸಂಧಿಗಳನ್ನು ಭೇದಿಸಲು ವೃತ್ರ ಸೈನ್ಯಕ್ಕೆ ಸಾಧ್ಯವಾಗಲಿಲ್ಲ.
ಸ ತೇನ ವರ್ಮಣಾ ಗುಪ್ತೋ ವೃತ್ರಂ ದೇವರಿಪುಂ ತದಾ |
ಜಘಾನ ಸಮರೇऽಭೀತಃ ಶಕ್ರೋ ದೇವಾಗ್ರಣೀಃ ಸ್ವಯಮ್ ॥ 69 ॥
ದೇವನಾಯಕನಾದ ಇಂದ್ರನು ಆ ಕವಚದಿಂದ ರಕ್ಷಿತನಾಗಿ ಯುದ್ಧದಲ್ಲಿ ಭಯಗೊಳ್ಳದೆ, ಆಗ ದೇವರಿಪುವಾದ ವೃತ್ರನನ್ನು ತಾನೇ ಸಂಹರಿಸಿದನು.
ಸ ತನ್ಮಂತ್ರಮಯಂ ಬಂಧಂ ವರ್ಮ ಚಾಂಗಿರಸೇ ದದೌ ॥ 70 ॥
ಅಂಗಿರಾಃ ಪ್ರಾಹ ಪುತ್ರಾಯ ಮಂತ್ರಜ್ಞಾಯ ಬೃಹಸ್ಪತೇಃ |
ಬೃಹಸ್ಪತಿರಥೋವಾಚ ಅಗ್ನಿವೇಶ್ಯಾಯ ಧೀಮತೇ ॥ 71 ॥
ಅಗ್ನಿವೇಶ್ಯೋ ಮಮ ಪ್ರಾದಾತ್ ತೇನ ಬಧ್ನಾಮಿ ವರ್ಮ ತೇ |
ತವಾದ್ಯ ದೇಹರಕ್ಷಾರ್ಥಂ ಮಂತ್ರೇಣ ನೃಪಸತ್ತಮ ॥ 72 ॥
ಅವನು ಆ ಮಂತ್ರ ಪೂರ್ವಕವಾದ ಬಂಧನವನ್ನು ಮತ್ತು ಕವಚವನ್ನು ಅಂಗಿರಸರಿಗೆ ಕೊಟ್ಟನು. ಅಂಗಿರಸರು ತಮ್ಮ ಪುತ್ರರೂ, ಮಂತ್ರಜ್ಞರೂ ಆದ ಬೃಹಸ್ಪತಿಗಳಿಗೆ ಕೊಟ್ಟರು. ಬೃಹಸ್ಪತಿಗಳು ಮೇಧಾವಿಯಾದ (ನನ್ನ ಚಿಕ್ಕಪ್ಪನಾದ) ಅಗ್ನಿವೇಶ್ಯರಿಗೆ ಅದನ್ನು ಉಪದೇಶಿಸಿದರು. ಅಗ್ನಿವೇಶ್ಯರು ನನಗೆ ನೀಡಿದರು. ಎಲೈ ನೃಪಶ್ರೇಷ್ಠನೇ, ನಿನ್ನ ದೇಹದ ರಕ್ಷಣೆಗಾಗಿ ನಾನು ಈ ದಿನ ಆ ಕವಚವನ್ನು ನಿನಗೆ ಕಟ್ಟುತ್ತಿದ್ದೇನೆ.
ಸಂಜಯಃ
ಏವಮುಕತ್ವ ತತೋ ದ್ರೋಣಃ ತವ ಪುತ್ರಂ ಮಹಾದ್ಯುತಿಃ |
ಪುನರೇವ ವಚಃ ಪ್ರಾಹ ಶನೈರಾಚಾರ್ಯಪುಂಗವಃ ॥ 73 ॥
ಸಂಜಯ ಮಹಾದ್ಯುತಿಯಾದ ದ್ರೋಣರು ನಿನ್ನ ಪುತ್ರನನ್ನು ಕುರಿತು ಹೀಗೆ ಹೇಳಿ, ಆಚಾರ್ಯಶ್ರೇಷ್ಠರಾದ ಅವರು ಪುನಃ ನಿಧಾನವಾಗಿ ಹೇಳಿದರು.
ದ್ರೋಣಃ
ಬ್ರಹ್ಮಸೂತ್ರೇಣ ಬಧ್ನಾಮಿ ಕವಚಂ ತವ ಪಾರ್ಥಿವ |
ಹಿರಣ್ಯಗರ್ಭೇಣ ಯಥಾ ಬದ್ಧಂ ವಿಷ್ಣೋಸ್ತು ವೈಶಸೇ ॥ 74 ॥
ಯಥಾ ಚ ಬ್ರಹ್ಮಣಾ ಬದ್ಧಂ ಸಂಗ್ರಾಮೇ ತಾರಕಾಮಯೇ |
ಶಕ್ರಸ್ಯ ಕವಚಂ ದಿವ್ಯಂ ತಥಾ ಬಧ್ನಾಮ್ಯಹಂ ತವ ॥ 75 ॥
ದ್ರೋಣರು ಎಲೈ ರಾಜನೇ, ಬ್ರಹ್ಮಸೂತ್ರದಿಂದ ನಿನಗೆ ಕವಚವನ್ನು ಕಟ್ಟುತ್ತಿದ್ದೇನೆ. ಯುದ್ಧದ ಸಮಯದಲ್ಲಿ ವಿಷ್ಣುವಿಗೆ ಹಿರಣ್ಯಗರ್ಭರಾದ ಬ್ರಹ್ಮದೇವರು ಕಟ್ಟಿದಂತೆ ನಿನಗೆ ಬ್ರಹ್ಮಸೂತ್ರದಿಂದ ಈ ಕವಚವನ್ನು ಕಟ್ಟುತ್ತಿದ್ದೇನೆ. ಹೇಗೆ ತಾರಕಾಮಯವಾದ ಯುದ್ಧದಲ್ಲಿ ಬ್ರಹ್ಮದೇವರು ಇಂದ್ರನಿಗೆ ಕವಚವನ್ನು ತೊಡಿಸಿದರೋ ಹಾಗೆ ನಾನು ನಿನಗೆ ಈ ದಿವ್ಯವಾದ ಕವಚವನ್ನು ತೊಡಿಸುತ್ತಿದ್ದೇನೆ.
ಸಂಜಯಃ

ಬದ್ಧ್ವಾ ತು ಕವಚಂ ತಸ್ಯ ಮಂತ್ರೇಣ ವಿಧಿಪೂರ್ವಕಮ್ |
ಪ್ರೇಷಯಾಮಾಸ ರಾಜಾನಂ ಯುದ್ಧಾಯ ಮಹತೇ ದ್ವಿಜಃ ॥ 76 ॥
ಸಂಜಯ ಬ್ರಾಹ್ಮಣರಾದ ದ್ರೋಣರು ವಿಧಿಪೂರ್ವಕವಾಗಿ ಮತ್ತು ಮಂತ್ರ ಪೂರ್ವಕವಾಗಿ ರಾಜನಿಗೆ ಆ ಕವಚವನ್ನು ತೊಡಿಸಿ, ಅವನನ್ನು ದೊಡ್ಡ ಯುದ್ಧಕ್ಕೆ ಕಳುಹಿಸಿದರು.
ಸ ಸನ್ನದ್ಧೋ ಮಹಾಬಾಹುರಾಚಾರ್ಯೇಣ ಮಹಾತ್ಮನಾ |
ಪ್ರಸ್ಥಿತಃ ಸಹಸಾ ರಾಜನ್ ಯತ್ರ ಯಾತೋ ಧನಂಜಯಃ ॥ 77 ॥
ಎಲೈ ರಾಜನೇ, ಮಹಾತ್ಮರಾದ ಆಚಾರ್ಯರಿಂದ ಸನ್ನದ್ಧನಾದ ಮಹಾಬಾಹುವಾದ ದುರ್ಯೋಧನನು ತಕ್ಷಣದಲ್ಲಿಯೇ ಅರ್ಜುನನು ಹೋದ ಮಾರ್ಗದಲ್ಲಿ ಹೊರಟನು.
ತತೋ ರಥಸಹಸ್ರೇಣ ತ್ರಿಗರ್ತಾನಾಂ ಪ್ರಹಾರಿಣಾಮ್ |
ತಥಾ ದಂತಿಸಹಸ್ರೇಣ ಮತ್ತಾನಾಂ ವೀರ್ಯಶಾಲಿನಾಮ್ ॥ 78 ॥
ಅಶ್ವಾನಾಂ ನಿಯುತೇನೈವ ತಥಾಽನ್ಯೈಶ್ಚ ಮಹಾರಥೈಃ |
ವೃತಃ ಪ್ರಾಯಾನ್ಮಹಾಬಾಹುರರ್ಜುನಸ್ಯ ರಥಂ ಪ್ರತಿ |
ದ್ರುತಂ ಪ್ರಯಾತಸ್ತೇ ಪುತ್ರೋ ಭೃಶಂ ಕ್ರೋಧಸಮನ್ವಿತಃ ॥ 79 ॥
ಆಗ ಪ್ರಹಾರಶೀಲರಾದ ತ್ರಿಗರ್ತರ ಸಹಸ್ರ ರಥಗಳಿಂದಲೂ, ಮದಿಸಿದ ಪರಾಕ್ರಮವುಳ್ಳ ಸಹಸ್ರ ಗಜಗಳಿಂದಲೂ, ಹತ್ತು ಸಾವಿರ ಕುದುರೆಗಳಿಂದಲೂ, ಇನ್ನೂ ಅನೇಕ ಮಹಾರಥರಿಂದಲೂ ಪರಿವೃತನಾಗಿ ಮಹಾಬಾಹುವಾದ ಸುಯೋಧನನು ಅರ್ಜುನನ ರಥದ ಕಡೆಗೆ ಹೊರಟನು. ಕ್ರೋಧ ಸಮನ್ವಿತನಾದ ನಿನ್ನ ಪುತ್ರನು ಬಹಳ ಶೀಘ್ರವಾಗಿ ಹೊರಟನು.
ನಾನಾವಾದಿತ್ರಘೋಷೇಣ ನಾನಾಜನಪದಾಯುತಃ |
ತವ ಪುತ್ರಃ ಪ್ರಯಾತಸ್ತು ಯಥಾ ವೈರೋಚನಿಸ್ತಥಾ ॥ 80 ॥
ನಾನಾ ವಾದ್ಯಘೋಷಗಳಿಂದಲೂ, ನಾನಾ ದೇಶದ ಯೋಧರಿಂದಲೂ ಸಂವೃತನಾಗಿ ನಿನ್ನ ಪುತ್ರನು ವಿರೋಚನನ ಮಗನಾದ ಬಲಿಯು ಯುದ್ಧಕ್ಕೆ ಹೊರಟಂತೆ ಹೊರಟನು.
ತತಃ ಶಬ್ದೋ ಮಹಾನಾಸೀತ್ ಸೈನ್ಯಾನಾಂ ತವ ಭಾರತ |
ಅಗಾಧಂ ಪ್ರಸ್ಥಿತಂ ದೃಷ್ಟ್ವಾ ಸಮುದ್ರಮಿವ ಕೌರವಮ್ ॥ 81 ॥
ಎಲೈ ಭಾರತನೇ, ಆಗ ಅಗಾಧ ಸಮುದ್ರವನ್ನು ಪ್ರವೇಶಿಸುವಂತೆ ಕೌರವನು ಹೊರಟುದುದನ್ನು ನೋಡಿ ನಿನ್ನ ಸೈನ್ಯಗಳಲ್ಲಿ ದೊಡ್ಡ ನಾದ ಉಂಟಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರ್ಯಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ನಾಲ್ಕನೆಯ ಅಧ್ಯಾಯ
ರಾಜರ ದ್ವಂದ್ವಯುದ್ಧಗಳು.
ಸಂಜಯಃ
ಪ್ರವಿಷ್ಟಯೋರ್ಮಹಾರಾಜ ಪಾರ್ಥವಾರ್ಷ್ಣೇಯಯೋ ರಣೇ |
ದುರ್ಯೋಧನೇ ಪ್ರಯಾತೇ ಚ ಪೃಷ್ಠತಃ ಪುರುಷರ್ಷಭಮ್ ॥ 1 ॥
ಜವೇನಾಭ್ಯದ್ರವನ್ ದ್ರೋಣಂ ಮಹತಾ ನಿಸ್ವನೇನ ಚ |
ಪಾಂಡವಾಃ ಸೋಮಕೈಃ ಸಾರ್ಧಂ ತತೋ ಯುದ್ಧಮವರ್ತತ ॥ 2 ॥
ಸಂಜಯ ಎಲೈ ಮಹಾರಾಜನೇ, ಕೃಷ್ಣಾರ್ಜುನರು ಸೈನ್ಯವನ್ನು ಪ್ರವೇಶಿಸುತ್ತಿರಲು ದುರ್ಯೋಧನನು ಪುರುಷಶ್ರೇಷ್ಠನಾದ ಅರ್ಜುನನ ಹಿಂದೆ ಹೋಗುತ್ತಿರಲು ಸೋಮಕರ ಜೊತೆಯಲ್ಲಿ ಕೂಡಿದ ಪಾಂಡವರು ಬಹಳ ವೇಗದಿಂದ ಮತ್ತು ದೊಡ್ಡ ನಾದದಿಂದ ದ್ರೋಣರ ಕಡೆಗೆ ಸಾಗಿದರು. ಅನಂತರ ಯುದ್ಧವು ಜರುಗಿತು.
ತದ್ ಯುದ್ಧಮಭವತ್ ತೀವ್ರಂ ತುಮುಲಂ ರೋಮಹರ್ಷಣಮ್ |
ಪಾಂಚಾಲಾನಾಂ ಕುರೂಣಾಂ ಚ ವ್ಯೂಹಸ್ಯ ಪುರತೋಽದ್ಭುತಮ್ ॥3॥
ವ್ಯೂಹದ ಮುಂಭಾಗದಲ್ಲಿ ಪಾಂಚಾಲರಿಗೂ ಮತ್ತು ಕೌರವರಿಗೂ ಅದ್ಭುತವೂ, ತೀವ್ರವೂ ಮತ್ತು ರೋಮಾಂಚಕಾರಿಯೂ ಆದ ಯುದ್ಧವು ನಡೆಯಿತು.
ರಾಜನ್ ಕದಾಚಿನ್ನಾಸ್ಮಾಭಿರ್ದೃಷ್ಟಂ ತಾದೃಙ್ ನ ಚ ಶ್ರುತಮ್ |
ಯಾದೃಙ್ ಮಧ್ಯಗತೇ ಸೂರ್ಯೇ ಯುದ್ಧಮಾಸೀದ್ ವಿಶಾಂಪತೇ ॥4॥
ಎಲೈ ರಾಜನೇ, ಸೂರ್ಯನು ಮಧ್ಯಗತನಾಗಿರುವಾಗ ಎಂತಹ ಯುದ್ಧವು ನಡೆಯಿತೋ ಅಂತಹ ಯುದ್ಧವನ್ನು ನಾವು ಎಂದೂ ನೋಡಿಯೂ ಇರಲಿಲ್ಲ, ಕೇಳಿಯೂ ಇರಲಿಲ್ಲ.
ಧೃಷ್ಟದ್ಯುಮ್ನಮುಖಾಃ ಪಾರ್ಥಾ ವ್ಯೂಢಾನೀಕಾಃ ಪ್ರಹಾರಿಣಃ |
ದ್ರೋಣಸ್ಯ ಸೈನ್ಯಂ ತೇ ಸರ್ವೇ ಶರವರ್ಷೈರವಾಕಿರನ್ ॥ 5 ॥
ಸೈನ್ಯವನ್ನು ವ್ಯೂಹ ಮಾಡಿದ, ಪ್ರಹಾರಶೀಲರಾದ ಧೃಷ್ಟದ್ಯುಮ್ನ ಮೊದಲಾದ ಪಾಂಡವರೆಲ್ಲರೂ ದ್ರೋಣರ ಸೈನ್ಯದ ಮೇಲೆ

ಬಾಣಗಳ ಮಳೆಯನ್ನು ಸುರಿಸಿದರು.
ವಯಂ ದ್ರೋಣಂ ಪುರಸ್ಕೃತ್ಯ ಸರ್ವಶಸ್ತ್ರಭೃತಾಂ ವರಮ್ |
ಪಾರ್ಷತಪ್ರಮುಖಾನ್ ಪಾರ್ಥಾನಭಿವರ್ಷಾಮ ಸಾಯಕೈಃ ॥ 6 ॥
ನಾವು ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರನ್ನು ಮುಂದೆ ಮಾಡಿಕೊಂಡು ಧೃಷ್ಟದ್ಯುಮ್ನ ಮೊದಲಾದ ಪಾಂಡವರ ಮೇಲೆ ಬಾಣಗಳ ಮಳೆಯನ್ನು ಕರೆದೆವು.
ಮಹಾಮೇಘಾವಿವೋದೀರ್ಣೌ ಮಿಶ್ರವಾತೌ ಹಿಮಾತ್ಯಯೇ |
ಸೇನಾಗ್ರೇ ತೇ ಪ್ರಕಾಶೇತೇ ರುಚಿರೇ ರತ್ನಭೂಷಿತೇ ॥ 7 ॥
ರತ್ನಭೂಷಿತವಾದ ಮತ್ತು ಮನೋಹರವಾದ ಆ ಎರಡು ಸೇನಾ ಮುಂಭಾಗಗಳು ಹಿಮ ಋತುವಿನ ಕೊನೆಯಲ್ಲಿ ವಾಯುವಿನಿಂದ ಮಿಶ್ರವಾದ ಉನ್ನದ್ಧವಾದ ಎರಡು ಮಹಾಮೇಘಗಳಂತೆ ಪ್ರಕಾಶಿಸಿದವು.
ಸಮೇತ್ಯ ತೇ ಮಹಾಸೇನೇ ಚಕ್ರತುರ್ವೇಗಮುತ್ತಮಮ್ |
ಜಾಹ್ನವೀಯಮುನೇ ನದ್ಯೌ ಪ್ರಾವೃಷೀವೋಲ್ಬಣೋದಕೇ ॥ 8 ॥
ಆ ಎರಡು ಸೈನ್ಯಗಳು ಪರಸ್ಪರವಾಗಿ ಸಂಧಿಸಿ, ಮಳೆಗಾಲದಲ್ಲಿ ಉಲ್ಬಣವಾದ ಉದಕದಿಂದ ಕೂಡಿದ ಗಂಗಾ-ಯಮುನಾ ನದಿಗಳಂತೆ ಶ್ರೇಷ್ಠವಾದ ವೇಗವನ್ನು ತಾಳಿದವು.
ನಾನಾಶಸ್ತ್ರಪುರೋವಾತಃ ದ್ವಿಪಾಶ್ವರಥಸಂವೃತಃ |
ಗದಾವಿದ್ಯುನ್ಮಹಾರೌದ್ರಃ ಸಂಗ್ರಾಮಜಲದೋ ಮಹಾನ್ ॥ 9 ॥
ಭಾರದ್ವಾಜಾನಿಲೋದ್ಧೂತಃ ಶರಧಾರಾಃ ಸಹಸ್ರಶಃ |
ಅಭ್ಯವರ್ಷನ್ ಮಹಾರೌದ್ರಂ ಪಾಂಡುಸೈನ್ಯಾಗ್ನಿಮುತ್ಥಿತಮ್ ॥ 10 ॥
ನಾನಾ ಶಸ್ತ್ರಗಳೆಂಬ ಪೂರ್ವವಾಯುವಿನಿಂದ ಕೂಡಿದ, ಹಯಾಶ್ವ-ರಥಗಳಿಂದ ಸಂವೃತವಾದ ಗದೆಗಳೆಂಬ ವಿದ್ಯುತ್ತುಗಳಿಂದ ಮಹಾಭಯಂಕರವಾದ ಸಂಗ್ರಾಮವೆಂಬ ದೊಡ್ಡ ಮೋಡವು ದ್ರೋಣರೆಂಬ ವಾಯುವಿನಿಂದ ಮೇಲಕ್ಕೆ ಹಾರಿಸಲ್ಪಟ್ಟು ಸಹಸ್ರ ಶರಧಾರೆಗಳಿಂದ ಉತ್ಥಿತವಾದ ಪಾಂಡವರ ಮಹಾಭಯಂಕರವಾದ ಸೈನ್ಯಾಗ್ನಿಯ ಮೇಲೆ ಮಳೆಗರೆಯಿತು.
ಸಮುದ್ರಮಿವ ಘರ್ಮಾಂತೇ ವಿವಾನ್ ಘೋರೋ ಮಹಾನಿಲಃ |
ವ್ಯಕ್ಷೋಭಯದನೀಕಾನಿ ಪಾಂಡವಾನಾಂ ದ್ವಿಜೋತ್ತಮಃ ॥ 11 ॥
ಬೇಸಿಗೆಯ ಕೊನೆಯಲ್ಲಿ ಬೀಸುವ ಘೋರವಾದ ಬಿರುಗಾಳಿಗೆ ಸಿಲುಕಿದ ಸಮುದ್ರದಂತೆ ದ್ವಿಜಶ್ರೇಷ್ಠರಾದ ದ್ರೋಣರು ಪಾಂಡವರ ಸೇನೆಯನ್ನು ಕ್ಷೋಭೆಗೊಳಿಸಿದರು.
ತೇಽಪಿ ಸರ್ವಪ್ರಯತ್ನೇನ ದ್ರೋಣಮೇವ ಸಮಾದ್ರವನ್ |
ಬಿಭಿತ್ಸಂತೋ ಮಹಾಸೇತುಂ ವಾರ್ಯೋಘಾಃ ಪ್ರಬಲಾ ಇವ ॥ 12 ॥
ಪಾಂಡವ ಯೋಧರೂ ಸಹ ಪ್ರಬಲವಾದ ಜಲಸಮೂಹಗಳು ಮಹಾಸೇತುವನ್ನು ಭೇದಿಸಲು ಬಯಸಿದಂತೆ ಸರ್ವಪ್ರಯತ್ನದಿಂದ ದ್ರೋಣರ ಕಡೆಗೆ ಮುನ್ನುಗ್ಗಿದರು.
ವಾರಯಾಮಾಸ ತಾನ್ ದ್ರೋಣೋ ವಾರ್ಯೋಘಾನಚಲೋ ಯಥಾ|
ಪಾಂಡವಾನ್ ಸಮರೇ ಕ್ರುದ್ಧಾನ್ ಪಾಂಚಾಲಾಂಶ್ಚ ಸಕೇಕಯಾನ್ ॥
ಪರ್ವತವು ಜಲಪ್ರವಾಹವನ್ನು ತಡೆದಂತೆ ದ್ರೋಣರು ಕ್ರುದ್ಧರಾದ ಪಾಂಡವರನ್ನೂ, ಕೇಕಯ ಸಹಿತರಾದ ಪಾಂಚಾಲರನ್ನೂ ತಡೆದರು.
ಪರ್ಯವರ್ತಂತ ರಾಜಾನಃ ಕುರ್ವಾಣಾಸ್ತವ ಶಾಸನಮ್ |
ಮಹಾಬಲಾ ರಣೇ ಶೂರಾಃ ಪಾಂಚಾಲಾನನ್ವವಾರಯನ್ ॥ 14 ॥
ಮಹಾಬಲರೂ, ಶೂರರೂ ಆದ ರಾಜರು ನಿನ್ನ ಶಾಸನವನ್ನು ಪಾಲಿಸುತ್ತಾ ಅಲ್ಲಿಯೇ ನಿಂತು ರಣರಂಗದಲ್ಲಿ ಪಾಂಚಾಲರನ್ನು ತಡೆದರು.
ತತೋ ರಣೇ ನರವ್ಯಾಘ್ರಃ ಪಾರ್ಷತಃ ಪಾಂಡವೈಃ ಸಹ |
ಸಂಜಘಾನಾಸಕೃದ್ ದ್ರೋಣಂ ಬಿಭಿತ್ಸುರರಿವಾಹಿನೀಮ್ ॥ 15 ॥
ಆಗ ನರವ್ಯಾಘ್ರನಾದ ಧೃಷ್ಟದ್ಯುಮ್ನನು ಪಾಂಡವರ ಜೊತೆಯಲ್ಲಿ ರಣರಂಗದಲ್ಲಿ ದ್ರೋಣರ ಸೈನ್ಯವನ್ನು ಭೇದಿಸಲು ಬಯಸಿ ಅನೇಕ ಬಾರಿ ದ್ರೋಣರಿಗೆ ಪ್ರಹಾರವನ್ನು ಮಾಡಿದನು.
ಯಥೈವ ಶರವರ್ಷಾಣಿ ದ್ರೋಣೋ ವರ್ಷತಿ ಪಾರ್ಷತೇ |
ತಥೈವ ಶರವರ್ಷಾಣಿ ಧೃಷ್ಟದ್ಯುಮ್ನೋಽಪ್ಯವರ್ಷತ ॥ 16 ॥
ದ್ರೋಣರು ಧೃಷ್ಟದ್ಯುಮ್ನನ ಮೇಲೆ ಹೇಗೆ ಬಾಣಗಳ ಮಳೆಯನ್ನು ಸುರಿಸುತ್ತಾರೆಯೋ ಹಾಗೆಯೇ ಧೃಷ್ಟದ್ಯುಮ್ನನೂ ಅವರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ಸನಿಸ್ತ್ರಿಂಶಪುರೋವಾತಃ ಶಕ್ತಿಪ್ರಾಸರ್ಷ್ಟಿಸಂವೃತಃ |
ಜ್ಯಾವಿದ್ಯುಚ್ಚಾಪನಿರ್ಹ್ರಾದೋ ಧೃಷ್ಟದ್ಯುಮ್ನಬಲಾಹಕಃ ॥ 17 ॥
ಶರಧಾರಾಶ್ಮವರ್ಷಾಣಿ ವ್ಯಸೃಜತ್ ಸರ್ವತೋದಿಶಮ್ |
ನಿಘ್ನಂಸ್ತತ್ರ ನರಾಶ್ವೌಘಾನ್ ಪಾತಯಾಮಾಸ ವಾಹಿನೀಮ್ ॥ 18 ॥
ಖಡ್ಗಗಳೆಂಬ ಪೂರ್ವವಾಯುವಿನಿಂದ ಸಹಿತವಾದ, ಶಕ್ತಿ-ಪ್ರಾಸ ಮತ್ತು ಋಷ್ಟಿಗಳೆಂಬ ಆಯುಧಗಳಿಂದ ಕೂಡಿದ, ಹೆದೆಗಳೆಂಬ ಮಿಂಚುಗಳಿಂದಲೂ, ಧನುಸ್ಸೆಂಬ ಗುಡುಗುಗಳಿಂದಲೂ ಕೂಡಿದ ಧೃಷ್ಟದ್ಯುಮ್ನನೆಂಬ ಮೋಡವು ಎಲ್ಲ ದಿಕ್ಕುಗಳಲ್ಲಿಯೂ ಬಾಣಗಳ

ಧಾರೆ ಎಂಬ ಕಲ್ಲುಗಳ ಮಳೆಯನ್ನು ಕರೆದು, ಪದಾತಿಗಳನ್ನು ಮತ್ತು ಅಶ್ವಸಮೂಹಗಳನ್ನು ಕೊಲ್ಲುತ್ತಾ ಅಲ್ಲಿ ನಿನ್ನ ಸೈನ್ಯವನ್ನು ಬೀಳಿಸಿತು.
ಯಂ ಯಮಾರ್ಚ್ಛಚ್ಚರೈರ್ದ್ರೋಣಃ ಪಾಂಡವಾನಾಂ ರಥವ್ರಜಮ್ |
ತಸ್ಮಾತ್ ತಸ್ಮಾಚ್ಚರೈರ್ದ್ರೋಣಮಪಾಕರ್ಷತ ಪಾರ್ಷತಃ ॥ 19 ॥
ದ್ರೋಣರು ಪಾಂಡವರ ರಥ ಸಮೂಹದಲ್ಲಿ ಯಾರ ಯಾರನ್ನು ಉದ್ದೇಶಿಸಿ ಶಸ್ತ್ರ ಪ್ರಯೋಗವನ್ನು ಮಾಡಲು ಬಯಸಿದರೋ ಧೃಷ್ಟದ್ಯುಮ್ನನು ಅವರವರಿಂದ ದ್ರೋಣರನ್ನು ತನ್ನ ಬಾಣಗಳಿಂದ ಬೇರೆ ಕಡೆಗೆ ಎಳೆದನು.
ತಥಾ ತು ಯತಮಾನಸ್ಯ ದ್ರೋಣಸ್ಯ ಯುಧಿ ಭಾರತ |
ಧೃಷ್ಟದ್ಯುಮ್ನಂ ಸಮಾಸಾದ್ಯ ತ್ರಿಧಾ ಸೈನ್ಯಮಭಿದ್ಯತ ॥ 20 ॥
ಎಲೈ ಭಾರತನೇ, ರಣರಂಗದಲ್ಲಿ ಹಾಗೆ ಪ್ರಯತ್ನಪಡುತ್ತಿದ್ದ ದ್ರೋಣರ ಸೈನ್ಯವು ಧೃಷ್ಟದ್ಯುಮ್ನನನ್ನು ಸಮೀಪಿಸಿ ಮೂರು ಭಾಗವಾಗಿ ಒಡೆಯಿತು.
ಭೋಜಮೇಕೇಽಭ್ಯವರ್ಷಂತ ಜಲಸಂಧಂ ತಥಾಽಪರೇ |
ಪಾಂಡವೈರ್ಹನ್ಯಮಾನಾಶ್ಚ ದ್ರೋಣಮೇವಾಪರೇ ವ್ರಜನ್ ॥ 21 ॥
ಕೆಲವರು ಕೃತವರ್ಮನ ಭಾಗದ ಮೇಲೆ ಬಾಣಗಳನ್ನು ಪ್ರಯೋಗಿಸಿದರು. ಇನ್ನು ಕೆಲವರು ಜಲಸಂಧನ ಭಾಗದ ಮೇಲೆ ಬಾಣಗಳನ್ನು ಕರೆದರು. ಇನ್ನು ಕೆಲವರು ದ್ರೋಣರ ಭಾಗದ ಮೇಲೆಯೇ ಎರಗಿದರು. ಎಲ್ಲರೂ ಪಾಂಡವರಿಂದ ಪ್ರಹಾರಕ್ಕೊಳಗಾದರು.
ಸಂಘಾತೇ ಯತತೇ ದ್ರೋಣಃ ಸೈನ್ಯಸ್ಯ ರಥಿನಾಂ ವರಃ |
ವ್ಯಧಮಚ್ಚಾಪಿ ತಾನ್ಯಸ್ಯ ಧೃಷ್ಟದ್ಯುಮ್ನೋ ಮಹಾರಥಃ ॥ 22 ॥
ರಥಿಶ್ರೇಷ್ಠರಾದ ದ್ರೋಣರು ಸೈನ್ಯವನ್ನು ಒಂದುಗೂಡಿಸಲು ಪ್ರಯತ್ನಪಟ್ಟರು. ಆದರೆ ಮಹಾರಥನಾದ ಧೃಷ್ಟದ್ಯುಮ್ನನು ಆ ಸೈನ್ಯವನ್ನು ಭಗ್ನಗೊಳಿಸಿದನು.
ಧಾರ್ತರಾಷ್ಟ್ರಾಸ್ತಥಾ ಭೂತಾ ವಧ್ಯಂತೇ ಪಾಂಡುಸೃಂಜಯೈಃ |
ಅಗೋಪಾಃ ಪಶವೋಽರಣ್ಯೇ ಬಹುಭಿಃ ಶ್ವಾಪದೈರಿವ ॥ 23 ॥
ಅಂತಹ ಸ್ಥಿತಿಗೆ ತಲುಪಿದ ಧೃತರಾಷ್ಟ್ರ ಪುತ್ರರು ಪಾಂಡವರಿಂದ ಮತ್ತು ಸೃಂಜಯರಿಂದ ಅರಣ್ಯದಲ್ಲಿ ರಕ್ಷಕರಿಲ್ಲದ ಪಶುಗಳು ಮಾಂಸಾಹಾರಿ ಪ್ರಾಣಿಗಳಿಗೆ ಸಿಲುಕಿದಂತೆ ಪ್ರಹಾರಕ್ಕೆ ಒಳಗಾದರು.
ಕಾಲಃ ಸಂಗ್ರಸತೇ ಯೋಧಾನ್ ಧೃಷ್ಟದ್ಯುಮ್ನೇನ ಮೋಹಿತಾನ್ |
ಸಂಗ್ರಾಮೇ ತುಮುಲೇ ತಸ್ಮಿನ್ನಿತಿ ಸಮ್ಮೇನಿರೇ ಜನಾಃ ॥ 24 ॥
ಈ ಘೋರವಾದ ಸಂಗ್ರಾಮದಲ್ಲಿ ಧೃಷ್ಟದ್ಯುಮ್ನನಿಂದ ಮೋಹಿತರಾದ ಯೋಧರನ್ನು ಕಾಲವೇ ಸಂಹರಿಸುತ್ತಿದೆ ಎಂದು ಜನರು ತಿಳಿದರು.
ಕುನೃಪಸ್ಯ ಯಥಾ ರಾಷ್ಟ್ರಂ ವ್ಯಾಧಿದುರ್ಭಿಕ್ಷತಸ್ಕರೈಃ |
ಪೀಡ್ಯತೇ ತದ್ವದಾಪನ್ನಾ ಪಾಂಡವೈಸ್ತವ ವಾಹಿನೀ ॥ 25 ॥
ಕೆಟ್ಟ ರಾಜನ ಆಳ್ವಿಕೆಯಲ್ಲಿ ರಾಷ್ಟ್ರವು ವ್ಯಾಧಿಗಳಿಂದ, ದುರ್ಭಿಕ್ಷದಿಂದ ಮತ್ತು ಕಳ್ಳರಿಂದ ಪೀಡಿತವಾದಂತೆ ನಿನ್ನ ಸೈನ್ಯವು ಪಾಂಡವರಿಂದ ಪೀಡೆಗೆ ಒಳಗಾಯಿತು.
ಅರ್ಕರಶ್ಮಿವಿಭಿನ್ನೇಷು ಶಸ್ತ್ರೇಷು ಕವಚೇಷು ಚ |
ಚಕ್ಷೂಂಷಿ ಪ್ರತ್ಯಹನ್ಯಂತ ಸೈನ್ಯೇನ ರಜಸಾ ತಥಾ ॥ 26 ॥
ಸೂರ್ಯರಶ್ಮಿ ಮಿಶ್ರಿತವಾದ ಶಸ್ತ್ರಗಳಿಂದ ಮತ್ತು ಕವಚದಿಂದ ಹಾಗೂ ಸೈನ್ಯದಿಂದ ಎದ್ದ ಧೂಳಿನಿಂದ ಯೋಧರ ದೃಷ್ಟಿಯು ಮಂಕಾಯಿತು.
ತ್ರಿಧಾ ಭೂತೇಷು ಸೈನ್ಯೇಷು ವಧ್ಯಮಾನೇಷು ಪಾಂಡವೈಃ |
ಅಮರ್ಷಿತಸ್ತತೋ ದ್ರೋಣಃ ಪಾಂಚಾಲಾನ್ ವ್ಯಧಮಚ್ಚರೈಃ ॥ 27 ॥
ತಮ್ಮ ಸೈನ್ಯವು ಮೂರು ಭಾಗವಾಗಿ ಪಾಂಡವರಿಂದ ಪ್ರಹಾರಕ್ಕೆ ಒಳಗಾಗುತ್ತಿರಲು ಕೋಪಗೊಂಡ ದ್ರೋಣರು ಪಾಂಚಾಲರನ್ನು ತಮ್ಮ ಬಾಣಗಳಿಂದ ನಾಶಗೊಳಿಸಿದರು.
ಮೃಗ್ನತಸ್ತಾನ್ಯನೀಕಾನಿ ನಿಘ್ನತಶ್ಚಾಪಿ ಸಾಯಕೈಃ |
ಬಭೂವ ರೂಪಂ ದ್ರೋಣಸ್ಯ ಕಾಲಾಗ್ನೇರಿವ ದೀಪ್ಯತಃ ॥ 28 ॥
ಆ ಸೈನ್ಯಗಳನ್ನು ಮರ್ದಿಸುತ್ತಾ ಬಾಣಗಳಿಂದ ಸಂಹರಿಸುತ್ತಿದ್ದ ದ್ರೋಣರ ರೂಪವು ಜ್ವಲಿಸುವ ಕಾಲಾಗ್ನಿಯ ರೂಪದಂತೆ ಇದ್ದಿತು.
ರಥನಾಗಹಯಾಂಶ್ಚಾಪಿ ಪತ್ತೀಂಶ್ಚಾಪಿ ವಿಶಾಂಪತೇ |
ಏಕೈಕೇನೇಷುಣಾ ಸಂಖ್ಯೇ ನಿರ್ಬಿಭೇದ ಮಹಾರಥಃ ॥ 29 ॥
ಎಲೈ ರಾಜನೇ, ಮಹಾರಥರಾದ ದ್ರೋಣರು ರಥ-ಗಜಾಶ್ವಗಳನ್ನು ಮತ್ತು ಪದಾತಿಗಳನ್ನು ಒಂದೊಂದೇ ಬಾಣದಿಂದ ರಣರಂಗದಲ್ಲಿ ಕತ್ತರಿಸಿದರು.
ಪಾಂಡವಾನಾಂ ತು ಸೈನ್ಯೇಷು ನಾಸ್ತಿ ರಾಜನ್ ಸ ಮಾನವಃ |
ಅಧಾರಯತ ಯೋ ಬಾಣಾನ್ ದ್ರೋಣಚಾಪಚ್ಯುತಾನ್ ಪ್ರಭೋ ॥
ಪ್ರಭುವೇ, ಪಾಂಡವರ ಸೈನ್ಯದಲ್ಲಿ ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳನ್ನು ದಹಿಸುವ (ತಡೆಯುವ) ಒಬ್ಬ ಮನುಷ್ಯನೂ ಇರುವುದಿಲ್ಲ.
ತತ್ ಪಚ್ಯಮಾನಮರ್ಕೇಣ ದ್ರೋಣಸಾಯಕತಾಪಿತಮ್ |

ಬಭ್ರಾಮ ಪಾರ್ಷತಂ ಸೈನ್ಯಂ ತತ್ರ ತತ್ರೈವ ಭಾರತ ॥ 31 ॥
ಮಧ್ಯಾಹ್ನದ ಸೂರ್ಯನ ಬಿಸಿಲಿನಿಂದಲೂ ಮತ್ತು ದ್ರೋಣರ ಬಾಣದಿಂದಲೂ ತಪ್ತವಾದ ಧೃಷ್ಟದ್ಯುಮ್ನನ ಸೈನ್ಯವು ಎಲ್ಲೆ ಭಾರತನೇ, ಅಲ್ಲಲ್ಲಿಯೇ ತಿರುಗಾಡಿತು.
ವಧ್ಯಮಾನಂ ತು ತತ್ ಸೈನ್ಯಂ ಭಾರದ್ವಾಜೇನ ಸರ್ವತಃ।
ಶರೈರಗ್ನಿಶಿಖಾಕಾರೈರ್ದಹ್ಯತೇ ಭರತರ್ಷಭ ॥ 32 ॥
ಎಲ್ಲೆ ಭರತರ್ಷಭನೇ, ದ್ರೋಣರಿಂದ ಎಲ್ಲ ಕಡೆಗಳಲ್ಲಿಯೂ ಅಗ್ನಿಶಿಖೆಯಂತಿರುವ ಬಾಣಗಳಿಂದ ಪ್ರಹಾರಕ್ಕೆ ಒಳಗಾದ ಆ ಸೈನ್ಯವು ದಹಿಸಲ್ಪಟ್ಟಿತು.
ತಥೈವ ಪಾರ್ಷತೇನಾಪಿ ಕಾಲ್ಯಮಾನಂ ಬಲಂ ತವ।
ಅಭವತ್ ಸರ್ವತೋ ದೀಪ್ತಂ ಶುಷ್ಕಂ ವನಮಿವಾಗ್ನಿನಾ ॥ 33 ॥
ಹಾಗೆಯೇ ಧೃಷ್ಟದ್ಯುಮ್ನನಿಂದ ಕಲಕಾಡಲ್ಪಡುವ ನಿನ್ನ ಸೈನ್ಯವು ಅಗ್ನಿಯು ಶುಷ್ಕವಾದ ವನವನ್ನು ದಹಿಸುವಂತೆ ಎಲ್ಲ ಕಡೆಯಲ್ಲಿಯೂ ಜ್ವಲಿಸಿತು.
ವಧ್ಯಮಾನೇಷು ಸೈನ್ಯೇಷು ದ್ರೋಣಪಾರ್ಷತಸಾಯಕೈಃ।
ತ್ಯಕ್ತ್ವಾ ಪ್ರಾಣಾನ್ ಪರಂ ಶಕ್ತ್ಯಾ ಯುದ್ಧ್ಯಂತೇ ಸ್ವರ್ಗಲಿಪ್ಸವಃ ॥ 34 ॥
ದ್ರೋಣರ ಮತ್ತು ಧೃಷ್ಟದ್ಯುಮ್ನನ ಬಾಣಗಳಿಂದ ಸೈನ್ಯಗಳು ವಧಿಸಲ್ಪಡುತ್ತಿರಲು ಸ್ವರ್ಗವನ್ನು ಬಯಸುವ ಯೋಧರು ತಮ್ಮ ಪ್ರಾಣದ ಹಂಗನ್ನು ತೊರೆದು ಶಕ್ತಿಯನ್ನು ಮೀರಿ ಯುದ್ಧವನ್ನು ಮಾಡಿದರು.
ತಾವಕಾನಾಂ ಪರೇಷಾಂ ಚ ಯುದ್ಧ್ಯತಾಂ ಭರತರ್ಷಭ।
ನಾಸೀತ್ ಕಶ್ಚಿನ್ಮಹಾರಾಜ ಯೋಽಜಹಾತ್ ಸಂಯುಗಂ ಭಯಾತ್ ॥
ಎಲ್ಲೆ ಭರತಶ್ರೇಷ್ಠನೇ, ಮಹಾರಾಜನೇ, ನಿನ್ನವರು ಮತ್ತು ಪಾಂಡವರು ಯುದ್ಧವನ್ನು ಮಾಡುತ್ತಿರುವಾಗ ಭಯದಿಂದ ರಣರಂಗವನ್ನು ತ್ಯಜಿಸುವ ವ್ಯಕ್ತಿಯು ಒಬ್ಬನೂ ಇರಲಿಲ್ಲ.
ಭೀಮಸೇನಂ ತು ಕೌಂತೇಯಂ ಸೋದರ್ಯಾಃ ಪರ್ಯವಾರಯನ್।
ವಿವಿಂಶತಿಶ್ಚಿತ್ರಸೇನೋ ವಿಕರ್ಣಶ್ಚ ಮಹಾರಥಃ ॥ 36 ॥
ಕುಂತೀಪುತ್ರನಾದ ಭೀಮಸೇನನನ್ನು, ಸಹೋದರರಾದ ವಿವಿಂಶತಿ, ಚಿತ್ರಸೇನ ಮತ್ತು ಮಹಾರಥನಾದ ವಿಕರ್ಣರು ಸುತ್ತುವರಿದರು.
ವಿಂದಾನುವಿಂದಾವಾವಂತ್ಯೌ ಕ್ಷೇಮಧೂರ್ತಿಶ್ಚ ವೀರ್ಯವಾನ್।
ತ್ರಯಾಣಾಂ ತವ ಪುತ್ರಾಣಾಂ ತ್ರಯ ಏವಾನುಯಾಯಿನಃ ॥ 37 ॥
ಅವಂತಿದೇಶದ ವಿಂದಾನುವಿಂದರು, ಪರಾಕ್ರಮಶಾಲಿಯಾದ ಕ್ಷೇಮಧೂರ್ತಿ ಇವರು ನಿನ್ನ ಮೂರು ಪುತ್ರರಿಗೆ ಮೂವರು ಹಿಂಬಾಲಕರಾದರು.
ಬಾಹ್ಲೀಕರಾಜಸ್ತೇಜಸ್ವೀ ಕುಲಪುತ್ರಾಂಸ್ತನುತ್ಯಜಃ।
ಸಹಸೇನಃ ಸಹಾಮಾತ್ಯೋ ದ್ರೌಪದೇಯಾನವಾರಯತ್ ॥ 38 ॥
ತೇಜಸ್ವಿಯಾದ ಬಾಹ್ಲೀಕರಾಜನು ತನ್ನ ಸೈನ್ಯ ಮತ್ತು ಅಮಾತ್ಯರಿಂದ ಒಡಗೂಡಿ, ಕುಲಪುತ್ರರೂ, ದೇಹತ್ಯಾಗವನ್ನು ಮಾಡಲು ಸಿದ್ಧರಾದವರೂ ಆದ ದ್ರೌಪದಿಯ ಪುತ್ರರನ್ನು ತಡೆದನು.
ಶೈಬ್ಯೋ ಗೋವಾಸನೋ ರಾಜಾ ಯೋಧೈರ್ದಶಶತಾವರೈಃ।
ಕಾಶ್ಯಸ್ಯಾಭಿಭುವಃ ಪುತ್ರಂ ಪರಾಕ್ರಾಂತಮವಾರಯತ್ ॥ 39 ॥
ಶೈಬ್ಯನಾದ ಗೋವಾಸನ ರಾಜನು ಸಹಸ್ರಸಂಖ್ಯೆಗೆ ಕಡಿಮೆಯಿಲ್ಲದ ಯೋಧರಿಂದ ಕೂಡಿ, ಪರಾಕ್ರಮಶಾಲಿಯಾದ ಕಾಶೀರಾಜನ ಪುತ್ರನನ್ನು ತಡೆದನು.
ಅಜಾತಶತ್ರುಂ ಕೌಂತೇಯಂ ಜ್ವಲಂತಮಿವ ಪಾವಕಮ್।
ಮದ್ರಾಣಾಮೀಶ್ವರಃ ಶಲ್ಯೋ ರಾಜಾ ರಾಜಾನಮಾವೃಣೋತ್ ॥ 40 ॥
ಜ್ವಲಿಸುವ ಅಗ್ನಿಯಂತೆ ಇದ್ದ ಕುಂತೀಪುತ್ರನಾದ, ರಾಜನಾದ ಅಜಾತಶತ್ರುವನ್ನು ಮದ್ರಾಧಿಪತಿಯಾದ ರಾಜನಾದ ಶಲ್ಯ ತಡೆದನು.
ದುಃಶಾಸನಸ್ತ್ವವಸ್ಥಾಪ್ಯ ಸ್ವಮನೀಕಮಮರ್ಷಣಃ।
ಸಾತ್ಯಕಿಂ ಪ್ರಯಯೌ ಕ್ರುದ್ಧಃ ಶೂರೋ ರಥವರಂ ಯುಧಿ ॥ 41 ॥
ರೋಷಶೀಲನಾದ ದುಶ್ಶಾಸನನು ತನ್ನ ಸೈನ್ಯವನ್ನು ನಿಲ್ಲಿಸಿ, ಕ್ರುದ್ಧನೂ, ಶೂರನೂ ಆದ ಅವನು ರಥಶ್ರೇಷ್ಠನಾದ ಸಾತ್ಯಕಿಯ ಕಡೆಗೆ ರಣರಂಗದಲ್ಲಿ ಹೋದನು.
ತೇನೈವ ಹಸ್ತ್ಯನೀಕೇನ ಸನ್ನದ್ಧಕವಚಧ್ವಜಃ।
ಚತುಃಶತೈರ್ಮಹೇಷ್ವಾಸೈಃ ಚೇಕಿತಾನಮವಾರಯತ್ ॥ 42 ॥
ಅವನು ಅದೇ ಗಜಸಮೂಹದ ಜೊತೆಯಲ್ಲಿ ಕವಚ-ಧ್ವಜಗಳನ್ನು ಸನ್ನದ್ಧಗೊಳಿಸಿ, ನಾಲ್ಕುನೂರು ಧನುರ್ಧಾರಿಗಳಿಂದ ಕೂಡಿದವನಾಗಿ ಚೇಕಿತಾನನನ್ನು ತಡೆದನು.
ಶಕುನಿಸ್ತು ಸಹಾನೀಕೋ ಮಾದ್ರೀಪುತ್ರಾವವಾರಯತ್।
ಸಗಾಂಧಾರೈಃ ಸಪ್ತಶತೈಃ ಚಾಪಶಕ್ತಿವರಾಸಿಭಿಃ ॥ 43 ॥
ಶಕುನಿಯಾದರೋ ಧನುಸ್ಸನ್ನು ಮತ್ತು ಶ್ರೇಷ್ಠವಾದ ಖಡ್ಗ ಮತ್ತು ಶಕ್ತ್ಯಾಯುಧವನ್ನು ಧರಿಸಿದ, ಏಳುನೂರು ಗಾಂಧಾರರಿಂದ ಕೂಡಿದ ತನ್ನ ಸೈನ್ಯದೊಡನೆ ಮಾದ್ರೀಪುತ್ರರಾದ ನಕುಲ- ಸಹದೇವರನ್ನು ತಡೆದನು.
ವಿಂದಾನುವಿಂದಾವಾವಂತ್ಯೌ ವಿರಾಟಂ ಮಾತ್ಸ್ಯಮಾರ್ಚ್ಛತಾಮ್।

ಪ್ರಾಣಾಂಸ್ತ್ಯಕ್ತ್ವಾ ಮಹೇಷ್ವಾಸೌ ಮಿತ್ರಾರ್ಥೇಽಭ್ಯುತ್ಥಿತೌ ಯುಧಿ ॥44॥
ಅವಂತಿದೇಶದ ಮಹಾಧನುರ್ಧಾರಿಗಳಾದ ವಿಂದಾನುವಿಂದರು ತಮ್ಮ ಪ್ರಾಣದ ಹಂಗನ್ನು ತೊರೆದು, ರಣರಂಗದಲ್ಲಿ ಮಿತ್ರನ ಸಲುವಾಗಿ ಪ್ರಯತ್ನ ಮಾಡುವವರಾಗಿ ಮತ್ಸ್ಯರಾಜನಾದ ವಿರಾಟನ ಮೇಲೆ ಎರಗಿದರು.
ಶಿಖಂಡಿನಂ ಯಾಜ್ಞಸೇನಿಂ ಯುವಾನಮಪರಾಜಿತಮ್ |
ಬಾಹ್ಲೀಕಃ ಪ್ರತಿಸಂರಬ್ಧಃ ಪರಾಕ್ರಾಂತಮವಾರಯತ್ ॥ 45 ॥
ಯಜ್ಞಸೇನನ ಪುತ್ರನಾದ ಯುವಕನಾದ ಅಪರಾಜಿತನಾದ ಪರಾಕ್ರಮಶಾಲಿಯಾದ ಶಿಖಂಡಿಯನ್ನು ಬಾಹ್ಲೀಕನು ತಾನೂ ಕೋಪಗೊಂಡು ತಡೆದನು.
ಧೃಷ್ಟದ್ಯುಮ್ನಂ ತು ಪಾಂಚಾಲ್ಯಂ ಕ್ರೂರೈಃ ಸಾರ್ಧಂ ಪ್ರಭದ್ರಕೈಃ |
ಆವಂತ್ಯಃ ಸಹ ಸೌವೀರೈಃ ಕ್ರುದ್ಧರೂಪಮವಾರಯತ್ ॥ 46 ॥
ಪಾಂಚಾಲ ದೇಶದವನಾದ ಧೃಷ್ಟದ್ಯುಮ್ನನನ್ನು ಕ್ರೂರರಾದ ಪ್ರಭದ್ರಕರಿಂದ ಒಡಗೂಡಿ ಮತ್ತು ಸೌವೀರ ಯೋಧರಿಂದ ಒಡಗೂಡಿ ಅವಂತಿ ದೇಶದ ರಾಜನು ತಡೆದನು.
ಘಟೋತ್ಕಚಂ ತಥಾ ಶೂರಂ ರಾಕ್ಷಸಂ ಕ್ರೂರಕರ್ಮಕೃತ್ |
ಅಲಂಬುಸೋಽದ್ರವತ್ ತೂರ್ಣಂ ಕ್ರುದ್ಧಮಾಯಾಂತಮಾಹವೇ ॥47॥
ಹಾಗೆಯೇ ಶೂರನೂ, ಕ್ರೂರಕರ್ಮವನ್ನು ಮಾಡುವವನೂ, ರಾಕ್ಷಸನೂ ಆದ ಕ್ರುದ್ಧನೂ, ರಣರಂಗವನ್ನು ಪ್ರವೇಶಿಸುತ್ತಿರುವವನೂ ಆದ ಘಟೋತ್ಕಚನನ್ನು ಶೀಘ್ರವಾಗಿ ಅಲಂಬುಸನು ಎದುರಿಸಿದನು.
ಅಲಂಬುಸಂ ರಾಕ್ಷಸೇಂದ್ರಂ ಕುಂತಿಭೋಜೋ ಮಹಾರಥಃ |
ಸೈನ್ಯೇನ ಮಹತಾ ಯುಕ್ತಃ ಕ್ರುದ್ಧರೂಪಮವಾರಯತ್ ॥ 48 ॥
ಮಹಾರಥನಾದ ಕುಂತಿಭೋಜನು ಕ್ರೋಧಗೊಂಡ, ದೊಡ್ಡ ಸೈನ್ಯದಿಂದ ಕೂಡಿದ, ರಾಕ್ಷಸಶ್ರೇಷ್ಠನಾದ ಅಲಂಬುಸನನ್ನು ತಡೆದನು.
ಸೈಂಧವಃ ಪೃಷ್ಠತಸ್ತ್ವಾಸೀತ್ ಸರ್ವಸೈನ್ಯಸ್ಯ ಭಾರತ |
ರಕ್ಷಿತಃ ಪರಮೇಷ್ವಾಸೈಃ ಕೃಪಪ್ರಭೃತಿಭೀ ರಥೈಃ ॥ 49 ॥
ಎಲೈ ಭಾರತನೇ, ಸೈಂಧವನು ಮಹಾಧನುರ್ಧಾರಿಗಳಾದ ಕೃಪ ಮೊದಲಾದ ಮಹಾರಥರಿಂದ ರಕ್ಷಿಸಲ್ಪಟ್ಟು ಎಲ್ಲ ಸೈನ್ಯದ ಹಿಂಭಾಗದಲ್ಲಿ ಇದ್ದನು.
ತಸ್ಯಾಸ್ತಾಂ ಚಕ್ರರಕ್ಷೌ ದ್ವೌ ಸೈಂಧವಸ್ಯ ಬೃಹತ್ತಮೌ |
ದ್ರೌಣಿರ್ದಕ್ಷಿಣತೋ ರಾಜನ್ ಸೂತಪುತ್ರಶ್ಚ ವಾಮತಃ ॥ 50 ॥
ಎಲೈ ರಾಜನೇ, ಆ ಸೈಂಧವನ ಚಕ್ರರಕ್ಷಕರಾಗಿ ಬೃಹತ್ತಮರಾದ ಅಶ್ವತ್ಥಾಮರು ಬಲಭಾಗದಲ್ಲಿ ಮತ್ತು ಕರ್ಣನು ಎಡಭಾಗದಲ್ಲಿ ಇದ್ದರು.
ಪೃಷ್ಠಗೋಪಾಸ್ತು ತಸ್ಯಾಸನ್ ಸೌಮದತ್ತಿಪುರೋಗಮಾಃ |
ಕೃಪಶ್ಚ ವೃಷಸೇನಶ್ಚ ಶಲಃ ಶಲ್ಯಶ್ಚ ದುರ್ಜಯಃ ॥ 51 ॥
ಅವನಿಗೆ ಭೂರಿಶ್ರವ ಮೊದಲಾದವರು, ಕೃಪರು, ವೃಷಸೇನ, ಶಲ, ಶಲ್ಯ ಮತ್ತು ದುರ್ಜಯರು (ದುರ್ಜಯನಾದ ಶಲ್ಯನು) ಹಿಂಭಾಗದಿಂದ ರಕ್ಷಕರಾಗಿದ್ದರು.
ನೀತಿಮಂತೋ ಮಹೇಷ್ವಾಸಾಃ ಸರ್ವಶಸ್ತ್ರವಿಶಾರದಾಃ |
ಸೈಂಧವಸ್ಯ ರಥಸ್ಯೈವ ರಕ್ಷಾರ್ಥಂ ಯುಯುಧುಸ್ತದಾ ॥ 52 ॥
ನೀತಿವಂತರೂ, ಮಹಾಧನುರ್ಧಾರಿಗಳೂ, ಸರ್ವಶಸ್ತ್ರಕುಶಲರೂ ಆದ ಅವರು ಸೈಂಧವನ ರಥದ ರಕ್ಷಣೆಗಾಗಿಯೇ ಆಗ ಯುದ್ಧವನ್ನು ಮಾಡಿದರು.
ರಾಜನ್ ಸಂಗ್ರಾಮಮಾಶ್ಚರ್ಯಂ ಶೃಣು ಕೀರ್ತಯತೋ ಮಮ |
ಕುರೂಣಾಂ ಪಾಂಡವಾನಾಂ ಚ ಯಥಾ ಯುದ್ಧಮವರ್ತತ ॥ 53 ॥
ರಾಜನೇ, ಕುರುಗಳಿಗೂ ಮತ್ತು ಪಾಂಡವರಿಗೂ ಹೇಗೆ ಆಶ್ಚರ್ಯಕರವಾದ ಯುದ್ಧವು ನಡೆಯಿತೆಂದು ಹೇಳುತ್ತೇನೆ. ಅದನ್ನು ಕೇಳು.
ಭಾರದ್ವಾಜಂ ಸಮಾಸಾದ್ಯ ವ್ಯೂಹಸ್ಯ ಪ್ರಮುಖೇ ಸ್ಥಿತಮ್ |
ಯೋಧಯಂತಿ ರಣೇ ಪಾರ್ಥಾ ದ್ರೋಣಾನೀಕಬಿಭಿತ್ಸಯಾ ॥ 54 ॥
ಪಾಂಡವರು ವ್ಯೂಹದ ಮುಂಭಾಗದಲ್ಲಿದ್ದ ದ್ರೋಣರನ್ನು ಸಮೀಪಿಸಿ, ಅವರ ಸೈನ್ಯವನ್ನು ಭೇದಿಸಲು ಬಯಸಿ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ರಕ್ಷಮಾಣಃ ಸ್ವಕಂ ವ್ಯೂಹಂ ದ್ರೋಣೋಽಪಿ ಸಹ ಸೈನಿಕೈಃ |
ಅಯೋಧಯದ್ ರಣೇ ಪಾರ್ಥಾನ್ ಪ್ರಾರ್ಥಯಾನೋ ಮಹದ್ ಯಶಃ॥
ದ್ರೋಣರೂ ಸಹ ತಮ್ಮ ವ್ಯೂಹವನ್ನು ರಕ್ಷಿಸಿಕೊಂಡು, ದೊಡ್ಡ ಯಶಸ್ಸನ್ನು ಬಯಸುತ್ತಾ ರಣರಂಗದಲ್ಲಿ ಪಾರ್ಥರೊಡನೆ ಯುದ್ಧವನ್ನು ಮಾಡಿದರು.
ವಿಂದಾನುವಿಂದಾವಾವಂತ್ಯೌ ವಿರಾಟಂ ದಶಭಿಃ ಶರೈಃ |
ಆಜಘ್ನತುಃ ರಣೇ ಕ್ರುದ್ಧೌ ತವ ಪುತ್ರಹಿತೈಷಿಣೌ ॥ 56 ॥
ನಿನ್ನ ಪುತ್ರನ ಹಿತವನ್ನು ಬಯಸುವ ಅವಂತಿದೇಶದ ವಿಂದಾನುವಿಂದರು ಕ್ರುದ್ಧರಾಗಿ ವಿರಾಟನನ್ನು ಹತ್ತು ಬಾಣಗಳಿಂದ ಹೊಡೆದರು.
ವಿರಾಟಶ್ಚ ಮಹಾರಾಜ ತಾವುಭೌ ಸಮರೇ ಸ್ಥಿತೌ |

ಪರಾಕ್ರಾಂತೌ ಪರಾಕ್ರಮ್ಯ ಯೋಧಯಾಮಾಸ ಸಾನುಗೌ ॥ 57 ॥
ಎಲೈ ಮಹಾರಾಜನೇ, ವಿರಾಟನೂ ಸಹ ಯುದ್ದದಲ್ಲಿ ನಿಂತ ಪರಾಕ್ರಮಶಾಲಿಗಳಾದ ಅವರ ಅನುಚರರಿಂದ ಕೂಡಿದ ಅವರಿಬ್ಬರನ್ನೂ ಪರಾಕ್ರಮದಿಂದ ಎದುರಿಸಿ ಯುದ್ದವನ್ನು ಮಾಡಿದನು.
ತೇಷಾಂ ಸಮಭವದ್ ಯುದ್ಧಂ ದಾರುಣಂ ರೋಮಹರ್ಷಣಮ್ |
ಸಿಂಹಸ್ಯ ದ್ವಿಪಮುಖ್ಯಾಭ್ಯಾಂ ಪ್ರಭಿನ್ನಾಭ್ಯಾಂ ಯಥಾ ವನೇ ॥ 58 ॥
ಅವರಿಗೆ ಅರಣ್ಯದಲ್ಲಿ ಸಿಂಹಕ್ಕೂ, ಎರಡು ಮದಗಜಗಳಿಗೂ ನಡೆದಂತೆ ರೋಮಹರ್ಷಣವೂ ಮತ್ತು ತೀವ್ರವೂ ಆದ ಯುದ್ಧವು ನಡೆಯಿತು.
ಬಾಹ್ಲೀಕಂ ರಭಸಂ ಯುದ್ಧೇ ಯಾಜ್ಞಸೇನಿರ್ಮಹಾಬಲಃ |
ಆಜಘ್ನೇ ವಿಶಿಖೈರುಗ್ರೈರ್ಘೋರೈರ್ಮರ್ಮಾಸ್ಥಿಭೇದಿಭಿಃ ॥ 59 ॥
ಮಹಾಬಲನಾದ ಧೃಷ್ಟದ್ಯುಮ್ನನು ಯುದ್ದದಲ್ಲಿ ವೇಗಶಾಲಿಯಾದ ಬಾಹ್ಲೀಕನನ್ನು ಮರ್ಮಾಸ್ಥಿಭೇದಕಗಳಾದ ಘೋರವಾದ ಬಾಣಗಳಿಂದ ಹೊಡೆದನು.
ಬಾಹ್ಲೀಕೋ ಯಾಜ್ಞಸೇನಿಂ ತು ಹೇಮಪುಂಖೈಃ ಶಿಲಾಶಿತೈಃ |
ಆಜಘಾನ ಭೃಶಂ ಕ್ರುದ್ಧೋ ನವಭಿರ್ನತಪರ್ವಭಿಃ ॥ 60 ॥
ಬಾಹ್ಲೀಕ ರಾಜನಾದರೂ ಕೋಪಗೊಂಡು ಹೇಮಪುಂಖವನ್ನು ಹೊಂದಿ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳಿಂದ ಗಾಢವಾಗಿ ಹೊಡೆದನು.
ತದ್ ಯುದ್ಧಮಭವದ್ ಘೋರಂ ಶರಶಕ್ತಯ |
ಭೀರೂಣಾಂ ತ್ರಾಸಜನನಂ ಶೂರಾಣಾಂ ಹರ್ಷವರ್ಧನಮ್ ॥ 61 ॥
ಬಾಣಗಳು, ಶಕ್ತಿಗಳು ಮತ್ತು ಋಷ್ಟಿಗಳಿಂದ ನಿಬಿಡವಾದ, ಭೀರುಗಳಿಗೆ ಭಯಜನಕವೂ ಮತ್ತು ಶೂರರಿಗೆ ಸಂತೋಷಜನಕವೂ ಆದ, ಆ ಘೋರವಾದ ಯುದ್ಧವು ನಡೆಯಿತು.
ಆವಂತ್ಯೌ ಭ್ರಾತರೌ ಶೂರೌ ಧೃಷ್ಟದ್ಯುಮ್ನಮಯುದ್ಧ್ಯತಾಮ್ |
ಸಾಲ್ವಕೋ ಬಿಲ್ವಕಶ್ಚೋಭೌ ಯಥಾ ವಿಷ್ಣುಂ ಕೃತೇ ಯುಗೇ ॥ 62 ॥
ಅವಂತಿಯ ಶೂರರಾದ ಸಹೋದರರು ಕೃತಯುಗದಲ್ಲಿ ಸಾಲ್ವಕ ಮತ್ತು ಬಿಲ್ವಕ ದೈತ್ಯರು ವಿಷ್ಣುವಿನ ಜೊತೆಯಲ್ಲಿ ಯುದ್ದವನ್ನು ಮಾಡಿದಂತೆ ಧೃಷ್ಟದ್ಯುಮ್ನನ ಜೊತೆಯಲ್ಲಿ ಯುದ್ದವನ್ನು ಮಾಡಿದರು.
ತೇಷಾಂ ತತ್ರ ಶರೈರ್ಮುಕ್ತೈರಂತರಿಕ್ಷಂ ದಿಶಸ್ತಥಾ |
ಅಭವತ್ ಸಂವೃತಂ ಸರ್ವಂ ನ ಪ್ರಾಜ್ಞಾಯತ ಕಿಂಚನ ॥ 63 ॥
ಅವರು ಅಲ್ಲಿ ಪ್ರಯೋಗಿಸಿದ ಬಾಣಗಳಿಂದ ದಿಕ್ಕುಗಳು ಮತ್ತು ಅಂತರಿಕ್ಷವೂ ತುಂಬಿಹೋಯಿತು. ಯಾವುದೂ ಕಾಣಲಿಲ್ಲ.
ಶೈಬ್ಯೋ ಗೋವಾಸನೋ ಯುದ್ಧೇ ಕಾಶ್ಯಪುತ್ರಂ ಮಹಾರಥಮ್ |
ಸಹಸಾ ಯೋಧಯಾಮಾಸ ಗಜಃ ಪ್ರತಿಗಜಂ ಯಥಾ ॥ 64 ॥
ಶೈಬ್ಯನಾದ ಗೋವಾಸನನು ಯುದ್ದದಲ್ಲಿ ಮಹಾರಥನಾದ ಕಾಶಿರಾಜನ ಪುತ್ರನ ಜೊತೆಯಲ್ಲಿ ಗಜವು ಪ್ರತಿಗಜದ ಜೊತೆಯಲ್ಲಿ ಯುದ್ದವನ್ನು ಮಾಡಿದಂತೆ ಯುದ್ದವನ್ನು ಮಾಡಿದನು.
ಬಾಹ್ಲೀಕರಾಜಃ ಸಂಕ್ರುದ್ಧೋ ದ್ರೌಪದೇಯಾನ್ ಮಹಾರಥಾನ್ |
ಮನಃ ಪಂಚೇಂದ್ರಿಯಾಣೀವ ಶುಶುಭೇ ಯೋಧಯನ್ ರಣೇ ॥ 65 ॥
ಕೋಪಗೊಂಡ ಬಾಹ್ಲೀಕರಾಜನು ಮಹಾರಥರಾದ ದ್ರೌಪದಿಯ ಪುತ್ರರೊಡನೆ ರಣರಂಗದಲ್ಲಿ ಯುದ್ದವನ್ನು ಮಾಡುತ್ತಾ ಪಂಚೇಂದ್ರಿಯಗಳ ಜೊತೆಯಲ್ಲಿ ಹೋರಾಡುವ ಮನಸ್ಸಿನಂತೆ ಶೋಭಿಸಿದನು.
ಅಯೋಧಯಂಸ್ತೇ ಚ ಭೃಶಂ ತಂ ಶರೌಘೈಃ ಸಮಂತತಃ |
ಇಂದ್ರಿಯಾಣಿ ಯಥಾ ದೇಹಂ ಶಶ್ವದ್ ದೇಹವತಾಂ ವರ ॥ 66 ॥
ಎಲೈ ದೇಹಧಾರಿಗಳಲ್ಲಿ ಶ್ರೇಷ್ಠನಾದವನೇ, ಅವರೂ ಸಹ ತಮ್ಮ ಬಾಣಗಳ ಸಮೂಹದಿಂದ ಎಲ್ಲ ಕಡೆಗಳಿಂದಲೂ ಇಂದ್ರಿಯಗಳು ದೇಹವನ್ನು ಘಾಸಿಗೊಳಿಸಿದಂತೆ ಅವನ ಜೊತೆಯಲ್ಲಿ ಯುದ್ದವನ್ನು ಮಾಡಿದನು.
ವಾರ್ಷ್ಣೇಯಂ ಸಾತ್ಯಕಿಂ ಯುದ್ಧೇ ಪುತ್ರೋ ದುಃಶಾಸನಸ್ತವ |
ಆಜಘ್ನೇ ಸಾಯಕೈಸ್ತೀಕ್ಷ್ಣೈರ್ನವಭಿರ್ದಶಭಿಸ್ತಥಾ ॥ 67 ॥
ನಿನ್ನ ಪುತ್ರನಾದ ದುಶ್ಶಾಸನನು ತೀಕ್ಷ್ಣವಾದ ಒಂಬತ್ತು ಬಾಣಗಳಿಂದ, ಅನಂತರ ಹತ್ತು ಬಾಣಗಳಿಂದ ವೃಷ್ಣಿಕುಲ ಸಂಭೂತನಾದ ಸಾತ್ಯಕಿಯನ್ನು ಹೊಡೆದನು.
ಸೋಽತಿವಿದ್ಧೋ ಬಲವತಾ ಮಹೇಷ್ವಾಸೇನ ಧನ್ವಿನಾ |
ಈಷನ್ಮೂರ್ಚ್ಛಾಂ ಜಗಾಮಾಶು ಸಾತ್ಯಕಿಃ ಸತ್ಯವಿಕ್ರಮಃ ॥ 68 ॥
ಸತ್ಯವಿಕ್ರಮನಾದ ಸಾತ್ಯಕಿಯು, ಬಲಿಷ್ಠನೂ, ಮಹಾಧನುರ್ಧಾರಿಯೂ ಆದ ದುಶ್ಶಾಸನನಿಂದ ಗಾಢವಾಗಿ ಹೊಡೆಯಲ್ಪಟ್ಟು ಸ್ವಲ್ಪ ಮೂರ್ಛೆಯನ್ನು ಹೊಂದಿದನು.
ಸಮಾಶ್ವಸ್ತಸ್ತು ವಾರ್ಷ್ಣೇಯಃ ತವ ಪುತ್ರಂ ಮಹಾರಥಮ್ |
ವಿವ್ಯಾಧ ದಶಭಿಸ್ತೂರ್ಣಂ ಸಾಯಕೈಃ ಕಂಕಪತ್ರಿಭಿಃ ॥ 69 ॥
ಸುಧಾರಿಸಿಕೊಂಡ ಸಾತ್ಯಕಿಯು ಮಹಾರಥನಾದ ನಿನ್ನ ಪುತ್ರನನ್ನು ಕಂಕಪತ್ರವನ್ನು ಹೊಂದಿದ ಹತ್ತು ಬಾಣಗಳಿಂದ ಶೀಘ್ರವಾಗಿ ಹೊಡೆದನು.

ತಾವನ್ಯೋನ್ಯಂ ದೃಢಂ ವಿದ್ಧ್ವಾ ಹ್ಯನ್ಯೋನ್ಯಶರವಿಕ್ಷತೌ |
ರೇಜತುಃ ಸಂಯುಗೇ ರಾಜನ್ ಪುಷ್ಪಿತಾವಿವ ಕಿಂಶುಕೌ ॥ 70 ॥
ಎಲೈ ರಾಜನೇ, ಅವರು ಪರಸ್ಪರವಾಗಿ ಯುದ್ಧವನ್ನು ಮಾಡಿ, ಪರಸ್ಪರ ಬಾಣಗಳಿಂದ ಗಾಯಗೊಂಡು, ರಣರಂಗದಲ್ಲಿ ಪುಷ್ಪಭರಿತವಾದ ಕಿಂಶುಕ ವೃಕ್ಷದಂತೆ ಶೋಭಿಸಿದರು.
ಅಲಂಬುಸಸ್ತು ಸಂಕ್ರುದ್ಧಃ ಕುಂತಿಭೋಜಶರಾರ್ದಿತಃ |
ಅಶೋಭತ ಭೃಶಂ ಲಕ್ಷ್ಮ್ಯಾ ಪುಷ್ಪಾಢ್ಯ ಇವ ಕಿಂಶುಕಃ ॥ 71 ॥
ಕ್ರೋಧಗೊಂಡ ಅಲಂಬುಸನಾದರೂ ಕುಂತಿಭೋಜನ ಬಾಣಗಳಿಂದ ಪೀಡಿತನಾಗಿ ತನ್ನ ಕಾಂತಿಯಿಂದ ಪುಷ್ಪಭರಿತವಾದ ಕಿಂಶುಕ ವೃಕ್ಷದಂತೆ ಶೋಭಿಸಿದನು.
ಕುಂತಿಭೋಜಂ ತತೋ ರಕ್ಷೋ ವಿದ್ಧ್ವಾ ಬಹುಭಿರಾಯಸೈಃ |
ಅನದದ್ ಭೈರವಂ ನಾದಂ ವಾಹಿನ್ಯಾಃ ಪ್ರಮುಖೇ ತವ ॥ 72 ॥
ತತಸ್ತೌ ಸಮರೇ ಶೂರೌ ಯೋಧಯಂತೌ ಪರಸ್ಪರಮ್ |
ದದೃಶುಃ ಸರ್ವಸೈನ್ಯಾನಿ ಶಕ್ರಜಂಭೌ ಯಥಾ ಪುರಾ ॥ 73 ॥
ಅನಂತರ ನಿನ್ನ ಸೈನ್ಯದ ಮುಂಭಾಗದಲ್ಲಿ ಅಲಂಬುಸ ರಾಕ್ಷಸನು ಕುಂತಿಭೋಜನನ್ನು ಕಬ್ಬಿಣದ ಅನೇಕ ಬಾಣಗಳಿಂದ ಹೊಡೆದು ಭೈರವ ನಾದವನ್ನು ಮಾಡಿದನು. ಆಗ ಎಲ್ಲ ಸೈನ್ಯಗಳೂ ಹಿಂದೆ ಇಂದ್ರ ಮತ್ತು ಜಂಭಾಸುರರ ಯುದ್ಧದಂತೆ ಪರಸ್ಪರವಾಗಿ ಯುದ್ಧವನ್ನು ಮಾಡುವ ಆ ಇಬ್ಬರು ಶೂರರನ್ನು ನೋಡಿದರು.
ಶಕುನಿಂ ರಭಸಂ ಯುದ್ಧೇ ಕೃತವೈರಂ ಚ ಭಾರತ |
ಮಾದ್ರೀಪುತ್ರೌ ಸುಸಂಕ್ರುದ್ಧೌ ಶರೈರರ್ದಯತಾಂ ಭೃಶಮ್ |
ತನ್ಮೂಲಃ ಸುಮಹಾನ್ ರಾಜನ್ ಪ್ರಾವರ್ತತ ಜನಕ್ಷಯಃ ॥ 74 ॥
ಎಲೈ ಭಾರತನೇ, ಯುದ್ಧದಲ್ಲಿ ವೇಗಶಾಲಿಯಾದ, ಮಹಾವೈರವನ್ನುಂಟು ಮಾಡಿದ ಶಕುನಿಯನ್ನು ಕೋಪಗೊಂಡ ಮಾದ್ರೀಪುತ್ರರು ಬಾಣಗಳಿಂದ ಚೆನ್ನಾಗಿ ಅರ್ದಿಸಿದರು. ಎಲೈ ರಾಜನೇ, ಈ ದೊಡ್ಡ ಜನಕ್ಷಯಕ್ಕೆ ಅವನೇ ಮೂಲಕಾರಣನಷ್ಟೆ!
ತ್ವಯಾ ಸಂಜನಿತೋಽತ್ಯರ್ಥಂ ಕರ್ಣೇನ ಚ ವಿವರ್ಧಿತಃ |
ರಕ್ಷಿತಸ್ತವ ಪುತ್ರೈಶ್ಚ ಕ್ರೋಧಮೂಲೋ ಹುತಾಶನಃ |
ಯ ಇಮಾಂ ಪೃಥಿವೀಂ ಸರ್ವಾಂ ದಗ್ಧುಂ ರಾಜನ್ ಸಮುದ್ಯತಃ ॥
ಈ ಜನಕ್ಷಯವು ನಿನ್ನಿಂದ ಹುಟ್ಟುಹಾಕಲ್ಪಟ್ಟಿತು. ಕರ್ಣನಿಂದ ಚೆನ್ನಾಗಿ ಬೆಳೆಸಲ್ಪಟ್ಟಿತು. ಕ್ರೋಧಮೂಲಕವಾದ ಈ ಅಗ್ನಿಯು ನಿನ್ನ ಪುತ್ರರಿಂದ ರಕ್ಷಿಸಲ್ಪಟ್ಟಿತು. ಎಲೈ ರಾಜನೇ, ಆ ಅಗ್ನಿಯು ಸಮಸ್ತವಾದ ಈ ಭೂಮಿಯನ್ನು ದಹಿಸಲು ಉದ್ಯುಕ್ತವಾಗಿದೆ.
ಶಕುನಿಃ ಪಾಂಡುಪುತ್ರಾಭ್ಯಾಂ ಕೃತಃ ಸ ವಿಮುಖಃ ಶರೈಃ ॥ 76 ॥
ನಾಭಿಜಾನಾತಿ ಕರ್ತವ್ಯಂ ಯುದ್ಧೇ ಕಿಂಚಿತ್ ಪರಾಕ್ರಮಮ್ ॥77॥
ಶಕುನಿಯು ಪಾಂಡುಪುತ್ರರಾದ ನಕುಲ-ಸಹದೇವರಿಂದ ಅವರ ಬಾಣಗಳಿಂದ ಯುದ್ಧವಿಮುಖನಾಗಿ ಮಾಡಲ್ಪಟ್ಟನು. ಅವನಿಗೆ ಯುದ್ಧದಲ್ಲಿ ಪರಾಕ್ರಮ ಸಹಿತವಾಗಿ ಏನನ್ನು ಮಾಡಬೇಕೆಂದು ತಿಳಿಯಲಿಲ್ಲ.
ವಿಮುಖಂ ಚೈನಮಾಲೋಕ್ಯ ಮಾದ್ರೀಪುತ್ರೌ ಮಹಾರಥೌ |
ವವರ್ಷತುಃ ಪುನರ್ಬಾಣೈರ್ಯಥಾ ಮೇಘೌ ಮಹಾಗಿರಿಮ್ ॥78॥
ವಿಮುಖನಾದ ಅವನನ್ನು ನೋಡಿ ಮಹಾರಥರಾದ ಮಾದ್ರೀಪುತ್ರರು ಮೇಘಗಳು ಮಹಾಪರ್ವತದ ಮೇಲೆ ಮಳೆ ಸುರಿಸಿದಂತೆ ಅವನ ಮೇಲೆ ಪುನಃ ಬಾಣಗಳ ಮಳೆಯನ್ನು ಸುರಿಸಿದರು.
ಸ ವಧ್ಯಮಾನೋ ಬಹುಭಿಃ ಶರೈಃ ಸನ್ನತಪರ್ವಭಿಃ |
ಸಂಪ್ರಾಯಾಜ್ಜವನೈರಶ್ವೈಃ ದ್ರೋಣಾನೀಕಾಯ ಸೌಬಲಃ ॥ 79 ॥
ಬಾಗಿದ ತುದಿಯುಳ್ಳ ಅನೇಕ ಬಾಣಗಳಿಂದ ಹೊಡೆಯಲ್ಪಡುತ್ತಿದ್ದ ಶಕುನಿಯು ವೇಗಶಾಲಿಗಳಾದ ಅಶ್ವಗಳಿಂದ ದ್ರೋಣರ ಸೈನ್ಯದ ಕಡೆಗೆ ಹೊರಟು ಹೋದನು.
ಘಟೋತ್ಕಚಸ್ತಥಾ ಶೂರೋ ರಾಕ್ಷಸಂ ತಮಲಂಬುಸಮ್ |
ಅಭ್ಯಯಾದ್ ರಭಸಂ ಯುದ್ಧೇ ವೇಗಮಾಸ್ಥಾಯ ಮಧ್ಯಮಮ್ ॥80॥
ಶೂರನಾದ ಘಟೋತ್ಕಚನು ಮಧ್ಯಮ ವೇಗವನ್ನು ಆಶ್ರಯಿಸಿ ವೇಗಶಾಲಿಯಾದ ಅಲಂಬುಸನ ಕಡೆಗೆ ರಣರಂಗದಲ್ಲಿ ಮುನ್ನುಗ್ಗಿದನು.

ತಯೋರ್ಯುದ್ಧಂ ಮಹಾರಾಜ ಚಿತ್ರರೂಪಮಿವಾಭವತ್ |
ಯಾದೃಶಂ ಹಿ ಪುರಾವೃತ್ತಂ ರಾಮರಾವಣಯೋರ್ಮೃಧೇ ॥ 81 ॥
ಎಲೈ ಮಹಾರಾಜನೇ, ಹಿಂದೆ ರಾಮ-ರಾವಣರಿಗೆ ನಡೆದ ಯುದ್ಧದಂತೆ ಅವರಿಬ್ಬರ ಯುದ್ಧವು ವಿಚಿತ್ರ ರೂಪವನ್ನು ಹೊಂದಿದ್ದಿತು.
ತತೋ ಯುಧಿಷ್ಠಿರೋ ರಾಜಾ ಮದ್ರರಾಜಾನಮಾಹವೇ |
ವಿದ್ಧ್ವಾ ಪಂಚಶತೈರ್ಬಾಣೈಃ ಪುನರ್ವಿವ್ಯಾಧ ಸಪ್ತಭಿಃ ॥ 82 ॥
ಆಗ ರಾಜನಾದ ಯುಧಿಷ್ಠಿರನು ರಣರಂಗದಲ್ಲಿ ಮದ್ರರಾಜನಾದ ಶಲ್ಯನ ಮೇಲೆ ಐದುನೂರು ಬಾಣಗಳನ್ನು ಪ್ರಯೋಗಿಸಿ ಪುನಃ ಏಳು ಬಾಣಗಳಿಂದ ಅವನನ್ನು ಹೊಡೆದನು.
ತತಃ ಪ್ರವವೃತೇ ಯುದ್ಧಂ ತಯೋರತ್ಯಂತಮದ್ಭುತಮ್ |
ಯಥಾ ಪೂರ್ವಂ ಮಹಾರಾಜ ಶಂಬರಾಮರರಾಜಯೋಃ ॥ 83 ॥

ಎಲೈ ಮಹಾರಾಜನೇ, ಅನಂತರ ಹಿಂದೆ ಶಂಬರನಿಗೂ ಮತ್ತು ದೇವೇಂದ್ರನಿಗೂ ನಡೆದಂತೆ ಅವರಿಬ್ಬರಿಗೆ ಅತ್ಯಂತ ಅದ್ಭುತವಾದ ಯುದ್ಧವು ನಡೆಯಿತು.
ವಿವಿಂಶತಿಶ್ಚಿತ್ರಸೇನೋ ವಿಕರ್ಣಶ್ಚ ತವಾತ್ಮಜಃ |
ಅಯೋಧಯನ್ ಭೀಮಸೇನಂ ಮಹತ್ಯಾ ಸೇನಯಾ ವೃತಾಃ ॥ 84 ॥
ವಿವಿಂಶತಿ, ಚಿತ್ರಸೇನ ಮತ್ತು ವಿಕರ್ಣ- ಈ ನಿನ್ನ ಪುತ್ರರು ದೊಡ್ಡ ಸೇನೆಯಿಂದ ಕೂಡಿದವರಾಗಿ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೈದನೆಯ ಅಧ್ಯಾಯ
ದ್ರೋಣ-ಧೃಷ್ಟದ್ಯುಮ್ನರ ಯುದ್ಧ. ದ್ರೋಣರಿಂದ ತಮ್ಮ ರಥಕ್ಕೆ
ಬಂದ ಧೃಷ್ಟದ್ಯುಮ್ನನ ಉಚ್ಚಾಟನೆ.
ಸಂಜಯಃ
ತಥಾ ತಸ್ಮಿನ್ ಪ್ರವೃತ್ತೇ ತು ಸಂಗ್ರಾಮೇ ರೋಮಹರ್ಷಣೇ |
ಕೌರವೇಯಾಂಸ್ತ್ರಿಧಾ ಭೂತಾನ್ ಪಾಂಡವಾಃ ಸಮುಪಾದ್ರವನ್ |
ಜಲಸಂಧಂ ಮಹಾಬಾಹುಂ ಭೀಮಸೇನೋಽಭ್ಯವರ್ತತ ॥ 1 ॥
ಸಂಜಯ ರೋಮಾಂಚಕಾರಿಯಾದ ಆ ಯುದ್ಧವು ಹಾಗೆ ನಡೆಯುತ್ತಿರಲು ಮೂರು ಭಾಗವಾದ ಕೌರವರ ಸೈನ್ಯದ ಮೇಲೆ ಪಾಂಡವರು ಮುನ್ನುಗ್ಗಿದರು. ಮಹಾಬಾಹುವಾದ ಜಲಸಂಧನು ಭೀಮಸೇನನನ್ನು ಸಮೀಪಿಸಿದನು.
ಯುಧಿಷ್ಠಿರಃ ಸಹಾನೀಕಃ ಕೃತವರ್ಮಾಣಮಾಹವೇ |
ಕಿರನ್ ಸ ಶರವರ್ಷಾಣಿ ರೋಚಮಾನ ಇವಾಂಶುಮಾನ್ ॥ 2 ॥
ಧೃಷ್ಟದ್ಯುಮ್ನೋ ಮಹಾರಾಜ ದ್ರೋಣಮಭ್ಯದ್ರವದ್ ರಣೇ ॥ 3 ॥
ಯುಧಿಷ್ಠಿರನು ತನ್ನ ಸೈನ್ಯದ ಜೊತೆಯಲ್ಲಿ ರಣರಂಗದಲ್ಲಿ ಕೃತವರ್ಮನ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಸೂರ್ಯನಂತೆ ಕಂಗೊಳಿಸಿದನು. ಎಲೈ ಮಹಾರಾಜನೇ, ಧೃಷ್ಟದ್ಯುಮ್ನನು ರಣರಂಗದಲ್ಲಿ ದ್ರೋಣರ ಕಡೆಗೆ ಸಾಗಿದನು.
ತತಃ ಪ್ರವವೃತೇ ಯುದ್ಧಂ ತ್ವರತಾಂ ಸರ್ವಧನ್ವಿನಾಮ್ |
ಕುರೂಣಾಂ ಪಾಂಡವಾನಾಂ ಚ ಕ್ರುದ್ಧಾನಾಮಿತರೇತರಮ್ ॥ 4 ॥
ಅನಂತರ ಕ್ರುದ್ಧರಾದ, ಧನುರ್ಧಾರಿಗಳಾದ, ತ್ವರೆ ಮಾಡುವ ಕೌರವ ಮತ್ತು ಪಾಂಡವ ಯೋಧರಿಗೆ ಪರಸ್ಪರವಾಗಿ ಯುದ್ಧವು ಪ್ರಾರಂಭವಾಯಿತು.
ಸಂಕ್ಷಯೇ ತು ತಥಾಭೂತೇ ವರ್ತಮಾನೇ ಮಹಾಭಯೇ |
ದ್ವಂದ್ವೀಭೂತೇಷು ಸೈನ್ಯೇಷು ಯುದ್ಧ್ಯಮಾನೇಷ್ವಭೀತವತ್ ॥ 5 ॥
ದ್ರೋಣಃ ಪಾಂಚಾಲಪುತ್ರೇಣ ಬಲೀ ಬಲವತಾ ಸಹ |
ವ್ಯಪಾಸೃಜತ್ ಪೃಷತ್ಕೌಘಾನ್ ತದದ್ಭುತಮಿವಾಭವತ್ ॥ 6 ॥
ಮಹಾಭಯಂಕರವಾದ ಕ್ಷತ್ರಿಯ ನಾಶವು ಹಾಗೆ ನಡೆಯುತ್ತಿರಲು, ಸೈನ್ಯಗಳು ದ್ವಂದ್ವ ಯುದ್ಧಗಳಲ್ಲಿ ನಿರತವಾಗಿ ನಿರ್ಭೀತವಾಗಿ ಯುದ್ಧದಲ್ಲಿ ತೊಡಗಿರಲು, ಬಲಿಷ್ಠರಾದ ದ್ರೋಣರು ಬಲಿಷ್ಠನಾದ ಧೃಷ್ಟದ್ಯುಮ್ನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಅದು ಅದ್ಭುತವಾಗಿದ್ದಿತು.
ಪುಂಡರೀಕವನಾನೀವ ವಿಧ್ವಸ್ತಾನಿ ಸಮಂತತಃ |
ಚಕ್ರಾತೇ ದ್ರೋಣಪಾಂಚಾಲ್ಯೌ ನೃಣಾಂ ಶೀರ್ಷಾಣ್ಯನೇಕಶಃ ॥ 7 ॥
ದ್ರೋಣ-ಧೃಷ್ಟದ್ಯುಮ್ನರಿಬ್ಬರೂ ತಮ್ಮ ಬಾಣಗಳಿಂದ ಅನೇಕ ಯೋಧರ ಶಿರಸ್ಸುಗಳನ್ನು ಕತ್ತರಿಸಿ, ರಣರಂಗವನ್ನು ಕಮಲಪುಷ್ಪಗಳು ಚೆಲ್ಲಾಡಿದ ವನದಂತೆ ಮಾಡಿದರು.
ವಿಕೀರ್ಣಾನಿ ಚ ವೀರಾಣಾಮನೀಕೇಷು ಸಮಂತತಃ |
ವಸಾತ್ರಾಭರಣಶಸ್ತ್ರಾಣಿ ಧ್ವಜವರ್ಮಾಯುಧಾನಿ ಚ ॥ 8 ॥
ವೀರರ ವಸಾತ್ರಾಭರಣ-ಶಸ್ತ್ರಗಳು, ಧ್ವಜ-ಕವಚ ಮತ್ತು ಆಯುಧಗಳು ಎಲ್ಲ ಕಡೆಗಳಲ್ಲಿಯೂ ಸೈನ್ಯದಲ್ಲಿ ಚೆಲ್ಲಾಡಿದವು.
ಸುವರ್ಣಚಿತ್ರಾಭರಣಾಃ ಸಂಸಿಕ್ತಾ ರುಧಿರೇಣ ಚ |
ಕೋವಿದಾರಾ ಇವಾಭಾಂತಿ ಪುಷ್ಪಿತಾಸ್ತತ್ರ ಭಾರತ |
ತಾವಕಾಃ ಸಮರೇ ಯೋಧಾಃ ಪಾಂಡವೇಯಾಶ್ಚ ವಿಕ್ಷತಾಃ ॥ 9 ॥
ಎಲೈ ಭಾರತನೇ, ಯುದ್ಧದಲ್ಲಿ ನಿನ್ನ ಮತ್ತು ಪಾಂಡವರ ಯೋಧರು ಬಹಳ ಗಾಯಗೊಂಡು ಸುವಣರ್ವಿಚಿತ್ರಾಭರಣಗಳನ್ನು ಧರಿಸಿದವರಾಗಿ, ರಕ್ತದಿಂದ ತೋಯಿಸಲ್ಪಟ್ಟು, ಪುಷ್ಪಭರಿತವಾದ ಕೋವಿದಾರ ವೃಕ್ಷಗಳಂತೆ ತೋರಿದರು.
ಕುಂಜರಾಂಶ್ಚ ನರಾನನ್ಯೇ ಪಾತಯಂತಿ ಸ್ಮ ಪತ್ರಿಭಿಃ |
ತಾಳಮಾತ್ರಾಣಿ ಚಾಪಾನಿ ವಿಕರ್ಷಂತೋ ಮಹಾರಥಾಃ ॥ 10 ॥

ಇನ್ನು ಕೆಲವು ಮಹಾರಥರು ತಾಳವೃಕ್ಷದಷ್ಟು ಎತ್ತರದ ಧನುಸ್ಸುಗಳನ್ನು ಎಳೆಯುತ್ತಾ ಗಜಗಳನ್ನೂ ಮತ್ತು ಪದಾತಿಗಳನ್ನೂ ಪತ್ರಸಹಿತವಾದ ಬಾಣಗಳಿಂದ ಹೊಡೆದು ಉರುಳಿಸಿದರು.
ಅಸಿಚರ್ಮಾಣಿ ಚಾಪಾನಿ ಶಿರಾಂಸಿ ಕವಚಾನಿ ಚ |
ವಿಪ್ರಕೀರ್ಯಂತ ಶೂರಾಣಾಂ ಸಂಪ್ರಹಾರೇ ಮಹಾತ್ಮನಾಮ್ ॥ 11 ॥
ಅಂತಹ ಯುದ್ಧವು ನಡೆಯುತ್ತಿರುವಾಗ ಮಹಾತ್ಮರಾದ ಶೂರರ ಖಡ್ಗ- ಚರ್ಮಗಳು, ಧನುಸ್ಸುಗಳು, ಶಿರಸ್ಸುಗಳು ಮತ್ತು ಕವಚಗಳು ರಣರಂಗದಲ್ಲಿ ಚೆಲ್ಲಾಡಿದವು.
ಉತ್ಥಿತಾನ್ಯಗಣೇಯಾನಿ ಕಬಂಧಾನಿ ಸಮಂತತಃ |
ಅದೃಶ್ಯಂತ ಮಹಾರಾಜ ತಸ್ಮಿನ್ ಪರಮಸಂಕುಲೇ ॥ 12 ॥
ಎಲೈ ಮಹಾರಾಜನೇ, ಆ ಸಂಕುಲ ಯುದ್ಧದಲ್ಲಿ ಎಲ್ಲ ಕಡೆಗಳಲ್ಲಿಯೂ ಅನೇಕ ಕಬಂಧಗಳು (ರುಂಡಗಳು) ಎದ್ದಿರುವುದು ಕಂಡುಬಂದಿತು.
ಗೃಧ್ರಾಃ ಕಂಕಾ ಬಲಾಃ ಶ್ಯೇನಾ ವಾಯಸಾ ಜಂಬುಕಾಸ್ತಥಾ |
ಬಹವಃ ಪಿಶಿತಾಶಾಶ್ಚ ತತ್ರಾದೃಶ್ಯಂತ ಮಾರಿಷ ॥ 13 ॥
ಎಲೈ ಪೂಜ್ಯನೇ, ಹದ್ದುಗಳು, ಕಂಕಗಳು, ಬಲಗಳು, ಗಿಡಗಗಳು, ಕಾಗೆಗಳು, ನರಿಗಳು ಮೊದಲಾದ ಅನೇಕ ಮಾಂಸಾಹಾರಿಗಳು ಅಲ್ಲಿ ಕಂಡುಬಂದವು.
ಭಕ್ಷಯಂತಶ್ಚ ಮಾಂಸಾನಿ ಪಿಬಂತಶ್ಚಾಪಿ ಶೋಣಿತಮ್ |
ವಿಲುಂಪಮಾನಾಃ ಕೇಶಾಂಶ್ಚ ಮಜ್ಜಾಶ್ಚ ಬಹುಧಾ ನೃಪ ॥ 14 ॥
ಆಕರ್ಷಂತಃ ಶರೀರಾಣಿ ಶರೀರಾವಯವಾಂಸ್ತಥಾ |
ನರಾಶ್ವಗಜಸಂಘಾನಾಂ ಶಿರಾಂಸಿ ಚ ತತಸ್ತತಃ ॥ 15 ॥
ಮಾಂಸಗಳನ್ನು ಭಕ್ಷಿಸುತ್ತಾ, ರಕ್ತವನ್ನು ಪಾನ ಮಾಡುತ್ತಾ, ಕೇಶಗಳನ್ನು ಮತ್ತು ಮಜ್ಜೆಗಳನ್ನು ಹಿಡಿದು ಎಳೆದಾಡುತ್ತಾ, ನರಾಶ್ವ-ಗಜ ಸಮೂಹಗಳ ಶರೀರಗಳನ್ನು ಶರೀರಾವಯವಗಳನ್ನು ಮತ್ತು ಶಿರಸ್ಸುಗಳನ್ನು ಎಳೆಯುತ್ತಿರುವುದು ಕಂಡುಬಂದಿತು.
ಕೃತಾಸ್ತತ್ರ ರಣದೀಕ್ಷಾಭಿಃ ದೀಕ್ಷಿತಾಃ ಶರಮಾಲಿನಃ |
ರಣೇ ಜಯಂ ಪ್ರಾರ್ಥಯಾನಾ ಭೃಶಂ ಯುಯುಧಿರೇ ತದಾ ॥ 16 ॥
ಅಸಿಮಾರ್ಗಾನ್ ಬಹುವಿಧಾನ್ ವಿಚೇರುಶ್ಚಾಪರೇ ರಣೇ ॥ 17 ॥
ಅಸ್ತ್ರಜ್ಞರಾದ ರಣದೀಕ್ಷೆಯಿಂದ ದೀಕ್ಷಿತರಾದ, ಶರಮಾಲೆಗಳನ್ನು ಧರಿಸಿದ, ಯುದ್ಧದಲ್ಲಿ ಜಯವನ್ನು ಪ್ರಾರ್ಥಿಸುವ ಅನೇಕ ಯೋಧರು ಆಗ ತೀವ್ರವಾಗಿ ಯುದ್ಧವನ್ನು ಮಾಡಿದರು. ಇನ್ನು ಕೆಲವರು ಬಹುವಿಧವಾದ ಖಡ್ಗಮಾರ್ಗಗಳಲ್ಲಿ ಸಂಚರಿಸಿದರು.
ಋಷ್ಟಿಭಿಃ ಶಕ್ತಿಭಿಃ ಪ್ರಾಸೈಃ ಶೂಲತೋಮರಪಟ್ಟಿಸೈಃ |
ಗದಾಭಿಃ ಪರಿಘೈಶ್ಚಾನ್ಯೈಃ ವ್ಯಾಯತೈಶ್ಚ ಭುಜೈರಪಿ |
ಅನ್ಯೋನ್ಯಂ ನ್ಯಹನನ್ ಸಂಖೇ ಯುದ್ಧರಂಗಗತಾ ನರಾಃ ॥ 18 ॥
ರಥಿನೋ ರಥಿಭಿಃ ಸಾರ್ಧಮಶ್ವಾರೋಹಾಶ್ಚ ಸಾದಿಭಿಃ |
ಮಾತಂಗಾ ವರಮಾತಂಗೈಃ ಪದಾತಾಶ್ಚ ಪದಾತಿಭಿಃ ॥ 19 ॥
ಇನ್ನು ಕೆಲವು ಯೋಧರು ಋಷ್ಟಿಗಳಿಂದಲೂ, ಶಕ್ತಿಗಳಿಂದಲೂ, ಪ್ರಾಸಗಳಿಂದಲೂ, ಶೂಲ-ತೋಮರ-ಪಟ್ಟಿಸಗಳಿಂದಲೂ, ಗದೆಗಳಿಂದಲೂ, ಪರಿಘಗಳಿಂದಲೂ, ಇನ್ನು ಕೆಲವರು ತಮ್ಮ ವಿಸ್ತಾರವಾದ ಭುಜಗಳಿಂದಲೂ ಯುದ್ಧರಂಗ ಗತರಾಗಿ ಪರಸ್ಪರವಾಗಿ ಹೊಡೆದಾಡಿದರು. ರಥಿಕರು ರಥಿಗಳಿಂದಲೂ, ಅಶ್ವಾರೋಹಿಗಳು ಅಶ್ವಾರೋಹಿಗಳಿಂದಲೂ, ಗಜಗಳು ಶ್ರೇಷ್ಠ ಗಜಗಳಿಂದಲೂ, ಪದಾತಿಗಳು ಪದಾತಿಗಳಿಂದಲೂ ಯುದ್ಧವನ್ನು ಮಾಡಿದರು.
ಕ್ಷೀಬಾ ಇವಾನ್ಯೇ ಚೋನ್ಮತ್ತಾ ರಂಗೇಷ್ವೇವ ಚ ವಾರಣಾಃ |
ಉಚ್ಚುಕ್ರುಶುರಥಾನ್ಯೋನ್ಯಂ ಜಘ್ನುರನ್ಯೋನ್ಯಮಾಹವೇ ॥ 20 ॥
ಇನ್ನು ಕೆಲವು ಗಜಗಳು ಪಾನಮತ್ತರಾದಂತೆ ಉನ್ಮತ್ತವಾಗಿ ರಣಭೂಮಿಯಲ್ಲಿಯೇ ಗರ್ಜಿಸಿ ಪರಸ್ಪರವಾಗಿ ಯುದ್ಧವನ್ನು ಮಾಡಿದವು.
ವರ್ತಮಾನೇ ಮಹಾಯುದ್ಧೇ ನಿರ್ಮರ್ಯಾದೇ ವಿಶಾಂಪತೇ |
ಧೃಷ್ಟದ್ಯುಮ್ನೋ ಹಯಾನಶ್ವೈರ್ದ್ರೋಣಸ್ಯಾಮಿಶ್ರಯತ್ ಸ್ವಕೈಃ ॥ 21 ॥
ಎಲೈ ರಾಜನೇ, ಎಲ್ಲೆಗಳನ್ನು ಮೀರಿದ ಆ ಮಹಾಯುದ್ಧವು ನಡೆಯುತ್ತಿರಲು ಧೃಷ್ಟದ್ಯುಮ್ನನು ತನ್ನ ರಥದ ಅಶ್ವಗಳನ್ನು ದ್ರೋಣರ ರಥದ ಅಶ್ವಗಳೊಂದಿಗೆ ಬೆರೆಸಿದನು.
ತೇ ಹಯಾಃ ಸಾಧ್ವಶೋಭಂತ ಮಿಶ್ರಿತಾ ವಾತರಂಹಸಃ |
ಪಾರಾವತಸವರ್ಣಾಶ್ಚ ರಕ್ತಶೋಣಾಶ್ಚ ಮಾರಿಷ ॥ 22 ॥
ಹಯಾಃ ಶುಶುಭಿರೇ ರಾಜನ್ ಮೇಘಾ ಇವ ಸವಿದ್ಯುತಃ ॥ 23 ॥
ಎಲೈ ಪೂಜ್ಯನೇ, ವಾಯುವೇಗವುಳ್ಳ ಪಾರಿವಾಳ ಬಣ್ಣದ ಮತ್ತು ರಕ್ತಕೆಂಪು ಬಣ್ಣದ ಅಶ್ವಗಳು ಪರಸ್ಪರವಾಗಿ ಮಿಶ್ರಿತವಾಗಿ ಬಹಳವಾಗಿ ಶೋಭಿಸಿದವು. ಎಲೈ ರಾಜನೇ, ಅಶ್ವಗಳು ಮಿಂಚಿನಿಂದ ಕೂಡಿದ ಮೋಡಗಳಂತೆ ಶೋಭಿಸಿದವು.
ಧೃಷ್ಟದ್ಯುಮ್ನಸ್ತು ಸಂಪ್ರೇಕ್ಷ್ಯ ದ್ರೋಣಮಭ್ಯಾಶಮಾಗತಮ್ |
ಅಸಿಚರ್ಮಾದದೇ ವೀರೋ ಧನುರುತ್ಸೃಜ್ಯ ಭಾರತ ॥ 24 ॥
ಎಲೈ ಭಾರತನೇ, ಧೃಷ್ಟದ್ಯುಮ್ನನಾದರೋ ತನ್ನ ಸಮೀಪಕ್ಕೆ ಬಂದ ದ್ರೋಣರನ್ನು ನೋಡಿ ವೀರನಾದ ಅವನು ಧನುಸ್ಸನ್ನು ಬಿಟ್ಟು ಖಡ್ಗ-ಚರ್ಮಗಳನ್ನು ತೆಗೆದುಕೊಂಡನು.

ಚಿಕೀರ್ಷುರ್ದುಷ್ಕರಂ ಕರ್ಮ ಪಾರ್ಷತಃ ಪರವೀರಹಾ |
ಈಷಾಯಾಃ ಸಮತಿಕ್ರಮ್ಯ ದ್ರೋಣಸ್ಯ ರಥಮಾವಿಶತ್ ॥ 25 ॥
ಪರವೀರಘಾತಕನಾದ ಧೃಷ್ಟದ್ಯುಮ್ನನು ದುಷ್ಕರವಾದ ಕರ್ಮವನ್ನು ಮಾಡಲು ಬಯಸಿ ತನ್ನ ರಥದ ಮೂಕಿಯಿಂದ ಹಾರಿ ದ್ರೋಣರ ರಥವನ್ನು ಸೇರಿದನು.
ಅತಿಷ್ಠದ್ ಯುಗಮಧ್ಯೇಷು ಯುಗಸನ್ನಹನೇಷು ಚ |
ಜಘನಾಂಸೇಷು ಚಾಶ್ವಾನಾಂ ತತ್ ಸೈನ್ಯಂ ಸಮಪೂಜಯತ್ ॥ 26 ॥
ಅವನು ನೊಗದ ಮಧ್ಯದಲ್ಲಿಯೂ, ನೊಗದ ಕಡಗೂಟಗಳಲ್ಲಿಯೂ, ಅಶ್ವಗಳ ಜಘನಪ್ರದೇಶಗಳಲ್ಲಿಯೂ ಸಂಚರಿಸಿದರು. ಅದನ್ನು ಸೈನ್ಯವು ಗೌರವಿಸಿತು.
ಖಡ್ಗೇನ ಚರತಸ್ತಸ್ಯ ಶೋಣಾಶ್ವಾನಧಿತಿಷ್ಠತಃ |
ನ ದದರ್ಶಾಂತರಂ ದ್ರೋಣಃ ತದದ್ಭುತಮಿವಾಭವತ್ ॥ 27 ॥
ದ್ರೋಣರ ಕೆಂಪು ಕುದುರೆಗಳನ್ನು ನಿಯಂತ್ರಣದಲ್ಲಿಟ್ಟು, ಖಡ್ಗವನ್ನು ಹಿಡಿದು ಚಲಿಸುವ ಅವನಲ್ಲಿ ದ್ರೋಣರು ಒಂದು ಸಣ್ಣ ಛಿದ್ರವನ್ನೂ ಕಾಣಲಿಲ್ಲ. ಅದು ಅದ್ಭುತವಾಗಿದ್ದಿತು.
ಯಥಾ ಶ್ಯೇನಸ್ಯ ಚರತೋ ದ್ರುತಮಾಮಿಷಗೃದ್ಧಿನಃ |
ತಥೈವಾಸೀದಭಿಸರಸ್ತಸ್ಯ ದ್ರೋಣಂ ಜಿಘಾಂಸತಃ ॥ 28 ॥
ಆಮಿಷವನ್ನು ನೋಡಿ ಬಯಸಿ, ಚಲಿಸುವ ಗಿಡುಗದಂತೆಯೇ ದ್ರೋಣರನ್ನು ಕೊಲ್ಲಲು ಬಯಸಿ ಚಲಿಸುವ ಧೃಷ್ಟದ್ಯುಮ್ನನ ಚಲನೆಯು ಇದ್ದಿತು.
ತತಃ ಶರಶತೇನಾಸ್ಯ ಶತಚಂದ್ರಮಪಾತಯತ್ ॥ 29 ॥
ದ್ರೋಣೋ ದ್ರುಪದಪುತ್ರಸ್ಯ ಖಡ್ಗಂ ಚ ದಶಭಿಃ ಶರೈಃ |
ಹಯಾಂಶ್ಚೈವ ಚತುಃಷಷ್ಟ್ಯಾ ಶರಾಣಾಂ ಜಘ್ನಿವಾನ್ ಬಲೀ ॥ 30 ॥
ಆಗ ಬಲಿಷ್ಠರಾದ ದ್ರೋಣರು ನೂರು ಬಾಣಗಳಿಂದ ಅವನ ಚರ್ಮವನ್ನು (ಗುರಾಣಿಯನ್ನು) ಕೆಳಗೆ ಬೀಳಿಸಿದರು. ಧೃಷ್ಟದ್ಯುಮ್ನನ ಖಡ್ಗವನ್ನು ಹತ್ತು ಬಾಣಗಳಿಂದಲೂ, ಅವನ ಕುದುರೆಗಳನ್ನು ಅರವತ್ನಾಲ್ಕು ಬಾಣಗಳಿಂದಲೂ ಹೊಡೆದರು.
ಅಥಾಸ್ಮೈ ತ್ವರಿತೋ ಬಾಣಮಪರಂ ಜೀವಿತಾಂತಕಮ್ |
ಧೃಷ್ಟದ್ಯುಮ್ನಾಯ ಚಿಕ್ಷೇಪ ಶಚೀಪತಿರಿವಾಶನಿಮ್ ॥ 31 ॥
ಅನಂತರ ತ್ವರೆ ಮಾಡಿ ಜೀವಿತಾಂತಕವಾದ ಇನ್ನೊಂದು ಬಾಣವನ್ನು ತೆಗೆದುಕೊಂಡು ಶಚೀಪತಿಯು ವಜ್ರಾಯುಧವನ್ನು ಪ್ರಯೋಗಿಸಿದಂತೆ ಅದನ್ನು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿದರು.
ತಂ ಚತುರ್ದಶಭಿರ್ಬಾಣೈರ್ಬಾಣಾಂಶ್ಚಿಚ್ಛೇದ ಸಾತ್ಯಕಿಃ |
ಗ್ರಸ್ತಮಾಚಾರ್ಯಮುಖ್ಯೇನ ಧೃಷ್ಟದ್ಯುಮ್ನಮಮೋಚಯತ್ ॥ 32 ॥
ಆಗ ಸಾತ್ಯಕಿಯು ಹದಿನಾಲ್ಕು ಬಾಣಗಳನ್ನು ಪ್ರಯೋಗಿಸಿ, ಆಚಾರ್ಯರ ಬಾಣಗಳನ್ನು ಕತ್ತರಿಸಿ, ಆಚಾರ್ಯ ಶ್ರೇಷ್ಠರಾದ ದ್ರೋಣರಿಂದ ಗ್ರಸ್ತನಾದ ಧೃಷ್ಟದ್ಯುಮ್ನನನ್ನು ಬಿಡುಗಡೆಗೊಳಿಸಿದನು.
ಸಿಂಹೇನೇವ ಮೃಗಂ ಗ್ರಸ್ತಂ ನರಸಿಂಹೇನ ಸಂಯುಗೇ |
ದ್ರೋಣಾದ್ ವೈ ಮೋಚಯಾಮಾಸ ಪಾಂಚಾಲ್ಯಂ ಶಿನಿಪುಂಗವಃ ॥33॥
ಸಿಂಹದಿಂದ ಹಿಡಿಯಲ್ಪಟ್ಟ ಜಿಂಕೆಯನ್ನು ಬಿಡಿಸಿದಂತೆ, ರಣರಂಗದಲ್ಲಿ ನರಸಿಂಹರಾದ ದ್ರೋಣರಿಂದ ಹಿಡಿಯಲ್ಪಟ್ಟ ಧೃಷ್ಟದ್ಯುಮ್ನನನ್ನು ಶಿನಿಪುಂಗವನಾದ ಸಾತ್ಯಕಿಯು ದ್ರೋಣರಿಂದ ಬಿಡುಗಡೆಗೊಳಿಸಿದನು.
ಸಾತ್ಯಕಿಂ ಪ್ರೇಕ್ಷ ್ಯ ಗೋಪ್ತಾರಂ ಪಾಂಚಾಲಸ್ಯ ಮಹಾಹವೇ |
ಶರಾಣಾಂ ತ್ವರಿತೋ ದ್ರೋಣಃ ಷಡ್ವಿಂಶತ್ಯಾ ಸಮರ್ಪಯತ್ ॥ 34 ॥
ಮಹಾಯುದ್ಧದಲ್ಲಿ ಸಾತ್ಯಕಿಯು ಧೃಷ್ಟದ್ಯುಮ್ನನಿಗೆ ರಕ್ಷಕನಾಗಿ ಬಂದುದನ್ನು ನೋಡಿ ದ್ರೋಣರು ಶೀಘ್ರವಾಗಿ ಸಾತ್ಯಕಿಯ ಮೇಲೆ ಇಪ್ಪತ್ತಾರು ಬಾಣಗಳನ್ನು ಪ್ರಯೋಗಿಸಿದರು.
ತತೋ ದ್ರೋಣಂ ಶಿನೇರ್ನಪ್ತಾ ಗ್ರಸಂತಮಿವ ಸೃಂಜಯಾನ್ |
ಪ್ರತ್ಯವಿದ್ಧ್ಯಚ್ಛಿತೈರ್ಬಾಣೈಃ ಷಡ್ವಿಂಶತ್ಯಾ ಸ್ತನಾಂತರೇ ॥ 35 ॥
ಆಗ ಶಿನಿಯ ಮೊಮ್ಮಗನಾದ ಸಾತ್ಯಕಿಯು ಸೃಂಜಯರ ಕಡೆಗೆ ಮುನ್ನುಗ್ಗಿ ಬರುತ್ತಿದ್ದ ದ್ರೋಣರ ಮೇಲೆ ಹರಿತವಾದ ಇಪ್ಪತ್ತಾರು ಬಾಣಗಳನ್ನು ಪ್ರಯೋಗಿಸಿ ಅವರ ಸ್ತನಗಳ ಮಧ್ಯದಲ್ಲಿ ಹೊಡೆದನು.
ತತಃ ಸರ್ವೇ ರಥಾತ್ ತೂರ್ಣಂ ಪಾಂಚಾಲಾ ಜಯಗೃದ್ಧಿನಃ |
ಸಾತ್ವತಾಭಿಸೃತೇ ದ್ರೋಣೇ ಧೃಷ್ಟದ್ಯುಮ್ನಮಚೋದಯನ್ ॥ 36 ॥
ಆಗ ಜಯಾಕಾಂಕ್ಷಿಗಳಾದ ಪಾಂಚಾಲರೆಲ್ಲರೂ ತಮ್ಮ ತಮ್ಮ ರಥಗಳಲ್ಲಿ ಕುಳಿತು ಸಾತ್ಯಕಿಯಿಂದ ಎದುರಿಸಲ್ಪಟ್ಟ ದ್ರೋಣರ ಮೇಲೆ ಎರಗುವಂತೆ ಧೃಷ್ಟದ್ಯುಮ್ನನನ್ನು ಪ್ರಚೋದಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಾಶೀತಿತಮೋಽಧ್ಯಾಯಃ ॥
॥ ಜಯದ್ರಥಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *

ಎಂಬತ್ತಾರನೆಯ ಅಧ್ಯಾಯ
ದ್ರೋಣ-ಸಾತ್ಯಕಿಯರ ಯುದ್ಧ. ಬಾಯಾರಿದ ಅಶ್ವಗಳಿಗಾಗಿ
ಅರ್ಜುನನಿಂದ ಸರೋವರದ ನಿರ್ಮಾಣ.
ಧೃತರಾಷ್ಟ್ರಃ
ಬಾಣೇ ತಸ್ಮಿನ್ ನಿಕೃತ್ತೇ ತು ಧೃಷ್ಟದ್ಯುಮ್ನೇ ಚ ಮೋಕ್ಷಿತೇ |
ತೇನ ವೃಷ್ಣಿಪ್ರವೀರೇಣ ಯುಯುಧಾನೇನ ಸಂಯುಗೇ ॥ 1 ॥
ಅಮರ್ಷಿತೋ ಮಹೇಷ್ವಾಸಃ ಸರ್ವಶಸ್ತ್ರಭೃತಾಂ ವರಃ |
ರಥವ್ಯಾಘ್ರಂ ಶಿನೇಃ ಪೌತ್ರಂ ದ್ರೋಣಃ ಕಿಮಕರೋದ್ ಯುಧಿ ॥ 2 ॥
ಧೃತರಾಷ್ಟ್ರ ದ್ರೋಣರ ಬಾಣವು ಕತ್ತರಿಸಲ್ಪಟ್ಟು ರಣರಂಗದಲ್ಲಿ ವೃಷ್ಣಿವೀರನಾದ ಸಾತ್ಯಕಿಯಿಂದ ಧೃಷ್ಟದ್ಯುಮ್ನನು ಬಿಡುಗಡೆಗೊಳಿಸಲ್ಪಡುತ್ತಿರಲು, ಕೋಪಗೊಂಡ ಮಹಾಧನುರ್ಧಾರಿಗಳೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ ಆದ ದ್ರೋಣರು ಶಿನಿಯ ಪೌತ್ರನೂ, ರಥವ್ಯಾಘ್ರನೂ ಆದ ಸಾತ್ಯಕಿಗೆ ಯುದ್ಧದಲ್ಲಿ ಏನು ಮಾಡಿದರು?
ಸಂಜಯಃ
ಸಂಪ್ರಸ್ರುತಕ್ರೋಧವಿಷೋ ವ್ಯಾದಿತಾಸ್ಯ ಇವಾಂತಕಃ |
ತೀಕ್ಷ್ಣಧಾರೇಷುದಶನಃ ಶಿತನಾರಾಚದಂಷ್ಟ್ರವಾನ್ ॥ 3 ॥
ಸಂರಂಭಾಮರ್ಷತಾಮ್ರಾಕ್ಷೋ ಮಹಾಹಿರಿವ ನಿಃಶ್ವಸನ್ |
ನರವೀರಃ ಪ್ರಮುದಿತೈಃ ಶೋಣೈರಶ್ವೈರ್ಮಹಾಜವೈಃ ॥ 4 ॥
ಉತ್ಪತದ್ಭಿರಿವಾಕಾಶಂ ಪತದ್ಭಿರಿವ ಸರ್ವತಃ |
ರುಗ್ಮಪುಂಖಾನ್ ಶರಾನಸ್ಯನ್ ಯುಯುಧಾನಮುಪಾದ್ರವತ್ ॥ 5 ॥
ಸಂಜಯ ಕ್ರೋಧವೆಂಬ ವಿಷವನ್ನು ಸುರಿಸುತ್ತಾ, ಬಾಯಿ ತೆರೆದ ಅಂತಕನಂತೆ ತೀಕ್ಷ್ಣಧಾರೆಯುಳ್ಳ ಬಾಣಗಳ ದಂತಗಳನ್ನೂ, ಹರಿತವಾದ ನಾರಾಚವೆಂಬ ಕೋರೆ ದಾಡೆಗಳನ್ನೂ ಹೊಂದಿ, ಕೋಪ-ರೋಷಗಳಿಂದ ಕೆಂಪಾದ ಕಣ್ಣುಳ್ಳ, ಮಹಾಸರ್ಪದಂತೆ ಉಸಿರನ್ನು ಬಿಡುವ, ನರವೀರರಾದ ದ್ರೋಣರು ಮಹಾವೇಗಶಾಲಿಗಳಾದ, ಸಂತೋಷಗೊಂಡ, ರಕ್ತವರ್ಣವನ್ನು ಹೊಂದಿದ, ಆಕಾಶಕ್ಕೆ ನೆಗೆಯುವಂತೆ ಎಲ್ಲ ಕಡೆಗಳಲ್ಲಿಯೂ ಚಲಿಸುವ ಅಶ್ವಗಳಿಂದ ಹೂಡಿದ ರಥದಲ್ಲಿ ಕುಳಿತು ಸುವರ್ಣ ಪುಂಖಗಳುಳ್ಳ ಬಾಣಗಳನ್ನು ಪ್ರಯೋಗಿಸುತ್ತಾ ಸಾತ್ಯಕಿಯ ಕಡೆಗೆ ಧಾವಿಸಿದರು.
ಶರಪಾತಮಹಾವರ್ಷಂ ರಥಘೋಷಬಲಾಹಕಮ್ |
ಕಾರ್ಮುಕಾಕರ್ಷವಿಕ್ಷೇಪಂ ನಾರಾಚಬಹುವಿದ್ಯುತಮ್ ॥ 6 ॥
ಶಕ್ತಿಖಡ್ಗಾಶನಿಧರಂ ಕ್ರೋಧವೇಗಸಮುತ್ಥಿತಮ್ |
ದ್ರೋಣಮೇಘಮನಾವಾರ್ಯಂ ಹಯಮಾರುತಚೋದಿತಮ್ ॥ 7 ॥
ದೃಷ್ಟ್ವೈವಾಭಿಪತಂತಂ ತಂ ಶೂರಃ ಪರಪುರಂಜಯಃ |
ಉವಾಚ ಸೂತಂ ಶೈನೇಯಃ ಪ್ರಹಸನ್ ಯುದ್ಧದುರ್ಮದಃ ॥ 8 ॥
ಶರಪಾತವೆಂಬ ಮಹಾಮಳೆಯುಳ್ಳ, ರಥಘೋಷವೆಂಬ ಬಿಳಿಯ ಮೋಡ ಸಮೂಹವುಳ್ಳ, ಧನುಸ್ಸಿನ ಎಳೆಯುವಿಕೆ ಎಂಬ ವಿಕ್ಷೇಪವುಳ್ಳ, ನಾರಾಚವೆಂಬ ಅನೇಕ ಮಿಂಚುಗಳುಳ್ಳ, ಶಕ್ತಿ-ಖಡ್ಗಗಳೆಂಬ ಸಿಡಿಲುಗಳುಳ್ಳ, ಕ್ರೋಧವೇಗದಿಂದ ಮೇಲಕ್ಕೆದ್ದ, ಇನ್ನೊಬ್ಬರು ನಿವಾರಿಸಲು ಸಾಧ್ಯವಿಲ್ಲದ, ಅಶ್ವಗಳೆಂಬ ಮಾರುತಗಳಿಂದ ಚೋದಿತವಾದ ದ್ರೋಣರೆಂಬ (ನೀಲ) ಮೇಘವು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದ ತಕ್ಷಣವೇ ಶೂರನೂ, ಪರಪುರಂಜಯನೂ, ಯುದ್ಧ ದುರ್ಮದನೂ ಆದ ಸಾತ್ಯಕಿಯು ನಗುತ್ತಾ ತನ್ನ ಸೂತನನ್ನು ಕುರಿತು ಹೇಳಿದನು.
ಏತಂ ವೈ ಬ್ರಾಹ್ಮಣಂ ಕ್ರೂರಂ ಸ್ವಕರ್ಮಣ್ಯನವಸ್ಥಿತಮ್ |
ಆಶ್ರಯಂ ಧಾರ್ತರಾಷ್ಟ್ರಾಣಾಂ ಧರ್ಮರಾಜಭಯಾವಹಮ್ ॥ 9 ॥
ಶೀಘ್ರಂ ಪ್ರಜವಿತೈರಶ್ವೈಃ ಪ್ರತ್ಯುದ್ಯಾಹಿ ಪ್ರಹೃಷ್ಟವತ್ |
ಆಚಾರ್ಯಂ ರಾಜಪುತ್ರಾಣಾಂ ಸತತಂ ಶೂರಮಾನಿನಮ್ |
ಏವಮುಕ್ತಸ್ತತಃ ಸೂತಃ ಸಾತ್ಯಕಸ್ಯಾವಹದ್ ರಥಮ್ ॥ 10 ॥
ಈ ಕ್ರೂರರಾದ, ತಮ್ಮ ಕರ್ಮಾನುಷ್ಠಾನದಲ್ಲಿ ಇಲ್ಲದಿರುವ, ದುರ್ಯೋಧನಾದಿಗಳಿಗೆ ಆಶ್ರಯರಾದ, ಯುಧಿಷ್ಠಿರನ ಭಯಕ್ಕೆ ಕಾರಣರಾದ, ಯಾವಾಗಲೂ ತಮ್ಮನ್ನು ಶೂರನೆಂದು ತಿಳಿಯುವ, ರಾಜಕುಮಾರರಿಗೆ ಆಚಾರ್ಯರಾದ ದ್ರೋಣರ ಬಳಿಗೆ ಶೀಘ್ರವಾಗಿ ವೇಗಶಾಲಿಗಳಾದ ಅಶ್ವಗಳಿಂದ ಕೂಡಿ ಸಂತೋಷದಿಂದ ಹೋಗುವವನಾಗು (ಎಂದು ಹೇಳಿದನು). ಹೀಗೆ ಹೇಳಲ್ಪಟ್ಟ ಸೂತನು ಸಾತ್ಯಕಿಯ ರಥವನ್ನು ಮುಂದೆ ನಡೆಸಿದನು.
ತತೋ ರಜತಸಂಕಾಶಾ ಮಾಧವಸ್ಯ ಹಯೋತ್ತಮಾಃ |
ದ್ರೋಣಸ್ಯಾಭಿಮುಖಾಃ ಶೀಘ್ರಮವಹನ್ ವಾತರಂಹಸಃ ॥ 11 ॥
ಆಗ ಬೆಳ್ಳಿಯ ಬಣ್ಣದಿಂದ ಕೂಡಿದ, ವಾಯುವೇಗವುಳ್ಳ, ಮಧುಕುಲದಲ್ಲಿ ಜನಿಸಿದ ಸಾತ್ಯಕಿಯ ಶ್ರೇಷ್ಠವಾದ ಹಯಗಳು ಸಾತ್ಯಕಿಯ ರಥವನ್ನು ದ್ರೋಣರಿಗೆ ಅಭಿಮುಖವಾಗಿ ಶೀಘ್ರವಾಗಿ ತೆಗೆದುಕೊಂಡು ಹೋದವು.
ತತಸ್ತೌ ದ್ರೋಣಶೈನೇಯೌ ಯುಯುಧಾತೇ ಪರಂತಪೌ |
ಶರೈರನೇಕಸಾಹಸ್ರೈಸ್ತಾಡಯಂತೌ ಪರಸ್ಪರಮ್ ॥ 12 ॥
ಅನಂತರ ಪರಂತಪರಾದ ದ್ರೋಣ-ಸಾತ್ಯಕಿಯರು ಅನೇಕ ಸಹಸ್ರ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡುತ್ತಾ ಯುದ್ಧವನ್ನು

ಮಾಡಿದರು.
ಇಷುಜಾಲಾವೃತಂ ವ್ಯೋಮ ಚಕ್ರತುಃ ಪುರುಷರ್ಷಭೌ |
ಪೂರಯಾಮಾಸತುರ್ವೀರಾವುಭೌ ದಶ ದಿಶಃ ಶರೈಃ || 13 ||
ವೀರರೂ, ಪುರುಷಶ್ರೇಷ್ಠರೂ ಆದ ಅವರಿಬ್ಬರು ಆಕಾಶವನ್ನು ತಮ್ಮ ಬಾಣ ಸಮೂಹಗಳಿಂದ ಆವೃತವನ್ನಾಗಿ ಮಾಡಿ, ಹತ್ತು ದಿಕ್ಕುಗಳನ್ನು ತಮ್ಮ ಬಾಣಗಳಿಂದ ತುಂಬಿದರು.
ಮೇಘಾವಿವಾತಪಾತ್ಯಾಯೇ ಧಾರಾಭಿರಿತರೇತರಮ್ |
ನ ಸ್ಮ ಸೂರ್ಯಸ್ತದಾ ಭಾತಿ ನ ವವೌ ಚ ಸಮೀರಣಃ || 14 ||
ಬೇಸಿಗೆಯ ಕೊನೆಯಲ್ಲಿ ಬರುವ ಮೋಡಗಳಂತೆ, ಮಳೆಯಂತಿರುವ ಬಾಣ ಧಾರೆಗಳಿಂದ ಪರಸ್ಪರವಾಗಿ ಒಬ್ಬರನ್ನೊಬ್ಬರು ತುಂಬಿದರು. ಆಗ ಸೂರ್ಯನೂ ಕಾಣುತ್ತಿರಲಿಲ್ಲ, ವಾಯುವೂ ಬೀಸುತ್ತಿರಲಿಲ್ಲ.
ಇಷುಜಾಲಾವೃತಂ ವ್ಯೋಮ ಅಂಧಕಾರಮನಂತಕಮ್ |
ಅನಾಧೃಷ್ಯಮಿವಾನ್ಯೇಷಾಂ ಶೂರಾಣಾಮಭವತ್ ತದಾ |
ಅಂಧಕಾರೀಕೃತೇ ಲೋಕೇ ದ್ರೋಣಶೈನೇಯಯೋಃ ಶರೈಃ || 15 ||
ದ್ರೋಣ-ಸಾತ್ಯಕಿಯರ ಬಾಣಗಳಿಂದ ಆವೃತವಾದ ಆಕಾಶವು ಅನಂತವಾದ ಅಂಧಕಾರಮಯವಾಯಿತು. ಉಳಿದ ಯಾವ ಶೂರರೂ ಅದನ್ನು ಪರಿಹರಿಸಲು ಸಾಧ್ಯವಾಗಲಿಲ್ಲ. ಲೋಕವೇ ಅಂಧಕಾರಮಯವಾಯಿತು.
ತಯೋಃ ಶೀಘ್ರಾಸ್ತ್ರವಿದುಷೋರ್ದ್ರೋಣಸಾತ್ಯಕಯೋಸ್ತದಾ |
ನಾಂತರಂ ಶರವೃಷ್ಟೀನಾಂ ದೃಶ್ಯತೇ ನರಸಿಂಹಯೋಃ || 16 ||
ಆಗ ಶೀಘ್ರಾಸ್ತ್ರವೇತ್ತರಾದ, ನರಸಿಂಹರಾದ ದ್ರೋಣ-ಸಾತ್ಯಕಿಯರ ಬಾಣ ವೃಷ್ಟಿಗಳಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ.
ತಯೋರ್ಜ್ಯಾತಳನಿರ್ಘೋಷಃ ಶ್ರೂಯತೇ ಯುದ್ಧಶೌಂಡಯೋಃ |
ಪ್ರಾವೃಷೀವೇಂದ್ರಮುಕ್ತಾನಾಮಶನೀನಾಮಿವ ಸ್ವನಃ || 17 ||
ಯುದ್ಧ ಕುಶಲರಾದ ಅವರ ಹೆದೆಯ ಘೋಷವು ಮಳೆಗಾಲದಲ್ಲಿ ಇಂದ್ರನಿಂದ ಸೃಷ್ಟವಾದ ಸಿಡಿಲಿನ ಘೋಷದಂತೆ ಕೇಳಿಬರುತ್ತಿದ್ದಿತು.

ನಾರಾಚೈರತಿವಿದ್ಧಾನಾಂ ಶೂರಾಣಾಂ ರೂಪಮಾಬಭೌ |
ಆಶೀವಿಷವಿದಷ್ಟಾನಾಂ ಸರ್ಪಾಣಾಮಿವ ಭಾರತ || 18 ||
ನಾರಾಚದಿಂದ ಗಾಢವಾಗಿ ಹೊಡೆಯಲ್ಪಟ್ಟ ಶೂರರ ರೂಪವು ಎಲೈ ಭಾರತನೇ, ದೃಷ್ಟಿವಿಷವಾದ ಸರ್ಪಗಳಿಂದ ಕಚ್ಚಲ್ಪಟ್ಟ ಸರ್ಪಗಳ ರೂಪದಂತೆ ಕಂಗೊಳಿಸಿತು.
ತಯೋರ್ಜ್ಯಾತಳನಿರ್ಘೋಷಃ ಶ್ರೂಯತೇ ಯುದ್ಧ್ಯಮಾನಯೋಃ |
ಅಜಸ್ರಂ ಶೈಲಶೃಂಗಾಣಾಂ ವಜ್ರೇಣಾಹನ್ಯತಾಮಿವ || 19 ||
ಯುದ್ಧ ಮಾಡುವ ಅವರ ಜ್ಯಾತಳ ನಿರ್ಘೋಷವು ವಜ್ರಾಯುಧದ ಹೊಡೆತಕ್ಕೆ ಸಿಕ್ಕಿದ ಪರ್ವತದ ಶಿಖರದ ಶಬ್ದಗಳಂತೆ ಸತತವಾಗಿ ಕೇಳಿ ಬರುತ್ತಿದ್ದಿತು.
ಉಭೌ ತೌ ಹಿ ರಥೌ ರಾಜನ್ ತೇ ಚಾಶ್ವಾಸ್ತೌ ಚ ಸಾರಥೀ |
ರುಗ್ಮಪುಂಖೈಃ ಶರೈಶ್ಛಿನ್ನಾಃ ಚಿತ್ರರೂಪಾ ಬಭುಸ್ತದಾ || 20 ||
ಎಲೈ ರಾಜನೇ, ಆ ಇಬ್ಬರು ರಥಿಕರೂ ಮತ್ತು ಅವರ ಧೈರ್ಯಶಾಲಿ ಸಾರಥಿಗಳೂ ಸಹ ಸುವರ್ಣಪುಂಖವುಳ್ಳ ಬಾಣಗಳಿಂದ ಗಾಯಗೊಂಡು ಚಿತ್ರರೂಪವುಳ್ಳವರಾಗಿ ಶೋಭಿಸಿದರು.
ನಿರ್ಮಲಾನಾಮಜಿಹ್ಮಾನಾಂ ನಾರಾಚಾನಾಂ ವಿಶಾಂಪತೇ |
ನಿರ್ಮುಕ್ತಾಶೀವಿಷಾಭಾನಾಂ ಸಂಪಾತೋಽಭೂತ್ ಸುದಾರುಣಃ ||21||
ಎಲೈ ರಾಜನೇ, ನಿರ್ಮಲವಾದ ಮತ್ತು ನೇರವಾಗಿ ಸಾಗುವ ನಾರಾಚಗಳ ಸಂಘರ್ಷವು ಪೊರೆಯನ್ನು ಕಳಚಿದ ಆಶೀವಿಷ ಸರ್ಪಗಳ ಸಂಪಾತದಂತೆ ಬಹಳ ದಾರುಣವಾಗಿದ್ದಿತು.
ಉಭಯೋಃ ಪತಿತೇ ಛತ್ರೇ ಪತಿತೌ ಚ ಮಹಾಧ್ವಜೌ |
ನಿಕೃಂತತೋಃ ಶರೈಸ್ತೀಕ್ಷ್ಣೈರ್ದ್ರೋಣಸಾತ್ಯಕಯೋಸ್ತದಾ || 22 ||
ದ್ರೋಣ-ಸಾತ್ಯಕಿಯರು ಬಾಣಗಳಿಂದ ಪರಸ್ಪರವಾಗಿ ಕತ್ತರಿಸುವಾಗ ಇಬ್ಬರ ಛತ್ರಗಳೂ ಮತ್ತು ಮಹಾಧ್ವಜಗಳೂ ಕೆಳಗೆ ಬಿದ್ದವು.
ಉಭೌ ರುಧಿರಸಂಸಿಕ್ತಾವುಭೌ ಚ ವಿಜಯೈಷಿಣೌ |
ಸ್ರವದ್ಭಿಃ ಶೋಣಿತಂ ಗಾತ್ರೈಃ ಪ್ರಸ್ರುತಾವಿವ ವಾರಣೌ |
ಅನ್ಯೋನ್ಯಮಭಿವಿದ್ಯೇತಾಂ ಜೀವಿತಾಂತಕರೈಃ ಶರೈಃ || 23 ||
ಇಬ್ಬರೂ ರಕ್ತಸಿಕ್ತರಾಗಿ, ಇಬ್ಬರೂ ಜಯಾಕಾಂಕ್ಷಿಗಳಾಗಿ, ಇಬ್ಬರೂ ಮದಿಸಿದ ಆನೆಯು ಮದವನ್ನು ಸುರಿಸುವಂತೆ ಶರೀರದ ಗಾಯಗಳಿಂದ ರಕ್ತವನ್ನು ಸುರಿಸುತ್ತಾ, ಜೀವಿತಾಂತಕವಾದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ಗರ್ಜಿತಾಕ್ರುಷ್ಟಸನ್ನಾದಾಃ ಶಂಖದುಂದುಭಿನಿಸ್ವನಾಃ |
ಉಪಾರಮನ್ ಮಹಾರಾಜ ವ್ಯಾಜಹಾರ ನ ಕಶ್ಚನ || 24 ||
ಎಲೈ ಮಹಾರಾಜನೇ, ಯೋಧರ ಗರ್ಜನೆಗಳು, ಆಕ್ರೋಶಗಳು ಮತ್ತು ಸಿಂಹನಾದಗಳು ಅಡಗಿದವು. ಶಂಖದುಂದುಭಿಸ್ವನಗಳು ನಿಂತುಹೋದವು. ಯಾವನೂ ಮಾತನಾಡಲಿಲ್ಲ.
ತೂಷ್ಣೀಂಭೂತಾನ್ಯನೀಕಾನಿ ಯೋಧಾ ಯುದ್ಧಾದುಪಾರಮನ್ |

ದದರ್ಶ ದ್ವೈರಥಂ ತಾಭ್ಯಾಂ ಜಾತಕೌತೂಹಲೋ ಜನಃ ॥ 25 ॥
ಸೈನ್ಯಗಳು ಸುಮ್ಮನೆ ನಿಂತವು. ಯೋಧರು ತಮ್ಮ ಯುದ್ಧವನ್ನು ನಿಲ್ಲಿಸಿ ಅವರಿಬ್ಬರ ದ್ವೈರಥ ಯುದ್ಧವನ್ನು ನೋಡಿದರು. ಕುತೂಹಲಗೊಂಡ ಜನರೂ ಆ ದ್ವೈರಥ ಯುದ್ಧವನ್ನು ನೋಡಿದರು.
ರಥಿನೋ ಹಸ್ತಿಯಂತಾರೋ ಹಯಾರೋಹಾಃ ಪದಾತಯಃ |
ಅವೇಕ್ಷನ್ನಚಲೈರ್ನೇತ್ರೈಃ ಪರಿವಾರ್ಯ ರಥರ್ಷಭೌ ॥ 26 ॥
ರಥಿಕರು, ಗಜಾರೋಹಿಗಳು, ಹಯಾರೋಹಿಗಳು ಮತ್ತು ಪದಾತಿಗಳು ಆ ಇಬ್ಬರು ರಥಶ್ರೇಷ್ಠರನ್ನು ಸುತ್ತುವರಿದು ಅಲುಗಾಡದ ಕಣ್ಣುಗಳಿಂದ ಆ ಯುದ್ಧವನ್ನು ನೋಡಿದರು.
ಹಸ್ತ್ಯನೀಕಾನಿ ತಿಷ್ಠಂತಿ ತಥಾಽನೀಕಾನಿ ವಾಜಿನಾಮ್ |
ತಿಷ್ಠಂತಿ ರಥವಾಹಿನ್ಯಃ ಪ್ರತಿವ್ಯೂಹ್ಯ ವ್ಯವಸ್ಥಿತಾಃ ॥ 27 ॥
ಪ್ರತಿವ್ಯೂಹದಲ್ಲಿಯೂ ತಮ್ಮ ತಮ್ಮ ಸ್ಥಳಗಳಲ್ಲಿ ಗಜಗಳ ಸಮೂಹಗಳು ನಿಂತವು. ಅಶ್ವಗಳ ಸಮೂಹಗಳು, ರಥಸೇನೆಯು ಹಾಗೆಯೇ ನಿಂತಿತು.
ಮುಕ್ತಾವಿದ್ರುಮಚಿತ್ರೈಶ್ಚ ಮಣಿಕಾಂಚನಭೂಷಿತೈಃ |
ಧ್ವಜೈರಾಭರಣೈಶ್ಚಿತ್ರೈಃ ಕವಚೈಶ್ಚ ಹಿರಣ್ಮಯೈಃ ॥ 28 ॥
ವೈಜಯಂತೀಪತಾಕಾಭಿಃ ಪರಿಸ್ತೋಮೈಶ್ಚ ಕಂಬಳೈಃ |
ನಿರ್ಮಲೈರ್ನಿಶಿತೈಃ ಶಸ್ತ್ರೈರ್ಹಯಾನಾಂ ಚ ಪ್ರಕೀರ್ಣಕೈಃ ॥ 29 ॥
ಜಾತರೂಪಮಯೀಭಿಶ್ಚ ರಾಜತೀಭಿಶ್ಚ ಮೂರ್ಧನಿ |
ಗಜಾನಾಂ ಕುಂಭಮಾಲಾಭಿರ್ದಂತವೇಷ್ಟೈಶ್ಚ ಭಾರತ ॥ 30 ॥
ಸಬಲಾಕಾ ಸಖದ್ಯೋತಾ ಸೈರಾವತಶತಹ್ರದಾ |
ಅದೃಶ್ಯತೋಷ್ಣಪರ್ಯಂತೇ ಮೇಘಾನಾಮಿವ ವಾಗುರಾ ॥ 31 ॥
ಎಲೈ ಭಾರತನೇ, ಮುತ್ತು-ಹವಳಗಳಿಂದ ವಿಚಿತ್ರವಾದ, ಮಣಿಕಾಂಚನ ಭೂಷಿತವಾದ ಧ್ವಜಗಳಿಂದಲೂ, ಆಭರಣಗಳಿಂದಲೂ, ವಿಚಿತ್ರವಾದ ಸುವರ್ಣಮಯವಾದ ಕವಚಗಳಿಂದಲೂ, ವೈಜಯಂತಿಗಳಿಂದಲೂ, ಪತಾಕೆಗಳಿಂದಲೂ, ಗಜದ ಮೇಲಿನ ಹಾಸುಗಳಿಂದಲೂ, ಕಂಬಳಿಗಳಿಂದಲೂ, ನಿರ್ಮಲವಾದ ಮತ್ತು ಹರಿತವಾದ ಶಸ್ತ್ರಗಳಿಂದಲೂ, ಅಶ್ವಗಳ ಸುವಣರ್ಮಯವಾದ ಮತ್ತು ರಜತಮಯವಾದ ಮೂರ್ಧಾಭರಣಗಳಿಂದಲೂ, ಗಜಗಳ ಕುಂಭಮಾಲೆಗಳಿಂದಲೂ, ದಂತಾಭರಣಗಳಿಂದಲೂ ಕೂಡಿದ ಸೈನ್ಯವು ಬಲಾಕ ಪಕ್ಷಿಗಳಿಂದಲೂ, ಖದ್ಯೋತಗಳಿಂದಲೂ, ಐರಾವತ ರೂಪವಾದ ಮಿಂಚುಗಳಿಂದಲೂ ಕೂಡಿದ ಬೇಸಿಗೆ ಕಾಲದ ನಂತರ ಬರುವ ಮೇಘಗಳ ಬಲೆಯಂತೆ ಕಂಡುಬಂದಿತು.
ಅಪಶ್ಯನ್ನಸ್ಮದೀಯಾಶ್ಚ ತೇ ಚ ಯೌಧಿಷ್ಠಿರಾಸ್ತದಾ |
ತದ್ ಯುದ್ಧಂ ಯುಯುಧಾನಸ್ಯ ದ್ರೋಣಸ್ಯ ಚ ಮಹಾತ್ಮನಃ ॥ 32 ॥
ನಮ್ಮವರು ಮತ್ತು ಯುಧಿಷ್ಠಿರನ ಸೈನ್ಯದವರು ಆಗ ಮಹಾತ್ಮರಾದ ಸಾತ್ಯಕಿ ಮತ್ತು ದ್ರೋಣರ ನಡುವೆ ನಡೆಯುವ ಆ ಯುದ್ಧವನ್ನು ನೋಡಿದರು.
ವಿಮಾನಸ್ಥಾಸ್ತದಾ ದೇವಾ ಬ್ರಹ್ಮಸೋಮಪುರೋಗಮಾಃ |
ಸಿದ್ಧಚಾರಣಸಂಘಾಶ್ಚ ವಿದ್ಯಾಧರಮಹೋರಗಾಃ ॥ 33 ॥
ಗಂಧರ್ವಾ ದಾನವಾ ಯಕ್ಷಾ ರಾಕ್ಷಸಾಪ್ಸರಸಃ ಖಗಾಃ |
ಗತಪ್ರತ್ಯಾಗತಾಕ್ಷೇಪೈಃ ಚಿತ್ರೈಃ ಶಸ್ತ್ರವಿಘಾತನೈಃ ॥ 34 ॥
ವಿವಿಧೈರ್ವಿಸ್ಮಯಂ ಜಗ್ಮುಸ್ತಯೋಃ ಪುರುಷಸಿಂಹಯೋಃ ॥ 35 ॥
ವಿಮಾನದಲ್ಲಿ ಕುಳಿತ ಬ್ರಹ್ಮ-ರುದ್ರ ಮೊದಲಾದ ದೇವತೆಗಳು, ಸಿದ್ಧ-ಚಾರಣರ ಸಮೂಹಗಳು, ವಿದ್ಯಾಧರ-ಮಹೋರಗರು, ಗಂಧರ್ವ-ದಾನವ-ಯಕ್ಷರು, ರಾಕ್ಷಸರು, ಅಪ್ಸರೆಯರು, ಪಕ್ಷಿಗಳು, ಪುರುಷಸಿಂಹರಾದ ಅವರಿಬ್ಬರ ವಿವಿಧವಾದ ಗಮನ-ಪ್ರತ್ಯಾಗಮನಗಳಿಂದಲೂ, ವಿಚಿತ್ರವಾದ ಶಸ್ತ್ರವಿಘಾತಗಳಿಂದಲೂ ವಿಸ್ಮಯವನ್ನು ಹೊಂದಿದರು.
ಹಸ್ತಲಾಘವಮಸ್ತ್ರೇಷು ದರ್ಶಯಂತೌ ಮಹಾರಥೌ |
ಅನ್ಯೋನ್ಯಮಭಿವಿದ್ಯೇತಾಂ ತೀಕ್ಷ್ಣೈರ್ಣ್ಯಸ್ತೌ ದ್ರೋಣಸಾತ್ಯಕೀ ॥36॥
ಮಹಾರಥರಾದ ಆ ದ್ರೋಣ-ಸಾತ್ಯಕಿಯರು ಪ್ರಯೋಗಿಸುವ ಅಸ್ತ್ರಗಳಲ್ಲಿ ತಮ್ಮ ಹಸ್ತದ ಕ್ಷಿಪ್ರತೆಯನ್ನು ತೋರಿಸುತ್ತಾ ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಯುದ್ಧ ಮಾಡಿದರು.
ತತೋ ದ್ರೋಣಸ್ಯ ವಾರ್ಷ್ಣೇಯೋ ಬಾಣಾಂಶ್ಚಿಚ್ಛೇದ ಸಂಯುಗೇ |
ಪತ್ರಿಭಿಃ ಸುದೃಢೈರಾಶು ಧನುಶ್ಚೈವ ಮಹೀಪತೇ ॥ 37 ॥
ಅನಂತರ ಎಲೈ ರಾಜನೇ, ಸಾತ್ಯಕಿಯು ಪತ್ರಸಹಿತವಾದ ಬಾಣಗಳಿಂದ ರಣರಂಗದಲ್ಲಿ ದ್ರೋಣರ ಬಾಣಗಳನ್ನೂ ಮತ್ತು ಧನುಸ್ಸನ್ನೂ ಶೀಘ್ರವಾಗಿ ಕತ್ತರಿಸಿದನು.
ನಿಮೇಷಾಂತರಮಾತ್ರೇಣ ಭಾರದ್ವಾಜೋಽಪರಂ ಧನುಃ |
ಸಜ್ಯಂ ಚಕಾರ ತಚ್ಚಾಶು ಚಿಚ್ಛೇದಾಸ್ಯ ಸ ಸಾತ್ಯಕಿಃ ॥ 38 ॥
ದ್ರೋಣರು ಒಂದು ನಿಮಿಷದಲ್ಲಿ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಹೆದೆಯನ್ನೇರಿಸಿದರು. ಸಾತ್ಯಕಿಯು ಅದನ್ನೂ ಶೀಘ್ರವಾಗಿ ಕತ್ತರಿಸಿದನು.
ತತ ಆಶು ಪುನರ್ದ್ರೋಣೋ ಧನುರ್ಹಸ್ತೋ ವ್ಯತಿಷ್ಠತ |

ಸಜ್ಯಂ ಸಜ್ಯಂ ಪುನಶ್ಚಾಪಂ ಚಿಚ್ಛೇದ ನಿಶಿತೈಃ ಶರೈಃ ॥ 39 ॥
ಆಗ ಪುನಃ ದ್ರೋಣರು ಶೀಘ್ರವಾಗಿ ಕೈಯಲ್ಲಿ ಇನ್ನೊಂದು ಧನುಸ್ಸನ್ನು ಹಿಡಿದು ನಿಂತರು. ಹೀಗೆ ದ್ರೋಣರು ಹೆದೆ ಏರಿಸಿದ ಧನುಸ್ಸೆಲ್ಲವನ್ನೂ ಹರಿತವಾದ ಬಾಣಗಳಿಂದ ಸಾತ್ಯಕಿಯು ಕತ್ತರಿಸಿದನು.
ತತೋಽಸ್ಯ ಸಂಯುಗೇ ದ್ರೋಣೋ ದೃಷ್ಟ್ವಾ ಕರ್ಮಾತಿಮಾನುಷಮ್ |
ಯುಯುಧಾನಸ್ಯ ರಾಜೇಂದ್ರ ಮನಸೈತದಚಿಂತಯತ್ ॥ 40 ॥
ಎಲೈ ರಾಜೇಂದ್ರನೇ, ಆಗ ದ್ರೋಣರು ಯುದ್ಧದಲ್ಲಿ ಸಾತ್ಯಕಿಯ ಅತಿಮಾನುಷವಾದ ಕರ್ಮವನ್ನು ನೋಡಿ ಮನಸ್ಸಿನಲ್ಲಿ ಹೀಗೆ ಚಿಂತಿಸಿದರು.
ಏತದಸ್ತ್ರಬಲಂ ರಾಮೇ ಕಾರ್ತವೀರ್ಯೇ ಧನಂಜಯೇ |
ಭೀಷ್ಮೇ ಚ ಪುರುಷವ್ಯಾಘ್ರೇ ಸಾತ್ಯಕೇ ಚಾಶುವಿಕ್ರಮೇ ॥ 41 ॥
ಈ ಅಸ್ತ್ರಬಲವು ಪರಶುರಾಮನಲ್ಲಿ, ಕಾರ್ತವೀರ್ಯನಲ್ಲಿ, ಅರ್ಜುನನಲ್ಲಿ, ಪುರುಷವ್ಯಾಘ್ರರಾದ ಭೀಷ್ಮರಲ್ಲಿ ಮತ್ತು ಶೀಘ್ರಪರಾಕ್ರಮಿಯಾದ ಸಾತ್ಯಕಿಯಲ್ಲಿ ಮಾತ್ರ ಇದೆ (ಎಂದು ಚಿಂತಿಸಿದರು).
ತಂ ಚಾಸ್ಯ ಮನಸಾ ದ್ರೋಣಃ ಪೂಜಯಾಮಾಸ ವಿಕ್ರಮಮ್ |
ಲಾಘವಂ ವೃಷ್ಣಿವೀರಸ್ಯ ವಾಸವಸ್ಯೇವ ದೃಶ್ಯ ಸಃ ॥ 42 ॥
ದ್ರೋಣರು ವೃಷ್ಣಿವೀರನಾದ ಸಾತ್ಯಕಿಯ ಇಂದ್ರನಿಗೆ ಸಮವಾದ ಕ್ಷಿಪ್ರತೆಯನ್ನು ಮತ್ತು ಪರಾಕ್ರಮವನ್ನು ನೋಡಿ ಅದನ್ನು ಮನಸ್ಸಿನಲ್ಲಿಯೇ ಗೌರವಿಸಿದರು.
ತುಷ್ಟುವುರ್ಲಾಘವಂ ತಸ್ಯ ದೇವಾಃ ಸಾಗ್ನಿಪುರೋಗಮಾಃ |
ಸಿದ್ಧಚಾರಣಸಂಘಾಶ್ಚ ಸಾಧು ಸಾಧ್ವಿತಿ ಚುಕ್ರುಶುಃ |
ನ ತಸ್ಯ ಲಘುತಾಮನ್ಯೇಽಲಕ್ಷಯನ್ ಶೀಘ್ರಕಾರಿಣಃ ॥ 43 ॥
ಅಗ್ನಿ ಮೊದಲಾದ ದೇವತೆಗಳು ಸಾತ್ಯಕಿಯ ಕ್ಷಿಪ್ರತೆಯನ್ನು ಪ್ರಶಂಸಿಸಿದರು. ಸಿದ್ಧ- ಚಾರಣ ಸಮೂಹಗಳು ಸಾಧು-ಸಾಧು ಎಂದು ಕಿರುಚಿದವು. ಉಳಿದವರು ಶೀಘ್ರಕಾರಿಯಾದ ಅವನ ಕ್ಷಿಪ್ರತೆಯನ್ನು ಗಮನಿಸಲಿಲ್ಲ.
ದೇವಾಸ್ತು ಯುಯುಧಾನಸ್ಯ ಗಂಧರ್ವಾಶ್ಚ ವಿಶಾಂಪತೇ |
ಸಿದ್ಧಚಾರಣಸಂಘಾಶ್ಚ ವಿದುರ್ದ್ರೋಣಸ್ಯ ಕರ್ಮ ತತ್ ॥ 44 ॥
ಎಲೈ ರಾಜನೇ, ದೇವತೆಗಳು, ಗಂಧರ್ವರು ಮತ್ತು ಸಿದ್ಧ-ಚಾರಣರು ಯುಯುಧಾನನ ಮತ್ತು ದ್ರೋಣರ ಆ ಕ್ಷಿಪ್ರಕರ್ಮವನ್ನು ತಿಳಿದರು.
ತತೋಽನ್ಯದ್ ಧನುರಾದಾಯ ದ್ರೋಣಃ ಶಸ್ತ್ರಭೃತಾಂ ವರಃ |
ಯುಯುಧಾನಂ ನರವ್ಯಾಘ್ರಂ ಯೋಧಯಾಮಾಸ ಭಾರತ ॥ 45 ॥
ಎಲೈ ಭಾರತನೇ, ಆಗ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು, ನರವ್ಯಾಘ್ರನಾದ ಯುಯುಧಾನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತಸ್ಯಾಸತ್ರ್ಯಸ್ತ್ರಮಾಯಾಭಿಃ ಪ್ರಹಸನ್ ಶಿನಿಪುಂಗವಃ |
ನಿಜಘ್ನೇ ನಿಶಿತೈರ್ಬಾಣೈಃ ತದದ್ಭುತಮಿವಾಭವತ್ ॥ 46 ॥
ಶಿನಿಪುಂಗವನಾದ ಸಾತ್ಯಕಿಯು ನಗುತ್ತಾ, ಅವರ ಅಸ್ತ್ರಗಳನ್ನು ತನ್ನ ಅಸ್ತ್ರಗಳ ಸಾಮರ್ಥ್ಯದಿಂದ ಹರಿತವಾದ ಬಾಣಗಳನ್ನು ಪ್ರಯೋಗಿಸಿ ನಾಶಗೊಳಿಸಿದನು. ಅದು ಅದ್ಭುತವಾಗಿದ್ದಿತು.
ತಸ್ಯಾತಿಮಾನುಷಂ ಕರ್ಮ ದೃಷ್ಟ್ವಾಽನ್ಯೈರಸಮಂ ರಣೇ |
ಯುಕ್ತಂ ಯೋಗೇನ ಯೋಗಜ್ಞಾಃ ಪೂಜಯಂತಿ ಸ್ಮ ತಾವಕಾಃ ॥ 47 ॥
ಇನ್ನೊಬ್ಬರಿಗೆ ಸಮವಲ್ಲದ ಅವನ ರಣರಂಗದ ಅಮಾನುಷ ಕರ್ಮವನ್ನು ನೋಡಿ ಮತ್ತು ಅಂತಹ ಯೋಗದಿಂದ ಕೂಡಿರುವುದನ್ನು ನೋಡಿ ಅಂತಹ ಕೌಶಲವನ್ನು ತಿಳಿದ ನಿನ್ನವರು ಅದನ್ನು ಪೂಜಿಸಿದರು.
ಯದಸ್ತ್ರಮಸ್ಯತಿ ದ್ರೋಣಃ ತದೇವಾಸ್ಯತಿ ಸಾತ್ಯಕಿಃ |
ಅಸಂಭ್ರಾಂತಸ್ತದಾಚಾರ್ಯೋ ಯೋಧಯತ್ಯರಿಸೂದನಃ ॥ 48 ॥
ದ್ರೋಣರು ಯಾವ ಅಸ್ತ್ರವನ್ನು ಪ್ರಯೋಗಿಸುತ್ತಾರೆಯೋ ಅದೇ ಅಸ್ತ್ರವನ್ನು ಗಾಬರಿಯಿಲ್ಲದೆ ಸಾತ್ಯಕಿಯೂ ಪ್ರಯೋಗಿಸುತ್ತಾನೆ. ಆಗ ಶತ್ರುಸೂದನರಾದ ಆಚಾರ್ಯರು ಪುನಃ ಯುದ್ಧವನ್ನು ಮಾಡಿದರು.
ತತಃ ಕ್ರುದ್ಧೋ ಮಹಾರಾಜ ಧನುರ್ವೇದಸ್ಯ ಪಾರಗಃ |
ಆಗ್ನೇಯಂ ಯುಯುಧಾನಸ್ಯ ದಿವ್ಯಮಸ್ತ್ರಮುದೈರಯತ್ ॥ 49 ॥
ಎಲೈ ಮಹಾರಾಜನೇ, ಆಗ ಧನುರ್ವೇದ ಪಾರಂಗತರಾದ ದ್ರೋಣರು ಕ್ರುದ್ಧರಾಗಿ ಸಾತ್ಯಕಿಯ ಮೇಲೆ ದಿವ್ಯವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದರು.
ತದಾಗ್ನೇಯಂ ಮಹಾರಾಜ ರಿಪುಘ್ನಮುಪಲಕ್ಷ್ಯ ಸಃ |
ಅಸ್ತ್ರಂ ದಿವ್ಯಂ ಮಹೇಷ್ವಾಸೋ ವಾರುಣಂ ಸಮುದೈರಯತ್ ॥ 50 ॥
ಎಲೈ ಮಹಾರಾಜನೇ, ದ್ರೋಣರು ಶತ್ರುನಾಶಕವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿರುವುದನ್ನು ನೋಡಿ ಮಹಾಧನುರ್ಧಾರಿಯಾದ ಸಾತ್ಯಕಿಯು ದಿವ್ಯವಾದ ವಾರುಣಾಸ್ತ್ರವನ್ನು ಪ್ರಯೋಗಿಸಿದನು.
ಹಾಹಾಕಾರೋ ಮಹಾನಾಸೀದ್ ದೃಷ್ಟ್ವಾ ದಿವ್ಯಾಸ್ತ್ರಧಾರಿಣೌ |
ನ ಚೇರುಶ್ಚ ತದಾಽಕಾಶೇ ಭೂತಾನ್ಯಾಕಾಶಗಾನ್ಯಪಿ ॥ 51 ॥

ದಿವ್ಯಾಸ್ತ್ರಧಾರಿಗಳಾದ ಅವರಿಬ್ಬರನ್ನೂ ನೋಡಿ ಲೋಕದಲ್ಲಿ ದೊಡ್ಡ ಹಾಹಾಕಾರವು ಉಂಟಾಯಿತು. ಆಗ ಆಕಾಶದಲ್ಲಿ ಪಕ್ಷಿ ಮೊದಲಾದ ಆಕಾಶ ಸಂಚಾರಿ ಪ್ರಾಣಿಗಳೂ ಸಂಚರಿಸಲಿಲ್ಲ.
ಅಸ್ತ್ರೇ ತೇ ವಾರುಣಾಗ್ನೇಯೇ ತಾಭ್ಯಾಂ ಬಾಣೈಃ ಸಮಾಹಿತೇ |
ನ ತದಾ ವ್ಯಭಿಷಜ್ಯೇತೇ ವ್ಯಾವರ್ತದಥ ಭಾಸ್ಕರಃ ॥ 52 ॥
ಅವರು ಬಾಣಗಳಲ್ಲಿ ಅಭಿಮಂತ್ರಿಸಿದ ವಾರುಣಾಗ್ನೇಯ ಅಸ್ತ್ರಗಳು ಪರಸ್ಪರವಾಗಿ ಸಂಧಿಸಿದವು. ಯಾವುದೂ ಹಿಂದೆ ಬರಲಿಲ್ಲ. ಆಗ ಸೂರ್ಯನು ಪಶ್ಚಿಮ ಸರಿದನು.
ತತೋ ಯುಧಿಷ್ಠಿರೋ ರಾಜಾ ಭೀಮಸೇನಶ್ಚ ಪಾಂಡವಃ |
ನಕುಲಃ ಸಹದೇವಶ್ಚ ಪರ್ಯರಕ್ಷಂತ ಸಾತ್ಯಕಿಮ್ ॥ 53 ॥
ಆಗ ರಾಜನಾದ ಯುಧಿಷ್ಠಿರನೂ, ಪಾಂಡುಪುತ್ರನಾದ ಭೀಮಸೇನನೂ, ನಕುಲ- ಸಹದೇವರೂ ಸಾತ್ಯಕಿಯನ್ನು ರಕ್ಷಿಸಿದರು.
ಧೃಷ್ಟದ್ಯುಮ್ನಮುಖ್ಯೈಃ ಸಾರ್ಧಂ ವಿರಾಟಃ ಕೇಕಯ್ಯೈಃ ಸಹ |
ಮಾತ್ಸ್ಯಸಾಲ್ವೇಯಸೇನಾಶ್ಚ ದ್ರೋಣಮಭ್ಯಯುರಂಜಸಾ ॥ 54 ॥
ಧೃಷ್ಟದ್ಯುಮ್ನ ಮೊದಲಾದವರ ಜೊತೆಯಲ್ಲಿ, ವಿರಾಟ ಮತ್ತು ಕೇಕಯರ ಜೊತೆಯಲ್ಲಿ, ಮತ್ಸ್ಯ-ಸಾಲ್ವ ಸೇನೆಗಳು ದ್ರೋಣರ ಮೇಲೆ ಚೆನ್ನಾಗಿ ಎರಗಿದವು.
ದುಃಶಾಸನಂ ಪುರಸ್ಕೃತ್ಯ ರಾಜಪುತ್ರಾಃ ಸಹಸ್ರಶಃ |
ದ್ರೋಣಮಭ್ಯವಪದ್ಯಂತ ಸಪತ್ನೈಃ ಪರಿವಾರಿತಮ್ ॥ 55 ॥
ಶತ್ರುಗಳಿಂದ ಪರಿವಾರಿತರಾದ ದ್ರೋಣರನ್ನು ರಕ್ಷಿಸಲು ದುಶ್ಶಾಸನನನ್ನು ಮುಂದೆ ಮಾಡಿಕೊಂಡು ರಾಜಪುತ್ರರು ಸಹಸ್ರಸಂಖ್ಯೆಯಲ್ಲಿ ಅವರ ಸಮೀಪಕ್ಕೆ ಬಂದರು.
ತತೋ ಯುದ್ಧಮಭೂದ್ ರಾಜನ್ ತವ ತೇಷಾಂ ಚ ಧನ್ವಿನಾಮ್ |
ರಜಸಾ ಸಂವೃತೇ ಲೋಕೇ ಶರಜಾಲಸಮಾವೃತೇ ॥ 56 ॥
ಲೋಕವು ಧೂಳಿನಿಂದ ಸಂವೃತವಾಗುತ್ತಿರಲು ಮತ್ತು ಬಾಣಗಳ ಸಮೂಹದಿಂದ ಆವರಿಸಲ್ಪಡುತ್ತಿರಲು ಎಲೈ ರಾಜನೇ, ನಿನ್ನ ಮತ್ತು ಅವರ ಧನುರ್ಧಾರಿಗಳಿಗೆ ಯುದ್ಧವು ನಡೆಯಿತು.
ಸರ್ವಮಾವಿಗ್ನಮಭವನ್ನ ಪ್ರಾಜ್ಞಾಯತ ಕಿಂಚನ |
ಸೈನ್ಯೇನ ರಜಸಾ ಧ್ವಸ್ತೇ ನಿರ್ಮರ್ಯಾದಮವರ್ತತ ॥ 57 ॥
ಸೈನ್ಯದಿಂದ ಎದ್ದ ಧೂಳಿನಿಂದ ಆವೃತವಾದ ಕಾರಣದಿಂದ ಎಲ್ಲವೂ ಮಂಕಾಯಿತು. ಯಾವುದೂ ಸರಿಯಾಗಿ ಕಾಣಿಸಲಿಲ್ಲ. ಎಲ್ಲೆಯನ್ನು ಮೀರಿದ ಯುದ್ಧವು ಜರುಗಿತು.
ತೇನಾಂತರೇಣ ಪಾರ್ಥಸ್ತು ರಣೇ ಜಿತ್ವಾ ಮಹಾರಥಾನ್ |
ಅತಿಕ್ರಾಂತಸ್ತದಾ ಯುದ್ಧಂ ಕೃತ್ವಾ ಪರ್ಯವತಸ್ಥಿವಾನ್ ॥ 58 ॥
ಈ ಮಧ್ಯದಲ್ಲಿ ಅರ್ಜುನನು ಯುದ್ಧದಲ್ಲಿ ಮಹಾರಥರನ್ನು ಗೆದ್ದು ಅವರನ್ನು ದಾಟಿ ಮುಂದೆ ಹೋಗಿ ಯುದ್ಧವನ್ನು ಮಾಡುತ್ತಾ ನಿಂತನು.
ವರ್ತಮಾನೇ ತದಾ ಯುದ್ಧೇ ದ್ರೋಣಸ್ಯ ಸಹ ಪಾಂಡುಭಿಃ |
ಪರಿವರ್ತಮಾನ ಆದಿತ್ಯೇ ತತ್ರಾಸ್ತಶಿಖರಂ ಪ್ರತಿ ॥ 59 ॥
ರಜಸಾ ಕೀರ್ಯಮಾಣಾಶ್ಚ ಮಂದೀಭೂತಾಶ್ಚ ಕೌರವಾಃ ॥ 60 ॥
ದ್ರೋಣರಿಗೂ ಮತ್ತು ಪಾಂಡವರಿಗೂ ಹಾಗೆ ಯುದ್ಧವು ನಡೆಯುತ್ತಿರಲು, ಆದಿತ್ಯನು ಅಸ್ತಪರ್ವತದ ಕಡೆಗೆ ಸಾಗುತ್ತಿರಲು, ಧೂಳಿನಿಂದ ಆವೃತವಾದ ಕೌರವರು ಮಂದಗತಿಯುಳ್ಳವರಾದರು.
ತಿಷ್ಠತಾಂ ಯುಧ್ಯಮಾನಾನಾಂ ಪುನರಾವರ್ತತಾಮಪಿ |
ಜಯತಾಂ ಭಜ್ಯಮಾನಾನಾಂ ಜಗಾಮ ತದಹಃ ಶನೈಃ ॥ 61 ॥
ಹೀಗೆ ನಿಲ್ಲುತ್ತಾ, ಯುದ್ಧವನ್ನು ಮಾಡುತ್ತಾ, ಪುನಃ ಹಿಂದಿರುಗುತ್ತಾ, ಜಯಗಳಿಸುತ್ತಾ, ಭಗ್ನಗೊಳ್ಳುತ್ತಾ ಆ ದಿನವು ಸಾಗಿತು.
ತಥಾ ತೇಷು ವಿಷಕ್ತೇಷು ಸೈನ್ಯೇಷು ಜಯಗೃದ್ಧಿಷು |
ಅರ್ಜುನೋ ವಾಸುದೇವಶ್ಚ ಸೈಂಧವಾಯೈವ ಜಗ್ಮತುಃ ॥ 62 ॥
ಜಯಾಕಾಂಕ್ಷಿಗಳಾದ ಸೇನೆಗಳು ಹಾಗೆ ಪರಸ್ಪರವಾಗಿ ಸಂಧಿಸುತ್ತಿರಲು ಅರ್ಜುನ ಮತ್ತು ಕೃಷ್ಣರು ಸೈಂಧವನ ಕಡೆಗೇ ಹೊರಟರು.
ರಥಮಾರ್ಗಪ್ರಮಾಣಂ ತು ಕೌಂತೇಯೋ ನಿಶಿತೈಃ ಶರೈಃ |
ಚಕಾರ ಯಂ ಚ ಪಂಥಾನಂ ಯಯೌ ತೇನ ಜನಾರ್ದನಃ ॥ 63 ॥
ಅರ್ಜುನನು ತನ್ನ ಹರಿತವಾದ ಬಾಣಗಳಿಂದ ರಥವು ಹೋಗುವಷ್ಟು ಮಾರ್ಗವನ್ನು ಬಿಡಿಸಿದನು. ಜನಾರ್ದನನು ಆ ಮಾರ್ಗದಲ್ಲಿಯೇ ರಥವನ್ನು ಮುಂದೆ ನಡೆಸಿದನು.
ಯತ್ರ ಯತ್ರ ರಥೋ ಯಾತಿ ಪಾಂಡವಸ್ಯ ಮಹಾತ್ಮನಃ |
ತತ್ರ ತತ್ರೈವ ದೀರ್ಯಂತೇ ಸೇನಾಸ್ತವ ವಿಶಾಂಪತೇ ॥ 64 ॥
ಎಲೈ ರಾಜನೇ, ಮಹಾತ್ಮನಾದ ಅರ್ಜುನನ ರಥವು ಎಲ್ಲೆಲ್ಲಿ ಹೋಗುತ್ತದೆಯೋ ಅಲ್ಲಲ್ಲಾ ನಿನ್ನ ಸೈನ್ಯವು ಭಗ್ನವಾಗುತ್ತಿದೆ.
ರಥಶಿಕ್ಷಾಂ ತು ದಾಶಾರ್ಹೋ ದರ್ಶಯಾಮಾಸ ವೀರ್ಯವಾನ್ |
ಉತ್ತಮಾಧಮಮಧ್ಯಾನಿ ಮಂಡಲಾನಿ ವಿದರ್ಶಯನ್ ॥ 65 ॥
ದಾಶಾರ್ಹನೂ, ಪರಾಕ್ರಮಶಾಲಿಯೂ ಆದ ಕೃಷ್ಣನು ರಥಮಾರ್ಗಗಳಲ್ಲಿ ಉತ್ತಮಾಧಮಮಧ್ಯಮ ಮಂಡಲಗಳನ್ನು ತೋರಿಸುತ್ತಾ,

ತನ್ನ ರಥಶಿಕ್ಷಣ ಕೌಶಲವನ್ನು ತೋರಿಸಿದನು.
ತೇ ತು ನಾಮಾಂಕಿತಾ ಪೀತಾಃ ಕಾಲಜ್ವಲನಸನ್ನಿಭಾಃ |
ಸ್ನಾಯುಬದ್ಧಾಃ ಸುಪರ್ವಾಣಃ ಪೃಥವಃ ಪ್ರಿಯದರ್ಶನಾಃ ॥ 66 ॥
ವೈಣವಾಯಸ್ಮಯಶರಾಃ ಸ್ವಾಯತಾ ವಿವಿಧಾನನಾಃ |
ರುಧಿರಂ ವಿಹಗೈಃ ಸಾರ್ಧಂ ಪ್ರಾಣಿನಾಂ ಪಪುರಾಹವೇ ॥ 67 ॥
ಅರ್ಜುನನ ನಾಮಾಂಕಿತವಾದ, ನೀರನ್ನು ಕುಡಿಸಿ ಹದಮಾಡಿದ, ಕಾಲಾಗ್ನಿಯ ಕಾಂತಿಯುಳ್ಳ, ಸ್ನಾಯುಬದ್ಧವಾದ, ಒಳ್ಳೆಯ ಅಲುಗುಳ್ಳ, ವಿಸ್ತಾರವಾದ, ಮನೋಹರವಾದ, ಬಿದಿರು ಮತ್ತು ಕಬ್ಬಿಣದಿಂದ ಮಾಡಿದ ದಂಡವುಳ್ಳ, ಅಗಲವಾದ, ವಿವಿಧವಾದ ಮುಖವುಳ್ಳ ಬಾಣಗಳು ಪಕ್ಷಿಗಳ ಜೊತೆಯಲ್ಲಿ ರಣರಂಗದಲ್ಲಿ ಪ್ರಾಣಿಗಳ ರಕ್ತವನ್ನು ಪಾನ ಮಾಡಿದವು.
ರಥಸ್ಥಿತೋಽಗ್ರತಃ ಕ್ರೋಶೇ ಯಾನಸ್ಯತ್ಯರ್ಜುನಃ ಶರಾನ್ |
ರಥೇ ಕ್ರೋಶಮತಿಕ್ರಾಂತೇ ತಸ್ಯ ತೇ ಘ್ನಂತಿ ಶಾತ್ರವಾನ್ ॥ 68 ॥
ಅರ್ಜುನನು ರಥದಲ್ಲಿ ಕುಳಿತು ಪ್ರಯೋಗಿಸಿದ ಬಾಣಗಳು ಅರ್ಜುನನ ರಥವು ಮುಂದೆ ಹೋದಮೇಲೆ ಹಿಂದೆ ಒಂದು ಕ್ರೋಶದೂರದಲ್ಲಿ  ಶತ್ರುಗಳನ್ನು ಕೊಲ್ಲುತ್ತಿದ್ದವು. (ಅರ್ಜುನನ ಬಾಣಗಳ ವೇಗಕ್ಕಿಂತ ಕೃಷ್ಣನು ನಡೆಸುವ ರಥದ ವೇಗವು ಅತ್ಯಂತ ಅಧಿಕವಾದುದು ಎಂದು ಅಭಿಪ್ರಾಯ).
ತಾರ್ಕ್ಷ ರ್ಯಮಾರುತರಂಹೋಭಿರ್ವಾಜಿಭಿಃ ಸಾಧುವಾಹಿಭಿಃ |
ಯಥಾಽಗಚ್ಛದ್ ಹೃಷೀಕೇಶಃ ಕೃತ್ಸ್ನಂ ವಿಸ್ಮಾಪಯನ್ ಜಗತ್ ॥ 69 ॥
ನ ತಥಾ ಗಚ್ಛತಿ ರಥಃ ತಪನಸ್ಯ ವಿಶಾಂಪತೇ |
ನ ಶಕ್ರಸ್ಯ ನ ರುದ್ರಸ್ಯ ನ ಚ ವೈಶ್ರವಣಸ್ಯ ಚ ॥ 70 ॥
ಗರುಡ ವೇಗ ಮತ್ತು ವಾಯುವೇಗವುಳ್ಳ ಚೆನ್ನಾಗಿ ಎಳೆಯುವ ಅಶ್ವಗಳನ್ನು ಹೂಡಿದ ಕೃಷ್ಣನ ರಥವು ಜಗತ್ತನ್ನು ವಿಸ್ಮಯಗೊಳಿಸುತ್ತಾ ಹೇಗೆ ಸಾಗಿತೋ ಹಾಗೆ ಎಲ್ಯೆ ರಾಜನೇ, ಸೂರ್ಯನ ರಥವಾಗಲೀ, ಇಂದ್ರನ ರಥವಾಗಲೀ, ರುದ್ರ ರಥವಾಗಲೀ, ಕುಬೇರನ ರಥವಾಗಲೀ ಎಂದೂ ಹೋಗುವುದಿಲ್ಲ.
ನಾನ್ಯಸ್ಯ ಸಮರೇ ರಾಜನ್ ಗತಪೂರ್ವಸ್ತಥಾ ರಥಃ |
ಯಥಾ ಯಯಾವರ್ಜುನಸ್ಯ ಮನೋಽಭಿಪ್ರಾಯಶೀಘ್ರಗಃ ॥ 71 ॥
ಎಲ್ಯೆ ರಾಜನೇ, ಅರ್ಜುನನ ರಥವು ಹೇಗೆ ಮನೋವೇಗಕ್ಕಿಂತಲೂ ಶೀಘ್ರವಾಗಿ ಸಂಚರಿಸಿತೋ ಹಾಗೆ ಯುದ್ಧದಲ್ಲಿ ಇನ್ನೊಬ್ಬರ ರಥವು ಇದಕ್ಕಿಂತ ಮೊದಲು ಎಂದೂ ಚಲಿಸಲಿಲ್ಲ.
ಪ್ರವಿಶ್ಯ ತು ರಣೇ ರಾಜನ್ ಕೇಶವಃ ಪರವೀರಹಾ |
ಸೇನಾಮಧ್ಯೇ ಹಯಾಂಸ್ತೂರ್ಣಂ ಚೋದಯಾಮಾಸ ಭಾರತ ॥ 72 ॥
ಎಲ್ಯೆ ರಾಜನೇ, ಪರವೀರಘಾತಕನಾದ ಕೇಶವನು ನಿನ್ನ ಸೈನ್ಯವನ್ನು ಪ್ರವೇಶಿಸಿ ಸೇನೆಯ ಮಧ್ಯದಲ್ಲಿ ತನ್ನ ರಥದ ಅಶ್ವಗಳನ್ನು ಶೀಘ್ರವಾಗಿ ಪ್ರಚೋದಿಸಿದನು.
ತತಸ್ತಸ್ಯ ರಥೌಘಸ್ಯ ಮಧ್ಯಂ ಪ್ರಾಪ್ಯ ಹಯೋತ್ತಮಾಃ |
ಕೃಚ್ಛ್ರೇಣ ರಥಮೂಹುಸ್ತೇ ಕ್ಷುತ್ಪಿಪಾಸಾಶ್ರಮಾನ್ವಿತಾಃ ॥ 73 ॥
ಆಗ ರಥ ಸಮೂಹದ ಮಧ್ಯವನ್ನು ಪ್ರವೇಶಿಸಿದ ಅವನ ಶ್ರೇಷ್ಠವಾದ ಅಶ್ವಗಳು ಹಸಿವು, ಬಾಯಾರಿಕೆಗಳಿಂದ ಬಳಲಿ ಕಷ್ಟದಿಂದ ರಥವನ್ನು ಮುಂದೆ ಎಳೆದವು.
ಕ್ಷತಾಶ್ಚ ಬಹುಭಿಃ ಶಸ್ತ್ರೈರ್ಯುದ್ಧಶೌಂಡೈರನೇಕಶಃ |
ಮಂಡಲಾನಿ ವಿಚಿತ್ರಾಣಿ ವಿಚೇರುಸ್ತೇ ಮುಹುರ್ಮುಹುಃ ॥ 74 ॥
ಯುದ್ಧವಿಶಾರದರಾದ ಅನೇಕರಿಂದ ಅನೇಕ ರೀತಿಯಲ್ಲಿ ಗಾಯಗೊಂಡ ಅವು ವಿಚಿತ್ರವಾದ ಮಂಡಲಗಳಲ್ಲಿ ಮತ್ತೆ ಮತ್ತೆ ಸಂಚರಿಸಿದವು.
ಹತಾನಾಂ ವಾಜಿನಾಗಾನಾಂ ರಥಾನಾಂ ಚ ನರೈಃ ಸಹ |
ಉಪರಿಷ್ಟಾದತಿಕ್ರಾಂತಾಃ ಶೈಲಾಭಾನಾಂ ಸಹಸ್ರಶಃ ॥ 75 ॥
ಅವು ಸಹಸ್ರ ಸಂಖ್ಯೆಯಲ್ಲಿ ಮೃತವಾಗಿ ಬಿದ್ದಿದ್ದ ಅಶ್ವಗಳ, ಪರ್ವತ ಪ್ರಾಯವಾದ ಗಜಗಳ, ರಥಗಳ ಮತ್ತು ಪದಾತಿಗಳ ಮೇಲೆ ತಿರುಗಾಡಿದವು.
ಶ್ರಮೇಣ ಮಹತಾ ಯುಕ್ತಾಸ್ತೇ ಹಯಾ ವಾತರಂಹಸಃ |
ಮಂದವೇಗಗತಾ ರಾಜನ್ ಸಂವೃತ್ತಾಸ್ತತ್ರ ಸಂಯುಗೇ ॥ 76 ॥
ಎಲ್ಯೆ ರಾಜನೇ, ವಾಯುವೇಗವುಳ್ಳ ಆ ಅಶ್ವಗಳು ತುಂಬ ಶ್ರಮದಿಂದ ಕೂಡಿದವುಗಳಾಗಿ ರಣರಂಗದಲ್ಲಿ ಮಂದಗತಿಯುಳ್ಳವುಗಳಾದವು.
ಏತಸ್ಮಿನ್ನಂತರೇ ವೀರಾವಾವಂತ್ಯೌ ಭ್ರಾತರೌ ನೃಪ |
ಸಹಸೈನ್ಯೌ ತಮಾರ್ಚ್ಛೇತಾಂ ಪಾಂಡವಂ ಕ್ಲಾಂತವಾಹನಮ್ ॥ 77 ॥
ಎಲ್ಯೆ ರಾಜನೇ, ಈ ಮಧ್ಯದಲ್ಲಿ ಅವಂತಿದೇಶದ ವೀರರಾದ ಸಹೋದರರು ತಮ್ಮ ಸೈನ್ಯದ ಜೊತೆಯಲ್ಲಿ ದಣಿದ ವಾಹನವುಳ್ಳ ಅರ್ಜುನನನ್ನು ಎದುರಿಸಿ ಯುದ್ಧವನ್ನು ಮಾಡಿದರು.
ತಾವರ್ಜುನಂ ಚತುಃಷಷ್ಟ್ಯಾ ಸಪ್ತತ್ಯಾ ಚ ಜನಾರ್ದನಮ್ |
ಶರಾಣಾಂ ಚ ಶತೇನಾಶ್ವಾನವಿಧ್ಯೇತಾಂ ಮುದಾಽನ್ವಿತೌ ॥ 78 ॥
ಅವರು ಅರ್ಜುನನನ್ನು ಅರವತ್ನಾಲ್ಕು ಬಾಣಗಳಿಂದಲೂ, ಕೃಷ್ಣನನ್ನು ಎಪ್ಪತ್ತು ಬಾಣಗಳಿಂದಲೂ, ಅಶ್ವಗಳನ್ನು ನೂರು

ಬಾಣಗಳಿಂದಲೂ ಸಂತೋಷಯುಕ್ತರಾಗಿ ಹೊಡೆದರು.
ತಾವರ್ಜುನೋ ಮಹಾರಾಜ ನವಭಿರ್ನತಪರ್ವಭಿಃ |
ಆಜಘಾನ ರಣೇ ಕ್ರುದ್ಧೋ ಮರ್ಮಜ್ಞೋ ಮರ್ಮಭೇದಿಭಿಃ ॥ 79 ॥
ಮರ್ಮಜ್ಞನಾದ ಅರ್ಜುನನು ಎಲ್ಲೈ ಮಹಾರಾಜನೇ, ಅವರಿಬ್ಬರ ಮೇಲೆಯೂ ಮರ್ಮಭೇದಿಗಳಾದ, ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ತತಸ್ತೌ ತು ಶರೌಘೇಣ ಬೀಭತ್ಸುಂ ಸಹಕೇಶವಮ್ |
ಛಾದಯೇತಾಂ ಸುಸಂರಬ್ಧೌ ಸಿಂಹನಾದಂ ಚ ಚಕ್ರತುಃ ॥ 80 ॥
ಆಗ ಅವರಿಬ್ಬರೂ ಬಹಳ ಕೋಪಗೊಂಡು ಕೃಷ್ಣಾರ್ಜುನರನ್ನು ತಮ್ಮ ಶರ ಸಮೂಹಗಳಿಂದ ಮುಚ್ಚಿ ಸಿಂಹನಾದವನ್ನು ಮಾಡಿದರು.

ತಯೋಸ್ತು ಧನುಷೀ ಚಿತ್ರೇ ಭಲ್ಲಾಭ್ಯಾಂ ಶ್ವೇತವಾಹನಃ |
ಚಿಚ್ಛೇದ ಸಮರೇ ತೂರ್ಣಂ ಭೂಯ ಏವ ಧನಂಜಯಃ |
ಅಥಾನ್ಯೈರ್ವಿಶಿಖೈಸ್ತೂರ್ಣಂ ಧ್ವಜೌ ಚ ಕನಕೋಜ್ಜ್ವಲೌ ॥ 81 ॥
ಶ್ವೇತವಾಹನನಾದ ಅರ್ಜುನನು ಅವರ ವಿಚಿತ್ರವಾದ ಧನುಸ್ಸುಗಳನ್ನು ಎರಡು ಭಲ್ಲದಿಂದ ಪುನಃ ಶೀಘ್ರವಾಗಿ ಕತ್ತರಿಸಿದನು. ಅನಂತರ ಬೇರೆ ಬಾಣಗಳಿಂದ ರಣರಂಗದಲ್ಲಿ ಅವರ ಕನಕೋಜ್ವಲವಾದ ಧ್ವಜವನ್ನು ಕತ್ತರಿಸಿದನು.
ಅಥಾನ್ಯೇ ಧನುಷೀ ರಾಜನ್ ಪ್ರಗೃಹ್ಯ ಸಮರೇ ತದಾ |
ಪಾಂಡವಂ ಭೃಶಸಂಕ್ರುದ್ಧಾವರ್ದಯಾಮಾಸತುಃ ಶರೈಃ ॥ 82 ॥
ಎಲ್ಲೈ ರಾಜನೇ, ಆಗ ಅವರಿಬ್ಬರೂ ಇನ್ನೂ ಬಹಳ ಕೋಪಗೊಂಡು, ಬೇರೆ ಧನುಸ್ಸುಗಳನ್ನು ಹಿಡಿದು ರಣರಂಗದಲ್ಲಿ ತಮ್ಮ ಬಾಣಗಳಿಂದ ಅರ್ಜುನನನ್ನು ಹಿಂಸಿಸಿದರು.
ತೌ ತು ಶಸ್ತ್ರಭೃತಾಂ ಶ್ರೇಷ್ಠಃ ಶರೈಃ ಸಂತಾಡ್ಯ ಭಾರತ |
ಧನುಷೀ ಚಿಚ್ಛಿದೇ ತೂರ್ಣಂ ಭೂಯ ಏವ ಧನಂಜಯಃ ॥ 83 ॥
ಎಲ್ಲೈ ಭಾರತನೇ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಧನಂಜಯನು ಅವರಿಬ್ಬರನ್ನೂ ತನ್ನ ಬಾಣಗಳಿಂದ ಹೊಡೆದು ಪುನಃ ಅವರ ಧನುಸ್ಸುಗಳನ್ನು ಶೀಘ್ರವಾಗಿ ಕತ್ತರಿಸಿದನು.
ಅಥಾನ್ಯೈರ್ದಶಭಿಸ್ತೂರ್ಣಂ ಹೇಮಪುಂಖೈಃ ಶಿಲಾಶಿತೈಃ |
ಜಘಾನಾಶ್ವಾಂಸ್ತಥಾ ಸೂತಂ ಪಾರ್ಷ್ಣಿಂ ಚ ಸಪದಾನುಗಮ್ ॥ 84 ॥
ಅನಂತರ ಹೇಮಪುಂಖವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಬೇರೆ ಹತ್ತು ಬಾಣಗಳಿಂದ ಅವರ ಸೂತರನ್ನೂ, ಸಹಾಯಕರನ್ನೂ ಮತ್ತು ಹಿಂಬಾಲಕರನ್ನೂ ಮತ್ತು ಅಶ್ವಗಳನ್ನೂ ಹೊಡೆದನು.
ಜ್ಯೇಷ್ಠಸ್ಯ ತು ಕ್ಷುರಪ್ರೇಣ ಶಿರಃ ಕಾಯಾನ್ನ್ಯಕೃಂತತ |
ಸ ಪಪಾತ ಹತಃ ಪೃಥ್ವ್ಯಾಂ ವಾತರುಗ್ಣ ಇವ ದ್ರುಮಃ ॥ 85 ॥
ಅರ್ಜುನನು ಅವರಲ್ಲಿ ಅಣ್ಣನ ಶಿರಸ್ಸನ್ನು ಕ್ಷುರಪ್ರದಿಂದ ಕತ್ತರಿಸಿದನು. ಅವನು ಬಿರುಗಾಳಿಗೆ ಭಗ್ನವಾದ ವೃಕ್ಷದಂತೆ ಮೃತನಾಗಿ ಭೂಮಿಯ ಮೇಲೆ ಬಿದ್ದನು.
ವಿಂದಂ ತು ನಿಹತಂ ದೃಷ್ಟ್ವಾ ಅನುವಿಂದಃ ಪ್ರತಾಪವಾನ್ |
ಹತಾಶ್ವಂ ರಥಮುತ್ಸ ೃಜ್ಯ ಗದಾಂ ಗೃಹ್ಯ ಮಹಾಬಲಃ ॥ 86 ॥
ಅಭ್ಯದ್ರವತ ಸಂಗ್ರಾಮೇ ಭ್ರಾತುರ್ವಧಮನುಸ್ಮರನ್ |
ಗದಯಾ ಗದಿನಾಂ ಶ್ರೇಷ್ಠೋ ನೃತ್ಯನ್ನಿವ ಮಹಾರಥಃ ॥ 87 ॥
ಅಣ್ಣನಾದ ವಿಂದನು ಹತನಾದುದನ್ನು ನೋಡಿ, ಪ್ರತಾಪಶಾಲಿಯೂ, ಮಹಾಬಲನೂ, ಮಹಾರಥನೂ ಆದ ಅನುವಿಂದನು ಅಶ್ವಗಳು ಮೃತವಾದ ರಥವನ್ನು ಬಿಟ್ಟು, ಗದಾಧರರಲ್ಲಿ ಶ್ರೇಷ್ಠನಾದ ಅವನು ಗದೆಯನ್ನು ಹಿಡಿದು, ಅಣ್ಣನ ಮರಣವನ್ನು ಸ್ಮರಿಸುತ್ತಾ ನೃತ್ಯವನ್ನು ಮಾಡುವವನಂತೆ ರಣರಂಗದಲ್ಲಿ ಅರ್ಜುನನ ಮೇಲೆ ಮುನ್ನುಗ್ಗಿದನು.
ಅನುವಿಂದಃ ಸ ಗದಯಾ ಲಲಾಟೇ ಮಧುಸೂದನಮ್ |
ಸ್ಪೃಷ್ಟ್ವಾ ನಾಕಂಪಯತ್ ಕ್ರುದ್ಧೋ ಮೈನಾಕಮಿವ ಪರ್ವತಮ್॥88॥
ಅನುವಿಂದನು ಕ್ರುದ್ಧನಾಗಿ ಕೃಷ್ಣನನ್ನು ತನ್ನ ಗದೆಯಿಂದ ಕ್ರುದ್ಧನಾಗಿ ಲಲಾಟದಲ್ಲಿ (ಹಣೆ) ಹೊಡೆದರೂ ಮೈನಾಕ ಪರ್ವತದಂತಿದ್ದ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ.
ತತ್ರಾರ್ಜುನಃ ಶರೈಃ ಷಡ್ಭಿಃ ಗ್ರೀವಾಂ ಪಾದೌ ಭುಜೌ ಶಿರಃ |
ನಿಚಕರ್ತ ಸ ತು ಚ್ಛಿನ್ನಃ ಪಪಾತಾದ್ರಿಚಯೋ ಯಥಾ ॥ 89 ॥
ಆಗ ಅರ್ಜುನನು ಆರು ಬಾಣಗಳಿಂದ ಅವನ ಕತ್ತನ್ನೂ, ಪಾದಗಳನ್ನೂ, ಭುಜಗಳನ್ನೂ ಮತ್ತು ಶಿರಸ್ಸನ್ನೂ ಕತ್ತರಿಸಿದನು. ಆಗ ಅನುವಿಂದನು ಹೀಗೆ ಕತ್ತರಿಸಲ್ಪಟ್ಟು ಪರ್ವತ ಸಮೂಹದಂತೆ ಭೂಮಿಯ ಮೇಲೆ ಬಿದ್ದನು.
ತತಸ್ತೌ ನಿಹತೌ ದೃಷ್ಟ್ವಾ ತಯೋ ರಾಜನ್ ಪದಾನುಗಾಃ |
ಅಭ್ಯದ್ರವಂತ ಸಂಕ್ರುದ್ಧಾಃ ಕಿರಂತಃ ಶತಶಃ ಶರಾನ್ ॥ 90 ॥
ಎಲ್ಲೈ ರಾಜನೇ, ಅವರಿಬ್ಬರೂ ಹತರಾದುದನ್ನು ನೋಡಿ ಅವರ ಅನುಯಾಯಿಗಳು ಕೋಪಗೊಂಡು ನೂರರ ಸಂಖ್ಯೆಯಲ್ಲಿ ಬಾಣಗಳನ್ನು ಪ್ರಯೋಗಿಸುತ್ತಾ ಓಡಿ ಹೋದರು.
ತಾನರ್ಜುನಃ ಶರೈಸ್ತೂರ್ಣಂ ನಿಹತ್ಯ ಭರತರ್ಷಭ |

ವ್ಯರೋಚತ ಯಥಾ ವಹ್ನಿರ್ದಾವಂ ದಗ್ಧ್ವಾ ಹಿಮಾತ್ಯಯೇ ॥ 91 ॥
ಎಲೈ ಭರತರ್ಷಭನೇ, ಅರ್ಜುನನು ಅವರನ್ನು ಶೀಘ್ರವಾಗಿ ತನ್ನ ಬಾಣಗಳಿಂದ ಕೊಂದು ಹಿಮಕಾಲವು ಕಳೆದ ಮೇಲೆ ವನವನ್ನು ಸುಟ್ಟ ಅಗ್ನಿಯಂತೆ ಶೋಭಿಸಿದನು.
ತಯೋಃ ಸೇನಾಮತಿಕ್ರಮ್ಯ ಕೃಚ್ಛ್ರಾನ್ನಿಘ್ನನ್ ಧನಂಜಯಃ |
ವಿಬಭೌ ಜಲದಾನ್ ಹಿತ್ವಾ ದಿವಾಕರ ಇವೋದಿತಃ ॥ 92 ॥
ಅವರಿಬ್ಬರ ಸೈನ್ಯವನ್ನು ದಾಟಿ ಧನಂಜಯನು ಕಷ್ಟದಿಂದ ಅವರನ್ನು ಕೊಲ್ಲುತ್ತಾ ಮೇಘವನ್ನು ಬಿಟ್ಟು ಮೇಲಕ್ಕೆ ಎದ್ದ ಸೂರ್ಯನಂತೆ ಶೋಭಿಸಿದನು.
ತಂ ದೃಷ್ಟ್ವಾ ಕುರವಸ್ತ್ರಸ್ತಾಃ ಪ್ರಹೃಷ್ಟಾಶ್ಚಾಭವನ್ ಪುನಃ |
ಅಭ್ಯದ್ರವಂತ ಪಾರ್ಥಂ ಚ ಸಮಂತಾದ್ ಭರತರ್ಷಭ ॥ 93 ॥
ಅವನನ್ನು ನೋಡಿ ಕುರುಗಳು ಹೆದರಿದರು ಮತ್ತು ಪುನಃ ಹರ್ಷಗೊಂಡರು (ಅರ್ಜುನನ ಪರಾಕ್ರಮವನ್ನು ಸ್ಮರಿಸಿ ಭಯ ಮತ್ತು ಅರ್ಜುನನ ಶ್ರಮವನ್ನು ನೋಡಿ ಪ್ರಹರ್ಷ ಎಂದು ಅಭಿಪ್ರಾಯ). ಅವರು ಎಲ್ಲ ಕಡೆಗಳಿಂದಲೂ ಅರ್ಜುನನ ಮೇಲೆ ನುಗ್ಗಿದರು.
ಶ್ರಾಂತಂ ಚೈನಂ ಸಮಾಲಕ್ಷ ್ಯ ಜ್ಞಾತ್ವಾ ದೂರೇ ಚ ಸೈಂಧವಮ್ |
ಸಿಂಹನಾದೇನ ಮಹತಾ ಸರ್ವತಃ ಪರ್ಯವಾರಯನ್ ॥ 94 ॥
ಅವನು ದಣಿದಿರುವುದನ್ನು ಗಮನಿಸಿ, ಸೈಂಧವನು ದೂರದಲ್ಲಿದ್ದಾನೆಂದು ತಿಳಿದು ಅವರು ದೊಡ್ಡ ಸಿಂಹನಾದವನ್ನು ಮಾಡಿ ಎಲ್ಲ ಕಡೆಗಳಿಂದಲೂ ಅವನನ್ನು ಸುತ್ತುವರಿದರು.
ತಾಂಸ್ತು ದೃಷ್ಟ್ವಾ ಸುಸಂರಬ್ಧಾನ್ ಉತ್ಸ್ಮಯನ್ ಪುರುಷರ್ಷಭಃ |
ಶನಕೈರಿವ ದಾಶಾರ್ಹಮರ್ಜುನೋ ವಾಕ್ಯಮಬ್ರವೀತ್ ॥ 95 ॥
ಪುರುಷಶ್ರೇಷ್ಠನಾದ ಅರ್ಜುನನು ಅವರು ಸಿಟ್ಟುಗೊಂಡಿರುವುದನ್ನು ನೋಡಿ ನಗುತ್ತಾ, ಕೃಷ್ಣನನ್ನು ಕುರಿತು ಮೆಲ್ಲನೆ ಮಾತನಾಡಿದನು.
ಶರಾರ್ದಿತಾಶ್ಚ ಕ್ಲಾಂತಾಶ್ಚ ಹಯಾ ದೂರೇ ಚ ಸೈಂಧವಃ |
ಕಿಮಿಹಾನಂತರಂ ಕಾರ್ಯಂ ಜ್ಯಾಯಿಷ್ಠಂ ತವ ರೋಚತೇ ॥ 96 ॥
ಬ್ರೂಹಿ ಕೃಷ್ಣ ಯಥಾತತ್ತ್ವಂ ತ್ವಂ ಹಿ ಪ್ರಾಜ್ಞತಮಃ ಸದಾ |
ಭವನ್ನೇತ್ರಾ ರಣೇ ಶತ್ರೂನ್ ವಿಜೇಷ್ಯಂತಿ ಹಿ ಪಾಂಡವಾಃ ॥ 97 ॥
ಮಮ ತ್ವನಂತರಂ ಕೃತ್ಯಂ ಯದ್ವೈತತ್ ಸನ್ನಿಬೋಧ ಮೇ |
ಹಯಾನ್ ವಿಮುಚ್ಯ ಹಿ ಸುಖಂ ವಿಶಲ್ಯಾನ್ ಕುರು ಮಾಧವ ॥ 98 ॥
ನನ್ನ ಕುದುರೆಗಳು ಬಾಣಗಳಿಂದ ಗಾಯಗೊಂಡು ವ್ಯಥೆಗೊಂಡಿವೆ ಮತ್ತು ದಣಿದಿವೆ. ಸೈಂಧವನು ದೂರದಲ್ಲಿದ್ದಾನೆ. ನಿನಗೆ ನಾನು ಏನು ಮಾಡುವುದು ಒಳ್ಳೆಯದೆಂದು ತೋರುತ್ತದೆ? ಕೃಷ್ಣನೇ, ಅದನ್ನು ಸರಿಯಾಗಿ ಹೇಳು. ನೀನು ಯಾವಾಗಲೂ ಬಹಳ ವಿವೇಕಿಯಾದವನು. ನಿನ್ನನ್ನು ನಾಯಕನನ್ನಾಗಿ ಹೊಂದಿ ಪಾಂಡವರು ಶತ್ರುಗಳನ್ನು ಗೆಲ್ಲುವರು. ನಾನು ಸದ್ಯದಲ್ಲಿ ಮಾಡಬೇಕಾದ ಕಾರ್ಯವೇನು ಎಂದು ನನಗೆ ಚೆನ್ನಾಗಿ ಹೇಳು. ಎಲೈ ಮಾಧವನೇ, ಕುದುರೆಗಳನ್ನು ರಥದಿಂದ ಸುಖವಾಗಿ ಬಿಡಿಸಿ ಅವುಗಳಿಗೆ ಚುಚ್ಚಿರುವ ಬಾಣಗಳನ್ನು ತೆಗೆದು ಸಮಾಧಾನಗೊಳಿಸು.
ಏವಮುಕ್ತಸ್ತು ಪಾರ್ಥೇನ ಕೇಶವಃ ಪ್ರತ್ಯುವಾಚ ತಮ್ |
ಮಮಾಪ್ಯೇತನ್ಮತಂ ಪಾರ್ಥ ಯದಿದಂ ತೇ ಪ್ರಭಾಷಿತಮ್ ॥ 99 ॥
ಹೀಗೆ ಅರ್ಜುನನಿಂದ ಹೇಳಲ್ಪಟ್ಟ ಕೇಶವನು- ಎಲೈ ಅರ್ಜುನನೇ, ನೀನು ಆಡಿದ ಮಾತುಗಳು ನನಗೂ ಸಮ್ಮತವಾಗಿವೆ ಎಂದು ಉತ್ತರವನ್ನು ಕೊಟ್ಟನು.
ಅರ್ಜುನಃ
ಅಹಂ ಹಿ ವಾರಯಿಷ್ಯಾಮಿ ಸರ್ವಸೈನ್ಯಾನಿ ಕೇಶವ |
ತ್ವಮಪ್ಯತ್ರ ಯಥಾನ್ಯಾಯಂ ಕುರು ಕಾರ್ಯಮನಂತರಮ್ ॥ 100 ॥
ಅರ್ಜುನ ಎಲೈ ಕೇಶವನೇ, ನಾನು ಕೌರವರ ಎಲ್ಲ ಸೈನ್ಯವನ್ನೂ ತಡೆಯುವೆನು. ನೀನು ಶಾಸ್ತ್ರೋಕ್ತ ರೀತಿಯಿಂದ ಮಾಡಬೇಕಾದ ಕಾರ್ಯವನ್ನು ಮಾಡು.
ಸಂಜಯಃ
ಸೋಽವತೀರ್ಯ ರಥೋಪಸ್ಥಾದ್ ಅಸಂಭ್ರಾಂತೋ ಧನಂಜಯಃ |
ಗಾಂಡೀವಂ ಧನುರಾದಾಯ ತಸ್ಥೌ ಗಿರಿರಿವಾಚಲಃ ॥ 101 ॥
ಸಂಜಯ ಧನಂಜಯನು ರಥಪೀಠದಿಂದ ಇಳಿದು ಗಾಬರಿ ಇಲ್ಲದೆ ಗಾಂಡೀವ ಧನುಸ್ಸನ್ನು ಹಿಡಿದು ಪರ್ವತದಂತೆ ನಿಂತನು.
ತಮಭ್ಯಧಾವನ್ ಕ್ರೋಶಂತಃ ಕ್ಷತ್ರಿಯಾ ಜಯಕಾಂಕ್ಷಿಣಃ |
ಇದಂ ಚ್ಛಿದ್ರಮಿತಿ ಜ್ಞಾತ್ವಾ ಧರಣೀಸ್ಥಂ ಧನಂಜಯಮ್ ॥ 102 ॥
ಅರ್ಜುನನು ಭೂಮಿಯ ಮೇಲೆ ನಿಂತಿರುವುದನ್ನು ನೋಡಿ ಇದೇ ಅವಕಾಶವೆಂದು ತಿಳಿದು ಜಯಾಕಾಂಕ್ಷಿಗಳಾದ ಕ್ಷತ್ರಿಯರು ಸಿಂಹನಾದವನ್ನು ಮಾಡುತ್ತಾ ಅವನ ಮೇಲೆ ನುಗ್ಗಿದರು.
ತ ಏನಂ ರಥವಂಶೇನ ಸಮಂತಾತ್ ಪರ್ಯವಾರಯನ್ ॥ 103 ॥
ವಿಕರ್ಷಂತಶ್ಚ ತೇ ಚಾಪಾನ್ ವಿಸೃಜಂತಶ್ಚ ಸಾಯಕಾನ್ |
ವಿಚಿತ್ರಾಣಿ ಚ ಶಸ್ತ್ರಾಣಿ ಕ್ರುದ್ಧಾಸ್ತತ್ರ ವ್ಯದರ್ಶಯನ್ ॥ 104 ॥

ಅವರು ತಮ್ಮ ರಥಸಮೂಹಗಳಿಂದ ಅವನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು. ಅವರು ತಮ್ಮ ಬಿಲ್ಲುಗಳನ್ನು ಎಳೆದು ಬಾಣಗಳನ್ನು ಪ್ರಯೋಗಿಸುತ್ತಾ ಕೋಪಗೊಂಡು ತಮ್ಮ ವಿಚಿತ್ರ ಶಸ್ತ್ರಗಳನ್ನು ಪ್ರದರ್ಶಿಸಿದರು.
ಛಾದಯಂತಃ ಶರೈಃ ಪಾರ್ಥಂ ಮೇಘಾ ಇವ ದಿವಾಕರಮ್ |
ಅದ್ರುವಂಶ್ಚಾಪಿ ವೇಗೇನ ಕ್ಷತ್ರಿಯಾ ಕ್ಷತ್ರಿಯರ್ಷಭಮ್ |
ರಥಸಿಂಹಂ ರಥೋದಾರಾಃ ಸಿಂಹಂ ಮತ್ತಾ ಇವ ದ್ವಿಪಾಃ ॥ 105 ॥
ಮೋಡಗಳು ಸೂರ್ಯನನ್ನು ಮುಚ್ಚುವಂತೆ ತಮ್ಮ ಬಾಣಗಳಿಂದ ಅರ್ಜುನನನ್ನು ಮುಚ್ಚುತ್ತಾ ರಥಶ್ರೇಷ್ಠರಾದ ಕ್ಷತ್ರಿಯರಾದ ಅವರು ಕ್ಷತ್ರಿಯಶ್ರೇಷ್ಠನಾದ, ರಥಸಿಂಹನಾದ ಅರ್ಜುನನ ಮೇಲೆ ಮದಗಜಗಳು ಸಿಂಹದ ಮೇಲೆ ಎರಗುವಂತೆ ವೇಗದಿಂದ ಎರಗಿದರು.
ತತ್ರ ಪಾರ್ಥಸ್ಯ ಭುಜಯೋರ್ಮಹದ್ ಬಲಮದೃಶ್ಯತ |
ಯತ್ ಕ್ರುದ್ಧಾ ಬಹುಲಾಃ ಸೇನಾಃ ಸರ್ವತಃ ಪರ್ಯವಾರಯತ್ ॥
ಕ್ರುದ್ಧರಾದ ಅನೇಕ ಸೈನ್ಯಗಳು ಎಲ್ಲ ಕಡೆಗಳಿಂದಲೂ ಅರ್ಜುನನನ್ನು ಮುತ್ತಿದಾಗ ಅರ್ಜುನನ ಭುಜಗಳ ದೊಡ್ಡ ಬಲವು ಕಂಡುಬಂದಿತು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ದ್ವಿಷತಾಂ ಸರ್ವತೋ ವಿಭುಃ |
ಇಷುಭಿರ್ಬಹುಭಿಸ್ತೂರ್ಣಂ ಸರ್ವಾನೇವ ಸಮಾವೃಣೋತ್ ॥ 107 ॥
ವಿಭುವಾದ ಅರ್ಜುನನು ಶತ್ರುಗಳ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನಿವಾರಿಸಿ, ತಾನು ಪ್ರಯೋಗಿಸಿದ ಅನೇಕ ಬಾಣಗಳಿಂದ ಎಲ್ಲರನ್ನೂ ಮುಚ್ಚಿಹಾಕಿದನು.
ತತ್ರಾಂತರಿಕ್ಷೇ ಬಾಣಾನಾಂ ಪ್ರಗಾಢಾನಾಂ ವಿಶಾಂಪತೇ |
ಸಂಘರ್ಷೇಣ ಮಹಾರ್ಚಿಷ್ಮಾನ್ ಪಾವಕಃ ಸಮಜಾಯತ ॥ 108 ॥
ಎಲೈ ರಾಜನೇ, ಬಾಣಗಳಿಗೆ ಉಂಟಾದ ಸಂಘರ್ಷದಿಂದ ಅಂತರಿಕ್ಷದಲ್ಲಿ ಜ್ವಾಲೆಯುಳ್ಳ ದೊಡ್ಡ ಅಗ್ನಿಯು ಉಂಟಾಯಿತು.
ತತ್ರ ತೈಶ್ಚ ಮಹೇಷ್ವಾಸೈಃ ಶ್ವಸದ್ಭಿಃ ಶೋಣಿತೋಕ್ಷಿತೈಃ |
ಹಯೈರ್ನಾಗೈಶ್ಚ ಸಂಭಿನ್ನೈರ್ನದದ್ಭಿಶ್ಚಾರಿಕರ್ಶನ ॥ 109 ॥
ಸಂರಬ್ಧೈಶ್ಚಾರಿಭಿರ್ವೀರೈಃ ಪ್ರಾರ್ಥಯದ್ಭಿರ್ಜಯಂ ಮೃಧೇ |
ಏಕಸ್ಥೈರ್ಬಹುಭಿಃ ಕ್ರುದ್ಧೈರೂರ್ಮೀವ ಸಮಜಾಯತ ॥ 110 ॥
ಅಲ್ಲಿ ರಕ್ತಸಿಕ್ತರಾಗಿ ದೊಡ್ಡ ಉಸಿರನ್ನು ಬಿಡುವ ಆ ಮಹಾಧನುರ್ಧಾರಿಗಳಿಂದಲೂ, ದೇಹವು ಕತ್ತರಿಸಲ್ಪಟ್ಟು ಗರ್ಜಿಸುವ ಅಶ್ವಗಳಿಂದ ಮತ್ತು ಗಜಗಳಿಂದಲೂ, ಕೋಪಗೊಂಡು ಒಂದು ಕಡೆಯಲ್ಲಿ ನಿಂತು ವಿಜಯವನ್ನು ಪ್ರಾರ್ಥಿಸುವ ಅನೇಕ ವೀರರಿಂದಲೂ, ಆ ಯುದ್ಧಭೂಮಿಯು ಸಮುದ್ರದಂತಾಯಿತು.
ಶರೋರ್ಮಿಣಂ ಗಜಾವರ್ತಂ ನಾಗನಕ್ರಂ ದುರತ್ಯಯಮ್ |
ಪದಾತಿಮತ್ಸ್ಯಕಲಿಲಂ ಶಂಖದುಂದುಭಿನಿಸ್ವನಮ್ ॥ 111 ॥
ಅಸಂಖ್ಯೇಯಮಪಾರಂ ಚ ರಜೋನೀರಮತೀವ ಚ |
ಉಷ್ಣೀಷಕಮಠಚ್ಛನ್ನಂ ಪತಾಕಾಫೇನಮಾಲಿನಮ್ ॥ 112 ॥
ರಥಸಾಗರಮಕ್ಷೋಭ್ಯಂ ಮಾತಂಗಾಂಗಶಿಲಾಚಿತಮ್ |
ವೇಲಾಭೂತಸ್ತದಾ ಪಾರ್ಥಃ ಪತ್ರಿಭಿಃ ಸಮವಾರಯತ್ ॥ 113 ॥
ಬಾಣಗಳೆಂಬ ತರಂಗವುಳ್ಳ, ಗಜಗಳೆಂಬ ಸುಳಿಗಳುಳ್ಳ, ಅಶ್ವಗಳೆಂಬ ಮೊಸಳೆಗಳುಳ್ಳ, ದಾಟಲು ಅಸಾಧ್ಯವಾದ, ಪದಾತಿಗಳೆಂಬ ಮತ್ಸ್ಯ ಸಮೂಹಗಳುಳ್ಳ, ಶಂಖ-ದುಂದುಭಿಗಳ ಘೋಷವನ್ನು ಹೊಂದಿದ, ಗಣನೆಯಿಲ್ಲದ ಅಪಾರವಾದ ರಥಗಳೆಂಬ ನೀರನ್ನು ಹೊಂದಿದ, ಉಷ್ಣೀಷಗಳೆಂಬ ಕೂರ್ಮಗಳಿಂದ ಆವೃತವಾದ, ಪತಾಕೆಗಳೆಂಬ ನೊರೆಗಳ ಮಾಲೆಗಳನ್ನು ಹೊಂದಿದ, ಆನೆಗಳ ಅಂಗಗಳೆಂಬ ಶಿಲೆಗಳಿಂದ ತುಂಬಿದ, ಅಲುಗಾಡಿಸಲು ಅಸಾಧ್ಯವಾದ ಆ ಸೈನ್ಯಸಾಗರವನ್ನು ಅರ್ಜುನನು ಪತ್ರವುಳ್ಳ ತನ್ನ ಬಾಣಗಳಿಂದ ತೀರದಂತೆ ತಡೆದನು.
ತತೋ ಜನಾರ್ದನಃ ಸಂಖ್ಯೇ ಪ್ರಿಯಂ ಪುರುಷಸತ್ತಮಮ್ |
ಅಸಂಭ್ರಾಂತಂ ಮಹಾಬಾಹುಮರ್ಜುನಂ ವಾಕ್ಯಮಬ್ರವೀತ್ ॥ 114 ॥
ಉದಪಾನಮಿಹಾಶ್ವಾನಾಂ ನಾಲ್ಪಮಸ್ತಿ ರಣೇಽರ್ಜುನ |
ಪರೀಪ್ಸಂತೇ ಜಲಂ ಚೇಮೇ ಪೇಯಂ ನ ತ್ವವಗಾಹನಮ್ ॥ 115 ॥
ಆಗ ಜನಾರ್ದನನು ರಣರಂಗದಲ್ಲಿ ತನಗೆ ಪ್ರಿಯನೂ, ಪುರುಷಶ್ರೇಷ್ಠನೂ, ಗಾಬರಿಗೊಳ್ಳದವನೂ, ಮಹಾಬಾಹುವೂ ಆದ ಅರ್ಜುನನನ್ನು ಕುರಿತು- ಎಲೈ ಅರ್ಜುನನೇ, ಇಲ್ಲಿ ಅಶ್ವಗಳಿಗೆ ಅಲ್ಪವೂ ನೀರಿಲ್ಲ. ಈ ಅಶ್ವಗಳು ಕುಡಿಯುವ ನೀರನ್ನು ಅಪೇಕ್ಷಿಸುತ್ತವೆ, ಸ್ನಾನವನ್ನು ಅಪೇಕ್ಷಿಸುವುದಿಲ್ಲ ಎಂದು ಹೇಳಿದನು.
ಸಂಜಯಃ
ಇದಮಸ್ತೀತ್ಯಸಂಭ್ರಾಂತೋ ಬ್ರುವನ್ನಸ್ತ್ರೇಣ ಮೇದಿನೀಮ್ |
ಅಭಿಹತ್ಯಾರ್ಜುನಶ್ಚಕ್ರೇ ವಾಜಿಪಾನಂ ಸರಃ ಶುಭಮ್ ॥ 116 ॥
ಸಂಜಯ ಅರ್ಜುನನು ಗಾಬರಿಗೊಳ್ಳದೆ ಇಲ್ಲಿ ನೀರಿದೆ ಎಂದು ಹೇಳುತ್ತಾ ತನ್ನ ಅಸ್ತ್ರದಿಂದ ಭೂಮಿಯನ್ನು ಭೇದಿಸಿ, ಕುದುರೆಗಳು ಕುಡಿಯುವುದಕ್ಕೆ ಯೋಗ್ಯವಾದ ನೀರಿರುವ ಒಂದು ಶುದ್ಧ ಸರೋವರವನ್ನು ಮಾಡಿದನು.
ಶರವಂಶಂ ಶರಸ್ಥೂಣಂ ಶರಾಚ್ಛಾದನಮದ್ಭುತಮ್ |
ಶರವೇಶ್ಮಾಕರೋತ್ ಪಾರ್ಥಃ ತ್ವಷ್ಟೇವಾದ್ಭುತಕರ್ಮಕೃತ್ ॥ 117 ॥

ಬಾಣಗಳ ಕಂಬಗಳು, ಬಾಣಗಳ ಹೊದಿಕೆ, ಬಾಣಗಳ ತಡಿಕೆಯನ್ನು ಹೊಂದಿದ ಒಂದು ಅದ್ಭುತವಾದ ಬಾಣಗೃಹವನ್ನು ಅದ್ಭುತ ಕರ್ಮಕಾರಕನಾದ ತ್ವಷ್ಟ್ರುವಿನಂತೆ ನಿರ್ಮಿಸಿದನು.
ತತಃ ಪ್ರಹಸ್ಯ ಗೋವಿಂದಃ ಸಾಧು ಸಾಧ್ವಿತ್ಯಥಾಬ್ರವೀತ್ |
ಶರವೇಶ್ಮನಿ ಪಾರ್ಥೇನ ಕೃತೇ ತಸ್ಮಿನ್ ಮಹಾರಣೇ ॥ 118 ॥
ಮಹಾರಣರಂಗದಲ್ಲಿ ಅರ್ಜುನನು ಅಂತಹ ಶರಗೃಹವನ್ನು ಮಾಡುತ್ತಿರಲು ಗೋವಿಂದನು ನಕ್ಕು, ಚೆನ್ನಾಗಿದೆ, ಚೆನ್ನಾಗಿದೆ ಎಂದು ಹೇಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಡಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೇಳನೆಯ ಅಧ್ಯಾಯ
ಅಶ್ವಗಳನ್ನು ಬಿಚ್ಚಿ, ನೀರನ್ನು ಕುಡಿಸಿ, ಸಮಾಧಾನ ಮಾಡಿ
ಕೃಷ್ಣನಿಂದ ಸೈಂಧವನ ಕಡೆಗೆ ರಥದ ಪ್ರಯಾಣ.
ಸಂಜಯಃ
ಸಲಿಲೇ ಜನಿತೇ ತಸ್ಮಿನ್ ಕೌಂತೇಯೇನ ಮಹಾತ್ಮನಾ |
ನಿವಾರಿತೇ ದ್ವಿಷತ್ಸೈನ್ಯೇ ಕೃತೇ ಚ ಶರವೇಶ್ಮನಿ ॥ 1 ॥
ವಾಸುದೇವೋ ರಥಾತ್ ತೂರ್ಣಮವತೀರ್ಯ ಮಹಾದ್ಯುತಿಃ |
ಮೋಚಯಾಮಾಸ ತುರಗಾನ್ ವಿನುನ್ನಾನ್ ಕಂಕಪತ್ರಿಭಿಃ ॥ 2 ॥
ಸಂಜಯ ಮಹಾತ್ಮನಾದ ಅರ್ಜುನನು ಅಲ್ಲಿ ನೀರನ್ನು ಸೃಷ್ಟಿಸಿ, ಶರಗೃಹವನ್ನು ರಚಿಸಿ, ಶತ್ರುಸೈನ್ಯವನ್ನು ತಡೆಯುತ್ತಿರಲು ಮಹಾದ್ಯುತಿಯುಳ್ಳ ವಾಸುದೇವನು ಶೀಘ್ರವಾಗಿ ರಥದಿಂದ ಇಳಿದು, ಬಾಣಗಳಿಂದ ವ್ಯಥೆಗೊಂಡ ಅಶ್ವಗಳನ್ನು ರಥದಿಂದ ಬಿಚ್ಚಿದನು.
ಸಿದ್ಧಚಾರಣಸಂಘಾನಾಂ ಸೈನಿಕಾನಾಂ ಚ ಸರ್ವಶಃ |
ಅದೃಷ್ಟಪೂರ್ವಂ ತದ್ ದೃಷ್ಟ್ವಾ ಸಿಂಹನಾದೋ ಮಹಾನಭೂತ್ ॥ 3 ॥
ಹಿಂದೆ ಎಂದೂ ನಡೆಯದಿದ್ದ ಅಂತಹ ಒಂದು ಘಟನೆಯನ್ನು ನೋಡಿ ಸಿದ್ಧ- ಚಾರಣ ಸಮೂಹಗಳು ಮತ್ತು ಸೈನಿಕರು ಎಲ್ಲ ಕಡೆಯಲ್ಲಿಯೂ ದೊಡ್ಡ ಸಿಂಹನಾದವನ್ನು ಮಾಡಿದರು.
ಪದಾತಿನಂ ತು ಕೌಂತೇಯಂ ಯುಧ್ಯಮಾನಂ ನರರ್ಷಭಾಃ |
ನಾಶಕ್ನುವನ್ ವಾರಯಿತುಂ ತದದ್ಭುತಮಿವಾಭವತ್ ॥ 4 ॥
ಪದಾತಿಯಾಗಿ ನಿಂತು ಯುದ್ಧವನ್ನು ಮಾಡುವ ಅರ್ಜುನನನ್ನು ತಡೆಯಲು ಯಾವ ರಾಜರಿಗೂ ಸಾಧ್ಯವಾಗಲಿಲ್ಲ. ಅದು ಅದ್ಭುತವಾಗಿದ್ದಿತು.
ಆಪತತ್ಸು ರಥೌಘೇಷು ಪ್ರಭೂತಗಜವಾಜಿಷು |
ನಾಸಂಭ್ರಮತ್ ತದಾ ಪಾರ್ಥಸ್ತದಸ್ಯ ಪುರುಷಾನತಿ ॥ 5 ॥
ಬಹಳ ಗಜಾಶ್ವಗಳಿಂದ ಕೂಡಿದ ರಥ-ಸಮೂಹಗಳು ಅವನ ಮೇಲೆ ಬೀಳುತ್ತಿರಲು ಅರ್ಜುನನು ಗಾಬರಿಗೊಳ್ಳಲಿಲ್ಲ. ಇದು ಬೇರೆ ಪುರುಷರನ್ನು ಮೀರಿದ ಅವನ ಶೌರ್ಯದ ಸ್ಥಿತಿ.
ವ್ಯಸೃಜಂತ ಶರೌಘಾಂಸ್ತೇ ಪಾಂಡವಂ ಪ್ರತಿ ಪಾರ್ಥಿವಾಃ |
ನ ಚಾವ್ಯಥತ ಧರ್ಮಾತ್ಮಾ ವಾಸವಿಃ ಪರವೀರಹಾ ॥ 6 ॥
ಆ ರಾಜರು ಅರ್ಜುನನ ಮೇಲೆ ಬಾಣಗಳ ಸಮೂಹಗಳನ್ನು ಪ್ರಯೋಗಿಸಿದರು. ಧರ್ಮಿಷ್ಠನೂ ಶತ್ರುವೀರಘಾತಕನೂ ಆದ ಅರ್ಜುನನು ವ್ಯಥೆಪಡಲಿಲ್ಲ.
ಸ ತಾನಿ ಶರಜಾಲಾನಿ ಗದಾಃ ಪ್ರಾಸಾಂಶ್ಚ ವೀರ್ಯವಾನ್ |
ಸಮಂತಾದ್ ಗ್ರಸತೇ ಪಾರ್ಥಃ ಸರಿತಃ ಸಾಗರೋ ಯಥಾ ॥ 7 ॥
ಪರಾಕ್ರಮಶಾಲಿಯಾದ ಅರ್ಜುನನು ಸಾಗರವು ನದಿಗಳನ್ನು ನುಂಗುವಂತೆ ಎಲ್ಲ ಕಡೆಗಳಿಂದ ಬರುವ ಆ ಬಾಣಸಮೂಹಗಳನ್ನು, ಗದೆಗಳನ್ನೂ, ಪ್ರಾಸಗಳನ್ನೂ ನುಂಗಿದನು.
ಅಸ್ತ್ರವೇಗೇನ ಮಹತಾ ಪಾರ್ಥೋ ಬಾಹುಬಲೇನ ಚ |
ಸರ್ವೇಷಾಂ ಪಾರ್ಥಿವೇಂದ್ರಾಣಾಮಗ್ರಸತ್ ತಾನ್ ಶರೋತ್ತಮಾನ್ ॥
ಅರ್ಜುನನು ತನ್ನ ಅಸ್ತ್ರಗಳ ದೊಡ್ಡ ವೇಗದಿಂದಲೂ ಮತ್ತು ಬಾಹುಬಲದಿಂದಲೂ ಎಲ್ಲ ರಾಜರುಗಳು ಪ್ರಯೋಗಿಸಿದ ಶ್ರೇಷ್ಠವಾದ ಬಾಣಗಳನ್ನು ನುಂಗಿದನು (ವಿನಾಶಗೊಳಿಸಿದನು).
ತತ್ ತು ಪಾರ್ಥಸ್ಯ ವಿಕ್ರಾಂತಂ ವಾಸುದೇವಸ್ಯ ಚೋಭಯೋಃ |
ಅಪೂಜಯನ್ ಮಹಾರಾಜ ಕೌರವಾಃ ಪರಮಾದ್ಭುತಮ್ ॥ 9 ॥
ಎಲೈ ಮಹಾರಾಜನೇ, ಅರ್ಜುನ ಮತ್ತು ಕೃಷ್ಣರ ಆ ಅದ್ಭುತವಾದ ಪರಾಕ್ರಮವನ್ನು ಕೌರವರೂ ಸಹ ಸ್ತುತಿಸಿದರು.
ಕೌರವಾಃ
ಕಿಂಚಾದ್ಭುತತರಂ ಲೋಕೇ ಭವಿತಾ ಚಾಥವಾಪ್ಯಭೂತ್ |

ಯದಶ್ವಾನ್ ಪಾರ್ಥಗೋವಿಂದೌ ಪಾಯಯಾಮಾಸತೂ ರಣೇ ॥10॥
ಕೌರವರು ಕೃಷ್ಣಾರ್ಜುನರು ಸೇರಿ ರಣರಂಗದಲ್ಲಿ ಅಶ್ವಗಳಿಗೆ ನೀರು ಕುಡಿಸುವುದಕ್ಕಿಂತ ಅದ್ಭುತವಾದ ಘಟನೆಯು ಲೋಕದಲ್ಲಿ ಮುಂದೆ ಯಾವುದಾದೀತು? ಅಥವಾ ಹಿಂದೆ ಯಾವುದು ನಡೆದಿದೆ?
ಭಯಂ ವಿಪುಲಮಸ್ಮಾಸು ಧತ್ತಾಮತಿಮಹಾರಥೌ |
ತೇಜೋ ವಿದಧತುಶ್ಚೋಗ್ರಂ ವಿಸ್ರಂಭಾದ್ ರಣಮೂರ್ಧನಿ |
ದಧಾರೈಕೋ ರಣೇ ಪಾರ್ಥೋ ವೇಲೋದ್ವೃತಮಿವಾರ್ಣವಮ್ ॥11॥
ಮಹಾರಥರಾದ ಕೃಷ್ಣ-ಪಾಂಡವರು ನಮಗೆ ಅಪಾರವಾದ ಭಯವನ್ನು ಉಂಟು ಮಾಡಿದ್ದಾರೆ. ಶ್ರೇಷ್ಠವಾದ ರಣಮಧ್ಯದಲ್ಲಿ ತಮ್ಮ ಆತ್ಮವಿಶ್ವಾಸದಿಂದ ಉಗ್ರವಾದ ತೇಜಸ್ಸನ್ನು ತೋರಿಸಿದ್ದಾರೆ. ಸಂಕ್ಷುಬ್ಧವಾದ ಸಾಗರವನ್ನು ತೀರವು ತಡೆದಂತೆ ಅರ್ಜುನನೊಬ್ಬನೇ ರಣರಂಗದಲ್ಲಿ ನಮ್ಮನ್ನು ತಡೆಹಿಡಿದಿದ್ದಾನೆ.
ಸಂಜಯಃ
ಪಾರ್ಥಸ್ಯ ಶರಸಂಛನ್ನೇ ತಸ್ಮಿನ್ ವೇಶ್ಮನಿ ಭಾರತ |
ಆಕಾಶಮಿವ ಸಂಪ್ರಾಪ್ಯ ವಿಚೇರುಸ್ತತ್ರ ಪಕ್ಷಿಣಃ ॥ 12 ॥
ಸಂಜಯ ಎಲೈ ಭಾರತನೇ, ಅರ್ಜುನನ ಬಾಣಗಳಿಂದ ಚೆನ್ನಾಗಿ ಮುಚ್ಚಲ್ಪಟ್ಟ ಆ ಬಾಣಗೃಹದಲ್ಲಿ ಆಕಾಶವನ್ನು ಸೇರುವಂತೆ ಪಕ್ಷಿಗಳು ಸೇರಿ ಹಾರಾಡಿದವು.
ನ ಚೈನಂ ಯುಧಿ ತಿಷ್ಠಂತಂ ತವ ಸೈನ್ಯೇಷು ಭಾರತ |
ಅಭ್ಯದ್ರುವತ ಸಂಕ್ರುದ್ಧಃ ಪುಮಾನ್ ಕಶ್ಚಿತ್ ತು ತಾವಕಃ ॥ 13 ॥
ಸರ್ವೇ ವಿಮನಸೋ ಭೂತ್ವಾ ತವ ಯೋಧಾ ವಿಶಾಂಪತೇ |
ಸಂಪ್ರೇಕ್ಷ ೆಯ ತತ್ರ ಗೋವಿಂದಂ ಪಾಂಡವಂ ಚ ಧನಂಜಯಮ್ ॥ 14 ॥
ಅರ್ಜುನನನ್ನು ಮತ್ತು ಕೃಷ್ಣನನ್ನು ನೋಡಿ ಎಲೈ ರಾಜನೇ, ನಿನ್ನ ಸೈನ್ಯದ ಯೋಧರೆಲ್ಲರೂ ಉತ್ಸಾಹಹೀನರಾಗಿ, ಅರ್ಜುನನು ರಣರಂಗದಲ್ಲಿ ಪದಾತಿಯಾಗಿ ನಿಂತಿದ್ದರೂ ನಿನ್ನ ಸೈನ್ಯದಲ್ಲಿನ ಯಾವ ಯೋಧನೂ ಕ್ರೋಧದಿಂದ ಅವನ ಕಡೆಗೆ ಮುನ್ನುಗ್ಗಲಿಲ್ಲ.
ಅಥೋತ್ಸ್ಮಯನ್ ಹೃಷೀಕೇಶಃ ಸ್ತ್ರೀಮಧ್ಯ ಇವ ಭಾರತ |
ಅರ್ಜುನೇನ ಕೃತೇ ಸಂಖೇ ಶರಗರ್ಭಗೃಹೇ ವಿಭೋ ॥ 15 ॥
ಉಪಾವರ್ತಯದವ್ಯಗ್ರಃ ತಾನಶ್ವಾನ್ ಪುಷ್ಕರೇಕ್ಷಣಃ |
ಮಿಷತಾಂ ಸರ್ವಸೈನ್ಯಾನಾಂ ತ್ವದೀಯಾನಾಂ ವಿಶಾಂಪತೇ ॥ 16 ॥
ಅರ್ಜುನನು ರಣರಂಗದಲ್ಲಿ ಬಾಣಗಳಿಂದ ಗೃಹವನ್ನು ನಿರ್ಮಿಸಿದ ಮೇಲೆ, ಎಲೈ ಭಾರತನೇ, ವಿಭುವೇ, ಕೃಷ್ಣನು ಸ್ತ್ರೀಯರ ಮಧ್ಯದಲ್ಲಿಯೋ ಎಂಬಂತೆ ನಗುತ್ತಾ ನಿನ್ನ ಸೈನ್ಯವೆಲ್ಲವೂ ನೋಡುತಿತರುವಂತೆಯೇ ಯಾವ ಗಾಬರಿಯೂ ಇಲ್ಲದಂತೆ, ಯಾವ ಗಡಿಬಿಡಿಯೂ ಇಲ್ಲದೆ ಅವನು ಅಶ್ವಗಳನ್ನು ಅಲ್ಲಿಗೆ ಕರೆತಂದನು.
ಉಪಾವೃತ್ಯೋತ್ತಿತಾನಶ್ವಾನ್ ಪಾಣಿಭ್ಯಾಂ ಪುಷ್ಕರೇಕ್ಷಣಃ |
ಸಮ್ಮಾರ್ಜಯದ್ ರಣೇ ರಾಜನ್ ಪಶ್ಯತಾಂ ಸರ್ವಯೋಧಿನಾಮ್ ॥
ಎಲೈ ರಾಜನೇ, ರಥದಿಂದ ಬಿಚ್ಚಿ ತನ್ನ ಬಳಿಯಲ್ಲಿ ನಿಂತ ಅಶ್ವಗಳನ್ನು ಪುಷ್ಕರಾಕ್ಷನಾದ ಕೃಷ್ಣನು ಎಲ್ಲ ಯೋಧರೂ ನೋಡುತ್ತಿರುವಂತೆಯೇ ತನ್ನ ಕೈಗಳಿಂದ ಸವರಿದನು.
ತೇಷಾಂ ಶ್ರಮಂ ಚ ಗ್ಲಾನಿಂ ಚ ವಮಥುಂ ವೇಪಥುಂ ವ್ರಣಾನ್ |
ಸರ್ವಾಣ್ಯಪಾನುದತ್ ಕೃಷ್ಣಃ ಕುಶಲೋ ಹ್ಯಶ್ವಕರ್ಮಣಿ ॥ 18 ॥
ಅಶ್ವಕರ್ಮಗಳಲ್ಲಿ ಕುಶಲನಾದ ಕೃಷ್ಣನು ಅವುಗಳ ಶ್ರಮವನ್ನೂ, ನೋವನ್ನೂ, ನಡುಕವನ್ನೂ ಮತ್ತು ವಮಥುಗಳನ್ನೂ (ಒಂದೊಂದು ಸ್ಥಳದಲ್ಲಿ ಚರ್ಮಗಳನ್ನು ಅಲ್ಲಾಡಿಸುವುದು), ಗಾಯಗಳೆಲ್ಲವನ್ನೂ ನಿವಾರಿಸಿದನು.
ಶಲ್ಯಾನುದ್ಧ ೃತ್ಯ ಪಾಣಿಭ್ಯಾಂ ಪರಿಮೃಜ್ಯ ಚ ತಾನ್ ಹಯಾನ್ |
ಉಪಾವೃತ್ತಾನ್ ಯಥಾಕಾಮಂ ಪಾಯಯಾಮಾಸ ವಾರಿ ಚ ॥ 19 ॥
ಶರೀರದಲ್ಲಿ ನೆಟ್ಟ ಬಾಣಗಳನ್ನು ತೆಗೆದು, ಅವುಗಳನ್ನು ನೇವರಿಸಿ, ರಥದಿಂದ ಬಿಚ್ಚಿ ಮುಂದೆ ಬಂದ ಅವುಗಳಿಗೆ ಇಷ್ಟವಾದಷ್ಟು ನೀರನ್ನು ಕುಡಿಸಿದನು.
ತತೋ ಲಬ್ಧೋದಕಾನ್ ಸ್ನಾತಾನ್ ಜಗ್ಧಾನ್ನಾನ್ ವಿಗತಕ್ಲಮಾನ್ |
ಯೋಜಯಾಮಾಸ ಸಂಹೃಷ್ಟಃ ಪುನರೇವ ರಥೋತ್ತಮೇ ॥ 20 ॥
ಅನಂತರ ನೀರನ್ನು ಕುಡಿದು, ಸ್ನಾನವನ್ನು ಮಾಡಿ, ತಮ್ಮ ಆಹಾರವನ್ನು ಸ್ವೀಕರಿಸಿ, ಶ್ರಮವನ್ನು ಕಳೆದುಕೊಂಡ ಅಶ್ವಗಳನ್ನು ಪುನಃ ಶ್ರೇಷ್ಠವಾದ ರಥದಲ್ಲಿ ಹೂಡಿದನು.
ಸ ತಂ ರಥವರಂ ಶೌರಿಃ ಸರ್ವಶಸ್ತ್ರಭೃತಾಂ ವರಃ |
ಸಮಾಸ್ಥಾಯ ಮಹಾತೇಜಾಃ ಸಾರ್ಜುನಃ ಪ್ರಯಯೌ ದ್ರುತಮ್ ॥21॥
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಮಹಾತೇಜಸ್ವಿಯಾದ ಶೌರಿಯಾದ ಕೃಷ್ಣನು ಆ ಶ್ರೇಷ್ಠ ರಥದಲ್ಲಿ ಸಾರಥಿಯಾಗಿ ಕುಳಿತು ಅರ್ಜುನನ ಜೊತೆಯಲ್ಲಿ ಶೀಘ್ರವಾಗಿ ಹೊರಟನು.
ಯೋಜಯಿತ್ವಾ ಹಯಾಂಸ್ತತ್ರ ವಿಧಿದೃಷ್ಟೇನ ಕರ್ಮಣಾ |
ರಣೇ ಚಚಾರ ಗೋವಿಂದಃ ತೃಣೀಕೃತ್ಯ ಮಹಾರಥಾನ್ ॥ 22 ॥
ಶಾಸ್ತ್ರೋಕ್ತ ರೀತಿಯಲ್ಲಿ ಅಶ್ವಗಳನ್ನು ರಥಕ್ಕೆ ಹೂಡಿ, ಗೋವಿಂದನು ಎಲ್ಲ ಮಹಾರಥರನ್ನು ತೃಣಪ್ರಾಯರನ್ನಾಗಿ ಮಾಡಿ

ರಣರಂಗದಲ್ಲಿ ಸಂಚರಿಸಿದನು.
ರಥಂ ರಥವರಸ್ಯಾಜೌ ಯುಕ್ತಂ ಲಬ್ಧೋದಕೈರ್ಹಯೈಃ |
ದೃಷ್ಟ್ವಾ ಕುರುಬಲಶ್ರೇಷ್ಠಾಃ ಪುನರ್ವಿಮನಸೋಽಭವನ್ ॥ 23 ॥
ನೀರನ್ನು ಕುಡಿದು ಸ್ನಾನ ಮಾಡಿದ ಅಶ್ವಗಳು ಪುನಃ ರಥದಲ್ಲಿ ಹೂಡಲ್ಪಟ್ಟುದನ್ನು ನೋಡಿ ಕುರುಸೈನ್ಯದ ಶ್ರೇಷ್ಠರಾದ ಯೋಧರು ಪುನಃ ಉತ್ಸಾಹಹೀನರಾದರು.
ವಿನಿಃಶ್ವಸಂತಸ್ತೇ ರಾಜನ್ ಭಗ್ನದಂಷ್ಟ್ರಾ ಇವೋರಗಾಃ |
ಧಿಗಹೋಽಧಿಗತಃ ಪಾರ್ಥಃ ಕೃಷ್ಣಶ್ಚೇತ್ಯಬ್ರುವನ್ ಪೃಥಕ್ ॥ 24 ॥
ತತ್ ಸೈನ್ಯಂ ಸರ್ವತೋ ದೃಷ್ಟ್ವಾ ಲೋಮಹರ್ಷಣಮದ್ಭುತಮ್ |
ತ್ವರಧ್ವಮಿತಿ ಚಾಕ್ರಂದನ್ ನೈತದಸ್ತೀತಿ ಚಾಬ್ರುವನ್ ॥ 25 ॥
ಎಲೈ ರಾಜನೇ, ಹಲ್ಲು ಮುರಿದ ಸರ್ಪಗಳಂತೆ ಅವರು ನಿಟ್ಟುಸಿರನ್ನು ಬಿಡುತ್ತಾ, ನಮಗೆ ಧಿಕ್ಕಾರವಿರಲಿ. ಕೃಷ್ಣಾರ್ಜುನರು ಪುನಃ ಮುಂದೆ ಬರುತ್ತಿದ್ದಾರೆ ಎಂದು ಒಬ್ಬೊಬ್ಬರೂ ಬೇರೆ ಬೇರೆ ಆಯುಧ ಹಿಡಿದರು. ಆ ಸೈನ್ಯವು ರೋಮಾಂಚಕಾರಿಯೂ, ಅದ್ಭುತವೂ ಆದ ಆ ದೃಶ್ಯವನ್ನು ನೋಡಿ ಕೃಷ್ಣಾರ್ಜುನರ ಮೇಲೆ ಶೀಘ್ರವಾಗಿ ಎರಗಿ. ಇದು ಸಾಧ್ಯವಿಲ್ಲ (ನಡೆಯಬಾರದ ಘಟನೆ) ಎಂದು ಹೇಳಿತು.
ಸೈನಿಕಾಃ
ಸರ್ವಕ್ಷತ್ರಸ್ಯ ಮಿಷತೋ ರಥೇನೈಕೇನ ದಂಸಿತೌ |
ಬಾಲಃ ಕ್ರೀಡನಕೇನೇವ ಕದರ್ಥೀಕೃತ್ಯ ನೋ ಬಲಮ್ ॥ 26 ॥
ಕ್ರೋಶತಾಂ ಯತಮಾನಾನಾಮಸಂಸಕ್ತೌ ಪರಂತಪೌ |
ದರ್ಶಯಿತ್ವಾಽತ್ಮನೋ ವೀರ್ಯಂ ಪ್ರಯಾತೌ ಸರ್ವರಾಜಸು ॥ 27 ॥
ಯಥಾ ದೈವಾಸುರೇ ಯುದ್ಧೇ ತೃಣೀಕೃತ್ಯ ಚ ದಾನವಾನ್ |
ಇಂದ್ರಾವಿಷ್ಣೂ ಪುರಾ ರಾಜನ್ ಜಂಭಸ್ಯ ವಧಕಾಂಕ್ಷಿಣೌ ॥ 28 ॥
ಸೈನಿಕರು ಎಲೈ ರಾಜನೇ, ಯುದ್ಧಸನ್ನದ್ಧರಾದ ಅವರಿಬ್ಬರೂ ಎಲ್ಲ ಕ್ಷತ್ರಿಯರು ನೋಡುತಿತರುವಂತೆಯೇ ಬಾಲಕನು ಆಟದ ಸಾಮಾನುಗಳ ಜೊತೆಯಲ್ಲಿ ಆಡುವಂತೆ ನಮ್ಮ ಸೈನ್ಯವನ್ನು ತೃಣೀಕರಿಸಿ, ನಾವು ಕಿರುಚಿ ಪ್ರಯತ್ನ ಪಡುತ್ತಿದ್ದರೂ ಪರಂತಪರಾದ ಅವರು ಪರಸ್ಪರವಾಗಿ ದೂರದಲ್ಲಿಯೇ ನಿಂತು, ತಮ್ಮ ಪರಾಕ್ರಮವನ್ನು ಎಲ್ಲ ರಾಜರುಗಳಿಗೂ ತೋರಿಸಿ ಹೊರಟಿದ್ದಾರೆ. ಹಿಂದೆ ದೇವಾಸುರ ಯುದ್ಧದಲ್ಲಿ ಇಂದ್ರ- ವಿಷ್ಣು ಇವರಿಬ್ಬರೂ ದಾನವರನ್ನು ತೃಣೀಕರಿಸಿ ಜಂಭಾಸುರನ ವಧೆಗಾಗಿ ಹೊರಟಂತೆ (ಹೊರಟಿದ್ದಾರೆ).
ತೌ ಪ್ರಯಾತೌ ಪುನರ್ದೃಷ್ಟ್ವಾ ತವಾಽನ್ಯೇ ಸೈನಿಕಾಬ್ರುವನ್ |
ತ್ವರಧ್ವಂ ಕುರವಃ ಸರ್ವೇ ವಧೇ ಕೃಷ್ಣಕಿರೀಟಿನೋಃ ॥ 29 ॥
ಅವರಿಬ್ಬರೂ ಅಲ್ಲಿಂದ ಹೊರಟುದನ್ನು ನೋಡಿ ಉಳಿದ ಸೈನಿಕರು ಕೃಷ್ಣಾರ್ಜುನರ ವಧೆಯನ್ನು ಮಾಡಲು ಎಲ್ಲ ಕೌರವರೂ ತ್ವರೆ ಮಾಡಿ ಎಂದು ಮಾತನಾಡಿದರು.
ರಥಂ ಯುಂಕತ್ವ ತು ದಾಶಾರ್ಹೋ ಮಿಷತಾಂ ಸರ್ವಧನ್ವಿನಾಮ್ |
ಜಯದ್ರಥಾಯ ಯಾತ್ಯೇಷ ಕದರ್ಥೀಕೃತ್ಯ ನೋ ರಣೇ ॥ 30 ॥
ದಾಶಾರ್ಹನಾದ ಕೃಷ್ಣನು ಸರ್ವಧನುರ್ಧಾರಿಗಳೂ ನೋಡುತ್ತಿರುವಂತೆಯೇ ರಥವನ್ನು ಹೂಡಿ, ರಣರಂಗದಲ್ಲಿ ನಮ್ಮನ್ನು ತೃಣೀಕರಿಸಿ ಜಯದ್ರಥನ ಕಡೆಗೆ ಸಾಗುತ್ತಿದ್ದಾನೆ ಎಂದು ಮಾತನಾಡಿಕೊಂಡರು.
ಸಂಜಯಃ
ತತ್ರ ಕೇಚಿನ್ಮಹಾರಾಜ ಸಮಭಾಷಂತ ಭೂಮಿಪಾಃ |
ಅದೃಷ್ಟಪೂರ್ವಂ ಸಂಗ್ರಾಮೇ ತದ್ ದೃಷ್ಟ್ವಾ ಮಹದದ್ಭುತಮ್ ॥ 31 ॥
ಸರ್ವಸೈನ್ಯಾನಿ ರಾಜಾ ಚ ಧೃತರಾಷ್ಟ್ರೋಽತ್ಯಯಂ ಗತಃ |
ದುರ್ಯೋಧನಾಪರಾಧೇನ ಕ್ಷತ್ರಂ ಕೃತ್ಸ್ನಂ ಚ ಮೇದಿನೀ ॥ 32 ॥
ವಿಲಯಂ ಸಮನುಪ್ರಾಪ್ತಾ ತಚ್ಚ ರಾಜಾ ನ ಬುದ್ಧ್ಯತೇ |
ಇತ್ಯೇವಂ ಕ್ಷತ್ರಿಯಾಸ್ತತ್ರ ಬ್ರುವಂತ್ಯನ್ಯೇ ಚ ಭಾರತ ॥ 33 ॥
ಸಂಜಯ ಎಲೈ ಮಹಾರಾಜನೇ, ಎಂದೂ ನೋಡದ ಆ ಅದ್ಭುತವಾದ ಘಟನೆಯನ್ನು ನೋಡಿ ರಣರಂಗದಲ್ಲಿ ರಾಜರು ಪರಸ್ಪರವಾಗಿ ಮಾತನಾಡುತ್ತಿದ್ದರು. ಸರ್ವಸೈನ್ಯಗಳೂ ರಾಜನಾದ ದುರ್ಯೋಧನನೂ, ಧೃತರಾಷ್ಟ್ರನೂ ಸಹ ವಿನಾಶವನ್ನು ಹೊಂದಿದ್ದಾರೆ. ದುರ್ಯೋಧನನ ಅಪರಾಧದಿಂದ ಎಲ್ಲ ಕ್ಷತ್ರಿಯರು ಮತ್ತು ಭೂಮಿಯು ವಿನಾಶವನ್ನು ಹೊಂದಿವೆ. ಅದನ್ನು ರಾಜನು (ಧೃತರಾಷ್ಟ್ರನು) ತಿಳಿಯುತ್ತಿಲ್ಲ. ಎಲೈ ಭಾರತನೇ, ಹೀಗೆ ಅಲ್ಲಿ ಬೇರೆ ಕ್ಷತ್ರಿಯರು ಮಾತನಾಡಿಕೊಂಡರು.
ಸಿಂಧುರಾಜಸ್ಯ ಯತ್ ಕೃತ್ಯಂ ಗತಸ್ಯ ಯಮಸಾದನಮ್ |
ತತ್ ಕರೋತು ವೃಥಾದೃಷ್ಟಿರ್ಧಾರ್ತರಾಷ್ಟ್ರೋಽನುಪಾಯವಿತ್ ॥ 34 ॥
ಬೇರೆ ಉಪಾಯವನ್ನು ಕಾಣದ ಧೃತರಾಷ್ಟ್ರನು ಸಿಂಧುರಾಜನು ಮೃತನಾದ ಮೇಲೆ ಮಾಡಬೇಕಾದ ಕಾರ್ಯವನ್ನು ಮಾಡಲು ಸಿದ್ಧನಾಗಲಿ (ಎಂದೂ ಮಾತನಾಡಿಕೊಂಡರು).
ಸಂಜಯಃ
ತತಃ ಶೀಘ್ರತರಂ ಪ್ರಾಯಾತ್ ಸೈಂಧವಂ ಪ್ರತಿ ಪಾಂಡವಃ |
ವಿವರ್ತಮಾನೇ ತಿಗ್ಮಾಂಶೌ ಹೃಷ್ಟೈಃ ಪೀತೋದಕೈರ್ಹಯೈಃ ॥ 35 ॥

ಸಂಜಯ ಆಗ ಸೂರ್ಯನು ಪಶ್ಚಿಮದ ಕಡೆಗೆ ಸಾಗುತ್ತಿರಲು ನೀರನ್ನು ಕುಡಿದು ಸಂತೋಷಗೊಂಡ ಅಶ್ವಗಳನ್ನು ಹೂಡಿದ ರಥದಲ್ಲಿ ಅರ್ಜುನನು ಸೈಂಧವನ ಕಡೆಗೆ ಶೀಘ್ರವಾಗಿ ಹೋದನು.
ತಂ ಪ್ರಯಾಂತಂ ಮಹಾಬಾಹುಂ ಸರ್ವಶಸ್ತ್ರಭೃತಾಂ ವರಮ್ |
ನಾಶಕ್ನುವನ್ ಧಾರಯಿತುಂ ಯೋಧಾಃ ಕ್ರುದ್ಧಮಿವಾಂತಕಮ್ ॥ 36 ॥
ಕೋಪಗೊಂಡ ಯಮನಂತೆ ಹೋಗುತ್ತಿದ್ದ ಮಹಾಬಾಹುವೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ ಆದ ಅವನನ್ನು ಹಿಡಿಯಲು ಯಾವ ಯೋಧರಿಗೂ ಸಾಧ್ಯವಾಗಲಿಲ್ಲ.
ವಿದ್ರಾವ್ಯ ತು ತತಃ ಸೈನ್ಯಂ ಪಾಂಡವಃ ಶ್ವೇತವಾಹನಃ |
ಯಥಾ ಮೃಗಗಣಾನ್ ಸಿಂಹಃ ಸೈಂಧವಾರ್ಥೇ ವ್ಯಲೋಲಯತ್ ॥37॥
ಸಿಂಹವು ಜಿಂಕೆಗಳ ಸಮೂಹವನ್ನು ಓಡಿಸುವಂತೆ ಶ್ವೇತವಾಹನನಾದ ಅರ್ಜುನನು ಸೈಂಧವನನ್ನು ತಲುಪುವ ಸಲುವಾಗಿ ಆ ಸೈನ್ಯವನ್ನು ಕಲಕಾಡಿ ಓಡಿಸಿದನು.
ಗಾಹಮಾನೋ ಹ್ಯನೀಕಾನಿ ತೂರ್ಣಮಶ್ವಾನಚೋದಯತ್ |
ಬಲಾಕವರ್ಣಂ ದಾಶಾರ್ಹಃ ಪಾಂಚಜನ್ಯಂ ವ್ಯನಾದಯತ್ ॥ 38 ॥
ಕೌರವರ ಸೈನ್ಯಗಳನ್ನು ಪ್ರವೇಶಿಸಿ ದಾಟುತ್ತಾ ಕೃಷ್ಣನು ಶೀಘ್ರವಾಗಿ ಅಶ್ವಗಳನ್ನು ನಡೆಸಿದನು. ಮತ್ತು ಬಲಾಕ ಪಕ್ಷಿಯಂತಿದ್ದ ಶ್ವೇತವರ್ಣದ ಪಾಂಚಜನ್ಯ ಶಂಖವನ್ನು ಊದಿದನು.
ಕೌಂತೇಯೇನಾಗ್ರತಃ ಸೃಷ್ಟಾ ನ್ಯಪತನ್ ಪೃಷ್ಠತಃ ಶರಾಃ |
ತೂರ್ಣಾತ್ ತೂರ್ಣತರಂ ಹ್ಯಶ್ವಾಃ ತೇಽವಹನ್ ವಾತರಂಹಸಃ ॥39॥
ಅರ್ಜುನನು ಮೊದಲು ಪ್ರಯೋಗಿಸಿದ ಬಾಣಗಳು ಅವನ ರಥದ ಹಿಂದೆ ಬಿದ್ದವು. ವಾಯುವೇಗವುಳ್ಳ ಆ ಅಶ್ವಗಳು ಅತ್ಯಂತ ಶೀಘ್ರವಾಗಿ ರಥವನ್ನು ತೆಗೆದುಕೊಂಡು ಹೋದವು.
ವಾತೋದ್ಧೂತಪತಾಕಾಂತಂ ರಥಂ ಜಲದನಿಸ್ವನಮ್ |
ಘೋರಂ ಕಪಿಧ್ವಜಂ ದೃಷ್ಟ್ವಾ ವಿಷಣ್ಣಾ ಬಹವೋಽಭವನ್ ॥ 40 ॥
ಗಾಳಿಗೆ ಅಲುಗಾಡುವ ಪತಾಕೆಗಳನ್ನು ಹೊಂದಿದ, ಮೇಘ ಘೋಷವುಳ್ಳ, ಕಪಿಧ್ವಜದಿಂದ ಕೂಡಿದ, ಘೋರವಾದ ರಥವನ್ನು ನೋಡಿ ಅನೇಕರು ವಿಷಾದವನ್ನು ಹೊಂದಿದರು.
ದಿವಾಕರೇಽಥ ರಜಸಾ ಸರ್ವತಃ ಸಂವೃತೇ ಭೃಶಮ್ |
ಶರಾರ್ತಾಶ್ಚ ರಣೇ ಯೋಧಾ ನ ಕೃಷ್ಣೌ ಶೇಕುರೀಕ್ಷಿತುಮ್ ॥ 41 ॥
ಎಲ್ಲ ಕಡೆಗಳಲ್ಲಿಯೂ ಎದ್ದ ಧೂಳಿನಿಂದ ಸೂರ್ಯನು ಮುಚ್ಚಲ್ಪಡುತ್ತಿರಲು ಅರ್ಜುನನ ಬಾಣಗಳ ಪ್ರಹಾರಕ್ಕೆ ಒಲಗಾದ ಯೋಧರು ರಣರಂಗದಲ್ಲಿ ಕೃಷ್ಣಾರ್ಜುನರನ್ನು ನೋಡಲೂ ಸಾಧ್ಯವಾಗಲಿಲ್ಲ.
ತತೋ ನೃಪತಯಃ ಕ್ರುದ್ಧಾಃ ಪರಿವವ್ರುರ್ಧನಂಜಯಮ್ |
ಕ್ಷತ್ರಿಯಾ ಬಹವಶ್ಚಾನ್ಯೇ ಜಯದ್ರಥವಧೈಷಿಣಮ್ ॥ 42 ॥
ಆಗ ಕೌರವಸೈನ್ಯದ ರಾಜರು ಕೋಪಗೊಂಡು, ಜಯದ್ರಥನ ವಧೆಯನ್ನು ಬಯಸುತ್ತಿದ್ದ ಪುರುಷಶ್ರೇಷ್ಠನಾದ ಅರ್ಜುನನನ್ನು ಸುತ್ತುವರಿದರು.
ಬಲೇಷು ಮ್ರಿಯಮಾಣೇಷು ವೀಕ್ಷ ೆಯ ತಂ ಪುರುಷರ್ಷಭಮ್ |
ದುರ್ಯೋಧನೋಽಭ್ಯಯಾತ್ ಪಾರ್ಥಂ ತ್ವರಮಾಣೋ ಸಹಾನುಗಃ ॥
ತನ್ನ ಸೈನ್ಯಗಳು ಮೃತವಾಗುತ್ತಿರಲು ಅದನ್ನು ನೋಡಿದ ದುರ್ಯೋಧನನು ತನ್ನ ತಮ್ಮನಾದ ದುಶ್ಶಾಸನನ ಜೊತೆಯಲ್ಲಿ ತ್ವರೆ ಮಾಡುತ್ತಾ, ಪುರುಷಶ್ರೇಷ್ಠನಾದ ಅರ್ಜುನನ ಕಡೆಗೆ ಧಾವಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆಂಟನೆಯ ಅಧ್ಯಾಯ
ಜಯದ್ರಥನ ಕಡೆಗೆ ಸಾಗುವ ಅರ್ಜುನನಿಗೆ ದುರ್ಯೋಧನನಿಂದ ತಡೆ.
ಸಂಜಯಃ
ಸ್ರಂಸಂತ ಇವ ರಾಜಾನಃ ತಾವಕಾನಾಂ ಭಯಾನ್ನ ೃಪ |
ತೌ ದೃಷ್ಟ್ವಾ ಸಮತಿಕ್ರಾಂತೌ ವಾಸುದೇವಧನಂಜಯೌ ॥ 1 ॥
ಸಂಜಯ ಕೃಷ್ಣಾರ್ಜುನರು ತಮ್ಮನ್ನು ದಾಟಿ ಹೋದುದನ್ನು ನೋಡಿ ಎಲೈ ರಾಜನೇ, ನಿನ್ನ ಸೈನ್ಯದ ರಾಜರು ಭಯದಿಂದ ಕುಸಿದು ಹೋದರು.
ಸರ್ವೇ ತು ಪ್ರತಿಸಂರಬ್ಧಾ ಹ್ರೀಮಂತಃ ಸತ್ತ್ವಚೋದಿತಾಃ |
ಸ್ಥಿರೀಭೂತಾ ಮಹಾತ್ಮಾನಃ ಪ್ರತ್ಯಗಚ್ಛನ್ ಧನಂಜಯಮ್ ॥ 2 ॥
ನಾಚಿಕೆಯುಳ್ಳವರೂ, ಹಿಂದೆ ಧೈರ್ಯಶಾಲಿಗಳಾಗಿದ್ದವರೂ ಆದ ಮಹಾತ್ಮರಾದ ಅವರು ಪುನಃ ಧೈರ್ಯವನ್ನು ತಂದುಕೊಂಡು ಅರ್ಜುನನ ಕಡೆಗೆ ಸಾಗಿದರು.

ಯೇ ಗತಾಃ ಪಾಂಡವಂ ಯುದ್ಧೇ ಕ್ರೋಧಾಮರ್ಷಸಮನ್ವಿತಾಃ |
ತೇಽದ್ಯಾಪಿ ನ ನಿವರ್ತಂತೇ ಸಿಂಧವಃ ಸಾಗರಾದಿವ ॥ 3 ॥
ಯಾರು ಕ್ರೋಧಾಮರ್ಷ ಸಹಿತರಾಗಿ ಅರ್ಜುನನ ಮೇಲೆ ಯುದ್ಧವನ್ನು ಮಾಡಲು ಹೋದರೋ ಅವರು ಸಾಗರವನ್ನು ಸೇರಿದ ನದಿಗಳಂತೆ ಇನ್ನೂ ಹಿಂದಕ್ಕೆ ಬರಲಿಲ್ಲ.
ಅಸಂತಸ್ತು ನಿವರ್ತಂತೇ ವೇದೇಭ್ಯ ಇವ ನಾಸ್ತಿಕಾಃ |
ನರಕಂ ಭಜಮಾನಾಸ್ತೇ ಪ್ರತ್ಯಪದ್ಯಂತ ಕಿಲ್ಬಿಷಮ್ ॥ 4 ॥
ಅಸಜ್ಜನರಾದ ಕ್ಷತ್ರಿಯರು ಮಾತ್ರ ವೇದಗಳಿಂದ ನಾಸ್ತಿಕರು ಹಿಂದೆ ಬಂದಂತೆ ಅರ್ಜುನನಿಂದ ಹಿಂದೆ ಬಂದು ಪಾಪವನ್ನು ಸಂಪಾದಿಸಿ ನರಕಭಾಜನರಾದರು.
ತಾವತೀತ್ಯ ರಥಾನೀಕಂ ವಿಮುಕ್ತೌ ಪುರುಷರ್ಷಭೌ |
ದದೃಶಾತೇ ಯಥಾ ರಾಹೋರಾಸ್ಯಾನ್ಮುಕ್ತೌ ಪ್ರಭಾಕರೌ ॥ 5 ॥
ರಥಸಮೂಹಗಳನ್ನು ದಾಟಿ ಅವುಗಳಿಂದ ಬಿಡುಗಡೆ ಹೊಂದಿದ ಪುರುಷಶ್ರೇಷ್ಠರಾದ ಆ ಕೃಷ್ಣಾರ್ಜುನರು ರಾಹುವಿನ ವದನದಿಂದ ಮುಕ್ತರಾದ ಇಬ್ಬರು ಸೂರ್ಯರಂತೆ ಕಂಡುಬಂದರು.
ಮತ್ಸ್ಯಾ ಇವ ಮಹಾಜಾಲಂ ವಿದಾರ್ಯ ವಿಗತಜ್ವರೌ |
ತಥಾ ಕೃಷ್ಣಾವದೃಶ್ಯೇತಾಂ ಸೇನಾಜಾಲಂ ವಿದಾರ್ಯ ತತ್ ॥ 6 ॥
ದೊಡ್ಡ ಬಲೆಯನ್ನು ಹರಿದು ಹೊರಗೆ ಬಂದು ನಿರಾತಂಕಗೊಂಡ ಮತ್ಸ್ಯಗಳಂತೆ ಕೃಷ್ಣಾರ್ಜುನರು ಆ ಸೇನಾಜಾಲವನ್ನು ಹರಿದು ಹೊರಗೆ ಬಂದುದು ಕಂಡುಬಂದಿತು.
ವಿಮುಕ್ತೌ ಶಸ್ತ್ರಸಂಬಾಧಾತ್ ದ್ರೋಣಾನೀಕಾತ್ತು ದುರ್ಭಿದಾತ್ |
ಅದೃಶ್ಯೇತಾಂ ಮಹಾತ್ಮಾನೌ ಕಾಲಸೂರ್ಯಾವಿವೋದಿತೌ ॥ 7 ॥
ರಥಸಮೂಹಗಳಿಂದಲೂ, ದುರ್ಭೇದ್ಯವಾದ ದ್ರೋಣರ ಸೇನೆಯಿಂದಲೂ ವಿಮುಕ್ತರಾದ ಆ ಇಬ್ಬರು ಮಹಾತ್ಮರು ಉದಯಿಸಿದ ಕಾಲಸೂರ್ಯರಂತೆ ಕಂಡು ಬಂದರು.
ಅಸ್ತ್ರಸಂಬಾಧನಿರ್ಮುಕ್ತೌ ವಿಮುಕ್ತೌ ಶಸ್ತ್ರಸಂಕಟಾತ್ |
ಅದೃಶ್ಯೇತಾಂ ಮಹಾತ್ಮಾನೌ ಶಸ್ತ್ರಸಂಬಾಧಕಾರಿಣೌ ॥ 8 ॥
ಅಸ್ತ್ರದ ಬಾಧೆಗಳಿಂದ ನಿರ್ಮುಕ್ತರಾಗಿ, ಶಸ್ತ್ರಸಂಕಟದಿಂದಲೂ ನಿರ್ಮುಕ್ತರಾದ ಆ ಮಹಾತ್ಮರು ಶತ್ರುಗಳ ಮೇಲೆ ಶಸ್ತ್ರಗಳಿಂದ ಬಾಧೆಯನ್ನುಂಟು ಮಾಡುವುದು ಕಂಡುಬಂದಿತು.
ವಿಮುಕ್ತೌ ಜ್ವಲನಸ್ಪರ್ಶಾತ್ ಝಷಾಸ್ಯಾನ್ಮಕರಾವಿವ |
ವ್ಯಕ್ಷೋಭಯೇತಾಂ ಸೇನಾಂ ತೌ ಸಮುದ್ರಂ ಮಕರಾವಿವ ॥ 9 ॥
ಮೊಸಳೆಯ ಬಾಯಿಂದ ತಪ್ಪಿಸಿಕೊಂಡ ಮೀನುಗಳಂತೆ ಅಗ್ನಿಸ್ಪರ್ಶರೂಪವಾದ ಶಸ್ತ್ರಗಳಿಂದ ವಿಮುಕ್ತರಾದ ಅವರು ಮಕರಗಳು ಸಮುದ್ರವನ್ನು ಕ್ಷೋಭೆಗೊಳಿಸುವಂತೆ ನಿನ್ನ ಸೈನ್ಯವನ್ನು ಕ್ಷೋಭೆಗೊಳಿಸಿದರು.
ತಾವಕಾಸ್ತವ ಪುತ್ರಾಶ್ಚ ದ್ರೋಣಾನೀಕಸ್ಥಯೋರ್ದ್ವಯೋಃ |
ನೇಮೌ ತರಿಷ್ಯತೋ ದ್ರೋಣಮಿತಿ ಚಕ್ರುಸ್ತದಾ ಮತಿಮ್ ॥ 10 ॥
ಅವರು ದ್ರೋಣರ ಸೈನ್ಯದಲ್ಲಿರುವವರೆಗೆ ನಿನ್ನ ಪುತ್ರರು ಮತ್ತು ರಾಜರು ಇವರು ದ್ರೋಣರ ಸೈನ್ಯವನ್ನು ದಾಟುವುದಿಲ್ಲ ಎಂದು ತಿಳಿದಿದ್ದರು.
ತೇ ತು ದೃಷ್ಟ್ವಾ ವ್ಯತಿಕ್ರಾಂತೌ ದ್ರೋಣಾನೀಕಂ ಮಹಾದ್ಯುತಿಮ್ |
ನಾಶಶಂಸುರ್ಮಹಾರಾಜ ಸಿಂಧುರಾಜಸ್ಯ ಜೀವಿತಮ್ ॥ 11 ॥
ಆದರೆ ಮಹಾಪ್ರತಾಪಶಾಲಿಯಾದ ದ್ರೋಣಸೈನ್ಯವನ್ನು ದಾಟಿದುದನ್ನು ನೋಡಿ ಎಲ್ಲೆ ಮಹಾರಾಜನೇ, ಸಿಂಧುರಾಜನ ಜೀವಿತದಲ್ಲಿ ಅವರು ಆಸೆಯನ್ನು ತೊರೆದರು.
ಆಶಾ ಬಲವತೀ ರಾಜನ್ ಪುತ್ರಾಣಾಮಭವತ್ ತವ |
ದ್ರೋಣಹಾರ್ದಿಕ್ಯಯೋಃ ಕೃಷ್ಣೌ ನ ಮೋಕ್ಷ್ಯೇತೇ ಇತಿ ಪ್ರಭೋ |
ತಾಮಾಶಾಂ ವಿಫಲಾಂ ಕೃತ್ವಾ ನಿಸ್ತೀರ್ಣೌ ತೌ ಪರಂತಪೌ ॥ 12 ॥
ಎಲ್ಲೆ ರಾಜನೇ, ಅವರು ದ್ರೋಣರ ಸೈನ್ಯದ ಮಧ್ಯದಲ್ಲಿದ್ದಾಗ ನಿನ್ನ ಪುತ್ರರಿಗೆ ಕೃಷ್ಣಾರ್ಜುನರು ದ್ರೋಣ ಮತ್ತು ಕೃತವರ್ಮರ ಸೈನ್ಯದಿಂದ ಬಿಡುಗಡೆ ಹೊಂದುವುದಿಲ್ಲ ಎಂಬ ಆಸೆಯು ಪ್ರಬಲವಾಗಿದ್ದಿತು. ಎಲ್ಲೆ ಪ್ರಭುವೇ, ಪರಂತಪರಾದ ಅವರು ಆ ಆಸೆಯನ್ನು ವ್ಯರ್ಥಗೊಳಿಸಿ ಆ ಸೈನ್ಯವನ್ನು ದಾಟಿದರು.
ದ್ರೋಣಾನೀಕಂ ಸುದುರ್ಧರ್ಷಂ ಭೋಜಾನೀಕಂ ಚ ದುಸ್ತರಮ್ |
ಅಥ ದೃಷ್ಟ್ವಾ ವ್ಯತಿಕ್ರಾಂತೌ ಜ್ವಲಿತಾವಿವ ಪಾವಕೌ ॥ 13 ॥
ನಿರಾಶಾಃ ಸಿಂಧುರಾಜಸ್ಯ ಜೀವಿತಂ ನಾಶಶಂಸಿರೇ ॥ 14 ॥
ಸೋಲಿಸಲು ಅಸಾಧ್ಯವಾದ ದ್ರೋಣರ ಸೈನ್ಯವನ್ನು ಮತ್ತು ದಾಟಲು ಅಸಾಧ್ಯವಾದ ಕೃತವರ್ಮನ ಸೈನ್ಯವನ್ನು ದಾಟಿ ಜ್ವಲಿಸುವ ಅಗ್ನಿಗಳಂತಿರುವ ಅವರನ್ನು ನೋಡಿ ನಿರಾಶೆಗೊಂಡ ಅವರು ಸೈಂಧವನ ಜೀವಿತದಲ್ಲಿ ಆಸೆಯನ್ನು ತೊರೆದರು.
ಮಿಥಶ್ಚ ಸಮಭಾಷೇತಾಮತೀತೌ ಭಯವರ್ಧನೌ |
ಜಯದ್ರಥವಧೇ ವಾಚಸ್ತಾಸ್ತಾಃ ಕೃಷ್ಣಧನಂಜಯೌ ॥ 15 ॥
ಆ ಸೈನ್ಯಗಳನ್ನು ದಾಟಿ ಶತ್ರುಗಳಿಗೆ ಭಯವನ್ನುಂಟು ಮಾಡಿದ ಕೃಷ್ಣಾರ್ಜುನರು ಜಯದ್ರಥನ ವಧೆಯನ್ನು ಕುರಿತು ಆ ಕಾಲಕ್ಕೆ

ಯೋಗ್ಯವಾದ ಮಾತುಗಳನ್ನು ಪರಸ್ಪರವಾಗಿ ಆಡಿದರು.
ಅಸೌ ಮಧ್ಯೇ ಕೃತಃ ಷಡ್ಭಿರ್ಧಾರ್ತರಾಷ್ಟ್ರೈರ್ಮಹಾರಥೈಃ |
ಚಕ್ಷುರ್ವಿಷಯಸಂಪ್ರಾಪ್ತೋ ನ ನೋ ಮೋಕ್ಷ್ಯತಿ ಸೈಂಧವಃ || 16 ||
ಧೃತರಾಷ್ಟ್ರ ಪುತ್ರರಾದ ಆರು ಮಹಾರಥರಿಂದ ಮಧ್ಯದಲ್ಲಿ ಸೇರಿಸಿಕೊಳ್ಳಲ್ಪಟ್ಟ ಈ ಸೈಂಧವನು ನಮ್ಮ ಕಣ್ಣಿಗೆ ಕಾಣಿಸುತ್ತಿದ್ದಾನೆ. ಅವನು ನಮ್ಮಿಂದ ಬಿಡುಗಡೆಯನ್ನು ಹೊಂದುವುದಿಲ್ಲ.
ಯದ್ಯಸ್ಯ ಸಮರೇ ಗೋಪ್ತಾ ಶಕ್ರೋ ದೇವೈಃ ಸಮಾಗತಃ |
ತಥಾಽಪ್ಯೇನಂ ಹನಿಷ್ಯಾವ ಇತಿ ಕೃಷ್ಣಾವಭಾಷತಾಮ್ || 17 ||
ಸಾಕ್ಷಾತ್ ಇಂದ್ರನೇ ದೇವತೆಗಳ ಜೊತೆಯಲ್ಲಿ ರಣರಂಗದಲ್ಲಿ ಅವನಿಗೆ ರಕ್ಷಕನಾಗಿ ಬಂದರೂ ನಾವಿಬ್ಬರೂ ಅವನನ್ನು ಕೊಲ್ಲುವೆವು ಎಂದು ಕೃಷ್ಣಾರ್ಜುನರು ಮಾತನಾಡಿಕೊಂಡರು.
ಇತಿ ಕೃಷ್ಣೌ ಮಹಾಬಾಹೂ ಮಿಥಃ ಕಥಯತಸ್ತದಾ |
ಸಿಂಧುರಾಜಮವೇಕ್ಷಂತೌ ತತ್ ಪುತ್ರಾಸ್ತವ ಶುಶ್ರುವುಃ || 18 ||
ಹೀಗೆ ಸೈಂಧವನನ್ನು ನೋಡುತ್ತಾ ಮಹಾಬಾಹುಗಳಾದ ಕೃಷ್ಣಾರ್ಜುನರು ಪರಸ್ಪರವಾಗಿ ಮಾತನಾಡಿಕೊಳ್ಳುವುದನ್ನು ನಿನ್ನ ಪುತ್ರರು ಕೇಳಿಸಿಕೊಂಡರು.
ಅತೀತ್ಯ ಮರುಧನ್ವೇಷು ತಪಾಂತೇ ತೃಷಿತೌ ಗಜೌ |
ಪೀತ್ವಾ ವಾರಿ ಸಮಾಶ್ವಸ್ತೌ ತಥೈವಾಸ್ತಾಮರಿಂದಮೌ || 19 ||
ಶತ್ರುತಾಪಕರಾದ ಕೃಷ್ಣಾರ್ಜುನರಾದರೋ ಬೇಸಿಗೆಯ ಕೊನೆಯಲ್ಲಿ ಬಾಯಾರಿ ಮರುಭೂಮಿಯನ್ನು ದಾಟಿ ಅನಂತರ ಜಲಪಾನವನ್ನು ಮಾಡಿದ ಗಜಗಳಂತೆ ಇದ್ದರು.
ವ್ಯಾಘ್ರಸಿಂಹಸಮಾಕೀರ್ಣಮತಿಕ್ರಮ್ಯೇವ ಪರ್ವತಮ್ |
ವಣಿಜಾವಿವ ದೃಶ್ಯೇತಾಂ ಹೀನಮೃತ್ಯೂ ಜರಾತಿಗೌ || 20 ||
ಜರಾಮೃತ್ಯುರಹಿತರಾದ ಅವರು ಹುಲಿ-ಸಿಂಹಗಳಿಂದ ತುಂಬಿದ ಪರ್ವತವನ್ನು ದಾಟಿದ ವಣಿಜ(ವ್ಯಾಪಾರಿ)ರಂತೆ ಕಂಡುಬಂದರು.
ತಥಾ ಹಿ ಮುಖವರ್ಣೋಽಯಮನಯೋರಿತಿ ಮೇನಿರೇ |
ತಾವಕಾ ದೃಶ್ಯ ಮುಕ್ತೌ ತೌ ವಿಕ್ರೋಶಂತಿ ಸ್ಮ ಸರ್ವತಃ ||21||
ನಿನ್ನ ಸೈನ್ಯದವರು ನಿನ್ನ ಸೈನ್ಯದಿಂದ ಮುಕ್ತರಾದ ಅವರನ್ನು ನೋಡಿ ಅವರ ಮುಖವರ್ಣವು ಆ ರೀತಿಯಿದೆ ಎಂದು ತಿಳಿದು ಗಟ್ಟಿಯಾಗಿ ಮಾತನಾಡಿದರು (ಕಿರುಚಿದರು).
ದ್ರೋಣಾದಾಶೀವಿಷಾಕಾರಾತ್ ಜ್ವಲಿತಾದಿವ ಪಾವಕಾತ್ |
ನಿರಾಶಾಃ ಸಿಂಧುರಾಜಸ್ಯ ಜೀವಿತಂ ನಾಶಶಂಸಿರೇ || 22 ||
ದೃಷ್ಟಿವಿಷವುಳ್ಳ ಸರ್ಪದಂತಿರುವ, ಉರಿಯುವ ಅಗ್ನಿಯಂತಿರುವ ದ್ರೋಣರನ್ನು ದಾಟಿ ಬಂದುದನ್ನು ನೋಡಿ, ಸಿಂಧುರಾಜನ ಜೀವಿತವನ್ನು ಬಯಸುವುದನ್ನು ತ್ಯಜಿಸಿದರು.
ಅನ್ಯೇಭ್ಯಃ ಪಾರ್ಥಿವೇಭ್ಯಶ್ಚ ಭಾಸ್ವಂತಾವಿವ ಭಾಸ್ಕರೌ |
ತೌ ಮುಕ್ತೌ ಸಾಗರಪ್ರಖ್ಯಾದ್ ದ್ರೋಣಾನೀಕಾದರಿಂದಮೌ |
ಅದೃಶ್ಯೇತಾಂ ಮುದಾ ಯುಕ್ತೌ ಸಮುತ್ತೀರ್ಯಾರ್ಣವಂ ಯಥಾ ||23||
ಪ್ರಕಾಶಿಸುವ ಎರಡು ಸೂರ್ಯರಂತೆ ಬೇರೆ ರಾಜರ ಸೈನ್ಯಗಳಿಂದಲೂ, ಸಾಗರವನ್ನು ಹೋಲುವ ದ್ರೋಣಸೈನ್ಯದಿಂದಲೂ ಹೊರಬಂದ, ಅರಿಂದಮರಾದ ಅವರು ಸಂತೋಷದಿಂದ ಕೂಡಿ ಸಮುದ್ರವನ್ನು ದಾಟಿದವರಂತೆ ಕಂಡುಬಂದರು.
ಶಸ್ತ್ರೌಘಾನ್ಮಹತೋ ಮುಕ್ತೌ ದ್ರೋಣಹಾರ್ದಿಕ್ಯರಕ್ಷಿತಾತ್ |
ರೋಚಮಾನಾವದೃಶ್ಯೇತಾಮ್ ಇಂದ್ರಾಗ್ನ್ಯೋಃ ಸದೃಶೌ ಗುಣೈಃ ||24||
ದ್ರೋಣ ಮತ್ತು ಕೃತವರ್ಮರಿಂದ ರಕ್ಷಿತವಾದ ಸೈನ್ಯದ ದೊಡ್ಡ ಶಸ್ತ್ರ ಸಮೂಹಗಳಿಂದ ಮುಕ್ತರಾಗಿ ಅವರು ತಮ್ಮ ಗುಣಗಳಿಂದ ಇಂದ್ರಾಗ್ನಿಗಳಿಗೆ ಸದೃಶರಾಗಿ ಪ್ರಕಾಶಿಸುತ್ತಿರುವುದು ಕಂಡುಬಂದಿತು.
ಉದ್ಭಿನ್ನರುಧಿರೌ ಕೃಷ್ಣೌ ಭಾರದ್ವಾಜಸ್ಯ ಸಾಯಕೈಃ |
ಶಿತೈಃ ಶರೈರ್ವ್ಯರೋಚೇತಾಂ ಕರ್ಣಿಕಾರೈರಿವಾಚಲೌ || 25 ||
ದ್ರೋಣರ ಹರಿತವಾದ ಬಾಣಗಳಿಂದ ರಕ್ತವನ್ನು ಸ್ರವಿಸುತ್ತಿದ್ದ ಕೃಷ್ಣಾರ್ಜುನರು ಕರ್ಣಿಕಾರ ವೃಕ್ಷದಿಂದ ಕೂಡಿದ ಪರ್ವತದಂತೆ ಶೋಭಿಸಿದರು.
ದ್ರೋಣಗ್ರಾಹಹ್ರದಾನ್ಮುಕ್ತೌ ಶಕ್ತ್ಯೃಷ್ಟಿ ವಿಷಕಂಟಕಾತ್ |
ಅಯೋಮುಸಲಸಂಬಾಧಾತ್ ಕ್ಷತ್ರಿಯಪ್ರವರಾಂಭಸಃ || 26 ||
ಜ್ಯಾಘೋಷತಳನಿರ್ಹ್ರಾದಾದ್ ಗದಾನಿಸ್ತ್ರಿಂಶವಿದ್ಯುತಃ |
ದ್ರೋಣಾಸ್ತ್ರಮೇಘಾನ್ನಿರ್ಮುಕ್ತೌ ಸೂರ್ಯೇಂದೂ ತಿಮಿರಾದಿವ || 27 ||
ದ್ರೋಣರೆಂಬ ಮೊಸಳೆಯಿಂದ ಕೂಡಿದ ಮಡುವಿನಿಂದಲೂ, ಶಕ್ತಿ-ಋಷ್ಟಿಗಳೆಂಬ ಕಂಟಕ ಸಹಿತ ವಿಷವೃಕ್ಷಗಳಿಂದಲೂ, ಕಬ್ಬಿಣದ ಒನಕೆಗಳ ಸಮೂಹದಿಂದಲೂ, ಕ್ಷತ್ರಿಯ ಶ್ರೇಷ್ಠರೆಂಬ ಪ್ರವಾಹದಿಂದಲೂ, ಹೆದೆಗಳ ಘೋಷವೆಂಬ ಸಿಡಿಲುಗಳಿಂದಲೂ, ಗದೆಗಳು-ಖಡ್ಗಗಳೆಂಬ ಮಿಂಚುಗಳಿಂದಲೂ, ದ್ರೋಣರ ಅಸ್ತ್ರಗಳೆಂಬ ಮೇಘದಿಂದಲೂ ನಿರ್ಮುಕ್ತರಾದ ಅವರು ಅಂಧಕಾರದಿಂದ ನಿರ್ಮುಕ್ತರಾದ ಸೂರ್ಯಚಂದ್ರರಂತೆ ಕಂಡುಬಂದರು.
ಬಾಹುಭ್ಯಾಮಿವ ಸಂತೀರ್ಣೌ ಸಿಂಧುಷಷ್ಠಾಃ ಸಮುದ್ರಗಾಃ |

ತಪಾಂತೇ ಸರಿತಃ ಪೂರ್ಣಾ ಮಹಾಗ್ರಾಹಸಮಾಕುಲಾಃ ॥ 28 ॥
ಬೇಸಿಗೆಯ ಅನಂತರದಲ್ಲಿ ಮಳೆಗಾಲದಲ್ಲಿ ದೊಡ್ಡ ಮೊಸಳೆಗಳಿಂದ ನಿಬಿಡವಾದ, ಪೂರ್ಣಪ್ರವಾಹದಿಂದ ಹರಿಯುವ ಸಿಂಧು ಮೊದಲಾದ ಸಮುದ್ರಗಾಮಿಗಳಾದ ಆರು ನದಿಗಳನ್ನು ಬಾಹುಗಳಿಂದಲೇ ದಾಟಿದವರಂತೆ ಕಂಡುಬಂದರು.
ಮಹಾಶ್ಯೈಲೋಚ್ಚಯಾಂ ಘೋರಾಂ ಲಂಘಯಿತ್ವಾ ಮಹಾನದೀಮ್ |
ನಿಸ್ತೀರ್ಣಾವಧ್ವಗೌ ಯದ್ವತ್ ತದ್ವತ್ ತೌ ತಾರಿತೌ ರಣೇ ॥ 29 ॥
ಮಹಾಶ್ಯೈಲ ಸಮೂಹಗಳಿಂದ ಕೂಡಿದ ಘೋರವಾದ ಮಹಾನದಿಯನ್ನು ದಾಟಿದ ದಾರಿಹೋಕರಂತೆ ಅವರು ಕೌರವ ಸೈನ್ಯವನ್ನು ದಾಟಿದರು.
ಇತಿ ಕೃಷ್ಣೌ ಮಹಾಭಾಗೌ ಯಶಸಾ ಲೋಕವಿಶ್ರುತೌ |
ಸರ್ವಭೂತಾನ್ಯಮನ್ಯಂತ ದ್ರೋಣಾಸ್ತ್ರಬಲವಿಸ್ಮಯಾತ್ ॥ 30 ॥
ದ್ರೋಣರ ಅಸ್ತ್ರಬಲವನ್ನು ತಿಳಿದ ಯೋಧರು ವಿಸ್ಮಯದಿಂದ, ಮಹಾಭಾಗರೂ, ತಮ್ಮ ಕೀರ್ತಿಯಿಂದ ಲೋಕವಿಶ್ರುತರೂ ಆದ ಕೃಷ್ಣಾರ್ಜುನರನ್ನು ನೋಡಿ ಹೀಗೆ ತಿಳಿದರು.
ಜಯದ್ರಥಂ ಸಮೀಪಸ್ಥಂ ಸಮೀಕ್ಷಂತೌ ಜಿಘಾಂಸಯಾ |
ರುರುಂ ನಿಪಾನೇ ಲಪ್ಸಂತೌ ವ್ಯಾಘ್ರುವತ್ ತಾವತಿಷ್ಠತಾಮ್ ॥ 31 ॥
ಜಯದ್ರಥನನ್ನು ಸಮೀಪದಿಂದ ನೋಡಿ, ಅವನನ್ನು ಕೊಲ್ಲಲು ಬಯಸಿ ರುರು (ಜಿಂಕೆ) ಮೃಗವನ್ನು ಜಲಪಾನದಲ್ಲಿ ಕೊಲ್ಲಲು ಬಯಸಿದ ಎರಡು ವ್ಯಾಘ್ರಗಳಂತೆ ಅವರು ನಿಂತರು.
ಯಥಾ ಹಿ ಮುಖವರ್ಣೋಽಯಮನಯೋರಿತಿ ಮೇನಿರೇ |
ತವ ಯೋಧಾ ಮಹಾರಾಜ ಹತಮಾಹುರ್ಜಯದ್ರಥಮ್ ॥ 32 ॥
ಅವರ ಮುಖದ ಕಾಂತಿಯನ್ನು ನೋಡಿದರೆ ಹಾಗೆ ತೋರುತ್ತದೆ ಎಂದು ತಿಳಿದರು. ಎಲೈ ಮಹಾರಾಜನೇ, ನಿನ್ನ ಯೋಧರು ಜಯದ್ರಥನು ವಿನಾಶವನ್ನು ಹೊಂದಿದನು ಎಂದೇ ಹೇಳಿದರು.
ಲೋಹಿತಾಕ್ಷೌ ಮಹಾಬಾಹೂ ಸಂಯತ್ತೌ ಕೃಷ್ಣಪಾಂಡವೌ |
ಸಿಂಧುರಾಜಮಭಿಪ್ರೇಕ್ಷ್ಯ ಹೃಷ್ಟೌ ನಿನದತುರ್ಮುಹುಃ ॥ 33 ॥
ಲೋಹಿತಾಕ್ಷರೂ, ಮಹಾಬಾಹುಗಳೂ, ಪ್ರಯತ್ನಶೀಲರೂ ಆದ ಕೃಷ್ಣ ಪಾಂಡವರು ಸೈಂಧವನನ್ನು ನೋಡಿ ಸಂತೋಷಗೊಂಡವರಾಗಿ ಪುನಃ ಪುನಃ ಸಿಂಹನಾದವನ್ನು ಮಾಡಿದರು.
ಶೌರೇರಭೀಶುಹಸ್ತಸ್ಯ ಪಾರ್ಥಸ್ಯ ಚ ಧನುಷ್ಮತಃ |
ತಯೋರಾಸೀತ್ ಪ್ರಭಾ ರಾಜನ್ ಸೂರ್ಯಪಾವಕಯೋರಿವ ॥ 34 ॥
ಚಾವಟಿಯನ್ನು ಹಿಡಿದ ಕೃಷ್ಣನ ಮತ್ತು ಧನುಸ್ಸನ್ನು ಹಿಡಿದ ಅರ್ಜುನನ ಕಾಂತಿಯು ಎಲೈ ರಾಜನೇ, ಸೂರ್ಯಾಗ್ನಿಗಳ ಕಾಂತಿಯಂತೆ ಇದ್ದಿತು.
ಹರ್ಷ ಏವಂ ತಯೋರಾಸೀದ್ ದ್ರೋಣಾನೀಕಾತ್ ಪ್ರಮುಕ್ತಯೋಃ |
ಸಮೀಪೇ ಸೈಂಧವಂ ದೃಷ್ಟ್ವಾ ಶ್ಯೇನಯೋರಾಮಿಷಂ ಯಥಾ ॥ 35 ॥
ದ್ರೋಣರ ಸೈನ್ಯವನ್ನು ದಾಟಿ ಮುಂದೆ ಬಂದ ಅವರಿಗೆ ಸೈಂಧವನನ್ನು ನೋಡಿ ಮಾಂಸವನ್ನು ನೋಡಿದ ಗಿಡುಗಗಳಿಗೆ ಉಂಟಾಗುವಂತೆ ಹರ್ಷ ಉಂಟಾಯಿತು.
ತೌ ತು ಸೈಂಧವಮಾಲೋಕ್ಯ ವರ್ತಮಾನಮಿವಾಂತಿಕೇ |
ಸಹಸಾ ಪೇತತುಃ ಕ್ರುದ್ಧೌ ಕ್ಷಿಪ್ರಂ ಶ್ಯೇನಾವಿವಾಮಿಷೇ ॥ 36 ॥
ಅವರು ಸಮೀಪದಲ್ಲಿಯೇ ಇರುವಂತೆ ತೋರುತ್ತಿದ್ದ ಸೈಂಧವನನ್ನು ನೋಡಿ ತಕ್ಷಣ ಕೋಪಗೊಂಡು ಗಿಡಗಗಳು ಮಾಂಸದ ತುಂಡಿನ ಮೇಲೆ ಎರಗಿದಂತೆ ಅವನ ಮೇಲೆ ಎರಗಿದರು.
ತೌ ತು ದೃಷ್ಟ್ವಾ ವ್ಯತಿಕ್ರಾಂತೌ ಹೃಷೀಕೇಶಧನಂಜಯೌ |
ಸಿಂಧುರಾಜಸ್ಯ ರಕ್ಷಾರ್ಥಂ ಪರಾಕ್ರಾಂತಃ ಸುತಸ್ತವ ॥ 37 ॥
ಕೃಷ್ಣಾರ್ಜುನರು ದ್ರೋಣರ ಸೈನ್ಯವನ್ನು ದಾಟಿದುದನ್ನು ನೋಡಿ ನಿನ್ನ ಪುತ್ರನಾದ ದುರ್ಯೋಧನನು ಪರಾಕ್ರಮಶಾಲಿಯಾದ ಸಿಂಧುರಾಜನ ರಕ್ಷಣೆಗಾಗಿ ಬಂದನು.
ದ್ರೋಣೇನ ಬದ್ಧಕವಚೋ ರಾಜಾ ದುರ್ಯೋಧನಸ್ತದಾ |
ಯಯಾವೇಕರಥೇನಾಜೌ ಹಯಸಂಸ್ಕಾರವಿತ್ ಪ್ರಭೋ ॥ 38 ॥
ದ್ರೋಣರಿಂದ ಕವಚಧಾರಣೆಯನ್ನು ಮಾಡಿಸಿಕೊಂಡ ರಾಜನಾದ, ಅಶ್ವಸಂಸ್ಕಾರಗಳನ್ನು ತಿಳಿದ ದುರ್ಯೋಧನನು ಎಲೈ ಪ್ರಭುವೇ, ಒಂದು ರಥದಿಂದ ಕೃಷ್ಣಾರ್ಜುನರ ಕಡೆಗೆ ಬಂದನು.
ಕೃಷ್ಣಪಾರ್ಥೌ ಮಹೇಷ್ವಾಸೌ ವ್ಯತಿಕ್ರಮ್ಯ ತು ತೇ ಸುತಃ |
ಅಗ್ರತಃ ಪುಂಡರೀಕಾಕ್ಷಂ ಪ್ರತೀಯಾಯ ನರಾಧಿಪಃ ॥ 39 ॥
ರಾಜನಾದ ನಿನ್ನ ಪುತ್ರನು ಮಹಾಧನುರ್ಧಾರಿಗಳಾದ ಕೃಷ್ಣಾರ್ಜುನರನ್ನು ದಾಟಿ ಕೃಷ್ಣನಿಗೆ ಎದುರಾಗಿ ಮುಂದೆ ನಿಂತನು.
ತತಃ ಸೈನ್ಯಾನಿ ಸರ್ವಾಣಿ ವಾದಿತ್ರಾಣಿ ಪ್ರಹೃಷ್ಟವತ್ |
ಅವಾದಯನ್ನತಿಕ್ರಾಂತೇ ಪುತ್ರೇ ತವ ಧನಂಜಯಮ್ ॥ 40 ॥
ಆಗ ನಿನ್ನ ಪುತ್ರನು ಧನಂಜಯನನ್ನು ದಾಟಿ ಹೋದಾಗ ನಿನ್ನ ಸೈನ್ಯವೆಲ್ಲವೂ ಸಂತೋಷದಿಂದ ಕೂಡಿದವರಂತೆ ವಾದ್ಯಗಳನ್ನು ಬಾರಿಸಿದವು.

ಸಿಂಹನಾದರವಾಶ್ಚಾಸನ್ ಶಂಖಶಬ್ದವಿಮಿಶ್ರಿತಾಃ |
ದೃಷ್ಟ್ವಾ ದುರ್ಯೋಧನಂ ತತ್ರ ಕೃಷ್ಣಯೋಃ ಪ್ರಮುಖೇ ಸ್ಥಿತಮ್ ॥41॥
ದುರ್ಯೋಧನನು ಕೃಷ್ಣಾರ್ಜುನರ ಎದುರಿಗೆ ನಿಂತಿರುವುದನ್ನು ನೋಡಿ ಆಗ ಶಂಖಘೋಷಗಳಿಂದ ಮಿಶ್ರಿತವಾದ ಸಿಂಹನಾದವು ಉಂಟಾದವು.
ಯೇ ಚ ತೇ ಸಿಂಧುರಾಜಸ್ಯ ಗೋಪ್ತಾರಃ ಪಾವಕೋಪಮಾಃ |
ತೇಽಪ್ಯಹೃಷ್ಯಂತ ಸಮರೇ ದೃಷ್ಟ್ವಾ ಪುತ್ರಂ ತವಾಭಿಭೋ ॥ 42 ॥
ಎಲೈ ಶತ್ರುಪರಾಭಾವಕನೇ, ಸಿಂಧುರಾಜನ ರಕ್ಷಕರಾದ ಅಗ್ನಿಸದೃಶರಾದ ರಾಜರೂ ಸಹ ರಣರಂಗದಲ್ಲಿ ಸಮೀಪದಲ್ಲಿ ದುರ್ಯೋಧನನನ್ನು ನೋಡಿ ಹರ್ಷಗೊಂಡರು.
ದೃಷ್ಟ್ವಾ ದುರ್ಯೋಧನಂ ಕೃಷ್ಣಃ ತ್ವತಿಕ್ರಾಂತಂ ಸಹಾನುಗಮ್ |
ಅಬ್ರವೀದರ್ಜುನಂ ರಾಜನ್ ಪ್ರಾಪ್ತಕಾಲಮಿದಂ ವಚಃ ॥ 43 ॥
ಕೃಷ್ಣನು ತನ್ನ ಅನುಯಾಯಿಗಳ ಜೊತೆಯಲ್ಲಿ ದುರ್ಯೋಧನನು ತಮ್ಮನ್ನು ದಾಟಿದುದನ್ನು ನೋಡಿ ಎಲೈ ರಾಜನೇ, ಆ ಕಾಲದಲ್ಲಿ ಅರ್ಜುನನನ್ನು ಕುರಿತು ಯೋಗ್ಯವಾದ ಈ ಮಾತುಗಳನ್ನು ಆಡಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಾಶೀತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂಬತ್ತನೆಯ ಅಧ್ಯಾಯ
ದುರ್ಯೋಧನನು ತಡೆಯುತ್ತಿರಲು ಕೃಷ್ಣನಿಂದ ಅರ್ಜುನನಿಗೆ
ಅವನ ದುಷ್ಕೃತ್ಯಗಳ ಜ್ಞಾಪನೆ. ಅರ್ಜುನನನ್ನು ಕುರಿತು
ದುರ್ಯೋಧನನ ವಿಯೋಚನ.
ಶ್ರೀಭಗವಾನ್
ಸುಯೋಧನಮತಿಕ್ರಾಂತಮೇನಂ ಪಶ್ಯ ಧನಂಜಯ |
ಆಪದ್ಗತಮಿಮಂ ಮನ್ಯೇ ನಾಸ್ತ್ಯಸ್ಯ ಸದೃಶೋ ರಥಃ ॥ 1 ॥
ಶ್ರೀಭಗವಾನ್ ಎಲೈ ಧನಂಜಯನೇ, ಸುಯೋಧನನು ನಮ್ಮನ್ನು ದಾಟಿ ಹೋದುದನ್ನು ನೋಡು. ಅವನು ಆಪತ್ತಿನಲ್ಲಿದ್ದಾನೆಂದು ನಾನು ಭಾವಿಸುತ್ತೇನೆ. ಇಲ್ಲಿ ಅವನಿಗೆ ಸಹಾಯ ಮಾಡುವ ಸದೃಶವಾದ ರಥವು ಯಾವುದೂ ಇಲ್ಲ.
ದೂರಪಾತೀ ಮಹೇಷ್ವಾಸಃ ಕೃತಾಸ್ತ್ರೋ ಯುದ್ಧದುರ್ಮದಃ |
ದೃಢಹಸ್ತಶ್ಚಿತ್ರಯೋಧೀ ಧಾರ್ತರಾಷ್ಟ್ರೋ ಮಹಾರಥಃ ॥ 2 ॥
ದುರ್ಯೋಧನನು ದೂರದವರೆಗೂ ಬಾಣಗಳನ್ನು ಪ್ರಯೋಗಿಸುವವನೂ, ಮಹಾಧನುರ್ಧಾರಿಯೂ, ಅಸ್ತ್ರಜ್ಞಾನವುಳ್ಳವನೂ, ಯುದ್ಧದುರ್ಮದನೂ, ದೃಢವಾದ ಹಸ್ತವುಳ್ಳವನೂ, ವಿಚಿತ್ರವಾಗಿ ಯುದ್ಧವನ್ನು ಮಾಡುವವನೂ ಆದ ಮಹಾರಥನಾಗಿದ್ದಾನೆ.
ಅತ್ಯಂತಸುಖಸಂವೃದ್ಧೋ ಮಾನಿತಶ್ಚ ಮಹಾರಥೈಃ |
ಕೃತೀ ಚ ಸತತಂ ಪಾರ್ಥ ನಿತ್ಯಂ ದ್ವೇಷ್ಟಿ ಚ ಪಾಂಡವಾನ್ ॥ 3 ॥
ಅವನು ಬಹಳ ಸುಖವಾಗಿ ಬೆಳೆದವನು. ಮಹಾರಥರಿಂದ ಸಮ್ಮಾನಿತನಾದವನು. ಎಲೈ ಅರ್ಜುನನೇ, ಸತತವಾಗಿ ಪ್ರಯತ್ನಶೀಲನಾದವನು ಮತ್ತು ಯಾವಾಗಲೂ ಪಾಂಡವರಾದ ನಿಮ್ಮನ್ನು ದ್ವೇಷಿಸುವವನು.
ತೇನ ಯುದ್ಧಮಹಂ ಮನ್ಯೇ ಪ್ರಾಪ್ತಕಾಲಮರಿಂದಮ |
ಅತ್ರ ವೋ ದ್ಯೂತಮಾಯತ್ತಂ ವಿಜಯಸ್ಯೇತರಸ್ಯ ವಾ ॥ 4 ॥
ಎಲೈ ಅರಿಂದಮನೇ, ಅವನ ಜೊತೆಯಲ್ಲಿ ಯುದ್ಧವು ಈಗ ಯೋಗ್ಯವಾದುದೆಂದು ನಾನು ಭಾವಿಸುತೆತೇನೆ. ಜಯವನ್ನು ಅಥವಾ ಪರಾಜಯವನ್ನು ಪಣವಾಗಿಟ್ಟು ನಡೆಯುವ ಈ ನಿಮ್ಮ ದ್ಯೂತವು ಇವನನ್ನು ಅವಲಂಬಿಸಿದೆ.
ಅತ್ರ ಕೋಪವಿಷಂ ಪಾರ್ಥ ವಿಮುಂಚ ಚಿರಸಂಭೃತಮ್ |
ಏಷ ಮೂಲಂ ಹ್ಯನರ್ಥಾನಾಂ ಪಾಂಡವಾನಾಂ ಮಹಾತ್ಮನಾಮ್ ॥5॥
ಎಲೈ ಅರ್ಜುನನೇ, ಬಹಳ ಕಾಲದಿಂದ ತಡೆಹಿಡಿದಿಟ್ಟುಕೊಂಡಿರುವ ನಿನ್ನ ಕೋಪದ ವಿಷವನ್ನು ಇವನ ಮೇಲೆ ಚೆಲ್ಲುವವನಾಗು. ಮಹಾತ್ಮರಾದ ಪಾಂಡವರಿಗೆ ಉಂಟಾದ ಎಲ್ಲ ಅನರ್ಥಗಳಿಗೂ ಇವನೇ ಮೂಲ ಕಾರಣನಾದವನು.
ಸೋಽಯಂ ಪ್ರಾಪ್ತಸ್ತವಾಕ್ಷೇಪೇ ಪಶ್ಯ ಸಾಫಲ್ಯಮಾತ್ಮನಃ |
ಕಥಂ ಹಿ ರಾಜಾ ರಾಜ್ಯಾರ್ಥೀ ತ್ವಯಾ ಗಚ್ಛೇತ ಸಂಯುಗಮ್ ॥ 6 ॥
ಅಂತಹ ಇವನು ನಿನ್ನ ಬಾಣದ ವ್ಯಾಪ್ತಿಯಲ್ಲಿ ಸಿಲುಕಿದ್ದಾನೆ. ನಿನ್ನ ವಿದ್ಯೆಯು ಸಫಲವಾಗುವುದು, ನೋಡು. ಇಲ್ಲದಿದ್ದರೆ ರಾಜ್ಯಾರ್ಥಿಯಾದ ರಾಜನಾದ ಅವನು ನಿನ್ನ ಜೊತೆಯಲ್ಲಿ ಹೇಗೆ ಯುದ್ಧಕ್ಕೆ ಸಿದ್ಧನಾಗುವನು?
ದಿಷ್ಟ್ಯಾ ತ್ವಿದಾನೀಂ ಸಂಪ್ರಾಪ್ತ ಏಷ ತೇ ಬಾಣಗೋಚರಮ್ |
ಯಥೈಷ ಜೀವಿತಂ ಜಹ್ಯಾತ್ ತಥಾ ಕುರು ಧನಂಜಯ ॥ 7 ॥
ದೇವರ ದಯದಿಂದ ಈ ದಿನ ನಿನ್ನ ಬಾಣದ ವ್ಯಾಪ್ತಿಯಲ್ಲಿ ಸಿಲುಕಿದ್ದಾನೆ. ಎಲೈ ಧನಂಜಯನೇ, ಅವನು ಪ್ರಾಣವನ್ನು ತೊರೆಯುವಂತೆ ಮಾಡು.

ಐಶ್ವರ್ಯಮದಸಮ್ಮೂಢೋ ನೈಷ ದುಃಖಮುಪೇಯಿವಾನ್ |
ನ ಚ ತೇ ಸಂಯುಗೇ ವೀರ್ಯಂ ಜಾನಾತಿ ಪುರುಷರ್ಷಭ ॥ 8 ॥
ಐಶ್ವರ್ಯಮದದಿಂದ ಮತ್ತನಾದ ಅವನು ಇದುವರೆಗೆ ದುಃಖವನ್ನು ಹೊಂದಲಿಲ್ಲ. ಎಲೈ ಪುರುಷಶ್ರೇಷ್ಠನೇ, ಅವನು ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ತಿಳಿದಿಲ್ಲ.
ತ್ವಾಂ ಹಿ ಲೋಕಾಸ್ತ್ರಯಃ ಪಾರ್ಥ ಸಸುರಾಸುರಮಾನವಾಃ |
ನೋತ್ಸಹಂತೇ ರಣೇ ಜೇತುಂ ಕಿಮುತೈಕಃ ಸುಯೋಧನಃ ॥ 9 ॥
ಎಲೈ ಅರ್ಜುನನೇ, ಸುರಾಸುರ-ಗಂಧರ್ವ ಸಹಿತರಾದ ಮೂರುಲೋಕಗಳೂ ನಿನ್ನನ್ನು ಯುದ್ಧದಲ್ಲಿ ಗೆಲ್ಲಲಾರವು. ಇನ್ನು ಒಬ್ಬ ಸುಯೋಧನನು ಹೇಗೆ ಗೆದ್ದಾನು?
ದಿಷ್ಟ್ಯಾ ಸ ಸಮರೇ ಪ್ರಾಪ್ತಃ ತವ ಪಾರ್ಥ ರಥಾಂತಿಕಮ್ |
ಜಹ್ಯೇನಂ ವೈ ಮಹಾಬಾಹೋ ಯಥಾ ವೃತ್ರಂ ಪುರಂದರಃ ॥ 10 ॥
ಎಲೈ ಅರ್ಜುನನೇ, ದೇವರ ದಯೆಯಿಂದ ಅವನು ಈ ದಿನ ರಣರಂಗದಲ್ಲಿ ನಿನ್ನ ರಥದ ಸಮೀಪಕ್ಕೆ ಬಂದಿದ್ದಾನೆ. ಎಲೈ ಮಹಾಬಾಹುವೇ, ಇಂದ್ರನು ವೃತ್ರನನ್ನು ಕೊಂದಂತೆ ಅವನನ್ನು ಕೊಲ್ಲುವವನಾಗು.
ಏಷ ಹ್ಯನರ್ಥೇ ಸತತಂ ಪರಾಕ್ರಾಂತಸ್ತವಾನಘ |
ನಿಕೃತ್ಯಾ ಧರ್ಮರಾಜಂ ಚ ದ್ಯೂತೇ ವಂಚಿತವಾನಯಮ್ ॥ 11 ॥
ಎಲೈ ಅನಘನೇ, ಇವನು ಸತತವಾಗಿ ನಿಮಗೆ ಅನರ್ಥವನ್ನುಂಟು ಮಾಡುವುದರಲ್ಲಿ ಪ್ರಯತ್ನಶೀಲನಾಗಿದ್ದಾನೆ. ದ್ಯೂತದಲ್ಲಿ ಧರ್ಮರಾಜನನ್ನು ಮೋಸದಿಂದ ವಂಚನೆ ಮಾಡಿದ್ದಾನೆ.
ಬಹೂನಿ ಸುನೃಶಂಸಾನಿ ಕೃತಾನ್ಯೇತೇನ ಮಾನದ |
ಯುಷ್ಮಾಸು ಪಾಪಮತಿನಾ ಅಪಾಪೇಷ್ವಪಿ ನಿತ್ಯದಾ ॥ 12 ॥
ಎಲೈ ಮಾನದನೇ, ನೀವು ನಿರಪರಾಧಿಗಳಾದರೂ ನಿಮ್ಮಲ್ಲಿ ದುಷ್ಟಬುದ್ಧಿಯಿಂದ ನಿಮಗೆ ಅನೇಕ ಕ್ರೂರಕರ್ಮಗಳನ್ನು ಮಾಡಿದ್ದಾನೆ.
ತಮನಾರ್ಯಂ ಸದಾ ಕ್ಷುದ್ರಂ ಪುರುಷಂ ಕಾಮಚಾರಿಣಮ್ |
ಆರ್ಯಾಂ ಯುದ್ಧೇ ಮತಿಂ ಕೃತ್ವಾ ಜಹಿ ಪಾರ್ಥಾವಿಚಾರಯನ್ ॥13॥
ನಿಕೃತ್ಯಾ ರಾಜ್ಯಹರಣಂ ವನವಾಸಂ ಚ ಪಾಂಡವ |
ಪರಿಕ್ಲೇಶಂ ಚ ಕೃಷ್ಣಾಯಾ ಹೃದಿ ಕೃತ್ವಾ ಪರಾಕ್ರಮಮ್ ॥ 14 ॥
ಎಲೈ ಪಾಂಡವನೇ, ಮೋಸದಿಂದ ರಾಜ್ಯಾಪಹಾರ, ವನವಾಸ, ದ್ರೌಪದಿಯ ಕ್ಲೇಶಗಳು ಎಲ್ಲವನ್ನೂ ಸ್ಮರಿಸಿ, ಪರಾಕ್ರಮವನ್ನು ಸ್ಮರಿಸಿ, ಯುದ್ಧದಲ್ಲಿ ಶ್ರೇಷ್ಠವಾದ ನಿರ್ಧಾರವನ್ನು ಹೊಂದಿದವನಾಗಿ, ಯಾವ ವಿಕಾರವನ್ನೂ ಹೊಂದದೆ, ಎಲೈ ಪಾರ್ಥನೇ, ಸದಾ ಅನಾಗರಿಕನೂ, ಕ್ಷುದ್ರನೂ, ಕ್ರೂರನೂ, ಕಾಮಚಾರಿಯೂ ಆದ ಅವನನ್ನು ಕೊಲ್ಲುವವನಾಗು.
ದಿಷ್ಟ್ಯೈಷ ತವ ಬಾಣಾನಾಂ ಗೋಚರೇ ಪರಿವರ್ತತೇ |
ವಿಘಾತೇ ತವ ಕಾರ್ಯಸ್ಯ ದಿಷ್ಟ್ಯಾ ಚ ಚರತೇಽಗ್ರತಃ ॥ 15 ॥
ನಿನ್ನ ಎಲ್ಲ ಉದ್ದೇಶವನ್ನು ವಿಘಟನೆ ಮಾಡಲು ಉದ್ದೇಶಿಸಿರುವ ಅವನು ದೇವರ ದಯದಿಂದ ನಿನ್ನ ಬಾಣದ ವ್ಯಾಪ್ತಿಗೆ ಸಿಲುಕಿ ನಿನ್ನ ಮುಂಭಾಗದಲ್ಲಿ ಸಂಚರಿಸುತ್ತಿದ್ದಾನೆ.
ದಿಷ್ಟ್ಯಾ ಜಾನಾತಿ ಸಂಗ್ರಾಮೇ ಯೋದ್ಧವ್ಯಂ ಹಿ ತ್ವಯಾ ಸಹ |
ದಿಷ್ಟ್ಯಾ ಹಿ ಸಫಲಾಃ ಪಾರ್ಥ ಸರ್ವೇ ಕಾಮಾಶ್ಚ ಕಾಮದ ॥ 16 ॥
ದೇವರ ದಯದಿಂದಲೇ ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಈಗ ಯೋಗ್ಯವೆಂದು ತಿಳಿದಿದ್ದಾನೆ. ಎಲೈ ಕಾಮದನೇ, ಪಾರ್ಥನೇ, ದೇವರ ದಯದಿಂದ ನಮ್ಮ ಆಸೆಯೆಲ್ಲವೂ ಈಗ ಸಫಲವಾಗಿವೆ.
ತಸ್ಮಾಜ್ಜಹಿ ರಣೇ ಪಾರ್ಥ ಧಾರ್ತರಾಷ್ಟ್ರಂ ಕುಲಾಧಮಮ್ |
ಯಥೇಂದ್ರೇಣ ಹತಃ ಪೂರ್ವಂ ಜಂಭೋ ದೈವಾಸುರೇ ಮೃಧೇ ॥17॥
ಎಲೈ ಪಾರ್ಥನೇ, ಆದ್ದರಿಂದ ಹಿಂದೆ ದೇವಾಸುರರ ಯುದ್ಧದಲ್ಲಿ ಇಂದ್ರನು ಜಂಭಾಸುರನನ್ನು ಕೊಂದಂತೆ ಕುಲಾಧಮನಾದ, ಧೃತರಾಷ್ಟ್ರಪುತ್ರನಾದ ಇವನನ್ನು ಕೊಲ್ಲುವವನಾಗು.
ಅಸ್ಮಿನ್ ಹತೇ ತ್ವಯಾ ಸೈನ್ಯಮನಾಥಂ ಭಿದ್ಯತಾಮಿದಮ್ |
ವೈರಸ್ಯ ದಿಷ್ಟ್ಯಾ ಸಹಜಂ ಮೂಲಂ ಛಿಂಧಿ ದುರಾತ್ಮನಃ ॥ 18 ॥
ಇವನು ನಿನ್ನಿಂದ ಹತನಾದರೆ ಅನಾಥವಾದ ಈ ಸೈನ್ಯವು ಭಗ್ನವಾಗುತ್ತದೆ. ವೈರಕ್ಕೆ ಮೂಲಕಾರಣನಾದ ಈ ದುರಾತ್ಮನನ್ನು ಕೊಲ್ಲುವವನಾಗು.
ಸಂಜಯಃ
ತಂ ತಥೇತ್ಯಬ್ರವೀತ್ ಪಾರ್ಥಃ ಕೃತ್ಯರೂಪಮಿದಂ ಮಮ |
ಸರ್ವಸೈನ್ಯಮನಾದೃತ್ಯ ಗಚ್ಛ ಯತ್ರ ಸುಯೋಧನಃ ॥ 19 ॥
ಸಂಜಯ ಅವನನ್ನು ಕುರಿತು ಪಾರ್ಥನು, ಇದು ನಾನು ಮಾಡಬೇಕಾದ ಶ್ರೇಷ್ಠವಾದ ಕಾರ್ಯ. ಎಲ್ಲ ಸೈನ್ಯವನ್ನೂ ಉಪೇಕ್ಷಿಸಿ ಸುಯೋಧನನು ಇದ್ದಲ್ಲಿಗೆ ರಥವನ್ನು ನಡೆಸು ಎಂದು ಹೇಳಿದನು.
ಯೇನೈತದ್ ದೀರ್ಘಕಾಲಂ ನೋ ಭುಕ್ತಂ ರಾಜ್ಯಮಕಂಟಕಮ್ |
ತತೋಽಪ್ಯಸ್ಯ ವ್ಯತಿಕ್ರಮ್ಯ ಚ್ಛಿಂದ್ಯಾಂ ಮೂರ್ಧಾನಮಾಹವೇ ॥ 20 ॥
ಯಾವ ಕಾರಣದಿಂದ ಇವನು ದೀರ್ಘಕಾಲದವರೆಗೆ ನಮ್ಮ ರಾಜ್ಯವನ್ನು ನಿಷ್ಕಂಟಕವಾಗಿ ಭೋಗಿಸಿದ್ದಾನೆಯೋ ಆ ಕಾರಣದಿಂದಲೇ

ಅವನನ್ನು ಆಕ್ರಮಿಸಿ ಅವನ ಶಿರಸ್ಸನ್ನು ಕತ್ತರಿಸುವೆನು.
ಅಪಿ ತಸ್ಯಾ ಅನರ್ಹಾಯಾಃ ಪರಿಕ್ಲೇಶಸ್ಯ ಮಾಧವ |
ಕೃಷ್ಣಾಯಾಃ ಶಕ್ನುಯಾಂ ಹಂತುಂ ಪದವೀಂ ಕಲಹಸ್ಯ ಚ ॥ 21 ॥
ಎಲ್ಲೈ ಮಾಧವನೇ, ದುಃಖಕ್ಕೆ ಅನರ್ಹಳಾದ ಆ ದ್ರೌಪದಿಯ ದುಃಖಗಳಿಗೂ ಮತ್ತು ಕಲಹಕ್ಕೂ ಕಾರಣನಾದ ಇವನನ್ನು ಈ ದಿನ ಕೊಲ್ಲಲು ಸಮರ್ಥನಾದೇನು.
ಅಪ್ಯಹಂ ತಾನಿ ದುಃಖಾನಿ ಪೂರ್ವವೃತ್ತಾನಿ ಮಾಧವ |
ದುರ್ಯೋಧನಂ ರಣೇ ಹತ್ವಾ ಪ್ರತಿಮೋಕ್ಷ್ಯೇಽಯೇ ಕಥಂಚನ ॥ 22 ॥
ಎಲ್ಲೈ ಮಾಧವನೇ, ನಾನು ಈ ದಿನ ದುರ್ಯೋಧನನನ್ನು ಕೊಂದು ಹಿಂದೆ ಅನುಭವಿಸಿದ ಆ ದುಃಖಗಳಿಂದ ಹೇಗಾದರೂ ಬಿಡುಗಡೆಯನ್ನು ಹೊಂದುವೆನು.
ಇತ್ಯೇವಂವಾದಿನೌ ಹೃಷ್ಟೌ ಕೃಷ್ಣೌ ಶ್ವೇತಾನ್ ಹಯೋತ್ತಮಾನ್ |
ಪ್ರೇಷಯಾಮಾಸತುಃ ಸಂಖ್ಯೇ ಪ್ರೇಪ್ಸಂತೌ ತಂ ನರಾಧಿಪಮ್ ॥ 23 ॥
ಹೀಗೆ ಮಾತನಾಡುತ್ತಾ ಸಂತೋಷಗೊಂಡ ಕೃಷ್ಣಾರ್ಜುನರು ಶ್ರೇಷ್ಠವಾದ ಶ್ವೇತಾಶ್ವಗಳನ್ನು ರಣರಂಗದಲ್ಲಿ ರಾಜನಾದ ದುರ್ಯೋಧನನ ಕಡೆಗೆ ಪ್ರಚೋದಿಸಿದರು.
ತಯೋಃ ಸಮೀಪಂ ಸಂಪ್ರಾಪ್ಯ ಪುತ್ರಸ್ತೇ ಭರತರ್ಷಭ |
ನ ಚಕಾರ ಭಯಂ ಪ್ರಾಪ್ತೇ ಭಯೇ ಮಹತಿ ಮಾರಿಷ ॥ 24 ॥
ಎಲ್ಲೈ ಭರತಶ್ರೇಷ್ಠನೇ, ಪೂಜ್ಯನೇ, ಅವರ ಸಮೀಪಕ್ಕೆ ಬಂದ ನಿನ್ನ ಪುತ್ರನು ದೊಡ್ಡ ಭಯವು ಪ್ರಾಪ್ತವಾಗಿದ್ದರೂ ಭಯಪಡಲಿಲ್ಲ.
ತದಸ್ಯ ಕ್ಷತ್ರಿಯಾಃ ಕರ್ಮ ಸರ್ವ ಏವಾಭ್ಯಪೂಜಯನ್ |
ಯದರ್ಜುನಹೃಷೀಕೇಶೌ ಪ್ರತ್ಯುದ್ಯಾತೋಽವಿಚಾರಯನ್ ॥ 25 ॥
ಯಾವ ವಿಚಾರವನ್ನೂ ಮಾಡದೆ ಕೃಷ್ಣಾರ್ಜುನರ ವಿರುದ್ಧವಾಗಿ ನಿಂತ ಅವನ ಆ ಕರ್ಮವನ್ನು ಎಲ್ಲ ಕ್ಷತ್ರಿಯರೂ ಪೂಜಿಸಿದರು.
ತತಃ ಸರ್ವಸ್ಯ ಸೈನ್ಯಸ್ಯ ತಾವಕಸ್ಯ ವಿಶಾಂಪತೇ |
ಮಹಾನ್ ನಾದೋ ಹ್ಯಭೂತ್ ತತ್ರ ದೃಷ್ಟ್ವಾ ರಾಜಾನಮಾಹವೇ ॥26॥
ಎಲ್ಲೈ ರಾಜನೇ, ಆಗ ರಾಜನಾದ ದುರ್ಯೋಧನನು ರಣರಂಗದಲ್ಲಿ ಅವರ ಎದುರಿನಲ್ಲಿ ನಿಂತುದನ್ನು ನೋಡಿ, ನಿನ್ನ ಸೈನ್ಯದಲ್ಲಿ ಸಂತೋಷದ ದೊಡ್ಡ ನಾದ ಉಂಟಾಯಿತು.
ತಸ್ಮಿನ್ ಜನಸಮುನ್ನಾದೇ ಪ್ರವೃತ್ತೇ ಭೈರವೇ ಸತಿ |
ಕದರ್ಥೀಕೃತ್ಯ ತೇ ಪುತ್ರಃ ಪ್ರತ್ಯಮಿತ್ರಮವಾರಯತ್ ॥ 27 ॥
ಅಂತಹ ಭಯಂಕರವಾದ ಸೈನ್ಯಘೋಷವು ಉಂಟಾಗುತ್ತಿರಲು ನಿನ್ನ ಪುತ್ರನು (ಶತ್ರುಗಳನ್ನು) ತೃಣೀಕರಿಸಿ ಶತ್ರುವಾದ ಅರ್ಜುನನನ್ನು ತಡೆದನು.
ಆವಾರಿತಸ್ತು ಕೌಂತೇಯಃ ತವ ಪುತ್ರೇಣ ಸಂಯುಗೇ |
ಸಂರಂಭಮಗಮದ್ ಭೂಯಃ ಸ ಚ ತಸ್ಮಿನ್ ಪರಂತಪಃ ॥ 28 ॥
ನಿನ್ನ ಪುತ್ರನಿಂದ ತಡೆಯಲ್ಪಟ್ಟ ಅರ್ಜುನನು ಅವನ ಮೇಲೆ ಬಹಳ ಕೋಪವನ್ನು ಹೊಂದಿದನು. ಪರಂತಪನಾದ ದುರ್ಯೋಧನನೂ ಸಹ ಅರ್ಜುನನ ಮೇಲೆ ಕೋಪವನ್ನು ಹೊಂದಿದನು.
ತೌ ದೃಷ್ಟ್ವಾ ಪ್ರತಿಸಂರಬ್ಧೌ ದುರ್ಯೋಧನಧನಂಜಯೌ |
ಅಭ್ಯವೈಕ್ಷಂತ ರಾಜಾನೋ ಭೀಮವೇಗಾಃ ಸಮಂತತಃ ॥ 29 ॥
ದುರ್ಯೋಧನ ಮತ್ತು ಅರ್ಜುನರು ಪರಸ್ಪರವಾಗಿ ಕೋಪಗೊಂಡುದನ್ನು ನೋಡಿ ಭಯಂಕರ ವೇಗವುಳ್ಳ ರಾಜರೆಲ್ಲರೂ ಎಲ್ಲ ಕಡೆಗಳಿಂದಲೂ ಅವರನ್ನು ನೋಡಿದರು.
ದೃಷ್ಟ್ವಾ ತು ಪಾರ್ಥಂ ಸಂರಬ್ಧಂ ವಾಸುದೇವಂ ಚ ಮಾರಿಷ |
ಪ್ರಹಸನ್ನೇವ ಪುತ್ರಸ್ತೇ ಯೋದ್ಧುಕಾಮಃ ಸಮಾಹ್ವಯತ್ ॥ 30 ॥
ಎಲ್ಲೈ ಪೂಜ್ಯನೇ, ನಿನ್ನ ಪುತ್ರನು ಕೋಪಗೊಂಡ ಕೃಷ್ಣಾರ್ಜುನರನ್ನು ನೋಡಿ ನಗುತ್ತಲೇ ಅವರನ್ನು ಯುದ್ಧಕ್ಕೆ ಆಹ್ವಾನಿಸಿದನು.
ತತಃ ಪ್ರಹೃಷ್ಟೋ ದಾಶಾರ್ಹಃ ಪಾಂಡವಶ್ಚ ಧನಂಜಯಃ |
ವ್ಯಾಕ್ರೋಶೇತಾಂ ಮಹಾತ್ಮಾನೌ ದಧ್ಮತುಶ್ಚಾಂಬುಜೋತ್ತಮೌ ॥ 31 ॥
ಆಗ ಸಂತೋಷಗೊಂಡ, ಮಹಾತ್ಮರಾದ ಕೃಷ್ಣ ಮತ್ತು ಧನಂಜಯರು ಸಿಂಹನಾದವನ್ನು ಮಾಡಿ, ತಮ್ಮ ಶ್ರೇಷ್ಠವಾದ ಶಂಖಗಳನ್ನು ಊದಿದರು.
ತೌ ಹೃಷ್ಟರೂಪೌ ಸಂಪ್ರೇಕ್ಷ್ಯ ಕುರವಸ್ತತ್ರ ಸರ್ವಶಃ |
ನಿರಾಶಾಃ ಸಮಪದ್ಯಂತ ಪುತ್ರಸ್ಯ ತವ ಜೀವಿತೇ ॥ 32 ॥
ರಣರಂಗದಲ್ಲಿ ಸಂತೋಷಗೊಂಡ ಅವರಿಬ್ಬರನ್ನೂ ನೋಡಿ ಕೌರವರೆಲ್ಲರೂ ನಿನ್ನ ಮಗನ ಜೀವಿತದ ವಿಷಯದಲ್ಲಿ ಆಸೆಯನ್ನು ತೊರೆದರು.
ಶೋಕಮೀಯುಃ ಪರಂ ಚೈವ ಕುರವಃ ಸರ್ವ ಏವ ಹಿ |
ಅಮನ್ಯಂತ ಚ ಪುತ್ರಂ ತೇ ವೈಶ್ವಾನರಮುಖೇ ಹುತಮ್ ॥ 33 ॥
ಎಲ್ಲ ಕುರುಗಳೂ ಬಹಳ ಶೋಕವನ್ನು ಹೊಂದಿದರು. ನಿನ್ನ ಪುತ್ರನು ಅಗ್ನಿ ಮುಖದಲ್ಲಿ ಹೋಮ ಮಾಡಲ್ಪಟ್ಟಿದ್ದಾನೆ ಎಂದು ತಿಳಿದರು.

ತಥಾ ಚ ದೃಷ್ಟ್ವಾ ಯೋಧಾಸ್ತೇ ಪ್ರಹೃಷ್ಟೌ ಕೃಷ್ಣಪಾಂಡವೌ |
ಹತೋ ರಾಜಾ ಹತೋ ರಾಜೇತ್ಯೂಚುರೇವಂ ಭಯಾರ್ದಿತಾಃ |
ಜನಸ್ಯ ಸನ್ನಿನಾದಂ ತಂ ಶ್ರುತ್ವಾ ದುರ್ಯೋಧನೋಽಬ್ರವೀತ್ ॥ 34 ॥
ವ್ಯೇತು ವೋ ಭೀ ರಣೇ ಕೃಷ್ಣೌ ಪ್ರೇಷಯಿಷ್ಯಾಮಿ ಮೃತ್ಯವೇ ॥ 35 ॥
ಹಾಗೆ ಸಂತೋಷಗೊಂಡ ಕೃಷ್ಣಾರ್ಜುನರನ್ನು ನೋಡಿ, ನಿನ್ನ ಯೋಧರೆಲ್ಲರೂ ಭಯಗೊಂಡವರಾಗಿ ರಾಜನು ಹತನಾದನು, ರಾಜನು ಹತನಾದನು ಎಂದು ಕಿರುಚಿದರು. ಯೋಧರ ಆ ದೊಡ್ಡ ಶಬ್ದವನ್ನು ಕೇಳಿ ದುರ್ಯೋಧನನು- `ನಿಮ್ಮ ಭಯವನ್ನು ಬಿಡಿ, ಯುದ್ಧದಲ್ಲಿ ನಾನು ಕೃಷ್ಣಾರ್ಜುನರನ್ನು ಮೃತ್ಯುಲೋಕಕ್ಕೆ ಕಳುಹಿಸುವೆನು' ಎಂದು ಹೇಳಿದನು.
ಇತ್ಯುಕ್ತ್ವಾ ಸೈನಿಕಾನ್ ಸರ್ವಾನ್ ಜಯಾಪೇಕ್ಷೀ ನರಾಧಿಪಃ |
ಪಾರ್ಥಮಾಭಾಷ್ಯ ಸಂರಂಭಾದಿದಂ ವಚನಮಬ್ರವೀತ್ ॥ 36 ॥
ಎಲ್ಲರನ್ನೂ ಕುರಿತು ಹೀಗೆ ಹೇಳಿ, ಜಯಾಕಾಂಕ್ಷಿಯಾದ ರಾಜನು ಕೋಪದಿಂದ ಪಾರ್ಥನನ್ನು ಸಂಬೋಧಿಸಿ ಈ ಮಾತನ್ನು ಆಡಿದನು.
ಪಾರ್ಥ ಯಚ್ಛಿಕ್ಷಿತಂ ತೇಽಸ್ತ್ರಂ ದಿವ್ಯಂ ಮಾನುಷಮೇವ ಚ |
ತದ್ ದರ್ಶಯ ಮಯಿ ಕ್ಷಿಪ್ರಂ ಯದಿ ಜಾತೋಽಸಿ ಪಾಂಡುನಾ ॥37॥
ಎಲೈ ಅರ್ಜುನನೇ, ನೀನು ಪಾಂಡುವಿನ ಪುತ್ರನೇ ಆದರೆ ನೀನು ಅಭ್ಯಾಸ ಮಾಡಿದ ದಿವ್ಯ ಮತ್ತು ಮಾನುಷವಾದ ಅಸ್ತ್ರಗಳನ್ನು ಶೀಘ್ರವಾಗಿ ನನಗೆ ತೋರಿಸುವವನಾಗು (ನನ್ನ ಮೇಲೆ ಪ್ರಯೋಗಿಸುವವನಾಗು).
ಯದ್ ಬಲಂ ತವ ವೀರ್ಯಂ ಚ ಕೇಶವಸ್ಯ ತಥೈವ ಚ |
ತತ್ ಕುರುಷ್ವ ಮಯಿ ಕ್ಷಿಪ್ರಂ ಪಶ್ಯಾಮಸ್ತವ ಪೌರುಷಮ್ ॥ 38 ॥
ನಿನ್ನ ಮತ್ತು ಕೃಷ್ಣನ ಬಲ ಮತ್ತು ಪರಾಕ್ರಮಗಳು ಏನಿವೆಯೋ ಅದನ್ನು ಶೀಘ್ರವಾಗಿ ನನಗೆ ತೋರಿಸುವವನಾಗು. ನಿನ್ನ ಪರಾಕ್ರಮವನ್ನು ನೋಡೋಣ.
ಅಸ್ಮತ್ಪರೋಕ್ಷಂ ಕರ್ಮಾಣಿ ಪ್ರವದಂತ್ಯದ್ಭುತಾನಿ ತೇ |
ಸ್ವಾಮಿಸತ್ಕಾರಯುಕ್ತಾನಿ ಯಾನಿ ತಾನೀಹ ದರ್ಶಯ ॥ 39 ॥
ನಿನ್ನ ಸ್ವಾಮಿಯಾದ ಕೃಷ್ಣನಿಂದ ಪ್ರಶಂಸಿಸಲ್ಪಟ್ಟ, ನನ್ನ ಪರೋಕ್ಷದಲ್ಲಿ ಮಾಡಿದ ನಿನ್ನ ಅದ್ಭುತವಾದ ಕರ್ಮಗಳನ್ನು ಕುರಿತು ಎಲ್ಲರೂ ಮಾತನಾಡುತ್ತಾರೆ. ಅವೇನಿವೆಯೋ ಅವುಗಳನ್ನು ಇಲ್ಲಿ ನನಗೆ ತೋರಿಸುವವನಾಗು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ಎಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತನೆಯ ಅಧ್ಯಾಯ
ಅರ್ಜುನನಿಂದ ದುರ್ಯೋಧನನ ಪರಾಜಯ ಮತ್ತು
ಸೈಂಧವನ ಕಡೆಗೆ ಅರ್ಜುನನ ಗಮನ.
ಸಂಜಯಃ
ಏವಮುಕ್ತ್ವಾಽರ್ಜುನಂ ರಾಜಾ ತ್ರಿಭಿರ್ಮರ್ಮಾತಿಗೈಃ ಶರೈಃ |
ಪ್ರತ್ಯವಿದ್ಧ್ಯನ್ಮಹಾವೇಗೈಃ ಚತುರ್ಭಿಶ್ಚತುರೋ ಹಯಾನ್ ॥ 1 ॥
ಸಂಜಯ ರಾಜನಾದ ದುರ್ಯೋಧನನು ಅರ್ಜುನನಿಗೆ ಹೀಗೆ ಹೇಳಿ ಅವನನ್ನು ಮಹಾವೇಗವುಳ್ಳ, ಮರ್ಮಭೇದಿಗಳಾದ ಮೂರು ಬಾಣಗಳಿಂದ ಹೊಡೆದು, ನಾಲ್ಕು ಬಾಣಗಳಿಂದ ರಥದ ನಾಲ್ಕು ಅಶ್ವಗಳನ್ನೂ ಹೊಡೆದನು.
ವಾಸುದೇವಂ ಚ ದಶಭಿಃ ಪ್ರತ್ಯವಿದ್ಧ್ಯತ್ ಸ್ತನಾಂತರೇ |
ಪ್ರತೋದಂ ಚಾಸ್ಯ ಭಲ್ಲೇನ ಛಿತ್ತ್ವಾ ಭೂಮಾವಪಾತಯತ್ ॥ 2 ॥
ಕೃಷ್ಣನನ್ನೂ ಸಹ ಹತ್ತು ಬಾಣಗಳಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು. ಅವನ ಹಸ್ತದಲ್ಲಿದ್ದ ಚಾವಟಿಯನ್ನೂ ಸಹ ಭಲ್ಲದಿಂದ ಹೊಡೆದು ಭೂಮಿಯ ಮೇಲೆ ಕೆಡವಿದನು.
ತಂ ಚತುರ್ದಶಭಿಃ ಪಾರ್ಥಃ ಚಿತ್ರಪುಂಖೈಃ ಶಿಲಾಶಿತೈಃ |
ಅವಿದ್ಧ್ಯತ್ ತೂರ್ಣಮವ್ಯಗ್ರೋ ತೇ ಚಾಭ್ರಶ್ಯಂತ ವರ್ಮಣಿ ॥ 3 ॥
ಅರ್ಜುನನು ಯಾವ ಗಾಬರಿಯೂ ಇಲ್ಲದೆ, ವಿಚಿತ್ರವಾದ ಪುಂಖಗಳನ್ನು ಹೊಂದಿದ್ದ, ಕಲ್ಲಿನಿಂದ ಸಾಣೆಯನ್ನು ಹಿಡಿದ ಹದಿನಾಲ್ಕು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ಆ ಬಾಣಗಳು ದುರ್ಯೋಧನನ ಕವಚವನ್ನು ತಲುಪಿ ಭ್ರಷ್ಟವಾದವು.
ತೇಷಾಂ ವೈಫಲ್ಯಮಾಲೋಕ್ಯ ಪುನರ್ನವ ಚ ಪಂಚ ಚ |
ಪ್ರಾಹಿಣೋನ್ನಿಶಿತಾನ್ ಬಾಣಾನ್ ತೇ ಹ್ಯಭ್ರಶ್ಯಂತ ವರ್ಮಣಃ ॥ 4 ॥
ಅರ್ಜುನನು ಅವುಗಳು ವಿಫಲವಾದುದನ್ನು ನೋಡಿ, ಪುನಃ ಅವನ ಮೇಲೆ ಹದಿನಾಲ್ಕು ಬಾಣಗಳನ್ನು ಪ್ರಯೋಗಿಸಿದನು. ಅವುಗಳೂ ಸಹ ಅವನ ಕವಚವನ್ನು ತಲುಪಿ ವ್ಯರ್ಥವಾದವು.
ಅಷ್ಟಾವಿಂಶಚ್ಛಿತಾನ್ ಬಾಣಾನ್ ತಾನ್ ವೈ ಪ್ರೇಕ್ಷ್ಯ ಸ ನಿಷ್ಫಲಾನ್ |
ಅಬ್ರವೀತ್ ಪರವೀರಘ್ನಃ ಕೃಷ್ಣೋಽರ್ಜುನಮಿದಂ ವಚಃ ॥ 5 ॥

ಇಪ್ಪತ್ತೆಂಟು ಬಾಣಗಳು ವ್ಯರ್ಥವಾದುದನ್ನು ನೋಡಿ, ಪರವೀರಘಾತಕನಾದ ಕೃಷ್ಣನು ಅರ್ಜುನನನ್ನು ಕುರಿತು ಈ ಮಾತನ್ನು ಆಡಿದನು.
ಅದೃಷ್ಟಪೂರ್ವಂ ಪಶ್ಯಾಮಿ ಶಿಲಾನಾಮಿವ ಸರ್ಪಣಮ್ |
ತ್ವಯಾ ಸಂಪ್ರೇಷಿತಾಃ ಪಾರ್ಥ ನಾರ್ಥಂ ಕುರ್ವಂತಿ ಪತ್ರಿಣಃ ॥ 6 ॥
ಹಿಂದೆಂದೂ ನೋಡದಿದ್ದ ಬಂಡೆಗಳ ಚಲನೆಯಂತಿರುವ ದೃಶ್ಯವನ್ನು ನೋಡುತ್ತಿದ್ದೇನೆ. ಎಲೈ ಅರ್ಜುನನೇ, ನೀನು ಪ್ರಯೋಗಿಸಿದ ಪತ್ರಸಹಿತವಾದ ಬಾಣಗಳು ವ್ಯರ್ಥವಾಗುತ್ತಿವೆ.
ಕಚ್ಚಿದ್ ಗಾಂಡೀವಜಃ ಪ್ರಾಣಃ ತಥೈವ ಭರತರ್ಷಭ |
ಮುಷ್ಟಿಶ್ಚ ತೇ ಯಥಾಪೂರ್ವಂ ಭುಜಯೋಶ್ಚ ಬಲಂ ತವ ॥ 7 ॥
ಎಲೈ ಭರತಶ್ರೇಷ್ಠನೇ, ಗಾಂಡೀವದ ಪ್ರಾಣವಾಗಲೀ, ನಿನ್ನ ಮುಷ್ಟಿಯಾಗಲೀ, ನಿನ್ನ ಭುಜಗಳ ಬಲವಾಗಲೀ ಹಿಂದಿನಂತೆಯೇ ಇವೆಯಷ್ಟೆ?
ವಿಧೇರ್ಬಲಾದಯಂ ಕಾಲಃ ಪ್ರಾಪ್ತಃ ಸ್ಯಾದದ್ಯ ಪಶ್ಚಿಮಃ |
ತವ ಚೈವಾಸ್ಯ ಶತ್ರೋಶ್ಚ ತನ್ಮಮಾಚಕ್ಷ ಿವ ಪೃಚ್ಛತಃ ॥ 8 ॥
ಅಥವಾ ವಿಧಿಯ ಇಚ್ಛೆಯಂತೆ ಇಂತಹ ನಿನ್ನ ಪಶ್ಚಿಮ ಕಾಲವು ಮತ್ತು ನಿನ್ನ ಶತ್ರುವಿನ ಉದಯ ಕಾಲವು ಉಂಟಾಗಿರಬಹುದು. ನಿನ್ನನ್ನು ಕೇಳುತ್ತಿರುವ ನನಗೆ ಅದನ್ನು ಹೇಳು.
ವಿಸ್ಮಯೋ ಮೇ ಮಹಾನ್ ಪಾರ್ಥ ತವ ದೃಷ್ಟ್ವಾ ಶರಾನಿಮಾನ್ |
ವ್ಯರ್ಥಾನ್ನಿಪತಿತಾನ್ ಸಂಖ್ಯೇ ದುರ್ಯೋಧನರಥಂ ಪ್ರತಿ ॥ 9 ॥
ಎಲೈ ಪಾರ್ಥನೇ, ನಿನ್ನ ಈ ಬಾಣಗಳು ದುರ್ಯೋಧನನ ರಥದ ಬಳಿಯಲ್ಲಿ ವ್ಯರ್ಥವಾಗಿ ಬೀಳುತಿತರುವುದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗಿದೆ.
ವಜ್ರಾಶನಿಸಮಾ ಘೋರಾಃ ಪರಕಾಯಾವಭೇದಿನಃ |
ಶರಾಃ ಕುರ್ವಂತಿ ತೇ ಪಾರ್ಥ ಪಾರ್ಥಿವೇಽದ್ಯ ವಿಡಂಬನಾಮ್ ॥10॥
ವಜ್ರಾಯುಧಕ್ಕೂ ಮತ್ತು ಸಿಡಿಲುಗಳಿಗೂ ಸಮನಾದ, ಪರಕಾಯವನ್ನು ಸೀಳುವ ಘೋರವಾದ ಈ ಬಾಣಗಳು ಎಲೈ ಪಾರ್ಥನೇ, ನಿನ್ನನ್ನು ಅಪಹಾಸ ಮಾಡುತ್ತಿವೆ.
ಅರ್ಜುನಃ
ದ್ರೋಣೇನ ನಿಯತಂ ಕೃಷ್ಣ ಧಾರ್ತರಾಷ್ಟ್ರೇ ನಿವೇಶಿತಮ್ |
ಅಂತೇ ವಿಹಿತಮಸ್ತ್ರಾಣಾಮೇತತ್ಕವಚಧಾರಣಮ್ ॥ 11 ॥
ಅರ್ಜುನ ಎಲೈ ಕೃಷ್ಣನೇ, ಖಂಡಿತವಾಗಿ ದ್ರೋಣರು ನನ್ನ ಅಸ್ತ್ರಗಳ ವಿನಾಶಕ್ಕಾಗಿ ದುರ್ಯೋಧನನಿಗೆ ೀ ಕವಚಧಾರಣೆಯನ್ನು ಮಾಡಿಸಿದ್ದಾರೆ.
ಅಸ್ಮಿನ್ನಂತರ್ಹಿತಂ ಕೃಷ್ಣ ತ್ರೈಲೋಕ್ಯಮಪಿ ವರ್ಮಣಿ |
ಏಕೋ ದ್ರೋಣೋ ಹಿ ವೇದೈತದಹಂ ತಸ್ಮಾಚ್ಚ ಸತ್ತಮಾತ್ ॥ 12 ॥
ಎಲೈ ಕೃಷ್ಣನೇ, ಈ ಕವಚದಲ್ಲಿ ಮೂರುಲೋಕಗಳೂ ಅಡಗಿವೆ. ಈ ಕವಚದ ಸಂವಿಧಾನವು ದ್ರೋಣರೊಬ್ಬರಿಗೇ ತಿಳಿದಿದೆ. ಆ ಸಜ್ಜನಶ್ರೇಷ್ಠರ ಉಪದೇಶದಿಂದ ನಾನೂ ತಿಳಿದಿದ್ದೇನೆ.
ನ ಶಕ್ಯಮೇತತ್ ಕವಚಂ ಬಾಣೈರ್ಭೇತ್ತುಂ ಕಥಂಚನ |
ಅಪಿ ವಜ್ರೇಣ ಗೋವಿಂದ ಸ್ವಯಂ ಮಘವತಾ ಯುಧಿ ॥ 13 ॥
ಈ ಕವಚವನ್ನು ಬಾಣಗಳಿಂದ ಯಾವ ರೀತಿಯಿಂದಲೂ ಭೇದಿಸಲು ಶಕ್ಯವಿಲ್ಲ. ಗೋವಿಂದನೇ, ಸ್ವತಃ ಇಂದ್ರನೂ ಸಹ ಇದನ್ನು ಯುದ್ಧದಲ್ಲಿ ವಜ್ರಾಯುಧದಿಂದಲೂ ಭೇದಿಸಲಾರ.
ಜಾನಂಸ್ತ್ವಮಪಿ ವೈ ಕೃಷ್ಣ ಮಾಂ ವೈ ಮೋಹಯಸೇ ಕಥಮ್ |
ಯದ್ ವೃತ್ತಂ ತ್ರಿಷು ಲೋಕೇಷು ವರ್ತತೇ ಯಚ್ಚ ಕೇಶವ ॥ 14 ॥
ತಥಾ ಭವಿಷ್ಯದ್ ಯಚ್ಚೈವ ತತ್ ಸರ್ವಂ ವಿದಿತಂ ತವ |
ನತ್ವಿದಂ ವೇದ ತತ್ ಕಶ್ಚಿದ್ ಯಥಾ ತ್ವಂ ಮಧುಸೂದನ ॥ 15 ॥
ಎಲೈ ಕೃಷ್ಣನೇ, ನೀನು ಎಲ್ಲವನ್ನೂ ತಿಳಿದಿದ್ದರೂ ನನಗೆ ಮೋಹವನ್ನುಂಟು ಮಾಡುತ್ತಿದ್ದೀಯೆ. ಮೂರುಲೋಕಗಳಲ್ಲಿ ಭೂತ-ಭವಿಷ್ಯತ್-ವರ್ತಮಾನ ಕಾಲದಲ್ಲಿ ನಡೆಯುವುದೆಲ್ಲವೂ ನಿನಗೆ ತಿಳಿದಿದೆ. ಎಲೈ ಮಧುಸೂದನನೇ, ನಿನಗೆ ತಿಳಿದಿರುವಂತೆ ಬೇರೆ ಯಾರಿಗೂ ತಿಳಿದಿಲ್ಲ.
ಏಷ ದುರ್ಯೋಧನಃ ಕೃಷ್ಣ ದ್ರೋಣೇನ ವಿಹಿತಾಮಿಮಾಮ್ |
ತಿಷ್ಠತ್ಯಭೀತವತ್ ಸಂಖ್ಯೇ ಬಿಭ್ರತ್ ಕವಚಧಾರಣಾಮ್ ॥ 16 ॥
ಎಲೈ ಕೃಷ್ಣನೇ, ಈ ದುರ್ಯೋಧನನು ದ್ರೋಣರು ವಿಧಾನ ಮಾಡಿದ ಕವಚವನ್ನು ಧರಿಸಿ ರಣರಂಗದಲ್ಲಿ ನಿರ್ಭೀತನಾದವನಂತೆ ಇದ್ದಾನೆ.
ಯತ್ ತತ್ರ ವಿಹಿತಂ ಕಾರ್ಯಂ ನೈಷ ತದ್ ವೇತ್ತಿ ಮಾಧವ |
ಸ್ತ್ರೀವದೇಷ ಬಿಭರ್ತ್ಯೇತಾಂ ಯುಕ್ತಾಂ ಕವಚಧಾರಣಾಮ್ ॥ 17 ॥
ಎಲೈ ಮಾಧವನೇ, ಈ ಕವಚದ ವಿಷಯದಲ್ಲಿ ಏನು ಮಾಡಬೇಕೆಂದು ಅವನಿಗೆ ತಿಳಿದಿಲ್ಲ. ದ್ರೋಣರು ಅಭಿಮಂತ್ರಿಸಿಕೊಟ್ಟ ಕವಚವನ್ನು ಕೇವಲ ಸ್ತ್ರೀಯಂತೆ ಅವನು ಧರಿಸಿದ್ದಾನೆ.

ಪಶ್ಯ ಬಾಹ್ವೋಶ್ಚ ಮೇ ವೀರ್ಯಂ ಧನುಷಶ್ಚ ಜನಾರ್ದನ |
ಪರಾಜಯಿಷ್ಯೇ ಕೌರವ್ಯಂ ಕವಚೇನಾಭಿರಕ್ಷಿತಮ್ ॥ 18 ॥
ಎಲೈ ಜನಾರ್ದನನೇ, ನನ್ನ ಬಾಹುವಿನ ಬಲವನ್ನೂ ಮತ್ತು ಧನುಸ್ಸಿನ ಶಕ್ತಿಯನ್ನೂ ನೋಡುವವನಾಗು. ದುರ್ಯೋಧನನು ಕವಚದಿಂದ ರಕ್ಷಿತನಾಗಿದ್ದರೂ ಅವನನ್ನು ಸೋಲಿಸುವೆನು.
ಇದಮಂಗಿರಸೇ ಪ್ರಾದಾದ್ ದೇವೇಶೋ ವರ್ಮ ಭಾಸ್ವರಮ್ |
ತಸ್ಮಾದ್ ಬೃಹಸ್ಪತಿಃ ಪ್ರಾಪ ತತಃ ಪ್ರಾಪ ಪುರಂದರಃ |
ಪುನರ್ದದೌ ಸುರಪತಿರ್ಮಹ್ಯಂ ವರ್ಮಸುಸಂಗ್ರಹಮ್ ॥ 19 ॥
ಈ ಪ್ರಕಾಶಮಾನವಾದ ಕವಚವನ್ನು ಬ್ರಹ್ಮದೇವರು ಅಂಗಿರಸರಿಗೆ ಕೊಟ್ಟರು. ಅಂಗಿರಸರಿಂದ ಅದು ಬೃಹಸ್ಪತ್ಯಾಚಾರ್ಯರಿಗೆ ಬಂದಿತು. ಬೃಹಸ್ಪತ್ಯಾಚಾರ್ಯರಿಂದ ಪುನಃ ಇಂದ್ರನು ತೆಗೆದುಕೊಂಡನು. ಸುರಪತಿಯಾದ ಅವನು ಈ ಕವಚದ ಸಂವಿಧಾನವನ್ನು ನನಗೆ ನೀಡಿದನು.
ದೈವಂ ಯದ್ಯಸ್ಯ ವರ್ಮೈತದ್ ಬ್ರಹ್ಮಣಾ ವಾ ಸ್ವಯಂ ಕೃತಮ್ |
ನೈವ ಗೋಪ್ಸ್ಯಂತಿ ದುರ್ಬುದ್ಧಿಂ ವರ್ಮ ಬಾಣಹತಂ ಮಯಾ ॥20॥
ಈ ಕವಚವು ಎಷ್ಟೇ ದೈವಿಕವಾಗಿದ್ದರೂ ಅಥವಾ ಬ್ರಹ್ಮದೇವರೇ ಸ್ವಯಂ ಮಾಡಿದ್ದರೂ ನನ್ನ ಬಾಣಗಳಿಂದ ಹತನಾಗುವ ದುರ್ಬುದ್ಧಿಯುಳ್ಳ ದುರ್ಯೋಧನನನ್ನು ಅದು ರಕ್ಷಿಸುವುದಿಲ್ಲ.
ಏವಮುಕ್ತ್ವಾಽರ್ಜುನೋ ಬಾಣಾನ್ ಅಭಿಮಂತ್ರ್ಯ ವ್ಯಕರ್ಷತ |
ವಿಕೃಷ್ಯಮಾಣಾನೇವೈತಾನ್ ಧನುರ್ಮಧ್ಯಗತಾನ್ ಶರಾನ್ |
ತಾನಸ್ಯಾಸ್ತ್ರೇಣ ಚಿಚ್ಛೇದ ದ್ರೌಣಿಃ ಸರ್ವಾಸ್ತ್ರಘಾತಿನಾ ॥ 21 ॥
ಹೀಗೆ ಹೇಳಿ ಅರ್ಜುನನು ಬಾಣಗಳನ್ನು ಅಭಿಮಂತ್ರಿಸಿ, ಧನುಸ್ಸಿನ ಮಧ್ಯದಲ್ಲಿ ಹೂಡಿ ಹೆದೆಯನ್ನು ಎಳೆದನು. ಅವನು ಹೆದೆಯನ್ನು ಎಳೆಯುತ್ತಿರುವಾಗಲೇ ಅಶ್ವತ್ಥಾಮರು ಸರ್ವಾಸ್ತ್ರಘಾತಿಯಾದ ಅಸ್ತ್ರದಿಂದ ಆ ಬಾಣಗಳನ್ನು ಕತ್ತರಿಸಿದರು.
ತಾನ್ ನಿಕೃತ್ತಾನಿಷೂನ್ ದೃಷ್ಟ್ವಾ ದೂರತೋ ಬ್ರಹ್ಮವಾದಿನಾ |
ನ್ಯವೇದಯತ್ ಕೇಶವಾಯ ವಿಸ್ಮಿತಃ ಶ್ವೇತವಾಹನಃ ॥ 22 ॥
ಬ್ರಹ್ಮವಾದಿಗಳಾದ ಅಶ್ವತ್ಥಾಮರು ದೂರದಿಂದಲೇ ತನ್ನ ಬಾಣಗಳನ್ನು ಕತ್ತರಿಸಿದುದನ್ನು ನೋಡಿ ವಿಸ್ಮಯಗೊಂಡ ಶ್ವೇತವಾಹನನು ಕೃಷ್ಣನನ್ನು ಕುರಿತು ಮಾತನಾಡಿದನು.
ಅರ್ಜುನಃ
ನೈತದಸ್ತ್ರಂ ಮಯಾ ಶಕ್ಯಂ ದ್ವಿಃ ಪ್ರಯೋಕ್ತುಂ ಜನಾರ್ದನ |
ಅಸ್ತ್ರಂ ಮಾಮೇವ ಹನ್ಯಾದ್ಧಿ ಪಶ್ಯಾದ್ಯಾಸ್ತ್ರಬಲಂ ಮಮ ॥ 23 ॥
ಅರ್ಜುನ ಎಲೈ ಜನಾರ್ದನನೇ, ಈ ಅಸ್ತ್ರವನ್ನು ನಾನು ಎರಡು ಬಾರಿ ಪ್ರಯೋಗಿಸಲು ಶಕ್ಯವಿಲ್ಲ. ಎರಡನೆಯ ಬಾರಿ ಪ್ರಯೋಗಿಸಿದರೆ ಅದು ನನ್ನನ್ನೇ ಕೊಂದೀತಷ್ಟೆ! ಈ ದಿನ ನನ್ನ (ಬೇರೆ) ಅಸ್ತ್ರಗಳ ಬಲವನ್ನು ನೋಡು.
ತತೋ ದುರ್ಯೋಧನಃ ಕೃಷ್ಣೌ ನವಭಿರ್ನತಪರ್ವಭಿಃ |
ಅವಿಧ್ಯತ ರಣೇ ರಾಜನ್ ತ್ವರಯಾಽಽಶೀವಿಷೋಪಮೈಃ ॥ 24 ॥
ಎಲೈ ರಾಜನೇ, ಆಗ ದುರ್ಯೋಧನನು ಕೃಷ್ಣಾರ್ಜುನರ ಮೇಲೆ ಸರ್ಪದಂತಿದ್ದ ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳನ್ನು ಶೀಘ್ರವಾಗಿ ಪ್ರಯೋಗಿಸಿದನು.
ಭೂಯ ಏವಾಭ್ಯವರ್ಷಚ್ಚ ಸ ರಣೇ ಕೃಷ್ಣಪಾಂಡವೌ |
ಶರವರ್ಷೇಣ ಮಹತಾ ತತೋಽಹೃಷ್ಯಂತ ತಾವಕಾಃ ॥ 25 ॥
ಚಕ್ರುರ್ವಾದಿತ್ರನಿನದಾನ್ ಸಿಂಹನಾದರವಾಂಸ್ತದಾ ॥ 26 ॥
ಅವನು ಪುನಃ ಕೃಷ್ಣಾರ್ಜುನರ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಕರೆದನು. ಆಗ ನಿನ್ನವರೆಲ್ಲರೂ ಹರ್ಷಗೊಂಡು ವಾದ್ಯಘೋಷಗಳನ್ನೂ ಮತ್ತು ಸಿಂಹನಾದವನ್ನೂ ಮಾಡಿದರು.
ತತಃ ಕ್ರುದ್ಧೋ ರಣೇ ಪಾರ್ಥಃ ಸೃಕ್ಕಿಣೀ ಪರಿಲೇಲಿಹನ್ |
ನಾಪಶ್ಯತ ತತೋಽಸ್ಯಾಂಗಂ ಯನ್ನ ಸ್ಯಾದ್ ವರ್ಮರಕ್ಷಿತಮ್ ॥ 27 ॥
ಆಗ ಅರ್ಜುನನು ರಣರಂಗದಲ್ಲಿ ಕೋಪಗೊಂಡು, ಕಟಬಾಯಿಯನ್ನು ಸವರಿಕೊಳ್ಳುತ್ತಾ, ಕವಚರಕ್ಷಿತವಲ್ಲದ ದುರ್ಯೋಧನನ ಯಾವ ಅಂಗವನ್ನೂ ಕಾಣಲಿಲ್ಲ.
ತತೋಽಸ್ಯ ನಿಶಿತೈರ್ಬಾಣೈಃ ಜ್ವಲನಾರ್ಕಾನಿಲೋಪಮೈಃ |
ಹಯಾಂಶ್ಚಕಾರ ನಿರ್ದೇಹಾನ್ ತಥೋಭೌ ಪಾರ್ಷ್ಣಿಸಾರಥೀ ॥ 28 ॥
ಆಗ ಹರಿತವಾದ ಜ್ವಲಿಸುವ ಅಗ್ನಿಯನ್ನು ಹೋಲುವ ಬಾಣಗಳನ್ನು ಪ್ರಯೋಗಿಸಿ ಅವನ ಅಶ್ವಗಳನ್ನು ಕೊಂದು, ಅವನ ಇಬ್ಬರು ಪಾರ್ಷ್ಣಿಸಾರಥಿಗಳನ್ನೂ ಸಂಹರಿಸಿದನು.
ಧನುರಸ್ಯಾಚ್ಛಿನತ್ ಕ್ಷಿಪ್ರಂ ಹಸ್ತಾವಾಪಂ ಚ ವೀರ್ಯವಾನ್ |
ರಥಂ ಚ ಶಕಲೀಕರ್ತುಂ ಸವ್ಯಸಾಚೀ ಪ್ರಚಕ್ರಮೇ ॥ 29 ॥
ಪರಾಕ್ರಮಶಾಲಿಯಾದ ಸವ್ಯಸಾಚಿಯು ಅವನ ಧನುಸ್ಸು ಮತ್ತು ಬತ್ತಳಿಕೆಗಳನ್ನು ಕತ್ತರಿಸಿ, ಅವನ ರಥವನ್ನು ಪುಡಿ ಮಾಡಲು ಉಪಕ್ರಮಿಸಿದನು.
ದುರ್ಯೋಧನಂ ತು ಬಾಣಾಭ್ಯಾಂ ತೀಕ್ಷ್ಣಾಭ್ಯಾಂ ವಿರಥೀಕೃತಮ್ |

ಅವಿದ್ಯದ್ ಹಸ್ತತಳಯೋರುಭಯೋರರ್ಜುನಸ್ತದಾ ॥ 30 ॥
ರಥವನ್ನು ಕಳೆದುಕೊಂಡ ದುರ್ಯೋಧನನನ್ನು ಉದ್ದೇಶಿಸಿ ಎರಡು ತೀಕ್ಷ್ಣವಾದ ಬಾಣಗಳನ್ನು ಅರ್ಜುನನು ಅವನ ಎರಡು ಅಂಗೈಗಳಿಗೆ ಹೊಡೆದನು.
ತಂ ಕೃಚ್ಛ್ರಾಮಾಪದಂ ಪ್ರಾಪ್ತಂ ದೃಷ್ಟ್ವಾ ಪರಮಧನ್ವಿನಃ |
ಸಮುತ್ಪೇತುಃ ಪರೀಪ್ಸಂತೋ ಧನಂಜಯಶರಾರ್ದಿತಮ್ ॥ 31 ॥
ಬಹಳ ಕಷ್ಟಕ್ಕೆ ಸಿಲುಕಿದ ದುರ್ಯೋಧನನನ್ನು ನೋಡಿ ಶ್ರೇಷ್ಠ ಧನುರ್ಧಾರಿಗಳು ಬಾಣ ಪೀಡಿತನಾದ ಅವನನ್ನು ರಕ್ಷಿಸಲು ಎಲ್ಲ ಕಡೆಗಳಿಂದಲೂ ಅವನ ಸಮೀಪಕ್ಕೆ ಬಂದರು.
ತೇ ರಥೈರ್ಬಹುಸಾಹಸ್ರೈಃ ಕಲ್ಪಿತೈಃ ಕುಂಜರೈರ್ಹಯೈಃ |
ಪದಾತ್ಯೋಘೈಶ್ಚ ಸಂರಬ್ಧಾಃ ಪರಿವವ್ರುರ್ಧನಂಜಯಮ್ ॥ 32 ॥
ಅವರು ಅನೇಕ ಸಹಸ್ರ ರಥಗಳಿಂದಲೂ, ಯುದ್ಧಕ್ಕೆ ಸಿದ್ಧಗೊಳಿಸಿದ ಗಜಾಶ್ವಗಳಿಂದಲೂ, ಪದಾತಿಗಳ ಸಮೂಹದಿಂದಲೂ ಕೂಡಿದವರಾಗಿ ಅರ್ಜುನನನ್ನು ಸುತ್ತುವರಿದರು.
ಅಥ ನಾರ್ಜುನಗೋವಿಂದೌ ರಥೋ ವಾಽಪಿ ವ್ಯದೃಶ್ಯತ |
ಅಸ್ತ್ರವರ್ಷೇಣ ಮಹತಾ ಶರೌಘೈಶ್ಚಾಪಿ ಸಂವೃತಾಃ ॥ 33 ॥
ಆಗ ಅವರು ಪ್ರಯೋಗಿಸಿದ ಅಸ್ತ್ರಗಳ ಮತ್ತು ಶಸ್ತ್ರಗಳ ಮಳೆಯಿಂದ ಕೃಷ್ಣನಾಗಲೀ, ಅರ್ಜುನನಾಗಲೀ, ಅವರ ರಥವಾಗಲೀ ಕಾಣಲಿಲ್ಲ.
ತತೋಽರ್ಜುನೋಽಸ್ತ್ರವೀರ್ಯೇಣ ವ್ಯಧಮತ್ ತಾಂ ವರೂಥಿನೀಮ್|
ತತ್ರ ವ್ಯಂಗಾಃ ಕೃತಾಃ ಪೇತುಃ ಶತಶೋಽಥ ರಥದ್ವಿಪಾಃ ॥ 34 ॥
ಆಗ ಅರ್ಜುನನು ಸುತ್ತುವರಿದ ಆ ಸೈನ್ಯವನ್ನು ತನ್ನ ಅಸ್ತ್ರವೇಗದಿಂದ ನಾಶಗೊಳಿಸಿದನು. ರಥಗಳು ಮತ್ತು ಗಜಗಳು ತಮ್ಮ ಅಂಗಗಳನ್ನು ಕಳೆದುಕೊಂಡು ನೂರಾರು ಸಂಖ್ಯೆಯಲ್ಲಿ ಅಲ್ಲಿ ಬಿದ್ದವು.
ತೇ ಹತಾ ಹನ್ಯಮಾನಾಶ್ಚ ನ್ಯಗೃಹ್ಣಂಸ್ತಂ ರಥೋತ್ತಮಮ್ |
ಸ ರಥಃ ಸ್ತಂಭಿತಸ್ತಸ್ಥೌ ಕ್ರೋಶಮಾತ್ರಂ ಸಮಂತತಃ |
ತತೋಽರ್ಜುನಂ ವೃಷ್ಣಿವೀರಃ ತ್ವರಿತೋ ವಾಕ್ಯಮಬ್ರವೀತ್ ॥ 35 ॥
ಧನುರ್ವಿಸ್ಫಾರಯಾತ್ಯರ್ಥಮಹಂ ಧ್ಮಾಸ್ಯಾಮಿ ಚಾಂಬುಜಮ್ ॥ 36 ॥
ಮೃತವಾಗಿ ಬಿದ್ದಿದ್ದ ಮತ್ತು ಬೀಳುತ್ತಿದ್ದ ಗಜಾಶ್ವಗಳು ಅರ್ಜುನನ ಶ್ರೇಷ್ಠವಾದ ರಥವನ್ನು ಒಂದು ಕ್ರೋಶ ದೂರದಲ್ಲಿಯೇ ನಿಲ್ಲಿಸಿದವು. ಆಗ ವೃಷ್ಣಿವೀರನಾದ ಕೃಷ್ಣನು ಅರ್ಜುನನನ್ನು ಕುರಿತು ಶೀಘ್ರವಾಗಿ ಮಾತನಾಡುತ್ತಾ, ನೀನು ಧನುಸ್ಸನ್ನು ಬಲವಾಗಿ ಎಳೆದು ಬಾಣಗಳನ್ನು ಪ್ರಯೋಗಿಸು, ನಾನು ಶಂಖವನ್ನು ಊದುವೆನು ಎಂದು ಹೇಳಿದನು.
ತತೋ ವಿಸ್ಫಾರ್ಯ ಬಲವದ್ ಗಾಂಡೀವಂ ನ್ಯಹನದ್ ರಿಪೂನ್ |
ಮಹತಾ ಶರವರ್ಷೇಣ ತಳಶಬ್ದೇನ ಚಾರ್ಜುನಃ ॥ 37 ॥
ಆಗ ಅರ್ಜುನನು ಗಾಂಡೀವ ಧನುಸ್ಸನ್ನು ಬಲವಾಗಿ ಎಳೆದು, ತನ್ನ ಬಾಣಗಳ ಮಳೆಯಿಂದಲೂ, ಹಸ್ತತಳ ಶಬ್ದದಿಂದಲೂ (ಜ್ಯಾತಳ ಶಬ್ದದಿಂದಲೂ) ಶತ್ರುಗಳನ್ನು ಸಂಹರಿಸಿದನು.
ಪಾಂಚಜನ್ಯಂ ಚ ಬಲವದ್ ದಧ್ಮೌ ತಾರೇಣ ಕೇಶವಃ |
ರಜಸಾ ಧ್ವಸ್ತಪಕ್ಷ್ಮಾಕ್ಷಃ ಪ್ರಸ್ವಿನ್ನವದನೋ ಭೃಶಮ್ ॥ 38 ॥
ಕೇಶವನು ತನ್ನ ಕಣ್ಣುರೆಪ್ಪೆಗಳು ಮತ್ತು ಕಣ್ಣುಗಳು ಯುದ್ಧದ ಧೂಳಿನಿಂದ ತುಂಬಿರಲು, ಬೆವರುತ್ತಾ ಬಹಳ ಬಲದಿಂದ ಶಂಖವನ್ನು ಊದಿದನು.
ತೇನಾಚ್ಯುತೋಷ್ಠಯುಗಪೂರಿತಮಾರುತೇನ
ಶಂಖಾಂತರೋದರವಿವೃದ್ಧವಿನಿಃಸೃತೇನ |
ನಾದೇನ ಸಾಸುರವಿಯತ್ಸುರಲೋಕಪಾಲಮ್
ಉದ್ವಿಗ್ನಮೀಶ್ವರ ಜಗತ್ ಸ್ಫುಟತೀವ ಸರ್ವಮ್ ॥ 39 ॥
ಕೃಷ್ಣನು ತನ್ನ ತುಟಿಗಳಿಂದ ಊದಿದ ವಾಯುವು ಶಂಖದ ಉದರವನ್ನು ಪ್ರವೇಶಿಸಿ ಉಂಟು ಮಾಡಿದ ಶಬ್ದದಿಂದ ಸುರಾಸುರ ಲೋಕಪಾಲಕರಿಂದ ಸಹಿತವಾದ ಮೂರು ಲೋಕಗಳೂ ಉದ್ವಿಗ್ನವಾದವು. ಎಲೈ ರಾಜನೇ, ಆ ಶಂಖನಾದವು ಜಗತ್ತನ್ನೇ ಒಡೆಯುವಂತೆ ತೋರಿತು.
ತಸ್ಯ ಶಂಖಸ್ಯ ನಾದೇನ ಧನುಷೋ ನಿಸ್ವನೇನ ಚ |
ನಿಃಸತ್ತ್ವಶ್ಚ ಸಸತ್ತ್ವಶ್ಚ ಕ್ಷಿತೌ ಪೇತುಸ್ತದಾ ಜನಾಃ ॥ 40 ॥
ಆ ಶಂಖನಾದವನ್ನೂ ಮತ್ತು ಧನುಸ್ಸಿನ ನಾದವನ್ನೂ ಕೇಳಿದ ಧೈರ್ಯಶಾಲಿಗಳೂ ಮತ್ತು ಧೈರ್ಯಶಾಲಿಗಳಲ್ಲದವರೂ ಆದ ಜನರು ಭೂಮಿಯ ಮೇಲೆ ಕುಸಿದು ಬಿದ್ದರು.
ತೈರ್ವಿಮುಕ್ತೋ ರಥೋ ರೇಜೇ ವಾಯ್ವೀರಿತ ಇವಾಂಬುದಃ |
ಜಯದ್ರಥಸ್ಯ ಗೋಪ್ತಾರಃ ತತಃ ಕ್ಷುಬ್ಧಾಃ ಸಹಾನುಗಾಃ ॥ 41 ॥
ಅವರು ತಡೆಹಿಡಿದಿದ್ದ ರಥವು ಅವರಿಂದ ಬಿಡುಗಡೆಯನ್ನು ಹೊಂದಿ, ವಾಯುವಿನಿಂದ ಪ್ರೇರಿತವಾದ ಮೇಘದಂತೆಕಂಗೊಳಿಸಿ ಜಯದ್ರಥನ ಸಮೀಪಕ್ಕೆ ಹೋಯಿತು. ಆಗ ಜಯದ್ರಥನ ರಕ್ಷಕರೂ ಮತ್ತು ಅವನ ಅನುಯಾಯಿಗಳು ಕ್ಷೋಭೆಗೊಂಡರು.
ತೇ ದೃಷ್ಟ್ವಾ ಸಹಸಾ ಪಾರ್ಥಂ ಗೋಪ್ತಾರಃ ಸೈಂಧವಸ್ಯ ತು |

ಚಕ್ರುರ್ನಾದಾನ್ ಮಹೇಷ್ವಾಸಾಃ ಕಂಪಯಂತೋ ವಸುಂಧರಾಮ್ ॥
ಅರ್ಜುನನು ಇದ್ದಕ್ಕಿದ್ದಂತೆಯೇ ಸೈಂಧವನ ಸಮೀಪಕ್ಕೆ ಬಂದುದನ್ನು ನೋಡಿ ಮಹಾಧನುರ್ಧಾರಿಗಳಾದ ಸೈಂಧವನ ರಕ್ಷಕರು ಭೂಮಿಯನ್ನು ನಡುಗಿಸುತ್ತಾ ಸಿಂಹನಾದಗಳನ್ನು ಮಾಡಿದರು.
ಬಾಣಶಬ್ದರವಾಂಶ್ಚೋಗ್ರಾನ್ ವಿಮಿಶ್ರಾನ್ ಶಂಖನಿಸ್ವನೈಃ ।
ಪ್ರಾದುಶ್ಚಕ್ರುರ್ಮಹಾತ್ಮಾನಃ ಸಿಂಹನಾದರವಾನಪಿ ॥ 43 ॥
ಮಹಾತ್ಮರಾದ ಅವರು ಶಂಖಧ್ವನಿಮಿಶ್ರಿತವಾದ, ಉಗ್ರವಾದ ಬಾಣಶಬ್ದಗಳ ಘೋಷವನ್ನೂ, ಸಿಂಹನಾದವನ್ನೂ ಪ್ರಾದುರ್ಭವಿಸಿದರು.
ತಂ ಶ್ರುತ್ವಾ ನಿನದಂ ಘೋರಂ ತಾವಕಾನಾಂ ಸಮುತ್ಥಿತಮ್ ।
ಪ್ರದಧ್ಮತುಃ ಶಂಖವರೌ ವಾಸುದೇವಧನಂಜಯೌ ॥ 44 ॥
ನಿನ್ನವರು ಉಂಟುಮಾಡಿದ ಆ ನಿನಾದವನ್ನು ಕೇಳಿ ಕೃಷ್ಣಾರ್ಜುನರು ತಮ್ಮ ಶ್ರೇಷ್ಠವಾದ ಶಂಖಗಳನ್ನು ಊದಿದರು.
ತೇನ ಶಬ್ದೇನ ಮಹತಾ ಪೂರಿತೇಯಂ ವಸುಂಧರಾ ।
ಸಶೈಲಾ ಸಾರ್ಣವದ್ವೀಪಾ ಸಪಾತಾಳಾ ವಿಶಾಂಪತೇ ॥ 45 ॥
ಎಲೈ ರಾಜನೇ, ಕೃಷ್ಣಾರ್ಜುನರು ಊದಿದ ಶಂಖದ ದೊಡ್ಡ ಧ್ವನಿಯಿಂದ ಶೈಲ- ಸಮುದ್ರ-ದ್ವೀಪ-ಪಾತಾಳಾದಿ ಸಹಿತವಾದ ಈ ಭೂಮಿಯು ತುಂಬಿಹೋಯಿತು.
ಸ ಶಬ್ದೋ ಭರತಶ್ರೇಷ್ಠ ವ್ಯಾಪ್ಯ ಸರ್ವಾ ದಿಶೋ ದಶ ।
ಪ್ರತಿಸಸ್ವಾನ ತತ್ರೈವ ಕುರುಪಾಂಡವಯೋರ್ಬಲೇ ॥ 46 ॥
ಎಲೈ ಭರತಶ್ರೇಷ್ಠನೇ, ಆ ಶಬ್ದವು ಹತ್ತುದಿಕ್ಕುಗಳನ್ನೂ ವ್ಯಾಪಿಸಿ ಪುನಃ ಹಿಂದಿರುಗಿ ಕುರುಪಾಂಡವರ ಸೈನ್ಯದಲ್ಲಿ ಪ್ರತಿಧ್ವನಿಸಿತು.
ತಾವಕಾ ರಥಿನಸ್ತತ್ರ ದೃಷ್ಟ್ವಾ ಕೃಷ್ಣಧನಂಜಯೌ ।
ತೇನ ಶಬ್ದೇನ ಮಹತಾ ಸರ್ವಸೈನ್ಯೇಷು ಪಾರ್ಥಿವಾಃ ।
ಸಂಭ್ರಮಂ ಪರಮಂ ಪ್ರಾಪ್ತಾಃ ತ್ವರಮಾಣಾ ಮಹಾರಥಾಃ ॥ 47 ॥
ನಿನ್ನ ರಥಿಕರು ಕೃಷ್ಣಾರ್ಜುನರನ್ನು ನೋಡಿ ನಿನ್ನ ಎಲ್ಲ ಸೈನ್ಯಗಳಲ್ಲಿದ್ದ ಮಹಾರಥರಾದ ಆ ರಾಜರುಗಳು ಆ ದೊಡ್ಡ ಶಂಖನಾದವನ್ನು ಕೇಳಿ, ಬಹಳ ಗಾಬರಿಗೊಂಡು ತ್ವರೆ ಮಾಡಿದರು.
ಅಥ ಕೃಷ್ಣೌ ಮಹಾಭಾಗೌ ತಾವಕಾ ದೃಶ್ಯ ದಂಸಿತಾಃ ।
ಅಭ್ಯದ್ರವನ್ ಯುಧಾಂ ಶ್ರೇಷ್ಠಾಸ್ತದದ್ಭುತಮಿವಾಭವತ್ ॥ 48 ॥
ಅನಂತರ ಯುದ್ಧ ಮಾಡುವವರಲ್ಲಿ ಶ್ರೇಷ್ಠರಾದ ಅವರು ಮಹಾನುಭಾವರಾದ ಕೃಷ್ಣಾರ್ಜುನರು ಸನ್ನದ್ಧರಾಗಿರುವುದನ್ನು ನೋಡಿ ಅವರ ಮೇಲೆ ಎರಗಿದರು. ಆ ದೃಶ್ಯವು ಅದ್ಭುತವಾಗಿದ್ದಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂದನೆಯ ಅಧ್ಯಾಯ
ಭೂರಿಶ್ರವ ಮೊದಲಾದ ಎಂಟು ಮಹಾರಥರ ಜೊತೆಯಲ್ಲಿ
ಅರ್ಜುನನ ಯುದ್ಧ.
ಸಂಜಯಃ
ತಾವಕಾಸ್ತ್ವಭಿಸಂಪ್ರೇಕ್ಷ್ಯ ವೃಷ್ಣ್ಯಂಧಕಕುರೂತ್ತಮೌ ।
ಅತ್ವರಂಸ್ತೌ ಜಿಘಾಂಸಂತಸ್ತಥೈವ ವಿಜಯಃ ಪರಾನ್ ॥ 1 ॥
ಸಂಜಯ ನಿನ್ನವರು ವೃಷ್ಣ್ಯಂಧಕ-ಕುರೂತ್ತಮನೂ, ಕುರುಕುಲೋತ್ತಮನೂ ಆದ ಕೃಷ್ಣಾರ್ಜುನರನ್ನು ನೋಡಿ ಅವರನ್ನು ಕೊಲ್ಲಲು ಬಯಸಿ ತ್ವರೆ ಮಾಡಿದರು. ಅರ್ಜುನನೂ ಶತ್ರುಗಳನ್ನು ಕೊಲ್ಲಲು ತ್ವರೆ ಮಾಡಿದನು.
ಸುವರ್ಣಚಿತ್ರೈರ್ವೈಯಾಘ್ರೈಃ ಸ್ವನವದ್ಭಿರ್ಮಹಾರಥೈಃ ।
ದೀಪಯಂತೋ ದಿಶಃ ಸರ್ವಾ ಜ್ವಲದ್ಭಿರಿವ ಪಾವಕೈಃ ॥ 2 ॥
ರುಗ್ಮಪೃಷ್ಠೈಶ್ಚ ದುಷ್ಪ್ರೇಕ್ಷ್ಯೈಃ ಕಾರ್ಮುಕೈಃ ಪೃಥಿವೀಪತೇ ।
ಕೂಜದ್ಭಿರತುಲಾನ್ ನಾದಾನ್ ರೋಷಿತೈರುರಗೈರಿವ ॥ 3 ॥
ಭೂರಿಶ್ರವಾಃ ಶಲಃ ಕರ್ಣೋ ವೃಷಸೇನೋ ಜಯದ್ರಥಃ ।
ಕೃಪಶ್ಚ ಮದ್ರರಾಜಶ್ಚ ದ್ರೌಣಿಶ್ಚ ರಥಿನಾಂ ವರಃ ॥ 4 ॥
ತೇ ಪಿಬಂತ ಇವಾಕಾಶಮಶ್ವೈರಷ್ಟೌ ಮಹಾರಥಾಃ ।
ವ್ಯನಾದಯನ್ ದಶ ದಿಶೋ ವೈಯಾಘ್ರೈರ್ಹೇಮಚಂದ್ರಕೈಃ ॥ 5 ॥
ಸುವರ್ಣಾಲಂಕೃತವಾದ, ವ್ಯಾಘ್ರಚರ್ಮದಿಂದ ಹೊದಿಸಲ್ಪಟ್ಟ, ಮಹಾಘೋಷದಿಂದ ಕೂಡಿದ ಮಹಾರಥದಿಂದ ಜ್ವಲಿಸುವ ಅಗ್ನಿಯಂತೆ ಎಲ್ಲ ದಿಕ್ಕುಗಳನ್ನೂ ಪ್ರಕಾಶಿಸುತ್ತಾ ಎಲೈ ರಾಜನೇ, ಚಿನ್ನದ ಹಿಡಿಯಿರುವ, ನೋಡಲೂ ಅಸಾಧ್ಯವಾದ, ಘೋಷದಿಂದ ಕೂಡಿದ ರೋಷಗೊಂಡ ಉರಗಗಳಂತೆ ನಾದವನ್ನು ಮಾಡುವ ಧನುಸ್ಸುಗಳಿಂದ ಸಹಿತರಾದ ಭೂರಿಶ್ರವ, ಶಲ, ಕರ್ಣ, ವೃಷಸೇನ,

ಜಯದ್ರಥ, ಕೃಪ, ಶಲ್ಯ, ಅಶ್ವತ್ಥಾಮ- ಈ ಎಂಟು ಮಹಾರಥರು ತಮ್ಮ ರಥದ ಅಶ್ವಗಳಿಂದ ಆಕಾಶವನ್ನೇ ಪಾನ ಮಾಡುವವರಂತೆ ವ್ಯಾಘ್ರಚರ್ಮದ ಪುಂಖಗಳನ್ನು ಹೊದಿಕೆ ಮತ್ತು ಸುವರ್ಣಮಯವಾದ ಚಂದ್ರಗಳಿಂದ ಕೂಡಿದ ತಮ್ಮ ರಥಗಳಿಂದ ಹತ್ತು ದಿಕ್ಕುಗಳನ್ನೂ ಪ್ರತಿಧ್ವನಿಸಿದರು.
ತೇ ದಂಸಿತಾಃ ಸುಸಂರಬ್ಧಾ ರಥೈರ್ಮೇ಼ೌಘನಿಸ್ವನೈಃ |
ಸಮಾವೃಣ್ವನ್ ದಿಶಃ ಸರ್ವಾಃ ಪಾರ್ಥಂ ಚ ವಿಶಿಖೈಃ ಸಹ ॥ 6 ॥
ಕವಚಾದಿ ಯುಕ್ತರೂ, ಬಹಳ ಕೋಪಗೊಂಡವರೂ ಆದ ಅವರು ಮೇಘ ಸಮೂಹಗಳ ನಾದವನ್ನು ಹೋಲುವ ತಮ್ಮ ರಥಗಳಿಂದ ಎಲ್ಲ ದಿಕ್ಕುಗಳನ್ನೂ ಮತ್ತು ಅರ್ಜುನನನ್ನೂ ತಮ್ಮ ಬಾಣಗಳಿಂದ ಆವರಿಸಿದರು.
ಕೌತೂಹಲಾದ್ ಹಯಾಶ್ಚಿತ್ರಾ ವಹಂತಶ್ಚ ಮಹಾರಥಾನ್ |
ವ್ಯಶೋಭಂತ ತದಾಽಽಕಾಶೇ ದೀಪಯಂತೋ ದಿಶೋ ದಶ ॥ 7 ॥
ಕುತೂಹಲದಿಂದ ಆ ಮಹಾರಥರನ್ನು ಹೊರುತ್ತಿದ್ದ ವಿಚಿತ್ರವಾದ ಅಶ್ವಗಳು ಆಕಾಶದಲ್ಲಿ ಹತುತದಿಕ್ಕುಗಳನ್ನೂ ಬೆಳಗುತ್ತಾ ಶೋಭಿಸಿದವು.
ಆಜಾನೇಯೈರ್ಮಹಾವೇಗೈರ್ನಾನಾದೇಶಸಮುದ್ಭವೈಃ |
ಪಾರ್ವತೀಯೈರ್ನದೀಜೈಶ್ಚ ಸೈಂಧವೈಶ್ಚ ಹಯೋತ್ತಮೈಃ ॥ 8 ॥
ಕುರುಯೋಧವರಾ ರಾಜಂಸ್ತವ ಪುತ್ರಮಭೀಪ್ಸವಃ |
ಧನಂಜಯರಥಂ ಶೀಘ್ರಂ ಸರ್ವತಃ ಸಮುಪಾದ್ರವನ್ ॥ 9 ॥
ಎಲೈ ರಾಜನೇ, ಒಳ್ಳೆಯ ಅಶ್ವಕುಲದಲ್ಲಿ ಜನಿಸಿದ, ಮಹಾವೇಗವುಳ್ಳ, ನಾನಾ ದೇಶಗಳಲ್ಲಿ ಜನಿಸಿದ, ಪರ್ವತ ಪ್ರದೇಶದ, ನದೀತೀರ ಪ್ರದೇಶದ ಸಿಂಧುದೇಶದ ಶ್ರೇಷ್ಠವಾದ ಅಶ್ವಗಳಿಂದ ಹೂಡಿದ ರಥದಲ್ಲಿ ಕುಳಿತು ಶ್ರೇಷ್ಠರಾದ ಕುರುಯೋಧರು ನಿನ್ನ ಪುತ್ರನನ್ನು ರಕ್ಷಿಸುವ ಉದ್ದೇಶದಿಂದ ಶೀಘ್ರವಾಗಿ ಅರ್ಜುನನ ರಥದ ಕಡೆಗೆ ಎಲ್ಲ ದಿಕ್ಕುಗಳಿಂದಲೂ ಧಾವಿಸಿದರು.
ಪ್ರಗೃಹ್ಯ ತು ಮಹಾಶಂಖಾನ್ ದಧ್ಮುಃ ಪುರುಷಸತ್ತಮಾಃ |
ಪೂರಯಂತೋ ದಿವಂ ರಾಜನ್ ಪೃಥಿವೀಂ ಚ ಸಸಾಗರಾಮ್ ॥ 10 ॥
ಎಲೈ ರಾಜನೇ, ಪುರುಷಶ್ರೇಷ್ಠರಾದ ಅವರು ದೊಡ್ಡ ಶಂಖಗಳನ್ನು ತೆಗೆದುಕೊಂಡು, ಅಂತರಿಕ್ಷವನ್ನು ಮತ್ತು ಸಾಗರಸಹಿತವಾದ ಭೂಮಿಯನ್ನು ತುಂಬುತ್ತಾ, ಅವುಗಳನ್ನು ಊದಿದರು.
ತಥೈವ ದಧ್ಮತುಃ ಶಂಖೌ ವಾಸುದೇವಧನಂಜಯೌ |
ಪ್ರವರೌ ಸರ್ವಯೋಧಾನಾಂ ಸರ್ವಶಂಖವರೌ ಭುವಿ |
ದೇವದತ್ತಂ ಚ ಕೌಂತೇಯಃ ಪಾಂಚಜನ್ಯಂ ಚ ಕೇಶವಃ ॥ 11 ॥
ಸರ್ವಯೋಧರಲ್ಲಿ ಶ್ರೇಷ್ಠರಾದ ಕೃಷ್ಣಾರ್ಜುನರೂ ಸಹ ಭೂಮಿಯಲ್ಲಿ ಎಲ್ಲ ಶಂಖಗಳಲ್ಲಿ ಶ್ರೇಷ್ಠವಾದ ತಮ್ಮ ಶಂಖಗಳನ್ನು ಹಾಗೆಯೇ ಊದಿದರು. ಅರ್ಜುನನು ದೇವದತ್ತವನ್ನೂ ಮತ್ತು ಕೃಷ್ಣನು ಪಾಂಚಜನ್ಯವನ್ನೂ ಊದಿದನು.
ಶಬ್ದಸ್ತು ದೇವದತ್ತಸ್ಯ ಧನಂಜಯಸಮೀರಿತಃ |
ಪೃಥಿವೀಮಂತರಿಕ್ಷಂ ಚ ದಿಶಶ್ಚೈವ ಸಮಾವೃಣೋತ್ ॥ 12 ॥
ಅರ್ಜುನನು ಊದಿದ ದೇವದತ್ತಶಂಖದ ಶಬ್ದವು ಭೂಮಿಯನ್ನು, ಅಂತರಿಕ್ಷವನ್ನು ಮತ್ತು ಹತ್ತು ದಿಕ್ಕುಗಳನ್ನು ಆವರಿಸಿತು.
ತಥೈವ ಪಾಂಚಜನ್ಯೋಽಪಿ ವಾಸುದೇವಸಮೀರಿತಃ |
ಸರ್ವಶಬ್ದಾನತಿಕ್ರಮ್ಯ ಪೂರಯಾಮಮಾಸ ರೋದಸೀ ॥ 13 ॥
ಹಾಗೆಯೇ ಕೃಷ್ಣನು ಊದಿದ ಪಾಂಚಜನ್ಯ ಶಬ್ದವೂ ಉಳಿದೆಲ್ಲ ಶಬ್ದಗಳನ್ನೂ ಮೀರಿ ಭೂಮಿ ಮತ್ತು ಅಂತರಿಕ್ಷವನ್ನು ತುಂಬಿತು.
ತಸ್ಮಿಂಸ್ತದಾ ವರ್ತಮಾನೇ ದಾರುಣೇ ನಾದಸಂಕುಲೇ |
ಭೀರೂಣಾಂ ತ್ರಾಸಜನನೇ ಶೂರಾಣಾಂ ಹರ್ಷವರ್ಧನೇ ॥ 14 ॥
ಪ್ರವಾದಿತಾಸು ಭೇರೀಷು ಝರ್ಝರೇಷ್ವಾನಕೇಷು ಚ |
ಮೃದಂಗೇಷು ಚ ರಾಜೇಂದ್ರ ವಾದ್ಯಮಾನೇಷ್ವನೇಕಶಃ ॥ 15 ॥
ಮಹಾರಥಸಮಾಖ್ಯಾತಾ ದುರ್ಯೋಧನಹಿತೈಷಿಣಃ |
ಅಮೃಷ್ಯಮಾಣಾಸ್ತಂ ಶಬ್ದಂ ಕ್ರುದ್ಧಾಃ ಪರಮಧನ್ವಿನಃ ॥ 16 ॥
ನಾನಾದೇಶ್ಯಾ ಮಹೀಪಾಲಾ ಸ್ವಸೈನ್ಯಪರಿರಕ್ಷಿಣಃ |
ಅಮರ್ಷಿತಾ ಮಹಾಶಂಖಾನ್ ದಧ್ಮುರ್ವೀರಾ ಮಹಾರಥಾಃ ॥ 17 ॥
ಕೃತೇ ಪ್ರತಿಕರಿಷ್ಯಂತಃ ಕೇಶವಸ್ಯಾರ್ಜುನಸ್ಯ ಚ ॥ 18 ॥
ಭೀರುಗಳಿಗೆ ಭಯಜನಕವೂ, ಶೂರರಿಗೆ ಸಂತೋಷಜನಕವೂ ಆದ ಆ ನಾದಗಳ ಸಮೂಹವು ಹಾಗೆ ದಾರುಣವಾಗಿರುತ್ತಿರಲು, ಎಲೈ ರಾಜೇಂದ್ರನೇ, ಭೇರಿಗಳು, ಝರ್ಝರಗಳು, ಆನಕಗಳು ಮತ್ತು ಮೃದಂಗಗಳು ಅನೇಕ ಸಂಖ್ಯೆಯಲ್ಲಿ ಬಾರಿಸಲ್ಪಡುತ್ತಿರಲು, ಮಹಾರಥರಿಂದ ಪರಿವೃತರಾದ, ದುರ್ಯೋಧನನ ಹಿತೈಷಿಗಳಾದ ನಾನಾ ದೇಶದಿಂದ ಬಂದ ತಮ್ಮ ತಮ್ಮ ಸೈನ್ಯವನ್ನು ರಕ್ಷಿಸುವ ರಾಜರು ಆ ಶಂಖಧ್ವನಿಯನ್ನು ಕೇಳಿ ಸಹಿಸದೆ ಕ್ರುದ್ಧರಾಗಿ ಮಹಾಧನುರ್ಧಾರಿಗಳೂ, ಮಹಾರಥರೂ, ವೀರರೂ ಆದ ಅವರು ಕೋಪದಿಂದ ಕೂಡಿದವರಾಗಿ ಕೇಶವಾರ್ಜುನರು ಮಾಡಿದುದಕ್ಕೆ ಪ್ರತಿಯಾಗಿ ಎಲ್ಲವನ್ನೂ ಮಾಡುತ್ತಾ, ತಮ್ಮ ಮಹಾಶಂಖಗಳನ್ನು ಊದಿದರು.
ಬಭೂವ ತವ ತತ್ ಸೈನ್ಯಂ ಶಂಖಶಬ್ದೇ ಸಮೀರಿತೇ |
ಉದ್ವಿಗ್ನನರನಾಗಾಶ್ವಮಸ್ವಸ್ಥಮಪಿ ಚಾಭಿಭೋ ॥ 19 ॥

ಎಲೈ ಶತ್ರುನಿವಾರಕನೇ, ಕೃಷ್ಣಾರ್ಜುನರು ಹಾಗೆ ಶಂಖಶಬ್ಧವನ್ನು ಉಂಟು ಮಾಡುತ್ತಿರಲು ಅದನ್ನು ಕೇಳಿದ ನರ-ನಾಗಾಶ್ವಗಳಿಂದ ಕೂಡಿದ ನಿನ್ನ ಸೈನ್ಯವು ಉದ್ವೇಗವನ್ನು ಹೊಂದಿತು ಮತ್ತು ಅಸ್ವಸ್ಥವಾಯಿತು.

ತತ್ ಪ್ರಯುಕ್ತಮನಾಧೃಷ್ಯಂ ಭೇರೀಶಂಖನಿನಾದಿತಮ್ |
ಬಭೂವ ಭೃಶಮುದ್ವಿಗ್ನಂ ನಿರ್ಘಾತೈರಿವ ಸಂವೃತಮ್ ॥ 20 ॥
ಕೃಷ್ಣಾರ್ಜುನರಿಂದ ಸಂಯುಕ್ತವಾದ, ಭೇರೀ ಶಂಖ ಸಹಿತವಾದ, ಅಡಗಿಸಲು ಅಸಾಧ್ಯವಾದ ಆ ಶಂಖನಾದವನ್ನು ಕೇಳಿ ಸಿಡಿಲುಗಳ ಹೊಡೆತಕ್ಕೆ ಸಿಲುಕಿದಂತೆ ನಿನ್ನ ಸೈನ್ಯವು ಬಹಳ ಉದ್ವಿಗ್ನವಾಯಿತು.

ಸ ಶಬ್ಧಃ ಸುಮಹಾನ್ ರಾಜನ್ ದಿಶಃ ಸರ್ವಾ ವಿನಾದಯನ್ |
ತ್ರಾಸಯಾಮಾಸ ತತ್ ಸೈನ್ಯಂ ಯುಗಾಂತ ಇವ ಸಂವೃತಮ್ ॥ 21 ॥
ಎಲೈ ರಾಜನೇ, ಆ ಶಬ್ಧವು ಬಹಳ ದೊಡ್ಡದಾಗಿದ್ದು, ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಾ ಯುಗಾಂತ ಕಾಲದಲ್ಲಿಯೋ ಎಂಬಂತೆ ಸಮೃದ್ಧವಾಗಿದ್ದ ನಿನ್ನ ಸೈನ್ಯವನ್ನು ಭಯಗೊಳಿಸಿತು.

ತತೋ ದುರ್ಯೋಧನೋಽಷ್ಟೌ ಚ ರಾಜಾನಸ್ತೇ ಮಹಾರಥಾಃ |
ಜಯದ್ರಥಸ್ಯ ರಕ್ಷಾರ್ಥಂ ಪಾಂಡವಂ ಪರ್ಯವಾರಯನ್ ॥ 22 ॥
ಆಗ ದುರ್ಯೋಧನನೂ ಮತ್ತು ಮಹಾರಥರಾದ ಆ ಎಂಟು ರಾಜರೂ ಸಹ ಸೈಂಧವನನ್ನು ರಕ್ಷಣೆ ಮಾಡುವ ಸಲುವಾಗಿ ಅರ್ಜುನನನ್ನು ಸುತ್ತುವರಿದರು.

ತತೋ ದ್ರೌಣಿಸ್ತ್ರಿಸಪ್ತತ್ಯಾ ವಾಸುದೇವಮತಾಡಯತ್ |
ಅರ್ಜುನಂ ಚ ತ್ರಿಭಿರ್ಭಲ್ಲೈರ್ಧ್ವಜಮಶ್ವಾಂಶ್ಚ ಪಂಚಭಿಃ ॥ 23 ॥
ಆಗ ಅಶ್ವತ್ಥಾಮರು ಎಪ್ಪತ್ಮೂರು ಬಾಣಗಳಿಂದ ಕೃಷ್ಣನನ್ನೂ, ಮೂರು ಬಾಣಗಳಿಂದ ಅರ್ಜುನನನ್ನೂ, ಅರ್ಜುನನ ರಥದ ಧ್ವಜಾಶ್ವಗಳನ್ನು ಐದು ಭಲ್ಲಗಳಿಂದಲೂ ಹೊಡೆದರು.

ತಮರ್ಜುನಃ ಪೃಷತ್ಕಾನಾಂ ಶತೈಃ ಷಡ್ಭಿರತಾಡಯತ್ |
ಅತ್ಯರ್ಥಮಿವ ಸಂಕ್ರುದ್ಧಃ ಪ್ರತಿವಿದ್ಧೇ ಜನಾರ್ದನೇ ॥ 24 ॥
ಕೃಷ್ಣನು ಅಶ್ವತ್ಥಾಮರಿಂದ ಹೊಡೆಯಲ್ಪಡುತ್ತಿರಲು ಬಹಳ ಕೋಪಗೊಂಡ ಅರ್ಜುನನು ಅಶ್ವತ್ಥಾಮರನ್ನು ಆರುನೂರು ಬಾಣಗಳಿಂದ ಹೊಡೆದನು.

ಕರ್ಣಂ ದ್ವಾದಶಭಿರ್ವಿದ್ಧ್ವಾ ವೃಷಸೇನಂ ತ್ರಿಭಿಸ್ತಥಾ |
ಶಲ್ಯಸ್ಯ ಸಶರಂ ಚಾಪಂ ಮುಷ್ಟೌ ಚಿಚ್ಛೇದ ವೀರ್ಯವಾನ್ |
ಗೃಹೀತ್ವಾ ಧನುರನ್ಯತ್ ತು ಶಲ್ಯೋ ವಿವ್ಯಾಧ ಪಾಂಡವಮ್ ॥ 25 ॥
ಕರ್ಣನನ್ನು ಹನ್ನೆರಡು ಬಾಣಗಳಿಂದಲೂ, ವೃಷಸೇನನನ್ನು ಮೂರು ಬಾಣಗಳಿಂದಲೂ ಹೊಡೆದು, ಪರಾಕ್ರಮಶಾಲಿಯಾದ ಅರ್ಜುನನು ಬಾಣ ಸಹಿತವಾದ ಶಲ್ಯನ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು. ಶಲ್ಯನಾದರೂ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ಭೂರಿಶ್ರವಾಸ್ತ್ರಿಭಿರ್ಬಾಣೈರ್ಹೇಮಪುಂಖೈಃ ಶಿಲಾಶಿತೈಃ |
ಕರ್ಣೋ ದ್ವಾವಿಂಶತಾ ಚೈವ ವೃಷಸೇನಶ್ಚ ಪಂಚಭಿಃ ॥ 26 ॥
ಜಯದ್ರಥಸ್ತ್ರಿಸಪ್ತತ್ಯಾ ಕೃಪಶ್ಚ ದಶಭಿಃ ಶರೈಃ |
ಮದ್ರರಾಜಶ್ಚ ದಶಭಿರ್ವಿವ್ಯಧುಃ ಫಲ್ಗುನಂ ರಣೇ ॥ 27 ॥
ಆಗ ಭೂರಿಶ್ರವನು ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಸುವರ್ಣಪುಂಖಗಳನ್ನು ಹೊಂದಿದ ಮೂರು ಬಾಣಗಳಿಂದಲೂ, ಕರ್ಣನು ಇಪ್ಪತ್ತೆರಡು ಬಾಣಗಳಿಂದಲೂ, ವೃಷಸೇನನು ಐದು ಬಾಣಗಳಿಂದಲೂ, ಜಯದ್ರಥನು ಎಪ್ಪತ್ಮೂರು ಬಾಣಗಳಿಂದಲೂ, ಕೃಪರು ಹತ್ತು ಬಾಣಗಳಿಂದಲೂ, ಮದ್ರರಾಜನು ಹತ್ತು ಬಾಣಗಳಿಂದಲೂ ಅರ್ಜುನನನ್ನು ರಣರಂಗದಲ್ಲಿ ಹೊಡೆದರು.

ತತಃ ಶರಾಣಾಂ ಷಷ್ಟ್ಯಾ ತು ದ್ರೌಣಿಃ ಪಾರ್ಥಮವಾಕಿರತ್ |
ವಾಸುದೇವಂ ಚ ಸಪ್ತತ್ಯಾ ಪುನಃ ಪಾರ್ಥಂ ಚ ಸಪ್ತಭಿಃ ॥ 28 ॥
ಅನಂತರ ಅಶ್ವತ್ಥಾಮರು ಅರವತ್ತು ಬಾಣಗಳಿಂದ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಕೃಷ್ಣನನ್ನು ಎಪ್ಪತ್ತು ಬಾಣಗಳಿಂದಲೂ, ಅರ್ಜುನನನ್ನು ಪುನಃ ಏಳು ಬಾಣಗಳಿಂದಲೂ ಹೊಡೆದರು.

ಪ್ರಹಸಂಸ್ತು ನರವ್ಯಾಘ್ರಃ ಶ್ವೇತಾಶ್ವಃ ಕೃಷ್ಣಸಾರಥಿಃ |
ಪ್ರತ್ಯವಿದ್ಧ್ಯತ ತಾನ್ ಸರ್ವಾನ್ ದರ್ಶಯನ್ ಪಾಣಿಲಾಘವಮ್ ॥
ನರವ್ಯಾಘ್ರನೂ, ಶ್ವೇತಾಶ್ವವಾಹನನೂ, ಕೃಷ್ಣಸಾರಥಿಯೂ ಆದ ಅರ್ಜುನನು ನಗುತ್ತಾ, ತನ್ನ ಹಸ್ತಲಾಘವವನ್ನು ತೋರಿಸುತ್ತಾ ಅವರೆಲ್ಲರನ್ನೂ ಪ್ರತಿಯಾಗಿ ಹೊಡೆದನು.

ಕರ್ಣಂ ದ್ವಾದಶಭಿರ್ವಿದ್ಧ್ವಾ ವೃಷಸೇನಂ ತ್ರಿಭಿಃ ಶರೈಃ |
ಶಲ್ಯಸ್ಯ ಸಶರಂ ಚಾಪಂ ಮುಷ್ಟಿದೇಶೇ ನ್ಯಕೃಂತತ ॥ 30 ॥
ಅವನು ಕರ್ಣನನ್ನು ಹನ್ನೆರಡು ಬಾಣಗಳಿಂದಲೂ, ವೃಷಸೇನನನ್ನು ಮೂರು ಬಾಣಗಳಿಂದಲೂ ಹೊಡೆದು, ಶಲ್ಯನ ಬಾಣಸಹಿತವಾದ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು.

ಸೌಮದತ್ತಿಂ ತ್ರಿಭಿರ್ವಿದ್ಧ್ವಾ ಶಲ್ಯಂ ಚ ನವಭಿಃ ಶರೈಃ |
ಶರೈರಾಶೀವಿಷಾಕಾರೈರ್ದ್ರೌಣಿಂ ವಿವ್ಯಾಧ ಚಾಷ್ಟಭಿಃ ॥ 31 ॥
ಭೂರಿಶ್ರವನನ್ನು ಮೂರು ಬಾಣಗಳಿಂದಲೂ, ಶಲ್ಯನನ್ನು ಒಂಬತ್ತು ಬಾಣಗಳಿಂದಲೂ ಹೊಡೆದು, ಸರ್ಪವನ್ನು ಹೋಲುವ ಎಂಟು

ಬಾಣಗಳಿಂದ ಅಶ್ವತ್ಥಾಮರನ್ನು ಹೊಡೆದನು.
ಗೌತಮಂ ಪಂಚವಿಂಶತ್ಯಾ ಸೈಂಧವಂ ಚ ಶತೇನ ಹ |
ಪುನರ್ದ್ರೌಣಿಂ ಚ ವಿಂಶತ್ಯಾ ಶರಾಣಾಂ ಸೋಽಭ್ಯತಾಡಯತ್ ॥ 32 ॥
ಕೃಪರನ್ನು ಇಪ್ಪತ್ತೈದು ಬಾಣಗಳಿಂದಲೂ, ಸೈಂಧವನನ್ನು ನೂರು ಬಾಣಗಳಿಂದಲೂ, ಅಶ್ವತ್ಥಾಮರನ್ನು ಪುನಃ ಇಪ್ಪತ್ತು ಬಾಣಗಳಿಂದಲೂ ಅವನು ಹೊಡೆದನು.
ಭೂರಿಶ್ರವಾಸ್ತು ಸಂಕ್ರುದ್ಧಃ ಪ್ರತೋದಂ ಚಿಚ್ಛಿದೇ ಹರೇಃ |
ಅರ್ಜುನಂ ಚ ತ್ರಿಸಪ್ತತ್ಯಾ ಬಾಣಾನಾಮಾಜಘಾನ ಹ ॥ 33॥
ಭೂರಿಶ್ರವನಾದರೋ ಬಹಳ ಕೋಪಗೊಂಡು ಕೃಷ್ಣನ ಚಾವಟಿಯನ್ನು ಕತ್ತರಿಸಿದನು. ಮತ್ತು ಅರ್ಜುನನನ್ನು ಎಪ್ಪತ್ಮೂರು ಬಾಣಗಳಿಂದ ಹೊಡೆದನು.
ತತಃ ಶರಶತೈಸ್ತೀಕ್ಷ್ಣೈಸ್ತಾನರೀನ್ ಶ್ವೇತವಾಹನಃ |
ಪ್ರತ್ಯಷೇಧದ್ ದ್ರುತಂ ಕ್ರುದ್ಧೋ ಮಹಾವಾತೋ ಘನಾನಿವ ॥ 34 ॥
ಆಗ ಶ್ವೇತವಾಹನನಾದ ಅರ್ಜುನನು ಶೀಘ್ರವಾಗಿ ಕ್ರುದ್ಧನಾಗಿ ಆ ಶತ್ರುಗಳನ್ನು ಮಹಾವಾಯುವು ಮೋಡಗಳನ್ನು ತಡೆದಂತೆ ತೀಕ್ಷ್ಣವಾದ ನೂರು ಬಾಣಗಳಿಂದ ಆ ಶತ್ರುವನ್ನು ತಡೆದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆರಡನೆಯ ಅಧ್ಯಾಯ
ಸಂಜಯನಿಂದ ಸೈನ್ಯದ ರಥ-ಧ್ವಜಗಳ ವರ್ಣನೆ.
ಧೃತರಾಷ್ಟ್ರಃ
ಧ್ವಜಾನ್ ಬಹುವಿಧಾಕಾರಾನ್ ಭ್ರಾಜಮಾನಾನತಿಶ್ರಿಯಾ |
ಪಾರ್ಥಾನಾಂ ಮಾಮಕಾನಾಂ ಚ ತಾನ್ ಮಮಾಚಕ್ಷ್ವ ಸಂಜಯ ॥1॥
ಧೃತರಾಷ್ಟ್ರ ಎಲೈ ಸಂಜಯನೇ, ಬಹಳ ಕಾಂತಿಯಿಂದ ಬೆಳಗುವ ನಾನಾ ವಿಧ ಆಕಾರವನ್ನು ಹೊಂದಿರುವ ಪಾಂಡವರ ಮತ್ತು ನನ್ನವರ ಧ್ವಜಗಳನ್ನು ನನಗೆ ತಿಳಿಸು.
ಸಂಜಯಃ
ಧ್ವಜಾನ್ ಬಹುವಿಧಾಕಾರಾನ್ ಶೃಣು ತೇಷಾಂ ಮಹಾತ್ಮನಾಮ್ |
ಪ್ರತ್ಯದೃಶ್ಯಂತ ರಾಜೇಂದ್ರ ಜ್ವಲಿತಾ ಇವ ಪಾವಕಾಃ ॥ 2 ॥
ತೇಷಾಂ ತು ರಥಮುಖ್ಯಾನಾಂ ರಥೇಷು ವಿವಿಧಾ ಧ್ವಜಾಃ ॥ 3 ॥
ಸಂಜಯ ಎಲೈ ರಾಜೇಂದ್ರನೇ, ಮಹಾತ್ಮರಾದ ಆ ರಥಶ್ರೇಷ್ಠರ ಜ್ವಲಿಸುವ ಅಗ್ನಿಗಳಂತೆ ಶೋಭಿಸುವ, ನಾನಾ ವಿಧವಾದ ಆಕಾರವನ್ನು ಹೊಂದಿದ, ವಿವಿಧವಾದ ರಥದಲ್ಲಿ ಯೋಜಿಸಿದ ಧ್ವಜಗಳನ್ನು ಕೇಳು.
ಕಾಂಚನಾಃ ಕಾಂಚನಾಪೀಡಾಃ ಕಾಂಚನಸ್ರಗಲಂಕೃತಾಃ |
ಕಾಂಚನಾನೀವ ಶೃಂಗಾಣಿ ಕಾಂಚನಸ್ಯ ಮಹಾಗಿರೇಃ ॥ 4 ॥
ಸುವರ್ಣಮಯವಾದ, ಮೇಲ್ಭಾಗದಲ್ಲಿ ಸುವರ್ಣಾಭರಣವನ್ನು ಹೊಂದಿದ, ಸುವರ್ಣಮಯವಾದ ಮಾಲೆಗಳಿಂದ ಅಲಂಕೃತವಾದ ಆ ಧ್ವಜಗಳು ಸುವರ್ಣ ಪರ್ವತದ ಸುವರ್ಣಶೃಂಗಗಳಂತೆ ಇವೆ.
ಅನೇಕವರ್ಣಾ ವಿವಿಧಾ ಧ್ವಜಾಃ ಪರಮಶೋಭನಾಃ |
ತೇ ಧ್ವಜಾಃ ಸಂವೃತಾಸ್ತೇಷಾಂ ಪತಾಕಾಭಿಃ ಸಮಂತತಃ |
ನಾನಾವರ್ಣವಿಚಿತ್ರಾಭಿಃ ಶೋಭಂತೇ ಸರ್ವತೋದಿಶಃ ॥ 5 ॥
ಆ ಧ್ವಜಗಳು ಅನೇಕ ವರ್ಣಗಳಿಂದ ಕೂಡಿದ್ದು, ಸುಂದರವಾಗಿ ವಿಧವಿಧವಾಗಿವೆ. ಆ ಧ್ವಜಗಳು ಎಲ್ಲ ಕಡೆಗಳಿಂದಲೂ ನಾನಾ ವರ್ಣದ ವಿಚಿತ್ರವಾದ ಪತಾಕೆಗಳಿಂದ ಆವೃತವಾಗಿವೆ.
ಪತಾಕಾಶ್ಚ ತತಸ್ತಾಸ್ತು ಶ್ವಸನೇನ ಸಮೀರಿತಾಃ |
ನೃತ್ಯಮಾನಾಃ ಪ್ರದೃಶ್ಯಂತೇ ರಂಗಮಧ್ಯೇ ಯಥಾ ಸ್ತ್ರಿಯಃ ॥ 6 ॥
ವಾಯುವಿನ ವೇಗದಿಂದ ಪ್ರಚೋದಿಸಲ್ಪಟ್ಟ ಆ ಪತಾಕೆಗಳು ರಂಗಮಧ್ಯದಲ್ಲಿ ನರ್ತನವನ್ನು ಮಾಡುವ ಸ್ತ್ರೀಯರಂತೆ ಕಂಡುಬರುತ್ತವೆ.
ಇಂದ್ರಾಯುಧಸವರ್ಣಾಭಾಃ ಪತಾಕಾ ಭರತರ್ಷಭ |
ದೋಧೂಯಮಾನಾ ರಥಿನಾಂ ಶೋಭಯಂತಿ ಮಹಾರಥಾಃ ॥ 7 ॥
ಎಲೈ ಭರತಶ್ರೇಷ್ಠನೇ, ಇಂದ್ರಾಯುಧಕ್ಕೆ ಸಮಾನವಾದ ಕಾಂತಿಯುಳ್ಳ, ಗಾಳಿಯಲ್ಲಿ ಪಟಪಟಿಸುವ ಆ ಪತಾಕೆಗಳು ರಥಶ್ರೇಷ್ಠರ ಮಹಾರಥಗಳಿಗೆ ಶೋಭೆಯನ್ನು ತಂದುಕೊಡುತ್ತವೆ.
ಸಿಂಹಲಾಂಗೂಲಮುಗ್ರಾಸ್ಯಂ ಧ್ವಜಂ ವಾನರಲಕ್ಷಣಮ್ |

ಧನಂಜಯಸ್ಯ ಸಂಗ್ರಾಮೇ ಪ್ರತ್ಯಪಶ್ಯಾಮ ಭೈರವಮ್ ॥ 8 ॥
ಸ ವಾನರಧ್ವಜೋ ರಾಜನ್ ಪತಾಕಾಭಿರಲಂಕೃತಃ ।
ತ್ರಾಸಯಾಮಾಸ ತತ್ ಸೈನ್ಯಂ ಧ್ವಜೋ ಗಾಂಡೀವಧನ್ವನಃ ॥ 9 ॥
ಸಿಂಹಲಾಂಗೂಲ(ಬಾಲ)ವನ್ನು ಹೊಂದಿದ, ಭಯಂಕರವಾದ ಮುಖವನ್ನು ಹೊಂದಿದ, ಭೀಕರವಾದ ಧನಂಜಯನ ವಾನರ ಧ್ವಜವನ್ನು ನಾವು ರಣರಂಗದಲ್ಲಿ ನೋಡಿದೆವು. ಎಲೈ ರಾಜನೇ, ಗಾಂಡೀವ ಧನುರ್ಧಾರಿಯಾದ, ಪತಾಕೆಗಳಿಂದ ಅಲಂಕೃತವಾದ ಅರ್ಜುನನ ಆ ಧ್ವಜವು ನಿನ್ನ ಸೈನ್ಯವನ್ನು ಭಯಗೊಳಿಸಿತು.
ತಥೈವ ಸಿಂಹಲಾಂಗೂಲಂ ದ್ರೋಣಪುತ್ರಸ್ಯ ಭಾರತ ।
ಧ್ವಜಾಗ್ರೇ ಸಮಪಶ್ಯಾಮ ಬಾಲಸೂರ್ಯಸಮಪ್ರಭಮ್ ॥ 10 ॥
ಕಾಂಚನಂ ಪವನೋದ್ಧೂತಂ ಶಕ್ರಧ್ವಜಸಮದ್ಯುತಿ ।
ನಂದನಂ ಕೌರವೇಯಾಣಾಂ ದ್ರೌಣೇರ್ಲಕ್ಷಣಮುಚ್ಛ್ರಿತಮ್ ॥ 11 ॥
ಎಲೈ ಭಾರತನೇ, ಹಾಗೆಯೇ ಬಾಲಸೂರ್ಯ ಕಾಂತಿಯುಳ್ಳ ಸಿಂಹಲಾಂಗೂಲ (ಬಾಲ)ಧ್ವಜವನ್ನು ನಾವು ಅಶ್ವತ್ಥಾಮರ ರಥದ ಮೇಲ್ಭಾಗದಲ್ಲಿ ನೋಡಿದೆವು. ಶಕ್ರಧ್ವಜಕ್ಕೆ ಸಮವಾದ ಕಾಂತಿಯುಳ್ಳ, ವಾಯುವಿನಿಂದ ಮೇಲ್ಮುಖವಾಗಿ ಮಾಡಲ್ಪಟ್ಟ, ಕಾಂಚನ ಮಯವಾದ, ಎತ್ತರವಾದ ಅಶ್ವತ್ಥಾಮರ ಧ್ವಜವು ಕೌರವರಿಗೆ ಸಂತೋಷವನ್ನು ಕೊಡುವುದಾಗಿದ್ದಿತು.
ಹಸ್ತಕಾಕ್ಯಾ ಪುನರ್ಹೈಮೀ ಬಭೂವಾಧಿರಥೇರ್ಧ್ವಜಃ ।
ಖಂ ಚಾಹವೇ ಮಹಾರಾಜ ದದೃಶೇ ಪೂರಯನ್ನಿವ ॥ 12 ॥
ಪತಾಕೀ ಕಾಂಚನಃ ಸ್ರಗ್ವೀ ಧ್ವಜಃ ಕರ್ಣಸ್ಯ ಸಂಯುಗೇ ।
ನೃತ್ಯತೀವ ರಥೋಪಸ್ಥೇ ಶ್ವಸನೇನ ಸಮೀರಿತಃ ॥ 13 ॥
ಎಲೈ ಮಹಾರಾಜನೇ, ಹಸ್ತಪ್ರಮಾಣದ ಸುವರ್ಣಮಯವಾದ ಕಾಕದಿಂದ ಕೂಡಿದ ಧ್ವಜವು ಕರ್ಣನ ಧ್ವಜ. ಯುದ್ಧದಲ್ಲಿ ಅದು ಆಕಾಶವನ್ನು ತುಂಬುವಂತೆ ತೋರುತ್ತಿದ್ದಿತು. ಪತಾಕೆಗಳನ್ನು ಧರಿಸಿದ ಕರ್ಣನ ಸುವರ್ಣಮಯವಾದ ಧ್ವಜವು ರಣರಂಗದಲ್ಲಿ ರಥಮಧ್ಯದಲ್ಲಿ ವಾಯುವಿನಿಂದ ಪ್ರೇರಿತವಾಗಿ ನರ್ತನವನ್ನು ಮಾಡುವಂತಿದ್ದಿತು.
`ಉತ್ಪತ್ಯ ತು ಮಹಾವೇಗಃ ಕಾಕಮಭ್ಯಾಹನತ್ ಕಪಿಃ' ಎಂದು ಕರ್ಣಪರ್ವದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಹಸ್ತಕಾಕ್ಯಾ ಶಬ್ದಕ್ಕೆ ಹಸ್ತಪ್ರಮಾಣದ ಕಾಗೆಯೆಂದೇ ಅರ್ಥವನ್ನು ಮಾಡಬೇಕು. ಹಸಿತಕಕ್ಷ್ಯಾ ಎಂದು ಪಾಠವಿದ್ದರೂ ಅದಕ್ಕೆ ಲಕ್ಷಣಾವೃತ್ತಿಯಿಂದ ಅಥವಾ ರೂಢಿಯಿಂದ ಕಾಕ ಎಂದೇ ಅರ್ಥವನ್ನು ಮಾಡಬೇಕು- ಲಕ್ಷಾಲಂಕಾರ.
ಆಚಾರ್ಯಸ್ಯ ಚ ಪಾಂಡೂನಾಂ ಬ್ರಾಹ್ಮಣಸ್ಯ ಯಶಸ್ವಿನಃ ।
ಗೋವೃಷೋ ಗೌತಮಸ್ಯಾಸೀತ್ ಕೃಪಸ್ಯ ಚ ಪರಿಷ್ಕೃತಃ ॥ 14 ॥
ಸ ತೇನ ಭ್ರಾಜತೇ ರಾಜನ್ ಗೋವೃಷೇಣ ಮಹಾರಥಃ ।
ತ್ರಿಪುರಘ್ನರಥೋ ಯದ್ವದ್ ಗೋವೃಷೇಣ ವಿರಾಜತಾ ॥ 15 ॥
ಪಾಂಡವರಿಗೆ ಆಚಾರ್ಯರಾದ, ಗೌತಮರಾದ ಕೃಪಾಚಾರ್ಯರ ಧ್ವಜವು ಅಲಂಕೃತವಾದ ಗೋವೃಷವಾಗಿದೆ. ಎಲೈ ರಾಜನೇ, ಮಹಾರಥರಾದ ಅವರು ಆ ಗೋವೃಷಭದಿಂದ ತ್ರಿಪುರಸಂಹಾರಿಯಾದ ರುದ್ರನು ಗೋವೃಷಧ್ವಜದಿಂದ ವಿರಾಜಿಸುವಂತೆ ವಿರಾಜಿಸುತ್ತಾರೆ.
ಮಯೂರೋ ವೃಷಸೇನಸ್ಯ ಕಾಂಚನೋ ಮಣಿರತ್ನವಾನ್ ।
ವ್ಯಾಹರನ್ನಿವ ಚಾತಿಷ್ಠತ್ ಸೇನಾಗ್ರಮಭಿಶೋಭಯನ್ ॥ 16 ॥
ತೇನ ತಸ್ಯ ರಥೋ ಭಾತಿ ಮಯೂರೇಣ ಮಹಾತ್ಮನಃ ।
ಯಥಾ ಸ್ಕಂದರಥೋ ರಾಜನ್ ಮಯೂರೇಣ ವಿರಾಜತಾ ॥ 17 ॥
ವೃಷಸೇನನ ಧ್ವಜವು ಕಾಂಚನಮಯವಾದ, ಮಣಿರತ್ನಭೂಷಿತವಾದ ಮಯೂರ. ಆ ಧ್ವಜವು ಅವನ ಸೇನಾಮುಖವನ್ನು ಶೋಭಿಸುತ್ತಾ ಮಾತನಾಡುವಂತೆ ತೋರುತ್ತಿದ್ದಿತು. ಎಲೈ ರಾಜನೇ, ಮಯೂರಧ್ವಜಯುಕ್ತವಾದ ಮಹಾತ್ಮನಾದ ಅವನ ರಥವು ಮಯೂರದಿಂದ ಕೂಡಿಕೊಂಡು ವಿರಾಜಮಾನವಾದ ಷಣ್ಮುಖನ ರಥದಂತೆ ಶೋಭಿಸುತ್ತದೆ.
ಮದ್ರರಾಜಸ್ಯ ಶಲ್ಯಸ್ಯ ಧ್ವಜಾಗ್ರೇಽಗ್ನಿಶಿಖಾಮಿವ ।
ಸೌವರ್ಣೀಂ ಪ್ರತ್ಯಪಶ್ಯಾಮ ಸೀತಾಮಪ್ರತಿಮಾಂ ಶುಭಾಮ್ ॥ 18 ॥
ಸಾ ಸೀತಾ ಭ್ರಾಜತೇ ತಸ್ಯ ರಥಮಾಸಾದ್ಯ ಮಾರಿಷ ।
ಸರ್ವಬೀಜವಿರೂಢೇವ ಯಥಾ ಸೀತಾ ಶ್ರಿಯಾ ವೃತಾ ॥ 19 ॥
ಮದ್ರರಾಜನ ಶಲ್ಯನ ಧ್ವಜದ ಮೇಲ್ಭಾಗದಲ್ಲಿ ಸುವರ್ಣಮಯವಾದ ಚೌಕಾಕಾರವಾದ ಭೂಮಿಯಿದೆ. ಎಲೈ ಪೂಜ್ಯನೇ, ಆ ಭೂಮಿಯಾದರೂ ಸರ್ವಸಸ್ಯಗಳು ಅಂಕುರಿಸಿದ ಕೇದಾರದಂತೆ (ಚಚ್ಚೌಕವಾದ ಭೂಮಿಯಂತೆ) ಶೋಭಿಸುತ್ತದೆ.
ವರಾಹಃ ಸಿಂಧುರಾಜಸ್ಯ ರಾಜತೋಽಭಿವಿರಾಜತೇ ।
ಧ್ವಜಾಗ್ರೇ ಲೋಹಿತಾರ್ಕಾಭೋ ಹೇಮಜಾಲಪರಿಷ್ಕೃತಃ ॥ 20 ॥
ಶುಶುಭೇ ಕೇತುನಾ ತೇನ ರಾಜತೇನ ಜಯದ್ರಥಃ ।
ಯಥಾ ದೈವಾಸುರೇ ಯುದ್ಧೇ ಪುರಾ ಪೂಷಾ ಸ್ಮ ಶೋಭತೇ ॥ 21 ॥
ಸಿಂಧುರಾಜನ ರಜತಮಯವಾದ, ಹೇಮಜಾಲಪರಿಷ್ಕೃತವಾದ ವರಾಹವು ಲೋಹಿತವರ್ಣದ ಸೂರ್ಯನ ಕಾಂತಿಯನ್ನು ಹೊಂದಿ ಅವನ ಧ್ವಜಾಗ್ರದಲ್ಲಿ ಶೋಭಿಸುತ್ತದೆ. ಹಿಂದೆ ದೇವಾಸುರ ಯುದ್ಧದಲ್ಲಿ ಪೂಷಣನು ರಜತಮಯವಾದ ಧ್ವಜದಿಂದ ಶೋಭಿಸಿದಂತೆ ಜಯದ್ರಥನು ರಜತಮಯವಾದ ಧ್ವಜದಿಂದ ಶೋಭಿಸುತ್ತಾನೆ.

ಸೌಮದತ್ತೇಃ ಪುನರ್ಯೂಪೋ ಯಜ್ಞಶೀಲಸ್ಯ ಧೀಮತಃ |
ಧ್ವಜಃ ಸೂರ್ಯ ಇವಾಭಾತಿ ರಥೇ ಚಾತ್ರ ಪ್ರದೃಶ್ಯತೇ ॥ 22 ॥
ಸ ಯೂಪಃ ಕಾಂಚನೋ ರಾಜನ್ ಸೌಮದತ್ತೇರ್ವಿರಾಜತೇ |
ರಾಜಸೂಯೇ ಮಖಶ್ರೇಷ್ಠೇ ಯಥಾ ಯೂಪಃ ಸಮುಚ್ಛ್ರಿತಃ ॥ 23॥
ಯಜ್ಞಶೀಲನೂ, ಮೇಧಾವಿಯೂ ಆದ ಭೂರಿಶ್ರವನ ಯೂಪಧ್ವಜವು ಸೂರ್ಯನಂತೆ ಶೋಭಿಸುತ್ತದೆ. ಎಲೈ ರಾಜನೇ, ಶ್ರೇಷ್ಠಯಾಗವಾದ ರಾಜಸೂಯದಲ್ಲಿ ಎತ್ತರವಾದ ಯೂಪವು ಶೋಭಿಸುವಂತೆ ಭೂರಿಶ್ರವನ ಆ ಸುವರ್ಣಮಯವಾದ ಯೂಪವು ಶೋಭಿಸುತ್ತದೆ.
ಶಲ್ಯಸ್ಯ ತು ಮಹಾರಾಜ ರಾಜತೇ ದ್ವಿರದೋ ಮಹಾನ್ |
ಕೇತನಃ ಕಾಂಚನಸ್ತತ್ರ ಮಯೂಖೈರಿವ ಶೋಭಿತಃ ॥ 24 ॥
ಸ ಧ್ವಜೋಽಶೋಭಯತ್ ಸೈನ್ಯಂ ತಾವಕಂ ಭರತರ್ಷಭ |
ಯಥಾ ಶ್ವೇತೋ ಮಹಾನಾಗೋ ದೇವರಾಜಚಮೂಂ ತಥಾ ॥ 25 ॥
ಎಲೈ ಮಹಾರಾಜನೇ, ಶಲ್ಯನ ರಥದಲ್ಲಿ ಸುವರ್ಣಮಯವಾದ, ಕಿರಣಗಳಿಂದ ಶೋಭಿಸುವ, ಮಹಾಗಜವು ಶೋಭಿಸುತ್ತದೆ. ಎಲೈ ಭರತಶ್ರೇಷ್ಠನೇ, ಮಹಾಗಜವಾದ ಐರಾವತವು ಇಂದ್ರನ ಸೇನೆಗೆ ಶೋಭೆಯನ್ನು ಉಂಟುಮಾಡುವಂತೆ ಆ ಧ್ವಜವು ನಿನ್ನ ಸೇನೆಗೆ ಶೋಭೆಯನ್ನುಂಟು ಮಾಡುತ್ತದೆ.
ನಾಗೋ ಮಣಿಮಯೋ ರಾಜ್ಞೋ ಧ್ವಜಃ ಕೇತನಸಂವೃತಃ |
ಕಿಂಕಿಣೀಶತನಿರ್ಹ್ರಾದೋ ಭ್ರಾಜಂಶ್ಚೈತ್ರೇ ರಥೋತ್ತಮೇ ॥ 26 ॥
ವ್ಯಭ್ರಾಜತ ಭೃಶಂ ರಾಜನ್ ಪುತ್ರಸ್ತವ ವಿಶಾಂಪತೇ |
ಧ್ವಜೇನ ಮಹತಾ ಸಂಖ್ಯೇ ಕುರೂಣಾಮೃಷಭಸ್ತದಾ ॥ 27 ॥
ಮಣಿಮಯವಾದ, ನೂರು ಕಿಂಕಿಣಿ ನಾದಗಳಿಂದ ಸಹಿತವಾದ ನಾಗವು ಜಯಶೀಲವಾದ ದುರ್ಯೋಧನನ ರಥದಲ್ಲಿ ಶೋಭಿಸುತ್ತದೆ. ಎಲೈ ರಾಜನೇ, ಕುರುಶ್ರೇಷ್ಠನಾದ ನಿನ್ನ ಪುತ್ರನು ಆ ರಥದಲ್ಲಿ ಅಂತಹ ಧ್ವಜದಿಂದ ಬಹಳವಾಗಿ ಶೋಭಿಸುತ್ತಾನೆ.
ನವೈತೇ ತವ ವಾಹಿನ್ಯಾಮುಚ್ಛ್ರಿತಾಃ ಪರಮಧ್ವಜಾಃ |
ವ್ಯದೀಪಯಂಸ್ತೇ ಪೃತನಾಂ ಯುಗಾಂತಾದಿತ್ಯಸನ್ನಿಭಾಃ ॥ 28 ॥
ಈ ಒಂಬತ್ತು ನಿನ್ನ ಸೈನ್ಯದಲ್ಲಿ ಉನ್ನತವಾದ ಮತ್ತು ಶ್ರೇಷ್ಠವಾದ ಧ್ವಜಗಳು. ಯುಗಾಂತಕಾಲದ ಸೂರ್ಯನ ಕಾಂತಿಯನ್ನು ಹೊಂದಿದ ಆ ಧ್ವಜಗಳು ನಿನ್ನ ಸೈನ್ಯವನ್ನು ಪ್ರಕಾಶಗೊಳಿಸುತ್ತವೆ.
ದಶಮಸ್ತ್ವರ್ಜುನಸ್ಯಾಸೀದೇಕ ಏವ ಮಹಾಕಪಿಃ |
ಅದೀವ್ಯದರ್ಜುನಸ್ತೇನ ಹಿಮವಾನಿವ ಶಂಭುನಾ ॥ 29 ॥
ಹತ್ತನೆಯ ರಥವು ಅರ್ಜುನನ ರಥ. ಅದರಲ್ಲಿ ಒಂದೇ ಒಂದು ಮಹಾಕಪಿ ಇದೆ. ಹಿಮಾಲಯವು ರುದ್ರನ ಜೊತೆಯಲ್ಲಿ ಆಟವಾಡಿದಂತೆ ಅರ್ಜುನನು ಆ ಕಪಿಯ ಜೊತೆಯಲ್ಲಿ ಆಟವಾಡುತ್ತಾನೆ.
ತತಶ್ಚಿತ್ರಾಣಿ ಶುಭ್ರಾಣಿ ಸುಮಹಾಂತಿ ಮಹಾರಥಾಃ |
ಕಾರ್ಮುಕಾಣ್ಯಾದದುಸ್ತೂರ್ಣಮರ್ಜುನಾರ್ಥಂ ಪರಂತಪಾಃ ॥ 30 ॥
ಅನಂತರ ಶತ್ರುತಾಪಕರೂ, ಮಹಾರಥರೂ ಆದ ನಿನ್ನ ಯೋಧರು ಶುಭ್ರವೂ, ವಿಚಿತ್ರವೂ ಮತ್ತು ಬಹಳ ದೊಡ್ಡವೂ ಆದ ಧನುಸ್ಸುಗಳನ್ನು ಅರ್ಜುನನ ಎದುರಿನಲ್ಲಿ ಯುದ್ಧವನ್ನು ಮಾಡಲು ಶೀಘ್ರವಾಗಿ ತೆಗೆದುಕೊಂಡರು.
ತಥೈವ ಧನುರಾಯಚ್ಛತ್ ಪಾರ್ಥಃ ಶತ್ರುವಿನಾಶನಮ್ |
ಗಾಂಡೀವಂ ದಿವ್ಯಕರ್ಮಾಣಂ ರಾಜನ್ ದುರ್ಮಂತ್ರಿತೇ ತವ ॥ 31 ॥
ಎಲೈ ರಾಜನೇ, ನಿನ್ನ ದುರ್ಮಂತ್ರದ ಫಲವಾಗಿ ಅರ್ಜುನನೂ ಸಹ ಶತ್ರುವಿನಾಶಕವಾದ ಮತ್ತು ದಿವ್ಯ ಕರ್ಮವನ್ನು ಮಾಡುವ ಗಾಂಡೀವ ಧನುಸ್ಸನ್ನು ಹಿಡಿದು ಎಳೆದನು.
ತವಾಪರಾಧಾದ್ ರಾಜೇಂದ್ರ ಬಹುಧಾ ನಿಹತಾ ಯುಧಿ |
ನಾನಾದಿಗ್ಭ್ಯಃ ಸಮಾಹೂತಾಃ ಸಹಯಾಃ ಸರಥದ್ವಿಪಾಃ ॥ 32 ॥
ಎಲೈ ರಾಜೇಂದ್ರನೇ, ನಿನ್ನ ಅಪರಾಧದಿಂದ ನಾನಾ ದಿಕ್ಕುಗಳಿಂದ ಆಹ್ವಾನಿಸಿ ಬಂದ ಹಯ-ರಥ-ಗಜ ಸಹಿತರಾದ ಅನೇಕ ಕ್ಷತ್ರಿಯರು ಯುದ್ಧದಲ್ಲಿ ಕೊಲ್ಲಲ್ಪಟ್ಟಿದ್ದಾರೆ.
ತೇಷಾಮಾಸೀದ್ ವ್ಯತಿಕ್ಷೇಪೋ ಗರ್ಜತಾಮಿತರೇತರಮ್ |
ದುರ್ಯೋಧನಮುಖಾನಾಂ ಚ ಪಾಂಡೂನಾಮೃಷಭಸ್ಯ ಚ ॥ 33 ॥
ಪರಸ್ಪರವಾಗಿ ಗರ್ಜಿಸುವ ದುರ್ಯೋಧನ ಮೊದಲಾದವರಿಗೂ ಮತ್ತು ಪಾಂಡವ ಶ್ರೇಷ್ಠನಾದ ಅರ್ಜುನನಿಗೂ ದೊಡ್ಡ ಸಂಘರ್ಷ ಉಂಟಾಯಿತು.
ತತ್ರಾದ್ಭುತಂ ಪರಂ ಚಕ್ರೇ ಕೌಂತೇಯಃ ಕೃಷ್ಣಸಾರಥಿಃ |
ಯದೇಕೋ ಬಹುಭಿಃ ಸಾರ್ಧಂ ಸಮಾಗಚ್ಛದಭೀತವತ್ ॥ 34 ॥
ಅಲ್ಲಿ ಕುಂತೀಪುತ್ರನೂ, ಕೃಷ್ಣಸಾರಥಿಯೂ ಆದ ಒಬ್ಬನೇ ಅರ್ಜುನನು ಯಾವ ಭಯವೂ ಇಲ್ಲದೆ ಅನೇಕರನ್ನು ಎದುರಿಸಿ, ಯುದ್ಧವನ್ನು ಮಾಡಿ ಅದ್ಭುತವಾದ ಕರ್ಮವನ್ನು ಮಾಡಿದನು.
ಅಶೋಭತ ಮಹಾಬಾಹುರ್ಗಾಂಡೀವಂ ವಿಕ್ಷಿಪನ್ ಧನುಃ |
ಜಿಗೀಷುಸ್ತಾನ್ ರಥಶ್ರೇಷ್ಠಾನ್ ಜಿಘಾಂಸುಶ್ಚ ಜಯದ್ರಥಮ್ ॥ 35 ॥

ಮಹಾಬಾಹುವಾದ ಅವನು ಆ ರಥಶ್ರೇಷ್ಠರನ್ನು ಹಾಗೆಯೇ ಜಯದ್ರಥನನ್ನು ಕೊಲ್ಲಲು ಬಯಸಿ ಗಾಂಡೀವ ಧನುಸ್ಸನ್ನು ಎಳೆಯುತ್ತಾ ಶೋಭಿಸಿದನು.
ತತೋಽರ್ಜುನೋ ಮಹಾರಾಜ ಶರೈರ್ಮುಕ್ತೈಃ ಸಹಸ್ರಶಃ |
ಅದೃಶ್ಯಾನಕರೋದ್ ಯೋಧಾಂಸ್ತಾವಕಾನ್ ಶತ್ರುತಾಪನಃ ॥ 36 ॥
ಎಲ್ಲೈ ಮಹಾರಾಜನೇ, ಆಗ ಶತ್ರುತಾಪನನಾದ ಅರ್ಜುನನು ಸಹಸ್ರ ಸಂಖ್ಯೆಯಲ್ಲಿ ಬಾಣಗಳನ್ನು ಪ್ರಯೋಗಿಸಿ, ನಿನ್ನ ಯೋಧರನ್ನು ಅದೃಶ್ಯರನ್ನಾಗಿ ಮಾಡಿದನು.
ತತಸ್ತೇಽಪಿ ನರವ್ಯಾಘ್ರಾಃ ಸರ್ವೇ ಪಾರ್ಥಂ ಮಹಾರಥಾಃ |
ಅದೃಶ್ಯಂ ಸಮರೇ ಚಕ್ರುಃ ಸಾಯಕೌಘೈಃ ಸಮಂತತಃ ॥ 37 ॥
ಆಗ ನರವ್ಯಾಘ್ರರಾದ ಆ ಮಹಾರಥರೆಲ್ಲರೂ ಸಹ ಎಲ್ಲ ಕಡೆಗಳಿಂದಲೂ ಬಾಣ ಸಮೂಹಗಳನ್ನು ಪ್ರಯೋಗಿಸಿ, ರಣರಂಗದಲ್ಲಿ ಅರ್ಜುನನನ್ನು ಅದೃಶ್ಯನನ್ನಾಗಿ ಮಾಡಿದರು.
ಸಂವೃತೇ ನರಸಿಂಹೇ ತೈಃ ಕುರೂಣಾಮೃಷಭೇಽರ್ಜುನೇ |
ಮಹಾನಾಸೀತ್ ಸಮುದ್ಧೂತಃ ತಸ್ಯ ಸೈನ್ಯಸ್ಯ ನಿಸ್ವನಃ ॥ 38 ॥
ಕುರುಶ್ರೇಷ್ಠನಾದ ಅರ್ಜುನನು ನರಸಿಂಹರಾದ ನಿನ್ನ ಆ ಯೋಧರಿಂದ ಸುತ್ತುವರಿಯಲ್ಪಡುತ್ತಿರಲು ಪಾಂಡವರ ಸೈನ್ಯದಲ್ಲಿ ದೊಡ್ಡ ನಾದವು ಉಂಟಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಿನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ಮೂರನೆಯ ಅಧ್ಯಾಯ
ದ್ರೋಣ-ಯುಧಿಷ್ಠಿರರ ಯುದ್ಧ. ದ್ರೋಣರಿಂದ ಯುಧಿಷ್ಠಿರನ ಪರಾಜಯ.
ಧೃತರಾಷ್ಟ್ರಃ
ಅರ್ಜುನೇ ಸೈಂಧವಂ ಯಾತೇ ಭಾರದ್ವಾಜೇನ ಸಂವೃತಾಃ |
ಪಾಂಚಾಲಾಃ ಕುರುಭಿಃ ಸಾರ್ಧಂ ಕಿಮಕುರ್ವತ ಸಂಜಯ ॥ 1 ॥
ಧೃತರಾಷ್ಟ್ರ ಎಲ್ಲೈ ಸಂಜಯನೇ, ಅರ್ಜುನನು ಸೈಂಧವನ ಕಡೆಗೆ ಹೋಗುತ್ತಿರಲು ದ್ರೋಣರಿಂದ ಸುತ್ತುವರಿಯಲ್ಪಟ್ಟ ಪಾಂಚಾಲರು ಕುರುಗಳ ಜೊತೆಯಲ್ಲಿ ಹೇಗೆ ಯುದ್ಧ ಮಾಡಿದರು?
ಸಂಜಯಃ
ಅಪರಾಹ್ಣೇ ಮಹಾರಾಜ ಸಂಗ್ರಾಮೇ ರೋಮಹರ್ಷಣೇ |
ಪಾಂಚಾಲಾನಾಂ ಕುರೂಣಾಂ ಚ ದ್ರೋಣೇ ಯುದ್ಧಮವರ್ತತ ॥ 2 ॥
ಸಂಜಯ ಎಲ್ಲೈ ಮಹಾರಾಜನೇ, ಅಪರಾಹ್ಣದಲ್ಲಿ ರೋಮಾಂಚಕಾರಿಯಾದ ಯುದ್ಧದಲ್ಲಿ ದ್ರೋಣರನ್ನು ಕೇಂದ್ರೀಕರಿಸಿ,
ಪಾಂಚಾಲರಿಗೂ ಮತ್ತು ಕುರುಗಳಿಗೂ ಯುದ್ಧವು ನಡೆಯಿತು.
ಪಾಂಚಾಲಾ ಹಿ ಜಿಘಾಂಸಂತೋ ದ್ರೋಣಂ ಸಂಹೃಷ್ಟಚೇತಸಃ |
ಅಭ್ಯಮುಂಚಂತ ಗರ್ಜಂತಃ ಶರವರ್ಷಾಣಿ ಭೂರಿಶಃ ॥ 3 ॥
ಪಾಂಚಾಲರಾದರೂ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ದ್ರೋಣರನ್ನು ವಧೆ ಮಾಡಲು ಬಯಸಿ, ವೀರಗರ್ಜನೆಯನ್ನು ಮಾಡುತ್ತಾ ಅನೇಕ ಬಾಣಗಳ ಮಳೆಯನ್ನು ಅವರ ಮೇಲೆ ಸುರಿಸಿದರು.
ತತಃ ಸುತುಮುಲಸ್ತೇಷಾಂ ಸಂಗ್ರಾಮೋಽವರ್ತತಾದ್ಭುತಃ |
ಪಾಂಚಾಲಾನಾಂ ಕುರೂಣಾಂ ಚ ಘೋರೋ ದೈವಾಸುರೋಪಮಃ ॥
ಅನಂತರ ಪಾಂಚಾಲರಿಗೂ ಮತ್ತು ಕುರುಗಳಿಗೂ ದೇವಾಸುರ ಯುದ್ಧಕ್ಕೆ ಸಮವಾದ ಘೋರವೂ, ತೀವ್ರವೂ ಮತ್ತು ಅದ್ಭುತವೂ ಆದ ಯುದ್ಧವು ನಡೆಯಿತು.
ಸರ್ವೇ ದ್ರೋಣರಥಂ ಪ್ರಾಪ್ಯ ಪಾಂಚಾಲಾಃ ಪಾಂಡವೈಃ ಸಹ |
ತದನೀಕಂ ಬಿಭಿತ್ಸಂತೋ ಮಹಾಸ್ತ್ರಾಣಿ ವ್ಯದರ್ಶಯನ್ ॥ 5 ॥
ಪಾಂಡವರ ಜೊತೆಯಲ್ಲಿ ಸೇರಿದ ಪಾಂಚಾಲರೆಲ್ಲರೂ ದ್ರೋಣರ ರಥದ ಸಮೀಪಕ್ಕೆ ಬಂದು ದ್ರೋಣರ ಸೇನೆಯನ್ನು ಭಗ್ನಗೊಳಿಸಲು ಇಚ್ಛಿಸಿ ಮಹಾಸ್ತ್ರಗಳನ್ನು ಪ್ರದರ್ಶಿಸಿದರು.
ದ್ರೋಣಸ್ಯ ರಥಪರ್ಯಂತಂ ರಥಿನೋ ರಥಮಾಸ್ಥಿತಾಃ |
ಕಂಪಯಂತೋಽಭ್ಯವರ್ಷಂತ ವೇಗಮಾಸ್ಥಾಯ ಮಧ್ಯಮಮ್ ॥ 6 ॥
ರಥಿಕರು ತಮ್ಮ ರಥದಲ್ಲಿ ನಿಂತು ದ್ರೋಣರ ರಥದವರೆಗೂ ಬಂದು ಮಧ್ಯಮ ವೇಗವನ್ನು ಆಶ್ರಯಿಸಿ ದ್ರೋಣರ ಸೇನೆಯನ್ನು ನಡುಗಿಸುತ್ತಾ ಬಾಣಗಳ ಮಳೆಯನ್ನು ಸುರಿಸಿದರು.
ತಮಭ್ಯಯಾದ್ ಬೃಹತ್ಕ್ಷತ್ರಃ ಕೇಕಯಾನಾಂ ಮಹಾರಥಃ |
ಪ್ರವಪನ್ನಿಶಿತಾನ್ ಬಾಣಾನ್ ಮಹೇಂದ್ರಾಶನಿಸನ್ನಿಭಾನ್ ॥ 7 ॥

ಮಹಾರಥನಾದ ಕೇಕಯನಾದ ಬೃಹತ್ಕ್ಷತ್ರನು ಇಂದ್ರನ ವಜ್ರಾಯುಧವನ್ನು ಹೋಲುವ ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ದ್ರೋಣರ ಸಮೀಪಕ್ಕೆ ಬಂದನು.
ತಂ ತು ಪ್ರತ್ಯುದಿಯಾಚ್ಚೀಘ್ರಂ ಕ್ಷೇಮಧೂರ್ತಿರ್ಮಹಾಯಶಾಃ |
ವಿಮುಂಚನ್ ನಿಶಿತಾನ್ ಬಾಣಾನ್ ಶತಶೋಽಥ ಸಹಸ್ರಶಃ ॥ 8 ॥
ಆಗ ಮಹಾಕೀರ್ತಿವಂತನಾದ ಕ್ಷೇಮಧೂರ್ತಿಯು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಶೀಘ್ರವಾಗಿ ಬೃಹತ್ಕ್ಷತ್ರನ ಎದುರಿಗೆ ಬಂದು ಅವನನ್ನು ಎದುರಿಸಿದನು.
ಧೃಷ್ಟಕೇತುಶ್ಚ ಚೇದೀನಾಮ್ ಋಷಭೋಽತಿಬಲೋದಿತಃ |
ತ್ವರಿತೋಽಭ್ಯದ್ರವದ್ ದ್ರೋಣಂ ಮಹೇಂದ್ರಮಿವ ಶಂಬರಃ ॥ 9 ॥
ಚೇದಿಗಳ ಅಧಿಪತಿಯಾದ ಅತಿಬಲಿಷ್ಠನಾದ ಧೃಷ್ಟಕೇತುವೂ ಸಹ ಶಂಬರನು ಇಂದ್ರನ ಬಳಿಗೆ ಬಂದಂತೆ ಶೀಘ್ರವಾಗಿ ದ್ರೋಣರ ಸಮೀಪಕ್ಕೆ ಬಂದನು.
ತಮಾಪತಂತಂ ಸಹಸಾ ವ್ಯಾದಿತಾಸ್ಯಮಿವಾಂತಕಮ್ |
ವೀರಧನ್ವಾ ಮಹೇಷ್ವಾಸಃ ತ್ವರಮಾಣಃ ಸಮಭ್ಯಯಾತ್ ॥ 10 ॥
ಬಾಯಿ ತೆರೆದ ಮೃತ್ಯುವಿನಂತೆ ಶೀಘ್ರವಾಗಿ ಬರುತ್ತಿದ್ದ ಅವನನ್ನು ನೋಡಿ ಮಹಾಧನುರ್ಧಾರಿಯಾದ ವೀರಧನ್ವನು ಜಾಗ್ರತೆಯಾಗಿ ಅವನ ಕಡೆಗೆ ಮುನ್ನುಗ್ಗಿದನು.
ಯುಧಿಷ್ಠಿರಂ ಮಹಾರಾಜ ಜಿಗೀಷುಂ ಸಮವಸ್ಥಿತಮ್ |
ಸಹಾನೀಕಂ ಸ್ಮಯನ್ ದ್ರೋಣೋ ನ್ಯವಾರಯತ ತದ್ ಬಲೀ ॥ 11 ॥
ಎಲೈ ಮಹಾರಾಜನೇ, ಬಲಿಷ್ಠರಾದ ದ್ರೋಣರು ತಮ್ಮನ್ನು ಗೆಲ್ಲಲು ಬಯಸಿ ಎದುರಿಗಿದ್ದ ಯುಧಿಷ್ಠಿರನನ್ನು ಅವನ ಸೈನ್ಯದ ಜೊತೆಯಲ್ಲಿ ನಗುತ್ತಲೇ ತಡೆದರು.
ನಕುಲಂ ಕುಶಲಂ ಯುದ್ಧೇ ಪರಾಕ್ರಾಂತಂ ಪರಾಕ್ರಮೀ |
ಅಭ್ಯಗಚ್ಛತ್ ಸಮಾಯಾಂತಂ ವಿಕರ್ಣಸ್ತೇ ಸುತಃ ಪ್ರಭೋ ॥ 12 ॥
ಪ್ರಭುವೇ, ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿಸುತ್ತಿದ್ದ ತನ್ನ ಕಡೆಗೆ ಬರುತ್ತಿದ್ದ ಕುಶಲನಾದ ನಕುಲನನ್ನು ಕುರಿತು ಪರಾಕ್ರಮಶಾಲಿಯಾದ ನಿನ್ನ ಪುತ್ರನಾದ ವಿಕರ್ಣನು ಅವನ ಎದುರಿಗೆ ಹೋದನು.
ಸಹದೇವಂ ತಥಾಽಽಯಾಂತಂ ದುರ್ಮುಖಃ ಶತ್ರುಕರ್ಶನಃ |
ಶರೈರನೇಕಸಾಹಸ್ರೈಃ ಸಮವಾರಯದಾಶುಗೈಃ ॥ 13 ॥
ಹಾಗೆಯೇ ತನ್ನ ಕಡೆಗೆ ಬರುತ್ತಿದ್ದ ಸಹದೇವನನ್ನು ಶತ್ರುಸೂದನನಾದ (ನಿನ್ನ ಪುತ್ರನಾದ) ದುರ್ಮುಖನು ಶೀಘ್ರಗಾಮಿಗಳಾದ ಅನೇಕ ಸಹಸ್ರ ಬಾಣಗಳಿಂದ ತಡೆದನು.
ಸಾತ್ಯಕಿಂ ತು ನರವ್ಯಾಘ್ರಂ ವ್ಯಾಘ್ರದತ್ತಸ್ತ್ವವಾಕಿರತ್ |
ಶರೈಃ ಸುನಿಶಿತೈಸ್ತೀಕ್ಷ್ಣೈಃ ಕಂಪಯನ್ ವೈ ಮುಹುರ್ಮುಹುಃ ॥ 14 ॥
ನರವ್ಯಾಘ್ರನಾದ ಸಾತ್ಯಕಿಯನ್ನು ವ್ಯಾಘ್ರದತ್ತನು ಬಹಳ ತೀಕ್ಷ್ಣವಾದ ಬಾಣಗಳನ್ನು ಪುನಃ ಪುನಃ ಪ್ರಯೋಗಿಸುತ್ತಾ ಅವನ ಸೈನ್ಯವನ್ನು ನಡುಗಿಸುತ್ತಾ ಬಾಣಗಳ ಮಳೆಯನ್ನು ಕರೆದನು.
ದ್ರೌಪದೇಯಾನ್ ನರವ್ಯಾಘ್ರಾನ್ ಮುಂಚತಃ ಸಾಯಕೋತ್ತಮಾನ್ |
ಸಂರಬ್ಧಾನ್ ರಥಿನಾಂ ಶ್ರೇಷ್ಠಃ ಸೌಮದತ್ತಿರವಾರಯತ್ ॥ 15 ॥
ಶ್ರೇಷ್ಠವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದ ಕೋಪಗೊಂಡ ನರವ್ಯಾಘ್ರರಾದ ದ್ರೌಪದಿಯ ಐವರು ಪುತ್ರರನ್ನು ರಥಿಶ್ರೇಷ್ಠನಾದ ಭೂರಿಶ್ರವನು ತಡೆದನು.
ಭೀಮಸೇನಂ ತಥಾ ಕ್ರುದ್ಧಂ ಘೋರರೂಪೋ ಭಯಾನಕಃ |
ಪ್ರತ್ಯವಾರಯದಾಯಾಂತಮಾರ್ಷ್ಯಶೃಂಗಿರ್ಮಹಾರಥಃ ॥ 16 ॥
ಹಾಗೆಯೇ ಕೋಪಗೊಂಡಿದ್ದ ಮುಂದೆ ಬರುತ್ತಿದ್ದ ಭೀಮಸೇನನನ್ನು ಘೋರರೂಪವುಳ್ಳವನೂ, ಭಯಂಕರನೂ, ಮಹಾರಥನೂ ಆದ ಋಷ್ಯಶೃಂಗನ ಪುತ್ರನಾದ ಅಲಂಬುಸನು ತಡೆದನು.
ತಯೋಃ ಸಮಭವದ್ ಯುದ್ಧಂ ನರರಾಕ್ಷಸಯೋರ್ಮೃಧೇ |
ಯಾದೃಶಂ ವೈ ಪುರಾವೃತ್ತಂ ರಾಮರಾವಣಯೋರ್ನೃಪ ॥ 17 ॥
ನರ-ರಾಕ್ಷಸರಾದ ಅವರಿಬ್ಬರಿಗೆ ಹಿಂದೆ ರಾಮ-ರಾವಣರಿಗೆ ನಡೆದ ಯುದ್ಧದಂತೆ ಯುದ್ಧವು ನಡೆಯಿತು.
ತತೋ ಯುಧಿಷ್ಠಿರೋ ದ್ರೋಣಂ ನವತ್ಯಾ ನತಪರ್ವಣಾಮ್ |
ಆಜಘ್ನೇ ಭರತಶ್ರೇಷ್ಠಃ ಸರ್ವಮರ್ಮಸು ಭಾರತ ॥ 18 ॥
ಎಲೈ ಭಾರತನೇ, ಭರತಶ್ರೇಷ್ಠನಾದ ಯುಧಿಷ್ಠಿರನು ಬಾಗಿದ ತುದಿಯುಳ್ಳ ತೊಂಬತ್ತು ಬಾಣಗಳಿಂದ ದ್ರೋಣರಿಗೆ ಸರ್ವಮರ್ಮಗಳಲ್ಲಿಯೂ ಹೊಡೆದನು.
ತಂ ದ್ರೋಣಃ ಪಂಚವಿಂಶತ್ಯಾ ನಿಜಘಾನ ಸ್ತನಾಂತರೇ |
ರೋಷಿತೋ ಭರತಶ್ರೇಷ್ಠ ಕೌಂತೇಯೇನ ಮಹಾತ್ಮನಾ |
ಭೂಯ ಏವ ಹಿ ವಿಂಶತ್ಯಾ ಸಾಯಕಾನಾಂ ಸಮಾಚಿನೋತ್ ॥ 19 ॥
ಎಲೈ ಭರತಶ್ರೇಷ್ಠನೇ, ಮಹಾತ್ಮನಾದ ಯುಧಿಷ್ಠಿರನಿಂದ ಕೋಪಗೊಳಿಸಲ್ಪಟ್ಟ ದ್ರೋಣರು ಇಪ್ಪತ್ತೈದು ಬಾಣಗಳಿಂದ ಯುಧಿಷ್ಠಿರನನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದರು ಮತ್ತು ಪುನಃ ಇಪ್ಪತ್ತು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದರು.

ಅದೃಶ್ಯಂ ಸಮರೇ ಚಕ್ರೇ ರಾಜಾನಂ ಸಾಯಕೋತ್ತಮೈಃ |
ಸಾಶ್ವಸೂತಧ್ವಜಂ ದ್ರೋಣಃ ಪಶ್ಯತಾಂ ಸರ್ವಧನ್ವಿನಾಮ್ ॥ 20 ॥
ದ್ರೋಣರು ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆಯೇ ತಮ್ಮ ಶ್ರೇಷ್ಠವಾದ ಬಾಣಗಳಿಂದ ಅಶ್ವ-ಸೂತ-ಧ್ವಜಸಹಿತನಾದ ಯುಧಿಷ್ಠಿರನನ್ನು ರಣರಂಗದಲ್ಲಿ ಅದೃಶ್ಯನನ್ನಾಗಿ ಮಾಡಿದರು.
ತಾನ್ ಶರಾನ್ ದ್ರೋಣಮುಕ್ತಾನ್ ಸ್ಮ ಶರವರ್ಷೇಣ ಪಾಂಡವಃ |
ನ್ಯವಾರಯತ ಧರ್ಮಾತ್ಮಾ ದರ್ಶಯನ್ ಹಸ್ತಲಾಘವಮ್ ॥ 21 ॥
ಧರ್ಮಾತ್ಮನಾದ ಯುಧಿಷ್ಠಿರನಾದರೂ ತನ್ನ ಹಸ್ತದ ಕ್ಷಿಪ್ರತೆಯನ್ನು ತೋರಿಸುತ್ತಾ ದ್ರೋಣರು ಪ್ರಯೋಗಿಸಿದ ಬಾಣಗಳನ್ನು ತನ್ನ ಬಾಣಗಳ ಮಳೆಯಿಂದ ನಿವಾರಿಸಿದನು.
ತತೋ ದ್ರೋಣೋ ಭೃಶಂ ಕ್ರುದ್ಧೋ ಧರ್ಮರಾಜಸ್ಯ ಸಂಯುಗೇ |
ಚಿಚ್ಛೇದ ಸಹಸಾ ಧನ್ವೀ ಧನುಸ್ತಸ್ಯ ಮಹಾತ್ಮನಃ ॥ 22 ॥
ಆಗ ದ್ರೋಣರು ಇನ್ನೂ ಕೋಪಗೊಂಡು ರಣರಂಗದಲ್ಲಿ ಮಹಾತ್ಮನಾದ ಧರ್ಮರಾಜನ ಧನುಸ್ಸನ್ನು ತಕ್ಷಣ ಕತ್ತರಿಸಿದರು.
ಅಥೈನಂ ಛಿನ್ನಧನ್ವಾನಂ ತ್ವರಮಾಣೋ ಮಹಾರಥಃ |
ಶರೈರನೇಕಸಾಹಸ್ರೈಃ ಪೂರಯಾಮಾಸ ಸರ್ವತಃ ॥ 23 ॥
ಅನಂತರ ಅವನ ಧನುಸ್ಸನ್ನು ಕತ್ತರಿಸಿದ ಮೇಲೆ ಮಹಾರಥರಾದ ದ್ರೋಣರು ತ್ವರೆ ಮಾಡುತ್ತಾ, ಅನೇಕ ಸಹಸ್ರ ಬಾಣಗಳಿಂದ ಅವನನ್ನು ಎಲ್ಲ ಕಡೆಗಳಲ್ಲಿಯೂ ತುಂಬಿದರು.
ಅದೃಶ್ಯಂ ದೃಶ್ಯ ರಾಜಾನಂ ಭಾರದ್ವಾಜಸ್ಯ ಸಾಯಕೈಃ |
ಸರ್ವಭೂತಾನ್ಯಮನ್ಯಂತ ಹತಮೇವ ಯುಧಿಷ್ಠಿರಮ್ ॥ 24 ॥
ದ್ರೋಣರ ಬಾಣಗಳಿಂದ ಅದೃಶ್ಯನಾದ ರಾಜನನ್ನು ನೋಡಿ ಎಲ್ಲ ಯೋಧರೂ ಯುಧಿಷ್ಠಿರನು ಹತನಾದನೆಂದೇ ತಿಳಿದರು.
ಕೇಚಿಚ್ಚೈನಮಮನ್ಯಂತ ತಥಾ ವೈ ವಿಮುಖೀಕೃತಮ್ |
ಹೃತೋ ರಾಜೇತಿ ರಾಜೇಂದ್ರ ಬ್ರಾಹ್ಮಣೇನ ಯಶಸ್ವಿನಾ ॥ 25 ॥
ಎಲೈ ರಾಜೇಂದ್ರನೇ, ಹಾಗೆ ವಿಮುಖಗೊಳಿಸಲ್ಪಟ್ಟ ರಾಜನನ್ನು, ಕೀರ್ತಿವಂತರಾದ ಬ್ರಾಹ್ಮಣರಾದ ದ್ರೋಣರಿಂದ ರಾಜನು ಅಪಹರಿಸಲ್ಪಟ್ಟಿದ್ದಾನೆ ಎಂದು ಕೆಲವರು ತಿಳಿದರು.
ಸ ಕೃಚ್ಛ್ರಂ ಪರಮಂ ಪ್ರಾಪ್ತೋ ಧರ್ಮರಾಜೋ ಯುಧಿಷ್ಠಿರಃ |
ತ್ಯಕ್ತ್ವಾ ತತ್ ಕಾರ್ಮುಕಂ ಛಿನ್ನಂ ಭಾರದ್ವಾಜೇನ ಸಂಯುಗೇ |
ಆದದೇಽನ್ಯದ್ ಧನುರ್ದಿವ್ಯಂ ಭಾಸ್ವರಂ ವೇಗವತ್ತರಮ್ ॥ 26 ॥
ಬಹಳ ಸಂಕಟಕ್ಕೆ ಸಿಲುಕಿದ ಧರ್ಮರಾಜನಾದ ಯುಧಿಷ್ಠಿರನು ಯುದ್ಧದಲ್ಲಿ ದ್ರೋಣರಿಂದ ಕತ್ತರಿಸಲ್ಪಟ್ಟ ಧನುಸ್ಸನ್ನು ತ್ಯಜಿಸಿ, ವೇಗಶಾಲಿಯಾದ ಮತ್ತು ಶತ್ರುವಿನ ವೇಗವನ್ನು ನಾಶಮಾಡುವ ದಿವ್ಯವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡನು.
ತತಸ್ತಾನ್ ಸಾಯಕಾನ್ ಸರ್ವಾನ್ ದ್ರೋಣಮುಕ್ತಾನ್ ಸಹಸ್ರಶಃ |
ಚಿಚ್ಛೇದ ಸಮರೇ ವೀರಃ ತದದ್ಭುತಮಿವಾಭವತ್ ॥ 27 ॥
ಅನಂತರ ವೀರನಾದ ಅವನು ಆ ಧನುಸ್ಸಿನಿಂದ ಸಹಸ್ರ ಸಂಖ್ಯೆಯಲ್ಲಿ ದ್ರೋಣರು ಪ್ರಯೋಗಿಸಿದ್ದ ಎಲ್ಲ ಬಾಣಗಳನ್ನೂ ಕತ್ತರಿಸಿದನು. ಅದು ಅದ್ಭುತವಾಗಿದ್ದಿತು.
ಛಿತ್ತ್ವಾ ಚ ತಾನ್ ಶರಾನ್ ರಾಜನ್ ಕ್ರೋಧಸಂರಕ್ತಲೋಚನಃ |
ಶಕ್ತಿಂ ಜಗ್ರಾಹ ಸಮರೇ ಗಿರೀಣಾಮಪಿ ದಾರಣೀಮ್ ॥ 28 ॥
ಸ್ವರ್ಣದಂಡಾಂ ಮಹಾಘೋಷಾಮ್ ಅಷ್ಟಘಂಟಾಂ ಭಯಾವಹಾಮ್ |
ಸಮುತ್ಕ್ಷಿಪ್ಯ ಚ ತಾಂ ಹೃಷ್ಟೋ ನನಾದ ಬಲವದ್ ಬಲೀ ॥ 29 ॥
ಎಲೈ ರಾಜನೇ, ಕೋಪದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದ ಅವನು ಆ ಬಾಣಗಳನ್ನು ಕತ್ತರಿಸಿ, ಸ್ವರ್ಣದಂಡವಿರುವ, ಮಹಾಘೋಷದಿಂದ ಕೂಡಿದ, ಎಂಟು ಘಂಟೆಗಳಿಂದ ಕೂಡಿದ, ಭಯಂಕರವಾದ ಪರ್ವತವನ್ನೂ ಭೇದಿಸುವ ಶಕ್ತಿಯನ್ನು ತೆಗೆದುಕೊಂಡು ಅದನ್ನು ದ್ರೋಣರ ಮೇಲೆ ಎಸೆದು ಬಲಿಷ್ಠನಾದ ಅವನು ಸಂತೋಷಗೊಂಡು ಗಟ್ಟಿಯಾದ ಸಿಂಹನಾದವನ್ನು ಮಾಡಿದನು.
ತಾಂ ರಣೇ ಸರ್ವಭೂತಾನಿ ತ್ರಾಸಯಂತೀಮಿವ ಪ್ರಭೋ |
ಶಕ್ತಿಂ ಸಮುದ್ಯತಾಂ ದೃಷ್ಟ್ವಾ ಧರ್ಮರಾಜೇನ ಸಂಯುಗೇ ॥ 30 ॥
ಸ್ವಸ್ತಿ ದ್ರೋಣಾಯ ಸಹಸಾ ಸರ್ವಸೈನ್ಯಾನ್ಯಥಾಬ್ರುವನ್ ॥ 31 ॥
ಎಲೈ ಪ್ರಭುವೇ, ಯುದ್ಧದಲ್ಲಿ ಧರ್ಮರಾಜನಿಂದ ಪ್ರಯೋಗಿಸಲ್ಪಟ್ಟ ಎಲ್ಲರನ್ನೂ ಭಯಗೊಳಿಸಿದ ಆ ಶಕ್ತಿಯನ್ನು ನೋಡಿ ಎಲ್ಲ ಸೈನ್ಯಗಳೂ ತಕ್ಷಣ ದ್ರೋಣರಿಗೆ ಕ್ಷೇಮವಾಗಲಿ ಎಂದು ಹೇಳಿದವು.
ಸಾ ರಾಜಭುಜನಿರ್ಮುಕ್ತಾ ನಿರ್ಮುಕ್ತೋರಗಸನ್ನಿಭಾ |
ಪ್ರಜ್ವಾಲಯಂತೀ ಗಗನಂ ದಿಶಶ್ಚ ವಿದಿಶಸ್ತಥಾ ॥ 32 ॥
ದ್ರೋಣಾಂತಿಕಮನುಪ್ರಾಪ್ತಾ ದೀಪ್ತಾಸ್ಯಾ ಪನ್ನಗೀ ಯಥಾ ॥ 33 ॥
ರಾಜನಾದ ಯುಧಿಷ್ಠಿರನಿಂದ ಪ್ರಯೋಗಿಸಲ್ಪಟ್ಟ ಪೊರೆಯನ್ನು ಬಿಚ್ಚಿದ ಹಾವಿನಂತೆ ಶೋಭಿಸುವ ಆ ಶಕ್ತಿಯು ಆಕಾಶವನ್ನೂ, ದಿಕ್ಕು-ವಿದಿಕ್ಕುಗಳನ್ನೂ ಪ್ರಕಾಶಿಸುತ್ತಾ, ಜ್ವಲಿಸುವ ಮುಖವುಳ್ಳ ಹೆಣ್ಣು ಸರ್ಪದಂತೆ ದ್ರೋಣರ ಬಳಿಗೆ ಬಂದಿತು.
ತಾಮಾಪತಂತೀಂ ಸಹಸಾ ಪ್ರೇಕ್ಷ್ಯ ಯ ದ್ರೋಣೋ ವಿಶಾಂಪತೇ |

ಪ್ರಾದುಶ್ಚಕ್ರೇ ತತೋ ಬ್ರಾಹ್ಮಮಸ್ತ್ರಮಸ್ತ್ರವಿದಾಂ ವರಃ ॥ 34 ॥
ಎಲೈ ರಾಜನೇ, ತನ್ನ ಬಳಿಗೆ ಕ್ಷಿಪ್ರವಾಗಿ ಬರುತ್ತಿದ್ದ ಆ ಶಕ್ತಿಯನ್ನು ನೋಡಿ ಅಸ್ತ್ರಜ್ಞಾನಿಗಳಲ್ಲಿ ಶ್ರೇಷ್ಠರಾದ ದ್ರೋಣರು ಬ್ರಹ್ಮಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದರು.
ತದಸ್ತ್ರಂ ಭಸ್ಮಸಾತ್ ಕೃತ್ವಾ ತಾಂ ಶಕ್ತಿಂ ಘೋರದರ್ಶನಾಮ್ |
ಜಗಾಮ ಸ್ಯಂದನಂ ತೂರ್ಣಂ ಪಾಂಡವಸ್ಯ ಯಶಸ್ವಿನಃ ॥ 35 ॥
ಆ ಬ್ರಹ್ಮಾಸ್ತ್ರವು ಘೋರರೂಪವನ್ನು ತಳೆದಿದ್ದ ಆ ಶಕ್ತ್ಯಾಯುಧವನ್ನು ಸುಟ್ಟು, ಶೀಘ್ರವಾಗಿ ಕೀರ್ತಿಶಾಲಿಯಾದ ಯುಧಿಷ್ಠಿರನ ರಥದ ಬಳಿಗೆ ಹೋಯಿತು.
ತತೋ ಯುಧಿಷ್ಠಿರೋ ರಾಜಾ ದ್ರೋಣಾಸ್ತ್ರಂ ತತ್ ಸಮುದ್ಯತಮ್ |
ಅಶಾಮಯನ್ಮಹಾಪ್ರಾಜ್ಞೋ ಬ್ರಹ್ಮಾಸ್ತ್ರೇಣೈವ ಭಾರತ ॥ 36 ॥
ಎಲೈ ಭಾರತನೇ, ಆಗ ರಾಜನಾದ, ಮಹಾಪ್ರಾಜ್ಞನಾದ ಯುಧಿಷ್ಠಿರನು ತನ್ನ ಬಳಿಗೆ ಬರುತ್ತಿದ್ದ ಆ ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೇ ಶಮನಗೊಳಿಸಿದನು.
ಸ ವಿವ್ಯಾಧ ರಣೇ ದ್ರೋಣಂ ಪಂಚಭಿರ್ನತಪರ್ವಭಿಃ |
ಕ್ಷುರಪ್ರೇಣ ಚ ತೀಕ್ಷ್ಣೇನ ಚಿಚ್ಛೇದಾಸ್ಯ ಮಹದ್ ಧನುಃ ॥ 37 ॥
ಅವನು ಯುದ್ಧದಲ್ಲಿ ದ್ರೋಣರ ಮೇಲೆ ಬಾಗಿದ ತುದಿಯುಳ್ಳ ಐದು ಬಾಣಗಳನ್ನು ಪ್ರಯೋಗಿಸಿ ಹರಿತವಾದ ಕ್ಷುರಪ್ರದಿಂದ ಅವರ ದೊಡ್ಡ ಧನುಸ್ಸನ್ನು ಕತ್ತರಿಸಿದನು.
ತದಪಾಸ್ಯ ಧನುಶ್ಛಿನ್ನಂ ದ್ರೋಣಃ ಕ್ಷತ್ರಿಯಮರ್ದನಃ |
ಗದಾಂ ಚಿಕ್ಷೇಪ ಸಹಸಾ ಧರ್ಮಪುತ್ರಾಯ ಮಾರಿಷ ॥ 38 ॥
ಎಲೈ ಪೂಜ್ಯನೇ, ಕ್ಷತ್ರಿಯಮರ್ದನರಾದ ದ್ರೋಣರು ಕತ್ತರಿಸಲ್ಪಟ್ಟ ಆ ಧನುಸ್ಸನ್ನು ತ್ಯಜಿಸಿ ತಕ್ಷಣ ಧರ್ಮರಾಜನ ಮೇಲೆ ಗದೆಯನ್ನು ಎಸೆದರು.
ತಾಮಾಪತಂತೀಂ ಸಹಸಾ ಗದಾಂ ದೃಷ್ಟ್ವಾ ಯುಧಿಷ್ಠಿರಃ |
ಗದಾಮೇವಾಗ್ರಹೀತ್ ಕ್ರುದ್ಧಃ ಚಿಕ್ಷೇಪ ಚ ಪರಂತಪಃ ॥ 39 ॥
ತನ್ನ ಕಡೆಗೆ ವೇಗದಿಂದ ಸಾಗಿ ಬರುತ್ತಿದ್ದ ಗದೆಯನ್ನು ನೋಡಿ ಪರಂತಪನಾದ ಯುಧಿಷ್ಠಿರನು ಕೋಪಗೊಂಡು ತಾನೂ ಗದೆಯನ್ನೇ ತೆಗೆದುಕೊಂಡು ಎಸೆದನು.
ತೇ ಗದೇ ಸಹಸಾ ಮುಕ್ತೇ ಸಮಾಸಾದ್ಯ ಪರಸ್ಪರಮ್ |
ಸಂಘರ್ಷಾತ್ ಪಾವಕಂ ಮುಕ್ತ್ವಾ ಸಮೇಯಾತಾಂ ಮಹೀತಳೇ ॥40॥
ಬಲದಿಂದ ಪ್ರಯೋಗಿಸಲ್ಪಟ್ಟ ಆ ಗದೆಗಳು ಪರಸ್ಪರವಾಗಿ ಸಮಾಗಮವನ್ನು ಹೊಂದಿ, ಸಂಘರ್ಷದಿಂದ ಅಗ್ನಿಯನ್ನು ಉತ್ಪಾದಿಸಿ ಭೂತಳದಲ್ಲಿ ಬಿದ್ದವು.
ತತೋ ದ್ರೋಣೋ ಭೃಶಂ ಕ್ರುದ್ಧೋ ಧರ್ಮರಾಜಸ್ಯ ಮಾರಿಷ |
ಚತುರ್ಭಿರ್ನಿಶಿತೈರ್ಜಘ್ನೇ ಹಯಾಂಸ್ತೀಕ್ಷ್ಣೈಃ ಶರೋತ್ತಮೈಃ ॥ 41 ॥
ಎಲೈ ಪೂಜ್ಯನೇ, ಆಗ ದ್ರೋಣರು ಬಹಳ ಕೋಪಗೊಂಡು ತೀಕ್ಷ್ಣವಾದ ತಮ್ಮ ಶ್ರೇಷ್ಠವಾದ ನಾಲ್ಕು ಬಾಣಗಳಿಂದ ಧರ್ಮರಾಜನ ರಥದ ನಾಲ್ಕು ಅಶ್ವಗಳನ್ನು ಸಂಹರಿಸಿದರು.
ಧನುಶ್ಚೈಕೇನ ಬಾಣೇನ ಚಿಚ್ಛೇದೇಂದ್ರಧ್ವಜೋಪಮಮ್ |
ಕೇತುಮೇಕೇನ ಚಿಚ್ಛೇದ ಪಾಂಡವಂ ಚಾರ್ದಯತ್ ತ್ರಿಭಿಃ ॥ 42 ॥
ಇಂದ್ರಧ್ವಜದಂತಿದ್ದ ಅವನ ಧನುಸ್ಸನ್ನು ಒಂದು ಬಾಣದಿಂದ ಕತ್ತರಿಸಿದರು. ಯುಧಿಷ್ಠಿರನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿ ಅವನನ್ನು ಪೀಡಿಸುತ್ತಾ ಅವನ ರಥದ ಧ್ವಜವನ್ನು ಒಂದು ಬಾಣದಿಂದ ಕತ್ತರಿಸಿದರು.
ಹತಾಶ್ವಾತ್ ತದ್ರಥಾತ್ ತೂರ್ಣಮವಪ್ಲುತ್ಯ ಯುಧಿಷ್ಠಿರಃ |
ತಸ್ಥಾವೂರ್ಧ್ವಭುಜೋ ರಾಜಾ ವ್ಯಾಯುಧೋ ಭರತರ್ಷಭ ॥ 43 ॥
ಎಲೈ ಭರತಶ್ರೇಷ್ಠನೇ, ರಾಜನಾದ ಯುಧಿಷ್ಠಿರನು ಅಶ್ವಗಳು ಮೃತವಾದ ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ, ಆಯುಧವನ್ನೂ ಕಳೆದುಕೊಂಡು ಭುಜಗಳನ್ನು ಮೇಲಕ್ಕೆತ್ತಿ ನಿಂತನು.
ವಿರಥಂ ತಂ ಸಮಾಲೋಕ್ಯ ವ್ಯಾಯುಧಂ ಚ ವಿಶೇಷತಃ |
ದ್ರೋಣೋ ವ್ಯಮೋಹಯಚ್ಛತ್ರೂನ್ ಸರ್ವಸೈನ್ಯಾನಿ ಚಾಭಿಭೋ ॥44॥
ಎಲೈ ಶತ್ರುಸೂದನನೇ, ಯುಧಿಷ್ಠಿರನು ರಥಹೀನನಾಗಿಯೂ ಮತ್ತು ವಿಶೇಷವಾಗಿ ಆಯುಧಹೀನನಾಗಿಯೂ ಇರುವುದನ್ನು ನೋಡಿ ದ್ರೋಣರು ಶತ್ರುಗಳ ಎಲ್ಲ ಸೈನ್ಯವನ್ನೂ ವಿಮೋಹಗೊಳಿಸಿದರು.
ಮುಂಚನ್ನಿಷುಗಣಾಂಸ್ತೀಕ್ಷ್ಣಾನ್ ಲಘುಹಸ್ತೋ ದೃಢವ್ರತಃ |
ಅಭಿದುದ್ರಾವ ರಾಜಾನಂ ಸಿಂಹೋ ದ್ವಿಪಮಿವೋನ್ಮದಮ್ ॥ 45 ॥
ದೃಢವ್ರತರೂ, ಕ್ಷಿಪ್ರಹಸ್ತರೂ ಆದ ಅವರು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ, ಸಿಂಹವು ಮದಗಜದೆಡೆಗೆ ಸಾಗಿದಂತೆ ರಾಜನ ಕಡೆಗೆ ಧಾವಿಸಿದರು.
ತಮಭಿದ್ರುತಮಾಲೋಕ್ಯ ದ್ರೋಣೇನಾಮಿತ್ರಘಾತಿನಾ |
ಹಾ ಹೇತಿ ಸಹಸಾ ಶಬ್ದಃ ಪಾಂಡೂನಾಂ ಸಮಜಾಯತ ॥ 46 ॥
ದ್ರೋಣರು ಅವನ ಕಡೆಗೆ ಹೀಗೆ ಧಾವಿಸುತ್ತಿರಲು ಅದನ್ನು ನೋಡಿ ಪಾಂಡವರ ಸೈನ್ಯದಲ್ಲಿ ಹಾಹಾಕಾರ ರೂಪವಾದ ಶಬ್ದವು

ಉಂಟಾಯಿತು.
ಹೃತೋ ರಾಜಾ ಹೃತೋ ರಾಜಾ ಭಾರದ್ವಾಜೇನ ಮಾರಿಷ |
ಇತ್ಯಾಸೀಚ್ಚ ಮಹಾನ್ ಶಬ್ದಃ ಪಾಂಡುಸೈನ್ಯಸ್ಯ ಭಾರತ ॥ 47 ॥
ಎಲೈ ಪೂಜ್ಯನೇ, ಭಾರತನೇ, ರಾಜನು ಅಪಹೃತನಾದನು, ರಾಜನು ಅಪಹೃತನಾದನು ಎಂಬ ದೊಡ್ಡ ಶಬ್ದವು ಪಾಂಡವರ ಸೈನ್ಯದಲ್ಲಿ ಉಂಟಾಯಿತು.
ತತಸ್ತ್ವರಿತಮಾರುಹ್ಯ ಸಹದೇವರಥಂ ನೃಪ |
ಅಪಾಯಾಜ್ಜವನೈರಶ್ವೈಃ ಕುಂತೀಪುತ್ರೋ ಯುಧಿಷ್ಠಿರಃ ॥ 48 ॥
ಆಗ ಕುಂತೀಪುತ್ರನಾದ ಯುಧಿಷ್ಠಿರನು ಎಲೈ ರಾಜನೇ, ಶೀಘ್ರವಾಗಿ ಸಹದೇವನ ರಥವನ್ನು ಏರಿ ವೇಗಶಾಲಿಗಳಾದ ಅಶ್ವಗಳಿಂದ ಶೀಘ್ರವಾಗಿ ಅಲ್ಲಿಂದ ಹೊರಟನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ಸಂಕುಲ ಯುದ್ಧ. ಬೃಹತ್ಕತ್ರನಿಂದ ಕ್ಷೇಮಧೂರ್ತಿಯ ವಧೆ.
ದ್ರೌಪದಿಯ ಪುತ್ರರಿಂದ ಶಲನ ವಧೆ ಮತ್ತು
ಭೀಮಸೇನನಿಂದ ಅಲಂಬುಸನ ಪರಾಜಯ.
ಸಂಜಯಃ
ಬೃಹತ್ಕತ್ರಮಥಾಯಾಂತಂ ಕೇಕಯಂ ದೃಢವಿಕ್ರಮಮ್ |
ಕ್ಷೇಮಧೂರ್ತಿರ್ಮಹಾರಾಜ ವಿವ್ಯಾಧೋರಸಿ ಮಾರ್ಗಣೈಃ ॥ 1 ॥
ಸಂಜಯ ಎಲೈ ಮಹಾರಾಜನೇ, ದೃಢಪರಾಕ್ರಮವುಳ್ಳ ತನ್ನೆಡೆಗೆ ಸಾಗಿ ಬರುತ್ತಿರುವ ಕೇಕಯನಾದ ಬೃಹತ್ಕತ್ರನನ್ನು ಕ್ಷೇಮಧೂರ್ತಿಯು ಬಾಣಗಳಿಂದ ಅವನ ಎದೆಯಲ್ಲಿ ಹೊಡೆದನು.
ಬೃಹತ್ಕತ್ರಸ್ತು ತಂ ರಾಜಾ ನವತ್ಯಾ ನತಪರ್ವಭಿಃ |
ಆಜಘ್ನೇ ತ್ವರಿತೋ ಯುದ್ಧೇ ದ್ರೋಣಾನೀಕಬಿಭಿತ್ಸಯಾ ॥ 2 ॥
ಬೃಹತ್ಕತ್ರನಾದರೋ ದ್ರೋಣ ಸೈನ್ಯವನ್ನು ಭೇದಿಸಲು ಬಯಸಿ ಬಾಗಿದ ತುದಿಯುಳ್ಳ ತೊಂಬತ್ತು ಬಾಣಗಳಿಂದ ಶೀಘ್ರವಾಗಿ ಅವನನ್ನು ಹೊಡೆದನು.
ಕ್ಷೇಮಧೂರ್ತಿಸ್ತು ಸಂಕ್ರುದ್ಧಃ ಕೇಕಯಸ್ಯ ಮಹಾತ್ಮನಃ |
ಧನುಶ್ಚಿಚ್ಛೇದ ಭಲ್ಲೇನ ಪೀತೇನ ನಿಶಿತೇನ ಚ ॥ 3 ॥
ಕ್ಷೇಮಧೂರ್ತಿಯೂ ಸಹ ಬಹಳ ಕೋಪಗೊಂಡು ನೀರನ್ನು ಕುಡಿಸಿ ಹದಮಾಡಿದ ಹರಿತವಾದ ಭಲ್ಲದಿಂದ ಮಹಾತ್ಮನಾದ ಕೇಕಯನ ಧನುಸ್ಸನ್ನು ಕತ್ತರಿಸಿದನು.
ಅಥೈನಂ ಛಿನ್ನಧನ್ವಾನಂ ಶಿತೇನ ನತಪರ್ವಣಾ |
ವಿವ್ಯಾಧ ಹೃದಯೇ ತೂರ್ಣಂ ಪ್ರವರಂ ಸರ್ವಧನ್ವಿನಾಮ್ ॥ 4 ॥
ಅನಂತರ ಧನುಸ್ಸು ಕತ್ತರಿಸಲ್ಪಟ್ಟ ಶ್ರೇಷ್ಠ ಧನುರ್ಧಾರಿಯಾದ ಅವನ ಮೇಲೆ ಬಾಗಿದ ತುದಿಯುಳ್ಳ ಹರಿತವಾದ ಬಾಣವನ್ನು ಅವನ ವಕ್ಷಸ್ಸ್ಥಲದಲ್ಲಿ ಪ್ರಯೋಗಿಸಿದನು.
ಅಥಾನ್ಯದ್ ಧನುರಾದಾಯ ಬೃಹತ್ಕತ್ರೋ ಹಸನ್ನಿವ |
ವ್ಯಶ್ವಸೂತಧ್ವಜಂ ಚಕ್ರೇ ಕ್ಷೇಮಧೂರ್ತಿಂ ಮಹಾರಥಮ್ ॥ 5 ॥
ಬೃಹತ್ಕತ್ರನು ನಗುವವನಂತೆ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಮಹಾರಥನಾದ ಕ್ಷೇಮಧೂರ್ತಿಯನ್ನು
ಅಶ್ವ-ಧ್ವಜ-ಸೂತರಹಿತನನ್ನಾಗಿ ಮಾಡಿದನು.
ತತೋಽಪರೇಣ ಭಲ್ಲೇನ ಪೀತೇನ ನಿಶಿತೇನ ಚ |
ಜಹಾರ ನೃಪತೇಃ ಕಾಯಾತ್ ಶಿರೋ ಜ್ವಲಿತಕುಂಡಲಮ್ ॥ 6 ॥
ಅನಂತರ ನೀರನ್ನು ಕುಡಿಸಿ ಹದಮಾಡಿದ ಇನ್ನೊಂದು ಭಲ್ಲದಿಂದ ಕುಂಡಲಗಳಿಂದ ಶೋಭಿಸುತ್ತಿದ್ದ ಕ್ಷೇಮಧೂರ್ತಿ ರಾಜನ ಶಿರಸ್ಸನ್ನು ಅವನ ದೇಹದಿಂದ ಕತ್ತರಿಸಿದನು.
ತಚ್ಛಿನ್ನಂ ಸಹಸಾ ತಸ್ಯ ಶಿರಃ ಕುಂಚಿತಮೂರ್ಧಜಮ್ |
ಸಕಿರೀಟಂ ಮಹೀಂ ಪ್ರಾಪ್ಯ ಬಭೌ ಜ್ಯೋತಿರಿವಾಂಬರಾತ್ ॥ 7 ॥
ಗುಂಗುರು ಕೂದಲುಗಳನ್ನು ಹೊಂದಿದ್ದ, ಕಿರೀಟವನ್ನು ಧರಿಸಿದ್ದ ಕ್ಷೇಮಧೂರ್ತಿಯ ಶಿರಸ್ಸು ಕತ್ತರಿಸಲ್ಪಟ್ಟು ಶೀಘ್ರವಾಗಿ ಭೂಮಿಯ ಮೇಲೆ ಬಿದ್ದು, ಆಕಾಶದಿಂದ ಬಿದ್ದ ಜ್ಯೋತಿಯಂತೆ ಶೋಭಿಸಿತು.
ತಂ ನಿಹತ್ಯ ರಣೇ ಹೃಷ್ಟೋ ಬೃಹತ್ಕತ್ರೋ ಮಹಾರಥಃ |
ಸಹಸಾಽಭ್ಯದ್ರವತ್ ಸೈನ್ಯಂ ತಾವಕಂ ದ್ರೋಣಕಾರಣಾತ್ ॥ 8 ॥

ಮಹಾರಥನಾದ ಬೃಹತ್ಕ್ಷತ್ರನು ಯುದ್ಧದಲ್ಲಿ ಅವನನ್ನು ಕೊಂದು ಸಂತೋಷಗೊಂಡವನಾಗಿ ತಕ್ಷಣ ದ್ರೋಣರನ್ನು ಉದ್ದೇಶಿಸಿ ನಿನ್ನ ಸೈನ್ಯದ ಕಡೆಗೆ ಧಾವಿಸಿದನು.
ಧೃಷ್ಟಕೇತುಮಥಾಽಽಯಾಂತಂ ದ್ರೋಣಹೇತೋಃ ಪರಾಕ್ರಮೀ |
ವೀರಧನ್ವಾ ಮಹೇಷ್ವಾಸೋ ವಾರಯಾಮಾಸ ಭಾರತ ॥ 9 ॥
ಎಲೈ ಭಾರತನೇ, ದ್ರೋಣರನ್ನು ಉದ್ದೇಶಿಸಿ ಶೀಘ್ರವಾಗಿ ಬರುತ್ತಿದ್ದ ಧೃಷ್ಟಕೇತುವನ್ನು (ಬೃಹತ್ಕ್ಷತ್ರನನ್ನು) ಪರಾಕ್ರಮಶಾಲಿಯೂ, ಮಹಾರಥನೂ ಆದ ವೀರಧನ್ವನು ತಡೆದನು.
ತೌ ಪರಸ್ಪರಮಾಸಾದ್ಯ ಶರದಂಷ್ಟ್ರೌ ತರಸ್ವಿನೌ |
ಶರೈರನೇಕಸಾಹಸ್ರೈರನ್ಯೋಽನ್ಯಮಭಿಜಘ್ನತುಃ ॥ 10 ॥
ಬಾಣವೆಂಬ ದಂಷ್ಟ್ರಗಳುಳ್ಳ, ನರಶಾರ್ದೂಲರಾದ ಅವರು ಪರಸ್ಪರವಾಗಿ ಸಂಧಿಸಿ, ದೊಡ್ಡ ಕಾಡಿನಲ್ಲಿ ಎರಡು ಸಲಗಗಳಂತೆ ತೀವ್ರಮದದಿಂದ ಕೂಡಿದವರಾಗಿ ಯುದ್ಧವನ್ನು ಮಾಡಿದರು.
ತಾವುಭೌ ನರಶಾರ್ದೂಲೌ ಯುಯುಧಾತೇ ಪರಸ್ಪರಮ್ |
ಮಹಾವನೇ ತೀವ್ರಮದೌ ವಾರಣಾವಿವ ಯೂಥಪೌ ॥ 11 ॥
ಗಿರಿಗಹ್ವರಮಾಸಾದ್ಯ ಶಾರ್ದೂಲಾವಿವ ರೋಷಿತೌ |
ತಾವುಭೌ ನರಶಾರ್ದೂಲೌ ಪೀಡಯಂತೌ ಪರಸ್ಪರಮ್ ॥ 12 ॥
ಪರ್ವತದ ಗುಹೆಯಲ್ಲಿ ಕೋಪಗೊಂಡ ಎರಡು ವ್ಯಾಘ್ರಗಳಂತೆ, ಎರಡು ಸಲಗಗಳಂತೆ ನರಶಾರ್ದೂಲರಾದ ಅವರಿಬ್ಬರು ಪರಸ್ಪರವಾಗಿ ಪೀಡಿಸುತ್ತಾ ಯುದ್ಧವನ್ನು ಮಾಡಿದರು.
ತದ್ ಯುದ್ಧಮಾಸೀತ್ ತುಮುಲಂ ಪ್ರೇಕ್ಷಣೀಯಂ ವಿಶಾಂಪತೇ |
ಸಿದ್ಧಚಾರಣಸಂಘಾನಾಂ ವಿಸ್ಮಯಾದ್ಭುತದರ್ಶನಮ್ ॥ 13 ॥
ಎಲೈ ರಾಜನೇ, ಆ ತೀವ್ರವಾದ ಯುದ್ಧವು ಮನೋಹರವಾಗಿದ್ದಿತು. ಸಿದ್ಧ-ಚಾರಣ ಸಮೂಹಗಳಿಗೂ ವಿಸ್ಮಯವನ್ನುಂಟು ಮಾಡುವಂತೆ ಅದ್ಭುತವಾಗಿ ತೋರುತ್ತಿದ್ದಿತು.
ವೀರಧನ್ವಾ ತತಃ ಕ್ರುದ್ಧೋ ಧೃಷ್ಟಕೇತೋಃ ಶರಾಸನಮ್ |
ದ್ವಿಧಾ ಚಿಚ್ಛೇದ ಭಲ್ಲೇನ ಪ್ರಹಸನ್ನಿವ ಭಾರತ ॥ 14 ॥
ಎಲೈ ಭಾರತನೇ, ಆಗ ವೀರಧನ್ವನು ನಗುತ್ತಲೇ ಬಹಳ ಕೋಪಗೊಂಡು ಧೃಷ್ಟಕೇತುವಿನ ಧನುಸ್ಸನ್ನು ಭಲ್ಲದಿಂದ ಎರಡು ಭಾಗವಾಗಿ ಕತ್ತರಿಸಿದನು.
ತದುತ್ಸ ೃಜ್ಯ ಧನುಶ್ಛಿನ್ನಂ ಚೈದ್ಯೋ ರಾಜಾ ಮಹಾಯಶಾಃ |
ಶಕ್ತಿಂ ಜಗ್ರಾಹ ವಿಪುಲಾಂ ರುಗ್ಮದಂಡಾಮಯಸ್ಮಯೀಮ್ ॥ 15 ॥
ಮಹಾಕೀರ್ತಿವಂತನಾದ ಚೈದ್ಯರಾಜನಾದ ಧೃಷ್ಟಕೇತುವು ಛಿನ್ನವಾದ ಧನುಸ್ಸನ್ನು ತ್ಯಜಿಸಿ, ಸುವರ್ಣದಂಡವನ್ನು ಹೊಂದಿದ್ದ, ಕಬ್ಬಿಣದಿಂದ ಮಾಡಿದ ಒಂದು ಶಕ್ತ್ಯಾಯುಧವನ್ನು ತೆಗೆದುಕೊಂಡನು.
ತಾಂ ತು ಶಕ್ತಿಂ ಮಹಾವೀರ್ಯಾಂ ಮಹತೀಮಥ ಭಾರತ |
ಚಿಕ್ಷೇಪ ಸಹಸಾ ಯತ್ತೋ ವೀರಧನ್ವರಥಂ ಪ್ರತಿ ॥ 16 ॥
ಎಲೈ ಭಾರತನೇ, ಮಹಾಬಲವುಳ್ಳ ಆ ದೊಡ್ಡ ಶಕ್ತ್ಯಾಯುಧವನ್ನು ಅವನು ಎಚ್ಚರಿಕೆಯಿಂದ ವೀರಧನ್ವನ ರಥದ ಮೇಲೆ ಶೀಘ್ರವಾಗಿ ಎಸೆದನು.
ಸ ತಯಾ ವೀರಘಾತಿನ್ಯಾ ಶಕ್ತ್ಯಾ ತ್ವಭಿಹತೋ ಭೃಶಮ್ |
ನಿರ್ಭಿನ್ನಹೃದಯಸ್ತೂರ್ಣಂ ನಿಪಪಾತ ರಥಾನ್ಮಹೀಮ್ ॥ 17 ॥
ವೀರಧನ್ವನಾದರೋ ವೀರಘಾತಿಯಾದ ಆ ಶಕ್ತಿಯಿಂದ ಗಾಢವಾಗಿ ಹೊಡೆಯಲ್ಪಟ್ಟು ಹೃದಯವು ಒಡೆದು ರಥದಿಂದ ಭೂಮಿಯ ಮೇಲೆ ಬಿದ್ದನು.
ತಸ್ಮಿನ್ ವಿನಿಹತೇ ವೀರೇ ತ್ರೈಗರ್ತಾನಾಂ ಮಹಾರಥೇ |
ಬಲಂ ತೇಽಭಜ್ಯತ ವಿಭೋ ಪಾಂಡವೇಯೈಃ ಸಮಂತತಃ ॥ 18 ॥
ಎಲೈ ವಿಭುವೇ, ತ್ರಿಗರ್ತರ ಮಹಾರಥನಾದ ವೀರನಾದ ವೀರಧನ್ವನು ಮರಣ ಹೊಂದುತ್ತಿರಲು, ಪಾಂಡವ ಯೋಧರು ನಿನ್ನ ಸೈನ್ಯವನ್ನು ಎಲ್ಲ ಕಡೆಗಳಿಂದಲೂ ಭಗ್ನಗೊಳಿಸಿದರು.
ಸಹದೇವೇ ತತಃ ಷಷ್ಟಿಂ ಸಾಯಕಾನ್ ದುರ್ಮುಖೋಽಕ್ಷಿಪತ್ |
ನನಾದ ಚ ಮಹಾನಾದಂ ತರ್ಜಯನ್ ಪಾಂಡವಂ ರಣೇ ॥ 19 ॥
ದುರ್ಮುಖನು ಸಹದೇವನ ಮೇಲೆ ಅರವತ್ತು ಬಾಣಗಳನ್ನು ಪ್ರಯೋಗಿಸಿ ಯುದ್ಧದಲ್ಲಿ ಅವನನ್ನು ಹೆದರಿಸುತ್ತಾ ದೊಡ್ಡ ಸಿಂಹನಾದವನ್ನು ಮಾಡಿದನು.
ಮಾದ್ರೇಯಸ್ತು ತತಃ ಕ್ರುದ್ಧೋ ದುರ್ಮುಖಂ ದಶಭಿಃ ಶರೈಃ |
ಭ್ರಾತಾ ಭ್ರಾತರಮಾಯತ್ತೋ ವಿವ್ಯಾಧ ಪ್ರಹಸನ್ನಿವ ॥ 20 ॥
ಮಾದ್ರೀಪುತ್ರನಾದ ಸಹದೇವನು ನಗುತ್ತಲೇ ಕೋಪಗೊಂಡು ತನ್ನ ಸಹೋದರನಾದ ದುರ್ಮುಖನನ್ನು ಹತ್ತು ಬಾಣಗಳಿಂದ ಹೊಡೆದನು.
ತಂ ರಣೇ ರಭಸಂ ದೃಷ್ಟ್ವಾ ಸಹದೇವಂ ಮಹಾಬಲಮ್ |
ದುರ್ಮುಖೋ ನವಭಿರ್ಬಾಣೈಃ ತಾಡಯಾಮಾಸ ಭಾರತ ॥ 21 ॥

ಎಲೈ ಭಾರತನೇ, ಮಹಾಬಲನಾದ ಸಹದೇವನು ಯುದ್ಧದಲ್ಲಿ ವೇಗಶಾಲಿಯಾಗಿರುವುದನ್ನು ನೋಡಿ ದುರ್ಮುಖನು ಅವನ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ದುರ್ಮುಖಸ್ಯ ತು ಭಲ್ಲೇನ ಛಿತ್ತ್ವಾ ಕೇತುಂ ಮಹಾಬಲಃ |
ಜಘಾನ ಚತುರೋ ವಾಹಾಂಶ್ಚತುರ್ಭಿರ್ನಿಶಿತೈಃ ಶರೈಃ ॥ 22 ॥
ಮಹಾಬಲನಾದ ಸಹದೇವನು ಒಂದು ಭಲ್ಲದಿಂದ ದುರ್ಮುಖನ ಧ್ವಜವನ್ನು ಕತ್ತರಿಸಿ, ನಾಲ್ಕು ಹರಿತವಾದ ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನು ಕೊಂದನು.
ಅಥಾಪರೇಣ ಭಲ್ಲೇನ ಪೀತೇನ ನಿಶಿತೇನ ಚ |
ಚಿಚ್ಛೇದ ಸಾರಥೇಃ ಕಾಯಾತ್ ಶಿರೋ ಜ್ವಲಿತಕುಂಡಲಮ್ ॥ 23 ॥
ಅನಂತರ ನೀರನ್ನು ಕುಡಿಸಿ ನಿಶಿತವನ್ನಾಗಿ ಮಾಡಿದ ಇನ್ನೊಂದು ಭಲ್ಲದಿಂದ ಕುಂಡಲಗಳಿಂದ ಶೋಭಿತವಾದ ಅವನ ಸಾರಥಿಯ ಶಿರಸ್ಸನ್ನು ದೇಹದಿಂದ ಕತ್ತರಿಸಿದನು.
ಕ್ಷುರಪ್ರೇಣ ಚ ತೀಕ್ಷ್ಣೇನ ಕೌರವ್ಯಸ್ಯ ಮಹದ್ ಧನುಃ |
ಸಹದೇವೋ ರಣೇ ಛಿತ್ತ್ವಾ ತಂ ಚ ವಿವ್ಯಾಧ ಪಂಚಭಿಃ ॥ 24 ॥
ಹರಿತವಾದ ಕ್ಷುರಪ್ರದಿಂದ ಕೌರವನಾದ ದುರ್ಮುಖನ ದೊಡ್ಡ ಧನುಸ್ಸನ್ನು ಕತ್ತರಿಸಿ ಸಹದೇವನು ಯುದ್ಧದಲ್ಲಿ ಅವನನ್ನು ಪುನಃ ಐದು ಬಾಣಗಳಿಂದ ಹೊಡೆದನು.
ಹತಾಶ್ವಂ ತು ರಥಂ ತ್ಯಕ್ತ್ವಾ ದುರ್ಮುಖೋ ವಿಮನಾಸ್ತದಾ |
ಆರುರೋಹ ರಥಂ ರಾಜನ್ ನಿರಮಿತ್ರಸ್ಯ ಭಾರತ ॥ 25 ॥
ಎಲೈ ಭಾರತನೇ, ದುರ್ಮುಖನು ಬೇಸರಗೊಂಡು ಅಶ್ವಗಳು ಮೃತವಾದ ತನ್ನ ರಥವನ್ನು ತ್ಯಜಿಸಿ ನಿರಮಿತ್ರನ ರಥವನ್ನು ಏರಿದನು.
ಸಹದೇವಸ್ತು ಸಂಕ್ರುದ್ಧೋ ನಿರಮಿತ್ರಂ ಮಹಾಹವೇ |
ಜಘಾನ ಪೃತನಾಮಧ್ಯೇ ಭಲ್ಲೇನ ಪರವೀರಹಾ ॥ 26 ॥
ಪರವೀರಘಾತಕನಾದ ಸಹದೇವನಾದರೋ ಮಹಾಯುದ್ಧದಲ್ಲಿ ಕೋಪಗೊಂಡವನಾಗಿ ಸೈನ್ಯದ ಮಧ್ಯದಲ್ಲಿ ಭಲ್ಲದಿಂದ ನಿರಮಿತ್ರನನ್ನು ಕೊಂದನು.
ಸ ಪಪಾತ ರಥೋಪಸ್ಥಾನ್ನಿರಮಿತ್ರೋ ಜನೇಶ್ವರಃ |
ತ್ರಿಗರ್ತರಾಜಸ್ಯ ಸುತೋ ವ್ಯಥಯಂಸ್ತವ ವಾಹಿನೀಮ್ ॥ 27 ॥
ತ್ರಿಗರ್ತರಾಜನ ಪುತ್ರನಾದ ಸ್ವತಃ ರಾಜನಾದ ನಿರಮಿತ್ರನು ನಿನ್ನ ಸೈನ್ಯವನ್ನು ವ್ಯಥೆಗೊಳಿಸುತ್ತಾ ರಥದ ಮಧ್ಯದಿಂದ ಬಿದ್ದನು.
ಹತ್ವಾ ತಂ ತು ಮಹಾಬಾಹುಃ ಸಹದೇವೋ ವ್ಯರೋಚತ |
ಯಥಾ ದಾಶರಥೀ ರಾಮಃ ಖರಂ ಹತ್ವಾ ಮಹಾಬಲಮ್ ॥ 28 ॥
ಮಹಾಬಾಹುವಾದ ಸಹದೇವನು ಅವನನ್ನು ಕೊಂದು ಮಹಾಬಲನಾದ ಖರನನ್ನು ಕೊಂದ ದಶರಥ ಪುತ್ರನಾದ ರಾಮನಂತೆ ಶೋಭಿಸಿದನು.
ಹಾಹಾಕಾರೋ ಮಹಾನಾಸೀತ್ ತ್ರಿಗರ್ತಾನಾಂ ಜನೇಶ್ವರ |
ರಾಜಪುತ್ರಂ ಹತಂ ದೃಷ್ಟ್ವಾ ನಿರಮಿತ್ರಂ ಮಹಾಬಲಮ್ ॥ 29 ॥
ಎಲೈ ರಾಜನೇ, ಮಹಾಬಲನಾದ ರಾಜಕುಮಾರನಾದ ನಿರಮಿತ್ರನು ಹತನಾದುದನ್ನು ನೋಡಿ ತ್ರಿಗರ್ತರ ಸೈನ್ಯದಲ್ಲಿ ದೊಡ್ಡ ಹಾಹಾಕಾರ ಉಂಟಾಯಿತು.
ನಕುಲಸ್ತೇ ಸುತಂ ವೀರೋ ವಿಕರ್ಣಂ ಪೃಥುಲೋಚನಮ್ |
ಮುಹೂರ್ತಾಜ್ಜಿತವಾನ್ ಸಂಖ್ಯೇ ತದದ್ಭುತಮಿವಾಭವತ್ ॥ 30 ॥
ವೀರನಾದ ನಕುಲನು ನಿನ್ನ ಪುತ್ರನಾದ, ವಿಸ್ತಾರನೇತ್ರವುಳ್ಳ ವಿಕರ್ಣನನ್ನು ಯುದ್ಧದಲ್ಲಿ ಒಂದು ಮುಹೂರ್ತದಲ್ಲಿ ಜಯಿಸಿದನು. ಅದು ಅದ್ಭುತವಾಗಿದ್ದಿತು.
ಸಾತ್ಯಕಿಂ ವ್ಯಾಘ್ರದತ್ತಸ್ತು ಶರೈಃ ಸನ್ನತಪರ್ವಭಿಃ |
ಚಕ್ರೇಽದೃಶ್ಯಂ ಸಾಶ್ವಸೂತಂ ಸಧ್ವಜಂ ಪೃತನಾಂತರೇ ॥ 31 ॥
ಇನ್ನೊಂದು ಸೈನ್ಯದಲ್ಲಿ ವ್ಯಾಘ್ರದತ್ತನು ಬಾಗಿದ ತುದಿಯುಳ್ಳ ಬಾಣಗಳಿಂದ ಅಶ್ವ- ಸೂತ-ಧ್ವಜ ಸಹಿತನಾದ ಸಾತ್ಯಕಿಯನ್ನು ಅದೃಶ್ಯನನ್ನಾಗಿ ಮಾಡಿದನು.
ತಾನ್ ನಿವಾರ್ಯ ಶರಾನ್ ಶೂರಃ ಶೈನೇಯಃ ಕೃತಹಸ್ತವತ್ |
ಸಾಶ್ವಸೂತಧ್ವಜಂ ಬಾಣೈರ್ವ್ಯಾಘ್ರದತ್ತಮಪಾತಯತ್ ॥ 32 ॥
ಶೂರನೂ, ಪಳಗಿದ ಹಸ್ತವುಳ್ಳವನೂ ಆದ ಸಾತ್ಯಕಿಯು ಅವನ ಬಾಣಗಳನ್ನು ನಿವಾರಿಸಿ ತನ್ನ ಬಾಣಗಳಿಂದ ಅಶ್ವ-ಸೂತ-ಧ್ವಜ ಸಹಿತನಾದ ವ್ಯಾಘ್ರದತ್ತನನ್ನು ರಥದಿಂದ ಬೀಳಿಸಿದನು.
ಕುಮಾರೇ ನಿಹತೇ ತಸ್ಮಿನ್ ಮಾಗಧಸ್ಯ ಸುತೇ ಪ್ರಭೋ |
ಮಾಗಧಾಃ ಸರ್ವತೋ ಯತ್ತಾ ಯುಯುಧಾನಮಯೋಧಯನ್ ॥
ಎಲೈ ಪ್ರಭುವೇ, ಮಗಧದೇಶದ ರಾಜಕುಮಾರನಾದ ವ್ಯಾಘ್ರದತ್ತನು ಬೀಳಿಸಲ್ಪಡುತ್ತಿರಲು ಮಾಗಧಯೋಧರೆಲ್ಲರೂ ಪ್ರಯತ್ನಪೂರ್ವಕವಾಗಿ ಎಲ್ಲ ಕಡೆಯಿಂದಲೂ ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ವಿಸೃಜಂತಃ ಶರಾಂಶ್ಚೈವ ತೋಮರಾಂಶ್ಚ ಸಹಸ್ರಶಃ |
ಭಿಂಡಿಪಾಲಾಂಸ್ತಥಾ ಪ್ರಾಸಾನ್ ಮುಸಲಾನ್ ಮುದ್ಗರಾನಪಿ |

ಅಯೋಧಯನ್ ರಣೇ ವೀರಾಃ ಸಾತ್ವತಂ ಯುದ್ಧದುರ್ಮದಮ್ ॥
ವೀರರಾದ ಅವರು ರಣರಂಗದಲ್ಲಿ ಸಹಸ್ರ ಸಂಖ್ಯೆಯಲ್ಲಿ ಬಾಣಗಳನ್ನೂ, ತೋಮರಗಳನ್ನೂ, ಭಿಂಡಿಪಾಲಗಳನ್ನೂ, ಪ್ರಾಸಗಳನ್ನೂ, ಮುಸಲಗಳನ್ನೂ, ಮುದ್ಗರಗಳನ್ನೂ ಪ್ರಯೋಗಿಸುತ್ತಾ ಯುದ್ಧದುರ್ಮದನಾದ ಸಾತ್ಯಕಿಯನ್ನು ಪೀಡಿಸಿದರು.
ತಾಂಸ್ತು ಸರ್ವಾನ್ ಸ ಬಲವಾನ್ ಸಾತ್ಯಕಿರ್ಯುದ್ಧದುರ್ಮದಃ |
ನಾತಿಕೃಚ್ಛ್ರಾದ್ ಹಸನ್ನೇವ ವಿಜಿಗ್ಯೇ ಪುರುಷರ್ಷಭ ॥ 35 ॥
ಎಲೈ ಪುರುಷಶ್ರೇಷ್ಠನೇ, ರಾಜನೇ, ಮಹಾಬಲನೂ, ಯುದ್ಧದುರ್ಮದನೂ ಆದ ಸಾತ್ಯಕಿಯು ನಗುತ್ತಲೇ ಬಹಳ ಪ್ರಯಾಸವಿಲ್ಲದೆ ಅವರೆಲ್ಲರನ್ನೂ ಸೋಲಿಸಿದನು.
ಮಾಗಧಾನ್ ದ್ರವತೋ ದೃಷ್ಟ್ವಾ ಹತಶೇಷಾನ್ ಸಮಂತತಃ |
ಅಭಜ್ಯತ ಬಲಂ ತತ್ ತೇ ಯುಯುಧಾನಶರಾರ್ದಿತಮ್ ॥ 36 ॥
ಅಳಿದುಳಿದ ಮಾಗಧರು ಎಲ್ಲ ಕಡೆಗಳಲ್ಲಿಯೂ ಓಡಿಹೋಗುವುದನ್ನು ನೋಡಿ ಸಾತ್ಯಕಿಯ ಬಾಣಗಳಿಂದ ಪೀಡಿತವಾದ ನಿನ್ನ ಸೈನ್ಯವು ಭಗ್ನವಾಯಿತು.
ನಾಶಯಿತ್ವಾ ರಣೇ ಸೈನ್ಯಂ ತ್ವದೀಯಾಂಸ್ತು ಸಮಂತತಃ |
ವಿಧೂನ್ವಾನೋ ಧನುಃಶ್ರೇಷ್ಠಂ ವ್ಯಭ್ರಾಜತ ಮಹಾಯಶಾಃ ॥ 37 ॥
ಯಥಾ ದೈತ್ಯಚಮೂಂ ಹತ್ವಾ ಶಕ್ರೋ ರಾಜನ್ ವ್ಯರೋಚತ ॥ 38 ॥
ಎಲೈ ರಾಜನೇ, ನಿನ್ನ ಸೈನ್ಯವನ್ನು ಎಲ್ಲ ಕಡೆಗಳಲ್ಲಿಯೂ ನಾಶವನ್ನು ಮಾಡಿ, ತನ್ನ ಶ್ರೇಷ್ಠವಾದ ಧನುಸ್ಸನ್ನು ತೂಗಾಡಿಸುವ ಮಹಾಕೀರ್ತಿವಂತನಾದ ಸಾತ್ಯಕಿಯು ದೈತ್ಯಸೈನ್ಯವನ್ನು ಸಂಹರಿಸಿದ ಇಂದ್ರನಂತೆ ಶೋಭಿಸಿದನು.
ಭಜ್ಯಮಾನಂ ಬಲಂ ರಾಜನ್ ಸಾತ್ವತೇನ ಮಹಾತ್ಮನಾ |
ನಾಭ್ಯವರ್ತತ ಯುದ್ಧಾಯ ತ್ರಾಸಿತಂ ದೀರ್ಘಬಾಹುನಾ ॥ 39 ॥
ಎಲೈ ರಾಜನೇ, ಮಹಾತ್ಮನಾದ ಸಾತ್ವತನಾದ ದೀರ್ಘಬಾಹುವಾದ ಸಾತ್ಯಕಿಯಿಂದ ಭಯಗೊಳಿಸಲ್ಪಟ್ಟು ಭಗ್ನವಾದ ನಿನ್ನ ಸೈನ್ಯವು ಪುನಃ ಯುದ್ಧಕ್ಕೆ ಬರಲಿಲ್ಲ.
ತತೋ ದ್ರೋಣೋ ಭೃಶಂ ಕ್ರುದ್ಧಃ ಸಹಸೋದ್ವ ೃತ್ಯ ಚಕ್ಷುಷೀ |
ಸಾತ್ಯಕಿಂ ಸತ್ಯಕರ್ಮಾಣಂ ಸ್ವಯಮೇವಾಭಿದುದ್ರುವೇ ॥ 40 ॥
ಆಗ ದ್ರೋಣರು ಬಹಳ ಕೋಪಗೊಂಡು ಕಣ್ಣುಗಳನ್ನು ವಿಸ್ತಾರವಾಗಿ ತೆರೆದು ಸತ್ಯಕರ್ಮನಾದ ಸಾತ್ಯಕಿಯ ಮೇಲೆ ತಾವೇ ಧಾವಿಸಿದರು.
ದ್ರೌಪದೇಯಾನ್ ಮಹೇಷ್ವಾಸಾನ್ ಸೌಮದತ್ತಿರ್ಮಹಾರಥಃ |
ಏಕೈಕಂ ಪಂಚಭಿರ್ವಿದ್ಧ್ವಾ ಪುನರ್ವಿವ್ಯಾಧ ಸಪ್ತಭಿಃ ॥ 41 ॥
ಮಹಾರಥನೂ, ಸೋಮದತ್ತನ ಪುತ್ರನೂ ಆದ ಶಲನು ಮಹಾಧನುರ್ಧಾರಿಗಳಾದ ದ್ರೌಪದಿಯ ಪುತ್ರರಲ್ಲಿ ಒಬ್ಬೊಬ್ಬರ ಮೇಲೆಯೂ ಐದು ಬಾಣಗಳನ್ನು ಪ್ರಯೋಗಿಸಿ, ಪುನಃ ಏಳು ಬಾಣಗಳನ್ನು ಪ್ರಯೋಗಿಸಿದನು.
ತೇ ಪೀಡಿತಾ ಭೃಶಂ ತೇನ ರೌದ್ರೇಣ ಸಹಸಾ ಪ್ರಭೋ |
ಸಮ್ಮೂಢಾ ನೈವ ವಿವಿದುರ್ಮೃಧೇ ಕೃತ್ಯಂ ಹಿ ಕಿಂಚನ ॥ 42 ॥
ಎಲೈ ಪ್ರಭುವೇ, ಭಯಂಕರವಾದ ಅವನ ಬಾಣಗಳಿಂದ ಪೀಡಿಸಲ್ಪಟ್ಟ ಅವರು ಸಮ್ಮೂಢರಾಗಿ ಯುದ್ಧದಲ್ಲಿ ಏನು ಮಾಡಬೇಕೆಂದು ತಿಳಿಯದಾದರು.
ನಾಕುಲಶ್ಚ ಶತಾನೀಕಃ ಸೌಮದತ್ತಿಂ ನರರ್ಷಭಮ್ |
ದ್ವಾಭ್ಯಾಂ ವಿದ್ಧ್ವಾನದದ್ ಧೃಷ್ಟಃ ಶರಾಭ್ಯಾಂ ಶತ್ರುತಾಪನಃ ॥ 43 ॥
ನಕುಲಪುತ್ರನಾದ, ಶತ್ರುತಾಪನನಾದ, ಧೈರ್ಯಶಾಲಿಯಾದ ಶತಾನೀಕನು ನರಶ್ರೇಷ್ಠನಾದ ಸೌಮದತಿತಯನ್ನು ಎರಡು ಬಾಣಗಳಿಂದ ಹೊಡೆದು ಸಿಂಹನಾದವನ್ನು ಮಾಡಿದನು.
ತಥೇತರೇ ರಣೇ ಯತ್ತಾಃ ತ್ರಿಭಿಸ್ತ್ರಿಭಿರಜಿಹ್ಮಗೈಃ |
ವಿವ್ಯಧುಃ ಸಮರೇ ತೂರ್ಣಂ ಸೌಮದತ್ತಿಮಮರ್ಷಣಮ್ ॥ 44 ॥
ಹಾಗೆಯೇ ಉಳಿದ ದ್ರೌಪದಿಯ ಪುತ್ರರೂ ಸಹ ಪ್ರಯತ್ನಪೂರ್ವಕವಾಗಿ ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ರೋಷಗೊಂಡ ಸೌಮದತ್ತಿಯನ್ನು ಶೀಘ್ರವಾಗಿ ಹೊಡೆದರು.
ಸ ತಾನ್ ಪ್ರತಿ ಮಹಾರಾಜ ಚಿಕ್ಷೇಪ ಪಂಚ ಸಾಯಕಾನ್ |
ಏಕೈಕಂ ಹೃದಿ ಚಾಜಘ್ನೇ ಏಕೈಕೇನ ಮಹಾಯಶಾಃ ॥ 45 ॥
ಎಲೈ ಮಹಾರಾಜನೇ, ಮಹಾಕೀರ್ತಿವಂತನಾದ ಅವನು ಅವರ ಮೇಲೆ ಐದು ಬಾಣಗಳನ್ನು ಪ್ರಯೋಗಿಸಿ ಒಬ್ಬೊಬ್ಬರನ್ನೂ ಹೃದಯದಲ್ಲಿ ಒಂದೊಂದು ಬಾಣಗಳಿಂದ ಹೊಡೆದನು.
ತತಸ್ತೇ ಭ್ರಾತರಃ ಪಂಚ ಶರೈರ್ವಿದ್ಧಾ ಮಹಾತ್ಮನಾ |
ಪರಿವಾರ್ಯ ರಥೈರ್ವೀರಂ ವಿವ್ಯಧುಃ ಸಾಯಕೈರ್ಭೃಶಮ್ ॥ 46 ॥
ಆಗ ಮಹಾತ್ಮನಾದ ಭೂರಿಶ್ರವನ ಬಾಣಗಳಿಂದ ಹೊಡೆಯಲ್ಪಟ್ಟ ಐವರು ಸಹೋದರರು ತಮ್ಮ ರಥಗಳಿಂದ ಸುತ್ತುವರಿದು, ತಮ್ಮ ಬಾಣಗಳಿಂದ ವೀರನಾದ ಶಲನನ್ನು ಚೆನ್ನಾಗಿ ಪೀಡಿಸಿದರು.
ಆರ್ಜುನಿಸ್ತು ಹಯಾಂಸ್ತಸ್ಯ ಚತುರ್ಭಿರ್ನಿಶಿತೈಃ ಶರೈಃ |
ಪ್ರೇಷಯಾಮಾಸ ಸಂಕ್ರುದ್ಧೋ ಯಮಸ್ಯ ಸದನಂ ಪ್ರತಿ ॥ 47 ॥

ಅರ್ಜುನಪುತ್ರನಾದ ಶ್ರುತಕರ್ಮನು ಕೋಪಗೊಂಡು ತನ್ನ ಹರಿತವಾದ ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನು ಯಮಲೋಕಕ್ಕೆ ಕಳುಹಿಸಿದನು.
ಭೈಮಸೇನಿರ್ಧನುಶ್ಛಿತ್ತ್ವಾ ಸೌಮದತ್ತೇರ್ಮಹಾತ್ಮನಃ |
ನನಾದ ಬಲವನ್ನಾದಂ ವಿವ್ಯಾಧ ನಿಶಿತೈಃ ಶರೈಃ ॥ 48 ॥
ಭೀಮಸೇನನ ಪುತ್ರನಾದ ಸುತಸೋಮನು ಮಹಾತ್ಮನಾದ ಸೋಮದತ್ತನ ಪುತ್ರನಾದ ಶಲನ ಧನುಸ್ಸನ್ನು ಕತ್ತರಿಸಿ, ದೊಡ್ಡ ನಾದವನ್ನು ಮಾಡಿ ಪುನಃ ಅವನನ್ನು ಹರಿತವಾದ ಬಾಣಗಳಿಂದ ಹೊಡೆದನು.
ಯೌಧಿಷ್ಠಿರೋ ಧ್ವಜಂ ಛಿತ್ತ್ವಾ ತಸ್ಯ ಭೂಮಾವಪಾತಯತ್ |
ನಾಕುಲಶ್ಚಾಸ್ಯ ಯಂತಾರಂ ರಥನೀಡಾದಪಾತಯತ್ ॥ 49 ॥
ಯುಧಿಷ್ಠಿರನ ಮಗನಾದ ಪ್ರತಿವಿಂಧ್ಯನು ಅವನ ಧ್ವಜವನ್ನು ಕತ್ತರಿಸಿ ಭೂಮಿಯ ಮೇಲೆ ಬೀಳಿಸಿದನು. ನಕುಲನ ಪುತ್ರನಾದ ಶ್ರುತಸೇನನು ಅವನ ಸಾರಥಿಯನ್ನು ರಥದ ಮುಂಭಾಗದಿಂದ ಕೆಡವಿದನು.
ಸಾಹದೇವಿಸ್ತು ತಂ ಹತ್ವಾ ಭ್ರಾತೃಭಿರ್ವಿಮುಖೀಕೃತಮ್ |
ಕ್ಷುರಪ್ರೇಣ ಶಿರೋ ರಾಜನ್ ನಿಚಕರ್ತ ಮಹಾಹವೇ ॥ 50 ॥
ಎಲೈ ರಾಜನೇ, ಸಹದೇವನ ಪುತ್ರನಾದ ಶತಾನೀಕನು ತನ್ನ ಸಹೋದರರಿಂದ ಯುದ್ಧ ವಿಮುಖನನ್ನಾಗಿ ಮಾಡಲ್ಪಟ್ಟ ಶಲನನ್ನು ಒಂದು ಕ್ಷುರಪ್ರದಿಂದ ಹೊಡೆದು ಮಹಾಯುದ್ಧದಲ್ಲಿ ಅವನ ಶಿರಸ್ಸನ್ನು ಕತ್ತರಿಸಿದನು.
ತಚ್ಛಿರೋ ನ್ಯಪತದ್ ಭೂಮೌ ತಪನೀಯವಿಭೂಷಿತಮ್ |
ಭಾಸಯತ್ ತದ್ ರಣೋದ್ದೇಶಂ ಬಾಲಸೂರ್ಯಸಮಪ್ರಭಮ್ ॥51॥
ಬಾಲಸೂರ್ಯನ ಕಾಂತಿಗೆ ಸಮವಾದ ಕಾಂತಿಯುಳ್ಳ, ಸುವರ್ಣಾಲಂಕೃತವಾದ ಅವನ ಶಿರಸ್ಸು ಆ ರಣಪ್ರದೇಶವನ್ನು ಬೆಳಗುತ್ತಾ ಭೂಮಿಯ ಮೇಲೆ ಬಿದ್ದಿತು.
ಸೌಮದತ್ತೇಃ ಶಿರೋ ದೃಷ್ಟ್ವಾ ನಿಪತತ್ ತನ್ಮಹಾತ್ಮನಃ |
ವಿತ್ರಸ್ತಾಸ್ತಾವಕಾ ರಾಜನ್ ಪ್ರದುದ್ರುವುರನೇಕಧಾ ॥ 52 ॥
ಎಲೈ ರಾಜನೇ, ಮಹಾತ್ಮನಾದ ಶಲನ ಶಿರಸ್ಸು ಭೂಮಿಯ ಮೇಲೆ ಬೀಳುವುದನ್ನು ನೋಡಿ ಹೆದರಿದ ನಿನ್ನ ಸೈನಿಕರು ಅನೇಕ ರೀತಿಗಳಲ್ಲಿ ಓಡಿ ಹೋದರು.
ಅಲಂಬುಸಸ್ತು ಸಮರೇ ಭೀಮಸೇನಂ ಮಹಾಬಲಮ್ |
ಯೋಧಯಾಮಾಸ ಸಂಕ್ರುದ್ಧೋ ಲಕ್ಷ್ಮಣಂ ರಾವಣಿರ್ಯಥಾ ॥ 53 ॥
ಅಲಂಬುಸನಾದರೋ ಬಹಳ ಕೋಪಗೊಂಡವನಾಗಿ ರಣರಂಗದಲ್ಲಿ ಲಕ್ಷ್ಮಣನ ಜೊತೆಯಲ್ಲಿ ಇಂದ್ರಜಿತುವು ಯುದ್ಧಮಾಡಿದಂತೆ ಮಹಾಬಲನಾದ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸಂಪ್ರಯುದ್ಧೌ ರಣೇ ದೃಷ್ಟ್ವಾ ತಾವುಭೌ ನರರಾಕ್ಷಸೌ |
ವಿಸ್ಮಯಃ ಸರ್ವಭೂತಾನಾಂ ಭಯಂ ಚಾಸೀತ್ ಸುದಾರುಣಮ್ ॥54॥
ನರರಾಕ್ಷಸರಾದ ಅವರಿಬ್ಬರೂ ಘೋರವಾಗಿ ಯುದ್ಧ ಮಾಡುತ್ತಿರುವುದನ್ನು ನೋಡಿ ಎಲ್ಲ ಪ್ರಾಣಿಗಳಿಗೂ ತೀವ್ರವಾದ ಭಯವೂ ಮತ್ತು ಆಶ್ಚರ್ಯವೂ ಉಂಟಾಯಿತು.
ಆರ್ಷ್ಯಶೃಂಗಿಂ ತದಾ ಭೀಮೋ ನವಭಿರ್ನಿಶಿತೈಃ ಶರೈಃ |
ವಿವ್ಯಾಧ ಪ್ರಹಸನ್ ರಾಜನ್ ರಾಕ್ಷಸೇಂದ್ರಮಮರ್ಷಣಮ್ ॥ 55 ॥
ಎಲೈ ರಾಜನೇ, ಆಗ ಭೀಮನು ರಾಕ್ಷಸೇಂದ್ರನೂ, ಕ್ರೋಧಶೀಲನೂ ಆದ ಅಲಂಬುಸನನ್ನು ಹರಿತವಾದ ಒಂಬತ್ತು ಬಾಣಗಳಿಂದ ನಗುತ್ತಾ ಪ್ರಹಾರ ಮಾಡಿದನು.
ತದ್ರಕ್ಷಃ ಸಮರೇ ವಿದ್ಧಂ ನಾದಂ ಕೃತ್ವಾ ಭಯಾವಹಮ್ |
ಅಭ್ಯದ್ರವತ್ ತತೋ ಭೀಮಂ ಯೇ ಚ ತಸ್ಯ ಪದಾನುಗಾಃ ॥ 56 ॥
ಆ ರಾಕ್ಷಸನಾದರೋ ಭಯಂಕರವಾದ ನಾದವನ್ನು ಮಾಡಿ ಭೀಮಸೇನನ ಮೇಲೆ ಮತ್ತು ಅವನ ಅನುಯಾಯಿಗಳ ಮೇಲೆ ಧಾವಿಸಿ ಬಂದನು.
ಸ ಭೀಮಂ ಪಂಚಭಿರ್ವಿದ್ಧ್ವಾ ಶರೈಃ ಸನ್ನತಪರ್ವಭಿಃ |
ಭೀಮಾನುಗಾನ್ ಜಘಾನಾಶು ರಥಾನ್ ತ್ರಿಂಶದರಿಂದಮಃ |
ಪುನಶ್ಚತುಃಶತಾನ್ ಹತ್ವಾ ಭೀಮಂ ವಿವ್ಯಾಧ ಪತ್ರಿಣಾ ॥ 57 ॥
ಅರಿಂದಮನಾದ ಆ ರಾಕ್ಷಸನು ಬಾಗಿದ ತುದಿಯುಳ್ಳ ಐದು ಬಾಣಗಳಿಂದ ಭೀಮಸೇನನನ್ನು ಹೊಡೆದು, ಭೀಮಸೇನನ ಅನುಯಾಯಿಗಳಾದ ಮೂವತ್ತು ರಥರನ್ನು ಶೀಘ್ರವಾಗಿ ಕೊಂದನು. ಪುನಃ ನಾಲ್ಕುನೂರು ಯೋಧರನ್ನು ಕೊಂದು ಪತ್ರವುಳ್ಳ ಬಾಣಗಳಿಂದ ಭೀಮಸೇನನನ್ನು ಹೊಡೆದನು.
ಸೋಽತಿವಿದ್ಧಸ್ತದಾ ಭೀಮೋ ರಾಕ್ಷಸೇನ ಮಹಾಬಲಃ |
ನಿಷಸಾದ ರಥೋಪಸ್ಥೇ ಮೂರ್ಚ್ಛಯಾಽಭಿಪರಿಪ್ಲುತಃ ॥ 58 ॥
ರಾಕ್ಷಸನಿಂದ ತೀವ್ರವಾಗಿ ಹೊಡೆಯಲ್ಪಟ್ಟ ಮಹಾಬಲನಾದ ಭೀಮಸೇನನು ರಥದ ಮಧ್ಯಭಾಗದಲ್ಲಿ ಕುಳಿತು ಮೂರ್ಛೆಯನ್ನು ಹೊಂದಿದನು.
ಪ್ರತಿಲಭ್ಯ ತತಃ ಸಂಜ್ಞಾಂ ಮಾರುತಿಃ ಕ್ರೋಧಮೂರ್ಚ್ಛಿತಃ |
ವಿಕೃಷ್ಯ ಕಾರ್ಮುಕಂ ಘೋರಂ ಭಾರಸಾಧನಮುತ್ತಮಮ್ ॥ 59 ॥

ಅಲಂಬುಸಂ ಶರೈಸ್ತೀಕ್ಷ್ಣೈರರ್ದಯಾಮಾಸ ಭಾರತ ॥ 60 ॥
ಎಲೈ ಭಾರತನೇ, ಅನಂತರ ಮಾರುತಿಯಾದ ಭೀಮಸೇನನು ಸಂಜ್ಞೆಯನ್ನು ಮರಳಿ ಪಡೆದು, ಕ್ರೋಧಮೂರ್ಛಿತನಾಗಿ ತನ್ನ ಭಾರಸಾಧನವೂ, ಶ್ರೇಷ್ಠವೂ ಆದ ಘೋರವಾದ ಬಿಲ್ಲನ್ನು ಎಳೆದು ಅಲಂಬುಸನನ್ನು ತೀಕ್ಷ್ಣವಾದ ಬಾಣಗಳಿಂದ ಪೀಡಿಸಿದನು.
ಸ ವಿದ್ಧೋ ಬಹುಭಿರ್ಬಾಣೈರ್ನೀಲಾಂಜನಚಯೋಪಮಃ |
ಶುಶುಭೇ ಸರ್ವತೋ ರಾಜನ್ ಪ್ರಫುಲ್ಲ ಇವ ಕಿಂಶುಕಃ ॥ 61 ॥
ಕಪ್ಪಾದ ಕಾಡಿಗೆಯ ರಾಶಿಯಂತಿದ್ದ ಅಲಂಬುಸನು ಭೀಮನ ಬಾಣಗಳಿಂದ ತೀವ್ರವಾಗಿ ಹೊಡೆಯಲ್ಪಟ್ಟು ಎಲೈ ರಾಜನೇ, ಎಲ್ಲ ಕಡೆಗಳಲ್ಲಿಯೂ ಗಾಯಗೊಂಡು ರಕ್ತವನ್ನು ಸುರಿಸುತ್ತಾ ಹೂವರಳಿದ ಕಿಂಶುಕ ವೃಕ್ಷದಂತೆ ಶೋಭಿಸಿದನು.
ಸ ವಧ್ಯಮಾನಃ ಸಮರೇ ಭೀಮಚಾಪಚ್ಯುತೈಃ ಶರೈಃ |
ಸ್ಮರನ್ ಭ್ರಾತೃವಧಂ ಚೈವ ಪಾಂಡವೇನ ಮಹಾತ್ಮನಾ |
ಘೋರಂ ರೂಪಮಥೋ ಕೃತ್ವಾ ಭೀಮಸೇನಮಭಾಷತ ॥ 62 ॥
ತಿಷ್ಠೇದಾನೀಂ ರಣೇ ಪಾರ್ಥ ಪಶ್ಯ ಮೇಽದ್ಯ ಪರಾಕ್ರಮಮ್ ॥ 63 ॥
ಬಕೋ ನಾಮ ಸುದುರ್ಬುದ್ಧೇ ರಾಕ್ಷಸಪ್ರವರೋ ಬಲೀ |
ಪರೋಕ್ಷಂ ಮಮ ತದ್ ವೃತ್ತಂ ಯನ್ಮೇ ಭ್ರಾತಾ ಹತಸ್ತ್ವಯಾ ॥ 64 ॥
ಭೀಮನ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳಿಂದ ರಣರಂಗದಲ್ಲಿ ಹೊಡೆಯಲ್ಪಟ್ಟ ಅವನು ಮಹಾತ್ಮನಾದ ಪಾಂಡವನು ತನ್ನ ಸಹೋದರನಾದ ಬಕನನ್ನು ಸಂಹರಿಸಿದುದನ್ನು ಸ್ಮರಿಸಿ, ಭಯಂಕರವಾದ ರೂಪವನ್ನು ತಾಳಿ, ಭೀಮಸೇನನನ್ನು ಕುರಿತು ಎಲೈ ಪಾರ್ಥನೇ, ಯುದ್ಧದಲ್ಲಿ ನಿಲ್ಲುವವನಾಗು. ಈ ದಿನ ನನ್ನ ಪರಾಕ್ರಮವನ್ನು ನೋಡು. ಎಲೈ ದುರ್ಬುದ್ಧಿಯೇ, ರಾಕ್ಷಸಶ್ರೇಷ್ಠನೂ, ಬಲಿಷ್ಠನೂ ಆದ ಬಕನು ನಿನ್ನಿಂದ ವಧಿಸಲ್ಪಟ್ಟನು. ಆ ಘಟನೆಯು ನನಗೆ ಪರೋಕ್ಷವಾಗಿ (ನಾನು ಇಲ್ಲದಿದ್ದಾಗ) ನಡೆಯಿತು ಎಂದು ಹೇಳಿದನು.
ಏವಮುಕ್ತ್ವಾ ತತೋ ಭೀಮಮಂತರ್ಧಾನಂ ಗತಸ್ತದಾ |
ಮಹತಾ ಶರವರ್ಷೇಣ ಭೃಶಂ ತಂ ಸಮವಾಕಿರತ್ ॥ 65 ॥
ಭೀಮಸೇನನನ್ನು ಕುರಿತು ಹೀಗೆ ಹೇಳಿ ಅನಂತರ ಅಂತರ್ಧಾನವನ್ನು ಹೊಂದಿ ಬಾಣಗಳ ದೊಡ್ಡ ಮಳೆಯನ್ನು ಭೀಮಸೇನನ ಮೇಲೆ ಸುರಿಸಿದನು.
ಭೀಮಸ್ತು ಸಮರೇ ರಾಜನ್ನದೃಶ್ಯೇ ರಾಕ್ಷಸೇ ತದಾ |
ಆಕಾಶಂ ಪೂರಯಾಮಾಸ ಶರೈಃ ಸನ್ನತಪರ್ವಭಿಃ ॥ 66 ॥
ಅಲಂಬುಸ ರಾಕ್ಷಸನು ಅದೃಶ್ಯನಾಗುತ್ತಿರಲು ಆಗ ಭೀಮಸೇನನು ಯುದ್ಧದಲ್ಲಿ ಬಾಗಿದ ತುದಿಯುಳ್ಳ ಬಾಣಗಳಿಂದ ಆಕಾಶವನ್ನೆಲ್ಲಾ ತುಂಬಿದನು.
ಸ ವಧ್ಯಮಾನೋ ಭೀಮೇನ ನಿಮೇಷಾದ್ ರಥಮಾಸ್ಥಿತಃ |
ಜಗಾಮ ಧರಣೀಂ ಕ್ಷುದ್ರಃ ಖಂ ಚೈವ ಸಹಸಾಽಗಮತ್ ॥ 67 ॥
ಕ್ಷುದ್ರನಾದ ಆ ರಾಕ್ಷಸನು ಭೀಮಸೇನನ ಬಾಣಗಳಿಂದ ಹೊಡೆಯಲ್ಪಟ್ಟವನಾಗಿ ಒಂದು ನಿಮಿಷದಲ್ಲಿ ರಥವನ್ನೇರಿ ಭೂಮಿಗೆ ಇಳಿದನು. ತಕ್ಷಣವೇ ಆಕಾಶಕ್ಕೆ ಹಾರಿದನು.
ಉಚ್ಚಾವಚಾನಿ ರೂಪಾಣಿ ಸ ಚಕಾರ ಬಹೂನಿ ಚ |
ಅಣುರ್ಬೃಹತ್ತದಾ ನಾದಾನ್ ಕುರ್ವನ್ ವರ್ಷನ್ನಿವಾಂಬುದಃ |
ಉಚ್ಚಾವಚಾಸ್ತಥಾ ವಾಚೋ ವ್ಯಾಜಹಾರ ಸಮಂತತಃ ॥ 68 ॥
ಅವನು ಸಣ್ಣ ಮತ್ತು ದೊಡ್ಡ ಅನೇಕ ರೂಪಗಳನ್ನು ತೆಗೆದುಕೊಂಡನು. ಸಣ್ಣ ಮತ್ತು ಅನೇಕ ದೊಡ್ಡ ನಾದಗಳನ್ನು ಮಾಡಿದನು. ಮಳೆಯನ್ನು ಸುರಿಸುವ ಮೋಡದ ಘೋಷದಂತೆ ಉಚ್ಚ-ನೀಚವಾದ ಅನೇಕ ಮಾತುಗಳನ್ನು ಆಡಿದನು.
ನಿಪೇತುರ್ಗಗನಾಚ್ಚೈವ ಶರಧಾರಾಃ ಸಹಸ್ರಶಃ |
ಶಕ್ತ್ಯಃ ಕರ್ಷಣಾಃ ಪ್ರಾಸಾಃ ಶೂಲಪಟ್ಟಸತೋಮರಾಃ ॥ 69 ॥
ಶತಘ್ನಃ ಪರಿಘಾಶ್ಚೈವ ಭಿಂಡಿಪಾಲಾಃ ಪರಶ್ವಧಾಃ |
ಶಿಲಾಃ ಖಡ್ಗಾ ಗುಳಾಶ್ಚೈವ ಋಷ್ಟಿರ್ವಜ್ರಾಣಿ ಚೈವ ಹ ॥ 70 ॥
ಆಕಾಶದಿಂದ ಶರಧಾರೆಗಳು ಸಹಸ್ರಸಂಖ್ಯೆಯಲ್ಲಿ ಬಿದ್ದವು. ಶಕ್ತಿಗಳು, ಕರ್ಷಣಗಳು, ಪ್ರಾಸಗಳು, ಶೂಲ-ಪಟ್ಟಸ-ತೋಮರಗಳು, ಶತಘ್ನಿಗಳು, ಪರಿಘಗಳು, ಭಿಂಡಿಪಾಲಗಳು, ಪರಶುಗಳು, ಶಿಲೆಗಳು, ಖಡ್ಗಗಳು, ಗುಳಗಳು, ಋಷ್ಟಿಗಳು ಮತ್ತು ವಜ್ರಗಳೂ ಬಿದ್ದವು.
ಸಾ ರಾಕ್ಷಸವಿಸೃಷ್ಟಾ ತು ಶಸ್ತ್ರವೃಷ್ಟಿಃ ಸುದಾರುಣಾ |
ಜಘಾನ ಪಾಂಡುಪುತ್ರಸ್ಯ ಸೈನಿಕಾನಾಂ ಚ ಮೂರ್ಧನಿ ॥ 71 ॥
ರಾಕ್ಷಸನಿಂದ ಸೃಷ್ಟವಾದ ದಾರುಣವಾದ ಶಸ್ತ್ರದ ಮಳೆಯು ಪಾಂಡುಪುತ್ರರ ಸೈನಿಕರ ತಲೆಯ ಮೇಲೆ ಬಿದ್ದು ಅವರನ್ನು ಕೊಂದಿತು.
ತೇನ ಪಾಂಡವಸೈನ್ಯಾನಾಂ ಮೃದಿತಾ ಯುಧಿ ವಾರಣಾಃ |
ಹಯಾಶ್ಚ ಬಹವೋ ರಾಜನ್ ಪತ್ತಯಶ್ಚ ತಥಾ ಪುನಃ |
ರಥೇಭ್ಯೋ ರಥಿನಸ್ತತ್ರ ಪೇತೂ ರಾಕ್ಷಸಸಾಯಕೈಃ ॥ 72 ॥
ಆ ಶಸ್ತ್ರದ ಮಳೆಯಿಂದ ಯುದ್ಧದಲ್ಲಿ ಪಾಂಡವಸೈನ್ಯದ ಅನೇಕ ಗಜಗಳೂ, ಅಶ್ವಗಳೂ ಮತ್ತು ಪದಾತಿಗಳೂ ಬಿದ್ದು ನಾಶವನ್ನು ಹೊಂದಿದವು. ಎಲೈ ರಾಜನೇ, ರಾಕ್ಷಸನ ಬಾಣಗಳಿಂದ ತಾಡಿತರಾದ ರಥಿಕರು ತಮ್ಮ ರಥಗಳಿಂದ ಕೆಳಗೆ ಬಿದ್ದರು.
ಶೋಣಿತೋದಾಂ ರಥಾವರ್ತಾಂ ಹಸ್ತಿಗ್ರಾಹಾಂ ಧ್ವಜಾಕುಲಾಮ್ |

ಛತ್ರಹಂಸಾಂ ಮಜ್ಜಪಂಕಾಂ ಬಾಹುಪನ್ನಗಸಂಕುಲಾಮ್ ॥ 73 ॥
ವಹಂತೀಂ ಸೃಂಜಯಾಂಶ್ಚೈವ ಪಾಂಚಾಲಾನಥ ಬಾಹ್ಲಿಕಾನ್ |
ನದೀಂ ಪ್ರವರ್ತಯಾಮಾಸ ರಕ್ಷೋಗಣಸಮಾಕುಲಾಮ್ ॥ 74 ॥
ರಾಕ್ಷಸನಾದ ಅಲಂಬುಸನು ರಕ್ತದ ಉದಕವುಳ್ಳ, ರಥದ ಸುಳಿಗಳುಳ್ಳ, ಗಜಗಳೆಂಬ ಮೊಸಳೆಗಳುಳ್ಳ, ಧ್ವಜಗಳಿಂದ ನಿಬಿಡವಾದ, ಛತ್ರವೆಂಬ ಹಂಸವುಳ್ಳ, ಮಜ್ಜೆ ಎಂಬ ಕೆಸರುಳ್ಳ, ಬಾಹುವೆಂಬ ಸರ್ಪಗಳಿಂದ ನಿಬಿಡವಾದ, ಪಾಂಚಾಲರನ್ನೂ ಮತ್ತು ಸೃಂಜಯರನ್ನೂ ಕೊಚ್ಚಿಕೊಂಡು ಹೋಗುವ, ರಾಕ್ಷಸಗಣಗಳಿಂದ ತುಂಬಿದ ನದಿಯನ್ನು ಹರಿಸಿದನು.
ತಂ ತಥಾ ಸಮರೇ ರಾಜನ್ ವಿಚರಂತಮಭೀತವತ್ |
ಪಾಂಡವಾ ಭೃಶಸಂವಿಗ್ನಾಃ ಪ್ರಾಪಶ್ಯಂಸ್ತಸ್ಯ ವಿಕ್ರಮಮ್ ॥ 75 ॥
ತಾವಕಾನಾಂ ತು ಸೈನ್ಯಾನಾಂ ಪ್ರಹರ್ಷಃ ಸಮಜಾಯತ ॥ 76 ॥
ಎಲೈ ರಾಜನೇ, ಯಾವ ಭಯವೂ ಇಲ್ಲದೆ ಯುದ್ಧದಲ್ಲಿ ಸಂಚರಿಸುವ ಅವನ ಪರಾಕ್ರಮವನ್ನು ಬಹಳ ಸಂವಿಗ್ನರಾದ ಪಾಂಡವರೆಲ್ಲರೂ ನೋಡಿದರು. ಆದರೆ ನಿನ್ನ ಸೈನ್ಯಕ್ಕೆ ಮಾತ್ರ ಬಹಳ ಹರ್ಷ ಉಂಟಾಯಿತು.
ತತೋ ವಾದಿತ್ರನಿನದಃ ಸುಮಹಾನ್ ಲೋಮಹರ್ಷಣಃ |
ಪ್ರಹರ್ಷಯನ್ ರಣೇ ರಕ್ಷಃ ಪಾಂಡವಾಂಶ್ಚ ವ್ಯಮೋಹಯತ್ ॥ 77 ॥
ಆಗ ರಾಕ್ಷಸನನ್ನು ಸಂತೋಷಗೊಳಿಸುವ ಮತ್ತು ಪಾಂಡವರನ್ನು ಮೋಹಗೊಳಿಸುವ ರೋಮಾಂಚಕಾರಿಯಾದ ವಾದ್ಯಗಳ ದೊಡ್ಡ ಶಬ್ದವು ಉಂಟಾಯಿತು.
ತಂ ಶ್ರುತ್ವಾ ನಿನದಂ ಘೋರಂ ತವ ಸೈನ್ಯೇಷು ಪಾಂಡವಾಃ |
ನಾಮೃಷ್ಯಂತ ಯಥಾ ನಾಗಾಃ ತಳಶಬ್ದಂ ಸಮೀರಿತಮ್ ॥ 78 ॥
ಪಾಂಡವರು ನಿನ್ನ ಸೈನ್ಯಗಳಿಂದ ಉಂಟಾದ ಘೋರವಾದ ಆ ನಾದಗಳನ್ನು ಕೇಳಿ ಗಜಗಳು ಚಪ್ಪಾಳೆ ಶಬ್ದವನ್ನು ಸಹಿಸದಂತೆ ಅದನ್ನು ಸಹಿಸಲಿಲ್ಲ.
ತತಃ ಕ್ರೋಧಾಭಿತಾಮ್ರಾಕ್ಷೋ ನಿರ್ದಹನ್ನಿವ ಭಾರತ |
ಸಂದಧೇ ತ್ವಾಷ್ಟ್ರಮಸ್ತ್ರಂ ಸ ಸ್ವಯಂ ತ್ವಷ್ಟೇವ ಮಾರಿಷ |
ತತಃ ಶರಸಹಸ್ರಾಣಿ ಪ್ರಾದುರಾಸನ್ ಸಮಂತತಃ ॥ 79 ॥
ತೈಃ ಶರೈಸ್ತವ ಸೈನ್ಯಸ್ಯ ವಿದ್ರವಃ ಸುಮಹಾನಭೂತ್ ॥ 80 ॥
ಎಲೈ ಪೂಜ್ಯನೇ, ಭಾರತನೇ, ಆಗ ಭೀಮಸೇನನು ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ, ಜಗತ್ತನ್ನೇ ಸುಡುವವನಂತೆ ಸಾಕ್ಷಾತ್ ತ್ವಷ್ಟೃವಿನಂತೆ ತ್ವಾಷ್ಟ್ರಾಸ್ತ್ರವನ್ನು ಬಿಲ್ಲಿನಲ್ಲಿ ಹೂಡಿದನು. ಅದರಿಂದ ಎಲ್ಲ ಕಡೆಗಳಲ್ಲಿಯೂ ಸಾವಿರಾರು ಬಾಣಗಳು ಪ್ರಾದುರ್ಭವಿಸಿದವು. ಆ ಬಾಣಗಳಿಂದ ಹೊಡೆಯಲ್ಪಟ್ಟ ನಿನ್ನ ಸೈನ್ಯದಲ್ಲಿ ಎಲ್ಲ ಕಡೆಗಳಲ್ಲಿಯೂ ದೊಡ್ಡ ಧಾವನವು ಉಂಟಾಯಿತು (ಯೋಧರು ಓಡಿ ಹೋದರು).
ತದಸ್ತ್ರಂ ಪ್ರೇಷಿತಂ ತೇನ ಭೀಮಸೇನೇನ ಸಂಯುಗೇ |
ರಾಕ್ಷಸಸ್ಯ ಮಹಾಮಾಯಾಂ ಹತ್ವಾ ರಾಕ್ಷಸಮಾರ್ದಯತ್ ॥ 81 ॥
ಯುದ್ಧದಲ್ಲಿ ಭೀಮಸೇನನಿಂದ ಪ್ರಯೋಗಿಸಲ್ಪಟ್ಟ ಆ ಅಸ್ತ್ರವು ಅಲಂಬುಸ ರಾಕ್ಷಸನ ಮಹಾಮಾಯೆಯನ್ನು ವಿನಾಶಗೊಳಿಸಿ ಅವನನ್ನು ಪೀಡಿಸಿತು.
ಸ ವಧ್ಯಮಾನೋ ಬಹುಧಾ ಭೀಮಸೇನೇನ ರಾಕ್ಷಸಃ |
ಸಂತ್ಯಜ್ಯ ಸಂಯುಗೇ ಭೀಮಂ ದ್ರೋಣಾನೀಕಮಥಾವ್ರಜತ್ ॥ 82 ॥
ಭೀಮಸೇನನಿಂದ ಅನೇಕ ರೀತಿಯಾಗಿ ಪೀಡಿಸಲ್ಪಟ್ಟ ಆ ರಾಕ್ಷಸನು ಭೀಮನ ಜೊತೆಯಲ್ಲಿ ಯುದ್ಧವನ್ನು ಮಾಡುವುದನ್ನು ಬಿಟ್ಟು ದ್ರೋಣರ ಸೈನ್ಯಕ್ಕೆ ಹೋಗಿ ಸೇರಿಕೊಂಡನು.
ತಸ್ಮಿಂಸ್ತು ನಿರ್ಜಿತೇ ರಾಜನ್ ರಾಕ್ಷಸೇಂದ್ರೇ ಮಹಾತ್ಮನಾ |
ವ್ಯನಾದಯನ್ ಸಿಂಹನಾದೈಃ ಪಾಂಡವಾಃ ಸರ್ವತೋದಿಶಮ್ ॥ 83 ॥
ರಾಕ್ಷಸೇಂದ್ರನಾದ ಅಲಂಬುಸನು ಮಹಾತ್ಮನಾದ ಭೀಮಸೇನನಿಂದ ಪರಾಜಿತನಾಗುತ್ತಿರಲು ಎಲೈ ರಾಜನೇ, ಪಾಂಡವರು ಎಲ್ಲ ದಿಕ್ಕುಗಳಲ್ಲಿಯೂ ಸಿಂಹನಾದವನ್ನು ಮಾಡಿದರು.
ಅಪೂಜಯನ್ ಮಾರುತಿಂ ಚ ಸಂಹೃಷ್ಟಾಸ್ತೇ ಮಹಾಬಲಮ್ |
ಪ್ರಹ್ಲಾದಮಿವ ದೈತೇಯಾ ಯಥಾ ಶಕ್ರಂ ಮರುದ್ಗಣಾಃ ॥ 84 ॥
ದೈತ್ಯರು ಪ್ರಹ್ಲಾದನನ್ನು ಪೂಜಿಸಿದಂತೆ, ಮರುದ್ಗಣಗಳು ಇಂದ್ರನನ್ನು ಪೂಜಿಸಿದಂತೆ ಅವರು ಸಂತೋಷಗೊಂಡು ಮಹಾಬಲನಾದ ಭೀಮಸೇನನನ್ನು ಪೂಜಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರ್ನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೈದನೆಯ ಅಧ್ಯಾಯ
ಘಟೋತ್ಕಚನಿಂದ ಅಲಂಬುಸನ ವಧೆ.

ಸಂಜಯಃ
ಕಿರಂತಂ ಶರವರ್ಷಾಣಿ ರೋಷಾದ್ ದ್ರೋಣಂ ಮಹಾಮೃಧೇ |
ವಿತ್ರಾಸಯಂತಂ ತಾಂ ಸೇನಾಂ ಕೌಂತೇಯಾನಾಂ ಮಹೀಪತೇ ॥ 1 ॥
ದೃಷ್ಟ್ವಾ ತತೋ ಮಹೇಷ್ವಾಸೋ ನಿಘ್ನಂತಂ ಚ ರಥಾನ್ ಭೃಶಮ್ |
ಘಟೋತ್ಕಚೋ ಮಹಾಬಾಹೂ ರಣಾಯಾಭಿಜಗಾಮ ಹ ॥ 2 ॥
ಸಂಜಯ ಎಲ್ಲೈ ರಾಜನೇ, ದೊಡ್ಡ ಯುದ್ಧದಲ್ಲಿ ರೋಷದಿಂದ ಬಾಣಗಳ ಮಳೆಯನ್ನು ಸುರಿಸುತ್ತಾ, ಪಾಂಡವರ ಸೇನೆಯನ್ನು ಭಯಗೊಳಿಸುತ್ತಿದ್ದ, ಹಾಗೆಯೇ ರಥಿಕರನ್ನು ಸಂಹರಿಸುತ್ತಿದ್ದ, ದ್ರೋಣರನ್ನು ನೋಡಿ ಮಹಾಬಾಹುವಾದ ಘಟೋತ್ಕಚನು ಅವರ ಜೊತೆಯಲ್ಲಿ ಯುದ್ಧಮಾಡಲು ಧಾವಿಸಿ ಬಂದನು.
ಪಿಶಾಚವದನೈರ್ಯುಕ್ತಂ ರಥಂ ಕಾಂಚನಭೂಷಿತಮ್ |
ಸಮಾಸ್ಥಾಯ ಮಹಾರಾಜ ನಾನಾಪ್ರಹರಣೈರ್ವೃತಮ್ ॥ 3 ॥
ದಂಸಿತಸ್ತಪನೀಯೇನ ಕವಚೇನ ಸುವರ್ಚಸಾ |
ಭೂಷಣೈರಾಚಿತಾಂಗಶ್ಚ ನದನ್ನಿವ ಚ ತೋಯದಃ |
ಹೈಡಿಂಬೇಯಃ ಸುಸಂಕ್ರುದ್ಧಃ ದ್ರೋಣಮಭ್ಯದ್ರುವದ್ ಬಲೀ ॥ 4 ॥
ಪಿಶಾಚಮುಖಗಳಿಂದ ಕೂಡಿದ, ಸುವರ್ಣಾಲಂಕೃತವಾದ, ನಾನಾ ವಿಧವಾದ ಆಯುಧಗಳನ್ನೂ ತುಂಬಿದ್ದ ರಥವನ್ನು ಏರಿ, ಸುವರ್ಣಮಯವಾದ ಕವಚವನ್ನು ಧರಿಸಿ, ಭೂಷಣಗಳಿಂದ ಅಲಹೃತನಾಗಿ, ಮೇಘದಂತೆ ಗರ್ಜಿಸುತ್ತಾ, ಬಹಳ ಕೋಪಗೊಂಡ ಬಲಿಷ್ಠನಾದ ಘಟೋತ್ಕಚನು ದ್ರೋಣರ ಕಡೆಗೆ ಧಾವಿಸಿದನು.
ತಮಭ್ಯಧಾವದಾಯಾಂತಂ ಕ್ರುದ್ಧರೂಪಮಲಂಬುಸಃ |
ಋಕ್ಷಚರ್ಮಪರಿಕ್ಷಿಪ್ತಂ ರಥಮಾಸ್ಥಾಯ ದಂಸಿತಃ ॥ 5 ॥
ಬಹಳ ಕೋಪಗೊಂಡು ಮುಂದೆ ಬರುತ್ತಿದ್ದ ಅವನನ್ನು ಕರಡಿಯ ಚರ್ಮದ ಹೊದಿಕೆಯುಳ್ಳ ರಥವನ್ನು ಏರಿ ಕವಚಾದಿಗಳನ್ನು ಧರಿಸಿ ಕೋಪಗೊಂಡ ಅಲಂಬುಸನು ಘಟೋತ್ಕಚನ ಕಡೆಗೆ ಧಾವಿಸಿದನು.
ರಕ್ತೋಷ್ಠವದನಃ ಪ್ರಾಂಶುಃ ಸಾಲವೃಕ್ಷ ಇವ ಸ್ಥಿತಃ |
ಕ್ಷಿಪನ್ ಶತಘ್ನೀಂ ವಿಪುಲಾಂ ಮುಸಲೋಪಮತೋಮರಾನ್ ॥ 6 ॥
ಮುಸುಂಠೀರ್ಬಹುಲಾಶ್ಚೈವ ತ್ರಿಶೂಲಾನಪಿ ಪಟ್ಟಿಸಾನ್ |
ಕರ್ಷಣಾನ್ ಶತಧಾರಾಂಶ್ಚ ಪಿನಾಕಾನ್ ವಿವಿಧಾಂಸ್ತಥಾ ॥ 7 ॥
ಚಕ್ರಾಣಿ ಚ ಕ್ಷುರಪ್ರಾಣಿ ಕ್ಷೇಪಣೀಶ್ಚ ಕಟಂಕಟಾನ್ |
ನಾರಾಚಾನ್ ವಿವಿಧಾನಸ್ಯನ್ ಸಕಂಕೋಲೂಕವಾಯಸಾನ್ ॥ 8 ॥
ಚಿಕ್ಷೇಪ ಧನುರಾದಾಯ ನಿನದನ್ ಭೈರವಾನ್ ರವಾನ್ ॥ 9 ॥
ರಕ್ತವರ್ಣದ ತುಟಿ ಮತ್ತು ಮುಖವನ್ನು ಹೊಂದಿ, ಸಾಲವೃಕ್ಷದಂತೆ ಎತ್ತರವಾಗಿದ್ದು, ವಿಪುಲವಾದ ಶತಘ್ನಿಗಳನ್ನೂ, ಒನಕೆಯಂತಿದ್ದ ತೋಮರಗಳನ್ನೂ, ಅನೇಕ ಮುಸುಂಠಿಗಳನ್ನೂ, ತ್ರಿಶೂಲಗಳನ್ನೂ, ಪಟ್ಟಿಸಗಳನ್ನೂ, ಕರ್ಷಣಗಳನ್ನೂ, ಶತಧಾರಗಳನ್ನೂ, ವಿವಿಧವಾದ ಪಿನಾಕಗಳನ್ನೂ, ಚಕ್ರಗಳನ್ನೂ, ಕ್ಷುರಪ್ರಗಳನ್ನೂ, ಕ್ಷೇಪಣಿಗಳನ್ನೂ, ಕಟಂಕಟಗಳನ್ನೂ, ಕಂಕ, ಉಲೂಕ, ವಾಯಸ ಧ್ವನಿಗಳಿಂದ ಕೂಡಿದ ವಿವಿಧವಾದ ನಾರಾಚಗಳನ್ನೂ ಧನುಸ್ಸಿನಲ್ಲಿ ಹೂಡಿ ಪ್ರಯೋಗಿಸಿ ಭೈರವನಾದವನ್ನು ಮಾಡಿದನು.
ತಂ ರೌದ್ರಂ ಕ್ರೂರಮಾಯಾಂತಂ ದೃಷ್ಟ್ವಾ ಕಾಲಮಿವಾಗತಮ್ |
ಪ್ರಾದ್ರವದ್ ಭಯಸಂವಿಗ್ನಾ ಸಾ ರಾಜನ್ ಪಾಂಡುವಾಹಿನೀ ॥10॥
ಎಲ್ಲೈ ರಾಜನೇ, ಮೃತ್ಯುವಿನಂತೆ ಸಮೀಪಕ್ಕೆ ಬಂದ ಭಯಂಕರನೂ, ಶೂರನೂ ಆದ ಅವನನ್ನು ನೋಡಿ ಭಯದಿಂದ ಕೂಡಿದ ಆ ಪಾಂಡವರ ಸೇನೆಯು ಓಡಿ ಹೋಯಿತು.
ಸಾತ್ಯಕಿಸ್ತು ರಥವ್ಯಾಘ್ರೋ ದೃಷ್ಟ್ವಾ ತಂ ರಾಕ್ಷಸಂ ಯುಧಿ |
ಅಭ್ಯಯಾದಮರಪ್ರಖ್ಯೋ ಭ್ರಾಮಯಿತ್ವಾ ಮಹದ್ಧನುಃ ॥ 11 ॥
ದೇವತಾಸದೃಶನಾದ, ರಥಶ್ರೇಷ್ಠನಾದ ಸಾತ್ಯಕಿಯಾದರೂ ಯುದ್ಧದಲ್ಲಿ ಆ ರಾಕ್ಷಸನನ್ನು ನೋಡಿ ತನ್ನ ದೊಡ್ಡ ಧನುಸ್ಸನ್ನು ತೂಗಾಡಿಸುತ್ತಾ ಅವನ ಕಡೆಗೆ ಸಾಗಿದನು.
ಅಭ್ಯದ್ರುವಚ್ಚ ತದ್ರಕ್ಷಃ ತಿಷ್ಠ ತಿಷ್ಠೇತಿ ಚಾಬ್ರವೀತ್ |
ಅಲಂಬುಸಂ ರಾಕ್ಷಸೇಂದ್ರಂ ಸೋಽಸ್ತ್ರವರ್ಷೈರವಾಕಿರತ್ ॥ 12 ॥
ಅಲಂಬುಸ ರಾಕ್ಷಸನ ಕಡೆಗೆ ಹೋಗಿ ನಿಲ್ಲು-ನಿಲ್ಲು ಎಂದು ಹೇಳಿದನು ಮತ್ತು ರಾಕ್ಷಸಶ್ರೇಷ್ಠನಾದ ಅಲಂಬುಸನ ಮೇಲೆ ಅವನು ಅಸ್ತ್ರಗಳ ಮಳೆಯನ್ನು ಕರೆದನು.
ತತಃ ಪಾಂಡವಸೈನ್ಯಾನಿ ವಿದ್ರುತಾನ್ಯಥ ಭಾರತ |
ನಿರೀಕ್ಷ್ಯಾಭ್ಯದ್ರುವತ್ ತೂರ್ಣಂ ತ್ವರಮಾಣೋ ಘಟೋತ್ಕಚಃ ॥ 13 ॥
ಎಲ್ಲೈ ಭಾರತನೇ, ಆಗ ಪಾಂಡವ ಸೈನ್ಯಗಳು ಓಡಿಹೋದವು. ಅದನ್ನು ನೋಡಿ ಘಟೋತ್ಕಚನು ಶೀಘ್ರವಾಗಿ ಅಲಂಬುಸನ ಕಡೆಗೆ ಎರಗಿದನು.
ಚಿಕ್ಷೇಪ ಚ ಗದಾಃ ಶಕ್ತೀಃ ತೋಮರಾನಥ ಪಟ್ಟಿಸಾನ್ |
ಹೇಮಚಿತ್ರತ್ಸರೂನುಗ್ರಾನ್ ಖಡ್ಗಾನಾಕಾಶಸಪ್ರಭಾನ್ ॥ 14 ॥
ಅವನು ಅಲಂಬುಸನ ಮೇಲೆ ಗದೆಗಳನ್ನೂ, ಶಕ್ತಿಗಳನ್ನೂ, ತೋಮರವನ್ನೂ, ಪಟ್ಟಿಸಗಳನ್ನೂ, ಚಿನ್ನದ ವಿಚಿತ್ರವಾದ ಹಿಡಿಗಳಿರುವ,

ಆಕಾಶದಂತೆ ಹೊಳೆಯುವ ಘೋರವಾದ ಖಡ್ಗಗಳನ್ನೂ ಎಸೆದನು.
ಅನ್ಯೋನ್ಯಮಾರಾದಾಲೋಕ್ಯ ರಾಕ್ಷಸೌ ತೌ ಮಹಾಬಲೌ |
ಭೈರವಂ ನೇದತುರ್ನಾದಾನ್ ಸತೋಯಾವಿವ ತೋಯದೌ ॥ 15 ॥
ಮಹಾಬಲರಾದ ಆ ರಾಕ್ಷಸರಿಬ್ಬರೂ ಸಮೀಪದಿಂದ ಒಬ್ಬರನ್ನೊಬ್ಬರು ನೋಡಿ ನೀರಿನಿಂದ ಕೂಡಿದ ಮೋಡಗಳಂತೆ ಭೈರವ ನಾದಗಳನ್ನು ಮಾಡಿದರು.
ತತಃ ಪ್ರವವೃತೇ ಯುದ್ಧಂ ತಯೋಃ ರಾಕ್ಷಸಸಿಂಹಯೋಃ |
ಯಾದೃಗೇವ ಪುರಾ ವೃತ್ತಂ ರಾಮರಾವಣಯೋರ್ಮೃಧೇ ॥ 16 ॥
ಅನಂತರ ಹಿಂದೆ ರಾಮ-ರಾವಣರಿಗೆ ನಡೆದ ಯುದ್ಧದಂತೆ ಆ ಇಬ್ಬರು ರಾಕ್ಷಸ ಶ್ರೇಷ್ಠರಿಗೆ ಯುದ್ಧವು ಪ್ರಾರಂಭವಾಯಿತು.
ಸ ಶಕ್ತೀಶ್ಚ ಪಿನಾಕಾಂಶ್ಚ ವಜ್ರಾನ್ ಖಡ್ಗಾನ್ ಪರಶ್ವಧಾನ್ |
ಅನ್ಯೋನ್ಯಮಭಿಸಂಕ್ರುದ್ಧೌ ತದಾ ವ್ಯಸೃಜತಾಮುಭೌ ॥ 17 ॥
ಅವರಿಬ್ಬರೂ ಶಕ್ತಿಗಳನ್ನೂ, ಪಿನಾಕಗಳನ್ನೂ, ವಜ್ರಗಳನ್ನೂ, ಖಡ್ಗಗಳನ್ನೂ ಮತ್ತು ಪರಶ್ವಧಗಳನ್ನೂ ಕ್ರೋಧದಿಂದ ಪರಸ್ಪರವಾಗಿ ಪ್ರಯೋಗಿಸಿದರು.
ಆಕೃಷ್ಯಮಾಣೇ ಧನುಷಿ ತಯೋರ್ಬಾಹುಬಲೇನ ಚ |
ಯಂತ್ರೇಣೇವ ತದಾ ರಾಜನ್ ಭೃಶಂ ನಾದಾನ್ ಪ್ರಚಕ್ರತುಃ ॥ 18 ॥
ಎಲೈ ರಾಜನೇ, ಅವರು ತಮ್ಮ ಬಾಹುಬಲದಿಂದ ಧನುಸ್ಸನ್ನು ಎಳೆದು ಯಂತ್ರದಿಂದಲೋ ಎಂಬಂತೆ ದೊಡ್ಡ ನಾದಗಳನ್ನು ಮಾಡಿದರು.
ಅಲಂಬುಸಸ್ತತಶ್ಚಕ್ರಂ ಕೃತಾಂತಜ್ವಲನಪ್ರಭಮ್ |
ಘಟೋತ್ಕಚಾಯ ಚಿಕ್ಷೇಪ ಯತ್ನಮಾಸ್ಥಾಯ ವೀರ್ಯವಾನ್ ॥ 19 ॥
ಆಗ ಪರಾಕ್ರಮಶಾಲಿಯಾದ ಅಲಂಬುಸನು ಮೃತ್ಯುಚಕ್ರದ ಕಾಂತಿಯನ್ನು ಹೊಂದಿದ್ದ ಚಕ್ರವನ್ನು ಪ್ರಯತ್ನ ಪೂರ್ವಕವಾಗಿ ಘಟೋತ್ಕಚನ ಮೇಲೆ ಎಸೆದನು.
ತದ್ ಭೈಮಸೇನಿಃ ಸಂಪ್ರೇಕ್ಷ ್ಯ ಚಕ್ರಂ ವೇಗವದಂತರೇ |
ಗದಯಾ ತಾಡಯಾಮಾಸ ತದ್ ದೀರ್ಣಂ ಶತಧಾಽಭವತ್ ॥ 20 ॥
ಭೀಮಸೇನನ ಪುತ್ರನಾದ ಘಟೋತ್ಕಚನು ಚಕ್ರವು ವೇಗದಿಂದ ಬರುತ್ತಿರುವುದನ್ನು ನೋಡಿ ಅದನ್ನು ಮಧ್ಯದಲ್ಲಿಯೇ ತನ್ನ ಗದೆಯಿಂದ ಹೊಡೆದನು. ಚಕ್ರವು ಮುರಿದು ನೂರಾರು ಚೂರಾಯಿತು.
ತತೋಽಗ್ನಿಚೂರ್ಣೈಃ ಸಹಸಾ ಚಕ್ರಘಾತವಿನಿಃಸೃತೈಃ |
ದಂಶಕೈರಿವ ಸಾ ಸೇನಾ ಪತದ್ಭಿರ್ಭೃಶಸಂಕುಲಾ ॥ 21 ॥
ಚಕ್ರಘಾತದಿಂದ ತಕ್ಷಣ ಉಂಟಾದ ಅಗ್ನಿಕಣಗಳಿಂದ ನೊಣಗಳಿಂದ ಹೇಗೋ ಹಾಗೆ ಆ ಕೌರವ ಸೈನ್ಯವು ಬಹಳ ದುಃಖಕ್ಕೆ ಈಡಾಯಿತು.
ತತಃ ಪ್ರತಿಹತೇ ಚಕ್ರೇ ಸ ವೀರೋ ರೋಷಸಂಕುಲಃ |
ಪ್ರಾಹಿಣೋತ್ ತರಸಾ ತೂರ್ಣಂ ಶಕ್ತಿದಶಶತಂ ತದಾ ॥ 22 ॥
ತನ್ನ ಚಕ್ರವು ಪ್ರತಿಹತವಾಗುತ್ತಿರಲು ವೀರನಾದ ಅಲಂಬುಸನು ಬಹಳ ರೋಷದಿಂದ ಕೂಡಿದವನಾಗಿ ಒಂದು ಸಾವಿರ ಶಕ್ತಿಗಳನ್ನು ಶೀಘ್ರವಾಗಿ ಪ್ರಯೋಗಿಸಿದನು.
ಜ್ವಲಂತೀಶ್ಚ ಕಿರಂತೀಶ್ಚ ಜ್ವಾಲಾಮಾಲಾಃ ಸಮಂತತಃ |
ಯುಗಾಂತೋಲ್ಕಾನಿಭಾಸ್ತೀಕ್ಷ್ಣಾ ಹೇಮದಂಡಾ ಮಹಾಸ್ವನಾಃ ॥ 23 ॥
ಹೇಮದಂಡವನ್ನು ಹೊಂದಿ ಮಹಾಶಬ್ದವನ್ನು ಮಾಡುತ್ತಿದ್ದ ಅವು ಸ್ವತಃ ಜ್ವಲಿಸುತ್ತಾ, ಎಲ್ಲಾ ದಿಕ್ಕುಗಳಲ್ಲಿಯೂ ಜ್ವಾಲೆಯ ಮಾಲೆಯನ್ನು ಸೂಸುತ್ತಾ, ಯುಗಾಂತಕಾಲದ ಉಲ್ಕೆಗಳಂತೆ ತೀಕ್ಷ್ಣವಾಗಿದ್ದವು.
ತಾಶ್ಚಾಪತಂತೀಃ ಸಂಪ್ರೇಕ್ಷ ್ಯ ರಾಕ್ಷಸಸ್ಯ ಘಟೋತ್ಕಚಃ |
ಅರ್ಧಚಂದ್ರೈಃ ಪ್ರಚಿಚ್ಛೇದ ನಾರಾಚೈಃ ಕಂಕಪತ್ರಿಭಿಃ ॥ 24 ॥
ರಾಕ್ಷಸನಾದ ಅಲಂಬುಸನ ಆ ಶಕ್ತ್ಯಾಯುಧಗಳು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಘಟೋತ್ಕಚನು ಕಂಕಪತ್ರಗಳನ್ನು ಹೊಂದಿದ್ದ ಅರ್ಧಚಂದ್ರಗಳಿಂದಲೂ ಮತ್ತು ನಾರಾಚಗಳಿಂದಲೂ ಅವುಗಳನ್ನು ಕತ್ತರಿಸಿದನು.
ತತೋ ರೋಷಪರೀತಾಂಗಃ ಪ್ರಮುಮೋಚ ಸ ರಾಕ್ಷಸಃ |
ಶರವರ್ಷಂ ಮಹಾಘೋರಂ ಘಟೋತ್ಕಚರಥಂ ಪ್ರತಿ ॥ 25 ॥
ಆಗ ರೋಷಪೂರ್ಣವಾದ ಶರೀರವುಳ್ಳ ಆ ರಾಕ್ಷಸನು ಘಟೋತ್ಕಚನ ರಥದ ಮೇಲೆ ಮಹಾಘೋರವಾದ ಬಾಣಗಳ ಮಳೆಯನ್ನು ಕರೆದನು.
ಅಲಂಬುಸಂ ತಥಾ ಯುದ್ಧೇ ವಿಚರಂತಮಭೀತವತ್ |
ಹೈಡಿಂಬಃ ಪ್ರಯಯೌ ತೂರ್ಣಂ ವಿವ್ಯಾಧ ಚ ಸಿತೈಃ ಶರೈಃ ॥ 26 ॥
ಆ ರೀತಿಯಲ್ಲಿ ಯುದ್ಧದಲ್ಲಿ ನಿರ್ಭಯವಾಗಿ ಸಂಚರಿಸುತ್ತಿದ್ದ ಅಲಂಬುಸನನ್ನು ನೋಡಿ ಘಟೋತ್ಕಚನು ಶೀಘ್ರವಾಗಿ ಅವನನ್ನು ಸಮೀಪಿಸಿ ಅವನ ಮೇಲೆ ಹರಿತವಾದ ಬಾಣಗಳನ್ನು ಪ್ರಯೋಗಿಸಿದನು.
ತಯೋರಪ್ರತಿಮಂ ಯುದ್ಧಮಾಸೀದ್ ರಾಕ್ಷಸಸಿಂಹಯೋಃ |
ಮುಂಚತೋರ್ವಿವಿಧಾ ಮಾಯಾಃ ಶಕ್ರಶಂಬರಯೋರಿವ ॥ 27 ॥

ಇಂದ್ರ-ಶಂಬರರಂತೆ ಅನೇಕ ವಿಧವಾದ ಮಾಯೆಗಳನ್ನು ಸೃಷ್ಟಿಸಿ ರಾಕ್ಷಸಸಿಂಹರಾದ ಅವರಿಬ್ಬರಿಗೆ ಅಸದೃಶವಾದ ಯುದ್ಧವು ನಡೆಯಿತು.
ಅಲಂಬುಸೋ ಭೃಶಂ ಕ್ರುದ್ಧೋ ಘಟೋತ್ಕಚಮತಾಡಯತ್ |
ತಯೋರ್ಯುದ್ಧಂ ಸಮಭವದ್ ರಕ್ಷೋಗ್ರಾಮಣಿಮುಖ್ಯಯೋಃ |
ಯಾದೃಗೇವ ಪುರಾ ವೃತ್ತಂ ರಾಮರಾವಣಯೋರ್ಮೃಧೇ ॥ 28 ॥
ಅಲಂಬುಸನು ಬಹಳ ಕೋಪಗೊಂಡು ಘಟೋತ್ಕಚನನ್ನು ಹೊಡೆದನು. ಹಿಂದೆ ರಾಮ-ರಾವಣರಿಗೆ ನಡೆದ ಯುದ್ಧದಂತೆ ರಾಕ್ಷಸಶ್ರೇಷ್ಠನಾದ ಮತ್ತು ಗ್ರಾಮ ನಾಯಕ ಶ್ರೇಷ್ಠನಾದ ಅವರಿಬ್ಬರಿಗೆ ಯುದ್ಧವು ನಡೆಯಿತು.
ಘಟೋತ್ಕಚಸ್ತು ವಿಂಶತ್ಯಾ ನಾರಾಚಾನಾಂ ಸ್ತನಾಂತರೇ |
ಅಲಂಬುಸಮಥೋ ವಿದ್ಧ್ವಾ ಸಿಂಹವದ್ ವ್ಯನದನ್ಮುಹುಃ ॥ 29 ॥
ಘಟೋತ್ಕಚನಾದರೋ ಇಪ್ಪತ್ತು ನಾರಾಚಗಳಿಂದ ಅಲಂಬುಸನನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದು ಸಿಂಹದಂತೆ ಪುನಃ ಪುನಃ ಗರ್ಜಿಸಿದನು.
ತಥೈವಾಲಂಬುಸೋ ರಾಜನ್ ಹೈಡಿಂಬಂ ಯುದ್ಧದುರ್ಮದಮ್ |
ವಿದ್ಧ್ವಾ ವಿದ್ಧ್ವಾಽನದದ್ ಧೃಷ್ಟಃ ಪೂರಯನ್ ಖಂ ಸಮಂತತಃ ॥30॥
ಎಲೈ ರಾಜನೇ, ಹಾಗೆಯೇ ಅಲಂಬುಸನು ಯುದ್ಧದುರ್ಮದನಾದ ಘಟೋತ್ಕಚನನ್ನು ಹೊಡೆದು-ಹೊಡೆದು ತನ್ನ ನಾದದಿಂದ ಆಕಾಶವನ್ನು ಎಲ್ಲ ಕಡೆಗಳಲ್ಲಿಯೂ ತುಂಬುತ್ತಾ ನಾದವನ್ನು ಮಾಡಿದನು.
ತಥಾ ತೌ ಭೃಶಸಂಕ್ರುದ್ಧೌ ರಾಕ್ಷಸೇಂದ್ರೌ ಮಹಾಬಲೌ |
ನಿರ್ವಿಶೇಷಮಯುದ್ಧ್ಯೇತಾಂ ಮಾಯಾಭಿರಿತರೇತರಮ್ ॥ 31 ॥
ಮಹಾಬಲರಾದ ಆ ಇಬ್ಬರು ರಾಕ್ಷಸಶ್ರೇಷ್ಠರು ಬಹಳ ಕೋಪಗೊಂಡವರಾಗಿ ರಾಕ್ಷಸಮಾಯೆಯನ್ನು ಆಶ್ರಯಿಸಿ, ಯಾವ ವ್ಯತ್ಯಾಸವೂ ಇಲ್ಲದೆ ಯುದ್ಧವನ್ನು ಮಾಡಿದರು.
ಮಾಯಾಶತಸೃಜೌ ದೃಪ್ತೌ ಮೋಹಯಂತೌ ಪರಸ್ಪರಮ್ |
ಮಾಯಾಯುದ್ಧೇಷು ಕುಶಲೌ ಮಾಯಾಯುದ್ಧಮಯುದ್ಧ್ಯತಾಮ್ ॥
ಮಾಯಾಯುದ್ಧದಲ್ಲಿ ಕುಶಲರಾದ ಅವರಿಬ್ಬರೂ ದರ್ಪದಿಂದ ಕೂಡಿದವರಾಗಿ ನೂರು ಮಾಯೆಗಳನ್ನು ಸೃಷ್ಟಿ ಮಾಡಿ ಪರಸ್ಪರವಾಗಿ ಮೋಹವನ್ನುಂಟು ಮಾಡುತ್ತಾ, ಮಾಯಾ ಯುದ್ಧವನ್ನು ಮಾಡಿದರು.
ಯಾಂ ಯಾಂ ಘಟೋತ್ಕಚೋ ಯುದ್ಧೇ ಮಾಯಾಂ ದರ್ಶಯತೇ ನೃಪ |
ತಾಂ ತಾಮಲಂಬುಸೋ ರಾಜನ್ ಮಾಯಯೈವಾಭಿಜಘ್ನಿವಾನ್ ॥ 33 ॥
ತ್ರುಷ್ಟಾಂ ಸೃಷ್ಟಾಂ ಪುನರ್ಮಾಯಾಂ ಭೈಮಸೇನೇರಲಂಬುಸಃ |
ಮಾಯಯೈವಾಹನದ್ ವೀರಃ ಪ್ರಾಕ್ರುದ್ಧಂಸ್ತತ್ರ ಪಾಂಡವಾಃ ॥ 34 ॥
ಎಲೈ ರಾಜನೇ, ಘಟೋತ್ಕಚನು ಯುದ್ಧದಲ್ಲಿ ಯಾವ ಯಾವ ಮಾಯೆಯನ್ನು ತೋರಿಸುತ್ತಾನೆಯೋ ಅದನ್ನೆಲ್ಲ ಅಲಂಬುಸನು ಮಾಯೆಯಿಂದಲೇ ವಿನಾಶಗೊಳಿಸಿದನು. ಘಟೋತ್ಕಚನು ಪುನಃ ಪುನಃ ಸೃಷ್ಟಿ ಮಾಡಿದ ಮಾಯೆಯನ್ನು ವೀರನಾದ ಅಲಂಬುಸನು ಮಾಯೆಯಿಂದಲೇ ನಾಶಗೊಳಿಸಿದನು. ಆಗ ಪಾಂಡವರು ಕೋಪಗೊಂಡರು.
ತಂ ತಥಾ ಯುದ್ಧ್ಯಮಾನಂ ತು ಮಾಯಾಯುದ್ಧವಿಶಾರದಮ್ |
ಅಲಂಬುಸಂ ರಾಕ್ಷಸೇಂದ್ರಂ ದೃಷ್ಟ್ವಾಽಕ್ರುದ್ಧ್ಯಂತ ಪಾಂಡವಾಃ ॥ 35 ॥
ಮಾಯಾಯುದ್ಧವಿಶಾರದನಾದ, ರಾಕ್ಷಸೇಂದ್ರನಾದ ಅಲಂಬುಸನು ಹಾಗೆ ಯುದ್ಧ ಮಾಡುತಿತರುವುದನ್ನು ನೋಡಿ ಪಾಂಡವರು ಕೋಪಗೊಂಡರು.
ತತ ಏನಂ ಭೃಶಂ ಕ್ರುದ್ಧಾಃ ಸರ್ವತಃ ಪರಿವಾರಿತಾಃ |
ಅಭ್ಯದ್ರವಂತ ಸಂರಬ್ಧಾ ಭೀಮಸೇನಾದಯೋ ನೃಪ ॥ 36 ॥
ಎಲೈ ರಾಜನೇ, ಆಗ ಭೀಮಸೇನಾದಿಗಳು ಬಹಳ ಕೋಪಗೊಂಡು ಎಲ್ಲ ಕಡೆಗಳಿಂದಲೂ ಪರಿವಾರ ಸಹಿತರಾಗಿ ಅಲಂಬುಸನ ಕಡೆಗೆ ಓಡಿದರು.
ತ ಏನಂ ಕೋಷ್ಠಕೀಕೃತ್ಯ ರಥವಂಶೇನ ಮಾರಿಷ |
ಸರ್ವತೋ ವ್ಯಕಿರನ್ ಬಾಣೈರುಲ್ಕಾಭಿರಿವ ಕುಂಜರಮ್ ॥ 37 ॥
ಎಲೈ ಪೂಜ್ಯನೇ, ಅವರು ಅಲಂಬುಸನನ್ನು ತಮ್ಮ ರಥ ಸಮೂಹದಿಂದ ಒಳಗೆ ಸೇರಿಸಿಕೊಂಡು ಪಂಜುಗಳಿಂದ ಗಜವನ್ನು ಹೊಡೆದಂತೆ ಎಲ್ಲ ಕಡೆಗಳಿಂದಲೂ ಬಾಣಗಳಿಂದ ಅವನನ್ನು ಹೊಡೆದರು.
ಸ ತೇಷಾಮಸ್ತ್ರವೇಗಂ ತಂ ಪ್ರತಿಹತ್ಯಾಸ್ತ್ರಮಾಯಯಾ |
ತಸ್ಮಾದ್ ರಥವ್ರಜಾನ್ಮುಕ್ತೋ ವನದಾಹಾದಿವ ದ್ವಿಪಃ ॥ 38 ॥
ಅಲಂಬುಸನು ತನ್ನ ಅಸ್ತ್ರಮಾಯೆಯಿಂದ ಅವರ ಅಸ್ತ್ರಗಳನ್ನು ನಿವಾರಿಸಿ, ಕಾಡ್ಗಿಚ್ಚಿನಿಂದ ಬಿಡುಗಡೆ ಹೊಂದಿದ ಗಜದಂತೆ ಆ ರಥಸಮೂಹದಿಂದ ಮುಕ್ತನಾದನು.
ಸ ವಿಷ್ಫಾರ್ಯ ಧನುರ್ಘೋರಮ್ ಇಂದ್ರಾಶನಿಸಮಸ್ವನಮ್ |
ಮಾರುತಿಂ ಪಂಚವಿಂಶತ್ಯಾ ಭೈಮಸೇನಿಂ ಚ ಪಂಚಭಿಃ ॥ 39 ॥
ಯುಧಿಷ್ಠಿರಂ ತ್ರಿಭಿರ್ವಿದ್ಧ್ವಾ ಸಹದೇವಂ ಚ ಸಪ್ತಭಿಃ |
ನಕುಲಂ ಚ ತ್ರಿಸಪ್ತತ್ಯಾ ದ್ರೌಪದೇಯಾಂಶ್ಚ ಮಾರಿಷ ॥ 40 ॥

ಪಂಚಭಿಃ ಪಂಚಭಿರ್ವಿದ್ಧ್ವಾ ಘೋರಂ ನಾದಂ ಚಕಾರ ಹ ॥ 41 ॥
ಅವನು ಇಂದ್ರನ ವಜ್ರಾಯುಧಕ್ಕೆ ಸಮವಾದ ಘೋಷವುಳ್ಳ ತನ್ನ ಘೋರವಾದ ಧನುಸ್ಸನ್ನು ಎಳೆದು, ಮಾರುತಿಯಾದ ಭೀಮಸೇನನನ್ನು ಇಪ್ಪತ್ತೈದು ಬಾಣಗಳಿಂದಲೂ, ಭೀಮಸೇನನ ಪುತ್ರನಾದ ಘಟೋತ್ಕಚನನ್ನು ಐದು ಬಾಣಗಳಿಂದಲೂ, ಯುಧಿಷ್ಠಿರನನ್ನು ಮೂರು ಬಾಣಗಳಿಂದಲೂ, ಸಹದೇವನನ್ನು ಏಳು ಬಾಣಗಳಿಂದಲೂ, ನಕುಲನನ್ನು ಎಪ್ಪತ್ಮೂರು ಬಾಣಗಳಿಂದಲೂ, ಎಲೈ ಪೂಜ್ಯನೇ, ದ್ರೌಪದಿಯ ಪುತ್ರರನ್ನು ಐದೈದು ಬಾಣಗಳಿಂದಲೂ ಹೊಡೆದು ಘೋರವಾದ ನಾದವನ್ನು ಮಾಡಿದನು.
ತಂ ಭೀಮಸೇನೋ ನವಭಿಃ ಸಹದೇವಶ್ಚ ಪಂಚಭಿಃ |
ಯುಧಿಷ್ಠಿರಃ ಶತೇನೈವ ರಾಕ್ಷಸಂ ಪ್ರತ್ಯವಿದ್ಧ್ಯತ |
ನಕುಲಶ್ಚ ಚತುಃಷಷ್ಟ್ಯಾ ದ್ರೌಪದೇಯಾಸ್ತ್ರಿಭಿಸ್ತ್ರಿಭಿಃ ॥ 42 ॥
ಭೀಮಸೇನನ ಪುತ್ರನು ಆ ರಾಕ್ಷಸನನ್ನು ಒಂಬತ್ತು ಬಾಣಗಳಿಂದಲೂ, ಸಹದೇವನು ಐದು ಬಾಣಗಳಿಂದಲೂ, ಯುಧಿಷ್ಠಿರನು ನೂರು ಬಾಣಗಳಿಂದಲೂ ಪ್ರತಿಯಾಗಿ ಹೊಡೆದರು. ನಕುಲನು ಅರವತ್ನಾಲ್ಕು ಬಾಣಗಳಿಂದಲೂ, ದ್ರೌಪದಿಯ ಪುತ್ರರು ಮೂರು-ಮೂರು ಬಾಣಗಳಿಂದಲೂ ಹೊಡೆದರು.
ಹೈಡಿಂಬೋ ರಾಕ್ಷಸಂ ವಿದ್ಧ್ವಾ ಯುದ್ಧೇ ಪಂಚಾಶತಾ ಶರೈಃ |
ಪುನರ್ವಿವ್ಯಾಧ ಸಪ್ತತ್ಯಾ ನನಾದ ಚ ಮಹಾಬಲಃ ॥ 43 ॥
ಘಟೋತ್ಕಚನು ಐವತ್ತು ಬಾಣಗಳಿಂದ ಅಲಂಬುಸನನ್ನು ಹೊಡೆದು ಪುನಃ ಎಪ್ಪತ್ತು ಬಾಣಗಳನ್ನು ಪ್ರಯೋಗಿಸಿ, ಮಹಾಬಲನಾದ ಅವನು ನಾದವನ್ನು ಮಾಡಿದನು.
ತಸ್ಯ ನಾದೇನ ಮಹತಾ ಕಂಪಿತೇಯಂ ವಸುಂಧರಾ |
ಸಪರ್ವತವನಾ ರಾಜನ್ ಸಪಾದಪಜಲಾಶಯಾ ॥ 44 ॥
ಅವನ ಆ ದೊಡ್ಡ ನಾದದಿಂದ ಎಲೈ ರಾಜನೇ, ಪರ್ವತ ವನಸಹಿತವಾದ, ಸಪ್ತ ಸಾಗರ ಸಹಿತವಾದ ಭೂಮಿಯು ನಡುಗಿದಂತೆ ತೋರಿತು.
ಸೋಽತಿವಿದ್ಧೋ ಮಹೇಷ್ವಾಸೈಃ ಸರ್ವತಸ್ತೈರ್ಮಹಾರಥೈಃ |
ಪ್ರತಿವಿವ್ಯಾಧ ತಾನ್ ಸರ್ವಾನ್ ಪಂಚಭಿಃ ಪಂಚಭಿಃ ಶರೈಃ ॥ 45 ॥
ಮಹಾರಥರೂ, ಮಹಾಧನುರ್ಧಾರಿಗಳೂ ಆದ ಅವರಿಂದ ಎಲ್ಲ ಕಡೆಗಳಿಂದಲೂ ಚೆನ್ನಾಗಿ ಹೊಡೆಯಲ್ಪಟ್ಟ ಅವನು, ಅವರಲ್ಲಿ ಒಬ್ಬೊಬ್ಬರ ಮೇಲೆಯೂ ಐದೈದು ಬಾಣಗಳನ್ನು ಪ್ರಯೋಗಿಸಿ, ಪ್ರತಿಯಾಗಿ ಯುದ್ಧವನ್ನು ಮಾಡಿದನು.
ಸಂಕ್ರುದ್ಧಂ ರಾಕ್ಷಸಂ ಯುದ್ಧೇ ಪ್ರತಿಕ್ರುದ್ಧಸ್ತು ಭಾರತ |
ಹೈಡಿಂಬೋ ರಾಕ್ಷಸಶ್ರೇಷ್ಠಃ ಶರೈರ್ವಿವ್ಯಾಧ ಸಪ್ತಭಿಃ ॥ 46 ॥
ಎಲೈ ಭಾರತನೇ, ಯುದ್ಧದಲ್ಲಿ ಕೋಪಗೊಂಡ ಅಲಂಬುಸ ರಾಕ್ಷಸನನ್ನು ಕೋಪಗೊಂಡ ರಾಕ್ಷಸಶ್ರೇಷ್ಠನಾದ ಘಟೋತ್ಕಚನು ಏಳು ಬಾಣಗಳಿಂದ ಹೊಡೆದನು.
ಸೋಽತಿವಿದ್ಧೋ ಬಲವತಾ ರಾಕ್ಷಸೇಂದ್ರೋ ಮಹಾಬಲಃ |
ವ್ಯಸೃಜತ್ ಸಾಯಕಾಂಸ್ತೂರ್ಣಂ ಸ್ವರ್ಣಪುಂಖಾನ್ ಶಿಲಾಶಿತಾನ್ ॥
ಬಲಿಷ್ಠನಾದ ಘಟೋತ್ಕಚನಿಂದ ಬಹಳ ಗಾಢವಾಗಿ ಪ್ರಹಾರವನ್ನು ಹೊಂದಿದ ಮಹಾಬಲನಾದ ರಾಕ್ಷಸೇಂದ್ರನು ಶೀಘ್ರವಾಗಿ ಸ್ವರ್ಣಪುಂಖವನ್ನು ಹೊಂದಿದ, ಕಲ್ಲಿನ ಮೇಲೆ ಸಾಣೆಯನ್ನು ಹಿಡಿದ ಬಾಣಗಳನ್ನು ಪ್ರಯೋಗಿಸಿದನು.
ತೇ ಶರಾ ನತಪರ್ವಾಣೋ ಹೈಡಿಂಬಂ ವಿವಿಶುರ್ಭೃಶಮ್ |
ರುಷಿತಾಃ ಪನ್ನಗಾ ಯದ್ವದ್ ಗಿರಿಮಗ್ರ್ಯಂ ಮಹಾಬಲಾಃ ॥ 48 ॥
ಮಹಾಬಲವುಳ್ಳ ಸರ್ಪಗಳು ಕೋಪದಿಂದ ಪರ್ವತವನ್ನು ಪ್ರವೇಶಿಸುವಂತೆ, ಅಲಂಬುಸನು ಪ್ರಯೋಗಿಸಿದ ಬಾಗಿದ ತುದಿಯುಳ್ಳ ಆ ಬಾಣಗಳು ಘಟೋತ್ಕಚನ ಶರೀರವನ್ನು ಚೆನ್ನಾಗಿ ಪ್ರವೇಶಿಸಿದವು.
ತತಸ್ತೇ ಪಾಂಡವಾ ರಾಜನ್ ಸಮಂತಾನ್ನಿಶಿತೈಃ ಶರೈಃ |
ಛಾದಯಾಮಾಸುರುದ್ವಿಗ್ನಾ ಹೈಡಿಂಬಶ್ಚ ಘಟೋತ್ಕಚಃ ॥ 49 ॥
ಎಲೈ ರಾಜನೇ, ಆಗ ಆ ಉದ್ವಿಗ್ನರಾದ ಪಾಂಡವರು ತಮ್ಮ ಹರಿತವಾದ ಬಾಣಗಳಿಂದ ಎಲ್ಲ ಕಡೆಗಳಿಂದಲೂ ಅಲಂಬುಸನನ್ನು ಮುಚ್ಚಿದರು. ಹಿಡಿಂಬಾಪುತ್ರನಾದ ಘಟೋತ್ಕಚನೂ ಹಾಗೆಯೇ ಮಾಡಿದನು.
ಸ ವಧ್ಯಮಾನಃ ಸಮರೇ ಪಾಂಡವೈರ್ಜಿತಕಾಶಿಭಿಃ |
ನಾಭ್ಯಪದ್ಯತ ಕರ್ತವ್ಯಮಾರ್ಶ್ಯಶೃಂಗಿರ್ಮಹಾಬಲಃ ॥ 50 ॥
ಋಶ್ಯಶೃಂಗರ ಪುತ್ರನೂ, ಮಹಾಬಲನೂ ಆದ ಅಲಂಬುಸನು ಜಯವನ್ನು ಆಶಿಸಿದ ಪಾಂಡವರಿಂದ ಯುದ್ಧದಲ್ಲಿ ಹೊಡೆಯಲ್ಪಟ್ಟು ಏನು ಮಾಡಬೇಕೆಂದು ತಿಳಿಯದಾದನು.
ಮರ್ತ್ಯಧರ್ಮಮನುಪ್ರಾಪ್ತಃ ಕರ್ತವ್ಯಂ ನಾನ್ವಪದ್ಯತ |
ತತಃ ಸಮರಶೌಂಡೋ ವೈ ಭೈಮಸೇನಿರ್ಮಹಾಬಲಃ |
ಸಮೀಕ್ಷ್ಯ ತಂ ತಥಾವಸ್ಥಂ ವಧಾಯಾಸ್ಯ ಮನೋ ದಧೇ ॥ 51 ॥
ಮರ್ತ್ಯಧರ್ಮವನ್ನು ಹೊಂದಿದವನಾಗಿ ಮೂಢನಾದನು. ಆಗ ಯುದ್ಧಕುಶಲಾದ ಮಹಾಬಲನಾದ ಘಟೋತ್ಕಚನು ಅಂತಹ ಅವಸ್ಥೆಯಲ್ಲಿರುವ ಅವನನ್ನು ನೋಡಿ ಅವನ ವಧೆಯನ್ನು ಮಾಡಲು ನಿರ್ಧರಿಸಿದನು.
ವೇಗಂ ಚಕ್ರೇ ಮಹಾಂತಂ ವೈ ರಾಕ್ಷಸೇಂದ್ರರಥಂ ಪ್ರತಿ |

ಘಟೋತ್ಕಚಂ ಮಹಾರಾಜ ಶರವರ್ಷೈರವಾಕಿರತ್ ॥ 52 ॥
ರಾಕ್ಷಸಶ್ರೇಷ್ಠನಾದ ಅಲಂಬುಸನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾ, ತನ್ನ ಬಾಣಗಳ ವೇಗವನ್ನು ಇನ್ನೂ ಹೆಚ್ಚಿಸಿದನು.
ದಗ್ಧಾದ್ರಿಕೂಟಸದೃಶಂ ತಮಂಜನಚಯೋಪಮಮ್ ॥ 53 ॥
ಎಲ್ಲೆ ಮಹಾರಾಜನೇ, ಸುಟ್ಟುಹೋದ ಪರ್ವತದ ಶಿಖರದಂತೆ, ಅಂಜನದ ರಾಶಿಯಂತೆ ಇದ್ದ ಘಟೋತ್ಕಚನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ಘಟೋತ್ಕಚೋಽಪ್ಯಸಂಭ್ರಾಂತಃ ಶರವರ್ಷಂ ಮಹತ್ತರಮ್ |
ಅಲಂಬುಸವಧಪ್ರೇಪ್ಸುರ್ಮುಮೋಚಾಗ್ನಿರಿವ ಜ್ವಲನ್ ॥ 54 ॥
ಘಟೋತ್ಕಚನೂ ಸಹ ಗಾಬರಿಗೊಳ್ಳದೆ ಅಲಂಬುಸನ ವಧೆಯನ್ನು ಬಯಸುತ್ತಾ, ಅಗ್ನಿಯಂತೆ ಜ್ವಲಿಸುತ್ತಾ, ಮಹತ್ತರವಾದ ಬಾಣಗಳ ಮಳೆಯನ್ನು ಅವನ ಮೇಲೆ ಸುರಿಸಿದನು.
ಅಲಂಬುಸರಥಾಚ್ಚೋಗ್ರಾದ್ ಘಟೋತ್ಕಚರಥಾದಪಿ |
ಶರಾಃ ಪ್ರಾದುರ್ಭವಂತಿ ಸ್ಮ ದ್ವಿರೇಫಾ ಇವ ಖಾದ್ ದಿಶಃ ॥ 55 ॥
ಅಲಂಬುಸನ ಉಗ್ರವಾದ ರಥದಿಂದಲೂ ಮತ್ತು ಘಟೋತ್ಕಚನ ರಥದಿಂದಲೂ ಬಾಣಗಳು ದುಂಬಿಗಳು ಆಕಾಶದಿಂದ ದಿಕ್ಕು-ದಿಕ್ಕುಗಳಿಗೆ ಹೋಗುವಂತೆ ಪ್ರಾದುರ್ಭವಿಸಿದವು.
ಅಭ್ರಚ್ಛಾಯೇವ ರಚಿತಾ ಬಾಣೈಸ್ತತ್ರ ನರೇಶ್ವರ |
ನ ಸ್ಮ ವಿಜ್ಞಾಯತೇ ಕಿಂಚಿದಂಧಕಾರೇ ಕೃತೇ ಶರೈಃ ॥ 56 ॥
ಎಲ್ಲೆ ನರೇಶ್ವರನೇ, ಆ ಬಾಣಗಳಿಂದ ಉಂಟಾದ ಛಾಯೆಯು ಮೋಡಗಳ ಛಾಯೆಯಂತಿದ್ದಿತು. ಬಾಣದಿಂದ ಅಂಧಕಾರವು ಸೃಷ್ಟಿಸಲ್ಪಡುತ್ತಿರಲು ಯಾವುದೂ ಕಾಣಿಸುತ್ತಿರಲಿಲ್ಲ.
ತತ ಆಕರ್ಣಕೃಷ್ಟೇನ ಭಲ್ಲೇನ ಚ ಘಟೋತ್ಕಚಃ |
ಅಲಂಬುಸಸ್ಯ ಚಿಚ್ಛೇದ ಶಿರೋ ಯಂತುರ್ಮಹಾಬಲಃ ॥ 57 ॥
ಅನಂತರ ಮಹಾಬಲನಾದ ಘಟೋತ್ಕಚನು ತನ್ನ ಕಿವಿಯವರೆಗೂ ಎಳೆದು ಪ್ರಯೋಗಿಸಿದ ಭಲ್ಲದಿಂದ ಅಲಂಬುಸನ ಸಾರಥಿಯ ಶಿರಸ್ಸನ್ನು ಕತ್ತರಿಸಿದನು.
ತತೋಽಪರೈರ್ವೇಗವದ್ಭಿಃ ಕ್ಷುರೈಸ್ತಸ್ಯ ಘಟೋತ್ಕಚಃ |
ಅಕ್ಷಮೀಷಾಂ ಯುಗಂ ಚೈವ ಚಿಚ್ಛೇದ ಯುಧಿ ತಾಡಯನ್ ॥ 58 ॥
ಅನಂತರ ಘಟೋತ್ಕಚನು ವೇಗಶಾಲಿಗಳಾದ ಬೇರೆ ಕ್ಷುರಗಳಿಂದ ಯುದ್ಧದಲ್ಲಿ ಅವನ ರಥದ ಅಶ್ವವನ್ನೂ, ಮೂಕಿಯನ್ನೂ ಮತ್ತು ನೊಗವನ್ನೂ ಹೊಡೆದು ಕತ್ತರಿಸಿದನು.
ಅವಸ್ಕಂದ್ಯ ರಥಾತ್ ತೂರ್ಣಂ ಕೈಮೀರಿಃ ಕ್ರೋಧಮೂರ್ಚ್ಛಿತಃ |
ತಸ್ಮಿನ್ ಮಾಯಾಮಯಂ ಘೋರಮಸ್ತ್ರವರ್ಷಂ ವವರ್ಷ ಹ ॥ 59 ॥
ಕಿರ್ಮೀರನ ಪುತ್ರನಾದ ಅಲಂಬುಸನು ಕ್ರೋಧಮೂರ್ಛಿತನಾಗಿ, ರಥದಿಂದ ಇಳಿದು ಅವನ ಮೇಲೆ ಮಾಯಾಮಯವಾದ ಘೋರವಾದ ಅಸ್ತ್ರಗಳ ಮಳೆಯನ್ನು ಸುರಿಸಿದನು.
ಘಟೋತ್ಕಚೋಽಪ್ಯಾಶು ರಥಾತ್ ಪ್ರಸ್ಕಂದ್ಯ ಸಮಮೇವ ಚ |
ಮಾಯಾಸ್ತ್ರೇಣೈವ ಮಾಯಾಸ್ತ್ರಂ ವ್ಯಧಮತ್ ಸಮರೇ ರಿಪೋಃ ॥ 60 ॥
ಘಟೋತ್ಕಚನೂ ಸಹ ಅವನು ರಥದಿಂದ ಇಳಿಯುತ್ತಿರುವಾಗಲೇ ತಾನೂ ರಥದಿಂದ ಇಳಿದು ಶತ್ರುವಿನ ಮಾಯಾಸ್ತ್ರಗಳನ್ನು ಶೀಘ್ರವಾಗಿ ತನ್ನ ಮಾಯಾಸ್ತ್ರಗಳಿಂದ ನಾಶಗೊಳಿಸಿದನು.
ಹೈಡಿಂಬೇನಾರ್ದ್ಯಮಾನಸ್ತು ಯುಧಿ ಸೋಽಲಂಬುಸೋ ದೃಢಮ್ |
ಅಂತರ್ಹಿತೋ ಮಹಾರಾಜ ಘಟೋತ್ಕಚಮಯೋಧಯತ್ ॥ 61 ॥
ಎಲ್ಲೆ ಮಹಾರಾಜನೇ, ಹಿಡಿಂಬಾಪುತ್ರನಾದ ಘಟೋತ್ಕಚನಿಂದ ಬಹಳವಾಗಿ ಪೀಡಿಸಲ್ಪಟ್ಟ ಅಲಂಬುಸನು ಅಂತರ್ಧಾನವನ್ನು ಹೊಂದಿ ಘಟೋತ್ಕಚನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಅಂತರ್ಧಾನಗತಂ ದೃಷ್ಟ್ವಾ ತತ್ರ ತತ್ರ ಘಟೋತ್ಕಚಃ |
ಗದಯಾ ತಾಡಯಾಮಾಸ ವೇಗವತ್ಯಾ ಮಹಾಬಲಃ ॥ 62 ॥
ಅವನು ಅಂತರ್ಧಾನವನ್ನು ಹೊಂದಿದುದನ್ನು ನೋಡಿ ಮಹಾಬಲನಾದ ಘಟೋತ್ಕಚನು ಎಲ್ಲ ಕಡೆಗಳಲ್ಲಿಯೂ ವೇಗಶಾಲಿಯಾದ ಗದೆಯಿಂದ ಹೊಡೆದನು.
ಉತ್ಪಪಾತ ತತೋ ವ್ಯೋಮ್ನಿ ಪ್ರಹಾರಪರಿಪೀಡಿತಃ |
ಅಲಂಬುಸೋ ರಾಕ್ಷಸೇಂದ್ರಃ ಸಹಸಾ ಪಕ್ಷಿರಾಡಿವ ॥ 63 ॥
ರಾಕ್ಷಸಶ್ರೇಷ್ಠನಾದ ಅಲಂಬುಸನು ಗದಾಪ್ರಹಾರ ಪೀಡಿತನಾಗಿ ಶ್ರೇಷ್ಠವಾದ ಪಕ್ಷಿಯಂತೆ ತಕ್ಷಣ ಆಕಾಶದಲ್ಲಿ ಮೇಲಕ್ಕೆ ಹಾರಿದನು.
ಘಟೋತ್ಕಚೋಽಪ್ಯಸಂಭ್ರಾಂತಃ ಖಡ್ಗಪಾಣಿರಥೋತ್ಪತತ್ |
ತತೋ ವೇಗೇನ ಮಹತಾ ವಿವರ್ಷಿಷುರಿವಾಂಬುದಃ ॥ 64 ॥
ಘಟೋತ್ಕಚನೂ ಕೂಡ ಗಾಬರಿಯಿಲ್ಲದೆ ಕೈಯಲ್ಲಿ ಖಡ್ಗವನ್ನು ಹಿಡಿದು ಮಳೆಯನ್ನು ಸುರಿಸಲಿರುವ ಮೋಡದಂತೆ ವೇಗದಿಂದ ಮೇಲಕ್ಕೆ ಹಾರಿದನು.
ತಮಾಪತಂತಂ ಸಂಪ್ರೇಕ್ಷ ್ಯ ಕೈರ್ಮೀರೀ ರಾಕ್ಷಸೋತ್ತಮಃ |
ಅಭಿದುದ್ರಾವ ವೇಗೇನ ಸಿಂಹಃ ಸಿಂಹಮಿವ ಸ್ಥಿತಮ್ ॥ 65 ॥

ಅವನು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ರಾಕ್ಷಸಶ್ರೇಷ್ಠನೂ, ಕಿರ್ಮೀರ ಪುತ್ರನೂ ಆದ ಅಲಂಬುಸನು ಸಿಂಹವು ಸಿಂಹದ ಮೇಲೆ ಎರಗುವಂತೆ ಅವನ ಕಡೆಗೆ ಶೀಘ್ರವಾಗಿ ಓಡಿ ಬಂದನು.
ದಕ್ಷಿಣೇನಾಸಿಮುದ್ಯಮ್ಯ ವಕ್ಷಃ ಪ್ರಚ್ಛಾದ್ಯ ಚರ್ಮಣಾ |
ಅಭಿದುದ್ರಾವ ವೇಗೇನ ವೇಗವಂತಂ ಘಟೋತ್ಕಚಃ ॥ 66 ॥
ಘಟೋತ್ಕಚನು ತನ್ನ ಬಲಗೈಯಿಂದ ಖಡ್ಗವನ್ನು ಎತ್ತಿ, ಎಡಗೈಯಿಂದ ಗುರಾಣಿಯಿಂದ ತನ್ನ ಎದೆಯನ್ನು ರಕ್ಷಿಸಿ ವೇಗಶಾಲಿಯಾದ ಅಲಂಬುಸನ ಕಡೆಗೆ ವೇಗವಾಗಿ ಓಡಿಬಂದನು.
ತಾವುಭೌ ವೇಗಸಂರಬ್ಧಾವಲಂಬುಸಘಟೋತ್ಕಚೌ |
ಅನ್ಯೋನ್ಯಸ್ಯ ತಥೈವೋರೂ ಸಮಾಜಘ್ನತುರಂಜಸಾ ॥ 67 ॥
ವೇಗಶಾಲಿಗಳೂ ಮತ್ತು ಕೋಪಗೊಂಡವರೂ ಆದ ಅಲಂಬುಸ-ಘಟೋತ್ಕಚ ಇಬ್ಬರೂ ಪರಸ್ಪರವಾಗಿ ತೊಡೆಗಳಿಗೆ ಹೊಡೆದರು.
ಅನ್ಯೋನ್ಯಸ್ಯಾಭಿಘಾತೇನ ತಯೋ ರಾಕ್ಷಸಸಿಂಹಯೋಃ |
ಶೈಲೇನಾಭಿಹತಸ್ಯೇವ ಶೈಲಸ್ಯಾಭೂನ್ಮಹಾಸ್ವನಃ ॥ 68 ॥
ಆ ರಾಕ್ಷಸಶ್ರೇಷ್ಠರು ಪರಸ್ಪರವಾಗಿ ಹೊಡೆದಾಗ ಒಂದು ಬೆಟ್ಟವನ್ನು ಇನ್ನೊಂದು ಬೆಟ್ಟದಿಂದ ಹೊಡೆದಂತೆ ಮಹಾಶಬ್ದವುಂಟಾಯಿತು.
ತತೋಽಪಸೃತ್ಯ ಸಹಸಾ ಪುನರಾಪೇತತುರ್ಭೃಶಮ್ |
ಚರಂತಾವಸಿಮಾರ್ಗಾಂಸ್ತಾನ್ ವಿವಿಧಾನ್ ರಾಕ್ಷಸೋತ್ತಮೌ ॥ 69 ॥
ಅನಂತರ ಇಬ್ಬರೂ ಹಿಂದಕ್ಕೆ ಸರಿದು ರಾಕ್ಷಸಶ್ರೇಷ್ಠರಾದ ಅವರು ವಿಧವಿಧವಾದ ಖಡ್ಗ ಮಾರ್ಗಗಳಲ್ಲಿ ಸಂಚರಿಸುತ್ತಾ ಪರಸ್ಪರವಾಗಿ ಎರಗಿದರು.
ತಯೋರ್ಗಾತ್ರೇಷು ಪತಿತಾವಸೀ ಸನ್ನೌ ನಿಪೇತತುಃ |
ವೇಗೋತ್ಸ ೃಷ್ಟೇ ಮಘವತಾ ವಜ್ರೇ ಶೈಲತಟೇಷ್ವಿವ ॥ 70 ॥
ಅವರ ಶರೀರಗಳಲ್ಲಿ ಬಿದ್ದ ಖಡ್ಗಗಳು ಇಂದ್ರನು ವೇಗದಿಂದ ಪರ್ವತ ತಟದಲ್ಲಿ ಪ್ರಯೋಗಿಸಿದ ವಜ್ರದಂತೆ ಪುನಃ ಪುನಃ ಹೊಡೆಯುವುದರಿಂದ ನಾಶವನ್ನು ಹೊಂದಿ ಬಿದ್ದವು.
ತತಃ ಸೈನ್ಯಾನಿ ದದೃಶುಃ ತದ್ ಯುದ್ಧಮತಿದಾರುಣಮ್ |
ಯುದ್ಧಂ ತಯೋ ರಾಕ್ಷಸಯೋರಾಮಿಷೇ ಶ್ಯೇನಯೋರಿವ ॥ 71 ॥
ಮಾಂಸದ ಸಲುವಾಗಿ ಹೊಡೆದಾಡುವ ಗಿಡುಗಗಳಂತೆ ಅವರಿಬ್ಬರ ನಡುವೆ ನಡೆದ ಬಹಳ ದಾರುಣವಾದ ಯುದ್ಧವನ್ನು ಸೈನ್ಯಗಳು ನೋಡಿದವು.
ತತೋ ಲೋಹಿತರಕ್ತಾಕ್ಷಾವುಭೌ ತೌ ರಾಕ್ಷಸೋತ್ತಮೌ |
ಅಥೈಕ್ಷೆ ಯೇತಾಂ ತು ರಾಜೇಂದ್ರ ಸಂಧ್ಯಾರಕ್ತಾವಿವಾಂಬುದೌ ॥ 72 ॥
ಆಗ ರಕ್ತದಂತೆ ಕೆಂಪಾದ ಕಣ್ಣುಳ್ಳ ಆ ಇಬ್ಬರು ರಾಕ್ಷಸಶ್ರೇಷ್ಠರು ಎಲೈ ರಾಜೇಂದ್ರನೇ, ಸಂಧ್ಯಾಕಾಲದ ರಕ್ತವರ್ಣದ ಮೋಡಗಳಂತೆ ಕಂಡುಬಂದರು.
ಚಕ್ರಾತೇ ಶ್ಯೇನವಚ್ಚೈವ ಮಂಡಲಾನಿ ಸಹಸ್ರಶಃ |
ಉಭೌ ನಿಶಿತ್ರಂಶಹಸ್ತೌ ತೌ ಸಪಕ್ಷಾವಿವ ಪಕ್ಷಿಣೌ ॥ 73 ॥
ಅವರು ಕೈಯಲ್ಲಿ ಖಡ್ಗವನ್ನು ಹಿಡಿದು, ರೆಕ್ಕೆಯನ್ನು ಹೊಂದಿದ ಗಿಡುಗಗಳಂತೆ ಸಹಸ್ರಾರು ಮಂಡಲಗಳಲ್ಲಿ ಸಂಚರಿಸಿದರು.
ತತೋ ಭ್ರಾಮ್ಯ ತು ತಂ ಖಡ್ಗಂ ಪಾಣ್ಯೋಃ ಕಿರ್ಮೀರನಂದನಃ |
ಚಿಕ್ಷೇಪಾಸ್ಯ ಶಿರೋ ಹರ್ತುಂ ಸ ಚ ತಸ್ಯ ಘಟೋತ್ಕಚಃ ॥ 74 ॥
ಅನಂತರ ಕಿರ್ಮೀರ ಪುತ್ರನಾದ ಅಲಂಬುಸನು ತನ್ನ ಖಡ್ಗವನ್ನು ಎರಡು ಕೈಗಳಿಂದಲೂ ತಿರುಗಿಸಿ ಘಟೋತ್ಕಚನ ಶಿರಸ್ಸನ್ನು ಕತ್ತರಿಸಲು ಅವನ ಮೇಲೆ ಎಸೆದನು. ಘಟೋತ್ಕಚನೂ ಸಹ ಅಲಂಬುಸನ ಶಿರಸನ್ನು ಕತ್ತರಿಸಲು ಹಾಗೆಯೇ ಮಾಡಿದನು.
ತಾವಸೀ ಯುಗಪದ್ ದೀಪ್ತೌ ಸಮೇತ್ಯ ವಿಪುಲೌ ಭುವಿ |
ಪತಿತೌ ತೌ ತು ಬಾಹುಭ್ಯಾಂ ರಾಕ್ಷಸೌ ಸಮಸಜ್ಜತಾಮ್ ॥ 75 ॥
ಆ ಜ್ವಲಿಸುವ ಎರಡು ವಿಸ್ತಾರವಾದ ಖಡ್ಗಗಳು ಒಂದನ್ನೊಂದು ಘಟ್ಟಿಸಿ ಭೂಮಿಯ ಮೇಲೆ ಬಿದ್ದವು. ಅನಂತರ ಆ ರಾಕ್ಷಸರು ಬಾಹುಯುದ್ಧವನ್ನು ಮಾಡಿದರು.
ಶೀರ್ಷಾಘಾತಾಂಸಘಾತೈಶ್ಚ ಪರಸ್ಪರಮಥಾಹತೌ |
ಪುನರ್ವಿಮಿಶ್ರಿತೌ ವೀರೌ ವ್ಯಾಯುದ್ಧ್ಯೇತೇ ಮುಹುರ್ಮುಹುಃ ॥76॥
ಶಿರಸ್ಸುಗಳನ್ನು ಪರಸ್ಪರವಾಗಿ ಘಟ್ಟಿಸಿ, ಭುಜಸಂಧಿಗಳನ್ನೂ ಪರಸ್ಪರವಾಗಿ ಘಟ್ಟಿಸಿ ಹೊಡೆದಾಡಿದ ವೀರರಾದ ಅವರು ಪುನಃ ಪುನಃ ಮಿಶ್ರಿತರಾಗಿ ಯುದ್ಧವನ್ನು ಮಾಡಿದರು.
ಭೈಮಸೇನಿರಥೋತ್ಕ್ಷಿಪ್ಯ ಸಮಾವಿದ್ಧ್ಯ ಪುನಃಪುನಃ |
ನಿಷ್ಪಿಪೇಷ ಕ್ಷಿತೌ ಕ್ಷಿಪ್ರಂ ಪೂರ್ಣಕುಂಭಮಿವಾಶ್ಮನಿ ॥ 77 ॥
ಭೀಮಸೇನನ ಪುತ್ರನಾದ ಘಟೋತ್ಕಚನು ಅಲಂಬುಸನನ್ನು ಮೇಲಕ್ಕೆ ಎಸೆದು ಪುನಃ ಪುನಃ ಹೊಡೆದು ಪೂರ್ಣಕುಂಭವನ್ನು ಕಲ್ಲಿನ ಮೇಲೆ ಪುಡಿ ಮಾಡಿದಂತೆ ಶೀಘ್ರವಾಗಿ ಅವನನ್ನು ಭೂಮಿಯ ಮೇಲೆ ಪುಡಿ ಮಾಡಿದನು.
ಬಲಲಾಘವಸಂಪನ್ನಃ ಸಂಪನ್ನೋ ವಿಕ್ರಮೇಣ ಚ |
ಭೈಮಸೇನಿರಥ ಕ್ರುದ್ಧಃ ಸರ್ವಸೈನ್ಯಸ್ಯ ಪಶ್ಯತಃ ॥ 78 ॥

ಅಸೃಕ್ಕ್ಷರಿತಸರ್ವಾಂಗಃ ಚೂರ್ಣಿತಾಸ್ಥಿವಿಭೂಷಣಃ |
ಘಟೋತ್ಕಚೇನ ನಿಷ್ಪಿಷ್ಟೋ ಹತಃ ಸಾಲಕಟಂಕಟಃ॥ 79 ॥
ಬಲ, ಕ್ಷಿಪ್ರತೆ ಮತ್ತು ಪರಾಕ್ರಮದಿಂದ ಕೂಡಿದ ಭೀಮಸೇನನ ಪುತ್ರನಾದ ಘಟೋತ್ಕಚನು ಸರ್ವಸೈನ್ಯವೂ ನೋಡುತ್ತಿರುವಂತೆ ಕ್ರುದ್ಧನಾಗಿ ಅವನನ್ನು ವಿನಾಶಗೊಳಿಸಲು ಸಾಲಕಟಂಕಟನು (ಸಾಲವೃಕ್ಷದ ಮಧ್ಯೆ ಹೋಗುವಾಗ ಅವನ ಶರೀರವು ಸಾಲವೃಕ್ಷಗಳಿಗೆ ತಾಕಿದಾಗ ಕಟಕಟ ಶಬ್ಧವು ಉಂಟಾಗುತ್ತಿದ್ದಿತು. ಅಂತಹ ಅಲಂಬುಸನು) ಘಟೋತ್ಕಚನಿಂದ ಪುಡಿ ಮಾಡಲ್ಪಟ್ಟು, ಅವನ ಶರೀರವೆಲ್ಲವೂ ರಕ್ತದಿಂದ ಸಿಕ್ತವಾಗಿ ಮೂಳೆಗಳೆಲ್ಲವೂ ಮುರಿದು (ಮುರಿದ ಮೂಳೆಗಳೆಂಬ ಆಭರಣದಿಂದ ಭೂಷಿತನಾಗಿ) ಹತನಾದನು.
ಪಾಂಡವಾನಾಂ ತತಃ ಸೇನಾ ತಂ ದೃಷ್ಟ್ವಾ ವಿನಿಪಾತಿತಮ್ |
ನನಾದ ಸುಮಹಾನಾದಂ ಹರ್ಷವೇಗಸಮಾಪ್ಲುತಾ ॥ 80 ॥
ಅವನು ಹತನಾಗಿ ಬಿದ್ದುದನ್ನು ನೋಡಿ ಪಾಂಡವರ ಸೈನ್ಯವು ಹರ್ಷವೇಗದಿಂದ ತುಂಬಿ ದೊಡ್ಡನಾದವನ್ನು ಮಾಡಿತು.
ತತೋ ಘಟೋತ್ಕಚೋ ಹತ್ವಾ ತದ್ ರಕ್ಷೋ ವೃತ್ರಸನ್ನಿಭಮ್ |
ಪುನಃ ಸ ರಥಮಾಸ್ಥಾಯ ವಿಜಿಗೀಷುರ್ನನಾದ ಹ ॥ 81 ॥
ಘಟೋತ್ಕಚನು ವೃತ್ರನಂತಿದ್ದ ಆ ರಾಕ್ಷಸನನ್ನು ಕೊಂದು ಪುನಃ ಯುದ್ಧವನ್ನು ಮಾಡಿ ಉಳಿದವರನ್ನು ಗೆಲ್ಲಲು ಬಯಸಿ ತನ್ನ ರಥವನ್ನು ಏರಿ ನಾದವನ್ನು ಮಾಡಿದನು.
ತತಃ ಸುಮನಸಃ ಪಾರ್ಥಾ ಹತೇ ತಸ್ಮಿನ್ ನಿಶಾಚರೇ |
ಚುಕ್ರುಶುಃ ಸಿಂಹನಾದಾಂಶ್ಚ ವಾಸಾಂಸ್ಯಾದುಧುವುಶ್ಚ ಹ ॥ 82 ॥
ಆಗ ಪ್ರಸನ್ನವಾದ ಮನಸ್ಸುಳ್ಳ ಪಾಂಡವರು ಅಲಂಬುಸ ರಾಕ್ಷಸನು ಹತನಾಗುತ್ತಿರಲು ಸಿಂಹನಾದಗಳನ್ನು ಮಾಡಿ ತಮ್ಮ ಉತ್ತರೀಯಗಳನ್ನು ಕೊಡವಿದರು.
ತಾವಕಾಸ್ತು ಹತಂ ದೃಷ್ಟ್ವಾ ರಾಕ್ಷಸೇಂದ್ರಂ ಮಹಾಬಲಮ್ |
ಅಲಂಬುಸಂ ಭೀಮರೂಪಂ ವಿಶೀರ್ಣಮಿವ ಪರ್ವತಮ್ ॥ 83 ॥
ಹಾಹಾಕಾರಮಕುರ್ವಂತ ಸೈನ್ಯಾನಿ ಚ ವಿಶಾಂಪತೇ ॥ 84 ॥
ಬಿರಿದ ಪರ್ವತದಂತೆ ಮಹಾಬಲನಾದ, ರಾಕ್ಷಸೇಂದ್ರನಾದ ಅಲಂಬುಸನು ಭಯಂಕರ ರೂಪವನ್ನು ಧರಿಸಿ ಹತನಾದುದನ್ನು ನೋಡಿ ಎಲೈ ರಾಜನೇ, ನಿನ್ನ ಸೈನ್ಯಗಳೆಲ್ಲವೂ ಹಾಹಾಕಾರವನ್ನು ಮಾಡಿದವು.
ಜನಾಶ್ಚೈನದ್ ದದೃಶಿರೇ ರಕ್ಷಃ ಕೌತೂಹಲಾನ್ವಿತಾಃ |
ಯದೃಚ್ಛಯಾ ನಿಪತಿತಂ ಭೂಮಾವಂಗಾರಕಂ ಯಥಾ ॥ 85 ॥
ಉಳಿದ ಜನರೂ ಸಹ ಭಗವದಿಚ್ಛೆಯಿಂದ ಭೂಮಿಯ ಮೇಲೆ ಬಿದ್ದ ಅಂಗಾರಕನಂತಿದ್ದ ಅಲಂಬುಸ ರಾಕ್ಷಸನನ್ನು ಕುತೂಹಲಯುಕ್ತರಾಗಿ ನೋಡಿದರು.
ಘಟೋತ್ಕಚಸ್ತು ತಂ ಹತ್ವಾ ರಕ್ಷೋ ಬಲವತಾಂ ವರಃ |
ಮುಮೋದ ಬಲವದ್ ರಾಜನ್ ಬಲಂ ಹತ್ವೇವ ವಾಸವಃ ॥ 86 ॥
ಎಲೈ ರಾಜನೇ, ಬಲಿಷ್ಠರಲ್ಲಿ ಶ್ರೇಷ್ಠನಾದ ಘಟೋತ್ಕಚನಾದರೂ ಇಂದ್ರನು ಬಲಾಸುರನನ್ನು ಕೊಂದಂತೆ ಆ ರಾಕ್ಷಸನನ್ನು ಕೊಂದು ಬಹಳ ಸಂತೋಷಗೊಂಡನು.
ನನಾದ ಚಾತೀವ ಚ ಪಾಂಡವಾತ್ಮಜೋ |
ರಣಾಜಿರೇ ಹೃಷ್ಟಮನಾ ಘಟೋತ್ಕಚಃ ॥ 87 ॥|
ಪಾಂಡವಪುತ್ರನಾದ ಘಟೋತ್ಕಚನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ರಣರಂಗದಲ್ಲಿ ಬಹಳ ನಾದವನ್ನು ಮಾಡಿದನು.

ಸ ಪೂಜ್ಯಮಾನಃ ಪಿತೃಭಿಃ ಸಬಾಂಧವೈಃ
ಘಟೋತ್ಕಚಃ ಕರ್ಮಣಿ ದುಷ್ಕರೇ ಕೃತೇ |
ರಿಪುಂ ನಿಹತ್ಯಾಭಿನನಂದ ವೈ ತದಾ
ಹ್ಯಲಂಬುಸಂ ಪಕ್ವಮಲಂಬುಸಂ ಯಥಾ ॥ 88 ॥
ಅಲಂಬುಸ ರಾಕ್ಷಸನು ಹತನಾಗುತ್ತಿರಲು ದುಷ್ಕರವಾದ ಕಾರ್ಯವನ್ನು ಮಾಡಿದ ಘಟೋತ್ಕಚನು ತನ್ನ ಪಿತೃಗಳು ಮತ್ತು ಬಾಂಧವರಿಂದ ಪೂಜಿಸಲ್ಪಟ್ಟನು. ಪಕ್ವವಾದ ಅಲಂಬು ಫಲದಂತೆ ಅಲಂಬುಸ ರಾಕ್ಷಸನನ್ನು ಕೊಂದು ಬಹಳ ಸಂತೋಷಗೊಂಡನು.
ತತೋ ನಿನಾದಃ ಸುಮಹಾನ್ ಸಮುತ್ಥಿತಃ
ಸಶಂಖನಾನಾವಿಧಘೋಷನಾದವಾನ್ |
ನಿಶಮ್ಯ ತಂ ಪ್ರತ್ಯನಂದಂಸ್ತು ಕೌರವಾಃ
ತತೋ ಧ್ವನಿರ್ಭುವನಮನಾದಯದ್ ಭೃಶಮ್ ॥ 89 ॥
ಆಗ ಶಂಖಧ್ವನಿಯಿಂದ ಕೂಡಿದ ನಾನಾವಿಧ ವಾದ್ಯಗಳ ಮಹಾಘೋಷವು ಉಂಟಾಯಿತು. ಆ ನಾದವನ್ನು ಕೇಳಿ ಕೌರವರೂ ಪ್ರತಿಯಾಗಿ ನಾದವನ್ನು ಮಾಡಿದರು. ಆ ನಾದವು ಭೂಮಿಯಲ್ಲೆಲ್ಲಾ ಬಹಳವಾಗಿ ಪ್ರತಿಧ್ವನಿಸಿತು.
ತತೋಽಭಿಗಮ್ಯ ರಾಜಾನಂ ಧರ್ಮಪುತ್ರಂ ಯುಧಿಷ್ಠಿರಮ್ |
ಸ್ವಕರ್ಮಾವೇದಯನ್ಮೂರ್ಧ್ನಾ ಸಾಂಜಲಿರ್ನಿಪಪಾತ ಹ ॥ 90 ॥

ಅನಂತರ ಘಟೋತ್ಕಚನು ರಾಜನಾದ ಯಮಧರ್ಮಪುತ್ರನಾದ ಯುಧಿಷ್ಠಿರನ ಬಳಿಗೆ ಬಂದು ತಾನು ಮಾಡಿದ ಕರ್ಮವನ್ನು ನಿವೇದಿಸಿ, ಕೈಗಳನ್ನು ಮುಗಿದು ಅವನಿಗೆ ಶಿರಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.
ಮೂರ್ಧ್ನ್ಯುಪಾಘ್ರಾಯ ತಂ ಜ್ಯೇಷ್ಠಃ ಪರಿಷ್ವಜ್ಯ ಚ ಪಾಂಡವಃ |
ಪ್ರೀತೋಽಸ್ಮೀತ್ಯಬ್ರುವೀದ್ ರಾಜನ್ ಹರ್ಷಾದುತ್ಫುಲ್ಲಲೋಚನಃ ॥ 91 ॥
ಎಲೈ ರಾಜನೇ, ಹಿರಿಯನಾದ, ಪಾಂಡುಪುತ್ರನಾದ ಯುಧಿಷ್ಠಿರನು ಅವನನ್ನು ಆಲಿಂಗಿಸಿ ಶಿರಸ್ಸಿನಲ್ಲಿ ಆಘ್ರಾಣಿಸಿ, ಅರಳಿದ ಕಣ್ಣುಳ್ಳವನಾಗಿ ನಾನು ಸಂತೋಷಗೊಂಡಿದ್ದೇನೆ ಎಂದು ಹೇಳಿದನು.
ಘಟೋತ್ಕಚೇನ ನಿಷ್ಪಿಷ್ಟೇ ಮೃತೇ ಸಾಲಕಟಂಕಟೇ |
ಬಭೂವುರ್ಮುದಿತಾಃ ಸರ್ವೇ ಹತೇ ತಸ್ಮಿನ್ ನಿಶಾಚರೇ ॥ 92 ॥
ಘಟೋತ್ಕಚನಿಂದ ರಾಕ್ಷಸನಾದ ಅಲಂಬುಸನು ಹತನಾಗುತ್ತಿರಲು ಪಾಂಡವರೆಲ್ಲರೂ ಸಂತೋಷಗೊಂಡರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತಾರನೆಯ ಅಧ್ಯಾಯ
ಅರ್ಜುನನ ಜೀವಿತವಿಷಯದಲ್ಲಿ ಸಂಶಯವನ್ನು ಹೊಂದಿದ ಯುಧಿಷ್ಠಿರನಿಂದ ಅವನ ಸಹಾಯಕ್ಕಾಗಿ ಹೋಗಲು ಸಾತ್ಯಕಿಗೆ ಒತ್ತಾಯ.
ಧೃತರಾಷ್ಟ್ರಃ
ಭಾರದ್ವಾಜಂ ಕಥಂ ಯುದ್ಧೇ ಯುಯುಧಾನೋ ನ್ಯವಾರಯತ್ |
ಸಂಜಯಾಚಕ್ಷ ್ವ ತತ್ತ್ವೇನ ಕೌತೂಹಲಮತೀವ ಮೇ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ದ್ರೋಣರನ್ನು ಸಾತ್ಯಕಿಯು ಯುದ್ಧದಲ್ಲಿ ಹೇಗೆ ನಿವಾರಿಸಿದನು? ಅದನ್ನು ನನಗೆ ಹೇಳು. ಈ ವಿಷಯದಲ್ಲಿ ನನಗೆ ಬಹಳ ಕುತೂಹಲವಿದೆ.
ಸಂಜಯಃ
ಶೃಣು ರಾಜನ್ ಮಹಾಶ್ಚರ್ಯಂ ಸಂಗ್ರಾಮಂ ರೋಮಹರ್ಷಣಮ್ |
ದ್ರೋಣಸ್ಯ ಪಾಂಡವೈಃ ಸಾರ್ಧಂ ಯುಯುಧಾನಪುರೋಗಮೈಃ ॥ 2 ॥
ಸಂಜಯ ಎಲೈ ರಾಜನೇ, ದ್ರೋಣರಿಗೆ ಸಾತ್ಯಕಿಯೇ ಮೊದಲಾದ ಪಾಂಡವರ ಜೊತೆಯಲ್ಲಿ ನಡೆದ ಆಶ್ಚರ್ಯಕರವಾದ ಮತ್ತು ರೋಮಾಂಚಕಾರಿಯಾದ ಯುದ್ಧವನ್ನು ಕೇಳುವವನಾಗು.
ವಧ್ಯಮಾನಂ ಬಲಂ ದೃಷ್ಟ್ವಾ ಯುಯುಧಾನೇನ ಮಾರಿಷ |
ಅಭ್ಯದ್ರವತ್ ಸ್ವಯಂ ದ್ರೋಣಃ ಸಾತ್ಯಕಿಂ ಸತ್ಯವಿಕ್ರಮಮ್ ॥ 3 ॥
ಎಲೈ ಪೂಜ್ಯನೇ, ಸಾತ್ಯಕಿಯಿಂದ ತಮ್ಮ ಸೈನ್ಯವು ವಧಿಸಲ್ಪಡುತ್ತಿರುವುದನ್ನು ನೋಡಿ ದ್ರೋಣರು ಸ್ವತಃ ಸತ್ಯಪರಾಕ್ರಮಿಯಾದ ಸಾತ್ಯಕಿಯ ಕಡೆಗೆ ಮುನ್ನುಗ್ಗಿದರು.
ತಮಾಪತಂತಂ ಸಹಸಾ ಭಾರದ್ವಾಜಂ ಮಹಾರಥಮ್ |
ಸಾತ್ಯಕಿಃ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮರ್ಪಯತ್ ॥ 4 ॥
ತನ್ನ ಕಡೆಗೆ ಶೀಘ್ರವಾಗಿ ಮುನ್ನುಗ್ಗುತ್ತಿದ್ದ ಮಹಾರಥರಾದ ದ್ರೋಣರ ಮೇಲೆ ಸಾತ್ಯಕಿಯು ಇಪ್ಪತ್ತೈದು ಸಣ್ಣ ಬಾಣಗಳನ್ನು ಪ್ರಯೋಗಿಸಿದನು.
ದ್ರೋಣೋಽಪಿ ಯುಧಿ ವಿಕ್ರಾಂತೋ ಯುಯುಧಾನಂ ಸಮಾಹಿತಮ್|
ಅವಿದ್ಧ್ಯತ್ ಪಂಚಭಿಸ್ತೂರ್ಣಂ ಹೇಮಪುಂಖೈಃ ಶಿಲಾಶಿತೈಃ ॥ 5 ॥
ಯುದ್ಧದಲ್ಲಿ ಪರಾಕ್ರಮಶಾಲಿಗಳಾದ ದ್ರೋಣರೂ ಸಹ ಸ್ಥಿರವಾಗಿ ಯುದ್ಧ ಮಾಡುತ್ತಿದ್ದ ಯುಯುಧಾನನನ್ನು ಹೇಮಪುಂಖಗಳನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಐದು ಬಾಣಗಳಿಂದ ಹೊಡೆದರು.
ತೇ ವರ್ಮ ಭಿತ್ತ್ವಾ ಸುದೃಢಂ ದ್ವಿಷದ್ರುಧಿರಭೋಜನಾಃ |
ಅಭ್ಯಯುರ್ಧರಿಣೀಂ ರಾಜನ್ ಶ್ವಸಂತ ಇವ ಪನ್ನಗಾಃ ॥ 6 ॥
ಎಲೈ ರಾಜನೇ, ಶತ್ರುಗಳ ರಕ್ತವನ್ನು ಪಾನ ಮಾಡುವ ಆ ಬಾಣಗಳು ಸಾತ್ಯಕಿಯ ಕವಚವನ್ನು ದೃಢವಾಗಿ ಭೇದಿಸಿ, ಭುಸುಗುಟ್ಟುವ ಸರ್ಪಗಳಂತೆ ಭೂಮಿಯನ್ನು ಪ್ರವೇಶಿಸಿದವು.
ತಂ ದೀರ್ಘಬಾಹುಃ ಸಂಕ್ರುದ್ಧಃ ತೋತ್ತ್ರಾರ್ದಿತ ಇವ ದ್ವಿಪಃ |
ದ್ರೋಣಂ ಪಂಚಾಶತಾಽವಿದ್ಧ್ಯನ್ನಾರಾಚೈರಗ್ನಿಸನ್ನಿಭೈಃ ॥ 7 ॥
ದೀರ್ಘಬಾಹುವೂ, ಕೋಪಗೊಂಡವನೂ ಆದ ಸಾತ್ಯಕಿಯು ಅಂಕುಶದಿಂದ ಹೊಡೆಯಲ್ಪಟ್ಟ ಗಜದಂತೆ ದ್ರೋಣರನ್ನು ಅಗ್ನಿಯಂತಿದ್ದ ಇಪ್ಪತ್ತೈದು ನಾರಾಚಗಳಿಂದ ಹೊಡೆದನು.
ಭಾರದ್ವಾಜೋ ರಣೇ ವಿದ್ಧೋ ಯುಯುಧಾನೇನ ಸತ್ವರಮ್ |
ಸಾತ್ಯಕಿಂ ನವಭಿರ್ಬಾಣೈರ್ಯತಮಾನಮವಿದ್ಧ್ಯತ ॥ 8 ॥
ಯುದ್ಧದಲ್ಲಿ ಸಾತ್ಯಕಿಯಿಂದ ಹೊಡೆಯಲ್ಪಟ್ಟ ದ್ರೋಣರು ಶೀಘ್ರವಾಗಿ ಇನ್ನೂ ಬಾಣಗಳನ್ನು ಪ್ರಯೋಗಿಸಲು ಪ್ರಯತ್ನಿಸುತ್ತಿದ್ದ

ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದ ಹೊಡೆದರು.
ತತಃ ಕ್ರುದ್ಧೋ ಮಹೇಷ್ವಾಸೋ ಭೂಯ ಏವ ಮಹಾರಥಃ |
ಸಾತ್ವತಂ ಪೀಡಯಾಮಾಸ ವ್ರಾತೇನ ನತಪರ್ವಣಾಮ್ ॥ 9 ॥
ಅನಂತರ ಕೋಪಗೊಂಡವರೂ, ಮಹಾಧನುರ್ಧಾರಿಗಳೂ, ಮಹಾರಥರೂ ಆದ ದ್ರೋಣರು ಪುನಃ ಬಾಗಿದ ತುದಿಯುಳ್ಳ ಬಾಣಗಳ ಸಮೂಹದಿಂದ ಸಾತ್ಯಕಿಯನ್ನು ಪೀಡಿಸಿದರು.
ಸ ವಧ್ಯಮಾನಃ ಸಮರೇ ಭಾರದ್ವಾಜೇನ ಸಾತ್ಯಕಿಃ |
ನಾಭ್ಯಪದ್ಯತ ಕರ್ತವ್ಯಂ ಕಿಂಚಿದೇವ ವಿಶಾಂಪತೇ ॥ 10 ॥
ಎಲೈ ರಾಜನೇ, ರಣರಂಗದಲ್ಲಿ ದ್ರೋಣರಿಂದ ಹೊಡೆಯಲ್ಪಟ್ಟ ಸಾತ್ಯಕಿಯು ಯುದ್ಧದಲ್ಲಿ ಏನು ಮಾಡಬೇಕೆಂದು ತಿಳಿಯದವನಾದನು.
ವಿಷಣ್ಣವದನಶ್ಚಾಪಿ ಯುಯುಧಾನೋಽಭವನ್ನ ೃಪ |
ಭಾರದ್ವಾಜಂ ರಣೇ ದೃಷ್ಟ್ವಾ ವಿಸೃಜಂತಂ ಶರಾನ್ ಶಿತಾನ್ ॥ 11 ॥
ಎಲೈ ರಾಜನೇ, ರಣರಂಗದಲ್ಲಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದ ದ್ರೋಣರನ್ನು ನೋಡಿ ಸಾತ್ಯಕಿಯು ವಿಷಾದದಿಂದ ಕೂಡಿದ ಮುಖವುಳ್ಳವನಾದನು.
ತಂ ತು ಸಂಪ್ರೇಕ್ಷ ೆಯ ತೇ ಪುತ್ರಾಃ ಸೈನಿಕಾಶ್ಚ ವಿಶಾಂಪತೇ |
ಪ್ರಹೃಷ್ಟಮನಸೋ ಭೂತ್ವಾ ಸಿಂಹವದ್ ವ್ಯನದನ್ ಮುಹುಃ ॥ 12 ॥
ಎಲೈ ರಾಜನೇ, ಅವನನ್ನು ನೋಡಿದ ನಿನ್ನ ಪುತ್ರರು ಮತ್ತು ಸೈನಿಕರು ಸಂತೋಷಗೊಂಡ ಮನಸ್ಸುಳ್ಳವರಾಗಿ ಪುನಃ ಪುನಃ ಸಿಂಹನಾದವನ್ನು ಮಾಡಿದರು.
ತಂ ಶ್ರುತ್ವಾ ನಿನದಂ ಘೋರಂ ಪೀಡ್ಯಮಾನಂ ಚ ಮಾಧವಮ್ |
ಯುಧಿಷ್ಠಿರೋಽಬ್ರವೀದ್ ರಾಜನ್ ಸರ್ವಸೈನ್ಯಾನಿ ಭಾರತ ॥ 13 ॥
ಸಾತ್ಯಕಿಯು ಪೀಡಿತನಾಗಿ ಕೌರವ ಸೈನ್ಯದಲ್ಲಿ ಅಂತಹ ಘೋರ ನಿನಾದವು ಉಂಟಾಗುತ್ತಿರುವುದನ್ನು ಕೇಳಿದ ಯುಧಿಷ್ಠಿರನು, ಎಲೈ ಭಾರತನೇ, ರಾಜನೇ, ತನ್ನ ಸರ್ವಸೈನ್ಯಗಳನ್ನು ಕುರಿತು ಹೇಳಿದನು.
ಯುಧಿಷ್ಠಿರಃ
ಏಷ ವೃಷ್ಣಿವರೋ ವೀರಃ ಸಾತ್ಯಕಿಃ ಸತ್ಯವಿಕ್ರಮಃ |
ಗ್ರಸ್ಯತೇ ಯುಧಿ ವೀರೇಣ ಆದಿತ್ಯ ಇವ ರಾಹುಣಾ |
ಆಗಚ್ಛತಾಭಿದ್ರವತ ಸಾತ್ಯಕಿರ್ಯತ್ರ ಯುದ್ಧ್ಯತೇ ॥ 14 ॥
ಯುಧಿಷ್ಠಿರ ಸತ್ಯವಿಕ್ರಮನೂ, ವೀರನೂ, ವೃಷ್ಣಿಶ್ರೇಷ್ಠನೂ ಆದ ಸಾತ್ಯಕಿಯು ಸೂರ್ಯನು ರಾಹುವಿನಿಂದ ಗ್ರಸ್ತನಾದಂತೆ ಯುದ್ಧದಲ್ಲಿ ದ್ರೋಣರಿಂದ ನುಂಗಲ್ಪಡುತ್ತಿದ್ದಾನೆ. ಎಲ್ಲರೂ ಬಂದು ಸಾತ್ಯಕಿಯು ಯುದ್ಧ ಮಾಡುತ್ತಿರುವ ಸ್ಥಳಕ್ಕೆ ಶೀಘ್ರವಾಗಿ ಹೋಗಿ.
ಸಂಜಯಃ
ಧೃಷ್ಟದ್ಯುಮ್ನಂ ಚ ಪಾಂಚಾಲ್ಯಮಿದಮಾಹ ಜನಾಧಿಪ ॥ 15 ॥
ದ್ರೋಣಂ ವಾರಯ ಸುಕ್ಷಿಪ್ರಂ ಸಾತ್ಯಕಿಂ ಮಾ ವಧೀದ್ ದ್ವಿಜಃ |
ಅಭಿದ್ರವ ದ್ರುತಂ ದ್ರೋಣಂ ಕಿನ್ನು ತಿಷ್ಠಸಿ ಪಾರ್ಷತ ॥ 16 ॥
ನ ಪಶ್ಯಸಿ ಭಯಂ ಘೋರಂ ದ್ರೋಣಾನ್ನಃ ಸಮುಪಸ್ಥಿತಮ್ |
ಅಸೌ ದ್ರೋಣೋ ಮಹೇಷ್ವಾಸೋ ಯುಯುಧಾನೇನ ಸಂಯುಗೇ |
ಕ್ರೀಡತೇ ಸೂತ್ರಬದ್ಧೇನ ಪಕ್ಷಿಣಾ ಬಾಲಕೋ ಯಥಾ ॥ 17 ॥
ಸಂಜಯ ಎಲೈ ರಾಜನೇ, ಧೃಷ್ಟದ್ಯುಮ್ನನನ್ನು ಕುರಿತು ಅವನು ಹೀಗೆ ಮಾತನಾಡಿದನು- `ಬೇಗ ಹೋಗಿ ದ್ರೋಣರನ್ನು ತಡೆ. ಆ ಬ್ರಾಹ್ಮಣರು ಸಾತ್ಯಕಿಯನ್ನು ಕೊಲ್ಲುವುದು ಬೇಡ. ಎಲೈ ಪಾರ್ಷತನೇ, ಏಕೆ ನಿಂತಿದ್ದೀಯೆ? ಶೀಘ್ರವಾಗಿ ದ್ರೋಣರ ಕಡೆಗೆ ಓಡು. ದ್ರೋಣರಿಂದ ಉಂಟಾದ ಘೋರವಾದ ಭಯವನ್ನು ನೀನು ಕಾಣುತ್ತಿಲ್ಲವೇ? ಈ ಮಹಾಧನುರ್ಧಾರಿಗಳಾದ ದ್ರೋಣರು ಬಾಲಕನು ಸೂತ್ರದಿಂದ ಕಟ್ಟಿದ ಪಕ್ಷಿಯ ಜೊತೆಯಲ್ಲಿ ಆಡುವಂತೆ ಯುದ್ಧದಲ್ಲಿ ಸಾತ್ಯಕಿಯ ಜೊತೆಯಲ್ಲಿ ಆಟವಾಡುತ್ತಿದ್ದಾರೆ.
ತತ್ರೈವ ಸರ್ವೇ ಗಚ್ಛಂತು ಭೀಮಸೇನಮುಖಾ ರಥಾಃ |
ತ್ವಯೈವ ಸಹಸಾ ಯತ್ತಾ ಯುಯುಧಾನರಥಂ ಪ್ರತಿ ॥ 18 ॥
ನಿನ್ನಿಂದಲೇ ಶೀಘ್ರವಾಗಿ ನಿಯಂತ್ರಿಸಲ್ಪಟ್ಟ ಭೀಮಸೇನ ಮೊದಲಾದ ಮಹಾರಥರೆಲ್ಲರೂ ಸಾತ್ಯಕಿಯ ರಥದ ಬಳಿಗೆ ಹೋಗುವವರಾಗಲಿ.
ಪೃಷ್ಠತೋಽನುಗಮಿಷ್ಯಾಮಿ ತ್ವಾಮಹಂ ಸಹಸೈನಿಕಃ |
ಸಾತ್ಯಕಿಂ ಮೋಕ್ಷಯಸ್ವಾದ್ಯ ಯಮದಂಷ್ಟ್ರಾಂತರಂ ಗತಮ್ ॥ 19 ॥
ನಾನು ನನ್ನ ಸೈನಿಕರ ಜೊತೆಯಲ್ಲಿ ನಿನ್ನ ಹಿಂದೆ ಬರುವೆನು. ಯಮನ ದಂತಗಳ ಮಧ್ಯೆ ಸಿಲುಕಿದಂತಿರುವ ಸಾತ್ಯಕಿಯನ್ನು ಈ ದಿನ ಬಿಡುಗಡೆಗೊಳಿಸು'.
ಸಂಜಯಃ
ಏವಮುಕತ್ವ ತತೋ ರಾಜಾ ಸರ್ವಸೈನ್ಯೇನ ಪಾಂಡವಃ |
ಅಭ್ಯದ್ರುವದ್ ರಣೇ ದ್ರೋಣಂ ಯುಯುಧಾನಸ್ಯ ಕಾರಣಾತ್ ॥ 20 ॥

ಸಂಜಯ ಹೀಗೆ ಹೇಳಿ ಪಾಂಡವನಾದ ಯುಧಿಷ್ಠಿರನು ಸಾತ್ಯಕಿಯನ್ನು ರಕ್ಷಿಸುವ ಸಲುವಾಗಿ ತನ್ನ ಎಲ್ಲ ಸೈನ್ಯದ ಜೊತೆಯಲ್ಲಿ ದ್ರೋಣರ ಕಡೆಗೆ ಧಾವಿಸಿದನು.
ತತ್ರಾರಾವೋ ಮಹಾನಾಸೀದ್ ದ್ರೋಣಮೇಕಂ ಯುಯುತ್ಸತಾಮ್ |
ಪಾಂಡವಾನಾಂ ಚ ಭದ್ರಂ ತೇ ಸೃಂಜಯಾನಾಂ ಚ ಸರ್ವಶಃ ॥ 21 ॥
ನಿನಗೆ ಮಂಗಳವಾಗಲಿ. ಪಾಂಡವರು ಮತ್ತು ಸೃಂಜಯರು ದ್ರೋಣರೊಬ್ಬರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಹೊರಡುತ್ತಿದ್ದಾಗ ಎಲ್ಲ ಕಡೆಗಳಲ್ಲಿಯೂ ಮಹಾನಾದ ಉಂಟಾಯಿತು.
ತೇ ಸಮೇತ್ಯ ನರವ್ಯಾಘ್ರಾ ಭಾರದ್ವಾಜಂ ಮಹಾರಥಮ್ |
ಅಭ್ಯವರ್ಷನ್ ಶರೈಸ್ತೀಕ್ಷ್ಣೈಃ ಕಂಕಬರ್ಹಿಣವಾಜಿತೈಃ ॥ 22 ॥
ನರವ್ಯಾಘ್ರರಾದ ಅವರು ಮಹಾರಥರಾದ ದ್ರೋಣರನ್ನು ಸಮೀಪಿಸಿ, ಕಂಕ ಮೊದಲಾದ ಪಕ್ಷಿಗಳ ಗರಿಗಳನ್ನು ಹೊಂದಿದ ತೀಕ್ಷ್ಣವಾದ ಬಾಣಗಳ ಮಳೆಯನ್ನು ಅವರ ಮೇಲೆ ಸುರಿಸಿದರು.
ಸ್ಮಯನ್ನೇವ ತು ತಾನ್ ವೀರೋ ದ್ರೋಣಃ ಪ್ರತ್ಯಗ್ರಹೀತ್ ಸ್ವಯಮ್ |
ಅತಿಥೀನಾಗತಾನ್ ಯದ್ವದ್ ಆಸನೇನೋದಕೇನ ಚ ॥ 23 ॥
ಆಗತರಾದ ಅತಿಥಿಗಳನ್ನು ಆಸನೋದಕಗಳಿಂದ ಸ್ವೀಕರಿಸುವಂತೆ ವೀರರಾದ ದ್ರೋಣರು ನಗುತ್ತಲೇ ಆ ಎಲ್ಲ ವೀರರನ್ನೂ (ವೀರರ ಬಾಣಗಳನ್ನು) ಸ್ವತಃ ಸ್ವೀಕರಿಸಿದರು.
ತರ್ಪಿತಾಸ್ತೇ ಶರೈಸ್ತಸ್ಯ ಭಾರದ್ವಾಜಸ್ಯ ಧನ್ವಿನಃ |
ಆತಿಥೇಯಂ ಗೃಹಂ ಪ್ರಾಪ್ಯ ತರ್ಪ್ಯಂತೇಽತಿಥಯೋ ಯಥಾ ॥ 24 ॥
ಯಜಮಾನನ ಮನೆಗೆ ಬಂದ ಬಾಯಾರಿದ ಅತಿಥಿಗಳನ್ನು ತೃಪ್ತಿಗೊಳಿಸುವಂತೆ ಧನುರ್ಧಾರಿಗಳಾದ ಪಾಂಡವವೀರರು ಆ ದ್ರೋಣರ ಬಾಣಗಳಿಂದ ತೃಪ್ತಿಗೊಳಿಸಲ್ಪಟ್ಟರು.
ಭಾರದ್ವಾಜಂ ಚ ತೇ ಯುದ್ಧೇ ನಾಶಕನ್ ಪ್ರತಿವೀಕ್ಷಿತುಮ್ |
ಮಧ್ಯಂದಿನಮನುಪ್ರಾಪ್ತಂ ಸಹಸ್ರಾಂಶುಮಿವ ಪ್ರಭೋ ॥ 25 ॥
ಎಲೈ ಪ್ರಭುವೇ, ಮಧ್ಯಾಹ್ನದಲ್ಲಿ ಇರುವ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ ಯುದ್ಧದಲ್ಲಿ ದ್ರೋಣರನ್ನು ನೋಡಲು ಪಾಂಡವರ ಸೈನ್ಯದಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ.
ತಾಂಸ್ತು ಸರ್ವಾನ್ ಮಹೇಷ್ವಾಸಾನ್ ದ್ರೋಣಃ ಶಸ್ತ್ರಭೃತಾಂ ವರಃ |
ಅತಾಪಯಚ್ಛರವ್ರಾತೈರ್ಗಭಸ್ತಿಭಿರಿವಾಂಶುಮಾನ್ ॥ 26 ॥
ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು, ತನ್ನ ಕಿರಣಗಳಿಂದ ಸೂರ್ಯನು ಎಲ್ಲರನ್ನೂ ತಾಪಗೊಳಿಸುವಂತೆ ತಮ್ಮ ಬಾಣಗಳ ಸಮೂಹದಿಂದ ಎಲ್ಲ ಮಹಾಧನುರ್ಧಾರಿಗಳನ್ನೂ ಸಂತಾಪಗೊಳಿಸಿದರು.
ವಧ್ಯಮಾನಾ ರಣೇ ರಾಜನ್ ಪಾಂಡವಾಃ ಸೃಂಜಯಾಸ್ತಥಾ |
ತ್ರಾತಾರಂ ನಾಧ್ಯಗಚ್ಛಂತ ಪಂಕೇ ಮಗ್ನಾ ಯಥಾ ಗಜಾಃ ॥ 27 ॥
ಎಲೈ ರಾಜನೇ, ದ್ರೋಣರ ಬಾಣಗಳಿಂದ ಹೊಡೆಯಲ್ಪಟ್ಟ ಪಾಂಡವರು ಮತ್ತು ಸೃಂಜಯರು ಕೆಸರಲ್ಲಿ ಮುಳುಗಿದ ಗಜಗಳಂತೆ ಯಾವ ರಕ್ಷಕನನ್ನೂ ಕಾಣಲಿಲ್ಲ.
ತಸ್ಯ ದ್ರೋಣಸ್ಯ ದೃಶ್ಯಂತೇ ಪ್ರಭವಂತೋ ಮಹಾಶರಾಃ |
ಗಭಸ್ತಯ ಇವಾರ್ಕಸ್ಯ ಪ್ರತಪಂತಃ ಸಮಂತತಃ ॥ 28 ॥
ತಮ್ಮ ಕಾರ್ಯವನ್ನು ಮಾಡುವ ದ್ರೋಣರ ಮಹಾಬಾಣಗಳು ಎಲ್ಲ ಕಡೆಗಳಲ್ಲಿಯೂ ತಾಪಗೊಳಿಸುವ ಸೂರ್ಯನ ಕಿರಣಗಳಂತೆ ಕಂಡುಬಂದವು.
ತಸ್ಮಿನ್ ದ್ರೋಣೇನ ನಿಹತಾಃ ಪಾಂಚಾಲಾಃ ಪಂಚವಿಂಶತಿಃ |
ಮಹಾರಥಸಮಾಖ್ಯಾತಾ ಧೃಷ್ಟದ್ಯುಮ್ನಸ್ಯ ಸಮ್ಮತಾಃ ॥ 29 ॥
ಆ ರಣರಂಗದಲ್ಲಿ ಧೃಷ್ಟದ್ಯುಮ್ನನಿಗೆ ಸಮ್ಮತರಾದ, ಮಹಾರಥರೆಂದು ಪರಿಗಣಿತರಾದ ಇಪ್ಪತ್ತೈದು ಮಂದಿ ಪಾಂಚಾಲರು ದ್ರೋಣರಿಂದ ಹತರಾದರು.
ಪಾಂಡೂನಾಂ ಸರ್ವಸೈನ್ಯೇಷು ಪಾಂಚಾಲಾನಾಂ ತಥೈವ ಚ |
ದ್ರೋಣಂ ಸ್ಮ ದದೃಶುಃ ಶೂರಾ ವಿನಿಘ್ನಂತಂ ವರಾನ್ ವರಾನ್ ॥30॥
ಶೂರರಾದವರು ಪಾಂಡವರ ಮತ್ತು ಪಾಂಚಾಲರ ಸೈನ್ಯದಲ್ಲಿ ಎಲ್ಲ ಕಡೆಗಳಲ್ಲಿಯೂ ಶ್ರೇಷ್ಠರಾದವರನ್ನು ಆರಿಸಿ, ಆರಿಸಿ ಕೊಲ್ಲುತ್ತಿದ್ದ ದ್ರೋಣರನ್ನು ನೋಡಿದರು.
ಕೇಕಯಾನಾಂ ಶತಂ ಹತ್ವಾ ವಿದ್ರಾವ್ಯ ಚ ಸಮಂತತಃ |
ದ್ರೋಣಸ್ತಸ್ಥೌ ಮಹಾರಾಜ ವ್ಯಾತ್ತಾನನ ಇವಾಂತಕಃ ॥ 31 ॥
ಎಲೈ ಮಹಾರಾಜನೇ, ದ್ರೋಣರು ಕೇಕಯರ ನೂರು ವೀರರನ್ನು ಕೊಂದು, ಉಳಿದವರನ್ನು ಎಲ್ಲ ಕಡೆಗಳಲ್ಲಿಯೂ ಓಡಿಸಿ, ಬಾಯಿ ತೆರೆದ ಮೃತ್ಯುವಿನಂತೆ ರಣರಂಗದಲ್ಲಿ ನಿಂತರು.
ಪಾಂಚಾಲಾನ್ ಸೃಂಜಯಾನ್ ಮಾತ್ಸ್ಯಾನ್ ಕೇಕಯಾನ್ ಪಾಂಡವಾನಪಿ |
ದ್ರೋಣೋಽಜಯನ್ಮಹಾಬಾಹುಃ ಶತಶೋಽಥ ಸಹಸ್ರಶಃ ॥ 32 ॥
ಮಹಾಬಾಹುಗಳಾದ ದ್ರೋಣರು ಪಾಂಚಾಲರನ್ನೂ, ಸೃಂಜಯರನ್ನೂ, ಮಾತ್ಸ್ಯರನ್ನೂ, ಕೇಕಯರನ್ನೂ ಮತ್ತು ಪಾಂಡವರನ್ನೂ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಜಯಿಸಿದರು.

ತೇಷಾಂ ಸಮಭವಚ್ಛಬ್ದೋ ವಧ್ಯತಾಂ ದ್ರೋಣಸಾಯಕೈಃ |
ವನೌಕಸಾಮಿವಾರಣ್ಯೇ ದಹ್ಯತಾಂ ಧೂಮಕೇತುನಾ ॥ 33 ॥
ದ್ರೋಣರ ಬಾಣಗಳಿಂದ ವಧಿಸಲ್ಪಡುವ ಅವರ ಶಬ್ದವು ಅರಣ್ಯದಲ್ಲಿ ಅಗ್ನಿಗೆ ಸಿಲುಕಿ ದಹಿಸಲ್ಪಡುವ ವನವಾಸಿ ಪ್ರಾಣಿಗಳ ಶಬ್ದದಂತೆ ಇದ್ದಿತು.
ತತ್ರ ದೇವಾಃ ಸಗಂಧರ್ವಾಃ ಪಿತರಶ್ಚಾಬ್ರುವನ್ ನೃಪ |
ಏತೇ ದ್ರವಂತಿ ಪಾಂಚಾಲಾಃ ಪಾಂಡವಾಃ ಸಹಸೈನಿಕಾಃ ॥ 34 ॥
ಎಲೈ ರಾಜನೇ, ಆಗ ಗಂಧರ್ವರಿಂದ ಸಹಿತರಾದ ದೇವತೆಗಳು ಮತ್ತು ಪಿತೃಗಳು ಈ ಪಾಂಚಾಲರು ಮತ್ತು ಪಾಂಡವರು ತಮ್ಮ ಸೈನಿಕರ ಜೊತೆಯಲ್ಲಿ ಓಡುತ್ತಿದ್ದಾರೆ ಎಂದು ಹೇಳಿದರು.
ಸಂಜಯಃ
ತಂ ತಥಾ ಸಮರೇ ದ್ರೋಣಂ ನಿಘ್ನಂತಂ ಸೋಮಕಾನ್ ರಣೇ |
ತಂ ಚಾಪ್ಯಭಿಯಯುಃ ಕೇಚಿದಪರೇ ನೈವ ವಿವ್ಯಧುಃ ॥ 35 ॥
ಆ ರೀತಿಯಲ್ಲಿ ಸೋಮಕರನ್ನು ಕೊಲ್ಲುತ್ತಿದ್ದ ದ್ರೋಣರನ್ನು ನೋಡಿ ಕೆಲವು ಯೋಧರು ಅವರ ಕಡೆಗೆ ಹೋಗಲೇ ಇಲ್ಲ. ಇನ್ನು ಕೆಲವರು ದ್ರೋಣರ ಮೇಲೆ ಶಸ್ತ್ರ ಪ್ರಯೋಗವನ್ನೇ ಮಾಡಲಿಲ್ಲ.
ವರ್ತಮಾನೇ ತಥಾ ರೌದ್ರೇ ತಸ್ಮಿನ್ ವೀರವರಕ್ಷಯೇ |
ಅಶೃಣೋತ್ ಸಹಸಾ ಪಾರ್ಥಃ ಪಾಂಚಜನ್ಯಸ್ಯ ನಿಸ್ವನಮ್ ॥ 36 ॥
ಶ್ರೇಷ್ಠರಾದ ವೀರರಿಗೆ ವಿನಾಶವನ್ನುಂಟು ಮಾಡುವ ಆ ಯುದ್ಧವು ಭಯಂಕರವಾಗಿ ನಡೆಯುತ್ತಿರಲು ಯುಧಿಷ್ಠಿರನು ಇದಕ್ಕಿದಂತೆಯೇ ಪಾಂಚಜನ್ಯದ ಘೋಷವನ್ನು ಕೇಳಿದನು.
ಪೂರಿತೇ ವಾಸುದೇವೇನ ಶಂಖರಾಜೇ ಮಹಾತ್ಮನಾ |
ಯುಧ್ಯಮಾನೇಷು ವೀರೇಷು ಸೈಂಧವಸ್ಯ ಚ ರಕ್ಷಿಷು ॥ 37 ॥
ನದತ್ಸು ಧಾರ್ತರಾಷ್ಟ್ರೇಷು ವಿಜಯಸ್ಯ ರಥಂ ಪ್ರತಿ |
ಗಾಂಡೀವಸ್ಯ ಚ ನಿರ್ಘೋಷೇ ವಿಪ್ರನಷ್ಟೇ ಸಮಂತತಃ ॥ 38 ॥
ಕಶ್ಮಲಾಭಿಹತೋ ರಾಜಾ ಚಿಂತಯಾಮಾಸ ಪಾಂಡವಃ ॥ 39 ॥
ಮಹಾತ್ಮನಾದ ಕೃಷ್ಣನು ತನ್ನ ಶ್ರೇಷ್ಠವಾದ ಶಂಖವನ್ನು ಊದುತ್ತಿರಲು, ಸೈಂಧವನ ರಕ್ಷಕರಾದ ವೀರರು ಯುದ್ಧವನ್ನು ಮಾಡುತ್ತಿರಲು, ಅರ್ಜುನನ ರಥದ ಬಳಿ ಕೌರವರು ಸಿಂಹನಾದವನ್ನು ಮಾಡುತ್ತಿರಲು, ಗಾಂಡೀವದ ಘೋಷವು ಎಲ್ಲಿಯೂ ಕೇಳಿ ಬರದಿರಲು, ವಿಷಾದಕ್ಕೆ ಒಳಗಾದ ಯುಧಿಷ್ಠಿರನು ಚಿಂತಿಸಿದನು.
ಯುಧಿಷ್ಠಿರಃ
ನ ನೂನಂ ಸ್ವಸ್ತಿ ಪಾರ್ಥಸ್ಯ ಯಥಾ ನದತಿ ಶಂಖರಾಟ್ |
ಕೌರವಾಶ್ಚ ಯಥಾ ಹೃಷ್ಟಾ ವಿನದಂತಿ ಮುಹುರ್ಮುಹುಃ |
ವ್ಯಕ್ತಮದ್ಯ ವಿನಶ್ಯಂತೇ ಸರ್ವಲೋಕಮಹಾರಥಾಃ ॥ 40 ॥
ಯುಧಿಷ್ಠಿರ ಶ್ರೇಷ್ಠವಾದ ಕೃಷ್ಣನ ಶಂಖವು ಘೋಷವನ್ನು ಮಾಡುವುದನ್ನು ಕೇಳಿದರೆ ಮತ್ತು ಕೌರವರೂ ಸಂತೋಷದಿಂದ ಪುನಃ ಪುನಃ ಸಿಂಹನಾದವನ್ನು ಮಾಡುವುದನ್ನು ಕೇಳಿದರೆ ಅರ್ಜುನನಿಗೆ ಕ್ಷೇಮವಿಲ್ಲವೆಂದು ತೋರುತ್ತದೆ. ಖಂಡಿತವಾಗಿ ಈ ದಿನ ಸರ್ವಲೋಕ ಮಹಾರಥರು ನಾಶವನ್ನು ಹೊಂದುತ್ತಾರೆ.
ಸಂಜಯಃ
ಶ್ರುತ್ವಾ ತು ನಿನದಂ ಘೋರಂ ಪಾಂಚಜನ್ಯಸ್ಯ ಮಾರಿಷ |
ಚಿಂತಯಿತ್ವಾ ಭೃಶಂ ರಾಜಾ ವ್ಯಾಕುಲೇನಾಂತರಾತ್ಮನಾ ॥ 41 ॥
ಅಜಾತಶತ್ರುಃ ಶೈನೇಯಮಭ್ಯಭಾಷತ ಸಾತ್ಯಕಿಮ್ |
ಬಾಷ್ಪಗದ್ಗದಯಾ ವಾಚಾ ಮುಹ್ಯಮಾನೋ ಮುಹುರ್ಮುಹುಃ ॥42॥
ಕೃತ್ಯಸ್ಯಾನಂತರಾಪೇಕ್ಷೀ ಶೈನೇಯಂ ಶಿನಿಪುಂಗವಮ್ ॥ 43 ॥
ಸಂಜಯ ಎಲೈ ಪೂಜ್ಯನೇ, ಪಾಂಚಜನ್ಯ ಶಂಖದ ಘೋರ ನಾದವನ್ನು ಕೇಳಿ ವ್ಯಾಕುಲಗೊಂಡ ಮನಸ್ಸಿನಿಂದ ಬಹಳವಾಗಿ ಚಿಂತಿಸಿ ರಾಜನಾದ, ಅಜಾತಶತ್ರುವಾದ ಯುಧಿಷ್ಠಿರನು ಬಾಷ್ಪಗದ್ಗದವಾದ ಮಾತುಗಳಿಂದ, ಪುನಃ ಪುನಃ ಮೋಹಕ್ಕೆ ಒಳಗಾಗುತ್ತಾ, ಮುಂದೆ ಮಾಡಬೇಕಾದ ಕಾರ್ಯವನ್ನು ಯೋಚಿಸುವವನಾಗಿ ಶಿನಿಶ್ರೇಷ್ಠನೂ, ಶಿನಿಯ ಪೌತ್ರನೂ ಆದ ಸಾತ್ಯಕಿಯನ್ನು ಕುರಿತು ಮಾತನಾಡಿದನು.
ಯುಧಿಷ್ಠಿರಃ
ಯೋಽಯಂ ಧರ್ಮಃ ಪುರಾ ಸೃಷ್ಟಃ ಸದ್ಭಿಃ ಶೈನೇಯ ಶಾಶ್ವತಃ |
ಸಾಂಪರಾಯೇ ಸುಹೃತ್ಕೃತ್ಯೇ ತಸ್ಯ ಕಾಲೋಽಯಮಾಗತಃ ॥ 44 ॥
ಯುಧಿಷ್ಠಿರ ಎಲೈ ಶೈನೇಯನೇ, ಯುದ್ಧದಲ್ಲಿ ಸುಹೃದಯರಿಗೆ ಸಹಾಯ ಮಾಡಬೇಕೆಂಬ ಯಾವ ಶಾಶ್ವತವಾದ ಧರ್ಮವು ಸಜ್ಜನರಿಂದ ಹಿಂದೆಯೇ ನಿರೂಪಿಸಲ್ಪಟ್ಟಿದ್ದೆಯೋ ಅದನ್ನು ಆಚರಿಸುವ ಕಾಲವು ಈಗ ಬಂದಿದೆ.
ಸರ್ವೇಷ್ವಪಿ ಚ ಯೋಧೇಷು ಚಿಂತಯನ್ ಶಿನಿಪುಂಗವ |
ತ್ವತ್ತಃ ಸುಹೃತ್ತಮಂ ಕಂಚಿನ್ನಾಭಿಜಾನಾಮಿ ಸಾತ್ತ್ವತ ॥ 45 ॥
ಎಲೈ ಶಿನಿಪುಂಗವನೇ, ಸಾತ್ವತನೇ, ನಾನು ಎಷ್ಟು ವಿಚಾರ ಮಾಡಿದರೂ ಎಲ್ಲ ಯೋಧರಲ್ಲಿ ನಿನಗಿಂತಲೂ ಸುಹೃದಯನಾದ

ಯಾವನೂ ನನಗೆ ಕಾಣುತ್ತಿಲ್ಲ.
ಪ್ರಿಯಃ ಪ್ರೀತಮನಾ ನಿತ್ಯಂ ಯಶ್ಚ ನಿತ್ಯಮನುವ್ರತಃ |
ಸ ಕಾರ್ಯೇ ಸಾಂಪರಾಯೇ ವಾ ನಿಯೋಜ್ಯ ಇತಿ ಮೇ ಮತಿಃ ॥46॥
ಪ್ರಿಯನೂ, ನಿತ್ಯವೂ ಸಂತೋಷಗೊಂಡ ಮನಸ್ಸುಳ್ಳವನೂ ಮತ್ತು ನಿತ್ಯವೂ ಅನುವ್ರತನಾದವನು ಯುದ್ಧದಲ್ಲಾಗಲೀ ಅಥವಾ ಬೇರೆ ಕಾರ್ಯದಲ್ಲಾಗಲೀ ನಿಯೋಜಿಸಲ್ಪಡಬೇಕು ಎಂದು ನನ್ನ ಅಭಿಪ್ರಾಯ.
ಯಥಾ ಹಿ ಕೇಶವೋ ನಿತ್ಯಂ ಪಾಂಡವಾನಾಂ ಪರಾಯಣಮ್ |
ತಥಾ ತ್ವಮಪಿ ವಾರ್ಷ್ಣೇಯ ಕೃಷ್ಣತುಲ್ಯಪರಾಕ್ರಮಃ ॥ 47 ॥
ಎಲೈ ವಾರ್ಷ್ಣೇಯನೇ, ಕೇಶವನು ಹೇಗೆ ಯಾವಾಗಲೂ ಪಾಂಡವರಿಗೆ ದೊಡ್ಡ ಆಶ್ರಯನಾಗಿದ್ದಾನೆಯೋ ಹಾಗೆಯೇ ಅವನಿಗೆ ಸಮಾನವಾದ ಪರಾಕ್ರಮವುಳ್ಳ ನೀನೂ ಸಹ ಪಾಂಡವರಿಗೆ ಆಶ್ರಯನಾಗಿದ್ದೀಯೆ.
ತ್ವಯಿ ಭಾರಂ ಸಮಾಧಾಸ್ಯೇ ತ್ವಂ ತಂ ವೋಢುಮಿಹಾರ್ಹಸಿ |
ಅಭಿಪ್ರಾಯಂ ಚ ಮೇ ನಿತ್ಯಂ ನ ಮೃಷಾ ಕರ್ತುಮರ್ಹಸಿ ॥ 48 ॥
ನಾನು ನಿನ್ನ ಮೇಲೆ ದೊಡ್ಡ ಭಾರವನ್ನು ಹೇರುತ್ತಿದ್ದೇನೆ. ನೀನು ಅದನ್ನು ಹೊರಬೇಕು. ನನ್ನ ಅಭಿಪ್ರಾಯವನ್ನು ನೀನು ಎಂದೂ ವ್ಯರ್ಥಗೊಳಿಸಬಾರದು.
ಸ ತ್ವಂ ಭ್ರಾತುರ್ವಯಸ್ಯಸ್ಯ ಗುರೋರಪಿ ಚ ಸಂಯುಗೇ |
ಕುರು ಕೃಚ್ಛ್ರೇ ಸಹಾಯಾರ್ಥಮರ್ಜುನಸ್ಯ ಮಹಾಮೃಧೇ ॥ 49 ॥
ಅಂತಹ ನೀನು ನಿನ್ನ ಸ್ನೇಹಿತನೂ, ಗುರುವೂ ಆದ ಅರ್ಜುನನಿಗೆ ಈ ದೊಡ್ಡ ಯುದ್ಧದಲ್ಲಿ ಅವನು ಕಷ್ಟದಲ್ಲಿ ಸಿಲುಕಿರುವಾಗ ಸಹಾಯವನ್ನು ಮಾಡು.
ತ್ವಂ ಹಿ ಸತ್ಯವ್ರತಃ ಶೂರೋ ಮಿತ್ರಾಣಾಮಭಯಂಕರಃ |
ಲೋಕೇ ವಿಖ್ಯಾಯಸೇ ಶೂರ ಕರ್ಮಭಿಃ ಸತ್ಯವಾಗಿತಿ ॥ 50 ॥
ಎಲೈ ಶೂರನೇ, ನೀನು ಲೋಕದಲ್ಲಿ ಶೂರನೆಂದೂ, ಸತ್ಯವ್ರತನೆಂದೂ, ಸ್ನೇಹಿತರಿಗೆ ಅಭಯವನ್ನುಂಟು ಮಾಡುವವನೆಂದೂ, ಸತ್ಯವಚನನೆಂದೂ ನಿನ್ನ ಕರ್ಮಗಳಿಂದ ವಿಖ್ಯಾತನಾಗಿದ್ದೀಯೆ.
ಯೋ ಹಿ ಶೈನೇಯ ಮಿತ್ರಾರ್ಥೇ ಯುಧ್ಯಮಾನಸ್ತನುಂ ತ್ಯಜೇತ್ |
ಪೃಥಿವೀಂ ಚ ದ್ವಿಜಾತಿಭ್ಯೋ ಯೋ ದದ್ಯಾತ್ ಸಮಮೇವ ತತ್ ॥51॥
ಎಲೈ ಶೈನೇಯನೇ, ಯಾವನು ಸ್ನೇಹಿತನ ಸಲುವಾಗಿ ಯುದ್ಧವನ್ನು ಮಾಡುತ್ತಾ ದೇಹವನ್ನು ತ್ಯಜಿಸುತ್ತಾನೆಯೋ ಮತ್ತು ಯಾವನು ಬ್ರಾಹ್ಮಣರಿಗೆ ಭೂಮಿಯನ್ನು ದಾನ ಮಾಡುತ್ತಾನೆಯೋ ಅವೆರಡೂ ಸಮವಾದವುಗಳು.
ಶ್ರುತಾಶ್ಚ ಬಹವೋऽಸ್ಮಾಭೀ ರಾಜಾನೋ ಯೇ ದಿವಂ ಗತಾಃ |
ದತ್ವೇಮಾಂ ಪೃಥಿವೀಂ ಕೃತ್ಸ್ನಾಂ ಬ್ರಾಹ್ಮಣೇಭ್ಯೋ ಯಥಾವಿಧಿ ॥ 52 ॥
ಬ್ರಾಹ್ಮಣರಿಗೆ ಈ ಸಮಗ್ರವಾದ ಭೂಮಿಯನ್ನು ಶಾಸೋತ್ರೀಕ್ತ ರೀತಿಯಲ್ಲಿ ದಾನವನ್ನು ಮಾಡಿ ಸ್ವರ್ಗಕ್ಕೆ ಹೋದ ಅನೇಕ ರಾಜರುಗಳನ್ನು ನಾವು ಕೇಳಿದ್ದೇವೆ.
ದೀಯಮಾನಾ ಚ ಬಹುಭಿರ್ದಾಸ್ಯತೇ ಚ ಮುಹುರ್ಮಹೀ |
ನತು ಕಶ್ಚಿದ್ ರಣೇ ಪ್ರಾಣಾನ್ ಮಿತ್ರಾರ್ಥೇ ತ್ಯಕ್ತವಾನಿಹ |
ಏವಂ ತ್ವಾಮಪಿ ಧರ್ಮಾತ್ಮನ್ ಪ್ರಯಾಚೇऽಹಂ ಕೃತಾಂಜಲಿಃ ॥ 53 ॥
ಪೃಥಿವೀದಾನತಸ್ತುಲ್ಯಮಧಿಕಂ ವಾ ಫಲಂ ವಿಭೋ ॥ 54 ॥
ಈ ಭೂಮಿಯು ಹಿಂದೆ ಅನೇಕರಿಂದ ಕೊಡಲ್ಪಟ್ಟಿದೆ, ಮುಂದೆಯೂ ಕೊಡಲ್ಪಡುವುದು. ಆದರೆ ಮಿತ್ರನ ಸಲುವಾಗಿ ಯುದ್ಧದಲ್ಲಿ ಪ್ರಾಣಗಳನ್ನು ತ್ಯಜಿಸಿದವನನ್ನು ನಾವು ಯಾವನನ್ನೂ ಕೇಳಿಲ್ಲ. ಆದ್ದರಿಂದ ಎಲೈ ಧರ್ಮಾತ್ಮನೇ, ನಿನಗೆ ಕೈಗಳನ್ನು ಮುಗಿದು, ಪೃಥಿವೀ ದಾನಕ್ಕೆ ಸಮವಾದ ಅಥವಾ ಅದಕ್ಕಿಂತ ಹೆಚ್ಚಿನ ಫಲವನ್ನು ಕೊಡುವವನಾಗು ಎಂದು ಬೇಡುತ್ತಿದ್ದೇನೆ.
ಏಕ ಏವ ಸದಾ ಕೃಷ್ಣೋ ಮಿತ್ರಾಣಾಮಭಯಂಕರಃ |
ರಣೇ ತ್ಯಜತಿ ಚ ಪ್ರಾಣಾನ್ ದ್ವಿತೀಯಸ್ತ್ವಂ ಚ ಸಾತ್ಯಕೇ ॥ 55 ॥
ಕೃಷ್ಣನೊಬ್ಬನೇ ಯಾವಾಗಲೂ ಮಿತ್ರರಿಗೆ ಅಭಯವನ್ನು ಕೊಡುವವನು. ಅದಕ್ಕಾಗಿ ಯುದ್ಧದಲ್ಲಿ ಅವನು ಪ್ರಾಣವನ್ನೂ ತ್ಯಜಿಸುವನು. ಎಲೈ ಸಾತ್ಯಕಿಯೇ, ನೀನು ಎರಡನೆಯವನು.
ಶೂರಸ್ಯ ಯುಧ್ಯಮಾನಸ್ಯ ಯುದ್ಧಾತ್ ಪ್ರಾರ್ಥಯತೋ ಯಶಃ |
ಶೂರ ಏವ ಸಹಾಯಃ ಸ್ಯಾನ್ನೇತರಃ ಪ್ರಾಕೃತೋ ಜನಃ ॥ 56 ॥
ಯುದ್ಧವನ್ನು ಮಾಡುತ್ತಾ, ಯುದ್ಧದಲ್ಲಿ ಯಶಸ್ಸನ್ನು ಪ್ರಾರ್ಥಿಸುವ ಶೂರನಿಗೆ ಇನ್ನೊಬ್ಬ ಶೂರನೇ ಸಹಾಯನಾಗುತ್ತಾನೆ ಹೊರತು ಸಾಧಾರಣನಾದ ಮನುಷ್ಯನು ಸಹಾಯನಾಗುವುದಿಲ್ಲ.
ಈದೃಶೇ ಹಿ ಪರಾಮರ್ದೇ ವರ್ತಮಾನೇ ಚ ಮಾಧವ |
ತ್ವದನ್ಯೋ ಹಿ ರಣೇ ಗೋಪ್ತಾ ವಿಜಯಸ್ಯ ನ ವಿದ್ಯತೇ ॥ 57 ॥
ಎಲೈ ಮಧುಕುಲೋತ್ಪನ್ನನೇ, ಇಂತಹ ಸಂಘರ್ಷವು ನಡೆಯುತ್ತಿರುವಾಗ ನಿನ್ನನ್ನು ಬಿಟ್ಟು ಅರ್ಜುನನನ್ನು ರಕ್ಷಿಸುವವರು ಬೇರೆ ಯಾರೂ ಇರುವುದಿಲ್ಲ.
ಶ್ಲಾಘಯನ್ನೇವ ಕರ್ಮಾಣಿ ವಿಜಯಸ್ತವ ಮಾಧವ |
ಮಮ ಸಂಜನಯನ್ ಹರ್ಷಂ ಪುನಃ ಪುನರಕೀರ್ತಯತ್ ॥ 58 ॥

ಎಲೈ ಮಧುಕುಲೋತ್ಪನ್ನನೇ, ಅರ್ಜುನನು ನಿನ್ನ ಕರ್ಮಗಳನ್ನು ಪ್ರಶಂಸಿಸುತ್ತಾ, ನನಗೆ ಸಂತೋಷವನ್ನುಂಟು ಮಾಡುತ್ತಾ ಪುನಃ ಪುನಃ ಹೀಗೆ ಮಾತನಾಡಿದನು.
ಲಘ್ವಸ್ತ್ರಶ್ಚಿತ್ರಯೋಧೀ ಚ ತಥಾ ಲಘುಪರಾಕ್ರಮಃ |
ಪ್ರಾಜ್ಞಃ ಸರ್ವಾಸ್ತ್ರವಿಚ್ಛೂರೋ ನ ಚ ಮುಹ್ಯತಿ ಸಂಯುಗೇ ॥ 59 ॥
ಮಹೋರಸ್ಕೋ ಮಹಾಸ್ಕಂಧೋ ಮಹಾಬಾಹುರ್ಮಹಾಧನುಃ |
ಮಹಾಬಲೋ ಮಹಾವೀರ್ಯೋ ಮಹಾತ್ಮಾ ಸ ಮಹಾರಥಃ ॥ 60 ॥
ಶಿಷ್ಯೋ ಮಮ ಸಖಾ ಚೈವ ಪ್ರಿಯೋಽಸ್ಯಾಹಂ ಪ್ರಿಯಶ್ಚ ಮೇ |
ಯುಯುಧಾನಃ ಸಹಾಯೋ ಮೇ ಪ್ರಮಥಿಷ್ಯತಿ ಕೌರವಮ್ |
ಸತ್ಯಕೇನ ಸಹಾಯೇನ ಪ್ರಮಥಿಷ್ಯಾಮ್ಯಹಂ ಕುರೂನ್ ॥ 61 ॥
ಸಾತ್ಯಕಿಯು ಕ್ಷಿಪ್ರವಾಗಿ ಅಸ್ತ್ರವನ್ನು ಪ್ರಯೋಗಿಸುವವನು, ವಿಚಿತ್ರವಾಗಿ ಯುದ್ಧವನ್ನು ಮಾಡುವವನು, ಸೂಕ್ಷ್ಮಪರಾಕ್ರಮವುಳ್ಳವನು, ಪ್ರಾಜ್ಞನಾದವನು, ಎಲ್ಲ ಅಸ್ತ್ರಗಳನ್ನೂ ತಿಳಿದವನು, ಶೂರನಾದವನು, ಯುದ್ಧದಲ್ಲಿ ಭ್ರಾಂತನಾಗದವನು, ಮಹೋರಸ್ಕನು, ಮಹಾಭುಜನು, ಮಹಾಬಾಹುವಾದವನು, ದೊಡ್ಡ ಧನುಸ್ಸನ್ನು ಹೊಂದಿದವನು, ಮಹಾಬಲನು, ಮಹಾವೀರನು, ಮಹಾತ್ಮನೂ ಆದ ಮಹಾರಥನು, ನನ್ನ ಸ್ನೇಹಿತ ಮತ್ತು ಶಿಷ್ಯನಾದವನು, ನಾನೂ ಸಹ ಅವನಿಗೆ ಪ್ರಿಯನಾದವನು- ಅಂತಹ ಸಾತ್ಯಕಿಯು ನನಗೆ ಸಹಾಯನಾಗಿ ಕೌರವರನ್ನು ವಿನಾಶಗೊಳಿಸುವನು. ನಾನೂ ಸಹ ಸಾತ್ಯಕಿಯ ಸಹಾಯದಿಂದ ಕುರುಗಳನ್ನು ವಿನಾಶಗೊಳಿಸುವೆನು (ಎಂದು ಹೇಳಿದನು).
ಅಸ್ಮದರ್ಥಂ ಚ ರಾಜೇಂದ್ರ ಸನ್ನಹ್ಯೇದ್ ಯದಿ ಕೇಶವಃ |
ರಾಮೋ ವಾಽಪ್ಯನಿರುದ್ಧೋ ವಾ ಪ್ರದ್ಯುಮ್ನೋ ವಾ ಮಹಾರಥಃ ॥62॥
ಗದೋ ವಾ ಸಾರಣೋ ವಾಽಪಿ ಸಾಂಬೋ ವಾ ಸಹ ವೃಷ್ಣಿಭಿಃ |
ಸಹಾಯಾರ್ಥಂ ಮಹಾರಾಜ ಸಂಗ್ರಾಮೋತ್ತಮಮೂರ್ಧನಿ ॥ 63 ॥
ತಥಾಽಪ್ಯೇನಂ ನರವ್ಯಾಘ್ರಂ ಶೈನೇಯಂ ಸತ್ಯವಿಕ್ರಮಮ್ |
ಸಾಹಾಯ್ಯೇ ವಿನಿಯೋಕ್ಷ್ಯಾಮಿ ನಾಸ್ತಿ ಮೇಽನ್ಯೋ ಹಿ ತತ್ಸಮಃ ॥64॥
ಎಲೈ ರಾಜೇಂದ್ರನೇ, ನನ್ನ ಸಲುವಾಗಿ ಕೃಷ್ಣನಾಗಲೀ, ಬಲರಾಮನಾಗಲೀ, ಅನಿರುದ್ಧನಾಗಲೀ, ಮಹಾರಥನಾದ ಪ್ರದ್ಯುಮ್ನನಾಗಲೀ, ವೃಷ್ಣಿಗಳಿಂದ ಕೂಡಿದ ಗದ- ಸಾರಣ-ಸಾಂಬರಾಗಲೀ ಯುದ್ಧದಲ್ಲಿ ನಮ್ಮ ಸಹಾಯಕ್ಕೆ ಬಂದರೂ, ಎಲೈ ಮಹಾರಾಜನೇ, ನಾನು ಸತ್ಯಪರಾಕ್ರಮವುಳ್ಳ ಈ ಸಾತ್ಯಕಿಯನ್ನೇ ಸಹಾಯಕ್ಕಾಗಿ ವಿನಿಯೋಗಿಸುತ್ತೇನೆ. ಅವನಿಗೆ ಸಮರಾದವರು ಬೇರೆ ಯಾರೂ ಇಲ್ಲ.
ಇತಿ ದ್ವೈತವನೇ ತಾತ ಮಾಮುವಾಚ ಧನಂಜಯಃ |
ಪರೋಕ್ಷಾಂಸ್ತ್ವದ್ಗುಣಾಂಸ್ತಥ್ಯಾನ್ ಕಥಯಾಮಾಸ ಸಂಸದಿ ॥ 65 ॥
ಎಲೈ ಪ್ರೀತಿಪಾತ್ರನೇ, ಹೀಗೆ ಅರ್ಜುನನು ದ್ವೈತವನದಲ್ಲಿ ನನ್ನನ್ನು ಕುರಿತು ನನಗೆ ಪರೋಕ್ಷವಾದ ನಿಜವಾದ ನಿನ್ನ ಗುಣಗಳನ್ನು ಸಭೆಯಲ್ಲಿ ಹೇಳಿದನು.
ತಸ್ಯ ತ್ವಮೇವಂ ಸಂಕಲ್ಪಂ ನ ವೃಥಾ ಕರ್ತುಮರ್ಹಸಿ |
ಧನಂಜಯಸ್ಯ ವಾರ್ಷ್ಣೇಯ ಮಮ ಭೀಮಸ್ಯ ಚೋಭಯೋಃ ॥ 66 ॥
ಎಲೈ ವಾರ್ಷ್ಣೇಯನೇ, ನೀನು ಧನಂಜಯನ, ನನ್ನ ಮತ್ತು ಭೀಮನ ಅಭಿಪ್ರಾಯವನ್ನು ವ್ಯರ್ಥಮಾಡಬೇಡ.
ಯಚ್ಚಾಪಿ ತೀರ್ಥಂ ವಿಚರನ್ನಗಚ್ಛದ್ ದ್ವಾರಕಾಂ ಪ್ರತಿ |
ತತ್ರಾಹಮಪಿ ತೇ ಭಕ್ತಿಮರ್ಜುನಂ ಪ್ರತಿ ದೃಷ್ಟವಾನ್ ॥ 67 ॥
ಅರ್ಜುನನು ತೀರ್ಥಯಾತ್ರೆಯನ್ನು ಮಾಡುತ್ತಾ ದ್ವಾರಕೆಗೆ ಬಂದಾಗ, ನಿನಗೆ ಅರ್ಜುನನಲ್ಲಿರುವ ಭಕ್ತಿಯನ್ನು ನಾನೂ ಸಹ ನೋಡಿದ್ದೇನೆ.
ತತ್ ತೇ ಸೌಹಾರ್ದಮಸ್ಮಾಸು ಯಥಾ ಶೈನೇಯ ಲಕ್ಷಿತಮ್ |
ತಥಾ ತ್ವಮಸ್ಮಾನ್ ಭಜಸೇ ವರ್ತಮಾನಾನುಪಪ್ಲವೇ ॥ 68 ॥
ಎಲೈ ಸಾತ್ಯಕಿಯೇ, ನಿನ್ನ ಸೌಹಾರ್ದವನ್ನು ನಾನು ಹೇಗೆ ಗಮನಿಸಿದ್ದೇನೆಯೋ ಅದರಂತೆಯೇ ನೀನು ನಾವು ಉಪಪ್ಲವ ನಗರದಲ್ಲಿರುವಾಗ ನಮ್ಮ ಜೊತೆಯಲ್ಲಿ ನಡೆದುಕೊಂಡಿದ್ದೀಯೆ.
ಸೌಹಾರ್ದಸ್ಯ ಚ ಭಕ್ತಸ್ಯ ಸಖ್ಯಸ್ಯಾಚಾರ್ಯಕಸ್ಯ ಚ |
ಸಂಭಾವನಾಯಾಃ ಪಾರ್ಥಸ್ಯ ಕುಲೀನತ್ವಸ್ಯ ಮಾಧವ ॥ 69 ॥
ಸತ್ತ್ವಸ್ಯ ಚ ಮಹಾಬಾಹೋ ಅನುಕಂಪಾರ್ಥಮೇವ ಚ |
ಅನುರೂಪಂ ಮಹೇಷ್ವಾಸ ಕರ್ಮ ಕರ್ತುಂ ತ್ವಮರ್ಹಸಿ ॥ 70 ॥
ಎಲೈ ಮಹಾಬಾಹುವೇ, ಆ ಸೌಹಾರ್ದದ, ಭಕ್ತಿಯ, ಸ್ನೇಹದ, ಗುರುತ್ವದ, ಅರ್ಜುನನು ನಿನಗೆ ಕೊಟ್ಟ ಮರ್ಯಾದೆಯ ಮತ್ತು ನಿನ್ನ ಕುಲದ ಮತ್ತು ಪರಾಕ್ರಮದ ಸಲುವಾಗಿ ಎಲೈ ಮಹಾಧನುರ್ಧಾರಿಯೇ, ಮಧುಕುಲೋತ್ಪನ್ನನೇ, ಮತ್ತು ಅರ್ಜುನನ ಮೇಲಿನ ಅನುಕಂಪದಿಂದಾದರೂ ಎಲ್ಲದಕ್ಕೂ ಅನುಗುಣವಾದ ಕಾರ್ಯವನ್ನು ನೀನು ಮಾಡಬೇಕು.
ಸುಯೋಧನೋ ಹಿ ಸಹಸಾ ಗತೋ ದ್ರೋಣೇನ ದಂಸಿತಃ |
ಪೂರ್ವಮೇವ ಚ ಯಾತಾಸ್ತೇ ಕೌರವಾಣಾಂ ಮಹಾರಥಾಃ ॥ 71 ॥
ಸುಯೋಧನನು ದ್ರೋಣರಿಂದ ಕವಚಧಾರಣೆಯನ್ನು ಮಾಡಿಸಿಕೊಂಡು ತಕ್ಷಣವೇ ಯುದ್ಧಕ್ಕೆ ಹೊರಟಿದ್ದಾನೆ. ಕೌರವರ ಮಹಾರಥರೂ ಮೊದಲೇ ಹೋಗಿದ್ದಾರೆ.

ಸುಮಹಾನ್ ನಿನದಶ್ಚೈವ ಶ್ರೂಯತೇ ವಿಜಯಂ ಪ್ರತಿ |
ಸ ಶೈನೇಯ ಜವೇನಾಶು ಗಂತುಮರ್ಹಸಿ ಮಾಧವ ॥ 72 ॥
ಅರ್ಜುನನಿರುವ ಸ್ಥಳದಿಂದ ದೊಡ್ಡ ಶಬ್ದವು ಕೇಳಿಬರುತ್ತಿದೆ. ಎಲೈ ಮಾಧವನೇ, ಸಾತ್ಯಕಿಯೇ, ನೀನು ಶೀಘ್ರವಾಗಿ ಹೋಗಬೇಕು.
ಭೀಮಸೇನೋ ವಯಂ ಚೈವ ಸಮಸ್ತಾಃ ಸಹಸೈನಿಕಾಃ |
ದ್ರೋಣಮಾವಾರಯಿಷ್ಯಾಮೋ ಯದಿ ತ್ವಾಂ ಪ್ರತಿಯೋತ್ಸ್ಯತೇ ॥ 73 ॥
ದ್ರೋಣರು ಒಂದು ಪಕ್ಷ ನಿನಗೆ ಪ್ರತಿಯಾಗಿ ಯುದ್ಧವನ್ನು ಮಾಡಿದರೆ ಭೀಮಸೇನನೂ, ನಾನೂ ಮತ್ತು ಸಮಸ್ತ ಸೈನಿಕರೂ ಅವರನ್ನು ತಡೆಯುವೆವು.
ಪಶ್ಯ ಶೈನೇಯ ಸೈನ್ಯಾನಿ ದ್ರವಮಾಣಾನಿ ಸಂಯುಗೇ |
ಮಹಾಂಶ್ಚ ತುಮುಲಃ ಶಬ್ದೋ ದೀರ್ಯಮಾಣಾ ಚ ಭಾರತೀ ॥ 74 ॥
ಸಾತ್ಯಕಿಯೇ, ಯುದ್ಧದಲ್ಲಿ ನಮ್ಮ ಸೈನ್ಯವು ಚದುರಿ ಹೋಗುತ್ತಿರುವುದನ್ನು ನೋಡು. ತೀವ್ರವೂ, ದೊಡ್ಡದೂ ಆದ ಶಬ್ದವು ಕೇಳಿಬರುತ್ತಿದೆ ಮತ್ತು ನಮ್ಮ ಭರತ ಸೈನ್ಯವು ಭಗ್ನವಾಗುತ್ತಿದೆ.
ಮಹಾವಾತಸಮುದ್ಧೂತಃ ಸಮುದ್ರ ಇವ ಪರ್ವಸು |
ಧಾರ್ತರಾಷ್ಟ್ರಬಲಂ ತಾತ ವಿಕ್ಷಿಪ್ತಂ ಸವ್ಯಸಾಚಿನಾ ॥ 75 ॥
ಎಲೈ ಪ್ರೀತಿಪಾತ್ರನೇ, ಪರ್ವಕಾಲದಲ್ಲಿ ಬಿರುಗಾಳಿಯಿಂದ ಪ್ರಕ್ಷುಬ್ಧಗೊಂಡ ಸಮುದ್ರದಂತೆ ಸವ್ಯಸಾಚಿಯಾದ ಅರ್ಜುನನಿಂದ ಸುಯೋಧನನ ಸೈನ್ಯವು ಕ್ಷೋಭೆಗೊಂಡಿದೆ.
ರಥೈಶ್ಚ ಪರಿಧಾವದ್ಭಿರ್ಮನುಷ್ಯಗಜವಾಜಿಭಿಃ |
ಸೈನ್ಯಂ ರಜಃ ಸಮುದ್ಧೂತಮೇತತ್ ಸಂಪ್ರತಿ ದೃಶ್ಯತೇ ॥ 76 ॥
ಸಂಚರಿಸುವ ರಥಗಳಿಂದಲೂ, ಪದಾತಿ-ಅಶ್ವ ಮತ್ತು ಗಜಗಳಿಂದಲೂ ಎದ್ದ ಸೈನ್ಯದ ಈ ಧೂಳು ಈಗ ಕಂಡುಬರುತ್ತಿದೆ.
ಸಂವೃತಃ ಸಿಂಧುಸೌವೀರೈರ್ನಖರಪ್ರಾಸಯೋಧಿಭಿಃ |
ಅತ್ಯಂತಾಪಚಿತೈಃ ಶೂರೈಃ ಫಲ್ಗುನಃ ಪರವೀರಹಾ ॥ 77 ॥
ನಮ್ಮಿಂದ ಅತ್ಯಂತ ಅಪಕಾರಕ್ಕೊಳಗಾದ, ನಖರ-ಪ್ರಾಸಗಳಿಂದ ಯುದ್ಧವನ್ನು ಮಾಡುವ ಸಿಂಧು-ಸೌವೀರ ದೇಶದ ಶೂರರಿಂದ ಪರವೀರಘಾತಕನಾದ ಅರ್ಜುನನು ಸುತ್ತುವರಿಯಲ್ಪಟ್ಟಿದ್ದಾನೆ.
ನೈತದ್ ಬಲಮಸಂವಾರ್ಯ ಶಕ್ಯೋ ಜೇತುಂ ಜಯದ್ರಥಃ |
ಏತೇ ಹಿ ಸೈಂಧವಸ್ಯಾರ್ಥೇ ಸರ್ವೇ ಸಂತ್ಯಕ್ತಜೀವಿತಾಃ ॥ 78 ॥
ಇವರೆಲ್ಲರೂ ಸೈಂಧವನ ಸಲುವಾಗಿ ತಮ್ಮ ಜೀವನದ ಆಸೆಯನ್ನು ತೊರೆದಿದ್ದಾರೆ. ಈ ಸೈನ್ಯವನ್ನು ತಡೆಯದೆ ಜಯದ್ರಥನನ್ನು ಗೆಲ್ಲಲು ಸಾಧ್ಯವಿಲ್ಲ.
ಶರಶಕ್ತಿಧ್ವಜವರಂ ಹಯನಾಗಸಮಾಕುಲಮ್ |
ಪಶ್ಯೈತದ್ ಧಾರ್ತರಾಷ್ಟ್ರಾಣಾಮನೀಕಂ ಚ ದುರಾಸದಮ್ ॥ 79 ॥
ನೋಡು ಬಾಣ-ಶಕ್ತಿ ಮತ್ತು ಶ್ರೇಷ್ಠ ಧ್ವಜಗಳನ್ನು ಹೊಂದಿದ, ಗಜಾಶ್ವಗಳಿಂದ ನಿಬಿಡವಾದ ದುರ್ಯೋಧನನ ಈ ಸೈನ್ಯವು ಸಮೀಪಿಸಲೂ ಅಸಾಧ್ಯವಾಗಿದೆ.
ಶೃಣು ದುಂದುಭಿನಿರ್ಘೋಷಂ ಶಂಖಶಬ್ದಾಂಶ್ಚ ಪುಷ್ಕಲಾನ್ |
ಸಿಂಹನಾದರವಾಂಶ್ಚೈವ ರಥನೇಮಿಸ್ವನಾಂಸ್ತಥಾ ॥ 80 ॥
ದುಂದುಭಿಘೋಷವನ್ನೂ, ಅನೇಕ ಶಂಖಶಬ್ದಗಳನ್ನೂ, ಸಿಂಹನಾದಗಳನ್ನೂ ಮತ್ತು ರಥಚಕ್ರದ ಘೋಷವನ್ನೂ ಕೇಳು.
ನಾಗಾನಾಂ ಶೃಣು ಶಬ್ದಾಂಶ್ಚ ಪತ್ತೀನಾಂ ಚ ಸಹಸ್ರಶಃ |
ಸಾದಿನಾಂ ದ್ರವತಾಂ ಶಬ್ದಂ ಶೃಣು ಕಂಪಯತಾಂ ಮಹೀಮ್ ॥ 81 ॥
ಗಜಗಳ ಶಬ್ದಗಳನ್ನೂ, ಸಹಸ್ರ ಸಂಖ್ಯೆಯಲ್ಲಿ ಚಲಿಸುವ ಪದಾತಿಗಳ ಶಬ್ದವನ್ನೂ ಕೇಳು. ಭೂಮಿಯನ್ನು ನಡುಗಿಸುತ್ತಾ ಚಲಿಸುವ ಅಶ್ವಾರೋಹಿಗಳ ಶಬ್ದವನ್ನೂ ಕೇಳು.
ಪುರಸ್ತಾತ್ ಸೈಂಧವಾನೀಕಂ ದ್ರೋಣಾನೀಕಸ್ಯ ಪೃಷ್ಠತಃ |
ಬಹುತ್ವಂ ಹಿ ನರವ್ಯಾಘ್ರ ದೇವೇಂದ್ರಮಪಿ ಪೀಡಯೇತ್ ॥ 82 ॥
ದ್ರೋಣರ ಸೈನ್ಯದ ಹಿಂಭಾಗದಲ್ಲಿ ಮೊದಲು ಸೈಂಧವಸೈನ್ಯವಿದೆ. ಎಲೈ ನರವ್ಯಾಘ್ರನೇ, ಆ ಸೈನ್ಯದ ಮಹತ್ವವು (ಬಹುತ್ವವು) ದೇವೇಂದ್ರನನ್ನೂ ಪೀಡಿಸಬಹುದು.
ಅಪರ್ಯಂತೇ ಬಲೇ ಮಗ್ನಾಃ ಪ್ರಜಹ್ಯಾದಪಿ ಜೀವಿತಮ್ |
ತಸ್ಮಿಂಶ್ಚ ನಿಹತೇ ಯುದ್ಧೇ ಕಥಂ ಜೀವೇತ ಮಾದೃಶಃ |
ಸರ್ವಥಾ ಸಮನುಪ್ರಾಪ್ತಃ ಸಕೃಚ್ಛ್ರಂ ಬತ ಜೀವಿತಮ್ ॥ 83 ॥
ಅರ್ಜುನನು ಕೊನೆಯೇ ಇಲ್ಲದ ಅಂತಹ ಸೈನ್ಯದಲ್ಲಿ ಮುಳುಗಿ ಪ್ರಾಣವನ್ನೇ ತೊರೆದಾನು. ಅವನು ಯುದ್ಧದಲ್ಲಿ ಮೃತನಾದರೆ ನನ್ನಂತಹವನು ಹೇಗೆ ಜೀವಿಸಬಹುದು? ಸರ್ವಥಾ ಅವನ ಪ್ರಾಣಧಾರಣೆಯು ಕಷ್ಟಕ್ಕೆ ಸಿಲುಕಿದೆ.
ಅಭ್ರಶ್ಯಾಮೋ ಗುಡಾಕೇಶೋ ದರ್ಶನೀಯಶ್ಚ ಪಾಂಡವಃ |
ಲಘ್ವಸ್ತ್ರಶ್ಚಿತ್ರಯೋಧೀ ಚ ಪ್ರವಿಷ್ಟಸ್ತ್ವತ್ರ ಭಾರತೀಮ್ ॥ 84 ॥
ಸೂರ್ಯೋದಯೇ ಮಹಾಬಾಹುರ್ದಿವಸಶ್ಚಾತಿವರ್ತತೇ ॥ 85 ॥
ಮೇಘಶ್ಯಾಮನೂ, ಗುಡಾಕೇಶನೂ (ನಿದ್ರೆಯನ್ನು ಗೆದ್ದವನು), ಸುಂದರನೂ, ಕ್ಷಿಪ್ರವಾಗಿ ಅಸ್ತ್ರವನ್ನು ಪ್ರಯೋಗಿಸುವವನೂ,

ಚಿತ್ರಯೋಧಿಯೂ, ಮಹಾಬಾಹುವೂ ಆದ ಅರ್ಜುನನು ಸೂರ್ಯೋದಯದ ಸಮಯದಲ್ಲಿ ದುರ್ಯೋಧನನ ಸೈನ್ಯವನ್ನು ಪ್ರವೇಶಿಸಿದನು. ಈಗ ದಿವಸವು ಕಳೆದುಹೋಗುತ್ತಿದೆ.
ತನ್ನ ಜಾನಾಮಿ ವಾರ್ಷ್ಣೇಯ ಯದಿ ಜೀವತಿ ವಾ ನ ವಾ |
ಕುರೂಣಾಂ ಸುಮಹತ್ ಸೈನ್ಯಂ ಸಾಗರಪ್ರತಿಮಂ ಮಹತ್ ॥ 86 ॥
ಏಕ ಏವ ಚ ಬೀಭತ್ಸುಃ ಪ್ರವಿಷ್ಟಸ್ತತ್ರ ಭಾರತೀಮ್ |
ಅವಿಷಹ್ಯಾಂ ಮಹಾಬಾಹುಃ ಸುರೈರಪಿ ಮಹಾಮೃಧೇ ॥ 87 ॥
ಎಲೈ ಸಾತ್ಯಕಿಯೇ, ಅವನು ಬದುಕಿದ್ದಾನೆಯೇ ಇಲ್ಲವೇ ಎಂದು ನನಗೆ ತಿಳಿಯುತ್ತಿಲ್ಲ. ಕುರುಗಳ ಸೈನ್ಯವು ಸಾಗರದಂತೆ ಬಹಳ ದೊಡ್ಡದಾಗಿದೆ. ಮಹಾಬಾಹುವಾದ ಅರ್ಜುನನು ದೇವತೆಗಳೂ ಯುದ್ಧದಲ್ಲಿ ಸಹಿಸಲಾರದ ಆ ಸೈನ್ಯವನ್ನು ಒಬ್ಬನೇ ಪ್ರವೇಶಿಸಿದ್ದಾನೆ.
ನ ಚ ಮೇ ವರ್ತತೇ ಬುದ್ಧಿರದ್ಯ ಯುದ್ಧೇ ಕಥಂಚನ |
ದ್ರೋಣೋ ಹಿ ರಭಸೋ ಯುದ್ಧೇ ಮಮ ಪೀಡಯತೇ ಬಲಮ್ |
ಪ್ರತ್ಯಕ್ಷಂ ತೇ ಮಹಾಬಾಹೋ ಯಥಾ ಸ ಚರತಿ ದ್ವಿಜಃ ॥ 88 ॥
ನನಗೆ ಈ ದಿನ ಯುದ್ಧವನ್ನು ಮಾಡುವ ಬುದ್ದಿಯಿಲ್ಲ. ಎಲೈ ಮಹಾಬಾಹುವೇ, ವೇಗಶಾಲಿಗಳಾದ ದ್ರೋಣರು ಸಂಚರಿಸುತ್ತಿರುವಂತೆ ನನ್ನ ಕಣ್ಣೆದುರಿಗೇ ಯುದ್ಧದಲ್ಲಿ ನನ್ನ ಸೈನ್ಯವನ್ನು ಪೀಡಿಸುತ್ತಿದ್ದಾರೆ.
ಯುಗಪತ್ ಸಮವೇತಾನಾಂ ಕಾರ್ಯಾಣಾಂ ತ್ವಂ ವಿಚಕ್ಷಣಃ |
ಮಹಾರ್ಥಂ ಲಘುಸಂಯುಕ್ತಂ ಕರ್ತುಮರ್ಹಸಿ ಮಾಧವ ॥ 89 ॥
ಎಲೈ ಮಧುಕುಲೋತ್ಪನ್ನನೇ, ಒಟ್ಟಿಗೆ ಅನೇಕ ಕಾರ್ಯವನ್ನು ಮಾಡಬೇಕಾಗಿ ಬಂದಾಗ ಮೇಧಾವಿಯಾದ ನೀನು ಅಲ್ಪಪ್ರಯತ್ನದಿಂದ ಮಹಾಫಲವನ್ನು ಉಂಟು ಮಾಡುವ ಕಾರ್ಯವನ್ನು ಮಾಡಬೇಕು.
ತಸ್ಯ ಮೇ ಸರ್ವಕಾರ್ಯೇಷು ಕಾರ್ಯಮೇತನ್ಮತಂ ಸದಾ |
ಅರ್ಜುನಸ್ಯ ಪರಿತ್ರಾಣಂ ಕರ್ತವ್ಯಮಿತಿ ಸಂಯುಗೇ ॥ 90 ॥
ನನ್ನ ಎಲ್ಲ ಕಾರ್ಯಗಳಲ್ಲಿಯೂ ಯುದ್ಧದಲ್ಲಿ ಅರ್ಜುನನನ್ನು ರಕ್ಷಿಸಬೇಕೆಂಬುದು ಅತ್ಯಂತ ಮುಖ್ಯವಾದ ಕಾರ್ಯ.
ನಾಹಂ ಶೋಚಾಮಿ ದಾಶಾರ್ಹಂ ಗೋಪ್ತಾರಂ ಜಗತಃ ಪ್ರಭುಮ್ ॥
ಸ ಹಿ ಶಕ್ತೋ ರಣೇ ತಾತ ತ್ರೀಲ್ಲೋಕಾನಪಿ ಸಂಗತಾನ್ |
ವಿಜೇತುಂ ಪುರುಷವ್ಯಾಘ್ರ ಸತ್ಯಮೇತದ್ ಬ್ರವೀಮಿ ತೇ |
ಕಿಂ ಪುನರ್ಧಾರ್ತರಾಷ್ಟ್ರಸ್ಯ ಬಲಮೇತತ್ ಸುದುರ್ಬಲಮ್ ॥ 92 ॥
ನಾನು ಜಗತ್ತಿಗೆ ಪ್ರಭುವೂ, ಸರ್ವರಕ್ಷಕನೂ ಆದ ಕೃಷ್ಣನ ವಿಷಯದಲ್ಲಿ ಚಿಂತಿಸುತ್ತಿಲ್ಲ. ಎಲೈ ಪುರುಷವ್ಯಾಘ್ರನೇ, ಅವನು ಮೂರುಲೋಕಗಳು ಒಟ್ಟಿಗೇ ಬಂದರೂ ಯುದ್ಧದಲ್ಲಿ ಅವುಗಳನ್ನು ಜಯಿಸಲು ಸಮರ್ಥನಾಗಿದ್ದಾನೆ. ಸತ್ಯವಾದ ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ. ಹೀಗಿರುವಾಗ ದುರ್ಬಲವಾದ ಈ ಸುಯೋಧನನ ಸೈನ್ಯವು ಅವನಿಗೆ ಏನು ಮಾಡೀತು?
ಅರ್ಜುನಸ್ತ್ವೇಷ ವಾರ್ಷ್ಣೇಯ ಪೀಡಿತೋ ಬಹುಭಿರ್ಯುಧಿ |
ಪ್ರಜಹ್ಯಾತ್ ಸಮರೇ ಪ್ರಾಣಾನ್ ತಸ್ಮಾದ್ ವಿಂದಾಮಿ ಕಶ್ಮಲಮ್ ॥
ಎಲೈ ವಾರ್ಷ್ಣೇಯನೇ, ಯುದ್ಧದಲ್ಲಿ ಅನೇಕರಿಂದ ಪೀಡಿತನಾದ ಈ ಅರ್ಜುನನು ಪ್ರಾಣಗಳನ್ನೂ ಬಿಡಬಹುದು. ಅದರಿಂದ ವಿಷಾದಕ್ಕೆ ಒಳಗಾಗಿದ್ದೇನೆ.
ತಸ್ಯ ತ್ವಂ ಪದವೀಂ ಗಚ್ಛ ಗಚ್ಛೇಯುಸ್ತ್ವಾದೃಶಾ ರಥಾಃ |
ತಾದೃಶಸ್ಯೇದೃಶೇ ಕಾಲೇ ಮಾದೃಶೈರಭಿಚೋದಿತಾಃ ॥ 94 ॥
ಅವನ ಮಾರ್ಗವನ್ನು ಹಿಡಿದು ಹೋಗು. ಇಂತಹ ಕಾಲದಲ್ಲಿ ನಿನ್ನಂತಹ ಮಹಾರಥರು ನನ್ನಂತಹವರಿಂದ ಪ್ರೇರಿತರಾಗಿ ಹೋಗುವರು.
ಸುಹೃದೋ ವೈ ಸುಹೃತ್ಕೃತ್ಯೇ ಪರಮಾಸ್ಥಾಯ ವಿಕ್ರಮಮ್ |
ಸುಹೃದಃ ಪದಮನ್ವಿಚ್ಛನ್ ನ ವ್ಯಥೇತ ಕಥಂಚನ ॥ 95 ॥
ಸ್ನೇಹಿತನ ಸ್ನೇಹಕಾರ್ಯದಲ್ಲಿ ಬಹಳ ವಿಕ್ರಮವನ್ನು ತೋರಿಸಿ ಅವನ ಮಾರ್ಗವನ್ನು ಅನುಸರಿಸಿ ಹೋಗುವವನು ಎಂದೂ ವ್ಯಥೆಪಡಲಾರ.
ನನು ಸತ್ಯಕ ವೃಷ್ಣೀನಾಂ ದ್ವಾವೇವಾತಿರಥೌ ಸ್ಮೃತೌ |
ಪ್ರದ್ಯುಮ್ನಶ್ಚ ಮಹಾಬಾಹುಸ್ತ್ವಂ ಚ ಸಾತ್ವತ ವಿಶ್ರುತಃ ॥ 96 ॥
ಎಲೈ ಸತ್ಯಕನೇ, ವೃಷ್ಣಿಗಳಲ್ಲಿ ಅತಿರಥರೆಂದು ಪರಿಗಣಿತರಾದವರು ಇಬ್ಬರೇ ಅಷ್ಟೆ? ಮಹಾಬಾಹುವಾದ ಅರ್ಜುನನೊಬ್ಬನು ಮತ್ತು ಪ್ರಖ್ಯಾತನಾದ ನೀನು ಇನ್ನೊಬ್ಬನು.
ಅಸ್ತ್ರೇ ನಾರಾಯಣಸಮಃ ಸಂಕರ್ಷಣಸಮೋ ಬಲೇ |
ವೀರತಾಯಾಂ ನರವ್ಯಾಘ್ರ ಧನಂಜಯಸಮೋ ಹ್ಯಸಿ ॥ 97 ॥
ಎಲೈ ನರವ್ಯಾಘ್ರನೇ, ನೀನು ಅಸ್ತ್ರಜ್ಞಾನದಲ್ಲಿ ನಾರಾಯಣನಿಗೆ ಸಮನಾದವನು. ಬಲದಲ್ಲಿ ಬಲರಾಮನಿಗೂ, ಪರಾಕ್ರಮದಲ್ಲಿ ಅರ್ಜುನನಿಗೂ ಸಮನಾಗಿದ್ದೀಯೆ.
ಭೀಷ್ಮದ್ರೋಣಾವತಿಕ್ರಾಂತಂ ಸರ್ವಯುದ್ಧವಿಶಾರದಮ್ |
ನಾಸಾಧ್ಯಂ ವಿದ್ಯತೇ ಲೋಕೇ ಸಾತ್ಯಕೇರಿತಿ ಮಾಧವ ಭೀಷ್ಮದ್ರೋಣಾವತಿಕ್ರಾಂತಂ ಸರ್ವಶಸ್ತ್ರವಿಶಾರದಮ್ |
ತ್ವಾಮದ್ಯ ಪುರುಷವ್ಯಾಘ್ರ ಲೋಕೇ ಸಂತಃ ಪ್ರಚಕ್ಷತೇ ॥ 98 ॥

ಎಲೈ ಮಾಧವನೇ, ನೀನು ಭೀಷ್ಮ-ದ್ರೋಣರನ್ನು ಮೀರಿದವನು, ಸರ್ವಶಸ್ತ್ರ ವಿಶಾರದನಾದವನು ಅಂತಹ ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲ ಎಂದು ಎಲೈ ಪುರುಷವ್ಯಾಘ್ರನೇ, ಲೋಕದಲ್ಲಿ ಸಜ್ಜನರು ಹೇಳುತ್ತಾರೆ.
ಸದೇವಾಸುರಗಂಧರ್ವಾನ್ ಸಕಿನ್ನರಮಹೋರಗಾನ್ |
ಯೋಧಯೇತ್ ಸ ಜಗತ್ ಸರ್ವಂ ವಿಜಯೇತ ರಿಪೂನ್ ಬಹೂನ್ ||
ಇತಿ ಬ್ರುವಂತಿ ಲೋಕೇಷು ಜನಾಸ್ತವ ಗುಣಾನ್ ಸದಾ || 100 ||
ಸಾತ್ಯಕಿಯು ದೇವಾಸುರ-ಗಂಧರ್ವರಿಂದ ಸಹಿತವಾದ, ಕಿನ್ನರ- ಮಹೋರಗರಿಂದ ಸಹಿತವಾದ, ಸರ್ವಜಗತ್ತಿನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅನೇಕ ಶತ್ರುಗಳನ್ನು ಸೋಲಿಸಿಯಾನು ಎಂದು ನಿನ್ನ ಗುಣಗಳನ್ನು ಯಾವಾಗಲೂ ಲೋಕದಲ್ಲಿ ಜನರು ಹೇಳುತ್ತಾರೆ.
ಸಮಾಗಮೇಷು ಜಲ್ಪಂತಿ ಪೃಥಗೇವ ಚ ಸರ್ವದಾ |
ನಾಸಾಧ್ಯಂ ವಿದ್ಯತೇ ಲೋಕೇ ಸತ್ಯಕಸ್ಯೇತಿ ಮಾಧವ |
ತತ್ ತ್ವಾಂ ಯದಿಹ ವಕ್ಷ್ಯಾಮಿ ತತ್ ಕುರುಷ್ವ ಮಹಾಬಲ ||101||
ಎಲೈ ಮಾಧವನೇ, ಸಮೂಹಗಳಲ್ಲಿಯೂ ಮತ್ತು ಪ್ರತ್ಯೇಕವಾಗಿಯೂ ಸಾತ್ಯಕಿಗೆ ಅಸಾಧ್ಯವಾದುದು ಈ ಲೋಕದಲ್ಲಿ ಯಾವುದೂ ಇಲ್ಲ ಎಂದು ಯಾವಾಗಲೂ ಹೇಳುತ್ತಾರೆ. ಆದ್ದರಿಂದ ಎಲೈ ಮಹಾಬಲನೇ, ನಾನು ನಿನಗೆ ಹೇಳುವುದನ್ನು ಈ ದಿನ ಮಾಡುವವನಾಗು.

ಸಂಭಾವನಾ ಹಿ ಪಾರ್ಥಸ್ಯ ಮಮ ಭೀಮಸ್ಯ ಚೋಭಯೋಃ |
ನಾನ್ಯಥಾ ತನ್ಮಹಾಬಾಹೋ ಸಂಪ್ರಕರ್ತುಮಿಹಾರ್ಹಸಿ || 102 ||
ಎಲೈ ಮಹಾಬಾಹುವೇ, ನಾನು, ಅರ್ಜುನ ಮತ್ತು ಭೀಮಸೇನರು ನಿನ್ನಲ್ಲಿ ಇಟ್ಟಿರುವ ಗೌರವಕ್ಕೆ ಅನುಗುಣವಾಗಿ ಕಾರ್ಯವನ್ನು ಮಾಡು. ಅನ್ಯಥಾ ಮಾಡುವುದು ಉಚಿತವಲ್ಲ.
ಪರಿತ್ಯಜ್ಯ ಪ್ರಿಯಾನ್ ಪ್ರಾಣಾನ್ ರಣೇ ವಿಚರ ವೀರವತ್ |
ನಹಿ ಶೈನೇಯ ದಾಶಾರ್ಹಾ ರಣೇ ರಕ್ಷಂತಿ ಜೀವಿತಮ್ || 103 ||
ಪ್ರಿಯವಾದ ಪ್ರಾಣಗಳನ್ನು ತ್ಯಜಿಸಿ ರಣರಂಗದಲ್ಲಿ ವೀರನಂತೆ ಸಂಚರಿಸು. ಎಲೈ ಶೈನೇಯನೇ, ದಾಶಾರ್ಹಕುಲದವರು ಯುದ್ಧದಲ್ಲಿ ತಮ್ಮ ಜೀವಿತವನ್ನು ರಕ್ಷಿಸಿಕೊಳ್ಳುವುದಿಲ್ಲ.
ಅಯುದ್ಧಮನವಸ್ಥಾನಂ ಸಂಗ್ರಾಮೇ ಚ ಪಲಾಯನಮ್ |
ಏಷ ಭೀರುಗತೋ ಮಾರ್ಗೋ ನೈವ ದಾಶಾರ್ಹಸೇವಿತಃ || 104 ||
ಯುದ್ಧವನ್ನು ಮಾಡದಿರುವುದು, ರಣರಂಗದಲ್ಲಿ ನಿಲ್ಲದಿರುವುದು ಮತ್ತು ಯುದ್ಧದಿಂದ ಪಲಾಯನ ಮಾಡುವುದು ಇದು ಹೇಡಿಗಳ ಮಾರ್ಗ. ದಾಶಾರ್ಹರು ಸೇವಿಸುವ ಮಾರ್ಗವಲ್ಲ.
ತವಾರ್ಜುನೋ ಗುರುಸ್ತಾತ ಧರ್ಮಾತ್ಮಾ ಶಿನಿಪುಂಗವ |
ವಾಸುದೇವೋ ಗುರುಶ್ಚೈವ ಅರ್ಜುನಸ್ಯ ತವೈವ ಚ || 105 ||
ಎಲೈ ಶಿನಿಪುಂಗವನೇ, ಪ್ರೀತಿಪಾತ್ರನೇ, ನಿನಗೆ ಧರ್ಮಾತ್ಮನಾದ ಅರ್ಜುನನೂ ಮತ್ತು ನಿನಗೂ ಮತ್ತು ಅರ್ಜುನನಿಗೂ ಕೃಷ್ಣನೂ ಸಹ ಗುರುವಾಗಿದ್ದಾನೆ.
ಕಾರಣದ್ವಯಮೇತದ್ಧಿ ಜಾನಂಸ್ತ್ವಮಹಮಬ್ರುವಮ್ |
ಮಾಽವಮಂಸ್ಥಾ ವಚೋ ಮೇಽದ್ಯ ಗುರೋಸ್ತವ ಗುರುರ್ಹ್ಯಹಮ್ ||
ಈ ಎರಡು ಕಾರಣಗಳನ್ನು ತಿಳಿದು ನಾನು ನಿನಗೆ ಹೇಳಿದ್ದೇನೆ. ನಿನ್ನ ಗುರುವಿನ ಗುರುವಾದ ನನ್ನ ಮಾತನ್ನು ಈ ದಿನ ತಿರಸ್ಕರಿಸಬೇಡ.
ವಾಸುದೇವಮತಂ ಚೈತನ್ಮಮ ಚೈವಾರ್ಜುನಸ್ಯ ಚ |
ಸತ್ಯಮೇತನ್ಮಯೋಕ್ತಂ ತೇ ಯಾಹಿ ಯತ್ರ ಧನಂಜಯಃ || 107 ||
ಇದು ಕೃಷ್ಣನಿಗೂ ಮತ್ತು ಅರ್ಜುನನಿಗೂ ಸಮ್ಮತವಾದುದು. ನಾನು ಹೇಳಿದ ಈ ಮಾತುಗಳು ಸತ್ಯವಾದವುಗಳು. ಅರ್ಜುನನು ಇರುವ ಕಡೆಗೆ ಹೋಗು.
ಏತದ್ ವಚನಮಾಜ್ಞಾಯ ಮಮ ಸತ್ಯಪರಾಕ್ರಮ |
ಪ್ರವಿಶೈತದ್ ಬಲಂ ತಾತ ಧಾರ್ತರಾಷ್ಟ್ರಸ್ಯ ದುರ್ಮತೇಃ || 108 ||
ಎಲೈ ಸತ್ಯಪರಾಕ್ರಮನೇ, ಪ್ರೀತಿಪಾತ್ರನೇ, ಈ ನನ್ನ ಮಾತುಗಳನ್ನು ಚೆನ್ನಾಗಿ ತಿಳಿದು ದುರ್ಮತಿಯಾದ ದುರ್ಯೋಧನನ ಈ ಸೈನ್ಯವನ್ನು ಪ್ರವೇಶಿಸು.
ಪ್ರವಿಶ್ಯ ಚ ಯಥಾನ್ಯಾಯಂ ಸಂಗಮ್ಯ ಚ ಮಹಾರಥೈಃ |
ಯಥಾರ್ಹಮಾತ್ಮನಃ ಕರ್ಮ ರಣೇ ಸತ್ಯಕ ದರ್ಶಯ || 109 ||
ಎಲೈ ಸತ್ಯಕನೇ, ಸೈನ್ಯವನ್ನು ವಿಧಿವತ್ತಾಗಿ ಪ್ರವೇಶಿಸಿ, ಮಹಾರಥರ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಯುದ್ಧದಲ್ಲಿ ನಿನ್ನ ಯೋಗ್ಯತೆಗೆ ಅನುರೂಪವಾದ ಕರ್ಮವನ್ನು ತೋರಿಸುವವನಾಗು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಣ್ಣವತಿತಮೋಽಧ್ಯಾಯಃ ||
|| ಜಯದ್ರಥವಧಪರ್ವಣಿ ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ತೊಂಬತ್ತೇಳನೆಯ ಅಧ್ಯಾಯ
ಯುಧಿಷ್ಠಿರನ ಮಾತಿಗೆ ಸಾತ್ಯಕಿಯ ಉತ್ತರ. ಭೀಮಾದ್ಯರಿಂದ ತನ್ನ
ರಕ್ಷಣೆಯನ್ನು ಹೇಳಿ ಪುನಃ ಯುಧಿಷ್ಠಿರನಿಂದ ಒತ್ತಾಯ.
ಸಂಜಯಃ
ಪ್ರೀತಿಯುಕ್ತಂ ಚ ಹೃದ್ಯಂ ಚ ಮಧುರಾಕ್ಷರಮೇವ ಚ |
ಕಾಲಯುಕ್ತಂ ಚ ಚಿತ್ರಂ ಚ ಸ್ವಧಿಯಾ ಚಾಭಿಭಾಷಿತಮ್ ॥ 1 ॥
ಧರ್ಮರಾಜಸ್ಯ ತದ್ ವಾಕ್ಯಂ ನಿಶಮ್ಯ ಶಿನಿಪುಂಗವಃ |
ಸಾತ್ಯಕಿರ್ಭರತಶ್ರೇಷ್ಠ ಪ್ರತ್ಯುವಾಚ ಯುಧಿಷ್ಠಿರಮ್ ॥ 2 ॥
ಸಂಜಯ ಎಲೈ ಭರತಶ್ರೇಷ್ಠನೇ, ಪ್ರೀತಿಯುಕ್ತವಾದ, ಮನೋಹರವಾದ, ಮಧುರಾಕ್ಷರಗಳಿಂದ ಕೂಡಿದ, ಆ ಕಾಲಕ್ಕೆ ಯೋಗ್ಯವಾದ, ವಿಚಿತ್ರವಾದ, ತನ್ನ ಬುದ್ಧಿಯಿಂದಲೇ ಆಡಿದ ಧರ್ಮರಾಜನ ಆ ಮಾತನ್ನು ಕೇಳಿ ಶಿನಿಪುಂಗವನಾದ ಸಾತ್ಯಕಿಯು ಯುಧಿಷ್ಠಿರನನ್ನು ಕುರಿತು ಮಾತನಾಡಿದನು.
ಶ್ರುತಂ ತೇ ಗದತೋ ವಾಕ್ಯಂ ಸರ್ವಮೇತನ್ಮಯಾಽಚ್ಯುತ |
ನ್ಯಾಯಯುಕ್ತಂ ಚ ಚಿತ್ರಂ ಚ ಫಲ್ಗುನಾರ್ಥೇ ಯಶಸ್ಕರಮ್ ॥ 3 ॥
ಎಲೈ ಅಚ್ಯುತನೇ, ನೀನು ಅರ್ಜುನನ ಸಲುವಾಗಿ ಆಡಿದ ನ್ಯಾಯಯುತವಾದ ಪ್ರೀತಿಕರವಾದ ವಿಚಿತ್ರವಾದ ನಿನ್ನ ಮಾತೆಲ್ಲವನ್ನೂ ಕೇಳಿದೆನು.
ಏವಂವಿಧೇ ತಥಾ ಕಾಲೇ ಮಾದೃಶಂ ಪ್ರೇಕ್ಷ ್ಯ ಸಮ್ಮತಮ್ |
ವಕ್ತುಮರ್ಹಸಿ ರಾಜೇಂದ್ರ ಯಥಾ ಪಾರ್ಥಂ ತಥೈವ ಮಾಮ್ ॥ 4 ॥
ಎಲೈ ರಾಜೇಂದ್ರನೇ, ಇಂತಹ ಕಾಲದಲ್ಲಿ ನನ್ನಂತಹ ಸಮ್ಮತನಾದವನನ್ನು ನೋಡಿ ಅರ್ಜುನನಿಗೆ ಹೇಳುವಂತೆಯೇ ನೀನು ನನಗೂ ಹೇಳಬೇಕು.
ನ ಮೇ ಧನಂಜಯಸ್ಯಾರ್ಥೇ ಪ್ರಾಣಾ ರಕ್ಷ್ಯಾಃ ಕಥಂಚನ |
ತ್ವತ್ಪ್ರಯುಕ್ತಃ ಪುನರಹಂ ಕಿಂ ನ ಕುರ್ಯಾಂ ಮಹಾಹವೇ ॥ 5 ॥
ಧನಂಜಯನ ಸಲುವಾಗಿ (ಧನಂಜಯನು ಯುದ್ಧಕ್ಕೆ ಹೋಗಿರುವಾಗ) ನಾನು ನನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕಾದ ಸಂದರ್ಭವೇ ಇಲ್ಲ. ಇನ್ನು ನೀನು ಪ್ರಚೋದಿಸಿದ ಮೇಲೆ ದೊಡ್ಡ ಯುದ್ಧದಲ್ಲಿ ನಾನು ಏನನ್ನು ಮಾಡದೇ ಇರಲು ಸಾಧ್ಯ?
ತ್ರೀನ್ ಲೋಕಾನ್ ವಾರಯೇಯಂ ಚ ಸದೇವಾಸುರಮಾನುಷಾನ್ |
ತ್ವತ್ಪ್ರಯುಕ್ತೋ ನರೇಂದ್ರೇಹ ಕಿಂ ಪುನಸ್ತಾನ್ ಸುದುರ್ಬಲಾನ್ ॥ 6 ॥
ಎಲೈ ನರೇಂದ್ರನೇ, ನಿನ್ನಿಂದ ಆಜ್ಞಾಪಿಸಲ್ಪಟ್ಟರೆ ದೇವಾಸುರ-ಮನುಷ್ಯರಿಂದ ಸಹಿತವಾದ ಮೂರುಲೋಕಗಳನ್ನೂ ತಡೆದೇನು! ಇನ್ನು ಆ ದುರ್ಬಲರ ವಿಷಯದಲ್ಲಿ ಹೇಳುವುದೇನಿದೆ?
ದುರ್ಯೋಧನಬಲಂ ತ್ವದ್ಯ ಯೋಧಯೇಯಂ ಸಮಂತತಃ |
ವಿಜೇಷ್ಯೇ ಚ ರಣೇ ರಾಜನ್ ಸತ್ಯಮೇತದ್ ಬ್ರವೀಮಿ ತೇ ॥ 7 ॥
ಎಲೈ ರಾಜನೇ, ಈ ದಿನ ನಾನು ದುರ್ಯೋಧನನ ಸೈನ್ಯದ ಜೊತೆಯಲ್ಲಿ ಎಲ್ಲ ಕಡೆಗಳಿಂದಲೂ ಯುದ್ಧವನ್ನು ಮಾಡಿ ಗೆಲ್ಲುವೆನು. ಈ ಸತ್ಯವಾದ ಮಾತನ್ನು ನಿನಗೆ ಹೇಳುತ್ತಿದ್ದೇನೆ.
ಕುಶಲ್ಯಹಂ ಕುಶಲಿನಂ ಸಮಾಸಾದ್ಯ ಧನಂಜಯಮ್ |
ಹತೇ ಜಯದ್ರಥೇ ಪಾಪೇ ಪುನರೇಷ್ಯಾಮಿ ತೇಽಂತಿಕಮ್ ॥ 8 ॥
ಕ್ಷೇಮದಿಂದಿರುವ ನಾನು ಕ್ಷೇಮದಿಂದಿರುವ ಅರ್ಜುನನನ್ನು ಸಮೀಪಿಸಿ, ಪಾಪಿಯಾದ ಜಯದ್ರಥನು ಹತನಾದ ಮೇಲೆ ಪುನಃ ನಿನ್ನ ಸಮೀಪಕ್ಕೆ ಬರುವೆನು.
ಅವಶ್ಯಂ ತು ಮಯಾ ಸರ್ವಂ ವಿಜ್ಞಾಪ್ಯಸ್ತ್ವಂ ನರಾಧಿಪ |
ಧನಂಜಯಸ್ಯ ಯದ್ ವಾಕ್ಯಂ ವಾಸುದೇವಸ್ಯ ಚೋಭಯೋಃ ॥ 9 ॥
ಎಲೈ ರಾಜನೇ, ಅರ್ಜುನನ ಮತ್ತು ಕೃಷ್ಣನ ಎಲ್ಲ ಮಾತುಗಳನ್ನೂ ನಾನು ಅವಶ್ಯವಾಗಿ ನಿನಗೆ ವಿಜ್ಞಾಪಿಸಬೇಕು.
ದೃಢಂ ತ್ವಭಿಹಿತಶ್ಚಾಹಮಾಚಾರ್ಯೇಣ ಪುನಃಪುನಃ |
ಮಧ್ಯೇ ಸರ್ವಸ್ಯ ಸೈನ್ಯಸ್ಯ ವಾಸುದೇವಸ್ಯ ಶೃಣ್ವತಃ ॥ 10 ॥
ಆಚಾರ್ಯನಾದ ಅರ್ಜುನನು ಕೃಷ್ಣನು ಕೇಳುವಂತೆಯೇ ಎಲ್ಲ ಸೈನ್ಯದ ಮಧ್ಯದಲ್ಲಿ ಪುನಃ ಪುನಃ ನನಗೆ ದೃಢವಾಗಿ ಹೀಗೆ ಹೇಳಿದ್ದಾನೆ.

ಅದ್ಯ ಮಾಧವ ರಾಜಾನಮಪ್ರಮತ್ತೋಽನುಪಾಲಯ |
ಆರ್ಯಾಂ ಯುದ್ಧೇ ಮತಿಂ ಕೃತ್ವಾ ಯಾವದ್ ಹನ್ಮಿ ಜಯದ್ರಥಮ್ ॥
ಎಲೈ ಮಧುಕುಲೋತ್ಪನ್ನನೇ, ಯುದ್ಧದಲ್ಲಿ ಶ್ರೇಷ್ಠವಾದ ಬುದ್ಧಿಯನ್ನು ಹೊಂದಿ ನಾನು ಜಯದ್ರಥನನ್ನು ಕೊಲ್ಲುವವರೆಗೆ ಎಚ್ಚರಿಕೆಯಿಂದ ಯುಧಿಷ್ಠಿರನನ್ನು ರಕ್ಷಿಸು.
ತ್ವಯಿ ಚಾಹಂ ಮಹಾಬಾಹೋ ಪ್ರದ್ಯುಮ್ನೇ ವಾ ಮಹಾರಥೇ |
ರಾಜಗೋಪೇ ಹನಿಷ್ಯಾಮಿ ನಿರಪೇಕ್ಷೋ ಜಯದ್ರಥಮ್ ॥ 12 ॥
ಎಲೈ ಮಹಾಬಾಹುವೇ, ನೀನಾಗಲೀ ಅಥವಾ ಮಹಾರಥನಾದ ಪ್ರದ್ಯುಮ್ನನಾಗಲೀ ರಾಜನನ್ನು ರಕ್ಷಿಸಿದರೆ ನಾನು ಬೇರೆ ಯಾವ ಅಪೇಕ್ಷೆಯೂ ಇಲ್ಲದೆ ಜಯದ್ರಥನನ್ನು ಕೊಲ್ಲುವೆನು.

ಸ ಏವಂ ಸುವಿನಿಕ್ಷಿಪ್ತೋ ನಿಕ್ಷೇಪಃ ಸವ್ಯಸಾಚಿನಾ |
ಭಾರದ್ವಾಜಭಯಂ ತೇಽದ್ಯ ಮನ್ಯತೇ ವೈ ಧನಂಜಯಃ ॥ 13 ॥
ಹೀಗೆ ಸವ್ಯಸಾಚಿಯಾದ ಅರ್ಜುನನಿಂದ ನನ್ನಲ್ಲಿ ನಿಕ್ಷೇಪವಾಗಿ ಇಡಲ್ಪಟ್ಟಿದ್ದೀಯೆ. ಅರ್ಜುನನು ನಿನಗೆ ಈ ದಿನ ದ್ರೋಣರಿಂದ ಭಯವಿದೆ ಎಂದು ತಿಳಿದಿದ್ದಾನೆ (ಅರ್ಜುನನು ನನಗೆ ಹೀಗೆ ಹೇಳಿದ್ದಾನೆ).
ಜಾನಾಸಿ ಹಿ ರಣೇ ದ್ರೋಣಂ ರಭಸಂ ಶ್ರೇಷ್ಠಸಮ್ಮತಮ್ |
ಪ್ರತಿಜ್ಞಾಂ ಚಾಪಿ ತೇ ನಿತ್ಯಂ ಶ್ರುತಾ ದ್ರೋಣಸ್ಯ ಮಾಧವ ॥ 14 ॥
ಎಲೈ ಮಾಧವನೇ, ಶ್ರೇಷ್ಠ ಸಮ್ಮತರಾದ ದ್ರೋಣರ ರಣರಂಗದಲ್ಲಿನ ವೇಗವನ್ನು ನೀನು ತಿಳಿದಿದ್ದೀಯೆ. ದ್ರೋಣರ ಪ್ರತಿಜ್ಞೆಯನ್ನೂ ಸಹ ಯಾವಾಗಲೂ ಕೇಳಿದ್ದೀಯೆ.
ಗ್ರಹಣಂ ಧರ್ಮರಾಜಸ್ಯ ಭಾರದ್ವಾಜೋಽಪಿ ಗೃದ್ಧ್ಯತಿ |
ಶಕ್ತಶ್ಚಾಪಿ ರಣೇ ದ್ರೋಣೋ ನಿಗ್ರಹೀತುಂ ಯುಧಿಷ್ಠಿರಮ್ ॥ 15 ॥
ದ್ರೋಣರು ಧರ್ಮರಾಜನನ್ನು ಸೆರೆಹಿಡಿಯಲು ಅಪೇಕ್ಷಿಸುತ್ತಾರೆ. ರಣರಂಗದಲ್ಲಿ ಯುಧಿಷ್ಠಿರನನ್ನು ಹಿಡಿಯಲು ಅವರು ಸಮರ್ಥರಾಗಿಯೂ ಇದ್ದಾರೆ.
ಏವಂ ತ್ವಯಿ ಸಮಾಧಾಯ ಧರ್ಮರಾಜಂ ನರೋತ್ತಮಮ್ |
ಅಹಮದ್ಯ ಗಮಿಷ್ಯಾಮಿ ಸೈಂಧವಸ್ಯ ವಧಾಯ ಹಿ ॥ 16 ॥
ಆದ್ದರಿಂದ ನರಶ್ರೇಷ್ಠನಾದ ಧರ್ಮರಾಜನನ್ನು ನಿನಗೆ ಒಪ್ಪಿಸಿ ನಾನು ಈ ದಿನ ಸೈಂಧವನ ವಧೆಗಾಗಿ ಹೋಗುವೆನು.
ಸ ತ್ವಮದ್ಯ ರಣೇ ಯತ್ತೋ ರಕ್ಷ ಮಾಧವ ಪಾಂಡವಮ್ |
ರಕ್ಷಣೇ ಧರ್ಮರಾಜಸ್ಯ ಧ್ರುವೋ ಹಿ ವಿಜಯೋ ಮಮ ॥ 17 ॥
ಎಲೈ ಮಾಧವನೇ, ಈ ದಿನ ನೀನು ಪಾಂಡುಪುತ್ರನಾದ ಧರ್ಮರಾಜನನ್ನು ಎಚ್ಚರಿಕೆಯಿಂದ ರಕ್ಷಿಸು. ನೀನು ಧರ್ಮರಾಜನನ್ನು ರಕ್ಷಿಸಿದರೆ ಯುದ್ಧದಲ್ಲಿ ನನ್ನ ಜಯವು ನಿಶ್ಚಿತವಾದುದು.
ಜಯದ್ರಥಮಹಂ ಹತ್ವಾ ಧ್ರುವಮೇಷ್ಯಾಮಿ ಮಾಧವ |
ನ ಧರ್ಮರಾಜಂ ದ್ರೋಣಶ್ಚೇನ್ನಿಗೃಹ್ಣೀಯಾದ್ ರಣೇ ಬಲಾತ್ ॥ 18 ॥
ಎಲೈ ಮಾಧವನೇ, ದ್ರೋಣರು ತಮ್ಮ ಸಾಮರ್ಥ್ಯದಿಂದ ರಣರಂಗದಲ್ಲಿ ಧರ್ಮರಾಜನನ್ನು ಸೆರೆಹಿಡಿಯದಿದ್ದರೆ ನಾನು ಜಯದ್ರಥನನ್ನು ಕೊಂದು ಖಂಡಿತವಾಗಿ ಮರಳಿ ಬರುವೆನು.
ನಿಗೃಹೀತೇ ನರಶ್ರೇಷ್ಠೇ ಭಾರದ್ವಾಜೇನ ಮಾಧವ |
ಸೈಂಧವಸ್ಯ ವಧೋ ನ ಸ್ಯಾನ್ಮಮಾಪ್ರೀತಿಸ್ತಥಾ ಭವೇತ್ ॥ 19 ॥
ಎಲೈ ಮಾಧವನೇ, ದ್ರೋಣರು ನರೋತ್ತಮನಾದ ಧರ್ಮರಾಜನನ್ನು ಸೆರೆಹಿಡಿದರೆ ಸೈಂಧವನ ವಧೆ ಆಗಲಾರದು. ನನಗೆ ಅಸಮಾಧಾನವೂ ಆದೀತು.
ಏವಂಗತೇ ನರಶ್ರೇಷ್ಠೇ ಪಾಂಡವೇ ಸತ್ಯವಾದಿನಿ |
ಅಸ್ಮಾಕಂ ಗಮನಂ ವ್ಯಕ್ತಂ ವನಂ ಪ್ರತಿ ಭವೇತ್ಪುನಃ ॥ 20 ॥
ಯದಿ ದ್ರೋಣೋ ರಣೇ ಕ್ರುದ್ಧೋ ನಿಗೃಹ್ಣೀಯಾದ್ ಯುಧಿಷ್ಠಿರಮ್ |
ಸೋಽಯಂ ಮಮ ಜಯೋ ವ್ಯಕ್ತಂ ವ್ಯರ್ಥ ಏವ ಭವಿಷ್ಯತಿ ॥ 21 ॥
ಸತ್ಯವಾದಿಯಾದ, ನರಶ್ರೇಷ್ಠನಾದ, ಪಾಂಡವನಾದ ಧರ್ಮರಾಜನು ಅಂತಹ ಪರಿಸ್ಥಿತಿಯನ್ನು ಹೊಂದಿದರೆ ನಾವು ಪುನಃ ಖಂಡಿತವಾಗಿ ವನವಾಸಕ್ಕೆ ಹೋಗಬೇಕಾದೀತು. ಕ್ರುದ್ಧರಾದ ದ್ರೋಣರು ರಣರಂಗದಲ್ಲಿ ಯುಧಿಷ್ಠಿರನನ್ನು ಹಿಡಿದರೆ ಈ ನನ್ನ ಜಯವೂ ಸಹ ಸ್ಪಷ್ಟವಾಗಿ ವ್ಯರ್ಥವಾಗುವುದು.
ಸ ತ್ವಮದ್ಯ ಮಹಾಬಾಹೋ ಪ್ರಿಯಾರ್ಥಂ ಮಮ ಮಾಧವ |
ಜಯಾರ್ಥಂ ಚ ಯಶೋಽರ್ಥಂ ಚ ರಕ್ಷ ರಾಜಾನಮಾಹವೇ ॥ 22 ॥
ಎಲೈ ಮಾಧವನೇ, ಮಹಾಬಾಹುವೇ, ಅಂತಹ (ಆದ್ದರಿಂದ) ನೀನು ಈ ದಿನ ನನ್ನ ಹಿತಕ್ಕಾಗಿ, ಜಯದ ಸಲುವಾಗಿ ಮತ್ತು ಕೀರ್ತಿಯ ಸಲುವಾಗಿ ರಾಜನನ್ನು ರಕ್ಷಿಸು (ಎಂದು ಅರ್ಜುನನು ನನಗೆ ಹೇಳಿದ್ದಾನೆ).
ಸ ಭವಾನ್ ಮಯಿ ನಿಕ್ಷೇಪೋ ನಿಕ್ಷಿಪ್ತಃ ಸವ್ಯಸಾಚಿನಾ |
ಭಾರದ್ವಾಜಾದ್ ಭಯಂ ನಿತ್ಯಂ ಪಶ್ಯಮಾನೇನ ತೇ ಪ್ರಭೋ ॥ 23 ॥
ಎಲೈ ಪ್ರಭುವಾದ ಯುಧಿಷ್ಠಿರನೇ, ಅಂತಹ ನಿನ್ನನ್ನು ಅರ್ಜುನನು ದ್ರೋಣರಿಂದ ನಿತ್ಯವೂ ಭಯವನ್ನು ಆಶಂಕಿಸುತ್ತಾ ನನ್ನಲ್ಲಿ ನಿಕ್ಷೇಪವಾಗಿ ಇಟ್ಟಿದ್ದಾನೆ.
ತಸ್ಯಾಪಿ ಚ ಮಹಾಬಾಹೋ ಸತ್ಯಂ ಪಶ್ಯಾಮಿ ಸಂಯುಗೇ |
ನಾನ್ಯಂ ಹಿ ಪ್ರತಿಯೋದ್ಧಾರಂ ರೌಗ್ಮಿಣೇಯಾದೃತೇ ಪ್ರಭೋ ॥ 24 ॥
ಮಾಂ ಚಾಸೌ ಮನ್ಯತೇ ಯುದ್ಧೇ ಭಾರದ್ವಾಜಸ್ಯ ಧೀಮತಃ ॥ 25 ॥
ಎಲೈ ಮಹಾಬಾಹುವೇ, ಆ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ಸಹ ರಣರಂಗದಲ್ಲಿ ಪ್ರದ್ಯುಮ್ನನೊಬ್ಬನನ್ನು ಬಿಟ್ಟರೆ ಬೇರೆ ಯಾವ ಪ್ರತಿಯೋಧನನ್ನೂ ನಾನು ಖಂಡಿತವಾಗಿ ಕಾಣುವುದಿಲ್ಲ. ಮೇಧಾವಿಯಾದ ಅರ್ಜುನನು ನನ್ನನ್ನೂ ಸಹ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ಸಮರ್ಥನೆಂದು ತಿಳಿದಿದ್ದಾನೆ.
ಸೋಽಹಂ ಸಂಭಾವನಾಂ ಚೈವಮಾಚಾರ್ಯವಚನಂ ಚ ತತ್ |
ಪೃಷ್ಠತೋ ನೋತ್ಸಹೇ ಕರ್ತುಂ ನ ತ್ವಾಂ ತ್ಯಕ್ಷ್ಯಾಮಿ ಪಾಂಡವ ॥ 26 ॥

ಎಲೈ ಪಾಂಡವನೇ, ಅಂತಹ ನಾನು ನೀನು ತೋರಿಸುವ ಗೌರವವನ್ನು ಮತ್ತು ನನಗೆ ಆಚಾರ್ಯನಾದ ಅರ್ಜುನನ ಮಾತನ್ನು ತಿರಸ್ಕರಿಸಲಾರೆ. ಆದ್ದರಿಂದ ನಿನ್ನನ್ನು ಬಿಟ್ಟು ಹೋಗುವುದಿಲ್ಲ.
ಆಚಾರ್ಯೋರ್ ಲಘುಹಸ್ತಶ್ಚ ಅವಧ್ಯಕವಚಾವೃತಃ |
ಉಪಲಭ್ಯ ರಣೇ ಕ್ರೀಡೇದ್ ಯಥಾ ಶಕುನಿನಾ ಶಿಶುಃ ॥ 27 ॥
ಆಚಾರ್ಯನಾದ ಅರ್ಜುನನು ಕ್ಷಿಪ್ರಹಸ್ತನೂ, ಅವಧ್ಯವಾದ ಕವಚವನ್ನು ಧರಿಸಿದವನೂ ಆಗಿದ್ದಾನೆ. ಅವನು ರಣಭೂಮಿಯನ್ನು ಸೇರಿ ಮಗುವು ಮರದ ಪಕ್ಷಿಯ ಜೊತೆಯಲ್ಲಿ ಆಡಿದಂತೆ ಆಡಿಯಾನು.
ಯದಿ ಕಾರ್ಷ್ಣಿರ್ಧನುಷ್ಪಾಣಿರಿಹ ಸ್ಯಾನ್ಮಕರಧ್ವಜಃ |
ತಸ್ಮೈ ತ್ವಾಂ ವಿಸೃಜೇಯಂ ವೈ ಸ ತ್ವಾಂ ರಕ್ಷೇದ್ ಯಥಾಽರ್ಜುನಃ ॥
ಒಂದು ಪಕ್ಷ ಮಕರಧ್ವಜನಾದ ಪ್ರದ್ಯುಮ್ನನು ಧನುಷ್ಪಾಣಿಯಾಗಿ ಇಲ್ಲಿ ಇದ್ದಿದ್ದರೆ ನಿನ್ನನ್ನು ಅವನ ವಶಕ್ಕೆ ಒಪ್ಪಿಸುತ್ತಿದ್ದೆ. ಅರ್ಜುನನಂತೆಯೇ ಅವನು ನಿನ್ನನ್ನು ರಕ್ಷಿಸುತ್ತಿದ್ದನು.
ಕುರು ತ್ವಮಾತ್ಮನೋ ಗುಪ್ತಿಂ ಕಸ್ತೇ ಗೋಪ್ತಾ ಗತೇ ಮಯಿ |
ಯಃ ಪ್ರತೀಯಾದ್ ರಣೇ ದ್ರೋಣಂ ಯಾವದ್ ಗಚ್ಛಾಮಿ ಪಾಂಡವಮ್ ॥
ನಿನ್ನ ರಕ್ಷಣೆಯನ್ನು ನೀನೇ ಮಾಡಿಕೊಳ್ಳುವವನಾಗು. ನಾನು ಇಲ್ಲಿಂದ ಹೊರಟು ಪಾಂಡವನಾದ ಅರ್ಜುನನನ್ನು ಸೇರಿದರೆ, ನಾನು ಇಲ್ಲದಿರುವಾಗ ದ್ರೋಣರಿಗೆ ಪ್ರತಿಯಾಗಿ ಯುದ್ಧವನ್ನು ಮಾಡಿ ನಿನ್ನನ್ನು ರಕ್ಷಿಸುವವರು ಯಾರು?
ಮಾ ಹಿ ತೇ ಭಯಮದ್ಯಾಸ್ತು ರಾಜನ್ನರ್ಜುನಸಂಭವಮ್ |
ನಹಿ ಜಾತು ಮಹಾಬಾಹುರ್ಭಾರಮುದ್ಯಮ್ಯ ಸೀದತಿ ॥ 30 ॥
ಎಲೈ ರಾಜನೇ, ನಿನಗೆ ಅರ್ಜುನನ ವಿಷಯದಲ್ಲಿ ಈ ದಿನ ಭಯಪಡುವ ಕಾರಣವಿಲ್ಲ. ಮಹಾಬಾಹುವಾದ ಅರ್ಜುನನು ದೊಡ್ಡ ಭಾರವು ಒದಗಿದಾಗ ಎಂದೂ ವಿಷಾದ ಪಡುವವನಲ್ಲ.
ಯೇ ಚ ಸೌವೀರಕಾ ಯೋಧಾಸ್ತಥಾ ಸೈಂಧವಪೌರವಾಃ |
ಉದೀಚ್ಯಾ ದಾಕ್ಷಿಣಾತ್ಯಾಶ್ಚ ಯೇ ಚಾನ್ಯೇಽಪಿ ಮಹಾರಥಾಃ ॥ 31 ॥
ಯೇ ಚ ಕರ್ಣಮುಖಾ ರಾಜನ್ ರಥೋದಾರಾಃ ಪ್ರಕೀರ್ತಿತಾಃ |
ಧನಂಜಯಸ್ಯ ಕ್ರುದ್ಧಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ 32 ॥
ಎಲೈ ರಾಜನೇ, ಸುವೀರದೇಶದ ಯೋಧರೂ, ಸೈಂಧವ-ಪೌರವ ಯೋಧರೂ, ಉತ್ತರ ದೇಶದ ಮತ್ತು ದಕ್ಷಿಣದೇಶದ ಯೋಧರೂ ಮತ್ತು ಉಳಿದ ಮಹಾರಥರೂ ಯಾರಿದ್ದಾರೆಯೋ, ಯಾವ ಕರ್ಣ ಮೊದಲಾದವರು ಶ್ರೇಷ್ಠರಾದ ರಥರೆಂದು ಹೇಳಲ್ಪಡುತ್ತಾರೆಯೋ ಅವರೆಲ್ಲರೂ ಕೋಪಗೊಂಡ ಅರ್ಜುನನ ಹದಿನಾರನೆಯ ಒಂದು ಕಲೆಗೂ (ಭಾಗಕ್ಕೂ) ಸಮರಾದವರಲ್ಲ.
ಉದ್ಯುಕ್ತಾ ಪೃಥಿವೀ ರಾಜನ್ ಸಸುರಾಸುರಮಾನವಾ |
ಸರಾಕ್ಷಸಗಣಾ ಚೈವ ಸಕಿನ್ನರಮಹೋರಗಾ |
ಜಂಗಮಸ್ಥಾವರೈಃ ಸಾರ್ಧಂ ನಾಲಂ ಪಾರ್ಥಸ್ಯ ಸಂಯುಗೇ ॥ 33 ॥
ಏತತ್ ಜ್ಞಾತ್ವಾ ಮಹಾರಾಜ ವ್ಯೇತು ತೇ ಭೀರ್ಧನಂಜಯೇ ॥ 34 ॥
ಎಲೈ ರಾಜನೇ, ಸುರಾಸುರ ಮಾನವರಿಂದ ಸಹಿತವಾದ, ರಾಕ್ಷಸ ಗಣಗಳಿಂದಲೂ, ಕಿನ್ನರ-ಮಹೋರಗಗಳಿಂದಲೂ, ಎಲ್ಲ ಸ್ಥಾವರ-ಜಂಗಮಗಳಿಂದಲೂ ಸಹಿತವಾದ ಈ ಭೂಮಿಯು ಯುದ್ಧದಲ್ಲಿ ಅರ್ಜುನನ ಸಾಮರ್ಥ್ಯದ ಎದುರಿನಲ್ಲಿ ಸಾಕಾಗುವುದಿಲ್ಲ. ಎಲೈ ಮಹಾರಾಜನೇ, ಇದನ್ನು ತಿಳಿದು ಧನಂಜಯನ ವಿಷಯದಲ್ಲಿ ಭಯವನ್ನು ಬಿಡು.
ಯತ್ರ ಕೃಷ್ಣೌ ಮಹೇಷ್ವಾಸೌ ಗತೌ ಸತ್ಯಪರಾಕ್ರಮೌ |
ನ ತತ್ರ ಕರ್ಮಣೋ ವ್ಯಾಪತ್ ಕಥಂಚಿದಪಿ ವಿದ್ಯತೇ ॥ 35 ॥
ಎಲ್ಲಿ ಸತ್ಯಪರಾಕ್ರಮಶಾಲಿಗಳೂ ಮತ್ತು ಮಹಾಧನುರ್ಧಾರಿಯೂ ಆದ ಕೃಷ್ಣಾರ್ಜುನರು ಹೋಗಿದ್ದಾರೆಯೋ ಅಲ್ಲಿ ಯಾವ ರೀತಿಯಿಂದಲೂ ಯಾವ ಕಾರ್ಯವೂ ಕೆಡುವುದಿಲ್ಲ.
ದೈವಂ ಕೃತಾಸ್ತ್ರತಾಂ ಯೋಗಮಮರ್ಷಂ ಶೌರ್ಯಮಾಹವೇ |
ಕೃತಜ್ಞತಾಂ ದಯಾಂ ಚಾಪಿ ಭ್ರಾತುಸ್ತ್ವಮಪಿ ಚಿಂತಯ ॥ 36 ॥
ನೀನು ನಿನ್ನ ತಮ್ಮನಾದ ಅರ್ಜುನನ ದೈವಬಲವನ್ನೂ, ಅಸ್ತ್ರಜ್ಞತೆಯನ್ನೂ, ವಿದ್ಯೆಯನ್ನೂ, ಕೋಪವನೂಹನ, ಯುದ್ಧದಲ್ಲಿ ಶೌರ್ಯವನ್ನೂ, ಕೃತಜ್ಞತೆಯನ್ನೂ, ದಯೆಯನ್ನೂ ಚಿಂತಿಸುವವನಾಗು.
ಮಯಿ ಚಾಪ್ಯಪಯಾತೇ ತ್ವಂ ಗಚ್ಛಮಾನೇಽರ್ಜುನಂ ಪ್ರತಿ |
ದ್ರೋಣೇ ಚಿತ್ರಾಸ್ತ್ರತಾಂ ಸಂಖೇ ರಾಜಂಸ್ತ್ವಮನುಚಿಂತಯ ॥ 37 ॥
ಎಲೈ ರಾಜನೇ, ನಾನು ನಿನ್ನನ್ನು ಬಿಟ್ಟು ಅರ್ಜುನನ ಬಳಿಗೆ ಹೋದರೆ ಯುದ್ಧದಲ್ಲಿ ದ್ರೋಣರ ಅಸ್ತ್ರಕೌಶಲವನ್ನು ನೀನು ಚಿಂತಿಸು.
ಆಚಾರ್ಯೋರ್ ಹಿ ಭೃಶಂ ರಾಜನ್ ನಿಗ್ರಹೇ ತವ ಗೃಧ್ಯತಿ |
ಪ್ರತಿಜ್ಞಾಮಾತ್ಮನೋ ರಕ್ಷನ್ ಸತ್ಯಾಂ ಕರ್ತುಂ ಚ ಭಾರತ ॥ 38 ॥
ಎಲೈ ಭಾರತನೇ, ದ್ರೋಣಾಚಾರ್ಯರು ತಮ್ಮ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡಲು, ಯುದ್ಧದಲ್ಲಿ ನಿನ್ನನ್ನು ಹಿಡಿಯಲು ಬಹಳವಾಗಿ ಅಪೇಕ್ಷಿಸುತ್ತಾರೆ.
ಯಸ್ಯಾಹಂ ಪ್ರತ್ಯಯಾತ್ ಪಾರ್ಥ ಗಚ್ಛೇಯಂ ಫಲ್ಗುನಂ ಪ್ರತಿ |
ಕುರುಷ್ವಾದ್ಯಾತ್ಮನೋ ಗುಪ್ತಿಂ ಕಸ್ತೇ ಗೋಪ್ತಾ ಗತೇ ಮಯಿ |
ಪ್ರತ್ಯಯೋ ನಹಿ ಮೇ ಪಾರ್ಥ ಯಾವದ್ ಗಚ್ಛಾಮಿ ಪಾಂಡವಮ್ ॥

ಎಲ್ಲೈ ಯುಧಿಷ್ಠಿರನೇ, ನಾನು ಯಾರ ಮೇಲೆ ನಂಬಿಕೆಯಿಂದ ಅರ್ಜುನನ ಬಳಿಗೆ ಹೋದೇನು? ನೀನೇ ನಿನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕಾಗುವುದು. ನಾನು ಹೋದರೆ ನಿನಗೆ ರಕ್ಷಕರು ಯಾರು? ನಾನು ಅರ್ಜುನನ ಬಳಿಗೆ ಹೋದರೆ ನಿನ್ನನ್ನು ಯಾರಾದರೂ ರಕ್ಷಿಸುವರೆಂಬ ನಂಬಿಕೆಯು ನನಗಿಲ್ಲ.
ತರ್ಹ್ಯಹಂ ತ್ವಯಿ ಕೌರವ್ಯ ವಿನಿಕ್ಷಿಪ್ತೇ ಮಹಾರಥೇ |
ಕಸ್ಮಿಂಶ್ಚಿತ್ ಸಂಪ್ರಯಾಸ್ಯಾಮಿ ಸತ್ಯಮೇತದ್ ಬ್ರವೀಮಿ ತೇ ॥40॥
ಎಲ್ಲೈ ಕೌರವ್ಯನೇ, ಹಾಗೆ ಯಾವನಲ್ಲಾದರೂ ಮಹಾರಥನಲ್ಲಿ ನಂಬಿಕೆಯಿದ್ದಿದ್ದರೆ ನಿನ್ನನ್ನು ಅವನಿಗೆ ಒಪ್ಪಿಸಿ ನಾನು ಹೋಗುತ್ತಿದ್ದೆ. ಈ ಮಾತನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ನ ಪಶ್ಯಾಮಿ ರಥಂ ಕಂಚಿದ್ ಯಸ್ತೇ ಗೋಪ್ತಾ ಭವೇದಿಹ |
ಶಕ್ತಂ ಯಂ ಮನ್ಯಸೇ ರಾಜನ್ ಗೋಪ್ತಾರಂ ಪ್ರತಿ ಪಾಂಡವ ॥ 41 ॥
ಎಲ್ಲೈ ರಾಜನೇ, ಪಾಂಡವನೇ, ನೀನು ಯಾರನ್ನು ನಿನ್ನ ರಕ್ಷಕನೆಂದು ತಿಳಿಯುವಿಯೋ ಅಂತಹ ಯಾವ ರಕ್ಷಕನಾದ ಮಹಾರಥನನ್ನೂ ನಾನು ಇಲ್ಲಿ ಕಾಣುವುದಿಲ್ಲ.
ಏತದ್ ವಿಚಾರ್ಯ ಬಹುಶೋ ಬುದ್ಧ್ಯಾ ಬುದ್ಧಿಮತಾಂ ವರ |
ದೃಷ್ಟ್ವಾ ಶ್ರೇಯಃ ಪರಂ ಬುದ್ಧ್ಯಾ ತತೋ ರಾಜನ್ ಪ್ರಶಾಧಿ ಮಾಮ್॥
ಮೇಧಾವಿಗಳಲ್ಲಿ ಶ್ರೇಷ್ಠನಾದವನೇ, ಇದನ್ನು ನಿನ್ನ ಬುದ್ಧಿಯಿಂದ ಬಹಳ ವಿಚಾರ ಮಾಡಿ, ಯಾವುದು ಶ್ರೇಯಸ್ಕರವೆಂದು ತಿಳಿದು ಎಲ್ಲೈ ರಾಜನೇ, ನನಗೆ ಆದೇಶವನ್ನು ನೀಡುವವನಾಗು.
ಯುಧಿಷ್ಠಿರಃ
ಏವಮೇತನ್ಮಹಾಬಾಹೋ ಯಥಾ ವದಸಿ ಮಾಧವ |
ನತು ಮೇ ಶುದ್ಧ್ಯತೇ ಭಾವಃ ಶ್ವೇತಾಶ್ವಂ ಪ್ರತಿ ಮಾರಿಷ ॥ 43 ॥
ಯುಧಿಷ್ಠಿರ ಎಲ್ಲೈ ಮಾಧವನೇ, ಮಹಾಬಾಹುವೇ, ಇವೆಲ್ಲವೂ ನೀನು ಹೇಳಿದಂತೆಯೇ ಸರಿ. ಆದರೆ ಪೂಜ್ಯನೇ, ಅರ್ಜುನನ ವಿಷಯದಲ್ಲಿ ನನ್ನ ಮನಸ್ಸಿಗೆ ಸಮಾಧಾನವಿಲ್ಲ.
ಕರಿಷ್ಯೇ ಚ ಪರಂ ಯತ್ನಮಾತ್ಮನೋ ರಕ್ಷಣಂ ಪ್ರತಿ |
ಗಚ್ಛ ತ್ವಂ ಸಮನುಜ್ಞಾತೋ ಯತ್ರ ಯಾತೋ ಧನಂಜಯಃ ॥ 44 ॥
ನಾನು ನನ್ನ ರಕ್ಷಣೆಯ ವಿಷಯದಲ್ಲಿ ಪರಮಪ್ರಯತ್ನವನ್ನು ಮಾಡುವೆನು. ನಿನಗೆ ಅನುಮತಿಯನ್ನು ಕೊಟ್ಟಿದ್ದೇನೆ, ಅರ್ಜುನನು ಹೋದಲ್ಲಿಗೆ ನೀನು ಹೋಗು.
ಆತ್ಮಸಂರಕ್ಷಣಂ ಸಂಖ್ಯೇ ಗಮನಂ ಚಾರ್ಜುನಂ ಪ್ರತಿ |
ವಿಚಾರ್ಯೈತದ್ ದ್ವಯಂ ಬುದ್ಧ್ಯಾ ಗಮನಂ ತತ್ರ ರೋಚಯೇ ॥45॥
ಯುದ್ಧದಲ್ಲಿ ನನ್ನ ರಕ್ಷಣೆ ಮತ್ತು ಅರ್ಜುನನ ಕಡೆಗೆ ಗಮನ, ಎರಡನ್ನೂ ಬುದ್ಧಿಯಿಂದ ವಿಚಾರ ಮಾಡಿ, ನೀನು ಅರ್ಜುನನಿದ್ದಲ್ಲಿಗೆ ಹೋಗುವುದನ್ನೇ ನಾನು ಬಯಸುತ್ತೇನೆ.
ಪೃಷ್ಠತಃ ಪುರುಷವ್ಯಾಘ್ರ ಭೀಮಸಾತ್ವನುಗಮಿಷ್ಯತಿ |
ಗಚ್ಛ ತ್ವಂ ಸಮನುಜ್ಞಾತೋ ಯತ್ರ ಯಾತೋ ಧನಂಜಯಃ |
ಮಮಾಪಿ ರಕ್ಷಣಂ ಭೀಮಃ ಕರಿಷ್ಯತಿ ಮಹಾಬಲಃ ॥ 46 ॥
ಎಲ್ಲೈ ಪುರುಷವ್ಯಾಘ್ರನೇ, ನಿನ್ನನ್ನು ಭೀಮನು ಹಿಂಬಾಲಿಸುತ್ತಾನೆ. ನನ್ನಿಂದ ಅನುಮತಿಯನ್ನು ಪಡೆದವನಾಗಿ ನೀನು ಧನಂಜಯನಿದ್ದಲ್ಲಿಗೆ ಹೋಗು. ಮಹಾಬಲನಾದ ಭೀಮನು ನನ್ನ ರಕ್ಷಣೆಯನ್ನೂ ಮಾಡುವನು.
ಪಾರ್ಷತಶ್ಚ ಸಸೋದರ್ಯಃ ಪಾರ್ಥಿವಾಶ್ಚ ಮಹಾರಥಾಃ |
ದ್ರೌಪದೇಯಾಶ್ಚ ಮಾಂ ತಾತ ರಕ್ಷಿಷ್ಯಂತಿ ನ ಸಂಶಯಃ ॥ 47 ॥
ಕೇಕಯಾ ಭ್ರಾತರಃ ಪಂಚ ರಾಕ್ಷಸಶ್ಚ ಘಟೋತ್ಕಚಃ |
ವಿರಾಟೋ ದ್ರುಪದಶ್ಚೈವ ಶಿಖಂಡೀ ಚ ಮಹಾರಥಃ ॥ 48 ॥
ಧೃಷ್ಟಕೇತುಶ್ಚ ಬಲವಾನ್ ಕುಂತಿಭೋಜಶ್ಚ ಮಾತುಲಃ |
ನಕುಲಃ ಸಹದೇವಶ್ಚ ಪಾಂಚಾಲಾಃ ಸೃಂಜಯಾಸ್ತಥಾ |
ಏತೇ ಸಮಾಹಿತಾಸ್ತಾತ ರಕ್ಷಿಷ್ಯಂತಿ ನ ಸಂಶಯಃ ॥ 49 ॥
ಎಲ್ಲೈ ಪ್ರೀತಿಪಾತ್ರನೇ, ತನ್ನ ಸಹೋದರರಿಂದ ಕೂಡಿದ ಧೃಷ್ಟದ್ಯುಮ್ನ, ಮಹಾರಥರಾದ ರಾಜರು, ದ್ರೌಪದಿಯ ಐವರು ಪುತ್ರರು ನನ್ನನ್ನು ರಕ್ಷಿಸುವರು. ಇದರಲ್ಲಿ ಸಂಶಯವಿಲ್ಲ. ಕೇಕಯ ದೇಶದ ಐವರು ಸಹೋದರರು, ರಾಕ್ಷಸನಾದ ಘಟೋತ್ಕಚ, ಮಹಾರಥರಾದ ವಿರಾಟ, ದ್ರುಪದ ಮತ್ತು ಶಿಖಂಡಿ, ಬಲಿಷ್ಠನಾದ ಧೃಷ್ಟಕೇತು, ಸೋದರಮಾವನಾದ ಕುಂತಿಭೋಜ, ನಕುಲ-ಸಹದೇವರು, ಪಾಂಚಾಲರು ಮತ್ತು ಸೃಂಜಯರು, ಎಲ್ಲೈ ಪ್ರೀತಿಪಾತ್ರನೇ, ಇವರೆಲ್ಲರೂ ಎಚ್ಚರಿಕೆಯಿಂದ ನನ್ನನ್ನು ರಕ್ಷಿಸುವರು. ಇದರಲ್ಲಿ ಸಂಶಯವಿಲ್ಲ.
ನ ದ್ರೋಣಃ ಸಹ ಸೈನ್ಯೇನ ಕೃತವರ್ಮಾ ಚ ಸಂಯುಗೇ |
ಸಮಾಸಾದಯಿತುಂ ಶಕ್ತೌ ನಚ ಮಾಂ ಧರ್ಷಯಿಷ್ಯತಃ ॥ 50 ॥
ರಣರಂಗದಲ್ಲಿ ಸೈನ್ಯದಿಂದ ಕೂಡಿದ ದ್ರೋಣರಾಗಲೀ ಅಥವಾ ಕೃತವರ್ಮನಾಗಲೀ ನನ್ನ ಬಳಿಗೆ ಬರಲು ಸಮರ್ಥರಾಗುವುದಿಲ್ಲ. ಅವರು ನನ್ನನ್ನು ಪರಾಭವಗೊಳಿಸಲಾರರು.
ಧೃಷ್ಟದ್ಯುಮ್ನಸ್ತು ಸಮರೇ ದ್ರೋಣಂ ಕ್ರುದ್ಧಂ ಪರಂತಪಃ |

ಧಾರಯಿಷ್ಯತಿ ವಿಕ್ರಮ್ಯ ವೇಲೇವ ಮಕರಾಲಯಮ್ ॥ 51 ॥
ಪರಂತಪನಾದ ಧೃಷ್ಟದ್ಯುಮ್ನನಾದರೋ ಕೋಪಗೊಂಡವನಾಗಿ ಯುದ್ಧದಲ್ಲಿ ತೀರವು ಸಮುದ್ರವನ್ನು ತಡೆದಂತೆ ತನ್ನ ಪರಾಕ್ರಮದಿಂದ ದ್ರೋಣರನ್ನು ತಡೆಯುವನು.
ಯತ್ರ ಸ್ಥಾಸ್ಯತಿ ಸಂಗ್ರಾಮೇ ಪಾರ್ಷತಃ ಪರವೀರಹಾ |
ನ ದ್ರೋಣಸ್ಯ ಬಲಂ ತಾತ ಕ್ರಾಮೇತ್ ತತ್ರ ಕಥಂಚನ ॥ 52 ॥
ಎಲೈ ಪ್ರೀತಿಪಾತ್ರನೇ, ಪರವೀರಘಾತಕನಾದ ಧೃಷ್ಟದ್ಯುಮ್ನನು ರಣರಂಗದಲ್ಲಿ ಎಲ್ಲಿರುವನೋ ಅಲ್ಲಿ ದ್ರೋಣರ ಸೈನ್ಯವು ಯಾವ ರೀತಿಯಿಂದಲೂ ಪ್ರವೇಶಿಸಲಾರದು.
ಏಷ ದ್ರೋಣವಿನಾಶಾಯ ಸಮುತ್ಪನ್ನೋ ಹುತಾಶನಾತ್ |
ಕವಚೀ ಸ ಶರೀ ಖಡ್ಗೀ ಧನ್ವೀ ಸ ರಥಭೂಷಣಃ ॥ 53 ॥
ಈ ಧೃಷ್ಟದ್ಯುಮ್ನನು ಕವಚ, ಬಾಣಗಳು, ಖಡ್ಗ, ಧನುಸ್ಸುಗಳನ್ನು ಧರಿಸಿ, ರಥಭೂಷಣನಾಗಿ ಅಗ್ನಿಯಿಂದ ದ್ರೋಣರ ನಾಶಕ್ಕಾಗಿಯೇ ಜನಿಸಿದ್ದಾನೆ.
ಏಷ ದ್ರೋಣಂ ರಣೇ ಕ್ರುದ್ಧಂ ವಾರಯೇತ ಸ ವೈ ಪ್ರಭೋ |
ಪಾಂಚಾಲಃ ಸಹಿತಃ ಸರ್ವೈಃ ಪಾಂಡವಾನಾಂ ಚ ಧನ್ವಿಭಿಃ ॥ 54 ॥
ಎಲೈ ಪ್ರಭುವೇ, ಅಂತಹ ಈ ಧೃಷ್ಟದ್ಯುಮ್ನನು ಎಲ್ಲ ಪಾಂಚಾಲರ ಮತ್ತು ಪಾಂಡವರ ಧನುರ್ಧಾರಿಗಳಿಂದ ಸಹಿತನಾಗಿ ಕ್ರುದ್ಧನಾಗಿ ಯುದ್ಧದಲ್ಲಿ ದ್ರೋಣರನ್ನು ತಡೆಯುವನು.
ವಿಸ್ರಬ್ಧೋ ಗಚ್ಛ ಶೈನೇಯ ಮಾ ಕಾರ್ಷೀರ್ಮಯಿ ಸಂಭ್ರಮಮ್ |
ಧೃಷ್ಟದ್ಯುಮ್ನೋ ರಣೇ ಕ್ರುದ್ಧಂ ಸ ದ್ರೋಣಂ ವಾರಯಿಷ್ಯತಿ ॥ 55 ॥
ಎಲೈ ಶೈನೇಯನೇ, ಧೈರ್ಯವಾಗಿ ಇಲ್ಲಿಂದ ಹೊರಡು. ನನ್ನ ವಿಷಯದಲ್ಲಿ ಆತಂಕಪಡಬೇಡ. ಯುದ್ಧದಲ್ಲಿ ಕೋಪಗೊಂಡ ಆ ಧೃಷ್ಟದ್ಯುಮ್ನನು ದ್ರೋಣರನ್ನು ತಡೆಯುವನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಸಪ್ತನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆಂಟನೆಯ ಅಧ್ಯಾಯ
ಸಂಜಯಃ
ಧರ್ಮರಾಜಸ್ಯ ತದ್ ವಾಕ್ಯಂ ನಿಶಮ್ಯ ಶಿನಿಪುಂಗವಃ |
ಪಾರ್ಥಾಚ್ಚ ಭಯಮಾಶಂಕೀ ಪರಿತ್ಯಾಗಾನ್ಮಹೀಪತೇಃ ॥ 1 ॥
ಅಪವಾದಂ ಹ್ಯಾತ್ಮನಶ್ಚ ಲೋಕಾದ್ ರಕ್ಷನ್ ವಿಶೇಷತಃ |
ನ ಮಾಂ ಭೀತ ಇತಿ ಬ್ರೂಯಾತ್ ಪ್ರಯಾಂತಂ ಫಲ್ಗುನಂ ಪ್ರತಿ ॥ 2 ॥
ನಿಶ್ಚಿತ್ಯ ಬಹುಧೈವಂ ಸ ಸಾತ್ಯಕಿರ್ಯುದ್ಧದುರ್ಮದಃ |
ನಾತಿವ್ಯಕ್ತಮಿವಾಭಾಷ್ಯ ಧರ್ಮರಾಜಂ ಮಹಾಯಶಾಃ ॥ 3 ॥
ಶೋಕಗದ್ಗದಯಾ ವಾಚಾ ಶೋಕೋಪಹತಚೇತನಃ |
ಯಥೇದಾನೀಮಿತಿ ಧ್ಯಾತ್ವಾ ಧರ್ಮರಾಜಮಥಾಬ್ರವೀತ್ ॥ 4 ॥
ಸಂಜಯ ಶಿನಿಪುಂಗವನಾದ ಸಾತ್ಯಕಿಯು ಧರ್ಮರಾಜನ ಆ ಮಾತನ್ನು ಕೇಳಿ, ರಾಜನನ್ನು ಪರಿತ್ಯಾಗ ಮಾಡಿದರೆ ಅರ್ಜುನನ ಅಸಮಾಧಾನದಿಂದ ಉಂಟಾಗುವ ಭಯವನ್ನೂ ಶಂಕಿಸಿ, ವಿಶೇಷವಾಗಿ ತನಗೆ ಒದಗಿ ಬರಬಹುದಾದ ಲೋಕಾಪವಾದವನ್ನು ಸ್ಮರಿಸಿಕೊಳ್ಳುತ್ತಾ, ಅರ್ಜುನನ ಬಳಿಗೆ ಹೋಗಲು ತನ್ನನ್ನು ಯಾರೂ ಭೀತನೆಂದು ಹೇಳಬಾರದು ಎಂದು ಯೋಚಿಸುತ್ತಾ, ಯುದ್ಧದುರ್ಮದನಾದ ಸಾತ್ಯಕಿಯು ಹೀಗೆಲ್ಲಾ ಬಹುರೀತಿಯಲ್ಲಿ ಯೋಚಿಸುತ್ತಾ, ಮಹಾಕೀರ್ತಿವಂತನಾದ ಅವನು ಧರ್ಮರಾಜನನ್ನು ಉದ್ದೇಶಿಸಿ ಶೋಕದಿಂದ ಕೂಡಿದ ಮನಸ್ಸುಳ್ಳವನಾಗಿ, ಶೋಕಗದ್ಗದ ಮಾತಿನಿಂದ ಹೇಗೆ ಧರ್ಮರಾಜನು ಇಲ್ಲಿಯೂ ರಕ್ಷಿಸಲ್ಪಡುವನು ಎಂದು ಚಿಂತಿಸಿ, ಧರ್ಮರಾಜನನ್ನು ಕುರಿತು ಅಸ್ಪಷ್ಟವಾಗಿ ಮಾತನಾಡಿದನು.
ಕೃತಾಂ ಚೇನ್ಮನ್ಯಸೇ ರಕ್ಷಾಂ ಸ್ವಸ್ತಿ ತೇಽಸ್ತು ವಿಶಾಂಪತೇ |
ಅನುಯಾಸ್ಯಾಮಿ ಬೀಭತ್ಸುಂ ಕರಿಷ್ಯೇ ವಚನಂ ತವ ॥ 5 ॥
ಎಲೈ ರಾಜನೇ, ನಿನಗೆ ರಕ್ಷಣೆಯು ಇರುವುದೆಂದು ಭಾವಿಸುವುದಾದರೆ, ನಿನಗೆ ಕ್ಷೇಮವಾಗಲಿ. ನಾನು ನಿನ್ನ ಆಜ್ಞೆಯನ್ನು ಅನುಸರಿಸಿ ಅರ್ಜುನನ ಬಳಿಗೆ ಹೋಗುವೆನು.
ನ ಹಿ ಮೇ ಪಾಂಡವಾತ್ ಕಶ್ಚಿತ್ ತ್ರಿಷು ಲೋಕೇಷು ವಿದ್ಯತೇ |
ಯೋ ಮೇ ಪ್ರಿಯತರೋ ರಾಜನ್ ಸತ್ಯಮೇತದ್ ಬ್ರವೀಮಿ ತೇ ॥6॥
ಎಲೈ ರಾಜನೇ, ನನಗೆ ಅರ್ಜುನನಿಗಿಂತ ಪ್ರಿಯನಾದವನು ಮೂರುಲೋಕಗಳಲ್ಲಿ ಯಾವನೂ ಇಲ್ಲ. ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ತಸ್ಯಾಹಂ ಪದವೀಂ ಯಾಸ್ಯೇ ಸಂದೇಶಾತ್ ತವ ಮಾನದ |
ತ್ವತ್ಕೃತೇ ನ ಹಿ ಮೇ ಕಿಂಚಿತ್ ನ ಕರ್ತವ್ಯಂ ಕಥಂಚನ ॥ 7 ॥

ಎಲೈ ಮಾನದನೇ, ನಿನ್ನ ಆಜ್ಞೆಯಂತೆ ನಾನು ಅರ್ಜುನನ ಮಾರ್ಗವನ್ನು ಹಿಡಿದು ಹೋಗುವೆನು. ನಿನ್ನ ಸಲುವಾಗಿ ನಾನು ಮಾಡಲಾರದುದು ಯಾವುದೂ ಇಲ್ಲ.
ಯಥಾ ಹಿ ಮೇ ಗುರೋರ್ವಾಕ್ಯಂ ವಿಶಿಷ್ಟಂ ದ್ವಿಪದಾಂವರ |
ತಥಾ ತವಾಪಿ ವಚನಂ ವಿಶಿಷ್ಟತರಮೇವ ಮೇ ॥ 8 ॥
ಎಲೈ ನರಶ್ರೇಷ್ಠನೇ, ಹೇಗೆ ನನಗೆ ಆಚಾರ್ಯನಾದ ಅರ್ಜುನನ ಮಾತು ವಿಶಿಷ್ಟವಾದುದೋ ಹಾಗೆಯೇ ನಿನ್ನ ವಚನವು ನನಗೆ ಅದಕ್ಕಿಂತಲೂ ವಿಶಿಷ್ಟವಾದುದು.
ಪ್ರಿಯೇ ಹಿ ತವ ವರ್ತೇತೇ ಭ್ರಾತರೌ ಕೃಷ್ಣಪಾಂಡವೌ |
ತಯೋಃ ಪ್ರಿಯೇ ಸ್ಥಿತಂ ಚೈವ ವಿದ್ಧಿ ಮಾಂ ರಾಜಸತ್ತಮ ॥ 9 ॥
ಎಲೈ ರಾಜಶ್ರೇಷ್ಠನೇ, ಸಹೋದರರಾದ ಕೃಷ್ಣಾರ್ಜುನರು ನಿನ್ನ ಹಿತದಲ್ಲಿಯೇ ಆಸಕ್ತರಾಗಿದ್ದಾರೆ. ನನ್ನನ್ನು ಅವರ ಪ್ರಿಯದಲ್ಲಿ ಆಸಕ್ತನಾದವನೆಂದು ತಿಳಿಯುವವನಾಗು.
ತ್ವದಾಜ್ಞಾಂ ಶಿರಸಾಽಽಧಾಯ ಪಾಂಡವಾರ್ಥಮಹಂ ಪ್ರಭೋ |
ಭೇತ್ಸ್ಯಾಮಿ ದುರ್ಭಿದಂ ಸೈನ್ಯಂ ಪ್ರಯಾಸ್ಯೇ ರಾಜಸತ್ತಮ ॥ 10 ॥
ಎಲೈ ಪ್ರಭುವೇ, ರಾಜಶ್ರೇಷ್ಠನೇ, ನಿನ್ನ ಆಜ್ಞೆಯನ್ನು ತಲೆಯ ಮೇಲೆ ಧರಿಸಿ, ಅರ್ಜುನನ ಸಲುವಾಗಿ ದುರ್ಭೇದ್ಯವಾದ ಆ ಸೈನ್ಯವನ್ನು ಭೇದಿಸಿ, ನಾನು ಪ್ರವೇಶಿಸುವೆನು.
ದ್ರೋಣಾನೀಕಂ ವಿಶಾಮ್ಯೇಷ ಕ್ರುದ್ಧೋ ಝಷ ಇವಾರ್ಣವಮ್ |
ತತ್ರ ಯಾಮಿ ಚ ಯತ್ರಾಸೌ ರಾಜನ್ ರಾಜಾ ಜಯದ್ರಥಃ ॥ 11 ॥
ಮೊಸಳೆಯು ಸಮುದ್ರವನ್ನು ಪ್ರವೇಶಿಸುವಂತೆ ಕ್ರುದ್ಧನಾದ ನಾನು ಇದೋ ದ್ರೋಣರ ಸೈನ್ಯವನ್ನು ಪ್ರವೇಶಿಸುತ್ತಿದ್ದೇನೆ. ಎಲೈ ರಾಜನೇ, ಈ ಜಯದ್ರಥನು ಎಲ್ಲಿದ್ದಾನೆಯೋ ಅಲ್ಲಿಗೆ ನಾನು ಹೋಗುತ್ತೇನೆ.
ಯತ್ರ ಸೇನಾಂ ಸಮಾಶ್ರಿತ್ಯ ಭೀತಸ್ತಿಷ್ಠತಿ ಪಾಂಡವಾತ್ |
ಗುಪ್ತೋ ರಥವರಶ್ರೇಷ್ಠೈರ್ದ್ರೌಣಿಕರ್ಣಕೃಪಾದಿಭಿಃ ॥ 12 ॥
ಎಲ್ಲಿ ಶ್ರೇಷ್ಠ ಮಹಾರಥರಾದ ಅಶ್ವತ್ಥಾಮ-ಕರ್ಣ-ಕೃಪಾದಿಗಳಿಂದ ರಕ್ಷಿತನಾಗಿ, ಅರ್ಜುನನಿಗೆ ಹೆದರಿ ಯಾವ ಸೈನ್ಯವನ್ನು ಆಶ್ರಯಿಸಿದಂತಿದ್ದಾನೆಯೋ (ಅಲ್ಲಿಗೆ ಹೋಗುತ್ತೇನೆ)
ಇತಸ್ತ್ರಿಯೋಜನಂ ಮನ್ಯೇ ತಮಧ್ವಾನಂ ವಿಶಾಂಪತೇ |
ಯತ್ರ ತಿಷ್ಠತಿ ಪಾರ್ಥೋಽಸೌ ಜಯದ್ರಥವಧೋದ್ಯತಃ ॥ 13 ॥
ಎಲೈ ರಾಜನೇ, ಜಯದ್ರಥನ ವಧೆಯಲ್ಲಿ ಉದ್ಯುಕ್ತನಾದ ಅರ್ಜುನನು ಎಲ್ಲಿದ್ದಾನೆಯೋ ಆ ಮಾರ್ಗವು ಇಲ್ಲಿಂದ ಮೂರುಯೋಜನ ದೂರವಾಗಿದೆ ಎಂದು ತಿಳಿಯುತ್ತೇನೆ.
ತ್ರಿಯೋಜನಗತಸ್ಯಾಪಿ ತತ್ರ ಯಾಸ್ಯಾಮ್ಯಹಂ ಪದಮ್ |
ಆಸೈಂಧವವಧಾದ್ ರಾಜನ್ ಸುದೃಢೇನಾಂತರಾತ್ಮನಾ ॥ 14 ॥
ಎಲೈ ರಾಜನೇ, ಅವನು ಮೂರು ಯೋಜನ ದೂರದಲ್ಲಿದ್ದರೂ ಸೈಂಧವನ ವಧೆಯಾಗುವವರೆಗೆ ದೃಢವಾದ ಮನಸ್ಸಿನಿಂದ ನಾನು ಅರ್ಜುನನ ಜೊತೆಯಲ್ಲಿಯೇ ಇರುವೆನು.
ಅನಾದಿಷ್ಟಸ್ತು ಗುರುಣಾ ಕೋ ನು ಯುದ್ಧ್ಯೇತ ಮಾನವಃ |
ಆದಿಷ್ಟಶ್ಚ ತ್ವಯಾ ರಾಜನ್ ಕೋ ನ ಯುದ್ಧ್ಯೇತ ಮಾದೃಶಃ ॥ 15 ॥
ಗುರುವಿನ ಆಜ್ಞೆಯಿಲ್ಲದೆ ಯಾವ ಮನುಷ್ಯ ಯುದ್ಧಮಾಡಿಯಾನು? ಎಲೈ ರಾಜನೇ, ನಿನ್ನಿಂದ ಆದಿಷ್ಟನಾದ ನನ್ನಂತಹ ಯಾವನು ಯುದ್ಧ ಮಾಡದೆ ಇದ್ದಾನು?
ಅಭಿಜಾನಾಮಿ ತಂ ದೇಶಮಿತಃ ಪೂರ್ಣಂ ತ್ರಿಯೋಜನಮ್ |
ಯತ್ರ ತಿಷ್ಠತಿ ರಾಜಾಽಸೌ ಸೈಂಧವೋ ಬಾಲಘಾತಕಃ ॥ 16 ॥
ಬಾಲಘಾತಕನಾದ, ರಾಜನಾದ ಸೈಂಧವನು ಎಲ್ಲಿದ್ದಾನೆಯೋ ಆ ಪ್ರದೇಶವು ಇಲ್ಲಿಂದ ಪೂರ್ಣವಾಗಿ ಮೂರು ಯೋಜನ ದೂರದಲ್ಲಿದೆ ಎಂದು ತಿಳಿದಿದ್ದೇನೆ.
ಸಾಗರಪ್ರತಿಮಂ ಸೈನ್ಯಂ ಗರ್ಜಂತಮಿವ ಸಾಗರಮ್ |
ಹುಲಶಕ್ತಿರಥಪ್ರಾಸಗದಾಶಕ್ತ್ಯೃಷ್ಟಿ ತೋಮರಮ್ |
ಇಷ್ವಾಸವರಸಂಬಾಧಂ ಕ್ಷೋಭಯಿತ್ವಾ ವ್ರಜಾಮ್ಯಹಮ್ ॥ 17 ॥
ಸಾಗರವನ್ನು ಹೋಲುವ, ಸಾಗರದಂತೆ ಗರ್ಜಿಸುವ, ಹುಲ-ಶಕ್ತಿ-ರಥ-ಪ್ರಾಸ- ಗದಾ-ಋಷ್ಟಿ-ತೋಮರ-ಬಾಣಗಳು-ಧನುಸ್ಸುಗಳು ಇವುಗಳಿಂದ ನಿಬಿಡವಾದ ಸೈನ್ಯ ಸಾಗರವನ್ನು ಕ್ಷೋಭೆಗೊಳಿಸಿ ನಾನು ಮುಂದೆ ಹೋಗುತ್ತೇನೆ.
ಯದೇತತ್ ಕುಂಜರಾನೀಕಂ ಸಹಸ್ರಮನುಪಶ್ಯಸಿ ॥ 18 ॥
ಕುಲಮಾಂಜನಕಂ ನಾಮ ಮತ್ತಾ ಹೈಮವತಾಃ ಸ್ಥಿತಾಃ |
ಆಸ್ಥಿತಾ ಬಹುಭಿರ್ಮ್ಲೇಚ್ಛೈರ್ಯುದ್ಧಶೌಂಡೈಃ ಪ್ರಹಾರಿಭಿಃ ॥ 19 ॥
ನೀನು ಯಾವ ಸಹಸ್ರ ಗಜಗಳ ಸೇನೆಯನ್ನು ನೋಡುತ್ತಿದ್ದೆಯೋ ಇವು ದಿಗ್ಗಜವಾದ ಅಂಜನ ಗಜದ ಕುಲದಲ್ಲಿ ಜನಿಸಿದವು. ಇವುಗಳ ಕುಲಕ್ಕೆ ಆಂಜನಕ ಎಂದು ಹೆಸರು. ಇವೆಲ್ಲವೂ ಮದಿಸಿದ ಸುವರ್ಣಾಲಂಕೃತವಾದ ಗಜಗಳು. ಯುದ್ಧಕುಶಲರೂ, ಪ್ರಹಾರಶೀಲರೂ ಆದ ಅನೇಕ ಮ್ಲೇಚ್ಛರು ಇವುಗಳನ್ನು ಏರಿದ್ದಾರೆ.
ನಾಗಾ ನಗನಿಭಾ ರಾಜನ್ ಕ್ಷರಂತ ಇವ ತೋಯದಾಃ |

ನೈತೇ ಜಾತು ನಿವರ್ತೇರನ್ ಪ್ರೇಷಿತಾ ಹಸ್ತಿಸಾದಿಭಿಃ |
ಅನ್ಯತ್ರ ಹಿ ವಧಾದೇಷಾಂ ನಾಸ್ತಿ ರಾಜನ್ ಪರಾಜಯಃ ॥ 20 ॥
ಎಲೈ ರಾಜನೇ, ಇವು ನೀರನ್ನು ಸುರಿಸುವ ಮೋಡಗಳಂತೆ ಅಥವಾ ಪರ್ವತಗಳಂತೆ ಇವೆ. ಗಜಾರೋಹಿಗಳಿಂದ ಪ್ರೇರಿಸಲ್ಪಟ್ಟ ಇವು ಎಂದೂ ಹಿಂದಿರುಗುವುದಿಲ್ಲ. ಎಲೈ ರಾಜನೇ, ವಧೆಯನ್ನು ಬಿಟ್ಟು ಇವುಗಳಿಗೆ ಬೇರೆ ಪರಾಜಯವಿಲ್ಲ.
ಅಥ ಯಾನ್ ರಥಿನೋ ರಾಜನ್ ಸಮಂತಾದನುಪಶ್ಯಸಿ |
ಏತೇ ರುಗ್ಮರಥಾ ನಾಮ ರಾಜಪುತ್ರಾ ಮಹಾರಥಾಃ ॥ 21 ॥
ಎಲೈ ರಾಜನೇ, ಸುತ್ತಲೂ ನೀನು ಯಾವ ರಥಿಕರನ್ನು ನೋಡುತ್ತಿದ್ದೀಯೋ ಇವರು ರುಗ್ಮರಥರು ಎಂಬ ಹೆಸರಿನ ಮಹಾರಥರಾದ ರಾಜಪುತ್ರರು.
ರಥೇಷ್ವಸ್ತ್ರೇಷು ನಿಪುಣಾ ನಾಗೇಷು ಚ ವಿಶಾಂಪತೇ |
ಧನುರ್ವೇದೇ ಗತಾಃ ಪಾರಂ ಮುಷ್ಟಿಯುದ್ಧೇ ಚ ಕೋವಿದಾಃ ॥ 22 ॥
ಎಲೈ ರಾಜನೇ, ಇವರು ರಥಗಳಲ್ಲಿಯೂ ಅಸ್ತ್ರಗಳಲ್ಲಿಯೂ, ಗಜಗಳಲ್ಲಿಯೂ ನಿಪುಣರಾದವರು. ಧನುರ್ವೇದಪಾರಂಗತರಾದವರು ಮತ್ತು ಮುಷ್ಟಿಯುದ್ಧದಲ್ಲಿಯೂ ಕೋವಿದರಾದವರು.
ಗದಾಯುದ್ಧವಿಶೇಷಜ್ಞಾ ನಿಯುದ್ಧಕುಶಲಾಸ್ತಥಾ |
ಖಡ್ಗಪ್ರಹರಣೇ ಯುಕ್ತಾಃ ಸಂಪಾತೇ ಚಾಸಿಚರ್ಮಣೋಃ ॥ 23 ॥
ಇವರು ಗದಾಯುದ್ಧದಲ್ಲಿ ವಿಶಾರದರು. ಬಾಹುಯುದ್ಧದಲ್ಲಿಯೂ ಕುಶಲರು. ಖಡ್ಗಪ್ರಹಾರವನ್ನು ತಿಳಿದವರು, ಖಡ್ಗ-ಚರ್ಮಗಳನ್ನು ಬೀಸುವುದರಲ್ಲಿಯೂ ಕುಶಲರಾದವರು.
ಶೂರಾಶ್ಚ ಕೃತವಿದ್ಯಾಶ್ಚ ಸ್ಪರ್ಧಂತೇ ಚ ಪರಸ್ಪರಮ್ |
ನಿತ್ಯಂ ಚ ಸಮರೇ ರಾಜನ್ ಜಿಗೀಷಂತೋ ರಣೇ ಸ್ಥಿತಾಃ ॥24॥
ಎಲೈ ರಾಜನೇ, ಇವರು ಶೂರರು ಮತ್ತು ವಿದ್ಯಾವಂತರು. ಯುದ್ಧದಲ್ಲಿ ನಿಂತು ಜಯವನ್ನು ಬಯಸುತ್ತಾ ಇವರು ಪರಸ್ಪರವಾಗಿ ಯಾವಾಗಲೂ ಸ್ಪರ್ಧಿಸುತ್ತಾರೆ.
ಕರ್ಣೇನ ವಿಹಿತಾ ರಾಜನ್ ದುಃಶಾಸನಮನುವ್ರತಾಃ |
ಏತಾನೇವ ರಥೋದಾರಾನ್ ವಾಸುದೇವಃ ಪ್ರಶಂಸತಿ ॥ 25 ॥
ಎಲೈ ರಾಜನೇ, ಇವರು ಕರ್ಣನಿಂದ ಸಿದ್ಧಪಡಿಸಲ್ಪಟ್ಟು ದುಶ್ಯಾಸನನ ಅನುಯಾಯಿಗಳಾಗಿದ್ದಾರೆ. ಕೃಷ್ಣನು ಇವರನ್ನೇ ರಥಶ್ರೇಷ್ಠರೆಂದು ಪ್ರಶಂಸಿಸುತ್ತಾನೆ.
ಸತತಂ ಪ್ರಿಯಕಾಮಾ ಹಿ ಕರ್ಣಸ್ಯೈತೇ ವಶೇ ಸ್ಥಿತಾಃ |
ತಸ್ಯೈವ ವಚನಾದ್ ರಾಜನ್ ನಿವೃತ್ತಾಃ ಶ್ವೇತವಾಹನಾತ್ ॥ 26 ॥
ಇವರು ಸತತವೂ ರಾಜನಿಗೆ ಹಿತವನ್ನು ಮಾಡಲು ಬಯಸಿ ಕರ್ಣನ ವಶದಲ್ಲಿಯೇ ಇರುತ್ತಾರೆ. ಅರ್ಜುನನ ಮುಂದೆ ಯುದ್ಧ ಮಾಡುತ್ತಿದ್ದ ಇವರು ಕರ್ಣನ ವಚನದಂತೆಯೇ ಅರ್ಜುನನ ಹಿಂಭಾಗದಲ್ಲಿ ಬಂದು ನಿಂತಿದ್ದಾರೆ.
ತೇ ನ ಕ್ಷತಾ ನಚ ಶ್ರಾಂತಾ ದೃಢಾವರಣಕಾರ್ಮುಕಾಃ |
ಮದರ್ಥಂ ವಿಷ್ಠಿತಾ ನೂನಂ ಧಾರ್ತರಾಷ್ಟ್ರಸ್ಯ ಶಾಸನಾತ್ ॥ 27 ॥
ಅವರ ದೇಹದಲ್ಲಿ ವ್ರಣವಿಲ್ಲ. ಅವರಿಗೆ ಶ್ರಮವಿಲ್ಲ. ದೃಢವಾದ ಕವಚ ಮತ್ತು ಧನುಸ್ಸುಗಳನ್ನು ಧರಿಸಿದ್ದಾರೆ. ದುರ್ಯೋಧನನ ಶಾಸನದಂತೆ ನನ್ನ ಸಲುವಾಗಿ ಅವರು ಅಲ್ಲಿ ನಿಲ್ಲಿಸಲ್ಪಟ್ಟಿದ್ದಾರೆ.
ಏತಾನ್ ಪ್ರಮಥ್ಯ ಸಂಗ್ರಾಮೇ ಪ್ರಿಯಾರ್ಥಂ ತವ ಕೌರವ |
ಪ್ರಯಾಸ್ಯಾಮಿ ತತಃ ಪಶ್ಚಾತ್ ಪದವೀಂ ಸವ್ಯಸಾಚಿನಃ ॥ 28 ॥
ಎಲೈ ಕೌರವನೇ, ನಿನಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಯುದ್ಧದಲ್ಲಿ ಇವರನ್ನು ಮರ್ದನ ಮಾಡಿ, ಅನಂತರ ಅರ್ಜುನನ ಮಾರ್ಗವನ್ನು ಹಿಡಿದು ಹೋಗುವೆನು.
ಯಾಂಸ್ತ್ವೇತಾನಪರಾನ್ ರಾಜನ್ ನಾಗಾನ್ ಸಪ್ತಶತಾನಿಹ |
ಪ್ರೇಕ್ಷಸೇ ವರ್ಮಸಂಛನ್ನಾನ್ ಕಿರಾತೈಃ ಸಮಧಿಷ್ಠಿತಾನ್ ॥ 29 ॥
ಕಿರಾತರಾಜೋ ಯಾನ್ ಪ್ರಾದಾದ್ ಗೃಹೀತಃ ಸವ್ಯಸಾಚಿನಾ |
ಅಲಂಕೃತ್ಯ ತದಾ ಪ್ರೇಷ್ಯಾನ್ ಇಚ್ಛನ್ ಜೀವಿತಮಾತ್ಮನಃ ॥ 30 ॥
ಆಸನ್ನೇತೇ ಪುರಾ ರಾಜನ್ ತವ ಕರ್ಮಕರಾ ದೃಢಮ್ |
ತ್ವಾಮೇವಾದ್ಯ ಯುಯುತ್ಸಂತೇ ಪಶ್ಯ ಕಾಲಸ್ಯ ಪರ್ಯಯಮ್ ॥ 31 ॥
ಎಲೈ ರಾಜನೇ, ಈ ಬೇರೆ ಯಾವ ಏಳುನೂರು ಗಜಗಳನ್ನು ನೋಡುತ್ತಿದ್ದೀಯೋ ಇವು ಕವಚಗಳಿಂದ ಆಚ್ಛಾದಿತವಾಗಿ ಕಿರಾತರಿಂದ ಏರಲ್ಪಟ್ಟಿವೆ. ಹಿಂದೆ ದಿಗ್ವಿಜಯ ಸಮಯದಲ್ಲಿ ಅರ್ಜುನನು ಇವನನ್ನು ಹಿಡಿದಾಗ ಕಿರಾತರಾಜನು ತನ್ನ ಜೀವನವನ್ನು ಬಯಸಿ ಇವುಗಳನ್ನು ಅಲಂಕರಿಸಿ ಅರ್ಜುನನಿಗೆ ಸೇವಕರಾದ ಕಿರಾತರ ಜೊತೆಯಲ್ಲಿ ನೀಡಿದನು. ಎಲೈ ರಾಜನೇ, ಇವರು ಹಿಂದೆ ನಿನ್ನ ಕರ್ಮಕರರಾಗಿದ್ದರು. ಈ ದಿನ ನಿನ್ನ ವಿರುದ್ಧವಾಗಿ ಯುದ್ಧವನ್ನು ಮಾಡಲು ಬಯಸುತ್ತಾರೆ. ಕಾಲದ ಗತಿಯನ್ನು ನೋಡು.
ತೇಷಾಮೇತೇ ಮಹಾಮಾತ್ರಾಃ ಕಿರಾತಾ ಯುದ್ಧದುರ್ಮದಾಃ |
ಹಸ್ತಿಶಿಕ್ಷಾವಿದಶ್ಚೈವ ಸರ್ವೇ ಚೈವಾಗ್ನಿಯೋನಯಃ ॥ 32 ॥
ಈ ಕಿರಾತರು ಅವರಲ್ಲಿ ಯುದ್ಧದುರ್ಮದರಾದ ಪ್ರಧಾನರಾದವರು. ಇವರೆಲ್ಲರೂ ಗಜಶಿಕ್ಷೆಯಲ್ಲಿ ಕುಶಲರು ಮತ್ತು ಅಗ್ನಿಕುಲದಲ್ಲಿ ಜನಿಸಿದವರು.

ಏತೇ ವಿನಿರ್ಜಿತಾಃ ಸರ್ವೇ ಸಂಗ್ರಾಮೇ ಸವ್ಯಸಾಚಿನಾ |
ಮದರ್ಥಮದ್ಯ ಸಂಯತ್ತಾಃ ಸುಯೋಧನವಶೇ ಸ್ಥಿತಾಃ ॥ 33 ॥
ಇವರೆಲ್ಲರೂ ಹಿಂದೆ ಅರ್ಜುನನಿಂದ ಯುದ್ಧದಲ್ಲಿ ಸೋಲಿಸಲ್ಪಟ್ಟಿದ್ದಾರೆ. ಈ ದಿನ ಸುಯೋಧನನ ವಶದಲ್ಲಿರುವ ಇವರು ನನ್ನನ್ನು ಎದುರಿಸಲು ಉದ್ಯುಕ್ತರಾಗಿದ್ದಾರೆ.
ಏತಾನ್ ಹತ್ವಾ ಶರೈ ರಾಜನ್ ಕಿರಾತಾನ್ ಯುದ್ಧದುರ್ಮದಾನ್ |
ಸೈಂಧವಸ್ಯ ವಧೇ ಯುಕ್ತಂ ಅನುಯಾಸ್ಯಾಮಿ ಪಾಂಡವಮ್ ॥ 34 ॥
ಎಲೈ ರಾಜನೇ, ಯುದ್ಧದುರ್ಮದರಾದ ಈ ಕಿರಾತರನ್ನು ನನ್ನ ಬಾಣಗಳಿಂದ ಕೊಂದು ಸೈಂಧವನ ವಧೆಯಲ್ಲಿ ಪ್ರಯತ್ನಶೀಲನಾದ ಅರ್ಜುನನ ಕಡೆಗೆ ಹೋಗುವೆನು.
ಏತೇ ಹಿ ಸುಮಹಾನಾಗಾ ಅಂಜನಸ್ಯ ಕುಲೋದ್ಭವಾಃ |
ಕರ್ಕಶಾಶ್ಚ ವಿನೀತಾಶ್ಚ ಪ್ರಭಿನ್ನಕರಟಾಮುಖಾಃ ॥ 35 ॥
ಈ ದೊಡ್ಡ ಗಜಗಳು ದಿಗ್ಗಜವಾದ ಅಂಜನನ ಕುಲದಲ್ಲಿ ಜನಿಸಿದವುಗಳು. ಇವುಗಳು ಚೆನ್ನಾಗಿ ಪಳಗಿದವು, ಒರಟಾಗಿರುವವು ಮತ್ತು ಕುಂಭಸ್ಥಳದಿಂದ ಮದೋದಕವನ್ನು ಸುರಿಸುತ್ತಿರುವಂತಹವುಗಳು.
ಜಾಂಬೂನದಮಯೈರೇತೇ ಭೂಷಣೈಃ ಸಮಲಂಕೃತಾಃ |
ಲಬ್ಧಲಕ್ಷ್ಯಾ ರಣೇ ರಾಜನ್ನೈರಾವತಸಮಾ ಯುಧಿ ॥ 36 ॥
ಇವು ಸುವರ್ಣಮಯವಾದ ಆಭರಣಗಳಿಂದ ಅಲಂಕೃತವಾಗಿದೆ. ಎಲೈ ರಾಜನೇ, ಯುದ್ಧದಲ್ಲಿ ಐರಾವತ ಗಜಕ್ಕೆ ಸಮವಾದ ಇವು ಎಂದೂ ತಮ್ಮ ಲಕ್ಷ್ಯವನ್ನು ತಪ್ಪುವುದಿಲ್ಲ.
ಆಸ್ಥಿತಾ ದಸ್ಯುಭಿಸ್ತೀಕ್ಷ್ಣೈಃ ಶೂರೈರುತ್ತಮಪಾರ್ವತೈಃ |
ಕರ್ಕಶೈಃ ಪ್ರವರೈರ್ಯೋಧೈಃ ಕಾರ್ಷ್ಣಾಯಸತನುಚ್ಛದೈಃ ॥ 37 ॥
ಇವು ಶೂರರೂ, ಉತ್ತಮ ಪರ್ವತ ಪ್ರದೇಶದಲ್ಲಿ ವಾಸಿಸುವವರೂ, ಕರ್ಕಶರೂ, ಶ್ರೇಷ್ಠವಾದ ಯೋಧರೂ, ಕ್ರೂರಿಗಳೂ, ಕಬ್ಬಿಣದ ಕವಚವನ್ನು ಧರಿಸಿದವರೂ, ದಸ್ಯುಗಳೂ ಆದ ಗಜಾರೋಹಿಗಳಿಂದ ಏರಲ್ಪಟ್ಟಿವೆ.
ಸಂತಿ ಗೋಯೋನಯಶ್ಚಾತ್ರ ಸಂತಿ ವಾನರಯೋನಯಃ |
ಮಕ್ಷಿಕಾಯೋನಯಶ್ಚಾನ್ಯೇ ತಥಾ ವಾನರಯೋನಯಃ ॥ 38 ॥
ಇಲ್ಲಿ ಗೋಯೋನಿಗಳು, ವಾನರಯೋನಿಗಳು, ಮಕ್ಷಿಕಾಯೋನಿಗಳೂ ಇದ್ದಾರೆ.
ಅನೀಕಮಸತಾಮೇತದ್ ಧೂಮವರ್ಣಮುದೀರ್ಯತೇ |
ಮ್ಲೇಚ್ಛಾನಾಂ ಪಾಪಕರ್ತೄಣಾಂ ಹಿಮವದ್ದುರ್ಗವಾಸಿನಾಮ್ ॥ 39 ॥
ಈ ಅಸಜ್ಜನರ ಸೈನ್ಯ ಸಮೂಹವು ಧೂಮವರ್ಣದಿಂದ ಕೂಡಿದುದಾಗಿದೆ ಎಂದು ಹೇಳಲ್ಪಡುತ್ತದೆ. ಇದು ಹಿಮಾಲಯದ ದುರ್ಗವಾಸಿಗಳಾದ ಪಾಪಾಚಾರಿಗಳಾದ ಮ್ಲೇಚ್ಛರ ಸೇನೆ.
ಏತದ್ ದುರ್ಯೋಧನೋ ಲಬ್ಧ್ವಾ ಸಮಗ್ರಂ ನಾಗಮಂಡಲಮ್ |
ಭೀಷ್ಮಂ ದ್ರೋಣಂ ಕೃಪಂ ಕರ್ಣಮಾವಂತ್ಯಮಥ ಸೈಂಧವಮ್ ॥ 40 ॥
ದ್ರೌಣಿಂ ಚ ಸೌಮದತ್ತಿಂ ಚ ಪಾಂಡವಾನತಿ ಮನ್ಯತೇ |
ಕೃತಾರ್ಥಮಥ ಚಾತ್ಮಾನಂ ಮನ್ಯತೇ ಕಾಲಚೋದಿತಃ ॥ 41 ॥
ದುರ್ಯೋಧನನು ಈ ಸಮಗ್ರ ಗಜಸೇನೆಯನ್ನು ಹೊಂದಿ ಇದು ಭೀಷ್ಮರನ್ನೂ, ದ್ರೋಣರನ್ನೂ, ಕೃಪರನ್ನೂ, ಕರ್ಣನನ್ನೂ, ಅವಂತಿರಾಜನನ್ನೂ, ಸೈಂಧವನನ್ನೂ, ಅಶ್ವತ್ಥಾಮರನ್ನೂ, ಭೂರಿಶ್ರವನನ್ನೂ ಮತ್ತು ಪಾಂಡವರನ್ನೂ ಮೀರಿದುದು ಎಂದು ತಿಳಿದಿದ್ದಾನೆ. ಮೃತ್ಯುಚೋದಿತನಾದ ಅವನು ತನ್ನನ್ನು ಕೃತಾರ್ಥನೆಂದು ಭಾವಿಸಿದ್ದಾನೆ.
ತೇ ಚ ಸರ್ವೇ ತು ಸಂಪ್ರಾಪ್ತಾ ಮಮ ನಾರಾಚಗೋಚರಮ್ |
ನ ಭವಿಷ್ಯಂತಿ ಕೌಂತೇಯ ಯದ್ಯಪಿ ಸ್ಯುರ್ಮನೋಜವಾಃ ॥ 42 ॥
ಎಲೈ ಕೌಂತೇಯನೇ, ಇವರೆಲ್ಲರೂ ಮನೋಜವವನ್ನು ಹೊಂದಿದರೂ ನನ್ನ ನಾರಾಚದ ವ್ಯಾಪ್ತಿಗೆ ಸಿಲುಕಿದ ಇವರು ಉಳಿಯುವುದಿಲ್ಲ.
ತೇನ ಸಂಭಾವಿತಾ ನಿತ್ಯಂ ಪರವೀರ್ಯೋಪಜೀವಿನಾ |
ವಿನಾಶಮುಪಯಾಸ್ಯಂತಿ ಮಚ್ಛರೌಘನಿಪೀಡಿತಾಃ ॥ 43 ॥
ಇನ್ನೊಬ್ಬರ ಪರಾಕ್ರಮದಿಂದ ಜೀವಿಸುವ ದುರ್ಯೋಧನನಿಂದ ಯಾವಾಗಲೂ ಪೂಜಿಸಲ್ಪಟ್ಟ ಇವರು ನನ್ನ ಬಾಣಗಳ ಸಮೂಹದಿಂದ ಪೀಡಿತರಾಗಿ ವಿನಾಶವನ್ನು ಹೊಂದುವರು.
ಯ ಏತೇ ರಥಿನೋ ರಾಜನ್ ದೃಶ್ಯಂತೇ ಕಾಂಚನಧ್ವಜಾಃ |
ಏತೇ ದುರ್ವಾರಣಾ ನಾಮ ಕಾಂಬೋಜಾ ಯದಿ ತೇ ಶ್ರುತಾಃ ॥44॥
ಎಲೈ ರಾಜನೇ, ಸುವರ್ಣಮಯವಾದ ಧ್ವಜವುಳ್ಳ ಯಾವ ಈ ರಥಿಕರು ಕಾಣುತ್ತಿದ್ದಾರೆಯೋ ಇವರು ನೀನು ಕೇಳಿದ್ದರೆ ಕಾಂಬೋಜ ದೇಶದ ದುರ್ವಾರಣ ಎಂಬ ಹೆಸರುಳ್ಳವರು.
ಶೂರಾಶ್ಚ ಕೃತವಿದ್ಯಾಶ್ಚ ಧನುರ್ವೇದೇ ಚ ನಿಷ್ಠಿತಾಃ |
ಸಂಹತಾಶ್ಚ ಭೃಶಂ ಹ್ಯೇತೇ ಅನ್ಯೋನ್ಯಸ್ಯ ಹಿತೈಷಿಣಃ ॥ 45 ॥
ಇವರು ಶೂರರೂ, ವಿದ್ಯಾಪಾರಂಗತರೂ, ಧನುರ್ವೇದದಲ್ಲಿ ನಿಷ್ಠೆಯುಳ್ಳವರೂ, ಪರಸ್ಪರ ಹಿತವನ್ನು ಬಯಸುತ್ತಾ ಬಹಳ ಒಂದುಗೂಡಿ ಇರುವವರೂ ಆಗಿದ್ದಾರೆ.

ಅಕ್ಷೋಹಿಣ್ಯಶ್ಚ ಸಂರಬ್ಧಾ ಧಾರ್ತರಾಷ್ಟ್ರಸ್ಯ ಪಾರ್ಥಿವ |
ಯತ್ತಾ ಮದರ್ಥಂ ತಿಷ್ಠಂತಿ ಕುರುವೀರಾಭಿರಕ್ಷಿತಾಃ ॥ 46 ॥
ಎಲೈ ರಾಜನೇ, ದುರ್ಯೋಧನನ ಕೋಪಗೊಂಡ ಅಕ್ಷೋಹಿಣಿ ಸೈನ್ಯಗಳಿವೆ. ಅವು ಕುರುವೀರರಿಂದ ರಕ್ಷಿತವಾಗಿ ನನ್ನ ಸಲುವಾಗಿ ಎಚ್ಚರಿಕೆಯಿಂದ ನಿಂತಿವೆ.
ಅಪ್ರಮತ್ತಾ ಮಹಾರಾಜ ಮಾಮೇವ ಪ್ರತ್ಯುಪಸ್ಥಿತಾಃ |
ತಾಂಸ್ತ್ವಹಂ ಪ್ರತಿಧಕ್ಷ್ಯಾಮಿ ತೃಣಾನೀವ ಹುತಾಶನಃ ॥ 47 ॥
ಎಲೈ ಮಹಾರಾಜನೇ, ಅವು ಪ್ರಮಾದವನ್ನು ಮಾಡದೆ ನನ್ನ ವಿರುದ್ಧ ಯುದ್ಧ ಮಾಡುವ ಸಲುವಾಗಿಯೇ ಸಿದ್ಧವಾಗಿವೆ. ಅಗ್ನಿಯು ತೃಣವನ್ನು ಭಸ್ಮಮಾಡಿದಂತೆ ನಾನು ಅವುಗಳನ್ನು ದಹಿಸುವೆನು.
ತಸ್ಮಾತ್ ಸರ್ವಾನುಪಾಸಂಗಾನ್ ಸರ್ವೋಪಕರಣಾನಿ ಚ |
ರಥೇ ಕುವಂತು ಮೇ ರಾಜನ್ ಯಥಾವದ್ ರಥಕಲ್ಪಕಾಃ ॥ 48 ॥
ಆದ್ದರಿಂದ ಎಲೈ ರಾಜನೇ, ರಥವನ್ನು ಸಿದ್ಧಮಾಡುವವರು ನನ್ನ ರಥದಲ್ಲಿ ಎಲ್ಲ ವಿಧವಾದ ಬತ್ತಳಿಕೆಗಳನ್ನೂ ಮತ್ತು ಉಳಿದ ಉಪಕರಣಗಳನ್ನೂ ತುಂಬಿ ಸಿದ್ಧಪಡಿಸುವವರಾಗಲಿ.
ಅಸ್ಮಿಂಸ್ತು ಖಲು ಸಂಗ್ರಾಮೇ ಗ್ರಾಹ್ಯಂ ವಿವಿಧಮಾಯುಧಮ್ |
ಯಥೋಪದಿಷ್ಟಮಾಚಾರ್ಯೈಃ ಕಾರ್ಯಃ ಪಂಚಗುಣೋ ರಥಃ ॥49॥
ಇಂತಹ ಯುದ್ಧದಲ್ಲಿ ಆಚಾರ್ಯರು ಉಪದೇಶ ಮಾಡಿದಂತೆ ವಿವಿಧವಾದ ಆಯುಧಗಳನ್ನು ತೆಗೆದುಕೊಂಡು, ಒಂದು ರಥದಲ್ಲಿ ಐದು ರಥಗಳಲ್ಲಿ ಇರುವಷ್ಟು ಸಲಕರಣೆಗಳು ಇರುವಂತೆ ಮಾಡಬೇಕು.
ಕಾಂಬೋಜೈರ್ಹಿ ಸಮೇಷ್ಯಾಮಿ ತೀಕ್ಷ್ಣೈ ್ಣೈರಾಶೀವಿಷೋಪಮೈಃ |
ನಾನಾಶಸ್ತ್ರಸಮಾವಾಪೈರ್ವಿವಿಧಾಯುಧಯೋಧಿಭಿಃ ॥ 50 ॥
ನಾನು ತೀಕ್ಷ್ಣರೂ, ಸರ್ಪಸದೃಶರೂ, ನಾನಾ ಶಸ್ತ್ರಗಳನ್ನು ಪ್ರಯೋಗಿಸಲು ಬಲ್ಲವರೂ, ಅನೇಕ ವಿಧವಾದ ಆಯುಧಗಳಿಂದ ಯುದ್ಧ ಮಾಡುವವರೂ ಆದ ಕಾಂಬೋಜರ ಜೊತೆಯಲ್ಲಿ ಸಮಾಗಮವನ್ನು ಹೊಂದುವೆನು.
ಕಿರಾತೈಶ್ಚ ಸಮೇಷ್ಯಾಮಿ ವಿಷಕಲ್ಪಪ್ರಹಾರಿಭಿಃ |
ಪಾದಾತೈಃ ಸತತಂ ರಾಜನ್ ದುರ್ಯೋಧನಹಿತೈಷಿಭಿಃ ॥ 51 ॥
ಎಲೈ ರಾಜನೇ, ವಿಷದಂತೆ ಪ್ರಹಾರಶೀಲರಾದ, ಯಾವಾಗಲೂ ದುರ್ಯೋಧನನ ಹಿತೈಷಿಗಳಾದ ಪದಾತಿಗಳಾದ ಕಿರಾತರ ಜೊತೆಯಲ್ಲಿ ಸಮಾಗಮವನ್ನು ಹೊಂದುವೆನು.
ಶಕೈಶ್ಚಾಪಿ ಸಮೇಷ್ಯಾಮಿ ಶಕ್ರತುಲ್ಯಬಲೈಃ ಸಹ |
ಅಗ್ನಿಕಲ್ಪೈರ್ದುರಾಧರ್ಷೈಃ ಪ್ರದೀಪ್ತೈರಿವ ಪಾವಕೈಃ ॥ 52 ॥
ಇಂದ್ರನಿಗೆ ಸಮಾನವಾದ ಬಲವುಳ್ಳ, ಅಗ್ನಿಗೆ ಸದೃಶರಾದ, ಸೋಲಿಸಲು ಕಷ್ಟಸಾಧ್ಯರಾದ, ಜ್ವಲಿಸುವ ಅಗ್ನಿಯಂತಿರುವ ಶಕರಿಂದಲೂ ಸಮಾಗಮವನ್ನು ಹೊಂದುವೆನು.
ತಥಾಽನ್ಯೈರ್ವಿವಿಧೈರ್ಯೋಧೈಃ ಕಾಲಕಲ್ಪೈರ್ದುರಾಸದೈಃ |
ಸಮೇಷ್ಯಾಮಿ ರಣೇ ರಾಜನ್ ಬಹುಭಿರ್ಯುದ್ಧದುರ್ಮದೈಃ ॥ 53 ॥
ಎಲೈ ರಾಜನೇ, ಹಾಗೆಯೇ ಮೃತ್ಯುಕಲ್ಪರೂ, ಸಮೀಪಿಸಲು ಕಷ್ಟಸಾಧ್ಯರೂ, ಯುದ್ಧದುರ್ಮದರೂ ಆದ ಇನ್ನೂ ಬಹುವಿಧವಾದ ಯೋಧರ ಜೊತೆಯಲ್ಲಿ ನಾನು ಸಮಾಗಮವನ್ನು ಹೊಂದುವೆನು.
ತ್ರಿಯೋಜನಗತಸ್ಯಾಹಂ ಪದವೀಂ ಸವ್ಯಸಾಚಿನಃ |
ಯಾಸ್ಯಾಮಿ ರಥಿನಾಂ ಶ್ರೇಷ್ಠಂ ಪ್ರವರಂ ಚ ಧನುಷ್ಮತಾಮ್ ॥ 54 ॥
ಮೂರು ಯೋಜನ ದೂರದಲ್ಲಿರುವ, ರಥಿಶ್ರೇಷ್ಠನಾದ, ಧನುರ್ಧಾರಿಗಳಲ್ಲಿಯೂ ಶ್ರೇಷ್ಠನಾದ ಅರ್ಜುನನ ಮಾರ್ಗವನ್ನು ಹಿಡಿದು ನಾನು ಹೋಗುವೆನು.
ಸೂರ್ಯೋದಯಗತಸ್ಯಾಹಂ ಪಾಂಡವಸ್ಯ ಗತಿಂ ಚರನ್ |
ಅಪರಾಹ್ಣಂ ಗತೇ ಸೂರ್ಯೇ ಗಮಿಷ್ಯಾಮಿ ನ ಸಂಶಯಃ ॥ 55 ॥
ನಾನು ಸೂರ್ಯೋದಯ ಕಾಲದಲ್ಲಿ ಹೊರಟ ಅರ್ಜುನನ ಮಾರ್ಗದಲ್ಲಿಯೇ ಸಂಚರಿಸುತ್ತಾ, ಸೂರ್ಯನು ಅಪರಾಹ್ಣ ತಲುಪಿರಲು ಅರ್ಜುನನನ್ನು ಹೋಗಿ ತಲುಪುವೆನು. ಇದರಲ್ಲಿ ಸಂಶಯವಿಲ್ಲ.
ತಸ್ಮಾನ್ಮೇ ವಾಜಿನೋ ಮುಕ್ತಾನ್ ವಿಶ್ರಾಂತಾಂಶ್ಚ ವಿಚಕ್ಷಣೈಃ |
ಉಪಾವೃತ್ತಾಂಶ್ಚ ಪೀತಾಂಶ್ಚ ಪುನರ್ಯುಂಜಂತು ಮೇ ರಥೇ ॥ 56 ॥
ಆದ್ದರಿಂದ ನನ್ನ ರಥದಿಂದ ಬಿಚ್ಚಿದ, ವಿಚಕ್ಷಣರಿಂದ ವಿಶ್ರಾಂತಿಯನ್ನು ಪಡೆದ, ನೀರನ್ನು ಕುಡಿದು ಹಿಂದಿರುಗಿದ ಅಶ್ವಗಳನ್ನು ಪುನಃ ನನ್ನ ರಥಕ್ಕೆ ನಿನ್ನ ಸೇವಕರು ಹೂಡಲಿ (ಎಂದು ಹೇಳಿದನು).
ಸಂಜಯಃ
ತಸ್ಯ ಸರ್ವಾನುಪಾಸಂಗಾನ್ ಸರ್ವೋಪಕರಣಾನಿ ಚ |
ರಥೇ ಚಾಸ್ಥಾಪಯದ್ ರಾಜಾ ಶಸಾತ್ರಣಿ ವಿವಿಧಾನಿ ಚ ॥ 57 ॥
ಸಂಜಯ ಆಗ ರಾಜನಾದ ಯುಧಿಷ್ಠಿರನು ಅವನ ಎಲ್ಲಾ ಬತ್ತಳಿಕೆಗಳನ್ನೂ ಮತ್ತು ಉಪಕರಣಗಳನ್ನೂ ಮತ್ತು ವಿವಿಧವಾದ ಶಸ್ತ್ರಗಳನ್ನು ರಥದಲ್ಲಿ ಇರಿಸಿದನು.
ತತಸ್ತಾನ್ ಸರ್ವತೋ ಮುಕತ್ವ ಸದಶ್ವಾಂಶ್ಚತುರೋ ಜನಾಃ |

ರಸವತ್ ಪಾಯಯಾಮಾಸುಃ ಪಾನಂ ಮದಸಮೀರಣಮ್ ॥ 58 ॥
ಪೀತೋಪವೃತ್ತಾನ್ ಸ್ನಾತಾಂಶ್ಚ ಜಗ್ಧಾನ್ನಾನ್ ಸಮಲಂಕೃತಾನ್ ।
ವಿನೀತಶಲ್ಯಾಂಸ್ತುರಗಾಂಶ್ಚತುರೋ ಹೇಮಮಾಲಿನಃ ॥ 59 ॥
ತಾನ್ ಯುಕ್ತಾನ್ ರೂಪ್ಯವರ್ಣಾಭಾನ್ ವಿನೀತಾನ್ ಶೀಘ್ರಗಾಮಿನಃ ।
ಸಂಹೃಷ್ಟಮನಸೋಽವ್ಯಗ್ರಾನ್ ವಿಧಿವತ್ ಕಲ್ಪಿತೇ ರಥೇ ॥ 60 ॥
ಆಗ ಸೇವಕರು ಅವನ ಶ್ರೇಷ್ಠವಾದ ನಾಲ್ಕು ಅಶ್ವಗಳನ್ನು ಎಲ್ಲ ಕಡೆಯಿಂದಲೂ ಬಿಡಿಸಿ, ಮದಕಾರಿಯಾದ ರಸಭರಿತವಾದ ಪಾನವನ್ನು ಕುಡಿಸಿದರು. ಪಾನ ಮಾಡಿ, ಸ್ನಾನ ಮಾಡಿ, ಆಹಾರವನ್ನು ಸೇವಿಸಿ, ದೇಹಕ್ಕೆ ಚುಚ್ಚಿದ ಬಾಣಗಳನ್ನು ತೆಗೆದು, ಸಮಲಂಕೃತವಾದ ಹೇಮಮಾಲೆಗಳನ್ನು ಧರಿಸಿದ, ಬೆಳ್ಳಿಯ ಬಣ್ಣವನ್ನು ಹೊಂದಿದ, ವಿನಯಶೀಲಗಳಾದ, ಶೀಘ್ರಗಾಮಿಗಳಾದ, ಸಂತೋಷಗೊಂಡ ಮನಸ್ಸುಳ್ಳ, ವಿಶೇಷವಾಗಿ ಏಕಾಗ್ರತೆಯನ್ನು ಹೊಂದಿದ ನಾಲ್ಕು ಅಶ್ವಗಳನ್ನು ವಿಧಿಪ್ರಕಾರಕ್ಕೆ ಅನುಗುಣವಾಗಿ ರಥದಲ್ಲಿ ಹೂಡಿದರು.
ಮಹಾಧ್ವಜೇನ ಸಿಂಹೇನ ಹೇಮಕೇಸರಮಾಲಿನಾ ।
ಸಂವೃತೇ ಕೇತಕೈರ್ಹೈಮೈರ್ಮಣಿವಿದ್ರುಮಚಿತ್ರಿತೈಃ ॥ 61 ॥
ಪಾಂಡರಾಭ್ರಪ್ರಕಾಶಾಭಿಃ ಪತಾಕಾಭಿರಲಂಕೃತೇ ।
ಹೇಮದಂಡೋಚ್ಛ್ರಿತಚ್ಛತ್ರೇ ಬಹುಶಸ್ತ್ರಪರಿಚ್ಛದೇ ॥ 62 ॥
ಯೋಜಯಾಮಾಸ ವಿಧಿವದ್ಧೇಮಭಾಂಡವಿಭೂಷಿತಾನ್ ॥ 63 ॥
ಸುವರ್ಣಮಯವಾದ ಕೇಸರಮಾಲೆಯನ್ನು ಧರಿಸಿದ, ದೊಡ್ಡ ಸಿಂಹಧ್ವಜದಿಂದ ಕೂಡಿದ, ಸುವಣರ್ಮಣಿಗಳಿಂದ ಮತ್ತು ಹವಳಗಳಿಂದ ವಿಚಿತ್ರವಾದ ಕೇಸರಗಳಿಂದ ಕೂಡಿದ, ದಿವ್ಯಮೋಡದ ಕಾಂತಿಯನ್ನು ಹೊಂದಿದ ಪತಾಕೆಗಳಿಂದ ಅಲಂಕೃತವಾದ, ಸುವರ್ಣದಂಡದ ಮೇಲಕ್ಕೆತ್ತಿದ ಛತ್ರವನ್ನು ಹೊಂದಿದ್ದ, ಅನೇಕ ಶಸ್ತ್ರ ಸಲಕರಣೆಗಳನ್ನು ತುಂಬಿದ ರಥದಲ್ಲಿ ಶಾಸ್ರೋತ್ರಕ್ತ ರೀತಿಯಲ್ಲಿ ಸುವರ್ಣಾಲಂಕೃತವಾದ ಅಶ್ವಗಳನ್ನು ಹೂಡಿದರು.
ದಾರುಕಸ್ಯಾನುಜೋ ಭ್ರಾತಾ ಸೂತಶ್ಚಾಸ್ಯ ಪ್ರಿಯಃ ಸಖಾ ।
ನ್ಯವೇದಯದ್ ರಥಂ ಯುಕ್ತಂ ವಾಸವಸ್ಯೇವ ಮಾತಲಿಃ ॥ 64 ॥
ದಾರುಕನ ತಮ್ಮನೂ ಮತ್ತು ಧೃಷ್ಟದ್ಯುಮ್ನನ ಪ್ರಿಯ ಸ್ನೇಹಿತನೂ ಆದ ಸೂತನು ಮಾತಲಿಯು ಇಂದ್ರನಲ್ಲಿ ನಿವೇದಿಸುವಂತೆ ರಥವು ಸಿದ್ಧವಾಗಿದೆ ಎಂದು ನಿವೇದಿಸಿದನು.
ತತಃ ಸ್ನಾತಃ ಶುಚಿರ್ಭೂತ್ವಾ ಕೃತಕೌತುಕಮಂಗಲಃ ।
ಸ್ನಾತಕಾನಾಂ ಸಹಸ್ರಾಣಾಂ ಪ್ರತಿನಿಷ್ಕಾಣ್ಯದಾಪಯತ್ ॥ 65 ॥
ಅನಂತರ ಸಾತ್ಯಕಿಯು ಸ್ನಾನ ಮಾಡಿ, ಶುಚಿಯಾಗಿ, ಮಂಗಳಾದಿಗಳನ್ನು ಮಾಡಿಸಿಕೊಂಡು, ಸಹಸ್ರ ಸಾತನತಕರಿಗೆ ಒಬ್ಬೊಬ್ಬರಿಗೂ ಒಂದೊಂದು ಸುವರ್ಣ ನಿಷ್ಕವನ್ನು ದಾನ ಮಾಡಿದನು.
ತತಃ ಸಮಧುಪರ್ಕಾಂಭಃ ಪೀತ್ವಾ ಕೈರಾತಕಂ ಮಧು ।
ಲೋಹಿತಾಕ್ಷೋ ಬಭೌ ತತ್ರ ಮದವಿಹ್ವಲಲೋಚನಃ ॥ 66 ॥
ಅನಂತರ ಮಧುಪರ್ಕ ಜಲವನ್ನು ಕುಡಿದು, ಕೈರಾತಕ ಮಧುವನ್ನು ಪಾನ ಮಾಡಿ, ಮದದಿಂದ ವಿಹ್ವಲವಾದ ಕಣ್ಣುಳ್ಳವನಾಗಿ, ಲೋಹಿತಾಕ್ಷನಾಗಿ ಶೋಭಿಸಿದನು.
ಆಲಭ್ಯ ವೀರಃ ಕಾಂಸ್ಯಂ ಚ ಹರ್ಷೇಣ ಮಹತಾನ್ವಿತಃ ।
ದ್ವಿಗುಣೀಕೃತತೇಜೋಭಿಃ ಪ್ರಜ್ವಲನ್ನಿವ ಪಾವಕಃ ॥ 67 ॥
ಉತ್ಸಂಗೇ ಧನುರಾದಾಯ ಸಶರಂ ರಥಿನಾಂ ವರಃ ।
ಆಶೀರ್ವಾದೈಃ ಪರಿಷ್ವಕ್ತಃ ಸಾತ್ಯಕಿಃ ಶ್ರೀಮತಾಂ ವರಃ ॥ 68 ॥
ವೀರ ಕಾಂಸ್ಯವನ್ನು ಸ್ಪರ್ಶಿಸಿ, ಬಹಳ ಸಂತೋಷದಿಂದ ಕೂಡಿದವನಾಗಿ, ಇಮ್ಮಡಿಯಾದ ತೇಜಸ್ಸಿನಿಂದ ಜ್ವಲಿಸುವ ಅಗ್ನಿಯಂತೆ ಇದ್ದ ರಥಿಶ್ರೇಷ್ಠನಾದ, ಕಾಂತಿಯುಕ್ತರಲ್ಲಿ ಶ್ರೇಷ್ಠನಾದ ಸಾತ್ಯಕಿಯು ತನ್ನ ತೊಡೆಯ ಮೇಲೆ ಬಾಣಸಹಿತವಾದ ಧನುಸ್ಸನ್ನು ಹಿಡಿದುಕೊಂಡು ಆಶೀರ್ವಾದಗಳಿಂದ ಆಶೀರ್ವದಿಸಲ್ಪಟ್ಟವನಾದನು.
ಕೃತಸ್ವ್ಯಥ ವಿಪ್ರೈಃ ಚ ಕವಚೀ ಸಮಲಂಕೃತಃ ।
ಲಾಜೈರ್ಗಂಧೈಸ್ತಥಾ ಮಾಲ್ಯೈಃ ಕನ್ಯಾಭಿರಭಿನಂದಿತಃ ॥ 69 ॥
ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು, ಕವಚವನ್ನು ಧರಿಸಿ, ಲಾಜ ಗಂಧಪುಷ್ಪಮಾಲೆಗಳಿಂದ ಅಲಂಕೃತನಾಗಿ ಕನ್ಯೆಯರಿಂದ ಅಭಿನಂದಿಸಲ್ಪಟ್ಟನು.
ಯುಧಿಷ್ಠಿರಸ್ಯ ಚರಣಾವಭಿವಾದ್ಯ ಕೃತಾಂಜಲಿಃ ।
ತೇನ ಮೂರ್ಧನ್ಯುಪಾಘ್ರಾತಃ ಕೃತಸ್ವಸ್ತ್ಯಯನೋಽಪಿ ಚ ॥ 70 ॥
ಆಶಿಷೋ ವಿಪುಲಾಃ ಶ್ರುತ್ವಾ ಧರ್ಮರಾಜಮುಖೋದ್ಗತಾಃ ।
ಹರ್ಷೇಣ ಮಹತಾ ಯುಕ್ತಸ್ತತ್ವರುರೋಹ ರಥೋತ್ತಮಮ್ ॥ 71 ॥
ಯುಧಿಷ್ಠಿರನ ಪಾದಗಳಿಗೆ ನಮಸ್ಕರಿಸಿ, ಕೈಗಳನ್ನು ಮುಗಿದು, ಅವನಿಂದ ಶಿರಸ್ಸಿನಲ್ಲಿ ಆಘ್ರಾಣಿಸಲ್ಪಟ್ಟು, ಕ್ಷೇಮವನ್ನು ಆಶಂಸಿಸಲ್ಪಟ್ಟನು. ಧರ್ಮರಾಜನ ಮುಖದಿಂದ ಬಂದ ಬಹಳವಾದ ಆಶೀರ್ವಾದ ವಚನಗಳನ್ನು ಕೇಳಿ ಬಹಳ ಹರ್ಷದಿಂದ ಕೂಡಿದವನಾಗಿ ತನ್ನ ಶ್ರೇಷ್ಠವಾದ ರಥವನ್ನು ಏರಿದನು.
ತತಸ್ತೇ ವಾಜಿನೋ ಹೃಷ್ಟಾಃ ಸುಪುಷ್ಟಾ ವಾತರಂಹಸಃ ।

ಆಜಾನೇಯಾ ಜೈತ್ರಮೂಹುರ್ವಿಕುರ್ವಾಣಾಶ್ಚ ಸೈಂಧವಾಃ |
ಯಥಾ ಶಕ್ರರಥಂ ರಾಜನ್ನೂಹುಸ್ತೇ ಹರಯಃ ಪುರಾ ॥ 72 ॥
ಅನಂತರ ಅವನ ಸಂತೋಷಗೊಂಡ, ಬಹಳ ಪುಷ್ಟವಾದ, ವಾಯುವೇಗವುಳ್ಳ, ಒಳ್ಳೆಯ ಜಾತಿಯಲ್ಲಿ ಜನಿಸಿದ, ಸಿಂಧುದೇಶದ ಅಶ್ವಗಳು ಜಯಶೀಲನಾದ ಅವನ ರಥವನ್ನು ಇಂದ್ರನ ರಥವನ್ನು ಹಿಂದೆ ಅಶ್ವಗಳು ಎಳೆದಂತೆ ವಿವಿಧವಾದ ಹೇಷಾರ ವರವನ್ನು ಮಾಡುತ್ತಾ ಎಳೆದುಕೊಂಡು ಹೋದವು.
ತಥೈವ ಭೀಮಸೇನೋಽಪಿ ಧರ್ಮರಾಜೇನ ಪೂಜಿತಃ |
ಪ್ರಾಯಾತ್ ಸಾತ್ಯಕಿನಾ ಸಾರ್ಧಮಭಿವಾದ್ಯ ಯುಧಿಷ್ಠಿರಮ್ ॥ 73 ॥
ಹಾಗೆಯೇ ಭೀಮಸೇನನೂ ಸಹ ಯುಧಿಷ್ಠಿರನಿಂದ ಪೂಜಿಸಲ್ಪಟ್ಟು ಅವನಿಗೆ ನಮಸ್ಕರಿಸಿ ಸಾತ್ಯಕಿಯ ಜೊತೆಯಲ್ಲಿ ಹೊರಟನು.
ಸನ್ನದ್ಧಂ ತ್ವನುಗಚ್ಛಂತಂ ಭೀಮಂ ಪ್ರೇಕ್ಷ ಿಯ ಸ ಸಾತ್ಯಕಿಃ |
ಅಥ ಹರ್ಷಪರೀತಾಂಗಃ ಸಾತ್ಯಕಿಃ ಸತ್ಯವಿಕ್ರಮಃ |
ಅಭಿನಂದ್ಯಾಬ್ರವೀದ್ ವೀರಃ ತದಾ ಹರ್ಷಕರಂ ವಚಃ ॥ 74 ॥
ಸನ್ನದ್ಧನಾಗಿ ತನ್ನನ್ನು ಹಿಂಬಾಲಿಸುತ್ತಿದ್ದ ಭೀಮನನ್ನು ನೋಡಿ ಸತ್ಯಪರಾಕ್ರಮನಾದ ಸಾತ್ಯಕಿಯು ಸಂತೋಷದಿಂದ ತುಂಬಿದ ದೇಹವುಳ್ಳವನಾಗಿ, ಅವನನ್ನು ಅಭಿನಂದಿಸಿ ಆಗ ಹರ್ಷಕರವಾದ ಮಾತುಗಳನ್ನು ಆಡಿದನು.
ತ್ವಂ ಭೀಮ ರಕ್ಷ ರಾಜಾನಮೇತತ್ ಕಾರ್ಯತಮಂ ಹಿ ತೇ |
ಅಹಂ ಭಿತ್ತ್ವಾ ಪ್ರವೇಕ್ಷ್ಯಾಮಿ ಕಾಲಪಕ್ವಮಿದಂ ಬಲಮ್ ॥ 75 ॥
ಎಲೈ ಭೀಮನೇ, ನೀನು ರಾಜನನ್ನು ರಕ್ಷಿಸು. ಇದು ಅವಶ್ಯವಾಗಿ ಮಾಡಬೇಕಾದ ಕಾರ್ಯ. ಕಾಲಪಕ್ವವಾದ ಈ ಸೈನ್ಯವನ್ನು ಭೇದಿಸಿ ನಾನು ಪ್ರವೇಶಿಸುವೆನು.
ಆಯತ್ಯಾಂ ಚ ತಥಾತ್ವೇ ಚ ಶ್ರೇಯೋ ರಾಜ್ಞೋಽಭಿರಕ್ಷಣಮ್ |
ಜಾನೀಷೇ ಮಮ ವೀರ್ಯಂ ತ್ವಂ ತವ ಚಾಹಮರಿಂದಮ ॥ 76 ॥
ತಸ್ಮಾದ್ ಭೀಮ ನಿವರ್ತಸ್ವ ಮಮ ಚೇದಿಚ್ಛಸಿ ಪ್ರಿಯಮ್ ॥ 77 ॥
ವರ್ತಮಾನ ಕಾಲದಲ್ಲಿ ಮತ್ತು ಭವಿಷ್ಯತ್ಕಾಲದಲ್ಲಿ ಧರ್ಮರಾಜನ ರಕ್ಷಣೆಯು ಶ್ರೇಯಸ್ಕರವಾದುದು. ಎಲೈ ಅರಿಂದಮನೇ, ನನ್ನ ಸಾಮರ್ಥ್ಯವನ್ನು ನೀನು ತಿಳಿದಿದ್ದೀಯೆ. ನಿನ್ನ ಸಾಮರ್ಥ್ಯವನ್ನು ನಾನೂ ತಿಳಿದಿದ್ದೇನೆ. ಆದ್ದರಿಂದ ಎಲೈ ಭೀಮನೇ, ನನಗೆ ಪ್ರಿಯವನ್ನು ಬಯಸುವುದಾದರೆ ನೀನು ಹಿಂದಿರುಗು.
ತಥೋಕ್ತಃ ಸಾತ್ಯಕಿಂ ಪ್ರಾಹ ವ್ರಜ ತ್ವಂ ಕಾರ್ಯಸಿದ್ಧಯೇ |
ಅಹಂ ರಾಜ್ಞಃ ಕರಿಷ್ಯಾಮಿ ರಕ್ಷಾಂ ಪುರುಷಸತ್ತಮ |
ಏವಮುಕ್ತಃ ಪ್ರತ್ಯುವಾಚ ಭೀಮಸೇನಂ ಸ ಮಾಧವಃ ॥ 78 ॥
ಹಾಗೆ ಹೇಳಲ್ಪಟ್ಟ ಭೀಮಸೇನನು ಸಾತ್ಯಕಿಯನ್ನು ಕುರಿತು, ನೀನು ಕಾರ್ಯಸಿದ್ಧಿಗಾಗಿ ಹೊರಡು. ಎಲೈ ಪುರುಷಶ್ರೇಷ್ಠನೇ, ನಾನು ರಾಜನ ರಕ್ಷಣೆಯನ್ನು ಮಾಡುವೆನು ಎಂದು ಹೇಳಿದನು. ಆಗ ಸಾತ್ಯಕಿಯು ಭೀಮಸೇನನನ್ನು ಕುರಿತು ಮಾತನಾಡಿದನು.
ಸಾತ್ಯಕಿಃ
ಗಚ್ಛ ಗಚ್ಛ ದ್ರುತಂ ಪಾರ್ಥ ಧ್ರುವೋಽದ್ಯ ವಿಜಯೋ ಮಮ |
ಯನ್ಮೇ ಸ್ನಿಗ್ಧೋಽನುರಕ್ತಶ್ಚ ತ್ವಮದ್ಯ ವಶಗಃ ಸ್ಥಿತಃ ॥ 79 ॥
ಸಾತ್ಯಕಿ ಎಲೈ ಪಾರ್ಥನೇ, ಬೇಗ ಹೊರಡು, ಹೊರಡು. ಈ ದಿನ ನನ್ನ ವಿಜಯವು ನಿಶ್ಚಿತವಾದುದು. ಏಕೆಂದರೆ ನನ್ನಲ್ಲಿ ಸ್ನೇಹಸಂಪನ್ನನಾದ ನೀನು ನನ್ನ ವಶವರ್ತಿಯಾಗಿದ್ದೀಯೆ.
ನಿಮಿತ್ತಾನಿ ಚ ಧನ್ಯಾನಿ ಯಥಾ ಭೀಮ ವದಂತಿ ಮೇ |
ನಿಹತೇ ಸೈಂಧವೇ ಪಾಪೇ ಪಾಂಡವೇನ ಮಹಾತ್ಮನಾ ॥ 80 ॥
ಪರಿಷ್ವಜಿಷ್ಯೇ ರಾಜಾನಂ ಧರ್ಮಾತ್ಮಾನಂ ನ ಸಂಶಯಃ |
ಅಪ್ರಮಾದಶ್ಚ ತೇ ಕಾರ್ಯೋ ದ್ರೋಣಂ ಪ್ರತಿ ಮಹಾರಥಮ್ ॥ 81 ॥
ಎಲೈ ಭೀಮನೇ, ಶುಭವಾದ ಶಕುನಗಳು ಹೇಳುತ್ತಿರುವಂತೆ ನನ್ನ ವಿಜಯವು ಇಂದು ಸ್ಥಿರವಾದುದು. ಮಹಾತ್ಮನಾದ ಪಾಂಡುಪುತ್ರನಾದ ಅರ್ಜುನನು ಪಾಪಿಯಾದ ಸೈಂಧವನನ್ನು ಕೊಂದಮೇಲೆ ನಾನು ಯುಧಿಷ್ಠಿರನನ್ನು ಆಲಿಂಗಿಸುವೆನು. ಇದರಲ್ಲಿ ಸಂಶಯವಿಲ್ಲ. ನೀನು ಮಹಾರಥರಾದ ದ್ರೋಣರ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು.
ಸಂಜಯಃ
ಏತಾವದುಕ್ತ್ವಾ ಭೀಮಂ ತು ವಿಸೃಜ್ಯ ಚ ಮಹಾಮನಾಃ |
ಸಂಪ್ರೈಕ್ಷತ್ ತಾವಕಂ ಸೈನ್ಯಂ ವ್ಯಾಘ್ರೋ ಮೃಗಗಣಾನಿವ ॥ 82 ॥
ಸಂಜಯ ಭೀಮನನ್ನು ಕುರಿತು ಇಷ್ಟು ಮಾತ್ರ ಮಾತನಾಡಿ, ಧೈರ್ಯಶಾಲಿಯಾದ ಅವನು ಭೀಮನನ್ನು ಕಳುಹಿಸಿಕೊಟ್ಟು ವ್ಯಾಘ್ರವು ಜಿಂಕೆಗಳ ಸಮೂಹವನ್ನು ನೋಡಿದಂತೆ ನಿನ್ನ ಸೈನ್ಯವನ್ನು ನೋಡಿದನು.
ತಂ ದೃಷ್ಟ್ವಾ ಪ್ರತಿವೀಕ್ಷಂತಂ ಸೈನ್ಯಂ ತವ ಜನಾಧಿಪ |
ಭೂಯ ಏವಾಭವನ್ಮೂಢಂ ಸುಭೃಶಂ ಚಾಪ್ಯಕಂಪತ ॥ 83 ॥
ಎಲೈ ರಾಜನೇ, ಸಾತ್ಯಕಿಯು ನಿನ್ನ ಸೈನ್ಯವನ್ನು ನೋಡುತ್ತಿರುವುದನ್ನು ನೋಡಿ ನಿನ್ನ ಸೈನ್ಯವು ಪುನಃ ಕರ್ತವ್ಯಮೂಢವಾಗಿ ಬಹಳವಾಗಿ ನಡುಗಿತು.
ತತಃ ಪ್ರಯಾತಃ ಸಹಸಾ ತವ ಸೈನ್ಯಂ ಸ ಸಾತ್ಯಕಿಃ |

ದಿದೃಕ್ಷುರರ್ಜುನಂ ರಾಜನ್ ಧರ್ಮರಾಜಸ್ಯ ಶಾಸನಾತ್ ॥ 84 ॥
ಎಲೈ ರಾಜನ್ನೇ, ಅನಂತರ ತಕ್ಷಣ ಸಾತ್ಯಕಿಯು ಧರ್ಮರಾಜನ ಶಾಸನಕ್ಕೆ ಅನುಗುಣವಾಗಿ ಅರ್ಜುನನನ್ನು ನೋಡಲು ಬಯಸಿ, ನಿನ್ನ ಸೈನ್ಯವನ್ನು ಪ್ರವೇಶಿಸಿ ಸಾಗಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟನವತಿತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂಬತ್ತನೆಯ ಅಧ್ಯಾಯ
ಅರ್ಜುನನ ಬಳಿಗೆ ಹೋಗುತ್ತಾ ಕೃತವರ್ಮನ ಜೊತೆಯಲ್ಲಿ
ಸಾತ್ಯಕಿಯ ಯುದ್ಧ.
ಸಂಜಯಃ
ಪ್ರಯಾತೇ ತವ ಸೈನ್ಯಂ ತು ಯುಯುಧಾನೇ ಯುಯುತ್ಸಯಾ |
ಧರ್ಮರಾಜೋ ಮಹಾರಾಜ ಸ್ವೇನಾನೀಕೇನ ಸಂವೃತಃ |
ಪ್ರಾಯಾದ್ ದ್ರೋಣರಥಪ್ರೇಪ್ಸುः ಯುಯುಧಾನಸ್ಯ ಪೃಷ್ಠತಃ ॥ 1 ॥
ಸಂಜಯ ಎಲೈ ಮಹಾರಾಜನೇ, ಯುಯುಧಾನನು (ಸಾತ್ಯಕಿಯು) ಯುದ್ಧವನ್ನು ಮಾಡಲು ಬಯಸಿ ನಿನ್ನ ಸೈನ್ಯವನ್ನು ಪ್ರವೇಶಿಸುತ್ತಿರಲು ಧರ್ಮರಾಜನು ತನ್ನ ಸೈನ್ಯದಿಂದ ಕೂಡಿದವನಾಗಿ ದ್ರೋಣರ ರಥದ ಸಮೀಪಕ್ಕೆ ಹೋಗಲು ಬಯಸಿ ಸಾತ್ಯಕಿಯ ಹಿಂದೆ ಹೊರಟನು.
ತತಃ ಪಾಂಚಾಲರಾಜಸ್ಯ ಪುತ್ರಃ ಸಂಗ್ರಾಮದುರ್ಮದಃ |
ಪ್ರಯಾತೇ ಮಾಧವೇ ರಾಜನ್ನಿದಂ ವಚನಮಬ್ರವೀತ್ ॥ 2 ॥
ಆಗ ಪಾಂಚಾಲರಾಜನ ಪುತ್ರನೂ, ಸಂಗ್ರಾಮ ದುರ್ಮದನೂ ಆದ ವಸುದಾನನು ಸಾತ್ಯಕಿಯು ಹೊರಟು ಹೋಗುತ್ತಿರಲು ಈ ಮಾತುಗಳನ್ನು ಆಡಿದನು.
ಪ್ರಾಕ್ರೋಶತ್ ಪಾಂಡವಾನೀಕೇ ವಸುದಾನಶ್ಚ ಪಾರ್ಥಿವಃ ॥ 3 ॥
ಆಗಚ್ಛತ ಪ್ರಹರತ ದ್ರುತಂ ವಿಪರಿಧಾವತ |
ಯಥಾ ಸುಖೇನ ಗಚ್ಛೇತ ಸಾತ್ಯಕಿರ್ಯುದ್ಧದುರ್ಮದಃ |
ಮಹಾರಥಾ ಹಿ ಬಹವೋ ಯತಿಷ್ಯಂತೇಽಸ್ಯ ನಿರ್ಜಯೇ ॥ 4 ॥
ಬನ್ನಿ, ಪ್ರಹಾರವನ್ನು ಮಾಡಿ, ಯುದ್ಧದುರ್ಮದನಾದ ಸಾತ್ಯಕಿಯು ಸುಖವಾಗಿ ಹೋಗುವಂತೆ ಶೀಘ್ರವಾಗಿ ಸಂಚರಿಸಿ. ಅನೇಕ ಮಹಾರಥರು ಸಾತ್ಯಕಿಯನ್ನು ಜಯಿಸಲು ಪ್ರಯತ್ನ ಪಡುವರು ಎಂದು ವಸುದಾನನು ಪಾಂಡವ ಸೈನ್ಯದಲ್ಲಿ ಕಿರುಚಿದನು.
ಸಂಜಯಃ
ಸೇನಾಪತಿವಚಃ ಶ್ರುತ್ವಾ ಪಾಂಡವೇಯಾಃ ಸಮಂತತಃ |
ಅಭ್ಯುದ್ಯಯುರ್ಮಹಾರಾಜ ತವ ಸೈನ್ಯಂ ಸಮಂತತಃ ॥ 5 ॥
ಸಂಜಯ ಎಲೈ ಮಹಾರಾಜನೇ, ಸೇನಾಪತಿಯ ವಚನವನ್ನು ಕೇಳಿ ಪಾಂಡವ ಸೇನೆಯ ಯೋಧರು ಎಲ್ಲ ಕಡೆಗಳಿಂದಲೂ ನಿನ್ನ ಸೈನ್ಯದ ಕಡೆಗೆ ನುಗ್ಗಿದರು.
ಜಹಿ ಪ್ರಹರ ಗೃಹ್ಣೀಹಿ ವಿಧ್ಯ ವಿದ್ರಾವಯಾದ್ರವ |
ಇತಿ ಬ್ರುವಂತೋ ವೇಗೇನ ಸಮಾಪೇತುರ್ಬಲಂ ತವ ॥ 6 ॥
ಕೊಲ್ಲು, ಪ್ರಹಾರವನ್ನು ಮಾಡು, ಹಿಡಿ, ಗಾಯಗೊಳಿಸು, ಓಡಿಸು, ಸಮೀಪಕ್ಕೆ ಓಡಿಹೋಗು ಎಂದು ಕಿರುಚುತ್ತಾ ವೇಗದಿಂದ ನಿನ್ನ ಸೈನ್ಯದ ಮೇಲೆ ಬಿದ್ದರು.
ವಯಂ ಪ್ರತಿಜಿಗೀಷಂತಸ್ತತ್ರ ತಾನ್ ಸಮಭಿದ್ರುತಾಃ |
ಬಾಣಶಬ್ದರವಾನ್ ಕೃತ್ವಾ ವಿಮಿಶ್ರಾನ್ ಶಂಖನಿಸ್ವನೈಃ ॥ 7 ॥
ಆಗ ನಾವು ಅವರನ್ನು ಗೆಲ್ಲಲು ಬಯಸಿ, ಶಂಖಧ್ವನಿಗಳಿಂದ ಮಿಶ್ರಿತವಾದ ಬಾಣಧ್ವನಿಗಳನ್ನು ಮಾಡಿ ಅವರ ಕಡೆಗೆ ಓಡಿದೆವು.
ಯುಯುಧಾನರಥಂ ದೃಷ್ಟ್ವಾ ತಾವಕಾ ಅಭಿದುದ್ರುವುಃ |
ತತಃ ಶಬ್ದೋ ಮಹಾನಾಸೀದ್ ಯುಯುಧಾನರಥಂ ಪ್ರತಿ ॥ 8 ॥
ಸಾತ್ಯಕಿಯ ರಥವನ್ನು ನೋಡಿ ನಿನ್ನ ಸೈನಿಕರು ಅವನ ಕಡೆಗೆ ಧಾವಿಸಿದರು. ಆಗ ಅವನ ರಥದ ಬಳಿ ದೊಡ್ಡ ಶಬ್ದವುಂಟಾಯಿತು.
ಪ್ರಕಂಪ್ಯಮಾನಾ ಮಹತೀ ತವ ಪುತ್ರಸ್ಯ ವಾಹಿನೀ |
ಸಾತ್ವತೇನ ಮಹಾರಾಜ ಶತಧಾಽಭಿವ್ಯದೀರ್ಯತ ॥ 9 ॥
ಎಲೈ ಮಹಾರಾಜನೇ, ಸಾತ್ಯಕಿಯಿಂದ ನಡುಗಿಸಲ್ಪಟ್ಟ ನಿನ್ನ ಪುತ್ರನ ದೊಡ್ಡ ಸೈನ್ಯವು ನೂರು ಭಾಗವಾಗಿ ಭಗ್ನವಾಯಿತು.
ತಸ್ಯಾಂ ವಿದೀರ್ಯಮಾಣಾಯಾಂ ಶಿನೇಃ ಪೌತ್ರೋ ಮಹಾರಥಃ |
ಸಪ್ತ ವೀರಾನ್ ಮಹೇಷ್ವಾಸಾನ್ ಅಗ್ರಾನೀಕೇಷ್ವಪೋಥಯತ್ ॥ 10 ॥
ನಿನ್ನ ಸೈನ್ಯವು ಹಾಗೆ ಭಗ್ನವಾಗುತ್ತಿರಲು ಶಿನಿಯ ಪೌತ್ರನೂ, ಮಹಾರಥನೂ ಆದ ಸಾತ್ಯಕಿಯು ನಿನ್ನ ಸೇನೆಯ ಅಗ್ರಭಾಗದಲ್ಲಿದ್ದ ಮಹಾಧನುರ್ಧಾರಿಗಳಾದ ಏಳು ವೀರರನ್ನು ಹೊಡೆದು ಉರುಳಿಸಿದನು.

ಅಥಾನ್ಯಾನಪಿ ರಾಜೇಂದ್ರ ನಾನಾಜನಪದೇಶ್ವರಾನ್ |
ಶರೈರನಲಸಂಕಾಶೈರ್ನಿನ್ಯೇ ವೀರಾನ್ ಯಮಕ್ಷಯಮ್ ॥ 11 ॥
ಎಲೈ ರಾಜೇಂದ್ರನೇ, ಅನಂತರ ವೀರರಾದ ಬೇರೆ ರಾಜರನ್ನೂ ಸಹ ಅಗ್ನಿ ಸದೃಶವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು.
ಶತಮೇಕೇನ ವಿವ್ಯಾಧ ಶತೇನೈಕಂ ಚ ಪತ್ರಿಣಾ |
ದ್ವಿಪಾರೋಹಾನ್ ದ್ವಿಪಾಂಶ್ಚೈವ ಹಯಾರೋಹಾನ್ ಹಯಾಂಸ್ತಥಾ |
ರಥಿನಃ ಸಾಶ್ವಸೂತಾಂಶ್ಚ ಜಘಾನೇಶಃ ಪಶೂನಿವ ॥ 12 ॥
ನೂರು ಬಾಣಗಳನ್ನು ಒಂದೇ ಬಾಣದಿಂದ ಯುದ್ದ ಮಾಡಿ ಕೆಡವಿದನು. ಪತ್ರವುಳ್ಳ ನೂರು ಬಾಣಗಳಿಂದ ಒಂದು ಬಾಣವನ್ನು ಕೆಡವಿದನು. ಪಶುಪತಿಯು ಪಶುಗಳನ್ನು ಸಂಹರಿಸುವಂತೆ ಅವನು ಗಜಾರೋಹಿಗಳನ್ನು ಮತ್ತು ಗಜಗಳನ್ನು, ಅಶ್ವಾರೋಹಿಗಳನ್ನು ಮತ್ತು ಅಶ್ವಗಳನ್ನು, ರಥಿಕರನ್ನು ಮತ್ತು ಅಶ್ವಸಾರಥಿಗಳನ್ನು ಕೊಂದನು.
ತಂ ತಥಾಭೂತಕರ್ಮಾಣಂ ಶರಸಂಘಾತವರ್ಷಿಣಮ್ |
ನ ಕೇಚನಾಭ್ಯಧಾವನ್ ವೈ ಸಾತ್ಯಕಿಂ ತವ ಸೈನಿಕಾಃ ॥ 13 ॥
ಬಾಣಗಳ ಸಮೂಹವನ್ನು ಸುರಿಸುತ್ತಾ ಅಂತಹ ಕಾರ್ಯವನ್ನು ಎಸಗುತ್ತಿದ್ದ ಸಾತ್ಯಕಿಯ ಕಡೆಗೆ ನಿನ್ನ ಸೈನಿಕರು ಯಾರೂ ಮುಂದೆ ಹೋಗಲಿಲ್ಲ.
ತೇ ಭೀತ್ವಾ ಮೃದ್ಯಮಾನಾಶ್ಚ ಪ್ರಮೃಷ್ಟಾ ದೀರ್ಘಬಾಹುನಾ |
ಆಯೋಧನಂ ಜಹುರ್ವೀರಾ ದೃಷ್ಟ್ವಾ ತಮತಿಪೌರುಷಮ್ ॥ 14 ॥
ದೀರ್ಘಬಾಹುವಾದ ಸಾತ್ಯಕಿಯಿಂದ ಮರ್ದಿಸಲ್ಪಟ್ಟು, ವಿನಾಶಕ್ಕೆ ಒಳಗಾಗುತ್ತಿದ್ದ ಆ ವೀರರು ಭಯಗೊಂಡು ಸಾತ್ಯಕಿಯ ಅತಿಪೌರುಷವನ್ನು ನೋಡಿ ರಣರಂಗವನ್ನು ತೊರೆದರು.
ತಮೇಕಂ ಬಹುಧಾ ಪಶ್ಯನ್ ಮೋಹಿತಾಸ್ತಸ್ಯ ತೇಜಸಾ |
ಸಂಗ್ರಾಮಕೋವಿದಂ ವೀರಂ ವಿಚರಂತಮಭೀತವತ್ ॥ 15 ॥
ಅವನ ಪರಾಕ್ರಮದಿಂದ ಮೋಹಿತರಾಗಿ, ನಿರ್ಭೀತನಾಗಿ ರಣರಂಗದಲ್ಲಿ ಸಂಚರಿಸುವ ರಣಕೋವಿದನಾದ ವೀರನಾದ ಅವನನ್ನು ಒಬ್ಬನನ್ನೇ ಅನೇಕರೆಂದು ತಿಳಿದರು.
ರಥೈರ್ವಿಮಥಿತಾಕ್ಷೈಶ್ಚ ಭಗ್ನನೀಡೈಶ್ಚ ಮಾರಿಷ |
ಚಕ್ರೈರ್ವಿಮಥಿತೈಶ್ಛಿನ್ನೈರ್ಧ್ವಜೈಶ್ಚ ವಿನಿಪಾತಿತೈಃ ॥ 17 ॥
ಅನುಕರ್ಷೈಃ ಪತಾಕಾಭಿಃ ಶಿರಸಹತ್ರಣೈಃ ಸಕಾಂಚನೈಃ |
ಬಾಹುಭಿಶ್ಚಂದನಾದಿಗ್ಧೈಃ ಸಾಂಗದೈಶ್ಚ ವಿಶಾಂಪತೇ ॥ 18 ॥
ಹಸ್ತಿಹಸ್ತೋಪಮೈಶ್ಚಾಪಿ ಭುಜಗಾಭೋಗಸನ್ನಿಭೈಃ |
ಊರುಭಿಃ ಪೃಥಿವೀ ಚ್ಛನ್ನಾ ಮನುಜಾನಾಂ ನರೋತ್ತಮ ॥ 19 ॥
ಎಲೈ ಪೂಜ್ಯನೇ, ನರಶ್ರೇಷ್ಠನೇ, ಅಕ್ಷಗಳು, ನೀಡಗಳು, ಚಕ್ರಗಳು ಮುರಿದು, ಧ್ವಜಗಳು ಭಗ್ನವಾಗಿ ಕೆಳಗೆ ಬಿದ್ದ ರಥಗಳಿಂದಲೂ, ಸಣ್ಣ ನೊಗಗಳು, ಪತಾಕೆಗಳು, ಶಿರಸಹತ್ರಣಗಳಿಂದಲೂ, ಸುವರ್ಣಾಲಂಕೃತವಾದ ಭುಜಕೀರ್ತಿಗಳುಳ್ಳ ಮತ್ತು ಚಂದನ ಲೇಪಿತವಾದ ಬಾಹುಗಳಿಂದಲೂ, ಆನೆಯ ಸೊಂಡಿಲುಗಳನ್ನು ಹೋಲುವ, ಸರ್ಪಗಳ ಶರೀರವನ್ನು ಹೋಲುವ ವೀರರ ತೊಡೆಗಳಿಂದಲೂ ಭೂಮಿಯು ತುಂಬಿಹೋಯಿತು.
ಶಶಾಂಕಸದೃಶಾಕಾರೈಃ ವದನೈಶ್ಚ ಸಕುಂಡಲೈಃ |
ಪತಿತೈರ್ವೃಷಭಾಕ್ಷಾಣಾಂ ಬಭೌ ಭಾರತ ಮೇದಿನೀ ॥ 20 ॥
ಎಲೈ ಭಾರತನೇ, ಚಂದ್ರನನ್ನು ಹೋಲುವ ಆಕಾರವುಳ್ಳ ಕುಂಡಲಸಹಿತರಾದ ಪತಿತರಾದ ವೃಷಭಾಕ್ಷವುಳ್ಳ ವೀರರ ಮುಖಗಳಿಂದ ಭೂಮಿಯು ಶೋಭಿಸಿತು.
ಗಜೈಶ್ಚ ಬಹುಧಾ ಚ್ಛಿನ್ನೈಃ ಶಯಾನೈಃ ಪರ್ವತೋಪಮೈಃ |
ರರಾಜಾತಿಭೃಶಂ ಭೂಮಿಃ ವಿಕೀರ್ಣೈರಿವ ಪರ್ವತೈಃ ॥ 21 ॥
ಬಹಳವಾಗಿ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದ ಪರ್ವತಸದೃಶವಾದ ಗಜಗಳಿಂದ ಭೂಮಿಯು ಪರ್ವತಗಳು ಚೆಲ್ಲಾಡಿದಂತೆ ಬಹಳವಾಗಿ ಶೋಭಿಸಿತು.
ತಪನೀಯಮಯ್ಯೈರ್ಯೋಕ್ತ್ರೈರ್ಮುಕ್ತಾಜಾಲವಿಭೂಷಿತೈಃ |
ಉರಶ್ಛದೈರ್ವಿಚಿತ್ರೈಶ್ಚ ವ್ಯರೋಚಂತ ತುರಂಗಮಾಃ ॥ 22 ॥
ಗತಸತತ್ವ ಮಹೀಂ ಪ್ರಾಪ್ತಾಃ ಪ್ರಮೃಷ್ಟಾ ದೀರ್ಘಬಾಹುನಾ ॥ 23 ॥
ಸುವರ್ಣಮಯವಾದ ಕಡಗೂಟಗಳಿಂದಲೂ ಮತ್ತು ಮುತ್ತಿನ ಜಾಲಗಳಿಂದಲೂ, ವಿಚಿತ್ರವಾದ ವಕ್ಷಸ್ಸ್ಥಲ ರಕ್ಷಣೆಗಳಿಂದಲೂ ಕೂಡಿದ ಅಶ್ವಗಳು ದೀರ್ಘಬಾಹುವಾದ ಸಾತ್ಯಕಿಯಿಂದ ವಿನಾಶಗೊಳಿಸಲ್ಪಟ್ಟು ಮೃತವಾಗಿಭೂಮಿಯ ಮೇಲೆ ಬಿದ್ದು ಶೋಭಿಸಿದವು.

ನಾನಾವಿಧಾನಿ ಸೈನ್ಯಾನಿ ತವ ಹತ್ವಾ ತು ಸಾತ್ವತಃ |
ಪ್ರವಿಷ್ಟಃಸ್ತಾವಕಂ ಸೈನ್ಯಂ ದ್ರಾವಯಿತ್ವಾ ಚಮೂಂ ತವ ॥ 24 ॥
ಸಾತ್ವತ ಕುಲಕ್ಕೆ ಸೇರಿದ ಸಾತ್ಯಕಿಯು ನಾನಾ ವಿಧವಾದ ಸೈನ್ಯಗಳನ್ನು ಸಂಹರಿಸಿ, ಓಡಿಸಿ, ನಿನ್ನ ಸೈನ್ಯದೊಳಗೆ ಇನ್ನೂ ಮುಂದೆ ಪ್ರವೇಶಿಸಿದನು.
ತತಸ್ತೇನೈವ ಮಾರ್ಗೇಣ ಯೇನ ಯಾತೋ ಧನಂಜಯಃ |

ಇಯೇಷ ಸಾತ್ಯಕಿರ್ಗಂತುಂ ತತೋ ದ್ರೋಣೇನ ವಾರಿತಃ ॥ 25 ॥
ಸಾತ್ಯಕಿಯು ಅರ್ಜುನನು ಹೋದ ಮಾರ್ಗದಲ್ಲಿಯೇ ಹೋಗಲು ಬಯಸಿದನು. ಆದರೆ ದ್ರೋಣರು ಅವನನ್ನು ತಡೆದರು.
ಭಾರದ್ವಾಜಂ ಸಮಾಸಾದ್ಯ ಯುಯುಧಾನಸ್ತು ಮಾರಿಷ |
ನಾತ್ಯವರ್ತತ ಸಂಕ್ರುದ್ಧೋ ವೇಲಾಮಿವ ಜಲಾಶಯಃ ॥ 26 ॥
ಎಲೈ ಪೂಜ್ಯನೇ, ದ್ರೋಣರನ್ನು ಸಮೀಪಿಸಿದ ಸಂಕ್ರುದ್ಧನಾದ ಯುಯುಧಾನನು ಜಲಾಶಯವು ದಡವನ್ನು ಮೀರಲು ಸಾಧ್ಯವಾಗದಂತೆ ಅವರನ್ನು ದಾಟಿ ಮುಂದೆ ಹೋಗಲಿಲ್ಲ.
ನಿಗೃಹ್ಯ ತು ರಣೇ ದ್ರೋಣೋ ಯುಯುಧಾನಂ ಮಹಾರಥಮ್ |
ವಿವ್ಯಾಧ ನಿಶಿತೈರ್ಬಾಣೈಃ ಪಂಚಭಿರ್ಮರ್ಮಭೇದಿಭಿಃ ॥ 27 ॥
ದ್ರೋಣರು ಮಹಾರಥನಾದ ಯುಯುಧಾನನನ್ನು ರಣರಂಗದಲ್ಲಿ ನಿಲ್ಲಿಸಿ, ಮರ್ಮಭೇದಿಗಳಾದ ತೀಕ್ಷ್ಣವಾದ ಐದು ಬಾಣಗಳಿಂದ ಅವನನ್ನು ಹೊಡೆದರು.
ಸಾತ್ಯಕಿಸ್ತು ರಣೇ ದ್ರೋಣಂ ರಾಜನ್ ವಿವ್ಯಾಧ ಸಪ್ತಭಿಃ |
ಹೇಮಪುಂಖೈಃ ಶಿಲಾಧೌತೈಃ ಕಂಕಬರ್ಹಿಣವಾಜಿತೈಃ |
ತಂ ಷಡ್ಭಿಃ ಸಾಯಕೈರ್ದ್ರೋಣಃ ಸಾಶ್ವಯಂತಾರಮಾರ್ದಯತ್ ॥ 28 ॥
ಎಲೈ ರಾಜನೇ, ಸಾತ್ಯಕಿಯಾದರೂ ಸುವರ್ಣಮಯವಾದ ಪುಂಖಗಳನ್ನು ಹೊಂದಿದ್ದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಕಂಕಬರ್ಹಿಗರಿಗಳನ್ನು ಹೊಂದಿದ್ದ ಏಳು ಬಾಣಗಳಿಂದ ರಣರಂಗದಲ್ಲಿ ದ್ರೋಣರನ್ನು ಹೊಡೆದನು. ದ್ರೋಣರು ಆರು ಬಾಣಗಳನ್ನು ಪ್ರಯೋಗಿಸಿ ಸಾರಥಿ, ಅಶ್ವಗಳಿಂದ ಸಹಿತನಾದ ಅವನನ್ನು ಎದುರಿಸಿದರು.
ಸ ತಂ ನ ಮಮೃಷೇ ದ್ರೋಣಂ ಯುಯುಧಾನೋ ಮಹಾರಥಃ |
ಸಿಂಹನಾದಂ ತತಃ ಕೃತ್ವಾ ದ್ರೋಣಂ ವಿವ್ಯಾಧ ಸಾತ್ಯಕಿಃ ॥ 29 ॥
ದಶಭಿಃ ಸಾಯಕೈಶ್ಚಾನ್ಯೈಃ ಷಡ್ಭಿರಷ್ಟಾಭಿರೇವ ಚ |
ಯುಯುಧಾನಃ ಪುನರ್ದ್ರೋಣಂ ವಿವ್ಯಾಧ ದಶಭಿಃ ಶರೈಃ ॥ 30 ॥
ಮಹಾರಥನಾದ ಸಾತ್ಯಕಿಯು ದ್ರೋಣರು ಹಾಗೆ ಮಾಡುವುದನ್ನು ಸಹಿಸಲಿಲ್ಲ. ಆಗ ಸಿಂಹನಾದವನ್ನು ಮಾಡಿ ಅವನು ಬೇರೆ ಹತ್ತು ಬಾಣಗಳಿಂದ, ಪುನಃ ಆರು ಬಾಣಗಳಿಂದ, ಪುನಃ ಎಂಟು ಬಾಣಗಳಿಂದ ಮತ್ತು ಪುನಃ ಹತ್ತು ಬಾಣಗಳಿಂದ ದ್ರೋಣರನ್ನು ಹೊಡೆದನು.
ಏಕೇನ ಸಾರಥಿಂ ಚಾಸ್ಯ ಚತುರ್ಭಿಶ್ಚತುರೋ ಹಯಾನ್ |
ಧ್ವಜಮೇಕೇನ ಬಾಣೇನ ಯುಧಿ ವಿವ್ಯಾಧ ಮಾರಿಷ ॥ 31 ॥
ಎಲೈ ಪೂಜ್ಯನೇ, ಅವನು ಒಂದು ಬಾಣದಿಂದ ಸಾರಥಿಯನ್ನೂ, ನಾಲ್ಕು ಬಾಣಗಳಿಂದ ರಥದ ನಾಲ್ಕು ಕುದುರೆಗಳನ್ನೂ, ಒಂದು ಬಾಣದಿಂದ ರಥದ ಧ್ವಜವನ್ನೂ ಹೊಡೆದನು.
ತಂ ದ್ರೋಣಃ ಸಾಶ್ವಯಂತಾರಂ ಸರಥಧ್ವಜಮಾಶುಗೈಃ |
ತ್ವರನ್ ಪ್ರಾಚ್ಛಾದಯದ್ ಬಾಣೈಃ ಶಲಭಾನಾಮಿವ ವ್ರಜೈಃ ॥ 32 ॥
ದ್ರೋಣರು ಅಶ್ವ-ಸಾರಥಿಗಳಿಂದಲೂ, ಧ್ವಜ-ರಥಗಳಿಂದಲೂ ಕೂಡಿದ ಅವನನ್ನು ಶೀಘ್ರವಾಗಿ ವೇಗವಾಗಿ ಸಾಗುವ ಪತಂಗಗಳ ಸಮೂಹದಂತೆ ಇರುವ ಬಾಣಗಳಿಂದ ಮುಚ್ಚಿಹಾಕಿದರು.
ತಥೈವ ಯುಯುಧಾನೋಽಪಿ ದ್ರೋಣಂ ಬಹುಭಿರಾಶುಗೈಃ |
ಪ್ರಾಚ್ಛಾದಯದಸಂಭ್ರಾಂತಃ ತ್ವರಮಾಣೋ ಮಹಾರಥಃ ॥ 33 ॥
ಹಾಗೆಯೇ ಮಹಾರಥನಾದ ಸಾತ್ಯಕಿಯೂ ಸಹ ಯಾವ ಗಾಬರಿಯೂ ಇಲ್ಲದೆ ಶೀಘ್ರಗಾಮಿಗಳಾದ ಅನೇಕ ಬಾಣಗಳಿಂದ ದ್ರೋಣರನ್ನು ಮುಚ್ಚಿಹಾಕಿದನು.
ದ್ರೋಣಸ್ತು ಪರಮಕ್ರುದ್ಧಃ ಸಾತ್ಯಕಿಂ ಪರವೀರಹಾ |
ಅವಾಕಿರಚ್ಚಿತೈರ್ಬಾಣೈರ್ವಾಸುದೇವಪರಾಕ್ರಮಮ್ ॥ 34 ॥
ಪರವೀರಘಾತಕರಾದ ದ್ರೋಣರಾದರೋ ಬಹಳ ಕೋಪಗೊಂಡು ಕೃಷ್ಣನ ಪರಾಕ್ರಮದಂತೆ ಪರಾಕ್ರಮವನ್ನು ಹೊಂದಿದ್ದ ಸಾತ್ಯಕಿಯ ಮೇಲೆ ಹರಿತವಾದ ಬಾಣಗಳ ಮಳೆಯನ್ನು ಕರೆದರು.
ತಂ ತಥಾ ಶರಜಾಲೇನ ಪ್ರಚ್ಛಾದ್ಯ ಮಹತಾ ಪುನಃ |
ದ್ರೋಣಃ ಪ್ರಹಸ್ಯ ಶೈನೇಯಮಿದಂ ವಚನಮಬ್ರವೀತ್ ॥ 35 ॥
ದ್ರೋಣರು ಹಾಗೆ ಅವನನ್ನು ಬಾಣಗಳ ಸಮೂಹದಿಂದ ಮುಚ್ಚಿಹಾಕಿ ನಕ್ಕು ಸಾತ್ಯಕಿಯನ್ನು ಕುರಿತು ಈ ಮಾತನ್ನು ಆಡಿದರು.
ತವಾಚಾರ್ಯೋ ರಣಂ ಹಿತ್ವಾ ಯಾತಃ ಕಾಪುರುಷೋ ಯಥಾ |
ಯೋಧಯಂತಂ ಹಿ ಹಿತ್ವಾಽಸೌ ಮಾಂ ಪ್ರದಕ್ಷಿಣತೋ ಬಲೀ ॥ 36 ॥
ನಿನ್ನ ಬಲಿಷ್ಠನಾದ ಗುರುವು ಕೆಟ್ಟ ಪುರುಷನಂತೆ ನಡೆದುಕೊಂಡು ಯುದ್ಧ ಮಾಡುತ್ತಿದ್ದ ನನ್ನನ್ನು ಬಿಟ್ಟು ನನಗೆ ಪ್ರದಕ್ಷಿಣೆಯನ್ನು ಮಾಡಿ ಹೊರಟು ಹೋದನು.
ತ್ವಂ ನ ಮೇ ಯುದ್ಧ್ಯಮಾನಸ್ಯ ಜೀವನ್ ಸಾತ್ಯಕ ಮೋಕ್ಷ್ಯಸೇ |
ಯದಿ ಮಾಂ ತ್ವಂ ರಣೇ ಹಿತ್ವಾ ನ ಯಾಸ್ಯಾಚಾರ್ಯವದ್ ದ್ರುತಮ್ ॥
ನಿನ್ನ ಗುರುವಿನಂತೆ ಯುದ್ಧವನ್ನು ಬಿಟ್ಟು ಶೀಘ್ರವಾಗಿ ಓಡಿಹೋಗದಿದ್ದರೆ, ಎಲೈ ಸಾತ್ಯಕಿಯೇ, ಆದರೆ ಯುದ್ಧ ಮಾಡುತ್ತಿರುವ ನನ್ನಿಂದ ನೀನು ಜೀವ ಸಹಿತವಾಗಿ ತಪ್ಪಿಸಿಕೊಳ್ಳಲಾರೆ.

ಸಾತ್ಯಕಿಃ
ಧನಂಜಯಸ್ಯ ಪದವೀಂ ಧರ್ಮರಾಜಸ್ಯ ಶಾಸನಾತ್ |
ಗಚ್ಛಾಮಿ ಸ್ವಸ್ತಿ ತೇ ಬ್ರಹ್ಮನ್ ನ ಮೇ ಕಾಲಾತ್ಯಯೋ ಭವೇತ್ ॥ 38 ॥
ಆಚಾರ್ಯಾನುಗತೋ ಮಾರ್ಗಃ ಶಿಷ್ಯೈರನ್ವಾಸ್ಯತೇ ಸದಾ |
ತಸ್ಮಾದೇವ ವ್ರಜಾಮ್ಯಾಶು ಯಥಾ ಮೇ ಸ ಗುರುರ್ಗತಃ ॥ 39 ॥
ಸಾತ್ಯಕಿ ಬ್ರಾಹ್ಮಣರೇ, ಧರ್ಮರಾಜನ ಅಪ್ಪಣೆಯಂತೆ ನಾನು ಅರ್ಜುನನ ಮಾರ್ಗವನ್ನು ಹಿಡಿದು ಹೋಗುತ್ತೇನೆ. ನಿಮಗೆ ಕ್ಷೇಮವಾಗಲಿ, ನನಗೆ ಕಾಲವು ಮೀರುವುದು ಬೇಡ. ಗುರುಗಳು ಹೋದ ಮಾರ್ಗದಲ್ಲಿಯೇ ಯಾವಾಗಲೂ ಶಿಷ್ಯರು ಹೋಗುತ್ತಾರೆ. ಆದ್ದರಿಂದ ನನ್ನ ಗುರು ಹೋದ ಮಾರ್ಗದಲ್ಲಿಯೇ ನಾನು ಶೀಘ್ರವಾಗಿ ಹೋಗುತ್ತೇನೆ.
ಸಂಜಯಃ
ಏವಮುಕ್ತತ್ವಾ ತು ಶೈನೇಯ ಆಚಾರ್ಯಂ ಪರಿವರ್ಜಯನ್ |
ಪ್ರಯಾತಃ ಸಹಸಾ ರಾಜನ್ ಸಾರಥಿಂ ಚೇದಮಬ್ರವೀತ್ ॥ 40 ॥
ಸಂಜಯ ಎಲೈ ರಾಜನೇ, ಸಾತ್ಯಕಿಯು ಹೀಗೆ ಹೇಳಿ ದ್ರೋಣರನ್ನು ಪರಿತ್ಯಜಿಸಿ ತಕ್ಷಣ ಹೊರಟವನಾಗಿ ಸಾರಥಿಯನ್ನು ಕುರಿತು ಈ ಮಾತನ್ನಾಡಿದನು.
ದ್ರೋಣಃ ಕರಿಷ್ಯತೇ ಯತ್ನಂ ಸರ್ವಥಾ ಮಮ ವಾರಣೇ |
ಯತ್ತೋ ಯಾಹಿ ರಣೇ ಸೂತ ಶೃಣು ಚೇದಂ ವಚೋಽಪರಮ್ ॥
ಎಲೈ ಸೂತನೇ, ದ್ರೋಣರು ಎಲ್ಲ ರೀತಿಯಿಂದಲೂ ನನ್ನನ್ನು ತಡೆಯಲು ಪ್ರಯತ್ನವನ್ನು ಮಾಡುವರು. ಆದ್ದರಿಂದ ಎಚ್ಚರಿಕೆಯಿಂದ ಮುಂದೆ ಹೋಗು. ನನ್ನ ಈ ಇನ್ನೊಂದು ಮಾತನ್ನು ಕೇಳು.
ಏತದಾಲೋಕ್ಯತೇ ಸೈನ್ಯಮಾವಂತ್ಯಾನಾಂ ಮಹಾಪ್ರಭಮ್ |
ಅಭೇದ್ಯಮರಿಭಿರ್ವೀರೈಃ ಸುಮಹದ್ಭಿರ್ಮಹದ್ ಬಲಮ್ ॥ 42 ॥
ಅವಂತಿದೇಶದ ಮಹಾಪ್ರಭೆಯುಳ್ಳ, ವೀರರಾದ ಅನೇಕ ಶತ್ರುಗಳಿಂದ ಕೂಡಿದ, ಭೇದಿಸಲು ಸಾಧ್ಯವಿಲ್ಲದ ಈ ದೊಡ್ಡ ಸೈನ್ಯವು ಕಾಣುತ್ತಿದೆ.
ಅಸ್ಯಾನಂತರತಶ್ಚೈತದ್ ಬಾಹ್ಲೀಕಾನಾಂ ಮಹದ್ ಬಲಮ್ |
ತದನಂತರಮೇವೈತದ್ ದಾಕ್ಷಿಣಾತ್ಯಂ ಮಹದ್ ಬಲಮ್ ॥ 43 ॥
ಬಾಹ್ಲಿಕಾಭ್ಯಾಶಸಂಯುಕ್ತಂ ಕರ್ಣಸ್ಯಾಪಿ ಮಹದ್ ಬಲಮ್ ॥ 44 ॥
ಈ ಸೈನ್ಯದ ಅನಂತರ ಬಾಹ್ಲೀಕರ ದೊಡ್ಡ ಸೈನ್ಯವಿದೆ. ಅದರ ಅನಂತರ ದಾಕ್ಷಿಣಾತ್ಯರ ದೊಡ್ಡ ಸೈನ್ಯವಿದೆ. ಬಾಹ್ಲೀಕರ ಸೈನ್ಯದ ಸಮೀಪದಲ್ಲಿ ಕರ್ಣನ ದೊಡ್ಡ ಸೈನ್ಯವೂ ಇದೆ.
ಅನ್ಯೋನ್ಯೇನ ಚ ಸೈನ್ಯಾನಿ ಭಿನ್ನಾನ್ಯೇತಾನಿ ಸಾರಥೇ |
ಅನ್ಯೋನ್ಯಂ ಸಮುಪಾಶ್ರಿತ್ಯ ನ ತ್ಯಕ್ಷ್ಯಂತಿ ರಣಾಜಿರಮ್ ॥ 45 ॥
ಎಲೈ ಸಾರಥಿಯೇ, ಈ ಸೈನ್ಯಗಳು ಪರಸ್ಪರವಾಗಿ ಸ್ವಲ್ಪ ಅಂತರದಿಂದ ಕೂಡಿವೆ. ಒಂದಕ್ಕೊಂದು ಬಲವನ್ನು ನೀಡುತ್ತಾ ಇವು ರಣರಂಗವನ್ನು ಬಿಡುವುದಿಲ್ಲ.
ಏತದಂತರಮಾಸಾದ್ಯ ಚೋದಯಾಶ್ವಾನ್ ಪ್ರಹೃಷ್ಟವತ್ |
ಮಧ್ಯಮಂ ಜವಮಾಸ್ಥಾಯ ವಹ ಮಾಮತ್ರ ಸಾರಥೇ ॥ 46 ॥
ಬಾಹ್ಲಿಕಾ ಯತ್ರ ದೃಶ್ಯಂತೇ ನಾನಾಪ್ರಹರಣೋದ್ಯತಾಃ |
ದಾಕ್ಷಿಣಾತ್ಯಾಶ್ಚ ಬಹುಶಃ ಸೂತಪುತ್ರಪುರೋಗಮಾಃ ॥ 47 ॥
ಎಲೈ ಸಾರಥಿಯೇ, ಈ ಮಧ್ಯದ ಅಲ್ಪದೇಶವನ್ನು ತಲುಪಿ, ಸಂತೋಷದಿಂದ ಮಧ್ಯಮವೇಗವನ್ನು ಆಶ್ರಯಿಸಿ, ಅಶ್ವಗಳನ್ನು ಪ್ರಚೋದಿಸಿ ನನ್ನನ್ನು ಎಲ್ಲಿ ಅನೇಕ ಆಯುಧಗಳನ್ನು ಹಿಡಿದು ಉದ್ಯುಕ್ತರಾದ ಬಾಹ್ಲೀಕರು ಮತ್ತು ಕರ್ಣನೇ ಮೊದಲಾದ ಅನೇಕ ದಾಕ್ಷಿಣಾತ್ಯರು ಕಾಣುತ್ತಾರೆಯೋ ಅಲ್ಲಿಗೆ ಕರೆದುಕೊಂಡು ಹೋಗು.
ಹಸ್ತ್ಯಶ್ವರಥ ಸಂಬಾಧಂ ಯತ್ರಾನೀಕಂ ವಿಲೋಕ್ಯತೇ |
ನಾನಾದೇಶಸಮುತ್ಥೈಶ್ಚ ಪದಾತಿಭಿರಧಿಷ್ಠಿತಮ್ ॥ 48 ॥
ಗಜಗಳಿಂದಲೂ, ಅಶ್ವಗಳಿಂದಲೂ ಮತ್ತು ರಥಗಳಿಂದಲೂ ನಿಬಿಡವಾದ, ನಾನಾ ದೇಶದಿಂದ ಬಂದ ಪದಾತಿಗಳಿಂದಲೂ ಅಧಿಷ್ಠಿತವಾದ ಸೈನ್ಯವು ಕಂಡು ಬರುವಲ್ಲಿಗೆ (ನನ್ನನ್ನು ಕರೆದುಕೊಂಡು ಹೋಗು).
ತತಃ ಶಕ್ಯೋ ಮಹಾವ್ಯೂಹೋ ಭೇತ್ತುಂ ಸ್ಮ ಸಹಸಾ ರಣೇ |
ತಂ ದೇಶಂ ತ್ವರಿತಾ ಯಾಮೋ ಮೃದ್ನಂತೋ ಯುಧಿ ಶಾತ್ರವಾನ್ |
ತತ್ರೈತೇ ಸಂಪ್ರಹೃಷ್ಟತ್ವಾನ್ನಾಸ್ಮಾನ್ ಪ್ರತಿ ಯುಯುತ್ಸವಃ ॥ 49 ॥
ಆಗ ರಣರಂಗದಲ್ಲಿ ಈ ದೊಡ್ಡ ವ್ಯೂಹವನ್ನು ಭೇದಿಸಲು ತಕ್ಷಣ ಸಾಧ್ಯವಾಗುತ್ತದೆ. ಶತ್ರುಗಳನ್ನು ಮರ್ದಿಸುತ್ತಾ ಆ ಪ್ರದೇಶಕ್ಕೆ ಶೀಘ್ರವಾಗಿ ಹೋಗೋಣ. ಇವರೆಲ್ಲರೂ ಸಂತೋಷದಿಂದ ಕೂಡಿರುವುದರಿಂದ ನಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತಿಲ್ಲ.
ಅಯುದ್ಧ್ಯಮಾನೋ ಬಹುಭಿರೇಕಂ ಪ್ರಾಪ್ಯ ಸುದುರ್ಬಲಮ್ |
ಬಲಂ ಪ್ರಮಥ್ಯ ಗಚ್ಛಾಮಿ ಮಿಷತಾಂ ಸರ್ವಧನ್ವಿನಾಮ್ ॥ 50 ॥
ಬಹಳ ಯೋಧರ ಜೊತೆಯಲ್ಲಿ ಯುದ್ಧವನ್ನು ಮಾಡದೆ ಒಬ್ಬ ದುರ್ಬಲನನ್ನು ಸಮೀಪಿಸಿ ಸೈನ್ಯವನ್ನು ಮರ್ದಿಸಿ, ಎಲ್ಲ

ಧನುರ್ಧಾರಿಗಳು ನೋಡುತ್ತಿರುವಂತೆ ಮುಂದೆ ಹೋಗುತ್ತೇನೆ.
ಸವ್ಯತೋ ಯಾಹಿ ಯತ್ರೋಗ್ರಂ ಕರ್ಣಸ್ಯ ಸುಮಹದ್ ಬಲಮ್ |
ಯತ್ರೈತೇ ಪರಮಕ್ರುದ್ಧಾ ದಾಕ್ಷಿಣಾತ್ಯಾ ಮಹಾರಥಾಃ ॥ 51 ॥
ಏತಾನ್ ವಿಜಿತ್ಯ ಸಂಗ್ರಾಮೇ ತತೋ ಯಾಮೋ ಧನಂಜಯಮ್ ॥
ಎಲ್ಲಿ ಕರ್ಣನ ಉಗ್ರವಾದ ಸೈನ್ಯವಿದೆಯೋ ಮತ್ತು ಪರಮಕ್ರುದ್ಧರಾದ ದಕ್ಷಿಣದೇಶದ ಮಹಾರಥರು ಇದ್ದಾರೆಯೋ ಅಲ್ಲಿಗೆ ಎಡಭಾಗದಿಂದ ಹೋಗುವವನಾಗು. ಇವರನ್ನು ಯುದ್ಧದಲ್ಲಿ ಗೆದ್ದು ಅನಂತರ ಅರ್ಜುನನಿದ್ದಲ್ಲಿಗೆ ಹೋಗೋಣ.
ಸಂಜಯಃ
ಯುಯುಧಾನವಚಃ ಶ್ರುತ್ವಾ ಯುಯುಧಾನಸ್ಯ ಸಾರಥಿಃ |
ಯಥೋಕ್ತಮಗಮದ್ ರಾಜನ್ ವರ್ಜಯನ್ ದ್ರೋಣಮಾಹವೇ ॥
ಸಂಜಯ ಯುಯುಧಾನನ ಮಾತನ್ನು ಕೇಳಿ ಅವನ ಸಾರಥಿಯು ಎಲೈ ರಾಜನೇ, ದ್ರೋಣರನ್ನು ತಪ್ಪಿಸಿ ಯುಯುಧಾನನು ಹೇಳಿದಂತೆಯೇ ಮುಂದೆ ಹೋದನು.
ತಂ ದ್ರೋಣೋಽನುಯಯೌ ಕ್ರುದ್ಧೋ ವಿಕಿರನ್ನಿಶಿತಾನ್ ಶರಾನ್ |
ಯುಯುಧಾನಂ ಮಹಾಬಾಹುಂ ಗಚ್ಛಂತಮನಿವರ್ತಿನಮ್ ॥ 54 ॥
ಹಿಂದೆ ತಿರುಗದೆ ಮುಂದೆ ಸಾಗುತ್ತಿದ್ದ ಮಹಾಬಾಹುವಾದ ಸಾತ್ಯಕಿಯನ್ನು ಹಿಂಬಾಲಿಸುತ್ತಾ ಕ್ರುದ್ಧರಾದ ದ್ರೋಣರು ಹರಿತವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದರು.
ಸ ಚ ಸೈನ್ಯಂ ಮಹದ್ ಭಿತ್ತ್ವಾ ದಾಕ್ಷಿಣಾತ್ಯಬಲಂ ಚ ತತ್ |
ಕರ್ಣಸ್ಯ ಸೈನ್ಯಂ ಸುಮಹನ್ನಿಹತ್ಯ ಚ ಶಿತೈಃ ಶರೈಃ |
ಪ್ರಾವಿಶದ್ ಭಾರತೀಂ ಸೇನಾಮಪರ್ಯಂತಾಂ ಸ ಸಾತ್ಯಕಿಃ ॥ 55 ॥
ಸಾತ್ಯಕೋ ಹಿ ತತಃ ಸೈನ್ಯಂ ದ್ರಾವಯನ್ ಸ ಸಮಂತತಃ ॥56॥
ಸಾತ್ಯಕಿಯು ಆ ದಾಕ್ಷಿಣಾತ್ಯರ ದೊಡ್ಡ ಸೈನ್ಯವನ್ನು ಭೇದಿಸಿ, ಕರ್ಣನ ದೊಡ್ಡ ಸೈನ್ಯವನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದು ಅಗಾಧವಾದ ಭಾರತರ ಸೈನ್ಯವನ್ನು ಪ್ರವೇಶಿಸಿದನು. ಅನಂತರ ಅವನು ಆ ಸೈನ್ಯವನ್ನು ಓಡುವಂತೆ ಮಾಡಿದನು.
ವಿದ್ರುತೇ ತು ಬಲೇ ತಸ್ಮಿನ್ ಭಗ್ನೇ ಭಾರತ ಭಾರತೇ |
ಅಮರ್ಷೀ ಕೃತವರ್ಮಾ ತು ಸಾತ್ಯಕಿಂ ಪರ್ಯವಾರಯತ್ ॥ 57 ॥
ಎಲೈ ಭಾರತನೇ, ಭಾರತರಾದ ನಿನ್ನ ಆ ಸೈನ್ಯವು ಭಗ್ನಗೊಂಡು ಓಡಿ ಹೋಗುತ್ತಿರಲು ರೋಷಾವಿಷ್ಟನಾದ ಕೃತವರ್ಮನೊಬ್ಬನು ಸಾತ್ಯಕಿಯನ್ನು ತಡೆದನು.
ತಮಾಪತಂತಂ ವಿಶಿಖೈಃ ಷಡ್ಭಿರಾಹತ್ಯ ಸಾತ್ಯಕಿಃ |
ಚತುರ್ಭಿಶ್ಚತುರೋಽಸ್ಯಾಶ್ವಾನಾಜಘಾನಾಶು ವೀರ್ಯವಾನ್ ॥ 58 ॥
ಸಾತ್ಯಕಿಯು ತನ್ನ ಮೇಲೆ ಎರಗುತ್ತಿದ್ದ ಕೃತವರ್ಮನನ್ನು ಆರು ಬಾಣಗಳಿಂದ ಹೊಡೆದು, ಪರಾಕ್ರಮಿಯಾದ ಅವನು ನಾಲ್ಕು ಬಾಣಗಳಿಂದ ಕೃತವರ್ಮನ ರಥದ ನಾಲ್ಕು ಅಶ್ವಗಳನ್ನು ಕೊಂದನು.
ತತಃ ಪುನಃ ಷೋಡಶಭಿರ್ನತಪರ್ವಭಿರಾಶುಗೈಃ |
ಸಾತ್ಯಕಿಃ ಕೃತವರ್ಮಾಣಂ ಪ್ರತ್ಯವಿದ್ಧ್ಯತ್ ಸ್ತನಾಂತರೇ ॥ 59 ॥
ಅನಂತರ ಶೀಘ್ರಗಾಮಿಗಳಾದ ಬಾಗಿದ ತುದಿಯುಳ್ಳ ಹದಿನಾರು ಬಾಣಗಳಿಂದ ಸಾತ್ಯಕಿಯು ಪುನಃ ಕೃತವರ್ಮನನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ಸ ತುದ್ಯಮಾನೋ ವಿಶಿಖೈರ್ಬಹುಭಿಸ್ತಿಗ್ಮತೇಜನೈಃ |
ಸಾತ್ವತೇನ ಮಹಾರಾಜ ಕೃತವರ್ಮಾ ನ ಚಕ್ಷಮೇ ॥ 60 ॥
ಎಲೈ ಮಹಾರಾಜನೇ, ಕ್ರೂರವಾದ ತೇಜಸ್ಸುಳ್ಳ ಅನೇಕ ಬಾಣಗಳಿಂದ ಸಾತ್ಯಕಿಯಿಂದ ಹಿಂಸಿಸಲ್ಪಟ್ಟ ಕೃತವರ್ಮನು ಅದನ್ನು ಸಹಿಸಲಿಲ್ಲ.
ಸ ವತ್ಸದಂತಂ ಸಂಧಾಯ ಜಿಹ್ಮಗಾನಲಸನ್ನಿಭಮ್ |
ಆಕೃಷ್ಯ ರಾಜನ್ನಾಕರ್ಣಂ ವಿವ್ಯಾಧೋರಸಿ ಸಾತ್ಯಕಿಮ್ ॥ 61 ॥
ಎಲೈ ರಾಜನೇ, ಅವನು ಸರ್ಪದಂತೆ ಮತ್ತು ಅಗ್ನಿಯಂತಿದ್ದ ಒಂದು ವತ್ಸದಂತವನ್ನು ಧನುಸ್ಸಿನಲ್ಲಿ ಹೂಡಿ, ತನ್ನ ಕಿವಿಯವರೆಗೂ ಎಳೆದು ಸಾತ್ಯಕಿಯನ್ನು ಎದೆಯಲ್ಲಿ ಹೊಡೆದನು.
ಸ ತಸ್ಯ ದೇಹಾವರಣಂ ಭಿತ್ತ್ವಾ ದೇಹಂ ಚ ಸಾಯಕಃ |
ಸಪತ್ರಪುಂಖಃ ಪೃಥಿವೀಂ ವಿವೇಶ ರುಧಿರೋಕ್ಷಿತಃ ॥ 62 ॥
ಆ ಬಾಣವು ಸಾತ್ಯಕಿಯ ಕವಚವನ್ನು ಮತ್ತು ಶರೀರವನ್ನು ಭೇದಿಸಿ ರಕ್ತಸಿಕ್ತವಾಗಿ ಪತ್ರಪುಂಖಸಹಿತವಾಗಿ ಭೂಮಿಯನ್ನು ಪ್ರವೇಶಿಸಿತು.
ಅಥಾಸ್ಯ ಬಹುಭಿರ್ಬಾಣೈರಾಚ್ಛಿನತ್ ಪರಮಾಸ್ತ್ರವಿತ್ |
ಸಮಾರ್ಗಣಗುಣಂ ಚಾಪಂ ಕೃತವರ್ಮಾ ಮಹಾರಥಃ ॥ 63 ॥
ಅನಂತರ ಮಹಾರಥನೂ ಮತ್ತು ಪರಮಾಸ್ತ್ರವೇತ್ತನೂ ಆದ ಕೃತವರ್ಮನು ಅನೇಕ ಬಾಣಗಳನ್ನು ಪ್ರಯೋಗಿಸಿ ಹೆದೆಯಿಂದ ಕೂಡಿದ ಅವನ ಧನುಸ್ಸನ್ನು ಕತ್ತರಿಸಿದನು.
ವಿವ್ಯಾಧ ಚ ರಣೇ ರಾಜನ್ ಸಾತ್ಯಕಿಂ ಸತ್ಯವಿಕ್ರಮಮ್ |

ದಶಭಿರ್ವಿಶಿಖೈಶ್ಚಾಪಿ ಸುಶಿತೈಸ್ತಂ ಸ್ತನಾಂತರೇ ॥ 64 ॥
ಎಲೈ ರಾಜನೇ, ಬಹಳ ತೀಕ್ಷ್ಣವಾದ ಹತ್ತು ಬಾಣಗಳಿಂದ ಸತ್ಯವಿಕ್ರಮನಾದ ಸಾತ್ಯಕಿಯನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ತತಃ ಪ್ರಶೀರ್ಣೇ ಧನುಷಿ ಶಕ್ತ್ಯಾ ಶಕ್ತಿಮತಾಂ ವರಃ |
ಅಭ್ಯಘ್ನದ್ ದಕ್ಷಿಣಂ ಬಾಹುಂ ಸಾತ್ಯಕಿಃ ಕೃತವರ್ಮಣಃ ॥ 65 ॥
ಅನಂತರ ಶಕ್ತಿವಂತರಲ್ಲಿ ಶ್ರೇಷ್ಠನಾದ ಸಾತ್ಯಕಿಯು ತನ್ನ ಧನುಸ್ಸು ಕೃತವರ್ಮನು ಪ್ರಯೋಗಿಸಿದ ಶಕಿತಯಿಂದ ನಾಶ ಹೊಂದುತ್ತಿರಲು ಕೃತವರ್ಮನ ದಕ್ಷಿಣಬಾಹುವನ್ನು ಬಾಣದಿಂದ ಹೊಡೆದನು.
ತತೋಽನ್ಯತ್ ಸುದೃಢಂ ವೀರೋ ಧನುರಾದಾಯ ಸಾತ್ಯಕಿಃ |
ವ್ಯಸೃಜದ್ ವಿಶಿಖಾಂಸ್ತೂರ್ಣಂ ಶತಶೋಽಥ ಸಹಸ್ರಶಃ ॥ 66 ॥
ಅನಂತರ ವೀರನಾದ ಸಾತ್ಯಕಿಯು ಇನ್ನೊಂದು ದೃಢವಾದ ಧನುಸ್ಸನ್ನು ತೆಗೆದುಕೊಂಡು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸಿದನು.
ಸರಥಂ ಕೃತವರ್ಮಾಣಂ ಸಮಂತಾತ್ ಪರ್ಯವಾಕಿರತ್ |
ತೇ ಶರಾಃ ಸಾತ್ವತೇನಾಸ್ತಾಃ ಕೃತವರ್ಮಾಣಮಾಹವೇ |
ಛಾದಯಾಂಚಕ್ರಿರೇ ವೃಕ್ಷಂ ಶಲಭಾ ಇವ ಘೋಷಿಣಃ ॥ 67 ॥
ಅವನು ರಥಸಹಿತನಾದ ಕೃತವರ್ಮನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿಹಾಕಿದನು. ಸಾತ್ಯಕಿಯು ಪ್ರಯೋಗಿಸಿದ ಆ ಬಾಣಗಳು ಘೋಷಸಹಿತವಾದ ಪತಂಗಗಳು ವೃಕ್ಷವನ್ನು ಮುತ್ತುವಂತೆ ರಣರಂಗದಲ್ಲಿ ಕೃತವರ್ಮನನ್ನು ಆವರಿಸಿದವು.
ಛಾದಯಿತ್ವಾ ರಣೇ ರಾಜನ್ ಹಾರ್ದಿಕ್ಯಂ ತು ಸ ಸಾತ್ಯಕಿಃ |
ಅಥಾಸ್ಯ ಭಲ್ಲೇನ ಶಿರಃ ಸಾರಥೇಃ ಸಮಕೃಂತತ ॥ 68 ॥
ಎಲೈ ರಾಜನೇ, ಸಾತ್ಯಕಿಯು ಹಾರ್ದಿಕ್ಯನನ್ನು ಹೀಗೆ ಬಾಣಗಳಿಂದ ಮುಚ್ಚಿ ಅವನ ಸಾರಥಿಯ ಶಿರಸ್ಸನ್ನು ಭಲ್ಲದಿಂದ ಕತ್ತರಿಸಿದನು.
ಸ ಪಪಾತ ಹತಃ ಸೂತೋ ಹಾರ್ದಿಕ್ಯಸ್ಯ ಮಹಾರಥಾತ್ |
ತತಸ್ತೇ ಯಂತರಿ ಹತೇ ಪ್ರಾದ್ರವಂಸ್ತುರಗಾ ಭೃಶಮ್ ॥ 69 ॥
ಆ ಸೂತನು ಹೊಡೆಯಲ್ಪಟ್ಟು ಹಾರ್ದಿಕ್ಯನ ಮಹಾರಥದಿಂದ ಬಿದ್ದನು. ಸಾರಥಿಯು ಹತನಾಗುತ್ತಿರಲು ಆ ಅಶ್ವಗಳು ಓಡಿ ಹೋದವು.

ಅಥ ಭೋಜಸ್ತ್ವಸಂಭ್ರಾಂತೋ ನಿಗೃಹ್ಯ ತುರಗಾನ್ ಸ್ವಯಮ್ |
ತಸ್ಥೌ ಶರಧನುಷ್ಪಾಣಿಸ್ತತ್ ಸೈನ್ಯಂ ಪ್ರತ್ಯಪೂಜಯತ್ ॥ 70 ॥
ಆಗ ಭೋಜನಾದ ಕೃತವರ್ಮನು ಗಾಬರಿಗೊಳ್ಳದೆ ಅಶ್ವಗಳನ್ನು ತಾನೇ ಹಿಡಿದು ನಿಯಂತ್ರಿಸುತ್ತಾ ಬಿಲ್ಲುಬಾಣಗಳನ್ನು ಹಿಡಿದು ನಿಂತನು. ಅದನ್ನು ಸೈನ್ಯವು ಪೂಜಿಸಿತು.
ಸ ಮುಹೂರ್ತಮಿವಾಶ್ವಸ್ಯ ಸದಶ್ವಾನಭ್ಯಚೋದಯತ್ |
ವ್ಯಪೇತಭೀರಮಿತ್ರಾಣಾಮಾದಧತ್ ಸುಮಹದ್ ಭಯಮ್ ॥ 71 ॥
ಅವನು ಆ ಒಳ್ಳೆಯ ಅಶ್ವಗಳನ್ನು ಒಂದು ಮುಹೂರ್ತದವರೆಗೆ ಸಮಾಧಾನಪಡಿಸಿ, ಭಯವನ್ನು ಹೊಂದದೆ ಶತ್ರುಗಳಿಗೆ ದೊಡ್ಡ ಭಯವನ್ನು ಉಂಟುಮಾಡುತ್ತಾ, ಅಶ್ವಗಳನ್ನು ಪುನಃ ಪ್ರಚೋದಿಸಿದನು.
ಸಾತ್ಯಕಿಂ ನಾಭ್ಯಯಾತ್ ತಸ್ಮಾತ್ ಸ ತು ಭೀಮಮುಪಾದ್ರವತ್ |
ಯುಯುಧಾನೋಽಪಿ ರಾಜೇಂದ್ರ ಭೋಜಾನೀಕಮತಿಕ್ರಮನ್
ಪ್ರಯಯೌ ತ್ವರಿತಸ್ತೂರ್ಣಂ ಕಾಂಬೋಜಾನಾಂ ಮಹಾಚಮೂಮ್ ॥
ಆ ಕಾರಣದಿಂದ ಅವನು ಸಾತ್ಯಕಿಯ ಕಡೆಗೆ ಹೋಗದೆ ಭೀಮಸೇನನ ಕಡೆಗೆ ಹೋದನು. ಎಲೈ ರಾಜನೇ, ಯುಯುಧಾನನೂ ಸಹ ಕೃತವರ್ಮನ ಸೈನ್ಯವನ್ನು ದಾಟಿ ಕಾಂಬೋಜರ ದೊಡ್ಡ ಸೈನ್ಯದ ಕಡೆಗೆ ಹೊರಟನು.
ಸ ತತ್ರ ಬಹುಭಿಃ ಶೂರೈಃ ಸನ್ನಿರುದ್ಧೋ ಮಹಾರಥೈಃ |
ನ ಚಚಾಲ ಮಹಾರಾಜ ಸಾತ್ಯಕಿಃ ಸತ್ಯವಿಕ್ರಮಃ ॥ 73 ॥
ಎಲೈ ಮಹಾರಾಜನೇ, ಅವನು ಅಲ್ಲಿ ಶೂರರಾದ ಅನೇಕ ಮಹಾರಥರಿಂದ ತಡೆಯಲ್ಪಟ್ಟರೂ ಸತ್ಯವಿಕ್ರಮನಾದ ಅವನು ಅಲುಗಾಡಲಿಲ್ಲ.
ಸಂಧಾಯ ಚ ಚಮೂಂ ದ್ರೋಣೋ ಭೋಜೇ ಭಾರಂ ನಿವೇಶ್ಯ ಚ |
ಅಭ್ಯಧಾವದ್ ರಣೇ ಯತ್ತೋ ಯುಯುಧಾನಂ ಯುಯುತ್ಸಯಾ ॥
ದ್ರೋಣರು ತಮ್ಮ ಸೈನ್ಯವನ್ನು ಒಂದುಗೂಡಿಸಿ, ಕೃತವರ್ಮನ ಮೇಲೆ ಸೈನ್ಯದ ರಕ್ಷಣೆಯ ಭಾರವನ್ನು ಹೊರಿಸಿ, ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ರಣರಂಗದಲ್ಲಿ ಎಚ್ಚರಿಕೆಯಿಂದ ಅವನ ಕಡೆಗೆ ಧಾವಿಸಿದರು.
ತಥಾ ತಮನುಧಾವಂತಂ ಯುಯುಧಾನಸ್ಯ ಪೃಷ್ಠತಃ |
ನ್ಯವಾರಯಂತ ಸಂಕ್ರುದ್ಧಾಃ ಪಾಂಡುಸೈನ್ಯೇ ಬೃಹತ್ತಮಾಃ ॥ 75 ॥
ಹೀಗೆ ಸಾತ್ಯಕಿಯ ರಥದ ಹಿಂದೆ ಅವನನ್ನು ಹಿಡಿಯಲು ಧಾವಿಸಿದಂತಹ ದ್ರೋಣರನ್ನು ಪಾಂಡುಸೈನ್ಯದ ಸಂಕ್ರುದ್ಧರಾದ ದೊಡ್ಡ ವೀರರು ತಡೆದರು.
ಸಮಾಸಾದ್ಯ ತು ಹಾರ್ದಿಕ್ಯಂ ರಥಿನಾಂ ಪ್ರವರಂ ರಥಮ್ |
ಪಾಂಚಾಲಾ ವಿಗತೋತ್ಸಾಹಾ ಭೀಮಸೇನಪುರೋಗಮಾಃ |
ವಿಕ್ರಮ್ಯ ವಾರಿತಾ ರಾಜನ್ ವೀರೇಣ ಕೃತವರ್ಮಣಾ ॥ 76 ॥

ಭೀಮಸೇನ ಮೊದಲಾದ ಪಾಂಚಾಲರು ಮಹಾರಥರಲ್ಲಿ ಶ್ರೇಷ್ಠನಾದ ಹಾರ್ದಿಕ್ಯನನ್ನು ಸಮೀಪಿಸಿ, ವೀರನಾದ ಅವನಿಂದ ಪರಾಕ್ರಮದಿಂದ ತಡೆಯಲ್ಪಟ್ಟು ಯುದ್ಧದಲ್ಲಿ ತಮ್ಮ ಉತ್ಸಾಹವನ್ನು ಕಳೆದುಕೊಂಡರು.
ಯತಮಾನಾಂಸ್ತು ತಾನ್ ಸರ್ವಾನ್ ದ್ವಿಷತೋ ಗತಚೇತಸಃ |
ಅಭಿತಸ್ತಾನ್ ಶರೌಘೇಣ ಕ್ಲಾಂತರೂಪಾನವಾರಯತ್ ॥ 77 ॥
ಸರಿಯಾದ ಪ್ರಜ್ಞೆಯಿಲ್ಲದ, ದಣಿದ, ತನ್ನ ಮೇಲೆ ಯುದ್ಧ ಮಾಡಲು ಪ್ರಯತ್ನ ಪಡುತ್ತಿದ್ದ ಆ ಶತ್ರುಗಳನ್ನು ಕೃತವರ್ಮನು ಎಲ್ಲ ಕಡೆಗಳಲ್ಲಿಯೂ ತನ್ನ ಬಾಣ ಸಮೂಹಗಳಿಂದ ತಡೆದನು.
ನಿಗೃಹೀತಾಸ್ತು ಭೋಜೇನ ಭೋಜಾನೀಕೇಪ್ಸವೋ ರಣೇ |
ಅತಿಷ್ಠನ್ನಾಹವೇ ವೀರಾಃ ಪ್ರಾರ್ಥಯಂತೋ ಮಹದ್ ಯಶಃ ॥ 78 ॥
ಹಾರ್ದಿಕ್ಯಂ ಸಮರೇ ಯತ್ತಾ ನ ಶೇಕುಃ ಪ್ರತಿವೀಕ್ಷಿತುಮ್ ॥ 79 ॥|
ಕೃತವರ್ಮನ ಸೈನ್ಯವನ್ನು ಸಮೀಪಿಸಲು ಬಯಸಿ ಅವನಿಂದ ತಡೆಯಲ್ಪಟ್ಟ ವೀರರು ಯುದ್ಧದಲ್ಲಿ ದೊಡ್ಡ ಕೀರ್ತಿಯನ್ನು ಬಯಸುತ್ತಾ ರಣರಂಗದಲ್ಲಿ ಸ್ಥಿರವಾಗಿ ನಿಂತರು. ಅವರು ಯುದ್ಧದಲ್ಲಿ ಸನ್ನದ್ಧನಾಗಿದ್ದರೂ ಕೃತವರ್ಮನನ್ನು ಪ್ರತಿಯಾಗಿ ನೋಡಲೂ ಸಾಧ್ಯವಾಗಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ತೊಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರನೆಯ ಅಧ್ಯಾಯ
ತನ್ನ ಸೈನ್ಯದ ಪರಾಜಯವನ್ನು ಕೇಳಿ ಧೃತರಾಷ್ಟ್ರನ ಶೋಕ.
ಅವನನ್ನು ನಿಂದಿಸಿ ಸಂಜಯನಿಂದ ಕೃತವರ್ಮನ ಪರಾಕ್ರಮದ ವರ್ಣನೆ.
ಧೃತರಾಷ್ಟ್ರಃ
ಏವಂ ಬಹುವಿಧಂ ಸೈನ್ಯಮೇವಂ ಪ್ರವಿಚಿತಂ ಪರಮ್ |
ವ್ಯೂಢಮೇವಂ ಯಥಾನ್ಯಾಯಮೇವಂ ಬಹು ಚ ಸಂಜಯ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ನಮ್ಮ ಸೈನ್ಯವು ಹೀಗೆ ಬಹುವಿಧವಾಗಿದೆ. ಹೀಗೆ ಆರಿಸಿ, ಆರಿಸಿ ಸೇರಿಸಲ್ಪಟ್ಟಿದೆ. ಶಾಸ್ತ್ರೋಕ್ತವಾಗಿ ವ್ಯೂಹಮಾಡಲ್ಪಟ್ಟಿದೆ ಮತ್ತು ವಿಸ್ತಾರವಾಗಿದೆ.
ನಿತ್ಯಂ ಪೂಜಿತಮಸ್ಮಾಭಿಃ ಅಭಿರಾಮಂ ಚ ನಃ ಸದಾ |
ಪ್ರೌಢಮತ್ಯದ್ಭುತಾಕಾರಂ ಪುರಸ್ತಾದ್ ದೃಢವಿಕ್ರಮಮ್ ॥ 2 ॥
ನಮ್ಮಿಂದ ಯಾವಾಗಲೂ ಗೌರವಿಸಲ್ಪಟ್ಟಿದೆ. ಯಾವಾಗಲೂ ನಮ್ಮಲ್ಲಿ ಸಂತೋಷದಿಂದ ಕೂಡಿದೆ. ಅದ್ಭುತವಾದ ಆಕಾರವನ್ನು ಹೊಂದಿ, ವಿವೇಕದಿಂದ ಕೂಡಿರುವುದಾಗಿದೆ ಮತ್ತು ಮೊದಲಿನಿಂದಲೂ ದೃಢವಾದ ಪರಾಕ್ರಮವನ್ನು ಹೊಂದಿದ್ದಾಗಿದೆ.
ನಾತಿವೃದ್ಧಮಬಾಲಂ ಚ ನ ಕೃಶಂ ನಾತಿಪೀವರಮ್ |
ಲಘುವೃತ್ತಾಯತಪ್ರಾಯಂ ಸಾರಯೋಧಸಮನ್ವಿತಮ್ ॥ 3 ॥
ಬಹಳ ವೃದ್ಧರಾಗಲೀ ಅಥವಾ ಬಾಲಕರಾಗಲೀ ಇಲ್ಲ. ಕೃಶವಾದ ಯೋಧರಿಂದ ಅಥವಾ ಬಹಳ ಸ್ಥೂಲವಾದ ಯೋಧರಿಂದ ಕೂಡಿರದೆ ಎತ್ತರವಾದ, ಮಧ್ಯಪ್ರಮಾಣದ ಸುತ್ತಳತೆಯುಳ್ಳ ಬಲಿಷ್ಠರಾದ ಯೋಧರಿಂದ ಕೂಡಿದುದಾಗಿದೆ.
ಆತ್ತಸನ್ನಾಹಸಂಪನ್ನಂ ಬಹುಶಸ್ತ್ರಪರಿಗ್ರಹಮ್ |
ಅಸ್ತ್ರಗ್ರಹಣವಿದ್ಯಾಸು ಬಹ್ವೀಷು ಪರಿನಿಷ್ಠಿತಮ್ ॥ 4 ॥
ಕವಚಾದಿ ಸಲಕರಣೆಗಳಿಂದ ಸಂಪನ್ನವಾಗಿದೆ. ಅನೇಕ ಶಸ್ತ್ರಗಳನ್ನು ಹೊಂದಿದೆ. ಅನೇಕ ಅಸ್ತ್ರವಿದ್ಯೆಗಳಲ್ಲಿ ಪರಿಣತವಾಗಿದೆ.
ಆರೋಹೇ ಪರ್ಯವಸ್ಕಂದೇ ಸರಣೇ ಸೋತ್ತರಪ್ಲುತೇ |
ಸಮ್ಯಕ್ ಪ್ರಹರಣೇ ಯಾನೇ ವ್ಯಪಯಾನೇ ಚ ಕೋವಿದಮ್ ॥ 5 ॥
ಅಶ್ವಾದಿಗಳ ಆರೋಹಣದಲ್ಲಿ, ಅವರೋಹಣದಲ್ಲಿ, ಮುಂದೆ ಸಾಗುವುದರಲ್ಲಿ, ದಾಟಿ ಮುಂದೆ ಹೋಗುವುದರಲ್ಲಿ, ಚೆನ್ನಾಗಿ ಪ್ರಹಾರ ಮಾಡುವುದರಲ್ಲಿ, ಪ್ರಯಾಣ ಮಾಡುವುದರಲ್ಲಿ ಮತ್ತು ಹಿಂದೆ ಸರಿಯುವುದರಲ್ಲಿ ಪರಿಣತವಾಗಿದೆ.
ನಾಗೇಷ್ವಶ್ವೇಷು ಬಹುಶೋ ರಥೇಷು ಚ ಪರೀಕ್ಷಿತಮ್ |
ಚರ್ಮನಿಸ್ತ್ರಿಂಶಯುದ್ಧೇ ಚ ನಿಯುದ್ಧೇ ಚ ವಿಶಾರದಮ್ |
ಪರೀಕ್ಷ ಯ ಚ ಯಥಾನ್ಯಾಯಂ ವೇತನೇನೋಪಪಾದಿತಮ್ ॥ 6 ॥
ರಥಗಳಲ್ಲಿ, ಗಜಗಳಲ್ಲಿ ಮತ್ತು ಅಶ್ವಗಳಲ್ಲಿ ಅನೇಕ ಬಾರಿ ಪರೀಕ್ಷೆಗೆ ಒಳಪಡಿಸಲಾಗಿದೆ. ಖಡ್ಗ-ಚರ್ಮಯುದ್ಧದಲ್ಲಿಯೂ, ಬಾಹುಯುದ್ಧದಲ್ಲಿಯೂ ವಿಶಾರದವಾಗಿದೆ. ಯೋಧರನ್ನು ಪರೀಕ್ಷಿಸಿ ಉಚಿತವಾದ ವೇತನದಿಂದ ಸಂಗ್ರಹಿಸಲಾಗಿದೆ.
ನ ಗೋಷ್ಠ್ಯಾ ನೋಪಕಾರೇಣ ನ ಸಂಬಂಧನಿಮಿತ್ತತಃ |
ನಾನಾಭೃತಂ ನಾನ್ಯಭೃತಂ ಮಮ ಸೈನ್ಯಂ ಬಭೂವ ಹ ॥ 7 ॥
ಸಮೂಹದಲ್ಲಿ ಸಂಗ್ರಸಿದವರಾಗಲೀ, ಕೃತಜ್ಞತೆಯ ನಿಮಿತ್ತದಿಂದ ಅಥವಾ ಸಂಬಂಧ ನಿಮಿತ್ತದಿಂದ ಸಂಗ್ರಹಿಸಿದವರಾಗಲೀ ಯಾರೂ ಇರುವುದಿಲ್ಲ. ನನ್ನ ಸೈನ್ಯವು ವೇತನರಹಿತವಾಗಿಲ್ಲ ಮತ್ತು ಇನ್ನೊಬ್ಬರಿಂದಲೂ ವೇತನವನ್ನು ಸ್ವೀಕರಿಸುವುದಿಲ್ಲ.

ಕುಲೀನಾಭಿಜನೋಪೇತಂ ತುಷ್ಟಪುಷ್ಟಮನುದ್ಧತಮ್ |
ಕೃತಮಾನೋಪಚಾರಂ ಚ ಯಶಸ್ವಿ ಚ ಮನಸ್ವಿ ಚ ॥ 8 ॥
ಒಳ್ಳೆಯ ಕುಲದಲ್ಲಿ ಜನಿಸಿದ ಯೋಧರಿಂದ ಕೂಡಿದೆ. ಸಂತುಷ್ಟರಾದ ಮತ್ತು ಪುಷ್ಟರಾದ ಉದ್ಧತರಲ್ಲದ ಯೋಧರಿಂದ ಕೂಡಿದೆ. ಕೀರ್ತಿಶಾಲಿಯೂ ಮತ್ತು ಧೈರ್ಯಶಾಲಿಯೂ ಆದ ಸೈನ್ಯವು ಅನೇಕ ಮಾನ ಮತ್ತು ಉಪಚಾರಗಳಿಂದ ಗೌರವಿಸಲ್ಪಟ್ಟಿದೆ.
ಸಚಿವೈಶ್ಚಾಪರೈರ್ಮುಖ್ಯೈರ್ಬಹುಭಿರ್ಮುಖ್ಯಕರ್ಮಭಿಃ |
ಲೋಕಪಾಲೋಪಮೈಸ್ತಾತ ಪಾಲಿತಂ ನರಸತ್ತಮೈಃ ॥ 9 ॥
ಎಲೈ ಪ್ರೀತಿಪಾತ್ರನೇ, ಶ್ರೇಷ್ಠವಾದ ಕಾರ್ಯಗಳನ್ನು ಮಾಡುವ ಅನೇಕ ಮುಖ್ಯರಾದ, ಲೋಕಪಾಲಕರನ್ನು ಹೋಲುವ, ನರಶ್ರೇಷ್ಠರಾದ ಸಚಿವರಿಂದ ಪಾಲಿತವಾಗಿದೆ.
ಬಹುಭಿಃ ಪಾರ್ಥಿವೈರ್ಗುಪ್ತಮಸ್ಮತ್ಪ್ರಿಯಚಿಕೀರ್ಷುಭಿಃ |
ಅಸ್ಮಾನಭಿಸೃತೈಃ ಕಾಮಾತ್ ಸಬಲೈಃ ಸಪದಾನುಗೈಃ ॥ 10 ॥
ತಮ್ಮ ಸ್ವಂತ ಇಚ್ಛೆಯಿಂದ ತಮ್ಮ ಸೈನ್ಯ ಮತ್ತು ಅನುಯಾಯಿಗಳಿಂದ ಸಹಿತರಾಗಿ ನಮ್ಮ ಬಳಿಗೆ ಬಂದು ನಮಗೆ ಪ್ರಿಯವನ್ನು ಮಾಡಲು ಇಚ್ಛಿಸುವ ಅನೇಕ ರಾಜರುಗಳಿಂದ ರಕ್ಷಿತವಾಗಿದೆ.
ಮಹೋದಧಿಮಿವಾಪೂರ್ಣಮಾಪಗಾಭಿಃ ಸಮಂತತಃ |
ಅಪಕ್ಷೈಃ ಪಕ್ಷಿಸಂಕಾಶೈ ರಥೈರಶ್ವೈಶ್ಚ ಸಂವೃತಮ್ ॥ 11 ॥
ಪ್ರಭಿನ್ನಕರಟೈಶ್ಚೈವ ದ್ವಿರದೈರಾವೃತಂ ಮಹತ್ |
ಯದಹನ್ಯತ ಮೇ ಸೈನ್ಯಂ ಕಿಮನ್ಯದ್ ಭಾಗಧೇಯತಃ ॥ 12 ॥
ನದಿಗಳಿಂದ ಎಲ್ಲ ಕಡೆಗಳಿಂದಲೂ ಪೂರ್ಣವಾದ ದೊಡ್ಡ ಸಾಗರದಂತಿದೆ. ರೆಕ್ಕೆಗಳಿಲ್ಲದ ಪಕ್ಷಿಗಳಂತಿರುವ ರಥ ಮತ್ತು ಅಶ್ವಗಳಿಂದ ಕೂಡಿದೆ. ಕುಂಭಸ್ಥಲದಿಂದ ಮದೋದಕವನ್ನು ಸುರಿಸುವ ಅನೇಕ ದೊಡ್ಡ ಗಜಗಳಿಂದ ತುಂಬಿದೆ. ಇಂತಹ ನನ್ನ ಸೈನ್ಯವು ಪ್ರಹಾರಕ್ಕೆ ಒಳಗಾಗುತ್ತಿದೆ ಎಂದರೆ ಅದೃಷ್ಟವನ್ನು ಬಿಟ್ಟು ಬೇರೆ ಯಾವ ಕಾರಣವಿದೆ?
ಯೋಧಾಕ್ಷಯ್ಯಜಲಂ ಭೀಮಂ ವಾಹನೋರ್ಮಿತರಂಗಿಣಮ್ |
ಕ್ಷೇಪಣ್ಯಸಿಗದಾಶಕ್ತಿಶರಪ್ರಾಸಝಷಾಕುಲಮ್ ॥ 13 ॥
ಧ್ವಜಾಗ್ರಮಣಿಸಂಬಾಧಂ ರತ್ನಪಟ್ಟಸುಸಂವೃತಮ್ |
ವಾಹನೈಃ ಪರಿಧಾವದ್ಭಿರ್ವಾಯುವೇಗೈರ್ವಿಕಲ್ಪಿತಮ್ ॥ 14 ॥
ದ್ರೋಣಗಂಭೀರಪಾತಾಳಂ ಕೃತವರ್ಮಮಹಾಹ್ರದಮ್ |
ಜಲಸಂಧಮಹಾಗ್ರಾಹಂ ಕರ್ಣಚಂದ್ರೋದಯೋದ್ಧತಮ್ ॥ 15 ॥
ಯೋಧರೆಂಬ ಅಕ್ಷಯ ಜಲವನ್ನು ಹೊಂದಿದೆ. ಭಯಂಕರವಾದ ವಾಹನಗಳೆಂಬ ಊರ್ಮಿಗಳನ್ನೂ ಮತ್ತು ತರಂಗವನ್ನೂ ಹೊಂದಿದೆ, ಕ್ಷಿಪಣಿ-ಖಡ್ಗ-ಗದೆ-ಶಕ್ತಿ-ಬಾಣ- ಪ್ರಾಸ ಮೊದಲಾದ ಮೊಸಳೆಗಳಿಂದ ನಿಬಿಡವಾದ, ಧ್ವಜಗಳ ಮೇಲಿನ ಶ್ರೇಷ್ಠವಾದ ಮಣಿಗಳಿಂದ ಪೂರ್ಣವಾದ, ರತ್ನಪಟ್ಟೆಗಳಿಂದ ಚೆನ್ನಾಗಿ ಮುಚ್ಚಲ್ಪಟ್ಟ, ವಾಯುವೇಗವನ್ನು ಹೊಂದಿ ಧಾವಿಸುವ ವಾಹನಗಳಿಂದ ಸಿದ್ಧಗೊಳಿಸಿದ, ದ್ರೋಣರೆಂಬ ಗಂಭೀರವಾದ ಪಾತಾಳವನ್ನು ಹೊಂದಿದ, ಕೃತವರ್ಮನೆಂಬ ದೊಡ್ಡ ಮಡುವನ್ನು ಹೊಂದಿದ, ಜಲಸಂಧನೆಂಬ ದೊಡ್ಡ ಮೊಸಳೆಯಿಂದ ಕೂಡಿದ, ಕರ್ಣನೆಂಬ ಚಂದ್ರೋದಯದಿಂದ ಉಬ್ಬಿದ (ನನ್ನ ಸೈನ್ಯವು ನಾಶ ಹೊಂದುತ್ತದೆಂದರೆ ಅದೃಷ್ಟವನ್ನು ಬಿಟ್ಟು ಬೇರೆ ಯಾವ ಕಾರಣವಿದೆ?)
ಗತೇ ಸೈನ್ಯಾರ್ಣವಂ ಭಿತ್ತ್ವಾ ತರಸಾ ಪಾಂಡವರ್ಷಭೇ |
ಸಂಜಯೈಕರಥೇನೈವ ಯುಯುಧಾನೇ ಚ ಮಾಮಕಮ್ ॥ 16 ॥
ತತ್ರ ಶೇಷಂ ನ ಪಶ್ಯಾಮಿ ಪ್ರವಿಷ್ಟೇ ಸವ್ಯಸಾಚಿನಿ |
ಸಾತ್ವತೇ ಚ ರಥೋದಾರೇ ಮಮ ಸೈನ್ಯಸ್ಯ ಸಂಜಯ ॥ 17 ॥
ಎಲೈ ಸಂಜಯನೇ, ಪಾಂಡವ ಶ್ರೇಷ್ಠನಾದ ಯುಯುಧಾನನು ಒಂದು ರಥದಿಂದ ನನ್ನ ಸೈನ್ಯ ಸಾಗರವನ್ನು ಶೀಘ್ರವಾಗಿ ಭೇದಿಸಿ ಹೋದಮೇಲೆ ಅರ್ಜುನನೂ ಮತ್ತು ರಥಶ್ರೇಷ್ಠನಾದ ಸಾತ್ಯಕಿಯೂ ನನ್ನ ಸೈನ್ಯವನ್ನು ಪ್ರವೇಶಿಸುತ್ತಿರಲು ನನ್ನ ಸೈನ್ಯದಲ್ಲಿ ಯಾರೂ ಉಳಿಯುವುದಿಲ್ಲವೆಂದು ಭಾವಿಸುತ್ತೇನೆ.
ತೌ ತತ್ರ ಸಮತಿಕ್ರಾಂತೌ ದೃಷ್ಟ್ವಾ ವೀರೌ ತರಸ್ವಿನೌ |
ಸಿಂಧುರಾಜಂ ಚ ಸಂಪ್ರೇಕ್ಷ್ಯ ಗಾಂಡೀವಸ್ಯೈವ ಗೋಚರಮ್ ॥ 18 ॥
ಕಿಂ ತದಾ ಕುರವಃ ಕೃತ್ಯಂ ವಿದಧುಃ ಕಾಲಚೋದಿತಾಃ |
ದಾರುಣೈಕಾಯನೇ ಕಾಲೇ ಕಥಂ ವಾ ಪ್ರತಿಪೇದಿರೇ ॥ 19 ॥
ವೇಗಶಾಲಿಗಳಾದ ಆ ಇಬ್ಬರು ವೀರರು ತಮ್ಮನ್ನು ದಾಟಿದುದನ್ನು ನೋಡಿ ಸೈಂಧವನೂ ಸಹ ಅರ್ಜುನನ ಬಾಣದ ವ್ಯಾಪ್ತಿಯಲ್ಲಿ ಸಿಲುಕಿರುವುದನ್ನು ನೋಡಿ, ಮೃತ್ಯುಚೋದಿತರಾದ ಕುರುಗಳು ಆಗ ಏನು ಮಾಡಿದರು? ಭಯಂಕರವಾದ ಫಲವನ್ನು ಕೊಡುವ ಆ ಕಾಲದಲ್ಲಿ ಹೇಗೆ ವರ್ತಿಸಿದರು?
ಗ್ರಸ್ತಾನ್ ಹಿ ಕೌರವಾನ್ ಮನ್ಯೇ ಮೃತ್ಯುನಾ ತಾತ ಸಂಗತಾನ್ |
ವಿಕ್ರಮೋಽಪಿ ರಣೇ ತೇಷಾಂ ನ ತಥಾ ದೃಶ್ಯತೇಽದ್ಯ ವೈ ॥ 20 ॥
ಎಲೈ ಪ್ರೀತಿಪಾತ್ರನೇ, ಎಲ್ಲ ಕೌರವರೂ ಒಟ್ಟಿಗೆ ಮೃತ್ಯುಗ್ರಸ್ತರಾಗಿದ್ದಾರೆಂದು ಭಾವಿಸುತ್ತೇನೆ. ಅವರ ಪರಾಕ್ರಮವೂ ಸಹ ಹಿಂದೆ ಇದ್ದಂತೆ ಈಗ ಕಂಡುಬರುವುದಿಲ್ಲ.
ಅಕ್ಷತೌ ಸಂಯುಗೇ ತತ್ರ ಪ್ರವಿಷ್ಟೌ ಕೃಷ್ಣಪಾಂಡವೌ |

ನ ಚ ವಾರಯಿತಾ ಕಶ್ಚಿನ್ಮಮ ಸೈನ್ಯೇಽಸ್ತಿ ಸಂಜಯ ॥ 21 ॥
ಎಲೈ ಸಂಜಯನೇ, ರಣರಂಗದಲ್ಲಿ ಗಾಯಗೊಳ್ಳದೇ ಪ್ರವೇಶಿಸಿದ ಕೃಷ್ಣಾರ್ಜುನರನ್ನು ತಡೆಯುವವರು ನನ್ನ ಸೈನ್ಯದಲ್ಲಿ ಯಾರೂ ಇಲ್ಲ.
ಭೃತಾಶ್ಚ ಬಹವೋ ಯೋಧಾಃ ಪರೀಕ್ಷ್ಯೈವ ತು ಸಂಜಯ |
ವೇತನೇನ ಯಥಾಯೋಗ್ಯಂ ಪ್ರಿಯವಾದೇನ ಚಾಪರೇ ॥ 22 ॥
ಎಲೈ ಸಂಜಯನೇ, ಅನೇಕ ಯೋಧರನ್ನು ಪರೀಕ್ಷೆ ಮಾಡಿಯೇ ಅವರಿಗೆ ಉಚಿತವಾದ ವೇತನವನ್ನು ಕೊಟ್ಟು ಮತ್ತು ಇನ್ನು ಕೆಲವರಿಗೆ ಪ್ರಿಯವಾದ ಮಾತುಗಳನ್ನು ಆಡಿ ಅವರೆಲ್ಲರೂ ನಮ್ಮಿಂದ ಪೂಜಿಸಲ್ಪಟ್ಟಿದ್ದಾರೆ.
ಅಕಾರಣಭೃತಸ್ತತ್ರ ಮಮ ಸೈನ್ಯೇ ನ ವಿದ್ಯತೇ |
ಕರ್ಮಣಾ ಹ್ಯನುರೂಪೇಣ ಲಭ್ಯತೇ ಭಕ್ತವೇತನಮ್ ॥ 23 ॥
ನಿಷ್ಕಾರಣವಾಗಿ ಪೂಜಿಸಲ್ಪಡುವ ಯಾವನೂ ನನ್ನ ಸೈನ್ಯದಲ್ಲಿ ಇಲ್ಲ. ಅವರು ಮಾಡುವ ಕರ್ಮಕ್ಕೆ ಅನುಗುಣವಾಗಿ ಅವರು ಆಹಾರ ಮತ್ತು ವೇತನಗಳನ್ನು ಪಡೆಯುತ್ತಾರೆ.
ನ ಚ ಯೋದ್ಧಾಽಭವತ್ ಕಶ್ಚಿನ್ಮಮ ಸೈನ್ಯೇಷು ಸಂಜಯ |
ನಾಲ್ಪದಾನಭೃತಸ್ತಾತ ನ ಕೋಽಪ್ಯಭೃತಕೋ ನರಃ ॥ 24 ॥
ಎಲೈ ಸಂಜಯನೇ, ನನ್ನ ಸೈನ್ಯದಲ್ಲಿ ಅಲ್ಪವೇತನವನ್ನು ಪಡೆಯುವ ಯೋಧನಾಗಲೀ, ವೇತನವನ್ನು ಪಡೆಯದ ಯೋಧನಾಗಲೀ ಯಾವನೂ ಇಲ್ಲ.
ಪೂಜಿತೋ ಹಿ ಯಥಾಶಕ್ತ್ಯಾ ದಾನಮಾನಾಸನೈರ್ಮಯಾ |
ತಥಾ ಪುತ್ರೈಶ್ಚ ಮೇ ತಾತ ಜ್ಞಾತಿಭಿಶ್ಚ ಸಬಾಂಧವೈಃ ॥ 25 ॥
ಎಲೈ ಪ್ರೀತಿಪಾತ್ರನೇ, ನನ್ನಿಂದಲೂ, ನನ್ನ ಪುತ್ರರಿಂದಲೂ ಮತ್ತು ನನ್ನ ಜ್ಞಾತಿ ಬಾಂಧವರಿಂದಲೂ ನಮ್ಮ ಶಕ್ತಿಗೆ ಅನುಗುಣವಾಗಿ ಅವರು ಗೌರವಿಸಲ್ಪಟ್ಟಿದ್ದಾರೆ.
ತೇ ಚಾವಾಪ್ಯ ಚ ಸಂಗ್ರಾಮೇ ನಿರ್ಜಿತಾಃ ಸವ್ಯಸಾಚಿನಾ |
ಶೈನೇಯೇನ ಚ ಸಮ್ಮೃಷ್ಟಾಃ ಕಿಮನ್ಯದ್ ಭಾಗಧೇಯತಃ ॥ 26 ॥
ಅಂತಹ ಅವರು ರಣರಂಗಕ್ಕೆ ಬಂದು ಅರ್ಜುನನಿಂದಲೂ ಮತ್ತು ಸಾತ್ಯಕಿಯಿಂದಲೂ ಪರಾಜಿತರಾಗಿದ್ದಾರೆ. ಅದೃಷ್ಟವನ್ನು ಬಿಟ್ಟು ಇದಕ್ಕೆ ಬೇರೆ ಏನು ಕಾರಣವಿದೆ?
ರಕ್ಷ್ಯತೇ ಯಶ್ಚ ಸಂಗ್ರಾಮೇ ಯೇ ಚ ಸಂಜಯ ರಕ್ಷಿಣಃ |
ಏಕಃ ಸಾಧಾರಣಃ ಪಂಥಾ ರಕ್ಷ್ಯಸ್ಯ ಸಹ ರಕ್ಷಿಭಿಃ ॥ 27 ॥
ಎಲೈ ಸಂಜಯನೇ, ಯುದ್ಧದಲ್ಲಿ ಯಾರು ರಕ್ಷಣೆಯನ್ನು ಮಾಡುತ್ತಾರೆಯೋ ಮತ್ತು ಯಾವನು ರಕ್ಷಿಸಲ್ಪಡುತ್ತಾನೆಯೋ ಅವರಿಬ್ಬರಿಗೂ ಸಾಧಾರಣವಾದ ಒಂದೇ ಮಾರ್ಗವಿದೆ.
ಅರ್ಜುನಂ ಸಮರೇ ದೃಷ್ಟ್ವಾ ಸೈಂಧವಸ್ಯಾಗ್ರತಃ ಸ್ಥಿತಮ್ |
ಪುತ್ರೋ ಮಮ ಭೃಶಂ ಮೂಢಃ ಕಿಂ ಕಾರ್ಯಂ ಪ್ರತ್ಯಪದ್ಯತ ॥ 28 ॥
ಸೈಂಧವನ ಮುಂಭಾಗದಲ್ಲಿದ್ದ ಅರ್ಜುನನನ್ನು ರಣರಂಗದಲ್ಲಿ ನೋಡಿ ಬಹಳ ಮೂಢನಾದ ನನ್ನ ಪುತ್ರನು ಏನು ಮಾಡಬೇಕೆಂದು ಇಚ್ಛಿಸಿದನು?
ಸಾತ್ಯಕಿಂ ಚ ರಣೇ ದೃಷ್ಟ್ವಾ ಪ್ರವಿಶಂತಮಭೀತವತ್ |
ಕಿನ್ನು ದುರ್ಯೋಧನಃ ಕೃತ್ಯಂ ಪ್ರಾಪ್ತಕಾಲಮಮನ್ಯತ ॥ 29 ॥
ರಣರಂಗದಲ್ಲಿ ಅಭೀತನಾಗಿ ಪ್ರವೇಶಿಸುವ ಸಾತ್ಯಕಿಯನ್ನು ನೋಡಿ ದುರ್ಯೋಧನನು ಏನು ಮಾಡಿದರೆ ಯೋಗ್ಯವೆಂದು ಭಾವಿಸಿದನು?
ಸರ್ವಶಕ್ತ್ಯಾಧಿಕೌ ಸೇನಾಂ ಪ್ರವಿಷ್ಟೌ ರಥಸತ್ತಮೌ |
ದೃಷ್ಟ್ವಾ ಕಾಂ ವೈ ಧೃತಿಂ ಯುದ್ಧೇ ಪ್ರತ್ಯಪದ್ಯಂತ ಮಾಮಕಾಃ ॥ 30 ॥
ಎಲ್ಲ ಶಕ್ತಿಗಳಿಂದಲೂ ಅಧಿಕರಾದ, ರಥಶ್ರೇಷ್ಠರಾದ ಅರ್ಜುನ-ಸಾತ್ಯಕಿಯರು ನಮ್ಮ ಸೈನ್ಯವನ್ನು ಪ್ರವೇಶ ಮಾಡುವುದನ್ನು ನೋಡಿ, ನನ್ನವರು ಯುದ್ಧದಲ್ಲಿ ಯಾವ ಧೈರ್ಯವನ್ನು ಹೊಂದಿದರು?
ದೃಷ್ಟ್ವಾ ತು ಕೃಷ್ಣಂ ವಾರ್ಷ್ಣೇಯಮರ್ಜುನಾರ್ಥೇ ವ್ಯವಸ್ಥಿತಮ್ |
ಶಿನೀನಾಮೃಷಭಂ ಚೈವ ಮನ್ಯೇ ಶೋಚಂತಿ ಪುತ್ರಕಾಃ ॥ 31 ॥
ಅರ್ಜುನನ ಹಿತದಲ್ಲಿ ಬದ್ಧನಾಗಿ ನಿರತರಾಗಿರುವ ವಾರ್ಷ್ಣೇಯನಾದ ಕೃಷ್ಣನನ್ನೂ, ಶಿನಿಪುಂಗವನಾದ ಸಾತ್ಯಕಿಯನ್ನೂ ನೋಡಿ ನನ್ನ ಮಕ್ಕಳು ಶೋಕಪಡುತ್ತಾರೆ.
ದೃಷ್ಟ್ವಾ ಸೇನಾಂ ವ್ಯತಿಕ್ರಾಂತಾಂ ಸಾತ್ವತೇನಾರ್ಜುನೇನ ಚ |
ಪಲಾಯಮಾನಾಂಶ್ಚ ಕುರೂನ್ ಮನ್ಯೇ ಶೋಚಂತಿ ಪುತ್ರಕಾಃ ॥ 32 ॥
ಸಾತ್ಯಕಿ ಮತ್ತು ಅರ್ಜುನರು ನಮ್ಮ ಸೈನ್ಯವನ್ನು ದಾಟಿದುದನ್ನು ನೋಡಿ ಮತ್ತು ಕುರುಗಳು ಪಲಾಯನ ಮಾಡುವುದನ್ನು ನೋಡಿ ನನ್ನ ಪುತ್ರರು ಶೋಕಪಡುವರೆಂದು ಭಾವಿಸುತ್ತೇನೆ.
ವಿದ್ರುತಾನ್ ರಥಿನೋ ದೃಷ್ಟ್ವಾ ನಿರುತ್ಸಾಹಾನ್ ದ್ವಿಷಜ್ಜಯೇ |
ಪಲಾಯನಕೃತೋತ್ಸಾಹಾನ್ ಮನ್ಯೇ ಶೋಚಂತಿ ಪುತ್ರಕಾಃ ॥ 33 ॥
ನಮ್ಮ ರಥಿಗಳು ಶತ್ರುಗಳ ಜಯದಲ್ಲಿ ಉತ್ಸಾಹವನ್ನು ಕಳೆದುಕೊಂಡು ಪಲಾಯನದಲ್ಲಿ ಉತ್ಸಾಹವನ್ನು ಹೊಂದಿ ಓಡುವುದನ್ನು

ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ಶೂನ್ಯಾನ್ ಕೃತಾನ್ ರಥೋಪಸ್ಥಾನ್ ಸಾತ್ಯಕೇನಾರ್ಜುನೇನ ಚ |
ಹತಾಂಶ್ಚ ಯೋಧಾನ್ ಸಂದೃಶ್ಯ ಮನ್ಯೇ ಶೋಚಂತಿ ಪುತ್ರಕಾಃ  ॥ 34 ॥
ಸಾತ್ಯಕಿ ಮತ್ತು ಅರ್ಜುನರಿಂದ ಶೂನ್ಯಗೊಳಿಸಲ್ಪಟ್ಟ ರಥಪೀಠಗಳನ್ನೂ, ಹತರಾದ ಯೋಧರನ್ನೂ ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ವ್ಯಶ್ವನಾಗರಥಾನ್ ದೃಷ್ಟ್ವಾ ತತ್ರ ಧೀರಾನ್ ಸಹಸ್ರಶಃ |
ಧಾವತಶ್ಚ ರಣೇ ವ್ಯಗ್ರಾನ್ ಮನ್ಯೇ ಶೋಚಂತಿ ಪುತ್ರಕಾಃ ॥ 35 ॥
ಅಶ್ವ-ಗಜ-ರಥಗಳನ್ನು ಕಳೆದುಕೊಂಡು ಧೀರರಾದ ವೀರರು ಸಹಸ್ರಸಂಖ್ಯೆಯಲ್ಲಿ ವ್ಯಗ್ರರಾಗಿ ರಣರಂಗದಲ್ಲಿ ಓಡುವುದನ್ನು ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ವಿವೀರಾಂಶ್ಚ ರಥೇಭಾಶ್ವಾನ್ ವಿರಥಾಂಶ್ಚ ಕೃತಾನ್ ನರಾನ್ |
ತತ್ರ ಸಾತ್ಯಕಿಪಾರ್ಥಾಭ್ಯಾಂ ಮನ್ಯೇ ಶೋಚಂತಿ ಪುತ್ರಕಾಃ ॥ 36 ॥
ರಣರಂಗದಲ್ಲಿ ಸಾತ್ಯಕಿ ಮತ್ತು ಅರ್ಜುನರಿಂದ ಯೋಧರಿಲ್ಲದಂತೆ ಮಾಡಲ್ಪಟ್ಟ ರಥ-ಗಜಾಶ್ವಗಳನ್ನೂ, ರಥ-ಗಜಾಶ್ವಗಳಿಲ್ಲದಂತೆ ಮಾಡಲ್ಪಟ್ಟ ಯೋಧರನ್ನೂ ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ಮಹಾನಾಗಾನ್ ವಿದ್ರವತೋ ದೃಷ್ಟ್ವಾಽರ್ಜುನಶರಾಹತಾನ್ |
ಪತಿತಾಂಶ್ಚ ತತಶ್ಚಾನ್ಯಾನ್ ಮನ್ಯೇ ಶೋಚಂತಿ ಪುತ್ರಕಾಃ ॥37॥
ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟು ಓಡುವ ಮತ್ತು ಬೀಳುವ ಮಹಾಗಜಗಳನ್ನು ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ಹಯೌಘಾನ್ ವಿದ್ರುತಾನ್ ದೃಷ್ಟ್ವಾ ದ್ರಾವ್ಯಮಾಣಾಂಸ್ತತಸ್ತತಃ |
ರಣೇ ಸಾತ್ವತಪಾರ್ಥಾಭ್ಯಾಂ ಮನ್ಯೇ ಶೋಚಂತಿ ಪುತ್ರಕಾಃ ॥ 38 ॥
ಅರ್ಜುನ-ಸಾತ್ಯಕಿಯರಿಂದ ರಣರಂಗದಲ್ಲಿ ಓಡಿಸಲ್ಪಡುವ ನಮ್ಮ ಅಶ್ವ ಸಮೂಹಗಳನ್ನು ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ಪತ್ತಿಸಂಘಾನ್ ರಣೇ ದೃಷ್ಟ್ವಾ ಧಾವಮಾನಾಂಶ್ಚ ಸರ್ವಶಃ |
ನಿರಾಶಾ ವಿಜಯೇ ಸರ್ವೇ ಮನ್ಯೇ ಶೋಚಂತಿ ಪುತ್ರಕಾಃ ॥ 39 ॥
ಪದಾತಿಗಳ ಸಮೂಹಗಳು ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಓಡಿ ಹೋಗುವುದನ್ನು ನೋಡಿ, ತಮ್ಮ ಜಯದ ಆಸೆಯನ್ನು ತೊರೆದು ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ದ್ರೋಣಸ್ಯ ಸಮತಿಕ್ರಾಂತಾವನೀಕಮಪರಾಜಿತೌ |
ಕ್ಷಣೇನ ದೃಷ್ಟ್ವಾ ತೌ ವೀರೌ ಮನ್ಯೇ ಶೋಚಂತಿ ಪುತ್ರಕಾಃ ॥ 40 ॥
ಆ ಇಬ್ಬರು ವೀರರು ಅಪರಾಜಿತರಾಗಿ ಒಂದು ಕ್ಷಣದಲ್ಲಿ ದ್ರೋಣರ ಸೈನ್ಯವನ್ನು ದಾಟಿ ಹೋದುದನ್ನು ನೋಡಿ ನನ್ನ ಪುತ್ರರು ಶೋಕಪಡುತ್ತಾರೆಂದು ಭಾವಿಸುತ್ತೇನೆ.
ಸಮ್ಮೂಢೋಽಸ್ಮಿ ಭೃಶಂ ತಾತ ಶ್ರುತ್ವಾ ಕೃಷ್ಣಧನಂಜಯೌ |
ಪ್ರವಿಷ್ಟೌ ಮಾಮಕಂ ಸೈನ್ಯಂ ಸಾತ್ವತೇನ ಸಹಾಚ್ಯುತೌ ॥ 41 ॥
ಎಲೈ ಪ್ರೀತಿಪಾತ್ರನೇ, ಕೃಷ್ಣಾರ್ಜುನರು ಸಾತ್ಯಕಿಯ ಜೊತೆಯಲ್ಲಿ ತಮ್ಮ ಸಾಮರ್ಥ್ಯ ಕಡಿಮೆಯಾಗದೆ ನಮ್ಮ ಸೈನ್ಯವನ್ನು ಪ್ರವೇಶಿಸಿದರೆಂದು ಕೇಳಿ ನಾನು ಬಹಳ ಮೂಢನಾಗಿದ್ದೇನೆ.
ತಸ್ಮಿನ್ ಪ್ರವಿಷ್ಟೇ ಪೃತನಾಂ ಶಿನೀನಾಂ ಪ್ರವರೇ ರಥೇ |
ಭೋಜಾನೀಕಂ ವ್ಯತಿಕ್ರಾಂತೇ ಕಥಮಾಸನ್ ಹಿ ಕೌರವಾಃ ॥ 42 ॥
ಶಿನಿಗಳ ಶ್ರೇಷ್ಠ ರಥನಾದ ಸಾತ್ಯಕಿಯು ನಮ್ಮ ಸೈನ್ಯವನ್ನು ಪ್ರವೇಶಿಸಿ, ಕೃತವರ್ಮನ ಸೈನ್ಯವನ್ನು ದಾಟಿ ಹೋದಾಗ ಕೌರವರು ಹೇಗಿದ್ದರು?
ತಥಾ ದ್ರೋಣೇನ ಸಮರೇ ನಿಗೃಹೀತೇಷು ಪಾಂಡುಷು |
ಕಥಂ ಯುದ್ಧಮಭೂತ್ ತೇಷಾಂ ತನ್ಮಮಾಚಕ್ಷ್ವ ಸಂಜಯ ॥ 43 ॥
ಹಾಗೆಯೇ ಪಾಂಡವರು ದ್ರೋಣರಿಂದ ರಣರಂಗದಲ್ಲಿ ತಡೆಯಲ್ಪಟ್ಟಾಗ ಅವರ ಜೊತೆಯಲ್ಲಿ ಹೇಗೆ ಯುದ್ಧವು ನಡೆಯಿತು? ಎಲೈ ಸಂಜಯನೇ, ಅದನ್ನು ನನಗೆ ಹೇಳು.
ದ್ರೋಣೋ ಹಿ ಬಲವಾನ್ ಶೂರಃ ಕೃತಾಸ್ತ್ರೋ ದೃಢವಿಕ್ರಮಃ |
ಪಾಂಚಾಲಾಸ್ತಂ ಮಹೇಷ್ವಾಸಂ ಪ್ರತ್ಯಯುಧ್ಯನ್ ಕಥಂ ರಣೇ ॥ 44 ॥
ದ್ರೋಣರು ಬಲಿಷ್ಠರಾದವರು, ಶೂರರು, ಅಸ್ತ್ರಪಾರಂಗತರು ಮತ್ತು ದೃಢ ಪರಾಕ್ರಮವುಳ್ಳವರು. ಪಾಂಚಾಲರು ಆ ಮಹಾಧನುರ್ಧಾರಿಗಳ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದರು?
ಬದ್ಧವೈರಾಸ್ತಥಾ ದ್ರೋಣೇ ಧರ್ಮರಾಜಜಯೈಷಿಣಃ |
ಭಾರದ್ವಾಜಸ್ತಥಾ ತೇಷು ದೃಢವೈರೋ ಮಹಾಬಲಃ ॥ 45 ॥
ಪಾಂಚಾಲರು ಧರ್ಮರಾಜನ ಜಯವನ್ನು ಬಯಸುತ್ತಾ ದ್ರೋಣರಲ್ಲಿ ಬದ್ಧವೈರ ಉಳ್ಳವರು. ಹಾಗೆಯೇ ಮಹಾಬಲರಾದ ದ್ರೋಣರೂ ಸಹ ಪಾಂಚಾಲರಲ್ಲಿ ದೃಢವಾದ ವೈರವುಳ್ಳವರು.
ಅರ್ಜುನಶ್ಚಾಪಿ ಯಚ್ಚಕ್ರೇ ಸಿಂಧುರಾಜವಧಂ ಪ್ರತಿ |

ತನ್ಮೇ ಸರ್ವಂ ಸಮಾಚಕ್ಷ ೀವ ಕುಶಲೋ ಹ್ಯಸಿ ಸಂಜಯ ॥ 46 ॥
ಎಲೈ ಸಂಜಯನೇ, ಸಿಂಧುರಾಜನ ವಧೆಯ ವಿಷಯದಲ್ಲಿ ಅರ್ಜುನನಾದರೂ ಏನು ಮಾಡಿದನು ಎಂದು ನನಗೆ ಎಲ್ಲವನ್ನೂ ಹೇಳು. ನೀನು ವರ್ಣನೆ ಮಾಡುವುದರಲ್ಲಿ ಕುಶಲನಾಗಿದ್ದೀಯೆ.
ಸಂಜಯಃ
ಆತ್ಮಾಪರಾಧಸಂಭೂತಂ ವ್ಯಸನಂ ಭರತರ್ಷಭ |
ಪ್ರಾಪ್ಯ ಪ್ರಾಕೃತವದ್ ಧೀರ ನ ತ್ವಂ ಶೋಚಿತುಮರ್ಹಸಿ ॥ 47 ॥
ಸಂಜಯ ಎಲೈ ಭರತಶ್ರೇಷ್ಠನೇ, ಧೀರನೇ, ಈ ವ್ಯಸನವು ನಿನಗೆ ನಿನ್ನ ಅಪರಾಧದಿಂದ ಉಂಟಾಗಿದೆ. ಅಂತಹ ವ್ಯಸನವನ್ನು ಹೊಂದಿ ನೀನು ಸಾಮಾನ್ಯ ಮನುಷ್ಯನಂತೆ ಶೋಕವನ್ನು ಪಡಬಾರದು.
ಪುರಾ ಯದುಚ್ಯಸೇ ಪ್ರಾಜ್ಞೈಃ ಸುಹೃದ್ಭಿರ್ವಿದುರಾದಿಭಿಃ |
ಮಾ ಹಾರ್ಷೀಃ ಪಾಂಡವಾನ್ ರಾಜನ್ನಿತಿ ತನ್ನ ತ್ವಯಾ ಕೃತಮ್ ॥48॥
ಹಿಂದೆ ನಿನ್ನ ಹಿತೈಷಿಗಳೂ, ಪ್ರಾಜ್ಞರೂ ಆದ ವಿದುರಾದಿಗಳು ರಾಜನೇ, ಪಾಂಡವರನ್ನು ದ್ಯೂತದಲ್ಲಿ ಸೋಲಿಸಬೇಡ ಎಂದು ಹೇಳಿದರು. ಅದನ್ನು ನೀನು ನಡೆಸಲಿಲ್ಲ (ಕೇಳಲಿಲ್ಲ).
ಸುಹೃದಾಂ ಹಿತಕಾಮಾನಾಂ ವಾಕ್ಯಂ ಯೋ ನ ಶೃಣೋತಿ ಹ |
ಸ ಮಹದ್ ವ್ಯಸನಂ ಪ್ರಾಪ್ಯ ಶೋಚತೇ ವೈ ಯಥಾ ಭವಾನ್ ॥49॥
ಯಾವನು ಹಿತವನ್ನು ಬಯಸುವ ಸುಹೃದರ ಮಾತನ್ನು ಕೇಳುವುದಿಲ್ಲವೋ ಅವನು ನಿನ್ನಂತೆ ದೊಡ್ಡ ವ್ಯಸನಕ್ಕೆ ಈಡಾಗಿ ಶೋಕಪಡುತ್ತಾನೆ.
ಯಾಚಿತೋಽಸಿ ಪುರಾ ರಾಜನ್ ದಾಶಾರ್ಹೇಣ ಶಮಂ ಪ್ರತಿ |
ನಚ ತಂ ಲಬ್ಧವಾನ್ ಕಾಮಂ ತ್ವತ್ತಃ ಕೃಷ್ಣೋ ಮಹಾಯಶಾಃ ॥50॥
ಎಲೈ ರಾಜನೇ, ದಾಶಾರ್ಹನಾದ ಕೃಷ್ಣನು ಹಿಂದೆ ನಿನ್ನನ್ನು ಸಂಧಿಗಾಗಿ ಬೇಡಿದನು. ಆದರೆ ಮಹಾಕೀರ್ತಿವಂತನಾದ ಕೃಷ್ಣನು ನಿನ್ನಿಂದ ಅವನು ಬಯಸಿದ ಸಂಧಿಯನ್ನು ಪಡೆಯಲಿಲ್ಲ.
ತವ ನಿರ್ಗುಣತಾಂ ಮತ್ವಾ ಪಕ್ಷಪಾತಂ ಸುತೇಷು ಚ |
ದ್ವೈಧೀಭಾವಂ ಪೃಥಗ್ ಧರ್ಮೇ ಪಾಂಡವೇಷು ಚ ಮತ್ಸರಮ್ ॥51॥
ಆರ್ತಪ್ರಲಾಪಾಂಶ್ಚ ಬಹೂನ್ ಮನುಜಾಧಿಪಸತ್ತಮ |
ತವ ಜಿಹ್ಮಮತಿಂ ಚೈವ ವಿದಿತ್ವಾ ಪಾಂಡವಾನ್ ಪ್ರತಿ |
ಸರ್ವಲೋಕಸ್ಯ ತತ್ತ್ವಜ್ಞಃ ಸರ್ವಲೋಕಗುರುಃ ಪ್ರಭುಃ ॥ 52 ॥
ವಾಸುದೇವಸ್ತತೋ ಯುದ್ಧಂ ಕುರೂಣಾಮಕರೋನ್ಮಹತ್ |
ಆತ್ಮಾಪರಾಧಾತ್ ಸುಮಹಾನ್ ಪ್ರಾಪ್ತಸ್ತೇ ವಿಪುಲಃ ಕ್ಷಯಃ |
ನೈವ ದುರ್ಯೋಧನೇ ದೋಷಾನ್ ವಕ್ತುಮರ್ಹಸಿ ಮಾನದ ॥ 53 ॥
ನಿನ್ನ ನಿರ್ಗುಣತ್ವವನ್ನು ತಿಳಿದು, ನಿನಗೆ ಮಕ್ಕಳಲ್ಲಿರುವ ಪಕ್ಷಪಾತವನ್ನು ತಿಳಿದು, ಧರ್ಮಾಚರಣೆಯಲ್ಲಿ ನಿನಗಿರುವ ಎರಡು ರೀತಿಯನ್ನೂ ಮತ್ತು ಪಾಂಡವರ ಮೇಲಿರುವ ಮತ್ಸರವನ್ನೂ ತಿಳಿದು, ಎಲೈ ಮನುಜಶ್ರೇಷ್ಠನೇ, ಸತ್ತಮನೇ, ನಿನ್ನ ಅನೇಕ ವಿಧವಾದ ಆರ್ತಪ್ರಲಾಪವನ್ನು ಕೇಳಿ ಪಾಂಡವರ ವಿಷಯದಲ್ಲಿ ನಿನಗಿರುವ ಕುಟಿಲ ಬುದ್ಧಿಯನ್ನು ಕೇಳಿ, ಸರ್ವಲೋಕದ ಜ್ಞಾನವುಳ್ಳವನೂ, ಸರ್ವಲೋಕದ ಗುರುವೂ, ಪ್ರಭುವೂ ಆದ ವಾಸುದೇವನು ಕುರುಗಳಲ್ಲಿ ದೊಡ್ಡ ಯುದ್ಧವಾಗುವಂತೆ ಮಾಡಿದನು. ನಿನ್ನ ಅಪರಾಧದಿಂದಲೇ ಕುರುಗಳ ದೊಡ್ಡ ವಿನಾಶವು ಉಂಟಾಗಿದೆ. ಎಲೈ ಮಾನದನೇ, ಈ (ಎಲ್ಲ) ದೋಷಗಳನ್ನು ದುರ್ಯೋಧನನ ಮೇಲೆ ಹಾಕಬೇಡ.
ನಹಿ ತೇ ಸುಕೃತಂ ಕಿಂಚಿದಾದೌ ಮಧ್ಯೇ ಚ ಭಾರತ |
ದೃಶ್ಯತೇ ಪೃಷ್ಠತಶ್ಚೈವ ತ್ವನ್ಮೂಲೋ ಹಿ ಪರಾಜಯಃ ॥ 54 ॥
ಎಲೈ ಭಾರತನೇ, ನೀನು ಮೊದಲಾಗಲೀ, ಮಧ್ಯದಲ್ಲಾಗಲೀ ಅಥವಾ ಕೊನೆಯಲ್ಲಾಗಲೀ ಯಾವ ಒಳ್ಳೆಯ ಕಾರ್ಯವನ್ನೂ ಮಾಡಲಿಲ್ಲ. ಈ ಪರಾಜಯಕ್ಕೆ ನೀನು ಕಾರಣನಾದವನು.
ಆರ್ತಪ್ರಲಾಪಾನಿಹ ತು ಕುರುಷೇ ಭರತರ್ಷಭ |
ನೈತದ್ ವೃದ್ಧಸ್ಯ ತೇ ಸಾಧು ಗತಾಸೋರಿವ ಮಂಡನಮ್ ॥ 55 ॥
ಎಲೈ ಭರತರ್ಷಭನೇ, ಈಗ ಆರ್ತಪ್ರಲಾಪವನ್ನು ಮಾಡುತ್ತಿದ್ದೀಯೆ. ಶವಕ್ಕೆ ಅಲಂಕಾರ ಮಾಡಿದಂತೆ ಈ ಆರ್ತಪ್ರಲಾಪಗಳು ಭೂಷಣವಲ್ಲ.
ತಸ್ಮಾದದ್ಯ ಸ್ಥಿರೋ ಭೂತ್ವಾ ಜ್ಞಾತ್ವಾ ಲೋಕಸ್ಯ ನಿರ್ಣಯಮ್ |
ಶೃಣು ಯುದ್ಧಂ ಯಥಾವೃತ್ತಂ ಘೋರಂ ದೇವಾಸುರೋಪಮಮ್ ॥
ಆದ್ದರಿಂದ ಈ ದಿನ ಮನಸ್ಸಿನಲ್ಲಿ ಸ್ಥೈರ್ಯವನ್ನು ತೆಗೆದುಕೊಂಡು, ಲೋಕದ ನಿರ್ಣಯವನ್ನು ತಿಳಿದು, ದೇವಾಸುರ ಯುದ್ಧಕ್ಕೆ ಸದೃಶವಾದ ಘೋರವಾದ ಯುದ್ಧವು ಹೇಗೆ ನಡೆಯಿತೆಂಬುದನ್ನು ಕೇಳು.
ಪ್ರವಿಷ್ಟೇ ತವ ಸೈನ್ಯಂ ತು ಶೈನೇಯೇ ಸತ್ಯವಿಕ್ರಮೇ |
ಭೀಮಸೇನಮುಖಾಃ ಪಾರ್ಥಾಃ ಪ್ರತೀಯುರ್ವಾಹಿನೀಂ ತವ ॥ 57 ॥
ಸತ್ಯವಿಕ್ರಮನಾದ ಸಾತ್ಯಕಿಯು ನಿನ್ನ ಸೈನ್ಯವನ್ನು ಪ್ರವೇಶಿಸುತ್ತಿರಲು ಭೀಮಸೇನ ಮೊದಲಾದ ಪಾಂಡವರು ನಿನ್ನ ಸೈನ್ಯದ ಕಡೆಗೆ ಧಾವಿಸಿದರು.

ಆಗಚ್ಛತಸ್ತಾನ್ ಸಹಸಾ ಕ್ರುದ್ಧರೂಪಾನ್ ಸಹಾನುಗಾನ್ |
ದಧಾರೈಕೋ ರಣೇ ಪಾಂಡೂನ್ ಕೃತವರ್ಮಾ ಮಹಾರಥಃ ॥ 58 ॥
ಕ್ರುದ್ಧರೂಪವನ್ನು ಧರಿಸಿ ತಮ್ಮ ಅನುಯಾಯಿಗಳ ಜೊತೆಯಲ್ಲಿ ವೇಗವಾಗಿ ಸಾಗಿ ಬರುತ್ತಿದ್ದ ಆ ಪಾಂಡವರನ್ನು ರಣರಂಗದಲ್ಲಿ ಮಹಾರಥನಾದ ಕೃತವರ್ಮನೊಬ್ಬನೇ ತಡೆದನು.
ಯಥೋದ್ವ ೃತ್ತಂ ವಾರಯತೇ ವೇಲೇವ ಸಲಿಲಾರ್ಣವಮ್ |
ಪಾಂಡುಸೈನ್ಯಂ ತಥಾ ಸಂಖ್ಯೇ ಹಾರ್ದಿಕ್ಯಃ ಸಮವಾರಯತ್ ॥ 59 ॥
ಕ್ಷೋಭೆಗೊಂಡ ಸಮುದ್ರವನ್ನು ದಡವು ತಡೆದಂತೆ ರಣರಂಗದಲ್ಲಿ ಕೃತವರ್ಮನು ಪಾಂಡವರ ಸೈನ್ಯವನ್ನು ತಡೆದನು.
ತತ್ರಾದ್ಭುತಮಮನ್ಯಂತ ಹಾರ್ದಿಕ್ಯಸ್ಯ ಪರಾಕ್ರಮಮ್ |
ಯದೇನಂ ಸಹಿತಾಃ ಪಾರ್ಥಾ ನಾತಿಚಕ್ರಮುರಾಹವೇ ॥ 60 ॥
ಪಾಂಡವರು ಒಟ್ಟುಗೂಡಿ ರಣರಂಗದಲ್ಲಿ ಕೃತವರ್ಮನನ್ನು ದಾಟಿ ಹೋಗಲಾರದ ಅವನ ಪರಾಕ್ರಮವನ್ನು ನೋಡಿ ಎಲ್ಲರೂ ಅದನ್ನು ಅದ್ಭುತವೆಂದು ತಿಳಿದರು.
ತತೋ ಭೀಮಸ್ತ್ರಿಭಿರ್ವಿದ್ಧ್ವಾ ಕೃತವರ್ಮಾಣಮಾಯಸೈಃ |
ಶಂಖಂ ದಧ್ಮೌ ಮಹಾಬಾಹುರ್ಹರ್ಷಯನ್ ಸರ್ವಪಾಂಡವಾನ್ ॥
ಆಗ ಮಹಾಬಾಹುವಾದ ಭೀಮನು ಮೂರು ಕಬ್ಬಿಣದ ಬಾಣಗಳಿಂದ ಕೃತವರ್ಮನನ್ನು ಹೊಡೆದು ಎಲ್ಲ ಪಾಂಡವರಿಗೆ ಸಂತೋಷವನ್ನುಂಟು ಮಾಡುತ್ತಾ ತನ್ನ ಶಂಖವನ್ನು ಊದಿದನು.
ಸಹದೇವಸ್ತು ವಿಂಶತ್ಯಾ ಧರ್ಮರಾಜಸ್ತು ಪಂಚಭಿಃ |
ನಕುಲಸ್ತು ಶತೇನೈವ ಹಾರ್ದಿಕ್ಯಂ ಸಮವಿಧ್ಯತ ॥ 62 ॥
ಸಹದೇವನು ಇಪ್ಪತ್ತು ಬಾಣಗಳಿಂದಲೂ, ಧರ್ಮರಾಜನು ಐದು ಬಾಣಗಳಿಂದಲೂ, ನಕುಲನು ನೂರು ಬಾಣಗಳಿಂದಲೂ ಕೃತವರ್ಮನನ್ನು ಹೊಡೆದರು.
ದ್ರೌಪದೇಯಾಸ್ತ್ರಿಸಪ್ತತ್ಯಾ ಸಪ್ತಭಿಶ್ಚ ಘಟೋತ್ಕಚಃ |
ಧೃಷ್ಟದ್ಯುಮ್ನಸ್ತ್ರಿಭಿರ್ಬಾಣೈಃ ಕೃತವರ್ಮಾಣಮಾರ್ದಯತ್ ॥ 63 ॥
ದ್ರೌಪದಿಯ ಪುತ್ರರು ಎಪ್ಪತ್ಮೂರು ಬಾಣಗಳಿಂದಲೂ, ಘಟೋತ್ಕಚನು ಏಳು ಬಾಣಗಳಿಂದಲೂ, ಧೃಷ್ಟದ್ಯುಮ್ನನು ಮೂರು ಬಾಣಗಳಿಂದಲೂ ಕೃತವರ್ಮನನ್ನು ಪೀಡಿಸಿದರು.
ವಿರಾಟಃ ಪಂಚದಶಭಿರ್ದ್ರುಪದಶ್ಚೈವ ಪಂಚಭಿಃ |
ಶಿಖಂಡೀ ಚೈವ ಹಾರ್ದಿಕ್ಯಂ ವಿದ್ಧ್ವಾ ಪಂಚಭಿರಾಶುಗೈಃ |
ಪುನರ್ವಿವ್ಯಾಧ ವಿಂಶತ್ಯಾ ಸಾಯಕಾನಾಂ ಹಸನ್ನಿವ ॥ 64 ॥
ವಿರಾಟನು ಹದಿನೈದು ಬಾಣಗಳಿಂದಲೂ, ದ್ರುಪದನು ಐದು ಬಾಣಗಳಿಂದಲೂ ಪೀಡಿಸಿದರು. ಶಿಖಂಡಿಯು ಶೀಘ್ರಗಾಮಿಗಳಾದ ಐದು ಬಾಣಗಳಿಂದ ಕೃತವರ್ಮನನ್ನು ಹೊಡೆದು ಪುನಃ ನಗುತ್ತಾ ಇಪ್ಪತ್ತು ಬಾಣಗಳಿಂದ ಅವನನ್ನು ಹೊಡೆದರು.
ಕೃತವರ್ಮಾ ತತೋ ರಾಜನ್ ಸರ್ವತಸ್ತಾನ್ ಮಹಾರಥಾನ್ |
ಏಕೈಕಂ ಪಂಚಭಿರ್ವಿದ್ಧ್ವಾ ಭೀಮಂ ವಿವ್ಯಾಧ ಸಪ್ತಭಿಃ ॥ 65 ॥
ಧನುರ್ಧ್ವಜಂ ಚ ಸಂಯತ್ತೋ ರಥಾದ್ ಭೂಮಾವಪಾತಯತ್ ॥
ಎಲೈ ರಾಜನೇ, ಆಗ ಕೃತವರ್ಮನು ಆ ಮಹಾರಥರಲ್ಲಿ ಎಲ್ಲರನ್ನೂ ಒಬ್ಬೊಬ್ಬರನ್ನು ಐದು ಬಾಣಗಳಿಂದ ಹೊಡೆದು, ಭೀಮನನ್ನು ಏಳು ಬಾಣಗಳಿಂದ ಹೊಡೆದನು. ಭೀಮಸೇನನ ಧ್ವಜ ಮತ್ತು ಧನುಸ್ಸನ್ನು ಪ್ರಯತ್ನಪೂರ್ವಕವಾಗಿ ರಥದಿಂದ ಭೂಮಿಯ ಮೇಲೆ ಕೆಡವಿದನು.
ಅಥೈನಂ ಛಿನ್ನಧನ್ವಾನಂ ತ್ವರಮಾಣೋ ಮಹಾರಥಃ |
ಆಜಘಾನೋರಸಿ ಕ್ರುದ್ಧಃ ಸಪ್ತತ್ಯಾ ನಿಶಿತೈಃ ಶರೈಃ ॥ 67 ॥
ಭೀಮಸೇನನ ಧನುಸ್ಸು ಕತ್ತರಿಸಲ್ಪಡುತ್ತಿರಲು ಮಹಾರಥನಾದ ಕೃತವರ್ಮನು ತ್ವರೆಯಿಂದ ಕೂಡಿದವನಾಗಿ ಕೋಪದಿಂದ ಎಪ್ಪತ್ತು ತೀಕ್ಷ್ಣವಾದ ಬಾಣಗಳಿಂದ ಭೀಮಸೇನನನ್ನು ಅವನ ಎದೆಯಲ್ಲಿ ಹೊಡೆದನು.
ಸ ಗಾಢವಿದ್ಧೋ ಬಲವಾನ್ ಹಾರ್ದಿಕ್ಯಸ್ಯ ಶರೋತ್ತಮೈಃ |
ಚಚಾಲ ರಥಮಧ್ಯಸ್ಥಃ ಕ್ಷಿತಿಕಂಪೇ ಯಥಾಽಚಲಃ ॥ 68 ॥
ಕೃತವರ್ಮನ ಶ್ರೇಷ್ಠವಾದ ಬಾಣಗಳಿಂದ ಗಾಢವಾಗಿ ಹೊಡೆಯಲ್ಪಟ್ಟ ಬಲಿಷ್ಠನಾದ ಭೀಮನು ಭೂಕಂಪದ ಸಮಯದಲ್ಲಿ ಪರ್ವತವು ನಡುಗುವಂತೆ ರಥಮಧ್ಯದಲ್ಲಿ ನಡುಗಿದನು.
ಭೀಮಸೇನಂ ತಥಾ ದೃಷ್ಟ್ವಾ ಧರ್ಮರಾಜಪುರೋಗಮಾಃ |
ವಿಸೃಜಂತಃ ಶರಾನ್ ಘೋರಾನ್ ಕೃತವರ್ಮಾಣಮಾರ್ದಯನ್ ॥69॥
ಭೀಮಸೇನನು ಹಾಗಿರುವುದನ್ನು ನೋಡಿ ಧರ್ಮರಾಜ ಮೊದಲಾದವರು ಘೋರವಾದ ಬಾಣಗಳನ್ನು ಪ್ರಯೋಗಿಸುತ್ತಾ ಕೃತವರ್ಮನನ್ನು ಪೀಡಿಸಿದರು.
ತಂ ತಥಾ ಕೋಷ್ಠಕೀಕೃತ್ಯ ರಥವಂಶೇನ ಮಾರಿಷ |
ವಿವ್ಯಧುಃ ಸಾಯಕೈರ್ಹೃಷ್ಟಾ ರಕ್ಷಾರ್ಥಂ ಮಾರುತೇರ್ಮೃಧೇ ॥ 70 ॥
ಎಲೈ ಪೂಜ್ಯನೇ,ಅವರು ರಣರಂಗದಲ್ಲಿ ಭೀಮನನ್ನು ರಕ್ಷಿಸುವ ಸಲುವಾಗಿ ತಮ್ಮ ರಥಗಳ ಸಮೂಹದಿಂದ ಕೃತವರ್ಮನನ್ನು ಕೂಡಿಹಾಕಿಕೊಂಡು ಸಂತುಷ್ಟರಾಗಿ ಬಾಣಗಳಿಂದ ಅವನನ್ನು ಹೊಡೆದರು.

ಪ್ರತಿಲಭ್ಯ ತತಃ ಸಂಜ್ಞಾಂ ಭೀಮಸೇನೋ ಮಹಾಬಲಃ |
ಶಕ್ತಿಂ ಜಗ್ರಾಹ ಸಮರೇ ಸ್ವರ್ಣದಂಡಾಮಯಸ್ಮಯೀಮ್ ॥ 71 ॥
ಚಿಕ್ಷೇಪ ಚ ರಥಾತ್ ತೂರ್ಣಂ ಕೃತವರ್ಮರಥಂ ಪ್ರತಿ ॥ 72 ॥
ಮಹಾಬಲನಾದ ಭೀಮಸೇನನು ಅನಂತರ ಪ್ರಜ್ಞೆಯನ್ನು ಮರಳಿ ಪಡೆದು ಸ್ವರ್ಣ ದಂಡವಿರುವ ಕಬ್ಬಿಣದಿಂದ ಮಾಡಿದ ಒಂದು ಶಕ್ತ್ಯಾಯುಧವನ್ನು ತೆಗೆದುಕೊಂಡು, ತನ್ನ ರಥದಲ್ಲಿಯೇ ನಿಂತು ಶೀಘ್ರವಾಗಿ ಅದನ್ನು ಕೃತವರ್ಮನ ರಥದ ಮೇಲೆ ಎಸೆದನು.
ಸಾ ಭೀಮಭುಜನಿರ್ಮುಕ್ತಾ ನಿರ್ಮುಕ್ತೋರಗಸನ್ನಿಭಾ |
ಕೃತವರ್ಮಾಣಮಭಿತಃ ಪ್ರಜಜ್ವಾಲ ಸುದಾರುಣಾ ॥ 73 ॥
ಭೀಮಸೇನನ ಭುಜದಿಂದ ಪ್ರಯೋಗಿಸಲ್ಪಟ್ಟ ಆ ಶಕ್ತಿಯು ನಿರ್ಮುಕ್ತವಾದ ಸರ್ಪದಂತೆ ಕೃತವರ್ಮನ ಸುತ್ತಲೂ ಬಹಳ ದಾರುಣವಾದ ಜ್ವಾಲೆಗಳನ್ನು ಉಂಟು ಮಾಡಿತು.
ತಾಮಾಪತಂತೀಂ ಸಹಸಾ ಯುಗಾಂತಾಗ್ನಿಸಮಪ್ರಭಾಮ್ |
ದ್ವಾಭ್ಯಾಂ ಶರಾಭ್ಯಾಂ ಹಾರ್ದಿಕ್ಯೋ ನಿಚಕರ್ತ ತ್ರಿಧಾ ತದಾ ॥ 74 ॥
ಯುಗಾಂತಾಗ್ನಿಯ ಕಾಂತಿಯನ್ನು ಹೊಂದಿ ತನ್ನ ಕಡೆಗೆ ಬರುತ್ತಿದ್ದ ಆ ಶಕ್ತಿಯನ್ನು ಕೃತವರ್ಮನು ತಕ್ಷಣ ಎರಡು ಬಾಣಗಳಿಂದ ಮೂರು ಭಾಗಗಳಾಗಿ ಕತ್ತರಿಸಿದನು.
ಸಾ ಚ್ಛಿನ್ನಾ ಪತಿತಾ ಭೂಮೌ ಶಕ್ತಿಃ ಕನಕಭೂಷಣಾ |
ದ್ಯೋತಯಂತೀ ದಿಶೋ ರಾಜನ್ ಮಹೋಲ್ಕೇವ ದಿವಶ್ಚ್ಯುತಾ |
ಶಕ್ತಿಂ ವಿನಿಹತಾಂ ದೃಷ್ಟ್ವಾ ಭೀಮಶ್ಚುಕ್ರೋಧ ವೈ ಭೃಶಮ್ ॥ 75 ॥
ಎಲೈ ರಾಜನೇ, ಕನಕಭೂಷಿತವಾದ ಆ ಶಕ್ತಿಯು ಆಕಾಶದಿಂದ ಬೀಳುವ ದೊಡ್ಡ ಉಲ್ಕೆಯಂತೆ ಎಲ್ಲ ದಿಕ್ಕುಗಳನ್ನೂ ಬೆಳಗುತ್ತಾ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಿತು. ಶಕ್ತಿಯು ವಿನಾಶಗೊಂಡುದನ್ನು ನೋಡಿ ಭೀಮಸೇನನು ಬಹಳ ಕೋಪಗೊಂಡನು.
ತತೋಽನ್ಯದ್ ಧನುರಾದಾಯ ವೇಗವತ್ ಸುಮಹಾಸ್ವನಮ್ |
ಭೀಮಸೇನೋ ರಣೇ ಕ್ರುದ್ಧೋ ಹಾರ್ದಿಕ್ಯಂ ಸಮವಾರಯತ್ ॥ 76 ॥
ಆಗ ಭೀಮಸೇನನು ರಣರಂಗದಲ್ಲಿ ಕ್ರುದ್ಧನಾಗಿ ವೇಗಶಾಲಿಯೂ, ಮಹಾಸ್ವನವುಳ್ಳದ್ದೂ ಆದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅದರಿಂದ ಕೃತವರ್ಮನನ್ನು ತಡೆದನು.
ಅಥೈನಂ ಪಂಚಭಿರ್ಬಾಣೈರಾಜಘಾನ ಸ್ತನಾಂತರೇ |
ಭೀಮೋ ಭೀಮಬಲೋ ರಾಜನ್ ತವ ದುರ್ಮಂತ್ರಿತೇನ ಹ ॥ 77 ॥
ಅನಂತರ ಎಲೈ ರಾಜನೇ, ನಿನ್ನ ದುರ್ಮಂತ್ರಣದ ಫಲವಾಗಿ ಭಯಂಕರ ಬಲವುಳ್ಳ ಭೀಮಸೇನನು ಐದು ಬಾಣಗಳಿಂದ ಕೃತವರ್ಮನನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ಭೋಜಸ್ತು ಕ್ಷತಸರ್ವಾಂಗೋ ಭೀಮಸೇನೇನ ಮಾರಿಷ |
ರಕ್ತಾಶೋಕ ಇವೋತ್ಫುಲ್ಲೋ ವ್ಯಭ್ರಾಜತ ರಣಾಂಕಣೇ ॥ 78 ॥
ಎಲೈ ಪೂಜ್ಯನೇ, ಕೃತವರ್ಮನು ಭೀಮಸೇನನಿಂದ ಸರ್ವಾವಯವಗಳಲ್ಲಿಯೂ ಗಾಯಗೊಳಿಸಲ್ಪಟ್ಟು ಅರಳಿದ ರಕ್ತಾಶೋಕಪುಷ್ಪದಂತೆ ರಣಾಂಗಣದಲ್ಲಿ ಶೋಭಿಸಿದನು.
ತತಃ ಕ್ರುದ್ಧಸ್ತ್ರಿಭಿರ್ಬಾಣೈರ್ಭೀಮಸೇನಂ ತ್ವರಾನ್ವಿತಃ |
ಆಹತ್ಯ ರಭಸೋ ಯುದ್ಧೇ ತಾನ್ ಸರ್ವಾನ್ ಪ್ರತ್ಯವಿಧ್ಯತ ॥ 79 ॥
ತ್ರಿಭಿಸ್ತ್ರಿಭಿರ್ಮಹೇಷ್ವಾಸೋ ಯತಮಾನಾನ್ ಮಹಾರಥಾನ್ |
ತೇಽಪಿ ತಂ ಪ್ರತ್ಯವಿಧ್ಯಂತ ಸಪ್ತಭಿಃ ಸಪ್ತಭಿಃ ಶರೈಃ ॥ 80 ॥
ಆಗ ಅವನು ಕೋಪಗೊಂಡು ಶೀಘ್ರವಾಗಿ ಭೀಮಸೇನನನ್ನು ಮೂರು ಬಾಣದಿಂದ ಹೊಡೆದು ವೇಗಶಾಲಿಯಾದ ಅವನು ಯುದ್ಧದಲ್ಲಿ ಪ್ರಯತ್ನಪಡುತ್ತಿದ್ದ ಮಹಾರಥರಾದ ಅವರೆಲ್ಲರನ್ನೂ ಮೂರು ಮೂರು ಬಾಣಗಳಿಂದ ಹೊಡೆದನು. ಅವರೂ ಸಹ ಪ್ರಯತ್ನಪಡುತ್ತಿದ್ದ ಅವನನ್ನು ಏಳು ಏಳು ಬಾಣಗಳಿಂದ ಹೊಡೆದರು.
ಶಿಖಂಡಿನಃ ತತಃ ಕ್ರುದ್ಧಃ ಕ್ಷುರಪ್ರೇಣ ಮಹಾರಥಃ |
ಧನುಶ್ಚಿಚ್ಛೇದ ಸಮರೇ ಪ್ರಹಸನ್ನಿವ ಭಾರತ ॥ 81 ॥
ಎಲೈ ಭಾರತನೇ, ಕೋಪಗೊಂಡ ಮಹಾತ್ಮನಾದ ಅವನು ಕ್ಷುರಪ್ರದಿಂದ ನಗುತ್ತಾ ಶಿಖಂಡಿಯ ಧನುಸ್ಸನ್ನು ಕತ್ತರಿಸಿದನು.
ಶಿಖಂಡೀ ತು ತತಃ ಕ್ರುದ್ಧಃ ಛಿನ್ನೇ ಧನುಷಿ ಸತ್ವರಮ್ |
ಅಸಿಂ ಜಗ್ರಾಹ ಸಮರೇ ಶತಚಂದ್ರಂ ಚ ಭಾಸ್ವರಮ್ ॥ 82 ॥
ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಶಿಖಂಡಿಯು ಶೀಘ್ರವಾಗಿ ಖಡ್ಗವನ್ನೂ ಮತ್ತು ಶತಚಂದ್ರಗಳಿಂದ ಕೂಡಿದ ಪ್ರಕಾಶಮಾನವಾದ ಗುರಾಣಿಯನ್ನೂ ತೆಗೆದುಕೊಂಡನು.
ಭ್ರಾಮಯಿತ್ವಾ ಮಹಚ್ಚರ್ಮ ಚಾಮೀಕರವಿಭೂಷಿತಮ್ |
ತಮಸಿಂ ಪ್ರೇಷಯಾಮಾಸ ಕೃತವರ್ಮರಥಂ ಪ್ರತಿ ॥ 83 ॥
ಸುವರ್ಣಭೂಷಿತವಾದ ಆ ಗುರಾಣಿಯನ್ನು ತಿರುಗಿಸಿ ಆ ಖಡ್ಗವನ್ನು ಕೃತವರ್ಮನ ರಥದ ಮೇಲೆ ಎಸೆದನು.
ಸ ತಸ್ಯ ಸಶರಂ ಚಾಪಂ ಛಿತ್ತ್ವಾ ರಾಜನ್ ಮಹಾನಸಿಃ |
ಅಭ್ಯಗಾದ್ ಧರಣೀಂ ರಾಜನ್ ಚ್ಯುತಂ ಜ್ಯೋತಿರಿವಾಂಬರಾತ್ ॥84॥
ಎಲೈ ರಾಜನೇ, ಆ ದೊಡ್ಡ ಖಡ್ಗವು ಕೃತವರ್ಮನ ಬಾಣವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿ ಆಕಾಶದಿಂದ ಬಿದ್ದ ಜ್ಯೋತಿಯಂತೆ

ಭೂಮಿಯನ್ನು ಪ್ರವೇಶಿಸಿತು.
ಏತಸ್ಮಿನ್ನೇವ ಕಾಲೇ ತು ತ್ವರಮಾಣಾ ಮಹಾರಥಾಃ |
ವಿವ್ಯಧುಃ ಸಾಯಕೈರ್ಗಾಢಂ ಕೃತವರ್ಮಾಣಮಾಹವೇ ॥ 85 ॥
ಆ ಕಾಲದಲ್ಲಿಯೇ ತ್ವರೆ ಮಾಡಿದ ಮಹಾರಥರು ರಣರಂಗದಲ್ಲಿ ಕೃತವರ್ಮನನ್ನು ಬಾಣಗಳಿಂದ ಗಾಢವಾಗಿ ಹೊಡೆದರು.
ಅಥಾನ್ಯದ್ ಧನುರಾದಾಯ ತ್ಯಕ್ತ್ವಾ ತಚ್ಚ ಮಹದ್ ಧನುಃ |
ವಿಶೀರ್ಣಂ ಭರತಶ್ರೇಷ್ಠ ಹಾರ್ದಿಕ್ಯಃ ಪರವೀರಹಾ ॥ 86 ॥
ವಿವ್ಯಾಧ ಪಾಂಡವಾನ್ ಭೂಯಃ ತ್ರಿಭಿಸ್ತ್ರಿಭಿರಜಿಹ್ಮಗೈಃ |
ಶಿಖಂಡಿನಂ ಚ ವಿವ್ಯಾಧ ತ್ರಿಭಿಃ ಪಂಚಭಿರೇವ ಚ ॥ 87 ॥
ಎಲೈ ಭರತಶ್ರೇಷ್ಠನೇ, ಪರವೀರಘಾತಕನಾದ ಹಾರ್ದಿಕ್ಯನು ಕತ್ತರಿಸಲ್ಪಟ್ಟು ನಾಶ ಹೊಂದಿದ ಆ ದೊಡ್ಡ ಧನುಸ್ಸನ್ನು ಬಿಟ್ಟು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ನೇರವಾಗಿ ಸಾಗುವ ಮೂರು-ಮೂರು ಬಾಣಗಳಿಂದ ಪುನಃ ಪಾಂಡವರನ್ನು ಹೊಡೆದನು ಮತ್ತು ಶಿಖಂಡಿಯನ್ನು ಮೂರು ಬಾಣಗಳಿಂದಲೂ ಮತ್ತು ಐದು ಬಾಣಗಳಿಂದಲೂ ಹೊಡೆದನು.
ಧನುರನ್ಯತ್ ಸಮಾದಾಯ ಶಿಖಂಡೀ ತು ಮಹಾಯಶಾಃ |
ಅವಾರಯತ್ ಕೂರ್ಮನಖೈರಾಶುಗೈರ್ಹೃದಿಕಾತ್ಮಜಮ್ ॥ 88 ॥
ಮಹಾಕೀರ್ತಿವಂತನಾದ ಶಿಖಂಡಿಯಾದರೂ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಶೀಘ್ರಗಾಮಿಯಾದ ಕೂರ್ಮನಖಾಕಾರವನ್ನು ಹೊಂದಿದ ಬಾಣಗಳಿಂದ ಕೃತವರ್ಮನನ್ನು ತಡೆದನು.
ತತಃ ಕ್ರುದ್ಧೋ ಮಹಾರಾಜ ಹೃದಿಕಸ್ಯಾತ್ಮಸಂಭವಃ |
ಅಭಿದುದ್ರಾವ ವೇಗೇನ ಯಾಜ್ಞಸೇನಿಂ ಮಹಾರಥಮ್ ॥ 89 ॥
ಎಲೈ ಮಹಾರಾಜನೇ, ಆಗ ಹೃದಿಕನ ಪುತ್ರನಾದ ಕೃತವರ್ಮನು ಕ್ರುದ್ಧನಾಗಿ ವೇಗದಿಂದ ಮಹಾರಥನಾದ ಶಿಖಂಡಿಯನ್ನು ಕುರಿತು ಧಾವಿಸಿದನು.
ಭೀಷ್ಮಸ್ಯ ಸಮರೇ ರಾಜನ್ ಮೃತ್ಯೋರ್ಹೇತುಂ ಮಹಾತ್ಮನಃ |
ವಿದರ್ಶಯನ್ ಬಲಂ ಘೋರಂ ಶಾರ್ದೂಲ ಇವ ಕುಂಜರಮ್ ॥90॥
ಎಲೈ ರಾಜನೇ, ಮಹಾತ್ಮರಾದ ಭೀಷ್ಮರ ಮೃತ್ಯುವಿಗೆ ಕಾರಣನಾದ ಅವನ ಮೇಲೆ ತನ್ನ ಘೋರವಾದ ಬಲವನ್ನು ತೋರಿಸುತ್ತಾ, ವ್ಯಾಘ್ರವು ಗಜದ ಮೇಲೆ ನುಗ್ಗಿದಂತೆ (ಅವನು ನುಗ್ಗಿದನು).
ತೌ ದಿಶಾಗಜಸಂಕಾಶೌ ಜ್ವಲಂತಾವಿವ ಪಾವಕೌ |
ಸಮಾಸೇದತುರನ್ಯೋನ್ಯಂ ಶರಸಂಘೈರರಿಂದಮೌ ॥ 91 ॥
ವಿಧೂನ್ವಾನೌ ಧನುಃಶ್ರೇಷ್ಠೇ ಸಂದಧಾನೌ ಚ ಸಾಯಕಾನ್ |
ವಿಸೃಜಂತೌ ಚ ಶತಧಾ ಗಭಸ್ತೀನಿವ ಭಾಸ್ಕರೌ ॥ 92 ॥
ದಿಗ್ಗಜಗಳನ್ನು ಹೋಲುವ ಅವರಿಬ್ಬರೂ ತಮ್ಮ ಶ್ರೇಷ್ಠವಾದ ಧನುಸ್ಸುಗಳನ್ನು ತೂಗಾಡಿಸುತ್ತಾ, ಬಾಣಗಳನ್ನು ಹೂಡುತ್ತಾ, ಸೂರ್ಯನು ಕಿರಣಗಳನ್ನು ಚೆಲ್ಲಿದಂತೆ ನೂರಾರು ಬಾಣಗಳನ್ನು ಪ್ರಯೋಗಿಸುತ್ತಾ, ಜ್ವಲಿಸುವ ಎರಡು ಅಗ್ನಿಗಳಂತೆ ಅರಿಂದಮರಾದ ಅವರು ಬಾಣಸಮೂಹಗಳನ್ನು ಪರಸ್ಪರವಾಗಿ ಪ್ರಯೋಗಿಸುತ್ತಾ ಒಬ್ಬರನ್ನೊಬ್ಬರು ಸಂಧಿಸಿದರು.
ತಾಪಯಂತೌ ಶರೈಸ್ತೀಕ್ಷ್ಣೈರನ್ಯೋನ್ಯಂ ತೌ ಮಹಾರಥೌ |
ಯುಗಾಂತಪ್ರತಿಮೌ ವೀರೌ ರೇಜತುರ್ಭಾಸ್ಕರಾವಿವ ॥ 93 ॥
ಮಹಾರಥರಾದ ಆ ವೀರರಿಬ್ಬರು ಯುಗಾಂತ ಕಾಲದ ಎರಡು ಸೂರ್ಯರಂತೆ ತೀಕ್ಷ್ಣವಾದ ತಮ್ಮ ಬಾಣಗಳಿಂದ ಪರಸ್ಪರವಾಗಿ ಸಂತಾಪಗೊಳಿಸುತ್ತಾ ಶೋಭಿಸಿದರು.
ಕೃತವರ್ಮಾ ಸರಭಸಂ ಯಾಜ್ಞಸೇನಿಂ ಮಹಾರಥಮ್ |
ವಿದ್ಧ್ವಾ ತತಸ್ತ್ರಿಸಪ್ತತ್ಯಾ ಪುನರ್ವಿವ್ಯಾಧ ಸಪ್ತಭಿಃ ॥ 94 ॥
ಕೃತವರ್ಮನು ವೇಗಶಾಲಿಯಾದ, ಮಹಾರಥನಾದ ಶಿಖಂಡಿಯನ್ನು ಎಪ್ಪತ್ತಮೂರು ಬಾಣಗಳಿಂದ ಹೊಡೆದು ಪುನಃ ಏಳು ಬಾಣಗಳಿಂದ ಹೊಡೆದನು.
ಸ ಗಾಢವಿದ್ಧೋ ವ್ಯಥಿತೋ ರಥೋಪಸ್ಥ ಉಪಾವಿಶತ್ |
ವಿಸೃಜ್ಯ ಸಶರಂ ಚಾಪಂ ಮೂರ್ಚ್ಛಯಾ ಚ ಪರಿಪ್ಲುತಃ ॥ 95 ॥
ಗಾಢವಾಗಿ ಹೊಡೆಯಲ್ಪಟ್ಟ ಶಿಖಂಡಿಯು ತನ್ನ ಧನುಸ್ಸು ಮತ್ತು ಬಾಣಗಳನ್ನು ತ್ಯಜಿಸಿ, ಮೂರ್ಛೆಯಿಂದ ಆವೃತನಾಗಿ ರಥದ ಮಧ್ಯದಲ್ಲಿ ವ್ಯಥೆಯಿಂದ ಕುಳಿತನು.
ತಂ ವಿಷಣ್ಣಂ ರಣೇ ದೃಷ್ಟ್ವಾ ತಾವಕಾ ಭರತರ್ಷಭ |
ಹಾರ್ದಿಕ್ಯಂ ಪೂಜಯಾಮಾಸುರ್ವಾಸಾಂಸ್ಯಾದುಧುವುಶ್ಚ ಹ ॥ 96 ॥
ಎಲೈ ಭರತಶ್ರೇಷ್ಠನೇ, ವಿಷಣ್ಣನಾದ ಶಿಖಂಡಿಯನ್ನು ನೋಡಿ ನಿನ್ನವರು ಕೃತವರ್ಮನನ್ನು ಪೂಜಿಸಿ ತಮ್ಮ ವಸ್ತ್ರಗಳನ್ನು ಬೀಸಿದರು.
ಶಿಖಂಡಿನಂ ತಥಾ ಜ್ಞಾತ್ವಾ ಹಾರ್ದಿಕ್ಯಶರಪೀಡಿತಮ್ |
ಅಪೋವಾಹ ರಣಾದ್ ಯಂತಾ ತ್ವರಮಾಣೋ ಮಹಾರಥಮ್ ॥97॥
ಕೃತವರ್ಮನ ಬಾಣಗಳಿಂದ ಪೀಡಿತನಾದ ಶಿಖಂಡಿಯು ಹಾಗಿರುವುದನ್ನು ತಿಳಿದು, ಅವನ ಸಾರಥಿಯು ಶೀಘ್ರವಾಗಿ ಮಹಾರಥನಾದ ಅವನನ್ನು ರಣರಂಗದಿಂದ ಹೊರಗೆ ಕರೆದುಕೊಂಡು ಹೋದನು.
ಸಾದಿತಂ ತು ರಥೋಪಸ್ಥೇ ದೃಷ್ಟ್ವಾ ಪಾರ್ಥಾಃ ಶಿಖಂಡಿನಮ್ |

ಪರಿವವ್ರೂ ರಥೈಸ್ತೂರ್ಣಂ ಕೃತವರ್ಮಾಣಮಾಹವೇ ॥ 98 ॥
ಪಾಂಡವರು ಶಿಖಂಡಿಯು ರಥಮಧ್ಯದಲ್ಲಿ ಕುಸಿದುದನ್ನು ನೋಡಿ ಶೀಘ್ರವಾಗಿ ರಣರಂಗದಲ್ಲಿ ಕೃತವರ್ಮನನ್ನು ಸುತ್ತುವರಿದರು.
ತತ್ರಾದ್ಭುತಂ ಪರಂ ಚಕ್ರೇ ಕೃತವರ್ಮಾ ಮಹಾರಥಃ |
ಯದೇಕಃ ಸಮರೇ ಪಾರ್ಥಾನ್ ವಾರಯಾಮಾಸ ಸಂಯುಗೇ ॥ 99 ॥
ಆಗ ಮಹಾರಥನಾದ ಕೃತವರ್ಮನೊಬ್ಬನೇ ಯುದ್ಧದಲ್ಲಿ ಪಾಂಡವರನ್ನು ತಡೆದು ರಣ ರಂಗದಲ್ಲಿ ಅದ್ಭುತವಾದ ಕಾರ್ಯವನ್ನು ಮಾಡಿದನು.
ಪಾರ್ಥಾನ್ ಜಿತ್ವಾಽಜಯಚ್ಚೇದೀನ್ ಪಾಂಚಾಲಾನ್ ಸೃಂಜಯಾನಪಿ |
ಕೇಕಯಾಂಶ್ಚ ಮಹಾವೀರ್ಯಾನ್ ಕೃತವರ್ಮಾ ಮಹಾರಥಃ ॥ 100 ॥
ಮಹಾರಥನಾದ ಕೃತವರ್ಮನು ಪಾಂಡವರನ್ನು ಗೆದ್ದು, ಚೇದಿಗಳನ್ನೂ, ಪಾಂಚಾಲರನ್ನೂ, ಸೃಂಜಯರನ್ನೂ, ಮಹಾವೀರರಾದ ಕೇಕಯರನ್ನೂ ಜಯಿಸಿದನು.
ತೇ ವಧ್ಯಮಾನಾಃ ಸಮರೇ ಹಾರ್ದಿಕ್ಯೇನ ಸ್ಮ ಪಾಂಡವಾಃ |
ಇತಶ್ಚೇತಶ್ಚ ಧಾವಂತೋ ನಹಿ ಜಗ್ಮುರ್ಧೃತಿಂ ಕ್ವಚಿತ್ ॥ 101 ॥
ಕೃತವರ್ಮನಿಂದ ಯುದ್ಧದಲ್ಲಿ ಹೊಡೆಯಲ್ಪಡುತ್ತಿದ್ದ ಪಾಂಡವರು ಇಲ್ಲಿಂದಲ್ಲಿಗೆ ಓಡುತ್ತಾ ಎಲ್ಲಿಯೂ ಧೈರ್ಯವನ್ನು ಹೊಂದಲಿಲ್ಲ.
ಜಿತ್ವಾ ಪಾಂಡುಸುತಾನ್ ಯುದ್ಧೇ ಭೀಮಸೇನಪುರೋಗಮಾನ್ |
ಹಾರ್ದಿಕ್ಯಃ ಸಮರೇಽತಿಷ್ಠದ್ ವಿಧೂಮ ಇವ ಪಾವಕಃ ॥ 102 ॥
ಕೃತವರ್ಮನು ಭೀಮಸೇನ ಮೊದಲಾದ ಪಾಂಡುಪುತ್ರರನ್ನು ಯುದ್ಧದಲ್ಲಿ ಗೆದ್ದು ರಣರಂಗದಲ್ಲಿ ಧೂಮವಿಲ್ಲದ ಅಗ್ನಿಯಂತೆ ನಿಂತನು.
ತೇ ದ್ರಾವ್ಯಮಾಣಾಃ ಸಮರೇ ಹಾರ್ದಿಕ್ಯೇನ ಮಹಾರಥಾಃ |
ವಿಮುಖಾಃ ಸಮಪದ್ಯಂತ ಶರವೃಷ್ಟಿಭಿರಾಹತಾಃ |
ಲಜ್ಜಯಾವನತಾಶ್ಚೈವ ನ ಕಿಂಚಿತ್ ಪ್ರತಿಪೇದಿರೇ ॥ 103 ॥
ಹಾರ್ದಿಕ್ಯನಿಂದ ಯುದ್ಧದಲ್ಲಿ ಓಡಿಸಲ್ಪಟ್ಟ ಆ ಮಹಾರಥರು ಬಾಣಗಳ ಮಳೆಯಿಂದ ತಾಡಿತರಾಗಿ ಯುದ್ಧದಲ್ಲಿ ವಿಮುಖರಾದರು. ಲಜ್ಜೆಯಿಂದ ತಲೆಯನ್ನು ತಗ್ಗಿಸಿ ಏನು ಮಾಡಬೇಕೆಂದು ತಿಳಿಯದಾದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯ (ಅಧ್ಯಾಯ-26)
ವಿನೈವ ವೃಷ್ಣೀನ್ ವಿಜಯೇ ವರೋ ಯ-
ದಮುಷ್ಯ ತೇನಾಸ್ಯ ಹಯಾನ್ ಸ ಸಾತ್ಯಕಿಃ |
ನಿಹತ್ಯ ಬಾಣೈರತುದತ್ ಸ ಯಾನ-
ಮನ್ಯತ್ ಸಮಾಸ್ಥಾ ತತೋಽಪಜಗ್ಮಿವಾನ್ ॥
ಯಾದವರನ್ನು ಹೊರತುಪಡಿಸಿಯೇ ಸರ್ವತ್ರ ಜಯಗಳಿಸುವ ವಿಷಯದಲ್ಲಿ ಕೃತವರ್ಮನಿಗೆ ಕೃಷ್ಣನ ವರವಿದ್ದುದರಿಂದ ಸಾತ್ಯಕಿ ಕೃತವರ್ಮನ ಕುದುರೆಗಳನ್ನು ಕೊಂದು ಅವನನ್ನು ಬಾಣಗಳಿಂದ ಪೀಡಿಸಿದನು. ಕೃತವರ್ಮನು ಬೇರೆ ರಥವನ್ನೇರಿ ಅಲ್ಲಿಂದ ಹೊರಟುಹೋದನು.
ತದಾ ಹರಿಃ ಪಾಂಚಜನ್ಯಂ ಸುಘೋಷ-
ಮಾಪೂರಯಾಮಾಸ ಜಯೇಽಭಿಯುದ್ಧ್ಯತಿ |
ಕರ್ಣಾದಿಭಿರ್ದ್ರೌಣಿಮುಖ್ಯೈ ರಿಪೂಣಾಂ
ಬಪ್ರಹಾಣಾಯ ಪರಃ ಪರೇಭ್ಯಃ ॥
ಕರ್ಣ ಮುಂತಾದವರೊಡನೆಯೂ ಅಶ್ವತ್ಥಾಮ ಮುಂತಾದವರೊಡನೆಯೂ ಅರ್ಜುನನು ಯುದ್ಧ ಮಾಡುತ್ತಿದ್ದಾಗಸರ್ವೋತ್ತಮನಾದ ಕೃಷ್ಣನು ಶತ್ರುಗಳ ಬಲವನ್ನು ಕುಂದಿಸುವುದಕ್ಕಾಗಿ ಉತ್ತಮ ಧ್ವನಿ ಉಳ್ಳ ಪಾಂಚಜನ್ಯಶಂಖವನ್ನು ಮೊಳಗಿಸಿದನು.
ಸ ಪಾಂಚಜನ್ಯೋಽಚ್ಯುತವಕ್ತ್ರವಾಯುನಾ
ಭೃಶಂ ಸುಪೂರ್ಣೋದರನಿಸ್ಸೃತಧ್ವನಿಃ |
ಜಗದ್ ವಿರಿಂಚೀಶಸುರೇಂದ್ರಪೂರ್ವಕಂ
ಪ್ರಕಮ್ಪಯಾಮಾಸ ಯುಗಾತ್ಯಯೇ ಯಥಾ ॥
ಆ ಪಾಂಚಜನ್ಯ ಕೃಷ್ಣನ ಬಾಯಿಯ ಗಾಳಿಯಿಂದ ಒಳಗೆ ತುಂಬಿಕೊಂಡಾಗ ಜೋರಾಗಿ ಧ್ವನಿಯನ್ನು ಹೊರಡಿಸಿ ಪ್ರಲಯಕಾಲದಲ್ಲಿ ಹೇಗೋ ಹಾಗೆ ಬ್ರಹ್ಮ, ರುದ್ರ, ಇಂದ್ರಾದಿ ಲೋಕವನ್ನು ನಡುಗಿಸಿತು.
ಗಾಂಡೀವಘೋಷೇ ಚ ತದಾಽಭಿಭೂತೇ

ಯುಧಿಷ್ಠಿರೋ ಭೀತಭೀತಸ್ತದೇತ್ಯ |
ಶೈನೇಯಮೂಚೇ ಪರಸೈನ್ಯಮಗ್ನೇ
ಪಾರ್ಥೇ ಸ್ವಯಂ ಯುದ್ಧ್ಯತಿ ಕೇಶವಃ ಸ್ಮ ॥
ಆಗ ಗಾಂಡೀವಧ್ವನಿ ಕೇಳಿಸದಂತಾಗಿರಲು ಧರ್ಮರಾಜ ಬಹಳ ಭಯಗೊಂಡು ಸಾತ್ಯಕಿಯ ಬಳಿಗೆ ಹೋಗಿ `ಏನು, ಶತ್ರುಸೈನ್ಯದಲ್ಲಿ ಅರ್ಜುನ ಮುಳುಗಿ ಹೋಗಿರಲು ಕೃಷ್ಣನೇ ಸ್ವತಃ ಯುದ್ಧ ಮಾಡುತಿತರುವನೇ? ಎಂದು ಕೇಳಿದನು.
ನ ಶ್ರೂಯತೇ ಗಾಂಡಿವಸ್ಯಾದ್ಯ ಘೋಷಃ
ಸಂಶ್ರೂಯತೇ ಪಾಂಚಜನ್ಯಸ್ಯ ಘೋಷಃ |
ತದ್ ಯಾಹಿ ಜಾನೀಹಿ ತಮದ್ಯ ಪಾರ್ಥಂ
ಯದಿ ಸ್ಮ ಜೀವತ್ಯಸಹಾಯ ಏಷಃ ॥
ಈಗ ಗಾಂಡೀವದ ಧ್ವನಿ ಕೇಳಿಬರುತ್ತಿಲ್ಲ. ಪಾಂಚಜನ್ಯ ಧ್ವನಿಯೇ ಕೇಳಿಬರುತ್ತಿದೆ. ಆದ್ದರಿಂದ ನೀನು ಈಗಲೇ ಕೃಷ್ಣನ ಬಳಿಗೆ ಹೋಗು. ಅರ್ಜುನನು ಬದುಕಿರುವನೋ ಎಂದು ತಿಳಿದುಕೊಂಡು ಬಾ. ಬದುಕಿದ್ದರೆ ಅಸಹಾಯಕನಾಗಿದ್ದರೆ ನೀನು ಸಹಾಯಕನಾಗು ಎಂದು ಹೇಳಿದನು.
ಇತೀರಿತಃ ಸಾತ್ಯಕಿರತ್ರ ವಿಪ್ರಾನ್
ಸಂಪೂಜ್ಯ ವಿತ್ತೈಃ ಪರಮಾಶಿಷಶ್ಚ |
ಜಯಾಯ ತೇಭ್ಯಃ ಪ್ರತಿಗೃಹ್ಯ ಸೇನಾ
ಮುಖಂ ಯಯೌ ಭೀಮಸೇನಾನುಯಾತಃ ॥
ಧರ್ಮರಾಜನು ಹೀಗೆ ಹೇಳಿದಾಗ ಸಾತ್ಯಕಿಯು ಬ್ರಾಹ್ಮಣರನ್ನು ದ್ರವ್ಯಗಳಿಂದ ಚೆನ್ನಾಗಿ ಸತ್ಕರಿಸಿ ಯುದ್ಧದಲ್ಲಿ ಜಯಕ್ಕಾಗಿ ಅವರಿಂದ ಉತ್ತಮ ಆಶೀರ್ವಾದಗಳನ್ನು ಹೊಂದಿ ಸೈನ್ಯದ ದ್ವಾರಕ್ಕೆ ಹೊರಟನು. ಅವನಿಗೆ ತಡೆ ಉಂಟಾಗದಿರಲೆಂದು ಭೀಮನು ಅವನನ್ನು ಹಿಂಬಾಲಿಸಿದನು.
ಭೀಮಸ್ತು ಸೇನಾಮುಖಮಾಶು ಭಿತ್ತ್ವಾ
ಪ್ರಾವೇಶಯದ್ ಯುಯುಧಾನಂ ಚಮೂಂ ತಾಮ್ |
ಸ ಯುದ್ಧ್ಯಮಾನೋ ಗುರುಣಾಽಭ್ಯುಪೇಕ್ಷಿತಃ
ಸೂತಂ ನಿಹತ್ಯ ದ್ರಾವಯಾಮಾಸ ಚಾಶ್ವಾನ್ ॥
ಭೀಮನು ಬೇಗನೆ ಸೈನ್ಯದ ದ್ವಾರವನ್ನು ಭೇದಿಸಿ ಸಾತ್ಯಕಿಯನ್ನು ಸೈನ್ಯದೊಳಗೆ ಪ್ರವೇಶ ಮಾಡಿಸಿದನು. ಸಾತ್ಯಕಿಯು ದ್ರೋಣರೊಡನೆ ಯುದ್ಧ ಮಾಡಿದನು. ದ್ರೋಣರು ಉಪೇಕ್ಷೆ ಮಾಡಿ ಬಿಟ್ಟಿದ್ದರಿಂದ ಸಾತ್ಯಕಿಯು ಅವರ ಸಾರಥಿಯನ್ನು ಕೊಂದು ಕುದುರೆಗಳನ್ನು ಓಡಿಸಿದನು.
ಬಲಂ ವಿವೃದ್ಧಂ ಚ ತದಾಽಸ್ಯ ಸಾತ್ಯಕೇ-
ರ್ವಿಪ್ರಾಶೀರ್ಭಿಃ ಕೃಷ್ಣವರಾದಪಿ ಸ್ಮ |
ಬಲಸ್ಯ ವೃದ್ಧಿರ್ಹಿ ಪುರಾಽಸ್ಯ ದತ್ತಾ
ಕೃಷ್ಣೇನ ತುಷ್ಟೇನ ದಿನೇ ಹಿ ತಸ್ಮಿನ್ ॥
ಆಗ ಸಾತ್ಯಕಿಯ ಬಲ ಬ್ರಾಹ್ಮಣರ ಆಶೀರ್ವಾದಗಳಿಂದಲೂ, ಕೃಷ್ಣನ ವರದಿಂದಲೂ ವೃದ್ಧಿ ಹೊಂದಿತ್ತು. ಆ ದಿನದಲ್ಲಿ ಸಾತ್ಯಕಿಗೆ ಬಲ ವೃದ್ಧಿಯಾಗಲೆಂದು ಸಂತುಷ್ಟನಾದ ಶ್ರೀಕೃಷ್ಣನಿಂದ ಹಿಂದೆ ವರ ನೀಡಲ್ಪಟ್ಟಿತ್ತು.
ತತೋ ವಿವೃದ್ಧೋರುಬಲಾತ್ ಸ ಸಾತ್ಯಕಿಃ
ಸಂಸ್ಥಾಪ್ಯ ಭೀಮಂ ಪ್ರಯಯೌ ರಥೇನ |
ತಂ ಬಾಣವರ್ಷೈಃ ಪೃತನಾಂ ಸಮಂತಾ-
ನ್ನಿಘ್ನಂತಮಾಜೌ ಹೃದಿಕಾತ್ಮಜೋಽಭ್ಯಯಾತ್ ॥
ಅದರಿಂದ ವೃದ್ಧಿಹೊಂದಿದ ಮಹಾಬಲದಿಂದ ಸಾತ್ಯಕಿಯು ಭೀಮನನ್ನು ಸೇನೆಯ ದ್ವಾರದಲ್ಲಿ ನಿಲ್ಲಿಸಿ, ರಥದಿಂದ ಒಳಗೆ ಪ್ರವೇಶಿಸಿದನು. ಯುದ್ಧದಲ್ಲಿ ಬಾಣಗಳ ಮಳೆಗಳಿಂದ ಸೈನ್ಯಗಳನ್ನು ಎಲ್ಲೆಡೆಗಳಲ್ಲಿ ನಾಶಮಾಡತೊಡಗಿದಾಗ ಕೃತವರ್ಮ ಎದುರಾದನು.
ತಯೋರಭೂದ್ ಯುದ್ಧಮತೀವ ದಾರುಣಂ
ತತ್ರಾಕರೋತ್ ತಂ ವಿರಥಂ ಸ ಸಾತ್ಯಕಿಃ |
ವಿಜಿತ್ಯ ತಂ ಸಾತ್ಯಕಿರುಗ್ರಧನ್ವಾ
ಯಯಾವತೀತ್ಯೈವ ಶಿರಾಂಸಿ ಯೂನಾಮ್ ॥
ಕೃಂತನ್ ಶರೈಸ್ತಂ ಜಲಸಂಧ ಆಗಮದ್
ರಣೇ ಗಜಸ್ಕಂಧಗತೋಽಭಿಯೋದ್ಧುಮ್ |
ನಿವಾರಯಂತಂ ತಮಸಹ್ಯವಿಕ್ರಮಂ
ನಿಹತ್ಯ ಬಾಣೈಃ ಸಮರೇ ಸ ಸಾತ್ಯಕಿಃ |
ವಿಲೋಲಯಾಮಾಸ ಬಲಂ ಕುರೂಣಾಂ
ನಿಘ್ನನ್ ಗಜಸ್ಯಂದನವಾಜಿಪತ್ತಿನಃ ॥
ಸಾತ್ಯಕಿ-ಕೃತವರ್ಮರಿಗೆ ಭೀಕರವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿ ಸಾತ್ಯಕಿ ಕೃತವರ್ಮನನ್ನು ವಿರಥನನ್ನಾಗಿ ಮಾಡಿದನು.

ಭಯಂಕರ ಧನುರ್ಧಾರಿ ಸಾತ್ಯಕಿಯು ಅವನನ್ನು ಪರಾಭವಗೊಳಿಸಿ ದಾಟಿ ಯುವಕರ ತಲೆಗಳನ್ನು ಕತ್ತರಿಸುತ್ತಾ ನಡೆದನು. ಅವನೊಡನೆ ಹೋರಾಡಲು ಆನೆಯ ಹೆಗಲನೇರಿ ಜಲಸಂಧನು ಬಂದನು. ತನನ್ನು ತಡೆಯುತ್ತಿದ್ದ ಅಸಹನೀಯ ಪರಾಕ್ರಮಿಯಾದ ಆ ಜಲಸಂಧನನ್ನು ಸಾತ್ಯಕಿಯು ಯುದ್ಧದಲ್ಲಿ ಬಾಣಗಳಿಂದ ಕೊಂದು ಕೌರವರ ಆನೆ, ರಥ, ಕುದುರೆ, ಕಾಲಾಳು ಚತುರಂಗ ಸೇನೆಯ ಬಲವನ್ನು ಹೊಡೆಯುತ್ತ ನಾಶಮಾಡಿದನು.

ಸ ಪಾರ್ವತೇಯಾಂಶ್ಚ ಶಿಲಾಪ್ರವರ್ಷಿಣೋ
    ನಿಹತ್ಯ ವಿದ್ರಾಪ್ಯ ಚ ಸರ್ವಸೈನಿಕಾನ್ ।
ಸಮಾಸದತ್ ಕೇಶವಫಲ್ಗುನೌ ಚ
    ಬಲೀ ತಮಾರಾಽಶು ಚ ಯೂಪಕೇತುಃ ॥
ತಯೋರಭೂದ್ ಯುದ್ಧಮತೀವ ಘೋರಂ
    ಚಿರಂ ವಿಚಿತ್ರಂ ಚ ಮಹದ್ ವಿಭೀಷಣಮ್ ॥

ಸಾತ್ಯಕಿ ಕಲ್ಲಿನ ಮಳೆ ಸುರಿಸುತ್ತಿದ್ದ ಗುಡ್ಡಗಾಡಿನವರನ್ನು ಸಂಹರಿಸಿ ಎಲ್ಲ ಸೈನಿಕರನ್ನು ಓಡಿಸಿ ಕೃಷ್ಣಾರ್ಜುನರ ಕಡೆಗೆ ಮುಂದುವರಿದನು. ಆಗ ಬಲಿಷ್ಠನಾದ ಭೂರಿಶ್ರವನು ಸಾತ್ಯಕಿಯನ್ನು ತಡೆದನು. ಅವರಿಬ್ಬರಿಗೆ ಅತ್ಯಂತ ಘೋರ, ಮಹಾಭಯಂಕರ, ವಿಚಿತ್ರವಾದ ಯುದ್ಧವು ಬಹಳಕಾಲ ನಡೆಯಿತು.

ಪರಸ್ಪರಂ ತೌ ತುರಗಾನ್ ನಿಹತ್ಯ
    ನಿಪಾತ್ಯ ಸೂತೌ ಧನುಷೀ ನಿಕೃತ್ಯ ॥
ಸಮೀಯತುಶ್ಚರ್ಮವರಾಸಿಧಾರಿಣೌ
    ವಿಚಿತ್ರಮಾರ್ಗಾನ್ ಯುಧಿ ಸಂಚರಂತೌ ॥

ಸಾತ್ಯಕಿಯು ಭೂರಿಶ್ರವರು ಒಬ್ಬ ಇನ್ನೊಬ್ಬರ ಕುದುರೆಗಳನ್ನು ಕೊಂದು ಸಾರಥಿಗಳನ್ನೂ ಬೀಳಿಸಿ ಬಿಲ್ಲುಗಳನ್ನೂ ಕಡಿದು ಕತ್ತಿ ಗುರಾಣಿಗಳನ್ನು ಹಿಡಿದು ವಿಚಿತ್ರವಾದ ವರಸೆಗಳನ್ನು ಯುದ್ಧದಲ್ಲಿ ತೋರುತ್ತ ಹೋರಾಡಿದರು.

ಸ ಸೌಮದತ್ತಿರ್ಭುವಿ ಸಾತ್ಯಕಿಂ ರಣೇ
    ನಿಪಾತ್ಯ ಕೇಶೇಷು ಚ ಸಂಪ್ರಗೃಹ್ಯ ।
ಪದಾಽಸ್ಯ ವಕ್ಷಸ್ಯಧಿರುಹ್ಯ ಖಡ್ಗ-
    ಮುದಗ್ರಹೀದಾಶು ಶಿರೋಽಪಹರ್ತುಮ್ ॥

ಭೂರಿಶ್ರವನು ಯುದ್ಧದಲ್ಲಿ ಸಾತ್ಯಕಿಯನ್ನು ನೆಲದಲ್ಲಿ ಕೆಡವಿ ಕೂದಲುಗಳಲ್ಲಿ ಹಿಡಿದು ಎದೆಯ ಮೇಲೆ ಕಾಲಿನಿಂದ ಮೆಟ್ಟಿ ನಿಂತು ಶಿರಶ್ಛೇದ ಮಾಡಲು ಬೇಗನೆ ಖಡ್ಗವನ್ನೆತ್ತಿದನು.

ತದ್ ವಾಸುದೇವಸ್ತು ನಿರೀಕ್ಷ್ಯ ವಿಶ್ವತ
    ಶ್ಚಕ್ಷುರ್ಜಗಾದಾಽಶು ಧನಂಜಯಂ ರಣೇ ।
ತ್ರಾಯಸ್ವ ಶೈನೇಯಮಿತಿ ಸ್ಮ ಸೋಽಪಿ
    ಭಲ್ಲೇನ ಚಿಚ್ಛೇದ ಭುಜಂ ಪರಸ್ಯ ॥

ವಿಶ್ವತಶ್ಚಕ್ಷುವಾದ ಶ್ರೀಕೃಷ್ಣನು ಅದನ್ನು ಕಂಡು ಬೇಗನೆ ಅರ್ಜುನನಿಗೆ ಹೇಳಿದ `ಯುದ್ಧದಲ್ಲಿ ಸಾತ್ಯಕಿಯನ್ನು ಕಾಪಾಡು' ಎಂದು. ಒಡನೆಯೇ ಅರ್ಜುನನು ಒಂದು ಭಲ್ಲದಿಂದ ಭೂರಿಶ್ರವನ ತೋಳನ್ನು ಕತ್ತರಿಸಿದನು.

ಸ ತೇನ ಚೋತ್ಕೃತ್ತಸಖಡ್ಗಬಾಹು
    ರ್ವಿನಿಂದ್ಯ ಪಾರ್ಥಂ ನಿಷಸಾದ ಭೂಮೌ ।
ಪ್ರಾಯೋಪವಿಷ್ಟಃ ಶರಸಂಸ್ತರೇ ಹರಿಂ
    ಧ್ಯಾಯನ್ ವಿನಿಂದನ್ನಸುರಪ್ರವೇಶಾತ್ ॥

ಭೂರಿಶ್ರವನು ತನ್ನ ಕತ್ತಿ ಎತ್ತಿದ್ದ ಬಾಹು ಕಡಿದು ಹೋದಾಗ ಅರ್ಜುನನನ್ನು ನಿಂದಿಸಿ ನೆಲದ ಮೇಲೆ ಕುಳಿತನು. ಅಸುರಾವೇಶದಿಂದ ಶ್ರೀಕೃಷ್ಣನನ್ನು ನಿಂದಿಸುತ್ತ ಶ್ರೀಹರಿಯನ್ನು ಧ್ಯಾನಿಸುತ್ತ ಬಾಣಗಳ ಹಾಸಿನ ಮೇಲೆ ಪ್ರಾಯೋಪ್ರವೇಶಕ್ಕೆ ಕುಳಿತನು.

ಗತೇಽಸುರಾವೇಶ ಉತಾತಿಭಕ್ತ್ಯಾ
    ಧ್ಯಾಯತ್ಯಮುಷ್ಮಿನ್ ಗರುಡಧ್ವಜಂ ತಮ್ ।
ಶೈನೇಯ ಉತ್ಥಾಯ ನಿವಾರ್ಯಮಾಣಃ
    ಕೃಷ್ಣಾರ್ಜುನಾದ್ಯೈರಹರಚ್ಛಿರೋಽಸ್ಯ ॥

ಅಸುರಾವೇಶ ಹೋದ ಬಳಿಕ ಒಳ್ಳೆಯ ಭಕ್ತಿಯಿಂದಲೇ ಭೂರಿಶ್ರವ ಶ್ರೀಕೃಷ್ಣನನ್ನು ಧ್ಯಾನಿಸುತ್ತಿದ್ದಾಗ ಸಾತ್ಯಕಿಯು ಎದ್ದು, ಶ್ರೀಕೃಷ್ಣ ಅರ್ಜುನ ಮುಂತಾದವರು ತಡೆಯುತ್ತಿದ್ದಂತೆಯೇ ಭೂರಿಶ್ರವನ ತಲೆಯನ್ನು ಕಡಿದು ಹಾಕಿದನು.

ತದಾ ಸ್ವಕೀಯಂ ರಥಮೇತದರ್ಥಂ
    ಕ್ಲೃಪ್ತಂ ದದೌ ಸಾತ್ಯಕಯೇ ಸಸೂತಮ್ ।
ಕೃಷ್ಣೋಽಥ ಪಾರ್ಥಸ್ಯ ಹಯಾಸ್ತೃಷಾಽರ್ದಿತಾ
    ಸ್ತದಾಽಸೃಜದ್ ವಾರುಣಾಸ್ತ್ರಂ ಸ ಪಾರ್ಥಃ ॥

ಸಾತ್ಯಕಿಗಾಗಿಯೇ ಸಿದ್ಧಗೊಳಿಸಲ್ಪಟ್ಟ ತನ್ನ ರಥವನ್ನು ಶ್ರೀಕೃಷ್ಣ ಆಗ ಸಾರಥಿ ಸಮೇತವಾಗಿ ಸಾತ್ಯಕಿಗೆ ಕೊಟ್ಟನು. ಆಗ ಅರ್ಜುನನ ಕುದುರೆಗಳು ಬಾಯಾರಿದ್ದವು. ಅರ್ಜುನ ವಾರುಣಾಸ್ತ್ರವನ್ನು ಪ್ರಯೋಗಿಸಿದನು.

ತೇನೈವ ತೀರ್ಥಂ ಪರಮಂ ಚಕಾರ

ತಥಾಽಶ್ವಶಾಲಾಮಪಿ ಬಾಣರೂಪಾಮ್ ।
ತತೋ ವಿಮುಚ್ಯಾತ್ರ ಹಯಾನಪಾಯಯದ್
ಹರಿಸ್ತದಾ ವಾಸವಿರಾರ್ದಯತ್ ಪರಾನ್ ॥
ವಾರುಣಾಸ್ತ್ರದಿಂದ ಅರ್ಜುನನು ಉತ್ತಮವಾದ ಜಲಾಶಯವನ್ನು ನಿರ್ಮಿಸಿದನು ಮತ್ತು ಬಾಣರೂಪ ಅಶ್ವಶಾಲೆಯನ್ನೂ ನಿರ್ಮಿಸಿದನು. ಶ್ರೀಕೃಷ್ಣನು ಕುದುರೆಗಳನ್ನು ರಥದಿಂದ ಬಿಚ್ಚಿ ನೀರು ಕುಡಿಸಿದನು. ಅರ್ಜುನನು ಆಗ ನೆಲದ ಮೇಲೆ ನಿಂತೇ ಶತ್ರುಗಳೊಡನೆ ಹೋರಾಡುತ್ತಲೇ ಇದ್ದನು.
ಯುಯೋಜ ಕೃಷ್ಣಸ್ತುರಗಾನ್ ರಥೇ ಪುನ-
ರ್ಗತಶ್ರಮಾನುದ್ಧೃತಸಾಯಕಾನ್ ಪ್ರಭುಃ ।
ಪ್ರಚೋದಿತೇ ತೇನ ರಥೇ ಸ್ಥಿತಃ ಪುನ-
ಸ್ತಥೈವ ಬೀಭತ್ಸುರರೀನಯೋಧಯತ್ ॥
ಪ್ರಭು ಶ್ರೀಕೃಷ್ಣನು ಕುದುರೆಗಳ ಮೈಯಲ್ಲಿ ನೆಟ್ಟಿದ್ದ ಬಾಣಗಳನ್ನು ಕಿತ್ತು ತೆಗೆದು ಹಾಕಿ ಮೈದಡವಿ ಅವುಗಳ ಆಯಾಸವನ್ನು ಪರಿಹರಿಸಿ ತಿರುಗಿ ರಥಕ್ಕೆ ಕಟ್ಟಿದ. ಬಳಿಕ ಅವನು ರಥವನ್ನು ನಡೆಸಲು ಸಿದ್ಧನಾದಾಗ ಅರ್ಜುನನು ಅದನ್ನೇರಿ ಪುನಃ ಹಿಂದಿನಂತೆಯೇ ಜಯದ್ರಥನ ಕಡೆಗೆ ಮುನ್ನುಗ್ಗುತ್ತ ಶತ್ರುಗಳೊಡನೆ ಹೋರಾಡಿದನು.
ಶಿನಿಪ್ರವೀರೇ ತು ಗತೇ ಯುಧಿಷ್ಠಿರಃ
ಪುನಶ್ಚ ಚಿಂತಾಕುಲಿತೋ ಬಭೂವ ಹ ।
ಜಗಾದ ಭೀಮಂ ಚ ನ ಗಾಂಡಿವಧ್ವನಿಃ
ಸಂಶ್ರೂಯತೇ ಪಾಂಚಜನ್ಯಸ್ಯ ರಾವಃ ॥
ಸಾತ್ಯಕಿಯು ಅತ್ತ ಹೋದ ಬಳಿಕ ಪುನಃ ಧರ್ಮರಾಜ ಚಿಂತಾಗ್ರಸ್ತನಾದನು. ಭೀಮನಿಗೆ ಹೇಳಿದ `ಗಾಂಡಿವ ಧ್ವನಿ ಇಲ್ಲ. ಪಾಂಚಜನ್ಯ ಧ್ವನಿ ಮಾತ್ರ ಕೇಳಿ ಬರುತ್ತಿದೆ' ಎಂದು.
ಮಯಾ ನಿಯುಕ್ತಶ್ಚ ಗತಃ ಸ ಸಾತ್ಯಕಿ-
ರ್ಭಾರಂ ಚ ತಸ್ಯಾಧಿಕಮೇವ ಮನ್ಯೇ ।
ತತ್ ಪಾಹಿ ಪಾರ್ಥಂ ಯುಯುಧಾನಮೇವ
ತ್ವಂ ಭೀಮ ಗತ್ವಾ ಯದಿ ಜೀವತಸ್ತೌ ॥
`ನನ್ನ ಆದೇಶ ಪಡೆದು ಸಾತ್ಯಕಿಯು ಅರ್ಜುನನಿಗೆ ಸಹಾಯ ಮಾಡಲು ಹೋಗಿದ್ದಾನೆ. ಆದರೆ ಆತನಿಗೆ ಆ ಕಾರ್ಯಭಾರ ಪ್ರಾಯಃ ಅಧಿಕವಾಯಿತೆಂದು ನನಗೆ ತೋರುತ್ತಿದೆ. ಅದರಿಂದ ಭೀಮನೇ, ನೀನೇ ಹೋಗಿ ಅರ್ಜುನನನ್ನೂ, ಸಾತ್ಯಕಿಯನ್ನೂ ಅವರು ಬದುಕಿದ್ದರೆ ಕಾಪಾಡು' ಎಂದು.
ಇತೀರಿತಃ ಪ್ರಾಹ ವೃಕೋದರಸ್ತಂ
ನ ರಕ್ಷಿತಂ ವಾಸುದೇವೇನ ಪಾರ್ಥಮ್ ।
ಬ್ರಹ್ಮೇಶಾನಾವಪಿ ಜೇತುಂ ಸಮರ್ಥೌ
ಕಿಂ ದ್ರೌಣಿಕರ್ಣಾದಿಧನುರ್ಭೃತೋಽತ್ರ ॥
ಹೀಗೆ ಧರ್ಮರಾಜನು ಹೇಳಿದಾಗ ಭೀಮನು ಅವನಿಗೆ ಹೇಳಿದ, `ಕೃಷ್ಣನಿಂದ ರಕ್ಷಿತನಾದ ಅರ್ಜುನನನ್ನು ಬ್ರಹ್ಮರುದ್ರರೂ ಕೂಡ ಗೆಲ್ಲಲು ಸಮರ್ಥರಲ್ಲ. ಇನ್ನು ಈ ಅಶ್ವತ್ಥಾಮರು, ಕರ್ಣ ಮುಂತಾದ ಧನುರ್ಧಾರಿಗಳ ಬಗ್ಗೆ ಏನು ಹೇಳಬೇಕು?
ಅತೋ ಭಯಂ ನಾಸ್ತಿ ಧನಂಜಯಸ್ಯ
ನ ಸಾತ್ಯಕೇಶ್ಚೈವ ಹರೇಃ ಪ್ರಸಾದಾತ್ ।
ರಕ್ಷ್ಯಸ್ತ್ವಮೇವಾತ್ರ ಮತೋ ಮಮಾದ್ಯ
ದ್ರೋಣೋ ಹ್ಯಯಂ ಯತತೇ ತ್ವಾಂ ಗ್ರಹೀತುಮ್ ॥
ಅದರಿಂದ ಅರ್ಜುನನಿಗೂ ಸಾತ್ಯಕಿಗೂ ಕೃಷ್ಣನ ಅನುಗ್ರಹದಿಂದ ಏನೂ ಭಯವಿಲ್ಲ. ನಿನ್ನ ರಕ್ಷಣೆಯೊಂದೇ ನಾನು ಮಾಡಬೇಕಾಗಿರುವ ಕಾರ್ಯವೆಂದು ನಾನು ಈಗ ಭಾವಿಸಿದ್ದೇನೆ. ಏಕೆಂದರೆ ದ್ರೋಣರು ನಿನ್ನನ್ನು ಸೆರೆ ಹಿಡಿಯಲು ಯತ್ನಿಸುತ್ತಿದ್ದಾರೆ.
ಇತೀರಿತಃ ಪ್ರಾಹ ಯುಧಿಷ್ಠಿರಸ್ತಂ
ನ ಜೀವಮಾನೇ ಯುಧಿ ಮಾಂ ಘಟೋತ್ಕಚೇ ।
ಧೃಷ್ಟದ್ಯುಮ್ನೇ ಚಾಸ್ತ್ರವಿದಾಂ ವರಿಷ್ಠೇ
ದ್ರೋಣೋ ವಶಂ ನೇತುಮಿಹ ಪ್ರಭುಃ ಕ್ವಚಿತ್ ॥
ಭೀಮ ಹೀಗೆ ಹೇಳಿದಾಗ ಧರ್ಮರಾಜನೆಂದ, `ಘಟೋತ್ಕಚನೂ, ಅಸ್ತ್ರವೇತ್ತರಲ್ಲಿ ಅಗ್ರಗಣ್ಯನಾದ ಧೃಷ್ಟದ್ಯುಮ್ನನೂ ಬದುಕಿರುವಾಗ ದ್ರೋಣರು ನನ್ನನ್ನು ವಶಪಡಿಸಿಕೊಳ್ಳಲು ಎಂದೂ ಶಕ್ತರಲ್ಲ.
ಯದಿ ಪ್ರಿಯಂ ಕರ್ತುಮಿಹೇಚ್ಛಸಿ ತ್ವಂ
ಮಮ ಪ್ರಯಾಹ್ಯಾಶು ಚ ಪಾರ್ಥಸಾತ್ಯಕೀ ।
ರಕ್ಷಸ್ವ ಸಂಜ್ಞಾಮಪಿ ಸಿಂಹನಾದಾತ್
ಕುರುಷ್ವ ಮೇ ಪಾರ್ಥಶೈನೇಯದೃಷ್ಟೌ ॥
`ನೀನು ನನಗೆ ಇಷ್ಟವಾದುದನ್ನು ಮಾಡಲು ಬಯಸುವಿಯಾದರೆ ಅರ್ಜುನ, ಸಾತ್ಯಕಿಯರ ಬಳಿಗೆ ಹೋಗು. ಅವರನ್ನು ರಕ್ಷಿಸು. ಅವರನ್ನು ಕಂಡೊಡನೆ ಸಿಂಹನಾದದಿಂದ ಅದರ ಬಗ್ಗೆ ನನಗೆ ಸೂಚನೆ ನೀಡು.

ತಥಾ ಹತೇ ಚೈವ ಜಯದ್ರಥೇ ಮೇ
ಕುರುಷ್ವ ಸಂಜ್ಞಾಮಿತಿ ತೇನ ಭೀಮಃ |
ಉಕ್ತಸ್ತು ಹೈಡಿಂಬಮಮುಷ್ಯ ರಕ್ಷಣೇ
ವ್ಯಧಾಚ್ಚ ಸೇನಾಪತಿಮೇವ ಸಮ್ಯಕ್ ॥
`ಹಾಗೇ ಜಯದ್ರಥನು ಹತನಾದಾಗಲೂ ನನಗೆ ಸೂಚನೆ ನೀಡು' ಹೀಗೆ ಧರ್ಮರಾಜ ಹೇಳಿದಾಗ ಭೀಮನು ಅವನ ರಕ್ಷಣೆಯ ಕಾರ್ಯದಲ್ಲಿ ಘಟೋತ್ಕಚನನ್ನೂ, ಸೇನಾಪತಿ ಧೃಷ್ಟದ್ಯುಮ್ನನನ್ನೂ ಚೆನ್ನಾಗಿ ನೇಮಿಸಿದನು.
ಸ ಚಾಽಹ ಸೇನಾಪತಿರತ್ರ ಭೀಮಂ
ಪ್ರಯಾಹಿ ತೌ ಯತ್ರ ಚ ಕೇಶವಾರ್ಜುನೌ |
ನ ಜೀವಮಾನೇ ಮಯಿ ಧರ್ಷಿತುಂ ಕ್ಷಮೋ
ದ್ರೋಣೋ ನೃಪಂ ಮೃತ್ಯುರಹಂ ಚ ತಸ್ಯ ॥
ಸೇನಾಪತಿ ಧೃಷ್ಟದ್ಯುಮ್ನನೂ ಭೀಮನಿಗೆ ಹೇಳಿದ `ನೀನು ಕೃಷ್ಣಾರ್ಜುನರಿರುವಲ್ಲಿಗೆ ಹೋಗು. ನಾನು ಬದುಕಿರುವಾಗ ನನ್ನ ಬಳಿ ಇರುವ ಯುಧಿಷ್ಠಿರನನ್ನು ಬಲಾತ್ಕರಿಸಲು ದ್ರೋಣರು ಸಮರ್ಥರಾಗುವುದಿಲ್ಲ. ಏಕೆಂದರೆ ನಾನು ಅವರಿಗೆ ಮೃತ್ಯು.
ಇತಿ ಬ್ರುವಾಣೇ ಪ್ರಣಿಧಾಯ ಭೀಮಃ
ಪುನಃಪುನಸ್ತಂ ನೃಪತಿಂ ಗದಾಧರಃ |
ಯಯೌ ಪರಾನೀಕಮಧಿಜ್ಯಧನ್ವಾ
ನಿರಂತರಂ ಪ್ರವಮನ್ ಬಾಣಪೂಗಾನ್ ॥
ಹೀಗೆ ಧೃಷ್ಟದ್ಯುಮ್ನನು ಮತ್ತೆ ಮತ್ತೆ ಹೇಳಿದಾಗ ಗದಾಧಾರಿಯಾದ ಭೀಮನು ಧರ್ಮರಾಜನನ್ನು ಅವನ ರಕ್ಷಣೆಯಲ್ಲಿರಿಸಿ ಬಿಲ್ಲಿಗೆ ಹೆದೆಯೇರಿಸಿ ಒಂದೇ ಸಮನೆ ಬಾಣಸಮೂಹಗಳನ್ನು ಚೆಲ್ಲುತ್ತ ಶತ್ರು ಸೈನ್ಯವನ್ನು ಹೊಕ್ಕನು.
ನ್ಯವಾರಯತ್ ತಂ ಶರವರ್ಷಧಾರೋ
ದ್ರೋಣೋ ವಚಶ್ಚೇದಮುವಾಚ ಭೀಮಮ್ |
ಶಿಷ್ಯಸ್ನೇಹಾದ್ ವಾಸವಿಃ ಸಾತ್ಯಕಿಶ್ಚ
ಮಯಾ ಪ್ರಮುಕ್ತೋ ಭೃಶಮಾನತೌ ಮಯಿ ॥
ಭೀಮನನ್ನು ದ್ರೋಣರು ಬಾಣಗಳ ಮಳೆಗರೆಯುತ್ತ ತಡೆದರು. ಭೀಮನಿಗೆ ಈ ಮಾತನ್ನು ಹೇಳಿದರು. `ಶಿಷ್ಯ ವಾತ್ಸಲ್ಯದಿಂದ ನಾನು ಅರ್ಜುನನನ್ನೂ ಸಾತ್ಯಕಿಯನ್ನೂ ಬಿಟ್ಟೆ. ಏಕೆಂದರೆ ಅವರು ನನ್ನಲ್ಲಿ ಬಹಳ ವಿನೀತರಾಗಿದ್ದಾರೆ.
ಸ್ವೀಯಾ ಪ್ರತಿಜ್ಞಾಽಪಿ ಹಿ ಸೈಂಧವಸ್ಯ
ಗುಪ್ತೌ ಮಯಾ ಪಾರ್ಥಕೃತೇ ವಿಸೃಷ್ಟಾ |
ದಾಸ್ಯೇ ನ ತೇ ಮಾರ್ಗಮಹಂ ಕಥಂಚಿತ್
ಪಶ್ಯಾಸ್ತ್ರವೀರ್ಯಂ ಮಮ ದಿವ್ಯಮದ್ಭುತಮ್ ॥
ಸೈಂಧವನ ರಕ್ಷಣೆಯ ವಿಷಯದಲ್ಲಿ ನಾನು ಮಾಡಿದ್ದ ಪ್ರತಿಜ್ಞೆಯನ್ನೂ ಕೂಡ ಅರ್ಜುನನಿಗಾಗಿ ಬಿಟ್ಟುಬಿಟ್ಟೆ. ಆದರೆ ನಿನಗೆ ನಾನು ಯಾವ ರೀತಿಯಿಂದಲೂ ದಾರಿ ಕೊಡಲಾರೆ. ನನ್ನ ಅಲೌಕಿಕ ಅದ್ಭುತ ಅಸ್ತ್ರ ಸಾಮರ್ಥ್ಯವನ್ನು ನೋಡು.
ಇತ್ಯುಕ್ತವಾಕ್ಯಃ ಸ ಗದಾಂ ಸಮಾದದೇ
ಚಿಕ್ಷೇಪ ತಾಂ ದ್ರೋಣರಥಾಯ ಭೀಮಃ |
ಉವಾಚ ಚಾಹಂ ಪಿತೃವನ್ಮಾನಯೇ ತ್ವಾಂ
ಸದಾ ಮೃದುಸತ್ತ್ವಂ ಪ್ರತಿ ನಾನ್ಯಥಾ ಕ್ವಚಿತ್ ॥
ದ್ರೋಣರು ಹೀಗೆ ಹೇಳಿದಾಗ ಭೀಮನು ಗದೆಯನ್ನೆತ್ತಿಕೊಂಡನು. ಅದನ್ನು ದ್ರೋಣರ ರಥಕ್ಕೆ ಎಸೆದು ಈ ಮಾತನ್ನು ಹೇಳಿದನು. `ನಾನು ನಿಮ್ಮನ್ನು ತಂದೆಯಂತೆ ಕಾಣುತ್ತೇನೆ. ಅದರಿಂದ ನಿಮ್ಮೆದುರಿನಲ್ಲಿ ನಾನು ಸದಾ ಮೃದುವಾಗಿ ಹೋರಾಡುತ್ತೇನೆ ಹೊರತು ಎಂದೂ ಕಠಿಣವಾಗಿ ಹೋರಾಡುವುದಿಲ್ಲ.
ಅಮಾರ್ದವೇ ಪಶ್ಯ ಚ ಯಾದೃಶಂ ಬಲಂ
ಮಮೇತಿ ತಸ್ಯಾಽಶು ವಿಚೂರ್ಣಿತೋ ರಥಃ |
ಗದಾಭಿಪಾತೇನ ವೃಕೋದರಸ್ಯ
ಸಸೂತವಾಜಿಧ್ವಜಯನ್ತ್ರಕೂಬರಃ ॥
`ಮೃದುವಾಗಿ ಅಲ್ಲದಿದ್ದರೆ, ನೋಡಿ ನನ್ನ ಬಲ ಯಾವ ರೀತಿಯದು ಎಂದು'. ಹೀಗೆ ಭೀಮನು ಹೇಳಿ ಒಡನೆಯೇ ಗದೆ ಏಟಿನಿಂದ ದ್ರೋಣರ ರಥದ ಸಾರಥಿ, ಕುದುರೆ, ಧ್ವಜ, ಚಕ್ರ, ನೊಗಗಳಿಂದ ಸಹಿತವಾಗಿ ಪುಡಿಪುಡಿಯಾಯಿತು.
ದ್ರೋಣೋ ಗದಾಮಾಪತತೀಂ ನಿರೀಕ್ಷ್ಯ
ತ್ವವಪ್ಲುತೋ ಲಾಘವತೋ ಧರಾತಳೇ |
ತದೈವ ದುರ್ಯೋಧನಯಾಪಿತಂ ರಥಂ
ಪರಂ ಸಮಾಸ್ಥಾಯ ಶರಾನ್ ವವರ್ಷ ಹ ॥
ಭೀಮನ ಗದೆಯು ತನ್ನೆಡೆಗೆ ಬರುತ್ತಿದ್ದುದನ್ನು ಕಂಡೇ ದ್ರೋಣವರು ತ್ವರಿತದಿಂದ ನೆಲದಲ್ಲಿ ಹಾರಿ ನಿಂತಿದ್ದರು. ತಕ್ಷಣವೇ ದುರ್ಯೋಧನನು ಕಳುಹಿಸಿದ ಇನ್ನೊಂದು ರಥವನ್ನೇರಿ ಬಾಣಗಳ ಮಳೆಗರೆದರು.
ಶರೈಸ್ತದೀಯೈಃ ಪರಮಾಸ್ತ್ರಮಂತ್ರಿತೈಃ

ಪ್ರವೃಷ್ಯಮಾಣೋ ಜಗದೀರಣಾತ್ಮಜಃ |
ಶಿರೋ ನಿಧಾಯಾಽಶು ಪುರೋ ವೃಷೋ
ಯಥಾ ತಮಭ್ಯಯಾದೇವ ರಥಾದವಪ್ಲುತಃ ||
ಮಹಾ ಅಸ್ತ್ರಮಂತ್ರಗಳಿಂದ ಅಭಿಮಂತ್ರಿತವಾದ ದ್ರೋಣರ ಬಾಣಗಳ ಮಳೆಯು ತನ್ನ ಮೇಲೆ ಬೀಳುತಿತದ್ದಂತೆಯೇ ಭೀಮನು ಬೇಗನೆ ರಥದಿಂದ ಕೆಳಗೆ ಹಾರಿ ತಲೆಯನ್ನು ಮುಂದೆ ಮಾಡಿಕೊಂಡು ಗೂಳಿಯಂತೆ ದ್ರೋಣರ ಕಡೆಗೆ ಧಾವಿಸಿದನು.
ಮನೋಜವಾದೇವ ತಮಾಪ್ಯ ಭೀಮೋ
ರಥಂ ಗೃಹೀತ್ವಾಽಂಬರ ಆಕ್ಷಿಪತ್ ಕ್ಷಣಾತ್ |
ಶಕ್ತೋಪ್ಯಹಂ ತ್ವಾಂ ನ ನಿಹನ್ಮಿ ಗೌರವಾ
ದಿತ್ಯೇವ ಸುಜ್ಞಾಪಯಿತುಂ ತದಸ್ಯ ||
ನಾನು ಶಕ್ತನಾದರೂ ಗೌರವ ಭಾವನೆಯಿಂದಲೇ ನಿಮ್ಮನ್ನು ಕೊಲ್ಲದೆ ಬಿಡುತ್ತಿದ್ದೇನೆ ಎಂದು ದ್ರೋಣರಿಗೆ ತಿಳಿಸುವುದಕ್ಕಾಗಿ ಭೀಮನು ಮನೋವೇಗದಿಂದ ದ್ರೋಣರ ಬಳಿಗೆ ಬಂದು ಕ್ಷಣದಲ್ಲಿ ರಥವನ್ನೆತ್ತಿ ಆಕಾಶಕ್ಕೆ ಹಾರಿಸಿದನು.
ಸವಾಜಿಸೂತಃ ಸ ರಥಃ ಕ್ಷಿತೌ ಪತನ್
ವಿಚೂರ್ಣಿತೋಽಸ್ಮಾದ್ ಗುರುರಪ್ಯವಪ್ಲುತಃ |
ತದಾ ವಿಶೋಕೋಽಸ್ಯ ರಥಂ ಸಮಾನಯತ್
ತಮಾರುಹದ್ ಭೀಮ ಉದಾರವಿಕ್ರಮಃ ||
ಕುದುರೆ, ಸಾರಥಿ ಸಹಿತವಾಗಿ ದ್ರೋಣರ ರಥ ನೆಲದಲ್ಲಿ ಬಿದ್ದು ಪುಡಿ ಪುಡಿಯಾಯಿತು. ಹಾಗಾಗುವುದರೊಳಗೆ ದ್ರೋಣರು ನೆಲಕ್ಕೆ ಹಾರಿದರು. ಆಗ ವಿಶೋಕ ಭೀಮನ ಬಳಿಗೆ ರಥವನ್ನು ತಂದನು. ಮಹಾಪರಾಕ್ರಮಿಯಾದ ಭೀಮನು ಅದನ್ನೇರಿದನು.
ದ್ರೋಣೋಽಪಿ ದುರ್ಯೋಧನದತ್ತಮನ್ಯಂ
ರಥಂ ಸಮಾಸ್ಥಾಯ ಯುಧಿಷ್ಠಿರಂ ಯಯೌ |
ಗೃಹೀತುಕಾಮಂ ನೃಪತಿಂ ಪ್ರಯಾಂತಂ
ನ್ಯವಾರಯತ್ ಸಂಯತಿ ವಾಹಿನೀಪತಿಃ ||
ದ್ರೋಣರೂ ದುರ್ಯೋಧನನಿತ್ತ ಇನ್ನೊಂದು ರಥವನ್ನೇರಿ ಯುಧಿಷ್ಠಿರನ ಕಡೆಗೆ ಹೊರಟು ಹೋದರು. ಯುಧಿಷ್ಠಿರನನ್ನು ಸೆರೆ ಹಿಡಿಯಲು ಬಯಸಿದ್ದ ಅವರನ್ನು ಯುದ್ಧದಲ್ಲಿ ಧೃಷ್ಟದ್ಯುಮ್ನನು ತಡೆದನು.
ವಿದ್ರಾವಿತಾಂ ದ್ರೋಣಶರೈಃ ಸ್ವಸೇನಾಂ
ಸಂಸ್ಥಾಪ್ಯ ಭೂಯೋ ದ್ರುಪದಾತ್ಮಜಃ ಶರೈಃ |
ದ್ರೋಣಂ ನಿವಾರ್ಯೈವ ಚಮೂಂ ಪರೇಷಾಂ
ವಿದ್ರಾವಯಾಮಾಸ ಚ ತಸ್ಯ ಪಶ್ಯತಃ ||
ಧೃಷ್ಟದ್ಯುಮ್ನನು ದ್ರೋಣರ ಬಾಣಗಳಿಂದ ಓಡಿಸಲ್ಪಡುತ್ತಿದ್ದ ತನ್ನ ಸೈನ್ಯವನ್ನು ತಡೆದು ನಿಲ್ಲಿಸಿ ಪುನಃ ಬಾಣಗಳಿಂದ ದ್ರೋಣರನ್ನು ತಡೆದು ಅವರು ನೋಡುತ್ತಿದ್ದಂತೆಯೇ ಕೌರವರ ಸೈನ್ಯವನ್ನು ಓಡಿಸಿದನು.
ತಯೋರಭೂದ್ ಯುದ್ಧಮತೀವ ರೌದ್ರಂ
ಜಯೈಷಿಣೋಃ ಪಾಂಡವಧಾರ್ತರಾಷ್ಟ್ರಯೋಃ |
ಅತ್ಯದ್ಭುತಂ ಸಂತತಬಾಣವರ್ಷ-
ಮನಾರತಂ ಸುಚಿರಂ ನಿರ್ವಿಶೇಷಮ್ ||
ಪಾಂಡವ-ಕೌರವರ ಜಯೇಚ್ಛುಗಳಾದ ಧೃಷ್ಟದ್ಯುಮ್ನ-ದ್ರೋಣರಿಗೆ ಅತ್ಯಂತ ಭೀಕರವಾದ ಯುದ್ಧವು ನಡೆಯಿತು. ಅದು ಅತ್ಯಂತ ಅದ್ಭುತವಾಗಿತ್ತು. ಸತತವಾದ ಬಾಣಗಳ ಮಳೆಯಿಂದ ಕೂಡಿದ್ದು ತಡೆಯೇ ಇಲ್ಲದೆ ಬಹುಕಾಲ ನಡೆಯಿತು. ಯಾರು ಹೆಚ್ಚು ಯಾರು ಕಡಿಮೆ ಎನ್ನಲಾಗದಂತಿತ್ತು.
ತತಃ ಪ್ರಾಯಾದ್ ಭೀಮಸೇನೋಽಮಿತೌಜಾ
ಮೃದ್ನನ್ ಶರೈಃ ಕೌರವರಾಜಸೇನಾಮ್ |
ವಿಂದಾನುವಿಂದಪ್ರಮುಖಾ ಧಾರ್ತರಾಷ್ಟ್ರಾ-
ಸ್ತಮಾಸೇದುರ್ದ್ವಾದಶ ವೀರಮುಖ್ಯಾಃ ||
ಆಗ ಅಮಿತ ಪರಾಕ್ರಮಿಯಾದ ಭೀಮಸೇನ ಬಾಣಗಳಿಂದ ದುರ್ಯೋಧನನ ಸೈನ್ಯವನ್ನು ನಾಶಪಡಿಸುತ್ತ ಮುಂದೆ ನಡೆದನು. ಅವನನ್ನು ವಿಂದ ಅನುವಿಂದರನ್ನು ಮುಂದೆ ಮಾಡಿಕೊಂಡು ವೀರರಲ್ಲಿ ಮುಖ್ಯರಾದ ಹನ್ನೆರಡು ಮಂದಿ ಧೃತರಾಷ್ಟ್ರ ಪುತ್ರರು ಎದುರಿಸಿದರು.
ವಿದ್ಧಃ ಶರೈಸ್ತೈರ್ಬಹುಭಿರ್ವೃಕೋದರಃ
ಶಿರಾಂಸಿ ತೇಷಾಂ ಯುಗಪಚ್ಚಕರ್ತ ||
ಹತೇಷು ತೇಷು ಪ್ರವರೇಷು ಧನ್ವಿನಾಂ
ಸತ್ಯವ್ರತಃ ಪುರುಮಿತ್ರೋ ಜಯಶ್ಚ |
ವೃಂದಾರಕಃ ಪೌರವಶ್ಚೇತ್ಯಮಾತ್ಯಾಃ
ಸಮಾಸೇದುರ್ಧಾರ್ತರಾಷ್ಟ್ರಸ್ಯ ಭೀಮಮ್ ||
ಅವರು ಬಹುಬಾಣಗಳಿಂದ ಹೊಡೆಯುತ್ತಿದ್ದಂತೆಯೇ ಭೀಮನು ಅವರೆಲ್ಲರ ತಲೆಗಳನ್ನೂ ಒಮ್ಮೆಲೆ ಕತ್ತರಿಸಿದನು. ಬಿಲ್ಲುಗಾರರಲ್ಲಿ

ಶ್ರೇಷ್ಠರಾದ ಅವರು ಸತ್ರಾಗ ಸತ್ಯವ್ರತ, ಪುರಮಿತ್ರ, ಜಯ, ವೃಂದಾರಕ, ಪೌರವ ಎಂಬ ದುರ್ಯೋಧನನ ಮಂತ್ರಿಗಳು ಭೀಮನನ್ನು ಎದುರಿಸಿದರು.

ಸ ತೈಃ ಪೃಷತ್ಕೈರವಕೀರ್ಯಮಾಣಃ
ಶಿತಾನ್ ವಿಪಾಠಾನ್ ಯುಗಪತ್ ಸಮಾದದೇ |
ಜಹಾರ ತೈರೇವ ಶಿರಾಂಸಿ ತೇಷಾಂ
ಹತೇಷು ತೇಷ್ವೇವ ಪರೇ ಪ್ರದುದ್ರುವುಃ ॥

ಅವರು ಬಾಣಗಳಿಂದ ಭೀಮನನ್ನು ಮುಚ್ಚುತ್ತಿದ್ದಂತೆಯೇ ಅವನು ಹರಿತವಾದ ಬಾಣಗಳನ್ನು ಒಮ್ಮೆಲೆ ಹೂಡಿದನು. ಅವುಗಳಿಂದಲೇ ಅವರ ತಲೆಗಳನ್ನು ಹಾರಿಸಿದನು. ಅವರು ಹತರಾದಾಗ ಉಳಿದವರು ಪಲಾಯನಗೈದರು.

ಸ ಸಿಂಹವತ್ ಕ್ಷುದ್ರಮೃಗಾನ್ ಸಮಂತತೋ
ವಿದ್ರಾಪ್ಯ ಶತ್ರೂನ್ ಹೃದಿಕಾತ್ಮಜಂ ರಣೇ |
ಅಭ್ಯಾಗಮತ್ ತೇನ ನಿವಾರಿತಃ ಶರೈಃ
ಕ್ಷಣೇನ ಚಕ್ರೇ ವಿರಥಾಶ್ವಸೂತಮ್ ॥

ಸಿಂಹವು ಕ್ಷುದ್ರ ಮೃಗಗಳನ್ನು ಓಡಿಸಿದಂತೆ ಭೀಮನು ಶತ್ರುಗಳನ್ನು ಎಲ್ಲ ಕಡೆಗಳಲ್ಲಿಯೂ ಓಡಿಸಿ ಯುದ್ಧರಂಗದಲ್ಲಿ ಕೃತವರ್ಮನ ಕಡೆಗೆ ಮುನ್ನುಗ್ಗಿದನು. ಕೃತವರ್ಮನು ಬಾಣಗಳಿಂದ ತಡೆದಾಗ ಅವನನ್ನು ಕ್ಷಣದಲ್ಲಿ ರಥ, ಅಶ್ವ, ಸಾರಥಿಗಳಿಂದ ರಹಿತನನ್ನಾಗಿ ಮಾಡಿದನು.

ಸ ಗಾಢವಿದ್ಧಸ್ತು ವೃಕೋದರೇಣ
ರಣಂ ವಿಸೃಜ್ಯಾಪಯಯೌ ಕ್ಷಣೇನ |
ವಿಜಿತ್ಯ ಹಾರ್ದಿಕ್ಯಮಥಾಽಶು ಭೀಮೋ
ವಿದ್ರಾವಯಾಮಾಸ ವರೂಥಿನೀಂ ತಾಮ್ |
ಸಂಪ್ರೇಷಯನ್ ಸರ್ವನರಾಶ್ವಕುಂಜರಾನ್
ಯಮಾಯ ಯಾತೋ ಹರಿಪಾರ್ಥಪಾರ್ಶ್ವಮ್ ॥

ಕೃತವರ್ಮನು ಭೀಮನಿಂದ ಗಾಢವಾಗಿ ಹೊಡೆಸಿಕೊಂಡು ಕ್ಷಣದಲ್ಲಿ ಯುದ್ಧವನ್ನು ತೊರೆದು ಪಲಾಯನ ಮಾಡಿದನು. ಭೀಮನು ವೇಗನೆ ಕೃತವರ್ಮನನ್ನು ಗೆದ್ದು ಒಡನೆ ಆ ಸೈನ್ಯವನ್ನು ಓಡಿಸಿದನು. ಎಲ್ಲ ಪದಾತಿಗಳನ್ನೂ, ಕುದುರೆಗಳನ್ನೂ, ಆನೆಗಳನ್ನೂ ಯಮನಿಗೆ ಕಳಿಸುತ್ತ ಕೃಷ್ಣಾರ್ಜುನರ ಬಳಿಗೆ ನಡೆದನು.

ದೃಷ್ಟ್ವೈವ ಕೃಷ್ಣವಿಜಯೌ ಪರಮಪ್ರಹೃಷ್ಟ-
ಸ್ತಾಭ್ಯಾಂ ನಿರೀಕ್ಷಿತ ಉತ ಪ್ರತಿಭಾಷಿತಶ್ಚ |
ಸಂಜ್ಞಾಂ ನೃಪಸ್ಯ ಸ ದದಾವಪಿ ಸಿಂಹನಾದಾನ್
ಶ್ರುತ್ವಾ ಪರಾಂ ಮುದಮವಾಪ ಸ ಚಾಗ್ರ್ಯಬುದ್ಧಿಃ ॥

ಭೀಮಸೇನನು ಕೃಷ್ಣಾರ್ಜುನರನ್ನು ಕಂಡೊಡನೆ ಬಹಳ ಆನಂದಿತನಾದನು. ಅವರೂ ಭೀಮಸೇನನನ್ನು ಕಂಡರು. ಸಂಭಾಷಣೆ ನಡೆಸಿದರು. ಈ ಬಗ್ಗೆ ಸಿಂಹನಾದದಿಂದ ಧರ್ಮರಾಜನಿಗೆ ಸೂಚನೆಯನ್ನು ಭೀಮನು ನೀಡಿದನು. ಉತ್ತಮ ಬುದ್ಧಿಶಾಲಿಯಾದ ಧರ್ಮರಾಜನು ಅದನ್ನು ಕೇಳಿ ಬಹಳ ಆನಂದ ಹೊಂದಿದನು.

ಭೀಮಸ್ಯ ನಾನದತ ಏವ ಮಹಾಸ್ವನೇನ
ವಿಣ್ಮೂತ್ರಶೋಣಿತಮಥೋ ಮೃತಿಮಾಪುರೇಕೇ |
ಭೀತೇಷು ಸರ್ವನೃಪತಿಷ್ವಮುಮಾಪ ತೂರ್ಣಂ
ಕರ್ಣೋ ವಿಕರ್ಣಮುಖರಾ ಅಪಿ ಧಾರ್ತರಾಷ್ಟ್ರಾಃ ॥

ಭೀಮಸೇನನು ಸಿಂಹನಾದ ಮಾಡುತ್ತಿದ್ದಂತೆ ಆ ಮಹಾನಾದದಿಂದ ಹಲವು ಕೌರವ ಸೈನಿಕರು ಮಲಮೂತ್ರ ವಿಸರ್ಜನೆ ಮಾಡಿದರು. ರಕ್ತಕಾರಿದರು. ಮರಣವನ್ನೂ ಹೊಂದಿದರು. ಎಲ್ಲ ರಾಜರೂ ಭಯಗೊಂಡಿದ್ದಾಗ ಭೀಮನ ಎದುರಿಗೆ ಬೇಗನೆ ಕರ್ಣ ಬಂದನು. ವಿಕರ್ಣ ಮುಂತಾದ ಧೃತರಾಷ್ಟ್ರ ಪುತ್ರರೂ ಬಂದರು.

ಹತ್ವಾ ವಿಕರ್ಣಮುತ ತತ್ರ ಚ ಚಿತ್ರಸೇನಂ
ಸಂಚೂರ್ಣಿತಂ ಚ ವಿದಧೇ ರಥಮರ್ಕಸೂನೋಃ |
ಘೋರೈಃ ಶರೈಃ ಪುನರಪಿ ಸ್ಮ ಸಮರ್ದ್ಯಮಾನಃ ಕರ್ಣೋಽಪಯಾನಮಕರೋದ್ ದ್ರುತಮೇವ ಭೀಮಾತ್ ॥

ಭೀಮಸೇನನು ಆ ಯುದ್ಧದಲ್ಲಿ ವಿಕರ್ಣನನ್ನೂ, ಚಿತ್ರಸೇನನನ್ನೂ ಕೊಂದು ಕರ್ಣನ ರಥವನ್ನು ಪುಡಿಪುಡಿ ಮಾಡಿದನು. ಕರ್ಣನು ಭೀಮನ ಭಯಂಕರ ಬಾಣಗಳಿಂದ ಮತ್ತೆ ಮತ್ತೆ ಜರ್ಜರಿತನಾಗಿ ಭೀಮನ ಎದುರಿನಿಂದ ಕೂಡಲೇ ಪಲಾಯನವನ್ನೇ ಮಾಡಿದನು.

ಆಶ್ವಾಸ್ಯ ಚೈವ ಸುಚಿರಂ ಪುನರೇವ ಭೀಮಂ
ಯುದ್ಧಾಯ ಯಾತಿ ಧೃತರಾಷ್ಟ್ರಸುತೈಸ್ತಥಾಽನ್ಯೈಃ |
ತಾಂಶ್ಚೈವ ತತ್ರ ವಿನಿಹತ್ಯ ತಥೈವ ಕರ್ಣೋ
ವ್ಯಶ್ವಾಯುಧಃ ಕೃತ ಉತಾಪಯಯೌ ಕ್ಷಣೇನ ॥

ಕರ್ಣನು ದೀರ್ಘಕಾಲ ವಿಶ್ರಾಂತಿ ಪಡೆದು ಧೃತರಾಷ್ಟ್ರನ ಇತರ ಮಕ್ಕಳನ್ನು ಕೂಡಿಕೊಂಡು ಪುನಃ ಭೀಮನೊಡನೆ ಯುದ್ಧಕ್ಕೆ ಬಂದನು. ಭೀಮನು ಧೃತರಾಷ್ಟ್ರನ ಮಕ್ಕಳನ್ನು ಕೊಂದು ಹಿಂದಿನಂತೆಯೇ ಕರ್ಣನ ಕುದುರೆಗಳನ್ನೂ, ಆಯುಧಗಳನ್ನೂ

ನಾಶಪಡಿಸಿದನು. ಕರ್ಣ ಕ್ಷಣದಲ್ಲಿ ಪಲಾಯನ ಮಾಡಿದನು.
ವಿಕರ್ಣಚಿತ್ರಸೇನಾದ್ಯಾ ಏವಂ ವೀರತಮಾಃ ಸುತಾಃ |
ಕರ್ಣಸ್ಯ ಪಶ್ಯತೋ ಭೀಮಬಾಣಕೃತ್ತಶಿರೋಧರಾಃ ॥
ನಿಪೇತುರ್ಧೃತರಾಷ್ಟ್ರಸ್ಯ ರಥೇಭ್ಯಃ ಪೃಥಿವೀತಳೇ |
ತ್ರಯೋವಿಂಶತಿರೇವಾತ್ರ ಕರ್ಣಸಾಹಾಯ್ಯಕಾರಿಣಃ ॥
ಹೀಗೆ ಕರ್ಣ ನೋಡುತ್ತಿದ್ದಂತೆಯೇ ಕರ್ಣನಿಗೆ ಸಹಾಯ ಮಾಡಲು ಬಂದಿದ್ದ ವಿಕರ್ಣ, ಚಿತ್ರಸೇನ ಮುಂತಾದ ಇಪ್ಪತ್ತಮೂರು ಮಂದಿ ಮಹಾವೀರರಾದ ಧೃತರಾಷ್ಟ್ರ ಪುತ್ರರೂ ಕೂಡ ಭೀಮನ ಬಾಣಗಳಿಂದ ಶಿರಶ್ಛೇದ ಹೊಂದಿ ರಥಗಳಿಂದ ನೆಲದಲ್ಲಿ ಬಿದ್ದರು.
ಏಕವಿಂಶತಿವಾರಂ ಚ ವ್ಯಶ್ವಸೂತರಥಧ್ವಜಃ |
ಗಾಢಮಭ್ಯರ್ಹಿತಸ್ತೀಕ್ಷ್ಣೈಃ ಶರೈರ್ಭೀಮೇನ ಸಂಯುಗೇ ॥
ಪ್ರಾಣಸಂಶಯಮಾಪನ್ನಃ ಸರ್ವಲೋಕಸ್ಯ ಪಶ್ಯತಃ |
ರಣಂ ತ್ಯಕತ್ವ ಪ್ರದುದ್ರಾವ ರುದನ್ ದುಃಖಾತ್ ಪುನಃಪುನಃ ॥
ಇಪ್ಪತ್ತೊಂದು ಬಾರಿ ಯುದ್ಧದಲ್ಲಿ ಭೀಮನಿಂದ ತೀಕ್ಷ್ಣವಾದ ಬಾಣಗಳಿಂದ ಗಾಢವಾಗಿ ಪೀಡಿತನಾದ ಕರ್ಣನು ಕುದುರೆ, ಸಾರಥಿ, ರಥ, ಧ್ವಜಗಳನ್ನು ಕಳೆದುಕೊಂಡು ಪ್ರಾಣಕ್ಕೇ ಅಪಾಯ ಬಂದಾಗ ಎಲ್ಲ ಜನ ನೋಡುತ್ತಿದ್ದಂತೆಯೇ ದುಃಖದಿಂದ ಮತ್ತೆ ಮತ್ತೆ ಅಳುತ್ತ ಯುದ್ಧವನ್ನು ಬಿಟ್ಟು ಓಡಿಹೋದನು.
ದ್ವಾವಿಂಶತಿಮಯುದ್ಧೇ ತು ರಾಮದತ್ತಂ ಸುಭಾಸ್ವರಮ್ |
ಅಭೇದ್ಯಂ ರಥಮಾರುಹ್ಯ ವಿಜಯಂ ಧನುರೇವ ಚ ॥
ತದ್ದತ್ತಮೇವ ಸಂಗೃಹ್ಯ ತೂಣೀ ಚಾಕ್ಷಯಸಾಯಕೌ |
ಆಸಸಾದ ರಣೇ ಭೀಮಂ ಕರ್ಣೋ ವೈಕರ್ತನೋ ವೃಷಾ ॥
ಇಪ್ಪತ್ತೆರಡನೆ ಯುದ್ಧದಲ್ಲಿ ಕರ್ಣನು ಚೆನ್ನಾಗಿ ಹೊಳೆಯುವ ಅಭೇದ್ಯವಾದ ಪರಶುರಾಮನಿತ್ತ ರಥವನ್ನೇರಿ ಪರಶುರಾಮನು ನೀಡಿದ್ದ ವಿಜಯ ಎಂಬ ಬಿಲ್ಲನ್ನೂ, ಅಕ್ಷಯ ಬಾಣಗಳ ಬತ್ತಳಿಕೆಯನ್ನೂ ಹಿಡಿದು ಯುದ್ಧರಂಗದಲ್ಲಿ ಕೋಪದಿಂದ ಭೀಮನನ್ನು ಎದುರಿಸಿದನು.
ಸುಘೋರ ಆಸೀತ್ ಸ ತಯೋರ್ವಿಮರ್ದೋ
    ಭೀಮಸ್ಯ ಕರ್ಣಸ್ಯ ಚ ದೀರ್ಘಕಾಲಮ್ |
ಆಕಾಶಮಾಚ್ಛಾದಯತೋಃ ಶರೌಘೈಃ
    ಪರಸ್ಪರಂ ಚೈವ ಸುರಕ್ತನೇತ್ರಯೋಃ ॥
ಬಲು ಕೆಂಪಾದ ಕಣ್ಣುಗಳುಳ್ಳ ಆ ಭೀಮ-ಕರ್ಣರೊಳಗೆ ಪರಸ್ಪರವಾಗಿ ದೀರ್ಘಕಾಲದವರೆಗೆ ಬಲು ಘೋರವಾದ ಕಾಳಗ ನಡೆಯಿತು.ಅವರು ಬಾಣ ಸಮೂಹಗಳಿಂದ ಆಕಾಶವನ್ನು ಮುಚ್ಚಿದರು.
ತತೋ ಭೀಮೋ ಮಹಾಬಾಹುಃ ಸಹಜಾಭ್ಯಾಂ ಚ ಸಂಯುತಮ್ |
ತ್ವಾಂ ತು ಕುಂಡವರ್ಮಭ್ಯಾಂ ಶಕ್ನುಯಾಂ ಹಂತುಮಂಜಸಾ ॥
ಇತಿ ಜ್ಞಾಪಯಿತುಂ ತಸ್ಯ ಕುಂಡಲೇ ಕವಚಂ ತಥಾ |
ಶರೈರುತ್ಕೃತ್ಯ ಸಮರೇ ಪಾತಯಾಮಾಸ ಭೂತಳೇ ॥
ಆಗ ಮಹಾಬಾಹುವಾದ ಭೀಮನು `ಕರ್ಣನೇ, ನೀನು ಸಹಜವಾದ ಕುಂಡಲ ಕವಚಗಳಿಂದ ಯುಕ್ತನಾಗಿದ್ದರೂ ನಿನ್ನನ್ನು ಕೊಲ್ಲಲು ನಾನು ಬಲು ಸಮರ್ಥನಾಗಿದ್ದೇನೆ' ಎಂದು ತಿಳಿಸುವುದಕ್ಕಾಗಿ ಯುದ್ಧದಲ್ಲಿ ಅವನ ಕುಂಡಲಗಳನ್ನೂ, ಕವಚವನ್ನೂ ಬಾಣಗಳಿಂದ ಕತ್ತರಿಸಿ ನೆಲದಲ್ಲಿ ಬೀಳಿಸಿದನು.
ಏವಂ ತಾನ್ಯಪಕೃಷ್ಯಾಹಂ ಹನ್ಯಾಂ ತ್ವಾಮಿತಿ ವೇದಯನ್ |
ಪುನಶ್ಚ ಬಹುಭಿಸ್ತೀಕ್ಷ್ಣೈಃ ಶರೈರೇನಂ ಸಮಾರ್ದಯತ್ ॥
ನಿನ್ನ ಆ ಸಹಜ ಕವಚ-ಕುಂಡಲಗಳನ್ನೂ ಕೂಡ ಕಿತ್ತು ಹೀಗೆಯೇ ನಿನ್ನನ್ನು ಕೊಲ್ಲಬಲ್ಲೆ ಎಂದು ತಿಳಿಸಲು ಭೀಮನು ಪುನಃ ತೀಕ್ಷ್ಣವಾದ ಅನೇಕ ಬಾಣಗಳಿಂದ ಕರ್ಣನನ್ನು ಪೀಡಿಸಿದನು.
ತತಸ್ತು ಭೀಮಸ್ಯ ಬಭೂವ ಬುದ್ಧಿ-
    ರಸ್ಪರ್ಧಿನಃ ಸರ್ವಜಯೋ ಹಿ ದತ್ತಃ |
ಅಮುಷ್ಯ ರಾಮೇಣ ನ ಚ ಸ್ಪರ್ಧಾऽಯಂ
    ಕರ್ಣೋ ಮಯಾ ಯುದ್ಧ್ಯತಿ ಕೃಚ್ಛ್ರಗೋ ಹ್ಯಯಮ್ ॥
ಬಳಿಕ ಭೀಮನಿಗೆ ಹೀಗೆ ಆಲೋಚನೆಯುಂಟಾಯಿತು. `ಕರ್ಣನಿಗೆ ಪರಶುರಾಮ ವರನೀಡಿದ್ದಾರೆ. ಸ್ಪರ್ಧೆ ಮಾಡದಿದ್ದರೆ ಎಲ್ಲರನ್ನೂ ಗೆಲ್ಲುತ್ತಿ' ಎಂದು. ಈಗ ಕರ್ಣನು ಸ್ಪರ್ಧೆಯಿಂದ ನನ್ನೊಡನೆ ಯುದ್ಧ ಮಾಡುತ್ತಿಲ್ಲ. ಏಕೆಂದರೆ ಅವನು ಪ್ರಾಣಾಪಾಯಕ್ಕೆ ಒಳಗಾಗಿದ್ದಾನೆ.
ತಥಾऽಪಿ ಮೇ ಭಗವಾನತ್ಯನುಗ್ರಹಾ-
    ಜ್ಜಯಂ ದದಾತ್ಯಾತ್ಮವಚೋಪಹಾಯ |
ಮಯಾ ತು ಮಾನ್ಯಂ ವಚನಂ ಹರೇಃ ಸದಾ
    ತಸ್ಮಾದ್ ದಾಸ್ಯೇ ವಿವರಂ ತ್ವದ್ಯ ಶತ್ರೋಃ ॥
ಆದರೂ ಭಗವಾನ್ ಪರಶುರಾಮರು ನನ್ನ ಮೇಲಿನ ಪರಮಾನುಗ್ರಹದಿಂದ ತನ್ನ ವರವನ್ನೂ ಬಿಟ್ಟುಕೊಟ್ಟು ನನಗೆ ಜಯ

ನೀಡುತ್ತಾರೆ. ಆದರೂ ನಾನು ಹರಿಯ ವರವನ್ನು ಸದಾ ಗೌರವಿಸಲೇಬೇಕು. ಅದರಿಂದ ನಾನು ಈಗ ಕರ್ಣನಿಗೆ ಅವಕಾಶ ನೀಡುವೆನು.
ಏವಂ ಸ್ಮೃತ್ವಾ ತೇನ ರಂಧ್ರೇ ಪ್ರದತ್ತೇ
ಕರ್ಣೋಽಸ್ತ್ರವೀರ್ಯೇಣ ಧನುರ್ನ್ಯಕೃಂತತ್ ।
ರಶ್ಮೀನ್ ಹಯಾನಾಂ ಚ ತತೋ ರಥಂ ಸ
ತತ್ಯಾಜ ನೈಜಂ ಬಲಮೇವ ವೇದಯನ್ ॥
ಹೀಗೆ ಆಲೋಚಿಸಿ ಭೀಮನು ಅವಕಾಶ ಕೊಟ್ಟೊಡನೆ ಕರ್ಣ ತನ್ನ ಅಸ್ತ್ರ ಸಾಮರ್ಥ್ಯದಿಂದ ಭೀಮನ ಬಿಲ್ಲನ್ನು ಕತ್ತರಿಸಿದನು. ಕುದುರೆಗಳ ಹಗ್ಗವನ್ನೂ ತುಂಡರಿಸಿದನು. ಆಗ ಭೀಮನು ತನ್ನ ನೈಜವಾದ ಬಲವನ್ನು ತೋರುವುದಕ್ಕಾಗಿ ರಥವನ್ನು ಬಿಟ್ಟುಬಿಟ್ಟನು.
ನ ಮೇ ರಥಾದ್ಯೈರ್ಧನುಷಾಽಪಿ ಕಾರ್ಯ-
ಮಿತ್ಯೇವ ಸಂಜ್ಞಾಪಯಿತುಂ ವೃಕೋದರಃ ।
ಖಮುತ್ಪಪಾತೋತ್ತಮವೀರ್ಯತೇಜಾ
ರಥಂ ಚ ಕರ್ಣಸ್ಯ ಸಮಾಸ್ಥಿತಃ ಕ್ಷಣಾತ್ ॥
ರಥ ಮುಂತಾದವುಗಳಿಂದಾಗಿ ಬಿಲ್ಲಿನಿಂದಲಾಗಲಿ ನಾನು ಯಾವುದೇ ಕಾರ್ಯ ಸಾಧಿಸಬೇಕಾಗಿಲ್ಲ ಎಂದು ತಿಳಿಸಲು ಉತ್ತಮ ವೀರ್ಯ ಪರಾಕ್ರಮ ಉಳ್ಳ ಭೀಮನು ಆಕಾಶಕ್ಕೆ ನೆಗೆದನು. ಕ್ಷಣದಲ್ಲಿ ಕಣರ್ನ ರಥದ ಮೇಲೆಯೇ ಬಂದು ನಿಂತನು.
ಭೀತಸ್ತು ಕರ್ಣೋ ರಥಕೂಬರೇ ತದಾ
ವ್ಯಲೀಯತಾತಃ ಸ ವೃಕೋದರೋ ರಥಾತ್ ।
ಅವಪ್ಲುತೋ ಜ್ಞಾಪಯಿತುಂ ಸ್ವಶಕ್ತಿಂ
ನಿರಾಯುಧತ್ವೇಪ್ಯರಿನಿಗ್ರಹಾದೌ ॥
ಕರ್ಣನು ಭೀತನಾಗಿ ರಥದ ನೊಗದ ಕೆಳಗೆ ಅಡಗಿ ನಿಂತನು. ಭೀಮನು ತಾನು ನಿರಾಯುಧನಾದರೂ ಶತ್ರುನಿಗ್ರಹಾದಿಗಳಲ್ಲಿ ತನಗೆ ಶಕ್ತಿ ಇದೆ ಎಂಬುದನ್ನು ತೋರುವುದಕ್ಕಾಗಿ ಕರ್ಣನ ರಥವೇರಿದ್ದನು. ಈಗ ರಥದಿಂದ ಕೆಳಗೆ ಹಾರಿದನು.
ನೈಚ್ಛದ್ ಗೃಹೀತುಂ ವಿನಿಹಂತುಮೇವ ವಾ
ರಥಂ ಧನುರ್ವಾಽಸ್ಯ ರಣೇಪಹರ್ತುಮ್ ।
ದ್ರೋಣಸ್ಯ ಯದ್ವತ್ ಪೂರ್ವಮತೀವ ಶಕ್ತೋಽ
ಪ್ಯಮಾನಯದ್ ರಾಮವಚೋಽಸ್ಯ ಭಕ್ತ್ಯಾ ॥
ಭೀಮನು ಅತ್ಯಂತ ಶಕ್ತನಾದರೂ ಶಕ್ತಿಯನ್ನು ಮರೆಸುವುದಕ್ಕಾಗಿಯೇ ಕರ್ಣನನ್ನು ಸೆರೆಹಿಡಿಯುವುದಕ್ಕಾಗಲಿ ಕೊಲ್ಲುವುದಕ್ಕಾಗಲಿ ಬಯಸಲಿಲ್ಲ. ರಥ ಆಯುಧ ರಹಿತನಾದರೂ ರಥವನ್ನಾಗಲಿ ಧನುಸ್ಸನ್ನಾಗಲಿ ಅಪಹರಿಸುವುದಕ್ಕೆ ಬಯಸಲಿಲ್ಲ. ಅತ್ಯಂತ ಶಕ್ತನಾದರೂ ಹಿಂದೆ ದ್ರೋಣರ ವಿಷಯದಲ್ಲಿ ಹೇಗೋ ಹಾಗೆ ಕರ್ಣನ ವಿಷಯದಲ್ಲಿಯೂ ಪರಶುರಾಮನ ವಚನವನ್ನು ಭಕ್ತಿಯಿಂದ ಮಾನಿಸಿದನು.
ಸತ್ಯಾಂ ಕರ್ತುಂ ವಾಸವೇಶ್ಚ ಪ್ರತಿಜ್ಞಾಂ
ಸಮ್ಮಾನಯನ್ ವೈಷ್ಣವತ್ವಾಚ್ಚ ಕರ್ಣಮ್ ।
ದಾತುಂ ರಂಧ್ರಂ ಸೂರ್ಯಜಸ್ಯ ಪ್ರಯಾತಃ
ಶರಕ್ಷೇಪಾರ್ಥಂ ದೂರಮತಿಷ್ಠದತ್ರ ॥
ಅರ್ಜುನನ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡುವುದಕ್ಕೂ, ಕರ್ಣ ವಿಷ್ಣುಭಕ್ತನಾದ್ದರಿಂದ ಅವನನ್ನು ಮಾನಿಸುವುದಕ್ಕೂ ಭೀಮನು ಕರ್ಣನನ್ನು ಕೊಲ್ಲದೆ ಬಿಟ್ಟನು. ಅವನಿಗೆ ತನ್ನ ಮೇಲೆ ಬಾಣಬಿಡಲು ಅವಕಾಶ ನೀಡುವುದಕ್ಕಾಗಿ ರಥದಿಂದ ಸ್ವಲ್ಪ ದೂರಕ್ಕೆ ಹೋಗಿ ಅಲ್ಲಿ ನಿಂತನು.
ತತಃ ಕರ್ಣೋ ದೂರಗತಂ ವೃಕೋದರಂ
ಸಮ್ಮಾನಯಂತಂ ರಾಮವಾಕ್ಯಂ ವಿಜಾನನ್ ।
ಶರೈರವಿದ್ಯತ್ ಸ ಚ ತಾನವಾರಯದ್
ಗಜೈರ್ಮೃತೈಸ್ತಾಂಶ್ಚ ಚಕರ್ತ ಕರ್ಣಃ ॥
ಭೀಮನು ಪರಶುರಾಮರ ವರವನ್ನು ಮಾನಿಸುವುದಕ್ಕಾಗಿ ದೂರದಲ್ಲಿ ನಿಂತಿದ್ದಾನೆ ಎಂಬುದನ್ನು ಕಣರ್ನು ತಿಳಿದು ಅವನನ್ನು ಬಾಣಗಳಿಂದ ಹೊಡೆದನು. ಭೀಮನು ಅರ್ಜುನನ ಬಾಣಗಳಿಂದ ಸತ್ತಿದ್ದ ಆನೆಗಳನ್ನು ಎತ್ತಿ ಎಸೆದು ಆ ಬಾಣಗಳನ್ನು ತಡೆದನು. ಆ ಸತ್ತ ಆನೆಗಳನ್ನು ಕರ್ಣನು ಕತ್ತರಿಸಿ ಹಾಕಿದನು.
ವ್ಯಸೂನ್ ಗಜಾನ್ ಪ್ರಕ್ಷಿಪಂತಂ ಸಮೇತ್ಯ
ಸಂಸ್ಪೃಶ್ಯ ಚಾಪೇನ ವಚಶ್ಚ ದುಷ್ಟಮ್ ।
ಸಂಶ್ರಾವಯಾಮಾಸ ಸುಯೋಧನಸ್ಯ
ಪ್ರೀತ್ಯೈ ಪ್ರಜಾನನ್ನಪಿ ತಸ್ಯ ವೀರ್ಯಮ್ ॥
ಸತ್ತ ಆನೆಗಳನ್ನು ಎಸೆಯುತ್ತಿದ್ದ ಭೀಮನ ಬಳಿಗೆ ಕರ್ಣನು ಬಂದು ಬಿಲ್ಲಿನ ಕೊನೆಯಿಂದ ತಿವಿದು ಅವನ ಪರಾಕ್ರಮವನ್ನು ತಿಳಿದೂ ದುರ್ಯೋಧನನ ಸಂತೋಷಕ್ಕಾಗಿ ಕೆಟ್ಟ ಮಾತನ್ನಾಡಿದನು.
ಸಂಶ್ರಾವಯಂತಂ ವಚನಾನಿ ರೂಕ್ಷಾ-
ಣ್ಯಪಾಹನದ್ ಬಾಣವರೈಸ್ತದಾಽರ್ಜುನಃ ।
ಸ ವರ್ಮಹೀನಃ ಪಾರ್ಥಬಾಣಾಭಿತಪ್ತೋ

ವ್ಯಪಾಗಮದ್ ಭೀಮ ಆಪಾತ್ಮಯಾನಮ್ ॥
ಭೀಮನ ಮುಂದೆ ಕೆಟ್ಟ ಮಾತುಗಳನ್ನಾಡುತ್ತಿದ್ದ ಕರ್ಣನನ್ನು ಅರ್ಜುನನು ಬಾಣ ಸಮೂಹಗಳಿಂದ ಹೊಡೆದನು. ಆಗ ಕವಚರಹಿತನಾಗಿದ್ದ ಕರ್ಣನು ಅರ್ಜುನನ ಬಾಣಗಳಿಂದ ಬಹಳ ನೋವನ್ನು ಅನುಭವಿಸಿ ಪಲಾಯನ ಮಾಡಿದನು. ಭೀಮನು ತನ್ನ ರಥವನ್ನೇರಿದನು.
ಕರ್ಣೋ ಭೀಮೇ ವಾಸವೀಂ ನೈವ ಶಕ್ತಿಂ
ವಿಮೋಕ್ತುಮೈಚ್ಛನ್ನೈವ ಬೀಭತ್ಸುತೋಽನ್ಯಾನ್ |
ಹನ್ಯಾಮಿತಿ ಪ್ರಾಹ ಯತಃ ಸ ಕುಂತ್ಯೈ
ಯದ್ಯಪ್ಯವಧ್ಯಃ ಸ ತಯಾಽಪಿ ಭೀಮಃ ॥
ಭೀಮನನ್ನು ಶಕ್ತ್ಯಾಯುಧದಿಂದಲೂ ಕೊಲ್ಲಲು ಸಾಧ್ಯವಿರಲಿಲ್ಲ. ಆದರೂ ಅರ್ಜುನನನ್ನು ಹೊರತು ಬೇರೆ ಪಾಂಡವರನ್ನು ಕೊಲ್ಲುವುದಿಲ್ಲವೆಂದು ಕರ್ಣ ಕುಂತಿಗೆ ಮಾತುಕೊಟ್ಟಿದ್ದರಿಂದ ಇಂದ್ರನ ಶಕ್ತ್ಯಾಯುಧವನ್ನು ಭೀಮನಲ್ಲಿ ಪ್ರಯೋಗಿಸಲು ಅವನು ಬಯಸಲಿಲ್ಲ.
ನಾರಾಯಣಾಸ್ತ್ರಂ ಶಿರಸಿ ಪ್ರಪಾತಿತಂ
ನ ಯಸ್ಯ ಲೋಮಾಪ್ಯದಹಚ್ಚಿರಸ್ಥಿತಮ್ |
ಕಿಂ ತಸ್ಯ ಶಕ್ತಿಃ ಪ್ರಕರೋತಿ ವಾಸವೀ
ತಥಾಽನ್ಯದಪ್ಯಸ್ತ್ರಶಸ್ತ್ರಂ ಮಹಚ್ಚ ॥
ಅಶ್ವತ್ಥಾಮರು ಹಾಕಿದ ನಾರಾಯಣಾಸ್ತ್ರವೂ ಕೂಡ ಭೀಮನ ತಲೆಯ ಮೇಲೆ ಬಹಳ ಹೊತ್ತು ನಿಂತೂ ಅವನ ಒಂದು ರೋಮವನ್ನೂ ಸುಡಲಿಲ್ಲ. ಅವನಿಗೆ ಇಂದ್ರನ ಶಕ್ತ್ಯಾಯುಧ ಏನು ಮಾಡಬಲ್ಲದು? ಇದೇ ರೀತಿ ಬೇರೆ ಮಹಾಶಸ್ತ್ರವೂ ಕೂಡ ಭೀಮನ ಮೇಲೆ ಏನು ಪರಿಣಾಮ ಮಾಡಬಲ್ಲದು?
ಭೀಮಃ ಕರ್ಣರಥಂ ಪ್ರಾಪ್ತಃ ಶಕ್ತಿಂ ನಾಽದಾತುಮೈಚ್ಛತ |
ಅಭಿಪ್ರಾಯಂ ಕೇಶವಸ್ಯ ಜಾನನ್ ಹೈಡಿಂಬಮೃತ್ಯವೇ ॥
ಭೀಮನು ಕರ್ಣನ ರಥಕ್ಕೆ ಬಂದೂ ಅವನ ಶಕ್ತ್ಯಾಯುಧವನ್ನು ಅಪಹರಿಸಲು ಬಯಸಲಿಲ್ಲ. ಏಕೆಂದರೆ ಅದು ಮುಂದೆ ಘಟೋತ್ಕಚನ ವಧೆಗೆ ಕಾರಣವಾಗಲೆಂಬ ಕೃಷ್ಣನ ಸಂಕಲ್ಪವನ್ನು ಅವನು ತಿಳಿದಿದ್ದನು.
ತತಃ ಕರ್ಣೋಽನ್ಯಮಾಸ್ಥಾಯ ರಥಮರ್ಜುನಮಭ್ಯಯಾತ್ |
ದಿವ್ಯಂ ರಥಂ ಧನುಶ್ಚೈವ ಕೃಷ್ಣಬುದ್ಧ್ಯಾಽರ್ಜುನೋ ಹರೇತ್ ॥
ಇತಿ ಭೀತಸ್ತು ತಾಂ ಶಕ್ತಿಮಾದಾಯಾರ್ಜುನಮೃತ್ಯವೇ |
ಯುದ್ಧಾಯಾಯಾದ್ ರಥಂ ಚಾಪಂ ಶಕ್ತಿಂ ಚೈಕತ್ರ ನಾಕರೋತ್ ॥
ಏಕಂ ಹೃತಂ ಚೇದನ್ಯತ್ ಸ್ಯಾದಿತಿ ಮತ್ವಾ ಭಯಾಕುಲಃ |
ಬಿಭೇತಿ ಸರ್ವದಾ ನೀತೇಃ ಕೃಷ್ಣಸ್ಯಾಮಿತತೇಜಸಃ ॥
ಬಳಿಕ ಕರ್ಣನು ಬೇರೆ ಸಾಮಾನ್ಯ ರಥವನ್ನೇರಿ ಅರ್ಜುನನನ್ನು ಎದುರಿಸಿದನು. ಪರಶುರಾಮನಿತ್ತ ದಿವ್ಯರಥವನ್ನೂ ದಿವ್ಯ ಧನುಸ್ಸನ್ನೂ ತಂದರೆ ಅವುಗಳನ್ನು ಕೃಷ್ಣನು ಹೇಳಿಕೊಡುವ ಉಪಾಯದಿಂದ ಅರ್ಜುನನು ಅಪಹರಿಸಬಹುದೆಂದು ಭಯಪಟ್ಟ ಕರ್ಣನು ಶಕ್ತ್ಯಾಯುಧವನ್ನು ಮಾತ್ರವೇ ಅರ್ಜುನನ ವಧೆಗಾಗಿ ಯುದ್ಧಕ್ಕೆ ಹಿಡಿದು ಬಂದಿದ್ದನು. ಮೂರರಲ್ಲಿ ಒಂದನ್ನು ಅರ್ಜುನನು ಅಪಹರಿಸಿದರೂ ಇನ್ನೆರಡಾದರೂ ತನಗೆ ಉಳಿದೀತೆಂದು ಭಯಾಕುಲನಾಗಿದ್ದ ಕರ್ಣನು ದಿವ್ಯ ರಥ, ದಿವ್ಯಬಿಲ್ಲು, ಶಕ್ತ್ಯಾಯುಧ ಈ ಮೂರನ್ನೂ ಒಂದೇ ಕಡೆ ಎಂದೂ ತರುತ್ತಿರಲಿಲ್ಲ. ಅಪರಿಮಿತ ಶಕ್ತನಾದ ಕೃಷ್ಣನ ಯುದ್ಧನೀತಿಗೆ ಅವನು ಸದಾ ಭಯಪಡುತ್ತಿದ್ದನು.
ನಿಶ್ಚಿತೋ ಮರಣಾಯೈವ ಮೃತಿಕಾಲೇ ತು ತಂ ರಥಮ್ |
ಆರುಹ್ಯಾಗಾದ್ಧಿ ಪೂರ್ವಂ ತು ನ ಕಾಲಂ ಮನ್ಯತೇ ಮೃತೇಃ ॥
ಮರಣ ಕಾಲದಲ್ಲಿ ಮಾತ್ರ ಕರ್ಣ ಮರಣ ಹೊಂದಲು ನಿಶ್ಚಯಿಸಿಕೊಂಡೇ ಆ ದಿವ್ಯ ರಥವೇರಿ ಬಂದ. ಅದಕ್ಕಿಂತ ಪೂರ್ವದಲ್ಲಿ ಆ ಕಾಲವನ್ನು ತನ್ನ ಮರಣ ಕಾಲವೆಂದು ಆತ ನಿಶ್ಚಯಿಸಿರಲಿಲ್ಲ.
ಶಕ್ತಿಂ ತು ತದ್ರಥಗತಾಂ ಪ್ರಸಮೀಕ್ಷ್ಯ ಕೃಷ್ಣಃ
ಸಂಸ್ಥಾಪ್ಯ ಪಾರ್ಥಮಪಿ ಸಾತ್ಯಕಿಮೇವ ಯೋದ್ಧುಮ್ |
ದತ್ವಾ ಸ್ವಕೀಯರಥಮೇವ ವಿರೋಚನಸ್ಯ
ಪುತ್ರೇಣ ಸೋಽದಿಶದಮುಷ್ಯ ಬಲಂ ಪ್ರದಾಯ ॥
ಕರ್ಣನ ರಥದಲ್ಲಿ ಶಕ್ತ್ಯಾಯುಧವನ್ನು ಕಂಡು ಕೃಷ್ಣ ಅರ್ಜುನನನ್ನು ತಡೆದು ಸಾತ್ಯಕಿಗೆ ತನ್ನ ರಥವನ್ನು ಕೊಟ್ಟು ಬಲವನ್ನೂ ನೀಡಿ ಕರ್ಣನೊಡನೆ ಹೋರಾಡಲು ಅವನಿಗೆ ಆದೇಶ ನೀಡಿದನು.
ಶಿಷ್ಯಂ ತ್ವಶಕ್ತಮಿಹ ಮೇ ಪ್ರತಿಯೋಧನಾಯ
ಪಾರ್ಥೋ ಹ್ಯದಾದಿತಿ ಸ ಸಾತ್ಯಕಿಮೀಕ್ಷಮಾಣಃ |
ಸಂಸ್ಪರ್ಧಯೈವ ಯುಯುಧೇ ವಿರಥಂ ಚಕಾರ
ತೇನೈವ ಸಾತ್ಯಕಿರಮುಂ ಹರಿಯಾನಸಂಸ್ಥಃ ॥
ಅರ್ಜುನನು ನನ್ನೊಡನೆ ಹೋರಾಡಲು ದುರ್ಬಲನಾದ ತನ್ನ ಶಿಷ್ಯನನ್ನು ಕಳಿಸಿಕೊಟ್ಟಿದ್ದಾನೆ ಎಂದು ಕರ್ಣನು ಸಾತ್ಯಕಿಯನ್ನು ದಿಟ್ಟಿಸುತ್ತ ಸ್ಪರ್ಧೆಯಿಂದಲೇ ಯುದ್ಧ ಮಾಡಿದನು. ಅದರಿಂದ ಕೃಷ್ಣನ ರಥದಲ್ಲಿ ಕುಳಿತಿದ್ದ ಸಾತ್ಯಕಿ ಅವನನ್ನು ವಿರಥನನ್ನಾಗಿ ಮಾಡಿದನು.

ನ ಕೇಶವರಥೇ ಕಶ್ಚಿತ್ ಸ್ಥಿತೋ ಯಾತಿ ಪರಾಜಯಮ್ |
ಅತಶ್ಚ ಸಾತ್ಯಕಿರ್ನಾऽಪ ಕರ್ಣೇನಾತ್ರ ಪರಾಜಯಮ್ ॥
ಶ್ರೀಕೃಷ್ಣನ ರಥದಲ್ಲಿ ಕುಳಿತವನು ಯಾರೂ ಯುದ್ಧದಲ್ಲಿ ಪರಾಜಯ ಹೊಂದುವುದಿಲ್ಲ. ಅದರಿಂದಲೂ ಸಾತ್ಯಕಿ ಕರ್ಣನಿಂದ ಪರಾಜಯ ಹೊಂದಲಿಲ್ಲ.
ಶಸ್ತ್ರಸಂಗ್ರಹಕಾಲೇ ತು ಕುಮಾರಾಣಾಂ ವ್ರತಂ ಭವೇತ್ |
ಇತ್ಯುಕ್ತಂ ಜಾಮದಗ್ನ್ಯೇನ ಧನುರ್ವಿದ್ಯಾಪುರಾಕೃತಾ ॥
ಧನುರ್ವಿದ್ಯೆಯ ಪ್ರಥಮ ಆಚಾರ್ಯನಾದ ಪರಶುರಾಮ ಶಿಷ್ಯರಿಗೆ ಹೇಳಿದ್ದ `ಶಿಷ್ಯರಿಗೆ ಶಸ್ತ್ರವಿದ್ಯಾಭ್ಯಾಸ ಮಾಡಿಸುವ ಕಾಲದಲ್ಲಿ ನೀವು ಕುಮಾರರಿಂದ ಒಂದು ವ್ರತವನ್ನು ಸ್ವೀಕಾರ ಮಾಡಿಸಬೇಕು.
ತಚ್ಚ ಶತ್ರುವಧರೂಪಂ ಚ ಪೂರ್ವಾಸಿದ್ಧಂ ಚ ಗೂಹಿತಮ್ |
ಅವಿರುದ್ಧಂ ಚ ಧರ್ಮಸ್ಯ ಕಾರ್ಯಂ ರಾಮಸ್ಯ ತುಷ್ಟಿದಮ್ ॥
ಅನುಪದ್ರವಂ ಚ ಲೋಕಸ್ಯೇತ್ಯತೋ ಭೀಮೋ ವ್ರತಂ ತ್ವಿದಮ್ |
ಚಕಾರ ತೂಬರೇತ್ಯುಕ್ತೇ ಹನ್ಯಾಮಿತಿ ರಹಃ ಪ್ರಭುಃ ॥
`ಆ ವ್ರತ ಶತ್ರುವಧದ ವ್ರತವಾಗಿರಬೇಕು. ಹಿಂದೆ ಯಾರೂ ಮಾಡದಿದ್ದುದಾಗಿರಬೇಕು. ಗೋಪ್ಯವಾಗಿರಬೇಕು. ಧರ್ಮಕ್ಕೆ ಅವಿರುದ್ಧವಾಗಿರಬೇಕು. ನನಗೆ ಸಂತೋಷದಾಯಕವಾಗಿರಬೇಕು. ಲೋಕಕ್ಕೆ ಉಪದ್ರವವಾಗದಂತಿರಬೇಕು' ಎಂದು. ಅದರಿಂದ ಸರ್ವಶಕ್ತನಾದ ಭೀಮಸೇನ ರಹಸ್ಯವಾಗಿ ಈ ಒಂದು ವ್ರತವನ್ನು ತೊಟ್ಟನು. ನನ್ನನ್ನು ಯಾರು ತೂಬರ, ಹರಕುಗಡ್ಡದವನೆನ್ನುವನೋ ಅವನನ್ನು ಕೊಲ್ಲುವೆ' ಎಂದು.
ಅನುಪದ್ರವಾಯ ಲೋಕಸ್ಯ ಸುವ್ಯಕ್ತಶ್ಮಶ್ರುಮಂಡಲಃ |
ಸುಶ್ಮಶ್ರುಂ ಮಾಂ ನ ಕಶ್ಚಿದ್ಧಿ ತಥಾ ಬ್ರೂಯಾದಿತಿ ಸ್ಫುಟಮ್ |
ತದರ್ಜುನೋ ವಿಜಾನಾತಿ ಸ್ನೇಹಾದ್ ಭೀಮೋದಿತಂ ರಹಃ ॥
ಸೊಂಪಾಗಿ ಬೆಳೆದ ಗಡ್ಡ ಉಳ್ಳ ಭೀಮನು ಲೋಕಕ್ಕೆ ಉಪದ್ರವವಾಗದಂತೆ ಈ ಪ್ರತಿಜ್ಞೆಗೈದನು. ಏಕೆಂದರೆ ಒಳ್ಳೆಯ ಗಡ್ಡ ಉಳ್ಳ ನನ್ನನ್ನು ಯಾರು ಹರಕಲು ಗಡ್ಡದವನೆಂದು ಹೇಳಲಾರರು ಎಂದು. ಭೀಮನು ಏಕಾಂತದಲ್ಲಿ ಸ್ವೀಕರಿಸಿದ ಈ ಪ್ರತಿಜ್ಞೆಯನ್ನು ಅರ್ಜುನನು ಸೋದರ ಸ್ನೇಹ ಪ್ರಯುಕ್ತ ತಿಳಿದುಕೊಂಡಿದ್ದಾನೆ.
ಅರ್ಜುನಸ್ಯಾಪಿ ಗಾಂಡೀವಂ ದೇಹೀತ್ಯುಕ್ತೋ ನಿಹನ್ಮಿತಮ್ |
ಗಾಂಡೀವಸ್ಯಾऽಗಮಂ ಪೂರ್ವಂ ಜಾನಾತ್ಯೇವ ಹಿ ನಾರದಾತ್ ॥
`ನಿನ್ನ ಗಾಂಡೀವವನನ್ನು ಬೇರೆಯವರಿಗೆ ಕೊಡು' ಎಂದು ಹೇಳಿದರೆ ಅವನನ್ನು ಕೊಲ್ಲುವೆನೆಂದು ಅರ್ಜುನನದೂ ಪ್ರತಿಜ್ಞೆ ಇದ್ದಿತು. ಗಾಂಡೀವ ಪ್ರಾಪ್ತಿಯ ಬಗ್ಗೆ ನಾರದರ ಮಾತಿನಿಂದ ಅರ್ಜುನ ಮೊದಲೇ ತಿಳಿದಿದ್ದ.
ಇತಿ ತಚ್ಚ ವಿಜಾನಾತಿ ಭೀಮ ಏಕೋ ನ ಚಾಪರಃ ॥
ಹೀಗೆ ಅರ್ಜುನ ಪ್ರತಿಜ್ಞೆ ಮಾಡಿದ್ದನ್ನು ಭೀಮನೊಬ್ಬನೇ ತಿಳಿದಿದ್ದ. ಇನ್ನಾರೂ ತಿಳಿದಿರಲಿಲ್ಲ.
ಪ್ರತಿಜ್ಞಾಂ ಭೀಮಸೇನಸ್ಯ ಬ್ರುವತಃ ಫಲ್ಗುನೇ ರಹಃ |
ದುರ್ಯೋಧನಸ್ತು ಶುಶ್ರಾವ ತಾಂ ಚ ಕರ್ಣಾಯ ಸೋऽಬ್ರವೀತ್ ॥
ಭೀಮಸೇನನು ತನ್ನ ಪ್ರತಿಜ್ಞೆಯನ್ನು ಗೋಪ್ಯವಾಗಿ ಅರ್ಜುನನಿಗೆ ಹೇಳುತ್ತಿದ್ದಾಗ ದುರ್ಯೋಧನನು ಅದನ್ನು ಕದ್ದಾಲಿಸಿದ. ಅವನು ಅದನ್ನು ಕರ್ಣನಿಗೆ ಹೇಳಿದನು.
ಅತೂಬರೋऽಪಿ ತೇನಾಸೌ ತಸ್ಮಾತ್ ತೂಬರ ಇತ್ಯಲಮ್ |
ಉಕ್ತಃ ಪ್ರಕೋಪನಾಯೈವ ತಸ್ಮಾದರ್ಜುನಮಬ್ರವೀತ್ ॥
ಭೀಮನಿಗೆ ಕೋಪ ಬರಿಸಲೆಂದೇ ಕರ್ಣನು ತೂಬರನಲ್ಲದವನನ್ನು ತೂಬರ ಎಂದು ನಿಂದಿಸಿದನು. ಅದರಿಂದ ಭೀಮನು ಅರ್ಜುನನಿಗೆ ಹೇಳಿದನು.
ಜಾನಾಸಿ ಮತ್ಪ್ರತಿಜ್ಞಾಂ ತ್ವಂ ತ್ವತ್ಪ್ರತಿಜ್ಞಾಮಹಂ ತಥಾ |
ತತ್ರ ಹಂತವ್ಯತಾಂ ಪ್ರಾಪ್ತೋ ಮಮ ವೈಕರ್ತನೋऽತ್ರ ಹಿ ॥
ಪ್ರತಿಜ್ಞಾತೋ ವಧಶ್ಚಾಸ್ಯ ತ್ವಯಾऽಪಿ ಮದನುಜ್ಞಯಾ |
ಅತಸ್ತ್ವಯಾ ಮಯಾ ವಾಯಂ ಹಂತವ್ಯಃ ಸೂತನಂದನಃ ॥
ನನ್ನ ಪ್ರತಿಜ್ಞೆಯನ್ನು ನೀನು ತಿಳಿದುರಿವಿ. ನಿನ್ನ ಪ್ರತಿಜ್ಞೆಯನ್ನು ನಾನು ತಿಳಿದಿದ್ದೇನೆ. ಈಗ ಕರ್ಣನು ನನಗೆ ವಧ್ಯನೆನಿಸಿದ್ದಾನೆ. ನೀನೂ ಅವನನ್ನು ವಧಿಸುವ ಪ್ರತಿಜ್ಞೆ ಮಾಡಿರುವಿ. ಅದು ನನ್ನ ಅನುಜ್ಞೆಯಿಂದ. ಹೀಗಾಗಿ ನೀನು ಅಥವಾ ನಾನು ಕರ್ಣನನ್ನು ಕೊಲ್ಲಬೇಕಾಗಿದೆ.
ಇತ್ಯುಕ್ತೋ ವಾಸವಿಃ ಪ್ರಾಹ ಹಂತವ್ಯೋऽಯಂ ಮಯೈವ ಹಿ |
ತ್ವದೀಯೋऽಹಂ ಯತಸ್ತೇನ ಮತ್ಕೃತಂ ತ್ವತ್ಕೃತಂ ಭವೇತ್ ॥
ನ ತ್ವತ್ಕೃತಂ ಮತ್ಕೃತಂ ಸ್ಯಾದ್ ಗುರುರ್ಮಮ ಯತೋ ಭವಾನ್ |
ಅತೋ ಮಯೈವ ಹಂತವ್ಯ ಇತ್ಯುಕ್ತ್ವಾ ಕರ್ಣಮಬ್ರವೀತ್ ॥
ಭೀಮನು ಹೀಗೆ ಹೇಳಿದಾಗ ಅರ್ಜುನನೆಂದ `ನಾನೇ ಕರ್ಣನನ್ನು ಕೊಲ್ಲುವುದು ಉಚಿತ. ಏಕೆಂದರೆ ನಾನು ನಿನ್ನವನು. ನಾನು ಮಾಡಿದರೆ ನೀನು ಮಾಡಿದಂತೆಯೇ ಆಗುತ್ತದೆ. ನೀನು ಮಾಡಿದರೆ ನಾನು ಮಾಡಿದಂತಾಗುವುದಿಲ್ಲ. ಏಕೆಂದರೆ ನೀನು ನನಗೆ ಹಿರಿಯ. ಅದರಿಂದ ನಾನೇ ಕರ್ಣನನ್ನು ಕೊಲ್ಲಬೇಕು' ಹೀಗೆ ಹೇಳಿ ಅರ್ಜುನನು ಕರ್ಣನಿಗೆ ಹೇಳಿದನು.

ರೂಕ್ಷಾ ವಾಚಃ ಶ್ರಾವಿತೋಽಯಂ ಭೀಮಃ ಕೃಷ್ಣಸ್ಯ ಶೃಣ್ವತಃ |
ಯಚ್ಚಾಭಿಮನ್ಯುರ್ಯುಷ್ಮಾಭಿರೇಕಃ ಸಂಭೂಯ ಪಾತಿತಃ ॥
`ಕರ್ಣನೇ, ನೀನು ಕೃಷ್ಣ ಕೇಳುತ್ತಿರುವಂತೆಯೇ ಭೀಮನಿಗೆ ಕೆಟ್ಟ ಮಾತುಗಳನ್ನಾಡಿರುವಿ ಮತ್ತು ನೀವೆಲ್ಲರೂ ಸೇರಿ ಒಬ್ಬ ಅಭಿಮನ್ಯುವನ್ನು ಕೊಂದಿರುವಿರಿ.
ಅತಸ್ತ್ವಂ ನಿಹನಿಷ್ಯಾಮಿ ತ್ವತ್ಪುತ್ರಂ ಚ ತವಾಗ್ರತಃ |
ಇತ್ಯುಕ್ತೋಽನ್ಯರಥಂ ಪ್ರಾಪ್ಯ ಕರ್ಣ ಆವೀಜ್ಜಯದ್ರಥಮ್ ॥
`ಅದರಿಂದ ನಾನು ನಿನ್ನನ್ನು ಕೊಲ್ಲುತ್ತೇನೆ. ನಿನ್ನ ಸಮ್ಮುಖದಲ್ಲಿಯೇ ನಿನ್ನ ಮಗನಾದ ವೃಷಸೇನನನ್ನೂ ಕೊಲ್ಲುತ್ತೇನೆ' ಎಂದು ಅರ್ಜುನನು ಹೇಳಿದಾಗ ಕರ್ಣನು ಇನ್ನೊಂದು ರಥವನ್ನೇರಿ ಜಯದ್ರಥನ ರಕ್ಷಣೆಗೆ ಹೊರಟು ಹೋದನು.
ದ್ರೌಣಿಕರ್ಣಾಭಿಗುಪ್ತಂ ತಂ ನಾಶಕದ್ಧಂತುಮರ್ಜುನಃ |
ತತ್ರ ವೇಗಂ ಪರಂ ಚಕ್ರೇ ದ್ರೌಣಿಃ ಪಾರ್ಥನಿವಾರಣೇ ॥
ಅಶ್ವತ್ಥಾಮರು ಮತ್ತು ಕರ್ಣನಿಂದ ರಕ್ಷಿತನಾಗಿದ್ದ ಜಯದ್ರಥನನ್ನು ಕೊಲ್ಲಲು ಅರ್ಜುನನು ಶಕ್ತನಾಗಲಿಲ್ಲ. ಆಗ ಅಶ್ವತ್ಥಾಮರು ಅರ್ಜುನನನ್ನು ತಡೆಯಲು ಬಹಳ ಪರಾಕ್ರಮ ತೋರಿದರು.
ನ ಚೈನಮಶಕತ್ ತರ್ತುಂ ಯತ್ನವಾನಪಿ ಫಲ್ಗುನಃ |
ತಯೋರಾಸೀಚ್ಚಿರಂ ಯುದ್ಧಂ ಚಿತ್ರಂ ಲಘು ಚ ಸುಷ್ಠು ಚ ॥
ಅರ್ಜುನನು ಎಷ್ಟು ಪ್ರಯತ್ನ ಮಾಡಿದರೂ ಅಶ್ವತ್ಥಾಮರನ್ನು ಅತಿಕ್ರಮಿಸಿ ಹೋಗಲು ಶಕ್ತನಾಗಲಿಲ್ಲ. ಅವರಿಬ್ಬರೊಳಗೆ ಹಸ್ತ ಚಮತ್ಕಾರದಿಂದ ಕೂಡಿದ ಉತ್ತಮವಾದ ಯುದ್ಧ ಬಹುಕಾಲದವರೆಗೆ ನಡೆಯಿತು.
ತದ್ ದೃಷ್ಟ್ವಾ ಭಗವಾನ್ ಕೃಷ್ಣೋ ಲೋಹಿತಾಯತಿ ಭಾಸ್ಕರೇ |
ಅಜಿತೇ ದ್ರೋಣತನಯೇ ತ್ವಹತೇ ಚ ಜಯದ್ರಥೇ |
ಅರ್ಜುನಸ್ಯ ಜಯಾಕಾಂಕ್ಷೀ ಸಸರ್ಜ ತಮ ಊರ್ಜಿತಮ್ ॥
ಅದನ್ನು ನೋಡಿ ಭಗವಾನ್ ಶ್ರೀಕೃಷ್ಣನು ಸೂರ್ಯ ಕೆಂಪಾಗುತ್ತಿರುವಾಗ ಇನ್ನೂ ಅಶ್ವತ್ಥಾಮರನ್ನು ಹಿಮ್ಮೆಟ್ಟದಿರುವಾಗ ಜಯದ್ರಥ ಹತನಾಗದಿದ್ದಾಗ ಅರ್ಜುನನ ಜಯಾಕಾಂಕ್ಷಿಯಾಗಿ ಶಕ್ತಿಶಾಲಿಯಾದ ಕತ್ತಲನ್ನು ಸೃಷ್ಟಿಸಿದನು.
ತಮೋವ್ಯಾಪ್ತೇ ಗಗನೇ ಸೂರ್ಯಮಸ್ತಂ
ಗತಂ ಮತ್ವಾ ದ್ರೌಣಿಪೂರ್ವಾಃ ಸಮಸ್ತಾಃ |
ವಿಶಶ್ರಮುಃ ಸೈಂಧವಶ್ಚಾರ್ಜುನಸ್ಯ
ಹತಪ್ರತಿಜ್ಞಸ್ಯ ಮುಖಂ ಸಮೈಕ್ಷತ ॥
ಆಕಾಶದಲ್ಲಿ ಕತ್ತಲು ಹರಡಿದಾಗ ದ್ರೋಣರು ಮೊದಲಾದವರೆಲ್ಲರೂ ಸೂರ್ಯಾಸ್ತವಾಯಿತೆಂದು ತಿಳಿದು ಯುದ್ಧ ನಿಲ್ಲಿಸಿ ವಿಶ್ರಾಂತಿ ಪಡೆದರು. ಅರ್ಜುನನು ತನ್ನ ಪ್ರತಿಜ್ಞೆಯನ್ನು ಪೂರೈಸಲಿಲ್ಲ ಎಂದು ಭಾವಿಸಿ ಅವನ ಮುಖವನ್ನು ಜಯದ್ರಥ ನೋಡಲು ತೊಡಗಿದನು.
ತದಾ ಹರೇರಾಜ್ಞಯಾ ಶಕ್ರಸೂನು-
ಶ್ಚಕರ್ತ ಬಾಣೇನ ಜಯದ್ರಥಸ್ಯ |
ಅಗ್ನಿಂ ವಿವಿಕ್ಷನ್ನಿವ ದರ್ಶಿತಃ ಶಿರ-
ಸ್ತದಾ ವಚಃ ಪ್ರಾಹ ಜನಾರ್ದನಸ್ತಮ್ ॥
ವಹ್ನಿಪ್ರವೇಶ ಮಾಡಲು ಹೊರಟಂತೆ ಕಾಣಿಸಿಕೊಂಡ ಅರ್ಜುನನು ಕೃಷ್ಣನ ಆದೇಶದಂತೆ ಜಯದ್ರಥನ ಶಿರವನ್ನು ಬಾಣದಿಂದ ತರಿದನು. ಆಗ ಕೃಷ್ಣನು ಅವನಿಗೆ ಈ ಮಾತನ್ನು ಅನುಡಿದನು.
ನೈತಚ್ಛಿರಃ ಪಾತಯ ಭೂತಳೇ ತ್ವ-
ಮಿತೀರಿತಃ ಪಾಶುಪತಾಸ್ತ್ರತೇಜಸಾ |
ದಧಾರ ಬಾಣೈರನುಪುಂಖಪುಂಖ್ಯೈಃ
ಪುನಸ್ತಮೂಚೇ ಗರುಡಧ್ವಜೋ ವಚಃ ॥
`ನೀನು ಈ ಶಿರವನ್ನು ನೆಲದಲ್ಲಿ ಬೀಳಗೊಡಬೇಡ' ಕೃಷ್ಣನು ಹೀಗೆ ಹೇಳಿದಾಗ ಅರ್ಜುನನು ಪಾಶುಪತಾಸ್ತ್ರದ ಪ್ರಭಾವದಿಂದ ಪುಂಖಾನುಪುಂಖವಾಗಿ ಬಾಣಗಳನ್ನು ಹೊರಡಿಸಿ ಶಿರಸ್ಸು ನೆಲಕ್ಕೆ ಬೀಳದಂತೆ ತಡೆಹಿಡಿದನು. ಆಗ ಪುನಃ ಕೃಷ್ಣನು ನುಡಿದ.
ಇದಂ ಪಿತುಸ್ತಸ್ಯ ಕರೇ ನಿಪಾತ್ಯತಾಂ
ವರೋಽಸ್ಯ ದತ್ತೋ ಹಿ ಪುರಾಽಮುನಾಽಯಮ್ |
ಶಿರೋ ನಿಕೃತ್ತಂ ಭುವಿ ಪಾತಯೇದ್ ಯ-
ಸ್ತವಾಸ್ಯ ಭೂಯಾಚ್ಚ ಶಿರಃ ಸಹಸ್ರಧಾ ॥
`ಈ ಶಿರಸ್ಸನ್ನು ಜಯದ್ರಥನ ತಂದೆಯ ಕೈಯಲ್ಲಿ ಬೀಳಿಸು. ಏಕೆಂದರೆ ಅವನು ಜಯದ್ರಥನಿಗೆ ವರ ನೀಡಿದ್ದಾನೆ. `ಯಾರು ಛಿನ್ನವಾದ ನಿನ್ನ ಶಿರವನ್ನು ನೆಲದಲ್ಲಿ ಬೀಳಿಸುವನೋ ಅವನ ಶಿರ ಸಾವಿರ ಹೋಳಾಗಲಿ' ಎಂದು.
ಇತಿ ಸ್ಮ ವಧ್ಯಃ ಸ ಪಿತಾಽಪಿ ತೇನೇ-
ತ್ಯುದೀರಿತೇ ತಸ್ಯ ಸಂಧ್ಯಾಕ್ರಿಯಸ್ಯ |
ಅಂಕೇ ವ್ಯಧಾತ್ ತಚ್ಛಿರ ಆಶು ವಾಸವಿಃ
ಸ ಸಂಭ್ರಮಾತ್ ತದ್ ಭುವಿ ಚ ನ್ಯಪಾತಯತ್ ॥

`ಈ ರೀತಿ ವರ ನೀಡಿದ್ದರಿಂದ ಜಯದ್ರಥನ ತಂದೆಯೂ ಕೂಡ ವಧಾರ್ಹನಾಗಿದ್ದಾನೆ' ಎಂದು ಶ್ರೀಕೃಷ್ಣನು ಹೇಳಿದಾಗ ಸಂಧ್ಯಾವಂದನೆ ಮಾಡುತ್ತಿದ್ದ ತಂದೆಯ ತೊಡೆಯ ಮೇಲಿದ್ದ ಕೈಯಲ್ಲಿ ಜಯದ್ರಥನ ಶಿರವನ್ನು ಬೇಗನೆ ಅರ್ಜುನನು ಹಾಕಿದನು. ತಂದೆ ಗಾಬರಿಯಿಂದ ಆ ಶಿರವನ್ನು ನೆಲದಲ್ಲಿ ಬೀಳಿಸಿದನು.
ತತೋಽಭವತ್ ತಸ್ಯ ಶಿರಃ ಸಹಸ್ರಧಾ
ಹರಿಶ್ಚ ಚಕ್ರೇ ತಮಸೋ ಲಯಂ ಪುನಃ |
ತದೈವ ಸೂರ್ಯೇ ಸಕೈಶ್ಚ ದೃಷ್ಟೇ
ಹಾಹೇತಿ ವಾದಃ ಸುಮಹಾನಥಾಽಸೀತ್ ॥
ಆಗ ತಂದೆಯ ಶಿರಸ್ಸನ್ನು ಸಾವಿರ ಹೋಳಾಯಿತು. ಬಳಿಕ ಕೃಷ್ಣನು ಕತ್ತಲನ್ನು ಕರಗಿಸಿದನು. ಒಡನೆಯೇ ಸೂರ್ಯ ಎಲ್ಲರಿಗೂ ಕಾಣಿಸಿಕೊಂಡಾಗ ಕೌರವ ಸೈನ್ಯದಲ್ಲಿ ಬಲು ದೊಡ್ಡ ಹಾಹಾಕಾರ ಉಂಟಾಯಿತು.
ಭೀಮಸ್ತದಾ ಶಲ್ಯಸುಯೋಧನಾದೀನ್
ಕೃಪಂ ಚ ಜಿತ್ವಾ ವ್ಯನದತ್ ಸುಭೈರವಮ್ |
ಕುರ್ವನ್ ಸಾಹಾಯ್ಯಂ ಫಲ್ಗುನಸ್ಯೈವ ತುಷ್ಟೋ
ಬಭೂವ ಶೈನೇಯ ಉತೋ ಹತೇ ರಿಪೌ ॥
ಆಗಲೇ ಭೀಮಸೇನನು ಶಲ್ಯದುರ್ಯೋಧನ ಮುಂತಾದವರನ್ನೂ, ಕೃಪರನ್ನೂ ಗೆದ್ದು ಭಯಂಕರವಾಗಿ ಸಿಂಹನಾದ ಗೈದನು. ಅರ್ಜುನನಿಗೆ ಸಹಾಯ ಮಾಡಲು ಬಂದಿದ್ದ ಭೀಮನೂ, ಸಾತ್ಯಕಿಯೂ ಶತ್ರು ಹತನಾದನೆಂದು ಸಂತುಷ್ಟರಾದರು.
ಅಪೂರಯತ್ ಪಾಂಚಜನ್ಯಂ ಚ ಕೃಷ್ಣೋ
ಮುದಾ ತದಾ ದೇವದತ್ತಂ ಚ ಪಾರ್ಥಃ |
ಭೀಮಸ್ಯ ನಾದಂ ಸಹಪಾಂಚಜನ್ಯ
ಘೋಷಂ ಶ್ರುತ್ವಾ ನಿಹತಂ ಸಿಂಧುರಾಜಮ್ ॥
ಜ್ಞಾತ್ವಾ ರಾಜಾ ಧರ್ಮಸುತೋ ಮುಮೋದ
ದುರ್ಯೋಧನಶ್ಚಾಽಸ ಸುದುಃಖಿತಸ್ತದಾ ॥
ಶ್ರೀಕೃಷ್ಣನು ಸಂತೋಷದಿಂದ ಪಾಂಚಜನ್ಯ ಶಂಖವನ್ನು ಮೊಳಗಿಸಿದನು. ಅರ್ಜುನನೂ ದೇವದತ್ತ ಶಂಖವನ್ನು ಮೊಳಗಿಸಿದನು. ಪಾಂಚಜನ್ಯನಾದದೊಂದಿಗೆ ಭೀಮನು ಸಿಂಹನಾದವನ್ನೂ ಕೇಳಿ ಧರ್ಮರಾಜನು ಜಯದ್ರಥನು ಹತನಾದನೆಂದು ತಿಳಿದು ಆನಂದಗೊಂಡನು. ದುರ್ಯೋಧನನು ಬಹಳ ದುಃಖಿತನಾದನು.
ತತೋ ದ್ರೌಣಿಮುಖಾಂ ಸೇನಾಂ
ಸರ್ವಾಂ ಭೀಮೋಭ್ಯವರ್ತತ |
ಪಾರ್ಥಃ ಕರ್ಣಮುಖಾನ್ ಶಿಷ್ಟಾನ್
ತತೋಽಭಜ್ಯತ ತದ್ ಬಲಮ್ ॥
ಬಳಿಕ ಅಶ್ವತ್ಥಾಮರ ನೇತೃತ್ವದಲ್ಲಿ ಎದುರಾದ ಸಮಸ್ತ ಸೈನ್ಯವನ್ನು ಭೀಮನು ಎದುರಿಸಿದನು. ಕರ್ಣನ ನೇತೃತ್ವದಲ್ಲಿ ಬಂದ ಉಳಿದ ಸೈನ್ಯವನ್ನು ಅರ್ಜುನನು ಎದುರಿಸಿದನು. ಆಗ ಕರ್ಣ-ಅಶ್ವತ್ಥಾಮರ ಸೈನ್ಯವೇ ಸೋತಿತು.
ಶೀರ್ಣಾಂ ಸೇನಾಂ ಪ್ರವಿವಿಶುರ್ಧೃಷ್ಟದ್ಯುಮ್ನಪುರೋಗಮಾಃ |
ತತಸ್ತಂ ದೇಶಮಾಪುಸ್ತೇ ಯತ್ರ ಭೀಮಧನಂಜಯೌ ॥
ಹೀಗೆ ಸೋತ ಕೌರವ ಸೈನ್ಯವನ್ನು ಧೃಷ್ಟದ್ಯುಮ್ನ ಮುಂತಾದವರೂ ಹೊಕ್ಕರು. ಭೀಮಾರ್ಜುನರಿದ್ದಲ್ಲಿಗೆ ಬಂದರು.
ತತ ಏಕೀಕೃತಾಃ ಸರ್ವೇ ಪಾಂಡವಾಃ ಸಹಸೋಮಕಾಃ |
ಪರಾನ್ ವಿದ್ರಾವಯಾಮಾಸುಸ್ತೇ ಭೀತಾಃ ಪ್ರಾದ್ರುವನ್ ದಿಶಃ ॥
ಬಳಿಕ ಪಾಂಡವರೂ ಪಾಂಚಾಲರೂ ಎಲ್ಲರೂ ಒಂದಾಗಿ ಶತ್ರುಗಳನ್ನು ಓಡಿಸಿದರು. ಶತ್ರುಗಳು ಹೆದರಿ ಎಲ್ಲ ದಿಕ್ಕುಗಳಿಗೆ ಪಲಾಯನ ಮಾಡಿದರು.
ವಿದ್ರಾವ್ಯಮಾಣಂ ಸೈನ್ಯಂ ತಂ ದೃಷ್ಟ್ವಾ ದುರ್ಯೋಧನೋ ನೃಪಃ |
ಜಯದ್ರಥವಧಾಚ್ಚೈವ ಕುಪಿತೋಽಭ್ಯದ್ರವತ್ ಪರಾನ್ ॥
ತನ್ನ ಸೈನ್ಯವು ಹೀಗೆ ಓಡಿಸಲ್ಪಡುವುದನ್ನು ಕಂಡು ರಾಜಾ ದುರ್ಯೋಧನನು ಕುಪಿತನಾದನು. ಜಯದ್ರಥನ ವಧೆಯಿಂದ ಮೊದಲೇ ಕುಪಿತನಾಗಿದ್ದ ಆತ ಶತ್ರುಗಳಿಗೆ ಎದುರಾದರು.
ಸ ಭೀಮಸೇನಂ ಚ ಧನಂಜಯಂ ಚ
ಯುಧಿಷ್ಠಿರಂ ಮಾದ್ರವತೀಸುತೌ ಚ |
ಧೃಷ್ಟದ್ಯುಮ್ನಂ ಸಾತ್ಯಕಿಂ ದ್ರೌಪದೇಯಾನ್
ಸರ್ವಾನೇಕಃ ಶರವರ್ಷೈರ್ವವರ್ಷ ॥
ಭೀಮಸೇನ, ಅರ್ಜುನ, ಯುಧಿಷ್ಠಿರ, ನಕುಲ, ಸಹದೇವ, ಧೃಷ್ಟದ್ಯುಮ್ನ, ಸಾತ್ಯಕಿ, ದ್ರೌಪದೀಪುತ್ರರು ಇವರೆಲ್ಲರ ಮೇಲೆ ದುರ್ಯೋಧನನೊಬ್ಬನೇ ಬಾಣಗಳ ಮಳೆಗರೆದನು.
ತೇ ವಿವ್ಯಧುಸ್ತಂ ಬಹುಭಿಃ ಶಿಲೀಮುಖೈಃ
ಸ ತಾನನಾದೃತ್ಯ ಚಕರ್ತ ಬಾಣೈಃ |
ಧನೂಂಷಿ ಚಿತ್ರಾಣಿ ಮಹಾರಥಾನಾಂ

ಚಕಾರ ಸಂಖ್ಯೇ ವಿರಥೌ ಯಮೌ ಚ ॥
ಭೀಮಾರ್ಜುನ ಮುಂತಾದವರು ಬಹಳ ಬಾಣಗಳಿಂದ ದುರ್ಯೋಧನನನ್ನು ಹೊಡೆದರು. ಅವನು ಅವುಗಳನ್ನು ಲೆಕ್ಕಿಸದೆ ಬಾಣಗಳಿಂದ ಮಹಾರಥರ ನಾನಾ ಬಗೆಯ ಧನುಸ್ಸುಗಳನ್ನೂ ಕತ್ತರಿಸಿದನು. ನಕುಲ, ಸಹದೇವರನ್ನು ವಿರಥರನ್ನಾಗಿ ಮಾಡಿದನು.
ಆದಾಯ ಚಾಪಾನಿ ಪರಾಣಿ ತೇಽಪಿ
ದುರ್ಯೋಧನಂ ವವೃಷುಃ ಸಾಯಕೌಘೈಃ।
ಅಚಿಂತಯಿತ್ವೈವ ಶರಾನ್ ಸ ಏಕೋ
ನ್ಯವಾರಯತ್ ತಾನಖಿಲಾಂಶ್ಚ ಬಾಣೈಃ ॥
ಮಹಾರಥರೂ ಕೂಡ ಬೇರೆ ಬಿಲ್ಲುಗಳನ್ನೆತ್ತಿಕೊಂಡು ದುರ್ಯೋಧನನ ಮೇಲೆ ಬಾಣಗಳ ಮಳೆಗರೆದರು. ಒಬ್ಬನೇ ದುರ್ಯೋಧನ ಅವುಗಳನ್ನೂ ಲೆಕ್ಕಿಸದೆ ಎಲ್ಲವನ್ನೂ ಬಾಣಗಳಿಂದ ತಡೆದನು.
ತಂ ಗಾಹಮಾನಂ ದ್ವಿಷತಾಂ ಬಹೂನಾಂ
ಮಧ್ಯೇ ದ್ರೋಣದ್ರೌಣಿಕೃಪಪ್ರಧಾನಾಃ।
ದೃಷ್ಟ್ವಾ ಸರ್ವೇ ಜುಗುಪುಃ ಸ್ವಾತ್ತಚಾಪಾ
ಅನಾರತಂ ಬಾಣಗಣಾನ್ ಸೃಜಂತಃ ॥
ಬಹುಮಂದಿ ಶತ್ರುಗಳ ನಡುವೆ ದುರ್ಯೋಧನನು ಮುಳುಗುತ್ತಿದ್ದುದನ್ನು ಕಂಡು ದ್ರೋಣ-ಅಶ್ವತ್ಥಾಮ-ಕೃಪ ಮುಂತಾದವರೆಲ್ಲರೂ ಬಿಲ್ಲನ್ನು ಧರಿಸಿ ಎಡೆಬಿಡದೆ ಬಾನ ಸಮೂಹಗಳನ್ನೆಸೆಯುತ್ತ ದುರ್ಯೋಧನನನ್ನು ಕಾಪಾಡಿಕೊಂಡರು.
ಸುಯೋಧನಃ ಕರ್ಣಮಾಹ ಜಹಿ ಭೀಮಮಿಮಂ ಯುಧಿ।
ಸ ಆಹ ನೈಷ ಶಕ್ಯೋ ಹಿ ಜೇತುಂ ದೇವೈಃ ಸವಾಸವೈಃ ॥
`ದುರ್ಯೋಧನನು ಕರ್ಣನಿಗೆ ಹೇಳಿದ, `ಈ ಭೀಮನನ್ನು ಯುದ್ಧದಲ್ಲಿ ಸಂಹರಿಸು'. ಅದಕ್ಕೆ ಕರ್ಣನು `ಭೀಮನನ್ನು ಗೆಲ್ಲಲು ಇಂದ್ರಾದಿ ದೇವತೆಗಳಿಂದಲೂ ಶಕ್ಯವಿಲ್ಲ'.
ದೈವಾಜ್ಜೀವಾಮ್ಯಹಂ ರಾಜನ್ ಯುದ್ಧ್ಯನೇನಾತಿಪೀಡಿತಃ।
ಅತೋ ಘಟಾಮಹೇ ಶಕ್ತ್ಯಾ ಜಯೋ ದೈವೇ ಸಮಾಹಿತಃ ॥
`ರಾಜನೇ, ನಾನು ಭೀಮನೊಡನೆ ಯುದ್ಧ ಮಾಡುತ್ತ ಬಹಳ ಪೀಡಿತನಾಗಿ ದೈವಾತ್ ಬದುಕಿ ಉಳಿದಿದ್ದೇನೆ. ಅದರಿಂದ ಇನ್ನು ಮುಂದೆ ಶಕ್ತ್ಯಾಯುಧದಿಂದ ಹೋರಾಡುತ್ತೇನೆ. ಜಯ ದೈವಾಧೀನ' ಎಂದು ಹೇಳಿದನು.
* * * * *
ನೂರ ಒಂದನೆಯ ಅಧ್ಯಾಯ
ಸಾತ್ಯಕಿಯಿಂದ ಜಲಸಂಧನ ವಧೆ.
ಸಂಜಯಃ
ಶೃಣುಷ್ವೈಕಮನಾ ರಾಜನ್ ಯನ್ಮಾಂ ತ್ವಂ ಪರಿಪೃಚ್ಛಸಿ।
ದ್ರಾವ್ಯಮಾಣೇ ಬಲೇ ತಸ್ಮಿನ್ ಹಾರ್ದಿಕ್ಯೇನ ಮಹಾತ್ಮನಾ ॥ 1 ॥
ಲಜ್ಜಯಾಽವನತೇ ಚಾಪಿ ಪ್ರಹೃಷ್ಟೈಶ್ಚೈವ ತಾವಕೈಃ।
ದ್ವೀಪೋ ಯ ಆಸೀತ್ ಪಾಂಡೂನಾಮಗಾಧೇ ಗಾಧಮಿಚ್ಛತಾಮ್ ॥2॥
ಸಂಜಯ ಎಲೈ ರಾಜನೇ, ಮಹಾಬಲನಾದ ಕೃತವರ್ಮನಿಂದ ಪಾಂಡವರ ಸೈನ್ಯವು ಚದುರಿಸಲ್ಪಟ್ಟು ಪಾಂಡವಯೋಧರು ನಾಚಿಕೆಯಿಂದ ತಲೆತಗ್ಗಿಸಿರಲು ಮತ್ತು ನಿನ್ನ ಯೋಧರು ಸಂತೋಷಗೊಂಡಿರಲು ಅಗಾಧವಾದ ಸಮಾಗಮದಲ್ಲಿ ನೆಲೆಯನ್ನು ಬಯಸುವ ಪಾಂಡವರಿಗೆ ಯಾರು ರಕ್ಷಕರಾದರು ಎಂದು ಕೇಳುತ್ತಿರುವಿಯಷ್ಟೆ? ಅದನ್ನು ಒಂದೇ ಮನಸ್ಸಿನಿಂದ ಕೇಳುವವನಾಗು.
ಶ್ರುತ್ವಾ ತು ನಿನದಂ ಭೀಮಂ ತಾವಕಾನಾಂ ಮಹಾಹವೇ।
ಶೈನೇಯಸ್ತ್ವರಿತೋ ರಾಜನ್ ಕೃತವರ್ಮಾಣಮಭ್ಯಯಾತ್ ॥ 3 ॥
ಎಲೈ ರಾಜನೇ, ಆ ದೊಡ್ಡ ಯುದ್ಧದಲ್ಲಿ ನಿನ್ನವರ ಭಯಂಕರವಾದ ಹರ್ಷ ನಾದವನ್ನು ಕೇಳಿ ಸಾತ್ಯಕಿಯು ಶೀಘ್ರವಾಗಿ ಕೃತವರ್ಮನ ಮೇಲೆ ಧಾವಿಸಿ ಬಂದನು.
ಕೃತವರ್ಮಾ ತು ಹಾರ್ದಿಕ್ಯಃ ಶೈನೇಯಂ ನಿಶಿತೈಃ ಶರೈಃ।
ಅವಾಕಿರತ್ ಸುಸಂಕ್ರುದ್ಧಸ್ತತೋಽಕ್ರುದ್ಧ್ಯತ್ ಸ ಸಾತ್ಯಕಿಃ ॥ 4 ॥
ಹೃದಿಕನ ಪುತ್ರನಾದ ಕೃತವರ್ಮನು ಬಹಳ ಕೋಪಗೊಂಡು ಸಾತ್ಯಕಿಯ ಮೇಲೆ ಹರಿತವಾದ ಬಾಣಗಳ ಮಳೆಯನ್ನು ಸುರಿಸಿದನು. ಆಗ ಸಾತ್ಯಕಿಯು ಕೋಪಗೊಂಡನು.
ತತಃ ಸುನಿಶಿತಂ ಭಲ್ಲಂ ಶೈನೇಯಃ ಕೃತವರ್ಮಣೇ।
ಪ್ರೇಷಯಾಮಾಸ ಸಮರೇ ಶರಾಂಶ್ಚ ಚತುರೋಽಪರಾನ್ ॥ 5 ॥
ತೇ ತಸ್ಯ ಜಘ್ನಿರೇ ವಾಹಾನ್ ಭಲ್ಲೇನಾಸ್ಯಾಚ್ಛಿನದ್ ಧನುಃ।
ಪೃಷ್ಠರಕ್ಷಂ ತಥಾ ಸೂತಮವಿಧ್ಯನ್ನಿಶಿತೈಃ ಶರೈಃ ॥ 6 ॥
ಆಗ ಸಾತ್ಯಕಿಯು ಕೃತವರ್ಮನನ್ನು ತೀಕ್ಷ್ಣವಾದ ಭಲ್ಲದಿಂದಲೂ ಮತ್ತು ಬೇರೆ ನಾಲ್ಕು ಬಾಣಗಳಿಂದಲೂ ಹೊಡೆದನು. ಆ ಬಾಣಗಳು ಕೃತವರ್ಮನ ರಥದ ನಾಲ್ಕು ಅಶ್ವಗಳನ್ನು ಕೊಂದವು. ಭಲ್ಲವು ಅವನ ಧನುಸ್ಸನ್ನು ಕತ್ತರಿಸಿತು. ಸಾತ್ಯಕಿಯು ಬೇರೆ ಬಾಣಗಳನ್ನು ಪ್ರಯೋಗಿಸಿ ಹಿಂದಿನಿಂದ ಅವನಿಗೆ ರಕ್ಷಣೆಯನ್ನು ಕೊಡುವವನನ್ನು ಮತ್ತು ಅವನ ರಥದ ಸೂತನನ್ನು ಹೊಡೆದು ಕೊಂದನು.
ತತಸ್ತಂ ವಿರಥಂ ಕೃತ್ವಾ ಸಾತ್ಯಕಿಃ ಸತ್ಯವಿಕ್ರಮಃ।

ಸೇನಾಮಸ್ಯಾರ್ದಯಾಮಾಸ ಶರೈಃ ಸನ್ನತಪರ್ವಭಿಃ ॥ 7 ॥
ಸತ್ಯಪರಾಕ್ರಮವುಳ್ಳ ಸಾತ್ಯಕಿಯು ಆಗ ಕೃತವರ್ಮನನ್ನು ರಥಹೀನನ್ನಾಗಿ ಮಾಡಿ, ಬಾಗಿದ ತುದಿಯುಳ್ಳ ಬಾಣಗಳಿಂದ ಅವನ ಸೈನ್ಯವನ್ನು ಪೀಡಿಸಿದನು.
ಸಾಭಜ್ಯತಾಥ ಪೃತನಾ ಶೈನೇಯಶರಪೀಡಿತಾ |
ತತಃ ಪ್ರಾಯಾದ್ ವೈ ತ್ವರಿತಃ ಸಾತ್ಯಕಿಃ ಸತ್ಯವಿಕ್ರಮಃ ॥ 8 ॥
ಶೃಣು ರಾಜನ್ ಯದಕರೋತ್ತ್ರವ ಸೈನ್ಯೇಷು ವೀರ್ಯವಾನ್ |
ಅತೀತ್ಯ ಸ ಮಹಾರಾಜ ದ್ರೋಣಾನೀಕಮಹಾರ್ಣವಮ್ ॥ 9 ॥
ಸಾತ್ಯಕಿಯ ಬಾಣಗಳಿಂದ ಪೀಡಿತವಾದ ಆ ಸೈನ್ಯವು ಭಗ್ನವಾಯಿತು. ಎಲೈ ರಾಜನೇ, ಸತ್ಯಪರಾಕ್ರಮವುಳ್ಳ ಶೂರನಾದ ಸಾತ್ಯಕಿಯು ಅಲ್ಲಿಂದ ಹೊರಟು ದ್ರೋಣರ ಸೈನ್ಯದ ಮಹಾಸಮುದ್ರವನ್ನು ದಾಟಿ ನಿನ್ನ ಸೈನ್ಯದಲ್ಲಿ ಏನು ಮಾಡಿದನೆಂಬುದನ್ನು ಕೇಳು.
ಪರಾಜಿತ್ಯ ಚ ಸಂಹೃಷ್ಟಃ ಕೃತವರ್ಮಾಣಮಾಹವೇ |
ಯಂತಾರಮಬ್ರವೀಚ್ಛೂರಃ ಶನೈರ್ಯಾಹೀತ್ಯಸಂಭ್ರಮಮ್ ॥ 10 ॥
ಶೂರನಾದ ಸಾತ್ಯಕಿಯು ಯುದ್ಧದಲ್ಲಿ ಕೃತವರ್ಮನನ್ನು ಸೋಲಿಸಿ ಸಂತೋಷಗೊಂಡು ತನ್ನ ಸಾರಥಿಯನ್ನು ಕುರಿತು ಗಾಬರಿಯಿಲ್ಲದೆ ನಿಧಾನವಾಗಿ ಹೋಗು ಎಂದು ಹೇಳಿದನು.
ದೃಷ್ಟ್ವಾ ತು ತವ ತತ್ ಸೈನ್ಯಂ ರಥಾಶ್ವದ್ವಿಪಸಂಕುಲಮ್ |
ಪದಾತಿಜನಸಂಪೂರ್ಣಮಬ್ರವೀತ್ ಸಾರಥಿಂ ಪುನಃ ॥ 11 ॥
ರಥಾಶ್ವ-ಗಜ-ಪದಾತಿಗಳಿಂದ ತುಂಬಿದ್ದ ನಿನ್ನ ಆ ಸೈನ್ಯವನ್ನು ನೋಡಿ ಪುನಃ ತನ್ನ ಸಾರಥಿಯನ್ನು ಕುರಿತು ಹೇಳಿದನು.
ಯದೇತನ್ಮೇಘಸಂಕಾಶಂ ದ್ರೋಣಾನೀಕಸ್ಯ ಸವ್ಯತಃ |
ಸುಮಹತ್ ಕುಂಜರಾನೀಕಂ ಯಸ್ಯ ರುಗ್ಮರಥೋ ಮುಖಮ್ ॥ 12॥
ಏತೇ ಹಿ ಬಹವಃ ಸೂತ ದುರ್ನಿವಾರ್ಯಾಶ್ಚ ಸಂಯುಗೇ |
ದುರ್ಯೋಧನಸಮಾದಿಷ್ಟಾ ತದರ್ಥೇ ತ್ಯಕ್ತಜೀವಿತಾಃ |
ರಾಜಪುತ್ರಾ ಮಹೇಷ್ವಾಸಾಃ ಸರ್ವೇ ವಿಕ್ರಾಂತಯೋಧಿನಃ ॥ 13 ॥
ತ್ರಿಗರ್ತಾನಾಂ ರಥೋದಾರಾಃ ಸುವರ್ಣವಿಕೃತಧ್ವಜಾಃ |
ಮಾಮೇವಾಭಿಮುಖಾ ವೀರಾ ಯೋತ್ಸ್ಯಮಾನಾ ವ್ಯವಸ್ಥಿತಾಃ ॥ 14 ॥
ದ್ರೋಣರ ಸೈನ್ಯದ ಎಡಭಾಗದಲ್ಲಿ ರುಗ್ಮರಥನನ್ನು ಮುಂದಿಟ್ಟುಕೊಂಡಿರುವ ಮೋಡಗಳನ್ನು ಹೋಲುವ ದೊಡ್ಡ ಗಜಸೇನೆ ಇದೆಯಷ್ಟೆ? ಎಲೈ ಸೂತನೇ, ಇವರೆಲ್ಲರೂ ಮಹಾಧನುರ್ಧಾರಿಗಳಾದ ರಾಜಪುತ್ರರು. ಪರಾಕ್ರಮದಿಂದ ಯುದ್ಧವನ್ನು ಮಾಡುವವರು. ಯುದ್ಧದಲ್ಲಿ ತಡೆಯಲು ಕಷ್ಟಸಾಧ್ಯರಾದವರು. ದುರ್ಯೋಧನನ ಆಜ್ಞೆಯಂತೆ ಅವನ ಸಲುವಾಗಿ ಪ್ರಾಣಗಳನ್ನು ಬಿಡಲು ಸಿದ್ಧರಾದವರು. ಸುವರ್ಣಾಲಂಕೃತವಾದ ಧ್ವಜಗಳನ್ನು ಹೊಂದಿರುವ ಇವರು ತ್ರಿಗರ್ತರ ರಥಶ್ರೇಷ್ಠರು. ವೀರರಾದ ಇವರು ನನ್ನ ಜೊತೆಯಲ್ಲಿಯೇ ಯುದ್ಧಮಾಡಲು ನನಗೆ ಅಭಿಮುಖವಾಗಿ ನಿಂತಿದ್ದಾರೆ.
ಅತ್ರ ಮಾಂ ಪ್ರಾಪಯ ಕ್ಷಿಪ್ರಮಶ್ವಾಂಶ್ಚೋದಯ ಸಾರಥೇ |
ತ್ರಿಗರ್ತೈಃ ಸಹ ಯೋತ್ಸ್ಯಾಮಿ ಭಾರದ್ವಾಜಸ್ಯ ಪಶ್ಯತಃ ॥ 15 ॥
ಎಲೈ ಸಾರಥಿಯೇ, ಅಲ್ಲಿಗೆ ಅಶ್ವಗಳನ್ನು ಪ್ರಚೋದಿಸಿ, ನನ್ನನ್ನು ಬೇಗ ಕರೆದುಕೊಂಡು ಹೋಗು. ದ್ರೋಣರು ನೋಡುತ್ತಿರುವಂತೆಯೇ ನಾನು ತ್ರಿಗರ್ತರ ಜೊತೆಯಲ್ಲಿ ಯುದ್ಧವನ್ನು ಮಾಡುವೆನು (ಎಂದು ಹೇಳಿದನು).
ಸಂಜಯಃ
ತತಃ ಪ್ರಾಯಾಚ್ಛನೈಃ ಸೂತಃ ಸಾತ್ವತಸ್ಯ ಮತೇ ಸ್ಥಿತಃ |
ರಥೇನಾದಿತ್ಯವರ್ಣೇನ ಭಾಸ್ವರೇಣ ಪತಾಕಿನಾ ॥ 16 ॥
ಸಂಜಯ ಆಗ ಸಾರಥಿಯು ಪ್ರಕಾಶಮಾನವಾದ ಸೂರ್ಯವರ್ಣದ ಪತಾಕೆಗಳಿಂದ ಕೂಡಿದ ರಥವನ್ನು ಸಾತ್ಯಕಿಯ ಅಭಿಪ್ರಾಯದಂತೆ ನಿಧಾನವಾಗಿ ಮುಂದೆ ತೆಗೆದುಕೊಂಡು ಹೋದನು.
ತಮೂಹುಃ ಸಾರಥೇರ್ವಶ್ಯಾ ವಲ್ಗಮಾನಾ ಹಯೋತ್ತಮಾಃ |
ವಾಯುವೇಗಸಮಾಃ ಸಂಖ್ಯೇ ಕುಂದೇಂದುರಜತಪ್ರಭಾಃ ॥ 17 ॥
ವಾಯುವೇಗಕ್ಕೆ ಸಮಾನವಾದ ವೇಗವನ್ನು ಹೊಂದಿದ, ಕುಂದ ಪುಷ್ಪಗಳ, ಚಂದ್ರನ ಮತ್ತು ರಜತದ ಕಾಂತಿಯನ್ನು ಹೊಂದಿದ, ಸಾರಥಿಯ ವಶವಾದ ಅವನ ಶ್ರೇಷ್ಠವಾದ ಕುದುರೆಗಳು ರಣರಂಗದಲ್ಲಿ ಕೆನೆಯುತ್ತಾ ಅವನನ್ನು ಎಳೆದುಕೊಂಡು ಹೋದವು.
ಆಪತಂತಂ ರಥಂ ತಂ ತು ಶಂಖವರ್ಣೈರ್ಹಯೋತ್ತಮೈಃ |
ಪರಿವವ್ರುಸ್ತತಃ ಶೂರಾ ಗಜಾನೀಕೇನ ಸರ್ವತಃ |
ಕಿರಂತೋ ವಿವಿಧಾಂಸ್ತೀಕ್ಷ್ಣಾನ್ ಸಾಯಕಾಲ್ಲಘುವೇಧಿನಃ ॥ 18 ॥
ಶಂಖವರ್ಣದ ಶ್ರೇಷ್ಠ ಅಶ್ವಗಳಿಂದ ಕೂಡಿದ ಆ ರಥವು ತಮ್ಮ ಕಡೆಗೆ ಬರುತ್ತಿರುವುದನ್ನು ನೋಡಿ, ಶೂರರೂ, ಕ್ಷಿಪ್ರವಾಗಿ ಬಾಣಗಳನ್ನು ಪ್ರಯೋಗಿಸುವವರೂ ಆದ ನಿನ್ನ ಯೋಧರು ಅನೇಕ ವಿಧವಾದ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಗಜಸೇನೆಯ ಜೊತೆಯಲ್ಲಿ ಎಲ್ಲ ಕಡೆಗಳಲ್ಲಿಯೂ ಅವನನ್ನು ಸುತ್ತುವರಿದರು.
ಸಾತ್ವತೋಽಪಿ ಶಿತೈರ್ಬಾಣೈರ್ಗಜಾನೀಕಮಯೋಧಯತ್ |
ಪರ್ವತಾನಿವ ವರ್ಷೇಣ ತಪಾಂತೇ ಜಲದೋ ಮಹಾನ್ ॥ 19 ॥
ಬೇಸಿಗೆಯು ಕಳೆದು ಮಳೆಗಾಲವು ಬಂದಾಗ ದೊಡ್ಡ ಮೋಡವು ಪರ್ವತಗಳ ಮೇಲೆ ಮಳೆಯನ್ನು ಸುರಿಸುವಂತೆ ಸಾತ್ಯಕಿಯೂ ಕೂಡ

ಹರಿತವಾದ ಬಾಣಗಳಿಂದ ಗಜಸೇನೆಯನ್ನು ಹೊಡೆದನು.
ವಜ್ರಾಶನಿಸಮಸ್ಪರ್ಶೈರ್ವಧ್ಯಮಾನಾಃ ಶರೈರ್ಗಜಾಃ |
ಪ್ರಾದ್ರುವನ್ ರಣಮುತ್ಸೃಜ್ಯ ಶಿನಿವೀರ್ಯಸಮೀರಿತೈಃ ॥ 20 ॥
ಸಾತ್ಯಕಿಯಿಂದ ಶ್ರೇಷ್ಠ ಬಲದಿಂದ ಪ್ರಯೋಗಿಸಲ್ಪಟ್ಟು ವಜ್ರಾಯುಧಕ್ಕೆ ಮತ್ತು ಸಿಡಿಲಿಗೆ ಸಮಾನವಾದ ಸ್ಪರ್ಶವುಳ್ಳ ಬಾಣಗಳಿಂದ ಹೊಡೆಯಲ್ಪಟ್ಟ ಗಜಗಳು ಯುದ್ಧ ಭೂಮಿಯನ್ನು ಬಿಟ್ಟು ಓಡಿಹೋದವು.
ಶೀರ್ಣದಂತಾ ವಿರುಧಿರಾ ಭಿನ್ನಮಸ್ತಕಪಿಂಡಕಾಃ |
ವಿಶೀರ್ಣಕರ್ಣಾಸ್ಯಕರಾ ವಿನಿಯನ್ತೃಪತಾಕಿನಃ ॥ 21 ॥
ಸಂಭಿನ್ನವರ್ಮಘಂಟಾಶ್ಚ ಸನ್ನಿಕೃತ್ತಮಹಾಧ್ವಜಾಃ |
ಹತಾರೋಹಾ ದಿಶೋ ರಾಜನ್ ಭೇಜಿರೇ ಭ್ರಷ್ಟಕಂಬಳಾಃ ॥ 22 ॥
ತಮ್ಮ ದಂತಗಳು ಮುರಿಯಲ್ಪಟ್ಟು, ಶಿರಸ್ಸುಗಳು ಮತ್ತು ಶರೀರವು ಭೇದಿಸಲ್ಪಟ್ಟು ಕರ್ಣಗಳು, ಸೊಂಡಿಲು ಮತ್ತು ಮುಖಗಳು ಭಗ್ನಗೊಳಿಸಲ್ಪಟ್ಟು, ಸಾರಥಿ ಮತ್ತು ಪತಾಕೆಗಳಿಂದ ಹೀನಗಳಾಗಿ, ಕವಚಗಳು ಮತ್ತು ಗಂಟೆಗಳು ಭೇದಿಸಲ್ಪಟ್ಟು, ಬೆನ್ನಿನ ಮೇಲೆ ಹಾಸಿದ ಕಂಬಳಿಗಳು ಜಾರಿಹೋಗಿ, ಧ್ವಜಗಳು ಕತ್ತರಿಸಲ್ಪಟ್ಟು, ಗಜಾರೋಹಿಗಳು ಮೃತರಾಗಿ, ಆ ಗಜಗಳು ದಿಕ್ಕುದಿಕ್ಕುಗಳಿಗೆ ಓಡಿಹೋದವು.
ರುವಂತೋ ವಿವಿಧಾನ್ ರಾವಾನ್ ಜಲದೋಪಮನಿಸ್ವನಾಃ |
ನಾರಾಚೈರ್ವತ್ಸದಂತೈಶ್ಚ ಸಾತ್ವತೇನ ವಿದಾರಿತಾಃ ॥
ಕ್ಷರಂತೋಽಸೃಕ್ ತಥಾ ಮೂತ್ರಂ ಪುರೀಷಂ ಚ ಪ್ರದುದ್ರುವುಃ |
ಬಭ್ರಮುಶ್ಚಾಸ್ಖಲಂಶ್ಚಾನ್ಯೇ ಮಮ್ರುಶ್ಚೈವ ತಥಾಪರೇ ॥
ಏವಂ ತತ್ಕುಂಜರಾನೀಕಂ ಯುಯುಧಾನೇನ ಪಾತಿತಮ್ | ಶರೈರಗ್ನ್ಯರ್ಕಸಂಕಾಶೈಃ ಪ್ರದುದ್ರಾವ ಸಮಂತತಃ ॥ 23 ॥
ಸಾತ್ವತ ಕುಲದ ಸಾತ್ಯಕಿಯಿಂದ ನಾರಾಚಗಳಿಂದಲೂ ಮತ್ತು ವತ್ಸದಂತಗಳಿಂದಲೂ ಸೀಳಲ್ಪಟ್ಟ, ಮೇಘಗರ್ಜನೆಯಂತಹ ಘೋಷವನ್ನು ಹೊಂದಿದ ಆ ಗಜಗಳು ವಿಧವಿಧವಾಗಿ ಕಿರುಚುತ್ತಾ ರಕ್ತವನ್ನು, ಮಲ-ಮೂತ್ರಗಳನ್ನೂ ಸ್ರವಿಸುತ್ತಾ ಓಡಿ ಹೋದವು. ಕೆಲವು ಅಲ್ಲಿಯೇ ತಿರುಗಾಡಿದವು, ಇನ್ನು ಕೆಲವು ಎಡವಿದವು, ಇನ್ನು ಕೆಲವು ಮೃತವಾದವು. ಹೀಗೆ ಸಾತ್ಯಕಿಯಿಂದ ಅಗ್ನಿ-ಸೂರ್ಯರಿಗೆ ಸಮನಾದ ಕಾಂತಿಯುಳ್ಳ ಬಾಣಗಳಿಂದ ಹೊಡೆಯಲ್ಪಟ್ಟ ಆ ಗಜಸೇನೆಯು ಎಲ್ಲ ಕಡೆಯಲ್ಲಿಯೂ ಓಡಿಹೋಯಿತು.
ತಸ್ಮಿನ್ ದ್ರುತೇ ಗಜಾನೀಕೇ ಜಲಸಂಧೋ ಮಹಾರಥಃ |
ಯತ್ತಃ ಸಂಪ್ರಾಪಯನ್ನಾಗಂ ರಜತಾಶ್ವರಥಂ ಪ್ರತಿ ॥ 24 ॥
ಆ ಗಜಸೇನೆಯು ಆ ರೀತಿಯಲ್ಲಿ ಓಡಿಹೋಗುತ್ತಿರಲು ಮಹಾರಥನಾದ ಜಲಸಂಧನು ರಜತಬಣ್ಣದ ಅಶ್ವಗಳನ್ನು ಹೂಡಿದ ರಥವನ್ನು ಹೊಂದಿದ್ದ ಸಾತ್ಯಕಿಯ ಮೇಲೆ ಪ್ರಯತ್ನಪೂರ್ವಕವಾಗಿ ತನ್ನ ಗಜವನ್ನು ಪ್ರೇರಿಸಿದನು.
ರುಗ್ಮವರ್ಣಕರಃ ಶೂರಸ್ತಪನೀಯಾಂಗದಃ ಶುಚಿಃ |
ಕುಂಡಲೀ ಮುಕುಟೀ ಶಂಖೀ ರಕ್ತಚಂದನರೂಷಿತಃ ॥ 25 ॥
ಶಿರಸಾ ಧಾರಯನ್ ದೀಪ್ತಾಂ ತಪನೀಯಮಯೀಂ ಸ್ರಜಮ್ |
ಉರಸಾ ಧಾರಯನ್ನಿಷ್ಕಂ ಕಂಠಸೂತ್ರಂ ಚ ಭಾಸ್ವರಮ್ ॥ 26 ॥
ಚಾಪಂ ಚ ರುಗ್ಮವಿಕೃತಂ ವಿಧುನ್ವನ್ ಗಜಮೂರ್ಧನಿ |
ಅಶೋಭತ ಮಹಾರಾಜ ಸವಿದ್ಯುದಿವ ತೋಯದಃ ॥ 27 ॥
ಸುವರ್ಣಮಯವಾದ ಕವಚವನ್ನು ಧರಿಸಿದ, ಸುವರ್ಣಮಯವಾದ ಅಂಗದವನ್ನು ಧರಿಸಿದ, ಕುಂಡಲಗಳನ್ನೂ ಕಿರೀಟವನ್ನೂ ಧರಿಸಿ ರಕ್ತಚಂದನದಿಂದ ಲೇಪಿತನಾದ, ಕೈಯಲ್ಲಿ ಶಂಖವನ್ನು ಹಿಡಿದ, ಶುಚಿಯಾದ, ಶಿರಸ್ಸಿನಲ್ಲಿ ಸುವರ್ಣಮಯವಾದ ಪ್ರಕಾಶಮಾನವಾದ ಮಾಲೆಯನ್ನು ಧರಿಸಿದ, ಎದೆಯಲ್ಲಿ ನಿಷ್ಕಗಳನ್ನೂ ಮತ್ತು ಪ್ರಕಾಶಮಾನವಾದ ಕಂಠಸೂತ್ರವನ್ನೂ ಧರಿಸಿದ, ಶೂರನಾದ ಜಲಸಂಧನು ಎಲೈ ಮಹಾರಾಜನೇ, ತನ್ನ ಗಜದ ಶಿರಸ್ಸಿನಲ್ಲಿ ಸುವರ್ಣಾಲಂಕೃತವಾದ ಧನುಸ್ಸನ್ನು ಕಂಪಿಸುತ್ತಾ, ಮಿಂಚುಗಳಿಂದ ಕೂಡಿದ ಮೋಡದಂತೆ ಶೋಭಿಸಿದನು.
ತಮಾಪತಂತಂ ಸಹಸಾ ಮಾಗಧಸ್ಯ ಗಜೋತ್ತಮಮ್ |
ಸಾತ್ಯಕಿರ್ವಾರಯಾಮಾಸ ವೇಲೇವೋದ್ವೃತ್ತಮರ್ಣವಮ್ ॥ 28 ॥
ವೇಗವಾಗಿ ಬರುತ್ತಿದ್ದ ಮಗಧರಾಜನ ಶ್ರೇಷ್ಠವಾದ ಆ ಗಜವನ್ನು ಕ್ರುದ್ಧವಾದ ಸಮುದ್ರವನ್ನು ತೀರವು ತಡೆದಂತೆ ಸಾತ್ಯಕಿಯು ತಡೆದನು.
ನಾಗಂ ನಿವಾರಿತಂ ದೃಷ್ಟ್ವಾ ಶೈನೇಯಸ್ಯ ಶರೋತ್ತಮೈಃ |
ಅಕ್ರುದ್ಧ್ಯತ ರಣೇ ರಾಜನ್ ಜಲಸಂಧೋ ಮಹಾಬಲಃ ॥ 29 ॥
ಸಾತ್ಯಕಿಯ ಶ್ರೇಷ್ಠ ಬಾಣಗಳಿಂದ ತನ್ನ ಗಜವು ತಡೆಯಲ್ಪಟ್ಟುದನ್ನು ನೋಡಿ ಎಲೈ ರಾಜನೇ, ಮಹಾಬಲನಾದ ಜಲಸಂಧನು ರಣರಂಗದಲ್ಲಿ ಕೋಪಗೊಂಡನು.
ತತಃ ಕ್ರುದ್ಧೋ ಮಹೇಷ್ವಾಸೋ ಮಾರ್ಗಣೈರ್ಭಾರಸಾಧನೈಃ |
ಅವಿದ್ಯತ ಶಿನೇಃ ಪೌತ್ರಂ ಜಲಸಂಧೋ ಮಹೋರಸಿ |
ಸ ವಾರ್ಯಮಾಣೋ ಬಾಣೌಘೈಃ ಶೈನೇಯೇನಾಥ ವೀರ್ಯವಾನ್ ॥
ಸಾತ್ಯಕಿಯು ಪ್ರಯೋಗಿಸಿದ ಬಾಣಗಳ ಸಮೂಹದಿಂದ ತಡೆಯಲ್ಪಟ್ಟ ಪರಾಕ್ರಮಶಾಲಿಯಾದ ಮಹಾಧನುರ್ಧಾರಿಯಾದ

ಜಲಸಂಧನು ಕೋಪಗೊಂಡು ಗುರುತರಕಾರ್ಯವನ್ನು ಮಾಡುವ ತನ್ನ ಬಾಣಗಳಿಂದ ಸಾತ್ಯಕಿಯನ್ನು ಅವನ ವಿಶಾಲವಾದ ವಕ್ಷಸ್ಸ್ಥಲದಲ್ಲಿ ಹೊಡೆದನು.
ತತೋಪರೇಣ ಭಲ್ಲೇನ ಪೀತೇನ ನಿಶಿತೇನ ಚ |
ಅಸ್ಯತೋ ವೃಷ್ಣಿವೀರಸ್ಯ ನಿಚಕರ್ತ ಶರಾಸನಮ್ ॥ 31 ॥
ಅನಂತರ ನೀರನ್ನು ಕುಡಿಸಿ ತೀಕ್ಷ್ಣಗೊಳಿಸಿದ ಇನ್ನೊಂದು ಭಲ್ಲದಿಂದ ಬಾಣವನ್ನು ಪ್ರಯೋಗಿಸಲು ಉದ್ಯುಕ್ತನಾಗಿದ್ದ ವೃಷ್ಣಿವೀರನಾದ ಸಾತ್ಯಕಿಯ ಧನುಸ್ಸನ್ನು ಕತ್ತರಿಸಿದನು.
ಸಾತ್ಯಕಿಂ ಛಿನ್ನಧನ್ವಾನಂ ಪ್ರಹಸನ್ನಿವ ಭಾರತ |
ಅವಿಧ್ಯನ್ಮಾಗಧೋ ವೀರಃ ಪಂಚಭಿರ್ನಿಶಿತೈಃ ಶರೈಃ ॥ 32 ॥
ಎಲೈ ಭಾರತನೇ, ಧನುಸ್ಸು ಕತ್ತರಿಸಲ್ಪಟ್ಟ ಸಾತ್ಯಕಿಯ ಮೇಲೆ ವೀರನಾದ, ಮಗಧರಾಜನಾದ ಅವನು ನಗುವವನಂತೆ ತೀಕ್ಷ್ಣವಾದ ಐದು ಬಾಣಗಳನ್ನು ಪ್ರಯೋಗಿಸಿದನು.
ಸ ವಿದ್ಧೋ ಬಹುಭಿರ್ಬಾಣೈರ್ಜಲಸಂಧೇನ ವೀರ್ಯವಾನ್ |
ನಾಕಂಪತ ಮಹಾಬಾಹುಸ್ತದದ್ಭುತಮಿವಾಭವತ್ ॥ 33 ॥
ಜಲಸಂಧನಿಂದ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟರೂ ಪರಾಕ್ರಮಶಾಲಿಯೂ ಮಹಾಬಾಹುವೂ ಆದ ಸಾತ್ಯಕಿಯು ಅಲುಗಾಡಲಿಲ್ಲ. ಅದು ಅದ್ಭುತವಾಗಿದ್ದಿತು.
ಅಚಿಂತಯನ್ ವೈ ಸ ಶರಾನ್ನಾತ್ಯರ್ಥಂ ಸಂಭ್ರಮಾದ್ ಬಲೀ |
ಧನುರನ್ಯತ್ ಸಮಾದಾಯ ತಿಷ್ಠ ತಿಷ್ಠೇತ್ಯುವಾಚ ಹ ॥ 34 ॥
ಬಲಿಷ್ಠನಾದ ಸಾತ್ಯಕಿಯು ಆ ಬಾಣಗಳನ್ನು ಗಣನೆಗೇ ತೆಗೆದುಕೊಳ್ಳದೆ ಬಹಳ ಗಾಬರಿಯನ್ನು ಹೊಂದದೆ, ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಜಲಸಂಧನನ್ನು ಕುರಿತು ನಿಲ್ಲು, ನಿಲ್ಲು ಎಂದು ಹೇಳಿದನು.
ಏತಾವದುಕತ್ವಾ ಶೈನೇಯೋ ಜಲಸಂಧಂ ಮಹೋರಸಿ |
ವಿವ್ಯಾಧ ಷಷ್ಟ್ಯಾ ಸುಭೃಶಂ ಶರಾಣಾಂ ಪ್ರಹಸನ್ನಿವ ॥ 35 ॥
ಹೀಗೆ ಹೇಳಿ ಸಾತ್ಯಕಿಯು ನಗುವವನಂತೆ ಅರವತ್ತು ತೀಕ್ಷ್ಣವಾದ ಬಾಣಗಳಿಂದ ಜಲಸಂಧನನ್ನು ಅವನ ಎದೆಯಲ್ಲಿ ಹೊಡೆದನು.
ಕ್ಷುರಪ್ರೇಣ ಚ ಪೀತೇನ ಮುಷ್ಟಿದೇಶೇ ಮಹದ್ಧನುಃ |
ಜಲಸಂಧಸ್ಯ ಚಿಚ್ಛೇದ ವಿವ್ಯಾಧ ಚ ತ್ರಿಭಿಃ ಶರೈಃ ॥ 36 ॥
ನೀರನ್ನು ಕುಡಿಸಿ ಹದಮಾಡಿದ ಒಂದು ಕ್ಷುರಪ್ರದಿಂದ ಜಲಸಂಧನ ದೊಡ್ಡ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿ ಅವನನ್ನು ಮೂರು ಬಾಣಗಳಿಂದ ಹೊಡೆದನು.
ಜಲಸಂಧಸ್ತು ತತ್ ತ್ಯಕತ್ವಾ ಸಶರಂ ವೈ ಶರಾಸನಮ್ |
ತೋಮರಂ ವ್ಯಸೃಜತ್ ತೂರ್ಣಂ ಸಾತ್ಯಕಿಂ ಪ್ರತಿ ಮಾರಿಷ ॥ 37 ॥
ಎಲೈ ಪೂಜ್ಯನೇ, ಜಲಸಂಧನು ಆ ಧನುಸ್ಸನ್ನು ಮತ್ತು ಬಾಣವನ್ನು ಬಿಟ್ಟು ತೋಮರವನ್ನು ತೆಗೆದುಕೊಂಡು, ಅದನ್ನು ಸಾತ್ಯಕಿಯ ಮೇಲೆ ಶೀಘ್ರವಾಗಿ ಪ್ರಯೋಗಿಸಿದನು.
ಸ ನಿರ್ಭಿದ್ಯ ಭುಜಂ ಸವ್ಯಂ ಮಾಧವಸ್ಯ ಮಹಾರಣೇ |
ಅಭ್ಯಗಾದ್ ಧರಣೀಂ ಘೋರಃ ಶ್ವಸನ್ನಿವ ಮಹೋರಗಃ ॥ 38 ॥
ಘೋರವಾದ ಆ ತೋಮರವು ದೊಡ್ಡ ರಣರಂಗದಲ್ಲಿ ಮಧುಕುಲದಲ್ಲಿ ಜನಿಸಿದ ಸಾತ್ಯಕಿಯ ಎಡಭುಜವನ್ನು ಭೇದಿಸಿಕೊಂಡು ಭುಸುಗುಟ್ಟುವ ದೊಡ್ಡ ಸರ್ಪದಂತೆ ಭೂಮಿಯೊಳಗೆ ಇಳಿಯಿತು.
ನಿರ್ಭಿನ್ನೇ ತು ಭುಜೇ ಸವ್ಯೇ ಸಾತ್ಯಕಿಃ ಸತ್ಯವಿಕ್ರಮಃ |
ತ್ರಿಂಶದ್ಭಿರ್ವಿಶಿಖೈಸ್ತೀಕ್ಷ್ಣೈರ್ಜಲಸಂಧಮತಾಡಯತ್ ॥ 39 ॥
ತನ್ನ ಭುಜವು ಬಹಳ ಗಾಯಗೊಳ್ಳುತ್ತಿರಲು ಸತ್ಯವಿಕ್ರಮನಾದ ಸಾತ್ಯಕಿಯು ಮೂವತ್ತು ತೀಕ್ಷ್ಣವಾದ ಬಾಣಗಳಿಂದ ಜಲಸಂಧನನ್ನು ಹೊಡೆದನು.
ಪ್ರಗೃಹ್ಯ ತು ತತಃ ಖಡ್ಗಂ ಜಲಸಂಧೋ ಮಹಾಬಲಃ |
ಆರ್ಷಭಂ ಚರ್ಮ ಚ ಮಹಚ್ಛತಚಂದ್ರಮಲಂಕೃತಮ್ |
ತತ ಆವಿಧ್ಯ ತಂ ಖಡ್ಗಂ ಸಾತ್ವತಾಯೋತ್ಸಸರ್ಜ ಹ ॥ 40 ॥
ಆಗ ಮಹಾಬಲನಾದ ಜಲಸಂಧನು ಖಡ್ಗವನ್ನು ಮತ್ತು ವೃಷಭಚರ್ಮದ ಹಿಡಿಯುಳ್ಳ ಶತಚಂದ್ರಚಿಹೆನಗಳಿಂದ ಅಲಂಕೃತವಾದ ದೊಡ್ಡ ಗುರಾಣಿಯನ್ನು ತೆಗೆದುಕೊಂಡು, ಖಡ್ಗವನ್ನು ತಿರುಗಿಸಿ ಅದನ್ನು ಸಾತ್ಯಕಿಯ ಮೇಲೆ ಎಸೆದನು.
ಶೈನೇಯಸ್ಯ ಧನುಶ್ಛಿತ್ತ್ವಾ ಸ ಖಡ್ಗೋ ನ್ಯಪತನ್ಮಹೀಮ್ |
ಅಲಾತಚಕ್ರವಚ್ಚೈವ ವ್ಯರೋಚತ ಮಹೀಂ ಗತಃ ॥ 41 ॥
ಆ ಖಡ್ಗವು ಸಾತ್ಯಕಿಯ ಧನುಸ್ಸನ್ನು ಕತ್ತರಿಸಿ ಭೂಮಿಯ ಮೇಲೆ ಬಿದ್ದಿತು. ಭೂಮಿಯ ಮೇಲೆ ಬಿದ್ದ ಆ ಖಡ್ಗವು ಅಲಾತಚಕ್ರದಂತೆ ಶೋಭಿಸಿತು.
ಅಥಾನ್ಯದ್ಧನುರಾದಾಯ ಸರ್ವಕಾಯಾವದಾರಣಮ್ |
ಸಾಲಸ್ಕಂಧಪ್ರತೀಕಾಶಮಿಂದ್ರಾಶನಿಸಮಸ್ವನಮ್ |
ವಿಸ್ಫಾರ್ಯ ವಿವ್ಯಧೇ ಕ್ರುದ್ಧೋ ಜಲಸಂಧಂ ಶರೇಣ ಹ ॥ 42 ॥
ಆಗ ಸಾತ್ಯಕಿಯು ಎಲ್ಲ ಶರೀರವನ್ನೂ ಭೇದಿಸುವ, ಸಾಲವೃಕ್ಷದ ಸ್ಕಂಧದಂತೆ ಸ್ಥೂಲವಾಗಿದ್ದ, ಇಂದ್ರನ ವಜ್ರಾಯುಧಕ್ಕೆ ಸಮವಾದ

ಘೋಷವುಳ್ಳ, ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಕ್ರುದ್ಧನಾಗಿ ಅದನ್ನು ಎಳೆದು ಜಲಸಂಧನನ್ನು ಬಾಣದಿಂದ ಹೊಡೆದನು.
ತತಃ ಸಾಭರಣೌ ಬಾಹೂ ಕ್ಷುರಾಭ್ಯಾಂ ಪರಿಘೋಪಮೌ |
ಸಾಂಗದೌ ಜಲಸಂಧಸ್ಯ ಚಿಚ್ಛೇದ ಪ್ರಹಸನ್ನಿವ ॥ 43 ॥
ಅನಂತರ ನಗುತ್ತಲೇ ಎರಡು ಕ್ಷುರಗಳಿಂದ ಆಭರಣಗಳಿಂದ ಅಲಂಕೃತವಾಗಿದ್ದ, ಭುಜಕೀರ್ತಿಯನ್ನು ಹೊಂದಿದ್ದ, ಕಬ್ಬಿಣದ ಒನಕೆಯಂತಿದ್ದ ಜಲಸಂಧನ ಎರಡು ಬಾಹುಗಳನ್ನು ಕತ್ತರಿಸಿದನು.
ತೌ ಬಾಹೂ ಪರಿಘಪ್ರಖ್ಯೌ ಪೇತತುರ್ಗಜಸತ್ತಮಾತ್ |
ವಸುಂಧರಧರಾದ್ ಭ್ರಷ್ಟೌ ಪಂಚಶೀರ್ಷಾವಿವೋರಗೌ ॥ 44 ॥
ಪರ್ವತದಿಂದ ಬಿದ್ದ ಐದು ಹೆಡೆಯ ಎರಡು ಸರ್ಪಗಳಂತೆ ಒನಕೆಗಳಂತಿದ್ದ ಆ ಬಾಹುಗಳು ಆ ಶ್ರೇಷ್ಠವಾದ ಗಜದಿಂದ ಕೆಳಗೆ ಬಿದ್ದವು.
ತತಃ ಸುದಂಷ್ಟ್ರಂ ಸುಹನು ಚಾರುಕುಂಡಲಮುನ್ನಸಮ್ |
ಕ್ಷುರೇಣಾಸ್ಯ ತೃತೀಯೇನ ಶಿರಶ್ಚಿಚ್ಛೇದ ಸಾತ್ಯಕಿಃ ॥ 45 ॥
ಅನಂತರ ಸಾತ್ಯಕಿಯು ಮೂರನೆಯ ಕ್ಷುರವನ್ನು ಪ್ರಯೋಗಿಸಿ ಒಳ್ಳೆಯ ದಂತಗಳನ್ನು ಹೊಂದಿದ್ದ, ಒಳ್ಳೆಯ ಗಲ್ಲವನ್ನು ಹೊಂದಿದ್ದ, ಮನೋಹರವಾದ ಕುಂಡಲಗಳನ್ನು ಧರಿಸಿದ, ಎತ್ತರವಾದ ಮೂಗನ್ನು ಹೊಂದಿದ್ದ ಜಲಸಂಧನ ಶಿರಸ್ಸನ್ನು ಕತ್ತರಿಸಿದನು.
ತತ್ಪಾತಿತಶಿರೋಬಾಹು ಕಬಂಧಂ ಭೀಮದರ್ಶನಮ್ |
ದ್ವಿರದಂ ಜಲಸಂಧಸ್ಯ ರುಧಿರೇಣಾಭ್ಯಷಿಂಚತ ॥ 46 ॥
ಶಿರಸ್ಸು ಮತ್ತು ಬಾಹುಗಳು ಕತ್ತರಿಸಲ್ಪಟ್ಟ ಘೋರದರ್ಶನವಾದ ಜಲಸಂಧನ ರುಂಡವು ಅವನ ಗಜವನ್ನು ರಕ್ತದಿಂದ ತೋಯಿಸಿತು.
ಜಲಸಂಧಂ ನಿಹತ್ಯಾಜೌ ತ್ವರಮಾಣಸ್ತು ಸಾತ್ವತಃ |
ನೈಷಾದಿಂ ಪಾತಯಾಮಾಸ ಗಜಸ್ಕಂಧಾದ್ ವಿಶಾಂಪತೇ ॥ 47 ॥
ಎಲೈ ರಾಜನೇ, ಸಾತ್ಯಕಿಯು ತ್ವರೆಮಾಡುತ್ತಾ ಯುದ್ಧದಲ್ಲಿ ಜಲಸಂಧನನ್ನು ಕೊಂದು ನಿಷಾದಾಧಿಪತಿಯನ್ನು ಆನೆಯ ಕತ್ತಿನಿಂದ ಕೆಳಗೆ ಉರುಳಿಸಿದನು.
ರುಧಿರೇಣಾವಸಿಕ್ತಾಂಗೋ ಜಲಸಂಧಸ್ಯ ಕುಂಜರಃ |
ವಿಲಂಬಮಾನಮವಹತ್ ಕಬಂಧಂ ಶ್ಲಿಷ್ಟಮಾಸನೇ ॥ 48 ॥
ಜಲಸಂಧನ ಗಜವಾದರೋ ತನ್ನ ಎಲ್ಲ ಶರೀರವೂ ರಕ್ತದಿಂದ ತೋಯಿಸಲ್ಪಟ್ಟು ಬೆನ್ನಿನ ಮೇಲೆ ಆಸನದಲ್ಲಿ ಚೆನ್ನಾಗಿ ಕಟ್ಟಲ್ಪಟ್ಟ ಜಲಸಂಧನ ರುಂಡವು ನೇತಾಡುತ್ತಿರುವಂತೆ ಅವನನ್ನು ಹೊರಗೆ ಕರೆದುಕೊಂಡು ಹೋಯಿತು.
ಶರಾರ್ದಿತಃ ಸಾತ್ವತೇನ ಮರ್ದಮಾನಃ ಸ್ವವಾಹಿನೀಮ್ |
ಘೋರಮಾರ್ತಸ್ವರಂ ಕೃತ್ವಾ ವಿದುದ್ರಾವ ಮಹಾಗಜಃ ॥ 49 ॥
ಆ ಮಹಾಗಜವು ಸಾತ್ಯಕಿಯ ಬಾಣಗಳಿಂದ ಪೀಡಿತವಾಗಿ ಘೋರವಾದ ಆರ್ತನಾದವನ್ನು ಮಾಡುತ್ತಾ, ತನ್ನ ಸೈನ್ಯವನ್ನೇ ತುಳಿದುಕೊಂಡು ಓಡಿಹೋಯಿತು.
ಹಾಹಾಕಾರೋ ಮಹಾನಾಸೀತ್ತವ ಸೈನ್ಯಸ್ಯ ಮಾರಿಷ |
ಜಲಸಂಧಂ ಹತಂ ದೃಷ್ಟ್ವಾ ವೃಷ್ಣೀನಾಮೃಷಭೇಣ ಹ ॥ 50 ॥
ಎಲೈ ಪೂಜ್ಯನೇ, ವೃಷ್ಣಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯಿಂದ ಜಲಸಂಧನು ಹತನಾದುದನ್ನು ನೋಡಿ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವು ಉಂಟಾಯಿತು.
ವಿಮುಖಾಶ್ಚಾಭ್ಯಧಾವಂತ ತವ ಯೋಧಾಃ ಸಮಂತತಃ |
ಪಲಾಯನೇ ಕೃತೋತ್ಸಾಹಾ ನಿರುತ್ಸಾಹಾ ದ್ವಿಷಜ್ಜಯೇ ॥ 51 ॥
ನಿನ್ನ ಯೋಧರು ಶತ್ರುಜಯದ ವಿಷಯದಲ್ಲಿ ಉತ್ಸಾಹವನ್ನು ಕಳೆದುಕೊಂಡು ಪಲಾಯನ ಮಾಡುವುದರಲ್ಲಿ ಉತ್ಸಾಹಭರಿತರಾಗಿ ಯುದ್ಧವಿಮುಖರಾಗಿ ಎಲ್ಲ ಕಡೆಗಳಲ್ಲಿಯೂ ಓಡಿಹೋದರು.
ಏತಸ್ಮಿನ್ನಂತರೇ ರಾಜನ್ ದ್ರೋಣಃ ಶಸ್ತ್ರಭೃತಾಂ ವರಃ |
ಅಭ್ಯಯಾಜ್ಜವನೈರಶ್ವೈರ್ಯುಯುಧಾನಂ ಮಹಾರಥಮ್ ॥ 52 ॥
ಎಲೈ ರಾಜನೇ, ಈ ಮಧ್ಯದಲ್ಲಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ವೇಗಶಾಲಿಗಳಾದ ಅಶ್ವಗಳಿಂದ ಮಹಾರಥನಾದ ಯುಯುಧಾನನ ಮೇಲೆ ಎರಗಿದರು.
ತಮುದೀರ್ಣಂ ತಥಾ ದೃಷ್ಟ್ವಾ ಶೈನೇಯಂ ಕುರುಪುಂಗವಾಃ |
ದ್ರೋಣೇನೈವ ಸಹ ಕ್ರುದ್ಧಾಃ ಸಾತ್ಯಕಿಂ ಪರ್ಯವಾರಯನ್ ॥ 53 ॥
ಸಾತ್ಯಕಿಯು ಹಾಗೆ ಬಲದಿಂದ ಅಭಿವೃದ್ಧಿಯನ್ನು ಹೊಂದಿದುದನ್ನು ನೋಡಿ ಕುರುಪುಂಗವರು ಕೋಪಗೊಂಡು ದ್ರೋಣರ ಜೊತೆಯಲ್ಲಿಯೇ ಸಾತ್ಯಕಿಯನ್ನು ಸುತ್ತುವರಿದರು.
ತತಃ ಪ್ರವವೃತೇ ಯುದ್ಧಂ ಕುರೂಣಾಂ ಸಾತ್ವತಸ್ಯ ಚ |
ದ್ರೋಣಸ್ಯ ಚ ರಣೇ ರಾಜನ್ ಘೋರಂ ದೇವಾಸುರೋಪಮಮ್ ॥
ಎಲೈ ರಾಜನೇ, ಅನಂತರ ಕೌರವರಿಗೂ, ದ್ರೋಣರಿಗೂ ಮತ್ತು ಸಾತ್ಯಕಿಗೂ ದೇವಾಸುರರಿಗೆ ಸದೃಶವಾದ ಘೋರವಾದ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚವಿಂಶೋಧ್ಯಾಯಃ ॥

ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಒಂದನೆಯ ಅಧ್ಯಾಯ ಮುಗಿಯಿತು.
* * * * *

ಮಹಾಭಾರತ
ದ್ರೋಣಪರ್ವ
ನೂರ ಎರಡನೆಯ ಅಧ್ಯಾಯ
ಸಾತ್ಯಕಿಯಿಂದ ದುರ್ಯೋಧನ ಮತ್ತು ಕೃತವರ್ಮರ ಪರಾಜಯ.
ಸಂಜಯಃ
ತೇ ಕಿರಂತಃ ಶರವ್ರಾತಾನ್ ಸರ್ವೇ ಯತ್ತಾಃ ಪ್ರಹಾರಿಣಃ |
ತ್ವರಮಾಣಾ ಮಹಾರಾಜ ಯುಯುಧಾನಮಯೋಧಯನ್ ॥ 1 ॥
ಸಂಜಯ ಎಲೈ ಮಹಾರಾಜನೇ, ಪ್ರಹಾರಶೂರರಾದ ಅವರೆಲ್ಲರೂ ಅವಧಾನ ಪೂರ್ವಕವಾಗಿ ಸಾತ್ಯಕಿಯ ಮೇಲೆ ಜಾಗ್ರತೆಯಾಗಿ ಬಾಣಗಳ ಮಳೆಯನ್ನು ಸುರಿಸುತ್ತಾ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತಂ ದ್ರೋಣಃ ಸಪ್ತಸಪ್ತತ್ಯಾ ಜಘಾನ ನಿಶಿತೈಃ ಶರೈಃ |
ದುರ್ಮರ್ಷಣೋ ದ್ವಾದಶಭಿರ್ದುಃಸಹೋ ದಶಭಿಃ ಶರೈಃ ॥ 2 ॥
ದ್ರೋಣರು ಅವನನ್ನು ತೀಕ್ಷ್ಣವಾದ ಎಪ್ಪತ್ತೇಳು ಬಾಣಗಳಿಂದಲೂ, ದುರ್ಮರ್ಷಣನು ಹನ್ನೆರಡು ಬಾಣಗಳಿಂದಲೂ, ದುಸ್ಸಹನು ಹತ್ತು ಬಾಣಗಳಿಂದಲೂ ಹೊಡೆದರು.
ವಿಕರ್ಣಶ್ಚಾಪಿ ನಿಶಿತೈಸ್ತ್ರಿಂಶದ್ಭಿಃ ಕಂಕಪತ್ರಿಭಿಃ |
ವಿವ್ಯಾಧ ಸವ್ಯೇ ಪಾರ್ಶ್ವೇ ತು ಸ್ತನಾಭ್ಯಾಮಂತರೇ ತಥಾ ॥ 3 ॥
ವಿಕರ್ಣನೂ ಸಹ ಕಂಕಪತ್ರಗಳನ್ನು ಹೊಂದಿದ್ದ, ತೀಕ್ಷ್ಣವಾದ ಮೂವತ್ತು ಬಾಣಗಳಿಂದ ಸಾತ್ಯಕಿಯ ಎಡಪಕ್ಕೆಯಲ್ಲಿಯೂ ಮತ್ತು ಸ್ತನಗಳ ಮಧ್ಯದಲ್ಲಿಯೂ ಹೊಡೆದನು.
ದುರ್ಮುಖೋ ದಶಭಿರ್ಬಾಣೈಸ್ತಥಾ ದುಃಶಾಸನೋಽಷ್ಟಭಿಃ |
ಚಿತ್ರಸೇನಶ್ಚ ಶೈನೇಯಂ ದ್ವಾಭ್ಯಾಂ ವಿವ್ಯಾಧ ಮಾರಿಷ ॥ 4 ॥
ಎಲೈ ಪೂಜ್ಯನೇ, ದುರ್ಮುಖನು ಹತ್ತು ಬಾಣಗಳಿಂದಲೂ, ದುಶ್ಶಾಸನನು ಎಂಟು ಬಾಣಗಳಿಂದಲೂ ಮತ್ತು ಚಿತ್ರಸೇನನು ಎರಡು ಬಾಣಗಳಿಂದಲೂ ಸಾತ್ಯಕಿಯನ್ನು ಹೊಡೆದರು.
ದುರ್ಯೋಧನಶ್ಚ ಮಹತಾ ಶರವರ್ಷೇಣ ಮಾಧವಮ್ |
ಅಪೀಡಯದ್ ರಣೇ ರಾಜನ್ ಶೂರಾಶ್ಚಾನ್ಯೇ ಮಹಾರಥಾಃ ॥ 5 ॥
ಎಲೈ ರಾಜನೇ, ದುರ್ಯೋಧನನು ದೊಡ್ಡ ಬಾಣಗಳ ಮಳೆಯಿಂದ ಮಧುಕುಲೋತ್ಪನ್ನನಾದ ಸಾತ್ಯಕಿಯನ್ನು ಪೀಡಿಸಿದನು. ಉಳಿದ ಶೂರರಾದ ಮಹಾರಥರೂ ಹಾಗೆಯೇ ಪೀಡಿಸಿದರು.
ಸರ್ವತಃ ಪ್ರತಿವಿದ್ಧಸ್ತು ತವ ಪುತ್ರೈರ್ಮಹಾರಥೈಃ |
ತಾನ್ ಪ್ರತ್ಯವಿದ್ಧ್ಯಚ್ಛೈನೇಯಃ ಪೃಥಕ್ಪೃಥಗಜಿಹ್ಮಗೈಃ ॥ 6 ॥
ಭಾರದ್ವಾಜಂ ತ್ರಿಭಿರ್ಬಾಣೈರ್ದುಃಸಹಂ ನವಭಿಸ್ತಥಾ |
ವಿಕರ್ಣಂ ಪಂಚವಿಂಶತ್ಯಾ ಚಿತ್ರಸೇನಂ ಚ ಸಪ್ತಭಿಃ ॥ 7 ॥
ದುರ್ಮರ್ಷಣಂ ದ್ವಾದಶಭಿಶ್ಚತುರ್ಭಿಶ್ಚ ವಿವಿಂಶತಿಮ್ |
ಸತ್ಯವ್ರತಂ ಚ ನವಭಿರ್ವಿಜಯಂ ದಶಭಿಃ ಶರೈಃ ॥ 8 ॥
ಎಲ್ಲ ಕಡೆಗಳಿಂದಲೂ ಮಹಾರಥರಾದ ನಿನ್ನ ಪುತ್ರರಿಂದ ಹೊಡೆಯಲ್ಪಟ್ಟ ಸಾತ್ಯಕಿಯು ನೇರವಾಗಿ ಸಾಗುವ ಬಾಣಗಳಿಂದ ಅವರನ್ನು ಪ್ರತ್ಯೇಕವಾಗಿ ಹೊಡೆದನು. ದ್ರೋಣರನ್ನು ಮೂರು ಬಾಣಗಳಿಂದಲೂ, ದುಸ್ಸಹನನ್ನು ಒಂಬತ್ತು ಬಾಣಗಳಿಂದಲೂ, ವಿಕರ್ಣನನ್ನು ಇಪ್ಪತ್ತೈದು ಬಾಣಗಳಿಂದಲೂ, ಚಿತ್ರಸೇನನನ್ನು ಏಳು ಬಾಣಗಳಿಂದಲೂ, ದುರ್ಮರ್ಷಣನನ್ನು ಹನ್ನೆರಡು ಬಾಣಗಳಿಂದಲೂ, ವಿವಿಂಶತಿಯನ್ನು ನಾಲ್ಕು ಬಾಣಗಳಿಂದಲೂ, ಸತ್ಯವ್ರತನನ್ನು ಒಂಬತ್ತು ಬಾಣಗಳಿಂದಲೂ, ವಿಜಯನನ್ನು ಹತ್ತು ಬಾಣಗಳಿಂದಲೂ ಹೊಡೆದನು.
ತತೋ ರುಗ್ಮಾಂಗದಂ ಚಾಪಂ ವಿಧುನ್ವಾನೋ ಮಹಾರಥಃ |
ಅಭ್ಯಯಾತ್ ಸಾತ್ಯಕಿಸ್ತೂರ್ಣಂ ಪುತ್ರಂ ತವ ಮಹಾರಥಮ್ ॥ 9 ॥
ಅನಂತರ ಮಹಾರಥನಾದ ಸಾತ್ಯಕಿಯು ನಿನ್ನ ಪುತ್ರನೂ, ಮಹಾರಥನೂ ಧನುಸ್ಸನ್ನು ತೂಗಾಡಿಸುತಿತದ್ದವನೂ ಆದ ಸುವರ್ಣಮಯವಾದ ಅಂಗವನ್ನು ಧರಿಸಿದ್ದ ದುರ್ಯೋಧನನ ಮೇಲೆ ಶೀಘ್ರವಾಗಿ ಸಾಗಿ ಹೋದನು.
ರಾಜಾನಂ ಸರ್ವಲೋಕಸ್ಯ ಸರ್ವಶಸ್ತ್ರಭೃತಾಂ ವರಮ್ |
ಶರೈರಭ್ಯಾಹನದ್ ಗಾಢಂ ತತೋ ಯುದ್ಧಮಭೂತ್ ತಯೋಃ ॥ 10 ॥
ಸರ್ವಲೋಕಕ್ಕೂ ರಾಜನಾದ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅವನನ್ನು ಬಾಣದಿಂದ ಗಾಢವಾಗಿ ಹೊಡೆದನು. ಅನಂತರ ಅವರಿಬ್ಬರಿಗೂ ಯುದ್ಧವು ನಡೆಯಿತು.
ವಿಮುಚ್ಯಂತೌ ಶರಾಂಸ್ತೀಕ್ಷ್ಣಾನ್ ಸಂದಧಾನೌ ಚ ಸಾಯಕಾನ್ |
ಅದೃಶ್ಯಂ ಸಮರೇನ್ಯೋನ್ಯಂ ಚಕ್ರತುಸ್ತೌ ಮಹಾರಥೌ ॥ 11 ॥
ಮಹಾರಥರಾದ ಅವರಿಬ್ಬರೂ ಧನುಸ್ಸುಗಳಲ್ಲಿ ತೀಕ್ಷ್ಣವಾದ ಬಾಣಗಳನ್ನು ಹೂಡುತ್ತಾ, ಅವುಗಳನ್ನು ಪ್ರಯೋಗಿಸುತ್ತಾ

ರಣಭೂಮಿಯಲ್ಲಿ ಪರಸ್ಪರವಾಗಿ ಅದೃಶ್ಯರನ್ನಾಗಿ ಮಾಡಿದರು.
ಸಾತ್ಯಕಿಃ ಕುರುರಾಜೇನ ನಿರ್ವಿದ್ಧೋ ಬಹ್ವಶೋಭತ |
ಅಸ್ರವದ್ ರುಧಿರಂ ಭೂರಿ ಸ್ವರಸಂ ಚಂದನೋ ಯಥಾ ॥ 12 ॥
ಕುರುರಾಜನಿಂದ ಗಾಢವಾಗಿ ಹೊಡೆಯಲ್ಪಟ್ಟ ಸಾತ್ಯಕಿಯು ಬಹಳವಾಗಿ ಶೋಭಿಸಿದನು. ಚಂದನ ವೃಕ್ಷವು ಸ್ವರಸವನ್ನು ಸುರಿಸಿದಂತೆ ಅವನ ದೇಹದಿಂದ ಬಹಳ ರಕ್ತವು ಸುರಿಯಿತು.
ಸಾತ್ವತೇನ ಚ ಬಾಣೌಘೈರ್ನಿರ್ವಿಸ್ತನಯಸ್ತವ |
ಶಾತಕುಂಭಮಯಾಪೀಡೋ ಬಭೌ ಯೂಪ ಇವೋಚ್ಛ್ರಿತಃ ॥ 13 ॥
ಸಾತ್ಯಕಿಯಿಂದ ಬಾಣಗಳ ಸಮೂಹದಿಂದ ಗಾಢವಾಗಿ ಹೊಡೆಯಲ್ಪಟ್ಟ ಸುವರ್ಣಮಯವಾದ ಕಿರೀಟವನ್ನು ಧರಿಸಿದ ನಿನ್ನ ಪುತ್ರನು ಎತ್ತರವಾದ ಯೂಪದಂತೆ ಶೋಭಿಸಿದನು.
ಮಾಧವಸ್ತು ರಣೇ ರಾಜನ್ ಕುರುರಾಜಸ್ಯ ಧನ್ವಿನಃ |
ಧನುಶ್ಚಿಚ್ಛೇದ ಸಹಸಾ ಕ್ಷುರಪ್ರೇಣ ಹಸನ್ನಿವ |
ಅಥೈನಂ ಛಿನ್ನಧನ್ವಾನಂ ಶರೈರ್ಬಹುಭಿರಾಚಿನೋತ್ ॥ 14 ॥
ಎಲೈ ರಾಜನೇ, ಮಾಧವನಾದ ಸಾತ್ಯಕಿಯು ನಗುತ್ತಾ ಕ್ಷುರಪ್ರದಿಂದ ಶೀಘ್ರವಾಗಿ ಧನುರ್ಧಾರಿಯಾದ ಕುರುರಾಜನಾದ ದುರ್ಯೋಧನನ ಧನುಸ್ಸನ್ನು ಕತ್ತರಿಸಿದನು. ಧನುಸ್ಸನ್ನು ಕತ್ತರಿಸಿ ಅನಂತರ ಅನೇಕ ಬಾಣಗಳಿಂದ ಅವನ ಶರೀರವನ್ನು ತುಂಬಿದನು.
ನಿರ್ಭಿನ್ನಶ್ಚ ಶರೈಸ್ತೇನ ದ್ವಿಷತಾ ಕ್ಷಿಪಕಾರಿಣಾ |
ನಾಮೃಷ್ಯತ ರಣೇ ರಾಜಾ ಶತ್ರೋರ್ವಿಜಯಲಕ್ಷಣಮ್ ॥ 15 ॥
ಕ್ಷಿಪ್ರಕಾರಿಯಾದ ಆ ಶತ್ರುವಿನಿಂದ ಆ ರೀತಿಯಲ್ಲಿ ಗಾಯಗೊಳಿಸಲ್ಪಟ್ಟ ರಾಜನಾದ ದುರ್ಯೋಧನನು ರಣರಂಗದಲ್ಲಿ ಶತ್ರುವಿನ ಆ ವಿಜಯ ಚಿಹ್ನೆಯನ್ನು ನೋಡಿ ಸಹಿಸಲಿಲ್ಲ.
ಅಥಾನ್ಯದ್ ಧನುರಾದಾಯ ಹೇಮಪೃಷ್ಠಂ ದುರಾಸದಮ್ |
ವಿವ್ಯಾಧ ಸಾತ್ಯಕಿಂ ತೂರ್ಣಂ ಸಾಯಕಾನಾಂ ಶತೇನ ಹ ॥ 16 ॥
ಆಗ ಅವನು ಸುವರ್ಣಪೃಷ್ಠವನ್ನು ಹೊಂದಿದ ಬಗ್ಗಿಸಲು ಕಷ್ಟಸಾಧ್ಯವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ನೂರು ಬಾಣಗಳನ್ನು ಪ್ರಯೋಗಿಸಿ ಶೀಘ್ರವಾಗಿ ಸಾತ್ಯಕಿಯನ್ನು ಹೊಡೆದನು.
ಸೋಽತಿವಿದ್ಧೋ ಬಲವತಾ ಪುತ್ರೇಣ ತವ ಧನ್ವಿನಾ |
ಅಮರ್ಷವಶಮಾಪನ್ನಸ್ತವ ಪುತ್ರಮಪೀಡಯತ್ ॥ 17 ॥
ಬಲಿಷ್ಠನೂ, ಧನುರ್ಧಾರಿಯೂ ಆದ ನಿನ್ನ ಪುತ್ರನಿಂದ ಗಾಢವಾಗಿ ಹೊಡೆಯಲ್ಪಟ್ಟ ಸಾತ್ಯಕಿಯು ಕ್ರೋಧವಶನಾಗಿ ನಿನ್ನ ಪುತ್ರನನ್ನು ಪೀಡಿಸಿದನು.
ಪೀಡಿತಂ ನೃಪತಿಂ ದೃಷ್ಟ್ವಾ ತವ ಪುತ್ರಾ ಮಹಾರಥಾಃ |
ಸಾತ್ವತಂ ಶರವರ್ಷೇಣ ಛಾದಯಾಮಾಸುರಂಜಸಾ ॥ 18 ॥
ಪೀಡಿತನಾದ ರಾಜನನ್ನು ನೋಡಿ ಮಹಾರಥರಾದ ನಿನ್ನ ಪುತ್ರರು ಬಾಣಗಳ ಮಳೆಯಿಂದ ಸಾತ್ಯಕಿಯನ್ನು ಚೆನ್ನಾಗಿ ಮುಚ್ಚಿದರು.
ಸ ಛಾದ್ಯಮಾನೋ ಬಹುಭಿಸ್ತವ ಪುತ್ರೈರ್ಮಹಾರಥೈಃ |
ಏಕೈಕಂ ಪಂಚಭಿರ್ವಿದ್ಧ್ವಾ ಪುನರ್ವಿವ್ಯಾಧ ಸಪ್ತಭಿಃ ॥ 19 ॥
ಮಹಾರಥರಾದ ನಿನ್ನ ಅನೇಕ ಪುತ್ರರಿಂದ ಆ ರೀತಿಯಲ್ಲಿ ಬಾಣಗಳಿಂದ ಮುಚ್ಚಲ್ಪಟ್ಟ ಅವನು ಅವರಲ್ಲಿ ಒಬ್ಬೊಬ್ಬರನ್ನೂ ಐದು ಬಾಣಗಳಿಂದ ಹೊಡೆದು, ಪುನಃ ಏಳೇಳು ಬಾಣಗಳಿಂದ ಹೊಡೆದನು.
ದುರ್ಯೋಧನಂ ಚ ತ್ವರಿತೋ ವಿವ್ಯಾಧಾಷ್ಟಭಿರಾಶುಗೈಃ |
ಪ್ರಹಸಂಶ್ಚಾಸ್ಯ ಚಿಚ್ಛೇದ ಕಾರ್ಮುಕಂ ರಿಪುಭೀಷಣಮ್ ॥ 20 ॥
ಅನಂತರ ಶೀಘ್ರವಾಗಿ ಶೀಘ್ರಗಾಮಿಗಳಾದ ಎಂಟು ಬಾಣಗಳಿಂದ ನಗುತ್ತಲೇ ದುರ್ಯೋಧನನ ಶತ್ರುಭಯಂಕರವಾದ ಧನುಸ್ಸನ್ನು ಕತ್ತರಿಸಿದನು.
ನಾಗಂ ಮಣಿಮಯಂ ಚೈವ ಶರೈರ್ಧ್ವಜಮಪಾತಯತ್ |
ಹತ್ವಾ ತು ಚತುರೋ ವಾಹಾಂಶ್ಚತುರ್ಭಿರ್ನಿಶಿತೈಃ ಶರೈಃ |
ಸಾರಥಿಂ ಪಾತಯಾಮಾಸ ಕ್ಷುರಪ್ರೇಣ ಮಹಾಯಶಾಃ ॥ 21 ॥
ತನ್ನ ಬಾಣಗಳಿಂದ ಮಣಿಮಯವಾದ ಸರ್ಪವುಳ್ಳ ಅವನ ಧ್ವಜವನ್ನು ಕೆಡವಿ ನಾಲ್ಕು ತೀಕ್ಷ್ಣವಾದ ಬಾಣಗಳಿಂದ ರಥದ ನಾಲ್ಕು ಕುದುರೆಗಳನ್ನು ಕೊಂದು ಮಹಾಕೀರ್ತಿವಂತನಾದ ಸಾತ್ಯಕಿಯು ಕ್ಷುರಪ್ರದಿಂದ ಅವನ ಸಾರಥಿಯನ್ನು ಕೆಡವಿದನು.
ಏತಸ್ಮಿನ್ನಂತರೇ ಚೈವ ಕುರುರಾಜಂ ಮಹಾರಥಮ್ |
ಅವಾಕಿರಚ್ಛರೈರ್ಹೃಷ್ಟೋ ಬಹುಭಿರ್ಮರ್ಮಭೇದಿಭಿಃ ॥ 22 ॥
ಸ ವಧ್ಯಮಾನಃ ಸಮರೇ ಶೈನೇಯಸ್ಯ ಶರೋತ್ತಮೈಃ |
ಪ್ರಾದ್ರವತ್ ಸಹಸಾ ರಾಜನ್ಪುತ್ರೋ ದುರ್ಯೋಧನಸ್ತವ |
ಆಪ್ಲುತಶ್ಚ ತತೋ ಯಾನಂ ಚಿತ್ರಸೇನಸ್ಯ ಧನ್ವಿನಃ ॥ 23 ॥
ಈ ಮಧ್ಯದಲ್ಲಿ ಸಂತೋಷಗೊಂಡ ಸಾತ್ಯಕಿಯು ಮಹಾರಥನಾದ ಕುರುರಾಜನ ಮೇಲೆ ಮರ್ಮಭೇದಿಗಳಾದ ಅನೇಕ ಬಾಣಗಳ ಮಳೆಯನ್ನು ಸುರಿಸಿದನು. ಎಲೈ ರಾಜನೇ, ನಿನ್ನ ಪುತ್ರನಾದ ದುರ್ಯೋಧನನು ರಣರಂಗದಲ್ಲಿ ಸಾತ್ಯಕಿಯ ಶ್ರೇಷ್ಠವಾದ ಬಾಣಗಳಿಂದ

ಹೊಡೆಯಲ್ಪಟ್ಟು ತನ್ನ ರಥದಿಂದ ಧನುರ್ಧಾರಿಯಾದ ಚಿತ್ರಸೇನನ ರಥಕ್ಕೆ ಹಾರಿ ರಣರಂಗದಿಂದ ಓಡಿಹೋದನು.
ಹಾಹಾಭೂತಂ ಜಗಚ್ಚಾಸೀದ್ ದೃಷ್ಟ್ವಾ ರಾಜಾನಮಾಹವೇ |
ಗ್ರಸ್ಯಮಾನಂ ಸಾತ್ಯಕಿನಾ ಖೇ ಸೋಮಮಿವ ರಾಹುಣಾ ॥ 24 ॥
ಆಕಾಶದಲ್ಲಿ ರಾಹುವಿನಿಂದ ಚಂದ್ರನು ನುಂಗಲ್ಪಟ್ಟಂತೆ ಯುದ್ಧದಲ್ಲಿ ಸಾತ್ಯಕಿಯಿಂದ ಕುರುರಾಜನು ನುಂಗಲ್ಪಡುವುದನ್ನು ನೋಡಿ ಜಗತ್ತಿನಲ್ಲಿ ಹಾಹಾಕಾರವುಂಟಾಯಿತು.
ತಂ ತು ಶಬ್ದಂ ಮಹಚ್ಛ್ರುತ್ವಾ ಕೃತವರ್ಮಾ ಮಹಾರಥಃ |
ಅಭ್ಯಯಾತ್ ಸಹಸಾ ತತ್ರ ಯತ್ರಾಸ್ತೇ ಮಾಧವಃ ಪ್ರಭುಃ ॥ 25 ॥
ಆ ದೊಡ್ಡ ಶಬ್ದವನ್ನು ಕೇಳಿದ ಮಹಾರಥನಾದ ಕೃತವರ್ಮನು ಶೀಘ್ರವಾಗಿ ಮಹಾಬಲನಾದ ಸಾತ್ಯಕಿಯು ಇದ್ದಲ್ಲಿಗೆ ಧಾವಿಸಿಬಂದನು.
ವಿಧುನ್ವಾನೋ ಧನುಃಶ್ರೇಷ್ಠಂ ಚೋದಯಂಶ್ಚೈವ ವಾಜಿನಃ |
ಭರ್ತ್ಸಯನ್ ಸಾರಥಿಂ ಚೋಗ್ರಂ ಯಾಹಿ ಯಾಹೀತಿ ಸತ್ವರಃ ॥ 26 ॥
ತನ್ನ ದೊಡ್ಡ ಧನುಸ್ಸನ್ನು ತೂಗಾಡಿಸುತ್ತಾ, ತನ್ನ ಅಶ್ವಗಳನ್ನು ಪ್ರಚೋದಿಸುತ್ತಾ, ಸಾರಥಿಯನ್ನು ಕುರಿತು ಉಗ್ರವಾಗಿ ಶೀಘ್ರವಾಗಿ ಹೋಗು, ಹೋಗು ಎಂದು ಗದರಿಸುತ್ತಾ ಅಲ್ಲಿಗೆ ಬಂದನು.
ತಮಾಪತಂತಂ ಸಂಪ್ರೇಕ್ಷ್ಯ ವ್ಯಾದಿತಾಸ್ಯಮಿವಾಂತಕಮ್ |
ಯುಯುಧಾನೋ ಮಹಾರಾಜ ಯಂತಾರಮಿದಮಬ್ರವೀತ್ ॥ 27 ॥
ಕೃತವರ್ಮಾ ರಥೇನೈಷ ದ್ರುತಮಾಪತತೇ ಶರೀ |
ಪ್ರತ್ಯುದ್ಯಾಹಿ ರಥೇನೈನಂ ಪ್ರವರಂ ಸರ್ವಧನ್ವಿನಾಮ್ ॥ 28 ॥
ಬಾಯಿ ತೆರೆದ ಮೃತ್ಯುವಿನಂತೆ ಅಲ್ಲಿಗೆ ಬಂದ ಕೃತವರ್ಮನನ್ನು ನೋಡಿ ಎಲೈ ಮಹಾರಾಜನೇ, ಸಾತ್ಯಕಿಯು ತನ್ನ ಸಾರಥಿಯನ್ನು ಕುರಿತು- `ಕೈಯಲ್ಲಿ ಬಾಣವನ್ನು ಹಿಡಿದ ಈ ಕೃತವರ್ಮನು ಶೀಘ್ರವಾಗಿ ರಥದಿಂದ ಬರುತ್ತಿದ್ದಾನೆ. ಸರ್ವ- ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅವನ ಕಡೆಗೆ ನನ್ನ ರಥವನ್ನು ತೆಗೆದುಕೊಂಡು ಹೋಗು' ಎಂದು ಹೇಳಿದನು.
ತತಃ ಪ್ರಜವಿತಾಶ್ವೇನ ವಿಧಿವತ್ ಕಲ್ಪಿತೇನ ಚ |
ಆಸಸಾದ ರಣೇ ಭೋಜಂ ಪ್ರತಿಮಾನಂ ಧನುಷ್ಮತಾಮ್ ॥ 29 ॥
ಆಗ ಶಾಸ್ತ್ರೋಕ್ತ ರೀತಿಯಲ್ಲಿ ಸಿದ್ಧಪಡಿಸಿದ ವೇಗಶಾಲಿಯಾದ ಅಶ್ವಗಳನ್ನು ಹೊಂದಿದ ತನ್ನ ರಥದಿಂದ ಧನುರ್ಧಾರಿಗಳಿಗೆ ಆದರ್ಶನಾಗಿದ್ದ ಭೋಜವಂಶದ ಕೃತವರ್ಮನನ್ನು ಸಾತ್ಯಕಿಯು ರಣರಂಗದಲ್ಲಿ ಸಮೀಪಿಸಿದನು.
ತತಃ ಪರಮಸಂಕ್ರುದ್ಧೌ ಜ್ವಲಂತಾವಿವ ಪಾವಕೌ |
ಸಮೇಯಾತಾಂ ನರವ್ಯಾಘ್ರೌ ವ್ಯಾಘ್ರಾವಿವ ತರಸ್ವಿನೌ ॥ 30 ॥
ಅನಂತರ ವೇಗಶಾಲಿಗಳಾದ ಆ ಇಬ್ಬರು ನರಶ್ರೇಷ್ಠರು ಬಹಳ ಕೋಪಗೊಂಡು ಉರಿಯುವ ಅಗ್ನಿಗಳಂತೆ, ವ್ಯಾಘ್ರಗಳಂತೆ ಪರಸ್ಪರವಾಗಿ ಸೆಣೆಸಿದರು.
ಕೃತವರ್ಮಾ ತು ಶೈನೇಯಂ ಷಡ್ವಿಂಶತ್ಯಾ ಸಮಾರ್ಪಯತ್ |
ನಿಶಿತೈಃ ಸಾಯಕೈಸ್ತೀಕ್ಷ್ಣೈರ್ಯಂತಾರಂ ಚಾಸ್ಯ ಸಪ್ತಭಿಃ ॥ 31 ॥
ಕೃತವರ್ಮನು ಸಾತ್ಯಕಿಯನ್ನು ತೀಕ್ಷ್ಣವಾದ ಇಪ್ಪತ್ತಾರು ಬಾಣಗಳಿಂದ ಹೊಡೆದು ಅವನ ಸಾರಥಿಯನ್ನೂ ಏಳು ಬಾಣಗಳಿಂದ ಹೊಡೆದನು.
ಚತುರಶ್ಚ ಹಯೋದಾರಾಂಶ್ಚತುರ್ಭಿಃ ಪರಮೇಷುಭಿಃ |
ಅವಿಧ್ಯತ್ ಸಾಧು ದಾಂತಾನ್ ವೈ ಸೈಂಧವಾನ್ ಸಾತ್ವತಸ್ಯ ಹ ॥ 32 ॥
ಚೆನ್ನಾಗಿ ಪಳಗಿದ ಸೈಂಧವ ದೇಶದ ನಾಲ್ಕು ಶ್ರೇಷ್ಠವಾದ ರಥಾಶ್ವಗಳನ್ನು ಶ್ರೇಷ್ಠವಾದ ನಾಲ್ಕು ಬಾಣಗಳಿಂದ ಚೆನ್ನಾಗಿ ಹೊಡೆದನು.
ರುಗ್ಮಧ್ವಜೋ ರುಗ್ಮಪೃಷ್ಠಂ ಮಹದ್ ವಿಸ್ಫಾರ್ಯ ಕಾರ್ಮುಕಮ್ |
ರುಗ್ಮಾಂಗದೀ ರುಗ್ಮವರ್ಮಾ ರುಗ್ಮಪುಂಖಾನವಾಕಿರತ್ ॥ 33 ॥
ಸುವರ್ಣಮಯವಾದ ಧ್ವಜವುಳ್ಳವನಾಗಿ, ಸುವರ್ಣಮಯವಾದ ಅಂಗದವನ್ನೂ ಮತ್ತು ಕವಚವನ್ನೂ ಧರಿಸಿ, ಸುವರ್ಣಮಯವಾದ ಪುಂಖಗಳನ್ನೂ ಮತ್ತು ಹಿಂಭಾಗವನ್ನೂ ಹೊಂದಿದ್ದ ತನ್ನ ದೊಡ್ಡ ಧನುಸ್ಸನ್ನು ತೂಗಾಡಿಸುತ್ತಾ ಸಾತ್ಯಕಿಯ ಮೇಲೆ ಬಾಣಗಳ ಮಳೆಯನ್ನು ಕರೆದನು.
ತತೋಽಶೀತಿಂ ಶಿನೇಃ ಪೌತ್ರಃ ಸಾಯಕಾನ್ ಕೃತವರ್ಮಣೇ |
ಪ್ರಾಹಿಣೋತ್ ತ್ವರಯಾ ಯುಕ್ತೋ ದ್ರಷ್ಟುಕಾಮೋ ಧನಂಜಯಮ್ ॥
ಆಗ ಅರ್ಜುನನನ್ನು ನೋಡುವ ತ್ವರೆಯಲ್ಲಿದ್ದ ಶಿನಿಯ ಪೌತ್ರನಾದ ಸಾತ್ಯಕಿಯು ಕೃತವರ್ಮನ ಮೇಲೆ ಎಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುತಾಪನಃ |
ಸಮಕಂಪತ ದುರ್ಧರ್ಷಃ ಕ್ಷಿತಿಕಂಪೇ ಯಥಾಽಚಲಃ ॥ 35 ॥
ಶತ್ರುತಾಪನನೂ, ದುರ್ಧರ್ಷನೂ ಆದ ಕೃತವರ್ಮನು ಬಲಿಷ್ಠನಾದ ಶತ್ರುವಿನಿಂದ ಗಾಢವಾಗಿ ಹೊಡೆಯಲ್ಪಟ್ಟು ಭೂಕಂಪದ ಸಮಯದಲ್ಲಿ ಪರ್ವತವು ನಡುಗುವಂತೆ ನಡುಗಿದನು.
ತ್ರಿಷಷ್ಟ್ಯಾ ಚತುರೋಽಸ್ಯಾಶ್ವಾನ್ ಸಪ್ತಭಿಃ ಸಾರಥಿಂ ಶರೈಃ |
ವಿವ್ಯಾಧ ನಿಶಿತೈಸ್ತೂರ್ಣಂ ಸಾತ್ಯಕಿಃ ಕೃತವರ್ಮಣಃ ॥ 36 ॥

ಸಾತ್ಯಕಿಯು ಕೃತವರ್ಮನ ನಾಲ್ಕು ಅಶ್ವಗಳನ್ನು ಅರವತ್ಮೂರು ಬಾಣಗಳಿಂದಲೂ ಮತ್ತು ಅವನ ಸಾರಥಿಯನ್ನು ನಿಶಿತವಾದ ಏಳು ಬಾಣಗಳಿಂದಲೂ ಹೊಡೆದನು.
ಸುವರ್ಣಪುಂಖಂ ನಿಶಿತಂ ಸಮಾಧಾಯ ಸ ಸಾತ್ಯಕಿಃ |
ವ್ಯಸೃಜತ್ತಂ ಮಹಾಜ್ವಾಲಂ ಸಂಕ್ರುದ್ಧಮಿವ ಪನ್ನಗಮ್ ॥ 37 ॥
ಸುವರ್ಣಪುಂಖವುಳ್ಳ ತೀಕ್ಷ್ಣವಾದ ಒಂದು ಬಾಣವನ್ನು ಸಾತ್ಯಕಿಯು ಧನುಸ್ಸಿನಲ್ಲಿ ಹೂಡಿ, ಕೋಪಗೊಂಡ ಸರ್ಪದಂತಿದ್ದ, ಮಹಾಜ್ವಾಲೆಯಿಂದ ಕೂಡಿದ ಅದನ್ನು ಕೃತವರ್ಮನ ಮೇಲೆ ಪ್ರಯೋಗಿಸಿದನು.
ಸೋಽವಿಶತ್ ಕೃತವರ್ಮಾಣಂ ಯಮದಂಡೋಪಮಃ ಶರಃ |
ಜಾಂಬೂನದವಿಚಿತ್ರಂ ಚ ವರ್ಮ ನಿರ್ಭಿದ್ಯ ಭಾನುಮತ್ |
ಅಭ್ಯಗಾದ್ಧರಣೀಮುಗ್ರೋ ರುಧಿರೇಣ ಸಮುಕ್ಷಿತಃ ॥ 38 ॥
ಯಮದಂಡಕ್ಕೆ ಸದೃಶವಾದ ಆ ಬಾಣವು ಕೃತವರ್ಮನನ್ನು ಸಮೀಪಿಸಿ ಸುವರ್ಣಮಯವಾದ ಅವನ ಕವಚವನ್ನೂ ಭೇದಿಸಿ, ಅವನ ಶರೀರವನ್ನೂ ಭೇದಿಸಿ ರಕ್ತದಿಂದ ತೊಯ್ದು ಭೂಮಿಯನ್ನು ಪ್ರವೇಶಿಸಿತು.
ಸಂಜಾತರುಧಿರಶ್ಚಾಜೌ ಸಾತ್ವತೇಷುಭಿರರ್ದಿತಃ |
ಪ್ರಚಲನ್ ಧನುರುತ್ಸೃಜ್ಯ ನ್ಯಪತತ್ ಸ್ಯಂದನೋತ್ತಮೇ ॥ 39 ॥
ಸಾತ್ಯಕಿಯ ಬಾಣಗಳಿಂದ ಪೀಡಿತನಾಗಿ ಬಹಳ ರಕ್ತವನ್ನು ಸುರಿಸುತ್ತಿದ್ದ ಅವನು ತನ್ನ ಧನುಸ್ಸನ್ನು ಬಿಟ್ಟು ತಟ್ಟಾಡುತ್ತಾ ತನ್ನ ಶ್ರೇಷ್ಠ ರಥದಲ್ಲಿ ಬಿದ್ದನು.
ಸ ಸಿಂಹದಂಷ್ಟ್ರೋ ಜಾನುಭ್ಯಾಮಾಪನ್ನೋಽಮಿತವಿಕ್ರಮಃ |
ಶರಾರ್ದಿತಃ ಸಾತ್ಯಕಿನಾ ರಥೋಪಸ್ಥೇ ನರರ್ಷಭಃ ॥ 40 ॥
ಅಮಿತವಿಕ್ರಮನಾದ, ನರರ್ಷಭನಾದ, ಸಿಂಹದಂಷ್ಟ್ರನಾದ ಅವನು ಸಾತ್ಯಕಿಯ ಬಾಣಗಳಿಂದ ಪೀಡಿತನಾಗಿ ರಥದ ಪೀಠದಲ್ಲಿ ತನ್ನ ಮಂಡಿಗಳ ಮೇಲೆ ಬಿದ್ದನು.
ಸಹಸ್ರಬಾಹೋಃ ಸದೃಶಮಕ್ಷೋಭ್ಯಮಿವ ಸಾಗರಮ್ |
ನಿವಾರ್ಯ ಕೃತವರ್ಮಾಣಂ ಸಾತ್ಯಕಿಃ ಪ್ರಯಯೌ ತತಃ ॥ 41 ॥
ಸಹಸ್ರಬಾಹುವಿಗೆ ಸದೃಶನಾದ, ಸಾಗರದಂತೆ ಅಕ್ಷೋಭ್ಯನಾದ ಕೃತವರ್ಮನನ್ನು ನಿವಾರಿಸಿ ಸಾತ್ಯಕಿಯು ಅಲ್ಲಿಂದ ಮುಂದೆ ಹೊರಟನು.
ಖಡ್ಗಶಕ್ತಿಧನುಃಕೀರ್ಣಾಂ ಗಜಾಶ್ವರಥಸಂಕುಲಾಮ್ |
ಪ್ರವರ್ತಿತೋಗ್ರರುಧಿರಾಂ ಶತಶಃ ಕ್ಷತ್ರಿಯರ್ಷಭೈಃ ॥ 42 ॥
ಪ್ರೇಕ್ಷತಾಂ ಸರ್ವಸೈನ್ಯಾನಾಂ ಮಧ್ಯೇನ ಶಿನಿಪುಂಗವಃ |
ಅಭ್ಯಗಾದ್ ವಾಹಿನೀಂ ಭಿತ್ತ್ವಾ ವೃತ್ರಹೇವಾಸುರೀಂ ಚಮೂಮ್ ॥
ಶಿನಿಪುಂಗವನಾದ ಸಾತ್ಯಕಿಯು ಎಲ್ಲ ಸೈನ್ಯಗಳೂ ನೋಡುತ್ತಿರುವಂತೆಯೇ ಖಡ್ಗ- ಶಕ್ತಿ-ಧನುಸ್ಸುಗಳಿಂದ ನಿಬಿಡವಾದ, ಗಜಾಶ್ವ-ರಥಗಳಿಂದ ತುಂಬಿದ, ಶ್ರೇಷ್ಠರಾದ ನೂರಾರು ಕ್ಷತ್ರಿಯರಿಂದ ಪ್ರವರ್ತಿತವಾದ ರಕ್ತದ ನದಿಯ ಮಧ್ಯದಲ್ಲಿ ಇಂದ್ರನು ಅಸುರಸೇನೆಯನ್ನು ಭೇದಿಸಿದಂತೆ ಕೌರವರ ಸೇನೆಯನ್ನು ಭೇದಿಸಿಕೊಂಡು ಮುಂದೆ ಸಾಗಿದನು.
ಸಮಾಶ್ವಾಸ್ಯ ಚ ಹಾರ್ದಿಕ್ಯೋ ಗೃಹ್ಯ ಚಾನ್ಯನ್ಮಹದ್ಧನುಃ |
ತಸ್ಥೌ ತತ್ರೈವ ಬಲವಾನ್ ವಾರಯನ್ ಯುಧಿ ಪಾಂಡವಾನ್ ॥ 44 ॥
ಕೃತವರ್ಮನಾದರೋ ಸ್ವಲ್ಪ ಸುಧಾರಿಸಿಕೊಂಡು ಇನ್ನೊಂದು ದೊಡ್ಡ ಧನುಸ್ಸನ್ನು ತೆಗೆದುಕೊಂಡು ಬಲಿಷ್ಠನಾದ ಅವನು ಯುದ್ಧದಲ್ಲಿ ಪಾಂಡವರನ್ನು ನಿವಾರಿಸುತ್ತಾ ಅಲ್ಲಿಯೇ ನಿಂತನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವ್ಯಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂರನೆಯ ಅಧ್ಯಾಯ
ಸಾತ್ಯಕಿಯ ಪರಾಕ್ರಮ. ಅವನಿಂದ ದ್ರೋಣರ ಪರಾಭವ.
ಸಂಜಯಃ
ಕಾಲ್ಯಮಾನೇಷು ಸೈನ್ಯೇಷು ಶೈನೇಯೇನ ತತಸ್ತತಃ |
ಭಾರದ್ವಾಜಃ ಶರವ್ರಾತೈರ್ಮಹದ್ಭಿಃ ಸಮವಾಕಿರತ್ ॥ 1 ॥
ಸಂಜಯ ಸಾತ್ಯಕಿಯಿಂದ ಕೌರವರ ಸೇನೆಯು ಅಲ್ಲಲ್ಲಿ ಅಟ್ಟಾಡಲ್ಪಡುತ್ತಿರಲು ದ್ರೋಣರು ಅವನ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಸುರಿಸಿದರು.
ಸ ಸಂಪ್ರಹಾರಸ್ತುಮುಲೋ ದ್ರೋಣಸಾತ್ವತಯೋರಭೂತ್ |
ಪಶ್ಯತಾಂ ಸರ್ವಸೈನ್ಯಾನಾಂ ಬಲಿವಾಸವಯೋರಿವ ॥ 2 ॥
ಎಲ್ಲ ಸೈನ್ಯಗಳ ಎದುರಿಗೇ ದ್ರೋಣ ಮತ್ತು ಸಾತ್ಯಕಿಯರ ಯುದ್ಧವು ಬಲಿ ಮತ್ತು ಇಂದ್ರನ ಯುದ್ಧದಂತೆ ತೀವ್ರವಾಗಿದ್ದಿತು.
ತತೋ ದ್ರೋಣಃ ಶಿನೇಃ ಪೌತ್ರಂ ಚಿತ್ರೈಃ ಸರ್ವಾಯಸೈಃ ಶರೈಃ |

ತ್ರಿಭಿರಾಶೀವಿಷಾಕಾರೈರ್ಲಲಾಟೇ ಸಮವಿದ್ಧ್ಯತ ॥ 3 ॥
ಆಗ ದ್ರೋಣರು ವಿಚಿತ್ರವಾದ, ಪೂರ್ಣವಾಗಿ ಕಬ್ಬಿಣದಿಂದ ಮಾಡಿದ ಸರ್ಪಾಕಾರವನ್ನು ಹೊಂದಿದ ಮೂರು ಬಾಣಗಳಿಂದ ಸಾತ್ಯಕಿಯನ್ನು ಅವನ ಹಣೆಯಲ್ಲಿ ಹೊಡೆದರು.
ತೈರ್ಲಲಾಟಾರ್ಪಿತೈರ್ಬಾಣೈರ್ಯುಯುಧಾನಸ್ತ್ವಜಿಹ್ಮಗೈಃ |
ವ್ಯರೋಚತ ಮಹಾರಾಜ ತ್ರಿಶೃಂಗ ಇವ ಪರ್ವತಃ ॥ 4 ॥
ಎಲೈ ಮಹಾರಾಜನೇ, ನೇರವಾಗಿ ಸಾಗಿ ಹಣೆಯಲ್ಲಿ ನೆಟ್ಟ ಆ ಮೂರು ಬಾಣಗಳಿಂದ ಸಾತ್ಯಕಿಯು ಮೂರು ಶಿಖರಗಳುಳ್ಳ ಪರ್ವತದಂತೆ ಶೋಭಿಸಿದನು.
ತತೋಽಸ್ಯ ಬಾಣಾನಪರಾನಿಂದ್ರಾಶನಿಸಮಸ್ವನಾನ್ |
ಭಾರದ್ವಾಜೋಽಂತರಪ್ರೇಕ್ಷೀ ಪ್ರೇಷಯಾಮಾಸ ಸಂಯುಗೇ ॥ 5 ॥
ಅನಂತರ ದ್ರೋಣರು ಅವನ ಒಂದು ಸಣ್ಣ ಅವಕಾಶವನ್ನು ಕಾಯುತ್ತಾ, ಇಂದ್ರನ ವಜ್ರಾಯುಧಕ್ಕೆ ಸಮವಾದ ಘೋಷವುಳ್ಳ ಬೇರೆ ಬಾಣಗಳನ್ನು ರಣರಂಗದಲ್ಲಿ ಅವನ ಮೇಲೆ ಪ್ರಯೋಗಿಸಿದರು.
ತಾನ್ ದ್ರೋಣಚಾಪನಿರ್ಮುಕ್ತಾನ್ ದಾಶಾರ್ಹಃ ಪತತಃ ಶರಾನ್ |
ದ್ವಾಭ್ಯಾಂ ದ್ವಾಭ್ಯಾಂ ಸುಪುಂಖಾಭ್ಯಾಂ ಚಿಚ್ಛೇದ ಪರಮಾಸ್ತ್ರವಿತ್ ॥ 6 ॥
ಪರಮಾಸ್ತ್ರವೇತ್ತನಾದ, ದಾಶಾರ್ಹನಾದ ಸಾತ್ಯಕಿಯು ದ್ರೋಣರ ಬಿಲ್ಲಿನಿಂದ ಹೊರಟು ತನ್ನೆಡೆಗೆ ಬರುತ್ತಿದ್ದ ಆ ಬಾಣಗಳಲ್ಲಿ ಒಂದೊಂದನ್ನೂ ಒಳ್ಳೆಯ ಪುಂಖವನ್ನು ಹೊಂದಿದ ಎರಡೆರಡು ಬಾಣಗಳಿಂದ ಕತ್ತರಿಸಿದನು.
ತಾಮಸ್ಯ ಲಘುತಾಂ ದ್ರೋಣಃ ಸಮವೇಕ್ಷ್ಯ ವಿಶಾಂಪತೇ |
ಪ್ರಹಸ್ಯ ಸಹಸಾವಿದ್ಧ್ಯದ್ ವಿಂಶತ್ಯಾ ಶಿನಿಪುಂಗವಮ್ ॥ 7 ॥
ಎಲೈ ರಾಜನೇ, ಅವನ ಶೀಘ್ರತೆಯನ್ನು ನೋಡಿದ ದ್ರೋಣರು ನಕ್ಕು, ತಕ್ಷಣ ಇಪ್ಪತ್ತು ಬಾಣಗಳಿಂದ ಸಾತ್ಯಕಿಯನ್ನು ಹೊಡೆದರು.
ಪುನಃ ಪಂಚಶತೇಷೂಣಾಂ ಶತೇನ ಚ ಸಮಾರ್ಪಯತ್ |
ಲಘುತಾಂ ಯುಯುಧಾನಸ್ಯ ಲಾಘವೇನ ವಿಶೇಷಯನ್ ॥ 8 ॥
ಪುನಃ ಸಾತ್ಯಕಿಯ ಕ್ಷಿಪ್ರತೆಗಿಂತಲೂ ಹೆಚ್ಚಿನ ಕ್ಷಿಪ್ರತೆಯನ್ನು ತೋರಿಸುವವರಾಗಿ ಅವನ ಮೇಲೆ ಐದು ಸಾವಿರ ಬಾಣಗಳನ್ನು ಪ್ರಯೋಗಿಸಿದರು.
ಸಮುತ್ಪತಂತಿ ವಲ್ಮೀಕಾದ್ ಯಥಾ ಕ್ರುದ್ಧಾ ಮಹೋರಗಾಃ |
ತಥಾ ದ್ರೋಣರಥಾದ್ ರಾಜನ್ನುತ್ಪತಂತಿ ತನುಚ್ಛಿದಃ ॥ 9 ॥
ಎಲೈ ರಾಜನೇ, ಕ್ರುದ್ಧವಾದ ಮಹಾಸರ್ಪಗಳು ಹುತ್ತದಿಂದ ಮೇಲೆ ಮೇಲೆ ಬಂದಂತೆ ಶರೀರಭೇದಕವಾದ ಬಾಣಗಳು ದ್ರೋಣರ ರಥದಿಂದ ಹಾರಿ ಬರತೊಡಗಿದವು.
ತಥೈವ ಯುಯುಧಾನೇನ ಸೃಷ್ಟಾಃ ಶತಸಹಸ್ರಶಃ |
ಅವಾಕಿರನ್ ದ್ರೋಣರಥಂ ಶರಾ ರುಧಿರಭೋಜನಾಃ ॥ 10 ॥
ಹಾಗೆಯೇ ಸಾತ್ಯಕಿಯೂ ನೂರಾರು ಸಾವಿರಾರು ಸಂಖ್ಯೆಯಲ್ಲಿ ಪ್ರಯೋಗಿಸಿದ ರಕ್ತಭೋಜಿಗಳಾದ ಬಾಣಗಳು ದ್ರೋಣರ ರಥದ ಮೇಲೆ ಬಿದ್ದವು.
ಲಾಘವಾದ್ ದ್ವಿಜಮುಖ್ಯಸ್ಯ ಸಾತ್ವತಸ್ಯ ಚ ಮಾರಿಷ |
ವಿಶೇಷಂ ನಾಧ್ಯಗಚ್ಛಾಮ ಸಮಾವಾಸ್ತಾಂ ನರರ್ಷಭೌ ॥ 11 ॥
ಎಲೈ ಪೂಜ್ಯನೇ, ಲಾಘವದ ವಿಷಯದಲ್ಲಿ ಬ್ರಾಹ್ಮಣಶ್ರೇಷ್ಠರಾದ ದ್ರೋಣರಿಗೂ ಮತ್ತು ಸಾತ್ಯಕಿಗೂ ನಾವು ಯಾವ ವಿಶೇಷವನ್ನೂ ಕಾಣಲಿಲ್ಲ. ನರಶ್ರೇಷ್ಠರಿಬ್ಬರೂ ಸಮರಾಗಿಯೇ ಇದ್ದರು.
ಸಾತ್ಯಕಿಸ್ತು ತತೋ ದ್ರೋಣಂ ನವಭಿರ್ನತಪರ್ವಭಿಃ |
ಆಜಘಾನ ಭೃಶಂ ಕ್ರುದ್ಧೋ ಧ್ವಜಂ ಚ ನಿಶಿತೈಃ ಶರೈಃ |
ಸಾರಥಿಂ ಚ ಶತೇನೈವ ಭಾರದ್ವಾಜಸ್ಯ ಪಶ್ಯತಃ ॥ 12 ॥
ಅನಂತರ ಸಾತ್ಯಕಿಯು ಬಹಳ ಕೋಪಗೊಂಡು ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳಿಂದ ದ್ರೋಣರನ್ನು ಹೊಡೆದನು. ಅನಂತರ ತೀಕ್ಷ್ಣವಾದ ಬಾಣಗಳಿಂದ ಅವರ ಧ್ವಜವನ್ನೂ ಮತ್ತು ದ್ರೋಣರು ನೋಡುತ್ತಿರುವಂತೆಯೇ ನೂರು ಬಾಣಗಳಿಂದ ಅವರ ಸಾರಥಿಯನ್ನೂ ಹೊಡೆದನು.
ಲಾಘವಂ ಯುಯುಧಾನಸ್ಯ ದೃಷ್ಟ್ವಾ ದ್ರೋಣೋ ಮಹಾರಥಃ |
ಸಪ್ತತ್ಯಾ ಸಾತ್ಯಕಿಂ ವಿದ್ಧ್ವಾ ತುರಗಾಂಶ್ಚ ತ್ರಿಭಿಸ್ತ್ರಿಭಿಃ |
ಧ್ವಜಮೇಕೇನ ವಿವ್ಯಾಧ ಮಾಧವಸ್ಯ ರಥೇ ಸ್ಥಿತಮ್ ॥ 13 ॥
ಮಹಾರಥರಾದ ದ್ರೋಣರು ಸಾತ್ಯಕಿಯ ಲಾಘವವನ್ನು (ಕ್ಷಿಪ್ರಕಾರಿತ್ವವನ್ನು) ನೋಡಿ ಎಪ್ಪತ್ತು ಬಾಣಗಳಿಂದ ಅವನನ್ನು ಹೊಡೆದು, ಮೂರು-ಮೂರು ಬಾಣಗಳಿಂದ ಅವನ ಅಶ್ವಗಳನ್ನು ಹೊಡೆದು, ಒಂದು ಬಾಣದಿಂದ ಅವನ ರಥದ ಧ್ವಜಕ್ಕೆ ಹೊಡೆದರು.
ಅಥಾಪರೇಣ ಭಲ್ಲೇನ ಹೇಮಪುಂಖೇನ ಪತ್ರಿಣಾ |
ಧನುಶ್ಚಿಚ್ಛೇದ ಸಮರೇ ಮಾಧವಸ್ಯ ಮಹಾತ್ಮನಃ ॥ 14 ॥
ಅನಂತರ ಹೇಮಪುಂಖವನ್ನೂ ಮತ್ತು ಪತ್ರಗಳನ್ನೂ ಹೊಂದಿದ್ದ ಇನ್ನೊಂದು ಭಲ್ಲದಿಂದ ರಣರಂಗದಲ್ಲಿ ಮಹಾತ್ಮನಾದ ಸಾತ್ಯಕಿಯ ಧನುಸ್ಸನ್ನು ಕತ್ತರಿಸಿದರು.
ಸಾತ್ಯಕಿಸ್ತು ತತಃ ಕ್ರುದ್ಧೋ ಧನುಸ್ತ್ಯಕ್ತ್ವಾ ಮಹಾರಥಃ |

ಗದಾಂ ಜಗ್ರಾಹ ಮಹತೀಂ ಭಾರದ್ವಾಜಾಯ ಚಾಕ್ಷಿಪತ್ ॥ 15 ॥
ಮಹಾರಥನಾದ ಸಾತ್ಯಕಿಯಾದರೋ ಕೋಪಗೊಂಡು ಆ ಧನುಸ್ಸನ್ನು ಬಿಟ್ಟು ದೊಡ್ಡ ಗದೆಯನ್ನು ತೆಗೆದುಕೊಂಡು ದ್ರೋಣರ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ಪಟ್ಟಬದ್ಧಮಯಸ್ಮಯೀಮ್ |
ನ್ಯವಾರಯಚ್ಛರೈರ್ದ್ರೋಣೋ ಬಹುಭಿರ್ಬಹುರೂಪಿಭಿಃ ॥ 16 ॥
ತಮ್ಮ ಕಡೆಗೆ ಬರುತ್ತಿದ್ದ ಕಬ್ಬಿಣದ ಪಟ್ಟಿಗಳನ್ನು ಹೊಂದಿದ್ದ ಆ ಕಬ್ಬಿಣದ ಗದೆಯನ್ನು ದ್ರೋಣರು ತಕ್ಷಣ ನಾನಾ ಆಕಾರವುಳ್ಳ ಅನೇಕ ಬಾಣಗಳಿಂದ ನಿವಾರಿಸಿದರು.
ಅಥಾನ್ಯದ್ ಧನುರಾದಾಯ ಸಾತ್ಯಕಿಃ ಸತ್ಯವಿಕ್ರಮಃ |
ವಿವ್ಯಾಧ ಬಹುಭಿರ್ವೀರಂ ಭಾರದ್ವಾಜಂ ಶಿಲಾಶಿತೈಃ ॥ 17 ॥
ಆಗ ಸತ್ಯಪರಾಕ್ರಮನಾದ ಸಾತ್ಯಕಿಯು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ವೀರರಾದ ದ್ರೋಣರನ್ನು, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಅನೇಕ ಬಾಣಗಳಿಂದ ಹೊಡೆದನು.
ಸ ವಿದ್ಧ್ವಾ ಸಮರೇ ದ್ರೋಣಂ ಸಿಂಹನಾದಮಮುಂಚತ |
ತಂ ವೈ ನ ಮಮೃಷೇ ದ್ರೋಣಃ ಸರ್ವಶಸ್ತ್ರಭೃತಾಂ ವರಃ ॥ 18 ॥
ಅವನು ದ್ರೋಣರನ್ನು ಹೊಡೆದು ರಣರಂಗದಲ್ಲಿ ಸಿಂಹನಾದವನ್ನು ಮಾಡಿದನು. ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಅದನ್ನು ಸಹಿಸಲಿಲ್ಲ.
ತತಃ ಶಕ್ತಿಂ ಗೃಹೀತ್ವಾ ತು ರುಗ್ಮದಂಡಾಮಯಸ್ಮಯೀಮ್ |
ತರಸಾ ಪ್ರೇಷಯಾಮಾಸ ಮಾಧವಸ್ಯ ರಥಂ ಪ್ರತಿ ॥ 19 ॥
ಆಗ ಅವರು ಚಿನ್ನದ ಹಿಡಿಯನ್ನು ಹೊಂದಿದ ಕಬ್ಬಿಣದ ಒಂದು ಶಕ್ತಿಯನ್ನು ತೆಗೆದುಕೊಂಡು ಅದನ್ನು ವೇಗದಿಂದ ಸಾತ್ಯಕಿಯ ರಥದ ಮೇಲೆ ಎಸೆದರು.
ಅನಾಸಾದ್ಯ ತು ಶೈನೇಯಂ ಸಾ ಶಕ್ತಿಃ ಕಾಲಸನ್ನಿಭಾ |
ಭಿತ್ತ್ವಾ ರಥಂ ಜಗಾಮೋಗ್ರಾ ಧರಣೀಂ ದಾರುಣಸ್ವನಾ ॥ 20 ॥
ಯಮನಂತಿದ್ದ ಆ ಘೋರವಾದ ಶಕ್ತಿಯು ಸಾತ್ಯಕಿಯನ್ನು ತಲುಪದೇ ಅವನ ರಥವನ್ನು ಭೇದಿಸಿ ದಾರುಣವಾದ ನಾದವನ್ನು ಮಾಡುತ್ತಾ ಭೂಮಿಯ ಒಳಗೆ ಇಳಿಯಿತು.
ತತೋ ದ್ರೋಣಂ ಶಿನೇಃ ಪೌತ್ರೋ ರಾಜನ್ ವಿವ್ಯಾಧ ಪತ್ರಿಣಾ |
ದಕ್ಷಿಣಂ ಭುಜಮಾಸಾದ್ಯ ಪೀಡಯನ್ ಭರತರ್ಷಭ ॥ 21 ॥
ಎಲೈ ರಾಜನೇ, ಭರತಶ್ರೇಷ್ಠನೇ, ಆಗ ಶಿನಿಯ ಪೌತ್ರನಾದ ಸಾತ್ಯಕಿಯು ಪತ್ರವನ್ನು ಹೊಂದಿದ ಬಾಣದಿಂದ ದ್ರೋಣರ ದಕ್ಷಿಣ ಭುಜವನ್ನು ಪೀಡಿಸಿದನು.
ದ್ರೋಣೋಽಪಿ ಸಮರೇ ರಾಜನ್ ಮಾಧವಸ್ಯ ಮಹದ್ಧನುಃ |
ಅರ್ಧಚಂದ್ರೇಣ ಚಿಚ್ಛೇದ ರಥಶಕ್ತ್ಯಾ ಚ ಸಾರಥಿಮ್ ॥ 22 ॥
ಎಲೈ ರಾಜನೇ, ದ್ರೋಣರೂ ಸಹ ರಣರಂಗದಲ್ಲಿ ಸಾತ್ಯಕಿಯ ದೊಡ್ಡ ಧನುಸ್ಸನ್ನು ಅರ್ಧಚಂದ್ರದಿಂದ ಕತ್ತರಿಸಿ ರಥಶಕ್ತಿಯಿಂದ ಅವನ ಸಾರಥಿಯನ್ನು ಹೊಡೆದರು.
ಮುಮೋಹ ಸಾರಥಿಸ್ತಸ್ಯ ರಥಶಕ್ತ್ಯಾ ಸಮಾಹತಃ |
ಸ ರಥೋಪಸ್ಥಮಾಸಾದ್ಯ ಮುಹೂರ್ತಂ ಸನ್ನ್ಯಷೀದತ ॥ 23 ॥
ರಥಶಕ್ತಿಯಿಂದ ಹೊಡೆಯಲ್ಪಟ್ಟ ಅವನ ಸಾರಥಿಯು ಮೂರ್ಛೆಗೆ ಒಳಗಾಗಿ ರಥದ ಪೀಠವನ್ನು ತಲುಪಿ ಒಂದು ಮುಹೂರ್ತದ ಕಾಲ ಕುಸಿದು ಕುಳಿತನು.
ಚಕಾರ ಸಾತ್ಯಕೀ ರಾಜಂಸ್ತತ್ರ ಕರ್ಮಾತಿಮಾನುಷಮ್ |
ಅಯೋಧಯಚ್ಚ ಯದ್ ದ್ರೋಣಂ ರಶ್ಮೀನ್ ಜಗ್ರಾಹ ಚ ಸ್ವಯಮ್ ॥
ಎಲೈ ರಾಜನೇ, ಆಗ ಸಾತ್ಯಕಿಯು ಸ್ವತಃ ಅಶ್ವಗಳ ಕಡಿವಾಣವನ್ನೂ ಹಿಡಿದು ದ್ರೋಣರ ಜೊತೆಯಲ್ಲಿ ಯುದ್ಧವನ್ನೂ ಮಾಡಿ ಅತಿಮಾನುಷ ಕರ್ಮವನ್ನು ಮಾಡಿದನು.
ತತಃ ಶರಶತೇನೈವ ಯುಯುಧಾನೋ ಮಹಾರಥಃ |
ಅವಿದ್ಧ್ಯದ್ ಬ್ರಾಹ್ಮಣಂ ಸಂಖ್ಯೇ ಹೃಷ್ಟರೂಪೋ ವಿಶಾಂಪತೇ ॥ 25 ॥
ಎಲೈ ರಾಜನೇ, ಆಗ ಮಹಾರಥನಾದ ಯುಯುಧಾನನು ಬಹಳ ಸಂತೋಷಗೊಂಡು ರಣರಂಗದಲ್ಲಿ ನೂರು ಬಾಣಗಳಿಂದ ಬ್ರಾಹ್ಮಣರಾದ ದ್ರೋಣರಿಗೆ ಹೊಡೆದನು.
ತಸ್ಯ ದ್ರೋಣಃ ಶರಾನ್ ಪಂಚ ಪ್ರೇಷಯಾಮಾಸ ಭಾರತ |
ತೇ ತಸ್ಯ ಕವಚಂ ಭಿತ್ತ್ವಾ ಪಪುಃ ಶೋಣಿತಮಾಹವೇ ॥ 26 ॥
ಎಲೈ ಭಾರತನೇ, ದ್ರೋಣರು ಅವನ ಮೇಲೆ ಐದು ಬಾಣಗಳನ್ನು ಪ್ರಯೋಗಿಸಿದರು. ಅವು ಅವನ ಕವಚವನ್ನು ಭೇದಿಸಿ ರಕ್ತವನ್ನು ಕುಡಿದವು.
ನಿರ್ವಿದ್ಧಸ್ತು ಶರೈರ್ಘೋರೈರಕ್ರುಧ್ಯತ್ ಸಾತ್ಯಕಿರ್ಭೃಶಮ್ |
ಸಾಯಕಾನ್ ವ್ಯಸೃಜಚ್ಚಾಪಿ ವೀರೋ ರುಗ್ಮರಥಂ ಪ್ರತಿ ॥ 27 ॥
ಘೋರವಾದ ಬಾಣಗಳಿಂದ ತೀವ್ರವಾಗಿ ಹೊಡೆಯಲ್ಪಟ್ಟ ಸಾತ್ಯಕಿಯು ಬಹಳ ಕೋಪಗೊಂಡು ದ್ರೋಣರ ರಥದ ಮೇಲೆ ವೀರನಾದ

ಅವನು ಅನೇಕ ಬಾಣಗಳನ್ನು ಪ್ರಯೋಗಿಸಿದನು.
ತತೋ ದ್ರೋಣಸ್ಯ ಯಂತಾರಂ ನಿಪಾತ್ಯೈಕೇಷುಣಾ ಭುವಿ |
ಅಶ್ವಾನ್ ವ್ಯದ್ರಾವಯದ್ ಬಾಣೈರ್ಹತಸೂತಾನ್ ಮಹಾತ್ಮನಃ ॥ 28 ॥
ಅನಂತರ ಒಂದು ಬಾಣದಿಂದ ದ್ರೋಣರ ಸಾರಥಿಯನ್ನು ಭೂಮಿಯ ಮೇಲೆ ಕೆಡವಿ ಅನೇಕ ಬಾಣಗಳಿಂದ ಸಾರಥಿಯಿಲ್ಲದ ಆ ಮಹಾತ್ಮರ ಅಶ್ವಗಳನ್ನು ಓಡಿಸಿದನು.
ಸ ರಥಃ ಪ್ರದ್ರುತಃ ಸಂಖ್ಯೇ ಮಂಡಲಾನಿ ಸಹಸ್ರಶಃ |
ಚಕಾರ ರಾಜತೋ ರಾಜನ್ ಭ್ರಾಜಮಾನ ಇವಾಂಶುಮಾನ್ ॥ 29 ॥
ಎಲೈ ರಾಜನೇ, ಆ ಬೆಳ್ಳಿಯ ರಥವು ಸೂರ್ಯನಂತೆ ಪ್ರಕಾಶಿಸುತ್ತಾ ರಣರಂಗದಲ್ಲಿ ಸಹಸ್ರಾರು ಮಂಡಲಗಳಲ್ಲಿ ಧಾವಿಸಿತು.
ಅಭಿದ್ರವತ ಗೃಹ್ಣೀತ ಹಯಾನ್ ದ್ರೋಣಸ್ಯ ಧಾವತಃ |
ಇತಿ ಸ್ಮ ಚುಕ್ರುಶುಃ ಸರ್ವೇ ರಾಜಪುತ್ರಾಃ ಸರಾಜಕಾಃ ॥ 30 ॥
ಎಲ್ಲ ರಾಜಪುತ್ರರು ಮತ್ತು ರಾಜರು ಓಡುತ್ತಿರುವ ದ್ರೋಣರ ಅಶ್ವಗಳನ್ನು ಹಿಂಬಾಲಿಸಿ, ಹಿಡಿಯಿರಿ ಎಂದು ಕಿರುಚಿದರು.
ತೇ ಸಾತ್ಯಕಿಮಪಾಸ್ಯಾಶು ರಾಜನ್ ಯುಧಿ ಮಹಾರಥಾಃ |
ಯತೋ ದ್ರೋಣ ಸ್ತತಃ ಸರ್ವೇ ಸಹಸಾ ಸಮುಪಾದ್ರವನ್ ॥ 31 ॥
ಎಲೈ ರಾಜನೇ, ಆ ಮಹಾರಥರೆಲ್ಲರೂ ರಣರಂಗದಲ್ಲಿ ಸಾತ್ಯಕಿಯನ್ನು ಶೀಘ್ರವಾಗಿ ಬಿಟ್ಟು ದ್ರೋಣರಿದ್ದ ಕಡೆಗೆ ಶೀಘ್ರವಾಗಿ ಬಂದರು.
ತಾನ್ ದೃಷ್ಟ್ವಾ ಪ್ರದ್ರುತಾನ್ ಸರ್ವಾನ್ ಸಾತ್ವತೇನ ಶರಾರ್ದಿತಾನ್ |
ಪ್ರಭಗ್ನಂ ಪುನರೇವಾಸೀತ್ತವ ಸೈನ್ಯಂ ಸಮಾಕುಲಮ್ ॥ 32 ॥
ಸಾತ್ಯಕಿಯ ಬಾಣಗಳಿಂದ ಪೀಡಿತರಾಗಿ ಓಡಿಹೋದ ಅವರನ್ನು ನೋಡಿ ನಿನ್ನ ಸೈನ್ಯವು ಪುನಃ ವ್ಯಥೆಗೊಂಡು ಭಗ್ನವಾಯಿತು.
ವ್ಯೂಹಸ್ಯೈವ ಪುನರ್ದ್ವಾರಂ ಗತ್ವಾ ದ್ರೋಣೋ ವ್ಯವಸ್ಥಿತಃ |
ವಾತಾಯಮಾನೈಸ್ತೈರಶ್ವೈರ್ಹೃತೋ ವೃಷ್ಣಿಶರಾರ್ದಿತೈಃ ॥ 33 ॥
ದ್ರೋಣರು ಸಾತ್ಯಕಿಯ ಬಾಣಗಳಿಂದ ಪೀಡಿತರಾಗಿ ಏದುಸಿರು ಬಿಡುತ್ತಿದ್ದ ಅಶ್ವಗಳಿಂದ ಎಳೆಯಲ್ಪಟ್ಟು ಪುನಃ ವ್ಯೂಹದ ದ್ವಾರದಲ್ಲಿಯೇ ಹೋಗಿ ನಿಂತರು.
ಪಾಂಡುಪಾಂಚಾಲಸಂಭಗ್ನಂ ವ್ಯೂಹಮಾಲೋಕ್ಯ ವೀರ್ಯವಾನ್ |
ಶೈನೇಯೇ ನಾಕರೋದ್ ಯತ್ನಂ ವ್ಯೂಹಸ್ಯೈವಾಭಿರಕ್ಷಣೇ ॥ 34 ॥
ಪರಾಕ್ರಮಶಾಲಿಗಳಾದ ಅವರು ಪಾಂಡವರಿಂದಲೂ ಮತ್ತು ಪಾಂಚಾಲರಿಂದಲೂ ಭಗ್ನವಾದ ತಮ್ಮ ವ್ಯೂಹವನ್ನು ನೋಡಿ ಸಾತ್ಯಕಿಯ ಜೊತೆಯಲ್ಲಿ ಯುದ್ದವನ್ನು ಮಾಡಲು ಪ್ರಯತ್ನ ಪಡಲಿಲ್ಲ. ವ್ಯೂಹವನ್ನು ರಕ್ಷಿಸುವುದರಲ್ಲಿಯೇ ಆಸಕ್ತರಾಗಿ ನಿಂತರು.
ನಿವಾರ್ಯ ಪಾಂಡುಪಾಂಚಾಲಾನ್ ದ್ರೋಣಾಗ್ನಿಃ ಪ್ರದಹನ್ನಿವ |
ತಸ್ಥೌ ಕ್ರೋಧಾಗ್ನಿಸಂದೀಪ್ತಃ ಕಾಲಸೂರ್ಯ ಇವೋದಿತಃ ॥ 35 ॥
ದ್ರೋಣರೆಂಬ ಅಗ್ನಿಯು ಪಾಂಡುಪಾಂಚಾಲರನ್ನು ನಿವಾರಿಸಿ, ಉದಯಿಸಿದ ಕಾಲಸೂರ್ಯನಂತೆ ದಹಿಸುತ್ತಾ ಕ್ರೋಧಾಗ್ನಿಯಿಂದ ಜ್ವಲಿಸುತ್ತಾ ನಿಂತಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರ್ಯಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಾಲ್ಕನೆಯ ಅಧ್ಯಾಯ
ಸಾತ್ಯಕಿಯಿಂದ ಸುದರ್ಶನರಾಜನ ವಧೆ.
ಸಂಜಯಃ
ದ್ರೋಣಂ ಸ ಜಿತ್ವಾ ಪುರುಷಪ್ರವೀರಸ್ತಥೈವ
ಹಾರ್ದಿಕ್ಯಮುಖಾಂಸ್ತ್ವದೀಯಾನ್ |
ಪ್ರಹಸ್ಯ ಸೂತಂ ವಚನಂ ಬಭಾಷೇ
ಶಿನಿಪ್ರವೀರಃ ಕುರುಪುಂಗವಾಗ್ರ್ಯ ॥ 1 ॥
ನಿಮಿತ್ತಮಾತ್ರಂ ವಯಮತ್ರ ಸೂತ
ದಗ್ಧಾರಯಃ ಕೇಶವಫಲ್ಗುನಾಭ್ಯಾಮ್ |
ಹತಾನ್ನಿಹನ್ಮೇಹ ನರರ್ಷಭೇಣ
ವಯಂ ಸುರೇಶಾತ್ಮಸಮುದ್ಭವೇನ ॥ 2 ॥
ಸಂಜಯ ಎಲೈ ಕುರುಪುಂಗವಶ್ರೇಷ್ಠನೇ, ಪುರುಷಶ್ರೇಷ್ಠನಾದ ಆ ಸಾತ್ಯಕಿಯು ದ್ರೋಣರನ್ನೂ ಮತ್ತು ಕೃತವರ್ಮನೇ ಮೊದಲಾದ ನಿನ್ನವರನ್ನೂ ಜಯಿಸಿ, ತನ್ನ ಸೂತನನ್ನು ಕುರಿತು ನಕ್ಕು, ಎಲೈ ಸೂತನೇ, ಕೇಶವಾರ್ಜುನರಿಂದಲೇ ಎಲ್ಲ ಶತ್ರುಗಳೂ ಮೊದಲೇ ದಗ್ಧರಾಗಿದ್ದಾರೆ. ಇಲ್ಲಿ ನಾವು ನಿಮಿತ್ತ ಮಾತ್ರ. ಇಂದ್ರಪುತ್ರನಾದ ನರಶ್ರೇಷ್ಠನಾದ ಅರ್ಜುನನಿಂದ ಕೊಲ್ಲಲ್ಪಟ್ಟ ಅವರನ್ನು ನಾವು ಇಲ್ಲಿ ಕೊಲ್ಲುತ್ತಿದ್ದೇವೆ ಎಂದು ಹೇಳಿದನು.

ತಮೇವಮುಕತ್ವ ಶಿನಿಪುಂಗವಸ್ತದಾ
ಮಹಾಮೃಧೇ ಸೋಽಗ್ರ್ಯಧನುರ್ಧರೋಽರಿಹಾ |
ಕಿರನ್ ಸಮಂತಾತ್ಸಹಸಾ ಶರಾನ್ ಬಲೀ
ಸಮಾಪತಚ್ಶ್ಯೇನ ಇವಾಮಿಷಂ ಯಥಾ ॥ 3 ॥
ಶಿನಿಪುಂಗವನೂ, ಶ್ರೇಷ್ಠಧನುರ್ಧಾರಿಯೂ, ಶತ್ರುಸಂಹಾರಕನೂ ಆದ ಸಾತ್ಯಕಿಯು ಆ ದೊಡ್ಡ ಯುದ್ಧದಲ್ಲಿ ಸೂತನನ್ನು ಕುರಿತು ಹೀಗೆ ಹೇಳಿ, ತಕ್ಷಣ ಎಲ್ಲ ಕಡೆಗಳಲ್ಲಿಯೂ ಬಾಣಗಳನ್ನು ಪ್ರಯೋಗಿಸುತ್ತಾ ಗಿಡುಗವು ಮಾಂಸದ ತುಂಡಿನ ಮೇಲೆ ಎರಗಿದಂತೆ ಬಲಿಷ್ಠನಾದ ಅವನು ಶತ್ರುಗಳ ಮೇಲೆ ಎರಗಿದನು.
ತಂ ಯಾಂತಮಶ್ವೈಃ ಶಶಿಶಂಖವರ್ಣೈ-
ರ್ವಿಗಾಹ್ಯ ಸೈನ್ಯಂ ಪುರುಷಪ್ರವೀರಮ್ |
ನಾಶಕ್ನುವನ್ ವಾರಯಿತುಂ ಸಮಂತಾ-
ದಾದಿತ್ಯರಶ್ಮಿಪ್ರತಿಮಂ ನರಾಗ್ರ್ಯಮ್ ॥ 4 ॥
ಶತ್ರುಸೈನ್ಯವನ್ನು ಭೇದಿಸಿ, ಸೂರ್ಯರಶ್ಮಿಯಂತೆ ತನ್ನ ಚಂದ್ರಶಂಖವರ್ಣದ ಅಶ್ವಗಳಿಂದ ಮುಂದೆ ಸಾಗುವ ಆ ನರಶ್ರೇಷ್ಠನನ್ನು ತಡೆಯಲು ನಿನ್ನವರು ಯಾರೂ ಸಮರ್ಥರಾಗಲಿಲ್ಲ.
ಅಸಹ್ಯವಿಕ್ರಾಂತಮದೀನಸತ್ತ್ವಂ
ಸರ್ವೇ ಗಣಾ ಭಾರತ ದುರ್ವಿಷಹ್ಯಮ್ |
ಸಹಸ್ರನೇತ್ರಪ್ರತಿಮಪ್ರಭಾವಂ
ದಿವೀವ ಸೂರ್ಯಂ ಜಲದವ್ಯಪಾಯೇ ॥ 5 ॥
ಎಲೈ ಭಾರತನೇ, ಬೇಸಿಗೆಯ ಸೂರ್ಯನಂತೆ ಪ್ರಕಾಶಿಸುತ್ತಾ, ಸಹಸ್ರಜಿತನಾದ ಇಂದ್ರನಿಗೆ ಹೋಲುವ ಸಾಮರ್ಥ್ಯವನ್ನು ಹೊಂದಿದ, ಸಹಿಸಲು ಅಸಾಧ್ಯವಾದ ಪರಾಕ್ರಮವನ್ನು ಹೊಂದಿದವನೂ, ಮಹಾಧೈರ್ಯಶಾಲಿಯೂ, ಯುದ್ಧದಲ್ಲಿ ತಡೆಯಲು ಅಸಾಧ್ಯನಾದವನೂ ಆದ ಅವನನ್ನು ನಿನ್ನ ಸೈನ್ಯ ಸಮೂಹಗಳು (ನೋಡಲೂ ಸಮರ್ಥವಾಗಲಿಲ್ಲ).
ಅಮರ್ಷಪೂರ್ಣಸ್ತ್ವತಿಚಿತ್ರಯೋಧೀ
ಶರಾಸನೀ ಕಾಂಚನವರ್ಮಧಾರೀ |
ಸುದರ್ಶನಃ ಸಾತ್ಯಕಿಮಾಪತಂತಂ
ನ್ಯವಾರಯದ್ ರಾಜವರಃ ಪ್ರಸಹ್ಯ ॥ 6 ॥
ರೋಷದಿಂದ ಪೂರ್ಣನಾದವನೂ, ವಿಚಿತ್ರವಾಗಿ ಯುದ್ಧವನ್ನು ಮಾಡುವವನೂ, ಧನುರ್ಧಾರಿಯೂ, ಸುವರ್ಣಮಯವಾದ ಕವಚವನ್ನು ಧರಿಸಿದವನೂ, ರಾಜಶ್ರೇಷ್ಠನೂ ಆದ ಸುದರ್ಶನನು ಮೇಲೆರಗಿ ಬರುತ್ತಿದ್ದ ಸಾತ್ಯಕಿಯನ್ನು ತನ್ನ ಸಾಮರ್ಥ್ಯದಿಂದ ತಡೆದನು.
ತಯೋರಭೂದ್ ಭಾರತ ಸಂಪ್ರಹಾರಃ
ಸುದಾರುಣಸ್ತಂ ಸಮಭಿಪ್ರಶಂಸನ್ |
ಯೋಧಾಸ್ತ್ವದೀಯಾಶ್ಚ ಹಿ ಸೋಮಕಾಶ್ಚ
ವೃತ್ರೇಂದ್ರಯೋರ್ಯುದ್ಧಮಿವಾಮರೌಘಾಃ ॥ 7 ॥
ಎಲೈ ಭಾರತನೇ, ಅವರಿಬ್ಬರಿಗೂ ದಾರುಣವಾದ ಯುದ್ಧವು ನಡೆಯಿತು. ಆ ಯುದ್ಧವನ್ನು ನಿನ್ನ ಯೋಧರೂ ಮತ್ತು ಸೋಮಕರೂ ಸಹ ದೇವತೆಗಳ ಸಮೂಹವು ಇಂದ್ರ-ವೃತ್ರರ ಯುದ್ಧವನ್ನು ಪ್ರಶಂಸಿಸಿದಂತೆ ಪ್ರಶಂಸಿಸಿದರು.
ಶರೈಃ ಸುತೀಕ್ಷ್ಣೈಃ ಶತಶೋಽಭ್ಯವಿಧ್ಯತ್
ಸುದರ್ಶನಃ ಸಾತ್ವತಮುಖ್ಯಮಾಜೌ |
ಅನಾಗತಾನೇವ ತು ತಾನ್ ಪೃಷತ್ಕಾಂ-
ಶ್ಚಿಚ್ಛೇದ ಬಾಣೈಃ ಶಿನಿಪುಂಗವೋಽಪಿ ॥ 8 ॥
ಸುದರ್ಶನನು ಸಾತ್ವತ ವೀರನಾದ ಸಾತ್ಯಕಿಯನ್ನು ರಣರಂಗದಲ್ಲಿ ನೂರಾರು ಬಾಣಗಳಿಂದ ಪೀಡಿಸಿದನು. ಶಿನಿಪುಂಗವನಾದ ಸಾತ್ಯಕಿಯಾದರೋ ಆ ಬಾಣಗಳು ತನ್ನನ್ನು ತಲುಪುವುದಕ್ಕಿಂತ ಮುಂಚೆಯೇ ತನ್ನ ಬಾಣಗಳಿಂದ ಅವುಗಳನ್ನು ಕತ್ತರಿಸಿದನು.
ತಥೈವ ಶಕ್ರಪ್ರತಿಮೋಽಪಿ ಸಾತ್ಯಕಿಃ
ಸುದರ್ಶನೇ ಯಾನ್ ಕ್ಷಿಪತಿ ಸ್ಮ ಸಾಯಕಾನ್ |
ದ್ವಿಧಾ ತ್ರಿಧಾ ತಾನಕರೋತ್ ಸುದರ್ಶನಃ
ಶರೋತ್ತಮೈಃ ಸ್ಯಂದನವರ್ಯಮಾಸ್ಥಿತಃ ॥ 9 ॥
ಹಾಗೆಯೇ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಸಾತ್ಯಕಿಯು ಸುದರ್ಶನನ ಮೇಲೆ ಎಷ್ಟು ಬಾಣಗಳನ್ನು ಪ್ರಯೋಗಿಸಿದನೋ ಅವುಗಳನ್ನು ಸುದರ್ಶನನು ತನ್ನ ಶ್ರೇಷ್ಠ ರಥದಲ್ಲಿಯೇ ಇದ್ದವನಾಗಿ ತನ್ನ ಶ್ರೇಷ್ಠವಾದ ಬಾಣಗಳಿಂದ ಎರಡು ಭಾಗವಾಗಿ, ಮೂರು ಭಾಗವಾಗಿ ಕತ್ತರಿಸಿದನು.
ಸಂಪ್ರೇಕ್ಷ್ಯ ಬಾಣಾನ್ ನಿಹತಾಂಸ್ತದಾನೀಂ
ಸುದರ್ಶನಃ ಸಾತ್ಯಕಿಬಾಣವೇಗೈಃ |
ಕ್ರೋಧಾದ್ ದಿಧಕ್ಷನ್ನಿವ ತಿಗ್ಮತೇಜಾಃ
ಶರಾನಮುಂಚತ್ತಪನೀಯಚಿತ್ರಾನ್ ॥ 10 ॥

ಆಗ ತನ್ನ ಬಾಣಗಳು ಸಾತ್ಯಕಿಯ ಬಾಣಗಳ ವೇಗದಿಂದ ಹತವಾಗುತ್ತಿರುವುದನ್ನು ನೋಡಿದ, ಕ್ರೂರವಾದ ತೇಜಸ್ಸುಳ್ಳ ಸುದರ್ಶನನು ಕ್ರೋಧದಿಂದ ಸುವರ್ಣಾಲಂಕೃತವಾದ, ವಿಚಿತ್ರವಾದ ಬಾಣಗಳನ್ನು ಸಾತ್ಯಕಿಯ ಮೇಲೆ ಪ್ರಯೋಗಿಸಿದನು.
ಪುನಃ ಸ ಬಾಣೈಸ್ತ್ರಿಭಿರಗ್ನಿಕಲ್ಪೈ-
ರಾಕರ್ಣ ಪೂರ್ಣೈರ್ನಿಶಿತೈಃ ಸುಪುಂಖೈಃ |
ವಿವ್ಯಾಧ ದೇಹಾವರಣಂ ವಿಭಿದ್ಯ
ತೇ ಸಾತ್ಯಕೇರಾವಿವಿಶುಃ ಶರೀರಮ್ ॥ 11 ॥
ಪುನಃ ಅವನು ಅಗ್ನಿಸದೃಶವಾದ ಒಳ್ಳೆಯ ಪುಂಖಗಳನ್ನು ಹೊಂದಿದ ಮೂರು ತೀಕ್ಷ್ಣವಾದ ಬಾಣಗಳನ್ನು ಹೆದೆಯನ್ನು ಕಿವಿಯವರೆಗೂ ಎಳೆದು ಪ್ರಯೋಗಿಸಿದನು. ಅವು ಸಾತ್ಯಕಿಯ ಕವಚವನ್ನು ಭೇದಿಸಿ ಅವನ ಶರೀರದಲ್ಲಿ ಇಳಿದವು.
ತಥೈವ ತಸ್ಯಾವನಿಪಾಲಪುತ್ರಃ
ಸಂಧಾಯ ಬಾಣೈರಪರೈರ್ಜ್ವಲದ್ಭಿಃ |
ಆಜಘ್ನಿವಾಂಸ್ತಾನ್ ರಜತಪ್ರಕಾಶಾಂ-
ಶ್ಚತುರ್ಭಿರಶ್ವಾಂಶ್ಚತುರಃ ಪ್ರಸಹ್ಯ ॥ 12 ॥
ಹಾಗೆಯೇ ರಾಜಪುತ್ರನಾದ ಸುದರ್ಶನನು ಬೆಳ್ಳಿಯ ಪ್ರಕಾಶವನ್ನು ಹೊಂದಿದ್ದ ಜ್ವಲಿಸುವ ಬೇರೆ ಬಾಣಗಳನ್ನು ಧನುಸ್ಸಿನಲ್ಲಿ ಹೂಡಿ ಅವನ ನಾಲ್ಕು ಕುದುರೆಗಳನ್ನು ಕೊಂದನು.
ತಥಾ ತು ತೇನಾಭಿಹತಸ್ತರಸ್ವೀ
ನಪ್ತಾ ಶಿನೇರಿಂದ್ರಸಮಾನವೀರ್ಯಃ |
ಸುದರ್ಶನಸ್ಯೇಷುಗಣೈಃ ಸುತೀಕ್ಷ್ಣೈ-
ಹಯಾನ್ ನಿಹತ್ಯಾಶು ನನಾದ ನಾದಮ್ ॥ 13 ॥
ಆ ರೀತಿಯಲ್ಲಿ ಅವನಿಂದ ಪೀಡಿತನಾದ ಶಿನಿಯ ಮೊಮ್ಮಗನೂ, ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನೂ ಆದ ಸಾತ್ಯಕಿಯು ಬಹಳ ತೀಕ್ಷ್ಣವಾದ ಬಾಣಗಳ ಸಮೂಹದಿಂದ ಸುದರ್ಶನನ ರಥದ ಅಶ್ವಗಳನ್ನು ಕೊಂದು ಸಿಂಹನಾದವನ್ನು ಮಾಡಿದನು.
ಅಥಾಸ್ಯ ಸೂತಸ್ಯ ಶಿರೋ ನಿಕೃತ್ಯ
ಭಲ್ಲೇನ ವಜ್ರಾಶನಿಸನ್ನಿಭೇನ |
ಸುದರ್ಶನಸ್ಯಾಪಿ ಶಿನಿಪ್ರವೀರಃ
ಕ್ಷುರೇಣ ಚಿಚ್ಛೇದ ಶಿರಃ ಪ್ರಸಹ್ಯ ॥ 14 ॥
ಅನಂತರ ವಜ್ರಸಿಡಿಲುಗಳನ್ನು ಹೋಲುವ ಭಲ್ಲದಿಂದ ಅವನ ಸೂತನ ಶಿರಸ್ಸನ್ನು ಕತ್ತರಿಸಿ, ಶಿನಿಪ್ರವೀರನಾದ ಸಾತ್ಯಕಿಯು ಕ್ಷುರದಿಂದ ತನ್ನ ಸಾಮರ್ಥ್ಯದಿಂದ ಸುದರ್ಶನನ ಶಿರಸ್ಸನ್ನೂ ಕತ್ತರಿಸಿದನು.
ಸಕುಂಡಲಂ ಪೂರ್ಣಶಶಿಪ್ರಕಾಶಂ
ಭ್ರಾಜಿಷ್ಣು ವಕ್ತ್ರಂ ನಿಚಕರ್ತ ದೇಹಾತ್ |
ಯಥಾ ಪುರಾ ವಜ್ರಧರಃ ಪ್ರಸಹ್ಯ
ಬಲಸ್ಯ ಸಂಖ್ಯೇಽತಿಬಲಸ್ಯ ರಾಜನ್ ॥ 15 ॥
ಎಲೈ ರಾಜನೇ, ಹಿಂದೆ ವಜ್ರಧರನಾದ ಇಂದ್ರನು ತನ್ನ ಸಾಮರ್ಥ್ಯದಿಂದ ಯುದ್ಧದಲ್ಲಿ ಅತಿಬಲನಾದ ಬಲನ ಶಿರಸ್ಸನ್ನು ಕತ್ತರಿಸಿದಂತೆ ಅವನು ಕುಂಡಲಸಹಿತವಾದ, ಪೂರ್ಣಚಂದ್ರಕಾಂತಿಯನ್ನು ಹೊಂದಿದ್ದ, ಪ್ರಕಾಶಮಾನವಾದ ಸುದರ್ಶನನ ಶಿರಸ್ಸನ್ನು ದೇಹದಿಂದ ಕತ್ತರಿಸಿದನು.
ನಿಹತ್ಯ ತಂ ಪಾರ್ಥಿವ ಪುತ್ರಪೌತ್ರಂ
ರಣೇ ಯದೂನಾಮೃಷಭಸ್ತರಸ್ವೀ |
ಮುದಾ ಸಮೇತಃ ಪರಯಾ ಮಹಾತ್ಮಾ
ರರಾಜ ರಾಜನ್ ಸುರರಾಜಕಲ್ಪಃ ॥ 16 ॥
ಎಲೈ ರಾಜನೇ, ಯದುಶ್ರೇಷ್ಠನೂ, ವೇಗಶಾಲಿಯೂ, ಮಹಾತ್ಮನೂ, ಇಂದ್ರನಿಗೆ ಸದೃಶನಾದವನೂ ಆದ ಸಾತ್ಯಕಿಯು ರಾಜನ ಪುತ್ರನ ಪೌತ್ರನಾದ ಸುದರ್ಶನನನ್ನು ಯುದ್ಧದಲ್ಲಿ ಕೊಂದು ಬಹಳ ಸಂತೋಷದಿಂದ ಕೂಡಿದವನಾಗಿ ಶೋಭಿಸಿದನು.
ತತೋ ಯಯಾವರ್ಜುನಮೇವ ಯೇನ
ನಿವಾರ್ಯ ಸೈನ್ಯಂ ತವ ಮಾರ್ಗಣೌಘೈಃ |
ಸದಶ್ವಯುಕ್ತೇನ ರಥೇನ ನಿರ್ಯಾ-
ಲ್ಲೋಕಾನ್ ವಿಸಿಸ್ಮಾಪಯಿಷುರ್ನೃವೀರಃ ॥ 17 ॥
ಅನಂತರ ಒಳ್ಳೆಯ ಅಶ್ವಗಳನ್ನು ಹೂಡಿದ ರಥದಲ್ಲಿ ಸಾಗಿ ನರಶ್ರೇಷ್ಠನಾದ ಅವನು ಎಲ್ಲ ಲೋಕಗಳಿಗೂ ವಿಸ್ಮಯವನ್ನುಂಟು ಮಾಡುತ್ತಾ, ತನ್ನ ಬಾಣಗಳ ಸಮೂಹದಿಂದ ನಿನ್ನ ಸೈನ್ಯವನ್ನು ನಿವಾರಿಸುತ್ತಾ ಅರ್ಜುನನಿದ್ದ ಕಡೆಗೆ ಹೊರಟನು.
ತತ್ತಸ್ಯ ವಿಸ್ಮಾಪಯನೀಯಮಗ್ರ್ಯ-
ಮಪೂಜಯನ್ಯೋಧವರಾಃ ಸಮೇತಾಃ |
ಯದ್ವರ್ತಮಾನಾನಿಷುಗೋಚರೇಽರೀನ್
ದದಾಹ ಬಾಣೈರ್ಹುತಭುಗ್ಯಥೈವ ॥ 18 ॥
ತನ್ನ ಬಾಣದ ವ್ಯಾಪ್ತಿಗೆ ಗೋಚರವಾದ ಎಲ್ಲ ಶತ್ರುಗಳನ್ನೂ ಅಗ್ನಿಯಂತೆ ತನ್ನ ಬಾಣಗಳಿಂದ ದಹಿಸಿದ ಅವನ ವಿಸ್ಮಯಕರವಾದ

ಶ್ರೇಷ್ಠವಾದ ಪ್ರತಾಪವನ್ನು ಶ್ರೇಷ್ಠರಾದ ಯೋಧರೆಲ್ಲರೂ ಒಟ್ಟಿಗೆ ಪೂಜಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐದನೆಯ ಅಧ್ಯಾಯ
ಸಾತ್ಯಕಿಯ ಪರಾಕ್ರಮ.
ಸಂಜಯಃ
ತತಃ ಸ ಸಾತ್ಯಕಿರ್ಧೀಮಾನ್ ಮಹಾತ್ಮಾ ವೃಷ್ಣಿಪುಂಗವಃ |
ಸುದರ್ಶನಂ ನಿಹತ್ಯಾಜೌ ಯಂತಾರಮಿದಮಬ್ರವೀತ್ ॥ 1 ॥
ರಥಾಶ್ವನಾಗಕಲಿಲಂ ಶರಶಕ್ತ್ಯೂರ್ಮಿಮಾಲಿನಮ್ |
ಖಡ್ಗಮತ್ಸ್ಯಂ ಗದಾಗ್ರಾಹಂ ಶೂರಾಯುಧಮಹಾಸ್ವನಮ್ ॥ 2 ॥
ಪ್ರಾಣಾಪಹಾರಿಣಂ ರೌದ್ರಂ ವಾದಿತ್ರೋತ್ಕೃಷ್ಟನಾದಿತಮ್ |
ಯೋಧಾನಾಮಸುಖಸ್ಪರ್ಶಂ ದುರ್ಧರ್ಷಮಜಯ್ಯೈಷಿಣಾಮ್ ॥ 3 ॥
ತೀರ್ಣಾಃ ಸ್ಮ ದುಸ್ತರಂ ತಾತ ದ್ರೋಣಾನೀಕಮಹಾರ್ಣವಮ್ |
ಜಲಸಂಧಬಲೇನಾಜೌ ಪುರುಷಾದೈರಿವಾವೃತಮ್ ॥ 4 ॥
ಸಂಜಯ ಅನಂತರ ವೃಷ್ಣಿಪುಂಗವನೂ, ಮೇಧಾವಿಯೂ, ಮಹಾತ್ಮನೂ ಆದ ಸಾತ್ಯಕಿಯು ಸುದರ್ಶನನನ್ನು ಕೊಂದು, ರಣರಂಗದಲ್ಲಿ ತನ್ನ ಸಾರಥಿಯನ್ನು ಕುರಿತು ಈ ಮಾತುಗಳನ್ನು ಆಡಿದನು. ರಥಾಶ್ವ-ಗಜಗಳಿಂದ ನಿಬಿಡವಾಗಿದ್ದ, ಬಾಣಗಳು ಶಕ್ತಿಗಳು ಎಂಬ ತರಂಗಮಾಲೆಯನ್ನು ಹೊಂದಿದ, ಖಡ್ಗವೆಂಬ ಮತ್ಸ್ಯಗಳನ್ನೂ, ಗದೆಗಳೆಂಬ ಮೊಸಳೆಗಳನ್ನೂ ಹೊಂದಿದ್ದ, ಶೂರರ ಆಯುಧಗಳ ಮಹಾನಾದದಿಂದ ಕೂಡಿದ್ದ, ಭಯಂಕರವೂ, ಪ್ರಾಣಾಪಹಾರಿಯೂ, ವಾದ್ಯಗಳ ಉತ್ಕೃಷ್ಟ ನಿನಾದದಿಂದ ಕೂಡಿದುದೂ, ಯೋಧರಿಗೆ ದುಃಖವನ್ನುಂಟು ಮಾಡುವಂತಹದೂ, ಜಯದ ಅಭಿಲಾಷೆಯಿಲ್ಲದವರಿಗೆ ಸೋಲಿಸಲು ಅಸಾಧ್ಯವೂ ಆದ, ರಾಕ್ಷಸರಂತಿದ್ದ ಜಲಸಂಧನ ಸೇನೆಯಿಂದ ಆವೃತವಾದಂತಹ ದಾಟಲು ಕಷ್ಟಸಾಧ್ಯವಾದ, ದ್ರೋಣರ ಸೈನ್ಯವೆಂಬ ಮಹಾಸಾಗರವನ್ನು ಎಲೈ ಪ್ರೀತಿಪಾತ್ರನೇ, ನಾವು ದಾಟಿದ್ದೇವೆ.
ಅತೋಽನ್ಯಂ ಪೃತನಾಶೇಷಂ ಮನ್ಯೇ ಕುನದಿಕಾಮಿವ |
ತರ್ತವ್ಯಾಮಲ್ಪಸಲಿಲಾಂ ಚೋದಯಾಶ್ವಾನಸಂಭ್ರಮಮ್ ॥ 5 ॥
ಉಳಿದ ಸೈನ್ಯದ ಭಾಗವು ಅಲ್ಪಜಲವಿರುವ ಸಣ್ಣ ನದಿ ಇದ್ದಂತೆ ಎಂದು ಭಾವಿಸುತ್ತೇನೆ. ಅದನ್ನು ದಾಟಬೇಕಾಗಿದೆ. ಗಾಬರಿಯಿಲ್ಲದೆ ಅಶ್ವಗಳನ್ನು ಪ್ರಚೋದಿಸು.
ಹಸ್ತಪ್ರಾಪ್ತಮಹಂ ಮನ್ಯೇ ಸಾಂಪ್ರತಂ ಸವ್ಯಸಾಚಿನಮ್ |
ನಿರ್ಜಿತ್ಯ ದುರ್ಧರಂ ದ್ರೋಣಂ ಸಪದಾನುಗಮಾಹವೇ ॥ 6 ॥
ಹಾರ್ದಿಕ್ಯಂ ಯೋಧವರ್ಯಂ ಚ ಪ್ರಾಪ್ತಂ ಮನ್ಯೇ ಧನಂಜಯಮ್ |
ನ ಹಿ ಮೇ ಜಾಯತೇ ತ್ರಾಸೋ ದೃಷ್ಟ್ವಾ ಸೈನ್ಯಾನ್ಯನೇಕಶಃ ॥ 7 ॥
ಎದುರಿಸಲು ಅಸಾಧ್ಯರಾದ, ತಮ್ಮ ಅನುಯಾಯಿಗಳಿಂದ ಕೂಡಿದ ದ್ರೋಣರನ್ನೂ ಹಾಗೆಯೇ ಶ್ರೇಷ್ಠ ಯೋಧನಾದ ಕೃತವರ್ಮನನ್ನೂ ಜಯಿಸಿ ಈ ನಾನು ಸವ್ಯಸಾಚಿಯಾದ ಧನಂಜಯನು ನನ್ನ ಕೈಗೆ ಸಿಲುಕಿದ್ದಾನೆ ಎಂದು ಭಾವಿಸುತ್ತೇನೆ. ಈ ಅನೇಕ ಸೈನ್ಯವನ್ನು ನೋಡಿದರೂ ನನಗೆ ಭಯವುಂಟಾಗುವುದಿಲ್ಲ.
ವಹ್ನೇರಿವ ಪ್ರದೀಪ್ತಸ್ಯ ಗ್ರೀಷ್ಮೇ ಶುಷ್ಕಂ ತೃಣಾಲಯಮ್ |
ದ್ರವತೇ ತದ್ ಯಥಾ ಸೈನ್ಯಂ ತೇನ ಭಗ್ನಂ ಮಹಾತ್ಮನಾ ॥ 8 ॥
ರಥೈರ್ವಿಪರಿಧಾವದ್ಭಿಃ ಗಜೈರಶ್ವೈಶ್ಚ ಸಾರಥೇ |
ಕೌಶೇಯಾರುಣಸಂಕಾಶಮೇತದುದ್ಧೂಯತೇ ರಜಃ ॥ 9 ॥
ಬೇಸಿಗೆ ಕಾಲದಲ್ಲಿ ಒಣಗಿದ ಹುಲ್ಲಿನ ಮನೆಯನ್ನು ಪ್ರವೇಶಿಸಿದ ಪ್ರದೀಪ್ತವಾದ ಅಗ್ನಿಯು ಉರಿಯುವಂತೆ, ಮಹಾತ್ಮನಾದ ಅರ್ಜುನನು ಕೌರವಸೈನ್ಯವನ್ನು ಭಗ್ನಗೊಳಿಸುತ್ತಿದ್ದಾನೆ. ಎಲೈ ಸಾರಥಿಯೇ, ಧಾವಿಸುವ ರಥಗಳಿಂದಲೂ, ಗಜಗಳಿಂದಲೂ ಮತ್ತು ಅಶ್ವಗಳಿಂದಲೂ ರೇಶ್ಮೆಯಂತೆ ಕೆಂಪುಬಣ್ಣವನ್ನು ಹೊಂದಿರುವ ಈ ಧೂಳು ಮೇಲಕ್ಕೇರುತ್ತಿದೆ.
ಪಶ್ಯ ಪಾಂಡವಮುಖ್ಯೇನ ಯಾತಾಂ ಭೂಮಿಂ ಕಿರೀಟಿನಾ |
ಪತ್ತ್ಯಶ್ವರಥನಾಗೌಘೈಃ ಪತಿತೈರ್ವಿಷಮೀಕೃತಾಮ್ ॥ 10 ॥
ಭೂಮಿಯ ಮೇಲೆ ಬಿದ್ದಿರುವ ಪದಾತಿಗಳಿಂದ, ಅಶ್ವಗಳಿಂದ, ರಥಗಳಿಂದ ಮತ್ತು ಗಜಗಳ ಸಮೂಹದಿಂದ ವಿಷಮವಾಗಿರುವ, ಪಾಂಡವಶ್ರೇಷ್ಠನಾದ ಅರ್ಜುನನು ಹಾದು ಹೋಗಿರುವ, ಈ ಭೂಮಿಯನ್ನು ನೋಡು.
ಅಭ್ಯಾಶಸ್ಥಮಹಂ ಮನ್ಯೇ ಶ್ವೇತಾಶ್ವಂ ಕೃಷ್ಣಸಾರಥಿಮ್ |
ಸ ಏಷ ಶ್ರೂಯತೇ ಶಬ್ದೋ ಗಾಂಡೀವ ಸ್ಯಾಮಿತೌಜಸಃ ॥ 11 ॥
ಕೃಷ್ಣಸಾರಥಿಯಾದ ಅರ್ಜುನನು ಸಮೀಪದಲ್ಲಿಯೇ ಇರುವನೆಂದು ತಿಳಿಯುತ್ತೇನೆ. ಬಹಳ ಸಾಮರ್ಥ್ಯವುಳ್ಳ ಗಾಂಡೀವ ಧನುಸ್ಸಿನ ಈ ಶಬ್ದವು ಕೇಳಿ ಬರುತ್ತಿದೆ.

ಯಾದೃಶಾನಿ ನಿಮಿತ್ತಾನಿ ಮಮ ಪ್ರಾದುರ್ಭವಂತಿ ವೈ |
ಅನಸ್ತಂಗತ ಆದಿತ್ಯೇ ಹಂತಾ ಸೈಂಧವಮರ್ಜುನಃ ॥ 12 ॥
ನನಗೆ ತೋರುತ್ತಿರುವ ಶಕುನಗಳಿಗೆ ಅನುಸಾರವಾಗಿ ಈ ದಿನ ಸೂರ್ಯನು ಅಸ್ತಂಗತನಾಗುವುದರೊಳಗೆ ಅರ್ಜುನನು ಸೈಂಧವನನ್ನು ಕೊಲ್ಲುವನು.
ಶನೈರ್ವಿಶ್ರಂಭಯನ್ನಶ್ವಾನ್ ಯಾಹಿ ಯತ್ತೋಽರಿವಾಹಿನೀಮ್ |
ಯತ್ರೈತೇ ಸತನುತ್ರಾಣಾಃ ಸುಯೋಧನಪುರೋಗಮಾಃ ॥ 13 ॥
ದಂಸಿತಾಃ ಕ್ರೂರಕರ್ಮಾಣಃ ಕಾಂಬೋಜಾ ಯುದ್ಧದುರ್ಮದಾಃ |
ಶರಬಾಣಾಸನಧರಾ ಯವನಾಶ್ಚ ಪ್ರಹಾರಿಣಃ ॥ 14 ॥
ಶಕಾಃ ಕಿರಾತಾ ದರದಾ ಬರ್ಬರಾಸ್ತಾಮ್ರಲಿಪ್ತಕಾಃ |
ಅನ್ಯೇ ಚ ಬಹವೋ ಮ್ಲೇಚ್ಛಾ ವಿವಿಧಾಯುಧಪಾಣಯಃ |
ಮಾಮೇವಾಭಿಮುಖಾಃ ಸರ್ವೇ ತಿಷ್ಠಂತಿ ಸಮರಾರ್ಥಿನಃ ॥ 15 ॥
ಅಶ್ವಗಳಿಗೆ ಸ್ವಲ್ಪ ಸಮಾಧಾನವನ್ನುಂಟು ಮಾಡುತ್ತಾ, ಎಲ್ಲ ಕವಚವನ್ನು ಧರಿಸಿದ ದುರ್ಯೋಧನ ಮೊದಲಾದವರೂ, ಕವಚವನ್ನು ಧರಿಸಿದ ಕ್ರೂರಕರ್ಮಿಗಳಾದ ಯುದ್ಧದುರ್ಮದರಾದ ಕಾಂಬೋಜರೂ, ಧನುರ್ಬಾಣಗಳನ್ನು ಧರಿಸಿದ ಪ್ರಹಾರಶೀಲರಾದ ಯವನರೂ, ಶಕರೂ, ಕಿರಾತರೂ, ದರದರೂ, ಬರ್ಬರರೂ, ತಾಮ್ರಲಿಪ್ತಕರೂ ಮತ್ತು ನನ್ನ ಜೊತೆಯಲ್ಲಿ ಯುದ್ಧವನ್ನು ಬಯಸಿ ನನ್ನನ್ನೇ ಎದುರು ನೋಡುತ್ತಿರುವ ಕೈಯಲ್ಲಿ ಅನೇಕ ವಿಧವಾದ ಆಯುಧಗಳನ್ನು ಹಿಡಿದಿರುವ ಅನೇಕ ಮ್ಲೇಚ್ಛರು ಇದ್ದಾರೆಯೋ ಅಂತಹ ಶತ್ರುಸೈನ್ಯದ ಭಾಗಕ್ಕೆ ಎಚ್ಚರಿಕೆಯಿಂದ ನಿಧಾನವಾಗಿ ಹೋಗು.
ಏತಾನ್ ಸರಥನಾಗಾಶ್ವಾನ್ ನಿಹತ್ಯಾಜೌ ಸಪತ್ತಿನಃ |
ಇದಂ ದುರ್ಗಂ ಮಹಾಘೋರಂ ತೀರ್ಣಮೇವೋಪಧಾರಯ ॥ 16 ॥
ಪದಾತಿಗಳಿಂದ ಕೂಡಿದ, ರಥ-ಗಜಾಶ್ವಗಳಿಂದ ಕೂಡಿದ ಇವರನ್ನು ರಣರಂಗದಲ್ಲಿ ಕೊಂದು ಈ ಮಹಾಘೋರವಾದ, ದುರ್ಗಮವಾದ ಸೈನ್ಯವನ್ನು ದಾಟಿದ್ದೇವೆ ಎಂದೇ ತಿಳಿದುಕೊ.
ಸೂತಃ
ನ ಸಂಭ್ರಮೋ ಮೇ ವಾರ್ಷ್ಣೇಯ ವಿದ್ಯತೇ ಸತ್ಯವಿಕ್ರಮ |
ಯದ್ಯಪಿ ಸ್ಯಾತ್ ಸುಸಂಕ್ರುದ್ಧೋ ಜಾಮದಗ್ನ್ಯೋಽಗ್ರತಃ ಸ್ಥಿತಃ ॥ 17 ॥
ಸೂತ ಎಲೈ ವಾರ್ಷ್ಣೇಯನೇ, ಸತ್ಯವಿಕ್ರಮನೇ, ಕೋಪಗೊಂಡ ಸಾಕ್ಷಾತ್ ಪರಶುರಾಮನೇ ಎದುರಿಗೆ ನಿಂತಿದ್ದರೂ ನನಗೆ ಯಾವ ಗಾಬರಿಯೂ ಇಲ್ಲ.
ದ್ರೋಣೋ ವಾ ರಥಿನಾಂ ಶ್ರೇಷ್ಠಃ ಕೃಪೋ ಮದ್ರೇಶ್ವರೋಽಪಿ ವಾ |
ತಥಾಪಿ ಸಂಭ್ರಮೋ ನ ಸ್ಯಾತ್ ತ್ವಾಮಾಶ್ರಿತ್ಯ ಮಹಾಭುಜ ॥ 18 ॥
ಎಲೈ ಮಹಾಭುಜನೇ, ನಿನ್ನನ್ನು ಆಶ್ರಯಿಸಿದ ನನಗೆ ರಥಿಶ್ರೇಷ್ಠರಾದ ದ್ರೋಣರೇ ಆಗಲಿ, ಕೃಪರೇ ಆಗಲಿ, ಮದ್ರೇಶ್ವರನಾದ ಶಲ್ಯನೇ ಆಗಲಿ, ಎದುರಿಗೆ ಬಂದರೂ ಯಾವ ಗಾಬರಿಯೂ ಆಗಲಾರದು.
ತ್ವಯಾ ಸುಬಹವೋ ಯುದ್ಧೇ ನಿರ್ಜಿತಾಃ ಶತ್ರುಸೂದನ |
ನ ಚ ಮೇ ಸಂಭ್ರಮಃ ಕಶ್ಚಿದ್ ಭೂತಪೂರ್ವಃ ಕದಾಚನ |
ಕಿಮು ಚೈತತ್ ಸಮಾಸಾದ್ಯ ವೀರ ಸಂಯುಗಗೋಷ್ಪದಮ್ ॥ 19 ॥
ಎಲೈ ಶತ್ರುಸೂದನನೇ, ನೀನು ಯುದ್ಧದಲ್ಲಿ ಅನೇಕರನ್ನು ಗೆದ್ದಿದ್ದೀಯೆ. ನಾನು ಹಿಂದೆ ಎಂದೂ ರಣರಂಗದಲ್ಲಿ ಗಾಬರಿಯನ್ನು ಹೊಂದಿಲ್ಲ. ಹೀಗಿರುವಾಗ ಎಲೈ ವೀರನೇ, ಗೋಪಾದಂತಿರುವ ಈ ಸೈನ್ಯವನ್ನು ಸಂಧಿಸಿದಾಗ ಏಕೆ ಗಾಬರಿಗೊಳ್ಳಬೇಕು?
ಆಯುಷ್ಮನ್ ಕತರೇಣ ತ್ವಾ ಪ್ರಾಪಯಾಮಿ ಧನಂಜಯಮ್ |
ಕೇಷಾಂ ಕ್ರುದ್ಧೋಽಸಿ ವಾರ್ಷ್ಣೇಯ ಕೇಷಾಂ ಮೃತ್ಯುರುಪಸ್ಥಿತಃ |
ಕೇಷಾಂ ಸಂಯಮನೀಮದ್ಯ ಗಂತುಮುತ್ಸಹತೇ ಮನಃ ॥ 20 ॥
ಆಯುಷ್ಮಂತನೇ, ಯಾವ ಮಾರ್ಗದಿಂದ ನಾನು ನಿನ್ನನ್ನು ಅರ್ಜುನನ ಬಳಿಗೆ ಕರೆದುಕೊಂಡು ಹೋಗಲಿ? ಎಲೈ ವಾರ್ಷ್ಣೇಯನೇ, ಯಾರ ಮೇಲೆ ನಿನಗೆ ಕೋಪವಿದೆ? ಯಾರಿಗೆ ಈ ದಿನ ಮೃತ್ಯುವು ಸನ್ನಿಹಿತವಾಗಿದೆ? ಯಾರ ಮನಸ್ಸು ಈ ದಿನ ಯಮಪಟ್ಟಣಕ್ಕೆ ಹೋಗಲು ಉತ್ಸುಕವಾಗಿದೆ?
ಕೇ ತ್ವಾಂ ಯುಧಿ ಪರಾಕ್ರಾಂತಂ ಕಾಲಾಂತಕಯಮೋಪಮಮ್ |
ದೃಷ್ಟ್ವಾ ವಿಕ್ರಮಸಂಪನ್ನಂ ವಿದ್ರವಿಷ್ಯಂತಿ ಸಂಯುಗೇ |
ಕೇಷಾಂ ವೈವಸ್ವತೋ ರಾಜಾ ಸ್ಮರತೇಽದ್ಯ ಮಹಾಭುಜ ॥ 21 ॥
ಕಾಲಾಂತಕ ಯಮನಂತೆ ಯುದ್ಧದಲ್ಲಿ ಪರಾಕ್ರಮಶಾಲಿಯಾದ ನಿನ್ನನ್ನು ನೋಡಿ ರಣರಂಗದಲ್ಲಿ ಈ ದಿನ ಯಾರು ಓಡಿಹೋಗುವರು? ಎಲೈ ಮಹಾಭುಜನೇ, ಈ ದಿನ ಯಮರಾಜನು ಯಾರನ್ನು ಸ್ಮರಿಸುತ್ತಾನೆ?
ಇತ್ಯೇವಂ ಕರ್ಮ ಕುರ್ವಾಣಮಂತಕಪ್ರತಿಮಂ ರಣೇ |
ಶಿನೇಃ ಪೌತ್ರಮಥೋಽವಾಚ ಯಂತಾ ಸಂಹೃಷ್ಟಮಾನಸಃ ॥ ॥ 22 ॥
ಹೀಗೆ ಯುದ್ಧದಲ್ಲಿ ಯಮನಂತೆ ಅಸದೃಶಕರ್ಮವನ್ನು ಮಾಡುತ್ತಿದ್ದ ಶಿನಿಯ ಪೌತ್ರನಾದ ಸಾತ್ಯಕಿಯನ್ನು ಕುರಿತು ಸಂತೋಷವನ್ನು ಹೊಂದಿದ ಸಾರಥಿಯು ಮಾತನಾಡಿದನು.
ಸಾತ್ಯಕಿಃ

ಮುಂಡಾನೇತಾನ್ ಹನಿಷ್ಯಾಮಿ ದಾನವಾನಿವ ವಾಸವಃ।
ಪ್ರತಿಜ್ಞಾಂ ಪಾರಯಿಷ್ಯಾಮಿ ಕಾಂಬೋಜಾನೇವ ಮಾ ವಹ।
ಅದ್ಯೈಷಾಂ ಕದನಂ ಕೃತ್ವಾ ಕ್ಷಿಪ್ರಂ ಯಾಸ್ಯಾಮಿ ಪಾಂಡವಮ್ ॥ 23 ॥
ಸಾತ್ಯಕಿ ಇಂದ್ರನು ದಾನವರನ್ನು ಸಂಹರಿಸಿದಂತೆ ನಾನು ಕಾಂಬೋಜದೇಶದ ಈ ಮುಂಡರನ್ನು ಕೊಂದು ನನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸುವೆನು. ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು. ಈ ದಿನ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಿ ಶೀಘ್ರವಾಗಿ ಅರ್ಜುನನ ಬಳಿಗೆ ಹೋಗುವೆನು.
ಅದ್ಯ ದ್ರಕ್ಷ ್ಯಂತಿ ಮೇ ವೀರ್ಯಂ ಕೌರವಾಃ ಸಸುಯೋಧನಾಃ।
ಮುಂಡಾನೀಕೇ ಹತೇ ಸೂತ ಸರ್ವಸೈನ್ಯೇಷು ಚಾಸಕೃತ್ ॥ 24 ॥
ಎಲೈ ಸೂತನೇ, ಎಲ್ಲ ಸೈನ್ಯಗಳಲ್ಲಿ ಮುಂಡರ ಸೈನ್ಯವು ಈ ದಿನ ನನ್ನಿಂದ ಅನೇಕ ಬಾರಿ ಹತವಾಗುತಿತರುವಾಗ ದುರ್ಯೋಧನನ ಜೊತೆಯಲ್ಲಿ ಎಲ್ಲ ಕೌರವರೂ ನನ್ನ ಪರಾಕ್ರಮವನ್ನು ನೋಡುವರು.
ಅದ್ಯ ಕೌರವಸೈನ್ಯಸ್ಯ ದೀರ್ಯಮಾಣಸ್ಯ ಸಂಯುಗೇ।
ಶ್ರುತ್ವಾ ವಿರಾವಂ ಬಹುಧಾ ಸಂತಪ್ಸ್ಯತಿ ಸುಯೋಧನಃ ॥ 25 ॥
ಈ ದಿನ ರಣರಂಗದಲ್ಲಿ ನನ್ನಿಂದ ಭಗ್ನಗೊಳಿಸಲ್ಪಡುವ ಕೌರವಸೈನ್ಯದ ಅನೇಕ ವಿಧವಾದ ಚೀರಾಟವನ್ನು ಕೇಳಿ ಸುಯೋಧನನು ತಾಪಪಡುವನು.
ಅದ್ಯ ಪಾಂಡವಮುಖ್ಯಸ್ಯ ಶ್ವೇತಾಶ್ವಸ್ಯ ಮಹಾತ್ಮನಃ।
ಆಚಾರ್ಯಕಕೃತಂ ಮಾರ್ಗಂ ದರ್ಶಯಿಷ್ಯಾಮಿ ಸಂಯುಗೇ ॥ 26 ॥
ಮಹಾತ್ಮನಾದ, ಪಾಂಡವಶ್ರೇಷ್ಠನಾದ ಅರ್ಜುನನು ಗುರುವಾಗಿ ನನಗೆ ತೋರಿಸಿದ ಮಾರ್ಗವನ್ನು ಈ ದಿನ ರಣರಂಗದಲ್ಲಿ ತೋರಿಸುವೆನು.
ಅದ್ಯ ಮದ್ಬಾಣನಿಹತಾನ್ ಯೋಧಮುಖ್ಯಾನ್ ಸಹಸ್ರಶಃ।
ದೃಷ್ಟ್ವಾ ದುರ್ಯೋಧನೋ ರಾಜಾ ಪಶ್ಚಾತ್ತಾಪಂ ಗಮಿಷ್ಯತಿ ॥ 27 ॥
ಈ ದಿನ ನನ್ನ ಬಾಣಗಳಿಂದ ಹೊಡೆಯಲ್ಪಟ್ಟು ಸಹಸ್ರ ಸಂಖ್ಯೆಯಲ್ಲಿ ಮೃತರಾದ ಶ್ರೇಷ್ಠ ಯೋಧರನ್ನು ನೋಡಿ, ರಾಜನಾದ ದುರ್ಯೋಧನನು ಪಶ್ಚಾತ್ತಾಪವನ್ನು ಪಡುವನು.
ಅದ್ಯ ಮೇ ಕ್ಷಿಪ್ರಹಸ್ತಸ್ಯ ಕ್ಷಿಪತಃ ಸಾಯಕೋತ್ತಮಾನ್।
ಅಲಾತಚಕ್ರಪ್ರತಿಮಂ ಧನುರ್ದ್ರಕ್ಷ ್ಯಂತಿ ಕೌರವಾಃ ॥ 28 ॥
ಕ್ಷಿಪ್ರಹಸ್ತವುಳ್ಳ ನಾನು ಶ್ರೇಷ್ಠವಾದ ಬಾಣಗಳನ್ನು ಪ್ರಯೋಗಿಸುವಾಗ ಈ ದಿನ ಅಲಾತಚಕ್ರದಂತೆ ಮಂಡಲಾಕಾರವಾಗಿರುವ ನನ್ನ ಧನುಸ್ಸನ್ನು ಕೌರವರು ನೋಡುವರು.
ಮತ್ಸಾಯಕಚಿತಾಂಗಾನಾಂ ರುಧಿರಂ ಸ್ರವತಾಂ ಬಹು।
ಸೈನಿಕಾನಾಂ ವಧಂ ದೃಷ್ಟ್ವಾ ಸಂತಪ್ಸ್ಯತಿ ಸುಯೋಧನಃ ॥ 29 ॥
ನನ್ನ ಬಾಣಗಳು ಶರೀರದಲ್ಲಿ ನಾಟಿ ಬಹಳ ರಕ್ತವು ಸೋರುತ್ತಾ ಉಂಟಾಗುವ ತನ್ನ ಸೈನಿಕರ ವಧೆಯನ್ನು ನೋಡಿ ಸುಯೋಧನನು ಸಂತಾಪಪಡುವನು.
ಅದ್ಯ ಮೇ ಕ್ರುದ್ಧರೂಪಸ್ಯ ನಿಘ್ನತಶ್ಚ ವರಾನ್ವರಾನ್।
ದ್ವಿರರ್ಜುನಮಿಮಂ ಲೋಕಂ ಮಂಸ್ಯತೇ ಸ ಸುಯೋಧನಃ ॥ 30 ॥
ಈ ದಿನ ನಾನು ಕ್ರುದ್ಧನಾಗಿ ಕೌರವಸೇನೆಯಲ್ಲಿ ಶ್ರೇಷ್ಠರನ್ನು ಆರಿಸಿ, ಆರಿಸಿ ಕೊಲ್ಲುವಾಗ ಸುಯೋಧನನು ಈ ಲೋಕದಲ್ಲಿ ಇಬ್ಬರು ಅರ್ಜುನರಿದ್ದಾರೆ ಎಂದು ತಿಳಿಯುವನು.
ಅದ್ಯ ರಾಜಸಹಸ್ರಾಣಿ ನಿಹತಾನಿ ಮಯಾ ರಣೇ।
ದೃಷ್ಟ್ವಾ ದುರ್ಯೋಧನೋ ರಾಜಾ ಸಂತಪ್ಸ್ಯತಿ ಮಹಾಮೃಧೇ ॥ 31 ॥
ಈ ದಿನ ದೊಡ್ಡ ಯುದ್ಧದಲ್ಲಿ ನನ್ನಿಂದ ಕೊಲ್ಲಲ್ಪಟ್ಟ ಸಹಸ್ರಾರು ರಾಜರನ್ನು ನೋಡಿ ರಾಜನಾದ ದುರ್ಯೋಧನನು ಸಂತಾಪಪಡುವನು.
ಅದ್ಯ ಸ್ನೇಹಂ ಚ ಭಕ್ತಿಂ ಚ ಪಾಂಡವೇಷು ಮಹಾತ್ಮಸು।
ಹತ್ವಾ ರಾಜಸಹಸ್ರಾಣಿ ದರ್ಶಯಿಷ್ಯಾಮಿ ರಾಜಸು ॥
ವರಂ ವೀರ್ಯಂ ಕೃತಜ್ಞತ್ವಂ ಮಮ ಜ್ಞಾಸ್ಯಂತಿ ಕೌರವಾಃ ॥ 32 ॥
ಈ ದಿನ ಸಹಸ್ರ ರಾಜರನ್ನು ಕೊಂದು ಎಲ್ಲ ರಾಜರಿಗೆ ಮಹಾತ್ಮರಾದ ಪಾಂಡವರಲ್ಲಿ ನನಗಿರುವ ಸೆನೇಹವನ್ನೂ ಮತ್ತು ನಿಷ್ಠೆಯನ್ನೂ ತೋರಿಸುವೆನು. ಕೌರವರು ನನ್ನ ಶ್ರೇಷ್ಠವಾದ ಸಾಮರ್ಥ್ಯವನ್ನೂ ಮತ್ತು ಕೃತಜ್ಞತೆಯನ್ನೂ ತಿಳಿಯುವರು.
ಸಂಜಯಃ
ಏವಮುಕ್ತಸ್ತದಾ ಸೂತಃ ಶಿಕ್ಷಿತಾನ್ ಸಾಧುವಾಹಿನಃ।
ಶಶಾಂಕಸನ್ನಿಕಾಶಾನ್ ವೈ ವಾಜಿನೋಽಚೂಚುದದ್ ಭೃಶಮ್ ॥ 33 ॥
ಸಂಜಯ ಹೀಗೆ ಹೇಳಲ್ಪಟ್ಟ ಸೂತನು ಆಗ ಸುಶಿಕ್ಷಿತಗಳಾದ, ಚೆನ್ನಾಗಿ ರಥವನ್ನು ಎಳೆಯುವ, ಚಂದ್ರನ ಕಾಂತಿಯನ್ನು ಹೊಂದಿದ ಅಶ್ವಗಳನ್ನು ಶೀಘ್ರವಾಗಿ ಪ್ರಚೋದಿಸಿದನು.
ತೇ ಪಿಬಂತ ಇವಾಕಾಶಂ ಯುಯುಧಾನಂ ಹಯೋತ್ತಮಾಃ।
ಪ್ರಾಪಯನ್ ಯವನಾನ್ ಶೀಘ್ರಂ ಮನಃಪವನರಂಹಸಃ ॥ 34 ॥

ಮನೋವೇಗವನ್ನೂ ಮತ್ತು ವಾಯುವೇಗವನ್ನು ಹೊಂದಿದ ಆ ಶ್ರೇಷ್ಠವಾದ ಅಶ್ವಗಳು ಆಕಾಶವನ್ನೇ ಪಾನಮಾಡುವಂತೆ ಯುಯುಧಾನನನ್ನು ಶೀಘ್ರವಾಗಿ ಯವನರ ಸೇನೆಯ ಬಳಿಗೆ ಕರೆದುಕೊಂಡು ಹೋದವು.
ಸಾತ್ಯಕಿಂ ತೇ ಸಮಾಸಾದ್ಯ ಪೃತನಾಸ್ವನಿವರ್ತಿನಮ್ |
ಬಹವೋ ಲಘುಹಸ್ತಾಶ್ಚ ಶರವರ್ಷೈರವಾಕಿರನ್ ॥ 35 ॥
ಯುದ್ಧದಲ್ಲಿ ಹಿಮ್ಮೆಟ್ಟದಿರುವ ಸಾತ್ಯಕಿಯನ್ನು ಸಮೀಪಿಸಿದ, ಕ್ಷಿಪ್ರಹಸ್ತರಾದ ಅನೇಕ ಯವನರು ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತೇಷಾಮಿಷೂನಥಾಸ್ತ್ರಾಣಿ ವೇಗವನ್ನತಪರ್ವಭಿಃ |
ಅಚ್ಛಿನತ್ ಸಾತ್ಯಕೀ ರಾಜನ್ನೈನಂ ತೇ ಪ್ರಾಪ್ನುವನ್ ಶರಾಃ ॥ 36 ॥
ಎಲೈ ರಾಜನೇ, ಸಾತ್ಯಕಿಯು ಅವರ ಬಾಣಗಳನ್ನೂ ಮತ್ತು ಅಸ್ತ್ರಗಳನ್ನೂ ಬಾಗಿದ ತುದಿಯುಳ್ಳ ತನ್ನ ಬಾಣಗಳಿಂದ ಶೀಘ್ರವಾಗಿ ಕತ್ತರಿಸಿದನು. ಆ ಬಾಣಗಳು ಯಾವುವೂ ಸಾತ್ಯಕಿಯ ಬಳಿಯೇ ಬರಲಿಲ್ಲ.
ರುಗ್ಮಪುಂಖೈಃ ಸುನಿಶಿತೈರ್ಗಾರ್ಧ್ರಪತ್ರೈರಜಿಹ್ಮಗೈಃ |
ಉಚ್ಚಕರ್ತ ಶಿರಾಂಸ್ಯುಗ್ರೋ ಯವನಾನಾಂ ಭುಜಾನಪಿ ॥ 37 ॥
ಉಗ್ರನಾದ ಸಾತ್ಯಕಿಯು ಸುವರ್ಣಪುಂಖಗಳನ್ನು ಹೊಂದಿದ್ದ, ಬಹಳ ತೀಕ್ಷ್ಣವಾದ, ಹದ್ದಿನ ಗರಿಗಳನ್ನು ಹೊಂದಿದ್ದ, ನೇರವಾಗಿ ಸಾಗುವ ಬಾಣಗಳಿಂದ ಯವನರ ಶಿರಸ್ಸುಗಳನ್ನೂ ಮತ್ತು ಭುಜಗಳನ್ನೂ ಕತ್ತರಿಸಿದನು.
ಶೈಕ್ಯಾಯಸಾನಿ ವರ್ಮಾಣಿ ಕಾಂಸ್ಯಾನಿ ಚ ಸಮಂತತಃ |
ಭಿತ್ತ್ವಾ ದೇಹಾಂಸ್ತಥಾ ತೇಷಾಂ ಶರಾ ಜಗ್ಮುರ್ಮಹೀತಲಮ್ ॥ 38 ॥
ಪೂರ್ಣವಾಗಿ ಅಯಸ್ಮಯವಾದ ಅಥವಾ ಕಂಚಿನಿಂದ ಮಾಡಿದ ಅವರ ಕವಚಗಳನ್ನು ಎಲ್ಲ ಕಡೆಯಲ್ಲಿಯೂ ಭೇದಿಸಿ, ಹಾಗೆಯೇ ಅವರ ದೇಹಗಳನ್ನೂ ಭೇದಿಸಿ ಆ ಬಾಣಗಳು ಭೂಮಿಯ ಮೇಲೆ ಬಿದ್ದವು.
ತೇ ಹನ್ಯಮಾನಾ ವೀರೇಣ ಮ್ಲೇಚ್ಛಾಃ ಸಾತ್ಯಕಿನಾ ರಣೇ |
ಶತಶೋ ನ್ಯಪತಂಸ್ತತ್ರ ವ್ಯಸವೋ ವಸುಧಾತಳೇ ॥ 39 ॥
ವೀರನಾದ ಸಾತ್ಯಕಿಯಿಂದ ರಣರಂಗದಲ್ಲಿ ಹೊಡೆಯಲ್ಪಟ್ಟ ಮ್ಲೇಚ್ಛರು ನೂರರ ಸಂಖ್ಯೆಯಲ್ಲಿ ಪ್ರಾಣವನ್ನು ಕಳೆದುಕೊಂಡು ಭೂತಳದಲ್ಲಿ ಬಿದ್ದರು.
ಸುಪೂರ್ಣಾಯತಮುಕ್ತೈಸ್ತಾನವ್ಯವಚ್ಛಿನ್ನಪಿಂಡಿತೈಃ |
ಪಂಚ ಷಟ್ಸಪ್ತ ಚಾಷ್ಟೌ ಚ ಬಿಭೇದ ಯವನಾನ್ ಶರೈಃ ॥ 40 ॥
ಪೂರ್ಣವಾಗಿ ಹೆದೆಯನ್ನು ಎಳೆದು ಪ್ರಯೋಗಿಸಿದ, ಒಂದಕ್ಕೊಂದು ಸೇರಿಕೊಂಡ ಬಾಣಗಳಿಂದ ಅವನು ಒಂದೇ ಬಾರಿಗೆ ಐದಾರು-ಏಳೆಂಟು ಯವನರನ್ನು ಭಗ್ನಗೊಳಿಸಿದನು.
ಕಾಂಬೋಜಾನಾಂ ಸಹಸ್ರೈಸ್ತು ಶಕಾನಾಂ ಚ ವಿಶಾಂಪತೇ |
ಶಬರಾಣಾಂ ಕಿರಾತಾನಾಂ ಬರ್ಬರಾಣಾಂ ತಥೈವ ಚ ॥ 41 ॥
ಅಗಮ್ಯರೂಪಾಂ ಪೃಥಿವೀಂ ಮಾಂಸಶೋಣಿತಕರ್ದಮಾಮ್ |
ಕೃತವಾಂಸ್ತತ್ರ ಶೈನೇಯಃ ಕ್ಷಪಯಂಸ್ತಾವಕಂ ಬಲಮ್ ॥ 42 ॥
ಎಲೈ ರಾಜನೇ, ಸಾತ್ಯಕಿಯು ನಿನ್ನ ಸೈನ್ಯವನ್ನು ನಾಶಗೊಳಿಸುತ್ತಾ, ರಣರಂಗದಲ್ಲಿ ಸಹಸ್ರಾರು ಕಾಂಬೋಜರ, ಶಕರ, ಶಬರರ, ಕಿರಾತರ ಮತ್ತು ಬರ್ಬರರ ಮಾಂಸ-ರಕ್ತ-ಕೆಸರಿನಿಂದ ಕೂಡಿದ ರಣಭೂಮಿಯನ್ನು ಸಂಚರಿಸಲು ಅಸಾಧ್ಯವನ್ನಾಗಿ ಮಾಡಿದನು.
ದಸ್ಯೂನಾಂ ಸಶಿರಸ್ತ್ರಾಣೈಃ ಶಿರೋಭಿರ್ಲೂನ ಮೂರ್ಧಜೈಃ |
ತತ್ರ ತತ್ರ ಮಹೀ ಕೀರ್ಣಾ ವಿಬರ್ಹೈರಂಡಜೈರಿವ ॥ 43 ॥
ತಲೆಯ ಕೇಶಗಳನ್ನು ಕಳೆದುಕೊಂಡು, ಶಿರಸ್ತ್ರಾಣ ಸಹಿತವಾಗಿ ಭೂಮಿಯ ಮೇಲೆ ಹರಡಿದ ದಸ್ಯುಗಳ ಶಿರಸ್ಸುಗಳು ಪುಕ್ಕಗಳಿಲ್ಲದ ಪಕ್ಷಿಗಳಂತೆ ಕಂಡುಬಂದವು.
ರುಧಿರೋಕ್ಷಿತಸರ್ವಾಂಗೈಸ್ತೈಸ್ತದಾಯೋಧನಂ ಬಭೌ |
ಕಬಂಧೈಃ ಸಂವೃತಂ ಸರ್ವಂ ತಾಮ್ರಾಭ್ರೈಃ ಖಮಿವಾವೃತಮ್ ॥ 44 ॥
ರಕ್ತದಿಂದ ತೋಯಿಸಲ್ಪಟ್ಟ ಸರ್ವಾಯವಗಳುಳ್ಳ ಕಬಂಧಗಳಿಂದ (ರುಂಡಗಳು) ಆವೃತವಾದ ರಣಭೂಮಿಯು ಕೆಂಪು ಮೋಡಗಳಿಂದ ಆವೃತವಾದ ಆಕಾಶದಂತೆ ಇದ್ದಿತು.
ವಜ್ರಾಶನಿಸಮಸ್ಪರ್ಶೈಃ ಸುಪರ್ವಭಿರಜಿಹ್ಮಗೈಃ |
ತೇ ಸಾಶ್ವಯಾನಾ ನಿಹತಾಃ ಸಮಾವವ್ರುರ್ವಸುಂಧರಾಮ್ ॥ 45 ॥
ವಜ್ರಾಯುಧಕ್ಕೂ, ಸಿಡಿಲಿಗೂ ಸಮವಾದ ಸ್ಪರ್ಶವುಳ್ಳ, ಒಳ್ಳೆಯ ಅಲುಗುಗಳನ್ನು ಹೊಂದಿದ, ನೇರವಾಗಿ ಸಾಗುವ ಬಾಣಗಳಿಂದ ಹೊಡೆಯಲ್ಪಟ್ಟ ಅವರು ಅಶ್ವ-ಗಜಾದಿ ವಾಹನಗಳ ಜೊತೆಯಲ್ಲಿ ಹತರಾಗಿ ಬಿದ್ದು ಭೂಮಿಯನ್ನು ಮುಚ್ಚಿದರು.
ಅಲ್ಪಾವಶಿಷ್ಟಾಃ ಸಂಭಗ್ನಾಃ ಕೃಚ್ಛ್ರಪ್ರಾಣಾ ವಿಚೇತಸಃ |
ಜಿತಾಃ ಸಂಖೇ ಮಹಾರಾಜ ಯುಯುಧಾನೇನ ದಂಸಿತಾಃ ॥ 46 ॥
ಪಾರ್ಷ್ಣಿಭಿಶ್ಚ ಕಶಾಭಿಶ್ಚ ತಾಡಯಂತಸ್ತುರಂಗಮಾನ್ |
ಜವಮುತ್ತಮಮಾಸ್ಥಾಯ ಸರ್ವತಃ ಪ್ರಾದ್ರವನ್ ಭಯಾತ್ ॥ 47 ॥
ಎಲೈ ಮಹಾರಾಜನೇ, ಸಾತ್ಯಕಿಯ ಬಾಣಗಳಿಂದ ಘಾತಿಸಲ್ಪಟ್ಟು, ಪ್ರಾಣ ಸಂಶಯವನ್ನು ಹೊಂದಿ ಪ್ರಜ್ಞಾಶೂನ್ಯಪ್ರಾಯರಾದ, ಭಗ್ನಗೊಂಡು ಯುದ್ಧದಲ್ಲಿ ಪರಾಜಿತರಾದ, ಅವಶಿಷ್ಟರಾದ ಅಲ್ಪಯೋಧರು ತಮ್ಮ ಹಿಮ್ಮಡಿಗಳಿಂದಲೂ ಮತ್ತು

ಚಾವಟಿಗಳಿಂದಲೂ ಅಶ್ವಗಳನ್ನು ಹೊಡೆಯುತ್ತಾ ಉತ್ತಮವೇಗವನ್ನು ಅವಲಂಬಿಸಿ ಭಯದಿಂದ ಎಲ್ಲ ಕಡೆಗಳಲ್ಲಿಯೂ ಓಡಿಹೋದರು.
ಕಾಂಬೋಜಸೈನ್ಯಂ ವಿದ್ರಾವ್ಯ ದುರ್ಜಯಂ ಯುಧಿ ಭಾರತ |
ಯವನಾನಾಂ ಚ ತತ್ ಸೈನ್ಯಂ ಶಕಾನಾಂ ಚ ಮಹದ್ ಬಲಮ್ ||
ಸ ತತಃ ಪುರುಷವ್ಯಾಘ್ರಃ ಸಾತ್ಯಕಿಃ ಸತ್ಯವಿಕ್ರಮಃ |
ಪ್ರಹಷ್ಟಸ್ತಾವಕಾನ್ ಜಿತ್ವಾ ಸೂತಂ ಯಾಹೀತ್ಯಚೋದಯತ್ || 49 ||
ಎಲೈ ಭಾರತನೇ, ಪುರುಷವ್ಯಾಘ್ರನೂ, ಸತ್ಯವಿಕ್ರಮನೂ ಆದ ಸಾತ್ಯಕಿಯು ದುರ್ಜಯವಾದ ಕಾಂಬೋಜ ಸೈನ್ಯವನ್ನೂ, ಯವನರ ಸೈನ್ಯವನ್ನೂ, ಶಕರ ದೊಡ್ಡ ಸೈನ್ಯವನ್ನೂ ಓಡಿಸಿ ಮತ್ತು ನಿನ್ನ ಯೋಧರನ್ನು ಗೆದ್ದು, ಸಂತೋಷಗೊಂಡು ಸಾರಥಿಯನ್ನು ಕುರಿತು ಮುಂದೆ ಹೋಗು ಎಂದು ಪ್ರಚೋದಿಸಿದನು.
ತಂ ಯಾಂತಂ ಪೃಷ್ಠಗೋಪ್ತಾರಮರ್ಜುನಸ್ಯ ವಿಶಾಂಪತೇ |
ನ ಕೇಚಿದಭ್ಯವರ್ತಂತ ತಾವಕಾ ವೃಷ್ಣಿನಂದನಮ್ || 50 ||
ಎಲೈ ರಾಜನೇ, ಅರ್ಜುನನ ಪೃಷ್ಠರಕ್ಷಕನಾಗಿ ಹೋಗುತ್ತಿದ್ದ ವೃಷ್ಣಿನಂದನನಾದ ಸಾತ್ಯಕಿಯನ್ನು ನಿನ್ನವರು ಯಾರೂ ಎದುರಿಸಲಿಲ್ಲ.
ತತ್ತಸ್ಯ ಸಮರೇ ಕರ್ಮ ದೃಷ್ಟ್ವಾನ್ಯೈರಕೃತಂ ಪುರಾ |
ಚಾರಣಾಃ ಪ್ರೇಕ್ಷ್ಯ ಸಂಹೃಷ್ಟಾಸ್ತ್ವದೀಯಾಶ್ಚಾಪ್ಯಪೂಜಯನ್ || 52 ||
ಹಿಂದೆ ಯಾರೂ ಮಾಡದಿದ್ದ ರಣರಂಗದಲ್ಲಿನ ಅವನ ಕರ್ಮವನ್ನು ನೋಡಿ ಚಾರಣರು ಹರ್ಷಗೊಂಡರು. ನಿನ್ನವರೂ ಸಹ ಅದನ್ನು ಪೂಜಿಸಿದರು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಾಧಿಕಶತತಮೋಧ್ಯಾಯಃ ||
|| ಜಯದ್ರಥವಧಪರ್ವಣಿ ಏಕೋನತ್ರಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಆರನೆಯ ಅಧ್ಯಾಯ
ಸಾತ್ಯಕಿಯ ಯುದ್ಧದ ವರ್ಣನೆ.
ಸಂಜಯಃ
ಜಿತ್ವಾ ಯವನಕಾಂಬೋಜಾನ್ ಯುಯುಧಾನಸ್ತತೋಽರ್ಜುನಮ್ |
ಜಗಾಮ ತವ ಸೈನ್ಯಸ್ಯ ಮಧ್ಯೇನ ರಥಿನಾಂ ವರಃ || 1 ||
ಸಂಜಯ ರಥಿಕರಲ್ಲಿ ಶ್ರೇಷ್ಠನಾದ ಸಾತ್ಯಕಿಯು ಯವನರನ್ನೂ, ಕಾಂಬೋಜರನ್ನೂ ಗೆದ್ದು ನಿನ್ನ ಸೈನ್ಯದ ಮಧ್ಯದಿಂದಲೇ ಅರ್ಜುನನ ಬಳಿಗೆ ಹೋದನು.
ಶರದಂಷ್ಟ್ರೋ ನರವ್ಯಾಘ್ರೋ ವಿಚಿತ್ರಕವಚಚ್ಛವಿಃ |
ಮೃಗಾನ್ ವ್ಯಾಘ್ರ ಇವಾಜಿಘ್ರಂಸ್ತವ ಸೈನ್ಯಮಭೀಷಯತ್ || 2 ||
ಶರಗಳೆಂಬ ದಂಷ್ಟ್ರವುಳ್ಳವನೂ, ವಿಚಿತ್ರವಾದ ಕವಚಗಳ ಕಾಂತಿಯನ್ನು ಹೊಂದಿದವನೂ ಆದ ಆ ನರವ್ಯಾಘ್ರನು, ವ್ಯಾಘ್ರವು ಜಿಂಕೆಗಳನ್ನು ಮೂಸಿನೋಡುವಂತೆ ಮುಂದೆ ಸಾಗುತ್ತಾ ನಿನ್ನ ಸೈನ್ಯವನ್ನು ಎದುರಿಸಿದನು.
ಸ ರಥೇನ ಚರನ್ ಮಾರ್ಗಾನ್ ಧನುರಭ್ರಾಮಯದ್ ಭೃಶಮ್ |
ರುಗ್ಮಪೃಷ್ಠಂ ಮಹಾವೇಗಂ ರುಗ್ಮಚಂದ್ರಕಸಂಕುಲಮ್ || 3 ||
ಅವನು ತನ್ನ ರಥದಿಂದ ವಿವಿಧ ಮಾರ್ಗಗಳಲ್ಲಿ ಚಲಿಸುತ್ತಾ, ಸುವರ್ಣ ಪೃಷ್ಠವನ್ನು ಹೊಂದಿದ್ದ, ಸುವರ್ಣಮಯವಾದ ಚಂದ್ರಚಿಹ್ನೆಗಳನ್ನು ಹೊಂದಿದ್ದ ಮಹಾ ವೇಗಶಾಲಿಯಾದ ಧನುಸ್ಸನ್ನು ತೀವ್ರವಾಗಿ ತಿರುಗಿಸಿದನು.
ರುಗ್ಮಾಂಗದಶಿರಸ್ತ್ರಾಣೋ ರುಗ್ಮವರ್ಮಸಮಾವೃತಃ |
ರುಗ್ಮಧ್ವಜವರಃ ಶೂರೋ ಮೇರುಶೃಂಗ ಇವಾಬಭೌ || 4 ||
ಸುವರ್ಣಮಯವಾದ ಅಂಗದವನ್ನೂ, ಕಿರೀಟವನ್ನೂ, ಕವಚವನ್ನೂ ಧರಿಸಿದ ಶೂರನಾದ ಅವನು ಸುವರ್ಣಮಯವಾದ ಶ್ರೇಷ್ಠ ಧ್ವಜವನ್ನು ಹೊಂದಿದವನಾಗಿ ಮೇರುಪರ್ವತದ ಶಿಖರದಂತೆ ಶೋಭಿಸಿದನು.
ಸಧನುರ್ಮಂಡಲಃ ಸಂಖ್ಯೇ ತೇಜೋಭಾಸ್ವರರಶ್ಮಿಮಾನ್ |
ಶರದೀವೋದಿತಃ ಸೂರ್ಯೋ ನೃಸೂರ್ಯೋ ವಿರರಾಜ ಹ || 5 ||
ರಣರಂಗದಲ್ಲಿ ಮಂಡಲಾಕಾರವಾದ ಧನುಸ್ಸಿನಿಂದ ಕೂಡಿದ, ಪುರುಷ ಸೂರ್ಯನಾದ ಅವನು ತನ್ನ ತೇಜಸ್ಸಿನಿಂದ ಬೆಳಗುವ ಕಿರಣಗಳಿಂದ ಕೂಡಿದ ಶರತ್ಕಾಲದಲ್ಲಿ ಉದಯಿಸಿದ ಸೂರ್ಯನಂತೆ ವಿರಾಜಿಸಿದನು.
ವೃಷಭಸ್ಕಂಧವಿಕ್ರಾಂತೋ ವೃಷಭಾಕ್ಷೋ ನರರ್ಷಭಃ |
ತಾವಕಾನಾಂ ಬಭೌ ಮಧ್ಯೇ ಗವಾಂ ಮಧ್ಯೇ ಯಥಾ ವೃಷಃ || 6 ||
ವೃಷಭಸ್ಕಂಧವನ್ನು ಹೊಂದಿದ, ಪರಾಕ್ರಮಶಾಲಿಯಾದ, ವೃಷಭಾಕ್ಷನಾದ ಆ ನರರ್ಷಭನು ನಿನ್ನ ಸೈನ್ಯದ ಮಧ್ಯದಲ್ಲಿ ಗೋವುಗಳ ಮಧ್ಯೆ ವೃಷಭದಂತೆ ಶೋಭಿಸಿದನು.
ಮತ್ತದ್ವಿರದಸಂಕಾಶಂ ಮತ್ತದ್ವಿರದಗಾಮಿನಮ್ |
ಪ್ರಭಿನ್ನಮಿವ ಮಾತಂಗಂ ಯೂಥಮಧ್ಯೇ ವ್ಯವಸ್ಥಿತಮ್ ||

ವ್ಯಾಘ್ರ ಇವ ಜಿಘಾಂಸಂತಸ್ತ್ವದೀಯಾಭ್ಯದ್ರವನ್ ರಣೇ ॥ 7 ॥
ಮದಗಜವನ್ನು ಹೋಲುವ, ಮದಗಜದ ನಡಿಗೆಯನ್ನು ಹೊಂದಿದ, ಗುಂಪಿನ ಮಧ್ಯದಲ್ಲಿರುವ, ಮದೋದಕವನ್ನು ಸ್ರವಿಸುವ ಮದಗಜದಂತೆ ಇದ್ದ ಅವನನ್ನು ಕೊಲ್ಲಲು ಬಯಸಿ ನಿನ್ನ ಯೋಧರು ವ್ಯಾಘ್ರಗಳಂತೆ ರಣರಂಗದಲ್ಲಿ ಅವನ ಕಡೆಗೆ ಓಡಿದರು.
ದ್ರೋಣಾನೀಕಮತಿಕ್ರಾಂತಂ ಭೋಜಾನೀಕಂ ಚ ದುಸ್ತರಮ್ |
ಜಲಸಂಧಾರ್ಣವಂ ತೀರ್ತ್ವಾ ಕಾಂಬೋಜಾನಾಂ ಚ ವಾಹಿನೀಮ್ ॥8॥
ಹಾರ್ದಿಕ್ಯಮಕರೋನ್ಮುಕ್ತಂ ತೀರ್ಣಂ ವೈ ಸೈನ್ಯಸಾಗರಮ್ |
ಪರಿವವ್ರುಃ ಸುಸಂಕ್ರುದ್ಧಾಸ್ತ್ವದೀಯಾಃ ಸಾತ್ಯಕಿಂ ರಥಾಃ ॥ 9 ॥
ದ್ರೋಣರ ಸೈನ್ಯವನ್ನು ದಾಟಿ, ದುಸ್ತರವಾದ ಕೃತವರ್ಮನ ಸೈನ್ಯವನ್ನೂ ದಾಟಿ, ಜಲಸಂಧನ ಸೈನ್ಯ ಸಾಗರವನ್ನೂ, ಕಾಂಬೋಜ ಸೈನ್ಯವನ್ನೂ ದಾಟಿ, ಕೃತವರ್ಮನೆಂಬ ಮೊಸಳೆಯಿಂದ ಮುಕ್ತನಾದ ಆ ಸಾತ್ಯಕಿಯನ್ನು ಬಹಳ ಕ್ರುದ್ಧರಾದ ನಿನ್ನ ರಥರು ಸುತ್ತುವರಿದರು.
ದುರ್ಯೋಧನಶ್ಚಿತ್ರಸೇನೋ ದುಃಶಾಸನವಿವಿಂಶತೀ |
ಶಕುನಿರ್ದುಃಸಹಶ್ಚೈವ ಯುವಾ ದುರ್ಮರ್ಷಣಃ ಕ್ರಥಃ ॥ 10 ॥
ಅನ್ಯೇ ಚ ಬಹವಃ ಶೂರಾಃ ಶಸ್ತ್ರವಂತೋ ದುರಾಸದಾಃ |
ಪೃಷ್ಠತಃ ಸಾತ್ಯಕಿಂ ಯಾಂತಮನ್ವಧಾವನ್ನಮರ್ಷಿತಾಃ ॥ 11 ॥
ದುರ್ಯೋಧನ, ಚಿತ್ರಸೇನ, ದುಶ್ಶಾಸನ, ವಿವಿಂಶತಿ, ಶಕುನಿ, ದುಸ್ಸಹ, ಯುವಕನಾದ ದುರ್ಮರ್ಷಣ, ಕ್ರಥ ಮತ್ತು ದುರಾಸದರಾದ ಶಸ್ತ್ರಧಾರಿಗಳಾದ ಇನ್ನೂ ಅನೇಕ ಶೂರರು ಕೋಪಗೊಂಡು ಮುಂದೆ ಸಾಗುತ್ತಿದ್ದ ಸಾತ್ಯಕಿಯನ್ನು ಹಿಂಬಾಲಿಸಿ ಓಡಿದರು.
ಅಥ ಶಬ್ದೋ ಮಹಾನಾಸೀತ್ತವ ಸೈನ್ಯಸ್ಯ ಮಾರಿಷ |
ಮಾರುತೋದ್ಧೂತವೇಗಸ್ಯ ಸಾಗರಸ್ಯೇವ ಪರ್ವಣಿ ॥ 12 ॥
ಎಲೈ ಪೂಜ್ಯನೇ, ಆಗ ಪರ್ವಕಾಲದಲ್ಲಿ ವಾಯುವಿನಿಂದ ಕ್ಷುಬ್ಧವಾದ ಸಾಗರದ ಘೋಷದಂತೆ ನಿನ್ನ ಸೈನ್ಯದಲ್ಲಿ ದೊಡ್ಡ ಶಬ್ದವು ಉಂಟಾಯಿತು.
ತಾನಭಿದ್ರವತಃ ಸರ್ವಾನ್ ಸಮೀಕ್ಷ್ಯ ಶಿನಿಪುಂಗವಃ |
ಶನೈರ್ಯಾಹೀತಿ ಯಂತಾರಮಬ್ರವೀತ್ ಪ್ರಹಸನ್ನಿವ ॥ 13 ॥
ಶಿನಿಪುಂಗವನಾದ ಸಾತ್ಯಕಿಯು ತನ್ನೆಡೆಗೆ ಓಡಿಬರುತ್ತಿದ್ದ ಅವರೆಲ್ಲರನ್ನೂ ನೋಡಿ ತನ್ನ ಸಾರಥಿಯನ್ನು ನೋಡಿ ನಗುತ್ತಾ ನಿಧಾನವಾಗಿ ಹೋಗು ಎಂದು ಹೇಳಿದನು.
ಇದಮೇತಿ ಸಮುದ್ಧೂತಂ ಧಾರ್ತರಾಷ್ಟ್ರಸ್ಯ ಯದ್ಬಲಮ್ |
ಮಾಮೇವಾಭಿಮುಖಂ ತೂರ್ಣಂ ಗಜಾಶ್ವರಥಪತ್ತಿಮತ್ ॥ 14 ॥
ನಾದಯನ್ವೈ ದಿಶಃ ಸರ್ವಾ ರಥಘೋಷೇಣ ಸಾರಥೇ |
ಪೃಥಿವೀಂ ಚಾಂತರಿಕ್ಷಂ ಚ ಕಂಪಯನ್ ಸಾಗರಾನಪಿ ॥ 15 ॥
ಗಜಾಶ್ವ-ರಥ-ಪದಾತಿಗಳಿಂದ ಕೂಡಿದ ದುರ್ಯೋಧನನ ಈ ದೊಡ್ಡ ಸೈನ್ಯವು ಎಲೈ ಸಾರಥಿಯೇ, ರಥಘೋಷದಿಂದ ಎಲ್ಲ ದಿಕ್ಕುಗಳನ್ನೂ ಪ್ರತಿಧ್ವನಿಸುತ್ತಾ, ಭೂಮಿಯನ್ನೂ, ಅಂತರಿಕ್ಷವನ್ನೂ ಮತ್ತು ಸಾಗರವನ್ನೂ ನಡುಗಿಸುತ್ತಾ ಶೀಘ್ರವಾಗಿ ನನಗೆ ಅಭಿಮುಖವಾಗಿಯೇ ಬರುತ್ತಿದೆ.
ಏತದ್ಬಲಾರ್ಣವಂ ತಾತ ವಾರಯಿಷ್ಯೇ ಮಹಾರಣೇ |
ಪೌರ್ಣಮಾಸ್ಯಾಮಿವೋದ್ಧೂತಂ ವೇಲೇವ ಸಲಿಲಾಶಯಮ್ ॥ 16 ॥
ಎಲೈ ಪ್ರೀತಿಪಾತ್ರನೇ, ಪೌರ್ಣಮಾಸಿಯ ದಿನ ಕ್ಷುಬ್ಧಸಾಗರವನ್ನು ತೀರವು ತಡೆದಂತೆ ರಣರಂಗದಲ್ಲಿ ಈ ಸೈನ್ಯಸಾಗರವನ್ನು ನಾನು ತಡೆಯುವೆನು.
ಪಶ್ಯ ಮೇ ಸೂತ ವಿಕ್ರಾಂತಮಿಂದ್ರಸ್ಯೇವ ಮಹಾಮೃಧೇ |
ಏಷ ಸೈನ್ಯಾನಿ ಶತ್ರೂಣಾಂ ವಿಧಮಾಮಿ ಶಿತೈಃ ಶರೈಃ ॥ 17 ॥
ಎಲೈ ಸೂತನೇ, ದೊಡ್ಡ ಯುದ್ಧದಲ್ಲಿ ಇಂದ್ರನ ಪರಾಕ್ರಮದಂತಿರುವ ನನ್ನ ಪರಾಕ್ರಮವನ್ನು ನೋಡು. ಈ ನಾನು ನಿಶಿತವಾದ ಬಾಣಗಳಿಂದ ಶತ್ರುಗಳ ಸೈನ್ಯವನ್ನು ನಾಶಗೊಳಿಸುತ್ತೇನೆ.
ನಿಹತಾನಾಹವೇ ಪಶ್ಯ ಪದಾತ್ಯಶ್ವರಥದ್ವಿಪಾನ್ |
ಮಚ್ಚರೈರಗ್ನಿಸಂಕಾಶೈರ್ವಿದೇಹಾಸೂನ್ ಸಹಸ್ರಶಃ ॥ 18 ॥
ಅಗ್ನಿಸದೃಶವಾದ ನನ್ನ ಬಾಣಗಳಿಂದ ಸಹಸ್ರ ಸಂಖ್ಯೆಯಲ್ಲಿ ತಮ್ಮ ಶರೀರಗಳನ್ನು ಮತ್ತು ಪ್ರಾಣಗಳನ್ನು ಕಳೆದುಕೊಳ್ಳುವ ಅಶ್ವ-ರಥ-ಗಜ-ಪದಾತಿಗಳನ್ನು ನೋಡು.
ಇತ್ಯೇವಂ ಬ್ರುವತಸ್ತಸ್ಯ ಸಾತ್ಯಕೇರಮಿತೌಜಸಃ |
ಸಮೀಪಂ ಸೈನಿಕಾಸ್ತೇ ತು ಶೀಘ್ರಮೀಯುರ್ಯುಯುತ್ಸವಃ |
ಜಹ್ಯಾದ್ರವಸ್ವ ತಿಷ್ಠೇತಿ ಪಶ್ಯ ಪಶ್ಯೇತಿ ವಾದಿನಃ ॥ 19 ॥
ಅಮಿತ ಪರಾಕ್ರಮಿಯಾದ ಸಾತ್ಯಕಿಯು ಹೀಗೆ ಹೇಳುತ್ತಿರುವಾಗ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿದ ಕೌರವ ಸೈನಿಕರು `ಕೊಲ್ಲು, ಓಡು, ನಿಲ್ಲು, ನೋಡು-ನೋಡು' ಎಂದು ಹೇಳುತ್ತಾ ಅವನ ಸಮೀಪಕ್ಕೆ ಬಂದರು.
ತಾನೇವಂ ಬ್ರುವತೋ ವೀರಾನ್ ಸಾತ್ಯಕಿರ್ನಿಶಿತೈಃ ಶರೈಃ |
ಜಘಾನ ತ್ರಿಶತಾನಶ್ವಾನ್ ಕುಂಜರಾಂಶ್ಚ ಚತುಃಶತಾನ್ ॥ 20 ॥

ಆ ವೀರರು ಹೀಗೆ ಹೇಳುತ್ತಿರುವಾಗ ಸಾತ್ಯಕಿಯು ನಿಶಿತವಾದ ಬಾಣಗಳಿಂದ ಅವರ ಸೈನ್ಯದಲ್ಲಿ ಮುನ್ನೂರು ಅಶ್ವಗಳನ್ನೂ ಮತ್ತು ನಾಲ್ಕುನೂರು ಗಜಗಳನ್ನೂ ಕೊಂದನು.
ಸ ಸಂಪ್ರಹಾರಸ್ತುಮುಲಸ್ತಸ್ಯ ತೇಷಾಂ ಚ ಧನ್ವಿನಾಮ್ |
ದೇವಾಸುರರಣಪ್ರಖ್ಯಃ ಪ್ರಾವರ್ತತ ಜನಕ್ಷಯಃ ॥ 21 ॥
ದೇವಾಸುರ ಯುದ್ಧಕ್ಕೆ ಸದೃಶವಾದ, ಜನವಿನಾಶಕಾರಕವಾದ ತೀವ್ರವಾದ ಯುದ್ಧವು ಅವನಿಗೂ ಮತ್ತು ಆ ಧನುರ್ಧಾರಿಗಳಿಗೂ ನಡೆಯಿತು.
ಮೇಘಜಾಲನಿಭಂ ಸೈನ್ಯಂ ತವ ಪುತ್ರಸ್ಯ ಮಾರಿಷ |
ಪ್ರತ್ಯಗೃಹ್ಣಾಚ್ಛಿನೇಃ ಪೌತ್ರಃ ಶರೈರಾಶೀವಿಷೋಪಮೈಃ ॥ 22 ॥
ಎಲೈ ಪೂಜ್ಯನೇ, ಮೇಘಸಮೂಹವನ್ನು ಹೋಲುವ ನಿನ್ನ ಪುತ್ರನ ಸೈನ್ಯವನ್ನು ಶಿನಿಯ ಪೌತ್ರನಾದ ಸಾತ್ಯಕಿಯು ಸರ್ಪಸದೃಶವಾದ ತನ್ನ ಬಾಣಗಳಿಂದ ಸ್ವೀಕರಿಸಿದನು.
ಪ್ರಚ್ಛಾದ್ಯಮಾನಃ ಸಮರೇ ಶರಜಾಲೈಃ ಸ ವೀರ್ಯವಾನ್ |
ಅಸಂಭ್ರಾಂತೋ ಮಹಾರಾಜ ತಾವಕಾನವಧೀದ್ ಬಹೂನ್ ॥ 23 ॥
ಎಲೈ ಮಹಾರಾಜನೇ, ಬಾಣಗಳ ಸಮೂಹದಿಂದ ರಣರಂಗದಲ್ಲಿ ಮುಚ್ಚಲ್ಪಟ್ಟ, ಪರಾಕ್ರಮಶಾಲಿಯಾದ ಅವನು ಸಂಭ್ರಮರಹಿತನಾಗಿ ನಿನ್ನ ಅನೇಕ ಯೋಧರನ್ನು ಕೊಂದನು.
ಆಶ್ಚರ್ಯಂ ತತ್ರ ರಾಜೇದ್ರ ಸುಮಹದ್ ದೃಷ್ಟವಾನಹಮ್ |
ನ ಮೋಘಃ ಸಾಯಕಃ ಕಶ್ಚಿತ್ ಸಾತ್ಯಕೇರಭವತ್ ಪ್ರಭೋ ॥ 24 ॥
ಎಲೈ ಪ್ರಭುವೇ, ರಾಜೇಂದ್ರನೇ, ಅಲ್ಲಿ ಸಾತ್ಯಕಿಯು ಪ್ರಯೋಗಿಸಿದ ಯಾವ ಒಂದು ಬಾಣವೂ ವ್ಯರ್ಥವಾಗದ ದೊಡ್ಡ ಆಶ್ಚರ್ಯವನ್ನು ನೋಡಿದೆನು.
ರಥನಾಗಾಶ್ವಕಲಿಲಃ ಪದಾತ್ಯೂರ್ಮಿಸಮಾಕುಲಃ |
ಶೈನೇಯವೇಲಾಮಾಸಾದ್ಯ ಸ್ಥಿತಃ ಸೈನ್ಯಮಹಾರ್ಣವಃ ॥ 25 ॥
ರಥ-ಗಜಾಶ್ವಗಳಿಂದ ನಿಬಿಡವಾದ, ಪದಾತಿಗಳೆಂಬ ಅಲೆಗಳಿಂದ ಪೂರ್ಣವಾದ ಆ ಕೌರವ ಸೈನ್ಯಸಾಗರವು ಸಾತ್ಯಕಿ ಎಂಬ ತೀರವನ್ನು ಸಮೀಪಿಸಿ ನಿಂತಿತು.
ಸಂಭ್ರಾಂತನರನಾಗಾಶ್ವಮಾವರ್ತತ ಮುಹುರ್ಮುಹುಃ |
ತತ್ಸೈನ್ಯಮಿಷುಭಿಸ್ತೇನ ವಧ್ಯಮಾನಂ ಸಮಂತತಃ ॥ 26 ॥
ಸಾತ್ಯಕಿಯಿಂದ ಎಲ್ಲ ಕಡೆಗಳಿಂದಲೂ ಬಾಣಗಳಿಂದ ಹೊಡೆಯಲ್ಪಟ್ಟ ಆ ಸೈನ್ಯವು ದಿಗ್ಭ್ರಮೆಗೊಂಡ ನರ-ಗಜಾಶ್ವಗಳಿಂದ ಯುಕ್ತವಾಗಿ ಪುನಃ ಪುನಃ ಅಲ್ಲಲ್ಲಿಯೇ ತಿರುಗಿತು.
ಬಭ್ರಾಮ ತತ್ರ ತತ್ರೈವ ಗಾವಃ ಶೀತಾರ್ದಿತಾ ಇವ |
ರಥಿನಃ ಪತ್ತಿನಾಗಾಶ್ವಾಃ ಸಾದಿನಶ್ಚ ಶರಾಹತಾಃ ॥ 27 ॥
ಸಾತ್ಯಕಿಯ ಬಾಣಗಳಿಂದ ಹೊಡೆಯಲ್ಪಟ್ಟ ರಥಿಕರೂ, ಪದಾತಿಗಳೂ, ಗಜಾಶ್ವಗಳೂ ಮತ್ತು ಅಶ್ವಾರೋಹಿಗಳು ಶೀತದಿಂದ ಪೀಡಿಸಲ್ಪಟ್ಟ ಗೋವುಗಳಂತೆ ಅಲ್ಲಲ್ಲಿಯೇ ತಿರುಗಾಡಿದರು.
ಪದಾತಿನಂ ರಥಂ ನಾಗಂ ಸಾದಿನಂ ತುರಗಂ ತಥಾ |
ಅವಿದ್ಧಂ ತತ್ರ ನಾದ್ರಾಕ್ಷಂ ಯುಯುಧಾನಸ್ಯ ಸಾಯಕೈಃ ॥ 28 ॥
ಸಾತ್ಯಕಿಯ ಬಾಣಗಳಿಂದ ಗಾಯಗೊಳ್ಳದ ಪದಾತಿಯನ್ನಾಗಲೀ, ರಥವನ್ನಾಗಲೀ, ಗಜವನ್ನಾಗಲೀ, ಅಶ್ವಾರೋಹಿಯನ್ನಾಗಲೀ ಅಥವಾ ಅಶ್ವವನ್ನಾಗಲೀ ನಾನು ಅಲ್ಲಿ ನೋಡಲಿಲ್ಲ.
ನ ತಾದೃಕ್ಕದನಂ ರಾಜನ್ ಕೃತವಾಂಸ್ತತ್ರ ಫಲ್ಗುನಃ |
ಯಾದೃಕ್ ಕ್ಷಯಮನೀಕಾನಾಮಕರೋತ್ ಸಾತ್ಯಕಿರ್ನೃಪ ॥ 29 ॥
ಎಲೈ ರಾಜನೇ, ಸಾತ್ಯಕಿಯು ಪರಸೈನ್ಯದಲ್ಲಿ ಎಂತಹ ನಾಶವನ್ನುಂಟು ಮಾಡಿದನೋ ಅಂತಹ ಕದನವನ್ನು ಅರ್ಜುನನೂ ಮಾಡಲಿಲ್ಲ.
ಅತ್ಯರ್ಜುನಂ ಶಿನೇಃ ಪೌತ್ರೋ ಯುದ್ಧ್ಯತೇ ಭರತರ್ಷಭ ॥
ವೀತಭೀರ್ಲಾಘವೋಪೇತಃ ಕೃತಿತ್ವಂ ಸಂಪ್ರದರ್ಶಯತ್ ॥ 30 ॥
ಎಲೈ ಭರತಶ್ರೇಷ್ಠನೇ, ಸಾತ್ಯಕಿಯು ನಿರ್ಭಯನಾಗಿ ಕ್ಷಿಪ್ರತೆಯಿಂದ ಕೂಡಿ ಕೌಶಲವನ್ನು ಪ್ರದರ್ಶಿಸುತ್ತಾ ಅರ್ಜುನನನ್ನೂ ಮೀರಿಸಿ ಯುದ್ಧವನ್ನು ಮಾಡಿದನು.
ತತೋ ದುರ್ಯೋಧನೋ ರಾಜಾ ಸಾತ್ವತಸ್ಯ ತ್ರಿಭಿಃ ಶರೈಃ |
ವಿವ್ಯಾಧ ಸೂತಂ ನಿಶಿತೈಶ್ಚತುರ್ಭಿಶ್ಚತುರೋ ಹಯಾನ್ ॥ 31 ॥
ಆಗ ರಾಜನಾದ ದುರ್ಯೋಧನನು ಮೂರು ಬಾಣಗಳಿಂದ ಸಾತ್ಯಕಿಯ ಸಾರಥಿಯನ್ನೂ, ನಾಲ್ಕು ತೀಕ್ಷ್ಣ ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನೂ ಹೊಡೆದನು.
ಸಾತ್ಯಕಿಂ ಚ ತ್ರಿಭಿರ್ವಿದ್ಧ್ವಾ ಪುನರ್ವಿವ್ಯಾಧ ಸೋಽಷ್ಟಭಿಃ |
ದುಃಶಾಸನಃ ಷೋಡಶಭಿರ್ವಿವ್ಯಾಧ ಶಿನಿಪುಂಗವಮ್ ॥ 32 ॥
ಪುನಃ ಸಾತ್ಯಕಿಯನ್ನು ಮೂರು ಬಾಣಗಳಿಂದ ಹೊಡೆದು, ಪುನಃ ಎಂಟು ಬಾಣಗಳಿಂದ ಹೊಡೆದನು. ದುಶ್ಶಾಸನನು ಶಿನಿಪುಂಗವನನ್ನು ಹದಿನಾರು ಬಾಣಗಳಿಂದ ಹೊಡೆದನು.

ಶಕುನಿಃ ಪಂಚವಿಂಶತ್ಯಾ ಚಿತ್ರಸೇನಶ್ಚ ಪಂಚಭಿಃ |
ದುಃಸಹಃ ಪಂಚದಶಭಿರ್ವಿವ್ಯಾಧೋರಸಿ ಸಾತ್ಯಕಿಮ್ ॥ 33 ॥
ಶಕುನಿಯು ಇಪ್ಪತ್ತೈದು ಬಾಣಗಳಿಂದಲೂ, ಚಿತ್ರಸೇನನು ಐದು ಬಾಣಗಳಿಂದಲೂ, ದುಸ್ಸಹನು ಹದಿನೈದು ಬಾಣಗಳಿಂದಲೂ ಸಾತ್ಯಕಿಗೆ ಅವನ ಎದೆಯಲ್ಲಿ ಹೊಡೆದನು.
ಉತ್ಸ್ಮಯನ್ ವೃಷ್ಣಿಶಾರ್ದೂಲಸ್ತಥಾ ಬಾಣೈಃ ಸಮಾಹತಃ |
ತಾನವಿಧ್ಯನ್ಮಹಾರಾಜ ಸರ್ವಾನೇವ ತ್ರಿಭಿಸ್ತ್ರಿಭಿಃ ॥ 34 ॥
ಎಲ್ಲೈ ಮಹಾರಾಜನೇ, ಹಾಗೆ ಬಾಣಗಳಿಂದ ಹೊಡೆಯಲ್ಪಟ್ಟ, ವೃಷ್ಣಿ ಶಾರ್ದೂಲನಾದ ಸಾತ್ಯಕಿಯು ನಗುತ್ತಾ ಅವರೆಲ್ಲರನ್ನೂ ಮೂರು-ಮೂರು ಬಾಣಗಳಿಂದ ಹೊಡೆದನು.
ಗಾಢವಿದ್ಧಾನರೀನ್ ಕೃತ್ವಾ ಮಾರ್ಗಣೈಃ ಸೋಽತಿತೇಜನೈಃ |
ಶೈನೇಯಃ ಶ್ಯೇನವತ್ ಸಂಖ್ಯೇ ವ್ಯಚರಲ್ಲಘುವಿಕ್ರಮಃ ॥ 35 ॥
ಸಾತ್ಯಕಿಯು ಅತಿತೀಕ್ಷ್ಣವಾದ ಬಾಣಗಳಿಂದ ಶತ್ರುಗಳಿಗೆ ಬಲವಾಗಿ ಹೊಡೆದು ಕ್ಷಿಪ್ರತೆಯನ್ನೂ ಮತ್ತು ಪರಾಕ್ರಮವನ್ನೂ ಹೊಂದಿ ರಣರಂಗದಲ್ಲಿ ಶ್ಯೇನದಂತೆ (ಗಿಡುಗ) ಸಂಚರಿಸಿದನು.
ಸೌಬಲಸ್ಯ ಧನುಶ್ಛಿತ್ತ್ವಾ ಹಸ್ತಾವಾಪಂ ನಿಕೃತ್ಯ ಚ |
ದುರ್ಯೋಧನಂ ತ್ರಿಭಿರ್ಬಾಣೈರಭ್ಯವಿಧ್ಯತ್ ಸ್ತನಾಂತರೇ ॥ 36 ॥
ಶಕುನಿಯ ಧನುಸ್ಸನ್ನು ಕತ್ತರಿಸಿ, ಬತ್ತಳಿಕೆಯನ್ನೂ ಕತ್ತರಿಸಿ, ದುರ್ಯೋಧನನಿಗೆ ಅವನ ಸ್ತನಗಳ ಮಧ್ಯದಲ್ಲಿ ಮೂರು ಬಾಣಗಳಿಂದ ಹೊಡೆದನು.
ಚಿತ್ರಸೇನಂ ಶತೇನೈವ ದಶಭಿರ್ದುಃಸಹಂ ತಥಾ |
ದುಃಶಾಸನಂ ಚ ವಿಂಶತ್ಯಾ ವಿವ್ಯಾಧ ಶಿನಿಪುಂಗವಃ ॥ 37 ॥
ಶಿನಿಪುಂಗವನಾದ ಸಾತ್ಯಕಿಯು ಚಿತ್ರಸೇನನನ್ನು ನೂರು ಬಾಣಗಳಿಂದಲೂ, ದುಸ್ಸನನನ್ನೂ ಹತ್ತು ಬಾಣಗಳಿಂದಲೂ ಹಾಗೂ ದುಶ್ಶಾಸನನನ್ನು ಇಪ್ಪತ್ತು ಬಾಣಗಳಿಂದಲೂ ಹೊಡೆದನು.
ಅಥಾನ್ಯದ್ಧನುರಾದಾಯ ಸ್ಯಾಲಸ್ತವ ವಿಶಾಂಪತೇ |
ಅಷ್ಟಭಿಃ ಸಾತ್ಯಕಿಂ ವಿದ್ಧ್ವಾ ಪುನರ್ವಿವ್ಯಾಧ ಪಂಚಭಿಃ ॥ 38 ॥
ಎಲ್ಲೈ ರಾಜನೇ, ಆಗ ನಿನ್ನ ಭಾವಮೈದುನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಸಾತ್ಯಕಿಯನ್ನು ಎಂಟು ಬಾಣಗಳಿಂದ ಹೊಡೆದು, ಪುನಃ ಐದು ಬಾಣಗಳಿಂದ ಹೊಡೆದನು.
ದುಃಶಾಸನಶ್ಚ ದಶಭಿರ್ದುಃಸಹಶ್ಚ ತ್ರಿಭಿಃ ಶರೈಃ |
ದುರ್ಮುಖಶ್ಚ ದ್ವಾದಶಭೀ ರಾಜನ್ ವಿವ್ಯಾಧ ಸಾತ್ಯಕಿಮ್ ॥ 39 ॥
ಎಲ್ಲೈ ರಾಜನೇ, ದುಶ್ಶಾಸನನು ಹತ್ತು ಬಾಣಗಳಿಂದಲೂ, ದುಸ್ಸಹನು ಮೂರು ಬಾಣಗಳಿಂದಲೂ, ದುರ್ಮುಖನು ಹನ್ನೆರಡು ಬಾಣಗಳಿಂದಲೂ ಸಾತ್ಯಕಿಯನ್ನು ಹೊಡೆದರು.
ದುರ್ಯೋಧನಸ್ತ್ರಿಸಪ್ತತ್ಯಾ ವಿದ್ಧ್ವಾ ಭಾರತ ಮಾಧವಮ್ |
ತತೋಽಸ್ಯ ನಿಶಿತೈರ್ಬಾಣೈಸ್ತ್ರಿಭಿರ್ವಿವ್ಯಾಧ ಸಾರಥಿಮ್ ॥ 40 ॥
ಎಲ್ಲೈ ಭಾರತನೇ, ದುರ್ಯೋಧನನು ಮಧುಕುಲೋತ್ಪನ್ನನಾದ ಸಾತ್ಯಕಿಯನ್ನು ಎಪ್ಪತ್ತೂರು ಬಾಣಗಳಿಂದ ಹೊಡೆದು, ಮೂರು ಹದವಾದ ಬಾಣಗಳಿಂದ ಅವನ ಸಾರಥಿಯನ್ನು ಹೊಡೆದನು.
ತಾನ್ ಸರ್ವಾನ್ ಸಹಿತಾನ್ ಶೂರಾನ್ ಯತಮಾನಾನ್ ಮಹಾರಥಾನ್ |
ಪಂಚಭಿಃ ಪಂಚಭಿರ್ಬಾಣೈಃ ಪುನರ್ವಿವ್ಯಾಧ ಸಾತ್ಯಕಿಃ ॥ 41 ॥
ಸಾತ್ಯಕಿಯು ತನ್ನ ಜೊತೆಯಲ್ಲಿ ಯುದ್ಧವನ್ನು ಮಾಡಲು ಪ್ರಯತ್ನಿಸುತ್ತಿದ್ದ ಒಟ್ಟಾದ ಆ ಎಲ್ಲ ಮಹಾರಥರ ಮೇಲೆ ಐದೈದು ಬಾಣಗಳನ್ನು ಪ್ರಯೋಗಿಸಿದನು.
ತತಃ ಸ ರಥಿನಾಂ ಶ್ರೇಷ್ಠಸ್ತವ ಪುತ್ರಸ್ಯ ಸಾರಥಿಮ್ |
ಆಜಘಾನಾಶು ಭಲ್ಲೇನ ಸ ಹತೋ ನ್ಯಪತದ್ ಭುವಿ ॥ 42 ॥
ಅನಂತರ ರಥಿಕರಲ್ಲಿ ಶ್ರೇಷ್ಠನಾದ ಅವನು ನಿನ್ನ ಪುತ್ರನ ಸಾರಥಿಯನ್ನು ಭಲ್ಲದಿಂದ ಶೀಘ್ರವಾಗಿ ಹೊಡೆದನು. ಅವನು ಮೃತನಾಗಿ ಭೂಮಿಯಲ್ಲಿ ಬಿದ್ದನು.
ಪಾತಿತೇ ಸಾರಥೌ ತಸ್ಮಿಂಸ್ತವ ಪುತ್ರರಥಃ ಪ್ರಭೋ |
ವಾತಾಯಮಾನೈಸ್ತೈರಶ್ವೈರಪಾನೀಯತ ಸಂಗರಾತ್ ॥ 43 ॥
ಎಲ್ಲೈ ಪ್ರಭುವೇ, ಸಾರಥಿಯು ಹತನಾಗುತ್ತಿರಲು ನಿನ್ನ ಪುತ್ರನ ರಥವು ವಾಯುವೇಗವನ್ನು ಹೊಂದಿದ ಅಶ್ವಗಳಿಂದ ರಣರಂಗದಿಂದ ಹೊರಗೆ ಎಳೆದೊಯ್ಯಲ್ಪಟ್ಟಿತು.
ತತಸ್ತವ ಸುತಾ ರಾಜನ್ ಸೈನಿಕಾಶ್ಚ ವಿಶಾಂಪತೇ |
ರಾಜ್ಞೋ ರಥಮಭಿಪ್ರೇಕ್ಷ ್ಯ ವಿದ್ರುತಾಃ ಶತಶೋಽಭವನ್ ॥ 44 ॥
ಎಲ್ಲೈ ರಾಜನೇ, ಆಗ ನಿನ್ನ ಪುತ್ರರೂ ಮತ್ತು ಸೈನಿಕರೂ ರಾಜರಥವನ್ನು ನೋಡಿ ನೂರರ ಸಂಖ್ಯೆಯಲ್ಲಿ ಓಡಿ ಹೋದರು.
ವಿದ್ರುತಂ ತತ್ರ ತತ್ಸೈನ್ಯಂ ದೃಷ್ಟ್ವಾ ಭಾರತ ಸಾತ್ಯಕಿಃ |
ಅವಾಕಿರಚ್ಛರೈಸ್ತೀಕ್ಷ್ಣೈ ್ಣ್ಯ ರುಗ್ಮಪುಂಖೈಃ ಶಿಲಾಶಿತೈಃ ॥ 45 ॥
ಎಲ್ಲೈ ಭಾರತನೇ, ಓಡಿಹೋಗುತ್ತಿದ್ದ ಆ ಸೈನ್ಯವನ್ನು ನೋಡಿ ಸಾತ್ಯಕಿಯು ರುಗ್ಮಪುಂಖಗಳನ್ನು ಹೊಂದಿದ್ದ, ಕಲ್ಲಿನಲ್ಲಿ ಸಾಣೆಯನ್ನು

ಹಿಡಿದ ತೀಕ್ಷ್ಣವಾದ ಬಾಣಗಳ ಮಳೆಯನ್ನು ಅವರ ಮೇಲೆ ಸುರಿಸಿದನು.
ವಿದ್ರಾವ್ಯ ಸರ್ವಸೈನ್ಯಾನಿ ತಾವಕಾನಿ ಸಮಂತತಃ |
ಪ್ರಯಯೌ ಸಾತ್ಯಕೀ ರಾಜನ್ ಶ್ವೇತಾಶ್ವಸ್ಯ ರಥಂ ಪ್ರತಿ ॥ 46 ॥
ಎಲೈ ರಾಜನೇ, ಸಾತ್ಯಕಿಯು ನಿನ್ನ ಎಲ್ಲಾ ಸೈನ್ಯಗಳನ್ನು ಎಲ್ಲ ಕಡೆಗಳಲ್ಲಿಯೂ ಓಡಿಸಿ ಅರ್ಜುನನ ರಥದ ಕಡೆಗೆ ಹೊರಟನು.
ತಂ ಶರಾನಾದದಾನಂ ಚ ರಕ್ಷಮಾಣಂ ಚ ಸಾರಥಿಮ್ |
ಆತ್ಮಾನಂ ಮೋಚಯಂತಂ ಚ ತಾವಕಾಃ ಸಮಪೂಜಯನ್ ॥ 47 ॥
ಸಾರಥಿಯನ್ನೂ ರಕ್ಷಿಸುತ್ತಾ ತನ್ನನ್ನೂ ರಕ್ಷಿಸಿಕೊಳ್ಳುತ್ತಾ ಬಾಣಗಳನ್ನು ತೆಗೆದುಕೊಂಡು ಪ್ರಯೋಗಿಸುತ್ತಿದ್ದ ಅವನನ್ನು ನಿನ್ನವರೂ ಪೂಜಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಡಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಏಳನೆಯ ಅಧ್ಯಾಯ
ಯುದ್ಧದಲ್ಲಿ ಸಾತ್ಯಕಿಯ ಪರಾಕ್ರಮ.
ಧೃತರಾಷ್ಟ್ರಃ
ಸಂಪ್ರಮೃದ್ಯ ಮಹತ್ ಸೈನ್ಯಂ ಯಾಂತಂ ಶೈನೇಯಮರ್ಜುನಮ್ |
ನಿರ್ಹ್ರೀಕಾ ಮಮ ತೇ ಪುತ್ರಾಃ ಕಿಮಕುರ್ವತ ಸಂಜಯ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಸಾತ್ಯಕಿಯು ನಮ್ಮ ದೊಡ್ಡ ಸೈನ್ಯವನ್ನು ಮರ್ದಿಸಿ ಅರ್ಜುನನ ಬಳಿಗೆ ಹೋಗುವಾಗ ನಾಚಿಕೆಯಿಲ್ಲದ ನನ್ನ ಆ ಪುತ್ರರು ಏನು ಮಾಡಿದರು?
ಕಥಂ ಚೈಷಾಂ ತಥಾ ಯುದ್ಧೇ ಧೃತಿರಾಸೀನ್ಮುಮೂರ್ಷತಾಮ್ |
ಶೈನೇಯಚರಿತಂ ದೃಷ್ಟ್ವಾ ಸದೃಶಂ ಸವ್ಯಸಾಚಿನಃ ॥ 2 ॥
ಸಾತ್ಯಕಿಯು ಯುದ್ಧದಲ್ಲಿ ಅರ್ಜುನನಿಗೆ ಸದೃಶವಾದ ಕಾರ್ಯವನ್ನು ಮಾಡುತ್ತಿರುವುದನ್ನು ನೋಡಿ ಮರಣವು ಸನ್ನಿಹಿತವಾದ ನನ್ನ ಪುತ್ರರಿಗೆ ಯುದ್ಧದ ವಿಷಯದಲ್ಲಿ ಹೇಗೆ ಧೈರ್ಯವು ಬಂದಿತು?
ಕಿಂ ನು ವಕ್ಷ್ಯಂತಿ ತೇ ಕ್ಷತ್ರಂ ಸೈನ್ಯಮಧ್ಯೇ ಪರಾಜಿತಾಃ |
ಕಥಂ ಚ ಸಾತ್ಯಕಿಯುದ್ಧೇ ವ್ಯತಿಕ್ರಾಂತೋ ಮಹಾಯಶಾಃ ॥ 3 ॥
ಸೈನ್ಯಮಧ್ಯದಲ್ಲಿ ಪರಾಜಿತರಾದ ಅವರು ಕ್ಷತ್ರಿಯರನ್ನು ಕುರಿತು ಏನು ಹೇಳುವರು? ಮಹಾಕೀರ್ತಿವಂತನಾದ ಸಾತ್ಯಕಿಯಾದರೂ ಯುದ್ಧದಲ್ಲಿ ಅವರನ್ನು ಹೇಗೆ ದಾಟಿದನು?
ಕಥಂ ಚ ಮಮ ಪುತ್ರಾಣಾಂ ಜೀವತಾಂ ತತ್ರ ಸಂಜಯ |
ಶೈನೇಯೋಽಭಿಯಯೌ ಯುದ್ಧೇ ತನ್ಮಮಾಚಕ್ಷ್ವ ತತ್ತ್ವತಃ ॥ 4 ॥
ಎಲೈ ಸಂಜಯನೇ, ನನ್ನ ಪುತ್ರರು ಬದುಕಿರುವಾಗ ಸಾತ್ಯಕಿಯು ರಣರಂಗದಲ್ಲಿ ಅವರನ್ನು ಹೇಗೆ ದಾಟಿದನೆಂದು ನನಗೆ ಯಥಾರ್ಥವಾಗಿ ಹೇಳು.
ಅತ್ಯದ್ಭುತಮಿದಂ ತಾತ ತ್ವತ್ಸಕಾಶಾಚ್ಛೃಣೋಮ್ಯಹಮ್ |
ಏಕಸ್ಯ ಬಹುಭಿರ್ಯುದ್ಧಂ ಶತ್ರುಭಿರ್ವೈ ಮಹಾರಥೈಃ ॥ 5 ॥
ಎಲೈ ಪ್ರೀತಿಪಾತ್ರನೇ, ಒಬ್ಬನು ಮಹಾರಥರಾದ ಅನೇಕ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿದ ಅದ್ಭುತ ವಿಷಯವನ್ನು ನಾನು ನಿನ್ನಿಂದ ಕೇಳುತ್ತಿದ್ದೇನೆ.
ವಿಪರೀತಮಹಂ ಮನ್ಯೇ ಮಂದಭಾಗ್ಯಾನ್ ಸುತಾನ್ ಪ್ರತಿ |
ಯತ್ರಾವಧ್ಯಂತ ಸಮರೇ ಸಾತ್ವತೇನ ಮಹಾತ್ಮನಾ ॥ 6 ॥
ಮಹಾತ್ಮನಾದ ಸಾತ್ಯಕಿಯಿಂದ ಯುದ್ಧದಲ್ಲಿ ಪರಾಜಿತರಾದ, ನನ್ನ ಮಂದಭಾಗ್ಯರಾದ ಪುತ್ರರಿಗೆ ಎಲ್ಲವೂ ತಲೆಕೆಳಗಾಗಿದೆ ಎಂದು ನಾನು ಭಾವಿಸುತ್ತೇನೆ.
ಏಕಸ್ಯ ಹಿ ನ ಪರ್ಯಾಪ್ತಂ ಮತ್ಸೈನ್ಯಂ ತಸ್ಯ ಸಂಜಯ |
ಕ್ರುದ್ಧಸ್ಯ ಯುಯುಧಾನಸ್ಯ ಸರ್ವೇ ತಿಷ್ಠಂತು ಪಾಂಡವಾಃ ॥ 7 ॥
ಎಲೈ ಸಂಜಯನೇ, ಎಲ್ಲ ಪಾಂಡವರು ಹಾಗಿರಲಿ. ಕೋಪಗೊಂಡ ಸಾತ್ಯಕಿಯೊಬ್ಬನಿಗೇ ನನ್ನ ಸೈನ್ಯವು ಸಾಕಾಗುವುದಿಲ್ಲ.
ನಿರ್ಜಿತ್ಯ ಸಮರೇ ದ್ರೋಣಂ ಕೃತಿನಂ ಯುದ್ಧದುರ್ಮದಮ್ |
ಯಥಾ ಪಶುಗಣಾನ್ ಸಿಂಹಸ್ತದ್ವದ್ಧಂತಾ ಸುತಾನ್ ಮಮ ॥ 8 ॥
ಯುದ್ಧದುರ್ಮದರೂ, ಕುಶಲರೂ ಆದ ದ್ರೋಣರನ್ನು ಯುದ್ಧದಲ್ಲಿ ಪರಾಭವಗೊಳಿಸಿ ಸಾತ್ಯಕಿಯು ಸಿಂಹವು ಪಶುಸಮೂಹವನ್ನು ಕೊಲ್ಲುವಂತೆ ನನ್ನ ಪುತ್ರರನ್ನು ಕೊಲ್ಲುವನು.
ಕೃತವರ್ಮಾದಿಭಿಃ ಶೂರೈರ್ಯತ್ತೈರ್ಬಹುಭಿರಾಹವೇ |
ಯುಯುಧಾನೋ ನ ಶಕಿತೋ ಹಂತುಂ ಯಃ ಪುರುಷರ್ಷಭಃ ॥ 9 ॥
ಕೃತವರ್ಮ ಮೊದಲಾದ ಶೂರರು ರಣರಂಗದಲ್ಲಿ ಬಹಳ ಪ್ರಯತ್ನಪಟ್ಟರೂ ಪುರುಷಶ್ರೇಷ್ಠನಾದ ಯುಯುಧಾನನನ್ನು ಕೊಲ್ಲಲು

ಸಮರ್ಥರಾಗಲಿಲ್ಲ.
ನೈತದೀದೃಶಕಂ ಯುದ್ಧಂ ಕೃತವಾಂಸ್ತತ್ರ ಫಲ್ಗುನಃ |
ಯಾದೃಶಂ ಕೃತವಾನ್ ಯುದ್ಧಂ ಶಿನೇರ್ನಪ್ತಾ ಮಹಾಯಶಾಃ ॥ 10 ॥
ಶಿನಿಯ ಪೌತ್ರನಾದ ಮಹಾಕೀರ್ತಿವಂತನಾದ ಸಾತ್ಯಕಿಯು ಎಂತಹ ಯುದ್ಧವನ್ನು ಮಾಡಿದನೋ ಅಂತಹ ಯುದ್ಧವನ್ನು ಅಲ್ಲಿ ಅರ್ಜುನನೂ ಮಾಡಲಿಲ್ಲ.
ಸಂಜಯಃ
ಶೃಣುಷ್ವ ರಾಜನ್ ಸಂಗ್ರಾಮಂ ನರವಾಜಿಗಜಕ್ಷಯಮ್ |
ದುರ್ಯೋಧನಾಪನೀತೇನ ತವ ದುರ್ಮಂತ್ರಿತೇನ ಚ ॥ 11 ॥
ಸಂಜಯ ಎಲೈ ರಾಜನೇ, ದುರ್ಯೋಧನನ ಅಪಚಾರದಿಂದ ಮತ್ತು ನಿನ್ನ ದುರ್ಮಂತ್ರಣದಿಂದ ಉಂಟಾದ ಪದಾತಿ-ಗಜಾಶ್ವ ಕ್ಷಯಕಾರಕವಾದ ಯುದ್ಧವನ್ನು ಕೇಳು.
ತೇ ಪುನಃ ಸನ್ನ್ಯವರ್ತಂತ ಸರ್ವೇ ಸಂಶಪ್ತಕಾ ಮಿಥಃ |
ಪರಾಂ ಯುದ್ಧೇ ಮತಿಂ ಕೃತ್ವಾ ಪುತ್ರಸ್ಯ ತವ ಶಾಸನಾತ್ ॥ 12 ॥
ನಿನ್ನ ಪುತ್ರನ ಶಾಸನವನ್ನು ಕೇಳಿ ಸಂಶಪ್ತಕರು ಪರಸ್ಪರವಾಗಿ ಮಾತನಾಡಿಕೊಂಡು, ಯುದ್ಧ ಮಾಡುವುದರಲ್ಲಿ ಉದಾತ್ತವಾದ ಬುದ್ಧಿಯನ್ನು ಹೊಂದಿ, ಎಲ್ಲರೂ ಹಿಂದಿರುಗಿದರು.
ತ್ರೀಣಿ ಸಾದಿಸಹಸ್ರಾಣಿ ದುರ್ಯೋಧನಪುರೋಗಮಾಃ |
ಶಕಾಃ ಕಾಂಬೋಜಬಾಹ್ಲೀಕಾ ಯವನಾಃ ಪಾರದಾಸ್ತಥಾ ॥ 13 ॥
ಕುಣಿಂದಾಸ್ತಂಗಣಾಂಬಷ್ಠಾಃ ಪೈಶಾಚಾಶ್ಚ ಸಮಂದರಾಃ |
ಅಭ್ಯದ್ರವಂತ ಶೈನೇಯಂ ಶಲಭಾಃ ಪಾವಕಂ ಯಥಾ ॥ 14 ॥
ದುರ್ಯೋಧನನನ್ನು ಮುಂದೆ ಮಾಡಿಕೊಂಡ ಮೂರು ಸಾವಿರ ಅಶ್ವಾರೋಹಿಗಳೂ, ಶಕರೂ, ಕಾಂಬೋಜರೂ, ಬಾಹ್ಲೀಕರೂ, ಯವನರೂ, ಪಾರದರೂ, ಕುಣಿಂದರೂ, ತಂಗಣರೂ, ಅಂಬಷ್ಠರೂ, ಪೈಶಾಚರೂ, ಮಂದರರೂ ಎಲ್ಲರೂ ಪತಂಗಗಳು ಅಗ್ನಿಯನ್ನು ಮುತ್ತಿದಂತೆ ಸಾತ್ಯಕಿಯನ್ನು ಮುತ್ತಿದರು.
ಯುಕ್ತಾಶ್ಚ ಪಾರ್ವತೀಯಾನಾಂ ರಥಾಃ ಪಾಷಾಣಯೋಧಿನಾಮ್ |
ಶೂರಾಃ ಪಂಚಶತಾ ರಾಜನ್ ಶೈನೇಯಂ ಸಮುಪಾದ್ರವನ್ ॥ 15 ॥
ಎಲೈ ರಾಜನೇ, ಬಂಡೆಗಳಿಂದ ಯುದ್ಧವನ್ನು ಮಾಡುವ ಪರ್ವತಪ್ರದೇಶದ ಶೂರರಾದ ಯೋಧರು ಸಜ್ಜುಗೊಳಿಸಿದ ಐದುನೂರು ರಥಗಳಿಂದ ಸಾತ್ಯಕಿಯ ಕಡೆಗೆ ಧಾವಿಸಿದರು.
ತತೋ ರಥಸಹಸ್ರೇಣ ಮಹಾರಥಶತೇನ ಚ |
ದ್ವಿರದಾನಾಂ ಸಹಸ್ರೇಣ ದ್ವಿಸಾಹಸ್ರೈಶ್ಚ ವಾಜಿಭಿಃ ॥ 16 ॥
ಶರವರ್ಷಾಣಿ ಮುಂಚಂತೋ ವಿವಿಧಾನಿ ಮಹಾರಥಾಃ |
ಅಭ್ಯದ್ರವಂತ ಶೈನೇಯಮಸಂಖ್ಯೇಯಾಶ್ಚ ಪತ್ತಯಃ ॥ 17 ॥
ಅನಂತರ ಒಂದು ಸಹಸ್ರ ರಥಗಳಿಂದಲೂ, ನೂರು ಮಹಾರಥರಿಂದಲೂ, ಸಹಸ್ರ ಗಜಗಳಿಂದಲೂ, ಎರಡು ಸಹಸ್ರ ಅಶ್ವಗಳಿಂದಲೂ, ಅಸಂಖ್ಯಾತರಾದ ಪದಾತಿಗಳಿಂದಲೂ ಸಹಿತರಾದ ಮಹಾರಥರು ಅನೇಕ ವಿಧವಾದ ಬಾಣಗಳ ಮಳೆಯನ್ನು ಸುರಿಸುತ್ತಾ ಸಾತ್ಯಕಿಯ ಮೇಲೆ ಎರಗಿದರು.
ತಾಂಶ್ಚ ಸಂಚೋದಯನ್ ಸರ್ವಾನ್ ಘ್ನತೈನಮಿತಿ ಭಾರತ |
ದುಃಶಾಸನೋ ಮಹಾರಾಜ ಸಾತ್ಯಕಿಂ ಪರ್ಯವಾರಯತ್ ॥ 18 ॥
ಎಲೈ ಭಾರತನೇ, ಮಹಾರಾಜನೇ, ದುಶ್ಶಾಸನನು ಅವರೆಲ್ಲರನ್ನೂ ಈ ಸಾತ್ಯಕಿಯನ್ನು ಕೊಲ್ಲಿ ಎಂದು ಪ್ರಚೋದಿಸುತ್ತಾ ಸಾತ್ಯಕಿಯನ್ನು ತಡೆದನು.
ತತ್ರಾದ್ಭುತಮಪಶ್ಯಾಮ ಶೈನೇಯಚರಿತಂ ಮಹತ್ |
ಯದೇಕೋ ಬಹುಭಿಃ ಸಾರ್ಧಮಸಂಭ್ರಾಂತಮಯುದ್ಧ್ಯತ ॥ 19 ॥
ಒಬ್ಬನೇ ಆದ ಸಾತ್ಯಕಿಯು ಅನೇಕ ಮಹಾರಥರ ಜೊತೆಯಲ್ಲಿ ಗಾಬರಿಯಿಲ್ಲದೆ ಯುದ್ಧವನ್ನು ಮಾಡಿದ ಸಾತ್ಯಕಿಯ ದೊಡ್ಡ ಅದ್ಭುತವಾದ ಚರಿತೆಯನ್ನು ನಾವು ಅಲ್ಲಿ ನೋಡಿದೆವು.
ಅವಧೀಚ್ಚ ರಥಾನೀಕಂ ದ್ವಿರದಾನಾಂ ಚ ತದ್ಬಲಮ್ |
ಸಾದಿನಶ್ಚೈವ ತಾನ್ ಸರ್ವಾನ್ ದಸ್ಯೂನಪಿ ಚ ಸರ್ವಶಃ ॥ 20 ॥
ಅವನು ರಥಸಮೂಹವನ್ನೂ, ಗಜಸೇನೆಯನ್ನೂ, ಆ ಎಲ್ಲ ಅಶ್ವಾರೋಹಿಗಳನ್ನೂ ಮತ್ತು ದಸ್ಯುಗಳನ್ನೂ ಎಲ್ಲ ಕಡೆಗಳಲ್ಲಿಯೂ ಕೊಂದನು.
ತತ್ರ ಚಕ್ರೈರ್ವಿಮಥಿತೈರ್ಭಗ್ನೈಶ್ಚ ಪರಮಾಯುಧೈಃ |
ಅಕ್ಷೈಶ್ಚ ಬಹುಧಾ ಭಗ್ನೈರೀಷಾದಂಡಕಬಂಧುರೈಃ ॥ 21 ॥
ಕೂಬರೈರ್ಮಥಿತೈಶ್ಚಾಪಿ ಧ್ವಜೈಶ್ಚಾಪಿ ನಿಪಾತಿತೈಃ |
ವರ್ಮಭಿಶ್ಚಾಮರೈಶ್ಚೈವ ವ್ಯವಕೀರ್ಣಾ ವಸುಂಧರಾ ॥ 22 ॥
ಅಲ್ಲಿ ಮುರಿದ ಚಕ್ರಗಳು, ಭಗ್ನವಾದ ಶ್ರೇಷ್ಠವಾದ ಆಯುಧಗಳು, ಬಹಳವಾಗಿ ಮುರಿದುಹೋದ ರಥದ ತೂಬುಗಳು, ಮೂಕಿಯ ಮರಗಳು, ಬಂಧುರಗಳು, ಭಗ್ನವಾದ ಕೂಬರಗಳು, ಕೆಡವಲ್ಪಟ್ಟ ಧ್ವಜಗಳು, ಕವಚಗಳು ಮತ್ತು ಚಾಮರಗಳು, ಇವುಗಳಿಂದ

ಭೂಮಿಯು ತುಂಬಿಹೋಯಿತು.
ಸ್ರಗ್ಭಿರಾಭರಣೈರ್ವಸ್ತ್ರೈರನುಕರ್ಷೈಶ್ಚ ಮಾರಿಷ |
ಸಂಛನ್ನಾ ವಸುಧಾ ತತ್ರ ದ್ಯೌರ್ಗ್ರಹೈರಿವ ಭಾರತ ॥ 23 ॥
ಎಲೈ ಪೂಜ್ಯನೇ, ಭಾರತನೇ, ಅಲ್ಲಿ ಮಾಲೆಗಳಿಂದಲೂ, ಆಭರಣಗಳಿಂದಲೂ, ವಸ್ತ್ರಗಳಿಂದಲೂ, ಸಣ್ಣ ನೊಗಗಳಿಂದಲೂ ಭೂಮಿಯು ಆಕಾಶವು ಗ್ರಹಗಳಿಂದ ತುಂಬಿ ಹೋದಂತೆ ತುಂಬಿಹೋಯಿತು.
ಗಿರಿರೂಪಧರಾಶ್ಚಾಪಿ ಪತಿತಾಃ ಕುಂಜರೋತ್ತಮಾಃ |
ಅಂಜನಸ್ಯ ಕುಲೇ ಜಾತಾ ವಾಮನಸ್ಯ ಚ ಭಾರತ |
ಸುಪ್ರತೀಕಕುಲೇ ಜಾತಾ ಮಹಾಪದ್ಮಕುಲೇ ತಥಾ ॥ 24 ॥
ಐರಾವತಕುಲೇ ಚೈವ ತಥಾನ್ಯೇಷು ಕುಲೇಷು ಚ |
ಜಾತಾ ದಂತಿವರಾ ರಾಜನ್ ಶೇರತೇ ಬಹವೋ ಹತಾಃ |
ಹತಾಃ ಸಾತ್ವತವೀರೇಣ ನಾರಾಚೈರಗ್ನಿಸನ್ನಿಭೈಃ ॥ 25 ॥
ಪರ್ವತಪ್ರಾಯವಾಗಿದ್ದ ಶ್ರೇಷ್ಠ ಗಜಗಳು ಬಿದ್ದವು. ದಿಗ್ಗಜಗಳಾದ ಅಂಜನನ ಕುಲದಲ್ಲಿ, ವಾಮನನ ಕುಲದಲ್ಲಿ, ಐರಾವತ ಕುಲದಲ್ಲಿ, ಮಹಾಪದ್ಮ ಕುಲದಲ್ಲಿ, ಹಾಗೆಯೇ ಸುಪ್ರತೀಕ ಕುಲದಲ್ಲಿ ಮತ್ತು ಬೇರೆ ಬೇರೆ ಕುಲದಲ್ಲಿ ಜನಿಸಿದ ಶ್ರೇಷ್ಠವಾದ ಅನೇಕ ಗಜಗಳು, ಎಲೈ ರಾಜನೇ, ಭಾರತನೇ, ಸತ್ತು ಮಲಗಿದವು. ಸಾತ್ವತವೀರನಾದ ಸಾತ್ಯಕಿಯಿಂದ ಅಗ್ನಿಸದೃಶವಾದ ನಾರಾಚಗಳಿಂದ ಅವು ಹತವಾದವು.
ವನಾಯುಜಾನ್ ಪಾರ್ವತೀಯಾನ್ ಕಾಂಬೋಜಾರಟ್ಟಬಾಹ್ಲಿಕಾನ್ |
ತಥಾ ಹಯವರಾನ್ ರಾಜನ್ ನಿಜಘ್ನೇ ತತ್ರ ಸಾತ್ಯಕಿಃ ॥ 26 ॥
ಎಲೈ ರಾಜನೇ, ಅಲ್ಲಿ ಸಾತ್ಯಕಿಯು ವನಾಯು ದೇಶದ, ಪರ್ವತದೇಶದ, ಕಾಂಬೋಜ, ಅರಟ್ಟ ಮತ್ತು ಬಾಹ್ಲೀಕ ದೇಶದ ಶ್ರೇಷ್ಠವಾದ ಅಶ್ವಗಳನ್ನು ಕೊಂದನು.
ನಾನಾದೇಶಸಮುತ್ಥಾಂಶ್ಚ ನಾನಾಜಾತ್ಯಾಂಶ್ಚ ಪತ್ತಿನಃ |
ನಿಜಘ್ನೇ ತತ್ರ ಶೈನೇಯಃ ಶತಶೋಽಥ ಸಹಸ್ರಶಃ ॥ 27 ॥
ಸಾತ್ಯಕಿಯು ಅಲ್ಲಿ ನಾನಾ ದೇಶಗಳಿಂದ ಬಂದ ನಾನಾ ಜಾತಿಯ ಪದಾತಿಗಳನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಕೊಂದನು.
ತೇಷು ಪ್ರಕಾಲ್ಯಮಾನೇಷು ದಸ್ಯೂನ್ ದುಃಶಾಸನೋಬ್ರವೀತ್ |
ನಿವರ್ತಧ್ವಮಧರ್ಮಜ್ಞಾ ಯುದ್ಧ್ಯಧ್ವಂ ಕಿಂ ಸೃತೇನ ವಃ ॥ 28 ॥
ಸೈನ್ಯವು ಹಾಗೆ ಸಾತ್ಯಕಿಯಿಂದ ಅಟ್ಟಾಡಲ್ಪಡುತ್ತಿರಲು ದುಶ್ಶಾಸನನು ದಸ್ಯುಗಳನ್ನು ಕುರಿತು ಧರ್ಮಜ್ಞಾನಶೂನ್ಯರಾದವರೇ ಏತಕ್ಕೆ ಓಡುತ್ತಿದ್ದೀರಿ? ಹಿಂದಿರುಗಿ ಬಂದು ಯುದ್ಧವನ್ನು ಮಾಡಿ ಎಂದು ಹೇಳಿದನು.
ತಾಂಶ್ಚಾಪಿ ಸರ್ವಾನ್ ಸಂಪ್ರೇಕ್ಷ್ಯ ಪುತ್ರೋ ದುಃಶಾಸನಸ್ತವ |
ಪಾಷಾಣಯೋಧಿನಃ ಶೂರಾನ್ ಪಾರ್ವತೀಯಾನಚೋದಯತ್ ॥29॥
ಅಶ್ಮಯುದ್ಧೇಷು ಕುಶಲಾ ನೈತಜ್ಜಾನಾತಿ ಸಾತ್ಯಕಿಃ |
ಅಶ್ಮಯುದ್ಧಮಜಾನಂತಂ ಘ್ನತೈನಂ ಯುದ್ಧಕಾಮುಕಮ್ ॥ 30 ॥
ಪರ್ವತಪ್ರದೇಶದ ಪಾಷಾಣಯೋಧಿಗಳಾದ ಎಲ್ಲ ಶೂರರನ್ನೂ ನೋಡಿ ನಿನ್ನ ಪುತ್ರನಾದ ದುಶ್ಶಾಸನನು, ಶಿಲಾಯುದ್ಧರಲ್ಲಿ ಕುಶಲರಾದ ಶೂರರೇ, ಸಾತ್ಯಕಿಗೆ ಈ ಯುದ್ಧದ ಜ್ಞಾನವಿಲ್ಲ. ಶಿಲಾಯುದ್ಧವನ್ನು ತಿಳಿಯದೆ ಯುದ್ಧವನ್ನು ಮಾಡಲು ಬಯಸಿರುವ ಇವನನ್ನು ಕೊಲ್ಲಿ.
ತಥೈವ ಕುರವಃ ಸರ್ವೇ ನಾಶ್ಮಯುದ್ಧವಿಶಾರದಾಃ |
ಅಭಿದ್ರವತ ಮಾ ಭೈಷ್ಟ ನ ವಃ ಪ್ರಾಪ್ಸ್ಯತಿ ಸಾತ್ಯಕಿಃ ॥ 31 ॥
ಹಾಗೆಯೇ ಕುರುಗಳು ಯಾರೂ ಅಶ್ಮಯುದ್ಧದಲ್ಲಿ ವಿಶಾರದರಲ್ಲ. ಆದ್ದರಿಂದ ಹೆದರಬೇಡಿ, ಮುನುನುಗ್ಗಿ. ಸಾತ್ಯಕಿಯು ನಿಮ್ಮ ಬಳಿಗೆ ಬರುವುದಿಲ್ಲ ಎಂದು ಪ್ರಚೋದಿಸಿದನು.
ತತೋ ಗಜಶಿಶುಪ್ರಖ್ಯೈರುಪಲೈಃ ಶೈಲವಾಸಿನಃ |
ಉದ್ಯತೈರ್ಯುಯುಧಾನಸ್ಯ ಸ್ಥಿತಾ ಮರಣಕಾಂಕ್ಷಿಣಃ ॥ 32 ॥
ಆಗ ಪರ್ವತವಾಸಿಗಳಾದ ಶೂರರು ಆನೆಯ ಮರಿಗಳಂತಹ ಬಂಡೆಗಳನ್ನು ಬಾಹುಗಳಿಂದ ಎತಿತಹಿಡಿದು ಸಾತ್ಯಕಿಯ ವಧೆಯನ್ನು ಮಾಡಲು ಬಯಸಿ ನಿಂತರು.
ಕ್ಷೇಪಣೀಯೈಸ್ತಥಾಪ್ಯನ್ಯೇ ಸಾತ್ವತಸ್ಯ ವಧೈಷಿಣಃ |
ಚೋದಿತಾಸ್ತವ ಪುತ್ರೇಣ ರುರುಧುಃ ಸರ್ವತೋ ದಿಶಮ್ ॥ 33 ॥
ನಿನ್ನ ಪುತ್ರನಿಂದ ಪ್ರಚೋದಿತರಾದ ಇನ್ನು ಕೆಲವು ಶೂರರು ಸಾತ್ಯಕಿಯ ವಧೆಯನ್ನು ಬಯಸಿ, ಕ್ಷೇಪಣಿಗಳನ್ನು (ಮಿಸೈಲ್‌ಸ) ಸಿದ್ಧಗೊಳಿಸಿ, ಎಲ್ಲ ದಿಕ್ಕುಗಳಲ್ಲಿಯೂ ಅವನನ್ನು ತಡೆದರು.
ತೇಷಾಮಾಪತತಾಮೇವ ಶಿಲಾಯುದ್ಧಂ ಚಿಕೀರ್ಷತಾಮ್ |
ಸಾತ್ಯಕಿಃ ಪ್ರತಿಸಂಧಾಯ ತ್ರಿಂಶತಂ ಪ್ರಾಹಿಣೋಚ್ಛರಾನ್ ॥ 34 ॥
ಹೀಗೆ ಶಿಲಾಯುದ್ಧವನ್ನು ಮಾಡಲು ಬಯಸಿ ತನ್ನೆಡೆಗೆ ಬರುತ್ತಿದ್ದ ಅವರನ್ನು ನೋಡಿ ಸಾತ್ಯಕಿಯು ಮುನ್ನೂರು ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ ಅವರನ್ನು ಹೊಡೆದನು.
ತಾಮಶ್ಮವೃಷ್ಟಿಂ ತುಮುಲಾಂ ಪಾರ್ವತೀಯೈಃ ಸಮೀರಿತಾಮ್ |

ಬಿಭೇದೋರಗಸಂಕಾಶೈರ್ನಾರಾಚೈಃ ಶಿನಿಪುಂಗವಃ ॥ 35 ॥
ಶಿನಿಪುಂಗವನಾದ ಅವನು ಪರ್ವತಪ್ರದೇಶದ ಶೂರರಿಂದ ಮಾಡಲ್ಪಟ್ಟ ಶಿಲಾವೃಷ್ಟಿಯನ್ನು ಸರ್ಪದಂತಿದ್ದ ನಾರಾಚಗಳಿಂದ ಭೇದಿಸಿದನು.
ತೈರಶ್ಮಚೂರ್ಣೈರ್ದೀಪ್ಯದ್ಭಿಃ ಖದ್ಯೋತಾನಾಮಿವ ವ್ರಜೈಃ |
ಪ್ರಾಯಃ ಸೈನ್ಯಾನ್ಯವಧ್ಯಂತ ಹಾಹಾಭೂತಾನಿ ಮಾರಿಷ ॥ 36 ॥
ಎಲೈ ಪೂಜ್ಯನೇ, ಅವನ ನಾರಾಚಗಳ ಸಂಘರ್ಷದಿಂದ ಉಂಟಾದ, ಮಿಣುಕು ಹುಳಗಳ ಸಮೂಹದಂತಿರುವ ಜ್ವಲಿಸುವ ಶಿಲೆಯ ಚೂರುಗಳು ಪ್ರಾಯಃ ನಿನ್ನ ಸೈನ್ಯಗಳನ್ನು ಕೊಂದು ಸೈನ್ಯದಲ್ಲಿ ಹಾಹಾಕಾರವುಂಟಾಯಿತು.
ತತಃ ಪಂಚಶತಾಃ ಶೂರಾಃ ಸಮುದ್ಯತಮಹಾಶಿಲಾಃ |
ನಿಕೃತ್ತಬಾಹವೋ ರಾಜನ್ನಿಪೇತುರ್ಧರಣೀತಳೇ ॥ 37 ॥
ಅನಂತರ ಕೈಯಲ್ಲಿ ದೊಡ್ಡ ಬಂಡೆಗಳನ್ನು ಎತ್ತಿಹಿಡಿದ ಶೂರರ ಬಾಹುಗಳು ಸಾತ್ಯಕಿಯಿಂದ ಕತ್ತರಿಸಲ್ಪಟ್ಟು, ರಾಜನೇ, ಐದು ನೂರು ಶೂರರು ಭೂತಳದಲ್ಲಿ ಬಿದ್ದರು.
ಪಾಷಾಣಯೋಧಿನಃ ಶೂರಾನ್ ಯತಮಾನಾನವಸ್ಥಿತಾನ್ |
ಅವಧೀದ್ ಬಹುಸಾಹಸ್ರಾಂಸ್ತದದ್ಭುತಮಿವಾಭವತ್ ॥ 38 ॥
ಬಹಳ ಪ್ರಯತ್ನಪಟ್ಟು ರಣರಂಗದಲ್ಲಿ ನಿಂತ ಅನೇಕ ಸಹಸ್ರಸಂಖ್ಯೆಯ ಶೂರರಾದ ಪಾಷಾಣ ಯೋಧರನ್ನು ಸಾತ್ಯಕಿಯು ಕೊಂದನು. ಅದು ಅದ್ಭುತವಾಗಿದ್ದಿತು.
ತತಃ ಪುನರ್ಬಸ್ತಮುಖೈರಶ್ಮವೃಷ್ಟಿಂ ಸಮಂತತಃ |
ಅಯೋಹಸ್ತೈಃ ಶೂಲಹಸ್ತೈರ್ದರದೈಃ ಖಶತಂಗಣೈಃ ॥ 39 ॥
ಅಂಬಷ್ಠೈಶ್ಚ ಕುಣಿಂದೈಶ್ಚ ಕ್ಷಿಪ್ತಾಂ ಕ್ಷಿಪ್ತಾಂ ಸ ಸಾತ್ಯಕಿಃ |
ನಾರಾಚೈಃ ಪ್ರತಿವಿವ್ಯಾಧ ಪ್ರೇಕ್ಷಮಾಣೋ ಮಹಾಬಲಃ ॥ 40 ॥
ಅನಂತರ ಮಹಾಬಲನಾದ ಸಾತ್ಯಕಿಯು ಎಲ್ಲ ಕಡೆಗಳಲ್ಲಿಯೂ ಬಸ್ತಮುಖರಿಂದ, ಕಬ್ಬಿಣದ ಆಯುಧವನ್ನೂ ಮತ್ತು ಶೂಲವನ್ನೂ ಕೈಯಲ್ಲಿ ಹಿಡಿದ ದರದರಿಂದ, ಖಶರಿಂದ, ತಂಗಣರಿಂದ, ಅಂಬಷ್ಠರಿಂದ, ಕುಣಿಂದರಿಂದ ಎಸೆಯಲ್ಪಟ್ಟ ಶಿಲೆಗಳೆಲ್ಲವನ್ನೂ ಮಹಾಬಲನಾದ ಅವನು ನೋಡುತ್ತಾ ನಾರಾಚಗಳಿಂದ ಹೊಡೆದನು.
ಅದ್ರೀಣಾಂ ಭಿದ್ಯಮಾನಾನಾಮಂತರಿಕ್ಷೇ ಶಿತೈಃ ಶರೈಃ |
ಶಬ್ದೇನ ಪ್ರಾದ್ರುವನ್ ರಾಜನ್ ಗಜಾಶ್ವರಥಪತ್ತಯಃ ॥ 41 ॥
ಎಲೈ ರಾಜನೇ, ಪರ್ವತದಂತಹ ದೊಡ್ಡ ಬಂಡೆಗಳು ಅಂತರಿಕ್ಷದಲ್ಲಿ ಸಾತ್ಯಕಿಯ ನಾರಾಚದಿಂದ ಹೊಡೆಯಲ್ಪಟ್ಟು ಭಗ್ನವಾಗುವಾಗ ಉಂಟಾದ ಶಬ್ದಗಳಿಂದ ಗಜಾಶ್ವ- ರಥ-ಪದಾತಿಗಳು ಓಡಿ ಹೋದರು.
ಅಶ್ಮಚೂರ್ಣೈಃ ಸಮಾಕೀರ್ಣಾ ಮನುಷ್ಯಾಶ್ಚ ವಯಾಂಸಿ ಚ |
ನಾಶಕ್ನುವನ್ನವಸ್ಥಾತುಂ ಭ್ರಮರೈರಿವ ದಂಶಿತಾಃ ॥ 42 ॥
ಕಲ್ಲಿನ ಪುಡಿಗಳಿಂದ ತುಂಬಿಹೋದ ಮನುಷ್ಯರು ಮತ್ತು ದಸ್ಯುಗಳು ಕಣಜದಿಂದ ಕಡಿಯಲ್ಪಟ್ಟವರಂತೆ ಅಲ್ಲಿ ನಿಲ್ಲಲು ಸಮರ್ಥರಾಗಲಿಲ್ಲ.
ಹತಶಿಷ್ಟಾ ವಿರುಧಿರಾ ಭಿನ್ನಮಸ್ತಕಪಿಂಡಿಕಾಃ |
ಕುಂಜರಾಃ ಸನ್ನ್ಯವರ್ತಂತ ಯುಯುಧಾನರಥಂ ಪ್ರತಿ ॥ 43 ॥
ಅಳಿದುಳಿದ ರಕ್ತವನ್ನು ಸ್ರವಿಸುತ್ತಿದ್ದ ಶರೀರವುಳ್ಳ ಮತ್ತು ತಲೆಗಳನ್ನು ಒಡೆದುಕೊಂಡ ಗಜಗಳು ಸಾತ್ಯಕಿಯ ರಥದ ಬಳಿಗೆ ಬಂದವು.
ತತಃ ಶಬ್ದಃ ಸಮಭವತ್ತವ ಸೈನ್ಯಸ್ಯ ಮಾರಿಷ |
ಮಾಧವೇನಾರ್ದ್ಯಮಾನಸ್ಯ ಸಾಗರಸ್ಯೇವ ದಾರುಣಃ ॥ 44 ॥
ಎಲೈ ಪೂಜ್ಯನೇ, ಆಗ ಸಾತ್ಯಕಿಯಿಂದ ಪೀಡಿಸಲ್ಪಡುವ ಗಜಸೇನೆಯ ಶಬ್ದವು ಸಮುದ್ರಘೋಷದಂತೆ ದಾರುಣವಾಗಿದ್ದಿತು.
ತಂ ಶಬ್ದಂ ತುಮುಲಂ ಶ್ರುತ್ವಾ ದ್ರೋಣೋ ಯಂತಾರಮಬ್ರವೀತ್ |
ಏಷ ಸೂತ ರಣೇ ಕ್ರುದ್ಧಃ ಸಾತ್ವತಾನಾಂ ಮಹಾರಥಃ ॥ 45 ॥
ದಾರಯನ್ ಬಹುಧಾ ಸೈನ್ಯಂ ರಣೇ ಚರತಿ ಕಾಲವತ್ |
ಯತ್ರೈಷ ಶಬ್ದಸ್ತುಮುಲಸ್ತತ್ರ ಸೂತ ರಥಂ ನಯ ॥ 46 ॥
ಆ ತೀವ್ರವಾದ ಶಬ್ದವನ್ನು ಕೇಳಿದ ದ್ರೋಣರು ತಮ್ಮ ಸಾರಥಿಯನ್ನು ಕುರಿತು ಎಲೈ ಸಾರಥಿಯೇ, ರಣರಂಗದಲ್ಲಿ ಸಾತ್ವತ ಮಹಾರಥನಾದ ಸಾತ್ಯಕಿಯು ನಮ್ಮ ಸೈನ್ಯವನ್ನು ಬಹಳವಾಗಿ ಭಗ್ನಗೊಳಿಸುತ್ತಾ ಮೃತ್ಯುವಿನಂತೆ ಸಂಚರಿಸುತ್ತಿದ್ದಾನೆ. ಎಲೈ ಸೂತನೇ, ಈ ತೀವ್ರವಾದ ಶಬ್ದವು ಬರುತ್ತಿರುವ ಕಡೆಗೆ ನನ್ನ ರಥವನ್ನು ತೆಗೆದುಕೊಂಡು ಹೋಗು ಎಂದು ಹೇಳಿದರು.
ಪಾಷಾಣ ಯೋಧಿಭಿರ್ನೂನಂ ಯುಯುಧಾನಃ ಸಮಾಗತಃ |
ತಥಾ ಹಿ ರಥಿನಃ ಸರ್ವೇ ಹ್ರಿಯಂತೇ ವಿದ್ರುತೈರ್ಹಯೈಃ ॥ 47 ॥
ವಿಶಸ್ತ್ರಕವಚಾ ರುಗ್ಣಾಸ್ತತ್ರ ತತ್ರ ಪತಂತಿ ಚ |
ನ ಶಕ್ನುವಂತಿ ಯಂತಾರಃ ಸಂಯಂತುಂ ತುಮುಲೇ ಹಯಾನ್ ॥48॥
ಸಾತ್ಯಕಿಯು ಪಾಷಾಣಯೋಧರ ಜೊತೆಯಲ್ಲಿ ಸಮಾಗತನಾಗಿದ್ದಾನೆ ಎಂದು ತಿಳಿಯುತ್ತಿದೆ. ಏಕೆಂದರೆ ಎಲ್ಲ ರಥಿಕರೂ ಧಾವಿಸುತ್ತಿರುವ ಅಶ್ವಗಳಿಂದ ಯುದ್ಧ ಭೂಮಿಯನ್ನು ಬಿಡುತ್ತಿದ್ದಾರೆ. ಶಸ್ತ್ರ-ಕವಚಗಳನ್ನು ಕಳೆದುಕೊಂಡು, ಗಾಯಗೊಂಡು ಅಲ್ಲಲ್ಲಿ ಬೀಳುತ್ತಿದ್ದಾರೆ. ಈ ತೀವ್ರ ಯುದ್ಧದಲ್ಲಿ ಸಾರಥಿಗಳಿಗೆ ಅಶ್ವವನ್ನು ನಿಯಂತ್ರಿಸಲು ಸಾಧ್ಯವಾಗುತ್ತಿಲ್ಲ (ಎಂದು ಹೇಳಿದರು).

ಇತ್ಯೇವಂ ಬ್ರುವತೋ ರಾಜನ್ ಭಾರದ್ವಾಜಸ್ಯ ಧೀಮತಃ |
ಪ್ರತ್ಯುವಾಚ ತತೋ ಯಂತಾಂ ದ್ರೋಣಂ ಶಸ್ತ್ರಭೃತಾಂ ವರಮ್ ॥ 49 ॥
ಎಲೈ ರಾಜನೇ, ಮೇಧಾವಿಯಾದ ದ್ರೋಣರು ಹೀಗೆ ಹೇಳುತ್ತಿರಲು ಸಾರಥಿಯು ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಅವರನ್ನು ಕುರಿತು ಮಾತನಾಡಿದನು.
ಆಯುಷ್ಮನ್ ದ್ರವತೇ ಸೈನ್ಯಂ ಕೌರವೇಯಂ ಸಮಂತತಃ |
ಪಶ್ಯ ಯೋಧಾನ್ ರಣೇ ಭಿನ್ನಾನ್ ಧಾವಮಾನಾಂಸ್ತತಸ್ತತಃ ॥ 50 ॥
ಪೂಜ್ಯರೇ, ಕೌರವರ ಸೈನ್ಯವು ಎಲ್ಲ ಕಡೆಗಳಲ್ಲಿಯೂ ಓಡಿಹೋಗುತ್ತಿದೆ. ಯುದ್ಧದಲ್ಲಿ ಭಗ್ನರಾಗಿ ಎಲ್ಲ ಕಡೆಗಳಲ್ಲಿಯೂ ಓಡುತ್ತಿರುವ ಯೋಧರನ್ನು ನೋಡಿ.
ಏತೇ ಚ ಸಹಿತಾಃ ಶೂರಾಃ ಪಾಂಚಾಲಾಃ ಪಾಂಡವೈಃ ಸಹ |
ತ್ವಾಮೇವ ಹಿ ಜಿಘಾಂಸಂತಃ ಪ್ರಾದ್ರವಂತಿ ಸಮಂತತಃ ॥ 51 ॥
ಪಾಂಡವರಿಂದ ಸಹಿತರಾದ, ಶೂರರಾದ ಈ ಪಾಂಚಾಲರು ನಿಮ್ಮನ್ನೇ ಕೊಲ್ಲಲು ಬಯಸಿ ಎಲ್ಲ ಕಡೆಗಳಿಂದ ಓಡಿ ಬರುತ್ತಿದ್ದಾರೆ.
ಅತ್ರ ಕಾರ್ಯಂ ಸಮಾಧತ್ಸ್ವ ಪ್ರಾಪ್ತಕಾಲಮರಿಂದಮ |
ಸ್ಥಾನೇ ವಾ ಗಮನೇ ವಾಪಿ ದೂರಂ ಯಾತಶ್ಚ ಸಾತ್ಯಕಿಃ ॥ 52 ॥
ಎಲೈ ಅರಿಂದಮರೇ, ಈಗ ಮಾಡಬೇಕಾದ ಕಾರ್ಯವನ್ನು ವಿಮರ್ಶೆ ಮಾಡಿ, ಇಲ್ಲಿ ನಿಲ್ಲಬೇಕೋ ಅಥವಾ ಹೊರಡಬೇಕೋ ಎಂದು ನಿರ್ಧರಿಸಿ. ಸಾತ್ಯಕಿಯು ಈಗಾಗಲೇ ದೂರ ಹೋಗಿದ್ದಾನೆ (ಎಂದು ಹೇಳಿದನು).
ತಥೈವಂ ವದತಸ್ತಸ್ಯ ಭಾರದ್ವಾಜಸ್ಯ ಮಾರಿಷ |
ಪ್ರತ್ಯದೃಶ್ಯತ ಶೈನೇಯೋ ನಿಘ್ನನ್ ಬಹುವಿಧಾನ್ ರಥಾನ್ ॥ 53 ॥
ಎಲೈ ಪೂಜ್ಯನೇ, ಸೂತನು ದ್ರೋಣರನ್ನು ಕುರಿತು ಹೀಗೆ ಹೇಳುತ್ತಿರುವಷ್ಟರಲ್ಲಿ ಅನೇಕ ವಿಧವಾದ ಮಹಾರಥರನ್ನು ಕೊಲ್ಲುತ್ತಿರುವ ಸಾತ್ಯಕಿಯು ಕಂಡುಬಂದನು.
ತೇ ವಧ್ಯಮಾನಾಃ ಸಮರೇ ಯುಯುಧಾನೇನ ತಾವಕಾಃ |
ಯುಯುಧಾನರಥಂ ತ್ಯಕ್ತ್ವಾ ದ್ರೋಣಾನೀಕಾಯ ದುದ್ರುವುಃ ॥ 54 ॥
ರಣರಂಗದಲ್ಲಿ ಸಾತ್ಯಕಿಯಿಂದ ಪೀಡಿಸಲ್ಪಡುವ ನಿನ್ನ ಮಹಾರಥರು ಸಾತ್ಯಕಿಯ ರಥವನ್ನು ಬಿಟ್ಟು ದ್ರೋಣರ ಸೇನೆಯ ಕಡೆಗೆ ಓಡಿ ಬಂದರು.
ಯೈಸ್ತು ದುಃಶಾಸನಃ ಸಾರ್ಧಂ ರಥೈಃ ಪೂರ್ವಂ ನ್ಯವರ್ತತ |
ತೇ ಭೀತಾಸ್ತ್ವಭ್ಯಧಾವಂತ ಸರ್ವೇ ದ್ರೋಣರಥಂ ಪ್ರತಿ ॥ 55 ॥
ದುಶ್ಶಾಸನನು ಮೊದಲು ಯಾವ ಮಹಾರಥರನ್ನು ಹಿಂದೆ ನಿಲ್ಲಿಸಿದ್ದನೋ ಅವರೂ ಸಹ ಭೀತರಾಗಿ ದ್ರೋಣರ ರಥದ ಕಡೆಗೆ ಎಲ್ಲರೂ ಓಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಟನೆಯ ಅಧ್ಯಾಯ
ಸಾತ್ಯಕಿಯ ಭಯದಿಂದ ಓಡುತ್ತಿದ್ದ ದುಶ್ಶಾಸನನಿಗೆ ದ್ರೋಣರಿಂದ ನಿಂದೆ. ದ್ರೋಣ-ಧೃಷ್ಟದ್ಯುಮ್ನರ ಯುದ್ಧ.
ಸಂಜಯಃ
ದುಃಶಾಸನರಥಂ ದೃಷ್ಟ್ವಾ ಸಮೀಪೇ ಪರ್ಯವಸ್ಥಿತಮ್ |
ಭಾರದ್ವಾಜಸ್ತತೋ ವಾಕ್ಯಂ ದುಃಶಾಸನಮಥಾಬ್ರವೀತ್ ॥ 1 ॥
ಸಂಜಯ ಸಮೀಪಕ್ಕೆ ಬಂದು ನಿಂತ ದುಶ್ಶಾಸನನ ರಥವನ್ನು ನೋಡಿ ದ್ರೋಣರು ಅವನನ್ನು ಕುರಿತು ಹೇಳಿದರು.
ದುಃಶಾಸನ ರಥಾಃ ಸರ್ವೇ ಕಸ್ಮಾದೇತೇ ಪ್ರವಿದ್ರುತಾಃ |
ಕಚ್ಚಿತ್ ಕ್ಷೇಮಂ ತು ನೃಪತೇಃ ಕಚ್ಚಿಜ್ಜೀವತಿ ಸೈಂಧವಃ ॥ 2 ॥
ಎಲೈ ದುಶ್ಶಾಸನನೇ, ಈ ಎಲ್ಲ ರಥರೂ ಏಕೆ ಓಡಿಹೋಗುತ್ತಿದ್ದಾರೆ? ರಾಜನಿಗೆ ಕ್ಷೇಮವಷ್ಟೆ? ಸೈಂಧವನು ಬದುಕಿದ್ದಾನೆಯೇ?
ರಾಜಪುತ್ರೋ ಭವಾನತ್ರ ರಾಜಭ್ರಾತಾ ಮಹಾರಥಃ |
ಕಿಮರ್ಥಂ ದ್ರವಸೇ ಯುದ್ಧೇ ಯೌವರಾಜ್ಯಮವಾಪ್ಯ ಹಿ ॥ 3 ॥
ನೀನು ರಾಜಪುತ್ರನೂ, ರಾಜನ ಸಹೋದರನೂ ಆದ ಮಹಾರಥ. ಯೌವರಾಜ್ಯವನ್ನು ಹೊಂದಿದ ನೀನು ಯುದ್ಧದಲ್ಲಿ ಏಕೆ ಓಡಿಹೋಗುತ್ತಿದ್ದೀಯೆ?
ಸ್ವಯಂ ವೈರಂ ಮಹತ್ಕೃತ್ವಾ ಪಾಂಚಾಲ್ಯೈಃ ಪಾಂಡವೈಃ ಸಹ |
ಏಕಂ ಸಾತ್ಯಕಿಮಾಸಾದ್ಯ ಕಥಂ ಭೀತೋಽಸಿ ಸಂಯುಗೇ ॥ 4 ॥
ಪಾಂಚಾಲರ ಮತ್ತು ಪಾಂಡವರ ಜೊತೆಯಲ್ಲಿ ಸ್ವತಃ ದೊಡ್ಡ ವೈರವನ್ನು ಮಾಡಿ ಯುದ್ಧದಲ್ಲಿ ಒಬ್ಬ ಸಾತ್ಯಕಿಯನ್ನು ಎದುರಿಸಿ ಏಕೆ ಭೀತನಾಗಿದ್ದೀಯೆ?
ನ ಜಾನೀಷೇ ಪುರಾ ತ್ವಂ ತು ಗೃಹ್ಣನ್ನಕ್ಷಾನ್ ದುರೋದರೇ |

ಶರಾ ಹ್ಯೇತೇ ಭವಿಷ್ಯಂತಿ ದಾರುಣಾಶೀವಿಷೋಪಮಾಃ ॥ 5 ॥
ಹಿಂದೆ ದ್ಯೂತದಲ್ಲಿ ದಾಳಗಳನ್ನು ಹಿಡಿಯುವಾಗ ನೀನು ಕ್ರೂರವಾದ ಸರ್ಪಗಳಂತೆ ಇರುವ ಬಾಣಗಳಾಗುವುವು ಎಂಬುದನ್ನು ತಿಳಿಯಲಿಲ್ಲ.
ಅಪ್ರಿಯಾಣಾಂ ಚ ವಚನಂ ಪಾಂಡವೇಷು ವಿಶೇಷತಃ |
ದ್ರೌಪದ್ಯಾಶ್ಚ ಪರಿಕ್ಲೇಶಸ್ತ್ವನ್ಮೂಲೋ ಹ್ಯಭವತ್ ಪುರಾ ॥ 6 ॥
ಪಾಂಡವರನ್ನು ಕುರಿತು ವಿಶೇಷವಾಗಿ ಆಡಿದ ಅಪ್ರಿಯವಾದ ವಚನಗಳಿಗೂ ಮತ್ತು ದ್ರೌಪದಿಯ ಪರಿಕ್ಲೇಶಕ್ಕೂ ಹಿಂದೆ ನೀನೇ ಮೂಲಕಾರಣನಾಗಿದ್ದೀಯೆ.
ದಾಸೀ ಜಿತಾಸಿ ದ್ಯೂತೇ ತ್ವಂ ಯಥಾಕಾಮಚರೀ ಭವ |
ವಾಸವಂ ವಾಹಿಕಾ ರಾಜ್ಞೋ ಭ್ರಾತುರ್ಜ್ಯೇಷ್ಠಸ್ಯ ಮೇ ಭವ ॥ 7 ॥
ನ ಸಂತಿ ಪತಯಃ ಸರ್ವಾಸ್ತಥಾ ಷಂಡತಿಲೈಃ ಸಮಾಃ ॥ 8 ॥
ನೀನು ದ್ಯೂತರಲ್ಲಿ ಪರಾಜಿತಳಾಗಿ ದಾಸಿಯಾಗಿದ್ದೀಯೆ. ನೀನು ಮನಸ್ಸಿಗೆ ಬಂದಂತೆ ಕಾಮಚಾರಿಯಾಗಿರು. ನನ್ನ ಅಣ್ಣನ ವಸ್ತ್ರಗಳನ್ನು ಒಗೆಯುವ ದಾಸಿಯಾಗಿರು ಅಥವಾ ರಾಣಿಯಾಗಿರು. ನಿನ್ನ ಪತಿಗಳು ಇಲ್ಲ. ಅವರೆಲ್ಲರೂ ಕೊಳೆತುಹೋದ ಎಳ್ಳುಕಾಳುಗಳಿಗೆ ಸಮಾನರಾಗಿದ್ದಾರೆ.
ದುಃಶಾಸನೈವಂ ಕಸ್ಮಾತ್ತ್ವಂ ಪೂರ್ವಮುಕ್ತತ್ವ ಪಲಾಯಸೇ |
ಸ್ವಯಂ ವೈರಂ ಮಹತ್ ಕೃತ್ವಾ ಪಾಂಚಾಲೈಃ ಪಾಂಡವೈಸ್ತಥಾ |
ಏಕಂ ಸಾತ್ಯಕಿಮಾಸಾದ್ಯ ಕಸ್ಮಾದ್ ಭೀತೋಽಸಿ ಸಂಯುಗೇ ॥ 9 ॥
ಎಲೈ ದುಶ್ಶಾಸನನೇ, ನೀನು ಹಿಂದೆ ಹೀಗೆ ಹೇಳಿ, ಈಗ ಏಕೆ ಪಲಾಯನ ಮಾಡುತ್ತಿದ್ದೀಯೆ? ಸ್ವತಃ ಪಾಂಚಾಲರ ಮತ್ತು ಪಾಂಡವರ ಜೊತೆಯಲ್ಲಿ ದೊಡ್ಡ ವೈರವನ್ನು ಮಾಡಿ, ಒಬ್ಬ ಸಾತ್ಯಕಿಯನ್ನು ಸಮೀಪಿಸಿ ಯುದ್ಧದಲ್ಲಿ ಏಕೆ ಹೆದರುತ್ತಿದ್ದೀಯೆ.
ಕ್ವ ತೇ ಮಾನಶ್ಚ ದರ್ಪಶ್ಚ ಕ್ವ ಚ ತದ್ವೀರ ಗರ್ಜಿತಮ್ |
ಆಶೀವಿಷಸಮಾನ್ ಪಾರ್ಥಾನ್ ಕೋಪಯಿತ್ವಾ ಕ್ವ ಯಾಸ್ಯಸಿ ॥ 10॥
ನಿನ್ನ ಮಾನ ಮತ್ತು ಅಹಂಕಾರಗಳು ಎಲ್ಲಿ ಹೋದವು? ಎಲೈ ವೀರನೇ, ನಿನ್ನ ಗರ್ಜನೆಯು ಎಲ್ಲಿ ಹೋಯಿತು? ಸರ್ಪಸದೃಶರಾದ ಪಾಂಡವರನ್ನು ಕೋಪಗೊಳಿಸಿ ಎಲ್ಲಿಗೆ ಹೋಗುವಿ?
ಶೋಚ್ಯೇಯಂ ಭಾರತೀ ಸೇನಾ ರಾಜಾ ಚೈವ ಸುಯೋಧನಃ |
ಯಸ್ಯ ತ್ವಂ ಕರ್ಕಶೋ ಭ್ರಾತಾ ಪಲಾಯನಪರಾಯಣಃ ॥ 11 ॥
ಕ್ರೂರ ಸಹೋದರನಾದ ಯಾವ ನೀನು ಪಲಾಯನಪರಾಯಣನಾಗಿದ್ದೀಯೋ ಅಂತಹ ರಾಜನಾದ ಸುಯೋಧನನು ಮತ್ತು ಕೌರವರ ಸೇನೆಯು ಶೋಚನೀಯವಾದ ಪರಿಸ್ಥಿತಿಯನ್ನು ಹೊಂದಿದೆ.
ನನು ನಾಮ ತ್ವಯಾ ವೀರ ದೀರ್ಯಮಾಣಾ ಭಯಾರ್ದಿತಾ |
ಸ್ವಬಾಹುಬಲಮಾಸ್ಥಾಯ ರಕ್ಷಿತವ್ಯಾ ಹ್ಯನೀಕಿನೀ |
ಸ ತ್ವಮದ್ಯ ರಣಂ ತ್ಯಕತ್ವ ಭೀತೋ ಹರ್ಷಯಸೇ ಪರಾನ್ ॥ 12 ॥
ಎಲೈ ವೀರನೇ, ಭಯದಿಂದ ಭಗ್ನವಾಗುವ ಸೇನೆಯನ್ನು ನಿನ್ನ ಬಾಹುಬಲದಿಂದ ನೀನು ರಕ್ಷಿಸಬೇಕಷ್ಟೆ! ಅಂತಹ ನೀನು ಈ ದಿನ ಹೆದರಿ ಯುದ್ಧವನ್ನು ಬಿಟ್ಟು, ಶತ್ರುಗಳಿಗೆ ಸಂತೋಷವನ್ನುಂಟು ಮಾಡುತಿತದ್ದೀಯೆ.
ವಿದ್ರುತೇ ತ್ವಯಿ ಸೈನ್ಯಸ್ಯ ನಾಯಕೇ ಶತ್ರುಸೂದನ |
ಕೋಽನ್ಯಃ ಸ್ಥಾಸ್ಯತಿ ಸಂಗ್ರಾಮೇ ಭೀತೋ ಭೀತೇ ವ್ಯಪಾಶ್ರಯೇ ॥13॥
ಎಲೈ ಶತ್ರುಸೂದನನೇ, ಭಯಗೊಂಡವರಿಗೆ ಆಶ್ರಯನೂ ಮತ್ತು ಸೈನ್ಯದ ನಾಯಕನೂ ಆದ ನೀನು ಓಡಿಹೋದಮೇಲೆ ರಣರಂಗದಲ್ಲಿ ಬೇರೆ ಯಾವನು ನಿಲ್ಲುವನು?
ಏಕೇನ ಸಾತ್ವತೇನಾದ್ಯ ಯುಧ್ಯಮಾನಸ್ಯ ಚಾನಘ |
ಪಲಾಯನೇ ತವ ಮತಿಃ ಸಂಗ್ರಾಮಾದ್ಧಿ ಪ್ರವರ್ತತೇ ॥ 14 ॥
ಎಲೈ ಅನಘನೇ, ಒಬ್ಬ ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡುವಾಗಲೇ ನಿನಗೆ ರಣರಂಗದಿಂದ ಪಲಾಯನ ಮಾಡಬೇಕೆಂಬ ಬುದ್ಧಿಯು ಉಂಟಾಗಿದೆ.
ಯದಾ ಗಾಂಡೀವಧನ್ವಾನಂ ಭೀಮಸೇನಂ ಚ ಕೌರವ |
ಯಮೌ ಚ ಯುಧಿ ದ್ರಷ್ಟಾಸಿ ತದಾ ತ್ವಂ ಕಿಂ ಕರಿಷ್ಯಸಿ ॥ 15 ॥
ಎಲೈ ಕೌರವನೇ, ಯುದ್ಧದಲ್ಲಿ ಗಾಂಡೀವ ಧನುರ್ಧಾರಿಯಾದ ಅರ್ಜುನನ್ನಾಗಲೀ, ಭೀಮಸೇನನನ್ನಾಗಲೀ,
ನಕುಲ-ಸಹದೇವರನ್ನಾಗಲೀ ನೋಡುವಾಗ ನೀನು ಏನು ಮಾಡುವಿ?
ಯುಧಿ ಫಲ್ಗುನಬಾಣಾನಾಂ ಸೂರ್ಯಾಗ್ನಿಸಮತೇಜಸಾಮ್ |
ನ ತುಲ್ಯಾಃ ಸಾತ್ಯಕಿಶರಾ ಯೇಷಾಂ ಭೀತಃ ಪಲಾಯಸೇ ॥ 16 ॥
ಯಾವ ಸಾತ್ಯಕಿಯ ಬಾಣಗಳಿಗೆ ಹೆದರಿ ನೀನು ಪಲಾಯನ ಮಾಡುತ್ತಿದ್ದೀಯೋ ಅಂತಹ ಸಾತ್ಯಕಿಯ ಬಾಣಗಳು ಸೂರ್ಯಾಗ್ನಿಗೆ ಸಮಾನವಾದ ತೇಜಸ್ಸುಳ್ಳ ಅರ್ಜುನನ ಬಾಣಗಳಿಗೆ ಸಮವಾದವುಗಳಲ್ಲ.
ಯದಿ ತಾವತ್ಕೃತಾ ಬುದ್ಧಿಃ ಪಲಾಯನಪರಾಯಣಾ |
ಪೃಥಿವೀ ಧರ್ಮರಾಜಸ್ಯ ಶಮೇನೈವ ಪ್ರದೀಯತಾಮ್ ॥ 17 ॥
ನಿನಗೆ ಪಲಾಯನ ಮಾಡಬೇಕೆಂಬ ಬುದ್ಧಿಯಿದ್ದರೆ ಅದರ ಬದಲು ಸಂಧಿಯನ್ನು ಮಾಡಿಕೊಂಡು ಯುಧಿಷ್ಠಿರನಿಗೆ ಭೂಮಿಯನ್ನು

ಕೊಡು.
ಯಾವತ್ ಫಲ್ಗುನನಾರಾಚಾ ನಿರ್ಮುಕ್ತೋರಗಸನ್ನಿಭಾಃ |
ನಾವಿಶಂತಿ ಶರೀರಂ ತೇ ತಾವತ್ ಸಂಶಾಮ್ಯ ಪಾಂಡವೈಃ ॥ 18 ॥
ಪೊರೆಯನ್ನು ಕಳಚಿದ ಸರ್ಪಗಳಂತಿರುವ ಅರ್ಜುನನ ನಾರಾಚಗಳು ನಿನ್ನ ಶರೀರವನ್ನು ಪ್ರವೇಶಿಸುವುದಕ್ಕಿಂತ ಮೊದಲೇ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ.
ಯಾವತ್ತೇ ಪೃಥಿವೀಂ ಪಾರ್ಥಾ ಹತ್ವಾ ಭ್ರಾತೃಶತಂ ರಣೇ |
ನಾಕ್ಷಿಪಂತಿ ಮಹಾತ್ಮಾನಸ್ತಾವತ್ ಸಂಶಾಮ್ಯ ಪಾಂಡವೈಃ ॥ 19 ॥
ಮಹಾತ್ಮರಾದ ಪಾಂಡವರು ಯುದ್ಧದಲ್ಲಿ ಸಹೋದರರಾದ ನಿಮ್ಮ ನೂರು ಮಂದಿಯನ್ನು ಕೊಂದು, ಭೂಮಿಯನ್ನು ನಿನ್ನಿಂದ ಕಿತ್ತುಕೊಳ್ಳುವುದಕ್ಕಿಂತ ಮೊದಲೇ ಅವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ.
ಯಾವನ್ನ ಕ್ರುಧ್ಯತೇ ರಾಜಾ ಧರ್ಮಪುತ್ರೋ ಯುಧಿಷ್ಠಿರಃ |
ಕೃಷ್ಣಶ್ಚ ಸಮರಶ್ಲಾಘೀ ತಾವತ್ ಸಂಶಾಮ್ಯ ಪಾಂಡವೈಃ ॥ 20 ॥
ಎಲ್ಲಿಯವರೆಗೆ ಧರ್ಮಪುತ್ರನಾದ ಯುಧಿಷ್ಠಿರನು ಮತ್ತು ಯುದ್ಧಾಕಾಂಕ್ಷಿಯಾದ ಕೃಷ್ಣನು ಕೋಪಗೊಳ್ಳುವುದಿಲ್ಲವೋ ಅಷ್ಟರೊಳಗೆ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ.
ಯಾವದ್ಭೀಮೋ ಮಹಾಬಾಹುರ್ವಿಗಾಹ್ಯ ಮಹತೀಂ ಚಮೂಮ್ |
ಸೋದರಾಂಸ್ತೇ ನ ಮೃದ್ನಾತಿ ತಾವತ್ ಸಂಶಾಮ್ಯ ಪಾಂಡವೈಃ ॥ 21 ॥
ಮಹಾಬಾಹುವಾದ ಭೀಮಸೇನನು ನಿಮ್ಮ ಸೈನ್ಯವನ್ನು ಪ್ರವೇಶಿಸಿ, ಸಹೋದರರಾದ ನಿಮ್ಮನ್ನು ಮರ್ದಿಸುವುದಕ್ಕಿಂತ ಮೊದಲೇ ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ.
ಪೂರ್ವಮುಕ್ತಶ್ಚ ತೇ ಭ್ರಾತಾ ಭೀಷ್ಮೇಣ ಸ ಸುಯೋಧನಃ |
ಅಜೇಯಾಃ ಪಾಂಡವಾಃ ಸಂಖ್ಯೇ ಸೌಮ್ಯ ಸಂಶಾಮ್ಯ ಪಾಂಡವೈಃ |
ನ ಚ ತತ್ ಕೃತವಾನ್ ಮಂದಸ್ತವ ಭ್ರಾತಾ ಸುಯೋಧನಃ ॥ 22 ॥
ಭೀಷ್ಮರು ಹಿಂದೆಯೇ ನಿನ್ನ ಅಣ್ಣನಾದ ಸುಯೋಧನನನ್ನು ಕುರಿತು, ಪ್ರೀತಿಪಾತ್ರನೇ, ಪಾಂಡವರು ಯುದ್ಧದಲ್ಲಿ ಅಜೇಯರಾದವರು. ಅವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ ಎಂದು ಹೇಳಿದರು. ಮಂದನಾದ ನಿನ್ನ ಅಣ್ಣನಾದ ಸುಯೋಧನನು ಆ ಮಾತನ್ನು ಕೇಳಲಿಲ್ಲ.
ಸ ಯುದ್ಧೇ ಧೃತಿಮಾಸ್ಥಾಯ ಯತ್ತೋ ಯುಧ್ಯಸ್ವ ಪಾಂಡವೈಃ |
ಗಚ್ಛ ತೂರ್ಣಂ ರಥೇನೈವ ಯತ್ರ ತಿಷ್ಠತಿ ಸಾತ್ಯಕಿಃ ॥ 23 ॥
ಅಂತಹ ನೀನು ಯುದ್ಧದ ವಿಷಯದಲ್ಲಿ ಧೈರ್ಯವನ್ನು ತಂದುಕೊಂಡು ಪ್ರಯತ್ನ ಪೂರ್ವಕವಾಗಿ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡು. ಸಾತ್ಯಕಿ ಇರುವಲ್ಲಿಗೆ ಶೀಘ್ರವಾಗಿ ನಿನ್ನ ರಥವನ್ನು ತೆಗೆದುಕೊಂಡು ಹೋಗು.
ತ್ವಯಾ ಹೀನಂ ಬಲಂ ಹ್ಯೇತದ್ ವಿದ್ರವಿಷ್ಯತಿ ಭಾರತ |
ಆತ್ಮಾರ್ಥಂ ಯೋಧಯ ರಣೇ ಸಾತ್ಯಕಿಂ ಸತ್ಯವಿಕ್ರಮಮ್ ॥ 24 ॥
ಎಲೈ ಭಾರತನೇ, ನೀನಿಲ್ಲದಿದ್ದರೆ ಈ ಕೌರವ ಸೇನೆಯು ಓಡಿ ಹೋಗುವುದು. ನಿನ್ನ ಮರ್ಯಾದೆಯ ಸಲುವಾಗಿಯಾದರೂ ಯುದ್ಧದಲ್ಲಿ ಸತ್ಯವಿಕ್ರಮನಾದ ಸಾತ್ಯಕಿಯನ್ನು ಎದುರಿಸು.
ಏವಮುಕ್ತಸ್ತವ ಸುತೋ ನಾಬ್ರವೀತ್ ಕಿಂಚಿದಪ್ಯಸೌ |
ಶ್ರುತಂ ಚಾಶ್ರುತವತ್ ಕೃತ್ವಾ ಪ್ರಾಯಾದ್ಯೇನ ಸ ಸಾತ್ಯಕಿಃ ॥ 25 ॥
ಹೀಗೆ ಹೇಳಲ್ಪಟ್ಟ ನಿನ್ನ ಪುತ್ರನು ಏನನ್ನೂ ಮಾತನಾಡಲಿಲ್ಲ. ಎಲ್ಲವನ್ನು ಕೇಳಿದರೂ ಕೇಳದಿದ್ದವನಂತೆ ಸಾತ್ಯಕಿ ಇರುವ ಸ್ಥಳಕ್ಕೆ ಹೋದನು.
ಸೈನ್ಯೇನ ಮಹತಾ ಯುಕ್ತೋ ಮ್ಲೇಚ್ಛಾನಾಮನಿವರ್ತಿನಾಮ್ |
ಆಸಾದ್ಯ ಚ ರಣೇ ಯತ್ತೋ ಯುಯುಧಾನಮಯೋಧಯತ್ ॥ 26॥
ರಣರಂಗದಿಂದ ಹಿಮ್ಮೆಟ್ಟದಿರುವ ಮ್ಲೇಚ್ಛರ ದೊಡ್ಡ ಸೈನ್ಯದಿಂದ ಕೂಡಿ ಸಾತ್ಯಕಿಯನ್ನು ಸಮೀಪಿಸಿ ರಣರಂಗದಲ್ಲಿ ಪ್ರಯತ್ನಪೂರ್ವಕವಾಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ದ್ರೋಣೋಽಪಿ ರಥಿನಾಂ ಶ್ರೇಷ್ಠಃ ಪಾಂಚಾಲಾನ್ ಪಾಂಡವಾಂಸ್ತಥಾ |
ಅಭ್ಯದ್ರವತ ಸಂಕ್ರುದ್ಧೋ ಜವಮಾಸ್ಥಾಯ ಮಧ್ಯಮಮ್ ॥ 27 ॥
ರಥಶ್ರೇಷ್ಠರಾದ ದ್ರೋಣರೂ ಸಹ ಕೋಪಗೊಂಡು, ಮಧ್ಯಮವೇಗವನ್ನು ಆಶ್ರಯಿಸಿ, ಪಾಂಚಾಲರ ಮತ್ತು ಪಾಂಡವರ ಮೇಲೆ ಧಾವಿಸಿದರು.
ಪ್ರವಿಶ್ಯ ಚ ರಣೇ ದ್ರೋಣಃ ಪಾಂಚಾಲಾನಾಂ ವರೂಥಿನೀಮ್ |
ದ್ರಾವಯಾಮಾಸ ಯೋಧಾನ್ ವೈ ಶತಶೋಽಥ ಸಹಸ್ರಶಃ ॥ 28 ॥
ದ್ರೋಣರು ರಣರಂಗದಲ್ಲಿ ಪಾಂಚಾಲರ ಸೇನೆಯನ್ನು ಪ್ರವೇಶಿಸಿ, ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ಸೈನಿಕರನ್ನು ಓಡಿಸಿದರು.
ತತೋ ದ್ರೋಣೋ ಮಹಾರಾಜ ನಾಮ ವಿಶ್ರಾವ್ಯ ಸಂಯುಗೇ |
ಪಾಂಡುಪಾಂಚಾಲಮತ್ಸ್ಯಾನಾಂ ಪ್ರಚಕ್ರೇ ಕದನಂ ಮಹತ್ ॥ 29 ॥
ಎಲೈ ಮಹಾರಾಜನೇ, ಅನಂತರ ದ್ರೋಣರು ರಣರಂಗದಲ್ಲಿ ತಮ್ಮ ಹೆಸರನ್ನು ಘೋಷಿಸುತ್ತಾ, ಪಾಂಡು-ಪಾಂಚಾಲ-ಮತ್ಸ್ಯರ

ಸೇನೆಯ ಜೊತೆಯಲ್ಲಿ ದೊಡ್ಡ ಯುದ್ಧವನ್ನು ಮಾಡಿದರು.
ತಂ ಜಯಂತಮನೀಕಾನಿ ಭಾರದ್ವಾಜಂ ತತಸ್ತತಃ |
ಪಾಂಚಾಲಪುತ್ರೋ ದ್ಯುತಿಮಾನ್ ವೀರಕೇತುಃ ಸಮಭ್ಯಯಾತ್ ॥ 30 ॥
ತಮ್ಮ ಸೈನ್ಯವನ್ನು ಅಲ್ಲಲ್ಲಿ ಪರಾಭವಗೊಳಿಸುತ್ತಿದ್ದ ದ್ರೋಣರ ಕಡೆಗೆ ಪಾಂಚಾಲ ಪುತ್ರನೂ, ಕಾಂತಿಯುಕ್ತನೂ ಆದ ವೀರಕೇತುವು ಧಾವಿಸಿ ಬಂದನು.
ಸ ದ್ರೋಣಂ ಪಂಚಭಿರ್ವಿದ್ಧ್ವಾ ಶರೈಃ ಸನ್ನತಪರ್ವಭಿಃ |
ಧ್ವಜಮೇಕೇನ ವಿವ್ಯಾಧ ಸಾರಥಿಂ ಚಾಸ್ಯ ಸಪ್ತಭಿಃ ॥ 31 ॥
ಅವನು ಬಾಗಿದ ತುದಿಯುಳ್ಳ ಐದು ಬಾಣಗಳಿಂದ ದ್ರೋಣರನ್ನು ಹೊಡೆದು, ಒಂದು ಬಾಣದಿಂದ ಅವರ ಧ್ವಜವನ್ನೂ ಮತ್ತು ಏಳು ಬಾಣಗಳಿಂದ ಅವರ ಸಾರಥಿಯನ್ನೂ ಹೊಡೆದನು.
ತತ್ರಾದ್ಭುತಂ ಮಹಾರಾಜ ದೃಷ್ಟವಾನಸ್ಮಿ ಸಂಯುಗೇ |
ಯದ್ ದ್ರೋಣೋ ರಭಸಂ ಯುದ್ಧೇ ಪಾಂಚಾಲ್ಯಂ ನಾಭ್ಯವರ್ತತ ॥
ಎಲೈ ಮಹಾರಾಜನೇ, ದ್ರೋಣರು ಯುದ್ಧದಲ್ಲಿ ವೇಗಶಾಲಿಯಾದ ಪಾಂಚಾಲ ಪುತ್ರನಾದ ವೀರಕೇತುವನ್ನು ದಾಟದ ಒಂದು ಅದ್ಭುತವನ್ನು ನಾನು ರಣರಂಗದಲ್ಲಿ ನೋಡಿದೆನು.
ಸನ್ನಿರುದ್ಧಂ ರಣೇ ದ್ರೋಣಂ ಪಾಂಚಾಲಾ ವೀಕ್ಷ್ಯ ಮಾರಿಷ |
ಆವವ್ರುಃ ಸರ್ವತೋ ರಾಜನ್ ಧರ್ಮಪುತ್ರಜಯೈಷಿಣಃ ॥ 33 ॥
ಎಲೈ ಪೂಜ್ಯನೇ, ಪಾಂಚಾಲರು ರಣರಂಗದಲ್ಲಿ ದ್ರೋಣರು ತಡೆಯಲ್ಪಟ್ಟುದನ್ನು ನೋಡಿ, ಯುಧಿಷ್ಠಿರನ ಜಯವನ್ನು ಆಶಿಸುತ್ತಾ, ದ್ರೋಣರನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ತೇ ಶರೈರಗ್ನಿಸಂಕಾಶೈಸ್ತೋಮರೈಶ್ಚ ಮಹಾಧನೈಃ |
ಶಸ್ತ್ರೈಶ್ಚ ವಿವಿಧೈ ರಾಜನ್ ದ್ರೋಣಮೇಕಮವಾಕಿರನ್ ॥ 34 ॥
ಎಲೈ ರಾಜನೇ, ಅವರು ಅಗ್ನಿಯಂತಹ ಬಾಣಗಳಿಂದಲೂ, ಬೆಲೆಬಾಳುವ ತೋಮರಗಳಿಂದಲೂ ಮತ್ತು ಅನೇಕ ವಿಧವಾದ ಶಸ್ತ್ರಗಳಿಂದಲೂ ಒಬ್ಬ ದ್ರೋಣರ ಮೇಲೆ ಆಯುಧಗಳ ಮಳೆಯನ್ನು ಸುರಿಸಿದರು.
ನಿಹತ್ಯ ತಾನ್ ಬಾಣಗಣಾನ್ ದ್ರೋಣೋ ರಾಜನ್ ಸಮಂತತಃ |
ಮಹಾಜಲಧರಾನ್ ವ್ಯೋಮ್ನಿ ಮಾತರಿಶ್ವಾ ವಿವಾನಿವ ॥ 35 ॥
ತತಃ ಶರಂ ಮಹಾಘೋರಂ ಸೂರ್ಯಪಾವಕಸನ್ನಿಭಮ್ |
ಸಂದಧೇ ಪರವೀರಘ್ನೋ ವೀರಕೇತುರಥಂ ಪ್ರತಿ ॥ 36 ॥
ಎಲೈ ರಾಜನೇ, ಆಗ ದ್ರೋಣರು ಬಲವಾಗಿ ಬೀಸುವ ವಾಯುವು ಆಕಾಶದಲ್ಲಿ ದೊಡ್ಡ ಮೋಡಗಳನ್ನು ಚದುರಿಸುವಂತೆ ಅವರನ್ನು ಹೊಡೆದು, ವೀರಕೇತುವಿನ ರಥವನ್ನು ಉದ್ದೇಶಿಸಿ ಸೂರ್ಯಾಗ್ನಿ ಸದೃಶವಾದ ಮಹಾಘೋರವಾದ ಒಂದು ಬಾಣವನ್ನು ಶತ್ರುಸಂಹಾರಕರಾದ ಅವರು ಧನುಸ್ಸಿನಲ್ಲಿ ಹೂಡಿದರು.
ಸ ಭಿತತ್ವಾ ತು ಶರೋ ರಾಜನ್ ಪಾಂಚಾಲ್ಯಂ ಕುಲನಂದನಮ್ |
ಅಭ್ಯಗಾದ್ ಧರಣೀಂ ತೂರ್ಣಂ ಲೋಹಿತಾರ್ದ್ರೋ ಜ್ವಲನ್ನಿವ ॥ 37 ॥
ಎಲೈ ರಾಜನೇ, ಆ ಬಾಣವು ಪಾಂಚಾಲಪುತ್ರನೂ, ಕುಲನಂದನನೂ ಆದ ವೀರಕೇತುವನ್ನು ಭೇದಿಸಿ, ರಕ್ತಸಿಕ್ತವಾಗಿ ಪ್ರಕಾಶಿಸುತ್ತಾ ಶೀಘ್ರವಾಗಿ ಭೂಮಿಯೊಳಗೆ ಇಳಿಯಿತು.
ತತೋಽಪತದ್ ರಥಾತ್ ತೂರ್ಣಂ ಪಾಂಚಾಲ್ಯಃ ಕುಲನಂದನಃ |
ಪರ್ವತಾಗ್ರಾದಿವ ಮಹಾಂಶ್ಚಂಪಕೋ ವಾಯುಪೀಡಿತಃ ॥ 38 ॥
ಆಗ ವಾಯುವಿನ ಹೊಡೆತಕ್ಕೆ ಸಿಲುಕಿದ ದೊಡ್ಡ ಚಂಪಕವೃಕ್ಷವು ಪರ್ವತದ ಶಿಖರದಿಂದ ಬಿದ್ದಂತೆ ಪಾಂಚಾಲರ ಪುತ್ರನೂ, ಕುಲನಂದನನೂ ಆದ ವೀರಕೇತುವು ಶೀಘ್ರವಾಗಿ ತನ್ನ ರಥದಿಂದ ಬಿದ್ದನು.
ತಸ್ಮಿನ್ ಹತೇ ಮಹೇಷ್ವಾಸೇ ರಾಜಪುತ್ರೇ ಮಹಾಬಲೇ |
ಪಾಂಚಾಲಾಸ್ತ್ವರಿತಾ ದ್ರೋಣಂ ಸಮಂತಾತ್ ಪರ್ಯವಾರಯನ್ ॥
ಮಹಾಧನುರ್ಧಾರಿಯೂ, ಮಹಾಬಲನೂ ಆದ ಆ ರಾಜಕುಮಾರನು ಹತನಾಗುತ್ತಿರಲು ಪಾಂಚಾಲರು ಶೀಘ್ರವಾಗಿ ಎಲ್ಲ ಕಡೆಗಳಿಂದಲೂ ದ್ರೋಣರನ್ನು ಸುತ್ತುವರಿದರು.
ಚಿತ್ರಕೇತುಃ ಸುಧನ್ವಾ ಚ ಚಿತ್ರವರ್ಮಾ ಚ ಭಾರತ |
ತಥಾ ಚಿತ್ರರಥಶ್ಚೈವ ಭ್ರಾತೃವ್ಯಸನಕರ್ಶಿತಾಃ ॥ 40 ॥
ಅಭ್ಯದ್ರವಂತ ಸಹಿತಾ ಭಾರದ್ವಾಜಂ ಯುಯುತ್ಸವಃ |
ಮುಂಚಂತಃ ಶರವರ್ಷಾಣಿ ತಪಾಂತೇ ಜಲದಾ ಇವ ॥ 41 ॥
ಎಲೈ ಭಾರತನೇ, ಚಿತ್ರಕೇತು, ಸುಧನ್ವಾ, ಚಿತ್ರವರ್ಮ ಮತ್ತು ಚಿತ್ರರಥ ಇವರು ಸಹೋದರನಾದ ವೀರಕೇತುವಿನ ವಧೆಯ ವ್ಯಸನದಿಂದ ಕರ್ಶಿತರಾಗಿ ದ್ರೋಣರ ಜೊತೆಯಲ್ಲಿ ಯುದ್ಧ ಮಾಡಲು ಬಯಸಿ, ಬೇಸಿಗೆಯು ಕಳೆದ ಮೇಲೆ ಮಳೆಗಾಲದಲ್ಲಿ ಮೋಡಗಳು ಜಲಧಾರೆಯನ್ನು ಸುರಿಸುವಂತೆ ಬಾಣಗಳ ಮಳೆಯನ್ನು ಸುರಿಸುತ್ತಾ ದ್ರೋಣರ ಕಡೆಗೆ ಒಟ್ಟಿಗೆ ಓಡಿಬಂದರು.
ಸ ವಧ್ಯಮಾನೋ ಬಹುಧಾ ರಾಜಪುತ್ರೈರ್ಮಹಾರಥೈಃ |
ವ್ಯಶ್ವಸೂತರಥಾಂಶ್ಚಕ್ರೇ ಕುಮಾರಾನ್ ಕುಪಿತೋ ರಣೇ ॥ 42 ॥
ಮಹಾರಥರಾದ ರಾಜಪುತ್ರರಿಂದ ಅನೇಕ ರೀತಿಯಲ್ಲಿ ಹೊಡೆಯಲ್ಪಟ್ಟ ದ್ರೋಣರು ರಣರಂಗದಲ್ಲಿ ಕುಪಿತರಾಗಿ ಆ ಕುಮಾರರ

ಅಶ್ವ-ಸೂತ-ರಥಗಳನ್ನು ನಾಶಮಾಡಿದರು.
ತಥಾಪರ್ಯೈಃ ಸುನಿಶಿತೈರ್ಭಲ್ಲೈರ್ಸ್ತೇಷಾಂ ಮಹಾಯಶಾಃ |
ಪುಷ್ಪಾಣೀವ ವಿಚಿನ್ವನ್ ಹಿ ಸೋತ್ತಮಾಂಗಾನ್ಯಪಾತಯತ್ ॥ 43॥
ಮಹಾಕೀರ್ತಿಗಳಾದ ಅವರು ತೀಕ್ಷ್ಣವಾದ ಭಲ್ಲಗಳಿಂದ ಅವರ ಶಿರಸ್ಸುಗಳನ್ನು ಪುಷ್ಪಗಳನ್ನು ಕೆಡವಿದಂತೆ ಕೆಡವಿದರು.
ಕ್ರೋಧಮಾಹಾರಯತ್ತೇಷಾಮಭಾವಾಯ ದ್ವಿಜರ್ಷಭಃ |
ತತಃ ಶರಮಯಂ ಜಾಲಂ ದ್ರೋಣಸ್ತೇಷಾಮವಾಸೃಜತ್ ॥ 44 ॥
ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಅವರನ್ನು ವಿನಾಶಗೊಳಿಸಲು ಉದ್ದೇಶಿಸಿ ಬಹಳ ಕ್ರೋಧವನ್ನು ತಂದುಕೊಂಡು ಬಾಣಗಳ ಒಂದು ಜಾಲವನ್ನೇ ಸೃಷ್ಟಿ ಮಾಡಿದರು.
ತೇ ಹನ್ಯಮಾನಾ ದ್ರೋಣಸ್ಯ ಶರೈರಾಕರ್ಣಚೋದಿತೈಃ |
ಕರ್ತವ್ಯಂ ನಾಭ್ಯಜಾನನ್ ವೈ ಕುಮಾರಾ ರಾಜಸತ್ತಮ ॥ 45 ॥
ಎಲೈ ರಾಜಶ್ರೇಷ್ಠನೇ, ಕಿವಿಯವರೆಗೂ ಎಳೆದು ಪ್ರಯೋಗಿಸಿದ ದ್ರೋಣರ ಆ ಬಾಣಗಳಿಂದ ಹೊಡೆಯಲ್ಪಟ್ಟ ಕುಮಾರರು ರಣರಂಗದಲ್ಲಿ ಕರ್ತವ್ಯ ಮೂಢರಾದರು.
ತಾನ್ ವಿಮೂಢಾನ್ ರಣೇ ದ್ರೋಣಃ ಪ್ರಹಸನ್ನಿವ ಭಾರತ |
ವ್ಯಶ್ವಸೂತರಥಾಂಶ್ಚಕ್ರೇ ಕುಪಿತಃ ಕಂಕಪತ್ರಿಭಿಃ ॥ 46 ॥
ಎಲೈ ಭಾರತನೇ, ಕೋಪಗೊಂಡ ದ್ರೋಣರು ವಿಮೂಢರಾದ ಆ ರಾಜಕುಮಾರರನ್ನು ಕಂಕಪತ್ರವನ್ನು ಹೊಂದಿದ್ದ ಬಾಣಗಳಿಂದ ಹೊಡೆದು, ಅಶ್ವ- ಸಾರಥಿ-ರಥಗಳಿಂದ ರಹಿತರನ್ನಾಗಿ ಮಾಡಿದರು.
ತೇ ರಥೇಭ್ಯೋ ಹತಾಃ ಪೇತುಃ ಕ್ಷಿತೌ ರಾಜನ್ ಸುವರ್ಚಸಃ |
ದೇವಾಸುರೇ ಪುರಾ ಯುದ್ಧೇ ಯಥಾ ದೈತೇಯದಾನವಾಃ ॥ 47 ॥
ಎಲೈ ರಾಜನೇ, ಹಿಂದೆ ದೇವಾಸುರ ಯುದ್ಧದಲ್ಲಿ ದೈತ್ಯದಾನವರು ಬಿದ್ದಂತೆ ಒಳ್ಳೆಯ ಕಾಂತಿಯನ್ನು ಹೊಂದಿದ ಆ ರಾಜಕುಮಾರರು ಮೃತರಾಗಿ ಭೂಮಿಯ ಮೇಲೆ ಬಿದ್ದರು.
ತಾನ್ ನಿಹತ್ಯ ರಣೇ ರಾಜನ್ ಭಾರದ್ವಾಜಃ ಪ್ರತಾಪವಾನ್ |
ಕಾರ್ಮುಕಂ ಭ್ರಾಮಯಾಮಾಸ ಹೇಮಪೃಷ್ಠಂ ದುರಾಸದಮ್ ॥ 48 ॥
ಎಲೈ ರಾಜನೇ, ಪ್ರತಾಪಶಾಲಿಯಾದ ದ್ರೋಣರು ರಣರಂಗದಲ್ಲಿ ಅವರನ್ನು ಕೊಂದು, ಹೇಮಪೃಷ್ಠವುಳ್ಳದ್ದೂ ಮತ್ತು ಸಮೀಪಿಸಲು ಅಸಾಧ್ಯವೂ ಆದ ಅವರ ಧನುಸ್ಸನ್ನು ತಿರುಗಿಸಿದರು.
ಪಾಂಚಾಲಾನ್ನಿಹತಾನ್ ದೃಷ್ಟ್ವಾ ದೇವಕಲ್ಪಾನ್ ಮಹಾರಥಾನ್ |
ಧೃಷ್ಟದ್ಯುಮ್ನೋ ಭೃಶಂ ಕ್ರುದ್ಧೋ ನೇತ್ರಾಭ್ಯಾಂ ಪಾತಯನ್ ಜಲಮ್ |
ಅಭ್ಯವರ್ತತ ಸಂಗ್ರಾಮೇ ಕ್ರುದ್ಧೋ ದ್ರೋಣರಥಂ ಪ್ರತಿ ॥ 49 ॥
ದೇವಕಲ್ಪರೂ, ಮಹಾರಥರೂ ಆದ ಪಾಂಚಾಲರಾಜಕುಮಾರರು ಹತರಾದುದನ್ನು ನೋಡಿ ಧೃಷ್ಟದ್ಯುಮ್ನನು ಬಹಳ ಕೋಪಗೊಂಡು ಕಣ್ಣೀರನ್ನು ಸುರಿಸುತ್ತಾ ರಣರಂಗದಲ್ಲಿ ಕ್ರುದ್ಧನಾಗಿ ದ್ರೋಣರ ರಥದ ಕಡೆಗೆ ಧಾವಿಸಿದನು.
ತತೋ ಹಾಹೇತಿ ಸಹಸಾ ನಾದಃ ಸಮಭವನ್ನೃಪ |
ಪಾಂಚಾಲ್ಯೇನ ರಣೇ ದೃಷ್ಟ್ವಾ ದ್ರೋಣಮಾವಾರಿತಂ ಶರೈಃ ॥ 50 ॥
ಎಲೈ ರಾಜನೇ, ಪಾಂಚಾಲ್ಯನಾದ ಮತ್ತು ಧೃಷ್ಟದ್ಯುಮ್ನನಿಂದ ದ್ರೋಣರು ರಣರಂಗದಲ್ಲಿ ಬಾಣಗಳಿಂದ ಮುಚ್ಚಲ್ಪಟ್ಟುದನ್ನು ನೋಡಿ ತಕ್ಷಣ ಹಾಹಾಕಾರವುಂಟಾಯಿತು.
ಸಂಛಾದ್ಯಮಾನೋ ಬಹುಧಾ ಪಾರ್ಷತೇನ ಮಹಾತ್ಮನಾ |
ನ ವಿವ್ಯಥೇ ತತೋ ದ್ರೋಣಃ ಸ್ಮಯನ್ನೇವಾನ್ವಯುಧ್ಯತ ॥ 51 ॥
ಮಹಾತ್ಮನಾದ ಧೃಷ್ಟದ್ಯುಮ್ನನಿಂದ ಅನೇಕ ರೀತಿಯಲ್ಲಿ ಆಚ್ಛಾದಿತರಾದರೂ ದ್ರೋಣರು ವ್ಯಥೆಪಡಲಿಲ್ಲ ಮತ್ತು ನಗುತ್ತಲೇ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತೋ ದ್ರೋಣಂ ಮಹಾರಾಜ ಪಾಂಚಾಲ್ಯಃ ಕ್ರೋಧಮೂರ್ಚ್ಛಿತಃ |
ಆಜಘಾನೋರಸಿ ಕ್ರುದ್ಧೋ ನವತ್ಯಾ ನತಪರ್ವಣಾಮ್ ॥ 52 ॥
ಎಲೈ ಮಹಾರಾಜನೇ, ಆಗ ಧೃಷ್ಟದ್ಯುಮ್ನನು ಕ್ರೋಧಮೂರ್ಛಿತನಾಗಿ, ಬಾಗಿದ ತುದಿಯುಳ್ಳ ತೊಂಬತ್ತು ಬಾಣಗಳಿಂದ ದ್ರೋಣರಿಗೆ ಅವರ ಎದೆಯಲ್ಲಿ ಹೊಡೆದನು.
ಸ ಗಾಢವಿದ್ಧೋ ಬಲಿನಾ ಭಾರದ್ವಾಜೋ ಮಹಾಯಶಾಃ |
ನಿಷಸಾದ ರಥೋಪಸ್ಥೇ ಕಶ್ಮಲಂ ಚ ಜಗಾಮ ಹ ॥ 53 ॥
ಮಹಾಕೀರ್ತಿವಂತರಾದ ದ್ರೋಣರು ಬಲಿಷ್ಠನಾದ ಧೃಷ್ಟದ್ಯುಮ್ನನಿಂದ ಗಾಢವಾಗಿ ಹೊಡೆಯಲ್ಪಟ್ಟು, ರಥಪೀಠದಲ್ಲಿ ಕುಳಿತು ಸ್ವಲ್ಪ ಮೂರ್ಛೆಯನ್ನು ಹೊಂದಿದರು.
ತಂ ವೈ ತಥಾಗತಂ ದೃಷ್ಟ್ವಾ ಧೃಷ್ಟದ್ಯುಮ್ನಃ ಪರಾಕ್ರಮೀ |
ಸಮುತ್ಸೃಜ್ಯ ಧನುಸ್ತೂರ್ಣಮಸಿಂ ಜಗ್ರಾಹ ವೀರ್ಯವಾನ್ ॥ 54 ॥
ದ್ರೋಣರ ಆ ಪರಿಸ್ಥಿತಿಯನ್ನು ನೋಡಿ ಪರಾಕ್ರಮಶಾಲಿಯೂ, ಶೂರನೂ ಆದ ಧೃಷ್ಟದ್ಯುಮ್ನನು ಧನುಸ್ಸನ್ನು ಬಿಟ್ಟು ಶೀಘ್ರವಾಗಿ ಖಡ್ಗವನ್ನು ತೆಗೆದುಕೊಂಡನು.
ಅವಪ್ಲುತ್ಯ ರಥಾಚ್ಚಾಪಿ ತ್ವರಿತಃ ಸ ಮಹಾರಥಃ |

ಆರುರೋಹ ರಥಂ ತೂರ್ಣಂ ಭಾರದ್ವಾಜಸ್ಯ ಮಾರಿಷ |
ಹರ್ತುಮೈಚ್ಛಚ್ಛಿರಃ ಕಾಯಾತ್ ಕ್ರೋಧಸಂರಕ್ತಲೋಚನಃ ॥ 55 ॥
ಎಲೈ ಪೂಜ್ಯನೇ, ಮಹಾರಥನಾದ ಅವನು ಶೀಘ್ರವಾಗಿ ತನ್ನ ರಥದಿಂದ ಹಾರಿ ದ್ರೋಣರ ರಥವನ್ನು ಏರಿದನು. ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಅವನು ದ್ರೋಣರ ಶಿರಸ್ಸನ್ನು ಕತ್ತರಿಸಲು ಬಯಸಿದನು.
ಪ್ರತ್ಯಾಶ್ವಸ್ತಸ್ತತೋ ದ್ರೋಣೋ ಧನುರ್ಗೃಹ್ಯ ಮಹಾಬಲಃ |
ಶರೈರ್ವೈತಸ್ತಿಕೈ ರಾಜನ್ ನಿತ್ಯಮಾಸನ್ನಯೋಧಿಭಿಃ |
ಯೋಧಯಾಮಾಸ ಸಮರೇ ಧೃಷ್ಟದ್ಯುಮ್ನಂ ಮಹಾರಥಮ್ ॥ 56 ॥
ಆ ವೇಳೆಗೆ ಚೇತರಿಸಿಕೊಂಡ ಮಹಾಬಲಶಾಲಿಗಳಾದ ದ್ರೋಣರು ಸಮೀಪದಿಂದ ಮಾತ್ರ ಪ್ರಯೋಗಿಸಬಹುದಾದ ಒಂದು ಗೇಣಿನಷ್ಟು ಉದ್ದವಾದ ಬಾಣಗಳನ್ನು ತೆಗೆದುಕೊಂಡು ಅವುಗಳಿಂದ ಮಹಾರಥನಾದ ಧೃಷ್ಟದ್ಯುಮ್ನನನ್ನು ಹೊಡೆದರು.
ತೇ ಹಿ ವೈತಸ್ತಿಕಾ ನಾಮ ಶರಾ ಆಸನ್ನಯೋಧಿನಃ |
ದ್ರೋಣಸ್ಯ ವಿದಿತಾ ರಾಜನ್ ಧೃಷ್ಟದ್ಯುಮ್ನಮವಾಕ್ಷಿಪನ್ ॥ 57 ॥
ಎಲೈ ರಾಜನೇ, ದ್ರೋಣರಿಗೆ ಮಾತ್ರ ತಿಳಿದಿದ್ದಂತಹ ಆ ವೈತಸ್ತ ಬಾಣಗಳು ಧೃಷ್ಟದ್ಯುಮ್ನನನ್ನು ಅಲ್ಲಿಂದ ಹಾರಿಸಿದವು.
ಸ ವಧ್ಯಮಾನೋ ಬಹುಭಿಃ ಸಾಯಕೈಸ್ತೈರ್ಮಹಾಬಲಃ |
ಅವಪ್ಲುತ್ಯ ರಥಾತ್ತೂರ್ಣಂ ಭಗ್ನವೇಗಃ ಪರಾಕ್ರಮೀ |
ಹತಸಂಕುಲ್ಯಭೂಯಿಷ್ಠಃ ಪ್ರಾದ್ರವತ್ ಸ್ವರಥಂ ಪ್ರತಿ ॥ 58 ॥
ಅಂತಹ ಅನೇಕ ಬಾಣಗಳಿಂದ ಹೊಡೆಯಲ್ಪಟ್ಟ ಮಹಾಬಲನೂ, ಪರಾಕ್ರಮಶಾಲಿಯೂ ಆದ ಧೃಷ್ಟದ್ಯುಮ್ನನು ತನ್ನ ವೇಗವನ್ನು ಕಳೆದುಕೊಂಡು ತನ್ನ ಸಂಕಲ್ಪವು ಪ್ರಾಯಶಃ ದೂರವಾಗುತ್ತಿರಲು ಆ ರಥದಿಂದ ಕೆಳಗೆ ಹಾರಿ ತನ್ನ ರಥದ ಕಡೆಗೆ ಓಡಿದನು.
ಆರುಹ್ಯ ಸ್ವರಥಂ ವೀರಃ ಪ್ರಗೃಹ್ಯ ಚ ಮಹದ್ಧನುಃ |
ವಿವ್ಯಾಧ ಸಮರೇ ದ್ರೋಣಂ ಧೃಷ್ಟದ್ಯುಮ್ನೋ ಮಹಾರಥಃ ॥ 59 ॥
ಮಹಾರಥನೂ, ವೀರನೂ ಆದ ಧೃಷ್ಟದ್ಯುಮ್ನನು ತನ್ನ ರಥವನ್ನು ಏರಿ ದೊಡ್ಡ ಧನುಸ್ಸನ್ನು ತೆಗೆದುಕೊಂಡು ರಣರಂಗದಲ್ಲಿ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತದದ್ಭುತಂ ತಯೋರ್ಯುದ್ಧಂ ಭೂತಸಂಘಹ್ಯಪೂಜಯನ್ |
ಕ್ಷತ್ರಿಯಾಶ್ಚ ಮಹಾರಾಜ ಯೇ ಚಾನ್ಯೇ ತತ್ರ ಸೈನಿಕಾಃ ॥ 60 ॥
ಎಲೈ ಮಹಾರಾಜನೇ, ಅವರಿಗೆ ನಡೆದ ಅದ್ಭುತವಾದ ಆ ಯುದ್ಧವನ್ನು ಅಲ್ಲಿ ನೆರೆದ ಭೂತಸಂಘಗಳೂ, ಕ್ಷತ್ರಿಯರೂ ಮತ್ತು ಉಳಿದ ಸೈನಿಕರೂ ಪೂಜಿಸಿದರು.
ತ್ರೈಲೋಕ್ಯಕಾಂಕ್ಷಿಣೋರಾಸೀಚ್ಛಕ್ರಪ್ರಹ್ಲಾದಯೋರಿವ |
ಮಂಡಲಾನಿ ವಿಚಿತ್ರಾಣಿ ಯಾಮಕಾನೀತರಾಣಿ ಚ ॥ 61 ॥
ಚರಂತೌ ಯುದ್ಧಮಾರ್ಗಜ್ಞೌ ತತಕ್ಷತುರಥೇಷುಭಿಃ |
ಕ್ಷೋಭಯಂತೌ ಮನಾಂಸ್ಯಾಜೌ ಯೋಧಾನಾಂ ದ್ರೋಣಪಾರ್ಷತೌ ॥
ಮೂರುಲೋಕದ ಅಧಿಪತ್ಯವನ್ನು ಬಯಸಿದ ವೀರ ಪ್ರಹ್ಲಾದರು ರಣರಂಗದಲ್ಲಿ ವಿಚಿತ್ರವಾದ ಸವ್ಯದ್ದಕ್ಷಣ ಮಂಡಲಗಳಲ್ಲಿ ಚಲಿಸಿದಂತೆ ಯುದ್ಧಮಾರ್ಗವನ್ನು ತಿಳಿದ ದ್ರೋಣ-ಧೃಷ್ಟದ್ಯುಮ್ನರಿಬ್ಬರೂ ಯೋಧರ ಮನಸ್ಸುಗಳಿಗೆ ಕ್ಷೋಭೆಯನ್ನುಂಟು ಮಾಡುತ್ತಾ ಬಾಣಗಳಿಂದ ಒಬ್ಬರನ್ನೊಬ್ಬರು ಗಾಯಗೊಳಿಸಿದರು.
ಸೃಜಂತೌ ಶರವರ್ಷಾಣಿ ವರ್ಷಾಸ್ವಿವ ಬಲಾಹಕೌ |
ಛಾದಯಂತೌ ಮಹಾತ್ಮಾನೌ ಶರೈರ್ವ್ಯೋಮ ದಿಶೋ ಮಹೀಮ್ |
ತದದ್ಭುತಂ ತಯೋರ್ಯುದ್ಧಂ ಭೂತಸಂಘಾಹ್ಯಪೂಜಯನ್ ॥ 63 ॥
ಮಳೆಗಾಲದ ಮೋಡಗಳಂತೆ ಬಾಣಗಳ ಮಳೆಯನ್ನು ಸೃಷ್ಟಿಮಾಡುತ್ತಾ, ತಮ್ಮ ಬಾಣಗಳಿಂದ ಆಕಾಶವನ್ನೂ, ಭೂಮಿಯನ್ನೂ ಮತ್ತು ದಿಕ್ಕುಗಳನ್ನೂ ಮುಚ್ಚುತಾ ಆ ಇಬ್ಬರು ಮಹಾತ್ಮರು ಯುದ್ಧವನ್ನು ಮಾಡಿದರು. ಅದ್ಭುತವಾದ ಅವರ ಯುದ್ಧವನ್ನು ಭೂತಸಂಘಗಳು ಪೂಜಿಸಿದವು.
ಅವಶ್ಯಂ ಸಮರೇ ದ್ರೋಣೋ ಧೃಷ್ಟದ್ಯುಮ್ನೇನ ಸಂಗತಃ |
ವಶಮೇಷ್ಯತಿ ನೋ ರಾಜ್ಞಃ ಪಾಂಚಾಲಾ ಇತಿ ಚುಕ್ರುಶುಃ ॥ 64 ॥
ಧೃಷ್ಟದ್ಯುಮ್ನನ ಸಮಾಗಮವನ್ನು ಹೊಂದಿದ ದ್ರೋಣರು ಖಂಡಿತವಾಗಿ ನಮ್ಮ ರಾಜನಾದ ಧೃಷ್ಟದ್ಯುಮ್ನನಿಗೆ ವಶರಾಗುವರು ಎಂದು ಪಾಂಚಾಲರು ಕಿರುಚಿದರು.
ದ್ರೋಣಸ್ತು ತ್ವರಿತೋ ಯುದ್ಧೇ ಧೃಷ್ಟದ್ಯುಮ್ನಸ್ಯ ಸಾರಥೇಃ |
ಶಿರಃ ಪ್ರಚ್ಯಾವಯಾಮಾಸ ಫಲಂ ಪಕ್ವಂ ತರೋರಿವ |
ತತಸ್ತೇ ಪ್ರದ್ರುತಾ ವಾಹಾ ರಾಜಂಸ್ತಸ್ಯ ಮಹಾತ್ಮನಃ ॥ 65 ॥
ಯುದ್ಧದಲ್ಲಿ ಕ್ಷಿಪ್ರಕಾರಿಗಳಾದ ದ್ರೋಣರು ಧೃಷ್ಟದ್ಯುಮ್ನನ ಸಾರಥಿಯ ಶಿರಸ್ಸನ್ನು ಮರದಿಂದ ಮಾಗಿದ ಹಣ್ಣನ್ನು ಕೆಡವುವಂತೆ ಕೆಡವಿದರು. ಎಲೈ ರಾಜನೇ, ಆಗ ಮಹಾತ್ಮನಾದ ಧೃಷ್ಟದ್ಯುಮ್ನನ ಅಶ್ವಗಳು ಓಡಿಹೋದವು.
ತೇಷು ಪ್ರದ್ರವಮಾಣೇಷು ಪಾಂಚಾಲಾನ್ ಸೃಂಜಯಾಂಸ್ತಥಾ |
ವ್ಯದ್ರಾವಯದ್ ರಣೇ ದ್ರೋಣಸ್ತತ್ರ ತತ್ರ ಪರಾಕ್ರಮೀ ॥ 66 ॥
ಧೃಷ್ಟದ್ಯುಮ್ನನ ಅಶ್ವಗಳು ಓಡಿಹೋಗುತ್ತಿರಲು ಪರಾಕ್ರಮಶಾಲಿಗಳಾದ ದ್ರೋಣರು ಪಾಂಚಾಲರನ್ನೂ ಮತ್ತು ಸೃಂಜಯರನ್ನೂ

ರಣರಂಗದಲ್ಲಿ ಓಡಿಸಿದರು.
ವಿಜಿತ್ಯ ಪಾಂಡುಪಾಂಚಾಲಾನ್ ಭಾರದ್ವಾಜಃ ಪ್ರತಾಪವಾನ್ |
ಸ್ವಂ ವ್ಯೂಹಂ ಪುನರಾಸ್ಥಾಯ ಸ್ಥಿರೋಽಭವದರಿಂದಮಃ ||
ನ ಚೈನಂ ಪಾಂಡವಾ ಯುದ್ಧೇ ಜೇತುಮುತ್ಸಹಿರೇ ಪ್ರಭೋ || 67 ||
ಪ್ರತಾಪಶಾಲಿಗಳೂ, ಅರಿಂದಮರೂ ಆದ ದ್ರೋಣರು ಪಾಂಡು-ಪಾಂಚಾಲರ ಮಧ್ಯದಲ್ಲಿ ಪುನಃ ತಮ್ಮ ವ್ಯೂಹಕ್ಕೆ ಬಂದು ಸ್ಥಿರವಾಗಿ ನಿಂತರು. ಎಲೈ ಪ್ರಭುವೇ, ಆಗ ಪಾಂಡವರು ಅವರನ್ನು ಯುದ್ಧದಲ್ಲಿ ಗೆಲ್ಲುವ ಉತ್ಸಾಹವನ್ನು ತೋರಿಸಲಿಲ್ಲ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಾಧಿಕಶತತಮೋಽಧ್ಯಾಯಃ ||
|| ಜಯದ್ರಥವಧಪರ್ವಣಿ ದ್ವಾತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂಬತ್ತನೆಯ ಅಧ್ಯಾಯ
ಸಾತ್ಯಕಿಯಿಂದ ಪುನಃ ದುಶ್ಶಾಸನನ ಪರಾಜಯ.
ಸಂಜಯಃ
ತತೋ ದುಃಶಾಸನೋ ರಾಜನ್ ಶೈನೇಯಂ ಸಮುಪಾದ್ರವತ್ |
ಕಿರನ್ ಶರಸಹಸ್ರಾಣಿ ಪರ್ಜನ್ಯ ಇವ ವೃಷ್ಟಿಮಾನ್ || 1 ||
ರಥವ್ರಾತೇನ ಮಹತಾ ನಾನಾದೇಶೋದ್ಭವೇನ ಚ |
ಸರ್ವತೋ ಭರತಶ್ರೇಷ್ಠ ವಿಸೃಜನ್ ಸಾಯಕಾನ್ ಬಹೂನ್ |
ಪರ್ಜನ್ಯ ಇವ ಘೋಷೇಣ ನಾದಯನ್ ವಿದಿಶೋ ದಶ || 2 ||
ಸಂಜಯ ಎಲೈ ರಾಜನೇ, ಆಗ ದುಶ್ಶಾಸನನು ನಾನಾ ದೇಶಗಳಿಂದ ಬಂದ ದೊಡ್ಡ ರಥಸಮೂಹಗಳೊಡನೆ ಕೂಡಿ ಮಳೆಯನ್ನು ಸುರಿಸುವ ಪರ್ಜನ್ಯನಂತೆ ಬಾಣಗಳನ್ನು ಸುರಿಸುತ್ತಾ, ಪರ್ಜನ್ಯಘೋಷದಂತೆ ದಿಕ್ಕುದಿಕ್ಕುಗಳನ್ನು ಪ್ರತಿಧ್ವನಿಸುತ್ತಾ ಸಾತ್ಯಕಿಯ ಕಡೆಗೆ ಧಾವಿಸಿದನು.
ತಮಾಪತಂತಮಾಲೋಕ್ಯ ಸಾತ್ಯಕಿಃ ಕೌರವಂ ರಣೇ |
ಅಭಿದ್ರುತ್ಯ ಮಹಾಬಾಹುಃ ಛಾದಯಾಮಾಸ ಸಾಯಕೈಃ || 3 ||
ತೇ ಚ್ಛಾದ್ಯಮಾನಾ ಬಾಣೌಘೈಃ ದುಃಶಾಸನಪುರೋಗಮಾಃ |
ಪ್ರಾದ್ರವನ್ ಸಮರೇ ಭೀತಾಸ್ತವ ಪುತ್ರಸ್ಯ ಪಶ್ಯತಃ || 4 ||
ಮಹಾಬಾಹುವಾದ ಸಾತ್ಯಕಿಯು ರಣರಂಗದಲ್ಲಿ ತನ್ನೆಡೆಗೆ ಬರುತ್ತಿದ್ದ ದುಶ್ಶಾಸನನನ್ನು ನೋಡಿ, ಅವನ ಕಡೆಗೆ ಓಡಿ ತನ್ನ ಬಾಣಗಳಿಂದ ಮುಚ್ಚಿದನು. ಸಾತ್ಯಕಿಯ ಬಾಣಸಮೂಹಗಳಿಂದ ಮುಚ್ಚಲ್ಪಟ್ಟ ದುಶ್ಶಾಸನನನ್ನು ಮುಂದೆ ಮಾಡಿಕೊಂಡ ಯೋಧರು ಯುದ್ಧದಲ್ಲಿ ಭೀತರಾಗಿ ದುಶ್ಶಾಸನನ ಕಣ್ಣೆದುರಿಗೇ ಓಡಿಹೋದರು.
ತೇಷು ದ್ರವತ್ಸು ರಾಜೇಂದ್ರ ಪುತ್ರೋ ದುಃಶಾಸನಸ್ತವ |
ತಸ್ಥೌ ವ್ಯಪೇತಭೀ ರಾಜನ್ ಸಾತ್ಯಕಿಂ ಚಾರ್ದಯನ್ ಶರೈಃ || 5 ||
ಎಲೈ ರಾಜನೇ, ಅವರು ಓಡಿಹೋಗುತ್ತಿರಲು ನಿನ್ನ ಪುತ್ರನಾದ ದುಶ್ಶಾಸನನು ನಿರ್ಭಯನಾಗಿ ನಿಂತು ಸಾತ್ಯಕಿಯನ್ನು ಬಾಣಗಳಿಂದ ಪೀಡಿಸಿದನು.
ಸಾತ್ಯಕಿಂ ಚ ಶತೇನಾಜೌ ವಿದ್ಧ್ವಾ ನಾದಂ ಮುಮೋಚ ಸಃ || 6 ||
ಸಾತ್ಯಕಿಯನ್ನು ನೂರು ಬಾಣಗಳಿಂದ ಹೊಡೆದು ದೊಡ್ಡ ನಾದವನ್ನು ಮಾಡಿದನು.
ತತಃ ಕ್ರುದ್ಧೋ ಮಹಾರಾಜ ಮಾಧವಸ್ತಸ್ಯ ಸಂಯುಗೇ |
ರಥಂ ಸೂತಂ ಧ್ವಜಂ ತಂ ಚ ಚಕ್ರೇಽದೃಶ್ಯಮಜಿಹ್ಮಗೈಃ || 7 ||
ಎಲೈ ಮಹಾರಾಜನೇ, ಆಗ ಮಧುಕುಲದಲ್ಲಿ ಜನಿಸಿದ ಸಾತ್ಯಕಿಯು ಯುದ್ಧದಲ್ಲಿ ನೇರವಾಗಿ ಸಾಗುವ ತನ್ನ ಬಾಣಗಳಿಂದ ದುಶ್ಶಾಸನನ ರಥ-ಸಾರಥಿ ಮತ್ತು ಧ್ವಜಗಳನ್ನು ಅದೃಶ್ಯಗಳನ್ನಾಗಿ ಮಾಡಿದನು.
ತತೋ ದುಃಶಾಸನಃ ಕ್ರುದ್ಧೋ ಯುದ್ಧ್ವಾ ಸಾತ್ಯಕಿಮಾಹವೇ |
ನಾಕಂಪಯತ್ ಸ್ಥಿತಂ ಯುದ್ಧೇ ಮೈನಾಕಮಿವ ಪರ್ವತಮ್ || 8 ||
ಆಗ ದುಶ್ಶಾಸನನು ರಣರಂಗದಲ್ಲಿ ಸಾತ್ಯಕಿಯ ಜೊತೆಯಲ್ಲಿ ಕ್ರುದ್ಧನಾಗಿ ಯುದ್ಧವನ್ನು ಮಾಡಿದರೂ ಮೈನಾಕ ಪರ್ವತದಂತಿದ್ದ ಅವನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ.
ಸ ತು ದುಃಶಾಸನಂ ವೀರಃ ಸಾಯಕೈರಾವೃಣೋದ್ ಭೃಶಮ್ |
ಮಶಕಂ ಸಮನುಪ್ರಾಪ್ತಮೂರ್ಣನಾಭಿರಿವೋರ್ಣಯಾ || 9 ||
ಜೇಡರ ಬಲೆಯಲ್ಲಿ ಬಿದ್ದ ನೊಣವನ್ನು ಜೇಡವು ತನ್ನ ಬಲೆಯಿಂದ ಮುಚ್ಚಿದಂತೆ ವೀರನಾದ ಸಾತ್ಯಕಿಯು ತನ್ನ ಬಾಣಗಳಿಂದ ದುಶ್ಶಾಸನನನ್ನು ತೀವ್ರವಾಗಿ ಮುಚ್ಚಿದನು.
ದೃಷ್ಟ್ವಾ ದುಃಶಾಸನಂ ರಾಜಾ ತಥಾ ಶರಶತಾಚಿತಮ್ |
ತ್ರಿಗರ್ತಾಂಶ್ಚೋದಯಾಮಾಸ ಯುಯುಧಾನರಥಂ ಪ್ರತಿ || 10 ||
ದುಶ್ಶಾಸನನು ನೂರಾರು ಬಾಣಗಳಿಂದ ಹೊಡೆಯಲ್ಪಟುದನ್ನು ನೋಡಿ (ಅವನ ಶರೀರದಲ್ಲಿ ನೂರಾರು ಬಾಣಗಳು ನಾಟಿದುದನ್ನು

ನೋಡಿ) ರಾಜನಾದ ದುರ್ಯೋಧನನು ತ್ರಿಗರ್ತರನ್ನು ಸಾತ್ಯಕಿಯ ರಥದ ಕಡೆಗೆ ಹೋಗುವಂತೆ ಪ್ರಚೋದಿಸಿದನು.
ತೇಽಗಚ್ಛನ್ ಯುಯುಧಾನಸ್ಯ ಸಮೀಪಂ ಕ್ರೂರಕಾರಿಣಃ |
ತ್ರಿಗರ್ತಾನಾಂ ತ್ರಿಸಾಹಸ್ರಾ ರಥಾ ಯುದ್ಧವಿಶಾರದಾಃ ॥ 11 ॥
ಯುದ್ಧವಿಶಾರದರಾದ, ಕ್ರೂರಕರ್ಮಿಗಳಾದ ತ್ರಿಗರ್ತರ ಮೂರುಸಹಸ್ರ ರಥರು ಸಾತ್ಯಕಿಯ ಸಮೀಪಕ್ಕೆ ಹೋದರು.
ತೇ ತು ತಂ ರಥವಂಶೇನ ಮಹತಾ ಪರ್ಯವಾರಯನ್ |
ಸ್ಥಿರಾಂ ಕೃತ್ವಾ ಮತಿಂ ಯುದ್ಧೇ ಮರಣಾಯ ಜಯಾಯ ವಾ ॥ 12 ॥
ಅವರು ಮರಣ ಅಥವಾ ಜಯಕ್ಕಾಗಿ ಯುದ್ಧದಲ್ಲಿ ಸ್ಥಿರವಾದ ಬುದ್ಧಿಯನ್ನು ಹೊಂದಿ ತಮ್ಮ ದೊಡ್ಡ ರಥಸಮೂಹದಿಂದ ಸಾತ್ಯಕಿಯನ್ನು ಸುತ್ತುವರಿದರು.
ತೇಷಾಂ ಪ್ರಯತತಾಂ ಯುದ್ಧೇ ಶರವರ್ಷಾಣಿ ಮುಂಚತಾಮ್ |
ಯೋಧಾನ್ ಪಂಚಶತಾನ್ ಮುಖ್ಯಾನಗ್ರಾನೀಕೇ ವ್ಯಪೋಥಯತ್ ॥
ಸಾತ್ಯಕಿಯಾದರೋ ಬಾಣಗಳ ಮಳೆಯನ್ನು ಕರೆಯುತ್ತಾ, ಯುದ್ಧವನ್ನು ಮಾಡಲು ಪ್ರಯತ್ನಪಡುತ್ತಿದ್ದ ಅವರಲ್ಲಿ ಮುಖ್ಯರಾದ ಐದುನೂರು ಯೋಧರನ್ನು ಸೇನೆಯ ಮುಂಭಾಗದಲ್ಲಿ ನಾಶಗೊಳಿಸಿದನು.
ತೇಽಪತಂತ ಹತಾಸ್ತೂರ್ಣಂ ಶಿನಿಪ್ರವರಸಾಯಕೈಃ |
ಮಹಾಮಾರುತವೇಗೇನ ರುಗ್ಣಾ ಇವ ಮಹಾದ್ರುಮಾಃ ॥ 14 ॥
ದೊಡ್ಡ ಬಿರುಗಾಳಿಯ ವೇಗಕ್ಕೆ ಸಿಲುಕಿ ಬಿದ್ದ ವೃಕ್ಷಗಳಂತೆ ಶಿನಿಪ್ರವರನಾದ ಸಾತ್ಯಕಿಯಿಂದ ಹೊಡೆಯಲ್ಪಟ್ಟ ಅವರು ಶೀಘ್ರವಾಗಿ ಬಿದ್ದರು.
ರಥೈಶ್ಚ ಬಹುಧಾ ಛಿನ್ನೈರ್ಧ್ವಜೈಶ್ಚೈವ ವಿಶಾಂಪತೇ |
ಹಯೈಶ್ಚ ಕನಕಾಪೀಡೈಃ ಪತಿತೈಸ್ತತ್ರ ಮೇದಿನೀ ॥ 15 ॥
ಶೈನೇಯಶರಸಂಕೃತ್ತೈಃ ಶೋಣಿತೌಘಪರಿಪ್ಲುತೈಃ |
ಅಶೋಭತ ಮಹಾರಾಜ ಕಿಂಶುಕೈರಿವ ಪುಷ್ಪಿತೈಃ ॥ 16 ॥
ಎಲೈ ರಾಜನೇ, ಸಾತ್ಯಕಿಯ ಬಾಣಗಳಿಂದ ಕತ್ತರಿಸಲ್ಪಟ್ಟ ರಥ-ಧ್ವಜಗಳಿಂದಲೂ, ಮತ್ತು ರಕ್ತದಿಂದ ತೊಯ್ದ ಶಿರಸ್ಸಿನಲ್ಲಿ ಸುವರ್ಣಮಯವಾದ ಆಭರಣವನ್ನು ಹೊಂದಿ ಬಿದ್ದ ಅಶ್ವಗಳಿಂದಲೂ ಭೂಮಿಯು ಹೂವರಳಿದ ಮುತ್ತುಗವೃಕ್ಷದಂತೆ ಶೋಭಿಸಿತು.

ತೇ ವಧ್ಯಮಾನಾಃ ಸಮರೇ ಯುಯುಧಾನೇನ ತಾವಕಾಃ |
ತ್ರಾತಾರಂ ನಾಧ್ಯಗಚ್ಛಂತ ಪಂಕಮಗ್ನಾ ಇವ ದ್ವಿಪಾಃ ॥ 17 ॥
ಯುದ್ಧದಲ್ಲಿ ಯುಯುಧಾನನ ಬಾಣಗಳ ಹೊಡೆತಕ್ಕೆ ಸಿಲುಕಿದ ಅವರು ಕೆಸರಿನಲ್ಲಿ ಬಿದ್ದ ಗಜಗಳಂತೆ ಯಾವ ರಕ್ಷಕನನ್ನೂ ಕಾಣಲಿಲ್ಲ.
ತತಸ್ತೇ ಪರ್ಯವರ್ತಂತ ಸರ್ವೇ ದ್ರೋಣರಥಂ ಪ್ರತಿ |
ಭಯಾತ್ ಪತಗರಾಜಸ್ಯ ಗರ್ತಾನೀವ ಮಹೋರಗಾಃ ॥ 18 ॥
ಆಗ ಅವರೆಲ್ಲರೂ ಗರುಡನ ಭಯದಿಂದ ಬಿಲಗಳನ್ನು ಸೇರುವ ಮಹಾ ಸರ್ಪಗಳಂತೆ ದ್ರೋಣರ ರಥದ ಕಡೆಗೆ ತಿರುಗಿದರು.
ಹತ್ವಾ ಪಂಚಶತಾನ್ ಯೋಧಾನ್ ಶರೈರಾಶೀವಿಷೋಪಮೈಃ |
ಪ್ರಯಾತ್ಸ ಶನಕೈರ್ವೀರೋ ಧನಂಜಯರಥಂ ಪ್ರತಿ ॥ 19 ॥
ವೀರನಾದ ಸಾತ್ಯಕಿಯು ಸರ್ಪಸದೃಶವಾದ ಬಾಣಗಳಿಂದ ಐದುನೂರು ಯೋಧರನ್ನು ಕೊಂದು ಅರ್ಜುನನ ರಥದ ಕಡೆಗೆ ಹೊರಟನು.
ವಿವ್ಯಾಧ ನವಭಿಸ್ತೂರ್ಣಂ ಶರೈಃ ಸನ್ನತಪರ್ವಭಿಃ |
ಶೈನೇಯಸ್ತು ತತಸ್ತೂರ್ಣಂ ವಿದ್ಧ್ವಾ ಪಂಚಭಿರಾಶುಗೈಃ ॥ 20 ॥
ಹಾಗೆ ಹೊರಟ ರಥಶ್ರೇಷ್ಠನಾದ ಅವನನ್ನು ನಿನ್ನ ಪುತ್ರನಾದ ದುಶ್ಶಾಸನನು ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳಿಂದ ಹೊಡೆದನು.
ಕ್ಷುರಪ್ರೇಣ ಧನುಶ್ಛಿತ್ವಾ ಪ್ರಹಸನ್ನಭ್ಯವರ್ತತ |
ಧನುರನ್ಯತ್ ಸಮಾದಾಯ ಪುತ್ರೋ ದುಃಶಾಸನಸ್ತವ ॥
ಪಂಚಭಿಃ ಪ್ರತಿವಿವ್ಯಾಧ ಶರೈಃ ಸನ್ನತಪರ್ವಭಿಃ ॥ 21 ॥
ಸಾತ್ಯಕಿಯಾದರೂ ಅವನನ್ನು ಶೀಘ್ರವಾಗಿ ಶೀಘ್ರಗಾಮಿಗಳಾದ ಐದು ಬಾಣಗಳಿಂದ ಹೊಡೆದು, ಕ್ಷುರಪ್ರದಿಂದ ಅವನ ಧನುಸ್ಸನ್ನು ಕತ್ತರಿಸಿ ನಗುತ್ತಾ ಮುಂದೆ ಸಾಗಿದನು.
ನಿನ್ನ ಪುತ್ರನಾದ ದುಶ್ಶಾಸನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅವನನ್ನು ಬಾಗಿದ ತುದಿಯುಳ್ಳ ಐದು ಬಾಣಗಳಿಂದ ಹೊಡೆದನು.
ಸ ತು ತಂ ಪ್ರತಿವಿವ್ಯಾಧ ಪಂಚಭಿರ್ನಿಶಿತೈಃ ಶರೈಃ |
ರುಗ್ಮಪುಂಖೈರ್ಮಹೇಷ್ವಾಸೋ ಗಾರ್ಧಪತ್ರೈರಜಿಹ್ಮಗೈಃ ॥ 22 ॥
ಮಹಾಧನುರ್ಧಾರಿಯಾದ ಸಾತ್ಯಕಿಯಾದರೋ ಗೃಧ್ರಪತ್ರಗಳನ್ನು ಹೊಂದಿದ್ದ, ಸುವರ್ಣಪುಂಖಗಳನ್ನು ಹೊಂದಿದ್ದ, ನೇರವಾಗಿ ಸಾಗುವ ಐದು ತೀಕ್ಷ್ಣವಾದ ಬಾಣಗಳಿಂದ ಅವನನ್ನು ಪ್ರತಿಯಾಗಿ ಹೊಡೆದನು.
ಸಾತ್ಯಕಿಂ ತು ಮಹಾರಾಜ ಪ್ರಹಸನ್ನಿವ ಭಾರತ |

ದುಃಶಾಸನಸ್ತ್ರಿಭಿರ್ವಿದ್ಧ್ವಾ ಪುನರ್ವಿವ್ಯಾಧ ಪಂಚಭಿಃ ॥ 23 ॥
ಎಲೈ ಭಾರತನೇ, ಮಹಾರಾಜನೇ, ದುಶ್ಶಾಸನನು ನಗುತ್ತಲೇ ಸಾತ್ಯಕಿಯನ್ನು ಮೂರು ಬಾಣಗಳಿಂದ ಹೊಡೆದು, ಪುನಃ ಐದು ಬಾಣಗಳಿಂದ ಹೊಡೆದನು.
ಶೈನೇಯಸ್ತವ ಪುತ್ರಂ ತು ವಿದ್ಧ್ವಾ ಪಂಚಭಿರಾಶುಗೈಃ |
ಧನುಶ್ಚಾಸ್ಯ ರಣೇ ಛಿತ್ತ್ವಾ ವಿಸ್ಮಯನ್ನರ್ಜುನಂ ಯಯೌ ॥ 24 ॥
ಸಾತ್ಯಕಿಯು ನಿನ್ನ ಪುತ್ರನನ್ನು ಶೀಘ್ರಗಾಮಿಗಳಾದ ಐದು ಬಾಣಗಳಿಂದ ಹೊಡೆದು, ರಣರಂಗದಲ್ಲಿ ಅವನ ಧನುಸ್ಸನ್ನೂ ಕತ್ತರಿಸಿ, ನಗುತ್ತಾ ಅರ್ಜುನನ ಕಡೆಗೆ ಹೊರಟನು.
ತತೋ ದುಃಶಾಸನಃ ಕ್ರುದ್ಧೋ ವೃಷ್ಣಿವೀರಾಯ ಗಚ್ಛತೇ |
ಸರ್ವಪಾರಶವೀಂ ಶಕ್ತಿಂ ವಿಸಸರ್ಜ ಜಿಘಾಂಸಯಾ ॥ 25 ॥
ಆಗ ದುಶ್ಶಾಸನನು ಕೋಪಗೊಂಡು ಹೋಗುತ್ತಿದ್ದ ಸಾತ್ಯಕಿಯ ಮೇಲೆ ಅವನನ್ನು ಕೊಲ್ಲುವ ಉದ್ದೇಶದಿಂದ ಅಯಸ್ಮಯವಾದ ಒಂದು ಶಕ್ತ್ಯಾಯುಧವನ್ನು ಎಸೆದನು.
ತಾಂ ತು ಶಕ್ತಿಂ ತದಾ ಘೋರಾಂ ತವ ಪುತ್ರಸ್ಯ ಸಾತ್ಯಕಿಃ |
ಚಿಚ್ಛೇದ ಶತಧಾ ರಾಜನ್ನಿಶಿತೈಃ ಕಂಕಪತ್ರಿಭಿಃ ॥ 26 ॥
ಎಲೈ ರಾಜನೇ, ನಿನ್ನ ಪುತ್ರನು ಪ್ರಯೋಗಿಸಿದ ಆ ಘೋರವಾದ ಶಕ್ತಿಯನ್ನು ಸಾತ್ಯಕಿಯು ಕಂಕಪತ್ರಗಳನ್ನು ಹೊಂದಿದ ತೀಕ್ಷ್ಣವಾದ ಬಾಣಗಳಿಂದ ನೂರು ಭಾಗವಾಗಿ ಕತ್ತರಿಸಿದನು.
ಅಥಾನ್ಯದ್ಧನುರಾದಾಯ ಪುತ್ರಸ್ತವ ಜನೇಶ್ವರ |
ಸಾತ್ಯಕಿಂ ದಶಭಿರ್ವಿದ್ಧ್ವಾ ಸಿಂಹನಾದಂ ನನಾದ ಹ ॥ 27 ॥
ಎಲೈ ಜನೇಶ್ವರನೇ, ಆಗ ನಿನ್ನ ಪುತ್ರನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಸಾತ್ಯಕಿಯನ್ನು ಹತ್ತು ಬಾಣಗಳಿಂದ ಹೊಡೆದು ಸಿಂಹನಾದವನ್ನು ಮಾಡಿದನು.
ಸಾತ್ಯಕಿಸ್ತು ರಣೇ ಕ್ರುದ್ಧೋ ಮೋಹಯಿತ್ವಾ ಸುತಂ ತವ |
ಶರೈರಗ್ನಿಶಿಖಾಕಾರೈರಾಜಘಾನ ಸ್ತನಾಂತರೇ |
ಸರ್ವಾಯಸೈಸ್ತೀಕ್ಷ್ಣವಕ್ತ್ರೈರಷ್ಟಭಿರ್ವಿವ್ಯಧೇ ಪುನಃ ॥ 28 ॥
ಸಾತ್ಯಕಿಯಾದರೋ ರಣರಂಗದಲ್ಲಿ ಕೋಪಗೊಂಡು ನಿನ್ನ ಪುತ್ರನನ್ನು ಮರುಳುಗೊಳಿಸಿ, ಅಗ್ನಿಜ್ವಾಲೆಯಂತಿದ್ದ ಬಾಣಗಳಿಂದ ಅವನನ್ನು ಸ್ತನಗಳ ಮಧ್ಯದಲ್ಲಿ ಹೊಡೆದನು. ಪುನಃ ಪೂರ್ಣವಾಗಿ ಕಬ್ಬಿಣದಿಂದ ಮಾಡಿದ ತೀಕ್ಷ್ಣವಾದ ಅಸ್ತ್ರಭಾಗವುಳ್ಳ ಎಂಟು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ದುಃಶಾಸನಸ್ತು ವಿಂಶತ್ಯಾ ಸಾತ್ಯಕಿಂ ಪ್ರತ್ಯವಿಧ್ಯತ |
ಸಾತ್ವತೋಽಪಿ ಮಹಾರಾಜ ತಂ ವಿವ್ಯಾಧ ಸ್ತನಾಂತರೇ |
ತ್ರಿಭಿರೇವ ಮಹಾವೇಗೈಃ ಶರೈಃ ಸನ್ನತಪರ್ವಭಿಃ ॥ 29 |
ದುಶ್ಶಾಸನನಾದರೂ ಸಾತ್ಯಕಿಯ ಮೇಲೆ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು. ಎಲೈ ಮಹಾರಾಜನೇ, ಸಾತ್ಯಕಿಯೂ ಕೂಡ ಮಹಾವೇಗವುಳ್ಳ, ಬಾಗಿದ ತುದಿಯುಳ್ಳ ಮೂರು ಬಾಣಗಳಿಂದಲೇ ಅವನನ್ನು ಸ್ತನಗಳ ಮಧ್ಯದಲ್ಲಿ ಹೊಡೆದನು.
ತತೋಽಸ್ಯ ವಾಹಾನ್ನಿಶಿತೈಃ ಶರೈರ್ಜಘ್ನೇ ಮಹಾರಥಃ |
ಸಾರಥಿಂ ಚ ಸುಸಂಕ್ರುದ್ಧೋ ಶರೈಃ ಸನ್ನತಪರ್ವಭಿಃ॥ 30 ॥
ಅನಂತರ ಮಹಾರಥನಾದ ಸಾತ್ಯಕಿಯು ಅವನ ರಥದ ಅಶ್ವಗಳನ್ನು ತೀಕ್ಷ್ಣವಾದ ಬಾಣಗಳಿಂದ ಕೊಂದು, ಬಾಗಿದ ತುದಿಯುಳ್ಳ ಬಾಣಗಳಿಂದ ಅವನು ಅವನ ಸಾರಥಿಯನ್ನೂ ಕೊಂದನು.
ಧನುರೇಕೇನ ಭಲ್ಲೇನ ಹಸ್ತಾವಾಪಂ ಚ ಪಂಚಭಿಃ |
ಧ್ವಜಂ ಚ ರಥಶಕ್ತಿಂ ಚ ಭಲ್ಲಾಭ್ಯಾಂ ಪರಮಾಸ್ತ್ರವಿತ್ |
ಚಿಚ್ಛೇದ ವಿಶಿಖೈಸ್ತೀಕ್ಷ್ಣೈಸ್ತಥೋಭೌ ಪಾರ್ಷ್ಣಿಸಾರಥೀ ॥ 31 ॥
ಪರಮಾಸ್ತ್ರವೇತ್ತನಾದ ಸಾತ್ಯಕಿಯು ಒಂದು ಭಲ್ಲದಿಂದ ಅವನ ಧನುಸ್ಸನ್ನೂ, ಐದು ಭಲ್ಲಗಳಿಂದ ಅವನ ಬತ್ತಳಿಕೆಯನ್ನೂ, ಎರಡು ಭಲ್ಲಗಳಿಂದ ಅವನ ಧ್ವಜ ಮತ್ತು ರಥಶಕ್ತಿಯನ್ನೂ ಕತ್ತರಿಸಿ, ತೀಕ್ಷ್ಣವಾದ ಬಾಣಗಳಿಂದ ಅವನ ಇಬ್ಬರು ಪಾರ್ಷ್ಣಿ ಸಾರಥಿಗಳನ್ನು ಹೊಡೆದನು.
ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ತ್ರಿಗರ್ತಸೇನಾಪತಿನಾ ಸ್ವರಥೇನಾಪವಾಹಿತಃ ॥ 32 ॥
ಧನುಸ್ಸು ಕತ್ತರಿಸಲ್ಪಟ್ಟು, ರಥಾಶ್ವಸಾರಥಿಗಳಿಂದ ಹೀನನಾದ ಅವನನ್ನು ತ್ರಿಗರ್ತರ ಸೇನಾಧಿಪತಿಯು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಣರಂಗದಿಂದ ಹೊರಗೆ ಕರೆದುಕೊಂಡು ಹೋದನು.
ತಮಭಿದ್ರುತ್ಯ ಶೈನೇಯೋ ಮುಹೂರ್ತಮಿವ ಭಾರತ |
ನ ಜಘಾನ ಮಹಾಬಾಹುರ್ಭೀಮಸೇನವಚಃ ಸ್ಮರನ್
ತಂ ಪ್ರಾಪ್ತಮಪಿ ನೇಯೇಷ ಹಂತುಂ ದುಃಶಾಸನಂ ನೃಪ ॥ 33॥
ಎಲೈ ಭಾರತನೇ, ಮಹಾಬಾಹುವಾದ ಸಾತ್ಯಕಿಯು ಒಂದು ಮುಹೂರ್ತದ ಕಾಲ ಅವನನ್ನು ಹಿಂಬಾಲಿಸಿದರೂ ಭೀಮಸೇನನ ಮಾತನ್ನು ಸ್ಮರಿಸಿ ಅವನನ್ನು ಕೊಲ್ಲಲಿಲ್ಲ. ಎಲೈ ರಾಜನೇ, ದುಶ್ಶಾಸನನು ತನ್ನ ಕೈಗೆ ಸಿಲುಕಿದರೂ ಅವನನ್ನು ಕೊಲ್ಲಲು ಬಯಸಲಿಲ್ಲ.

ಭೀಮಸೇನೇನ ಹಿ ವಧಃ ಸುತಾನಾಂ ತವ ಭಾರತ |
ಪ್ರತಿಜ್ಞಾತಃ ಸಭಾಮಧ್ಯೇ ಸರ್ವೇಷಾಮೇವ ಸಂಯುಗೇ ॥ 34 ॥
ಎಲೈ ಭಾರತನೇ, ಸಭಾಮಧ್ಯದಲ್ಲಿ ನಿನ್ನ ಎಲ್ಲ ಪುತ್ರರನ್ನೂ ಯುದ್ಧದಲ್ಲಿ ತಾನೇ ಕೊಲ್ಲುವೆನೆಂದು ಭೀಮಸೇನನು ಪ್ರತಿಜ್ಞೆ ಮಾಡಿದ್ದಾನಷ್ಟೆ?
ತಥಾ ದುಃಶಾಸನಂ ಜಿತ್ವಾ ಸಾತ್ಯಕಿಃ ಸಂಯುಗೇ ಪ್ರಭೋ |
ಜಗಾಮ ತ್ವರಿತೋ ರಾಜನ್ ಯೇನ ಯಾತೋ ಧನಂಜಯಃ ॥ 35 ॥
ಎಲೈ ಪ್ರಭುವೇ, ಸಾತ್ಯಕಿಯು ಯುದ್ಧದಲ್ಲಿ ಆ ರೀತಿಯಲ್ಲಿ ದುಶ್ಶಾಸನನನ್ನು ಗೆದ್ದು ಶೀಘ್ರವಾಗಿ ಧನಂಜಯನು ಹೋದ ಮಾರ್ಗದಲ್ಲಿಯೇ ಹೋದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ನವಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ತ್ರಯಸ್ತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಹತ್ತನೆಯ ಅಧ್ಯಾಯ

ಸಂಕುಲ ಯುದ್ಧವರ್ಣನೆ. ಸಾತ್ಯಕಿಯಿಂದ ಅರ್ಜುನನ ದರ್ಶನ.
ಧೃತರಾಷ್ಟ್ರಃ
ಕಿಂ ತಸ್ಯಾಂ ಮಮ ಸೇನಾಯಾಂ ನಾಸನ್ ಕೇಚಿನ್ಮಹಾರಥಾಃ |
ಯೇ ತಥಾ ಸಾತ್ಯಕಿಂ ಯಾಂತಂ ನೈವಾಘ್ನನ್ ನಾಪ್ಯವಾರಯನ್ ॥ 1 ॥
ಧೃತರಾಷ್ಟ್ರ, ಎಲೈ ಸಂಜಯನೇ, ಆ ರೀತಿಯಲ್ಲಿ ಹೋಗುತ್ತಿದ್ದ ಸಾತ್ಯಕಿಯನ್ನು ಕೊಲ್ಲಲು ಅಥವಾ ತಡೆಯಲು ನನ್ನ ಸೈನ್ಯದಲ್ಲಿ ಯಾವ ಮಹಾರಥರೂ ಇರಲಿಲ್ಲವೇ?
ಏಕೋ ಹಿ ಸಮರೇ ಕರ್ಮ ಕೃತವಾನ್ ಸತ್ಯವಿಕ್ರಮಃ |
ಶಕ್ರತುಲ್ಯಬಲೋ ಯುದ್ಧೇ ಮಹೇಂದ್ರೋ ದಾನವೇಷ್ವಿವ ॥ 2 ॥
ಇಂದ್ರನಿಗೆ ಸಮವಾದ ಬಲವುಳ್ಳ, ಸತ್ಯಪರಾಕ್ರಮನಾದ ಅವನು ಇಂದ್ರನು ದಾನವರ ಜೊತೆಯಲ್ಲಿ ಮಾಡಿದಂತೆ ಒಬ್ಬನೇ ಯುದ್ಧದಲ್ಲಿ ಅದ್ಭುತವಾದ ಕರ್ಮವನ್ನು ಮಾಡಿದನು.
ಅಥ ವಾ ಶೂನ್ಯಮಾಸೀತ್ ತದ್ ಯೇನ ಯಾತಃ ಸ ಸಾತ್ಯಕಿಃ |
ಏಕೋ ವೈ ಬಹುಲಾಃ ಸೇನಾಃ ಪ್ರಮೃದ್ನನ್ ಪುರುಷರ್ಷಭಃ ॥ 3 ॥
ಅಥವಾ ಸಾತ್ಯಕಿಯು ಹೋದ ಮಾರ್ಗವು ಶೂನ್ಯವಾಗಿದ್ದಿತೆ? ಏಕೆಂದರೆ ಪುರುಷಶ್ರೇಷ್ಠನಾದ ಅವನೊಬ್ಬನೇ ಬಹಳ ಸೈನ್ಯಗಳನ್ನು ವಿನಾಶಮಾಡಿದನಷ್ಟೆ?
ಯತ್ ಕೃತಂ ವೃಷ್ಣಿವೀರೇಣ ಕರ್ಮ ಶಂಸಸಿ ಮೇ ರಣೇ |
ನೈತದುತ್ಸಹತೇ ಕರ್ಮ ಕರ್ತುಂ ಶಕ್ರೋಽಪಿ ಸಂಜಯ ॥ 4 ॥
ಎಲೈ ಸಂಜಯನೇ, ನೀನು ವೃಷ್ಣಿವೀರನಾದ ಸಾತ್ಯಕಿಯು ಯುದ್ಧದಲ್ಲಿ ಎಂತಹ ಕರ್ಮವನ್ನು ಮಾಡಿದನೆಂದು ಹೇಳುತ್ತಿದ್ದಿಯೋ ಅದನ್ನು ಇಂದ್ರನೂ ಮಾಡಲಾರ.
ಅಶ್ರದ್ಧೇಯಮಚಿಂತ್ಯಂ ಚ ಕರ್ಮ ತಸ್ಯ ಮಹಾತ್ಮನಃ |
ವೃಷ್ಣ್ಯಂಧಕಪ್ರವೀರಸ್ಯ ಶ್ರುತ್ವಾ ಮೇ ವ್ಯಥಿತಂ ಮನಃ ॥ 5 ॥
ವೃಷ್ಣ್ಯಂಧಕವೀರನಾದ, ಮಹಾತ್ಮನಾದ ಅವನ ನಂಬಲು ಅಸಾಧ್ಯವಾದ, ಅಚಿಂತ್ಯವಾದ ಕರ್ಮವನ್ನು ಕೇಳಿ ನನ್ನ ಮನಸ್ಸಿಗೆ ವ್ಯಥೆಯಾಗಿದೆ.
ಕಥಂ ಚ ಯುದ್ಧ್ಯಮಾನಾನಾಮಪಕ್ರಾಂತೋ ಮಹಾತ್ಮನಾಮ್ |
ಏಕೋ ಬಹೂನಾಂ ಶೈನೇಯಸ್ತನ್ಮಮಾಚಕ್ಷ್ವ ಸಂಜಯ |
ನ ಸಂತಿ ತಸ್ಮಾತ್ ಪುತ್ರಾ ಮೇ ಯಥಾ ಸಂಜಯ ಭಾಷಸೇ ॥ 6 ॥
ಎಲೈ ಸಂಜಯನೇ, ಅನೇಕ ಮಹಾತ್ಮರು ಯುದ್ಧ ಮಾಡುತ್ತಿದ್ದರೂ ಸಾತ್ಯಕಿಯೊಬ್ಬನೇ ಅಲ್ಲಿಂದ ಹೇಗೆ ಹೋದನೆಂದು ನನಗೆ ಹೇಳು. ಎಲೈ ಸಂಜಯನೇ, ನೀನು ಮಾತನಾಡುತ್ತಿರುವುದನ್ನು ಕೇಳಿದರೆ ನನ್ನ ಪುತ್ರರು ಇಲ್ಲವೆಂದೇ ಭಾವಿಸುತ್ತೇನೆ.
ಸಂಜಯಃ
ರಾಜನ್ ಸೇನಾಸಮುದ್ಯೋಗೋ ರಥನಾಗಾಶ್ವಪತ್ತಿಮಾನ್ |
ಅತುಲ್ಯಸ್ತವ ಸೈನ್ಯಾನಾಂ ಯುಗಾಂತಸದೃಶೋಽಭವತ್ ॥ 7 ॥
ಸಂಜಯ ಎಲೈ ರಾಜನೇ, ರಥ-ಗಜಾಶ್ವ-ಪದಾತಿಗಳಿಂದ ಕೂಡಿದ ನಿನ್ನ ಸೈನ್ಯದ ಪ್ರಯತ್ನವು ಅಸದೃಶವಾಗಿ ಯುಗಾಂತ ಕಾಲದಂತೆ ಇದ್ದಿತು.
ಆಹಿತೇಷು ಸಮೂಹೇಷು ತವ ಸೈನ್ಯಸ್ಯ ಮಾನದ |
ನಾಸ್ತಿ ಲೋಕೇ ಸಮಃ ಕಶ್ಚಿತ್ ಸಮೂಹ ಇತಿ ಮೇ ಮತಿಃ ॥ 8 ॥
ಎಲೈ ಮಾನದನೇ, ನಿನ್ನ ಸೈನ್ಯವನ್ನು ಪ್ರತಿದಿವಸವೂ ಹೇಗೆ ವ್ಯೂಹಗೊಳಿಸಿದರೋ ಅಂತಹ ವ್ಯೂಹಕ್ಕೆ ಸಮನಾದ ವ್ಯೂಹವು ಲೋಕದಲ್ಲಿ ಯಾವುದೂ ಇಲ್ಲ ಎಂದು ನನ್ನ ಅಭಿಪ್ರಾಯ.

ತತ್ರ ದೇವಾಃ ಸ್ಮ ಭಾಷಂತೇ ಚಾರಣಾಶ್ಚ ಸಮಾಗತಾಃ |
ಏತದಂತಾಃ ಸಮೂಹಾ ವೈ ಭವಿಷ್ಯಂತಿ ಮಹೀತಳೇ ॥ 9 ॥
ಅಲ್ಲಿಗೆ ಬಂದ ದೇವತೆಗಳು ಮತ್ತು ಚಾರಣರು ಭೂಮಿಯಲ್ಲಿ ಇದೇ ವ್ಯೂಹಗಳ ಕೊನೆಯ ತುದಿ ಎಂದು ಮಾತನಾಡಿಕೊಂಡರು.
ನ ಚೈವ ತಾದೃಶಃ ಕಶ್ಚಿದ್ ವ್ಯೂಹ ಆಸೀದ್ ವಿಶಾಂಪತೇ |
ಯಾದೃಗ್ ಜಯದ್ರಥವಧೇ ದ್ರೋಣೇನ ವಿಹಿತೋಽಭವತ್ ॥ 10 ॥
ಎಲ್ಲೈ ರಾಜನೇ, ಜಯದ್ರಥನ ವಧೆಯ ದಿವಸ ದ್ರೋಣರು ಎಂತಹ ವ್ಯೂಹವನ್ನು ರಚಿಸಿದರೋ ಅಂತಹ ಇನ್ನೊಂದು ವ್ಯೂಹವು ಎಂದೂ ಇರಲಿಲ್ಲ.
ಚಂಡವಾತಾಭಿಪನ್ನಾನಾಂ ಸಮುದ್ರಾಣಾಮಿವ ಸ್ವನಃ |
ರಣೇಽಭವದ್ ಬಲೌಘಾನಾಮನ್ಯೋನ್ಯಮಭಿಧಾವತಾಮ್ ॥ 11 ॥
ರಣರಂಗದಲ್ಲಿ ಪರಸ್ಪರವಾಗಿ ಧಾವಿಸುವ ಸೈನ್ಯಗಳಿಂದ ಉಂಟಾದ ನಾದವು ಬಿರುಗಾಳಿಗೆ ಸಿಲುಕಿದ ಸಮುದ್ರಗಳ ಘೋಷದಂತೆ ಇದ್ದಿತು.
ಪಾರ್ಥಿವಾನಾಂ ಸಮೇತಾನಾಂ ಬಹೂನ್ಯಾಸನ್ ನರೋತ್ತಮ |
ತ್ವದ್ಬಲೇ ಪಾಂಡವಾನಾಂ ಚ ಸಹಸ್ರಾಣಿ ಶತಾನಿ ಚ ॥ 12 ॥
ಎಲ್ಲೈ ನರಶ್ರೇಷ್ಠನೇ, ನಿನ್ನ ಸೈನ್ಯದಲ್ಲಿಯೂ ಮತ್ತು ಪಾಂಡವರ ಸೈನ್ಯದಲ್ಲಿಯೂ ಒಟ್ಟುಗೂಡಿದ ರಾಜರು ಅನೇಕ ಶತಸಹಸ್ರಸಂಖ್ಯೆಯಲ್ಲಿದ್ದರು.
ಸಂರಬ್ಧಾನಾಂ ಪ್ರವೀರಾಣಾಂ ಸಮರೇ ದೃಢಕರ್ಮಣಾಮ್ |
ತತ್ರಾಸೀತ್ ಸುಮಹಾನ್ ಶಬ್ದಸ್ತುಮುಲೋ ಲೋಮಹರ್ಷಣಃ ॥13॥
ಯುದ್ಧದಲ್ಲಿ ದೃಢವಾದ ಕಾರ್ಯವನ್ನು ಮಾಡುವ ಕೋಪಗೊಂಡ ಆ ಪ್ರವೀರರಿಂದ ಉಂಟಾದ ದೊಡ್ಡ ಶಬ್ದವು ತೀವ್ರವೂ ರೋಮಾಂಚಕಾರಿಯೂ ಆಗಿದ್ದಿತು.
ಅಥಾಕ್ರಂದದ್ ಭೀಮಸೇನೋ ಧೃಷ್ಟದ್ಯುಮ್ನಶ್ಚ ಮಾರಿಷ |
ನಕುಲಃ ಸಹದೇವಶ್ಚ ಧರ್ಮರಾಜಶ್ಚ ಪಾಂಡವಃ ॥ 15 ॥
ಆಗಚ್ಛತ ಪ್ರಹರತ ಬಲವತ್ ಪರಿಧಾವತ |
ಪ್ರವಿಷ್ಟಾವರಿಸೇನಾಂ ಹಿ ವೀರೌ ಮಾಧವಪಾಂಡವೌ ॥ 16 ॥
ಯಥಾ ಸುಖೇನ ಗಚ್ಛೇತಾಂ ಜಯದ್ರಥವಧಂ ಪ್ರತಿ |
ತಥಾ ಪ್ರಕುರುತ ಕ್ಷಿಪ್ರಮಿತಿ ಸೈನ್ಯಾನ್ಯಚೋದಯತ್ |
ತಯೋರಭಾವೇ ಕುರವಃ ಕೃತಾರ್ಥಾಃ ಸ್ಯುರ್ವಯಂ ಜಿತಾಃ ॥ 17 ॥
ತೇ ಯೂಯಂ ಸಹಿತಾ ಭೂತ್ವಾ ತೂರ್ಣಮೇವ ಬಲಾರ್ಣವಮ್ |
ಕ್ಷೋಭಯಧ್ವಂ ಮಹಾವೇಗಾಃ ಪವನಾಃ ಸಾಗರಂ ಯಥಾ ॥ 18 ॥
ಆಗ ಎಲ್ಲೈ ಪೂಜ್ಯನೇ, ಭೀಮಸೇನನೂ, ಧೃಷ್ಟದ್ಯುಮ್ನನೂ, ನಕುಲ-ಸಹದೇವರೂ ಮತ್ತು ಧರ್ಮರಾಜನೂ ತಮ್ಮ ಸೈನ್ಯವನ್ನು ಕುರಿತು ಉಚ್ಛಸ್ವರದಲ್ಲಿ- `ಬನ್ನಿ, ಬಲವಾಗಿ ಪ್ರಹಾರವನ್ನು ಮಾಡಿ, ಎಲ್ಲ ಕಡೆಯಲ್ಲಿಯೂ ಓಡಿ, ವೀರರಾದ ಕೃಷ್ಣಾರ್ಜುನರು ಶತ್ರುಸೈನ್ಯವನ್ನು ಪ್ರವೇಶಿಸಿದ್ದಾರೆ. ಜಯದ್ರಥನ ವಧೆಗಾಗಿ ಅವರಿಬ್ಬರೂ ಸುಖವಾಗಿ ಹೋಗುವಂತೆ ಕ್ಷಿಪ್ರವಾಗಿ ವ್ಯವಸ್ಥೆ ಮಾಡಿ. ಅವರಿಲ್ಲದಿದ್ದರೆ ಕುರುಗಳು ಕೃತಾರ್ಥರಾಗುತ್ತಾರೆ ಮತ್ತು ನಾವು ಪರಾಜಿತರಾಗುತ್ತೇವೆ. ಆದ್ದರಿಂದ ನೀವೆಲ್ಲರೂ ಒಟ್ಟಾಗಿ ಮಹಾವೇಗವನ್ನು ಹೊಂದಿದ ವಾಯುವು ಸಾಗರವನ್ನು ಕ್ಷೋಭೆಗೊಳಿಸಿದಂತೆ ಕೌರವರ ಬಲಸಾಗರವನ್ನು ಕ್ಷೋಭೆಗೊಳಿಸಿ' ಎಂದು ಪ್ರಚೋದಿಸಿದರು.
ಭೀಮಸೇನೇನ ತೇ ರಾಜನ್ ಪಾಂಚಾಲ್ಯೇನ ಚ ಚೋದಿತಾಃ |
ಆಜಘ್ನುಃ ಕೌರವಾನ್ ಸಂಖ್ಯೇ ತ್ಯಕತ್ವಾಽಸೂನಾತ್ಮನಃ ಪ್ರಿಯಾನ್ ॥ 20 ॥
ಎಲ್ಲೈ ರಾಜನೇ, ಭೀಮಸೇನನಿಂದಲೂ ಮತ್ತು ಧೃಷ್ಟದ್ಯುಮ್ನನಿಂದಲೂ ಪ್ರಚೋದಿಸಲ್ಪಟ್ಟ ಅವರು ತಮಗೆ ಪ್ರಿಯವಾದ ಪ್ರಾಣಗಳನ್ನು ಲೆಕ್ಕಿಸದೆ ರಣರಂಗದಲ್ಲಿ ಕೌರವರನ್ನು ಹೊಡೆದರು.
ಇಚ್ಛಂತೋ ನಿಧನಂ ಯುದ್ಧೇ ಶಸ್ತ್ರೈರುತ್ತಮತೇಜಸಃ |
ಸ್ವರ್ಗಾರ್ಥಂ ಮಿತ್ರಕಾರ್ಯಾರ್ಥಂ ನಾಭ್ಯರಕ್ಷಂತ ಜೀವಿತಮ್ ॥ 21 ॥
ಉತ್ತಮ ತೇಜಸ್ವಿಗಳಾದ ಅವರು ಯುದ್ಧದಲ್ಲಿ ಶಸ್ತ್ರಗಳಿಂದ ವಧೆಯನ್ನು ಬಯಸುತ್ತಾ, ಸ್ವರ್ಗಪ್ರಾಪ್ತಿಗಾಗಿ ಮತ್ತು ಮಿತ್ರಕಾರ್ಯಕ್ಕಾಗಿ ತಮ್ಮ ಜೀವಿತವನ್ನು ರಕ್ಷಿಸಿಕೊಳ್ಳಲಿಲ್ಲ.
ತಥೈವ ತಾವಕಾ ರಾಜನ್ ಪ್ರಾರ್ಥಯಂತೋ ಮಹದ್ಯಶಃ |
ಆರ್ಯಾಂ ಯುದ್ಧೇ ಮತಿಂ ಕೃತ್ವಾ ಯುದ್ಧಾಯೈವೋಪತಸ್ಥಿರೇ ॥ 22 ॥
ಎಲ್ಲೈ ರಾಜನೇ, ಹಾಗೆಯೇ ನಿನ್ನವರೂ ಸಹ ದೊಡ್ಡ ಕೀರ್ತಿಯನ್ನು ಬಯಸುತ್ತಾ ಯುದ್ಧದಲ್ಲಿ ಶ್ರೇಷ್ಠವಾದ ಬುದ್ಧಿಯನ್ನು ಹೊಂದಿ ಯುದ್ಧಕ್ಕಾಗಿಯೇ ನಿಂತರು.
ತಸ್ಮಿಂಸ್ತು ತುಮುಲೇ ಯುದ್ಧೇ ವರ್ತಮಾನೇ ಮಹಾಭಯೇ |
ಹತ್ವಾ ಸರ್ವಾಣಿ ಸೈನ್ಯಾನಿ ಪ್ರಾಯಾತ್ ಸಾತ್ಯಕಿರರ್ಜುನಮ್ ॥ 23 ॥
ಮಹಾಭಯಂಕರವಾದ ತೀವ್ರವಾದ ಆ ಯುದ್ಧವು ನಡೆಯುತ್ತಿರಲು ಸಾತ್ಯಕಿಯು ಎಲ್ಲ ಸೈನ್ಯಗಳನ್ನೂ ಕೊಂದು ಅರ್ಜುನನ ಬಳಿಗೆ ಹೋದನು.

ಕವಚಾನಾಂ ಪ್ರಭಾಸ್ತತ್ರ ಸೂರ್ಯರಶ್ಮಿವಿಚಿತ್ರಿತಾಃ |
ದೃಷ್ಟೀಃ ಸಂಖ್ಯೇ ಸೈನಿಕಾನಾಂ ಪ್ರತಿಜಘ್ನುಃ ಸಮಂತತಃ |
ಧ್ವಜಶಸ್ತ್ರಪ್ರತಿಹತಾ ಲೋಕಾನ್ ಸಮವದೀಪಯನ್ ॥ 24 ॥
ಸೂರ್ಯರಶ್ಮಿಯು ಬಿದ್ದ ಕವಚದ ಪ್ರಭೆಗಳು ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಸೈನಿಕರ ದೃಷ್ಟಿಗಳನ್ನು ಕೋರೈಸಿದವು. ಧ್ವಜಗಳ ಮತ್ತು ಶಸ್ತ್ರಗಳ ಮೇಲೆ ಬಿದ್ದ ಸೂರ್ಯ ರಶ್ಮಿಗಳು ಪ್ರತಿಫಲಿತವಾಗಿ ಎಲ್ಲ ಲೋಕವನ್ನೂ ಬೆಳಗಿದವು.
ತಥಾ ಪ್ರಯತಮಾನೇಷು ಪಾಂಡವೇಯೇಷು ನಿರ್ಭಯಃ |
ದುರ್ಯೋಧನೋ ಮಹಾರಾಜ ವ್ಯಗಾಹತ ಮಹದ್ಬಲಮ್ ॥ 25 ॥
ಪಾಂಡವರ ಸೈನ್ಯಗಳು ಆ ರೀತಿ ಪ್ರಯತ್ನಪಡುತ್ತಿರಲು ಎಲೈ ಮಹಾರಾಜನೇ, ದುರ್ಯೋಧನನು ನಿರ್ಭಯನಾಗಿ ಆ ದೊಡ್ಡ ಸೈನ್ಯವನ್ನು ಪ್ರವೇಶಿಸಿದನು.
ಸ ಸನ್ನಿಪಾತಸ್ತುಮುಲಸ್ತೇಷಾಂ ತಸ್ಯ ಚ ಭಾರತ |
ಅಭವತ್ ಸರ್ವಸೈನ್ಯಾನಾಮಭಾವಕರಣೋ ಮಹಾನ್ ॥ 26 ॥
ಎಲೈ ಭಾರತನೇ, ನಿನ್ನ ಸೈನ್ಯಕ್ಕೂ ಮತ್ತು ಪಾಂಡವರ ಸೈನ್ಯಕ್ಕೂ ಸರ್ವಸೈನ್ಯ ವಿನಾಶಕವಾದ ದೊಡ್ಡ ಸಂಘರ್ಷವು ಉಂಟಾಯಿತು.
ಧೃತರಾಷ್ಟ್ರಃ
ತಥಾ ಗತೇಷು ಸೈನ್ಯೇಷು ತಥಾ ಕೃಚ್ಛ್ರಗತಃ ಸ್ವಯಮ್ |
ಕಚ್ಚಿದ್ದುರ್ಯೋಧನಃ ಸೂತ ನಾಕಾರ್ಷೀತ್ಪೃಷ್ಠತೋ ರಣಮ್ ॥ 27 ॥
ಧೃತರಾಷ್ಟ್ರ, ಎಲೈ ಸೂತನೇ, ಸೈನ್ಯಗಳು ಹಾಗೆ ಹೋಗುತ್ತಿರಲು ಸ್ವತಃ ಕಷ್ಟಕ್ಕೆ ಸಿಲುಕಿದ ದುರ್ಯೋಧನನು ರಣರಂಗದಿಂದ ವಿಮುಖನಾಗಲಿಲ್ಲವೇ?
ಏಕಸ್ಯ ಚ ಬಹೂನಾಂ ಚ ಸನ್ನಿಪಾತೋ ಮಹಾಹವೇ |
ವಿಶೇಷತೋ ನೃಪತಿನಾ ವಿಷಮಃ ಪ್ರತಿಭಾತಿ ಮೇ ॥ 28 ॥
ಒಬ್ಬನು, ಅದರಲ್ಲಿಯೂ ವಿಶೇಷವಾಗಿ ರಾಜನಾದವನು ಅನೇಕರ ಜೊತೆಯಲ್ಲಿ ರಣರಂಗದಲ್ಲಿ ಯುದ್ಧವನ್ನು ಮಾಡುವುದು ವಿಷಮವೆಂದು ನನಗೆ ತೋರುತ್ತದೆ.
ಸೋಽತ್ಯಂತಸುಖಸಂವೃದ್ಧೋ ಲಕ್ಷ್ಮ್ಯಾ ಲೋಕಸ್ಯ ಚೇಶ್ವರಃ |
ಏಕೋ ಬಹೂನ್ ಸಮಾಸಾದ್ಯ ಕಚ್ಚಿನ್ನಾಸೀತ್ ಪರಾಙ್ಮುಖಃ ॥ 29 ॥
ಅತ್ಯಂತ ಸುಖದಿಂದ ಬೆಳೆದವನೂ, ತನ್ನ ಕಾಂತಿಯಿಂದ ಲೋಕಕ್ಕೆ ಪ್ರಭುವಾದವನೂ ಆದ ಅವನೊಬ್ಬನೇ ಅನೇಕರನ್ನು ಎದುರಿಸಿ ಯುದ್ಧಕ್ಕೆ ಪರಾಙ್ಮುಖನಾಗಲಿಲ್ಲವೇ?
ಸಂಜಯಃ
ರಾಜನ್ ಸಂಗ್ರಾಮಮಾಶ್ಚರ್ಯಂ ತವ ಪುತ್ರಸ್ಯ ಭಾರತ |
ಏಕಸ್ಯ ಚ ಬಹೂನಾಂ ಚ ಶೃಣುಷ್ವ ಗದತೋಽದ್ಭುತಮ್ ॥ 30 ॥
ಸಂಜಯ ರಾಜನೇ, ಭಾರತನೇ, ಒಬ್ಬನಾದ ನಿನ್ನ ಪುತ್ರನಿಗೂ ಮತ್ತು ಅನೇಕರಿಗೂ ನಡೆದ ಅದ್ಭುತವಾದ, ಆಶ್ಚರ್ಯಕರವಾದ, ನಾನು ಹೇಳುವ ಯುದ್ಧದ ವಿವರವನ್ನು ಕೇಳು.
ದುರ್ಯೋಧನೇನ ಸಹಸಾ ಪಾಂಡವೀ ಪೃತನಾ ರಣೇ |
ನಳಿನೀ ದ್ವಿರದೇನೇವ ಸಮಂತಾದ್ ವಿಪ್ರಲೋಡಿತಾ ॥ 31 ॥
ದುರ್ಯೋಧನನಿಂದ ರಣರಂಗದಲ್ಲಿ ಪಾಂಡವಸೇನೆಯು ಆನೆಯಿಂದ ದೊಡ್ಡ ಸರೋವರವು ಕಲಕಲ್ಪಡುವಂತೆ ತಕ್ಷಣ ಕಲಕಾಡಲ್ಪಟ್ಟಿತು.
ತಥಾ ಸೇನಾಂ ಕೃತಾಂ ದೃಷ್ಟ್ವಾ ತವ ಪುತ್ರೇಣ ಕೌರವ |
ಭೀಮಸೇನಪುರೋಗಾಸ್ತಂ ಪಾಂಚಾಲಾಃ ಸಮುಪಾದ್ರವನ್ ॥ 32 ॥
ಎಲೈ ಕೌರವನೇ, ತಮ್ಮ ಸೈನ್ಯವು ನಿನ್ನ ಪುತ್ರನಿಂದ ಆ ಪರಿಸ್ಥಿತಿಗೆ ಬಂದುದನ್ನು ನೋಡಿ, ಭೀಮಸೇನನನ್ನು ಮುಂದೆ ಮಾಡಿಕೊಂಡ ಪಾಂಚಾಲರು ಅವನ ಕಡೆಗೆ ಧಾವಿಸಿದರು.
ಸ ಭೀಮಸೇನಂ ದಶಭಿರ್ಮಾದ್ರೀಪುತ್ರೌ ತ್ರಿಭಿಸ್ತ್ರಿಭಿಃ |
ವಿರಾಟದ್ರುಪದೌ ಷಡ್ಭಿಃ ಶತೇನ ಚ ಶಿಖಂಡಿನಮ್ ॥ 33 ॥
ಧೃಷ್ಟದ್ಯುಮ್ನಂ ಚ ವಿಂಶತ್ಯಾ ಧರ್ಮಪುತ್ರಂ ಚ ಸಪ್ತಭಿಃ |
ಕೇಕಯಾನ್ ದಶಭಿರ್ವಿದ್ಧ್ವಾ ದ್ರೌಪದೇಯಾಂಸ್ತ್ರಿಭಿಸ್ತ್ರಿಭಿಃ ॥ 34 ॥
ಶತಶಶ್ಚಾಪರಾನ್ ಯೋಧಾನ್ ಸದ್ವಿಪಾಂಶ್ಚ ರಥಾನ್ ರಣೇ |
ಶರೈರವಚಕರ್ತೋಗ್ರೈಃ ಕ್ರುದ್ಧೋಽಂತಕ ಇವ ಪ್ರಜಾಃ ॥ 35 ॥
ದುರ್ಯೋಧನನು ಭೀಮಸೇನನನ್ನು ಹತ್ತು ಬಾಣಗಳಿಂದಲೂ, ನಕುಲ- ಸಹದೇವರನ್ನು ಮೂರು-ಮೂರು ಬಾಣಗಳಿಂದಲೂ, ವಿರಾಟ-ದ್ರುಪದರನ್ನು ಆರು ಬಾಣಗಳಿಂದಲೂ, ಶಿಖಂಡಿಯನ್ನು ನೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಇಪ್ಪತ್ತು ಬಾಣಗಳಿಂದಲೂ, ಯುಧಿಷ್ಠಿರನನ್ನು ಏಳು ಬಾಣಗಳಿಂದಲೂ, ಕೇಕಯರನ್ನು ಹತ್ತು ಬಾಣಗಳಿಂದಲೂ, ದ್ರೌಪದಿಯ ಪುತ್ರರನ್ನು ಮೂರು-ಮೂರು ಬಾಣಗಳಿಂದಲೂ, ಗಜ-ರಥಸಹಿತರಾದ ಉಳಿದ ಯೋಧರನ್ನು ನೂರಾರು ಉಗ್ರವಾದ ಬಾಣಗಳಿಂದಲೂ ಕೋಪಗೊಂಡ ಯಮನು ಪ್ರಜೆಗಳನ್ನು ಸಂಹರಿಸುವಂತೆ ಕತ್ತರಿಸಿದನು.
ನ ಸಂದಧನ್ ವಿಮುಂಚನ್ ವಾ ಮಂಡಲೀಕೃತಕಾರ್ಮುಕಃ |

ಅದೃಶ್ಯತ ರಿಪೂನ್ ನಿಘ್ನನ್ ಶಿಕ್ಷಯಾಽಸ್ತ್ರಬಲೇನ ಚ ॥ 36 ॥
ಅವನು ಬತ್ತಳಿಕೆಯಿಂದ ಬಾಣವನ್ನು ತೆಗೆದುಕೊಂಡು, ಧನುಸ್ಸಿನಲ್ಲಿ ಹೂಡಿದರೂ, ಪ್ರಯೋಗಿಸಿ ಶತ್ರುಗಳನ್ನು ಕೊಂದರೂ, ಅವನ ಶಿಕ್ಷಾ ಮತ್ತು ಅಸ್ತ್ರಬಲದಿಂದ ಅವನ ಧನುಸ್ಸು ಮಂಡಲಾಕಾರವಾಗಿಯೇ ಕಂಡುಬರುತ್ತಿದ್ದಿತು.
ತಸ್ಯ ತಾನ್ ನಿಘ್ನತಃ ಶತ್ರೂನ್ ಹೇಮಪೃಷ್ಠಂ ಮಹದ್ಧನುಃ |
ಭಲ್ಲಾಭ್ಯಾಂ ಪಾಂಡವೋ ಜ್ಯೇಷ್ಠಸ್ತ್ರಿಧಾ ಚಿಚ್ಛೇದ ಮಾರಿಷ ॥ 37 ॥
ಎಲೈ ಪೂಜ್ಯನೇ, ಹಾಗೆ ಶತ್ರುಗಳನ್ನು ತನ್ನ ಬಾಣಗಳಿಂದ ಹೊಡೆಯುತ್ತಿದ್ದ ಅವನ ಚಿನ್ನದ ಹಿಂಭಾಗವುಳ್ಳ ದೊಡ್ಡ ಧನುಸ್ಸನ್ನು ಪಾಂಡವ ಜ್ಯೇಷ್ಠನಾದ ಯುಧಿಷ್ಠಿರನು ಎರಡು ಭಲ್ಲಗಳಿಂದ ಮೂರು ಭಾಗಗಳಾಗಿ ಕತ್ತರಿಸಿದನು.
ವಿವ್ಯಾಧ ಚೈನಂ ಬಹುಭಿಃ ಸಮ್ಯಗಸ್ತೈಃ ಶಿತೈಃ ಶರೈಃ |
ಮರ್ಮಾಣ್ಯಾಶು ಸಮಾಸಾದ್ಯ ತೇ ಭಗ್ನಾಃ ಕ್ಷಿತಿಮಾವಿಶನ್ ॥ 38 ॥
ಮತ್ತು ಚೆನ್ನಾಗಿ ಪ್ರಯೋಗಿಸಿದ ನಿಶಿತವಾದ ಅನೇಕ ಬಾಣಗಳಿಂದ ಅವನನ್ನು ಹೊಡೆದನು. ಆ ಬಾಣಗಳು ಶೀಘ್ರವಾಗಿ ಅವನ ಮರ್ಮಸ್ಥಾನಗಳನ್ನು ತಲುಪಿ, ಭೇದಿಸಿ (ಭಗ್ನಗೊಂಡು) ಭೂಮಿಯ ಒಳಗೆ ಇಳಿದವು.
ತತಃ ಪ್ರಮುದಿತಾಃ ಪಾರ್ಥಾಃ ಪರಿವವ್ರುರ್ಯುಧಿಷ್ಠಿರಮ್ |
ಯಥಾ ವೃತ್ರವಧೇ ದೇವಾ ಮುದಾ ಶಕ್ರಂ ಮಹರ್ಷಿಭಿಃ ॥ 39 ॥
ಆಗ, ವೃತ್ರವಧೆಯಾದಾಗ ಮಹರ್ಷಿಗಳ ಜೊತೆಯಲ್ಲಿ ದೇವತೆಗಳು ಇಂದ್ರನನ್ನು ಸುತ್ತುವರಿದಂತೆ ಸಂತೋಷಗೊಂಡ ಪಾಂಡವರು ಯುಧಿಷ್ಠಿರನನ್ನು ಸುತ್ತುವರಿದರು.
ಅಥ ದುರ್ಯೋಧನೋ ರಾಜಾ ದೃಢಮಾದಾಯ ಕಾರ್ಮುಕಮ್ |
ತಿಷ್ಠ ತಿಷ್ಠೇತಿ ರಾಜಾನಂ ಬ್ರುವನ್ ಪಾಂಡವಮಭ್ಯಯಾತ್ ॥ 40 ॥
ಆಗ ರಾಜನಾದ ದುರ್ಯೋಧನನು ದೃಢವಾದ ಧನುಸ್ಸನ್ನು ತೆಗೆದುಕೊಂಡು `ನಿಲ್ಲು, ನಿಲ್ಲು' ಎಂದು ಯುಧಿಷ್ಠಿರನಿಗೆ ಹೇಳುತ್ತಾ ಅವನ ಕಡೆಗೆ ಧಾವಿಸಿದನು.
ತಂ ತಥಾವಾದಿನಂ ರಾಜಂಸ್ತವ ಪುತ್ರಂ ಮಹಾರಥಮ್ |
ಪ್ರತ್ಯುದ್ಯಯುಃ ಪ್ರಮುದಿತಾಃ ಪಾಂಚಾಲಾ ಜಯಗೃದ್ಧಿನಃ ॥ 41 ॥
ಎಲೈ ರಾಜನೇ, ಹಾಗೆ ಹೇಳುತ್ತಾ ಮುಂದುವರಿಯುತ್ತಿದ್ದ ಮಹಾರಥನಾದ ನಿನ್ನ ಪುತ್ರನನ್ನು ಸಂತೋಷಗೊಂಡ ಜಯಾಕಾಂಕ್ಷಿಗಳಾದ ಪಾಂಚಾಲರು ಎದುರಿಸಿದರು.
ತಾನ್ ದ್ರೋಣಃ ಪ್ರತಿಜಗ್ರಾಹ ಪರೀಪ್ಸನ್ ಯುಧಿ ಪಾಂಡವಮ್ |
ಚಂಡವಾತೋದ್ಧತಾನ್ ಮೇಘಾನ್ ಸಜಲಾನಚಲೋ ಯಥಾ ॥
ಚಂಡಮಾರುತದಿಂದ ಎದ್ದ ನೀರುತುಂಬಿದ ಮೋಡಗಳನ್ನು ಪರ್ವತವು ತಡೆದು ನಿಲ್ಲಿಸುವಂತೆ ಧರ್ಮರಾಜನನ್ನು ಯುದ್ಧದಲ್ಲಿ ಹಿಡಿಯಲು ಬಯಸಿದ ದ್ರೋಣರು ಪಾಂಚಾಲರನ್ನು ಸ್ವೀಕರಿಸಿದರು (ಎದುರಿಸಿದರು).
ತತ್ರ ರಾಜನ್ ಮಹಾನಾಸೀತ್ ಸಂಗ್ರಾಮೋ ಭಯವರ್ಧನಃ |
ಪಾಂಡವಾನಾಂ ಮಹಾರಾಜ ತಾವಕಾನಾಂ ಚ ಸಂಯುಗೇ ॥ 43 ॥
ಎಲೈ ಮಹಾರಾಜನೇ, ಆಗ ನಿನ್ನವರಿಗೂ ಮತ್ತು ಪಾಂಡವರಿಗೂ ಭಯಜನಕವಾದ ದೊಡ್ಡ ಯುದ್ಧವು ನಡೆಯಿತು.
ತತಃ ಶಬ್ದೋ ಮಹಾನಾಸೀದ್ ಯಾತೋ ಯೇನ ಧನಂಜಯಃ |
ಅತೀವ ಸರ್ವಶಬ್ದೇಭ್ಯೋ ರೋಮಹರ್ಷಕರಃ ಪ್ರಭೋ ॥ 44 ॥
ಆಗ ಎಲೈ ಪ್ರಭುವೇ, ಅರ್ಜುನನು ಹೋದ ಮಾರ್ಗದಲ್ಲಿ ಎಲ್ಲ ಶಬ್ದಗಳನ್ನೂ ಮೀರಿಸುವ ರೋಮಾಂಚಕರವಾದ ದೊಡ್ಡ ಶಬ್ದವುಂಟಾಯಿತು.
ರುದ್ರಸ್ಯಾಕ್ರೀಡಸಂಕಾಶಃ ಸಂಹಾರಃ ಸರ್ವದೇಹಿನಾಮ್ |
ಅರ್ಜುನಸ್ಯ ಮಹಾಬಾಹೋ ತಾವಕಾನಾಂ ಚ ಧನ್ವಿನಾಮ್ ॥ 45 ॥
ಎಲೈ ಮಹಾಬಾಹುವೇ, ಅರ್ಜುನನಿಗೂ ಮತ್ತು ನಿನ್ನ ಧನುರ್ಧಾರಿಗಳಿಗೂ ಸರ್ವದೇಹಕ್ಷಯಕಾರಕವಾದ, ರುದ್ರದೇವರ ಆಟದ ಬಯಲಿಗೆ ಸದೃಶವಾದ ಸಂಹಾರವು ಉಂಟಾಯಿತು.
ಮಧ್ಯೇ ಭಾರತಸೈನ್ಯಸ್ಯ ಮಾಧವಸ್ಯ ಮಹಾರಣೇ |
ದ್ರೋಣಸ್ಯಾಪಿ ಪರೈಃ ಸಾರ್ಧಂ ವ್ಯೂಹದ್ವಾರೇ ಮಹಾರಣೇ ॥ 46 ॥
ಕೌರವರ ಸೈನ್ಯದ ಮಧ್ಯದಲ್ಲಿ ಮಹಾಯುದ್ಧದಲ್ಲಿ ಇದ್ದ ಸಾತ್ಯಕಿಯಿಂದಲೂ ಮತ್ತು ತಮ್ಮ ವ್ಯೂಹದ್ವಾರದಲ್ಲಿ ನಿಂತ ದ್ರೋಣರಿಂದಲೂ ಪರಸ್ಪರವಾಗಿ ಶತ್ರುಗಳ ಜೊತೆಯಲ್ಲಿ ಅಂತಹ ಸಂಹಾರಕಾರಣವಾದ ಯುದ್ಧವು ನಡೆಯಿತು.
ಏವಮೇವ ಕ್ಷಯೋ ವೃತ್ತಃ ಪೃಥಿವ್ಯಾಂ ಪೃಥಿವೀಪತೇ |
ಕ್ರುದ್ಧೇಽರ್ಜುನೇ ತಥಾ ದ್ರೋಣೇ ಸಾತ್ವತೇ ಚ ಮಹಾರಥೇ ॥ 47 ॥
ಎಲೈ ರಾಜನೇ, ಅರ್ಜುನನೂ, ದ್ರೋಣರೂ ಮತ್ತು ಮಹಾರಥನಾದ ಸಾತ್ಯಕಿಯೂ ಕೋಪಗೊಳ್ಳುತ್ತಿರಲು ಹೀಗೆಯೇ ರಣರಂಗದಲ್ಲಿ ಯೋಧರ ಕ್ಷಯಕಾರಕವಾದ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತುಸ್ತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.

* * * * *

नूರ ಹನ್ನೊಂದನೆಯ ಅಧ್ಯಾಯ

ದ್ರೋಣರ ಪರಾಕ್ರಮ. ಅವರಿಂದ ಬೃಹತ್ಕ್ಷತ್ರ, ಕ್ಷೇಮವರ್ಮ, ಧೃಷ್ಟಕೇತು ಮೊದಲಾದವರ ವಧೆ.

ಸಂಜಯಃ

ಅಪರಾಹ್ಣೇ ಮಹಾರಾಜ ಸಂಗ್ರಾಮಃ ಸಮಪದ್ಯತ |
ಪರ್ಜನ್ಯಸಮನಿರ್ಘೋಷಃ ಪುನರ್ದ್ರೋಣಸ್ಯ ಸೋಮಕೈಃ ॥ 1 ॥
ಸಂಜಯ ಎಲೈ ಮಹಾರಾಜನೇ, ಅಪರಾಹ್ಣದಲ್ಲಿ ಪುನಃ ದ್ರೋಣರಿಗೂ ಮತ್ತು ಸೋಮಕರಿಗೂ ಪರ್ಜನ್ಯಘೋಷಕ್ಕೆ ಸಮಾನವಾದ ಘೋಷವುಳ್ಳ ಯುದ್ಧವು ಜರುಗಿತು.

ಶೋಣಾಶ್ವಂ ರಥಮಾಸ್ಥಾಯ ನರವೀರಃ ಸಮಾಹಿತಃ |
ಸಮರೇಽಭ್ಯದ್ರವತ್ ಪಾಂಡೂನ್ ಜವಮಾಸ್ಥಾಯ ಮಧ್ಯಮಮ್ ॥2॥
ಶೋಣಾಶ್ವಗಳನ್ನು ಹೂಡಿದ ರಥದಲ್ಲಿ ನಿಂತ ನರವೀರರಾದ ದ್ರೋಣರು ಸಮಾಧಾನದಿಂದ ಮಧ್ಯಮವೇಗವನ್ನು ಆಶ್ರಯಿಸಿ ಯುದ್ಧದಲ್ಲಿ ಪಾಂಡವರ ಕಡೆಗೆ ಧಾವಿಸಿದರು.

ತವ ಪ್ರಿಯಹಿತೇ ಯುಕ್ತೋ ಮಹೇಷ್ವಾಸೋ ಮಹಾಬಲಃ |
ಚಿತ್ರಪುಂಖೈಃ ಶಿತೈರ್ಬಾಣೈಃ ಕಲಶೋತ್ತಮಸಂಭವಃ ॥ 3 ॥
ವರಾನ್ ವರಾನ್ ಹಿ ಯೋಧಾನಾಂ ವಿಚಿನ್ವನ್ನಿವ ಭಾರತ |
ಅಕ್ರೀಡತ ರಣೇ ರಾಜನ್ ಭಾರದ್ವಾಜಃ ಪ್ರತಾಪವಾನ್ ॥ 4 ॥
ಮಹಾಧನುರ್ಧಾರಿಗಳೂ, ಮಹಾಬಲವುಳ್ಳವರೂ, ಶ್ರೇಷ್ಠವಾದ ಕಲಶದಿಂದ ಜನಿಸಿದವರೂ, ನಿನ್ನ ಪ್ರಿಯಹಿತದಲ್ಲಿ ನಿರತರಾದವರೂ ಆದ, ಪ್ರತಾಪಶಾಲಿಗಳಾದ ದ್ರೋಣರು ಎಲೈ ರಾಜನೇ, ಭಾರತನೇ, ಪಾಂಡವರ ಸೈನ್ಯದಲ್ಲಿ ಶ್ರೇಷ್ಠರಾದ, ಶ್ರೇಷ್ಠರಾದ ಯೋಧರನ್ನು ಆರಿಸುವಂತೆ ರಣರಂಗದಲ್ಲಿ ಕ್ರೀಡಿಸಿದರು.

ತಮಭ್ಯಯಾದ್ ಬೃಹತ್ಕ್ಷತ್ರಃ ಕೇಕಯಾನಾಂ ಮಹಾರಥಃ |
ಭ್ರಾತೄಣಾಂ ವೀರಪಂಚಾನಾಂ ಜ್ಯೇಷ್ಠಃ ಸಮರಕರ್ಕಶಃ ॥ 5 ॥
ವಿಮುಂಚನ್ ವಿಶಿಖಾಂಸ್ತೀಕ್ಷ್ಣಾನಾಚಾರ್ಯಂ ಛಾದಯನ್ ಭೃಶಮ್ |
ಮಹಾಮೇಘೋ ಯಥಾ ವರ್ಷಂ ವಿಮುಂಚನ್ ಗಂಧಮಾದನೇ ॥6॥
ಕೇಕಯರ ವೀರರಾದ ಐವರು ಸಹೋದರರಲ್ಲಿ ಜ್ಯೇಷ್ಠನೂ, ಸಮರಕರ್ಕಶನೂ, ಮಹಾರಥನೂ ಆದ ಬೃಹತ್ಕ್ಷತ್ರನು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಗಂಧಮಾದನ ಪರ್ವತದ ಮೇಲೆ ಮಹಾಮೇಘವು ಮಳೆಯನ್ನು ಸುರಿಸುವಂತೆ ಆಚಾರ್ಯರನ್ನು ತನ್ನ ಬಾಣಗಳಿಂದ ಆವರಿಸಿದನು.

ತಸ್ಯ ದ್ರೋಣೋ ಮಹಾರಾಜ ಸ್ವರ್ಣಪುಂಖಾನ್ ಶಿಲಾಶಿತಾನ್ |
ಪ್ರೇಷಯಾಮಾಸ ಸಂಕ್ರುದ್ಧಃ ಸಾಯಕಾನ್ ದಶ ಸಪ್ತ ಚ ॥ 7 ॥
ಎಲೈ ಮಹಾರಾಜನೇ, ದ್ರೋಣರು ಕ್ರುದ್ಧರಾಗಿ ಸ್ವರ್ಣಪುಂಖಗಳಿಂದ ಕೂಡಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಹದಿನೇಳು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದರು.

ತಾಂಸ್ತು ದ್ರೋಣಧನುರ್ಮುಕ್ತಾನ್ ಘೋರಾನಾಶೀವಿಷೋಪಮಾನ್ |
ಏಕೈಕಂ ದಶಭಿರ್ಬಾಣೈರ್ಯುಧಿ ಚಿಚ್ಛೇದ ಹೃಷ್ಟವತ್ ॥ 8 ॥
ಬೃಹತ್ಕ್ಷತ್ರನು ಸಂತೋಷಗೊಂಡು ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಸರ್ಪದಂತಿದ್ದ ಘೋರವಾದ ಒಂದೊಂದು ಬಾಣವನ್ನೂ ಹತ್ತು ಬಾಣಗಳಿಂದ ಕತ್ತರಿಸಿದನು.

ತಸ್ಯ ತಲ್ಲಾಘವಂ ದೃಷ್ಟ್ವಾ ಪ್ರಹಸನ್ ದ್ವಿಜಸತ್ತಮಃ |
ಪ್ರೇಷಯಾಮಾಸ ವಿಶಿಖಾನಷ್ಟೌ ಸನ್ನತಪರ್ವಣಃ ॥ 9 ॥
ದ್ವಿಜಶ್ರೇಷ್ಠರಾದ ದ್ರೋಣರು ಅವನ ಕ್ಷಿಪ್ರತೆಯನ್ನು ನೋಡಿ ನಗುತ್ತಾ ಬಾಗಿದ ತುದಿಯುಳ್ಳ ಎಂಟು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದರು.

ತಾನ್ ದೃಷ್ಟ್ವಾ ಪತತಃ ಶೀಘ್ರಂ ದ್ರೋಣಚಾಪಚ್ಯುತಾನ್ ಶರಾನ್ |
ಅವಾರಯಚ್ಛರೈರೇವ ತಾವದ್ಭಿರ್ನಿಶಿತೈರ್ದೃಢೈಃ ॥ 10 ॥
ದ್ರೋಣರ ಧನುಸ್ಸಿನಿಂದ ಹೊರಟು ತನ್ನ ಕಡೆಗೆ ಶೀಘ್ರವಾಗಿ ಬರುತ್ತಿದ್ದ ಆ ಬಾಣಗಳನ್ನು ನೋಡಿ ಬೃಹತ್ಕ್ಷತ್ರನು ನಿಶಿತವೂ, ದೃಢವೂ ಆದ ಅಷ್ಟೇ ಬಾಣಗಳಿಂದ ಅವುಗಳನ್ನು ನಿವಾರಿಸಿದನು.

ತತೋಽಭವತ್ ಮಹಾರಾಜ ತವ ಸೈನ್ಯಸ್ಯ ವಿಸ್ಮಯಃ |
ಬೃಹತ್ಕ್ಷತ್ರೇಣ ತತ್ಕರ್ಮ ಕೃತಂ ದೃಷ್ಟ್ವಾ ಸುದುಷ್ಕರಮ್ ॥ 11 ॥
ಎಲೈ ಮಹಾರಾಜನೇ, ಬೃಹತ್ಕ್ಷತ್ರನು ಮಾಡಿದ ಆ ದುಷ್ಕರವಾದ ಕರ್ಮವನ್ನು ನೋಡಿ ನಿನ್ನ ಸೈನ್ಯಕ್ಕೆ ವಿಸ್ಮಯವುಂಟಾಯಿತು.

ತತೋ ದ್ರೋಣೋ ಮಹಾರಾಜ ಕೇಕಯಂ ವೈ ವಿಶೇಷಯನ್ |
ಪ್ರದುಶ್ಚಕ್ರೇ ರಣೇ ದಿವ್ಯಂ ಬ್ರಾಹ್ಮಮಸ್ತ್ರಂ ಮಹಾತಪಾಃ ॥ 12 ॥
ಅನಂತರ ಮಹಾತಪಸ್ವಿಗಳಾದ ದ್ರೋಣರು ಕೇಕಯರಾಜನಾದ ಬೃಹತ್ಕ್ಷತ್ರನನ್ನು ಮೀರಿಸುತ್ತಾ ರಣರಂಗದಲ್ಲಿ ದಿವ್ಯವಾದ ಬ್ರಹ್ಮಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದರು.

ತದಸ್ಯ ರಾಜನ್ ಕೈಕೇಯಃ ಪ್ರತ್ಯವಾರಯದಚ್ಯುತಃ |
ಬ್ರಾಹ್ಮೇಣೈವ ಮಹಾಬಾಹುರಾಹವೇ ಸಮುದೀರಿತಮ್ ॥ 13 ॥
ಎಲೈ ರಾಜನೇ, ಮಹಾಬಾಹುವೂ, ತನ್ನ ಗುಣಗಳಿಂದ ಚ್ಯುತನಾದವನೂ ಆದ ಕೇಕಯನು ದ್ರೋಣರು ಪ್ರಯೋಗಿಸಿದ ಆ ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೇ ನಿವಾರಿಸಿದನು.
ಪ್ರತಿಹನ್ಯ ತದಸ್ತ್ರಂ ತು ಭಾರದ್ವಾಜಸ್ಯ ಸಂಯುಗೇ |
ವಿವ್ಯಾಧ ಬ್ರಾಹ್ಮಣಂ ಷಷ್ಟ್ಯಾ ಸ್ವರ್ಣಪುಂಖೈಃ ಶಿಲಾಶಿತೈಃ ॥ 14 ॥
ಅವನು ರಣರಂಗದಲ್ಲಿ ದ್ರೋಣರ ಬ್ರಹ್ಮಾಸ್ತ್ರವನ್ನು ಪ್ರತಿಘಾತಗೊಳಿಸಿ, ಅವರನ್ನು ಸ್ವರ್ಣಪುಂಖಗಳನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಅರವತ್ತು ಬಾಣಗಳಿಂದ ಹೊಡೆದನು.
ತಂ ದ್ರೋಣೋ ದ್ವಿಪದಾಂ ಶ್ರೇಷ್ಠೋ ನಾರಾಚೇನ ಸಮರ್ಪಯತ್ |
ಸ ತಸ್ಯ ಕವಚಂ ಭಿತ್ತ್ವಾ ಪ್ರಾವಿಶದ್ಧರಣೀತಳಮ್ ॥ 15 ॥
ದ್ವಿಪದರಲ್ಲಿ ಶ್ರೇಷ್ಠರಾದ ದ್ರೋಣರು ಅವನನ್ನು ಒಂದು ನಾರಾಚದಿಂದ ಹೊಡೆದರು. ಅದು ಅವರ ಕವಚವನ್ನು ಭೇದಿಸಿ ಭೂಮಿಯನ್ನು ಪ್ರವೇಶಿಸಿತು.
ಕೃಷ್ಣಸರ್ಪೋ ಯಥಾ ಮುಕ್ತೋ ವಲ್ಮೀಕಂ ನೃಪಸತ್ತಮ |
ತಥಾಭ್ಯಗಾನ್ಮಹೀಂ ಬಾಣೋ ಭಿತ್ತ್ವಾ ಕೈಕೇಯಮಾಹವೇ ॥ 16 ॥
ಎಲೈ ರಾಜಶ್ರೇಷ್ಠನೇ, ಬಿಡುಗಡೆ ಹೊಂದಿದ ಕೃಷ್ಣಸರ್ಪವು ಹುತ್ತವನ್ನು ಪ್ರವೇಶಿಸುವಂತೆ ಆ ನಾರಾಚವು ರಣರಂಗದಲ್ಲಿ ಕೇಕಯನನ್ನು ಭೇದಿಸಿ ಭೂಮಿಯಲ್ಲಿ ಇಳಿಯಿತು.
ಸೋಽತಿವಿದ್ಧೋ ಮಹಾರಾಜ ದ್ರೋಣೇನಾಸ್ತ್ರವಿದಾ ಭೃಶಮ್ |
ಕ್ರೋಧೇನ ಮಹತಾವಿಷ್ಟೋ ವ್ಯಾವೃತ್ಯ ನಯನೇ ಶುಭೇ ॥ 17 ॥
ದ್ರೋಣಂ ವಿವ್ಯಾಧ ಸಪ್ತತ್ಯಾ ಸ್ವರ್ಣಪುಂಖೈಃ ಶಿಲಾಶಿತೈಃ |
ಸಾರಥಿಂ ಚಾಸ್ಯ ಭಲ್ಲೇನ ಬಾಹ್ವೋರುರಸಿ ಚಾರ್ಪಯತ್ ॥ 18 ॥
ಎಲೈ ಮಹಾರಾಜನೇ, ಅಸ್ತ್ರಜ್ಞರಾದ ದ್ರೋಣರಿಂದ ಗಾಢವಾಗಿ ಹೊಡೆಯಲ್ಪಟ್ಟ ಅವನು ಬಹಳ ಕ್ರೋಧದಿಂದ ಕೂಡಿದವನಾಗಿ, ಕಣ್ಣುಗಳನ್ನು ಅರಳಿಸಿ, ಸ್ವರ್ಣಪುಂಖವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಎಪ್ಪತ್ತು ಬಾಣಗಳಿಂದ ದ್ರೋಣರನ್ನು ಹೊಡೆದನು. ಇನ್ನೊಂದು ಭಲ್ಲವನ್ನು ಪ್ರಯೋಗಿಸಿ ಅವರ ಸಾರಥಿ ಬಾಹುಗಳಿಗೂ ಮತ್ತು ಎದೆಗೂ ಹೊಡೆದನು.
ದ್ರೋಣಸ್ತು ಬಹುಧಾ ವಿದ್ಧೋ ಬೃಹತ್ಕ್ಷತ್ರೇಣ ಮಾರಿಷ |
ಅಸೃಜದ್ ವಿಶಿಖಾಂಸ್ತೀಕ್ಷ್ಣಾನ್ ಕೇಕಯಸ್ಯ ರಥಂ ಪ್ರತಿ ॥ 19 ॥
ಎಲೈ ಪೂಜ್ಯನೇ, ಬೃಹತ್ಕ್ಷತ್ರನಿಂದ ಬಹಳವಾಗಿ ಹೊಡೆಯಲ್ಪಟ್ಟ ದ್ರೋಣರು ಅವನ ರಥದ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದರು.
ವ್ಯಾಕುಲೀಕೃತ್ಯ ತಂ ದ್ರೋಣೋ ಬೃಹತ್ಕ್ಷತ್ರಂ ಮಹಾರಥಮ್ |
ವ್ಯಸೃಜತ್ ಸಾಯಕಂ ತೀಕ್ಷ ್ಣಂ ಕೇಕಯಂ ಪ್ರತಿ ಭಾರತ ॥ 20 ॥
ಎಲೈ ಭಾರತನೇ, ದ್ರೋಣರು ಮಹಾರಥನಾದ ಬೃಹತ್ಕ್ಷತ್ರನನ್ನು ವ್ಯಾಕುಲಗೊಳಿಸಿ ಅವನ ಮೇಲೆ ಒಂದು ತೀಕ್ಷ್ಣವಾದ ಬಾಣವನ್ನು ಪ್ರಯೋಗಿಸಿದರು.
ಸ ಗಾಢವಿದ್ಧಸ್ತೇನಾಶು ಮಹಾರಾಜ ಸ್ತನಾಂತರೇ |
ರಥಾತ್ ಪುರುಷಶಾರ್ದೂಲಃ ಸಂಭಿನ್ನಹೃದಯೋಽಪತತ್ ॥ 21 ॥
ಎಲೈ ಮಹಾರಾಜನೇ, ಆ ಬಾಣದಿಂದ ಸ್ತನಗಳ ಮಧ್ಯದಲ್ಲಿ ತೀವ್ರವಾಗಿ ಹೊಡೆಯಲ್ಪಟ್ಟ, ಪುರುಷಶಾರ್ದೂಲನಾದ ಅವನು ಹೃದಯವು ಭೇದಿಸಲ್ಪಟ್ಟು ರಥದಿಂದ ಶೀಘ್ರವಾಗಿ ಕೆಳಗೆ ಬಿದ್ದನು.
ಬೃಹತ್ಕ್ಷತ್ರೇ ಹತೇ ರಾಜನ್ ಕೇಕಯಾನಾಂ ಮಹಾರಥೇ |
ಶೈಶುಪಾಲಿಃ ಸುಸಂಕ್ರುದ್ಧೋ ಯಂತಾರಮಿದಮಬ್ರವೀತ್ ॥ 22 ॥
ಸಾರಥೇ ಯಾಹಿ ಯತ್ರೈಷ ದ್ರೋಣಸ್ತಿಷ್ಠತಿ ದಂಸಿತಃ |
ವಿನಿಘ್ನನ್ ಕೇಕಯಾನ್ ಸರ್ವಾನ್ ಪಾಂಚಾಲಾನಾಂ ಚ ವಾಹಿನೀಮ್॥
ಎಲೈ ರಾಜನೇ, ಕೇಕಯರ ಮಹಾರಥನಾದ ಬೃಹತ್ಕ್ಷತ್ರನು ಹತನಾಗುತ್ತಿರಲು ಶಿಶುಪಾಲನ ಪುತ್ರನಾದ ಧೃಷ್ಟಕೇತುವು ಬಹಳ ಕೋಪಗೊಂಡು ತನ್ನ ಸಾರಥಿಯನ್ನು ಕುರಿತು- `ಎಲೈ ಸಾರಥಿಯೇ, ಈ ದ್ರೋಣರು ಕವಚ ಸನ್ನದ್ಧರಾಗಿ ಕೇಕಯರನ್ನೂ ಮತ್ತು ಪಾಂಚಾಲರ ಸೈನ್ಯವನ್ನೂ ನಾಶಮಾಡುತಿತರುವಲ್ಲಿಗೆ ರಥವನ್ನು ನಡೆಸು' ಎಂದು ಹೇಳಿದನು.
ತಸ್ಯ ತದ್ವಚನಂ ಶ್ರುತ್ವಾ ಸಾರಥೀ ರಥಿನಾಂ ವರಮ್ |
ದ್ರೋಣಾಯ ಪ್ರಾಪಯಾಮಾಸ ಕಾಂಬೋಜೈರ್ಜವನೈರ್ಹಯೈಃ॥24 ॥
ಅವನ ಆ ಮಾತುಗಳನ್ನು ಕೇಳಿದ ಸಾರಥಿಯು ರಥಿಶ್ರೇಷ್ಠನಾದ ಅವನನ್ನು ಕಾಂಬೋಜ ದೇಶದ ವೇಗಶಾಲಿಗಳಾದ ಅಶ್ವಗಳಿಂದ ಹೂಡಿದ ರಥದಿಂದ ದ್ರೋಣರ ಬಳಿಗೆ ಕರೆದೊಯ್ದನು.
ಧೃಷ್ಟಕೇತುಶ್ಚ ಚೇದೀನಾಮೃಷಭೋಽತಿಬಲೋದಿತಃ |
ಸಹಸಾ ಪ್ರಾಪತದ್ ದ್ರೋಣಂ ಪತಂಗ ಇವ ಪಾವಕಮ್ ॥ 25 ॥
ಚೇದಿಗಳ ರಾಜನಾದ, ಅತಿಬಲದಿಂದ ಕೂಡಿದ ಧೃಷ್ಟಕೇತುವಾದರೋ ಪತಂಗವು ಅಗ್ನಿಯ ಮೇಲೆ ಎರಗಿದಂತೆ ತಕ್ಷಣ ದ್ರೋಣರ ಮೇಲೆ ಎರಗಿದನು.

ಸೋಽಭ್ಯವಿದ್ಯತ್ತತೋ ದ್ರೋಣಂ ಷಷ್ಟ್ಯಾ ಸಾಶ್ವರಥಧ್ವಜಮ್ |
ಪುನಶ್ಚಾನ್ಯೈಃ ಶರೈಸ್ತೀಕ್ಷ್ಣೈಃ ಸುಪ್ತಂ ವ್ಯಾಘ್ರಂ ತುದನ್ನಿವ ॥ 26 ॥
ಆಗ ಅವನು ಅಶ್ವ-ರಥ-ಧ್ವಜ ಸಹಿತರಾದ ದ್ರೋಣರನ್ನು ಅರವತ್ತು ಬಾಣಗಳಿಂದ ಹೊಡೆದು, ಪುನಃ ಬೇರೆ ತೀಕ್ಷ್ಣವಾದ ಬಾಣಗಳಿಂದ ಮಲಗಿದ ವ್ಯಾಘ್ರವನ್ನು ಚುಚ್ಚುವಂತೆ ಅವರನ್ನು ಹೊಡೆದನು.
ತಸ್ಯ ದ್ರೋಣೋ ಧನುರ್ಮಧ್ಯೇ ಕ್ಷುರಪ್ರೇಣ ಶಿತೇನ ಹ |
ಚಿಚ್ಛೇದ ರಾಜ್ಞೋ ಬಲಿನೋ ಯತಮಾನಸ್ಯ ಸಂಯುಗೇ ॥ 27 ॥
ದ್ರೋಣರು ಒಂದು ನಿಶಿತವಾದ ಕ್ಷುರಪ್ರದಿಂದ ಯುದ್ಧವನ್ನು ಮಾಡಲು ಪ್ರಯತ್ನ ಪಡುತ್ತಿದ್ದ ಬಲಿಷ್ಠವಾದ ಅವನ ಧನುಸ್ಸನ್ನು ಮಧ್ಯಭಾಗದಲ್ಲಿ ಕತ್ತರಿಸಿದರು.
ಅಥಾನ್ಯದ್ಧನುರಾದಾಯ ಶೈಶುಪಾಲಿರ್ಮಹಾರಥಃ |
ವಿವ್ಯಾಧ ಸಾಯಕೈರ್ದ್ರೋಣಂ ಪುನಃ ಸುನಿಶಿತೈರ್ದೃಢೈಃ ॥ 28 ॥
ಆಗ ಶಿಶುಪಾಲಪುತ್ರನಾದ ಆ ಮಹಾರಥನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ನಿಶಿತವೂ, ದೃಢವೂ ಆದ ಬಾಣದಿಂದ ಪುನಃ ದ್ರೋಣರನ್ನು ಹೊಡೆದನು.
ತಸ್ಯ ದ್ರೋಣೋ ಹಯಾನ್ ಹತ್ವಾ ಸಾರಥಿಂ ಚ ಮಹಾಬಲಃ |
ಸಾರಥೇಶ್ಚ ಶಿರಃ ಕಾಯಾಚ್ಚಕರ್ತ ಪ್ರಹಸನ್ನಿವ ॥
ಅಥೈನಂ ಪಂಚವಿಂಶತ್ಯಾ ಸಾಯಕಾನಾಂ ಸಮಾರ್ಪಯತ್ ॥ 29 ॥
ಮಹಾಬಲರಾದ ದ್ರೋಣರು ಅವನ ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಬಾಣಗಳಿಂದ ಹೊಡೆದು ನಗುತ್ತಾ ಸಾರಥಿಯ ಶಿರಸ್ಸನ್ನು ಅವನ ದೇಹದಿಂದ ಕತ್ತರಿಸಿದರು. ಅನಂತರ ಧೃಷ್ಟಕೇತುವಿನ ಮೇಲೆ ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿದರು.
ವಿರಥೋ ವಿಧನುಷ್ಕಶ್ಚ ಚೇದಿರಾಜೋಽಪಿ ಸಂಯುಗೇ |
ಗದಾಂ ಚಿಕ್ಷೇಪ ಸಂಕ್ರುದ್ಧೋ ಭಾರದ್ವಾಜರಥಂ ಪ್ರತಿ ॥ 30 ॥
ರಥ ಮತ್ತು ಧನುಸ್ಸುಗಳಿಂದ ರಹಿತನಾದ ಚೇದಿರಾಜನೂ ಸಹ ರಣರಂಗದಲ್ಲಿ ಕ್ರುದ್ಧನಾಗಿ ದ್ರೋಣರ ರಥದ ಮೇಲೆ ಗದೆಯನ್ನು ಎಸೆದನು.
ತಾಮಾಪತಂತೀಂ ಸಹಸಾ ಘೋರರೂಪಾಂ ಭಯಾವಹಾಮ್ |
ಅಶ್ಮಸಾರಮಯೀಂ ಗುರ್ವೀಂ ತಪನೀಯವಿಭೂಷಿತಾಮ್ ॥ 31 ॥
ಶರೈರನೇಕಸಾಹಸ್ರೈರ್ಭಾರದ್ವಾಜೋ ನ್ಯಪಾತಯತ್|
ಭ್ರಾಜತೇ ಸ್ಮ ಮಹೀಂ ಪ್ರಾಪ್ಯ ಮಹೋಲ್ಕಪ್ರತಿಮಾ ಗದಾ ॥ 32 ॥
ಘೋರವೂ, ಭಯಂಕರವೂ, ಅಶ್ಮಸಾರಮಯವಾದುದೂ, ಭಾರವಾದುದೂ, ಸ್ವಣರ್ಭೂಷಿತವಾದುದೂ ಆಗಿ ಶೀಘ್ರವಾಗಿ ತಮ್ಮ ಕಡೆಗೆ ಬರುತ್ತಿದ್ದ ಆ ಗದೆಯನ್ನು ದ್ರೋಣರು ಅನೇಕ ಸಹಸ್ರ ಬಾಣಗಳನ್ನು ಪ್ರಯೋಗಿಸಿ ಕೆಡವಿದರು. ಆ ಗದೆಯು ಭೂಮಿಯ ಮೇಲೆ ಬಿದ್ದು ದೊಡ್ಡ ಉಲ್ಕೆಯಂತೆ ಶೋಭಿಸಿತು.
ಸಾ ಪಪಾತ ಗದಾ ಭೂಮೌ ಭಾರದ್ವಾಜೇನ ಸಾದಿತಾ |
ರಕ್ತಮಾಲ್ಯಾಂಬರಧರಾ ತಾರೇವ ನಭಸಸ್ತಳಾತ್ ॥ 33 ॥
ರಕ್ತಮಾಲ್ಯ-ವಸ್ತ್ರಗಳನ್ನು ಹೊಂದಿದ್ದ ಆ ಗದೆಯು ದ್ರೋಣರಿಂದ ವಿನಾಶಗೊಳಿಸಲ್ಪಟ್ಟು ಆಕಾಶದಿಂದ ಬಿದ್ದ ನಕ್ಷತ್ರದಂತೆ ಭೂಮಿಯ ಮೇಲೆ ಬಿದ್ದಿತು.
ಗದಾಂ ವಿನಿಹತಾಂ ದೃಷ್ಟ್ವಾ ಧೃಷ್ಟಕೇತುರಮರ್ಷಣಃ |
ತೋಮರಂ ವ್ಯಸೃಜತ್ತೂರ್ಣಂ ಶಕ್ತಿಂ ಚ ಕನಕೋಜ್ಜ್ವಲಾಮ್ ॥ 34 ॥
ಗದೆಯು ವಿನಾಶಗೊಂಡುದನ್ನು ನೋಡಿ ಕೋಪಗೊಂಡ ಧೃಷ್ಟಕೇತುವು ಶೀಘ್ರವಾಗಿ ತೋಮರವನ್ನೂ ಮತ್ತು ಕನಕಭೂಷಿತವಾದ ಒಂದು ಶಕ್ತಿಯನ್ನೂ ದ್ರೋಣರ ಮೇಲೆ ಪ್ರಯೋಗಿಸಿದನು.
ತೋಮರಂ ತು ತ್ರಿಭಿರ್ಬಾಣೈರ್ದ್ರೋಣಶ್ಚಿತ್ಛೇತ್ವ ಮಹಾಮೃಧೇ |
ಶಕ್ತಿಂ ಚಿಚ್ಛೇದ ಸಹಸಾ ಕೃತಹಸ್ತೋ ಮಹಾಬಲಃ |
ತೌ ಜಗ್ಮತುರ್ಮಹೀಂ ಛಿನ್ನೌ ಸರ್ಪಾವಿವ ಗರುತ್ಮತಾ ॥ 35 ॥
ದ್ರೋಣರು ಮೂರು ಬಾಣಗಳಿಂದ ರಣರಂಗದಲ್ಲಿ ತೋಮರವನ್ನು ಕತ್ತರಿಸಿ, ಪಳಗಿದ ಹಸ್ತವುಳ್ಳವರೂ ಮತ್ತು ಮಹಾಬಲರೂ ಆದ ಅವರು ಶಕ್ತಿಯನ್ನೂ ತಕ್ಷಣ ಕತ್ತರಿಸಿದರು. ಅವು ಗರುಡನಿಂದ ಕತ್ತರಿಸಲ್ಪಟ್ಟ ಸರ್ಪಗಳಂತೆ ಭೂಮಿಯ ಮೇಲೆ ಬಿದ್ದವು.
ತತೋಽಸ್ಯ ವಿಶಿಖಂ ತೀಕ್ಷ್ಣಂ ವಧಾರ್ಥಂ ವಧಕಾಂಕ್ಷಿಣಃ |
ಪ್ರೇಷಯಾಮಾಸ ಸಮರೇ ಭಾರದ್ವಾಜಃ ಪ್ರತಾಪವಾನ್ ॥ 36 ॥
ಅನಂತರ ತಮ್ಮ ವಧೆಯನ್ನು ಬಯಸುತ್ತಿದ್ದ ಅವನ ವಧೆಯನ್ನು ಉದ್ದೇಶಿಸಿ ಪ್ರತಾಪಶಾಲಿಗಳಾದ ದ್ರೋಣರು ರಣರಂಗದಲ್ಲಿ ಅವನ ಮೇಲೆ ಒಂದು ತೀಕ್ಷ್ಣವಾದ ಬಾಣವನ್ನು ಪ್ರಯೋಗಿಸಿದರು.
ಸ ತಸ್ಯ ಕವಚಂ ಭಿತ್ತ್ವಾ ಹೃದಯಂ ಚಾಮಿತೌಜಸಃ |
ಅಭ್ಯಗಾದ್ಧರಣೀಂ ಬಾಣೋ ಹಂಸಃ ಪದ್ಮಸರೋ ಯಥಾ ॥ 37 ॥
ಆ ಬಾಣವು ಅಮಿತ ಸಾಮರ್ಥ್ಯವುಳ್ಳ ಅವನ ಕವಚವನ್ನೂ, ಹೃದಯವನ್ನೂ ಭೇದಿಸಿ ಹಂಸವು ಪದ್ಮಸರೋವರವನ್ನು ಪ್ರವೇಸುವಂತೆ ಭೂಮಿಯನ್ನು ಪ್ರವೇಶಿಸಿತು.
ಪತಂಗಾನ್ ಹಿ ಗ್ರಸೇಚ್ಚಾಷೋ ಯಥಾ ರಾಜನ್ ಬುಭುಕ್ಷಿತಃ |

ತಥಾ ದ್ರೋಽಣೋಗ್ರಸಚ್ಛೂರೋ ಧೃಷ್ಟಕೇತುಂ ಮಹಾಮೃಧೇ ॥ 38 ॥
ಎಲೈ ರಾಜನೇ, ಹಸಿದ ಚಾಷಪಕ್ಷಿಯು (ಕರಿಹಕ್ಕಿಯು) ಪತಂಗಗಳನ್ನು ನುಂಗಿದಂತೆ ದ್ರೋಣರು ದೊಡ್ಡಯುದ್ಧದಲ್ಲಿ ಧೃಷ್ಟಕೇತುವನ್ನು ನುಂಗಿದರು.
ನಿಹತೇ ಚೇದಿರಾಜೇ ತು ತತ್ಖಂಡಂ ಪಿತ್ರ್ಯಮಾವಿಶತ್ |
ಅಮರ್ಷವಶಮಾಪನ್ನಃ ಪುತ್ರೋಽಸ್ಯ ಪರಮಾಸ್ತ್ರವಿತ್ ॥ 39 ॥
ಚೇದಿರಾಜನಾದ ಧೃಷ್ಟಕೇತುವು ಹತನಾಗುತ್ತಿರಲು ಶೂನ್ಯವಾದ ತನ್ನ ತಂದೆಯ ಆ ಭಾಗವನ್ನು ಕ್ರೋಧವಶನಾದ ಪರಮಾಸ್ತ್ರಜ್ಞಾನಿಯಾದ ಅವನ ಪುತ್ರನು ತುಂಬಿದನು.
ತಮಪಿ ಪ್ರಹಸನ್ ದ್ರೋಣಃ ಶರೈರ್ನಿನ್ಯೇ ಯಮಕ್ಷಯಮ್ |
ಮಹಾವ್ಯಾಘ್ರೋ ಮಹಾರಣ್ಯೇ ಮೃಗಶಾವಂ ಯಥಾ ಬಲೀ ॥ 40 ॥
ಬಲಿಷ್ಠವಾದ ಮಹಾವ್ಯಾಘ್ರವು ಕಾಡಿನಲ್ಲಿ ಜಿಂಕೆಯನ್ನು ಸಂಹರಿಸುವಂತೆ ದ್ರೋಣರು ನಗುತ್ತಾ ತಮ್ಮ ಬಾಣಗಳಿಂದ ಅವನನ್ನೂ ಯಮಲೋಕಕ್ಕೆ ಕಳುಹಿಸಿದರು.
ತೇಷು ಪ್ರಕ್ಷೀಯಮಾಣೇಷು ಪಾಂಡವೇಯೇಷು ಭಾರತ |
ಜರಾಸಂಧಸುತೋ ವೀರಃ ಸ್ವಯಂ ದ್ರೋಣಮುಪಾದ್ರವತ್ ॥ 41 ॥
ಎಲೈ ಭಾರತನೇ, ಪಾಂಡವಸೈನ್ಯದ ಯೋಧರು ಹೀಗೆ ನಾಶವನ್ನು ಹೊಂದುತ್ತಿರಲು ಜಲಾಸಂಧನ ಪುತ್ರನಾದ, ವೀರನಾದ ಸಹದೇವನು ಸ್ವತಃ ದ್ರೋಣರ ಕಡೆಗೆ ಧಾವಿಸಿದನು.
ಸ ತು ದ್ರೋಣಂ ಮಹಾರಾಜ ಛಾದಯನ್ ಸಾಯಕೈಃ ಶಿತೈಃ |
ಅದೃಶ್ಯಮಕರೋತ್ತೂರ್ಣಂ ಜಲದೋ ಭಾಸ್ಕರಂ ಯಥಾ ॥ 42 ॥
ಅವನು ನಿಶಿತವಾದ ಬಾಣಗಳನ್ನು ಪ್ರಯೋಗಿಸಿ, ಮೋಡವು ಸೂರ್ಯನನ್ನು ಮುಚ್ಚುವಂತೆ ಶೀಘ್ರವಾಗಿ ದ್ರೋಣರನ್ನು ಅದೃಶ್ಯರನ್ನಾಗಿ ಮಾಡಿದನು.
ತಸ್ಯ ತಲ್ಲಾಘವಂ ದೃಷ್ಟ್ವಾ ದ್ರೋಣಃ ಕ್ಷತ್ರಿಯಮರ್ದನಃ |
ವ್ಯಸೃಜತ್ ಸಾಯಕಾಂಸ್ತೂರ್ಣಂ ಶತಶೋಽಥ ಸಹಸ್ರಶಃ ॥ 43 ॥
ಕ್ಷತ್ರಿಯ ಸಂಹಾರಕರಾದ ದ್ರೋಣರು ಅವನ ಆ ಕ್ಷಿಪ್ರತೆಯನ್ನು ನೋಡಿ ನೂರಾರು ಸಾವಿರಾರು ಸಂಖ್ಯೆಯಲ್ಲಿ ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸಿದರು.
ಛಾದಯಿತ್ವಾ ರಣೇ ದ್ರೋಣೋ ರಥಸ್ಥಂ ರಥಿನಾಂ ವರಮ್ |
ಜಾರಾಸಂಧಿಮಥೋ ಜಘ್ನೇ ಮಿಷತಾಂ ಸರ್ವಧನ್ವಿನಾಮ್ ॥ 44 ॥
ದ್ರೋಣರು ರಥದಲ್ಲಿದ್ದ ರಥಿಶ್ರೇಷ್ಠನಾದ, ಜರಾಸಂಧಪುತ್ರನಾದ ಸಹದೇವನನ್ನು ತಮ್ಮ ಬಾಣಗಳಿಂದ ಆವರಿಸಿ ಎಲ್ಲ ಧನುರ್ಧಾರಿಗಳು ನೋಡುತ್ತಿರುವಂತೆಯೇ ಅವನನ್ನು ಕೊಂದರು.
ಯೋ ಯಃ ಸ್ಮ ನೀಯತೇ ದ್ರೋಣಂ ದ್ರೋಣೋಽಂತಕೋಪಮಃ |
ಆದತ್ತ ಸರ್ವಭೂತಾನಿ ಪ್ರಾಪ್ತೇ ಕಾಲೇ ಯಥಾಂತಕಃ ॥ 45 ॥
ಯಾವ ಯಾವ ಯೋಧರು ದ್ರೋಣರ ಬಳಿಗೆ ಹೋಗುತ್ತಾರೆಯೋ ಅವರನ್ನು ಮರಣಕಾಲವು ಪ್ರಾಪ್ತವಾದಾಗ ಬರುವ ಯಮನಂತೆ ಯಮಸದೃಶರಾದ ದ್ರೋಣರು ಅವರೆಲ್ಲರನ್ನೂ ನುಂಗಿಹಾಕಿದರು.
ತತೋ ದ್ರೋಣೋ ಮಹೇಷ್ವಾಸೋ ನಾಮ ವಿಶ್ರಾವ್ಯ ಸಂಯುಗೇ |
ಶರೈರನೇಕಸಾಹಸ್ರೈಃ ಪಾಂಡವೇಯಾನ್ ವ್ಯಮೋಹಯತ್ ॥ 46 ॥
ಅನಂತರ ಮಹಾಧನುರ್ಧಾರಿಗಳಾದ ದ್ರೋಣರು ರಣರಂಗದಲ್ಲಿ ತಮ್ಮ ಹೆಸರನ್ನು ಗಟ್ಟಿಯಾಗಿ ಘೋಷಿಸುತ್ತಾ, ಅನೇಕ ಸಹಸ್ರ ಬಾಣಗಳಿಂದ ಪಾಂಡವಸೇನೆಯ ಯೋಧರನ್ನು ಮರುಳುಗೊಳಿಸಿದರು.
ತತೋ ದ್ರೋಣಾಂಕಿತಾ ಬಾಣಾಃ ಸ್ವರ್ಣಪುಂಖಾಃ ಶಿಲಾಶಿತಾಃ |
ನರಾನ್ ನಾಗಾನ್ ಹಯಾಂಶ್ಚೈವ ನಿಜಘ್ನುಃ ಸರ್ವತೋ ರಣೇ ॥ 47 ॥
ಆಗ ದ್ರೋಣರ ಹೆಸರನ್ನು ಹೊಂದಿದ ಸ್ವರ್ಣಪುಂಖವುಳ್ಳ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳು ಪದಾತಿಗಳನ್ನೂ, ಗಜಗಳನ್ನೂ, ಅಶ್ವಗಳನ್ನೂ ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಕೊಂದವು.
ತೇ ವಧ್ಯಮಾನಾ ದ್ರೋಣೇನ ಶಕ್ರೇಣೇವ ಮಹಾಸುರಾಃ |
ಸಮಕಂಪಂತ ಪಾಂಚಾಲಾ ಗಾವಃ ಶೀತಾರ್ದಿತಾ ಇವ ॥ 48 ॥
ಇಂದ್ರನಿಂದ ಮಹಾದೈತ್ಯರು ವಧೆಮಾಡಲ್ಪಟ್ಟಂತೆ ದ್ರೋಣರಿಂದ ವಧಿಸಲ್ಪಡುತ್ತಿದ್ದ ಆ ಪಾಂಚಾಲರು ಶೀತಪೀಡಿತವಾದ ಗೋವುಗಳಂತೆ ನಡುಗಿದರು.
ತತೋ ನಿಷ್ಠಾನಕೋ ಘೋರಃ ಪಾಂಡವಾನಾಮಜಾಯತ |
ದ್ರೋಣೇನ ವಧ್ಯಮಾನೇಷು ಸೈನ್ಯೇಷು ಭರತರ್ಷಭ ॥ 49 ॥
ಎಲೈ ಭರತಶ್ರೇಷ್ಠನೇ, ತಮ್ಮ ಸೈನ್ಯಗಳು ದ್ರೋಣರಿಂದ ವಧಿಸಲ್ಪಡುತ್ತಿರಲು ಪಾಂಡವ ಸೇನೆಯಲ್ಲಿ ಘೋರವಾದ ದುಃಖದ ನಾದವುಂಟಾಯಿತು.
ಮೋಹಿತಾಃ ಶರವರ್ಷೇಣ ಭಾರದ್ವಾಜಸ್ಯ ಸಂಯುಗೇ |
ಊರುಗ್ರಾಹಗೃಹೀತಾ ಹಿ ಪಾಂಚಾಲಾನಾಂ ಮಹಾರಥಾಃ ॥ 50 ॥
ರಣರಂಗದಲ್ಲಿ ದ್ರೋಣರ ಬಾಣಗಳ ಮಳೆಯಿಂದ ದಿಗ್ಭ್ರಾಂತರಾದ ಪಾಂಚಾಲ ಮಹಾರಥರ ತೊಡೆಗಳು ಸ್ತಂಭಿತವಾದವು.

ಚೇದಯಶ್ಚ ಮಹಾರಾಜ ಸೃಂಜಯಾಃ ಸೋಮಕಾಸ್ತಥಾ |
ಅಭ್ಯದ್ರವಂತ ಸಂಹೃಷ್ಟಾ ಭಾರದ್ವಾಜಂ ಯುಯುತ್ಸಯಾ ॥ 51 ॥
ಎಲೈ ಮಹಾರಾಜನೇ, ಸೃಂಜಯರೂ, ಚೇದಿಗಳೂ ಮತ್ತು ಸೋಮಕರೂ ಸಂತೋಷಗೊಂಡು ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಮುಂದೆ ಬಂದರು.
ಹತ ದ್ರೋಣಂ ಹತ ದ್ರೋಣಮಿತಿ ತೇ ದ್ರೋಣಮಭ್ಯಯುಃ |
ಯತಂತಃ ಪುರುಷವ್ಯಾಘ್ರಾಃ ಸರ್ವಶಕ್ತ್ಯಾ ಮಹಾದ್ಯುತಿಮ್ ॥
ನಿನೀಷಂತೋ ರಣೇ ದ್ರೋಣಂ ಯಮಸ್ಯ ಸದನಂ ಪ್ರತಿ ॥ 52 ॥
ಪುರುಷವ್ಯಾಘ್ರರಾದ ಅವರು ಸರ್ವಶಕ್ತಿಯಿಂದ ಪ್ರಯತ್ನಪಡುತ್ತಾ ದ್ರೋಣರನ್ನು ಕೊಲ್ಲಿ, ದ್ರೋಣರನ್ನು ಕೊಲ್ಲಿ ಎಂದು ಹೇಳುತ್ತಾ ಮಹಾಕಾಂತಿಯುಳ್ಳ ದ್ರೋಣರನ್ನು ಯಮನ ಪಟ್ಟಣಕ್ಕೆ ಕಳುಹಿಸಲು ಬಯಸಿ ದ್ರೋಣರ ಬಳಿಗೆ ಬಂದರು.
ಯತಮಾನಾಂಸ್ತು ತಾನ್ ವೀರಾನ್ ಭಾರದ್ವಾಜಃ ಶಿಲೀಮುಖೈಃ |
ಯಮಾಯ ಪ್ರೇಷಯಾಮಾಸ ಚೇದಿಮುಖ್ಯಾನ್ ವಿಶೇಷತಃ ॥ 53 ॥
ಯುದ್ಧದಲ್ಲಿ ಪ್ರಯತ್ನಪಡುತ್ತಿದ್ದ ಆ ವೀರರನ್ನು, ಅದರಲ್ಲೂ ವಿಶೇಷವಾಗಿ ಚೇದಿ ಶ್ರೇಷ್ಠರನ್ನು ದ್ರೋಣರು ತಮ್ಮ ಬಾಣಗಳಿಂದ ಯಮನ ಬಳಿಗೆ ಕಳುಹಿಸಿದರು.
ತೇಷು ಪ್ರಕ್ಷೀಯಮಾಣೇಷು ಚೇದಿಮುಖ್ಯೇಷು ಭಾರತ |
ಪಾಂಚಾಲಾಃ ಸಮಕಂಪಂತ ದ್ರೋಣಸಾಯಕಪೀಡಿತಾಃ ॥ 54 ॥
ಎಲೈ ಭಾರತನೇ, ಚೇದಿಸೇನೆಯ ಶ್ರೇಷ್ಠರು ವಿನಾಶವನ್ನು ಹೊಂದುತ್ತಿರಲು ದ್ರೋಣರ ಬಾಣಗಳಿಂದ ಪೀಡಿತರಾದ ಪಾಂಚಾಲರು ನಡುಗಿದರು.
ಪ್ರಾಕ್ರೋಶನ್ ಭೀಮಸೇನಂ ತೇ ಧೃಷ್ಟದ್ಯುಮ್ನರಥಂ ಪ್ರತಿ |
ದೃಷ್ಟ್ವಾ ದ್ರೋಣಸ್ಯ ಕರ್ಮಾಣಿ ತಥಾರೂಪಾಣಿ ಮಾರಿಷ ॥ 55 ॥
ಎಲೈ ಪೂಜ್ಯನೇ, ದ್ರೋಣರ ಅಂತಹ ಕರ್ಮಗಳನ್ನು ನೋಡಿ ಧೃಷ್ಟದ್ಯುಮ್ನನ ರಥದ ಬಳಿ ಭೀಮಸೇನನಿಗಾಗಿ ಕಿರುಚಿದರು.
ಬ್ರಾಹ್ಮಣೇನ ತಪೋ ನೂನಂ ಚರಿತಂ ದುಶ್ಚರಂ ಮಹತ್ |
ತಥಾ ಹಿ ಯುಧಿ ವಿಕ್ರಾಂತೋ ದಹತಿ ಕ್ಷತ್ರಿಯರ್ಷಭಾನ್ ॥ 56 ॥
ಈ ಬ್ರಾಹ್ಮಣರು ಖಂಡಿತವಾಗಿ ದುಶ್ಚರವಾದ ದೊಡ್ಡ ತಪಸ್ಸನ್ನು ಮಾಡಿದ್ದಾರೆ. ಏಕೆಂದರೆ ಯುದ್ಧದಲ್ಲಿ ಪರಾಕ್ರಮವನ್ನು ಹೊಂದಿ ಕ್ಷತ್ರಿಯಶ್ರೇಷ್ಠರನ್ನು ದಹಿಸುತ್ತಿದ್ದಾರೆ.
ಧರ್ಮೋ ಯುದ್ಧಂ ಕ್ಷತ್ರಿಯಸ್ಯ ಬ್ರಾಹ್ಮಣಸ್ಯ ಪರಂ ತಪಃ |
ತಪಸ್ವೀ ಕೃತವಿದ್ಯಶ್ಚ ಪ್ರೇಕ್ಷಿತೇನಾಪಿ ನಿರ್ದಹೇತ್ ॥ 57 ॥
ಯುದ್ಧವು ಕ್ಷತ್ರಿಯಧರ್ಮ. ತಪಸ್ಸು ಬ್ರಾಹ್ಮಣರ ಶ್ರೇಷ್ಠವಾದ ಧರ್ಮ. ತಪಸ್ವಿಗಳೂ, ವಿದ್ಯಾಸಂಪನ್ನರೂ ಆದ ದ್ರೋಣರು ತಮ್ಮ ದೃಷ್ಟಿಯಿಂದಲೇ ಶತ್ರುಸೈನ್ಯವನ್ನು ಸುಟ್ಟಾರು!
ದ್ರೋಣಾಸ್ತ್ರಮಗ್ನಿಸಂಸ್ಪರ್ಶಂ ಪ್ರವಿಷ್ಟಾಃ ಕ್ಷತ್ರಿಯರ್ಷಭಾಃ |
ಬಹವೋ ದುಸ್ತರಂ ಘೋರಂ ಯತ್ರಾದಹ್ಯಂತ ಭಾರತ ॥ 58 ॥
ದ್ರೋಣರ ಅಗ್ನಿಸಂಸ್ಪರ್ಶಕ್ಕೆ ಸಮವಾದ ಬಾಣದ ವ್ಯಾಪ್ತಿಗೆ ಸಿಲುಕಿದ ಅನೇಕ ಕ್ಷತ್ರಿಯ ಶ್ರೇಷ್ಠರು ಘೋರವಾದ, ದುಸ್ತರವಾದ ಆ ಪ್ರಹಾರವನ್ನು ನಿವಾರಿಸಿಕೊಳ್ಳಲಾರದೆ ದಹಿಸಲ್ಪಡುತ್ತಿದ್ದಾರೆ.
ಯಥಾಬಲಂ ಯಥೋತ್ಸಾಹಂ ಯಥಾಸತ್ತ್ವಂ ಮಹಾದ್ಯುತಿಃ |
ಮೋಹಯನ್ ಸರ್ವಭೂತಾನಿ ದ್ರೋಣೋ ಹಂತಿ ಬಲಾನಿ ನಃ ॥59॥
ತಮ್ಮ ಬಲಕ್ಕೆ, ತಮ್ಮ ಉತ್ಸಾಹಕ್ಕೆ ಮತ್ತು ತಮ್ಮ ಧೈರ್ಯಕ್ಕೆ ಅನುಗುಣವಾಗಿ ಮಹಾಕಾಂತಿಯುಕ್ತರಾದ ದ್ರೋಣರು ಸರ್ವಭೂತಗಳನ್ನೂ ಮರುಳುಗೊಳಿಸುತ್ತಾ ನಮ್ಮ ಸೈನ್ಯವನ್ನು ಕೊಲ್ಲುತ್ತಿದ್ದಾರೆ (ಎಂದು ಮಾತನಾಡಿಕೊಂಡರು).
ತೇಷಾಂ ತದ್ವಚನಂ ಶ್ರುತ್ವಾ ಕ್ಷತ್ರಧರ್ಮಾ ವ್ಯವಸ್ಥಿತಃ |
ಅರ್ಧಚಂದ್ರೇಣ ಚಿಚ್ಛೇದ ದ್ರೋಣಸ್ಯ ಸಶರಂ ಧನುಃ ॥ 60 ॥
ಅವರ ಆ ಮಾತುಗಳನ್ನು ಕೇಳಿ ರಣರಂಗದಲ್ಲಿ ನಿಂತ ಕ್ಷತ್ರಧರ್ಮನು ಅರ್ಧಚಂದ್ರದಿಂದ ದ್ರೋಣರ ಧನುಸ್ಸು ಮತ್ತು ಬಾಣಗಳನ್ನು ಕತ್ತರಿಸಿದನು.
ಸ ಸಂರಬ್ಧತರೋ ಭೂತ್ವಾ ದ್ರೋಣಃ ಕ್ಷತ್ರಿಯಮರ್ದನಃ |
ಅನ್ಯತ್ಕಾರ್ಮುಕಮಾದಾಯ ಭಾಸ್ವರಂ ವೇಗವತ್ತರಮ್ ॥ 61 ॥
ತತ್ರಾಧಾಯ ಶರಂ ತೀಕ್ಷ್ಣಂ ಭಾರಘ್ನಂ ವಿಮಲಂ ದೃಢಮ್ |
ಆಕರ್ಣಪೂರ್ಣಮಾಚಾರ್ಯೋ ಬಲವಾನಭ್ಯವಾಸೃಜತ್ ॥ 62 ॥
ಕ್ಷತ್ರಿಯ ಮರ್ದನರಾದ ದ್ರೋಣರು ಇನ್ನೂ ಹೆಚ್ಚಿನ ಕೋಪವನ್ನು ತಾಳಿ ಪ್ರಕಾಶಮಾನವಾದ ಇನ್ನೂ ಹೆಚ್ಚು ವೇಗಶಾಲಿಯಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತೀಕ್ಷ್ಣವೂ, ಗುರುಕಾರ್ಯಸಾಧಕವೂ, ವಿಮಲವೂ, ದೃಢವೂ ಆದ ಒಂದು ಬಾಣವನ್ನು ಹೂಡಿ, ಕಿವಿಯವರೆಗೂ ಹೆದೆಯನ್ನು ಎಳೆದು ಬಲಿಷ್ಠರಾದ ಆಚಾರ್ಯರಾದ ಅವರು ಬಾಣವನ್ನು ಪ್ರಯೋಗಿಸಿದರು.
ಸ ಹತ್ವಾ ಕ್ಷತ್ರಧರ್ಮಾಣಂ ಜಗಾಮ ಧರಣೀತಳಮ್ |
ಸ ಭಿನ್ನಹೃದಯೋ ವಾಹಾದಪತನ್ಮೇದಿನೀತಳೇ ॥ 63 ॥
ಆ ಬಾಣವು ಕ್ಷತ್ರಧರ್ಮನನ್ನು ಕೊಂದು ಭೂಮಿಯನ್ನು ಪ್ರವೇಶಿಸಿತು. ಕ್ಷತ್ರಧರ್ಮನು ಹೃದಯವು ಭೇದಿಸಲ್ಪಟ್ಟು ರಥದಿಂದ

ಭೂಮಿಯ ಮೇಲೆ ಬಿದ್ದನು.
ತತಃ ಸೈನ್ಯಾನ್ಯಕಂಪಂತ ಧೃಷ್ಟದ್ಯುಮ್ನಸುತೇ ಹತೇ |
ಅಥ ದ್ರೋಣಂ ಸಮಾರೋಹಚ್ಚೇಕಿತಾನೋ ಮಹಾರಥಃ ॥ 64 ॥
ಧೃಷ್ಟದ್ಯುಮ್ನನ ಪುತ್ರನಾದ ಕ್ಷತ್ರಧರ್ಮನು ಹತನಾಗುತ್ತಿರಲು ಸೈನ್ಯಗಳು ನಡುಗಿ ಹೋದವು. ಅನಂತರ ಮಹಾರಥನಾದ ಚೇಕಿತಾನನು ದ್ರೋಣರನ್ನು ಎದುರಿಸಿದನು.
ಸ ದ್ರೋಣಂ ದಶಭಿರ್ಬಾಣೈಃ ಪ್ರತ್ಯವಿದ್ಯತ್ಸ್ತನಾಂತರೇ |
ಚತುರ್ಭಿಃ ಸಾರಥಿಂ ಚಾಸ್ಯ ಚತುರ್ಭಿಶ್ಚತುರೋ ಹಯಾನ್ ॥ 65 ॥
ಅವನು ದ್ರೋಣರನ್ನು ಅವರ ಸ್ತನಗಳ ಮಧ್ಯದಲ್ಲಿ ಹತ್ತು ಬಾಣಗಳಿಂದ ಹೊಡೆದು ಅವರ ಸಾರಥಿಯನ್ನು ನಾಲ್ಕು ಬಾಣಗಳಿಂದಲೂ ಮತ್ತು ಅಶ್ವಗಳನ್ನು ನಾಲ್ಕು ಬಾಣಗಳಿಂದಲೂ ಹೊಡೆದನು.
ತಸ್ಯಾಚಾರ್ಯಃ ಷೋಡಶಭಿರವಿದ್ಯದ್ ದಕ್ಷಿಣಂ ಭುಜಮ್ |
ಧ್ವಜಂ ಷೋಡಶಭಿರ್ಬಾಣೈರ್ಯಂತಾರಂ ಚಾಸ್ಯ ಸಪ್ತಭಿಃ ॥ 66 ॥
ಆಚಾರ್ಯರು ಹದಿನಾರು ಬಾಣಗಳಿಂದ ಅವನ ದಕ್ಷಿಣ ಭುಜವನ್ನೂ, ಹದಿನಾರು ಬಾಣಗಳಿಂದ ರಥದ ಧ್ವಜವನ್ನೂ ಮತ್ತು ಏಳು ಬಾಣಗಳಿಂದ ಅವನ ಸಾರಥಿಯನ್ನೂ ಹೊಡೆದರು.
ತಸ್ಯ ಸೂತೇ ಹತೇ ತೇಽಶ್ವಾ ರಥಮಾದಾಯ ವಿದ್ರುತಾಃ |
ಸಮರೇ ಶರಸಂವೀತಾ ಭಾರದ್ವಾಜೇನ ಮಾರಿಷ ॥ 67 ॥
ಎಲೈ ಪೂಜ್ಯನೇ, ಸಾರಥಿಯು ಹತನಾಗುತ್ತಿರಲು ತಮ್ಮ ಶರೀರದಲ್ಲಿ ಬಾಣಗಳು ನಾಟಿದ ಆ ಅಶ್ವಗಳು ರಥವನ್ನು ಎಳೆದುಕೊಂಡು ಓಡಿಹೋದವು.
ಚೇಕಿತಾನರಥಂ ದೃಷ್ಟ್ವಾ ವಿದ್ರುತಂ ಹತಸಾರಥಿಮ್ |
ಪಾಂಚಾಲಾನ್ ಪಾಂಡವಾಂಶ್ಚೈವ ಮಹದ್ಭಯಮಥಾವಿಶತ್ ॥ 68 ॥
ಚೇಕಿತಾನನ ರಥವು ಸಾರಥಿಯನ್ನು ಕಳೆದುಕೊಂಡು ಧಾವಿಸುತ್ತಿರುವುದನ್ನು ನೋಡಿದ ಪಾಂಚಾಲರಿಗೆ ಮತ್ತು ಪಾಂಡವ ಸೇನೆಗೆ ದೊಡ್ಡ ಭಯವು ಉಂಟಾಯಿತು.
ತಾನ್ ಸಮೇತಾನ್ ರಣೇ ಶೂರಾಂಶ್ಚೇದಿಪಾಂಚಾಲಸೃಂಜಯಾನ್ |
ಸಮಂತಾದ್ ದ್ರಾವಯನ್ ದ್ರೋಣೋ ಬಹ್ವಶೋಭತ ಮಾರಿಷ ॥69॥
ಎಲೈ ಪೂಜ್ಯನೇ, ರಣರಂಗದಲ್ಲಿ ಒಂದುಗೂಡಿದ ಶೂರರಾದ ಚೇದಿ-ಪಾಂಚಾಲ- ಸೃಂಜಯರನ್ನು ಎಲ್ಲ ಕಡೆಗಳಲ್ಲಿಯೂ ಓಡಿಸುತ್ತಾ ದ್ರೋಣರು ಬಹಳ ಶೋಭಿಸಿದರು.
ಆಕರ್ಣಪಲಿತಃ ಶ್ಯಾಮೋ ವಯಸಾಶೀತಿಕಾತ್ಪರಃ |
ರಣೇ ಪರ್ಯಚರದ್ ದ್ರೋಣೋ ವೃದ್ಧಃ ಷೋಡಶವರ್ಷವತ್ ॥70॥
ಕಿವಿಯವರೆಗೂ ನೆರೆಗೂದಲುಗಳು ತುಂಬಿದ, ಶ್ಯಾಮವರ್ಣದ ವಯಸ್ಸಿನಲ್ಲಿ ಎಂಬತ್ತು ದಾಟಿದ (ನಾಲ್ಕು ನೂರು ವರ್ಷ ವಯಸ್ಸಿನ) ವೃದ್ಧರಾದ ದ್ರೋಣರು ಹದಿನಾರು ವರ್ಷದ ಯುವಕನಂತೆ ರಣರಂಗದಲ್ಲಿ ಸಂಚರಿಸಿದರು.
ಅಥ ದ್ರೋಣಂ ಮಹಾರಾಜ ವಿಚರಂತಮಭೀತವತ್ |
ವಜ್ರಹಸ್ತಮಮನ್ಯಂತ ಶತ್ರವಃ ಶತ್ರುಸೂದನಮ್ ॥ 71 ॥
ಆಗ ಎಲೈ ಮಹಾರಾಜನೇ, ರಣರಂಗದಲ್ಲಿ ನಿರ್ಭಯವಾಗಿ ಸಂಚರಿಸುತ್ತಿದ್ದ ದ್ರೋಣರನ್ನು ಶತ್ರುಗಳು ಕೈಯಲ್ಲಿ ವಜ್ರಾಯುಧವನ್ನು ಹಿಡಿದ ಶತ್ರುಸೂದನನಾದ ಇಂದ್ರನೆಂದು ಭಾವಿಸಿದರು.
ತತೋಽಬ್ರವೀನ್ಮಹಾರಾಜ ದ್ರುಪದೋ ಬುದ್ಧಿಮಾನ್ ನೃಪ |
ಲುಬ್ಧೋಽಯಂ ಕ್ಷತ್ರಿಯಾನ್ ಹಂತಿ ವ್ಯಾಘ್ರಃ ಕ್ಷುದ್ರಮೃಗಾನಿವ ॥ 72 ॥
ಎಲೈ ಮಹಾರಾಜನೇ, ಆಗ ಮೇಧಾವಿಯಾದ ದ್ರುಪದರಾಜನು ಈ ಬ್ರಾಹ್ಮಣರು ಲೋಭದಿಂದ ವ್ಯಾಘ್ರವು ಕ್ಷುದ್ರಮೃಗಗಳನ್ನು ಕೊಂದಂತೆ ಶತ್ರುಗಳನ್ನು ಕೊಲ್ಲುತ್ತಿದ್ದಾರೆ.
ಕೃಚ್ಛ್ರಾನ್ ದುರ್ಯೋಧನೋ ಲೋಕಾನ್ ಪಾಪಃ ಪ್ರಾಪ್ಸ್ಯತಿ ದುರ್ಮತಿಃ|
ಯಸ್ಯ ಲೋಭಾದ್ ವಿನಿಹತಾಃ ಸಮರೇ ಕ್ಷತ್ರಿಯರ್ಷಭಾಃ ॥ 73 ॥
ಪಾಪಿಯೂ ದುರ್ಮತಿಯೂ ಆದ ದುರ್ಯೋಧನನು ಕಷ್ಟಮಯವಾದ ಲೋಕಗಳನ್ನು ಹೊಂದುವನು. ಅವನ ಲೋಭದ ನಿಮಿತ್ತದಿಂದಾಗಿ ಯುದ್ಧದಲ್ಲಿ ಕ್ಷತ್ರಿಯ ಶ್ರೇಷ್ಠರು ನಾಶವನ್ನು ಹೊಂದುತ್ತಿದ್ದಾರೆ.
ಶತಶಃ ಶೇರತೇ ಭೂಮೌ ನಿಕೃತ್ತಾ ಗೋವೃಷಾ ಇವ |
ರುಧಿರೇಣ ಪರೀತಾಂಗಾಃ ಶ್ವಸೃಗಾಲಾದನೀಕೃತಾಃ ॥ 74 ॥
ದ್ರೋಣರ ಬಾಣದಿಂದ ಕತ್ತರಿಸಲ್ಪಟ್ಟು ರಕ್ತದಿಂದ ತೋಯ್ದ ಶರೀರವುಳ್ಳವರಾಗಿ ನೂರಾರು ಸಂಖ್ಯೆಗಳಲ್ಲಿ ನಾಯಿ-ನರಿಗಳಿಗೆ ಆಹಾರವಾಗಿ ಗೋವೃಷಗಳಂತಹ ಕ್ಷತ್ರಿಯರು ಭೂಮಿಯ ಮೇಲೆ ಬಿದ್ದಿದ್ದಾರೆ (ಎಂದು ಹೇಳಿದನು).
ಏವಮುಕ್ತ್ವಾ ಮಹಾರಾಜ ದ್ರುಪದೋಽಕ್ಷೋಹಿಣೀಪತಿಃ |
ಪುರಸ್ಕೃತ್ಯ ರಣೇ ಪಾರ್ಥಾನ್ ದ್ರೋಣಮಭ್ಯದ್ರವದ್ ದ್ರುತಮ್ ॥ 75॥
ಎಲೈ ಮಹಾರಾಜನೇ, ಅಕ್ಷೋಹಿಣೀ ಪತಿಯಾದ ದ್ರುಪದರಾಜನು ಹೀಗೆ ಹೇಳಿ ಪಾಂಡವರನ್ನು ಮುಂದೆ ಮಾಡಿಕೊಂಡು ಶೀಘ್ರವಾಗಿ ದ್ರೋಣರ ಕಡೆಗೆ ಸಾಗಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ದ್ರೋಣಪರ್ವಣಿ ಏಕಾದಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹನ್ನೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೆರಡನೆಯ ಅಧ್ಯಾಯ
ಅರ್ಜುನನ ವಾರ್ತೆಯನ್ನು ತಿಳಿಯಲು ಯುಧಿಷ್ಠಿರನಿಂದ ಸಾತ್ಯಕಿಯನ್ನು ಕಳುಹಿಸಿ ಪುನಃ ಭೀಮಸೇನನ ಪ್ರೇಷಣ.
ಸಂಜಯಃ
ವ್ಯೂಹೇಷ್ವಾಲೋಡ್ಯಮಾನೇಷು ಪಾಂಡವಾನಾಂ ತತಸ್ತತಃ।
ಸುದೂರಮನ್ವಯುಃ ಪಾರ್ಥಾಃ ಪಾಂಚಾಲಾಃ ಸಹ ಸೋಮಕೈಃ ॥ 1 ॥
ಸಂಜಯ ದ್ರೋಣರಿಂದ ಪಾಂಡವರ ವ್ಯೂಹವು ಅಲ್ಲಲ್ಲಿ ಕ್ಷೋಭೆಗೊಳ್ಳುತ್ತಿರಲು ಪಾರ್ಥರು ಪಾಂಚಾಲರ ಮತ್ತು ಸೋಮಕರ ಜೊತೆಯಲ್ಲಿ ಬಹಳ ದೂರ ಹೋದರು.
ವರ್ತಮಾನೇ ತಥಾ ರೌದ್ರೇ ಸಂಗ್ರಾಮೇ ಲೋಮಹರ್ಷಣೇ।
ಪ್ರಕ್ಷಯೇ ಜಗತಸ್ತೀವ್ರೇ ಯುಗಾಂತ ಇವ ಭಾರತ ॥ 2 ॥
ದ್ರೋಣೇ ಯುಧಿ ಪರಾಕ್ರಾಂತೇ ನರ್ದಮಾನೇ ಮುಹುರ್ಮುಹುಃ।
ಪಾಂಚಾಲೇಷು ಚ ಕ್ಷೀಣೇಷು ವಧ್ಯಮಾನೇಷು ಪಾಂಡುಷು ॥ 3 ॥
ನಾಪಶ್ಯಚ್ಚರಣಂ ಕಿಂಚಿದ್ ಧರ್ಮರಾಜೋ ಯುಧಿಷ್ಠಿರಃ।
ಚಿಂತಯಾಮಾಸ ರಾಜೇಂದ್ರ ಕಥಮೇತದ್ ಭವಿಷ್ಯತಿ ॥ 4 ॥
ಎಲೈ ಭಾರತನೇ, ಯುಗಾಂತದಲ್ಲಿ ನಡೆಯುವಂತೆ ಜಗತ್ತಿಗೆ ತೀವ್ರವಾದ ಕ್ಷಯವನ್ನುಂಟು ಮಾಡುವಂತಹ, ರೋಮಾಂಚಕಾರಿಯಾದ, ಘೋರವಾದ ಯುದ್ಧವು ನಡೆಯುತ್ತಿರಲು ದ್ರೋಣರು ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿ, ಪುನಃ ಪುನಃ ಭೇದಿಸುತ್ತಿರಲು, ಪಾಂಚಾಲರು ಕ್ಷೀಣಗೊಳ್ಳುತಿತರಲು, ಪಾಂಡವ ಸೇನೆಯು ವಧಿಸಲ್ಪಡುತ್ತಿರಲು, ಧರ್ಮರಾಜನಾದ ಯುಧಿಷ್ಠಿರನು ಯಾವ ರಕ್ಷಕನನ್ನೂ ಕಾಣಲಿಲ್ಲ. ಎಲೈ ರಾಜೇಂದ್ರನೇ, ಇದನ್ನು ಹೇಗೆ ನಿರ್ವಾಹ ಮಾಡುವುದು ಎಂದು ಚಿಂತಿಸಿದನು.
ತತ್ರಾವೇಕ್ಷ್ಯ ದಿಶಃ ಸರ್ವಾಃ ಸವ್ಯಸಾಚಿದಿದೃಕ್ಷಯಾ।
ಯುಧಿಷ್ಠಿರೋ ದದರ್ಶಾಥ ನೈವ ಪಾರ್ಥಂ ನ ಮಾಧವಮ್ ॥ 5 ॥
ಅರ್ಜುನನನ್ನು ನೋಡುವ ಇಚ್ಛೆಯಿಂದ ಯುಧಿಷ್ಠಿರನು ಎಲ್ಲ ಕಡೆಗಳಲ್ಲಿಯೂ ದೃಷ್ಟಿಯನ್ನು ಹಾಯಿಸಿದರೂ ಅರ್ಜುನನನ್ನಾಗಲೀ ಅಥವಾ ಸಾತ್ಯಕಿಯನ್ನಾಗಲೀ (ಕೃಷ್ಣನನ್ನಾಗಲೀ) ಕಾಣಲಿಲ್ಲ.
ಸೋಽಪಶ್ಯನ್ ನರಶಾರ್ದೂಲಂ ವಾನರರ್ಷಭಲಕ್ಷಣಮ್।
ಗಾಂಡೀವಸ್ಯ ಚ ನಿರ್ಘೋಷಮಶೃಣ್ವನ್ ವ್ಯಥಿತೇಂದ್ರಿಯಃ ॥ 6 ॥
ಅಪಶ್ಯನ್ ಸಾತ್ಯಕಿಂ ಚಾಪಿ ವೃಷ್ಣೀನಾಂ ಪ್ರವರಂ ರಥಮ್।
ಚಿಂತಯಾಽಭಿಪರೀತಾಂಗೋ ಧರ್ಮರಾಜೋ ಯುಧಿಷ್ಠಿರಃ।
ನಾಧ್ಯಗಚ್ಛತ್ ತದಾ ಶಾಂತಿಂ ತಾವಪಶ್ಯನ್ ನರರ್ಷಭೌ ॥ 7 ॥
ನರಶಾರ್ದೂಲನಾದ, ಕಪಿಧ್ವಜನಾದ ಅರ್ಜುನನನ್ನು ಕಾಣದೆ, ಗಾಂಡೀವ ಧನುಸ್ಸಿನ ಘೋಷವನ್ನು ಕೇಳದೆ ವ್ಯಥೆಯಿಂದ ಕೂಡಿದವನಾಗಿ, ವೃಷ್ಣಿಗಳ ಶ್ರೇಷ್ಠರಥನಾದ ಸಾತ್ಯಕಿಯನ್ನೂ ಕಾಣದೆ ಚಿಂತೆಯಿಂದ ಕೂಡಿದ ಧರ್ಮರಾಜನಾದ ಯುಧಿಷ್ಠಿರನು ಆ ಇಬ್ಬರು ನರಶ್ರೇಷ್ಠರನ್ನು ಕಾಣದೆ ಸಮಾಧಾನವನ್ನು ಹೊಂದಲಿಲ್ಲ.
ಲೋಕೋಪಕ್ರೋಶಭೀರುತ್ವಾದ್ ಧರ್ಮರಾಜೋ ಮಹಾಯಶಾಃ।
ಅಚಿಂತಯನ್ಮಹಾಬಾಹುಃ ಶೈನೇಯಸ್ಯ ರಥಂ ಪ್ರತಿ ॥ 8 ॥
ಲೋಕಾಪವಾದಕ್ಕೆ ಹೆದರಿದ ಮಹಾಕೀರ್ತಿವಂತನಾದ ಮಹಾಬಾಹುವಾದ ಧರ್ಮರಾಜನು ಸಾತ್ಯಕಿಯ ರಥದ ವಿಷಯದಲ್ಲಿ ಚಿಂತಿಸಿದನು.
ಪದವೀಂ ಪ್ರೇಷಿತಶ್ಚೈವ ಫಲ್ಗುನಸ್ಯ ಮಯಾ ರಣೇ।
ಶೈನೇಯಃ ಸಾತ್ಯಕಿಃ ಸತ್ಯೋ ಮಿತ್ರಾಣಾಮಭಯಂಕರಃ ॥ 9 ॥
ಸತ್ಯವಂತನೂ ಮತ್ತು ಮಿತ್ರರಿಗೆ ಅಭಯಪ್ರದನೂ ಆದ, ಶೈನೇಯನಾದ ಸಾತ್ಯಕಿಯನ್ನು ನಾನು ರಣರಂಗದಲ್ಲಿ ಅರ್ಜುನನ ಮಾರ್ಗವನ್ನು ಹುಡುಕಲು ಕಳುಹಿಸಿದೆ.
ತದಿದಂ ಹ್ಯೇಕಮೇವಾಸೀದ್ ದ್ವಿಧಾ ಜಾತಂ ಮಮಾದ್ಯ ವೈ।
ಸಾತ್ಯಕಿಶ್ಚ ಹಿ ಮೇ ಜ್ಞೇಯಃ ಪಾಂಡವಶ್ಚ ಧನಂಜಯಃ ॥ 10 ॥
ಈಗ ನನಗೆ ಹುಡುಕುವ ಒಂದು ಕಾರ್ಯವು ಎರಡಾಯಿತು. ನಾನು ಸಾತ್ಯಕಿಯನ್ನೂ ತಿಳಿಯಬೇಕು ಮತ್ತು ಪಾಂಡವನಾದ ಅರ್ಜುನನನ್ನೂ ತಿಳಿಯಬೇಕು.
ಸಾತ್ಯಕಿಂ ಪ್ರೇಷಯಿತ್ವಾ ತು ಪಾಂಡವಸ್ಯ ಪದಾನುಗಮ್।
ಸಾತ್ವತಸ್ಯಾಪಿ ಕಂ ಯುದ್ಧೇ ಪ್ರೇಷಯಿಷ್ಯೇ ಪದಾನುಗಮ್ ॥ 11 ॥
ಅರ್ಜುನನ ಅನುಯಾಯಿಯಾಗಿ ಸಾತ್ಯಕಿಯನ್ನು ಕಳುಹಿಸಿದ ನಾನು ಈಗ ರಣರಂಗದಲ್ಲಿ ಸಾತ್ಯಕಿಯನ್ನು ಹುಡುಕಲು ಯಾರನ್ನು ಕಳುಹಿಸಲಿ?

ಕರಿಷ್ಯಾಮಿ ಪ್ರಯತ್ನೇನ ಭ್ರಾತುರನ್ವೇಷಣಂ ಯದಿ |
ಯುಯುಧಾನಮನನ್ವಿಷ್ಯ ಲೋಕೋ ಮಾಂ ಗರ್ಹಯಿಷ್ಯತಿ ॥ 12 ॥
ಭ್ರಾತುರನ್ವೇಷಣಂ ಕೃತ್ವಾ ಧರ್ಮರಾಜೋ ಯುಧಿಷ್ಠಿರಃ |
ಪರಿತ್ಯಜತಿ ವಾರ್ಷ್ಣೇಯಂ ಸಾತ್ಯಕಿಂ ಸತ್ಯವಿಕ್ರಮಮ್ ॥ 13 ॥
ನಾನು ಪ್ರಯತ್ನಪೂರ್ವಕವಾಗಿ ಅರ್ಜುನನ ಅನ್ವೇಷಣವನ್ನು ಮಾಡಿ ಸಾತ್ಯಕಿಯ ಅನ್ವೇಷಣವನ್ನು ಮಾಡದಿದ್ದರೆ ಧರ್ಮರಾಜನಾದ ಯುಧಿಷ್ಠಿರನು ತನ್ನ ತಮ್ಮನ ಅನ್ವೇಷಣೆಯನ್ನು ಮಾಡಿ ವಾರ್ಷ್ಣೇಯನೂ, ಸತ್ಯಪರಾಕ್ರಮನೂ ಆದ ಸಾತ್ಯಕಿಯನ್ನು ಪರಿತ್ಯಾಗ ಮಾಡುತ್ತಿದ್ದಾನೆ ಎಂದು ಲೋಕವು ನನ್ನನ್ನು ನಿಂದಿಸುವುದು.
ಲೋಕಾಪವಾದಭೀರುತ್ವಾತ್ ಸೋಽಹಂ ಪಾರ್ಥಂ ವೃಕೋದರಮ್ |
ಪದವೀಂ ಪ್ರೇಷಯಿಷ್ಯಾಮಿ ಮಾಧವಸ್ಯ ಮಹಾತ್ಮನಃ ॥ 14 ॥
ಲೋಕಾಪವಾದಕ್ಕೆ ಹೆದರಿದ ಕಾರಣದಿಂದ ಅಂತಹ ನಾನು ಮಹಾತ್ಮನಾದ ಸಾತ್ಯಕಿಯ ಮಾರ್ಗವನ್ನು ಹುಡುಕಲು ಕುಂತೀಪುತ್ರನಾದ ವೃಕೋದರನನ್ನು ಕಳುಹಿಸುವೆನು.
ಯಥೈವ ಚ ಮಮ ಪ್ರೀತಿರರ್ಜುನೇ ಶತ್ರುಸೂದನೇ |
ತಥೈವ ವೃಷ್ಣಿವೀರೇಽಪಿ ಸಾತ್ವತೇ ಯುದ್ಧದುರ್ಮದೇ ॥ 15 ॥
ನನಗೆ ಶತ್ರುಸಂಹಾರಕನಾದ ಅರ್ಜುನನಲ್ಲಿ ಹೇಗೆ ಪ್ರೀತಿಯಿದೆಯೋ ಯುದ್ಧ ದುರ್ಮದನಾದ, ವೃಷ್ಣಿವೀರನಾದ ಸಾತ್ಯಕಿಯಲ್ಲಿಯೂ ಹಾಗೆಯೇ ಪ್ರೀತಿಯಿದೆ.
ಅತಿಭಾರೇ ನಿಯುಕ್ತಶ್ಚ ಮಯಾ ಶೈನೇಯನಂದನಃ |
ಸ ತು ಮಿತ್ರೋಪರೋಧೇನ ಗೌರವಾಚ್ಚ ಮಹಾಬಲಃ |
ಪ್ರವಿಷ್ಟೋ ಭಾರತೀಂ ಸೇನಾಂ ಮಕರಃ ಸಾಗರಂ ಯಥಾ ॥ 16 ॥
ನಾನು ಶೈನೇಯನಂದನನಾದ ಸಾತ್ಯಕಿಗೆ ದೊಡ್ಡ ಭಾರವನ್ನು ವಹಿಸಿದ್ದೇನೆ. ಮಹಾಬಲನಾದ ಅವನು ಸೇನೇಹಿತರಿಗೆ ಉಪಕಾರ ಮಾಡುವ ದೃಷ್ಟಿಯಿಂದಲೂ ಮತ್ತು ನನ್ನ ಮೇಲಿನ ಗೌರವದಿಂದಲೂ ಮೊಸಳೆಯು ಸಾಗರವನ್ನು ಪ್ರವೇಶಿಸಿದಂತೆ ಕೌರವ ಸೈನ್ಯವನ್ನು ಪ್ರವೇಶಿಸಿದ್ದಾನೆ.
ಅಸೌ ಹಿ ಶ್ರೂಯತೇ ಶಬ್ದಃ ಶೂರಾಣಾಮನಿವರ್ತಿನಾಮ್ |
ಮಿಥಃ ಸಂಯುದ್ಧ್ಯಮಾನಾನಾಂ ವೃಷ್ಣಿವೀರೇಣ ಧೀಮತಾ ॥ 17 ॥
ಮೇಧಾವಿಯಾದ ವೃಷ್ಣಿವೀರನಾದ ಅವನ ಜೊತೆಯಲ್ಲಿ ಯುದ್ಧದಿಂದ ಹಿಮ್ಮೆಟ್ಟದಿರುವ ಶೂರರು ಮಾಡುವ ಈ ಯುದ್ಧದ ಶಬ್ದವು ಕೇಳಿಬರುತ್ತಿದೆ.
ಪ್ರಾಪ್ತಕಾಲಂ ಸುಬಲವ ನ್ನಿಶ್ಚಿತ್ಯ ಬಹುಧಾ ಹಿ ಮೇ |
ತತ್ರೈವ ಪಾಂಡವೇಯಸ್ಯ ಭೀಮಸೇನಸ್ಯ ಧನ್ವಿನಃ |
ಗಮನಂ ರೋಚತೇ ಮಹ್ಯಂ ಯತ್ರ ಯಾತೌ ಮಹಾರಥೌ ॥ 18 ॥
ಈಗ ಮಾಡಬೇಕಾದ ಕಾರ್ಯವನ್ನು ಬಹಳ ರೀತಿಯಿಂದ ಬಹುವಾಗಿ ವಿಚಾರ ಮಾಡಿ ನಾನು ಆ ಮಹಾರಥರು ಇದ್ದಲ್ಲಿಗೆ ಪಾಂಡುಪುತ್ರನೂ, ಧನುರ್ಧಾರಿಯೂ ಆದ ಭೀಮಸೇನನನ್ನು ಕಳುಹಿಸುವುದಕ್ಕೆ ಇಷ್ಟಪಡುತ್ತೇನೆ.
ನ ಚಾಪ್ಯಸಹ್ಯಂ ಭೀಮಸ್ಯ ವಿದ್ಯತೇ ಭುವಿ ಕಿಂಚನ |
ಶಕ್ತೋ ಹ್ಯೇಷ ರಣೇ ಯತ್ತಾನ್ ಪೃಥಿವ್ಯಾಂ ಸರ್ವಧನ್ವಿನಃ |
ಸ್ವಬಾಹುಬಲಮಾಸ್ಥಾಯ ಪ್ರತಿವ್ಯೂಹಿತುಮಂಜಸಾ ॥ 19 ॥
ಭೀಮಸೇನನಿಗಾದರೂ ಭೂಮಿಯಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ. ಅವನು ತನ್ನ ಬಾಹುಬಲದಿಂದಲೇ ಭೂಮಿಯಲ್ಲಿರುವ ಪ್ರಯತ್ನಶಾಲಿಗಳಾದ ಎಲ್ಲ ಧನುರ್ಧಾರಿಗಳನ್ನೂ ಪ್ರತಿಘಾತಗೊಳಿಸಲು ಸಮರ್ಥನಾಗಿದ್ದಾನೆ.
ಯಸ್ಯ ಬಾಹುಬಲಂ ಸರ್ವೇ ಸಮಾಶ್ರಿತ್ಯ ಮಹಾತ್ಮನಃ |
ವನವಾಸಾನ್ನಿವೃತ್ತಾಃ ಸ್ಮ ನ ಚ ಯುದ್ಧೇಷು ನಿರ್ಜಿತಾಃ ॥ 20 ॥
ಮಹಾತ್ಮನಾದ ಅವನ ಬಾಹುಬಲವನ್ನು ಆಶ್ರಯಿಸಿ, ನಾವು ವನವಾಸದಿಂದ ಹಿಂದಿರುಗಿದ್ದೇವೆ ಮತ್ತು ಯುದ್ಧದಲ್ಲಿ ಪರಾಭವವನ್ನು ಹೊಂದಿಲ್ಲ.
ಇತೋ ಗತೇ ಭೀಮಸೇನೇ ಸಾತ್ವತಂ ಪ್ರತಿ ಪಾಂಡವೇ |
ಸನಾಥೌ ಭವಿತಾರೌ ಹಿ ಯುಧಿ ಸಾತ್ವತಫಲ್ಗುನೌ ॥ 21 ॥
ಪಾಂಡವನಾದ ಭೀಮಸೇನನು ಸಾತ್ಯಕಿಯನ್ನು ಹುಡುಕಲು ಇಲ್ಲಿಂದ ಹೊರಟರೆ ರಣರಂಗದಲ್ಲಿ ಅರ್ಜುನ-ಸಾತ್ಯಕಿಯರು ಸನಾಥರಾಗುವರು.
ಕಾಮಂ ತ್ವಶೋಚನೀಯೌ ತೌ ರಣೇ ಸಾತ್ವತಫಲ್ಗುನೌ |
ರಕ್ಷಿತೌ ವಾಸುದೇವೇನ ಸ್ವಯಂ ಚಾಸ್ತ್ರವಿಶಾರದೌ ॥ 22 ॥
ವಸ್ತುತಃ ಯುದ್ಧದಲ್ಲಿ ಸಾತ್ಯಕಿ ಮತ್ತು ಅರ್ಜುನರನ್ನು ಕುರಿತು ಶೋಕಪಡಬೇಕಾದ ಕಾರಣವಿಲ್ಲ. ಅವರು ಕೃಷ್ಣನಿಂದ ರಕ್ಷಿತರೂ ಮತ್ತು ಸ್ವತಃ ಅಸ್ತ್ರವಿಶಾರದರೂ ಆಗಿದ್ದಾರೆ.
ಅವಶ್ಯಂ ತು ಮಯಾ ಕಾರ್ಯಮಾತ್ಮನಃ ಶೋಕನಾಶನಮ್ |
ತಸ್ಮಾದ್ ಭೀಮಂ ನಿಯೋಕ್ಷ್ಯಾಮಿ ಸಾತ್ವತಸ್ಯ ಪದಾನುಗಮ್ |
ತತಃ ಪ್ರತಿಕೃತಂ ಮನ್ಯೇ ವಿಧಾನಂ ಸಾತ್ಯಕಿಂ ಪ್ರತಿ ॥ 23 ॥

ಆದರೆ ನಾನು ಅವಶ್ಯವಾಗಿ ನನ್ನ ಶೋಕವನ್ನು ಪರಿಹರಿಸುವ ಕಾರ್ಯವನ್ನು ಮಾಡಬೇಕು. ಆದ್ದರಿಂದ ಸಾತ್ಯಕಿಯನ್ನು ಹುಡುಕಲು ಭೀಮಸೇನನಿಗೆ ಆದೇಶಿಸುವೆನು. ಆಗ ಸಾತ್ಯಕಿಯು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲ್ಪಡುತ್ತದೆ ಎಂದು ಭಾವಿಸುತ್ತೇನೆ (ಎಂದು ಚಿಂತಿಸಿದನು).
ಏವಂ ನಿಶ್ಚಿತ್ಯ ಮನಸಾ ಧರ್ಮಪುತ್ರೋ ಯುಧಿಷ್ಠಿರಃ |
ಯಂತಾರಮಬ್ರವೀದ್ರಾಜನ್ ಭೀಮಂ ಪ್ರತಿ ನಯಸ್ವ ಮಾಮ್ ॥ 24 ॥
ಧರ್ಮಪುತ್ರನಾದ ಯುಧಿಷ್ಠಿರನು ಮನಸ್ಸಿನಲ್ಲಿ ಹೀಗೆ ನಿಶ್ಚಯಿಸಿ ಎಲೈ ರಾಜನೇ, ತನ್ನ ಸಾರಥಿಯನ್ನು ಕುರಿತು ಭೀಮನ ಬಳಿಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದನು.
ಧರ್ಮರಾಜವಚಃ ಶ್ರುತ್ವಾ ಸಾರಥಿರ್ಹಯಕೋವಿದಃ |
ರಥಂ ಹೇಮಪರಿಷ್ಕಾರಂ ಭೀಮಾಂತಿಕಮುಪಾನಯತ್ ॥ 25 ॥
ಧರ್ಮರಾಜನ ಮಾತನ್ನು ಕೇಳಿ ಅಶ್ವಕೋವಿದನಾದ ಸಾರಥಿಯು ಸುವರ್ಣಾಲಂಕೃತವಾದ ರಥವನ್ನು ಭೀಮನ ಬಳಿಗೆ ತೆಗೆದುಕೊಂಡು ಹೋದನು.
ಭೀಮಸೇನಮನುಪ್ರಾಪ್ಯ ಪ್ರಾಪ್ತಕಾಲಮನುಸ್ಮರನ್ |
ಕಶ್ಮಲಂ ಪ್ರಾವಿಶದ್ ರಾಜಾ ಬಹು ತತ್ರ ಸಮಾದಿಶನ್ ॥ 26 ॥
ಯಃ ಸದೇವಾನ್ ಸಗಂಧರ್ವಾನ್ ದೈತ್ಯಾಂಶ್ಚೈಕರಥೋಽಜಯತ್ |
ತಸ್ಯ ಲಕ್ಷ ್ಮ ನ ಪಶ್ಯಾಮಿ ಭೀಮಸೇನಾನುಜಸ್ಯ ತೇ ॥ 27 ॥
ರಾಜನಾದ ಯುಧಿಷ್ಠಿರನು ಭೀಮಸೇನನನ್ನು ಸಮೀಪಿಸಿ, ಆಗ ಮಾಡಬೇಕಾದ ಕಾರ್ಯವನ್ನು ಚಿಂತಿಸಿ, ವಿಷಾದವನ್ನು ಹೊಂದಿ, ಬಹಳ ರೀತಿಯಲ್ಲಿ ಆದೇಶ ಮಾಡಿದನು. ಎಲೈ ಭೀಮಸೇನನೇ, ಯಾವನು ಒಂದು ರಥದಲ್ಲಿ ನಿಂತು ದೇವತೆಗಳಿಂದಲೂ, ಗಂಧರ್ವರಿಂದಲೂ ಸಹಿತರಾದ ದೈತ್ಯರನ್ನು ಜಯಿಸಿದನೋ ಅಂತಹ ತಮ್ಮನಾದ ಅರ್ಜುನನ ಚಿಹ್ನೆಯನ್ನು ಕಾಣುತ್ತಿಲ್ಲ (ಎಂದು ಹೇಳಿದನು).
ತತೋಽಬ್ರವೀದ್ ಧರ್ಮರಾಜಂ ಭೀಮಸೇನಸ್ತಥಾಗತಮ್ |
ನೈವಾದ್ರಾಕ್ಷಂ ನ ಚಾಶ್ರೌಷಂ ತವ ಕಶ್ಮಲಮೀದೃಶಮ್ ॥ 28 ॥
ಪುರಾ ಹಿ ದುಃಖದೀರ್ಣಾನಾಂ ಭವಾನ್ ಗತಿರಭೂದ್ಧಿ ನಃ |
ಉತ್ತಿಷ್ಠೋತ್ತಿಷ್ಠ ರಾಜೇಂದ್ರ ಶಾಧಿ ಕಿಂ ಕರವಾಣಿ ತೇ ॥ 29 ॥
ನ ಹ್ಯಸಾಧ್ಯಮಕಾರ್ಯಂ ವಾ ವಿದ್ಯತೇ ಮಮ ಮಾನದ |
ಆಜ್ಞಾಪಯ ಕುರುಶ್ರೇಷ್ಠ ಮಾ ಚ ಶೋಕೇ ಮನಃ ಕೃಥಾಃ ॥ 30 ॥
ಆ ಅವಸ್ಥೆಯಲ್ಲಿದ್ದ ಧರ್ಮರಾಜನನ್ನು ಕುರಿತು ಭೀಮಸೇನನು, ನಿನಗೆ ಉಂಟಾಗಿರುವ ಇಂತಹ ವಿಷಾದವನ್ನು ನಾನು ನೋಡಲೂ ಇಲ್ಲ, ಕೇಳಿಯೂ ಇಲ್ಲ. ಹಿಂದೆ ದುಃಖದಿಂದ ಬಿರಿದು ಹೋಗುವ ನಮಗೆ ನೀನು ಆಶ್ರಯನಾಗಿದ್ದೆ. ರಾಜೇಂದ್ರನೇ ಎದ್ದೇಳು, ಎದ್ದೇಳು. ನಾನು ನಿನಗೆ ಏನು ಮಾಡಬೇಕೆಂದು ಶಾಸನವನ್ನು ಮಾಡು. ಎಲೈ ಮಾನದನೇ, ನನಗೆ ಅಸಾಧ್ಯವಾದುದು ಅಥವಾ ಮಾಡಲಾರದುದು ಯಾವುದೂ ಇಲ್ಲ. ಎಲೈ ಕುರುಶ್ರೇಷ್ಠನೇ, ನನಗೆ ಆಜ್ಞೆಯನ್ನು ಮಾಡು, ಮನಸ್ಸಿನಲ್ಲಿ ಶೋಕಪಡಬೇಡ ಎಂದು ಹೇಳಿದನು.
ತಮಬ್ರವೀದಶ್ರುಪೂರ್ಣಃ ಕೃಷ್ಣಸರ್ಪ ಇವ ಶ್ವಸನ್ |
ಭೀಮಸೇನಮಿದಂ ವಾಕ್ಯಂ ಪ್ರಮ್ಲಾನವದನೋ ನೃಪಃ ॥ 31 ॥
ಆಗ ಅಶ್ರುಪೂರ್ಣನೂ, ಬಾಡಿದ ಮುಖವುಳ್ಳವನೂ ಆದ ರಾಜನು ಕೃಷ್ಣಸರ್ಪದಂತೆ ನಿಟ್ಟುಸಿರನ್ನು ಬಿಡುತ್ತಾ ಭೀಮಸೇನನನ್ನು ಕುರಿತು ಈ ಮಾತನ್ನು ಆಡಿದನು.
ಯಥಾ ಶಂಖಸ್ಯ ನಿರ್ಘೋಷಃ ಪಾಂಚಜನ್ಯಸ್ಯ ಶ್ರೂಯತೇ |
ಪ್ರೇರಿತೋ ವಾಸುದೇವೇನ ಸಂರಬ್ಧೇನ ಯಶಸ್ವಿನಾ |
ನೂನಮದ್ಯ ಹತಃ ಶೇತೇ ತವ ಭ್ರಾತಾ ಧನಂಜಯಃ ॥ 32 ॥
ಕೀರ್ತಿವಂತನೂ, ಕೋಪಗೊಂಡವನೂ ಆದ ಕೃಷ್ಣನಿಂದ ಊದಲ್ಪಡುವ ಪಾಂಚಜನ್ಯದ ಘೋಷವನ್ನು ಕೇಳಿದರೆ ಈ ದಿನ ನಿನ್ನ ತಮ್ಮನಾದ ಅರ್ಜುನನು ಮೃತನಾಗಿ ಮಲಗಿದ್ದಾನೆ ಎನಿಸುತ್ತದೆ.
ತಸ್ಮಿನ್ ವಿನಿಹತೇ ನೂನಂ ಯುದ್ಧ್ಯತೇಽಸೌ ಜನಾರ್ದನಃ |
ಯಸ್ಯ ಸತ್ತ್ವವತೋ ವೀರ್ಯಮುಪಜೀವಂತಿ ಪಾಂಡವಾಃ ॥ 33 ॥
ಅವನು ಮೃತನಾಗುತ್ತಿರಲು ಯಾರ ಬಲವನ್ನು ಮತ್ತು ಪರಾಕ್ರಮವನ್ನು ಪಾಂಡವರು ಉಪಜೀವಿಸಿಕೊಂಡಿದ್ದಾರೆಯೋ ಅಂತಹ ಈ ಜನಾರ್ದನನೇ ಖಂಡಿತವಾಗಿ ಯುದ್ಧವನ್ನು ಮಾಡುತಿತದ್ದಾನೆ.
ಯಂ ಭಯೇಷ್ವಭಿಗಚ್ಛಂತಿ ಸಹಸ್ರಾಕ್ಷಮಿವಾಮರಾಃ |
ಸ ಶೂರಃ ಸೈಂಧವಪ್ರೇಪ್ಸುರನ್ವಯಾದ್ ಭಾರತೀಂ ಚಮೂಮ್ ॥ 34 ॥
ಭಯವುಂಟಾದಾಗ ದೇವತೆಗಳು ಇಂದ್ರನನ್ನು ಆಶ್ರಯಿಸುವಂತೆ ಯೋಧರು ಯಾವ ಶೂರನನ್ನು ಆಶ್ರಯಿಸುತ್ತಾರೋ ಅಂತಹ ಅರ್ಜುನನು ಸೈಂಧವನ ವಧೆ ಮಾಡಲು ಕೌರವರ ಸೈನ್ಯವನ್ನು ಪ್ರವೇಶಿಸಿದ್ದಾನೆ.
ತಸ್ಯ ವೈ ಗಮನಂ ವಿದ್ಮೋ ಭೀಮ ನಾವರ್ತನಂ ಪುನಃ |
ಶ್ಯಾಮೋ ಯುವಾ ಗುಡಾಕೇಶೋ ದರ್ಶನೀಯೋ ಮಹಾಭುಜಃ ॥35॥
ವ್ಯೂಢೋರಸ್ಕೋ ಮಹಾಸ್ಕಂಧೋ ಮತ್ತದ್ವಿರದವಿಕ್ರಮಃ |

ಚಕೋರನೇತ್ರಸ್ತಾರಾಕ್ಷೋ ದ್ವಿಷತಾಮಘವರ್ಧನಃ ॥ 36 ॥
ಎಲೈ ಭೀಮನೇ, ಅವನು ಅಲ್ಲಿಗೆ ಹೋದದ್ದನ್ನು ಕೇಳಿದ್ದೇವೆ. ಅವನ ಹಿಂದಿರುಗುವಿಕೆಯು ತಿಳಿದಿಲ್ಲ. ಅವನು ಶ್ಯಾಮವರ್ಣದವನು, ಯುವಕ, ನಿದ್ರೆಯನ್ನು ಗೆದ್ದವನು, ಮಹಾಭುಜ, ತುಂಬಿದ ಎದೆಯುಳ್ಳವನು, ಮದಗಜದ ವಿಕ್ರಮವುಳ್ಳವನು, ಚಕೋರನೇತ್ರನು, ತಾಮ್ರಾಕ್ಷನು, ಶತ್ರುಗಳಿಗೆ ಹೆಚ್ಚಿನ ಅಪಚಾರವನ್ನು ಮಾಡುವವನು.
ತದಿದಂ ಮಮ ಭದ್ರಂ ತೇ ಶೋಕಸ್ಥಾನಮರಿಂದಮ |
ಅರ್ಜುನಾರ್ಥಂ ಮಹಾಬಾಹೋ ಸಾತ್ವತಸ್ಯ ಚ ಕಾರಣಾತ್ ॥ 37 ॥
ವರ್ಧತೇ ಹವಿಷೇವಾಗ್ನಿ ರಿದ್ಧ್ಯಮಾನಃ ಪುನಃ ಪುನಃ |
ತಸ್ಯ ಲಕ್ಷ ್ಮ ನ ಪಶ್ಯಾಮಿ ತೇನ ವಿಂದಾಮಿ ಕಶ್ಮಲಮ್ ॥ 38 ॥
ಎಲೈ ಭೀಮನೇ, ನಿನಗೆ ಮಂಗಳವಾಗಲಿ. ಎಲೈ ಮಹಾಬಾಹುವೇ, ಅರ್ಜುನನ ಸಲುವಾಗಿ ಮತ್ತು ಸಾತ್ಯಕಿಯ ಸಲುವಾಗಿ ಈ ನನ್ನ ಶೋಕಸ್ಥಾನವು ಉಂಟಾಗಿದೆ. ಆ ಶೋಕವು ಹವಿಸ್ಸನ್ನು ಹಾಕಿದ ಅಗ್ನಿಯಂತೆ ಪುನಃ ಪುನಃ ಜ್ವಲಿಸುತ್ತಿದೆ. ಅವನ ಚಿಹ್ನೆಯು ಕಾಣುತ್ತಿಲ್ಲ. ಆದ್ದರಿಂದ ವಿಷಾದವನ್ನು ಹೊಂದಿದ್ದೇನೆ.
ತಂ ವಿದ್ಧಿ ಪುರುಷವ್ಯಾಘ್ರಂ ಸಾತ್ವತಂ ಚ ಮಹಾರಥಮ್ |
ಸ ತಂ ಮಹಾರಥಂ ಪಶ್ಚಾದನುಯಾತಸ್ತವಾನುಜಮ್ |
ತಮಪಶ್ಯನ್ ಮಹಾಬಾಹುಮಹಂ ವಿಂದಾಮಿ ಕಶ್ಮಲಮ್ ॥ 39 ॥
ಪುರುಷವ್ಯಾಘ್ರನಾದ ಅವನನ್ನು ಮತ್ತು ಮಹಾರಥನಾದ ಸಾತ್ಯಕಿಯನ್ನು ತಿಳಿ. ಸಾತ್ಯಕಿಯು ಮಹಾರಥನಾದ ನಿನ್ನ ತಮ್ಮನನ್ನು ಅನುಸರಿಸಿ ಹೋಗಿದ್ದಾನೆ. ಆ ಮಹಾಬಾಹುವನ್ನು ಕಾಣದೆ ನಾನು ಕಶ್ಮಲವನ್ನು ಹೊಂದಿದ್ದೇನೆ.
ತಸ್ಮಾತ್ ಕೃಷ್ಣೋ ರಣೇ ನೂನಂ ಯುದ್ಧ್ಯತೇ ಯುದ್ಧಕೋವಿದಃ |
ಯಸ್ಯ ವೀರ್ಯವತೋ ವೀರ್ಯಮುಪಜೀವಂತಿ ಪಾಂಡವಾಃ ॥ 40 ॥
ಆದ್ದರಿಂದ ಪರಾಕ್ರಮಶಾಲಿಯಾದ ಯಾವನ ಪರಾಕ್ರಮವನ್ನು ಪಾಂಡವರು ಉಪಜೀವಿಸುತ್ತಾರೆಯೋ ಅಂತಹ ಪರಾಕ್ರಮಶಾಲಿಯಾದ ಕೃಷ್ಣನು ತಾನೇ ಯುದ್ಧವನ್ನು ಮಾಡುತ್ತಿದ್ದಾನೆ.
ಸ ತತ್ರ ಗಚ್ಛ ಕೌಂತೇಯ ಯತ್ರ ಯಾತೋ ಧನಂಜಯಃ |
ಸಾತ್ಯಕಿಶ್ಚ ಮಹಾವೀರ್ಯಃ ಕರ್ತವ್ಯಂ ಯದಿ ಮನ್ಯಸೇ |
ವಚನಂ ಮಮ ಧರ್ಮಜ್ಞ ಜ್ಯೇಷ್ಠೋ ಭ್ರಾತಾ ಭವಾಮಿ ತೇ ॥ 41 ॥
ಎಲೈ ಕೌಂತೇಯನೇ, ನಾನು ನಿನಗೆ ಅಣ್ಣನಾಗಿದ್ದೇನೆ. ಧರ್ಮಜ್ಞನಾದವನೇ, ನನ್ನ ಮಾತಿನಲ್ಲಿ ನಿನಗೆ ಗೌರವವಿದ್ದರೆ ಧನಂಜಯನೂ ಮತ್ತು ಮಹಾವೀರನಾದ ಸಾತ್ಯಕಿಯೂ ಎಲ್ಲಿದ್ದಾರೆಯೋ ಅಲ್ಲಿಗೆ ಹೋಗು.
ನ ತೇಽರ್ಜುನಸ್ತಥಾ ಜ್ಞೇಯೋ ಜ್ಞಾತವ್ಯಃ ಸಾತ್ಯಕಿರ್ಯಥಾ |
ಚಿಕೀರ್ಷುರ್ಮತ್ಪ್ರಿಯಂ ಪಾರ್ಥ ಪ್ರಯಾತಃ ಸವ್ಯಸಾಚಿನಃ |
ಪದವೀಂ ದುರ್ಗಮಾಂ ಘೋರಾಮಗಮ್ಯಾಮಕೃತಾತ್ಮಭಿಃ ॥ 42 ॥
ಸಾತ್ಯಕಿಯನ್ನು ತಿಳಿಯಬೇಕಾದ ರೀತಿಯಲ್ಲಿ ಅರ್ಜುನನನ್ನು ತಿಳಿಯಬೇಕಾದ ಅವಶ್ಯಕತೆ ಇಲ್ಲ. ಎಲೈ ಪಾರ್ಥನೇ, ನನಗೆ ಪ್ರಿಯವನ್ನು ಮಾಡಲು ಬಯಸಿ ಸಾತ್ಯಕಿಯು ದುರ್ಗಮವಾದ, ಘೋರವಾದ, ಧೈರ್ಯಶಾಲಿಯೂ ಪ್ರವೇಶ ಮಾಡಲಾರದ ಅರ್ಜುನನ ಪದವಿಯನ್ನು ಅನುಸರಿಸಿ ಹೋಗಿದ್ದಾನೆ.
ಭೀಮಸೇನಃ
ಬ್ರಹ್ಮೇಶಾನೇಂದ್ರವರುಣಾನವಹದ್ ಯಃ ಪುರಾ ರಥಃ |
ತಮಾಸ್ಥಾಯ ಗತೌ ಕೃಷ್ಣೌ ನ ತಯೋರ್ವಿದ್ಯತೇ ಭಯಮ್ ॥ 43 ॥
ಆಜ್ಞಾಂ ತು ಶಿರಸಾ ಬಿಭ್ರದೇಷ ಗಚ್ಛಾಮಿ ಮಾ ಶುಚಃ |
ಸಮೇತ್ಯ ತಾನ್ ನರವ್ಯಾಘ್ರಾಂಸ್ತವ ದಾಸ್ಯಾಮಿ ಸಂವಿದಮ್ ॥ 44 ॥
ಭೀಮಸೇನ ಯಾವ ರಥವು ಹಿಂದೆ ಬ್ರಹ್ಮ-ರುದ್ರ-ಇಂದ್ರ-ವರುಣರನ್ನು ಕರೆದುಕೊಂಡು ಹೋಗಿದೆಯೋ ಅಂತಹ ರಥದಲ್ಲಿರುವ ಕೃಷ್ಣಾರ್ಜುನರಿಗೆ ಯಾವ ಭಯವೂ ಇಲ್ಲ. ಆದರೆ ನಿನ್ನ ಆಜ್ಞೆಯನ್ನು ಶಿರಸಾ ಧರಿಸಿ ನಾನು ಹೋಗುತ್ತಿದ್ದೇನೆ. ದುಃಖಪಡಬೇಡ. ನಾನು ಆ ನರವ್ಯಾಘ್ರರನ್ನು ಸಂಧಿಸಿ ನಿನಗೆ ಸೂಚನೆಯನ್ನು ಕೊಡುವೆನು.
ಸಂಜಯಃ
ಏತಾವದುಕತ್ವ ಪ್ರಯಯೌ ಪರಿಧಾಯ ಯುಧಿಷ್ಠಿರಮ್ |
ಧೃಷ್ಟದ್ಯುಮ್ನಾಯ ಬಲವಾನ್ ಸುಹೃದ್ಭ್ಯಶ್ಚ ಪುನಃ ಪುನಃ |
ಧೃಷ್ಟದ್ಯುಮ್ನಂ ಚೇದಮಾಹ ಭೀಮಸೇನೋ ಮಹಾಬಲಃ ॥ 45 ॥
ಸಂಜಯ ಇಷ್ಟನ್ನು ಹೇಳಿ ಬಲಿಷ್ಠನಾದ ಭೀಮಸೇನನು ಯುಧಿಷ್ಠಿರನನ್ನೂ, ಧೃಷ್ಟದ್ಯುಮ್ನನನ್ನೂ ಮತ್ತು ಸುಹೃದರನ್ನು ಬಿಡಿಸಿಕೊಂಡು ಹೊರಟು ಮಹಾಬಲನಾದ ಅವನು ಪುನಃ ಪುನಃ ಧೃಷ್ಟದ್ಯುಮ್ನನನ್ನು ಕುರಿತು ಈ ಮಾತನ್ನು ಆಡಿದನು.
ವಿದಿತಂ ತೇ ಮಹಾಬಾಹೋ ಯಥಾ ದ್ರೋಣೋ ಮಹಾರಥಃ |
ಗೃಹಣೇ ಧರ್ಮರಾಜಸ್ಯ ಸರ್ವೋಪಾಯೇನ ವರ್ತತೇ ॥ 46 ॥
ಎಲೈ ಮಹಾಬಾಹುವೇ, ಮಹಾರಥರಾದ ದ್ರೋಣರು ಹೇಗೆ ಸರ್ವೋಪಾಯದಿಂದ ಧರ್ಮರಾಜನನ್ನು ಹಿಡಿಯಲು ಪ್ರತಿಜ್ಞೆಯನ್ನು ಮಾಡಿದ್ದಾರೆ ಎಂಬುದು ನಿನಗೆ ತಿಳಿದಿದೆ.
ನ ಚ ಮೇ ಗಮನೇ ಕೃತ್ಯಂ ತಾದೃಕ್ ಪಾರ್ಷತ ವಿದ್ಯತೇ |

ಯಾದೃಶಂ ರಕ್ಷಣೇ ರಾಜ್ಞಃ ಕಾರ್ಯಮಾತ್ಯಯಿಕಂ ಹಿ ನಃ ॥ 47 ॥
ಎಲೈ ಧೃಷ್ಟದ್ಯುಮ್ನನೇ, ನನಗೆ ರಾಜನನ್ನು ರಕ್ಷಣೆ ಮಾಡುವುದು ಎಂತಹ ದೊಡ್ಡ ಕಾರ್ಯವಾಗಿದೆಯೋ ಇಲ್ಲಿಂದ ಅರ್ಜುನನನ್ನು ನೋಡಲು ಹೊರಡುವುದು ಅಷ್ಟು ದೊಡ್ಡ ಕಾರ್ಯವಾಗಿ ಕಾಣುವುದಿಲ್ಲ.
ಏವಮುಕ್ತೋಽಸ್ಮಿ ಪಾರ್ಥೇನ ಪ್ರತಿವಕ್ತುಂ ಸ್ಮ ನೋತ್ಸಹೇ |
ಪ್ರಯಾಸ್ಯೇ ತತ್ರ ಯತ್ರಾಸೌ ಮುಮೂರ್ಷುಃ ಸೈಂಧವಃ ಸ್ಥಿತಃ ॥
ಧರ್ಮರಾಜಸ್ಯ ವಚನೇ ಸ್ಥಾತವ್ಯಮವಿಶಂಕಯಾ ॥ 48 ॥
ಆದರೆ ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟಿದ್ದೇನೆ. ನಾನು ಅವನಿಗೆ ಪ್ರತಿಯಾಗಿ ಮಾತನಾಡಲಾರೆ. ಮರಣವು ಸನ್ನಿಹಿತನಾದ ಆ ಸೈಂಧವನು ಎಲ್ಲಿದ್ದಾನೆಯೋ ಅಲ್ಲಿಗೆ ನಾನು ಹೋಗುವೆನು. ಧರ್ಮರಾಜನ ಮಾತನ್ನು ನಾನು ನಿಶ್ಶಂಕೆಯಿಂದ ಪಾಲಿಸಬೇಕಷ್ಟೆ!
ಸೋಽದ್ಯ ಯತ್ತೋ ರಣೇ ಪಾರ್ಥಂ ಪರಿರಕ್ಷ ಯುಧಿಷ್ಠಿರಮ್ |
ಏತದ್ಧಿ ಸರ್ವಕಾರ್ಯಾಣಾಂ ಪರಮಂ ಕೃತ್ಯಮಾಹವೇ ॥ 49 ॥
ಆದ್ದರಿಂದ ಈ ದಿನ ನೀನು ಎಚ್ಚರಿಕೆಯಿಂದ ರಣರಂಗದಲ್ಲಿ ಯುಧಿಷ್ಠಿರನನ್ನು ರಕ್ಷಿಸು. ರಣರಂಗದಲ್ಲಿ ಎಲ್ಲ ಕಾರ್ಯಗಳಿಗಿಂತಲೂ ಇದು ನೀನು ಅವಶ್ಯವಾಗಿ ಮಾಡಬೇಕಾದ ಶ್ರೇಷ್ಠವಾದ ಕಾರ್ಯ (ಎಂದು ಹೇಳಿದನು).
ತಮಬ್ರವೀನ್ಮಹಾರಾಜ ಧೃಷ್ಟದ್ಯುಮ್ನೋ ವೃಕೋದರಮ್ |
ಈಪ್ಸಿತೇನ ಮಹಾಬಾಹೋ ಗಚ್ಛ ಪಾರ್ಥಾವಿಚಾರಯನ್ ॥ 50 ॥
ನಾಹತ್ವಾ ಸಮರೇ ದ್ರೋಣೋ ಧೃಷ್ಟದ್ಯುಮ್ನಂ ಕಥಂಚನ |
ನಿಗ್ರಹಂ ಧರ್ಮರಾಜಸ್ಯ ಪ್ರಕರಿಷ್ಯತಿ ಸಂಯುಗೇ ॥ 51 ॥
ಎಲೈ ಮಹಾರಾಜನೇ, ಆಗ ಧೃಷ್ಟದ್ಯುಮ್ನನು ಭೀಮಸೇನನನ್ನು ಕುರಿತು- `ಎಲೈ ಮಹಾಬಾಹುವೇ, ಪಾರ್ಥನೇ, ಯಾವ ಸಂಶಯವನ್ನೂ ಹೊಂದದೆ ನಿನ್ನ ಇಷ್ಟಸಿದ್ಧಿಗಾಗಿ ನೀನು ಹೊರಡು. ಧೃಷ್ಟದ್ಯುಮ್ನನಾದ ನನ್ನನ್ನು ರಣರಂಗದಲ್ಲಿ ಕೊಲ್ಲದೆ ದ್ರೋಣರು ಧರ್ಮರಾಜನ ನಿಗ್ರಹವನ್ನು ಮಾಡಲು ಸಾಧ್ಯವಿಲ್ಲ' ಎಂದು ಹೇಳಿದನು.
ತತೋ ನಿಕ್ಷಿಪ್ಯ ರಾಜಾನಂ ಧೃಷ್ಟದ್ಯುಮ್ನಾಯ ಪಾಂಡವಃ |
ಅಭಿವಾದ್ಯ ಗುರುಂ ಜ್ಯೇಷ್ಠಂ ಪ್ರಯಯೌ ಯತ್ರ ಫಲ್ಗುನಃ ॥ 52 ॥
ಆಗ ಪಾಂಡವನಾದ ಭೀಮಸೇನನು ರಾಜನಾದ ಯುಧಿಷ್ಠಿರನನ್ನು ಧೃಷ್ಟದ್ಯುಮ್ನನ ವಶಕ್ಕೆ ಒಪ್ಪಿಸಿ ತನ್ನ ಗುರುವೂ, ಹಿರಿಯನೂ ಆದ ಯುಧಿಷ್ಠಿರನಿಗೆ ನಮಸ್ಕರಿಸಿ ಅರ್ಜುನನಿದ್ದಲ್ಲಿಗೆ ಹೊರಟನು.
ಪರಿಷ್ವಕ್ತಸ್ತು ಕೌಂತೇಯೋ ಧರ್ಮರಾಜೇನ ಭಾರತ |
ಆಘ್ರಾತಶ್ಚ ತಥಾ ಮೂರ್ಧ್ನಿ ಶ್ರಾವಿತಶ್ಚಾಶಿಷಃ ಶುಭಾಃ ॥ 53 ॥
ಭೀಮಸೇನೋ ಮಹಾಬಾಹುಃ ಕವಚೀ ಶುಭಕುಂಡಲೀ |
ಸಾಂಗದಃ ಸತನುತ್ರಾಣಃ ಸಶರೀ ರಥಿನಾಂ ವರಃ ॥ 54 ॥
ಎಲೈ ಭಾರತನೇ, ಕೌಂತೇಯನಾದ ಭೀಮಸೇನನು ಧರ್ಮರಾಜನಿಂದ ಆಲಿಂಗಿಸಲ್ಪಟ್ಟು, ಪುನಃ ಪುನಃ ಶಿರಸ್ಸಿನಲ್ಲಿ ಆಘ್ರಾಣಿಸಲ್ಪಟ್ಟು, ಅವನಿಂದ ಒಳ್ಳೆಯ ಆಶೀರ್ವಾದಗಳನ್ನು ಕೇಳಿ, ಮಹಾಬಾಹುವಾದ ರಥಿಶ್ರೇಷ್ಠನಾದ ಭೀಮಸೇನನು ಕವಚವನ್ನೂ, ಶುಭಕುಂಡಲಗಳನ್ನೂ, ಅಂಗದಗಳನ್ನೂ, ಕವಚವನ್ನೂ ಧರಿಸಿ ಬಾಣವನ್ನು ಹಿಡಿದು (ಹೊರಟನು).
ತಸ್ಯ ಕಾರ್ಷ್ಣಾಯಸಂ ವರ್ಮ ಹೇಮಚಿತ್ರಂ ಮಹರ್ದ್ಧಿಮತ್ |
ವಿಬಭೌ ಪರ್ವತಶ್ಲಿಷ್ಟಃ ಸವಿದ್ಯುದಿವ ತೋಯದಃ ॥ 55 ॥
ಅವನ ಬಹಳ ಬೆಲೆಬಾಳುವ ಸುವರ್ಣಖಚಿತವಾದ ಕಬ್ಬಿಣದ ಕವಚವು ಪರ್ವತದಿಂದ ಆಲಿಂಗಿತವಾದ, ಮಿಂಚಿನಿಂದ ಕೂಡಿದ ಮೋಡದಂತೆ ಕಂಗೊಳಿಸಿತು.
ಪೀತರಕ್ತಾಸಿತಸಿತೈರ್ವಾಸೋಭಿಶ್ಚ ಸುವೇಷ್ಟಿತಃ |
ಕಂಠತ್ರಾಣೇನ ಚ ಬಭೌ ಸೇಂದ್ರಾಯುಧ ಇವಾಂಬುದಃ ॥ 56 ॥
ಹಳದಿ, ಕೆಂಪು, ಕಪ್ಪು ಮತ್ತು ಬಿಳಿಯ ಬಣ್ಣದ ವಸ್ತ್ರಗಳನ್ನು ಧರಿಸಿದ ಅವನು ಕಂಠತ್ರಾಣವನ್ನು ಧರಿಸಿ ಕಾಮನಬಿಲ್ಲಿನಿಂದ ಶೋಭಿಸುವ ಮೋಡದಂತೆ ಶೋಭಿಸಿದನು.
ಪ್ರಯಾತೇ ಭೀಮಸೇನೇ ತು ತವ ಸೈನ್ಯಂ ಯುಯುತ್ಸಯಾ |
ಪಾಂಚಜನ್ಯರವೋ ಘೋರಃ ಪುನರಾಸೀದ್ ವಿಶಾಂಪತೇ ॥ 57 ॥
ನಿನ್ನ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಭೀಮಸೇನನು ಅಲ್ಲಿಂದ ಹೊರಡುತ್ತಿರಲು ಎಲೈ ರಾಜನೇ, ಪುನಃ ಪಾಂಚಜನ್ಯದ ಘೋರವಾದ ಘೋಷವು ಕೇಳಿಬಂದಿತು.
ತಂ ಶ್ರುತ್ವಾ ನಿನದಂ ಘೋರಂ ತ್ರೈಲೋಕ್ಯತ್ರಾಸನಂ ಮಹತ್ |
ಪುನರ್ಭೀಮಂ ಮಹಾಬಾಹುರ್ಧರ್ಮಪುತ್ರೋಽಭ್ಯಭಾಷತ ॥ 58 ॥
ತ್ರೈಲೋಕ್ಯಭೀಷಣವಾದ, ಘೋರವಾದ ಆ ದೊಡ್ಡ ಘೋಷವನ್ನು ಕೇಳಿದ ಮಹಾಬಾಹುವಾದ ಯುಧಿಷ್ಠಿರನು ಭೀಮನನ್ನು ಕುರಿತು ಪುನಃ ಮಾತನಾಡಿದನು.
ಏಷ ವೃಷ್ಣಿಪ್ರವೀರೇಣ ಧ್ಮಾತಃ ಸಲಿಲಜೋ ಭೃಶಮ್ |
ಪೃಥಿವೀಂ ಚಾಂತರಿಕ್ಷಂ ಚ ವಿನಾದಯತಿ ಶಂಖರಾಟ್ ॥ 59 ॥
ವೃಷ್ಣಿವೀರನಾದ ಕೃಷ್ಣನಿಂದ ಊದಲ್ಪಡುತ್ತಿರುವ ಈಶ್ರೇಷ್ಠ ಜಲಜವಾದ ಶಂಖವು ಭೂಮಿಯನ್ನೂ, ಅಂತರಿಕ್ಷವನ್ನೂ ತನ್ನ ನಾದದಿಂದ ತುಂಬುತ್ತಿದೆ.

ನೂನಂ ವ್ಯಸನಮಾಪನ್ನೇ ಸುಮಹತ್ ಸವ್ಯಸಾಚಿನಿ |
ಕುರುಭಿರ್ಯುಧ್ಯತೇ ಸಾರ್ಧಂ ಸರ್ವೈಶ್ಚಕ್ರಗದಾಧರಃ ॥ 60 ॥
ಖಂಡಿತವಾಗಿ ಅರ್ಜುನನು ದೊಡ್ಡ ವ್ಯಸನವನ್ನು ಹೊಂದಿರುವಾಗ ಚಕ್ರಗದಾಧರನಾದ ಕೃಷ್ಣನು ಎಲ್ಲ ಕುರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ.
ನೂನಮಾರ್ಯಾ ಮಹತ್ಕುಂತೀ ಪಾಪಮದ್ಯ ನಿದರ್ಶನಮ್ |
ದ್ರೌಪದೀ ಚ ಸುಭದ್ರಾ ಚ ಪಶ್ಯಂತಿ ಸಹ ಬಂಧುಭಿಃ ॥ 61 ॥
ಖಂಡಿತವಾಗಿ ಈ ದಿನ ಪೂಜ್ಯಳಾದ ಕುಂತಿಯೂ, ದ್ರೌಪದಿಯೂ, ಸುಭದ್ರೆಯೂ, ತಮ್ಮ ಬಂಧುಗಳ ಜೊತೆಯಲ್ಲಿ ದೊಡ್ಡ ಅನರ್ಥವನ್ನು ನೋಡುತ್ತಾರೆ.
ಸ ಭೀಮಸ್ತ್ವರಯಾ ಯುಕ್ತೋ ಯಾಹಿ ಯತ್ರ ಧನಂಜಯಃ |
ಮುಹ್ಯಂತೀವ ಹಿ ಮೇಽಂಗಾನಿ ಧನಂಜಯದಿದೃಕ್ಷಯಾ |
ದಿಶಃ ಸಪ್ರದಿಶಃ ಪಾರ್ಥ ಸಾತ್ವತಸ್ಯ ಚ ಕಾರಣಾತ್ |
ಗಚ್ಛ ಗಚ್ಛೇತಿ ಚ ಪುನರ್ಭೀಮಸೇನಮಭಾಷತ ॥ 62 ॥
ಆದ್ದರಿಂದ ಭೀಮನೇ, ಶೀಘ್ರವಾಗಿ ಅರ್ಜುನನಿರುವಲ್ಲಿಗೆ ಹೋಗು. ಅರ್ಜುನನನ್ನು ನೋಡುವ ಆಸೆಯಿಂದ ನನ್ನ ಅಂಗಗಳು ಶಿಥಿಲವಾಗುತ್ತಿವೆ. ಎಲೈ ಭೀಮಸೇನನೇ, ಸಾತ್ಯಕಿಯ ನಿಮಿತ್ತದಿಂದಾಗಿ ದಿಕ್ಕು-ವಿದಿಕ್ಕುಗಳು ಮಂಕಾಗುತ್ತಿವೆ. ಭೀಮಸೇನನೇ ಹೊರಡು ಹೊರಡು ಎಂದು ಅವನು ಪುನಃ ಭೀಮಸೇನನಿಗೆ ಹೇಳಿದನು.
ಭೃಶಂ ಸ ಪ್ರಹಿತೋ ಭ್ರಾತ್ರಾ ಭ್ರಾತಾ ಭ್ರಾತುಃ ಪ್ರಿಯಂಕರಃ |
ಆಹತ್ಯ ದುಂದುಭಿಂ ಭೀಮಃ ಶಂಖಂ ಪ್ರಧ್ಮಾಯ ಚಾಸಕೃತ್ ॥ 63 ॥
ವಿನದ್ಯ ಸಿಂಹನಾದಂ ಚ ಜ್ಯಾಂ ವಿಕರ್ಷನ್ ಪುನಃ ಪುನಃ |
ದರ್ಶಯನ್ ಘೋರಮಾತ್ಮಾನಮಮಿತ್ರಾನ್ ಸಹಸಾಭ್ಯಯಾತ್ ॥ 64 ॥
ಹೀಗೆ ಅಣ್ಣನಿಂದ ಕಳುಹಿಸಲ್ಪಟ್ಟ ಭೀಮನು ಅಣ್ಣನಿಗೆ ಪ್ರಿಯವನ್ನು ಮಾಡುವವನಾಗಿ, ದುಂದುಭಿಯನ್ನು ಬಾರಿಸಿ, ಅನೇಕ ಬಾರಿ ಶಂಖವನ್ನು ಊದಿ, ಸಿಂಹನಾದವನ್ನು ಮಾಡಿ, ಧನುಸ್ಸಿನ ಹೆದೆಯನ್ನು ಎಳೆಯುತ್ತಾ, ಶತ್ರುಗಳಿಗೆ ತನ್ನನ್ನು ಘೋರರೂಪನಾಗಿ ತೋರಿಸುತ್ತಾ ತಕ್ಷಣದಲ್ಲಿ ಹೊರಟನು.
ತಮೂಹುರ್ಜವನಾ ದಾಂತಾ ವಿಕುರ್ವಾಣಾ ಹಯೋತ್ತಮಾಃ |
ವಿಶೋಕೇನಾಭಿಸಂಯತ್ತಾ ಮನೋಮಾರುತರಂಹಸಃ ॥ 65 ॥
ವಿಶೋಕನಿಂದ ನಿಯಂತ್ರಿಸಲ್ಪಟ್ಟ, ಮನೋಮಾರುತವೇಗವುಳ್ಳ ಪಳಗಿದ ಶ್ರೇಷ್ಠವಾದ ಅಶ್ವಗಳು ವಿವಿಧ ಚೇಷ್ಟೆಗಳನ್ನು ಮಾಡುತ್ತಾ ಅವನನ್ನು ಕರೆದುಕೊಂಡು ಹೋದವು.
ಆರುಜನ್ ವಿರುಜನ್ ಪಾರ್ಥೋ ಜ್ಯಾಂ ವಿಕರ್ಷಂಶ್ಚ ಪಾಣಿನಾ |
ಸೋಽವಕರ್ಷನ್ ವಿಕರ್ಷಂಶ್ಚ ಸೇನಾಗ್ರಂ ಸಮಲೋಡಯತ್ ॥ 66 ॥
ಪಾರ್ಥನಾದ ಭೀಮಸೇನನು ಶತ್ರುಸೈನ್ಯವನ್ನು ಹಿಂಸಿಸುತ್ತಾ, ತನ್ನ ಹಸ್ತದಿಂದ ಧನುಸ್ಸಿನ ಹೆದೆಯನ್ನು ಎಳೆಯುತ್ತಾ, ಮೇಲ್ಭಾಗದಲ್ಲಿ ಮತ್ತು ಕೆಳಭಾಗದಲ್ಲಿ ಧನುಸ್ಸನ್ನು ತೂಗಾಡಿಸುತ್ತಾ ಕೌರವರ ಸೇನೆಯ ಮುಂಭಾಗವನ್ನು ಕಲಕಾಡಿದನು.
ತಂ ಪ್ರಯಾಂತಂ ಮಹಾಬಾಹುಂ ಪಾಂಚಾಲಾಃ ಸಹಸೋಮಕಾಃ |
ಪೃಷ್ಠತೋಽನುಯಯುಃ ಶೂರಾ ಮಘವಂತಮಿವಾಮರಾಃ ॥ 67 ॥
ಹಾಗೆ ಹೊರಟ ಮಹಾಬಾಹುವಾದ ಅವನನ್ನು ದೇವತೆಗಳು ಇಂದ್ರನನ್ನು ಅನುಸರಿಸಿದಂತೆ ಶೂರರಾದ ಪಾಂಚಾಲರು ಮತ್ತು ಸೋಮಕರು ಹಿಂಬಾಲಿಸಿದರು.
ತಂ ಸಸೇನಾ ಮಹಾರಾಜ ಸೋದರ್ಯಾಃ ಪರ್ಯವಾರಯನ್ |
ದುಃಶಲಶ್ಚಿತ್ರಸೇನಶ್ಚ ಕುಂಡಭೇದೀ ವಿವಿಂಶತಿಃ ॥ 68 ॥
ದುರ್ಮುಖೋ ದುಃಸಹಶ್ಚೈವ ವಿಕರ್ಣಶ್ಚ ಶಲಸ್ತಥಾ |
ವಿಂದಾನುವಿಂದೌ ಸುಮುಖೋ ದೀರ್ಘಬಾಹುಃ ಸುದರ್ಶನಃ ॥ 69 ॥
ವೃಂದಾರಕಃ ಸುಹಸ್ತಶ್ಚ ಸುಷೇಣೋ ದೀರ್ಘಲೋಚನಃ |
ಅಭಯೋ ರೌದ್ರಕರ್ಮಾ ಚ ಸುವರ್ಮಾ ದುರ್ವಿಮೋಚನಃ ॥ 70 ॥
ಎಲೈ ಮಹಾರಾಜನೇ, ಅವನನ್ನು ನಿನ್ನ ಪುತ್ರರಾದ ಸಹೋದರರಾದ ದುಶ್ಶಲ, ಚಿತ್ರಸೇನ, ಕುಂಡಭೇದಿ, ವಿವಿಂಶತಿ, ದುರ್ಮುಖ, ದುಸ್ಸಹ, ವಿಕರ್ಣ, ಶಲ, ವಿಂದಾನುವಿಂದರು, ಸುಮುಖ, ದೀರ್ಘಬಾಹು, ವೃಂದಾರಕ, ಸುಹಸ್ತ, ಸುಷೇಣ, ದೀರ್ಘಲೋಚನ, ಅಭಯ, ರೌದ್ರಕರ್ಮ, ಸುವರ್ಮ, ದುರ್ವಿಮೋಚನ- ಇವರು ಸುತ್ತುವರಿದರು.
ವಿವಿಧೈ ರಥಿನಾಂ ಶ್ರೇಷ್ಠಾಃ ಸಹ ಸೈನ್ಯೈಃ ಸಹಾನುಗೈಃ |
ಸಂಯತ್ತಾಃ ಸಮರೇ ಶೂರಾ ಭೀಮಸೇನಮುಪಾದ್ರವನ್ ॥ 71 ॥
ಶೂರರೂ, ರಥಶ್ರೇಷ್ಠರೂ ಆದ ಅವರು ತಮ್ಮ ಸೈನ್ಯ ಮತ್ತು ಪರಿವಾರದಿಂದ ಸಹಿತರಾಗಿ ಪ್ರಯತ್ನಪೂರ್ವಕವಾಗಿ ಭೀಮಸೇನನ ಕಡೆಗೆ ಧಾವಿಸಿದರು (ಅವನನ್ನು ಸುತ್ತುವರಿದರು).
ತಾನ್ ಸಮೀಕ್ಷ್ಯ ತು ಕೌಂತೇಯೋ ಭೀಮಸೇನಃ ಪರಾಕ್ರಮೀ |
ಅಭ್ಯವರ್ತತ ವೇಗೇನ ಸಿಂಹಃ ಕ್ಷುದ್ರಮೃಗಾನಿವ ॥ 72 ॥
ಪರಾಕ್ರಮಶಾಲಿಯಾದ ಕುಂತೀಪುತ್ರನಾದ ಭೀಮಸೇನನು ಅವರನ್ನು ನೋಡಿ ಸಿಂಹವು ಕ್ಷುದ್ರಮೃಗಗಳ ಕಡೆಗೆ ಧಾವಿಸಿದಂತೆ

ವೇಗದಿಂದ ಅವರ ಕಡೆಗೆ ಧಾವಿಸಿದನು.
ತೇ ಮಹಾಸ್ತ್ರಾಣಿ ದಿವ್ಯಾನಿ ತತ್ರ ವೀರಾ ಅದರ್ಶಯನ್ |
ವಾರಯಂತಃ ಶರೈರ್ಭೀಮಂ ಮೇಘಾಃ ಸೂರ್ಯಮಿವೋದಿತಮ್ ||
ವೀರರಾದ ಅವರು ದಿವ್ಯಾಸ್ತ್ರಗಳನ್ನು ಪ್ರದರ್ಶಿಸುತ್ತಾ ಮೇಘಗಳು ಉದಯಿಸಿದ ಸೂರ್ಯನನ್ನು ತಡೆಯುವಂತೆ ಬಾಣಗಳಿಂದ ಭೀಮನನ್ನು ನಿವಾರಿಸಿದರು.
ಸ ತಾನತೀತ್ಯ ವೇಗೇನ ದ್ರೋಣಾನೀಕಮುಪಾದ್ರವತ್ |
ಅಗ್ರತಶ್ಚ ಗಜಾನೀಕಂ ಶರವರ್ಷೈರವಾಕಿರತ್ || 74 ||
ಭೀಮಸೇನನು ವೇಗದಿಂದ ಅವರನ್ನು ದಾಟಿ ದ್ರೋಣಸೇನೆಯ ಕಡೆಗೆ ಬಂದು ಮುಂಭಾಗದಲ್ಲಿದ್ದ ಗಜಸೇನೆಯನ್ನು ಬಾಣಗಳ ಮಳೆಯಿಂದ ಹೊಡೆದನು.
ಸೋಽಚಿರೇಣೈವ ಕಾಲೇನ ತದ್ಗಜಾನೀಕಮಾಶುಗೈಃ |
ದಿಶಃ ಸರ್ವಾಃ ಸಮಭ್ಯಸ್ಯ ವ್ಯಧಮತ್ ಪವನಾತ್ಮಜಃ || 75 ||
ಪವನಾತ್ಮಜನಾದ ಅವನು ಅಲ್ಪಕಾಲದಲ್ಲಿಯೇ ಶೀಘ್ರಗಾಮಿಗಳಾದ ಬಾಣಗಳಿಂದ ಹೊಡೆದು ಆ ಗಜಸೇನೆಯನ್ನು ಎಲ್ಲ ದಿಕ್ಕುಗಳಲ್ಲಿ ಚದುರಿಹೋಗುವಂತೆ ಮಾಡಿದನು.
ತ್ರಾಸಿತಾಃ ಶರಭಸ್ಯೇವ ಗರ್ಜಿತೇನ ವನೇ ಮೃಗಾಃ |
ಪ್ರಾದ್ರವನ್ ದ್ವಿರದಾಃ ಸರ್ವೇ ನದಂತೋ ಭೈರವಾನ್ ರವಾನ್ || 76||
ಶರಭದ ಗರ್ಜನೆಯಿಂದ ಓಡುವ ಕಾಡುಮೃಗಗಳಂತೆ ಭೀಮಸೇನನಿಂದ ಹೆದರಿಸಲ್ಪಟ್ಟ ಗಜಗಳೆಲ್ಲವೂ ಭೈರವ ನಾದಗಳನ್ನು ಮಾಡುತ್ತಾ ಓಡಿಹೋದವು.
ಪುನಶ್ಚಾತೀತ್ಯ ವೇಗೇನ ದ್ರೋಣಾನೀಕಮುಪಾದ್ರವತ್ |
ತಮವಾರಯದಾಚಾರ್ಯೋ ವೇಲೇವೋದ್ವೃತ್ತಮರ್ಣವಮ್ || 77 ||
ಪುನಃ ವೇಗದಿಂದ ಸಾಗುತ್ತಾ ಗಜಸೇನೆಯನ್ನು ದಾಟಿ ಭೀಮಸೇನನು ದ್ರೋಣರ ಸೇನೆಯನ್ನು ತಲುಪಿದನು. ದ್ರೋಣಾಚಾರ್ಯರು ತೀರವು ಕ್ಷುಬ್ಧ ಸಮುದ್ರವನ್ನು ತಡೆಯುವಂತೆ ಅವನನ್ನು ತಡೆದರು.
ಲಲಾಟೇಽತಾಡಯಚ್ಚೈನಂ ನಾರಾಚೇನ ಸ್ಮಯನ್ನಿವ |
ಊರ್ಧ್ವರಶ್ಮಿರಿವಾದಿತ್ಯೋ ವಿಬಭೌ ತತ್ರ ಪಾಂಡವಃ || 78 ||
ಅವರು ನಗುತ್ತಾ ನಾರಾಚದಿಂದ ಅವನಿಗೆ ಹಣೆಯಲ್ಲಿ ಹೊಡೆದರು. ಭೀಮಸೇನನು ಹಣೆಯಲ್ಲಿ ನಾಟಿದ ಆ ಬಾಣದಿಂದ ಊರ್ಧ್ವಕಿರಣವುಳ್ಳ ಸೂರ್ಯನಂತೆ ಶೋಭಿಸಿದನು.
ಸ ಮನ್ಯಮಾನಸ್ತ್ವಾಚಾರ್ಯೋ ಮಮಾಯಂ ಫಲ್ಗುನೋ ಯಥಾ |
ಭೀಮಃ ಕರಿಷ್ಯತೇ ಪೂಜಾಮಿತ್ಯುವಾಚ ವೃಕೋದರಮ್ || 79 ||
ದ್ರೋಣಾಚಾರ್ಯರು ಅರ್ಜುನನಂತೆ ಭೀಮನು ನನಗೆ ಗೌರವವನ್ನು ಸಲ್ಲಿಸುವನು ಎಂದು ತಿಳಿದು ಅವನನ್ನು ಕುರಿತು ಮಾತನಾಡಿದರು.
ಭೀಮಸೇನ ನ ತೇ ಶಕ್ಯಂ ಪ್ರವೇಷ್ಟುಮರಿವಾಹಿನೀಮ್ |
ಮಾಮನಿರ್ಜಿತ್ಯ ಸಮರೇ ಶತ್ರುಮಧ್ಯೇ ಮಹಾಬಲ || 80 ||
ಎಲೈ ಭೀಮಸೇನನೇ, ಮಹಾಬಲನೇ, ಶತ್ರುಗಳ ಮಧ್ಯದಲ್ಲಿ ರಣರಂಗದಲ್ಲಿ ನನ್ನನ್ನು ಸೋಲಿಸದೆ ನೀನು ಶತ್ರುಸೈನ್ಯವನ್ನು ಪ್ರವೇಶಿಸಲು ಸಾಧ್ಯವಿಲ್ಲ.
ಯದಿ ತೇ ಸೋಽನುಜಃ ಕೃಷ್ಣಃ ಪ್ರವಿಷ್ಟೋಽನುಮತೇ ಮಮ |
ಅನೀಕಂ ನ ತು ಶಕ್ಯಂ ಭೋಃ ಪ್ರವೇಷ್ಟುಮಿಹ ವೈ ತ್ವಯಾ || 81 ||
ನಿನ್ನ ತಮ್ಮನಾದ ಅರ್ಜುನ ಮತ್ತು ಕೃಷ್ಣರು ನನ್ನ ಅನುಮತಿಯಿಂದ ನನ್ನ ಸೈನ್ಯವನ್ನು ಪ್ರವೇಶಿಸಿದ್ದಾರೆ. ಆದರೆ ನೀನು ನಮ್ಮ ಸೈನ್ಯವನ್ನು ಪ್ರವೇಶಿಸಲು ಸಾಧ್ಯವಿಲ್ಲ (ಎಂದು ಹೇಳಿದರು).
ಅಥ ಭೀಮಸ್ತು ತಚ್ಛ್ರುತ್ವಾ ಗುರೋರ್ವಾಕ್ಯಮಪೇತಭೀಃ |
ಕ್ರುದ್ಧಃ ಪ್ರೋವಾಚ ವೈ ದ್ರೋಣಂ ರಕ್ತತಾಮ್ರೇಕ್ಷಣಃ ಶ್ವಸನ್ || 82 ||
ತವಾರ್ಜುನೋ ನಾನುಮತೇ ಬ್ರಹ್ಮಬಂಧೋ ರಣಾಜಿರಮ್ |
ಪ್ರವಿಷ್ಟಃ ಸ ಹಿ ದುರ್ಧರ್ಷಃ ಶಕ್ರಸ್ಯಾಪಿ ವಿಶೇದ್ ಬಲಮ್ || 83 ||
ಯೇನ ವೈ ಪರಮಾಂ ಪೂಜಾಂ ಕುರ್ವತಾ ಮಾನಿತೋ ಹ್ಯಸಿ |
ನಾರ್ಜುನೋಽಹಂ ಘೃಣೀ ದ್ರೋಣ ಭೀಮಸೇನೋಽಸ್ಮಿ ತೇ ರಿಪುಃ ||
ಆಗ ಭೀಮನು ಗುರುಗಳ ಆ ಮಾತನ್ನು ಕೇಳಿ ಯಾವ ಭಯವೂ ಇಲ್ಲದೆ ಕ್ರುದ್ಧನಾಗಿ, ಕೆಂಪಾದ ಕಣ್ಣುಗಳನ್ನು ಹೊಂದಿ ಶ್ವಾಸವನ್ನು ಬಿಡುತ್ತಾ ದ್ರೋಣರನ್ನು ಕುರಿತು- ಎಲೈ ಬ್ರಹ್ಮಬಂಧುವೇ, ನಿಮ್ಮ ಅನುಮತಿಯಿಂದ ಅರ್ಜುನನು ರಣರಂಗವನ್ನು ಪ್ರವೇಶಿಸಿಲ್ಲ. ದುರ್ಧರ್ಷನಾದ ಅವನು ಇಂದ್ರನ ಸೈನ್ಯವನ್ನೂ ಪ್ರವೇಶಿಸಿಯಾನು. ಅವನು ನಿಮಗೆ ಶ್ರೇಷ್ಠವಾದ ಪೂಜೆಯನ್ನು ಸಲ್ಲಿಸಿ ನಿಮಗೆ ಗೌರವಿಸಿದ್ದಾನೆ. ದ್ರೋಣರೇ ನಾನು ಅರ್ಜುನನಂತೆ ದಯಾಪರನಲ್ಲ. ನಾನು ನಿಮ್ಮ ಶತ್ರುವಾದ ಭೀಮಸೇನ.
ಪಿತಾ ನಸ್ತ್ವಂ ಗುರುರ್ಬಂಧುಸ್ತಥಾ ಪುತ್ರಾ ಹಿ ತೇ ವಯಮ್ |
ಇತಿ ಮನ್ಯಾಮಹೇ ಸರ್ವೇ ಭವಂತಂ ಪ್ರಣತಾಃ ಸ್ಥಿತಾಃ || 85 ||
ಅದ್ಯ ತದ್ವಿಪರೀತಂ ತೇ ವದತೋಽಸ್ಮಾಸು ದೃಶ್ಯತೇ |

ಯದಿ ಶತ್ರುಂ ತ್ವಮಾತ್ಮಾನಂ ಮನ್ಯಸೇ ತತ್ ತಥಾಸಿತ್ವಹ |
ಏಷ ತೇ ಸದೃಶಂ ಶತ್ರೋಃ ಕರ್ಮ ಭೀಮಃ ಕರೋಮ್ಯಹಮ್ ॥ 86 ॥
ನೀವು ನಮಗೆ ತಂದೆ, ಗುರು ಮತ್ತು ಬಂಧುಗಳು. ಹಾಗೆ ನಾವೂ ಸಹ ನಿಮ್ಮ ಪುತ್ರರು ಎಂದು ನಾವೆಲ್ಲರೂ ತಿಳಿದು ನಿಮಗೆ ನಮಸ್ಕರಿಸಿಕೊಂಡಿದ್ದೇವೆ. ಈ ದಿನ ನೀವು ನಮ್ಮನ್ನು ಕುರಿತು ಅದಕ್ಕೆ ವಿರುದ್ಧವಾಗಿ ಮಾತನಾಡುತ್ತಿದ್ದೀರಿ. ನೀವು ನಮ್ಮನ್ನು ನಿಮ್ಮ ಶತ್ರುಗಳೆಂದು ತಿಳಿಯುವುದಾದರೆ ಅದು ಹಾಗೆಯೇ ಆಗಲಿ. ಭೀಮನಾದ ನಿಮ್ಮ ಶತ್ರುವಾದ ಈ ನಾನು ಶತ್ರುವಿಗೆ ಸದೃಶವಾದ ಕಾರ್ಯವನ್ನು ಮಾಡುತ್ತೇನೆ (ಎಂದು ಹೇಳಿದನು).
ಅಥೋದ್ಭ್ರಾಮ್ಯ ಗದಾಂ ಭೀಮಃ ಕಾಲದಂಡಮಿವಾಂತಕಃ |
ದ್ರೋಣಾಯಾವಾಸೃಜದ್ ರಾಜನ್ ಸ ರಥಾದವಪುಪ್ಲುವೇ ॥ 87 ॥
ಎಲೈ ರಾಜನೇ, ಆಗ ಭೀಮನು ತನ್ನ ಗದೆಯನ್ನು ಯಮನು ಕಾಲದಂಡವನ್ನು ತಿರುಗಿಸಿದಂತೆ ತಿರುಗಿಸಿ ದ್ರೋಣರ ಮೇಲೆ ಎಸೆದನು. ದ್ರೋಣರು ತಮ್ಮ ರಥದಿಂದ ಕೆಳಗೆ ಹಾರಿದರು.
ಸಾಶ್ವಸೂತಧ್ವಜಂ ಯಾನಂ ದ್ರೋಣಸ್ಯಾಪೋಥಯತ್ ತದಾ |
ಪ್ರಾಮೃದ್ನಾಚ್ಚ ಬಹೂನ್ಯೋಧಾನ್ವಾಯುರ್ವೃಕ್ಷಾನಿವೌಜಸಾ ॥ 88 ॥
ಆ ಗದೆಯು ಅಶ್ವ-ಸೂತ-ಧ್ವಜಗಳಿಂದ ಸಹಿತವಾದ ದ್ರೋಣರ ರಥವನ್ನು ಪುಡಿಮಾಡಿ, ವಾಯುವು ತನ್ನ ಬಲದಿಂದ ವೃಕ್ಷಗಳನ್ನು ಬೀಳಿಸುವಂತೆ ಅನೇಕ ಯೋಧರನ್ನೂ ಮರ್ದಿಸಿತು.
ತಂ ಪುನಃ ಪರಿವವ್ರುಸ್ತೇ ತವ ಪುತ್ರಾ ರಥೋತ್ತಮಮ್ |
ಅನ್ಯಂ ಚ ರಥಮಾಸ್ಥಾಯ ದ್ರೋಣಃ ಪ್ರಹರತಾಂ ವರಃ ॥ 89 ॥
ಆಗ ನಿನ್ನ ಪುತ್ರರು ರಥಶ್ರೇಷ್ಠರಾದ ಅವರನ್ನು ಸುತ್ತುವರಿದರು. ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ದ್ರೋಣರು ಇನ್ನೊಂದು ರಥವನ್ನು ಏರಿದರು.
ತತಃ ಕ್ರುದ್ಧೋ ಮಹಾರಾಜ ಭೀಮಸೇನಃ ಪರಾಕ್ರಮೀ |
ಅಗ್ರತಃ ಸ್ಯಂದನಾನೀಕಂ ಶರವರ್ಷೈರವಾಕಿರತ್ ॥ 90 ॥
ಎಲೈ ಮಹಾರಾಜನೇ, ಆಗ ಕೋಪಗೊಂಡ ಪರಾಕ್ರಮಶಾಲಿಯಾದ ಭೀಮಸೇನನು ತನ್ನ ಮುಂದಿರುವ ರಥಸೇನೆಯ ಮೇಲೆ ಬಾಣಗಳ ಮಳೆಯನ್ನು ಕರೆದನು.
ತೇ ವಧ್ಯಮಾನಾಃ ಸಮರೇ ತವ ಪುತ್ರಾ ಮಹಾರಥಾಃ |
ಭೀಮಂ ಭೀಮಬಲಂ ಯುದ್ಧೇಽಯೋಧಯಂಸ್ತು ಜಯೈಷಿಣಃ ॥91॥
ನಿನ್ನ ಪುತ್ರರಾದ ಆ ಮಹಾರಥರು ಯುದ್ಧದಲ್ಲಿ ಭೀಮನಿಂದ ಪೀಡಿಸಲ್ಪಟ್ಟರೂ ಜಯವನ್ನು ಬಯಸಿ ಭೀಮಬಲವುಳ್ಳ ಭೀಮನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತೋ ದುಃಶಾಸನಃ ಕ್ರುದ್ಧೋ ರಥಶಕ್ತಿಂ ಸಮಾಕ್ಷಿಪತ್ |
ಸರ್ವಪಾರಶವೀಂ ತೀಕ್ಷ್ಣಾಂ ಜಿಘಾಂಸುಃ ಪಾಂಡುನಂದನಮ್ ॥ 92 ॥
ಆಗ ದುಶ್ಶಾಸನನು ಕೋಪಗೊಂಡು ಪಾಂಡುನಂದನನಾದ ಭೀಮಸೇನನನ್ನು ಕೊಲ್ಲಲು ಬಯಸಿ ಕಬ್ಬಿಣದ ತೀಕ್ಷ್ಣವಾದ ರಥಶಕ್ತಿಯನ್ನು ಅವನ ಮೇಲೆ ಎಸೆದನು.
ಆಪತಂತೀಂ ಮಹಾಶಕ್ತಿಂ ತವ ಪುತ್ರಪ್ರಚೋದಿತಾಮ್ |
ದ್ವಿಧಾ ಚಿಚ್ಛೇದ ತಾಂ ಭೀಮಸ್ತದದ್ಭುತಮಿವಾಭವತ್ ॥ 93 ॥
ನಿನ್ನ ಪುತ್ರನು ಎಸೆದ, ತನ್ನ ಕಡೆಗೆ ಬರುತ್ತಿದ್ದ ಆ ಮಹಾಶಕ್ತಿಯನ್ನು ಭೀಮಸೇನನು ಎರಡು ಭಾಗವಾಗಿ ಕತ್ತರಿಸಿದನು. ಅದು ಅದ್ಭುತವಾಗಿದ್ದಿತು.
ಅಥಾನ್ಯೈರ್ನಿಶಿತೈರ್ಬಾಣೈಃ ಸಂಕ್ರುದ್ಧಃ ಕುಂಡಭೇದಿನಮ್ |
ಸುಷೇಣಂ ದೀರ್ಘನೇತ್ರಂ ಚ ತ್ರಿಭಿಸ್ತ್ರೀನವಧೀದ್ ಬಲೀ ॥ 94 ॥
ಅನಂತರ ಬಲಿಷ್ಠನಾದ ಭೀಮಸೇನನು ಕೋಪಗೊಂಡು ನಿಶಿತವಾದ ಮೂರು ಬಾಣಗಳಿಂದ ನಿನ್ನ ಪುತ್ರರಾದ ಕುಂಡಭೇದಿ, ಸುಷೇಣ ಮತ್ತು ದೀರ್ಘನೇತ್ರರನ್ನು ಕೊಂದನು.
ತತೋ ವೃಂದಾರಕಂ ವೀರಂ ಕುರೂಣಾಂ ಕೀರ್ತಿವರ್ಧನಮ್ |
ಪುತ್ರಾಣಾಂ ತವ ವೀರಾಣಾಂ ಯುದ್ಧ್ಯತಾಮವಧೀತ್ ಪುನಃ ॥ 95 ॥
ಅನಂತರ ನಿನ್ನ ಪುತ್ರರು ಯುದ್ಧಮಾಡುತ್ತಿರುವಂತೆಯೇ ಕುರುಗಳ ಕೀರ್ತಿವರ್ಧನನಾದ ವೀರನಾದ ವೃಂದಾರಕನನ್ನೂ ಕೊಂದನು.
ಅಭಯಂ ರೌದ್ರಕರ್ಮಾಣಂ ದುರ್ವಿಮೋಚನಮೇವ ಚ |
ತ್ರಿಭಿಸ್ತ್ರೀನವಧೀದ್ ಭೀಮಃ ಪುನರೇವ ಸುತಾಂಸ್ತವ ॥ 96 ॥
ಭೀಮಸೇನನು ಪುನಃ ಮೂರು ಬಾಣಗಳಿಂದ ನಿನ್ನ ಪುತ್ರನಾದ ಅಭಯ, ರೌದ್ರಕರ್ಮ ಮತ್ತು ದುರ್ವಿಮೋಚನನನ್ನು ಕೊಂದನು.
ವಧ್ಯಮಾನಾ ಮಹಾರಾಜ ಪುತ್ರಾಸ್ತವ ಬಲೀಯಸಾ |
ಭೀಮಂ ಪ್ರಹರತಾಂ ಶ್ರೇಷ್ಠಂ ಸಮಂತಾತ್ ಪರ್ಯವಾರಯನ್ ॥97॥
ಎಲೈ ಮಹಾರಾಜನೇ, ಬಲಿಷ್ಠ ಭೀಮಸೇನನಿಂದ ಹೊಡೆಯಲ್ಪಡುತ್ತಿದ್ದ ನಿನ್ನ ಉಳಿದ ಪುತ್ರರು ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಭೀಮಸೇನನನ್ನು ಸುತ್ತುವರಿದರು.
ವಿಂದಾನುವಿಂದೌ ಸಹಿತೌ ಸುವರ್ಮಾಣಂ ಚ ತೇ ಸುತಮ್ |
ಪ್ರಹಸನ್ನಿವ ಕೌಂತೇಯಃ ಶರೈರ್ನಿನ್ಯೇ ಯಮಕ್ಷಯಮ್ ॥ 98 ॥

ಕುಂತೀಪುತ್ರನಾದ ಭೀಮಸೇನನು ವಿಂದಾನುವಿಂದರನ್ನೂ ಮತ್ತು ನಿನ್ನ ಪುತ್ರನಾದ ಸುವರ್ಣನನ್ನೂ ನಗುತ್ತಲೇ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು.
ತತಃ ಸುದರ್ಶನಂ ವೀರಂ ಪುತ್ರಂ ತೇ ಭರತರ್ಷಭ |
ವಿವ್ಯಾಧ ಸಮರೇ ತೂರ್ಣಂ ಸ ಪಪಾತ ಮಮಾರ ಚ ॥ 99 ॥
ಎಲೈ ಭರತರ್ಷಭನೇ, ಅನಂತರ ನಿನ್ನ ಪುತ್ರನಾದ ವೀರನಾದ ಸುದರ್ಶನನನ್ನು ಯುದ್ಧದಲ್ಲಿ ಹೊಡೆದನು. ಅವನು ಶೀಘ್ರವಾಗಿ ಬಿದ್ದು ಪ್ರಾಣವನ್ನು ಬಿಟ್ಟನು.
ಸೋಽಚಿರೇಣೈವ ಕಾಲೇನ ತದ್ರಥಾನೀಕಮಾಶುಗೈಃ |
ದಿಶಃ ಸರ್ವಾಃ ಸಮಭ್ಯಸ್ಯ ವ್ಯಧಮತ್ ಪಾಂಡುನಂದನಃ ॥ 100 ॥
ಪಾಂಡುನಂದನನಾದ ಆ ಭೀಮಸೇನನು ಸ್ವಲ್ಪ ಕಾಲದಲ್ಲಿಯೇ ಶೀಘ್ರಗಾಮಿಗಳಾದ ಬಾಣಗಳನ್ನು ಎಲ್ಲ ದಿಕ್ಕುಗಳಲ್ಲಿ ಪ್ರಯೋಗಿಸಿ ಆ ರಥಸಮೂಹವನ್ನು ನಾಶ ಮಾಡಿದನು.
ತತೋ ವೈ ರಥಘೋಷೇಣ ಗರ್ಜಿತೇನ ಮೃಗಾ ಇವ |
ವಧ್ಯಮಾನಾಶ್ಚ ಸಮರೇ ಪುತ್ರಾಸ್ತವ ವಿಶಾಂಪತೇ |
ಪ್ರಾದ್ರವನ್ ಸರಥಾಃ ಸರ್ವೇ ಭೀಮಸೇನಭಯಾರ್ದಿತಾಃ ॥ 101 ॥
ಸಿಂಹಗರ್ಜನೆಯಿಂದ ಓಡುವ ಮೃಗಗಳಂತೆ ಭೀಮಸೇನನ ರಥಘೋಷದಿಂದ ಹೆದರಿದ, ಯುದ್ಧದಲ್ಲಿ ಅವನಿಂದ ಹೊಡೆಯಲ್ಪಡುವ ನಿನ್ನ ಪುತ್ರರೆಲ್ಲರೂ ಎಲೈ ರಾಜನೇ, ಭೀಮಸೇನನ ಭಯದಿಂದ ಭೀತರಾಗಿ ಎಲ್ಲ ಕಡೆಯಲ್ಲಿಯೂ ಓಡಿಹೋದರು.
ಅನುಯಾಯ ತು ಕೌಂತೇಯಃ ಪುತ್ರಾಣಾಂ ತೇ ಮಹದ್ಬಲಮ್ |
ವಿವ್ಯಾಧ ಸಮರೇ ರಾಜನ್ ಕೌರವೇಯಾನ್ ಸಮಂತತಃ ॥ 102 ॥
ಎಲೈ ರಾಜನೇ, ಕುಂತೀಪುತ್ರನಾದ ಭೀಮಸೇನನು ನಿನ್ನ ಪುತ್ರರ ದೊಡ್ಡ ಸೈನ್ಯವನ್ನು ಹಿಂಬಾಲಿಸಿ ಹೋಗಿ, ಆ ಸೇನೆಯ ಯೋಧರನ್ನು ಯುದ್ಧದಲ್ಲಿ ಎಲ್ಲ ಕಡೆಗಳಲ್ಲಿಯೂ ಹೊಡೆದನು.
ವಧ್ಯಮಾನಾ ಮಹಾರಾಜ ಭೀಮಸೇನೇನ ತಾವಕಾಃ |
ತ್ಯಕ್ತ್ವಾ ಭೀಮಂ ರಣೇ ಯಾಂತಿ ಚೋದಯಂತೋ ಹಯೋತ್ತಮಾನ್ ॥
ಎಲೈ ಮಹಾರಾಜನೇ, ಭೀಮಸೇನನಿಂದ ಹೊಡೆಯಲ್ಪಡುವ ನಿನ್ನ ಸೈನಿಕರು ರಣರಂಗದಲ್ಲಿ ಭೀಮನನ್ನು ಬಿಟ್ಟು ತಮ್ಮ ಶ್ರೇಷ್ಠವಾದ ಅಶ್ವಗಳನ್ನು ಪ್ರಚೋದಿಸುತ್ತಾ ಹೊರಟರು.
ತಾಂಸ್ತು ನಿರ್ಜಿತ್ಯ ಸಮರೇ ಭೀಮಸೇನೋ ಮಹಾಬಲಃ |
ಸಿಂಹನಾದರವಂ ಚಕ್ರೇ ಬಾಹುಶಬ್ದಂ ಚ ಪಾಂಡವಃ ॥ 104 ॥
ಮಹಾಬಲನಾದ ಭೀಮಸೇನನು ಯುದ್ಧದಲ್ಲಿ ಅವರನ್ನು ಗೆದ್ದು ಸಿಂಹನಾದವನ್ನೂ ಮತ್ತು ಬಾಹುಶಬ್ದವನ್ನೂ ಮಾಡಿದನು.
ತಳಶಬ್ದಂ ಚ ಸುಮಹತ್ಕೃತ್ವಾ ಭೀಮೋ ಮಹಾಬಲಃ |
ವ್ಯತೀತ್ಯ ರಥಿನಶ್ಚಾಪಿ ದ್ರೋಣಾನೀಕಮುಪಾದ್ರವತ್ ॥ 105 ॥
ಮಹಾಬಲನಾದ ಭೀಮನು ದೊಡ್ಡ ಹಸ್ತತಳ ಶಬ್ದವನ್ನು ಮಾಡಿ ಅವನು ರಥಿಕರನ್ನು ದಾಟಿ ದ್ರೋಣರ ಸೇನೆಯ ಸಮೀಪಕ್ಕೆ ಬಂದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಾದಶಾಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹನ್ನೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿಮೂರನೆಯ ಅಧ್ಯಾಯ
ಅರ್ಜುನನನ್ನು ನೋಡಿ ಭೀಮನ ಸಿಂಹನಾದ.
ಅದನ್ನು ಕೇಳಿದ ಯುಧಿಷ್ಠಿರನ ಹರ್ಷ.
ಸಂಜಯಃ
ತಮುತ್ತೀರ್ಣಂ ರಥಾನೀಕಾತ್ತಮಸೋ ಭಾಸ್ಕರೋ ಯಥಾ |
ದಿಧಾರಯಿಷುರಾಚಾರ್ಯಃ ಶರವರ್ಷೈರವಾಕಿರತ್ ॥ 1 ॥
ಸಂಜಯ ಕತ್ತಲೆಯಿಂದ ಸೂರ್ಯನು ಹೊರಗೆ ಬಂದಂತೆ ರಥಸಮೂಹವನ್ನು ದಾಟಿ ಬಂದ ಭೀಮನನ್ನು ತಡೆಯಲು ದ್ರೋಣಾಚಾರ್ಯರು ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ಪಿಬನ್ನಿವ ಶರೌಘಾಂಸ್ತಾನ್ ದ್ರೋಣಚಾಪವರಾತಿಗಾನ್ |
ಸೋಭ್ಯವರ್ತತ ಸೋದರ್ಯಾನ್ ಮಾಯಯಾ ಮೋಹಯನ್ ಬಲಮ್ ॥
ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಆ ಬಾಣಗಳ ಸಮೂಹವನ್ನು ನಿವಾರಿಸಿ, ತನ್ನ ಸಾಮರ್ಥ್ಯದಿಂದ ಕೌರವಸೇನೆಯನ್ನು ಮರುಳುಗೊಳಿಸುತ್ತಾ, ಅವನು ತನ್ನ ಸಹೋದರರ ಕಡೆಗೆ ಧಾವಿಸಿದನು.
ತಂ ಮೃಧೇ ವೇಗಮಾಸ್ಥಾಯ ಪರಂ ಪರಮಧನ್ವಿನಃ |
ಚೋದಿತಾಸ್ತವ ಪುತ್ರೈಶ್ಚ ಸರ್ವತಃ ಪರ್ಯವಾರಯನ್ ॥ 3 ॥

ನಿನ್ನ ಪುತ್ರನಿಂದ ಪ್ರೇರಿಸಲ್ಪಟ್ಟ ಪರಮಧನುರ್ಧಾರಿಗಳು ಶೀಘ್ರವಾಗಿ ಅವನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ಸ ತಥಾ ಸಂವೃತೋ ಭೀಮಃ ಪ್ರಹಸನ್ನಿವ ಭಾರತ |
ಉದಯಚ್ಚದ್ ಗದಾಂ ತೇಭ್ಯೋ ಘೋರಾಂ ತಾಂ ಸಿಂಹವನ್ನದನ್ |
ಅವಾಸೃಜಚ್ಚ ವೇಗೇನ ತೇಷು ತಾಂ ಪ್ರಮಥನ್ ಬಲೀ ॥ 4 ॥
ಎಲೈ ಭಾರತನೇ, ಆ ರೀತಿಯಲ್ಲಿ ಸುತ್ತುವರಿಯಲ್ಪಟ್ಟ ಭೀಮನು ನಗುತ್ತಾ ಸಿಂಹನಾದವನ್ನು ಮಾಡಿ, ತನ್ನ ಘೋರವಾದ ಗದೆಯನ್ನು ಎತ್ತಿ ಬಲಿಷ್ಠನಾದ ಅವನು ವೇಗದಿಂದ ಆ ಗದೆಯನ್ನು ಅವರ ಮೇಲೆ ಎಸೆದು ಅವರನ್ನು ಮರ್ದಿಸಿದನು.
ಸೇಂದ್ರಾಶನಿರಿವೇಂದ್ರೇಣ ಪ್ರವಿದ್ಧಾ ಸಂಹತಾತ್ಮನಾ |
ಘೋಷೇಣ ಮಹತಾ ರಾಜನ್ ಪೂರಯಿತ್ವೇವ ಮೇದಿನೀಮ್ |
ಜ್ವಲಂತೀ ತೇಜಸಾ ಭೀಮಾ ತ್ರಾಸಯಾಮಾಸ ತೇ ಸುತಾನ್ ॥ 5 ॥
ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧದಂತೆ ದೃಢ ಶರೀರವುಳ್ಳ ಭೀಮನಿಂದ ಎಸೆಯಲ್ಪಟ್ಟ ಆ ಗದೆಯು ಮಹಾಘೋಷದಿಂದ ಭೂಮಿಯನ್ನು ತುಂಬಿ ಜ್ವಲಿಸುತ್ತಾ ನಿನ್ನ ಪುತ್ರರನ್ನು ಭಯಗೊಳಿಸಿತು.
ತಾಂ ಪತಂತೀಂ ಮಹಾವೇಗಾಂ ದೃಷ್ಟ್ವಾ ತೇಜೋಭಿಸಂವೃತಾಮ್ |
ಪ್ರಾದ್ರವಂಸ್ತಾವಕಾಃ ಸರ್ವೇ ನದಂತೋ ಭೈರವಾನ್ ರವಾನ್ ॥ 6 ॥
ತೇಜಸ್ಸಿನಿಂದ ಕೂಡಿ ತಮ್ಮ ಕಡೆಗೆ ಶೀಘ್ರವಾಗಿ ಬರುತ್ತಿದ್ದ ಆ ಗದೆಯನ್ನು ನೋಡಿ ನಿನ್ನವರೆಲ್ಲರೂ ಭೈರವನಾದವನ್ನು ಮಾಡುತ್ತಾ ಓಡಿಹೋದರು.
ತಂ ಚ ಶಬ್ದಮಸಂಸಹ್ಯಂ ತಸ್ಯಾಃ ಸಂಲಕ್ಷ್ಯ ಮಾರಿಷ |
ಪ್ರಾಪತನ್ ಮನುಜಾಸ್ತತ್ರ ರಥೇಭ್ಯೋ ರಥಿನಸ್ತದಾ ॥ 7 ॥
ಎಲೈ ಪೂಜ್ಯನೇ, ಸಹಿಸಲು ಅಸಾಧ್ಯವಾದ ಅವನ ಸಿಂಹನಾದವನ್ನು ಕೇಳಿ ಪದಾತಿಗಳು ಬಿದ್ದರು, ರಥಿಕರೂ ರಥದಿಂದ ಬಿದ್ದರು.
ಸ ತಾನ್ ವಿದ್ರಾವ್ಯ ಕೌಂತೇಯಃ ಸಂಖ್ಯೇಽಮಿತ್ರಾನ್ ದುರಾಸದಃ |
ಸುಪರ್ಣ ಇವ ವೇಗೇನ ಪಕ್ಷಿರಾಡತ್ಯಗಾಚ್ಚಮೂಮ್ ॥ 8 ॥
ಕುಂತೀಪುತ್ರನೂ, ದುರಾಸದನೂ ಆದ ಭೀಮನು ರಣರಂಗದಲ್ಲಿ ಆ ಶತ್ರುಗಳನ್ನು ಓಡಿಸಿ, ಪಕ್ಷಿರಾಜನಾದ ಗರುಡನಂತೆ ಶೀಘ್ರವಾಗಿ ಆ ಸೈನ್ಯವನ್ನು ದಾಟಿದನು.
ತಥಾ ತಂ ವಿಪ್ರಕುರ್ವಾಣಂ ರಥಯೂಥಪಯೂಥಪಮ್ |
ಭಾರದ್ವಾಜೋ ಮಹಾರಾಜ ಭೀಮಸೇನಂ ಸಮಭ್ಯಯಾತ್ ॥ 9 ॥
ಎಲೈ ಮಹಾರಾಜನೇ, ಆ ರೀತಿಯಲ್ಲಿ ಅಪಕಾರವನ್ನು ಮಾಡುತ್ತಿದ್ದ ರಥಯೂಥಪ ಯೂಥಪನಾದ ಭೀಮಸೇನನನ್ನು ದ್ರೋಣರು ಸಮೀಪಿಸಿದರು.
ದ್ರೋಣಸ್ತು ಸಮರೇ ಭೀಮಂ ವಾರಯಿತ್ವಾ ಶರೋರ್ಮಿಭಿಃ |
ಅಕರೋತ್ ಸಹಸಾ ನಾದಂ ಪಾಂಡೂನಾಂ ಭಯಮಾದಧತ್ ॥ 10 ॥
ದ್ರೋಣರಾದರೋ ತಮ್ಮ ಬಾಣದ ಅಲೆಗಳಿಂದ ರಣರಂಗದಲ್ಲಿ ಭೀಮಸೇನನನ್ನು ತಡೆದು, ಪಾಂಡವಸೇನೆಗೆ ಭಯವನ್ನುಂಟು ಮಾಡುತ್ತಾ ಸಿಂಹನಾದವನ್ನು ಮಾಡಿದರು.
ತದ್ಯುದ್ಧಮಾಸೀತ್ ಸುಮಹದ್ ಘೋರಂ ದೇವಾಸುರೋಪಮಮ್ |
ದ್ರೋಣಸ್ಯ ಚ ಮಹಾರಾಜ ಭೀಮಸ್ಯ ಚ ಮಹಾತ್ಮನಃ ॥ 11 ॥
ಮಹಾರಾಜನೇ, ದ್ರೋಣರಿಗೂ ಮತ್ತು ಮಹಾತ್ಮನಾದ ಭೀಮಸೇನನಿಗೂ ದೇವಾಸುರ ಯುದ್ಧಕ್ಕೆ ಸದೃಶವಾದ ಘೋರವಾದ ಮಹಾಯುದ್ಧವು ನಡೆಯಿತು.
ಯದಾ ತು ವಿಶಿಖೈಸ್ತೀಕ್ಷ್ಣೈರ್ದ್ರೋಣಚಾಪವಿನಿಃಸೃತೈಃ |
ವಧ್ಯಂತೇ ಸಮರೇ ವೀರಾಃ ಶತಶೋಽಥ ಸಹಸ್ರಶಃ ॥ 12 ॥
ತತೋ ರಥಾದವಪ್ಲುತ್ಯ ವೇಗಮಾಸ್ಥಾಯ ಪಾಂಡವಃ |
ನಿಮೀಲ್ಯ ನಯನೇ ರಾಜನ್ ಪದಾತಿರ್ದ್ರೋಣಮಭ್ಯಯಾತ್ ॥ 13 ॥
ದ್ರೋಣರ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳಿಂದ ಪಾಂಡವಸೇನೆಯ ವೀರರು ನೂರಾರು, ಸಹಸ್ರಾರು ಸಂಖ್ಯೆಯಲ್ಲಿ ವಧಿಸಲ್ಪಡುತ್ತಿದ್ದಾಗ ಭೀಮಸೇನನು ಶೀಘ್ರವಾಗಿ ರಥದಿಂದ ಕೆಳಗೆ ಹಾರಿ, ಕಣ್ಣುಗಳನ್ನು ಮುಚ್ಚಿ ಪದಾತಿಯಾಗಿ ದ್ರೋಣರ ಕಡೆಗೆ ಓಡಿದನು.
ಯಥಾ ಹಿ ಗೋವೃಷೋ ವರ್ಷಂ ಪ್ರತಿಗೃಹ್ಣಾತಿ ಲೀಲಯಾ |
ತಥಾ ಭೀಮೋ ನರವ್ಯಾಘ್ರಃ ಶರವರ್ಷಂ ಸಮಗ್ರಹೀತ್ ॥ 14 ॥
ಗೋವೃಷಭವು ಮಳೆಯನ್ನು ಸ್ವೀಕರಿಸಿದಂತೆ ನರವ್ಯಾಘ್ರನಾದ ಭೀಮನು ವೇಗದಿಂದ ತಲೆಯನ್ನು ತಗ್ಗಿಸಿ ದ್ರೋಣರ ಬಾಣವೃಷ್ಟಿಯನ್ನು ಸ್ವೀಕರಿಸಿದನು.
ಸ ವಧ್ಯಮಾನಃ ಸಮರೇ ರಥಂ ದ್ರೋಣಸ್ಯ ಮಾರಿಷ |
ಈಷಾಯಾಂ ಪಾಣಿನಾ ಗೃಹ್ಯ ಪ್ರಚಿಕ್ಷೇಪ ಮಹಾಬಲಃ ॥ 15 ॥
ಎಲೈ ಪೂಜ್ಯನೇ, ಹೀಗೆ ಹೊಡೆಯಲ್ಪಡುತ್ತಿದ್ದ ಅವನು ರಣರಂಗದಲ್ಲಿ ದ್ರೋಣರ ರಥದ ಮೂಕಿಯನ್ನು ಕೈಯಲ್ಲಿ ಹಿಡಿದು ಮಹಾಬಲನಾದ ಅವನು ರಥವನ್ನು ಮೇಲಕ್ಕೆ ಎಸೆದನು.
ದ್ರೋಣಸ್ತು ಸತ್ವರೋ ರಾಜನ್ ಕ್ಷಿಪ್ತೋ ಭೀಮೇನ ಸಂಯುಗೇ |

ರಥಮನ್ಯಂ ಸಮಾಸ್ಥಾಯ ವ್ಯೂಹದ್ವಾರಮುಪಾಯಯೌ ॥ 16 ॥
ರಾಜನೇ, ದ್ರೋಣರಾದರೋ ರಥಸಹಿತವಾಗಿ ಭೀಮನಿಂದ ಎಸೆಯಲ್ಪಟ್ಟು ಶೀಘ್ರವಾಗಿ ಇನ್ನೊಂದು ರಥವನ್ನು ಏರಿ ವ್ಯೂಹದ್ವಾರದಲ್ಲಿ ಬಂದು ನಿಂತರು.
ತಸ್ಮಿನ್ ಕ್ಷಣೇ ತಸ್ಯ ಯಂತಾ ತೂರ್ಣಮಶ್ವಾನಚೋದಯತ್ |
ಭೀಮಸೇನಸ್ಯ ಕೌರವ್ಯ ತದದ್ಭುತಮಿವಾಭವತ್ ॥ 17 ॥
ಎಲೈ ಕೌರವ್ಯನೇ, ಆ ಸಮಯದಲ್ಲಿ ಭೀಮಸೇನನ ಸಾರಥಿಯು ಶೀಘ್ರವಾಗಿ ಅಶ್ವಗಳನ್ನು ಪ್ರಚೋದಿಸಿದನು. ಅದು ಅದ್ಭುತವಾಗಿದ್ದಿತು.

ತತಃ ಸ್ವರಥಮಾಸ್ಥಾಯ ಭೀಮಸೇನೋ ಮಹಾಬಲಃ |
ಅಭ್ಯವರ್ತತ ವೇಗೇನ ತವ ಪುತ್ರಸ್ಯ ವಾಹಿನೀಮ್ ॥ 18 ॥
ಅನಂತರ ಮಹಾಬಲನಾದ ಭೀಮಸೇನನು ತನ್ನ ರಥವನ್ನು ಏರಿ ನಿನ್ನ ಪುತ್ರನ ಸೈನ್ಯದ ಕಡೆಗೆ ವೇಗದಿಂದ ಸಾಗಿದನು.
ಸ ಮೃದ್ನನ್ ಕ್ಷತ್ರಿಯಾನಾಜೌ ವಾತೋ ವೃಕ್ಷಾನಿವೋದ್ಧತಃ |
ಅಗಚ್ಛದ್ ದಾರಯನ್ ಸೇನಾಂ ಸಿಂಧುವೇಗೋ ನಗಾನಿವ ॥ 19 ॥
ಬಿರುಗಾಳಿಯು ವೃಕ್ಷಗಳನ್ನು ಉರುಳಿಸುವಂತೆ ಅವನು ರಣರಂಗದಲ್ಲಿ ಕ್ಷತ್ರಿಯರನ್ನು ಮರ್ದಿಸುತ್ತಾ ಸಿಂಧುನದಿಯ ವೇಗವು ಪರ್ವತಗಳನ್ನು (ವೃಕ್ಷಗಳನ್ನು) ಸೀಳಿದಂತೆ ನಿನ್ನ ಸೈನ್ಯವನ್ನು ಸೀಳುತ್ತಾ ಮುಂದೆ ಸಾಗಿದನು.
ಭೋಜಾನೀಕಂ ಸಮಾಸಾದ್ಯ ಹಾರ್ದಿಕ್ಯೇನಾಭಿರಕ್ಷಿತಮ್ |
ಪ್ರಮಥ್ಯ ಬಹುಧಾ ರಾಜನ್ ಭೀಮಸೇನಃ ಸಮಭ್ಯಯಾತ್ ॥ 20 ॥
ಕೃತವರ್ಮನಿಂದ ರಕ್ಷಿತವಾದ ಭೋಜರ ಸೇನೆಯನ್ನು ಸಮೀಪಿಸಿ ಅದನ್ನು ಬಹಳವಾಗಿ ಮರ್ದಿಸಿ ಭೀಮಸೇನನು ಮುಂದೆ ಸಾಗಿದನು.
ಸಂತ್ರಾಸಯನ್ನನೀಕಾನಿ ತಳಶಬ್ದೇನ ಮಾರಿಷ |
ಅಜಯತ್ ಸರ್ವಸೈನ್ಯಾನಿ ಶಾರ್ದೂಲ ಇವ ಗೋವೃಷಾನ್ ॥ 21 ॥
ಎಲೈ ಪೂಜ್ಯನೇ, ತನ್ನ ಹಸ್ತತಳ ಶಬ್ದದಿಂದ ಸೈನ್ಯಗಳನ್ನು ಭಯಪಡಿಸುತ್ತಾ ವ್ಯಾಘ್ರವು ಗೋವೃಷಭಗಳನ್ನು ಜಯಿಸಿದಂತೆ ಎಲ್ಲ ಸೈನ್ಯವನ್ನೂ ಜಯಿಸಿದನು.
ಭೋಜಾನೀಕಮತಿಕ್ರಮ್ಯ ಕಾಂಬೋಜಾನಾಂ ಚ ವಾಹಿನೀಮ್ |
ತಥಾ ಮ್ಲೇಚ್ಛಗಣಾಂಶ್ಚಾನ್ಯಾನ್ ಬಹೂನ್ ಯುದ್ಧವಿಶಾರದಾನ್ ॥ 22॥
ಸಾತ್ಯಕಿಂ ಚಾಪಿ ಸಂಪ್ರೇಕ್ಷ್ಯ ಯುಧ್ಯಮಾನಂ ನರರ್ಷಭಮ್ |
ರಥೇನ ಯತ್ತಃ ಕೌಂತೇಯೋ ವೇಗೇನ ಪ್ರಯಯೌ ತದಾ ॥ 23 ॥
ಭೋಜರ ಸೇನೆಯನ್ನು ದಾಟಿ, ಕಾಂಬೋಜರ ಸೇನೆಯನ್ನೂ ಮತ್ತು ಮ್ಲೇಚ್ಛ ಗಣಗಳನ್ನೂ ದಾಟಿ ಹಾಗೆಯೇ ಯುದ್ಧವಿಶಾರದರಾದ ಅನೇಕ ವೀರರನ್ನೂ ದಾಟಿ, ಯುದ್ಧಮಾಡುತ್ತಿರುವ ನರಶ್ರೇಷ್ಠನಾದ ಸಾತ್ಯಕಿಯನ್ನೂ ನೋಡಿ ಭೀಮಸೇನನು ತನ್ನ ರಥದಿಂದ ವೇಗದಿಂದ ಸಾಗಿದನು.
ಭೀಮಸೇನೋ ಮಹಾರಾಜ ದ್ರಷ್ಟುಕಾಮೋ ಧನಂಜಯಮ್ |
ಅತೀತ್ಯ ಸಮರೇ ಯೋಧಾಂಸ್ತಾವಕಾನ್ ಪಾಂಡುನಂದನಃ ॥ 24 ॥
ಸೋಽಪಶ್ಯದರ್ಜುನಂ ತತ್ರ ಯುಧ್ಯಮಾನಂ ನರರ್ಷಭಮ್ |
ಸೈಂಧವಸ್ಯ ವಧಾರ್ಥಂ ಹಿ ಪರಾಕ್ರಾಂತಂ ಪರಾಕ್ರಮೀ ॥ 25 ॥
ಮಹಾರಾಜನೇ, ಅರ್ಜುನನು ನೋಡಲು ಬಯಸಿದ ಪಾಂಡುನಂದನನಾದ ಭೀಮಸೇನನು ರಣರಂಗದಲ್ಲಿ ನಿನ್ನ ಯೋಧರನ್ನು ದಾಟಿ ಸೈಂಧವನ ವಧೆಗಾಗಿ ಪರಾಕ್ರಮವನ್ನು ತೋರಿಸುತ್ತಿದ್ದ ಯುದ್ಧವನ್ನು ಮಾಡುತ್ತಿದ್ದ ಪರಾಕ್ರಮಶಾಲಿಯಾದ ನರಶ್ರೇಷ್ಠನಾದ ಅರ್ಜುನನನ್ನು ನೋಡಿದನು.
ಅರ್ಜುನಂ ತತ್ರ ದೃಷ್ಟ್ವಾಥ ಚುಕ್ರೋಶ ಮಹತೋ ರವಾನ್ |
ತಂ ತು ತಸ್ಯ ಮಹಾನಾದಂ ಪಾರ್ಥಃ ಶುಶ್ರಾವ ನರ್ದತಃ ॥ 26 ॥
ಅಲ್ಲಿ ಅರ್ಜುನನನ್ನು ನೋಡಿ ಆಗ ದೊಡ್ಡ ನಾದಗಳನ್ನು ಮಾಡಿದನು. ಗರ್ಜಿಸುತ್ತಿರುವ ಅವನ ಆ ಮಹಾನಾದಗಳನ್ನು ಯುಧಿಷ್ಠಿರನು ಕೇಳಿದನು.
ತತಃ ಪಾರ್ಥೋ ಮಹಾನಾದಂ ಮುಂಚನ್ ವೈ ಮಾಧವಶ್ಚ ಹ |
ಅಭ್ಯಯಾತಾಂ ಮಹಾರಾಜ ನರ್ದಂತೌ ಗೋವೃಷಾವಿವ ॥ 27 ॥
ಎಲೈ ಮಹಾರಾಜನೇ, ಆಗ ಅರ್ಜುನನು ಮತ್ತು ಕೃಷ್ಣನು ಮಹಾನಾದವನ್ನು ಮಾಡಿ ಗರ್ಜಿಸುತ್ತಾ ಗೋವೃಷಗಳಂತೆ ಭೀಮಸೇನನ ಕಡೆಗೆ ಬಂದರು.
ವಾಸುದೇವಾರ್ಜುನೌ ಶ್ರುತ್ವಾ ನಿನಾದಂ ತಸ್ಯ ಶುಷ್ಮಿಣಃ |
ಪುನಃ ಪುನಃ ಪ್ರಣದತಾಂ ದಿದೃಕ್ಷಂತೌ ವೃಕೋದರಮ್ ॥ 28 ॥
ಕೃಷ್ಣಾರ್ಜುನರು ವೀರ್ಯಶಾಲಿಯಾದ ಭೀಮನ ಸಿಂಹನಾದಗಳನ್ನು ಕೇಳಿ ಅವನನ್ನು ನೋಡಲು ಬಯಸಿ ಪುನಃ ಪುನಃ ನಾದವನ್ನು ಮಾಡಿ ಗರ್ಜಿಸಿದರು.
ಭೀಮಸೇನರವಂ ಶ್ರುತ್ವಾ ಫಲ್ಗುನಸ್ಯ ಚ ಧನ್ವಿನಃ |
ಅಪ್ರೀಯತ ಮಹಾರಾಜ ಧರ್ಮಪುತ್ರೋ ಯುಧಿಷ್ಠಿರಃ ॥ 29 ॥
ಭೀಮಸೇನನ ಮತ್ತು ಧನುರ್ಧಾರಿಯಾದ ಅರ್ಜುನನ ಗರ್ಜನೆಯನ್ನು ಕೇಳಿ ಎಲೈ ಮಹಾರಾಜನೇ, ಧರ್ಮಪುತ್ರನಾದ ಯುಧಿಷ್ಠಿರನು

ಹರ್ಷಗೊಂಡನು.
ವಿಶೋಕಶ್ಚಾಭವದ್ ರಾಜಾ ಶ್ರುತ್ವಾ ತಂ ನಿನದಂ ಮಹತ್ |
ಧನಂಜಯಸ್ಯ ಚ ರಣೇ ಜಯಮಾಶಾಸ್ತವಾನ್ ವಿಭುಃ ॥ 30 ॥
ಧರ್ಮರಾಜನು ಆ ದೊಡ್ಡ ನಾದವನ್ನು ಕೇಳಿ ಶೋಕರಹಿತನಾದನು. ಪ್ರಭುವಾದ ಅವನು ಅರ್ಜುನನಿಗೆ ಯುದ್ಧದಲ್ಲಿ ಜಯವನ್ನೂ ಹಾರೈಸಿದನು.
ತಥಾ ತು ನರ್ದಮಾನೇ ವೈ ಭೀಮಸೇನೇ ರಣೋತ್ಕಟೇ |
ಸ್ಮಿತಂ ಕೃತ್ವಾ ಮಹಾಬಾಹುರ್ಧರ್ಮಪುತ್ರೋ ಯುಧಿಷ್ಠಿರಃ ॥ 31 ॥
ಹೃದ್ಗತಂ ಮನಸಾ ಪ್ರಾಹ ಧ್ಯಾತ್ವಾ ಧರ್ಮಭೃತಾಂ ವರಃ |
ದತ್ತಾ ಭೀಮ ತ್ವಯಾ ಸಂವಿತ್ ಕೃತಂ ಗುರುವಚಸ್ತಥಾ ॥ 32 ॥
ರಣೋತ್ಕಟನಾದ ಭೀಮಸೇನನು ಆ ರೀತಿಯಲ್ಲಿ ಗರ್ಜಿಸುತ್ತಿರಲು ಮಹಾಬಾಹುವಾದ ಧರ್ಮಪುತ್ರನಾದ ಯುಧಿಷ್ಠಿರನು ಮಂದಹಾಸವನ್ನು ಬೀರಿ, ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಧ್ಯಾನ ಮಾಡಿ, ತನ್ನ ಅಭಿಪ್ರಾಯವನ್ನು ಮನಸ್ಸಿನಲ್ಲಿಯೇ ಭೀಮನೇ ನೀನು ಸೂಚನೆಯನ್ನು ಕೊಟ್ಟಿದ್ದೀಯೆ ಮತ್ತು ಅಣ್ಣನ ಮಾತನ್ನು ಪಾಲಿಸಿದ್ದೀಯೆ ಎಂದು ಹೇಳಿದನು.
ನ ಹಿ ತೇಷಾಂ ಜಯೋ ಯುದ್ಧೇ ಯೇಷಾಂ ದ್ವೇಷ್ಟಾಸಿ ಪಾಂಡವ |
ದಿಷ್ಟ್ಯಾ ಜೀವತಿ ಸಂಗ್ರಾಮೇ ಸವ್ಯಸಾಚೀ ಧನಂಜಯಃ ॥ 33 ॥
ಎಲೈ ಪಾಂಡವನೇ, ನೀನು ಯಾರನ್ನು ದ್ವೇಷಿಸುತ್ತೀಯೋ ಅವರಿಗೆ ಯುದ್ಧದಲ್ಲಿ ಜಯವಾಗುವುದಿಲ್ಲ. ದೇವರ ದಯದಿಂದ ಸವ್ಯಸಾಚಿಯಾದ ಅರ್ಜುನನು ರಣರಂಗದಲ್ಲಿ ಜೀವಿಸಿದ್ದಾನೆ.
ದಿಷ್ಟ್ಯಾ ಚ ಕುಶಲೀ ವೀರಃ ಸಾತ್ಯಕಿಃ ಸತ್ಯವಿಕ್ರಮಃ |
ದಿಷ್ಟ್ಯಾ ಶೃಣೋಮಿ ಗರ್ಜಂತೌ ವಾಸುದೇವಧನಂಜಯೌ ॥ 34 ॥
ದೇವರದಯದಿಂದ ಸತ್ಯಪರಾಕ್ರಮಿಯೂ, ವೀರನೂ ಆದ ಸಾತ್ಯಕಿಯೂ ಕ್ಷೇಮದಿಂದಿದ್ದಾನೆ. ದೇವರ ದಯದಿಂದಲೇ ಕೃಷ್ಣಾರ್ಜುನರ ಗರ್ಜನೆಯನ್ನು ಕೇಳುತ್ತಿದ್ದೇನೆ.
ಯೇನ ಶಕ್ರಂ ರಣೇ ಜಿತ್ವಾ ತರ್ಪಿತೋ ಹವ್ಯವಾಹನಃ |
ಸ ಹಂತಾ ದ್ವಿಷತಾಂ ಸಂಖ್ಯೇ ದಿಷ್ಟ್ಯಾ ಜೀವತಿ ಫಲ್ಗುನಃ ॥ 35 ॥
ಯಾವ ಅರ್ಜುನನು ಯುದ್ಧದಲ್ಲಿ ಇಂದ್ರನನ್ನು ಗೆದ್ದು ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಪಡಿಸಿದನೋ, ಅಂತಹ ಯುದ್ಧದಲ್ಲಿ ಶತ್ರುವನ್ನು ಕೊಲ್ಲುವ ಅರ್ಜುನನು ದೇವರ ದಯದಿಂದ ಜೀವಿಸಿದ್ದಾನೆ.
ಯಸ್ಯ ಬಾಹುಬಲಂ ಸರ್ವೇ ವಯಮಾಶ್ರಿತ್ಯ ಜೀವಿತಾಃ |
ಸ ಹಂತಾ ರಿಪುಸೈನ್ಯಾನಾಂ ದಿಷ್ಟ್ಯಾ ಜೀವತಿ ಫಲ್ಗುನಃ ॥ 36 ॥
ಯಾರ ಬಾಹುಬಲವನ್ನು ಆಶ್ರಯಿಸಿ ನಾವೆಲ್ಲರೂ ಬದುಕಿದ್ದೇವೆಯೋ ಅಂತಹ ರಿಪುಸೈನ್ಯವನ್ನು ಕೊಲ್ಲುವ ಅರ್ಜುನನು ದೇವರ ದಯದಿಂದ ಜೀವಿಸಿದ್ದಾನೆ.
ನಿವಾತಕವಚಾ ಯೇನ ದೇವೈರಪಿ ಸುದುರ್ಜಯಾಃ |
ನಿರ್ಜಿತಾ ರಥಿನೈಕೇನ ದಿಷ್ಟ್ಯಾ ಪಾರ್ಥಃ ಸ ಜೀವತಿ ॥ 37 ॥
ದೇವತೆಗಳಿಂದಲೂ ಜಯಿಸಲು ಅಸಾಧ್ಯರಾದ ನಿವಾತಕವಚರನ್ನು ಯಾವ ಅರ್ಜುನನು ಒಂದು ರಥದಿಂದ ಜಯಿಸಿದನೋ ಅಂತಹ ಪಾರ್ಥನು ದೇವರ ದಯದಿಂದ ಜೀವಿಸಿದ್ದಾನೆ.
ಕೌರವಾನ್ ಸಹಿತಾನ್ ಸರ್ವಾನ್ ಗೋಗ್ರಹಾರ್ಥೇ ಸಮಾಗತಾನ್ |
ಯೋಽಜಯನ್ಮತ್ಸ್ಯನಗರೇ ದಿಷ್ಟ್ಯಾ ಪಾರ್ಥಃ ಸ ಜೀವತಿ ॥ 38 ॥
ವಿರಾಟನಗರದಲ್ಲಿ ಗೋಗ್ರಹಣಾರ್ಥವಾಗಿ ಪ್ರಾಪ್ತರಾದ ಎಲ್ಲ ಕೌರವರನ್ನು ಜಯಿಸಿದನೋ ಅಂತಹ ಅವನು ದೇವರ ದಯದಿಂದ ಜೀವಿಸಿದ್ದಾನೆ.
ಕಾಲಕೇಯಸಹಸ್ರಾಣಿ ಚತುರ್ದಶ ಮಹಾರಣೇ |
ಯೋಽವಧೀದ್ ಭುಜವೀರ್ಯೇಣ ದಿಷ್ಟ್ಯಾ ಪಾರ್ಥಃ ಸ ಜೀವತಿ ॥
ದೊಡ್ಡ ಯುದ್ಧದಲ್ಲಿ ಹದಿನಾಲ್ಕು ಸಾವಿರ ಕಾಲಕೇಯ ದೈತ್ಯರನ್ನು ತನ್ನ ಭುಜಬಲದಿಂದ ಕೊಂದ ಅರ್ಜುನನು ದೇವರ ದಯದಿಂದ ಜೀವಿಸಿದ್ದಾನೆ.
ಗಂಧರ್ವರಾಜಂ ಬಲಿನಂ ದುರ್ಯೋಧನಕೃತೇನ ವೈ |
ಜಿತವಾನ್ ಯೋಽಸ್ತ್ರವೀರ್ಯೇಣ ದಿಷ್ಟ್ಯಾ ಪಾರ್ಥಃ ಸ ಜೀವತಿ ॥
ಬಲಿಷ್ಠನಾದ ಗಂಧರ್ವರಾಜನಾದ ಚಿತ್ರರಥನನ್ನು ದುರ್ಯೋಧನನ ನಿಮಿತ್ತದಿಂದ ತನ್ನ ಅಸ್ತ್ರಬಲದಿಂದ ಜಯಿಸಿದ ಅರ್ಜುನನು ದೇವರ ದಯದಿಂದ ಜೀವಿಸಿದ್ದಾನೆ.
ಕಿರೀಟಮಾಲೀ ಬಲವಾನ್ ಶ್ವೇತಾಶ್ವಃ ಕೃಷ್ಣಸಾರಥಿಃ |
ಮಮ ಪ್ರಿಯಶ್ಚ ಸತತಂ ದಿಷ್ಟ್ಯಾ ಜೀವತಿ ಫಲ್ಗುನಃ ॥ 41 ॥
ಕಿರೀಟಮಾಲಿಯೂ, ಬಲಿಷ್ಠನೂ, ಶ್ವೇತಾಶ್ವನೂ, ಕೃಷ್ಣಸಾರಥಿಯೂ, ನನಗೆ ಯಾವಾಗಲೂ ಪ್ರಿಯನೂ ಆದ ಅರ್ಜುನನು ದೇವರ ದಯದಿಂದ ಜೀವಿಸಿದ್ದಾನೆ.
ಪುತ್ರಶೋಕಾಭಿಸಂತಪ್ತಶ್ಚಿಕೀರ್ಷುಃ ಕರ್ಮ ದುಷ್ಕರಮ್ |
ಜಯದ್ರಥವಧಾನ್ವೇಷೀ ಪ್ರತಿಜ್ಞಾಂ ಕೃತವಾನ್ ಹಿ ಯಃ |

ಕಚ್ಚಿತ್ ಸ ಸೈಂಧವಂ ಸಂಖ್ಯೇ ಹನಿಷ್ಯತಿ ಧನಂಜಯಃ ॥ 42 ॥
ಅಭಿಮನ್ಯುವಿನ ವಧೆಯಿಂದ ಸಂತಪ್ತನಾಗಿ ದುಷ್ಕರವಾದ ಕರ್ಮವನ್ನು ಮಾಡಲು ಬಯಸಿ, ಜಯದ್ರಥನ ವಧೆಯನ್ನು ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದ ಅರ್ಜುನನು ರಣರಂಗದಲ್ಲಿ ಸೈಂಧವನನ್ನು ಕೊಲ್ಲುವನೆ?
ಕಚ್ಚಿತ್ತೀರ್ಣಪ್ರತಿಜ್ಞಂ ಹಿ ವಾಸುದೇವೇನ ರಕ್ಷಿತಮ್ |
ಅನಸ್ತಮಿತ ಆದಿತ್ಯೇ ಸಮೇಷ್ಯಾಮ್ಯಹಮರ್ಜುನಮ್ ॥ 43 ॥
ಸೂರ್ಯಾಸ್ತವಾಗುವುದರೊಳಗೆ ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿ ಕೃಷ್ಣನಿಂದ ರಕ್ಷಿತನಾದ ಅರ್ಜುನನ ಜೊತೆಯಲ್ಲಿ ನಾನು ಸಮಾಗಮವನ್ನು ಹೊಂದುವೆನೆ?
ಕಚ್ಚಿತ್ ಸೈಂಧವಕೋ ರಾಜಾ ದುರ್ಯೋಧನಹಿತೇ ರತಃ |
ನಂದಯಿಷ್ಯತ್ಯಮಿತ್ರಾಣಿ ಫಲ್ಗುನೇನ ನಿಪಾತಿತಃ ॥ 44 ॥
ದುರ್ಯೋಧನನ ಹಿತದಲ್ಲಿ ನಿರತನಾದ ಆ ಕೆಟ್ಟ ಸೈಂಧವರಾಜನು ಅರ್ಜುನನಿಂದ ವಧೆಯನ್ನು ಹೊಂದಿ ಶತ್ರುಗಳನ್ನು ಸಂತೋಷಪಡಿಸುವನೆ?
ಕಚ್ಚಿದ್ ದುರ್ಯೋಧನೋ ರಾಜಾ ಫಲ್ಗುನೇನ ನಿಪಾತಿತಮ್ |
ದೃಷ್ಟ್ವಾ ಸೈಂಧವಕಂ ಸಂಖ್ಯೇ ಶಮಮಸ್ಮಾಸು ಧಾಸ್ಯತಿ ॥ 45 ॥
ಅರ್ಜುನನಿಂದ ಹತನಾದ ಸೈಂಧವನನ್ನು ನೋಡಿ ರಾಜನಾದ ದುರ್ಯೋಧನನು ರಣರಂಗದಲ್ಲಿಯೇ ನಮ್ಮ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವನೆ?
ದೃಷ್ಟ್ವಾ ವಿನಿಹತಾನ್ ಭ್ರಾತೄನ್ ಭೀಮಸೇನೇನ ಸಂಯುಗೇ |
ಕಚ್ಚಿದ್ ದುರ್ಯೋಧನೋ ಮಂದಃ ಶಮಮಸ್ಮಾಸು ಧಾಸ್ಯತಿ ॥ 46 ॥
ರಣರಂಗದಲ್ಲಿ ಭೀಮಸೇನನಿಂದ ಹತರಾದ ತನ್ನ ಸಹೋದರರನ್ನು ನೋಡಿ ಮಂದನಾದ ದುರ್ಯೋಧನನು ನಮ್ಮ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವನೆ?
ದೃಷ್ಟ್ವಾ ಚಾನ್ಯಾನ್ ಬಹೂನ್ ಯೋಧಾನ್ ಪಾತಿತಾನ್ ಧರಣೀತಳೇ |
ಕಚ್ಚಿದ್ ದುರ್ಯೋಧನೋ ಮಂದಃ ಪಶ್ಚಾತ್ತಾಪಂ ಕರಿಷ್ಯತಿ ॥ 47 ॥
ಭೂಮಿಯ ಮೇಲೆ ಹತರಾಗಿ ಬಿದ್ದ ಉಳಿದ ಅನೇಕ ಯೋಧರನ್ನು ನೋಡಿ ಮಂದನಾದ ದುರ್ಯೋಧನನು ಪಶ್ಚಾತ್ತಾಪವನ್ನು ಪಡುವನೆ?
ಕಚ್ಚಿದ್ ಭೀಷ್ಮೇಣ ನೋ ವೈರಮೇಕೇನೈವ ಪ್ರಶಾಮ್ಯತಿ |
ಶೇಷಸ್ಯ ರಕ್ಷಣಾರ್ಥಂ ಚ ಸಂಧಾಸ್ಯತಿ ಸುಯೋಧನಃ ॥ 48 ॥
ಭೀಷ್ಮರೊಬ್ಬರ ನಿಧನದಿಂದ ದುರ್ಯೋಧನನು ವೈರವನ್ನು ತ್ಯಜಿಸಿ, ನಮ್ಮ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳುವನೆ? ಉಳಿದವರನ್ನು ರಕ್ಷಿಸುವುದಕ್ಕಾಗಿ ಸುಯೋಧನನು ಸಂಧಿಯನ್ನು ಮಾಡಿಕೊಳ್ಳುವನೆ?
ಏವಂ ಬಹುವಿಧಂ ತಸ್ಯ ಚಿಂತಯಾನಸ್ಯ ಪಾರ್ಥಿವ |
ಕೃಪಯಾಽಭಿಪರೀತಸ್ಯ ಘೋರಂ ಯುದ್ಧಮವರ್ತತ ॥ 49 ॥
ಹೀಗೆ ಎಲೈ ರಾಜನೇ, ಕೃಪೆಯಿಂದ ಕೂಡಿ ಬಹುವಿಧವಾಗಿ ಯುಧಿಷ್ಠಿರನು ಚಿಂತಿಸುತ್ತಿರಲು ಘೋರವಾದ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಯೋದಶಾಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾಲ್ಕನೆಯ ಅಧ್ಯಾಯ
ಭೀಮಸೇನನಿಂದ ಕರ್ಣನ ಪರಾಜಯ
ಧೃತರಾಷ್ಟ್ರಃ
ತಥಾ ತು ನರ್ದಮಾನಂ ತಂ ಭೀಮಸೇನಂ ಮಹಾಬಲಮ್ |
ಮೇಘಸ್ತನಿತನಿರ್ಘೋಷಂ ಕೇ ವೀರಾಃ ಪರ್ಯವಾರಯನ್ ॥ 1 ॥
ಧೃತರಾಷ್ಟ್ರ ಹಾಗೆ ಗರ್ಜಿಸುತ್ತಿದ್ದ ಮೇಘಗರ್ಜನೆಯ ಘೋಷವುಳ್ಳ ಮಹಾಬಲನಾದ ಭೀಮಸೇನನನ್ನು ಯಾವ ವೀರರು ತಡೆದರು?
ನ ಹಿ ಪಶ್ಯಾಮ್ಯಹಂ ತಂ ವೈ ತ್ರಿಷು ಲೋಕೇಷು ಸಂಜಯ |
ಕ್ರುದ್ಧಸ್ಯ ಭೀಮಸೇನಸ್ಯ ಯಸ್ತಿಷ್ಠೇದಗ್ರತೋ ರಣೇ ॥ 2 ॥
ಎಲೈ ಸಂಜಯನೇ, ರಣರಂಗದಲ್ಲಿ ಕೋಪಗೊಂಡ ಭೀಮಸೇನನ ಎದುರಿಗೆ ನಿಲ್ಲುವ ಯೋಧನನ್ನು ನಾನು ಮೂರುಲೋಕಗಳಲ್ಲಿಯೂ ಕಾಣುವುದಿಲ್ಲ.
ಗದಾಮುದ್ಯಚ್ಛಮಾನಸ್ಯ ಕಾಲಸ್ಯೇವ ಮಹಾಮೃಧೇ |
ನ ಹಿ ಪಶ್ಯಾಮ್ಯಹಂ ತಾತ ಯಸ್ತಿಷ್ಠೇತ ರಣಾಜಿರೇ ॥ 3 ॥
ಎಲೈ ಪ್ರೀತಿಪಾತ್ರನೇ, ಗದೆಯನ್ನು ಎತ್ತಿ ರಣರಂಗದಲ್ಲಿ ಯಮನಂತೆ ನಿಂತಿರುವ ಅವನ ಎದುರಿನಲ್ಲಿ ರಣರಂಗದಲ್ಲಿ ನಿಲ್ಲಬಹುದಾದ ಯಾವ ಯೋಧನನ್ನೂ ನಾನು ಕಾಣುವುದಿಲ್ಲ.
ರಥಂ ರಥೇನ ಯೋ ಹನ್ಯಾತ್ ಕುಂಜರಂ ಕುಂಜರೇಣ ಚ |

ಕಸ್ತಸ್ಯ ಸಮರೇ ಸ್ಥಾತಾ ಸಾಕ್ಷಾದಪಿ ಶತಕ್ರತುಃ ॥ 4 ॥
ಯಾವನು ರಥದಿಂದ ರಥವನ್ನು, ಗಜದಿಂದ ಗಜವನ್ನು ಹೊಡೆಯುತ್ತಾನೆಯೋ ಅವನ ಎದುರಿನಲ್ಲಿ ಸಾಕ್ಷಾತ್ ಇಂದ್ರನಂತಹ ಯಾವನೂ ಸಹ ಹೇಗೆ ನಿಂತಾನು?
ಕ್ರುದ್ಧಸ್ಯ ಭೀಮಸೇನಸ್ಯ ಮಮ ಪುತ್ರಾನ್ ಜಿಘಾಂಸತಃ |
ದುರ್ಯೋಧನಹಿತೇ ಯುಕ್ತಾಃ ಸಮತಿಷ್ಠಂತ ಕೇಽಗ್ರತಃ ॥ 5 ॥
ನನ್ನ ಪುತ್ರರನ್ನು ಕೊಲ್ಲಲು ಬಯಸಿ ಕೋಪಗೊಂಡ ಭೀಮಸೇನನ ಎದುರಿಗೆ ದುರ್ಯೋಧನನ ಹಿತದಲ್ಲಿ ರತರಾದ ಯಾರು ನಿಂತರು?
ಭೀಮಸೇನದವಾಗ್ನೇಸ್ತು ಮಮ ಪುತ್ರತೃಣೋಪಲಮ್ |
ಪ್ರಧಕ್ಷ್ಯತೋ ರಣಮುಖೇ ಕೇ ವೀರಾಃ ಪ್ರಮುಖೇ ಸ್ಥಿತಾಃ ॥ 6 ॥
ನನ್ನ ಪುತ್ರರೆಂಬ ತೃಣಗಳನ್ನು ದಹಿಸುವ ಭೀಮಸೇನದಾವಾಗ್ನಿಯ ಎದುರಿನಲ್ಲಿ ರಣರಂಗದಲ್ಲಿ ಯಾವ ವೀರರು ನಿಂತರು?
ಕಾಲ್ಯಮಾನಾನ್ ಹಿ ಮೇ ಪುತ್ರಾನ್ ಭೀಮೇನಾವೇಕ್ಷ್ಯ ಸಂಯುಗೇ |
ಕಾಲೇನೇವ ಪ್ರಜಾಃ ಸರ್ವಾಃ ಕೇ ಭೀಮಂ ಪರ್ಯವಾರಯನ್ ॥ 7 ॥
ಮೃತ್ಯುವು ಪ್ರಜೆಗಳನ್ನು ವಿನಾಶಗೊಳಿಸಿದಂತೆ ಭೀಮನಿಂದ ರಣರಂಗದಲ್ಲಿ ನನ್ನ ಪುತ್ರರು ವಿನಾಶಗೊಳಿಸಲ್ಪಡುತ್ತಿದ್ದಾಗ ಯಾರು ಭೀಮನನ್ನು ತಡೆದರು?
ಭೀಮವಹ್ನೇಃ ಪ್ರದೀಪ್ತಸ್ಯ ಮಮ ಪುತ್ರಾನ್ ದಿಧಕ್ಷತಃ |
ಕೇ ಶೂರಾಃ ಪರ್ಯವರ್ತಂತ ತನ್ಮಮಾಚಕ್ಷ್ವ ಸಂಜಯ ॥ 8 ॥
ನನ್ನ ಪುತ್ರರನ್ನು ಸುಡಲು ಬಯಸಿದ ಜ್ವಲಿಸುವ ಭೀಮಾಗ್ನಿಯನ್ನು ಯಾವ ಶೂರರು ಸಮೀಪಿಸಿದರು? ಸಂಜಯನೇ, ಅದನ್ನು ನನಗೆ ಹೇಳು.
ಸಂಜಯಃ
ತಥಾ ತು ನರ್ದಮಾನಂ ತಂ ಭೀಮಸೇನಂ ಮಹಾರಥಮ್ |
ತುಮುಲೇನೈವ ಶಬ್ದೇನ ಕರ್ಣೋಽಭ್ಯಪತದ್ ಬಲೀ ॥ 9 ॥
ಸಂಜಯ ಹಾಗೆ ಗರ್ಜಿಸುತ್ತಿದ್ದ ಮಹಾರಥನಾದ ಭೀಮಸೇನನನ್ನು ಕುರಿತು ತೀವ್ರವಾದ ಗರ್ಜನೆಯನ್ನು ಮಾಡುತ್ತಾ ಬಲಿಷ್ಠನಾದ ಕರ್ಣನು ಧಾವಿಸಿದನು.
ವ್ಯಾಕ್ಷಿಪನ್ ಬಲವಚ್ಚಾಪಮತಿಮಾತ್ರಮಮರ್ಷಣಃ |
ಕರ್ಣಸ್ತು ಯುದ್ಧಮಾಕಾಂಕ್ಷನ್ ದರ್ಶಯಿಷ್ಯನ್ ಬಲಂ ಬಲೀ ॥ 10 ॥
ಕೋಪಗೊಂಡ ಕರ್ಣನು ತನ್ನ ಧನುಸ್ಸಿನ ಹೆದೆಯನ್ನು ಎಳೆಯುತ್ತಾ ಯುದ್ಧವನ್ನು ಬಯಸುತ್ತಾ ತನ್ನ ಬಲವನ್ನು ತೋರಿಸುತ್ತಾ ರಣರಂಗದಲ್ಲಿ ಮುಂದೆ ಸಾಗಿದನು.
ಪ್ರಾವೇಪನ್ನಿವ ಗಾತ್ರಾಣಿ ಕರ್ಣಭೀಮಸಮಾಗಮೇ |
ರಥಿನಾಂ ಸಾದಿನಾಂ ಚೈವ ತಯೋಃ ಶ್ರುತ್ವಾ ತಳಸ್ವನಮ್ ॥ 11 ॥
ಕರ್ಣ-ಭೀಮರ ಸಮಾಗಮವುಂಟಾದಾಗ ಅವರ ಹಸ್ತತಳಗಳ ಶಬ್ಧಗಳನ್ನು ಕೇಳಿ ರಥಿಕರ ಮತ್ತು ಅಶ್ವಾರೋಹಿಗಳ ಶರೀರಗಳು ನಡುಗಿದವು.
ಭೀಮಸೇನಸ್ಯ ನಿನದಂ ಘೋರಂ ಶ್ರುತ್ವಾ ರಣಾಜಿರೇ |
ಖಂ ಚ ಭೂಮಿಂ ಚ ಸಂಬದ್ಧಾಂ ಮೇನಿರೇ ಕ್ಷತ್ರಿಯರ್ಷಭಾಃ ॥ 12 ॥
ರಣರಂಗದಲ್ಲಿ ಭೀಮಸೇನನ ಘೋರವಾದ ನಾದವನ್ನು ಕೇಳಿ ಕ್ಷತ್ರಿಯಶ್ರೇಷ್ಠರು ಭೂಮಿ ಮತ್ತು ಆಕಾಶಗಳು ಸೇರಿಕೊಂಡಿವೆ ಎಂದು ತಿಳಿದರು.
ಪುನರ್ಘೋರೇಣ ನಾದೇನ ಪಾಂಡವಸ್ಯ ಮಹಾತ್ಮನಃ |
ಸಮರೇ ಸರ್ವಯೋಧಾನಾಂ ಧನೂಂಷ್ಯಭ್ಯಪತನ್ ಕ್ಷಿತೌ ॥ 13 ॥
ಮಹಾತ್ಮನಾದ ಪಾಂಡವನ ಘೋರವಾದ ನಾದದಿಂದ ರಣರಂಗದಲ್ಲಿ ಎಲ್ಲ ಯೋಧರ ಧನುಸ್ಸುಗಳೂ ಕೈಯಿಂದ ಜಾರಿ ಭೂಮಿಯ ಮೇಲೆ ಬಿದ್ದವು.
ವಿತ್ರಸ್ತಾನಿ ಚ ಸರ್ವಾಣಿ ಶಕೃನ್ಮೂತ್ರಂ ಪ್ರಸುಸ್ರುವುಃ |
ವಾಹನಾನಿ ಮಹಾರಾಜ ಬಭೂವುರ್ವಿಮನಾಂಸಿ ಚ ॥ 14 ॥
ಎಲೈ ಮಹಾರಾಜನೇ, ಎಲ್ಲ ವಾಹನಗಳೂ ಇದ್ದಲ್ಲೇ ಮಲ-ಮೂತ್ರಗಳನ್ನು ಸುರಿಸಿದವು ಮತ್ತು ಯುದ್ಧವಿಮುಖವಾದವು.
ಪ್ರಾದುರಾಸನ್ ನಿಮಿತ್ತಾನಿ ಘೋರಾಣಿ ಚ ಬಹೂನಿ ಚ |
ತಸ್ಮಿಂಸ್ತು ತುಮುಲೇ ರಾಜನ್ ಭೀಮಕರ್ಣಸಮಾಗಮೇ ॥ 15 ॥
ರಾಜನೇ, ತೀವ್ರವಾದ ಭೀಮ-ಕರ್ಣಸಮಾಗಮವುಂಟಾದಾಗ ಘೋರವಾದ ಅನೇಕ ಅಪಶಕುನಗಳು ಉಂಟಾದವು.
ತತಃ ಕರ್ಣಸ್ತು ವಿಂಶತ್ಯಾ ಶರಾಣಾಂ ಭೀಮಮಾರ್ದಯತ್ |
ವಿವ್ಯಾಧ ಚಾಸ್ಯ ತ್ವರಿತಃ ಸೂತಂ ಪಂಚಭಿರಾಶುಗೈಃ ॥ 16 ॥
ಆಗ ಕರ್ಣನು ಇಪ್ಪತ್ತು ಬಾಣಗಳಿಂದ ಭೀಮನನ್ನು ಪೀಡಿಸಿದನು. ಶೀಘ್ರವಾಗಿ ಅವನ ಸಾರಥಿಯನ್ನು ಶೀಘ್ರಗಾಮಿಗಳಾದ ಐದು ಬಾಣಗಳಿಂದ ಹೊಡೆದನು.
ಪ್ರಹಸ್ಯ ಭೀಮಸೇನಸ್ತು ಕರ್ಣಂ ಪ್ರತ್ಯರ್ಪಯದ್ರಣೇ |
ಸಾಯಕಾನಾಂ ಚತುಃಷಷ್ಟ್ಯಾ ಕ್ಷಿಪ್ರಕಾರೀ ಮಹಾಬಲಃ ॥ 17 ॥

ಕ್ಷಿಪ್ರಕಾರಿಯೂ, ಮಹಾಬಲನೂ ಆದ ಭೀಮಸೇನನು ನಕ್ಕು ಪ್ರತಿಯಾಗಿ ಕರ್ಣನನ್ನು ಅರವತ್ನಾಲ್ಕು ಬಾಣಗಳಿಂದ ಹೊಡೆದನು.
ತಸ್ಯ ಕರ್ಣೋ ಮಹೇಷ್ವಾಸಃ ಸಾಯಕಾಂಶ್ಚತುರೋಽಕ್ಷಿಪತ್ |
ಅಸಂಪ್ರಾಪ್ತಾಂಸ್ತು ತಾನ್ ಭೀಮಃ ಸಾಯಕೈರ್ನತಪರ್ವಭಿಃ |
ಚಿಚ್ಛೇದ ಬಹುಧಾ ರಾಜನ್ ದರ್ಶಯನ್ ಪಾಣಿಲಾಘವಮ್ ॥ 18 ॥
ಮಹಾಧನುರ್ಧಾರಿಯಾದ ಕರ್ಣನು ಭೀಮಸೇನನ ಮೇಲೆ ನಾಲ್ಕು ಬಾಣಗಳನ್ನು ಪ್ರಯೋಗಿಸಿದನು. ರಾಜನೇ, ಭೀಮಸೇನನು ತನ್ನ ಹಸ್ತಲಾಘವವನ್ನು ತೋರಿಸುತ್ತಾ ಆ ಬಾಣಗಳು ತನ್ನನ್ನು ತಲುಪುವುದಕ್ಕಿಂತ ಮುಂಚೆಯೇ ಬಾಗಿದ ತುದಿಯುಳ್ಳ ಬಾಣಗಳಿಂದ ಅವುಗಳನ್ನು ಅನೇಕ ಭಾಗಗಳಾಗಿ ಕತ್ತರಿಸಿದನು.
ತಂ ಕರ್ಣಶ್ಛಾದಯಾಮಾಸ ಶರವ್ರಾತೈರನೇಕಶಃ |
ಸಂಛಾದ್ಯಮಾನಃ ಕರ್ಣೇನ ಬಹುಧಾ ಪಾಂಡುನಂದನಃ ॥ 19 ॥
ಚಿಚ್ಛೇದ ಚಾಪಂ ಕರ್ಣಸ್ಯ ಮುಷ್ಟಿದೇಶೇ ಮಹಾರಥಃ |
ವಿವ್ಯಾಧ ಚೈನಂ ಬಹುಭಿಃ ಸಾಯಕೈರ್ನತಪರ್ವಭಿಃ ॥ 20 ॥
ಕರ್ಣನು ಅನೇಕ ಬಾಣಗಳ ಸಮೂಹಗಳಿಂದ ಅವನನ್ನು ಮುಚ್ಚಿದನು. ಕರ್ಣನಿಂದ ಹೀಗೆ ಮುಚ್ಚಲ್ಪಟ್ಟ ಪಾಂಡುನಂದನನೂ, ಮಹಾರಥನೂ ಆದ ಭೀಮಸೇನನು ಕರ್ಣನ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿ ಅವನ ಮೇಲೆ ಬಾಗಿದ ತುದಿಯುಳ್ಳ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ಅಥಾನ್ಯದ್ಧನುರಾದಾಯ ಸಜ್ಯಂ ಕೃತ್ವಾ ಚ ಸೂತಜಃ |
ವಿವ್ಯಾಧ ಸಮರೇ ಭೀಮಂ ಭೀಮಕರ್ಮಾ ಮಹಾರಥಃ ॥ 21 ॥
ಆಗ ಭೀಮಕರ್ಮನೂ, ಮಹಾರಥನೂ ಆದ ಕರ್ಣನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಹೆದೆಯೇರಿಸಿ ಭೀಮನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತಸ್ಯ ಭೀಮೋ ಭೃಶಂ ಕ್ರುದ್ಧಸ್ತ್ರೀನ್ ಶರಾನ್ ನತಪರ್ವಣಃ |
ನಿಚಖಾನೋರಸಿ ತದಾ ಸೂತಪುತ್ರಸ್ಯ ವೇಗಿತಃ ॥ 22 ॥
ಆಗ ಭೀಮಸೇನನು ಬಹಳ ಕೋಪಗೊಂಡು ಬಾಗಿದ ತುದಿಯುಳ್ಳ ಬಾಣಗಳನ್ನು ಸೂತಪುತ್ರನಾದ ಕರ್ಣನ ಎದೆಯಲ್ಲಿ ನಾಟುವಂತೆ ವೇಗದಿಂದ ಪ್ರಯೋಗಿಸಿದನು.
ತೈಃ ಕರ್ಣೋಽಭ್ರಾಜತ ಶರೈರುರೋಮಧ್ಯಗತೈಸ್ತದಾ |
ಮಹೀಧರ ಇವೋದಗ್ರಸ್ತ್ರಿಶೃಂಗೋ ಭರತರ್ಷಭ ॥ 23 ॥
ಎಲೈ ಭರತಶ್ರೇಷ್ಠನೇ, ಎದೆಯಲ್ಲಿ ನಾಟಿದ ಆ ಮೂರು ಬಾಣಗಳಿಂದ ಸಹಿತನಾದ ಕರ್ಣನು ಮೂರು ಶಿಖರಗಳುಳ್ಳ ಶ್ರೇಷ್ಠವಾದ ಪರ್ವತದಂತೆ ಶೋಭಿಸಿದನು.
ಸುಸ್ರಾವ ಚಾಸ್ಯ ರುಧಿರಂ ವಿದ್ಧಸ್ಯ ಪರಮೇಷುಭಿಃ |
ಧಾತುಪ್ರಸ್ಯಂದಿನಃ ಶೈಲಾದ್ಯಥಾ ಗೈರಿಕರಾಜಯಃ ॥ 24 ॥
ಆ ಶ್ರೇಷ್ಠವಾದ ಬಾಣಗಳಿಂದ ಹೊಡೆಯಲ್ಪಟ್ಟ ಅವನ ದೇಹದಿಂದ ಪರ್ವತದಿಂದ ಗೈರಿಕಾದಿ ಧಾತುವಿನ ಧಾರೆಯು ಹರಿದಂತೆ ರಕ್ತವು ಹರಿಯಿತು.
ಕಿಂಚಿದ್ವಿಚಲಿತಃ ಕರ್ಣಃ ಸುಪ್ರಹಾರಾಭಿಪೀಡಿತಃ |
ಸಸಾಯಕಂ ಧನುಃ ಕೃತ್ವಾ ಭೀಮಂ ವಿವ್ಯಾಧ ಮಾರಿಷ |
ಚಿಕ್ಷೇಪ ಚ ಪುನರ್ಬಾಣಾನ್ ಶತಶೋಽಥ ಸಹಸ್ರಶಃ ॥ 25 ॥
ಆ ದೊಡ್ಡ ಏಟಿನಿಂದ ಬಹಳವಾಗಿ ಪೀಡಿತನಾದ ಕರ್ಣನು ಸ್ವಲ್ಪ ವಿಚಲಿತನಾಗಿ ಪುನಃ ಧನುಸ್ಸನ್ನು ಹಿಡಿದು ಭೀಮನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಭೀಮನ ಮೇಲೆ ನೂರಾರು, ಸಾವಿರಾರು ಸಂಖ್ಯೆಯಲ್ಲಿ ಬಾಣಗಳನ್ನು ಪ್ರಯೋಗಿಸಿದನು.
ಸ ಛಾದ್ಯಮಾನಃ ಸಹಸಾ ಕರ್ಣೇನ ದೃಢಧನ್ವಿನಾ |
ಧನುರ್ಜ್ಯಾಮಚ್ಛಿನತ್ತೂರ್ಣಮುತ್ಸ್ಮಯನ್ ಪಾಂಡುನಂದನಃ ॥ 26 ॥
ದೃಢಧನುಸ್ಸನ್ನು ಹೊಂದಿದ ಕರ್ಣನಿಂದ ಆ ರೀತಿಯಲ್ಲಿ ಮುಚ್ಚಲ್ಪಟ್ಟ ಪಾಂಡುನಂದನನಾದ ಭೀಮನು ನಗುತ್ತಾ ಕರ್ಣನ ಧನುಸ್ಸಿನ ಹೆದೆಯನ್ನು ಕತ್ತರಿಸಿದನು.
ಸಾರಥಿಂ ಚಾಸ್ಯ ಭಲ್ಲೇನ ಪ್ರಾಹಿಣೋದ್ಯಮಸಾದನಮ್ |
ವಾಹಾಂಶ್ಚ ಚತುರಃ ಸಂಖ್ಯೇ ವ್ಯಸೂಂಶ್ಚಕ್ರೇ ಮಹಾರಥಃ ॥ 27 ॥
ಅವನು ಒಂದು ಭಲ್ಲದಿಂದ ಕರ್ಣನ ಸಾರಥಿಯನ್ನು ಯಮಲೋಕಕ್ಕೆ ಕಳುಹಿಸಿದನು ಮತ್ತು ಮಹಾರಥನಾದ ಅವನು ಅವನ ರಥದ ನಾಲ್ಕು ಅಶ್ವಗಳನ್ನೂ ಕೊಂದನು.
ಹತಾಶ್ವಾತ್ತು ರಥಾತ್ಕರ್ಣಃ ಸಮಾಪ್ಲುತ್ಯ ವಿಶಾಂಪತೇ |
ಸ್ಯಂದನಂ ವೃಷಸೇನಸ್ಯ ಸಮಾರೋಹನ್ಮಹಾರಥಃ ॥ 28 ॥
ಎಲೈ ರಾಜನೇ, ಮಹಾರಥನಾದ ಕರ್ಣನು ತನ್ನ ಹತವಾದ ಅಶ್ವಗಳ ರಥದಿಂದ ಹಾರಿ ವೃಷಸೇನನ ರಥವನ್ನು ಸೇರಿದನು.
ನಿರ್ಜಿತ್ಯ ತು ರಣೇ ಕರ್ಣಂ ಭೀಮಸೇನಃ ಪ್ರತಾಪವಾನ್ |
ನನಾದ ಸುಮಹಾನಾದಂ ಪರ್ಜನ್ಯನಿನದೋಪಮಮ್ ॥ 29 ॥
ಪ್ರತಾಪಶಾಲಿಯಾದ ಭೀಮಸೇನನು ಯುದ್ಧದಲ್ಲಿ ಕರ್ಣನನ್ನು ಗೆದ್ದು ಪರ್ಜನ್ಯ ಘೋಷದಂತೆ ಮಹಾನಾದವನ್ನು ಮಾಡಿದನು.
ತಸ್ಯ ತಂ ನಿನದಂ ಶ್ರುತ್ವಾ ಪ್ರಹೃಷ್ಟೋಽಭೂದ್ ಯುಧಿಷ್ಠಿರಃ |

ಕರ್ಣಂ ಚ ನಿರ್ಜಿತಂ ಮತ್ವಾ ಭೀಮಸೇನೇನ ಭಾರತ ॥ 30 ॥
ಎಲೈ ಭಾರತನೇ, ಭೀಮಸೇನನ ಆ ನಾದವನ್ನು ಕೇಳಿ ಕರ್ಣನು ಪರಾಜಿತನಾಗಿದ್ದಾನೆಂದು ತಿಳಿದು ಯುಧಿಷ್ಠಿರನು ಸಂತೋಷಗೊಂಡನು.
ಸಮಂತಾಚ್ಛಂಖನಿನದಂ ಪಾಂಡುಸೇನಾಽಕರೋತ್ ತದಾ |
ಶತ್ರುಸೇನಾಧ್ವನಿಂ ಶ್ರುತ್ವಾ ತಾವಕಾ ಹ್ಯಪಿ ನಾನದನ್ |
ಗಾಂಡೀವಂ ಪ್ರಾಕ್ಷಿಪತ್ಪಾರ್ಥಃ ಕೃಷ್ಣೋಽಪ್ಯಬ್ಜಮವಾದಯತ್ ॥ 31 ॥
ಪಾಂಡವ ಸೇನೆಯು ಆಗ ಎಲ್ಲ ಕಡೆಗಳಲ್ಲಿಯೂ ಶಂಖನಾದವನ್ನು ಮಾಡಿತು. ಶತ್ರುಸೈನ್ಯದ ಧ್ವನಿಯನ್ನು ಕೇಳಿ ನಿನ್ನವರೂ ಶಂಖನಾದವನ್ನು ಮಾಡಿದರು. ಅರ್ಜುನನು ಗಾಂಡೀವ ಧನುಸ್ಸನ್ನು ಎಳೆದು ಘೋಷವನ್ನು ಮಾಡಿದನು. ಕೃಷ್ಣನೂ ಶಂಖವನ್ನು ಊದಿದನು.
ತಮಂತರ್ಧಾಯ ನಿನದಂ ಧ್ವನಿರ್ಭೀಮಸ್ಯ ನರ್ದತಃ |
ಅಶ್ರೂಯತ ಮಹಾರಾಜ ಸರ್ವಸೈನ್ಯೇಷು ಭಾರತ ॥ 32 ॥
ಎಲೈ ಭಾರತನೇ, ಮಹಾರಾಜನೇ, ಭೀಮಸೇನನ ಗರ್ಜನೆಯ ಧ್ವನಿಯು ಆ ಎಲ್ಲ ಶಬ್ದಗಳನ್ನೂ ಮೀರಿ ಸರ್ವಸೈನ್ಯಗಳಲ್ಲಿ ಕೇಳಿಬರುತ್ತಿದ್ದಿತು.
ತತೋ ವ್ಯಾಯಚ್ಛತಾಮಸ್ತ್ರೈಃ ಪೃಥಕ್ಪೃಥಗರಿಂದಮೌ |
ಮೃದುಪೂರ್ವಂ ಚ ರಾಧೇಯೋ ದೃಢಪೂರ್ವಂ ಚ ಪಾಂಡವಃ ॥33॥
ಅನಂತರ ಅರಿಂದಮರಾದ ಅವರು ಮೃದುಪೂರ್ವವಾಗಿ ಕರ್ಣನೂ, ಕ್ರೋಧಪೂರ್ವವಾಗಿ ಅರ್ಜುನನೂ ಬೇರೆ ಬೇರೆಯಾಗಿ ಅಸ್ತ್ರಗಳನ್ನು ಪ್ರಯೋಗಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರ್ದಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಅಷ್ಟತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೈದನೆಯ ಅಧ್ಯಾಯ
ದ್ರೋಣ-ದುರ್ಯೋಧನರ ಸಂವಾದ. ಯುಧಾಮನ್ಯು-ಉತ್ತಮೌಜರ ಜೊತೆಯಲ್ಲಿ ದುರ್ಯೋಧನನ ಯುದ್ಧ.
ಸಂಜಯಃ
ತಸ್ಮಿನ್ ವಿಲುಳಿತೇ ಸೈನ್ಯೇ ಸೈಂಧವಾಯಾರ್ಜುನೇ ಗತೇ |
ಸಾತ್ವತೇ ಭೀಮಸೇನೇ ಚ ಪುತ್ರಸ್ತೇ ದ್ರೋಣಮಭ್ಯಯಾತ್ |
ತ್ವರನ್ನೇಕರಥೇನೈವ ಬಹುಕೃತ್ಯಂ ವಿಚಿಂತಯನ್ ॥ 1 ॥
ಸಂಜಯ ಕೌರವ ಸೈನ್ಯವೆಲ್ಲವೂ ಅಸ್ತವ್ಯಸ್ತವಾಗಿ ಸೈಂಧವನನ್ನು ಹುಡುಕಿಕೊಂಡು ಅರ್ಜುನನೂ ಮತ್ತು ಅವನನ್ನು ಹುಡುಕಿಕೊಂಡು ಸಾತ್ಯಕಿ ಮತ್ತು ಭೀಮಸೇನರೂ ಹೋಗುತ್ತಿರಲು ನಿನ್ನ ಪುತ್ರನು ತ್ವರೆ ಮಾಡುತ್ತಾ ಮಾಡಬೇಕಾದ ಬಹುಕಾರ್ಯಗಳನ್ನು ಚಿಂತಿಸುತ್ತಾ ಒಂದು ರಥದಿಂದ ದ್ರೋಣರ ಬಳಿಗೆ ಹೋದನು.
ಸ ರಥಸ್ತವ ಪುತ್ರಸ್ಯ ತ್ವರಯಾ ಪರಯಾ ಯುತಃ |
ತೂರ್ಣಮಭ್ಯಪತದ್ ದ್ರೋಣಂ ಮನೋಮಾರುತವೇಗವಾನ್ ॥ 2 ॥
ಮನೋಮಾರುತವೇಗವುಳ್ಳ ನಿನ್ನ ಪುತ್ರನ ಆ ರಥವು ಬಹಳ ತ್ವರೆಯಿಂದ ಕೂಡಿ ಶೀಘ್ರವಾಗಿ ದ್ರೋಣರ ಬಳಿಗೆ ತಲುಪಿತು.
ಉವಾಚ ಚೈನಂ ಪುತ್ರಸ್ತೇ ಸಂರಂಭಾದ್ ರಕ್ತಲೋಚನಃ |
ಅರ್ಜುನೋ ಭೀಮಸೇನಶ್ಚ ಸಾತ್ಯಕಿಶ್ಚಾಪರಾಜಿತಃ ॥ 3 ॥
ವಿಜಿತ್ಯ ಸರ್ವಸೈನ್ಯಾನಿ ಸುಮಹಾಂತಿ ಮಹಾರಥಾಃ |
ಸಂಪ್ರಾಪ್ತಾಃ ಸಿಂಧುರಾಜಸ್ಯ ಸಮೀಪಮರಿಕರ್ಶನಾಃ |
ವ್ಯಾಯಚ್ಛಂತಿ ಚ ತತ್ರಾಪಿ ಸರ್ವ ಏವಾಪರಾಜಿತಾಃ ॥ 4 ॥
ನಿನ್ನ ಪುತ್ರನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಅವರನ್ನು ಕುರಿತು ಮಹಾರಥರಾದ ಅರ್ಜುನ, ಭೀಮಸೇನ ಮತ್ತು ಅಪರಾಜಿತನಾದ ಸಾತ್ಯಕಿಯು ನಮ್ಮ ದೊಡ್ಡದಾದ ಸೈನ್ಯವನ್ನೆಲ್ಲಾ ಜಯಿಸಿ, ಸೈಂಧವನ ಸಮೀಪಕ್ಕೆ ಬಂದಿದ್ದಾರೆ. ಅಪರಾಜಿತರೂ, ಶತ್ರುಕರ್ಶನರೂ ಆದ ಅವರೆಲ್ಲರೂ ಅಲ್ಲಿಯೂ ಕೂಡ ಪ್ರಯತ್ನಪಟ್ಟು ಯುದ್ಧವನ್ನು ಮಾಡುತ್ತಿದ್ದಾರೆ.
ಯದಿ ತಾವದ್ರಣೇ ಪಾರ್ಥೋ ವ್ಯತಿಕ್ರಾಂತೋ ಮಹಾರಥಃ |
ಕಥಂ ಸಾತ್ಯಕಿಭೀಮಾಭ್ಯಾಂ ವ್ಯತಿಕ್ರಾಂತೋಽಸಿ ಮಾನದ ॥ 5 ॥
ಎಲೈ ಮಾನದರೇ, ಮಹಾರಥನಾದ ಅರ್ಜುನನು ಒಂದು ಪಕ್ಷ ನಿಮ್ಮನ್ನು ದಾಟಿ ಹೋದರೋ ಸಾತ್ಯಕಿ ಮತ್ತು ಭೀಮಸೇನರು ಹೇಗೆ ನಿಮ್ಮನ್ನು ದಾಟಿದರು?
ಆಶ್ಚರ್ಯಭೂತಂ ಲೋಕೇಽಸ್ಮಿನ್ ಸಮುದ್ರಸ್ಯೇವ ಶೋಷಣಮ್ |
ನಿರ್ಜಯಂ ತವ ವಿಪ್ರಾಗ್ರ್ಯ ಸಾತ್ವತೇನಾರ್ಜುನೇನ ಚ ॥ 6 ॥
ಎಲೈ ಬ್ರಾಹ್ಮಣಶ್ರೇಷ್ಠರೇ, ಸಾತ್ಯಕಿ ಮತ್ತು ಅರ್ಜುನರಿಂದ ನಿಮ್ಮ ಪರಾಭವವು ಸಮುದ್ರದ ಶೋಷಣೆಯಂತೆ ಲೋಕದಲ್ಲಿ ಆಶ್ಚರ್ಯಕರವಾಗಿದೆ.

ತಥೈವ ಭೀಮಸೇನೇನ ಲೋಕಃ ಸಂವದತೇ ಭೃಶಮ್ |
ಕಥಂ ದ್ರೋಣೋ ಜಿತಃ ಸಂಖ್ಯೇ ಧನುರ್ವೇದಸ್ಯ ಪಾರಗಃ ॥ 7 ॥
ಹಾಗೆಯೇ ಧನುರ್ವೇದ ಪಾರಂಗತನಾದ ನಿಮ್ಮನ್ನು ಭೀಮಸೇನನು ಹೇಗೆ ಜಯಿಸಿದನೆಂದು ಜನರು ಮಾತನಾಡಿಕೊಳ್ಳುತ್ತಿದ್ದಾರೆ.
ನಾಶ ಏವ ತು ಮೇ ನೂನಂ ಮಂದಭಾಗ್ಯಸ್ಯ ಸಂಯುಗೇ |
ಯತ್ರ ತ್ವಾಂ ಪುರುಷವ್ಯಾಘ್ರಮತಿಕ್ರಾಂತಾಸ್ತ್ರಯೋ ರಥಾಃ ॥ 8 ॥
ಪುರುಷವ್ಯಾಘ್ರರಾದ ನಿಮ್ಮನ್ನು ಮೂವರು ರಥರು ದಾಟಿಹೋದಮೇಲೆ ಮಂದಭಾಗ್ಯನಾದ ನನಗೆ ಯುದ್ಧದಲ್ಲಿ ಖಂಡಿತವಾಗಿ ನಾಶವೇ ಉಂಟಾಗುವುದೆಂದು ತೋರುತ್ತದೆ.
ಏವಂ ಗತೇ ತು ಕೃತ್ಯೇಽಸ್ಮಿನ್ ಬ್ರೂಹಿ ಯತ್ತೇ ವಿವಕ್ಷಿತಮ್ |
ಯದ್ ಗತಂ ಗತಮೇವೇಹ ಶೇಷಂ ಚಿಂತಯ ಮಾನದ ॥ 9 ॥
ಪರಿಸ್ಥಿತಿಯು ಹೀಗಿರುವಾಗ ಈಗ ಮಾಡಬೇಕಾದ ಕಾರ್ಯದ ವಿಷಯದಲ್ಲಿ ನಿಮ್ಮ ಅಭಿಪ್ರಾಯವು ಏನೆಂದು ಹೇಳಿ ಕಳೆದುದು ಕಳದೇ ಹೋಗಿದೆ. ಮಾನದರೇ, ಉಳಿದಿರುದನ್ನು ವಿಚಾರ ಮಾಡಿ.
ಯತ್ ಕೃತ್ಯಂ ಸಿಂಧುರಾಜಸ್ಯ ಪ್ರಾಪ್ತಕಾಲಮನಂತರಮ್ |
ತದ್ಬ್ರವೀತು ಭವಾನ್ ಕ್ಷಿಪ್ರಂ ಸಾಧು ತತ್ ಸಂವಿಧೀಯತಾಮ್ ॥10॥
ಸೈಂಧವನ ವಿಷಯದಲ್ಲಿ ತಕ್ಷಣ ಮಾಡಬೇಕಾದ ಕಾರ್ಯವು ಯಾವುದು ಎಂದು ಹೇಳಿ. ನೀವು ಅದಕ್ಕೆ ಬೇಕಾದ ವ್ಯವಸ್ಥೆಯನ್ನು ಶೀಘ್ರವಾಗಿ ಮಾಡಿ.
ದ್ರೋಣಃ
ಚಿಂತ್ಯಂ ಬಹು ಮಹಾರಾಜ ಕೃತ್ಯಂ ಯತ್ತತ್ರ ಮೇ ಶೃಣು |
ತ್ರಯೋ ಹಿ ಸಮತಿಕ್ರಾಂತಾಃ ಪಾಂಡವಾನಾಂ ಮಹಾರಥಾಃ |
ಯಾವದೇವ ಭಯಂ ಪಶ್ಚಾತ್ ತಾವದೇಷಾಂ ಪುರಃಸರಮ್ ॥ 11 ॥
ದ್ರೋಣರು ಮಹಾರಾಜನೇ, ಚಿಂತಿಸಬೇಕಾದುದು ಬಹಳವಿದೆ. ಮಾಡಬೇಕಾದ ಕಾರ್ಯದ ಬಗ್ಗೆ ಹೇಳುತ್ತೇನೆ, ಅದನ್ನು ಕೇಳು. ಪಾಂಡವರ ಮೂವರು ಮಹಾರಥರು ನಮ್ಮನ್ನು ದಾಟಿ ಹೋಗಿದ್ದಾರೆ. ಹಿಂದೆ ಸೈಂಧವನಿರುವಲ್ಲಿ ಎಷ್ಟು ಭಯವಿದೆಯೋ ವ್ಯೂಹದ ಮುಂಭಾಗದಲ್ಲಿಯೂ ಅವರಿಂದ ಅಷ್ಟೇ ಭಯವಿದೆ.
ತದ್ ಗರೀಯಸ್ತರಂ ಮನ್ಯೇ ಯತ್ರ ಕೃಷ್ಣಧನಂಜಯೌ |
ಸಾ ಪುರಸ್ತಾಚ್ಚ ಪಶ್ಚಾಚ್ಚ ಗೃಹೀತಾ ಭಾರತೀ ಚಮೂಃ ॥ 12 ॥
ಎಲ್ಲಿ ಕೃಷ್ಣಾರ್ಜುನರು ಇದ್ದಾರೆಯೋ ಅಲ್ಲಿ ದ್ರೋಣರ ವ್ಯೂಹದ ಮುಂಭಾಗದಲ್ಲಿ ಮತ್ತು ಸೈಂಧವನ ಸಮೀಪದಲ್ಲಿ ಕೌರವ ಸೇನೆಯು ಹಿಡಿಯಲ್ಪಟ್ಟಿರುವುದರಿಂದ ಆ ಕಾರ್ಯವು ಶ್ರೇಷ್ಠವೆಂದು ಭಾವಿಸುತೆತೇನೆ.
ತತ್ರ ಕೃತ್ಯಮಹಂ ಮನ್ಯೇ ಸೈಂಧವಸ್ಯಾಭಿರಕ್ಷಣಮ್ |
ಸ ನೋ ರಕ್ಷ್ಯತಮಸ್ತಾತ ಕ್ರುದ್ಧಾದ್ ಭೀತೋ ಧನಂಜಯಾತ್ ॥ 13 ॥
ಅವೆರಡರಲ್ಲಿ ಸೈಂಧವನ ರಕ್ಷಣೆಯು ತಕ್ಷಣ ಮಾಡಬೇಕಾದ ಕಾರ್ಯವೆಂದು ಭಾವಿಸುತ್ತೇನೆ. ಎಲೈ ಪ್ರೀತಿಪಾತ್ರನೇ, ಕ್ರುದ್ಧನಾದ ಅರ್ಜುನನಿಂದ ಭೀತನಾದ ಅವನನ್ನು ನಾವು ಎಲ್ಲರಿಗಿಂತಲೂ ಹೆಚ್ಚಾಗಿ ರಕ್ಷಿಸಬೇಕು.
ಗತೌ ಹಿ ಸೈಂಧವಂ ವೀರೌ ಯುಯುಧಾನವೃಕೋದರೌ |
ಸಂಪ್ರಾಪ್ತಂ ತದಿದಂ ದ್ಯೂತಂ ಯತ್ತಚ್ಛಕುನಿಬುದ್ಧಿಜಮ್ ॥ 14 ॥
ವೀರರಾದ ಸಾತ್ಯಕಿ ಮತ್ತು ಭೀಮಸೇನರು ಸೈಂಧವನ ಬಳಿಗೆ ಹೋಗಿದ್ದಾರೆ. ಶಕುನಿಯ ಬುದ್ಧಿಯಿಂದ ಉಂಟಾದ ನಿಜವಾದ ದ್ಯೂತವು ಈಗ ಪ್ರಾರಂಭವಾಗಿದೆ.
ನ ಸಭಾಯಾಂ ಜಯೋ ವೃತ್ತೋ ನಾಪಿ ತತ್ರ ಪರಾಜಯಃ |
ಇಹ ನೋ ಗ್ಲಹಮಾನಾನಾಮದ್ಯ ತಾತ ಜಯಾಜಯೌ ॥ 15 ॥
ಎಲೈ ಪ್ರೀತಿಪಾತ್ರನೇ, ಹಿಂದೆ ಸಭೆಯಲ್ಲಿ ಜಯವೂ ಉಂಟಾಗಲಿಲ್ಲ, ಪರಾಜಯವೂ ಉಂಟಾಗಲಿಲ್ಲ. ಆದರೆ ಈ ದಿನ ಇಲ್ಲಿ ಪಣವಿಟ್ಟು ಆಡುವ ನಮಗೆ ಜಯ-ಪರಾಜಯಗಳು ಉಂಟಾಗುವುವು.
ಯಾನ್ ಸ್ಮ ತಾನ್ ಗ್ಲಹತೇ ಘೋರಾನ್ ಶಕುನಿಃ ಕುರುಸಂಸದಿ |
ಅಕ್ಷಾನ್ ಸಮ್ಮನ್ಯಮಾನಃ ಸ ಪ್ರಾಕ್ ಶರಾಸ್ತೇ ದುರಾಸದಾಃ ॥ 16 ॥
ಹಿಂದೆ ಶಕುನಿಯು ಕುರುಸಭೆಯಲ್ಲಿ ಯಾವ ಘೋರವಾದ ದಾಳಗಳನ್ನು ದಾಳವೆಂದು ತಿಳಿದು ದ್ಯೂತವನ್ನು ಆಡಿದನೋ ಅವು ನಿಜವಾಗಿ ಸಮೀಪಿಸಲು ಅಸಾಧ್ಯವಾದ ಬಾಣಗಳು.
ಯತ್ರ ತೇ ಬಹವಸ್ತಾತ ಕುರವಃ ಪರ್ಯವಸ್ಥಿತಾಃ |
ಸೇನಾಂ ದುರೋದರಂ ವಿದ್ಧಿ ಶರಾನಕ್ಷಾನ್ ವಿಶಾಂಪತೇ ॥ 17 ॥
ಪ್ರೀತಿಪಾತ್ರನೇ, ರಾಜನೇ, ಬಹಳ ಜನ ಕುರುಗಳು ನಿಂತಿರುವ ಈ ಸೇನೆಯನ್ನು ದ್ಯೂತವೆಂದು (ಹಾಸು) ತಿಳಿ. ಇಲ್ಲಿ ಬಾಣಗಳೇ ದಾಳಗಳು.
ಗ್ಲಹಂ ಚ ಸೈಂಧವಂ ರಾಜನ್ನತ್ರ ದ್ಯೂತಸ್ಯ ನಿಶ್ಚಯಃ |
ಸೈಂಧವೇ ಹಿ ಮಹಾದ್ಯೂತಂ ಸಮಾಸಕ್ತಂ ಪರೈಃ ಸಹ ॥ 18 ॥
ರಾಜನೇ, ಇಲ್ಲಿ ಸೈಂಧವನೇ ಪಣ. ದ್ಯೂತದ ಜಯಪರಾಜಯಗಳು ಇಲ್ಲಿ ನಿರ್ಧರಿಸಲ್ಪಡುತ್ತವೆ. ಸೈಂಧವನನ್ನು ಪಣವಾಗಿ ಭಾವಿಸಿ ನಮಗೆ ಪಾಂಡವರ ಜೊತೆಯಲ್ಲಿ ದೊಡ್ಡ ದ್ಯೂತವು ಪ್ರಸಕ್ತವಾಗಿದೆ.

ಅತ್ರ ಸರ್ವೇ ಮಹಾರಾಜ ತ್ಯಕ್ತ್ವಾ ಜೀವಿತಮಾತ್ಮನಃ |
ಸೈಂಧವಸ್ಯ ರಣೇ ರಕ್ಷಾಂ ವಿಧಿವತ್ ಕರ್ತುಮರ್ಹಥ |
ತತ್ರ ನೋ ಗ್ಲಹಮಾನಾನಾಂ ಧ್ರುವೌ ತಾತ ಜಯಾಜಯೌ ॥ 19 ॥
ಎಲೈ ಮಹಾರಾಜನೇ, ಎಲ್ಲರೂ ತಮ್ಮ ಜೀವಿತದ ಆಸೆಯನ್ನು ತೊರೆದು ರಣರಂಗದಲ್ಲಿ ಶಾಸೊತ್ರೋಕ್ತ ರೀತಿಯಲ್ಲಿ ಸೈಂಧವನ ರಕ್ಷಣೆ ಮಾಡುವುದು ಸೂಕ್ತವಾದುದು. ದ್ಯೂತವನ್ನಾಡುವ ನಮಗೆ ಅಲ್ಲಿ ಜಯಪರಾಜಯಗಳು ಸಂಸಕ್ತವಾಗಿವೆ.
ಯತ್ರ ತೇ ಪರಮೇಷ್ವಾಸಾ ಯತ್ತಾ ರಕ್ಷಂತಿ ಸೈಂಧವಮ್ |
ತತ್ರ ಯಾಹಿ ಸ್ವಯಂ ಶೀಘ್ರಂ ತಾಂಶ್ಚ ರಕ್ಷಸ್ವ ರಕ್ಷಿಣಃ ॥ 20 ॥
ಎಲ್ಲಿ ಆ ಮಹಾಧನುರ್ಧಾರಿಗಳು ಪ್ರಯತ್ನಪಟ್ಟು ಸೈಂಧವನನ್ನು ರಕ್ಷಿಸುತ್ತಿದ್ದಾರೆಯೋ ಅಲ್ಲಿ ನೀನು ಸ್ವತಃ ಶೀಘ್ರವಾಗಿ ಹೋಗು. ಅವನ ರಕ್ಷಕರನ್ನೂ ರಕ್ಷಿಸು.
ಇಹೈವ ತ್ವಹಮಾಸಿಷ್ಯೇ ಪ್ರೇಷಯಿಷ್ಯಾಮಿ ಚಾಪರಾನ್ |
ನಿರೋತ್ಸ್ಯಾಮಿ ಚ ಪಾಂಚಾಲಾನ್ ಸಹಿತಾನ್ ಪಾಂಡುಸೃಂಜಯೈಃ ॥
ನಾನು ಇಲ್ಲಿಯೇ ಇದ್ದು ಉಳಿದವರನ್ನು ಅಲ್ಲಿಗೆ ಕಳುಹಿಸುವೆನು. ಪಾಂಡು- ಸೃಂಜಯರಿಂದ ಸಹಿತರಾದ ಪಾಂಚಾಲರನ್ನು ನಾನು ಇಲ್ಲಿ ತಡೆಯುವೆನು.
ತತೋ ದುರ್ಯೋಧನಃ ಪ್ರಾಯಾತ್ ತೂರ್ಣಮಾಚಾರ್ಯಶಾಸನಾತ್|
ಉದ್ಯಮ್ಯಾತ್ಮಾನಮುಗ್ರಾಯ ಕರ್ಮಣೇ ಸಪದಾನುಗಃ ॥ 22 ॥
ಆಗ ದುರ್ಯೋಧನನು ಆಚಾರ್ಯರ ಅಪ್ಪಣೆಯಂತೆ ತನ್ನನ್ನು ಕಾರ್ಯೋನ್ಮುಖನನ್ನಾಗಿ ಮಾಡಿಕೊಂಡು, ಉಗ್ರವಾದ ಕರ್ಮವನ್ನು ಮಾಡಲು ತನ್ನ ಅನುಯಾಯಿಗಳ ಜೊತೆಯಲ್ಲಿ ಶೀಘ್ರವಾಗಿ ಹೊರಟನು.
ಚಕ್ರರಕ್ಷೌ ತು ಪಾಂಚಾಲ್ಯೌ ಯುಧಾಮನ್ಯೂತ್ತಮೌಜಸೌ |
ಬಾಹ್ಯೇನ ಸೇನಾಮಭ್ಯೇತ್ಯ ಜಗ್ಮತುಃ ಸವ್ಯಸಾಚಿನಮ್ ॥ 23 ॥
ಚಕ್ರರಕ್ಷಕರಾದ ಪಾಂಚಾಲದೇಶದ ಯುಧಾಮನ್ಯು ಮತ್ತು ಉತ್ತಮೌಜರು ವ್ಯೂಹ ಮುಖದಲ್ಲಿ ಹಿಂದೆ ತಡೆಯಲ್ಪಟ್ಟುದರಿಂದ ಸೇನೆಯ ಹೊರಭಾಗದಿಂದ ಬಂದು ಅರ್ಜುನನನ್ನು ಸಮೀಪಿಸಿದರು.
ತೌ ಹಿ ಪೂರ್ವಂ ಮಹಾರಾಜ ವಾರಿತೌ ಕೃತವರ್ಮಣಾ |
ಪ್ರವಿಷ್ಟೇ ತ್ವರ್ಜುನೇ ರಾಜಂಸ್ತವ ಸೈನ್ಯಂ ಯುಯುತ್ಸಯಾ ॥ 24 ॥
ಎಲೈ ಮಹಾರಾಜನೇ, ನಿನ್ನ ಸೈನ್ಯದ ಜೊತೆಯಲ್ಲಿ ಯುದ್ಧ ಮಾಡಲು ಬಯಸಿ ಅರ್ಜುನನು ಪ್ರವೇಶಿಸಿದಾಗ ಅವನನ್ನು ಹಿಂಬಾಲಿಸಿದ ಅವರಿಬ್ಬರೂ ಕೃತವರ್ಮನಿಂದ ತಡೆಯಲ್ಪಟ್ಟರು.
ತಾಭ್ಯಾಂ ದುರ್ಯೋಧನಃ ಸಾರ್ಧಮಗಚ್ಛದ್ ಯುದ್ಧಮುತ್ತಮಮ್ |
ತ್ವರಿತಸ್ತ್ವರಮಾಣಾಭ್ಯಾಂ ಭ್ರಾತೃಭ್ಯಾಂ ಭಾರತೋ ಬಲೀ ॥ 25 ॥
ತ್ವರೆಯಿಂದ ಕೂಡಿದ ಬಲಿಷ್ಠನಾದ ದುರ್ಯೋಧನನು ತ್ವರೆಯಿಂದ ಕೂಡಿದ ಸಹೋದರರಾದ ಅವರಿಬ್ಬರ ಜೊತೆಯಲ್ಲಿ ಶ್ರೇಷ್ಠವಾದ ಯುದ್ಧವನ್ನು ಮಾಡಿದನು.
ತಾವಭಿದ್ರವತಾಮೇನಮುಭಾವುದ್ಯತಕಾರ್ಮುಕೌ |
ಮಹಾರಥಸಮಾಖ್ಯಾತೌ ಕ್ಷತ್ರಿಯಪ್ರವರೌ ಯುಧಿ ॥ 26 ॥
ಮಹಾರಥರೆಂದು ಪರಿಗಣಿಸಲ್ಪಟ್ಟ, ಕ್ಷತ್ರಿಯಶ್ರೇಷ್ಠರಾದ ಅವರಿಬ್ಬರು ರಣರಂಗದಲ್ಲಿ ತಮ್ಮ ಧನುಸ್ಸುಗಳನ್ನು ಎತ್ತಿ ದುರ್ಯೋಧನನ ಮೇಲೆ ಎರಗಿದರು.
ಯುಧಾಮನ್ಯುಸ್ತು ಸಂಕ್ರುದ್ಧಃ ಶರಾಂಸಿತ್ರಂಶತಮಾಯಸಾನ್ |
ವ್ಯಸೃಜತ್ ತವ ಪುತ್ರಸ್ಯ ತ್ವರಮಾಣಃ ಸ್ತನಾಂತರೇ ॥ 27 ॥
ಕೋಪಗೊಂಡ ಯುಧಾಮನ್ಯುವಾದರೋ ತ್ವರೆಯಿಂದ ಕೂಡಿದವನಾಗಿ ಮೂವತ್ತು ಕಬ್ಬಿಣದ ಬಾಣಗಳಿಂದ ನಿನ್ನ ಪುತ್ರನನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ದುರ್ಯೋಧನೋಽಪಿ ರಾಜೇಂದ್ರ ಪಾಂಚಾಲ್ಯಸ್ಯೋತ್ತಮೌಜಸಃ |
ಜಘಾನ ಚತುರಶ್ಚಾಶ್ವಾನುಭೌ ಚ ಪಾರ್ಷ್ಣಿಸಾರಥೀ ॥ 28 ॥
ಎಲೈ ರಾಜೇಂದ್ರನೇ, ದುರ್ಯೋಧನನೂ ಸಹ ಪಾಂಚಾಲ ದೇಶದ ಉತ್ತಮೌಜನ ರಥದ ನಾಲ್ಕು ಅಶ್ವಗಳನ್ನು ಮತ್ತು ಇಬ್ಬರು ರಥಸಾರಥಿಗಳನ್ನು ಕೊಂದನು.
ಉತ್ತಮೌಜಾ ಹತಾಶ್ವಸ್ತು ಹತಸೂತಶ್ಚ ಸಂಯುಗೇ |
ಆರುರೋಹ ರಥಂ ಭ್ರಾತುರ್ಯುಧಾಮನ್ಯೋರಭಿ ತ್ವರನ್ ॥ 29 ॥
ತನ್ನ ಅಶ್ವಗಳನ್ನೂ, ಸೂತನನ್ನೂ ಕಳೆದುಕೊಂಡ ಉತ್ತಮೌಜನು ರಣರಂಗದಲ್ಲಿ ತ್ವರೆಯಿಂದ ಯುಧಾಮನ್ಯುವಿನ ರಥವನ್ನು ಏರಿದನು.
ಸ ರಥಂ ಪ್ರಾಪ್ಯ ತಂ ಭ್ರಾತುರ್ದುರ್ಯೋಧನಹಯಾನ್ ಶರೈಃ |
ಬಹುಭಿಸ್ತಾಡಯಾಮಾಸ ತೇ ಹತಾಃ ಪ್ರಾಪತನ್ ಭುವಿ ॥ 30 ॥
ಅವನು ತನ್ನ ಸಹೋದರನ ರಥವನ್ನು ಸೇರಿ ದುರ್ಯೋಧನನ ರಥದ ಅಶ್ವಗಳನ್ನು ಅನೇಕ ಬಾಣಗಳಿಂದ ಹೊಡೆದನು. ಅವು ಮೃತವಾಗಿ ಭೂಮಿಯ ಮೇಲೆ ಬಿದ್ದವು.
ಹಯೇಷು ಪತಿತೇಷ್ವಸ್ಯ ಚಿಚ್ಛೇದ ಪರಮೇಷುಣಾ |

ಯುಧಾಮನ್ಯುರ್ಧನುಃ ಶೀಘ್ರಂ ಶರಾವಾಪಂ ಚ ಸಂಯುಗೇ ॥ 31 ॥
ಅಶ್ವಗಳು ಭೂಮಿಯ ಮೇಲೆ ಬೀಳುತ್ತಿರಲು ಯುಧಾಮನ್ಯುವು ಶೀಘ್ರವಾಗಿ ಒಂದು ಶ್ರೇಷ್ಠವಾದ ಬಾಣದಿಂದ ದುರ್ಯೋಧನನ ಧನುಸ್ಸನ್ನು ಮತ್ತು ಬತ್ತಳಿಕೆಯನ್ನು ಕತ್ತರಿಸಿದನು.
ಹತಾಶ್ವಸೂತಾತ್ ಸ ರಥಾದವಪ್ಲುತ್ಯ ಮಹಾರಥಃ |
ಗದಾಮಾದಾಯ ತೇ ಪುತ್ರಃ ಪಾಂಚಾಲ್ಯಾವಭ್ಯಧಾವತ ॥ 32 ॥
ಅಶ್ವ-ಸೂತರನ್ನು ಕಳೆದುಕೊಂಡ ಮಹಾರಥನಾದ ನಿನ್ನ ಪುತ್ರನು ರಥದಿಂದ ಕೆಳಗೆ ಹಾರಿ ಗದೆಯನ್ನು ಹಿಡಿದು ಪಾಂಚಾಲದೇಶದ ಅವರಿಬ್ಬರ ಮೇಲೆ ಧಾವಿಸಿದನು.
ತಮಾಪತಂತಂ ಸಂಪ್ರೇಕ್ಷ್ಯ ಕ್ರುದ್ಧಂ ಪರಪುರಂಜಯಮ್ |
ಅವಪ್ಲುತೌ ರಥೋಪಸ್ಥಾದ್ ಯುಧಾಮನ್ಯೂತ್ತಮೌಜಸೌ ॥ 33 ॥
ಪರಪುರಂಜಯನಾದ, ಕ್ರುದ್ಧನಾದ ಅವನು ತಮ್ಮೆಡೆಗೆ ಬರುತ್ತಿರುವುದನ್ನು ನೋಡಿ ಯುಧಾಮನ್ಯು ಮತ್ತು ಉತ್ತಮೌಜರು ತಮ್ಮ ರಥಪೀಠದಿಂದ ಕೆಳಗೆ ಹಾರಿದರು.
ತತಃ ಸ ಹೇಮಚಿತ್ರಂ ತಂ ಸ್ಯಂದನಪ್ರವರಂ ಗದೀ |
ಗದಯಾ ಪೋಥಯಾಮಾಸ ಸಾಶ್ವಸೂತಧ್ವಜಂ ರಣೇ ॥ 34 ॥
ಆಗ ಗದೆಯನ್ನು ಹಿಡಿದಿದ್ದ ದುರ್ಯೋಧನನು ಸುವರ್ಣಾಲಂಕೃತವಾದ ಅಶ್ವ- ಸೂತ-ಧ್ವಜಗಳಿಂದ ಕೂಡಿದ ಅವರ ಶ್ರೇಷ್ಠವಾದ ರಥವನ್ನು ಗದೆಯಿಂದ ಹೊಡೆದು ಪುಡಿಮಾಡಿದನು.
ಹತ್ವಾ ಚೈನಂ ಸ ಪುತ್ರಸ್ತೇ ಹತಾಶ್ವೋ ಹತಸಾರಥಿಃ |
ಮದ್ರರಾಜರಥಂ ತೂರ್ಣಮಾರುರೋಹ ಪರಂತಪಃ ॥ 35 ॥
ರಥವನ್ನು ವಿನಾಶ ಮಾಡಿ, ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಕಳೆದುಕೊಂಡಿದ್ದ ಪರಂತಪನಾದ ನಿನ್ನ ಪುತ್ರನು ಶೀಘ್ರವಾಗಿ ಶಲ್ಯನ ರಥವನ್ನು ಏರಿದನು.
ಪಾಂಚಾಲಾನಾಂ ತು ಮುಖ್ಯೌ ತೌ ರಾಜಪುತ್ರೌ ಮಹಾಬಲೌ |
ರಥಮನ್ಯಂ ಸಮಾರುಹ್ಯ ಧನಂಜಯಮಭೀಯತುಃ ॥ 36 ॥
ಮಹಾಬಲರೂ, ಪಾಂಚಾಲ ದೇಶದ ರಾಜಕುಮಾರರೂ ಮತ್ತು ಪ್ರಧಾನರೂ ಆದ ಯುಧಾಮನ್ಯು ಮತ್ತು ಉತ್ತಮೌಜರು ಇನ್ನೊಂದು ರಥವನ್ನು ಏರಿ ಅರ್ಜುನನ ಬಳಿಗೆ ಹೋದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚದಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕೋನಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾರನೆಯ ಅಧ್ಯಾಯ
ಭೀಮನಿಂದ ಕರ್ಣನ ಪರಾಜಯ.
ಧೃತರಾಷ್ಟ್ರಃ
ಯೌ ತೌ ಕರ್ಣಶ್ಚ ಭೀಮಶ್ಚ ಸಂಪ್ರಯುದ್ಧೌ ಮಹಾಬಲೌ |
ಅರ್ಜುನಸ್ಯ ರಥೋಪಾಂತೇ ಕೀದೃಶಃ ಸೋಽಭವದ್ ರಣಃ ॥ 1 ॥
ಧೃತರಾಷ್ಟ್ರ, ಮಹಾಬಲರಾದ ಕರ್ಣ ಮತ್ತು ಭೀಮರು ಅರ್ಜುನನ ರಥ ಸಮೀಪದಲ್ಲಿ ಯುದ್ಧ ಮಾಡಿದರಷ್ಟೆ! ಆ ಯುದ್ಧವು ಹೇಗಿದ್ದಿತು?
ಪೂರ್ವಂ ಹಿ ನಿರ್ಜಿತಃ ಕರ್ಣೋ ಭೀಮಸೇನೇನ ಸಂಯುಗೇ |
ಕಥಂ ಭೂಯಸ್ತು ರಾಧೇಯೋ ಭೀಮಮಾಗಾನ್ಮಹಾರಥಃ ॥ 2 ॥
ಹಿಂದೆ ಕರ್ಣನು ಯುದ್ಧದಲ್ಲಿ ಭೀಮಸೇನನಿಂದ ಪರಾಜಿತನಾಗಿದ್ದನು. ಮಹಾರಥನಾದ ರಾಧೇಯನು ಪುನಃ ಹೇಗೆ ಭೀಮನ ಜೊತೆಯಲ್ಲಿ ಯುದ್ಧಕ್ಕೆ ಹೋದನು?
ಭೀಮೋ ವಾ ಸೂತತನಯಂ ಪ್ರತ್ಯುದ್ಯಾತಃ ಕಥಂ ರಣೇ |
ಮಹಾರಥಸಮಾಖ್ಯಾತಂ ಪೃಥಿವ್ಯಾಂ ಪ್ರವರಂ ರಥಮ್ ॥ 3 ॥
ಭೀಮನಾದರೋ ಮಹಾರಥನೆಂದು ಪರಿಖ್ಯಾತನಾದ ಪೃಥಿವಿಯಲ್ಲಿ ಶ್ರೇಷ್ಠ ರಥನಾದ ಕರ್ಣನ ಜೊತೆಯಲ್ಲಿ ಹೇಗೆ ಯುದ್ಧಕ್ಕೆ ಹೋದನು?
ಭೀಷ್ಮದ್ರೋಣಾವತಿಕ್ರಮ್ಯ ಧರ್ಮಪುತ್ರೋ ಯುಧಿಷ್ಠಿರಃ |
ನಾನ್ಯತೋ ಭಯಮಾದತ್ತ ವಿನಾ ಕರ್ಣಂ ಧನುರ್ಧರಮ್ ॥ 4 ॥
ಧರ್ಮಪುತ್ರನಾದ ಯುಧಿಷ್ಠಿರನು ಭೀಷ್ಮ-ದ್ರೋಣರನ್ನು ಬಿಟ್ಟರೆ ಧನುರ್ಧಾರಿಯಾದ ಕರ್ಣನನ್ನು ಬಿಟ್ಟು ಬೇರೆ ಯಾರಿಂದಲೂ ಭಯವನ್ನು ಹೊಂದಲಿಲ್ಲ.
ಭಯಾನ್ನ ಶೇತೇ ಸತತಂ ಚಿಂತಯನ್ ವೈ ಮಹಾರಥಮ್ |
ತಂ ಕಥಂ ಸೂತಪುತ್ರಂ ಹಿ ಭೀಮೋಽಯುಧ್ಯತ ಸಂಯುಗೇ ॥ 5 ॥
ಅವನು ಮಹಾರಥನಾದ ಕರ್ಣನನ್ನು ಚಿಂತಿಸುತ್ತಾ ಭಯದಿಂದ ರಾತ್ರಿಯಲ್ಲಿ ನಿದ್ರೆಯನ್ನೇ ಮಾಡುವುದಿಲ್ಲ. ಅಂತಹ

ಸೂತಪುತ್ರನಾದ ಕರ್ಣನ ಜೊತೆಯಲ್ಲಿ ಭೀಮನು ಹೇಗೆ ಯುದ್ಧವನ್ನು ಮಾಡಿದನು?
ಬ್ರಹ್ಮಣ್ಯಂ ವೀರ್ಯಸಂಪನ್ನಂ ಸಮರೇಷ್ವನಿವರ್ತಿನಮ್ |
ಕಥಂ ಕರ್ಣಂ ಯುಧಾಂಶ್ರೇಷ್ಠಂ ಭೀಮೋಽಯುದ್ಧ್ಯತ ಸಂಯುಗೇ ||
ಬ್ರಾಹ್ಮಣರಲ್ಲಿ ವಾತ್ಸಲ್ಯವುಳ್ಳವನೂ, ವೀರ್ಯಸಂಪನ್ನನೂ, ಯುದ್ಧದಲ್ಲಿ ಹಿಮ್ಮೆಟ್ಟದವನೂ, ಯೋಧರಲ್ಲಿ ಶ್ರೇಷ್ಠನಾದವನೂ ಆದ ಕರ್ಣನ ಜೊತೆಯಲ್ಲಿ ಭೀಮಸೇನನು ಹೇಗೆ ಯುದ್ಧವನ್ನು ಮಾಡಿದನು?
ಯೌ ತೌ ಸಮೀಯತುರ್ವೀರಾವರ್ಜುನಸ್ಯ ರಥಂ ಪ್ರತಿ |
ಕಥಂ ನು ತಾವಯುದ್ಧ್ಯೇತಾಂ ಸೂತಪುತ್ರವೃಕೋದರೌ || 7 ||
ವೀರರಾದ ಯಾವ ಭೀಮ ಮತ್ತು ಕರ್ಣರು ಅರ್ಜುನನ ರಥದ ಬಳಿಯಲ್ಲಿ ಸಂಧಿಸಿದರೋ ಅವರು ಹೇಗೆ ಯುದ್ಧವನ್ನು ಮಾಡಿದರು?
ಭ್ರಾತೃತ್ವಂ ದರ್ಶಿತಂ ಪೂರ್ವಂ ಘೃಣೀ ಚಾಪಿ ಸ ಸೂತಜಃ |
ಕಥಂ ಭೀಮೇನ ಯುಯುಧೇ ಕುಂತ್ಯಾ ವಾಕ್ಯಮನುಸ್ಮರನ್ || 8 ||
ಕರ್ಣನು ಹಿಂದೆ ಸೋದರಸ್ನೇಹವನ್ನು ಮತ್ತು ದಯೆಯನ್ನು ತೋರಿಸಿದ್ದಾನೆ. ಅಂತಹ ಕರ್ಣನು ಕುಂತಿಯ ವಾಕ್ಯವನ್ನು ಸ್ಮರಿಸಿ, ಭೀಮನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದನು?
ಭೀಮೋ ವಾ ಸೂತಪುತ್ರೇಣ ಸ್ಮರನ್ ವೈರಂ ಪುರಾ ಕೃತಮ್ |
ಸೋಽಯುದ್ಧ್ಯತ ಕಥಂ ವೀರಃ ಕರ್ಣೇನ ಸಹ ಸಂಯುಗೇ || 9 ||
ವೀರನಾದ ಭೀಮನೂ ಸಹ ಕರ್ಣನ ಜೊತೆಯಲ್ಲಿ ಹಿಂದೆ ಮಾಡಿದ ವೈರವನ್ನು ಸ್ಮರಿಸುತ್ತಾ ಅವನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದನು?
ಆಶಾಸ್ತೇ ಚ ಸದಾ ಸೂತ ಪುತ್ರೋ ದುರ್ಯೋಧನೋ ಮಮ |
ಕರ್ಣೋ ಜೇಷ್ಯತಿ ಸಂಗ್ರಾಮೇ ಸಹಿತಾನ್ ಪಾಂಡವಾನಿತಿ || 10 ||
ಎಲೈ ಸೂತನೇ, ನನ್ನ ಪುತ್ರನಾದ ದುರ್ಯೋಧನನು ಯುದ್ಧದಲ್ಲಿ ಕರ್ಣನು ಎಲ್ಲ ಪಾಂಡವರನ್ನೂ ಜಯಿಸುವನು ಎಂದು ಯಾವಾಗಲೂ ಆಶಿಸುತ್ತಾನೆ.
ಜಯಾಶಾ ಯತ್ರ ಮಂದಸ್ಯ ಪುತ್ರಸ್ಯ ಮಮ ಸಂಯುಗೇ |
ಸ ಕಥಂ ಭೀಮಕರ್ಮಾಣಂ ಭೀಮಸೇನಮಯುದ್ಧ್ಯತ || 11 ||
ಯಾವ ಕರ್ಣನಲ್ಲಿ ಮಂದನಾದ ನನ್ನ ಪುತ್ರನ ಜಯದ ಆಸೆಯು ಕೇಂದ್ರೀಕೃತವಾಗಿದೆಯೋ ಅಂತಹ ಕರ್ಣನು ಭಯಂಕರವಾದ ಕರ್ಮವನ್ನುಳ್ಳ ಭೀಮಸೇನನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದನು?
ಯಂ ಸಮಾಶ್ರಿತ್ಯ ಪುತ್ರೈರ್ಮೇ ಕೃತಂ ವೈರಂ ಮಹಾರಥೈಃ |
ತಂ ಸೂತತನಯಂ ತಾತ ಕಥಂ ಭೀಮೋ ಹ್ಯಯೋಧಯತ್ || 12 ||
ಎಲೈ ಪ್ರೀತಿಪಾತ್ರನೇ, ಯಾವ ಕರ್ಣನನ್ನು ಆಶ್ರಯಿಸಿ ಮಹಾರಥರಾದ ನನ್ನ ಪುತ್ರರು ವೈರವನ್ನು ಮಾಡಿದರೋ ಅಂತಹ ಸೂತಪುತ್ರನ ಜೊತೆಯಲ್ಲಿ ಭೀಮನಾದರೂ ಹೇಗೆ ಯುದ್ಧವನ್ನು ಮಾಡಿದನು?
ಅನೇಕಾನ್ ವಿಪ್ರಕಾರಾಂಶ್ಚ ಸೂತಪುತ್ರಸಮುದ್ಭವಾನ್ |
ಸ್ಮರಮಾಣಃ ಕಥಂ ಭೀಮೋ ಯುಯುಧೇ ಸೂತಸೂನುನಾ || 13 ||
ಕರ್ಣನು ಮಾಡಿದ ಅನೇಕ ಅವಮಾನಗಳನ್ನು ಸ್ಮರಿಸುತ್ತಾ ಭೀಮನು ಅವನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದನು?
ಯೋಽಜಯತ್ ಪೃಥಿವೀಂ ಸರ್ವಾಂ ರಥೇನೈಕೇನ ವೀರ್ಯವಾನ್ |
ತಂ ಸೂತತನಯಂ ಯುದ್ಧೇ ಕಥಂ ಭೀಮೋ ಹ್ಯಯೋಧಯತ್ ||14||
ಯಾವ ಪರಾಕ್ರಮಶಾಲಿಯಾದ ಕರ್ಣನು ಒಂದು ರಥದಿಂದ ಎಲ್ಲ ಭೂಮಿಯನ್ನೂ ಗೆದ್ದನೋ ಅಂತಹ ಕರ್ಣನ ಜೊತೆಯಲ್ಲಿ ಭೀಮನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿದನು?
ಯೋ ಜಾತಃ ಕುಂಡಲಾಭ್ಯಾಂ ಚ ಕವಚೇನ ಸಹೈವ ಚ |
ತಂ ಸೂತಪುತ್ರಂ ಸಮರೇ ಭೀಮಃ ಕಥಮಯೋಧಯತ್ || 15 ||
ಯಾವ ಕರ್ಣನು ಕವಚ-ಕುಂಡಲಗಳಿಂದ ಸಹಿತವಾಗಿ ಜನಿಸಿದನೋ ಅಂತಹ ಸೂತಪುತ್ರನ ಜೊತೆಯಲ್ಲಿ ಭೀಮನು ಹೇಗೆ ಯುದ್ಧವನ್ನು ಮಾಡಿದನು?
ಯಥಾ ತಯೋರ್ಯುದ್ಧಮಭೂದ್ಯಶ್ಚಾಸೀದ್ ವಿಜಯೀ ತಯೋಃ |
ತನ್ಮಮಾಚಕ್ಷ್ವ ತತ್ತ್ವೇನ ಕುಶಲೋ ಹ್ಯಸಿ ಸಂಜಯ || 16 ||
ಎಲೈ ಸಂಜಯನೇ, ಅವರಿಗೆ ಯುದ್ಧವು ಹೇಗೆ ನಡೆಯಿತು? ಅವರಿಬ್ಬರಲ್ಲಿ ಯಾರು ಜಯವನ್ನು ಪಡೆದರು? ಎಲ್ಲವನ್ನೂ ನನಗೆ ಸರಿಯಾಗಿ ಹೇಳು. ವರ್ಣನೆ ಮಾಡುವುದರಲ್ಲಿ ನೀನು ಕುಶಲನಾಗಿದ್ದೀಯೆ.
ಸಂಜಯಃ
ಭೀಮಸೇನಸ್ತು ರಾಧೇಯಮುತ್ಸೃಜ್ಯ ರಥಿನಾಂ ವರಮ್ |
ಇಯೇಷ ಗಂತುಂ ಯತ್ರಾಸ್ತಾಂ ವೀರೌ ಕೃಷ್ಣಧನಂಜಯೌ || 17 ||
ಸಂಜಯ ಭೀಮಸೇನನಾದರೋ ರಥಿಕರಲ್ಲಿ ಶ್ರೇಷ್ಠನಾದ ಕರ್ಣನನ್ನು ಬಿಟ್ಟು ವೀರರಾದ ಕೃಷ್ಣಾರ್ಜುನರು ಇರುವಲ್ಲಿಗೆ ಹೋಗಲು ಬಯಸಿದನು.
ತಂ ಪ್ರಯಾಂತಮಭಿದ್ರುತ್ಯ ರಾಧೇಯಃ ಕಂಕಪತ್ರಿಭಿಃ |
ಅಭ್ಯವರ್ಷನ್ಮಹಾರಾಜ ಮೇಘೋ ವೃಷ್ಟ್ಯೇವ ಪರ್ವತಮ್ || 18 ||

ಹಾಗೆ ಹೊರಟ ಭೀಮಸೇನನನ್ನು ಎದುರಿಸಿ, ಎಲೈ ಮಹಾರಾಜನೇ, ಕಂಕಪತ್ರಗಳನ್ನು ಹೊಂದಿದ ಬಾಣಗಳಿಂದ ಕರ್ಣನು ಮೇಘವು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಬಾಣದ ಮಳೆಯನ್ನು ಸುರಿಸಿದನು.
ಫುಲ್ಲತಾ ಪಂಕಜೇನೇವ ವಕ್ತ್ರೇಣಾಭ್ಯುತ್ಸ್ಮಯನ್ ಬಲೀ |
ಆಜುಹಾವ ರಣೇ ಯಾಂತಂ ಭೀಮಮಾಧಿರಥಿಸ್ತದಾ ॥ 19 ॥
ಬಲಿಷ್ಠನಾದ ಕರ್ಣನು ಅರಳುವ ಕಮಲದಂತಹ ಮುಖವುಳ್ಳವನಾಗಿ ನಗುತ್ತಾ, ಹೊರಟಿದ್ದ ಭೀಮಸೇನನನ್ನು ಯುದ್ಧಕ್ಕೆ ಆಹ್ವಾನಿಸಿದನು.
ಭೀಮಸೇನಸ್ತದಾಹ್ವಾನಂ ಕರ್ಣಾನ್ನಾಮರ್ಷಯದ್ ಯುಧಿ |
ಅರ್ಧಮಂಡಲಮಾವೃತ್ಯ ಸೂತಪುತ್ರಮಯೋಧಯತ್ ॥ 20 ॥
ಭೀಮಸೇನನು ಯುದ್ಧದಲ್ಲಿ ಕರ್ಣನ ಆ ಆಹ್ವಾನವನ್ನು ಸಹಿಸಲಿಲ್ಲ. ಅರ್ಧಮಂಡಲದಷ್ಟು ಹಿಂದಿರುಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಅವಕ್ರಗಾಮಿಭಿರ್ಬಾಣೈರಭ್ಯವರ್ಷನ್ ಮಹಾಯಸೈಃ |
ದ್ವೈರಥೇ ದಂಸಿತಂ ಯತ್ತಂ ಸರ್ವಶಸ್ತ್ರಭೃತಾಂ ವರಮ್ ॥ 21 ॥
ನೇರವಾಗಿ ಸಾಗುವ ಕಬ್ಬಿಣದ ಬಾಣಗಳಿಂದ ದ್ವಂದ್ವ ಯುದ್ಧದಲ್ಲಿ ಅವನು ಶಸ್ತ್ರ ಕವಚ ಸನ್ನದ್ಧನಾದ ಪ್ರಯತ್ನಶೀಲನಾದ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಕರ್ಣನನ್ನು ಹೊಡೆದನು.
ವಿಧಿತ್ಸುಃ ಕಲಹಸ್ಯಾಂತಂ ಜಿಘಾಂಸುಃ ಕರ್ಣಮಕ್ಷಿಣೋತ್ |
ತಂ ಚ ಹತ್ವೇತರಾನ್ ಸರ್ವಾನ್ ಹಂತುಕಾಮೋ ಮಹಾಬಲಃ ॥ 22 ॥
ಕಲಹದ ಅಂತವನ್ನು ಮಾಡಲು ಬಯಸಿ, ಕರ್ಣನನ್ನು ಕೊಲ್ಲಲು ಬಯಸಿ, ಮಹಾಬಲನಾದ ಭೀಮನು ಅನಂತರ ಉಳಿದ ಎಲ್ಲರನ್ನೂ ಸಂಹರಿಸಲು ಅವನ ಕಡೆಗೆ ನೋಡಿದನು.
ತಸ್ಮೈ ಪ್ರಾಸೃಜದುಗ್ರಾಣಿ ವಿವಿಧಾನಿ ಪರಂತಪಃ |
ಅಮರ್ಷೀ ಪಾಂಡವಃ ಕ್ರುದ್ಧಃ ಶರವರ್ಷಾಣಿ ಮಾರಿಷ ॥ 23 ॥
ಎಲೈ ಪೂಜ್ಯನೇ, ಕ್ರುದ್ಧನೂ, ರೋಷವನ್ನು ಹೊಂದಿದವನೂ ಆದ ಪರಂತಪನಾದ ಪಾಂಡುಪುತ್ರನಾದ ಭೀಮನು ಕರ್ಣನ ಮೇಲೆ ಉಗ್ರವಾದ ಬಾಣಗಳ ಮಳೆಯನ್ನು ಕರೆದನು.
ತಸ್ಯ ತಾನೀಷುವರ್ಷಾಣಿ ಮತ್ತದ್ವಿರದಗಾಮಿನಃ |
ಸೂತಪುತ್ರೋಽಸ್ತ್ರಮಾಯಾಭಿರಗ್ರಸತ್ ಸುಮಹಾಯಶಾಃ ॥ 24 ॥
ಮತ್ತಗಜಗಾಮಿಯಾದ ಭೀಮಸೇನನ ಆ ಬಾಣಗಳ ಮಳೆಯನ್ನು ಮಹಾಕೀರ್ತಿವಂತನಾದ ಸೂತಪುತ್ರನಾದ ಕರ್ಣನು ತನ್ನ ಅಸ್ತ್ರಗಳ ಸಾಮರ್ಥ್ಯದಿಂದ ನುಂಗಿದನು (ವಿನಾಶಮಾಡಿದನು).
ಸ ಯಥಾವನ್ಮಹಾರಾಜ ವಿದ್ಯಯಾ ವೈ ಸುಪೂಜಿತಃ |
ಆಚಾರ್ಯವನ್ಮಹೇಷ್ವಾಸಃ ಕರ್ಣಃ ಪರ್ಯಚರದ್ ರಣೇ ॥ 25 ॥
ಎಲೈ ಮಹಾರಾಜನೇ, ಮಹಾಧನುರ್ಧಾರಿಯಾದ ಕರ್ಣನು ಒಳ್ಳೆಯ ವಿದ್ಯೆಯನ್ನು ಹೊಂದಿದವನಾಗಿ ದ್ರೋಣಾಚಾರ್ಯರಂತೆ ರಣರಂಗದಲ್ಲಿ ಸಂಚರಿಸಿದನು.
ಸಂರಂಭೇಣ ತು ಯುದ್ಧ್ಯಂತಂ ಭೀಮಸೇನಂ ಸ್ಮಯನ್ನಿವ |
ಅಭ್ಯಪದ್ಯತ ರಾಧೇಯಸ್ತಮಮರ್ಷೀ ವೃಕೋದರಮ್ ॥ 26 ॥
ಕೋಪದಿಂದ ಯುದ್ಧಮಾಡುತ್ತಿದ್ದ ಭೀಮಸೇನನನ್ನು ಕೋಪಗೊಂಡ ರಾಧೇಯನು ನಗುತ್ತಾ ಸಮೀಪಿಸಿದನು.
ತನ್ನಾಮೃಷ್ಯತ ಕೌಂತೇಯಃ ಕರ್ಣಸ್ಯ ಸ್ಮಿತಮಾಹವೇ |
ಯುದ್ಧ್ಯಮಾನೇಷು ವೀರೇಷು ಪಶ್ಯತ್ಸು ಚ ಸಮಂತತಃ ॥ 27 ॥
ಯುದ್ಧವನ್ನು ಮಾಡುವ ವೀರರು ಎಲ್ಲ ಕಡೆಗಳಿಂದಲೂ ನೋಡುತ್ತಿರುವಾಗ ಕರ್ಣನ ಆ ನಗುವನ್ನು ಕುಂತೀಪುತ್ರನಾದ ಭೀಮಸೇನನು ಸಹಿಸಲಿಲ್ಲ.
ತಂ ಭೀಮಸೇನಃ ಸಂಪ್ರಾಪ್ತಂ ವತ್ಸದಂತೈಃ ಸ್ತನಾಂತರೇ |
ವಿವ್ಯಾಧ ಬಲವಾನ್ ಕ್ರುದ್ಧಸ್ತೋತ್ತ್ರೈರಿವ ಮಹಾದ್ವಿಪಮ್ ॥ 28 ॥
ಸಮೀಪಕ್ಕೆ ಬಂದ ಕರ್ಣನನ್ನು ಬಲಿಷ್ಠನಾದ ಭೀಮಸೇನನು ಕೋಪಗೊಂಡು ಅಂಕುಶಗಳಿಂದ ಮಹಾಗಜವನ್ನು ಹೊಡೆದಂತೆ ವತ್ಸದಂತಗಳಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ಸೂತಂ ತು ಸೂತಪುತ್ರಸ್ಯ ಸುಪುಂಖೈರ್ನಿಶಿತೈಃ ಶರೈಃ |
ಸುಮುಕ್ತೈಶ್ಚಿತ್ರವರ್ಮಾಣಂ ನಿರ್ಬಿಭೇದ ತ್ರಿಸಪ್ತಭಿಃ ॥ 29 ॥
ವಿಚಿತ್ರವಾದ ಕವಚವನ್ನು ಧರಿಸಿದ್ದ ಕರ್ಣನ ಸೂತನನ್ನು ಒಳ್ಳೆಯ ಪುಂಖವುಳ್ಳ ತೀಕ್ಷ್ಣವಾದ ಚೆನ್ನಾಗಿ ಪ್ರಯೋಗಿಸಿದ ಇಪ್ಪತ್ತೊಂದು ಬಾಣಗಳಿಂದ ಭಗ್ನಗೊಳಿಸಿದನು.
ಕರ್ಣೋ ಜಾಂಬೂನದೈರ್ಜಾಲೈಃ ಸಂಛನ್ನಾನ್ ವಾತರಂಹಸಃ |
ವಿವ್ಯಾಧ ತುರಗಾನ್ ವೀರಃ ಪಂಚಭಿಃ ಪಂಚಭಿಃ ಶರೈಃ ॥ 30 ॥
ಕರ್ಣನು ವಾಯುವೇಗವನ್ನು ಹೊಂದಿದ್ದ ಸುವರ್ಣಮಯವಾದ ಹೊದಿಕೆಗಳಿಂದ ಆವರಿಸಲ್ಪಟ್ಟಿದ್ದ ಭೀಮಸೇನನ ರಥದ ಅಶ್ವಗಳನ್ನು ಐದೈದು ಬಾಣಗಳಿಂದ ಹೊಡೆದನು.
ತತೋ ಬಾಣಮಯಂ ಜಾಲಂ ಭೀಮಸೇನರಥಂ ಪ್ರತಿ |

ಕರ್ಣೇನ ವಿಹಿತಂ ರಾಜನ್ನಿಮೇಷಾರ್ಧಾದದೃಶ್ಯತ ॥ 31 ॥
ಎಲೈ ರಾಜನೇ, ಅನಂತರ ಅರ್ಧನಿಮಿಷದಲ್ಲಿ ಭೀಮಸೇನನ ರಥದ ಸುತ್ತಲೂ ಕರ್ಣನು ನಿರ್ಮಿಸಿದ ಬಾಣಮಯವಾದ ಜಾಲವು ಕಂಡುಬಂದಿತು.
ಸರಥಃ ಸಧ್ವಜಸ್ತತ್ರ ಸಸೂತಃ ಪಾಂಡವಸ್ತದಾ |
ಪ್ರಾಚ್ಛಾದ್ಯತ ಮಹಾರಾಜ ಕರ್ಣಚಾಪಚ್ಯುತೈಃ ಶರೈಃ ॥ 32 ॥
ಎಲೈ ಮಹಾರಾಜನೇ, ಆಗ ಪಾಂಡುಪುತ್ರನಾದ ಭೀಮಸೇನನು ತನ್ನ ರಥ-ಗಜ- ಸೂತ ಸಹಿತನಾಗಿ ಕರ್ಣನಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ಮುಚ್ಚಿಹೋದನು.
ತಸ್ಯ ಕರ್ಣಶ್ಚತುಃಷಷ್ಟ್ಯಾ ವ್ಯಧಮತ್ ಕವಚಂ ದೃಢಮ್ |
ಕ್ರುದ್ಧಶ್ಚಾಪ್ಯಹನತ್ ಪಾರ್ಶ್ವೇ ನಾರಾಚೈರ್ಮರ್ಮಭೇದಿಭಿಃ ॥ 33 ॥
ಕರ್ಣನು ಅರವತ್ನಾಲ್ಕು ಬಾಣಗಳನ್ನು ಪ್ರಯೋಗಿಸಿ ಭೀಮಸೇನನ ದೃಢವಾದ ಕವಚವನ್ನು ಹಾರಿಸಿದನು. ಮತ್ತೂ ಕೋಪಗೊಂಡು ಅವನ ಪಾರ್ಶ್ವದಲ್ಲಿ (ಪಕ್ಕೆಯ ಮೇಲೆ) ಮೂಳೆಯನ್ನು ಭೇದಿಸುವ ಬಾಣಗಳನ್ನು ಪ್ರಯೋಗಿಸಿದನು.
ತತೋಽಚಿಂತ್ಯ ಮಹಾವೇಗಾನ್ ಕರ್ಣಕಾರ್ಮುಕನಿಃಸೃತಾನ್ |
ಸಮಾಶ್ಲಿಷ್ಯದಸಂಭ್ರಾಂತಃ ಸೂತಪುತ್ರಂ ವೃಕೋದರಃ ॥ 34 ॥
ಆಗ ಕರ್ಣನ ಧನುಸ್ಸಿನಿಂದ ಹೊರಟ ಮಹಾವೇಗವುಳ್ಳ ಬಾಣಗಳನ್ನು ಪರಿಗಣಿಸದೆ ಭೀಮಸೇನನು ಯಾವ ಗಾಬರಿಯೂ ಇಲ್ಲದೆ ಬಂದು ಸೂತಪುತ್ರನಾದ ಕರ್ಣನನ್ನು ಆಲಿಂಗಿಸಿದನು.
ಸ ಕರ್ಣಚಾಪಪ್ರಭವಾನಿಷೂನಾಶೀವಿಷೋಪಮಾನ್ |
ಬಿಭ್ರದ್ ಭೀಮೋ ಮಹಾರಾಜ ನ ಜಗಾಮ ವ್ಯಥಾಂ ರಣೇ ॥ 35 ॥
ಎಲೈ ಮಹಾರಾಜನೇ, ಕರ್ಣನ ಧನುಸ್ಸಿನಿಂದ ಹೊಮ್ಮಿದ ಸರ್ಪದಂತಹ ಬಾಣಗಳು ಶರೀರದಲ್ಲಿ ನಾಟಿದರೂ ಭೀಮಸೇನನು ರಣರಂಗದಲ್ಲಿ ವ್ಯಥೆಯನ್ನು ಹೊಂದಲಿಲ್ಲ.
ತತೋ ದ್ವಾತ್ರಿಂಶತಾ ಭಲ್ಲೈರ್ನಿಶಿತೈಸ್ತಿಗ್ಮತೇಜನೈಃ |
ವಿವ್ಯಾಧ ಸಮರೇ ಕರ್ಣಂ ಭೀಮಸೇನಃ ಪ್ರತಾಪವಾನ್ ॥ 36 ॥
ಅನಂತರ ಪ್ರತಾಪಶಾಲಿಯಾದ ಭೀಮಸೇನನು ಕ್ರೂರಸಾಮರ್ಥ್ಯವುಳ್ಳ ನಿಶಿತವಾದ ಮೂವತ್ತೆರಡು ಬಾಣಗಳಿಂದ ರಣರಂಗದಲ್ಲಿ ಕರ್ಣನನ್ನು ಹೊಡೆದನು.
ಅಯತ್ನೇನೈವ ತಂ ಕರ್ಣಃ ಶರೈರುಪಸಮಾಕಿರತ್ |
ಭೀಮಸೇನಂ ಮಹಾಬಾಹುಂ ಸೈಂಧವಸ್ಯ ವಧೈಷಿಣಮ್ ॥ 37 ॥
ಕರ್ಣನು ಸೈಂಧವನ ವಧೆಯನ್ನು ಬಯಸಿದ ಮಹಾಬಾಹುವಾದ ಭೀಮಸೇನನ ಮೇಲೆ ಹೆಚ್ಚು ಪ್ರಯತ್ನವನ್ನು ಪಡದೆ ಬಾಣಗಳ ಮಳೆಯನ್ನು ಸುರಿಸಿದನು.
ಮೃದುಪೂರ್ವಂ ಚ ರಾಧೇಯೋ ಭೀಮಮಾಜಾವಯೋಧಯತ್ |
ಕ್ರೋಧಪೂರ್ವಂ ತಥಾ ಭೀಮಃ ಪೂರ್ವವೈರಮನುಸ್ಮರನ್ ॥ 38 ॥
ರಾಧೇಯನಾದ ಕರ್ಣನು ಮೊದಲು ಮೃದುವಾಗಿಯೇ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಭೀಮಸೇನನು ಹಿಂದಿನ ವೈರವನ್ನು ಸ್ಮರಿಸುತ್ತಾ ಕೋಪಪೂರ್ವಕವಾಗಿ ಯುದ್ಧವನ್ನು ಮಾಡಿದನು.
ತಂ ಭೀಮಸೇನೋ ನಾಮೃಷ್ಯದವಮಾನಮಮರ್ಷಣಃ |
ಸ ತಸ್ಮೈ ವ್ಯಸೃಜತ್ತೂರ್ಣಂ ಶರವರ್ಷಮಮಿತ್ರಜಿತ್ ॥ 39 ॥
ಕರ್ಣನು ಮೃದುವಾಗಿ ಯುದ್ಧವನ್ನು ಮಾಡುತ್ತಿರುವುದನ್ನು ತಿಳಿದ ಭೀಮಸೇನನು ಅದು ತನಗೆ ಮಾಡಿದ ಅವಮಾನವೆಂದು ತಿಳಿದು ಕೋಪಗೊಂಡು ಶತ್ರುಗಳನ್ನು ಜಯಿಸುವ ಅವನು ಶೀಘ್ರವಾಗಿ ಕರ್ಣನ ಮೇಲೆ ಬಾಣಗಳ ಮಳೆಯನ್ನು ಕರೆದನು.
ತೇ ಶರಾಃ ಪ್ರೇಷಿತಾ ರಾಜನ್ ಭೀಮಸೇನೇನ ಸಂಯುಗೇ |
ನಿಪೇತುಃ ಸರ್ವತೋ ಭೀಮಾಃ ಕೂಜಂತ ಇವ ಪಕ್ಷಿಣಃ ॥ 40 ॥
ಎಲೈ ರಾಜನೇ, ರಣರಂಗದಲ್ಲಿ ಭೀಮಸೇನನಿಂದ ಪ್ರಯೋಗಿಸಲ್ಪಟ್ಟ ಆ ಭಯಂಕರವಾದ ಬಾಣಗಳು ಕಿರುಚುವ ಪಕ್ಷಿಗಳಂತೆ ಎಲ್ಲ ಕಡೆಗಳಲ್ಲಿಯೂ ಬಿದ್ದವು.
ಹೇಮಪುಂಖಾ ಮಹಾರಾಜ ಭೀಮಸೇನಧನುಶ್ಚ್ಯುತಾಃ |
ಅಭ್ಯದ್ರವಂಸ್ತೇ ರಾಧೇಯಂ ವೃಕಾಃ ಕ್ಷುದ್ರಮೃಗಂ ಯಥಾ ॥ 41 ॥
ಎಲೈ ಮಹಾರಾಜನೇ, ಭೀಮಸೇನನ ಬಾಣಗಳಿಂದ ಹೊರಟ, ಹೇಮ- ಪುಂಖಗಳನ್ನು ಹೊಂದಿದ್ದ ಆ ಬಾಣಗಳು ತೋಳಗಳು ಕ್ಷುದ್ರಮೃಗದ ಕಡೆಗೆ ಧಾವಿಸುವಂತೆ ಕರ್ಣನ ಕಡೆಗೆ ಧಾವಿಸಿದವು.
ಕರ್ಣಸ್ತು ರಥಿನಾಂ ಶ್ರೇಷ್ಠಶ್ಛಾದ್ಯಮಾನಃ ಸಮಂತತಃ |
ರಾಜನ್ ವ್ಯಸೃಜದುಗ್ರಾಣಿ ಶರವರ್ಷಾಣಿ ಸಂಯುಗೇ ॥ 42 ॥
ಎಲೈ ರಾಜನೇ, ರಥಿಕರಲ್ಲಿ ಶ್ರೇಷ್ಠನಾದ ಕರ್ಣನು ಆ ಬಾಣಗಳಿಂದ ಎಲ್ಲ ಕಡೆಗಳಲ್ಲಿಯೂ ಆವರಿಸಲ್ಪಟ್ಟು ರಣರಂಗದಲ್ಲಿ ಉಗ್ರವಾದ ಶರವೃಷ್ಟಿಯನ್ನು ಸೃಷ್ಟಿಸಿದನು.
ತಸ್ಯ ತಾನಶನಿಪ್ರಖ್ಯಾನಿಷೂನ್ ಸಮರಶೋಭಿನಃ |
ಚಿಚ್ಛೇದ ಬಹುಭಿರ್ಭಲ್ಲೈರಸಂಪ್ರಾಪ್ತಾನ್ ವೃಕೋದರಃ ॥ 43 ॥
ಸಮರಶೋಭಿಯಾದ ಕರ್ಣನ ಸಿಡಿಲಿನಂತಹ ಬಾಣಗಳನ್ನು ತನ್ನ ಬಳಿಗೆ ಬರುವುದಕ್ಕಿಂತ ಮುಂಚೆಯೇ ವೃಕೋದರನು ಅನೇಕ

ಭಲ್ಲಗಳಿಂದ ಭಗ್ನಗೊಳಿಸಿದನು.
ಪುನಶ್ಚ ಶರವರ್ಷೇಣ ಛಾದಯಾಮಾಸ ಭಾರತ |
ಕರ್ಣೋ ವೈಕರ್ತನೋ ಯುದ್ಧೇ ಭೀಮಸೇನಂ ಮಹಾರಥಮ್ ॥ 44॥
ಎಲೈ ಭಾರತನೇ, ವೈಕರ್ತನನಾದ ಕರ್ಣನು ರಣರಂಗದಲ್ಲಿ ಮಹಾರಥನಾದ ಭೀಮಸೇನನನ್ನು ಪುನಃ ಬಾಣಗಳ ಮಳೆಯಿಂದ ಮುಚ್ಚಿದನು.
ತತ್ರ ಭಾರತ ಭೀಮಂ ತು ದೃಷ್ಟವಂತಃ ಸ್ಮ ಸಾಯಕೈಃ |
ಸಮಾಚಿತತನುಂ ಸಂಖ್ಯೇ ಶ್ವಾವಿಧಂ ಶಲಲೈರಿವ ॥ 45 ॥
ಎಲೈ ಭಾರತನೇ, ಆಗ ರಣರಂಗದಲ್ಲಿ ನಾವು ಕರ್ಣನ ಬಾಣಗಳಿಂದ ಕೂಡಿದ ಶರೀರವುಳ್ಳ ಭೀಮಸೇನನನ್ನು ಮುಳ್ಳುಗಳಿಂದ ಕೂಡಿದ ಮುಳ್ಳುಹಂದಿಯಂತೆ ನೋಡಿದವು.
ಹೇಮಪುಂಖಾನ್ ಶಿಲಾಧೌತಾನ್ ಕರ್ಣಚಾಪಚ್ಯುತಾನ್ ಶರಾನ್ |
ದಧಾರ ಸಮರೇ ವೀರಃ ಸ್ವರಶ್ಮೀನಿವ ಭಾಸ್ಕರಃ ॥ 46 ॥
ಹೇಮಪುಂಖವುಳ್ಳ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಕರ್ಣನ ಧನುಸ್ಸಿನ ಹೊರಹೊಮ್ಮಿದ ಬಾಣಗಳನ್ನು ವೀರನಾದ ಭೀಮಸೇನನು ಸೂರ್ಯನ ಕಿರಣಗಳನ್ನು ಧರಿಸುವಂತೆ ತನ್ನ ಶರೀರದಲ್ಲಿ ಧರಿಸಿದನು.
ರುಧಿರೋಕ್ಷಿತಸರ್ವಾಂಗೋ ಭೀಮಸೇನೋ ವ್ಯರೋಚತ |
ತಪನೀಯನಿಭೈಃ ಪುಷ್ಪೈಃ ಪಲಾಶ ಇವ ಕಾನನೇ ॥ 47 ॥
ರಕ್ತದಿಂದ ತೊಯ್ದ ಸಕಲಾವಯವಗಳಿಂದ ಭೀಮಸೇನನು ಕಾಡಿನಲ್ಲಿ ಚಿನ್ನದ ಬಣ್ಣದಿಂದ ಕೂಡಿದ ಪಲಾಶ ಕೂಡಿದ (ಮುತ್ತುಗ) ವೃಕ್ಷದಂತೆ ಶೋಭಿಸಿದನು.
ತತ್ತು ಭೀಮೋ ಮಹಾರಾಜ ಕರ್ಣಸ್ಯ ಚರಿತಂ ರಣೇ |
ನಾಮೃಷ್ಯತ ಮಹೇಷ್ವಾಸಃ ಕ್ರೋಧಾದುದ್ವೃತ್ಯ ಚಕ್ಷುಷೀ ॥ 48 ॥
ಎಲೈ ಮಹಾರಾಜನೇ, ರಣರಂಗದಲ್ಲಿ ಕರ್ಣನ ಆ ಕಾರ್ಯವನ್ನು ನೋಡಿ ಮಹಾಧನುರ್ಧಾರಿಯಾದ ಭೀಮನು ಅದನ್ನು ಸಹಿಸಲಿಲ್ಲ. ಅವನು ಕೋಪದಿಂದ ತನ್ನ ಕಣ್ಣುಗಳನ್ನು ಅರಳಿಸಿದನು.
ಸ ಕರ್ಣಂ ಪಂಚವಿಂಶತ್ಯಾ ನಾರಾಚಾನಾಂ ಸಮಾರ್ಪಯತ್ |
ಮಹೀಧರಮಿವ ಶ್ವೇತಂ ಗೂಢಪಾದೈರ್ವಿಷೋಲ್ಬಣೈಃ ॥ 49 ॥
ಶ್ವೇತಪರ್ವತವನ್ನು ವಿಷೋಲ್ಬಣವಾದ ಸರ್ಪಗಳು ಪ್ರವೇಶಿಸಿದಂತೆ ಅವನು ಕರ್ಣನ ಶರೀರದಲ್ಲಿ ಇಪ್ಪತ್ತೈದು ವಿಷಭರಿತ ನಾರಾಚಗಳನ್ನು ನಾಟಿಸಿದನು.
ತಂ ವಿವ್ಯಾಧ ಪುನರ್ಭೀಮಃ ಷಡ್ಭಿರಷ್ಟಾಭಿರೇವ ಚ |
ಮರ್ಮಸ್ವಮರವಿಕ್ರಾಂತಃ ಸೂತಪುತ್ರಂ ಮಹಾರಣೇ ॥ 50 ॥
ಅಮರಪರಾಕ್ರಮವುಳ್ಳ ಭೀಮಸೇನನು ಆ ದೊಡ್ಡ ಯುದ್ಧದಲ್ಲಿ ಸೂತಪುತ್ರನಾದ ಕರ್ಣನನ್ನು ಆರು ಬಾಣಗಳಿಂದ ಮತ್ತು ಪುನಃ ಎಂಟು ಬಾಣಗಳಿಂದ ಮರ್ಮಸ್ಥಾನಗಳಲ್ಲಿ ಹೊಡೆದನು.
ತತಃ ಕರ್ಣಸ್ಯ ಸಂಕ್ರುದ್ಧೋ ಭೀಮಸೇನಃ ಪ್ರತಾಪವಾನ್ |
ಚಿಚ್ಛೇದ ಕಾರ್ಮುಕಂ ತೂರ್ಣಂ ಸರ್ವೋಪಕರಣಾನಿ ಚ ॥ 51 ॥
ಅನಂತರ ಕರ್ಣನ ಮೇಲೆ ಕೋಪಗೊಂಡ ಪ್ರತಾಪಶಾಲಿಯಾದ ಭೀಮಸೇನನು ಶೀಘ್ರವಾಗಿ ಅವನ ಧನುಸ್ಸನ್ನೂ ಮತ್ತು ಉಳಿದ ಎಲ್ಲಾ ಯುದ್ಧೋಪಕರಣಗಳನ್ನೂ ಕತ್ತರಿಸಿದನು.
ಜಘಾನ ಚತುರಶ್ಚಾಶ್ವಾನ್ ಸೂತಂ ಚ ತ್ವರಿತಃ ಶರೈಃ |
ನಾರಾಚೈರರ್ಕರಶ್ಮ್ಯಾಭೈಃ ಕರ್ಣಂ ವಿವ್ಯಾಧ ಚೋರಸಿ ॥ 52 ॥
ಅವನ ರಥದ ನಾಲ್ಕು ಕುದುರೆಗಳನ್ನು ಮತ್ತು ಸೂತನನ್ನು ಶೀಘ್ರವಾಗಿ ತನ್ನ ಬಾಣದಿಂದ ಕೊಂದನು. ಸೂರ್ಯನ ಕಿರಣವನ್ನು ಹೋಲುವ ನಾರಾಚದಿಂದ ಕರ್ಣನನ್ನು ಅವನ ಎದೆಯಲ್ಲಿ ಹೊಡೆದನು.
ತೇ ಜಗ್ಮುರ್ಧರಣೀಂ ಸರ್ವೇ ಕರ್ಣಂ ನಿರ್ಭಿದ್ಯ ಮಾರಿಷ |
ಯಥಾ ಹಿ ಜಲದಂ ಭಿತ್ತ್ವಾ ರಾಜನ್ ಸೂರ್ಯಸ್ಯ ರಶ್ಮಯಃ ॥ 53 ॥
ಎಲೈ ಪೂಜ್ಯನೇ, ರಾಜನೇ, ಮೋಡವನ್ನು ಭೇದಿಸಿ ಹೊರಗೆ ಬರುವ ಸೂರ್ಯ ರಶ್ಮಿಗಳಂತೆ ಆ ನಾರಾಚಗಳೆಲ್ಲವೂ ಕರ್ಣನನ್ನು ಭೇದಿಸಿ ಭೂಮಿಯೊಳಗೆ ಇಳಿದವು.
ಸ ವೈಕಲ್ಯಂ ಮಹತ್ ಪ್ರಾಪ್ಯ ಛಿನ್ನಧನ್ವಾ ಶರಾರ್ದಿತಃ |
ತಥಾ ಪುರುಷಮಾನೀ ಸ ಪ್ರತ್ಯಪಾಯಾದ್ ರಥಾಂತರಮ್ ॥ 54 ॥
ಧನುಸ್ಸು ಕತ್ತರಿಸಲ್ಪಟ್ಟು, ಭೀಮಸೇನನ ಬಾಣಗಳಿಂದ ಪೀಡಿತನಾದ, ಪುರುಷಮಾನ್ಯನಾದ ಕರ್ಣನು ದೊಡ್ಡ ಸಂಕಟಕ್ಕೆ ಸಿಲುಕಿ ಇನ್ನೊಂದು ರಥವನ್ನು ಸೇರಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷೋಡಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹದಿನಾರನೆಯ
ಅಧ್ಯಾಯ ಮುಗಿಯಿತು.

* * * * *
नूರ ಹದಿನೇಳನೆಯ ಅಧ್ಯಾಯ
ಭೀಮಸೇನ ಮತ್ತು ಕರ್ಣರ ಯುದ್ಧ.
ಧೃತರಾಷ್ಟ್ರಃ
ಯಸ್ಮಿನ್ ಜಯಾಶಾ ಸತತಂ ಪುತ್ರಾಣಾಂ ಮಮ ಸಂಜಯ |
ತಂ ದೃಷ್ಟ್ವಾ ವಿಮುಖಂ ಸಂಖ್ಯೇ ಕಿಂ ನು ದುರ್ಯೋಧನೋಽಬ್ರವೀತ್|
ಕರ್ಣೋ ವಾ ಸಮರೇ ತಾತ ಕಿಮಕಾರ್ಷೀದತಃ ಪರಮ್ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಯಾವ ಕರ್ಣನಲ್ಲಿ ನನ್ನ ಪುತ್ರರ ಜಯದ ಆಸೆಯು ಸತತವಾಗಿ ಅವಲಂಬಿಸಿಕೊಂಡಿದೆಯೋ ಅಂತಹ ಕರ್ಣನು ಯುದ್ಧದಲ್ಲಿ ವಿಮುಖನಾದಾಗ ದುರ್ಯೋಧನನು ಏನು ಹೇಳಿದನು? ಪ್ರೀತಿಪಾತ್ರನೇ, ಯುದ್ಧದಲ್ಲಿ ಕರ್ಣನಾದರೂ ಅನಂತರ ಏನು ಮಾಡಿದನು?
ಸಂಜಯಃ
ಭೀಮಸೇನಂ ರಣೇ ದೃಷ್ಟ್ವಾ ಜ್ವಲಂತಮಿವ ಪಾವಕಮ್ |
ರಥಮನ್ಯಂ ಸಮಾಸ್ಥಾಯ ವಿಧಿವತ್ಕಲ್ಪಿತಂ ಪುನಃ |
ಅಭ್ಯಯಾತ್ ಪಾಂಡವಂ ಕರ್ಣೋ ವಾತೋದ್ಧೂತ ಇವಾರ್ಣವಃ ॥2॥
ಸಂಜಯ ಜ್ವಲಿಸುವ ಅಗ್ನಿಯಂತಿರುವ ಭೀಮಸೇನನನ್ನು ನೋಡಿ ರಣರಂಗದಲ್ಲಿ ಕರ್ಣನು ವಿಧಿವತ್ತಾಗಿ ಸಿದ್ಧಪಡಿಸಿದ ಇನ್ನೊಂದು ರಥವನ್ನು ಏರಿ ಬಿರುಗಾಳಿಯಿಂದ ಕ್ಷೋಭೆಗೊಂಡ ಸಮುದ್ರದಂತೆ ಪಾಂಡವನಾದ ಭೀಮಸೇನನ ಮೇಲೆ ಎರಗಿದನು.
ಕ್ರುದ್ಧಮಾಧಿರಥಿಂ ದೃಷ್ಟ್ವಾ ಪುತ್ರಾಸ್ತವ ವಿಶಾಂಪತೇ |
ಭೀಮಸೇನಮಮನ್ಯಂತ ವೈವಸ್ವತಮುಖೇ ಹುತಮ್ ॥ 3 ॥
ಎಲೈ ರಾಜನೇ, ಕೋಪಗೊಂಡ ಕರ್ಣನನ್ನು ನೋಡಿ ನಿನ್ನ ಪುತ್ರರು ಭೀಮಸೇನನು ಯಮನ ಮುಖದಲ್ಲಿ ಹೋಮಮಾಡಲ್ಪಟ್ಟಿದ್ದಾನೆ ಎಂದು ತಿಳಿದರು.
ಚಾಪಶಬ್ದಂ ಮಹತ್ಕೃತ್ವಾ ತಳಶಬ್ದಂ ಚ ಭೈರವಮ್ |
ಅಭ್ಯವರ್ತತ ರಾಧೇಯೋ ಭೀಮಸೇನರಥಂ ಪ್ರತಿ ॥ 4 ॥
ಧನುಸ್ಸಿನಿಂದಲೂ ಮತ್ತು ಹಸ್ತತಳದಿಂದಲೂ ಭೀಕರವಾಗಿ ದೊಡ್ಡ ಶಬ್ದವನ್ನು ಮಾಡಿ ರಾಧೇಯನು ಭೀಮಸೇನನ ರಥದ ಕಡೆಗೆ ಸಾಗಿದನು.
ಪುನರೇವ ತತೋ ರಾಜನ್ ಮಹಾನಾಸೀತ್ ಸುದಾರುಣಃ |
ವಿಮರ್ದಃ ಸೂತಪುತ್ರಸ್ಯ ಭೀಮಸ್ಯ ಚ ವಿಶಾಂಪತೇ॥ 5 ॥
ಎಲೈ ರಾಜನೇ, ನಂತರ ಭೀಮಸೇನನಿಗೂ ಮತ್ತು ಸೂತಪುತ್ರನಾದ ಕರ್ಣನಿಗೂ ಘೋರವಾದ ದೊಡ್ಡ ಸಂಘರ್ಷವು ಸಂಭವಿಸಿತು.
ಸಂರಬ್ಧೌ ಹಿ ಮಹಾಬಾಹೂ ಪರಸ್ಪರವಧೈಷಿಣೌ |
ಅನ್ಯೋನ್ಯಮೀಕ್ಷಾಂಚಕ್ರಾತೇ ದಹಂತಾವಿವ ಲೋಚನೈಃ ॥ 6 ॥
ಕೋಪಗೊಂಡವರೂ, ಮಹಾಬಾಹುಗಳೂ, ಪರಸ್ಪರವಧೆಯನ್ನು ಬಯಸುವವರೂ ಆದ ಅವರು ತಮ್ಮ ದೃಷ್ಟಿಯಿಂದಲೇ ಸುಡುವಂತೆ ಪರಸ್ಪರವಾಗಿ ನೋಡಿದರು.
ಕ್ರೋಧರಕ್ತೇಕ್ಷಣೌ ಕ್ರುದ್ಧೌ ನಿಃಶ್ವಸಂತೌ ಮಹಾರಥೌ |
ಯುದ್ಧೇಽನ್ಯೋನ್ಯಂ ಸಮಾಸಾದ್ಯ ತತಕ್ಷತುರರಿಂದಮೌ ॥ 7 ॥
ಕ್ರೋಧದಿಂದ ಕೆಂಪಾದ ಕಣ್ಣುಳ್ಳವರೂ, ದೀರ್ಘವಾದ ನಿಟ್ಟುಸಿರನ್ನು ಬಿಡುವವರೂ, ಅರಿಂದಮರೂ, ಮಹಾರಥರೂ ಆದ ಅವರು ಯುದ್ಧದಲ್ಲಿ ಪರಸ್ಪರವಾಗಿ ಸಮೀಪಿಸಿ ಗಾಯಗೊಳಿಸಿದರು.
ವ್ಯಾಘ್ರಾವಿವ ಸುಸಂರಬ್ಧೌ ಶ್ಯೇನಾವಿವ ಚ ಶೀಘ್ರಗೌ |
ಶರಭಾವಿವ ಸಂಕ್ರುದ್ಧೌ ಯುಯುಧಾತೇ ಪರಸ್ಪರಮ್ ॥ 8 ॥
ಕೋಪಗೊಂಡ ಎರಡು ವ್ಯಾಘ್ರಗಳಂತೆ, ಶೀಘ್ರಗಾಮಿಗಳಾದ ಹದ್ದುಗಳಂತೆ, ಕ್ರೋಧಗೊಂಡ ಎರಡು ಶರಭಗಳಂತೆ ಅವರು ಪರಸ್ಪರವಾಗಿ ಯುದ್ಧವನ್ನು ಮಾಡಿದರು.
ತತೋ ಭೀಮಃ ಸ್ಮರನ್ ಕ್ಲೇಶಾನಕ್ಷದ್ಯೂತೇ ವನೇಽಪಿ ಚ |
ವಿರಾಟನಗರೇ ಚೈವ ಪ್ರಾಪ್ತಂ ದುಃಖಮರಿಂದಮಃ ॥ 9 ॥
ರಾಷ್ಟ್ರಾಣಾಂ ಸ್ಫೀತರತ್ನಾನಾಂ ಹರಣಂ ಚ ತವಾತ್ಮಜೈಃ |
ಸತತಂ ಚ ಪರಿಕ್ಲೇಶಾನ್ ಸಪುತ್ರೇಣ ತ್ವಯಾ ಕೃತಾನ್ ॥ 10 ॥
ಆಗ ಭೀಮನು ಅಕ್ಷದ್ಯೂತದಲ್ಲಿ ಮತ್ತು ಕಾಡಿನಲ್ಲಿಯೂ ಅನುಭವಿಸಿದ ಕ್ಲೇಶಗಳನ್ನು ಸ್ಮರಿಸುತ್ತಾ, ವಿರಾಟನಗರದಲ್ಲಿ ಪ್ರಾಪ್ತವಾದ ದುಃಖವನ್ನೂ ಸ್ಮರಿಸುತ್ತಾ, ನಿನ್ನ ಮಕ್ಕಳಿಂದ ಸಮೃದ್ಧವಾದ ರಾಜ್ಯದ ಹರಣವನ್ನೂ ಮತ್ತು ಪುತ್ರಸಹಿತನಾದ ನೀನು ಸತತವಾಗಿ ಉಂಟು ಮಾಡಿದ ಕ್ಲೇಶಗಳನ್ನೂ ಸ್ಮರಿಸುತ್ತಾ;
ದಗ್ಧುಮೈಚ್ಛಶ್ಚ ಯತ್ ಕುಂತೀಂ ಸಪುತ್ರಾಂ ತ್ವಮನಾಗಸೀಮ್ |
ಕೃಷ್ಣಾಯಾಶ್ಚ ಪರಿಕ್ಲೇಶಂ ಸಭಾಮಧ್ಯೇ ದುರಾತ್ಮಭಿಃ ॥ 11 ॥
ಪತಿಮನ್ಯಂ ಪರೀಪ್ಸಸ್ವ ನ ಸಂತಿ ಪತಯಸ್ತವ |
ನರಕಂ ಪತಿತಾಃ ಪಾರ್ಥಾಃ ಸರ್ವೇ ಷಂಢತಿಲೋಪಮಾಃ ॥ 12 ॥

ನಿರಪರಾಧಿಯಾದ ಪುತ್ರಸಹಿತಳಾದ ಕುಂತಿಯನ್ನು ನೀನು ದಹಿಸಲು ಬಯಸಿದುದನ್ನೂ, ಸಭೆಯ ಮಧ್ಯದಲ್ಲಿ ದುರಾತ್ಮರಾದ ನಿನ್ನ ಪುತ್ರರು ದ್ರೌಪದಿಗೆ ಕೊಟ್ಟ ಕ್ಲೇಶವನ್ನೂ, ನೀನು ಇನ್ನೊಬ್ಬ ಪತಿಯನ್ನು ಹೊಂದು, ನಿನ್ನ ಪತಿಗಳು ಇಲ್ಲ, ಪಾಂಡವರೆಲ್ಲರೂ ಕೊಳೆತು ಹೋದ ಎಳ್ಳು ಕಾಳುಗಳಂತೆ ನರಕದಲ್ಲಿ ಬಿದ್ದಿದ್ದಾರೆ ಎಂಬ ಮಾತನ್ನೂ ಸ್ಮರಿಸುತ್ತಾ;
ಸಮಕ್ಷಂ ತವ ಕೌರವ್ಯ ಯದೂಚುಃ ಕುರವಸ್ತದಾ |
ದಾಸೀಭೋಗೇನ ಕೃಷ್ಣಾಂ ಚ ಭೋಕ್ತುಕಾಮಾಃ ಸುತಾಸ್ತವ ॥ 13 ॥
ಯಚ್ಚಾಪಿ ತಾನ್ ಪ್ರವ್ರಜತಃ ಕೃಷ್ಣಾಜಿನನಿವಾಸಿನಃ |
ಪರುಷಾಣ್ಯುಕ್ತವಾನ್ ಕರ್ಣಃ ಸಭಾಯಾಂ ಸನ್ನಿಧೌ ತವ ॥ 14 ॥
ಎಲೈ ಕೌರವನೇ, ನಿನ್ನ ಎದುರಿನಲ್ಲಿ ಕುರುಗಳು ದ್ರೌಪದಿಯನ್ನು ದಾಸೀಭೋಗದಿಂದ ಭೋಗಿಸುವ ಆಸೆಯನ್ನು ಹೊಂದಿದುದನ್ನೂ, ಕೃಷ್ಣಾಜಿನವನ್ನು ಧರಿಸಿ ಕಾಡಿಗೆ ಹೊರಟ ಅವರನ್ನು ಕುರಿತು ಸಭೆಯಲ್ಲಿ ನಿನ್ನ ಸನ್ನಿಧಿಯಲ್ಲಿ ಕರ್ಣನು ಆಡಿದ ಉಗ್ರವಾದ ಮಾತುಗಳನ್ನು ಸ್ಮರಿಸುತ್ತಾ;
ತೃಣೀಕೃತ್ಯ ಚ ಯತ್ ಪಾರ್ಥಾಂಸ್ತವ ಪುತ್ರೋ ವವಲ್ಗ ಹ |
ವಿಷಮಸ್ಥಾನ್ ಸಮಸ್ಥೋ ಹಿ ಸಂರಂಭಾದ್ ಗತಚೇತಸಃ ॥ 15 ॥
ಬಾಲ್ಯಾತ್ ಪ್ರಭೃತಿ ಚಾರಿಘ್ನಸ್ತಾನಿ ದುಃಖಾನಿ ಚಿಂತಯನ್ |
ನಿರವಿದ್ಯತ ಧರ್ಮಾತ್ಮಾ ಜೀವಿತೇನ ವೃಕೋದರಃ ॥ 16 ॥
ವಿಷಮ ಪರಿಸ್ಥಿತಿಯಲ್ಲಿದ್ದ ಪಾರ್ಥರನ್ನು ತುಚ್ಛೀಕರಿಸಿ ಸಮೃದ್ಧ ಪರಿಸ್ಥಿತಿಯಲ್ಲಿದ್ದ ನಿನ್ನ ಪುತ್ರನು ಭೀಮನಾದ ತನ್ನ ಹಿಂದೆ ಅನುಕರಿಸಿದ ಗತಿಯನ್ನು ಸ್ಮರಿಸುತ್ತಾ ಕೋಪದಿಂದ ಪ್ರಜ್ಞಾಶೂನ್ಯರಾದ ಕೌರವರು ಬಾಲ್ಯದಿಂದಲೂ ನೀಡಿದ ದುಃಖಗಳನ್ನು ಸ್ಮರಿಸುತ್ತಾ ಶತ್ರುಸೂದನನೂ, ಧರ್ಮಾತ್ಮನೂ ಆದ ವೃಕೋದರನು ಬದುಕಿ ಏನು ಪ್ರಯೋಜನ ಎಂಬ ಭಾವವನ್ನು ತಾಳಿದನು.
ತತೋ ವಿಸ್ಫಾರ್ಯ ಸುಮಹೇಮಪೃಷ್ಠಂ ದುರಾಸದಮ್ |
ಚಾಪಂ ಭರತಶಾರ್ದೂಲಸ್ತ್ಯಕ್ತಾತ್ಮಾ ಕರ್ಣಮಭ್ಯಯಾತ್ ॥ 17 ॥
ಆಗ ಭರತಶಾರ್ದೂಲನಾದ ಭೀಮಸೇನನು ಸುವರ್ಣಪೃಷ್ಠವುಳ್ಳ, ಸಮೀಪಿಸಲು ಅಸಾಧ್ಯವಾದ ತನ್ನ ಧನುಸ್ಸನ್ನು ಬಗ್ಗಿಸಿ ಜೀವಿತದ ಮೇಲೆ ಆಸೆಯನ್ನು ತೊರೆದು ಕರ್ಣನ ಮೇಲೆ ಎರಗಿದನು.
ಸ ಸಾಯಕಮಯೈರ್ಜಾಲೈರ್ಭೀಮಃ ಕರ್ಣರಥಂ ಪ್ರತಿ |
ಭಾನುಮದ್ಭಿಃ ಶಿಲಾಧೌತೈರ್ಭಾನೋಃ ಪ್ರಾಚ್ಛಾದಯತ್ಪ್ರಭಾಮ್ ॥ 18 ॥
ಭೀಮನು ಕರ್ಣನ ರಥದ ಸುತ್ತಲೂ ಪ್ರಕಾಶಮಾನವಾದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳ ಜಾಲದಿಂದ ಸೂರ್ಯನ ಪ್ರಭೆಯನ್ನು ಮುಚ್ಚಿದನು.
ತತಃ ಪ್ರಹಸ್ಯಾಧಿರಥಿಸ್ತೂರ್ಣಮಸ್ಯನ್ ಶಿತಾನ್ ಶರಾನ್ |
ವ್ಯಧಮದ್ ಭೀಮಸೇನಸ್ಯ ಶರಜಾಲಾನಿ ಪತ್ರಿಭಿಃ ॥ 19 ॥
ಆಗ ಅಧಿರಥನ ಪುತ್ರನಾದ ಕರ್ಣನು ನಕ್ಕು ಭೀಮಸೇನನ ಬಾಣಸಮೂಹಗಳನ್ನು ಪತ್ರಗಳನ್ನು ಹೊಂದಿದ ತನ್ನ ನಿಶಿತವಾದ ಬಾಣಗಳಿಂದ ಶೀಘ್ರವಾಗಿ ವಿನಾಶಗೊಳಿಸಿದನು.
ಮಹಾರಥೋ ಮಹಾಬಾಹುರ್ಮಹಾವೇಗೈರ್ಮಹಾಬಲಃ |
ವಿವ್ಯಾಧಾಧಿರಥಿರ್ಭೀಮಂ ನವಭಿರ್ನಿಶಿತೈಃ ಶರೈಃ ॥ 20 ॥
ಮಹಾರಥನೂ, ಮಹಾಬಾಹುವೂ, ಮಹಾಬಲನೂ ಆದ ಕರ್ಣನು ಮಹಾವೇಗವುಳ್ಳ ಒಂಬತ್ತು ತೀಕ್ಷ್ಣವಾದ ಬಾಣಗಳಿಂದ ಭೀಮನನ್ನು ಹೊಡೆದನು.
ಸ ತೋತ್ತ್ರೈರಿವ ಮಾತಂಗೋ ವಾರ್ಯಮಾಣಃ ಪತತ್ರಿಭಿಃ |
ಅಭ್ಯಧಾವದಸಂಭ್ರಾಂತಃ ಸೂತಪುತ್ರಂ ವೃಕೋದರಃ ॥ 21 ॥
ಅಂಕುಶಗಳಿಂದ ಆನೆಯನ್ನು ಹೊಡೆದಂತೆ ಆ ಬಾಣಗಳಿಂದ ತಡೆಯಲ್ಪಡುತ್ತಿದ್ದರೂ ವೃಕೋದರನು ಯಾವ ಚಿಂತೆಯೂ ಇಲ್ಲದೆ ಸೂತಪುತ್ರನಾದ ಕರ್ಣನ ಕಡೆಗೆ ಧಾವಿಸಿದನು.
ತಮಾಪತಂತಂ ವೇಗೇನ ರಭಸಂ ಪಾಂಡವರ್ಷಭಮ್ |
ಕರ್ಣಃ ಪ್ರತ್ಯುದ್ಯಯೌ ಯೋದ್ಧುಂ ಮತ್ತೋ ಮತ್ತಮಿವ ದ್ವಿಪಮ್ ॥22॥
ವೇಗದಿಂದ ತನ್ನೆಡೆಗೆ ಬರುತ್ತಿದ್ದ ವೀರಶಾಲಿಯಾದ ಪಾಂಡವಶ್ರೇಷ್ಠನಾದ ಭೀಮಸೇನನನ್ನು ನೋಡಿ ಒಂದು ಮದಗಜವು ಇನ್ನೊಂದು ಮದಗಜದ ಜೊತೆಯಲ್ಲಿ ಹೋರಾಡಲು ಬಂದಂತೆ ಕರ್ಣನು ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಅವನ ಎದುರಾಗಿ ಬಂದನು.
ತತಃ ಪ್ರಧ್ಮಾಪ್ಯ ಜಲಜಂ ಭೇರೀಶತನಿನಾದಿತಮ್ |
ಅಕ್ಷುಭ್ಯತ ಬಲಂ ಹರ್ಷಾದುದ್ಧೂತ ಇವ ಸಾಗರಃ ॥ 23 ॥
ಆಗ ಕೌರವರ ಸೇನೆಯು ಶಂಖಗಳನ್ನು ಊದಿ, ನೂರಾರು ಭೇರಿಗಳನ್ನು ಬಾರಿಸಿ ಉಕ್ಕುವ ಸಮುದ್ರದಂತೆ ಕ್ಷೋಭೆಗೊಂಡಿತು.
ತದುದ್ಧೂತಂ ಬಲಂ ದೃಷ್ಟ್ವಾ ರಥನಾಗಾಶ್ವಪತ್ತಿಮತ್ |
ಭೀಮಃ ಕರ್ಣಂ ಸಮಾಸಾದ್ಯ ಛಾದಯಾಮಾಸ ಸಾಯಕೈಃ ॥ 24 ॥
ರಥ-ಗಜಾಶ್ವ-ಪದಾತಿಗಳಿಂದ ಕೂಡಿದ ಉಕ್ಕುವ ಸಮುದ್ರದಂತಿದ್ದ ಆ ಸೈನ್ಯವನ್ನು ನೋಡಿ ಭೀಮನು ಕರ್ಣನನ್ನು ಸಮೀಪಿಸಿ ತನ್ನ ಬಾಣಗಳಿಂದ ಅವನನ್ನು ಮುಚ್ಚಿದನು.
ಅಶ್ವಾನೃಶ್ಯಸವರ್ಣಾಂಸ್ತು ಹಂಸವರ್ಣೈರ್ಹಯೋತ್ತಮೈಃ |

ವ್ಯಾಮಿಶ್ರಯದ್ರಣೇ ಕರ್ಣಃ ಪಾಂಡವಂ ಛಾದಯನ್ ಶರೈಃ ॥ 25 ॥
ಕರ್ಣನು ಭೀಮಸೇನನ ಜಿಂಕೆಯ ಬಣ್ಣದ ಅಶ್ವಗಳನ್ನು ಹಂಸವರ್ಣದ ತನ್ನ ಶ್ರೇಷ್ಠವಾದ ಅಶ್ವಗಳಿಂದ ಮಿಶ್ರಣ ಮಾಡುತ್ತಾ ಅವನನ್ನು ರಣರಂಗದಲ್ಲಿ ತನ್ನ ಬಾಣಗಳಿಂದ ಆಚ್ಛಾದಿಸಿದನು.
ಋಶ್ಯವರ್ಣಾನ್ ಹಯಾನ್ ಕರ್ಕೈರ್ಮಿಶ್ರಾನ್ ಮಾರುತರಂಹಸಃ |
ನಿರೀಕ್ಷ್ಯ ತವ ಪುತ್ರಾಣಾಂ ಹಾಹಾಕೃತಮಭೂದ್ ಬಲಮ್ ॥ 26 ॥
ಜಿಂಕೆಯ ಬಣ್ಣದ ವಾಯುವೇಗವುಳ್ಳ ಅಶ್ವಗಳು ಹಂಸವರ್ಣದ ಅಶ್ವಗಳ ಜೊತೆಯಲ್ಲಿ ಮಿಶ್ರಿತವಾಗಿರುವುದನ್ನು ನೋಡಿ ನಿನ್ನ ಪುತ್ರರ ಸೇನೆಯು ಹಾಹಾಕಾರವನ್ನು ಮಾಡಿತು.
ತೇ ಹಯಾ ಬಹ್ವಶೋಭಂತ ಮಿಶ್ರಿತಾ ವಾತರಂಹಸಃ |
ಸಿತಾಸಿತಾ ಮಹಾರಾಜ ಯಥಾ ವ್ಯೋಮ್ನಿ ಬಲಾಹಕಾಃ ॥ 27 ॥
ಎಲೈ ಮಹಾರಾಜನೇ, ಆಕಾಶದಲ್ಲಿ ಬಿಳಿಯ ಮತ್ತು ಕಪ್ಪು ಮೋಡಗಳು ಸೇರಿದಂತೆ ವಾಯುವೇಗವುಳ್ಳ ಆ ಅಶ್ವಗಳು ಮಿಶ್ರಿತವಾಗಿ ಬಹಳ ಶೋಭಿಸಿದವು.
ಸಂರಬ್ಧೌ ಕ್ರೋಧತಾಮ್ರಾಕ್ಷೌ ಪ್ರೇಕ್ಷ್ಯ ಕರ್ಣವೃಕೋದರೌ |
ಸಂತ್ರಸ್ತಾಃ ಸಮಕಂಪಂತ ತ್ವದೀಯಾನಾಂ ಮಹಾರಥಾಃ ॥ 28 ॥
ಕೋಪಗೊಂಡವರೂ, ಕೋಪದಿಂದ ಕೆಂಪಾದ ಕಣ್ಣುಳ್ಳವರೂ ಆದ ಕರ್ಣ- ವೃಕೋದರರನ್ನು ನೋಡಿ ನಿನ್ನ ಸೈನ್ಯದ ಮಹಾರಥರು ಹೆದರಿ ನಡುಗಿದರು.
ಯಮರಾಷ್ಟ್ರೋಪಮಂ ಘೋರಮಾಸೀದಾಯೋಧನಂ ತಯೋಃ |
ದುರ್ದರ್ಶಂ ಭರತಶ್ರೇಷ್ಠ ಪ್ರೇತರಾಜಪುರಂ ಯಥಾ ॥ 29 ॥
ಎಲೈ ಭರತಶ್ರೇಷ್ಠನೇ, ಅವರಿಬ್ಬರಿಗೆ ಕಣ್ಣಿನಿಂದ ನೋಡಲು ಅಸಾಧ್ಯವಾದ ಯಮರಾಷ್ಟ್ರದಂತಿದ್ದ, ಪ್ರೇತರಾಜಪಟ್ಟಣದಂತಿದ್ದ ಘೋರವಾದ ಯುದ್ಧವು ನಡೆಯಿತು.
ಸಮಾಜಮಿವ ತಚ್ಚಿತ್ರಂ ಪ್ರೇಕ್ಷಮಾಣಾ ಮಹಾರಥಾಃ |
ನಾಲಕ್ಷಯನ್ ಜಯಂ ವ್ಯಕ್ತಮೇಕೈಕಸ್ಯ ನಿವಾರಣೇ ॥ 30 ॥
ನಿನ್ನ ಮಹಾರಥರು ಆ ವಿಚಿತ್ರವಾದ ಸಮಾಗಮವನ್ನು ನೋಡುತ್ತಾ ಒಬ್ಬೊಬ್ಬರು ಹಿಂದೆ ಸರಿಯುತಿತರಲು ಯಾರಿಗೂ ಜಯವನ್ನು ಗುರುತಿಸಲಿಲ್ಲ.
ತಯೋಃ ಪ್ರೈಕ್ಷಂತ ಸಮ್ಮರ್ದಂ ಸನ್ನಿಕೃಷ್ಟಮಹಾಸ್ತ್ರಯೋಃ |
ತವ ದುರ್ಮಂತ್ರಿತೇ ರಾಜನ್ ಸಪುತ್ರಸ್ಯ ವಿಶಾಂಪತೇ ॥ 31 ॥
ಎಲೈ ರಾಜನೇ, ಪುತ್ರಸಹಿತನಾದ ನಿನ್ನ ದುರ್ಮಂತ್ರಣದ ನಿಮಿತ್ತದಿಂದ ಮಹಾಸ್ತ್ರಗಳನ್ನು ಹೊಂದಿದ ಅವರಿಬ್ಬರಿಗೂ ನಡೆದ ಯುದ್ಧವನ್ನು ನಿನ್ನ ಮಹಾರಥರು ನೋಡಿದರು.
ಛಾದಯಂತೌ ಹಿ ಶತ್ರುಘ್ನಾವನ್ಯೋನ್ಯಂ ಸಾಯಕೈಃ ಶಿತೈಃ |
ಶರಜಾಲಾವೃತಂ ವ್ಯೋಮ ಚಕ್ರಾತೇ ಶರವೃಷ್ಟಿಭಿಃ ॥ 32 ॥
ಶತ್ರುಸಂಹಾರಕರಾದ ಅವರು ನಿಶಿತವಾದ ಬಾಣಗಳಿಂದ ಪರಸ್ಪರವಾಗಿ ಆಚ್ಛಾದಿಸುತ್ತಾ ತಮ್ಮ ಬಾಣಗಳ ಮಳೆಯಿಂದ ಆಕಾಶವನ್ನು ಶರಜಾಲದಿಂದ ಆವೃತವನ್ನಾಗಿ ಮಾಡಿದರು.
ತಾವನ್ಯೋನ್ಯಂ ಜಿಘಾಂಸಂತೌ ಶರೈಸ್ತೀಕ್ಷ್ಣೈರ್ಮಹಾರಥೌ |
ಪ್ರೇಕ್ಷಣೀಯತರಾವಾಸ್ತಾಂ ವೃಷ್ಟಿಮಂತಾವಿವಾಂಬುದೌ ॥ 33 ॥
ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಕೊಲ್ಲಲು ಬಯಸಿದ ಆ ಇಬ್ಬರು ಮಹಾರಥರು ಮಳೆಯನ್ನು ಸುರಿಸುವ ಮೋಡಗಳಂತೆ ನೋಡಲು ಬಹಳ ರಮಣೀಯವಾಗಿ ಕಂಡರು.
ಸುವರ್ಣವಿಕೃತಾನ್ ಬಾಣಾನ್ ಪ್ರಮುಂಚಂತಾವರಿಂದಮೌ |
ಭಾಸ್ವರಂ ವ್ಯೋಮ ಚಕ್ರಾತೇ ವಹ್ನ್ಯುಲ್ಕಾಭಿರಿವ ಪ್ರಭೋ ॥ 34 ॥
ಎಲೈ ಪ್ರಭುವೇ, ಅರಿಂದಮರಾದ ಅವರು ಸುವರ್ಣಾಲಂಕೃತವಾದ ಬಾಣಗಳನ್ನು ಪ್ರಯೋಗಿಸುತ್ತಾ ಆಕಾಶವನ್ನು ವಹ್ನಿಯ ಕಿಡಿಗಳಿಂದಲೋ ಎಂಬಂತೆ ಪ್ರಕಾಶಗೊಳಿಸಿದರು.
ತಾಭ್ಯಾಂ ಮುಕ್ತಾ ವ್ಯಕಾಶಂತ ಕಂಕಬರ್ಹಿಣವಾಸಸಃ |
ಪಂಕ್ತ್ಯಃ ಶರದಿ ಮತ್ತಾನಾಂ ಸಾರಸಾನಾಮಿವಾಂಬರೇ ॥ 35 ॥
ಅವರಿಬ್ಬರೂ ಪ್ರಯೋಗಿಸಿದ ಕಂಕಪಕ್ಷಿಗಳ ಮತ್ತು ನವಿಲುಗಳ ಪುಂಖವನ್ನು ಹೊಂದಿದ ಬಾಣಗಳ ಪಂಕ್ತಿಯು ಶರತ್ಕಾಲದಲ್ಲಿ ಆಕಾಶದಲ್ಲಿ ಹೋಗುವ ಮದಿಸಿದ ಸಾರಸ ಪಕ್ಷಿಗಳ ಪಂಕ್ತಿಯಂತೆ ಶೋಭಿಸಿತು.
ಸಂಸಕ್ತಂ ಸೂತಪುತ್ರೇಣ ದೃಷ್ಟ್ವಾ ಭೀಮಮರಿಂದಮಮ್ |
ಅತಿಭಾರಮಮನ್ಯೇತಾಂ ಭೀಮೇ ಕೃಷ್ಣಧನಂಜಯೌ ॥ 36 ॥
ಸೂತಪುತ್ರನಾದ ಕರ್ಣನ ಜೊತೆಯಲ್ಲಿ ಯುದ್ಧದಲ್ಲಿ ಸಂಘಟಿಸಿದ ಅರಿಂದಮನಾದ ಭೀಮನನ್ನು ಕೃಷ್ಣಾರ್ಜುನರು ಭೀಮನ ಮೇಲೆ ದೊಡ್ಡ ಭಾರವು ಇದೆ ಎಂದು ತಿಳಿದರು.
ತತ್ರಾಧಿರಥಿಭೀಮಾಭ್ಯಾಂ ಶರೈರ್ಮುಕ್ತೈರ್ದೃಢಾಹತಾಃ |
ಇಷುಪಾತಮತಿಕ್ರಮ್ಯ ಪೇತುರಶ್ವನರದ್ವಿಪಾಃ ॥ 37 ॥
ಕರ್ಣ-ವೃಕೋದರರಿಂದ ಬಾಣದಿಂದ ಗಾಢವಾಗಿ ಹೊಡೆಯಲ್ಪಟ್ಟ ಅಶ್ವ-ನರ- ಗಜಗಳು ಒಂದು ಬಾಣವು ಸಾಗುವ ದಾರಿಯನ್ನು

ಹೊಂದಿ ಭೂಮಿಯ ಮೇಲೆ ಬಿದ್ದವು.
ಪತದ್ಭಿಃ ಪತಿತೈಶ್ಚಾನ್ಯೈರ್ಗತಾಸುಭಿರನೇಕಶಃ |
ಕೃತೋ ಮಹಾನ್ ಮಹಾರಾಜ ಪುತ್ರಾಣಾಂ ತೇ ಜನಕ್ಷಯಃ ॥ 38 ॥
ಎಲೈ ಮಹಾರಾಜನೇ, ಭೂಮಿಯ ಮೇಲೆ ಬಿದ್ದ ಮತ್ತು ಪ್ರಾಣಗಳನ್ನು ಕಳೆದುಕೊಂಡು ಬೀಳುತ್ತಿದ್ದ ಅನೇಕ ಗಜಾಶ್ವ-ಯೋಧರಿಂದ ನಿನ್ನ ಪುತ್ರರಿಗೆ ದೊಡ್ಡ ಜನಕ್ಷಯವು ಉಂಟಾಯಿತು.
ಮನುಷ್ಯಾಶ್ವಗಜಾನಾಂ ಚ ಶರೀರೈರ್ಗತಜೀವಿತೈಃ |
ಕ್ಷಣೇನ ಭೂಮಿಃ ಸಂಜಜ್ಞೇ ಸಂವೃತಾ ಭರತರ್ಷಭ ॥ 39 ॥
ಎಲೈ ಭರತಶ್ರೇಷ್ಠನೇ, ಒಂದು ಕ್ಷಣದಲ್ಲಿ ಮೃತರಾದ ಮನುಷ್ಯ-ಅಶ್ವ-ಗಜಗಳ ಶರೀರದಿಂದ ಭೂಮಿಯು ಮುಚ್ಚಿಹೋಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತದಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹದಿನೇಳನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಹದಿನೆಂಟನೆಯ ಅಧ್ಯಾಯ
ಭೀಮನಿಂದ ಕರ್ಣನ ಸಹಾಯಕ್ಕೆ ಬಂದ ದುರ್ಜಯನ ವಧೆ.
ಧೃತರಾಷ್ಟ್ರಃ
ಅತ್ಯದ್ಭುತಮಹಂ ಮನ್ಯೇ ಭೀಮಸೇನಸ್ಯ ವಿಕ್ರಮಮ್ |
ಯತ್ ಕರ್ಣಂ ಯೋಧಯಾಮಾಸ ಸಮರೇ ಲಘುವಿಕ್ರಮಮ್ ॥ 1 ॥
ಧೃತರಾಷ್ಟ್ರ, ಕ್ಷಿಪ್ರಕಾರಿಯೂ, ಪರಾಕ್ರಮಶಾಲಿಯೂ ಆದ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದ ಭೀಮನ ಪರಾಕ್ರಮವು ಬಹಳ ಅದ್ಭುತವಾದುದೆಂದು ನಾನು ತಿಳಿಯುತ್ತೇನೆ.
ತ್ರಿದಶಾನಪಿ ಚೋದ್ಯುಕ್ತಾನ್ ಸರ್ವಶಸ್ತ್ರಧರಾನ್ ಯುಧಿ |
ವಾರಯೇದ್ ಯೋ ರಣೇ ಕರ್ಣಃ ಸಯಕ್ಷಾಸುರಮಾನವಾನ್ ॥ 2 ॥
ಸ ಕಥಂ ಪಾಂಡವಂ ಯುದ್ಧೇ ಭ್ರಾಜಮಾನಮಿವ ಶ್ರಿಯಾ |
ನಾತರತ್ ಸಂಯುಗೇ ತಾತ ತನ್ಮಮಾಚಕ್ಷ್ವ ಸಂಜಯ ॥ 3 ॥
ಯಾವ ಕರ್ಣನು ಸರ್ವಶಸ್ತ್ರಗಳನ್ನು ಧರಿಸಿದ ಯಕ್ಷ-ರಾಕ್ಷಸ-ಮನುಷ್ಯರಿಂದ ಸಹಿತರಾದ ದೇವತೆಗಳನ್ನೂ ಯುದ್ಧದಲ್ಲಿ ತಡೆಯಬಲ್ಲನೋ ಅಂತಹ ಕರ್ಣನು ಎಲೈ ಪ್ರೀತಿಪಾತ್ರನಾದ ಸಂಜಯನೇ, ತನ್ನ ಕಾಂತಿಯಿಂದ ಬೆಳಗುತ್ತಿದ್ದ ಪಾಂಡುಪುತ್ರನಾದ ಭೀಮಸೇನನನ್ನು ಯುದ್ಧದಲ್ಲಿ ಹೇಗೆ ದಾಟಲಿಲ್ಲ?
ಕಥಂ ಚ ಯುದ್ಧಂ ಭೂಯೋಽಭೂತ್ ತಯೋಃ ಪ್ರಾಣದುರೋದರೇ |
ಅತ್ರ ಮನ್ಯೇ ಸಮಾಯತ್ತೋ ಜಯೋ ವಾಽಜಯ ಏವ ವಾ ॥ 4 ॥
ಪ್ರಾಣವನ್ನು ಪಣವಾಗಿಟ್ಟ ಆ ಯುದ್ಧದ್ಯೂತವು ಪುನಃ ಅವರಿಬ್ಬರಿಗೆ ಹೇಗೆ ನಡೆಯಿತು? ನಮ್ಮ ಜಯ-ಪರಾಜಯಗಳು ಈ ಯುದ್ಧವನ್ನು ಅವಲಂಬಿಸಿದೆ ಎಂದು ತಿಳಿಯುತ್ತೇನೆ.
ಕರ್ಣಂ ಪ್ರಾಪ್ಯ ರಣೇ ಸೂತ ಮಮ ಪುತ್ರಃ ಸುಯೋಧನಃ |
ಜೇತುಮುತ್ಸಹತೇ ಪಾರ್ಥಾನ್ ಸಗೋವಿಂದಾನ್ ಸಸಾತ್ವತಾನ್ ॥ 5 ॥
ಎಲೈ ಸೂತನೇ, ನನ್ನ ಪುತ್ರನಾದ ಸುಯೋಧನನು ಕರ್ಣನನ್ನು ನಂಬಿ ಸಾತ್ವತರಿಂದ ಮತ್ತು ಕೃಷ್ಣನಿಂದ ಸಹಿತರಾದ ಪಾಂಡವರನ್ನು ಯುದ್ಧದಲ್ಲಿ ಗೆಲ್ಲುತ್ತೇನೆಂದು ಆಶಿಸುತ್ತಾನೆ.
ಶ್ರುತ್ವಾ ತು ನಿರ್ಜಿತಂ ಕರ್ಣಮಸಕೃದ್ ಭೀಮಕರ್ಮಣಾ |
ಭೀಮಸೇನೇನ ಸಮರೇ ಮೋಹ ಆವಿಶತೀವ ಮಾಮ್ ॥ 6 ॥
ಭಯಂಕರ ಕರ್ಮವನ್ನು ಮಾಡುವ ಭೀಮಸೇನನಿಂದ ಕರ್ಣನು ಅನೇಕ ಬಾರಿ ಯುದ್ಧದಲ್ಲಿ ಪರಾಜಿತನಾಗಿದ್ದಾನೆಂದು ಕೇಳಿ ನನಗೆ ಮೂರ್ಛೆ ಉಂಟಾಗುತ್ತಿದೆ.
ವಿನಷ್ಟಾನ್ ಕೌರವಾನ್ ಮನ್ಯೇ ಮಮ ಪುತ್ರಸ್ಯ ದುರ್ನಯೈಃ |
ನ ಹಿ ಕರ್ಣೋ ಮಹೇಷ್ವಾಸಾನ್ ಪಾರ್ಥಾನ್ ಜೇಷ್ಯತಿ ಸಂಜಯ ॥
ಕೌರವರು ನನ್ನ ಪುತ್ರನ ದುರ್ನೀತಿಗಳಿಂದ ನಾಶವನ್ನು ಹೊಂದಿದ್ದಾರೆ ಎಂದು ಭಾವಿಸುತ್ತೇನೆ. ಎಲೈ ಸಂಜಯನೇ, ಕರ್ಣನು ಮಹಾಧನುರ್ಧಾರಿಗಳಾದ ಪಾಂಡವರನ್ನು ಗೆಲ್ಲುವುದಿಲ್ಲ.
ಕೃತವಾನ್ ಯಾನಿ ಯುದ್ಧಾನಿ ಕರ್ಣಃ ಪಾಂಡುಸುತೈಃ ಸಹ |
ಸರ್ವತ್ರ ಪಾಂಡವಾಃ ಕರ್ಣಮಜಯಂತ ರಣಾಜಿರೇ ॥ 8 ॥
ಕರ್ಣನು ಇದುವರೆಗೆ ಪಾಂಡುಪುತ್ರರ ಜೊತೆಯಲ್ಲಿ ಎಷ್ಟು ಯುದ್ಧಗಳನ್ನು ಮಾಡಿದ್ದಾನೆಯೋ ಅವುಗಳಲ್ಲೆಲ್ಲಾ ಪಾಂಡವರು ಕರ್ಣನನ್ನೇ ಜಯಿಸಿದ್ದಾರೆ.
ಅಜಯ್ಯಾಃ ಪಾಂಡವಾಸ್ತಾತ ದೇವೈರಪಿ ಸವಾಸವೈಃ |
ನ ಚ ತದ್ ಬುಧ್ಯತೇ ಮಂದಃ ಪುತ್ರೋ ದುರ್ಯೋಧನೋ ಮಮ ॥

ಎಲೈ ಪ್ರೀತಿಪಾತ್ರನೇ, ಇಂದ್ರನಿಂದ ಸಹಿತರಾದ ದೇವತೆಗಳೂ ಪಾಂಡವರನ್ನು ಯುದ್ಧದಲ್ಲಿ ಗೆಲ್ಲಲಾರರು. ಮಂದನಾದ ನನ್ನ ಪುತ್ರನಾದ ದುರ್ಯೋಧನನು ಅದನ್ನು ತಿಳಿಯುತ್ತಿಲ್ಲ.
ಧನಂ ಧನೇಶ್ವರಸ್ಯೇವ ಹೃತ್ವಾ ಪಾರ್ಥಸ್ಯ ಮೇ ಸುತಃ |
ಮಧುಪ್ರೇಪ್ಸುರಿವಾಬುದ್ಧಿಃ ಪ್ರಪಾತಂ ನಾವಬುಧ್ಯತೇ ॥ 10 ॥
ಕುಬೇರನ ಧನವನ್ನು ಅಪಹರಿಸಿದಂತೆ ಮಂದನಾದ ನನ್ನ ಪುತ್ರನು ಪಾಂಡವರ ಸಂಪತ್ತನ್ನು ಅಪಹರಿಸಿ ಜೇನನ್ನು ಪಡೆಯಲು ಬಯಸುತ್ತಿದ್ದಾನೆ. ಮುಂದಿರುವ ಹಳ್ಳವನ್ನು ನೋಡುತ್ತಿಲ್ಲ.
ನಿಕೃತ್ಯಾ ನಿಕೃತಿಪ್ರಜ್ಞೋ ರಾಜ್ಯಂ ಹೃತ್ವಾ ಮಹಾತ್ಮನಾಮ್ |
ಜಿತಾನಿತ್ಯೇವ ಮನ್ವಾನಃ ಪಾಂಡವಾನವಮನ್ಯತೇ ॥ 11 ॥
ಮೋಸದ ಬುದ್ಧಿಯುಳ್ಳ ಅವನು ಮಹಾತ್ಮರಾದ ಪಾಂಡವರ ರಾಜ್ಯವನ್ನು ಮೋಸದಿಂದಲೇ ಅಪಹರಿಸಿ, ಅವರನ್ನು ಪರಾಜಯಗೊಳಿಸಿದ್ದೇನೆ ಎಂದು ತಿಳಿದು ಅವರಿಗೆ ಅವಮಾನವನ್ನು ಮಾಡುತ್ತಿದ್ದಾನೆ.
ಪುತ್ರಸ್ನೇಹಾಭಿಭೂತೇನ ಮಯಾ ಚಾಪ್ಯಕೃತಾತ್ಮನಾ |
ಧರ್ಮೇ ಸ್ಥಿತಾ ಮಹಾತ್ಮಾನೋ ನಿಕೃತಾಃ ಪಾಂಡುನಂದನಾಃ ॥ 12 ॥
ಪುತ್ರಸ್ನೇಹಕ್ಕೆ ವಶನಾಗಿ ಒಳ್ಳೆಯ ಬುದ್ಧಿಯಿಲ್ಲದ ನಾನೂ ಸಹ ಧರ್ಮದಲ್ಲಿ ಇರುವ ಮಹಾತ್ಮರಾದ ಪಾಂಡವರಿಗೆ ಅಪಚಾರವನ್ನು ಮಾಡಿದ್ದೇನೆ.
ಶಮಕಾಮಃ ಸದಾ ಪಾರ್ಥೋ ದೀರ್ಘಪ್ರೇಕ್ಷೀ ಯುಧಿಷ್ಠಿರಃ |
ಅಶಕ್ತ ಇತಿ ಮನ್ವಾನೈಃ ಪುತ್ರೈರ್ಮಮ ನಿರಾಕೃತಃ ॥ 13 ॥
ಕುಂತೀಪುತ್ರನಾದ ಯುಧಿಷ್ಠಿರನು ದೀರ್ಘಪ್ರೇಕ್ಷಿ ಮತ್ತು ಯಾವಾಗಲೂ ಸಂಧಿಯನ್ನು ಬಯಸುವವನು. ಅವನನ್ನು ಅಶಕ್ತನೆಂದು ತಿಳಿದು ನನ್ನ ಪುತ್ರರು ಅವನು ಮಾಡಿದ ಸಂಧಿಯ ಸೂಚನೆಯನ್ನು ನಿರಾಕರಿಸಿದ್ದಾರೆ.
ತಾನಿ ದುಃಖಾನ್ಯನೇಕಾನಿ ವಿಪ್ರಕಾರಾಂಶ್ಚ ಸರ್ವಶಃ |
ಹೃದಿ ಕೃತ್ವಾ ಮಹಾಬಾಹುರ್ಭೀಮೋಽಯುದ್ಧ್ಯತ ಸೂತಜಮ್ ॥14॥
ಆ ಅನೇಕ ಕ್ಲೇಶಗಳನ್ನು ಮತ್ತು ಎಲ್ಲ ಅವಮಾನಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮಹಾಬಾಹುವಾದ ಭೀಮನು ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತಸ್ಮಾನ್ಮೇ ಸಂಜಯ ಬ್ರೂಹಿ ಕರ್ಣಭೀಮೌ ಯಥಾ ರಣೇ |
ಅಯುದ್ಧ್ಯೇತಾಂ ಯುಧಿಶ್ರೇಷ್ಠೌ ಪರಸ್ಪರವಧೈಷಿಣೌ ॥ 15 ॥
ಎಲೈ ಸಂಜಯನೇ, ಆದ್ದರಿಂದ ಯೋಧಶ್ರೇಷ್ಠರೂ, ಪರಸ್ಪರ ವಧೆಯನ್ನು ಬಯಸುವವರೂ ಆದ ಕರ್ಣ-ಭೀಮಸೇನರು ರಣರಂಗದಲ್ಲಿ ಹೇಗೆ ಯುದ್ಧವನ್ನು ಮಾಡಿದರು ಎಂಬುದನ್ನು ನನಗೆ ಹೇಳು.
ಸಂಜಯಃ
ಶೃಣು ರಾಜನ್ ಯಥಾ ವೃತ್ತಃ ಸಂಗ್ರಾಮಃ ಕರ್ಣಭೀಮಯೋಃ |
ಪರಸ್ಪರವಧಪ್ರೇಪ್ಸ್ವೋರ್ವನೇ ಕುಂಜರಯೋರಿವ ॥ 16 ॥
ಸಂಜಯ ಪರಸ್ಪರ ವಧೆಯನ್ನು ಬಯಸಿದ ಕರ್ಣ-ಭೀಮಸೇನರಿಗೆ ಕಾಡಿನಲ್ಲಿ ಎರಡು ಗಜಗಳಿಗೆ ನಡೆದಂತೆ ಹೇಗೆ ಸಂಗ್ರಾಮವು ನಡೆಯಿತೆಂದು ಕೇಳು.
ರಾಜನ್ ವೈಕರ್ತನೋ ಭೀಮಂ ಕ್ರುದ್ಧಃ ಕ್ರುದ್ಧಮರಿಂದಮಮ್ |
ಪರಾಕ್ರಾಂತಂ ಪರಾಕ್ರಮ್ಯ ವಿವ್ಯಾಧ ತ್ರಿಂಶತಾ ಶರೈಃ ॥ 17 ॥
ರಾಜನೇ, ಕ್ರುದ್ಧನೂ, ಪರಾಕ್ರಮಶಾಲಿಯೂ ಆದ ಕರ್ಣನು ಕ್ರುದ್ಧನೂ, ಅರಿಂದಮನೂ, ಪರಾಕ್ರಮಶಾಲಿಯೂ ಆದ ಭೀಮಸೇನನ ಮೇಲೆ ಮೂವತ್ತು ಬಾಣಗಳನ್ನು ಪ್ರಯೋಗಿಸಿದನು.
ಮಹಾವೇಗೈಃ ಪ್ರಸನ್ನಾಗ್ರೈಃ ಶಾತಕುಂಭಪರಿಷ್ಕೃತೈಃ |
ಆಹನದ್ ಭರತಶ್ರೇಷ್ಠ ಭೀಮಂ ವೈಕರ್ತನಃ ಶರೈಃ ॥ 18 ॥
ಮಹಾವೇಗವುಳ್ಳ, ಒಳ್ಳೆಯ ಅಗ್ರಭಾಗವುಳ್ಳ, ಸುವರ್ಣಪರಿಷ್ಕೃತವಾದ ಬಾಣಗಳಿಂದ ಎಲೈ ಭರತಶ್ರೇಷ್ಠನೇ, ಕರ್ಣನು ಭೀಮನನ್ನು ಚೆನ್ನಾಗಿ ಹೊಡೆದನು.
ತಸ್ಯಾಸ್ಯತೋ ಧನುರ್ಭೀಮಶ್ಚಕರ್ತ ನಿಶಿತೈಸ್ತ್ರಿಭಿಃ |
ರಥನೀಡಾಚ್ಚ ಯಂತಾರಂ ಭಲ್ಲೇನಾಪಾತಯತ್ ಕ್ಷಿತೌ ॥ 19 ॥
ಭೀಮಸೇನನು ಹಾಗೆ ಬಾಣಗಳನ್ನು ಪ್ರಯೋಗಿಸುತ್ತಿದ್ದ ಕರ್ಣನ ಧನುಸ್ಸನ್ನು ತೀಕ್ಷ್ಣವಾದ ಮೂರು ಬಾಣಗಳಿಂದ ಕತ್ತರಿಸಿದನು. ಅವನ ಸಾರಥಿಯನ್ನು ಭಲ್ಲದಿಂದ ಹೊಡೆದು ರಥದ ಮುಂಭಾಗದಿಂದ ಭೂಮಿಯ ಮೇಲೆ ಬೀಳಿಸಿದನು.
ಸ ಕಾಂಕ್ಷನ್ ಭೀಮಸೇನಸ್ಯ ವಧಂ ವೈಕರ್ತನೋ ವೃಷಃ |
ಶಕ್ತಿಂ ಕನಕವೈಡೂರ್ಯಚಿತ್ರದಂಡಾಂ ಪರಾಮೃಶತ್ ॥ 20 ॥
ಭೀಮಸೇನನನ್ನು ಕೊಲ್ಲಲು ಬಯಸಿದ ಕರ್ಣನು ಕನಕವೈಡೂರ್ಯ ಭೂಷಿತವಾದ ದಂಡವುಳ್ಳ ಶಕ್ತಿಯನ್ನು ಕೈಯಲ್ಲಿ ತೆಗೆದುಕೊಂಡನು.
ಪ್ರಗೃಹ್ಯ ಚ ಮಹಾಶಕ್ತಿಂ ಕಾಲಶಕ್ತಿಮಿವಾಪರಾಮ್ |
ಸಮುತ್ಕ್ಷಿಪ್ಯ ಚ ರಾಧೇಯಃ ಸಂಧಾಯ ಚ ಮಹಾಬಲಃ |
ಚಿಕ್ಷೇಪ ಭೀಮಸೇನಾಯ ಜೀವಿತಾಂತಕರೀಮಿವ ॥ 21 ॥

ಯಮನ ಶಕ್ತಿಯಂತಿದ್ದ ಆ ಮಹಾಶಕ್ತಿಯನ್ನು ಹಿಡಿದು, ಮಹಾಬಲನಾದ ಕರ್ಣನು ಅದನ್ನು ಎತ್ತಿ ಧನುಸ್ಸಿನಲ್ಲಿ ಹೂಡಿ, ಜೀವಿತಾಂತಕವಾದ ಅದನ್ನು ಭೀಮಸೇನನ ಮೇಲೆ ಪ್ರಯೋಗಿಸಿದನು.
ಶಕ್ತಿಂ ವಿಸೃಜ್ಯ ರಾಧೇಯಃ ಪುರಂದರ ಇವಾಶನಿಮ್ |
ನನಾದ ಸುಮಹಾನಾದಂ ಬಲವಾನ್ ಸೂತನಂದನಃ |
ತಂ ಚ ನಾದಂ ತತಃ ಶ್ರುತ್ವಾ ಪುತ್ರಾಸ್ತೇ ಹೃಷಿತಾಽಭವನ್ ॥ 22 ॥
ಕರ್ಣನು ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದಂತೆ ಆ ಶಕ್ತಿಯನ್ನು ಪ್ರಯೋಗಿಸಿ, ಬಲಿಷ್ಠನೂ, ಸೂತಪುತ್ರನೂ ಆದ ಅವನು ದೊಡ್ಡ ನಾದವನ್ನು ಮಾಡಿದನು. ಆ ನಾದವನ್ನು ಕೇಳಿ ನಿನ್ನ ಪುತ್ರರು ಸಂತೋಷಗೊಂಡರು.
ತಾಂ ಕರ್ಣಭುಜನಿರ್ಮುಕ್ತಾಮರ್ಕವೈಶ್ವಾನರಪ್ರಭಾಮ್ |
ಶಕ್ತಿಂ ವಿಯತಿ ಚಿಚ್ಛೇದ ಭೀಮಃ ಸಪ್ತಭಿರಾಶುಗೈಃ ॥ 23 ॥
ಕರ್ಣನಿಂದ ಪ್ರಯೋಗಿಸಲ್ಪಟ್ಟ, ಸೂರ್ಯನ ಪ್ರಭೆಯನ್ನು ಹೊಂದಿದ ಆ ಶಕ್ತಿಯನ್ನು ಭೀಮಸೇನನು ಶೀಘ್ರಗಾಮಿಗಳಾದ ಏಳು ಬಾಣಗಳನ್ನು ಪ್ರಯೋಗಿಸಿ ಆಕಾಶದಲ್ಲಿಯೇ ಕತ್ತರಿಸಿದನು.
ಛಿತ್ತ್ವಾ ಶಕ್ತಿಂ ತತೋ ಭೀಮೋ ನಿರ್ಮುಕ್ತೋರಗಸನ್ನಿಭಾಮ್ |
ಮಾರ್ಗಮಾಣ ಇವ ಪ್ರಾಣಾನ್ ಸೂತಪುತ್ರಸ್ಯ ಮಾರಿಷ ॥ 24 ॥
ಪ್ರಾಹಿಣೋನ್ನವ ಸಂರಬ್ಧಃ ಶರಾನ್ ಬರ್ಹಿಣವಾಸಸಃ |
ಸ್ವರ್ಣಪುಂಖಾನ್ ಶಿಲಾಧೌತಾನ್ ಯಮದಂಡೋಪಮಾನ್ ಮೃಧೇ ॥
ಪೊರೆಯನ್ನು ಬಿಟ್ಟ ಸರ್ಪದಂತಿದ್ದ ಆ ಶಕ್ತಿಯನ್ನು ಕತ್ತರಿಸಿ ಭೀಮಸೇನನು ಎಲ್ಲೈ ಪೂಜ್ಯನೇ, ಕರ್ಣನ ಪ್ರಾಣಗಳನ್ನು ಹುಡುಕುವವನಂತೆ ಕೋಪದಿಂದ ಕೂಡಿದವನಾಗಿ ನವಿಲುಗರಿಯನ್ನು ಹೊಂದಿದ್ದ, ಸ್ವರ್ಣಪುಂಖವನ್ನು ಹೊಂದಿದ್ದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಯಮದಂಡದಂತಿದ್ದ ಒಂಬತ್ತು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ಕರ್ಣೋಽಪ್ಯನ್ಯದ್ ಧನುರ್ಗೃಹ್ಯ ಹೇಮಪೃಷ್ಠಂ ದುರಾಸದಮ್ |
ವಿಕೃಷ್ಯ ಚ ಮಹಾತೇಜಾ ವ್ಯಸೃಜತ್ ಸಾಯಕಾನ್ನವ ॥ 26 ॥
ಮಹಾತೇಜಸ್ವಿಯಾದ ಕರ್ಣನೂ ಕೂಡ ಹೇಮಪೃಷ್ಠವನ್ನು ಹೊಂದಿದ್ದ, ಬಗ್ಗಿಸಲು ಕಷ್ಟಸಾಧ್ಯವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅದನ್ನು ಎಳೆದು ಭೀಮಸೇನನ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ತಾನ್ ಪಾಂಡುಪುತ್ರಶ್ಚಿಚ್ಛೇದ ನವಭಿರ್ನತಪರ್ವಭಿಃ |
ವಸುಷೇಣೇನ ನಿರ್ಮುಕ್ತಾನ್ನವ ರಾಜನ್ ಮಹಾಶರಾನ್ |
ಛಿತ್ತ್ವಾ ಭೀಮೋ ಮಹಾರಾಜ ನಾದಂ ಸಿಂಹ ಇವಾನದತ್ ॥ 27 ॥
ವಸುಷೇಣನಿಂದ (ಕರ್ಣನಿಂದ) ಪ್ರಯೋಗಿಸಲ್ಪಟ್ಟ ಆ ಒಂಬತ್ತು ದೊಡ್ಡ ಬಾಣಗಳನ್ನು ಎಲ್ಲೈ ರಾಜನೇ, ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳಿಂದ ಪಾಂಡುಪುತ್ರನಾದ ಭೀಮಸೇನನು ಕತ್ತರಿಸಿ ಎಲ್ಲೈ ಮಹಾರಾಜನೇ, ಸಿಂಹದಂತೆ ನಾದವನ್ನು ಮಾಡಿದನು.
ತೌ ವೃಷಾವಿವ ನರ್ದಂತೌ ಬಲಿನೌ ವಾಸಿತಾಂತರೇ |
ಶಾರ್ದೂಲಾವಿವ ಚಾನ್ಯೋನ್ಯಮತ್ಯರ್ಥಂ ಚ ಹ್ಯಗರ್ಜತಾಮ್ ॥ 28 ॥
ಬಲಿಷ್ಠರಾದ ಅವರಿಬ್ಬರೂ ವಾಸಿತದ (ಆಗತಾನೆ ಮೈನೆರೆದ ಗೋವಿನ) ಸಲುವಾಗಿ ಹೊಡೆದಾಡುವ ವೃಷಭಗಳಂತೆ, ಶಾರ್ದೂಲಗಳಂತೆ ಪರಸ್ಪರವಾಗಿ ಬಹಳವಾಗಿ ಗರ್ಜಿಸಿದರು.
ಅನ್ಯೋನ್ಯಂ ಪ್ರಜಿಹೀರ್ಷಂತಾವನ್ಯೋನ್ಯಸ್ಯಾಂತರೈಷಿಣೌ |
ಅನ್ಯೋನ್ಯಮಭಿ ವೀಕ್ಷಂತೌ ಗೋಷ್ಠೇಷ್ವಿವ ಮಹರ್ಷಭೌ ॥ 29 ॥
ಒಬ್ಬರನ್ನೊಬ್ಬರು ಸೋಲಿಸಲು ಬಯಸಿ, ಪರಸ್ಪರವಾಗಿ ಛಿದ್ರಗಳನ್ನು ಅನ್ವೇಷಿಸಿ, ಕೊಟ್ಟಿಗೆಯಲ್ಲಿನ ವೃಷಭಗಳಂತೆ ಪರಸ್ಪರವಾಗಿ ನೋಡಿದರು.
ಮಹಾಗಜಾವಿವಾಸಾದ್ಯ ವಿಷಾಣಾಗ್ರೈಃ ಪರಸ್ಪರಮ್ |
ಶರೈಃ ಪೂರ್ಣಾಯತೋತ್ಸೃಷ್ಟೈರನ್ಯೋನ್ಯಮಭಿಜಘ್ನತುಃ ॥ 30 ॥
ಮಹಾಗಜಗಳು ಪರಸ್ಪರವಾಗಿ ಘಟ್ಟಿಸಿ, ದಂತಾಗ್ರದಿಂದ ತಿವಿದಂತೆ ಪೂರ್ಣವಾಗಿ ಎಳೆದು ಪ್ರಯೋಗಿಸಿದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ನಿರ್ದಹಂತೌ ಮಹಾರಾಜ ಶರವೃಷ್ಟ್ಯಾ ಪರಸ್ಪರಮ್ |
ಅನ್ಯೋನ್ಯಮಭಿವೀಕ್ಷಂತೌ ಕೋಪಾದ್ ವಿವೃತಲೋಚನೌ ॥ 31 ॥
ಪ್ರಹಸಂತೌ ತಥಾನ್ಯೋನ್ಯಂ ಭರ್ತ್ಸಯಂತೌ ಮುಹುರ್ಮುಹುಃ |
ಶಂಖಶಬ್ದಂ ಚ ಕುರ್ವಾಣೌ ಯುಯುಧಾತೇ ಪರಸ್ಪರಮ್ ॥ 32 ॥
ಎಲ್ಲೈ ಮಹಾರಾಜನೇ, ಬಾಣಗಳ ವೃಷ್ಟಿಯಿಂದ ಪರಸ್ಪರವಾಗಿ ದಹಿಸುತ್ತಾ, ಕೋಪದಿಂದ ಅರಳಿದ ಕಣ್ಣುಗಳಿಂದ ಪರಸ್ಪರವಾಗಿ ವೀಕ್ಷಿಸುತ್ತಾ, ಪರಸ್ಪರವಾಗಿ ನಗುತ್ತಾ ಪುನಃ ಪುನಃ ಹಿಯಾಳಿಸುತ್ತಾ, ಶಂಖಶಬ್ದವನ್ನು ಮಾಡುತ್ತಾ ಅವರು ಪರಸ್ಪರವಾಗಿ ಯುದ್ಧವನ್ನು ಮಾಡಿದರು.
ತಸ್ಯ ಭೀಮಃ ಪುನಶ್ಚಾಪಂ ಮುಷ್ಟೌ ಚಿಚ್ಛೇದ ಮಾರಿಷ |
ಶಂಖವರ್ಣಾಂಶ್ಚ ತಾನಶ್ವಾನ್ ಬಾಣೈರ್ನಿನ್ಯೇ ಯಮಕ್ಷಯಮ್ ॥33॥
ಎಲ್ಲೈ ಪೂಜ್ಯನೇ, ಭೀಮಸೇನನು ಪುನಃ ಅವನ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು. ಶಂಖವರ್ಣದ ಕರ್ಣನ ಅಶ್ವಗಳನ್ನು ತನ್ನ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು.

ತಥಾ ಕೃಚ್ಛ್ರಗತಂ ದೃಷ್ಟ್ವಾ ಕರ್ಣಂ ದುರ್ಯೋಧನೋ ನೃಪಃ |
ವೇಪಮಾನ ಇವ ಕ್ರೋಧಾದ್ ವ್ಯಾದಿದೇಶಾಥ ದುರ್ಜಯಮ್ ॥ 34॥
ಗಚ್ಛ ದುರ್ಜಯ ರಾಧೇಯಂ ಪುರಾ ಗ್ರಸತಿ ಪಾಂಡವಃ |
ಜಹಿ ತೂಬರಕಂ ಕ್ಷಿಪ್ರಂ ಕರ್ಣಸ್ಯ ಬಲಮಾದಧತ್ ॥ 35 ॥
ಆ ರೀತಿಯಲ್ಲಿ ಸಂಕಟಕ್ಕೆ ಸಿಲುಕಿದ ಕರ್ಣನನ್ನು ನೋಡಿ ರಾಜನಾದ ದುರ್ಯೋಧನನು ಕ್ರೋಧದಿಂದ ನಡುಗುತ್ತಾ ತನ್ನ ತಮ್ಮನಾದ ದುರ್ಜಯನನ್ನು ಕುರಿತು, ಎಲೈ ದುರ್ಜಯನೇ, ಪಾಂಡುಪುತ್ರನಾದ ಭೀಮಸೇನನು ಕರ್ಣನನ್ನು ಶೀಘ್ರವಾಗಿ ನುಂಗುತ್ತಿದ್ದಾನೆ. ನೀನು ಹೋಗಿ ಕರ್ಣನಿಗೆ ಬೆಂಬಲವನ್ನು ನೀಡಿದ ತೂಬರಕನಾದ (ಹೋತದಂತೆ ಗಡ್ಡವನ್ನು ಹೊಂದಿದ) ಅವನನ್ನು ಶೀಘ್ರವಾಗಿ ಕೊಲ್ಲು ಎಂದು ಆದೇಶಿಸಿದನು.
ಏವಮುಕ್ತಸ್ತಥೇತ್ಯುಕ್ತ್ವಾ ತವ ಪುತ್ರಸ್ತವಾತ್ಮಜಮ್ |
ಅಭ್ಯದ್ರವದ್ ಭೀಮಸೇನಂ ವ್ಯಾಸಕ್ತಂ ವಿಕಿರನ್ ಶರಾನ್ ॥ 36 ॥
ಹೀಗೆ ಹೇಳಲ್ಪಟ್ಟ ನಿನ್ನ ಪುತ್ರನು ನಿನ್ನ ಪುತ್ರನಾದ ದುರ್ಯೋಧನನಿಗೆ ಹಾಗೆಯೇ ಆಗಲಿ ಎಂದು ಹೇಳಿ, ಕರ್ಣನ ಜೊತೆಯಲ್ಲಿ ಯುದ್ಧದಲ್ಲಿ ತೊಡಗಿದ್ದ ಭೀಮಸೇನನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾ ಅವನ ಕಡೆಗೆ ಧಾವಿಸಿದನು.
ಸ ಭೀಮಂ ನವಭಿರ್ಬಾಣೈರಶ್ವಾನಷ್ಟಭಿರರ್ದಯತ್ |
ಷಡ್ಭಿಃ ಸೂತಂ ತ್ರಿಭಿಃ ಕೇತುಂ ಪುನಸ್ತಂ ಚಾಪಿ ಸಪ್ತಭಿಃ ॥ 37 ॥
ಅವನು ಭೀಮಸೇನನನ್ನು ಒಂಬತ್ತು ಬಾಣಗಳಿಂದಲೂ, ಅವನ ಅಶ್ವಗಳನ್ನು ಎಂಟು ಬಾಣಗಳಿಂದಲೂ ಪೀಡಿಸಿ, ಸೂತನನ್ನು ಆರು ಬಾಣಗಳಿಂದಲೂ, ಧ್ವಜವನ್ನು ಮೂರು ಬಾಣಗಳಿಂದಲೂ, ಪುನಃ ಭೀಮಸೇನನನ್ನು ಏಳು ಬಾಣಗಳಿಂದಲೂ ಪೀಡಿಸಿದನು.
ಭೀಮಸೇನೋಽಪಿ ಸಂಕ್ರುದ್ಧಃ ಸಾಶ್ವಯಂತಾರಮಾಶುಗೈಃ |
ದುರ್ಜಯಂ ಭಿನ್ನಮರ್ಮಾಣಮನಯದ್ಯಮಸಾದನಮ್ ॥ 38 ॥
ಭೀಮಸೇನನೂ ಸಹ ಬಹಳ ಕೋಪಗೊಂಡು ಅಶ್ವ-ಸಾರಥಿಗಳಿಂದ ಸಹಿತನಾದ ದುರ್ಜಯನನ್ನು ಶೀಘ್ರಗಾಮಿಗಳಾದ ಬಾಣಗಳಿಂದ ಅವನ ಮರ್ಮಗಳನ್ನು ಭೇದಿಸಿ ಯಮಲೋಕಕ್ಕೆ ಕಳುಹಿಸಿದನು.
ಸ್ವಲಂಕೃತಂ ಕ್ಷಿತೌ ಕ್ಷುಣ್ಣಂ ಚೇಷ್ಟಮಾನಂ ಯಥೋರಗಮ್ |
ರುದನ್ನಾರ್ತಸ್ತವ ಸುತಂ ಕರ್ಣಶ್ಚಕ್ರೇ ಪ್ರದಕ್ಷಿಣಮ್ ॥ 39 ॥
ಚೆನ್ನಾಗಿ ಅಲಂಕೃತನಾಗಿ ಭೂಮಿಯಲ್ಲಿ ಬಿದ್ದು ಸರ್ಪದಂತೆ ಹೊರಳಾಡುತ್ತಿದ್ದ ನಿನ್ನ ಪುತ್ರನನ್ನು ಕರ್ಣನು ಅಳುತ್ತಾ ಆರ್ತನಾಗಿ ಪ್ರದಕ್ಷಿಣೆಯನ್ನು ಮಾಡಿದನು.
ಸ ತು ತಂ ವಿರಥಂ ಕೃತ್ವಾ ಸ್ಮಯನ್ನತ್ಯಂತವೈರಿಣಮ್ |
ಸಮಾಚಿನೋದ್ಬಾಣಗಣೈಃ ಶತಘ್ನೀಮಿವ ಶಂಕುಭಿಃ ॥ 40 ॥
ಭೀಮಸೇನನಾದರೋ ಅತ್ಯಂತ ವೈರಿಯಾದ ಕರ್ಣನನ್ನು ನಗುತ್ತಲೇ ರಥಹೀನನ್ನಾಗಿ ಮಾಡಿ ಶತಘ್ನಿ ಎಂಬ ಆಯುಧವನ್ನು ಮೊಳೆಗಳಿಂದ ಹೊಡೆದಂತೆ ಬಾಣಗಳ ಸಮೂಹದಿಂದ ಕರ್ಣನನ್ನು ತುಂಬಿದನು.
ತಥಾಪ್ಯತಿರಥಃ ಕರ್ಣೋ ಭಿದ್ಯಮಾನಃ ಸ್ಮ ಸಾಯಕೈಃ |
ನ ಜಹೌ ಸಮರೇ ಭೀಮಂ ಕ್ರುದ್ಧರೂಪಂ ಪರಂತಪಃ ॥ 41 ॥
ಭೀಮಸೇನನ ಬಾಣಗಳಿಂದ ಭೇದಿಸಲ್ಪಡುತ್ತಿದ್ದರೂ, ಅತಿರಥನೂ, ಪರಂತಪನೂ, ಕ್ರುದ್ಧರೂಪನೂ ಆದ ಕರ್ಣನು ರಣರಂಗದಲ್ಲಿ ಭೀಮನನ್ನು ತ್ಯಜಿಸಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಾದಶಾಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ದ್ವಿಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹದಿನೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹತ್ತೊಂಬತ್ತನೆಯ ಅಧ್ಯಾಯ
ಭೀಮನಿಂದ ಪರಾಜಿತನಾದ ಕರ್ಣನ ಪಲಾಯನ.
ಸಂಜಯಃ
ಸ ತಥಾ ವಿರಥಃ ಕರ್ಣಃ ಪುನರ್ಭೀಮೇನ ನಿರ್ಜಿತಃ |
ರಥಮನ್ಯಂ ಸಮಾಸ್ಥಾಯ ಸದ್ಯೋ ವಿವ್ಯಾಧ ಪಾಂಡವಮ್ ॥ 1 ॥
ಸಂಜಯ ಭೀಮಸೇನನಿಂದ ಪರಾಜಿತನಾಗಿ ರಥಹೀನನಾದ ಕರ್ಣನು ಇನ್ನೊಂದು ರಥವನ್ನು ಏರಿ ತಕ್ಷಣದಲ್ಲಿ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಮಹಾಗಜಾವಿವಾಸಾದ್ಯ ವಿಷಾಣಾಗ್ರೈಃ ಪರಸ್ಪರಮ್ |
ಶರೈಃ ಪೂರ್ಣಾಯತೋತ್ಸೃಷ್ಟೈರನ್ಯೋನ್ಯಮಭಿಜಘ್ನತುಃ ॥ 2 ॥
ಅವರು ಪರಸ್ಪರವಾಗಿ ಸಮೀಪಿಸಿ, ದಂತಗಳಿಂದ ಹೊಡೆದಾಡುವ ಮಹಾಗಜಗಳಂತೆ ಪೂರ್ಣವಾಗಿ ಎಳೆದು ವಿಸರ್ಜಿಸಿದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ಅಥ ಕರ್ಣಃ ಶರವ್ರಾತೈರ್ಭೀಮಂ ಬಲವದರ್ದಯತ್ |

ನನಾದ ಬಲವನ್ನಾದಂ ಪುನರ್ವಿವ್ಯಾಧ ಚೋರಸಿ ॥ 3 ॥
ಅನಂತರ ಕರ್ಣನು ಬಾಣಗಳ ಸಮೂಹದಿಂದ ಭೀಮನನ್ನು ಬಲವಾಗಿ ಹೊಡೆದು ಬಲವಾದ ನಾದವನ್ನು ಮಾಡಿ ಪುನಃ ಅವನ ಎದೆಯಲ್ಲಿ ಹೊಡೆದನು.
ತಂ ಭೀಮೋ ದಶಭಿರ್ಬಾಣೈಃ ಪ್ರತ್ಯವಿದ್ಧ್ಯದಜಿಹ್ಮಗೈಃ ।
ಪುನರ್ವಿವ್ಯಾಧ ವಿಂಶತ್ಯಾ ಶರಾಣಾಂ ನತಪರ್ವಣಾಮ್ ॥ 4 ॥
ಭೀಮಸೇನನು ನೇರವಾಗಿ ಸಾಗುವ ಹತ್ತು ಬಾಣಗಳಿಂದ ಅವನನ್ನು ಹೊಡೆದು ಬಾಗಿದ ತುದಿಯುಳ್ಳ ಇಪ್ಪತ್ತು ಬಾಣಗಳಿಂದ ಪುನಃ ಹೊಡೆದನು.
ಕರ್ಣಸ್ತು ನವಭಿರ್ಭೀಮಂ ವಿದ್ಧ್ವಾ ರಾಜನ್ ಸ್ತನಾಂತರೇ ।
ಧ್ವಜಮೇಕೇನ ವಿವ್ಯಾಧ ಸಾಯಕೇನ ಶಿತೇನ ಹ ॥ 5 ॥
ಕರ್ಣನಾದರೋ ಎಲ್ಲೈ ರಾಜನೇ, ಭೀಮನನ್ನು ಒಂಬತ್ತು ಬಾಣಗಳಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದು ಒಂದು ನಿಶಿತವಾದ ಬಾಣದಿಂದ ಅವನ ಧ್ವಜವನ್ನು ಹೊಡೆದನು.
ಸಾಯಕಾನಾಂ ತತಃ ಪಾರ್ಥಸ್ತ್ರಿಷಷ್ಟ್ಯಾ ಪ್ರತ್ಯವಿದ್ಧ್ಯತ ।
ತೋತ್ತ್ರೈರಿವ ಮಹಾನಾಗಂ ಕಶಾಭಿರಿವ ವಾಜಿನಮ್ ॥ 6 ॥
ಆಗ ಭೀಮಸೇನನು ಅಂಕುಶಗಳಿಂದ ಮಹಾಗಜವನ್ನು ಹೊಡೆದಂತೆ, ಚಾವಟಿಯಿಂದ ಅಶ್ವಗಳನ್ನು ಹೊಡೆದಂತೆ, ಅರವತ್ಮೂರು ಬಾಣಗಳಿಂದ ಕರ್ಣನನ್ನು ಹೊಡೆದನು.
ಸೋಽತಿವಿದ್ಧೋ ಮಹಾರಾಜ ಪಾಂಡವೇನ ಯಶಸ್ವಿನಾ ।
ಸೃಕ್ಕಿಣೀ ಲೇಲಿಹನ್ ವೀರಃ ಕ್ರೋಧಸಂರಕ್ತಲೋಚನಃ ॥ 7 ॥
ತತಃ ಶರಂ ಮಹಾರಾಜ ಸರ್ವಕಾಯಾವದಾರಣಮ್ ।
ಪ್ರಾಹಿಣೋದ್ ಭೀಮಸೇನಾಯ ಬಲಾಯೇಂದ್ರ ಇವಾಶನಿಮ್ ॥ 8 ॥
ಎಲ್ಲೈ ಮಹಾರಾಜನೇ, ಕೀರ್ತಿಶಾಲಿಯಾದ ಭೀಮಸೇನನಿಂದ ಗಾಢವಾಗಿ ಹೊಡೆಯಲ್ಪಟ್ಟ ವೀರನಾದ ಕರ್ಣನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ, ಕಟಬಾಯಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ, ಸರ್ವಶರೀರಭೇದಕವಾದ ಬಾಣವನ್ನು ತೆಗೆದುಕೊಂಡು ಇಂದ್ರನು ಬಲಾಸುರನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದಂತೆ ಅದನ್ನು ಭೀಮಸೇನನ ಮೇಲೆ ಪ್ರಯೋಗಿಸಿದನು.
ಸ ನಿರ್ಭಿದ್ಯ ರಣೇ ಪಾರ್ಥಂ ಸೂತಪುತ್ರಧನುಶ್ಚ್ಯುತಃ ।
ಅಗಚ್ಛದ್ ದಾರಯನ್ ಭೂಮಿಂ ಚಿತ್ರಪುಂಖಃ ಶಿಲೀಮುಖಃ ॥ 9 ॥
ವಿಚಿತ್ರವಾದ ಪುಂಖವನ್ನು ಹೊಂದಿದ್ದ ಕರ್ಣನಿಂದ ಪ್ರಯೋಗಿಸಲ್ಪಟ್ಟ ಆ ಬಾಣವು ರಣರಂಗದಲ್ಲಿ ಭೀಮನನ್ನು ಭೇದಿಸಿ ಭೂಮಿಯನ್ನು ಸೀಳುತ್ತಾ ಭೂಮಿಯೊಳಗೆ ಇಳಿಯಿತು.
ತತಃ ಶೈಕ್ಯಾಂ ಚತುಷ್ಕಿಷ್ಕುಂ ಗುರ್ವೀಂ ರುಗ್ಮಾಂಗದಾಂ ಗದಾಮ್ ।
ಪ್ರಾಹಿಣೋತ್ ಸೂತಪುತ್ರಾಯ ಷಡಸ್ರಾಮವಿಚಾರಯನ್ ॥ 10 ॥
ಆಗ ಭೀಮಸೇನನು ನೆಲುವಿನ ಮೇಲೆ ಇಟ್ಟಿರುತ್ತಿದ್ದ ಭಾರವಾದ ಸುವರ್ಣ ಪಟ್ಟಿಯಿಂದ ಕೂಡಿದ, ನಾಲ್ಕು ಕಿಷ್ಕುವಿನಷ್ಟು ದೀರ್ಘವಾದ ಆರು ಅಂಚುಗಳನ್ನು ಹೊಂದಿದ ಗದೆಯನ್ನು ತಿರುಗಿಸಿ ಕರ್ಣನ ಮೇಲೆ ಎಸೆದನು.
ತಯಾ ಜಘಾನಾಧಿರಥೇಃ ಸದಶ್ವಾನ್ ಸಾಧುವಾಹಿನಃ ।
ಗದಯಾ ಭಾರತಃ ಕ್ರುದ್ಧೋ ವಜ್ರೇಣೇಂದ್ರ ಇವಾಸುರಾನ್ ॥ 11 ॥
ಎಲ್ಲೈ ಭಾರತನೇ, ಪಾಂಡವನು ಕ್ರುದ್ಧನಾಗಿ ಆ ಗದೆಯಿಂದ ಇಂದ್ರನು ಅಸುರರನ್ನು ಕೊಂದಂತೆ ಕಣರ್ನ ಸಾಧುವಾಹಿಗಳಾದ ಒಳ್ಳೆಯ ಅಶ್ವಗಳನ್ನು ಕೊಂದನು.
ತತೋ ಭೀಮೋ ಮಹಾಬಾಹುಃ ಕ್ಷುರಾಭ್ಯಾಂ ಭರತರ್ಷಭ ।
ಧ್ವಜಮಾಧಿರಥೇಶ್ಛಿತ್ತ್ವಾ ಸೂತಮಭ್ಯಹನತ್ ತದಾ ॥ 12 ॥
ಎಲ್ಲೈ ಭರತಶ್ರೇಷ್ಠನೇ, ಅನಂತರ ಮಹಾಬಾಹುವಾದ ಭೀಮನು ಏಳು ಬಾಣಗಳಿಂದ ಕರ್ಣನ ಧ್ವಜವನ್ನು ಕತ್ತರಿಸಿ ಸೂತನನ್ನೂ ಕೊಂದನು.
ಹತಾಶ್ವಸೂತಮುತ್ಸೃಜ್ಯ ರಥಂ ಸ ಪತಿತಧ್ವಜಮ್ ।
ವಿಸ್ಫಾರಯನ್ ಧನುಃ ಕರ್ಣಸ್ತಸ್ಥೌ ಭಾರತ ದುರ್ಮನಾಃ ॥ 13 ॥
ಅಶ್ವ-ಸಾರಥಿಗಳನ್ನು ಕಳೆದುಕೊಂಡ, ಧ್ವಜವನ್ನು ಕತ್ತರಿಸಿದ ರಥವನ್ನು ಪರಿತ್ಯಜಿಸಿ, ಎಲ್ಲೈ ಭಾರತನೇ, ಕರ್ಣನು ಧನುಸ್ಸನ್ನು ಎಳೆಯುತ್ತಾ ವಿಷಾದದಿಂದ ನಿಂತನು.
ತತ್ರಾದ್ಭುತಮಪಶ್ಯಾಮ ರಾಧೇಯಸ್ಯ ಪರಾಕ್ರಮಮ್ ।
ವಿರಥೋ ರಥಿನಾಂ ಶ್ರೇಷ್ಠೋ ವಾರಯಾಮಾಸ ಯದ್ ರಿಪುಮ್ ॥
ರಥಿಶ್ರೇಷ್ಠನಾದ ಕರ್ಣನು ರಥಹೀನನಾದರೂ ಶತ್ರುವನ್ನು ನಿವಾರಿಸಿದ ಅವನ ಅದ್ಭುತವಾದ ಪರಾಕ್ರಮವನ್ನು ನಾವು ಅಲ್ಲಿ ನೋಡಿದೆವು.
ವಿರಥಂ ತಂ ರಥಶ್ರೇಷ್ಠಂ ದೃಷ್ಟ್ವಾಧಿರಥಿಮಾಹವೇ ।
ದುರ್ಯೋಧನಸ್ತತೋ ರಾಜನ್ನಭ್ಯಭಾಷತ ದುರ್ಮುಖಮ್ ॥ 15 ॥
ಏಷ ದುರ್ಮುಖ ರಾಧೇಯೋ ಭೀಮೇನ ವಿರಥೀಕೃತಃ ।

ತಂ ರಥೇನ ನರಶ್ರೇಷ್ಠಂ ಸಂಪಾದಯ ಮಹಾರಥಮ್ ॥ 16 ॥
ರಣರಂಗದಲ್ಲಿ ರಥಹೀನನಾಗಿ ನಿಂತಿದ್ದ ರಥಶ್ರೇಷ್ಠನಾದ ಕರ್ಣನನ್ನು ನೋಡಿ ಎಲೈ ರಾಜನೇ, ದುರ್ಯೋಧನನು ತನ್ನ ತಮ್ಮನಾದ ದುರ್ಮುಖನನ್ನು ಕುರಿತು- `ಎಲೈ ದುರ್ಮುಖನೇ, ಕರ್ಣನು ಭೀಮನಿಂದ ರಥಹೀನನಾಗಿ ಮಾಡಲ್ಪಟ್ಟಿದ್ದಾನೆ. ಮಹಾರಥನಾದ ಆ ರಥಶ್ರೇಷ್ಠನಿಗೆ ಒಂದು ರಥವನ್ನು ಒದಗಿಸು' ಎಂದು ಹೇಳಿದನು.
ದುರ್ಯೋಧನವಚಃ ಶ್ರುತ್ವಾ ತತೋ ಭಾರತ ದುರ್ಮುಖಃ |
ತ್ವರಮಾಣೋಽಭ್ಯಯಾತ್ ಕರ್ಣಂ ಭೀಮಂ ಚಾವಾರಯಚ್ಛರೈಃ॥17॥
ಎಲೈ ಭಾರತನೇ, ದುರ್ಯೋಧನನ ಮಾತುಗಳನ್ನು ಕೇಳಿದ ದುರ್ಮುಖನು ತ್ವರೆಮಾಡುತ್ತಾ ಕರ್ಣನ ಸಮೀಪಕ್ಕೆ ಹೋಗಿ ಭೀಮನನ್ನು ತನ್ನ ಬಾಣಗಳಿಂದ ತಡೆದನು.
ದುರ್ಮುಖಂ ಪ್ರೇಕ್ಷ್ಯ ಸಂಗ್ರಾಮೇ ಸೂತಪುತ್ರಪದಾನುಗಮ್ |
ವಾಯುಪುತ್ರಃ ಪ್ರಹೃಷ್ಟೋಽಭೂತ್ ಸೃಕ್ಕಿಣೀ ಪರಿಲೇಲಿಹನ್ ॥ 18 ॥
ಸೂತಪುತ್ರನಾದ ಕರ್ಣನ ರಕ್ಷಣೆಗೆ ಬಂದ ದುರ್ಮುಖನನ್ನು ರಣರಂಗದಲ್ಲಿ ನೋಡಿ ವಾಯುಪುತ್ರನಾದ ಭೀಮಸೇನನು ಕಟಬಾಯಿಯನ್ನು ಸವರಿಕೊಳ್ಳುತ್ತಾ ಸಂತುಷ್ಟನಾದನು.
ತತಃ ಕರ್ಣಂ ಮಹಾರಾಜ ವಾರಯಿತ್ವಾ ಶಿಲೀಮುಖೈಃ |
ದುರ್ಮುಖಾಯ ರಥಂ ಶೀಘ್ರಂ ಪ್ರೇಷಯಾಮಾಸ ಪಾಂಡವಃ ॥ 19 ॥
ತಸ್ಮಿನ್ ಕ್ಷಣೇ ಮಹಾರಾಜ ನವಭಿರ್ನತಪರ್ವಭಿಃ |
ಸುಪುಂಖೈರ್ದುರ್ಮುಖಂ ಭೀಮಃ ಶರೈರ್ನಿನ್ಯೇ ಯಮಕ್ಷಯಮ್ ॥20॥
ಎಲೈ ಮಹಾರಾಜನೇ, ಆಗ ಭೀಮಸೇನನು ಬಾಣಗಳಿಂದ ಕರ್ಣನನ್ನು ನಿವಾರಿಸಿ ತನ್ನ ರಥವನ್ನು ಶೀಘ್ರವಾಗಿ ದುರ್ಮುಖನ ಕಡೆಗೆ ಸಾಗಿಸಿ, ಬಾಗಿದ ತುದಿಯುಳ್ಳ, ಒಳ್ಳೆಯ ಪುಂಖಗಳನ್ನು ಹೊಂದಿದ ಒಂಬತ್ತು ಬಾಣಗಳಿಂದ ಆ ಕ್ಷಣದಲ್ಲಿ ದುರ್ಮುಖನನ್ನು ಯಮಲೋಕಕ್ಕೆ ಕಳುಹಿಸಿದನು.
ತತಸ್ತಮೇವಾಧಿರಥಿಃ ಸ್ಯಂದನಂ ದುರ್ಮುಖೇ ಹತೇ |
ಆಸ್ಥಿತಃ ಪ್ರಬಭೌ ರಾಜನ್ ದೀಪ್ಯಮಾನ ಇವಾಂಶುಮಾನ್ ॥ 21 ॥
ಎಲೈ ರಾಜನೇ, ದುರ್ಮುಖನು ಹತನಾಗುತ್ತಿರಲು ಕರ್ಣನು ಅದೇ ರಥವನ್ನು ಏರಿ ಸೂರ್ಯನಂತೆ ಬೆಳಗಿದನು.
ಶಯಾನಂ ಭಿನ್ನಮರ್ಮಾಣಂ ದುರ್ಮುಖಂ ಶೋಣಿತೋಕ್ಷಿತಮ್ |
ದೃಷ್ಟ್ವಾ ಕರ್ಣೋಽಶ್ರುಪೂರ್ಣಾಕ್ಷೋ ಮುಹೂರ್ತಂ ನಾಭ್ಯವರ್ತತ ॥
ಮರ್ಮಗಳು ಭಿನ್ನವಾಗಿ, ರಕ್ತದಿಂದ ತೊಯ್ದು, ಭೂಮಿಯ ಮೇಲೆ ಮಲಗಿದ ದುರ್ಮುಖನನ್ನು ನೋಡಿ ಕರ್ಣನು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಒಂದು ಮುಹೂರ್ತದವರೆಗೆ ಮುಂದೆ ಸಾಗಲಿಲ್ಲ.
ತಂ ಗತಾಸುಮತಿಕ್ರಮ್ಯ ಕೃತ್ವಾ ಕರ್ಣಃ ಪ್ರದಕ್ಷಿಣಮ್ |
ದೀರ್ಘಮುಷ್ಣಂ ಶ್ವಸನ್ ವೀರೋ ನ ಕಿಂಚಿತ್ ಪ್ರತ್ಯಪದ್ಯತ ॥ 23 ॥
ಅವನು ಮೃತನಾದ ಮೇಲೆ ವೀರನಾದ ಕರ್ಣನು ಅವನಿಗೆ ಪ್ರದಕ್ಷಿಣೆಯನ್ನು ಮಾಡಿ, ದೀರ್ಘವಾದ ನಿಟ್ಟುಸಿರನ್ನು ಬಿಡುತ್ತಾ ಏನು ಮಾಡಬೇಕೆಂದು ತಿಳಿಯದಾದನು.
ತಸ್ಮಿಂಸ್ತು ವಿವರೇ ರಾಜನ್ನಾರಾಚಾನ್ ಗಾರ್ಧ್ರವಾಸಸಃ |
ಪ್ರಾಹಿಣೋತ್ ಸೂತಪುತ್ರಾಯ ಭೀಮಸೇನಶ್ಚತುರ್ದಶ ॥ 24 ॥
ಆ ಅವಕಾಶವನ್ನು ಪಡೆದ ಭೀಮಸೇನನು ಎಲೈ ರಾಜನೇ, ಹದ್ದಿನ ಗರಿಗಳನ್ನು ಹೊಂದಿದ್ದ ಹದಿನಾಲ್ಕು ನಾರಾಚಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು.
ತೇ ತಸ್ಯ ಕವಚಂ ಭಿತ್ತ್ವಾ ಸ್ವರ್ಣಪುಂಖಾ ಮಹೌಜಸಃ |
ಹೇಮಚಿತ್ರಾ ಮಹಾರಾಜ ದ್ಯೋತಯಂತೋ ದಿಶೋ ದಶ ॥ 25 ॥
ಅಪಿಬನ್ ಸೂತಪುತ್ರಸ್ಯ ಶೋಣಿತಂ ರಕ್ತಭೋಜನಾಃ |
ಕ್ರುದ್ಧಾ ಇವ ಮನುಷ್ಯೇಂದ್ರ ಭುಜಗಾಃ ಕಾಲಚೋದಿತಾಃ ॥ 26 ॥
ಎಲೈ ಮಹಾರಾಜನೇ, ಸ್ವರ್ಣಪುಂಖಗಳನ್ನು ಹೊಂದಿದ, ಮಹಾಸಾಮರ್ಥ್ಯವುಳ್ಳ, ಸುವರ್ಣಾಲಂಕೃತವಾದ ಆ ನಾರಾಚಗಳು ಹತ್ತುದಿಕ್ಕುಗಳನ್ನು ಬೆಳಗುತ್ತಾ ಕರ್ಣನ ಕವಚಗಳನ್ನು ಭೇದಿಸಿ ರಕ್ತಭೋಜಿಗಳಾದ ಅವು ಕಾಲಚೋದಿತವಾದ ಕ್ರುದ್ಧವಾದ ಸರ್ಪಗಳಂತೆ ಕರ್ಣನ ರಕ್ತವನ್ನು ಪಾನ ಮಾಡಿದವು.
ಪ್ರಸರ್ಪಮಾಣಾ ಮೇದಿನ್ಯಾಂ ತೇ ವ್ಯರೋಚಂತ ಮಾರ್ಗಣಾಃ |
ಅರ್ಧಪ್ರವಿಷ್ಟಾಃ ಸಂರಬ್ಧಾ ಬಿಲಾನೀವ ಮಹೋರಗಾಃ ॥ 27 ॥
ರಣರಂಗದಲ್ಲಿ ಮುಂದೆ ಸಾಗಿದ ಆ ಬಾಣಗಳು ಅರ್ಧಭಾಗ ಕರ್ಣನ ಶರೀರದಲ್ಲಿ ನಾಟಿ, ಅರ್ಧಶರೀರದಿಂದ ಬಿಲವನ್ನು ಪ್ರವೇಶಮಾಡಿದ ಕೋಪಗೊಂಡ ಮಹಾಸರ್ಪಗಳಂತೆ ಶೊಭಿಸಿದವು.
ತಂ ಪ್ರತ್ಯವಿದ್ಧ್ಯದ್ ರಾಧೇಯೋ ಜಾಂಬೂನದವಿಭೂಷಿತೈಃ |
ಚತುರ್ದಶಭಿರತ್ಯುಗ್ರೈರ್ನಾರಾಚೈರವಿಚಾರಯನ್ ॥ 28 ॥
ಕರ್ಣನು ಸುವರ್ಣಭೂಷಿತವಾದ ಉಗ್ರವಾದ ಹದಿನಾಲ್ಕು ನಾರಾಚಗಳಿಂದ ಏನೂ ತಡಮಾಡದೆ ಭೀಮಸೇನನನ್ನು ಹೊಡೆದನು.
ತೇ ಭೀಮಸೇನಸ್ಯ ಭುಜಂ ಸವ್ಯಂ ನಿರ್ಭಿದ್ಯ ಪತ್ರಿಣಃ |
ಪ್ರಾವಿಶನ್ ಮೇದಿನೀಂ ಭೀಮಾಃ ಕ್ರೌಂಚಂ ಪತ್ರರಥಾ ಇವ ॥ 29 ॥

ಆ ಬಾಣಗಳು ಭೀಮಸೇನನ ಎಡಭುಜವನ್ನು ಭೇದಿಸಿ, ಪಕ್ಷಿಗಳು ಕ್ರೌಂಚ ಪರ್ವತವನ್ನು ಪ್ರವೇಶ ಮಾಡಿದಂತೆ ಭಯಂಕರವಾದ ಅವು ಭೂಮಿಯನ್ನು ಪ್ರವೇಶಿಸಿದವು.
ತೇ ವ್ಯರೋಚಂತ ನಾರಾಚಾಃ ಪ್ರವಿಶಂತೋ ವಸುಂಧರಾಮ್ |
ಗಚ್ಛತ್ಯಸ್ತಂ ದಿನಕರೇ ದೀಪ್ಯಮಾನಾ ಇವಾಂಶವಃ   ॥ 30 ॥
ಭೂಮಿಯನ್ನು ಪ್ರವೇಶಿಸುತ್ತಿದ್ದ ಆ ನಾರಾಚಗಳು ಸೂರ್ಯನು ಅಸ್ತಂಗತನಾಗುವಾಗ ಪ್ರಕಾಶಿಸುವ ಅವನ ಕಿರಣಗಳಂತೆ ಶೋಭಿಸಿದವು.
ಸ ನಿರ್ಭಿನ್ನೋ ರಣೇ ಭೀಮೋ ನಾರಾಚೈರ್ಮರ್ಮಭೇದಿಭಿಃ |
ಸುಸ್ರಾವ ರುಧಿರಂ ಭೂರಿ ಪರ್ವತಃ ಸಲಿಲಂ ಯಥಾ   ॥ 31 ॥
ಮರ್ಮಭೇದಿಗಳಾದ ನಾರಾಚಗಳಿಂದ ದೃಢವಾಗಿ ಹೊಡೆದು ಭೇದಿಸಲ್ಪಟ್ಟ ಭೀಮಸೇನನು ಪರ್ವತವು ಜಲವನ್ನು ಸುರಿಸಿದಂತೆ ಬಹಳ ರಕ್ತವನ್ನು ಸುರಿಸಿದನು.
ಸ ಭೀಮಸ್ತ್ರಿಭಿರಾಯಸ್ತಃ ಸೂತಪುತ್ರಂ ಪತತ್ರಿಭಿಃ |
ಸುಪರ್ಣವೇಗೈರ್ವಿವ್ಯಾಧ ಸಾರಥಿಂ ಚಾಸ್ಯ ಸಪ್ತಭಿಃ॥ 32 ॥
ಆಯಾಸಗೊಂಡ ಭೀಮಸೇನನು ಕರ್ಣನನ್ನು ಗರುಡನ ವೇಗವುಳ್ಳ ಮೂರು ಬಾಣಗಳಿಂದ  ಹೊಡೆದು ಅವನ ಸಾರಥಿಯನ್ನು ಏಳು ಬಾಣಗಳಿಂದ ಹೊಡೆದನು.
ಸ ವಿಹ್ವಲೋ ಮಹಾರಾಜ ಕರ್ಣೋ ಭೀಮಬಲಾರ್ದಿತಃ |
ಪ್ರಾದ್ರವಜ್ಜವನೈರಶ್ವೈ ರಣಂ ಹಿತ್ವಾ ಮಹಾಯಶಾಃ   ॥ 33 ॥
ಎಲೈ ಮಹಾರಾಜನೇ, ಮಹಾಕೀರ್ತಿವಂತನಾದ ಆ ಕರ್ಣನು ಭೀಮಸೇನನ ಬಲದಿಂದ ಪೀಡಿತನಾಗಿ ರಣರಂಗವನ್ನು ಬಿಟ್ಟು ಶೀಘ್ರಗಾಮಿಗಳಾದ ಅಶ್ವಗಳಿಂದ ಸಹಿತನಾಗಿ ಓಡಿಹೋದನು.
ಭೀಮಸೇನಸ್ತು ವಿಸ್ಫಾರ್ಯ ಚಾಪಂ ಹೇಮಪರಿಷ್ಕೃತಮ್ |
ಆಹವೇಽತಿರಥೋಽತಿಷ್ಠಜ್ಜ್ವಲನ್ನಿವ ಹುತಾಶನಃ   ॥ 34 ॥
ಅತಿರಥನಾದ ಭೀಮಸೇನನಾದರೋ ಸುವರ್ಣಭೂಷಿತವಾದ ತನ್ನ ಧನುಸ್ಸನ್ನು ಎಳೆದು ನಾದವನ್ನು ಮಾಡುತ್ತಾ, ಜ್ವಲಿಸುವ ಅಗ್ನಿಯಂತೆ ರಣರಂಗದಲ್ಲಿ ನಿಂತನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತನೆಯ ಅಧ್ಯಾಯ
ಭೀಮಸೇನನಿಂದ ದುರ್ಯೋಧನನ ತಮ್ಮಂದಿರಾದ
ದುರ್ಮರ್ಷಣಾದಿ ಐವರ ವಧೆ.
ಧೃತರಾಷ್ಟ್ರಃ
ದೈವಮೇವ ಪರಂ ಮನ್ಯೇ ಧಿಕ್ಪೌರುಷಮನರ್ಥಕಮ್ |
ಯತ್ರಾಧಿರಥಿರಾಯಸ್ತೋ ನಾತರತ್ ಪಾಂಡವಂ ರಣೇ   ॥ 1 ॥
ಧೃತರಾಷ್ಟ್ರ, ಅಧಿರಥಸುತನಾದ ಕರ್ಣನು ರಣರಂಗದಲ್ಲಿ ಭೀಮನನ್ನು ದಾಟಲು ಸಾಧ್ಯವಾಗದ ಮೇಲೆ ದೈವವೇ ಶ್ರೇಷ್ಠವೆಂದು ತಿಳಿಯುತ್ತೇನೆ. ವ್ಯರ್ಥವಾದ ಪೌರುಷಕ್ಕೆ ಧಿಕ್ಕಾರವಿರಲಿ.
ಕರ್ಣಃ ಪಾರ್ಥಾನ್ ಸಗೋವಿಂದಾನ್ ಜೇತುಮುತ್ಸಹತೇ ರಣೇ |
ನ ಚ ಕರ್ಣಸಮಂ ಯೋಧಂ ಲೋಕೇ ಪಶ್ಯಾಮಿ ಕಂಚನ |
ಇತಿ ದುರ್ಯೋಧನಸ್ಯಾಹಮಶ್ರೌಷಂ ಜಲ್ಪತೋ ಮುಹುಃ   ॥ 2 ॥
ಕರ್ಣನು ಕೃಷ್ಣ ಸಹಿತರಾದ ಪಾಂಡವರನ್ನು ಯುದ್ಧದಲ್ಲಿ ಗೆಲ್ಲುವನು. ಕರ್ಣನಿಗೆ ಸಮಾನನಾದ ಯೋಧನನ್ನು ನಾನು ಲೋಕದಲ್ಲಿ ಕಾಣುವುದಿಲ್ಲ ಎಂದು ದುರ್ಯೋಧನನು ಪುನಃ ಪುನಃ ಹೇಳುವುದನ್ನು ನಾನು ಕೇಳಿದ್ದೇನೆ.
ಕರ್ಣೋ ಹಿ ಬಲವಾನ್ ಶೂರೋ ದೃಢಧನ್ವಾ ಜಿತಕ್ಲಮಃ |
ಇತಿ ಮಾಮಬ್ರವೀತ್ ಸೂತ ಮಂದೋ ದುರ್ಯೋಧನಃ ಪುರಾ   ॥ 3 ॥
ವಸುಷೇಣಸಹಾಯಂ ಮಾಂ ನಾಲಂ ದೇವಾಪಿ ಸಂಯುಗೇ |
ಕಿಮು ಪಾಂಡುಸುತಾ ರಾಜನ್ ಗತಸತ್ತ್ವಾ ವಿಚೇತಸಃ   ॥ 4 ॥
ಎಲೈ ಸೂತನೇ, ಮಂದನಾದ ದುರ್ಯೋಧನನು ಹಿಂದೆ- ದೃಢವಾದ ಧನುಸ್ಸುಳ್ಳವನೂ, ಆಯಾಸವನ್ನು ಮೀರಿದವನೂ, ಶೂರನೂ ಆದ ಕರ್ಣನು ಬಲಿಷ್ಠನಾಗಿದ್ದಾನೆ. ಅವನ ಸಹಾಯವುಳ್ಳ ನನ್ನನ್ನು ದೇವತೆಗಳೂ ಯುದ್ಧದಲ್ಲಿ ಗೆಲ್ಲಲಾರರು. ರಾಜನೇ, ಬಲಹೀನರಾದ, ಪ್ರಜ್ಞಾಶೂನ್ಯರಾದ ಪಾಂಡವರು ಹೇಗೆ ಗೆದ್ದಾರು? - ಎಂದು ನನಗೆ ಹೇಳಿದನು.
ತತ್ರ ತಂ ನಿರ್ಜಿತಂ ದೃಷ್ಟ್ವಾ ಭುಜಂಗಮಿವ ನಿರ್ವಿಷಮ್ |
ಯುದ್ಧಾತ್ಕರ್ಣಮಪಕ್ರಾಂತಂ ಕಿಂ ಸ್ವಿದ್ ದುರ್ಯೋಧನೋಽಬ್ರವೀತ್   ॥
ರಣರಂಗದಲ್ಲಿ ಕರ್ಣನು ನಿರ್ಜಿತನಾಗಿ ವಿಷರಹಿತವಾದ ಸರ್ಪದಂತೆ ಯುದ್ಧದಿಂದ ಹೊರಗೆ ಹೋದುದನ್ನು ನೋಡಿ

ದುರ್ಯೋಧನನು ಏನು ಹೇಳಿದನು?
ಅಹೋ ದುರ್ಮುಖಮೇವೈಕಂ ಯುದ್ಧಾನಾಮವಿಶಾರದಮ್ |
ಪ್ರಾವೇಶಯದ್ಧುತವಹಂ ಪತಂಗಮಿವ ಮೋಹಿತಃ ॥ 6 ॥
ಯುದ್ಧದಲ್ಲಿ ವಿಶಾರದನಲ್ಲದ ಒಬ್ಬ ದುರ್ಮುಖನನ್ನು ಪತಂಗವನ್ನು ಅಗ್ನಿಮುಖದಲ್ಲಿ ಕಳುಹಿಸಿದಂತೆ ಮೋಹಗೊಂಡ ದುರ್ಯೋಧನನು ಕಳುಹಿಸಿದ್ದಾನೆ. ಇದು ಎಂತಹ ವಿಷಾದದ ವಿಷಯ!
ಅಶ್ವತ್ಥಾಮಾ ಮದ್ರರಾಜಃ ಕೃಪಃ ಕರ್ಣಶ್ಚ ಸಂಗತಾಃ |
ನ ಶಕ್ತಾಃ ಪ್ರಮುಖೇ ಸ್ಥಾತುಂ ನೂನಂ ಭೀಮಸ್ಯ ಸಂಜಯ ॥ 7 ॥
ಎಲೈ ಸಂಜಯನೇ, ಅಶ್ವತ್ಥಾಮರಾಗಲೀ, ಶಲ್ಯನಾಗಲೀ, ಕೃಪರಾಗಲೀ, ಕರ್ಣನಾಗಲೀ ಅಥವಾ ಎಲ್ಲರೂ ಸೇರಿ ಯುದ್ಧದಲ್ಲಿ ಭೀಮಸೇನನ ಎದುರಿಗೆ ನಿಲ್ಲಲು ಸಾಧ್ಯವಿಲ್ಲ.
ತೇಽಪಿ ಚಾಸ್ಯ ಮಹಾಘೋರಂ ಬಲಂ ನಾಗಾಯುತೋಪಮಮ್ |
ಜಾನಂತೋ ವ್ಯವಸಾಯಂ ಚ ಕ್ರೂರಂ ಮಾರುತತೇಜಸಃ ॥ 8 ॥
ಕಿಮರ್ಥಂ ಕ್ರೂರಕರ್ಮಾಣಂ ಯಮಕಾಲಾಂತಕೋಪಮಮ್ |
ಬಲಸಂರಂಭವೀರ್ಯಜ್ಞಾಃ ಕೋಪಯಿಷ್ಯಂತಿ ಸಂಯುಗೇ ॥ 9 ॥
ಅವನ ಹತ್ತು ಸಾವಿರ ಆನೆಗಳ ಬಲಕ್ಕೆ ಸಮವಾದ, ಮಹಾಘೋರವಾದ ಬಲವನ್ನೂ, ಕೋಪವನ್ನೂ, ಅವನ ಕ್ರೂರವಾದ ನಿರ್ಧಾರವನ್ನು ತಿಳಿದ ಅವರಾದರೂ ಸಹ ಕ್ರೂರ ಕರ್ಮವನ್ನು ಮಾಡುವವನೂ, ಯಮನಂತೆ ಮೃತ್ಯುವಂತೆ ಇರುವವನೂ, ವಾಯುವೇಗವನ್ನು ಹೊಂದಿದವನೂ ಆದ ಭೀಮನನ್ನು ಯುದ್ಧದಲ್ಲಿ ಏಕೆ ಕೋಪಗೊಳಿಸುವರು?
ಕರ್ಣಸ್ತ್ವೇಕೋ ಮಹಾಬಾಹುಃ ಸ್ವಬಾಹುಬಲಮಾಶ್ರಿತಃ |
ಭೀಮಸೇನಮನಾದೃತ್ಯ ರಣೇಽಯುದ್ಧ್ಯತ ಸೂತಜಃ ॥ 10 ॥
ಸೂತಪುತ್ರನಾದ ಮಹಾಬಾಹುವಾದ ಕರ್ಣನೊಬ್ಬನೇ ತನ್ನ ಬಾಹುಬಲವನ್ನು ಆಶ್ರಯಿಸಿ ಭೀಮಸೇನನನ್ನು ಅನಾದರಿಸಿ ಯುದ್ಧವನ್ನು ಮಾಡುತ್ತಾನೆ.
ಯೋಽಜಯತ್ ಸಮರೇ ಕರ್ಣಂ ಪುರಂದರ ಇವಾಸುರಮ್ |
ನ ಸ ಪಾಂಡುಸುತೋ ಜೇತುಂ ಶಕ್ಯಃ ಕೇನಚಿದಾಹವೇ ॥ 11 ॥
ಇಂದ್ರನು ಅಸುರರನ್ನು ಗೆದ್ದಂತೆ ಯಾವ ಪಾಂಡುಸುತನಾದ ಭೀಮನು ಯುದ್ಧದಲ್ಲಿ ಕರ್ಣನನ್ನು ಗೆದ್ದನೋ ಅವನನ್ನು ಯಾರೂ ಯುದ್ಧದಲ್ಲಿ ಜಯಿಸಲು ಸಾಧ್ಯವಿಲ್ಲ.
ದ್ರೋಣಂ ಯಃ ಸಂಪ್ರಮಥ್ಯೈಕಃ ಪ್ರವಿಷ್ಟೋ ಮಮ ವಾಹಿನೀಮ್ |
ಭೀಮೋ ಧನಂಜಯಾನ್ವೇಷೀ ಕಸ್ತಮರ್ಚ್ಛೇಜ್ಜಿಜೀವಿಷುಃ ॥ 12 ॥
ಅರ್ಜುನನನ್ನು ಹುಡುಕಲು ಹೊರಟ ಭೀಮಸೇನನು ಒಬ್ಬನೇ ದ್ರೋಣರನ್ನು ಮರ್ದಿಸಿ ನನ್ನ ಸೈನ್ಯವನ್ನು ಪ್ರವೇಶಿಸಿದ್ದಾನೆ. ಬದುಕುವ ಆಸೆಯುಳ್ಳ ಯಾವನು ಅವನ ಸಮೀಪಕ್ಕೆ ಹೋದಾನು?
ಕೋ ಹಿ ಸಂಜಯ ಭೀಮಸ್ಯ ಸ್ಥಾತುಮುತ್ಸಹತೇಽಗ್ರತಃ |
ಉದ್ಯತಾಶನಿವಜ್ರಸ್ಯ ಮಹೇಂದ್ರಸ್ಯೇವ ದಾನವಃ ॥ 13 ॥
ಎಲೈ ಸಂಜಯನೇ, ವಜ್ರಾಯುಧವನ್ನು ಎತ್ತಿಹಿಡಿದ ಮಹೇಂದ್ರನ ಎದುರಿಗೆ ದಾನವನು ಹೋದಂತೆ ಭೀಮನೆದುರಿಗೆ ಹೋಗಲು ಯಾವನು ಉತ್ಸಾಹಪಡುತ್ತಾನೆ?
ಪ್ರೇತರಾಜಪುರಂ ಪ್ರಾಪ್ಯ ನಿವರ್ತೇತಾಪಿ ಮಾನವಃ |
ನ ಭೀಮಸೇನಂ ಸಂಪ್ರಾಪ್ಯ ನಿವರ್ತೇತ ಕದಾಚನ ॥ 14 ॥
ಮನುಷ್ಯನು ಯಮಪಟ್ಟಣಕ್ಕೆ ಹೋಗಿ ಹಿಂದಿರುಗಬಹುದು. ಆದರೆ ಭೀಮಸೇನನನ್ನು ಸಮೀಪಿಸಿದವನು ಎಂದೂ ಹಿಂದಿರುಗಲಾರ.
ಪತಂಗಾ ಇವ ವಹ್ನಿಂ ತೇ ಪ್ರಾವಿಶನ್ನಲ್ಪಚೇತಸಃ |
ಯೇ ಭೀಮಸೇನಂ ಸಂಕ್ರುದ್ಧಮಭ್ಯಧಾವನ್ ವಿಮೋಹಿತಾಃ ॥ 15 ॥
ಯಾವ ಮೂಢರು ಕ್ರೋಧದಿಂದ ಭೀಮಸೇನನ ಮೇಲೆ ಎರಗಿದರೋ ಅಂತಹ ಅಲ್ಪಬುದ್ಧಿಯುಳ್ಳವರು ಪತಂಗಗಳು ಅಗ್ನಿಯನ್ನು ಪ್ರವೇಶಿಸುವಂತೆ ಪ್ರವೇಶಿಸುತ್ತಿದ್ದಾರೆ.
ಯತ್ತತ್ ಸಭಾಯಾಂ ಭೀಮೇನ ಮಮ ಪುತ್ರವಧಾಶ್ರಯಮ್ |
ಶಪ್ತಂ ಸಂರಂಭಿಣೋಗ್ರೇಣ ಕುರೂಣಾಂ ಶೃಣ್ವತಾಂ ತದಾ ॥ 16 ॥
ತನ್ನೂನಮಭಿಸಂಚಿಂತ್ಯ ದೃಷ್ಟ್ವಾ ಕರ್ಣಂ ಚ ನಿರ್ಜಿತಮ್ |
ದುಃಶಾಸನಃ ಸಹ ಭ್ರಾತ್ರಾ ಭಯಾದ್ ಭೀಮಾದುಪಾರಮತ್ ॥ 17 ॥
ಉಗ್ರನಾದ ಭೀಮಸೇನನು ಸಭೆಯಲ್ಲಿ ನನ್ನ ಪುತ್ರರ ವಧೆಯ ವಿಷಯದಲ್ಲಿ ಎಲ್ಲ ಕುರುಗಳು ಕೇಳುವಂತೆ ಕೋಪದಿಂದ ಏನು ಶಪಥವನ್ನು ಮಾಡಿದನೋ ಅದನ್ನು ಚಿಂತಿಸಿ, ಕರ್ಣನು ಪರಾಜಿತನಾದುದನ್ನು ನೋಡಿ ದುಶ್ಶಾಸನನು ತನ್ನ ಸಹೋದರರ ಜೊತೆಯಲ್ಲಿ ಭೀಮನಿಂದ ದೂರ ಹೋಗಿದ್ದಾನೆ.
ಯಶ್ಚ ಸಂಜಯ ದುರ್ಬುದ್ಧಿರಬ್ರವೀತ್ ಸಮಿತೌ ಮುಹುಃ |
ಕರ್ಣೋ ದುಃಶಾಸನೋಽಹಂ ಚ ಜೇಷ್ಯಾಮೋ ಯುಧಿ ಪಾಂಡವಾನ್ ॥
ಸ ನೂನಂ ವಿರಥಂ ದೃಷ್ಟ್ವಾ ಕರ್ಣಂ ಭೀಮೇನ ನಿರ್ಜಿತಮ್ |
ಪ್ರತ್ಯಾಖ್ಯಾನಾಚ್ಚ ಕೃಷ್ಣಸ್ಯ ಭೃಶಂ ತಪ್ಯತಿ ಸಂಜಯ ॥ 19 ॥

ಎಲೈ ಸಂಜಯನೇ, ದುರ್ಬುದ್ಧಿಯುಳ್ಳ ಯಾವ ದುಶ್ಶಾಸನನು ಸಭೆಯಲ್ಲಿ ಪುನಃ ಪುನಃ ನಾನು ಮತ್ತು ಕರ್ಣನು ಯುದ್ಧದಲ್ಲಿ ಪಾಂಡವರನ್ನು ಗೆಲ್ಲುವೆವು ಎಂದು ಹೇಳಿದನೋ ಅವನು ಈ ದಿನ ಕರ್ಣನು ಭೀಮನಿಂದ ಪರಾಜಿತನಾಗಿ ರಥಹೀನನಾಗಿರುವುದನ್ನು ನೋಡಿ ಸಂಧಿಗೆ ಬಂದ ಕೃಷ್ಣನನ್ನು ನಿರಾಕರಿಸಿರುವುದನ್ನು ಸ್ಮರಿಸಿ ಬಹಳ ತಾಪಗೊಳ್ಳುತ್ತಾನೆ.

ದೃಷ್ಟ್ವಾ ಭ್ರಾತೄನ್ ಹತಾನ್ ಯುದ್ಧೇ ಭೀಮಸೇನೇನ ದಂಸಿತಾನ್ |
ಆತ್ಮಾಪರಾಧಾತ್ ಸುಮಹನ್ನೂನಂ ತಪ್ಯತಿ ಪುತ್ರಕಃ ॥ 20 ॥

ಯುದ್ಧಸನ್ನದ್ಧರಾದ ತನ್ನ ಸಹೋದರರು ರಣರಂಗದಲ್ಲಿ ತನ್ನ ಅಪರಾಧದಿಂದ ಭೀಮಸೇನನಿಂದ ಹತರಾದುದನ್ನು ನೋಡಿ ನನ್ನ ಪುತ್ರನಾದ ದುರ್ಯೋಧನನು ಖಂಡಿತವಾಗಿ ಪಶ್ಚಾತ್ತಾಪವನ್ನು ಪಡುತ್ತಾನೆ.

ಕೋ ಹಿ ಜೀವಿತಮನ್ವಿಚ್ಛನ್ ಪ್ರತೀಪಂ ಪಾಂಡವಂ ವ್ರಜೇತ್ |
ಭೀಮಂ ಭೀಮಾಯುಧಂ ಕ್ರುದ್ಧಂ ಸಾಕ್ಷಾತ್ ಕಾಲಮಿವ ಸ್ಥಿತಮ್ ॥21॥

ಬದುಕಲು ಬಯಸುವ ಯಾವನು ತಾನೇ ಭಯಂಕರವಾದ ಆಯುಧವನ್ನು ಹಿಡಿದಿರುವ, ಕ್ರುದ್ಧನಾದ, ಸಾಕ್ಷಾತ್‌ಯಮನಂತಿರುವ ಪಾಂಡುಪುತ್ರನಾದ ಭೀಮನಿಗೆ ವಿರೋಧವನ್ನು ಮಾಡಿ ಮುಂದೆ ಹೋದಾನು?

ವಡವಾಮುಖಮಧ್ಯಸ್ಥೋ ಮುಚ್ಯೇತಾಪಿ ಹಿ ಮಾನವಃ |
ನ ಭೀಮಮುಖಸಂಪ್ರಾಪ್ತೋ ಮುಚ್ಯೇತೇತಿ ಮತಿರ್ಮಮ ॥ 22 ॥

ವಡವಾಗ್ನಿಯ ಬಾಯಿಯಲ್ಲಿ ಸಿಕ್ಕಿದ ಮನುಷ್ಯನು ಹೊರಗೆ ಬರಬಹುದು ಆದರೆ ಭೀಮನ ಮುಖವನ್ನು ಸಮೀಪಿಸಿದ ಮನುಷ್ಯನು ಹಿಂದೆ ಬರಲಾರ ಎಂದು ನನ್ನ ಅಭಿಪ್ರಾಯ.

ನ ಪಾಂಡವಾ ನ ಪಾಂಚಾಲಾ ನ ಚ ಕೇಶವಸಾತ್ಯಕೀ |
ಜಾನಂತಿ ಯುಧಿ ಸಂರಬ್ಧಾ ಜೀವಿತಂ ಪರಿರಕ್ಷಿತುಮ್ |
ಅಹೋ ಮಮ ಸುತಾನಾಂ ಹಿ ವಿಪನ್ನಂ ಸೂತ ಜೀವಿತಮ್ ॥ 23 ॥

ಯುದ್ಧದಲ್ಲಿ ಕೋಪಗೊಂಡ ಪಾಂಡವರಾಗಲೀ, ಪಾಂಚಾಲರಾಗಲೀ, ಕೃಷ್ಣ- ಸಾತ್ಯಕಿಯರಾಗಲೀ ಭೀಮನಿಂದ ಪೀಡಿತನಾದ ಯೋಧನ ಜೀವನನ್ನು ರಕ್ಷಿಸಲು ಸಮರ್ಥರಲ್ಲ. ಎಲೈ ಸೂತನೇ, ಅಯ್ಯೋ! ನನ್ನ ಮಕ್ಕಳ ಜೀವನವು ನಾಶವನ್ನು ಹೊಂದಿತು.

ಸಂಜಯಃ

ಯತ್ ಸಂಶೋಚಸಿ ಕೌರವ್ಯ ವರ್ತಮಾನೇ ಜನಕ್ಷಯೇ |
ತ್ವಮಸ್ಯ ಜಗತೋ ಮೂಲಂ ವಿನಾಶಸ್ಯ ನ ಸಂಶಯಃ ॥ 24 ॥

ಸಂಜಯ ಎಲೈ ಕೌರವ್ಯನೇ, ಇಂತಹ ಜನಕ್ಷಯ ಉಂಟಾಗಿರುವಾಗ ನೀನು ಶೋಕಪಡುತಿತರುವಿಯಷ್ಟೇ? ಈ ಜಗತ್ತಿನ ವಿನಾಶಕ್ಕೆ ನೀನೇ ಮೂಲಕಾರಣನಾದವನು. ಇದರಲ್ಲಿ ಸಂಶಯವಿಲ್ಲ.

ಸ್ವಯಂ ವೈರಂ ಮಹತ್ ಕೃತ್ವಾ ಪುತ್ರಾಣಾಂ ವಚನೇ ಸ್ಥಿತಃ |
ಉಚ್ಯಮಾನೋ ನ ಗೃಹ್ಣೀಷೇ ಮರ್ತ್ಯಃ ಪಥ್ಯಮಿವೌಷಧಮ್ ॥ 25 ॥

ಮಕ್ಕಳ ಮಾತಿನಂತೆ ನಡೆದುಕೊಂಡು ಸ್ವತಃ ದೊಡ್ಡ ವೈರವನ್ನು ಮಾಡಿ, ಎಷ್ಟು ಹೇಳಿದರೂ ಮನುಷ್ಯನು ಪಥ್ಯವಾದ ಔಷಧಿಯನ್ನು ನಿರಾಕರಿಸುವಂತೆ ನೀನು ಆ ಮಾತುಗಳನ್ನು ಸ್ವೀಕರಿಸುತ್ತಿಲ್ಲ.

ಸ್ವಯಂ ಪೀತ್ವಾ ಮಹಾರಾಜ ಕಾಳಕೂಟಂ ಸುದುರ್ಜರಮ್ |
ತಸ್ಯೇದಾನೀಂ ಫಲಂ ಕೃತ್ಸ್ನಮವಾಪ್ನುಹಿ ನರೋತ್ತಮ ॥ 26 ॥
ಯತ್ತು ಕುತ್ಸಯಸೇ ಯೋಧಾನ್ ಯುದ್ಧ್ಯಮಾನಾನ್ ಯಥಾಬಲಮ್ |
ಅತ್ರ ತೇ ವರ್ಣಯಿಷ್ಯಾಮಿ ಯಥಾ ಯುದ್ಧಮವರ್ತತ ॥ 27 ॥

ಎಲೈ ನರಶ್ರೇಷ್ಠನೇ, ಮಹಾರಾಜನೇ, ಕಾಳಕೂಟದಂತಹ, ಜೀರ್ಣಿಸಲು ಅಸಾಧ್ಯವಾದಂತಹ ವಿಷವನ್ನು ಪಾನಮಾಡಿ, ಅದರ ಪೂರ್ಣವಾದ ಫಲವನ್ನು ಈಗ ಹೊಂದುವವನಾಗು. ತಮ್ಮ ಶಕ್ತಿಗೆ ಅನುಗುಣವಾಗಿ ಯುದ್ಧ ಮಾಡುತ್ತಿರುವ ಯೋಧರನ್ನು ನೀನು ನಿಂದಿಸುತ್ತಿರುವಿಯಷ್ಟೇ? ಯುದ್ಧವು ಹೇಗೆ ನಡೆಯಿತೆಂದು ನಿನಗೆ ಹೇಳುವೆನು.

ದೃಷ್ಟ್ವಾ ಕರ್ಣಂ ತು ಪುತ್ರಾಸ್ತೇ ಭೀಮಸೇನಪರಾಜಿತಮ್ |
ನಾಮೃಷ್ಯಂತ ಮಹೇಷ್ವಾಸಾಃ ಸೋದರ್ಯಾಃ ಪಂಚ ಮಾರಿಷ ॥ 28 ॥
ದುರ್ಮರ್ಷಣೋ ದುಃಸಹಶ್ಚ ದುರ್ಮದೋ ದುರ್ಧರೋ ಜಯಃ |
ಪಾಂಡವಂ ಚಿತ್ರಸನ್ನಾಹಾಸ್ತಂ ಪ್ರತೀಪಮುಪಾದ್ರವನ್ ॥ 29 ॥

ಭೀಮಸೇನನಿಂದ ಪರಾಜಿತನಾದ ಕರ್ಣನನ್ನು ನೋಡಿ, ಎಲೈ ಪೂಜ್ಯನೇ, ನಿನ್ನ ಪುತ್ರರಾದ, ಮಹಾಧನುರ್ಧಾರಿಗಳಾದ ದುರ್ಮರ್ಷಣ, ದುಸ್ಸಹ, ದುರ್ಮದ, ದುರ್ಧರ, ಜಯ- ಈ ಐವರು ಸಹೋದರರು ಅದನ್ನು ಸಹಿಸಲಿಲ್ಲ. ವಿಚಿತ್ರವಾಗಿ ಸನ್ನದ್ಧರಾಗಿ ಅವರು ಭೀಮನಿಗೆ ವಿರೋಧ ಮಾಡುತ್ತಾ ಅವನ ಕಡೆಗೆ ಧಾವಿಸಿದರು.

ತೇ ಸಮಂತಾನ್ಮಹಾಬಾಹುಂ ಪರಿವಾರ್ಯ ವೃಕೋದರಮ್ |
ದಿಶಃ ಶರೈಃ ಸಮಾವೃಣ್ವನ್ ಶಲಭಾನಾಮಿವ ವ್ರಜೈಃ ॥ 30 ॥

ಅವರು ಮಹಾಬಾಹುವಾದ ವೃಕೋದರನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ಪತಂಗಗಳ ಸಮೂಹದಂತಹ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿದರು.

ಆಗಚ್ಛತಸ್ತಾನ್ ಸಹಸಾ ಕುಮಾರಾನ್ ದೇವರೂಪಿಣಃ |
ಪ್ರತಿಜಗ್ರಾಹ ಸಮರೇ ಭೀಮಸೇನೋ ಹಸನ್ನಿವ ॥ 31 ॥

ದೇವತೆಗಳಂತೆ ಸುಂದರರೂಪವನ್ನು ಹೊಂದಿ ಶೀಘ್ರವಾಗಿ ತನ್ನ ಕಡೆಗೆ ಬರುತ್ತಿದ್ದ ಆ ಕುಮಾರರನ್ನು ನೋಡಿ, ರಣರಂಗದಲ್ಲಿ

ಭೀಮಸೇನನು ನಗುತ್ತಾ ಅವರನ್ನು ಸ್ವೀಕರಿಸಿದನು.
ತವ ದೃಷ್ಟ್ವಾ ತು ತನಯಾನ್ ಭೀಮಸೇನಸಮೀಪಗಾನ್ |
ಅಭ್ಯವರ್ತತ ರಾಧೇಯೋ ಭೀಮಸೇನಂ ಮಹಾಬಲಮ್ ॥ 32 ॥
ನಿನ್ನ ಪುತ್ರರು ಭೀಮಸೇನನ ಸಮೀಪದಲ್ಲಿರುವುದನ್ನು ನೋಡಿ ಕರ್ಣನು ಮಹಾಬಲನಾದ ಭೀಮಸೇನನ ಬಳಿಗೆ ಬಂದನು.
ವಿಸೃಜನ್ ವಿಶಿಖಾನ್ ರಾಜನ್ ಸ್ವರ್ಣಪುಂಖಾನ್ ಶಿಲಾಶಿತಾನ್ |
ತಂ ತು ಭೀಮೋಽಭ್ಯಯಾತ್ ತೂರ್ಣಂ ವಾರ್ಯಮಾಣಃ ಸುತೈಸ್ತವ ॥
ಎಲೈ ರಾಜನೇ, ಸ್ವರ್ಣಪುಂಖವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳನ್ನು ಪ್ರಯೋಗಿಸುತ್ತಾ ನಿನ್ನ ಪುತ್ರರಿಂದ ನಿವಾರಿಸಲ್ಪಡುತ್ತಿದ್ದರೂ ಭೀಮಸೇನನು ಕರ್ಣನ ಕಡೆಗೆ ಶೀಘ್ರವಾಗಿ ಬಂದನು.
ಕುರವಸ್ತು ತತಃ ಕರ್ಣಂ ಪರಿವಾರ್ಯ ಸಮಂತತಃ |
ಅವಾಕಿರನ್ ಭೀಮಸೇನಂ ಶರೈಃ ಸನ್ನತಪರ್ವಭಿಃ ॥ 34 ॥
ಕುರುಗಳಾದರೋ ಕರ್ಣನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು, ಬಾಗಿದ ತುದಿಯುಳ್ಳ ಬಾಣಗಳನ್ನು ಭೀಮಸೇನನ ಮೇಲೆ ಸುರಿಸಿದರು.
ತಾನ್ ಬಾಣೈಃ ಪಂಚವಿಂಶತ್ಯಾ ಸಾಶ್ವಾನ್ ರಾಜನ್ನರರ್ಷಭಾನ್ |
ಸಸೂತಾನ್ ಭೀಮಧನುಷೋ ಭೀಮೋ ನಿನ್ಯೇ ಯಮಕ್ಷಯಮ್ ॥
ಎಲೈ ರಾಜನೇ, ಭೀಮನು ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿ, ಅಶ್ವ-ಸೂತ ಸಹಿತರಾದ, ಭಯಂಕರವಾದ ಧನುಸ್ಸುಳ್ಳ ಆ ನರಶ್ರೇಷ್ಠರನ್ನು ಯಮನ ಪಟ್ಟಣಕ್ಕೆ ಕಳುಹಿಸಿದನು.
ಪ್ರಾಪತನ್ ಸ್ಯಂದನೇಭ್ಯಸ್ತೇ ಸಾರ್ಧಂ ಸೂತೈರ್ಗತಾಸವಃ |
ಚಿತ್ರಪುಷ್ಪಧರಾ ಭಗ್ನಾ ವಾತೇನೇವ ಮಹಾದ್ರುಮಾಃ ॥ 36 ॥
ವಾಯುವಿನಿಂದ ಭಗ್ನವಾದ ವಿಚಿತ್ರಪುಷ್ಪವನ್ನು ಧರಿಸಿದ ಮಹಾವೃಕ್ಷಗಳಂತೆ ಅವರು ಮೃತರಾಗಿ ತಮ್ಮ ಸಾರಥಿಗಳ ಸಹಿತರಾಗಿ ರಥದಿಂದ ಬಿದ್ದರು.
ತತ್ರಾದ್ಭುತಮಪಶ್ಯಾಮ ಭೀಮಸೇನಸ್ಯ ವಿಕ್ರಮಮ್ |
ಸಂವಾರ್ಯಾಧಿರಥಿಂ ಬಾಣೈರ್ಯಜ್ಜಘಾನ ತವಾತ್ಮಜಾನ್ ॥ 37 ॥
ಅಲ್ಲಿ ಕರ್ಣನನ್ನು ಬಾಣಗಳಿಂದ ನಿವಾರಿಸಿ, ನಿನ್ನ ಪುತ್ರರನ್ನು ಸಂಹರಿಸಿದ ಭೀಮಸೇನನ ಅದ್ಭುತವಾದ ಪರಾಕ್ರಮವನ್ನು ನಾವು ನೋಡಿದೆವು.
ಸ ವಾರ್ಯಮಾಣೋ ಭೀಮೇನ ಶಿತೈರ್ಬಾಣೈಃ ಸಮಂತತಃ |
ಸೂತಪುತ್ರೋ ಮಹಾರಾಜ ಭೀಮಸೇನಮವೈಕ್ಷತ ॥ 38 ॥
ಎಲೈ ಮಹಾರಾಜನೇ, ಭೀಮಸೇನನಿಂದ ತೀಕ್ಷ್ಣವಾದ ಬಾಣಗಳಿಂದ ಎಲ್ಲ ಕಡೆಗಳಿಂದಲೂ ನಿವಾರಿಸಲ್ಪಡುತ್ತಿದ್ದ ಸೂತಪುತ್ರನಾದ ಕರ್ಣನು ಭೀಮಸೇನನನ್ನು ನೋಡಿದನು.
ತಂ ಭೀಮಸೇನಃ ಸಂರಂಭಾತ್ ಕ್ರೋಧಸಂರಕ್ತಲೋಚನಃ |
ವಿಸ್ಫಾರ್ಯ ಸುಮಹಚ್ಚಾಪಂ ಮುಹುಃ ಕರ್ಣಮವೈಕ್ಷತ ॥ 39 ॥
ಭೀಮಸೇನನೂ ಸಹ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ತನ್ನ ದೊಡ್ಡ ಧನುಸ್ಸನ್ನು ನೀವುತ್ತಾ ಪುನಃ ಕರ್ಣನನ್ನು ನೋಡಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ವಿಂಶತ್ಯಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತುಶ್ಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂದನೆಯ ಅಧ್ಯಾಯ
ಭೀಮಸೇನನಿಂದ ಚಿತ್ರೋಪಚಿತ್ರ ಮೊದಲಾದ ದುರ್ಯೋಧನನ
ಏಳು ಸಹೋದರರ ವಧೆ.
ಸಂಜಯಃ
ತವಾತ್ಮಜಾಂಸ್ತು ಪತಿತಾನ್ ದೃಷ್ಟ್ವಾ ಕರ್ಣಃ ಪ್ರತಾಪವಾನ್ |
ಕ್ರೋಧೇನ ಮಹತಾವಿಷ್ಟೋ ನಿರ್ವಿಣ್ಣೋಽಭೂತ್ ಸ ಜೀವಿತಾತ್ ॥1॥
ಸಂಜಯ ಪ್ರತಾಪಶಾಲಿಯಾದ ಕರ್ಣನು ಭೂಮಿಯಲ್ಲಿ ಬಿದ್ದ ನಿನ್ನ ಪುತ್ರರನ್ನು ನೋಡಿ ಬಹಳ ಕ್ರೋಧದಿಂದ ಕೂಡಿದವನಾಗಿ ತನ್ನ ಜೀವಿತದಲ್ಲಿ ವೈರಾಗ್ಯವನ್ನು ಹೊಂದಿದನು.
ಆಗಸ್ಕೃತಮಿವಾತ್ಮಾನಂ ಮೇನೇ ಚಾಧಿರಥಿಸ್ತದಾ |
ಭೀಮಸೇನಂ ತತಃ ಕ್ರುದ್ಧಃ ಸಮಾದ್ರವತ ಸಂಭ್ರಮಾತ್ ॥ 2 ॥
ಅಧಿರಥಪುತ್ರನಾದ ಅವನು ಆಗ ತನ್ನನ್ನೇ ಅಪರಾಧಿ ಎಂದು ತಿಳಿದು ಕೋಪವನ್ನು ಹೊಂದಿ ಭೀಮಸೇನನ ಮೇಲೆ ಶೀಘ್ರವಾಗಿ ಎರಗಿದನು.
ಸ ಭೀಮಂ ಪಂಚಭಿರ್ವಿದ್ಧ್ವಾ ರಾಧೇಯಃ ಪ್ರಹಸನ್ನಿವ |
ಪುನರ್ವಿವ್ಯಾಧ ಸಪ್ತತ್ಯಾ ಸ್ವರ್ಣಪುಂಖೈಃ ಶಿಲಾಶಿತೈಃ ॥ 3 ॥

ಕರ್ಣನು ನಗುವವನಂತೆ ಭೀಮಸೇನನನ್ನು ಐದು ಬಾಣಗಳಿಂದ ಹೊಡೆದು, ಪುನಃ ಸ್ವರ್ಣಪುಂಖವನ್ನು ಹೊಂದಿದ್ದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಎಪ್ಪತ್ತು ಬಾಣಗಳಿಂದ ಅವನನ್ನು ಹೊಡೆದನು.
ಅವಹಾಸಂ ತು ತಂ ಪಾರ್ಥೋ ನಾಮೃಷ್ಯತ ವೃಕೋದರಃ |
ತತೋ ವಿವ್ಯಾಧ ರಾಧೇಯಂ ಶತೇನ ನತಪರ್ವಣಾಮ್ ॥ 4 ॥
ಕರ್ಣನ ಆ ಅವಹಾಸವನ್ನು ಕುಂತೀಪುತ್ರನಾದ ವೃಕೋದರನು ಸಹಿಸಲಿಲ್ಲ. ಆಗ ಅವನು ಬಾಗಿದ ತುದಿಯುಳ್ಳ ನೂರು ಬಾಣಗಳಿಂದ ಕರ್ಣನನ್ನು ಹೊಡೆದನು.
ಪುನಶ್ಚ ವಿಶಿಖೈಸ್ತೀಕ್ಷ್ಣೈರ್ವಿದ್ಧ್ವಾ ಪಂಚಭಿರಾಶುಗೈಃ |
ಧನುಶ್ಚಿಚ್ಛೇದ ಭಲ್ಲೇನ ಸೂತಪುತ್ರಸ್ಯ ಮಾರಿಷ ॥ 5 ॥
ಎಲ್ಲೈ ಪೂಜ್ಯನೇ, ಪುನಃ ಶೀಘ್ರಗಾಮಿಗಳಾದ, ತೀಕ್ಷ್ಣವಾದ ಐದು ಬಾಣಗಳಿಂದ ಹೊಡೆದು ಭಲ್ಲದಿಂದ ಕರ್ಣನ ಧನುಸ್ಸನ್ನು ಕತ್ತರಿಸಿದನು.
ಅಥಾನ್ಯದ್ ಧನುರಾದಾಯ ಕರ್ಣೋ ಭಾರತ ದುರ್ಮನಾಃ |
ಇಷುಭಿಶ್ಛಾದಯಾಮಾಸ ಭೀಮಸೇನಂ ಸಮಂತತಃ ॥ 6 ॥
ಎಲ್ಲೈ ಭಾರತನೇ, ವಿಷಾದಗೊಂಡ ಕರ್ಣನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಬಾಣಗಳಿಂದ ಭೀಮಸೇನನನ್ನು ಎಲ್ಲ ಕಡೆಗಳಲ್ಲಿಯೂ ಆಚ್ಛಾದಿಸಿದನು.
ತಸ್ಯ ಭೀಮೋ ಹಯಾನ್ ಹತ್ವಾ ವಿನಿಹತ್ಯ ಚ ಸಾರಥಿಮ್ |
ಪ್ರಜಹಾಸ ಮಹಾಹಾಸಂ ಕೃತೇ ಪ್ರತಿಕೃತಂ ಪುನಃ ॥ 7 ॥
ಭೀಮನು ಅವನ ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಕೊಂದು, ಗಟ್ಟಿಯಾಗಿ ನಕ್ಕು ಅವನು ಮಾಡಿದುದಕ್ಕೆ ಪ್ರತಿಯಾಗಿ ಮಾಡಿದನು.
ಇಷುಭಿಃ ಕಾರ್ಮುಕಂ ಚಾಸ್ಯ ಚಕರ್ತ ಪುರುಷರ್ಷಭಃ |
ತತ್ಪಪಾತ ಮಹಾರಾಜ ಸ್ವರ್ಣಪೃಷ್ಠಂ ಮಹಾಸ್ವನಮ್ ॥ 8 ॥
ಎಲ್ಲೈ ಮಹಾರಾಜನೇ, ಪುರುಷರ್ಷಭನಾದ ಭೀಮಸೇನನು ಬಾಣಗಳಿಂದ ಕರ್ಣನ ಧನುಸ್ಸನ್ನು ಕತ್ತರಿಸಿದನು. ಸ್ವರ್ಣಪೃಷ್ಠವನ್ನು ಹೊಂದಿದ ಆ ಧನುಸ್ಸು ಮಹಾನಾದವನ್ನು ಮಾಡುತ್ತಾ ಭೂಮಿಯ ಮೇಲೆ ಬಿದ್ದಿತು.
ಅವಾರೋಹದ್ ರಥಾತ್ತಸ್ಮಾದಥ ಕರ್ಣೋ ಮಹಾರಥಃ |
ಗದಾಂ ಗೃಹೀತ್ವಾ ಸಮರೇ ಭೀಮಸೇನಾಯ ಚಾಕ್ಷಿಪತ್ ॥ 9 ॥
ಆಗ ಮಹಾರಥನಾದ ಕರ್ಣನು ಆ ರಥದಿಂದ ಇಳಿದು, ಗದೆಯನ್ನು ತೆಗೆದುಕೊಂಡು ರಣರಂಗದಲ್ಲಿ ಭೀಮಸೇನನ ಮೇಲೆ ಅದನ್ನು ಎಸೆದನು.
ತಾಮಾಪತಂತೀಂ ಸಹಸಾ ಗದಾಂ ದೃಷ್ಟ್ವಾ ವೃಕೋದರಃ |
ಶರೈರವಾರಯದ್ ರಾಜನ್ ಸರ್ವಸೈನ್ಯಸ್ಯ ಪಶ್ಯತಃ ॥ 10 ॥
ಎಲ್ಲೈ ರಾಜನೇ, ಶೀಘ್ರವಾಗಿ ತನ್ನ ಕಡೆಗೆ ಬರುತ್ತಿದ್ದ ಆ ಗದೆಯನ್ನು ನೋಡಿ ಭೀಮಸೇನನು ಎಲ್ಲ ಸೈನ್ಯಗಳೂ ನೋಡುತ್ತಿರುವಂತೆ ಬಾಣಗಳಿಂದ ಅವುಗಳನ್ನು ನಿವಾರಿಸಿದನು.
ತತೋ ಬಾಣಸಹಸ್ರಾಣಿ ಪ್ರೇಷಯಾಮಾಸ ಪಾಂಡವಃ |
ಸೂತಪುತ್ರವಧಾಕಾಂಕ್ಷೀ ತ್ವರಮಾಣಃ ಪರಾಕ್ರಮೀ ॥ 11 ॥
ಅನಂತರ ಪರಾಕ್ರಮಶಾಲಿಯಾದ ಪಾಂಡವನು ಸೂತಪುತ್ರನಾದ ಕರ್ಣನ ವಧೆಯನ್ನು ಬಯಸಿ ತ್ವರೆ ಮಾಡುತ್ತಾ ಒಂದು ಸಹಸ್ರ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ತಾನಿಷೂನಿಷುಭಿಃ ಕರ್ಣೋ ವಾರಯಿತ್ವಾ ಮಹಾಮೃಧೇ |
ಕವಚಂ ಭೀಮಸೇನಸ್ಯ ಪಾತಯಾಮಾಸ ಸಾಯಕೈಃ ॥ 12 ॥
ಆ ದೊಡ್ಡ ಯುದ್ಧದಲ್ಲಿ ಕರ್ಣನು ಆ ಬಾಣಗಳನ್ನು ತನ್ನ ಬಾಣಗಳಿಂದ ನಿವಾರಿಸಿ ಬಾಣಗಳನ್ನು ಪ್ರಯೋಗಿಸಿ ಭೀಮಸೇನನ ಕವಚವನ್ನು ಕೆಡವಿದನು.
ಅಥೈನಂ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮಾರ್ಪಯತ್ |
ಪಶ್ಯತಾಂ ಸರ್ವ ಭೂತಾನಾಂ ತದದ್ಭುತಮಿವಾಭವತ್ ॥ 13 ॥
ಅನಂತರ ಎಲ್ಲ ಭೂತಗಳೂ ನೋಡುತ್ತಿರುವಂತೆಯೇ ಇಪ್ಪತ್ತೈದು ಕ್ಷುದ್ರ ಬಾಣಗಳಿಂದ ಭೀಮಸೇನನನ್ನು ಹೊಡೆದನು, ಅದು ಅದ್ಭುತವಾಗಿದ್ದಿತು.
ತತೋ ಭೀಮೋ ಮಹಾರಾಜ ನವಭಿರ್ನತಪರ್ವಣಾಮ್ |
ರಣೇಽಪ್ರೇಷಯತ ಕ್ರುದ್ಧಃ ಸೂತಪುತ್ರಸ್ಯ ಮಾರಿಷ ॥ 14 ॥
ಎಲ್ಲೈ ಪೂಜ್ಯನೇ, ಮಹಾರಾಜನೇ, ಆಗ ಭೀಮಸೇನನು ರಣರಂಗದಲ್ಲಿ ಕ್ರುದ್ಧನಾಗಿ ಸೂತಪುತ್ರನ ಮೇಲೆ ಬಾಗಿದ ತುದಿಯುಳ್ಳ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು.
ತೇ ತಸ್ಯ ಕವಚಂ ಭಿತ್ತ್ವಾ ತಥಾ ಬಾಹುಂ ಚ ದಕ್ಷಿಣಮ್ |
ಅಭ್ಯಗುರ್ಧರಣೀಂ ತೀಕ್ಷ್ಣಾ ವಲ್ಮೀಕಮಿವ ಪನ್ನಗಾಃ ॥ 15 ॥
ಆ ತೀಕ್ಷ್ಣವಾದ ಬಾಣಗಳು ಕರ್ಣನ ಕವಚವನ್ನೂ, ದಕ್ಷಿಣಬಾಹುವನ್ನೂ ಭೇದಿಸಿ ಸರ್ಪವು ಹುತ್ತವನ್ನು ಪ್ರವೇಶಿಸುವಂತೆ ಭೂಮಿಯನ್ನು ಪ್ರವೇಶಿಸಿದವು.

ರಾಧೇಯಂ ತು ರಣೇ ದೃಷ್ಟ್ವಾ ಪದಾತಿನಮವಸ್ಥಿತಮ್ |
ಭೀಮಸೇನೇನ ಸಂರಬ್ಧಂ ರಾಜಾ ದುರ್ಯೋಧನೋಽಬ್ರವೀತ್ |
ತ್ವರಧ್ವಂ ಸರ್ವತೋ ಯತ್ತಾ ರಾಧೇಯಸ್ಯ ರಥಂ ಪ್ರತಿ ॥ 16 ॥
ಕರ್ಣನು ರಣರಂಗದಲ್ಲಿ ಪದಾತಿಯಾಗಿ ನಿಂತು, ಭೀಮಸೇನನ ಜೊತೆಯಲ್ಲಿ ಸೆಣೆಸುತ್ತಿರುವುದನ್ನು ನೋಡಿದ ರಾಜನಾದ ದುರ್ಯೋಧನನು, ಎಲ್ಲರೂ ತ್ವರೆ ಮಾಡಿ ಪ್ರಯತ್ನಪೂರ್ವಕವಾಗಿ ಕರ್ಣನ ಬಳಿಗೆ ಹೋಗಿ ಎಂದು ಹೇಳಿದನು.
ತತಸ್ತವ ಸುತಾ ರಾಜನ್ ಶ್ರುತ್ವಾ ಭ್ರಾತುರ್ವಚೋ ದ್ರುತಮ್ |
ಅಭ್ಯಯುಃ ಪಾಂಡವಂ ಯುದ್ಧೇ ವಿಸೃಜಂತಃ ಶಿತಾನ್ ಶರಾನ್ ॥ 17 |
ಚಿತ್ರೋಪಚಿತ್ರಶ್ಚಿತ್ರಾಕ್ಷಶ್ಚಾರುಚಿತ್ರಃ ಶರಾಸನಃ |
ಚಿತ್ರಾಯುಧಶ್ಚಿತ್ರವರ್ಮಾ ಸಮರೇ ಚಿತ್ರಯೋಧಿನಃ ॥ 18 ॥
ಎಲೈ ರಾಜನೇ, ಆಗ ನಿನ್ನ ಪುತ್ರರಾದ ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಶರಾಸನ, ಚಿತ್ರಾಯುಧ ಮತ್ತು ಚಿತ್ರವರ್ಮ- ಚಿತ್ರಯೋಧಿಗಳಾದ ಈ ಏಳು ಸಹೋದರರು ಅಣ್ಣನ ಮಾತನ್ನು ಕೇಳಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಶೀಘ್ರವಾಗಿ ಭೀಮನನ್ನು ಸಮೀಪಿಸಿದರು.
ಆಗಚ್ಛತಸ್ತಾನ್ ಸಹಸಾ ಭೀಮೋ ರಾಜನ್ ಮಹಾರಥಃ |
ಸಾಶ್ವಸೂತಧ್ವಜಾನ್ ಯತ್ತಾನ್ ಪಾತಯಾಮಾಸ ಸಂಯುಗೇ ॥
ತೇ ಹತಾ ನ್ಯಪತನ್ ಭೂಮೌ ವಾತನುನ್ನಾ ಇವ ದ್ರುಮಾಃ ॥ 19 ॥
ಎಲೈ ರಾಜನೇ, ಮಹಾರಥನಾದ ಭೀಮನು ಅವರು ಬರುತ್ತಿರುವಂತೆಯೇ ಶೀಘ್ರವಾಗಿ ಅಶ್ವ-ಸೂತ-ಧ್ವಜಗಳಿಂದ ಸಹಿತರಾದ, ಪ್ರಯತ್ನಶಾಲಿಗಳಾದ ಅವರನ್ನು ರಣರಂಗದಲ್ಲಿ ಕೆಡವಿದನು. ಅವರು ಗಾಳಿಯ ಹೊಡೆತಕ್ಕೆ ಸಿಕ್ಕಿಬಿದ್ದ ಮರಗಳಂತೆ ಹತರಾಗಿ ಭೂಮಿಯಲ್ಲಿ ಬಿದ್ದರು.
ದೃಷ್ಟ್ವಾ ವಿನಿಹತಾನ್ ಪುತ್ರಾಂಸ್ತವ ರಾಜನ್ ಮಹಾರಥಾನ್ |
ಅಶ್ರುಪೂರ್ಣಮುಖಃ ಕರ್ಣಃ ಕಶ್ಮಲಂ ಸಮಪದ್ಯತ ॥ 20 ॥
ಎಲೈ ರಾಜನೇ, ಮಹಾರಥರಾದ ನಿನ್ನ ಪುತ್ರರು ಹತರಾದುದನ್ನು ನೋಡಿ ಕಣ್ಣುಗಳಲ್ಲಿ ನೀರು ತುಂಬಿದ ಕರ್ಣನು ವಿಷಾದವನ್ನು ಹೊಂದಿದನು.
ರಥಮನ್ಯಂ ಸಮಾಸ್ಥಾಯ ವಿಧಿವತ್ಕಲ್ಪಿತಂ ಪುನಃ |
ಅಭ್ಯಯಾತ್ ಪಾಂಡವಂ ಯುದ್ಧೇ ತ್ವರಮಾಣಃ ಪರಾಕ್ರಮೀ ॥ 21 ॥
ಪರಾಕ್ರಮಶಾಲಿಯಾದ ಅವನು ವಿಧಿಪೂರ್ವಕವಾಗಿ ಸಜ್ಜುಗೊಳಿಸಿದ ಇನ್ನೊಂದು ರಥವನ್ನು ಏರಿ ತ್ವರೆ ಮಾಡುತ್ತಾ ಭೀಮನ ಮೇಲೆ ಎರಗಿದನು.
ತಾವನ್ಯೋನ್ಯಂ ಶರೈರ್ವಿದ್ಧ್ವಾ ಸ್ವರ್ಣಪುಂಖೈಃ ಶಿಲಾಶಿತೈಃ |
ವ್ಯಭ್ರಾಜೇತಾಂ ಮಹಾರಾಜ ಪುಷ್ಪಿತಾವಿವ ಕಿಂಶುಕೌ ॥ 22 ॥
ಎಲೈ ಮಹಾರಾಜನೇ, ಅವರಿಬ್ಬರೂ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಸ್ವರ್ಣ ಪುಂಖಗಳನ್ನು ಹೊಂದಿದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿ ಹೂವರಳಿದ ಕಿಂಶುಕ ವೃಕ್ಷಗಳಂತೆ ಶೋಭಿಸಿದರು.
ಷಟ್‌ತ್ರಿಂಶದ್ಭಿಸ್ತತೋ ಭಲ್ಲೈರ್ನಿಶಿತೈಸ್ತಿಗ್ಮತೇಜನೈಃ |
ವ್ಯಧಮತ್ ಕವಚಂ ಕ್ರುದ್ಧಃ ಸೂತಪುತ್ರಸ್ಯ ಪಾಂಡವಃ ॥ 23 ॥
ಪಾಂಡುಪುತ್ರನಾದ ಭೀಮಸೇನನು ಕೋಪಗೊಂಡು ತೀಕ್ಷ್ಣವಾದ ಮತ್ತು ಬಹಳ ಸಾಮರ್ಥ್ಯವನ್ನು ಹೊಂದಿದ ಮೂವತ್ತಾರು ಭಲ್ಲಗಳಿಂದ ಕರ್ಣನ ಕವಚವನ್ನು ಹಾರಿಸಿದನು.
ರಕ್ತಚಂದನದಿಗ್ಧಾಂಗೌ ಶರೈಃ ಕೃತಮಹಾವ್ರಣೌ |
ಶೋಣಿತಾಕ್ತೌ ವ್ಯರಾಜೇತಾಂ ಕಾಲಸೂರ್ಯಾವಿವೋದಿತೌ ॥ 24 ॥
ರಕ್ತಚಂದನದಿಂದ ಲೇಪಿತರಾಗಿ, ಬಾಣಗಳಿಂದ ಬಹಳವಾಗಿ ಗಾಯಗೊಂಡು ರಕ್ತದಿಂದ ತೊಯ್ದ ಶರೀರವುಳ್ಳ ಅವರಿಬ್ಬರೂ ಉದಯಿಸಿದ ಕಾಲಸೂರ್ಯನಂತೆ ಶೋಭಿಸಿದರು.
ತೌ ಶೋಣಿತೋಕ್ಷಿತೈರ್ಗಾತ್ರೈಃ ಶರೈಶ್ಛಿನ್ನತನುಚ್ಛದೌ |
ವಿವರ್ಮಾಣೌ ವ್ಯರಾಜೇತಾಂ ನಿರ್ಮುಕ್ತಾವಿವ ಪನ್ನಗೌ ॥ 25 ॥
ಬಾಣಗಳಿಂದ ಕವಚಗಳು ಕತ್ತರಿಸಲ್ಪಟ್ಟು, ರಕ್ತದಿಂದ ತೊಯ್ದ ಶರೀರವುಳ್ಳವರಾಗಿ, ಪೊರೆಯನ್ನು ಬಿಟ್ಟ ಸರ್ಪಗಳಂತೆ ಶೋಭಿಸಿದರು.
ವ್ಯಾಘ್ರಾವಿವ ನರವ್ಯಾಘ್ರೌ ದಂಷ್ಟ್ರಾಭಿರಿತರೇತರಮ್ |
ಶರದಂಷ್ಟ್ರೌ ವಿಧುನ್ವಾನೌ ತತಕ್ಷತುರರಿಂದಮೌ ॥ 26 ॥
ಅರಿಂದಮರಾದ ನರವ್ಯಾಘ್ರರಾದ ಶರದಂಷ್ಟ್ರಗಳುಳ್ಳ ಧನುಸ್ಸುಗಳನ್ನು ತೂಗಾಡಿಸುತ್ತಾ ಅವರಿಬ್ಬರೂ ವ್ಯಾಘ್ರಗಳಂತೆ ತಮ್ಮ ದಂಷ್ಟ್ರಗಳಿಂದ ಪರಸ್ಪರವಾಗಿ ಗಾಯಗೊಳಿಸಿದರು.
ವಾರಣಾವಿವ ಸಂಸಕ್ತೌ ರಂಗಮಧ್ಯೇ ವಿರೇಜತುಃ |
ತುದಂತೌ ವಿಶಿಖೈಸ್ತೀಕ್ಷ್ಣೈರ್ಮತ್ತವಾರಣವಿಕ್ರಮೌ ॥ 27 ॥
ಮದಗಜದ ಪರಾಕ್ರಮವುಳ್ಳ ಅವರಿಬ್ಬರೂ ರಂಗಮಧ್ಯದಲ್ಲಿ ಗಜಗಳಂತೆ ಸಂಸಕ್ತರಾಗಿ ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಪೀಡಿಸುತ್ತಾ ವಿರಾಜಿಸಿದರು.
ಪ್ರಚ್ಛಾದಯಂತೌ ಸಮರೇ ಶರಜಾಲೈಃ ಪರಸ್ಪರಮ್ |

ರಥಾಭ್ಯಾಂ ನಾದಯಂತೌ ಚ ದಿಶಃ ಸರ್ವಾ ವಿಚೇರತುಃ ॥ 28 ॥
ರಣರಂಗದಲ್ಲಿ ಬಾಣಗಳ ಸಮೂಹದಿಂದ ಪರಸ್ಪರವಾಗಿ ಆಚ್ಛಾದನೆಯನ್ನು ಮಾಡುತ್ತಾ, ರಥಗಳಿಂದ ಶಬ್ದವನ್ನು ಮಾಡುತ್ತಾ ಅವರಿಬ್ಬರೂ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಿದರು.
ತೌ ರಥಾಭ್ಯಾಂ ಮಹಾರಾಜ ಮಂಡಲಾವರ್ತನಾದಿಷು |
ವ್ಯರೋಚೇತಾಂ ಮಹಾತ್ಮಾನೌ ವೃತ್ರವಜ್ರಧರಾವಿವ ॥ 29 ॥
ಎಲೈ ಮಹಾರಾಜನೇ, ಮಹಾತ್ಮರಾದ ಅವರಿಬ್ಬರೂ ವೃತ್ರ ಮತ್ತು ವಜ್ರಧರನಾದ ಇಂದ್ರನಂತೆ ತಮ್ಮ ರಥಗಳಿಂದ ಮಂಡಲಾವರ್ತನಾದಿಗಳನ್ನು ಮಾಡುತ್ತಾ ಶೋಭಿಸಿದರು.
ಸಹಸ್ತಾಭರಣಾಭ್ಯಾಂ ತು ಭುಜಾಭ್ಯಾಂ ವಿಕ್ಷಿಪನ್ ಧನುಃ |
ವ್ಯರೋಚತ ರಣೇ ಭೀಮಃ ಸವಿದ್ಯುದಿವ ತೋಯದಃ ॥ 30 ॥
ಹಸ್ತಾಭರಣ ಸಹಿತವಾದ ಭುಜಗಳಿಂದ ಧನುಸ್ಸನ್ನು ಎಳೆಯುತ್ತಾ ಭೀಮಸೇನನು ರಣರಂಗದಲ್ಲಿ ವರುಣನಿಂದ ಕೂಡಿದ ಮೋಡದಂತೆ ಶೋಭಿಸಿದನು.
ಸ ಚಾಪಘೋಷಸ್ತನಿತಃ ಶರಧಾರಾಂಬುದೋ ಮಹಾನ್ |
ಭೀಮಮೇಘೋ ಮಹಾರಾಜ ಕರ್ಣಪರ್ವತಮಭ್ಯಯಾತ್ ॥ 31 ॥
ಎಲೈ ಮಹಾರಾಜನೇ, ಧನುರ್ಘೋಷವೆಂಬ ಗುಡುಗುಗಳನ್ನು ಹೊಂದಿದ, ಶರಧಾರೆಯೆಂಬ ಮಳೆಯನ್ನು ಸುರಿಸುವ ಭೀಮನೆಂಬ ದೊಡ್ಡ ಮೋಡವು ಕರ್ಣ ಪರ್ವತದ ಮೇಲೆ ಧಾವಿಸಿತು.
ತತಃ ಶರಸಹಸ್ರೇಣ ಧನುರ್ಮುಕ್ತೇನ ಭಾರತ |
ಪಾಂಡವೋ ವ್ಯಕಿರತ್ ಕರ್ಣಂ ಘನೋಽದ್ರಿಮಿವ ವೃಷ್ಟಿಭಿಃ ॥ 32 ॥
ಆಗ ಎಲೈ ಭಾರತನೇ, ಧನುಸ್ಸಿನಿಂದ ಹೊರಹೊಮ್ಮಿದ ಸಹಸ್ರ ಬಾಣಗಳಿಂದ ಮೋಡವು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಭೀಮನು ಕರ್ಣನ ಮೇಲೆ ಬಾಣದ ಮಳೆಯನ್ನು ಸುರಿಸಿದನು.
ತತ್ರಾವೈಕ್ಷಂತ ಪುತ್ರಾಸ್ತೇ ಭೀಮಸೇನಸ್ಯ ವಿಕ್ರಮಮ್ |
ಸುಪುಂಖೈಃ ಕಂಕವಾಸೋಭಿರ್ಯತ್ ಕರ್ಣಂ ಛಾದಯನ್ ಶರೈಃ ॥33॥
ಸ ನಂದಯನ್ ರಣೇ ಪಾರ್ಥಂ ಕೇಶವಂ ಚ ಯಶಸ್ವಿನಮ್ |
ಸಾತ್ಯಕಿಂ ಚಕ್ರರಕ್ಷೌ ಚ ಭೀಮಃ ಕರ್ಣಮಯೋಧಯತ್ ॥ 34 ॥
ಕಂಕಪತ್ರವನ್ನು ಹೊಂದಿದ ಒಳ್ಳೆಯ ಪುಂಖಗಳಿಂದ ಶೋಭಿತವಾದ ಬಾಣಗಳಿಂದ ಕರ್ಣನನ್ನು ಆಚ್ಛಾದಿಸುತ್ತಾ, ಯುದ್ಧದಲ್ಲಿ ಅರ್ಜುನನನ್ನೂ ಮತ್ತು ಕೀರ್ತಿವಂತನಾದ ಕೃಷ್ಣನನ್ನೂ, ಸಾತ್ಯಕಿಯನ್ನೂ, ಚಕ್ರರಕ್ಷಕರನ್ನೂ ಸಂತೋಷಪಡಿಸುತ್ತಾ ಭೀಮನು ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಭೀಮಸೇನನ ಆ ಮಹಾಪರಾಕ್ರಮವನ್ನು ನಿನ್ನ ಪುತ್ರರು ನೋಡಿದರು.
ವಿಕ್ರಮಂ ಭುಜಯೋರ್ವೀರ್ಯಂ ಧೈರ್ಯಂ ಚ ವಿದಿತಾತ್ಮನಃ |
ಪುತ್ರಾಸ್ತವ ಮಹಾರಾಜ ದದೃಶುಃ ಪಾಂಡವಸ್ಯ ಹ ॥ 35 ॥
ಎಲೈ ಮಹಾರಾಜನೇ, ಪ್ರಖ್ಯಾತನಾದ ಭೀಮನ ಪರಾಕ್ರಮವನ್ನೂ, ಭುಜವೀರ್ಯವನ್ನೂ ಮತ್ತು ಧೈರ್ಯವನ್ನೂ ನಿನ್ನ ಪುತ್ರರು ನೋಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಏಕವಿಂಶತ್ಯಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೆರಡನೆಯ ಅಧ್ಯಾಯ
ಭೀಮಸೇನನಿಂದ ವಿಕರ್ಣಾದಿ ಸಪ್ತ ದುರ್ಯೋಧನನ ಸಹೋದರರ ವಧೆ.
ಸಂಜಯಃ
ಭೀಮಸೇನಸ್ಯ ರಾಧೇಯಃ ಶ್ರುತ್ವಾ ಜ್ಯಾತಳನಿಸ್ವನಮ್ |
ನಾಮೃಷ್ಯತ ಯಥಾ ಮತ್ತೋ ಗಜಃ ಪ್ರತಿಗಜಸ್ವನಮ್ ॥ 1 ॥
ಸಂಜಯ ಭೀಮಸೇನನ ಹೆದೆಯ ಘೋಷವನ್ನು ಕೇಳಿದ ಕರ್ಣನು ಗಜವು ಪ್ರತಿಗಜದ ಗರ್ಜನೆಯನ್ನು ಸಹಿಸದಂತೆ ಅದನ್ನು ಸಹಿಸಲಿಲ್ಲ.
ಅಪಕ್ರಮ್ಯ ಸ ಭೀಮಸ್ಯ ಮುಹೂರ್ತಂ ಶರಗೋಚರಾತ್ |
ತವ ಚಾಧಿರಥಿರ್ದೃಷ್ಟ್ವಾ ಸ್ಯಂದನೇಭ್ಯಶ್ಚ್ಯುತಾನ್ ಸುತಾನ್ ॥ 2 ॥
ಭೀಮಸೇನೇನ ನಿಹತಾನ್ ವಿಮನಾ ದುಃಖಿತೋಽಭವತ್ |
ನಿಃಶ್ವಸನ್ ದೀರ್ಘಮುಷ್ಣಂ ಚ ಪುನಃ ಪಾಂಡವಮಭ್ಯಯಾತ್ ॥ 3 ॥
ಕರ್ಣನು ಒಂದು ಮುಹೂರ್ತದ ಕಾಲ ಭೀಮಸೇನನ ಬಾಣಗಳ ವ್ಯಾಪ್ತಿಯಿಂದ ಹೊರಗೆ ಬಂದು ಭೀಮಸೇನನಿಂದ ಹತರಾಗಿ ತಮ್ಮ ರಥಗಳಿಂದ ಕೆಳಗೆ ಉರುಳಿದ ನಿನ್ನ ಪುತ್ರರನ್ನು ನೋಡಿ ಬೇಸರಗೊಂಡು ದುಃಖಿತನಾಗಿ ದೀರ್ಘವಾದ ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ ಪುನಃ ಭೀಮಸೇನನ ಮೇಲೆ ಯುದ್ಧಕ್ಕೆ ನಿಂತನು.
ಸ ತಾಮ್ರನಯನಃ ಕ್ರೋಧಾಚ್ಛ್ವಸನ್ನಿವ ಮಹೋರಗಃ |

ಬಭೌ ಕರ್ಣಃ ಶರಾನಸ್ಯನ್ ರಶ್ಮೀನಿವ ದಿವಾಕರಃ ॥ 4 ॥
ಕರ್ಣನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಮಹಾಸರ್ಪದಂತೆ ಉಸಿರಾಡುತ್ತಾ ಸೂರ್ಯನು ಕಿರಣಗಳನ್ನು ಚೆಲ್ಲುವಂತೆ ಬಾಣಗಳನ್ನು ಪ್ರಯೋಗಿಸುತ್ತಾ ಶೋಭಿಸಿದನು.
ರಶ್ಮಿಜಾಲೈರಿವಾರ್ಕಸ್ಯ ವಿತತೈರ್ಭರತರ್ಷಭ |
ಕರ್ಣಚಾಪಚ್ಯುತೈರ್ಬಾಣೈಃ ಪ್ರಾಚ್ಛಾದ್ಯತ ವೃಕೋದರಃ ॥ 5 ॥
ಎಲೈ ಭರತಶ್ರೇಷ್ಠನೇ, ಸೂರ್ಯನ ವಿಸ್ತೃತವಾದ ಕಿರಣಗಳ ಸಮೂಹದಿಂದಲೋ ಎಂಬಂತೆ ಕರ್ಣನು ತನ್ನ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳಿಂದ ಭೀಮಸೇನನನ್ನು ಆಚ್ಛಾದಿಸಿದನು.
ಕರ್ಣಚಾಪಚ್ಯುತಾಶ್ಚಿತ್ರಾಃ ಶರಾ ಬರ್ಹಿಣವಾಸಸಃ |
ವಿವಿಶುಃ ಸರ್ವತಃ ಪಾರ್ಥಂ ವಾಸಾಯೇವಾಂಡಜಾ ದ್ರುಮಮ್ ॥ 6 ॥
ಕರ್ಣನ ಬಿಲ್ಲಿನಿಂದ ಹೊರಹೊಮ್ಮಿದ ಪಕ್ಷಿಗಳ ಗರಿಗಳನ್ನು ಹೊಂದಿದ ವಿಚಿತ್ರವಾದ ಬಾಣಗಳು ಪಕ್ಷ್ಷಿಗಳು ತಮ್ಮ ವಾಸವೃಕ್ಷವನ್ನು ಸೇರುವಂತೆ ಎಲ್ಲ ಕಡೆಗಳಿಂದಲೂ ಭೀಮಸೇನನ ದೇಹದಲ್ಲಿ ನಾಟಿದವು.
ಕರ್ಣಚಾಪಚ್ಯುತಾ ಬಾಣಾಃ ಸಂಪತಂತಸ್ತತಸ್ತತಃ |
ರುಗ್ಮಪುಂಖಾ ವ್ಯರಾಜಂತ ಹಂಸಾಃ ಶ್ರೇಣೀಕೃತಾ ಇವ ॥ 7 ॥
ಕರ್ಣನ ಧನುಸ್ಸಿನಿಂದ ಹೊರಟು ಎಲ್ಲ ದಿಕ್ಕುಗಳಲ್ಲಿಯೂ ಹೋಗುತ್ತಿದ್ದ ಸುವರ್ಣ ಪುಂಖವುಳ್ಳ ಬಾಣಗಳು ಹಂಸಗಳ ಕುಂಕ್ತಿಯಂತೆ ಶೋಭಿಸಿದವು.
ಚಾಪಧ್ವಜೋಪಸ್ಕರೇಭ್ಯಶ್ಛತ್ರಾದೀಷಾಮುಖಾದ್ಯುಗಾತ್ |
ಪ್ರಭವಂತೋ ವ್ಯದೃಶ್ಯಂತ ರಾಜನ್ನಾಧಿರಥೇಃ ಶರಾಃ ॥ 8 ॥
ಕರ್ಣನು ಪ್ರಯೋಗಿಸಿದ ಬಾಣಗಳು ಅವನ ಧನುಸ್ಸಿನಿಂದಲೂ, ಧ್ವಜದಿಂದಲೂ, ರಥದ ಉಪಕರಣಗಳಿಂದಲೂ, ಛತ್ರದಿಂದಲೂ, ಮೂಕಿಯಿಂದಲೂ,ನೊಗದಿಂದಲೂ ಬರುವಂತೆ ತೋರುತ್ತಿದ್ದವು.
ಖಂ ಪೂರಯನ್ ಮಹಾವೇಗಾನ್ ಖಗಮಾನ್ ಖಗವಾಸಸಃ |
ಸುವರ್ಣವಿಕೃತಾಂಶ್ಚಿತ್ರಾನ್ ಮುಮೋಚಾಧಿರಥಿಃ ಶರಾನ್ ॥ 9 ॥
ಕರ್ಣನು ಸುವರ್ಣಾಲಂಕೃತವಾದ ಮಹಾವೇಗವುಳ್ಳ, ಪಕ್ಷಿಗಳ ಗರಿಯನ್ನು ಹೊಂದಿದ್ದ, ಆಕಾಶದಲ್ಲಿ ಸಂಚರಿಸುವ ಬಾಣಗಳಿಂದ ಆಕಾಶವನ್ನು ತುಂಬುತ್ತಾ ಬಾಣಗಳನ್ನು ಪ್ರಯೋಗಿಸಿದನು.
ತಮಂತಕಮಿವಾಯಸ್ತಮಾಪತಂತಂ ವೃಕೋದರಃ |
ತ್ಯಕ್ತ್ವಾ ಪ್ರಾಣಾನಭಿಕ್ರುದ್ಧ್ಯ ವಿವ್ಯಾಧ ನವಭಿಃ ಶರೈಃ ॥ 10 ॥
ಯಮನಂತೆ ಕೋಪಗೊಂಡು ದಣಿದು ತನ್ನ ಮೇಲೆ ಬರುತ್ತಿದ್ದ ಅವನ ಮೇಲೆ ವೃಕೋದರನು ಪ್ರಾಣಗಳ ಹಂಗನ್ನು ತೊರೆದು ಕೋಪಗೊಂಡು ಒಂಬತ್ತು ಬಾಣಗಳನ್ನು ಪ್ರಯೋಗಿಸಿ ಹೊಡೆದನು.
ತಸ್ಯ ವೇಗಮಸಂಸಹ್ಯಂ ದೃಷ್ಟ್ವಾ ಕರ್ಣಸ್ಯ ಪಾಂಡವಃ |
ಮಹತಶ್ಚ ಶರೌಘಾಂಸ್ತಾನ್ ನೈವಾವ್ಯಥತ ವೀರ್ಯವಾನ್ ॥ 11 ॥
ವೃಕೋದರನು ಕರ್ಣನ ಸಹಿಸಲು ಅಸಾಧ್ಯವಾದ ವೇಗವನ್ನೂ ಮತ್ತು ಬಾಣಗಳ ದೊಡ್ಡ ಸಮೂಹವನ್ನೂ ನೋಡಿದರೂ ಪರಾಕ್ರಮಶಾಲಿಯಾದ ಅವನು ವ್ಯಥೆಪಡಲಿಲ್ಲ.
ತತೋ ವಿಧಮ್ಯಾಧಿರಥೇಃ ಶರಜಾಲಾನಿ ಪಾಂಡವಃ |
ವಿವ್ಯಾಧ ಕರ್ಣಂ ವಿಂಶತ್ಯಾ ಪುನರನ್ಯೈಃ ಶಿತೈಃ ಶರೈಃ ॥ 12 ॥
ಆಗ ಭೀಮಸೇನನು ಕರ್ಣನ ಬಾಣಸಮೂಹಗಳನ್ನು ಹಾರಿಸಿ ಕರ್ಣನ ಮೇಲೆ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿ ಪುನಃ ನಿಶಿತವಾದ ಬೇರೆ ಬಾಣಗಳಿಂದ ಅವನನ್ನು ಹೊಡೆದನು.
ಯಥೈವ ಹಿ ಶರೈಃ ಪಾರ್ಥಃ ಸೂತಪುತ್ರೇಣ ಚ್ಛಾದಿತಃ |
ತಥೈವ ಕರ್ಣಂ ಸಮರೇ ಛಾದಯಾಮಾಸ ಪಾಂಡವಃ ॥ 13 ॥
ಕರ್ಣನು ಭೀಮಸೇನನನ್ನು ಬಾಣಗಳಿಂದ ಆಚ್ಛಾದಿಸಿದಂತೆಯೇ ಭೀಮನೂ ಸಹ ಕರ್ಣನನ್ನು ಬಾಣಗಳಿಂದ ಆಚ್ಛಾದಿಸಿದನು.
ದೃಷ್ಟ್ವಾ ತು ಭೀಮಸೇನಸ್ಯ ವಿಕ್ರಮಂ ಯುಧಿ ಭಾರತ |
ಅಭ್ಯನಂದಂಸ್ತ್ವದೀಯಾಶ್ಚ ಸಂಪ್ರಹೃಷ್ಟಾಶ್ಚ ಚಾರಣಾಃ ॥ 14 ॥
ಎಲೈ ಭಾರತನೇ, ಯುದ್ಧದಲ್ಲಿ ಭೀಮಸೇನನ ಪರಾಕ್ರಮವನ್ನು ನೋಡಿ ಪಾಂಡವರ ಯೋಧರು ಮತ್ತು ಚಾರಣರು ಸಂತೋಷಗೊಂಡರು.
ಭೂರಿಶ್ರವಾಃ ಕೃಪೋ ದ್ರೌಣಿರ್ಮದ್ರರಾಜೋ ಜಯದ್ರಥಃ |
ಉತ್ತಮೌಜಾ ಯುಧಾಮನ್ಯುಃ ಸಾತ್ಯಕಿಃ ಕೇಶವಾರ್ಜುನೌ ॥ 15 ॥
ಕುರುಪಾಂಡವಾನಾಂ ಪ್ರವರಾ ದಶ ರಾಜನ್ ಮಹಾರಥಾಃ |
ಸಾಧು ಸಾಧ್ವಿತಿ ವೇಗೇನ ಸಿಂಹನಾದಮಥಾನದನ್ ॥ 16 ॥
ಭೂರಿಶ್ರವ, ಕೃಪರು, ಅಶ್ವತ್ಥಾಮರು, ಮದ್ರರಾಜನಾದ ಶಲ್ಯ, ಜಯದ್ರಥ, ಉತ್ತಮೌಜ, ಯುಧಾಮನ್ಯು, ಸಾತ್ಯಕಿ, ಕೃಷ್ಣಾರ್ಜುನರು, ಎಲೈ ರಾಜನೇ, ಕುರು-ಪಾಂಡವ ಸೇನೆಗಳ ಶ್ರೇಷ್ಠರಾದ ಈ ಹತ್ತು ಮಹಾರಥರು ಸಾಧು-ಸಾಧು ಎಂದು ಹೇಳುತ್ತಾ ಸಿಂಹನಾದವನ್ನು ಮಾಡಿದರು.
ತಸ್ಮಿಂಸ್ತು ತುಮುಲೇ ಶಬ್ದೇ ಪ್ರವೃತ್ತೇ ಲೋಮಹರ್ಷಣೇ |

ಅಭ್ಯಭಾಷತ ಪುತ್ರಾಂಸ್ತೇ ರಾಜನ್ ದುರ್ಯೋಧನಸ್ತ್ವರನ್ ॥ 17 ॥
ರಾಜ್ಞಶ್ಚ ರಾಜಪುತ್ರಾಂಶ್ಚ ಸೋದರ್ಯಾಂಶ್ಚ ವಿಶೇಷತಃ |
ಕರ್ಣಂ ಗಚ್ಛತ ಭದ್ರಂ ವಃ ಪರೀಪ್ಸಂತೋ ವೃಕೋದರಾತ್ ॥ 18 ॥
ಪುರಾ ನಿಘ್ನಂತಿ ರಾಧೇಯಂ ಭೀಮಚಾಪಚ್ಯುತಾಃ ಶರಾಃ |
ತೇ ಯತಧ್ವಂ ಮಹೇಷ್ವಾಸಾಃ ಸೂತಪುತ್ರಸ್ಯ ರಕ್ಷಣೇ ॥ 19 ॥
ರೋಮಾಂಚಕಾರಿಯಾದ ಅಂತಹ ತೀವ್ರವಾದ ಶಬ್ದವುಂಟಾಗುತ್ತಿರಲು ದುರ್ಯೋಧನನು ನಿನ್ನ ಪುತ್ರರನ್ನೂ, ರಾಜರನ್ನೂ, ರಾಜಕುಮಾರರನ್ನೂ ಕುರಿತು, ವಿಶೇಷವಾಗಿ ಸಹೋದರರನ್ನು ಕುರಿತು, ಭೀಮನ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳು ಕರ್ಣನನ್ನು ಕೊಲ್ಲುತ್ತಿವೆ. ನಿಮಗೆ ಮಂಗಳವಾಗಲಿ, ಬೇಗ ಹೋಗಿ ಕರ್ಣನನ್ನು ವೃಕೋದರನಿಂದ ರಕ್ಷಿಸಿ. ಮಹಾಧನುರ್ಧಾರಿಗಳಾದ ನೀವು ಕರ್ಣನ ರಕ್ಷಣೆಯಲ್ಲಿ ಪ್ರಯತ್ನಶೀಲರಾಗಿ ಎಂದು ಹೇಳಿದನು.
ದುರ್ಯೋಧನಸಮಾದಿಷ್ಟಾಃ ಸೋದರ್ಯಾಃ ಸಪ್ತ ಮಾರಿಷ |
ಭೀಮಸೇನಮಭಿದ್ರುತ್ಯ ಸಂರಬ್ಧಾಃ ಪರ್ಯವಾರಯನ್ ॥ 20 ॥
ಎಲೈ ಪೂಜ್ಯನೇ, ದುರ್ಯೋಧನನಿಂದ ಆಜ್ಞಪ್ತರಾದ ಅವನ ಏಳು ಸಹೋದರರು ಕೋಪದಿಂದ ಭೀಮಸೇನನ ಬಳಿಗೆ ಹೋಗಿ ಅವನನ್ನು ತಡೆದರು.
ತೇ ಸಮಾಸಾದ್ಯ ಕೌಂತೇಯಮಾವೃಣ್ವನ್ ಶರವೃಷ್ಟಿಭಿಃ |
ಪರ್ವತಂ ವಾರಿಧಾರಾಭಿಃ ಪ್ರಾವೃಷೀವ ಬಲಾಹಕಾಃ ॥ 21 ॥
ಅವರು ಭೀಮಸೇನನನ್ನು ಸಮೀಪಿಸಿ, ತಮ್ಮ ಬಾಣಗಳ ಮಳೆಯಿಂದ ಮಳೆಗಾಲದಲ್ಲಿ ಮೋಡಗಳು ಪರ್ವತದ ಮೇಲೆ ಜಲಧಾರೆಯನ್ನು ಸುರಿಸುವಂತೆ ಅವನನ್ನು ಮುಚ್ಚಿಹಾಕಿದರು.
ತೇಽಪೀಡಯನ್ ಭೀಮಸೇನಂ ಕ್ರುದ್ಧಾಃ ಸಪ್ತ ಮಹಾರಥಾಃ |
ಪ್ರಜಾಸಂಹರಣೇ ರಾಜನ್ ಸೋಮಂ ಸಪ್ತ ಗ್ರಹಾ ಇವ ॥ 22 ॥
ಎಲೈ ರಾಜನೇ, ಪ್ರಜೆಗಳ ಸಂಹಾರಕಾಲದಲ್ಲಿ ಚಂದ್ರನನ್ನು ಏಳು ಗ್ರಹಗಳು ಪೀಡಿಸಿದಂತೆ ಅವನ ಏಳು ಮಹಾರಥರು ಕೋಪಗೊಂಡು ಭೀಮಸೇನನನ್ನು ಪೀಡಿಸಿದರು.
ತತೋ ವಾಮೇನ ಕೌಂತೇಯಃ ಪೀಡಯಿತ್ವಾ ಶರಾಸನಮ್ |
ಮುಷ್ಟಿನಾ ಪಾಂಡವೋ ರಾಜನ್ ದೃಢೇನ ಸುಪರಿಷ್ಕೃತಮ್ ॥ 23 ॥
ಮನುಷ್ಯಸಮತಾಂ ಜ್ಞಾತ್ವಾ ಸಪ್ತ ಸಂಧಾಯ ಸಾಯಕಾನ್ |
ತೇಭ್ಯೋ ವ್ಯಸೃಜದಾಯಸ್ತಃ ಸೂರ್ಯರಶ್ಮಿನಿಭಾನ್ ಪ್ರಭುಃ ॥ 24 ॥
ಆಗ ಕುಂತೀಪುತ್ರನಾದ ಭೀಮಸೇನನು ಎಡಮುಷ್ಟಿಯಿಂದ ದೃಢವಾದ, ಅಲಂಕೃತವಾದ ಧನುಸ್ಸನ್ನು ತೀವ್ರವಾಗಿ ಪೀಡಿಸಿ ಆ ಏಳು ಸಹೋದರರನ್ನು ಸಾಮಾನ್ಯ ಮನುಷ್ಯರೆಂದು ಭಾವಿಸಿ ಕೋಪಗೊಂಡು ಧನುಸ್ಸಿನಲ್ಲಿ ಸೂರ್ಯನ ಕಿರಣದಂತಹ ಏಳು ಬಾಣಗಳನ್ನು ಹೂಡಿ ಅವರ ಮೇಲೆ ಪ್ರಯೋಗಿಸಿದನು.
ನಿರಸ್ಯನ್ನಿವ ದೇಹೇಭ್ಯಸ್ತನಯಾನಾಮಸೂಂಸ್ತವ |
ಭೀಮಸೇನೋ ಮಹಾರಾಜ ಪೂರ್ವವೈರಮನುಸ್ಮರನ್ ॥ 25 ॥
ಮಹಾರಾಜನೇ, ಭೀಮಸೇನನು ಹಿಂದಿನ ವೈರವನ್ನು ಸ್ಮರಿಸಿ, ಅವರ ದೇಹಗಳಿಂದ ಪ್ರಾಣಗಳನ್ನು ಹೊರಗೆ ಕಳುಹಿಸುವವನಂತೆ ಬಾಣಗಳನ್ನು ಪ್ರಯೋಗಿಸಿದನು.
ತೇ ಕ್ಷಿಪ್ತಾ ಭೀಮಸೇನೇನ ಶರಾ ಭಾರತ ಭಾರತಾನ್ |
ವಿದಾರ್ಯ ಖಂ ಸಮುತ್ಪೇತುಃ ಸ್ವರ್ಣಪುಂಖಾಃ ಶಿಲಾಶಿತಾಃ ॥ 26 ॥
ಎಲೈ ಭಾರತನೇ, ಭೀಮಸೇನನಿಂದ ಪ್ರಯೋಗಿಸಲ್ಪಟ್ಟ ಸ್ವರ್ಣಪುಂಖವುಳ್ಳ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಆ ಬಾಣಗಳು ಭಾರತರಾದ ಆ ಏಳು ಸಹೋದರರ ದೇಹಗಳನ್ನು ಭೇದಿಸಿ ಆಕಾಶಕ್ಕೆ ಹಾರಿತು.
ತೇಷಾಂ ವಿದಾರ್ಯ ಚೇತಾಂಸಿ ಶರಾ ಹೇಮವಿಭೂಷಿತಾಃ |
ವ್ಯರಾಜಂತ ಮಹಾರಾಜ ಸುಪರ್ಣಾ ಇವ ಖೇಚರಾಃ ॥ 27 ॥
ಮಹಾರಾಜನೇ, ಸುವರ್ಣಭೂಷಿತವಾದ ಆ ಬಾಣಗಳು ಅವರ ದೇಹಗಳನ್ನು ಭೇದಿಸಿ ಆಕಾಶದಲ್ಲಿ ಗರುಡಗಳಂತೆ ವಿರಾಜಿಸಿದವು.
ಶೋಣಿತಾದಿಗ್ಧವಾಜಾಗ್ರಾಃ ಸಪ್ತ ಹೇಮಪರಿಷ್ಕೃತಾಃ |
ಪುತ್ರಾಣಾಂ ತವ ರಾಜೇಂದ್ರ ಪೀತ್ವಾ ಶೋಣಿತಮುದ್ಗತಾಃ ॥ 28 ॥
ಎಲೈ ರಾಜೇಂದ್ರನೇ, ಸುವರ್ಣಾಲಂಕೃತವಾದ ಏಳು ಬಾಣಗಳು ನಿನ್ನ ಪುತ್ರರ ಉದರವನ್ನು ಪ್ರವೇಶಿಸಿ, ಅಲ್ಲಿದ್ದ ಆಹಾರವನ್ನು ರಕ್ತಸಿಕ್ತವನ್ನಾಗಿ ಮಾಡಿ, ತಾವೂ ರಕ್ತಪಾನವನ್ನು ಮಾಡಿ ಹೊರಬಂದವು (ಲಕ್ಷಾಲಂಕಾರ).
ತೇ ಶರೈರ್ಭಿನ್ನಮರ್ಮಾಣೋ ರಥೇಭ್ಯಃ ಪ್ರಾಪತನ್ ಕ್ಷಿತೌ |
ಗಿರಿಸಾನುರುಹಾ ಭಗ್ನಾ ದ್ವಿಪೇನೇವ ಮಹಾದ್ರುಮಾಃ ॥ 29 ॥
ಅವರು ಬಾಣಗಳಿಂದ ತಮ್ಮ ಮರ್ಮಗಳು ಭೇದಿಸಲ್ಪಟ್ಟು, ಪರ್ವತ ಶಿಖರದಲ್ಲಿ ಬೆಳೆದ ಮಹಾವೃಕ್ಷಗಳು ಗಜದಿಂದ ಭಗ್ನ ಹೊಂದಿ ಬೀಳುವಂತೆ ತಮ್ಮ ರಥದಿಂದ ಭೂಮಿಯ ಮೇಲೆ ಬಿದ್ದರು.
ಶತ್ರುಂಜಯಃ ಶತ್ರುಸಹಶ್ಚಿತ್ರಶ್ಚಿತ್ರಾಯುಧೋ ದೃಢಃ |
ಚಿತ್ರಸೇನೋ ವಿಕರ್ಣಶ್ಚ ಸಪ್ತೈತೇ ವಿನಿಪಾತಿತಾಃ ॥ 30 ॥
ಶತ್ರುಂಜಯ, ಶತ್ರುಸಹ, ಚಿತ್ರ, ಚಿತ್ರಾಯುಧ, ದೃಢ, ಚಿತ್ರಸೇನ, ವಿಕರ್ಣ- ಈ ಏಳು ಸಹೋದರರು ಭೂಮಿಯಲ್ಲಿ ಬಿದ್ದರು.

ತಾನ್ ನಿಹತ್ಯ ಮಹಾಬಾಹೂ ರಾಧೇಯಸ್ಯೈವ ಪಶ್ಯತಃ |
ಸಿಂಹನಾದರವಂ ಘೋರಮಸೃಜತ್ ಪಾಂಡುನಂದನಃ ॥ 31 ॥
ಮಹಾಬಾಹುವಾದ ಪಾಂಡುನಂದನನು ಕರ್ಣನ ಎದುರಿಗೇ ಅವರನ್ನು ಕೊಂದು ಘೋರವಾದ ಸಿಂಹನಾದವನ್ನು ಮಾಡಿದನು.
ಸ ರವಸ್ತಸ್ಯ ಶೂರಸ್ಯ ಧರ್ಮರಾಜಸ್ಯ ಭಾರತ |
ಆಚಖ್ಯಾವಿವ ತದ್ಯುದ್ಧಂ ವಿಜಯಂ ಚಾತ್ಮನೋ ಮಹತ್ ॥ 32 ॥
ಎಲೈ ಭಾರತನೇ, ಆ ಶೂರನ ಸಿಂಹನಾದವು ಧರ್ಮರಾಜನಿಗೆ ಆ ಯುದ್ಧವನ್ನು ತಿಳಿಸುವಂತೆ ಮತ್ತು ಆ ಯುದ್ಧದಲ್ಲಿ ತನ್ನ ಜಯವನ್ನು ಹೇಳುವಂತೆ ಇದ್ದಿತು.
ತಂ ಶ್ರುತ್ವಾ ಸುಮಹಾನಾದಂ ಭೀಮಸೇನಸ್ಯ ಧನ್ವಿನಃ |
ಬಭೂವ ಪರಮಾ ಪ್ರೀತಿರ್ಧರ್ಮರಾಜಸ್ಯ ಸಂಯುಗೇ ॥ 33 ॥
ಧನುರ್ಧಾರಿಯಾದ ಭೀಮಸೇನನ ಆ ಮಹಾನಾದವನ್ನು ಕೇಳಿದ ಧರ್ಮರಾಜನಿಗೆ ರಣರಂಗದಲ್ಲಿ ಬಹಳ ಸಂತೋಷವಾಯಿತು.
ತತೋ ಹೃಷ್ಟೋ ಮಹಾರಾಜ ವಾದಿತ್ರಾಣಾಂ ಮಹಾಸ್ವನೈಃ |
ಭೀಮಸೇನರವಂ ಪಾರ್ಥಃ ಪ್ರತಿಜಗ್ರಾಹ ಸರ್ವಶಃ ॥ 34 ॥
ಎಲೈ ಮಹಾರಾಜನೇ, ಸಂತೋಷಗೊಂಡ ಧರ್ಮರಾಜನು ರಣವಾದ್ಯಗಳ ಮಹಾನಾದದಿಂದ ಭೀಮಸೇನನ ಸಿಂಹನಾದವನ್ನು ಎಲ್ಲ ಕಡೆಯಲ್ಲಿಯೂ ಸ್ವೀಕರಿಸಿದನು.
ಅಭ್ಯಯಾಚ್ಚೈವ ಸಮರೇ ದ್ರೋಣಮಸ್ತ್ರಭೃತಾಂ ವರಮ್ |
ಹರ್ಷೇಣ ಮಹತಾ ಯುಕ್ತಃ ಕೃತಸಂಜ್ಞೇ ವೃಕೋದರೇ ॥ 35 ॥
ಭೀಮಸೇನನು ಸೂಚನೆಯನ್ನು ಕೊಡುತ್ತಿರಲು ಬಹಳ ಸಂತೋಷದಿಂದ ಕೂಡಿದವನಾಗಿ ಅಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರ ಮೇಲೆ ಯುದ್ಧಕ್ಕೆ ಹೋದನು.
ಏಕತ್ರಿಂಶನ್ಮಹಾರಾಜ ಪುತ್ರಾಂಸ್ತವ ಮಹಾರಥಾನ್ |
ಹತಾನ್ ದುರ್ಯೋಧನೋ ದೃಷ್ಟ್ವಾ ಕ್ಷತ್ತುಃ ಸಸ್ಮಾರ ತದ್ವಚಃ ॥ 36 ॥
ಮಹಾರಾಜನೇ, ನಿನ್ನ ಪುತ್ರರಾದ ಮೂವತ್ತೊಂದು ಮಹಾರಥರು ಹತರಾದುದನ್ನು ನೋಡಿದ ದುರ್ಯೋಧನನು ವಿದುರನ ಆ ಮಾತುಗಳನ್ನು ಸ್ಮರಿಸಿದನು.
ತದಿದಂ ಸಮನುಪ್ರಾಪ್ತಂ ಕ್ಷತ್ತುರ್ಹಿತಕರಂ ವಚಃ |
ಇತಿ ಸಂಚಿಂತ್ಯ ರಾಜಾಸೌ ನೋತ್ತರಂ ಪ್ರತ್ಯಪದ್ಯತ ॥ 37 ॥
ವಿದುರನು ಹೇಳಿದ ಹಿತವಚನಗಳ ಫಲವು ಈಗ ದೊರೆಯುತ್ತಿದೆ ಎಂದು ಚಿಂತಿಸಿದ ಆ ರಾಜನು ಈಗ ಮಾಡಬೇಕಾದ ಪ್ರತಿಕ್ರಿಯೆಯನ್ನು ತಿಳಿಯಲಿಲ್ಲ.
ಯದ್ ದ್ಯೂತಕಾಲೇ ದುರ್ಬುದ್ಧಿರಬ್ರವೀತ್ ತನಯಸ್ತವ |
ಯಚ್ಚ ಕರ್ಣೋಽಬ್ರವೀತ್ ಕೃಷ್ಣಾಂ ಸಭಾಯಾಂ ಪರುಷಂ ವಚಃ ॥38॥
ಪ್ರಮುಖೇ ಪಾಂಡುಪುತ್ರಾಣಾಂ ತವ ಚೈವ ವಿಶಾಂಪತೇ |
ಕೌರವಾಣಾಂ ಚ ಸರ್ವೇಷಾಮಾಚಾರ್ಯಸ್ಯ ಚ ಸನ್ನಿಧೌ ॥ 39 ॥
ವಿನಷ್ಟಾಃ ಪಾಂಡವಾಃ ಕೃಷ್ಣೇ ಶಾಶ್ವತಂ ನರಕಂ ಗತಾಃ |
ಪತಿಮನ್ಯಂ ವೃಣೀಷ್ವೇತಿ ತಸ್ಯೇದಂ ಫಲಮಾಗತಮ್ ॥ 40 ॥
ಎಲೈ ರಾಜನೇ, ದ್ಯೂತಕಾಲದಲ್ಲಿ ದುರ್ಬುದ್ಧಿಯುಳ್ಳ ನಿನ್ನ ಪುತ್ರನು ಏನು ಮಾತನಾಡಿದನೋ, ಕಣರ್ನು ಸಭೆಯಲ್ಲಿ ದ್ರೌಪದಿಯನ್ನು ಕುರಿತು ಯಾವ ಕ್ರೂರವಾದ ಮಾತುಗಳನ್ನು ಆಡಿದನೋ, ನಿನ್ನ ಸಮಕ್ಷದಲ್ಲಿ ಪಾಂಡವರ ಎದುರಿನಲ್ಲಿ ಎಲ್ಲ ಕೌರವರ ಮತ್ತು ಆಚಾರ್ಯರ ಸನ್ನಿಧಿಯಲ್ಲಿ ದ್ರೌಪದಿಯೇ ಪಾಂಡವರು ನಾಶವನ್ನು ಹೊಂದಿದ್ದಾರೆ. ಶಾಶ್ವತವಾಗಿ ನರಕದಲ್ಲಿ ಬಿದ್ದಿದ್ದಾರೆ. ಇನ್ನೊಬ್ಬ ಪತಿಯನ್ನು ಆರಿಸು ಎಂದು ಆಡಿದ ಆ ಮಾತುಗಳ ಫಲವು ಈಗ ಪ್ರಾಪ್ತವಾಗಿದೆ.
ಯತ್ ಸ್ಮ ತಾಂ ಪರುಷಾಣ್ಯಾಹುಃ ಸಭಾಮಾನಾಯ್ಯ ದ್ರೌಪದೀಮ್ |
ಪಾಂಡವಾನುಗ್ರಧನುಷಃ ಕ್ರೋಧಯಂತಸ್ತವಾತ್ಮಜಾಃ ॥ 41 ॥
ತಂ ಭೀಮಸೇನಃ ಕ್ರೋಧಾಗ್ನಿಂ ತ್ರಯೋದಶ ಸಮಾಃ ಸ್ಥಿತಮ್ |
ವಿಸೃಜಂಸ್ತವ ಪುತ್ರಾಣಾಮಂತಂ ಗಚ್ಛತಿ ಕೌರವ ॥ 42 ॥
ಎಲೈ ಕೌರವನೇ, ನಿನ್ನ ಪುತ್ರರು ದ್ರೌಪದಿಯನ್ನು ಸಭೆಗೆ ಎಳೆತಂದು ಉಗ್ರಧನುರ್ಧಾರಿಗಳಾದ ಪಾಂಡವರನ್ನು ಕೋಪಗೊಳಿಸುತ್ತಾ ಯಾವ ಕ್ರೂರವಾದ ಮಾತುಗಳನ್ನು ಆಡಿದರೋ ಅದರಿಂದ ಉಂಟಾದ ಕ್ರೋಧಾಗ್ನಿಯನ್ನು ಭೀಮಸೇನನು ಹದಿಮೂರು ವರ್ಷಗಳ ಕಾಲ ತನ್ನಲ್ಲಿ ರಕ್ಷಿಸಿ, ಈಗ ನಿನ್ನ ಪುತ್ರರ ಮೇಲೆ ಅದನ್ನು ಹಾಕುತ್ತಾ ಅವರ ನಾಶವನ್ನು ಮಾಡುತ್ತಿದ್ದಾನೆ.
ವಿಲಪಂಶ್ಚ ಬಹು ಕ್ಷತ್ತಾ ಶಮಂ ನಾಲಭತ ತ್ವಯಿ |
ಸಪುತ್ರೋ ಭರತಶ್ರೇಷ್ಠ ತಸ್ಯ ಭುಂಕ್ಷ್ವ ಫಲೋದಯಮ್ |
ಹತೋ ವಿಕರ್ಣೋ ರಾಜೇಂದ್ರ ಚಿತ್ರಸೇನಶ್ಚ ವೀರ್ಯವಾನ್ ॥ 43 ॥
ವಿದುರನು ನಿನ್ನ ಬಳಿ ಎಷ್ಟು ವಿಲಾಪವನ್ನು ಮಾಡಿದರೂ ನೀನು ಶಾಂತಿಯನ್ನು ಹೊಂದಲಿಲ್ಲ. ಎಲೈ ಭರತಶ್ರೇಷ್ಠನೇ, ನಿನ್ನ ಪುತ್ರರ ಜೊತೆಯಲ್ಲಿ ನೀನು ಅದರ ಫಲವನ್ನು ಅನುಭವಿಸು. ರಾಜೇಂದ್ರನೇ, ಪರಾಕ್ರಮಶಾಲಿಗಳಾದ ವಿಕರ್ಣನು, ಚಿತ್ರಸೇನನು ಹತರಾಗಿದ್ದಾರೆ.
ಪ್ರವರಾನಾತ್ಮಜಾನಾಂ ತೇ ಸುತಾಂಶ್ಚಾನ್ಯಾನ್ಮಹಾರಥಾನ್ |

ಯಾನ್ ಯಾಂಶ್ಚ ದದೃಶೇ ಭೀಮಶ್ಚಕ್ಷುರ್ವಿಷಯಮಾಗತಾನ್ |
ಪುತ್ರಾಂಸ್ತವ ಮಹಾಬಾಹೋ ತ್ವರಯಾ ತಾನ್ ಜಘಾನ ಹ ॥ 44 ॥
ನಿನ್ನ ಪುತ್ರರಲ್ಲಿ ಶ್ರೇಷ್ಠರಾದ ಮಹಾರಥರಾದ ಯಾರು ಯಾರು ಭೀಮನ ದೃಷ್ಟಿಯಲ್ಲಿ ಸಿಲುಕಿದರೋ ಎಲೈ ಮಹಾಬಾಹುವೇ ಭೀಮಸೇನನು ಅವರನ್ನು ಶೀಘ್ರವಾಗಿ ಕೊಂದನು.
ತ್ವತ್ಕೃತೇ ಹ್ಯಹಮದ್ರಾಕ್ಷಂ ದಹ್ಯಮಾನಾಂ ವರೂಥಿನೀಮ್ |
ಸಹಸ್ರಶಃ ಶರೈರ್ಮುಕ್ತೈಃ ಪಾಂಡವೇನ ವೃಷೇಣ ಚ ॥ 45 ॥
ನಿನ್ನ ನಿಮಿತ್ತದಿಂದಾಗಿ ನಾನು ಭೀಮಸೇನನಿಂದ ಮತ್ತು ಕರ್ಣನಿಂದ ಪ್ರಯೋಗಿಸಲ್ಪಟ್ಟ ಸಹಸ್ರಾರು ಬಾಣಗಳಿಂದ ಕುರು-ಪಾಂಡವಸೇನೆಗಳು ದಹಿಸುವುದನ್ನು ನೋಡಿದೆನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವಾವಿಂಶತ್ಯಧಿಕಶತತಮೋಧ್ಯಾಯಃ ॥
॥ಳ ಜಯದ್ರಥವಧಪರ್ವಣಿ ಷಟ್ತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ಮೂರನೆಯ ಅಧ್ಯಾಯ
ಭೀಮ ಮತ್ತು ಕರ್ಣರ ಯುದ್ಧ.
ಧೃತರಾಷ್ಟ್ರಃ
ಮಹಾನಪನಯಃ ಸೂತ ಮಮೈವಾತ್ರ ವಿಶೇಷತಃ |
ಸ ಇದಾನೀಮನುಪ್ರಾಪ್ತೋ ಮನ್ಯೇ ಸಂಜಯ ಶೋಚತಃ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಇಲ್ಲಿ ನನ್ನ ದೊಡ್ಡ ಅಪಚಾರವೇ ಈ ಅನರ್ಥಕ್ಕೆ ಕಾರಣವಾಗಿದೆ. ಎಲೈ ಸೂತನೇ, ನಾನು ಶೋಕಪಡುತ್ತಿರುವಾಗ ಅದರ ಫಲವು ಈಗ ಪ್ರಾಪ್ತವಾಗಿದೆ ಎಂದು ತಿಳಿಯುತ್ತೇನೆ.
ಯದ್ಗತಂ ತದ್ಗತಮಿತಿ ಮಮಾಸೀನ್ಮನಸಿ ಸ್ಥಿತಮ್ |
ಇದಾನೀಮತ್ರ ಕಿಂ ಕಾರ್ಯಂ ಪ್ರಕರಿಷ್ಯಾಮಿ ಸಂಜಯ ॥ 2 ॥
ಕಳೆದುದು ಕಳೆದು ಹೋಯಿತು ಎಂದು ನನ್ನ ಮನಸ್ಸಿನ ಅಭಿಪ್ರಾಯವಾಗಿದ್ದಿತು. ಎಲೈ ಸಂಜಯನೇ, ಈಗ ಏನು ಮಾಡಬೇಕೆಂದು ಹೇಳು, ಅದನ್ನು ಮಾಡುವೆನು.
ಯಥಾ ತ್ವೇಷ ಕ್ಷಯೋ ವೃತ್ತೋ ಮಮಾಪನಯಸಂಭವಃ |
ವೀರಾಣಾಂ ತನ್ಮಮಾಚಕ್ಷ್ವ ಸ್ಥಿರೀಭೂತೋಽಸ್ಮಿ ಸಂಜಯ ॥ 3 ॥
ಸಂಜಯನೇ, ನನ್ನ ಅಪಚಾರದಿಂದ ವೀರರ ಯಾವ ಈ ಘೋರವಾದ ವಿನಾಶವು ಸಂಭವಿಸಿತೋ ಅದನ್ನು ನನಗೆ ಹೇಳು. ನಾನು ದೃಢವಾಗಿದ್ದೇನೆ.
ಸಂಜಯಃ
ಕರ್ಣಭೀಮೌ ಮಹಾರಾಜ ಪರಾಕ್ರಾಂತೌ ಮಹಾಹವೇ |
ಬಾಣವರ್ಷಾಣ್ಯವರ್ಷೇತಾಂ ವೃಷ್ಟಿಮಂತಾವಿವಾಂಬುದೌ ॥ 4 ॥
ಸಂಜಯ ಮಹಾರಾಜನೇ, ಯುದ್ಧದಲ್ಲಿ ಉದ್ಯುಕ್ತರಾದ ಕರ್ಣ-ಭೀಮರು ಮಳೆಯ ನೀರನ್ನು ಹೊಂದಿದ ಮೋಡಗಳಂತೆ ಪರಸ್ಪರವಾಗಿ ಬಾಣದ ಮಳೆಗಳನ್ನು ಸುರಿಸಿದರು.
ಭೀಮನಾಮಾಂಕಿತಾ ಬಾಣಾಃ ಸ್ವರ್ಣಪುಂಖಾಃ ಶಿಲಾಶಿತಾಃ |
ವಿವಿಶುಃ ಕರ್ಣಮಾಸಾದ್ಯ ಭಿಂದಂತ ಇವ ಜೀವಿತಮ್ ॥ 5 ॥
ಭೀಮನ ಹೆಸರನ್ನು ಹೊಂದಿದ ಸ್ವರ್ಣಪುಂಖವುಳ್ಳ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳು ಕಣರ್ನನ್ನು ಸಮೀಪಿಸಿ, ಅವನ ಪ್ರಾಣವನ್ನು ಭೇದಿಸುವಂತೆ ಅವನ ಶರೀರದಲ್ಲಿ ಇಳಿದವು.
ತಥೈವ ಕರ್ಣನಿರ್ಮುಕ್ತೈಃ ಸವಿಷೈರಿವ ಪನ್ನಗೈಃ |
ಆಕೀರ್ಯತ ರಣೇ ಭೀಮಃ ಶತಶೋಽಥ ಸಹಸ್ರಶಃ ॥ 6 ॥
ಹಾಗೆಯೇ ಕರ್ಣನು ಪ್ರಯೋಗಿಸಿದ ವಿಷ ಸರ್ಪಗಳಂತಿದ್ದ ನೂರಾರು ಸಾವಿರಾರು ಬಾಣಗಳಿಂದ ರಣರಂಗದಲ್ಲಿ ಭೀಮನ ಶರೀರವೂ ತುಂಬಿಹೋಯಿತು.
ತಯೋಃ ಶರೈರ್ಮಹಾರಾಜ ಸಂಪತದ್ಭಿಃ ಸಮಂತತಃ |
ಬಭೂವ ತವ ಸೈನ್ಯಾನಾಂ ಸಂಕ್ಷೋಭಃ ಸಾಗರೋಪಮಃ ॥ 7 ॥
ಎಲೈ ಮಹಾರಾಜನೇ, ಅವರು ಪ್ರಯೋಗಿಸಿದ ಬಾಣಗಳು ಎಲ್ಲ ಕಡೆಗಳಲ್ಲಿಯೂ ಹಾರುತ್ತಿರಲು ನಿನ್ನ ಸೈನ್ಯಕ್ಕೆ ಸಮುದ್ರದಂತಹ ಕ್ಷೋಭೆ ಉಂಟಾಯಿತು.
ಭೀಮಚಾಪಚ್ಯುತೈರ್ಬಾಣೈಸ್ತವ ಸೈನ್ಯಮರಿಂದಮ |
ಅವಧ್ಯತ ಚಮೂಮಧ್ಯೇ ಘೋರೈರಾಶೀವಿಷೋಪಮೈಃ ॥ 8 ॥
ಎಲೈ ಅರಿಂದಮನೇ, ಭೀಮನ ಧನುಸ್ಸಿನಿಂದ ಹೊರಹೊಮ್ಮಿದ ವಿಷ ಸರ್ಪವನ್ನು ಹೋಲುವ ಬಾಣಗಳಿಂದ ರಣರಂಗದಲ್ಲಿ ನಿನ್ನ ಸೈನ್ಯವು ವಧಿಸಲ್ಪಟ್ಟಿತು.
ವಾರಣೈಃ ಪತಿತೈ ರಾಜನ್ ವಾಜಿಭಿಶ್ಚ ನರೈಃ ಸಹ |

ಅದೃಶ್ಯತ ಮಹೀ ಕೀರ್ಣಾ ವಾತನುನ್ನೈರ್ದ್ರುಮೈರಿವ ॥ 9 ॥
ರಾಜನ್, ಭೂಮಿಯ ಮೇಲೆ ಬಿದ್ದ ಗಜಗಳಿಂದಲೂ, ಅಶ್ವಗಳಿಂದಲೂ ಮತ್ತು ಯೋಧರಿಂದಲೂ ತುಂಬಿ ಹೋದ ಭೂಮಿಯು ವಾಯುವಿನ ಹೊಡೆತಕ್ಕೆ ಸಿಕ್ಕಿ ಭಗ್ನವಾದ ಮರಗಳಿಂದ ಕೂಡಿರುವಂತೆ ತೋರುತ್ತಿದ್ದಿತು.
ತೇ ವಧ್ಯಮಾನಾಃ ಸಮರೇ ಭೀಮಚಾಪಚ್ಯುತೈಃ ಶರೈಃ |
ಪ್ರಾದ್ರವಂಸ್ತಾವಕಾ ಯೋಧಾಃ ಕಿಮೇತದಿತಿ ಚಾಬ್ರುವನ್ ॥ 10 ॥
ಭೀಮನ ಧನುಸ್ಸಿನಿಂದ ಹೊರಟ ಬಾಣಗಳಿಂದ ಯುದ್ಧದಲ್ಲಿ ಪೀಡಿತರಾದ ನಿನ್ನ ಯೋಧರು ಇದೇನು ಎಂದು ಹೇಳುತ್ತಾ ಓಡಿಹೋದರು.
ತತೋ ವ್ಯುದಸ್ತಂ ತತ್ ಸೈನ್ಯಂ ಸಿಂಧುಸೌವೀರಕೌರವಮ್ |
ಪ್ರೋತ್ಸಾರಿತಂ ಮಹಾವೇಗೈಃ ಕರ್ಣಪಾಂಡವಯೋಃ ಶರೈಃ ॥ 11 ॥
ಆಗ ಕರ್ಣ-ಪಾಂಡವರು ಪ್ರಯೋಗಿಸಿದ ಮಹಾವೇಗವುಳ್ಳ ಬಾಣಗಳಿಂದ ಸಿಂಧು-ಸೌವೀರ-ಕೌರವ ಸೈನ್ಯಗಳು ರಣರಂಗದಿಂದ ಹೊರದೂಡಲ್ಪಟ್ಟವು.
ತೇ ಶರಾತುರಭೂಯಿಷ್ಠಾ ಹತಾಶ್ವನರವಾಹನಾಃ |
ಉತ್ಸೃಜ್ಯ ಕರ್ಣಂ ಭೀಮಂ ಚ ಪ್ರಾದ್ರವನ್ ಸರ್ವತೋದಿಶಮ್ ॥12॥
ಬಾಣದ ಪ್ರಹಾರಕ್ಕೆ ಸಿಲುಕಿದ ಅಶ್ವ-ನರ-ವಾಹನಗಳು ಕರ್ಣನನ್ನೂ, ಭೀಮನನ್ನೂ ತ್ಯಜಿಸಿ ಎಲ್ಲ ದಿಕ್ಕುಗಳಲ್ಲಿಯೂ ಓಡಿಹೋದವು.
ನೂನಂ ಪಾರ್ಥಾರ್ಥಮೇವಾಸ್ಮಾನ್ ಮೋಹಯಂತಿ ದಿವೌಕಸಃ |
ಯತ್ ಕರ್ಣಭೀಮಪ್ರಭವೈರ್ವಧ್ಯತೇ ನೋ ಬಲಂ ಶರೈಃ ॥ 13 ॥
ಏವಂ ಬ್ರುವಂತೋ ಯೋಧಾಸ್ತೇ ತಾವಕಾ ಭಯಪೀಡಿತಾಃ |
ಶರಪಾತಂ ಸಮುತ್ಸೃಜ್ಯ ಸ್ಥಿತಾ ಯುದ್ಧದಿದೃಕ್ಷವಃ ॥ 14 ॥
ಖಂಡಿತವಾಗಿ ಅರ್ಜುನನ ಸಲುವಾಗಿ ದೇವತೆಗಳು ನಮ್ಮನ್ನು ಮರಳುಗೊಳಿಸುತ್ತಿದ್ದಾರೆ. ಆದ್ದರಿಂದ ನಮ್ಮ ಸೈನ್ಯಗಳು ಕರ್ಣ-ಭೀಮರು ಪ್ರಯೋಗಿಸಿದ ಬಾಣಗಳಿಂದ ವಧಿಸಲ್ಪಡುತ್ತಿವೆ ಎಂದು ಹೇಳುತ್ತಾ ಭಯ ಪೀಡಿತರಾದ ನಿನ್ನ ಯೋಧರು ಬಾಣದ ಹೊಡೆತವನ್ನು ತಪ್ಪಿಸಿಕೊಂಡು ಯುದ್ಧವನ್ನು ನೋಡಲು ಬಯಸಿ ನಿಂತರು.
ತತಃ ಪ್ರಾವರ್ತತ ನದೀ ಘೋರರೂಪಾ ಮಹಾಹವೇ |
ಬಭೂವ ಚ ವಿಶೇಷೇಣ ಭೀರೂಣಾಂ ಭಯವರ್ಧಿನೀ ॥ 15 ॥
ಅನಂತರ ಆ ದೊಡ್ಡ ರಣರಂಗದಲ್ಲಿ ಭೀರುಗಳಿಗೆ ಭಯವನ್ನು ಹೆಚ್ಚಿಸುವ ಘೋರರೂಪವಾದ ನದಿಯು ವಿಶೇಷವಾಗಿ ಹರಿಯಿತು.
ವಾರಣಾಶ್ವಮನುಷ್ಯಾಣಾಂ ರುಧಿರೌಘಸಮುದ್ಭವಾ |
ಸಂವೃತಾ ಗತಸತ್ತ್ವೈಶ್ಚ ಮನುಷ್ಯಗಜವಾಜಿಭಿಃ ॥ 16 ॥
ಸಾನುಕರ್ಷಪತಾಕೈಶ್ಚ ದ್ವಿಪಾಶ್ವರಥಭೂಷಣೈಃ |
ಸ್ಯಂದನೈರಪವಿದ್ಧೈಶ್ಚ ಭಗ್ನಚಕ್ರಾಕ್ಷಕೂಬರೈಃ ॥ 17 ॥
ಜಾತರೂಪಪರಿಷ್ಕಾರೈರ್ಧನುರ್ಭಿಃ ಸುಮಹಾಧನೈಃ |
ಸುವರ್ಣಪುಂಖೈರಿಷುಭಿರ್ನಾರಾಚೈಶ್ಚ ಸಹಸ್ರಶಃ ॥ 18 ॥
ಕರ್ಣಪಾಂಡವನಿರ್ಮುಕ್ತೈರ್ನಿರ್ಮುಕ್ತೈರಿವ ಪನ್ನಗೈಃ |
ಪ್ರಾಸತೋಮರಸಂಘಾತೈಃ ಖಡ್ಗೈಶ್ಚ ಸಪರಶ್ವಧೈಃ ॥ 19 ॥
ಸುವರ್ಣವಿಕೃತೈಶ್ಚಾಪಿ ಗದಾಮುಸಲಪಟ್ಟಿಶೈಃ |
ವಜ್ರೈಶ್ಚ ವಿವಿಧಾಕಾರೈಃ ಶಕ್ತಿಭಿಃ ಪರಿಘೈರಪಿ |
ಶತಘ್ನೀಭಿಶ್ಚ ಚಿತ್ರಾಭಿರ್ಬಭೌ ಭಾರತ ಮೇದಿನೀ ॥ 20 ॥
ಗಜಾಶ್ವ-ಮನುಷ್ಯರ ರಕ್ತಸಮೂಹದಿಂದ ಉಂಟಾದ, ಮೃತರಾದ ಮನುಷ್ಯ-ಗಜ, ವಾಜಿಗಳಿಂದ ತುಂಬಿದ, ಅನುಕರ್ಷ ಪತಾಕೆಗಳಿಂದಲೂ, ಗಜಾಶ್ವ- ರಥ ಭೂಷಣಗಳಿಂದಲೂ ತುಂಬಿದ ಚಕ್ರ-ಅಕ್ಷ-ಕೂಬರಗಳು ಭಗ್ನವಾಗಿ ಪರಿತ್ಯಜಿಸಿದ ರಥಗಳನ್ನು ಹೊಂದಿದ, ಸುವರ್ಣಾಲಂಕೃತವಾದ ಬೆಲೆಬಾಳುವ ಧನುಸ್ಸುಗಳಿಂದ ಕೂಡಿದ, ಸುವರ್ಣ ಪುಂಖಗಳನ್ನು ಹೊಂದಿದ ಸಹಸ್ರಾರು ಬಾಣಗಳಿಂದಲೂ ಮತ್ತು ನಾರಾಚಗಳಿಂದಲೂ ತುಂಬಿದ, ಕರ್ಣ-ಭೀಮರು ಪ್ರಯೋಗಿಸಿದ ಸರ್ಪಗಳಂತಿರುವ ಪ್ರಾಸ-ತೋಮರ ಸಮೂಹಗಳಿಂದಲೂ ಪರಶ್ವಧ ಸಹಿತವಾದ ಖಡ್ಗಗಳಿಂದಲೂ ತುಂಬಿದ, ಸುವರ್ಣಾಲಂಕೃತವಾದ ಗದಾ-ಮುಸಲ-ಪಟ್ಟಿಶಗಳಿಂದಲೂ, ವಿವಿಧಾಕಾರದ ವಜ್ರಗಳಿಂದಲೂ, ಶಕ್ತಿಗಳಿಂದಲೂ ಪರಿಘಗಳಿಂದಲೂ ವಿಚಿತ್ರವಾದ ಶತಘ್ನಿಗಳಿಂದಲೂ ತುಂಬಿದ, ಆ ಭೂಮಿಯು ಎಲೈ ಭಾರತನೇ, ಶೋಭಿಸಿತು.
ಕನಕಾಂಗದಕೇಯೂರೈಃ ಕುಂಡಲೈರ್ಮಣಿಭಿಃ ಶುಭೈಃ |
ತನುತ್ರೈಃ ಸತಳತ್ರೈಶ್ಚ ಹಾರೈರ್ನಿಷ್ಕೈಶ್ಚ ಭಾರತ ॥ 21 ॥
ವಸ್ತ್ರೈಶ್ಛತ್ರೈಶ್ಚ ವಿಧ್ವಸ್ತೈಶ್ಚಾಮರವ್ಯಜನೈರಪಿ |
ಗಜಾಶ್ವಮನುಜೈರ್ಭಿನ್ನೈಃ ಶಸ್ತ್ರೈಃ ಸ್ಯಂದನಭೂಷಣೈಃ ॥ 22 ॥
ತೈಸ್ತೈಶ್ಚ ವಿವಿಧೈರ್ಭಾವೈಸ್ತತ್ರ ತತ್ರ ವಸುಂಧರಾ |
ಪತಿತೈರಪವಿದ್ಧೈಶ್ಚ ಸಂಬಭೌ ದ್ಯೌರಿವ ಗ್ರಹೈಃ ॥ 23 ॥
ಕೆಳಗೆ ಬಿದ್ದ ಮತ್ತು ಎಸೆದ ಸುವರ್ಣಾಂಗದ ಕೇಯೂರಗಳಿಂದಲೂ, ಕುಂಡಲಗಳಿಂದಲೂ, ಶುಭವಾದ ಮಣಿಗಳಿಂದಲೂ, ಶರೀರ ಕವಚ ಮತ್ತು ಹಸ್ತ ಕವಚಗಳಿಂದಲೂ, ಹಾರ-ನಿಷ್ಕಗಳಿಂದಲೂ, ವಸ್ತ್ರಗಳಿಂದಲೂ, ಛತ್ರಗಳಿಂದಲೂ, ಭಗ್ನವಾಗಿ ಎಸೆದ

ಚಾಮರಗಳಿಂದಲೂ, ಭಗ್ನಗೊಂಡ ಗಜಾಶ್ವ-ಮನುಷ್ಯರಿಂದಲೂ, ಶಸ್ತ್ರಗಳಿಂದಲೂ, ರಥದ ಆಭರಣಗಳಿಂದಲೂ, ಅಲ್ಲಲ್ಲಿ ಹರಡಲ್ಪಟ್ಟ ಭೂಮಿಯು ಎಲ್ಲೈ ಭಾರತನೇ, ಗ್ರಹಗಳಿಂದ ಕೂಡಿದ ಆಕಾಶದಂತೆ ಶೋಭಿಸಿತು.
ಅಚಿಂತ್ಯಮದ್ಭುತಂ ಚೈವ ತಯೋಃ ಕರ್ಮಾತಿಮಾನುಷಮ್ |
ದೃಷ್ಟ್ವಾ ಚಾರಣಸಿದ್ಧಾನಾಂ ವಿಸ್ಮಯಃ ಸಮಪದ್ಯತ ॥ 24 ॥
ಅಚಿಂತ್ಯವೂ ಮತ್ತು ಅದ್ಭುತವೂ ಆದ ಅವರಿಬ್ಬರ ಅತಿಮಾನುಷ ಕರ್ಮವನ್ನು ನೋಡಿ ಚಾರಣರಿಗೆ ಮತ್ತು ಸಿದ್ಧರಿಗೆ ವಿಸ್ಮಯವುಂಟಾಯಿತು.
ಅಗ್ನೇರ್ವಾಯುಸಹಾಯಸ್ಯ ಗತಿಃ ಕಕ್ಷ ಇವಾಹವೇ |
ಆಸೀದ್ ಭೀಮಸಹಾಯಸ್ಯ ರೌದ್ರಮಾಧಿರಥೇರ್ಗತಮ್ ॥ 25 ॥
ವಾಯುಸಹಾಯವುಳ್ಳ ಅಗ್ನಿಗೆ ಹುಲ್ಲುಗಾವಲಿನಲ್ಲಿ ಇರುವ ಗತಿಯಂತೆ ಯುದ್ಧದಲ್ಲಿ ಭೀಮನ ಸಹಾಯವುಳ್ಳ ಕರ್ಣನಿಗೆ ಘೋರವಾದ ಗತಿ ಇದ್ದಿತು.
ನಿಪಾತಿತಧ್ವಜರಥಂ ಹತವಾಜಿ ನರದ್ವಿಪಮ್ |
ಗಜಾಭ್ಯಾಂ ಸಂಪ್ರಯುಕ್ತಾಭ್ಯಾಮಾಸೀನ್ನಡವನಂ ಯಥಾ ॥ 26 ॥
ಭೂಮಿಯ ಮೇಲೆ ಬಿದ್ದ ಧ್ವಜ-ರಥಗಳಿಂದಲೂ, ಮೃತವಾದ ಗಜ-ಅಶ್ವ ಯೋಧರಿಂದಲೂ, ಭೂಮಿಯು ಎರಡು ಗಜಗಳಿಂದ ಕಲಕಲ್ಪಟ್ಟ ಕಮಲ ಸರೋವರದಂತೆ ಇದ್ದಿತು.
ತಥಾಭೂತಂ ಮಹತ್ ಸೈನ್ಯಮಾಸೀದ್ ಭಾರತ ಸಂಯುಗೇ |
ವಿಮರ್ದಃ ಕರ್ಣಭೀಮಾಭ್ಯಾಮಾಸೀಚ್ಚ ಪರಮೋ ರಣೇ ॥ 27 ॥
ಎಲ್ಲೈ ಭಾರತನೇ, ಆ ದೊಡ್ಡ ಸೈನ್ಯವು ಯುದ್ಧದಲ್ಲಿ ಆ ರೀತಿಯಲ್ಲಿ ಇದ್ದಿತು. ಪುನಃ ಕರ್ಣ ಮತ್ತು ಭೀಮರಿಗೆ ರಣರಂಗದಲ್ಲಿ ಘೋರವಾದ ಸಂಘರ್ಷವು ಉಂಟಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಯೋವಿಂಶತ್ಯಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಸಪ್ತಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ನಾಲ್ಕನೆಯ ಅಧ್ಯಾಯ
ಭೀಮ-ಕರ್ಣರ ಯುದ್ಧ.
ಸಂಜಯಃ
ತತಃ ಕರ್ಣೋ ಮಹಾರಾಜ ಭೀಮಂ ವಿದ್ಧ್ವಾ ತ್ರಿಭಿಃ ಶರೈಃ |
ಮುಮೋಚ ಶರವರ್ಷಾಣಿ ಚಿತ್ರಾಣಿ ಚ ಬಹೂನಿ ಚ ॥ 1 ॥
ಸಂಜಯ ಎಲ್ಲೈ ಮಹಾರಾಜನೇ, ಅನಂತರ ಕರ್ಣನು ಮೂರು ಬಾಣಗಳಿಂದ ಭೀಮನನ್ನು ಹೊಡೆದು, ಅವನ ಮೇಲೆ ವಿಚಿತ್ರವಾದ ಬಾಣಗಳ ಮಳೆಯನ್ನು ಸುರಿಸಿದನು.
ವಧ್ಯಮಾನೋ ಮಹಾರಾಜ ಸೂತಪುತ್ರೇಣ ಪಾಂಡವಃ |
ನ ವಿವ್ಯಥೇ ಭೀಮಸೇನೋ ಭಿದ್ಯಮಾನ ಇವಾಚಲಃ ॥ 2 ॥
ಎಲ್ಲೈ ಮಹಾರಾಜನೇ, ಸೂತಪುತ್ರನಾದ ಕರ್ಣನಿಂದ ಹೊಡೆಯಲ್ಪಡುತ್ತಿದ್ದ ಪಾಂಡುಪುತ್ರನಾದ ಭೀಮಸೇನನು ಪರ್ವತದಂತೆ ಅಚಲನಾಗಿ ವ್ಯಥೆಯನ್ನು ಹೊಂದಲಿಲ್ಲ.
ಸ ಕರ್ಣಂ ಕರ್ಣಿನಾ ಕರ್ಣೇ ಪೀತೇನ ನಿಶಿತೇನ ಚ |
ವಿವ್ಯಾಧ ಯುಧಿ ರಾಜೇಂದ್ರ ಭೀಮಸೇನಃ ಪತತ್ರಿಣಾ ॥ 3 ॥
ಎಲ್ಲೈ ರಾಜೇಂದ್ರನೇ, ಭೀಮಸೇನನು ನೀರು ಕುಡಿಸಿ ಹದಮಾಡಿದ ಬಾಣಗಳಿಂದ ಕರ್ಣನನ್ನು ಯುದ್ಧದಲ್ಲಿ ಅವನ ಕಿವಿಯಲ್ಲಿ ಹೊಡೆದನು.
ಸ ಕುಂಡಲಂ ಮಹತ್ಕರ್ಣಾತ್ಕರ್ಣಸ್ಯಾಪಾತಯದ್ ಭುವಿ |
ತಪನೀಯಂ ಮಹಾರಾಜ ದೀಪ್ತಂ ಜ್ಯೋತಿರಿವಾಂಬರಾತ್ ॥ 4 ॥
ಎಲ್ಲೈ ಮಹಾರಾಜನೇ, ಆ ಬಾಣವು ಕರ್ಣನ ಕಿವಿಯಲ್ಲಿದ್ದ ಶ್ರೇಷ್ಠವಾದ ಸುವರ್ಣಮಯವಾದ ಕುಂಡಲವನ್ನು ಆಕಾಶದಿಂದ ಭೂಮಿಗೆ ಬೀಳುವ ಜ್ಯೋತಿಯಂತೆ ಕೆಡವಿತು.
ಅಥಾಪರೇಣ ಭಲ್ಲೇನ ಸೂತಪುತ್ರಂ ಸ್ತನಾಂತರೇ |
ಆಜಘಾನ ಭೃಶಂ ಭೀಮಃ ಸ್ಮಯನ್ನಿವ ಮಹಾಬಲಃ ॥ 5 ॥
ಅನಂತರ ಮಹಾಬಲನಾದ ಭೀಮನು ನಗುತ್ತಾ ಸೂತಪುತ್ರನನ್ನು ಭಲ್ಲದಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ಪುನರಸ್ಯ ತ್ವರನ್ ಭೀಮೋ ನಾರಾಚಾನ್ ದಶ ಭಾರತ |
ರಣೇ ಪ್ರೈಷೀನ್ಮಹಾವೇಗಾನ್ ಯಮದಂಡೋಪಮಾಂಸ್ತಥಾ ॥ 6 ॥
ಎಲ್ಲೈ ಭಾರತನೇ, ಪುನಃ ಭೀಮನು ತ್ವರೆ ಮಾಡುತ್ತಾ, ಯಮದಂಡದಂತಿದ್ದ ಮಹಾವೇಗವುಳ್ಳ ಹತ್ತು ನಾರಾಚಗಳನ್ನು ಅವನ ಮೇಲೆ ಪ್ರಯೋಗಿಸಿದನು.
ತೇ ಲಲಾಟಂ ಸಮಾಸಾದ್ಯ ಸೂತಪುತ್ರಸ್ಯ ಮಾರಿಷ |

ವಿವಿಶುಶ್ಚೋದಿತಾಸ್ತೇನ ವಲ್ಮೀಕಮಿವ ಪನ್ನಗಾಃ ॥ 7 ॥
ಎಲೈ ಪೂಜ್ಯನೇ, ಭೀಮಸೇನನಿಂದ ಪ್ರಯೋಗಿಸಲ್ಪಟ್ಟ ಆ ನಾರಾಚಗಳು ಕರ್ಣನ ಲಲಾಟವನ್ನು ಸಮೀಪಿಸಿ ಸರ್ಪಗಳು ಹುತ್ತದ ಒಳಗೆ ಇಳಿದಂತೆ ಒಳಗೆ ಇಳಿದವು.
ಲಲಾಟಸ್ಥೈಸ್ತು ತೈರ್ಬಾಣೈಃ ಸೂತಪುತ್ರೋ ವ್ಯರೋಚತ |
ನೀಲೋತ್ಪಲಮಯೀಂ ಮಾಲಾಂ ಧಾರಯನ್ ಸ ಪುರಾ ಯಥಾ ॥8॥
ಲಲಾಟದಲ್ಲಿ ನೆಟ್ಟ ಆ ನಾರಾಚಗಳ ಪಂಕ್ತಿಯಿಂದ ಸೂತಪುತ್ರನಾದ ಕರ್ಣನು ಶಿರಸ್ಸಿನಲ್ಲಿ ನೀಲೋತ್ಪಲಪುಷ್ಪದ ಮಾಲೆಯನ್ನು ಹಿಂದಿನಂತೆ ಧರಿಸಿದವನಂತೆ ಕಂಡುಬಂದನು.
ತತಃ ಕ್ರುದ್ಧೋ ರಣೇ ಕರ್ಣಃ ಪೀಡಿತೋ ದೃಢಧನ್ವನಾ |
ವೇಗಂ ಚಕ್ರೇ ಮಹಾವೇಗೋ ಭೀಮಸೇನವಧಂ ಪ್ರತಿ ॥ 9 ॥
ದೃಢವಾದ ಧನುಸ್ಸುಳ್ಳ ಭೀಮಸೇನನಿಂದ ಹೀಗೆ ಪೀಡಿತನಾದ ಮತ್ತು ಅದರಿಂದ ಕ್ರುದ್ಧನಾದ, ಸ್ವತಃ ಮಹಾವೇಗಶಾಲಿಯಾದ ಕರ್ಣನು ಭೀಮಸೇನನ ವಧೆಯನ್ನು ಕುರಿತು ಇನ್ನೂ ಹೆಚ್ಚಿನ ವೇಗವನ್ನು ಆಶ್ರಯಿಸಿದನು.
ತಸ್ಮೈ ಕರ್ಣಃ ಶತಂ ರಾಜನ್ನಿಷೂಣಾಂ ಗಾರ್ಧ್ರವಾಸಸಾಮ್ |
ಅಮರ್ಷೀ ಬಲವಾನ್ ಕ್ರುದ್ಧಃ ಪ್ರೇಷಯಾಮಾಸ ಭಾರತ ॥ 10 ॥
ಎಲೈ ಭಾರತನೇ, ಕೋಪಗೊಂಡವನೂ, ಬಲಿಷ್ಠನೂ ಆದ ಕರ್ಣನು ಗೃಧ್ರಪಕ್ಷಿಯ ಗರಿಯನ್ನು ಹೊಂದಿದ್ದ ನೂರು ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸಿದನು.
ತತಃ ಪ್ರಾಸೃಜದುಗ್ರಾಣಿ ಶರವರ್ಷಾಣಿ ಪಾಂಡವಃ |
ಸಮರೇ ತಮನಾದೃತ್ಯ ನಾಸ್ಯ ವೀರ್ಯಮಚಿಂತಯತ್ ॥ 11 ॥
ಭೀಮನು ಕರ್ಣನನ್ನು ಗಣನೆಗೆ ತಂದುಕೊಳ್ಳದೆ, ಅವನ ಪರಾಕ್ರಮವನ್ನೂ ಚಿಂತಿಸದೆ ಅವನ ಮೇಲೆ ಬಾಣಗಳ ಘೋರವಾದ ಮಳೆಯನ್ನು ಸುರಿಸಿದನು.
ತತಃ ಕರ್ಣೋ ಮಹಾರಾಜ ಪಾಂಡವಂ ನಿಶಿತೈಃ ಶರೈಃ |
ಆಜಘಾನೋರಸಿ ಕ್ರುದ್ಧಃ ಕ್ರುದ್ಧರೂಪಂ ಪರಂತಪಃ ॥ 12 ॥
ಎಲೈ ಮಹಾರಾಜನೇ, ಆಗ ಪರಂತಪನೂ, ಕ್ರೋಧಗೊಂಡವನೂ ಆದ ಕರ್ಣನು ಹಾಗೆ ಕ್ರೋಧಗೊಂಡ ಪಾಂಡವನಾದ ಭೀಮಸೇನನನ್ನು ವಕ್ಷಸ್ಸ್ಥಲದಲ್ಲಿ ನಿಶಿತವಾದ ಬಾಣಗಳಿಂದ ಹೊಡೆದನು.
ಜೀಮೂತಾವಿವ ಚಾನ್ಯೋನ್ಯಂ ತೌ ವವರ್ಷತುರಾಹವೇ |
ತಳಶಬ್ದರವೈಶ್ಚೈವ ತ್ರಾಸಯಂತೌ ಪರಸ್ಪರಮ್ ॥ 13 ॥
ತಳಶಬ್ದಗಳಿಂದ ಅವರು ಪರಸ್ಪರವಾಗಿ ಹೆದರಿಸುತ್ತಾ ಎರಡು ಮೋಡಗಳಂತೆ ರಣರಂಗದಲ್ಲಿ ಅವರು ಪರಸ್ಪರವಾಗಿ ಬಾಣಗಳ ಮಳೆಯನ್ನು ಕರೆದರು.
ಶರಜಾಲೈಶ್ಚ ವಿವಿಧೈಶ್ಛಾದಯಾಮಾಸತುರ್ಮೃಧೇ |
ಅನ್ಯೋನ್ಯಂ ಸಮರೇ ಕ್ರುದ್ಧೌ ಕೃತಪ್ರತಿಕೃತೈಷಿಣೌ ॥ 14 ॥
ಕ್ರುದ್ಧರಾದ ಮತ್ತು ಮಾಡಿದುದಕ್ಕೆ ಪ್ರತಿಕಾರ ಮಾಡುವ ಅವರಿಬ್ಬರೂ ರಣರಂಗದಲ್ಲಿ ವಿವಿಧವಾದ ಬಾಣಸಮೂಹಗಳಿಂದ ಒಬ್ಬರನ್ನೊಬ್ಬರು ಮುಚ್ಚಿದರು.
ತತೋ ಭೀಮೋ ಮಹಾಬಾಹೂ ರಾಧೇಯಸ್ಯ ಮಹಾತ್ಮನಃ |
ಕ್ಷುರಪ್ರೇಣ ಧನುಶ್ಛಿತ್ತ್ವಾ ಕರ್ಣಂ ವಿವ್ಯಾಧ ಪತ್ರಿಣಾ ॥ 15 ॥
ಆಗ ಮಹಾಬಾಹುವಾದ ಭೀಮನು ಕ್ಷುರಪ್ರದಿಂದ ಮಹಾತ್ಮನಾದ ಕರ್ಣನ ಧನುಸ್ಸನ್ನು ಕತ್ತರಿಸಿ ಬಾಣದಿಂದ ಕರ್ಣನನ್ನು ಹೊಡೆದನು.
ತದಪಾಸ್ಯ ಧನುಶ್ಛಿನ್ನಂ ಸೂತಪುತ್ರೋ ಮಹಾಮನಾಃ |
ಅನ್ಯತ್ ಕಾರ್ಮುಕಮಾದತ್ತ ವೇಗಘ್ನಂ ಭಾರಸಾಧನಮ್ ॥ 16 ॥
ಧೈರ್ಯಶಾಲಿಯಾದ ಸೂತಪುತ್ರನು ಕತ್ತರಿಸಲ್ಪಟ್ಟ ಆ ಧನುಸ್ಸನ್ನು ಬಿಟ್ಟು, ವೇಗಶಾಲಿಯೂ, ಶತ್ರುಗಳ ಸಮೂಹವನ್ನು ನಾಶಮಾಡುವಂತಹದೂ ಆದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡನು.
ದೃಷ್ಟ್ವಾ ಚ ಕುರುಸೌವೀರಸೈಂಧವಾನಾಂ ಬಲಕ್ಷಯಮ್ |
ಸವರ್ಮಧ್ವಜಶಸ್ತ್ರೈಶ್ಚ ಪತಿತೈಃ ಸಂವೃತಾಂ ಮಹೀಮ್ ॥ 17 ॥
ಹಸ್ತ್ಯಶ್ವನರದೇಹಾಂಶ್ಚ ಗತಾಸೂನ್ ಪ್ರೇಕ್ಷ್ಯ ಸರ್ವತಃ |
ಸೂತಪುತ್ರಸ್ಯ ಸಂರಂಭಾದ್ ದೀಪ್ತಂ ವಪುರಜಾಯತ ॥ 18 ॥
ಕೌರವ-ಸೌವೀರ-ಸೈಂಧವರ ಸೈನ್ಯಕ್ಷಯವನ್ನು ನೋಡಿ, ಕವಚ-ಧ್ವಜ-ಶಸ್ತ್ರಗಳಿಂದ ಸಹಿತರಾದ ಯೋಧರು ಬಿದ್ದು ಭೂಮಿಯನ್ನು ಮುಚ್ಚಿರುವುದನ್ನು ನೋಡಿ, ಎಲ್ಲ ಕಡೆಗಳಲ್ಲಿಯೂ ಬಿದ್ದಿರುವ ಮೃತರಾದ ಗಜಾಶ್ವ-ಪದಾತಿಗಳ ದೇಹಗಳನ್ನು ನೋಡಿ, ಸೂತಪುತ್ರನ ದೇಹವು ಕೋಪದಿಂದ ಉರಿಯಿತು.
ಸ ವಿಸ್ಫಾರ್ಯ ಮಹಚ್ಚಾಪಂ ಕಾರ್ತಸ್ವರವಿಭೂಷಿತಮ್ |
ಭೀಮಂ ಪ್ರೈಕ್ಷತ ರಾಧೇಯೋ ರಾಜನ್ ಘೋರೇಣ ಚಕ್ಷುಷಾ ॥ 19 ॥
ಎಲೈ ರಾಜನೇ, ರಾಧೇಯನಾದ ಕರ್ಣನು ಸುವರ್ಣಭೂಷಿತವಾದ ತನ್ನ ದೊಡ್ಡ ಧನುಸ್ಸನ್ನು ಎಳೆದು ಘೋರವಾದ ದೃಷ್ಟಿಯಿಂದ ಭೀಮನನ್ನು ನೋಡಿದನು.

ತತಃ ಕ್ರುದ್ಧಃ ಶರಾನಸ್ಯನ್ ಸೂತಪುತ್ರೋ ವ್ಯರೋಚತ |
ಮಧ್ಯಂದಿನಗತೋಽರ್ಚಿಷ್ಮಾನ್ ಶರದೀವ ದಿವಾಕರಃ ॥ 20 ॥
ಆಗ ಕೋಪಗೊಂಡು ಬಾಣಗಳನ್ನು ಪ್ರಯೋಗಿಸುತ್ತಿದ್ದ ಸೂತಪುತ್ರನಾದ ಕರ್ಣನು ಶರತ್ಕಾಲದಲ್ಲಿ ಮಧ್ಯಂದಿನ (ಮಧ್ಯಾಹ್ನ) ಕಾಲದಲ್ಲಿನ ಕಿರಣಗಳಿಂದ ಕೂಡಿದ ಸೂರ್ಯನಂತೆ ಶೋಭಿಸಿದನು.
ಮರೀಚಿವಿಕಚಸ್ಯೇವ ರಾಜನ್ ಭಾನುಮತೋ ವಪುಃ |
ಆಸೀದಾಧಿರಥೇರ್ಘೋರಂ ವಪುಃ ಶರಶತಾರ್ಚಿಷಃ ॥ 21 ॥
ಎಲೈ ರಾಜನೇ, ಕಿರಣಗಳಿಂದ ತುಂಬಿದ ಸೂರ್ಯನ ದೇಹದಂತೆ ಅಧಿರಥನ ಪುತ್ರನಾದ ಕರ್ಣನ ದೇಹವು ನೂರಾರು ಬಾಣಗಳ ತೇಜಸ್ಸಿನಿಂದ ಕೂಡಿದುದಾಗಿ ಘೋರವಾಗಿದ್ದಿತು.
ಕರಾಭ್ಯಾಮಾದದಾನಸ್ಯ ಸಂದಧಾನಸ್ಯ ಚಾಶುಗಾನ್ |
ವಿಕರ್ಷತೋ ಮುಂಚತೋ ವಾ ನಾಂತರಂ ದದೃಶೂ ರಣೇ ॥ 22 ॥
ಹಸ್ತದಿಂದ ಬಾಣಗಳನ್ನು ತೆಗೆದುಕೊಳ್ಳುವ, ವೇಗಶಾಲಿಗಳಾದ ಬಾಣಗಳನ್ನು ಹೂಡುವ, ಹೆದೆಯನ್ನು ಎಳೆದು ಬಾಣಗಳನ್ನು ಪ್ರಯೋಗಿಸುವ ಮಧ್ಯದಲ್ಲಿ ಜನರು ಯಾವ ಅಂತರವನ್ನೂ ಕಾಣಲಿಲ್ಲ.
ಅಗ್ನಿಚಕ್ರೋಪಮಂ ಘೋರಂ ಮಂಡಲೀಕೃತಮಾಯುಧಮ್ |
ಕರ್ಣಸ್ಯಾಸೀನ್ಮಹಾರಾಜ ಸವ್ಯದಕ್ಷಿಣಮಸ್ಯತಃ ॥ 23 ॥
ಎಲೈ ಮಹಾರಾಜನೇ, ಎಡಭಾಗದಿಂದಲೂ ಮತ್ತು ಬಲಭಾಗದಿಂದಲೂ ಬಾಣಗಳನ್ನು ಪ್ರಯೋಗಿಸುವ ಕರ್ಣನ ಮಂಡಲಾಕಾರವಾದ ಧನುಸ್ಸು ಅಗ್ನಿಚಕ್ರದಂತೆ ಘೋರವಾಗಿದ್ದಿತು.
ಸ್ವರ್ಣಪುಂಖಾಃ ಸುನಿಶಿತಾಃ ಕರ್ಣಚಾಪಚ್ಯುತಾಃ ಶರಾಃ |
ಪ್ರಾಚ್ಛಾದಯನ್ ಮಹಾರಾಜ ದಿಶಃ ಸೂರ್ಯಸ್ಯ ಚ ಪ್ರಭಾಮ್ ॥24॥
ಎಲೈ ಮಹಾರಾಜನೇ, ಕರ್ಣನ ಧನುಸ್ಸಿನಿಂದ ಹೊರಹೊಮ್ಮಿದ, ಸ್ವರ್ಣ ಪುಂಖಗಳನ್ನು ಹೊಂದಿದ ಬಹಳ ತೀಕ್ಷ್ಣವಾದ ಬಾಣಗಳು ದಿಕ್ಕುಗಳನ್ನೂ ಮತ್ತು ಸೂರ್ಯನ ಪ್ರಭೆಯನ್ನೂ ಮುಚ್ಚಿದವು.
ತತಃ ಕನಕಪುಂಖಾನಾಂ ಶರಾಣಾಂ ನತಪರ್ವಣಾಮ್ |
ಧನುಶ್ಚ್ಯುತಾನಾಂ ವಿಯತಿ ದದೃಶೇ ಬಹುಧಾ ವ್ರಜಃ ॥ 25 ॥
ಆಗ ಬಾಗಿದ ತುದಿಯುಳ್ಳ, ಕನಕಪುಂಖಗಳನ್ನು ಹೊಂದಿದ, ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳ ಸಮೂಹಗಳು ಆಕಾಶದಲ್ಲಿ ಅನೇಕ ರೀತಿಯಲ್ಲಿ ಕಂಡುಬಂದವು.
ಶರಾಸನಾದಾಧಿರಥೇಃ ಪ್ರಭವಂತಃ ಸ್ಮ ಸಾಯಕಾಃ |
ಶ್ರೇಣೀಕೃತಾ ವ್ಯರಾಜಂತ ರಾಜನ್ ಕ್ರೌಂಚಾ ಇವಾಂಬರೇ ॥ 26 ॥
ಎಲೈ ರಾಜನೇ, ಕರ್ಣನ ಧನುಸ್ಸಿನಿಂದ ಹೊರಹೊಮ್ಮಿದ ಬಾಣಗಳು ಪಂಕ್ತಿ ಪಂಕ್ತಿಗಳಲ್ಲಿ ಆಕಾಶದಲ್ಲಿ ಚಲಿಸುವ ಕ್ರೌಂಚಪಕ್ಷಿಗಳ ಸಮೂಹದಂತೆ ವಿರಾಜಿಸಿದವು.
ಗಾರ್ಧ್ರಪತ್ರಾನ್ ಶಿಲಾಧೌತಾನ್ ಕಾರ್ತಸ್ವರವಿಭೂಷಿತಾನ್ |
ಮಹಾವೇಗಾನ್ ಪ್ರದೀಪ್ತಾಗ್ರಾನ್ ಮುಮೋಚಾಧಿರಥಿಃ ಶರಾನ್ ॥27॥
ಕರ್ಣನು ಗೃಧ್ರಪತ್ರವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಸುವರ್ಣ ಭೂಷಿತವಾದ, ಮಹಾವೇಗವುಳ್ಳ, ಜ್ವಲಿಸುವ ತುದಿಯುಳ್ಳ, ಬಾಣಗಳನ್ನು ಪ್ರಯೋಗಿಸಿದನು.
ತೇ ತು ಚಾಪಬಲೋದ್ಧೂತಾಃ ಶಾತಕುಂಭವಿಭೂಷಿತಾಃ |
ಅಜಸ್ರಮನ್ವಕೀರ್ಯಂತ ಶರಾಃ ಪಾರ್ಥರಥಂ ಪ್ರತಿ ॥ 28 ॥
ಧನುಸ್ಸಿನ ಬಲದಿಂದ ಮುಂದೆ ಸಾಗುವ, ಸ್ವರ್ಣವಿಭೂಷಿತವಾದ ಆ ಬಾಣಗಳು ಸತತವಾಗಿ ಭೀಮನ ರಥದ ಕಡೆಗೆ ಹೋಗುತ್ತಿದ್ದವು.
ತೇ ವ್ಯೋಮ್ನಿ ರತ್ನವಿಕೃತಾ ವ್ಯಕಾಶಂತ ಸಹಸ್ರಶಃ |
ಶಲಭಾನಾಮಿವ ವ್ರಾತಾಃ ಶರಾಃ ಕರ್ಣಸಮೀರಿತಾಃ ॥ 29 ॥
ಕರ್ಣನಿಂದ ಪ್ರಯೋಗಿಸಲ್ಪಟ್ಟ ರತ್ನಭೂಷಿತವಾದ ಸಹಸ್ರಾರು ಸಂಖ್ಯೆಯ ಬಾಣಗಳು ಆಕಾಶದಲ್ಲಿ ಪತಂಗಗಳ ಸಮೂಹದಂತೆ ವಿರಾಜಿಸಿದವು.
ಚಾಪಾದಾಧಿರಥೇರ್ಮುಕ್ತಾಃ ಪ್ರಪತಂತಃ ಸ್ಮ ಸಾಯಕಾಃ |
ಏಕೋ ದೀರ್ಘ ಇವ ಪ್ರಾಂಶುಃ ಪ್ರಭವನ್ ದೃಶ್ಯತೇ ಶರಃ ॥ 30 ॥
ಕರ್ಣನ ಧನುಸ್ಸಿನಿಂದ ಹೊರಟು ಒಂದರ ಹಿಂದೆ ಒಂದರಂತೆ ಹೋಗುವ ಬಾಣಗಳು ಒಂದೇ ದೀರ್ಘವಾದ ಬಾಣದಂತೆ ತೋರುತ್ತಿದ್ದವು.
ಪರ್ವತಂ ವಾರಿಧಾರಾಭಿಶ್ಛಾದಯನ್ನಿವ ತೋಯದಃ |
ಕರ್ಣಃ ಪ್ರಾಚ್ಛಾದಯತ್ ಕ್ರುದ್ಧೋ ಭೀಮಂ ಸಾಯಕವೃಷ್ಟಿಭಿಃ ॥ 31 ॥
ಮೋಡವು ಪರ್ವತವನ್ನು ನೀರಿನ ಧಾರೆಯಿಂದ ಮುಚ್ಚುವಂತೆ ಕೋಪಗೊಂಡ ಕರ್ಣನು ಭೀಮನನ್ನು ಬಾಣದ ಮಳೆಯಿಂದ ಮುಚ್ಚಿದನು.
ತತ್ರ ಭಾರತ ಭೀಮಸ್ಯ ಬಲವೀರ್ಯಪರಾಕ್ರಮಮ್ |
ವ್ಯವಸಾಯಂ ಚ ಪುತ್ರಾಸ್ತೇ ಪ್ರೈಕ್ಷಂತ ಕುರುಭಿಃ ಸಹ ॥ 32 ॥
ಎಲೈ ಭಾರತನೇ, ರಣರಂಗದಲ್ಲಿ ನಿನ್ನ ಪುತ್ರರು ಉಳಿದ ಕೌರವರ ಜೊತೆಯಲ್ಲಿ ಭೀಮನ ಬಲ-ಸಾಮರ್ಥ್ಯ ಆಗ ಪರಾಕ್ರಮಗಳನ್ನೂ,

ಅವನ ದೃಢವಾದ ನಿರ್ಧಾರವನ್ನೂ ನೋಡಿದರು.
ತಾಂ ಸಮುದ್ರಮಿವೋದ್ಧೂತಾಂ ಶರವೃಷ್ಟಿಂ ಸಮುತ್ಥಿತಾಮ್ |
ಅಚಿಂತಯಿತ್ವಾ ಭೀಮಸ್ತು ಕ್ರುದ್ಧಃ ಕರ್ಣಮುಪಾದ್ರವತ್ ॥ 33 ॥
ಕ್ಷೋಭೆಗೊಂಡ ಸಮುದ್ರದಂತೆ ಕರ್ಣನ ಬಾಣಗಳಿಂದ ಉಂಟಾದ ಆ ಬಾಣದ ಮಳೆಯನ್ನು ಗಣನೆಗೇ ತೆಗೆದುಕೊಳ್ಳದೆ ಭೀಮನು ಕ್ರುದ್ಧನಾಗಿ ಕರ್ಣನ ಕಡೆಗೆ ಧಾವಿಸಿದನು.
ರುಗ್ಮಪೃಷ್ಠಂ ಮಹಚ್ಚಾಪಂ ಭೀಮಸ್ಯಾಸೀದ್ ವಿಶಾಂಪತೇ |
ಆಕರ್ಷಾನ್ಮಂಡಲೀಭೂತಂ ಶಕ್ರಚಾಪಮಿವಾಪರಮ್ |
ತಸ್ಮಾಚ್ಛರಾಃ ಪ್ರಾದುರಾಸನ್ ಪೂರಯಂತ ಇವಾಂಬರಮ್ ॥ 34 ॥
ಎಲೈ ರಾಜನೇ, ಭೀಮನ ದೊಡ್ಡ ಧನುಸ್ಸು ಸುವರ್ಣಪೃಷ್ಠವನ್ನು ಹೊಂದಿದ್ದಿತು. ಅದನ್ನು ಎಳೆದಾಗ ಮಂಡಲಾಕಾರವಾದ ಅದು ಇನ್ನೊಂದು ಇಂದ್ರನ ಚಾಪದಂತೆ ತೋರುತ್ತಿದ್ದಿತು. ಆ ಧನುಸ್ಸಿನಿಂದ ಹೊರಟ ಬಾಣಗಳು ಆಕಾಶವನ್ನು ತುಂಬುವಂತೆ ತೋರುತ್ತಿದ್ದವು.
ಸುವರ್ಣಪುಂಖೈರ್ಭೀಮೇನ ಸಾಯಕೈರ್ನತಪರ್ವಭಿಃ |
ಗಗನೇ ರಚಿತಾ ಮಾಲಾ ಕಾಂಚನೀವ ವ್ಯರಾಜತ ॥ 35 ॥
ಭೀಮನು ಪ್ರಯೋಗಿಸಿದ ಸುವರ್ಣಪುಂಖವುಳ್ಳ, ಬಾಗಿದ ತುದಿಯುಳ್ಳ ಬಾಣಗಳು ಆಕಾಶದಲ್ಲಿ ಸುವರ್ಣಮಾಲೆಯಂತೆ ವಿರಾಜಿಸಿದವು.
ತತೋ ವ್ಯೋಮ್ನಿ ವಿಷಕ್ತಾನಿ ಶರಜಾಲಾನಿ ಭಾಗಶಃ |
ಆಹತಾನಿ ವ್ಯಶೀರ್ಯಂತ ಭೀಮಸೇನಸ್ಯ ಪತ್ರಿಭಿಃ ॥ 36 ॥
ಆಗ ಕರ್ಣನಿಂದ ಪ್ರಯೋಗಿಸಲ್ಪಟ್ಟು ಆಕಾಶದಲ್ಲಿದ್ದ ಬಾಣಗಳ ಸಮೂಹಗಳು ಭೀಮಸೇನನ ಬಾಣಗಳಿಂದ ಹೊಡೆಯಲ್ಪಟ್ಟು ಭಾಗಶಃ ನಾಶವನ್ನು ಹೊಂದಿದವು.
ಕರ್ಣಸ್ಯ ಶರಜಾಲೌಘೈರ್ಭೀಮಸೇನಸ್ಯ ಚೋಭಯೋಃ |
ಅಗ್ನಿಸ್ಫುಲಿಂಗಸಂಸ್ಪರ್ಶೈರಂಜೋಗತಿಭಿರಾಹವೇ |
ತೈಸ್ತೈಃ ಕನಕಪುಂಖಾನಾಂ ದ್ಯೌರಾಸೀತ್ ಸಂವೃತಾ ವ್ರಜೈಃ ॥ 37 ॥
ನೇರವಾಗಿ ಸಾಗುವ ಅಗ್ನಿಕಣಗಳಂತಹ ಉಗ್ರವಾದ ಸ್ಪರ್ಶವನ್ನು ಹೊಂದಿದ, ಕನಕಪುಂಖವುಳ್ಳ ಭೀಮಸೇನ ಮತ್ತು ಕರ್ಣನು ಪ್ರಯೋಗಿಸಿದ ಬಾಣಗಳ ಸಮೂಹದಿಂದ ಆಕಾಶವು ತುಂಬಿಹೋಯಿತು.
ಸ ಭೀಮಂ ಛಾದಯನ್ ಬಾಣೈಃ ಸೂತಪುತ್ರಃ ಪೃಥಗ್ವಿಧೈಃ |
ಉಪಾರೋಹದನಾದೃತ್ಯ ತಸ್ಯ ವೀರ್ಯಂ ಮಹಾತ್ಮನಃ ॥ 38 ॥
ಸೂತಪುತ್ರನಾದ ಕರ್ಣನು ವಿವಿಧವಾದ ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸುತ್ತಾ, ಮಹಾತ್ಮನಾದ ಅವನ ಪರಾಕ್ರಮವನ್ನು ಗಣನೆಗೇ ತಂದುಕೊಳ್ಳದೆ ಅವನ ಸಮೀಪಕ್ಕೆ ಬಂದನು.
ತಯೋರ್ವಿಸೃಜತೋಸ್ತತ್ರ ಶರಜಾಲಾನಿ ಮಾರಿಷ |
ವಾಯುಭೂತಾನ್ಯದೃಶ್ಯಂತ ಸಂಸಕ್ತಾನೀತರೇತರಮ್ ॥ 39 ॥
ಎಲೈ ಪೂಜ್ಯನೇ, ಅವರು ಪ್ರಯೋಗಿಸಿದ ಬಾಣಗಳು ಪರಸ್ಪರವಾಗಿ ಘಟ್ಟಿಸಿ ವಾಯುವಿನಿಂದ ಪ್ರೇರಿಸಲ್ಪಟ್ಟು ಅತಿವೇಗವುಳ್ಳವುಗಳಾಗಿ ಕಂಡುಬಂದವು.
ತಸ್ಮೈ ಕರ್ಣಃ ಶಿತಾನ್ ಬಾಣಾನ್ ಕರ್ಮಾರಪರಿಮಾರ್ಜಿತಾನ್ |
ಸುವರ್ಣವಿಕೃತಾನ್ ಕ್ರುದ್ಧಃ ಪ್ರಾಹಿಣೋದ್ ವಧಕಾಂಕ್ಷಯಾ ॥ 40 ॥
ಭೀಮಸೇನನ ಮೇಲೆ ಕರ್ಣನು ನಿಶಿತವಾದ, ಕಮ್ಮಾರರಿಂದ ತೊಳಸಲ್ಪಟ್ಟ, ಸುವರ್ಣಭೂಷಿತವಾದ ಬಾಣಗಳನ್ನು ಅವನ ವಧೆಯನ್ನು ಉದ್ದೇಶಿಸಿ ಕ್ರುದ್ಧನಾಗಿ ಪ್ರಯೋಗಿಸಿದನು.
ತಾನಂತರಿಕ್ಷೇ ವಿಶಿಖೈಸ್ತ್ರಿಧೈಕೈಕಮಶಾತಯತ್ |
ವಿಶೇಷಯನ್ ಸೂತಪುತ್ರಂ ಭೀಮಸ್ತಿಷ್ಠೇತಿ ಚಾಬ್ರವೀತ್ ॥ 41 ॥
ಭೀಮಸೇನನು ಕರ್ಣನಿಗಿಂತಲೂ ಅತಿಶಯವನ್ನು ತೋರಿಸುತ್ತಾ ಅಂತರಿಕ್ಷದಲ್ಲಿ ತನ್ನ ಬಾಣಗಳಿಂದ ಅವುಗಳನ್ನು ಒಂದೊಂದನ್ನೂ ಮೂರುಭಾಗವಾಗಿ ಕತ್ತರಿಸಿ ನಿಲ್ಲು ಎಂದು ಹೇಳಿದನು.
ಪುನಶ್ಚಾಸೃಜದುಗ್ರಾಣಿ ಶರವರ್ಷಾಣಿ ಪಾಂಡವಃ |
ಅಮರ್ಷೀ ಬಲವಾನ್ ಕ್ರುದ್ಧೋ ದಿಧಕ್ಷನ್ನಿವ ಪಾವಕಃ ॥ 42 ॥
ರೋಷಶೀಲನೂ, ಬಲಿಷ್ಠನೂ ಆದ ಪಾಂಡುಪುತ್ರನಾದ ಭೀಮಸೇನನು ದಹಿಸಲು ಬಯಸಿದ ಅಗ್ನಿಯಂತೆ ಪುನಃ ಘೋರವಾದ ಬಾಣಗಳ ಮಳೆಯನ್ನು ಸೃಷ್ಟಿಸಿದನು.
ತಕಶ್ಚಟಚಟಾಶಬ್ದೋ ಗೋಧಾಘಾತಾದಭೂತ್ ತಯೋಃ |
ತಲಶಬ್ದಶ್ಚ ಸುಮಹಾನ್ ಸಿಂಹನಾದಶ್ಚ ಭೈರವಃ |
ರಥನೇಮಿ ನಿನಾದಶ್ಚ ಜ್ಯಾಶಬ್ದಶ್ಚೈವ ದಾರುಣಃ ॥ 43 ॥
ಆಗ ಅವರಿಬ್ಬರೂ ಧರಿಸಿದ ಗೋಧ (ಉದ) ಚರ್ಮದ ಹಸ್ತರಕ್ಷೆಗಳಿಂದ (ಹೆದೆಯ ಹಿಂದೇಟನ್ನು ತಪ್ಪಿಸಲು ಹಸ್ತಕ್ಕೆ ಹಾಕಿಕೊಳ್ಳುವ ರಕ್ಷೆಗಳು- ಎಷ್ಟೃಥಿ) ಚಟಚಟ ಶಬ್ದವುಂಟಾಯಿತು. ದೊಡ್ಡ ಹಸ್ತತಳ ಶಬ್ದವೂ, ಭೀಕರವಾದ ಹಿಂಸ್ರನಾದವೂ, ರಥಚಕ್ರಗಳ ಶಬ್ದವೂ ಮತ್ತು ಹೆದೆಯ ಶಬ್ದವೂ ಉಂಟಾದವು.
ಯೋಧಾ ವ್ಯಪಾರಮನ್ ಯುದ್ಧಾದ್ ದಿದೃಕ್ಷಂತಃ ಪರಾಕ್ರಮಮ್ |

ಕರ್ಣಪಾಂಡವಯೋ ರಾಜನ್ ಪರಸ್ಪರವಧೈಷಿಣೋಃ ॥ 44 ॥
ಎಲೈ ರಾಜನೇ, ಪರಸ್ಪರ ವಧೆಯನ್ನು ಬಯಸುವ ಕರ್ಣ-ಪಾಂಡವರ ಪರಾಕ್ರಮವನ್ನು ನೋಡಲು ಬಯಸಿ ಉಳಿದ ಯೋಧರು ಯುದ್ಧವನ್ನು ನಿಲ್ಲಿಸಿದರು.
ದೇವರ್ಷಿಸಿದ್ಧಗಂಧರ್ವಾಃ ಸಾಧಾಸಾಧ್ವಿಶ್ಯಪೂಜಯನ್ |
ಮುಮುಚುಃ ಪುಷ್ಪವರ್ಷಂ ಚ ವಿದ್ಯಾಧರಗಣಾಸ್ತಥಾ ॥ 45 ॥
ದೇವರ್ಷಿ-ಸಿದ್ಧ-ಗಂಧರ್ವರು ಸಾಧು-ಸಾಧು ಎಂದು ಪೂಜಿಸಿದರು. ವಿದ್ಯಾಧರ ಗಣಗಳು ಪುಷ್ಪವೃಷ್ಟಿಯನ್ನು ಮಾಡಿದವು.
ತತೋ ಭೀಮೋ ಮಹಾಬಾಹುಃ ಸಂರಂಭೀ ದೃಢವಿಕ್ರಮಃ |
ಅಸ್ತ್ರೈರಸ್ತ್ರಾಣಿ ಸಂವಾರ್ಯ ಶರೈರ್ವಿವ್ಯಾಧ ಸೂತಜಮ್ ॥ 46 ॥
ಆಗ ಕ್ರುದ್ಧನೂ, ಮಹಾಬಾಹುವೂ, ದೃಢವಿಕ್ರಮವನ್ನು ಹೊಂದಿದವನೂ ಆದ ಭೀಮನು ತನ್ನ ಅಸ್ತ್ರಗಳಿಂದ ಕರ್ಣನ ಅಸ್ತ್ರಗಳನ್ನು ನಿವಾರಿಸಿ ಬಾಣಗಳಿಂದ ಅವನನ್ನು ಹೊಡೆದನು.
ಕರ್ಣೋಽಪಿ ಭೀಮಸೇನಸ್ಯ ನಿವಾರ್ಯೇಷೂನ್ ಮಹಾಬಲಃ |
ಪ್ರಾಹಿಣೋನ್ನವ ನಾರಾಚಾನಾಶೀವಿಷಸಮಾನ್ ರಣೇ ॥ 47 ॥
ಮಹಾಬಲನಾದ ಕರ್ಣನೂ ಸಹ ಭೀಮಸೇನನ ಬಾಣಗಳನ್ನು ನಿವಾರಿಸಿ ಸರ್ಪ ಸದೃಶವಾದ ಒಂಬತ್ತು ನಾರಾಚಗಳನ್ನು ರಣರಂಗದಲ್ಲಿ ಭೀಮನ ಮೇಲೆ ಪ್ರಯೋಗಿಸಿದನು.
ತಾವದ್ಭಿರಥ ತಾನ್ ಭೀಮೋ ವ್ಯೋಮ್ನಿ ಚಿಚ್ಛೇದ ಪತ್ರಿಭಿಃ |
ನಾರಾಚಾನ್ ಸೂತಪುತ್ರಸ್ಯ ತಿಷ್ಠತಿಷ್ಠೇತಿ ಚಾಬ್ರವೀತ್ ॥ 48 ॥
ಭೀಮನು ಅಷ್ಟೇ ಬಾಣಗಳಿಂದ ಕರ್ಣನ ನಾರಾಚಗಳನ್ನು ಆಕಾಶದಲ್ಲಿ ಕತ್ತರಿಸಿ ಅವನನ್ನು ಕುರಿತು ನಿಲ್ಲು, ನಿಲ್ಲು ಎಂದು ಹೇಳಿದನು.
ತತೋ ಭೀಮೋ ಮಹಾಬಾಹುಃ ಶರಂ ಕ್ರುದ್ಧಾಂತಕೋಪಮಮ್ |
ಮುಮೋಚಾಧಿರಥೇರ್ವೀರ್ಯೋ ಯಮದಂಡಮಿವಾಪರಮ್ ॥ 49 ॥
ಅನಂತರ ಮಹಾಬಾಹುವಾದ ಕೋಪಗೊಂಡ ಭೀಮನು ಯಮದಂಡದಂತಿದ್ದ ಘೋರವಾದ ಒಂದು ಬಾಣವನ್ನು ಕರ್ಣನ ಮೇಲೆ ಪ್ರಯೋಗಿಸಿದನು.
ತಮಾಪತಂತಂ ಚಿಚ್ಛೇದ ರಾಧೇಯಃ ಪ್ರಹಸನ್ನಿವ |
ತ್ರಿಭಿಃ ಶರೈಃ ಶರಂ ರಾಜನ್ ಪಾಂಡವಸ್ಯ ಪ್ರತಾಪವಾನ್ ॥ 50 ॥
ಎಲೈ ರಾಜನೇ, ಪ್ರತಾಪಶಾಲಿಯಾದ ಕರ್ಣನು ನಗುತ್ತಾ ತನ್ನ ಬಳಿಗೆ ಬರುತ್ತಿದ್ದ ಭೀಮಸೇನನ ಬಾಣವನ್ನು ಮೂರು ಬಾಣಗಳಿಂದ ಕತ್ತರಿಸಿದನು.
ಪುನಶ್ಚಾಸೃಜದುಗ್ರಾಣಿ ಶರವರ್ಷಾಣಿ ಪಾಂಡವಃ |
ತಸ್ಯ ತಾನ್ಯಾದದೇ ಕರ್ಣಃ ಸರ್ವಾಣ್ಯಸ್ತ್ರಾಣ್ಯಭೀತವತ್ ॥ 51 ॥
ಅನಂತರ ಭೀಮಸೇನನು ಉಗ್ರವಾದ ಬಾಣದ ಮಳೆಯನ್ನು ಸೃಷ್ಟಿಸಿದನು. ಕರ್ಣನು ಯಾವ ಭಯವೂ ಇಲ್ಲದೆ ಅವೆಲ್ಲವನ್ನೂ ಸ್ವೀಕರಿಸಿದನು.
ಯುಧ್ಯತಃ ಪಾಂಡುಪುತ್ರಸ್ಯ ಸೂತಪುತ್ರೋಽಸ್ತ್ರಮಾಯಯಾ |
ತಸ್ಯೇಷುಧೀ ಧನುರ್ಜ್ಯಾಂ ಚ ಬಾಣೈಃ ಸನ್ನತಪರ್ವಭಿಃ |
ರಶ್ಮೀನ್ ಯೋಕ್ತ್ರಾಣಿ ಚಾಶ್ವಾನಾಂ ಕರ್ಣೋ ವೈಕರ್ತನೋಽಚ್ಛಿನತ್ ॥
ಪಾಂಡುಪುತ್ರನಾದ ಭೀಮಸೇನನು ಯುದ್ಧವನ್ನು ಮಾಡುತ್ತಿರುವಂತೆಯೇ ಸೂತಪುತ್ರನಾದ ಕರ್ಣನು ತನ್ನ ಅಸ್ತ್ರದ ಸಾಮರ್ಥ್ಯದಿಂದ ಬಾಗಿದ ತುದಿಯುಳ್ಳ ಬಾಣಗಳಿಂದ ಅವನ ಬತ್ತಳಿಕೆಗಳನ್ನೂ, ಧನುಸ್ಸನ್ನೂ, ಹೆದೆಯನ್ನೂ, ಅಶ್ವದ ಕಡಿವಾಣವನ್ನೂ ಮತ್ತು ಕಡಗೂಟಗಳನ್ನೂ ಕತ್ತರಿಸಿದನು.
ತಸ್ಯಾಶ್ವಾಂಶ್ಚ ಪುನರ್ಹತ್ವಾ ಸೂತಂ ವಿವ್ಯಾಧ ಪಂಚಭಿಃ |
ಸೋಽವಪ್ಲುತ್ಯ ದ್ರುತಂ ಸೂತೋ ಯುಯುಧಾನರಥಂ ಯಯೌ॥53॥
ಪುನಃ ಭೀಮಸೇನನ ರಥದ ಅಶ್ವಗಳನ್ನು ಕೊಂದು ಅವನ ಸಾರಥಿಯನ್ನು ಐದು ಬಾಣಗಳಿಂದ ಹೊಡೆದನು. ಭೀಮಸೇನನ ಸಾರಥಿಯಾದ ವಿಶೋಕನು ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ ಸಾತ್ಯಕಿಯ ರಥಕ್ಕೆ ಹೋದನು.
ಉತ್ಸ್ಮಯನ್ನಿವ ಭೀಮಸ್ಯ ಕ್ರುದ್ಧಃ ಕಾಲಾನಲಪ್ರಭಃ |
ಧ್ವಜಂ ಚಿಚ್ಛೇದ ರಾಧೇಯಃ ಪತಾಕಾಶ್ಚ ನ್ಯಪಾತಯತ್ ॥ 54 ॥
ಕರ್ಣನು ಕ್ರುದ್ಧನಾಗಿ ಯುಗಾಂತಕಾಲದ ಅಗ್ನಿಯ ಕಾಂತಿಯನ್ನು ಹೊಂದಿ ನಗುತ್ತಲೇ ಭೀಮನ ಧ್ವಜವನ್ನು ಕತ್ತರಿಸಿ ಪತಾಕೆಗಳನ್ನು ಕೆಡವಿದನು.
ಸ ವಿಧನ್ವಾ ಮಹಾರಾಜ ರಥಶಕ್ತಿಂ ಪರಾಮೃಶತ್ |
ತಾಮವಾಸೃಜದಾವಿಧ್ಯ ಕ್ರುದ್ಧಃ ಕರ್ಣರಥಂ ಪ್ರತಿ ॥ 55 ॥
ಮಹಾರಾಜನೇ, ತನ್ನ ಧನುಸ್ಸನ್ನು ಕಳೆದುಕೊಂಡ ಭೀಮಸೇನನು ಶತ್ರುರಥವನ್ನು ಭೇದಿಸುವ ಶಕ್ತಿ ಎಂಬ ಆಯುಧ ವಿಶೇಷವನ್ನು ತೆಗೆದುಕೊಂಡು ಅದನ್ನು ತಿರುಗಿಸಿ ಕ್ರುದ್ಧನಾಗಿ ಕರ್ಣನ ರಥದ ಮೇಲೆ ಎಸೆದನು.
ತಾಮಾಧಿರಥಿರಾಯಸ್ತಃ ಶಕ್ತಿಂ ಹೇಮಪರಿಷ್ಕೃತಾಮ್ |
ಆಪತಂತೀಂ ಮಹೋಲ್ಕಾಭಾಂ ಚಿಚ್ಛೇದ ದಶಭಿಃ ಶರೈಃ ॥ 56 ॥

ಕೋಪಗೊಂಡ ಕರ್ಣನು ಮಹೋಲ್ಕೆಯಂತೆ ತನ್ನ ಕಡೆಗೆ ಬರುತ್ತಿದ್ದ ಸುವರ್ಣಭೂಷಿತವಾದ ಆ ಶಕ್ತಿಯನ್ನು ಹತ್ತು ಬಾಣಗಳಿಂದ ಕತ್ತರಿಸಿದನು.
ಸಾಪತದ್ ದಶಧಾ ರಾಜನ್ ನಿಕೃತ್ತಾ ಕರ್ಣಸಾಯಕೈಃ |
ಅಸ್ಯತಃ ಸೂತಪುತ್ರಸ್ಯ ಮಿತ್ರಾರ್ಥೇ ಚಿತ್ರಯೋಧಿನಃ ॥ 57 ॥
ತನ್ನ ಮಿತ್ರನ ಸಲುವಾಗಿ ವಿಚಿತ್ರ ಯುದ್ಧವನ್ನು ಮಾಡುವ ಕರ್ಣನ ಬಾಣಗಳಿಂದ ಕತ್ತರಿಸಲ್ಪಟ್ಟು, ಎಲೈ ರಾಜನೇ, ಆ ಶಕ್ತಿಯು ಹತ್ತುಭಾಗವಾಗಿ ಬಿದ್ದಿತು.
ಸ ಚರ್ಮಾದತ್ತ ಕೌಂತೇಯೋ ಜಾತರೂಪಪರಿಷ್ಕೃತಮ್ |
ಖಡ್ಗಂ ಚಾನ್ಯತರಪ್ರೇಪ್ಸುರ್ಮೃತ್ಯೋರಗ್ರೇ ಜಯಸ್ಯ ವಾ |
ತದಸ್ಯ ಸಹಸಾ ಕರ್ಣೋ ವ್ಯಧಮತ್ ಪ್ರಹಸನ್ನಿವ ॥ 58 ॥
ಕುಂತೀಪುತ್ರನಾದ ಭೀಮಸೇನನು ಮೃತ್ಯು ಅಥವಾ ಜಯಗಳಲ್ಲಿ ಯಾವುದನ್ನಾದರೂ ಬಯಸಿ ಸುವರ್ಣಭೂಷಿತವಾದ ಗುರಾಣಿ ಮತ್ತು ಖಡ್ಗವನ್ನು ತೆಗೆದುಕೊಂಡನು. ಕರ್ಣನು ನಗುತ್ತಾ ತಕ್ಷಣದಲ್ಲಿಯೇ ಆ ಗುರಾಣಿಯನ್ನು ಅವನ ಕೈಯಿಂದ ಹಾರಿಸಿದನು.
ಸ ವಿಚರ್ಮಾ ಮಹಾರಾಜ ವಿರಥಃ ಕ್ರೋಧಮೂರ್ಚ್ಛಿತಃ |
ಅಸಿಂ ಪ್ರಾಸೃಜದಾವಿಧ್ಯ ತ್ವರನ್ ಕರ್ಣರಥಂ ಪ್ರತಿ ॥ 59 ॥
ಎಲೈ ಮಹಾರಾಜನೇ, ಗುರಾಣಿಯನ್ನೂ ಮತ್ತು ರಥವನ್ನೂ ಕಳೆದುಕೊಂಡ ಭೀಮನು ಕ್ರೋಧಮೂರ್ಛಿತನಾಗಿ ಕೈಯಲ್ಲಿದ್ದ ಖಡ್ಗವನ್ನು ತಿರುಗಿಸಿ ಶೀಘ್ರವಾಗಿ ಕರ್ಣನ ರಥದ ಮೇಲೆ ಎಸೆದನು.
ಸ ಧನುಃ ಸೂತಪುತ್ರಸ್ಯ ಛಿತ್ತ್ವಾ ಜ್ಯಾಂ ಚ ಸುಸಂಶಿತಃ |
ಅಪತದ್ ಭುವಿ ನಿಸ್ತ್ರಿಂಶಶ್ಚ್ಯುತಃ ಸರ್ಪ ಇವಾಂಬರಾತ್ ॥ 60 ॥
ಅತ್ಯಂತ ನಿಶಿತವಾದ ಆ ಖಡ್ಗವು ಕರ್ಣನ ಧನುಸ್ಸನ್ನೂ ಮತ್ತು ಹೆದೆಯನ್ನೂ ಕತ್ತರಿಸಿ ಆಕಾಶದಿಂದ ಬಿದ್ದ ಸರ್ಪದಂತೆ ಭೂಮಿಯ ಮೇಲೆ ಬಿದ್ದಿತು.
ತತಃ ಪ್ರಹಸ್ಯಾಧಿರಥಿರನ್ಯದಾದತ್ತ ಕಾರ್ಮುಕಮ್ |
ಶತ್ರುಘ್ನಂ ಸಮರೇ ಕ್ರುದ್ಧೋ ದೃಢಜ್ಯಂ ವೇಗವತ್ತರಮ್ ॥ 61 ॥
ಆಗ ಕರ್ಣನು ನಕ್ಕು ಶತ್ರುವಿನಾಶಕವಾದ ದೃಢವಾದ ಹೆದೆಯುಳ್ಳ ಮೊದಲಿನ ಧನುಸ್ಸಿಗಿಂತಲೂ ವೇಗವತ್ತಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡನು.
ಸ ಭೀಮಸೇನಃ ಕುಪಿತೋ ಬಲವಾನ್ ಸತ್ಯವಿಕ್ರಮಃ |
ವಿಹಾಯಸಂ ಪ್ರಾಕ್ರಮದ್ವೈ ಕರ್ಣಸ್ಯ ರಥಮಾವಿಶತ್ ॥ 62 ॥
ಕೋಪಗೊಂಡವನೂ, ಬಲಿಷ್ಠನೂ, ಸತ್ಯವಾದ ಪರಾಕ್ರಮವುಳ್ಳ, ಭೀಮಸೇನನು ಆಕಾಶದಲ್ಲಿ ಹಾರಿ ಕರ್ಣನ ರಥವನ್ನು ಬಂದು ಸೇರಿದನು.
ತಸ್ಯ ತಚ್ಚರಿತಂ ದೃಷ್ಟ್ವಾ ಸಂಗ್ರಾಮೇ ವಿಜಯೈಷಿಣಃ |
ಧ್ವಜಾಲಯಸ್ಥೋ ರಾಧೇಯೋ ಭೀಮಸೇನಮವಂಚಯತ್ ॥ 63 ॥
ಯುದ್ಧದಲ್ಲಿ ವಿಜಯವನ್ನು ಬಯಸುವ ಅವನ ಆ ಚರ್ಯೆಯನ್ನು ನೋಡಿ ಕರ್ಣನು ಹೆದರಿ ರಥದ ಧ್ವಜದ ಮೂಲೆಯಲ್ಲಿ ಅಡಗಿಕೊಂಡು ಭೀಮಸೇನನನ್ನು ವಂಚಿಸಿದನು.
ತಮದೃಷ್ಟ್ವಾ ರಥೋಪಸ್ಥೇ ನಿಲೀನಂ ವ್ಯಥಿತೇಂದ್ರಿಯಮ್ |
ಧ್ವಜಮಸ್ಯ ಸಮಾಸಾದ್ಯ ತಸ್ಥೌ ಸ ಧರಣೀತಳೇ ॥ 64 ॥
ಭೀಮಸೇನನು ತನ್ನ ಬಾಣಗಳಿಂದ ಪೀಡಿತನಾಗಿ ಅವಿತುಕೊಂಡಿದ್ದ ಅವನನ್ನು ರಥಪೀಠದಲ್ಲಿ ಕಾಣದೆ ಅವನ ರಥದ ಧ್ವಜದ ಹತ್ತಿರ ರಣರಂಗದಲ್ಲಿ ಬಂದು ನಿಂತನು.
ತದಸ್ಯ ಕುರವಃ ಸರ್ವೇ ಚಾರಣಾಶ್ಚಾಭ್ಯಪೂಜಯನ್ |
ಯದಿಯೇಷ ರಥಾತ್ ಕರ್ಣಂ ಹಂತುಂ ತಾರ್ಕ್ಷ್ಯ ಇವೋರಗಮ್ ॥
ಕರ್ಣನ ರಥವನ್ನು ಏರಿ ಗರುಡನು ಸರ್ಪವನ್ನು ಕೊಲ್ಲಲು ಬಯಸಿದಂತೆ ಅವನನ್ನು ಕೊಲ್ಲಲು ಬಯಸಿದ ಅವನ ಆ ಪರಾಕ್ರಮವನ್ನು ಎಲ್ಲ ಕುರುಗಳು ಮತ್ತು ಚಾರಣರು ಪೂಜಿಸಿದರು.
ಸ ಛಿನ್ನಧನ್ವಾ ವಿರಥಃ ಸ್ವಧರ್ಮಮನುಪಾಲಯನ್ |
ಸ್ವರಥಂ ಪೃಷ್ಠತಃ ಕೃತ್ವಾ ಯುದ್ಧಾಯೈವ ವ್ಯವಸ್ಥಿತಃ ॥ 66 ॥
ತನ್ನ ಧನುಸ್ಸು ಕತ್ತರಿಸಲ್ಪಟ್ಟು ರಥವನ್ನೂ ಕಳೆದುಕೊಂಡಿದ್ದರೂ ಕ್ಷತ್ರಿಯಧರ್ಮವನ್ನು ಪಾಲಿಸುತ್ತಾ ಭೀಮಸೇನನು ತನ್ನ ರಥವನ್ನೂ ಧಿಕ್ಕರಿಸಿ ಯುದ್ಧಕ್ಕಾಗಿಯೇ ನಿಂತನು.
ತದ್ವಿಹತ್ಯಾಸ್ಯ ರಾಧೇಯಸ್ತತ ಏನಂ ಸಮಭ್ಯಯಾತ್ |
ಸಂರಬ್ಧಃ ಪಾಂಡವಂ ಸಂಖ್ಯೇ ಯುದ್ಧಾಯ ಸಮುಪಸ್ಥಿತಮ್ ॥ 67 ॥
ಕರ್ಣನು ತನ್ನ ರಥಕ್ಕೆ ತನ್ನನ್ನು ಹಿಡಿಯಲು ಬಂದ ಭೀಮನಿಂದ ತಪ್ಪಿಸಿಕೊಂಡು ಯುದ್ಧಕ್ಕೆ ಸನ್ನದ್ಧನಾಗಿ ನಿಂತ ಭೀಮಸೇನನ ಮೇಲೆ ಕ್ರುದ್ಧನಾಗಿ ಎರಗಿದನು (ಲಕ್ಷ್ಯಾಲಂಕಾರ).
ತೌ ಸಮೇತೌ ಮಹಾರಂಗೇ ಸ್ಪರ್ಧಮಾನೌ ಮಹಾಬಲೌ |
ಜೀಮೂತಾವಿವ ಘರ್ಮಾಂತೇ ಗರ್ಜಮಾನೌ ನಭಸ್ತಳೇ ॥ 68 ॥
ಮಹಾರಂಗದಲ್ಲಿ ಪರಸ್ಪರವಾಗಿ ಸ್ಪರ್ಧಿಸುವ ಮಹಾಬಲರಾದ ಅವರಿಬ್ಬರೂ ಬೇಸಿಗೆಯು ಕಳೆದ ಮೇಲೆ ಆಕಾಶದಲ್ಲಿ ಗರ್ಜಿಸುವ

ಮೋಡಗಳಂತೆ ಪರಸ್ಪರವಾಗಿ ಸಂಧಿಸಿದರು.
ತಯೋರಾಸೀತ್ ಸಂಪ್ರಹಾರಃ ಕ್ರುದ್ಧಯೋರ್ನರಸಿಂಹಯೋಃ |
ಅಮೃಷ್ಯಮಾಣಯೋಃ ಸಂಖೇ ದೇವದಾನವಯೋರಿವ ॥ 69 ॥
ಒಬ್ಬರನ್ನೊಬ್ಬರು ಸಹಿಸದ, ನರಶ್ರೇಷ್ಠರಾದ ಅವರು ಕೋಪಗೊಂಡು ಮಾಡಿದ ಸಂಪ್ರಹಾರವು ಯುದ್ಧದಲ್ಲಿ ದೇವ-ದಾನವರ ಸಂಪ್ರಹಾರದಂತೆ ಇದ್ದಿತು.
ಕ್ಷೀಣಶಸ್ತ್ರಸ್ತು ಕೌಂತೇಯಃ ಕರ್ಣೇನ ಸಮಭಿದ್ರುತಃ |
ದೃಷ್ಟ್ವಾರ್ಜುನಹತಾನ್ ನಾಗಾನ್ ಪತಿತಾನ್ ಪರ್ವತೋಪಮಾನ್ |
ರಥಮಾರ್ಗವಿಘಾತಾರ್ಥಂ ವ್ಯಾಯುಧಃ ಪ್ರವಿವೇಶ ಹ ॥ 70 ॥
ಶಸ್ತ್ರಹೀನನಾದ ಭೀಮನು ಕರ್ಣನಿಂದ ತಾನು ಹಿಂಬಾಲಿಸಲ್ಪಡುವುದನ್ನು ನೋಡಿ ಅವನ ರಥವನ್ನು ತಡೆಯಲು ಅರ್ಜುನನಿಂದ ಹತವಾದ, ರಣಭೂಮಿಯಲ್ಲಿ ಬಿದ್ದಿದ್ದ, ಪರ್ವತಸದೃಶವಾದ ಗಜಗಳ ಸಮೂಹವನ್ನು ಪ್ರವೇಶಿಸಿದನು.
ಹಸ್ತಿನಾಂ ವ್ರಜಮಾಸಾದ್ಯ ರಥದುರ್ಗಂ ಪ್ರವಿಶ್ಯ ಚ |
ಪಾಂಡವೋ ಜೀವಿತಾಕಾಂಕ್ಷೀ ರಾಧೇಯಂ ನಾಭ್ಯಹಾರಯತ್ ॥ 71 ॥
ಗಜಗಳ ಸಮೂಹವನ್ನು, ಹಾಗೆಯೇ ಮುರಿದ ರಥಗಳ ಸಮೂಹವನ್ನು ಪ್ರವೇಶಿಸಿದ ಜೀವಿತಾಕಾಂಕ್ಷಿಯಾದ ಪಾಂಡವನು ಕರ್ಣನನ್ನು ಹೊಡೆಯಲಿಲ್ಲ.
ವ್ಯವಸ್ಥಾನಮಥಾಕಾಂಕ್ಷನ್ ಧನಂಜಯಶರೈರ್ಹತಮ್ |
ಉದ್ಯಮ್ಯ ಕುಂಜರಂ ಪಾರ್ಥಸ್ತಸ್ಥೌ ಪರಪುರಂಜಯಃ ॥ 72 ॥
ರಣರಂಗದಲ್ಲಿ ನಿಲ್ಲಲು ಬಯಸಿ ಧನಂಜಯನಿಂದ ಹತವಾದ ಗಜವನ್ನು ಎತ್ತಿ ಹಿಡಿದು ಪರಪುರಂಜಯನಾದ ಭೀಮನು ರಣರಂಗದಲ್ಲಿ ನಿಂತನು.
ತಮಸ್ಯ ವಿಶಿಖೈಃ ಕರ್ಣೋ ವ್ಯಧಮತ್ ಕುಂಜರಂ ಪುನಃ |
ಹಸ್ತ್ಯಂಗಾನ್ಯಥ ಕರ್ಣಾಯ ಪ್ರಾಹಿಣೋತ್ ಪಾಂಡವೋ ನದನ್ ॥73॥
ಕರ್ಣನು ತನ್ನ ನಿಶಿತವಾದ ಬಾಣಗಳಿಂದ ಅವನ ಕೈಯಲ್ಲಿದ್ದ ಮೃತ ಕುಂಜರವನ್ನು ಪುಡಿ ಮಾಡಿದನು. ಆಗ ಭೀಮಸೇನನು ಗರ್ಜನೆಯನ್ನು ಮಾಡುತ್ತಾ ಅಶ್ವಗಳ ಅಂಗಗಳನ್ನು ಕರ್ಣನ ರಥದ ಮೇಲೆ ಎಸೆದನು.
ಚಕ್ರಾಣ್ಯಶ್ವಾಂಸ್ತಥಾ ವಾಹಾನ್ ಯದ್ಯತ್ ಪಶ್ಯತಿ ಭೂತಳೇ |
ತತ್ತದಾದಾಯ ಚಿಕ್ಷೇಪ ಕ್ರುದ್ಧಃ ಕರ್ಣಾಯ ಪಾಂಡವಃ ॥ 74 ॥
ಭೀಮಸೇನನು ಕ್ರುದ್ಧನಾಗಿ ರಥದ ಚಕ್ರಗಳನ್ನೂ, ಮೃತವಾದ ಅಶ್ವಗಳನ್ನೂ, ಭೂತಳದಲ್ಲಿ ಏನೇನು ಕಾಣುತ್ತವೆಯೋ ಅವೆಲ್ಲವನ್ನೂ ತೆಗೆದುಕೊಂಡು ಕರ್ಣನ ಮೇಲೆ ಎಸೆದನು.
ತದಸ್ಯ ಸರ್ವಂ ಚಿಚ್ಛೇದ ಕ್ಷಿಪ್ತಂ ಕ್ಷಿಪ್ತಂ ಶಿತೈಃ ಶರೈಃ |
ವ್ಯಾಯುಧಂ ನಾವಧೀಚ್ಚೈನಂ ಕರ್ಣಃ ಕುಂತ್ಯಾ ವಚಃ ಸ್ಮರನ್ ॥ 75 ॥
ಭೀಮಸೇನನು ಎಸೆದಂತೆ ಎಸೆದಂತೆ ಎಲ್ಲವನ್ನೂ ಕರ್ಣನು ತನ್ನ ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಕುಂತಿಯ ಮಾತನ್ನು ಸ್ಮರಿಸಿದ ಕರ್ಣನು ಭೀಮಸೇನನು ಆಯುಧ ರಹಿತನಾಗಿದ್ದರೂ ಅವನನ್ನು ಕೊಲ್ಲಲಿಲ್ಲ (ಕೊಲ್ಲಲು ಬಯಸಲಿಲ್ಲ).
ಧನುಷೋಽಗ್ರೇಣ ತಂ ಕರ್ಣಸ್ತ್ವಭಿದ್ರುತ್ಯ ಪರಾಮೃಶತ್ |
ಉತ್ಸ್ಮಯನ್ನಿವ ರಾಧೇಯೋ ಭೀಮಸೇನಮುವಾಚ ಹ ॥ 76 ॥
ಆಗ ಕರ್ಣನು ಭೀಮಸೇನನ ಬಳಿಗೆ ಬಂದು ಧನುಸ್ಸಿನ ಒಂದು ಕೋಟಿ (ತುದಿ)ಯನ್ನು ಅವನ ಕೊರಳಿಗೆ ಹಾಕಿ ನಗುತ್ತಾ ಭೀಮಸೇನನನ್ನು ಕುರಿತು ಹೇಳಿದನು.
ಪುನಃ ಪುನಸ್ತೂಬರಕ ಮೂಢ ಔದರಿಕೇತಿ ಚ |
ಅಕೃತಾಸ್ತ್ರಕ ಮಾ ಯೋತ್ಸೀರ್ಬಾಲ ಸಂಗ್ರಾಮಕಾತರ ॥ 77 ॥
ತೂಬರಕ (ಗಲ್ಲದಲ್ಲಿ ಮಾತ್ರ ಗಡ್ಡವಿದ್ದವನು), ಮೂಢ, ಹೊಟ್ಟೆಬಾಕ, ಅಸ್ತ್ರಜ್ಞಾನ ಶೂನ್ಯನಾದವನೇ, ಯುದ್ಧಕ್ಕೆ ಹೆದರುವವನೇ, ಬಾಲನೇ ಯುದ್ಧವನ್ನು ಮಾಡಬೇಡ ಎಂದು ಪುನಃ ಪುನಃ ಹೇಳಿದನು.
ಯತ್ರ ಭೋಜ್ಯಂ ಬಹುವಿಧಂ ಭಕ್ಷ್ಯಂ ಪೇಯಂ ಚ ಪಾಂಡವ |
ತತ್ರ ತ್ವಂ ದುರ್ಮತೇ ಯೋಗ್ಯೋ ನ ಯುದ್ಧೇಷು ಕಥಂಚನ ॥ 78 ॥
ಎಲೈ ಪಾಂಡವನೇ, ಎಲ್ಲಿ ಬಹುವಿಧವಾದ ಭಕ್ಷ್ಯ-ಭೋಜ್ಯಗಳು ಮತ್ತು ಪೇಯವು ಇರುತ್ತವೆಯೋ, ಎಲೈ ದುರ್ಮತಿಯೇ ನೀನು ಅಲ್ಲಿ ಯೋಗ್ಯನಾಗಿರುತ್ತೀಯೆ. ಯುದ್ಧಗಳಲ್ಲಿ ನಿನಗೆ ಯೋಗ್ಯತೆ ಇಲ್ಲ.
ಮುನಿಭಿರ್ಭೂತ್ವಾಥ ವಾ ಭೀಮ ಫಲಾನ್ಯಾದತ್ಸ್ವ ದುರ್ಮತೇ |
ವನಾಯ ವ್ರಜ ಕೌಂತೇಯ ನ ತ್ವಂ ಯುದ್ಧವಿಶಾರದಃ ॥ 79 ॥
ಎಲೈ ದುರ್ಮತಿಯಾದ ಭೀಮನೇ, ಅಥವಾ ರುಚಿಯಾಗಿ ಫಲಗಳನ್ನು ತಿನ್ನು. ಕೌಂತೇಯನೇ, ಕಾಡಿಗೆ ಹೋಗು. ನೀನು ಯುದ್ಧವಿಶಾರದನಲ್ಲ.
ಫಲಮೂಲಾಶನೇ ಯುಕ್ತಸ್ತ್ವಂ ತಥಾಽತಿಥಿಭೋಜನೇ |
ನ ತ್ವಾಂ ಶಸ್ತ್ರಸಮುದ್ಯೋಗೇ ಯೋಗ್ಯಂ ಮನ್ಯೇ ವೃಕೋದರ ॥ 80 ॥
ಎಲೈ ವೃಕೋದರನೇ, ನೀನು ಫಲ-ಮೂಲಗಳನ್ನು ತಿನ್ನಲು ಯೋಗ್ಯನಾದವನು. ಹಾಗೆಯೇ ಅತಿಥಿಯಾಗಿ ಭೋಜನವನ್ನು ಮಾಡಲು ಯೋಗ್ಯನಾದವನು. ಎಲೈ ವೃಕೋದರನೇ, ಶಸ್ತ್ರಸಮುದ್ಯೋಗದಲ್ಲಿ ನಿನಗೆ ಯೋಗ್ಯತೆ ಇಲ್ಲವೆಂದು ನಾನು ಭಾವಿಸುತ್ತೇನೆ.

ಪುಷ್ಪಮೂಲಫಲಾಹಾರೋ ವ್ರತೇಷು ನಿಯಮೇಷು ಚ |
ಉಚಿತಸ್ತ್ವಂ ವನೇ ಭೀಮ ನ ತ್ವಂ ಯುದ್ಧವಿಶಾರದಃ ॥ 81 ॥
ಎಲೈ ಭೀಮನೇ, ನೀನು ಗೆಡ್ಡೆ-ಗೆಣಸುಗಳನ್ನೂ, ಪುಷ್ಪಗಳನ್ನೂ ತಿಂದು ಕಾಡಿನಲ್ಲಿ ವ್ರತನಿಯಮವನ್ನು ಮಾಡಲು ಯೋಗ್ಯನಾಗಿದ್ದೀಯೆ. ನೀನು ಯುದ್ಧವಿಶಾರದನಲ್ಲ.
ಕ್ವ ಯುದ್ಧಂ ಕ್ವ ಮುನಿತ್ವಂ ಚ ವನಂ ಗಚ್ಛ ವೃಕೋದರ |
ನ ತ್ವಂ ಯುದ್ಧೋಚಿತಸ್ತಾತ ವನವಾಸರತಿರ್ಭವ ॥ 82 ॥
ಎಲೈ ವೃಕೋದರನೇ, ಎಲ್ಲಿಯ ಯುದ್ಧ? ಮುನಿಯಾದ ನೀನು ಎಲ್ಲಿ? ನೀನು ಕಾಡಿಗೆ ಹೋಗು. ಎಲೈ ಪ್ರೀತಿಪಾತ್ರನೇ, ನೀನು ಯುದ್ಧಕ್ಕೆ ಅರ್ಹನಲ್ಲ. ವನವಾಸವನ್ನು ಮಾಡುವವನಾಗು.
ಸೂದಾನ್ ಭೃತ್ಯಜನಾನ್ ದಾಸಾಂಸ್ತ್ವಂ ಗೃಹೇ ತ್ವರಯನ್ ಭೃಶಮ್ |
ಯೋಗ್ಯಸ್ತಾಡಯಿತುಂ ಕ್ರೋಧಾದ್ ಭೋಜನಾರ್ಥಂ ವೃಕೋದರ ॥83॥
ಎಲೈ ವೃಕೋದರನೇ, ನೀನು ಮನೆಯಲ್ಲಿ ಅಡುಗೆಮಾಡುವವರನ್ನೂ, ಸೇವಕರನ್ನೂ, ದಾಸರನ್ನೂ ತ್ವರೆ ಮಾಡುತ್ತಾ ಕೋಪದಿಂದ ಅವರಿಗೆ ಹೊಡೆಯಲು ಯೋಗ್ಯನಾಗಿದ್ದೀಯೆ (ಎಂದು ಹೇಳಿದನು).
ಸಂಜಯಃ
ಕೌಮಾರೇ ಯಾನಿ ಚಾಪ್ಯಾಸನ್ನಪ್ರಿಯಾಣಿ ವಿಶಾಂಪತೇ |
ಪೂರ್ವವೃತ್ತಾನಿ ಚಾಪ್ಯೇನಂ ರೂಕ್ಷಾಣ್ಯಶ್ರಾವಯದ್ ಭೃಶಮ್ ॥ 84 ॥
ಸಂಜಯ ಎಲೈ ರಾಜನೇ, ಬಾಲ್ಯದಲ್ಲಿ ನಡೆದ ಅಪ್ರಿಯ ಘಟನೆಗಳನ್ನು ಮತ್ತು ಉಗ್ರವಾದ ಮಾತುಗಳನ್ನು ಅವನಿಗೆ ಕರ್ಣನು ಜ್ಞಾಪಿಸಿದನು.
ಅಥೈನಂ ತತ್ರ ಸಂಲೀನಮಸ್ಪೃಶದ್ ಧನುಷಾ ಪುನಃ |
ಪ್ರಹಸಂಶ್ಚ ಪುನರ್ವಾಕ್ಯಂ ಭೀಮಮಾಹ ವೃಷಸ್ತದಾ ॥ 85 ॥
ಅನಂತರ ಅಲ್ಲಿಯೇ ಹಾಗೆ ನಿಂತಿದ್ದ ಭೀಮನನ್ನು ಧನುಸ್ಸಿನ ತುದಿಯನ್ನು ಮುಟ್ಟುತ್ತಾ ನಗುತ್ತಾ ಪುನಃ ಭೀಮನನ್ನು ಕುರಿತು ಮಾತನಾಡಿದನು.
ಯೋದ್ಧವ್ಯಮಾವಿಶಾನ್ಯತ್ರ ನ ಯೋದ್ಧವ್ಯಂ ತು ಮಾದೃಶೈಃ |
ಮಾದೃಶೈರ್ಯುಧ್ಯಮಾನಾನಾಮೇತಚ್ಚಾನ್ಯಚ್ಚ ವಿದ್ಯತೇ ॥ 86 ॥
ಯುದ್ಧವನ್ನು ಮಾಡಬೇಕಾದರೆ ಬೇರೆ ಕಡೆಗೆ ಹೋಗು. ನನ್ನಂತಹವರ ಜೊತೆಯಲ್ಲಿ ಯುದ್ಧವನ್ನು ಮಾಡಬಾರದು. ನನ್ನಂತಹವರ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ನಿನ್ನ ಕಂಠದಲ್ಲಿ ಧನುಸ್ಸನ್ನು ಹಾಕುವುದು ಮತ್ತು ವಧೆಯನ್ನು ಮಾಡುವುದೂ ಸಹ ಉಂಟಾಗುತ್ತದೆ.
ಗಚ್ಛ ವಾ ಯತ್ರ ತೌ ಕೃಷ್ಣೌ ತೌ ತ್ವಾ ರಕ್ಷಿಷ್ಯತೋ ರಣೇ |
ಗೃಹಂ ವಾ ಗಚ್ಛ ಕೌಂತೇಯ ಕಿಂ ತೇ ಯುದ್ಧೇನ ಬಾಲಕ ॥ 87 ॥
ಅಥವಾ ಎಲ್ಲಿ ಕೃಷ್ಣಾರ್ಜುನರಿದ್ದಾರೆಯೋ ಅಲ್ಲಿಗೆ ಹೋಗು. ಅವರು ನಿನ್ನನ್ನು ಯುದ್ಧದಲ್ಲಿ ರಕ್ಷಿಸುವರು. ಎಲೈ ಕುಂತೀಪುತ್ರನೇ, ಅಥವಾ ಮನೆಗಾದರೂ ಹೋಗು. ಬಾಲಕನೇ, ನಿನಗೆ ಯುದ್ಧದಿಂದ ಏನಾಗಬೇಕು?
ಸಂಜಯಃ
ಏವಂ ತಂ ವಿರಥಂ ಕೃತ್ವಾ ಕರ್ಣೋ ರಾಜನ್ ವ್ಯಕತ್ಥತ |
ಪ್ರಮುಖೇ ವೃಷ್ಣಿಸಿಂಹಸ್ಯ ಪಾರ್ಥಸ್ಯ ಚ ಮಹಾತ್ಮನಃ ॥ 88 ॥
ಸಂಜಯ ಹೀಗೆ ಕರ್ಣನು ಭೀಮಸೇನನನ್ನು ವಿರಥನನ್ನಾಗಿ ಮಾಡಿ ಮಹಾತ್ಮನಾದ ವೃಷ್ಣಿಸಿಂಹನಾದ ಕೃಷ್ಣನ ಮತ್ತು ಅರ್ಜುನನ ಎದುರಿನಲ್ಲಿ ತನ್ನ ಪ್ರತಾಪವನ್ನೇ ತಾನು ಹೊಗಳಿಕೊಂಡನು.
ತತೋ ರಾಜನ್ ಶಿಲಾಧೌತಾನ್ ಶರಾನ್ ಶಾಖಾಮೃಗಧ್ವಜಃ |
ಪ್ರಾಹಿಣೋತ್ ಸೂತಪುತ್ರಾಯ ಕೇಶವೇನ ಪ್ರಚೋದಿತಃ ॥ 89 ॥
ಆಗ ಕೃಷ್ಣನಿಂದ ಪ್ರೇರಿಸಲ್ಪಟ್ಟ ಕಪಿಧ್ವಜನಾದ ಅರ್ಜುನನು ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು.
ತತಃ ಪಾರ್ಥಭುಜೋತ್ಸೃಷ್ಟಾಃ ಶರಾಃ ಕಾಂಚನಭೂಷಣಾಃ |
ಗಾಂಡೀವಪ್ರಭವಾಃ ಕರ್ಣಂ ಹಂಸಾಃ ಕ್ರೌಂಚಮಿವಾವಿಶನ್ ॥ 90 ॥
ಆಗ ಪಾರ್ಥನ ಭುಜದಿಂದ ಎಳೆದು ಬಿಡಲ್ಪಟ್ಟ, ಗಾಂಡೀವದಿಂದ ಹೊರಹೊಮ್ಮಿದ ಸ್ವರ್ಣಭೂಷಿತವಾದ ಬಾಣಗಳು ಹಂಸಗಳು ಕ್ರೌಂಚ ಪರ್ವತವನ್ನು ಪ್ರವೇಶಿಸಿದಂತೆ ಕರ್ಣನನ್ನು ಪ್ರವೇಶಿಸಿದವು.
ಸ ಭುಜಂಗೈರಿವಾಯಸ್ತೈರ್ಗಾಂಡೀವಪ್ರೇಷಿತೈಃ ಶರೈಃ |
ಭೀಮಸೇನಾದಪಾಸೇಧತ್ ಸೂತಪುತ್ರಂ ಧನಂಜಯಃ ॥ 91 ॥
ಅರ್ಜುನನು ಕೋಪಗೊಂಡ ಸರ್ಪಗಳಂತಿದ್ದ ತಾನು ಪ್ರಯೋಗಿಸಿದ ಬಾಣಗಳಿಂದ ಕರ್ಣನನ್ನು ಭೀಮಸೇನನನ್ನು ಬಿಟ್ಟು ಬೇರೆ ಕಡೆಗೆ ತಿರುಗಿಸಿ ಅವನು ಪಲಾಯನ ಮಾಡುವಂತೆ ಮಾಡಿದನು.
ಸ ಛಿನ್ನಧನ್ವಾ ಭೀಮೇನ ಧನಂಜಯಶರಾಹತಃ |
ಕರ್ಣೋ ಭೀಮಾದಪಾಯಾಸೀದ್ ರಥೇನ ಮಹತಾ ದ್ರುತಮ್ ॥92॥
ಭೀಮನಿಂದ ತನ್ನ ಧನುಸ್ಸು ಕತ್ತರಿಸಲ್ಪಟ್ಟು, ಅರ್ಜುನನ ಬಾಣಗಳಿಂದ ಪೀಡಿತನಾದ ಕರ್ಣನು ತನ್ನ ದೊಡ್ಡ ರಥದಿಂದ ಶೀಘ್ರವಾಗಿ

ಭೀಮನನ್ನು ಬಿಟ್ಟು ಬೇರೆ ಕಡೆಗೆ ಹೋದನು.
ಭೀಮೋಽಪಿ ಸಾತ್ಯಕೇರ್ವಾಹಂ ಸಮಾರುಹ್ಯ ನರರ್ಷಭಃ |
ಅನ್ವಯಾದ್ ಭ್ರಾತರಂ ಸಂಖ್ಯೇ ಪಾಂಡವಂ ಸವ್ಯಸಾಚಿನಮ್ ॥ 93 ॥
ನರಶ್ರೇಷ್ಠನಾದ ಭೀಮನೂ ಸಹ ಸಾತ್ಯಕಿಯ ರಥವನ್ನು ಏರಿ ತನ್ನ ತಮ್ಮನಾದ ಪಾಂಡುಪುತ್ರನಾದ ಅರ್ಜುನನನ್ನು ರಣರಂಗದಲ್ಲಿ ಹಿಂಬಾಲಿಸಿದನು.
ತತಃ ಕರ್ಣಂ ಸಮುದ್ದಿಶ್ಯ ತ್ವರಮಾಣೋ ಧನಂಜಯಃ |
ನಾರಾಚಂ ಕ್ರೋಧತಾಮ್ರಾಕ್ಷಃ ಪ್ರೈಷೀನ್ಮೃತ್ಯುಮಿವಾಂತಕಃ ॥ 94 ॥
ಆಗ ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಅರ್ಜುನನು ತ್ವರೆ ಮಾಡುತ್ತಾ ಮೃತ್ಯುವಿನಂತೆ ಪ್ರಾಣಾಪಹಾರಿಯಾದ ನಾರಾಚವನ್ನು ಕರ್ಣನ ಮೇಲೆ ಪ್ರಯೋಗಿಸಿದನು.
ಸ ಗರುತ್ಮಾನಿವಾಕಾಶೇ ಪ್ರಾರ್ಥಯನ್ ಭುಜಗೋತ್ತಮಮ್ |
ನಾರಾಚೋಽಭ್ಯಪತತ್ ಕರ್ಣಂ ತೂರ್ಣಂ ಗಾಂಡೀವಚೋದಿತಃ ॥95॥
ಗಾಂಡೀವ ಧನುಸ್ಸಿನಿಂದ ಹೊರಹೊಮ್ಮಿದ ಆ ನಾರಾಚವು ಸರ್ಪವನ್ನು ಬಯಸುವ ಆಕಾಶದಲ್ಲಿರುವ ಗರುಡನಂತೆ ಶೀಘ್ರವಾಗಿ ಕರ್ಣನ ಮೇಲೆ ಬಿದ್ದಿತು.
ತಮಂತರಿಕ್ಷೇ ನಾರಾಚಂ ದ್ರೌಣಿಶ್ಚಿಚ್ಛೇದ ಪತ್ರಿಣಾ |
ಧನಂಜಯಭಯಾತ್ ಕರ್ಣಮುಜ್ಜಿಹೀರ್ಷುರ್ಮಹಾರಥಃ ॥ 96 ॥
ಆಗ ಮಹಾರಥರಾದ ಅಶ್ವತ್ಥಾಮರು ಧನಂಜಯನ ಭಯದಿಂದ ಕರ್ಣನನ್ನು ಉದ್ಧಾರ ಮಾಡಲು ಬಯಸಿ ಒಂದು ಬಾಣದಿಂದ ಆ ನಾರಾಚವನ್ನು ಕತ್ತರಿಸಿದರು.
ತತೋ ದ್ರೌಣಿಂ ಚತುಃಷಷ್ಟ್ಯಾ ವಿವ್ಯಾಧ ಕುಪಿತೋಽರ್ಜುನಃ |
ಶಿಲೀಮುಖೈರ್ಮಹಾರಾಜ ಮಾ ಗಾಸ್ತಿಷ್ಠೇತಿ ಚಾಬ್ರವೀತ್ ॥ 97 ॥
ಎಲ್ಲೈ ಮಹಾರಾಜನೇ, ಆಗ ಕೋಪಗೊಂಡ ಅರ್ಜುನನು ಅಶ್ವತ್ಥಾಮರನ್ನು ಅರವತ್ನಾಲ್ಕು ಬಾಣಗಳಿಂದ ಹೊಡೆದು ಹೋಗಬೇಡಿ, ನಿಲ್ಲಿ ಎಂದು ಹೇಳಿದನು.
ಸ ತು ಮತ್ತಗಜಾಕೀರ್ಣಮನೀಕಂ ರಥಸಂಕುಲಮ್ |
ತೂರ್ಣಮಭ್ಯಾವಿಶದ್ ದ್ರೌಣಿರ್ಧನಂಜಯಶರಾರ್ದಿತಃ ॥ 98 ॥
ಅರ್ಜುನನ ಬಾಣಗಳಿಂದ ಪೀಡಿತರಾದ ಅಶ್ವತ್ಥಾಮರು ಮದಿಸಿದ ಗಜಗಳಿಂದಲೂ, ರಥಸಮೂಹದಿಂದಲೂ ಕೂಡಿದ ಕೌರವಸೇನೆಯನ್ನು ಶೀಘ್ರವಾಗಿ ಪ್ರವೇಶಿಸಿದರು.
ತತಃ ಸುವರ್ಣಪೃಷ್ಠಾನಾಂ ಧನುಷಾಂ ಕೂಜತಾಂ ರಣೇ |
ಶಬ್ದಂ ಗಾಂಡೀವಘೋಷೇಣ ಕೌಂತೇಯೋಽಭ್ಯಭವದ್ ಬಲೀ ॥ 99 ॥
ಆಗ ಯುದ್ಧದಲ್ಲಿ ಕೇಳಿ ಬರುತ್ತಿದ್ದ ಸುವರ್ಣಪೃಷ್ಠವುಳ್ಳ ಧನುಸ್ಸುಗಳ ನಾದಗಳನ್ನು ಕುಂತೀಪುತ್ರನಾದ ಬಲಿಷ್ಠನಾದ ಅರ್ಜುನನು ಗಾಂಡೀವ ಘೋಷದಿಂದ ಸೋಲಿಸಿದನು (ಮುಚ್ಚಿಹಾಕಿದನು).
ಧನಂಜಯಸ್ತಥಾ ಯಾಂತಂ ಪೃಷ್ಠತೋ ದ್ರೌಣಿಮಭ್ಯಯಾತ್ |
ನಾತಿದೀರ್ಘಮಿವಾಧ್ವಾನಂ ಶರೈಃ ಸಂತ್ರಾಸಯನ್ ಬಲಮ್ ॥ 100 ॥
ಅಶ್ವತ್ಥಾಮರು ಹಾಗೆ ಹೋಗುತ್ತಿರಲು ಅರ್ಜುನನು ತನ್ನ ಬಾಣಗಳಿಂದ ಕೌರವ ಸೇನೆಯನ್ನು ಭಯಗೊಳಿಸುತ್ತಾ ಸ್ವಲ್ಪ ದೂರ ಅವರನ್ನು ಹಿಂಬಾಲಿಸಿದನು.
ವಿದಾರ್ಯ ದೇಹಾನ್ ನಾರಾಚೈರ್ನರವಾರಣವಾಜಿನಾಮ್ |
ಕಂಕಬರ್ಹಿಣವಾಸೋಭಿರ್ಬಲಂ ವ್ಯಧಮದರ್ಜುನಃ ॥ 101 ॥
ಗಜ-ಅಶ್ವ-ಯೋಧರ ದೇಹಗಳನ್ನು ಕಂಕಪಕ್ಷಿಯ ಗರಿಗಳನ್ನು ಹೊಂದಿದ ನಾರಾಚಗಳಿಂದ ಸೀಳಿ ಅರ್ಜುನನು ಕೌರವಸೇನೆಯನ್ನು ನಾಶಗೊಳಿಸಿದನು.
ತದ್ಬಲಂ ಭರತಶ್ರೇಷ್ಠ ಸವಾಜಿದ್ವಿಪಮಾನವಮ್ |
ಪಾಕಶಾಸನಿರಾಯಸ್ತಃ ಪಾರ್ಥಃ ಸನ್ನಿಜಘಾನ ಹ ॥ 102 ॥
ಎಲ್ಲೈ ಭರತಶ್ರೇಷ್ಠನೇ, ಕೋಪಗೊಂಡ ಇಂದ್ರಪುತ್ರನಾದ ಅರ್ಜುನನು ಅಶ್ವ-ಗಜ- ಮಾನವರಿಂದ ಕೂಡಿದ ಆ ಸೈನ್ಯವನ್ನು ಚೆನ್ನಾಗಿ ಮರ್ದಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರ್ವಿಂಶತ್ಯಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಅಷ್ಟಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೈದನೆಯ ಅಧ್ಯಾಯ
ಸಾತ್ಯಕಿಯಿಂದ ಅಲಂಬುಸನ ವಧೆ.
ಧೃತರಾಷ್ಟ್ರಃ

ದಾತವ್ಯಮದ್ಯಮಂಯೇಽಹಂ ಪಾಂಡವಾನಾಂ ಸ್ವಕಂ ಪುನಃ |
ನ ವಿಗ್ರಹೋ ಹಿ ಬಲಿನಾ ಶ್ರೇಯಸೇ ಸ್ಯಾದ್ ಯಥಾತಥಾ ॥ 1 ॥
ಧೃತರಾಷ್ಟ್ರ, ಈ ದಿನ ಪಾಂಡವರಿಗೆ ಅವರ ದ್ರವ್ಯವನ್ನು ಹಿಂದಿರುಗಿಸಬೇಕೆಂದು ಭಾವಿಸುತ್ತೇನೆ. ಬಲಿಷ್ಠರ ಜೊತೆಯಲ್ಲಿ ವಿರೋಧವು ಎಂದೂ ಶ್ರೇಯಸ್ಸನ್ನು ಉಂಟು ಮಾಡುವುದಿಲ್ಲ.
ಪಾದಯೋಃ ಪ್ರಣತೇನಾಪಿ ಭುಕತತ್ವಪ್ಯುಚ್ಛಿಷ್ಟಮಪ್ಯರೇಃ |
ಅತೋಽನ್ಯದ್ವಾಪಿ ಕೃತ್ವೈವ ಜೀವ್ಯಂ ಲೋಕೇ ನರೇಣ ಚ ॥ 2 ॥
ಮನುಷ್ಯನಾದವನು ಶತ್ರುಗಳ ಪಾದಗಳಿಗೆ ನಮಸ್ಕಾರ ಮಾಡಿಯಾಗಲೀ, ಅವನ ಉಚ್ಛಿಷ್ಟವನ್ನು ಭುಂಜಿಸಿಯೇ ಆಗಲಿ ಅಥವಾ ಬೇರೆ ಏನನ್ನಾದರೂ ಮಾಡಿಯಾಗಲೀ ಲೋಕದಲ್ಲಿ ಜಯಿಸಬೇಕು.
ಜೀವತ್ಯೆನ ಪರೋ ಲೋಕಃ ಸಾಧ್ಯತೇ ಚೈವ ಸರ್ವಥಾ |
ಅಜೀವತ ಸ್ತಥೈವಾಸೀನ್ನ ಸುಖಂ ನ ಪರಾಗತಿಃ ॥ 3 ॥
ಬದುಕಿರುವ ಮನುಷ್ಯನು ಮಾತ್ರ ಸರ್ವಥಾ ಪರಲೋಕಸಾಧನೆಯನ್ನು ಮಾಡಬಹುದು. ಬದುಕದಿದ್ದರೆ ನರಕ ಸಾಧನೆಯೂ ಇಲ್ಲ, ಸ್ವರ್ಗಸಾಧನೆಯೂ ಇಲ್ಲ.
ವಿನಾಶೇ ಸರ್ವಥೋತ್ಪನ್ನೇ ನ ಬಾಲೋ ಬುಧ್ಯತೇ ಕ್ರಿಯಾಂ |
ಮಿಥ್ಯಾಭಿಮಾನದಗ್ಧೋ ಹಿ ನ ಬುದ್ಧ್ಯೇತ ಕೃತಾಕೃತೇ ॥ 4 ॥
ಎಲೈ ಪ್ರೀತಿಪಾತ್ರನೇ, ಸರ್ವವಿನಾಶವು ಪ್ರಾಪ್ತವಾದಾಗ ಮಿಥ್ಯಾಹಂಕಾರದಿಂದ ಕೂಡಿದ ಬಾಲಕನು ಅದಕ್ಕೆ ಮಾಡಬೇಕಾದ ಪ್ರತಿಕ್ರಿಯೆಯನ್ನು ತಿಳಿಯುವುದಿಲ್ಲ. ವಿವೇಕಿಯಾದವನು ಮಾತ್ರ ಅಂತಹ ಪ್ರಸಂಗಗಳು ಬಂದಂತೆ ಬರದಂತೆ ಮಾಡಬೇಕಾದ ಪ್ರತಿಕ್ರಿಯೆಯನ್ನು ತಿಳಿಯುತ್ತಾನೆ.
ಅಹನ್ಯಹನಿ ಮೇ ದೀಪ್ತಂ ಯಶಃ ಪತತಿ ಸಂಜಯ |
ಹತಾ ಮೇ ಬಹವೋ ಯೋಧಾ ಮನ್ಯೇ ಕಾಲಸ್ಯ ಪರ್ಯಯಮ್ ॥5॥
ಎಲೈ ಸಂಜಯನೇ, ಪ್ರತಿದಿವಸವೂ ಬೆಳಗುತ್ತಿದ್ದ ನನ್ನ ಕೀರ್ತಿಯು ನಾಶ ಹೊಂದುತ್ತಿದೆ. ನನ್ನ ಅನೇಕ ಯೋಧರು ಹತರಾಗಿದ್ದಾರೆ. ಇದನ್ನು ಕಾಲ ಗತಿ ಎಂದು ಭಾವಿಸುತ್ತೇನೆ.
ಧನಂಜಯಸ್ತು ಸಂಕ್ರುದ್ಧಃ ಪ್ರವಿಷ್ಟೋ ಮಾಮಕಂ ಬಲಮ್ |
ರಕ್ಷಿತಂ ದ್ರೋಣಕರ್ಣಾಭ್ಯಾಮಪ್ರವೇಶ್ಯಂ ಸುರೈರಪಿ ॥ 6 ॥
ದ್ರೋಣ-ಕರ್ಣರಿಂದ ರಕ್ಷಿತವಾದ, ದೇವತೆಗಳಿಂದಲೂ ಪ್ರವೇಶ ಮಾಡಲು ಸಾಧ್ಯವಿಲ್ಲದ, ನನ್ನ ಸೈನ್ಯವನ್ನು ಕೋಪಗೊಂಡ ಅರ್ಜುನನು ಪ್ರವೇಶಿಸಿದ್ದಾನೆ.
ತಾಭ್ಯಾಮೂರ್ಜಿತವೀರ್ಯಾಭ್ಯಾಮಾಪ್ಯಾಯಿತಪರಾಕ್ರಮಃ |
ಸಹಿತಃ ಕೃಷ್ಣಭೀಮಾಭ್ಯಾಂ ಶಿನೀನಾಮೃಷಭೇಣ ಚ ॥ 7 ॥
ಉನ್ನತ ಸಾಮರ್ಥ್ಯವುಳ್ಳ ಕೃಷ್ಣ-ಭೀಮರಿಂದಲೂ ಮತ್ತು ಶಿನಿಪ್ರವೀರನಾದ ಸಾತ್ಯಕಿಯಿಂದಲೂ ಅಭಿವೃದ್ಧಿ ಹೊಂದಿದ ಪರಾಕ್ರಮವುಳ್ಳವನಾಗಿದ್ದಾನೆ.
ತದಾ ಪ್ರಭೃತಿ ಮಾ ಶೋಕೋ ದಹತ್ಯಗ್ನಿರಿವಾಶಯಮ್ |
ಗ್ರಸ್ತಾನ್ ಹಿ ಪ್ರತಿಪಶ್ಯಾಮಿ ಭೂಮಿಪಾಲಾನ್ ಸಸೈಂಧವಾನ್ ॥ 8 ॥
ಆಗಿನಿಂದಲೂ ನನ್ನ ಶೋಕವು ಅಗ್ನಿಯು ಆಶಯವನ್ನು ಸುಡುವಂತೆ ನನ್ನನ್ನು ದಹಿಸುತ್ತಿದೆ. ಸೈಂಧವನಿಂದ ಸಹಿತರಾದ ಎಲ್ಲ ರಾಜರೂ ಅರ್ಜುನನಿಂದ ವಿನಾಶಗೊಂಡಿದ್ದಾರೆ ಎಂದು ಕಾಣುತಿತದ್ದೇನೆ.
ಅಪ್ರಿಯಂ ಸುಮಹತ್ ಕೃತ್ವಾ ಸಿಂಧುರಾಜಃ ಕಿರೀಟಿನಃ |
ಚಕ್ಷುರ್ವಿಷಯಮಾಪನ್ನಃ ಕಥಂ ಮುಚ್ಯೇತ ಜೀವಿತಃ ॥ 9 ॥
ಅರ್ಜುನನಿಗೆ ಅಷ್ಟು ದೊಡ್ಡ ಅಪ್ರಿಯವನ್ನು ಮಾಡಿದ ಸೈಂಧವನು ಅರ್ಜುನನಿಗೆ ದೃಷ್ಟಿಗೋಚರನಾಗಿ ಹೇಗೆ ಜೀವಸಹಿತನಾಗಿ ಬಿಡುಗಡೆಯನ್ನು ಹೊಂದಿಯಾನು?
ಅನುಮಾನಾಚ್ಚ ಪಶ್ಯಾಮಿ ನಾಸ್ತಿ ಸಂಜಯ ಸೈಂಧವಃ |
ಯುದ್ಧಂ ತು ತದ್ಯಥಾ ವೃತ್ತಂ ತನ್ಮಮಾಚಕ್ಷ ್ವ ಪೃಚ್ಛತಃ ॥ 10 ॥
ಅಶ್ವತ್ಥಾಮ-ಕರ್ಣನಂತಹವರೇ ಅರ್ಜುನನ ಭಯದಿಂದ ಓಡಿಹೋದಮೇಲೆ ನಾನು ಸೈಂಧವನು ಇಲ್ಲವೆಂದು ಅನುಮಾನದಿಂದ ತಿಳಿಯುತ್ತಿದ್ದೇನೆ. ಎಲೈ ಸಂಜಯನೇ, ನನ್ನ ಪ್ರಶ್ನೆಗೆ ಉತ್ತರವಾಗಿ ಯುದ್ಧವು ಹೇಗೆ ನಡೆಯಿತೆಂದು ನನಗೆ ಹೇಳು.
ಯಚ್ಚ ವಿಕ್ಷೋಭ್ಯ ಮಹತೀಂ ಸೇನಾಂ ಸಂಲೋಡ್ಯ ಚಾಸಕೃತ್ |
ಏಕಃ ಪ್ರವಿಷ್ಟಃ ಸಂಕ್ರುದ್ಧೋ ನಳಿನೀಮಿವ ಕುಂಜರಃ ॥ 11 ॥
ತಸ್ಯ ವೃಷ್ಣಿಪ್ರವೀರಸ್ಯ ಬ್ರೂಹಿ ಯುದ್ಧಂ ಯಥಾತಥಮ್ |
ಧನಂಜಯಾರ್ಥೇ ಯತ್ತಸ್ಯ ಕುಶಲೋ ಹ್ಯಸಿ ಸಂಜಯ ॥ 12 ॥
ಯಾವ ಒಬ್ಬನು ಕೋಪಗೊಂಡು ನಮ್ಮ ದೊಡ್ಡ ಸೈನ್ಯವನ್ನು ಪ್ರವೇಶಿಸಿ ಆನೆಯು ಪದ್ಮಸರೋವರವನ್ನು ಕ್ಷೋಭೆಗೊಳಿಸಿದಂತೆ ಪುನಃ ಪುನಃ ಕ್ಷೋಭೆಗೊಳಿಸಿದನೋ ಅಂತಹ ಅರ್ಜುನನಿಗೆ ಸಹಾಯ ಮಾಡಲು ದೃಢವಾಗಿ ಪ್ರಯತ್ನ ಮಾಡುವ, ವೃಷ್ಣಿವೀರನಾದ ಸಾತ್ಯಕಿಯ ಯುದ್ಧವನ್ನು ಸರಿಯಾಗಿ ಹೇಳು. ಎಲೈ ಸಂಜಯನೇ, ನೀನು ಕುಶಲನಾಗಿದ್ದೀಯೆ.
ಸಂಜಯಃ
ತಥಾ ತು ವೈಕರ್ತನಪೀಡಿತಂ ತಂ

ಭೀಮಂ ಪ್ರಯಾಂತಂ ಪುರುಷಪ್ರವೀರಮ್ |
ಸಮೀಕ್ಷ್ಯ ರಾಜನ್ ನರವೀರಮಧ್ಯೇ
ಶಿನಿಪ್ರವೀರೋಽನುಯಯೌ ರಥೇನ ॥ 13 ॥
ಸಂಜಯ ರಾಜನೇ, ಕರ್ಣನಿಂದ ಪೀಡಿತನಾಗಿ ಹಾಗೆ ಹೋಗುತ್ತಿದ್ದ ಪುರುಷಶ್ರೇಷ್ಠನಾದ ಭೀಮಸೇನನನ್ನು ನೋಡಿ ಸಾತ್ಯಕಿಯು ಆ ನರವೀರರ ಮಧ್ಯದಲ್ಲಿ ತನ್ನ ರಥದಿಂದ ಅವನನ್ನು ಹಿಂಬಾಲಿಸಿದನು.
ನದನ್ ಯಥಾ ವಜ್ರಧರಸ್ತಪಾಂತೇ
ಜ್ವಲನ್ ಯಥಾ ಜಲದಾಂತೇ ಚ ಸೂರ್ಯಃ |
ನಿಘ್ನನ್ನಮಿತ್ರಾನ್ ಧನುಷಾ ದೃಢೇನ
ಸಂಕಂಪಯಂಸ್ತವ ಪುತ್ರಸ್ಯ ಸೇನಾಮ್ ॥ 14 ॥
ತಂ ಯಾಂತಮಶ್ವೈ ರಜತಪ್ರಕಾಶೈ-
ರಾಯೋಧನೇ ನರವೀರಂ ಚರಂತಮ್ |
ನಾಶಕ್ನುವನ್ ವಾರಯಿತುಂ ತ್ವದೀಯಾಃ
ಸರ್ವೇ ರಥಾ ಭಾರತ ಮಾಧವಾಗ್ರ್ಯಮ್ ॥ 15 ॥
ಬೇಸಿಗೆಯ ಅನಂತರದ ಮಳೆಗಾಲದಲ್ಲಿ ವಜ್ರಧರನಾದ ಇಂದ್ರನು ಮೇಘಗಳಿಂದ ಗರ್ಜಿಸುವಂತೆ, ಮಳೆಗಾಲದ ಅನಂತರದ ಶರತ್ಕಾಲದಲ್ಲಿ ಸೂರ್ಯನು ಜ್ವಲಿಸುವಂತೆ ತನ್ನ ದೃಢವಾದ ಧನುಸ್ಸಿನಿಂದ ಶತ್ರುಗಳನ್ನು ಕೊಲ್ಲುತ್ತಾ, ನಿನ್ನ ಪುತ್ರನ ಸೇನೆಯನ್ನು ನಡುಗಿಸುತ್ತಾ, ರಣರಂಗದಲ್ಲಿ ರಜತವರ್ಣದ ಅಶ್ವಗಳನ್ನು ಹೂಡಿದ ರಥದಲ್ಲಿ ಸಾಗುವ ಆ ನರಶ್ರೇಷ್ಠನಾದ ಮಧುಕುಲದಲ್ಲಿ ಜನಿಸಿದ ಸಾತ್ಯಕಿಯನ್ನು ಎಲೈ ಭಾರತನೇ, ನಿನ್ನ ಮಹಾರಥರೆಲ್ಲರೂ ಸೇರಿದರೂ ತಡೆಯಲು ಸಾಧ್ಯವಾಗಲಿಲ್ಲ.
ಅಮರ್ಷಪೂರ್ಣಸ್ತ್ವನಿವೃತ್ತಯೋಧೀ
ಶರಾಸನೀ ಕಾಂಚನವರ್ಮಧಾರೀ |
ಅಲಂಬುಸಃ ಸಾತ್ಯಕಿಂ ಮಾಧವಾಗ್ರ್ಯ-
ಮವಾರಯದ್ ರಾಜವರೋಽಭಿಪತ್ಯ ॥ 16 ॥
ಆಗ ರೋಷಯುಕ್ತನಾದವನೂ, ಯುದ್ಧದಿಂದ ಹಿಮ್ಮೆಟ್ಟದವನೂ, ಸುವರ್ಣ ಕವಚವನ್ನು ಧರಿಸಿ ಕೈಯಲ್ಲಿ ಧನುಸ್ಸನ್ನು ಹಿಡಿದ ರಾಜಶ್ರೇಷ್ಠನೂ ಆದ ಅಲಂಬುಸನು ಮಾಧವ ಶ್ರೇಷ್ಠನಾದ ಸಾತ್ಯಕಿಯ ಎದುರಿಗೆ ಬಂದು ಅವನನ್ನು ತಡೆದನು.
ತಯೋರಭೂದ್ ಭಾರತ ಸಂಪ್ರಹಾರ-
ಸ್ತಥಾಗತೋ ನೈವ ಬಭೂವ ಕಶ್ಚಿತ್ |
ಪ್ರೈಕ್ಷಂತ ಏವಾಹವಶೋಭಿನೌ ತೌ
ಯೋಧಾಸ್ತ್ವದೀಯಾಶ್ಚ ಪರೇ ಚ ಸರ್ವೇ ॥ 17 ॥
ಎಲೈ ಭಾರತನೇ, ಅವರಿಗೆ ದೊಡ್ಡ ಯುದ್ಧವು ನಡೆಯಿತು. ಅಂತಹ ಯುದ್ಧವು ಹಿಂದೆ ಎಂದೂ ನಡೆದಿರಲಿಲ್ಲ. ನಿನ್ನ ಮತ್ತು ಪಾಂಡವರ ಎಲ್ಲ ಯೋಧರೂ ಯುದ್ಧದಲ್ಲಿ ಶೋಭಿಸುವ ಅವರನ್ನು ನೋಡುತ್ತಾ ನಿಂತರು.
ಅವಿದ್ಧ್ಯದೇನಂ ದಶಭಿಃ ಪೃಷತ್ಕೈ-
ರಲಂಬುಸೋ ರಾಜವರಃ ಪ್ರಸಹ್ಯ |
ಅನಾಗತಾನೇವ ತು ತಾನ್ ಪೃಷತ್ಕಾನ್
ಚಿಚ್ಛೇದ ಬಾಣೈಃ ಶಿನಿಪುಂಗವೋಽಪಿ ॥ 18 ॥
ರಾಜಶ್ರೇಷ್ಠನಾದ ಅಲಂಬುಸನು ಹತ್ತು ಬಾಣಗಳಿಂದ ಸಾತ್ಯಕಿಯನ್ನು ಬಲವಾಗಿ ಹೊಡೆದನು. ಶಿನಿಪುಂಗವನಾದರೂ ಆ ಬಾಣಗಳು ತನ್ನನ್ನು ತಲುಪುವುದಕ್ಕಿಂತ ಮೊದಲೇ ಅವುಗಳನ್ನು ತನ್ನ ಬಾಣಗಳಿಂದ ಕತ್ತರಿಸಿದನು.
ಪುನಃ ಸ ಬಾಣೈಸ್ತ್ರಿಭಿರಗ್ನಿಕಲ್ಪೈ-
ರಾಕರ್ಣಪೂರ್ಣೈರ್ನಿಶಿತೈಃ ಸುಪುಂಖೈಃ |
ವಿವ್ಯಾಧ ದೇಹಾವರಣಂ ವಿದಾರ್ಯ
ತೇ ಸಾತ್ಯಕೇರಾವಿವಿಶುಃ ಶರೀರಮ್ ॥ 19 ॥
ಪುನಃ ಅಲಂಬುಸನು ಒಳ್ಳೆಯ ಪುಂಖಗಳನ್ನು ಹೊಂದಿದ್ದ ಅಗ್ನಿಸದೃಶವಾದ ಮೂರು ನಿಶಿತವಾದ ಬಾಣಗಳನ್ನು ಹೆದೆಯನ್ನು ಕಿವಿಯವರೆಗೂ ಎಳೆದು ಪ್ರಯೋಗಿಸಿದನು. ಅವು ಸಾತ್ಯಕಿಯ ಕವಚವನ್ನು ಭೇದಿಸಿ ಅವನ ಶರೀರವನ್ನು ಪ್ರವೇಶಿಸಿದವು.
ತೈಃ ಕಾಯಮಸ್ಯಾಗ್ನ್ಯನಿಲಪ್ರಭಾವೈ-
ರ್ವಿದಾರ್ಯ ಬಾಣೈರಪರೈರ್ಜ್ವಲದ್ಭಿಃ |
ಆಜಘ್ನಿವಾಂಸ್ತಾನ್ ರಜತಪ್ರಕಾಶಾ-
ನಶ್ವಾಂಶ್ಚತುರ್ಭಿಶ್ಚತುರಃ ಪ್ರಸಹ್ಯ ॥ 20 ॥
ಅವುಗಳಿಂದಲೂ ಮತ್ತು ಜ್ವಲಿಸುವ ಬೇರೆ ಸೂರ್ಯಾಗ್ನಿ ಸದೃಶವಾದ ದೀಪ್ತವಾದ ಬಾಣಗಳಿಂದಲೂ ಅವನ ಶರೀರವನ್ನು ಭೇದಿಸಿ ಅಲಂಬುಸನು ನಾಲ್ಕು ಬಾಣಗಳಿಂದ ರಜತವರ್ಣದ ಅವನ ನಾಲ್ಕು ಅಶ್ವಗಳನ್ನು ಬಲವಾಗಿ ಹೊಡೆದನು.
ತಥಾ ತು ತೇನಾಭಿಹತಸ್ತರಸ್ವೀ
ನಪ್ತಾ ಶಿನೇಶ್ಚಕ್ರಧರಪ್ರಭಾವಃ |
ಅಲಂಬುಸಸ್ಯೋತ್ತಮವೇಗವದ್ಭಿ-

ಹಯಾಂಶ್ಚತುರ್ಭಿರ್ನಿಜಘಾನ ಬಾಣೈಃ ॥ 21 ॥
ಆ ರೀತಿಯಲ್ಲಿ ಅವನಿಂದ ಹೊಡೆಯಲ್ಪಟ್ಟ ವೇಗಶಾಲಿಯೂ, ಕೃಷ್ಣನಿಗೆ ಸದೃಶವಾದ ಪ್ರಭಾವವನ್ನು ಹೊಂದಿದವನೂ ಆದ ಸಾತ್ಯಕಿಯು ಉತ್ತಮ ವೇಗವನ್ನು ಹೊಂದಿದ ನಾಲ್ಕು ಬಾಣಗಳಿಂದ ಅಲಂಬುಸನ ರಥದ ಅಶ್ವಗಳನ್ನು ಕೊಂದನು.
ಅಥಾಸ್ಯ ಸೂತಸ್ಯ ಶಿರೋ ನಿಕೃತ್ಯ
ಭಲ್ಲೇನ ಕಾಲಾನಲಸನ್ನಿಭೇನ |
ಸಕುಂಡಲಂ ಪೂರ್ಣಶಶಿಪ್ರಕಾಶಂ
ಭ್ರಾಜಿಷ್ಣು ವಕ್ತ್ರಂ ನಿಚಕರ್ತ ದೇಹಾತ್ ॥ 22 ॥
ಅನಂತರ ಕಾಲಾಗ್ನಿಯನ್ನು ಹೋಲುವ ಭಲ್ಲದಿಂದ ಅವನ ಸಾರಥಿಯ ಶಿರಸ್ಸನ್ನು ಕತ್ತರಿಸಿ, ಕುಂಡಲಸಹಿತವಾದ ಪೂರ್ಣಚಂದ್ರ ಪ್ರಕಾಶವನ್ನು ಹೊಂದಿದ ಅವನ ಶಿರಸ್ಸನ್ನೂ ಸಹ ದೇಹದಿಂದ ಕತ್ತರಿಸಿದನು.
ನಿಹತ್ಯ ತಂ ಪಾರ್ಥಿವಪುತ್ರಪೌತ್ರಂ
ಸಂಖೇ ಮಧೂನಾಮೃಷಭಃ ಪ್ರಮಾಥೀ |
ತತೋಽನ್ವಯಾದರ್ಜುನಮೇವ ವೀರಃ
ಸೈನ್ಯಾನಿ ರಾಜಂಸ್ತವ ಸನ್ನಿವಾರ್ಯ ॥ 23 ॥
ರಾಜನ ಮರಿಮಗನಾದ ಅಲಂಬುಸನನ್ನು ರಣರಂಗದಲ್ಲಿ ಕೊಂದು, ಶತ್ರುಗಳನ್ನು ಮರ್ದಿಸುವವನಾದ, ಮನುಜಶ್ರೇಷ್ಠನಾದ, ವೀರನಾದ ಸಾತ್ಯಕಿಯು ನಿನ್ನ ಸೈನ್ಯಗಳನ್ನು ನಿವಾರಿಸುತ್ತಾ ಅರ್ಜುನನನ್ನೇ ಹಿಂಬಾಲಿಸಿದನು.
ಅನ್ವಾಗತಂ ವೃಷ್ಣಿವರಂ ಸಮೀಕ್ಷ್ಯ
ತಥಾರಿಮಧ್ಯೇ ಪರಿವರ್ತಮಾನಮ್ |
ಘ್ನಂತಂ ಕುರೂಣಾಮಿಷುಭಿರ್ಬಲಾನಿ
ಪುನಃ ಪುನರ್ವಾಯುರಿವಾಭ್ರಪೂಗಾನ್ ॥ 24 ॥
ಶತ್ರುಗಳ ಮಧ್ಯದಲ್ಲಿ ಸಂಚರಿಸುತ್ತಾ ವಾಯುವು ಮೋಡಗಳ ರಾಶಿಯನ್ನು ಪುನಃ ಪುನಃ ಚದುರಿಸಿದಂತೆ ತನ್ನ ಬಾಣಗಳಿಂದ ಶತ್ರುಸೈನ್ಯವನ್ನು ವಿನಾಶಗೊಳಿಸುತ್ತಿದ್ದ ವೃಷ್ಣಿವೀರನಾದ ಸಾತ್ಯಕಿಯನ್ನು ಯೋಧರು ನೋಡಿದರು.
ತತೋಽವಹನ್ ಸೈಂಧವಾಃ ಸಾಧು ದಾಂತಾ
ಗೋಕ್ಷೀರಕುಂದೇಂದುಹಿಮಪ್ರಕಾಶಾಃ |
ಸುವರ್ಣಜಾಲಾವತತಾಃ ಸದಶ್ವಾ
ಯತೋ ಯತಃ ಕಾಮಯತೇ ನೃಸಿಂಹಃ ॥ 25 ॥
ಆಗ ಗೋಕ್ಷೀರ-ಕುಂದಪುಷ್ಪ-ಚಂದ್ರ ಹಿಮಗಳಿಗೆ ಸಮಾನವಾದ ಶ್ವೇತವರ್ಣವನ್ನು ಹೊಂದಿದ, ಸಿಂಧುದೇಶದಲ್ಲಿ ಜನಿಸಿದ, ಪಳಗಿದ, ಅವನ ಸುವರ್ಣಜಾಲಗಳಿಂದ ಅಲಂಕೃತವಾದ ಶ್ರೇಷ್ಠವಾದ ಅಶ್ವಗಳು ಆ ನರಸಿಂಹನು ಬಯಸಿದ ಕಡೆಗೆ ರಥವನ್ನು ಚೆನ್ನಾಗಿ ಎಳೆದುಕೊಂಡು ಹೋದವು.
ಅಥಾತ್ಮಜಾಸ್ತೇ ಸಹಿತಾಭಿಪೇತು-
ರನ್ಯೇ ಚ ಯೋಧಾಸ್ತ್ವರಿತಾಸ್ತ್ವದೀಯಾಃ |
ಕೃತ್ವಾ ಮುಖಂ ಭಾರತ ಯೋಧಮುಖ್ಯಂ
ದುಃಶಾಸನಂ ತ್ವತ್ಸುತಮಾಜಮೀಢ ॥ 26 ॥
ಎಲೈ ಭಾರತನೇ, ಆಗ ನಿನ್ನ ಪುತ್ರರು ಮತ್ತು ಉಳಿದ ನಿನ್ನ ಯೋಧರು ತ್ವರೆಯನ್ನು ಮಾಡುತ್ತಾ ಎಲೈ ಆಜಮೀಢನೇ, ನಿನ್ನ ಪುತ್ರನಾದ ಶ್ರೇಷ್ಠ ಯೋಧನಾದ ದುಶ್ಶಾಸನನನ್ನು ಮುಂದೆ ಮಾಡಿಕೊಂಡು ಸಾತ್ಯಕಿಯ ಮೇಲೆ ಎರಗಿದರು.
ತೇ ಸರ್ವತಃ ಸಂಪರಿವಾರ್ಯ ಸಂಖೇ
ಶೈನೇಯಮಾಜಘ್ನುರನೀಕಸಾಹಾಃ |
ಸ ಚಾಪಿ ತಾನ್ ಪ್ರವರಃ ಸಾತ್ವತಾನಾಂ
ನ್ಯವಾರಯದ್ ಬಾಣಜಾಲೇನ ವೀರಃ ॥ 27 ॥
ಯುದ್ಧ ಸಹಿಷ್ಣುಗಳಾದ ಅವರು ರಣರಂಗದಲ್ಲಿ ಸಾತ್ಯಕಿಯನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ಬಾಣಗಳಿಂದ ಹೊಡೆದರು. ಸಾತ್ವತ ಪ್ರವರನೂ, ವೀರನೂ ಆದ ಸಾತ್ಯಕಿಯು ತನ್ನ ಬಾಣಗಳ ಸಮೂಹದಿಂದ ಅವರನ್ನು ತಡೆದನು.
ನಿವಾರ್ಯ ತಾಂಸ್ತೂರ್ಣಮಮಿತ್ರಘಾತೀ
ನಪ್ತಾ ಶಿನೇಃ ಪತ್ರಿಭಿರಗ್ನಿಕಲ್ಪೈಃ |
ದುಃಶಾಸನಸ್ಯಾಪಿ ಜಘಾನ ವಾಹಾ-
ನುದ್ಯಮ್ಯ ಬಾಣಾಸನಮಾಜಮೀಢ ॥ 28 ॥
ಎಲೈ ಆಜಮೀಢನೇ, ಶತ್ರುಘಾತಿಯಾದ ಸಾತ್ಯಕಿಯು ಅಗ್ನಿಸದೃಶವಾದ ಬಾಣಗಳಿಂದ ಅವರನ್ನು ನಿವಾರಿಸಿ ತನ್ನ ಧನುಸ್ಸನ್ನು ಎತ್ತಿ ದುಶ್ಶಾಸನನ ರಥದ ನಾಲ್ಕು ಕುದುರೆಗಳನ್ನು ಕೊಂದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚವಿಂಶತ್ಯಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕೋನಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.

* * * * *

नूರ ಇಪ್ಪತ್ತಾರನೆಯ ಅಧ್ಯಾಯ

ಸಾತ್ಯಕಿಯಿಂದ ಅರ್ಜುನನ ದರ್ಶನ.

ಸಂಜಯಃ
ತಮುದ್ಯತಂ ಮಹಾಬಾಹುಂ ದುಃಶಾಸನರಥಂ ಪ್ರತಿ |
ತ್ವರಿತಂ ತ್ವರಣೀಯೇಷು ಧನಂಜಯಹಿತೈಷಿಣಮ್ ॥ 1 ॥
ತ್ರಿಗರ್ತಾನಾಂ ಮಹೇಷ್ವಾಸಾಃ ಸುವರ್ಣವಿಕೃತಧ್ವಜಾಃ |
ಸೇನಾಸಮುದ್ರಮಾವಿಷ್ಟಮಾನರ್ತಂ ಪರ್ಯವಾರಯನ್ ॥ 2 ॥
ಸಂಜಯ ಮಹಾಬಾಹುವೂ, ದುಶ್ಶಾಸನನ ರಥದ ಕಡೆಗೆ ಬರುತ್ತಿದ್ದವನೂ, ಧನಂಜಯನ ಹಿತೈಷಿಯೂ, ತ್ವರೆಯಿಂದ ಕೂಡಿದವರಲ್ಲಿ ಇನ್ನೂ ತ್ವರೆಯಿಂದ ಕೂಡಿದವನೂ, ಕೌರವಸೈನ್ಯವನ್ನು ಪ್ರವೇಶಿಸಿದವನೂ ಆದ ಸಾತ್ಯಕಿಯನ್ನು ಸುವರ್ಣಾಲಂಕೃತ ಧ್ವಜವನ್ನು ಹೊಂದಿದ ತ್ರಿಗರ್ತರ ಮಹಾಧನುರ್ಧಾರಿಗಳು ಸುತ್ತುವರಿದರು.
ಅಥೈನಂ ರಥವಂಶೇನ ಸರ್ವತಃ ಸನ್ನಿವಾರ್ಯ ತೇ |
ಅವಾಕಿರನ್ ಶರವ್ರಾತೈಃ ಕ್ರುದ್ಧಾಃ ಪರಮಧನ್ವಿನಃ ॥ 3 ॥
ಅನಂತರ ರಥಸಮೂಹಗಳಿಂದ ಅವನನ್ನು ಎಲ್ಲ ಕಡೆಗಳಿಂದಲೂ ತಡೆದರು. ಶ್ರೇಷ್ಠ ಧನುರ್ಧಾರಿಗಳಾದ ಅವರು ಕ್ರುದ್ಧರಾಗಿ ಅವನ ಮೇಲೆ ಬಾಣಗಳ ಸಮೂಹಗಳನ್ನು ಸುರಿಸಿದರು.
ಅಜಯದ್ ರಾಜಪುತ್ರಾಂಸ್ತಾನ್ ಯತಮಾನಾನ್ ಮಹಾರಣೇ |
ಏಕಃ ಪಂಚಾಶತಂ ಶತ್ರೂನ್ ಸಾತ್ಯಕಿಃ ಸತ್ಯವಿಕ್ರಮಃ ॥ 4 ॥
ಸಂಪ್ರಾಪ್ಯ ಭಾರತೀಮಧ್ಯಂ ತಳಘೋಷಸಮಾಕುಲಮ್ |
ಅಸಿಶಕ್ತಿಗದಾಪೂರ್ಣಮಪ್ಲವಂ ಸಲಿಲಂ ಯಥಾ ॥ 5 ॥
ಸತ್ಯಪರಾಕ್ರಮನಾದ ಸಾತ್ಯಕಿಯು ಹಸ್ತತಳ ಘೋಷದಿಂದ ಕೂಡಿದ, ಖಡ್ಗ-ಶಕ್ತಿ- ಗದೆಗಳಿಂದ ಪೂಣರ್ವಾದ, ನೌಕೆಯಿಲ್ಲದ ಸಮುದ್ರದಂತಿದ್ದ, ಕೌರವಸೈನ್ಯದ ಮಧ್ಯಭಾಗವನ್ನು ಪ್ರವೇಶಿಸಿ, ಮಹಾಯುದ್ಧದಲ್ಲಿ ಪ್ರಯತ್ನಶೀಲರಾಗಿದ್ದ ಶೂರರಾದ ತ್ರಿಗರ್ತರ ಐವತ್ತು ರಾಜಕುಮಾರನನ್ನು ಒಬ್ಬನೇ ಜಯಿಸಿದನು.
ಅಥೈನಮನುವೃತ್ತಾಸ್ತು ತ್ರಿಗರ್ತಾ ಸಹಿತಾ ಪುನಃ |
ತೀವ್ರೇಣ ರಥವಂಶೇನ ಮಹತಾ ಪರ್ಯವಾರಯನ್ |
ವಿಕರ್ಷಂತೋಽತಿಮಾತ್ರಾಣಿ ಚಾಪಾನಿ ಭರತರ್ಷಭ ॥ 6 ॥
ಎಲೈ ಭರತಶ್ರೇಷ್ಠನೇ, ಆಗ ತ್ರಿಗರ್ತರು ಒಟ್ಟಾಗಿ ಅವನನ್ನು ಪುನಃ ಹಿಂಬಾಲಿಸಿ ತಮ್ಮ ಧನುಸ್ಸುಗಳನ್ನು ಎಳೆದು ಬಾಣಗಳನ್ನು ಪ್ರಯೋಗಿಸುತ್ತಾ ಘೋರವಾದ ತಮ್ಮ ದೊಡ್ಡ ರಥಸಮೂಹದಿಂದ ಅವನನ್ನು ತಡೆದರು.
ತತ್ರಾದ್ಭುತಮಪಶ್ಯಾಮ ಶೈನೇಯಚರಿತಂ ರಣೇ |
ಪ್ರತೀಚ್ಯಾಂ ದಿಶಿ ತಂ ದೃಷ್ಟ್ವಾ ಪ್ರಾಚ್ಯಾಂ ಪಶ್ಯಾಮ ಲಾಘವಾತ್ ॥ 6 ॥
ಉದೀಚೀಂ ದಕ್ಷಿಣಾಂ ಪ್ರಾಚೀಂ ಪ್ರತೀಚೀಂ ಪ್ರಸೃತಸ್ತಥಾ |
ನೃತ್ಯನ್ನಿವಾಚರಚ್ಛೂರೋ ಯಥಾ ರಥಶತಂ ತಥಾ ॥ 7 ॥
ಸಾತ್ಯಕಿಯನ್ನು ನಾವು ಪಶ್ಚಿಮ ದಿಕ್ಕಿನಲ್ಲಿ ನೋಡಿ ಪುನಃ ಶೀಘ್ರವಾಗಿ ಪೂರ್ವ ದಿಕ್ಕಿನಲ್ಲಿ ನೋಡಿದೆವು. ಶೂರನಾದ ಅವನು ನೂರು ಮಹಾರಥರಂತೆ, ನೃತ್ಯವನ್ನು ಮಾಡುವವನಂತೆ, ಉತ್ತರ-ದಕ್ಷಿಣ-ಪೂರ್ವ-ಪಶ್ಚಿಮ ದಿಕ್ಕುಗಳಲ್ಲಿ ಚಲಿಸಿದನು. ಯುದ್ಧದುರ್ಮದನೂ, ವೀರನೂ ಆದ ಅವನು ಪುನಃ ಮಧ್ಯಭಾಗದಲ್ಲಿ ಕಾಣುತ್ತಿದ್ದನು. ನಾವು ಸಾತ್ಯಕಿಯ ಆ ಅದ್ಭುತ ಚರ್ಯೆಯನ್ನು ನೋಡಿದೆವು.
ತದ್ ದೃಷ್ಟ್ವಾ ಚರಿತಂ ತಸ್ಯ ಸಿಂಹವಿಕ್ರಾಂತಗಾಮಿನಃ |
ಪುನರ್ಮಧ್ಯಗತೋ ವೀರ ಆಹವೇ ಯುದ್ಧದುರ್ಮದಃ ॥ 8 ॥
ಏಕಃ ಪರ್ಯಚರದ್ ರಂಗೇ ಬಹುಧಾ ಸ ಮಹಾರಥಃ |
ತ್ರಿಗರ್ತಾಃ ಸನ್ನ್ಯವರ್ತಂತ ಸಂತಪ್ತಾಃ ಸ್ವಜನಂ ಪ್ರತಿ ॥ 9 ॥
ಮಹಾರಥನಾದ ಅವನೊಬ್ಬನೇ ಅನೇಕ ಮಹಾರಥರಂತೆ ರಣರಂಗದಲ್ಲಿ ಸಂಚರಿಸಿದನು. ಸಿಂಹಪರಾಕ್ರಮವನ್ನು ಹೊಂದಿ ಚಲಿಸುವ ಆ ಯುದ್ಧ ದುರ್ಮದನಾದ ವೀರನ ಚರಿತೆಯನ್ನು ನೋಡಿ ಸಂತಪ್ತರಾದ ತ್ರಿಗರ್ತರು ಹಿಂದೆ ಬಂದು ತಮ್ಮ ಯೋಧರ ಜೊತೆಯಲ್ಲಿ ಸೇರಿದರು.
ತಮನ್ಯೇ ಶೂರಸೇನಾನಾಂ ಶೂರಾಃ ಸಂಖ್ಯೇ ನ್ಯವಾರಯನ್ |
ನಿಯಚ್ಛಂತಃ ಶರವ್ರಾತೈರ್ಮತ್ತಂ ದ್ವಿಪಮಿವಾಂಕುಶೈಃ ॥ 10 ॥
ಆಗ ಶೂರಸೇನರ ಬೇರೆ ಶೂರರು ಅಂಕುಶಗಳಿಂದ ಮದಗಜವನ್ನು ನಿಯಂತ್ರಿಸುವಂತೆ ತಮ್ಮ ಬಾಣಸಮೂಹಗಳಿಂದ ಸಾತ್ಯಕಿಯನ್ನು ನಿವಾರಿಸುತ್ತಾ ರಣರಂಗದಲ್ಲಿ ಅವನನ್ನು ತಡೆದರು.
ತಾನ್ ವ್ಯವಾಹರದಾಯಸ್ತಾನ್ ಮುಹೂರ್ತಮಿವ ಸಾತ್ಯಕಿಃ |
ತತಃ ಕಳಿಂಗೈರ್ಯುಯುಧೇ ಸೋಽಚಿಂತ್ಯಬಲವಿಕ್ರಮಃ ॥ 11 ॥
ಶ್ರೇಷ್ಠವಾದ ನಡತೆಯುಳ್ಳ ಸಾತ್ಯಕಿಯು ಅವರಲ್ಲಿ ಸೇರಿ, ಒಂದು ಮುಹೂರ್ತದವರೆಗೆ ಯುದ್ಧವಿನೋದವನ್ನು ಮಾಡಿ, ಅಚಿಂತ್ಯಬಲ, ಪರಾಕ್ರಮವುಳ್ಳ ಅವನು ಅನಂತರ ಕಳಿಂಗರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತೈರ್ವಾರಿತೋ ಮಹಾರಾಜ ಸಾತ್ಯಕಿಃ ಪರ್ಯವಾರಯತ್ |

ನಿಜಘಾನ ಬಹೂನ್ ಯೋಧಾನ್ ಶತಶೋಽಥ ಸಹಸ್ರಶಃ ॥ 12 ॥
ಎಲೈ ಮಹಾರಾಜನೇ, ಅವರಿಂದ ತಡೆಯಲ್ಪಟ್ಟ ಸಾತ್ಯಕಿಯು ಅವರನ್ನು ತಡೆದು ಅವರ ಅನೇಕ ಯೋಧರನ್ನು ನೂರಾರು-ಸಾವಿರಾರು ಸಂಖ್ಯೆಯಲ್ಲಿ ಕೊಂದನು.
ತೇ ಹತಾ ನಿಪತಂತಿ ಸ್ಮ ಪ್ರಮೃಷ್ಟಾ ದೀರ್ಘಬಾಹುನಾ |
ತತಃ ಪ್ರಾಯಾದಸಂಭ್ರಾಂತೋ ದದರ್ಶ ಚ ಧನಂಜಯಮ್ ॥ 13 ॥
ದೀರ್ಘಬಾಹುವಾದ ಸಾತ್ಯಕಿಯಿಂದ ತಾಡಿತರಾಗಿ ಅವರು ವಿನಾಶವನ್ನು ಹೊಂದಿ ಭೂಮಿಯ ಮೇಲೆ ಬಿದ್ದರು. ಅನಂತರ ಸಾತ್ಯಕಿಯು ಯಾವ ಗಾಬರಿಯೂ ಇಲ್ಲದೆ ಮುಂದೆ ಹೋಗಿ ಅರ್ಜುನನನ್ನು ನೋಡಿದನು.
ತಾಂ ಚ ಸೇನಾಮತಿಕ್ರಮ್ಯ ಕಳಿಂಗಾನಾಂ ದುರತ್ಯಯಾಮ್ |
ಅಥ ಪಾರ್ಥಂ ಮಹಾಬಾಹುರ್ಧನಂಜಯಮುಪಾಸದತ್ ॥ 14 ॥
ಸಾತ್ಯಕಿಯು ದಾಟಲು ಅಸಾಧ್ಯವಾದ ಕಳಿಂಗರ ಸೇನೆಯನ್ನು ದಾಟಿ, ಮಹಾಬಾಹುವಾದ ಅವನು ಅರ್ಜುನನನ್ನು ಸಮೀಪಿಸಿದನು.
ತರನ್ನಿವ ಜಲೇ ಶ್ರಾಂತೋ ಯಥಾ ಸ್ಥಲಮುಪೇಯಿವಾನ್ |
ತಂ ದೃಷ್ಟ್ವಾ ಪುರುಷವ್ಯಾಘ್ರಂ ಯುಯುಧಾನಃ ಸಮಾಶ್ವಸತ್ ॥ 15 ॥
ನೀರಿನಲ್ಲಿ ಈಜುವವನು ದಣಿದು ತೀರವನ್ನು ಸೇರುವಂತೆ ಪುರುಷಶ್ರೇಷ್ಠನಾದ ಅರ್ಜುನನನ್ನು ನೋಡಿ ಸಾತ್ಯಕಿಯು ಸಮಾಧಾನವನ್ನು ಹೊಂದಿದನು.
ತಮಾಯಾಂತಮಭಿಪ್ರೇಕ್ಷ್ಯ ಕೇಶವೋಽರ್ಜುನಮಬ್ರವೀತ್ |
ಅಸಾವಾಯಾತಿ ಶೈನೇಯಸ್ತವ ಪಾರ್ಥ ಪದಾನುಗಃ ॥ 16 ॥
ಅವನು ಬರುತ್ತಿರುವುದನ್ನು ನೋಡಿದ ಕೃಷ್ಣನು ಅರ್ಜುನನನ್ನು ಕುರಿತು ಹೇಳಿದನು- ಎಲೈ ಅರ್ಜುನನೇ, ನಿನ್ನನ್ನು ಹುಡುಕಿಕೊಂಡು ಈ ಸಾತ್ಯಕಿಯು ಬರುತ್ತಿದ್ದಾನೆ.
ಏಷ ಶಿಷ್ಯಃ ಸಖಾ ಚೈವ ತವ ಸತ್ಯಪರಾಕ್ರಮಃ |
ಸರ್ವಾನ್ ಯೋಧಾಂಸ್ತೃಣೀಕೃತ್ಯ ವಿಜಿಗ್ಯೇ ಪುರುಷರ್ಷಭಃ ॥ 17 ॥
ಸತ್ಯಪರಾಕ್ರಮನೂ, ನಿನ್ನ ಶಿಷ್ಯನೂ, ಸ್ನೇಹಿತನೂ, ಪುರುಷಶ್ರೇಷ್ಠನೂ ಆದ ಇವನು ಎಲ್ಲ ಯೋಧರನ್ನೂ ತೃಣೀಕರಿಸಿ ಜಯಿಸಿದ್ದಾನೆ.
ಏಷ ಕೌರವಯೋಧಾನಾಂ ಕೃತ್ವಾ ಘೋರಮುಪದ್ರವಮ್ |
ತವ ಪ್ರಾಣೈಃ ಪ್ರಿಯತರಃ ಕಿರೀಟಿನ್ ಏತಿ ಸಾತ್ಯಕಿಃ ॥ 18 ॥
ಎಲೈ ಅರ್ಜುನನೇ, ನಿನ್ನ ಪ್ರಾಣಕ್ಕಿಂತಲೂ ಪ್ರಿಯನಾದ ಈ ಸಾತ್ಯಕಿಯು ಕೌರವ ಸೈನಿಕರಿಗೆ ಘೋರವಾದ ಉಪದ್ರವವನ್ನು ಮಾಡಿ ಬರುತ್ತಿದ್ದಾನೆ.
ಏಷ ದ್ರೋಣಂ ತಥಾ ಭೋಜಂ ಕೃತವರ್ಮಾಣಮೇವ ಚ |
ಕದರ್ಥೀಕೃತ್ಯ ವಿಶಿಖೈಃ ಫಲ್ಗುನಾಭ್ಯೇತಿ ಸಾತ್ಯಕಿಃ ॥ 19 ॥
ಎಲೈ ಫಲ್ಗುನನೇ, ಈ ಸಾತ್ಯಕಿಯು ದ್ರೋಣರನ್ನು ಮತ್ತು ಭೋಜಕುಲದ ಕೃತವರ್ಮನನ್ನು ತೃಣೀಕರಿಸಿ ನಿನ್ನ ಬಳಿಗೆ ಬರುತ್ತಿದ್ದಾನೆ.
ಧರ್ಮರಾಜಪ್ರಿಯಾನ್ವೇಷೀ ಹತ್ವಾ ಯೋಧಾನ್ ವರಾನ್ ವರಾನ್ |
ಶೂರಶ್ಚೈವ ಕೃತಾಸ್ತ್ರಶ್ಚ ಫಲ್ಗುನಾಭ್ಯೇತಿ ಸಾತ್ಯಕಿಃ ॥ 20 ॥
ಎಲೈ ಫಲ್ಗುನನೇ, ಧರ್ಮರಾಜನಿಗೆ ಪ್ರಿಯವನ್ನು ಮಾಡಲು ಬಯಸಿದ ಶೂರನೂ ಮತ್ತು ಅಸ್ತ್ರಜ್ಞನೂ ಆದ ಸಾತ್ಯಕಿಯು ಶತ್ರುಸೈನ್ಯದಲ್ಲಿ ಶ್ರೇಷ್ಠರಾದ ಶ್ರೇಷ್ಠರಾದ ಯೋಧರನ್ನು ಕೊಂದು ನಿನ್ನ ಬಳಿಗೆ ಬರುತಿತದ್ದಾನೆ.
ಕೃತ್ವಾ ಸುದುಷ್ಕರಂ ಕರ್ಮ ಸೈನ್ಯಮಧ್ಯೇ ಮಹಾಬಲಃ |
ತವ ದರ್ಶನಮನ್ವಿಚ್ಛನ್ ಪಾಂಡವಾಭ್ಯೇತಿ ಸಾತ್ಯಕಿಃ ॥ 21 ॥
ಎಲೈ ಪಾಂಡವನೇ, ಮಹಾಬಲನಾದ ಸಾತ್ಯಕಿಯು ಸೈನ್ಯಮಧ್ಯದಲ್ಲಿ ದುಷ್ಕರವಾದ ಕರ್ಮವನ್ನು ಮಾಡಿ ನಿನ್ನ ದರ್ಶನವನ್ನು ಬಯಸಿ ಬರುತ್ತಿದ್ದಾನೆ.
ಬಹೂನೇಕರಥೇನಾಜೌ ಯೋಧಯಿತ್ವಾ ಮಹಾರಥಾನ್ |
ಆಚಾರ್ಯಪ್ರಮುಖಾನ್ ಪಾರ್ಥ ಆಯಾತ್ಯೇಷ ಹಿ ಸಾತ್ಯಕಿಃ ॥ 22 ॥
ಎಲೈ ಪಾರ್ಥನೇ, ದ್ರೋಣಾಚಾರ್ಯರೇ ಮೊದಲಾದ ಅನೇಕ ಮಹಾರಥರನ್ನು ಏಕರಥನಾಗಿ ಯುದ್ಧ ಮಾಡಿ (ಸೋಲಿಸಿ) ಈ ಸಾತ್ಯಕಿಯು ಬರುತ್ತಿದ್ದಾನೆ.
ಸ್ವಬಾಹುಬಲಮಾಶ್ರಿತ್ಯ ವಿದಾರ್ಯ ಚ ವರೂಥಿನೀಮ್ |
ಪ್ರೇಷಿತೋ ಧರ್ಮಪುತ್ರೇಣ ಪಾರ್ಥೈಷೋಽಭ್ಯೇತಿ ಸಾತ್ಯಕಿಃ ॥ 23 ॥
ಎಲೈ ಪಾರ್ಥನೇ, ಧರ್ಮರಾಜನಿಂದ ಕಳುಹಿಸಲ್ಪಟ್ಟು ತನ್ನ ಬಾಹುಬಲದಿಂದ ಕೌರವ ಸೇನೆಯನ್ನು ಭಗ್ನಗೊಳಿಸಿ ಈ ಸಾತ್ಯಕಿಯು ಬರುತ್ತಿದ್ದಾನೆ.
ಯಸ್ಯ ನಾಸ್ತಿ ಸಮೋ ಯೋಧಃ ಕೌರವೇಷು ಕಥಂಚನ |
ಸೋಽಯಮಾಯಾತಿ ಕೌಂತೇಯ ಸಾತ್ಯಕಿಃ ಸತ್ಯವಿಕ್ರಮಃ ॥ 24 ॥
ಎಲೈ ಕೌಂತೇಯನೇ, ಕೌರವ ಸೈನ್ಯದಲ್ಲಿ ಯಾವನಿಗೆ ಸಮನಾದ ಯೋಧನಿಲ್ಲವೋ ಅಂತಹ ಈ ಸತ್ಯಪರಾಕ್ರಮನಾದ ಸಾತ್ಯಕಿಯು ಬರುತ್ತಿದ್ದಾನೆ.
ಪ್ರಿಯಶಿಷ್ಯಶ್ಚ ತೇ ಪಾರ್ಥ ತ್ವಯಾ ತುಲ್ಯಪರಾಕ್ರಮಃ |
ವಿದಾರ್ಯ ಕೌರವೀಂ ಸೇನಾಮೇಷ ಆಯಾತಿ ಸತ್ಯಕಃ ॥ 25 ॥

ಎಲೈ ಪಾರ್ಥನೇ, ನಿನ್ನ ಪ್ರಿಯಶಿಷ್ಯನೂ, ನಿನಗೆ ಸಮಾನವಾದ ಪರಾಕ್ರಮ ಉಳ್ಳವನೂ ಆದ ಸಾತ್ಯಕಿಯು ಕೌರವ ಸೇನೆಯನ್ನು ಭಗ್ನಗೊಳಿಸಿ ಬರುತ್ತಿದ್ದಾನೆ.
ಕುರುಸೈನ್ಯಾದ್ ವಿಮುಕ್ತೋ ವೈ ಸಿಂಹೋ ಮಧ್ಯಾದ್ ಗವಾಮಿವ |
ನಿಹತ್ಯ ಬಹುಲಾಃ ಸೇನಾಃ ಪಾರ್ಥೈಷೋಽಭ್ಯೇತಿ ಸಾತ್ಯಕಿಃ ॥ 26 ॥
ಎಲೈ ಪಾರ್ಥನೇ, ಗೋವುಗಳ ಮಧ್ಯದಿಂದ ಸಿಂಹವು ಹೊರಗೆ ಬಂದಂತೆ ಕೌರವರ ಬಹಳ ಸೈನ್ಯವನ್ನು ಕೊಂದು ಆ ಸೈನ್ಯದ ಮಧ್ಯದಿಂದ ಹೊರಗೆ ಬಂದ ಈ ಸಾತ್ಯಕಿಯು ನಿನ್ನ ಕಡೆಗೆ ಬರುತ್ತಿದ್ದಾನೆ.
ಏಷ ರಾಜಸಹಸ್ರಾಣಾಂ ವಕ್ತ್ರೈಃ ಪಂಕಜಸನ್ನಿಭೈಃ |
ಆಸ್ತೀರ್ಯ ವಸುಧಾಂ ಪಾರ್ಥ ಕ್ಷಿಪ್ರಮಾಯಾತಿ ಸಾತ್ಯಕಿಃ ॥ 27 ॥
ಎಲೈ ಪಾರ್ಥನೇ, ಈ ಸಾತ್ಯಕಿಯು ಸಹಸ್ರರಾಜರ ಪದ್ಮಸದೃಶವಾದ ಮುಖಗಳಿಂದ ಭೂಮಿಯನ್ನು ಹರಡಿ ಶೀಘ್ರವಾಗಿ ಬರುತ್ತಿದ್ದಾನೆ.
ಏಷ ದುರ್ಯೋಧನಂ ಜಿತ್ವಾ ಭ್ರಾತೃಭಿಃ ಸಹಿತಂ ರಣೇ |
ನಿಹತ್ಯ ಜಲಸಂಧಂ ಚ ಕ್ಷಿಪ್ರಮಾಯಾತಿ ಸಾತ್ಯಕಿಃ ॥ 28 ॥
ಈ ಸಾತ್ಯಕಿಯು ಸಹೋದರರಿಂದ ಸಹಿತನಾದ ದುರ್ಯೋಧನನನ್ನು ರಣರಂಗದಲ್ಲಿ ಜಯಿಸಿ, ಜಲಸಂಧನನ್ನು ಕೊಂದು ಶೀಘ್ರವಾಗಿ ಬರುತ್ತಿದ್ದಾನೆ.
ರುಧಿರೌಘವತೀಂ ಕೃತ್ವಾ ನದೀಂ ಶೋಣಿತಕರ್ದಮಾಮ್ |
ತೃಣವನ್ನ್ಯಸ್ಯ ಕೌರವ್ಯಾನೇಷ ಆಯಾತಿ ಸಾತ್ಯಕಿಃ ॥ 29 ॥
ರಕ್ತಪ್ರವಾಹವುಳ್ಳ ಮತ್ತು ರಕ್ತದ ಕೆಸರುಳ್ಳ ನದಿಯನ್ನು ಸೃಷ್ಟಿಸಿ ಕೌರವರನ್ನು ತೃಣದಂತೆ ಪಕ್ಕಕ್ಕೆ ಸರಿಸಿ ಈ ಸಾತ್ಯಕಿಯು ಬರುತ್ತಿದ್ದಾನೆ (ಎಂದು ಹೇಳಿದನು).
ಸಂಜಯಃ
ತತೋಽಪ್ರಹೃಷ್ಟಃ ಕೌಂತೇಯಃ ಕೇಶವಂ ವಾಕ್ಯಮಬ್ರವೀತ್ |
ನ ಮೇ ಪ್ರಿಯಂ ಮಹಾಬಾಹೋ ಯನ್ಮಾಮಭ್ಯೇತಿ ಸಾತ್ಯಕಿಃ ॥ 30 ॥
ಆಗ ವಿಷಾದಗೊಂಡ ಅರ್ಜುನನು ಕೇಶವನನ್ನು ಕುರಿತು- `ಎಲೈ ಮಹಾಬಾಹುವೇ, ಸಾತ್ಯಕಿಯು ನನ್ನ ಬಳಿಗೆ ಬರುತ್ತಿರುವುದು ನನಗೆ ಪ್ರಿಯವಾದುದಲ್ಲ' ಎಂದು ಹೇಳಿದನು.
ನ ಹಿ ಜಾನಾಮಿ ವೃತ್ತಾಂತಂ ಧರ್ಮರಾಜಸ್ಯ ಕೇಶವ |
ಸಾತ್ವತೇನ ವಿಹೀನಃ ಸ ಯದಿ ಜೀವತಿ ವಾ ನ ವಾ ॥ 31 ॥
ಎಲೈ ಕೇಶವನೇ, ಸಾತ್ಯಕಿಯಿಂದ ರಹಿತನಾದ ಧರ್ಮರಾಜನು ಜೀವಿಸಿದ್ದಾನೆಯೇ ಇಲ್ಲವೇ ಎಂದು ಅವನ ವಾರ್ತೆಯನ್ನು ನಾನು ತಿಳಿಯುತ್ತಿಲ್ಲ.
ಏತೇನ ಹಿ ಮಹಾಬಾಹೋ ರಕ್ಷಿತವ್ಯಃ ಸ ಪಾರ್ಥಿವಃ |
ತಮೇಷ ಕಥಮುತ್ಸೃಜ್ಯ ಮಮ ಕೃಷ್ಣ ಪದಾನುಗಃ ॥ 32 ॥
ಎಲೈ ಕೃಷ್ಣನೇ, ಮಹಾಬಾಹುವೇ, ಇವನು ಧರ್ಮರಾಜನನ್ನು ರಕ್ಷಿಸಬೇಕಾಗಿದ್ದಿತು. ಅವನನ್ನು ಬಿಟ್ಟು ನನ್ನನ್ನು ಹುಡುಕಿಕೊಂಡು ಇವನು ಏಕೆ ಬಂದಿದ್ದಾನೆ?
ರಾಜಾ ದ್ರೋಣಾಯ ಚೋತ್ಸೃಷ್ಟಃ ಸೈಂಧವಶ್ಚಾನಿಪಾತಿತಃ |
ಪ್ರತ್ಯುದ್ಯಾತಶ್ಚ ಶೈನೇಯಮೇಷ ಭೂರಿಶ್ರವಾ ರಣೇ ॥ 33 ॥
ಧರ್ಮರಾಜನು ದ್ರೋಣರ ಕೈಗೆ ಸಿಲುಕಿದ್ದಾನೆ. ಸೈಂಧವನನ್ನು ಇನ್ನೂ ಸಂಹಾರ ಮಾಡಿಲ್ಲ. ಭೂರಿಶ್ರವನು ರಣರಂಗದಲ್ಲಿ ಸಾತ್ಯಕಿಯ ಮೇಲೆ ಎರಗುತ್ತಿದ್ದಾನೆ.
ಸೋಽಯಂ ಗುರುತರೋ ಭಾರಃ ಸೈಂಧವಾನ್ಮೇ ಸಮಾಹಿತಃ |
ಜ್ಞಾತವ್ಯಶ್ಚ ಹಿ ಮೇ ರಾಜಾ ರಕ್ಷಿತವ್ಯಶ್ಚ ಸಾತ್ಯಕಿಃ ॥ 34 ॥
ಜಯದ್ರಥಶ್ಚ ಹಂತವ್ಯೋ ಲಂಬತೇ ಚ ದಿವಾಕರಃ |
ಶ್ರಾಂತಶ್ಚೈಷ ಮಹಾಬಾಹುರಲ್ಪಪ್ರಾಣಶ್ಚ ಸಾಂಪ್ರತಮ್ ॥ 35 ॥
ಆದ್ದರಿಂದ ಈಗ ಸೈಂಧವನ ವಧೆಗಿಂತಲೂ ದೊಡ್ಡ ಭಾರವು ನನ್ನ ಮೇಲೆ ಬಿದ್ದಿದೆ. ನಾನು ರಾಜನ ವಾರ್ತೆಯನ್ನು ತಿಳಿದುಕೊಳ್ಳಬೇಕು. ಸಾತ್ಯಕಿಯನ್ನು ರಕ್ಷಿಸಬೇಕು. ಜಯದ್ರಥನನ್ನೂ ಕೊಲ್ಲಬೇಕು. ಸೂರ್ಯನು ಇಳಿಮುಖನಾಗುತ್ತಿದ್ದಾನೆ. ಮಹಾಬಾಹುವಾದ ಸಾತ್ಯಕಿಯು ದಣಿದು ಈಗ ಅಲ್ಪಶಕ್ತಿಯುಳ್ಳವನಾಗಿದ್ದಾನೆ.
ಪರಿಶ್ರಾಂತಾ ಹಯಾಶ್ಚಾಸ್ಯ ಹಯಯಂತಾ ಚ ಮಾಧವ |
ನ ಚ ಭೂರಿಶ್ರವಾಃ ಶ್ರಾಂತಃ ಸಸಹಾಯಶ್ಚ ಕೇಶವ ॥ 36 ॥
ಎಲೈ ಮಾಧವನೇ, ಅವನ ಕುದುರೆಗಳು ದಣಿದಿವೆ, ಸಾರಥಿಯೂ ದಣಿದಿದ್ದಾನೆ. ಎಲೈ ಕೇಶವನೇ, ಭೂರಿಶ್ರವನು ದಣಿದಿಲ್ಲ ಮತ್ತು ಸಹಾಯದಿಂದ ಯುಕ್ತನಾಗಿದ್ದಾನೆ.
ಅಪೀದಾನೀಂ ಭವೇದಸ್ಯ ಕ್ಷೇಮಮಸ್ಮಿನ್ ಸಮಾಗಮೇ |
ಕಚ್ಚಿನ್ನ ಸಾಗರಂ ತೀರ್ತ್ವಾ ಸಾತ್ಯಕಿಃ ಸತ್ಯವಿಕ್ರಮಃ |
ಗೋಷ್ಪದಂ ಪ್ರಾಪ್ಯ ಸೀದೇತ ಮಹೌಜಾಃ ಶಿನಿಪುಂಗವಃ ॥ 37 ॥
ಈ ಸಮಾಗಮದಲ್ಲಿ ಈಗ ಸಾತ್ಯಕಿಗೆ ಕ್ಷೇಮವಾದೀತೆ? ಸತ್ಯಪರಾಕ್ರಮನಾದ, ಮಹಾಸಾಮರ್ಥ್ಯವನ್ನು ಹೊಂದಿದ ಶಿನಿಪುಂಗವನಾದ ಸಾತ್ಯಕಿಯು ಸಾಗರವನ್ನು ದಾಟಿ ಗೋಷ್ಪದ ಪರಿಮಿತವಾದ ನೀರಿನಲ್ಲಿ ನಾಶವನ್ನು ಹೊಂದುವುದಿಲ್ಲವಷ್ಟೆ?

ಅಪಿ ಕೌರವಮುಖ್ಯೇನ ಕೃತಾಸ್ತ್ರೇಣ ಮಹಾತ್ಮನಾ |
ಸಮೇತ್ಯ ಭೂರಿಶ್ರವಸಾ ಸ್ವಸ್ತಿಮಾನ್ ಸಾತ್ಯಕಿರ್ಭವೇತ್ ॥ 38 ॥
ಕೌರವಶ್ರೇಷ್ಠನೂ, ಅಸ್ತ್ರಜ್ಞನೂ, ಮಹಾತ್ಮನೂ ಆದ ಭೂರಿಶ್ರವನ ಸಮಾಗಮವನ್ನು ಹೊಂದಿ ಸಾತ್ಯಕಿಯು ಕ್ಷೇಮದಿಂದ ಇರುತ್ತಾನೆಯೇ?
ವ್ಯತಿಕ್ರಮಮಿಮಂ ಮನ್ಯೇ ಧರ್ಮರಾಜಸ್ಯ ಕೇಶವ |
ಆಚಾರ್ಯಾದ್ ಭಯಮುತ್ಸೃಜ್ಯ ಯಃ ಪ್ರೇಷಯತಿ ಸಾತ್ಯಕಿಮ್ ॥39॥
ಎಲೈ ಕೇಶವನೇ, ದ್ರೋಣಾಚಾರ್ಯರ ಭಯವನ್ನು ಬಿಟ್ಟು ಸಾತ್ಯಕಿಯನ್ನು ಕಳುಹಿಸಿದ ಧರ್ಮರಾಜನು ತಪ್ಪನ್ನು ಮಾಡಿದ್ದಾನೆ ಎಂದು ಭಾವಿಸುತ್ತೇನೆ.
ಗ್ರಹಣಂ ಧರ್ಮರಾಜಸ್ಯ ಖಗಃ ಶ್ಯೇನ ಇವಾಮಿಷಮ್ |
ನಿತ್ಯಮಾಶಂಸತೇ ದ್ರೋಣಃ ಕಚ್ಚಿತ್ ಸ್ಯಾತ್ ಕುಶಲೀ ನೃಪಃ ॥ 40॥
ಶ್ಯೇನ ಆಕಾಶದಲ್ಲಿರುವ ಪಕ್ಷಿಯು ಆಮಿಷವನ್ನು ಬಯಸಿದಂತೆ ದ್ರೋಣರು ಧರ್ಮರಾಜನ ಪ್ರಾಣವನ್ನು ಬಯಸುತ್ತಿದ್ದಾರೆ. ಈ ದಿನ ರಾಜನು ಕ್ಷೇಮದಿಂದ ಇರುವನೆ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್‌ವಿಂಶತ್ಯಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚಾಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೇಳನೆಯ ಅಧ್ಯಾಯ
ಸಾತ್ಯಕಿ ಮತ್ತು ಭೂರಿಶ್ರವಸರ ಯುದ್ಧ. ಅರ್ಜುನನಿಂದ
ಭೂರಿಶ್ರವಸನ ದಕ್ಷಿಣ ಬಾಹುವಿನ ಛೇದ.
ಸಂಜಯಃ
ತಮಾಪತಂತಂ ಸಂಪ್ರೇಕ್ಷ್ಯ ಸಾತ್ವತಂ ಯುದ್ಧದುರ್ಮದಮ್ |
ಕ್ರೋಧಾದ್ ಭೂರಿಶ್ರವಾ ರಾಜನ್ ಸಹಸಾ ಸಮುಪಾದ್ರವತ್ ॥ 1 ॥
ಸಂಜಯ ಎಲೈ ರಾಜನೇ, ಯುದ್ಧದುರ್ಮದನಾದ ಸಾತ್ಯಕಿಯು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಭೂರಿಶ್ರವನು ಕೋಪದಿಂದ ತಕ್ಷಣ ಅವನ ಕಡೆಗೆ ಧಾವಿಸಿದನು.
ತಮಬ್ರವೀನ್ಮಹಾಬಾಹುಃ ಕೌರವ್ಯಃ ಶಿನಿಪುಂಗವಮ್ |
ಅದ್ಯ ಪ್ರಾಪ್ತೋಽಸಿ ದಿಷ್ಟ್ಯಾ ಮೇ ಚಕ್ಷುರ್ವಿಷಯಮಿತ್ಯುತ ॥ 2 ॥
ಮಹಾಬಾಹುವಾದ, ಕುರುಕುಲೋತ್ಪನ್ನನಾದ ಭೂರಿಶ್ರವನು ಸಾತ್ಯಕಿಯನ್ನು ಕುರಿತು `ದೇವರ ದಯದಿಂದ ಇವತ್ತು ನನ್ನ ದೃಷ್ಟಿಗೆ ಗೋಚರನಾಗಿದ್ದೀಯೆ' ಎಂದು ಹೇಳಿದನು.
ಚಿರಾಭಿಲಷಿತಂ ಕಾಮಮದ್ಯ ಪ್ರಾಪ್ಸ್ಯಾಮಿ ಸಂಯುಗೇ |
ನ ಹಿ ಮೇ ಮೋಕ್ಷ್ಯಸೇ ಜೀವನ್ ಯದಿ ನೋತ್ಸೃಜಸೇ ರಣಮ್ ॥3॥
ಬಹಳ ಕಾಲದಿಂದ ಬಯಸಿದ ನನ್ನ ಅಭೀಷ್ಟವನ್ನು ಈ ದಿನ ಯುದ್ಧದಲ್ಲಿ ಹೊಂದುವೆನು. ನೀನು ರಣರಂಗವನ್ನು ತ್ಯಜಿಸದಿದ್ದರೆ ಜೀವಸಹಿತವಾಗಿ ರಣರಂಗದಿಂದ ಹೊರಗೆ ಹೋಗುವುದಿಲ್ಲ.
ಅದ್ಯ ತ್ವಾಂ ಸಮರೇ ಹತ್ವಾ ನಿತ್ಯಂ ಶೂರಾಭಿಮಾನಿನಮ್ |
ನಂದಯಿಷ್ಯಾಮಿ ದಾಶಾರ್ಹ ಕುರುರಾಜಂ ಸುಯೋಧನಮ್ ॥ 4 ॥
ಎಲೈ ದಾಶಾರ್ಹನೇ, ಯಾವಾಗಲೂ ಶೂರನೆಂದು ತಿಳಿದುಕೊಳ್ಳುತ್ತಿರುವ ನಿನ್ನನ್ನು ಈ ದಿನ ರಣರಂಗದಲ್ಲಿ ಕೊಂದು, ಕುರುರಾಜನಾದ ಸುಯೋಧನನನ್ನು ಸಂತೋಷ ಪಡಿಸುವೆನು.
ಅದ್ಯ ಮದ್ಬಾಣನಿರ್ದಗ್ಧಂ ಪತಿತಂ ಧರಣೀತಳೇ |
ದ್ರಕ್ಷ್ಯತಸ್ತ್ವಾಂ ರಣೇ ವೀರೌ ಸಹಿತೌ ಕೇಶವಾರ್ಜುನೌ ॥ 5 ॥
ಈ ದಿನ ನನ್ನ ಬಾಣಗಳಿಂದ ದಹಿಸಲ್ಪಟ್ಟು ಭೂಮಿಯ ಮೇಲೆ ಬಿದ್ದ ನಿನ್ನನ್ನು ವೀರರಾದ ಕೃಷ್ಣಾರ್ಜುನರು ಜೊತೆಯಾಗಿ ನೋಡುವರು.
ಅದ್ಯ ಧರ್ಮಸುತೋ ರಾಜಾ ಶ್ರುತ್ವಾ ತ್ವಾಂ ನಿಹತಂ ಮಯಾ |
ಸವ್ರೀಡೋ ಭವಿತಾ ಸದ್ಯೋ ಯೇನಾಸೀಹ ಪ್ರವೇಶಿತಃ ॥ 6 ॥
ಯಾವ ಯುಧಿಷ್ಠಿರನು ನಿನ್ನನ್ನು ಇಲ್ಲಿಗೆ ಕಳುಹಿಸಿದನೋ ಅವನು ಈ ದಿನ ನಿನ್ನನ್ನು ನಾನು ಕೊಂದೆನೆಂದು ಕೇಳಿ ನಾಚಿಕೊಳ್ಳುವನು.

ಅದ್ಯ ಮೇ ವಿಕ್ರಮಂ ಪಾರ್ಥೋ ವಿಜ್ಞಾಸ್ಯತಿ ಧನಂಜಯಃ |
ತ್ವಯಿ ಭೂಮೌ ವಿನಿಹತೇ ಶಯಾನೇ ರುಧಿರೋಕ್ಷಿತೇ ॥ 7 ॥
ನೀನು ಬಾಣಗಳಿಂದ ಹೊಡೆಯಲ್ಪಟ್ಟು ರಕ್ತಸಿಕ್ತನಾಗಿ ಭೂಮಿಯ ಮೇಲೆ ಮಲಗಿದಾಗ ಈ ದಿನ ಅರ್ಜುನನು ನನ್ನ ಪರಾಕ್ರಮವನ್ನು ತಿಳಿಯುವನು.
ಚಿರಾಭಿಲಷಿತೋ ಹ್ಯದ್ಯ ತ್ವಯಾ ಸಹ ಸಮಾಗಮಃ |

ಪುರಾ ದೇವಾಸುರೇ ಯುದ್ಧೇ ಶಕ್ರಸ್ಯ ಬಲಿನಾ ಯಥಾ ॥ 8 ॥
ದೇವಾಸುರ ಯುದ್ಧದಲ್ಲಿ ಶಕ್ರ-ಬಲಿಗಳ ಸಮಾಗಮದಂತಿರುವ, ಬಹಳ ಕಾಲದಿಂದ ಬಯಸಿದ ಈ ನಿನ್ನ ಸಮಾಗಮವು ಈ ದಿನ ಲಬ್ಧವಾಗಿದೆ.
ಅದ್ಯ ಯುದ್ಧಂ ಮಹಾಘೋರಂ ತವ ದಾಸ್ಯಾಮಿ ಸಾತ್ವತ |
ತತೋ ಜ್ಞಾಸ್ಯಸಿ ತತ್ತ್ವೇನ ಮದ್ವೀರ್ಯಬಲಪೌರುಷಮ್ ॥ 9 ॥
ಎಲೈ ಸಾತ್ವತನೇ, ಈ ದಿನ ನಿನ್ನ ಜೊತೆಯಲ್ಲಿ ಘೋರವಾದ ಯುದ್ಧವನ್ನು ಮಾಡುವೆನು. ಆಗ ನನ್ನ ನಿಜವಾದ ಪರಾಕ್ರಮ, ಬಲ ಮತ್ತು ಪೌರುಷಗಳನ್ನು ನೀನು ತಿಳಿಯುವಿ.
ಅದ್ಯ ಸಂಯಮನೀಂ ಯಾತಾ ಮಯಾ ತ್ವಂ ನಿಹತೋ ರಣೇ |
ಯಥಾ ರಾಮಾನುಜೇನಾಜೌ ರಾವಣಿರ್ಲಕ್ಷ್ಮಣೇನ ವೈ ॥ 10 ॥
ರಾಮನ ತಮ್ಮನಾದ ಲಕ್ಷ್ಮಣನಿಂದ ರಾವಣಪುತ್ರನಾದ ಇಂದ್ರಜಿತು ಯುದ್ಧದಲ್ಲಿ ಹತನಾದಂತೆ, ನೀನು ನನ್ನಿಂದ ಹತನಾಗಿ ಯಮಪಟ್ಟಣವಾದ ಸಂಯಮನಿಗೆ ಹೋಗುವಿ.
ಅದ್ಯ ಕೃಷ್ಣಶ್ಚ ಪಾರ್ಥಶ್ಚ ಧರ್ಮರಾಜಶ್ಚ ಮಾಧವ |
ಹತೇ ತ್ವಯಿ ನಿರುತ್ಸಾಹಾ ರಣಂ ತ್ಯಕ್ಷ್ಯಂತ್ಯಸಂಶಯಮ್ ॥ 11 ॥
ಎಲೈ ಮಾಧವನೇ, ನೀನು ಯುದ್ಧದಲ್ಲಿ ಹತನಾಗುತ್ತಿರಲು ಕೃಷ್ಣ-ಅರ್ಜುನ ಮತ್ತು ಧರ್ಮರಾಜರೆಲ್ಲರೂ ನಿರುತ್ಸಾಹಗೊಂಡು ನಿಸ್ಸಂಶಯವಾಗಿ ಯುದ್ಧವನ್ನು ತ್ಯಜಿಸುವರು.
ಅದ್ಯ ತೇಽಪಚಿತಿಂ ಕೃತ್ವಾ ಶಿತೈರ್ಮಾಧವ ಸಾಯಕೈಃ |
ತತ್ಸ್ತ್ರಿಯೋ ನಂದಯಿಷ್ಯಾಮಿ ಯೇ ತ್ವಯಾ ನಿಹತಾ ರಣೇ ॥ 12 ॥
ಎಲೈ ಮಾಧವನೇ, ಈ ದಿನ ನನ್ನ ನಿಶಿತವಾದ ಬಾಣಗಳಿಂದ ನಿನ್ನನ್ನು ಕೊಂದು ನಿನ್ನಿಂದ ಹತರಾದ ಯೋಧರ ಪತ್ನಿಯರಿಗೆ ಸಂತೋಷವನ್ನುಂಟು ಮಾಡುವೆನು.
ಚಕ್ಷುರ್ವಿಷಯಸಂಪ್ರಾಪ್ತೋ ನ ತ್ವಂ ಮಾಧವ ಮೋಕ್ಷ್ಯಸೇ |
ಸಿಂಹಸ್ಯ ವಿಷಯಂ ಪ್ರಾಪ್ತೋ ಯಥಾ ಕ್ಷುದ್ರಮೃಗಸ್ತಥಾ ॥ 13 ॥
ಎಲೈ ಮಾಧವನೇ, ಸಿಂಹದ ದೃಷ್ಟಿಗೆ ಗೋಚರವಾದ ಕ್ಷುದ್ರಮೃಗದಂತೆ ನನ್ನ ದೃಷ್ಟಿಗೆ ಗೋಚರನಾದ ನೀನು ತಪ್ಪಿಸಿಕೊಳ್ಳಲಾರೆ (ಎಂದ ಹೇಳಿದನು)
ಸಂಜಯಃ
ಯುಯುಧಾನಸ್ತು ತಂ ರಾಜನ್ ಪ್ರತ್ಯುವಾಚ ಹಸನ್ನಿವ |
ಕೌರವೇಯ ನ ಸಂತ್ರಾಸೋ ವಿದ್ಯತೇ ಮಮ ಸಂಯುಗೇ ॥ 14 ॥
ಸಂಜಯ ಎಲೈ ರಾಜನೇ, ಯುಯುಧಾನನು ಆ ಮಾತುಗಳನ್ನು ಕೇಳಿ ನಗುತ್ತಾ ಅವನನ್ನು ಕುರಿತು ಮಾತನಾಡಿದನು- ಎಲೈ ಕೌರವನೇ, ಯುದ್ಧದಲ್ಲಿ ನನಗೆ ಯಾವ ಭಯವೂ ಇಲ್ಲ.
ಸ ಮಾಂ ನಿಹನ್ಯಾತ್ ಸಂಗ್ರಾಮೇ ಯೋ ಮಾಂ ಕುರ್ಯಾನ್ನಿರಾಯುಧಮ್|
ಸಮಾಸ್ತು ಶಾಶ್ವತೀರ್ಹನ್ಯಾದ್ ಯೋ ಮಾಂ ಹನ್ಯಾದ್ಧಿ ಸಂಯುಗೇ ॥ 15 ॥
ಯಾವನು ನನ್ನನ್ನು ಯುದ್ಧದಲ್ಲಿ ನಿರಾಯುಧನನ್ನಾಗಿ ಮಾಡುವನೋ ಅವನು ನನ್ನನ್ನು ಕೊಂದಾನು. ಯುದ್ಧದಲ್ಲಿ ನನ್ನನ್ನು ಕೊಲ್ಲುವವರು ಬಹಳ ವರ್ಷದವರೆಗೆ ಯುದ್ಧವನ್ನು ಮಾಡಬೇಕಾದೀತು.
ಕಿಂ ಮೃಷೋಕ್ತೇನ ಬಹುನಾ ಕರ್ಮಣಾ ತು ಸಮಾಚರ |
ಶಾರದಸ್ಯೇವ ಮೇಘಸ್ಯ ಗರ್ಜಿತಂ ನಿಷ್ಫಲಂ ಹಿ ತೇ ॥ 16 ॥
ಬಹಳ ಸುಳ್ಳು ಮಾತುಗಳನ್ನು ಆಡಿ ಏನು ಪ್ರಯೋಜನ? ಕಾರ್ಯವನ್ನು ಮಾಡಿ ನಿನ್ನ ಪರಾಕ್ರಮವನ್ನು ತೋರಿಸು. ಶರತ್ಕಾಲದ ಮೇಘಗರ್ಜನೆಯಂತೆ ನಿನ್ನ ಗರ್ಜನೆ ನಿಷ್ಫಲವಾದುದು.
ಶ್ರುತ್ವೈತದ್ಗರ್ಜಿತಂ ವೀರ ಹಾಸ್ಯಂ ಹಿ ಮಮ ಜಾಯತೇ |
ಚಿರಕಾಲೇಪ್ಸಿತಂ ಲೋಕೇ ಯುದ್ಧಮದ್ಯಾಸ್ತು ಕೌರವ ॥ 17 ॥
ಎಲೈ ವೀರನೇ, ನಿನ್ನ ಈ ಗರ್ಜನೆಯನ್ನು ಕೇಳಿ ನನಗೆ ಹಾಸ್ಯ ಉಂಟಾಗುತ್ತಿದೆ. ಎಲೈ ಕೌರವನೇ, ಬಹಳ ಕಾಲದಿಂದ ಬಯಸಿದ ಈ ಯುದ್ಧವು ಇಂದು ನಡೆಯಲಿ.
ತ್ವರತೇ ಮೇ ಮತಿಸ್ತಾತ ತ್ವಯಿ ಯುದ್ಧಾಭಿಕಾಂಕ್ಷಿಣಿ |
ನಾಹತ್ವಾ ಸಂನಿವರ್ತಿಷ್ಯೇ ತ್ವಾಮದ್ಯ ಪುರುಷಾಧಮ ॥ 18 ॥
ನೀನು ಯುದ್ಧವನ್ನು ಬಯಸುತ್ತಿರಲು ಎಲೈ ಪ್ರೀತಿಪಾತ್ರನೇ, ನನ್ನ ಮನಸ್ಸೂ ಯುದ್ಧಕ್ಕೆ ಹಾತೊರೆಯುತಿತದೆ. ಎಲೈ ಪುರುಷಾಧಮನೇ, ನಿನ್ನನ್ನು ಕೊಲ್ಲದೆ ನಾನು ಈ ದಿನ ಯುದ್ಧಭೂಮಿಯಿಂದ ಹಿಂದಿರುಗುವುದಿಲ್ಲ (ಎಂದು ಹೇಳಿದನು).
ಸಂಜಯಃ
ಅನ್ಯೋನ್ಯಂ ತೌ ತದಾ ವಾಗ್ಭಿಸ್ತಕ್ಷಂತೌ ನರಪುಂಗವೌ |
ಜಿಘಾಂಸೂ ಪರಮಕ್ರುದ್ಧಾವಭಿಜಘ್ನತುರಾಹವೇ ॥ 19 ॥
ಸಂಜಯ ಹೀಗೆ ಆ ಇಬ್ಬರು ನರಶ್ರೇಷ್ಠರು ಮಾತುಗಳಿಂದ ಒಬ್ಬರನ್ನೊಬ್ಬರು ಗಾಯಗೊಳಿಸುತ್ತಾ, ಬಹಳ ಕೋಪಗೊಂಡು ಪರಸ್ಪರವಾಗಿ ಕೊಲ್ಲಲು ಬಯಸಿ ರಣರಂಗದಲ್ಲಿ ಒಬ್ಬರನ್ನೊಬ್ಬರು ಹೊಡೆದರು.
ಸಮೇತೌ ತೌ ನರವ್ಯಾಘ್ರೌ ಶುಷ್ಮಿಣೌ ಸ್ಪರ್ಧಿನೌ ರಣೇ |

ದ್ವಿರದಾವಿವ ಸಂಕ್ರುದ್ಧೌ ವಾಸಿತಾರ್ಥೇ ಮದೋತ್ಕಟೌ ॥ 20 ॥
ಭೂರಿಶ್ರವಾಃ ಸಾತ್ಯಕಿಶ್ಚ ವವರ್ಷತುರರಿಂದಮೌ |
ಶರವರ್ಷಾಣಿ ಭೀಮಾನಿ ಮೇಘಾವಿವ ಪರಸ್ಪರಮ್ ॥ 21 ॥
ಸಮಾಗಮವನ್ನು ಹೊಂದಿದ ಪರಾಕ್ರಮಶಾಲಿಗಳೂ, ಸ್ಪರ್ಧಾಳುಗಳೂ, ಅರಿಂದಮರೂ ಆದ ಭೂರಿಶ್ರವ ಮತ್ತು ಸಾತ್ಯಕಿಯರು ಚಿಕ್ಕ ಹೆಣ್ಣಾನೆಯ ಸಲುವಾಗಿ ಮದೋತ್ಕಟವಾದ ಎರಡು ಗಂಡಾನೆಗಳಂತೆ ಕೋಪಗೊಂಡು ಮೇಘಗಳಂತೆ ಪರಸ್ಪರವಾಗಿ ಭಯಂಕರವಾದ ಬಾಣಗಳ ಮಳೆಯನ್ನು ಸುರಿಸಿದರು.
ಸೌಮದತ್ತಿಸ್ತು ಶೈನೇಯಂ ಪ್ರಚ್ಛಾದ್ಯೇಷುಭಿರಾಶುಗೈಃ |
ಜಿಘಾಂಸುರ್ಭರತಶ್ರೇಷ್ಠ ವಿವ್ಯಾಧ ನಿಶಿತೈಃ ಶರೈಃ ॥ 22 ॥
ಎಲೈ ಭರತಶ್ರೇಷ್ಠನೇ, ಭೂರಿಶ್ರವನು ಶೀಘ್ರಗಾಮಿಗಳಾದ ಬಾಣಗಳಿಂದ ಸಾತ್ಯಕಿಯನ್ನು ಮುಚ್ಚಿ, ಅವನನ್ನು ಕೊಲ್ಲಲು ಬಯಸಿ, ತೀಕ್ಷ್ಣವಾದ ಬಾಣಗಳಿಂದ ಅವನನ್ನು ಹೊಡೆದನು.
ದಶಭಿಃ ಸಾತ್ಯಕಿಂ ವಿದ್ಧ್ವಾ ಸೌಮದತ್ತಿರಥಾಪರಾನ್ |
ಮುಮೋಚ ನಿಶಿತಾನ್ ಬಾಣಾನ್ಜಿಘಾಂಸುಃ ಶಿನಿಪುಂಗವಮ್ ॥23॥
ಅನಂತರ ಭೂರಿಶ್ರವನು ಸಾತ್ಯಕಿಯನ್ನು ಕೊಲ್ಲಲು ಬಯಸಿ ಹತ್ತು ಬಾಣಗಳಿಂದ ಅವನನ್ನು ಹೊಡೆದು, ಬೇರೆ ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ತಾನಸ್ಯ ವಿಶಿಖಾಂಸ್ತೀಕ್ಷ್ಣಾನಂತರಿಕ್ಷೇ ವಿಶಾಂಪತೇ |
ಅಪ್ರಾಪ್ತಾನಸ್ತ್ರಮಾಯಾಭಿರಗ್ರಸತ್ ಸಾತ್ಯಕಿಃ ಪ್ರಭೋ ॥ 24 ॥
ಎಲೈ ರಾಜನೇ, ಭೂರಿಶ್ರವನು ಪ್ರಯೋಗಿಸಿದ ತೀಕ್ಷ್ಣವಾದ ಬಾಣಗಳು ತನ್ನ ಬಳಿಗೆ ಬರುವುದಕ್ಕಿಂತ ಮೊದಲೇ ಸಾತ್ಯಕಿಯು ಅಂತರಿಕ್ಷದಲ್ಲಿಯೇ ಅವುಗಳನ್ನು ತನ್ನ ಅಸ್ತ್ರಗಳ ಸಾಮರ್ಥ್ಯದಿಂದ ನುಂಗಿ ಹಾಕಿದನು.
ತೌ ಪೃಥಕ್ ಶರವರ್ಷಾಭ್ಯಾಮವರ್ಷೇತಾಂ ಪರಸ್ಪರಮ್ |
ಉತ್ತಮಾಭಿಜನೌ ವೀರೌ ಕುರುವೃಷ್ಣಿಯಶಸ್ಕರೌ ॥ 25 ॥
ಕುರುವಂಶ ಮತ್ತು ವೃಷ್ಣಿವಂಶಗಳಿಗೆ ಕೀರ್ತಿಯನ್ನು ತರುವ, ಉತ್ತಮ ಕುಲ ಪ್ರಸೂತರಾದ ಆ ವೀರರಿಬ್ಬರು ಪರಸ್ಪರವಾಗಿ ಬಾಣಗಳ ಮಳೆಯನ್ನು ಸುರಿಸಿದರು.
ತೌ ನಖೈರಿವ ಶಾರ್ದೂಲೌ ದಂತೈರಿವ ಮಹಾದ್ವಿಪೌ |
ರಥಶಕ್ತಿಭಿರನ್ಯೋನ್ಯಂ ವಿಶಿಖೈಶ್ಚಾಪ್ಯಕೃಂತತಾಮ್ ॥ 26 ॥
ವ್ಯಾಘ್ರಗಳು ನಖಗಳಿಂದ ಹೋರಾಡಿದಂತೆ, ಎರಡು ಮಹಾಗಜಗಳು ದಂತಗಳಿಂದ ಹೋರಾಡಿದಂತೆ ಅವರಿಬ್ಬರೂ ರಥಶಕ್ತಿಗಳಿಂದಲೂ ಮತ್ತು ಬಾಣಗಳಿಂದಲೂ ಪರಸ್ಪರವಾಗಿ ಗಾಯಗೊಳಿಸಿದರು.
ನಿಭಿಂದಂತೌ ಹಿ ಗಾತ್ರಾಣಿ ವಿಕ್ಷರಂತೌ ಚ ಶೋಣಿತಮ್ |
ವ್ಯಷ್ಟಂಭಯೇತಾಮನ್ಯೋನ್ಯಂ ಪ್ರಾಣದ್ಯೂತಾಭಿದೇವಿನೌ ॥ 27 ॥
ಪರಸ್ಪರವಾಗಿ ದೇಹಗಳನ್ನು ಗಾಯಗೊಳಿಸುತ್ತಾ ತಮ್ಮ ಶರೀರದಿಂದ ರಕ್ತವನ್ನು ಸುರಿಸುತ್ತಾ, ಪ್ರಾಣದ್ಯೂತವನ್ನು ಆಡುವ ಆ ಇಬ್ಬರು ವೀರರು ಒಬ್ಬರನ್ನೊಬ್ಬರು ಪರಸ್ಪರವಾಗಿ ತಡೆದರು.
ಏವಮುತ್ತಮಕರ್ಮಾಣೌ ಕುರುವೃಷ್ಣಿಯಶಸ್ಕರೌ |
ಪರಸ್ಪರಮಯುದ್ಧ್ಯೇತಾಂ ವಾರಣಾವಿವ ಯೂಥಪೌ ॥ 28 ॥
ಹೀಗೆ ಉತ್ತಮಕರ್ಮವನ್ನು ಮಾಡುವ ಕುರು-ವೃಷ್ಣಿವಂಶಯಶಸ್ಕರರಾದ ಅವರಿಬ್ಬರೂ ಎರಡು ಸಲಗಗಳಂತೆ ಪರಸ್ಪರವಾಗಿ ಯುದ್ಧವನ್ನು ಮಾಡಿದನು.
ತಾವದೀರ್ಘೇಣ ಕಾಲೇನ ಬ್ರಹ್ಮಲೋಕಪುರಸ್ಕೃತೌ |
ಜಿಗೀಷಂತೌ ಪರಂ ಸ್ಥಾನಮನ್ಯೋನ್ಯಮಭಿಜಘ್ನತುಃ ॥ 29 ॥
ಬ್ರಾಹ್ಮಣ ಸಮೂಹದಿಂದ ಸತ್ಕೃತರಾದ ಅವರಿಬ್ಬರೂ ಅಲ್ಪಕಾಲದಲ್ಲಿ ಶ್ರೇಷ್ಠವಾದ ಸ್ಥಾನವನ್ನು ಸಂಪಾದಿಸಲು ಬಯಸಿ ಪರಸ್ಪರವಾಗಿ ಹೊಡೆದಾಡಿದರು- ಲಕ್ಷಾಲಂಕಾರ.
ಸಾತ್ಯಕಿಃ ಸೌಮದತ್ತಿಶ್ಚ ಶರವೃಷ್ಟ್ಯಾ ಪರಸ್ಪರಮ್ |
ಹೃಷ್ಟವದ್ ಧಾರ್ತರಾಷ್ಟ್ರಾಣಾಂ ಪಶ್ಯತಾಮಭ್ಯವರ್ಷತಾಮ್ ॥ 30 ॥
ಸಾತ್ಯಕಿ ಮತ್ತು ಭೂರಿಶ್ರವರು ಧೃತರಾಷ್ಟ್ರಪುತ್ರರು ನೋಡುತ್ತಿರುವಂತೆಯೇ ಸಂತೋಷದಿಂದ ಪರಸ್ಪರವಾಗಿ ಬಾಣಗಳ ಮಳೆಯನ್ನು ಸುರಿಸಿದರು.
ಸಂಪ್ರೈಕ್ಷಂತ ಜನಾಸ್ತತ್ರ ಯುದ್ಧ್ಯಮಾನೌ ಯುಧಾಂಪತೀ |
ಯೂಥಪೌ ವಾಸಿತಾಹೇತೋಃ ಪ್ರಯುದ್ಧಾವಿವ ಕುಂಜರೌ ॥ 31 ॥
ಯುದ್ಧಸ್ವಾಮಿಗಳಾದ ಅವರು ಹೆಣ್ಣಾನೆಯ ಸಲುವಾಗಿ ಎರಡು ಸಲಗಗಳು ಹೊಡೆದಾಡುವಂತೆ ಯುದ್ಧ ಮಾಡುವುದನ್ನು ಅಲ್ಲಿ ಜನರು ನೋಡಿದರು.
ಅನ್ಯೋನ್ಯಸ್ಯ ಹಯಾನ್ ಹತ್ವಾ ಧನುಷೀ ವಿನಿಕೃತ್ಯ ಚ |
ವಿರಥಾವಸಿಯುದ್ಧಾಯ ಸಮೇಯಾತಾಂ ಮಹಾರಣೇ ॥ 32 ॥
ಪರಸ್ಪರವಾಗಿ ಅಶ್ವಗಳನ್ನು ಕೊಂದು, ಧನುಸ್ಸುಗಳನ್ನು ಕತ್ತರಿಸಿ, ರಥವನ್ನು ಕಳೆದುಕೊಂಡು ರಣರಂಗದಲ್ಲಿ ಖಡ್ಗಯುದ್ಧಕ್ಕಾಗಿ ಸಿದ್ಧರಾದರು.

ಆರ್ಷಭೇ ಚರ್ಮಣೀ ಚಿತ್ರೇ ಪ್ರಗೃಹ್ಯ ವಿಪುಲೇ ಶುಭೇ |
ವಿಕೋಶೌ ಚಾಪ್ಯಸೀ ಕೃತ್ವಾ ಸಮರೇ ತೌ ವಿಚೇರತುಃ ॥ 33 ॥
ವೃಷಭ ಚರ್ಮದಿಂದ ಮಾಡಿದ, ವಿಸ್ತಾರವಾದ, ಶುಭವಾದ ಮತ್ತು ವಿಚಿತ್ರವಾದ ಗುರಾಣಿಗಳನ್ನು ಮತ್ತು ಒರೆಯಿಂದ ಹಿರಿದ ಖಡ್ಗಗಳನ್ನು ಹಿಡಿದು ಅವರು ರಣರಂಗದಲ್ಲಿ ಸಂಚರಿಸಿದರು.
ಚರಂತೌ ವಿವಿಧಾನ್ ಮಾರ್ಗಾನ್ ಮಂಡಲಾನಿ ಚ ಭಾಗಶಃ |
ಮುಹುರಾಜಘ್ನತುಃ ಕ್ರುದ್ಧಾವನ್ಯೋನ್ಯಮರಿಮರ್ದನೌ ॥ 34 ॥
ಶತ್ರುಸೂದನರಾದ ಅವರು ವಿವಿಧ ಮಾರ್ಗಗಳನ್ನು ಮತ್ತು ಭಾಗಶಃ ಖಡ್ಗಯುದ್ಧದ ಮಂಡಲಗಳನ್ನು ಸಂಚರಿಸುತ್ತಾ ಪರಸ್ಪರವಾಗಿ ಕೋಪಗೊಂಡು ಪುನಃ ಪುನಃ ಹೊಡೆದಾಡಿದರು.
ಸಖಡ್ಗೌ ಚಿತ್ರವರ್ಮಾಣೌ ಸನಿಷ್ಕಾಂಗದಭೂಷಣೌ |
ರಣೇ ರಣೋತ್ಕಟೌ ರಾಜನ್ನನ್ಯೋನ್ಯಂ ಪರ್ಯಕರ್ಷತಾಮ್ ॥ 35 ॥
ಎಲೈ ರಾಜನೇ, ಖಡ್ಗಗಳನ್ನು ಹಿಡಿದ, ವಿಚಿತ್ರವಾದ ಕವಚಗಳನ್ನು ಧರಿಸಿದ, ಸುವರ್ಣಮಯವಾದ ಭುಜಕೀರ್ತಿಗಳಿಂದ ಭೂಷಿತರಾದ, ರಣೋತ್ಕಟರಾದ ಅವರು ಪರಸ್ಪರವಾಗಿ ಎಳೆದಾಡಿದರು.
ಮುಹೂರ್ತಮಿವ ರಾಜೇಂದ್ರ ಪರಿಕೃಷ್ಯ ಪರಸ್ಪರಮ್ |
ಪಶ್ಯತಾಂ ಸರ್ವಸೈನ್ಯಾನಾಂ ವೀರಾವಾಶ್ವಸತಾಂ ಪುನಃ ॥ 36 ॥
ಎಲೈ ರಾಜೇಂದ್ರನೇ, ಎಲ್ಲ ಸೈನ್ಯಗಳು ನೋಡುತ್ತಿರುವಂತೆಯೇ ಒಂದು ಮುಹೂರ್ತದ ಕಾಲ ಪರಸ್ಪರವಾಗಿ ಎಳೆದಾಡಿ ಆ ವೀರರು ಸ್ವಲ್ಪ ವಿಶ್ರಾಂತಿಯನ್ನು ಪಡೆದರು.
ಅಸಿಭ್ಯಾಂ ಚರ್ಮಣೀ ಶುಭ್ರೇ ವಿಪುಲೇ ಚ ಶರಾವರೇ |
ನಿಕೃತ್ಯ ಪುರುಷವ್ಯಾಘ್ರೌ ಬಾಹುಯುದ್ಧಂ ಪ್ರಚಕ್ರತುಃ॥ 37 ॥
ಪುನಃ ತಮ್ಮ ಖಡ್ಗಗಳಿಂದ ವಿಸ್ತಾರವಾದ ಮತ್ತು ಶುಭ್ರವಾದ ಗುರಾಣಿಗಳನ್ನು ಮತ್ತು ಬತ್ತಳಿಕೆಗಳನ್ನು ಕತ್ತರಿಸಿ, ಪುರುಷವ್ಯಾಘ್ರರಾದ ಅವರು ಬಾಹುಯುದ್ಧವನ್ನು ಮಾಡಿದರು.
ವ್ಯೂಢೋರಸ್ಕೌ ದೀರ್ಘಭುಜೌ ನಿಯುದ್ಧಕುಶಲಾವುಭೌ |
ಬಾಹುಭಿಃ ಸಮಸಜ್ಜೇತಾಮಾಯಸೈಃ ಪರಿಘೈರಿವ ॥ 38 ॥
ವಿಸ್ತಾರವಾದ ಎದೆಯುಳ್ಳವರೂ, ದೀರ್ಘಭುಜವುಳ್ಳವರೂ, ಬಾಹು ಯುದ್ಧದಲ್ಲಿ ವಿಶಾರದರೂ ಆದ ಅವರಿಬ್ಬರೂ ಕಬ್ಬಿಣದ ಒನಕೆಗಳಂತಿದ್ದ ತಮ್ಮ ಬಾಹುಗಳಿಂದ ಪರಸ್ಪರವಾಗಿ ಯುದ್ಧವನ್ನು ಮಾಡಿದರು.
ತಯೋರಾಸನ್ ಭುಜಾಘಾತಾ ನಿಗ್ರಹಪ್ರಗ್ರಹೌ ತಥಾ |
ಶಿಕ್ಷಾಬಲಸಮುದ್ಭೂತಾಃ ಸರ್ವಯೋಧಪ್ರಹರ್ಷಣಾಃ ॥ 39 ॥
ಅವರು ಬಾಹುಯುದ್ಧವನ್ನು ಮಾಡುವಾಗ ತಮ್ಮ ಅಭ್ಯಾಸದಿಂದಲೂ, ಬಲದಿಂದಲೂ ಮಾಡಿದ ಪರಸ್ಪರ ಗ್ರಹಣ ಮತ್ತು ಮೋಚನಗಳಿಂದ ಎಲ್ಲ ಯೋಧರೂ ಸಂತುಷ್ಟರಾದರು.
ವ್ಯಾಖ್ಯಾನ ವಿಶೇಷ ಭುಜ ಬಂಧಗಳಿಂದಲೂ, ಕೆಳಗಿನ ಬಂಧನಗಳಿಂದಲೂ, ಶಿರೋಬಂಧಗಳಿಂದಲೂ ಪಾದಗಳ ಆಕರ್ಷಣ ಮತ್ತು ಸಂಧಾನಗಳಿಂದಲೂ, ತೋಮರಾಂಕುಶ ಸದೃಶವಾದ ಕ್ರಿಯೆಗಳಿಂದಲೂ, ಪಾದ-ಉದರಬಂಧಗಳಿಂದಲೂ, ಭೂಮಿಯಲ್ಲಿ ತಿರುಗಿಸುವುದರಿಂದಲೂ, ಮುಂದೆ ಹೋಗಿ ಹಿಂದೆ ಬಂದು ಮೇಲೆ ಎಸೆಯುವುದರಿಂದಲೂ, ಕೆಳಗೆ ಬೀಳಿಸಿ ಮೇಲೆತ್ತಿ ಹಾರಿಸುವುದರಿಂದಲೂ, ಎಲೈ ಭಾರತನೇ, ಇಂತಹ ಬಾಹುಯುದ್ಧದ ಮೂವತ್ತೆರಡು ಪ್ರಕಾರಗಳೇನಿವೆಯೋ ಅವುಗಳಿಂದ ಮಹಾಬಲರಾದ ಅವರು ಯುದ್ಧವನ್ನು ಮಾಡುತ್ತಾ, ತಮ್ಮ ಸಾಮರ್ಥ್ಯವನ್ನು ತೋರಿಸಿದರು - ಲಕ್ಷಾಲಂಕಾರ.
ತಯೋರ್ನೃವರಯೋ ರಾಜನ್ ಸಮರೇ ಯುದ್ಧ್ಯಮಾನಯೋಃ |
ಭೀಮೋಽಭವನ್ಮಹಾಶಬ್ದೋ ವಜ್ರಪರ್ವತಯೋರಿವ ॥ 40 ॥
ದ್ವಿಪಾವಿವ ವಿಷಾಣಾಗ್ರೈಃ ಶೃಂಗೈರಿವ ಮಹರ್ಷಭೌ |
ಯುಯುಧಾತೇ ಮಹಾತ್ಮಾನೌ ಕುರುಸಾತ್ವತಪುಂಗವೌ ॥ 41 ॥
ಎಲೈ ರಾಜನೇ, ರಣರಂಗದಲ್ಲಿ ಯುದ್ಧ ಮಾಡುವ ಆ ನರಶ್ರೇಷ್ಠರಿಂದ ಉಂಟಾದ ಭಯಂಕರವಾದ ಮಹಾಶಬ್ದವು ವಜ್ರ ಮತ್ತು ಪರ್ವತಗಳ ಆಘಾತದ ಶಬ್ದದಂತಿದ್ದಿತು. ದಂತದ ತುದಿಗಳಿಂದ ಗಜಗಳು ಹೊಡೆದಾಡಿದಂತೆ, ಶೃಂಗಗಳಿಂದ ದೊಡ್ಡ ವೃಷಭಗಳು ಹೊಡೆದಾಡಿದಂತೆ ಮಹಾತ್ಮರಾದ ಆ ಕುರು-ಸಾತ್ವತಪುಂಗವರು ಯುದ್ಧವನ್ನು ಮಾಡಿದರು.
ಕ್ಷೀಣಾಯುಧೇ ಸಾತ್ವತೇ ಯುದ್ಧ್ಯಮಾನೇ
ತತೋಽಬ್ರವೀದರ್ಜುನಂ ವಾಸುದೇವಃ |
ಪಶ್ಯಸ್ವೈನಂ ವಿರಥಂ ಯುದ್ಧ್ಯಮಾನಂ
ರಣೇ ಕೇತುಂ ಸರ್ವಧನುರ್ಧರಾಣಾಮ್ ॥ 42 ॥
ಯುದ್ಧವನ್ನು ಮಾಡುತ್ತಿದ್ದ ಸಾತ್ಯಕಿಯು ತನ್ನ ಆಯುಧವನ್ನು ಕಳೆದುಕೊಳ್ಳುತ್ತಿರಲು ಆಗ ಕೃಷ್ಣನು ಅರ್ಜುನನನ್ನು ಕುರಿತು- `ಸರ್ವಧನುರ್ಧಾರಿಗಳಿಗೆ ಧ್ವಜಪ್ರಾಯನಾಗಿರುವ ರಣರಂಗದಲ್ಲಿ ಯುದ್ಧವನ್ನು ಮಾಡಿ ರಥಹೀನನಾಗಿರುವ ಇವನನ್ನು ನೋಡು' ಎಂದು ಹೇಳಿದನು.
ಪ್ರವಿಷ್ಟೋ ಭಾರತೀಂ ಸೇನಾಂ ತವ ಪಾಂಡವ ಪೃಷ್ಠತಃ |
ಯೋಧಿತಶ್ಚ ಮಹಾವೀರ್ಯೈಃ ಸರ್ವೈರ್ಭಾರತ ಭಾರತೈಃ ॥ 43 ॥
ಪರಿಶ್ರಾಂತೋ ಯುಧಾಂಶ್ರೇಷ್ಠಃ ಸಂಪ್ರಾಪ್ತೋ ಭೂರಿದಕ್ಷಿಣಮ್ |

ಯುದ್ಧಕಾಂಕ್ಷಿಣಮಾಯಾಂತಂ ನೈತತ್ ಸಮಮಿವಾರ್ಜುನ ॥ 44 ॥
ಎಲ್ಲೆ ಪಾಂಡವನೇ, ನಿನ್ನ ಹಿಂಭಾಗದಲ್ಲಿಯೇ ಕೌರವ ಸೇನೆಯನ್ನು ಪ್ರವೇಶಿಸಿ ಎಲ್ಲೆ ಭಾರತನೇ, ಮಹಾವೀರ್ಯನಾದ ಇವನು ಕೌರವ ಸೇನೆಯ ಯೋಧರ ಜೊತೆಯಲ್ಲಿ ಯುದ್ಧವನ್ನು ಮಾಡಿದ್ದಾನೆ. ದಣಿದಿರುವ ಈ ಯೋಧಶ್ರೇಷ್ಠನು ಯುದ್ಧವನ್ನು ಬಯಸುತ್ತಿರುವ ಭೂರಿದಕ್ಷಿಣೆಯನ್ನು ಕೊಟ್ಟು ಯಾಗವನ್ನು ಮಾಡಿದ ಭೂರಿಶ್ರವನನ್ನು ಎದುರಿಸುತ್ತಿದ್ದಾನೆ. ಅರ್ಜುನನೇ, ಇದು ಸಮವಾದ ಯುದ್ಧವಲ್ಲ.
ಸಂಜಯಃ
ತತೋ ಭೂರಿಶ್ರವಾಃ ಕ್ರುದ್ಧಃ ಸಾತ್ಯಕಿಂ ಯುದ್ಧದುರ್ಮದಮ್ ।
ಉದ್ಯಮ್ಯ ನ್ಯಹನದ್ ರಾಜನ್ ಮತ್ತೋ ಮತ್ತಮಿವ ದ್ವಿಪಮ್ ॥ 45 ॥
ರಥಸ್ಥಯೋರ್ದ್ವಯೋರ್ಯುದ್ಧೇ ಕ್ರುದ್ಧಯೋರ್ಯೋಧಮುಖ್ಯಯೋಃ ।
ಕೇಶವಾರ್ಜುನಯೋ ರಾಜನ್ ಸಮರೇ ಪ್ರೇಕ್ಷಮಾಣಯೋಃ ॥ 46 ॥
ಸಂಜಯ ಎಲ್ಲೆ ರಾಜನೇ, ಆಗ ಭೂರಿಶ್ರವನು ಕ್ರುದ್ಧನಾಗಿ ಯುದ್ಧ- ದುರ್ಮದನಾದ ಸಾತ್ಯಕಿಯನ್ನು ಮದಗಜವು ಮದಗಜವನ್ನು ಘಟ್ಟಿಸುವಂತೆ ರಣರಂಗದಲ್ಲಿ ಯೋಧಮುಖ್ಯರಾದ ಕ್ರುದ್ಧರಾದ ಕೇಶವಾರ್ಜುನರು ರಥದಲ್ಲಿ ಕುಳಿತು ನೋಡುತ್ತಿರುವಂತೆಯೇ (ಧನುಸ್ಸನ್ನು ಎತ್ತಿ) ಹೊಡೆದನು.
ಅಥ ಕೃಷ್ಣೋ ಮಹಾಬಾಹುರರ್ಜುನಂ ಪ್ರತ್ಯಭಾಷತ ।
ಪಶ್ಯ ವೃಷ್ಣ್ಯಂಧಕವ್ಯಾಘ್ರಂ ಸೌಮದತ್ತಿವಶಂ ಗತಮ್ ॥ 47 ॥
ಪರಿಶ್ರಾಂತಂ ಗತಂ ಭೂಮೌ ಕೃತ್ವಾ ಕರ್ಮ ಸುದುಷ್ಕರಮ್ ।
ತವಾಂತೇವಾಸಿನಂ ಶೂರಂ ಪಾಲಯಾರ್ಜುನ ಸಾತ್ಯಕಿಮ್ ॥ 48 ॥
ನ ವಶಂ ಯಜ್ಞಶೀಲಸ್ಯ ಗಚ್ಛೇದೇಷ ವರಾರಿಹನ್ ।
ತ್ವತ್ಕೃತೇ ಪುರುಷವ್ಯಾಘ್ರ ತದಾಶು ಕ್ರಿಯತಾಂ ವಿಭೋ ॥ 49 ॥
ಆಗ ಮಹಾಬಾಹುವಾದ ಕೃಷ್ಣನು ಅರ್ಜುನನನ್ನು ಕುರಿತು- ವೃಷ್ಣ್ಯಂಧಕ ಶೂರನಾದ ಸಾತ್ಯಕಿಯು ಭೂರಿಶ್ರವನ ವಶನಾಗಿರುವುದನ್ನು ನೋಡು. ಎಲ್ಲೆ ಅರ್ಜುನನೇ, ಅತ್ಯಂತ ದುಷ್ಕರವಾದ ಕರ್ಮವನ್ನು ಮಾಡಿ, ದಣಿದು ಭೂಮಿಯಲ್ಲಿ ನಿಂತಿರುವ ನಿನ್ನ ಶಿಷ್ಯನಾದ ಶೂರನಾದ ಈ ಸಾತ್ಯಕಿಯನ್ನು ರಕ್ಷಿಸು. ಎಲ್ಲೆ ಶತ್ರುಸಂಹಾರಕನೇ, ಪುರುಷವ್ಯಾಘ್ರನೆ, ನಿನ್ನ ಸಲುವಾಗಿ ಹೋರಾಡುತ್ತಿರುವ ಇವನು ಯಜ್ಞಶೀಲನಾದ ಭೂರಿಶ್ರವನ ವಶನಾಗಬಾರದು. ಆದ್ದರಿಂದ ವಿಭುವೇ, ಹಾಗೆ ನಿರ್ವಾಹವನ್ನು ಮಾಡು' ಎಂದು ಹೇಳಿದನು.
ಸಂಜಯಃ
ಅಥಾಬ್ರವೀದ್ ಹೃಷ್ಟಮನಾ ವಾಸುದೇವಂ ಧನಂಜಯಃ ।
ಪಶ್ಯ ವೃಷ್ಣಿಪ್ರವೀರೇಣ ಕ್ರೀಡಂತಂ ಕುರುಪುಂಗವಮ್ ।
ಮಹಾದ್ವಿಪೇನೇವ ವನೇ ಮತ್ತೇನ ಹರಿಯೂಥಪಮ್ ॥ 50 ॥
ಆಗ ಸಂತೋಷಗೊಂಡ ಅರ್ಜುನನು ಕೃಷ್ಣನನ್ನು ಕುರಿತು- `ಮದಿಸಿದ ಮಹಾಗಜದ ಜೊತೆಯಲ್ಲಿ ಸೆಣೆಸುವ ಸಿಂಹದಂತೆ ಸಾತ್ಯಕಿಯ ಜೊತೆಯಲ್ಲಿ ಆಟವಾಡುತ್ತಿರುವ ಈ ಕುರುಪುಂಗವನಾದ ಭೂರಿಶ್ರವನನ್ನು ನೋಡು' ಎಂದು ಹೇಳಿದನು.
ಹಾಹಾಕಾರೋ ಮಹಾನಾಸೀತ್ ಸೈನ್ಯಾನಾಂ ಭರತರ್ಷಭ ।
ಯದುದ್ಯಮ್ಯ ಮಹಾಬಾಹುಃ ಸಾತ್ಯಕಿಂ ನ್ಯಪತದ್ ಭುವಿ ॥ 51 ॥
ಎಲ್ಲೆ ಭರತರ್ಷಭನೇ, ಮಹಾಬಾಹುವಾದ ಭೂರಿಶ್ರವನು ಸಾತ್ಯಕಿಯನ್ನು ಎತ್ತಿ ನೆಲದ ಮೇಲೆ ಕೆಡವಿದಾಗ ಪಾಂಡವ ಸೈನ್ಯಗಳಲ್ಲಿ ದೊಡ್ಡ ಹಾಹಾಕಾರ ಉಂಟಾಯಿತು.
ಮಾಮೇವ ಚ ಮಹಾಬಾಹೋ ಪರಿಯಾಂತಿ ಮಹಾರಥಃ ।
ಯಥಾಶಕ್ತಿ ಯತಂತೇ ಮಾಂ ಯೋಧಯಾಂತೋ ಜನಾರ್ದನಃ ॥52॥
ಸಾತ್ಯಕಿಯು ಕೆಳಗೆ ಬೀಳುತ್ತಿರಲು ಆಗ ಅರ್ಜುನನು ಕೃಷ್ಣನನ್ನು ಕುರಿತು- `ಎಲ್ಲೆ ಮಹಾಬಾಹುವೇ, ಮಹಾರಥರು ನನ್ನನ್ನೇ ಸುತ್ತುವರಿಯುತ್ತಿದ್ದಾರೆ. ಎಲ್ಲೆ ಜನಾರ್ದನನೇ, ನನ್ನ ಜೊತೆಯಲ್ಲಿ ಅವರ ಶಕ್ತಿಗೆ ಅನುಗುಣವಾಗಿ ಯುದ್ಧವನ್ನು ಮಾಡಲು ಪ್ರಯತ್ನ ಪಡುತ್ತಿದ್ದಾರೆ.
ಧ್ರುವಂ ಚ ಯೋಧಯಾಂಯೇತಾಚ್ಛಿದ್ರಾನ್ವೇಷಣತತ್ಪರಾನ್ ।
ರಕ್ಷಾಮಿ ಸಾತ್ಯಕಿಂ ಚೈವ ಚೋದಮತ್ತಿವಶಂ ಗತಮ್ ॥ 53 ॥
ಅಪ್ರಾಪ್ತೋಽಯಂ ಮಯಾ ಕೃಷ್ಣ ಹಂತುಂ ಭೂರಿಶ್ರವಾ ರಣೇ ।
ಅನ್ಯೇನ ತು ಸಮಾಸಕ್ತಂ ಮಮ ನೋತ್ಸಹತೇ ಮನಃ ॥ 54 ॥
ನನ್ನಲ್ಲಿ ಯಾವುದಾದರೂ ಅಲ್ಪ ಅವಕಾಶವನ್ನು ಹುಡುಕುತ್ತಿರುವ ಇವರ ಜೊತೆಯಲ್ಲಿ ನಾನು ಯುದ್ಧವನ್ನು ಮಾಡುತ್ತೇನೆ. ಭೂರಿಶ್ರವನ ವಶನಾದ ಸಾತ್ಯಕಿಯನ್ನೂ ರಕ್ಷಿಸುತ್ತೇನೆ. ಎಲ್ಲೆ ಕೃಷ್ಣನೇ, ರಣರಂಗದಲ್ಲಿ ಭೂರಿಶ್ರವನು ನನ್ನ ಜೊತೆಯಲ್ಲಿ ಯುದ್ಧಕ್ಕೆ ಬಂದಿಲ್ಲ. ಇನ್ನೊಬ್ಬನ ಜೊತೆಯಲ್ಲಿ ಯುದ್ಧ ಮಾಡುತ್ತಿರುವ ಅವನನ್ನು ಕೊಲ್ಲಲು ನನ್ನ ಮನಸ್ಸಿಗೆ ಉತ್ಸಾಹವಿಲ್ಲ.
ಅವಶ್ಯಂ ಚ ಮಯಾ ಕೃಷ್ಣ ವೃಷ್ಣಿವೀರಸ್ಯ ರಕ್ಷಣಮ್ ।
ಮದರ್ಥೇ ಯುಧ್ಯಮಾನಸ್ಯ ಕಾರ್ಯ ಪ್ರಾಣೈರಪಿ ಪ್ರಭೋ ॥ 55 ॥
ಅಧರ್ಮೋ ವಾಽಸ್ತು ಧರ್ಮೋ ವಾ ಮಮ ಮಾಧವ ಮಾಧವಃ ।
ಪರೇಣ ನಿಹತೋ ಮಾ ಸ್ಮ ಪ್ರಾಣಾಂಹಾಸೀನ್ಮಹಾರಥಃ ॥ 56 ॥

ಎಲೈ ಕೃಷ್ಣನೇ, ನನ್ನ ಸಲುವಾಗಿ ಯುದ್ಧವನ್ನು ಮಾಡುತ್ತಿರುವ ವೃಷ್ಣಿವೀರನಾದ ಸಾತ್ಯಕಿಯ ರಕ್ಷಣೆಯನ್ನು ನಾನು ಪ್ರಾಣವನ್ನು ಕೊಟ್ಟಾದರೂ ಅವಶ್ಯವಾಗಿ ಮಾಡಲೇಬೇಕು. ಎಲೈ ಮಾಧವನೇ, ಪ್ರಭುವೇ, ಅದು ಧರ್ಮವಾಗಲಿ ಅಥವಾ ಅಧರ್ಮವಾಗಲಿ ಮಧುಕುಲೋತ್ಪನ್ನನಾದ ಮಹಾರಥನಾದ ಸಾತ್ಯಕಿಯು ಶತ್ರುವಿನಿಂದ ಹತನಾಗಿ ಪ್ರಾಣವನ್ನು ತೊರೆಯಬಾರದು, ಎಂದು ಹೇಳಿದನು.
ಸಂಜಯಃ
ಏವಮುಕ್ತ್ವಾಽರ್ಜುನಃ ಕೃಷ್ಣಂ ಪರಾನಾಶು ಶಿತೈಃ ಶರೈಃ |
ಛಾದಯಾಮಾಸ ಸಂಕ್ರುದ್ಧಃ ಪರೇ ಚಾಪಿ ಧನಂಜಯಮ್ ॥ 57 ॥
ಸಂಜಯ ಕೃಷ್ಣನನ್ನು ಕುರಿತು ಹೀಗೆ ಹೇಳಿ ಅರ್ಜುನನು ಕೋಪಗೊಂಡು ತನ್ನ ಶತ್ರುಗಳನ್ನು ಶೀಘ್ರವಾಗಿ ತೀಕ್ಷ್ಣವಾದ ಬಾಣಗಳಿಂದ ಮುಚ್ಚಿದನು ಮತ್ತು ಶತ್ರುಗಳೂ ಕೂಡ ಅರ್ಜುನನನ್ನು ಹಾಗೆಯೇ ಮುಚ್ಚಿದರು.
ಏವಂ ಸ್ಮ ಯುಧ್ಯತೇ ವೀರಃ ಸಾತ್ಯಕಿಂ ಚ ಮುಹುರ್ಮುಹುಃ |
ಪ್ರೇಕ್ಷತೇ ಸ್ಮ ನರವ್ಯಾಘ್ರೋ ಭೂರಿಶ್ರವಸಮೇವ ಚ ॥ 58 ॥
ಹೀಗೆ ವೀರನೂ, ನರವ್ಯಾಘ್ರನೂ ಆದ ಅರ್ಜುನನು ಒಂದು ಕಡೆ ಯುದ್ಧವನ್ನು ಮಾಡಿ, ಇನ್ನೊಂದು ಕಡೆ ಪುನಃ ಪುನಃ ಸಾತ್ಯಕಿಯನ್ನು ಮತ್ತು ಭೂರಿಶ್ರವನನ್ನು ನೋಡಿದನು.
ಸ ಸಿಂಹ ಇವ ಮಾತಂಗಂ ವಿಕರ್ಷನ್ ಭೂರಿದಕ್ಷಿಣಃ |
ವ್ಯರೋಚತ ಕುರುಶ್ರೇಷ್ಠಃ ಸಾತ್ವತಪ್ರವರಂ ಯುಧಿ ॥ 59 ॥
ಭೂರಿದಕ್ಷಿಣನಾದ, ಕುರುಶ್ರೇಷ್ಠನಾದ ಭೂರಿಶ್ರವನು ಸಿಂಹವು ಆನೆಯನ್ನು ಹಿಡಿಯುವಂತೆ ಯುದ್ಧದಲ್ಲಿ ಸಾತ್ವತಪ್ರವರನಾದ ಸಾತ್ಯಕಿಯನ್ನು ಹಿಡಿದು ಶೋಭಿಸಿದನು.
ಅಥ ಕೋಶಾದ್ ವಿನಿಷ್ಕೃಷ್ಯ ಖಡ್ಗಂ ಭೂರಿಶ್ರವಾ ರಣೇ |
ಮೂರ್ಧಜೇಷು ನಿಜಗ್ರಾಹ ಪದಾ ಚೋರಸ್ಯತಾಡಯತ್ ॥ 60 ॥
ಅನಂತರ ಭೂರಿಶ್ರವನು ರಣರಂಗದಲ್ಲಿ ಖಡ್ಗವನ್ನು ಒರೆಯಿಂದ ಹಿರಿದು, ಸಾತ್ಯಕಿಯನ್ನು ಕೇಶದಲ್ಲಿ ಹಿಡಿದು ತನ್ನ ಕಾಲಿನಿಂದ ಅವನ ಎದೆಗೆ ಒದ್ದನು.
ತಥಾ ತು ಪರಿಕೃಷ್ಯಂತಂ ದೃಷ್ಟ್ವಾ ಸಾತ್ವತಮಾಹವೇ |
ವಾಸುದೇವಸ್ತತೋ ರಾಜನ್ ಭೂಯೋಽರ್ಜುನಮಭಾಷತ ॥ 61 ॥
ಎಲೈ ರಾಜನೇ, ರಣರಂಗದಲ್ಲಿ ಆ ರೀತಿಯಲ್ಲಿ ಎಳೆದಾಡಲ್ಪಡುತ್ತಿದ್ದ ಸಾತ್ಯಕಿಯನ್ನು ನೋಡಿ ಕೃಷ್ಣನು ಅರ್ಜುನನನ್ನು ಕುರಿತು ಪುನಃ ಮಾತನಾಡಿದನು.
ಪಶ್ಯ ವೃಷ್ಣ್ಯಂಧಕವ್ಯಾಘ್ರಂ ಸೌಮದತ್ತಿವಶಂ ಗತಮ್ |
ತವ ಶಿಷ್ಯಂ ಮಹಾಬಾಹೋ ಧನುಷ್ಯನವರಂ ತ್ವಯಾ ॥ 62 ॥
ಎಲೈ ಮಹಾಬಾಹುವೇ, ನಿನ್ನ ಶಿಷ್ಯನೂ, ಧನುರ್ವಿದ್ಯೆಯಲ್ಲಿ ನಿನಗಿಂತ ಕಡಿಮೆಯಲ್ಲದವನೂ ಆದ, ವೃಷ್ಣ್ಯಂಧಕವೀರನಾದ ಸಾತ್ಯಕಿಯು ಭೂರಿಶ್ರವನ ವಶನಾಗಿರುವುದನ್ನು ನೋಡು.
ಅಸತ್ಯೋ ವಿಕ್ರಮಃ ಪಾರ್ಥ ಯತ್ರ ಭೂರಿಶ್ರವಾ ರಣೇ |
ವಿಶೇಷಯತಿ ವಾರ್ಷ್ಣೇಯಂ ಸಾತ್ಯಕಿಂ ಸತ್ಯವಿಕ್ರಮಮ್ ॥ 63 ॥
ಎಲೈ ಪಾರ್ಥನೇ, ಎಲ್ಲಿ ರಣರಂಗದಲ್ಲಿ ಭೂರಿಶ್ರವನು ಸತ್ಯಪರಾಕ್ರಮವುಳ್ಳ, ವೃಷ್ಣಿಕುಲೋತ್ಪನ್ನನಾದ ಸಾತ್ಯಕಿಗಿಂತಲೂ ಅತಿಶಯವನ್ನು ತೋರುತ್ತಾನೆಯೋ ಅಂತಹ ಅವನ ಪರಾಕ್ರಮವು ಅಸತ್ಯವಾದುದು ಎಂದು ಹೇಳಿದನು.
ಏವಮುಕ್ತೋ ಮಹಾಬಾಹುರ್ವಾಸುದೇವೇನ ಪಾಂಡವಃ |
ಮನಸಾ ಪೂಜಯಾಮಾಸ ಭೂರಿಶ್ರವಸಮಾಹವೇ ॥ 64 ॥
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಮಹಾಬಾಹುವಾದ ಅರ್ಜುನನು ರಣರಂಗದಲ್ಲಿ ಭೂರಿಶ್ರವನನ್ನು ಮನಸ್ಸಿನಲ್ಲಿಯೇ ಪೂಜಿಸಿದನು.
ವಿಕರ್ಷನ್ ಸಾತ್ವತಶ್ರೇಷ್ಠಂ ಕ್ರೀಡಮಾನ ಇವಾಹವೇ |
ಸಂಹರ್ಷಯತಿ ಮಾಂ ಭೂಯಃ ಕುರೂಣಾಂ ಕೀರ್ತಿವರ್ಧನಃ ॥ 65 ॥
ಪ್ರವರಂ ವೃಷ್ಣಿವೀರಾಣಾಂ ಯನ್ನ ಹನ್ಯಾದ್ಧಿ ಸಾತ್ಯಕಿಮ್ |
ಮಹಾದ್ವಿಪಮಿವಾರಣ್ಯೇ ಮೃಗೇಂದ್ರ ಇವ ಕರ್ಷತಿ ॥ 66 ॥
ಕುರುಗಳ ಕೀರ್ತಿವರ್ಧನನಾದ ಭೂರಿಶ್ರವನು ಸಾತ್ವತಶ್ರೇಷ್ಠನಾದ ಸಾತ್ಯಕಿಯನ್ನು ರಣರಂಗದಲ್ಲಿ ಎಳೆದಾಡುತ್ತಾ ನನ್ನನ್ನು ಇನ್ನೂ ಸಂತೋಷಗೊಳಿಸುತ್ತಿದ್ದಾನೆ. ವೃಷ್ಣಿವೀರರಲ್ಲಿ ಶ್ರೇಷ್ಠನಾದ ಸಾತ್ಯಕಿಯನ್ನು ಅವನು (ಕೊಲ್ಲದೇ)ಅರಣ್ಯದಲ್ಲಿ ಸಿಂಹವು ಮಹಾಗಜವನ್ನು ಎಳೆದಾಡಿದಂತೆ ಎಳೆದಾಡುತ್ತಿದ್ದಾನೆ.
ಏವಂ ತು ಮನಸಾ ರಾಜನ್ ಪಾರ್ಥಃ ಸಂಪೂಜ್ಯ ಕೌರವಮ್ |
ವಾಸುದೇವಂ ಮಹಾಬಾಹುರರ್ಜುನಃ ಪ್ರತ್ಯಭಾಷತ ॥ 67 ॥
ಸೈಂಧವಾಸಕ್ತದೃಷ್ಟಿತ್ವಾನ್ನೈನಂ ಪಶ್ಯಾಮಿ ಮಾಧವ |
ಏಷ ತ್ವಸುಕರಂ ಕರ್ಮ ಯಾದವಾರ್ಥೇ ಕರೋಮ್ಯಹಮ್ ॥ 68 ॥
ಎಲೈ ರಾಜನೇ, ಅರ್ಜುನನು ಹೀಗೆ ಮನಸ್ಸಿನಲ್ಲಿ ಯೋಚಿಸಿ, ಕೌರವನಾದ ಭೂರಿಶ್ರವನನ್ನು ಪೂಜಿಸಿ, ಮಹಾಬಾಹುವಾದ ಅವನು ಕೃಷ್ಣನನ್ನು ಕುರಿತು- ಮಾಧವನೇ, ಸೈಂಧವನಲ್ಲಿಯೇ ನೆಟ್ಟ ದೃಷ್ಟಿಯುಳ್ಳ ಕಾರಣದಿಂದ ನಾನು ಸಾತ್ಯಕಿಯನ್ನು ನೋಡಲಿಲ್ಲ. ಈಗ ನಾನು ಮಧುಕುಲೋತ್ಪನ್ನನಾದ ಸಾತ್ಯಕಿಯ ಸಲುವಾಗಿ ದುಷ್ಕರವಾದ ಕಾರ್ಯವನ್ನು ಮಾಡುವೆನು' ಎಂದು ಹೇಳಿದನು.

ಇತ್ಯುಕ್ತ್ವಾ ವಚನಂ ಕುರ್ವನ್ ವಾಸುದೇವಸ್ಯ ಪಾಂಡವಃ |
ಸಖಡ್ಗಂ ಯಜ್ಞಶೀಲಸ್ಯ ಪತ್ರಿಣಾ ಬಾಹುಮಚ್ಛಿನತ್ ॥ 69 ॥
ಕೃಷ್ಣನನ್ನು ಕುರಿತು ಹೀಗೆ ಹೇಳಿ, ತನ್ನ ಮಾತನ್ನು ನಡೆಸುವವನಾಗಿ ಅರ್ಜುನನು ಯಜ್ಞಶೀಲನಾದ ಭೂರಿಶ್ರವನ ಖಡ್ಗ ಸಹಿತವಾದ ದಕ್ಷಿಣ ಬಾಹುವನ್ನು ಬಾಣದಿಂದ ಕತ್ತರಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಏಕಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೆಂಟನೆಯ ಅಧ್ಯಾಯ
ಭೂರಿಶ್ರವನ ಪ್ರಾಯೋಪ್ರವೇಶ. ಸಾತ್ಯಕಿಯಿಂದ ಭೂರಿಶ್ರವನ ಶಿರಚ್ಛೇದ.
ಸಂಜಯಃ
ಸ ಬಾಹುರಪತದ್ ಭೂಮೌ ಸಖಡ್ಗಃ ಸಶುಭಾಂಗದಃ |
ಯಂತ್ರಮುಕ್ತೋ ಮಹೇಂದ್ರಸ್ಯ ಧ್ವಜೋ ವೃತ್ತೋತ್ಸವೋ ಯಥಾ |
ಆದಧಜ್ಜೀವಲೋಕಸ್ಯ ದುಃಖಮುತ್ತಮಮುತ್ತಮಃ ॥ 1 ॥
ಸಂಜಯ ಖಡ್ಗ ಮತ್ತು ಶುಭಾಂಗದ ಸಹಿತವಾದ ಆ ಬಾಹುವು ಉತ್ಸವವು ಮುಗಿದ ಮೇಲೆ ಯಂತ್ರದಿಂದ ಮುಕ್ತವಾದ ಇಂದ್ರಧ್ವಜದಂತೆ ಜೀವಲೋಕಕ್ಕೆ ದುಃಖವನ್ನುಂಟು ಮಾಡುತ್ತಾ ಭೂಮಿಯ ಮೇಲೆ ಬಿದ್ದಿತು.
ಪ್ರಹರಿಷ್ಯನ್ ಹೃತೋ ಬಾಹುರದೃಶ್ಯೇನ ಕಿರೀಟಿನಾ |
ವೇಗೇನಾಭ್ಯಪತದ್ ಭೂಮೌ ಪಂಚಾಸ್ಯ ಇವ ಪನ್ನಗಃ ॥ 2 ॥
ಇನ್ನೇನು ಹೊಡೆಯುವುದರಲ್ಲಿದ್ದ ಭೂರಿಶ್ರವನ ಬಾಹುವು ಮರೆಯಾದ ಅರ್ಜುನನಿಂದ ಹೊಡೆಯಲ್ಪಟ್ಟು ಐದು ತಲೆಯುಳ್ಳ ಸರ್ಪದಂತೆ ಶೀಘ್ರವಾಗಿ ಭೂಮಿಯ ಮೇಲೆ ಬಿದ್ದಿತು.
ಸ ಮೋಘಂ ಕೃತಮಾತ್ಮಾನಂ ದೃಷ್ಟ್ವಾ ಪಾರ್ಥೇನ ಕೌರವಃ |
ಉತ್ಸೃಜ್ಯ ಸಾತ್ಯಕಿಂ ಕ್ರೋಧಾದ್ ಗರ್ಹಯಾಮಾಸ ಪಾಂಡವಮ್ ॥3॥
ತನ್ನ ಪ್ರಯತ್ನವು ಅರ್ಜುನನಿಂದ ವ್ಯರ್ಥಗೊಳಿಸಲ್ಪಟ್ಟುದನ್ನು ನೋಡಿ ಕೌರವನಾದ ಭೂರಿಶ್ರವನು ಸಾತ್ಯಕಿಯನ್ನು ಬಿಟ್ಟು ಕ್ರೋಧದಿಂದ ಅರ್ಜುನನನ್ನು ನಿಂದಿಸಿದನು.
ಸ ವಿಬಾಹುರ್ಮಹಾರಾಜ ಏಕಪಕ್ಷ ಇವಾಂಡಜಃ |
ಏಕಚಕ್ರೋ ರಥೋ ಯದ್ವದ್ ಧರಣೀಮಾಸ್ಥಿತೋ ನೃಪಃ |
ಉವಾಚ ಪಾಂಡವಂ ಚೈವ ಸರ್ವಕ್ಷತ್ರಸ್ಯ ಪಶ್ಯತಃ ॥ 4 ॥
ಎಲೈ ಮಹಾರಾಜನೇ, ದಕ್ಷಿಣಬಾಹುವಿಲ್ಲದ ಅವನು ಒಂದು ರೆಕ್ಕೆಯನ್ನು ಹೊಂದಿದ ಪಕ್ಷಿಯಂತೆ, ಒಂದು ಚಕ್ರವನ್ನು ಹೊಂದಿದ ರಥದಂತೆ ಭೂಮಿಯ ಮೇಲೆ ನಿಂತು ಎಲ್ಲ ಕ್ಷತ್ರಿಯರೂ ನೋಡುತಿತರುವಂತೆ ಅರ್ಜುನನನ್ನು ಕುರಿತು ಹೇಳಿದನು.
ನೃಶಂಸಂ ಬತ ಕೌಂತೇಯ ಕರ್ಮೇದಂ ಕೃತವಾನಸಿ |
ಅಪಶ್ಯತೋ ವಿಷಕ್ತಸ್ಯ ಯನ್ಮೇ ಬಾಹುಮಚಿಚ್ಛಿದಃ ॥ 5 ॥
ಎಲೈ ಕೌಂತೇಯನೇ, ನಿನ್ನನ್ನು ನೋಡದಿರುವ, ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡದಿರುವ ನನ್ನ ಬಾಹುವನ್ನು ಕತ್ತರಿಸಿ ನೀನು ಬಹಳ ಕ್ರೂರವಾದ ಈ ಕರ್ಮವನ್ನು ಮಾಡಿದ್ದೀಯೆ.
ಕಿಂ ನು ವಕ್ಷ್ಯಸಿ ರಾಜಾನಂ ಧರ್ಮಪುತ್ರಂ ಯುಧಿಷ್ಠಿರಮ್ |
ಕಿಂ ಕುರ್ವಾಣೋ ಮಯಾ ಸಂಖ್ಯೇ ಹತೋ ಭೂರಿಶ್ರವಾ ಇತಿ ॥ 6 ॥
ಧರ್ಮಪುತ್ರನಾದ ಯುಧಿಷ್ಠಿರನನ್ನು ಕುರಿತು, ಏನು ಮಾಡುತ್ತಿದ್ದ ಭೂರಿಶ್ರವನನ್ನು ನಾನು ಯುದ್ಧದಲ್ಲಿ ಕೊಂದೆನು ಎಂದು ಹೇಳುತ್ತೀಯೆ?
ಇದಮಿಂದ್ರೇಣ ತೇ ಸಾಕ್ಷಾದುಪದಿಷ್ಟಂ ಮಹಾತ್ಮನಾ |
ಅಸ್ತ್ರಂ ರುದ್ರೇಣ ವಾ ಪಾರ್ಥ ದ್ರೋಣೇನಾಥ ಕೃಪೇಣ ವಾ ॥ 7 ॥
ಎಲೈ ಪಾರ್ಥನೇ, ಈ ಅಸ್ತ್ರವು ನಿನಗೆ ಮಹಾತ್ಮನಾದ ಇಂದ್ರನಿಂದ ಉಪದೇಶಿಸಲ್ಪಟ್ಟಿತೆ? ಅಥವಾ ರುದ್ರನಿಂದ, ದ್ರೋಣರಿಂದ ಅಥವಾ ಕೃಪರಿಂದ ಉಪದೇಶಿಸಲ್ಪಟ್ಟಿತೆ?
ನನು ನಾಮ ಸ್ವಧರ್ಮಜ್ಞಸ್ತ್ವಂ ಲೋಕೇಽಭ್ಯಧಿಕಃ ಪರೈಃ |
ಅಯುದ್ಧ್ಯಮಾನಸ್ಯ ಕಥಂ ರಣೇ ಪ್ರಹೃತವಾನಸಿ ॥ 8 ॥
ನೀನು ಲೋಕದಲ್ಲಿ ನಿನ್ನ ಧರ್ಮವಾದ ಕ್ಷತ್ರಿಯಧರ್ಮವನ್ನು ತಿಳಿದವರಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನಾದವನಷ್ಟೆ? ರಣರಂಗದಲ್ಲಿ ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡದಿರುವ ನನ್ನನ್ನು ಹೇಗೆ ಹೊಡೆದೆ?
ನ ಪ್ರಮತ್ತಾಯ ಭೀತಾಯ ವಿರಥಾಯ ಪ್ರಯಾಚತೇ |
ವ್ಯಸನೇ ವರ್ತಮಾನಾಯ ಪ್ರಹರಂತಿ ಮನಸ್ವಿನಃ ॥ 9 ॥
ಪ್ರಮತ್ತನಾದವನಿಗೆ, ಭೀತನಾದವನಿಗೆ, ರಥಹೀನನಾದವನಿಗೆ, ಬೇಡುವವನಿಗೆ, ಕಷ್ಟದಲ್ಲಿ ಸಿಲುಕಿದವನಿಗೆ ಧೈರ್ಯಶಾಲಿಗಳಾದ

ಕ್ಷತ್ರಿಯರು ಹೊಡೆಯುವುದಿಲ್ಲ.
ಇದಂ ತು ನೀಚಾಚರಿತಮಸತ್ಪುರುಷಸೇವಿತಮ್ |
ಕಥಮಾಚರಿತಂ ಪಾರ್ಥ ತ್ವಯಾ ಕರ್ಮ ಸುದುಷ್ಕರಮ್ ॥ 10 ॥
ನೀನು ಮಾಡಿದ ಈ ಕರ್ಮವಾದರೂ ಅಸಜ್ಜನರಿಂದ ಸೇವಿಸಲ್ಪಡುವುದೂ ಮತ್ತು ನೀಚರಿಂದ ಆಚರಿಸಲ್ಪಡುವುದೂ ಆಗಿದೆ. ಎಲೈ ಅರ್ಜುನನೇ, ಅತ್ಯಂತ ದುಷ್ಕರವಾದ ಕರ್ಮವನ್ನು ನೀನು ಹೇಗೆ ಮಾಡಿದೆ?
ಆರ್ಯೇಣ ಸುಕರಂ ಹ್ಯಾಹುರಾರ್ಯಕರ್ಮ ಧನಂಜಯ |
ಅನಾರ್ಯಕರ್ಮ ತ್ವಾರ್ಯೇಣ ಸುದುಷ್ಕರತರಂ ಭುವಿ ॥ 11 ॥
ಎಲೈ ಧನಂಜಯನೇ, ಆರ್ಯನಾದವನು ಆರ್ಯಕರ್ಮವನ್ನು ಮಾಡುವುದು ಸುಲಭ ಎಂದು ಜ್ಞಾನಿಗಳು ಹೇಳುತ್ತಾರೆ. ಆರ್ಯನಾದವನು ಭೂಮಿಯಲ್ಲಿ ಅನಾರ್ಯ ಕರ್ಮವನ್ನು ಮಾಡುವುದು ಅತ್ಯಂತ ದುಷ್ಕರವಾದುದು.
ಯೇಷು ಯೇಷು ನರಃ ಪಾರ್ಥ ಯತ್ರ ಯತ್ರ ಚ ವರ್ತತೇ |
ಆಶು ತಚ್ಛೀಲತಾಮೇತಿ ತದಿದಂ ತ್ವಯಿ ದೃಶ್ಯತೇ ॥ 12 ॥
ಎಲೈ ಪಾರ್ಥನೇ, ಮನುಷ್ಯನು ಯಾರ ಯಾರ ಜೊತೆಯಲ್ಲಿ ಎಲ್ಲೆಲ್ಲಿ ಇರುತ್ತಾನೋ ಅವರ ಸ್ವಭಾವವನ್ನು ಶೀಘ್ರವಾಗಿ ಹೊಂದುತ್ತಾನೆ. ಇದು ನಿನ್ನಲ್ಲಿ ಕಂಡುಬರುತ್ತಿದೆ.
ಕಥಂ ಹಿ ರಾಜವಂಶ್ಯಸ್ತ್ವಂ ಕೌರವೇಯೋ ವಿಶೇಷತಃ |
ಕ್ಷತ್ರಧರ್ಮಾದಪಕ್ರಾಂತಃ ಸುವೃತ್ತಶ್ಚರಿತವ್ರತಃ ॥ 13 ॥
ರಾಜವಂಶದಲ್ಲಿ ಅದರಲ್ಲಿಯೂ ವಿಶೇಷವಾಗಿ ಕೌರವವಂಶದಲ್ಲಿ ಜನಿಸಿ, ಒಳ್ಳೆಯ ನಡತೆಯನ್ನು ಮತ್ತು ಚರಿತೆಯನ್ನು ಹೊಂದಿದ ನೀನು ಕ್ಷತ್ರಿಯ ಧರ್ಮದಿಂದ ಹೇಗೆ ದೂರ ಸರಿದೆ?
ಇದಂ ತು ಯದತಿಕ್ಷುದ್ರಂ ವಾರ್ಷ್ಣೇಯಾರ್ಥೇ ಕೃತಂ ತ್ವಯಾ |
ವಾಸುದೇವಮತಂ ನೂನಂ ನೈತತ್ ತ್ವಯ್ಯುಪಪದ್ಯತೇ ॥ 14 ॥
ಸಾತ್ಯಕಿಯ ಸಲುವಾಗಿ ನೀನು ಮಾಡಿದ ಅತ್ಯಂತ ಕ್ಷುದ್ರವಾದ ಈ ಕರ್ಮವು ಖಂಡಿತವಾಗಿ ಕೃಷ್ಣನಿಗೆ ಅಭಿಮತವಾದುದು. ಇದು ನಿನಗೆ ಯುಕ್ತವಾಗುವುದಿಲ್ಲ
ಕೋ ಹಿ ನಾಮ ಪ್ರಮತ್ತಾಯ ಪರೇಣ ಸಹ ಯುದ್ಧ್ಯತೇ |
ಈದೃಶಂ ವ್ಯಸನಂ ದದ್ಯಾದ್ ಯೋ ನ ಕೃಷ್ಣಸಖೋ ಭವೇತ್ ॥ 15 ॥
ಕೃಷ್ಣನ ಸ್ನೇಹಿತನಲ್ಲದ ಯಾವನು ಪ್ರಮತ್ತನಾದ, ಬೇರೆಯವನ ಜೊತೆಯಲ್ಲಿ ಯುದ್ಧ ಮಾಡುತ್ತಿರುವ ಯೋಧನಿಗೆ ಇಂತಹ ವ್ಯಸನವನ್ನು ಕೊಟ್ಟಾನು?
ವ್ರಾತ್ಯಾಃ ಸಂಶ್ಲಿಷ್ಟಕರ್ಮಾಣಃ ಪ್ರಕೃತ್ಯೈವ ವಿಗರ್ಹಿತಾಃ |
ವೃಷ್ಣ್ಯಂಧಕಾಃ ಕಥಂ ಪಾರ್ಥ ಪ್ರಮಾಣಂ ಭವತಾ ಕೃತಾಃ ॥ 16 ॥
ವ್ರತಭ್ರಷ್ಟರೂ, ಸ್ವಾಭಾವಿಕವಾಗಿ ನಿಂದಿತರಾದವರೂ, ಜೊತೆಯಲ್ಲಿ ಸೇರಿ ಕಾರ್ಯವನ್ನು ಮಾಡುವವರೂ ಆದ ವೃಷ್ಣ್ಯಂಧಕರನ್ನು ಎಲೈ ಪಾರ್ಥನೇ, ನೀನು ಹೇಗೆ ಪ್ರಮಾಣವೆಂದು ಅಂಗೀಕರಿಸಿದೆ?
ಸಂಜಯಃ
ಏವಮುಕ್ತೋ ರಣೇ ಪಾರ್ಥೋ ಭೂರಿಶ್ರವಸಮಬ್ರವೀತ್ |
ವ್ಯಕ್ತಂ ಹಿ ಜೀರ್ಯಮಾಣೋಽಪಿ ಬುದ್ಧಿಂ ಜರಯತೇ ಜನಃ ॥ 17 ॥
ಸಂಜಯ ಹೀಗೆ ರಣರಂಗದಲ್ಲಿ ಹೇಳಲ್ಪಟ್ಟ ಅರ್ಜುನನು ಭೂರಿಶ್ರವನನ್ನು ಕುರಿತು ಮಾತನಾಡಿದನು- ಮುಪ್ಪನ್ನು ಹೊಂದುವವನು ತನ್ನ ಬುದ್ಧಿಗೂ ಮುಪ್ಪನ್ನು ತಂದುಕೊಳ್ಳುತ್ತಾನೆ ಎಂಬುದು ಸ್ಪಷ್ಟವಾಗಿದೆ.
ಅನರ್ಥಕಮಿದಂ ಸರ್ವಂ ಯತ್ ತ್ವಯಾ ವ್ಯಾಹೃತಂ ಪ್ರಭೋ |
ಜಾನನ್ನೇವ ಹೃಷೀಕೇಶಂ ಗರ್ಹಸೇ ಮಾಂ ಚ ಪಾಂಡವಮ್ ॥ 18 ॥
ಸಂಗ್ರಾಮಾಣಾಂ ಹಿ ಧರ್ಮಜ್ಞಃ ಸರ್ವಶಾಸ್ತ್ರಾರ್ಥಪಾರಗಃ |
ನ ಚಾಧರ್ಮಮಹಂ ಕುರ್ಯಾಂ ಜಾನಂಶ್ಚೈವ ಹಿ ಮುಹ್ಯಸೇ ॥ 20 ॥
ಎಲೈ ಪ್ರಭುವೇ, ನೀನು ಆಡಿದ ಮಾತುಗಳೆಲ್ಲವೂ ಅನರ್ಥಕವಾದುವು. ಯುದ್ಧ ಧರ್ಮವನ್ನು ತಿಳಿದವನೂ, ಸರ್ವಶಾಸ್ತ್ರ ಪಾರಂಗತನೂ ಆದ ನೀನು ಎಲ್ಲವನ್ನೂ ತಿಳಿದೇ ಹೃಷೀಕೇಶನಾದ ಕೃಷ್ಣನನ್ನೂ ಮತ್ತು ಪಾಂಡವನಾದ ನನ್ನನ್ನೂ ನಿಂದಿಸುತ್ತಿದ್ದೀಯೆ. ನಾನು ಅಧರ್ಮವನ್ನು ಮಾಡಲಾರೆ. ನೀನು ಎಲ್ಲವನ್ನೂ ತಿಳಿದವನಾದರೂ ಭ್ರಾಂತಿಗೆ ಒಳಗಾಗುತ್ತಿದ್ದೀಯೆ.
ಯುದ್ಧ್ಯಂತೇ ಕ್ಷತ್ರಿಯಾಃ ಶತ್ರೂನ್ ಸ್ವೈಃಸ್ವೈಃ ಪರಿವೃತಾ ನರಾಃ |
ಭ್ರಾತೃಭಿಃ ಪಿತೃಭಿಃ ಪುತ್ರೈಸ್ತಥಾ ಸಂಬಂಧಿಬಾಂಧವೈಃ ॥ 21 ॥
ಕ್ಷತ್ರಿಯರಾದ ಮನುಷ್ಯರು ತಮ್ಮ ತಮ್ಮ ಸಹೋದರರಿಂದ, ತಂದೆಯಿಂದ, ಪುತ್ರರಿಂದ, ಹಾಗೆ ಸಂಬಂಧ-ಬಾಂಧವರಿಂದ ಸಹಿತರಾಗಿ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾರೆ.
ಸ ಕಥಂ ಸಾತ್ಯಕಿಂ ಶಿಷ್ಯಂ ಸುಹೃತ್ಸಂಬಂಧಿಮೇವ ಚ |
ಅಸ್ಮದರ್ಥೇ ಚ ಯುದ್ಧ್ಯಂತಂ ತ್ಯಕ್ತತ್ವ ಪ್ರಾಣಾನ್ ಸುದುಸ್ತ್ಯಜಾನ್ ॥
ಅಂತಹ ಕ್ಷತ್ರಿಯನಾದ ನಾನು ನನ್ನ ಶಿಷ್ಯನೂ, ಸ್ನೇಹಿತನೂ, ಸಂಬಂಧಿಯೂ, ದುಸ್ತ್ಯಜವಾದ ಪ್ರಾಣವನ್ನು ಬಿಟ್ಟು ನಮ್ಮ ಸಲುವಾಗಿ ಯುದ್ಧವನ್ನು ಮಾಡುತ್ತಿರುವ ಸಾತ್ಯಕಿಯನ್ನು ಉಪೇಕ್ಷೆ ಮಾಡಲು ಹೇಗೆ ಸಾಧ್ಯ?
ಮಮ ಬಾಹುಂ ರಣೇ ರಾಜನ್ ದಕ್ಷಿಣಂ ಯುದ್ಧದುರ್ಮದಮ್ |

ತ್ವಯಾ ನಿಷ್ಕೃಷ್ಯಮಾಣಂ ಚ ದೃಷ್ಟ್ವವಾನಸ್ಮಿ ನಿಷ್ಕ್ರಿಯಮ್ ॥ 23 ॥
ಎಲೈ ರಾಜನೇ, ನನ್ನ ದಕ್ಷಿಣ ಬಾಹುವಿನಂತಿರುವ ಯುದ್ಧದುರ್ಮದನಾದ ಸಾತ್ಯಕಿಯು ರಣರಂಗದಲ್ಲಿ ನಿಷ್ಕ್ರಿಯನಾಗಿ ನಿನ್ನಿಂದ ಎಳೆದಾಡಲ್ಪಡುವುದನ್ನು ನಾನು ನೋಡಿದೆನು.
ಯಾ ಯಸ್ಯ ಯುದ್ಧ್ಯತೇಽರ್ಥಾಯ ಸ ಸಂರಕ್ಷ್ಯೋ ನರಾಧಿಪ |
ತೈ ರಕ್ಷ್ಯಮಾಣೈಃ ಸ ನೃಪೋ ರಕ್ಷಿತವ್ಯೋ ಮಹಾಮೃಧೇ ॥ 24 ॥
ಎಲೈ ರಾಜನೇ, ಯಾವನು ಯಾರ ಸಲುವಾಗಿ ಯುದ್ಧವನ್ನು ಮಾಡುತ್ತಾನೆಯೋ ಅವನು ರಕ್ಷಿಸಲ್ಪಡಬೇಕಾದವನು. ರಾಜನಿಂದ ರಕ್ಷಿತರಾದ ಅಂತಹವರಿಂದ ದೊಡ್ಡ ಯುದ್ಧದಲ್ಲಿ ರಾಜನು ರಕ್ಷಿಸಲ್ಪಡುತ್ತಾನೆ.
ಯದ್ಯಹಂ ಸಾತ್ಯಕಿಂ ದೃಷ್ಟ್ವಾ ತೂಷ್ಣೀಮಾಸಿಷ್ಯ ಆಹವೇ |
ತತಸ್ತೇನ ವಿಯೋಗಶ್ಚ ಪ್ರಾಪ್ಯಂ ನರಕಮೇವ ಚ ॥ 25 ॥
ನಾನು ಸಾತ್ಯಕಿಯನ್ನು ನೋಡಿ ರಣರಂಗದಲ್ಲಿ ಸುಮ್ಮನಿದ್ದರೆ ಅದರಿಂದ ಅವನಿಂದ ವಿಯೋಗವೂ ಮತ್ತು ಮುಂದೆ ನರಕವು ನನಗೆ ಉಂಟಾಗುತ್ತಿದ್ದಿತು.
ರಕ್ಷಿತವ್ಯೋ ಮಯಾ ಯಸ್ಮಾತ್ ತಸ್ಮಾಲ್ಲಬ್ಧೋ ಮಯಾ ಸ ಚ |
ಯಶಶ್ಚೈವ ಸ್ವಪಕ್ಷೇಭ್ಯಃ ಫಲಂ ಮಿತ್ರಸ್ಯ ರಕ್ಷಣಾತ್ ॥ 26 ॥
ಅವನು ನನ್ನಿಂದ ರಕ್ಷಿಸಲ್ಪಡಬೇಕಾದ ಕಾರಣದಿಂದ ನಾನು ಅವನನ್ನು ನನ್ನ ಪಕ್ಷದವರಿಂದ ಕೀರ್ತಿಯನ್ನೂ, ಮಿತ್ರನನ್ನು ರಕ್ಷಣೆ ಮಾಡಿದ ಕಾರಣದಿಂದ ಶ್ರೇಷ್ಠವಾದ ಫಲವನ್ನೂ ಹೊಂದಿದೆನು.
ಯಶ್ಚ ಮಾಂ ಗರ್ಹಸೇ ರಾಜನ್ ಕೃಷ್ಣೇನ ಸಹ ಸಂಗತಮ್ |
ಕಸ್ತೇನ ಸಂಗಮಂ ನೇಚ್ಛೇತ್ ತತ್ರ ತೇ ಬುದ್ಧಿವಿಭ್ರಮಃ ॥ 27 ॥
ಎಲೈ ರಾಜನೇ, ಕೃಷ್ಣನ ಜೊತೆಯಲ್ಲಿ ಸೇರಿದ ನನ್ನನ್ನು ನೀನು ನಿಂದಿಸುತ್ತಿರುವಿಯಷ್ಟೇ. ಅವನ ಜೊತೆಯಲ್ಲಿ ಯಾರು ಸಂಗಮವನ್ನು ಬಯಸಲಾರರು? ಈ ವಿಷಯದಲ್ಲಿ ನಿನ್ನ ಬುದ್ಧಿಯು ಭ್ರಾಂತಿಗೆ ಒಳಗಾಗಿದೆ.
ಆಬದ್ಧಕವಚಸ್ಯೇಹ ರಥಮಾರುಹ್ಯ ತಿಷ್ಠತಃ |
ಸರ್ವಾಯುಧೈರುಪೇತಸ್ಯ ಪ್ರತಿಯೋಧಪ್ರತೀಕ್ಷಿಣಃ ॥ 28 ॥
ಅಸ್ಮಿನ್ ರಥಗಜಾನೀಕೇ ಹಯಪತ್ತಿಸಮಾಕುಲೇ |
ಸಿಂಹನಾದೋದ್ಧತರಯೇ ಗಂಭೀರೇ ಸೈನ್ಯಸಾಗರೇ ॥ 29 ॥
ಸ್ವೈಶ್ಚಾಪಿ ಸಮುಪೇತಸ್ಯ ವಿಕ್ರಾಂತಸ್ಯ ತಥಾ ರಣೇ |
ಸಾತ್ಯಕೇನ ಕಥಂ ಯೋಗ್ಯಃ ಸಂಗ್ರಾಮಸ್ತೇ ಭವಿಷ್ಯತಿ ॥ 30 ॥
ಕವಚವನ್ನು ಧರಿಸಿ, ನಿನ್ನ ರಥದಲ್ಲಿ ಕ್ಷೇಮದಿಂದ ಇದ್ದು, ಸರ್ವಾಯುಧಗಳನ್ನು ಹೊಂದಿದವನಾಗಿ, ಪ್ರತಿಯೋಧನನ್ನು ನಿರೀಕ್ಷೆ ಮಾಡುತ್ತಾ, ರಥ-ಗಜಸೇನೆಗಳನ್ನು ಹೊಂದಿದ, ಹಯ-ಪದಾತಿಗಳಿಂದ ನಿಬಿಡವಾದ, ಸಿಂಹನಾದದಂತಹ ಉದ್ಧತ ಘೋಷದಿಂದ ಕೂಡಿದ ಗಂಭೀರವಾದ ಈ ಸೈನ್ಯಸಾಗರದಲ್ಲಿ ನಿನ್ನವರಿಂದಲೂ ಪರಿವಾರಿತನಾದ ಪರಾಕ್ರಮಶಾಲಿಯಾದ ನಿನಗೆ ಸಾತ್ಯಕಿಯ ಜೊತೆಯಲ್ಲಿ ನಿನಗೆ ಹೇಗೆ ಯುದ್ಧವು ಯೋಗ್ಯವಾಗುವುದು?
ಬಹುಭಿಃ ಸಹ ಸಂಗತ್ಯ ನಿರ್ಜಿತ್ಯ ಚ ಮಹಾರಥಾನ್ |
ಶ್ರಾಂತಶ್ಚ ಶ್ರಾಂತವಾಹಶ್ಚ ಕ್ಷೀಣಸರ್ವಾಯುಧಸ್ತ್ವಯಾ ॥ 31 ॥
ಸಮೇತಃ ಸಾತ್ಯಕಿಃ ಸಂಖೇ ನಿರ್ಜಿತಶ್ಚ ಮಹಾರಥಃ |
ಈದೃಶಂ ಸಾತ್ಯಕಿಂ ಸಂಖೇ ನಿರ್ಜಿತ್ಯ ಚ ಮಹಾರಥಮ್ ॥ 32 ॥
ಅಧಿಕತ್ವಂ ವಿಜಾನೀಷೇ ಸ್ವವೀರ್ಯವಶಮಾಗತಮ್ ॥ 33 ॥
ಅನೇಕ ಮಹಾರಥರ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಅವರನ್ನು ಜಯಿಸಿ, ದಣಿದು, ಅವನ ಕುದುರೆಗಳೂ ದಣಿದಿರಲು, ಎಲ್ಲ ಆಯುಧಗಳನ್ನು ಕಳೆದುಕೊಂಡ ಅವನ ಸಮಾಗಮವನ್ನು ಹೊಂದಿ ನೀನು ಮಹಾರಥನಾದ ಅವನನ್ನು ರಣರಂಗದಲ್ಲಿ ಪರಾಭವಗೊಳಿಸಿದ್ದೀಯೆ. ಈ ಅವಸ್ಥೆಯಲ್ಲಿದ್ದ ಮಹಾರಥನಾದ ಸಾತ್ಯಕಿಯನ್ನು ಯುದ್ಧದಲ್ಲಿ ಸೋಲಿಸಿ, ಅವನು ನನ್ನ ಪರಾಕ್ರಮಕ್ಕೆ ವಶನಾದನೆಂದು ತಿಳಿದು ನೀನು ನಿನ್ನನ್ನು ಶ್ರೇಷ್ಠನಾದವನೆಂದು ತಿಳಿದಿದ್ದೀಯೆ.
ಇಚ್ಛಸಿ ತ್ವಂ ಶಿರಸ್ತಸ್ಯ ಅಸಿನಾ ಹರ್ತುಮಾಹವೇ |
ತಥಾ ಕೃಚ್ಛ್ರಗತಂ ದೃಷ್ಟ್ವಾ ಸಾತ್ಯಕಿಂ ಕಃ ಕ್ಷಮಿಷ್ಯತಿ ॥ 34 ॥
ತ್ವಂ ತು ಗರ್ಹಯ ಚಾತ್ಮಾನಂ ಸ್ವಧರ್ಮಂ ಯೋ ನ ರಕ್ಷಸಿ ॥ 35 ॥
ಮತ್ತು ರಣರಂಗದಲ್ಲಿ ಖಡ್ಗದಿಂದ ಅವನ ಶಿರಸ್ಸನ್ನು ಕತ್ತರಿಸಲು ಬಯಸುತ್ತಿದ್ದೀಯೆ. ಅಂತಹ ಕಷ್ಟದಲ್ಲಿರುವ ಸಾತ್ಯಕಿಯನ್ನು ನೋಡಿ ಯಾರು ಸಹಿಸುವರು? ನಿನ್ನ ಧರ್ಮವನ್ನು ರಕ್ಷಿಸದ ನಿನ್ನನ್ನೇ ನೀನು ನಿಂದಿಸು.
ಏಕಸ್ಯೈಕೇನ ಹಿ ಕಥಂ ಸಂಗ್ರಾಮಃ ಸಂಭವಿಷ್ಯತಿ |
ಕಥಂ ರಕ್ಷಿಷ್ಯಸೇ ವೀರ ಯೇ ವೈ ತ್ವಾಂ ಸಂಶ್ರಿತಾ ಜನಾಃ ॥ 36 ॥
ಒಬ್ಬನಿಗೆ ಒಬ್ಬನ ಜೊತೆಯಲ್ಲಿಯೇ ಯುದ್ಧವು ಹೇಗೆ ನಡೆಯುವುದು? ಎಲೈ ವೀರನೇ, ನಿನ್ನನ್ನು ಆಶ್ರಯಿಸಿದ ಅನೇಕ ಜನರನ್ನು ನೀನು ಹೇಗೆ ರಕ್ಷಿಸುವಿ?
ಆತ್ತಶಸ್ತ್ರಸ್ಯ ತು ರಣೇ ವೃಷ್ಣಿಪುತ್ರಂ ಜಿಘಾಂಸತಃ |
ಛಿನ್ನವಾನ್ ಯದ್ಯಹಂ ಬಾಹುಂ ನೈತಲ್ಲೋಕವಿಗರ್ಹಿತಮ್ ॥ 37 ॥
ಕೈಯಲ್ಲಿ ಶಸ್ತ್ರವನ್ನು ಹಿಡಿದು ರಣರಂಗದಲ್ಲಿ ವೃಷ್ಣಿಪುತ್ರನಾದ ಸಾತ್ಯಕಿಯನ್ನು ಕೊಲ್ಲಲು ಬಯಸಿದ ನಿನ್ನ ಬಾಹುವನ್ನು ಕತ್ತರಿಸಿದರೆ

ಇದು ಲೋಕನಿಂದಿತವಾಗುವುದಿಲ್ಲ.
ನ್ಯಸ್ತಶಸ್ತ್ರಸ್ಯ ಹಿ ಪುನರ್ವಿಕಲಸ್ಯ ವಿವರ್ಮಣಃ |
ಅಭಿಮನ್ಯೋರ್ವಧಂ ತಾತ ಧಾರ್ಮಿಕಃ ಕೋ ನು ಪೂಜಯೇತ್ ||
ಎಲೈ ಪ್ರೀತಿಪಾತ್ರನೇ, ಶಸ್ತ್ರರಹಿತನಾಗಿ, ಅಪ್ರಾಪ್ತ ಯೌವನನಾಗಿ, ಕವಚಶೂನ್ಯನಾಗಿದ್ದ ಅಭಿಮನ್ಯುವಿನ ವಧೆಯನ್ನು ಧಾರ್ಮಿಕನಾದ ಯಾವನು ತಾನೆ ಗೌರವಿಸುವನು? (ಎಂದು ಹೇಳಿದನು).
ಸಂಜಯಃ
ಏವಮುಕ್ತಸ್ತು ಮಹಾಬಾಹುರ್ಯೂಪಕೇತುರ್ಮಹಾಯಶಾಃ |
ಯುಯುಧಾನಂ ಪರಿತ್ಯಜ್ಯ ರಣೇ ಪ್ರಾಯಮುಪಾವಿಶತ್ || 39 ||
ಸಂಜಯ ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಮಹಾಬಾಹುವೂ, ಮಹಾಕೀರ್ತಿವಂತನೂ, ಯೂಪಧ್ವಜನೂ ಆದ ಭೂರಿಶ್ರವನು ಸಾತ್ಯಕಿಯನ್ನು ಬಿಟ್ಟು ರಣರಂಗದಲ್ಲಿ ಪ್ರಾಯೋಪ್ರವೇಶಕ್ಕೆ ಕುಳಿತುಕೊಂಡನು.
ಶರಾನಾಸ್ತೀರ್ಯ ಸವ್ಯೇನ ಪಾಣಿನಾ ಪುಣ್ಯಲಕ್ಷಣಃ |
ಯಿಯಾಸುಬ್ರಹ್ಮಲೋಕಾಯ ಪ್ರಾಣಾನ್ ಪ್ರಾಣೇಷ್ವಥಾಜುಹೋತ್ ||
ಪುಣ್ಯಲಕ್ಷಣಗಳನ್ನು ಹೊಂದಿದ್ದ ಅವನು ಎಡಗೈಯಿಂದ ದರ್ಭೆಗಳನ್ನು ಹರಡಿ ಬ್ರಹ್ಮಲೋಕಕ್ಕೆ ಹೋಗುವವನಾಗಿ ಇಂದ್ರಿಯಗಳಿಂದ ವ್ಯುತ್ಕ್ರಮದಿಂದ ಹೋಮವನ್ನು ಮಾಡಿದನು.
ಸೂರ್ಯೇ ಚಕ್ಷುಃ ಸಮಾಧಾಯ ಪ್ರಸನ್ನಂ ಸಲಿಲೇ ಮನಃ |
ಧ್ಯಾಯನ್ ಮಹೋಪನಿಷದಂ ಯೋಗಯುಕ್ತೋಽಭವನ್ಮುನಿಃ || 41 ||
ಸೂರ್ಯನಲ್ಲಿ ಚಕ್ಷುಸ್ಸನ್ನು, ಪ್ರಸನ್ನವಾದ ಮನಸ್ಸನ್ನು ಜಲದಲ್ಲಿಯೂ ನಿಲ್ಲಿಸಿ, ವೇದಪ್ರತಿಪಾದ್ಯನಾದ ಪರಬ್ರಹ್ಮನನ್ನು ಧ್ಯಾನಮಾಡುತ್ತಾ ಯೋಗಯುಕ್ತನಾದ ಮುನಿಯಾದನು.
ತತಃ ಸ ಸರ್ವಸೇನಾಯಾಂ ಜನಃ ಕೃಷ್ಣಧನಂಜಯೌ |
ಗರ್ಹಯಾಮಾಸ ತಂ ಚಾಪಿ ಶಶಂಸ ಪುರುಷರ್ಷಭಮ್ || 42 ||
ಆಗ ಆ ಸೇನೆಯ ಎಲ್ಲ ಜನರೂ ಕೃಷ್ಣಾರ್ಜುನರನ್ನು ನಿಂದಿಸಿ ಪುರುಷಶ್ರೇಷ್ಠನಾದ ಭೂರಿಶ್ರವನನ್ನು ಪ್ರಶಂಸಿಸಿದರು.
ನಿಂದ್ಯಮಾನೌ ತಥಾ ಕೃಷ್ಣೌ ನೋಚತುಃ ಕಿಂಚಿದಪ್ರಿಯಮ್ |
ಪ್ರಶಸ್ಯಮಾನಶ್ಚ ತಥಾ ನಾಹೃಷ್ಯದ್ ಯೂಪಕೇತನಃ || 43 ||
ಕೃಷ್ಣಾರ್ಜುನರು ನಿಂದಿಸಲ್ಪಡುತ್ತಿದ್ದರೂ ಅವರು ಯಾವ ಅಹಿತವಚನವನ್ನೂ ಆಡಲಿಲ್ಲ. ಹಾಗೆ ಹೊಗಳಲ್ಪಡುತ್ತಿದ್ದರೂ ಯೂಪಕೇತುವಾದ ಭೂರಿಶ್ರವನು ಅದರಿಂದ ಸಂತೋಷಪಡಲಿಲ್ಲ.
ತಾಂಸ್ತಥಾ ವಾದಿನೋ ರಾಜನ್ ಪುತ್ರಾಂಸ್ತವ ಧನಂಜಯಃ |
ಅಮೃಷ್ಯಮಾಣೋ ಮನಸಾ ತೇಷಾಂ ತಸ್ಯ ಚ ಭಾಷಿತಮ್ || 44 ||
ಅಸಂಕ್ರುದ್ಧಮನಾ ವಾಚಾ ಸ್ಮಾರಯನ್ನಿವ ಭಾರತ |
ಸಂಕ್ಷುಬ್ಧಮನಸೋ ಭೂತ್ವಾ ಕೃಪಯಾ ಚ ಪರಿಪ್ಲುತಃ |
ಉವಾಚ ಪಾಂಡುತನಯಃ ಸಾಕ್ಷೇಪಮಿವ ಫಲ್ಗುನಃ || 45 ||
ಎಲೈ ರಾಜನೇ, ಭಾರತನೇ, ಹಾಗೆ ಮಾತನಾಡುತ್ತಿದ್ದ ಆ ಜನರನ್ನು ಮತ್ತು ನಿನ್ನ ಪುತ್ರರ ಮಾತುಗಳನ್ನು ಮನಸ್ಸಿನಲ್ಲಿ ಸಹಿಸದೆ, ಆದರೂ ಕೋಪಗೊಳ್ಳದೆ, ಮನಸ್ಸಿನಲ್ಲಿಯೇ ಕ್ಷೋಭೆಗೊಂಡು, ಕೃಪೆಯಿಂದ ಕೂಡಿದವನಾಗಿ ಪಾಂಡುಪುತ್ರನಾದ ಅರ್ಜುನನು ಆಕ್ಷೇಪಪೂರ್ವಕವಾಗಿ ಹಿಂದಿನ ಘಟನೆಯನ್ನು ಅವರಿಗೆ ಸ್ಮರಣೆಗೆ ತಂದುಕೊಡುತ್ತಾ ಮಾತನಾಡಿದನು.
ಮಮ ಸರ್ವೇಽಪಿ ರಾಜಾನೋ ಜಾನಂತ್ಯೇತನ್ಮಹಾವ್ರತಮ್ |
ನ ಶಕ್ಯೋ ಮಾಮಕೋ ಹಂತುಂ ಯೋ ಮೇ ಸ್ಯಾದ್ಬಾಣಗೋಚರೇ ||
ನನ್ನ ಮಹಾವ್ರತವನ್ನು ಎಲ್ಲ ರಾಜರೂ ತಿಳಿದಿದ್ದಾರೆ. ನನ್ನ ಬಾಣದ ವ್ಯಾಪ್ತಿಯಲ್ಲಿ ಬರುವ ಯಾವ ನನ್ನ ಯೋಧರನ್ನೂ ಶತ್ರುಗಳು ಕೊಲ್ಲಲು ಸಾಧ್ಯವಿಲ್ಲ (ಎಂಬುದು ನನ್ನ ಮಹಾವ್ರತ).
ಯೂಪಕೇತೋ ಸಮೀಕ್ಷ್ಯ ತ್ವಂ ನ ಮಾಂ ಗರ್ಹಿತುಮರ್ಹಸಿ |
ನ ಹಿ ಧರ್ಮಮವಿಜ್ಞಾಯ ಯುಕ್ತಂ ಗರ್ಹಯಿತುಂ ಪರಮ್ || 47 ||
ಎಲೈ ಯೂಪಕೇತುವೇ, ಇದನ್ನು ತಿಳಿದು ನೀನು ನನ್ನನ್ನು ನಿಂದಿಸುವುದು ಯೋಗ್ಯವಲ್ಲ. ಧರ್ಮವನ್ನು ತಿಳಿಯದೆ ಇನ್ನೊಬ್ಬನನ್ನು ನಿಂದಿಸುವುದು ಯೋಗ್ಯವಲ್ಲ.
ಆತ್ತಶಸ್ತ್ರಸ್ಯ ಹಿ ರಣೇ ವೃಷ್ಣಿವೀರಂ ಜಿಘಾಂಸತಃ |
ಯದಹಂ ಬಾಹುಮಚ್ಛೈತ್ಸಂ ನ ಸ ಧರ್ಮೋ ವಿಗರ್ಹಿತಃ || 48 ||
ಕೈಯಲ್ಲಿ ಶಸ್ತ್ರವನ್ನು ಹಿಡಿದು ರಣರಂಗದಲ್ಲಿ ವೃಷ್ಣಿವೀರನಾದ ಸಾತ್ಯಕಿಯನ್ನು ಕೊಲ್ಲಲು ಬಯಸಿದ ನಿನ್ನ ಬಾಹುವನ್ನು ನಾನು ಏನು ಕತ್ತರಿಸಿದೆನೋ ಅದು ನಿಂದನೀಯವಾದ ಧರ್ಮವಲ್ಲ.
ನ್ಯಸ್ತಶಸ್ತ್ರಸ್ಯ ಬಾಲಸ್ಯ ವಿರಥಸ್ಯ ವಿವರ್ಮಣಃ |
ಅಭಿಮನ್ಯೋರ್ವಧಂ ತಾತ ಧಾರ್ಮಿಕಃ ಕೋ ನು ಪೂಜಯೇತ್ |
ನಾಭಿಮನ್ಯೋರ್ವಧಂ ಯೂಯಂ ಗರ್ಹಯಧ್ವಂ ಕುತಸ್ತದಾ || 49 ||
ಶಸ್ತ್ರಹೀನನಾದ, ಬಾಲಕನಾದ, ರಥಹೀನನಾದ, ಕವಚಹೀನನಾದ ಅಭಿಮನ್ಯುವಿನ ವಧೆಯನ್ನು ಎಲೈ ಪ್ರೀತಿಪಾತ್ರನೇ, ಧಾರ್ಮಿಕನಾದ ಯಾವನು ಗೌರವಿಸಿಯಾನು? ಆಗ ನೀನು ಅಭಿಮನ್ಯುವಿನ ವಧೆಯನ್ನು ಏಕೆ ನಿಂದಿಸಲಿಲ್ಲ?

ಏವಮುಕ್ತಸ್ತು ಪಾರ್ಥೇನ ಶಿರಸಾ ಭೂಮಿಮಸ್ಪೃಶತ್ |
ಪಾಣಿನಾ ಚೈವ ಸವ್ಯೇನ ಪ್ರಾಹಿಣೋದಸ್ಯ ದಕ್ಷಿಣಮ್ ॥ 50 ॥
ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಭೂರಿಶ್ರವನು ತಲೆಯನ್ನು ಬಾಗಿಸಿ ಭೂಮಿಗೆ ಮುಟ್ಟಿಸಿ ಎಡಗೈಯಿಂದ ಅರ್ಜುನನಿಗೆ ಅಭಯಹಸ್ತವನ್ನು ತೋರಿಸಿದನು.
ಏತತ್ಪಾರ್ಥಸ್ಯ ತು ವಚಸ್ತತಃ ಶ್ರುತ್ವಾ ಮಹಾದ್ಯುತಿಃ |
ಯೂಪಕೇತುರ್ಮಹಾರಾಜ ತೂಷ್ಣೀಮಾಸೀದವಾಙ್ಮುಖಃ ॥ 51 ॥
ಎಲ್ಲೈ ಮಹಾರಾಜನೇ, ಅರ್ಜುನನ ಈ ಮಾತುಗಳನ್ನು ಕೇಳಿ ಮಹಾ- ಕಾಂತಿಯುಕ್ತನೂ, ಯೂಪಕೇತುವೂ ಆದ ಭೂರಿಶ್ರವನು ಮೌನವಾಗಿ ಮುಖವನ್ನು ತಗ್ಗಿಸಿದನು.
ಅರ್ಜುನಃ
ಯಾ ಪ್ರೀತಿರ್ಧರ್ಮರಾಜೇ ಮೇ ಭೀಮೇ ಚ ವದತಾಂವರೇ |
ನಕುಲೇ ಸಹದೇವೇ ಚ ಸಾ ಮೇ ತ್ವಯಿ ಶಲಾಗ್ರಜ ॥ 52 ॥
ಮಯಾ ತು ಸಮನುಜ್ಞಾತಃ ಕೃಷ್ಣೇನ ಚ ಮಹಾತ್ಮನಾ |
ಗಚ್ಛ ಪುಣ್ಯಕೃತಾಂಲ್ಲೋಕಾನ್ ಶಿಬಿರೌಶೀನರೋ ಯಥಾ ॥ 53 ॥
ಅರ್ಜುನ ಎಲ್ಲೈ ಶಲನ ಅಣ್ಣನೇ, ನನಗೆ ಧರ್ಮರಾಜನಲ್ಲಿ ಎಂತಹ ಪ್ರೀತಿ ಇದೆಯೋ, ಮಾತನಾಡುವವರಲ್ಲಿ ಶ್ರೇಷ್ಠನಾದ ಭೀಮಸೇನನಲ್ಲಿ ಎಂತಹ ಪ್ರೀತಿ ಇದೆಯೋ, ನಕುಲ-ಸಹದೇವರಲ್ಲಿ ಎಂತಹ ಪ್ರೀತಿ ಇದೆಯೋ ಅಂತಹ ಪ್ರೀತಿಯು ನಿನ್ನಲ್ಲಿ ಇದೆ. ನನ್ನಿಂದ ಅನುಮತಿಯನ್ನು ಪಡೆದು, ಮಹಾತ್ಮನಾದ ಕೃಷ್ಣನಿಂದಲೂ ಅನುಮತಿಯನ್ನು ಪಡೆದು, ಔಶೀನರ ಶಿಬಿಯಂತೆ ನಿನ್ನ ಪುಣ್ಯದಿಂದ ಸಂಪಾದಿಸಿದ ಲೋಕಗಳಿಗೆ ಹೋಗುವವನಾಗು.
ವಾಸುದೇವಃ
ಯೇ ಲೋಕಾ ಮಮ ವಿಮಲಾಃ ಸಕೃದ್ ವಿಭಾತಾ
ಬ್ರಹ್ಮಾದ್ಯೈಃ ಸುರವೃಷಭೈರಪೀಷ್ಯಮಾಣಾ |
ತಾನ್ ಕ್ಷಿಪ್ರಂ ವ್ರಜ ಸತತಾಗ್ನಿಹೋತ್ರಯಾಜಿನ್
ಮತ್ತುಲ್ಯೋ ಭವ ಗರುಡೋತ್ತಮಾಂಗಯಾನಃ ॥ 54 ॥
ವಾಸುದೇವ ಎಲ್ಲೈ ಸತತ ಅಗ್ನಿಹೋತ್ರಯಾಜಿಯೇ, ಬ್ರಹ್ಮಾದಿ ದೇವ ಶ್ರೇಷ್ಠರಿಂದಲೂ ಪ್ರಾರ್ಥಿತವಾದ ಶುದ್ಧವಾದ ಪ್ರಕಾಶಿಸುವ ನನ್ನ ಲೋಕಗಳಿಗೆ ನೀನು ಶೀಘ್ರವಾಗಿ ಹೋಗುವವನಾಗು. ಗರುಡ ವಾಹನನಾಗಿ ನನಗೆ ಸದೃಶನಾಗು.
ಸಂಜಯಃ
ಧನಂಜಯೇ ಬ್ರುವತ್ಯೇವಂ ಘೃಣಯಾ ಚ ಪರಿಪ್ಲುತೇ |
ಅವಾಙ್ಮುಖಾ ಬಭೂವುಶ್ಚ ಸೈನಿಕಾಃ ಸರ್ವ ಏವ ತೇ |
ಉತ್ಥಿತಃ ಸ ತು ಶೈನೇಯೋ ವಿಮುಕ್ತಃ ಸೌಮದತ್ತಿನಾ ॥ 55 ॥
ಸಂಜಯ ಕರುಣೆಯಿಂದ ತುಂಬಿದ ಧನಂಜಯನು ಹೀಗೆ ಹೇಳುತ್ತಿರಲು ಎಲ್ಲ ಸೈನಿಕರೂ ತಲೆಯನ್ನು ತಗ್ಗಿಸಿದರು. ಸಾತ್ಯಕಿಯು ಭೂರಿಶ್ರವನಿಂದ ವಿಮುಕ್ತನಾಗಿ ಎದ್ದನು.
ಮುಹೂರ್ತಾದಿವ ವಿಶ್ರಮ್ಯ ಸಾತ್ಯಕಿಃ ಕ್ರೋಧಮೂರ್ಚ್ಛಿತಃ |
ಅಮರ್ಷವಶಮಾಪನ್ನಃ ಸೌಮದತ್ತಿನಿರಾಕೃತಃ |
ಖಡ್ಗಮಾದಾಯ ಚಿಚ್ಛಿತ್ಸುಃ ಶಿರಸ್ತಸ್ಯ ಮಹಾತ್ಮನಃ ॥ 56 ॥
ನಿಹತಂ ಪಾಂಡುಪುತ್ರೇಣ ಪ್ರಮತ್ತಂ ಭೂರಿದಕ್ಷಿಣಮ್ |
ಇಯೇಷ ಸಾತ್ಯಕಿರ್ಹಂತುಂ ಶಲಾಗ್ರಜಮಕಲ್ಮಷಮ್ ॥ 57 ॥
ಕ್ರೋಧಮೂರ್ಛಿತನಾದ ಸಾತ್ಯಕಿಯು ಒಂದುಮುಹೂರ್ತದಷ್ಟು ವಿಶ್ರಾಂತಿಯನ್ನು ಪಡೆದು, ಭೂರಿಶ್ರವನಿಂದ ಅವಮಾನಗೊಳಿಸಲ್ಪಟ್ಟ ಕಾರಣದಿಂದ ಕ್ರೋಧವಶನಾಗಿ ಖಡ್ಗವನ್ನು ತೆಗೆದುಕೊಂಡು, ಮಹಾತ್ಮನಾದ ಪಾಂಡುಪುತ್ರನಾದ ಅರ್ಜುನನಿಂದ ಭುಜವು ಕತ್ತರಿಸಲ್ಪಟ್ಟ, ಯುದ್ಧವಿಮುಖನಾದ ಭೂರಿದಕ್ಷಿಣೆಯನ್ನು ಕೊಟ್ಟು ಯಾಗವನ್ನು ಮಾಡಿದ, ನಿಷ್ಕಲ್ಮಷನಾದ, ಶಲನ ಅಣ್ಣನಾದ ಮಹಾತ್ಮನಾದ ಅವನ ಶಿರಸ್ಸನ್ನು ಕತ್ತರಿಸಲು ಬಯಸಿದನು.
ನಿಕೃತ್ತಭುಜಮಾಸೀನಂ ಛಿನ್ನಹಸ್ತಮಿವ ದ್ವಿಪಮ್ |
ಕ್ರೋಶತಾಂ ಸರ್ವಸೈನ್ಯಾನಾಂ ನಿಂದ್ಯಮಾನಃ ಸುದುರ್ಮನಾಃ ॥ 58 ॥
ವಾರ್ಯಮಾಣಃ ಸ ಕೃಷ್ಣೇನ ಪಾರ್ಥೇನ ಚ ಮಹಾತ್ಮನಾ |
ಭೀಮೇನ ಚಕ್ರರಕ್ಷಾಭ್ಯಾಮಶ್ವತ್ಥಾಮ್ನಾ ಕೃಪೇಣ ಚ ॥ 59 ॥
ಕರ್ಣೇನ ವೃಷಸೇನೇನ ಸೈಂಧವೇನ ತಥೈವ ಚ |
ವಿಕ್ರೋಶತಾಂ ಚ ಸೈನ್ಯಾನಾಮವಧೀತ್ ತಂ ಯತವ್ರತಮ್ ॥ 60 ॥
ಸೊಂಡಿಲು ಕತ್ತರಿಸಿದ ಆನೆಯಂತೆ ಭುಜವು ಕತ್ತರಿಸಲ್ಪಟ್ಟು ರಣರಂಗದಲ್ಲಿ ಕುಳಿತಿದ್ದ ಅವನನ್ನು ಸರ್ವಸೈನ್ಯದಿಂದ ನಿಂದಿಸಲ್ಪಡುತ್ತಿದ್ದರೂ ಕೃಷ್ಣನಿಂದ ಮತ್ತು ಮಹಾತ್ಮನಾದ ಅರ್ಜುನನಿಂದ ನಿಷೇಧಿಸಲ್ಪಡುತ್ತಿದ್ದರೂ, ಭೀಮನಿಂದ ಚಕ್ರರಕ್ಷಕರಿಂದ, ಅಶ್ವತ್ಥಾಮರಿಂದ ಕೃಪರಿಂದ ಕರ್ಣನಿಂದ ವೃಷಸೇನನಿಂದ ಮತ್ತು ಸೈಂಧವನಿಂದ ನಿಷೇಧಿಸಲ್ಪಡುತ್ತಿದ್ದರೂ, ಸೈನ್ಯಗಳು ಕಿರುಚುತ್ತಿದ್ದರೂ ಆ ವ್ರತನಿಷ್ಠನಾದ ಭೂರಿಶ್ರವನ ಶಿರಸ್ಸನ್ನು ಬಹಳ ಸಮಾಧಾನದಿಂದ ಕೂಡಿದವನಾಗಿ ಕತ್ತರಿಸಿದನು.
ಪ್ರಾಯೋಪವಿಷ್ಟಸ್ಯ ರಣೇ ಪಾರ್ಥೇನ ಛಿನ್ನಬಾಹವೇ |

ಸಾತ್ಯಕಿಃ ಕೌರವೇಂದ್ರಸ್ಯ ಖಡ್ಗೇನಾಪಾಹರಚ್ಚಿರಃ ॥ 61 ॥
ಯುದ್ಧಭೂಮಿಯಲ್ಲಿ ಪ್ರಾಯೋಪ್ರವೇಶಕ್ಕೆ ಕುಳಿತಿದ್ದ, ಅರ್ಜುನನಿಂದ ಬಾಹುವೂ ಕತ್ತರಿಸಲ್ಪಟ್ಟ ಆ ಕೌರವೇಂದ್ರನ ಶಿರಸ್ಸನ್ನು ಸಾತ್ಯಕಿಯು ತನ್ನ ಖಡ್ಗದಿಂದ ಕತ್ತರಿಸಿದನು.
ನಾಭ್ಯನಂದಂತ ತಂ ಸೈನ್ಯಾಃ ಸಾತ್ಯಕಿಂ ತೇನ ಕರ್ಮಣಾ |
ಅರ್ಜುನೇನ ಹತಂ ಪೂರ್ವಂ ಯಜ್ಜಘಾನ ಕುರೂದ್ವಹಮ್ ॥ 62 ॥
ಅರ್ಜುನನಿಂದ ಮೊದಲೇ ಹತನಾಗಿದ್ದ, ಕುರುವೃದ್ಧನಾದ ಭೂರಿಶ್ರವನನ್ನು ಸಾತ್ಯಕಿಯು ಕೊಂದುದನ್ನು ನೋಡಿ ಸೈನ್ಯದವರು ಯಾರೂ ಸಾತ್ಯಕಿಯ ಆ ಕರ್ಮವನ್ನು ಅಭಿನಂದಿಸಲಿಲ್ಲ.
ಸಹಸ್ರಾಕ್ಷಸಮಂ ತತ್ರ ಸಿದ್ಧಚಾರಣಮಾನವಾಃ |
ಭೂರಿಶ್ರವಸಮಾಲೋಕ್ಯ ಯುದ್ಧೇ ಪ್ರಾಯಗತಂ ಹತಮ್ ॥ 63 ॥
ಅಪೂಜಯಂತ ತಂ ದೇವಾ ವಿಸ್ಮಿತಾಸ್ತಸ್ಯ ಕರ್ಮಭಿಃ |
ಪಕ್ಷವಾದಾಂಶ್ಚ ಬಹುಶಃ ಪ್ರಾವದಂಸ್ತಸ್ಯ ಸೈನಿಕಾಃ ॥ 64 ॥
ಯುದ್ಧಭೂಮಿಯಲ್ಲಿ ಪ್ರಾಯೋಪ್ರವೇಶಕ್ಕೆ ಕುಳಿತ ಇಂದ್ರನಿಗೆ ಸಮನಾದ ಭೂರಿಶ್ರವನು ಹತನಾದುದನ್ನು ನೋಡಿ ಸಿದ್ಧ-ಚಾರಣ-ಮಾನವರೂ, ದೇವತೆಗಳೂ ಅವನ ಕರ್ಮದಿಂದ ವಿಸ್ಮಿತರಾಗಿ ಅವನನ್ನು ಪೂಜಿಸಿದರು. ಸೈನಿಕರು ಅವರವರ ಪಕ್ಷಗಳನ್ನು ಸಮರ್ಥಿಸುವ ಮಾತುಗಳನ್ನು ಆಡಿದರು.
ನ ವಾರ್ಷ್ಣೇಯಸ್ಯಾಪರಾಧೋ ಭವಿತವ್ಯಂ ಹಿ ತತ್ತಥಾ |
ತಸ್ಮಾನ್ಮನ್ಯುರ್ನ ವಃ ಕಾರ್ಯಃ ಕ್ರೋಧೋ ದುಃಖಕರೋ ನೃಣಾಮ್ ॥
ಇದರಲ್ಲಿ ಸಾತ್ಯಕಿಯ ಯಾವ ಅಪರಾಧವೂ ಇಲ್ಲ. ಇದು ಹೀಗೆಯೇ ನಡೆಯಬೇಕಾಗಿದ್ದಿತು. ಆದ್ದರಿಂದ ನೀವು ಕೋಪವನ್ನು ಮಾಡಬೇಡಿ. ಕೋಪವು ಮನುಷ್ಯರಿಗೆ ದುಃಖವನ್ನುಂಟು ಮಾಡುತ್ತದೆ.
ಮರ್ತವ್ಯಮೇವ ಸರ್ವೇಣ ಚರಮಂ ಪೂರ್ವಮೇವ ವಾ |
ಮನ್ಯಧ್ವಂ ಮೃತ ಇತ್ಯೇವ ಮಾ ಭೂದ್ವೋ ಬುದ್ಧಿಲಾಘವಮ್ ॥ 66 ॥
ಮನುಷ್ಯನು ಮೊದಲಲ್ಲಾಗಲೀ ಅಥವಾ ಕೊನೆಯಲ್ಲಾಗಲೀ ಮರಣವನ್ನು ಹೊಂದಲೇಬೇಕು. ಭೂರಿಶ್ರವನು ಮೃತನಾಗಿದ್ದಾನೆಂದೇ ತಿಳಿಯಿರಿ. ನಿಮ್ಮ ಬುದ್ಧಿಯು ಅನ್ಯಥಾ ಭಾವಿಸುವುದು ಬೇಡ (ಎಂದು ಮಾತನಾಡಿದರು).
ತಸ್ಮಿನ್ ಹತೇ ಮಹಾಬಾಹೌ ಯೂಪಕೇತೌ ಮಹಾತ್ಮನಿ |
ಧಿಗೇನಮಿತಿ ಚಾಕ್ರಂದನ್ ಕ್ಷತ್ರಿಯಾ ಕ್ರೋಧಮೂರ್ಚ್ಛಿತಾಃ ॥ 67 ॥
ಮಹಾಬಾಹುವೂ, ಮಹಾತ್ಮನೂ ಆದ ಯೂಪಕೇತುವು ಹತನಾಗುತ್ತಿರಲು ಕ್ರೋಧಮೂರ್ಛಿತರಾದ ಕ್ಷತ್ರಿಯರು ಸಾತ್ಯಕಿಗೆ ಧಿಕ್ಕಾರವಿರಲಿ ಎಂದು ಕಿರುಚಿದರು.
ಅನ್ಯೇನ ಯುಕ್ತಮಿತ್ಯೇವ ಭವಿತವ್ಯಂ ತಥೇತಿ ಚ |
ಕೇಚಿದಾಸನ್ ವಿಮನಸಃ ಕೇಚಿದ್ ದುಃಖಸಮನ್ವಿತಾಃ ॥ 68 ॥
ಭೂರಿಶ್ರವನು ಇನ್ನೊಬ್ಬನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದನು ಎಂದೂ, ಇದು ಹಾಗೆಯೇ ನಡೆಯಬೇಕಾಗಿದ್ದಿತು ಎಂದೂ ಕೆಲವರು ಬೇಸರಗೊಂಡರು, ಇನ್ನು ಕೆಲವರು ದುಃಖವನ್ನು ಹೊಂದಿದರು.
ಹಂತವ್ಯಶ್ಚೈಷ ವೀರೇಣ ನಾತ್ರ ಕಾರ್ಯಾ ವಿಚಾರಣಾ |
ವಿಹಿತೋ ಹ್ಯಸ್ಯ ಧಾತ್ರೈವ ಮೃತ್ಯುಃ ಸಾತ್ಯಕಿರಾಹವೇ ॥ 69 ॥
ಭೂರಿಶ್ರವನು ವೀರನಿಂದ ಕೊಲ್ಲಲ್ಪಡಬೇಕಾಗಿದ್ದಿತು. ಇದರಲ್ಲಿ ವಿಚಾರ ಮಾಡುವ ಅಗತ್ಯವಿಲ್ಲ. ಸಾತ್ಯಕಿಯನ್ನೇ ಭೂರಿಶ್ರವನ ಮೃತ್ಯುವೆಂದು ಬ್ರಹ್ಮನು ಸಂಕಲ್ಪ ಮಾಡಿದ್ದಾನೆ (ಎಂದೂ ಮಾತನಾಡಿದರು).
ಸಾತ್ಯಕಿಃ
ನ ಹಂತವ್ಯೋ ನ ಹಂತವ್ಯ ಇತಿ ಯನ್ಮಾಂ ಪ್ರಭಾಷಥ |
ಧರ್ಮವಾದೈರಧರ್ಮಿಷ್ಠಾ ಧರ್ಮಕಂಚುಕಮಾಸ್ಥಿತಾಃ ॥ 70 ॥
ಯದಾ ಬಾಲಃ ಸುಭದ್ರಾಯಾಃ ಸುತಃ ಶಸ್ತ್ರವಿನಾಕೃತಃ |
ಯುಷ್ಮಾಭಿರ್ನಿಹತೋ ಯುದ್ಧೇ ತದಾ ಧರ್ಮಃ ಕ್ವ ವೋ ಗತಃ ॥ 71 ॥
ಸಾತ್ಯಕಿ ಎಲ್ಲೆ ಅಧರ್ಮಿಷ್ಠರೇ, ಧರ್ಮದ ಸೋಗನ್ನು ಹಾಕಿಕೊಂಡ ನೀವು `ಕೊಲ್ಲಬಾರದಾಗಿದ್ದಿತು, ಕೊಲ್ಲಬಾರದಾಗಿದ್ದಿತು' ಎಂದು ನನ್ನನ್ನು ಕುರಿತು ಧರ್ಮವಾದವನ್ನು ಹೇಳುತ್ತಿರುವಿರಷ್ಟೇ? ಸುಭದ್ರೆಯ ಪುತ್ರನಾದ ಬಾಲಕನಾದ, ಶಸ್ತ್ರರಹಿತನಾದ ಅಭಿಮನ್ಯುವು ರಣರಂಗದಲ್ಲಿ ನಿಮ್ಮೆಲ್ಲರಿಂದ ಹತನಾದಾಗ ನಿಮ್ಮ ಧರ್ಮವು ಎಲ್ಲಿಗೆ ಹೋಗಿದ್ದಿತು?
ಮಯಾ ತ್ವೇತತ್ ಪ್ರತಿಜ್ಞಾತಂ ಕ್ಷೇಪೇ ಕಸ್ಮಿಂಶ್ಚಿದೇವ ಹಿ |
ಶ್ರುತ್ವಾ ತತ್ ಸರ್ವಭಾವೇನ ಗರ್ಹಯಧ್ವಂ ನಚಾರ್ಜುನಮ್ ॥ 72 ॥
ಯೋ ಮಾಂ ನಿಷ್ಪಿಷ್ಯ ಸಂಗ್ರಾಮೇ ಜೀವನ್ ಹನ್ಯಾತ್ಪದಾ ರುಷಾ |
ಸ ಮೇ ವಧ್ಯೋ ಭವೇಚ್ಛತ್ರುರ್ಯದ್ಯಪಿ ಸ್ಯಾನ್ಮುನಿವ್ರತಃ ॥ 73 ॥
ನಾನು ಹಿಂದೆ ನನಗೊಮ್ಮೆ ಅವಮಾನವಾದಾಗ ಯಾರು ನನ್ನನ್ನು ಯುದ್ಧದಲ್ಲಿ ಮರ್ದಿಸಿ ಕೋಪದಿಂದ ಕಾಲಿನಿಂದ ಒದೆಯುತ್ತಾರೆಯೋ ಅವನು ಮುನಿವ್ರತವನ್ನು ಧರಿಸಿದ್ದರೋ ಶತ್ರುವಾದ ಅವನನ್ನು ಕೊಲ್ಲಬೇಕು ಎಂದು ಪ್ರತಿಜ್ಞೆಯನ್ನು ಮಾಡಿದ್ದೇನೆ. ಇದನ್ನು ಪೂರ್ಣವಾಗಿ ತಿಳಿದು ಅರ್ಜುನನನ್ನು ನಿಂದಿಸಬೇಡಿ.
ಚೇಷ್ಟಮಾನಂ ಪ್ರತೀಘಾತೇ ಸಭುಜಂ ಮಾಂ ಸಚಕ್ಷುಷಃ |

ಮನ್ಯಧ್ವಂ ಮೃತಮಿತ್ಯೇವಮೇತದ್ವೋ ಬುದ್ಧಿಲಾಘವಮ್ |
ಯುಕ್ತೋ ಹ್ಯಸ್ಯ ಪ್ರತೀಘಾತಃ ಕೃತೋ ಮೇ ಕುರುಪುಂಗವಾಃ ॥ 74 ॥
ತನ್ನ ಭುಜದಿಂದ ಯುಕ್ತನಾಗಿ ನನ್ನನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದ ಭೂರಿಶ್ರವನನ್ನು ಕಣ್ಣುಗಳನ್ನು ಹೊಂದಿದ ನೀವು ಮೃತನಾಗಿದ್ದಾನೆ ಎಂದೇ ತಿಳಿಯಿರಿ. (ಸಾಯುಧನಾದ ಅವನು ನಿರಾಯುಧನಾದ ನನ್ನನ್ನು ಕೊಲ್ಲಲು ಬಯಸಿದುದು ಸರಿಯಲ್ಲ). ನೀವು ಅನ್ಯಥಾ ಭಾವಿಸಿದರೆ ಅದು ನಿಮ್ಮ ಬುದ್ಧಿದೋಷ. ಅವನಿಗೆ ಪ್ರತಿಕಾರ ಮಾಡುವುದು ನನಗೆ ಉಚಿತವಾಗಿದ್ದಿತು. ಎಲೈ ಕುರುಪುಂಗವರೇ, ನಾನು ಪ್ರತೀಕಾರವನ್ನು ಮಾಡಿದ್ದೇನೆ.
ಯತ್ತು ಪಾರ್ಥೇನ ಮತ್ಸ್ನೇಹಾತ್ ಸ್ವಾಂ ಪ್ರತಿಜ್ಞಾಂ ಚ ರಕ್ಷತಾ |
ಸಖಡ್ಗೋಽಸ್ಯ ಹೃತೋ ಬಾಹುರೇತೇನೈವಾಸ್ಮಿ ವಂಚಿತಃ ॥ 75 ॥
ನನ್ನ ಮೇಲಿನ ಸ್ನೇಹದಿಂದ ತನ್ನ ಪ್ರತಿಜ್ಞೆಯನ್ನು ರಕ್ಷಿಸುವ ಅರ್ಜುನನಿಂದ ಖಡ್ಗ ಸಹಿತವಾದ ಅವನ ಬಾಹುವು ಕತ್ತರಿಸಲ್ಪಟ್ಟುದುದರಿಂದ ನಾನು ವಂಚಿತನಾಗಿದ್ದೇನೆ. (ಇಲ್ಲದಿದ್ದರೆ ನಾನೇ ಅವನನ್ನು ಕೊಲ್ಲಬೇಕಾಗಿದ್ದಿತು).
ಭವಿತವ್ಯಂ ಚ ಯದ್ಭಾವಿ ದೈವಂ ಚೇಷ್ಟಯತೀವ ಚ |
ಸೋಽಯಂ ಹತೋ ವಿಮರ್ದೇಽಸ್ಮಿನ್ ಕಿಮತ್ರಾಧರ್ಮಚೇಷ್ಟಿತಮ್ ॥
ಯಾವುದು ನಡೆಯಬೇಕೋ ಅದು ನಡೆಯುತ್ತದೆ. ವಿಧಿಯು ನಮ್ಮನ್ನು ನಡೆಸುತ್ತದೆ. ಈ ಯುದ್ಧದಲ್ಲಿ ಭೂರಿಶ್ರವನು ಹತನಾಗಿದ್ದಾನೆ. ಇದರಲ್ಲಿ ಅಧರ್ಮದ ಕಾರ್ಯವು ಯಾವುದು?
ಅಪಿ ಚಾಯಂ ಪುರಾ ಗೀತಃ ಶ್ಲೋಕೋ ವಾಲ್ಮೀಕಿನಾ ಭುವಿ |
ನ ಹಂತವ್ಯಾಃ ಸ್ತ್ರಿಯ ಇತಿ ಯದ್ ಬ್ರವೀಷಿ ಪ್ಲವಂಗಮ ॥ 77 ॥
ಪೀಡಾಕರಮಮಿತ್ರಾಣಾಂ ಯತ್ ಸ್ಯಾತ್ ಕರ್ತವ್ಯಮೇವ ತತ್ |
ಅನುಷ್ಠಿತಂ ಮಯಾ ತಚ್ಚ ಮೂಢವತ್ತು ಯಥಾತಥಮ್ ॥ 78 ॥
ಹಿಂದೆ ಭೂಮಿಯಲ್ಲಿ ವಾಲ್ಮೀಕಿ ಋಷಿಗಳು `ಎಲೈ ಕಪಿಯೇ, ಸ್ತ್ರೀಯರನ್ನು ಕೊಲ್ಲಬಾರದು ಎಂದು ಏನು ಹೇಳುತ್ತಿದ್ದೀಯೋ ಅದು ಸರಿಯಲ್ಲ. ಅವರ ಪ್ರತಿಪಕ್ಷದವರಾದ ಸಜ್ಜನರಿಗೆ ಪೀಡೆಯನ್ನು ಉಂಟುಮಾಡುವುದಾದರೆ ಅವರನ್ನು ಕೊಲ್ಲಲೇಬೇಕು' ಎಂಬ ಗೀತೆಯನ್ನು ಏನು ಹಾಡಿದ್ದಾರೆಯೋ ಅದನ್ನು ನಾನು ಮೂಢನಂತೆ (ಸಂಶಯ ಪಡದೆ) ಸರಿಯಾಗಿ ಆಚರಿಸಿದ್ದೇನೆ (ಎಂದು ಹೇಳಿದನು).
ಸಂಜಯಃ
ಏವಮುಕ್ತೇ ಮಹಾರಾಜ ಸರ್ವೇ ಕೌರವಪಾಂಡವಾಃ |
ನ ಸ್ಮ ಕಿಂಚಿದಭಾಷಂತ ಮನಸಾ ಸಮಪೂಜಯನ್ ॥ 79 ॥
ಸಂಜಯ ಎಲೈ ಮಹಾರಾಜನೇ, ಅವನು ಹೀಗೆ ಮಾತನಾಡುತ್ತಿರಲು ಕೌರವರಾಗಲೀ, ಪಾಂಡವರಾಗಲೀ ಏನೂ ಮಾತನಾಡಲಿಲ್ಲ. ಎಲ್ಲರೂ ಭೂರಿಶ್ರವನನ್ನು ಮನಸ್ಸಿನಿಂದಲೇ ಪೂಜಿಸಿದರು.
ಮಂತ್ರೈರ್ಹಿ ಪೂತಸ್ಯ ಮಹಾಧ್ವರೇಷು
ಯಶಸ್ವಿನೋ ಭೂರಿಸಹಸ್ರದಸ್ಯ |
ಮುನೇರಿವಾರಣ್ಯಗತಸ್ಯ ತಸ್ಯ
ನ ತತ್ರ ಕಶ್ಚಿದ್ ವಧಮಭ್ಯನಂದತ್ ॥ 80 ॥
ಮಹಾಯಜ್ಞಗಳಲ್ಲಿ ಮಂತ್ರಗಳಿಂದ ಪವಿತ್ರನಾದ, ಕೀರ್ತಿವಂತನಾದ, ಸಹಸ್ರಾರು ದಕ್ಷಿಣೆಗಳನ್ನು ನೀಡಿದ, ಋಷಿಯಂತೆ ಅರಣ್ಯವಾಸವನ್ನು ಮಾಡಿದ ಅವನ ವಧೆಯನ್ನು ಯಾರೂ ಅಭಿನಂದಿಸಲಿಲ್ಲ.
ಸುನೀಲಕೇಶಂ ವರದಸ್ಯ ತಸ್ಯ
ಶೂರಸ್ಯ ಪಾರಾವತಲೋಹಿತಾಕ್ಷಮ್ |
ಅಶ್ವಸ್ಯ ಮೇಧ್ಯಸ್ಯ ಶಿರೋ ನಿಕೃತ್ತಂ
ನ್ಯಸ್ತಂ ಹವಿರ್ಧಾನಮಿವೋತ್ತರೇಣ ॥ 81 ॥
ಕಪ್ಪಾದ ಕೂದಲುಗಳಿಂದ ಕೂಡಿದ, ಬೇಡಿದವರಿಗೆ ವರವನ್ನು ಕೊಡುವವನೂ, ಶೂರನೂ, ಪಾರಿವಾಳ ಬಣ್ಣದಂತೆ ಲೋಹಿತ ಕಣ್ಣುಳ್ಳವನೂ ಆದ ಅವನ ಶಿರಸ್ಸು ವೇದಿಕೆಯ ಉತ್ತರದಲ್ಲಿ ಇಡಲ್ಪಟ್ಟ ಮೇಧ್ಯಾಶ್ವದ ಶಿರಸ್ಸಿನಂತೆ ಕತ್ತರಿಸಿ ಇಡಲ್ಪಟ್ಟಿತು.
ಸ ತೇಜಸಾ ಶಸ್ತ್ರಹತೇನ ಪೂತೋ
ಮಹಾಹವೇ ದೇಹವರಂ ವಿಸೃಜ್ಯ |
ಆಕ್ರಾಮದೂರ್ಧ್ವಂ ವರದೋ ವರಾರ್ಹೋ
ವ್ಯಾವೃತ್ಯ ಧರ್ಮೇಣ ಪರೇಣ ರೋದಸೀ ॥ 82 ॥
ಶಸ್ತ್ರಘಾತದಿಂದ ಪವಿತ್ರವಾದ ತೇಜಸ್ಸನ್ನು ಹೊಂದಿದ ಅವನು ದೊಡ್ಡ ಯುದ್ಧದಲ್ಲಿ ತನ್ನ ಶ್ರೇಷ್ಠವಾದ ದೇಹವನ್ನು ತ್ಯಜಿಸಿ ಎಲ್ಲರಿಗೂ ವರವನ್ನು ಕೊಡುವ, ದೇವತೆಗಳಿಂದ ವರಗಳನ್ನು ಸ್ವೀಕರಿಸಲು ಯೋಗ್ಯನಾದ ಅವನು ಶ್ರೇಷ್ಠವಾದ ಧರ್ಮದಿಂದ ಭೂಮಿ- ಅಂತರಿಕ್ಷಗಳನ್ನು ದಾಟಿ ಊರ್ಧ್ವಮುಖನಾಗಿ ಹೊರಟನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಾವಿಂಶತ್ಯಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ದ್ವಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ತೆಂಟನೆಯ

ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ
ಸಂಜಯನಿಂದ ಧೃತರಾಷ್ಟ್ರನನ್ನು ಕುರಿತು ಭೂರಿಶ್ರವನಿಂದ ಸಾತ್ಯಕಿಯ ಪರಾಭವಕ್ಕೆ ಕಾರಣ ಕಥನ ಮತ್ತು ಯಾದವರ ಪ್ರಶಂಸೆ.
ಧೃತರಾಷ್ಟ್ರಃ
ಶೈನೇಯಸ್ಯ ಚ ಯೋತ್ಪತ್ತಿರ್ಭೂರಿಶ್ರವಸ ಏವ ಚ |
ವಿಸ್ತರೇಣ ಮಮಾಚಕ್ಷ್ವ ಸರ್ವಮೇವ ತು ಸಂಜಯ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಸಾತ್ಯಕಿಯ ಮತ್ತು ಭೂರಿಶ್ರವನ ಉತ್ಪತ್ತಿ ಎಲ್ಲವನ್ನೂ ನನಗೆ ವಿಸ್ತೃತವಾಗಿ ಹೇಳು.
ಅಜಿತೋ ದ್ರೋಣಭೀಷ್ಮಾಭ್ಯಾಂ ಕರ್ಣೇನ ಚ ಕೃಪೇಣ ಚ |
ಅಜಿತೋ ದ್ರೋಣರಾಧೇಯವಿಕರ್ಣಕೃತವರ್ಮಭಿಃ ॥ 2 ॥
ಯಶ್ಚೈವೋತ್ಸಹತೇ ಜೇತುಂ ಸಮಸ್ತಂ ಮಾಮಕಂ ಬಲಮ್ |
ತೀರ್ಣಃ ಸೈನ್ಯಾರ್ಣವಂ ವೀರಃ ಪ್ರತಿಶ್ರುತ್ಯ ಯುಧಿಷ್ಠಿರೇ ॥ 3 ॥
ಸ ಕಥಂ ಕೌರವೇಯೇಣ ಸಮರೇಷ್ವನಿವಾರಿತಃ |
ನಿಗೃಹ್ಯ ಭೂರಿಶ್ರವಸಾ ಬಲಾದ್ ಭುವಿ ನಿಪಾತಿತಃ ॥ 4 ॥
ಯಾವನು ದ್ರೋಣರಿಂದ, ಭೀಷ್ಮರಿಂದ, ಕರ್ಣನಿಂದ ಮತ್ತು ಕೃಪರಿಂದ, ವಿಕರ್ಣ, ಕೃತವರ್ಮನಿಂದ ಪರಾಜಿತನಾಗಲಿಲ್ಲವೋ, ಯಾವನು ಯುಧಿಷ್ಠಿರನ ಮುಂದೆ ಪ್ರತಿಜ್ಞೆಯನ್ನು ಮಾಡಿ, ನನ್ನ ಸಮಸ್ತ ಸೈನ್ಯವನ್ನು ದಾಟಿ ಅದನ್ನು ಗೆಲ್ಲಲು ಉತ್ಸುಕನಾಗಿದ್ದಾನೆಯೋ ಅಂತಹ ಯುದ್ಧದಲ್ಲಿ ಹಿಮ್ಮೆಟ್ಟದಿರುವ ಸಾತ್ಯಕಿಯು ಕೌರವನಾದ ಭೂರಿಶ್ರವನಿಂದ ಹೇಗೆ ಹಿಡಿದು ಭೂಮಿಯಲ್ಲಿ ಕೆಡವಲ್ಪಟ್ಟನು?
ಸಂಜಯಃ
ಶೃಣು ರಾಜನ್ನಿಹೋತ್ಪತ್ತಿಂ ಶೈನೇಯಸ್ಯ ಯಥಾ ಪುರಾ |
ಯಥಾ ಚ ಭೂರಿಶ್ರವಸೋ ಯತ್ರ ತೇ ಸಂಶಯೋ ನೃಪ ॥ 5 ॥
ಸಂಜಯ ಎಲೈ ರಾಜನೇ, ನಿನಗೆ ಯಾವ ವಿಷಯದಲ್ಲಿ ಸಂಶಯವಿದೆಯೋ ಅಂತಹ ಸಾತ್ಯಕಿಯ ಮತ್ತು ಭೂರಿಶ್ರವನ ಉತ್ಪತ್ತಿಯು ಹಿಂದೆ ಹೇಗಾಯಿತು ಎಂದು ಕೇಳು.
ಅತ್ರೇಃ ಪುತ್ರೋಽಭವತ್ ಸೋಮಃ ಸೋಮಸ್ಯ ತು ಬುಧಃ ಸ್ಮೃತಃ |
ಬುಧಸ್ಯಾಸೀನ್ಮಹೇಂದ್ರಾಭಃ ಪುತ್ರ ಏಕಃ ಪುರೂರವಾಃ ॥ 6 ॥
ಅತ್ರಿಋಷಿಗೆ ಚಂದ್ರನು ಪುತ್ರನಾಗಿ ಜನಿಸಿದನು. ಚಂದ್ರನ ಪುತ್ರ ಬುಧ. ಬುಧನಿಗೆ ಇಂದ್ರನಿಗೆ ಸಮಾನನಾದ ಕಾಂತಿಯುಳ್ಳ ಪುರೂರವನೆಂಬ ಒಬ್ಬ ಪುತ್ರನು ಜನಿಸಿದನು.
ಪುರೂರವಸ ಆಯುಸ್ತು ಆಯುಷೋ ನಹುಷಃ ಸ್ಮೃತಃ |
ನಹುಷಸ್ಯ ಯಯಾತಿಸ್ತು ರಾಜರ್ಷಿರ್ದೇವಸಮ್ಮಿತಃ ॥ 7 ॥
ಪುರೂರವನಿಂದ ಆಯು, ಆಯುವಿನಿಂದ ನಹುಷನು ಹುಟ್ಟಿದನು. ನಹುಷನಿಗೆ ದೇವತೆಗಳಿಗೆ ಸಮಾನನಾದ ರಾಜರ್ಷಿಯಾದ ಯಯಾತಿಯು ಜನಿಸಿದನು.
ಯಯಾತೇರ್ದೇವಯಾನ್ಯಾಂ ತು ಯದುರ್ಜ್ಯೇಷ್ಠೋಽಭವತ್ ಸುತಃ |
ಯದೋರಭೂದನ್ವವಾಯೇ ದೇವಮೀಢ ಇತಿ ಶ್ರುತಃ ॥ 8 ॥
ಯಯಾತಿಗೆ ದೇವಯಾನಿಯಲ್ಲಿ ಯದುವು ಜ್ಯೇಷ್ಠಪುತ್ರನಾಗಿ ಜನಿಸಿದನು. ಯದುವಿನ ವಂಶದಲ್ಲಿ ದೇವಮೀಢನೆಂಬ ರಾಜನು ಬಂದನು.
ಯಾದವಸ್ತಸ್ಯ ಚ ಸುತಃ ಶೂರಸ್ತ್ರೈಲೋಕ್ಯಸಂಮತಃ |
ಶೂರಸ್ಯ ಶೌರಿರ್ನೃವರೋ ವಸುದೇವೋ ಮಹಾಯಶಾಃ ॥ 9 ॥
ದೇವಮೀಢನಿಗೆ ತ್ರೈಲೋಕಸ್ಯಸಮ್ಮತನಾದ ಯಾದವನಾದ ಶೂರನೆಂಬ ಸುತನು ಜನಿಸಿದನು. ಶೂರನಿಗೆ ಮಹಾಕೀರ್ತಿವಂತನಾದ ನರಶ್ರೇಷ್ಠನಾದ ವಸುದೇವನು ಜನಿಸಿದನು.
ಧನುಷ್ಯನವರಃ ಶೂರಃ ಕಾರ್ತವೀರ್ಯಸಮೋ ಯುಧಿ |
ತದ್ವೀರ್ಯಶ್ಚಾಪಿ ತತ್ರೈವ ಕುಲೇ ಶಿನಿರಭೂನ್ನೃಪಃ ॥ 10 ॥
ಧನುರ್ವಿದ್ಯೆಯಲ್ಲಿ ಶ್ರೇಷ್ಠನಾದ, ಶೂರನಾದ, ಯುದ್ಧದಲ್ಲಿ ಕಾರ್ತವೀರ್ಯನಿಗೆ ಸಮನಾದ, ಕಾರ್ತವೀರ್ಯನ ಪರಾಕ್ರಮವನ್ನು ಹೊಂದಿದ ಶಿನಿ ಎಂಬ ರಾಜನು ಅದೇ ಕುಲದಲ್ಲಿ ಜನಿಸಿದನು.
ಏತಸ್ಮಿನ್ನೇವ ಕಾಲೇ ತು ದೇವಕಸ್ಯ ಮಹಾತ್ಮನಃ |
ದುಹಿತುಃ ಸ್ವಯಂವರೇ ರಾಜನ್ ಸರ್ವಕ್ಷತ್ರಸಮಾಗಮೇ ॥ 11 ॥
ತತ್ರ ವೈ ದೇವಕೀಂ ದೇವೀಂ ವಸುದೇವಾರ್ಥಮಾಪ್ತವಾನ್ |
ನಿರ್ಜಿತ್ಯ ಪಾರ್ಥಿವಾನ್ಸರ್ವಾನ್ ರಥಮಾರೋಪಯಚ್ಛಿನಿಃ ॥ 12 ॥
ಎಲೈ ರಾಜನೇ, ಮಹಾತ್ಮನಾದ ದೇವಕನ ಮಗಳಾದ ದೇವಕಿಯ ಸ್ವಯಂವರದಲ್ಲಿ ಸರ್ವಕ್ಷತ್ರಿಯರೂ ಬಂದು ಸೇರಿರುವಾಗ ಶಿನಿಯು ವಸುದೇವನ ಸಲುವಾಗಿ ಎಲ್ಲ ರಾಜರನ್ನೂ ಗೆದ್ದು ದೇವಕಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡನು.
ತಾಂ ದೃಷ್ಟ್ವಾ ದೇವಕೀ ಶೌರೇ ರಥಸ್ಥಾಂ ಪುರುಷರ್ಷಭಃ |

ತಾಂ ದೃಷ್ಟ್ವಾ ನೀಯಮಾನಾಂ ತು ವಸುದೇವಾಯ ದೇವಕಮ್ |
ನಾಮೃಷ್ಯತ ಮಹಾತೇಜಾಃ ಸೋಮದತ್ತಃ ಶಿನೇರ್ನೃಪ ॥ 13 ॥
ವಸುದೇವನ ಸಲುವಾಗಿ -ದೇವಕಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟ ಶಿನಿಯನ್ನು ನೋಡಿ, ಪುರುಷಶ್ರೇಷ್ಠನೂ, ಮಹಾತೇಜಸ್ವಿಯೂ ಆದ ಸೋಮದತ್ತನು ಸಹಿಸಲಿಲ್ಲ.
ತಯೋರ್ಯುದ್ಧಮಭೂದ್ ರಾಜನ್ ದಿನಾರ್ಧಂ ಚಿತ್ರಮದ್ಭುತಮ್ |
ಬಾಹುಯುದ್ಧಂ ಸುಬಲಿನೋಃ ಶಕ್ರಪ್ರಹ್ಲಾದಯೋರಿವ ॥ 14 ॥
ಎಲೈ ರಾಜನೇ, ಬಲಿಷ್ಠರಾದ ಅವರಿಬ್ಬರಿಗೆ ಇಂದ್ರ-ಪ್ರಹ್ಲಾದರಿಗೆ ನಡೆದಂತೆ ಅರ್ಧದಿನದ ಕಾಲ ವಿಚಿತ್ರವೂ ಮತ್ತು ಅದ್ಭುತವೂ ಆದ ಯುದ್ಧವು ನಡೆಯಿತು.
ಶಿನಿನಾ ಸೋಮದತ್ತಸ್ತು ಪ್ರಸಹ್ಯ ಭುವಿ ಪಾತಿತಃ |
ಅಸಿಮುದ್ಯಮ್ಯ ಕೇಶೇಷು ಪ್ರಗೃಹ್ಯ ಚ ಪದಾ ಹತಃ ॥ 15 ॥
ಶಿನಿಯು ಸೋಮದತ್ತನನ್ನು ಬಲಾತ್ಕಾರದಿಂದ ಭೂಮಿಯ ಮೇಲೆ ಕೆಡವಿ ಅವನನ್ನು ತಲೆಕೂದಲಿನಲ್ಲಿ ಹಿಡಿದು ಖಡ್ಗವನ್ನು ಎತ್ತಿ ಕಾಲಿನಿಂದ ಒದ್ದನು.
ಮಧ್ಯೇ ರಾಜಸಹಸ್ರಾಣಾಂ ಪ್ರೇಕ್ಷಕಾಣಾಂ ಸಮಂತತಃ |
ಕೃಪಯಾ ಚ ಪುನಸ್ತೇನ ಜೀವೇತಿ ಸ ವಿಸರ್ಜಿತಃ ॥ 16 ॥
ಸಹಸ್ರರಾಜರು ಎಲ್ಲ ಕಡೆಗಳಲ್ಲಿಯೂ ನೋಡುತ್ತಿರುವಾಗ ಹೀಗೆ ಮಾಡಿ, ಪುನಃ ಅವನು ಕೃಪೆಯಿಂದ ಕೂಡಿ, ಬದುಕು ಎಂದು ಹೇಳಿ ಸೋಮದತ್ತನನ್ನು ಬಿಟ್ಟನು.
ತದವಸ್ಥಃ ಕೃತಸ್ತೇನ ಸೋಮದತ್ತೋಽಥ ಮಾರಿಷ |
ಪ್ರಾಸಾದಯನ್ಮಹಾದೇವಮಮರ್ಷವಶಮಾಸ್ಥಿತಃ ॥ 17 ॥
ಎಲೈ ಪೂಜ್ಯನೇ, ಅಂತಹ ಸ್ಥಿತಿಯನ್ನು ತಲುಪಿದ ಸೋಮದತ್ತನು ಬಹಳ ಕೋಪದಿಂದ ಕೂಡಿದವನಾಗಿ ರುದ್ರದೇವರನ್ನು ತಪಸ್ಸಿನಿಂದ ಪ್ರಸನ್ನೀಕರಿಸಿಕೊಂಡನು.
ತಸ್ಯ ತುಷ್ಟೋ ಮಹಾದೇವೋ ವರಾಣಾಂ ವರದಃ ಪ್ರಭುಃ |
ವರೇಣ ಛಂದಯಾಮಾಸ ಸ ತು ವವ್ರೇ ವರಂ ನೃಪಃ ॥ 18 ॥
ಶ್ರೇಷ್ಠವಾದ ವರಗಳನ್ನು ಕೊಡುವ ಪ್ರಭುವಾದ ಮಹಾದೇವನು ಸಂತುಷ್ಟನಾಗಿ ವರವನ್ನು ನೀಡುತ್ತಿರಲು ರಾಜನು ವರವನ್ನು ಬೇಡಿದನು.
ಪುತ್ರಮಿಚ್ಛಾಮಿ ಭಗವನ್ ಯೋ ನಿಹನ್ಯಾಚ್ಛಿನೇಃ ಸುತಮ್ |
ಮಧ್ಯೇ ರಾಜಸಹಸ್ರಾಣಾಂ ಪದಾ ಹನ್ಯಾಚ್ಚ ಸಂಯುಗೇ ॥ 19 ॥
ಭಗವಂತನೇ, ರಾಜಸಹಸ್ರರ ಮಧ್ಯದಲ್ಲಿ ಶಿನಿಯ ಪುತ್ರನನ್ನು ಯುದ್ಧದಲ್ಲಿ ಕಾಲಿನಿಂದ ಒದೆಯುವ ಪುತ್ರನನ್ನು ಬಯಸುತ್ತೇನೆ (ಎಂದು ವರವನ್ನು ಬೇಡಿದನು).
ತಸ್ಯ ತದ್ವಚನಂ ಶ್ರುತ್ವಾ ಸೋಮದತ್ತಸ್ಯ ಪಾರ್ಥಿವ |
ಏವಮಸ್ತ್ವಿತಿ ತತ್ರೋಕ್ತ್ವಾ ಸ ದೇವೋಽಂತರಧೀಯತ ॥ 20 ॥
ಎಲೈ ರಾಜನೇ, ಸೋಮದತ್ತನ ಆ ಮಾತನ್ನು ಕೇಳಿ ಮಹಾದೇವನು ಹಾಗೆಯೇ ಆಗಲಿ ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು.
ಸ ತೇನ ವರದಾನೇನ ಲಬ್ಧವಾನ್ ಭೂರಿದಕ್ಷಿಣಮ್ |
ನ್ಯಪಾತಯಚ್ಚ ಸಮರೇ ಸೌಮದತ್ತಿಃ ಶಿನೇಃ ಸುತಮ್ ॥ 21 ॥
ಸೋಮದತ್ತನು ಆ ವರದಿಂದ ಭೂರಿದಕ್ಷಿಣನಾದ ಭೂರಿಶ್ರವನನ್ನು ಮಗನಾಗಿ ಪಡೆದನು. ಭೂರಿಶ್ರವನೂ ಸಹ ಶಿನಿಯ ಪುತ್ರನಾದ ಸಾತ್ಯಕಿಯನ್ನು ಯುದ್ಧದಲ್ಲಿ ಕೆಡವಿದನು.
ಏತತ್ತೇ ಕಥಿತಂ ರಾಜನ್ ಯನ್ಮಾಂ ತ್ವಂ ಪರಿಪೃಚ್ಛಸಿ |
ನ ಹಿ ಶಕ್ಯಾ ರಣೇ ಜೇತುಂ ಸಾತ್ವತಾ ಮನುಜರ್ಷಭ ॥ 22 ॥
ಎಲೈ ರಾಜನೇ, ನಿನ್ನ ಪ್ರಶ್ನೆಗೆ ಉತ್ತರವಾಗಿ ಇದನ್ನು ಹೇಳಿದ್ದೇನೆ. ಮನುಜಶ್ರೇಷ್ಠನೇ, ಇಲ್ಲದಿದ್ದರೆ ಸಾತ್ವತನನ್ನು ಯುದ್ಧದಲ್ಲಿ ಗೆಲ್ಲುವುದು ಸಾಧ್ಯವಿಲ್ಲ.
ಲಬ್ಧಲಕ್ಷ್ಯಾಶ್ಚ ಸಂಗ್ರಾಮೇ ಬಹವಶ್ಚಿತ್ರಯೋಧಿನಃ |
ದೇವದಾನವಗಂಧರ್ವಾನ್ ವಿಜೇತಾರೋ ಹ್ಯವಿಸ್ಮಿತಾಃ |
ಸ್ವವೀರ್ಯವಿಜಯೇ ಯುಕ್ತಾ ನೈತೇ ಪರಪರಿಗ್ರಹಾಃ ॥ 23 ॥
ಆ ಕುಲದಲ್ಲಿ ಗುರಿಯನ್ನು ತಪ್ಪದ, ಯುದ್ಧದಲ್ಲಿ ವಿಚಿತ್ರವಾಗಿ ಯುದ್ಧವನ್ನು ಮಾಡುವ, ದೇವ-ದಾನವ-ಗಂಧರ್ವರನ್ನು ಗೆದ್ದ, ಅವಿಸ್ಮಯರಾದ ಅನೇಕರು ಇದ್ದಾರೆ. ಇವರು ತಮ್ಮ ಪರಾಕ್ರಮ ಮತ್ತು ವಿಜಯದಲ್ಲಿ ನಿರತರಾಗಿದ್ದಾರೆ. ಇವರಿಗೆ ಇನ್ನೊಬ್ಬರ ಅಪೇಕ್ಷೆಯಿಲ್ಲ.
ನ ತುಲ್ಯಂ ವೃಷ್ಣಿಭಿರಿಹ ದೃಶ್ಯತೇ ಕಿಂಚನ ಪ್ರಭೋ |
ಭೂತಂ ಭವ್ಯಂ ಭವಿಷ್ಯಚ್ಚ ಬಲೇನ ಭರತರ್ಷಭ ॥ 24 ॥
ಎಲೈ ಭರತಶ್ರೇಷ್ಠನೇ, ಪ್ರಭುವೇ, ವೃಷ್ಣಿಗಳ ಬಲಕ್ಕೆ ಸಮಾನರಾದವರು ಭೂತ- ವರ್ತಮಾನ-ಭವಿಷ್ಯತ್ ಕಾಲದಲ್ಲಿ ಯಾರೂ ಕಾಣುವುದಿಲ್ಲ.

ನ ಜ್ಞಾತಿಮವಮನ್ಯಂತೇ ವೃದ್ಧಾನಾಂ ಶಾಸನೇ ರತಾಃ |
ನ ದೇವಾಸುರಗಂಧರ್ವಾ ನ ಯಕ್ಷೋರಗರಾಕ್ಷಸಾಃ |
ಜೇತಾರೋ ವೃಷ್ಣಿವೀರಾಣಾಂ ನ ಪುನರ್ಮಾನುಷಾ ರಣೇ ॥ 25 ॥
ಅವರು ಬಂಧುಗಳಿಗೆ ಅವಮಾನ ಮಾಡುವುದಿಲ್ಲ. ಹಿರಿಯರ ಶಾಸನದಂತೆ ನಡೆದುಕೊಳ್ಳುತ್ತಾರೆ. ದೇವಾಸುರ-ಗಂಧರ್ವರಾಗಲೀ, ಯಕ್ಷ-ಸರ್ಪ-ರಾಕ್ಷಸರಾಗಲೀ ವೃಷ್ಣಿವೀರರನ್ನು ಗೆಲ್ಲಲಾರರು. ಮನುಷ್ಯರಂತೂ ಯುದ್ಧದಲ್ಲಿ ಎಂದೂ ಗೆಲ್ಲಲಾರರು.
ಬ್ರಹ್ಮದ್ರವ್ಯೇ ಗುರುದ್ರವ್ಯೇ ಜ್ಞಾತಿದ್ರವ್ಯೇಽಪ್ಯಹಿಂಸಕಾಃ |
ಏತೇಷಾಂ ರಕ್ಷಿತಾರಶ್ಚ ಯೇ ಸ್ಯುಃ ಕಸ್ಯಾಂಚಿದಾಪದಿ ॥ 26 ॥
ಅವರು ಬ್ರಹ್ಮದ್ರವ್ಯವನ್ನಾಗಲೀ, ಗುರುದ್ರವ್ಯವನ್ನಾಗಲೀ, ಬಂಧುದ್ರವ್ಯವನ್ನಾಗಲೀ ನಾಶ ಮಾಡುವವರಲ್ಲ. ಅವರಿಗೆ ಏನಾದರೂ ಸಂಕಟ ಒದಗಿದರೆ ಅವರನ್ನು ರಕ್ಷಿಸುತ್ತಾರೆ.
ಅರ್ಥವಂತೋ ನ ಚೋತ್ಸಿಕ್ತಾ ಬ್ರಹ್ಮಣ್ಯಾಃ ಸತ್ಯವಾದಿನಃ |
ಸಮರ್ಥಾನ್ ನಾವಮನ್ಯಂತೇ ದೀನಾನಭ್ಯುದ್ಧರಂತಿ ಚ ॥ 27 ॥
ಅವರು ಸಂಪದ್ಯುಕ್ತರಾದವರು, ಅಹಂಕಾರಿಗಳಲ್ಲ, ಬ್ರಾಹ್ಮಣರಿಗೆ ವತ್ಸಲರಾದವರು, ಸತ್ಯವಾದಿಗಳು, ಸಮರ್ಥರಾದವರನ್ನು ಅವಮಾನಗೊಳಿಸುವುದಿಲ್ಲ. ದೀನರನ್ನು ಉದ್ಧಾರ ಮಾಡುತ್ತಾರೆ.
ನಿತ್ಯಂ ದೇವಪರಾ ದಾಂತಾ ದಾತಾರಶ್ಚಾವಿಕತ್ಥನಾಃ |
ತೇನ ವೃಷ್ಣಿಪ್ರವೀರಾಣಾಂ ಚಕ್ರಂ ನ ಪ್ರತಿಹನ್ಯತೇ ॥ 28 ॥
ನಿತ್ಯವೂ ದೇವಾರ್ಚನೆಯಲ್ಲಿ ನಿರತರಾದವರು, ಇಂದ್ರಿಯನಿಗ್ರಹವುಳ್ಳವರು, ದಾನವನ್ನು ಮಾಡುವವರು ಮತ್ತು ತಮ್ಮನ್ನು ಹೊಗಳಿಕೊಳ್ಳದವರು. ಆದ್ದರಿಂದ ವೃಷ್ಣಿವೀರರ ಸೈನ್ಯವು ಪ್ರತಿಘಾತಕ್ಕೆ ಒಳಗಾಗುವುದಿಲ್ಲ.
ಅಪಿ ಮೇರುಂ ವಹೇತ್ ಕಶ್ಚಿತ್ ತರೇದ್ವಾ ಮಕರಾಲಯಮ್ |
ನ ತು ವೃಷ್ಣಿಪ್ರವೀರಾಣಾಂ ಸಮಿತ್ಯಂತಂ ವ್ರಜೇನ್ನೃಪ ॥ 29 ॥
ಯಾವನಾದರೂ ಮೇರುವನ್ನು ಎತ್ತಬಹುದು ಅಥವಾ ಸಮುದ್ರವನ್ನು (ಬಾಹುಗಳಿಂದಲೇ ದಾಟಬಹುದು). ಆದರೆ ಎಲೈ ರಾಜನೇ, ಯಾವನೂ ವೃಷ್ಣಿವೀರರ ಸೈನ್ಯವನ್ನು ದಾಟಿಹೋಗಲಾರ.
ಏತತ್ತೇ ಸರ್ವಮಾಖ್ಯಾತಂ ಯತ್ರ ತೇ ಸಂಶಯೋ ವಿಭೋ |
ಕುರುರಾಜ ನರಶ್ರೇಷ್ಠ ತವ ಹ್ಯಪನಯೋ ಮಹಾನ್ ॥ 30 ॥
ಎಲೈ ವಿಭುವೇ, ನಿನಗೆ ಸಂಶಯವಿರುವ ಈ ಎಲ್ಲ ವಿಷಯವನ್ನೂ ಹೇಳಿದ್ದೇನೆ. ಎಲೈ ಕುರುರಾಜನೇ, ನರಶ್ರೇಷ್ಠನೇ, ಈ ಒಂದು ವಿನಾಶಕ್ಕೆ ನಿನ್ನ ಅಪಚಾರವೇ ಮೂಲಕಾರಣವಾಗಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನತ್ರಿಂಶದಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ತ್ರಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತನೆಯ ಅಧ್ಯಾಯ
ಕೃಷ್ಣಾರ್ಜುನರ ಸಂವಾದ. ಕರ್ಣ-ಸಾತ್ಯಕಿ ಮೊದಲಾದವರ ಯುದ್ಧ.
ಧೃತರಾಷ್ಟ್ರಃ
ತದವಸ್ಥೇ ಹತೇ ತಸ್ಮಿನ್ ಭೂರಿಶ್ರವಸಿ ಕೌರವೇ |
ಯಥಾ ಭೂಯೋಽಭವದ್ ಯುದ್ಧಂ ತನ್ಮಮಾಚಕ್ಷ್ವ ಸಂಜಯ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಕೌರವನಾದ ಭೂರಿಶ್ರವನು ಅಂತಹ ಅವಸ್ಥೆಯಲ್ಲಿ ಹತನಾಗುತ್ತಿರಲು ಪುನಃ ಹೇಗೆ ಯುದ್ಧವು ನಡೆಯಿತೆಂದು ನನಗೆ ಹೇಳು.
ಸಂಜಯಃ
ಭೂರಿಶ್ರವಸಿ ಸಂಕ್ರಾಂತೇ ಪರಲೋಕಾಯ ಭಾರತ |
ವಾಸುದೇವಂ ಮಹಾಬಾಹುರರ್ಜುನಃ ಸಮಚೂಚುದತ್ ॥ 2 ॥
ಸಂಜಯ ಎಲೈ ಭಾರತನೇ, ಭೂರಿಶ್ರವನು ಪರಲೋಕಕ್ಕೆ ಪ್ರಯಾಣ ಮಾಡುತ್ತಿರಲು ಮಹಾಬಾಹುವಾದ ಅರ್ಜುನನು ಕೃಷ್ಣನನ್ನು ಪ್ರಚೋದಿಸಿದನು.
ಚೋದಯಾಶ್ವಾನ್ ಭೃಶಂ ಕೃಷ್ಣ ಯತೋ ರಾಜಾ ಜಯದ್ರಥಃ |
ಅಸ್ತಮೇತಿ ಮಹಾಬಾಹೋ ತ್ವರಮಾಣೋ ದಿವಾಕರಃ ॥ 3 ॥
ಎಲೈ ಮಹಾಬಾಹುವೇ, ಸೂರ್ಯನು ಶೀಘ್ರವಾಗಿ ಅಸ್ತದ ಕಡೆಗೆ ಹೋಗುತ್ತಿದ್ದಾನೆ. ಕೃಷ್ಣನೇ, ಜಯದ್ರಥನಿರುವಲ್ಲಿಗೆ ನನ್ನ ರಥದ ಅಶ್ವಗಳನ್ನು ಪ್ರಚೋದಿಸು.
ಏತದ್ಧಿ ಪುರುಷವ್ಯಾಘ್ರ ಮಹದಭ್ಯುದ್ಯತಂ ಮಯಾ |
ಕಾರ್ಯಂ ಸಂರಕ್ಷ್ಯತೇ ಚೈಷ ಕುರುಸೇನಾಮಹಾರಥೈಃ ॥ 4 ॥
ಎಲೈ ಪುರುಷವ್ಯಾಘ್ರನೇ, ಇದು ನಾನು ಮಾಡಬೇಕಾದ ದೊಡ್ಡ ಕಾರ್ಯ. ಕುರುಸೇನೆಯ ಮಹಾರಥರು ಜಯದ್ರಥನನ್ನು

ರಕ್ಷಿಸುತ್ತಿದ್ದಾರೆ.
ನಾಸ್ತಮೇತಿ ಯಥಾ ಸೂರ್ಯೋ ಯಥಾ ಸತ್ಯಂ ಭವೇದ್ವಚಃ |
ಚೋದಯಾಶ್ವಾಂಸ್ತಥಾ ಕೃಷ್ಣ ಯಥಾ ಹನ್ಯಾಂ ಜಯದ್ರಥಮ್ ॥ 5 ॥
ಎಲೈ ಕೃಷ್ಣನೇ, ಸೂರ್ಯನು ಅಸ್ತಂಗತನಾಗುವುದಕ್ಕಿಂತ ಮೊದಲು ನಾನು ಜಯದ್ರಥನನ್ನು ಕೊಲ್ಲುವಂತೆ, ನನ್ನ ಮಾತು ಸತ್ಯವಾಗುವಂತೆ ನನ್ನ ಅಶ್ವಗಳನ್ನು ಪ್ರಚೋದಿಸು (ಎಂದು ಒತ್ತಾಯಪಡಿಸಿದನು).
ತತಃ ಕೃಷ್ಣೋ ಮಹಾಬಾಹೂ ರಜತಪ್ರತಿಮಾನ್ ಹಯಾನ್ |
ಹಯಜ್ಞಶ್ಚೋದಯಾಮಾಸ ಜಯದ್ರಥರಥಂ ಪ್ರತಿ ॥ 6 ॥
ಆಗ ಅಶ್ವಕೋವಿದನಾದ ಮಹಾಬಾಹುವಾದ ಕೃಷ್ಣನು ರಜತವರ್ಣದ ಅರ್ಜುನನ ಕುದುರೆಗಳನ್ನು ಜಯದ್ರಥದ ರಥನ ಕಡೆಗೆ ಪ್ರೇರಿಸಿದನು.
ತಂ ಪ್ರಯಾಂತಮಮೋಘೇಷುಮುತ್ಪತದ್ಭಿರಿವಾಶುಗೈಃ |
ತ್ವರಮಾಣಾ ಮಹಾರಾಜ ಸೇನಾಮುಖ್ಯಾಃ ಸಮಾವ್ರಜನ್ ॥ 7 ॥
ಎಲೈ ಮಹಾರಾಜನೇ, ಶೀಘ್ರಗಾಮಿಗಳಾಗಿ ಆಕಾಶದಲ್ಲಿ ಹಾರುವಂತೆ ಹೋಗುತ್ತಿದ್ದ ಅಮೋಘ ಬಾಣಪ್ರಯೋಗವುಳ್ಳ ಅರ್ಜುನನನ್ನು ನಿನ್ನ ಸೇನೆಯ ಪ್ರಧಾನರು ತ್ವರೆಯಿಂದ ಮುತ್ತಿದರು.
ದುರ್ಯೋಧನಶ್ಚ ಕರ್ಣಶ್ಚ ವೃಷಸೇನೋಽಥ ಮದ್ರರಾಟ್|
ಅಶ್ವತ್ಥಾಮಾ ಕೃಪಶ್ಚೈವ ಸ್ವಯಮೇವ ಚ ಸೈಂಧವಃ ॥ 8 ॥
ದುರ್ಯೋಧನ, ಕರ್ಣ, ವೃಷಸೇನ, ಮುದ್ರರಾಜನಾದ ಶಲ್ಯ, ಅಶ್ವತ್ಥಾಮ, ಕೃಪರು ಮತ್ತು ಸ್ವತಃ ಸೈಂಧವ- ಇವರು (ಅರ್ಜುನನ ಮೇಲೆ ಎರಗಿದರು).
ಸಮಾಸಾದ್ಯ ತು ಬೀಭತ್ಸುಃ ಸೈಂಧವಂ ಪ್ರಮುಖೇ ಸ್ಥಿತಮ್ |
ನೇತ್ರಾಭ್ಯಾಂ ಕ್ರೋಧದೀಪ್ತಾಭ್ಯಾಂ ಸಂಪ್ರೈಕ್ಷನ್ ನಿರ್ದಹನ್ನಿವ ॥ 9 ॥
ಅರ್ಜುನನು ಸೈಂಧವನ ಸಮೀಪಕ್ಕೆ ಬಂದು ತನ್ನ ಎದುರಿಗಿದ್ದ ಅವನನ್ನು ಕ್ರೋಧದೀಪ್ತವಾದ ತನ್ನ ಕಣ್ಣುಗಳಿಂದ ಸುಟ್ಟುಬಿಡುವಂತೆ ನೋಡಿದನು.
ತತೋ ದುರ್ಯೋಧನೋ ರಾಜಾ ರಾಧೇಯಂ ತ್ವರಿತೋಽಬ್ರವೀತ್ |
ಅರ್ಜುನಂ ವೀಕ್ಷ್ಯ ಸಂಯಾಂತಂ ಜಯದ್ರಥರಥಂ ಪ್ರತಿ ॥ 10 ॥
ಆಗ ರಾಜನಾದ ದುರ್ಯೋಧನನು ಜಯದ್ರಥನ ರಥದ ಕಡೆಗೆ ಹೋಗುತ್ತಿದ್ದ ಅರ್ಜುನನನ್ನು ನೋಡಿ ಶೀಘ್ರವಾಗಿ ಕರ್ಣನನ್ನು ಕುರಿತು ಹೇಳಿದನು.
ಅಯಂ ಸ ವೈಕರ್ತನ ಯುದ್ಧಕಾಲೋ
ವಿದರ್ಶಯ ಸ್ವಾತ್ಮಬಲಂ ಮಹಾತ್ಮನ್ |
ಯಥಾ ನ ವಧ್ಯೇತ ರಣೇಽರ್ಜುನೇನ
ಜಯದ್ರಥಃ ಕರ್ಣ ತಥಾ ಕುರುಷ್ವ ॥ 11 ॥
ಎಲೈ ವೈಕರ್ತನನೇ, ಇದು ನೀನು ನಿರೀಕ್ಷಿಸಿದ ಯುದ್ಧದ ಕಾಲ. ಮಹಾತ್ಮನೇ, ನಿನ್ನ ಸಾಮರ್ಥ್ಯವನ್ನು ಈಗ ತೋರಿಸು. ಎಲೈ ಕರ್ಣನೇ, ಯುದ್ಧದಲ್ಲಿ ಜಯದ್ರಥನು ಅರ್ಜುನನಿಂದ ಕೊಲ್ಲಲ್ಪಡದಂತೆ ಮಾಡು.
ಅಲ್ಪಾವಶಿಷ್ಟಂ ದಿವಸಂ ನೃವೀರ
ವಿಘಾತಯಸ್ವಾದ್ಯ ರಿಪುಂ ಶರೌಘೈಃ |
ದಿನಕ್ಷಯಂ ಪ್ರಾಪ್ಯ ನರಪ್ರವೀರ
ಧ್ರುವಂ ಹಿ ನಃ ಕರ್ಣ ಜಯೋ ಭವಿಷ್ಯತಿ ॥ 12 ॥
ಎಲೈ ನರಶ್ರೇಷ್ಠನೇ, ದಿವಸದಲ್ಲಿ ಅಲ್ಪಭಾಗವು ಮಾತ್ರ ಉಳಿದಿದೆ. ಶತ್ರುವಾದ ಅರ್ಜುನನನ್ನು ನಿನ್ನ ಬಾಣಗಳ ಸಮೂಹದಿಂದ ಈ ದಿನ ವಿಫಲಗೊಳಿಸು. ಎಲೈ ನರಪ್ರವೀರನಾದ ಕರ್ಣನೇ, ಈ ದಿನವು ಕಳೆದು ಹೋದರೆ ನಮಗೆ ಖಂಡಿತವಾಗಿ ಜಯವುಂಟಾಗುವುದು.
ಸೈಂಧವೇ ರಕ್ಷ್ಯಮಾಣೇ ತು ಸೂರ್ಯಸ್ಯಾಸ್ತಮಯಂ ಪ್ರತಿ |
ಮಿಥ್ಯಾಪ್ರತಿಜ್ಞಃ ಕೌಂತೇಯಃ ಪ್ರವೇಕ್ಷ್ಯತಿ ಹುತಾಶನಮ್ ॥ 13 ॥
ಸೂರ್ಯಾಸ್ತದವರೆಗೂ ಸೈಂಧವನನ್ನು ರಕ್ಷಿಸಿದರೆ ಅರ್ಜುನನು ಮಿಥ್ಯಾ ಪ್ರತಿಜ್ಞ ಉಳ್ಳವನಾಗಿ ಅಗ್ನಿಯನ್ನು ಪ್ರವೇಶಿಸುವನು.
ಅನರ್ಜುನಾಯಾಂ ಚ ಭುವಿ ಮುಹೂರ್ತಮಪಿ ಮಾನದ |
ಜೀವಿತುಂ ನೋತ್ಸಹೇರನ್ ವೈ ಭ್ರಾತರೋಽಸ್ಯ ಸಹಾನುಗಾಃ ॥ 14 ॥
ಎಲೈ ಮಾನದನೇ, ಅರ್ಜುನ ರಹಿತವಾದ ಭೂಮಿಯಲ್ಲಿ ಅವನ ಸಹೋದರರು ಮತ್ತು ಅನುಯಾಯಿಗಳು ಒಂದು ಮುಹೂರ್ತದ ಕಾಲವೂ ಜೀವಿಸಲಾರರು.
ವಿನಷ್ಟೈಃ ಪಾಂಡವೇಯೈಶ್ಚ ಸಶೈಲವನಕಾನನಾಮ್ |
ವಸುಂಧರಾಮಿಮಾಂ ಕರ್ಣ ಭೋಕ್ಷ್ಯಾಮೋ ಹತಕಂಟಕಾಮ್ ॥ 15 ॥
ಎಲೈ ಕರ್ಣನೇ, ಪಾಂಡವರು ವಿನಾಶವನ್ನು ಹೊಂದಿದರೆ, ಶೈಲ-ವನ- ಕಾನನಗಳಿಂದ ಸಹಿತವಾದ ಈ ಭೂಮಿಯನ್ನು ನಿಷ್ಕಂಟಕವಾಗಿ ನಾವು ಅನುಭವಿಸುವೆವು.
ದೈವೇನೋಪಹತಃ ಪಾರ್ಥೋ ವಿಪರೀತಶ್ಚ ಮಾನದ |
ಕಾರ್ಯಾಕಾರ್ಯಮಜಾನನ್ ವೈ ಪ್ರತಿಜ್ಞಾಂ ಕೃತವಾನ್ ರಣೇ ॥ 16 ॥

ಎಲೈ ಮಾನದನೇ, ಅರ್ಜುನನು ವಿಧಿಯಿಂದ ಉಪದ್ರುತನಾಗಿ ವಿಪರೀತ ಬುದ್ಧಿಯನ್ನು ಹೊಂದಿದ್ದಾನೆ. ಕಾರ್ಯಾಕಾರ್ಯಗಳನ್ನು ತಿಳಿಯದೆ ಯುದ್ಧದಲ್ಲಿ ಪ್ರತಿಜ್ಞೆಯನ್ನು ಮಾಡಿದ್ದಾನೆ.
ನೂನಮಾತ್ಮವಿನಾಶಾಯ ಪಾಂಡವೇನ ಕಿರೀಟಿನಾ |
ಪ್ರತಿಜ್ಞೇಯಂ ಕೃತಾ ಕರ್ಣ ಜಯದ್ರಥವಧಂ ಪ್ರತಿ ॥ 17 ॥
ಎಲೈ ಕರ್ಣನೇ, ಖಂಡಿತವಾಗಿ ಅರ್ಜುನನು ಜಯದ್ರಥನ ವಧೆಯ ವಿಷಯದಲ್ಲಿ ತನ್ನ ವಿನಾಶಕ್ಕಾಗಿ ಈ ಪ್ರತಿಜ್ಞೆಯನ್ನು ಮಾಡಿದ್ದಾನೆ.

ಕಥಂ ಜೀವತಿ ದುರ್ಧರ್ಷೇ ತ್ವಯಿ ರಾಧೇಯ ಫಲ್ಗುನಃ |
ಅನಸ್ತಂಗತ ಆದಿತ್ಯೇ ಹನ್ಯಾತ್ ಸೈಂಧವಕಂ ನೃಪಮ್ ॥ 18 ॥
ಎಲೈ ರಾಧೇಯನೇ, ಸೋಲಿಸಲು ಅಸಾಧ್ಯನಾದ ನೀನು ಬದುಕಿರುವಾಗ ಸೂರ್ಯನು ಅಸ್ತಂಗತನಾಗುವುದರೊಳಗೆ ಅರ್ಜುನನು ಸೈಂಧವನನ್ನು ಹೇಗೆ ಕೊಂದಾನು?
ರಕ್ಷಿತಂ ಮದ್ರರಾಜೇನ ಕೃಪೇಣ ಚ ಮಹಾತ್ಮನಾ |
ಜಯದ್ರಥಂ ರಣಮುಖೇ ಕಥಂ ಹನ್ಯಾದ್ ಧನಂಜಯಃ ॥ 19 ॥
ಮದ್ರರಾಜನಾದ ಶಲ್ಯನಿಂದಲೂ, ಮಹಾತ್ಮರಾದ ಕೃಪರಿಂದಲೂ ಯುದ್ಧದಲ್ಲಿ ರಕ್ಷಿಸಲ್ಪಡುವ ಜಯದ್ರಥನನ್ನು ಅರ್ಜುನನು ಹೇಗೆ ಕೊಂದಾನು?
ದ್ರೌಣಿನಾ ರಕ್ಷ್ಯಮಾಣಂ ಚ ಮಯಾ ದುಃಶಾಸನೇನ ಚ |
ಕಥಂ ಪ್ರಾಪ್ಸ್ಯತಿ ಬೀಭತ್ಸುಃ ಸೈಂಧವಂ ಕಾಲಚೋದಿತಃ ॥ 20 ॥
ಕಾಲಚೋದಿತನಾದ ಅರ್ಜುನನು ಅಶ್ವತ್ಥಾಮರಿಂದಲೂ, ನನ್ನಿಂದಲೂ ಮತ್ತು ದುಶ್ಶಾಸನನಿಂದಲೂ ರಕ್ಷಿಸಲ್ಪಡುವ ಸೈಂಧವನ ಬಳಿಗೆ ಹೇಗೆ ಬರುತ್ತಾನೆ?
ಯುದ್ಧ್ಯಂತೇ ಬಹವಃ ಶೂರಾ ಲಂಬತೇ ಚ ದಿವಾಕರಃ |
ಶಂಕೇ ಜಯದ್ರಥಂ ಪಾರ್ಥೋ ನೈವ ಪ್ರಾಪ್ಸ್ಯತಿ ಮಾನದ ॥ 21 ॥
ನಮ್ಮ ಅನೇಕ ಶೂರರು ಯುದ್ಧವನ್ನು ಮಾಡುತ್ತಿದ್ದಾರೆ. ಸೂರ್ಯನು ಇಳಿಯುತ್ತಿದ್ದಾನೆ. ಎಲೈ ಮಾನದನೇ, ಅರ್ಜುನನು ಜಯದ್ರಥನ ಬಳಿಗೆ ಬರಲಾರನೆಂದು ನಾನು ಶಂಕಿಸುತ್ತೇನೆ.
ಸ ತ್ವಂ ಕರ್ಣ ಮಯಾ ಸಾರ್ಧಂ ಶೂರೈಶ್ಚಾನ್ಯೈರ್ಮಹಾರಥೈಃ |
ದ್ರೌಣಿನಾ ತ್ವಂ ಹಿ ಸಹಿತೋ ಮದ್ರೇಶೇನ ಕೃಪೇಣ ಚ |
ಯುದ್ಧ್ಯಸ್ವ ಯತ್ನಮಾಸ್ಥಾಯ ಪರಂ ಪಾರ್ಥೇನ ಸಂಯುಗೇ ॥ 22 ॥
ಕರ್ಣನೇ, ಅಂತಹ ನೀನು ನನ್ನ ಜೊತೆಯಲ್ಲಿ, ಶೂರರಾದ ಉಳಿದ ಮಹಾರಥರ ಜೊತೆಯಲ್ಲಿ ಅಶ್ವತ್ಥಾಮರ, ಶಲ್ಯನ ಮತ್ತು ಕೃಪರ ಜೊತೆಯಲ್ಲಿ ಪ್ರಯತ್ನಪಟ್ಟು ಅರ್ಜುನನ ಜೊತೆ ಯುದ್ಧವನ್ನು ಮಾಡು (ಎಂದು ಹೇಳಿದನು).
ಏವಮುಕ್ತಸ್ತು ರಾಧೇಯಸ್ತವ ಪುತ್ರೇಣ ಮಾರಿಷ |
ದುರ್ಯೋಧನಮಿದಂ ವಾಕ್ಯಂ ಪ್ರತ್ಯುವಾಚ ಕುರೂತ್ತಮಮ್ ॥ 23 ॥
ಎಲೈ ಪೂಜ್ಯನೇ, ನಿನ್ನ ಪುತ್ರನಾದ ದುರ್ಯೋಧನನಿಂದ ಹೀಗೆ ಹೇಳಲ್ಪಟ್ಟ ರಾಧೇಯನಾದ ಕರ್ಣನು ಕುರುಶ್ರೇಷ್ಠನಾದ ದುರ್ಯೋಧನನನ್ನು ಕುರಿತು ಮಾತನಾಡಿದನು.
ದೃಢಲಕ್ಷ್ಯೇಣ ಶೂರೇಣ ಭೀಮಸೇನೇನ ಧನ್ವಿನಾ |
ಭೃಶಮುದ್ವೇಜಿತಃ ಸಂಖ್ಯೇ ಶರಜಾಲೈರನೇಕಶಃ ॥ 24 ॥
ಲಕ್ಷ್ಯವನ್ನು ತಪ್ಪದಿರುವ ಶೂರನಾದ ಧನುರ್ಧಾರಿಯಾದ ಭೀಮಸೇನನಿಂದ ಅನೇಕ ಬಾಣಸಮೂಹಗಳಿಂದ ನಾನು ಯುದ್ಧದಲ್ಲಿ ಬಹಳ ಉದ್ವೇಗಗೊಂಡಿದ್ದೇನೆ.
ಸ್ಥಾತವ್ಯಮಿತಿ ತಿಷ್ಠಾಮಿ ರಣೇ ಸಂಪ್ರತಿ ಮಾನದ |
ನೈವಾಂಗಮಿಂಗತಿ ಕಿಂಚಿನ್ಮೇ ಸಂತಪ್ತಸ್ಯ ರಣೇಷುಭಿಃ ॥ 25 ॥
ಎಲೈ ಮಾನದನೇ, ರಣರಂಗದಲ್ಲಿ ನಿಲ್ಲಬೇಕೆಂಬ ಹಠದಿಂದ ಈಗ ನಾನು ನಿಂತಿದ್ದೇನೆ. ಭೀಮನ ಬಾಣಗಳಿಂದ ಸಂತಪ್ತನಾದ ನನ್ನ ಶರೀರದ ಯಾವ ಅವಯವಗಳೂ ಅಲ್ಲಾಡುವುದಿಲ್ಲ.
ಯೋತ್ಸ್ಯಾಮಿ ತು ತಥಾ ರಾಜನ್ ಶಕ್ತ್ಯಾಹಂ ಪರಯಾ ರಣೇ |
ತದ್ ಯಥಾ ಪ್ರಯತಿಷ್ಯೇऽಹಂ ಪರಂ ಶಕ್ತ್ಯಾ ಸುಯೋಧನ |
ಯಥಾ ಪಾಂಡವಮುಖ್ಯೋऽಸೌ ನ ಹನಿಷ್ಯತಿ ಸೈಂಧವಮ್ ॥ 26 ॥
ಎಲೈ ರಾಜನೇ, ಸುಯೋಧನನೇ, ಪಾಂಡವಶ್ರೇಷ್ಠನಾದ ಅರ್ಜುನನು ಸೈಂಧವನನ್ನು ಕೊಲ್ಲದಂತೆ ನಾನು ನನ್ನ ಪರಮಶಕ್ತಿಯಿಂದ ಪ್ರಯತ್ನ ಪೂರ್ವಕವಾಗಿ ಯುದ್ಧವನ್ನು ಮಾಡುವೆನು.
ನ ಹಿ ಮೇ ಯುದ್ಧ್ಯಮಾನಸ್ಯ ಸಾಯಕಾಂಶ್ಚಾಸ್ಯತಃ ಶಿತಾನ್ |
ಸೈಂಧವಂ ಪ್ರಾಪ್ಸ್ಯತೇ ವೀರಃ ಸವ್ಯಸಾಚೀ ಧನಂಜಯಃ ॥ 27 ॥
ನಾನು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ಯುದ್ಧವನ್ನು ಮಾಡುವಾಗ ವೀರನೂ, ಸವ್ಯಸಾಚಿಯೂ ಆದ ಧನಂಜಯನು ಸೈಂಧವನ ಬಳಿಗೆ ಬರುವುದಿಲ್ಲ.
ಯತ್ ತು ಶಕ್ತಿಮತಾ ಕಾರ್ಯಂ ಸತತಂ ಹಿತಕಾರಿಣಾ |
ತತ್ ಕರಿಷ್ಯಾಮಿ ಕೌರವ್ಯ ಜಯೋ ದೈವೇ ಪ್ರತಿಷ್ಠಿತಃ ॥ 28 ॥

ಎಲೈ ಕೌರವ್ಯನೇ, ಸತತವಾಗಿ ಹಿತವನ್ನು ಮಾಡುವ ಶಕ್ತಿವಂತನು ಯಾವ ಕಾರ್ಯವನ್ನು ಮಾಡಬಹುದೋ ಅಂತಹ ಕಾರ್ಯವನ್ನು ಮಾಡುವೆನು. ಎಲೈ ಕೌರವ್ಯನೇ, ಜಯವು ದೈವವನ್ನು ಅವಲಂಬಿಸಿದೆ.
ಸೈಂಧವಾರ್ಥೇ ಪರಂ ಯತ್ನಂ ಕರಿಷ್ಯಾಮ್ಯದ್ಯ ಸಂಯುಗೇ |
ತ್ವತ್ಪ್ರಿಯಾರ್ಥಂ ಮಹಾರಾಜ ಜಯೋ ದೈವೇ ಪ್ರತಿಷ್ಠಿತಃ ॥ 29 ॥
ಎಲೈ ಮಹಾರಾಜನೇ, ನಿನ್ನ ಪ್ರೀತಿಯ ಸಲುವಾಗಿ ನಾನು ಈ ದಿನ ಯುದ್ಧದಲ್ಲಿ ಸೈಂಧವನನ್ನು ರಕ್ಷಿಸುವ ಸಲುವಾಗಿ ಬಹಳ ಪ್ರಯತ್ನವನ್ನು ಮಾಡುವೆನು. ಜಯವು ದೈವವನ್ನು ಅವಲಂಬಿಸಿದೆ.
ಅದ್ಯ ಯೋತ್ಸ್ಯೇಽರ್ಜುನಮಹಂ ಪೌರುಷಂ ಸ್ವಂ ವ್ಯಪಾಶ್ರಿತಃ |
ತ್ವದರ್ಥಂ ಪುರುಷವ್ಯಾಘ್ರ ಜಯೋ ದೈವೇ ಪ್ರತಿಷ್ಠಿತಃ ॥ 30 ॥
ಎಲೈ ಪುರುಷವ್ಯಾಘ್ರನೇ, ಈ ದಿನ ನಾನು ನನ್ನ ಪೌರುಷವನ್ನು ಆಶ್ರಯಿಸಿ ನಿನ್ನ ಸಲುವಾಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವೆನು. ಜಯವು ದೈವವನ್ನು ಅವಲಂಬಿಸಿದೆ.
ಅದ್ಯ ಯುದ್ಧಂ ಕುರುಶ್ರೇಷ್ಠ ಮಮ ಪಾರ್ಥಸ್ಯ ಚೋಭಯೋಃ |
ಪಶ್ಯಂತು ಸರ್ವಭೂತಾನಿ ದಾರುಣಂ ಲೋಮಹರ್ಷಣಮ್ ॥ 31 ॥
ಎಲೈ ಕುರುಶ್ರೇಷ್ಠನೇ, ಈ ದಿನ ನನಗೂ ಮತ್ತು ಅರ್ಜುನನಿಗೂ ನಡೆಯುವ ದಾರುಣವೂ, ರೋಮಾಂಚಕಾರಿಯೂ ಆದ ಯುದ್ಧವನ್ನು ಎಲ್ಲ ಪ್ರಾಣಿಗಳೂ ನೋಡಲಿ.
ಸಂಜಯಃ
ಕರ್ಣಕೌರವಯೋರೇವಂ ರಣೇ ಸಂಭಾಷಮಾಣಯೋಃ |
ಅರ್ಜುನೋ ನಿಶಿತೈರ್ಬಾಣೈರ್ಜಘಾನ ತವ ವಾಹಿನೀಮ್ ॥ 32 ॥
ಸಂಜಯಕರ್ಣ-ದುರ್ಯೋಧನರು ರಣರಂಗದಲ್ಲಿ ಹಾಗೆ ಮಾತನಾಡುತ್ತಿರಲು ಅರ್ಜುನನು ತೀಕ್ಷ್ಣವಾದ ಬಾಣಗಳಿಂದ ನಿನ್ನ ಸೈನ್ಯವನ್ನು ಹೊಡೆದನು.
ಚಿಚ್ಛೇದ ತೀಕ್ಷ್ಣಾಗ್ರಮುಖೈಃ ಶೂರಾಣಾಮನಿವರ್ತಿನಾಮ್ |
ಭುಜಾನ್ ಪರಿಘಸಂಕಾಶಾನ್ ಹಸ್ತಿಹಸ್ತೋಪಮಾನ್ ರಣೇ ॥ 33 ॥
ತೀಕ್ಷ್ಣವಾದ ಅಗ್ರಭಾಗವುಳ್ಳ ಬಾಣಗಳಿಂದ ಅರ್ಜುನನು ರಣರಂಗದಲ್ಲಿ ಯುದ್ಧದಿಂದ ಹಿಮ್ಮೆಟ್ಟದಿರುವ ಶೂರರ ಕಬ್ಬಿಣದ ಒನಕೆಗೆ ಸದೃಶವಾದ, ಆನೆಯ ಸೊಂಡಿಲುಗಳಿಗೆ ಸದೃಶವಾದ ಭುಜಗಳನ್ನು ಕತ್ತರಿಸಿದನು.
ಶಿರಾಂಸಿ ಚ ಮಹಾಬಾಹುಶ್ಚಿಚ್ಛೇದ ನಿಶಿತೈಃ ಶರೈಃ |
ಹಸ್ತಿಹಸ್ತಾನ್ ಹಯಗ್ರೀವಾ ರಥಾಕ್ಷಾಂಶ್ಚ ಸಮಂತತಃ ॥ 34 ॥
ಮಹಾಬಾಹುವಾದ ಅರ್ಜುನನು ತೀಕ್ಷ್ಣವಾದ ಬಾಣಗಳಿಂದ ಯೋಧರ ಶಿರಸ್ಸುಗಳನ್ನೂ, ಆನೆಗಳ ಸೊಂಡಿಲುಗಳನ್ನೂ, ಅಶ್ವಗಳ ಕತ್ತುಗಳನ್ನೂ, ರಥಗಳ ತೂಬುಗಳನ್ನೂ ಎಲ್ಲ ಕಡೆಗಳಲ್ಲಿಯೂ ಕತ್ತರಿಸಿದನು.
ಶೋಣಿತಾಕ್ತಾನ್ ಹಯಾರೋಹಾನ್ ಗೃಹೀತಪ್ರಾಸತೋಮರಾನ್ |
ಕ್ಷುರೈಶ್ಚಿಚ್ಛೇದ ಬೀಭತ್ಸುರ್ದ್ವಿಧೈಕೈಕಂ ತ್ರಿಧೈವ ಚ ॥ 35 ॥
ಅರ್ಜುನನು ಕೈಗಳಲ್ಲಿ ಪ್ರಾಸ-ತೋಮರಗಳನ್ನು ಹಿಡಿದ, ರಕ್ತಲೇಪಿತವಾದ ಅಶ್ವಾರೋಹಿಗಳಲ್ಲಿ ಒಬ್ಬೊಬ್ಬರನ್ನೂ ಕ್ಷುರಗಳಿಂದ ಎರಡು ಭಾಗವಾಗಿ ಅಥವಾ ಮೂರು ಭಾಗಗಳಾಗಿ ಕತ್ತರಿಸಿದನು.
ಹಯವಾರಣಮುಖ್ಯಾಶ್ಚ ಪ್ರಾಪತಂತ ಸಹಸ್ರಶಃ |
ಧ್ವಜಾಶ್ಛತ್ರಾಣಿ ಚಾಪಾನಿ ಚಾಮರಾಣಿ ಶಿರಾಂಸಿ ಚ ॥ 36 ॥
ಶ್ರೇಷ್ಠವಾದ ಅಶ್ವಗಳು ಮತ್ತು ಗಜಗಳು ಸಹಸ್ರ ಸಂಖ್ಯೆಯಲ್ಲಿ ಬಿದ್ದವು. ಧ್ವಜಗಳೂ, ಛತ್ರಗಳೂ, ಧನುಸ್ಸುಗಳೂ, ಚಾಮರಗಳೂ ಮತ್ತು ಶಿರಸ್ಸುಗಳೂ ಬಿದ್ದವು.
ಕಕ್ಷಮಗ್ನಿರಿವೋದ್ಭೂತಃ ಪ್ರದಹಂಸ್ತವ ವಾಹಿನೀಮ್ |
ಅಚಿರೇಣ ಮಹೀಂ ಪಾರ್ಥಶ್ಚಕಾರ ರುಧಿರೋತ್ತರಾಮ್ ॥ 37 ॥
ಪರಿವೃದ್ಧವಾದ ಅಗ್ನಿಯು ಹುಲ್ಲುಗಾವಲನ್ನು ಸುಡುವಂತೆ ಅರ್ಜುನನು ಅಲ್ಪಕಾಲದಲ್ಲಿಯೇ ರಣಭೂಮಿಯನ್ನು ರಕ್ತಸಿಕ್ತವನ್ನಾಗಿ ಮಾಡಿದನು.
ಹತಭೂಯಿಷ್ಠಯೋಧಂ ತತ್ ಕೃತ್ವಾ ತವ ಬಲಂ ಬಲೀ |
ಆಸಸಾದ ದುರಾಧರ್ಷಃ ಸೈಂಧವಂ ಸತ್ಯವಿಕ್ರಮಃ ॥ 38 ॥
ಬಲಿಷ್ಠನಾದ ಅರ್ಜುನನು ಕೌರವ ಸೈನ್ಯದಲ್ಲಿ ಯೋಧರನ್ನು ಬಹಳವಾಗಿ ಕೊಂದು, ಸತ್ಯಪರಾಕ್ರಮನೂ ಮತ್ತು ದುರಾಧರ್ಷನೂ ಆದ ಅವನು ಸೈಂಧವನನ್ನು ಸಮೀಪಿಸಿದನು.
ಬೀಭತ್ಸುರ್ಭೀಮಸೇನೇನ ಸಾತ್ವತೇನ ಚ ರಕ್ಷಿತಃ |
ಸ ಬಭೌ ಭರತಶ್ರೇಷ್ಠ ಜ್ವಲನ್ನಿವ ಹುತಾಶನಃ ॥ 39 ॥
ಭೀಮಸೇನನಿಂದಲೂ ಮತ್ತು ಸಾತ್ಯಕಿಯಿಂದಲೂ ರಕ್ಷಿಸಲ್ಪಟ್ಟ ಅರ್ಜುನನು ಎಲೈ ಭರತಶ್ರೇಷ್ಠನೇ, ಜ್ವಲಿಸುವ ಅಗ್ನಿಯಂತೆ ಶೋಭಿಸಿದನು.
ತಂ ತಥಾವಸ್ಥಿತಂ ದೃಷ್ಟ್ವಾ ತ್ವದೀಯಾ ವೀರ್ಯಸಮ್ಮತಾಃ |
ನಾಮೃಷ್ಯಂತ ಮಹೇಷ್ವಾಸಾಃ ಫಲ್ಗುನಂ ಪುರುಷರ್ಷಭಾಃ ॥ 40 ॥
ಅರ್ಜುನನು ಆ ರೀತಿ ಇರುವುದನ್ನು ನೋಡಿ ಧನುರ್ಧಾರಿಗಳೂ ತಮ್ಮ ಪರಾಕ್ರಮದಿಂದ ಪ್ರಖ್ಯಾತರೂ ಆದ ನಿನ್ನ ಪುರುಷಶ್ರೇಷ್ಠರು

ಸಹಿಸಲಿಲ್ಲ.
ದುರ್ಯೋಧನಶ್ಚ ಕರ್ಣಶ್ಚ ವೃಷಸೇನೋಽಥ ಮದ್ರರಾಟ್ |
ಅಶ್ವತ್ಥಾಮಾ ಕೃಪಶ್ಚೈವ ಸ್ವಯಮೇವ ಚ ಸೈಂಧವಃ ॥ 41 ॥
ಸಂರಬ್ಧಾಃ ಸೈಂಧವಸ್ಯಾರ್ಥೇ ಸಮಾವೃಣ್ವನ್ ಕಿರೀಟಿನಮ್ |
ನೃತ್ಯಂತಂ ರಥಮಾರ್ಗೇಷು ಧನುರ್ಜ್ಯಾತಳನಿಸ್ವನೈಃ ॥ 42 ॥
ದುರ್ಯೋಧನ, ಕರ್ಣ, ವೃಷಸೇನ, ಮದ್ರರಾಜನಾದ ಶಲ್ಯ, ಅಶ್ವತ್ಥಾಮರು, ಕೃಪರು ಮತ್ತು ಸ್ವತಃ ಸೈಂಧವ ಇವರು ಕೋಪಗೊಂಡು ಸೈಂಧವನ ಸಲುವಾಗಿ ರಥ ಮಾರ್ಗಗಳಲ್ಲಿ ಧನುಸ್ಸಿನ ಘೋಷಗಳಿಂದಲೂ, ಹೆದೆಯ ಘೋಷಗಳಿಂದಲೂ ನರ್ತನವನ್ನು ಮಾಡುವಂತಿದ್ದ ಅರ್ಜುನನನ್ನು ಸುತ್ತುವರಿದರು.
ಸಂಗ್ರಾಮಕೋವಿದಂ ಪಾರ್ಥಂ ಸರ್ವೇ ಯುದ್ಧವಿಶಾರದಾಃ |
ಅಭೀತಾಃ ಪರ್ಯವರ್ತಂತ ವ್ಯಾದಿತಾಸ್ಯಮಿವಾಂತಕಮ್ ॥ 43 ॥
ಯುದ್ಧವಿಶಾರದರಾದ ಆ ನಿನ್ನವರೆಲ್ಲರೂ ಬಾಯ್ತೆರೆದ ಮೃತ್ಯುವಿನಂತಿದ್ದ ರಣಕೋವಿದನಾದ ಅರ್ಜುನನನ್ನು ನಿರ್ಭಯವಾಗಿ ಸುತ್ತುವರಿದರು.
ಸೈಂಧವಂ ಪೃಷ್ಠತಃ ಕೃತ್ವಾ ಜಿಘಾಂಸಂತೋಽರ್ಜುನಾಚ್ಯುತೌ |
ಸೂರ್ಯಾಸ್ತಮಯಮಿಚ್ಛಂತೋ ಲೋಹಿತಾಯತಿ ಭಾಸ್ಕರೇ ॥ 44 ॥
ತೇ ಭುಜೈರ್ಭೋಗಿಭೋಗಾಭೈರ್ಧನೂಂಷ್ಯಾಯಮ್ಯ ಸಾಯಕಾನ್ |
ಮುಮುಚುಃ ಸೂರ್ಯರಶ್ಮ್ಯಾಭಾನ್ ಶತಶಃ ಫಲ್ಗುನಂ ಪ್ರತಿ ॥ 45 ॥
ಸೈಂಧವನನ್ನು ಹಿಂದಿಟ್ಟುಕೊಂಡು ಕೃಷ್ಣಾರ್ಜುನರನ್ನು ಕೊಲ್ಲಲು ಬಯಸಿ ಸೂರ್ಯನು ಕೆಂಪು ಬಣ್ಣಕ್ಕೆ ತಿರುಗುತ್ತಿರಲು ಸೂರ್ಯಾಸ್ತವನ್ನು ಬಯಸುತ್ತಾ ಸರ್ಪ ಶರೀರಗಳಂತಿದ್ದ ತಮ್ಮ ಭುಜಗಳಿಂದ ಧನುಸ್ಸುಗಳನ್ನು ಎಳೆದು ಸೂರ್ಯಕಿರಣಗಳಂತಿದ್ದ ಬಾಣಗಳನ್ನು ಅರ್ಜುನನ ಮೇಲೆ ನೂರಾರು ಸಂಖ್ಯೆಯಲ್ಲಿ ಪ್ರಯೋಗಿಸಿದರು.
ತಾನಸ್ತಾನಸ್ಯಮಾನಾಂಶ್ಚ ಕಿರೀಟೀ ಯುದ್ಧದುರ್ಮದಃ |
ದ್ವಿಧಾ ತ್ರಿಧಾಷ್ಟಧೈಕೈಕಂ ಛಿತ್ತ್ವಾ ವಿವ್ಯಾಧ ತಾನ್ ರಣೇ ॥ 46 ॥
ಯುದ್ಧದುರ್ಮದನಾದ ಅರ್ಜುನನು ಅವರು ಪ್ರಯೋಗಿಸಿದ ಮತ್ತು ಪ್ರಯೋಗಿಸುತ್ತಿದ್ದ ಆ ಬಾಣಗಳನ್ನು ರಣರಂಗದಲ್ಲಿ ಒಂದೊಂದನ್ನೂ ಎರಡು ಭಾಗವಾಗಿ, ಮೂರು ಭಾಗವಾಗಿ, ಎಂಟು ಭಾಗವಾಗಿ ಕತ್ತರಿಸಿ ಅವರ ಮೇಲೆ ಬಾಣ ಪ್ರಯೋಗವನ್ನು ಮಾಡಿದನು.
ಸಿಂಹಲಾಂಗೂಲಕೇತುಸ್ತು ದರ್ಶಯನ್ ಶಕ್ತಿಮಾತ್ಮನಃ |
ಶಾರದ್ವತೀಸುತೋ ರಾಜನ್ನರ್ಜುನಂ ಪ್ರತ್ಯವಾರಯತ್ ॥ 47 ॥
ಎಲೈ ರಾಜನೇ, ಶಾರದ್ವತೀ ಸುತರಾದ, ಸಿಂಹಲಾಂಗೂಲ (ಬಾಲ) ಧ್ವಜವುಳ್ಳ ಕೃಪಾಚಾರ್ಯರು ತಮ್ಮ ಶಕ್ತಿಯನ್ನು ತೋರಿಸುತ್ತಾ ಅರ್ಜುನನನ್ನು ತಡೆದರು.
ಸ ವಿದ್ಧ್ವಾ ದಶಭಿಃ ಪಾರ್ಥಂ ವಾಸುದೇವಂ ಚ ಸಪ್ತಭಿಃ |
ಅತಿಷ್ಠದ್ ರಥಮಾರ್ಗೇಷು ಸೈಂಧವಂ ಪರಿಪಾಲಯನ್ ॥ 48 ॥
ಅವರು ಅರ್ಜುನನನ್ನು ಹತ್ತು ಬಾಣಗಳಿಂದಲೂ, ಕೃಷ್ಣನನ್ನು ಏಳು ಬಾಣಗಳಿಂದಲೂ ಹೊಡೆದು, ಸೈಂಧವನನ್ನು ರಕ್ಷಿಸುತ್ತಾ ಅರ್ಜುನನ ರಥಮಾರ್ಗದಲ್ಲಿ ಅಡ್ಡವಾಗಿ ನಿಂತರು.
ಅಥೈನಂ ಕೌರವಶ್ರೇಷ್ಠಾಃ ಸರ್ವ ಏವ ಮಹಾರಥಾಃ |
ಮಹತಾ ರಥವಂಶೇನ ಸರ್ವತಃ ಪರ್ಯವಾರಯನ್ ॥ 49 ॥
ಆಗ ಮಹಾರಥರಾದ ಎಲ್ಲ ಕೌರವಶ್ರೇಷ್ಠರೂ ದೊಡ್ಡ ರಥಸಮೂಹದಿಂದ ಎಲ್ಲ ಕಡೆಗಳಿಂದಲೂ ಅವನನ್ನು ಸುತ್ತುವರಿದರು.
ವಿಸ್ಫಾರಯಂತಶ್ಚಾಪಾನಿ ವಿಸೃಜಂತಶ್ಚ ಸಾಯಕಾನ್ |
ಸೈಂಧವಂ ಪರ್ಯರಕ್ಷಂತ ಶಾಸನಾತ್ ತನಯಸ್ಯ ತೇ ॥ 50 ॥
ಅವರು ನಿನ್ನ ಪುತ್ರನ ಶಾಸನದಂತೆ ತಮ್ಮ ಧನುಸ್ಸನ್ನು ಎಳೆಯುತ್ತಾ, ಬಾಣಗಳನ್ನು ಪ್ರಯೋಗಿಸುತ್ತಾ ಸೈಂಧವನನ್ನು ರಕ್ಷಿಸಿದರು.
ತತ್ರ ಪಾರ್ಥಸ್ಯ ಶೂರಸ್ಯ ಬಾಹ್ವೋರ್ಬಲಮದೃಶ್ಯತ |
ಇಷೂಣಾಮಕ್ಷಯತ್ವಂ ಚ ಧನುಷೋ ಗಾಂಡೀವಸ್ಯ ಚ ॥ 51 ॥
ಆಗ ರಣರಂಗದಲ್ಲಿ ಶೂರನಾದ ಅರ್ಜುನನ ಬಾಹುಬಲವೂ, ಗಾಂಡೀವ ಧನುಸ್ಸಿನ ಬಲವೂ ಮತ್ತು ಬಾಣಗಳ ಅಕ್ಷಯತ್ವವೂ ಕಂಡುಬಂದಿತು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ದ್ರೌಣೇಃ ಶಾರದ್ವತಸ್ಯ ಚ |
ಏಕೈಕಂ ನವಭಿರ್ಬಾಣೈಃ ಸರ್ವಾನೇವ ಸಮರ್ಪಯತ್ ॥ 52 ॥
ಅರ್ಜುನನು ಅಶ್ವತ್ಥಾಮರ ಮತ್ತು ಕೃಪರ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನಿವಾರಿಸಿ ಅವರಲ್ಲಿ ಒಬ್ಬೊಬ್ಬರನ್ನೂ ಒಂಬತ್ತು ಬಾಣಗಳಿಂದ ಹೊಡೆದನು.
ತಂ ದ್ರೌಣಿಃ ಪಂಚವಿಂಶತ್ಯಾ ವೃಷಸೇನಶ್ಚ ಸಪ್ತಭಿಃ |
ದುರ್ಯೋಧನಶ್ಚ ವಿಂಶತ್ಯಾ ಕರ್ಣಶಲ್ಯೌ ತ್ರಿಭಿಸ್ತ್ರಿಭಿಃ ॥ 53 ॥
ತ ಏನಮಭಿಗರ್ಜಂತೋ ವಿಧ್ಯಂತಶ್ಚ ಪುನಃ ಪುನಃ |
ವಿಧುನ್ವಂತಶ್ಚ ಚಾಪಾನಿ ಸರ್ವತಃ ಪರ್ಯವಾರಯನ್ ॥ 54 ॥

ಅವನನ್ನು ಅಶ್ವತ್ಥಾಮರು ಇಪ್ಪತ್ತೈದು ಬಾಣಗಳಿಂದಲೂ, ವೃಷಸೇನನು ಏಳು ಬಾಣಗಳಿಂದಲೂ, ದುರ್ಯೋಧನನು ಇಪ್ಪತ್ತು ಬಾಣಗಳಿಂದಲೂ, ಕರ್ಣ-ಶಲ್ಯರು ಮೂರು-ಮೂರು ಬಾಣಗಳಿಂದಲೂ ಹೊಡೆದರು. ಅವರು ಪುನಃ ಪುನಃ ಬಾಣಗಳನ್ನು ಪ್ರಯೋಗಿಸುತ್ತಾ, ಅರ್ಜುನನ ಮೇಲೆ ಗರ್ಜನೆಯನ್ನು ಮಾಡುತ್ತಾ, ತಮ್ಮ ಧನುಸ್ಸುಗಳನ್ನು ಓಲಾಡಿಸುತ್ತಾ ಎಲ್ಲ ಕಡೆಗಳಿಂದಲೂ ಅರ್ಜುನನನ್ನು ಸುತ್ತುವರಿದರು.

ಶ್ಲಿಷ್ಟಂ ತು ಸರ್ವತಶ್ಚಕ್ರೂ ರಥಮಂಡಲಮಾಶು ತೇ |
ಸೂರ್ಯಾಸ್ತಮಯಮಿಚ್ಛಂತಸ್ತ್ವರಮಾಣಾ ಮಹಾರಥಾಃ ॥ 55 ॥

ಸೂರ್ಯಾಸ್ತಮಯವನ್ನು ಬಯಸಿದ ಆ ಮಹಾರಥರು ತ್ವರೆಯಿಂದ ಅರ್ಜುನನ ರಥದ ಸುತ್ತಲೂ ತಮ್ಮ ರಥಸಮೂಹವು ದೃಢವಾಗಿ ನಿಲ್ಲುವಂತೆ ಮಾಡಿದರು.

ತ ಏನಮಭಿನರ್ದಂತೋ ವಿಧುನ್ವಾನಾ ಧನೂಂಷಿ ಚ |
ಸಿಷಿಚುರ್ಮಾರ್ಗಣೈರ್ಘೋರೈರ್ಗಿರಿಂ ಮೇಘಾ ಇವಾಂಬುಭಿಃ ॥ 56 ॥

ಅವರು ಅರ್ಜುನನನ್ನು ನೋಡಿ ಗರ್ಜಿಸುತ್ತಾ, ತಮ್ಮ ಧನುಸ್ಸುಗಳನ್ನು ಎಳೆಯುತ್ತಾ ಮೋಡವು ನೀರಿನಿಂದ ಪರ್ವತವನ್ನು ಅಭಿಷೇಕ ಮಾಡಿದಂತೆ ಘೋರವಾದ ಬಾಣಗಳಿಂದ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.

ತೇ ಮಹಾಸ್ತ್ರಾಣಿ ದಿವ್ಯಾನಿ ತತ್ರ ರಾಜನ್ ವ್ಯದರ್ಶಯನ್ |
ಧನಂಜಯಸ್ಯ ಗಾತ್ರೇಷು ಶೂರಾಃ ಪರಿಘಬಾಹವಃ ॥ 57 ॥

ಎಲೈ ರಾಜನೇ, ಶೂರರೂ, ಒನಕೆಯಂತಹ ಬಾಹುಗಳನ್ನುಳ್ಳವರೂ ಆದ ಅವರು ಅರ್ಜುನನ ಶರೀರದ ಮೇಲೆ ತಮ್ಮ ಮಹಾಸ್ತ್ರಗಳನ್ನು ಪ್ರದರ್ಶಿಸಿದರು.

ಹತಭೂಯಿಷ್ಠಯೋಧಂ ತತ್ ಕೃತ್ವಾ ತವ ಬಲಂ ಬಲೀ |
ಆಸಸಾದ ದುರಾಧರ್ಷಃ ಸೈಂಧವಂ ಸತ್ಯವಿಕ್ರಮಃ ॥ 58 ॥

ಬಲಿಷ್ಠನಾದ ಅರ್ಜುನನು ಆ ನಿನ್ನ ಸೈನ್ಯದಲ್ಲಿ ಬಹಳ ಯೋಧರನ್ನು ಕೊಂದು ದುರಾಧರ್ಷನೂ, ಸತ್ಯವಿಕ್ರಮನೂ ಆದ ಅವನು ಸೈಂಧವನನ್ನು ಸಮೀಪಿಸಿದನು.

ತಂ ಕರ್ಣಃ ಸಂಯುಗೇ ರಾಜನ್ ಪ್ರತ್ಯವಾರಯದಾಶುಗೈಃ |
ಮಿಷತೋ ಭೀಮಸೇನಸ್ಯ ಸಾತ್ವತಸ್ಯ ಚ ಭಾರತ ॥ 59 ॥

ಎಲೈ ಭಾರತನೇ, ಕರ್ಣನು ಭೀಮಸೇನನೂ ಮತ್ತು ಸಾತ್ಯಕಿಯೂ ನೋಡುತ್ತಿರುವಂತೆಯೇ ರಣರಂಗದಲ್ಲಿ ಶೀಘ್ರಗಾಮಿಗಳಾದ ಬಾಣಗಳಿಂದ ಅವನನ್ನು ತಡೆದನು.

ತಂ ಪಾರ್ಥೋ ದಶಭಿರ್ಬಾಣೈಃ ಪ್ರತ್ಯವಿದ್ಧ್ಯದ್ ರಣಾಜಿರೇ |
ಸೂತಪುತ್ರಂ ಮಹಾಬಾಹುಃ ಸರ್ವಸೈನ್ಯಸ್ಯ ಪಶ್ಯತಃ ॥ 60 ॥

ಮಹಾಬಾಹುವಾದ ಅರ್ಜುನನು ಎಲ್ಲ ಸೈನ್ಯಗಳು ನೋಡುತ್ತಿರುವಂತೆಯೇ ಹತ್ತು ಬಾಣಗಳಿಂದ ಸೂತಪುತ್ರನಾದ ಕರ್ಣನನ್ನು ರಣರಂಗದಲ್ಲಿ ಹೊಡೆದನು.

ಸಾತ್ವತಶ್ಚ ತ್ರಿಭಿರ್ಬಾಣೈಃ ಕರ್ಣಂ ವಿವ್ಯಾಧ ಮಾರಿಷ |
ಭೀಮಸೇನಸ್ತ್ರಿಭಿಶ್ಚೈವ ಪುನಃ ಪಾರ್ಥಶ್ಚ ಸಪ್ತಭಿಃ ॥ 61 ॥

ಎಲೈ ಪೂಜ್ಯನೇ, ಸಾತ್ಯಕಿಯು ಕರ್ಣನನ್ನು ಮೂರು ಬಾಣಗಳಿಂದ ಹೊಡೆದನು. ಭೀಮಸೇನನು ಮೂರು ಬಾಣಗಳಿಂದಲೂ ಮತ್ತು ಅರ್ಜುನನು ಪುನಃ ಏಳು ಬಾಣಗಳಿಂದಲೂ ಹೊಡೆದರು.

ತಾನ್ ಕರ್ಣಃ ಪ್ರತಿವಿವ್ಯಾಧ ಷಷ್ಟ್ಯಾ ಷಷ್ಟ್ಯಾ ಮಹಾರಥಃ |
ತದ್ ಯುದ್ಧಮಭವದ್ ರಾಜನ್ ಕರ್ಣಸ್ಯ ಬಹುಭಿಃ ಸಹ ॥ 62 ॥

ಮಹಾರಥನಾದ ಕರ್ಣನು ಅವರನ್ನು ಅರವತ್ತು ಬಾಣಗಳಿಂದ ಪ್ರತಿಯಾಗಿ ಹೊಡೆದನು. ರಾಜನೇ, ಕರ್ಣನಿಗೆ ಅನೇಕರ ಜೊತೆಯಲ್ಲಿ ಯುದ್ಧವು ನಡೆಯಿತು.

ತತ್ರಾದ್ಭುತಮಪಶ್ಯಾಮ ಸೂತಪುತ್ರಸ್ಯ ಮಾರಿಷ |
ಯದೇಕಃ ಸಮರೇ ಕ್ರುದ್ಧಸ್ತ್ರೀನ್ ರಥಾನ್ಪರ್ಯವಾರಯತ್ ॥ 63 ॥

ಎಲೈ ಪೂಜ್ಯನೇ, ಕ್ರುದ್ಧನಾದ ಕರ್ಣನೊಬ್ಬನೇ ರಣರಂಗದಲ್ಲಿ ಮೂರು ಮಹಾರಥರನ್ನು ಎದುರಿಸಿದ ಅದ್ಭುತವನ್ನು ನಾವು ಅಲ್ಲಿ ನೋಡಿದೆವು.

ಫಲ್ಗುನಸ್ತು ಮಹಾಬಾಹುಃ ಕರ್ಣಂ ವೈಕರ್ತನಂ ರಣೇ |
ಸಾಯಕಾನಾಂ ಶತೇನೈವ ಸರ್ವಮರ್ಮಸ್ವತಾಡಯತ್ ॥ 64 ॥

ಮಹಾಬಾಹುವಾದ ಅರ್ಜುನನಾದರೋ ರಣರಂಗದಲ್ಲಿ ವೈಕರ್ತನನಾದ ಕರ್ಣನನ್ನು ನೂರು ಬಾಣಗಳಿಂದ ಎಲ್ಲ ಮರ್ಮಗಳಲ್ಲಿಯೂ ಹೊಡೆದನು.

ರುಧಿರೋಕ್ಷಿತಸರ್ವಾಂಗಃ ಸೂತಪುತ್ರಃ ಪ್ರತಾಪವಾನ್ |
ಶರೈಃ ಪಂಚಾಶತಾ ವೀರಃ ಫಲ್ಗುನಂ ಪ್ರತ್ಯವಿಧ್ಯತ |
ತಸ್ಯ ತಲ್ಲಾಘವಂ ದೃಷ್ಟ್ವಾ ನಾಮೃಷ್ಯತ ರಣೇಽರ್ಜುನಃ ॥ 65 ॥

ಸರ್ವಾಂಗಗಳಿಂದ ರಕ್ತವು ಸೋರುತ್ತಿದ್ದ ಪ್ರತಾಪಶಾಲಿಯೂ ಮತ್ತು ವೀರನೂ ಆದ ಕರ್ಣನು ಐವತ್ತು ಬಾಣಗಳಿಂದ ಅರ್ಜುನನನ್ನು ಹೊಡೆದನು. ಕರ್ಣನ ಕ್ಷಿಪ್ರತೆಯನ್ನು ನೋಡಿ ಅರ್ಜುನನು ಸಹಿಸಲಿಲ್ಲ.

ತತಃ ಪಾರ್ಥೋ ಧನುಶ್ಛಿತ್ತ್ವಾ ವಿವ್ಯಾಧೈನಂ ಸ್ತನಾಂತರೇ |

ಸಾಯಕೈರ್ನವಭಿರ್ವೀರಸ್ತ್ವರಮಾಣೋ ಧನಂಜಯಃ ॥ 66 ॥
ಆಗ ವೀರನೂ, ತ್ವರೆಯಿಂದ ಕೂಡಿದವನೂ ಆದ ಅರ್ಜುನನು ಕರ್ಣನ ಧನುಸ್ಸನ್ನು ಕತ್ತರಿಸಿ, ಒಂಬತ್ತು ಬಾಣಗಳಿಂದ ಅವನನ್ನು ಹೊಡೆದನು.
ವಧಾರ್ಥಂ ಚಾಸ್ಯ ಸಮರೇ ಸಾಯಕಂ ಸೂರ್ಯವರ್ಚಸಮ್ |
ಚಿಕ್ಷೇಪ ತ್ವರಯಾ ಯುಕ್ತಸ್ತ್ವರಾಕಾಲೇ ಧನಂಜಯಃ ॥ 67 ॥
ಧನಂಜಯನು ತ್ವರೆಯನ್ನು ಮಾಡಬೇಕಾದ ಕಾಲದಲ್ಲಿ ತ್ವರೆಯಿಂದ ಕೂಡಿದವನಾಗಿ ಸೂರ್ಯನಂತೆ ಪ್ರಕಾಶಮಾನವಾದ ಒಂದು ಬಾಣವನ್ನು ಕರ್ಣನ ವಧೆಯನ್ನು ಉದ್ದೇಶಿಸಿ ಅವನ ಮೇಲೆ ಪ್ರಯೋಗಿಸಿದನು.
ತಮಾಪತಂತಂ ವೇಗೇನ ದ್ರೌಣಿಶ್ಚಿಚ್ಛೇದ ಸಾಯಕಮ್ |
ಅರ್ಧಚಂದ್ರೇಣ ತೀಕ್ಷ್ಣೇನ ಸ ಛಿನ್ನಃ ಪ್ರಾಪತದ್ ಭುವಿ ॥ 68 ॥
ಕರ್ಣನ ಕಡೆಗೆ ವೇಗವಾಗಿ ಹೋಗುತ್ತಿದ್ದ ಆ ಬಾಣವನ್ನು ಅಶ್ವತ್ಥಾಮರು ತೀಕ್ಷ್ಣವಾದ ಅರ್ಧಚಂದ್ರದಿಂದ ಕತ್ತರಿಸಿದರು. ಆ ಬಾಣವು ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಿತು.
ಅಥಾನ್ಯದ್ ಧನುರಾದಾಯ ಸೂತಪುತ್ರಃ ಪ್ರತಾಪವಾನ್ |
ಸಾಯಕೈರ್ಬಹುಸಾಹಸ್ರೈಶ್ಛಾದಯಾಮಾಸ ಪಾಂಡವಮ್ ॥ 70 ॥
ಆಗ ಪ್ರತಾಪಶಾಲಿಯಾದ ಸೂತಪುತ್ರನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಅನೇಕ ಸಹಸ್ರ ಬಾಣಗಳನ್ನು ಪ್ರಯೋಗಿಸಿ ಅರ್ಜುನನನ್ನು ಮುಚ್ಚಿದನು.
ತಾಂ ಶಸ್ತ್ರವೃಷ್ಟಿಮತುಲಾಂ ಕರ್ಣಚಾಪಸಮುತ್ಥಿತಾಮ್ |
ವ್ಯಧಮತ್ ಸಾಯಕೈಃ ಪಾರ್ಥಃ ಶಲಭಾನಿವ ಮಾರುತಃ ॥ 71 ॥
ಕರ್ಣನ ಧನುಸ್ಸಿನಿಂದ ಹೊರಹೊಮ್ಮಿದ ಅಸದೃಶವಾದ ಬಾಣದ ಮಳೆಯನ್ನು ಅರ್ಜುನನು ವಾಯುವು ಪತಂಗಗಳನ್ನು ಹಾರಿಸುವಂತೆ ತನ್ನ ಬಾಣಗಳಿಂದ ನಾಶಗೊಳಿಸಿದನು.
ಛಾದಯಾಮಾಸ ಚ ತದಾ ಸಾಯಕೈರರ್ಜುನೋ ರಣೇ |
ಪಶ್ಯತಾಂ ಸರ್ವಯೋಧಾನಾಂ ದರ್ಶಯನ್ ಪಾಣಿಲಾಘವಮ್ ॥73॥
ಆಗ ಅರ್ಜುನನು ತನ್ನ ಹಸ್ತಲಾಘವವನ್ನು ತೋರಿಸುತ್ತಾ, ಸರ್ವಯೋಧರು ನೋಡುತ್ತಿರುವಂತೆಯೇ ಕರ್ಣನನ್ನು ತನ್ನ ಬಾಣಗಳಿಂದ ಮುಚ್ಚಿದನು.
ಕರ್ಣೋಽಪಿ ದ್ವಿಷತಾಂ ಹಂತಾ ಛಾದಯಾಮಾಸ ಫಲ್ಗುನಮ್ |
ಸಾಯಕೈರ್ಬಹುಸಾಹಸ್ರೈಃ ಕೃತಪ್ರತಿಕೃತೇಪ್ಸಯಾ ॥ 74 ॥
ಶತ್ರುಸಂಹಾರಕನಾದ ಕರ್ಣನೂ ಸಹ ಅರ್ಜುನನು ಮಾಡಿದುದಕ್ಕೆ ಪ್ರತಿಯಾಗಿ ಮಾಡಲು ಬಯಸಿ ಅನೇಕ ಸಹಸ್ರಬಾಣಗಳಿಂದ ಅರ್ಜುನನನ್ನು ಮುಚ್ಚಿಹಾಕಿದನು.
ತೌ ವೃಷಾವಿವ ನರ್ದಂತೌ ನರಸಿಂಹೌ ಮಹಾರಥೌ |
ಸಾಯಕೌಘಪ್ರತಿಚ್ಛನ್ನಂ ಚಕ್ರತುಃ ಖಮಜಿಹ್ಮಗೈಃ |
ಅದೃಶ್ಯೌ ಚ ಶರೌಘೈಸ್ತೌ ನಿಘ್ನತಾಮಿತರೇತರಮ್ ॥ 75 ॥
ವೃಷಭಗಳಂತೆ ಗರ್ಜಿಸುತ್ತಾ ಮಹಾರಥರೂ, ನರಸಿಂಹರೂ ಆದ ಅವರು ಅಂತರಿಕ್ಷವನ್ನು ನೇರವಾಗಿ ಸಾಗುವ ಬಾಣಗಳ ಸಮೂಹದಿಂದ ಮುಚ್ಚಿಹಾಕಿದರು ಮತ್ತು ಪರಸ್ಪರವಾಗಿ ಬಾಣಗಳನ್ನು ಪ್ರಯೋಗಿಸಿ ಅದೃಶ್ಯರನ್ನಾಗಿ ಮಾಡಿದರು.
ಪಾರ್ಥೋಽಹಮಸ್ಮಿ ತಿಷ್ಠ ತ್ವಂ ಕರ್ಣೋಽಹಂ ತಿಷ್ಠ ಫಲ್ಗುನ |
ಇತ್ಯೇವಂ ತರ್ಜಯಂತೌ ತೌ ವಾಕ್ಶಲ್ಯೈಸ್ತುದತಾಂ ತಥಾ ॥ 76 ॥
ನಾನು ಅರ್ಜುನ ನಿಲ್ಲು, ನಿಲ್ಲು. ನಾನು ಕರ್ಣ ಅರ್ಜುನನೇ ನಿಲ್ಲು, ನಿಲ್ಲು ಎಂದು ಹೆದರಿಸುತ್ತಾ ವಾಗ್ಬಾಣಗಳಿಂದ ಪರಸ್ಪರವಾಗಿ ಹಿಂಸಿಸಿದರು.
ಯುಧ್ಯೇತಾಂ ಸಮರೇ ವೀರೌ ಚಿತ್ರಂ ಲಘು ಚ ಸುಷ್ಠು ಚ |
ಪ್ರೇಕ್ಷಣೀಯೌ ಚಾಭವತಾಂ ಸರ್ವಯೋಧಸಮಾಗಮೇ ॥ 77 ॥
ವೀರರಾದ ಅವರಿಬ್ಬರೂ ರಣರಂಗದಲ್ಲಿ ವಿಚಿತ್ರವಾದ, ಕ್ಷಿಪ್ರವಾದ ಮತ್ತು ಚೆನ್ನಾದ ಯುದ್ಧವನ್ನು ಮಾಡಿ ಸರ್ವಯೋಧರ ಸಮೂಹದಲ್ಲಿ ಸುಂದರವಾಗಿ ಕಂಡರು.
ಪ್ರಶಸ್ಯಮಾನೌ ಸಮರೇ ಸಿದ್ಧಚಾರಣವಾತಿಕೈಃ |
ಅಯುಧ್ಯೇತಾಂ ಮಹಾರಾಜ ಪರಸ್ಪರವಧೈಷಿಣೌ ॥ 78 ॥
ಎಲೈ ಮಹಾರಾಜನೇ, ರಣರಂಗದಲ್ಲಿ ಪರಸ್ಪರ ವಧೆಯನ್ನು ಬಯಸಿದ ಅವರಿಬ್ಬರೂ ಆಕಾಶಗಾಮಿಗಳಾದ ಸಿದ್ಧ-ಚಾರಣರಿಂದ ಮತ್ತು ವಾಯುಗಾಮಿಗಳಿಂದ ಪ್ರಶಂಸಿಸಲ್ಪಟ್ಟು ಯುದ್ಧವನ್ನು ಮಾಡಿದರು.
ತತೋ ದುರ್ಯೋಧನೋ ರಾಜಂಸ್ತಾವಕಾನಭ್ಯಭಾಷತ |
ಯತ್ತಾ ರಕ್ಷತ ರಾಧೇಯಂ ನಾಹತ್ವಾ ಸಮರೇಽರ್ಜುನಮ್ |
ನಿವರ್ತಿಷ್ಯತಿ ರಾಧೇಯ ಇತಿ ಮಾಮುಕ್ತವಾನ್ ವೃಷಃ ॥ 79 ॥
ಎಲೈ ರಾಜನೇ, ಆಗ ದುರ್ಯೋಧನನು ನಿನ್ನವರನ್ನು ಕುರಿತು ಕರ್ಣನನ್ನು ಎಚ್ಚರಿಕೆಯಿಂದ ರಕ್ಷಿಸಿ. ರಣರಂಗದಲ್ಲಿ ಅರ್ಜುನನನ್ನು ಕೊಲ್ಲದೆ ನಾನು ಹಿಂದಿರುಗುವುದಿಲ್ಲ ಎಂದು ಕರ್ಣನು ನನಗೆ ಹೇಳಿದ್ದಾನೆ ಎಂದು ಹೇಳಿದನು.
ಏತಸ್ಮಿನ್ನಂತರೇ ರಾಜನ್ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ |

ಆಕರ್ಣಮುಕ್ತೈರಿಷುಭಿಃ ಕರ್ಣಸ್ಯ ಚತುರೋ ಹಯಾನ್ |
ಅನಯನ್ಮೃತ್ಯುಲೋಕಾಯ ಚತುರ್ಭಿಃ ಸಾಯಕೋತ್ತಮೈಃ ॥ 80 ॥
ಎಲೈ ರಾಜನೇ, ಈ ಮಧ್ಯದಲ್ಲಿ ಕರ್ಣನ ಪರಾಕ್ರಮವನ್ನು ನೋಡಿ ಅರ್ಜುನನು ಹೆದೆಯನ್ನು ಕಿವಿಯವರೆಗೂ ಎಳೆದು ಪ್ರಯೋಗಿಸಿದ ನಾಲ್ಕು ಶ್ರೇಷ್ಠವಾದ ಬಾಣಗಳಿಂದ ಕರ್ಣನ ರಥದ ನಾಲ್ಕು ಅಶ್ವಗಳನ್ನು ಮೃತ್ಯುಲೋಕಕ್ಕೆ ಕಳುಹಿಸಿದನು.
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾಹರತ್ |
ಛಾದಯಾಮಾಸ ಚ ಶರೈಸ್ತವ ಪುತ್ರಸ್ಯ ಪಶ್ಯತಃ ॥ 81 ॥
ಕರ್ಣನ ರಥದ ಸಾರಥಿಯನ್ನು ಒಂದು ಭಲ್ಲದಿಂದ ರಥನೀಡದಿಂದ ಕೆಡವಿ ನಿನ್ನ ಪುತ್ರನು ನೋಡುತಿತರುವಂತೆಯೇ ಕರ್ಣನನ್ನು ಬಾಣಗಳಿಂದ ಮುಚ್ಚಿಹಾಕಿದನು.
ಸ ಛಾದ್ಯಮಾನಃ ಸಮರೇ ಹತಾಶ್ವೋ ಹತಸಾರಥಿಃ |
ಮೋಹಿತಃ ಶರಜಾಲೇನ ಕರ್ತವ್ಯಂ ನಾಭ್ಯಪದ್ಯತ ॥ 82 ॥
ತನ್ನ ಅಶ್ವಗಳನ್ನೂ ಮತ್ತು ಸಾರಥಿಯನ್ನು ಕಳೆದುಕೊಂಡು ಬಾಣಗಳ ಸಮೂಹದಿಂದ ಮುಚ್ಚಲ್ಪಟ್ಟ ಕಣರ್ನು ಮೌಢ್ಯವನ್ನು ಹೊಂದಿ ರಣರಂಗದಲ್ಲಿ ಏನು ಮಾಡಬೇಕೆಂದು ತಿಳಿಯಲಿಲ್ಲ.
ತಂ ತಥಾ ವಿರಥಂ ದೃಷ್ಟ್ವಾ ರಥಮಾರೋಪ್ಯ ಸ್ವಂ ತದಾ |
ಅಶ್ವತ್ಥಾಮಾ ಮಹಾರಾಜ ಭೂಯೋಽರ್ಜುನಮಯೋಧಯತ್ ॥83॥
ಕರ್ಣನು ಹಾಗೆ ರಥಹೀನನಾಗಿರುವುದನ್ನು ನೋಡಿ ಎಲೈ ಮಹಾರಾಜನೇ, ಅಶ್ವತ್ಥಾಮರು ಅವನನ್ನು ತಮ್ಮ ರಥದಲ್ಲಿ ಏರಿಸಿಕೊಂಡು ಪುನಃ ಅರ್ಜುನನೊಡನೆ ಯುದ್ಧವನ್ನು ಮಾಡಿದರು.
ಮದ್ರರಾಜಸ್ತು ಕೌಂತೇಯಮವಿದ್ಧ್ಯತ್ ತ್ರಿಂಶತಾ ಶರೈಃ |
ಶಾರದ್ವತಸ್ತು ವಿಂಶತ್ಯಾ ವಾಸುದೇವಂ ಸಮಾರ್ಪಯತ್ |
ಧನಂಜಯಂ ದ್ವಾದಶಭಿರಾಜಘಾನ ಶಿಲೀಮುಖೈಃ ॥ 84 ॥
ಮದ್ರರಾಜನಾದ ಶಲ್ಯನು ಅರ್ಜುನನನ್ನು ಮೂವತ್ತು ಬಾಣಗಳಿಂದ ಹೊಡೆದನು. ಕೃಪರು ಕೃಷ್ಣನನ್ನು ಇಪ್ಪತ್ತು ಬಾಣಗಳಿಂದ ಹೊಡೆದು ಅರ್ಜುನನನ್ನು ತೀಕ್ಷ್ಣವಾದ ಹನ್ನೆರಡು ಬಾಣಗಳಿಂದ ಹೊಡೆದರು.
ಚತುರ್ಭಿಃ ಸಿಂಧುರಾಜಶ್ಚ ವೃಷಸೇನಶ್ಚ ಸಪ್ತಭಿಃ |
ಪೃಥಕ್ಪೃಥಕ್ ಮಹಾರಾಜ ಕೃಷ್ಣಪಾರ್ಥಾವವಿದ್ಧ್ಯತಾಮ್ ॥ 85 ॥
ಎಲೈ ಮಹಾರಾಜನೇ, ಸೈಂಧವನು ನಾಲ್ಕು ಬಾಣಗಳಿಂದಲೂ, ವೃಷಸೇನನು ಏಳು ಬಾಣಗಳಿಂದಲೂ ಕೃಷ್ಣಾರ್ಜುನರನ್ನು ಬೇರೆ ಬೇರೆಯಾಗಿ ಹೊಡೆದರು.
ತಥೈವ ತಾನ್ ಪ್ರತ್ಯವಿದ್ಧ್ಯತ್ ಕುಂತೀಪುತ್ರೋ ಧನಂಜಯಃ |
ದ್ರೋಣಪುತ್ರಂ ಚತುಃಷಷ್ಟ್ಯಾ ಮದ್ರರಾಜಂ ಶತೇನ ಚ ॥ 86 ॥
ಸೈಂಧವಂ ದಶಭಿರ್ಭಲ್ಲೈರ್ವೃಷಸೇನಂ ತ್ರಿಭಿಃ ಶರೈಃ |
ಶಾರದ್ವತಂ ಚ ವಿಂಶತ್ಯಾ ವಿದ್ಧ್ವಾ ಪಾರ್ಥಃ ಸಮುನ್ನದತ್ ॥ 87 ॥
ಕುಂತೀಪುತ್ರನಾದ ಅರ್ಜುನನೂ ಸಹ ಅವರನ್ನು ಹಾಗೆಯೇ ಹೊಡೆದನು. ದ್ರೋಣಪುತ್ರರಾದ ಅಶ್ವತ್ಥಾಮರನ್ನು ಅರವತ್ನಾಲ್ಕು ಬಾಣಗಳಿಂದಲೂ, ಮದ್ರರಾಜನಾದ ಶಲ್ಯನನ್ನು ನೂರು ಬಾಣಗಳಿಂದಲೂ, ಸೈಂಧವನನ್ನು ಹತ್ತು ಭಲ್ಲಗಳಿಂದಲೂ, ವೃಷಸೇನನನ್ನು ಮೂರು ಬಾಣಗಳಿಂದಲೂ, ಕೃಪರನ್ನು ಇಪ್ಪತ್ತು ಬಾಣಗಳಿಂದಲೂ ಹೊಡೆದು ಅರ್ಜುನನು ಸಿಂಹನಾದವನ್ನು ಮಾಡಿದನು.
ತೇ ಪ್ರತಿಜ್ಞಾಪ್ರತೀಘಾತಮಿಚ್ಛಂತಃ ಸವ್ಯಸಾಚಿನಃ |
ಸಹಿತಾಸ್ತ್ವರಿತಾಸ್ತೂರ್ಣಮಭಿಪೇತುರ್ಧನಂಜಯಮ್ ॥ 88 ॥
ನಿನ್ನವರಾದ ಅವರು ಅರ್ಜುನನ ಪ್ರತಿಜ್ಞೆಯ ಭಂಗವನ್ನು ಆಶಿಸುತ್ತಾ ಎಲ್ಲರೂ ಒಟ್ಟಾಗಿ, ಶೀಘ್ರವಾಗಿ ಅರ್ಜುನನ ಮೇಲೆ ಎರಗಿದರು.
ಅಥಾರ್ಜುನಃ ಸರ್ವತೋ ವಾರುಣಾಸ್ತ್ರಂ
ಪ್ರಾದುಶ್ಚಕ್ರೇ ತ್ರಾಸಯನ್ ಧಾರ್ತರಾಷ್ಟ್ರಾನ್ |
ತಂ ಪ್ರತ್ಯುದೀಯುಃ ಕುರವಃ ಪಾಂಡುಸೂನುಂ
ರಥೈರ್ಮಹಾರ್ಹೈಃ ಶರವರ್ಷಾಣ್ಯವರ್ಷನ್ ॥ 89 ॥
ಆಗ ಅರ್ಜುನನು ಧೃತರಾಷ್ಟ್ರ ಪುತ್ರರನ್ನು ಹೆದರಿಸುವವನಾಗಿ ಎಲ್ಲ ಕಡೆಯಲ್ಲಿಯೂ ವಾರುಣಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದನು. ಕೌರವರು ಶ್ರೇಷ್ಠವಾದ ರಥಗಳಿಂದ ಅವನ ಕಡೆಗೆ ಸಾಗಿ ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತತಸ್ತು ತಸ್ಮಿಂಸ್ತುಮುಲೇ ಸಮುತ್ಥಿತೇ
ಸುದಾರುಣೇ ಭಾರತ ಮೋಹನೀಯೇ |
ನಾಮುಹ್ಯತ ಪ್ರಾಪ್ಯ ಸ ರಾಜಪುತ್ರಃ
ಕಿರೀಟಮಾಲೀ ವಿಸೃಜನ್ ಪೃಷತ್ಕಾನ್ ॥ 90 ॥
ಎಲೈ ಭಾರತನೇ, ಆಗ ಮೌಢ್ಯವನ್ನು ಉಂಟುಮಾಡುವ ಘೋರವೂ, ತೀವ್ರವೂ ಆದ ಯುದ್ಧವು ನಡೆಯುತ್ತಿರಲು ರಾಜಪುತ್ರನೂ, ಕಿರೀಟಮಾಲಿಯೂ ಆದ ಅರ್ಜುನನು ಬಾಣಗಳನ್ನು ಪ್ರಯೋಗಿಸುತ್ತಾ ಮೌಢ್ಯಕ್ಕೆ ಒಳಗಾಗಲಿಲ್ಲ.
ರಾಜ್ಯಪ್ರೇಪ್ಸುಃ ಸವ್ಯಸಾಚೀ ಕುರೂಣಾಂ

ಸ್ಮರನ್ ಕ್ಲೇಶಾನ್ ದ್ವಾದಶವರ್ಷವೃತ್ತಾನ್ |
ಗಾಂಡೀವಮುಕ್ತೈರಿಷುಭಿರ್ಮಹಾತ್ಮಾ
ಸರ್ವಾ ದಿಶೋ ವ್ಯಾವೃಣೋದಪ್ರಮೇಯೈಃ ॥ 91 ॥
ಕುರುಗಳ ರಾಜ್ಯವನ್ನು ಪಡೆಯಲು ಇಚ್ಛಿಸಿದ ಮಹಾತ್ಮನಾದ ಸವ್ಯಸಾಚಿಯಾದ ಅರ್ಜುನನು ಹನ್ನೆರಡು ವರ್ಷಗಳ ಕಾಲ ಅನುಭವಿಸಿದ ಕ್ಲೇಶಗಳನ್ನು ಸ್ಮರಿಸುತ್ತಾ, ಗಾಂಡೀವ ಧನುಸ್ಸಿನಿಂದ ಹೊರಹೊಮ್ಮಿದ ಅಸಂಖ್ಯಾತ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿದನು.
ಪ್ರದೀಪ್ತೋಲ್ಕಮಭವಚ್ಚಾಂತರಿಕ್ಷಂ
ದೇಹೇಷು ಭೂರೀಣ್ಯಪತನ್ ವಯಾಂಸಿ |
ಯತ್ ಪಿಂಗಲಜ್ಯೇನ ಕಿರೀಟಮಾಲೀ
ಕ್ರುದ್ಧೋ ರಿಪೂನಾಜಗವೇನ ಹಂತಿ ॥ 92 ॥
ಪಿಂಗಲವರ್ಣದ ಹೆದೆಯನ್ನು ಹೊಂದಿದ ತನ್ನ ಗಾಂಡೀವ ಧನುಸ್ಸಿನಿಂದ ಅರ್ಜುನನು ಕ್ರುದ್ಧನಾಗಿ ಶತ್ರುವನ್ನು ಹೊಡೆಯುವಾಗ ಆಕಾಶವು ಜ್ವಲಿಸುವ ಉಲ್ಕೆಗಳಿಂದ ತುಂಬಿದಂತೆ ಕಂಡುಬಂದಿತು. ಮೃತಶರೀರಗಳಲ್ಲಿ ಅನೇಕ ಮಾಂಸಾಹಾರಿ ಪಕ್ಷಿಗಳು ಎರಗಿದವು.
ಕಿರೀಟಮಾಲೀ ಮಹತಾ ಮಹಾಯಶಾಃ
ಶರಾಸನೇನಾಸ್ಯ ಶರಾನನೀಕಜಿತ್ |
ಹಯಪ್ರವೇಕೋತ್ತಮನಾಗಧೂರ್ಗತಾನ್-
ಕುರುಪ್ರವೀರಾನಿಷುಭಿರ್ನ್ಯಪಾತಯತ್ ॥ 93 ॥
ಮಹಾಕೀರ್ತಿವಂತನೂ, ಶತ್ರುಸೈನ್ಯವನ್ನು ಜಯಿಸುವವನೂ ಆದ ಕಿರೀಟ- ಮಾಲಿಯು ತನ್ನ ಶ್ರೇಷ್ಠವಾದ ಧನುಸ್ಸಿನಿಂದ ಬಾಣಗಳನ್ನು ಪ್ರಯೋಗಿಸಿ ರಣರಂಗದಲ್ಲಿ ನೆರೆದ ಶ್ರೇಷ್ಠವಾದ ಅಶ್ವಗಳನ್ನೂ, ಉತ್ತಮವಾದ ಗಜಗಳನ್ನೂ ಮತ್ತು ಕುರುವೀರರನ್ನೂ ಉರುಳಿಸಿದನು.
ಗದಾಶ್ಚ ಗುರ್ವೀಃ ಪರಿಘಾನಯಸ್ಮಯಾ-
ನಸೀಂಶ್ಚ ಶಕ್ತ್ಯಶ್ಚ ರಣೇ ನರಾಧಿಪಾಃ |
ಮಹಾಂತಿ ಶಸಶತ್ರಣಿ ಚ ಭೀಮದರ್ಶನಾಃ
ಪ್ರಗೃಹ್ಯ ಪಾರ್ಥಂ ಸಹಸಾಭಿದುದ್ರುವುಃ ॥ 94 ॥
ಭಯಂಕರ ಆಕಾರವುಳ್ಳ ರಾಜರು ದೊಡ್ಡ ಗದೆಗಳನ್ನೂ, ಕಬ್ಬಿಣದ ಒನಕೆಗಳನ್ನೂ, ಖಡ್ಗಗಳನ್ನೂ, ಶಕಿತಗಳನ್ನೂ, ಉತ್ತಮವಾದ ಶಸ್ತ್ರಗಳನ್ನೂ ಹಿಡಿದು ಅರ್ಜುನನ ಮೇಲೆ ಶೀಘ್ರವಾಗಿ ಎರಗಿದರು.
ಸ ತಾನುದೀರ್ಣಾನ್ ಸರಥಾಶ್ವವಾರಣಾನ್
ಪದಾತಿಸಂಘಾಂಶ್ಚ ಮಹಾಧನುರ್ಧರಃ |
ವಿಪನ್ನಸರ್ವಾಯುಧಜೀವಿತಾನ್ ರಣೇ
ಚಕಾರ ವೀರೋ ಯಮರಾಷ್ಟ್ರವರ್ಧನಾನ್ ॥ 95 ॥
ಮಹಾಧನುರ್ಧಾರಿಯಾದ ಆ ಅರ್ಜುನನು ರಥಾಶ್ವ-ಗಜಗಳ ಜೊತೆಯಲ್ಲಿ ತಮ್ಮ ಮೇಲೆ ಬರುತ್ತಿದ್ದ ಪದಾತಿ ಸಮೂಹಗಳನ್ನು ಸರ್ವಾಯುಧರಹಿತರನ್ನಾಗಿಯೂ, ಜೀವಿತ ರಹಿತರನ್ನಾಗಿಯೂ ಮಾಡಿ ಯಮರಾಷ್ಟ್ರವು ತುಂಬುವಂತೆ ಮಾಡಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿಂಶದಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಚತುಃಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರಮೂವತ್ತನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 26ನೇ ಅಧ್ಯಾಯ
ದುರ್ಯೋಧನೋ ದ್ರೋಣಮಾಹ ಸೈಂಧವಸ್ತ್ವದುಪೇಕ್ಷಯಾ |
ಪಾರ್ಥೇನ ನಿಹತೋ ಭೀಮಸಾತ್ಯಕಿಭ್ಯಾಂ ಚ ಮೇ ಬಲಮ್ ॥
ದುರ್ಯೋಧನ ದ್ರೋಣರಿಗೆ ಹೇಳಿದ `ನಿಮ್ಮ ಉಪೇಕ್ಷೆಯಿಂದಾಗ ಜಯದ್ರಥ ಅರ್ಜುನನಿಂದ ಹತನಾದ. ಭೀಮ ಮತ್ತು ಸಾತ್ಯಕಿಯರಿಂದ ನನ್ನ ಸೈನ್ಯವು ಪುಡಿಯಾಯಿತು.
ಪ್ರತಿಜ್ಞಾ ಚ ಪರಿತ್ಯಕ್ತಾ ಪಾಂಡವಸ್ನೇಹತಸ್ತ್ವಯಾ |
ಇತ್ಯುಕ್ತಃ ಕುಪಿತೋ ದ್ರೋಣಃ ಪ್ರತಿಜ್ಞಾಮಕರೋತ್ ತತಃ ॥
`ಪಾಂಡವರ ಮೇಲಿನ ಪ್ರೀತಿಯಿಂದ ನೀವು ನಿಮ್ಮ ಪ್ರತಿಜ್ಞೆಯನ್ನು ಕೈಬಿಟ್ಟಿರುವಿರಿ' ಹೀಗೆ ದುರ್ಯೋಧನನು ಹೇಳಿದಾಗ ದ್ರೋಣರು ಕುಪಿತರಾಗಿ ಪುನಃ ಪ್ರತಿಜ್ಞೆ ಮಾಡಿದರು.
ಇತಃ ಪರಂ ನೈವ ರಣಾದ್ ರಾತ್ರಾವಹನಿ ವಾ ಕ್ವಚಿತ್ |
ಗಚ್ಛೇಯಂ ನ ಚ ಮೋಕ್ಷ್ಯಾಮಿ ವರ್ಮ ಬದ್ಧಂ ಕಥಂಚನ ॥
ಇನ್ನು ಮುಂದೆ ನಾನು ರಾತ್ರಿಯಲ್ಲಾಗಲಿ, ಹಗಲಲ್ಲಿಯಾಗಲಿ ಯುದ್ಧವನ್ನು ಬಿಟ್ಟು ಶಿಬಿರಕ್ಕೆ ಹಿಂತಿರುಗಲಾರೆ. ತೊಟ್ಟ ಕವಚವನ್ನು ಯಾವ ಕಾರಣಕ್ಕಾಗಿಯಾಗಲಿ ಬಿಚ್ಚಿಕೊಳ್ಳಲಾರೆ.

ಮತ್ಪುತ್ರಶ್ಚ ತ್ವಯಾ ವಾಚ್ಯಃ ಪಾಂಚಾಲಾನ್ ನೈವ ಶೇಷಯೇಃ |
ಸದೌಹಿತ್ರಾನಿತೀತ್ಯುಕತ್ವ ವಿಜಗಾಹೇ ನಿಶಾಗಮೇ ॥
ಚಮೂಂ ಪರೇಷಾಮಭ್ಯಾಗಾದ್ ಧೃಷ್ಟದ್ಯುಮ್ನಸ್ತಮಾಶು ಚ |
ದ್ರೌಣಿದುರ್ಯೋಧನೌ ತತ್ರ ವಿರಥೀಕೃತ್ಯ ಮಾರುತಿಃ |
ದ್ರಾವಯಾಮಾಸ ತತ್ ಸೈನ್ಯಂ ಪಶ್ಯತಾಂ ಸರ್ವಭೂಭೃತಾಮ್ ॥
ನನ್ನ ಮಗನಿಗೂ ನೀನು ಹೇಳು. ಪಾಂಚಾಲರನ್ನೂ ದ್ರೌಪದಿಯ ಮಕ್ಕಳನ್ನೂ ಯಾರನ್ನೂ ಉಳಿಸಬೇಡ ಎಂದು. ಹೀಗೆ ಹೇಳಿದ ದ್ರೋಣರು ರಾತ್ರಿಯಾದಾಗಲೂ ಪಾಂಡವರ ಸೈನ್ಯವನ್ನು ಹೊಕ್ಕರು. ಅವರನ್ನು ಬೇಗನೆ ಧೃಷ್ಟದ್ಯುಮ್ನ ಎದುರಿಸಿದನು. ಅಶ್ವತ್ಥಾಮ-ದುರ್ಯೋಧನರನ್ನು ಭೀಮನು ವಿರಥರನ್ನಾಗಿ ಮಾಡಿ ಅವರ ಸೈನ್ಯವನ್ನು ಎಲ್ಲ ರಾಜರು ನೋಡುತ್ತಿದ್ದಂತೆಯೇ ಓಡಿಸಿದನು.
ಅಕ್ಷೋಹಿಣ್ಯಸ್ತು ಸಪ್ತೈವ ಸೇನಯೋರುಭಯೋರಪಿ |
ಹತಾಸ್ತಾಸಾಂ ಚ ಭೀಮೇನ ತಿಸ್ರೋ ದ್ವೇ ಫಲ್ಗುನೇನ ಚ ॥
ಎರಡೂ ಸೈನ್ಯಗಳಲ್ಲಿ ಒಟ್ಟು ಏಳು ಅಕ್ಷೋಹಿಣಿ ಸೈನ್ಯಗಳು ಹತವಾದುವು. ಅವುಗಳಲ್ಲಿ ಭೀಮನಿಂದ ಮೂರು, ಅರ್ಜುನನಿಂದ ಎರಡು ಹತವಾದುವು.
ಸೌಭದ್ರಸಾತ್ಯಕಿಮುಖ್ಯೈಸ್ತನ್ಮಧ್ಯೇ ಷೋಡಶಾಂಶಕಃ |
ಹೈಡಿಂಬಪಾರ್ಷತಮುಖ್ಯೈಸ್ತ್ರಯಾಚ್ಚ ದಶಮಾಂಶಕಃ ॥
ಅವುಗಳಲ್ಲಿ ಅರ್ಜುನನಿಂದ ಹತವಾದ ಸೈನ್ಯದಲ್ಲಿ ಹದಿನಾರನೆ ಒಂದಂಶದಷ್ಟು ಅಭಿಮನ್ಯು ಸಾತ್ಯಕಿ ಮುಂತಾದವರಿಂದ ಹತವಾಯಿತು. ಭೀಮನಿಂದ ಹತವಾದ ಮೂರು ಅಕ್ಷೋಹಿಣಿಯಲ್ಲಿ ಹತ್ತನೆ ಒಂದಂಶ ಘಟೋತ್ಕಚ ಧೃಷ್ಟದ್ಯುಮ್ನರಿಂದ ಹತವಾದವು.
ಭೀಷ್ಮದ್ರೋಣದ್ರೌಣಿಭಿಶ್ಚ ದ್ವೇ ಸಮಂ ನಿಹತೇ ತದಾ |
ತದನ್ಯೈರ್ಮಿಲಿತೈಃ ಸರ್ವೈಸ್ತಚ್ಚತುರ್ಥಾಂಶ ಏವ ಚ ॥
ಭೀಷ್ಮ-ದ್ರೋಣ-ಅಶ್ವತ್ಥಾಮರಿಂದ ಒಟ್ಟು ಎರಡು ಅಕ್ಷೋಹಿಣಿ ಸೈನ್ಯಗಳು ಹತವಾದವು. ಅವರು ಪರಸ್ಪರ ಸಮಾನವಾಗಿಯೇ ಸೈನ್ಯಗಳನ್ನು ನಾಶಮಾಡಿದರು. ಉಳಿದವರೆಲ್ಲರೂ ಸೇರಿ ಅದರ ನಾಲ್ಕನೇ ಒಂದಂಶವನ್ನು ನಾಶಮಾಡಿದರು.
ತತೋ ರಾತ್ರೌ ಪಂಚಭಿಶ್ಚ ಪಾರ್ಥಾಃ ಷಡ್ಭಿಶ್ಚ ಕೌರವಾಃ |
ಅಕ್ಷೋಹಿಣೀಭಿಃ ಸಂವ್ಯೂಹ್ಯ ಯುದ್ಧಂ ಚಕ್ರುಃ ಸುದಾರುಣಮ್ ॥
ಬಳಿಕ ರಾತ್ರಿಯಲ್ಲಿ ಪಾಂಡವರು ಐದು ಅಕ್ಷೋಹಿಣಿ ಸೈನ್ಯದಿಂದಲೂ ಕೌರವರು ಆರು ಅಕ್ಷೋಹಿಣಿ ಸೈನ್ಯದಿಂದಲೂ ವ್ಯೂಹರಚನೆ ಮಾಡಿ ಬಲು ಭಯಂಕರವಾದ ಯುದ್ಧವನ್ನು ನಡೆಸಿದರು.
ಭೀಮಂ ಸೇನಾಂ ದ್ರಾವಯಂತಂ ಪುನಃ ಕರ್ಣಃ ಸಮಾಸದತ್ |
ಸ ಕರ್ಣಪುತ್ರೋ ಭೀಮೋ ದುಷ್ಕರ್ಣಂ ಕರ್ಣಮೇವ ಚ ॥
ದುರ್ಯೋಧನಸ್ಯಾವರಜೌ ನಿಷ್ಪಿಪೇಷ ಪದಾ ಕ್ಷಣಾತ್ |
ರಥಾಶ್ವಧ್ವಜಸೂತೈಶ್ಚ ಸಹಿತೌ ನ ವ್ಯದೃಶ್ಯತಾಮ್ ॥
ಭೀಮನು ಸೈನ್ಯವನ್ನು ಓಡಿಸುತ್ತಿದ್ದಾಗ ಪುನಃ ಕರ್ಣನು ಬಂದನು. ಭೀಮನು ಕರ್ಣನ ಮುಂದೆಯೇ ದುರ್ಯೋಧನನ ತಮ್ಮಂದಿರಾದ ದುಷ್ಕರ್ಣ ಕರ್ಣರನ್ನು ಕಾಲಿಂದ ತುಳಿದು ಕ್ಷಣದಲ್ಲಿ ಪುಡಿಮಾದಿದನು. ಅವರಿಬ್ಬರೂ ರಥ, ಕುದುರೆ, ಧ್ವಜ ಸಾರಥಿಗಳಿಂದ ಸಮೇತರಾಗಿ ನಾಶಹೊಂದಿದರು.
ನಿರಾಯುಧೋಽಹಮಿತಿ ಮಾಂ ತ್ವಮಾತ್ಥ ಪರುಷಂ ವಚಃ |
ನಿರಾಯುಧಃ ಪದೈವಾಹಂ ತ್ವಾಂ ಹಂತುಮಶಕಂ ತದಾ ॥
`ಕರ್ಣ! ನಿರಾಯುಧನೆಂದು ತಿಳಿದು ನನಗೆ ಅಂದು ನೀನು ನಿಷ್ಠುರವಾದ ಮಾತನ್ನಾಡಿರುವಿ. ಆದರೆ ನಿರಾಯುಧನಾದರೂ ನಾನು ನಿನ್ನನ್ನು ಆಗ ಕಾಲಿಂದ ತುಳಿದೇ ಕೊಲ್ಲಲು ಶಕ್ತನಾಗಿದ್ದೆ'.
ಇತಿ ಕರ್ಣಸ್ಯ ತೌ ಭೀಮಃ ಸಂಜ್ಞಯಾ ಜ್ಞಾಪಯನ್ ಭುವಿ |
ಪದಾ ಪಿಪೇಷ ಕಾಳಿಂಗಂ ಮುಷ್ಟಿನೈವ ಜಘಾನ ಹ ॥
ಹೀಗೆ ಕರ್ಣನಿಗೆ ಸೂಚನೆ ನೀಡುವುದಕ್ಕಾಗಿ ಭೀಮ ದುಷ್ಕರ್ಣ ಕರ್ಣರನ್ನು ನೆಲದ ಮೇಲೆ ಕಾಲಿಂದ ತುಳಿದು ಪುಡಿಗೈದ. ಕಾಲಿಂಗನನ್ನು ಮುಷ್ಟಿಯಿಂದಲೇ ಹೊಡೆದು ಕೊಂದ.
ಮುಷ್ಟಿನಾ ತ್ವದ್ವಧಾಯಾಹಂ ಸಮರ್ಥ ಇತಿ ಕಿಂ ವದೇ |
ತಸ್ಮಾನ್ಮಯಾ ರಕ್ಷಿತಸ್ತ್ವಮಿತಿ ಜ್ಞಾಪಯಿತುಂ ಪ್ರಭುಃ |
ಸಾಶ್ವಸೂತಧ್ವಜರಥಃ ಕಾಳಿಂಗೋ ಮುಷ್ಟಿಚೂರ್ಣಿತಃ ॥
`ಮುಷ್ಟಿಯಿಂದಲೂ ನಿನ್ನ ವಧೆ ಮಾಡಲು ನಾನು ಸಮರ್ಥನೆಂದು ಬೇರೇನು ಹೇಳಬೇಕು? ಅದರಿಂದ ಅಂದು ನಾನು ನಿನ್ನನ್ನು ಕೊಲ್ಲದೆ ಬಿಟ್ಟೆನಷ್ಟೆ' ಎಂದು ತಿಳಿಸಲು ಸರ್ವಶಕ್ತನಾದ ಭೀಮ ಕುದುರೆ, ಸಾರಥಿ, ಧ್ವಜ, ರಥಗಳಿಂದ ಸಮೇತನಾದ ಕಾಲಿಂಗನನ್ನು ಮುಷ್ಟಿಯಿಂದ ಪುಡಿಮಾಡಿದನು.
ಕೇತುಮಾಂಶ್ಚ ಪಿತಾ ತಸ್ಯ ಶಕ್ರದೇವಃ ಶ್ರುತಾಯುಧಃ |
ಅಕ್ಷೋಹಿಣ್ಯಾ ಸೇನಯಾ ಚ ಸಹ ಭೀಮೇನ ಪಾತಿತಾಃ ॥
ಖಡ್ಗಯುದ್ಧೇ ಪುರಾ ಭೀಷ್ಮೇ ಸೇನಾಪತ್ಯಂ ಪ್ರಕುರ್ವತಿ |

ಕರ್ಣಾನುಜಾನ್ ಧ್ರುವಾದ್ಯಾಂಶ್ಚ ಬಹೂನ್ ಜಘ್ನೇ ಸ ವೈ ನಿಶಿ |
ಹಿಂದೆ ಭೀಷ್ಮರು ಸೇನಾಪತ್ಯ ಮಾಡುತ್ತಿದ್ದಾಗ ಖಡ್ಗಯುದ್ಧದಲ್ಲಿ ಕಾಲಿಂಗನ ತಂದೆಯಾದ ಕೇತುಮಾನ್ ಶಕ್ರದೇವ ಶ್ರುತಾಯುಧ ಇವರನ್ನು ಅಕ್ಷೋಹಿಣೀ ಸೈನ್ಯದೊಂದಿಗೆ ಭೀಮನೇ ಸಂಹರಿಸಿದ್ದನು. ಈಗ ರಾತ್ರಿ ಯುದ್ಧದಲ್ಲಿ ಕಾಲಿಂಗನನ್ನೂ ಕೊಂದನು. ಬಳಿಕ ಕರ್ಣನ ತಮ್ಮಂದಿರಾದ ಧ್ರುವ ಮುಂತಾದ ಅನೇಕ ವೀರರನ್ನೂ ಸಂಹರಿಸಿದನು.
ಸಂಜ್ಞಾಂ ಭೀಮಕೃತಾಂ ಜ್ಞಾತ್ವಾ ಶಕ್ತಿಂ ಚಿಕ್ಷೇಪ ಚಾಪರಾಮ್ |
ಕರ್ಣಃ ಶಕ್ತಿರ್ಮಯಾ ದಿವ್ಯಾ ನ ಮುಕ್ತಾ ತೇನ ಜೀವಸಿ ||
ಇತಿ ಜ್ಞಾಪಯಿತುಂ ತಾಂ ತು ಜ್ಞಾತ್ವಾ ಭೀಮಃ ಕ್ಷಣಾತ್ ತದಾ |
ಖಮುತ್ಪತ್ಯ ಗೃಹೀತ್ವಾ ಚ ಕರ್ಣೇ ಚಿಕ್ಷೇಪ ಸತ್ವರಃ ||
ಭೀಮನು ನೀಡಿದ ಸೂಚನೆಯನ್ನು ಗ್ರಹಿಸಿ ಕರ್ಣ ಬೇರೆ ಸಾಮಾನ್ಯವಾದ ಒಂದು ಶಕ್ತ್ಯಾಯುಧವನ್ನು ಭೀಮನ ಮೇಲೆ ಎಸೆದ. `ನಾನು ನಿನ್ನ ಮೇಲೆ ಇಂದ್ರನ ದಿವ್ಯ ಶಕ್ತ್ಯಾಯುಧವನ್ನು ಪ್ರಯೋಗಿಸಲಿಲ್ಲ. ಅದರಿಂದ ನೀನು ಬದುಕಿರುವಿ' ಎಂದು ಸೂಚಿಸುವ ಅಭಿಪ್ರಾಯ ಕರ್ಣನಿಗಿದ್ದಿತು. ಅದನ್ನು ತಿಳಿದು ಭೀಮ ಕ್ಷಣದಲ್ಲಿ ಆಕಾಶಕ್ಕೆ ನೆಗೆದು ಶಕ್ತ್ಯಾಯುಧವನ್ನು ಹಿಡಿದು ಕರ್ಣನ ಮೇಲೆಯೇ ಬೀಳಿಸಿದ.
ಯದಿ ತ್ವಯಾ ತದಾ ಮುಕ್ತಾ ಶಕ್ತಿಸ್ತತ್ವಂ ಸಾ ಹನಿಷ್ಯತಿ |
ಇತಿ ಜ್ಞಾಪಯಿತುಂ ಸಾ ಚ ಕರ್ಣರಕ್ಷಣಕಾಂಕ್ಷಿಣಾ ||
ಮುಕ್ತಾ ದಕ್ಷಭುಜೇ ಸಾಽಥ ವಿದಾರ್ಯ ಧರಣೀಂ ತಥಾ |
ಭಿತ್ತತ್ವ ವಿವೇಶ ಕರ್ಣಸ್ಯ ದರ್ಶಯಂತೀ ನಿದರ್ಶನಮ್ ||
`ನೀನು ಆಗ ದಿವ್ಯಶಕ್ತ್ಯಾಯುಧವನ್ನು ಪ್ರಯೋಗಿಸಿದ್ದರೂ ಅದು ನಿನ್ನನ್ನೇ ಕೊಲ್ಲುತ್ತಿತ್ತು' ಎಂದು ಸೂಚಿಸಲು ಭೀಮನು ಹಾಗೆ ಮಾಡಿದ. ಆಗ ಆ ಶಕ್ತ್ಯಾಯುಧವನ್ನು ಕರ್ಣನ ರಕ್ಷಣೆಯನ್ನು ಬಯಸಿದ್ದ ಭೀಮನು ಅವನ ಬಲಭುಜಕ್ಕೇ ಹಾಕಿದ್ದನು. ಅದು ಭುಜವನ್ನು ಸೀಳಿ ನೆಲವನ್ನೂ ಸೀಳಿ ಒಳಗೆ ಪ್ರವೇಶಿಸಿತು. ಕರ್ಣನಿಗೆ ನಿದರ್ಶನವನ್ನು ತೋರಿಸಿತು.
ತತೋ ಭೀಮಃ ಪುನಃ ಸ್ವಂ ತು ರಥಮಾಸ್ಥಾಯ ಚಾಪಭೃತ್ |
ಕರ್ಣಸ್ಯ ಪುರತಃ ಶತ್ರೂನ್ ದ್ರಾವಯಾಮಾಸ ಸರ್ವತಃ ||
ಪುನಃ ಭೀಮನು ತನ್ನ ರಥವನ್ನೇರಿ ಬಿಲ್ಲನ್ನು ಹಿಡಿದು ಕರ್ಣನ ಕಣ್ಣಮುಂದೆಯೇ ಶತ್ರುಗಳನ್ನು ಎಲ್ಲೆಡೆ ಓಡಿಸಿದನು.
ತಂ ಕರ್ಣೋ ವಾರಯಾಮಾಸ ಶರೈಃ ಸನ್ನತಪರ್ವಭಿಃ |
ಭೀಮಃ ಕರ್ಣರಥಾಯೈವ ಗದಾಂ ಚಿಕ್ಷೇಪ ವೇಗಿತಃ ||
ಕರ್ಣ ಭೀಮನನ್ನು ಬಾಗಿದ ಗಂಟುಗಳುಳ್ಳ ಬಾಣಗಳಿಂದ ತಡೆದನು. ಭೀಮನು ಕರ್ಣನ ರಥಕ್ಕೇ ವೇಗವಾಗಿ ಗದೆ ಎಸೆದನು.
ಸ ತದ್ಗದಾವಿಘಾತಾಯ ಸ್ಥೂಣಾಕರ್ಣಾಸ್ತ್ರಮಾಸೃಜತ್ |
ತೇನಾಸ್ತ್ರೇಣ ಪ್ರತಿಹತಾ ಸಾ ಗದಾ ಭೀಮಮಾವ್ರಜತ್ ||
ಕರ್ಣ ಆ ಗದೆಯನ್ನು ತುಡರಿಸಲು ಸ್ಥೂಣಾಕರ್ಣವೆಂಬ ಬಾಣವನ್ನು ಪ್ರಯೋಗಿಸಿದನು. ಆ ಬಾಣದಿಂದ ತಡೆಯಲ್ಪಟ್ಟ ಭೀಮನ ಗದೆ ಭೀಮನ ಬಳಿಗೇ ಹಿಂತಿರುಗಿ ಬಂದಿತು.
ಭೀಮೋ ಗದಾಂ ಸಮಾದಾಯ ಕರ್ಣಸ್ಯ ರಥಮಾರುಹತ್ |
ತಯಾ ಸಂಚೂರ್ಣಯಾಮಾಸ ಕರ್ಣಸ್ಯ ರಥಕೂಬರಮ್ ||
ಭೀಮನ ಗದೆಯನ್ನು ಹಿಡಿದು ಕರ್ಣನ ರಥವನ್ನೇರಿದನು. ಗದೆಯಿಂದ ಕರ್ಣನ ರಥದ ನೊಗವನ್ನು ಪುಡಿ ಮಾಡಿದನು.
ಏವಂ ತ್ವಚ್ಚೂರ್ಣನೇ ಶಕ್ತೋ ಮತ್ಕಾಮಾತ್ ತ್ವಂ ಹಿ ಜೀವಸಿ |
ಏವಂ ನಿದರ್ಶಯಿತ್ವೈವ ಪುನಃ ಸ್ವಂ ರಥಮಾವ್ರಜತ್ ||
ಹೀಗೆ ನಿನ್ನನ್ನೂ ಪುಡಿ ಮಾಡಬಲ್ಲೆ. ಆದರೆ ನನ್ನಿಚ್ಛೆಯಿಂದಲೇ ನೀನು ಬದುಕಿರುವಿ ಎಂಬುದಕ್ಕೆ ನಿದರ್ಶನವನ್ನು ತೋರಿಸಿ ಭೀಮನು ಪುನಃ ತನ್ನ ರಥಕ್ಕೆ ಬಂದನು.
ಪುನಃ ಕರ್ಣಪುರಃ ಸೇನಾಂ ಜಘಾನ ಬಹುಶೋ ರಣೇ |
ಕರ್ಣಸ್ತು ತಂ ಪರಿತ್ಯಜ್ಯ ಸಹದೇವಮುಪಾದ್ರವತ್ ||
ಭೀಮನು ಪುನಃ ಕರ್ಣನ ಎದುರಿನಲ್ಲಿಯೇ ಯುದ್ಧದಲ್ಲಿ ಬಹಳ ಸೈನ್ಯವನ್ನು ನಾಶಮಾಡಿದನು. ಕಣರ್ನು ಅವನನ್ನು ಬಿಟ್ಟು ಸಹದೇವನ ಕಡೆಗೆ ನಡೆದನು.
ಸ ತು ತಂ ವಿರಥೀಕೃತ್ಯ ಧನುಃ ಕಂಠೇಽವಸಜ್ಯ ಚ |
ಕುತ್ಸಯಾಮಾಸ ಬಹುಶಃ ಸ ತು ನಿರ್ವೇದಮಾಗಮತ್ ||
ಸಹದೇವನನ್ನು ಕರ್ಣ ವಿರಥನನ್ನಾಗಿ ಮಾಡಿ ಕುತ್ತಿಗೆಗೆ ಬಿಲ್ಲು ಸಿಕ್ಕಿಸಿ ಬಹಳ ಗೇಲಿ ಮಾಡಿದನು. ಸಹದೇವನು ಬಹಳ ವ್ಯಥೆಪಟ್ಟನು.
ನ ಹಂತುಮೈಚ್ಛತ್ ತಂ ಕರ್ಣಃ ಪೃಥಾಯೈ ಸ್ವಂ ವಚಃ ಸ್ಮರನ್ |
ತಂ ವಿಜಿತ್ಯ ರಣೇ ಕರ್ಣೋ ಜಘ್ನೇ ಪಾರ್ಥವರೂಥಿನೀಮ್ ||
ಕರ್ಣನು ಸಹದೇವನನ್ನು ಕೊಲ್ಲಲು ಬಯಸಲಿಲ್ಲ. ಏಕೆಂದರೆ ಅವನು ಕುಂತಿಗೆ ಕೊಟ್ಟ ತನ್ನ ಮಾತನ್ನು ನೆನೆದುಕೊಂಡನು. ಅದರಿಂದ ಸಹದೇವನನ್ನು ಗೆದ್ದು ರಣರಂಗದಲ್ಲಿ ಪಾಂಡವರ ಸೈನ್ಯವನ್ನು ಕೊಲ್ಲ ತೊಡಗಿದನು.
ತತೋ ದ್ರೌಣಿರ್ವಿವಿಧೈರ್ಬಾಣಸ್ಯೆಂ-
ರ್ಜಘಾನ ಪಾರ್ಥಸ್ಯ ಚಮೂಂ ಸಮಂತತಃ |
ಸಾ ಹನ್ಯಮಾನಾ ರಣಕೋವಿದೇನ
ನ ಶಂ ಲೇಭೇ ಮೃತ್ಯುಽಽನಾರ್ತಾ ಪ್ರಜೇವ ||

ಅಶ್ವತ್ಥಾಮರು ನಾನಾ ವಿಧವಾದ ಬಾಣ ಸಮೂಹಗಳಿಂದ ಪಾಂಡವರ ಸೈನ್ಯವನ್ನು ಎಲ್ಲೆಡೆ ಕೊಲ್ಲಲು ತೊಡಗಿದರು. ಯುದ್ಧವಿಶಾರದರಾದ ಅವರಿಂದ ಹತವಾಗುತ್ತಿದ್ದ ಆ ಸೈನ್ಯಕ್ಕೆ ಮೃತ್ಯುವಿನಿಂದ ಪೀಡಿತವಾಗುವ ಆರ್ತ ಜಂತುವಿನಂತೆ ನೆಮ್ಮದಿ ಇಲ್ಲದಂತಾಯಿತು.

ದೃಷ್ಟ್ವಾ ಸೇನಾಂ ದ್ರೌಣಿಬಾಭಿಭೂತಾಂ
ತಮಾಹ್ವಯಾಮಾಸ ಘಟೋತ್ಕಚೋ ಯುಧೇ |
ದ್ರೌಣಿಸ್ತಮಾಹಾಽಮಲಂ ನ ವತ್ಸ
ಪುತ್ರಸ್ತಾತಂ ಯೋಧಯಸ್ವಾದ್ಯ ಮಾಂ ತ್ವಮ್ ॥

ಪಾಂಡವರ ಸೈನ್ಯ ಅಶ್ವತ್ಥಾಮರ ಬಲಕ್ಕೆ ಮಣಿಯುತ್ತಿದ್ದುದನ್ನು ಕಂಡು ಘಟೋತ್ಕಚನು ಅವರನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಅಶ್ವತ್ಥಾಮರು `ಮಗು, ಬೇಡ ಬೇಡ, ಮಗ ತಂದೆಯೊಡನೆ ಯುದ್ಧ ಮಾಡಬಾರದು' ಎಂದರು.

ಇತ್ಯುಕ್ತ ಊಚೇ ನ ಪಿತಾ ಮಮ ತ್ವಂ
ಸಖಾ ಪಿತುರ್ಯದ್ಯಪಿ ಶತ್ರುಸಂಶ್ರಯಾತ್ |
ಅರಿಶ್ಚ ಮೇಽಸೀತಿ ತಮಾಹ ಯದ್ಯರಿಂ
ಮಾಂ ಮನ್ಯಸೇ ತದ್ವದಹಂ ಕರೋಮಿ ತೇ ॥

ಅಶ್ವತ್ಥಾಮರು ಹೀಗೆ ಹೇಳಿದಾಗ ಘಟೋತ್ಕಚ `ನೀವು ನನ್ನ ತಂದೆಯಲ್ಲ. ನಮ್ಮ ತಂದೆಯ ಸ್ನೇಹಿತರೆನ‍ನವುದು ನಿಜ. ಆದರೆ ಈಗ ನೀವು ಶತ್ರು ಪಕ್ಷದಲ್ಲಿರುವುದರಿಂದ ಶತ್ರುವೇ ಆಗಿರುವಿರಿ' ಎಂದನು. ಆಗ ಅಶ್ವತ್ಥಾಮರು `ನೀನು ನನ್ನನ್ನು ಶತ್ರುವೆಂದು ತಿಳಿಯುವಿಯಾದರೆ ನಿನಗೆ ಶತ್ರುವಿನಂತೆಯೇ ವರ್ತಿಸುತೆತೇನೆ' ಎಂದರು.

ಇತ್ಯೂಚಿವಾನ್ ಶಕ್ರಧನುಃಪ್ರಕಾಶಂ
ವಿಷ್ಫಾರ್ಯ ಚಾಪಂ ಪ್ರಕಿರನ್ ಶರೌಘಾನ್ |
ಅಭ್ಯಾಗಮದ್ ರಾಕ್ಷಸಮುಗ್ರವೇಗಃ
ಸ್ವಸೇನಯಾ ಸೋಽಪಿ ತಮಭ್ಯವರ್ತತ ॥

ಅಶ್ವತ್ಥಾಮರು ಹೀಗೆ ಹೇಳಿ ಇಂದ್ರಧನುಸ್ಸಿನಂತೆ ಹೊಳೆಯುವ ಬಿಲ್ಲನ್ನು ಹೆದೆಯೇರಿಸಿ ಬಾಣಸಮೂಹಗಳನ್ನು ಚೆಲ್ಲುತ್ತಾ ಭಯಂಕರ ವೇಗಯುಕ್ತರಾಗಿ ಘಟೋತ್ಕಚನ ಬಳಿಗೆ ಬಂದರು. ಘಟೋತ್ಕಚನೂ ತನ್ನ ಸೇನೆಯೊಂದಿಗೆ ಅಶ್ವತ್ಥಾಮರನ್ನು ಎದುರಿಸಿದನು.

ಸ ರಕ್ಷಸಾಂ ಲಕ್ಷಸಮಾವೃತೋ ಬಲೀ
ನೃಭಿಶ್ಚ ವೀರೈರ್ಬಹುಭಿಃ ಸುಶಿಕ್ಷಿತೈಃ |
ಅಕ್ಷೋಹಿಣೀಮಾತ್ರಬಲೇನ ರಾಕ್ಷಸಃ
ಸಂಕ್ಷೋಭಯಾಮಾಸ ಗುರೋಃ ಸುತಂ ಶರೈಃ ॥

ಬಲಿಷ್ಠನಾದ ಘಟೋತ್ಕಚನು ಒಂದು ಲಕ್ಷ ರಾಕ್ಷಸರಿಂದ ಪರಿವೃತನಾಗಿರುವವನು. ಯುದ್ಧವಿದ್ಯೆಯಲ್ಲಿ ಸುಶಿಕ್ಷಿತರಾದ ಬಹುಮಂದಿ ಮನುಷ್ಯ ವೀರರಿಂದಲೂ ಕೂಡಿದ್ದಾನೆ. ಒಟ್ಟು ಒಂದು ಅಕ್ಷೋಹಿಣಿ ಪರಿಮಾಣದ ಸೈನ್ಯದೊಂದಿಗೆ ಆತ ಅಶ್ವತ್ಥಾಮರನ್ನು ಬಾಣಗಳಿಂದ ಕ್ಷೋಭೆಗೊಳಿಸಿದ.

ಸ ತೇನ ಬಾಣೈರ್ಬಹುಭಿಃ ಪ್ರಪೀಡಿತೋ
ವಿಭಿನ್ನಗಾತ್ರಃ ಕ್ಷತಜಾಪ್ಲುತಾಂಗಃ |
ವ್ಯಾವೃತ್ಯ ನೇತ್ರೇ ಕುಪಿತೋ ಮಹದ್ ಧನು
ರ್ವಿಷ್ಫಾರ್ಯ ಬಾಣೈ ರಜನೀಂ ಚಕಾರ ॥

ಅಶ್ವತ್ಥಾಮರು ಅವನ ಬಹುಬಾಣಗಳಿಂದ ಬಹಳ ಪೀಡಿತನಾಗಿ ಮೈಯೆಲ್ಲ ಗಾಯಗೊಂಡು ನೆತ್ತರಿಂದ ತೊಯ್ದು ಕೋಪಗೊಂಡು ಕಣ್ಣು ತಿರುಗಿಸುತ್ತಾ ಮಹಾಧನುಸ್ಸನ್ನು ಸೆಳೆದು ಬಾನಗಳಿಂದ ಕತ್ತಲನ್ನು ನಿರ್ಮಿಸಿದರು.

ಸೋಽಕ್ಷೋಹಿಣೀಂ ತಾಂ ಕ್ಷಣಮಾತ್ರತಃ ಕ್ಷರನ್
ಮಹಾಶರಾಂಸ್ತಾನಪಿ ರಾಕ್ಷಸಾನ್ ಕ್ಷಯಮ್ |
ನಿನಾಯ ಪುತ್ರಂ ಚ ಘಟೋತ್ಕಚಸ್ಯ
ನಿಷ್ಯ್ರಂ ಪುರಾ ಯೋಽಂಜನವರ್ಮನಾಮಕಃ ॥

ಅಶ್ವತ್ಥಾಮರು ಮಹಾಬಾಣಗಳನ್ನೆಸೆದು ಕ್ಷಣಮಾತ್ರದಲ್ಲಿ ಆ ಅಕ್ಷೋಹಿಣಿ ಸೈನ್ಯವನ್ನೂ ಆ ರಾಕ್ಷಸರನ್ನೂ ನಾಶಗೊಳಿಸಿದರು. ಹಿಂದೆ ಅಂಜನವರ್ಮನಾಗಿದ್ದು ನಿಷ್ಯ್ರನೆಂದೂ ಹೆಸರು ಪಡೆದ ಘಟೋತ್ಕಚನ ಮಗನನ್ನೂ ಕೊಂದರು.

ನಿರೀಕ್ಷ್ಯ ಸೇನಾಂ ಸ್ವಸುತಂ ಚ ಪಾತಿತಂ
ಘಟೋತ್ಕಚೋ ದ್ರೋಣಸುತಂ ಶರೇಣ |
ವಿವ್ಯಾಧ ಗಾಢಂ ಸ ತು ವಿಹ್ವಲೋ ಧ್ವಜಂ
ಸಮಾಶ್ರಿತಶ್ಚಾಽಶು ಸಸಂಜ್ಞಕೋಭವತ್ ॥

ಸೈನ್ಯವೂ ತನ್ನ ಮಗನೂ ನಾಶಹೊಂದಿದ್ದನ್ನು ಕಂಡು ಘಟೋತ್ಕಚನು ಅಶ್ವತ್ಥಾಮರನ್ನು ಬಾಣದಿಂದ ಬಲವಾಗಿ ಹೊಡೆದನು. ಅಶ್ವತ್ಥಾಮರು ಬಹಳ ವಿಹ್ವಲರಾಗಿ ಧ್ವಜವನ್ನು ಹಿಡಿದು ನಿಂತು ಬೇಗನೆ ಚೇತರಿಸಿಕೊಂಡರು.

ಉತ್ಥಾಯ ಬಾಣಂ ಯಮದಂಡಕಲ್ಪಂ
ಸಂಧಾಯ ಚಾಪೇ ಪ್ರವಿಕೃಷ್ಯ ರಾಕ್ಷಸೇ |
ಮುಮೋಚ ತೇನಾಭಿಹತಃ ಪಪಾತ

ವಿನಷ್ಟಸಂಜ್ಞಃ ಸ್ವರಥೇ ಘಟೋತ್ಕಚಃ ॥
ಅಶ್ವತ್ಥಾಮರು ಎದ್ದು ಯಮದಂಡಕ್ಕೆ ಸಮಾನವಾದ ಬಾಣವನ್ನು ಬಿಲ್ಲಿನಲ್ಲಿ ಹೂಡಿ ಚೆನ್ನಾಗಿ ಸೆಳೆದು ಘಟೋತ್ಕಚನಿಗೆ ಎಸೆದರು. ಆ ಬಾಣದ ಏಟಿಗೆ ಘಟೋತ್ಕಚನು ಎಚ್ಚರತಪ್ಪಿ ತನ್ನ ರಥದಲ್ಲಿ ಬಿದ್ದನು.
ವಿಮೂರ್ಚ್ಛಿತಂ ಸಾರಥಿರಸ್ಯ ದೂರಂ
ನಿನಾಯ ಯುದ್ಧಾಙ್ಗಜಗತೋಽವಿಪಶ್ಯತಃ |
ದ್ರೌಣಿಶ್ಚ ಸೇನಾಂ ನಿಶಿತೈಃ ಶರೋತ್ತಮೈ
ರ್ವ್ಯದ್ರಾವಯತ್ ಪಾಂಡವಸೋಮಕಾನಾಮ್ ॥
ಮೂರ್ಛಿತನಾದ ಘಟೋತ್ಕಚನನ್ನು ಲೋಕವೆಲ್ಲ ನೋಡುತ್ತಿದ್ದಂತೆ ಅವನ ಸಾರಥಿ ರಣರಂಗದಿಂದ ದೂರಕ್ಕೆ ಕರೆದುಕೊಂಡು ಹೋದನು. ಅಶ್ವತ್ಥಾಮರು ಹರಿತವಾದ ಶ್ರೇಷ್ಠ ಬಾಣಗಳಿಂದ ಪಾಂಡವರ ಮತ್ತು ಪಾಂಚಾಲರ ಸೇನೆಯನ್ನು ಓಡಿಸಿದರು.
ಸಂಜ್ಞಾಮವಾಪ್ಯಾಥ ಘಟೋತ್ಕಚೋಽಪಿ
ಕ್ರುದ್ಧೋವಿಶತ್ ಕೌರವಸೈನ್ಯಮಾಶು |
ವಿದ್ರಾವಯಾಮಾಸ ಸ ಬಾಣವರ್ಷೈಃ
ಪ್ರಕಮ್ಪಯಾಮಾಸ ಮಹಾರಥಾಂಸ್ತಥಾ ॥
ಘಟೋತ್ಕಚನು ಎಚ್ಚರಗೊಂಡು ಕ್ರುದ್ಧನಾಗಿ ಕೌರವಸೈನ್ಯವನ್ನು ಬೇಗನೆ ಹೊಕ್ಕನು. ಬಾಣಗಳ ಮಳೆಗಳಿಂದ ಓಡಿಸಿದನು. ಮಹಾರಥರನ್ನು ನಡುಗಿಸಿದನು.
ತದೈವ ಪಾರ್ಥಂ ಪ್ರತಿ ಯೋದ್ಧುಮಾಗತಂ
ವೈಕರ್ತನಂ ವೀಕ್ಷ್ಯ ಜಗತ್ಪತಿರ್ಹರಿಃ |
ಘಟೋತ್ಕಚಂ ಪ್ರಾಹಿಣೋಚ್ಛಕ್ತಿಮುಗ್ರಾಂ
ತಸ್ಮಿನ್ ಮೋಕ್ತುಂ ಪಾರ್ಥರಕ್ಷಾರ್ಥಮೇವ ॥
ಆಗಲೇ ಅರ್ಜುನನೊಡನೆ ಹೋರಾಡಲು ಕರ್ಣ ಬಂದುದನ್ನು ಕಂಡು ಜಗನ್ನಾಥನಾದ ಶ್ರೀಕೃಷ್ಣನು ಅರ್ಜುನನ ರಕ್ಷಣೆಗಾಗಿ ಉಗ್ರವಾದ ಶಕ್ತ್ಯಾಯುಧವನ್ನು ಘಟೋತ್ಕಚನಲ್ಲಿ ಬೀಳಿಸುವ ಉದ್ದೇಶದಿಂದ ಅವನನ್ನು ಕರ್ಣನ ಎದುರಿಗೆ ಕಳುಹಿಸಿದನು.
ಸ ಕರ್ಣಮಾಹೂಯ ಯುಯೋಧ ತೇನ
ತಸ್ಯಾನು ದುರ್ಯೋಧನಪೂರ್ವಕಾಶ್ಚ ಯೇ |
ದ್ರೋಣೇನ ಚೈತಾನ್ ಸಮರೇ ಸ ಏಕೋ
ನಿವಾರಯಾಮಾಸ ಮಮರ್ದ ಚಾಧಿಕಮ್ ॥
ಘಟೋತ್ಕಚ ಕರ್ಣನನ್ನು ಆಹ್ವಾನಿಸಿ ಅವನೊಡನೆ, ಅವನ ಹಿಂದೆ ಸಹಾಯಕ್ಕೆ ನಿಂತಿದ್ದನು. ದುರ್ಯೋಧನ ಮುಂತಾದವರೊಡನೆ ಮತ್ತು ದ್ರೋಣರೊಡನೆ ಹೋರಾಡಿದನು. ಯುದ್ಧದಲ್ಲಿ ಅವರೆಲ್ಲರನ್ನೂ ಒಬ್ಬನೇ ತಡೆದು ಬಹಳ ಪೀಡಿಸಿದನು.
ತೇ ಬಾಧ್ಯಮಾನಾ ಬಹುಶೋ ಬಲೀಯಸಾ
ಕರ್ಣಂ ಪುರೋಧಾಯ ತಮಭ್ಯಯೋಧಯನ್ |
ನ ವಿವ್ಯಥೇ ತತ್ರ ರಣೇ ಸ ಕರ್ಣಃ
ಸ್ವವೀರ್ಯಮಾಸ್ಥಾಯ ಮಹಾಸ್ತ್ರವೇತ್ತಾ ॥
ಬಲಿಷ್ಠನಾದ ಘಟೋತ್ಕಚನಿಂದ ಬಹಳ ಪೀಡಿತರಾದ ದುರ್ಯೋಧನ ಮುಂತಾದವರು ಕರ್ಣನನ್ನು ಮುಂದೆ ಮಾಡಿಕೊಂಡು ಹೋರಾಡಿದರು. ಮಹಾ ಅಸ್ತ್ರಜ್ಞನಾದ ಕರ್ಣ ತನ್ನ ಪರಾಕ್ರಮವನ್ನು ತೋರಿಸುತ್ತಾ ಯುದ್ಧದಲ್ಲಿ ವ್ಯಥಿತನಾಗಿದೆ ನಿಂತನು.
ನಿವಾರಯಾಮಾಸ ಗುರೋಃ ಸುತಂ ತದಾ
ಭೀಮಸ್ತ್ರಿಗರ್ತಾನ್ ಶತಮನ್ಯುನಂದನಃ |
ಅಲಂಬಲೋ ನಾಮ ತದೈವ ರಾಕ್ಷಸಃ
ಸಮಾಗಮದ್ ಭೀಮಸುತಂ ನಿಹಂತುಮ್ ॥
ಆಗ ಭೀಮನು ಅಶ್ವತ್ಥಾಮರನ್ನು ತಡೆದನು. ಅರ್ಜುನ ತ್ರಿಗರ್ತರನ್ನು ತಡೆದನು. ಆಗಲೆ ಅಲಂಬಲನೆಂಬ ರಾಕ್ಷಸ ಘಟೋತ್ಕಚನನ್ನು ಕೊಲ್ಲಲು ಬಂದನು.
ಯುದ್ಧ್ವಾ ಪ್ರಗೃಹ್ಯೈನಮಥೋ ನಿಪಾತ್ಯ
ಘಟೋತ್ಕಚೋ ಭೂಮಿತಳೇಽಸಿನಾಽಸ್ಯ |
ಉತ್ಕೃತ್ಯ ಶೀರ್ಷಂ ತು ಸುಯೋಧನೇಽಕ್ಷಿಪದ್
ವಿಷೇದುರತ್ರಾಖಿಲಭೂಮಿಪಾಲಾಃ ॥
ಅಲಂಬಲನೊಡನೆ ಘಟೋತ್ಕಚನು ಹೋರಾಡಿ ಅವನನ್ನು ಹಿಡಿದು ನೆಲದಲ್ಲಿ ಕೆಡವಿ ಖಡ್ಗದಿಂದ ತಲೆಯನ್ನು ಕಡಿದು ಆ ತಲೆಯಿಂದಲೇ ದುರ್ಯೋಧನನನ್ನು ಹೊಡೆದನು. ಆಗ ಎಲ್ಲ ರಾಜರೂ ಕಳವಳಗೊಂಡರು.
ಆಯುಧೋಽಥಾಽಗಮದುಗ್ರವೀರ್ಯೋ
ನರಾಶನಸ್ತಂ ಸ ಘಟೋತ್ಕಚೋಽಭ್ಯಯಾತ್ |
ಯುದ್ಧ್ವಾ ಮುಹೂರ್ತಂ ಸ ತು ತೇನ ಭೂಮೌ
ನಿಪಾತ್ಯ ತಂ ಯಜ್ಞಪಶುಂ ಚಕಾರ ॥
ಅನಂತರ ಉಗ್ರಪರಾಕ್ರಮಿಯಾದ ಅಲಾಯುಧನೆಂಬ ನರಭಕ್ಷಕ ರಾಕ್ಷಸನು ಬಂದನು. ಅವನನ್ನೂ ಘಟೋತ್ಕಚ ಎದುರಿಸಿದನು.

ಅವನೊಡನೆ ಒಂದು ಮುಹೂರ್ತದ ಕಾಲ ಯುದ್ಧಮಾಡಿ ಅವನನ್ನು ನೆಲದಲ್ಲಿ ಕೆಡವಿ ಯಜ್ಞ ಪಶುವನ್ನಾಗಿ ಮಾಡಿದನು.
ಅಥಾಸ್ಯ ಶಿರ ಉದ್ಧೃತ್ಯ ಕ್ರೋಧಾದ್ ದುರ್ಯೋಧನೋರಸಿ |
ಚಿಕ್ಷೇಪ ತೇನ ಸಂಭ್ರಾಂತಾಃ ಸರ್ವೇ ದುರ್ಯೋಧನಾದಯಃ ||
ಘಟೋತ್ಕಚನು ಅಲಾಯುಧನ ಶಿರಸ್ಸನ್ನು ಕತ್ತರಿಸಿ ಅದನ್ನು ಕೋಪದಿಂದ ದುರ್ಯೋಧನನ ಎದೆಯ ಮೇಲೆ ಎಸೆದನು. ಅದರಿಂದ ದುರ್ಯೋಧನ ಮುಂತಾದವರೆಲ್ಲರೂ ಕಳವಳಗೊಂಡರು.
ಘಟೋತ್ಕಚಬಲಖ್ಯಾತ್ಯೈ ಸಮರ್ಥೇನಾಪಿ ಯೋ ರಣೇ |
ನ ಹತೋ ಭೀಮಸೇನೇನ ಹತೇಽಸ್ಮಿನ್ ಭೈಮಸೇನಿನಾ |
ಸರ್ವೇ ಸಂಚೋದಯಾಮಾಸುಃ ಕರ್ಣಂ ಶಕ್ತಿವಿಮೋಕ್ಷಣೇ ||
ಅಸ್ಮಿನ್ ಹತೇ ಹತಂ ಸರ್ವಂ ಕಿಂ ನಃ ಪಾರ್ಥಃ ಕರಿಷ್ಯತಿ ||
ಅಲಾಯುಧನನ್ನು ಕೊಲ್ಲಲು ಭೀಮನು ಸಮರ್ಥನಾಗಿದ್ದರೂ ಘಟೋತ್ಕಚನ ಬಲ ಹೀಗೆ ಪ್ರಕಟವಾಗಲೆಂದೇ ತಾನು ಕೊಲ್ಲದೆ ಬಿಟ್ಟಿದ್ದನು. ಘಟೋತ್ಕಚನು ಅವನನ್ನು ಕೊಂದಾಗ ಎಲ್ಲರೂ ಶಕ್ತ್ಯಾಯುಧ ಪ್ರಯೋಗಕ್ಕೆ ಕರ್ಣನನ್ನು ಒತ್ತಾಯಿಸಿದರು. `ಈತನೊಬ್ಬ ಹತನಾದರೂ ಎಲ್ಲ ಹತರಾದಂತೆ. ಬಳಿಕ ಅರ್ಜುನ ನಮ್ಮನ್ನೇನು ಮಾಡಬಲ್ಲ?' ಎಂದರು.
ಏವಂ ಸಂಚೋದ್ಯಮಾನಃ ಸ ಧಾರ್ತರಾಷ್ಟ್ರೈಃ ಪುನಃಪುನಃ |
ಹೈಡಿಂಬೇನಾರ್ದ್ಯಮಾನ್ಯೆಸ್ತು ಸ್ವಯಂ ಚ ಭೃಶಪೀಡಿತಃ |
ಆದತ್ತ ಶಕ್ತಿಂ ವಿಪುಲಾಂ ಪಾಕಶಾಸನಸಮ್ಮತಾಮ್ ||
ಹೀಗೆ ಘಟೋತ್ಕಚನಿಂದ ಪೀಡಿತರಾಗಿದ್ದ ಕೌರವರು ಮತ್ತೆ ಮತ್ತೆ ಒತ್ತಾಯ ಮಾಡಿದಾಗ, ತಾನೂ ಬಹಳ ಪೀಡಿತನಾದ್ದರಿಂದ ಇಂದ್ರನ ಪ್ರೀತಿಪಾತ್ರವಾದ ಮಹತ್ತಾದ ಶಕ್ತ್ಯಾಯುಧವನ್ನು ಕರ್ಣ ಎತ್ತಿಕೊಂಡನು.
ತಾಮಂಬರಸ್ಥಾಯ ಘಟೋತ್ಕಚಾಯ
ಶೈಲೋಪಮಾಯಾತುವಿಕ್ರಮಾಯ |
ಚಿಕ್ಷೇಪ ಮೃತ್ಯೋಃ ರಸನೋಪಮಾಮಲಂ
ಪ್ರಕಾಶಯಂತೀಂ ಪ್ರದಿಶೋ ದಿಶಶ್ಚ ||
ಅತುಲ ಪರಾಕ್ರಮಿಯಾದ ಘಟೋತ್ಕಚನು ಆಕಾಶದಲ್ಲಿ ನಿಂತಿದ್ದನು. ಬೆಟ್ಟದಂತೆ ಕಾಣುತ್ತಿದ್ದನು. ಅವನ ಮೇಲೆ ಕರ್ಣನು ಮೃತ್ಯುವಿನ ನಾಲಗೆಯಂತಿದ್ದ ದಿಕ್ಕು ವಿದಿಕ್ಕುಗಳನ್ನು ಚೆನ್ನಾಗಿ ಬೆಳಗಿಸುತ್ತಿದ್ದ ಶಕ್ತ್ಯಾಯುಧವನ್ನು ಎಸೆದನು.
ನಿರ್ಭಿನ್ನವಕ್ಷಾಃ ಸ ತಯಾ ಪಪಾತ
ವಿಚೂರ್ಣಯನ್ ಶತ್ರುಬಲಂ ಹತೋಽಪಿ |
ತಸ್ಮಿನ್ ಹತೇ ಜಹೃಷುರ್ಧಾರ್ತರಾಷ್ಟ್ರಾ
ಉಚ್ಚುಕ್ರುಶುರ್ದುಧುವುಶ್ಚಾಂಬರಾಣಿ ||
ಶಕ್ತ್ಯಾಯುಧದಿಂದ ಘಟೋತ್ಕಚನ ಎದೆ ಒಡೆದು ಕೆಳಗೆ ಬಿದ್ದನು. ತಾನು ಹತನಾದರೂ ಬಿದ್ದು ಶತ್ರುಸೈನ್ಯವನ್ನು ಪುಡಿಮಾಡುತ್ತ ಬಿದ್ದನು. ಅವನು ಹತನಾದಾಗ ಕೌರವರು ಹರ್ಷಪಟ್ಟರು. ಕೇಕೆ ಹಾಕಿದರು. ವಸ್ತ್ರಗಳನ್ನು ಹಾರಿಸಿದರು.
ತದಾ ನನರ್ತ ಕೇಶವಃ ಸಮಾಶ್ಲಿಷಚ್ಚ ಫಲ್ಗುನಮ್ |
ನನಾದ ಶಂಖಮಾಧಮಜ್ಜಹಾಸ ಚೋರುನಿಸ್ವನಃ ||
ಆಗ ಶ್ರೀಕೃಷ್ಣನೂ ಕುಣಿದಾಡಿದ. ಅರ್ಜುನನನ್ನು ತಬ್ಬಿಕೊಂಡ. ಶಂಖನಾದ ಮಾಡುತ್ತ ಸಿಂಹನಾದವನ್ನು ಮಾಡಿದ. ದೊಡ್ಡ ಧ್ವನಿಯಿಂದ ನಕ್ಕ.
ತಮಪೃಚ್ಛದ್ ಗುಡಾಕೇಶಃ ಕಿಮೇತದಿತಿ ದುರ್ಮನಾಃ |
ಹತೇ ಸುತೇಽಗ್ರಜೇಽಸ್ಮಾಕಂ ವೀರೇ ಕಿಂ ನಂದಸಿ ಪ್ರಭೋ ||
ದುಃಖಿತನಾದ ಅರ್ಜುನ ಶ್ರೀಕೃಷ್ಣನನ್ನು ಕೇಳಿದ `ಪ್ರಭು, ಇದೇನು? ವೀರನಾದ ನಮ್ಮ ಜ್ಯೇಷ್ಠಪುತ್ರ ಹತನಾದಾಗ ಏಕೆ ಸಂತೋಷಪಡುವಿ?' ಎಂದು.
ತಮಾಹ ಭಗವಾನ್ ಕೃಷ್ಣೋ ದಿಷ್ಟ್ಯಾ ಜೀವಸಿ ಫಲ್ಗುನ |
ತ್ವದರ್ಥಂ ನಿಹಿತಾ ಶಕ್ತಿರ್ವಿಮುಕ್ತಾಽಸ್ಮಿನ್ ಹಿ ರಾಕ್ಷಸೇ ||
ಭಗವಾನ್ ಶ್ರೀಕೃಷ್ಣ ಅರ್ಜುನನಿಗೆ ಹೇಳಿದ, `ಅರ್ಜುನ, ಅದೃಷ್ಟವಶದಿಂದ ನೀನು ಬದುಕಿಕೊಂಡೆ. ನಿನಗಾಗಿ ಕಾದಿರಿಸಿದ್ದ ಶಕ್ತ್ಯಾಯುಧವನ್ನು ಕರ್ಣ ಘಟೋತ್ಕಚನ ಮೇಲೆ ಎಸೆದುಬಿಟ್ಟ.
ತತೋ ಯುಧಿಷ್ಠಿರೋ ದುಃಖಾದಮರ್ಷಾಚ್ಚಾಭ್ಯವರ್ತತ |
ಕರ್ಣಂ ಪ್ರತಿ ತಮಾಹಾಥ ಕೃಷ್ಣದ್ವೈಪಾಯನಃ ಪ್ರಭುಃ ||
ಆಗ ಯುಧಿಷ್ಠಿರ ಕೋಪದಿಂದ ಮತ್ತು ದುಃಖದಿಂದ ಕರ್ಣನ ಮುಂದೆ ಯುದ್ಧಕ್ಕೆ ಹೊರಟನು. ಆಗ ವೇದವ್ಯಾಸರು ಬಂದು ಹೇಳಿದರು.
ಯಯಾಽರ್ಜುನೋ ನಿಹಂತವ್ಯಸ್ತಯಾಽಸೌ ರಾಕ್ಷಸೋ ಹತಃ |
ತನ್ಮಾ ಶುಚಸ್ತ್ವಂ ರಾಜೇಂದ್ರ ದಿಷ್ಟ್ಯಾ ಜೀವತಿ ಫಲ್ಗುನಃ |
ಇತ್ಯುಕ್ತ್ವಾತ್ವ ಪ್ರಯಯೌ ವ್ಯಾಸಸ್ತತೋ ಯುದ್ಧಮವರ್ತತ ||
`ಯಾವ ಶಕ್ತ್ಯಾಯುಧದಿಂದ ಅರ್ಜುನ ಹತನಾಗಬೇಕಿತ್ತೋ ಅದರಿಂದ ಘಟೋತ್ಕಚ ಹತನಾಗಿದ್ದಾನೆ. ಅದರಿಂದ, ಮಹಾರಾಜ ಶೋಕಿಸಬೇಡ. ಅದೃಷ್ಟವಶಾತ್ ಅರ್ಜುನ ಬದುಕಿದ್ದಾನೆ'. ಹೀಗೆ ಹೇಳಿ ವೇದವ್ಯಾಸರು ಹೊರಟುಹೋದರು. ಬಳಿಕ ಯುದ್ಧ ಮುಂದುವರಿಯಿತು.

ಭೀಮಾರ್ಜುನಾಭ್ಯಾಮಿಹ ಹನ್ಯಮಾನೇ
ಬಲೇ ಕುರೂಣಾಮಿತರೈಶ್ಚ ಪಾಂಡವೇ |
ಪ್ರದೀಪಹಸ್ತಾ ಅಥ ಯೋಧಕಾಶ್ಚ
ಸರ್ವೇಽಪಿ ನಿದ್ರಾವಶಗಾ ಬಭೂವುಃ ॥
ಕೌರವರ ಸೈನ್ಯವನ್ನು ಭೀಮಾರ್ಜುನರೂ ಪಾಂಡವರ ಸೈನ್ಯವನ್ನು ಕೌರವರೂ ನಾಶಮಾಡುತ್ತಿದ್ದಾಗ ದೀಪಗಳನ್ನು ಹಿಡಿದವರೂ ಯೋಧರೂ ಎಲ್ಲರೂ ನಿದ್ರಾಪರವಶರಾದರು.
ದೃಷ್ಟ್ವೈವ ತಾನಾಹ ಧನಂಜಯಸ್ತದಾ
ಸ್ವಪ್ಸ್ಯಂತು ಯಾವಚ್ಛಶಿನಃ ಪ್ರಕಾಶಃ |
ಇತೀರಿತಾ ಆಶಿಷಃ ಫಲ್ಗುನಾಯ
ಪ್ರಯುಜ್ಯ ಸರ್ವೇ ಸುಷುಪುರ್ಯಥಾಸ್ಥಿತಾಃ ॥
ಸೈನಿಕರು ನಿದ್ರಾಪರವಶರಾದುದನ್ನು ಕಂಡು ಅರ್ಜುನನು ಹೇಳಿದ `ಚಂದ್ರನ ಪ್ರಕಾಶ ಹರಡುವವರೆಗೆ ಎಲ್ಲರೂ ನಿದ್ದೆ ಮಾಡಿರಿ'. ಹೀಗೆ ಹೇಳಿದಾಗ ಎಲ್ಲರೂ ಅವನಿಗೆ ಆಶೀರ್ವಾದ ಮಾಡಿ, ಹೇಗಿದ್ದರೋ ಹಾಗೇ ಮಲಗಿ ನಿದ್ದೆಹೋದರು.
ಪುನಶ್ಚ ಚಂದ್ರೇಽಭ್ಯುದಿತೇ ಯುಧೇ ತೇ
ಸಮಾಯಯುಃ ಶಸ್ತ್ರಮಹಾಸ್ತ್ರವರ್ಷಾಃ |
ತತ್ರಾಽಯಾತಃ ಸಾತ್ಯಕಿಂ ಸೋಮದತ್ತೋ
ಭೂರಿಶ್ಚ ತಾಭ್ಯಾಂ ಯುಯುಧೇ ಸ ಏಕಃ ॥
ಚಂದ್ರನುದಿಸಿದಾಗ ಪುನಃ ಅವರು ಶಸ್ತ್ರ ಮಹಾಸ್ತ್ರಗಳ ಮಳೆ ಸುರಿಸುತ್ತ ಯುದ್ಧಕ್ಕೆ ಬಂದರು. ಭೂರಿ ಮತ್ತು ಸೋಮದತ್ತರು ಸಾತ್ಯಕಿಯ ಎದುರಿಗೆ ಬಂದರು. ಸಾತ್ಯಕಿಯೊಬ್ಬನೇ ಅವರಿಬ್ಬರೊಡನೆ ಹೋರಾಡಿದನು.
ಹತೌ ಚ ತೌ ಪೇತತುಸ್ತೇನ ಭೂಮೌ
ಬಾಹ್ಲೀಕ ಏನಂ ಸಮರೇ ತ್ವಯೋಧಯತ್ |
ಸ ಸಾತ್ಯಕಿಂ ವಿರಥೀಕೃತ್ಯ ಬಾಣಂ
ವಧಾಯ ತಸ್ಯಾಽಶು ಮುಮೋಚ ವೀರಃ ॥
ಸಾತ್ಯಕಿಯಿಂದ ಭೂರಿ ಸೋಮದತ್ತರು ಹತರಾಗಿ ನೆಲದಲ್ಲಿ ಬಿದ್ದರು. ಬಾಹ್ಲೀಕ ಸಾತ್ಯಕಿಯೊಡನೆ ಯುದ್ಧದಲ್ಲಿ ಹೋರಾಡಿದ. ವೀರನಾದ ಅವನು ಸಾತ್ಯಕಿಯನ್ನು ವಿರಥನನ್ನಾಗಿ ಮಾಡಿ ಅವನ ವಧೆಗಾಗಿ ಬಾಣವನ್ನೆಸೆದನು.
ಚಿಚ್ಛೇದ ತಂ ಭೀಮಸೇನಸ್ತ್ರಿಧೈವ
ತಸ್ಮೈ ಶತಘ್ನೀಂ ಪ್ರಜಹಾರ ಬಾಹ್ಲಿಕಃ |
ತಯಾ ಹತೋ ವಿಹ್ವಲಿತೋ ವೃಕೋದರೋ
ಜಘಾನ ತಂ ಗದಯಾ ಸೋಽಪತಚ್ಚ ॥
ಆ ಬಾಣವನ್ನು ಭೀಮನು ಮೂರು ಭಾಗವಾಗಿ ತುಂಡರಿಸಿದನು. ಭೀಮನಿಗೆ ಬಾಹ್ಲೀಕ ಶತಘ್ನಿಯನ್ನು ಪ್ರಯೋಗಿಸಿದನು. ಅದರ್ದಂ ಹೊಡೆಸಿಕೊಂಡು ಭೀಮನು ವಿಹ್ವಲನಾದವನಂತೆ ತೋರಿಕೊಂಡು ಅವನನ್ನು ಗದೆಯಿಂದ ಹೊಡೆದನು. ಬಾಹ್ಲೀಕನು ಮೃತನಾದನು.
ಬಾಹ್ಲೀಕಃ ಪ್ರಾರ್ಥಯಾಮಾಸ ಪೂರ್ವಂ ಸ್ನೇಹಪುರಃಸರಮ್ |
ಭೀಮ ತ್ವಯೈವ ಹಂತವ್ಯೋ ರಣೇಽಹಂ ಪ್ರೀತಿಮಿಚ್ಛತಾ |
ತದಾ ಯಶಶ್ಚ ಧರ್ಮಂ ಚ ಲೋಕಂ ಚ ಪ್ರಾಪ್ನುಯಾಮಹಮ್ ॥
ಹಿಂದೆ ಬಾಹ್ಲೀಕನು ಭೀಮನಲ್ಲಿ ಸ್ನೇಹಪುರಸ್ಸರವಾಗಿ ಕೇಳಿಕೊಂಡಿದ್ದನು. `ಭೀಮನೇ, ನೀನು ನನಗೆ ಸಂತೋಷವನ್ನು ಬಯಸುವಿಯಾದರೆ ನೀನೇ ನನ್ನನ್ನು ಯುದ್ಧದಲ್ಲಿ ಕೊಲ್ಲಬೇಕು. ಆಗಲೇ ನಾನು ಕೀರ್ತಿಯನ್ನೂ ಪುಣ್ಯವನ್ನೂ ಉತ್ತಮ ಲೋಕವನ್ನೂ ಪಡೆಯಬಲ್ಲೆ' ಎಂದು.
ಇತ್ಯುಕ್ತ ಆಹ ತಂ ಭೀಮೋ ನಿತರಾಂ ವ್ಯಥಿತಸ್ತದಾ |
ಹನ್ಯಾಂ ನೈವಾನ್ಯಥಾ ಯುದ್ಧೇ ತತ್ ತೇ ಶುಶ್ರೂಷಣಂ ಭವೇತ್ ॥
ಇತಿ ತೇನ ಹತಸ್ತತ್ರ ಭೀಮಸೇನೇನ ಬಾಹ್ಲಿಕಃ ॥
ಬಾಹ್ಲೀಕನು ಹೀಗೆ ಹೇಳಿದ ಭೀಮನು `ಯುದ್ಧದಲ್ಲಿ ನಾನು ಬಹಳ ಹೊಡೆಸಿಕೊಂಡರೆ ಮಾತ್ರ, ನಿನ್ನನಜ್ಞೆಯಿಂದ ನಿನ್ನನ್ನು ಕೊಲ್ಲುವುದು ನಿನಗೆ ಸೇವೆಯಾಗುವುದಿದ್ದರೆ ಮಾತ್ರ, ನಿನ್ನನ್ನು ಕೊಲ್ಲುವೆ ಇಲ್ಲದಿದ್ದರೆ ಇಲ್ಲ' ಎಂದು ಹೇಳಿದನು. ಅದರಿಂದ ಭೀಮನು ಬಾಹ್ಲೀಕನನ್ನು ಕೊಂದನು.
ಹತೇ ಬಾಹ್ಲೀಕೇ ಕೌರವಾ ಭೀಮಸೇನ-
ಮಭ್ಯಾಜಗ್ಮುಃ ಕರ್ಣದುರ್ಯೋಧನಾದ್ಯಾಃ |
ದ್ರೌಣಿಂ ಪುರಸ್ಕೃತ್ಯ ಗುರುಂ ಚ ಪಾರ್ಷತಃ
ಸಭ್ರಾತೃಕಃ ಸಾತ್ಯಕಿನಾ ಸಮಭ್ಯಯಾತ್ ॥
ಬಾಹ್ಲೀಕ ಹತನಾದಾಗ ಕರ್ಣ ದುರ್ಯೋಧನ ಮುಂತಾದ ಕೌರವ ಯೋಧರು ಅಶ್ವತ್ಥಾಮರನ್ನು ಮುಂದೆ ಮಾಡಿಕೊಂಡು ಭೀಮಸೇನನ ಮುಂದೆ ಬಂದರು. ಅತ್ತ ಧೃಷ್ಟದ್ಯುಮ್ನನು ಸೋದರರೊಂದಿಗೆ ಮತ್ತು ಸಾತ್ಯಕಿಯೊಂದಿಗೆ ದ್ರೋಣರ ಬಳಿಗೆ ಬಂದನು.
ಸಂಶಪ್ತಕೈರೇವ ಪಾರ್ಥೋ ಯುಯೋಧ

ತದ್ ಯುದ್ಧಮಾಸೀದತಿ ರೌದ್ರಮದ್ಭುತಮ್ |
ಅಕ್ಷೋಹಿಣೀ ತತ್ರ ಭೀಮಾರ್ಜುನಾಭ್ಯಾಂ
ನಿಷೂದಿತಾ ರಾತ್ರಿಯುದ್ಧೇ ಸಮಸ್ತಾ ||
ಅರ್ಜುನನು ಸಂಶಪ್ತಕರೊಡನೆ ಹೋರಾಡಿದನು. ಆ ಯುದ್ಧವು ಅತಿ ಭೀಕರ ಮತ್ತು ಅದ್ಭುತವಾಗಿದ್ದಿತು. ಅಂದು ರಾತ್ರಿ ಯುದ್ಧದಲ್ಲಿ ಸಂಪೂರ್ಣ ಒಂದು ಅಕ್ಷೋಹಿಣಿ ಕೌರವರ ಸೈನ್ಯ ಭೀಮಾರ್ಜುನರಿಂದ ಹತವಾಯಿತು.
ತತಃ ಸೂರ್ಯಶ್ಚಾಭ್ಯುದಿತಸ್ತದಾಽತಿ
ಘೋರಂ ದ್ರೋಣಃ ಕರ್ಮ ಯುದ್ಧೇ ಚಕಾರ |
ಸ ಪಾಂಚಾಲಾನಾಂ ರಥವೃಂದಂ ಪ್ರವಿಶ್ಯ
ಜಘಾನ ಹಸ್ತ್ಯಶ್ವರಥಾನ್ ನರಾಂಶ್ಚ ||
ಹದಿನೈದನೆಯ ದಿವಸದ ಯುದ್ಧದಲ್ಲಿ ಪಾಂಚಾಲರ ರಥ ಸಮೂಹವನ್ನು ಹೊಕ್ಕು ದ್ರೋಣರು ಅತಿಘೋರವಾದ ಹೋರಾಟ ನಡೆಸಿದರು. ಆನೆ, ಕುದುರೆ, ರಥ ಕಾಲಾಳುಗಳನ್ನು ಸಂಹರಿಸಿದರು.
ವಿದ್ರಾವಿತಾಸ್ತೇನ ಮಹಾರಥಾಶ್ಚ
ನೈವಾವಿಂದನ್ ಶರ್ಮ ಬಾಣಾಂಧಕಾರೇ |
ಯುವೇವ ವೃದ್ಧೋಽಪಿ ಚಚಾರ ಯುದ್ಧೇ
ಸ ಉಗ್ರಧನ್ವಾ ಪರಮಾಸ್ತ್ರವೇತ್ತಾ ||
ದ್ರೋಣರು ಮಹಾರಥರನ್ನು ಓಡಿಸಿದರು. ಬಾಣಗಳ ಕತ್ತಲಲ್ಲಿ ಯಾರಿಗೂ ನೆಮ್ಮದಿಯಿಲ್ಲದಂತೆ ಮಾಡಿದರು. ಮಹಾಸ್ತ್ರಜ್ಞಾನಿಯಾದ ಅವರು ವೃದ್ಧರಾದರೂ ಯುವಕನಂತೆ ಭಯಂಕರವಾ ಧನುಸ್ಸನ್ನು ಹಿಡಿದು ರಣರಂಗದಲ್ಲಿ ಸಂಚರಿಸಿದರು.
ರಥಾರ್ಬುದಂ ತೇನ ಹತಂ ಚ ತತ್ರ
ತತಃ ಸಹಸ್ರಂ ಗುಣಿತಂ ನರಾಣಾಮ್ |
ತತೋ ದಶಾಂಶೋ ನಿಹತೋ ಹಯಾನಾಂ
ಗಜಾರ್ಬುದಂ ಚೈವ ರಣೋತ್ಕಟೇನ ||
ಯುದ್ಧದಲ್ಲಿ ಅಪ್ರತಿಮರಾದ ದ್ರೋಣರು ಆ ಯುದ್ಧದಲ್ಲಿ ಇಪ್ಪತ್ತು ಸಾವಿರ ರಥ ಸ್ಯನಿಕರನ್ನು ನಾಶಪಡಿಸಿದರು. ಅದಕ್ಕೆ ಸಹಸ್ರಪಟ್ಟು ಕಾಲಾಳುಗಳನ್ನು ಕೊಂದರು. ಅವರ ಹತ್ತನೆಯ ಒಂದಂಶದಷ್ಟು ಅಶ್ವಸೈನಿಕರನ್ನು ವಧಿಸಿದರು, ಇಪ್ಪತ್ತು ಸಾವಿರ ಗಜ ಸೈನಿಕರನ್ನು ಕೊಂದರು.
ತಥಾ ವಿರಾಟದ್ರುಪದೌ ಶರಾಭ್ಯಾಂ
ನಿನಾಯ ಲೋಕಂ ಪರಮಾಜಿಮಧ್ಯೇ |
ತತೋ ವಿಜಿತ್ಯೈವ ಗುರೋಃ ಸುತಾದೀನ್
ಧೃಷ್ಟದ್ಯುಮ್ನಂ ಭೀಮಸೇನೋ ಜುಗೋಪ ||
ದ್ರೋಣರು ರಣರಂಗದಲ್ಲಿ ಎರಡು ಬಾಣಗಳಿಂದ ವಿರಾಟ, ದ್ರುಪದರನ್ನು ಪರಲೋಕಕ್ಕೆ ಕಳುಹಿಸಿದರು. ಆಗ ಭೀಮನು ಅಶ್ವತ್ಥಾಮ ಮುಂತಾದವರನ್ನು ಗೆದ್ದು ಧೃಷ್ಟದ್ಯುಮ್ನನನ್ನು ರಕ್ಷಿಸಿದನು.
ಧೃಷ್ಟದ್ಯುಮ್ನೋ ಭೀಮಸೇನಾಭಿಗುಪ್ತೋ
ದ್ರೋಣಂ ಹಂತುಂ ಯತ್ನಮುಚ್ಚೈಶ್ಚಕಾರ |
ನಿವಾರಯಾಮಾಸ ಗುರುಃ ಶರೌಘೈ-
ರ್ಧೃಷ್ಟದ್ಯುಮ್ನಂ ಸೋಽಪಿ ತಂ ಸಾಯಕೇನ ||
ವಿವ್ಯಾಧ ತೇನಾಭಿಹತಃ ಸ ಮೂರ್ಚ್ಛಾ-
ಮವಾಪ ವಿಪ್ರೋ ನಿಷಸಾದ ಚಾಽಶು ||
ಭೀಮನ ರಕ್ಷಣೆಯಲ್ಲಿದ್ದ ಧೃಷ್ಟದ್ಯುಮ್ನನು ದ್ರೋಣರನ್ನು ಕೊಲ್ಲಲು ಬಹಳ ಪ್ರಯತ್ನ ಮಾಡಿದನು. ದ್ರೋಣರು ಬಾಣಸಮೂಹಗಳಿಂದ ಅವನನ್ನು ತಡೆದರು. ಅವನೂ ದ್ರೋಣರನ್ನು ಬಾಣದಿಂದ ಹೊಡೆದನು. ದ್ರೋಣರು ಕೂಡಲೇ ಆ ಏಟಿಗೆ ಮೂರ್ಛೆ ಹೊಂದಿ ಕುಳಿತುಬಿಟ್ಟರು.
ಧೃಷ್ಟದ್ಯುಮ್ನಃ ಸತ್ವರಂ ಖಡ್ಗಚರ್ಮಣೀ
ಆದಾಯ ತಸ್ಯಾಽರುರುಹೇ ರಥೋತ್ತಮಮ್ |
ಸಂಜ್ಞಾಮವಾಪ್ಯಾಥ ಗುರುಃ ಶರೌಘೈಃ
ಪ್ರಾದೇಶಮಾತ್ರೈರ್ವ್ಯಥಯಾಮಾಸ ತಂ ಚ ||
ಧೃಷ್ಟದ್ಯುಮ್ನ ಬೇಗನೆ ಖಡ್ಗ-ಗುರಾಣಿ ಹಿಡಿದು ದ್ರೋಣರ ಉತ್ತಮವಾದ ರಥವೇರಲು ತೊಡಗಿದನು. ಒಡನೆ ದ್ರೋಣರು ಎಚ್ಚೆತ್ತು ಗೇಣುದ್ದದ ಬಾಣ ಸಮೂಹಗಳಿಂದ ಅವನನ್ನು ಪೀಡಿಸಿದರು.
ಸ ತೈರತಿವ್ಯಥಿತಸ್ತದ್ರಥಾಚ್ಚ
ಪರಾವೃತ್ತಃ ಸ್ವಂ ರಥಮಾರುರೋಹ |
ಸುಸಂರಬ್ಧೌ ತೌ ಪುನರೇವ ಯುದ್ಧಂ
ಸಂಚಕ್ರತುರ್ಧೃಷ್ಟಶರಾಂಬುಧಾರೌ ||
ಧೃಷ್ಟದ್ಯುಮ್ನನು ಆ ಬಾಣಗಳಿಂದ ಬಹಳ ವೇದನೆ ಹೊಂದಿ ದ್ರೋಣರ ರಥದಿಂದ ಹಿಂದೆ ಬಂದು ತನ್ನ ರಥವನ್ನೇರಿದನು. ಇಬ್ಬರೂ

ಬಹಳ ಯತ್ನಿಸುತ್ತ ಬಾಣಗಳ ಜಲಧಾರೆ ಸುರಿಸುತ್ತಾ ಪುನಃ ಯುದ್ಧ ಮಾಡಿದರು.
ನಿವಾರ್ಯ ಶತ್ರುಂ ಸ ಶರೈರ್ಬ್ರಹ್ಮಾಸ್ತ್ರಮಸೃಜದ್ ದ್ವಿಜಃ |
ತೇನ ಸಂದಾಹಯಾಮಾಸ ಪಾಂಚಾಲಾನ್ ಸುಬಹೂನ್ ರಣೇ |
ಪುರುಜಿತ್ ಕುಂತಿಭೋಜಶ್ಚ ತೇನಾನ್ಯೇ ಚ ಹತಾಸ್ತದಾ ||
ದ್ರೋಣರು ಬಾಣಗಳಿಂದ ಧೃಷ್ಟದ್ಯುಮ್ನನನ್ನು ತಡೆದು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದರು. ಅದರಿಂದ ಬಹುಮಂದಿ ಪಾಂಚಾಲರನ್ನು ಸುಟ್ಟರು. ಪುರುಜಿತ್, ಕುಂತಿಭೋಜ ಮತ್ತು ಇನ್ನಿತರರು ಆಗ ಯುದ್ಧದಲ್ಲಿ ಅವರಿಂದ ಹತರಾದರು.
* * * * *
ನೂರ ಮೂವತ್ತೊಂದನೆಯ ಅಧ್ಯಾಯ
ಅರ್ಜುನನಿಂದ ಸೈಂಧವನ ಶಿರಶ್ಚೇದ.
ಶ್ರುತ್ವಾ ನಿನಾದಂ ಧನುಷಶ್ಚ ತಸ್ಯ
ವಿಸ್ಪಷ್ಟಮುತ್ಕೃಷ್ಟಮಿವಾಂತಕಸ್ಯ |
ಶಕ್ರಾಶನಿಸ್ಫೋಟಸಮಂ ಸುಘೋರಂ
ವಿಕೃಷ್ಯಮಾಣಸ್ಯ ಧನಂಜಯೇನ || 1 ||
ತ್ರಾಸೋದ್ವಿಗ್ನಂ ತಥೋದ್ಭ್ರಾಂತಂ ತ್ವದೀಯಂ ತದ್ಬಲಂ ನೃಪ |
ಯುಗಾಂತವಾತಸಂಕ್ಷುಬ್ಧಂ ಚಲದ್ವೀಚಿತರಂಗಿತಮ್ || 2 ||
ಧನಂಜಯನಿಂದ ಎಳೆಯಲ್ಪಡುವ ಧನುಸ್ಸಿನ ಅತ್ಯಂತ ಘೋರವಾದ, ಇಂದ್ರನ ವಜ್ರಾಯುಧದ ಸ್ಫೋಟಕ್ಕೆ ಸಮವಾದ, ಯಮನ ಆಕ್ರೋಶಶಬ್ದಗಳಿಗೆ ಸಮವಾದ, ಅತ್ಯಂತ ಸ್ಪಷ್ಟವಾದ ಘೋಷವನ್ನು ಕೇಳಿ ಎಲೈ ರಾಜನೇ, ಹೆದರಿಕೆಯಿಂದ ಉದ್ವೇಗಗೊಂಡ ಮತ್ತು ದಿಗ್ಭ್ರಾಂತವಾದ ನಿನ್ನ ಸೈನ್ಯವು ಯುಗಾಂತಕಾಲದ ವಾಯುವಿನಿಂದ ಕ್ಷೋಭೆಗೊಂಡ, ಮೇಲಿಂದ ಮೇಲೆ ಬರುವ ವೀಚಿತರಂಗಗಳಿಂದ ಕೂಡಿದ ಸಮುದ್ರದಂತೆ ಆಯಿತು.
ಮಧ್ಯಂದಿನಗತಂ ಸೂರ್ಯಮಾಪತಂತಮಿವಾಂಬರೇ |
ನ ಶೇಕುಃ ಸರ್ವಭೂತಾನಿ ಪಾಂಡವಂ ಪ್ರತಿವೀಕ್ಷಿತುಮ್ || 3 ||
ಮಧ್ಯಾಹ್ನದಲ್ಲಿನ ಸಮಯದಲ್ಲಿ ಆಕಾಶದಲ್ಲಿ ಸಾಗುವ ಸೂರ್ಯನಂತೆ ಇದ್ದ ಅರ್ಜುನನನ್ನು ಪ್ರತಿಯಾಗಿ ನೋಡಲು ಯಾವ ಪ್ರಾಣಿಯೂ ಸಮರ್ಥವಾಗಲಿಲ್ಲ.
ಸ ರಣೇ ವ್ಯಚರತ್ ಪಾರ್ಥಃ ಪ್ರೇಕ್ಷ್ಯಮಾಣೋ ಧನಂಜಯಃ |
ಯುಗಪದ್ ದಿಕ್ಷು ಸರ್ವಾಸು ಸರ್ವಾಣ್ಯಸ್ತ್ರಾಣಿ ದರ್ಶಯನ್ || 4 ||
ಅರ್ಜುನನು ರಣರಂಗವನ್ನು ನೋಡುತ್ತಾ ಸಂಚರಿಸಿ, ಎಲ್ಲ ದಿಕ್ಕುಗಳಲ್ಲಿಯೂ ಒಂದೇ ಕಾಲದಲ್ಲಿ ತನ್ನ ಅಸ್ತ್ರಗಳ ಸಾಮರ್ಥ್ಯವನ್ನು ತೋರಿಸಿದನು.
ಆದದಾನಂ ಮಹಾರಾಜ ಸಂದಧಾನಂ ಚ ಪಾಂಡವಮ್ |
ಉತ್ಕರ್ಷಂತಂ ಸೃಜಂತಂ ಚ ನ ಸ್ಮ ಪಶ್ಯಾಮ ಲಾಘವಾತ್ || 5 ||
ಎಲೈ ಮಹಾರಾಜನೇ, ಅವನ ಕ್ಷಿಪ್ರತೆಯಿಂದ ಅರ್ಜುನನು ಬತ್ತಳಿಕೆಯಿಂದ ಬಾಣಗಳನ್ನು ತೆಗೆದುಕೊಳ್ಳುವುದನ್ನೂ, ಬಾಣವನ್ನು ಹೂಡುವುದನ್ನೂ, ಹೆದೆಯನ್ನು ಎಳೆಯುವುದನ್ನೂ ಮತ್ತು ಬಾಣವನ್ನು ಪ್ರಯೋಗಿಸುವುದನ್ನೂ ನಾವು ಕಾಣಲಿಲ್ಲ.
ತತಃ ಕ್ರುದ್ಧೋ ಮಹಾಬಾಹುರೈಂದ್ರಮಸ್ತ್ರಂ ದುರಾಸದಮ್ |
ಪ್ರಾದುಶ್ಚಕ್ರೇ ಮಹಾರಾಜ ತ್ರಾಸಯನ್ ಸರ್ವಭಾರತಾನ್ || 6 ||
ಎಲೈ ಮಹಾರಾಜನೇ, ಆಗ ಮಹಾಬಾಹುವಾದ ಕೋಪಗೊಂಡ ಅರ್ಜುನನು ಎಲ್ಲ ಕೌರವರನ್ನು ಭಯಗೊಳಿಸುತ್ತಾ ಹತ್ತಿರ ಸುಳಿಯಲು ಸಾಧ್ಯವಿಲ್ಲದ ಐಂದ್ರಾಸ್ತ್ರವನ್ನು ಪ್ರಯೋಗಿಸಿದನು.
ತತಃ ಶರಾಃ ಪ್ರಾದುರಾಸನ್ ದಿವ್ಯಾಸ್ತ್ರಪ್ರತಿಮಂತ್ರಿತಾಃ |
ಪ್ರದೀಪ್ತಾಶ್ಚ ಶಿಖಿಮುಖಾಃ ಶತಶೋಽಥ ಸಹಸ್ರಶಃ || 7 ||
ಆಗ ಜ್ವಲಿಸುವ ಅಗ್ರಭಾಗವುಳ್ಳ ದಿವ್ಯಾಸ್ತ್ರ ಮಂತ್ರಿತವಾದ ಬಾಣಗಳು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಪ್ರಾದುರ್ಭವಿಸಿದವು.
ಆಕರ್ಣಪೂರ್ಣನಿರ್ಮುಕ್ತೈರಗ್ನ್ಯರ್ಕಾಂಶುನಿಭೈಃ ಶರೈಃ |
ನಭೋಽಭವತ್ ತದ್ದುಷ್ಪ್ರೇಕ್ಷ್ಯಮುಲ್ಕಾಭಿರಿವ ಸಂವೃತಮ್ || 8 ||
ಕಿವಿಯವರೆಗೂ ಹೆದೆಯನ್ನು ಪೂರ್ಣವಾಗಿ ಎಳೆದು ಪ್ರಯೋಗಿಸಿದ, ಸೂರ್ಯನ- ಅಗ್ನಿಯ ಕಿರಣಗಳನ್ನು ಹೋಲುವ ಬಾಣಗಳಿಂದ ತುಂಬಿದ ಆಕಾಶವು ಉಲ್ಕೆಗಳಿಂದ ತುಂಬಿದಂತೆ ನೋಡಲು ಅಸಾಧ್ಯವಾಯಿತು.
ತತಃ ಶಸ್ತ್ರಾಂಧಕಾರಂ ತತ್ ಕೌರವ್ಯೈಃ ಸಮುದೀರಿತಮ್ |
ಅಶಕ್ಯಂ ಮನಸಾಽಪ್ಯನ್ಯೈಃ ಪಾಂಡವಃ ಸಂಭ್ರಮನ್ನಿವ || 9 ||
ನಾಶಯಾಮಾಸ ವಿಕ್ರಮ್ಯ ಶರೈರ್ದಿವ್ಯಾಸ್ತ್ರಮಂತ್ರಿತೈಃ |
ನೈಶಂ ತಮೋಽಂಶುಭಿಃ ಕ್ಷಿಪ್ರಂ ದಿನಾದಾವಿವ ಭಾಸ್ಕರಃ || 10 ||
ಆಗ ಕೌರವರು ಉಂಟುಮಾಡಿದ ಬೇರೆಯವರು ನಾಶ ಮಾಡಲು ಮನಸ್ಸಿನಿಂದಲೂ ಯೋಚಿಸಲಾಗದ ಶಸ್ತ್ರಾಂಧಕಾರವನ್ನು ಅರ್ಜುನನು ಕ್ಷಿಪ್ರವಾಗಿ ದಿವ್ಯಾಸ್ತ್ರಮಂತ್ರಿತವಾದ ಬಾಣಗಳಿಂದ ದಿನದ ಆರಂಭದಲ್ಲಿ ತನ್ನ ಕಿರಣಗಳಿಂದ ಸೂರ್ಯನು ರಾತ್ರಿಯ ಕತ್ತಲನ್ನು ಶೀಘ್ರವಾಗಿ ನಾಶ ಮಾಡುವಂತೆ ನಾಶ ಮಾಡಿದನು.

ತತಸ್ತು ತಾವಕಂ ಸೈನ್ಯಂ ದೀಪ್ತೈಃ ಶರಗಭಸ್ತಿಭಿಃ |
ಆಕ್ಷಿಪತ್ ಪಲ್ವಲಾಂಬೂನಿ ನಿದಾಘಾರ್ಕ ಇವ ಪ್ರಭುಃ ॥ 11 ॥
ಅನಂತರ ತನ್ನ ದೀಪ್ತವಾದ ಬಾಣಗಳೆಂಬ ಕಿರಣಗಳಿಂದ ಪ್ರಭುವಾದ ಅರ್ಜುನನು ಬೇಸಿಗೆಯ ಕಾಲದ ಸೂರ್ಯನು ಔಗು ಪ್ರದೇಶದ ನೀರನ್ನು ಒಣಗಿಸುವಂತೆ ನಿನ್ನ ಸೈನ್ಯವನ್ನು ತಾಪಗೊಳಿಸಿದನು.
ತತೋ ದಿವ್ಯಾಸ್ತ್ರವಿದುಷಾ ಪ್ರಹಿತಾಃ ಸಾಯಕಾಂಶವಃ |
ಸಮಾಪ್ಲವನ್ ದ್ವಿಷತ್ಸೈನ್ಯಂ ಲೋಕಂ ಭಾನೋರಿವಾಂಶವಃ ॥ 12 ॥
ಆಗ ದಿವ್ಯಾಸ್ತ್ರವೇದಿಯಾದ ಅರ್ಜುನನಿಂದ ಕಳುಹಿಸಲ್ಪಟ್ಟ ಬಾಣಗಳ ಕಿರಣಗಳು ಸೂರ್ಯಕಿರಣಗಳು ಲೋಕವನ್ನು ತುಂಬಿದಂತೆ ಶತ್ರುಸೈನ್ಯವನ್ನು ತುಂಬಿದವು.
ಅಥಾಪರೇ ಸಮುತ್ಸೃಷ್ಟಾ ವಿಶಿಖಾಸ್ತಿಗ್ಮತೇಜಸಃ |
ಹೃದಯಾನ್ಯಾಶು ವೀರಾಣಾಂ ವಿವಿಶುಃ ಪ್ರಿಯಬಂಧುರವತ್ ॥ 13 ॥
ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಕ್ರೂರವಾದ ಸಾಮರ್ಥ್ಯವುಳ್ಳ ಬೇರೆ ಬಾಣಗಳು ಪ್ರಿಯಬಂಧುಗಳಂತೆ ವೀರರ ಹೃದಯವನ್ನು ಪ್ರವೇಶಿಸಿದವು.
ಯ ಏನಮೀಯುಃ ಸಮರೇ ತ್ವದ್ಯೋಧಾಃ ಶೂರಮಾನಿನಃ |
ಶಲಭಾ ಇವ ತೇ ದೀಪ್ತಮಗ್ನಿಂ ಪ್ರಾಪ್ಯ ಯಯುಃ ಕ್ಷಯಮ್ ॥ 14 ॥
ಅರ್ಜುನನನ್ನು ಸಮೀಪಿಸಿದ ತಮ್ಮನ್ನು ಶೂರರೆಂದು ತಿಳಿಯುವ ನಿನ್ನ ಯೋಧರು ಜ್ವಲಿಸುವ ಅಗ್ನಿಯನ್ನು ಸಮೀಪಿಸಿದ ಪತಂಗಗಳಂತೆ ವಿನಾಶವನ್ನು ಹೊಂದಿದರು.
ಏವಂ ಸ ಮೃದ್ನನ್ ಶತ್ರೂಣಾಂ ಜೀವಿತಾನಿ ಯಶಾಂಸಿ ಚ |
ಪಾರ್ಥಶ್ಚಚಾರ ಸಂಗ್ರಾಮೇ ಮೃತ್ಯುರ್ವಿಗ್ರಹವಾನಿವ ॥ 15 ॥
ಹೀಗೆ ಅರ್ಜುನನು ಶತ್ರುಗಳ ಜೀವಿತವನ್ನೂ ಮತ್ತು ಕೀರ್ತಿಯನ್ನೂ ನಾಶ ಪಡಿಸುತ್ತಾ, ವಿಗ್ರಹವನ್ನು ಧರಿಸಿದ ಯಮನಂತೆ ರಣರಂಗದಲ್ಲಿ ಸಂಚರಿಸಿದನು.
ಸ ಕಿರೀಟಾನಿ ವಸಶತ್ರುಣಿ ಸಾಂಗದಾನ್ ವಿಪುಲಾನ್ ಭುಜಾನ್ |
ಸಕುಂಡಲಯುಗಾನ್ ಕರ್ಣಾನ್ ಕೇಷಾಂಚಿದಹರಚ್ಛರೈಃ ॥ 16 ॥
ಅವನು ತನ್ನ ಬಾಣಗಳಿಂದ ಕೆಲವರ ಕಿರೀಟಗಳನ್ನೂ, ವಸ್ತ್ರವನ್ನೂ, ಅಂಗದ ಯುಕ್ತವಾದ ವಿಪುಲವಾದ ಭುಜಗಳನ್ನೂ, ಕರ್ಣ-ಕುಂಡಲಗಳಿಂದ ಸಹಿತವಾದ ಕಿವಿಗಳನ್ನೂ ಕತ್ತರಿಸಿದನು.
ಸತೋಮರಾನ್ ಗಜಸ್ಥಾನಾಂ ಸಪ್ರಾಸಾನ್ ಹಯಸಾದಿನಾಮ್ |
ಸಚರ್ಮಣಃ ಪದಾತೀನಾಂ ರಥಿನಾಂ ಚ ಸಧನ್ವನಃ ॥
ಸಪ್ರತೋದಾನ್ನಿಯಂತೃಣಾಂ ಬಾಹೂಂಶ್ಚಿಚ್ಛೇದ ಪಾಂಡವಃ ॥ 17 ॥
ಅರ್ಜುನನು ಗಜಾರೋಹಿಗಳ ತೋಮರ ಸಹಿತವಾದ ಬಾಹುಗಳನ್ನೂ, ಅಶ್ವಾರೋಹಿಗಳ ಪ್ರಾಸ ಸಹಿತವಾದ ಬಾಹುಗಳನ್ನೂ, ಪದಾತಿಗಳ ಗುರಾಣಿಯಿಂದ ಸಹಿತವಾದ ಬಾಹುಗಳನ್ನೂ, ರಥಿಕರ ಧನುಸ್ಸಿನಿಂದ ಸಹಿತವಾದ ಬಾಹುಗಳನ್ನೂ, ಸಾರಥಿಗಳ ಚಾವಟಿಯಿಂದ ಸಹಿತವಾದ ಬಾಹುಗಳನ್ನೂ ಕತ್ತರಿಸಿದನು.
ಪ್ರದೀಪ್ತೋಗ್ರಶರಾರ್ಚಿಷ್ಮಾನ್ ಬಭೌ ತತ್ರ ಧನಂಜಯಃ |
ಸವಿಷ್ಫುಲಿಂಗಾಗ್ರಶಿಖೋ ಜ್ವಲನ್ನಿವ ಹುತಾಶನಃ ॥ 18 ॥
ಅರ್ಜುನನು ರಣರಂಗದಲ್ಲಿ ಜ್ವಲಿಸುವ ಉಗ್ರವಾದ ಬಾಣಗಳೆಂಬ ಕಿಡಿಗಳಿಂದ ಕೂಡಿದವನಾಗಿ, ಕಿಡಿಗಳಿಂದ ಮತ್ತು ಉಗ್ರಜ್ವಾಲೆಗಳಿಂದ ಜ್ವಲಿಸುವ ಅಗ್ನಿಯಂತೆ ಶೋಭಿಸಿದನು.
ತಂ ದೇವರಾಜಪ್ರತಿಮಂ ಸರ್ವಶಸ್ತ್ರಭೃತಾಂ ವರಮ್ |
ಯುಗಪದ್ ದಿಕ್ಷು ಸರ್ವಾಸು ರಥಸ್ಥಂ ಪುರುಷರ್ಷಭಮ್ ॥ 19 ॥
ನಿಕ್ಷಿಪಂತಂ ಮಹಾಸಶತ್ರಣಿ ಪ್ರೇಕ್ಷಣೀಯಂ ಧನಂಜಯಮ್ |
ನೃತ್ಯಂತಂ ರಥಮಾರ್ಗೇಷು ಧನುರ್ಜ್ಯಾತಳನಾದಿನಮ್ ॥ 20 ॥
ನಿರೀಕ್ಷಿತುಂ ನ ಶೇಕುಸ್ತೇ ಯತ್ನವಂತೋಽಪಿ ಪಾರ್ಥಿವಾಃ |
ಮಧ್ಯಂದಿನಗತಂ ಸೂರ್ಯಂ ಪ್ರತಪಂತಮಿವಾಂಬರೇ ॥ 21 ॥
ಇಂದ್ರನನ್ನು ಹೋಲುವ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಏಕಕಾಲದಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಮಹಾಸ್ತ್ರವನ್ನು ಪ್ರಯೋಗಿಸುವ, ಮನೋಹರನಾದ, ರಥ ಮಾರ್ಗಗಳಲ್ಲಿ ನರ್ತನವನ್ನು ಮಾಡುವ, ಧನುಸ್ಸಿನ ಮತ್ತು ಜ್ಯಾತಳದ ಘೋಷದಿಂದ ಕೂಡಿದ, ರಥಶ್ರೇಷ್ಠನಾದ ಪುರುಷಶ್ರೇಷ್ಠನಾದ ಮಧ್ಯಾಹ್ನದಲ್ಲಿ ಆಕಾಶದಲ್ಲಿ ಜ್ವಲಿಸುವ ಸೂರ್ಯನಂತಿದ್ದ ಅರ್ಜುನನನ್ನು ನೋಡಲು ಪ್ರಯತ್ನಪಟ್ಟರೂ ಆ ಶತ್ರುರಾಜರು ಸಮರ್ಥರಾಗಲಿಲ್ಲ.
ದೀಪ್ತೋಗ್ರಸಂಭೃತಶರಃ ಕಿರೀಟೀ ವಿರರಾಜ ಹ |
ವರ್ಷಾಸ್ವಿವೋದೀರ್ಣಜಲಃ ಸೇಂದ್ರಧನ್ವಾಂಬುದೋ ಮಹಾನ್ ॥ 22 ॥
ಜ್ವಲಿಸುವ ಉಗ್ರ ಬಾಣಗಳಿಂದ ಕೂಡಿದ ಅರ್ಜುನನು ಮಳೆಗಾಲದಲ್ಲಿ ಬಹಳ ಜಲವನ್ನು ಹೊಂದಿ ಕಾಮನಬಿಲ್ಲಿನಿಂದ ಕೂಡಿದ ದೊಡ್ಡ ಮೋಡದಂತೆ ವಿರಾಜಿಸಿದನು.
ಮಹಾಸ್ತ್ರಸಂಪ್ಲವೇ ತಸ್ಮಿನ್ ಜಿಷ್ಣುನಾ ಸಂಪ್ರವರ್ತಿತೇ |
ಸುದುಸ್ತರೇ ಮಹಾಘೋರೇ ಮಮಜ್ಜುರ್ಯೋಧಪುಂಗವಾಃ ॥ 23 ॥

ಅರ್ಜುನನಿಂದ ಪ್ರವರ್ತಿತವಾದ, ದಾಟಲು ಅಸಾಧ್ಯವಾದ, ಅತ್ಯಂತ ಘೋರವಾದ, ಮಹಾಸ್ತ್ರಗಳ ಪ್ರವಾಹದಲ್ಲಿ ಯೋಧಶ್ರೇಷ್ಠರು ಮುಳುಗಿಹೋದರು.

ಉತ್ಕೃತ್ತವದನೈರ್ದೇಹೈಃ ಶರೀರೈಃ ಕೃತ್ತಬಾಹುಭಿಃ |
ಭುಜೈಶ್ಚ ಪಾಣಿನಿರ್ಮುಕ್ತೈಃ ಪಾಣಿಭಿರ್ವ್ಯಂಗುಳೀಕೃತೈಃ ॥ 24 ॥
ಕೃತ್ತಾಗ್ರಹಸ್ತೈಃ ಕರಿಭಿಃ ಕೃತ್ತದಂತೈರ್ಮದೋತ್ಕಟೈಃ |
ಹಯೈಶ್ಚ ವಿಧುರಗ್ರೀವೈ ರಥೈಶ್ಚ ಶಕಲೀಕೃತೈಃ ॥ 25 ॥
ನಿಕೃತ್ತಾನ್ತ್ರೈಃ ಕೃತ್ತಪಾದೈಸ್ತಥಾಽನ್ಯೈಃ ಕೃತ್ತಸಂಧಿಭಿಃ |
ನಿಶ್ಚೇಷ್ಟೈರ್ವಿಷ್ಫುರದ್ಭಿಶ್ಚ ಶತಶೋಽಥ ಸಹಸ್ರಶಃ ॥ 26 ॥
ಮೃತ್ಯೋರಾಘಾತಲಲಿತಂ ತತ್ಪಾರ್ಥಾಯೋಧನಂ ಮಹತ್ |
ಅಪಶ್ಯಾಮ ಮಹೀಪಾಲ ಭೀರೂಣಾಂ ಭಯವರ್ಧನಮ್ ॥ 27 ॥

ಶಿರಸ್ಸನ್ನು ಕತ್ತರಿಸಿದ ದೇಹಗಳಿಂದಲೂ, ಬಾಹುಗಳನ್ನು ಕತ್ತರಿಸಿದ ಶರೀರಗಳಿಂದಲೂ, ಹಸ್ತರಹಿತವಾದ ಭುಜಗಳಿಂದಲೂ, ಅಂಗುಲಿಗಳಿಂದ ರಹಿತವಾದ ಹಸ್ತಗಳಿಂದಲೂ, ಸೊಂಡಿಲನ್ನು ಕತ್ತರಿಸಿದ ದಂತವನ್ನು ಭಗ್ನಗೊಳಿಸಿದ ಮದೋದ್ಕಟವಾದ ಗಜಗಳಿಂದಲೂ, ಕತ್ತಿಲ್ಲದ ಅಶ್ವಗಳಿಂದಲೂ, ಪುಡಿಮಾಡಲ್ಪಟ್ಟ ರಥಗಳಿಂದಲೂ, ಕತ್ತರಿಸಲ್ಪಟ್ಟ ಕರುಳುಗಳಿಂದಲೂ, ಕತ್ತರಿಸಲ್ಪಟ್ಟ ಪಾದಗಳಿಂದಲೂ, ಹಾಗೆಯೇ ಕತ್ತರಿಸಲ್ಪಟ್ಟ ಸಂಧಿಗಳಿಂದಲೂ ನಿಶ್ಚೇಷ್ಟರಾದ ಅಥವಾ ಶತಸಹಸ್ರಸಂಖ್ಯೆಯಲ್ಲಿ ಹೊರಳಾಡುತ್ತಿರುವ ಯೋಧರಿಂದಲೂ ಕೂಡಿದ ಎಲೈ ಮಹೀಪಾಲನೇ, ಭೀರುಗಳಿಗೆ ಭಯವನ್ನು ಹೆಚ್ಚಿಸುವ ಆ ದೊಡ್ಡ ರಣಭೂಮಿಯು ಮೃತ್ಯುವಿನ ವಧಾಸ್ಥಾನದಂತಿರುವುದನ್ನು ಪಾರ್ಥನನ್ನು ನಾವು ನೋಡಿದೆವು.

ಆಕ್ರೀಡಮಿವ ರುದ್ರಸ್ಯ ಪುರಾಭ್ಯರ್ದಯತಃ ಪಶೂನ್ |
ಗಜಾನಾಂ ಕ್ಷುರನಿರ್ಮುಕ್ತೈಃ ಕರೈಃ ಸಭುಜಗೇವ ಭೂಃ ॥ 28 ॥
ಕ್ವಚಿದ್ ಬಭೌ ಸ್ರಗ್ವಿಣೀವ ವಕ್ತ್ರಪದ್ಮೈಃ ಸಮಾಚಿತಾ |
ವಿಚಿತ್ರೋಷ್ಣೀಷಮುಕುಟೈಃ ಕೇಯೂರಾಂಗಕುಂಡಲೈಃ ॥ 29 ॥
ಸ್ವರ್ಣಚಿತ್ರತನುತ್ರೈಶ್ಚ ಭಾಂಡೈಶ್ಚ ಗಜವಾಜಿನಾಮ್ |
ಕಿರೀಟಶತಸಂಕೀರ್ಣಾ ತತ್ರ ತತ್ರ ಸಮಾಚಿತಾ |
ವಿರರಾಜ ಭೃಶಂ ಚಿತ್ರಾ ಮಹೀ ನವವಧೂರಿವ ॥ 30 ॥

ಹಿಂದೆ ಪಶುಗಳನ್ನು ಸಂಹರಿಸುವ ರುದ್ರದೇವರ ವಿಹಾರ ಸ್ಥಾನದಂತೆ ಭೂಮಿಯು ಕೆಲವು ಕಡೆ ಗಜಗಳ ಕತ್ತರಿಸಲ್ಪಟ್ಟ ಸೊಂಡಿಲುಗಳಿಂದ ಸರ್ಪಗಳಿಂದ ಕೂಡಿರುವಂತೆಯೂ, ಮುಖಕಮಲಗಳಿಂದ ತುಂಬಿದ ಒಂದು ಕಡೆ ಮಾಲೆಯನ್ನು ಧರಿಸಿರುವಂತೆಯೂ, ಯೋಧರ ವಿಚಿತ್ರವಾದ ಉಷ್ಣೀಷ ಮತ್ತು ಕಿರೀಟದಿಂದಲೂ, ಕೇಯೂರಾಂಗದ ಕುಂಡಲಗಳಿಂದಲೂ, ಸ್ವರ್ಣಖಚಿತವಾದ ಕವಚಗಳಿಂದಲೂ, ಗಜಾಶ್ವಗಳ ಅಲಂಕಾರಸಾಮಗ್ರಿಗಳಿಂದಲೂ, ಅಲ್ಲಲ್ಲಿ ಬಿದ್ದ ನೂರಾರು ಕಿರೀಟಗಳಿಂದಲೂ, ನಿಬಿಡವಾಗಿಯೂ, ಚಿತ್ರವಾಗಿಯೂ ತೋರುತ್ತಿದ್ದ ಭೂಮಿಯು ನವವಧುವಿನಂತೆ ಶೋಭಿಸಿತು.

ಮಜ್ಜಾಮೇದಃಕರ್ದಮಿನೀಂ ಶೋಣಿತೌಘತರಂಗಿಣೀಮ್ |
ಮರ್ಮಾಸ್ಥಿಬಿರಗಾಧಾಂ ಚ ಕೇಶಶೈವಲಶಾದ್ವಲಾಮ್ ॥ 31 ॥
ಶಿರೋಬಾಹೂಪಲತಟಾಂ ರುಗ್ಣಕ್ರೋಡಾಸ್ಥಿಸಂಕಟಾಮ್ |
ಚಿತ್ರಧ್ವಜಪತಾಕಾಢ್ಯಾಂ ಛತ್ರಚಾಪೋರ್ಮಿಮಾಲಿನೀಮ್ ॥ 32 ॥
ವಿಗತಾಸುಮಹಾಕಾಯಾಂ ಗಜದೇಹಾಭಿಸಂಕುಲಾಮ್ |
ರಥೋಡುಪಶತಾಕೀರ್ಣಾಂ ಹಯಸಂಘಾತರೋಧಸಮ್ ॥ 33 ॥

ಮಜ್ಜೆ-ಮೇದಸ್ಸುಗಳೆಂಬ ಕೆಸರಿನಿಂದ ಕೂಡಿದ, ರಕ್ತಸಮೂಹವೆಂಬ ತರಂಗಗಳಿಂದ ಕೂಡಿದ, ಮರ್ಮಸ್ಥಾನವೆಂಬ ಮೂಳೆಯಿಂದ ಬಹಳ ಆಳವಾದ, ಕೇಶಗಳೆಂಬ ಶೈವಲ ಮತ್ತು ಮೃದುಪ್ರದೇಶಗಳನ್ನು ಹೊಂದಿದ, ಶಿರಸ್ಸು ಮತ್ತು ಬಾಹುಗಳೆಂಬ ಕಲ್ಲಿನ ದಡವನ್ನು ಹೊಂದಿದ, ಭಗ್ನವಾದ ಕ್ರೋಡಗಳ ಅಸ್ಥಿಗಳಿಂದ ನಿಬಿಡವಾದ, ವಿಚಿತ್ರಧ್ವಜವೆಂಬ ಪತಾಕೆಗಳಿಂದ ಕೂಡಿದ, ಛತ್ರ ಮತ್ತು ಧನುಸ್ಸೆಂಬ ಅಲೆಗಳಿಂದ ಕೂಡಿದ, ಮೃತರ ದೇಹಗಳೆಂಬ ದೊಡ್ಡ ಶರೀರವುಳ್ಳ, ಗಜದೇಹಗಳಿಂದ ನಿಬಿಡವಾದ, ರಥಗಳೆಂಬ ನೂರಾರು ಚಂದ್ರಗಳಿಂದ ಕೂಡಿದ, ಅಶ್ವಸಮೂಹವೆಂಬ ತೀರವುಳ್ಳ;

ರಥಚಕ್ರಯುಗೇಷಾಕ್ಷಕೂಬರೈರತಿದುರ್ಗಮಾಮ್ |
ಪ್ರಾಸಾಸಿಶಕ್ತಿಪರಶುವಿಶಿಖಾಹಿದುರಾಸದಾಮ್ ॥ 34 ॥
ಬಲಕಂಕಮಹಾನಕ್ರಾಂ ಗೋಮಾಯುಮಕರೋತ್ಕಟಾಮ್ |
ಗೃಧ್ರೋದಗ್ರಮಹಾಗ್ರಾಹಾಂ ಶಿವಾವಿರುತಭೈರವಾಮ್ ॥ 35 ॥
ನೃತ್ಯತ್ಪ್ರೇತಪಿಶಾಚಾಗ್ರ್ಯೈರ್ಭೂತಾಕೀರ್ಣಾಂ ಸಹಸ್ರಶಃ |
ಗತಾಸುಯೋಧನಿಶ್ಚೇಷ್ಟಶರೀರಶತವಾಹಿನೀಮ್ ॥ 36 ॥
ಮಹಾಪ್ರತಿಭಯಾಂ ರೌದ್ರಾಂ ಘೋರಾಂ ವೈತರಣೀಮಿವ |
ನದೀಂ ಪ್ರವರ್ತಯಾಮಾಸ ಭೀರೂಣಾಂ ಭಯವರ್ಧಿನೀಮ್ ॥ 37 ॥

ಭಗ್ನವಾದ ರಥದ ಚಕ್ರಗಳು, ನೊಗಗಳು, ಮೂಕಿಗಳು, ತೂಬುಗಳು, ಕೂಬರಗಳು- ಇವುಗಳಿಂದ ಅತ್ಯಂತ ದುರ್ಗಮವಾದ, ಪ್ರಾಸಗಳು, ಖಡ್ಗಗಳು, ಶಕ್ತಿಗಳು, ಪರಶುಗಳು, ಬಾಣಗಳು ಎಂಬ ಸರ್ಪಗಳಿಂದ ಸಮೀಪ ಸುಳಿಯಲು ಅಸಾಧ್ಯವಾದ, ಬಲ-ಕಂಕ ಪಕ್ಷಿಗಳೆಂಬ ಮಹಾಮೊಸಳೆಗಳಿಂದ ಕೂಡಿದ, ನರಿಗಳೆಂಬ ದೊಡ್ಡ ಮೊಸಳೆಗಳಿಂದ ಉತ್ಕಟವಾದ, ಹದ್ದುಗಳೆಂಬ ಕ್ರೂರವಾದ ಮಹಾ

ಮೊಸಳೆಗಳಿಂದ ಕೂಡಿದ, ಹೆಣ್ಣುನರಿಗಳ ರೋದನದಿಂದ ಭಯಂಕರವಾದ, ನರ್ತಿಸುವ ಪ್ರೇತ-ಪಿಶಾಚಿಗಳಿಂದ ಕೂಡಿದ, ಸಹಸ್ರಾರು ಭೂತಗಳಿಂದ ತುಂಬಿದ, ಮೃತರಾದ ಯೋಧರ ನಿಶ್ಚೇಷ್ಟವಾದ ನೂರಾರು ಶರೀರಗಳನ್ನು ಕೊಚ್ಚಿಕೊಂಡು ಹೋಗುವ, ಮಹಾಭಯಂಕರವೂ, ರೌದ್ರವೂ, ವೈತರಿಣಿಯಂತೆ ಘೋರವೂ, ಭೀರುಗಳಿಗೆ (ಹೇಡಿಗಳಿಗೆ) ಭಯವರ್ಧಿನಿಯೂ ಆದ ನದಿಯನ್ನು ಅರ್ಜುನನು ಹರಿಸಿದನು.
ತಂ ದೃಷ್ಟ್ವಾ ತಸ್ಯ ವಿಕ್ರಾಂತಮಂತಕಸ್ಯೇವ ರೂಪಿಣಃ |
ಅಭೂತಪೂರ್ವಂ ಕುರುಷು ಭಯಮಾಗಾದ್ ರಣಾಜಿರೇ ॥ 38 ॥
ಶರೀರವನ್ನು ಧರಿಸಿದ ಯಮನಂತೆ ಇದ್ದ ಅವನ ಹಿಂದೆಂದೂ ಕಾಣದ ಆ ಪರಾಕ್ರಮವನ್ನು ನೋಡಿ ರಣರಂಗದಲ್ಲಿ ಕುರುಸೇನೆಗೆ ಭಯವುಂಟಾಯಿತು.
ತತ ಆದಾಯ ವೀರಾಣಾಮಸ್ತ್ರೈರಸ್ತ್ರಾಣಿ ಪಾಂಡವಃ |
ಆತ್ಮಾನಂ ರೌದ್ರಮಾಚಷ್ಟ ರೌದ್ರಕರ್ಮಣ್ಯಧಿಷ್ಠಿತಃ ॥ 39 ॥
ತತೋ ರಥವರಾನ್ ರಾಜನ್ನತ್ಯತಿಕ್ರಾಮದರ್ಜುನಃ ॥ 40 ॥
ಆಗ ಪಾಂಡವನಾದ ಅರ್ಜುನನು ವೀರರ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನುಂಗಿ ಹಾಕುತ್ತಾ ಭಯಂಕರವಾದ ಕರ್ಮವನ್ನು ಮಾಡುವವನಾಗಿ ತನ್ನನ್ನು ಭಯಂಕರವಾಗಿ ತೋರಿಸಿಕೊಳ್ಳುತ್ತಾ ಎಲ್ಲ ರಥಶ್ರೇಷ್ಠರನ್ನೂ ಮೀರಿಸಿದನು.
ಮಧ್ಯಂದಿನಗತಂ ಸೂರ್ಯಂ ಪ್ರತಪಂತಮಿವಾಂಬರೇ |
ನ ಶೇಕುಃ ಸರ್ವಭೂತಾನಿ ಪಾಂಡವಂ ಪ್ರತಿವೀಕ್ಷಿತುಮ್ ॥ 41 ॥
ಮಧ್ಯಾಹ್ನದ ಕಾಲದಲ್ಲಿ ಆಕಾಶದಲ್ಲಿ ಜ್ವಲಿಸುವ ಸೂರ್ಯನಂತೆ ಇರುವ ಅರ್ಜುನನನ್ನು ನೋಡಲು ಯಾವ ಪ್ರಾಣಿಗಳೂ ಶಕ್ತವಾಗಲಿಲ್ಲ.
ಪ್ರಸೃತಾಂಸ್ತಸ್ಯ ಗಾಂಡೀವಾತ್ ಶರವ್ರಾತಾನ್ ಮಹಾತ್ಮನಃ |
ಸಂಗ್ರಾಮೇ ಸಂಪ್ರಪಶ್ಯಾಮೋ ಹಂಸಪಂಕ್ತಿಮಿವಾಂಬರೇ ॥ 42 ॥
ಆ ಮಹಾತ್ಮನ ಗಾಂಡೀವದಿಂದ ರಣರಂಗದಲ್ಲಿ ಹೊರಹೊಮ್ಮಿದ ಬಾಣ ಸಮೂಹಗಳನ್ನು ಆಕಾಶದಲ್ಲಿ ಚಲಿಸುವ ಹಂಸಪಕ್ಷಿಗಳ ಪಂಕ್ತಿಯಂತೆ ನಾವು ನೋಡಿದೆವು.
ವಿನಿವಾರ್ಯ ಸ ವೀರಾಣಾಮಸ್ತ್ರೈರಸ್ತ್ರಾಣಿ ಸರ್ವತಃ |
ದರ್ಶಯನ್ ರೌದ್ರಮಾತ್ಮಾನಮುಗ್ರೇ ಕರ್ಮಣಿ ಧಿಷ್ಠಿತಃ ॥ 43 ॥
ಸ ತಾನ್ ರಥವರಾನ್ ರಾಜನ್ನತ್ಯಾಕ್ರಾಮತ್ತದಾರ್ಜುನಃ |
ಮೋಹಯನ್ನಿವ ನಾರಾಚೈರ್ಜಯದ್ರಥವಧೇಪ್ಸಯಾ ॥ 44 ॥
ಅರ್ಜುನನು ವೀರರ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ಎಲ್ಲ ಕಡೆಗಳಲ್ಲಿಯೂ ನಿವಾರಿಸಿ, ಉಗ್ರವಾದಕರ್ಮವನ್ನು ಮಾಡುವವನಾಗಿ ತನ್ನನ್ನು ಉಗ್ರವಾಗಿ ತೋರಿಸಿಕೊಳ್ಳುತ್ತಾ, ಎಲ್ಲ ರಥಶ್ರೇಷ್ಠರನ್ನೂ ಮೀರಿ ಜಯದ್ರಥನನ್ನು ಕೊಲ್ಲುವ ಅಭಿಪ್ರಾಯದಿಂದ ಕೌರವ ಯೋಧರನ್ನು ಮರುಳುಗೊಳಿಸುವಂತೆ ತೋರಿದನು.
ವಿಸೃಜನ್ ದಿಕ್ಷು ಸರ್ವಾಸು ಶರಾನಚ್ಯುತಸಾರಥಿಃ |
ಸರಥೋ ವ್ಯಚರತ್ತೂರ್ಣಂ ಪ್ರೇಕ್ಷಣೀಯೋ ಧನಂಜಯಃ ॥ 45 ॥
ಅಚ್ಯುತಸಾರಥಿಯಾದ ಧನಂಜಯನು ಎಲ್ಲ ದಿಕ್ಕುಗಳಲ್ಲಿಯೂ ಬಾಣಗಳನ್ನು ಪ್ರಯೋಗಿಸುತ್ತಾ ರಥಸಹಿತನಾಗಿ, ಮನೋಹರನಾಗಿ ತೀವ್ರವಾಗಿ ಸಂಚರಿಸಿದನು.
ಭ್ರಮಂತ ಇವ ಶೂರಸ್ಯ ಶರವ್ರಾತಾ ಮಹಾತ್ಮನಃ |
ಅದೃಶ್ಯಂತಾಂತರಿಕ್ಷಸ್ಥಾಃ ಶತಶೋಽಥ ಸಹಸ್ರಶಃ ॥ 46 ॥
ಮಹಾತ್ಮನಾದ ಶೂರನ ಅವನ ಬಾಣಸಮೂಹಗಳು ನೂರಾರು ಸಾವಿರಾರು ಸಂಖ್ಯೆಯಲ್ಲಿ ಅಂತರಿಕ್ಷದಲ್ಲಿ ಸಂಚರಿಸುತ್ತಿರುವಂತೆ ಕಂಡುಬಂದವು.
ಆದದಾನಂ ಮಹೇಷ್ವಾಸಂ ಸಂದಧಾನಂ ಚ ಸಾಯಕಮ್ |
ವಿಸೃಜಂತಂ ಚ ಕೌಂತೇಯಂ ನಾನುಪಶ್ಯಾಮ ವೈ ತದಾ ॥ 47 ॥
ಆಗ ಮಹಾಧನುರ್ಧಾರಿಯಾದ ಕೌಂತೇಯನು ಬಾಣಗಳನ್ನು ತೆಗೆದುಕೊಳ್ಳುವುದನ್ನು, ಹೂಡುವುದನ್ನು, ಪ್ರಯೋಗಿಸುವುದನ್ನು ನಾವು ಕಾಣಲಿಲ್ಲ.
ತಥಾ ಸರ್ವಾ ದಿಶೋ ರಾಜನ್ ಸರ್ವಾಂಶ್ಚ ರಥಿನೋ ರಣೇ |
ಆಕುಲೀಕೃತ್ಯ ಕೌಂತೇಯೋ ಜಯದ್ರಥಮುಪಾದ್ರವತ್ |
ವಿವ್ಯಾಧ ಚ ಚತುಃಷಷ್ಟ್ಯಾ ಶರಾಣಾಂ ನತಪರ್ವಣಾಮ್ ॥ 48 ॥
ಎಲೈ ರಾಜನೇ, ಆ ರೀತಿಯಲ್ಲಿ ರಣರಂಗದಲ್ಲಿ ಎಲ್ಲ ದಿಕ್ಕುಗಳನ್ನೂ ಮತ್ತು ಎಲ್ಲ ಮಹಾರಥರನ್ನೂ ವ್ಯಾಕುಲಗೊಳಿಸಿ ಸೈಂಧವನನ್ನು ಸಮೀಪಿಸಿ ಬಾಗಿದ ತುದಿಯುಳ್ಳ ಅರವತ್ನಾಲ್ಕು ಬಾಣಗಳಿಂದ ಹೊಡೆದನು.
ಸೈಂಧವಾಭಿಮುಖಂ ಯಾಂತಂ ಯೋಧಾಃ ಸಂಪ್ರೇಕ್ಷ್ಯ ಪಾಂಡವಮ್ |
ನ್ಯವರ್ತಂತ ರಣಾದ್ವೀರಾಃ ನಿರಾಶಾಸ್ತಸ್ಯ ಜೀವಿತೇ ॥ 49 ॥
ಸೈಂಧವನಿಗೆ ಅಭಿಮುಖವಾಗಿ ಹೋಗುವ ಅರ್ಜುನನನ್ನು ನೋಡಿ ಯೋಧರು ಸೈಂಧವರ ಜೀವನದಲ್ಲಿ ನಿರಾಶರಾಗಿ ರಣರಂಗದಿಂದ ಹಿಂದಿರುಗಿದರು.
ಯೋಽಯೋಭ್ಯಧಾವದಾಕ್ರಂದೇ ತಾವಕಃ ಪಾಂಡವಂ ರಣೇ |

ತಸ್ಯ ತಸ್ಯಾಂತಗಾ ಬಾಣಾಃ ಶರೀರೇ ನ್ಯಪತನ್ ಪ್ರಭೋ ॥ 50 ॥
ಎಲೈ ಪ್ರಭುವೇ, ಯಾವ ಯಾವ ನಿನ್ನವನು ರಣರಂಗದಲ್ಲಿ ಪಾಂಡವನಾದ ಅರ್ಜುನನ ಎದುರಿಗೆ ಬಂದನೋ ಅವನವನ ಶರೀರದಲ್ಲಿ ಪ್ರಾಣಾಂತಕವಾದ ಬಾಣಗಳು ಬಿದ್ದವು.
ಕಬಂಧಸಂಕುಲಂ ಚಕ್ರೇ ತವ ಸೈನ್ಯಂ ಮಹಾರಥಃ |
ಅರ್ಜುನೋ ಜಯತಾಂ ಶ್ರೇಷ್ಠಃ ಶರೈರಗ್ನ್ಯಂಶುಸನ್ನಿಭೈಃ ॥ 51 ॥
ಮಹಾರಥನಾದ ಜಯಶಾಲಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಅಗ್ನಿಕಿರಣಗಳಂತಹ ಬಾಣಗಳಿಂದ ರಣರಂಗವನ್ನು ರುಂಡಗಳಿಂದ ನಿಬಿಡ(ದಟ್ಟ)ವನ್ನಾಗಿ ಮಾಡಿದನು.
ಏವಂ ತತ್ರೈವ ರಾಜೇಂದ್ರ ಚತುರಂಗಬಲಂ ತದಾ |
ವ್ಯಾಕುಲೀಕೃತ್ಯ ಕೌಂತೇಯೋ ಜಯದ್ರಥಮುಪಾದ್ರವತ್ ॥ 52 ॥
ರಾಜೇಂದ್ರನೇ, ಹೀಗೆ ಕೌಂತೇಯನು ನಿನ್ನ ಚತುರಂಗಬಲವನ್ನು ವ್ಯಾಕುಲಗೊಳಿಸಿ ಜಯದ್ರಥನ ಸಮೀಪಕ್ಕೆ ಬಂದನು.
ದ್ರೌಣಿಂ ಪಂಚಾಶತಾಽವಿಧ್ಯದ್ ವೃಷಸೇನಂ ತ್ರಿಭಿಃ ಶರೈಃ |
ಕೃಪಾಯಮಾಣಃ ಕೌಂತೇಯಃ ಕೃಪಂ ನವಭಿರಾರ್ದಯತ್ ॥ 53 ॥
ಕೌಂತೇಯನಾದ ಅರ್ಜುನನು ಅಶ್ವತ್ಥಾಮರನ್ನು ಐವತ್ತು ಬಾಣಗಳಿಂದಲೂ, ವೃಷಸೇನನನ್ನು ಮೂರು ಬಾಣಗಳಿಂದಲೂ, ಕೃಪರನ್ನು ಕೃಪೆಯನ್ನು ಹೊಂದಿ ಒಂಬತ್ತು ಬಾಣಗಳಿಂದಲೂ ಮರ್ದಿಸಿದನು.
ಶಲ್ಯಂ ಷೋಡಶಭಿರ್ಬಾಣೈಃ ಕರ್ಣಂ ದ್ವಾತ್ರಿಂಶತಾ ಶರೈಃ |
ಸೈಂಧವಂ ಚ ಚತುಃಷಷ್ಟ್ಯಾ ವಿದ್ಧ್ವಾ ಸಿಂಹ ಇವಾನದತ್ ॥ 54 ॥
ಶಲ್ಯನನ್ನು ಹದಿನಾರು ಬಾಣಗಳಿಂದಲೂ, ಕರ್ಣನನ್ನು ಮೂವತ್ತೆರಡು ಬಾಣಗಳಿಂದಲೂ, ಸೈಂಧವನನ್ನು ಅರವತ್ನಾಲ್ಕು ಬಾಣಗಳಿಂದಲೂ ಹೊಡೆದು ಸಿಂಹನಾದವನ್ನು ಮಾಡಿದನು.
ಸೈಂಧವಸ್ತು ತಥಾ ವಿದ್ಧಃ ಶರೈರ್ಗಾಂಡೀವಧನ್ವನಾ |
ನ ಚಕ್ಷಮೇ ಸುಸಂಕ್ರುದ್ಧಸ್ತೋತ್ತ್ರಾರ್ದಿತ ಇವ ದ್ವಿಪಃ ॥ 55 ॥
ಗಾಂಡೀವ ಧನುರ್ಧಾರಿಯಾದ ಅರ್ಜುನನಿಂದ ಆ ರೀತಿಯಲ್ಲಿ ಬಾಣಗಳಿಂದ ಹೊಡೆಯಲ್ಪಟ್ಟ ಸೈಂಧವನು ಅದನ್ನು ಸಹಿಸದೆ ಅಂಕುಶದಿಂದ ಹೊಡೆದ ಗಜದಂತೆ ಬಹಳ ಕೋಪಗೊಂಡನು.
ಸ ವರಾಹಧ್ವಜಸ್ತೂರ್ಣಂ ಗಾರ್ಧ್ರಪತ್ರಾನಜಿಹ್ಮಗಾನ್ |
ಕ್ರುದ್ಧಾಶೀವಿಷಸಂಕಾಶಾನ್ ಕರ್ಮಾರಪರಿಮಾರ್ಜಿತಾನ್ ॥ 56 ॥
ಆಕರ್ಣಪೂರ್ಣಾಂಶ್ಚಿಕ್ಷೇಪ ಫಲ್ಗುನಸ್ಯ ರಥಂ ಪ್ರತಿ |
ತ್ರಿಭಿಸ್ತು ವಿದ್ಧ್ವಾ ಗೋವಿಂದಂ ನಾರಾಚೈಃ ಷಡ್ಭಿರರ್ಜುನಮ್ ॥ 57॥
ಅಷ್ಟಭಿರ್ವಾಜಿನೋಽವಿಧ್ಯದ್ ಧ್ವಜಂ ಚೈಕೇನ ಪತ್ರಿಣಾ |
ಭೂಯಶ್ಚೈವಾರ್ಜುನಂ ಸಂಖ್ಯೇ ಶರವರ್ಷೈರವಾಕಿರತ್ ॥ 58 ॥
ವರಾಹಧ್ವಜವುಳ್ಳ ಅವನು ಗೃಧ್ರಪತ್ರವನ್ನು ಹೊಂದಿದ, ನೇರವಾಗಿ ಸಾಗುವ, ಕೋಪಗೊಂಡ ಸರ್ಪಗಳನ್ನು ಹೋಲುವ, ಕಮ್ಮಾರರಿಂದ ಸಂಸ್ಕರಿಸಲ್ಪಟ್ಟ ಬಾಣಗಳನ್ನು ಹೆದೆಯನ್ನು ಕಿವಿಯವರೆಗೂ ಎಳೆದು ಫಲ್ಗುನನ ರಥದ ಮೇಲೆ ಪ್ರಯೋಗಿಸಿದನು. ಕೃಷ್ಣನನ್ನು ಮೂರು ಬಾಣಗಳಿಂದಲೂ, ಅರ್ಜುನನನ್ನು ಆರು ಬಾಣಗಳಿಂದಲೂ, ಅರ್ಜುನನ ರಥದ ಅಶ್ವಗಳನ್ನು ಎಂಟು ಬಾಣಗಳಿಂದಲೂ, ಧ್ವಜವನ್ನು ಒಂದು ಬಾಣದಿಂದಲೂ ಹೊಡೆದು, ಪುನಃ ಅರ್ಜುನನನ್ನು ರಣರಂಗದಲ್ಲಿ ಬಾಣಗಳ ಮಳೆಯಿಂದ ಹಿಂಸಿಸಿದನು (ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು).
ಸ ವಿಕ್ಷಿಪ್ಯಾರ್ಜುನಸ್ತೂರ್ಣಂ ಸೈಂಧವಪ್ರಹಿತಾನ್ ಶರಾನ್ |
ಯುಗಪತ್ತಸ್ಯ ಚಿಚ್ಛೇದ ಶರಾಭ್ಯಾಂ ಸೈಂಧವಸ್ಯ ಹ ॥
ಸಾರಥೇಶ್ಚ ಶಿರಃ ಕಾಯಾದ್ ಧ್ವಜಂ ಚ ಸಮಲಂಕೃತಮ್ ॥ 59 ॥
ಅರ್ಜುನನು ಸೈಂಧವನು ಪ್ರಯೋಗಿಸಿದ ಬಾಣಗಳನ್ನು ಶೀಘ್ರವಾಗಿ ನಾಶಗೊಳಿಸಿ, ಎರಡು ಬಾಣಗಳಿಂದ ಸೈಂಧವನ ಸಾರಥಿಯ ಶಿರಸ್ಸನ್ನು ಮತ್ತು ಅಲಂಕೃತವಾದ ಅವನ ರಥದ ಧ್ವಜವನ್ನು ಏಕಕಾಲದಲ್ಲಿ ಕತ್ತರಿಸಿದನು.
ಸ ಚ್ಛಿನ್ನಯಷ್ಟಿಃ ಸುಮಹಾನ್ ಧನಂಜಯಶರಾಹತಃ |
ವರಾಹಃ ಸಿಂಧುರಾಜಸ್ಯ ಪಪಾತೇಂದುಸಮಪ್ರಭಃ ॥ 60 ॥
ಧನಂಜಯನ ಬಾಣಗಳಿಂದ ದಂಡವು ಭಗ್ನವಾದ ಚಂದ್ರನ ಕಾಂತಿಯನ್ನು ಹೊಂದಿದ, ಸೈಂಧವನ ವರಾಹಧ್ವಜವು ಕೆಳಗೆ ಬಿದ್ದಿತು.
ಆದಿತ್ಯಂ ಪ್ರೇಕ್ಷಮಾಣಸ್ತು ಬೀಭತ್ಸುಃ ಸೃಕ್ಕಿಣೀ ಲಿಹನ್ |
ಅಪಶ್ಯನ್ನಾಂತರಂ ತಸ್ಯ ರಕ್ಷಿಭಿಃ ಸಂವೃತಸ್ಯ ವೈ ॥ 61 ॥
ಅಭವತ್ಕ್ರೋಧರಕ್ತಾಕ್ಷೋ ವ್ಯಾತ್ತಾನನ ಇವಾಂತಕಃ |
ಅಥಾಬ್ರವೀದ್ ವಾಸುದೇವಃ ಕುಂತೀಪುತ್ರಂ ಧನಂಜಯಮ್ ॥ 62 ॥
ಅರ್ಜುನನು ಸೂರ್ಯನನ್ನು ನೋಡುತ್ತಾ, ಕಟಬಾಯಿಯನ್ನು ಸವರಿಕೊಳ್ಳುತ್ತಾ ರಕ್ಷಕರಿಂದ ಸುತ್ತುವರಿಯಲ್ಪಟ್ಟ ಸೈಂಧವನನ್ನು ಹೊಡೆಯಲು ಒಂದು ಅವಕಾಶವನ್ನೂ ಕಾಣದೆ ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ಬಾಯನ್ನು ತೆರೆದು ಅಂತಕನಂತೆ ಆದನು. ಆಗ ಕೃಷ್ಣನು ಕುಂತೀಪುತ್ರನಾದ ಧನಂಜಯನನ್ನು ಕುರಿತು ಹೇಳಿದನು.
ಎಲೈ ಮಹಾಬಾಹುವೇ, ಆರು ಮಹಾರಥರಾದ ವೀರರಿಂದ ಮಧ್ಯದಲ್ಲಿ ಇರಿಸಿಕೊಂಡು ರಕ್ಷಿಸಲ್ಪಡುತ್ತಿರುವ ಜೀವಿತವನ್ನು ಬಯಸಿದ ಈ ಸೈಂಧವನು ಭಯದಿಂದ ಕೂಡಿದ್ದಾನೆ.

ನೈವ ಶಕ್ಯಸ್ತ್ವಯಾ ಹಂತುಂ ನಿರ್ವ್ಯಾಜಂ ಭರತರ್ಷಭ |
ಸೃಕ್ಷ್ಯಾಮ್ಯಹಮುಪಾಯಂ ತಮಾದಿತ್ಯಸ್ಯಾಪವಾರಣೇ |
ತತೋಽಸ್ತಂ ಗತಮಾದಿತ್ಯಂ ಮಂಸ್ಯತೇ ಸಿಂಧುರಾಡಿಹ ॥ 63 ॥
ಎಲೈ ಪುರುಷಶ್ರೇಷ್ಠನೇ, ಭರತಶ್ರೇಷ್ಠನೇ, ಈ ಆರು ಮಹಾರಥರನ್ನು ಯುದ್ಧದಲ್ಲಿ ಗೆಲ್ಲದೆ ಇವನನ್ನು ನಿರ್ವ್ಯಾಜವಾಗಿ ನೀನು ಕೊಲ್ಲಲು ಸಾಧ್ಯವಿಲ್ಲ. ನಾನು ಸೂರ್ಯನನ್ನು ಮರೆಮಾಡಲು ಒಂದು ಉಪಾಯವನ್ನು ಸೃಷ್ಟಿಸುವೆನು. ಆಗ ಸೈಂಧವನು ಸೂರ್ಯನು ಅಸ್ತಂಗತನಾದನೆಂದು ತಿಳಿಯುವನು.
ತತೋಽಸ್ಯ ವಿಸ್ಮಯಃ ಪಾರ್ಥ ಹರ್ಷಶ್ಚೈವ ಭವಿಷ್ಯತಿ |
ಆತ್ಮಜೀವಿತಲಾಭಾಚ್ಚ ಪ್ರತಿಜ್ಞಾಯಾಶ್ಚ ನಾಶನಾತ್ ॥ 64 ॥
ಎಲೈ ಪಾರ್ಥನೇ, ಆಗ ಅವನಿಗೆ ತನ್ನ ಜೀವನವು ಉಳಿದು ನಿನ್ನ ಪ್ರತಿಜ್ಞೆಯು ಭಂಗವಾಗುವುದರಿಂದ ವಿಸ್ಮಯವೂ, ಆಶ್ಚರ್ಯವೂ ಆಗುವುದು.
ಅಸ್ತಂಗತಮಿವಾದಿತ್ಯಂ ದೃಷ್ಟ್ವಾ ಮೋಹೇನ ಬಾಲಿಶಃ |
ನ ಹಿ ಶಕ್ಷ್ಯತ್ಯಥಾಽಽತ್ಮಾನಂ ರಕ್ಷಿತುಂ ಹರ್ಷಸಂಭವಾತ್ ॥ 65 ॥
ಬಾಲಿಶನಾದ ಅವನು ಅಸ್ತಂಗತನಾದ ಆದಿತ್ಯನನ್ನು ನೋಡಿ ಉಂಟಾದ ಹರ್ಷದಿಂದ ಮೂಢನಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳುವುದಿಲ್ಲ.
ಏತಸ್ಮಿನ್ನೇವ ಕಾಲೇ ತು ಪ್ರಹರ್ತವ್ಯಂ ಧನಂಜಯ |
ಜಯದ್ರಥಸ್ಯ ಕ್ಷುದ್ರಸ್ಯ ಸವಿತುರ್ದರ್ಶನಾರ್ಥಿನಃ |
ವ್ಯಪೇಕ್ಷಾ ನೈವ ಕರ್ತವ್ಯಾ ಗತೋಽಸ್ತಮಿತಿ ಭಾಸ್ಕರಃ ॥ 66 ॥
ಎಲೈ ಧನಂಜಯನೇ, ಆ ಕಾಲದಲ್ಲಿ ಸೂರ್ಯನನ್ನು ನೋಡಲು ಪ್ರಯತ್ನಿಸುವ ಅವನನ್ನು ಹೊಡೆಯಬೇಕು. ಸೂರ್ಯನು ಅಸ್ತಂಗತನಾದನೆಂದು ಚಿಂತಿಸಬಾರದು ಎಂದು ಹೇಳಿದನು.
ಏವಮಸ್ತ್ವಿತಿ ಬೀಭತ್ಸುಃ ಕೇಶವಂ ಪ್ರತ್ಯಭಾಷತ |
ತತೋಽಸೃಜತ್ ತಮಃ ಕೃಷ್ಣಃ ಸೂರ್ಯಸ್ಯಾವರಣಂ ಪ್ರತಿ |
ಯೋಗೀ ಯೋಗೇನ ಸಂಯುಕ್ತೋ ಯೋಗಿನಾಮೀಶ್ವರೋ ಹರಿಃ ॥
ಅರ್ಜುನನು ಕೇಶವನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು. ಯೋಗೀಶ್ವರನಾದ ಹರಿಯು ಯೋಗದಿಂದ ಸಂಯುಕ್ತನಾಗಿ ಸೂರ್ಯನನ್ನು ಆವರಿಸಲು ಕತ್ತಲೆಯನ್ನು ಸೃಷ್ಟಿಸಿದನು.
ಸೃಷ್ಟೇ ತಮಸಿ ಕೃಷ್ಣೇನ ಗತೋಽಸ್ತಮಿತಿ ಭಾಸ್ಕರಃ ॥
ತ್ವದೀಯಾ ಜಹೃಷುರ್ಯೋಧಾಃ ಪಾರ್ಥನಾಶಾನ್ನರಾಧಿಪ ॥ 68 ॥
ಎಲೈ ರಾಜನೇ, ಕೃಷ್ಣನು ತಮಸ್ಸನ್ನು ಸೃಷ್ಟಿಸುತ್ತಿರಲು ನಿನ್ನ ಯೋಧರು ಸೂರ್ಯನು ಅಸ್ತಂಗತನಾದನೆಂದು ತಿಳಿದು ಅರ್ಜುನನ ನಾಶದ ಕಾರಣದಿಂದಾಗಿ ಸಂತೋಷಪಟ್ಟರು.
ಪಾರ್ಥಸ್ಯ ಬಲಮಜ್ಞಾನಾತ್ತಮೋ ದೃಷ್ಟ್ವಾ ಸುದುಃಖಿತಮ್ |
ಅಭವಂಸ್ತಾವಕಾ ಯೋಧಾ ಹರ್ಷಸಂಕುಲಚೇತಸಃ ॥ 69 ॥
ಅರ್ಜುನ ಸೇನೆಯು ಕತ್ತಲೆಯನ್ನು ನೋಡಿ ಅಜ್ಞಾನದಿಂದ ಬಹಳ ದುಃಖವನ್ನು ಹೊಂದಿತು. ನಿನ್ನ ಯೋಧರು ಹರ್ಷಗೊಂಡ ಮನಸ್ಸುಳ್ಳವರಾದರು.
ತೇ ಪ್ರಹೃಷ್ಟಾ ರಣೇ ರಾಜನ್ನಪಶ್ಯನ್ ಸೈನಿಕಾ ರವಿಮ್ |
ಉನ್ನಾಮ್ಯ ವಕಾಣಿ ತದಾ ಸ ಚ ರಾಜಾ ಜಯದ್ರಥಃ ॥ 70 ॥
ಎಲೈ ರಾಜನೇ, ಸಂತೋಷಗೊಂಡ ನಿನ್ನ ಸೈನಿಕರು ರಣರಂಗದಲ್ಲಿ ತಮ್ಮ ಮುಖಗಳನ್ನು ಎತ್ತಿ ಸೂರ್ಯನ ಕಡೆಗೆ ನೋಡಿದರು. ಸೈಂಧವನೂ ಹಾಗೆ ಮಾಡಿದನು.
ವೀಕ್ಷಮಾಣೇ ತತಸ್ತಸ್ಮಿನ್ ಸಿಂಧುರಾಜೇ ದಿವಾಕರಮ್ |
ಪುನರೇವಾಬ್ರವೀತ್ ಕೃಷ್ಣೋ ಧನಂಜಯಮಿದಂ ವಚಃ |
ಉನ್ನಮಯ್ಯ ಶಿರೋಗ್ರೀವಾಂ ವೀಕ್ಷತೇ ಸೂರ್ಯಮಂಡಲಮ್ |
ತಸ್ಯ ಶೀಘ್ರಂ ಪ್ರಷತ್ಕೇನ ಕಾಯಾಚ್ಛೀರ್ಷಮಪಾಹರ ॥ 71 ॥
ಸೈಂಧವನು ಸೂರ್ಯನನ್ನು ನೋಡುತ್ತಿರುವಾಗ ಕೃಷ್ಣನು ಧನಂಜಯನನ್ನು ಕುರಿತು ಸೈಂಧವನು ತನ್ನ ಕತ್ತು ಮತ್ತು ಮುಖವನ್ನು ಎತ್ತಿ ಸೂರ್ಯಮಂಡಲವನ್ನು ನೋಡುತ್ತಿದ್ದಾನೆ. ನೀನು ಬಾಣದಿಂದ ಶೀಘ್ರವಾಗಿ ಅವನ ಶಿರಸ್ಸನ್ನು ದೇಹದಿಂದ ಕತ್ತರಿಸು ಎಂದು ಪುನಃ ಹೇಳಿದನು.
ಸಂಜಯಃ
ಕೇಶವೇನೈವಮುಕ್ತಃ ಸನ್ನಮರ್ಷಾದ್ ರಕ್ತಲೋಚನಃ |
ಉದ್ವಬರ್ಹ ಶರಂ ತೀಕ್ಷ ್ಣಮಮರ್ರೈರಪಿ ದುಃಸಹಮ್ ॥ 72 ॥
ಸಂಜಯ ಕೇಶವನಿಂದ ಹೀಗೆ ಹೇಳಲ್ಪಟ್ಟ ಅರ್ಜುನನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ದೇವತೆಗಳಿಂದಲೂ ಸಹಿಸಲು ಅಸಾಧ್ಯವಾದ ತೀಕ್ಷ್ಣವಾದ ಒಂದು ಬಾಣವನ್ನು ಬತ್ತಳಿಕೆಯಿಂದ ತೆಗೆದನು.
ಏಕಂ ತೂಣೀಶಯಂ ಘೋರಮಿಂದ್ರಾಶನಿಸಮಪ್ರಭಮ್ |
ವರ್ಮಭೇದಿನಮತ್ಯರ್ಥಂ ಗಂಧಮಾಲ್ಯಾರ್ಚಿತಂ ಸದಾ ॥

ವಿಸಸರ್ಜ ತತಸ್ತೂರ್ಣಂ ಸೈಂಧವಸ್ಯ ರಥಂ ಪ್ರತಿ ॥ 73 ॥
ಅವನು ಬತ್ತಳಿಕೆಯಲ್ಲಿದ್ದ, ಇಂದ್ರನ ವಜ್ರಾಯುಧಕ್ಕೆ ಸಮವಾದ ಕಾಂತಿಯನ್ನು ಹೊಂದಿದ, ಘೋರವಾದ, ಪ್ರಧಾನವಾದ, ಕವಚವನ್ನೂ ಭೇದಿಸುವ, ಗಂಧಮಾಲ್ಯದಿಂದ ಯಾವಾಗಲೂ ಪೂಜಿತವಾದ, ಆ ಬಾಣವನ್ನು ಶೀಘ್ರವಾಗಿ ಸೈಂಧವನ ರಥದ ಮೇಲೆ ಪ್ರಯೋಗಿಸಿದನು.
ಸ ತು ಗಾಂಡೀವನಿರ್ಮುಕ್ತಃ ಶರಃ ಶ್ಯೇನ ಇವಾಶುಗಃ |
ಶಕುಂತಮಿವ ವೃಕ್ಷಾಗ್ರಾತ್ ಸೈಂಧವಸ್ಯಾಹರಚ್ಛಿರಃ ॥ 74 ॥
ಗಾಂಡೀವದಿಂದ ಹೊರಹೊಮ್ಮಿದ ಆ ಬಾಣವು ಶೀಘ್ರಗಾಮಿಯಾದ ಹದ್ದು ವೃಕ್ಷದ ತುದಿಯಲ್ಲಿರುವ ಪಕ್ಷಿಯನ್ನು ಹಾರಿಸಿದಂತೆ ಸೈಂಧವನ ಶಿರಸ್ಸನ್ನು ಕತ್ತರಿಸಿತು.
ಪ್ರಪತಿಷ್ಯತಿ ಶೀರ್ಷೇ ತು ಕೃಷ್ಣೋಽರ್ಜುನಮಥಾಬ್ರವೀತ್ |
ಪಾರ್ಥ ಪಾರ್ಥ ಶಿರೋ ಹ್ಯೇತದ್ ಯಥಾ ನೇಯಾನ್ಮಹೀತಳಮ್ ॥
ತಥಾ ಕುರು ಕುರುಶ್ರೇಷ್ಠ ವಕ್ಷ್ಯೇ ಯೇ ತಸ್ಯಾಪಿ ಕಾರಣಮ್ ॥ 75 ॥
ಆ ಶಿರಸ್ಸು ಬೀಳುತ್ತಿರುವಾಗ ಕೃಷ್ಣನು ಅರ್ಜುನನನ್ನು ಕುರಿತು, ಅರ್ಜುನ ಅರ್ಜುನ, ಎಲೈ ಕುರುಶ್ರೇಷ್ಠನೇ, ಈ ಶಿರಸ್ಸು ಭೂಮಿಯ ಮೇಲೆ ಬೀಳದಂತೆ ಮಾಡು. ಅದಕ್ಕೆ ಕಾರಣವನ್ನು ಹೇಳುವೆನು ಎಂದು ಹೇಳಿದನು.
ಶ್ರುತ್ವಾ ತು ವಚನಂ ತಸ್ಯ ತ್ವರಮಾಣೋಽಸ್ತ್ರಮಾಯಯಾ |
ತಥಾಽಹರಚ್ಛಿರಸ್ತಸ್ಯ ಶರೈರೂರ್ಧ್ವಂ ಧನಂಜಯಃ |
ದುರ್ಹೃದಾಮಪಹರ್ಷಾಯ ಸುಹೃದಾಂ ಹರ್ಷಣಾಯ ಚ ॥ 76 ॥
ಕೃಷ್ಣನ ಮಾತುಗಳನ್ನು ಕೇಳಿ, ಅರ್ಜುನನು ಜಾಗ್ರತೆಯಾಗಿ ಶತ್ರುಗಳಿಗೆ ದುಃಖವನ್ನೂ, ಮಿತ್ರರಿಗೆ ಸಂತೋಷವನ್ನೂ ಉಂಟು ಮಾಡುತ್ತಾ ತನ್ನ ಅಸ್ತ್ರ ಸಾಮರ್ಥ್ಯದಿಂದ ಬಾಣಗಳಿಂದ ಆ ಶಿರಸ್ಸನ್ನು ಮೇಲೆ ಹಾರಿಸಿದನು.
ತಿರ್ಯಗೂರ್ಧ್ವಮಧಶ್ಚೈವ ಪುನರೂರ್ಧ್ವಮಥಾಪಿ ಚ |
ದೀರ್ಘಕಾಲಮವಾಕ್ ಚೈವ ಸಂಪ್ರಕ್ರೀಡನ್ನಿವಾರ್ಜುನಃ ॥ 77 ॥
ಅಡ್ಡಲಾಗಿ, ಮೇಲ್ಮುಖವಾಗಿ, ಕೆಳಮುಖವಾಗಿ, ಪುನಃ ಮೇಲ್ಮುಖವಾಗಿ, ಬಹು ಕಾಲದವರೆಗೆ ಕೆಳಮುಖವಾಗಿ ಶಿರಸ್ಸನ್ನು ಹಾರಿಸುತ್ತಾ ಅರ್ಜುನನು ಆಟವಾಡಿದನು.
ತತ್ ಸೈನ್ಯಂ ಸರ್ವತೋ ಪಶ್ಯನ್ ಮಹದಾಶ್ಚರ್ಯಮದ್ಭುತಮ್ |
ಪ್ರಾಪಯತ್ ಸ ಶಿರೋ ಯಸ್ಮಾದ್ ಯೋಧಯನ್ನೇವ ಪಾರ್ಥಿವಾನ್ ॥
ಅರ್ಜುನನು ರಾಜರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಲೇ ಆ ಶಿರಸ್ಸನ್ನು ಹಾರಿಸುತ್ತಿದ್ದುದರಿಂದ ಆ ದೊಡ್ಡ ಅದ್ಭುತವಾದ ಆಶ್ಚರ್ಯವನ್ನು ಸೈನ್ಯದಲ್ಲಿದ್ದ ಎಲ್ಲರೂ ನೋಡಿದರು.
ಶರೈಃ ಕಂದುಕವತ್ ಕೃತ್ವಾ ತಸ್ಯಾಲೋಕಾಯ ಪಾಂಡವಃ |
ಸಮಂತಪಂಚಕಾದ್ ಬಾಹ್ಯೇ ಶಿರಸ್ತದಹರಚ್ಛರೈಃ ॥ 79 ॥
ಅರ್ಜುನನು ಶಿರಸ್ಸು ಕಾಣಿಸುವಂತೆ ಬಾಣಗಳಿಂದ ಅದನ್ನು ಚೆಂಡಿನಂತೆ ಮಾಡಿ (ಆಟವಾಡಿ) ತನ್ನ ಬಾಣಗಳಿಂದ ಅದನ್ನು ಸಮಂತಪಂಚಕದ ಹೊರಗೆ ಹಾರಿಸಿದನು.
ಜಯದ್ರಥಸ್ಯಾರ್ಜುನಬಾಣನಾಳಂ
ಮುಖಾರವಿಂದಂ ರುಧಿರಾಂಬುಸಿಕ್ತಮ್ |
ದೃಷ್ಟಂ ನರೈಶ್ಚೋಪರಿವರ್ತಮಾನಂ
ವಿದ್ಯಾಧರೋತ್ಸೃಷ್ಟಮಿವೈಕಪದ್ಮಮ್ ॥ 80 ॥
ಕೆಳಭಾಗದಿಂದ ಅರ್ಜುನನ ಬಾಣವೆಂಬ ನಾಳದಿಂದ ಸಹಿತವಾದ ಜಯದ್ರಥನ ರಕ್ತಸಿಕ್ತವಾದ ಆ ಮುಖಕಮಲವು ಮೇಲೆ ಹಾರುತ್ತಾ, ವಿದ್ಯಾಧರರಿಂದ ಬೀಳಿಸಲ್ಪಟ್ಟ ಒಂದು ಪದ್ಮದಂತೆ ಜನರಿಂದ ನೋಡಲ್ಪಟ್ಟಿತು.
ಸ ದೇವಶತ್ರೂನಿವ ದೇವರಾಜಃ
ಕಿರೀಟಮಾಲೀ ವ್ಯಧಮತ್ ಸಪತ್ನಾನ್ |
ಯಥಾ ತಮಾಂಸ್ಯಭ್ಯುದಿತಸ್ತಮೋಘ್ನಃ
ಪೂರ್ಣಃ ಪ್ರತಿಜ್ಞಾಂ ಸ ಸಮಾಪ್ಯ ವೀರಃ ॥ 81 ॥
ಕಿರೀಟಮಾಲಿಯಾದ ವೀರನಾದ ಅರ್ಜುನನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿ ದೇವರಾಜನಾದ ಇಂದ್ರನು ದೇವಶತ್ರುಗಳನ್ನು ನಾಶಪಡಿಸಿದಂತೆ, ಪೂರ್ಣವಾಗಿ ಉದಯಿಸಿದ ಸೂರ್ಯನು ತಮಸ್ಸನ್ನು ನಾಶಪಡಿಸಿದಂತೆ ಶತ್ರುವನ್ನು ನಾಶಪಡಿಸಿದನು.
ಅಥಾಬ್ರವೀತ್ ಕೇಶವಂ ಪಾಂಡವೇಯಃ
ಕಿಯಂತಮಧ್ವಾನಮಿದಂ ಹರಾಮಿ |
ಕಿಮರ್ಥಮೇತನ್ನ ನಿಪಾತ್ಯಮುರ್ವ್ಯಾಂ
ಕ್ವ ಚ ಪ್ರಯಾತವ್ಯಮಿದಂ ಚ ಶಂಸ ॥
ಶಕ್ನೋಮ್ಯಹಂ ಯತ್ರ ಭವಾನ್ ಬ್ರವೀತಿ
ತಂ ಭೂಮಿದೇಶಂ ಚ ಶಿರೋ ವಿನೇತುಮ್ ॥ 82 ॥
ಆಗ ಪಾಂಡುಪುತ್ರನಾದ ಅರ್ಜುನನು ಕೇಶವನನ್ನು ಕುರಿತು, ಈ ಶಿರಸ್ಸನ್ನು ಎಷ್ಟು ದೂರ ಹಾರಿಸಿಕೊಂಡು ಹೋಗಬೇಕು? ಇದು ಏಕೆ ನೆಲದ ಮೇಲೆ ಬೀಳಬಾರದು? ಇದನ್ನು ಎಲ್ಲಿಗೆ ತೆಗೆದುಕೊಂಡು ಹೋಗಬೇಕು ಎಂದು ಹೇಳು. ನೀನು ಎಲ್ಲಿಗೆ ಹೇಳುತ್ತೀಯೋ ಆ

ಭೂಪ್ರದೇಶಕ್ಕೆ ನಾನು ಶಿರಸ್ಸನ್ನು ಹಾರಿಸಿಕೊಂಡು ಹೋಗಲು ಸಮರ್ಥನಾಗಿದ್ದೇನೆ ಎಂದು ಹೇಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕತ್ರಿಂಶದಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೆರಡನೆಯ ಅಧ್ಯಾಯ
ಸೈಂಧವನ ಶಿರಸ್ಸನ್ನು ರಣರಂಗದಲ್ಲಿ ಬೀಳಿಸದಿರಲು ಕೃಷ್ಣನಿಂದ
ಕಾರಣ ನಿರೂಪಣೆ. ಸೈಂಧವನ ತಂದೆಯ ತೊಡೆಯಲ್ಲಿ
ಶಿರಸ್ಸಿನ ಪಾತ ಮತ್ತು ಅವನ ಮರಣ.
ಸಂಜಯಃ
ಪಾರ್ಥ ಪಾರ್ಥ ಶಿರೋ ಹ್ಯೇತತ್ ಯತ್ಕೃತೇ ನ ಪತೇದ್ ಭುವಿ |
ಶ್ರೂಯತಾಂ ತದ್ಯಥಾವೃತ್ತಂ ಕಾರಣಂ ಸೈಂಧವಂ ಪ್ರತಿ ॥ 1 ॥
ಏತಸ್ಮಿನ್ನೇವ ಕಾಲೇ ತು ತ್ವರಮಾಣೇ ದಿವಾಕರೇ |
ಅಬ್ರವೀತ್ ಪಾಂಡವಂ ತತ್ರ ತವರಮಾಣೋ ಜನಾರ್ದನಃ ॥ 2 ॥
ಸಂಜಯ ಈ ಕಾಲದಲ್ಲಿಯೇ ಸೂರ್ಯನು ಶೀಘ್ರವಾಗಿ ಸಾಗುತ್ತಿರಲು ಕೃಷ್ಣನು ತ್ವರೆ ಮಾಡುತ್ತಾ ಅರ್ಜುನನನ್ನು ಕುರಿತು ಹೇಳಿದನು-
ಅರ್ಜುನನೇ, ಈ ಶಿರಸ್ಸು ಏತಕ್ಕಾಗಿ ಭೂಮಿಯಲ್ಲಿ ಬೀಳಬಾರದೆಂಬುದಕ್ಕೆ ಸೈಂಧವನ ವಿಷಯದಲ್ಲಿ ಹಿಂದೆ ಜರುಗಿದ ಒಂದು
ಕಾರಣವನ್ನು ಕೇಳುವವನಾಗು.
ವೃದ್ಧಕ್ಷತ್ರಃ ಸೈಂಧವಸ್ಯ ಪಿತಾ ಜಗತಿ ವಿಶ್ರುತಃ |
ಸ ಕಾಲೇನೇಹ ಮಹತಾ ಸೈಂಧವಂ ಪ್ರಾಪ್ತವಾನ್ ಸುತಮ್ ॥ 3 ॥
ಲೋಕದಲ್ಲಿ ಪ್ರಸಿದ್ಧನಾದ ಸೈಂಧವನ ತಂದೆಯಾದ ವೃದ್ಧಕ್ಷತ್ರನು ಬಹಳ ಕಾಲದ ಮೇಲೆ ಶತ್ರುಸಂಹಾರಕನಾದ ಜಯದ್ರಥನನ್ನು
ಮಗನಾಗಿ ಪಡೆದನು.
ಜಯದ್ರಥಮಮಿತ್ರಘ್ನಂ ತಂ ಚೋವಾಚ ತತೋ ನೃಪಮ್ |
ಅಂತರ್ಹಿತಾ ತದಾ ವಾಣೀ ಮೇಘದುಂದುಭಿನಿಸ್ವನಾ ॥ 4 ॥
ಆಗ ಮೇಘದುಂದುಭಿಘೋಷದಂತಿದ್ದ ಒಂದು ಅದೃಶ್ಯವಾದ ವಾಣಿಯು ಆ ರಾಜನನ್ನು ಕುರಿತು ಹೇಳಿತು.
ತವಾತ್ಮಜೋಽಯಂ ಮರ್ತ್ಯೇಷು ಕುಲಶೀಲದಮಾದಿಭಿಃ |
ಗುಣೈರ್ಭವಿಷ್ಯತಿ ವಿಭೋ ಸದೃಶೋ ವಂಶಯೋರ್ದ್ವಯೋಃ |
ಕ್ಷತ್ರಿಯಪ್ರವರೋ ಲೋಕೇ ನಿತ್ಯಂ ಶೂರಾಭಿಸತ್ಕೃತಃ ॥ 5 ॥
ಎಲೈ ವಿಭುವೇ, ನಿನ್ನ ಈ ಪುತ್ರನು ತನ್ನ ಕುಲ-ಶೀಲ-ದಮಾದಿ ಗುಣಗಳಿಂದ ಎರಡು ವಂಶಗಳಿಗೂ ಯೋಗ್ಯನಾಗುವನು. ಲೋಕದಲ್ಲಿ
ಅವನು ಕ್ಷತ್ರಿಯಶ್ರೇಷ್ಠನೂ ಮತ್ತು ಯಾವಾಗಲೂ ಶೂರರಿಂದ ಸತ್ಕೃತನೂ ಆಗುವನು.
ಶತ್ರುಭಿರ್ಯುದ್ಧ್ಯಮಾನಸ್ಯ ಸಂಗ್ರಾಮೇ ತ್ವಸ್ಯ ಧನ್ವಿನಃ |
ಶಿರಶ್ಛೇತ್ಸ್ಯತಿ ಸಂಕ್ರುದ್ಧಃ ಶತ್ರುರ್ನಾಲಕ್ಷಿತೋ ಭುವಿ ॥ 6 ॥
ಈ ಧನುರ್ಧಾರಿಯು ಶತ್ರುಗಳ ಜೊತೆಯಲ್ಲಿ ರಣರಂಗದಲ್ಲಿ ಯುದ್ಧವನ್ನು ಮಾಡುವಾಗ ಇವನ ಶತ್ರುವು ಕಣ್ಣಿಗೆ ಕಾಣಿಸದಂತೆ ಇವನ
ಶಿರಸ್ಸನ್ನು ಕತ್ತರಿಸುವನು (ಎಂದು ಹೇಳಿತು).
ಏತಚ್ಛ್ರುತ್ವಾ ಸಿಂಧುರಾಜೋ ಧ್ಯಾತ್ವಾ ಚಿರಮರಿಂದಮ |
ಜ್ಞಾತೀನ್ ಸರ್ವಾನುವಾಚೇದಂ ಪುತ್ರಸ್ನೇಹಾಭಿಪೀಡಿತಃ ॥ 7 ॥
ಸಂಗ್ರಾಮೇ ಯುದ್ಧ್ಯಮಾನಸ್ಯ ವಹತೋ ಮಹತೀಂ ಧುರಮ್ |
ಧರಣ್ಯಾಂ ಮಮ ಪುತ್ರಸ್ಯ ಪಾತಯಿಷ್ಯತಿ ಯಃ ಶಿರಃ |
ತಸ್ಯಾಪಿ ಶತಧಾ ಮೂರ್ಧಾ ಫಲಿಷ್ಯತಿ ನ ಸಂಶಯಃ ॥ 8 ॥
ಯದಿ ಚೇದಸ್ತಿ ಮೇ ಲಾಭಸ್ತಪಸೋ ವಾ ದಮಸ್ಯ ವಾ |
ಏವಮುಕತ್ತ್ವ ತತೋ ರಾಜ್ಯೇ ಸ್ಥಾಪಯಿತ್ವಾ ಜಯದ್ರಥಮ್ |
ವೃದ್ಧಕ್ಷತ್ರೋ ವನಂ ಯಾತಸ್ತಪಶ್ಚೇಷ್ಟಂ ಸಮಾಸ್ಥಿತಃ ॥ 9 ॥
ಎಲೈ ಅರಿಂದಮನೇ, ಸಿಂಧುರಾಜನಾದ ವೃದ್ಧಕ್ಷತ್ರನು ಇದನ್ನು ಕೇಳಿ, ಬಹಳ ಸಮಯದವರೆಗೆ ಯೋಚಿಸಿ, ಮಗನ ಮೇಲಿನ
ಸ್ನೇಹದಿಂದ ಕೂಡಿದವನಾಗಿ ಎಲ್ಲ ಜ್ಞಾತಿಗಳನ್ನು ಕುರಿತು- ನನ್ನ ತಪಸ್ಸಿಗೆ ಮತ್ತು ಇಂದ್ರಿಯನಿಗ್ರಹಕ್ಕೆ ಏನಾದರೂ
ಪ್ರಯೋಜನವಿದ್ದರೆ, ದೊಡ್ಡ ಭಾರವನ್ನು ವಹಿಸಿ ರಣರಂಗದಲ್ಲಿ ಯುದ್ಧವನ್ನು ಮಾಡುವ ಈ ನನ್ನ ಪುತ್ರನ ಶಿರಸ್ಸನ್ನು ಯಾವನು
ಭೂಮಿಯ ಮೇಲೆ ಕೆಡವುವನೋ ಅವನ ಶಿರಸ್ಸೂ ಸಹ ನೂರು ಹೋಳಾಗುತ್ತದೆ (ಹೋಳಾಗಲಿ). ಇದರಲ್ಲಿ ಸಂಶಯವಿಲ್ಲ ಎಂದು
ಹೇಳಿ ರಾಜ್ಯದಲ್ಲಿ ಜಯದ್ರಥನನ್ನು ಸ್ಥಾಪಿಸಿ ಕಾಡಿಗೆ ಹೋಗಿ ಇಷ್ಟವಾದ ತಪಸ್ಸನ್ನು ಪ್ರಾರಂಭಿಸಿದನು.
ಸೋಽಯಂ ತಪ್ಯತಿ ತೇಜಸ್ವೀ ತಪೋ ಘೋರಂ ದುರಾಸದಮ್ |
ಸಮಂತಪಂಚಕಾದಸ್ಮಾದ್ಬಹಿರ್ವಾನರಕೇತನ ॥ 10 ॥

ಎಲೈ ಕಪಿಧ್ವಜನೇ, ಅಂತಹ ತೇಜಸ್ವಿಯಾದ ಈ ವೃದ್ಧಕ್ಷತ್ರನು ಸಮಂತಪಂಚಕದ ಹೊರಗೆ ಇದ್ದು ಘೋರವೂ, ಅಸಾಧ್ಯವೂ ಆದ ತಪಸ್ಸನ್ನು ಮಾಡುತ್ತಿದ್ದಾನೆ.
ತಸ್ಮಾಜ್ಜಯದ್ರಥಸ್ಯ ತ್ವಂ ಶಿರಶ್ಚಿತ್ತ್ವಾ ಮಹಾಮೃಧೇ |
ದಿವ್ಯೇನಾಸ್ತ್ರೇಣ ರಿಪುಹನ್ ಘೋರೇಣಾದ್ಭುತಕರ್ಮಣಾ ॥ 11 ॥
ಸಕುಂಡಲಂ ಸಿಂಧುಪತೇಃ ಪ್ರಭಂಜನಸುತಾನುಜ |
ಉತ್ಸಂಗೇ ಪಾತಯಸ್ವಾಶು ವೃದ್ಧಕ್ಷತ್ರಸ್ಯ ಭಾರತ ॥ 12 ॥
ಎಲೈ ಶತ್ರುಸಂಹಾರಕನೇ, ಪ್ರಭಂಜನಸುತನಾದ ಭೀಮಸೇನನ ತಮ್ಮನೇ, ಭಾರತನೇ, ಆದ್ದರಿಂದ ನೀನು ಈ ಮಹಾಯುದ್ಧದಲ್ಲಿ ಜಯದ್ರಥನ ಶಿರಸ್ಸನ್ನು ಕತ್ತರಿಸಿ, ಘೋರವಾದ, ಅದ್ಭುತಕರ್ಮವನ್ನು ಮಾಡಲು ಸಮರ್ಥವಾದ, ದಿವ್ಯಾಸ್ತ್ರದಿಂದ ಕುಂಡಲ ಸಹಿತವಾದ ಜಯದ್ರಥನ ಶಿರಸ್ಸನ್ನು ವೃದ್ಧಕ್ಷತ್ರನ ತೊಡೆಯ ಮೇಲೆ ಶೀಘ್ರವಾಗಿ ಬೀಳಿಸು.
ಅಥ ತ್ವಮಸ್ಯ ಮೂರ್ಧಾನಂ ಪಾತಯಿಷ್ಯಸಿ ಭೂತಳೇ |
ತವಾಪಿ ಶತಧಾ ಮೂರ್ಧಾ ಫಲಿಷ್ಯತಿ ನ ಸಂಶಯಃ ॥ 13 ॥
ಹಾಗಿಲ್ಲದೆ ನೀನು ಭೂಮಿಯಲ್ಲಿಯೇ ಇವನ ತಲೆಯನ್ನು ಬೀಳಿಸಿದರೆ ನಿನ್ನ ತಲೆಯೂ ನೂರು ಭಾಗವಾಗುವುದರಲ್ಲಿ ಸಂಶಯವಿಲ್ಲ.
ಯಥಾ ಚೈತನ್ನ ಜಾನೀಯಾತ್ ಸ ರಾಜಾ ಪೃಥಿವೀಪತಿಃ |
ತಥಾ ಕುರು ಕುರುಶ್ರೇಷ್ಠ ದಿವ್ಯಮಸ್ತ್ರಮುಪಾಶ್ರಿತಃ ॥ 14 ॥
ಎಲೈ ಕುರುಶ್ರೇಷ್ಠನೇ, ರಾಜನಾದ ಆ ವೃದ್ಧಕ್ಷತ್ರನು ಇದನ್ನು ತಿಳಿಯದಂತೆ ದಿವ್ಯಾಸ್ತ್ರವನ್ನು ಆಶ್ರಯಿಸಿ ಈ ಕಾರ್ಯವನ್ನು ಮಾಡು.
ನ ಹ್ಯಸಾಧ್ಯಮಕಾರ್ಯಂ ವಾ ವಿದ್ಯತೇ ತವ ಕಿಂಚನ |
ಸಮಸ್ತೇಷ್ವಪಿ ಲೋಕೇಷು ತ್ರಿಷು ವಾಸವನಂದನ ॥ 15 ॥
ಎಲೈ ಇಂದ್ರನಂದನನೇ, ಸಮಸ್ತವಾದ ಮೂರುಲೋಕಗಳಲ್ಲಿಯೂ ನಿನಗೆ ಅಸಾಧ್ಯವಾದುದು ಅಥವಾ ನೀನು ಮಾಡಲಾರದುದು ಯಾವುದೂ ಇಲ್ಲ.
ಅಸ್ತ್ರಸ್ಯಾಸ್ಯ ಪ್ರಭಾವೇಣ ಪಶುಭರ್ತುಃ ಕಥಂಚನ |
ಯಥೈತತ್ ಸೈಂಧವಶಿರಃ ಶರೈರೇವ ಧನಂಜಯ |
ವೃದ್ಧಕ್ಷತ್ರೇ ಪತತ್ಯೇವ ತಥಾ ನೀತಿರ್ವಿಧೀಯತಾಮ್ ॥ 16 ॥
ಎಲೈ ಅರ್ಜುನನೇ, ಪಶುಪತಿಯ ಈ ಅಸ್ತ್ರದ ಪ್ರಭಾವದಿಂದ ಬಾಣಗಳಿಂದ ಹೊಡೆಯಲ್ಪಡುವ ಸೈಂಧವನ ಈ ಶಿರಸ್ಸು ವೃದ್ಧಕ್ಷತ್ರನ ತೊಡೆಯಲ್ಲಿ ಬೀಳುವಂತಹ ನೀತಿಯನ್ನು ರೂಪಿಸು (ಎಂದು ಹೇಳಿದನು).
ಅರ್ಜುನಸ್ತ್ವರಯಾ ಯುಕ್ತಸ್ತದಸ್ತ್ರಂ ಸಮುಪಾಶ್ರಿತಃ |
ವೃದ್ಧಕ್ಷತ್ರಾಶ್ರಮಾದ್ವಾರಮಹರತ್ ತದರೇಃ ಶಿರಃ ॥ 17 ॥
ಆಗ ಅರ್ಜುನನು ತ್ವರೆಯಿಂದ ಕೂಡಿದವನಾಗಿ ದಿವ್ಯವಾದ ಪಾಶುಪತಾಸ್ತ್ರವನ್ನು ಆಶ್ರಯಿಸಿ ಶತ್ರುವಿನ ಶಿರಸ್ಸನ್ನು ವೃದ್ಧಕ್ಷತ್ರನ ಆಶ್ರಮದ ದ್ವಾರದವರೆಗೂ ಹಾರಿಸಿದನು.
ಏತಸ್ಮಿನ್ನೇವ ಕಾಲೇ ತು ವೃದ್ಧಕ್ಷತ್ರೋ ಮಹೀಪತಿಃ |
ಸಂಧ್ಯಾಮುಪಾಸ್ತೇ ತೇಜಸ್ವೀ ಸಂಬಂಧೀ ತವ ಮಾರಿಷ ॥ 18 ॥
ಎಲೈ ಪೂಜ್ಯನೇ, ಈ ಕಾಲದಲ್ಲಿಯೇ ರಾಜನೂ, ತೇಜಸ್ವಿಯೂ, ನಿನ್ನ ಸಂಬಂಧಿಯೂ ಆದ ವೃದ್ಧಕ್ಷತ್ರನು ಸಂಧ್ಯೋಪಾಸನೆಯನ್ನು ಮಾಡುತ್ತಿದ್ದನು.
ಉಪಾಸೀನಸ್ಯ ತಸ್ಯಾಥ ಕೃಷ್ಣಕೇಶಂ ಸಕುಂಡಲಮ್ |
ಸಿಂಧುರಾಜಸ್ಯ ಮೂರ್ಧಾನಮುತ್ಸಂಗೇ ಸಮಪಾತಯತ್ ॥ 19 ॥
ಕುಳಿತುಕೊಂಡು ಸಂಧ್ಯೋಪಾಸನೆಯನ್ನು ಮಾಡುತ್ತಿದ್ದ ಅವನ ತೊಡೆಯ ಮೇಲೆ ಜಯದ್ರಥನ ಕೃಷ್ಣಕೇಶಗಳಿಂದಲೂ, ಕರ್ಣ ಕುಂಡಲಗಳಿಂದಲೂ ಕೂಡಿದ ಶಿರಸ್ಸನ್ನು ಅರ್ಜುನನು ಬೀಳಿಸಿದನು.
ತಸ್ಯೋತ್ಸಂಗೇ ನಿಪತಿತಂ ಶಿರಸ್ತಚ್ಚಾರುಕುಂಡಲಮ್ |
ವೃದ್ಧಕ್ಷತ್ರಸ್ಯ ನೃಪತೇರಲಕ್ಷಿತಮರಿಂದಮ ॥ 20 ॥
ಎಲೈ ಅರಿಂದಮನೇ, ಸುಂದರವಾದ ಕುಂಡಲಗಳಿಂದ ಸಹಿತವಾದ ಆ ಶಿರಸ್ಸು ತನ್ನ ತೊಡೆಯ ಮೇಲೆ ಬಿದ್ದುದನ್ನು ವೃದ್ಧಕ್ಷತ್ರನು ಶೀಘ್ರವಾಗಿ ಗಮನಿಸಲಿಲ್ಲ.
ಕೃತಜಪ್ಯಸ್ಯ ತಸ್ಯಾಥ ವೃದ್ಧಕ್ಷತ್ರಸ್ಯ ಧೀಮತಃ |
ಉತ್ತಿಷ್ಠತಸ್ತತ್ ಸಹಸಾ ಶಿರೋಽಗಚ್ಛದ್ ಧರಾತಳಮ್ ॥ 21 ॥
ಮೇಧಾವಿಯಾದ ವೃದ್ಧಕ್ಷತ್ರನು ಜಪವನ್ನು ಮಾಡಿ ಏಳುವಾಗ ತಕ್ಷಣ ಆ ಶಿರಸ್ಸು ಭೂಮಿಯ ಮೇಲೆ ಬಿದ್ದಿತು.
ತತಸ್ತಸ್ಯ ನರೇಂದ್ರಸ್ಯ ಪುತ್ರಮೂರ್ಧನಿ ಭೂತಳಮ್ |
ಗತೇ ತಸ್ಯಾಪಿ ಶತಧಾ ಮೂರ್ಧಾಗಚ್ಛದರಿಂದಮ ॥ 22 ॥
ಎಲೈ ಅರಿಂದಮನೇ, ತನ್ನ ಪುತ್ರನ ಶಿರಸ್ಸು ಭೂಮಿಯ ಸ್ಪರ್ಶವನ್ನು ಮಾಡುತ್ತಿರಲು ವೃದ್ಧಕ್ಷತ್ರನ ಶಿರಸ್ಸೂ ಸಹ ನೂರು ಭಾಗವಾಗಿ ಒಡೆಯಿತು.
ತಚ್ಛಿರಃ ಶತಧಾ ರಾಜನ್ ಪಪಾತ ಪೃಥಿವೀತಳೇ |
ತತಃ ಸರ್ವಾಣಿ ಭೂತಾನಿ ವಿಸ್ಮಯಂ ಜಗ್ಮುರುತ್ತಮಮ್ |
ವಾಸುದೇವಶ್ಚ ಬೀಭತ್ಸುಂ ಪ್ರಶಶಂಸ ಮಹಾರಥಮ್ ॥ 23 ॥

ಎಲೈ ರಾಜನೇ, ಆ ಶಿರಸ್ಸು ನೂರು ಹೋಳಾಗಿ ಭೂಮಿಯ ಮೇಲೆ ಬಿದ್ದಿತು. ಆಗ ಎಲ್ಲ ಭೂತಗಳೂ ಬಹಳ ವಿಸ್ಮಯವನ್ನು ಹೊಂದಿದವು. ಕೃಷ್ಣನಾದರೂ ಮಹಾರಥನಾದ ಅರ್ಜುನನನ್ನು ಪ್ರಶಂಸಿಸಿದನು.

ಕರ್ಮಣಾ ತೇನ ಪಾರ್ಥಸ್ಯ ವಿಸ್ಮಿತಾಃ ಸರ್ವದೇವತಾಃ |
ಸರ್ವಥಾ ಸಮರೇ ಯಸ್ಯ ಗೋಪ್ತಾ ನಿತ್ಯಂ ಜನಾರ್ದನಃ ॥ 24 ॥
ಕಥಂ ತಸ್ಯ ಜಯೋ ನ ಸ್ಯಾದಿತಿ ಭೂತಾನಿ ಮೇನಿರೇ |
ಏತದರ್ಥಂ ಶಿರಸ್ತಸ್ಯ ಚ್ಯಾವಯಾಮಾಸ ಪಾಂಡವಃ ॥ 25 ॥

ಅರ್ಜುನನ ಆ ಕರ್ಮವನ್ನು ನೋಡಿದ ದೇವತೆಗಳೆಲ್ಲರೂ ವಿಸ್ಮಿತರಾದರು. ಯಾವನಿಗೆ ಕೃಷ್ಣನು ಯುದ್ಧದಲ್ಲಿ ನಿತ್ಯವೂ ಸರ್ವಥಾ ರಕ್ಷಕನಾಗಿದ್ದಾನೆಯೋ ಅಂತಹವನಿಗೆ ಜಯವುಂಟಾಗದಿರಲು ಹೇಗೆ ಸಾಧ್ಯ ಎಂದು ಭೂತಗಳು ಭಾವಿಸಿದವು.

ಸಮಂತಪಂಚಕಾದ್ ಬಾಹ್ಯಂ ಶರೈರೇವ ಯಥಾಕ್ರಮಮ್ |
ಕೃತ್ವಾ ತಚ್ಚ ಮಹತ್ ಕರ್ಮ ನಿಹತ್ಯ ಚ ಜಯದ್ರಥಮ್ |
ಅಸ್ತ್ರಂ ಪಾಶುಪತಂ ಪಾರ್ಥಃ ಸಂಹರ್ತುಮುಪಚಕ್ರಮೇ ॥ 26 ॥

ಅರ್ಜುನನು ಈ ಕಾರಣಕ್ಕಾಗಿ ಅವನ ಶಿರಸ್ಸನ್ನು ಬಾಣಗಳಿಂದ ಕ್ರಮವಾಗಿ ಸಮಂತಪಂಚಕದ ಹೊರಗೆ ಹಾರಿಸಿಕೊಂಡು ಹೋದನು. ಅರ್ಜುನನು ಆ ಮಹಾಕಾರ್ಯವನ್ನು ಮಾಡಿ ಜಯದ್ರಥನನ್ನು ಕೊಂದು, ಪಾಶುಪತಾಸ್ತ್ರವನ್ನು ಉಪಸಂಹಾರ ಮಾಡಲು ಪ್ರಾರಂಭಿಸಿದನು.

ಸಂಹರತ್ಯಪಿ ಕೌಂತೇಯೇ ತದಸ್ತ್ರಂ ತತ್ರ ಭಾರತ |
ವವೌ ಶೀತಃ ಸುಗಂಧಶ್ಚ ಪವನೋ ಹ್ಲಾದಯನ್ನಿವ ॥ 27 ॥

ಎಲೈ ಭಾರತನೇ, ಕುಂತೀಪುತ್ರನಾದ ಅರ್ಜುನನು ಆ ಅಸ್ತ್ರವನ್ನು ಉಪಸಂಹಾರ ಮಾಡುತ್ತಿರಲು ಶೀತವೂ, ಸುಗಂಧಯುಕ್ತವೂ ಆದ ವಾಯುವು ಸಂತೋಷವನ್ನುಂಟು ಮಾಡುತ್ತಾ ಬೀಸಿತು.

ಸಂಹಾರಂ ಚ ಪ್ರಮೋಕ್ಷಂ ಚ ದೃಷ್ಟ್ವಾ ತತ್ರ ದಿವೌಕಸಃ |
ವಿಸ್ಮಯಂ ಪರಮಂ ಜಗ್ಮುಃ ಪ್ರಶಶಂಸುಶ್ಚ ಪಾಂಡವಮ್ ॥ 28 ॥

ಅಸ್ತ್ರದ ಪ್ರಯೋಗವನ್ನು ಮತ್ತು ಉಪಸಂಹಾರವನ್ನು ನೋಡಿದ ದೇವತೆಗಳು ಬಹಳ ವಿಸ್ಮಯವನ್ನು ಹೊಂದಿ ಅರ್ಜುನನನ್ನು ಪ್ರಶಂಸಿಸಿದರು.

ಏವಮಸ್ತ್ರೇಣ ತಾನ್ ವೀರಾನ್ ಯೋಧಯಿತ್ವಾ ಧನಂಜಯಃ |
ಜಯದ್ರಥಶಿರಃ ಪಶ್ಚಾಚ್ಚ್ಯಾವಯಾಮಾಸ ಪಾಂಡವಃ ॥ 29 ॥

ಹೀಗೆ ವೀರನಾದ ಪಾಂಡುಪುತ್ರನಾದ ಅರ್ಜುನನು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿ ಜಯದ್ರಥನ ಶಿರಸ್ಸನ್ನು ಅಲ್ಲಿಂದ ಹೊರಗೆ ತೆಗೆದುಕೊಂಡು ಹೋಗಿ ಬೀಳಿಸಿದನು.

ತಚ್ಛಿರಶ್ಚ್ಯಾವಮಾನಂ ತು ದದೃಶುಸ್ತಾವಕಾ ಯುಧಿ |
ಶಲ್ಯಕರ್ಣಕೃಪಾ ರಾಜನ್ ಮೋಹಿತಾಃ ಸವ್ಯಸಾಚಿನಾ ॥ 30 ॥

ಅರ್ಜುನನ ಅದ್ಭುತವಾದ ಕರ್ಮದಿಂದ ಮೋಹಿತರಾದ ನಿನ್ನವರಾದ ಶಲ್ಯ, ಕರ್ಣ, ಕೃಪರು ಎಲೈ ರಾಜನೇ, ರಣರಂಗದಲ್ಲಿ ಆ ಶಿರಸ್ಸು ಹಾಗೆ ಹಾರುತ್ತಿದ್ದುದನ್ನು ನೋಡಿದರು.

ಶಿರಸಿ ಚ್ಯಾವಿತೇ ತಸ್ಯ ಶರೈರಾಶೀವಿಷೋಪಮೈಃ |
ಪಶ್ಚಾತ್ ಕಾಯೋಽಪತದ್ ಭೂಮಿಂ ಶೋಚಯನ್ ಸರ್ವಪಾರ್ಥಿವಾನ್ ॥

ವಿಷಸರ್ಪಸದೃಶವಾದ ಬಾಣಗಳಿಂದ ಅವನ ಶಿರಸ್ಸು ಹಾಗೆ ಹಾರಿಸಲ್ಪಡುತ್ತಿರಲು ಅವನ ಶರೀರವು ಎಲ್ಲ ರಾಜರಿಗೂ ದುಃಖವನ್ನುಂಟು ಮಾಡುತ್ತಾ, ಅನಂತರ ಭೂಮಿಯ ಮೇಲೆ ಬಿದ್ದಿತು.

ದೃಷ್ಟ್ವಾ ತು ನಿಹತಂ ಸಂಖ್ಯೇ ಸಿಂಧುರಾಜಂ ಮಹಾರಥಮ್ ॥
ಪುತ್ರಾಣಾಂ ತವ ನೇತ್ರೇಭ್ಯೋ ದುಃಖಾದ್ ಬಹ್ವಪತಜ್ಜಲಮ್ ॥ 32 ॥

ಮಹಾರಥನಾದ ಸಿಂಧುರಾಜನು ರಣರಂಗದಲ್ಲಿ ಹತನಾದುದನ್ನು ನೋಡಿ ನಿನ್ನ ಪುತ್ರರ ಕಣ್ಣುಗಳಿಂದ ಬಹಳವಾದ ದುಃಖಜಲವು ಹರಿಯಿತು.

ಭೀಮಸೇನೋಽಪಿ ಸಂಗ್ರಾಮೇ ಬೋಧಯನ್ನಿವ ಪಾಂಡವಮ್ |
ಸಿಂಹನಾದೇನ ಮಹತಾ ಪೂರಯಾಮಾಸ ರೋದಸೀ ॥ 33 ॥

ಭೀಮಸೇನನೂ ಸಹ ರಣರಂಗದಲ್ಲಿ (ಸೈಂಧವ ವಧೆಯನ್ನು) ಯುಧಿಷ್ಠಿರನಿಗೆ ತಿಳಿಸುವವನಂತೆ ದೊಡ್ಡ ಸಿಂಹನಾದದಿಂದ ಭೂಮಿ ಮತ್ತು ಅಂತರಿಕ್ಷಗಳನ್ನು ತುಂಬಿದನು.

ತಂ ಶ್ರುತ್ವಾ ತು ಮಹಾನಾದಂ ಧರ್ಮಪುತ್ರೋ ಯುಧಿಷ್ಠಿರಃ |
ಭೀಮಶ್ಚ ವೃಷ್ಣಿಸಿಂಹಶ್ಚ ಯುಧಾಮನ್ಯುಶ್ಚ ಭಾರತ ॥ 34 ॥
ಉತ್ತಮೌಜಾಶ್ಚ ವಿಕ್ರಾಂತ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥
ಸೈಂಧವಂ ನಿಹತಂ ಮೇನೇ ಫಲ್ಗುನೇನ ಮಹಾತ್ಮನಾ ॥ 35 ॥

ಆ ಮಹಾನಾದವನ್ನು ಕೇಳಿದ ಧರ್ಮಪುತ್ರನಾದ ಯುಧಿಷ್ಠಿರ, ಭೀಮ, ವೃಷ್ಣಿಸಿಂಹನಾದ ಸಾತ್ಯಕಿ, ಯುಧಾಮನ್ಯು, ಉತ್ತಮೌಜ ಮೊದಲಾದ ಪರಾಕ್ರಮಶಾಲಿಗಳು ತಮ್ಮ ತಮ್ಮ ಶಂಖಗಳನ್ನು ಊದಿದರು. ಎಲೈ ಭಾರತನೇ, ಯುಧಿಷ್ಠಿರನು ಮಹಾತ್ಮನಾದ ಅರ್ಜುನನಿಂದ ಸೈಂಧವನು ಹತನಾಗಿದ್ದಾನೆ ಎಂದು ತಿಳಿದನು.

ತತೋ ವಾದಿತ್ರಘೋಷೇಣ ಸ್ವಾನ್ ಯೋಧಾನಭಿಹರ್ಷಯನ್ |

ಅಭ್ಯವರ್ತತ ಸಂಗ್ರಾಮೇ ಭಾರದ್ವಾಜಂ ಯುಯುತ್ಸಯಾ ॥ 36 ॥
ಅನಂತರ ವಾದಿತ್ರಘೋಷದಿಂದ ತನ್ನ ಯೋಧರನ್ನು ಹರ್ಷಗೊಳಿಸುತ್ತಾ ರಣರಂಗದಲ್ಲಿ ದ್ರೋಣರ ಜೊತೆಯಲ್ಲಿ ಯುದ್ಧ ಮಾಡಲು ಬಯಸಿ ಅವರೆಡೆಗೆ ಸಾಗಿದನು.
ತತಃ ಪ್ರವವೃತೇ ರಾಜನ್ನಸ್ತಂ ಗಚ್ಛತಿ ಭಾಸ್ಕರೇ |
ದ್ರೋಣಸ್ಯ ಸೋಮಕೈಃ ಸಾರ್ಧಂ ಸಂಗ್ರಾಮೋ ಲೋಮಹರ್ಷಣಃ ॥
ಎಲೈ ರಾಜನೇ, ಸೂರ್ಯನು ಇನ್ನೇನು ಅಸ್ತಂಗತನಾಗುತ್ತಿರಲು ಆಗ ದ್ರೋಣರಿಗೂ ಮತ್ತು ಸೋಮಕರಿಗೂ ರೋಮಾಂಚಕಾರಿಯಾದ ಯುದ್ಧವು ನಡೆಯಿತು.
ತೇ ತು ಸರ್ವಪ್ರಯತ್ನೇನ ಭಾರದ್ವಾಜಂ ಜಿಘಾಂಸವಃ |
ಸೈಂಧವೇ ನಿಹತೇ ರಾಜನ್ನಯುದ್ಧ್ಯಂತ ಮಹಾರಥಾಃ ॥ 38 ॥
ಎಲೈ ರಾಜನೇ, ಸೈಂಧವನು ಹತನಾಗುತ್ತಿರಲು ಸೋಮಕ ಮಹಾರಥರು ದ್ರೋಣರನ್ನು ಕೊಲ್ಲಲು ಬಯಸಿ ಸರ್ವಪ್ರಯತ್ನದಿಂದ ಯುದ್ಧವನ್ನು ಮಾಡಿದರು.
ಪಾಂಡವಾಸ್ತು ಜಯಂ ಲಬ್ಧ್ವಾ ಸೈಂಧವಂ ವಿನಿಹತ್ಯ ಚ |
ಅಯೋಧಯಂಸ್ತತೋ ದ್ರೋಣಂ ಜಯೋನ್ಮತ್ತಾಸ್ತತಸ್ತತಃ ॥ 39 ॥
ಪಾಂಡವರಾದರೋ ಸೈಂಧವನನ್ನು ಕೊಂದು ಜಯವನ್ನು ಪಡೆದು ಜಯೋನ್ಮತ್ತರಾಗಿ ಅಲ್ಲಲ್ಲಿ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಅರ್ಜುನೋಽಪಿ ರಣೇ ಯೋಧಾಂಸ್ತಾವಕಾನ್ ರಥಸತ್ತಮಾನ್ |
ಅಯೋಧಯನ್ಮಹಾರಾಜ ಹತ್ವಾ ಸೈಂಧವಕಂ ನೃಪಮ್ ॥ 40 ॥
ಎಲೈ ಮಹಾರಾಜನೇ, ಅರ್ಜುನನೂ ಸಹ ರಣರಂಗದಲ್ಲಿ ರಾಜನಾದ ಸೈಂಧವನನ್ನು ಕೊಂದು ನಿನ್ನ ರಥಶ್ರೇಷ್ಠರ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸ ದೇವಶತ್ರೂನಿವ ದೇವರಾಜಃ
ಕಿರೀಟಮಾಲೀ ವ್ಯಧಮತ್ ಸಮಂತಾತ್ |
ಯಥಾ ತಮಾಂಸ್ಯಭ್ಯುದಿತಸ್ತಮೋಘ್ನಃ
ಪೂರ್ವಾಂ ಪ್ರತಿಜ್ಞಾಂ ಸಮವಾಪ್ಯ ವೀರಃ ॥ 41 ॥
ಕಿರೀಟಮಾಲಿಯಾದ ಅರ್ಜುನನು ತನ್ನ ಪೂರ್ವಪ್ರತಿಜ್ಞೆಯನ್ನು ನೆರವೇರಿಸಿ ದೇವರಾಜನಾದ ಇಂದ್ರನು ದೇವಶತ್ರುಗಳನ್ನು ನಾಶಪಡಿಸಿದಂತೆ, ಉದಯಿಸಿದ ಸೂರ್ಯನು ಕತ್ತಲೆಯನ್ನು ನಾಶಪಡಿಸಿದಂತೆ ಶತ್ರುಗಳನ್ನು ನಾಶಪಡಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಾತ್ರಿಂಶದಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ಷಟ್‌ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೆರಡನೆಯ
ಅಧ್ಯಾಯ ಮುಗಿಯಿತು.
॥ ಜಯದ್ರಥವಧ ಪರ್ವವು ಮುಗಿಯಿತು ॥
* * * * *
6. ಘಟೋತ್ಕಚವಧಪರ್ವ
ನೂರ ಮೂವತ್ಮೂರನೆಯ ಅಧ್ಯಾಯ
ಸೈಂಧವವಧೆಯಿಂದ ಪಾಂಡವರ ಹರ್ಷ. ಸತ್ಕಾರ ಮತ್ತು ಸಲ್ಲಾಪ.
ಧೃತರಾಷ್ಟ್ರಃ
ತಸ್ಮಿನ್ ವಿನಿಹತೇ ವೀರೇ ಸೈಂಧವೇ ಸವ್ಯಸಾಚಿನಾ |
ಮಾಮಕಾ ಯದಕುರ್ವಂತ ತನ್ಮಮಾಚಕ್ಷ್ವ ಸಂಜಯ ॥ 1 ॥
ಧೃತರಾಷ್ಟ್ರ, ಎಲೈ ಸಂಜಯನೇ, ವೀರನಾದ ಆ ಸೈಂಧವನು ಅರ್ಜುನನಿಂದ ಕೊಲ್ಲಲ್ಪಡುತ್ತಿರಲು ನನ್ನವರು ಏನು ಮಾಡಿದರು ಎಂದು ಹೇಳು.
ಪಶ್ಯತಾಂ ಸರ್ವಯೋಧಾನಾಂ ಮಾಮಕಾನಾಂ ಮಹಾರಣೇ |
ಅಹನ್ಯತ ಕಥಂ ಯುದ್ಧೇ ಸೈಂಧವಃ ಸವ್ಯಸಾಚಿನಾ ॥ 2 ॥
ನನ್ನ ಎಲ್ಲ ಯೋಧರು ನೋಡುತ್ತಿರುವಂತೆಯೇ ಮಹಾಯುದ್ಧದಲ್ಲಿ ಅರ್ಜುನನಿಂದ ಸೈಂಧವನು ಹೇಗೆ ಹತನಾದನು?
ಕಥಂ ದ್ರೌಣಿಕೃಪೈರ್ಗುಪ್ತಃ ಕರ್ಣೇನ ಚ ಮಹಾರಣೇ |
ಫಲ್ಗುನಾಗ್ನಿಮುಖಂ ಘೋರಂ ಪ್ರವಿಷ್ಟಃ ಸಾಧು ಸೈಂಧವಃ ॥ 3 ॥
ಮಹಾಯುದ್ಧದಲ್ಲಿ ಅಶ್ವತ್ಥಾಮರಿಂದಲೂ, ಕೃಪರಿಂದಲೂ ಮತ್ತು ಕರ್ಣನಿಂದಲೂ ರಕ್ಷಿಸಲ್ಪಟ್ಟ ಸೈಂಧವನು ಹೇಗೆ ಅರ್ಜುನನ ಘೋರವಾದ ಅಗ್ನಿಮುಖವನ್ನು ಚೆನ್ನಾಗಿ ಪ್ರವೇಶಿಸಿದನು?
ತಸ್ಮಿನ್ ಹತೇ ಮಹೇಷ್ವಾಸೇ ಮಂದಾತ್ಮಾ ಚ ಸುಯೋಧನಃ |
ಭ್ರಾತೃಭಿಃ ಸಹಿತಃ ಸೂತ ಕಿಮಕಾರ್ಷೀದನಂತರಮ್ ॥ 4 ॥
ಮಹಾಧನುರ್ಧಾರಿಯಾದ ಅವನು ಹತನಾಗುತ್ತಿರಲು ಮಂದನಾದ ಸುಯೋಧನನು ತನ್ನ ತಮ್ಮಂದಿರಿಂದ ಸಹಿತನಾಗಿ ಎಲೈ

ಸೂತನೇ, ಅನಂತರ ಏನು ಮಾಡಿದನು?
ಸಂಜಯಃ
ಸೈಂಧವಂ ನಿಹತಂ ದೃಷ್ಟ್ವಾ ರಣೇ ಪಾರ್ಥೇನ ಮಾರಿಷ |
ಅಮರ್ಷವಶಮಾಪನ್ನಃ ಕೃಪಃ ಶಾರದ್ವತಸ್ತದಾ ॥ 5 ॥
ಮಹತಾ ಶರವರ್ಷೇಣ ಪಾಂಡವಂ ಸಮವಾಕಿರತ್ |
ದ್ರೌಣಿಶ್ಚಾಭ್ಯದ್ರವತ್ಪಾರ್ಥಂ ರಥಮಾಸ್ಥಾಯ ಫಲ್ಗುನಮ್ ॥ 6 ॥
ಸಂಜಯ ಎಲೈ ಪೂಜ್ಯನೇ, ಯುದ್ಧದಲ್ಲಿ ಅರ್ಜುನನಿಂದ ಸೈಂಧವನು ಹತನಾದುದನ್ನು ನೋಡಿ, ಶರದ್ವತರ ಪುತ್ರರಾದ ಕೃಪರು ರೋಷಾವಿಷ್ಟರಾಗಿ ಅರ್ಜುನನ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಕರೆದರು. ಅಶ್ವತ್ಥಾಮರೂ ಸಹ ರಥವನ್ನೇರಿ ಅರ್ಜುನನ ಕಡೆಗೆ ಧಾವಿಸಿದರು.
ತಾವೇನಂ ರಥಿನಾಂ ಶ್ರೇಷ್ಠೌ ರಥಾಭ್ಯಾಂ ರಥಸತ್ತಮಮ್ |
ಉಭಾವುಭಯತಸ್ತೀಕ್ಷ್ಣೈರ್ವಿಶಿಖೈರಭ್ಯವರ್ಷತಾಮ್ ॥ 7 ॥
ರಥಶ್ರೇಷ್ಠರಾದ ಅವರಿಬ್ಬರೂ ಎರಡು ಪಾರ್ಶ್ವಗಳಿಂದ ತೀಕ್ಷ್ಣವಾದ ಬಾಣಗಳಿಂದ ರಥಶ್ರೇಷ್ಠನಾದ ಅರ್ಜುನನನ್ನು ಪೀಡಿಸಿದರು.
ಸ ತಥಾ ಶರವರ್ಷಾಭ್ಯಾಂ ಸುಮಹದ್ಭ್ಯಾಂ ಮಹಾಭುಜಃ |
ಪೀಡ್ಯಮಾನಃ ಪರಾಮಾರ್ತಿಮಗಮದ್ರಥಿನಾಂ ವರಃ ॥ 8 ॥
ಆ ರೀತಿಯಾಗಿ ಬಹಳ ಶ್ರೇಷ್ಠರಾದ ಆ ಇಬ್ಬರಿಂದ ಬಾಣಗಳ ಮಳೆಗಳಿಂದ ಪೀಡಿಸಲ್ಪಟ್ಟ ರಥಿಶ್ರೇಷ್ಠನಾದ ಅರ್ಜುನನು ಬಹಳ ದುಃಖವನ್ನು ಹೊಂದಿದನು.
ಸೋಽಜಿಘಾಂಸುರ್ಗುರುಂ ಸಂಖ್ಯೇ ಗುರೋಸ್ತನಯಮೇವ ಚ |
ಚಕಾರಾಚಾರ್ಯಕಂ ತತ್ರ ಕುಂತೀಪುತ್ರೋ ಧನಂಜಯಃ ॥ 9 ॥
ಕುಂತೀಪುತ್ರನಾದ ಧನಂಜಯನು ಯುದ್ಧದಲ್ಲಿ ಗುರುಗಳನ್ನೂ ಮತ್ತು ಗುರುಪುತ್ರರನ್ನೂ ಕೊಲ್ಲಲು ಬಯಸದೆ ಅವರಿಗೆ ಗುರುತ್ವಪ್ರಯುಕ್ತವಾದ ಗೌರವವನ್ನು ತೋರಿಸಿದನು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ದ್ರೌಣೇಃ ಶಾರದ್ವತಸ್ಯ ಚ |
ಮಂದವೇಗಾನಿಷೂಂಸ್ತಾಭ್ಯಾಮಜಿಘಾಂಸುರವಾಸೃಜತ್ ॥ 10 ॥
ಅಶ್ವತ್ಥಾಮರ ಮತ್ತು ಕೃಪರ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನಿವಾರಿಸಿ, ಅವರನ್ನು ಕೊಲ್ಲಲು ಇಷ್ಟಪಡದೆ ಮಂದವೇಗವುಳ್ಳ ಬಾಣಗಳನ್ನು ಪ್ರಯೋಗಿಸಿದನು.
ತೇ ಚಾಪಿ ಭೃಶಮಭ್ಯಘ್ನನ್ ವಿಶಿಖಾ ಜಯಚೋದಿತಾಃ |
ಬಹುತ್ವಾತ್ತು ಪರಾಮಾರ್ತಿಂ ಶರಾಣಾಂ ತಾವಗಚ್ಛತಾಮ್ ॥ 11 ॥
ಅರ್ಜುನನಿಂದ ಪ್ರೇರಿತವಾದ ಆ ಬಾಣಗಳೂ ಸಹ ಅವರನ್ನು ಚೆನ್ನಾಗಿ ಪೀಡಿಸಿದವು. ಬಾಣಗಳ ಸಂಖ್ಯೆಯು ಬಹಳವಾಗಿದ್ದುದರಿಂದ ಅವರಿಬ್ಬರೂ ಬಹಳ ದುಃಖವನ್ನು ಹೊಂದಿದರು.
ಅಥ ಶಾರದ್ವತೋ ರಾಜನ್ ಕೌಂತೇಯಶರಪೀಡಿತಃ |
ಅವಾಸೀದದ್ ರಥೋಪಸ್ಥೇ ಮೂರ್ಚ್ಛಾಮಭಿಜಗಾಮ ಹ ॥ 12 ॥
ಎಲೈ ರಾಜನೇ, ಆಗ ಅರ್ಜುನನ ಶರಪೀಡಿತರಾದ ಕೃಪರು ರಥಪೀಠದಲ್ಲಿ ಕುಸಿದು ಮೂರ್ಛೆಯನ್ನು ಹೊಂದಿದರು.
ವಿಹ್ವಲಂ ತಮಭಿಜ್ಞಾಯ ಭರ್ತಾರಂ ಶರಪೀಡಿತಮ್ |
ಹತೋಽಯಮಿತಿ ಚ ಜ್ಞಾತ್ವಾ ಸಾರಥಿಸ್ತಮಪಾವಹತ್ ॥ 13 ॥
ತನ್ನ ಸ್ವಾಮಿಯಾದ ಕೃಪರು ಬಾಣದಿಂದ ಪೀಡಿತರಾಗಿ ವಿಹ್ವಲವಾಗಿದ್ದಾರೆಂದೂ, ಹತರಾಗಿದ್ದಾರೆಂದೂ ತಿಳಿದು ಅವನ ಸಾರಥಿಯು ಅವರ ರಥವನ್ನು ರಣರಂಗದಿಂದ ಹೊರಗೆ ತೆಗೆದುಕೊಂಡು ಹೋದನು.
ತಸ್ಮಿನ್ ಸನ್ನೇ ಮಹಾರಾಜ ಕೃಪೇ ಶಾರದ್ವತೇ ಯುಧಿ |
ಅಶ್ವತ್ಥಾಮಾಪ್ಯಪಾಯಾಸೀತ್ ಪಾಂಡವೇಯಾದ್ ರಥಾಂತರಮ್ ॥
ಎಲೈ ಮಹಾರಾಜನೇ, ಶಾರದ್ವತರಾದ ಕೃಪರು ಯುದ್ಧದಲ್ಲಿ ವಿನಾಶವನ್ನು ಹೊಂದುತ್ತಿರಲು ಅಶ್ವತ್ಥಾಮರೂ ಸಹ ಪಾಂಡವರನ್ನು ಬಿಟ್ಟು ಇನ್ನೊಂದು ರಥಕ್ಕೆ ಹೋದರು.
ದೃಷ್ಟ್ವಾ ಶಾರದ್ವತಂ ಪಾರ್ಥೋ ಮೂರ್ಚ್ಛಿತಂ ಶರಪೀಡಿತಮ್ |
ರಥ ಏವ ಮಹೇಷ್ವಾಸಃ ಕೃಪಣಂ ಪರ್ಯದೇವಯತ್ ॥ 15 ॥
ಮಹಾಧನುರ್ಧಾರಿಯಾದ ಅರ್ಜುನನು ಶಾರದ್ವತರಾದ ಕೃಪರು ಶರಪೀಡಿತರಾಗಿ ಮೂರ್ಛೆಯನ್ನು ಹೊಂದಿದ್ದಾರೆಂದು ತಿಳಿದು ರಥದಲ್ಲಿಯೇ ಕುಳಿತು ಕರುಣಾಜನಕವಾಗಿ ಗೋಳಾಡಿದನು.
ಅಶ್ರುಪೂರ್ಣಮುಖೋ ದೀನೋ ವಚನಂ ಚೇದಮಬ್ರವೀತ್ |
ಪಶ್ಯನ್ನಿದಂ ಮಹಾಪ್ರಾಜ್ಞಃ ಕ್ಷತ್ತಾ ರಾಜಾನಮುಕ್ತವಾನ್ |
ಕುಲಾಂತಕರಣೇ ಪಾಪೇ ಜಾತಮಾತ್ರೇ ಸುಯೋಧನೇ ॥ 16 ॥
ನೀಯತಾಂ ಪರಲೋಕಾಯ ಸಾಧ್ವಯಂ ಕುಲಪಾಂಸನಃ |
ಅಸ್ಮಾದ್ಧಿ ಕುರುಮುಖ್ಯಾನಾಂ ಮಹದುತ್ಪತ್ಸ್ಯತೇ ಭಯಮ್ ॥ 17 ॥
ಕಣ್ಣೀರಿನಿಂದ ತುಂಬಿದ ಮುಖವುಳ್ಳವನಾಗಿ, ದೀನನಾಗಿ ಈ ಮಾತುಗಳನ್ನು ಆಡಿದನು- ಇದೆಲ್ಲವನ್ನೂ ಮೊದಲೇ ಗಮನಿಸಿದ ಮಹಾಪ್ರಾಜ್ಞನಾದ ವಿದುರನು ಕುಲನಾಶಕನೂ, ಪಾಪಿಯೂ ಆದ ಸುಯೋಧನನು ಹುಟ್ಟಿದ ತಕ್ಷಣವೇ ಧೃತರಾಷ್ಟ್ರನನ್ನು ಕುರಿತು,

ಈ ಕುಲಪಾಂಸನನಾದ ಶಿಶುವು ಪರಲೋಕಕ್ಕೆ ಕಳುಹಿಸಲ್ಪಡಲಿ. ಇವನಿಂದ ಶ್ರೇಷ್ಠರಾದ ಕುರುಗಳಿಗೆ ದೊಡ್ಡ ಭಯವು ಉಂಟಾಗುವುದು ಎಂದು ಹೇಳಿದ್ದನು.
ತದಿದಂ ಸಮನುಪ್ರಾಪ್ತಂ ವಚನಂ ಸತ್ಯವಾದಿನಃ |
ತತ್ಕೃತೇ ಹ್ಯದ್ಯ ಪಶ್ಯಾಮಿ ಶರತಲ್ಪಗತಂ ಕೃಪಮ್ ॥ 18 ॥
ಸತ್ಯವಾದಿಯಾದ ವಿದುರನ ವಚನವು ಈಗ (ಫಲ ಸಹಿತವಾಗಿ) ಪ್ರಾಪ್ತವಾಗಿದೆ. ಆ ಕಾರಣದಿಂದ ನಾನು ಈ ದಿನ ಶರತಲ್ಪದಲ್ಲಿ ಇರುವ ಕೃಪರನ್ನು ನೋಡುತ್ತಿದ್ದೇನೆ.
ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಪೌರುಷಮ್ |
ಕೋ ಹಿ ಬ್ರಾಹ್ಮಣಮಾಚಾರ್ಯಮಭಿದ್ರುಹ್ಯೇತ ಮಾದೃಶಃ ॥ 19 ॥
ಕ್ಷತ್ರಿಯ ಧರ್ಮಕ್ಕೆ ಧಿಕ್ಕಾರವಿರಲಿ. ಬಲ-ಪೌರುಷಗಳಿಗೆ ಧಿಕ್ಕಾರವಿರಲಿ. ನನ್ನಂತಹ ಯಾವನು ತಾನೆ ಬ್ರಾಹ್ಮಣರಾದ ಆಚಾರ್ಯರಿಗೆ ದ್ರೋಹವನ್ನು ಮಾಡಿಯಾನು?
ಋಷಿಪುತ್ರೋ ಮಮಾಚಾರ್ಯೋ ದ್ರೋಣಸ್ಯ ದಯಿತಃ ಸಖಾ |
ಏಷ ಶೇತೇ ರಥೋಪಸ್ಥೇ ಮದ್ಬಾಣೈರಭಿಪೀಡಿತಃ ॥ 20 ॥
ಋಷಿಪುತ್ರರೂ, ದ್ರೋಣರ ಪ್ರಿಯಸ್ನೇಹಿತರೂ ಆದ ನನ್ನ ಈ ಗುರುಗಳು ನನ್ನ ಬಾಣಗಳಿಂದ ಬಹಳ ಪೀಡಿತರಾಗಿ ರಥಪೀಠದಲ್ಲಿ ಮಲಗಿದ್ದಾರೆ.
ಅಕಾಮಯಾನೇನ ಮಯಾ ವಿಶಿಖೈರರ್ದಿತೋ ಭೃಶಮ್ |
ಅವಾಸೀದದ್ರಥೋಪಸ್ಥೇ ಪ್ರಾಣಾನ್ ಪೀಡಯತೀವ ಮೇ ॥ 21 ॥
ನನಗೆ ಇಷ್ಟವಿಲ್ಲದಿದ್ದರೂ ಬಾಣಗಳಿಂದ ಚೆನ್ನಾಗಿ ಹೊಡೆದೆನು. ರಥಪೀಠದಲ್ಲಿ ಕುಸಿದ ಅವರು ನನ್ನ ಪ್ರಾಣಗಳನ್ನು ಪೀಡಿಸುತ್ತಿದ್ದಾರೆ.

ಶರಾರ್ದಿತೇನ ಹಿ ಮಯಾ ಪ್ರೇಕ್ಷಣೀಯೋ ಮಹಾದ್ಯುತಿಃ |
ಪುತ್ರಶೋಕಾಭಿಭೂತೇನ ಶರೈರಭ್ಯರ್ದಿತೇನ ಚ |
ಪ್ರತ್ಯಸ್ತೋ ಬಹುಭಿರ್ಬಾಣೈರ್ದಶಧರ್ಮಗತೇನ ವೈ ॥ 22 ॥
ಪುತ್ರಶೋಕದಿಂದ ಕೂಡಿದ, ಬಾಣಗಳಿಂದ ಪೀಡಿತನಾದ ಮತ್ತು ದಶಧರ್ಮ ಗತನಾದ (ದುರವಸ್ಥೆಯನ್ನು ಹೊಂದಿದ) ನನ್ನಿಂದ ಮಹಾಕಾಂತಿಯುಕ್ತರೂ, ಮನೋಹರರೂ ಆದ ಗುರುಗಳು ಅನೇಕ ಬಾಣಗಳಿಂದ ಪೀಡಿಸಲ್ಪಟ್ಟರು.
ಶೋಚಯತ್ಯೇಷ ನಿಪತನ್ ಭೂಯಃ ಪುತ್ರವಧಾದ್ಧಿ ಮಾಮ್ |
ಕೃಪಣಂ ಸ್ವರಥೇ ಸನ್ನಂ ಪಶ್ಯ ಕೃಷ್ಣ ಯಥಾಗತಮ್ ॥ 23 ॥
ತಮ್ಮ ರಥದಲ್ಲಿ ಕುಸಿದ ಇವರು ನನಗೆ ನನ್ನ ಪುತ್ರವಧೆಗಿಂತಲೂ ಹೆಚ್ಚಾದ ದುಃಖವನ್ನು ಉಂಟುಮಾಡುತ್ತಿದ್ದಾರೆ. ಕೃಷ್ಣನೇ, ತಮ್ಮ ರಥದಲ್ಲಿ ಕುಸಿದು ಅಂತಹ ಅವಸ್ಥೆಯನ್ನು ಹೊಂದಿರುವ ಕೃಪಣರಾದ ಕೃಪಾಚಾರ್ಯರನ್ನು ನೋಡು.
ಉಪಾಕೃತ್ಯ ತು ವೈ ವಿದ್ಯಾಮಾಚಾರ್ಯೇಭ್ಯೋ ನರರ್ಷಭಾಃ |
ಪ್ರಯಚ್ಛಂತೀಹ ಯೇ ಕಾಮಾನ್ ದೇವತ್ವಮುಪಯಾಂತಿ ತೇ ॥ 24 ॥
ಯಾವ ನರಶ್ರೇಷ್ಠರು ಗುರುಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿ, ಅವರಿಗೆ ಅಪೇಕ್ಷಿತವಾದ ಗುರುದಕ್ಷಿಣೆಯನ್ನು ಕೊಡುತ್ತಾರೆಯೋ ಅವರು ದೇವತ್ವವನ್ನು ಹೊಂದುತ್ತಾರೆ.
ಯೇ ತು ವಿದ್ಯಾಮುಪಾದಾಯ ಗುರುಭ್ಯಃ ಪುರುಷಾಧಮಾಃ |
ಘ್ನಂತಿ ತಾನೇವ ದುರ್ವೃತ್ತಾಸ್ತೇ ವೈ ನಿರಯಗಾಮಿನಃ ॥ 25 ॥
ಯಾವ ಪುರುಷಾಧಮರು ಗುರುಗಳಿಂದ ವಿದ್ಯೆಯನ್ನು ಸ್ವೀಕರಿಸಿ, ಅವರನ್ನೇ ಕೊಲ್ಲುತ್ತಾರೋ ದುರ್ನಡತೆಯುಳ್ಳ ಅಂತಹವರು ನರಕಕ್ಕೆ ಹೋಗುವರು.
ತದಿದಂ ನರಕಾಯಾದ್ಯ ಕೃತಂ ಕರ್ಮ ಮಯಾ ಧ್ರುವಮ್ |
ಆಚಾರ್ಯಂ ಶರವರ್ಷೇಣ ರಥೇ ಸಾದಯತಾ ಕೃಪಮ್ ॥ 26 ॥
ಗುರುಗಳಾದ ಕೃಪಾಚಾರ್ಯರನ್ನು ಬಾಣಗಳ ಮಳೆಯಿಂದ ರಥದಲ್ಲಿ ಕುಸಿಯುವಂತೆ ಮಾಡಿರುವ ನನ್ನಿಂದ ಈ ದಿನ ಖಂಡಿತವಾಗಿ ನರಕಕ್ಕೆ ಹೋಗುವ ಕ್ರೂರಕರ್ಮವು ಮಾಡಲ್ಪಟ್ಟಿದೆ.
ಯತ್ತತ್ ಪೂರ್ವಮುಪಾಕುರ್ವನ್ನಸ್ತ್ರಂ ಮಾಮಬ್ರವೀತ್ ಕೃಪಃ |
ನ ಕಥಂಚನ ಕೌರವ್ಯ ಪ್ರಹರ್ತವ್ಯಂ ಗುರಾವಿತಿ ॥ 27 ॥
ಗುರುಗಳಾದ ಕೃಪರು ಹಿಂದೆ ನನಗೆ ಅಸ್ತ್ರವಿದ್ಯೆಯ ಉಪದೇಶವನ್ನು ಮಾಡುವಾಗ ನನ್ನನ್ನು ಕುರಿತು `ಎಲೈ ಕೌರವ್ಯನೇ, ಯಾವ ಕಾರಣದಿಂದಲೂ ಗುರುಗಳಿಗೆ ಹೊಡೆಯಬಾರದು' ಎಂದು ಹೇಳಿದ್ದರು.
ತದಿದಂ ವಚನಂ ಸಾಧೋರಾಚಾರ್ಯಸ್ಯ ಮಹಾತ್ಮನಃ |
ನಾನುಷ್ಠಿತಂ ತಮೇವಾಜೌ ವಿಶಿಖೈರಭಿವರ್ಷತಾ ॥ 28 ॥
ಯುದ್ಧದಲ್ಲಿ ಅವರ ಮೇಲೆ ಬಾಣಗಳ ಮಳೆಯನ್ನು ಸುರಿಸಿ ನಾನು ಮಹಾತ್ಮರೂ, ಸಜ್ಜನರೂ ಆದ ಆಚಾರ್ಯರ ಈ ಮಾತನ್ನು ನಡೆಸಿಕೊಡಲಿಲ್ಲ.
ನಮಸ್ತಸ್ಮೈ ಸುಪೂಜ್ಯಾಯ ಗೌತಮಾಯಾಪಲಾಯಿನೇ |
ಧಿಗಸ್ತು ಮಮ ವಾರ್ಷ್ಣೇಯ ಯೋ ಹ್ಯಸ್ಮೈ ಪ್ರಹರಾಮ್ಯಹಮ್ ॥29॥
ಯುದ್ಧದಿಂದ ಹಿಮ್ಮೆಟ್ಟದಿರುವ ಅತ್ಯಂತ ಪೂಜ್ಯರಾದ ಆ ಕೃಪರಿಗೆ ನಮಸ್ಕಾರವಿರಲಿ. ಎಲೈ ಕೃಷ್ಣನೇ, ಅಂತಹವರಿಗೆ ಹೊಡೆಯುವ

ನನಗೆ ಧಿಕ್ಕಾರವಿರಲಿ.
ತಥಾ ವಿಲಪಮಾನೇ ತು ಸವ್ಯಸಾಚಿನಿ ತಂ ಪ್ರತಿ |
ಸೈಂಧವಂ ನಿಹತಂ ದೃಷ್ಟ್ವಾ ರಾಧೇಯಃ ಸಮುಪಾದ್ರವತ್ ॥ 30 ॥
ಅರ್ಜುನನು ಕೃಪರನ್ನು ಕುರಿತು ಆ ರೀತಿಯಲ್ಲಿ ಗೋಳಾಡುತ್ತಿದ್ದಾಗ ಸೈಂಧವನು ಹತನಾದುದನ್ನು ನೋಡಿ ಕರ್ಣನು ಅರ್ಜುನನ ಬಳಿಗೆ ಧಾವಿಸಿಬಂದನು.
ತಮಾಪತಂತಂ ರಾಧೇಯಮರ್ಜುನಸ್ಯ ರಥಂ ಪ್ರತಿ |
ಪಾಂಚಲ್ಯೌ ಸಾತ್ಯಕಿಶ್ಚೈವ ಸಹಸಾ ಸಮುಪಾದ್ರವನ್ ॥ 31 ॥
ಅರ್ಜುನನ ರಥದ ಮೇಲೆ ಎರಗುತ್ತಿದ್ದ ರಾಧಾಪುತ್ರನಾದ ಕರ್ಣನನ್ನು ಪಾಂಚಾಲ ದೇಶದ ಯುಧಾಮನ್ಯು, ಉತ್ತಮೌಜರು ಮತ್ತು ಸಾತ್ಯಕಿಯು ತಕ್ಷಣ ಧಾವಿಸಿ ಎದುರಿಸಿದರು.
ಉಪಾಯಾಂತಂ ತು ರಾಧೇಯಂ ದೃಷ್ಟ್ವಾ ಪಾರ್ಥೋ ಮಹಾರಥಃ |
ಪ್ರಹಸನ್ ದೇವಕೀಪುತ್ರಮಿದಂ ವಚನಮಬ್ರವೀತ್ ॥ 32 ॥
ಸಮೀಪಕ್ಕೆ ಬಂದ ಕರ್ಣನನ್ನು ನೋಡಿ ಮಹಾರಥನಾದ ಅರ್ಜುನನು ನಗುತ್ತಾ ದೇವಕೀಪುತ್ರನಾದ ಕೃಷ್ಣನನ್ನು ಕುರಿತು ಈ ಮಾತನ್ನು ಆಡಿದನು.
ಏಷ ಪ್ರಯಾತ್ಯಾಧಿರಥಿಃ ಸಾತ್ಯಕೇಃ ಸ್ಯಂದನಂ ಪ್ರತಿ |
ನ ಮೃಷ್ಯತಿ ಹತಂ ನೂನಂ ಭೂರಿಶ್ರವಸಮಾಹವೇ ॥ 33 ॥
ಅಧಿರಥ ಪುತ್ರನಾದ ಈ ಕರ್ಣನು ಸಾತ್ಯಕಿಯ ರಥದ ಬಳಿಗೆ ಹೋಗುತ್ತಿದ್ದಾನೆ. ಭೂರಿಶ್ರವನು ಯುದ್ಧದಲ್ಲಿ ಹತನಾದುದನ್ನು ಅವನು ಖಂಡಿತ ಸಹಿಸುತ್ತಿಲ್ಲ.
ಯತ್ರ ಯಾತ್ಯೇಷ ತತ್ರ ತ್ವಂ ಚೋದಯಾಶ್ವಾನ್ ಜನಾರ್ದನ |
ಮಾ ಸೋಮದತ್ತೇಃ ಪದವೀಂ ಗಮಯೇತ್ ಸಾತ್ಯಕಿಂ ವೃಷಃ ॥ 34 ॥
ಎಲೈ ಜನಾರ್ದನನೇ, ಅವನು ಹೋದ ಕಡೆಯಲ್ಲಿಯೇ ನನ್ನ ಅಶ್ವಗಳನ್ನು ಪ್ರಚೋದಿಸು. ಕರ್ಣನು ಸಾತ್ಯಕಿಯನ್ನು ಭೂರಿಶ್ರವನ ಮಾರ್ಗದಲ್ಲಿ ಕಳುಹಿಸುವುದು ಬೇಡ (ಎಂದು ಹೇಳಿದನು).
ಏವಮುಕ್ತೋ ಮಹಾಬಾಹುಃ ಕೇಶವಃ ಸವ್ಯಸಾಚಿನಾ |
ಪ್ರತ್ಯುವಾಚ ಮಹಾತೇಜಾಃ ಕಾಲಯುಕ್ತಮಿದಂ ವಚಃ ॥ 35 ॥
ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಮಹಾಬಾಹುವೂ, ಮಹಾತೇಜಸ್ವಿಯೂ ಆದ ಕೇಶವನು ಆ ಸಮಯಕ್ಕೆ ಯೋಗ್ಯವಾದ ಈ ಮಾತನ್ನು ಆಡಿದನು.
ಅಲಮೇಷ ಮಹಾಬಾಹುಃ ಕರ್ಣಾಯೈಕೋ ಹಿ ಪಾಂಡವ |
ಕಿಂ ಪುನರ್ದ್ರೌಪದೇಯಾಭ್ಯಾಂ ಸಹಿತಃ ಸಾತ್ವತರ್ಷಭಃ ॥ 36 ॥
ಎಲೈ ಪಾಂಡವನೇ, ಕರ್ಣನನ್ನು ಎದುರಿಸಲು ಮಹಾಬಾಹುವಾದ ಒಬ್ಬ ಸಾತ್ಯಕಿಯು ಸಾಕು. ಇನ್ನು ದ್ರುಪದಪುತ್ರರಾದ ಯುಧಾಮನ್ಯು ಮತ್ತು ಉತ್ತಮೌಜರಿಂದ ಸಾತ್ಯಕಿಯು ಸಹಿತನಾದ ಮೇಲೆ ಹೇಳುವುದೇನಿದೆ?
ನ ಚ ತಾವತ್ ಕ್ಷಮಃ ಪಾರ್ಥ ಕರ್ಣೇನ ತವ ಸಂಗರಃ |
ಪ್ರಜ್ವಲಂತೀ ಮಹೋಲ್ಕೇವ ತಿಷ್ಠತ್ಯಸ್ಯ ಹಿ ವಾಸವೀ |
ತ್ವದರ್ಥಂ ಪೂಜ್ಯಮಾನೈಷಾ ರಕ್ಷ್ಯತೇ ಪರವೀರಹನ್ ॥ 37 ॥
ಎಲೈ ಪಾರ್ಥನೇ, ಸದ್ಯದಲ್ಲಿ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡುವುದು ನಿನಗೆ ಯೋಗ್ಯವಲ್ಲ. ಎಲೈ ಶತ್ರುಘಾತಕನೇ, ಇಂದ್ರನು ಕೊಟ್ಟ ಶಕ್ತಿಯು ಮಹೋಲ್ಕೆಯಂತೆ ಪ್ರಜ್ವಲಿಸುತ್ತಾ ನಿತ್ಯವೂ ಪೂಜಿಸಲ್ಪಟ್ಟು ನಿನ್ನ ಸಲುವಾಗಿ ರಕ್ಷಿಸಲ್ಪಟ್ಟು ಅವನ ಬಳಿಯಲ್ಲಿದೆ.
ಅತಃ ಕರ್ಣಃ ಪ್ರಯಾತ್ವತ್ರ ಸಾತ್ವತಸ್ಯ ಯಥಾ ತಥಾ |
ಅಹಂ ಜ್ಞಾಸ್ಯಾಮಿ ಕೌರವ್ಯ ಕಾಲಮಸ್ಯ ದುರಾತ್ಮನಃ |
ಯತ್ರೈನಂ ವಿಶಿಖೈಸ್ತೀಕ್ಷ್ಣೈಃ ಣ್ಯೈಃ ಪಾತಯಿಷ್ಯತಿ ಭೂತಳೇ ॥ 38 ॥
ಆದ್ದರಿಂದ ಕರ್ಣನು ಸಾತ್ಯಕಿಯ ಕಡೆಗೆ ಹೇಗೆ ಬೇಕೋ ಹಾಗೆ ಹೋಗಲಿ. ಎಲೈ ಕೌರವ್ಯನೇ, ದುರಾತ್ಮನಾದ ಅವನನ್ನು ನೀನು ತೀಕ್ಷ್ಣವಾದ ಬಾಣಗಳಿಂದ ಭೂತಳದಲ್ಲಿ ಕೆಡವುವ ಕಾಲವನ್ನು ನಾನು ತಿಳಿಯುವೆನು.
ಧೃತರಾಷ್ಟ್ರಃ
ಯೋಽಸೌ ಕರ್ಣೇನ ವೀರೇಣ ವಾರ್ಷ್ಣೇಯಸ್ಯ ಸಮಾಗಮಃ |
ಹತೇ ತು ಭೂರಿಶ್ರವಸಿ ಸೈಂಧವೇ ಚ ನಿಪಾತಿತೇ ॥ 39 ॥
ಸಾತ್ಯಕಿಶ್ಚಾಪಿ ವಿರಥಃ ಕಂ ಸಮಾರೂಢವಾನ್ ರಥಮ್ |
ಚಕ್ರರಕ್ಷೌ ಚ ಪಾಂಚಲ್ಯೌ ತನ್ಮಮಾಚಕ್ಷ್ವ ಸಂಜಯ ॥ 40 ॥
ಧೃತರಾಷ್ಟ್ರ, ಭೂರಿಶ್ರವನು ಹತನಾದಮೇಲೆ, ಸೈಂಧವನೂ ಹತನಾದ ಮೇಲೆ, ಈ ಕರ್ಣ ಮತ್ತು ಸಾತ್ಯಕಿಗೆ ಪರಸ್ಪರ ಸಮಾಗಮವಾಯಿತಷ್ಟೆ! ರಥಹೀನನಾಗಿದ್ದ ಸಾತ್ಯಕಿಯು ಆಗ ಯಾವ ರಥವನ್ನು ಏರಿದನು? ಎಲೈ ಸಂಜಯನೇ, ಅವನ ಚಕ್ರರಕ್ಷಕರಾಗಿದ್ದ ಪಾಂಚಾಲ ದೇಶದ ಯುಧಾಮನ್ಯು ಮತ್ತು ಉತ್ತಮೌಜರು ಯಾವ ರಥವನ್ನು ಏರಿದರೆಂದು ನನಗೆ ಹೇಳು.
ಸಂಜಯಃ
ಹಂತ ತೇ ವರ್ಣಯಿಷ್ಯಾಮಿ ಯಥಾವೃತ್ತಂ ಮಹಾರಣೇ |

ಶುಶ್ರೂಷಸ್ವ ಸ್ಥಿರೋ ಭೂತ್ವಾ ದುರಾಚರಿತಮಾತ್ಮನಃ ॥ 41 ॥
ಸಂಜಯ ಸಂತೋಷ. ಮಹಾಯುದ್ಧದಲ್ಲಿ ಏನು ನಡೆಯಿತೆಂದು ನಾನು ನಿನಗೆ ವರ್ಣಿಸುವೆನು. ನಿನ್ನ ದುರಾಚಾರ ಫಲವಾದ ಅದನ್ನು ಸ್ಥಿರವಾಗಿ ಕೇಳು.
ಪೂರ್ವಮೇವ ಹಿ ಕೃಷ್ಣಸ್ಯ ಮನೋಗತಮಿದಂ ಪ್ರಭೋ |
ವಿಜೇತವ್ಯೋ ಯಥಾ ವೀರಃ ಸಾತ್ಯಕಿರ್ಯೂಪಕೇತುನಾ ॥ 42 ॥
ಎಲೈ ಪ್ರಭುವೇ, ವೀರನಾದ ಸಾತ್ಯಕಿಯು ಭೂರಿಶ್ರವನಿಂದ ಜಯಿಸಲ್ಪಡ- ಬೇಕೆಂಬುದು ಮೊದಲಿನಿಂದಲೂ ಕೃಷ್ಣನ ಅಭಿಪ್ರಾಯವಾಗಿದ್ದಿತು.
ಅತೀತಾನಾಗತಂ ರಾಜನ್ ಸ ಹಿ ವೇತ್ತಿ ಜನಾರ್ದನಃ |
ಅತಃ ಸೂತಂ ಸಮಾಹೂಯ ದಾರುಕಂ ಸಂದಿದೇಶ ಹ |
ರಥೋ ಮೇ ಯುಜ್ಯತಾಂ ಕಾಲ್ಯಮಿತಿ ರಾಜನ್ ಮಹಾಬಲಃ ॥ 43 ॥
ರಾಜನೇ, ಅತೀತಾನಾಗತವಾದ ಎಲ್ಲವನ್ನೂ ಜನಾರ್ದನನು ತಿಳಿದಿದ್ದಾನೆ. ಆದ್ದರಿಂದ ಮಹಾಬಲನಾದ ಅವನು ತನ್ನ ಸೂತನಾದ ದಾರುಕನನ್ನು ಕರೆದು ಪ್ರಾತಃಕಾಲದಲ್ಲಿ ನನ್ನ ರಥವನ್ನು ಅಣಿಗೊಳಿಸು ಎಂದು ಸಂದೇಶವನ್ನು ನೀಡಿದನು.
ನ ಹಿ ದೇವಾ ನ ಗಂಧರ್ವಾ ನ ಯಕ್ಷೋರಗರಾಕ್ಷಸಾಃ |
ಮಾನವಾ ವಾ ವಿಜೇತಾರಃ ಕೃಷ್ಣಯೋಃ ಸಂತಿ ಕೇಚನ ॥ 44 ॥
ಮೊದಲು ಕೃಷ್ಣಾರ್ಜುನರು ಕುಳಿತ ರಥದಲ್ಲಿ ಅನಂತರ ಯಾರು ಕುಳಿತರೂ ದೇವತೆಗಳಾಗಲೀ, ಗಂಧರ್ವರಾಗಲೀ, ಯಕ್ಷೋರಗರಾಕ್ಷಸರಾಗಲೀ, ಮಾನವರಾಗಲೀ ಅವರನ್ನು ಜಯಿಸಲಾರರು (ಲಕ್ಷಾಲಂಕಾರ).
ಪಿತಾಮಹಪುರೋಗಾಶ್ಚ ದೇವಾಃ ಸಿದ್ಧಾಶ್ಚ ತಂ ವಿದುಃ |
ತಯೋಃ ಪ್ರಭಾವಮತುಲಂ ಶೃಣು ಯುದ್ಧಂ ಚ ತದ್ಯಥಾ ॥ 45 ॥
ಬ್ರಹ್ಮದೇವರೇ ಮೊದಲಾದ ದೇವತೆಗಳೂ ಮತ್ತು ಸಿದ್ಧರೂ ಈ ವಿಷಯವನ್ನು ತಿಳಿದಿದ್ದಾರೆ. ಸಾತ್ಯಕಿ ಮತ್ತು ಕರ್ಣರ ಅತುಲವಾದ ಪ್ರಭಾವವನ್ನು ಮತ್ತು ಅವರಿಗೆ ನಡೆದ ಯುದ್ಧದ ರೀತಿಯನ್ನು ಕೇಳು.
ಸಾತ್ಯಕಿಂ ವಿರಥಂ ದೃಷ್ಟ್ವಾ ಕರ್ಣಂ ಚಾಭ್ಯುದ್ಯತಾಯುಧಮ್ |
ದಧ್ಮೌ ಶಂಖಂ ಮಹಾವೇಗಮಾರ್ಷಭೇಣೈವ ಪೂರಿತಮ್ ॥ 45 ॥
ಸಾತ್ಯಕಿಯು ರಥಹೀನನಾಗಿರುವುದನ್ನು ಮತ್ತು ಕರ್ಣನು ಆಯುಧವನ್ನು ಎತ್ತಿ ಹಿಡಿದಿರುವುದನ್ನು ನೋಡಿದ ಕೃಷ್ಣನು ತನ್ನ ಶಂಖವನ್ನು ದಾರುಕನಿಗೆ ಸೂಚನೆಯನ್ನು ಕೊಡಲು ಋಷಭನಾದವು ಬರುವಂತೆ ಊದಿದನು.
ದಾರುಕೋಽವೇತ್ಯ ಸಂದೇಶಂ ಶ್ರುತ್ವಾ ಶಂಖಸ್ಯ ಚ ಸ್ವನಮ್ |
ರಥಮನ್ವಾನಯತ್ ತಸ್ಮೈ ಸುಪರ್ಣೋಚ್ಚ್ರಿತಕೇತನಮ್ ॥ 46 ॥
ದಾರುಕನು ಶಂಖದ ಧ್ವನಿಯನ್ನು ಕೇಳಿ, ಕೃಷ್ಣನ ಸಂದೇಶವನ್ನು ತಿಳಿದು ಗರುಡ ಧ್ವಜವುಳ್ಳ ರಥವನ್ನು ಅವನಿಗಾಗಿ ತಂದನು.
ಸ ಕೇಶವಸ್ಯಾನುಮತೇ ರಥಂ ದಾರುಕಸಂಯುತಮ್ |
ಆರುರೋಹ ಶಿನೇಃ ಪೌತ್ರೋ ಜ್ವಲನಾದಿತ್ಯಸನ್ನಿಭಮ್ ॥ 47 ॥
ಕೇಶವನ ಅಪ್ಪಣೆಯಂತೆ ಸಾತ್ಯಕಿಯು ದಾರುಕನಿಂದ ಕೂಡಿದ ಜ್ವಲಿಸುವ ಸೂರ್ಯನ ಕಾಂತಿಯನ್ನು ಹೊಂದಿದ ಆ ರಥವನ್ನು ಏರಿದನು.
ಕಾಮಗೈಃ ಸೈನ್ಯಸುಗ್ರೀವಮೇಘಪುಷ್ಪಬಲಾಹಕೈಃ |
ಹಯೋದಗ್ರೈರ್ಮಹಾವೇಗೈರ್ಹೇಮಭಾಂಡವಿಭೂಷಿತೈಃ ॥ 48 ॥
ಯುಕ್ತಂ ಸಮಾರುಹ್ಯ ಚ ತಂ ವಿಮಾನಪ್ರತಿಮಂ ರಥಮ್ |
ಅಭ್ಯದ್ರವತ ರಾಧೇಯಂ ಪ್ರವಪನ್ ಸಾಯಕಾನ್ ಬಹೂನ್ ॥ 49 ॥
ಕಾಮಗಾಮಿಗಳಾದ, ಮಹಾವೇಗವನ್ನು ಹೊಂದಿದ, ಹೇಮಾಭರಣಗಳಿಂದ ಭೂಷಿತವಾದ, ಸೈನ್ಯ-ಸುಗ್ರೀವ-ಮೇಘಪುಷ್ಪ-ಬಲಾಹಕಗಳೆಂಬ ನಾಲ್ಕು ಶ್ರೇಷ್ಠವಾದ ಅಶ್ವಗಳನ್ನು ಹೂಡಿದ, ವಿಮಾನದಂತಿದ್ದ ರಥವನ್ನು ಏರಿ, ಬಾಣಗಳನ್ನು ಬೀಜಗಳಂತೆ ಚೆಲ್ಲುತ್ತಾ ಕರ್ಣನ ಮೇಲೆ ಎರಗಿದನು.
ಚಕ್ರರಕ್ಷಾವಪಿ ತದಾ ಯುಧಾಮನ್ಯೂತ್ತಮೌಜಸೌ |
ಧನಂಜಯರಥಂ ಹಿತ್ವಾ ರಾಧೇಯಂ ಪ್ರತ್ಯುದೀಯಯುಃ ॥ 50 ॥
ಚಕ್ರರಕ್ಷಕರಾದ ಯುಧಾಮನ್ಯು ಮತ್ತು ಉತ್ತಮೌಜರೂ ಅರ್ಜುನನ ರಥವನ್ನು ಬಿಟ್ಟು ಆಗ ಕರ್ಣನ ಮೇಲೆಯೇ ಎರಗಿದರು.
ರಾಧೇಯೋಽಪಿ ಮಹಾರಾಜ ಶರವರ್ಷಂ ಸಮುತ್ಸೃಜನ್ |
ಅಭ್ಯದ್ರವತ್ ಸುಸಂಕ್ರುದ್ಧೋ ರಣೇ ಶೈನೇಯಮಚ್ಯುತಮ್ ॥ 51 ॥
ಎಲೈ ಮಹಾರಾಜನೇ, ಕರ್ಣನೂ ಸಹ ಬಹಳ ಕೋಪಗೊಂಡು ರಣರಂಗದಲ್ಲಿ ತನ್ನ ಗುಣಗಳಿಂದ ಚ್ಯುತನಾಗದ ಸಾತ್ಯಕಿಯ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಅವನ ಕಡೆಗೆ ಧಾವಿಸಿದನು.
ನೈವ ದೈವಂ ನ ಗಾಂಧರ್ವಂ ನಾಸುರೋರಗರಾಕ್ಷಸಮ್ |
ತಾದೃಶಂ ಭುವಿ ವಾ ಯುದ್ಧಂ ದಿವಿ ವಾ ಶ್ರುತಮಿತ್ಯುತ ॥ 52 ॥
ದೇವತೆಗಳಿಗಾಗಲೀ, ಗಂಧರ್ವರಿಗಾಗಲೀ, ಅಸುರೋರಗರಾಕ್ಷಸರಿಗಾಗಲೀ ಭೂಮಿಯಲ್ಲಿ ಅಥವಾ ಆಕಾಶದಲ್ಲಿ ಅಂತಹ ಯುದ್ಧವು ನಡೆದುದನ್ನು ಯಾರೂ ಕೇಳಿರಲಿಲ್ಲ.
ಉಪಾರಮತ ತತ್ ಸೈನ್ಯಂ ಸರಥಾಶ್ವನರದ್ವಿಪಮ್ |

ತಯೋರ್ದೃಷ್ಟ್ವಾ ಮಹಾರಾಜ ಕರ್ಮ ಸಮ್ಮೂಢಚೇತನಮ್ ॥ 53 ॥
ಎಲೈ ಮಹಾರಾಜನೇ, ಅವರಿಬ್ಬರ ಕರ್ಮವನ್ನು ನೋಡಿ ಮೂಢರಾದ, ರಥಾಶ್ವ- ನರ-ಗಜಗಳಿಂದ ಕೂಡಿದ ಅವರ ಸೈನ್ಯಗಳು ಯುದ್ಧವನ್ನು ನಿಲ್ಲಿಸಿದವು.
ಸರ್ವೇ ಚ ಸಮಪಶ್ಯಂತ ತದ್ಯುದ್ಧಮತಿಮಾನುಷಮ್ |
ತಯೋರ್ನೃವರಯೋ ರಾಜನ್ ಸಾರಥ್ಯಂ ದಾರುಕಸ್ಯ ಚ ॥ 54 ॥
ಎಲೈ ರಾಜನೇ, ಅವರೆಲ್ಲರೂ ನರಶ್ರೇಷ್ಠರಾದ ಅವರ ಅತಿಮಾನುಷವಾದ ಆ ಯುದ್ಧವನ್ನು ಮತ್ತು ದಾರುಕನ ಸಾರಥ್ಯ ಕೌಶಲವನ್ನು ನೋಡುತ್ತಾ ನಿಂತರು.
ಗತಪ್ರತ್ಯಾಗತಾವೃತ್ತೈರ್ಮಂಡಲೈಃ ಸನ್ನಿವರ್ತನೈಃ |
ಸಾರಥೇಸ್ತು ರಥಸ್ಥಸ್ಯ ಕಾಶ್ಯಪೇಯಸ್ಯ ವಿಸ್ಮಿತಾಃ ॥ 55 ॥
ಕಾಶ್ಯಪ ಗೋತ್ರದ ಸಾರಥಿಯಾದ ದಾರುಕನ ಮುಂದೆ ಸಾಗುವುದು, ಹಿಂದೆ ಬರುವುದು, ತಿರುಗುವುದು, ಮಂಡಲಗಳನ್ನು ಮಾಡುವುದು ಮೊದಲಾದ ಕೌಶಲವನ್ನು ನೋಡಿ ಎಲ್ಲರೂ ವಿಸ್ಮಿತರಾದರು.
ನಭಸ್ತಳಗತಾಶ್ಚೈವ ದೇವಗಂಧರ್ವದಾನವಾಃ |
ಅತೀವಾವಹಿತಾ ದ್ರಷ್ಟುಂ ಕರ್ಣಶೈನೇಯಯೋ ರಣಮ್ ॥ 56 ॥
ಆಕಾಶದಲ್ಲಿ ನಿಂತ ದೇವ-ಗಂಧರ್ವ-ದಾನವರು ಕರ್ಣ ಮತ್ತು ಸಾತ್ಯಕಿಯರ ಯುದ್ಧವನ್ನು ನೋಡಲು ಬಹಳ ಆಸಕ್ತರಾಗಿ ನಿಂತರು.
ಮಿತ್ರಾರ್ಥೇ ತೌ ಪರಾಕ್ರಾಂತೌ ಸ್ಪರ್ಧಿನೌ ಶುಷ್ಮಿಣೌ ರಣೇ |
ಕರ್ಣಶ್ಚಾಮರಸಂಕಾಶೋ ಯುಯುಧಾನಶ್ಚ ಸಾತ್ಯಕಿಃ ॥ 57 ॥
ದೇವತಾಕಾಂತಿಯನ್ನು ಹೊಂದಿದ ಕರ್ಣನು ಮತ್ತು ಸಾತ್ಯಕಿಯಾದ ಯುಯುಧಾನನು ಸ್ಪರ್ಧಿಸುವವರಾಗಿ, ವೀರ್ಯವಂತರಾಗಿ ಮಿತ್ರರ ಸಲುವಾಗಿ ಯುದ್ಧದಲ್ಲಿ ಪರಾಕ್ರಮವನ್ನು ಮಾಡಿದರು.
ಅನ್ಯೋನ್ಯಂ ತೌ ಮಹಾರಾಜ ಶರವರ್ಷೈರವರ್ಷತಾಮ್ |
ಪ್ರಮಮಾಥ ಶಿನೇಃ ಪೌತ್ರಂ ಕರ್ಣಃ ಸಾಯಕವೃಷ್ಟಿಭಿಃ ॥ 58 ॥
ಎಲೈ ಮಹಾರಾಜನೇ, ಅವರು ಪರಸ್ಪರವಾಗಿ ಬಾಣಗಳ ಮಳೆಯನ್ನು ಸುರಿಸಿದರು. ಕರ್ಣನು ಬಾಣಗಳ ಮಳೆಯಿಂದ ಶಿನಿಯ ಪೌತ್ರನಾದ ಸಾತ್ಯಕಿಯನ್ನು ಮರ್ದಿಸಿದನು.
ಅಮೃಷ್ಯಮಾಣೋ ನಿಧನಂ ಕೌರವ್ಯಜಲಸಂಧಯೋಃ |
ಕರ್ಣಃ ಶೋಕಸಮಾವಿಷ್ಟೋ ಮಹೋರಗ ಇವ ಶ್ವಸನ್ ॥ 59 ॥
ಸ ಶೈನೇಯಂ ರಣೇ ಕ್ರುದ್ಧಃ ಪ್ರದಹನ್ನಿವ ಚಕ್ಷುಷಾ |
ಅಭ್ಯದ್ರವತ ವೇಗೇನ ಪುನಃ ಪುನರರಿಂದಮಃ ॥ 60 ॥
ಕರ್ಣನು ಭೂರಿಶ್ರವ ಮತ್ತು ಜಲಸಂಧರ ವಧೆಯನ್ನು ಸಹಿಸದೆ ಶೋಕದಿಂದ ಕೂಡಿದವನಾಗಿ ಮಹಾಸರ್ಪದಂತೆ ಉಸಿರನ್ನು ಬಿಡುತ್ತಾ ಸಾತ್ಯಕಿಯನ್ನು ತನ್ನ ದೃಷ್ಟಿಯಿಂದ ಸುಡುವವನಂತೆ ಪುನಃ ಪುನಃ ಅರಿಂದಮನಾದ ಅವನು ವೇಗದಿಂದ ಸಾತ್ಯಕಿಯ ಮೇಲೆ ಎರಗಿದನು.
ತಂ ತು ಸಂಪ್ರೇಕ್ಷ್ಯ ಸಂಕ್ರುದ್ಧಂ ಸಾತ್ಯಕಿಃ ಪ್ರತ್ಯವಿಧ್ಯತ |
ಮಹತಾ ಶರವರ್ಷೇಣ ಗಜಃ ಪ್ರತಿಗಜಂ ಯಥಾ ॥ 61 ॥
ಅವನು ಬಹಳ ಕೋಪಗೊಂಡಿರುವುದನ್ನು ನೋಡಿ ಸಾತ್ಯಕಿಯು ದೊಡ್ಡ ಬಾಣಗಳ ವೃಷ್ಟಿಯನ್ನು ಕರೆದು ಗಜವು ಪ್ರತಿಗಜವನ್ನು ಹಿಂಸಿಸಿದಂತೆ ಅವನನ್ನು ಹಿಂಸಿಸಿದನು.
ತೌ ಸಮೇತ್ಯ ನರವ್ಯಾಘ್ರೌ ವ್ಯಾಘ್ರಾವಿವ ತರಸ್ವಿನೌ |
ಅನ್ಯೋನ್ಯಂ ಸಂತತಕ್ಷಾತೇ ರಣೇಽನುಪಮವಿಕ್ರಮೌ ॥ 62 ॥
ಯುದ್ಧದಲ್ಲಿ ಅನುಪಮ ಪರಾಕ್ರಮವುಳ್ಳ ನರವ್ಯಾಘ್ರರಾದ ಅವರಿಬ್ಬರು ವೇಗಶಾಲಿಗಳಾದ ವ್ಯಾಘ್ರಗಳಂತೆ ಪರಸ್ಪರವಾಗಿ ಸಂಧಿಸಿ ಪರಸ್ಪರವಾಗಿ ಗಾಯಗೊಳಿಸಿದರು.
ತತಃ ಕರ್ಣಂ ಶಿನೇಃ ಪೌತ್ರಃ ಸರ್ವಪಾರಶವೈಃ ಶರೈಃ |
ಬಿಭೇದ ಸರ್ವಗಾತ್ರೇಷು ಪುನಃ ಪುನರರಿಂದಮಃ ॥ 63 ॥
ಅನಂತರ ಶಿನಿಯ ಪೌತ್ರನಾದ ಸಾತ್ಯಕಿಯು ಪೂರ್ಣವಾಗಿ ಕಬ್ಬಿಣದಿಂದ ಮಾಡಿದ ಬಾಣಗಳಿಂದ ಕರ್ಣನನ್ನು ಅವನ ಶರೀರದಲ್ಲೆಲ್ಲ ಪುನಃ ಪುನಃ ಭೇದಿಸಿದನು.
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾಹರತ್ |
ಅಶ್ವಾಂಶ್ಚ ಚತುರಃ ಶ್ವೇತಾನ್ ನಿಜಘ್ನೇ ನಿಶಿತೈಃ ಶರೈಃ ॥ 64 ॥
ಅವನ ಸಾರಥಿಯನ್ನು ಭಲ್ಲದಿಂದ ರಥದ ಮುಂಭಾಗದಿಂದ ಕೆಡವಿದನು. ನಾಲ್ಕು ಶ್ವೇತಾಶ್ವಗಳನ್ನು ತೀಕ್ಷ್ಣವಾದ ಬಾಣಗಳಿಂದ ಕೊಂದನು.
ಛಿತ್ತ್ವಾ ಧ್ವಜಂ ಶತೇನೈವ ಶತಧಾ ಪುರುಷರ್ಷಭಃ |
ಚಕಾರ ವಿರಥಂ ಕರ್ಣಂ ತವ ಪುತ್ರಸ್ಯ ಪಶ್ಯತಃ ॥ 65 ॥
ನೂರು ಬಾಣಗಳಿಂದ ಪುರುಷಶ್ರೇಷ್ಠನಾದ ಅವನು ಧ್ವಜವನ್ನು ನೂರು ಭಾಗವಾಗಿ ಕತ್ತರಿಸಿ ನಿನ್ನ ಪುತ್ರನು ನೋಡುತ್ತಿರುವಂತೆಯೇ ಕರ್ಣನನ್ನು ರಥಹೀನನನ್ನಾಗಿ ಮಾಡಿದನು.
ತತೋ ವಿಮನಸೋ ರಾಜಂಸ್ತಾವಕಾಃ ಪುರುಷರ್ಷಭಾಃ |

ವೃಷಸೇನಃ ಕರ್ಣಸುತಃ ಶಲ್ಯೋ ಮದ್ರಾಧಿಪಸ್ತಥಾ ॥ 66 ॥
ದ್ರೋಣಪುತ್ರಶ್ಚ ಶೈನೇಯಂ ಸರ್ವತಃ ಪರ್ಯವಾರಯನ್ |
ತತಃ ಪರ್ಯಾಕುಲಂ ಸರ್ವಂ ನ ಪ್ರಾಜ್ಞಾಯತ ಕಿಂಚನ ॥ 67 ॥
ಎಲೈ ರಾಜನೇ, ಆಗ ವಿಷಾದಗೊಂಡ ನಿನ್ನ ಪುರುಷಶ್ರೇಷ್ಠರಾದ, ಕರ್ಣಸುತನಾದ ವೃಷಸೇನ, ಮದ್ರಾದಿಪತಿಯಾದ ಶಲ್ಯ ಮತ್ತು ದ್ರೋಣಪುತ್ರರಾದ ಅಶ್ವತ್ಥಾಮರು ಎಲ್ಲ ಕಡೆಗಳಿಂದಲೂ ಸಾತ್ಯಕಿಯನ್ನು ಸುತ್ತುವರಿದರು. ಅನಂತರ ಎಲ್ಲವೂ ಮಿಶ್ರಣವನ್ನು ಹೊಂದಿತು. ಏನೂ ತಿಳಿಯಲಿಲ್ಲ.
ತಥಾ ಸಾತ್ಯಕಿನಾ ವೀರೇ ವಿರಥೇ ಸೂತಜೇ ಕೃತೇ |
ಹಾಹಾಕಾರಸ್ತತೋ ರಾಜನ್ ಸರ್ವಸೈನ್ಯೇಷು ಚಾಭವತ್ ॥ 68 ॥
ಎಲೈ ರಾಜನೇ, ಸಾತ್ಯಕಿಯಿಂದ ವೀರನಾದ ಕರ್ಣನು ಆ ರೀತಿಯಲ್ಲಿ ರಥಹೀನನಾಗಿ ಮಾಡಲ್ಪಡುತಿತರಲು ಎಲ್ಲ ಸೈನ್ಯಗಳಲ್ಲಿಯೂ ಹಾಹಾಕಾರ ಉಂಟಾಯಿತು.
ಕರ್ಣೋಽಪಿ ವಿಹ್ವಲೋ ರಾಜನ್ ಸಾತ್ವತೇನಾರ್ದಿತಃ ಶರೈಃ |
ದುರ್ಯೋಧನರಥಂ ರಾಜನ್ನಾರುರೋಹ ವಿನಿಃಶ್ವಸನ್ ॥ 69 ॥
ಮಾನಯಂಸ್ತವ ಪುತ್ರಸ್ಯ ಬಾಲ್ಯಾತ್ ಪ್ರಭೃತಿ ಸೌಹೃದಮ್ |
ಕೃತಾಂ ರಾಜ್ಯಪ್ರದಾನೇನ ಪ್ರತಿಜ್ಞಾಂ ಪರಿಪಾಲಯನ್ ॥ 70 ॥
ಎಲೈ ರಾಜನೇ, ಸಾತ್ಯಕಿಯ ಬಾಣಗಳಿಂದ ಪೀಡಿತನಾಗಿ ವಿಹ್ವಲನಾದ ಕರ್ಣನೂ ಸಹ ನಿಟ್ಟುಸಿರನ್ನು ಬಿಡುತ್ತಾ ಬಾಲ್ಯದಿಂದಲೂ ನಿನ್ನ ಪುತ್ರನು ತೋರಿಸಿದ ಸೌಹಾರ್ದವನ್ನು ಗೌರವಿಸುತ್ತಾ, ರಾಜ್ಯಪ್ರದಾನ ಕಾಲದಲ್ಲಿ ತಾನು ಮಾಡಿದ ಪ್ರತಿಜ್ಞೆಯನ್ನು ಪಾಲಿಸುತ್ತಾ ದುರ್ಯೋಧನನ ರಥವನ್ನು ಏರಿದನು.
ತಥಾ ತು ವಿರಥೇ ಕರ್ಣೇ ಪುತ್ರಾನ್ ವೈ ತವ ಪಾರ್ಥಿವ |
ದುಃಶಾಸನಮುಖಾನ್ ಶೂರಾನ್ ನಾವಧೀತ್ ಸಾತ್ಯಕಿರ್ವಶೀ ॥ 71 ॥
ಎಲೈ ರಾಜನೇ, ಕರ್ಣನು ಆ ರೀತಿಯಲ್ಲಿ ರಥಹೀನನಾಗುತ್ತಿರಲು ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡ ಸಾತ್ಯಕಿಯು ನಿನ್ನ ಪುತ್ರರಾದ ದುಶ್ಶಾಸನ ಮೊದಲಾದ ಶೂರರನ್ನು ಕೊಲ್ಲಲಿಲ್ಲ.
ರಕ್ಷನ್ ಪ್ರತಿಜ್ಞಾಂ ಚ ಪುನರ್ಭೀಮಸೇನಕೃತಾಂ ಪುರಾ |
ವಿರಥಾನ್ ವಿಹ್ವಲಾಂಶ್ಚಕ್ರೇ ನ ತು ಪ್ರಾಣೈರ್ವ್ಯಯೋಜಯತ್ ॥ 72 ॥
ಹಿಂದೆ ಭೀಮಸೇನನು ಮಾಡಿದ ಪ್ರತಿಜ್ಞೆಯನ್ನು ರಕ್ಷಿಸುವವನಾಗಿ ಅವರನ್ನು ರಥಹೀನರನ್ನಾಗಿ ಮತ್ತು ವಿಹ್ವಲರನ್ನಾಗಿ ಮಾಡಿದನು. ಪ್ರಾಣವಿಯೋಗವನ್ನು ಉಂಟು ಮಾಡಲಿಲ್ಲ.
ಭೀಮಸೇನೇನ ತು ವಧಃ ಪುತ್ರಾಣಾಂ ತೇ ಪ್ರತಿಶ್ರುತಃ |
ಪುನರ್ದ್ಯೂತೇ ಚ ಪಾರ್ಥೇನ ವಧಃ ಕರ್ಣಸ್ಯ ಸಂಶ್ರುತಃ ॥ 73 ॥
ಭೀಮಸೇನನಿಂದ ನಿನ್ನ ಪುತ್ರರ ವಧೆಯು ಪ್ರತಿಜ್ಞೆ ಮಾಡಲ್ಪಟ್ಟಿತು. ಹಾಗೆಯೇ ದ್ಯೂತಕಾಲದಲ್ಲಿ ಅರ್ಜುನನಿಂದ ಕರ್ಣನ ವಧೆಯು ಪ್ರತಿಜ್ಞೆ ಮಾಡಲ್ಪಟ್ಟಿತು.
ವಧೇ ತ್ವಕುರ್ವನ್ ಯತ್ನಂ ತೇ ತಸ್ಯ ಕರ್ಣಮುಖಾಸ್ತದಾ |
ನಾಶಕ್ನುವಂಶ್ಚ ತಂ ಹಂತುಂ ಸಾತ್ಯಕಿಂ ಪ್ರವರಾ ರಥಾಃ ॥ 74 ॥
ಕರ್ಣ ಮೊದಲಾದವರು ಸಾತ್ಯಕಿಯನ್ನು ಕೊಲ್ಲಲು ಪ್ರಯತ್ನ ಮಾಡಿದರು. ಆದರೆ ಶ್ರೇಷ್ಠರಥರಾದ ಅವರು ಅವನನ್ನು ಕೊಲ್ಲಲು ಶಕ್ತರಾಗಲಿಲ್ಲ.
ದ್ರೌಣಿಶ್ಚ ಕೃತವರ್ಮಾ ಚ ತಥೈವಾನ್ಯೇ ಮಹಾರಥಾಃ |
ನಿರ್ಜಿತಾ ಧನುಷೈಕೇನ ಶತಶಃ ಕ್ಷತ್ರಿಯರ್ಷಭಾಃ |
ಕಾಂಕ್ಷತಃ ಪರಲೋಕಂ ಚ ಧರ್ಮರಾಜಸ್ಯ ಚ ಪ್ರಿಯಮ್ ॥ 75 ॥
ಅಶ್ವತ್ಥಾಮರು, ಕೃತವರ್ಮ ಮತ್ತು ಇನ್ನೂ ಅನೇಕ ಮಹಾರಥರು ಮತ್ತು ನೂರಾರು ಸಂಖ್ಯೆಯ ಕ್ಷತ್ರಿಯ ಶ್ರೇಷ್ಠರು ಪರಲೋಕವನ್ನು ಬಯಸಿ ಧರ್ಮರಾಜನಿಗೆ ಪ್ರಿಯವನ್ನು ಮಾಡಲು ಬಯಸಿದ ಸಾತ್ಯಕಿಯ ಒಂದು ಧನುಸ್ಸಿನಿಂದ ಪರಾಜಿತರಾದರು.
ಕೃಷ್ಣಯೋಃ ಸದೃಶೋ ವೀರ್ಯೇ ಸಾತ್ಯಕಿಃ ಶತ್ರುಕರ್ಶನಃ |
ಕೃಷ್ಣೋ ವಾಪಿ ಭವೇಲ್ಲೋಕೇ ಪಾರ್ಥೋ ವಾಪಿ ಧನುರ್ಧರಃ |
ಶೈನೇಯೋ ವಾ ನರವ್ಯಾಘ್ರಶ್ಚತುರ್ಥೋ ನೋಪಲಭ್ಯತೇ ॥ 76 ॥
ಶತ್ರುಕರ್ಶನನಾದ ಸಾತ್ಯಕಿಯು ಪರಾಕ್ರಮದಲ್ಲಿ ಕೃಷ್ಣಾರ್ಜುನರಿಗೆ ಸಮಾನನಾದವನು. ಲೋಕದಲ್ಲಿ ಕೃಷ್ಣನು ಪರಾಕ್ರಮಿಯಾಗಬಹುದು ಅಥವಾ ಧನುರ್ಧಾರಿಯಾದ ಅರ್ಜುನನು ಪರಾಕ್ರಮಿಯಾಗಬಹುದು ಅಥವಾ ನರವ್ಯಾಘ್ರನಾದ ಸಾತ್ಯಕಿಯು ಪರಾಕ್ರಮಿಯಾಗಬಹುದು. ನಾಲ್ಕನೆಯವನು ಕಾಣುವುದಿಲ್ಲ.
ಅಜಯ್ಯಂ ರಥಮಾಸ್ಥಾಯ ವಾಸುದೇವಸ್ಯ ಸಾತ್ಯಕಿಃ |
ವಿರಥಂ ಕೃತವಾನ್ ಕರ್ಣಂ ವಾಸುದೇವಸಮೋ ಯುವಾ ॥ 77 ॥
ಕೃಷ್ಣನಿಗೆ ಸಮಾನನಾದ ಯುವಕನಾದ ಸಾತ್ಯಕಿಯು ಅಜೇಯವಾದ ಕೃಷ್ಣನ ರಥವನ್ನು ಏರಿ ಕಣರ್ನನ್ನು ರಥಹೀನನನ್ನಾಗಿ ಮಾಡಿದನು.
ಧೃತರಾಷ್ಟ್ರಃ
ದಾರುಕೇಣ ಸಮಾಯುಕ್ತಂ ಸ್ವಬಾಹುಬಲದರ್ಪಿತಃ |

ಕಚ್ಚಿದನ್ಯಂ ಸಮಾರೂಢಃ ಸ ರಥಂ ಸಾತ್ಯಕಿಃ ಪುನಃ ॥ 78 ॥
ಧೃತರಾಷ್ಟ್ರ, ದಾರುಕನಿಂದ ಸಹಿತವಾದ ರಥವನ್ನು ಏರಿದ ತನ್ನ ಬಾಹುಬಲದಿಂದ ದರ್ಪಿತನಾದ ಸಾತ್ಯಕಿಯು ಪುನಃ ಇನ್ನೊಂದು ರಥವನ್ನು ಏರಿದನೆ?
ಏತದಿಚ್ಛಾಮ್ಯಹಂ ಶ್ರೋತುಂ ಕುಶಲೋ ಹ್ಯಸಿ ಭಾಷಿತುಮ್ ।
ಅಸಹ್ಯಂ ತಮಹಂ ಮನ್ಯೇ ತನ್ಮಮಾಚಕ್ಷ್ವ ಸಂಜಯ ॥ 79 ॥
ನಾನು ಇದನ್ನು ತಿಳಿಯಲು ಬಯಸುತ್ತೇನೆ. ನೀನು ಚೆನ್ನಾಗಿ ಹೇಳುತ್ತಿದ್ದೀಯೆ. ಎಲೈ ಸಂಜಯನೇ, ಸಾತ್ಯಕಿಯ ಪರಾಕ್ರಮವು ಶತ್ರುಗಳು ಸಹಿಸಲು ಸಾಧ್ಯವಿಲ್ಲದುದು ಎಂದು ನಾನು ತಿಳಿಯುತ್ತೇನೆ. ಅದನ್ನು ನನಗೆ ಹೇಳು.
ಸಂಜಯಃ
ಶೃಣು ರಾಜನ್ ಯಥಾ ತಸ್ಯ ರಥಮನ್ಯಂ ಮಹಾಮತಿಃ ।
ದಾರುಕಸ್ಯಾನುಜಸ್ತೂರ್ಣಂ ಕಲ್ಪನಾವಿಧಿಕಲ್ಪಿತಮ್ ॥ 80 ॥
ಆಯಸೈಃ ಕಾಂಚನೈಶ್ಚಾಪಿ ಪಟ್ಟೈರ್ನದ್ಧಂ ಸಕೂಬರಮ್ ।
ತಾರಾಸಹಸ್ರಖಚಿತಂ ಸಿಂಹಧ್ವಜಪತಾಕಿನಮ್ ॥ 81 ॥
ಅಶ್ವೈರ್ವಾತಜವೈರ್ಯುಕ್ತಂ ಹೇಮಭಾಂಡಪರಿಚ್ಛದೈಃ ।
ಪಾಂಡರೈರಿಂದುಸಂಕಾಶೈಃ ಸರ್ವಶಬ್ದಾತಿಗೈರ್ದೃಢೈಃ ॥ 82 ॥
ಚಿತ್ರಕಾಂಚನಸನ್ನಾಹೈರ್ವಾಜಿಮುಖ್ಯೈರ್ವಿಶಾಂಪತೇ ।
ಘಂಟಾಜಾಲಾಕುಲರವಂ ಶಕ್ತಿತೋಮರವಿದ್ಯುತಮ್ ॥ 83 ॥
ವೃತಂ ಸಾಂಗ್ರಾಮಿಕೈರ್ದ್ರವ್ಯೈರ್ಬಹುಶಸ್ತ್ರಪರಿಚ್ಛದಮ್ ।
ರಥಂ ಸಂಪಾದಯಾಮಾಸ ಮೇಘಗಂಭೀರನಿಸ್ವನಮ್ ॥ 84 ॥
ಸಂಜಯ ಎಲೈ ರಾಜನೇ, ಮಹಾಮೇಧಾವಿಯಾದ ದಾರುಕನ ತಮ್ಮನು ಸಾತ್ಯಕಿಗೆ ಶಾಸ್ತ್ರೋಕ್ತರೀತಿಯಲ್ಲಿ ಅಣಿಗೊಳಿಸಿದ ಕಬ್ಬಿಣ ಮತ್ತು ಸುವರ್ಣದ ಪಟ್ಟಿಗಳಿಂದ ಬಿಗಿಯಲ್ಪಟ್ಟ ಕೂಬರಸಹಿತವಾದ, ನೂರು ನಕ್ಷತ್ರಗಳ ಚಿಹ್ನೆಯನ್ನು ಹೊಂದಿದ, ಸಿಂಹಧ್ವಜ ಮತ್ತು ಪತಾಕೆಗಳನ್ನು ಹೊಂದಿದ, ಸುವರ್ಣಾಲಂಕೃತವಾದ ಮನೋವೇಗವುಳ್ಳ ಚಂದ್ರನಂತೆ ಶ್ವೇತವರ್ಣದಿಂದ ಕೂಡಿದ ಸರ್ವಶಬ್ದಗಳನ್ನೂ ಸಹಿಸುವ, ಚಿನ್ನದ ಕಡಿವಾಣದ ಸಲಕರಣೆಗಳನ್ನು ಹೊಂದಿದ, ಶ್ರೇಷ್ಠವಾದ ಅಶ್ವಗಳನ್ನು ಹೂಡಿದ, ಘಂಟೆಗಳ ಸಮೂಹದಿಂದ ನಿಬಿಡವಾದ ನಾದವನ್ನು ಹೊಂದಿದ, ಶಕ್ತಿ- ತೋಮರಗಳಿಂದ (ಶಕಿತ-ತೋಮರಗಳ ಮಿಂಚುಗಳಿಂದ) ಕೂಡಿದ, ಯುದ್ಧದ ಸರ್ವೋಪಕರಣಗಳಿಂದಲೂ ಮತ್ತು ಸರ್ವಶಸ್ತ್ರಗಳಿಂದಲೂ ತುಂಬಲ್ಪಟ್ಟ, ಮೇಘದಂತೆ ಗಂಭೀರವಾದ ಘೋಷವುಳ್ಳ ರಥವನ್ನು ಸಂಪಾದಿಸಿದನು.
ತಂ ಸಮಾರುಹ್ಯ ಶೈನೇಯಸ್ತವ ಸೈನ್ಯಮುಪಾದ್ರವತ್ ।
ದಾರುಕೋಽಪಿ ಯಥಾಕಾಮಂ ಪ್ರಯಯುಃ ಕೇಶವಾಂತಿಕಮ್ ॥ 85 ॥
ಸಾತ್ಯಕಿಯು ಆ ರಥವನ್ನು ಏರಿ ನಿನ್ನ ಸೈನ್ಯದ ಮೇಲೆ ದಾಳಿ ಮಾಡಿದನು. ದಾರುಕನೂ ಸಹ ಅವನ ಮನಸ್ಸಿಗೆ ಬಂದಂತೆ ಕೃಷ್ಣನ ಶಿಬಿರಕ್ಕೆ ಹೋದನು.
ಕರ್ಣಸ್ಯಾಪಿ ಮಹಾರಾಜ ಶಂಖಗೋಕ್ಷೀರಪಾಂಡರೈಃ ।
ಚಿತ್ರಕಾಂಚನಸನ್ನಾಹೈಃ ಸದಶ್ವೈರ್ವೇಗವತ್ತರೈಃ ॥ 86 ॥
ಹೇಮಕಕ್ಷ್ಯಾಧ್ವಜೋಪೇತಂ ಕ್ಲೃಪ್ತಯಂತ್ರಪತಾಕಿನಮ್ ।
ಅಗ್ರ್ಯಂ ರಥಂ ಸುಯಂತಾರಂ ಬಹುಶಸ್ತ್ರಪರಿಚ್ಛದಮ್ ॥ 87 ॥
ಉಪಾಜಹ್ರುಸ್ತಮಾಸ್ಥಾಯ ಕರ್ಣೋಽಪ್ಯಭ್ಯದ್ರವದ್ ರಿಪೂನ್ ।
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ॥ 88 ॥
ಎಲೈ ಮಹಾರಾಜನೇ, ಕರ್ಣನಿಗೂ ಸಹ ಅವನ ಸೇವಕರು ಶಂಖ, ಗೋಕ್ಷೀರ ದಂತಹ ಬಿಳಿಯ ವಣರ್ದಿಂದ ಕೂಡಿದ, ವಿಚಿತ್ರವಾದ ಸುವರ್ಣಮಯವಾದ ಸಲಕರಣೆಗಳಿಂದ ಕೂಡಿದ, ವೇಗಶಾಲಿಗಳಾದ ಒಳ್ಳೆಯ ಅಶ್ವಗಳನ್ನು ಹೂಡಿದ, ಚಿನ್ನದ ಸರಪಣಿಗಳು ಮತ್ತು ಧ್ವಜದಿಂದ ಕೂಡಿದ, ಯಂತ್ರ ಮತ್ತು ಪತಾಕೆಗಳನ್ನು ಹೊಂದಿದ, ಒಳ್ಳೆಯ ಸಾರಥಿಯನ್ನು ಹೊಂದಿದ, ಬಹುಶಸ್ತ್ರ ಸಲಕರಣೆಗಳಿಂದ ಕೂಡಿದ ಶ್ರೇಷ್ಠವಾದ ರಥವನ್ನು ತಂದರು. ಅದನ್ನು ಏರಿ ಕರ್ಣನು ಶತ್ರುಗಳ ಮೇಲೆ ಎರಗಿದನು. ಎಲೈ ರಾಜನೇ, ನೀನು ಕೇಳಿದ ಎಲ್ಲವನ್ನೂ ನಾನು ನಿನಗೆ ಹೇಳಿದ್ದೇನೆ.
ಭೂಯಶ್ಚಾಪಿ ನಿಬೋಧ ತ್ವಂ ತವಾಪನಯಜಂ ಕ್ಷಯಮ್ ।
ಏಕತ್ರಿಂಶತ್ತವ ಸುತಾ ಭೀಮಸೇನೇನ ಪಾತಿತಾಃ ॥ 89 ॥
ನಿನ್ನ ಅಪಚಾರದಿಂದ ಉಂಟಾದ ವಿನಾಶವನ್ನು ಪುನಃ ಕೇಳುವವನಾಗು. ನಿನ್ನ ಮೂವತ್ತೊಂದು ಪುತ್ರರು ಭೀಮಸೇನನಿಂದ ಹತರಾದರು.
ದುರ್ಮುಖಂ ಪ್ರಮುಖೇ ಕೃತ್ವಾ ಸತತಂ ಚಿತ್ರಯೋಧಿನಮ್ ।
ಶತಶೋ ನಿಹತಾಃ ಶೂರಾಃ ಸಾತ್ವತೇನಾರ್ಜುನೇನ ಚ ॥ 90 ॥
ದುರ್ಮುಖನನ್ನು ಮುಂದೆ ಮಾಡಿಕೊಂಡ ಚಿತ್ರಯೋಧಿಗಳಾದ ನೂರಾರು ಶೂರರು ಸಾತ್ಯಕಿಯಿಂದಲೂ ಮತ್ತು ಅರ್ಜುನನಿಂದಲೂ ಹತರಾದರು.
ಭೀಷ್ಮಂ ಪ್ರಮುಖತಃ ಕೃತ್ವಾ ಭಗದತ್ತಂ ಚ ಮಾರಿಷ ।
ಏವಮೇಷ ಕ್ಷಯೋ ವೃತ್ತೋ ರಾಜನ್ ದುರ್ಮಂತ್ರಿತೇ ತವ ॥ 91 ॥

ಎಲ್ಲೈ ರಾಜನೇ, ಪೂಜ್ಯನೇ, ನಿನ್ನ ದುರ್ಮಂತ್ರಣದ ನಿಮಿತ್ತದಿಂದಾಗಿ ಭೀಷ್ಮರನ್ನು ಮುಂದೆ ಮಾಡಿಕೊಂಡ ಅವರು, ಭಗದತ್ತನನ್ನು ಮುಂದೆ ಮಾಡಿಕೊಂಡ ಅವರು ಹೀಗೆಯೇ ಸೈನ್ಯದ ವಿನಾಶವನ್ನು ಹೊಂದಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಯಸಿತ್ರಂಶಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ನಾಲ್ಕನೆಯ ಅಧ್ಯಾಯ
ಭೀಮಸೇನನನ್ನು ಅವಹೇಳನ ಮಾಡಿದ ಕರ್ಣನನ್ನು ಕುರಿತು ಅರ್ಜುನನ ಮಾತುಗಳು. ಅರ್ಜುನನ ಪುತ್ರನ ವಧೆಯ ಪ್ರತಿಜ್ಞೆ. ಕೃಷ್ಣನಿಂದ ಅರ್ಜುನನ ಪ್ರಶಂಸೆ ಮತ್ತು ಅರ್ಜುನನಿಗೆ ರಣರಂಗದ ಪ್ರದರ್ಶನ.
ಧೃತರಾಷ್ಟ್ರಃ
ತಥಾ  ಗತೇಷು ಶೂರೇಷು ತೇಷಾಂ ಮಮ ಚ ಸಂಜಯ |
ಕಿಂ ವೈ ಭೀಮಸ್ತದಾಕಾರ್ಷೀತ್ ತನ್ಮಮಾಚಕ್ಷ್ವ ಸಂಜಯ ॥ 1 ॥
ಧೃತರಾಷ್ಟ್ರ ಎಲ್ಲೈ ಸಂಜಯನೇ, ನನ್ನ ಮತ್ತು ಅವರ ಶೂರರು ಆ ರೀತಿಯಲ್ಲಿ ನಾಶ ಹೊಂದುತಿತರುವಾಗ ಭೀಮಸೇನನು ಏನು ಮಾಡಿದನೆಂದು ನನಗೆ ಹೇಳು.
ಸಂಜಯಃ
ವಿರಥೋ ಭೀಮಸೇನೋ ವೈ ಕರ್ಣವಾಕ್ಶಲ್ಯಪೀಡಿತಃ |
ಅಮರ್ಷವಶಮಾಪನ್ನಃ ಫಲ್ಗುನಂ ವಾಕ್ಯಮಬ್ರವೀತ್ ॥ 2 ॥
ಪುನಃ ಪುನಸ್ತೂಬರಕ ಮೂಢ ಔದರಿಕೇತಿ ಚ |
ಅಕೃತಾಸ್ತ್ರಕ ಮಾ ಯೋಧೀರ್ಬಾಲ ಸಂಗ್ರಾಮಕಾತರ ॥ 3 ॥
ಇತಿ ಮಾಮಬ್ರವೀತ್ ಕರ್ಣಃ ಪಶ್ಯತಸ್ತೇ ಧನಂಜಯ |
ಏವಂ ವಕ್ತಾ ಚ ಮೇ ವಧ್ಯಸ್ತೇನ ಚೋಽಕ್ತೋಸ್ಮಿ ಭಾರತ ॥ 4 ॥
ಸಂಜಯ ಕರ್ಣನ ಬಾಣಗಳಿಂದ ಪೀಡಿತನಾದ ಭೀಮಸೇನನು ತನ್ನ ರಥವನ್ನು ಕಳೆದುಕೊಂಡು ರೋಷವಶನಾಗಿ ಅರ್ಜುನನನ್ನು ಕುರಿತು ಕರ್ಣನು ನನ್ನನ್ನು ಕುರಿತು ಪುನಃ ಪುನಃ ತೂಬರಕನೆಂದೂ, ಮೂಢನೆಂದೂ, ಹೊಟ್ಟೆಬಾಕನೆಂದೂ, ಅಸ್ತ್ರಜ್ಞಾನವಿಲ್ಲದವನೆಂದೂ, ಯುದ್ಧಾಕಾಂಕ್ಷಿಯಾದ ಬಾಲಕನೇ ಯುದ್ಧವನ್ನು ಮಾಡಬೇಡ ಎಂದೂ ನಿನ್ನ ಎದುರಿನಲ್ಲಿಯೇ ಹೇಳಿದ್ದಾನೆ. ಎಲ್ಲೈ ಭಾರತನೇ, ಹೀಗೆ ಹೇಳುವವನು ನನ್ನಿಂದ ವಧ್ಯನಾಗುತ್ತಾನೆ ಮತ್ತು ಅವನು ಹೀಗೆ ಹೇಳಿದ್ದಾನೆ.
ಏತದ್ ವ್ರತಂ ಮಹಾಬಾಹೋ ತ್ವಯಾ ಸಹ ಕೃತಂ ಮಯಾ |
ಯಥೈತನ್ಮಮ ಕೌಂತೇಯ ತಥಾ ತವ ನ ಸಂಶಯಃ ॥ 5 ॥
ತದ್ವಧಾಯ ನರಶ್ರೇಷ್ಠ ಸ್ಮರೈತದ್ವಚನಂ ಮಮ |
ಯಥಾ ಭವತಿ ತತ್ ಸತ್ಯಂ ತಥಾ ಕುರು ಧನಂಜಯ ॥ 6 ॥
ಎಲ್ಲೈ ಮಹಾಬಾಹುವೇ, ನಾನು ನಿನ್ನ ಜೊತೆಯಲ್ಲಿ ಇಂತಹ ಪ್ರತಿಜ್ಞೆಯನ್ನು ಮಾಡಿದ್ದೇನೆ. ಎಲ್ಲೈ ಕೌಂತೇಯನೇ, ಈ ನನ್ನ ಪ್ರತಿಜ್ಞೆಯು ಹೇಗೆ ನನ್ನದೋ ಹಾಗೆಯೇ ನಿನ್ನದೂ ಎಂಬುದರಲ್ಲಿ ಸಂಶಯವಿಲ್ಲ. ಎಲ್ಲೈ ನರಶ್ರೇಷ್ಠನೇ, ಅವನ ವಧೆಯ ವಿಷಯದಲ್ಲಿ ನಾನು ಹಿಂದೆ ಆಡಿದ ಮಾತುಗಳನ್ನು ಸ್ಮರಿಸು. ಎಲ್ಲೈ ಧನಂಜಯನೇ, ಅದು ಸತ್ಯವಾಗುವಂತೆ ಮಾಡು ಎಂದು ಹೇಳಿದನು.
ತಚ್ಛ್ರುತ್ವಾ ವಚನಂ ತಸ್ಯ ಭೀಮಸ್ಯಾಮಿತವಿಕ್ರಮಃ |
ತತೋಽರ್ಜುನೋಽಬ್ರವೀತ್ ಕರ್ಣಂ ಕಿಂಚಿದಭ್ಯೇತ್ಯ ಸಂಯುಗೇ ॥
ಭೀಮನ ಆ ಮಾತುಗಳನ್ನು ಕೇಳಿ ಅಮಿತವಿಕ್ರಮನಾದ ಅರ್ಜುನನು ರಣರಂಗದಲ್ಲಿ ಕರ್ಣನನ್ನು ಸ್ವಲ್ಪ ಸಮೀಪಿಸಿ ಅವನನ್ನು ಕುರಿತು ಹೀಗೆ ಹೇಳಿದನು.
ಕರ್ಣ ಕರ್ಣ ವೃಥಾದೃಷ್ಟೇ ಸೂತಪುತ್ರಾತ್ಮಸಂಸ್ತುತ |
ಅಧರ್ಮಬುದ್ಧೇ ಶೃಣು ಮೇ ಯತ್ತ್ವಾ ವಕ್ಷ್ಯಾಮಿ ಸಾಂಪ್ರತಮ್ ॥ 8 ॥
ಎಲ್ಲೈ ಕರ್ಣನೇ, ಕರ್ಣನೇ, ವಕ್ರದೃಷ್ಟಿಯುಳ್ಳವನೇ, ಸೂತಪುತ್ರನೇ, ಆತ್ಮಶ್ಲಾಘಿಯೇ, ಅಧಮ ಬುದ್ಧಿಯುಳ್ಳವನೇ, ನಾನು ನಿನಗೆ ಈಗ ಹೇಳುವ ಮಾತುಗಳನ್ನು ಕೇಳು.
ದ್ವಿವಿಧಂ ಕರ್ಮ ಶೂರಾಣಾಂ ಯುದ್ಧೇ ಜಯಪರಾಜಯೌ |
ತೌ ಚಾಪ್ಯನಿತ್ಯೌ ರಾಧೇಯ ವಾಸವಸ್ಯಾಪಿ ಯುಧ್ಯತಃ ॥ 9 ॥
ಮುಮೂರ್ಷುರ್ಯುಯುಧಾನೇನ ವಿರಥೋಽಸಿ ವಿಸರ್ಜಿತಃ |
ಯದೃಚ್ಛಯಾ ಭೀಮಸೇನಂ ವಿರಥಂ ಕೃತವಾನಸಿ ॥ 10 ॥
ಎಲ್ಲೈ ಕರ್ಣನೇ, ಶೂರರಿಗೆ ಯುದ್ಧದಲ್ಲಿ ಜಯ ಅಥವಾ ಪರಾಜಯ ಎಂಬ ಎರಡು ವಿಧವಾದ ಫಲಗಳಿವೆ. ಅವು ಇಂದ್ರನು ಯುದ್ಧ ಮಾಡಿದರೂ ನಿತ್ಯವಾದವುಗಳು. ಸಾತ್ಯಕಿಯ ಜೊತೆಯಲ್ಲಿ ನೀನು ಯುದ್ಧವನ್ನು ಮಾಡಿ ನೀನು ಸಾಯುವ ಸ್ಥಿತಿಯಲ್ಲಿದ್ದಾಗ ನಿನ್ನನ್ನು ವಿರಥನನ್ನಾಗಿ ಮಾಡಿ ಅವನು ನಿನ್ನನ್ನು ಬಿಟ್ಟಿದ್ದಾನೆ. ಭೀಮಸೇನನನ್ನು ಅಕಸ್ಮಾತ್ತಾಗಿ ನೀನು ರಥಹೀನನ್ನಾಗಿ ಮಾಡಿದ್ದೀಯೆ.
ಅಧರ್ಮಸ್ತ್ವೇಷ ರಾಧೇಯ ಯತ್ತ್ವಂ ಭೀಮಮವೋಚಥಾಃ |
ಯುದ್ಧಧರ್ಮಂ ವಿಜಾನನ್ ವೈ ಯುಧ್ಯಂತಮಪಲಾಯಿನಮ್ |

ಪೂರಯಂತಂ ಯಥಾಶಕ್ತಿ ಶೂರಕರ್ಮಾಹವೇ ತಥಾ ॥ 11 ॥
ಎಲೈ ರಾಧೇಯನೇ, ಯುದ್ಧಧರ್ಮವನ್ನು ತಿಳಿದ ನೀನು ಯುದ್ಧದಲ್ಲಿ ಹಿಮ್ಮೆಟ್ಟದೆ ಯುದ್ಧವನ್ನು ಮಾಡುವ ತನ್ನ ಶಕ್ತಿಗೆ ಅನುಗುಣವಾಗಿ ರಣರಂಗದಲ್ಲಿ ಕ್ರೂರಕರ್ಮವನ್ನು ಮಾಡುವ ಯುದ್ಧವನ್ನು ಪೂರ್ಣಗೊಳಿಸುವ ಭೀಮನನ್ನು ಕುರಿತು ಆಡಿದ ಮಾತುಗಳು ಅಧರ್ಮದಿಂದ ಕೂಡಿದವು.
ಪಶ್ಯತಾಂ ಸರ್ವಸೈನ್ಯಾನಾಂ ಕೇಶವಸ್ಯ ಮಮೈವ ಚ |
ವಿರಥೋ ಭೀಮಸೇನೇನ ಕೃತೋಽಸಿ ಬಹುಶೋ ರಣೇ |
ನ ಚ ತ್ವಾಂ ಪರುಷಂ ಕಿಂಚಿದುಕ್ತವಾನ್ ಪಾಂಡುನಂದನಃ ॥ 12 ॥
ಎಲ್ಲ ಸೈನ್ಯಗಳೂ ಕೃಷ್ಣನೂ ಮತ್ತು ನಾನೂ ನೋಡುತ್ತಿರುವಂತೆಯೇ ಭೀಮಸೇನನಿಂದ ನೀನು ಅನೇಕ ಬಾರಿ ರಥಹೀನನಾಗಿ ಮಾಡಲ್ಪಟ್ಟಿದ್ದೀಯೆ. ಆದರೆ ಪಾಂಡುನಂದನನಾದ ಅವನು ನಿನ್ನನ್ನು ಕುರಿತು ಎಂದೂ ಒರಟು ಮಾತುಗಳನ್ನು ಆಡಲಿಲ್ಲ.
ಯಸ್ಮಾತ್ತು ಬಹು ರೂಕ್ಷಂ ಚ ಶ್ರಾವಿತಸ್ತೇ ವೃಕೋದರಃ |
ಪರೋಕ್ಷಂ ಯಚ್ಚ ಸೌಭದ್ರೋ ಯುಷ್ಮಾಭಿರ್ನಿಹತೋ ಮಮ ॥ 13 ॥
ತಸ್ಮಾದಸ್ಯಾವಲೇಪಸ್ಯ ಸದ್ಯಃ ಫಲಮವಾಪ್ನುಹಿ |
ತ್ವಯಾ ತಸ್ಯ ಧನುಶ್ಛಿನ್ನಮಾತ್ಮನಾಶಾಯ ದುರ್ಮತೇ ॥ 14 ॥
ನೀನು ಭೀಮಸೇನನನ್ನು ಕುರಿತು ಬಹಳ ಒರಟಾದ ಮಾತುಗಳನ್ನು ಆಡಿದುದರಿಂದಲೂ ಮತ್ತು ನನ್ನ ಪರೋಕ್ಷದಲ್ಲಿ ನೀವೆಲ್ಲರೂ ಸೇರಿ ಅಭಿಮನ್ಯುವನ್ನು ಕೊಂದುದರಿಂದಲೂ ಆ ಅಹಂಕಾರದ ಫಲವನ್ನು ಸದ್ಯದಲ್ಲಿಯೇ ಹೊಂದುವವನಾಗು. ಎಲೈ ದುರ್ಮತಿಯೇ, ನೀನು ನಿನ್ನ ಆತ್ಮನಾಶಕ್ಕಾಗಿ ಭೀಮಸೇನನ ಧನುಸ್ಸನ್ನು ಕತ್ತರಿಸಿದ್ದೀಯೆ.
ತಸ್ಮಾದ್ ವಧ್ಯೋಽಸಿ ಮೇ ಮೂಢ ಸಭೃತ್ಯಬಲವಾಹನಃ |
ಕುರು ತ್ವಂ ಸರ್ವಕೃತ್ಯಾನಿ ಮಹತ್ತೇ ಭಯಮಾಗತಮ್ ॥ 15 ॥
ಆದ್ದರಿಂದ ಎಲೈ ಮೂಢನೇ, ನಿನ್ನ ಭೃತ್ಯ-ಬಲ-ವಾಹನ ಸಹಿತನಾಗಿ ನೀನು ನನ್ನಿಂದ ವಧ್ಯನಾಗಿದ್ದೀಯೆ. ಮಾಡಬೇಕಾದ ಎಲ್ಲ ಕಾರ್ಯಗಳನ್ನು ಮಾಡಿ ಮುಗಿಸು. ನಿನಗೆ ದೊಡ್ಡ ಭಯವು ಪ್ರಾಪ್ತವಾಗಿದೆ.
ಹಂತಾಸ್ಮಿ ವೃಷಸೇನಂ ತೇ ಪ್ರೇಕ್ಷಮಾಣಸ್ಯ ಸಂಯುಗೇ |
ಯೇ ಚಾನ್ಯೇಽಪ್ಯುಪಯಾಸ್ಯಂತಿ ಬುದ್ಧಿಮೋಹೇನ ಮಾಂ ನೃಪಾಃ |
ತಾಂಶ್ಚ ಸರ್ವಾನ್ ಹನಿಷ್ಯಾಮಿ ಸತ್ಯೇನಾಯುಧಮಾಲಭೇ ॥ 16 ॥
ನೀನು ನೋಡುತ್ತಿರುವಂತೆಯೇ ನಿನ್ನ ಪುತ್ರನಾದ ವೃಷಸೇನನನ್ನು ಕೊಲ್ಲುವೆನು. ಇನ್ನು ಬುದ್ಧಿಮೌಢ್ಯದಿಂದ ಉಳಿದ ಯಾವ ರಾಜರು ನನ್ನ ಬಳಿಗೆ ಬರುತ್ತಾರೆಯೋ ಅವರೆಲ್ಲರನ್ನೂ ಕೊಲ್ಲುವೆನು ಎಂದು ಆಯುಧವನ್ನು ಮುಟ್ಟಿ ಶಪಥವನ್ನು ಮಾಡುತಿದ್ದೇನೆ.
ತ್ವಾಂ ಚ ಮೂಢಾಕೃತಪ್ರಜ್ಞಮತಿಮಾನಿನಮಾಹವೇ |
ದೃಷ್ಟ್ವಾ ದುರ್ಯೋಧನೋ ಮಂದೋ ಭೃಶಂ ತಪ್ಸ್ಯತಿ ಪಾತಿತಮ್ ॥
ಎಲೈ ಮೂಢನೇ, ರಣರಂಗದಲ್ಲಿ ನನ್ನಿಂದ ಕೆಡವಲ್ಪಟ್ಟ ಬುದ್ಧಿಶೂನ್ಯನಾದ ನಿನ್ನನ್ನು ನೋಡಿ ಮಂದನಾದ ದುರ್ಯೋಧನನು ಬಹಳ ತಾಪವನ್ನು ಪಡುವನು (ಎಂದು ಹೇಳಿದನು).
ಸಂಜಯಃ
ಅರ್ಜುನೇನ ಪ್ರತಿಜ್ಞಾತೇ ವಧೇ ಕರ್ಣಸುತಸ್ಯ ತು |
ಮಹಾನ್ ಸುತುಮುಲಃ ಶಬ್ದೋ ಬಭೂವ ರಥಿನಾಂ ತದಾ ॥ 18 ॥
ಸಂಜಯ ಅರ್ಜುನನು ಕರ್ಣಪುತ್ರನ ವಧೆಯನ್ನು ಪ್ರತಿಜ್ಞೆ ಮಾಡುತ್ತಿರಲು ರಥಿಕರಲ್ಲಿ ತೀವ್ರವಾದ ದೊಡ್ಡ ಶಬ್ದವುಂಟಾಯಿತು.
ತಸ್ಮಿನ್ನಾಕುಲಸಂಗ್ರಾಮೇ ವರ್ತಮಾನೇ ಮಹಾಭಯೇ |
ಮಂದರಶ್ಮಿಃ ಸಹಸ್ರಾಂಶುರಸ್ತಂ ಗಿರಿಮುಪಾಗಮತ್ ॥ 19 ॥
ಮಹಾಭಯಂಕರವಾದ ಆ ಸಂಕೀರ್ಣ ಯುದ್ಧವು ನಡೆಯುತ್ತಿರುವಾಗ ಸೂರ್ಯನು ಮಂದಕಿರಣವುಳ್ಳವನಾಗಿ ಅಸ್ತಪರ್ವತದ ಕಡೆಗೆ ಸಾಗಿದನು.
ತತೋ ರಾಜನ್ ಹೃಷೀಕೇಶಃ ಸಂಗ್ರಾಮಶಿರಸಿ ಸ್ಥಿತಮ್ |
ತೀರ್ಣಪ್ರತಿಜ್ಞಂ ಬೀಭತ್ಸುಂ ಪರಿಷ್ವಜ್ಯೇದಮಬ್ರವೀತ್ ॥ 20 ॥
ಎಲೈ ರಾಜನೇ, ಆಗ ಕೃಷ್ಣನು ರಣರಂಗದಲ್ಲಿ ತನ್ನ ಪ್ರತಿಜ್ಞೆಯನ್ನು ಪೂರೈಸಿ ನಿಂತ ಅರ್ಜುನನನ್ನು ಆಲಿಂಗಿಸಿ ಈ ಮಾತನ್ನು ಆಡಿದನು.
ದಿಷ್ಟ್ಯಾ ಸಂಪಾದಿತಾ ಜಿಷ್ಣೋ ಪ್ರತಿಜ್ಞಾ ಮಹತೀ ತ್ವಯಾ |
ದಿಷ್ಟ್ಯಾ ಚ ನಿಹತಃ ಪಾಪೋ ವೃದ್ಧಕ್ಷತ್ರಃ ಸಹಾತ್ಮಜಃ ॥ 21 ॥
ಎಲೈ ಜಿಷ್ಣುವೇ, ದೇವರ ದಯದಿಂದ ನಿನ್ನ ದೊಡ್ಡ ಪ್ರತಿಜ್ಞೆಯು ನೆರವೇರಿಸಲ್ಪಟ್ಟಿತು. ದೇವರ ದಯದಿಂದಲೇ ವೃದ್ಧಕ್ಷತ್ರನು ಮತ್ತು ಪಾಪಿಯಾದ ಅವನ ಮಗನು ನಿನ್ನಿಂದ ಹತರಾದರು.
ಧಾರ್ತರಾಷ್ಟ್ರಬಲಂ ಪ್ರಾಪ್ಯ ದೇವಸೇನಾಪಿ ಭಾರತ |
ಸೀದೇತ ಸಮರೇ ಜಿಷ್ಣೋ ನಾತ್ರ ಕಾರ್ಯಾ ವಿಚಾರಣಾ ॥ 22 ॥
ಎಲೈ ಭಾರತನೇ, ಜಿಷ್ಣುವೇ, ದುರ್ಯೋಧನನ ಸೇನೆಯನ್ನು ಸಮೀಪಿಸಿದರೆ ದೇವಸೈನ್ಯವು ಯುದ್ಧದಲ್ಲಿ ಕುಸಿದೀತು! ಇದರಲ್ಲಿ ಸಂಶಯವಿಲ್ಲ.
ನ ತಂ ಪಶ್ಯಾಮಿ ಲೋಕೇಷು ಚಿಂತಯನ್ ಪುರುಷಂ ಕ್ವಚಿತ್ |

ತ್ವದೃತೇ ಪುರುಷವ್ಯಾಘ್ರ ಯ ಏತದ್ ಯೋಧಯೇದ್ ಬಲಮ್ ॥
ಎಲೈ ಪುರುಷವ್ಯಾಘ್ರನೇ, ನಾನು ಎಷ್ಟು ಯೋಚನೆಯನ್ನು ಮಾಡಿದರೂ ಲೋಕಗಳಲ್ಲಿ ನಿನ್ನನ್ನು ಬಿಟ್ಟು ದುರ್ಯೋಧನ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡಬಲ್ಲ ಯಾವ ಪುರುಷನನ್ನೂ ಕಾಣುವುದಿಲ್ಲ.
ಮಹಾಪ್ರಭಾವಾ ಬಹವಸ್ತ್ವಯಾ ತುಲ್ಯಾಧಿಕಾಪಿ ವಾ |
ಸಮೇತಾಃ ಪೃಥಿವೀಪಾಲಾ ಧಾರ್ತರಾಷ್ಟ್ರಸ್ಯ ಕಾರಣಾತ್ |
ತೇ ತ್ವಾಂ ಪ್ರಾಪ್ಯ ರಣೇ ಕ್ರುದ್ಧಂ ನಾಭ್ಯವರ್ತಂತ ದಂಸಿತಾಃ ॥ 24 ॥
ದುರ್ಯೋಧನನ ಸಲುವಾಗಿ ಮಹಾಪ್ರಭಾವವುಳ್ಳ, ನಿನಗೆ ಸಮಾನರಾದ ಅಥವಾ ಅಧಿಕರಾದ ಶಸತ್ರಧಿ ಸನ್ನದ್ಧರಾದ ಅನೇಕ ರಾಜರು ರಣರಂಗದಲ್ಲಿ ಕ್ರುದ್ಧನಾದ ನಿನ್ನನ್ನು ಸಮೀಪಿಸಿ ಹಿಂದಿರುಗಲಿಲ್ಲ.
ತವ ವೀರ್ಯಂ ಬಲಂ ಚೈವ ರುದ್ರಶಕ್ರಾಂತಕೋಪಮಮ್ |
ನೇದೃಶಂ ಶಕ್ನುಯಾತ್ ಕಶ್ಚಿದ್ ರಣೇ ಕರ್ತುಂ ಪರಾಕ್ರಮಮ್ |
ಯಾದೃಶಂ ಕೃತವಾನದ್ಯ ತ್ವಮೇಕಃ ಶತ್ರುತಾಪನಃ ॥ 25 ॥
ನಿನ್ನ ಬಲ-ಪರಾಕ್ರಮಗಳು ರುದ್ರ-ಇಂದ್ರ-ಯಮರ ಬಲ-ಪರಾಕ್ರಮಗಳಿಗೆ ಸದೃಶವಾಗಿವೆ. ಶತ್ರುತಾಪನನಾದ ನೀನು ಈ ದಿನ ರಣರಂಗದಲ್ಲಿ ಎಂತಹ ಕಾರ್ಯವನ್ನು ಮಾಡಿದ್ದೀಯೋ ಅಂತಹ ಪರಾಕ್ರಮವನ್ನು ಬೇರೆ ಯಾವನೂ ಮಾಡಲಾರ.
ಏವಮೇವ ಹತೇ ಕರ್ಣೇ ಸಾನುಬಂಧೇ ದುರಾತ್ಮನಿ |
ವರ್ಧಯಿಷ್ಯಾಮಿ ಭೂಯಸತ್ತ್ವಂ ವಿಜಿತಾರಿಂ ಹತದ್ವಿಷಮ್ ॥ 26 ॥
ಇದೇ ರೀತಿಯಲ್ಲಿ ದುರಾತ್ಮನಾದ ಕರ್ಣನು ಪರಿವಾರಸಹಿತನಾಗಿ ನಿನ್ನಿಂದ ಹತನಾದಾಗ ಶತ್ರುಗಳನ್ನು ಗೆದ್ದು ಅವನನ್ನು ಕೊಂದ ನಿನಗೆ ನಾನು ಪುನಃ ಶುಭವನ್ನು ಹಾರೈಸುವೆನು ಎಂದು ಹೇಳಿದನು.
ತಮರ್ಜುನಃ ಪ್ರತ್ಯುವಾಚ ಪ್ರಸಾದಾತ್ ತವ ಮಾಧವ |
ಪ್ರತಿಜ್ಞೇಯಂ ಮಯೋತ್ತೀರ್ಣಾ ವಿಬುಧೈರಪಿ ದುಸ್ತರಾ ॥ 27 ॥
ಸಂಜಯ ಅವನನ್ನು ಕುರಿತು ಅರ್ಜುನನು ಎಲೈ ಮಾಧವನೇ, ನಿನ್ನ ಅನುಗ್ರಹದಿಂದ ದೇವತೆಗಳೂ ದಾಟಲಾರದ ಈ ಪ್ರತಿಜ್ಞೆಯನ್ನು ನಾನು ದಾಟಿದ್ದೇನೆ.
ಅನಾಶ್ಚರ್ಯೋ ಜಯಸ್ತೇಷಾಂ ಯೇಷಾಂ ನಾಥೋಽಸಿ ಮಾಧವ |
ತ್ವತ್್ವಪ್ರಸಾದಾನ್ಮಹೀಂ ಕೃತ್ಸ್ನಾಂ ಸಂಪ್ರಾಪ್ಸ್ಯತಿ ಯುಧಿಷ್ಠಿರಃ ॥ 28 ॥
ಎಲೈ ಮಾಧವನೇ, ಯಾರಿಗೆ ನೀನು ನಾಥನಾಗಿದ್ದೀಯೋ ಅವರಿಗೆ ಯುದ್ಧದಲ್ಲಿ ಜಯವು ಆಶ್ಚರ್ಯಕರವಲ್ಲ. ನಿನ್ನ ಅನುಗ್ರಹದಿಂದ ಯುಧಿಷ್ಠಿರನು ಸಮಗ್ರವಾದ ಭೂಮಿಯನ್ನು ಹೊಂದುವನು.
ತವೈವ ಭಾರೋ ವಾರ್ಷ್ಣೇಯ ತವೈವ ವಿಜಯಃ ಪ್ರಭೋ |
ವರ್ಧನೀಯಾಸ್ತವ ವಯಂ ಪ್ರೇಷ್ಯಾಶ್ಚ ಮಧುಸೂದನ ॥ 29 ॥
ಎಲೈ ವಾರ್ಷ್ಣೇಯನೇ, ಯುದ್ಧವು ನಿನ್ನ ಮೇಲೆಯೇ ಇರುವ ಭಾರ. ಪ್ರಭುವೇ, ಜಯವೂ ನಿನ್ನದೇ. ಮಧುಸೂದನನೇ, ನಾವು ನಿನ್ನ ದಾಸರು. ನೀನು ಯಾವಾಗಲೂ ನಮಗೆ ಶುಭವನ್ನು ಚಿಂತಿಸಬೇಕು ಎಂದು ಹೇಳಿದನು.
ಸಂಜಯಃ
ಏವಮುಕ್ತಃ ಸ್ಮಯನ್ ಕೃಷ್ಣಃ ಶನಕೈರ್ವಾಹಯನ್ ಹಯಾನ್ |
ದರ್ಶಯಾಮಾಸ ಪಾರ್ಥಾಯ ಕ್ರೂರಮಾಯೋಧನಂ ಮಹತ್ ॥
ಸಂಜಯ ಹೀಗೆ ಹೇಳಲ್ಪಟ್ಟ ಕೃಷ್ಣನು ನಗುತ್ತಾ ನಿಧಾನವಾಗಿ ಅಶ್ವಗಳನ್ನು ಪ್ರಚೋದಿಸುತ್ತಾ ಅರ್ಜುನನಿಗೆ ಕ್ರೂರವಾದ ಆ ದೊಡ್ಡ ರಣರಂಗವನ್ನು ತೋರಿಸಿದನು.
ಶ್ರೀಕೃಷ್ಣಃ
ಪ್ರಾರ್ಥಯಂತೋ ಜಯಂ ಯುದ್ಧೇ ಪ್ರಥಿತಂ ಚ ಮಹದ್ಯಶಃ |
ಪೃಥಿವ್ಯಾಂ ಶೇರತೇ ಶೂರಾಃ ಪಾರ್ಥಿವಾಸ್ತ್ವಚ್ಛರೈರ್ಹತಾಃ ॥ 31 ॥
ಶ್ರೀಕೃಷ್ಣ ಯುದ್ಧದಲ್ಲಿ ಜಯವನ್ನೂ, ವಿಸ್ತಾರವಾದ ಕೀರ್ತಿಯನ್ನೂ ಅಶಿಸುತ್ತಾ ನಿನ್ನ ಬಾಣದಿಂದ ಹತರಾದ ಶೂರರು ಭೂಮಿಯ ಮೇಲೆ ಮಲಗಿದ್ದಾರೆ.
ವಿಕರ್ಣಶಸತ್ರಭರಣಾ ವಿಪನ್ನಾಶ್ವರಥದ್ವಿಪಾಃ |
ಸಂಭಿನ್ನಭಿನ್ನವರ್ಮಾಣೋ ವೈಕ್ಲವ್ಯಂ ಪರಮಂ ಗತಾಃ ॥ 32 ॥
ತಮ್ಮ ಶಸತ್ರಭರಣಗಳು ಅಸ್ತವ್ಯಸ್ತವಾಗಿ ತಮ್ಮ ಅಶ್ವ-ರಥ-ಗಜಗಳು ನಾಶವನ್ನು ಹೊಂದಿ, ಕವಚಗಳು ಛಿನ್ನ-ಭಿನ್ನವಾಗಿ ಪರಮ ವೈಕ್ಲವ್ಯವನ್ನು ಹೊಂದಿ ಮೃತರಾಗಿ ಬಿದ್ದಿದ್ದಾರೆ.
ಸಸತತ್ವ ಗತಸತತ್ವಶ್ಚ ಪ್ರಭಯಾ ಪರಯಾ ಯುತಾಃ |
ಸಜೀವಾ ಇವ ಲಕ್ಷ್ಯಂತೇ ಗತಸತತ್ವ ನರಾಧಿಪಾಃ ॥ 33 ॥
ಪ್ರಾಣವಿರುವ ಮತ್ತು ಮೃತರಾದ ರಾಜರು ಒಳ್ಳೆಯ ಕಾಂತಿಯಿಂದ ಕೂಡಿದವರಾಗಿ ಜೀವವಿರುವವರಂತೆ ನೂರಾರು ಸಂಖ್ಯೆಯಲ್ಲಿ ಕಾಣುತ್ತಿದ್ದಾರೆ.
ತೇಷಾಂ ಶರೈಃ ಸ್ವರ್ಣಪುಂಖೈಃ ಶಸ್ತ್ರೈಶ್ಚ ವಿವಿಧೈಃ ಶಿತೈಃ |
ವಾಹನೈರಾಯುಧೈಶ್ಚೈವ ಸಂಪೂರ್ಣಾಂ ಪಶ್ಯ ಮೇದಿನೀಮ್ ॥ 34 ॥
ಅವರ ಸ್ವರ್ಣಪುಂಖ ಸಹಿತವಾದ ಬಾಣಗಳಿಂದಲೂ, ನಾನಾ ವಿಧವಾದ ನಿಶಿತವಾದ ಶಸ್ತ್ರಗಳಿಂದಲೂ, ವಾಹನಗಳಿಂದಲೂ ಮತ್ತು

ಆಯುಧಗಳಿಂದಲೂ ತುಂಬಿಹೋಗಿರುವ ಭೂಮಿಯನ್ನು ನೋಡು.
ವರ್ಮಭಿಶ್ಚರ್ಮಭಿರ್ಹಾರೈಃ ಶಿರೋಭಿಶ್ಚ ಸಕುಂಡಲೈಃ |
ಉಷ್ಣೀಷೈರ್ಮುಕುಟೈಃ ಸ್ರಗ್ಭಿಶ್ಚೂಡಾಮಣಿಭಿರಂಬರೈಃ ॥ 35 ॥
ಕಂಠಸೂತ್ರೈರಂಗದೈಶ್ಚ ನಿಷ್ಕೈರಪಿ ಚ ಸುಪ್ರಭೈಃ |
ಅನ್ಯೈಶ್ಚಾಭರಣೈಶ್ಚಿತ್ರೈರ್ಭಾತಿ ಭಾರತ ಮೇದಿನೀ ॥ 36 ॥
ಎಲೈ ಭಾರತನೇ, ಅವರ ಕವಚಗಳಿಂದಲೂ, ಗುರಾಣಿಗಳಿಂದಲೂ, ಕುಂಡಲಸಹಿತವಾದ ಶಿರಸ್ಸುಗಳಿಂದಲೂ, ರುಮಾಲುಗಳಿಂದಲೂ, ಕಿರೀಟಗಳಿಂದಲೂ, ಮಾಲೆಗಳಿಂದಲೂ, ಚೂಡಾಮಣಿಗಳಿಂದಲೂ, ವಸ್ತ್ರಗಳಿಂದಲೂ, ಕಂಠಸೂತ್ರಗಳಿಂದಲೂ, ಅಂಗದಗಳಿಂದಲೂ, ಕಾಂತಿಯುಕ್ತವಾದ ಸುವರ್ಣನಾಣ್ಯಗಳಿಂದಲೂ ಮತ್ತು ಉಳಿದ ಆಭರಣಗಳಿಂದಲೂ ಭೂಮಿಯು ಚಿತ್ರವಿಚಿತ್ರವಾಗಿ ತೋರುತ್ತಿದೆ.
ಚಾಮರೈರ್ವ್ಯಜನೈಶ್ಚಿತ್ರೈರ್ಧ್ವಜೈಶ್ಚಾಶ್ವರಥದ್ವಿಪೈಃ |
ವಿವಿಧೈಶ್ಚ ಪರಿಸ್ತೋಮೈರಶ್ವಾನಾಂ ಚ ಪ್ರಕೀರ್ಣಕೈಃ ॥ 37 ॥
ಕುಥಾಭಿಶ್ಚ ವಿಚಿತ್ರಾಭಿರ್ವರೂಥೈಶ್ಚ ಮಹಾಧನೈಃ |
ಸಂಸ್ತೀರ್ಣಾಂ ವಸುಧಾಂ ಪಶ್ಯ ಚಿತ್ರಪಟೈರಿವಾವೃತಾಮ್ ॥ 38 ॥
ಚಾಮರಗಳಿಂದಲೂ, ವ್ಯಜನಗಳಿಂದಲೂ, ವಿಚಿತ್ರವಾದ ಧ್ವಜಗಳಿಂದಲೂ, ಅಶ್ವ-ರಥ-ಗಜಗಳಿಂದಲೂ, ವಿವಿಧವಾದ ಅಶ್ವಗಳ ಸಲಕರಣೆಗಳಿಂದಲೂ, ರತ್ನಕಂಬಳಿಗಳಿಂದಲೂ, ವಿಚಿತ್ರವಾದ ಬೆಲೆಬಾಳುವ ರಕ್ಷಣ ಸಾಮಗ್ರಿಗಳಿಂದಲೂ, ಬೇರೆ ಬೇರೆ ಬಣ್ಣದ ವಸ್ತ್ರಗಳನ್ನು ಧರಿಸಿದಂತಿರುವ ಈ ಭೂಮಿಯನ್ನು ನೋಡು.
ನಾಗೇಭ್ಯಃ ಪತಿತಾನನ್ಯಾನ್ ಕಲ್ಪಿತೇಭ್ಯೋ ದ್ವಿಪೈಃ ಸಹ |
ಸಿಂಹಾನ್ ವಜ್ರಪ್ರಣುನ್ನೇಭ್ಯೋ ಗಿರ್ಯಗ್ರೇಭ್ಯ ಇವ ಚ್ಯುತಾನ್ ॥39॥
ಸಂಸ್ಯೂತಾನ್ ವಾಜಿಭಿಃ ಸಾರ್ಧಂ ಧರಣ್ಯಾಂ ಪಶ್ಯ ಚಾಪರಾನ್ |
ಪದಾತಿಸಾದಿಸಂಘಾಂಶ್ಚ ಕ್ಷತಜೌಘಪರಿಪ್ಲುತಾನ್ ॥ 40 ॥
ಅಣಿಗೊಳಿಸಿದ ಗಜಗಳ ಜೊತೆಯಲ್ಲಿ ಉರುಳಿದ ಗಿರಿಶಿಖರದಿಂದ ವಜ್ರಾಯುಧ ಪ್ರಹಾರಕ್ಕೆ ತುತ್ತಾದ ಸಿಂಹಗಳಂತೆ ಕೆಳಗೆ ಉರುಳಿರುವ ಈ ರಾಜರನ್ನು ನೋಡು. ಭೂಮಿಯ ಮೇಲೆ ತಮ್ಮ ಅಶ್ವಗಳ ಜೊತೆಯಲ್ಲಿ ಬದ್ಧರಾಗಿ ಬಿದ್ದಿರುವಂತಹ ಈ ಬೇರೆ ರಾಜರನ್ನು ನೋಡು. ರಕ್ತಸಮೂಹದಿಂದ ಪೂಣರ್ವಾಗಿ ಒದ್ದೆಯಾದ ಈ ಪದಾತಿಗಳ ಸಮೂಹವನ್ನೂ ಮತ್ತು ಅಶ್ವಾರೋಹಿಗಳ ಸಮೂಹವನ್ನೂ ನೋಡು.
ಸಂಜಯಃ
ಏವಂ ಸಂದರ್ಶಯನ್ ಕೃಷ್ಣೋ ರಣಭೂಮಿಂ ಕಿರೀಟಿನಃ |
ಸ್ವೈಃ ಸಮೇತಃ ಸ ಮುದಿತಃ ಪಾಂಚಜನ್ಯಂ ವ್ಯನಾದಯತ್ ॥ 41 ॥
ಸಂಜಯ ಹೀಗೆ ಕೃಷ್ಣನು ಅರ್ಜುನನಿಗೆ ರಣಭೂಮಿಯನ್ನು ತೋರಿಸುತ್ತಾ ತನ್ನವರ ಜೊತೆಯಲ್ಲಿ ಸೇರಿ ಸಂತೋಷಗೊಂಡು ಪಾಂಚಜನ್ಯ ಶಂಖವನ್ನು ಊದಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುಸ್ತ್ರಿಂಶದಧಿಕಶತತಮೋಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ದ್ವಿತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೈದನೆಯ ಅಧ್ಯಾಯ
ಯುಧಿಷ್ಠಿರನಿಂದ ಕೃಷ್ಣ-ಭೀಮ-ಸಾತ್ಯಕಿಗಳ ಸತ್ಕಾರ.
ಸಂಜಯಃ
ತತೋ ರಾಜಾನಮಭ್ಯೇತ್ಯ ಧರ್ಮರಾಜಂ ಯುಧಿಷ್ಠಿರಮ್ |
ಚಚಕ್ಷೇ ಸಂಪ್ರಹೃಷ್ಟಾತ್ಮಾ ಹತಃ ಪಾರ್ಥೇನ ಸೈಂಧವಮ್ ॥ 1 ॥
ಸಂಜಯ ಆಗ ಕೃಷ್ಣನು ಧರ್ಮರಾಜನಾದ ಯುಧಿಷ್ಠಿರನ ಬಳಿಗೆ ಬಂದು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಅರ್ಜುನನಿಂದ ಸೈಂಧವನು ಹತನಾಗಿದ್ದಾನೆಂದು ಹೇಳಿದನು.
ದಿಷ್ಟ್ಯಾ ವರ್ಧಸಿ ರಾಜೇಂದ್ರ ಹತಶತ್ರುರ್ನರೋತ್ತಮ |
ದಿಷ್ಟ್ಯಾ ನಿಸ್ತೀರ್ಣವಾಂಶ್ಚೈವ ಪ್ರತಿಜ್ಞಾಮನುಜಸ್ತವ ॥
ಸ ತ್ವೇವಮುಕ್ತಃ ಕೃಷ್ಣೇನ ಹೃಷ್ಟಃ ಪರಪುರಂಜಯಃ ॥ 2 ॥
ಎಲೈ ರಾಜೇಂದ್ರನೇ, ನರೋತ್ತಮನೇ, ದೇವರ ದಯದಿಂದ ನಿನ್ನ ಶತ್ರುವು ಹತನಾಗಿ ನೀನು ಶ್ರೇಯಸ್ಸನ್ನು ಹೊಂದಿದ್ದೀಯೆ. ದೇವರ ದಯದಿಂದಲೇ ನಿನ್ನ ತಮ್ಮನು ತನ್ನ ಪ್ರತಿಜ್ಞೆಯನ್ನು ಪೂರೈಸಿದ್ದಾನೆ (ಎಂದು ಹೇಳಿದನು).
ತತೋ ಯುಧಿಷ್ಠಿರೋ ರಾಜಾ ರಥಾದಾಪ್ಲುತ್ಯ ಭಾರತ |
ಪರ್ಯಷ್ವಜತ್ ತದಾ ಕೃಷ್ಣಾವಾನಂದಾಶ್ರುಪರಿಪ್ಲುತಃ ॥ 3 ॥
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಪರಪುರಂಜಯನೂ, ಸಂತುಷ್ಟನೂ ಆದ ಯುಧಿಷ್ಠಿರನು ತನ್ನ ರಥದಿಂದ ಕೆಳಗೆ ಹಾರಿ

ಆನಂದಬಾಷ್ಪಪೂರಿತನಾಗಿ ಕೃಷ್ಣಾರ್ಜುನರನ್ನು ಆಲಿಂಗಿಸಿದನು.
ಪ್ರಮೃಜ್ಯ ವದನಂ ಶುಭ್ರಂ ಪುಂಡರೀಕಸಮಪ್ರಭಮ್ |
ಅಬ್ರವೀದ್ ವಾಸುದೇವಂ ಚ ಪಾಂಡವಂ ಚ ಧನಂಜಯಮ್ ॥ 4 ॥
ಪದ್ಮಪುಷ್ಪದಂತಿದ್ದ ಅವರಿಬ್ಬರ ಶುಭ್ರವಾದ ಮುಖಗಳನ್ನು ನೇವರಿಸಿ ಕೃಷ್ಣನನ್ನು ಮತ್ತು ಪಾಂಡವನಾದ ಅರ್ಜುನನನ್ನು ಕುರಿತು ಮಾತನಾಡಿದನು.
ದಿಷ್ಟ್ಯಾ ಪಶ್ಯಾಮಿ ಸಂಗ್ರಾಮೇ ತೀರ್ಣಭಾರೌ ಮಹಾರಥೌ |
ದಿಷ್ಟ್ಯಾ ಚ ನಿಹತಃ ಪಾಪಃ ಸೈಂಧವಃ ಪುರುಷಾಧಮಃ ॥ 5 ॥
ದೇವರದಯದಿಂದ ಯುದ್ಧದಲ್ಲಿ ನಿಮ್ಮ ಕರ್ತವ್ಯವನ್ನು ನೆರವೇರಿಸಿದ ಮಹಾರಥರಾದ ನಿಮ್ಮನ್ನು ನೋಡುತ್ತಿದ್ದೇನೆ. ದೇವರ ದಯದಿಂದ ಪುರುಷಾಧಮನೂ, ಪಾಪಿಯೂ ಆದ ಸೈಂಧವನು ಹತನಾಗಿದ್ದಾನೆ.
ಕೃಷ್ಣ ದಿಷ್ಟ್ಯಾ ಮಮ ಪ್ರೀತಿರ್ಮಹತೀ ಪ್ರತಿಪಾದಿತಾ |
ದಿಷ್ಟ್ಯಾ ಶತ್ರುಗಣಾಶ್ಚೈವ ನಿಮಗ್ನಾಃ ಶೋಕಸಾಗರೇ ॥ 6 ॥
ಎಲೈ ಕೃಷ್ಣನೇ, ದೇವರ ದಯದಿಂದ ನೀನು ನನಗೆ ಬಹಳ ಸಂತೋಷವನ್ನು ಉಂಟುಮಾಡಿದ್ದೀಯೆ. ದೇವರ ದಯದಿಂದಲೇ ಶತ್ರುಸಮೂಹಗಳು ಶೋಕ ಸಾಗರದಲ್ಲಿ ಮುಳುಗಿವೆ.
ನ ತೇಷಾಂ ದುಷ್ಕರಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ |
ಸರ್ವಲೋಕಗುರುರ್ಯೇಷಾಂ ತ್ವಂ ನಾಥೋ ಮಧುಸೂದನ ॥ 7 ॥
ಎಲೈ ಮಧುಸೂದನನೇ, ಸರ್ವಲೋಕಗುರುವಾದ ನೀನು ಯಾರಿಗೆ ನಾಥನಾಗಿದ್ದೀಯೋ ಅವರಿಗೆ ಮೂರುಲೋಕಗಳಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ.
ತವ ಪ್ರಸಾದಾದ್ ಗೋವಿಂದ ವಯಂ ಜೇಷ್ಯಾಮಹೇ ರಿಪೂನ್ |
ಯಥಾ ಪೂರ್ವಂ ಪ್ರಸಾದಾತ್ ತೇ ದಾನವಾನ್ ಪಾಕಶಾಸನಃ ॥ 8 ॥
ಎಲೈ ಗೋವಿಂದನೇ, ಹಿಂದೆ ನಿನ್ನ ಅನುಗ್ರಹದಿಂದ ಪಾಕಶಾಸನನಾದ ಇಂದ್ರನು ದಾನವರನ್ನು ಜಯಿಸಿದಂತೆ, ನಾವು ನಿನ್ನ ಅನುಗ್ರಹದಿಂದ ಶತ್ರುಗಳನ್ನು ಜಯಿಸುವೆವು.
ಪೃಥಿವೀವಿಜಯೋ ವಾಪಿ ತ್ರೈಲೋಕ್ಯವಿಜಯೋಽಪಿ ವಾ |
ಧ್ರುವೋ ಹಿ ತೇಷಾಂ ವಾರ್ಷ್ಣೇಯ ಯೇಷಾಂ ತುಷ್ಟೋಽಸಿ ಮಾಧವ ॥
ಎಲೈ ಮಾಧವನೇ, ನೀನು ಯಾರಿಗೆ ಪ್ರಸನ್ನನಾಗಿದ್ದೀಯೋ ಅವರಿಗೆ ಪೃಥಿವಿಯ ಜಯವಾಗಲೀ ಅಥವಾ ಮೂರುಲೋಕಗಳ ಜಯವಾಗಲೀ ಖಂಡಿತವಾಗಿ ಉಂಟಾಗುತ್ತದೆ.
ನ ತೇಷಾಂ ವಿದ್ಯತೇ ಪಾಪಂ ಸಂಗ್ರಾಮೇ ವಾ ಪರಾಜಯಃ |
ತ್ರಿದಶೇಶ್ವರನಾಥಸ್ತ್ವಂ ಯೇಷಾಂ ತುಷ್ಟೋಽಸಿ ಮಾಧವ ॥ 10 ॥
ಎಲೈ ಮಾಧವನೇ, ಸ್ವರ್ಗದ ಪ್ರಭುಗಳಿಗೆ ನಾಥನಾದ ನೀನು ಯಾರಿಗೆ ಪ್ರಸನ್ನನಾಗಿದ್ದೀಯೋ ಅವರಿಗೆ ಪಾಪವಾಗಲೀ, ಯುದ್ಧದಲ್ಲಿ ಪರಾಜಯವಾಗಲೀ ಇರುವುದಿಲ್ಲ.
ತ್ವತ್ಪ್ರಸಾದಾದ್ಧೃಷೀಕೇಶ ಶಕ್ರಃ ಸುರಗಣೇಶ್ವರಃ |
ತ್ರೈಲೋಕ್ಯವಿಜಯಂ ಶ್ರೀಮಾನ್ ಪ್ರಾಪ್ತವಾನ್ ರಣಮೂರ್ಧನಿ ॥ 11 ॥
ಎಲೈ ಹೃಷೀಕೇಶನೇ, ನಿನ್ನ ಅನುಗ್ರಹದಿಂದ, ಸುರಗಣೇಶ್ವರನಾದ ಸಂಪದ್ಯುಕ್ತನಾದ ಇಂದ್ರನು ದೊಡ್ಡ ಯುದ್ಧದಲ್ಲಿ ತ್ರಿಲೋಕ ವಿಜಯವನ್ನು ಸಂಪಾದಿಸಿದನು.
ತವ ಚೈವ ಪ್ರಸಾದೇನ ತ್ರಿದಶಾಸ್ತ್ರಿದಶೇಶ್ವರ |
ಅಮರತ್ವಂ ಗತಾಃ ಕೃಷ್ಣ ಲೋಕಾಂಶ್ಚಾಶ್ನುವತೇಽಕ್ಷಯಾನ್ ॥ 12 ॥
ಎಲೈ ಕೃಷ್ಣನೇ, ಅಮರಪ್ರಭುವೇ, ನಿನ್ನ ಅನುಗ್ರಹದಿಂದಲೇ ದೇವತೆಗಳು ಅಮರತ್ವವನ್ನು ಹೊಂದಿ ಅಕ್ಷಯಲೋಕಗಳನ್ನು ಹೊಂದುತ್ತಾರೆ.
ತ್ವತ್ಪ್ರಸಾದಸಮುತ್ಥೇನ ವಿಕ್ರಮೇಣಾರಿಸೂದನ |
ಸುರೇಶತ್ವಂ ಗತಃ ಶಕ್ರೋ ಹತ್ವಾ ದೈತ್ಯಾನ್ ಸಹಸ್ರಶಃ ॥ 13 ॥
ಎಲೈ ಶತ್ರುಸೂದನನೇ, ನಿನ್ನ ಅನುಗ್ರಹದಿಂದ ಉಂಟಾದ ಪರಾಕ್ರಮದಿಂದ ಇಂದ್ರನು ಸಹಸ್ರ ಸಂಖ್ಯೆಯಲ್ಲಿ ದೈತ್ಯರನ್ನು ಕೊಂದು ದೇವತೆಗಳಿಗೆ ಒಡೆಯನಾದನು.
ತ್ವತ್ಪ್ರಸಾದಾದ್ಧೃಷೀಕೇಶ ಜಗತ್ ಸ್ಥಾವರಜಂಗಮಮ್ |
ಸ್ವವರ್ತ್ಮನಿ ಸ್ಥಿತಂ ವೀರ ಜಪಹೋಮೇಷು ವರ್ತತೇ ॥ 14 ॥
ಎಲೈ ಹೃಷೀಕೇಶನೇ, ವೀರನೇ, ನಿನ್ನ ಅನುಗ್ರಹದಿಂದ ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚವು ತನ್ನ ಮಾರ್ಗದಲ್ಲಿ ನೆಲೆಸಿ ಜಪ-ಹೋಮಗಳಲ್ಲಿ ನಿರತವಾಗಿದೆ.
ಏಕಾರ್ಣವಮಿದಂ ಪೂರ್ವಂ ಸರ್ವಮಾಸೀತ್ತಮೋಮಯಮ್ |
ತ್ವತ್ಪ್ರಸಾದಾತ್ ಪ್ರಕಾಶತ್ವಂ ಜಗತ್ಪ್ರಾಪ್ತಂ ನರೋತ್ತಮ ॥ 15 ॥
ಏಕಾರ್ಣವವಾದ ಈ ಜಗತ್ತೆಲ್ಲವೂ ಮೊದಲು ಕತ್ತಲೆಯಿಂದ ಆವೃತವಾಗಿದ್ದಿತು. ಎಲೈ ನರೋತ್ತಮನೇ, ನಿನ್ನ ಅನುಗ್ರಹದಿಂದ ಅನಂತರ ಪ್ರಕಾಶಗೊಂಡಿತು.
ಸೃಷ್ಟಾರಂ ಸರ್ವಲೋಕಾನಾಂ ಪರಮಾತ್ಮಾನಮಚ್ಯುತಮ್ |

ಯೇ ಪ್ರಪನ್ನಾ ಹೃಷೀಕೇಶಂ ನ ತೇ ಮುಹ್ಯಂತಿ ಕರ್ಹಿಚಿತ್ ॥ 16 ॥
ಸರ್ವಲೋಕಗಳ ಸೃಷ್ಟಿಕರ್ತನೂ, ಪರಮಾತ್ಮನೂ, ಚತುರ್ವಿಧ ನಾಶರಹಿತನೂ ಆದ ಹೃಷೀಕೇಶನಾದ ನಿನಗೆ ಶರಣಾಗತರಾದವರು ಯಾವ ಮೋಹಕ್ಕೂ ಒಳಗಾಗುವುದಿಲ್ಲ.
ಅನಾದಿನಿಧನಂ ದೇವಂ ಲೋಕಕರ್ತಾರಮವ್ಯಯಮ್ |
ತ್ವಾಂ ಭಕ್ತಾ ಯೇ ಹೃಷೀಕೇಶ ದುರ್ಗಾಣ್ಯತಿತರಂತಿ ತೇ ॥ 17 ॥
ಎಲೈ ಹೃಷೀಕೇಶನೇ, ಆದ್ಯಂತರಹಿತನಾದ ಲೋಕಕರ್ತನಾದ, ಶಾಶ್ವತನಾದ, ದೇವನಾದ ನಿನ್ನಲ್ಲಿ ಭಕ್ತಿಯನ್ನು ಮಾಡುವವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ಪರಂ ಪುರಾಣಂ ಪುರುಷಂ ಪುರಾಣಾನಾಂ ಪರಂ ಚ ಯತ್ |
ಪ್ರಪದ್ಯತಸ್ತಂ ಪರಮಂ ಪರಾ ಭೂತಿರ್ವಿಧೀಯತೇ ॥ 18 ॥
ಸರ್ವೋತ್ತಮನೂ, ಪುರಾಣ ಪುರುಷನೂ, ಪ್ರಾಚೀನರಾದ ಎಲ್ಲರಿಗಿಂತಲೂ ಉತ್ತಮನೂ ಆದ ನಿನಗೆ ಶರಣಾಗತರಾದವರಿಗೆ ಶ್ರೇಷ್ಠವಾದ ಸಮೃದ್ಧಿಯು ಉಂಟಾಗುತ್ತದೆ.
ಯೋಽಗಾತ ಚತುರೋ ವೇದಾನ್ಯಶ್ಚ ವೇದೇಷು ಗೀಯತೇ |
ತಂ ಪ್ರಪದ್ಯ ಮಹಾತ್ಮಾನಂ ಭೂತಿಮಾಪ್ನೋತ್ಯನುತ್ತಮಾಮ್ ॥ 19 ॥
ನಾಲ್ಕು ವೇದಗಳನ್ನೂ ಗಾನ ಮಾಡಿದ, ನಾಲ್ಕು ವೇದಗಳಿಂದ ಪ್ರತಿಪಾದ್ಯನಾದ ಮಹಾತ್ಮನಾದ ನಿನ್ನನ್ನು ಶರಣು ಹೊಂದಿ ಶ್ರೇಷ್ಠವಾದ ಐಶ್ವರ್ಯವನ್ನು ಪಡೆಯುತ್ತಾರೆ.
ಧನಂಜಯಸಖಾ ಯಶ್ಚ ಧನಂಜಯಹಿತಶ್ಚ ಯಃ |
ತಂ ಧನಂಜಯಗೋಪ್ತಾರಂ ಪ್ರಪದ್ಯ ಸುಖಮೇಧತೇ ॥ 20 ॥
ಧನಂಜಯನ ಸ್ನೇಹಿತನಾದವನೂ, ಅವನ ಹಿತದಲ್ಲಿ ರತನಾದವನೂ, ಅವನನ್ನು ರಕ್ಷಿಸುವವನೂ ಆದ ನಿನ್ನನ್ನು ಶರಣು ಹೊಂದಿ ಸುಖವನ್ನು ಪಡೆಯುತ್ತಾರೆ.
ಇತ್ಯಬ್ರುವೀತ್ ತದಾ ರಾಜಾ ಪರಿಷ್ವಜ್ಯ ಚ ಕೇಶವಮ್ |
ಸಂಪ್ರಹೃಷ್ಟಮನಾ ರಾಜನ್ ಧರ್ಮಪುತ್ರೋ ಯುಧಿಷ್ಠಿರಃ ॥ 21 ॥
ಎಲೈ ರಾಜನೇ, ಧರ್ಮಪುತ್ರನಾದ ಯುಧಿಷ್ಠಿರನು ಆಗ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಕೇಶವನನ್ನು ಆಲಿಂಗಿಸಿ ಹೀಗೆ ಮಾತನಾಡಿದನು.
ಇತ್ಯುಕ್ತೌ ತೌ ಮಹಾತ್ಮಾನಾವುಭೌ ಕೇಶವಪಾಂಡವೌ |
ತಾವಬ್ರೂತಾಂ ತದಾ ಹೃಷ್ಟೌ ರಾಜಾನಂ ಪೃಥಿವೀಪತಿಮ್ ॥ 22 ॥
ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಮಹಾತ್ಮರಾದ ಆ ಕೃಷ್ಣಾರ್ಜುನರಿಬ್ಬರೂ ಸಂತೋಷದಿಂದ ಕೂಡಿ ರಾಜನಾದ ಅವನನ್ನು ಕುರಿತು ಮಾತನಾಡಿದರು.
ತವ ಕೋಪಾಗ್ನಿನಾ ದಗ್ಧಃ ಪಾಪೋ ರಾಜಾ ಜಯದ್ರಥಃ |
ಉದೀರ್ಣಂ ಚಾಪಿ ಸುಮಹದ್ಧಾರ್ತರಾಷ್ಟ್ರಬಲಂ ರಣೇ ॥ 23 ॥
ಹನ್ಯತೇ ನಿಹತಂ ಚೈವ ವಿನಂಕ್ಷ್ಯತಿ ಚ ಭಾರತ |
ತವ ಕ್ರೋಧಹತಾ ಹ್ಯೇತೇ ಕೌರವಾಃ ಶತ್ರುಸೂದನ ॥ 24 ॥
ಎಲೈ ಭಾರತನೇ, ನಿನ್ನ ಕೋಪಾಗ್ನಿಯಿಂದ ರಾಜನಾದ ಜಯದ್ರಥನು ಮತ್ತು ಬಲೋನ್ನದ್ಧವಾದ ದುರ್ಯೋಧನನ ದೊಡ್ಡ ಸೈನ್ಯವು ರಣರಂಗದಲ್ಲಿ ದಹಿಸಲ್ಪಡುತ್ತದೆ. ಎಲೈ ಭಾರತನೇ, ದಹಿಸಲ್ಪಟ್ಟಿದೆ, ದಹಿಸಲ್ಪಡುತ್ತಿದೆ ಮತ್ತು ಮುಂದೆ ದಹಿಸಲ್ಪಡುವುದು. ಎಲೈ ಶತ್ರುಸೂದನನೇ, ಈ ಕೌರವರು ನಿನ್ನ ಕ್ರೋಧದಿಂದ ಹತರಾಗಿದ್ದಾರೆ.
ತ್ವಾಂ ಹಿ ಚಕ್ಷುರ್ಹಣಂ ವೀರಂ ಕೋಪಯಿತ್ವಾ ಸುಯೋಧನಃ |
ಸಮಿತ್ರಬಂಧುಃ ಸಮರೇ ಪ್ರಾಣಾಂಸ್ತ್ಯಕ್ಷ್ಯತಿ ದುರ್ಮತಿಃ ॥ 25 ॥
ದೃಷ್ಟಿಯಿಂದಲೇ ಕೊಲ್ಲುವ ವೀರನಾದ ನಿನ್ನನ್ನು ಕೋಪಗೊಳಿಸಿ, ದುರ್ಮತಿಯಾದ ಸುಯೋಧನನು ಯುದ್ಧದಲ್ಲಿ ಮಿತ್ರ-ಬಾಂಧವರೊಡನೆ ಪ್ರಾಣಗಳನ್ನು ತ್ಯಜಿಸುವನು.
ತವ ಕ್ರೋಧಹತಃ ಪೂರ್ವಂ ದೇವೈರಪಿ ಸುದುರ್ಜಯಃ |
ಶರತಲ್ಪಗತಃ ಶೇತೇ ಭೀಷ್ಮಃ ಕುರುಪಿತಾಮಹಃ ॥ 26 ॥
ದೇವತೆಗಳಿಂದಲೂ ದುರ್ಜಯರಾದ ಕುರುಪಿತಾಮಹರಾದ ಭೀಷ್ಮರು ನಿನ್ನ ಕ್ರೋಧದಿಂದ ಹತರಾಗಿ ಮೊದಲೇ ಶರತಲ್ಪದಲ್ಲಿ ಮಲಗಿದ್ದಾರೆ.
ದುರ್ಲಭೋ ಹಿ ಜಯಸ್ತೇಷಾಂ ಸಂಗ್ರಾಮೇ ರಿಪುಸೂದನ |
ಯಾತಾ ಮೃತ್ಯುವಶಂ ತೇ ವೈ ಯೇಷಾಂ ಕ್ರುದ್ಧೋಽಸಿ ಪಾಂಡವ ॥
ಎಲೈ ಶತ್ರುಸೂದನನೇ, ಪಾಂಡವನೇ, ಯಾರ ಮೇಲೆ ನೀನು ಕೋಪಗೊಳ್ಳುವಿಯೋ ಅವರಿಗೆ ಯುದ್ಧದಲ್ಲಿ ಜಯವು ದುರ್ಲಭವಾದುದು. ಅವರು ಮೃತ್ಯುವಶರಾಗುವರು.
ರಾಜ್ಯಂ ಪ್ರಾಣಾಃ ಪ್ರಿಯಾಃ ಪುತ್ರಾಃ ಸೌಖ್ಯಾನಿ ವಿವಿಧಾನಿ ಚ |
ಅಚಿರಾತ್ ತಸ್ಯ ನಶ್ಯಂತಿ ಯೇಷಾಂ ಕ್ರುದ್ಧೋಽಸಿ ಮಾನದ ॥ 28 ॥
ಎಲೈ ಮಾನದನೇ, ನೀನು ಯಾರ ಮೇಲೆ ಕೋಪಗೊಳ್ಳುವಿಯೋ ಅವರ ರಾಜ್ಯ, ಪ್ರಾಣಗಳು, ಪ್ರಿಯಪುತ್ರರು, ವಿವಿಧವಾದ ಸೌಖ್ಯಗಳು ಎಲ್ಲವೂ ಶೀಘ್ರವಾಗಿ ನಾಶವನ್ನು ಹೊಂದುತ್ತವೆ.

ವಿನಷ್ಟಾನ್ ಕೌರವಾನ್ ಮನ್ಯೇ ಸಪುತ್ರಪಶುಬಾಂಧವಾನ್ |
ರಾಜಧರ್ಮಪರೇ ನಿತ್ಯಂ ತ್ವಯಿ ಕ್ರುದ್ಧೇ ಯುಧಿಷ್ಠಿರ ॥ 29 ॥
ಎಲೈ ಯುಧಿಷ್ಠಿರನೇ, ರಾಜಧರ್ಮದಲ್ಲಿ ನಿರತನಾದ ನೀನು ಕೋಪಗೊಂಡಿರಲು ಪುತ್ರ-ಪಶು-ಬಾಂಧವರಿಂದ ಸಹಿತರಾದ ಕೌರವರು ನಷ್ಟರಾಗಿದ್ದಾರೆಂದು ಭಾವಿಸುತ್ತೇನೆ (ಎಂದು ಹೇಳಿದನು).
ತತೋ ಭೀಮೋ ಮಹಾಬಾಹುಃ ಸಾತ್ಯಕಿಶ್ಚ ಮಹಾರಥಃ |
ಅಭಿವಾದ್ಯ ಗುರುಂ ಜ್ಯೇಷ್ಠಂ ಮಾರ್ಗಣೈಃ ಕ್ಷತವಿಕ್ಷತೌ |
ಸ್ಥಿತಾವಾಸ್ತಾಂ ಮಹೇಷ್ವಾಸೌ ಪಾಂಚಾಲ್ಯೈಃ ಪರಿವಾರಿತೌ ॥ 30 ॥
ಆಗ ಮಹಾಬಾಹುವಾದ ಭೀಮನು ಮತ್ತು ಮಹಾರಥನಾದ ಸಾತ್ಯಕಿಯು, ಗುರುವೂ-ಹಿರಿಯನೂ ಆದ ಯುಧಿಷ್ಠಿರನಿಗೆ ನಮಸ್ಕರಿಸಿ, ಅವರ ದೇಹವೆಲ್ಲವೂ ಬಾಣಗಳಿಂದ ಗಾಯಗೊಂಡು ಮಹಾಧನುರ್ಧಾರಿಗಳಾದ ಅವರು ಪಾಂಚಾಲರಿಂದ ಕೂಡಿ ಎದುರಿಗೆ ನಿಂತರು.
ತೌ ದೃಷ್ಟ್ವಾ ಮುದಿತೌ ವೀರೌ ಪ್ರಾಂಜಲೀ ಚಾಗ್ರತಃ ಸ್ಥಿತೌ |
ಅಭ್ಯನಂದತ ಕೌಂತೇಯಸ್ತಾವುಭೌ ಭೀಮಸಾತ್ಯಕೀ ॥ 31 ॥
ಎದುರಿಗೆ ಸಂತೋಷದಿಂದ ಕೈಮುಗಿದು ನಿಂತ ಆ ಇಬ್ಬರು ವೀರರಾದ ಭೀಮ-ಸಾತ್ಯಕಿಯರನ್ನು ನೋಡಿ ಯುಧಿಷ್ಠಿರನು ಅವರಿಬ್ಬರನ್ನೂ ಅಭಿನಂದಿಸಿದನು.
ದಿಷ್ಟ್ಯಾ ಪಶ್ಯಾಮಿ ವಾಂ ವೀರೌ ವಿಮುಕ್ತೌ ಸೈನ್ಯಸಾಗರಾತ್ |
ದ್ರೋಣಗ್ರಾಹಾದ್ ದುರಾಧರ್ಷಾದ್ ಹಾರ್ದಿಕ್ಯಮಕರಾಲಯಾತ್ |
ದಿಷ್ಟ್ಯಾ ಚ ನಿರ್ಜಿತಾಃ ಸಂಖ್ಯೇ ಪೃಥಿವ್ಯಾಂ ಸರ್ವಪಾರ್ಥಿವಾಃ ॥ 32 ॥
ದೇವರ ದಯದಿಂದ ಸೈನ್ಯಸಾಗರದಿಂದಲೂ, ಸಮೀಪಿಸಲು ಅಸಾಧ್ಯವಾದ ದ್ರೋಣರೆಂಬ ಮೊಸಳೆಯಿಂದಲೂ, ಕೃತವರ್ಮನೆಂಬ ಸಮುದ್ರದಿಂದಲೂ ದಾಟಿ ಬಂದ ನಿಮ್ಮನ್ನು ನೋಡುತ್ತಿದ್ದೇನೆ. ದೇವರ ದಯದಿಂದ ಭೂಮಿಯಲ್ಲಿರುವ ಎಲ್ಲ ರಾಜರೂ ಯುದ್ಧದಲ್ಲಿ ಪರಾಜಿತರಾಗಿದ್ದಾರೆ.
ಯುವಾಂ ವಿಜಯಿನೌ ಚಾಪಿ ದಿಷ್ಟ್ಯಾ ಪಶ್ಯಾಮಿ ಸಂಯುಗೇ |
ದಿಷ್ಟ್ಯಾ ದ್ರೋಣೋ ಜಿತಃ ಸಂಖ್ಯೇ ಹಾರ್ದಿಕ್ಯಶ್ಚ ಮಹಾಬಲಃ ॥ 33 ॥
ದೇವರ ದಯದಿಂದ ಯುದ್ಧದಲ್ಲಿ ವಿಜಯವನ್ನು ಸಂಪಾದಿಸಿದ ನಿಮ್ಮಿಬ್ಬರನ್ನು ನೋಡುತ್ತಿದ್ದೇನೆ. ದೇವರ ದಯದಿಂದ ಯುದ್ಧದಲ್ಲಿ ದ್ರೋಣರು ಮತ್ತು ಮಹಾಬಲನಾದ ಕೃತವರ್ಮನು ಪರಾಜಿತರಾಗಿದ್ದಾರೆ.
ಸೈನ್ಯಾರ್ಣವಂ ಸಮುತ್ತೀರ್ಣೌ ದಿಷ್ಟ್ಯಾ ಪಶ್ಯಾಮಿ ಚಾನಘೌ |
ಸಮರಶ್ಲಾಘಿನೌ ವೀರೌ ಸಮರೇಷ್ವಪಲಾಯಿನೌ |
ಮಮ ಪ್ರಾಣಸಮೌ ಚೈವ ದಿಷ್ಟ್ಯಾ ಪಶ್ಯಾಮಿ ವಾಮಹಮ್ ॥ 34 ॥
ದೇವರ ದಯದಿಂದ ಸೈನ್ಯಸಾಗರವನ್ನು ದಾಟಿ ಬಂದ, ನಿರ್ದೋಷರಾದ, ಸಮರಶ್ಲಾಘಿಗಳಾದ, ಯುದ್ಧದಲ್ಲಿ ಹಿಮ್ಮೆಟ್ಟದಿರುವ ವೀರರಾದ ನಿಮ್ಮನ್ನು ನೋಡುತ್ತಿದ್ದೇನೆ. ದೇವರ ದಯದಿಂದ ನನಗೆ ಪ್ರಾಣ ಸಮರಾದ ನಿಮ್ಮಿಬ್ಬರನ್ನು ನಾನು ನೋಡುತ್ತಿದ್ದೇನೆ.
ಇತ್ಯುಕ್ತ್ವಾ ಪಾಂಡವೋ ರಾಜಾ ಯುಯುಧಾನವೃಕೋದರೌ |
ಸಸ್ವಜೇ ಪುರುಷವ್ಯಾಘ್ರೌ ಹರ್ಷಾದ್ ಬಾಷ್ಪಂ ಮುಮೋಚ ಹ ॥ 35 ॥
ಹೀಗೆ ಹೇಳಿ ಪಾಂಡುಪುತ್ರನಾದ ಧರ್ಮರಾಜನು ಪುರುಷವ್ಯಾಘ್ರರಾದ ಭೀಮ-ಸಾತ್ಯಕಿಯರನ್ನು ಆಲಿಂಗಿಸಿ ಸಂತೋಷದಿಂದ ಬಾಷ್ಪಗಳನ್ನು ಸುರಿಸಿದನು.
ತತಃ ಪ್ರಮುದಿತಂ ಸರ್ವಂ ಬಲಮಾಸೀದ್ ವಿಶಾಂಪತೇ |
ಪಾಂಡವಾನಾಂ ಜಯಂ ದೃಷ್ಟ್ವಾ ಯುದ್ಧಾಯ ಚ ಮನೋ ದಧೇ ॥
ಎಲೈ ರಾಜನೇ, ಆಗ ಪಾಂಡವರ ಜಯವನ್ನು ನೋಡಿ ಅವರ ಸೈನ್ಯವೆಲ್ಲವೂ ಸಂತೋಷಗೊಂಡು ಯುದ್ಧಕ್ಕಾಗಿ ಮನಸ್ಸಿನಲ್ಲಿ ಸಿದ್ಧರಾದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚತ್ರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತಾರನೆಯ ಅಧ್ಯಾಯ
ಸೈಂಧವನ ವಧೆಯಿಂದ ದುರ್ಯೋಧನನ ಶೋಕ ಮತ್ತು ಆತ್ಮನಿಂದೆ.
ಸಂಜಯಃ
ಸೈಂಧವೇ ನಿಹತೇ ರಾಜನ್ ಪುತ್ರಸ್ತವ ಸುಯೋಧನಃ |
ಅಶ್ರುಕ್ಲಿನ್ನಮುಖೋ ದೀನೋ ನಿರುತ್ಸಾಹೋ ದ್ವಿಷಜ್ಜಯೇ |
ಅಮನ್ಯತಾರ್ಜುನಸಮೋ ಯೋಧೋ ಭುವಿ ನ ವಿದ್ಯತೇ ॥ 1 ॥
ನ ದ್ರೋಣೋ ನ ಚ ರಾಧೇಯೋ ನಾಶ್ವತ್ಥಾಮಾ ಕೃಪೋ ನ ಚ |
ಕ್ರುದ್ಧಸ್ಯ ಪ್ರಮುಖೇ ಸ್ಥಾತುಂ ಪರ್ಯಾಪ್ತಾ ಇತಿ ಮಾರಿಷ ॥ 2 ॥
ಸಂಜಯ ಎಲೈ ರಾಜನೇ, ಸೈಂಧವನು ಹತನಾಗುತ್ತಿರಲು ನಿನ್ನ ಪುತ್ರನಾದ ದುರ್ಯೋಧನನು ಕಣ್ಣೀರಿನಿಂದ ತುಂಬಿದ

ಮುಖವುಳ್ಳವನಾಗಿ, ದೀನನಾಗಿ ಶತ್ರುಜಯದಲ್ಲಿ ಉತ್ಸಾಹವನ್ನು ಕಳೆದುಕೊಂಡು ಅರ್ಜುನನಿಗೆ ಸಮರಾದ ಯೋಧರು ಭೂಮಿಯಲ್ಲಿ ಯಾರೂ ಇಲ್ಲ. ದ್ರೋಣರಾಗಲೀ, ಕರ್ಣನಾಗಲೀ, ಅಶ್ವತ್ಥಾಮರಾಗಲೀ, ಕೃಪರಾಗಲೀ ಕ್ರುದ್ಧನಾದ ಅವನ ಮುಂದೆ ನಿಲ್ಲಲು ಸಮರ್ಥರಲ್ಲ ಎಂದು ತಿಳಿದನು.
ನಿರ್ಜಿತ್ಯ ಹಿ ರಣೇ ಪಾರ್ಥಃ ಸರ್ವಾನ್ ಮಮ ಮಹಾರಥಾನ್ |
ಅವಧೀತ್ ಸೈಂಧವಂ ಸಂಖ್ಯೇ ನೈನಂ ಕಶ್ಚಿದವಾರಯತ್ ॥ 3 ॥
ಅರ್ಜುನನು ನನ್ನ ಸೈನ್ಯದ ಎಲ್ಲ ಮಹಾರಥರನ್ನೂ ಜಯಿಸಿ ರಣರಂಗದಲ್ಲಿ ಸೈಂಧವನನ್ನು ಕೊಂದನು. ಅವನನ್ನು ಯಾರೂ ತಡೆಯಲಿಲ್ಲ.
ಸರ್ವಥಾ ಹತಮೇವೈತತ್ ಕೌರವಾಣಾಂ ಮಹದ್ಬಲಮ್ |
ನ ಹ್ಯಸ್ಯ ವಿದ್ಯತೇ ತ್ರಾತಾ ಸಾಕ್ಷಾದಪಿ ಪುರಂದರಃ ॥ 4 ॥
ಕೌರವರ ಈ ದೊಡ್ಡ ಸೈನ್ಯವು ಎಲ್ಲ ರೀತಿಯಿಂದಲೂ ವಿನಾಶವನ್ನು ಹೊಂದಿದೆ. ಸಾಕ್ಷಾತ್ ಇಂದ್ರನೂ ಇದನ್ನು ರಕ್ಷಿಸಲಾರ.
ಯಮುಪಾಶ್ರಿತ್ಯ ಸಂಗ್ರಾಮೇ ಕೃತಃ ಶಸ್ತ್ರಸಮುದ್ಯಮಃ |
ಸ ಕರ್ಣೋ ನಿರ್ಜಿತಃ ಸಂಖ್ಯೇ ಹತಶ್ಚೈವ ಜಯದ್ರಥಃ ॥ 5 ॥
ಯಾವ ಕರ್ಣನನ್ನು ಆಶ್ರಯಿಸಿ ಯುದ್ಧದಲ್ಲಿ ಶಸ್ತ್ರವ್ಯಾಪಾರವನ್ನು ಮಾಡಿದೆವೋ ಅಂತಹ ಕರ್ಣನೂ ಯುದ್ಧದಲ್ಲಿ ಪರಾಜಿತನಾಗಿದ್ದಾನೆ. ಜಯದ್ರಥನು ಹತನಾಗಿದ್ದಾನೆ.
ಪರುಷಾಣಿ ಸಭಾಮಧ್ಯೇ ಪ್ರೋಕ್ತವಾನ್ ಯಃ ಸ್ಮ ಪಾಂಡವಾನ್ |
ಸ ಕರ್ಣೋ ನಿರ್ಜಿತಃ ಸಂಖ್ಯೇ ಸೈಂಧವಶ್ಚ ನಿಪಾತಿತಃ ॥ 6 ॥
ಯಾವ ಕರ್ಣನು ಸಭೆಯ ಮಧ್ಯದಲ್ಲಿ ಪಾಂಡವರನ್ನು ಕುರಿತು ಉಗ್ರವಾದ ಮಾತುಗಳನ್ನು ಆಡಿದನೋ ಅಂತಹ ಅವನು ರಣರಂಗದಲ್ಲಿ ನಿರ್ಜಿತನಾಗಿದ್ದಾನೆ, ಸೈಂಧವನು ಹತನಾಗಿದ್ದಾನೆ.
ಯಸ್ಯ ವೀರ್ಯಂ ಸಮಾಶ್ರಿತ್ಯ ಶಮಂ ಯಾಚಂತಮಚ್ಯುತಮ್ |
ತೃಣವತ್ ತಮಹಂ ಮನ್ಯೇ ಸ ಕರ್ಣೋ ನಿರ್ಜಿತೋ ಯುಧಿ ॥ 7 ॥
ಯಾರ ಪರಾಕ್ರಮವನ್ನು ಆಶ್ರಯಿಸಿ ನಾನು ಸಂಧಿಯನ್ನು ಬೇಡಲು ಬಂದ ಕೃಷ್ಣನನ್ನು ತೃಣಕ್ಕೆ ಸಮಾನವಾಗಿ ನೋಡಿದೆನೋ ಅಂತಹ ಕರ್ಣನು ಯುದ್ಧದಲ್ಲಿ ಪರಾಜಿತನಾಗಿದ್ದಾನೆ.
ಏವಂ ಕ್ಲಾಂತಮನಾ ರಾಜನ್ನುಪಾಯಾದ್ ದ್ರೋಣಮೀಕ್ಷಿತುಮ್ |
ಆಗಸ್ಕೃತ್ ಸರ್ವಲೋಕಸ್ಯ ಪುತ್ರಸ್ತೇ ಭರತರ್ಷಭ ॥ 8 ॥
ಎಲೈ ರಾಜನೇ, ಭರತಶ್ರೇಷ್ಠನೇ, ಹೀಗೆ ಮನಸ್ಸಿನಲ್ಲಿ ದುಃಖದಿಂದ ಯೋಚಿಸುತ್ತಾ ಸರ್ವಲೋಕಕ್ಕೂ ಅಪರಾಧವನ್ನು ಮಾಡಿದ ನಿನ್ನ ಪುತ್ರನು ದ್ರೋಣರನ್ನು ನೋಡಲು ಹೊರಟನು.
ತತಸ್ತತ್ ಸರ್ವಮಾಚಖ್ಯೌ ಕುರೂಣಾಂ ವೈಶಸಂ ಮಹತ್ |
ಪರಾನ್ ವಿಜಯತಶ್ಚಾಪಿ ಧಾರ್ತರಾಷ್ಟ್ರಾನ್ ನಿಮಜ್ಜತಃ ॥ 9 ॥
ಅನಂತರ ಅಲ್ಲಿ ಕುರುಗಳಿಗೆ ಉಂಟಾದ ದೊಡ್ಡ ಹಿಂಸೆಯನ್ನೂ, ಶತ್ರುಗಳಾದ ಪಾಂಡವರು ಗೆಲ್ಲುತ್ತಿರುವುದನ್ನೂ, ಧೃತರಾಷ್ಟ್ರ ಪುತ್ರರು ಮುಳುಗಿಹೋಗುತ್ತಿರುವುದನ್ನೂ ಹೇಳಿದನು.
ದುರ್ಯೋಧನಃ
ಪಶ್ಯ ಮೂರ್ಧಾವಸಿಕ್ತಾನಾಮಾಚಾರ್ಯ ಕದನಂ ಕೃತಮ್ |
ಕೃತ್ವಾ ಪ್ರಮುಖತಃ ಶೂರಂ ಭೀಷ್ಮಂ ಮಮ ಪಿತಾಮಹಮ್ ॥ 10 ॥
ದುರ್ಯೋಧನ ಪಟ್ಟಾಭಿಷಿಕ್ತರಾಜರಿಗೆ ಗುರುಗಳಾದ ಎಲೈ ದ್ರೋಣರೇ, ನಾವು ಪಿತಾಮಹರಾದ ಶೂರರಾದ ಭೀಷ್ಮರನ್ನು ಮುಂದೆ ಮಾಡಿಕೊಂಡು ಮಾಡಿದ ಯುದ್ಧವನ್ನು ನೋಡಿ.
ತಂ ನಿಹತ್ಯ ಪ್ರಲುಬ್ಧೋಽಯಂ ಶಿಖಂಡೀ ಪೂರ್ಣಮಾನಸಃ |
ಪಾಂಚಾಲ್ಯೈಃ ಸಹಿತಃ ಸರ್ವೈಃ ಸೇನಾಗ್ರಮಭಿಕರ್ಷತಿ ॥ 11 ॥
ಬಹಳವಾದ ಆಸೆಯುಳ್ಳ ಈ ಶಿಖಂಡಿಯು ಅವರನ್ನು ಕೊಂದು ತನ್ನ ಮನೋರಥವನ್ನು ಪೂರ್ಣ ಮಾಡಿಕೊಂಡು ಎಲ್ಲ ಪಾಂಚಾಲರಿಂದಲೂ ಸಹಿತರಾಗಿ ಆ ಸೇನೆಯನ್ನು ಮುಂದೆ ನಡೆಸುತ್ತಿದ್ದಾನೆ.
ಅಪರಶ್ಚಾಪಿ ದುರ್ಧರ್ಷಃ ಶಿಷ್ಯಸ್ತೇ ಸವ್ಯಸಾಚಿನಾ |
ಅಕ್ಷೋಹಿಣೀಃ ಸಪ್ತ ಹತ್ವಾ ಹತೋ ರಾಜಾ ಜಯದ್ರಥಃ ॥ 12 ॥
ನಿಮ್ಮ ದುರ್ಧರ್ಷನಾದ ಇನ್ನೊಬ್ಬ ಶಿಷ್ಯನಾದ ಜಯದ್ರಥನೂ ಸಹ ಏಳು ಅಕ್ಷೋಹಿಣಿ ಸೈನ್ಯವನ್ನು ಕೊಂದು ಅರ್ಜುನನಿಂದ ಹತನಾಗಿದ್ದಾನೆ.
ಅಸ್ಮದ್ವಿಜಯಕಾಮಾನಾಂ ಸುಹೃದಾಮುಪಕಾರಿಣಾಮ್ |
ಗಂತಾಸ್ಮಿ ಕಥಮಾನೃಣ್ಯಂ ಗತಾನಾಂ ಯಮಸಾದನಮ್ ॥ 13 ॥
ನಮ್ಮ ವಿಜಯವನ್ನು ಬಯಸಿ ಉಪಕಾರವನ್ನು ಮಾಡಿ ಯಮಲೋಕಕ್ಕೆ ಹೋದ ಯೋಧರಿಗೆ ನಾನು ಯಾವ ರೀತಿಯಲ್ಲಿ ಋಣವನ್ನು ತೀರಿಸಲಿ?
ಯೇ ಮದರ್ಥಂ ಪರೀಪ್ಸಂತಿ ವಸುಧಾಂ ವಸುಧಾಧಿಪಾಃ |
ತೇ ಹಿತ್ವಾ ವಸುಧೈಶ್ವರ್ಯಂ ವಸುಧಾಮಧಿಶೇರತೇ ॥ 14 ॥
ಯಾವ ರಾಜರು ನನ್ನ ಸಲುವಾಗಿ ಭೂಮಿಯನ್ನು ರಕ್ಷಿಸಿದರೋ ಅವರು ಭೂಮಿಯ ಐಶ್ವರ್ಯವನ್ನು ತ್ಯಜಿಸಿ ಭೂಮಿಯ ಮೇಲೆ

ಮೃತರಾಗಿ ಮಲಗಿದ್ದಾರೆ.
ಸೋಽಹಂ ಕಾಪುರುಷಃ ಕೃತ್ವಾ ಮಿತ್ರಾಣಾಂ ಕ್ಷಯಮೀದೃಶಮ್ |
ನಾಶ್ವಮೇಧಸಹಸ್ರೇಣ ಪಾತುಮಾತ್ಮಾನಮುತ್ಸಹೇ ॥ 15 ॥
ಮಿತ್ರರಿಗೆ ಇಂತಹ ಕ್ಷಯವನ್ನು ಉಂಟುಮಾಡಿದ ಕೆಟ್ಟ ಪುರುಷನಾದ ನಾನು ಸಹಸ್ರ ಅಶ್ವಮೇಧಗಳಿಂದಲೂ ನನ್ನನ್ನು ರಕ್ಷಿಸಿಕೊಳ್ಳಲಾರೆ.
ಮಮ ಲುಬ್ಧಸ್ಯ ಪಾಪಸ್ಯ ತಥಾ ಧರ್ಮಾಪಚಾಯಿನಃ |
ವ್ಯಾಯಚ್ಛಂತೋ ಜಿಗೀಷಂತಃ ಪ್ರಾಪ್ತಾ ವೈವಸ್ವತಕ್ಷಯಮ್ ॥ 16 ॥
ಆಸೆಬುರುಕನೂ, ಪಾಪಿಯೂ, ಧರ್ಮಭ್ರಷ್ಟನೂ ಆದ ನನ್ನ ಸಲುವಾಗಿ ಶತ್ರುಗಳನ್ನು ಗೆಲ್ಲಲು ಬಯಸಿ ಶಸ್ತ್ರೋದ್ಯೋಗವನ್ನು ಮಾಡಿದ ಅವರು ಯಮಪಟ್ಟಣವನ್ನು ತಲುಪಿದ್ದಾರೆ.
ಕಥಂ ಪತಿತವೃತ್ತಸ್ಯ ಪೃಥಿವೀ ಸುಹೃದಾಂ ದ್ರುಹಃ |
ವಿವರಂ ನಾಶಕದ್ ದಾತುಂ ಮಮ ಪಾರ್ಥಿವಸಂಸದಿ ॥ 17 ॥
ಭೂಮಿಯು ದುರ್ನಡತೆಯುಳ್ಳ ಮಿತ್ರದ್ರೋಹಿಯಾದ, ರಾಜರ ಸಭೆಯಲ್ಲಿ ಸಿಂಹಾಸನದ ಮೇಲೆ ಕುಳಿತ ನನ್ನನ್ನು ಏಕೆ ನುಂಗಲಿಲ್ಲ?
ಸೋಽಹಂ ರುಧಿರಸಿಕ್ತಾಂಗಂ ರಾಜ್ಞಾಂ ಮಧ್ಯೇ ಪಿತಾಮಹಮ್ |
ಶಯಾನಂ ನಾಶಕಂ ತ್ರಾತುಂ ಭೀಷ್ಮಮಾಯೋಧನೇ ಹತಮ್ ॥ 18 ॥
ಅಂತಹ ನಾನು ರಣರಂಗದಲ್ಲಿ ತಾಡಿತರಾಗಿ, ದೇಹವೆಲ್ಲ ರಕ್ತದಿಂದ ಒದ್ದೆಯಾಗಿ ರಣಭೂಮಿಯಲ್ಲಿ ಮಲಗಿದ ಪಿತಾಮಹರಾದ ಭೀಷ್ಮರನ್ನು ರಾಜರ ಮಧ್ಯದಲ್ಲಿ ರಕ್ಷಿಸಲು ಸಮರ್ಥನಾಗಲಿಲ್ಲ.
ತಂ ಮಾಮನಾರ್ಯಪುರುಷಂ ಮಿತ್ರದ್ರುಹಮಧಾರ್ಮಿಕಮ್ |
ಕಿಂ ಸ ವಕ್ಷ್ಯತಿ ದುರ್ಧರ್ಷಃ ಸಮೇತ್ಯ ಪರಲೋಕಜಿತ್ ॥ 19 ॥
ಪರಲೋಕವನ್ನು ಗೆದ್ದಿರುವ ದುರ್ಧರ್ಷರಾದ ಭೀಷ್ಮರು ಅನಾರ್ಯನೂ, ಮಿತ್ರದ್ರೋಹಿಯೂ, ಅಧಾರ್ಮಿಕನೂ ಆದ ನನ್ನನ್ನು ನೋಡಿ ಏನು ಹೇಳುವರು?
ಜಲಸಂಧಂ ಮಹೇಷ್ವಾಸಂ ಪಶ್ಯ ಸಾತ್ಯಕಿನಾ ಹತಮ್ |
ಮದರ್ಥಮುದ್ಯತಂ ಶೂರಂ ಪ್ರಾಣಾಂಸ್ತ್ಯಕ್ತ್ವಾ ಮಹಾರಥಮ್ ॥ 20 ॥
ನನ್ನ ಸಲುವಾಗಿ ಪ್ರಾಣವನ್ನು ಲೆಕ್ಕಿಸದೆ ಯುದ್ಧವನ್ನು ಮಾಡಿದ ಮಹಾಧನುರ್ಧಾರಿಯೂ, ಮಹಾರಥನೂ ಆದ ಜಲಸಂಧನು ಸಾತ್ಯಕಿಯಿಂದ ಹತನಾದುದನ್ನು ನೋಡಿ.
ಕಾಂಬೋಜಂ ನಿಹತಂ ದೃಷ್ಟ್ವಾ ತಥಾಲಂಬುಸಮೇವ ಚ |
ಅನ್ಯಾನ್ ಬಹೂಂಶ್ಚ ಸುಹೃದೋ ಜೀವಿತಾರ್ಥೋಽದ್ಯ ಕೋ ಮಮ ॥
ಕಾಂಬೋಜನು ಹತನಾದುದನ್ನು ನೋಡಿ ಹಾಗೆಯೇ ಅಲಂಬುಸನೂ ಬೇರೆ ಬಹಳ ಸಹೃದರೂ ಹತರಾದುದನ್ನು ನೋಡಿ ಈ ದಿನ ನಾನು ಬದುಕಿ ಏನು ಪ್ರಯೋಜನ?
ವ್ಯಾಯಚ್ಛಂತೋ ಹತಾಃ ಶೂರಾ ಮದರ್ಥೇ ಯೇಽಪರಾಙ್ಮುಖಾಃ |
ಯತಮಾನಾಃ ಪರಂ ಶಕ್ತ್ಯಾ ವಿಜೇತುಮಹಿತಾನ್ ಮಮ ॥ 22 ॥
ನನ್ನ ಶತ್ರುಗಳನ್ನು ಜಯಿಸಲು ಯುದ್ಧದಲ್ಲಿ ಹಿಮ್ಮೆಟ್ಟದ ಶೂರರು ನನ್ನ ಸಲುವಾಗಿ ಶಕ್ತಿ ಮೀರಿ ಪ್ರಯತ್ನಪಟ್ಟು ಶಸ್ತ್ರಗಳನ್ನು ಪ್ರಯೋಗಿಸಿದರು.
ತೇಷಾಂ ಗತ್ವಾಹಮಾನೃಣ್ಯಮದ್ಯ ಶಕ್ತ್ಯಾ ಪರಂತಪ |
ತರ್ಪಯಿಷ್ಯಾಮಿ ತಾನೇವ ಜಲೇನ ಯಮುನಾಮನು ॥ 23 ॥
ಎಲೈ ಪರಂತಪರೇ, ಈ ದಿನ ನಾನು ನನ್ನ ಶಕ್ತಿಯಿಂದ ಯುದ್ಧ ಮಾಡಿ ಅವರ ಋಣದಿಂದ ಮುಕ್ತನಾಗಿ ಅವರಿಗೆ ಯಮುನಾ ಜಲದಿಂದ ತರ್ಪಣವನ್ನು ಕೊಡುವೆನು.
ಸತ್ಯಂ ತೇ ಪ್ರತಿಜಾನಾಮಿ ಸರ್ವಶಸ್ತ್ರಭೃತಾಂ ವರ |
ಇಷ್ಟಾಪೂರ್ತೇನ ಚ ಶಪೇ ವೀರ್ಯೇಣ ಚ ಸುತೈರಪಿ ॥ 24 ॥
ಎಲ್ಲ ಧನುರ್ಧಾರಿಗಳಲ್ಲಿ ಶ್ರೇಷ್ಠರೇ, ಇದನ್ನು ನಾನು ಮಾಡಿದ ಇಷ್ಟಾಪೂರ್ತಗಳ ಮೇಲೆ ಆಣೆಯನ್ನು ಮಾಡಿ, ನನ್ನ ಪರಾಕ್ರಮದ ಮೇಲೆ ಮತ್ತು ನನ್ನ ಮಕ್ಕಳ ಮೇಲೆ ಆಣೆಯನ್ನು ಮಾಡಿ ನಿಮಗೆ ಸತ್ಯವಾಗಿ ಹೇಳುತ್ತಿದ್ದೇನೆ.
ನಿಹತ್ಯ ತಾನ್ ರಣೇ ಸರ್ವಾನ್ ಪಾಂಚಾಲಾನ್ ಪಾಂಡವೈಃ ಸಹ |
ಶಾಂತಿಂ ಲಬ್ಧಾಸ್ಮಿ ತೇಷಾಂ ವಾ ರಣೇ ಗಂತಾ ಸಲೋಕತಾಮ್ ॥25॥
ಯುದ್ಧದಲ್ಲಿ ಪಾಂಡವರಿಂದ ಸಹಿತರಾದ ಎಲ್ಲ ಪಾಂಚಾಲರನ್ನೂ ಕೊಂದು ನಾನು ಶಾಂತಿಯನ್ನು ಪಡೆಯುವೆನು. ಅಥವಾ ಅವರು (ನನ್ನ ವೀರರು) ಹೋದ ಲೋಕಕ್ಕೇ ನಾನೂ ಹೋಗುವೆನು.
ನ ಹೀದಾನೀಂ ಸಹಾಯಾ ಮೇ ಪರೀಪ್ಸಂ ತ್ಯನುಕುಕೃತಾಃ |
ಶ್ರೇಯೋ ಹಿ ಪಾಂಡೂನ್ ಮನ್ಯಂತೇ ನ ತಥಾಽಸ್ಮಾನ್ ಮಹಾಭುಜ ॥
ನನ್ನಿಂದ ಗೌರವಿಸಲ್ಪಡದ ನನ್ನ ಅನುಚರರು ಈಗ ನನ್ನ ಕಡೆ ನೋಡುವುದಿಲ್ಲ. ಎಲೈ ಮಹಾಭುಜರೇ, ಅವರು ಪಾಂಡವರನ್ನೇ ತಮ್ಮ ಶ್ರೇಯಸ್ಸಿಗೆ ಕಾರಣರೆಂದು ತಿಳಿಯುತ್ತಾರೆ. ನನ್ನನ್ನು ಹಾಗೆ ತಿಳಿಯುವುದಿಲ್ಲ.
ಸ್ವಯಂ ಹಿ ಮೃತ್ಯುರ್ವಿಹಿತಃ ಸತ್ಯಸಂಧೇನ ಸಂಯುಗೇ |
ಭವಾನುಪೇಕ್ಷಾಂ ಕುರುತೇ ಸುಶಿಷ್ಯತ್ವಾದ್ ಧನಂಜಯೇ ॥ 27 ॥

ಸತ್ಯಸಂಧರಾದ ಭೀಷ್ಮರು ರಣರಂಗದಲ್ಲಿ ತಮ್ಮ ಮೃತ್ಯುವನ್ನು ತಾವೇ ತಂದುಕೊಂಡರು. ನೀವೂ ಸಹ ಒಳ್ಳೆಯ ಶಿಷ್ಯನಾದುದರಿಂದ ಅರ್ಜುನನನ್ನು ಉಪೇಕ್ಷೆ ಮಾಡುತ್ತಿದ್ದೀರಿ.
ಅತೋ ವಿನಿಹತಾಃ ಸರ್ವೇ ಯೇऽಸ್ಮಜ್ಜಯಚಿಕೀರ್ಷವಃ |
ಕರ್ಣಮೇವ ತು ಪಶ್ಯಾಮಿ ಸಂಪ್ರತ್ಯಸ್ಮಜ್ಜಯೈಷಿಣಮ್ ॥ 28 ॥
ಆದ್ದರಿಂದ ನಮ್ಮ ಜಯವನ್ನು ಆಶಿಸಿ ಯುದ್ಧ ಮಾಡುವವರೆಲ್ಲರೂ ಮೃತರಾಗಿದ್ದಾರೆ. ಈಗ ಕಣರ್ನೊಬ್ಬನು ಮಾತ್ರ ನಮ್ಮ ಜಯವನ್ನು ಬಯಸುತ್ತಿರುವುದನ್ನು ನೋಡುತ್ತಿದ್ದೇನೆ.
ಯೋ ಹಿ ಮಿತ್ರಮವಿಜ್ಞಾಯ ಯಾಥಾತಥ್ಯೇನ ಮಂದಧೀಃ |
ಮಿತ್ರಾರ್ಥೇ ಯೋಜಯತ್ಯೇನಂ ತಸ್ಯ ಸೋऽರ್ಥೋऽವಸೀದತಿ ॥29॥
ಯಾವ ಮೂಢನು ತನ್ನ ಮಿತ್ರನನ್ನು ಸರಿಯಾಗಿ ತಿಳಿಯದೆ ಅವನನ್ನು ಮಿತ್ರಕಾರ್ಯದಲ್ಲಿ ನಿಯೋಗಿಸುತ್ತಾನೆಯೋ ಅವನ ಸಂಪತ್ತು ಶೀಘ್ರದಲ್ಲಿ ನಾಶವನ್ನು ಹೊಂದುತ್ತದೆ.
ತಾದೃಗ್ರೂಪಮಿದಂ ಕಾರ್ಯಂ ಕೃತಂ ಮಮ ಸುಹೃದ್ಬ್ರುವೈಃ |
ಮೋಹಾಲ್ಲುಬ್ಧಸ್ಯ ಪಾಪಸ್ಯ ಜಿಹ್ಮಾಚಾರೈಸ್ತತಸ್ತತಃ ॥ 30 ॥
ನನ್ನ ಮಿತ್ರರೆಂದು ಕರೆದುಕೊಳ್ಳುವವರು ಮೋಹದಿಂದ ಲೋಭಿಯಾದ, ಪಾಪಿಯಾದ, ಕಪಟಾಚಾರಿಯಾದ ನನ್ನ ಸಲುವಾಗಿ ಅಂತಹ ಕಾರ್ಯವನ್ನು ಮಾಡಿದನು.
ಹತೋ ಜಯದ್ರಥಶ್ಚೈವ ಸೌಮದತ್ತಿಶ್ಚ ವೀರ್ಯವಾನ್ |
ಅಭೀಷಾಹಾಃ ಶೂರಸೇನಾಃ ಶಿಬಯೋऽಥ ವಸಾತಯಃ ॥ 31 ॥
ನನ್ನ ಸಲುವಾಗಿ ಜಯದ್ರಥನೂ, ಪರಾಕ್ರಮಿಯಾದ ಭೂರಿಶ್ರವನೂ, ಅಭೀಷಾಹರೂ, ಶೂರಸೇನರೂ, ಶಿಬಿಗಳೂ, ವಸಾತಿಗಳೂ ಮೃತರಾದರು.
ಸೋऽಹಮದ್ಯ ಗಮಿಷ್ಯಾಮಿ ಯತ್ರ ತೇ ಪುರುಷರ್ಷಭಾಃ |
ಹತಾ ಮದರ್ಥಂ ಸಂಗ್ರಾಮೇ ಯುಧ್ಯಮಾನಾಃ ಕಿರೀಟಿನಾ ॥ 32 ॥
ಅಂತಹ ನಾನು ಈ ದಿನ ನನ್ನ ಸಲುವಾಗಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಹತರಾದ ಆ ಪುರುಷಶ್ರೇಷ್ಠರು ಹೋದ ಸ್ಥಳಕ್ಕೇ ಹೋಗುವೆನು.
ನ ಹಿ ಮೇ ಜೀವಿತೇನಾರ್ಥಸ್ತಾನೃತೇ ಪುರುಷರ್ಷಭಾನ್ |
ಆಚಾರ್ಯಃ ಪಾಂಡುಪುತ್ರಾಣಾಮನುಜಾನಾತು ನೋ ಭವಾನ್ ॥33॥
ಆ ಪುರುಷಶ್ರೇಷ್ಠರನ್ನು ಬಿಟ್ಟು ನಾನು ಬದುಕುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಪಾಂಡುಪುತ್ರರ ಆಚಾರ್ಯರೇ, ನನಗೆ ಅನುಮತಿಯನ್ನು ಕೊಡಿ.
ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್‌ತ್ರಿಂಶದಧಿಕಶತತಮೋऽಧ್ಯಾಯಃ ॥
ಘಟೋತ್ಕಚವಧಪರ್ವಣಿ ಚತುರ್ಥೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೇಳನೆಯ ಅಧ್ಯಾಯ
ದುರ್ಯೋಧನನನ್ನು ನಿಂದಿಸಿ ರಾತ್ರಿ ಯುದ್ಧಕ್ಕಾಗಿ ದ್ರೋಣರ ಪ್ರಸ್ಥಾನ
ಧೃತರಾಷ್ಟ್ರಃ
ಸಿಂಧುರಾಜೇ ಹತೇ ತಾತ ಸಮರೇ ಸವ್ಯಸಾಚಿನಾ |
ತಥೈವ ಭೂರಿಶ್ರವಸಿ ಕಿಮಾಸೀದ್ ವೋ ಮನಸ್ತದಾ ॥ 1 ॥
ದುರ್ಯೋಧನೇನ ಚ ದ್ರೋಣಸ್ತಥೋಕ್ತಃ ಕುರುಸಂಸದಿ |
ಕಿಮುಕ್ತವಾನ್ ಪರಂ ತಸ್ಮಾತ್ ತನ್ಮಮಾಚಕ್ಷ್ವ ಸಂಜಯ ॥ 2 ॥
ಧೃತರಾಷ್ಟ್ರ ಎಲೈ ಪ್ರೀತಿಪಾತ್ರನೇ, ಅರ್ಜುನನಿಂದ ರಣರಂಗದಲ್ಲಿ ಸೈಂಧವನೂ ಹಾಗೆಯೇ ಭೂರಿಶ್ರವನೂ ಹತನಾಗುತ್ತಿರಲು ನಿಮ್ಮ ಮನಸ್ಸು ಹೇಗಿದ್ದಿತು? ಸಂಜಯನೇ, ದುರ್ಯೋಧನನಿಂದ ಕೌರವರ ಸಭೆಯಲ್ಲಿ ಹಾಗೆ ಹೇಳಲ್ಪಟ್ಟ ದ್ರೋಣರು ಅನಂತರ ಏನು ಹೇಳಿದರು ಎಂದು ನನಗೆ ಹೇಳು.
ಸಂಜಯಃ
ನಿಷ್ಟಾನಕೋ ಮಹಾನಾಸೀತ್ ಸೈನ್ಯಾನಾಂ ತವ ಭಾರತ |
ಸೈಂಧವಂ ನಿಹತಂ ದೃಷ್ಟ್ವಾ ಭೂರಿಶ್ರವಸಮೇವ ಚ ॥ 3 ॥
ಮಂತ್ರಿತಂ ತವ ಪುತ್ರಸ್ಯ ತೇ ಸರ್ವಮವಮೇನಿರೇ |
ಯೇನ ಮಂತ್ರೇಣ ನಿಹತಾಃ ಶತಶಃ ಕ್ಷತ್ರಿಯರ್ಷಭಾಃ ॥ 4 ॥
ಸಂಜಯ ಎಲೈ ಭಾರತನೇ, ಸೈಂಧವ ಮತ್ತು ಭೂರಿಶ್ರವರು ಹತರಾದುದನ್ನು ನೋಡಿ ನಿನ್ನ ಸೈನ್ಯದಲ್ಲಿ ಘೋರವಾದ ಶಬ್ದವುಂಟಾಯಿತು. ಯಾವ ನಿನ್ನ ಪುತ್ರನ ಮಂತ್ರಾಲೋಚನೆಯಿಂದ ನೂರಾರು ಕ್ಷತ್ರಿಯ ಶ್ರೇಷ್ಠರು ಹತರಾದರೋ ಅಂತಹ ಮಂತ್ರಾಲೋಚನೆಯನ್ನು ಸೈನ್ಯಗಳು ತಿರಸ್ಕರಿಸಿದವು.

ದ್ರೋಣಸ್ತು ತದ್ವಚಃ ಶ್ರುತ್ವಾ ಪುತ್ರಸ್ಯ ತವ ದುರ್ಮನಾಃ |
ಮುಹೂರ್ತಮಿವ ತು ಧ್ಯಾತ್ವಾ ಭೃಶಮಾರ್ತೋಽಭ್ಯಭಾಷತ ॥ 5 ॥
ದ್ರೋಣರು ನಿನ್ನ ಪುತ್ರನ ಮಾತುಗಳನ್ನು ಕೇಳಿ ಬಹಳ ಬೇಸರಗೊಂಡು ಒಂದು ಮುಹೂರ್ತದ ಕಾಲ ಚಿಂತಿಸಿ ಬಹಳ ದುಃಖದಿಂದ ಮಾತನಾಡಿದರು.
ದುರ್ಯೋಧನ ಕಿಮೇವಂ ಮಾಂ ವಾಕ್ಶರೈರಭಿಕೃಂತಸಿ |
ಅಜಯ್ಯಂ ಸಮರೇ ನಿತ್ಯಂ ಬ್ರುವಾಣಂ ಸವ್ಯಸಾಚಿನಮ್ ॥ 6 ॥
ಎಲ್ಲೈ ದುರ್ಯೋಧನನೇ, ಅರ್ಜುನನು ಯುದ್ಧದಲ್ಲಿ ಅಜೇಯನಾದವನು ಎಂದು ನಿತ್ಯವೂ ಹೇಳುತ್ತಿರುವ ನನ್ನನ್ನು ಏಕೆ ಹೀಗೆ ವಾಗ್ಬಾಣಗಳಿಂದ ಗಾಯಗೊಳಿಸುತ್ತಿದ್ದೀಯೆ?
ಏತೇನೈವಾರ್ಜುನಂ ಜ್ಞಾತುಮಲಂ ಕೌರವ ಸಂಯುಗೇ |
ಯಚ್ಛಿಖಂಡ್ಯವಧೀದ್ ಭೀಷ್ಮಂ ಪಾಲ್ಯಮಾನಃ ಕಿರೀಟಿನಾ ॥ 7 ॥
ಅರ್ಜುನನಿಂದ ರಕ್ಷಿತನಾಗಿ ಶಿಖಂಡಿಯು ಭೀಷ್ಮರನ್ನು ಬಾಣಗಳಿಂದ ಹೊಡೆದುದರಿಂದಲೇ ಎಲ್ಲೈ ಕೌರವನೇ, ಯುದ್ಧದಲ್ಲಿ ಅರ್ಜುನನ ಸಾಮರ್ಥ್ಯವೆಷ್ಟಿದೆ ಎಂದು ತಿಳಿಯಬಹುದು.
ಅವಧ್ಯಂ ನಿಹತಂ ದೃಷ್ಟ್ವಾ ಸಂಯುಗೇ ದೇವಮಾನುಷೈಃ |
ತದೈವಾಜ್ಞಾಸಿಷಮಹಂ ನೇಯಮಸ್ತೀತಿ ಭಾರತೀ ॥ 8 ॥
ದೇವ-ದಾನವರಿಂದ ಅವಧ್ಯರಾದ ಭೀಷ್ಮರು ರಣರಂಗದಲ್ಲಿ ಹತರಾದುದನ್ನು ನೋಡಿ ನಾನು ಆಗಲೇ ಈ ಕೌರವ ಸೇನೆಯು ಇಲ್ಲವೆಂದು ತಿಳಿದೆ.
ಯಂ ಪುಂಸಾಂ ತ್ರಿಷು ಲೋಕೇಷು ಸರ್ವಶೂರಮಮಂಸ್ಮಹಿ |
ತಸ್ಮಿನ್ ವಿನಿಹತೇ ಶೂರೇ ಕಿಂ ಶೇಷಂ ಪರ್ಯುಪಾಸ್ಮಹೇ ॥ 9 ॥
ಯಾರನ್ನು ಮೂರುಲೋಕದಲ್ಲೂಸರ್ವಶೂರರೆಂದು ನಾವು ತಿಳಿದಿದ್ದೆವೋ ಅಂತಹ ಭೀಷ್ಮರು ಹತರಾದ ಮೇಲೆ ಇನ್ನು ಏನು ಉಳಿಯುವುದು?
ಯಾನ್ ಸ್ಮ ತಾನ್ ಗ್ಲಹತೇ ತಾತಃ ಶಕುನಿಃ ಕುರುಸಂಸದಿ |
ಅಕ್ಷಾನ್ ನ ತೇಽಕ್ಷಾ ನಿಶಿತಾ ಬಾಣಾಸ್ತೇ ಶತ್ರುತಾಪನಾಃ ॥ 10॥
ಮತ್ತು ಎಲ್ಲೈ ಪ್ರೀತಿಪಾತ್ರನೇ, ಶಕುನಿಯು ಕೌರವ ಸಭೆಯಲ್ಲಿ ಯಾವ ದಾಳಗಳನ್ನು ಉರುಳಿಸಿ ದ್ಯೂತವಾಡಿದನೋ ಅವು ದಾಳಗಳಲ್ಲ. ಅವು ಶತ್ರುಭಯಂಕರವಾದ ತೀಕ್ಷ್ಣವಾದ ಬಾಣಗಳು.
ತ ಏತೇ ಘ್ನಂತಿ ನಸ್ತಾತ ವಿಶಿಖಾ ಯಮಚೋದಿತಾಃ |
ಯಾಂಸ್ತದಾ ಖ್ಯಾಪ್ಯಮಾನಾಂಸ್ತ್ವಂ ವಿದುರೇಣ ನ ಬುಧ್ಯಸೇ ॥ 11 ॥
ಎಲ್ಲೈ ಪ್ರೀತಿಪಾತ್ರನೇ, ವಿದುರನು ಆ ಸಮಯದಲ್ಲಿ ಘೋಷಿಸುತ್ತಿದ್ದ ಯಾವ ಮಾತುಗಳನ್ನು ನೀನು ಕೇಳಲಿಲ್ಲವೋ ಆ ಮಾತುಗಳು ಅರ್ಜುನನಿಂದ ಪ್ರೇರಿತವಾದ ಬಾಣಗಳಾಗಿ ನಮ್ಮನ್ನು ಕೊಲ್ಲುತ್ತಿವೆ.
ತಾಸ್ತಾ ವಿಲಪತಶ್ಚಾಪಿ ವಿದುರಸ್ಯ ಮಹಾತ್ಮನಃ |
ಧೀರಸ್ಯ ವಾಚೋ ನಾಶ್ರೌಷೀಃ ಕ್ಷೇಮಾಯ ವದತಃ ಶಿವಾಃ ॥ 12 ॥
ನಮ್ಮ ಕ್ಷೇಮದ ಸಲುವಾಗಿ ಯೋಗ್ಯವಾದ ಶುಭವಾದ ಆಯಾ ಮಾತುಗಳನ್ನು ಆಡುತ್ತಿದ್ದ ಧೀರನೂ, ಮಹಾತ್ಮನೂ ಆದ ವಿದುರನ ವಿಲಾಪಪೂರ್ವಕವಾದ ಮಾತುಗಳನ್ನು ನೀನು ಕೇಳಲಿಲ್ಲ.
ತದಿದಂ ವರ್ತತೇ ಘೋರಮಾಗತಂ ವೈಶಸಂ ಮಹತ್ |
ತಸ್ಯಾವಮಾನಾದ್ ವಾಕ್ಯಸ್ಯ ದುರ್ಯೋಧನ ಕೃತೇ ತವ ॥ 13 ॥
ಎಲ್ಲೈ ದುರ್ಯೋಧನನೇ, ವಿದುರನ ವಾಕ್ಯಗಳನ್ನು ಅವಮಾನ ಮಾಡಿದ ಕಾರಣದಿಂದ, ನಿನ್ನ ನಿಮಿತ್ತದಿಂದಾಗಿ ಈ ಘೋರವೂ, ದೊಡ್ಡದೂ ಆದ ಹಿಂಸೆಯು ಪ್ರಾಪ್ತವಾಗಿದೆ.
ಯಚ್ಚ ನಃ ಪ್ರೇಕ್ಷಮಾಣಾನಾಂ ಕೃಷ್ಣಾಮಾನಾಯಯಃ ಸಭಾಮ್ |
ಅನರ್ಹತೀಂ ಕುಲೇ ಜಾತಾಂ ಸರ್ವಧರ್ಮಾನುಚಾರಿಣೀಮ್ ॥ 14 ॥
ತಸ್ಯಾಧರ್ಮಸ್ಯ ಗಾಂಧಾರೇ ಫಲಂ ಪ್ರಾಪ್ತಮಿದಂ ತ್ವಯಾ |
ನೋ ಚೇತ್ ಪಾಪಂ ಪರೇ ಲೋಕೇ ತ್ವಮರ್ಚ್ಛೇಥಾಸ್ತತೋಽಧಿಕಮ್॥
ನಾವು ನೋಡುತ್ತಿರುವಂತೆಯೇ ಹಾಗೆ ಮಾಡಲು ಯೋಗ್ಯಳಲ್ಲದಂತಹ ಶ್ರೇಷ್ಠಕುಲದಲ್ಲಿ ಜನಿಸಿದಂತಹ, ಸರ್ವಧರ್ಮಾಚಾರಿಣಿಯಾದ ದ್ರೌಪದಿಯನ್ನು ಸಭೆಗೆ ಎಳೆಸಿ ತಂದಿಯಷ್ಟೆ? ಎಲ್ಲೈ ಗಾಂಧಾರಿ ಪುತ್ರನೇ, ಆ ಅಧರ್ಮದ ಈ ಫಲವು ಈಗ ಪ್ರಾಪ್ತವಾಗಿದೆ. ಇಲ್ಲದಿದ್ದರೆ ನೀನು ಪರಲೋಕದಲ್ಲಿ ಇದಕ್ಕಿಂತ ಹೆಚ್ಚಿನ ದುಃಖವನ್ನು ಹೊಂದುತ್ತಿದ್ದೆ.
ಯಚ್ಚ ತಾನ್ ಪಾಂಡವಾನ್ ದ್ಯೂತೇ ವಿಷಮೇಣ ವಿಜಿತ್ಯ ಹ |
ಪ್ರಾವ್ರಾಜಯಸ್ತದಾರಣ್ಯೇ ರೌರವಾಜಿನವಾಸಸಃ ॥ 16 ॥
ಪುತ್ರಾಣಾಮಿವ ಚೈತೇಷಾಂ ಧರ್ಮಮಾಚರತಾಂ ಸದಾ |
ದ್ರುಹ್ಯೇತ್ ಕೋ ನು ನರೋ ಲೋಕೇ ಮದನ್ಯೋ ಬ್ರಾಹ್ಮಣಬ್ರುವಃ ॥
ಆ ಪಾಂಡವರನ್ನು ಕಪಟ ದ್ಯೂತದಲ್ಲಿ ಗೆದ್ದು, ಕೃಷ್ಣಾಜಿನ ವಸ್ತ್ರವನ್ನು ಉಡಿಸಿ ಕಾಡಿಗೆ ಕಳುಹಿಸಿದೆಯಷ್ಟೆ? ಯಾವಾಗಲೂ ಧರ್ಮಾಚರಣೆಯನ್ನು ಮಾಡುತ್ತ ಪುತ್ರರಂತೆ ಇರುವ ಇವರಿಗೆ ನನ್ನನ್ನು ಬಿಟ್ಟು ಬೇರೆ ಯಾವ ಬ್ರಾಹ್ಮಣಾಧಮನು ಲೋಕದಲ್ಲಿ ದ್ರೋಹವನ್ನು ಮಾಡಿಯಾನು?

ಪಾಂಡವಾನಾಮಯಂ ಕೋಪಸ್ತ್ವಯಾ ಶಕುನಿನಾ ಸಹ |
ಆಹೃತೋ ಧೃತರಾಷ್ಟ್ರಸ್ಯ ಸಮ್ಮತೇ ಕುರುಸಂಸದಿ ॥ 18 ॥
ದುಃಶಾಸನೇನ ಸಂಯುಕ್ತಃ ಕರ್ಣೇನ ಪರಿವರ್ಧಿತಃ |
ಕ್ಷತ್ತುರ್ವಾಕ್ಯಮನಾದೃತ್ಯ ತ್ವಯಾಭ್ಯಸ್ತಃ ಪುನಃ ಪುನಃ ॥ 19 ॥
ಕೌರವ ಸಭೆಯಲ್ಲಿ ಧೃತರಾಷ್ಟ್ರನ ಸಮ್ಮತಿಯಲ್ಲಿ ಶಕುನಿಯಿಂದ ಕೂಡಿದ ನಿನ್ನಿಂದ ಪಾಂಡವರಿಗೆ ಕೋಪವುಂಟು ಮಾಡಲ್ಪಟ್ಟಿತು. ದುಶ್ಶಾಸನನಿಂದ ಚೆನ್ನಾಗಿ ಬೆಳೆಸಲ್ಪಟ್ಟ ಆ ಕೋಪವು ಕರ್ಣನಿಂದ ಅಭಿವೃದ್ಧಿ ಹೊಂದಿಸಲ್ಪಟ್ಟಿತು. ವಿದುರನ ಮಾತನ್ನು ಕೇಳದೆ ನೀನು ಅದನ್ನು ಪುನಃ ಪುನಃ ಅಭಿವೃದ್ಧಿಗೊಳಿಸಿದೆ.
ಯತ್ತತ್ ಸರ್ವೇ ಪರಾಭೂಯ ಪರ್ಯವಾರಯತಾರ್ಜುನಿಮ್ |
ಸಿಂಧುರಾಜಾನಮಾಶ್ರಿತ್ಯ ಸ ವೋ ಮಧ್ಯೇ ಕಥಂ ಹತಃ ॥ 20 ॥
ನೀವೆಲ್ಲರೂ ಸೇರಿ ಸೈಂಧವನನ್ನು ಆಶ್ರಯಿಸಿ ಅಭಿಮನ್ಯುವನ್ನು ಸುತ್ತುವರಿದಿರಷ್ಟೆ? ಅವನು ನಿಮ್ಮ ಮಧ್ಯದಲ್ಲಿ ಹೇಗೆ ಹತನಾದನು?
ಕಥಂ ತ್ವಯಿ ಚ ಕರ್ಣೇ ಚ ಕೃಪೇ ಶಲ್ಯೇ ಚ ಜೀವತಿ |
ಅಶ್ವತ್ಥಾಮ್ನಿ ಚ ಕೌರವ್ಯ ನಿಧನಂ ಸೈಂಧವೋಽಗಮತ್ ॥ 21 ॥
ಎಲೈ ಕೌರವ್ಯನೇ, ನೀನೂ, ಕರ್ಣನೂ, ಕೃಪರೂ, ಶಲ್ಯರೂ, ಅಶ್ವತ್ಥಾಮರೂ ಜೀವಿಸಿರುವಾಗ ಸೈಂಧವನು ಹೇಗೆ ನಿಧನವನ್ನು ಹೊಂದಿದನು?
ಯದ್ವಸ್ತತ್ ಸರ್ವರಾಜಾನಸ್ತೇಜಸ್ತಿಗ್ಮಮುಪಾಸತೇ |
ಸಿಂಧುರಾಜಂ ಪರಿತ್ರಾತುಂ ಸ ವೋ ಮಧ್ಯೇ ಕಥಂ ಹತಃ ॥ 22 ॥
ಎಲ್ಲ ರಾಜರೂ ಸೈಂಧವನನ್ನೂ ನಿಮ್ಮ ಸಾಮರ್ಥ್ಯವನ್ನೂ ಉಪಜೀವಿಸಿಕೊಂಡು ಇದ್ದಾರಷ್ಟೆ? ಅಂತಹ ಸೈಂಧವನು ನಿಮ್ಮ ಮಧ್ಯದಲ್ಲಿ ಹೇಗೆ ಹತನಾದನು?
ಮಯ್ಯೇವ ಹಿ ವಿಶೇಷೇಣ ತಥಾ ದುರ್ಯೋಧನ ತ್ವಯಿ |
ಆಶಂಸತ ಪರಿತ್ರಾಣಮರ್ಜುನಾತ್ ಸ ಮಹೀಪತಿಃ ॥ 23 ॥
ಎಲೈ ದುರ್ಯೋಧನನೇ, ರಾಜನಾದ ಸೈಂಧವನು ಅರ್ಜುನನಿಂದ ರಕ್ಷಣೆಗಾಗಿ ವಿಶೇಷವಾಗಿ ನನ್ನಲ್ಲಿ ಮತ್ತು ನಿನ್ನಲ್ಲಿ ಬಹಳ ಆಸೆಯನ್ನು ಹೊಂದಿದ್ದನು.
ತತಸ್ತಸ್ಮಿನ್ ಪರಿತ್ರಾಣಮಲಬ್ಧವತಿ ಫಲ್ಗುನಾತ್ |
ನ ಕಿಂಚದನುಪಶ್ಯಾಮಿ ಜೀವಿತತ್ರಾಣಮಾತ್ಮನಃ ॥ 24 ॥
ಅನಂತರ ಅವನು ಫಲ್ಗುನನ ಎದುರಿನಲ್ಲಿ ರಕ್ಷಣೆಯನ್ನು ಪಡೆಯದಿರಲು ನಮ್ಮ ಜೀವಿತವನ್ನು ರಕ್ಷಿಸುವ ಯಾವುದೂ ಇಲ್ಲ ಎಂದು ತಿಳಿಯುತ್ತೇನೆ.
ಮಜ್ಜಂತಮಿವ ಚಾತ್ಮಾನಂ ಧೃಷ್ಟದ್ಯುಮ್ನಸ್ಯ ಕಿಲ್ಬಿಷೇ |
ಪಶ್ಯಾಮ್ಯಹತ್ವಾ ಪಾಂಚಾಲಾನ್ ಸಹ ತೇನ ಶಿಖಂಡಿನಾ ॥ 25 ॥
ಶಿಖಂಡಿಯ ಜೊತೆಯಲ್ಲಿ ಪಾಂಚಾಲರನ್ನು ಕೊಲ್ಲದೆ ನಾನು ಧೃಷ್ಟದ್ಯುಮ್ನನ ಕೆಟ್ಟ ಪರಾಕ್ರಮದಲ್ಲಿ ಮುಳುಗಿ ಹೋಗುತ್ತಿದ್ದೇನೆಂದು ಭಾವಿಸುತ್ತಿದ್ದೇನೆ.
ತನ್ಮಾ ಕಿಮಭಿತಪ್ಯಂತಂ ವಾಕ್ಶರೈರಭಿಕೃಂತಸಿ |
ಅಶಕ್ತಃ ಸಿಂಧುರಾಜಸ್ಯ ಭೂತ್ವಾ ತ್ರಾಣಾಯ ಭಾರತ ॥ 26 ॥
ಎಲೈ ಭಾರತನೇ, ಸೈಂಧವನನ್ನು ರಕ್ಷಿಸಲು ಅಸಮರ್ಥನಾದ ನೀನು ಹೀಗೆ ದುಃಖಪಡುತ್ತಿರುವ ನನ್ನನ್ನು ವಾಗ್ಬಾಣಗಳಿಂದ ಏಕೆ ಗಾಯಗೊಳಿಸುತ್ತಿದ್ದೀಯೆ?
ಸೌವರ್ಣಂ ಸತ್ಯಸಂಧಸ್ಯ ಧ್ವಜಮಕ್ಲಿಷ್ಟಕರ್ಮಣಃ |
ಅಪಶ್ಯನ್ ಯುಧಿ ಭೀಷ್ಮಸ್ಯ ಕಥಮಾಶಂಸಸೇ ಜಯಮ್ ॥ 27 ॥
ಸತ್ಯಸಂಧರೂ, ಲೀಲಾಜಾಲವಾಗಿ ಯುದ್ಧವನ್ನು ಮಾಡುವವರೂ ಆದ ಭೀಷ್ಮರ ಸುವರ್ಣಮಯವಾದ ಧ್ವಜವನ್ನು ರಣರಂಗದಲ್ಲಿ ನೋಡದೆ ಹೇಗೆ ಜಯವನ್ನು ಆಶಿಸುತ್ತೀಯೆ?
ಮಧ್ಯೇ ಮಹಾರಥಾನಾಂ ಚ ಯತ್ರಾಹನ್ಯತ ಸೈಂಧವಃ |
ಹತೋ ಭೂರಿಶ್ರವಾಶ್ಚೈವ ಕಿಂ ಶೇಷಂ ತತ್ರ ಮನ್ಯಸೇ ॥ 28 ॥
ಮಹಾರಥರ ಮಧ್ಯದಲ್ಲಿ ಸೈಂಧವನೂ ಮತ್ತು ಭೂರಿಶ್ರವನು ಹತನಾದ ಮೇಲೆ ಏನು ಉಳಿಯುವುದೆಂದು ತಿಳಿದಿದ್ದೀಯೆ?
ಕೃಪ ಏವ ಚ ದುರ್ಧರ್ಷೋ ಯದಿ ಜೀವತಿ ಪಾರ್ಥಿವ |
ಯೋ ನಾಗಾತ್ ಸಿಂಧುರಾಜಸ್ಯ ವರ್ತ್ಮ ತಂ ಪೂಜಯಾಮ್ಯಹಮ್ ॥
ಎಲೈ ರಾಜನೇ, ಇನ್ನೂ ಬದುಕಿದ್ದರೆ ಕೃಪರೊಬ್ಬರೇ ದುರ್ಧರ್ಷರಾದವರು. ಅವರು ಸೈಂಧವನ ಮಾರ್ಗವನ್ನು ಹಿಡಿದು ಹೋಗಲಿಲ್ಲ. ಅವರನ್ನು ನಾನು ಗೌರವಿಸುತ್ತೇನೆ.
ಯಚ್ಚಾಪಶ್ಯಂ ಹತಂ ಭೀಷ್ಮಂ ಪಶ್ಯತಸ್ತೇಽನುಜಸ್ಯ ವೈ |
ದುಃಶಾಸನಸ್ಯ ಕೌರವ್ಯ ಕುರ್ವಾಣಂ ಕರ್ಮ ದುಷ್ಕರಮ್ |
ಅವಧ್ಯಕಲ್ಪಂ ಸಂಗ್ರಾಮೇ ದೇವೈರಪಿ ಸವಾಸವೈಃ ॥ 30 ॥
ನ ತೇ ವಸುಂಧರಾಸ್ತೀತಿ ತದಹಂ ಚಿಂತಯಂ ನೃಪ |
ಇಮಾನಿ ಪಾಂಡವಾನಾಂ ಚ ಸೃಂಜಯಾನಾಂ ಚ ಭಾರತ |

ಅನೀಕಾನ್ಯಾದ್ರವಂತೇ ಮಾಂ ಸಹಿತಾನ್ಯದ್ಯ ಮಾರಿಷ ॥ 31 ॥
ದುಷ್ಕರವಾದ ಕರ್ಮವನ್ನು ಮಾಡುತ್ತಿದ್ದಂತಹ, ಯುದ್ಧದಲ್ಲಿ ಇಂದ್ರನಿಂದ ಸಹಿತರಾದ ದೇವತೆಗಳಿಂದಲೂ ಅವಧ್ಯ ಕಲ್ಪರಾಗಿದ್ದಂತಹ ಭೀಷ್ಮರು ನನ್ನ, ನಿನ್ನ ಮತ್ತು ನಿನ್ನ ತಮ್ಮನಾದ ದುಶ್ಶಾಸನನ ಕಣ್ಣೆದುರಿಗೇ ಹತರಾದುದನ್ನು ನೋಡಿ ಎಲೈ ರಾಜನೇ, ನಾನು ಆಗಲೇ ನಿನಗೆ ಭೂಮಿಯ ಒಡೆತನವು ಇಲ್ಲವೆಂದು ಭಾವಿಸಿದೆನು. ಎಲೈ ಭಾರತನೇ, ಶ್ರೇಷ್ಠನೇ, ಪಾಂಡವರ ಮತ್ತು ಸೃಂಜಯರ ಈ ಸೈನ್ಯಗಳು ಒಂದುಗೂಡಿ ನನ್ನ ಮೇಲೆ ಎರಗುತ್ತಿವೆ.
ನಾಹತ್ವಾ ಸರ್ವಪಾಂಚಾಲಾನ್ ಕವಚಸ್ಯ ವಿಮೋಕ್ಷಣಮ್ |
ಕರ್ತಾಸ್ಮಿ ಸಮರೇ ಕರ್ಮ ಧಾರ್ತರಾಷ್ಟ್ರ ಹಿತಂ ತವ ॥ 32 ॥
ಎಲೈ ದುರ್ಯೋಧನನೇ, ಎಲ್ಲ ಪಾಂಚಾಲರನ್ನೂ ಕೊಲ್ಲದೆ ನಾನು ನನ್ನ ಕವಚವನ್ನು ಬಿಚ್ಚುವುದಿಲ್ಲ. ಯುದ್ಧದಲ್ಲಿ ನಿನಗೆ ಹಿತವಾದ ಇಂತಹ ಕರ್ಮವನ್ನು ಮಾಡುವೆನು.
ರಾಜನ್ ಬ್ರೂಯಾಃ ಸುತಂ ಮೇ ತ್ವಮಶ್ವತ್ಥಾಮಾನಮಾಹವೇ |
ನ ಸೋಮಕಾಃ ಪ್ರಮೋಕ್ತವ್ಯಾ ಜೀವಿತಂ ಪರಿರಕ್ಷತಾ ॥ 33 ॥
ಯಚ್ಚ ಪಿತ್ರಾನುಶಿಷ್ಟೋಽಸಿ ತದ್ವಚಃ ಪರಿಪಾಲಯ |
ಆನೃಶಂಸ್ಯೇ ದಮೇ ಸತ್ಯೇ ಆರ್ಜವೇ ಚ ಸ್ಥಿರೋ ಭವ ॥ 34 ॥
ಧರ್ಮಾರ್ಥಕಾಮಕುಶಲೋ ಧರ್ಮಾರ್ಥಾವಪ್ಯಪೀಡಯನ್ |
ಧರ್ಮಪ್ರಧಾನಃ ಕಾರ್ಯಾಣಿ ಕುರ್ಯಾಶ್ಚೇತಿ ಪುನಃ ಪುನಃ ॥ 35 ॥
ಚಕ್ಷುರ್ಮನೋಭ್ಯಾಂ ಸಂತೋಷ್ಯಾ ವಿಪ್ರಾಃ ಸೇವ್ಯಾಶ್ಚ ಶಕ್ತಿತಃ |
ನ ಚೈಷಾಂ ವಿಪ್ರಿಯಂ ಕಾರ್ಯಂ ತೇ ಹಿ ವಹ್ನಿಶಿಖೋಪಮಾಃ ॥ 36 ॥
ರಾಜನೇ, ಯುದ್ಧವನ್ನು ಮಾಡುತ್ತಿರುವ ನನ್ನ ಪುತ್ರನಾದ ಅಶ್ವತ್ಥಾಮರಿಗೆ ನಿನ್ನ ಜೀವನವನ್ನು ರಕ್ಷಿಸಿಕೊಳ್ಳಲು ಸೋಮಕರನ್ನು ಉಳಿಸಬಾರದು. ತಂದೆಯು ಹೇಳಿದ ಆದೇಶದಂತೆ ನಡೆದುಕೊಳ್ಳುವವನಾಗು. ದಯೆ, ಇಂದ್ರಿಯನಿಗ್ರಹ, ಸತ್ಯ ಮತ್ತು ಆರ್ಜವಗಳಲ್ಲಿ ಸ್ಥಿರವಾಗಿ ನಿಲ್ಲು. ಧರ್ಮಾರ್ಥಕಾಮ ಕುಶಲನಾದ ನೀನು ಧರ್ಮಾರ್ಥಗಳನ್ನು ಹಿಂಸಿಸದೆ ಧರ್ಮಪ್ರಧಾನನಾಗಿ ಕಾರ್ಯಗಳನ್ನು ಮಾಡು ಎಂದು ಪುನಃ ಪುನಃ ಹೇಳು. ಬ್ರಾಹ್ಮಣರನ್ನು ಕಣ್ಣುಗಳಿಂದಲೂ, ಮನಸ್ಸಿನಿಂದಲೂ ಸಂತೋಷಪಡಿಸಬೇಕು. ಶಕ್ತಿ ಇದ್ದಷ್ಟು ಅವರ ಸೇವೆಯನ್ನು ಮಾಡಬೇಕು. ಅವರಿಗೆ ಯಾವ ಅಹಿತವನ್ನೂ ಮಾಡಬಾರದು. ಅವರು ಅಗ್ನಿಶಿಖೆಯಿದ್ದಂತೆ ಎಂದೂ ಹೇಳು (ಎಂದು ಹೇಳಿದರು).
ಏಷ ತ್ವಹಮನೀಕಾನಿ ಪ್ರವಿಶಾಮ್ಯರಿಸೂದನ |
ರಣಾಯ ಮಹತೇ ರಾಜಂಸ್ತ್ವಯಾ ವಾಕ್ಶಲ್ಯಪೀಡಿತಃ ॥ 37 ॥
ಎಲೈ ರಾಜನೇ, ಶತ್ರುಸೂದನನೇ, ನಿನ್ನ ವಾಗ್ಬಾಣಗಳಿಂದ ಪೀಡಿತನಾದ ನಾನು ಯುದ್ಧಕ್ಕಾಗಿ ಪಾಂಡವ ಸೈನ್ಯಗಳನ್ನು ಪ್ರವೇಶಿಸುತ್ತಿದ್ದೇನೆ.
ತ್ವಂ ಚ ದುರ್ಯೋಧನ ಬಲಂ ಯದಿ ಶಕ್ನೋಷಿ ಧಾರಯ |
ರಾತ್ರಾವಪಿ ಹಿ ಯೋತ್ಸ್ಯಂತೇ ಸಂರಬ್ಧಾಃ ಕುರುಸೃಂಜಯಾಃ ॥ 38 ॥
ಎಲೈ ದುರ್ಯೋಧನನೇ, ನಿನಗೆ ಸಾಮರ್ಥ್ಯವಿದ್ದರೆ ನಿನ್ನ ಸೈನ್ಯವನ್ನು ಹಿಡಿದು ನಿಲ್ಲು. ಕೋಪಗೊಂಡ ಕುರು-ಸೃಂಜಯರು ರಾತ್ರಿಯಲ್ಲಿಯೂ ಯುದ್ಧವನ್ನು ಮಾಡುವರು.
ಏವಮುಕತ್ವ ತತಃ ಪ್ರಾಯಾದ್ ದ್ರೋಣಃ ಪಾಂಡವಸೃಂಜಯಾನ್ |
ಮುಷ್ಣನ್ ಕ್ಷತ್ರಿಯತೇಜಾಂಸಿ ನಕ್ಷತ್ರಾಣಾಮಿವಾಂಶುಮಾನ್ ॥ 39 ॥
ಹೀಗೆ ಹೇಳಿ ದ್ರೋಣರು ನಕ್ಷತ್ರಗಳ ತೇಜಸ್ಸನ್ನು ಸೂರ್ಯನು ಸೆಳೆಯುವಂತೆ ಕ್ಷತ್ರಿಯರ ತೇಜಸ್ಸನ್ನು ಅಪಹರಿಸುತ್ತಾ ಪಾಂಡವ-ಸೃಂಜಯರ ಕಡೆಗೆ ಧಾವಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ಸಪ್ತತ್ರಿಂಶದಧಿಕಶತತಮೋಧ್ಯಾಯಃ ॥
॥ ಜಯದ್ರಥವಧಪರ್ವಣಿ ಪಂಚಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಮೂವತ್ತೆಂಟನೆಯ ಅಧ್ಯಾಯ

ಜಯದ್ರಥನ ವಧೆಗಾಗಿ ದ್ರೋಣರನ್ನು ನಿಂದಿಸುವ ದುರ್ಯೋಧನನನ್ನು ನಿರಾಕರಿಸಿ ಕರ್ಣನಿಂದ ದೈವಹೇತುತ್ವ ಸಮರ್ಥನೆ.
ಸಂಜಯಃ
ತತೋ ದುರ್ಯೋಧನೋ ರಾಜಾ ದ್ರೋಣೇನೈವಂ ಪ್ರಚೋದಿತಃ |
ಅಮರ್ಷವಶಮಾಪನ್ನೋ ಯುದ್ಧಾಯೈವ ಮನೋ ದಧೇ ॥ 1 ॥
ದ್ರೋಣರಿಂದ ಹೀಗೆ ಪ್ರೇರಿಸಲ್ಪಟ್ಟ ರಾಜನಾದ ದುರ್ಯೋಧನನು ಆಗ ರೋಷವಶನಾಗಿ ಯುದ್ಧವನ್ನು ಮಾಡಲು ನಿರ್ಧರಿಸಿದನು.
ಅಬ್ರವೀಚ್ಚ ತದಾ ಕರ್ಣಂ ಪುತ್ರೋ ದುರ್ಯೋಧನಸ್ತವ |
ಪಶ್ಯ ಕೃಷ್ಣಸಹಾಯೇನ ಪಾಂಡವೇನ ಕಿರೀಟಿನಾ |
ಆಚಾರ್ಯವಿಹಿತಂ ವ್ಯೂಹಂ ಭಿನ್ನಂ ದೇವೈಃ ಸುದುರ್ಭಿದಮ್ ॥ 2 ॥

ತವ ವ್ಯಾಯಚ್ಛಮಾನಸ್ಯ ದ್ರೋಣಸ್ಯ ಚ ಮಹಾತ್ಮನಃ |
ಮಿಷತಾಂ ಯೋಧಮುಖ್ಯಾನಾಂ ಸೈಂಧವೋ ವಿನಿಪಾತಿತಃ ॥ 3 ॥
ನಿನ್ನ ಪುತ್ರನಾದ ದುರ್ಯೋಧನನು ಆಗ ಕರ್ಣನನ್ನು ಕುರಿತು- ನೋಡು, ಕೃಷ್ಣನ ಸಹಾಯವುಳ್ಳ ಅರ್ಜುನನು ದೇವತೆಗಳೂ ಭೇದಿಸಲು ಸಾಧ್ಯವಿಲ್ಲದ ದ್ರೋಣರು ರಚಿಸಿದ ವ್ಯೂಹವನ್ನು ಭೇದಿಸಿದನು. ನೀನೂ ಮತ್ತು ಮಹಾತ್ಮರಾದ ದ್ರೋಣರೂ ಯುದ್ಧದಲ್ಲಿ ಉದ್ಯುಕ್ತರಾಗಿದ್ದರೂ ನಿಮ್ಮ ಮತ್ತು ಶ್ರೇಷ್ಠ ಯೋಧರ ಕಣ್ಣೆದುರಿಗೇ ಸೈಂಧವನು ಹತನಾದನು.
ಪಶ್ಯ ರಾಧೇಯ ರಾಜಾನಃ ಪೃಥಿವ್ಯಾಂ ಪ್ರವರಾ ಯುಧಿ |
ಪಾರ್ಥೇನೈಕೇನ ನಿಹತಾಃ ಸಿಂಹೇನೇವೇತರಾ ಮೃಗಾಃ ॥ 4 ॥
ಎಲೈ ಕರ್ಣನೇ, ಪೃಥ್ವಿಯಲ್ಲಿ ಶ್ರೇಷ್ಠರಾದ ರಾಜರು ಸಿಂಹದಿಂದ ಜಿಂಕೆಗಳು ಹತವಾದಂತೆ ಒಬ್ಬ ಅರ್ಜುನನಿಂದ ಹತರಾಗುತ್ತಿರುವುದನ್ನು ನೋಡು.
ಮಮ ವ್ಯಾಯಚ್ಛಮಾನಸ್ಯ ಸಮರೇ ಶತ್ರುಸೂದನ |
ಅಲ್ಪಾವಶೇಷಂ ಸೈನ್ಯಂ ಮೇ ಕೃತಂ ಶಕ್ರಾತ್ಮಜೇನ ಹ ॥ 5 ॥
ಎಲೈ ಶತ್ರುಸೂದನನೇ, ಯುದ್ಧದಲ್ಲಿ ನಾನು ಪೂರ್ಣವಾಗಿ ತೊಡಗಿದ್ದರೂ ಇಂದ್ರಪುತ್ರನಾದ ಅರ್ಜುನನು ನನ್ನ ಸೈನ್ಯದಲ್ಲಿ ಸ್ವಲ್ಪವೇ ಶೇಷವು ಉಳಿಯುವಂತೆ ಮಾಡಿದ್ದಾನೆ.
ಕಥಂ ಹ್ಯನಿಚ್ಛಮಾನಸ್ಯ ದ್ರೋಣಸ್ಯ ಯುಧಿ ಫಲ್ಗುನಃ |
ಭಿಂದ್ಯಾತ್ ಸುದುರ್ಭಿದಂ ವ್ಯೂಹಂ ಯತಮಾನೋಽಪಿ ಸಂಯುಗೇ ॥
ದ್ರೋಣರ ಸಮ್ಮತಿ ಇಲ್ಲದಿದ್ದರೆ ಅರ್ಜುನನು ರಣರಂಗದಲ್ಲಿ ಪ್ರಯತ್ನಪಟ್ಟರೂ ಅತ್ಯಂತ ದುರ್ಭೇದ್ಯವಾದ ವ್ಯೂಹವನ್ನು ಹೇಗೆ ಭೇದಿಸಿಯಾನು?
ಪ್ರಿಯೋ ಹಿ ಫಲ್ಗುನೋ ನಿತ್ಯಮಾಚಾರ್ಯಸ್ಯ ಮಹಾತ್ಮನಃ |
ತತೋಽಸ್ಯ ದತ್ತವಾನ್ ದ್ವಾರಂ ನಯುದ್ಧೇನಾರಿಮರ್ದನ ॥ 7 ॥
ಎಲೈ ಅರಿಮರ್ದನನೇ, ಮಹಾತ್ಮರಾದ ಆಚಾರ್ಯರಿಗೆ ಅರ್ಜುನನು ಯಾವಾಗಲೂ ಪ್ರಿಯನಾದವನು. ಆ ಕಾರಣದಿಂದ ಅವನಿಗೆ ಯುದ್ಧವಿಲ್ಲದೆಯೇ ಅವರೊಂದು ಪ್ರವೇಶ ದ್ವಾರವನ್ನು ಕಲ್ಪಿಸಿಕೊಟ್ಟರು.
ಅಭಯಂ ಸೈಂಧವಸ್ಯಾಜೌ ದತ್ತ್ವಾ ದ್ರೋಣಃ ಪರಂತಪಃ |
ಪ್ರಾದಾತ್ ಕಿರೀಟಿನೇ ದ್ವಾರಂ ಪಶ್ಯನ್ ನಿರ್ಗುಣತಾಂ ಮಮ ॥ 8 ॥
ಪರಂತಪರಾದ ದ್ರೋಣರು ಯುದ್ಧದಲ್ಲಿ ಸೈಂಧವನಿಗೆ ಅಭಯವನ್ನು ಕೊಟ್ಟು ನನ್ನ ನಿರ್ಗುಣತ್ವವನ್ನು ನೋಡಿ ಅರ್ಜುನನಿಗೆ ದಾರಿಯನ್ನು ಮಾಡಿಕೊಟ್ಟರು.
ಯದ್ಯದಾಸ್ಯಮನುಜ್ಞಾಂ ವೈ ಪೂರ್ವಮೇವ ಗೃಹಾನ್ ಪ್ರತಿ |
ಸಿಂಧುರಾಜಸ್ಯ ಸಮರೇ ನಾಭವಿಷ್ಯಜ್ಜನಕ್ಷಯಃ ॥ 9 ॥
ನಾನು ಸೈಂಧವನಿಗೆ ಮೊದಲೇ ಮನೆಗೆ ಹೋಗಲು ಅನುಮತಿಯನ್ನು ನೀಡಿದ್ದರೆ ಯುದ್ಧದಲ್ಲಿ ಇಂತಹ ಜನಕ್ಷಯವು ಆಗುತ್ತಿರಲಿಲ್ಲ.
ಜಯದ್ರಥೋ ಜೀವಿತಾರ್ಥೀ ಗಚ್ಛಮಾನೋ ಗೃಹಾನ್ ಪ್ರತಿ |
ಮಯಾನಾರ್ಯೇಣ ಸಂರುದ್ಧೋ ದ್ರೋಣಾತ್ ಪ್ರಾಪ್ಯಾಭಯಂ ರಣೇ ॥
ಅದ್ಯ ಮೇ ಭ್ರಾತರಃ ಕ್ಷೀಣಾಶ್ಚಿತ್ರಸೇನಾದಯೋ ಯುಧಿ |
ಭೀಮಸೇನಂ ಸಮಾಸಾದ್ಯ ಪಶ್ಯತಾಂ ನೋ ದುರಾತ್ಮನಾಮ್ ॥ 11 ॥
ಬದುಕಲು ಬಯಸಿ ಮನೆಗೆ ಹೊರಟಿದ್ದ ಜಯದ್ರಥನನ್ನು ದ್ರೋಣರಿಂದ ಅಭಯವನ್ನು ಪಡೆದು ಅನಾರ್ಯನಾದ ನಾನು ತಡೆದೆನು. ಈ ದಿನ ದುರಾತ್ಮರಾದ ನಾವು ನೋಡುತ್ತಿರುವಂತೆಯೇ ನಮ್ಮ ತಮ್ಮಂದಿರಾದ ಚಿತ್ರಸೇನ ಮೊದಲಾದವರು ಯುದ್ಧದಲ್ಲಿ ಭೀಮಸೇನನನ್ನು ಸಮೀಪಿಸಿ ನಾಶವನ್ನು ಹೊಂದಿದ್ದಾರೆ.
ಕರ್ಣಃ
ಆಚಾರ್ಯಂ ಮಾ ವಿಗರ್ಹಸ್ವ ಶಕ್ತ್ಯಾ ಯುಧ್ಯತ್ಯಸೌ ದ್ವಿಜಃ |
ಅಜಯ್ಯಾನ್ ಪಾಂಡವಾನ್ ಮನ್ಯೇ ದ್ರೋಣೇನಾಸ್ತ್ರವಿದಾ ಮೃಧೇ ॥
ಕರ್ಣ ಆಚಾರ್ಯರನ್ನು ನಿಂದಿಸಬೇಡ. ಆ ಬ್ರಾಹ್ಮಣರು ಶಕ್ತಿ ಇದ್ದಷ್ಟು ಯುದ್ಧವನ್ನು ಮಾಡುತ್ತಿದ್ದಾರೆ. ಪಾಂಡವರು ಅಸ್ತ್ರಜ್ಞರಾದ ದ್ರೋಣರಿಂದ ಯುದ್ಧದಲ್ಲಿ ಜಯಿಸಲು ಅಸಾಧ್ಯರಾದವರು ಎಂದು ಭಾವಿಸುತ್ತೇನೆ.
ತಥಾ ಹ್ಯೇನಮತಿಕ್ರಮ್ಯ ಪ್ರವಿಷ್ಟಃ ಶ್ವೇತವಾಹನಃ |
ದೈವದೃಷ್ಟೋಽನ್ಯಥಾಭಾವೋ ನ ಮನ್ಯೇ ವಿದ್ಯತೇ ಕ್ವಚಿತ್ ॥ 13 ॥
ಆ ರೀತಿಯಲ್ಲಿ ಶ್ವೇತವಾಹನನಾದ ಅರ್ಜುನನು ದ್ರೋಣರನ್ನೂ ದಾಟಿ ನಮ್ಮ ಸೈನ್ಯವನ್ನು ಪ್ರವೇಶಿಸಿದನು. ದೈವ ನಿಯತಿಗೆ ಎಂದೂ ವ್ಯತ್ಯಾಸವಿಲ್ಲವೆಂದು ನಾನು ಭಾವಿಸುತ್ತೇನೆ.
ತತೋ ನೋ ಯುಧ್ಯಮಾನಾನಾಂ ಪರಂ ಶಕ್ತ್ಯಾ ಸುಯೋಧನ |
ಸೈಂಧವೋ ನಿಹತೋ ರಾಜನ್ ದೈವಮತ್ರ ಪರಂ ಸ್ಮೃತಮ್ ॥ 14 ॥
ಎಲೈ ಸುಯೋಧನನೇ, ರಾಜನೇ, ಆ ಕಾರಣದಿಂದ ನಾವು ನಮ್ಮ ಪೂರ್ಣಶಕ್ತಿಯಿಂದ ಯುದ್ಧವನ್ನು ಮಾಡುತ್ತಿದ್ದರೂ ಸೈಂಧವನು ಹತನಾದನು. ಈ ವಿಷಯದಲ್ಲಿ ದೈವವೇ ಶ್ರೇಷ್ಠವೆಂದು ಹೇಳುತ್ತಾರೆ.
ಪರಂ ಯತ್ನಂ ಕುರ್ವತಾಂ ಚ ತ್ವಯಾ ಸಾರ್ಧಂ ರಣಾಜಿರೇ |
ಹತ್ವಾಸ್ಮಾಕಂ ಪೌರುಷಂ ಹಿ ದೈವಂ ಪಶ್ಚಾತ್ಕರೋತಿ ನಃ |

ಸತತಂ ಚೇಷ್ಟಮಾನಾನಾಂ ನಿಕೃತ್ಯಾ ವಿಕ್ರಮೇಣ ಚ ॥ 15 ॥
ರಣರಂಗದಲ್ಲಿ ನಿನ್ನ ಜೊತೆಯಲ್ಲಿ ಬಹಳ ಪ್ರಯತ್ನವನ್ನು ಮಾಡುತ್ತಾ ಮೋಸದಿಂದಲೂ, ಪರಾಕ್ರಮದಿಂದಲೂ ಕ್ರಿಯೆಗಳನ್ನು ಮಾಡುತ್ತಿರುವ ನಮ್ಮ ಪರಾಕ್ರಮವನ್ನು ನಾಶಗೊಳಿಸಿ ದೈವವು ನಮ್ಮನ್ನು ಹಿಂದಕ್ಕೆ ತಳ್ಳುತ್ತಿದೆ.
ದೈವೋಪಸೃಷ್ಟಃ ಪುರುಷೋ ಯತ್ ಕರ್ಮ ಕುರುತೇ ಕ್ವಚಿತ್ |
ಕೃತಂ ಕೃತಂ ಸ್ಮ ತತ್ ತಸ್ಯ ದೈವೇನ ವಿನಿಹನ್ಯತೇ ॥ 16 ॥
ದೈವ ಹತನಾದ ಪುರುಷನು ಯಾವ ಯಾವ ಕರ್ಮವನ್ನು ಮಾಡುತ್ತಾನೆಯೋ ಅವೆಲ್ಲವೂ ದೈವದಿಂದ ನಾಶಗೊಳಿಸಲ್ಪಡುತ್ತದೆ.
ಯತ್ ಕರ್ತವ್ಯಂ ಮನುಷ್ಯೇಣ ವ್ಯವಸಾಯವತಾ ಸತಾ |
ತತ್ಕಾರ್ಯಮವಿಶಂಕೇನ ಸಿದ್ಧಿರ್ದೈವೇ ಪ್ರತಿಷ್ಠಿತಾ ॥ 17 ॥
ಸಜ್ಜನನಾದ ಪುರುಷನು ಒಳ್ಳೆಯ ನಿರ್ಧಾರದಿಂದ ಏನು ಮಾಡಬೇಕೋ ಅದನ್ನು ನಿಶ್ಶಂಕೆಯಿಂದ ಮಾಡಬೇಕು. ಆ ಕಾರ್ಯದ ಸಿದ್ಧಿಯು ದೈವವನ್ನು ಅವಲಂಬಿಸಿದೆ.
ನಿಕೃತ್ಯಾ ನಿಕೃತಾಃ ಪಾರ್ಥಾ ವಿಷಯೋಗೈಶ್ಚ ಭಾರತ |
ದಗ್ಧಾ ಜತುಗೃಹೇ ಚಾಪಿ ದ್ಯೂತೇನ ಚ ಪರಾಜಿತಾಃ ॥ 18 ॥
ಎಲೈ ಭಾರತನೇ, ಪಾಂಡವರು ಅನೇಕ ಮೋಸಗಳಿಂದ ವಂಚಿಸಲ್ಪಟ್ಟಿದ್ದಾರೆ. ವಿಷಪ್ರಯೋಗದಿಂದಲೂ, ಜತುಗೃಹ ದಾಹದಿಂದಲೂ, ಮತ್ತು ದ್ಯೂತದ ಪರಾಜಯದಿಂದಲೂ (ಅವರು ವಂಚಿಸಲ್ಪಟ್ಟಿದ್ದಾರೆ).
ರಾಜನೀತಿಂ ವ್ಯಪಾಶ್ರಿತ್ಯ ಪ್ರಹಿತಾಶ್ಚೈವ ಕಾನನಮ್ |
ಯತ್ನೇನ ಚ ಕೃತಂ ಯತ್ ತೇ ದೈವೇನ ವಿನಿಪಾತಿತಮ್ ॥ 19 ॥
ರಾಜನೀತಿಯನ್ನು ಆಶ್ರಯಿಸಿ ನೀನು ಅವರನ್ನು ಅರಣ್ಯಕ್ಕೆ ಕಳುಹಿಸಿದೆ. ನೀನು ಪ್ರಯತ್ನಪೂರ್ವಕವಾಗಿ ಮಾಡಿದ್ದೆಲ್ಲವನ್ನೂ ದೈವವು ಭಗ್ನಗೊಳಿಸುತ್ತಿದೆ.
ಯುದ್ಧ್ಯಸ್ವ ಯತ್ನಮಾಸ್ಥಾಯ ಮೃತ್ಯುಂ ಕೃತ್ವಾ ನಿವರ್ತನಮ್ |
ಯತತಸ್ತವ ತೇಷಾಂ ಚ ದೈವಂ ಮಾರ್ಗೇಣ ಯಾಸ್ಯತಿ ॥ 20 ॥
ಮೃತ್ಯುವನ್ನು ಹಿಂದಕ್ಕೆ ತಳ್ಳಿ (ಮೃತ್ಯುಭಯವನ್ನು ಬಿಟ್ಟು) ಪ್ರಯತ್ನಪೂರ್ವಕವಾಗಿ ಯುದ್ಧವನ್ನು ಮಾಡು. ನೀನು ಮತ್ತು ಅವರು ಪ್ರಯತ್ನಪೂರ್ವಕವಾಗಿ ಯುದ್ಧವನ್ನು ಮಾಡಿದರೆ ದೈವವು ತನ್ನ ಮಾರ್ಗದಲ್ಲಿ ಸಾಗುವುದು.
ನ ತೇಷಾಂ ಮತಿಪೂರ್ವಂ ಹಿ ಸುಕೃತಂ ದೃಶ್ಯತೇ ಕ್ವಚಿತ್ |
ದುಷ್ಕೃತಂ ತವ ವಾ ವೀರ ಬುದ್ಧ್ಯಾ ಹೀನಂ ಕುರೂದ್ವಹ ॥ 21 ॥
ಎಲೈ ಕುರೂದ್ವಹನೇ, ನೀನು ಪಾಂಡವರಿಗೆ ಬುದ್ಧಿಪೂರ್ವಕವಾಗಿ ಯಾವ ಒಳ್ಳೆಯ ಕಾರ್ಯವನ್ನೂ ಮಾಡಿರುವುದು ಕಂಡುಬರುವುದಿಲ್ಲ. ಎಲೈ ವೀರನೇ, ಬುದ್ಧಿಯಿಲ್ಲದೆ ಮಾಡಿದ ಯಾವ ದುಷ್ಕರ್ಮವೂ ಕಂಡುಬರುವುದಿಲ್ಲ (ಎಲ್ಲ ದುಷ್ಕರ್ಮಗಳನ್ನೂ ಬುದ್ಧಿಪೂರ್ವಕವಾಗಿಯೇ ಮಾಡಿದ್ದೀಯೆ).
ದೈವಂ ಪ್ರಮಾಣಂ ಸರ್ವಸ್ಯ ಸುಕೃತಸ್ಯೇತರಸ್ಯ ವಾ |
ಅನನ್ಯಕರ್ಮ ದೈವಂ ಹಿ ಜಾಗರ್ತಿ ಸ್ವಪತಾಮಪಿ ॥ 22 ॥
ಸುಕೃತ-ದುಷ್ಕೃತಗಳೆಲ್ಲದಕ್ಕೂ ದೈವವೇ ಪ್ರಮಾಣ. ದೈವಕ್ಕೆ ಅವರ ಕರ್ಮಗಳಿಗೆ ಅನುಸಾರವಾಗಿ ಫಲವನ್ನು ಕೊಡುವುದನ್ನು ಬಿಟ್ಟು ಬೇರೆ ಕಾರ್ಯವಿಲ್ಲ. ನಾವು ಮಲಗಿದ್ದರೂ ದೈವವು ಎಚ್ಚರಿಕೆಯಿಂದ ಇರುತ್ತದೆ.
ಬಹೂನಿ ತವ ಸೈನ್ಯಾನಿ ಯೋಧಾಶ್ಚ ಬಹವಸ್ತಥಾ |
ನ ತಥಾ ಪಾಂಡುಪುತ್ರಾಣಾಮೇವಂ ಯುದ್ಧಮವರ್ತತ ॥ 23 ॥
ನಿನ್ನ ಸೈನ್ಯಗಳು ಮತ್ತು ಯೋಧರು ಬಹುಸಂಖ್ಯಾತರಾದವರು, ಪಾಂಡವರ ಸೈನ್ಯವು ಹಾಗಲ್ಲ. ಹೀಗೆ ಯುದ್ಧವು ಪ್ರಾರಂಭವಾಯಿತು.
ತೈರಲ್ಪೈರ್ಬಹವೋ ಯೂಯಂ ಕ್ಷಯಂ ನೀತಾಃ ಪ್ರಹಾರಿಣಃ |
ಶಂಕೇ ದೈವಸ್ಯ ತತ್ಕರ್ಮ ಪೌರುಷಂ ಯೇನ ನಾಶಿತಮ್ ॥ 24 ॥
ಅಲ್ಪಸಂಖ್ಯೆಯುಳ್ಳ ಅವರಿಂದ ಬಹುಸಂಖ್ಯೆಯುಳ್ಳವರೂ ಯುದ್ಧದಲ್ಲಿ ಪ್ರಹಾರಶೀಲರೂ ಆದ ನೀವು ವಿನಾಶವನ್ನು ಹೊಂದಿದಿರಿ. ನಿಮ್ಮ ಪುರುಷಪ್ರಯತ್ನವನ್ನು ನಾಶಮಾಡಿದುದು ದೈವದ ಕಾರ್ಯವೆಂದು ತಿಳಿಯುತ್ತೇನೆ.
ಸಂಜಯಃ
ಏವಂ ಸಂಭಾಷಮಾಣಾನಾಂ ಬಹು ತತ್ತಜ್ಜನಾಧಿಪ |
ಪಾಂಡವಾನಾಮನೀಕಾನಿ ಸಮದೃಶ್ಯಂತ ಸಂಯುಗೇ ॥ 25 ॥
ಸಂಜಯ ಎಲೈ ರಾಜನೇ, ಹೀಗೆ ಬೇರೆ ಬೇರೆ ವಿಷಯಗಳನ್ನು ಬಹಳವಾಗಿ ಮಾತನಾಡುತ್ತಿರಲು ರಣರಂಗದಲ್ಲಿ ಪಾಂಡವರ ಸೈನ್ಯಗಳು ಕಾಣಿಸಿಕೊಂಡವು.
ತತಃ ಪ್ರವವೃತೇ ಯುದ್ಧಂ ವ್ಯತಿಷಕ್ತರಥದ್ವಿಪಮ್ |
ತಾವಕಾನಾಂ ಪರೈಃ ಸಾರ್ಧಂ ರಾಜನ್ ದುರ್ಮಂತ್ರಿತೇ ತವ ॥ 26 ॥
ಎಲೈ ರಾಜನೇ, ಆಗ ನಿನ್ನ ಮತ್ತು ಅವರ ರಥ-ಗಜಗಳು ಮಿಶ್ರಿತವಾಗಿ ನಿನ್ನ ದುರ್ನೀತಿಯ ಫಲವಾಗಿ ಯುದ್ಧವು ಪ್ರವೃತ್ತವಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟತ್ರಿಂಶದಧಿಕಶತತಮೋಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಷಷ್ಠೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *
नೂರ ಮೂವತ್ತೊಂಬತ್ತನೆಯ ಅಧ್ಯಾಯ
ರಾತ್ರಿಯುದ್ಧದಲ್ಲಿ ದುರ್ಯೋಧನನಿಂದ ಯುಧಿಷ್ಠಿರಪರಾಜಯ.
ಸಂಜಯಃ
ತದುದೀರ್ಣಗಜಾಶ್ವೌಘಂ ಬಲಂ ತವ ಜನಾಧಿಪ |
ಪಾಂಡುಸೇನಾಮಭಿದ್ರುತ್ಯ ಯೋಧಯಾಮಾಸ ಸರ್ವತಃ ॥ 1 ॥
ಸಂಜಯ ಎಲೈ ರಾಜನೇ, ಶ್ರೇಷ್ಠವಾದ ಗಜಾಶ್ವ ಸಮೂಹಗಳಿಂದ ಕೂಡಿದ ನಿನ್ನ ಸೈನ್ಯವು ಪಾಂಡವಸೇನೆಗೆ ಅಭಿಮುಖವಾಗಿ ಹೋಗಿ, ಎಲ್ಲ ಕಡೆಗಳಲ್ಲಿಯೂ ಯುದ್ಧವನ್ನು ಮಾಡಿತು.
ಪಾಂಚಾಲಾಃ ಕುರವಶ್ಚೈವ ಯೋಧಯಂತಃ ಪರಸ್ಪರಮ್ |
ಯಮರಾಷ್ಟ್ರಾಯ ಮಹತೇ ಪರಲೋಕಾಯ ದೀಕ್ಷಿತಾಃ ॥ 2 ॥
ಪಾಂಚಾಲರೂ ಮತ್ತು ಕೌರವರೂ ಪರಸ್ಪರವಾಗಿ ಯುದ್ಧವನ್ನು ಮಾಡುತ್ತಾ ಯಮಲೋಕಕ್ಕೂ ಮತ್ತು ಶ್ರೇಷ್ಠವಾದ ಪರಲೋಕಕ್ಕೂ ಹೋಗಲು ದೀಕ್ಷಿತರಾದರು.
ಶೂರಾಃ ಶೂರೈಃ ಸಮಾಗಮ್ಯ ಶರತೋಮರಶಕ್ತಿಭಿಃ |
ವಿವ್ಯಧುಃ ಸಮರೇ ತೂರ್ಣಂ ನಿನ್ಯುಶ್ಚೈವ ಯಮಕ್ಷಯಮ್ ॥ 3 ॥
ಶೂರರು ಶೂರರ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಶರ-ತೋಮರ- ಶಕ್ತಿಗಳಿಂದ ರಣರಂಗದಲ್ಲಿ ಪರಸ್ಪರವಾಗಿ ಹೊಡೆದು ಶೀಘ್ರವಾಗಿ ಯಮಲೋಕಕ್ಕೆ ಕಳುಹಿಸಿದರು.
ರಥಿನಾಂ ರಥಿಭಿಃ ಸಾರ್ಧಂ ರುಧಿರಸ್ರಾವಿ ದಾರುಣಮ್ |
ಪ್ರಾವರ್ತತ ಮಹದ್ಯುದ್ಧಂ ನಿಘ್ನತಾಮಿತರೇತರಮ್ ॥ 4 ॥
ವಾರಣಾಶ್ಚ ಮಹಾರಾಜ ಸಮಾಸಾದ್ಯ ಪರಸ್ಪರಮ್ |
ವಿಷಾಣೈರ್ದಾರಯಾಮಾಸುಃ ಸಂಕ್ರುದ್ಧಾಶ್ಚ ಮದೋತ್ಕಟಾಃ ॥ 5 ॥
ರಥಿಗಳು ರಥಿಗಳ ಜೊತೆಯಲ್ಲಿ ಪರಸ್ಪರವಾಗಿ ಹೊಡೆದಾಡುವಾಗ ರಕ್ತಸ್ರಾವಿಯಾದ ಘೋರವಾದ ಯುದ್ಧವು ನಡೆಯಿತು. ಎಲೈ ಮಹಾರಾಜನೇ, ಮದೋತ್ಕಟವಾದ ಮತ್ತು ಕೋಪಗೊಂಡ ಗಜಗಳು ಪರಸ್ಪರವಾಗಿ ಸಂಧಿಸಿ ತಮ್ಮ ದಂತಗಳಿಂದ ಪರಸ್ಪರವಾಗಿ ಸೀಳಿಹಾಕಿದವು.
ಹಯಾರೋಹಾನ್ ಹಯಾರೋಹಾಃ ಪ್ರಾಸಶಕ್ತಿಪರಶ್ವಧೈಃ |
ಬಿಭಿದುಸ್ತುಮುಲೇ ಯುದ್ಧೇ ಪ್ರಾರ್ಥಯಂತೋ ಮಹದ್ಯಶಃ ॥ 6 ॥
ಅಶ್ವಾರೋಹಿಗಳು ತೀವ್ರವಾದ ಯುದ್ಧದಲ್ಲಿ ದೊಡ್ಡ ಕೀರ್ತಿಯನ್ನು ಸಂಪಾದಿಸಲು ಬಯಸಿ ಪ್ರಾಸ-ಶಕಿತ-ಪರಶ್ವಧಗಳಿಂದ ಅಶ್ವಾರೋಹಿಗಳನ್ನು ಗಾಯಗೊಳಿಸಿದರು.
ಪತ್ತಯಶ್ಚ ಮಹಾಬಾಹೋ ಶತಶಃ ಶಸ್ತ್ರಪಾಣಯಃ |
ಅನ್ಯೋನ್ಯಮಾರ್ದಯನ್ ರಾಜನ್ನಿತ್ಯಯತ್ತಾಃ ಪರಾಕ್ರಮೇ ॥ 7 ॥
ಎಲೈ ರಾಜನೇ, ಮಹಾಬಾಹುವೇ, ನಿತ್ಯವೂ ಪರಾಕ್ರಮದಲ್ಲಿ ಪ್ರಯತ್ನಪಡುವ ಪದಾತಿಗಳು ಶಸ್ತ್ರಗಳನ್ನು ಹಿಡಿದು ನೂರಾರು ಸಂಖ್ಯೆಯಲ್ಲಿ ಪರಸ್ಪರವಾಗಿ ಹಿಂಸಿಸಿದರು.
ಗೋತ್ರಾಣಾಂ ನಾಮಧೇಯಾನಾಂ ಕುಲಾನಾಂ ಚೈವ ಮಾರಿಷ |
ಶ್ರವಣಾದ್ಧಿ ವಿಜಾನೀಮಃ ಪಾಂಚಾಲಾನ್ ಕುರುಭಿಃ ಸಹ ॥ 8 ॥
ಎಲೈ ಪೂಜ್ಯನೇ, ಗೋತ್ರಗಳನ್ನೂ, ನಾಮಧೇಯಗಳನ್ನೂ ಮತ್ತು ಕುಲಗಳನ್ನೂ ಉಚ್ಚಾರ ಮಾಡುತಿತದ್ದುದರಿಂದ ಪಾಂಚಾಲರನ್ನೂ, ಕೌರವರನ್ನೂ ತಿಳಿಯುತ್ತಿದ್ದೆವು.
ಅನ್ಯೋನ್ಯಂ ಸಮರೇ ಯೋಧಾಃ ಶರಶಕ್ತಿಪರಶ್ವಧೈಃ |
ಪ್ರೇಷಯನ್ ಪರಲೋಕಾಯ ವಿಚರಂತೋ ಹ್ಯಭೀತವತ್ ॥ 9 ॥
ಯೋಧರು ರಣರಂಗದಲ್ಲಿ ನಿರ್ಭಯವಾಗಿ ಸಂಚರಿಸುತ್ತಾ ಪರಸ್ಪರವಾಗಿ ಶರ-ಶಕ್ತಿ-ಪರಶುಗಳಿಂದ ಹೊಡೆದು ಪರಲೋಕಕ್ಕೆ ಕಳುಹಿಸಿದರು.
ಶರೈರ್ದಶ ದಿಶೋ ರಾಜಂಸ್ತೇಷಾಂ ಮುಕ್ತೈಃ ಸಹಸ್ರಶಃ |
ನ ಭ್ರಾಜಂತ ಯಥಾಪೂರ್ವಂ ಭಾಸ್ಕರೇಽಸ್ತಂ ಗತೇಽಪಿ ಚ ॥ 10 ॥
ಎಲೈ ರಾಜನೇ, ಅವರು ಸಹಸ್ರ ಸಂಖ್ಯೆಯಲ್ಲಿ ಪ್ರಯೋಗಿಸಿದ ಆಕಾಶದಲ್ಲಿ ವ್ಯಾಪ್ತವಾದ ಬಾಣಗಳಿಂದಲೂ ಮತ್ತು ಸೂರ್ಯನು ಅಸ್ತಂಗತನಾದ ಕಾರಣದಿಂದಲೂ ದಿಕ್ಕುಗಳು ಮೊದಲಿನಂತೆ ಪ್ರಕಾಶಿಸುತ್ತಿರಲಿಲ್ಲ.
ತಥಾ ಪ್ರಯುದ್ಧ್ಯಮಾನೇಷು ಪಾಂಡವೇಯೇಷು ನಿರ್ಭಯಃ |
ದುರ್ಯೋಧನೋ ಮಹಾರಾಜ ವ್ಯವಗಾಹತ ತದ್ಬಲಮ್ ॥ 11 ॥
ಎಲೈ ಮಹಾರಾಜನೇ, ಪಾಂಡವಯೋಧರು ಆ ರೀತಿಯಲ್ಲಿ ಯುದ್ಧವನ್ನು ಮಾಡುತ್ತಿರಲು ದುರ್ಯೋಧನನು ನಿರ್ಭಯನಾಗಿ ಆ ಸೈನ್ಯವನ್ನು ಪ್ರವೇಶಿಸಿದನು.
ಸೈಂಧವಸ್ಯ ವಧೇನೈವ ಭೃಶಂ ದುಃಖಸಮನ್ವಿತಃ |
ಮರ್ತವ್ಯಮಿತಿ ಸಂಚಿಂತ್ಯ ಪ್ರಾವಿಶತ್ತು ದ್ವಿಷದ್ಬಲಮ್ ॥ 12 ॥
ನಾದಯನ್ ರಥಘೋಷೇಣ ಕಂಪಯನ್ನಿವ ಮೇದಿನೀಮ್ |

ಅಭ್ಯವರ್ತತ ಪುತ್ರಸ್ತೇ ಪಾಂಡವಾನಾಮನೀಕಿನೀಮ್ ॥ 13 ॥
ಸೈಂಧವನ ವಧೆಯಿಂದಲೇ ಬಹಳ ದುಃಖದಿಂದ ಕೂಡಿದ ಅವನು ತನ್ನ ಮರಣವನ್ನು ನಿಶ್ಚಯಿಸಿ ಶತ್ರುಸೈನ್ಯವನ್ನು ಪ್ರವೇಶಿಸಿದನು. ತನ್ನ ರಥಘೋಷದಿಂದ ಎಲ್ಲ ಕಡೆಗಳಲ್ಲಿಯೂ ನಾದವನ್ನು ಮಾಡುತ್ತಾ ಭೂಮಿಯನ್ನು ಕಂಪಿಸುವವನಂತೆ ನಿನ್ನ ಪುತ್ರನು ಪಾಂಡವರ ಸೈನ್ಯದ ಮೇಲೆ ಎರಗಿದನು.
ಸ ಸನ್ನಿಪಾತಸ್ತುಮುಲಸ್ತಸ್ಯ ತೇಷಾಂ ಚ ಭಾರತ |
ಅಭವತ್ ಸರ್ವಸೈನ್ಯಾನಾಮಭಾವಕರಣೋ ಮಹಾನ್ ॥ 14 ॥
ಎಲೈ ಭಾರತನೇ, ಅವನಿಗೂ ಮತ್ತು ಪಾಂಡವರಿಗೂ ಉಂಟಾದ ಆ ಸಂಘರ್ಷವು ಸರ್ವಸೈನ್ಯದ ವಿನಾಶವನ್ನು ಮಾಡುವುದಾಗಿ ಬಹಳ ತೀವ್ರವಾಗಿದ್ದಿತು.
ಮಧ್ಯಂದಿನಗತಂ ಸೂರ್ಯಂ ಪ್ರತಪಂತಂ ಗಭಸ್ತಿಭಿಃ |
ತಥಾ ತವ ಸುತಂ ಮಧ್ಯೇ ಪ್ರತಪಂತಂ ಶರೋರ್ಮಿಭಿಃ ॥ 15 ॥
ಮಧ್ಯಾಹ್ನದಲ್ಲಿ ಕಿರಣಗಳಿಂದ ಜ್ವಲಿಸುವ ಸೂರ್ಯನನ್ನು ನೋಡಲು ಅಸಾಧ್ಯವಾದಂತೆ ಬಾಣಗಳ ಅಲೆಗಳಿಂದ ಪಾಂಡವರ ಸೈನ್ಯವನ್ನು ತಾಪಗೊಳಿಸುತ್ತಿದ್ದ ನಿನ್ನ ಪುತ್ರನಾದ ದುರ್ಯೋಧನನನ್ನು ನೋಡಲು ಪಾಂಡವರಿಗೆ ಸಾಧ್ಯವಾಗಲಿಲ್ಲ.
ನ ಶೇಕುರ್ಭಾರತಂ ಯುದ್ಧೇ ಪಾಂಡವಾಃ ಸಮವೇಕ್ಷಿತುಮ್ |
ಪಲಾಯನೇ ಕೃತೋತ್ಸಾಹಾ ನಿರುತ್ಸಾಹಾ ದ್ವಿಷಜ್ಜಯೇ |
ಪರ್ಯಧಾವಂತ ಪಾಂಚಾಲಾ ವಧ್ಯಮಾನಾ ಮಹಾತ್ಮನಾ ॥ 16 ॥
ಮಹಾತ್ಮನಾದ ದುರ್ಯೋಧನನಿಂದ ಹೊಡೆಯಲ್ಪಡುತ್ತಿದ್ದ ಪಾಂಚಾಲರು ಶತ್ರುಜಯದಲ್ಲಿ ಉತ್ಸಾಹವನ್ನು ಕಳೆದುಕೊಂಡು ಪಲಾಯನವನ್ನು ಮಾಡುವುದರಲ್ಲಿ ಉತ್ಸಾಹವನ್ನು ಹೊಂದಿ ಎಲ್ಲ ಕಡೆಗಳಲ್ಲಿಯೂ ಓಡಿದರು.
ರುಗ್ಮಪುಂಖೈಃ ಪ್ರಸನ್ನಾಗ್ರೈಸ್ತವ ಪುತ್ರೇಣ ಧನ್ವಿನಾ |
ಅರ್ದ್ಯಮಾನಾಃ ಶರೈಸ್ತೂರ್ಣಂ ನ್ಯಪತನ್ ಪಾಂಡುಸೈನಿಕಾಃ ॥ 17 ॥
ನಿನ್ನ ಪುತ್ರನು ಪ್ರಯೋಗಿಸಿದ ರುಗ್ಮಪುಂಖಗಳನ್ನು ಹೊಂದಿದ, ತೀಕ್ಷ್ಣವಾದ ತುದಿಯನ್ನು ಹೊಂದಿದ ಬಾಣಗಳಿಂದ ಪೀಡಿತರಾದ ಪಾಂಡು ಸೈನಿಕರು ಶೀಘ್ರವಾಗಿ ಹತರಾಗಿ ಬಿದ್ದರು.
ನ ತಾದೃಶಂ ರಣೇ ಕರ್ಮ ಕೃತವಂತಸ್ತು ತಾವಕಾಃ |
ಯಾದೃಶಂ ಕೃತವಾನ್ ರಾಜಾ ಪುತ್ರಸ್ತವ ವಿಶಾಂಪತೇ ॥ 18 ॥
ಎಲೈ ರಾಜನೇ, ನಿನ್ನ ಪುತ್ರನು ಯುದ್ಧದಲ್ಲಿ ಮಾಡಿದ ಕಾರ್ಯಕ್ಕೆ ಸದೃಶವಾದ ಕಾರ್ಯವನ್ನು ಅಲ್ಲಿಯವರೆಗೆ ನಿನ್ನವರು ಯಾರೂ ಮಾಡಿರಲಿಲ್ಲ.
ಪುತ್ರೇಣ ತವ ಸಾ ಸೇನಾ ಪಾಂಡವೀ ಮಥಿತಾ ರಣೇ |
ನಳಿನೀ ದ್ವಿರದೇನೇವ ಸಮಂತಾತ್ ಫುಲ್ಲಪಂಕಜಾ ॥ 19 ॥
ಅರಳಿದ ಪದ್ಮಗಳುಳ್ಳ ಪದ್ಮ ಸರೋವರವು ಆನೆಯಿಂದ ವಿನಾಶಗೊಳಿಸಲ್ಪಟ್ಟಂತೆ ಪಾಂಡವರ ಸೈನ್ಯವು ರಣರಂಗದಲ್ಲಿ ನಿನ್ನ ಪುತ್ರನಿಂದ ವಿನಾಶಗೊಳಿಸಲ್ಪಟ್ಟಿತು.
ಕ್ಷೀಣತೋಯಾನಿಲಾರ್ಕಾಭ್ಯಾಂ ಹತತ್ವಿಡಿವ ಪದ್ಮಿನೀ |
ಬಭೂವ ಪಾಂಡವೀ ಸೇನಾ ತವ ಪುತ್ರಸ್ಯ ತೇಜಸಾ ॥ 20 ॥
ನೀರು ಒಣಗಿ ಹೋಗಿ ಸೂರ್ಯಾಗ್ನಿಗಳ ಪ್ರತಾಪಕ್ಕೆ ಸಿಕ್ಕಿದ ಪದ್ಮಸರೋವರವು ತನ್ನ ಕಾಂತಿಯನ್ನು ಕಳೆದುಕೊಳ್ಳುವಂತೆ ಪಾಂಡವರ ಸೈನ್ಯವು ನಿನ್ನ ಪುತ್ರನ ತೇಜಸ್ಸಿನಿಂದ ಕಾಂತಿಹೀನವಾಯಿತು.
ಪಾಂಡುಸೇನಾಂ ಹತಾಂ ದೃಷ್ಟ್ವಾ ತವ ಪುತ್ರೇಣ ಭಾರತ |
ಭೀಮಸೇನಪುರೋಗಾಸ್ತು ಪಾಂಚಾಲಾಃ ಸಮುಪಾದ್ರವನ್ ॥ 21 ॥
ಎಲೈ ಭಾರತನೇ, ನಿನ್ನ ಪುತ್ರನಿಂದ ಪಾಂಡುಸೇನೆಯು ಹೊಡೆಯಲ್ಪಡುತ್ತಿರುವುದನ್ನು ನೋಡಿ ಭೀಮಸೇನನನ್ನು ಮುಂದೆ ಮಾಡಿಕೊಂಡು ಪಾಂಚಾಲರು ಅಲ್ಲಿಗೆ ಓಡಿಬಂದರು.
ಸ ಭೀಮಸೇನಂ ದಶಭಿರ್ಮಾದ್ರೀಪುತ್ರೌ ತ್ರಿಭಿಸ್ತ್ರಿಭಿಃ |
ವಿರಾಟದ್ರುಪದೌ ಷಡ್ಭಿಃ ಶತೇನ ಚ ಶಿಖಂಡಿನಮ್ ॥ 22 ॥
ಧೃಷ್ಟದ್ಯುಮ್ನಂ ಚ ಸಪ್ತತ್ಯಾ ಧರ್ಮಪುತ್ರಂ ಚ ಸಪ್ತಭಿಃ |
ಕೇಕಯಾಂಶ್ಚೈವ ಚೇದೀಂಶ್ಚ ಬಹುಭಿರ್ನಿಶಿತೈಃ ಶರೈಃ ॥ 23 ॥
ಸಾತ್ವತಂ ಪಂಚಭಿರ್ವಿದ್ಧ್ವಾ ದ್ರೌಪದೇಯಾಂಸ್ತ್ರಿಭಿಸ್ತ್ರಿಭಿಃ |
ಘಟೋತ್ಕಚಂ ಚ ಸಮರೇ ವಿದ್ಧ್ವಾ ಸಿಂಹ ಇವಾನದತ್ ॥ 24 ॥
ನಿನ್ನ ಪುತ್ರನಾದ ದುರ್ಯೋಧನನು ಭೀಮಸೇನನನ್ನು ಹತ್ತು ಬಾಣಗಳಿಂದಲೂ, ನಕುಲ-ಸಹದೇವರನ್ನು ಮೂರು ಮೂರು ಬಾಣಗಳಿಂದಲೂ, ವಿರಾಟ-ದ್ರುಪದರನ್ನು ಆರು ಬಾಣಗಳಿಂದಲೂ, ಶಿಖಂಡಿಯನ್ನು ನೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಎಪ್ಪತ್ತು ಬಾಣಗಳಿಂದಲೂ, ಯುಧಿಷ್ಠಿರನನ್ನು ಏಳು ಬಾಣಗಳಿಂದಲೂ, ಕೇಕಯರನ್ನು ಮತ್ತು ಚೇದಿಗಳನ್ನು ತೀಕ್ಷ್ಣವಾದ ಅನೇಕ ಬಾಣಗಳಿಂದಲೂ, ಸಾತ್ಯಕಿಯನ್ನು ಐದು ಬಾಣಗಳಿಂದಲೂ, ದ್ರೌಪದಿಯ ಪುತ್ರರನ್ನು ಮೂರು-ಮೂರು ಬಾಣಗಳಿಂದಲೂ , ಘಟೋತ್ಕಚನನ್ನು (ಅರವತ್ನಾಲ್ಕು) ಬಾಣಗಳಿಂದಲೂ ಹೊಡೆದು ಸಿಂಹನಾದವನ್ನು ಮಾಡಿದನು.
ಶತಶಶ್ಚಾಪರಾನ್ ಯೋಧಾನ್ ಸದ್ವಿಪಾಶ್ವರಥಾನ್ ರಣೇ |
ಶರೈರವಚಕತರ್ೋಗ್ರೈಃ ಕ್ರುದ್ಧೋಽಂತಕ ಇವ ಪ್ರಜಾಃ ॥ 25 ॥

ತಸ್ಯ ತಾನ್ ನಿಘ್ನತಃ ಶತ್ರೂನ್ ರುಗ್ಮಪೃಷ್ಠಂ ಮಹದ್ಧನುಃ |
ಭಲ್ಲಾಭ್ಯಾಂ ಪಾಂಡವೋ ಜ್ಯೇಷ್ಠಸ್ತ್ರಿಧಾ ಚಿಚ್ಛೇದ ಮಾರಿಷ ॥ 26 ॥
ಸುವರ್ಣಮಯವಾದ ಪೃಷ್ಠವುಳ್ಳ ಶತ್ರುಗಳನ್ನು ಸಂಹಾರ ಮಾಡುವ ಅವನ ದೊಡ್ಡ ಧನುಸ್ಸನ್ನು ಪಾಂಡವರಲ್ಲಿ ಹಿರಿಯನಾದ ಧರ್ಮರಾಜನು ಎಲೈ ಪೂಜ್ಯನೇ, ಎರಡು ಭಲ್ಲಗಳಿಂದ ಮೂರು ಭಾಗವಾಗಿ ಕತ್ತರಿಸಿದನು.
ವಿವ್ಯಾಧ ಚೈನಂ ದಶಭಿಃ ಸಮ್ಯಗಸ್ತೈಃ ಶಿತೈಃ ಶರೈಃ |
ಮರ್ಮಾಣಿ ಭಿತತ್ವ ತೇ ಸರ್ವೇ ಸಂಭಗ್ನಾಃ ಕ್ಷಿತಿಮಾವಿಶನ್ ॥27॥
ದುರ್ಯೋಧನನನ್ನು ಚೆನ್ನಾಗಿ ಪ್ರಯೋಗಿಸಿದ ತೀಕ್ಷ್ಣವಾದ ಹತ್ತು ಬಾಣಗಳಿಂದ ಹೊಡೆದನು. ಅವೆಲ್ಲವೂ ಅವನ ಮರ್ಮಗಳನ್ನು ಭೇದಿಸಿ ಭಗ್ನವಾಗಿ ಭೂಮಿಯಲ್ಲಿ ಇಳಿದವು.
ತತಃ ಪ್ರಮುದಿತಾ ಯೋಧಾಃ ಪರಿವವ್ರುರ್ಯುಧಿಷ್ಠಿರಮ್ |
ವೃತ್ರಹತ್ಯೈ ಯಥಾ ದೇವಾಃ ಪರಿವವ್ರುಃ ಪುರಂದರಮ್ ॥ 28 ॥
ಆಗ ವೃತ್ರಹತ್ಯೆಗಾಗಿ ದೇವತೆಗಳು ಇಂದ್ರನನ್ನು ಸುತ್ತುವರಿದಂತೆ ಸಂತೋಷಗೊಂಡ ಪಾಂಡವ ಯೋಧರು ಯುಧಿಷ್ಠಿರನನ್ನು ಸುತ್ತುವರಿದರು.
ತತೋ ಯುಧಿಷ್ಠಿರೋ ರಾಜಾ ತವ ಪುತ್ರಸ್ಯ ಮಾರಿಷ |
ಶರಂ ಪರಮದುರ್ವಾರಂ ಪ್ರೇಷಯಾಮಾಸ ಸಂಯುಗೇ |
ಸ ತೇನ ಭೃಶಸಂವಿದ್ಧೋ ನಿಷಸಾದ ರಥೋತ್ತಮೇ ॥ 29 ॥
ಎಲೈ ಪೂಜ್ಯನೇ, ಆಗ ಯುಧಿಷ್ಠಿರನು ರಣರಂಗದಲ್ಲಿ ನಿನ್ನ ಪುತ್ರನ ಮೇಲೆ ನಿವಾರಿಸಲು ಅಸಾಧ್ಯವಾದ ಒಂದು ಶ್ರೇಷ್ಠವಾದ ಬಾಣವನ್ನು ಪ್ರಯೋಗಿಸಿದನು. ಆ ಬಾಣದಿಂದ ಚೆನ್ನಾಗಿ ಹೊಡೆಯಲ್ಪಟ್ಟ ದುರ್ಯೋಧನನು ತನ್ನ ಶ್ರೇಷ್ಠ ರಥದಲ್ಲಿ ಕುಸಿದು ಬಿದ್ದನು.
ತತಃ ಪಾಂಚಾಲಸೈನ್ಯಾನಾಂ ಭೃಶಮಾಸೀದ್ ರವೋ ಮಹಾನ್ |
ಹತೋ ರಾಜೇತಿ ರಾಜೇಂದ್ರ ಮುದಿತಾನಾಂ ಸಮಂತತಃ ॥ 30 ॥
ಎಲೈ ರಾಜೇಂದ್ರನೇ, ಆಗ ಪಾಂಚಾಲ ಸೈನ್ಯದಲ್ಲಿ ಇದ್ದ ಎಲ್ಲರಿಗೂ ಸಂತೋಷದಿಂದ ರಾಜನಾದ ದುರ್ಯೋಧನನು ಹತನಾದನು ಎಂಬ ದೊಡ್ಡ ನಾದವು ಉಂಟಾಯಿತು.
ಬಾಣಶಬ್ದರವಶ್ಚೋಗ್ರಃ ಶುಶ್ರುವೇ ತತ್ರ ಮಾರಿಷ |
ಅಥ ದ್ರೋಣೋ ದ್ರುತಂ ತತ್ರ ಪ್ರತ್ಯದೃಶ್ಯತ ಸಂಯುಗೇ ॥ 31 ॥
ಎಲೈ ಪೂಜ್ಯನೇ, ಬಾಣಶಬ್ದಗಳು ಮತ್ತು ಉಗ್ರವಾದ ಯೋಧರ ನಾದಗಳು ಅಲ್ಲಿ ಕೇಳಿಬಂದವು. ಆಗ ರಣರಂಗದಲ್ಲಿ ಅಲ್ಲಿ ಶೀಘ್ರವಾಗಿ ದ್ರೋಣರು ಕಾಣಿಸಿಕೊಂಡರು.
ಹೃಷ್ಟೋ ದುರ್ಯೋಧನಶ್ಚಾಪಿ ದೃಢಮಾದಾಯ ಕಾರ್ಮುಕಮ್ |
ತಿಷ್ಠ ತಿಷ್ಠೇತಿ ರಾಜಾನಂ ಬ್ರುವನ್ ಪಾಂಡವಮಭ್ಯಯಾತ್ ॥ 32 ॥
ಸಂತೋಷಗೊಂಡ ದುರ್ಯೋಧನನೂ ಸಹ ದೃಢವಾದ ಧನುಸ್ಸನ್ನು ತೆಗೆದುಕೊಂಡು ಧರ್ಮರಾಜನನ್ನು ಕುರಿತು ನಿಲ್ಲು-ನಿಲ್ಲು ಎಂದು ಹೇಳುತ್ತಾ ಅವನ ಕಡೆಗೆ ಸಾಗಿದನು.
ಪ್ರತ್ಯುದ್ಯಯುಸ್ತಂ ತ್ವರಿತಾಃ ಪಾಂಚಾಲಾ ರಾಜಗೃದ್ಧಿನಃ |
ತಾನ್ ದ್ರೋಣಃ ಪ್ರತಿಜಗ್ರಾಹ ಪರೀಪ್ಸನ್ ಕುರುಸತ್ತಮಮ್ |
ಚಂಡವಾತೋದ್ಧತಾನ್ ಮೇಘಾನ್ ನಿಘ್ನನ್ ರಶ್ಮಿಮುಚೋ ಯಥಾ ॥
ಧರ್ಮರಾಜನನ್ನು ಉಳಿಸಲು ಬಯಸಿದ ಪಾಂಚಾಲರು ಶೀಘ್ರವಾಗಿ ಅವನ ಮೇಲೆ ಎರಗಿದರು. ದ್ರೋಣರು ಚಂಡಮಾರುತದಿಂದ ಎದ್ದ ಮೋಡಗಳನ್ನು ಸೂರ್ಯನು ನಾಶಗೊಳಿಸುವಂತೆ ದುರ್ಯೋಧನನನ್ನು ರಕ್ಷಿಸಲು ಬಯಸಿ ಆ ಯೋಧರನ್ನು ಸ್ವೀಕರಿಸಿದರು.
ತತೋ ರಾಜನ್ ಮಹಾನಾಸೀತ್ ಸಂಗ್ರಾಮೋ ಭೂರಿವರ್ಧನಃ |
ತಾವಕಾನಾಂ ಪರೇಷಾಂ ಚ ಸಮೇತಾನಾಂ ಯುಯುತ್ಸಯಾ ॥ 34 ॥
ಎಲೈ ರಾಜನೇ, ಆಗ ಪರಸ್ಪರ ಯುದ್ಧದ ಅಭಿಲಾಷೆಯಿಂದ ಸೇರಿದ ನಿನ್ನವರಿಗೂ ಮತ್ತು ಪರರಿಗೂ ಯಮರಾಷ್ಟ್ರವರ್ಧನವಾದ ದೊಡ್ಡ ಸಂಗ್ರಾಮವು ಉಂಟಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಮೂವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತನೆಯ ಅಧ್ಯಾಯ
ರಾತ್ರಿಯುದ್ಧದ ಪ್ರಾರಂಭ. ದ್ರೋಣರ ಪರಾಕ್ರಮ.
ಧೃತರಾಷ್ಟ್ರಃ
ಯತ್ತದಾ ಪ್ರಾವಿಶತ್ ಪಾಂಡೂನಾಚಾರ್ಯಃ ಕುಪಿತೋ ವಶೀ |
ಉಕತ್ವ ದುರ್ಯೋಧನಂ ಸಮ್ಯಙ್ಮಮ ಶಾಸ್ತ್ರಾತಿಗಂ ಸುತಮ್ ॥1॥

ಪ್ರವಿಶ್ಯ ವಿಚರಂತಂ ಚ ರಣೇ ಶೂರಮವಸ್ಥಿತಮ್ |
ಕಥಂ ದ್ರೋಣಂ ಮಹೇಷ್ವಾಸಂ ಪಾಂಡವಾಃ ಪರ್ಯವಾರಯನ್ ||2||
ಧೃತರಾಷ್ಟ್ರ ಆಚಾರ್ಯರಾದ ದ್ರೋಣರು ಶಾಸ್ತ್ರ ನಿಯಮವನ್ನು ಮೀರಿದ ನನ್ನ ಪುತ್ರನಾದ ದುರ್ಯೋಧನನನ್ನು ಕುರಿತು ಸರಿಯಾಗಿ ಮಾತನಾಡಿ ಕುಪಿತರೂ ಸ್ವವಶರೂ ಆದ ಅವರು ಪಾಂಡವಸೇನೆಯನ್ನು ಪ್ರವೇಶಿಸಿ ಸಂಚರಿಸುತ್ತಿರುವಾಗ ರಣರಂಗದಲ್ಲಿ ಶೂರರಾಗಿ ನಿಂತ ಮಹಾಧನುರ್ಧಾರಿಗಳಾದ ದ್ರೋಣರನ್ನು ಪಾಂಡವರು ಹೇಗೆ ನಿವಾರಿಸಿದರು?
ಕೇಽರಕ್ಷನ್ ದಕ್ಷಿಣಂ ಚಕ್ರಮಾಚಾರ್ಯಸ್ಯ ಮಹಾತ್ಮನಃ |
ಕೇ ಚೋತ್ತರಮರಕ್ಷಂತ ನಿಘ್ನತಃ ಶಾತ್ರವಾನ್ ರಣೇ || 3 ||
ಮಹಾತ್ಮರಾದ ಆಚಾರ್ಯರ ದಕ್ಷಿಣ ಪಕ್ಷವನ್ನು ಯಾರು ರಕ್ಷಿಸಿದರು? ರಣರಂಗದಲ್ಲಿ ಶತ್ರುಗಳನ್ನು ಕೊಲ್ಲುವ ಅವರ ವಾಮ ಪಕ್ಷವನ್ನು ಯಾರು ರಕ್ಷಿಸಿದರು?
ನೃತ್ಯನ್ ಸ ರಥಮಾರ್ಗೇಷು ಸರ್ವಶಸ್ತ್ರಭೃತಾಂ ವರಃ |
ಧೂಮಕೇತುರಿವ ಕ್ರುದ್ಧಃ ಕಥಂ ಮೃತ್ಯುಮುಪೇಯಿವಾನ್ || 4 ||
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ, ರಥಮಾರ್ಗಗಳಲ್ಲಿ ನರ್ತನವನ್ನು ಮಾಡುವ ಧೂಮಕೇತುವಿನಂತೆ ಕ್ರುದ್ಧರಾದ ಅವರು ಹೇಗೆ ಮರಣವನ್ನು ಹೊಂದಿದರು?
ಸಂಜಯಃ
ಸಾಯಾಹ್ನೇ ಸೈಂಧವಂ ಹತ್ವಾ ರಾಜ್ಞಾ ಪಾರ್ಥಃ ಸಮೇತ್ಯ ಚ |
ಸಾತ್ಯಕಿಶ್ಚ ಮಹೇಷ್ವಾಸೋ ದ್ರೋಣಮೇವಾಭ್ಯಧಾವತಾಮ್ || 5 ||
ಸಂಜಯ ಸಾಯಂಕಾಲದಲ್ಲಿ ಅರ್ಜುನನು ಸೈಂಧವನನ್ನು ಕೊಂದು, ಧರ್ಮರಾಜನ ಜೊತೆಯಲ್ಲಿ ಸಮಾಗಮವನ್ನು ಹೊಂದಿ, ಅವನೂ ಮತ್ತು ಮಹಾಧನುರ್ಧಾರಿಯಾದ ಸಾತ್ಯಕಿಯೂ ದ್ರೋಣರ ಮೇಲೆಯೇ ನುಗ್ಗಿದರು.
ತಥಾ ಯುಧಿಷ್ಠಿರಸ್ತೂರ್ಣಂ ಭೀಮಸೇನಶ್ಚ ಪಾಂಡವಃ |
ಪೃಥಕ್ಚಮೂಭ್ಯಾಂ ಸಂಸಕ್ತೌ ದ್ರೋಣಮೇವಾಭ್ಯಧಾವತಾಮ್ || 6 ||
ಹಾಗೆಯೇ ಪಾಂಡವರಾದ ಯುಧಿಷ್ಠಿರ ಮತ್ತು ಭೀಮಸೇನರು ಶೀಘ್ರವಾಗಿ ಬೇರೆ ಬೇರೆ ಸೈನ್ಯಗಳಿಂದ ಕೂಡಿದವರಾಗಿ ದ್ರೋಣರ ಮೇಲೆಯೇ ಧಾವಿಸಿದರು.
ತಥೈವ ನಕುಲೋ ಧೀಮಾನ್ ಸಹದೇವಶ್ಚ ದುರ್ಜಯಃ |
ಧೃಷ್ಟದ್ಯುಮ್ನಃ ಶತಾನೀಕೋ ವಿರಾಟಶ್ಚ ಸಕೇಕಯಃ |
ಮತ್ಸ್ಯಾಃ ಸಾಲ್ವೇಯಸೇನಾಶ್ಚ ದ್ರೋಣಮೇವ ಯಯುರ್ಯುಧಿ || 7 ||
ಹಾಗೆಯೇ ಮೇಧಾವಿಯಾದ ನಕುಲನೂ, ದುರ್ಜಯನಾದ ಸಹದೇವನೂ, ಧೃಷ್ಟದ್ಯುಮ್ನನೂ, ಶತಾನೀಕನೂ, ಕೇಕಯರಿಂದ ಸಹಿತನಾದ ವಿರಾಟನೂ, ಮತ್ಸ್ಯರೂ, ಸಾಲ್ವಪುತ್ರರ ಯೋಧರೂ ರಣರಂಗದಲ್ಲಿ ದ್ರೋಣರ ಮೇಲೆಯೇ ಎರಗಿದರು.
ದ್ರುಪದಶ್ಚ ತಥಾ ರಾಜಾ ಪಾಂಚಾಲ್ಯೈರಭಿರಕ್ಷಿತಃ |
ಧೃಷ್ಟದ್ಯುಮ್ನಪಿತಾ ರಾಜನ್ ದ್ರೋಣಮೇವಾಭ್ಯವರ್ತತ || 8 ||
ಎಲೈ ರಾಜನೇ, ಹಾಗೆಯೇ ಪಾಂಚಾಲರಿಂದ ರಕ್ಷಿತನಾದ ಧೃಷ್ಟದ್ಯುಮ್ನನ ತಂದೆಯಾದ ದ್ರುಪದರಾಜನು ದ್ರೋಣರ ಮೇಲೆಯೇ ಧಾವಿಸಿದನು.
ದ್ರೌಪದೇಯಾ ಮಹೇಷ್ವಾಸಾ ರಾಕ್ಷಸಶ್ಚ ಘಟೋತ್ಕಚಃ |
ಸಸೇನಾಸ್ತೇಽಭ್ಯವರ್ತಂತ ದ್ರೋಣಮೇವ ಮಹಾದ್ಯುತಿಮ್ || 9 ||
ಮಹಾಧನುರ್ಧಾರಿಗಳಾದ ದ್ರೌಪದಿಯ ಪುತ್ರರೂ, ರಾಕ್ಷಸನಾದ ಘಟೋತ್ಕಚನೂ ತಮ್ಮ ಸೈನ್ಯದಿಂದ ಸಹಿತರಾಗಿ ದ್ರೋಣರ ಮೇಲೆಯೇ ಎರಗಿದರು.
ಪ್ರಭದ್ರಕಾಶ್ಚ ಪಾಂಚಲಾಃ ಷಟ್‌ಸಹಸ್ರಾಃ ಪ್ರಹಾರಿಣಃ |
ದ್ರೋಣಮೇವಾಭ್ಯವರ್ತಂತ ಪುರಸ್ಕೃತ್ಯ ಶಿಖಂಡಿನಮ್ || 10 ||
ಪ್ರಭದ್ರಕರೂ ಮತ್ತು ಪಾಂಚಾಲರೂ ಸೇರಿ ಆರು ಸಹಸ್ರ ಪ್ರಹಾರಶೀಲರಾದ ಯೋಧರು ಶಿಖಂಡಿಯನ್ನು ಮುಂದೆ ಮಾಡಿಕೊಂಡು ದ್ರೋಣರ ಕಡೆಗೆ ನುಗ್ಗಿದರು.
ತಥೇತರೇ ನರವ್ಯಾಘ್ರಾಃ ಪಾಂಡವಾನಾಂ ಮಹಾರಥಾಃ |
ಸಹಿತಾಃ ಸಂನ್ಯವರ್ತಂತ ದ್ರೋಣಮೇವ ದ್ವಿಜರ್ಷಭಮ್ || 11 ||
ಹಾಗೆಯೇ ಪಾಂಡವರ ನರಶ್ರೇಷ್ಠರಾದ ಇತರ ಮಹಾರಥರು ಒಟ್ಟಾಗಿ ಬ್ರಾಹ್ಮಣಶ್ರೇಷ್ಠರಾದ ದ್ರೋಣರ ಮೇಲೆಯೇ ನುಗ್ಗಿದರು.
ತೇಷು ಶೂರೇಷು ಯುದ್ಧಾಯ ಗತೇಷು ಭರತರ್ಷಭ |
ಬಭೂವ ರಜನೀ ಘೋರಾ ಭೀರೂಣಾಂ ಭಯವರ್ಧಿನೀ || 12 ||
ಯೋಧಾನಾಮಶಿವಾ ರೌದ್ರಾ ರಾಜನ್ನಂತಕಗಾಮಿನೀ |
ಕುಂಜರಾಶ್ವಮನುಷ್ಯಾಣಾಂ ಪ್ರಾಣಾಂತಕರಣೀ ತದಾ || 13 ||
ಎಲೈ ಭರತಶ್ರೇಷ್ಠನೇ, ಆ ಶೂರರು ಯುದ್ಧಕ್ಕಾಗಿ ಹೋಗುತ್ತಿರಲು ಹೇಡಿಗಳಿಗೆ ಭಯವನ್ನು ಹೆಚ್ಚಿಸುವ, ಯೋಧರನ್ನು ಅಶುಭವಾದ ಭಯಂಕರವಾದ ಯಮಲೋಕಕ್ಕೆ ಸಾಗಿಸುವ, ಗಜಾಶ್ವ-ಮನುಷ್ಯರ ಪ್ರಾಣಗಳನ್ನು ಅಪಹರಿಸುವ ಘೋರವಾದ ರಾತ್ರಿಯಾಯಿತು.
ತಸ್ಯಾಂ ರಜನ್ಯಾಂ ಘೋರಾಯಾಂ ನದಂತ್ಯಃ ಸರ್ವತಃ ಶಿವಾಃ |
ನ್ಯವೇದಯನ್ ಭಯಂ ಘೋರಂ ಸಜ್ವಾಲಕವಳೈರ್ಮುಖೈಃ || 14 ||

ಆ ಘೋರವಾದ ರಾತ್ರಿಯಲ್ಲಿ ನರಿಗಳು ಎಲ್ಲ ಕಡೆಗಳಲ್ಲಿಯೂ ರೋದಿಸುತ್ತಾ ತಮ್ಮ ಮುಖದಲ್ಲಿ ಜ್ವಾಲೆಯಿಂದ ಸಹಿತವಾದ ಕವಳಗಳನ್ನು ಇಟ್ಟುಕೊಂಡು ಪ್ರಾಪ್ತವಾದ ಘೋರವಾದ ಭಯವನ್ನು ನಿವೇದಿಸಿದವು.
ಉಲೂಕಾಶ್ಚಾಪ್ಯದೃಶ್ಯಂತ ಶಂಸಂತೋ ವಿಪುಲಂ ಭಯಮ್ |
ವಿಶೇಷತಃ ಕೌರವಾಣಾಂ ಧ್ವಜಿನ್ಯಾಮತಿದಾರುಣಮ್ ॥ 15 ॥
ಗೂಬೆಗಳು ವಿಪುಲವಾದ ಭಯವನ್ನು ಅದರಲ್ಲಿಯೂ ಕೌರವರ ಸೇನೆಗೆ ಅತಿದಾರುಣವಾದ ಭಯವನ್ನು ಸೂಚಿಸುತ್ತಾ ಕಂಡುಬಂದವು.
ತತಃ ಸೈನ್ಯೇಷು ರಾಜೇಂದ್ರ ಶಬ್ದಃ ಸಮಭವನ್ಮಹಾನ್ |
ಭೇರೀಶಬ್ದೇನ ಮಹತಾ ಮೃದಂಗಾನಾಂ ಸ್ವನೇನ ಚ ॥ 16 ॥
ಗಜಾನಾಂ ಗರ್ಜಿತೈಶ್ಚಾಪಿ ತುರಂಗಾಣಾಂ ಚ ಹೇಷಿತೈಃ |
ಖುರಶಬ್ದನಿಪಾತೈಶ್ಚ ತುಮುಲಃ ಸರ್ವತೋಽಭವತ್ ॥ 17 ॥
ಎಲೈ ರಾಜೇಂದ್ರನೇ, ಆಗ ಸೈನ್ಯಗಳಲ್ಲಿ ದೊಡ್ಡ ಭೇರೀ ಶಬ್ದಗಳಿಂದಲೂ, ಮೃದಂಗಗಳ ನಾದದಿಂದಲೂ, ಗಜಗಳ ಬೃಂಹಣದಿಂದಲೂ, ಅಶ್ವಗಳ ಹೇಶಾರವ ಮತ್ತು ಖುರಶಬ್ದಗಳಿಂದಲೂ, ವಿಪುಲವಾದ ದೊಡ್ಡ ಶಬ್ದವು ಎಲ್ಲ ಕಡೆಗಳಲ್ಲಿಯೂ ಉಂಟಾಯಿತು.
ತತಃ ಸಮಭವದ್ ಯುದ್ಧಂ ಸಂಧ್ಯಾಯಾಮತಿದಾರುಣಮ್ |
ದ್ರೋಣಸ್ಯ ಚ ಮಹಾರಾಜ ಸೃಂಜಯಾನಾಂ ಚ ಸರ್ವಶಃ ॥ 18 ॥
ಎಲೈ ಮಹಾರಾಜನೇ, ಅನಂತರ ಸಂಧ್ಯಾಕಾಲದಲ್ಲಿ ದ್ರೋಣರಿಗೂ ಮತ್ತು ಎಲ್ಲ ಸೃಂಜಯರಿಗೂ ಬಹಳ ದಾರುಣವಾದ ಯುದ್ಧವು ನಡೆಯಿತು.
ತಮಸಾ ಚಾವೃತೇ ಲೋಕೇ ನ ಪ್ರಾಜ್ಞಾಯತ ಕಿಂಚನ |
ಸೈನ್ಯೇನ ರಜಸಾ ಚೈವ ಸಮಂತಾದುತ್ಥಿತೇನ ಹ ॥ 19 ॥
ರಣರಂಗವು ಕತ್ತಲೆಯಿಂದ ಆವರಿಸಲ್ಪಡುತ್ತಿರಲು ಮತ್ತು ಸೈನ್ಯದಿಂದ ಎಲ್ಲ ಕಡೆಯಲ್ಲಿಯೂ ಎದ್ದ ಧೂಳಿನಿಂದ ಯಾವುದೂ ತಿಳಿಯುತ್ತಿರಲಿಲ್ಲ.
ನರಸ್ಯಾಶ್ವಸ್ಯ ನಾಗಸ್ಯ ಸಮಸಜ್ಜತ ಶೋಣಿತಮ್ |
ನಾಪಶ್ಯಾಮ ರಜೋ ಭೌಮಂ ಕಶ್ಮಲೇನಾಭಿಸಂವೃತಾಃ ॥ 20 ॥
ಮನುಷ್ಯರ, ಅಶ್ವಗಳ ಮತ್ತು ಗಜಗಳ ರಕ್ತಗಳು ಮಿಶ್ರಣಗೊಂಡವು. ವಿಷಾದದಿಂದ ಕೂಡಿದ ನಮಗೆ ಭೂಮಿಯ ಧೂಳು ಕಾಣಲಿಲ್ಲ.
ರಾತ್ರೌ ವಂಶವನಸ್ಯೇವ ದಹ್ಯಮಾನಸ್ಯ ಪರ್ವತೇ |
ಘೋರಶ್ಚಟಚಟಾಶಬ್ದಃ ಶಸ್ತ್ರಾಣಾಂ ಪತತಾಮಭೂತ್ ॥ 21 ॥
ರಾತ್ರಿಯ ಕಾಲದಲ್ಲಿ ಪರ್ವತದಲ್ಲಿ ಉರಿಯುವ ಬಿದಿರುವನದ ಶಬ್ದದಂತೆ ಶಸ್ತ್ರಗಳ ಸಂಘಾತದಿಂದ ಉಂಟಾದ ಘೋರವಾದ ಚಟಚಟ ಶಬ್ದವು ಕೇಳಿಬಂದಿತು.
ನೈವ ಸ್ವೇ ನ ಪರೇ ರಾಜನ್ ಪ್ರಾಜ್ಞಾಯಂತ ತಮೋವೃತೇ |
ಉನ್ಮತ್ತಮಿವ ತತ್ ಸರ್ವಂ ಬಭೂವ ರಜನೀಮುಖೇ ॥ 22 ॥
ಎಲೈ ರಾಜನೇ, ಕತ್ತಲೆಯಿಂದ ಆವರಿಸಲ್ಪಟ್ಟ ರಣರಂಗದಲ್ಲಿ ತನ್ನವರಾಗಲೀ, ಶತ್ರುಗಳಾಗಲೀ ಯಾರೆಂದು ತಿಳಿಯಲಿಲ್ಲ. ರಾತ್ರಿಯ ಪ್ರಾರಂಭದ ಕಾಲದಲ್ಲಿ ಎಲ್ಲವೂ ಹುಚ್ಚುಹಿಡಿದಂತೆ ಆಯಿತು.
ಭೌಮಂ ರಜೋಽಥ ರಾಜೇಂದ್ರ ಶೋಣಿತೇನ ಪ್ರಶಾಮಿತಮ್ |
ಶಾತಕೌಂಭೈಶ್ಚ ಕವಚೈರ್ಭೂಷಣೈಶ್ಚ ತಮೋಽಭ್ಯಗಾತ್ ॥ 23 ॥
ಎಲೈ ರಾಜೇಂದ್ರನೇ, ಅನಂತರ ಭೂಮಿಯ ಧೂಳು ಹರಿಯುವ ರಕ್ತದಿಂದ ಶಾಂತವಾಯಿತು. ಸುವರ್ಣಮಯವಾದ ಕವಚಗಳಿಂದಲೂ ಮತ್ತು ಆಭರಣಗಳಿಂದಲೂ ಕತ್ತಲೆಯು ನಾಶವನ್ನು ಹೊಂದಿತು.
ತತಃ ಸಾ ಭಾರತೀ ಸೇನಾ ಮಣಿಹೇಮವಿಭೂಷಿತಾ |
ದ್ಯೌರಿವಾಸೀತ್ ಸನಕ್ಷತ್ರಾ ರಜನ್ಯಾಂ ಭರತರ್ಷಭ ॥ 24 ॥
ಗೋಮಾಯುಬಲಸಂಘುಷ್ಟಾ ಶಕ್ತಿಧ್ವಜಸಮಾಕುಲಾ |
ದಾರುಣಾಭಿರುತಾ ಘೋರಾ ಕ್ಷ್ವೇಡಿತೋತ್ಕ್ರುಷ್ಟನಾದಿತಾ ॥ 25 ॥
ಎಲೈ ಭರತರ್ಷಭನೇ, ಅನಂತರ ನರಿಗಳ ಘೋಷದಿಂದಲೂ ಮತ್ತು ಬಲಪಕ್ಷಿಗಳ ಘೋಷದಿಂದಲೂ ಕೂಡಿದ, ಶಕ್ತಿ-ಧ್ವಜಗಳಿಂದ ನಿಬಿಡವಾದ, ದಾರುಣವಾದ ಶಬ್ದಗಳಿಂದ ಕೂಡಿದ, ಸಿಂಹನಾದ ಮೊದಲಾದ ಉತ್ಕೃಷ್ಟನಾದಗಳಿಂದ ಕೂಡಿದ ಘೋರವಾದ ಕೌರವರ ಸೇನೆಯು ಮಣಿ-ಸುವಣರ್ಗಳಿಂದ ಭೂಷಿತವಾಗಿ ರಾತ್ರಿಯಲ್ಲಿ ನಕ್ಷತ್ರ ಸಹಿತವಾದ ಆಕಾಶದಂತೆ ಆಯಿತು.
ತತೋಽಭವನ್ಮಹಾಶಬ್ದಸ್ತುಮುಲೋ ಲೋಮಹರ್ಷಣಃ |
ಸಮಾವೃಣ್ವನ್ ದಿಶಃ ಸರ್ವಾ ಮಹೇಂದ್ರಾಶನಿನಿಸ್ವನಃ ॥ 26 ॥
ಅನಂತರ ತೀವ್ರವೂ, ರೋಮಾಂಚಕಾರಿಯೂ ಆದ ಮಹಾಶಬ್ದವು ಉಂಟಾಯಿತು. ಮಹೇಂದ್ರನ ವಜ್ರದ ನಾದಕ್ಕೆ ಸಮವಾದ ಘೋಷದಿಂದ ಎಲ್ಲ ದಿಕ್ಕುಗಳೂ ತುಂಬಿದವು.
ಸಾ ನಿಶೀಥೇ ಮಹಾರಾಜ ಸೇನಾಽದೃಶ್ಯತ ಭಾರತೀ |
ಅಂಗದೈಃ ಕುಂಡಲೈರ್ನಿಷ್ಕೈಃ ಶಸ್ತ್ರೈಶ್ಚೈವಾವಭಾಸಿತಾ ॥ 27 ॥
ಎಲೈ ಮಹಾರಾಜನೇ, ಆ ರಾತ್ರಿಯಲ್ಲಿ ಕೌರವ ಸೇನೆಯು ಅಂಗದಗಳಿಂದಲೂ, ಕುಂಡಲಗಳಿಂದಲೂ, ಚಿನ್ನದ ಹಾರಗಳಿಂದಲೂ

ಮತ್ತು ಶಸ್ತ್ರಗಳಿಂದಲೂ ಪ್ರಕಾಶಿಸಲ್ಪಟ್ಟು ಕಾಣುತ್ತಿದ್ದಿತು.
ತತ್ರ ನಾಗಾ ರಥಾಶ್ಚೈವ ಜಾಂಬೂನದವಿಭೂಷಿತಾಃ |
ನಿಶಾಯಾಂ ಪ್ರತ್ಯದೃಶ್ಯಂತ ಮೇಘಾ ಇವ ಸವಿದ್ಯುತಃ ॥ 28 ॥
ಅಲ್ಲಿ ಸುವರ್ಣಾಲಂಕೃತವಾದ ಗಜಗಳು ಮತ್ತು ರಥಗಳು ಮಿಂಚಿನಿಂದ ಸಹಿತವಾದ ಮೋಡಗಳಂತೆ ರಾತ್ರಿಯ ಕಾಲದಲ್ಲಿ ಕಂಡುಬಂದವು.
ಋಷ್ಟಿಶಕ್ತಿಗದಾಬಾಣಮುಸಲಪ್ರಾಸಪಟ್ಟಿಶಾಃ |
ಸಂಪತಂತೋ ವ್ಯದೃಶ್ಯಂತ ಭ್ರಾಜಮಾನಾ ಇವಾಗ್ನಯಃ ॥ 29 ॥
ಪ್ರಯೋಗಿಸಲ್ಪಡುವ ಋಷ್ಟಿ-ಶಕ್ತಿ-ಗದೆ-ಬಾಣ-ಮುಸಲ-ಪ್ರಾಸ-ಪಟ್ಟಿಶ ಮೊದಲಾದ ಆಯುಧಗಳು ಪ್ರಕಾಶಿಸುವ ಅಗ್ನಿಗಳಂತೆ ತೋರುತ್ತಿದ್ದವು.
ದುರ್ಯೋಧನಪುರೋವಾತಾಂ ರಥನಾಗಬಲಾಹಕಾಮ್ |
ವಾದಿತ್ರಘೋಷಸ್ತನಿತಾಂ ಚಾಪವಿದ್ಯುದ್ಧ್ವಜೈರ್ವೃತಾಮ್ ॥ 30 ॥
ದ್ರೋಣಪಾಂಡವಪರ್ಜನ್ಯಾಂ ಖಡ್ಗಶಕ್ತಿಗದಾಶನಿಮ್ |
ಶರಧಾರಾಸ್ತ್ರಪವನಾಂ ಭೃಶಂ ಶೀತೋಷ್ಣಸಂಕುಲಾಮ್ ॥ 31 ॥
ಘೋರಾಂ ವಿಸ್ಮಾಪನೀಮುಗ್ರಾಂ ಜೀವಿತಚ್ಛಿದಮಪ್ಲವಾಮ್ |
ತಾಂ ಪ್ರಾವಿಶನ್ನತಿಭಯಾಂ ಸೇನಾಂ ಯುದ್ಧಚಿಕೀರ್ಷವಃ ॥ 32 ॥
ದುರ್ಯೋಧನನೆಂಬ ಪೂರ್ವವಾಯುವಿನಿಂದ ಕೂಡಿದ, ಗಜ-ರಥಗಳೆಂಬ ಮೋಡಗಳಿಂದ ಕೂಡಿದ, ವಾದ್ಯಘೋಷಗಳೆಂಬ ಗುಡುಗುಗಳಿಂದ ಕೂಡಿದ, ಧನುಸ್ಸುಗಳೆಂಬ ವಿದ್ಯುದ್ಧ್ವಜಗಳಿಂದ ಕೂಡಿದ, ದ್ರೋಣ-ಪಾಂಡವರೆಂಬ ಪರ್ಜನ್ಯರಿಂದ ಕೂಡಿದ, ಖಡ್ಗ-ಶಕ್ತಿ-ಗದೆಗಳೆಂಬ ಸಿಡಿಲುಗಳಿಂದ ಕೂಡಿದ, ಶರಗಳೆಂಬ ಮಳೆಯ ಧಾರೆಗಳಿಂದ ಕೂಡಿದ, ಅಸ್ತ್ರಗಳಿಂದ ಉಂಟಾದ ವಾಯುವಿನಿಂದ ಕೂಡಿದ, ಶೀತೋಷ್ಣ ಮಿಶ್ರಿತವಾದ, ಆಶ್ಚರ್ಯಕರವಾದ, ಘೋರವಾದ, ಯೋಧರ ಮತ್ತು ವಾಹನಗಳ ಜೀವಿತವನ್ನು ಅಪಹರಿಸುವ, ದೋಣಿಯಿಲ್ಲದ ಅತಿಭಯಂಕರವಾದ ಆ ಸೈನ್ಯರೂಪವಾದ ನದಿಯನ್ನು ಯುದ್ಧವನ್ನು ಮಾಡಲು ಬಯಸಿದ ಯೋಧರು ಪ್ರವೇಶಿಸಿದರು.
ತಸ್ಮಿನ್ ರಾತ್ರಿಮುಖೇ ಘೋರೇ ಮಹಾಶಬ್ದನಿನಾದಿತೇ |
ಭೀರೂಣಾಂ ತ್ರಾಸಜನನೇ ಶೂರಾಣಾಂ ಹರ್ಷವರ್ಧನೇ ॥ 33 ॥
ರಾತ್ರಿಯುದ್ಧೇ ತದಾ ಘೋರೇ ವರ್ತಮಾನೇ ಸುದಾರುಣೇ |
ದ್ರೋಣಮಭ್ಯದ್ರುವನ್ ಕ್ರುದ್ಧಾಃ ಸಹಿತಾಃ ಪಾಂಡುಸೃಂಜಯಾಃ ॥ 34 ॥
ರಾತ್ರಿಯ ಆರಂಭದಲ್ಲಿ ಪ್ರಾರಂಭವಾದ ಘೋರವಾದ ಮಹಾಶಬ್ದದಿಂದ ಕೂಡಿದ, ಹೇಡಿಗಳಿಗೆ ಭಯಜನಕವೂ, ಶೂರರಿಗೆ ಸಂತೋಷಜನಕವೂ ಆದ ಆ ಘೋರವಾದ ರಾತ್ರಿಯ ಯುದ್ಧದಲ್ಲಿ ಪಾಂಡವ-ಸೃಂಜಯರು ಸಹಿತರಾಗಿ ಕೋಪದಿಂದ ದ್ರೋಣರ ಮೇಲೆ ಧಾವಿಸಿದರು.
ಯೇ ಯೇ ಪ್ರಮುಖತೋ ರಾಜನ್ನ್ಯವರ್ತಂತ ಮಹಾತ್ಮನಃ |
ತಾನ್ ಸರ್ವಾನ್ ವಿಮುಖಾಂಶ್ಚಕ್ರೇ ಕಾಂಶ್ಚಿನ್ನಿನ್ಯೇ ಯಮಕ್ಷಯಮ್ ॥
ಎಲೈ ರಾಜನೇ, ಪಾಂಡವರ ಸೈನ್ಯದಲ್ಲಿ ಮಹಾತ್ಮರಾದ ದ್ರೋಣರ ಎದುರಿಗೆ ಯಾರು-ಯಾರು ಬಂದರೋ ಅವರೆಲ್ಲರನ್ನೂ ದ್ರೋಣರು ಯುದ್ಧವಿಮುಖರನ್ನಾಗಿ ಮಾಡಿದರು. ಕೆಲವರನ್ನು ಯಮಲೋಕಕ್ಕೆ ಕಳುಹಿಸಿದರು.
ತಾನಿ ನಾಗಸಹಸ್ರಾಣಿ ರಥಾನಾಮಯುತಾನಿ ಚ |
ಪದಾತಿಹಯಸಂಘಾನಾಂ ಪ್ರಯುತಾನ್ಯರ್ಬುದಾನಿ ಚ |
ದ್ರೋಣೇನೈಕೇನ ನಾರಾಚೈರ್ನಿರ್ಭಿನ್ನಾನಿ ನಿಶಾಮುಖೇ ॥ 36 ॥
ರಾತ್ರಿಯ ಆರಂಭಕಾಲದಲ್ಲಿ ದ್ರೋಣರೊಬ್ಬರಿಂದಲೇ ನಾರಾಚಗಳಿಂದ ಸಹಸ್ರ, ಗಜಗಳು, ಹತ್ತು ಸಹಸ್ರ ರಥಗಳು, ಪ್ರಯುತ-ಅಬುದ ಸಂಖ್ಯೆಯ ಪದಾತಿ, ಹಯ ಸಮೂಹಗಳು ನಿರ್ಭಿನ್ನವಾದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೊಂದನೆಯ ಅಧ್ಯಾಯ
ಭೀಮಸೇನನಿಂದ ದುರ್ಮದ-ದುಷ್ಕರ್ಣಾದಿಗಳ ವಧೆ.
ಧೃತರಾಷ್ಟ್ರಃ
ತಸ್ಮಿನ್ ಪ್ರವಿಷ್ಟೇ ದುರ್ಧರ್ಷೇ ಸೃಂಜಯಾನಮಿತೌಜಸಿ |
ಅಮೃಷ್ಯಮಾಣೇ ಸಂರಬ್ಧೇ ಕಾ ವೋಽಭೂದ್ವೈ ಮತಿಸ್ತದಾ ॥ 1 ॥
ಧೃತರಾಷ್ಟ್ರ, ದುರ್ಧರ್ಷರೂ, ಅಮಿತಪರಾಕ್ರಮಿಗಳೂ ಆದ ದ್ರೋಣರು ಕೋಪಗೊಂಡು ಸೃಂಜಯರ ಸೇನೆಯನ್ನು ಪ್ರವೇಶಿಸುತ್ತಿರಲು ಆಗ ನಿಮ್ಮ ಅಭಿಪ್ರಾಯವು ಹೇಗಿದ್ದಿತು?

ದುರ್ಯೋಧನಂ ತಥಾ ಪುತ್ರಮುಕ್ತತ್ವ ಶಾಸ್ತ್ರಾತಿಗಂ ಮಮ |
ಯತ್ ಪ್ರಾವಿಶದಮೇಯಾತ್ಮಾ ಕಿಂ ಪಾರ್ಥಃ ಪ್ರತ್ಯಪದ್ಯತ ॥ 2 ॥
ಶಾಸ್ತ್ರವನ್ನು ಮೀರುವ ನನ್ನ ಪುತ್ರನಾದ ದುರ್ಯೋಧನನನ್ನು ಕುರಿತು ಹಾಗೆ ಮಾತನಾಡಿ ಅಚಿಂತ್ಯಸಾಮರ್ಥ್ಯವುಳ್ಳ ದ್ರೋಣರು ಸೈನ್ಯವನ್ನು ಪ್ರವೇಶಿಸಿದಾಗ ಯುಧಿಷ್ಠಿರನು ಏನು ಯೋಚಿಸಿದನು?
ನಿಹತೇ ಸೈಂಧವೇ ವೀರೇ ಭೂರಿಶ್ರವಸಿ ಚೈವ ಹಿ |
ಯದಭ್ಯಗಾನ್ಮಹಾತೇಜಾಃ ಪಾಂಚಾಲಾನಪರಾಜಿತಃ ॥ 3 ॥
ಕಿಮಮನ್ಯತ ದುರ್ಧರ್ಷಃ ಪ್ರವಿಷ್ಟೇ ಶತ್ರುತಾಪನೇ |
ದುರ್ಯೋಧನಶ್ಚ ಕಿಂ ಕೃತ್ಯಂ ಪ್ರಾಪ್ತಕಾಲಮಮನ್ಯತ ॥ 4 ॥
ವೀರನಾದ ಸೈಂಧವನು ಮತ್ತು ಭೂರಿಶ್ರವನು ಹತರಾಗಿ ಮಹಾತೇಜಸ್ವಿಗಳೂ, ಅಪರಾಜಿತರೂ, ಶತ್ರುತಾಪನರೂ ಆದ ದ್ರೋಣರು ತಮ್ಮ ಸೈನ್ಯವನ್ನು ಪ್ರವೇಶಿಸಿದಾಗ ದುರ್ಧರ್ಷನಾದ ಅರ್ಜುನನು ಏನು ಭಾವಿಸಿದನು? ದುರ್ಯೋಧನನಾದರೂ ಆ ಕಾಲದಲ್ಲಿ ಏನು ಮಾಡುವುದು ಯೋಗ್ಯವೆಂದು ಭಾವಿಸಿದನು?
ಕೇ ಚ ತಂ ವರದಂ ವೀರಮನ್ವಯುರ್ದ್ವಿಜಸತ್ತಮಮ್ |
ಕೇ ಚಾಸ್ಯ ಪೃಷ್ಠತೋಽಗಚ್ಛನ್ ವೀರಾಃ ಶೂರಸ್ಯ ಯುದ್ಧ್ಯತಃ |
ಕೇ ಪುರಸ್ತಾದಯುದ್ಧ್ಯಂತ ನಿಘ್ನತಃ ಶಾತ್ರವಾನ್ ರಣೇ ॥ 5 ॥
ಆಶ್ರಿತರಿಗೆ ಅಭಯವನ್ನು ಕೊಡುವ ವೀರರಾದ ಆ ದ್ವಿಜಶ್ರೇಷ್ಠರನ್ನು ಯಾರು ಹಿಂಬಾಲಿಸಿದರು? ಯುದ್ಧವನ್ನು ಮಾಡುವ ಆ ಶೂರರ ಹಿಂದೆ ಯಾವ ವೀರರು ಹೋದರು? ರಣರಂಗದಲ್ಲಿ ಶತ್ರುಗಳನ್ನು ಕೊಲ್ಲುವ ಅವರ ಮುಂದೆ ನಿಂತು ಯಾರು ಯುದ್ಧವನ್ನು ಮಾಡಿದರು?
ಮನ್ಯೇಽಹಂ ಪಾಂಡವಾನ್ ಸರ್ವಾನ್ ಭಾರದ್ವಾಜಶರಾರ್ದಿತಾನ್ |
ಶಿಶಿರೇ ಕಂಪಮಾನಾ ವೈ ಕೃಶಾ ಗಾವ ಇವಾಭಿಭೋ ॥ 6 ॥
ಎಲೈ ಜಯಶೀಲನೇ, ಪಾಂಡವರೆಲ್ಲರೂ ಶಿಶಿರ ಋತುವಿನಲ್ಲಿ ನಡುಗುವ ಕೃಶವಾದ ಗೋವುಗಳಂತೆ ದ್ರೋಣರ ಬಾಣಗಳಿಂದ ಪೀಡಿತರಾದರೆಂದು ಭಾವಿಸುತ್ತೇನೆ.
ಪ್ರವಿಶ್ಯ ಸ ಮಹೇಷ್ವಾಸಃ ಪಾಂಚಾಲಾನರಿಮರ್ದನಃ |
ಕಥಂ ನು ಪುರುಷವ್ಯಾಘ್ರಃ ಪಂಚತ್ವಮುಪಜಗ್ಮಿವಾನ್ ॥ 7 ॥
ಮಹಾಧನುರ್ಧಾರಿಗಳೂ, ಶತ್ರುಮರ್ದನರೂ ಆದ ಪುರುಷವ್ಯಾಘ್ರರಾದ ಅವರು ಪಾಂಚಾಲ ಸೇನೆಯನ್ನು ಪ್ರವೇಶಿಸಿ ಹೇಗೆ ಮರಣವನ್ನು ಹೊಂದಿದರು?
ಸರ್ವೇಷು ಸೈನ್ಯೇಷು ಚ ಸಂಗತೇಷು
ರಾತ್ರೌ ಸಮೇತೇಷು ಮಹಾರಥೇಷು |
ಸಂಲೋಡ್ಯಮಾನೇಷು ಪೃಥಗ್ವಿಧೇಷು
ಕೇ ವಸ್ತದಾನೀಂ ಮತಿಮಂತ ಆಸನ್ ॥ 8 ॥
ರಾತ್ರಿಯ ಕಾಲದಲ್ಲಿ ಎಲ್ಲ ಸೈನ್ಯಗಳೂ ಮತ್ತು ಮಹಾರಥರೂ ಕೂಡಿ ಬೇರೆ ಬೇರೆ ಸೈನ್ಯಗಳು ಪೀಡಿಸಲ್ಪಡುತ್ತಿರಲು ಆಗ ನಿಮ್ಮಲ್ಲಿ ಯಾರು ಪ್ರಜ್ಞಾವಂತರಿದ್ದರು?
ಹತಾಂಶ್ಚೈವ ವಿಷಕ್ತಾಂಶ್ಚ ಪರಾಭೂತಾಂಶ್ಚ ಶಂಸಸಿ |
ರಥಿನೋ ವಿರಥಾಂಶ್ಚೈವ ಕೃತಾನ್ ಯುದ್ಧೇಷು ಮಾಮಕಾನ್ ॥ 9 ॥
ನನ್ನವರು ಕೆಲವರು ಹತರಾದರೆಂದೂ, ಕೆಲವರು ಸೋತರೆಂದೂ, ಕೆಲವರು ಯುದ್ಧವನ್ನು ಮಾಡುತ್ತಾ ನಿಂತರೆಂದೂ ಹೇಳುತ್ತಿದ್ದೀಯೆ. ಯುದ್ಧದಲ್ಲಿ ನನ್ನ ರಥಿಕರು ರಥಹೀನರಾಗಿ ಮಾಡಲ್ಪಟ್ಟರೆಂದೂ ಹೇಳುತ್ತಿದ್ದೀಯೆ.
ಕಥಮೇಷಾಂ ತದಾ ತತ್ರ ಪಾರ್ಥಾನಾಮಪಲಾಯಿನಾಮ್ |
ಪ್ರಕಾಶಮಭವದ್ ರಾತ್ರೌ ಕಥಂ ಕುರುಷು ಸಂಜಯ ॥ 10 ॥
ರಣಭೂಮಿಯಲ್ಲಿ ಹಿಮ್ಮೆಟ್ಟದಿರುವ ಪಾಂಡವರಿಗೆ ಆ ರಾತ್ರಿಯ ಕಾಲದಲ್ಲಿ ಹೇಗೆ ಪ್ರಕಾಶವುಂಟಾಯಿತು? ಎಲೈ ಸಂಜಯನೇ, ಕುರುಗಳಿಗಾದರೂ ಹೇಗೆ ಪ್ರಕಾಶ ಉಂಟಾಯಿತು?
ಸಂಜಯಃ
ರಾತ್ರಿಯುದ್ಧೇ ತದಾ ರಾಜನ್ ವರ್ತಮಾನೇ ಸುದಾರುಣೇ |
ದ್ರೋಣಮಭ್ಯದ್ರುವನ್ ರಾತ್ರೌ ಪಾಂಡವಾಃ ಸಹಸೈನಿಕಾಃ ॥ 11 ॥
ಸಂಜಯ ಎಲೈ ರಾಜನೇ, ಅತ್ಯಂತ ದಾರುಣವಾದ ರಾತ್ರಿ ಯುದ್ಧವು ನಡೆಯುತ್ತಿರಲು ರಾತ್ರಿಯ ಕಾಲದಲ್ಲಿ ಪಾಂಡವರು ತಮ್ಮ ಸೈನಿಕರಿಂದ ಸಹಿತರಾಗಿ ದ್ರೋಣರ ಮೇಲೆ ಮುನ್ನುಗ್ಗಿದರು.
ತತೋ ದ್ರೋಣಃ ಕೇಕಯಾಂಶ್ಚ ಧೃಷ್ಟದ್ಯುಮ್ನಸ್ಯ ಚಾತ್ಮಜಾನ್ |
ಪ್ರೇಷಯನ್ ಮೃತ್ಯುಲೋಕಾಯ ಸರ್ವಾನಿಷುಭಿರಾಶುಗೈಃ ॥ 12 ॥
ಆಗ ದ್ರೋಣರು ಶೀಘ್ರಗಾಮಿಗಳಾದ ಬಾಣಗಳಿಂದ ಕೇಕಯರನ್ನೂ, ಧೃಷ್ಟದ್ಯುಮ್ನ ಪುತ್ರರನ್ನೂ ಮೃತ್ಯುಲೋಕಕ್ಕೆ ಕಳುಹಿಸಿದರು.
ತಸ್ಯ ಪ್ರಮುಖತೋ ರಾಜನ್ ಯೇಽವರ್ತಂತ ಮಹಾರಥಾಃ |
ತಾನ್ ಸರ್ವಾನ್ ಪ್ರೇಷಯಾಮಾಸ ಪರಲೋಕಾಯ ಭಾರತ ॥ 13 ॥
ಎಲೈ ಭಾರತನೇ, ದ್ರೋಣರ ಎದುರಿಗೆ ಇದ್ದ ಮಹಾರಥರನ್ನೆಲ್ಲಾ ಅವರು ಪರಲೋಕಕ್ಕೆ ಕಳುಹಿಸಿದರು.

ಪ್ರಮಥ್ನಂತಂ ತದಾ ವೀರಂ ಭಾರದ್ವಾಜಂ ಮಹಾರಥಮ್ |
ಅಭ್ಯವರ್ತತ ಸಂಕ್ರುದ್ಧಃ ಶಿಬೀ ರಾಜನ್ ಪ್ರತಾಪವಾನ್ ॥ 14 ॥
ಪಾಂಡವರ ಸೇನೆಯನ್ನು ಮರ್ದಿಸುತ್ತಿದ್ದ ವೀರರೂ ಮಹಾರಥರೂ ಆದ ದ್ರೋಣರ ಕಡೆಗೆ ಪ್ರತಾಪಶಾಲಿಯೂ, ಕೋಪಗೊಂಡವನೂ ಆದ ಶಿಬಿರಾಜನು ನುಗ್ಗಿ ಬಂದನು.
ತಮಾಪತಂತಂ ಸಂಪ್ರೇಕ್ಷ್ಯ ಪಾಂಡವಾನಾಂ ಮಹಾರಥಮ್ |
ವಿವ್ಯಾಧ ದಶಭಿರ್ದ್ರೋಣಃ ಸರ್ವಪಾರಶವೈಃ ಶರೈಃ ॥ 15 ॥
ತಮ್ಮ ಮೇಲೆ ಎರಗುತ್ತಿರುವ ಪಾಂಡವರ ಆ ಮಹಾರಥನನ್ನು ನೋಡಿ ದ್ರೋಣರು ಪೂರ್ಣವಾಗಿ ಕಬ್ಬಿಣದಿಂದ ಮಾಡಿದ ಹತ್ತು ಬಾಣಗಳಿಂದ ಅವನನ್ನು ಹೊಡೆದರು.
ತಂ ಶಿಬಿಃ ಪ್ರತಿವಿವ್ಯಾಧ ತ್ರಿಂಶತಾ ನಿಶಿತೈಃ ಶರೈಃ |
ಸಾರಥಿಂ ಚಾಸ್ಯ ಭಲ್ಲೇನ ಸ್ಮಯಮಾನೋ ನ್ಯಪಾತಯತ್ ॥ 16 ॥
ಶಿಬಿಯು ಮೂವತ್ತು ತೀಕ್ಷ್ಣವಾದ ಬಾಣಗಳಿಂದ ಅವರನ್ನು ಪ್ರತಿಯಾಗಿ ಹೊಡೆದನು ಮತ್ತು ನಗುತ್ತಾ ಅವರ ಸಾರಥಿಯನ್ನು ಒಂದು ಭಲ್ಲದಿಂದ ಹೊಡೆದು ರಥದಿಂದ ಕೆಳಗೆ ಉರುಳಿಸಿದನು.
ತಸ್ಯ ದ್ರೋಣೋ ಹಯಾನ್ ಹತ್ವಾ ಸಾರಥಿಂ ಚ ಮಹಾತ್ಮನಃ |
ಅಥಾಸ್ಯ ಸಶಿರಸ್ತ್ರಾಣಂ ಶಿರಃ ಕಾಯಾದಪಾಹರತ್ ॥ 17 ॥
ದ್ರೋಣರು ಮಹಾತ್ಮನಾದ ಅವನ ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಕೊಂದು, ಶಿರಸ್ತ್ರಾಣ ಸಹಿತವಾದ ಅವನ ಶಿರಸ್ಸನ್ನು ದೇಹದಿಂದ ಕತ್ತರಿಸಿದರು.
ಕಳಿಂಗಾನಾಂ ಚ ಸೈನ್ಯೇನ ಕಳಿಂಗಸ್ಯ ಸುತೋ ರಣೇ |
ಪೂರ್ವಂ ಪಿತೃವಧಾತ್ ಕ್ರುದ್ಧೋ ಭೀಮಸೇನಮುಪಾದ್ರವತ್ ॥ 18 ॥
ಕಳಿಂಗ ರಾಜನ ಮಗನು ಕಳಿಂಗ ಸೈನ್ಯದ ಜೊತೆಯಲ್ಲಿ ಹಿಂದೆಯೇ ತನ್ನ ತಂದೆಯ ವಧೆಯನ್ನು ಮಾಡಿದ ಕಾರಣದಿಂದ ಕ್ರುದ್ಧನಾಗಿ ಭೀಮಸೇನನ ಮೇಲೆ ಮುನ್ನುಗ್ಗಿದನು.
ಸ ಭೀಮಂ ಪಂಚಭಿರ್ವಿದ್ಧ್ವಾ ಪುನರ್ವಿವ್ಯಾಧ ಸಪ್ತಭಿಃ |
ವಿಶೋಕಂ ತ್ರಿಭಿರಾಜಘ್ನೇ ಧ್ವಜಮೇಕೇನ ಪತ್ರಿಣಾ ॥ 19 ॥
ಅವನು ಭೀಮನನ್ನು ಐದು ಬಾಣಗಳಿಂದ ಹೊಡೆದು, ಪುನಃ ಏಳು ಬಾಣಗಳಿಂದ ಹೊಡೆದನು. ಭೀಮಸೇನನ ಸಾರಥಿಯಾದ ವಿಶೋಕನನ್ನು ಮೂರು ಬಾಣಗಳಿಂದಲೂ, ರಥದ ಧ್ವಜವನ್ನು ಒಂದು ಬಾಣದಿಂದಲೂ ಹೊಡೆದನು.
ಕಳಿಂಗಾನಾಂ ತು ತಂ ಶೂರಂ ಕ್ರುದ್ಧಂ ಕ್ರುದ್ಧೋ ವೃಕೋದರಃ |
ರಥಾದ್ ರಥಮಭಿದ್ರುತ್ಯ ಮುಷ್ಟಿನಾಽಭಿಜಘಾನ ಹ ॥ 20 ॥
ಕೋಪಗೊಂಡ ವೃಕೋದರನು ತನ್ನ ರಥದಿಂದ ಅವನ ರಥಕ್ಕೆ ಹಾರಿ ಕಳಿಂಗ ದೇಶದ ಶೂರನೂ, ಕ್ರುದ್ಧನೂ ಆದ ಅವನನ್ನು ಮುಷ್ಟಿಯಿಂದ ಹೊಡೆದನು.
ತಸ್ಯ ಮುಷ್ಟಿಹತಸ್ಯಾಜೌ ಪಾಂಡವೇನ ಬಲೀಯಸಾ |
ಸರ್ವಾಣ್ಯಸ್ಥೀನಿ ಸಹಸಾ ಪ್ರಾಪತನ್ ವೈ ಪೃಥಕ್ ಪೃಥಕ್ ॥ 21 ॥
ಬಲಿಷ್ಠನಾದ ಭೀಮಸೇನನಿಂದ ರಣರಂಗದಲ್ಲಿ ಮುಷ್ಟಿಯಿಂದ ಹೊಡೆಯಲ್ಪಟ್ಟ ಅವನ ಶರೀರದ ಎಲ್ಲ ಮೂಳೆಗಳೂ ತಕ್ಷಣ ಬೇರೆ ಬೇರೆಯಾಗಿ ಬಿದ್ದವು.
ತಂ ಕರ್ಣೋ ಭ್ರಾತರಶ್ಚಾಸ್ಯ ನಾಮೃಷ್ಯಂತ ಮಹಾರಥಾಃ |
ತೇ ಭೀಮಸೇನಂ ನಾರಾಚೈರ್ಜಘ್ನುರಾಶೀವಿಷೋಪಮೈಃ ॥ 22 ॥
ಅದನ್ನು ಕರ್ಣನೂ ಮಹಾರಥರಾದ ಅವನ ತಮ್ಮಂದಿರೂ ಸಹಿಸಲಿಲ್ಲ. ಅವರು ಸರ್ಪಸದೃಶವಾದ ನಾರಾಚಗಳಿಂದ ಭೀಮಸೇನನನ್ನು ಹೊಡೆದರು.
ತತಃ ಶತ್ರುರಥಂ ತ್ಯಕ್ತ್ವಾ ಭೀಮೋ ಧ್ರುವರಥಂ ಗತಃ |
ಧ್ರುವಂ ಚಾಸ್ಯಂತಮನಿಶಂ ಮುಷ್ಟಿನಾ ಸಮಪೋಥಯತ್ |
ಸ ತಥಾ ಪಾಂಡುಪುತ್ರೇಣ ಬಲಿನಾ ನಿಹತೋಽಪತತ್ ॥ 23 ॥
ಆಗ ಭೀಮನು ಶತ್ರುರಥವನ್ನು ಬಿಟ್ಟು ಧ್ರುವನ ರಥಕ್ಕೆ ಬಂದನು. ಸತತವಾಗಿ ಬಾಣಗಳನ್ನು ಪ್ರಯೋಗಿಸುತ್ತಿದ್ದ ಧ್ರುವನನ್ನು ಮುಷ್ಟಿಯಿಂದ ಜಜ್ಜಿದನು. ಅವನೂ ಸಹ ಬಲಿಷ್ಠನಾದ ಪಾಂಡುಪುತ್ರನಾದ ಭೀಮಸೇನನಿಂದ ಹತನಾಗಿ ಕೆಳಗೆ ಬಿದ್ದನು.
ತಂ ನಿಹತ್ಯ ಮಹಾರಾಜ ಭೀಮಸೇನೋ ಮಹಾಬಲಃ |
ಜಯರಾತರಥಂ ಪ್ರಾಪ್ಯ ಮುಹುಃ ಸಿಂಹ ಇವಾನದತ್ ॥ 24 ॥
ಎಲೈ ಮಹಾರಾಜನೇ, ಮಹಾಬಲನಾದ ಭೀಮಸೇನನು ಅವನನ್ನು ಕೊಂದು ಜಯರಾತನ ರಥಕ್ಕೆ ಬಂದು ಪುನಃ ಸಿಂಹದಂತೆ ಗರ್ಜಿಸಿದನು.
ಜಯರಾತಮಥಾಕ್ಷಿಪ್ಯ ನದನ್ ಸವ್ಯೇನ ಪಾಣಿನಾ |
ತಳೇನ ನಾಶಯಾಮಾಸ ಕರ್ಣಸ್ಯೈವಾಗ್ರತಃ ಸ್ಥಿತಮ್ ॥ 25 ॥
ಗರ್ಜಿಸುತ್ತಾ ಜಯರಾತನನ್ನು ಎಡಗೈಯಿಂದ ಎಸೆದು, ಬಲ ಅಂಗೈಯಿಂದ ಕರ್ಣನ ಎದುರಿನಲ್ಲಿ ಅವನನ್ನು ನಾಶಮಾಡಿದನು.
ಕರ್ಣಸ್ತು ಪಾಂಡವೇ ಶಕ್ತಿಂ ಕಾಂಚನೀಂ ಸಮವಾಸೃಜತ್ |
ತತಸ್ತಾಮೇವ ಜಗ್ರಾಹ ಪ್ರಹಸನ್ ಪಾಂಡುನಂದನಃ ॥ 26 ॥

ಕರ್ಣನು ಭೀಮಸೇನನ ಮೇಲೆ ಸುವರ್ಣಾಲಂಕೃತವಾದ ಶಕ್ತಿಯನ್ನು ಪ್ರಯೋಗಿಸಿದನು. ಪಾಂಡುನಂದನನಾದ ಭೀಮನು ನಗುತ್ತಾ ಅದನ್ನೇ ಹಿಡಿದುಕೊಂಡನು.
ಕರ್ಣಾಯೈವ ಚ ದುರ್ಧರ್ಷಶ್ಚಿಕ್ಷೇಪಾಜೌ ವೃಕೋದರಃ |
ತಾಮಂತರಿಕ್ಷೇ ಚಿಚ್ಛೇದ ಶಕುನಿಸ್ತೈಲಪಾಯಿನಾ ॥ 27 ॥
ರಣರಂಗದಲ್ಲಿ ದುರ್ಧರ್ಷನಾದ ವೃಕೋದರನು ಅದನ್ನು ಕರ್ಣನ ಮೇಲೆಯೇ ಎಸೆದನು. ಶಕುನಿಯು ತೈಲವನ್ನು ಕುಡಿಸಿದ ಬಾಣದಿಂದ ಅದನ್ನು ಅಂತರಿಕ್ಷದಲ್ಲಿಯೇ ಕತ್ತರಿಸಿದನು.
ತತಸ್ತವ ಸುತಾ ರಾಜನ್ ಭೀಮಸ್ಯ ರಥಮಾವ್ರಜನ್ |
ಮಹತಾ ಶರವರ್ಷೇಣ ಛಾದಯಂತೋ ವೃಕೋದರಮ್ ॥ 28 ॥
ಎಲೈ ರಾಜನೇ, ಅನಂತರ ನಿನ್ನ ಪುತ್ರರು ಬಾಣಗಳ ದೊಡ್ಡ ಮಳೆಯಿಂದ ಭೀಮಸೇನನನ್ನು ಆವರಿಸುತ್ತಾ ಭೀಮಸೇನನ ರಥದ ಬಳಿಗೆ ಬಂದರು.
ದುರ್ಮದಸ್ಯ ತತೋ ಭೀಮಃ ಪ್ರಹಸನ್ನಿವ ಸಂಯುಗೇ |
ಸಾರಥಿಂ ಚ ಹಯಾಂಶ್ಚೈವ ಶರೈರ್ನಿನ್ಯೇ ಯಮಕ್ಷಯಮ್ |
ದುರ್ಮದಸ್ತು ತತೋ ಯಾನಂ ದುಷ್ಕರ್ಣಸ್ಯಾವಪುಪ್ಲುವೇ ॥ 29 ॥
ಆಗ ಭೀಮನು ರಣರಂಗದಲ್ಲಿ ನಗುತ್ತಾ ತನ್ನ ಬಾಣಗಳಿಂದ ದುರ್ಮದನ ಸಾರಥಿಯನ್ನೂ ಮತ್ತು ಅಶ್ವಗಳನ್ನೂ ಯಮಲೋಕಕ್ಕೆ ಕಳುಹಿಸಿದನು. ದುರ್ಮದನು ಅಲ್ಲಿಂದ ದುಷ್ಕರ್ಣನ ರಥಕ್ಕೆ ಹಾರಿದನು.
ತಾವೇಕರಥಮಾರೂಢೌ ಭ್ರಾತರೌ ಪರತಾಪನೌ |
ಸಂಗ್ರಾಮಶಿರಸೋ ಮಧ್ಯೇ ಭೀಮಂ ದ್ವಾವಭ್ಯಧಾವತಾಮ್ ॥
ಯಥಾಂಬುಪತಿಮಿತ್ರೌ ಹಿ ತಾರಕಂ ದೈತ್ಯಸತ್ತಮಮ್ ॥ 30 ॥
ಒಂದೇ ರಥವನ್ನು ಏರಿದ ಶತ್ರುತಾಪನರಾದ ಆ ಸಹೋದರರು ಆ ಘೋರವಾದ ಯುದ್ಧದ ಮಧ್ಯದಲ್ಲಿ ಮಿತ್ರವರುಣರು ದೈತ್ಯಶ್ರೇಷ್ಠನಾದ ತಾರಕಾಸುರನ ಮೇಲೆ ಎರಗಿದಂತೆ ಭೀಮನ ಮೇಲೆ ಎರಗಿದರು.
ತತಸ್ತು ದುರ್ಮದಶ್ಚೈವ ದುಷ್ಕರ್ಣಶ್ಚ ತವಾತ್ಮಜೌ |
ರಥಮೇಕಂ ಸಮಾರುಹ್ಯ ಭೀಮಂ ಬಾಣೈರವಿಧ್ಯತಾಮ್ ॥ 31 ॥
ಅನಂತರ ನಿನ್ನ ಪುತ್ರರಾದ ದುರ್ಮದ ಮತ್ತು ದುಷ್ಕರ್ಣರು ಒಂದೇ ರಥವನ್ನು ಏರಿ ಭೀಮನನ್ನು ಬಾಣಗಳಿಂದ ಹೊಡೆದರು.
ತತಃ ಕರ್ಣಸ್ಯ ಮಿಷತೋ ದ್ರೌಣೇರ್ದುರ್ಯೋಧನಸ್ಯ ಚ |
ಕೃಪಸ್ಯ ಸೋಮದತ್ತಸ್ಯ ಬಾಹ್ಲೀಕಸ್ಯ ಚ ಪಾಂಡವಃ ॥ 32 ॥
ದುರ್ಮದಸ್ಯ ಚ ವೀರಸ್ಯ ದುಷ್ಕರ್ಣಸ್ಯ ಚ ತಂ ರಥಮ್ |
ಪಾದಪ್ರಹಾರೇಣ ಧರಾಂ ಪ್ರಾವೇಶಯದರಿಂದಮಃ ॥ 33 ॥
ಆಗ ಕರ್ಣನೂ, ಅಶ್ವತ್ಥಾಮರೂ, ದುರ್ಯೋಧನನೂ, ಕೃಪರೂ, ಸೋಮದತ್ತನೂ, ಬಾಹ್ಲೀಕರೂ ನೋಡುತ್ತಿರುವಂತೆಯೇ ಅರಿಂದಮನಾದ ಪಾಂಡುಪುತ್ರನಾದ ಭೀಮನು ವೀರರಾದ ದುರ್ಮದ ಮತ್ತು ದುಷ್ಕರ್ಣರ ರಥವನ್ನು ಪಾದದಿಂದ ಒದ್ದು ಭೂಮಿಯ ಮೇಲೆ ಬೀಳುವಂತೆ ಮಾಡಿದನು.
ತತಃ ಸುತೌ ತೇ ಬಲಿನೌ ಶೂರೌ ದುಷ್ಕರ್ಣದುರ್ಮದೌ |
ಮುಷ್ಟಿನಾಹತ್ಯ ಸಂಕ್ರುದ್ಧಃ ಮಮರ್ದ ಚರಣೇನ ಚ ॥ 34 ॥
ಅನಂತರ ಬಲಿಷ್ಠರೂ, ಶೂರರೂ, ನಿನ್ನ ಪುತ್ರರೂ ಆದ ದುಷ್ಕರ್ಣ- ದುರ್ಮದರನ್ನು ಮುಷ್ಟಿಯಿಂದ ಗುದ್ದಿ ಕೋಪಗೊಂಡು ಪಾದದಿಂದ ಮರ್ದಿಸಿದನು.
ತತೋ ಹಾಹಾಕೃತೇ ಸೈನ್ಯೇ ದೃಷ್ಟ್ವಾ ಭೀಮಂ ನೃಪಾಬ್ರುವನ್ |
ರುದ್ರೋಽಯಂ ಭೀಮರೂಪೇಣ ಧಾರ್ತರಾಷ್ಟ್ರೇಷು ಗೃಧ್ಯತಿ ॥ 35 ॥
ಆಗ ಸೈನ್ಯದಲ್ಲಿ ಹಾಹಾಕಾರ ಉಂಟಾಗುತ್ತಿರಲು ಭೀಮನನ್ನು ನೋಡಿ ರಾಜರು ರುದ್ರದೇವನೇ ಭೀಮರೂಪದಿಂದ ಧೃತರಾಷ್ಟ್ರ ಪುತ್ರರನ್ನು ಬಯಸಿ ಸಂಹರಿಸುತ್ತಿದ್ದಾನೆ ಎಂದು ಹೇಳಿದರು.
ಏವಮುಕ್ತ್ವಾಪಲಾಯಂತ ಸರ್ವೇ ಭಾರತ ಪಾರ್ಥಿವಾಃ |
ವಿಸಂಜ್ಞಾ ವಾಹಯನ್ ವಾಹಾನ್ ನ ಚ ದ್ವೌ ಸಹ ಧಾವತಃ ॥ 36 ॥
ಎಲೈ ಭಾರತನೇ, ಹೀಗೆ ಹೇಳಿ ಎಲ್ಲ ರಾಜರೂ ಪಲಾಯನ ಮಾಡಿದರು. ಶರೀರದಲ್ಲಿ ಸರಿಯಾದ ಎಚ್ಚರವಿಲ್ಲದೆ ತಮ್ಮ ವಾಹನಗಳನ್ನು ಓಡಿಸಿದರು. ಯಾರಿಬ್ಬರೂ ಜೊತೆಯಲ್ಲಿ ಓಡಲಿಲ್ಲ.
ತತೋ ಬಲೇ ಭೃಶಲುಲಿತೇ ನಿಶಾಮುಖೇ
　　　　ಸುಪೂಜಿತೋ ನೃಪವೃಷಭೈರ್ವೃಕೋದರಃ |
ಮಹಾಬಲಃ ಕಮಲವಿಬುದ್ಧಲೋಚನೋ
　　　　ಯುಧಿಷ್ಠಿರಂ ನೃಪತಿಮಪೂಜಯದ್ ಬಲೀ ॥ 37 ॥
ಆಗ ನಿಶಾಮುಖದಲ್ಲಿ ಕೌರವಸೈನ್ಯವು ಬಹಳವಾಗಿ ಮರ್ದಿಸಲ್ಪಡುತ್ತಿರಲು ನೃಪಶ್ರೇಷ್ಠರಿಂದ ಚೆನ್ನಾಗಿ ಪೂಜಿತನಾದ ಮಹಾಬಲನೂ, ಕಮಲದಂತೆ ಕಣ್ಣುಳ್ಳವನೂ ಆದ ವೃಕೋದರನು ರಾಜನಾದ ಯುಧಿಷ್ಠಿರನನ್ನು ಪೂಜಿಸಿದನು.
ತತೋ ಯಮೌ ದ್ರುಪದವಿರಾಟಕೇಕಯಾ
　　　　ಯುಧಿಷ್ಠಿರಶ್ಚಾಪಿ ಪರಾಂ ಮುದಂ ಯಯುಃ |

ವೃಕೋದರಂ ಭೃಶಮಭಿಪೂಜಯಂಶ್ಚ ತೇ
ಯಥಾಂಧಕೇ ಪ್ರತಿನಿಹತೇ ಹರಂ ಸುರಾಃ ॥ 38 ॥
ಆಗ ನಕುಲ-ಸಹದೇವರೂ, ದ್ರುಪದ-ವಿರಾಟ-ಕೇಕಯರೂ ಮತ್ತು ಯುಧಿಷ್ಠಿರನೂ ಬಹಳ ಸಂತೋಷವನ್ನು ಹೊಂದಿದರು. ಅಂಧಕಾಸುರನ ಸಂಹಾರವಾದಾಗ ದೇವತೆಗಳು ರುದ್ರದೇವರನ್ನು ಪೂಜಿಸಿದಂತೆ ಅವರು ವೃಕೋದರನನ್ನು ಬಹಳವಾಗಿ ಪೂಜಿಸಿದರು.
ತತಃ ಸುತಾಸ್ತವ ವರುಣಾತ್ಮಜೋಪಮಾ
ರುಷಾನ್ವಿತಾಃ ಸಹ ಗುರುಣಾ ಮಹಾತ್ಮನಾ |
ವೃಕೋದರಂ ಸರಥಪದಾತಿಕುಂಜರಾ
ಯುಯುತ್ಸವೋ ಭೃಶಮಭಿಪರ್ಯವಾರಯನ್ ॥ 39 ॥
ಆಗ ವರುಣಪುತ್ರರಿಗೆ ಸಮವಾದ ಪರಾಕ್ರಮವುಳ್ಳ ನಿನ್ನ ಪುತ್ರರು ಕೋಪದಿಂದ ಕೂಡಿ ಮಹಾತ್ಮರಾದ ದ್ರೋಣರಿಂದ ಸಹಿತರಾಗಿ ತಮ್ಮ ರಥ-ಪದಾತಿ-ಗಜಗಳಿಂದ ಸಹಿತರಾಗಿ ಭೀಮನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಅವನನ್ನು ತೀವ್ರವಾಗಿ ಸುತ್ತುವರಿದು ತಡೆದರು.
ತತೋಽಭವತ್ತಿಮಿರಘನೈರಿವಾವೃತಂ
ಮಹಾಭಯೇ ಭಯದಮತೀವ ದಾರುಣಮ್ |
ನಿಶಾಮುಖೇ ಬಲವೃಕಗೃಧ್ರಮೋದನಂ
ಮಹಾತ್ಮನಾಂ ನೃಪವರಯುದ್ಧಮದ್ಭುತಮ್ ॥ 40 ॥
ಎಲೈ ರಾಜಶ್ರೇಷ್ಠನೇ, ಆಗ ಕತ್ತಲೆ ಮತ್ತು ಮೋಡಗಳಿಂದ ಆವೃತವಾದಂತಿದ್ದ, ಮಹಾಭಯಂಕರವಾದ, ಅತ್ಯಂತ ದಾರುಣವಾದ ನಿಶಾಮುಖದಲ್ಲಿ ಬಲ-ವೃಕ- ಗೃಧ್ರಗಳಿಗೆ ಸಂತೋಷವನ್ನು ಕೊಡುವ ಮಹಾತ್ಮರ ಅದ್ಭುತವಾದ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೆರಡನೆಯ ಅಧ್ಯಾಯ
ಸಾತ್ಯಕಿಯಿಂದ ಸೋಮದತ್ತನ ಪರಾಜಯ. ಅಶ್ವತ್ಥಾಮ-ಘಟೋತ್ಕಚರ ಯುದ್ಧ. ಅಶ್ವತ್ಥಾಮರಿಂದ ದ್ರುಪದಪುತ್ರರ ಮತ್ತು ಕುಂತಿಭೋಜಪುತ್ರರ ವಧೆ.
ಸಂಜಯಃ
ಪ್ರಾಯೋಪವಿಷ್ಟೇ ತು ಹತೇ ಪುತ್ರೇ ಸಾತ್ಯಕಿನಾ ತತಃ |
ಸೋಮದತ್ತೋ ಭೃಶಂ ಕ್ರುದ್ಧಃ ಸಾತ್ಯಕಿಂ ವಾಕ್ಯಮಬ್ರವೀತ್ ॥ 1 ॥
ಸಂಜಯ ಪ್ರಾಯೋಪವಿಷ್ಟನಾದ ತನ್ನ ಪುತ್ರನು ಸಾತ್ಯಕಿಯಿಂದ ಹತನಾಗುತ್ತಿರಲು ಸೋಮದತ್ತನು ಬಹಳ ಕೋಪಗೊಂಡು ಸಾತ್ಯಕಿಯನ್ನು ಕುರಿತು ಹೇಳಿದನು.
ಕ್ಷತ್ರಧರ್ಮಃ ಪುರಾ ದೃಷ್ಟೋ ಯಸ್ತು ದೇವೈರ್ಮಹಾತ್ಮಭಿಃ |
ತಂ ತ್ವಂ ಸಾತ್ವತ ಸಂತ್ಯಜ್ಯ ದಸ್ಯುಧರ್ಮೇ ಕಥಂ ರತಃ ॥ 2 ॥
ಎಲೈ ಸಾತ್ವತನೇ, ಮಹಾತ್ಮರಾದ ದೇವತೆಗಳು ಹಿಂದೆ ಕಂಡುಕೊಂಡ ಕ್ಷತ್ರಿಯ ಧರ್ಮವನ್ನು ಪರಿತ್ಯಜಿಸಿ ನೀನು ಹೇಗೆ ದಸ್ಯುಧರ್ಮದಲ್ಲಿ ನಿರತನಾಗಿದ್ದೀಯೆ?
ಪರಾಙ್ಮುಖಾಯ ದೀನಾಯ ನ್ಯಸ್ತಶಸ್ತ್ರಾಯ ಯಾಚತೇ |
ಕ್ಷತ್ರಧರ್ಮರತಃ ಪ್ರಾಜ್ಞಃ ಕಥಂ ನು ಪ್ರಹರೇದ್ ರಣೇ ॥ 3 ॥
ಯುದ್ಧ ಪರಾಙ್ಮುಖನಾದವನಿಗೆ, ದೀನನಾದವನಿಗೆ, ಶಸ್ತ್ರಸಂನ್ಯಾಸ ಮಾಡಿದವನಿಗೆ, ಬೇಡುವವನಿಗೆ ಕ್ಷತ್ರಧರ್ಮನಿಷ್ಠನಾದ ಯಾವ ಪ್ರಾಜ್ಞನು ಯುದ್ಧದಲ್ಲಿ ಹೊಡೆದಾನು?
ದ್ವಾವೇವ ಕಿಲ ವೃಷ್ಣೀನಾಂ ತತ್ರ ಖ್ಯಾತೌ ಮಹಾರಥೌ |
ಪ್ರದ್ಯುಮ್ನಶ್ಚ ಮಹಾಬಾಹುಸ್ತ್ವಂ ಚೈವ ಯುಧಿ ಸಾತ್ವತ ॥ 4 ॥
ಎಲೈ ಸಾತ್ವತನೇ, ವೃಷ್ಣಿಗಳ ಮಧ್ಯದಲ್ಲಿ ಪ್ರಖ್ಯಾತರಾದ ಮಹಾರಥರು ಇಬ್ಬರೆಯಷ್ಟೆ? ಒಬ್ಬನು ಮಹಾಬಾಹುವಾದ ಪ್ರದ್ಯುಮ್ನ ಮತ್ತು ಇನ್ನೊಬ್ಬನು ನೀನೆ.
ಕಥಂ ಪ್ರಾಯೋಪವಿಷ್ಟಾಯ ಪಾರ್ಥೇನ ಛಿನ್ನಬಾಹವೇ |
ನೃಶಂಸಂ ಪತನೀಯಂ ಚ ತಾದೃಶಂ ಕೃತವಾನಸಿ ॥ 5 ॥
ಅರ್ಜುನನಿಂದ ಬಾಹುವು ಕತ್ತರಿಸಲ್ಪಟ್ಟು ಪ್ರಾಯೋಪವಿವೇಶಕ್ಕೆ ಕುಳಿತ ಅವನಿಗೆ ಕ್ರೂರವೂ, ನೀಚವೂ ಆದ ಕಾರ್ಯವನ್ನು ನೀನು ಹೇಗೆ ಮಾಡಿದೆ?
ಶಪೇ ಸಾತ್ವತ ಪುತ್ರಾಭ್ಯಾಮಿಷ್ಟೇನ ಸುಕೃತೇನ ಚ |
ಅನತೀತಾಮಿಮಾಂ ರಾತ್ರಿಂ ಯದಿ ತ್ವಾಂ ವೀರಮಾನಿನಮ್ ॥ 6 ॥

ಅರಕ್ಷ್ಯಮಾಣಂ ಪಾರ್ಥೇನ ಜಿಷ್ಣುನಾ ಸಸುತಾನುಜಮ್ |
ನ ಹನ್ಯಾಂ ನಿರಯೇ ಘೋರೇ ಪತೇಯಂ ವೃಷ್ಣಿಪಾಂಸನ ॥ 7 ॥
ಎಲೈ ಸಾತ್ವತನೇ, ನನ್ನ ಪುತ್ರರ ಮೇಲೆ, ಬಂಧುಗಳ ಮೇಲೆ, ಪುಣ್ಯದ ಮೇಲೆ ಆಣೆ ಮಾಡಿ ಹೇಳುತಿತದ್ದೇನೆ. ಈ ರಾತ್ರಿ ಅರ್ಜುನನಿಂದ ರಕ್ಷಿಸಲ್ಪಡದಿದ್ದರೆ ವೀರಮಾನಿಯಾದ ನಿನ್ನನ್ನು ನಿನ್ನ ಮಕ್ಕಳು ಮತ್ತು ಸಹೋದರರ ಜೊತೆಯಲ್ಲಿ ಈ ರಾತ್ರಿಯು ಕಳೆಯುವುದರೊಳಗೆ ಕೊಲ್ಲದಿದ್ದರೆ ಎಲೈ ವೃಷ್ಣಿಪಾಂಸನನೇ, ನಾನು ಘೋರವಾದ ನರಕದಲ್ಲಿ ಬಿದ್ದೇನು (ಎಂದು ಹೇಳಿದನು).
ಏವಮುಕತತ್ವ ಸುಸಂಕ್ರುದ್ಧಃ ಸೋಮದತ್ತೋ ಮಹಾಬಲಃ |
ದಧ್ಮೌ ಶಂಖಂ ಚ ತಾರೇಣ ಸಿಂಹನಾದಂ ನನಾದ ಚ ॥ 8 ॥
ಹೀಗೆ ಹೇಳಿ ಬಹಳ ಕೋಪಗೊಂಡವನೂ, ಮಹಾಬಲನೂ ಆದ ಸೋಮದತ್ತನು ತಾರಸ್ವರದಲ್ಲಿ ತನ್ನ ಶಂಖವನ್ನು ಊದಿ ಸಿಂಹನಾದವನ್ನು ಮಾಡಿದನು.
ತತಃ ಕಮಲಪತ್ರಾಕ್ಷಃ ಸಿಂಹದಂಷ್ಟ್ರೋ ಮಹಾಬಲಃ |
ಸಾತ್ವತೋ ಭೃಶಸಂಕ್ರುದ್ಧಃ ಸೋಮದತ್ತಮಥಾಬ್ರವೀತ್ ॥ 9 ॥
ಆಗ ಕಮಲಪತ್ರಾಕ್ಷನೂ, ಸಿಂಹದಂಷ್ಟ್ರನೂ, ಮಹಾಬಲನೂ ಆದ ಸಾತ್ವತನು ಬಹಳ ಕೋಪಗೊಂಡು ಸೋಮದತ್ತನನ್ನು ಕುರಿತು ಹೇಳಿದನು.
ಹತೋ ಭೂರಿಶ್ರವಾ ವೀರಸ್ತವ ಪುತ್ರೋ ಮಹಾರಥಃ |
ಶಲಶ್ಚೈವ ತಥಾ ರಾಜನ್ ಭ್ರಾತೃವ್ಯಸನಕರ್ಶಿತಃ ॥ 10 ॥
ಎಲೈ ರಾಜನೇ, ನಿನ್ನ ಪುತ್ರನೂ, ಮಹಾರಥನೂ, ವೀರನೂ ಆದ ಭೂರಿಶ್ರವನು ಹತನಾಗಿದ್ದಾನೆ. ಹಾಗೆಯೇ ಅಣ್ಣನ ವ್ಯಸನದಿಂದ ಕರ್ಶಿತನಾದ ಶಲನೂ ಹತನಾಗಿದ್ದಾನೆ.
ತ್ವಾಂ ಚಾಪ್ಯದ್ಯ ವಧಿಷ್ಯಾಮಿ ಸಪುತ್ರಪಶುಬಾಂಧವಮ್ |
ತಿಷ್ಠೇದಾನೀಂ ರಣೇ ಯತ್ತಃ ಕೌರವೋಽಸಿ ವಿಶೇಷತಃ ॥ 11 ॥
ನಿನ್ನನ್ನೂ ಸಹ ಪಶು-ಪುತ್ರ-ಬಾಂಧವರ ಜೊತೆಯಲ್ಲಿ ಈ ದಿನ ಕೊಲ್ಲುವೆನು. ರಣರಂಗದಲ್ಲಿ ಈಗ ಸ್ಥಿರವಾಗಿ ನಿಲ್ಲುವವನಾಗು. ನೀನು ವಿಶೇಷವಾಗಿ ಕೌರವನಾಗಿದ್ದೀಯಷ್ಟೆ?
ಯಸ್ಮಿನ್ ದಾನಂ ದಮಃ ಶೌಚಮಹಿಂಸಾ ಹ್ರೀರ್ಧೃತಿಃ ಕ್ಷಮಾ |
ಅನಪಾಯೀನಿ ಸರ್ವಾಣಿ ನಿತ್ಯಂ ರಾಜ್ಞೋ ಯುಧಿಷ್ಠಿರೇ ॥ 12 ॥
ಮೃದಂಗಕೇತೋಸ್ತಸ್ಯ ತ್ವಂ ತೇಜಸಾ ನಿಹತಃ ಪುರಾ |
ಸಕರ್ಣಸೌಬಲಃ ಸಂಖ್ಯೇ ವಿನಾಶಂ ಸಮುಪೇಷ್ಯಸಿ ॥ 13 ॥
ಯಾವ ಯುಧಿಷ್ಠಿರನಲ್ಲಿ ದಾನ, ಇಂದ್ರಿಯನಿಗ್ರಹ, ಶೌಚ, ಅಹಿಂಸೆ, ನಾಚಿಕೆ, ಧೈರ್ಯ, ಸಹನೆ- ಈ ಎಲ್ಲ ಗುಣಗಳೂ ಎಂದೂ ಹೋಗದೆ ನಿತ್ಯದಲ್ಲಿಯೂ ನೆಲೆಸಿವೆಯೋ ಅಂತಹ ಮೃದಂಗಧ್ವಜನಾದ ಅವನ ತೇಜಸ್ಸಿನಿಂದಲೇ ನೀನು ಮೊದಲೇ ಮೃತನಾಗಿದ್ದೀಯೆ. ಇನ್ನು ಕರ್ಣ-ಶಕುನಿಗಳ ಜೊತೆಯಲ್ಲಿ ರಣರಂಗದಲ್ಲಿ ವಿನಾಶವನ್ನು ಹೊಂದುವೆ.
ಶಪೇಽಹಂ ಕೃಷ್ಣಚರಣೈರಿಷ್ಟಾಪೂರ್ತೇನ ಚೈವ ಹ |
ಯದಿ ತ್ವಾಂ ಸಸುತಂ ಪಾಪಂ ನ ಹನ್ಯಾಂ ಯುಧಿ ರೋಷಿತಃ |
ಅಪಯಾಸ್ಯಸಿ ಚೇತ್ತ್ಯಕತತ್ವ ತತೋ ಮುಕ್ತೋ ಭವಿಷ್ಯಸಿ ॥ 14 ॥
ಪಾಪಿಯಾದ ನಿನ್ನನ್ನು ನಾನು ರೋಷದಿಂದ ಕೂಡಿ ಯುದ್ಧದಲ್ಲಿ ಕೊಲ್ಲದಿದ್ದರೆ ನಾನು ಕೃಷ್ಣನ ಪಾದಗಳ ಮೇಲೆ ಮತ್ತು ನನ್ನ ಇಷ್ಟಾಪೂರ್ತಗಳ ಮೇಲೆ ಆಣೆಯನ್ನು ಮಾಡಿ ಹೇಳುತ್ತಿದ್ದೇನೆ. ರಣರಂಗವನ್ನು ಬಿಟ್ಟು ಹೊರಗೆ ಹೋದರೆ ಮಾತ್ರ ನೀನು ಮುಕ್ತನಾಗುವೆ.
ಏವಮಾಭಾಷ್ಯ ಚಾನ್ಯೋನ್ಯಂ ಕ್ರೋಧಸಂರಕ್ತಲೋಚನೌ |
ಪ್ರವೃತ್ತೌ ಶರಸಂಪಾತಂ ಕರ್ತುಂ ಪುರುಷಸತ್ತಮೌ ॥ 15 ॥
ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಪುರುಷಶ್ರೇಷ್ಠರಾದ ಅವರು ಪರಸ್ಪರವಾಗಿ ಹೀಗೆ ಮಾತನಾಡಿ ಬಾಣಗಳಿಂದ ಹೊಡೆಯಲು ಪ್ರವೃತ್ತರಾದರು.
ತತೋ ಗಜಸಹಸ್ರೇಣ ರಥಾನಾಮಯುತೇನ ಚ |
ದುರ್ಯೋಧನಃ ಸೋಮದತ್ತಂ ಪರಿವಾರ್ಯ ವ್ಯವಸ್ಥಿತಃ ॥ 16 ॥
ಆಗ ಸಹಸ್ರ ಗಜಗಳಿಂದಲೂ, ಹತ್ತು ಸಹಸ್ರ ರಥರಿಂದಲೂ ದುರ್ಯೋಧನನು ಸೋಮದತ್ತನನ್ನು ಸುತುತವರಿದು (ಅವನ ರಕ್ಷಣೆಗಾಗಿ) ನಿಂತನು.
ಶಕುನಿಶ್ಚ ಸುಸಂಕ್ರುದ್ಧಃ ಸರ್ವಶಸ್ತ್ರಭೃತಾಂ ವರಃ |
ಪುತ್ರಪೌತ್ರೈಃ ಪರಿವೃತೋ ಭ್ರಾತೃಭಿಶ್ಚೇಂದ್ರವಿಕ್ರಮೈಃ |
ಸ್ಯಾಲಸ್ತವ ಮಹಾಬಾಹುರ್ವಜ್ರಸಂಹನನೋ ಯುವಾ ॥ 17 ॥
ಸಾಗ್ರಂ ಶತಸಹಸ್ರಂ ತು ಹಯಾನಾಂ ತಸ್ಯ ಧೀಮತಃ |
ಸೋಮದತ್ತಂ ಮಹೇಷ್ವಾಸಂ ಸಮಂತಾತ್ ಪರ್ಯರಕ್ಷತ ॥ 18 ॥
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಬಹಳ ಕೋಪಗೊಂಡ, ನಿನ್ನ ಭಾವಮೈದುನನೂ, ಮಹಾಬಾಹುವೂ, ವಜ್ರಶರೀರವುಳ್ಳ ಯೋಧನೂ ಆದ ಶಕುನಿಯು ಪುತ್ರ-ಪೌತ್ರರಿಂದಲೂ, ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಸೋದರರಿಂದಲೂ ಸಹಿತನಾಗಿ ಮೇಧಾವಿಯಾದ ತನ್ನ ಬಳಿ ಇದ್ದ ಒಂದು ಲಕ್ಷ ಅಶ್ವಗಳ ಜೊತೆಯಲ್ಲಿ ಮಹಾಧನುರ್ಧಾರಿಯಾದ ಸೋಮದತ್ತನನ್ನು ಎಲ್ಲ

ಕಡೆಗಳಿಂದಲೂ ರಕ್ಷಿಸಿದನು.
ರಕ್ಷ್ಯಮಾಣಶ್ಚ ಬಲಿಭಿಶ್ಛಾದಯಾಮಾಸ ಸಾತ್ಯಕಿಮ್ ।
ತಂ ಛಾದ್ಯಮಾನಂ ವಿಶಿಖೈರ್ದೃಷ್ಟ್ವಾ ಸನ್ನತಪರ್ವಭಿಃ ।
ಧೃಷ್ಟದ್ಯುಮ್ನೋಽಭ್ಯಯಾತ್ ಕ್ರುದ್ಧಃ ಪ್ರಗೃಹ್ಯ ಮಹತೀಂ ಚಮೂಮ್ ॥
ಬಲಿಷ್ಠರಿಂದ ರಕ್ಷಿಸಲ್ಪಟ್ಟ ಸೋಮದತ್ತನು ಸಾತ್ಯಕಿಯನ್ನು ಬಾಣಗಳಿಂದ ಮುಚ್ಚಿಹಾಕಿದನು. ಬಾಗಿದ ತುದಿಯುಳ್ಳ ಬಾಣಗಳಿಂದ ಸಾತ್ಯಕಿಯು ಮುಚ್ಚಲ್ಪಡುವುದನ್ನು ನೋಡಿ ಕೋಪಗೊಂಡ ಧೃಷ್ಟದ್ಯುಮ್ನನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಅವನ ರಕ್ಷಣೆಗಾಗಿ ಬಂದನು.
ಚಂಡವಾತಾಭಿಸೃಷ್ಟಾನಾಮುದಧೀನಾಮಿವ ಸ್ವನಃ ।
ಆಸೀದ್ರಾಜನ್ ಬಲೌಘಾನಾಮನ್ಯೋನ್ಯಮಭಿನಿಘ್ನತಾಮ್ ॥ 20 ॥
ಎಲೈ ರಾಜನೇ, ಪರಸ್ಪರವಾಗಿ ಹೊಡೆದಾಡುವ ಎರಡು ಸೈನ್ಯಗಳಿಂದ ಉಂಟಾದ ಧ್ವನಿಯು ಬಿರುಗಾಳಿಗೆ ಎದ್ದ ಸಮುದ್ರಗಳ ಘೋಷದಂತೆ ಇದ್ದಿತು.
ವಿವ್ಯಾಧ ಸೋಮದತ್ತಸ್ತು ಸಾತ್ವತಂ ನವಭಿಃ ಶರೈಃ ।
ಸಾತ್ಯಕಿರ್ದಶಭಿಶ್ಚೈನಮವಧೀತ್ ಕುರುಪುಂಗವಮ್ ॥ 21 ॥
ಸೋಮದತ್ತನು ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದ ಹೊಡೆದನು. ಸಾತ್ಯಕಿಯು ಕುರುಶ್ರೇಷ್ಠನಾದ ಸೋಮದತ್ತನನ್ನು ಹತ್ತು ಬಾಣಗಳಿಂದ ಹೊಡೆದನು.
ಸೋಽತಿವಿದ್ಧೋ ಬಲವತಾ ಸಮರೇ ದೃಢಧನ್ವನಾ ।
ರಥೋಪಸ್ಥಂ ಸಮಾಸಾದ್ಯ ಮುಮೋಹ ಗತಚೇತನಃ ॥ 22 ॥
ದೃಢ ಧನುಸ್ಸನ್ನು ಹೊಂದಿದ ಬಲಿಷ್ಠನಾದ ಸಾತ್ಯಕಿಯಿಂದ ರಣರಂಗದಲ್ಲಿ ಗಾಢವಾಗಿ ಹೊಡೆಯಲ್ಪಟ್ಟ ಸೋಮದತ್ತನು ರಥಪೀಠದ ಬಳಿಗೆ ಬಂದು ಪ್ರಜ್ಞೆಯನ್ನು ಕಳೆದುಕೊಂಡು ಮೂರ್ಛೆ ಹೋದನು.
ತಂ ವಿಮೂಢಂ ಸಮಾಲಕ್ಷ್ಯ ಸಾರಥಿಸ್ತ್ವರಯಾಽನ್ವಿತಃ ।
ಅಪೋವಾಹ ರಣಾದ್ ವೀರಂ ಸೋಮದತ್ತಂ ಮಹಾರಥಮ್ ॥
ಅವನು ಮೂರ್ಛೆ ಹೋದುದನ್ನು ಗಮನಿಸಿದ ಅವನ ಸಾರಥಿಯು ತ್ವರೆಯಿಂದ ಕೂಡಿದವನಾಗಿ ಮಹಾರಥನಾದ, ವೀರನಾದ ಸೋಮದತ್ತನನ್ನು ರಣರಂಗದಿಂದ ಹೊರಗೆ ಕರೆದುಕೊಂಡು ಹೋದನು.
ತಂ ವಿಸಂಜ್ಞಂ ಸಮಾಲೋಕ್ಯ ಯುಯುಧಾನಶರಾರ್ದಿತಮ್ ।
ದ್ರೌಣಿರಭ್ಯದ್ರವತ್ ಕ್ರುದ್ಧಃ ಸಾತ್ವತಂ ರಣಮೂರ್ಧನಿ ॥ 24 ॥
ಸಾತ್ಯಕಿಯ ಬಾಣಗಳಿಂದ ಪೀಡಿತನಾಗಿ ಸೋಮದತ್ತನು ಮೂರ್ಛೆ ಹೋದುದನ್ನು ನೋಡಿ ಕೋಪಗೊಂಡ ಅಶ್ವತ್ಥಾಮರು ರಣರಂಗದಲ್ಲಿ ಸಾತ್ವತನ ಮೇಲೆ ಧಾವಿಸಿ ಬಂದರು.
ತಮಾಪತಂತಂ ಸಂಪ್ರೇಕ್ಷ್ಯ ಶೈನೇಯಸ್ಯ ರಥಂ ಪ್ರತಿ ।
ಭೈಮಸೇನಿಃ ಸುಸಂಕ್ರುದ್ಧಃ ಪ್ರತ್ಯಮಿತ್ರಮವಾರಯತ್ ॥ 25 ॥
ಸಾತ್ಯಕಿಯ ರಥದ ಕಡೆಗೆ ಶೀಘ್ರವಾಗಿ ಬರುತ್ತಿದ್ದ ಅವರನ್ನು ನೋಡಿ ಭೀಮಸೇನನ ಪುತ್ರನಾದ ಘಟೋತ್ಕಚನು ಬಹಳ ಕೋಪಗೊಂಡು ಶತ್ರುವಾದ ಅಶ್ವತ್ಥಾಮರನ್ನು ತಡೆದನು.
ಕಾರ್ಷ್ಣಾಯಸಮಯಂ ಘೋರಮೃಕ್ಷಚರ್ಮಾವೃತಂ ಮಹತ್ ।
ಯುಕ್ತಂ ಗಜನಿಭೈರ್ವಾಹೈರ್ನ ಹಯೈರ್ನಾಪಿ ವಾ ಗಜೈಃ ॥ 26 ॥
ವಿಕ್ಷಿಪ್ತಮಷ್ಟಚಕ್ರೇಣ ವಿವೃತಾಕ್ಷೇಣ ಕೂಜತಾ ।
ಧ್ವಜೇನೋಚ್ಛ್ರಿತತುಂಡೇನ ಗೃಧ್ರರಾಜೇನ ರಾಜತಾ ॥ 27 ॥
ಲೋಹಿತಾರ್ದ್ರಪತಾಕಂ ತಮಾಂತ್ರಮಾಲಾವಿಭೂಷಿತಮ್ ।
ಅಷ್ಟಚಕ್ರಸಮಾಯುಕ್ತಮಾಸ್ಥಾಯ ವಿಪುಲಂ ರಥಮ್ ॥ 28 ॥
ಶೂಲಮುದ್ಗರಧಾರಿಣ್ಯಾ ಶೈಲಪಾದಪಹಸ್ತಯಾ ।
ರಕ್ಷಸಾಂ ಘೋರರೂಪಾಣಾಮಕ್ಷೋಹಿಣ್ಯಾ ಸಮಾವೃತಃ ॥ 29 ॥
ಕಬ್ಬಿಣದಿಂದ ಮಾಡಲ್ಪಟ್ಟ, ಕರಡಿಯ ಚರ್ಮದಿಂದ ಆವೃತವಾದ, ದೊಡ್ಡದಾದ ಮತ್ತು ಘೋರವಾದ, ಅಶ್ವಗಳಿಂದಲೂ ಅಲ್ಲದೆ ಗಜಗಳಿಂದಲೂ ಅಲ್ಲದೆ ಗಜದಂತಹ ಅಶ್ವಗಳಿಂದ ಹೂಡಲ್ಪಟ್ಟ, ಎಂಟು ಚಕ್ರಗಳಿಂದ ಕೂಡಿದ, ಸ್ಪಷ್ಟವಾಗಿ ಕಾಣುವ ನಾದವನ್ನು ಮಾಡುವ ತೂಬಿನಿಂದ ಕೂಡಿದ, ಬಾಯಿ ತೆರೆದ ಗೃಧ್ರ ರಾಜನ ಧ್ವಜದಿಂದ ವಿರಾಜಿಸುವ, ರಕ್ತದಿಂದ ಆರ್ದ್ರವಾದಂತಹ ಪತಾಕೆಯನ್ನು ಹೊಂದಿದ, ಕರುಳಿನ ಮಾಲೆಗಳಿಂದ ವಿಭೂಷಿತವಾದ, ಎಂಟುಮೂಲೆಗಳಿಂದ ಕೂಡಿದ, ಶೂಲ- ಮುದ್ಗರಾದಿ ಶಸ್ತ್ರಗಳನ್ನು ಹೊಂದಿದ, ವಿಸ್ತಾರವಾದ ರಥವನ್ನು ಏರಿ, ಶೈಲಗಳನ್ನೂ ಮತ್ತು ವೃಕ್ಷಗಳನ್ನೂ ಕೈಯಲ್ಲಿ ಹಿಡಿದ, ಘೋರರೂಪರಾದ ರಾಕ್ಷಸರ ಒಂದು ಅಕ್ಷೋಹಿಣಿ ಸೈನ್ಯದಿಂದ ಕೂಡಿ (ಅಶ್ವತ್ಥಾಮರ ಕಡೆಗೆ ಧಾವಿಸಿದನು).
ತಮುದ್ಯತಮಹಾಚಾಪಂ ನಿಶಾಮ್ಯ ವ್ಯಥಿತಾ ನೃಪಾಃ ।
ಯುಗಾಂತಕಾಲಸಮಯೇ ದಂಡಹಸ್ತಮಿವಾಂತಕಮ್ ॥ 30 ॥
ಯುಗಾಂತಕಾಲದಲ್ಲಿ ಕೈಯಲ್ಲಿ ದಂಡವನ್ನು ಹಿಡಿದ ಯಮನಂತೆ ಇರುವ, ಧನುಸ್ಸನ್ನು ಎತ್ತಿ ಹಿಡಿದ, ಅವನನ್ನು ನೋಡಿ ಕೌರವ ರಾಜರು ವ್ಯಥೆಯನ್ನು ಹೊಂದಿದರು.
ಭಯಾರ್ದಿತಾ ಪ್ರಚುಕ್ಷೋಭ ಪುತ್ರಸ್ಯ ತವ ವಾಹಿನೀ ।

ವಾಯುನಾ ಕ್ಷೋಭಿತಾವರ್ತಾ ಗಂಗೇವೋರ್ಧ್ವತರಂಗಿಣೀ ॥ 31 ॥
ಬಿರುಗಾಳಿಯಿಂದ ಸುಳಿಗಳಿಗೆ ಕ್ಷೋಭೆ ಉಂಟಾದ, ಊರ್ಧ್ವಗಾಮಿಯಾದ ಗಂಗೆಯಂತೆ ನಿನ್ನ ಪುತ್ರನ ಸೈನ್ಯವು ಭಯದಿಂದ ಪೀಡಿತವಾಗಿ ಕ್ಷೋಭೆಯನ್ನು ಹೊಂದಿತು.
ಘಟೋತ್ಕಚಪ್ರಯುಕ್ತೇನ ಸಿಂಹನಾದೇನ ಭೀಷಿತಾಃ |
ಪ್ರಸುಸ್ರುವುರ್ಗಜಾ ಮೂತ್ರಂ ವಿವ್ಯಥುಶ್ಚ ನರಾ ಭೃಶಮ್ ॥ 32 ॥
ಘಟೋತ್ಕಚನು ಮಾಡಿದ ಸಿಂಹನಾದದಿಂದ ಭೀಷಿತರಾಗಿ ಗಜಗಳು ಮೂತ್ರವನ್ನು ಸುರಿಸಿದವು, ಯೋಧರು ಬಹಳ ವ್ಯಥೆಯಿಂದ ಕೂಡಿದರು.
ತತೋಽಶ್ಮವೃಷ್ಟಿರತ್ಯರ್ಥಮಾಸೀತ್ ತತ್ರ ಸಮಂತತಃ |
ಸಂಧ್ಯಾಕಾಲಾಧಿಕಬಲೈಃ ಪ್ರಮುಕ್ತಾ ರಾಕ್ಷಸೈಃ ಕ್ಷಿತೌ ॥ 33 ॥
ಅನಂತರ ಸಂಧ್ಯಾಕಾಲದಲ್ಲಿ ವಿಶೇಷ ಬಲದಿಂದ ಯುಕ್ತರಾಗುವ ಆ ರಾಕ್ಷಸರಿಂದ ಪ್ರೇರಿಸಲ್ಪಟ್ಟ ಕಲ್ಲುಗಳ ಮಳೆಯು ಎಲ್ಲ ಕಡೆಗಳಲ್ಲಿಯೂ ಭೂಮಿಯ ಮೇಲೆ ಬಿದ್ದಿತು.
ಆಯಸಾನಿ ಚ ಚಕ್ರಾಣಿ ಭುಶುಂಡ್ಯಃ ಪ್ರಾಸತೋಮರಾಃ |
ಪತಂತ್ಯವಿರಲಾಃ ಶೂಲಾಃ ಶತಘ್ನ್ಯಃ ಪಟ್ಟಿಶಾಸ್ತಥಾ ॥ 34 ॥
ಕಬ್ಬಿಣದ ಚಕ್ರಗಳು, ಭುಶುಂಡಿಗಳು, ಪ್ರಾಸ-ತೋಮರಗಳು, ನಿಬಿಡವಾದ ಶೂಲಗಳು, ಶತಘ್ನಿಗಳು ಮತ್ತು ಪಟ್ಟಿಸಗಳು ಬಿದ್ದವು.
ತದುಗ್ರಮತಿರೌದ್ರಂ ಚ ದೃಷ್ಟ್ವಾ ಯುದ್ಧಂ ನರಾಧಿಪಾಃ |
ತನಯಾಸ್ತವ ಕರ್ಣಶ್ಚ ವ್ಯಥಿತಾಃ ಪ್ರಾದ್ರವನ್ ದಿಶಃ ॥ 35 ॥
ಅತ್ಯಂತ ಭಯಂಕರವಾದ ಆ ಯುದ್ಧವನ್ನು ನೋಡಿ ರಾಜರೂ, ನಿನ್ನ ಪುತ್ರರೂ ಮತ್ತು ಕರ್ಣನೂ ವ್ಯಥೆಯಿಂದ ಕೂಡಿದವರಾಗಿ ದಿಕ್ಕು-ದಿಕ್ಕುಗಳಿಗೆ ಓಡಿ ಹೋದರು.
ತತ್ರೈಕೋಽಸ್ತ್ರಬಲಶ್ಲಾಘೀ ದ್ರೌಣಿರ್ಮಾನೀ ನ ವಿವ್ಯಥೇ |
ವ್ಯಧಮಚ್ಚ ಶರೈರ್ಮಾಯಾಂ ಘಟೋತ್ಕಚವಿನಿರ್ಮಿತಾಮ್ ॥ 36 ॥
ಅವರಲ್ಲಿ ಅಸ್ತ್ರಬಲವನ್ನು ಶ್ಲಾಘಿಸುವ, ಆತ್ಮಾಭಿಮಾನವುಳ್ಳ ಅಶ್ವತ್ಥಾಮರೊಬ್ಬರು ವ್ಯಥೆಯನ್ನು ಹೊಂದಲಿಲ್ಲ. ಅವರು ಘಟೋತ್ಕಚನಿಂದ ನಿರ್ಮಿತವಾದ ಮಾಯೆಯನ್ನು ತಮ್ಮ ಬಾಣಗಳಿಂದ ವಿನಾಶಗೊಳಿಸಿದರು.
ನಿಹತಾಯಾಂ ತು ಮಾಯಾಯಾಮಮರ್ಷೀ ಸ ಘಟೋತ್ಕಚಃ |
ವಿಸಸರ್ಜ ಶರಾನ್ ಘೋರಾಂಸ್ತೇಽಶ್ವತ್ಥಾಮಾನಮಾವಿಶನ್ |
ಭುಜಗಾ ಇವ ವೇಗೇನ ವಲ್ಮೀಕಂ ಕ್ರೋಧಮೂರ್ಛಿತಾಃ ॥ 37 ॥
ತನ್ನ ಮಾಯೆಯು ನಾಶವನ್ನು ಹೊಂದುತ್ತಿರಲು ರೋಷಗೊಂಡ ಘಟೋತ್ಕಚನು ಘೋರವಾದ ಬಾಣಗಳನ್ನು ಪ್ರಯೋಗಿಸಿದನು. ಅವು ಕ್ರೋಧ ಮೂರ್ಛಿತವಾದ ಸರ್ಪಗಳು ವೇಗವಾಗಿ ಹುತ್ತದೊಳಗೆ ಹೋಗುವಂತೆ ಅಶ್ವತ್ಥಾಮರ ಶರೀರವನ್ನು ಪ್ರವೇಶಿಸಿದವು.
ತೇ ಶರಾ ರುಧಿರಾಭ್ಯಕ್ತಾ ಭಿತ್ತ್ವಾ ಶಾರದ್ವತೀಸುತಮ್ |
ವಿವಿಶುರ್ಧರಣೀಂ ಶೀಘ್ರ ರುಗ್ಮಪುಂಖಾಃ ಶಿಲಾಶಿತಾಃ ॥ 38 ॥
ರುಗ್ಮಪುಂಖಗಳನ್ನು ಹೊಂದಿ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ರಕ್ತಸಿಕ್ತವಾದ ಆ ಬಾಣಗಳು ಶಾರದ್ವತೀ ಪುತ್ರರಾದ ಅಶ್ವತ್ಥಾಮರನ್ನು ಭೇದಿಸಿ ಶೀಘ್ರವಾಗಿ ಭೂಮಿಯಲ್ಲಿ ಇಳಿದವು.
ಅಶ್ವತ್ಥಾಮಾ ತು ಸಂಕ್ರುದ್ಧೋ ಲಘುಹಸ್ತಃ ಪ್ರತಾಪವಾನ್ |
ಘಟೋತ್ಕಚಮಭಿಕ್ರುದ್ಧಂ ಬಿಭೇದ ದಶಭಿಃ ಶರೈಃ ॥ 39 ॥
ಶೀಘ್ರ ಹಸ್ತರೂ, ಪ್ರತಾಪಶಾಲಿಗಳೂ ಆದ ಅಶ್ವತ್ಥಾಮರು ಬಹಳ ಕ್ರುದ್ಧರಾಗಿ ಕ್ರುದ್ಧನಾದ ಘಟೋತ್ಕಚನನ್ನು ಹತ್ತು ಬಾಣಗಳಿಂದ ಭೇದಿಸಿದರು.
ಘಟೋತ್ಕಚೋಽತಿವಿದ್ಧಸ್ತು ದ್ರೋಣಪುತ್ರೇಣ ಮರ್ಮಸು |
ಚಕ್ರಂ ಶತಸಹಸ್ರಾರಮಗೃಹ್ಣಾದ್ ವ್ಯಥಿತೋ ಭೃಶಮ್ ॥ 40 ॥
ದ್ರೋಣ ಪುತ್ರರಿಂದ ಮರ್ಮಸ್ಥಾನಗಳಲ್ಲಿ ಗಾಢವಾಗಿ ಹೊಡೆಯಲ್ಪಟ್ಟ ಘಟೋತ್ಕಚನು ಬಹಳ ವ್ಯಥೆಯಿಂದ ಕೂಡಿ ಶತಸಹಸ್ರ ಅರಗಳಿರುವ ಚಕ್ರವನ್ನು ತೆಗೆದುಕೊಂಡನು.
ಕ್ಷುರಾಂತಂ ಬಾಲಸೂರ್ಯಾಭಂ ಮಣಿವಜ್ರವಿಭೂಷಿತಮ್ |
ಅಶ್ವತ್ಥಾಮ್ನಸ್ತು ಚಿಕ್ಷೇಪ ಭೈಮಸೇನಿರ್ಜಿಘಾಂಸಯಾ ॥ 41 ॥
ಭೀಮಸೇನನ ಪುತ್ರನಾದ ಘಟೋತ್ಕಚನು ಕತ್ತಿಯಂತೆ ಅಲುಗನ್ನು ಹೊಂದಿದ್ದ, ಬಾಲಸೂರ್ಯ ಕಾಂತಿಯನ್ನು ಹೊಂದಿದ್ದ, ಮಣಿವಜ್ರ ವಿಭೂಷಿತವಾದ ಆ ಚಕ್ರವನ್ನು ಅಶ್ವತ್ಥಾಮರನ್ನು ಕೊಲ್ಲಲು ಬಯಸಿ ಅವರ ಮೇಲೆ ಎಸೆದನು.
ವೇಗೇನ ಮಹತಾ ಗಚ್ಛದ್ ವಿಕ್ಷಿಪ್ತಂ ದ್ರೌಣಿನಾ ಶರೈಃ |
ಅಭಾಗ್ಯಸ್ಯೇವ ಸಂಕಲ್ಪಸ್ತನ್ಮೋಘಂ ನ್ಯಪತದ್ ಭುವಿ ॥ 42 ॥
ಘಟೋತ್ಕಚನಿಂದ ಪ್ರಯೋಗಿಸಲ್ಪಟ್ಟು ಬಹಳ ವೇಗದಿಂದ ಸಾಗುತ್ತಿದ್ದ ಆ ಚಕ್ರವು ಅಶ್ವತ್ಥಾಮರಿಂದ ಬಾಣಗಳಿಂದ ಭೇದಿಸಲ್ಪಟ್ಟು ಭಾಗ್ಯಹೀನನ ಸಂಕಲ್ಪದಂತೆ ವ್ಯರ್ಥವಾಗಿ ಭೂಮಿಯ ಮೇಲೆ ಬಿದ್ದಿತು.
ಘಟೋತ್ಕಚಸ್ತತಸ್ತೂರ್ಣಂ ದೃಷ್ಟ್ವಾ ಚಕ್ರಂ ನಿಪಾತಿತಮ್ |
ದ್ರೌಣಿಂ ಪ್ರಾಚ್ಛಾದಯದ್ ಬಾಣೈಃ ಸ್ವರ್ಭಾನುರಿವ ಭಾಸ್ಕರಮ್ ॥ 43 ॥
ಘಟೋತ್ಕಚನು ತನ್ನ ಚಕ್ರವು ನಾಶ ಹೊಂದಿ ಭೂಮಿಯ ಮೇಲೆ ಬಿದ್ದುದನ್ನು ನೋಡಿ ತನ್ನ ಬಾಣಗಳಿಂದ ರಾಹುವು ಸೂರ್ಯನನ್ನು

ಮುತ್ತಿದಂತೆ ಅಶ್ವತ್ಥಾಮರನ್ನು ಮುಚ್ಚಿ ಹಾಕಿದನು.
ಘಟೋತ್ಕಚಸುತಃ ಶ್ರೀಮಾನ್ ಭಿನ್ನಾಂಜನಚಯೋಪಮಃ |
ರುರೋಧ ದ್ರೌಣಿಮಾಯಾಂತಂ ಪ್ರಭಂಜನಮಿವಾದ್ರಿರಾಟ್ ॥ 44 ॥
ಘಟೋತ್ಕಚನ ಪುತ್ರನಾದ ಕಾಂತಿಯುಕ್ತನಾದ ಸ್ಪಷ್ಟವಾದ ಕಾಡಿಗೆಯ ರಾಶಿಯಂತಿದ್ದ ಕಾಂತಿಯುಕ್ತನಾದ ಅಂಜನಪರ್ವನು ಸಾಗಿ ಬರುತ್ತಿದ್ದ ಅಶ್ವತ್ಥಾಮರನ್ನು ವಾಯುವನ್ನು ಪರ್ವತವು ತಡೆಯುವಂತೆ ತಡೆದನು.
ಪೌತ್ರೇಣ ಭೀಮಸೇನಸ್ಯ ಶರೈಃ ಸೋಽಂಜನಪರ್ವಣಾ |
ಬಭೌ ಮೇಘೇನ ಧಾರಾಭಿರ್ಗಿರಿರ್ಮೇರುರಿವಾರ್ದಿತಃ ॥ 45 ॥
ಭೀಮಸೇನನ ಪೌತ್ರನಾದ ಅಂಜನಪರ್ವನಿಂದ ಬಾಣಗಳಿಂದ ಪೀಡಿಸಲ್ಪಟ್ಟ ಅಶ್ವತ್ಥಾಮರು ಮೇಘದಿಂದ ಜಲಧಾರೆಗಳಿಂದ ಪೀಡಿಸಲ್ಪಟ್ಟ ಪರ್ವತದಂತೆ ಶೋಭಿಸಿದರು.
ಅಶ್ವತ್ಥಾಮಾ ತ್ವಸಂಭ್ರಾಂತೋ ರುದ್ರೋಪೇಂದ್ರೇಂದ್ರವಿಕ್ರಮಃ |
ಧ್ವಜಮೇಕೇನ ಬಾಣೇನ ಚಿಚ್ಛೇದಾಂಜನಪರ್ವಣಃ ॥ 46 ॥
ರುದ್ರ-ಉಪೇಂದ್ರ-ಇಂದ್ರರ ಪರಾಕ್ರಮವನ್ನು ಹೊಂದಿದ ಅಶ್ವತ್ಥಾಮರಾದರೋ ಯಾವ ಗಾಬರಿಯೂ ಇಲ್ಲದೆ ಅಂಜನಪರ್ವನ ಧ್ವಜವನ್ನು ಕತ್ತರಿಸಿದರು.
ದ್ವಾಭ್ಯಾಂ ತು ರಥಯಂತಾರಂ ತ್ರಿಭಿಶ್ಚಾಸ್ಯ ತ್ರಿವೇಣುಕಮ್ |
ಧನುರೇಕೇನ ಚಿಚ್ಛೇದ ಚತುರ್ಭಿಶ್ಚತುರೋ ಹಯಾನ್ ॥ 47 ॥
ಎರಡು ಬಾಣಗಳಿಂದ ಅವನ ಸಾರಥಿಯನ್ನೂ, ಮೂರು ಬಾಣಗಳಿಂದ ರಥದ ತ್ರಿವೇಣುವನ್ನೂ, ಒಂದು ಬಾಣದಿಂದ ಅವನ ಧನುಸ್ಸನ್ನೂ, ನಾಲ್ಕು ಬಾಣಗಳಿಂದ ನಾಲ್ಕು ಅಶ್ವಗಳನ್ನೂ ಕತ್ತರಿಸಿದರು.
ವಿರಥಸ್ಯೋದ್ಯತಂ ಹಸ್ತಾದ್ಧೇಮಬಿಂದುಭಿರಾಚಿತಮ್ |
ವಿಶಿಖೇನ ಸುತೀಕ್ಷ್ಣೇನ ಖಡ್ಗಮಸ್ಯ ದ್ವಿಧಾಽಕರೋತ್ ॥ 48 ॥
ರಥವನ್ನು ಕಳೆದುಕೊಂಡು ಚಿನ್ನದ ಬಿಂದುಗಳಿಂದ ನಿಬಿಡವಾದ ಖಡ್ಗವನ್ನು ಎತ್ತಿಹಿಡಿದ ಅಂಜನಪರ್ವನ ಖಡ್ಗವನ್ನು ತೀಕ್ಷ್ಣವಾದ ಬಾಣದಿಂದ ಎರಡು ಭಾಗವಾಗಿ ಕತ್ತರಿಸಿದರು.
ಗದಾ ಹೇಮಾಂಗದಾ ರಾಜಂಸ್ತೂರ್ಣಂ ಹೈಡಿಂಬಸೂನುನಾ |
ಭ್ರಾಮ್ಯೋತ್ಕ್ಷಿಪ್ತಾ ಶರೈಃ ಸಾಪಿ ದ್ರೌಣಿನಾಭ್ಯಾಹತಾಽಪತತ್ ॥ 49 ॥
ಎಲೈ ರಾಜನೇ, ಚಿನ್ನದ ಪಟ್ಟಿಯುಳ್ಳ ಗದೆಯು ಆಗ ಘಟೋತ್ಕಚಪುತ್ರನಿಂದ ಚೆನ್ನಾಗಿ ತಿರುಗಿಸಿ ಅಶ್ವತ್ಥಾಮರ ಮೇಲೆ ಎಸೆಯಲ್ಪಟ್ಟಿತು. ಅಶ್ವತ್ಥಾಮರು ಅದನ್ನೂ ಬಾಣಗಳಿಂದ ಹೊಡೆದು ಕೆಡವಿದರು.
ತತೋಽಂತರಿಕ್ಷಮುತ್ಪತ್ಯ ಕಾಲಮೇಘ ಇವೋನ್ನದನ್ |
ವವರ್ಷಾಂಜನಪರ್ವಾ ಸ ದ್ರುಮವರ್ಷಂ ನಭಸ್ತಳಾತ್ ॥ 50 ॥
ಅನಂತರ ಅಂಜನಪರ್ವನು ಕಾಲಮೇಘದಂತೆ ಗರ್ಜಿಸುತ್ತಾ ಅಂತರಿಕ್ಷಕ್ಕೆ ಹಾರಿ ಅಂತರಿಕ್ಷದಿಂದ ಅಶ್ವತ್ಥಾಮರ ಮೇಲೆ ವೃಕ್ಷಗಳ ಮಳೆಯನ್ನು ಸುರಿಸಿದನು.
ತತೋ ಮಾಯಾಧರಂ ದ್ರೌಣಿರ್ಘಟೋತ್ಕಚಸುತಂ ದಿವಿ |
ಮಾರ್ಗಣೈರಭಿವಿವ್ಯಾಧ ಘನಂ ಸೂರ್ಯ ಇವಾಂಶುಭಿಃ ॥ 51 ॥
ಆಗ ಅಶ್ವತ್ಥಾಮರು ಮಾಯಾವಿಯಾದ ಘಟೋತ್ಕಚಪುತ್ರನನ್ನು ಆಕಾಶದಲ್ಲಿ ಮೋಡವನ್ನು ಸೂರ್ಯನು ತನ್ನ ಕಿರಣಗಳಿಂದ ನಾಶಪಡಿಸುವಂತೆ ತಮ್ಮ ಬಾಣಗಳಿಂದ ಹೊಡೆದರು.
ಸೋಽವತೀರ್ಯ ಪುನಸ್ತಸ್ಥೌ ರಥೇ ಹೇಮಪರಿಷ್ಕೃತೇ |
ಮಹೀಧರ ಇವಾತ್ಯುಚ್ಚಃ ಶ್ರೀಮಾನಂಜನಪರ್ವತಃ ॥ 52 ॥
ಕಾಂತಿಯುಕ್ತನಾದ ಅಂಜನಪರ್ವನು ಅಂತರಿಕ್ಷದಿಂದ ಇಳಿದು ಪುನಃ ಸುವರ್ಣಾಲಂಕೃತವಾದ ತನ್ನ ರಥದಲ್ಲಿ ಎತ್ತರವಾದ ಪರ್ವತದಂತೆ ನಿಂತನು.
ತಮಯಸ್ಮಯವರ್ಮಾಣಂ ದ್ರೌಣಿರ್ಭೀಮಾತ್ಮಜಾತ್ಮಜಮ್ |
ಜಘಾನಾಂಜನಪರ್ವಾಣಂ ಮಹೇಶ್ವರ ಇವಾಂಧಕಮ್ ॥ 53 ॥
ಭೀಮನ ಪುತ್ರನ ಪುತ್ರನಾದ, ಕಬ್ಬಿಣದ ಕವಚವನ್ನು ಧರಿಸಿದ ಅಂಜನಪರ್ವನನ್ನು ಅಶ್ವತ್ಥಾಮರು ಮಹೇಶ್ವರನು ಅಂಧಕಾಸುರನನ್ನು ಕೊಂದಂತೆ ಕೊಂದುಹಾಕಿದರು.
ಅಥ ದೃಷ್ಟ್ವಾ ಹತಂ ಪುತ್ರಮಶ್ವತ್ಥಾಮ್ನಾ ಮಹಾಬಲಮ್ |
ದ್ರೌಣೇಃ ಸಕಾಶಮಭ್ಯೇತ್ಯ ರೋಷಾತ್ ಪ್ರಚಲಿತಾಂಗದಃ ॥ 54 ॥
ಪ್ರಾಹ ವಾಕ್ಯಮಸಂಭ್ರಾಂತೋ ವೀರಂ ಶಾರದ್ವತೀಸುತಮ್ |
ದಹಂತಂ ಪಾಂಡವಾನೀಕಂ ವನಮಗ್ನಿಮಿವೋದ್ಧತಮ್ ॥ 55 ॥
ತಿಷ್ಠ ತಿಷ್ಠ ನ ಮೇ ಜೀವನ್ ದ್ರೋಣಪುತ್ರ ಗಮಿಷ್ಯಸಿ |
ತ್ವಾಮದ್ಯ ನಿಹನಿಷ್ಯಾಮಿ ಕ್ರೌಂಚಮಗ್ನಿಸುತೋ ಯಥಾ ॥ 56 ॥
ಮಹಾಬಲನಾದ ತನ್ನ ಪುತ್ರನು ಅಶ್ವತ್ಥಾಮರಿಂದ ಹತನಾದುದನ್ನು ನೋಡಿ ಘಟೋತ್ಕಚನು ರೋಷದಿಂದ ನಡುಗುವ ಬಾಹುಗಳನ್ನುಳ್ಳವನಾಗಿ ಅಶ್ವತ್ಥಾಮರ ಸಮೀಪಕ್ಕೆ ಬಂದು ಶಾರದ್ವತೀ ಸುತರೂ, ವೀರರೂ, ಉದ್ಧತವಾದ ಅಗ್ನಿಯು ವನವನ್ನು ಸುಡುವಂತೆ ಪಾಂಡವ ಸೇನೆಯನ್ನು ದಹಿಸುವವರೂ ಆದ ಅಶ್ವತ್ಥಾಮರನ್ನು ಕುರಿತು ಯಾವ ಗಾಬರಿಯೂ ಇಲ್ಲದೆ `ಎಲೈ

ದ್ರೋಣಪುತ್ರನೇ, ನಿಲ್ಲು, ನಿಲ್ಲು. ಜೀವ ಸಹಿತನಾಗಿ ನೀನು ನನ್ನಿಂದ ಹೊರಗೆ ಹೋಗುವುದಿಲ್ಲ. ಅಗ್ನಿಸುತನಾದ ಷಣ್ಮುಖನು ಕ್ರೌಂಚ ಪರ್ವತವನ್ನು ಸೀಳಿದಂತೆ ನಾನು ಈ ದಿನ ನಿನ್ನನ್ನು ಕೊಲ್ಲುವೆನು' ಎಂದು ಹೇಳಿದನು.
ಅಶ್ವತ್ಥಾಮಾ
ಗಚ್ಛ ವತ್ಸ ಸಹಾನ್ಯೈಸ್ತ್ವಂ ಯುದ್ಧ್ಯಸ್ವಾಮರವಿಕ್ರಮ |
ನ ಹಿ ಪುತ್ರೇಣ ಹೈಡಿಂಬೇ ಪಿತಾ ನ್ಯಾಯ್ಯಂ ಪ್ರಬಾಧಿತುಮ್ ॥ 57 ॥
ಅಶ್ವತ್ಥಾಮ ಮಗು, ದೇವಪರಾಕ್ರಮವನ್ನು ಹೊಂದಿದವನೇ, ಹೋಗಿ ಬೇರೆಯವರ ಜೊತೆಯಲ್ಲಿ ಯುದ್ಧವನ್ನು ಮಾಡು. ಹಿಡಿಂಬಿಯ ಪುತ್ರನೇ, ಪುತ್ರನು ತಂದೆಯನ್ನು ಬಾಧಿಸುವುದು ನ್ಯಾಯವಲ್ಲ.
ಕಾಮಂ ಖಲು ನ ಮೇ ರೋಷೋ ಹೈಡಿಂಬೇ ವಿದ್ಯತೇ ತ್ವಯಿ |
ಕಿಂ ತು ರೋಷಾನ್ವಿತೋ ಜಂತುರ್ಹನ್ಯಾದಾತ್ಮಾನಮಪ್ಯುತ ॥ 58 ॥
ಎಲೈ ಹಿಡಿಂಬಿಯ ಪುತ್ರನೇ, ಖಂಡಿತವಾಗಿ ನನಗೆ ನಿನ್ನಲ್ಲಿ ರೋಷವಿಲ್ಲ. ಆದರೆ ರೋಷಾನ್ವಿತನಾದ ವ್ಯಕ್ತಿಯು ತನ್ನನ್ನೇ ತಾನು ಕೊಂದುಕೊಳ್ಳುತ್ತಾನೆ.
ಸಂಜಯಃ
ಶ್ರುತ್ವೈತತ್ಕ್ರೋಧತಾಮ್ರಾಕ್ಷಃ ಪುತ್ರಶೋಕಸಮನ್ವಿತಃ |
ಅಶ್ವತ್ಥಾಮಾನಮಾಯಸ್ತೋ ಭೈಮಸೇನಿರಭಾಷತ ॥ 59 ॥
ಸಂಜಯ ಈ ಮಾತುಗಳನ್ನು ಕೇಳಿ ಪುತ್ರಶೋಕಸಮನ್ವಿತನಾದ, ಭೀಮಸೇನ ಪುತ್ರನಾದ ಘಟೋತ್ಕಚನು ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ಕ್ರೋಧವನ್ನು ಹೊಂದಿ ಅಶ್ವತ್ಥಾಮರನ್ನು ಕುರಿತು ಮಾತನಾಡಿದನು.
ಕಿಮಹಂ ಕಾತರೋ ದ್ರೌಣೇ ಪೃಥಗ್ಜನ ಇವಾಹವೇ |
ಭೀಮಾತ್ ಖಲ್ವಹಮುತ್ಪನ್ನಃ ಕುರೂಣಾಂ ವಿಪುಲೇ ಕುಲೇ ॥ 60 ॥
ಪಾಂಡವಾನಾಮಹಂ ಪುತ್ರಃ ಸಮರೇಷ್ವನಿವರ್ತಿನಾಮ್ |
ರಕ್ಷಸಾಮಧಿರಾಜೋಽಹಂ ದಶಗ್ರೀವಸಮೋ ಬಲೇ ॥ 61 ॥
ತಿಷ್ಠ ತಿಷ್ಠ ನ ಮೇ ಜೀವನ್ ದ್ರೋಣಪುತ್ರ ಗಮಿಷ್ಯಸಿ |
ಯುದ್ಧಶ್ರದ್ಧಾಮಹಂ ತೇಽದ್ಯ ವಿನೇಷ್ಯಾಮಿ ರಣಾಜಿರೇ ॥ 62 ॥
ಎಲೈ ಅಶ್ವತ್ಥಾಮರೇ, ನಾನು ಸಾಮಾನ್ಯ ಜನರಂತೆ ಯುದ್ಧಕ್ಕೆ ಹೆದರುವವನೇ? ಕುರುಗಳ ಪವಿತ್ರವಾದ ಕುಲದಲ್ಲಿ ನಾನು ಭೀಮಸೇನನಿಂದ ಜನಿಸಿದ್ದೇನೆ. ನಾನು ಯುದ್ಧದಲ್ಲಿ ಹಿಮ್ಮೆಟ್ಟದಿರುವ ಪಾಂಡವರ ಪುತ್ರ. ನಾನು ರಾಕ್ಷಸರಿಗೆ ಅಧಿಪತಿ. ಬಲದಲ್ಲಿ ರಾವಣನಿಗೆ ಸಮಾನನಾದವನು. ದ್ರೋಣಪುತ್ರರೇ, ನಿಲ್ಲಿ, ನಿಲ್ಲಿ. ನೀವು ಜೀವ ಸಹಿತವಾಗಿ ಇಲ್ಲಿಂದ ಹೋಗುವುದಿಲ್ಲ. ಈ ದಿನ ನಾನು ರಣರಂಗದಲ್ಲಿ ನಿಮ್ಮ ಯುದ್ಧಶ್ರದ್ಧೆಯನ್ನು ನಾಶಮಾಡುವೆನು ಎಂದು ಹೇಳಿದನು.
ಇತ್ಯುಕ್ತ್ವಾ ರೋಷತಾಮ್ರಾಕ್ಷೋ ರಾಕ್ಷಸಃ ಸುಮಹಾಬಲಃ |
ದ್ರೌಣಿಮಭ್ಯದ್ರವತ್ ಕ್ರುದ್ಧೋ ಗಜೇಂದ್ರಮಿವ ಕೇಸರೀ ॥ 63 ॥
ಹೀಗೆ ಹೇಳಿ ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ಅತ್ಯಂತ ಬಲಶಾಲಿಯಾದ ರಾಕ್ಷಸನು ಕ್ರೋಧಗೊಂಡ ಸಿಂಹವು ಗಜೇಂದ್ರನ ಮೇಲೆ ಎರಗಿದಂತೆ ಅಶ್ವತ್ಥಾಮರ ಮೇಲೆ ಮುನ್ನುಗ್ಗಿದನು.
ರಥಾಕ್ಷಮಾತ್ರೈರಿಷುಭಿರಭ್ಯವರ್ಷದ್ ಘಟೋತ್ಕಚಃ |
ರಥಿನಾಮೃಷಭಂ ದ್ರೌಣಿಂ ಧಾರಾಭಿರಿವ ತೋಯದಃ ॥ 64 ॥
ರಥದ ಅಕ್ಷದಂತಹ ಸ್ಥೂಲವಾದ ಬಾಣಗಳಿಂದ ಘಟೋತ್ಕಚನು ಮೋಡವು ಜಲಧಾರೆಗಳಿಂದ ಪರ್ವತವನ್ನು (ಪೀಡಿಸುವಂತೆ) ರಥಿಶ್ರೇಷ್ಠರಾದ ಅಶ್ವತ್ಥಾಮರನ್ನು ಪೀಡಿಸಿದನು.
ಶರವೃಷ್ಟಿಂ ಶರೈರ್ದ್ರೌಣಿರಪ್ರಾಪ್ತಾಂ ತಾಂ ವ್ಯಶಾತಯತ್ |
ತತೋಽಂತರಿಕ್ಷೇ ಬಾಣಾನಾಂ ಸಂಗ್ರಾಮೋಽನ್ಯ ಇವಾಭವತ್ ॥ 65 ॥
ಅಶ್ವತ್ಥಾಮರು ತಮ್ಮ ಬಾಣಗಳಿಂದ ಆ ಘಟೋತ್ಕಚನ ಬಾಣಗಳು ತಮ್ಮ ಬಳಿಗೆ ಬರುವುದಕ್ಕಿಂತ ಮೊದಲೇ ಅವುಗಳನ್ನು ನಾಶಗೊಳಿಸಿದರು. ಆಗ ಆಕಾಶದಲ್ಲಿಯೇ ಬಾಣಗಳ ಪರಸ್ಪರ ಸಂಗ್ರಾಮವುಂಟಾಯಿತು.
ಅಥಾಸ್ತ್ರಸಂಘರ್ಷಕೃತೈರ್ವಿಸ್ಫುಲಿಂಗೈಃ ಸಮಾಬಭೌ |
ವಿಭಾವರೀಮುಖೇ ವ್ಯೋಮ ಖದ್ಯೋತೈರಿವ ಚಿತ್ರಿತಮ್ ॥ 66 ॥
ಅಸ್ತ್ರಗಳ ಪರಸ್ಪರ ಸಂಘರ್ಷದಿಂದ ಉಂಟಾದ ಅಗ್ನಿಯ ಕಿಡಿಗಳಿಂದ ಆ ರಾತ್ರಿಯ ಮುಖದಲ್ಲಿ ಆಕಾಶವು ಮಿಣುಕು ಹುಳುಗಳಿಂದ ಚಿತ್ರಿತವಾದಂತೆ ಕಂಡುಬಂದಿತು.
ನಿಶಾಮ್ಯ ನಿಹತಾಂ ಮಾಯಾಂ ದ್ರೌಣಿನಾ ರಣಮಾನಿನಾ |
ಘಟೋತ್ಕಚಸ್ತತೋ ಮಾಯಾಂ ಸಸರ್ಜಾಂತರ್ಹಿತಃ ಪುನಃ ॥ 67 ॥
ಯುದ್ಧದಲ್ಲಿ ಅಭಿಮಾನವುಳ್ಳ ಅಶ್ವತ್ಥಾಮರಿಂದ ತನ್ನ ಮಾಯೆಯು ಹತವಾದುದನ್ನು ನೋಡಿ ಘಟೋತ್ಕಚನು ಪುನಃ ಅಂತರ್ಧಾನವನ್ನು ಹೊಂದಿ ಮಾಯೆಯನ್ನು ಸೃಷ್ಟಿಸಿದನು.
ಸೋಽಭವದ್ ಗಿರಿರತ್ಯುಚ್ಚಃ ಶಿಖರೈಸ್ತರುಸಂಕಟೈಃ |
ಶೂಲಪ್ರಾಸಾಸಿಮುಸಲಜಲಪ್ರಸ್ರವಣೋ ಮಹಾನ್ ॥ 68 ॥
ಅವನು ವೃಕ್ಷಸಮೂಹದಿಂದ ಕೂಡಿದ ಶಿಖರಗಳನ್ನುಳ್ಳ, ಶೂಲ-ಪ್ರಾಸ-ಖಡ್ಗ- ಮುಸಲಗಳೆಂಬ ಜಲಧಾರೆಗಳಿಂದ ಕೂಡಿದ, ಎತ್ತರವಾದ ದೊಡ್ಡ ಪರ್ವತವಾದನು.

ತಮಂಜನಚಯಪ್ರಖ್ಯಂ ದ್ರೌಣಿರ್ದೃಷ್ಟ್ವಾ ಮಹೀಧರಮ್ |
ಪ್ರಪತದ್ಭಿಶ್ಚ ಬಹುಭಿಃ ಶಸ್ತ್ರಸ್ಯೌಘೈರ್ನ ಚುಕ್ಷುಭೇ ॥ 69 ॥
ಕಾಡಿಗೆಯ ರಾಶಿಯಂತಿದ್ದ ಆ ಪರ್ವತವನ್ನು ನೋಡಿದ ಅಶ್ವತ್ಥಾಮರು ಅದರಿಂದ ಬೀಳುತ್ತಿದ್ದ ಅನೇಕ ಶಸ್ತ್ರಸಮೂಹಗಳಿಂದ ಕ್ಷೋಭೆಯನ್ನು ಹೊಂದಲಿಲ್ಲ.
ತತಃ ಸ್ಮಯನ್ನಿವ ದ್ರೌಣಿರ್ವಜ್ರಮಸ್ತ್ರಮುದೀರಯತ್ |
ಸ ತೇನಾಸ್ತ್ರೇಣ ಶೈಲೇಂದ್ರಃ ಕ್ಷಿಪ್ತಃ ಕ್ಷಿಪ್ರಮನಶ್ಯತ ॥ 70 ॥
ಆಗ ಅಶ್ವತ್ಥಾಮರು ನಗುತ್ತಾ ವಜ್ರಾಸ್ತ್ರವನ್ನು ಪ್ರಯೋಗಿಸಿದರು. ಆ ಅಸ್ತ್ರದಿಂದ ಹೊಡೆಯಲ್ಪಟ್ಟ ಆ ಶ್ರೇಷ್ಠ ಪರ್ವತವು ಶೀಘ್ರವಾಗಿ ನಾಶವನ್ನು ಹೊಂದಿತು.
ತತಃ ಸ ತೋಯದೋ ಭೂತ್ವಾ ನೀಲಃ ಸೇಂದ್ರಾಯುಧೋ ದಿವಿ |
ಅಶ್ಮವೃಷ್ಟಿಭಿರತ್ಯುಗ್ರೋ ದ್ರೌಣಿಮಾಚ್ಛಾದಯದ್ ರಣೇ ॥ 71 ॥
ಅನಂತರ ಅತಿಘೋರನಾದ ಅವನು ಕಾಮನಬಿಲ್ಲಿನಿಂದ ಕೂಡಿದ ಕಪ್ಪು ಮೋಡವಾಗಿ ಆಕಾಶದಲ್ಲಿದ್ದು ಅಶ್ವತ್ಥಾಮರನ್ನು ರಣರಂಗದಲ್ಲಿ ಕಲ್ಲಿನ ಮಳೆಯಿಂದ ಮುಚ್ಚಿದನು.
ಅಥ ಸಂಧಾಯ ವಾಯವ್ಯಮಸ್ತ್ರಮಸ್ತ್ರವಿದಾಂ ವರಃ |
ವ್ಯಧಮದ್ ದ್ರೋಣತನಯೋ ನೀಲಮೇಘಂ ಸಮುತ್ಥಿತಮ್ ॥ 72 ॥
ಅನಂತರ ಅಸ್ತ್ರಜ್ಞರಲ್ಲಿ ಶ್ರೇಷ್ಠರಾದ ದ್ರೋಣಪುತ್ರರು ವಾಯವ್ಯಾಸ್ತ್ರವನ್ನು ಹೂಡಿ ಆಕಾಶದಲ್ಲಿದ್ದ ನೀಲಮೇಘವನ್ನು ನಾಶಮಾಡಿದರು.
ಸ ಮಾರ್ಗಣಗಣೈರ್ದ್ರೌಣಿರ್ದಿಶಃ ಪ್ರಚ್ಛಾದ್ಯ ಸರ್ವತಃ |
ಶತಂ ರಥಸಹಸ್ರಾಣಾಂ ಜಘಾನ ದ್ವಿಪದಾಂ ವರಃ ॥ 73 ॥
ಮನುಷ್ಯಶ್ರೇಷ್ಠರಾದ ಅಶ್ವತ್ಥಾಮರು ತಮ್ಮ ಬಾಣಗಳ ಸಮೂಹದಿಂದ ಎಲ್ಲ ದಿಕ್ಕುಗಳನ್ನೂ ಆಚ್ಛಾದಿಸಿ ಒಂದು ಲಕ್ಷ ರಥರನ್ನು ಕೊಂದರು.
ಸ ದೃಷ್ಟ್ವಾ ಪುನರಾಯಾಂತಂ ರಥೇನಾಯತಕಾರ್ಮುಕಮ್ |
ಘಟೋತ್ಕಚಮಸಂಭ್ರಾಂತಂ ರಾಕ್ಷಸೈರ್ಬಹುಭಿರ್ವೃತಮ್ ॥ 74 ॥
ಸಿಂಹಶಾರ್ದೂಲಸದೃಶೈರ್ಮತ್ತದ್ವಿರದವಿಕ್ರಮೈಃ |
ಗಜಸ್ಥೈಶ್ಚ ರಥಸ್ಥೈಶ್ಚ ವಾಜಿಪೃಷ್ಠಗತೈರಪಿ ॥ 75 ॥
ವಿವೃತಾಸ್ಯಶಿರೋಗ್ರೀವೈರ್ಹೈಡಿಂಬಾನುಚರೈಃ ಸಹ |
ಪೌಲಸ್ತ್ಯೈರ್ಯಾತುಧಾನೈಶ್ಚ ತಾಮಸೈಶ್ಚೋಗ್ರವಿಕ್ರಮೈಃ ॥ 76 ॥
ನಾನಾಶಸ್ತ್ರಧರೈರ್ವೀರೈರ್ನಾನಾಕವಚಭೂಷಣೈಃ |
ಮಹಾಬಲೈರ್ಭೀಮರವೈಃ ಸಂರಂಭೋದ್ವೃತ್ತಲೋಚನೈಃ ॥ 77 ॥
ಉಪಸ್ಥಿತೈಸ್ತತೋ ಯುದ್ಧೇ ರಾಕ್ಷಸೈರ್ಯುದ್ಧದುರ್ಮದೈಃ |
ವಿಷಣ್ಣಮಭಿಸಂಪ್ರೇಕ್ಷ್ಯ ಪುತ್ರಂ ತೇ ದ್ರೌಣಿರಬ್ರವೀತ್ ॥ 78 ॥
ಸಿಂಹ-ವ್ಯಾಘ್ರಸದೃಶರಾದ, ಮತ್ತಗಜ ಪರಾಕ್ರಮವುಳ್ಳ, ಗಜವನ್ನು ಏರಿದ, ರಥವನ್ನು ಏರಿದ, ಅಶ್ವಗಳನ್ನು ಏರಿದ, ಬಾಯ್ತೆರೆದ ಶಿರೋಗ್ರೀವಗಳನ್ನೂ ತೋರಿಸುತ್ತಿದ್ದ ಘಟೋತ್ಕಚನ ಅನುಚರರಿಂದಲೂ ಕೂಡಿ, ಅನೇಕ ರಾಕ್ಷಸರ ಜೊತೆಯಲ್ಲಿ ಪರಿವೃತನಾಗಿ ತಾಮಸರಾದ, ಉಗ್ರವಿಕ್ರಮಶಾಲಿಗಳಾದ ಪೌಲಸ್ತ್ಯರಿಂದಲೂ ಮತ್ತು ಯಾತುಧಾನರಿಂದಲೂ ಕೂಡಿ, ನಾನಾ ಶಸ್ತ್ರಗಳನ್ನು ಧರಿಸಿ, ನಾನಾ ಕವಚ-ಭೂಷಣ- ಗಳನ್ನು ಧರಿಸಿದ ವೀರರಿಂದಲೂ ಕೂಡಿ, ಮಹಾಬಲರೂ ಭಯಂಕರ ನಾದಗಳನ್ನು ಮಾಡುವವರೂ ಕೋಪದಿಂದ ತೆರೆದ ಕಣ್ಣುಳ್ಳವರೂ ಯುದ್ಧದುರ್ಮದರೂ, ಯುದ್ಧದಲ್ಲಿ ಸಮೀಪದಲ್ಲಿರುವವರೂ ಆದ ರಾಕ್ಷಸರಿಂದ ಕೂಡಿದ ಘಟೋತ್ಕಚನನ್ನು ನೋಡಿ ವಿಷಾದ ಹೊಂದಿದ ನಿನ್ನ ಪುತ್ರನನ್ನು ಕುರಿತು ಅಶ್ವತ್ಥಾಮರು ಹೇಳಿದರು.
ತಿಷ್ಠ ದುರ್ಯೋಧನಾದ್ಯ ತ್ವಂ ನ ಕಾರ್ಯಃ ಸಂಭ್ರಮಸ್ತ್ವಯಾ |
ಸಹೈಭಿರ್ಭ್ರಾತೃಭಿರ್ವೀರೈಃ ಪಾರ್ಥಿವೈಶ್ಚೇಂದ್ರವಿಕ್ರಮೈಃ ॥ 79 ॥
ನಿಹನಿಷ್ಯಾಮ್ಯಮಿತ್ರಾಂಸ್ತೇ ನ ತವಾಸ್ತಿ ಪರಾಜಯಃ |
ಸತ್ಯಂ ತೇ ಪ್ರತಿಜಾನಾಮಿ ಪರ್ಯಾಶ್ವಾಸಯ ವಾಹಿನೀಮ್ ॥ 80 ॥
ದುರ್ಯೋಧನನೇ, ಗಾಬರಿಗೊಳ್ಳಬೇಡ. ನೀನು ವೀರರಾದ ನಿನ್ನ ಸಹೋದರರಿಂದಲೂ, ಇಂದ್ರನ ಪರಾಕ್ರಮವನ್ನು ಹೊಂದಿದ ರಾಜರಿಂದಲೂ ಕೂಡಿ ಈ ದಿನ ನಿಲ್ಲು. ನಿನ್ನ ಶತ್ರುಗಳನ್ನು ನಾನು ಕೊಲ್ಲುವೆನು. ನಿನಗೆ ಪರಾಜಯ ಉಂಟಾಗುವುದಿಲ್ಲ. ನಿನಗೆ ಸತ್ಯಪ್ರತಿಜ್ಞೆಯನ್ನು ಮಾಡಿ ಹೇಳುತಿತದ್ದೇನೆ. ನಿನ್ನ ಸೈನ್ಯವನ್ನು ಸಮಾಧಾನಗೊಳಿಸು (ಎಂದು ಹೇಳಿದರು).
ದುರ್ಯೋಧನಃ
ನ ತ್ವೇತದದ್ಭುತಂ ಮನ್ಯೇ ಯತ್ತೇ ಮಹದಿದಂ ಮನಃ |
ಅಸ್ಮಾಸು ಚ ಪರಾ ಭಕ್ತಿಸ್ತವ ಗೌತಮಿನಂದನ ॥ 81 ॥
ದುರ್ಯೋಧನ ಎಲೈ ಗೌತಮಿಪುತ್ರರೇ, ನಿಮ್ಮ ಈ ದೊಡ್ಡ ಮಾತುಗಳು ನಮ್ಮಲ್ಲಿ ನಿಮಗಿರುವ ನಿಷ್ಠೆಯು ಆಶ್ಚರ್ಯಕರವಲ್ಲವೆಂದು ನನಗೆ ತೋರಿಸುತ್ತವೆ.
ಸಂಜಯಃ
ಅಶ್ವತ್ಥಾಮಾನಮುಕ್ತ್ವೈವಂ ತತಃ ಸೌಬಲಮಬ್ರವೀತ್ |

ವೃತಃ ಶತಸಹಸ್ರೇಣ ರಥಾನಾಂ ರಣಶೋಭಿನಾಮ್ ॥ 82 ॥
ಷಷ್ಟ್ಯಾ ಗಜಸಹಸ್ರೈಶ್ಚ ಪ್ರಯಾಹಿ ತ್ವಂ ಧನಂಜಯಮ್ ।
ಕರ್ಣಶ್ಚ ವೃಷಸೇನಶ್ಚ ಕೃಪೋ ನೀಲಸ್ತಥೈವ ಚ ॥ 83 ॥
ಉದೀಚ್ಯಾಃ ಕೃತವರ್ಮಾ ಚ ಪುರುಮಿತ್ರಃ ಶ್ರುತಾರ್ಪಣಃ ।
ದುಃಶಾಸನೋ ನಿಕುಂಭಶ್ಚ ಕುಂಡಭೇದೀ ಉರುಕ್ರಮಃ ॥ 84 ॥
ಪುರಂಜಯೋ ದೃಢರಥಃ ಪತಾಕೀ ಹೇಮಪಂಕಜಃ ।
ಶಲ್ಯಾರುಣೀಂದ್ರಸೇನಾಶ್ಚ ಸಂಜಯೋ ವಿಜಯೋ ಜಯಃ ॥ 85 ॥
ಕಮಲಾಕ್ಷಃ ಪುರುಃ ಕ್ರಾಥೀ ಜಯವರ್ಮಾ ಸುದರ್ಶನಃ ।
ಏತೇ ತ್ವಾಮನುಯಾಸ್ಯಂತಿ ಪತ್ತೀನಾಮಯುತಾನಿ ಷಟ್ ॥ 86 ॥
ಸಂಜಯ ಅಶ್ವತ್ಥಾಮರನ್ನು ಕುರಿತು ಹೀಗೆ ಹೇಳಿ ಅನಂತರ ಶಕುನಿಯನ್ನು ಕುರಿತು ಸೋದರಮಾವನೇ, ಯುದ್ಧದಲ್ಲಿ ಶೋಭಿಸುವ ಒಂದುಲಕ್ಷ ರಥದಿಂದಲೂ, ಅರವತ್ತು ಸಾವಿರ ಗಜಗಳಿಂದಲೂ ಕೂಡಿ ನೀನು ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಹೋಗು. ಕರ್ಣ, ವೃಷಸೇನ, ಕೃಪ, ನೀಲ, ಉತ್ತರ ದೇಶದ ರಾಜರು, ಕೃತವರ್ಮ, ಪುರುಮಿತ್ರ, ಶ್ರುತಾರ್ಪಣ, ದುಶ್ಶಾಸನ, ನಿಕುಂಭ, ಕುಂಡಭೇದಿ, ಉರುಕ್ರಮ, ಪುರಂಜಯ, ದೃಢರಥ, ಪತಾಕಿ, ಹೇಮಪಂಕಜ, ಶಲ್ಯ, ಅರುಣಿ, ಇಂದ್ರಸೇನ, ಸಂಜಯ, ವಿಜಯ, ಜಯ, ಕಮಲಾಕ್ಷ, ಪುರು, ಕ್ರಾಥೀ, ಜಯವರ್ಮ, ಸುದರ್ಶನ - ಇವರೆಲ್ಲರೂ ಅರವತ್ತು ಸಾವಿರ ಪದಾತಿಗಳೊಂದಿಗೆ ನಿನ್ನನ್ನು ಹಿಂಬಾಲಿಸುವರು.
ಜಹಿ ಭೀಮಂ ಯಮೌ ಚೋಭೌ ಧರ್ಮರಾಜಂ ಚ ಮಾತುಲ ।
ಅಸುರಾನಿವ ದೇವೇಂದ್ರೋ ಜಯಾಶಾ ಮೇ ತ್ವಯಿ ಸ್ಥಿತಾ ॥ 87 ॥
ಎಲೈ ಸೋದರಮಾವನೇ, ದೇವೇಂದ್ರನು ಅಸುರರನ್ನು ಸಂಹರಿಸಿದಂತೆ ಭೀಮಸೇನನನ್ನೂ, ನಕುಲ-ಸಹದೇವರಿಬ್ಬರನ್ನೂ ಮತ್ತು ಧರ್ಮರಾಜನನ್ನೂ ಕೊಲ್ಲು. ನಿನ್ನಲ್ಲಿ ನನಗೆ ಜಯದ ಆಸೆಯಿದೆ.
ದಾರಿತಾನ್ ದ್ರೌಣಿನಾ ಬಾಣೈರ್ಭೃಶಂ ವಿಕ್ಷತವಿಗ್ರಹಾನ್ ।
ಜಹಿ ಮಾತುಲ ಕೌಂತೇಯಾನಸುರಾನಿವ ಪಾವಕಿಃ ॥ 88 ॥
ಎಲೈ ಸೋದರಮಾವನೇ, ಅಶ್ವತ್ಥಾಮರ ಬಾಣಗಳಿಂದ ಬಹಳವಾಗಿ ಸೀಳಲ್ಪಟ್ಟು ಗಾಯಗೊಂಡ ಶರೀರವುಳ್ಳ ಕುಂತೀಪುತ್ರರನ್ನು, ಷಣ್ಮುಖನು ಅಸುರರನ್ನು ಕೊಂದಂತೆ ಕೊಲ್ಲುವವನಾಗು.
ಏವಮುಕ್ತೋ ಯಯೌ ಶೀಘ್ರಂ ಪುತ್ರೇಣ ತವ ಸೌಬಲಃ ।
ಪಿಪ್ರೀಷುಸ್ತೇ ಸುತಾನ್ ರಾಜನ್ ದಿಧಕ್ಷುಶ್ಚೈವ ಪಾಂಡವಾನ್ ॥ 89॥
ನಿನ್ನ ಪುತ್ರನಿಂದ ಹೀಗೆ ಹೇಳಲ್ಪಟ್ಟ ಶಕುನಿಯು ನಿನ್ನ ಪುತ್ರನಿಗೆ ಸಂತೋಷವನ್ನು ಉಂಟುಮಾಡಲು ಬಯಸಿ, ಪಾಂಡವರನ್ನು ದಹಿಸಲು ಬಯಸಿ ಶೀಘ್ರವಾಗಿ ಅಲ್ಲಿಂದ ಹೊರಟನು.
ಅಥ ಪ್ರವವೃತೇ ಯುದ್ಧಂ ದ್ರೌಣಿರಾಕ್ಷಸಯೋರ್ಮೃಧೇ ।
ವಿಭಾವರ್ಯಾಂ ಸುತುಮುಲಂ ಶಕ್ರಪ್ರಹ್ಲಾದಯೋರಿವ ॥ 90 ॥
ಅನಂತರ ಆ ರಾತ್ರಿಯಲ್ಲಿ ಅಶ್ವತ್ಥಾಮರಿಗೂ ಮತ್ತು ರಾಕ್ಷಸನಾದ ಘಟೋತ್ಕಚನಿಗೂ ಇಂದ್ರ-ಪ್ರಹ್ಲಾದರಿಗೆ ನಡೆದಂತೆ ಅತ್ಯಂತ ತೀವ್ರವಾದ ಯುದ್ಧವು ನಡೆಯಿತು.
ತತೋ ಘಟೋತ್ಕಚೋ ಬಾಣೈರ್ದಶಭಿರ್ಗೌತಮೀಸುತಮ್ ।
ಜಘಾನೋರಸಿ ಸಂಕ್ರುದ್ಧೋ ವಿಷಾಗ್ನಿಪ್ರತಿಮೈರ್ದೃಢೈಃ ॥ 91 ॥
ಆಗ ಘಟೋತ್ಕಚನು ಕೋಪಗೊಂಡು ವಿಷಸದೃಶವಾದ, ಅಗ್ನಿಸದೃಶವಾದ, ದೃಢವಾದ ಹತ್ತು ಬಾಣಗಳಿಂದ ಗೌತಮೀಪುತ್ರರಾದ ಅಶ್ವತ್ಥಾಮರನ್ನು ಎದೆಯಲ್ಲಿ ಹೊಡೆದನು.
ಸ ತೈರಭ್ಯಾಹತೋ ಗಾಢಂ ಶರೈರ್ಭೀಮಸುತೇರಿತೈಃ ।
ಚಚಾಲ ರಥಮಧ್ಯಸ್ಥೋ ವಾತೋದ್ಧೂತ ಇವ ದ್ರುಮಃ ॥ 92 ॥
ಭೀಮಪುತ್ರನು ಪ್ರಯೋಗಿಸಿದ ಆ ಬಾಣಗಳಿಂದ ಗಾಢವಾಗಿ ಹೊಡೆಯಲ್ಪಟ್ಟ ಅಶ್ವತ್ಥಾಮರು ರಥದ ಮಧ್ಯದಲ್ಲಿ ಬಿರುಗಾಳಿಗೆ ಸಿಕ್ಕಿದ ವೃಕ್ಷದಂತೆ ಅಲುಗಾಡಿದರು.
ಭೂಯಶ್ಚಾಂಜಲಿಕೇನಾಸ್ಯ ಮಾರ್ಗಣೇನ ಮಹಾಪ್ರಭಮ್ ।
ದ್ರೌಣಿಹಸ್ತಸ್ಥಿತಂ ಚಾಪಂ ಚಿಚ್ಛೇದಾಶು ಘಟೋತ್ಕಚಃ ॥ 93 ॥
ಘಟೋತ್ಕಚನು ಪುನಃ ಒಂದು ಮಹಾಪ್ರಭೆಯುಳ್ಳ ಅಂಜಲಿಕವನ್ನು ಪ್ರಯೋಗಿಸಿ, ಆ ಬಾಣದಿಂದ ಅಶ್ವತ್ಥಾಮರ ಕೈಯಲ್ಲಿದ್ದ ಧನುಸ್ಸನ್ನು ಶೀಘ್ರವಾಗಿ ಕತ್ತರಿಸಿದನು.
ತತೋಽನ್ಯದ್ ದ್ರೌಣಿರಾದಾಯ ಧನುರ್ಭಾರಸಹಂ ಮಹತ್ ।
ವವರ್ಷ ವಿಶಿಖಾಂಸ್ತೀಕ್ಷ್ಣಾನ್ ವಾರಿಧಾರಾ ಇವಾಂಬುದಃ ॥ 94 ॥
ಆಗ ಅಶ್ವತ್ಥಾಮರು ಭಾರಸಾಧನವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಮೋಡವು ಬಹಳ ಮಳೆಯನ್ನು ಸುರಿಸಿಸುವಂತೆ ಘಟೋತ್ಕಚನ ಮೇಲೆ ತೀಕ್ಷ್ಣವಾದ ಬಾಣ ಧಾರೆಗಳನ್ನು ಸುರಿಸಿದರು.
ತತಃ ಶಾರದ್ವತೀಪುತ್ರಃ ಪ್ರೇಷಯಾಮಾಸ ಭಾರತ ।
ಸುವರ್ಣಪುಂಖಾನ್ ಶತ್ರುಘ್ನಾನ್ ಖಚರಾನ್ ಖಚರಾನ್ ಪ್ರತಿ ॥
ಅನಂತರ ಎಲೈ ಭಾರತನೇ, ಶಾರದ್ವತೀಪುತ್ರರಾದ ಅಶ್ವತ್ಥಾಮರು ಅಂತರಿಕ್ಷ ಸಂಚಾರಿಗಳಾದ ರಾಕ್ಷಸರ ಮೇಲೆ ಶತ್ರುನಾಶಕವಾದ,

ಸುವರ್ಣಪುಂಖಗಳನ್ನು ಹೊಂದಿದ, ಆಕಾಶದಲ್ಲಿ ಸಂಚರಿಸುವ ಬಾಣಗಳನ್ನು ಪ್ರಯೋಗಿಸಿದರು.
ತದ್ಬಾಣೈರರ್ದಿತಂ ಯೂಥಂ ರಕ್ಷಸಾಂ ಪೀನವಕ್ಷಸಾಮ್ |
ಸಿಂಹೈರಿವ ಬಭೌ ಮತ್ತಂ ಗಜಾನಾಮಾಕುಲಂ ಕುಲಮ್ ॥ 96 ॥
ಆ ಬಾಣಗಳಿಂದ ತೀವ್ರವಾಗಿ ಪೀಡೆಗೊಳಗಾದ, ಉನ್ನತ ವಕ್ಷಃಸ್ಥಳವುಳ್ಳ ರಾಕ್ಷಸರ ಸಮೂಹವು ಸಿಂಹಗಳಿಂದ ಆಕುಲವಾದ ಮದಗಜಗಳ ಸಮೂಹದಂತೆ ಶೋಭಿಸಿತು.
ವಿಧಮ್ಯ ರಾಕ್ಷಸಾನ್ ಬಾಣೈಃ ಸಾಶ್ವಸೂತರಥಾನ್ ವಿಭುಃ |
ದದಾಹ ಭಗವಾನ್ ವಹ್ನಿರ್ಭೂತಾನೀವ ಯುಗಕ್ಷಯೇ ॥ 97 ॥
ವಿಭುವಾದ ಅಶ್ವತ್ಥಾಮರು ತಮ್ಮ ಬಾಣಗಳಿಂದ ಅಶ್ವ-ಸೂತ-ರಥ ಸಹಿತರಾದ ರಾಕ್ಷಸರನ್ನು ಚದುರಿಸಿ, ಪೂಜ್ಯರಾದ ಅವರು ಯುಗಾಂತಕಾಲದಲ್ಲಿ ವಹ್ನಿಯು ಪ್ರಾಣಿಗಳನ್ನು ಸುಡುವಂತೆ ಅವರನ್ನು ಸುಟ್ಟುಹಾಕಿದರು.
ಸ ದಗ್ಧ್ವಾಕ್ಷೌಹಿಣೀಂ ಬಾಣೈರ್ನೈರ್ಋತಾನ್ ರುರುಚೇ ಭೃಶಮ್ |
ಪುರೇವ ತ್ರಿಪುರಂ ದಗ್ಧ್ವಾ ದಿವಿ ದೇವೋ ಮಹೇಶ್ವರಃ ॥ 98 ॥
ಅವರು ತಮ್ಮ ಬಾಣಗಳಿಂದ ರಾಕ್ಷಸರ ಒಂದು ಅಕ್ಷೋಹಿಣೀ ಸೈನ್ಯವನ್ನು ನಾಶ ಮಾಡಿ ತ್ರಿಪುರವನ್ನು ದಹಿಸಿದ ದೇವನಾದ ಮಹೇಶ್ವರನು ಹಿಂದೆ ಸ್ವರ್ಗದಲ್ಲಿ ಮೆರೆದಂತೆ ಬಹಳವಾಗಿ ಶೋಭಿಸಿದರು.
ಯುಗಾಂತೇ ಸರ್ವಭೂತಾನಿ ದಗ್ಧ್ವೇವ ವಸುರುಲ್ಬಣಃ |
ರರಾಜ ಜಯತಾಂ ಶ್ರೇಷ್ಠೋ ದ್ರೋಣಪುತ್ರಸ್ತವಾಹಿತಾನ್ ॥ 99 ॥
ಯುಗಾಂತ ಕಾಲದಲ್ಲಿ ಉಲ್ಬಣವಾದ ಅಗ್ನಿಯು ಎಲ್ಲ ಪ್ರಾಣಿಗಳನ್ನೂ ಸುಟ್ಟು ಶೋಭಿಸುವಂತೆ ಜಯಶೀಲರಲ್ಲಿ ಶ್ರೇಷ್ಠರಾದ ದ್ರೋಣಪುತ್ರರು ನಿನ್ನ ಶತ್ರುಗಳನ್ನು ದಹಿಸಿ ಶೋಭಿಸಿದರು.
ತೇಷು ರಾಜಸಹಸ್ರೇಷು ಪಾಂಡವೇಯೇಷು ಭಾರತ |
ನೈನಂ ನಿರೀಕ್ಷಿತುಂ ಕಶ್ಚಿಚ್ಛಕ್ನೋತಿ ದ್ರೌಣಿಮಾಹವೇ |
ಋತೇ ಘಟೋತ್ಕಚಾದ್ ವೀರಾದ್ ರಾಕ್ಷಸೇಂದ್ರಾನ್ಮಹಾಬಲಾತ್ ॥
ಎಲೈ ಭಾರತನೇ, ಆ ಪಾಂಡವಸೇನೆಯ ಸಹಸ್ರ ರಾಜರಲ್ಲಿ ವೀರನೂ, ರಾಕ್ಷಸೇಂದ್ರನೂ, ಮಹಾಬಲನೂ ಆದ ಘಟೋತ್ಕಚನೊಬ್ಬನನ್ನು ಬಿಟ್ಟು ಬೇರೆ ಯಾರೂ ರಣರಂಗದಲ್ಲಿ ಈ ಅಶ್ವತ್ಥಾಮರನ್ನು ನೋಡಲು ಶಕ್ತರಾಗಲಿಲ್ಲ.
ಸ ಪುನರ್ಭರತಶ್ರೇಷ್ಠ ಕ್ರೋಧಾದ್ ರಕ್ತಾಂತಲೋಚನಃ |
ತಳಂ ತಳೇನ ಸಂಹತ್ಯ ಸಂದಶ್ಯ ದಶನಚ್ಛದಮ್ |
ಸ್ವಸೂತಮಬ್ರವೀತ್ ಕ್ರುದ್ಧೋ ದ್ರೋಣಪುತ್ರಾಯ ಮಾಂ ವಹ ॥101॥
ಎಲೈ ಭರತಶ್ರೇಷ್ಠನೇ, ಆ ಘಟೋತ್ಕಚನಾದರೋ ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ, ಅಂಗೈಯನ್ನು ಅಂಗೈಯಿಂದ ಉಜ್ಜುತ್ತಾ, ಹಲ್ಲುಮುಡಿಗಳನ್ನು ಕಚ್ಚಿ, ಕೋಪಗೊಂಡು ತನ್ನ ಸೂತನನ್ನು ಕುರಿತು ದ್ರೋಣಪುತ್ರರ ಕಡೆಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದನು.
ಸ ಯಯೌ ಘೋರರೂಪೇಣ ತೇನ ಜೈತ್ರಪತಾಕಿನಾ |
ದ್ವೈರಥಂ ದ್ರೋಣಪುತ್ರೇಣ ಪುನರಪ್ಯರಿಸೂದನಃ ॥ 102 ॥
ಶತ್ರುಸೂದನನಾದ ಅವನು ಜೈತ್ರಪತಾಕೆಯುಳ್ಳ, ಘೋರರೂಪವುಳ್ಳ ರಥದಲ್ಲಿ ಕುಳಿತು ದ್ರೋಣಪುತ್ರರಿಂದ ದ್ವೈರಥಯುದ್ಧವನ್ನು ಮಾಡಲು ಅನುಕೂಲವಾಗುವಂತೆ ಅಲ್ಲಿಂದ ಹೊರಟನು.
ಸ ಚಿಕ್ಷೇಪ ತತಃ ಕ್ರುದ್ಧೋ ದ್ರೋಣಪುತ್ರಾಯ ರಾಕ್ಷಸಃ |
ಅಷ್ಟಚಕ್ರಾಂ ಮಹಾರೌದ್ರಾಮಶನೀಂ ರುದ್ರನಿರ್ಮಿತಾಮ್ ॥ 103 ॥
ಕೋಪಗೊಂಡ ರಾಕ್ಷಸನಾದ ಘಟೋತ್ಕಚನು ದ್ರೋಣಪುತ್ರರ ಮೇಲೆ ರುದ್ರ ನಿರ್ಮಿತವಾದ, ಅತ್ಯಂತ ಭಯಂಕರವಾದ, ಎಂಟುಮೂಲೆಗಳಿಂದ ಕೂಡಿದ ಅಶನಿಯನ್ನೂ (ಆಯುಧ ವಿಶೇಷವನ್ನು) ಎಸೆದನು.
ತಾಮವಪ್ಲುತ್ಯ ಜಗ್ರಾಹ ದ್ರೌಣಿರ್ನ್ಯಸ್ಯ ರಥೇ ಧನುಃ |
ಚಿಕ್ಷೇಪ ಚೈನಾಂ ತಸ್ಯೈವ ಸ್ಯಂದನಾತ್ ಸೋಽವಪುಪ್ಲುವೇ ॥ 104 ॥
ಅಶ್ವತ್ಥಾಮರು ತಮ್ಮ ಧನುಸ್ಸನ್ನು ರಥದಲ್ಲಿಟ್ಟು, ರಥದಿಂದ ಹಾರಿ ಆ ಅಶನಿಯನ್ನು ಹಿಡಿದು, ಅದನ್ನು ಘಟೋತ್ಕಚನ ರಥವನ್ನೇ ಉದ್ದೇಶಿಸಿ ಅದರ ಮೇಲೆಯೇ ಎಸೆದರು. ಘಟೋತ್ಕಚನು ಕೆಳಗೆ ಹಾರಿದನು.
ಸಾಶ್ವಸೂತಧ್ವಜಂ ವಾಹಂ ಭಸ್ಮ ಕೃತ್ವಾ ಮಹಾಪ್ರಭಾ |
ವಿವೇಶ ವಸುಧಾಂ ಭಿತ್ತ್ವಾ ಸಾಶನಿರ್ಭೃಶದಾರುಣಾ ॥ 105 ॥
ಅತ್ಯಂತ ಭಯಂಕರವಾದ ಮಹಾಪ್ರಭೆಯನ್ನು ಹೊಂದಿದ ಆ ಅಶನಿಯು ಅಶ್ವ- ಸೂತ-ಧ್ವಜ ಸಹಿತವಾದ ಘಟೋತ್ಕಚನ ರಥವನ್ನು ಭಸ್ಮ ಮಾಡಿ ಭೂಮಿಯನ್ನು ಸೀಳಿ ಒಳಗೆ ಇಳಿಯಿತು.
ದ್ರೌಣೇಸ್ತತ್ಕರ್ಮ ದೃಷ್ಟ್ವಾ ತು ಸರ್ವಭೂತಾನ್ಯಪೂಜಯನ್ |
ಯದವಪ್ಲುತ್ಯ ಜಗ್ರಾಹ ಘೋರಾಂ ಶಂಕರನಿರ್ಮಿತಾಮ್ ॥ 106 ॥
ಅಶ್ವತ್ಥಾಮರು ರಥದಿಂದ ಹಾರಿ ಶಂಕರನಿರ್ಮಿತವಾದ ಘೋರವಾದ ಅಶನಿಯನ್ನು ಹಿಡಿದುದನ್ನು ನೋಡಿ ಅವರ ಆ ಕಾರ್ಯವನ್ನು ಎಲ್ಲ ಪ್ರಾಣಿಗಳೂ ಪೂಜಿಸಿದವು.
ಧೃಷ್ಟದ್ಯುಮ್ನರಥಂ ಗತ್ವಾ ಭೈಮಸೇನಿಸ್ತತೋ ನೃಪ |
ಮುಮೋಚ ನಿಶಿತಾನ್ ಬಾಣಾನ್ ಪುನರ್ದ್ರೌಣೇರ್ಮಹೋರಸಿ ॥

ಎಲೈ ರಾಜನೇ, ಅನಂತರ ಘಟೋತ್ಕಚನು ಧೃಷ್ಟದ್ಯುಮ್ನನ ರಥವನ್ನು ಸೇರಿ ಪುನಃ ಅಶ್ವತ್ಥಾಮರ ಎದೆಯಲ್ಲಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.
ಧೃಷ್ಟದ್ಯುಮ್ನೋಽಪ್ಯಸಂಭ್ರಾಂತೋ ಮುಮೋಚಾಶೀವಿಷೋಪಮಾನ್ |
ಸುವರ್ಣಪುಂಖಾನ್ ವಿಶಿಖಾನ್ ದ್ರೋಣಪುತ್ರಸ್ಯ ವಕ್ಷಸಿ ॥ 108 ॥
ಧೃಷ್ಟದ್ಯುಮ್ನನೂ ಸಹ ಯಾವ ಗಾಬರಿಯೂ ಇಲ್ಲದೆ ಸುವರ್ಣ ಪುಂಖಗಳನ್ನು ಹೊಂದಿದ, ಸರ್ಪಸದೃಶವಾದ ಬಾಣಗಳನ್ನು ದ್ರೋಣಪುತ್ರರ ಎದೆಯಲ್ಲಿ ಪ್ರಯೋಗಿಸಿದನು.
ತತೋ ಮುಮೋಚ ನಾರಾಚಾನ್ ದ್ರೌಣಿಸ್ತಾಭ್ಯಾಂ ಸಹಸ್ರಶಃ |
ತಾವಪ್ಯಗ್ನಿಶಿಖಾಪ್ರಖ್ಯೈರ್ಜಘ್ನತುಸ್ತಸ್ಯ ಮಾರ್ಗಣಾನ್ ॥ 109 ॥
ಆಗ ಅಶ್ವತ್ಥಾಮರು ಅವರಿಬ್ಬರ ಮೇಲೆ ಸಹಸ್ರ ಸಂಖ್ಯೆಯಲ್ಲಿ ನಾರಾಚಗಳನ್ನು ಪ್ರಯೋಗಿಸಿದರು. ಧೃಷ್ಟದ್ಯುಮ್ನ-ಘಟೋತ್ಕಚರೂ ಸಹ ಅಗ್ನಿಶಿಖೆಗಳಂತಿದ್ದ ತಮ್ಮ ಬಾಣಗಳಿಂದ ಅಶ್ವತ್ಥಾಮರ ಬಾಣಗಳನ್ನು ಹೊಡೆದು ಹಾಕಿದರು.
ಅತಿತೀವ್ರಮಭೂದ್ ಯುದ್ಧಂ ತಯೋಃ ಪುರುಷಸಿಂಹಯೋಃ |
ಯೋಧಾನಾಂ ಪ್ರೀತಿಜನನಂ ದ್ರೌಣೇಶ್ಚ ಭರತರ್ಷಭ ॥ 110 ॥
ಎಲೈ ಭರತಶ್ರೇಷ್ಠನೇ, ಪುರುಷಸಿಂಹರಾದ ಅವರಿಬ್ಬರಿಗೂ ಎಲ್ಲ ಯೋಧರಿಗೂ ಮತ್ತು ಅಶ್ವತ್ಥಾಮರಿಗೂ ಸಂತೋಷದಾಯಕವಾದ ತೀವ್ರವಾದ ಯುದ್ಧವು ನಡೆಯಿತು.
ತತೋ ರಥಸಹಸ್ರೇಣ ದ್ವಿರದಾನಾಂ ಶತೈಸ್ತ್ರಿಭಿಃ |
ಷಡ್ಭಿರ್ವಾಜಿಸಹಸ್ರೈಶ್ಚ ಭೀಮಸ್ತಂ ದೇಶಮಾವ್ರಜತ್ ॥ 111 ॥
ಆಗ ಒಂದು ಸಹಸ್ರ ರಥದಿಂದಲೂ, ಮುನ್ನೂರು ಗಜಗಳಿಂದಲೂ, ಆರು ಸಹಸ್ರ ಅಶ್ವಗಳಿಂದಲೂ ಕೂಡಿದ ಭೀಮನು ಆ ಪ್ರದೇಶಕ್ಕೆ ಬಂದನು.
ತತೋ ಭೀಮಾತ್ಮಜಂ ರಕ್ಷೋ ಧೃಷ್ಟದ್ಯುಮ್ನಂ ಚ  ಸಾನುಗಮ್ |
ಅಯೋಧಯತ ಧರ್ಮಾತ್ಮಾ ದ್ರೌಣಿರಕ್ಲಿಷ್ಟಕರ್ಮಕೃತ್ ॥ 112 ॥
ಆಗ ಭೀಮಪುತ್ರನಾದ ರಾಕ್ಷಸನನ್ನೂ, ಅನುಚರ ಸಹಿತನಾದ ಧೃಷ್ಟದ್ಯುಮ್ನನನ್ನೂ ಲೀಲಾಜಾಲವಾಗಿ ಯುದ್ಧವನ್ನು ಮಾಡುವ ಧರ್ಮಾತ್ಮರಾದ ಅಶ್ವತ್ಥಾಮರು ಬಾಣಗಳಿಂದ ಹೊಡೆದರು.
ತತ್ರಾದ್ಭುತತಮಂ ದ್ರೌಣಿರ್ದರ್ಶಯಾಮಾಸ ವಿಕ್ರಮಮ್ |
ಅಶಕ್ಯಂ ಕರ್ತುಮನ್ಯೇನ ಸರ್ವಭೂತೇಷು ಭಾರತ ॥ 113 ॥
ಎಲೈ ಭಾರತನೇ, ಆಗ ಅಶ್ವತ್ಥಾಮರು ಎಲ್ಲ ಪ್ರಾಣಿಗಳಲ್ಲಿ ಬೇರೆ ಯಾರಿಂದಲೂ ಮಾಡಲು ಅಸಾಧ್ಯವಾದ ತಮ್ಮ ಅತ್ಯಂತ ಅದ್ಭುತವಾದ ಪರಾಕ್ರಮವನ್ನು ತೋರಿಸಿದರು.
ನಿಮೇಷಾಂತರಮಾತ್ರೇಣ ಸಾಶ್ವಸೂತರಥದ್ವಿಪಾಮ್ |
ಅಕ್ಷೋಹಿಣೀಂ ರಾಕ್ಷಸಾನಾಂ ಶಿತೈರ್ಬಾಣೈರಶಾತಯತ್ ॥ 114 ॥
ಮಿಷತೋ ಭೀಮಸೇನಸ್ಯ ಹೈಡಿಂಬೇಃ ಪಾರ್ಷತಸ್ಯ ಚ |
ಯಮಯೋರ್ಧರ್ಮಪುತ್ರಸ್ಯ ವಿಜಯಸ್ಯಾಚ್ಯುತಸ್ಯ ಚ ॥ 115 ॥
ಒಂದು ನಿಮಿಷ ಮಾತ್ರದಲ್ಲಿ ಭೀಮಸೇನನೂ, ಘಟೋತ್ಕಚನೂ, ಧೃಷ್ಟದ್ಯುಮ್ನನೂ, ನಕುಲ-ಸಹದೇವರೂ, ಅರ್ಜುನನೂ, ಕೃಷ್ಣನೂ ನೋಡುತ್ತಿರುವಂತೆಯೇ ಅಶ್ವತ್ಥಾಮರು ರಾಕ್ಷಸರ ಒಂದು ಅಕ್ಷೋಹಿಣಿ ಸೈನ್ಯವನ್ನು ನಿಶಿತವಾದ ಬಾಣಗಳಿಂದ ವಿನಾಶ- ಗೊಳಿಸಿದರು.

ಪ್ರಗಾಢಮಂಜೋಗತಿಭಿರ್ನಾರಾಚೈರಭಿತಾಡಿತಾಃ |
ನಿಪೇತುರ್ದ್ವಿರದಾ ಭೂಮೌ ದ್ವಿಶೃಂಗಾ ಇವ ಪರ್ವತಾಃ ॥ 116 ॥
ಚೆನ್ನಾಗಿ ಸಾಗುವ ನಾರಾಚಗಳಿಂದ ಗಾಢವಾಗಿ ಹೊಡೆಯಲ್ಪಟ್ಟ ಗಜಗಳು ಎರಡು ಶಿಖರವುಳ್ಳ ಪರ್ವತಗಳಂತೆ ಭೂಮಿಯಲ್ಲಿ ಬಿದ್ದವು.
ನಿಕೃತ್ತೈರ್ಹಸ್ತಿಹಸ್ತೈಶ್ಚ ವಿಚಲದ್ಭಿರಿತಸ್ತತಃ |
ರರಾಜ ವಸುಧಾ ಕೀರ್ಣಾ ವಿಸರ್ಪದ್ಭಿರಿವೋರಗೈಃ ॥ 117 ॥
ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಅಲ್ಲಲ್ಲಿ ಹೊರಳಾಡುವ ಸೊಂಡಿಲುಗಳಿಂದ ಭೂಮಿಯು ಹೊರಳಾಡುವ ಸರ್ಪಗಳಿಂದ ಹರಡಲ್ಪಟ್ಟಂತೆ ತೋರುತ್ತಿದ್ದಿತು.
ಕ್ಷಿಪ್ತೈಃ ಕಾಂಚನದಂಡೈಶ್ಚ ನೃಪಚ್ಛತ್ರೈಃ ಕ್ಷಿತಿರ್ಬಭೌ |
ದ್ಯೌರಿವೋದಿತಚಂದ್ರಾರ್ಕಾ ಗ್ರಹಾಕೀರ್ಣಾ ಯುಗಕ್ಷಯೇ ॥ 118 ॥
ರಾಜರ ಎಸೆದ ಚಿನ್ನದ ದಂಡಗಳಿಂದ ಕೂಡಿದ ಶ್ವೇತಛತ್ರಗಳಿಂದ ಭೂಮಿಯು ಯುಗಾಂತ ಕಾಲದಲ್ಲಿ ಉದಯಿಸಿದ ಸೂರ್ಯ-ಚಂದ್ರರಿಂದ ಮತ್ತು ಗ್ರಹಗಳಿಂದ ತುಂಬಿದ ಆಕಾಶದಂತೆ ಕಾಣುತ್ತಿದ್ದಿತು.
ಪ್ರವೃದ್ಧಧ್ವಜಮಂಡೂಕಾಂ ಭೇರೀವಿಸ್ತೀರ್ಣಕಚ್ಛಪಾಮ್ |
ಛತ್ರಹಂಸಾವಲೀಜುಷ್ಟಾಂ ಫೇನಚಾಮರಮಾಲಿನೀಮ್ ॥ 119 ॥
ಕಂಕಗೃಧ್ರಮಹಾಗ್ರಾಹಾಂ ನೈಕಾಯುಧಝುಷಾಕುಲಾಮ್ |
ರಥಕ್ಷಿಪ್ತಮಹಾವಪ್ರಾಂ ಪತಾಕಾರುಚಿರದ್ರುಮಾಮ್ ॥ 120 ॥
ಶರಮೀನಾಂ ಮಹಾರೌದ್ರಾಂ ಪ್ರಾಸಶಕ್ತ್ಯುಗ್ರಡುಂಡುಭಾಮ್ |

ಮಜ್ಜಾಮಾಂಸಮಹಾಪಂಕಾಂ ಕಬಂಧಾವರ್ಜಿತೋಡುಪಾಮ್ ॥121॥
ಕೇಶಶೈವಲಕಲ್ಮಾಷಾಂ ಭೀರೂಣಾಂ ಕಶ್ಮಲಾವಹಾಮ್ |
ನಾಗೇಂದ್ರಹಯಯೋಧಾನಾಂ ಶರೀರವ್ಯಯಸಂಭವಾಮ್ ॥ 122 ॥
ಶೋಣಿತೌಘಮಹಾವೇಗಾಂ ದ್ರೌಣಿಃ ಪ್ರಾವರ್ತಯನ್ನದೀಮ್ |
ಯೋಧಾರ್ತರವನಿರ್ಘೋಷಾಂ ಕ್ಷತಜೋರ್ಮಿಸಮಾಕುಲಾಮ್ ॥123॥
ಉನ್ನತವಾದ ಧ್ವಜಗಳೆಂಬ ಮಂಡೂಕಗಳಿಂದಲೂ, ಭೇರಿಗಳೆಂಬ ವಿಸ್ತಾರವಾದ ಕೂರ್ಮಗಳಿಂದಲೂ, ಛತ್ರಗಳೆಂಬ ಹಂಸಸಮೂಹಗಳಿಂದಲೂ, ನೊರೆಗಳೆಂಬ ಚಾಮರದ ಪುಂಖಗಳಿಂದಲೂ, ಕಂಕಗೃಧ್ರಗಳೆಂಬ ಮಹಾಮೊಸಳೆಗಳಿಂದಲೂ, ಅನೇಕ ಆಯುಧಗಳೆಂಬ ಮೊಸಳೆಗಳಿಂದಲೂ, ಎಸೆದ ರಥಗಳೆಂಬ ದೊಡ್ಡ ಕೋಟೆಗಳಿಂದಲೂ, ಪತಾಕೆಗಳೆಂಬ ಮನೋಹರವಾದ ವೃಕ್ಷಗಳಿಂದಲೂ, ಬಾಣಗಳೆಂಬ ಮೀನುಗಳಿಂದಲೂ, ಪ್ರಾಸ-ಶಕ್ತಿಗಳೆಂಬ ಉಗ್ರವಾದ ಡುಂಡುಭ ಜಾತಿಯ ಸರ್ಪಗಳಿಂದಲೂ, ಮಜ್ಜಾ-ಮಾಂಸಗಳೆಂಬ ದೊಡ್ಡ ಕೆಸರಿನಿಂದಲೂ, ರುಂಡಗಳೆಂಬ ಜನರಿಲ್ಲದ ದೋಣಿಗಳಿಂದಲೂ, ಯುವಕರ ಮತ್ತು ವೃದ್ಧರ ಕಪ್ಪಾದ ಮತ್ತು ಬಿಳಿಯ ತಲೆಕೂದಲುಗಳೆಂಬ ಪಾಚಿಗಳಿಂದಲೂ, ಹೇಡಿಗಳಿಗೆ ವಿಷಾದವನ್ನುಂಟು ಮಾಡುವ ಮಹಾಭೀಕರವಾದ ಅಶ್ವ-ಗಜ-ಯೋಧರ ಮೃತ ಶರೀರಗಳಿಂದ ಉಂಟಾದ ರಕ್ತ ಪ್ರವಾಹದ ಮಹಾವೇಗವನ್ನು ಹೊಂದಿದ, ಯೋಧರ ಸಂಕಟಧ್ವನಿ ಎಂಬ ದೊಡ್ಡ ಘೋಷವನ್ನು ಹೊಂದಿದ, ರಕ್ತದ ತರಂಗಗಳಿಂದ ನಿಬಿಡವಾದ ಮಹಾಘೋರವಾದ ನದಿಯನ್ನು ಅಶ್ವತ್ಥಾಮರು ಪ್ರವರ್ತಿಸಿದರು (ನಿರ್ಮಿಸಿದರು).
ಪ್ರಾಯಾದತಿಮಹಾಘೋರಂ ಯಮಕ್ಷಯಮಹೋದಧಿಮ್ |
ನಿಹತ್ಯ ರಾಕ್ಷಸಾನ್ ಬಾಣೈರ್ದ್ರೌಣಿರ್ಹೈಡಿಂಬಮಾರ್ದಯತ್ ॥124॥
ಆ ನದಿಯು ಮಹಾಘೋರವಾದ ಯಮಲೋಕವೆಂಬ ಸಾಗರದ ಕಡೆಗೆ ಹರಿಯಿತು. ಅಶತ್ಥಾಮರು ರಾಕ್ಷಸರನ್ನು ಸಂಹರಿಸಿ ಘಟೋತ್ಕಚನನ್ನು ಚೆನ್ನಾಗಿ ಪೀಡಿಸಿದರು.
ಪುನರಪ್ಯತಿಸಂಕ್ರುದ್ಧಃ ಸವೃಕೋದರಪಾರ್ಷತಾನ್ |
ಸ ನಾರಾಚಗಣೈಃ ಪಾರ್ಥಾನ್ ದ್ರೌಣಿರ್ವಿದ್ಧ್ವಾ ಮಹಾಬಲಃ ॥ 125 ॥
ಜಘಾನ ಸುರಥಂ ನಾಮ ದ್ರುಪದಸ್ಯ ಸುತಂ ವಿಭುಃ |
ಪುನಃ ಶ್ರುತಂಜಯಂ ನಾಮ ಸುರಥಸ್ಯಾನುಜಂ ರಣೇ ॥ 126 ॥
ಪುನಃ ಕೋಪಗೊಂಡ ಮಹಾಬಲರಾದ ಅಶ್ವತ್ಥಾಮರು ವೃಕೋದರ ಮತ್ತು ಧೃಷ್ಟದ್ಯುಮ್ನನಿಂದ ಸಹಿತರಾದ ಪಾಂಡವಯೋಧರನ್ನು ನಾರಾಚ ಸಮೂಹಗಳಿಂದ ಹೊಡೆದು, ದ್ರುಪದಪುತ್ರನಾದ ಸುರಥನೆಂಬುವವನನ್ನು ಕೊಂದರು. ವಿಶೇಷ ಸಾಮರ್ಥ್ಯವುಳ್ಳ ಅವರು ಪುನಃ ಶ್ರುತಂಜಯನೆಂಬ ಸುರಥನ ತಮ್ಮನನ್ನೂ ರಣರಂಗದಲ್ಲಿ ಕೊಂದರು.
ಬಲಾನೀಕಂ ಜಯಾನೀಕಂ ಜಯಾಶ್ವಂ ಚಾಭಿಜಘ್ನಿವಾನ್ |
ಶ್ರುತಾಹ್ವಯಂ ಚ ರಾಜೇಂದ್ರ ದ್ರೌಣಿರ್ನಿನ್ಯೇ ಯಮಕ್ಷಯಮ್ ॥127॥
ಎಲೈ ರಾಜೇಂದ್ರನೇ, ದ್ರುಪದನ ಮಕ್ಕಳಾದ ಬಲಾನೀಕ, ಜಯಾನೀಕ, ಜಯಾಶ್ವ, ಶ್ರುತಾಹ್ವಯ - ಇವರನ್ನು ಅಶ್ವತ್ಥಾಮರು ಬಾಣಗಳಿಂದ ಹೊಡೆದು ಯಮಲೋಕಕ್ಕೆ ಕಳುಹಿಸಿದರು.
ತ್ರಿಭಿಶ್ಚಾನ್ಯೈಃ ಶರೈಸ್ತೀಕ್ಷ್ಣೈಃ ಸುಪುಂಖೈ ರುಗ್ಮಮಾಲಿನಮ್ |
ಶತ್ರುಂಜಯಂ ಚ ಬಲಿನಂ ಶಕ್ರಲೋಕಂ ನಿನಾಯ ಹ ॥ 128 ॥
ಒಳ್ಳೆಯ ಪುಂಖಗಳನ್ನು ಹೊಂದಿದ ಬೇರೆಯ ಮೂರು ನಿಶಿತವಾದ ಬಾಣಗಳಿಂದ ರುಗ್ಮಮಾಲಿಯನ್ನೂ ಮತ್ತು ಬಲಿಷ್ಠನಾದ ಶತ್ರುಂಜಯನನ್ನೂ ಇಂದ್ರಲೋಕಕ್ಕೆ ಕಳುಹಿಸಿದರು.
ಜಘಾನ ಸ ಪೃಷಧ್ರಂ ಚ ಚಂದ್ರದೇವಂ ಚ ಮಾನಿನಮ್ |
ಕುಂತಿಭೋಜಸುತಾಂಶ್ಚಾಜೌ ದಶಭಿರ್ದಶ ಜಘ್ನಿವಾನ್ ॥ 129 ॥
ಅಹಂಕಾರಿಗಳಾದ ಪೃಷಧ್ರನನ್ನೂ ಮತ್ತು ಚಂದ್ರದೇವನನ್ನೂ ಕೊಂದು, ಕುಂತಿಭೋಜನ ಹತ್ತುಪುತ್ರರನ್ನು ರಣರಂಗದಲ್ಲಿ ಹತ್ತು ಬಾಣಗಳಿಂದ ಕೊಂದರು.
ಅಶ್ವತ್ಥಾಮಾ ಸುಸಂಕ್ರುದ್ಧಃ ಸಂಧಾಯೋಗ್ರಮಜಿಹ್ಮಗಮ್ |
ಮುಮೋಚಾಕರ್ಣಪೂರ್ಣೇನ ಧನುಷಾ ಶರಮುತ್ತಮಮ್ |
ಯಮದಂಡೋಪಮಂ ಘೋರಮುದ್ದಿಶ್ಯಾಶು ಘಟೋತ್ಕಚಮ್ ॥130॥
ಬಹಳ ಕೋಪಗೊಂಡ ಅಶ್ವತ್ಥಾಮರು ನೇರವಾಗಿ ಸಾಗುವ ಒಂದು ಉಗ್ರವಾದ ಬಾಣವನ್ನು ಧನುಸ್ಸಿನಲ್ಲಿ ಹೂಡಿ ಹೆದೆಯನ್ನು ಕಿವಿಯವರೆಗೂ ಎಳೆದು ಯಮದಂಡ ಸದೃಶವಾದ ಆ ಶ್ರೇಷ್ಠವಾದ ಮತ್ತು ಘೋರವಾದ ಬಾಣವನ್ನು ಘಟೋತ್ಕಚನ ಮೇಲೆ ಪ್ರಯೋಗಿಸಿದರು.
ಸ ಭಿತ್ತ್ವಾ ಹೃದಯಂ ತಸ್ಯ ರಾಕ್ಷಸಸ್ಯ ಮಹಾಶರಃ |
ವಿವೇಶ ವಸುಧಾಂ ಶೀಘ್ರಂ ಸಪುಂಖಃ ಪೃಥಿವೀಪತೇ ॥ 131 ॥
ಎಲೈ ರಾಜನೇ, ಆ ದೊಡ್ಡ ಬಾಣವು ರಾಕ್ಷಸನಾದ ಘಟೋತ್ಕಚನ ಹೃದಯವನ್ನು ಭೇದಿಸಿ, ಒಳ್ಳೆಯ ಪುಂಖದೊಡನೆ ಶೀಘ್ರವಾಗಿ ಭೂಮಿಯಲ್ಲಿ ಇಳಿಯಿತು.
ತಂ ಹತಂ ಪತಿತಂ ಜ್ಞಾತ್ವಾ ಧೃಷ್ಟದ್ಯುಮ್ನೋ ಮಹಾರಥಃ |
ದ್ರೌಣೇಃ ಸಕಾಶಾದ್ ರಾಜೇಂದ್ರ ಅಪನಿನ್ಯೇ ರಥಾಂತರಮ್ ॥ 132 ॥
ಕೆಳಗೆ ಬಿದ್ದ ಘಟೋತ್ಕಚನು ಮೃತನಾದನೆಂದು ತಿಳಿದು, ಎಲೈ ರಾಜೇಂದ್ರನೇ, ಮಹಾರಥನಾದ ಧೃಷ್ಟದ್ಯುಮ್ನನು ಅಶ್ವತ್ಥಾಮರನ್ನು

ಬಿಟ್ಟು ಬೇರೆಯ ರಥದ ಕಡೆಗೆ ಹೋದನು.
ತಥಾ ಪರಾಙ್ಮುಖರಥಂ ಸೈನ್ಯಂ ಯೌಧಿಷ್ಠಿರಂ ನೃಪ |
ಪರಾಜಿತ್ಯ ರಣೇ ವೀರೋ ದ್ರೋಣಪುತ್ರೋ ನನಾದ ಹ |
ಪೂಜಿತಃ ಸರ್ವಭೂತೈಶ್ಚ ತವ ಪುತ್ರೈಶ್ಚ ಭಾರತ ॥ 133 ॥
ಆ ರೀತಿಯಲ್ಲಿ ಯುಧಿಷ್ಠಿರನ ಸೈನ್ಯದ ಮಹಾರಥರು ಯುದ್ದ ಪರಾಙ್ಮುಖ- ರಾಗುವಂತೆ ಮಾಡಿ ಎಲೈ ರಾಜನೇ, ಮಹಾರಥನೇ, ದ್ರೋಣಪುತ್ರರಾದ ವೀರರಾದ ಅಶ್ವತ್ಥಾಮರು ಯುಧಿಷ್ಠಿರ ಸೈನ್ಯವನ್ನು ಯುದ್ಧದಲ್ಲಿ ಸೋಲಿಸಿ, ಸಿಂಹನಾದವನ್ನು ಮಾಡಿ ಸರ್ವಯೋಧರಿಂದಲೂ ಮತ್ತು ನಿನ್ನ ಪುತ್ರರಿಂದಲೂ ಪೂಜಿಸಲ್ಪಟ್ಟರು.
ಅಥ ಶರಶತಭಿನ್ನಕೃತ್ತದೇಹೈ-
ರ್ಹತಪತಿತೈಃ ಕ್ಷಣದಾಚರೈಃ ಸಮಂತಾತ್ |
ನಿಧನಮುಪಗತೈರ್ಮಹೀ ಕೃತಾಭೂದ್-
ಗಿರಿಶಿಖರೈರಿವ ದುರ್ಗಮಾತಿರೌದ್ರಾ ॥ 134 ॥
ಆಗ ನೂರಾರು ಬಾಣಗಳಿಂದ ದೇಹವು ಕತ್ತರಿಸಲ್ಪಟ್ಟು, ಎಲ್ಲ ಕಡೆಗಳಲ್ಲಿಯೂ ಮೃತರಾಗಿ ಬಿದ್ದ ರಾಕ್ಷಸ ಶರೀರಗಳಿಂದ ತುಂಬಿದ ಭೂಮಿಯು ಪರ್ವತ ಶಿಖರಗಳಿಂದ ಹರಡಲ್ಪಟ್ಟಂತೆ ನಡೆಯಲು ಅತ್ಯಂತ ದುರ್ಗಮವೂ ಮತ್ತು ಅತಿಭಯಂಕರವೂ ಆಗಿದ್ದಿತು.
ತಂ ಸಿದ್ಧಗಂಧರ್ವಪಿಶಾಚಸಂಘಾ
ನಾಗಾಃ ಸುಪರ್ಣಾಃ ಪಿತರೋ ವಯಾಂಸಿ |
ರಕ್ಷೋಗಣಾ ಭೂತಗಣಾಶ್ಚ ದ್ರೌಣಿ-
ಮಪೂಜಯನ್ನಪ್ಸರಸಃ ಸುರಾಶ್ಚ ॥ 135 ॥
ಆ ಅಶ್ವತ್ಥಾಮರನ್ನು ಸಿದ್ಧ-ಗಂಧರ್ವ-ಪಿಶಾಚ ಸಮೂಹಗಳು ನಾಗಗಳೂ, ಸುಪರ್ಣಗಳೂ, ಪಿತೃಗಳೂ, ಪಕ್ಷಿಗಳೂ, ರಾಕ್ಷಸಸಮೂಹಗಳೂ, ಭೂತ- ಸಮೂಹಗಳೂ, ದೇವತೆಗಳೂ ಅಪ್ಸರೆಯರೂ ಪೂಜಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಜಯದ್ರಥವಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೂರನೆಯ ಅಧ್ಯಾಯ
ಭೀಮಸೇನನಿಂದ ಬಾಹ್ಲೀಕ ರಾಜನ, ದುರ್ಯೋಧನ ಹತ್ತು ತಮ್ಮಂದಿರ ಮತ್ತು ಶಕುನಿಯ ಐದು ತಮ್ಮಂದಿರ ವಧೆ.
ಸಂಜಯಃ
ದ್ರುಪದಸ್ಯಾತ್ಮಜಾನ್ ದೃಷ್ಟ್ವಾ ಕುಂತಿಭೋಜಸುತಾಂಸ್ತಥಾ |
ದ್ರೋಣಪುತ್ರೇಣ ನಿಹತಾನ್ ರಾಕ್ಷಸಾಂಶ್ಚ ಸಹಸ್ರಶಃ ॥ 1 ॥
ಯುಧಿಷ್ಠಿರೋ ಭೀಮಸೇನೋ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಯುಯುಧಾನಶ್ಚ ಸಂಯತ್ತಾ ಯುದ್ಧಾಯೈವ ಮನೋ ದಧುಃ ॥ 2 ॥
ಸಂಜಯ ದ್ರುಪದನ ಪುತ್ರರೂ, ಕುಂತಿಭೋಜನ ಪುತ್ರರೂ ಮತ್ತು ಸಹಸ್ರ ಸಂಖ್ಯೆಯಲ್ಲಿ ರಾಕ್ಷಸರೂ ಅಶ್ವತ್ಥಾಮರಿಂದ ಹತರಾದುದನ್ನು ನೋಡಿ ಯುಧಿಷ್ಠಿರ, ಭೀಮಸೇನ, ಪಾರ್ಶತನಾದ ಧೃಷ್ಟದ್ಯುಮ್ನ ಮತ್ತು ಯುಯುಧಾನರು ಪ್ರಯತ್ನ ಪೂರ್ವಕವಾಗಿ ಯುದ್ಧವನ್ನು ಮುಂದುವರಿಸಲು ಮನಸ್ಸು ಮಾಡಿದರು.
ಸೋಮದತ್ತಃ ಪುನಃ ಕ್ರುದ್ಧೋ ದೃಷ್ಟ್ವಾ ಸಾತ್ಯಕಿಮಾಹವೇ |
ಮಹತಾ ಶರವರ್ಷೇಣ ಛಾದಯಾಮಾಸ ಸರ್ವತಃ ॥ 3 ॥
ಸೋಮದತ್ತನು ಪುನಃ ಕೋಪಗೊಂಡು, ರಣರಂಗದಲ್ಲಿ ಸಾತ್ಯಕಿಯನ್ನು ನೋಡಿ ಬಾಣಗಳ ದೊಡ್ಡ ಮಳೆಯಿಂದ ಅವನನ್ನು ಎಲ್ಲ ಕಡೆಯಿಂದ ಮುಚ್ಚಿಹಾಕಿದನು.
ತತಃ ಸಮಭವದ್ ಯುದ್ಧಮತೀವ ಭಯವರ್ಧನಮ್ |
ತ್ವದೀಯಾನಾಂ ಪರೇಷಾಂ ಚ ಘೋರಂ ವಿಜಯಕಾಂಕ್ಷಿಣಾಮ್ ॥ 4 ॥
ಅನಂತರ ಜಯಾಕಾಂಕ್ಷಿಗಳಾದ ನಿನ್ನವರಿಗೂ ಮತ್ತು ಪಾಂಡವರಿಗೂ ಬಹಳ ಭಯಂಕರವಾದ, ಘೋರವಾದ ಯುದ್ಧವು ನಡೆಯಿತು.
ದಶಭಿಃ ಸಾತ್ವತಸ್ಯಾರ್ಥೇ ಭೀಮೋ ವಿವ್ಯಾಧ ಕೌರವಮ್ |
ಸೋಮದತ್ತೋಽಪಿ ತಂ ವೀರಂ ಶತೇನ ಪ್ರತ್ಯವಿದ್ಧ್ಯತ ॥ 5 ॥
ಧೃಷ್ಟದ್ಯುಮ್ನನನ್ನು ರಕ್ಷಿಸುವ ಸಲುವಾಗಿ ಭೀಮಸೇನನು ಹತ್ತು ಬಾಣಗಳಿಂದ ಕೌರವನಾದ ಸೋಮದತ್ತನನ್ನು ಹೊಡೆದನು. ಸೋಮದತ್ತನೂ ಸಹ ವೀರನಾದ ಭೀಮಸೇನನನ್ನು (ಸಾತ್ಯಕಿಯನ್ನು) ನೂರು ಬಾಣಗಳಿಂದ ಪ್ರತಿಯಾಗಿ ಹೊಡೆದನು.
ಸಾತ್ವತಸ್ತ್ವಭಿಸಂಕ್ರುದ್ಧಃ ಪುತ್ರಾಧಿಭಿರಭಿಪ್ಲುತಮ್ |
ವೃದ್ಧಮೃದ್ಧಂ ಗುಣೈಃ ಸರ್ವೈರ್ಯಯಾತಿಮಿವ ನಾಹುಷಮ್ ॥ 6 ॥
ವಿವ್ಯಾಧ ದಶಭಿಸ್ತೀಕ್ಷ್ಣೈಃ ಶರೈರ್ವಜ್ರನಿಪಾತಿಭಿಃ |
ಶಕ್ತ್ಯಾ ಚೈನಮಥಾಹತ್ಯ ಪುನರ್ವಿವ್ಯಾಧ ಸಪ್ತಭಿಃ ॥ 7 ॥

ಸಾತ್ಯಕಿಯು ಅತ್ಯಂತ ಕೋಪಗೊಂಡು ಪುತ್ರವ್ಯಸನದಿಂದ ತುಂಬಿಹೋಗಿದ್ದ ವೃದ್ಧನೂ, ನಹುಷ ಪುತ್ರನಾದ ಯಯಾತಿಯಂತೆ ಸರ್ವಗುಣಗಳಿಂದ ಸಮೃದ್ಧನೂ ಆದ ಬಾಹ್ಲೀಕರಾಜನನ್ನು ವಜ್ರದಂತೆ ಬೀಳುವ ಹತ್ತು ತೀಕ್ಷ್ಣವಾದ ಬಾಣಗಳಿಂದ ಹೊಡೆದನು. ಅನಂತರ ಅವನನ್ನು ಶಕ್ತ್ಯಾಯುಧದಿಂದ ಹೊಡೆದು ಪುನಃ ಏಳು ಬಾಣಗಳಿಂದ ಹೊಡೆದನು.

ತತಸ್ತು ಸಾತ್ಯಕೇರರ್ಥೇ ಭೀಮಸೇನೋ ನವಂ ದೃಢಮ್ |
ಮುಮೋಚ ಪರಿಘಂ ಘೋರಂ ಸೋಮದತ್ತಸ್ಯ ಮೂರ್ಧನಿ ॥ 8 ॥
ಅನಂತರ ಸಾತ್ಯಕಿಯ ಸಲುವಾಗಿ ಭೀಮಸೇನನು ಹೊಸದಾದ ಬಲಿಷ್ಠವಾದ ಘೋರವಾದ ಪರಿಘವನ್ನು ತೆಗೆದುಕೊಂಡು ಅದನ್ನು ಸೋಮದತ್ತನ ಶಿರಸ್ಸಿನ ಮೇಲೆ ಎಸೆದನು.

ಸಾತ್ಯಕಿಶ್ಚಾಗ್ನಿಸಂಕಾಶಂ ಮುಮೋಚ ಶರಮುತ್ತಮಮ್ |
ಸೋಮದತ್ತೋರಸಿ ಕ್ರುದ್ಧಃ ಸುಪತ್ರಂ ನಿಶಿತಂ ಯುಧಿ ॥ 9 ॥
ಸಾತ್ಯಕಿಯೂ ಸಹ ಕ್ರುದ್ಧನಾಗಿ ಒಳ್ಳೆಯ ಪತ್ರಗಳಿಂದ ಕೂಡಿದ ಅಗ್ನಿಯಂತಿದ್ದ ನಿಶಿತವಾದ ಶ್ರೇಷ್ಠವಾದ ಒಂದು ಬಾಣದಿಂದ ರಣರಂಗದಲ್ಲಿ ಸೋಮದತ್ತನನ್ನು ಎದೆಯಲ್ಲಿ ಹೊಡೆದನು.

ಯುಗಪತ್ಪೇತತುರಥ ಘೋರೌ ಪರಿಘಮಾರ್ಗಣೌ |
ಶರೀರೇ ಸೋಮದತ್ತಸ್ಯ ಸ ಪಪಾತ ಮಹಾರಥಃ ॥ 10 ॥
ಘೋರವಾದ ಭೀಮಸೇನನ ಪರಿಘವೂ ಮತ್ತು ಸಾತ್ಯಕಿಯ ಬಾಣವೂ ಒಂದೇ ಕಾಲದಲ್ಲಿ ಸೋಮದತ್ತನ ಶರೀರದಲ್ಲಿ ಬಿದ್ದವು. ಮಹಾರಥನಾದ ಅವನು ರಥದಿಂದ ಕೆಳಗೆ ಬಿದ್ದನು.

ವ್ಯಾಮೋಹಿತೇ ತು ತನಯೇ ಬಾಹ್ಲೀಕಃ ಸಮುಪಾದ್ರವತ್ |
ವಿಸೃಜನ್ ಶರವರ್ಷಾಣಿ ಕಾಲವರ್ಷೀವ ತೋಯದಃ ॥ 11 ॥
ತನ್ನ ಪುತ್ರನು ಮೂರ್ಛೆಯನ್ನು ಹೊಂದುತ್ತಿರಲು ಬಾಹ್ಲೀಕ ರಾಜನು ಮಳೆಗಾಲದಲ್ಲಿ ಮೋಡವು ನೀರನ್ನು ಸುರಿಸುವಂತೆ ಬಾಣಗಳ ಮಳೆಯನ್ನು ಸುರಿಸುತ್ತಾ ಅಲ್ಲಿಗೇ ಧಾವಿಸಿದನು.

ಭೀಮೋಽಥ ಸಾತ್ವತಸ್ಯಾರ್ಥೇ ಬಾಹ್ಲೀಕಂ ನವಭಿಃ ಶರೈಃ |
ಪೀಡಯನ್ ವೈ ಮಹಾತ್ಮಾನಂ ವಿವ್ಯಾಧ ರಣಮೂರ್ಧನಿ ॥ 12 ॥
ಆಗ ಭೀಮನು ಧೃಷ್ಟದ್ಯುಮ್ನನ ಸಲುವಾಗಿ ಪ್ರತೀಪ ಪುತ್ರನೂ, ಮಹಾತ್ಮನೂ ಆದ ಬಾಹ್ಲೀಕನನ್ನು ಆ ಘೋರವಾದ ಯುದ್ಧದಲ್ಲಿ ಒಂಬತ್ತು ಬಾಣಗಳಿಂದ ಹೊಡೆದನು (ಪ್ರತೀಪನ ಪುತ್ರ ಬಾಹ್ಲೀಕ. ಬಾಹ್ಲೀಕನ ಪುತ್ರ ಸೋಮದತ್ತ. ಸೋಮದತ್ತನ ಪುತ್ರರು ಭೂರಿ, ಭೂರಿಶ್ರವ ಮತ್ತು ಶಲ).

ಪ್ರಾತಿಪೇಯಸ್ತು ಸಂಕ್ರುದ್ಧಃ ಶಕ್ತಿಂ ಭೀಮಸ್ಯ ವಕ್ಷಸಿ |
ನಿಚಖಾನ ಮಹಾಬಾಹುಃ ಪುರಂದರ ಇವಾಶನಿಮ್ ॥ 13 ॥
ಪ್ರತೀಪ ಪುತ್ರನಾದ ಮಹಾಬಾಹುವಾದ ಬಾಹ್ಲೀಕನು ಬಹಳ ಕೋಪಗೊಂಡು ಭೀಮನ ಎದೆಯಲ್ಲಿ ಇಂದ್ರನು ವಜ್ರಾಯುಧವನ್ನು ನಾಟಿಸಿದಂತೆ ಒಂದು ಬಾಣವನ್ನು ನಾಟಿಸಿದನು.

ಸ ತಯಾಽಭಿಹತೋ ಭೀಮಶ್ಚಕಂಪೇ ಚ ಮುಮೋಹ ಚ |
ಪ್ರಾಪ್ಯ ಚೇತಶ್ಚ ಬಲವಾನ್ ಗದಾಮಸ್ಮೈ ಸಸರ್ಜ ಹ ॥ 14 ॥
ಆ ಬಾಣದಿಂದ ಹೊಡೆಯಲ್ಪಟ್ಟ ಭೀಮನು ನಡುಗಿ ಮೂರ್ಛೆಯನ್ನು ಹೊಂದಿದನು. ಬಲಿಷ್ಠನಾದ ಅವನು ಪುನಃ ಪ್ರಜ್ಞೆಯನ್ನು ಹೊಂದಿ ಬಾಹ್ಲೀಕನ ಮೇಲೆ ಒಂದು ಗದೆಯನ್ನು ಎಸೆದನು.

ಸಾ ಪಾಂಡವೇನ ಪ್ರಹಿತಾ ಬಾಹ್ಲೀಕಸ್ಯ ಶಿರೋಽಹರತ್ |
ಸ ಪಪಾತ ಹತಃ ಪೃಥ್ವ್ಯಾಂ ವಜ್ರಾಹತ ಇವಾದ್ರಿರಾಟ್ ॥ 15 ॥
ಪಾಂಡವನಾದ ಭೀಮಸೇನನಿಂದ ಎಸೆಯಲ್ಪಟ್ಟ ಆ ಗದೆಯು ಬಾಹ್ಲೀಕನ ಶಿರಸ್ಸನ್ನು ಹಾರಿಸಿತು. ಅವನು ವಜ್ರಾಯುಧದ ಹೊಡೆತಕ್ಕೆ ಸಿಕ್ಕಿದ ಪರ್ವತರಾಜನಂತೆ ಮೃತನಾಗಿ ಭೂಮಿಯ ಮೇಲೆ ಬಿದ್ದನು.

ತಸ್ಮಿನ್ ವಿನಿಹತೇ ವೀರೇ ಬಾಹ್ಲೀಕೇ ಪುರುಷರ್ಷಭೇ |
ಪುತ್ರಾಸ್ತೇಽಭ್ಯರ್ದಯನ್ ಭೀಮಂ ದಶ ದಾಶರಥೇಃ ಸಮಾಃ ॥ 16 ॥
ಪುರುಷಶ್ರೇಷ್ಠನಾದ ವೀರನಾದ ಆ ಬಾಹ್ಲೀಕನು ಹತನಾಗುತ್ತಿರಲು ರಾಮನಿಗೆ ಸಮಾನವಾದ ಪರಾಕ್ರಮವುಳ್ಳ ನಿನ್ನ ಹತ್ತು ಪುತ್ರರು ಭೀಮನನ್ನು ಮರ್ದಿಸಿದರು.

ನಾರಾಚೈರ್ದಶಭಿರ್ಭೀಮಸ್ತಾನ್ ನಿಹತ್ಯ ತವಾತ್ಮಜಾನ್ |
ಕರ್ಣಸ್ಯ ದಯಿತಂ ಪುತ್ರಂ ವೃಷಸೇನಮವಾಕಿರತ್ ॥ 17 ॥
ಭೀಮನು ಹತ್ತು ನಾರಾಚಗಳಿಂದ ಆ ನಿನ್ನ ಹತ್ತು ಪುತ್ರರನ್ನು ಹೊಡೆದು ಕರ್ಣನ ಪ್ರೀತಿಪಾತ್ರ ಪುತ್ರನಾದ ವೃಷಸೇನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.

ತತೋ ವೃಷರಥೋ ನಾಮ ಭ್ರಾತಾ ಕರ್ಣಸ್ಯ ವಿಶ್ರುತಃ |
ಜಘಾನ ಭೀಮಂ ನಾರಾಚೈಸ್ತಮಪ್ಯಭ್ಯವಧೀದ್ ಬಲೀ ॥ 18 ॥
ಆಗ ಕರ್ಣನ ಪ್ರಖ್ಯಾತನಾದ ತಮ್ಮನಾದ ವೃಷರಥನು ಭೀಮನನ್ನು ನಾರಾಚಗಳಿಂದ ಹೊಡೆದನು. ಬಲಿಷ್ಠನಾದ ಭೀಮಸೇನನು ಅವನನ್ನೂ ಕೊಂದನು.

ತತಃ ಸಪ್ತ ರಥಾನ್ ವೀರಃ ಸ್ಯಾಲಾನಾಂ ತವ ಭಾರತ |
ನಿಹತ್ಯ ಭೀಮೋ ನಾರಾಚೈಃ ಶತಚಂದ್ರಮಪೋಥಯತ್ ॥ 19 ॥

ಎಲೈ ಭಾರತನೇ, ಅನಂತರ ವೀರನಾದ ಭೀಮನು ನಿನ್ನ ಭಾವಮೈದುರಾದ ಏಳು ರಥರನ್ನು ಕೊಂದು ನಾರಾಚಗಳಿಂದ ಶತಚಂದ್ರನನ್ನು ಸಂಹರಿಸಿದನು.
ಅಮರ್ಷಯಂತೋ ನಿಹತಂ ಶತಚಂದ್ರಂ ಮಹಾರಥಮ್ |
ಶಕುನೇರ್ಭ್ರಾತರೋ ವೀರಾ ಗಜಾಕ್ಷಃ ಶರಭೋ ವಿಭುಃ |
ಅಭಿದ್ರುತ್ಯ ಶರೈಸ್ತೀಕ್ಷ್ಣೈರ್ಭೀಮಸೇನಮತಾಡಯನ್ ॥ 20 ॥
ಮಹಾರಥನಾದ ಶತಚಂದ್ರನು ಹತನಾದುದನ್ನು ನೋಡಿ ರೋಷಕ್ಕೆ ಒಳಗಾದ, ಶಕುನಿಯ ಸಹೋದರರಾದ, ವೀರರಾದ ಗಜಾಕ್ಷ, ಶರಭ ಮತ್ತು ವಿಭು ಎಂಬುವವರು ಭೀಮಸೇನನ ಕಡೆಗೆ ಧಾವಿಸಿ ಅವನನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದರು.
ಸ ತುದ್ಯಮಾನೋ ನಾರಾಚೈರ್ವೃಷ್ಟಿವೇಗೈರಿವರ್ಷಭಃ |
ಜಘಾನ ಪಂಚಭಿರ್ಬಾಣೈಃ ಪಂಚೈವಾತಿಬಲೋ ರಥಾನ್ |
ತಾನ್ ದೃಷ್ಟ್ವಾ ನಿಹತಾನ್ ವೀರಾನ್ ವಿಚೇಲುರ್ನೃಪಸತ್ತಮಾಃ ॥ 21 ॥
ನಾರಾಚಗಳಿಂದ ಹಿಂಸಿಸಲ್ಪಡುತ್ತಿದ್ದ ಭೀಮನು ಗೂಳಿಯು ಮಳೆಯ ಧಾರೆಗಳನ್ನು ತಡೆದಂತೆ ಅವುಗಳನ್ನು ಧರಿಸಿ, ಅತಿಬಲನಾದ ಅವನು ಐದು ಬಾಣಗಳಿಂದ ಮಹಾರಥರಾದ ಆ ಐದು ಯೋಧರನ್ನೂ ಕೊಂದನು. ಆ ವೀರರು ಹತರಾದುದನ್ನು ನೋಡಿ ನೃಪಶ್ರೇಷ್ಠರು ನಡುಗಿದರು.
ತತೋ ಯುಧಿಷ್ಠಿರಃ ಕ್ರುದ್ಧಸ್ತವಾನೀಕಮಶಾತಯತ್ |
ಮಿಷತಃ ಕುಂಭಯೋನೇಶ್ಚ ಪುತ್ರಾಣಾಂ ಚ ತವಾನಘ ॥ 22 ॥
ಅನಂತರ ಯುಧಿಷ್ಠಿರನು ಕೋಪಗೊಂಡು ಎಲೈ ಅನಘನೇ, ಕುಂಭಯೋನಿಗಳಾದ ದ್ರೋಣರು ಮತ್ತು ನಿನ್ನ ಪುತ್ರರು ನೋಡುತ್ತಿರುವಂತೆಯೇ ನಿನ್ನ ಸೈನ್ಯವನ್ನು ನಾಶಗೊಳಿಸಿದನು.
ಅಂಬಷ್ಠಾನ್ ಮಾಲವಾನ್ ಶೂರಾಂಸ್ತ್ರಿಗರ್ತಾನ್ ಸಶಿಬೀನಪಿ |
ಪ್ರಾಹಿಣೋತ್ ಮೃತ್ಯುಲೋಕಾಯ ಗಣಾನ್ ಯುದ್ಧೇ ಯುಧಿಷ್ಠಿರಃ ॥
ಅಂಬಷ್ಠರ, ಮಾಲವರ, ತ್ರಿಗರ್ತಶೂರರ, ಶಿಬಿಗಳ ಸಮೂಹಗಳನ್ನು ಯುಧಿಷ್ಠಿರನು ರಣರಂಗದಲ್ಲಿ ಮೃತ್ಯುಲೋಕಕ್ಕೆ ಕಳುಹಿಸಿದನು.
ಅಭೀಷಾಹಾನ್ ಶೂರಸೇನಾನ್ ಬಾಹ್ಲೀಕಾನ್ ಸವಸಾತಿಕಾನ್ |
ನಿಕೃತ್ಯ ಪೃಥಿವೀಂ ರಾಜಾ ಚಕ್ರೇ ಶೋಣಿತಕರ್ದಮಾಮ್ ॥ 24 ॥
ರಾಜನಾದ ಯುಧಿಷ್ಠಿರನು ಅಭೀಷಾಹರನ್ನು, ಶೂರಸೇನರನ್ನು, ಬಾಹ್ಲೀಕರನ್ನು ಮತ್ತು ವಸಾತಿಗಳನ್ನು ಕೊಂದು ಭೂಮಿಯನ್ನು ರಕ್ತದ ಕೆಸರುಳ್ಳದ್ದಾಗಿ ಮಾಡಿದನು.
ಯೌಧೇಯಾರಟ್ಟರಾಜನ್ಯಮದ್ರುಕಾಣಾಂ ಗಣಾನ್ ಯುಧಿ |
ಪ್ರಾಹಿಣೋತ್ ಮೃತ್ಯುಲೋಕಾಯ ಶೂರಾನ್ ಬಾಣೈರ್ಯುಧಿಷ್ಠಿರಃ ॥
ಯುಧಿಷ್ಠಿರನು ತನ್ನ ಬಾಣಗಳಿಂದ ಶೂರರಾದ ಯೌಧೇಯರ, ಆರಟ್ಟರ, ರಾಜನ್ಯರ, ಮದ್ರುಕರ ಗಣಗಳನ್ನು ರಣರಂಗದಲ್ಲಿ ಮೃತ್ಯುಲೋಕಕ್ಕೆ ಕಳುಹಿಸಿದನು.
ಹತಾಹರತ ಗೃಹ್ಣೀತ ವಿದ್ಧ್ಯತ ವ್ಯವಕೃಂತತ |
ಇತ್ಯಾಸೀತ್ತುಮುಲಃ ಶಬ್ದೋ ಯುಧಿಷ್ಠಿರರಥಂ ಪ್ರತಿ ॥ 26 ॥
ಕೊಲ್ಲಿ, ಎಳೆದು ತನ್ನಿ, ಹಿಡಿಯಿರಿ, ಹೊಡೆಯಿರಿ, ಕತ್ತರಿಸಿ ಎಂಬ ತೀವ್ರವಾದ ಶಬ್ದಗಳು ಯುಧಿಷ್ಠಿರನ ರಥದ ಬಳಿಯಲ್ಲಿ ಉಂಟಾದವು.
ಸೈನ್ಯಾನಿ ದ್ರಾವಯಂತಂ ತಂ ದ್ರೋಣೋ ದೃಷ್ಟ್ವಾ ಯುಧಿಷ್ಠಿರಮ್ |
ಚೋದಿತಸ್ತವ ಪುತ್ರೇಣ ಸಾಯಕೈರಭ್ಯವಾಕಿರತ್ ॥ 27 ॥
ದ್ರೋಣರು ತಮ್ಮ ಸೈನ್ಯವನ್ನು ಓಡಿಸುತ್ತಿದ್ದ ಯುಧಿಷ್ಠಿರನನ್ನು ನೋಡಿ ನಿನ್ನ ಪುತ್ರನಿಂದ ಪ್ರಚೋದಿತರಾಗಿ ಯುಧಿಷ್ಠಿರನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ದ್ರೋಣಸ್ತು ಪರಮಕ್ರುದ್ಧೋ ವಾಯವ್ಯಾಸ್ತ್ರೇಣ ಪಾರ್ಥಿವಮ್ |
ವಿವ್ಯಾಧ ಸೋಽಸ್ಯ ತದ್ದಿವ್ಯಮಸ್ತ್ರಮಸ್ತ್ರೇಣ ಜಘ್ನಿವಾನ್ ॥ 28 ॥
ಬಹಳ ಕೋಪಗೊಂಡ ದ್ರೋಣರು ರಾಜನಾದ ಯುಧಿಷ್ಠಿರನನ್ನು ವಾಯವ್ಯಾಸ್ತ್ರದಿಂದ ಹೊಡೆದರು. ಯುಧಿಷ್ಠಿರನು ಆ ದಿವ್ಯಾಸ್ತ್ರವನ್ನು ಪ್ರತ್ಯಸ್ತ್ರದಿಂದ ನಾಶಪಡಿಸಿದನು.
ತಸ್ಮಿನ್ ವಿನಿಹತೇ ಚಾಸ್ತ್ರೇ ಭಾರದ್ವಾಜೋ ಯುಧಿಷ್ಠಿರೇ |
ವಾರುಣಂ ಯಾಮ್ಯಮಾಗ್ನೇಯಂ ತ್ವಾಷ್ಟ್ರಂ ಸಾವಿತ್ರಮೇವ ಚ |
ಚಿಕ್ಷೇಪ ಪರಮಕ್ರುದ್ಧೋ ಜಿಘಾಂಸುಃ ಪಾಂಡುನಂದನಮ್ ॥ 29 ॥
ತಮ್ಮ ವಾಯವ್ಯಾಸ್ತ್ರವು ನಾಶವನ್ನು ಹೊಂದುತ್ತಿರಲು ದ್ರೋಣರು ಪರಮಕ್ರುದ್ಧರಾಗಿ ಪಾಂಡುನಂದನನಾದ ಯುಧಿಷ್ಠಿರನನ್ನು ಕೊಲ್ಲಲು ಬಯಸಿ ಅವನ ಮೇಲೆ ವಾರುಣಾಸ್ತ್ರವನ್ನೂ, ಯಾಮ್ಯಾಸ್ತ್ರವನ್ನೂ, ಆಗ್ನೇಯಾಸ್ತ್ರವನ್ನೂ, ತ್ವಾಷ್ಟ್ರಾಸ್ತ್ರವನ್ನೂ ಮತ್ತು ಸಾವಿತ್ರಾಸ್ತ್ರವನ್ನೂ ಪ್ರಯೋಗಿಸಿದರು.
ಕ್ಷಿಪ್ತಾನಿ ಕ್ಷಿಪ್ಯಮಾಣಾನಿ ತಾನಿ ಚಾಸ್ತ್ರಾಣಿ ಧರ್ಮಜಃ |
ಜಘಾನಾಸ್ತ್ರೈರ್ಮಹಾಬಾಹುಃ ಕುಂಭಯೋನೇರವಿತ್ರಸನ್ ॥ 30 ॥
ಕುಂಭಯೋನಿಗಳಾದ ದ್ರೋಣರಿಂದ ಪ್ರಯೋಗಿಸಲ್ಪಟ್ಟ ಮತ್ತು ಪ್ರಯೋಗಿಸಲ್ಪಡುತ್ತಿದ್ದ ಆ ಅಸ್ತ್ರಗಳನ್ನು ಮಹಾಬಾಹುವಾದ ಧರ್ಮರಾಜನು ಹೆದರದೆ ಅಸ್ತ್ರಗಳಿಂದ ನಾಶಪಡಿಸಿದನು.

ಸತ್ಯಾಂ ಚಿಕೀರ್ಷಮಾಣಸ್ತು ಪ್ರತಿಜ್ಞಾಂ ಕುಂಭಸಂಭವಃ |
ಪ್ರಾದುಶ್ಚಕ್ರೇಽಸ್ತ್ರಮೈಂದ್ರಂ ವೈ ಪ್ರಾಜಾಪತ್ಯಂ ಚ ಭಾರತ |
ಜಿಘಾಂಸುರ್ಧರ್ಮತನಯಂ ತವ ಪುತ್ರಹಿತೇ ರತಃ ॥ 31 ॥
ಕುಂಭಸಂಭವರಾದ ದ್ರೋಣರು ತಮ್ಮ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡಲು ಬಯಸಿ ನಿನ್ನ ಪುತ್ರನ ಹಿತದಲ್ಲಿ ರತರಾಗಿ ಧರ್ಮರಾಜನನ್ನು ಕೊಲ್ಲುವ ಇಚ್ಛೆಯುಳ್ಳವರಾಗಿ ಎಲೈ ಭಾರತನೇ, ಐಂದ್ರಾಸ್ತ್ರವನ್ನೂ ಮತ್ತು ಪ್ರಾಜಾಪತ್ಯ ಅಸ್ತ್ರವನ್ನು ಪ್ರಾದುರ್ಭಾವ- ಗೊಳಿಸಿದರು.
ಪತಿಃ ಕುರೂಣಾಂ ಗಜಸಿಂಹಗಾಮೀ
ವಿಶಾಲವಕ್ಷಾಃ ಪೃಥುಲೋಹಿತಾಕ್ಷಃ |
ಪ್ರಾದುಶ್ಚಕಾರಾಸ್ತ್ರಮಹೀನತೇಜಾ
ಮಾಹೇಂದ್ರಮನ್ಯತ್ ಸ ಜಘಾನ ತೇಽಸ್ತ್ರೇ ॥ 32 ॥
ಕುರುಪತಿಯೂ, ಗಜಸಿಂಹಗತಿಯುಳ್ಳವನೂ, ವಿಶಾಲವಕ್ಷಸ್ಥಳವುಳ್ಳವನೂ, ವಿಸ್ತಾರವಾದ ಲೋಹಿತಾಕ್ಷವುಳ್ಳವನೂ, ಪೂರ್ಣವಾದ ತೇಜಸ್ಸುಳ್ಳವನೂ ಆದ ಯುಧಿಷ್ಠಿರನು ಇನ್ನೊಂದು ಇಂದ್ರಾಸ್ತ್ರವನ್ನು ಪ್ರಾದುರ್ಭಾವಗೊಳಿಸಿ ಆ ಎರಡು ಅಸ್ತ್ರಗಳನ್ನು ನಾಶಪಡಿಸಿದನು.
ವಿಹನ್ಯಮಾನೇಷ್ವಸ್ತ್ರೇಷು ದ್ರೋಣಃ ಕ್ರೋಧಸಮನ್ವಿತಃ |
ಯುಧಿಷ್ಠಿರವಧಪ್ರೇಪ್ಸುರ್ಬ್ರಾಹ್ಮಮಸ್ತ್ರಮುದೈರಯತ್ ॥ 33 ॥
ತಮ್ಮ ಅಸ್ತ್ರಗಳು ನಾಶಪಡಿಸಲ್ಪಡುತ್ತಿರಲು ಕ್ರೋಧ ಸಮನ್ವಿತರಾದ ದ್ರೋಣರು ಯುಧಿಷ್ಠಿರನ ವಧೆಯನ್ನು ಬಯಸಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದರು.
ತತೋ ನಾಜ್ಞಾಸಿಷಂ ಕಿಂಚಿದ್ ಘೋರೇಣ ತಮಸಾವೃತೇ |
ಸರ್ವಭೂತಾನಿ ಚ ಪರಂ ತ್ರಾಸಂ ಜಗ್ಮುರ್ಮಹೀಪತೇ ॥ 34 ॥
ಎಲೈ ರಾಜನೇ, ಆಗ ಘೋರವಾದ ತಮಸ್ಸಿನಿಂದ ಎಲ್ಲವೂ ಆವೃತವಾಗಿರಲು ನಾನು ಏನನ್ನೂ ತಿಳಿಯಲಿಲ್ಲ. ಆದರೆ ಎಲ್ಲ ವಾಹನಗಳೂ ಮತ್ತು ಯೋಧರೂ ಬಹಳ ತ್ರಾಸ (ಸಂಕಟ)ವನ್ನು ಹೊಂದಿದರು.
ಬ್ರಹ್ಮಾಸ್ತ್ರಮುದ್ಯತಂ ದೃಷ್ಟ್ವಾ ಕುಂತೀಪುತ್ರೋ ಯುಧಿಷ್ಠಿರಃ |
ಬ್ರಹ್ಮಾಸ್ತ್ರೇಣೈವ ರಾಜೇಂದ್ರ ತದಸ್ತ್ರಂ ಪ್ರತ್ಯವಾರಯತ್ ॥ 35 ॥
ಕಾರ್ಯೋನ್ಮುಖವಾದ ಬ್ರಹ್ಮಾಸ್ತ್ರವನ್ನು ನೋಡಿದ ಕುಂತೀಪುತ್ರನಾದ ಯುಧಿಷ್ಠಿರನು ಎಲೈ ರಾಜೇಂದ್ರನೇ, ಬ್ರಹ್ಮಾಸ್ತ್ರದಿಂದಲೇ ಆ ಅಸ್ತ್ರವನ್ನು ನಿವಾರಿಸಿದನು.
ತತಃ ಸೈನಿಕಮುಖ್ಯಾಸ್ತೇ ಪ್ರಶಶಂಸುರ್ನರರ್ಷಭೌ |
ದ್ರೋಣಪಾರ್ಥೌ ಮಹೇಷ್ವಾಸೌ ಸರ್ವಯುದ್ಧವಿಶಾರದೌ ॥ 36 ॥
ಆಗ ಆ ಸೈನಿಕರಲ್ಲಿ ಮುಖ್ಯರಾದವರು ಮಹಾಧನುರ್ಧಾರಿಗಳೂ, ಸರ್ವ ಯುದ್ಧವಿಶಾರದರೂ, ನರಶ್ರೇಷ್ಠರೂ ಆದ ದ್ರೋಣರನ್ನು ಮತ್ತು ಯುಧಿಷ್ಠಿರನನ್ನು ಪ್ರಶಂಸೆ ಮಾಡಿದರು.
ತತಃ ಪ್ರಮುಚ್ಯ ಕೌಂತೇಯಂ ದ್ರೋಣೋ ದ್ರುಪದವಾಹಿನೀಮ್ |
ವ್ಯಧಮದ್ ರೋಷತಾಮ್ರಾಕ್ಷೋ ವಾಯವ್ಯಾಸ್ತ್ರೇಣ ಭಾರತ ॥ 37 ॥
ಎಲೈ ಭಾರತನೇ, ಆಗ ಕೋಪದಿಂದ ಕೆಂಪಾದ ಕಣ್ಣುಳ್ಳ ದ್ರೋಣರು ಧರ್ಮರಾಜನನ್ನು ಬಿಟ್ಟು ದ್ರುಪದನ ಸೈನ್ಯವನ್ನು ವಾಯವ್ಯಾಸ್ತ್ರದಿಂದ ಹಾರಿಸಿದರು.
ತೇ ಹನ್ಯಮಾನಾ ದ್ರೋಣೇನ ಪಾಂಚಾಲಾಃ ಪ್ರಾದ್ರವನ್ ಭಯಾತ್ |
ಪಶ್ಯತೋ ಭೀಮಸೇನಸ್ಯ ಪಾರ್ಥಸ್ಯ ಚ ಮಹಾತ್ಮನಃ ॥ 38 ॥
ದ್ರೋಣರ ಆ ಅಸ್ತ್ರದಿಂದ ಪೀಡಿಸಲ್ಪಟ್ಟ ಪಾಂಚಾಲರು ಭೀಮಸೇನನು ಮತ್ತು ಮಹಾತ್ಮನಾದ ಅರ್ಜುನನು ನೋಡುತ್ತಿರುವಂತೆಯೇ ಭಯದಿಂದ ಓಡಿಹೋದರು.
ತತಃ ಕಿರೀಟೀ ಭೀಮಶ್ಚ ಸಹಸಾ ಸಂನ್ಯವರ್ತತಾಮ್ |
ಮಹದ್ಭ್ಯಾಂ ರಥವಂಶಾಭ್ಯಾಂ ಪರಿಗೃಹ್ಯ ಬಲಂ ತವ ॥ 39 ॥
ಆಗ ಅರ್ಜುನ ಮತ್ತು ಭೀಮಸೇನನು ದೊಡ್ಡ ರಥಸಮೂಹಗಳನ್ನು ತೆಗೆದುಕೊಂಡು ನಿನ್ನ ಸೈನ್ಯವನ್ನು ಉದ್ದೇಶಿಸಿ ತಕ್ಷಣ ಹಿಂದಿರುಗಿದರು.
ಬೀಭತ್ಸುರ್ದಕ್ಷಿಣಂ ಪಾರ್ಶ್ವಮುತ್ತರಂ ತು ವೃಕೋದರಃ |
ಭಾರದ್ವಾಜಂ ಶರೌಘಾಭ್ಯಾಂ ಮಹದ್ಭ್ಯಾಮಭ್ಯವರ್ಷತಾಮ್ ॥ 40 ॥
ಅರ್ಜುನನು ದ್ರೋಣರ ಸೈನ್ಯದ ಬಲಭಾಗವನ್ನೂ, ವೃಕೋದರನು ಎಡಭಾಗವನ್ನೂ ತಮ್ಮ ದೊಡ್ಡ ಬಾಣಸಮೂಹಗಳಿಂದ ಪೀಡಿಸಿದರು.
ತೌ ತದಾ ಸೃಂಜಯಾಶ್ಚೈವ ಪಾಂಚಾಲಾಶ್ಚ ಮಹೌಜಸಃ |
ಅನ್ವಗಚ್ಛನ್ ಮಹಾರಾಜ ಮತ್ಸ್ಯಾಶ್ಚ ಸಹ ಸಾತ್ವತೈಃ ॥ 41 ॥
ಎಲೈ ಮಹಾರಾಜನೇ, ಆಗ ಅವರಿಬ್ಬರನ್ನೂ ಸೃಂಜಯರೂ, ಮಹಾಶಕ್ತಿವಂತರಾದ ಪಾಂಚಾಲರೂ, ಸಾತ್ವತರಿಂದ ಸೇರಿದ ಮತ್ಸ್ಯರೂ ಹಿಂಬಾಲಿಸಿದರು.
ತತಃ ಸಾ ಭಾರತೀ ಸೇನಾ ವಧ್ಯಮಾನಾ ಕಿರೀಟಿನಾ |

ದ್ರೋಣೇನ ವಾರ್ಯಮಾಣಾಸ್ತೇ ಸ್ವಯಂ ತವ ಸುತೇನ ಚ |
ನಾಶಕ್ಯಂತ ಮಹಾರಾಜ ಯೋಧಾ ವಾರಯಿತುಂ ತದಾ ॥ 42 ॥
ಆಗ ಅರ್ಜುನನಿಂದ ಹೊಡೆಯಲ್ಪಡುತ್ತಿದ್ದ ಆ ಕೌರವಸೇನೆಯು ದ್ರೋಣರಿಂದಲೂ ಮತ್ತು ಸ್ವತಃ ನಿನ್ನ ಪುತ್ರರಿಂದಲೂ ತಡೆಯಲ್ಪಟ್ಟಿತು. ಎಲ್ಲೈ ಮಹಾರಾಜನೇ, ಉಳಿದ ಯೋಧರು ಅವರನ್ನು ತಡೆಯಲು ಆಗ ಸಮರ್ಥರಾಗಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *

ನೂರ ನಲವತ್ನಾಲ್ಕನೆಯ ಅಧ್ಯಾಯ
ದುರ್ಯೋಧನನ ಎದುರಿನಲ್ಲಿ ಕರ್ಣ ಮತ್ತು ಕೃಪರ ಕಲಹ.
ಸಂಜಯಃ
ಉದೀರ್ಯಮಾಣಂ ತದ್ ದೃಷ್ಟ್ವಾ ಪಾಂಡವಾನಾಂ ಮಹದ್ಬಲಮ್ |
ಅವಿಷಹ್ಯಂ ಚ ಮನ್ವಾನಃ ಕರ್ಣಂ ದುರ್ಯೋಧನೋಽಬ್ರವೀತ್ ॥1॥
ಸಂಜಯ ಪಾಂಡವರ ದೊಡ್ಡ ಸೈನ್ಯವು ಅಭಿವೃದ್ಧಿ ಹೊಂದುತ್ತಿರುವುದನ್ನು ನೋಡಿ ಅದನ್ನು ತಡೆಯಲು ಅಸಾಧ್ಯವೆಂದು ತಿಳಿದ ದುರ್ಯೋಧನನು ಕರ್ಣನನ್ನು ಕುರಿತು ಮಾತನಾಡಿದನು.
ಅಯಂ ಸ ಕಾಲಃ ಸಂಪ್ರಾಪ್ತೋ ಮಿತ್ರಾಣಾಂ ಮಿತ್ರವತ್ಸಲ |
ತ್ರಾಯಸ್ವ ಸಮರೇ ಕರ್ಣ ಸರ್ವಾನ್ ಯೋಧಾನ್ ಮಹಾಬಲ ॥ 2 ॥
ಪಾಂಚಾಲೈರ್ಮತ್ಸ್ಯಕೈಕೇಯೈಃ ಪಾಂಡವೈಶ್ಚ ಮಹಾರಥೈಃ |
ವೃತಾನ್ ಸಮಂತಾತ್ ಸಂಕ್ರುದ್ಧೈರ್ನಿಃಶ್ವಸದ್ಭಿರಿವೋರಗೈಃ ॥ 3 ॥
ಎಲ್ಲೈ ಮಿತ್ರವತ್ಸಲನೇ, ಮಿತ್ರರು ಉಪಕಾರವನ್ನು ಮಾಡಬೇಕಾದ ಕಾಲವು ಈಗ ಪ್ರಾಪ್ತವಾಗಿದೆ. ಎಲ್ಲೈ ಕರ್ಣನೇ, ಮಹಾಬಲನೇ, ಬಹಳ ಕೋಪಗೊಂಡು ಸರ್ಪಗಳಂತೆ ಉಸಿರಾಡುತ್ತಿರುವ ಪಾಂಚಾಲರಿಂದಲೂ, ಮತ್ಸ್ಯ ಕೇಕಯರಿಂದಲೂ, ಮಹಾರಥರಾದ ಪಾಂಡವರಿಂದಲೂ ಎಲ್ಲ ಕಡೆಗಳಲ್ಲಿಯೂ ಸುತ್ತುವರಿಯಲ್ಪಟ್ಟ ಎಲ್ಲಾ ಯೋಧರನ್ನೂ ಯುದ್ಧದಲ್ಲಿ ರಕ್ಷಿಸು.
ಏತೇ ನದಂತಿ ಸಂಹೃಷ್ಟಾಃ ಪಾಂಡವಾ ಜಿತಕಾಶಿನಃ |
ಶಕ್ರೋಪಮಾಶ್ಚ ಬಹವಃ ಪಾಂಚಾಲಾನಾಂ ರಥವ್ರಜಾಃ ॥ 4 ॥
ಜಯವನ್ನು ಗಮನಿಸಿದ ಪಾಂಡವರೂ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಪಾಂಚಾಲರ ಈ ರಥಸಮೂಹಗಳೂ ಸಂತೋಷದಿಂದ ಗರ್ಜಿಸುತ್ತಿವೆ.
ಕರ್ಣಃ
ಪರಿತ್ರಾತುಮಿಹ ಪ್ರಾಪ್ತೋ ಯದಿ ಪಾರ್ಥಂ ಪುರಂದರಃ |
ತಮಪ್ಯಾಶು ಪರಾಜಿತ್ಯ ತತೋ ಹಂತಾಸ್ಮಿ ಪಾಂಡವಮ್ ॥ 5 ॥
ಕರ್ಣ ಅರ್ಜುನನನ್ನು ರಕ್ಷಣೆ ಮಾಡಲು ಇಂದ್ರನೇ ಬಂದರೂ ನಾನು ಅವನನ್ನೂ ಶೀಘ್ರವಾಗಿ ಪರಾಜಯಗೊಳಿಸಿ ಅರ್ಜುನನನ್ನು ಕೊಲ್ಲುವೆನು.
ಸತ್ಯಂ ತೇ ಪ್ರತಿಜಾನಾಮಿ ಸಮಾಶ್ವಸಿಹಿ ಭಾರತ |
ಹಂತಾಸ್ಮಿ ಪಾಂಡುತನಯಾನ್ ಪಾಂಚಾಲಾಂಶ್ಚ ಸಮಾಗತಾನ್ ॥ 6 ॥
ಎಲ್ಲೈ ಭಾರತನೇ, ನಿನಗೆ ಶಪಥವನ್ನು ಮಾಡಿ ಹೇಳುತ್ತಿದ್ದೇನೆ. ಸಮಾಧಾನವನ್ನು ಹೊಂದು. ಯುದ್ಧಕ್ಕೆ ಬಂದ ಪಾಂಡುಪುತ್ರರನ್ನು ಮತ್ತು ಪಾಂಚಾಲರನ್ನು ಕೊಲ್ಲುವೆನು.
ಜಯಂ ತೇ ಪ್ರತಿಜಾನಾಮಿ ವಾಸವಸ್ಯೇವ ಪಾವಕಿಃ |
ಪ್ರಿಯಂ ತವ ಮಯಾ ಕಾರ್ಯಮಿತಿ ಜೀವಾಮಿ ಪಾರ್ಥಿವ ॥ 7 ॥
ಷಣ್ಮುಖನು ಇಂದ್ರನಿಗೆ ವಾಗ್ದಾನ ಮಾಡಿದಂತೆ ನಾನು ಈ ದಿನ ನಿನಗೆ ಜಯದ ಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ. ಎಲ್ಲೈ ರಾಜನೇ, ನಾನು ನಿನಗೆ ಪ್ರಿಯವನ್ನು ಮಾಡಬೇಕು ಎಂದು ಬದುಕಿದ್ದೇನೆ.
ಸರ್ವೇಷಾಮೇವ ಪಾರ್ಥಾನಾಂ ಫಲ್ಗುನೋ ಬಲವತ್ತರಃ |
ತಸ್ಯಾಮೋಘಾಂ ವಿಮೋಕ್ಷ್ಯಾಮಿ ಶಕ್ತಿಂ ಶಕ್ರವಿನಿರ್ಮಿತಾಮ್ ॥ 8 ॥
ಪಾಂಡವರಲ್ಲಿ ಅರ್ಜುನನು ಎಲ್ಲರಿಗಿಂತಲೂ ಬಲಶಾಲಿಯಾದವನು. ಅವನ ಮೇಲೆ ಇಂದ್ರನು ಕೊಟ್ಟ ಅಮೋಘವಾದ ಶಕ್ತಿಯನ್ನು ಪ್ರಯೋಗಿಸುವೆನು.
ತಸ್ಮಿನ್ ಹತೇ ಮಹೇಷ್ವಾಸೇ ಭ್ರಾತರಸ್ತಸ್ಯ ಮಾನದ |
ತವ ವಶ್ಯಾ ಭವಿಷ್ಯಂತಿ ವನಂ ಯಾಸ್ಯಂತಿ ವಾ ಪುನಃ ॥ 9 ॥
ಎಲ್ಲೈ ಮಾನದನೇ, ಮಹಾಧನುರ್ಧಾರಿಯಾದ ಅರ್ಜುನನು ಹತನಾದರೆ ಅವನ ಸಹೋದರರು ನಿನ್ನ ವಶವಾಗುವರು ಅಥವಾ ಪುನಃ ಕಾಡಿಗೆ ಹೋಗುವರು.
ಮಯಿ ಜೀವತಿ ಕೌರವ್ಯ ವಿಷಾದಂ ಮಾ ಕೃಥಾಃ ಕ್ವಚಿತ್ |
ಅಹಂ ಜೇಷ್ಯಾಮಿ ಸಮರೇ ಸಹಿತಾನ್ ಸರ್ವಪಾಂಡವಾನ್ ॥ 10 ॥

ಎಲೈ ಕೌರವ್ಯನೇ, ನಾನು ಬದುಕಿರುವಾಗ ಯಾವ ಕಾರಣದಿಂದಲೂ ವಿಷಾದವನ್ನು ಮಾಡಬೇಡ. ನಾನು ಒಂದುಗೂಡಿದ ಎಲ್ಲ ಪಾಂಡವರನ್ನೂ ಯುದ್ಧದಲ್ಲಿ ಜಯಿಸುವೆನು.
ಪಾಂಚಾಲಾನ್ ಕೇಕಯಾಂಶ್ಚೈವ ವೃಷ್ಣೀಂಶ್ಚಾಪಿ ಸಮಾಗತಾನ್ |
ಬಾಣೌಘೈಃ ಶಕಲೀಕೃತ್ಯ ತವ ದಾಸ್ಯಾಮಿ ಮೇದಿನೀಮ್ ॥ 11 ॥
ರಣರಂಗಕ್ಕೆ ಬಂದ ಪಾಂಚಾಲರನ್ನೂ ಕೇಕಯರನ್ನೂ ವೃಷ್ಣಿಗಳನ್ನೂ ನನ್ನ ಬಾಣಗಳ ಸಮೂಹಗಳಿಂದ ಪುಡಿ ಮಾಡಿ ನಿನಗೆ ಭೂಮಿಯನ್ನು ಒಪ್ಪಿಸುವೆನು.
ಸಂಜಯಃ
ಏವಂ ಬ್ರುವಾಣಂ ಕರ್ಣಂ ತು ಕೃಪಃ ಶಾರದ್ವತೋಽಬ್ರವೀತ್ |
ಸ್ಮಯನ್ನಿವ ಮಹಾಬಾಹುಃ ಸೂತಪುತ್ರಮಿದಂ ವಚಃ ॥ 12 ॥
ಸಂಜಯ ಹೀಗೆ ಮಾತನಾಡುತ್ತಿದ್ದ ಸೂತಪುತ್ರನಾದ ಕರ್ಣನನ್ನು ಕುರಿತು ಮಹಾಬಾಹುಗಳಾದ, ಶಾರದ್ವತರಾದ ಕೃಪರು ನಗುತ್ತಾ ಈ ಮಾತನ್ನು ಆಡಿದರು.
ಶೋಭನಂ ಶೋಭನಂ ಕರ್ಣ ಸನಾಥಃ ಕುರುಪುಂಗವಃ |
ತ್ವಯಾ ನಾಥೇನ ರಾಧೇಯ ವಚಸಾ ಯದಿ ಸಿಧ್ಯತಿ ॥ 13 ॥
ಕರ್ಣನೇ, ಒಳ್ಳೆಯದು, ಒಳ್ಳೆಯದು. ಮಾತಿನಿಂದಲೇ ಎಲ್ಲವೂ ಸಿದ್ಧಿಸುವುದಾದರೆ ಎಲೈ ರಾಧೇಯನೇ, ನಿನ್ನನ್ನು ನಾಥನನ್ನಾಗಿ ಪಡೆದು ಕುರುಶ್ರೇಷ್ಠನಾದ ದುರ್ಯೋಧನನು ಸನಾಥನಾಗಿದ್ದಾನೆ.
ಬಹುಶಃ ಕತ್ಥಸೇ ಕರ್ಣ ಕೌರವ್ಯಸ್ಯ ಸಮೀಪತಃ |
ನ ತು ತೇ ವಿಕ್ರಮಃ ಕಶ್ಚಿದ್ ದೃಶ್ಯತೇ ಬಲಮೇವ ವಾ ॥ 14 ॥
ಎಲೈ ಕರ್ಣನೇ, ದುರ್ಯೋಧನನ ಸಮೀಪದಲ್ಲಿ ನಿನ್ನ ಪ್ರತಾಪವನ್ನು ಬಹಳವಾಗಿ ಕೊಚ್ಚಿಕೊಳ್ಳುತಿತದ್ದೀಯೆ. ಆದರೆ ನಿನ್ನ ಪರಾಕ್ರಮವಾಗಲೀ, ಬಲವಾಗಲೀ ಯಾವುದೂ ಕಂಡುಬರುವುದಿಲ್ಲ.
ಸಮಾಗಮಃ ಪಾಂಡುಸುತೈರ್ದೃಷ್ಟಸ್ತೇ ಬಹುಶೋ ಯುಧಿ |
ಸರ್ವತ್ರ ನಿರ್ಜಿತಶ್ಚಾಸಿ ಪಾಂಡವೈಃ ಸೂತನಂದನ ॥ 15 ॥
ನೀನು ಪಾಂಡುಸುತರ ಜೊತೆಯಲ್ಲಿ ಯುದ್ಧದಲ್ಲಿ ಸಮಾಗಮ ಹೊಂದಿದುದನ್ನು ಅನೇಕ ಸಲ ನೋಡಿದ್ದೇವೆ. ಎಲೈ ಸೂತಪುತ್ರನೇ, ಎಲ್ಲ ಕಡೆಗಳಲ್ಲಿಯೂ ನೀನು ಪಾಂಡವರಿಂದ ಪರಾಜಿತನಾಗಿದ್ದೀಯೆ.
ಹ್ರಿಯಮಾಣೇ ತದಾ ಕರ್ಣ ಗಂಧರ್ವೈರ್ಧೃತರಾಷ್ಟ್ರಜೇ |
ತದಾಯುದ್ಧ್ಯಂತ ಸೈನ್ಯಾನಿ ತ್ವಮೇಕಸ್ತು ಪಲಾಯಥಾಃ ॥ 16 ॥
ಎಲೈ ಕರ್ಣನೇ, ಗಂಧರ್ವರು ಧೃತರಾಷ್ಟ್ರ ಪುತ್ರನಾದ ದುರ್ಯೋಧನನನ್ನು ಅಪಹರಿಸಿಕೊಂಡು ಹೋಗಿದ್ದಾಗ ಸೈನ್ಯಗಳು ಯುದ್ಧವನ್ನು ಮಾಡಿದವು. ನೀನೊಬ್ಬನು ಮಾತ್ರ ಪಲಾಯನ ಮಾಡಿದ್ದೆ.
ವಿರಾಟನಗರೇ ಚಾಪಿ ಸಮೇತಾಃ ಸರ್ವಕೌರವಾಃ |
ಪಾರ್ಥೇನ ನಿರ್ಜಿತಾ ಯುದ್ಧೇ ತ್ವಂ ಚ ಕರ್ಣ ಸಹಾನುಜಃ ॥ 17 ॥
ವಿರಾಟನಗರದಲ್ಲಿ ಎಲ್ಲ ಕೌರವರೂ ಸೇರಿದರು. ಎಲೈ ಕರ್ಣನೇ, ನೀನೂ ನಿನ್ನ ಸಹೋದರರೂ ಅಲ್ಲಿ ಯುದ್ಧದಲ್ಲಿ ಅರ್ಜುನನಿಂದ ಪರಾಜಿತರಾದರಿ.
ಏಕಸ್ಯಾಪ್ಯಸಮರ್ಥಸ್ತ್ವಂ ಫಲ್ಗುನಸ್ಯ ರಣಾಜಿರೇ |
ಕಥಮುತ್ಸಹಸೇ ಜೇತುಂ ಸಕೃಷ್ಣಾನ್ ಸರ್ವಪಾಂಡವಾನ್ ॥ 18 ॥
ರಣರಂಗದಲ್ಲಿ ಒಬ್ಬ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ನಿನಗೆ ಸಾಮರ್ಥ್ಯವಿಲ್ಲ. ಕೃಷ್ಣನಿಂದ ಸಹಿತರಾದ ಎಲ್ಲ ಪಾಂಡವರನ್ನೂ ಗೆಲ್ಲುವುದಕ್ಕೆ ಹೇಗೆ ಆಶಿಸುತ್ತೀಯೆ?
ಅಬ್ರುವನ್ ಕರ್ಣ ಯುದ್ಧ್ಯಸ್ವ ಬಹು ಕತ್ಥಸಿ ಸೂತಜ |
ಅನುಕತ್ವ ವಿಕ್ರಮೇದ್ ಯಸ್ತು ತದ್ವೈ ಸತ್ಪುರುಷವ್ರತಮ್ ॥ 19 ॥
ಎಲೈ ಕರ್ಣನೇ, ಮಾತನಾಡದೆ ಯುದ್ಧವನ್ನು ಮಾಡು. ಎಲೈ ಸೂತಪುತ್ರನೇ, ಆತ್ಮಶ್ಲಾಘನೆಯ ಅನೇಕ ಮಾತುಗಳನ್ನು ಆಡುತ್ತಿದ್ದೀಯೆ. ಬಾಯಿಂದ ಮಾತನಾಡದೆ ಪರಾಕ್ರಮವನ್ನು ತೋರಿಸುವುದು ಸತ್ಪುರುಷರ ವ್ರತ.
ಗರ್ಜಿತ್ವಾ ಸೂತಪುತ್ರ ತ್ವಂ ಶಾರದಾಭ್ರಮಿವಾಜಲಮ್ |
ನಿಷ್ಫಲೋ ದೃಶ್ಯಸೇ ಕರ್ಣ ತಚ್ಚ ರಾಜಾ ನ ಬುಧ್ಯತೇ ॥ 20 ॥
ಎಲೈ ಸೂತಪುತ್ರನೇ, ಶರತ್ಕಾಲದ ನೀರಿಲ್ಲದ ಮೋಡದಂತೆ ಗರ್ಜನೆಯನ್ನು ಮಾಡಿ ನೀನು ಫಲರಹಿತನಾಗಿ ಕಾಣುತ್ತಿದ್ದೀಯೆ. ಎಲೈ ಕರ್ಣನೇ, ಅದನ್ನು ರಾಜನು ತಿಳಿಯುತ್ತಿಲ್ಲ.
ತಾವದ್ ಗರ್ಜಸಿ ರಾಧೇಯ ಯಾವತ್ಪಾರ್ಥಂ ನ ಪಶ್ಯಸಿ |
ಪುರಾ ಪಾರ್ಥಂ ಹಿ ತೇ ದೃಷ್ಟ್ವಾ ದುರ್ಲಭಂ ಗರ್ಜಿತಂ ಭವೇತ್ ॥21॥
ಎಲೈ ರಾಧೇಯನೇ, ಅರ್ಜುನನನ್ನು ಎಲ್ಲಿಯವರೆಗೆ ನೀನು ನೋಡುವುದಿಲ್ಲವೋ ಅಲ್ಲಿಯವರೆಗೆ ಗರ್ಜಿಸುತ್ತೀಯೆ. ಅರ್ಜುನನನ್ನು ನೋಡಿದ ಮೇಲೆ ನಿನ್ನ ಗರ್ಜನೆಯು ದುರ್ಲಭವಾಗುತ್ತದೆ..
ತ್ವಮನಾಸಾದ್ಯ ತಾನ್ ಬಾಣಾನ್ ಫಲ್ಗುನಸ್ಯ ವಿಗರ್ಜಸಿ |
ಪಾರ್ಥಸಾಯಕವಿದ್ಧಸ್ಯ ದುರ್ಲಭಂ ಗರ್ಜಿತಂ ಭವೇತ್ ॥ 22 ॥
ನೀನು ಅರ್ಜುನನ ಬಾಣಗಳ ಸ್ಪರ್ಶವನ್ನು ಅನುಭವಿಸದೆ ಗರ್ಜಿಸುತ್ತಿದ್ದೀಯೆ. ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟಾಗ ಎಲೈ

ಕರ್ಣನೇ, ನಿನ್ನ ಗರ್ಜನೆಯು ದುರ್ಲಭವಾಗುವುದು.
ಬಾಹುಭಿಃ ಕ್ಷತ್ರಿಯಾಃ ಶೂರಾ ವಾಗ್ಭಿಃ ಶೂರಾ ದ್ವಿಜಾತಯಃ |
ಧನುಷಾ ಫಲ್ಗುನಃ ಶೂರಃ ಕರ್ಣಃ ಶೂರೋ ಮನೋರಥೈಃ ॥ 23 ॥
ಕ್ಷತ್ರಿಯರು ಬಾಹುಗಳಿಂದ ಶೂರರಾಗಿರುತ್ತಾರೆ. ಬ್ರಾಹ್ಮಣರು ಮಾತುಗಳಿಂದ ಶೂರರಾಗಿರುತ್ತಾರೆ. ಅರ್ಜುನನು ಧನುಸ್ಸಿನಿಂದ ಶೂರನಾಗಿದ್ದಾನೆ. ಕರ್ಣನು ಮನೋರಥಗಳಿಂದ ಶೂರನಾಗಿದ್ದಾನೆ (ಎಂದು ಹೇಳಿದರು).
ಏವಂ ಪರುಷಿತಸ್ತೇನ ತದಾ ಶಾರದ್ವತೇನ ಸಃ |
ಕರ್ಣಃ ಪ್ರಹರತಾಂ ಶ್ರೇಷ್ಠಃ ಕೃಪಂ ವಾಕ್ಯಮಥಾಬ್ರವೀತ್ ॥ 24 ॥
ಹೀಗೆ ಕೃಪಾಚಾರ್ಯರಿಂದ ಉಗ್ರವಚನವನ್ನು ಕೇಳಿದ, ಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಕಣರ್ನು ಅನಂತರ ಕೃಪರನ್ನು ಕುರಿತು ಮಾತನಾಡಿದನು.
ಶೂರಾ ಗರ್ಜಂತಿ ಸತತಂ ಪ್ರಾವೃಷೀವ ಬಲಾಹಕಾಃ |
ಫಲಂ ಚಾಶು ಪ್ರಯಚ್ಛಂತಿ ಬೀಜಮುಪ್ತಮೃತಾವಿವ ॥ 25 ॥
ಮಳೆಗಾಲದ ಮೋಡಗಳಂತೆ ಶೂರರು ಸತತವಾಗಿ ಗರ್ಜಿಸುತ್ತಾರೆ. ಸಕಾಲದಲ್ಲಿ ಬಿತ್ತಿದ ಬೀಜಗಳಂತೆ ಫಲವನ್ನೂ ಬೇಗ ಕೊಡುತ್ತಾರೆ.
ದೋಷಮತ್ರ ನ ಪಶ್ಯಾಮಿ ಶೂರಾಣಾಂ ರಣಮೂರ್ಧನಿ |
ತತ್ತದ್ವಿಕತ್ಥಮಾನಾನಾಂ ಭಾರಂ ಚೋದ್ವಹತಾಂ ಮೃಧೇ ॥ 26 ॥
ಯುದ್ಧದ ಭಾರವನ್ನು ಹೊತ್ತು ಆಯಾ ಮಾತುಗಳಿಂದ ಶೂರರು ರಣರಂಗದಲ್ಲಿ ತಮ್ಮ ಪ್ರತಾಪವನ್ನು ಹೇಳಿಕೊಳ್ಳುವುದರಲ್ಲಿ ನಾನು ಯಾವ ದೋಷವನ್ನೂ ಕಾಣುವುದಿಲ್ಲ.
ಯಂ ಭಾರಂ ಪುರುಷೋ ವೋಢುಂ ಮನಸಾ ಹಿ ವ್ಯವಸ್ಯತಿ |
ದೈವಮಸ್ಯ ಧ್ರುವಂ ತತ್ರ ಸಾಹಾಯ್ಯಾಯೋಪಪದ್ಯತೇ ॥ 27 ॥
ಪುರುಷನು ಯಾವ ಭಾರವನ್ನು ಹೊರಲು ಮನಸ್ಸಿನಲ್ಲಿ ನಿರ್ಧರಿಸುತ್ತಾನೆಯೋ ಆ ವಿಷಯದಲ್ಲಿ ದೈವವು ಖಂಡಿತವಾಗಿ ಅವನಿಗೆ ಸಹಾಯವನ್ನು ಮಾಡುತ್ತದೆ.
ವ್ಯವಸಾಯದ್ವಿತೀಯೋಽಹಂ ಮನಸಾ ಭಾರಮುದ್ವಹನ್ |
ಗರ್ಜಾಮಿ ಯದ್ಯಹಂ ವಿಪ್ರಾ ತವ ಕಿಂ ತತ್ರ ನಶ್ಯತಿ ॥ 28 ॥
ಅಂತಹ ನಿರ್ಧಾರದಿಂದ ಕೂಡಿದ ನಾನು ಮನಸ್ಸಿನಲ್ಲಿಯೇ ನನ್ನ ದೊಡ್ಡ ಭಾರವನ್ನು (ಜವಾಬ್ದಾರಿಯನ್ನು) ಹೊತ್ತು ಗರ್ಜಿಸಿದರೆ, ಎಲೈ ಬ್ರಾಹ್ಮಣನೇ, ನಿನ್ನ ಗಂಟು ಏನು ಹೋಗುತ್ತದೆ?
ವೃಥಾ ಶೂರಾ ನ ಗರ್ಜಂತಿ ಸಜಲಾ ಇವ ತೋಯದಾಃ |
ಸಾಮರ್ಥ್ಯಮಾತ್ಮನೋ ಜ್ಞಾತ್ವಾ ತತೋ ಗರ್ಜಂತಿ ಪಂಡಿತಾಃ ॥ 29॥
ನೀರು ತುಂಬಿದ ಮೋಡಗಳಂತೆ ಶೂರರು ವ್ಯರ್ಥವಾಗಿ ಗರ್ಜಿಸುವುದಿಲ್ಲ. ಮೇಧಾವಿಗಳಾದ ಅವರು ತಮ್ಮ ಸಾಮರ್ಥ್ಯವನ್ನು ತಿಳಿದು ಅನಂತರ ಗರ್ಜಿಸುತ್ತಾರೆ.
ಸೋಽಹಮದ್ಯ ರಣೇ ಯತ್ತಃ ಸಹಿತೌ ಕೃಷ್ಣಪಾಂಡವೌ |
ಉತ್ಸಹೇ ತರಸಾ ಜೇತುಂ ತತೋ ಗರ್ಜಾಮಿ ಗೌತಮ ॥ 30 ॥
ಈ ದಿನ ನಾನು ಯುದ್ಧದಲ್ಲಿ ಜೊತೆಗೂಡಿದ ಕೃಷ್ಣಾರ್ಜುನರನ್ನು ನನ್ನ ಸಾಮರ್ಥ್ಯದಿಂದ ಗೆಲ್ಲಲು ಉತ್ಸಾಹದಿಂದಿದ್ದೇನೆ. ಎಲೈ ಗೌತಮರೇ, ಆ ಕಾರಣದಿಂದ ಗರ್ಜಿಸುತ್ತಿದ್ದೇನೆ.
ಪಶ್ಯ ತ್ವಂ ಗರ್ಜಿತಸ್ಯಾಸ್ಯ ಫಲಂ ಮೇ ವಿಪ್ರ ಸಾನುಗಃ |
ಹತ್ವಾ ಪಾಂಡುಸುತಾನಾಜೌ ಸಹಕೃಷ್ಣಾನ್ ಸಸಾತ್ವತಾನ್ |
ದುರ್ಯೋಧನಾಯ ದಾಸ್ಯಾಮಿ ಪೃಥಿವೀಂ ಹತಕಂಟಕಾಮ್ ॥ 31 ॥
ಎಲೈ ವಿಪ್ರನೇ, ನಿನ್ನ ಅನುಚರರಿಂದ ಸಹಿತನಾಗಿ ನನ್ನ ಗರ್ಜನೆಯ ಫಲವನ್ನು ನೋಡು. ನಾನು ರಣರಂಗದಲ್ಲಿ ಕೃಷ್ಣನಿಂದ ಮತ್ತು ಸಾತ್ವತರಿಂದ ಸಹಿತರಾದ ಪಾಂಡುಪುತ್ರರನ್ನು ಕೊಂದು ನಿಷ್ಕಂಟಕವಾದ ಭೂಮಿಯನ್ನು ದುರ್ಯೋಧನನಿಗೆ ಕೊಡುವೆನು.
ಕೃಪಃ
ಮನೋರಥಪ್ರಲಾಪೋ ಮೇ ನ ಗ್ರಾಹ್ಯಸ್ತವ ಸೂತಜ |
ಯದಾಕ್ಷಿಪಸಿ ವೈ ಕೃಷ್ಣೌ ಧರ್ಮರಾಜಂ ಚ ಪಾಂಡವಮ್ ॥ 32 ॥
ಧ್ರುವಸ್ತತ್ರ ಜಯಃ ಕರ್ಣ ಯತ್ರ ಯುದ್ಧವಿಶಾರದೌ |
ದೇವಗಂಧರ್ವಯಕ್ಷಾಣಾಂ ಮನುಷ್ಯೋರಗರಕ್ಷಸಾಮ್ |
ದಂಸಿತಾನಾಮಪಿ ರಣೇ ಅಜೇಯೌ ಕೃಷ್ಣಪಾಂಡವೌ ॥ 33 ॥
ಕೃಪ ಎಲೈ ಸೂತಪುತ್ರನೇ, ಕೃಷ್ಣಾರ್ಜುನರನ್ನೂ ಮತ್ತು ಪಾಂಡವನಾದ ಧರ್ಮರಾಜನನ್ನೂ ನಿಂದಿಸುವ ನಿನ್ನ ಮನೋರಥಪ್ರಲಾಪಗಳನ್ನು ನಾನು ಸ್ವೀಕರಿಸುವುದಿಲ್ಲ. ಯುದ್ಧವಿಶಾರದರಾದ ಕೃಷ್ಣ-ಪಾಂಡವರು ಯುದ್ಧ ಸನ್ನದ್ಧರಾದ ದೇವ-ಗಂಧರ್ವ- ಯಕ್ಷರಿಂದಲೂ, ಮನೋಷ್ಯೋರಗ-ರಾಕ್ಷಸರಿಂದಲೂ ಯುದ್ಧದಲ್ಲಿ ಅಜೇಯರಾದವರು ಎಲೈ ಕರ್ಣನೇ, ಕೃಷ್ಣಾರ್ಜುನರು ಮತ್ತು ಧರ್ಮರಾಜನು ಇರುವಲ್ಲಿ ಜಯವು ನಿಶ್ಚಿತವಾದುದು.
ಬ್ರಹ್ಮಣ್ಯಃ ಸತ್ಯವಾಗ್ದಾಂತೋ ಗುರುದೈವತಪೂಜಕಃ |
ನಿತ್ಯಂ ಧರ್ಮರತಶ್ಚೈವ ಕೃತಾಸ್ತ್ರಶ್ಚ ವಿಶೇಷತಃ |
ಧೃತಿಮಾಂಶ್ಚ ಕೃತಜ್ಞಶ್ಚ ಧರ್ಮಪುತ್ರೋ ಯುಧಿಷ್ಠಿರಃ ॥ 34 ॥

ಧರ್ಮಪುತ್ರನಾದ ಯುಧಿಷ್ಠಿರನು ಬ್ರಾಹ್ಮಣರಲ್ಲಿ ವಾತ್ಸಲ್ಯವುಳ್ಳವನೂ, ಸತ್ಯವಚನವುಳ್ಳವನು, ಇಂದ್ರಿಯನಿಗ್ರಹವುಳ್ಳವನು, ಗುರುದೇವತಾ ಪೂಜ್ಯನಾದವನೂ, ನಿತ್ಯವೂ ಧರ್ಮರತನು, ಅಸ್ತ್ರಜ್ಞನು, ವಿಶೇಷವಾದ ಧೈರ್ಯವನ್ನು ಹೊಂದಿರುವವನು ಮತ್ತು ಕೃತಜ್ಞನಾದವನು.

ಭ್ರಾತರಶ್ಚಾಸ್ಯ ಬಲಿನಃ ಸರ್ವಾಸ್ತ್ರೇಷು ಕೃತಶ್ರಮಾಃ |
ಗುರುವೃತ್ತಿರತಾಃ ಪ್ರಾಜ್ಞಾ ಧರ್ಮನಿತ್ಯಾ ಯಶಸ್ವಿನಃ ॥ 35 ॥

ಅವನ ಸಹೋದರರೂ ಬಲಿಷ್ಠರಾದವರು, ಎಲ್ಲ ಅಸ್ತ್ರಗಳಲ್ಲಿಯೂ ಪರಿಶ್ರಮ ಉಳ್ಳವರು, ಹಿರಿಯರನ್ನು ಅನುಸರಿಸುವವರು, ಪ್ರಾಜ್ಞರು, ನಿತ್ಯವೂ ಧರ್ಮನಿಷ್ಠರು ಮತ್ತು ಕೀರ್ತಿಶಾಲಿಗಳು.

ಸಂಬಂಧಿನಶ್ಚೇಂದ್ರವೀರ್ಯಾಃ ಸ್ವನುರಕ್ತಾಃ ಪ್ರಹಾರಿಣಃ |

ಅವರ ಸಂಬಂಧಿಗಳಾದರೂ ಇಂದ್ರನ ಪರಾಕ್ರಮವುಳ್ಳವರು, ಒಳ್ಳೆಯ ಸ್ವಾಮಿನಿಷ್ಠೆಯುಳ್ಳವರು, ಪ್ರಹಾರಶೀಲರಾದವರು.

ಧೃಷ್ಟದ್ಯುಮ್ನಃ ಶಿಖಂಡೀ ಚ ದೌರ್ಮುಖಿರ್ಜನಮೇಜಯಃ ॥ 36 ॥
ಚಂದ್ರಸೇನೋ ಭದ್ರಸೇನಃ ಕೀರ್ತಿಧರ್ಮಾ ಧ್ರುವೋ ಧರಃ |
ವಸುಚಂದ್ರೋ ದಾಮಚಂದ್ರಃ ಸಿಂಹಚಂದ್ರಃ ಸುವೇಧನಃ ॥ 37 ॥
ದ್ರುಪದಸ್ಯ ತಥಾ ಪುತ್ರಾ ದ್ರುಪದಶ್ಚ ಮಹಾಸ್ತ್ರವಿತ್ |
ಯೇಷಾಮರ್ಥಾಯ ಸಂಯತ್ತೋ ಮತ್ಸ್ಯರಾಜಃ ಸಹಾನುಗಃ ॥ 38 ॥
ಶತಾನೀಕಃ ಸುದರ್ಶನಃ ಶ್ರುತಾನೀಕಃ ಶ್ರುತಧ್ವಜಃ |
ಬಲಾನೀಕೋ ಜಯಾನೀಕೋ ಜಯಾಶ್ವೋ ರಥವಾಹನಃ ॥ 39 ॥
ಚಂದ್ರೋದಯಃ ಕಾಮರಥೋ ವಿರಾಟಭ್ರಾತರಃ ಶುಭಾಃ |
ಯಮೌ ಚ ದ್ರೌಪದೇಯಾಶ್ಚ ರಾಕ್ಷಸಶ್ಚ ಘಟೋತ್ಕಚಃ |
ಯೇಷಾಮರ್ಥಾಯ ಯುದ್ಧ್ಯಂತೇ ನ ತೇಷಾಂ ವಿದ್ಯತೇ ಕ್ಷಯಃ ॥40॥

ಧೃಷ್ಟದ್ಯುಮ್ನ, ಶಿಖಂಡಿ, ದೌರ್ಮುಖನಾದ ಜನಮೇಜಯ, ಚಂದ್ರಸೇನ, ಭದ್ರಸೇನ, ಕೀರ್ತಿಧರ್ಮ, ಧ್ರುವ, ಧರ, ವಸುಚಂದ್ರ, ದಾಮಚಂದ್ರ, ಸಿಂಹಚಂದ್ರ, ಸುವೇಧನ, ದ್ರುಪದ ಪುತ್ರರು ಮತ್ತು ಮಹಾಸ್ತ್ರವೇತ್ತನಾದ ದ್ರುಪದ ಮತ್ತು ಅವರ ಸಲುವಾಗಿ ಯುದ್ಧ ಮಾಡಲು ಸಿದ್ಧರಾಗಿರುವ ಮತ್ಸ್ಯರಾಜನಾದ ವಿರಾಟ ಮತ್ತು ಅವನ ಅನುಚರರು, ಶತಾನೀಕ, ಸುದರ್ಶನ, ಶ್ರುತಾನೀಕ, ಶ್ರುತಧ್ವಜ, ಬಲಾನೀಕ, ಜಯಾನೀಕ, ಜಯಾಶ್ವ, ರಥವಾಹನ, ಚಂದ್ರೋದಯ, ಕಾಮರಥ, ಶೂರರಾದ ವಿರಾಟ ಸಹೋದರರು, ನಕುಲ-ಸಹದೇವರು, ದ್ರೌಪದಿಯ ಪುತ್ರರು, ರಾಕ್ಷಸನಾದ ಘಟೋತ್ಕಚ - ಇವರು ಯಾರ ಸಲುವಾಗಿ ಯುದ್ಧ ಮಾಡುತ್ತಾರೆಯೋ ಅವರಿಗೆ ಯುದ್ಧದಲ್ಲಿ ಹಾನಿಯುಂಟಾಗುವುದಿಲ್ಲ.

ಕಾಮಂ ಖಲು ಜಗತ್ ಸರ್ವಂ ಸದೇವಾಸುರಮಾನವಮ್ |
ಸಯಕ್ಷರಾಕ್ಷಸಗಣಂ ಸಭೂತಭುಜಗದ್ವಿಪಮ್ |
ನಿಃಶೇಷಮಸ್ತ್ರವೀರ್ಯೇಣ ಕುರ್ಯಾತಾಂ ಭೀಮಫಲ್ಗುನೌ ॥ 41 ॥

ತಮ್ಮ ಮನಸ್ಸಿಗೆ ಬಂದಂತೆ ದೇವಾಸುರ ಮಾನವರಿಂದ ಸಹಿತವಾದ, ಯಕ್ಷ-ರಾಕ್ಷಸ ಗಣ ಸಹಿತವಾದ, ಭೂತ-ಭುಜಗ-ದ್ವಿಪ (ಆನೆ)ಸಹಿತವಾದ ಜಗತ್ತೆಲ್ಲವನ್ನೂ ಭೀಮಾರ್ಜುನರು ತಮ್ಮ ಅಸ್ತ್ರವೀರ್ಯದಿಂದ ನಿಶ್ಶೇಷವಾಗಿ ನಾಶ ಮಾಡಿಯಾರು.

ಯುಧಿಷ್ಠಿರಶ್ಚ ಪೃಥಿವೀಂ ನಿರ್ದಹೇದ್ ಘೋರಚಕ್ಷುಷಾ |
ಅಪ್ರಮೇಯಬಲಃ ಶೌರಿರ್ಯೇಷಾಮರ್ಥೇ ಚ ದಂಸಿತಃ |
ಕಥಂ ತಾನ್ ಸಂಯುಗೇ ಕರ್ಣ ಜೇತುಮುತ್ಸಹಸೇ ಪರಾನ್ ॥ 42 ॥

ಯುಧಿಷ್ಠಿರನಾದರೂ ತನ್ನ ಘೋರದೃಷ್ಟಿಯಿಂದ ಭೂಮಿಯನ್ನೇ ಸುಟ್ಟಾನು. ಅಪ್ರಮೇಯ ಬಲನಾದ ಕೃಷ್ಣನು ಅವರ ಸಲುವಾಗಿ ಯುದ್ಧಸನ್ನದ್ಧನಾಗಿದ್ದಾನೆ. ಕರ್ಣನೇ, ಅಂತಹ ಶತ್ರುಗಳನ್ನು ನೀನು ಜಯಿಸಲು ಹೇಗೆ ಆಶಿಸುತ್ತೀಯೆ?

ಮಹಾನಪನಯಸ್ತ್ವೇಷ ತವ ನಿತ್ಯಂ ಹಿ ಸೂತಜ |
ಯಸ್ತ್ವಮುತ್ಸಹಸೇ ಯೋದ್ಧುಂ ಸಮರೇ ಶೌರಿಣಾ ಸಹ ॥ 43 ॥

ಎಲೈ ಸೂತಪುತ್ರನೇ, ನೀನು ಯಾವಾಗಲೂ ಕೃಷ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಲು ಏನು ಬಯಸುತ್ತಿದ್ದೀಯೋ ಅದು ನಿನ್ನಿಂದಾದ ದೊಡ್ಡ ಅಪಚಾರ.

ಸಂಜಯಃ

ಏವಮುಕ್ತಸ್ತು ರಾಧೇಯಃ ಪ್ರಹಸನ್ ಭರತರ್ಷಭ |
ಅಬ್ರವೀಚ್ಚ ತದಾ ಕರ್ಣೋ ಗುರುಂ ಶಾರದ್ವತಂ ಕೃಪಮ್ ॥ 44 ॥

ಸಂಜಯ ಎಲೈ ಭರತಶ್ರೇಷ್ಠನೇ, ಹೀಗೆ ಹೇಳಲ್ಪಟ್ಟ ಕರ್ಣನು ನಗುತ್ತಾ ಗುರುಗಳೂ, ಶರದ್ವತನ ಪುತ್ರರೂ ಆದ ಕೃಪಾಚಾರ್ಯರನ್ನು ಕುರಿತು ಆಗ ಮಾತನಾಡಿದನು.

ಸತ್ಯಮುಕ್ತಂ ತ್ವಯಾ ಬ್ರಹ್ಮನ್ ಪಾಂಡವಾನ್ ಪ್ರತಿ ಯದ್ವಚಃ |
ಏತೇ ಚಾನ್ಯೇ ಚ ಬಹವೋ ಗುಣಾಃ ಪಾಂಡುಸುತೇಷು ವೈ ॥ 45 ॥

ಎಲೈ ಬ್ರಾಹ್ಮಣನೇ, ಪಾಂಡವರ ವಿಷಯದಲ್ಲಿ ನೀನು ಹೇಳಿದ ಮಾತುಗಳು ಸತ್ಯವಾದವುಗಳು. ಪಾಂಡವರಲ್ಲಿ ಇವು ಮತ್ತು ಇನ್ನೂ ಅನೇಕ ಗುಣಗಳು ಇವೆ.

ಅಜಯ್ಯಾಶ್ಚ ರಣೇ ಪಾರ್ಥಾ ದೇವೈರಪಿ ಸವಾಸವೈಃ |
ಸದೈತ್ಯಯಕ್ಷಗಂಧರ್ವಪಿಶಾಚೋರಗರಾಕ್ಷಸೈಃ |

ತಥಾಪಿ ಪಾರ್ಥಾನ್ ಜೇಷ್ಯಾಮಿ ಶಕ್ತ್ಯಾ ವಾಸವದತ್ತಯಾ ॥ 46 ॥
ಇಂದ್ರನಿಂದ ಸಹಿತರಾದ ದೇವತೆಗಳಿಂದಲೂ, ದೈತ್ಯ-ಯಕ್ಷ-ಗಂಧರ್ವ- ಪಿಶಾಚೋರಗ-ರಾಕ್ಷಸರಿಂದಲೂ ಪಾಂಡವರು ಯುದ್ಧದಲ್ಲಿ ಅಜೇಯರಾದವರು. ಆದರೂ ಇಂದ್ರನು ಕೊಟ್ಟ ಶಕ್ತಿಯ ಬಲದಿಂದ ನಾನು ಪಾಂಡವರನ್ನು ಗೆಲ್ಲುವೆನು.
ಮಮಾಪ್ಯಮೋಘಾ ದತ್ತೇಯಂ ಶಕ್ತಿಃ ಶಕ್ರೇಣ ವೈ ದ್ವಿಜ |
ಏತಯಾ ನಿಹನಿಷ್ಯಾಮಿ ಸವ್ಯಸಾಚಿನಮಾಹವೇ ॥ 47 ॥
ಎಲೈ ಬ್ರಾಹ್ಮಣನೇ, ನನ್ನ ಬಳಿ ಇಂದ್ರನು ಕೊಟ್ಟ ಅಮೋಘವಾದ ಈ ಶಕ್ತಿಯಿದೆ. ಈ ಶಕ್ತಿಯಿಂದ ನಾನು ಯುದ್ಧದಲ್ಲಿ ಅರ್ಜುನನನ್ನು ಕೊಲ್ಲುವೆನು.
ಹತೇ ತು ಪಾಂಡವೇ ಕೃಷ್ಣೋ ಭ್ರಾತರಶ್ಚಾಸ್ಯ ಸೋದರಾಃ |
ಅನರ್ಜುನಾ ನ ಶಕ್ಷ್ಯಂತಿ ಮಹೀಂ ಭೋಕ್ತುಂ ಕಥಂಚನ ॥ 48 ॥
ಅರ್ಜುನನು ಹತನಾದರೆ ಕೃಷ್ಣನೂ ಮತ್ತು ಅವನ ಸಹೋದರರೂ ಅರ್ಜುನನಿಲ್ಲದೆ ಯಾವ ರೀತಿಯಿಂದಲೂ ಭೂಮಿಯನ್ನು ಭೋಗಿಸಲು ಸಮರ್ಥರಾಗುವುದಿಲ್ಲ.
ತೇಷು ನಷ್ಟೇಷು ಸರ್ವೇಷು ಪೃಥಿವೀಯಂ ಸಸಾಗರಾ |
ಅಯತ್ನಾತ್ ಕೌರವೇಯಸ್ಯ ವಶೇ ಸ್ಥಾಸ್ಯತಿ ಗೌತಮ ॥ 49 ॥
ಅವರೆಲ್ಲರೂ ನಾಶವನ್ನು ಹೊಂದಿದ ಮೇಲೆ ಸಾಗರ ಸಹಿತವಾದ ಈ ಭೂಮಿಯು ಎಲೈ ಗೌತಮನೇ, ಅನಾಯಾಸವಾಗಿ ದುರ್ಯೋಧನನ ವಶದಲ್ಲಿ ನಿಲ್ಲುವುದು.
ಸುನೀತೈರಿಹ ಸರ್ವಾರ್ಥಾಃ ಸಿಧ್ಯಂತೇ ನಾತ್ರ ಸಂಶಯಃ |
ಏತಮರ್ಥಮಹಂ ಜ್ಞಾತ್ವಾ ತತೋ ಗರ್ಜಾಮಿ ಗೌತಮ ॥ 50 ॥
ಒಳ್ಳೆಯ ನೀತಿಯಿಂದ ಇಲ್ಲಿ ಎಲ್ಲ ಅರ್ಥಗಳೂ ಸಿದ್ಧಿಸುತ್ತವೆ ಎಂಬುದರಲ್ಲಿ ಸಂಶಯವಿಲ್ಲ. ಎಲೈ ಗೌತಮನೇ, ಈ ವಿಷಯವನ್ನು ತಿಳಿದೇ ನಾನು ಗರ್ಜಿಸುತ್ತಿದ್ದೇನೆ.
ತ್ವಂ ತು ವೃದ್ಧಶ್ಚ ವಿಪ್ರಶ್ಚ ಅಶಕ್ತಶ್ಚಾಪಿ ಸಂಯುಗೇ |
ಕೃತಸ್ನೇಹಶ್ಚ ಪಾರ್ಥೇಷು ಮೋಹಾನ್ಮಾಮವಮನ್ಯಸೇ ॥ 51 ॥
ನೀನಾದರೂ ಬ್ರಾಹ್ಮಣ, ವೃದ್ಧ ಮತ್ತು ಯುದ್ಧ ಮಾಡಲು ಅಶಕ್ತನಾದವನು. ಪಾಂಡವರಲ್ಲಿ ಸ್ನೇಹವನ್ನು ಮಾಡಿ ಮೋಹದಿಂದ ನನಗೆ ಅವಮಾನವನ್ನು ಮಾಡುತ್ತಿದ್ದೀಯೆ.
ಯದ್ಯೇವಂ ವಕ್ಷ್ಯಸೇ ಭೂಯೋ ಮಾಮಪ್ರಿಯಮಿಹ ದ್ವಿಜ |
ತತಸ್ತೇ ಖಡ್ಗಮುದ್ಯಮ್ಯ ಜಿಹ್ವಾಂ ಛೇತ್ಸ್ಯಾಮಿ ದುರ್ಮತೇ ॥ 52 ॥
ಎಲೈ ಬ್ರಾಹ್ಮಣನೇ, ದುರ್ಮತಿಯೇ, ನೀನು ಪುನಃ ಏನಾದರೂ ನನಗೆ ಅಪ್ರಿಯವಾದ ಮಾತನ್ನು ಆಡಿದರೆ ಖಡ್ಗವನ್ನು ಹಿಡಿದು ನಿನ್ನ ನಾಲಿಗೆಯನ್ನು ಕತ್ತರಿಸುವೆನು.
ಯಚ್ಚಾಪಿ ಪಾಂಡವಾನ್ ವಿಪ್ರ ಸ್ತೋತುಮಿಚ್ಛಸಿ ಸಂಯುಗೇ |
ಭೀಷಯನ್ ಸರ್ವಸೈನ್ಯಾನಿ ಕೌರವೇಯಾಣಿ ದುರ್ಮತೇ |
ಅತ್ರಾಪಿ ಶೃಣು ಮೇ ವಾಕ್ಯಂ ಯಥಾವದ್ ಗದತೋ ದ್ವಿಜ ॥ 53 ॥
ಎಲೈ ಬ್ರಾಹ್ಮಣನೇ, ನೀನು ದುರ್ಯೋಧನನ ಎಲ್ಲ ಸೈನ್ಯಗಳನ್ನು ಭಯಗೊಳಿಸುತ್ತಾ ಯುದ್ಧದಲ್ಲಿ ಪಾಂಡವರನ್ನು ಪ್ರಶಂಸಿಸಲು ಬಯಸುತ್ತಿರುವೆಯಷ್ಟೆ? ಎಲೈ ದುರ್ಮತಿಯೇ, ಬ್ರಾಹ್ಮಣನೇ, ಈ ವಿಷಯದಲ್ಲಿ ನನ್ನ ಮಾತನ್ನು ಸರಿಯಾಗಿ ಕೇಳು.
ದುರ್ಯೋಧನಶ್ಚ ದ್ರೋಣಶ್ಚ ಶಕುನಿರ್ದುರ್ಮುಖೋ ಜಯಃ |
ದುಃಶಾಸನೋ ವೃಷಸೇನೋ ಮದ್ರರಾಜಸ್ತ್ವಮೇವ ಚ |
ಸೋಮದತ್ತಶ್ಚ ಭೂರಿಶ್ಚ ತಥಾ ದ್ರೌಣಿರ್ವಿವಿಂಶತಿಃ ॥ 54 ॥
ತಿಷ್ಠೇಯುರ್ದಂಸಿತಾ ಯತ್ರ ಸರ್ವೇ ಯುದ್ಧವಿಶಾರದಾಃ |
ಜಯೇದೇತಾನ್ ರಣೇ ಕೋ ನು ಶಕ್ರತುಲ್ಯಬಲೋಽಪ್ಯರಿಃ ॥ 55 ॥
ದುರ್ಯೋಧನ, ದ್ರೋಣರು, ಶಕುನಿ, ದುರ್ಮುಖ, ಜಯ, ದುಶ್ಶಾಸನ, ವೃಷಸೇನ, ಮದ್ರರಾಜನಾದ ಶಲ್ಯ, ನೀನು, ಸೋಮದತ್ತ, ಭೂರಿ, ಹಾಗೆಯೇ ಅಶ್ವತ್ಥಾಮ, ವಿವಿಂಶತಿ- ಯುದ್ಧವಿಶಾರದರಾದ ಇವರೆಲ್ಲರೂ ಸೇರಿ ಎಲ್ಲಿ ಶಸ್ತ್ರಕವಚ ಸನ್ನದ್ಧರಾಗಿ ನಿಲ್ಲುವರೋ ಅಲ್ಲಿ ಇಂದ್ರನಿಗೆ ಸಮಾನನಾದ ಶತ್ರುವೂ ಸಹ ಇವರನ್ನು ಯುದ್ಧದಲ್ಲಿ ಹೇಗೆ ಗೆದ್ದಾನು?
ಶೂರಾಶ್ಚ ಹಿ ಕೃತಾಸ್ತ್ರಾಶ್ಚ ಬಲಿನಃ ಸ್ವರ್ಗಲಿಪ್ಸವಃ |
ಧರ್ಮಜ್ಞಾ ಯುದ್ಧಕುಶಲಾ ಹನ್ಯುರ್ಯುದ್ಧೇ ಸುರಾನಪಿ ॥ 56 ॥
ಶೂರರೂ, ಅಸ್ತ್ರಜ್ಞರೂ, ಬಲಿಷ್ಠರೂ, ಸ್ವರ್ಗಪ್ರಾಪ್ತಿಯಲ್ಲಿ ಆಸಕ್ತಿಯುಳ್ಳವರೂ, ಧರ್ಮಜ್ಞರೂ, ಯುದ್ಧಕುಶಲರೂ ಆದ ಇವರು ಯುದ್ಧದಲ್ಲಿ ದೇವತೆಗಳನ್ನೂ ಕೊಂದಾರು.
ಏತೇ ಸ್ಥಾಸ್ಯಂತಿ ಸಂಗ್ರಾಮೇ ಪಾಂಡವಾನಾಂ ವಧಾರ್ಥಿನಃ |
ಜಯಮಾಕಾಂಕ್ಷಮಾಣಾ ಹಿ ಕೌರವೇಯಸ್ಯ ದಂಸಿತಾಃ ॥ 57 ॥
ಇವರು ಪಾಂಡವರ ವಧೆಯನ್ನು ಬಯಸಿ ಯುದ್ಧಸನ್ನದ್ಧರಾಗಿ ದುರ್ಯೋಧನನ ಜಯವನ್ನು ಆಶಿಸುತ್ತಾ ಯುದ್ಧದಲ್ಲಿ ನಿಲ್ಲುವರು.
ದೈವಾಯತ್ತಮಹಂ ಮನ್ಯೇ ಜಯಂ ಸುಬಲಿನಾಮಪಿ |
ಯತ್ರ ಭೀಷ್ಮೋ ಮಹಾಬಾಹುಃ ಶೇತೇ ಶರಶತಾಚಿತಃ ॥ 58 ॥
ಮಹಾಬಾಹುಗಳಾದ ಭೀಷ್ಮರು ನೂರಾರು ಬಾಣಗಳು ದೇಹದಲ್ಲಿ ಹೊಕ್ಕು ಮಲಗಿರುವಾಗ ನಾನು ಅತ್ಯಂತ ಬಲಿಷ್ಠರಿಗೂ ಸಹ

ಜಯವು ದೈವವನ್ನು ಅವಲಂಬಿಸಿದೆ ಎಂದು ಭಾವಿಸುತ್ತೇನೆ.
ವಿಕರ್ಣಶ್ಚಿತ್ರಸೇನಶ್ಚ ಬಾಹ್ಲೀಕೋಽಥ ಜಯದ್ರಥಃ |
ಭೂರಿಶ್ರವಾ ಜಯಶ್ಚೈವ ಜಲಸಂಧಃ ಸುದಕ್ಷಿಣಃ ॥ 59 ॥
ಶಲಶ್ಚ ರಥಿನಾಂ ಶ್ರೇಷ್ಠೋ ಭಗದತ್ತಶ್ಚ ವೀರ್ಯವಾನ್ |
ಏತೇ ಚಾನ್ಯೇ ಚ ರಾಜಾನೋ ದೇವೈರಪಿ ಸುದುರ್ಜಯಾಃ ॥ 60 ॥
ನಿಹತಾಃ ಸಮರೇ ಶೂರಾಃ ಪಾಂಡವೈರ್ಬಲವತ್ತರಾಃ |
ಕಿಮನ್ಯದ್ ದೈವಸಂಯೋಗಾನ್ಮನ್ಯಸೇ ಪುರುಷಾಧಮ ॥ 61 ॥
ವಿಕರ್ಣ, ಚಿತ್ರಸೇನ, ಬಾಹ್ಲೀಕ, ಜಯದ್ರಥ, ಭೂರಿಶ್ರವ, ಜಯ, ಜಲಸಂಧ, ಸುದಕ್ಷಿಣ, ರಥಿಶ್ರೇಷ್ಠನಾದ ಶಲ, ಪರಾಕ್ರಮಶಾಲಿಯಾದ ಭಗದತ್ತ - ಪಾಂಡವರಿಗಿಂತ ಹೆಚ್ಚು ಬಲಶಾಲಿಗಳಾದ ಇವರೂ, ದೇವತೆಗಳಿಂದಲೂ ದುರ್ಜಯರಾದ ಇನ್ನೂ ಅನೇಕ ಶೂರರೂ, ಯುದ್ಧದಲ್ಲಿ ಹತರಾಗಿದ್ದಾರೆ. ಎಲೈ ಪುರುಷಾಧಮನೇ, ಇದಕ್ಕೆ ದೈವ ನಿಯತಿಯನ್ನು ಬಿಟ್ಟು ಬೇರೆ ಯಾವ ಕಾರಣವನ್ನು ತಿಳಿಯುತಿತೀಯೆ?
ಯಾಂಶ್ಚ ತಾನ್ ಸ್ತೌಷಿ ಸತತಂ ದುರ್ಯೋಧನರಿಪೂನ್ ದ್ವಿಜ |
ತೇಷಾಮಪಿ ಹತಾಃ ಶೂರಾಃ ಶತಶೋಽಥ ಸಹಸ್ರಶಃ ॥ 62 ॥
ಎಲೈ ಬ್ರಾಹ್ಮಣನೇ, ದುರ್ಯೋಧನನ ಶತ್ರುಗಳಾದ ಯಾವ ಪಾಂಡವರನ್ನು ನೀನು ಸತತವಾಗಿ ಸ್ತೋತ್ರ ಮಾಡುತ್ತಿದ್ದೀಯೋ ಅವರ ಕಡೆಯಲ್ಲಿಯೂ ಶೂರರು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಹತರಾಗಿದ್ದಾರೆ.
ಕ್ಷೀಯಂತೇ ಸರ್ವಸೈನ್ಯಾನಿ ಕುರೂಣಾಂ ಪಾಂಡವೈಃ ಸಹ |
ಪ್ರಭಾವಂ ನಾತ್ರ ಪಶ್ಯಾಮಿ ಪಾಂಡವಾನಾಂ ಕಥಂಚನ ॥ 63 ॥
ಕುರುಗಳ ಸೈನ್ಯವೂ, ಪಾಂಡವಸೈನ್ಯವೂ ಎಲ್ಲವೂ ಕ್ಷಯವನ್ನು ಹೊಂದುತ್ತಿದೆ. ಇದರಲ್ಲಿ ನಾನು ಪಾಂಡವರ ವಿಶೇಷ ಸಾಮರ್ಥ್ಯವನ್ನೇನೂ ಯಾವ ರೀತಿಯಿಂದಲೂ ಕಾಣುತ್ತಿಲ್ಲ.
ಯಾಂಸ್ತಾನ್ ಬಲವತೋ ನಿತ್ಯಂ ಮನ್ಯಸೇ ತ್ವಂ ದ್ವಿಜಾಧಮ |
ಯತಿಷ್ಯೇಽಹಂ ಯಥಾಶಕ್ತಿ ಯೋದ್ಧುಂ ತೈಃ ಸಹ ಸಂಯುಗೇ |
ದುರ್ಯೋಧನಹಿತಾರ್ಥಾಯ ಜಯೋ ದೈವೇ ಪ್ರತಿಷ್ಠಿತಃ ॥ 64 ॥
ಎಲೈ ದ್ವಿಜಾಧಮನೇ, ಯಾವ ಪಾಂಡವರನ್ನು ನೀನು ದುರ್ಯೋಧನನಿಗಿಂತಲೂ ಬಲಿಷ್ಠರು ಎಂದು ಭಾವಿಸುತ್ತೀಯೋ, ರಣರಂಗದಲ್ಲಿ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಲು ದುರ್ಯೋಧನನ ಹಿತಕ್ಕಾಗಿ ನಾನು ನನ್ನ ಶಕ್ತಿಗೆ ಅನುಗುಣವಾಗಿ ಪ್ರಯತ್ನವನ್ನು ಮಾಡುವೆನು. ಜಯವು ದೈವವನ್ನು ಅವಲಂಬಿಸಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೈದನೆಯ ಅಧ್ಯಾಯ
ಕರ್ಣನಿಂದ ಕೃಪರ ನಿಂದೆಯನ್ನು ಕೇಳಿ, ಕರ್ಣನ ಜೊತೆಯಲ್ಲಿ
ಅಶ್ವತ್ಥಾಮರ ಕಲಹ. ದುರ್ಯೋಧನನಿಂದ ಕಲಹದ ಉಪಶಮನ ಮತ್ತು ಅಶ್ವತ್ಥಾಮರನ್ನು ಕುರಿತು ಪಾಂಚಾಲರನ್ನು ಕೊಲ್ಲುವಂತೆ ಒತ್ತಾಯ.
ಸಂಜಯಃ
ತಥಾ ಪರುಷಿತಂ ದೃಷ್ಟ್ವಾ ಸೂತಪುತ್ರೇಣ ಮಾತುಲಮ್ |
ಖಡ್ಗಮುದ್ಯಮ್ಯ ವೇಗೇನ ದ್ರೌಣಿರಭ್ಯಪತದ್ ದ್ರುತಮ್ ॥ 1 ॥
ಸಂಜಯ ತಮ್ಮ ಸೋದರಮಾವನನ್ನು ಕುರಿತು ಕರ್ಣನು ಆಡಿದ ಉಗ್ರ ವಚನವನ್ನು ಕೇಳಿ ಅಶ್ವತ್ಥಾಮರು ಖಡ್ಗವನ್ನು ಎತ್ತಿ ವೇಗದಿಂದ ಅಲ್ಲಿಗೆ ಬಂದರು.
ಅಶ್ವತ್ಥಾಮಾ
ಕರ್ಣ ಪಶ್ಯ ಸುದುರ್ಬುದ್ಧೇ ತಿಷ್ಠೇದಾನೀಂ ನರಾಧಮ |
ಏಷ ತೇಽದ್ಯ ಶಿರಃ ಕಾಯಾದುದ್ಧರಾಮಿ ಸುದುರ್ಮತೇ ॥ 2 ॥
ಅಶ್ವತ್ಥಾಮಾ ಎಲೈ ದುರ್ಬುದ್ಧಿಯುಳ್ಳ ಕರ್ಣನೇ, ಇಲ್ಲಿ ನೋಡು. ನರಾಧಮನೇ, ಈಗ ನಿಲ್ಲು. ಅತ್ಯಂತ ದುರ್ಬುದ್ಧಿಯೇ ಈಗ ನಿನ್ನ ಶಿರಸ್ಸನ್ನು ದೇಹದಿಂದ ಕತ್ತರಿಸುತ್ತೇನೆ.
ಸಂಜಯಃ
ತಮುತ್ಪತಂತಂ ವೇಗೇನ ರಾಜಾ ದುರ್ಯೋಧನಃ ಸ್ವಯಮ್ |
ನ್ಯವಾರಯತ್ ಮಹಾರಾಜ ಕೃಪಶ್ಚ ದ್ವಿಪದಾಂ ವರಃ ॥ 3 ॥
ಸಂಜಯ ಎಲೈ ಮಹಾರಾಜನೇ, ವೇಗದಿಂದ ಕರ್ಣನ ಮೇಲೆ ಬೀಳಲು ಹೋಗುತ್ತಿದ್ದ ಅಶ್ವತ್ಥಾಮರನ್ನು ರಾಜನಾದ ದುರ್ಯೋಧನನು ಸ್ವತಃ ತಾನೂ ಮತ್ತು ಮನುಷ್ಯಶ್ರೇಷ್ಠರಾದ ಕೃಪರೂ ತಡೆದರು.

ಕರ್ಣಃ
ಶೂರೋಽಯಂ ಸಮರಶ್ಲಾಘೀ ದುರ್ಮತಿಶ್ಚ ದ್ವಿಜಾಧಮಃ |
ಆಸಾದಯತು ಮದ್ವೀರ್ಯಂ ಮುಂಚೇಮಂ ಕುರುಸತ್ತಮ ॥ 4 ॥
ಕರ್ಣ ಈ ಬ್ರಾಹ್ಮಣಾಧಮನು ಶೂರ, ಯುದ್ಧಪ್ರಿಯ ಮತ್ತು ದುರ್ಮತಿ ಉಳ್ಳವನು. ಎಲೈ ಕುರುಶ್ರೇಷ್ಠನೇ, ಅವನನ್ನು ಬಿಡು. ಅವನು ನನ್ನ ಪರಾಕ್ರಮಕ್ಕೆ ಗುರಿಯಾಗಲಿ.
ಅಶ್ವತ್ಥಾಮಾ
ತವೈತತ್ ಕ್ಷಮ್ಯತೇಽಸ್ಮಾಭಿಃ ಸೂತಾತ್ಮಜ ಸುದುರ್ಮತೇ |
ದರ್ಪಮುತ್ಸಿಕ್ತಮೇತತ್ ತೇ ಫಲ್ಗುನೋ ನಾಶಯಿಷ್ಯತಿ ॥ 5 ॥
ಅಶ್ವತ್ಥಾಮಾ ಎಲೈ ಸೂತಪುತ್ರನೇ, ಅತ್ಯಂತ ದುರ್ಮತಿಯುಳ್ಳವನೇ, ನಿನ್ನ ಈ ಅಪಚಾರವನ್ನು ನಾವು ಕ್ಷಮಿಸುತ್ತೇವೆ. ಆದರೆ ಈ ನಿನ್ನ ದುರಹಂಕಾರ ಪೂರಿತವಾದ ದರ್ಪವನ್ನು ಅರ್ಜುನನು ನಾಶಗೊಳಿಸುವನು.
ದುರ್ಯೋಧನಃ
ಅಶ್ವತ್ಥಾಮನ್ ಪ್ರಸೀದಸ್ವ ಕ್ಷಂತುಮರ್ಹಸಿ ಮಾನದ |
ಕೋಪಃ ಖಲು ನ ಕರ್ತವ್ಯಃ ಸೂತಪುತ್ರೇ ಕಥಂಚನ ॥ 6 ॥
ದುರ್ಯೋಧನ ಎಲೈ ಮಾನದರೇ, ಅಶ್ವತ್ಥಾಮರೇ, ಪ್ರಸನ್ನರಾಗಿ. ನೀವು ಕ್ಷಮಿಸಬೇಕು. ಯಾವ ಕಾರಣದಿಂದಲೂ ಕರ್ಣನ ಮೇಲೆ ಕೋಪವನ್ನು ಮಾಡಬಾರದು.
ತ್ವಯಿ ಕರ್ಣೇ ಕೃಪೇ ದ್ರೋಣೇ ಮದ್ರರಾಜೇಽಥ ಸೌಬಲೇ |
ಮಹತ್ಕಾರ್ಯಂ ಸಮಾಯತ್ತಂ ಪ್ರಸೀದ ದ್ವಿಜಸತ್ತಮ ॥ 7 ॥
ಎಲೈ ದ್ವಿಜಶ್ರೇಷ್ಠರೇ, ನಿಮ್ಮ ಮೇಲೆ, ಕರ್ಣನ ಮೇಲೆ, ಕೃಪರ ಮೇಲೆ, ದ್ರೋಣರ ಮೇಲೆ, ಶಲ್ಯನ ಮೇಲೆ ಮತ್ತು ಶಕುನಿಯ ಮೇಲೆ ದೊಡ್ಡಕಾರ್ಯದ ಹೊಣೆಯು ಬಿದ್ದಿದೆ. ಪ್ರಸನ್ನರಾಗಿ.
ಏತೇ ಹ್ಯಭಿಮುಖಾಃ ಸರ್ವೇ ರಾಧೇಯೇನ ಯುಯುತ್ಸವಃ |
ಆಯಾಂತಿ ಪಾಂಡವಾ ಬ್ರಹ್ಮನ್ನಾಹ್ವಯಂತಃ ಸಮಂತತಃ ॥ 8 ॥
ಎಲೈ ಬ್ರಾಹ್ಮಣರೇ, ಈ ಪಾಂಡವರೆಲ್ಲರೂ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಕರ್ಣನನ್ನು ಆಹ್ವಾನಿಸುತ್ತಾ, ಅವನಿಗೆ ಅಭಿಮುಖವಾಗಿ ಎಲ್ಲ ಕಡೆಯಿಂದಲೂ ಬರುತ್ತಿದ್ದಾರೆ.
ಸಂಜಯಃ
ಕರ್ಣೋಽಪಿ ರಥಿನಾಂ ಶ್ರೇಷ್ಠಶ್ಚಾಪಮುದ್ಯಮ್ಯ ವೀರ್ಯವಾನ್ |
ಕೌರವಾಗ್ರ್ಯೈಃ ಪರಿವೃತಃ ಶಕ್ರೋ ದೇವಗಣೈರಿವ |
ಪರ್ಯತಿಷ್ಠತ ತೇಜಸ್ವೀ ಸ್ವಬಾಹುಬಲಮಾಶ್ರಿತಃ ॥ 9 ॥
ಸಂಜಯ ರಥಿಕರಲ್ಲಿ ಶ್ರೇಷ್ಠರಾದ, ಪರಾಕ್ರಮಶಾಲಿಯಾದ ಕರ್ಣನೂ ಸಹ ತನ್ನ ಧನುಸ್ಸನ್ನು ಎತ್ತಿ ದೇವಸಮೂಹದಿಂದ ಇಂದ್ರನು ಪರಿವೃತನಾದಂತೆ ಕೌರವ ಶ್ರೇಷ್ಠರಿಂದ ಸುತ್ತುವರಿಯಲ್ಪಟ್ಟು ತೇಜಸ್ವಿಯಾದ ಅವನು ತನ್ನ ಬಾಹುಬಲವನ್ನು ಆಶ್ರಯಿಸಿ ನಿಂತನು.
ತತಃ ಪ್ರವವೃತೇ ಯುದ್ಧಂ ಕರ್ಣಸ್ಯ ಸಹ ಪಾಂಡವೈಃ |
ಸಂರಬ್ಧಸ್ಯ ಮಹಾರಾಜ ಸಿಂಹನಾದವಿನಾದಿತಮ್ ॥ 10 ॥
ಎಲೈ ಮಹಾರಾಜನೇ, ಅನಂತರ ಕೋಪಗೊಂಡ ಕರ್ಣನಿಗೂ ಮತ್ತು ಪಾಂಡವರಿಗೂ ಸಿಂಹನಾದದಿಂದ ಕೂಡಿದ ಯುದ್ಧವು ನಡೆಯಿತು.
ತತಸ್ತೇ ಪಾಂಡವಾ ರಾಜನ್ ಪಾಂಚಾಲಾಶ್ಚ ಯಶಸ್ವಿನಃ |
ದೃಷ್ಟ್ವಾ ಕರ್ಣಂ ಮಹಾಬಾಹುಮುಚ್ಚೈಃ ಶಬ್ದಮಥಾನದನ್ ॥ 11 ॥
ಅಯಂ ಕರ್ಣಃ ಕುತಃ ಕರ್ಣಸ್ತಿಷ್ಠ ಕರ್ಣ ಮಹಾರಣೇ |
ಯುದ್ಧ್ಯಸ್ವ ಸಹಿತೋಽಸ್ಮಾಭಿರ್ದುರಾತ್ಮನ್ ಪುರುಷಾಧಮ ॥ 12 ॥
ಎಲೈ ರಾಜನೇ, ಆಗ ಪಾಂಡವರು ಮತ್ತು ಕೀರ್ತಿವಂತರಾದ ಪಾಂಚಾಲರು ಮಹಾಬಾಹುವಾದ ಕರ್ಣನನ್ನು ನೋಡಿ ಇವನು ಕರ್ಣ. ಕರ್ಣನು ಎಲ್ಲಿದ್ದಾನೆ? ಕರ್ಣನೇ ನಿಲ್ಲು. ದುರಾತ್ಮನೇ, ಪುರುಷಾಧಮನೇ, ನಮ್ಮ ಜೊತೆಯಲ್ಲಿ ಯುದ್ಧವನ್ನು ಮಾಡು ಎಂಬುದಾಗಿ ರಣರಂಗದಲ್ಲಿ ಗಟ್ಟಿಯಾದ ಶಬ್ದದಿಂದ ಕಿರುಚಿದರು.
ಅನ್ಯೇ ತು ದೃಷ್ಟ್ವಾ ರಾಧೇಯಂ ಕ್ರೋಧರಕ್ತೇಕ್ಷಣಾಬ್ರುವನ್ |
ಹನ್ಯತಾಮಯಮುತ್ಸಿಕ್ತಃ ಸೂತಪುತ್ರೋಽಲ್ಪಚೇತನಃ ॥ 13 ॥
ಸರ್ವೈಃ ಪಾರ್ಥಿವಶಾರ್ದೂಲೈರ್ನಾನೇನಾರ್ಥೋಽಸ್ತಿ ಜೀವತಾ |
ಅತ್ಯಂತವೈರೀ ಪಾರ್ಥಾನಾಂ ಸತತಂ ಪಾಪಪೂರುಷಃ ॥ 14 ॥
ಏಷ ಮೂಲಂ ಹ್ಯನರ್ಥಾನಾಂ ದುರ್ಯೋಧನಮತೇ ಸ್ಥಿತಃ |
ಹತ್ವೈನಮಿತಿ ಜಲ್ಪಂತಃ ಕ್ಷತ್ರಿಯಾಃ ಸಮುಪಾದ್ರವನ್ ॥ 15 ॥
ಇನ್ನು ಕೆಲವರು ಕರ್ಣನನ್ನು ನೋಡಿ, ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ, ಅಹಂಕಾರಿಯೂ, ಅಲ್ಪಚೇತನನೂ ಆದ ಈ ಕರ್ಣನನ್ನು ಎಲ್ಲ ರಾಜಶಾರ್ದೂಲರೂ ಸೇರಿ ಕೊಲ್ಲಿ. ಇವನು ಬದುಕಿರುವುದರಿಂದ ಯಾವ ಪ್ರಯೋಜನವೂ ಇಲ್ಲ. ಇವನು ಪಾಪಪುರುಷನಾದವನು. ಪಾಂಡವರಿಗೆ ಯಾವಾಗಲೂ ಅತ್ಯಂತ ವೈರಿಯಾದವನು. ದುರ್ಯೋಧನನ ಅಭಿಪ್ರಾಯದಂತೆ ನಡೆದುಕೊಳ್ಳುವ ಇವನು ಎಲ್ಲ ಅನರ್ಥಕ್ಕೂ ಮೂಲಕಾರಣನಾದವನು. ಇವನನ್ನು ಕೊಲ್ಲಿ ಎಂದು ಹೇಳುತ್ತಾ ಕ್ಷತ್ರಿಯರು ಅವನ

ಕಡೆಗೆ ಧಾವಿಸಿದರು.
ಮಹತಾ ಶರವರ್ಷೇಣ ಛಾದಯಂತೋ ಮಹಾರಥಾಃ |
ವಧಾರ್ಥಂ ಸೂತಪುತ್ರಸ್ಯ ಪಾಂಡವೇಯೇನ ಚೋದಿತಾಃ ॥ 16 ॥
ಯುಧಿಷ್ಠಿರನಿಂದ ಪ್ರೇರಿಸಲ್ಪಟ್ಟ ಮಹಾರಥರು ಕರ್ಣನ ವಧೆಗಾಗಿ ಬಾಣಗಳ ದೊಡ್ಡ ಮಳೆಯನ್ನು ಅವನ ಮೇಲೆ ಸುರಿಸುತ್ತಾ (ಅವನ ಕಡೆಗೆ ಧಾವಿಸಿದರು).
ತಾಂಸ್ತು ಸರ್ವಾಂಸ್ತಥಾ ದೃಷ್ಟ್ವಾ ಧಾವಮಾನಾನ್ ಮಹಾರಥಾನ್ |
ನ ವಿವ್ಯಥೇ ಸೂತಪುತ್ರೋ ನ ಚ ತ್ರಾಸಮಗಚ್ಛತ ॥ 17 ॥
ತನ್ನ ಕಡೆಗೆ ಓಡಿಬರುತ್ತಿದ್ದ ಆ ಎಲ್ಲ ಮಹಾರಥರನ್ನು ನೋಡಿ ಸೂತಪುತ್ರನಾದ ಕರ್ಣನು ವ್ಯಥೆಯನ್ನೂ ಪಡಲಿಲ್ಲ, ಭಯವನ್ನೂ ಹೊಂದಲಿಲ್ಲ.
ದೃಷ್ಟ್ವಾ ನಗರಕಲ್ಪಂ ತಮುದ್ಭೂತಂ ಸೈನ್ಯಸಾಗರಮ್ |
ಪಿಪ್ರೀಷುಸ್ತವ ಪುತ್ರಾಣಾಂ ಸಂಗ್ರಾಮೇಷ್ವಪರಾಜಿತಃ ॥ 18 ॥
ಸಾಯಕೌಘೇನ ಬಲವಾನ್ ಕ್ಷಿಪ್ರಕಾರೀ ಮಹಾಬಲಃ |
ವಾರಯಾಮಾಸ ತತ್ ಸೈನ್ಯಂ ಸಮಂತಾದ್ ಭರತರ್ಷಭ ॥ 19 ॥
ಎಲೈ ಭರತಶ್ರೇಷ್ಠನೇ, ದೊಡ್ಡ ನಗರದಂತಿದ್ದ ಆ ಸೈನ್ಯಸಾಗರವನ್ನು ನೋಡಿ ಯುದ್ಧದಲ್ಲಿ ಪರಾಜಿತನಾಗದ ಮಹಾಬಲನೂ, ಕ್ಷಿಪ್ರಕಾರಿಯೂ ಆದ ಕರ್ಣನು ನಿನ್ನ ಮಕ್ಕಳನ್ನು ಸಂತೋಷಪಡಿಸಲು ಬಯಸಿ, ಆ ಸೈನ್ಯವನ್ನು ತನ್ನ ಬಾಣಗಳ ಸಮೂಹದಿಂದ ಎಲ್ಲ ಕಡೆಗಳಲ್ಲಿಯೂ ತಡೆದನು.
ತತಸ್ತು ಶರವರ್ಷೇಣ ಪಾರ್ಥಿವಾಸ್ತಮವಾರಯನ್ |
ಧನೂಂಷಿ ತೇ ವಿಧುನ್ವಾನಾಃ ಶತಶೋಽಥ ಸಹಸ್ರಶಃ |
ಅಯೋಧಯಂತ ರಾಧೇಯಂ ಶಕ್ರಂ ದೈತ್ಯಗಣಾ ಇವ ॥ 20 ॥
ಆಗ ಆ ರಾಜರೂ ಸಹ ಬಾಣಗಳ ಮಳೆಯಿಂದ ಕರ್ಣನನ್ನು ತಡೆದರು. ಧನುಸ್ಸುಗಳನ್ನು ತೂಗಾಡಿಸುತ್ತಾ ನೂರಾರು, ಸಾವಿರಾರು ಸಂಖ್ಯೆಯಲ್ಲಿದ್ದ ಆ ರಾಜರು ದೈತ್ಯಸಮೂಹಗಳು ಇಂದ್ರನ ಜೊತೆ ಯುದ್ಧವನ್ನು ಮಾಡಿದಂತೆ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಶರವರ್ಷಂ ತು ತತ್ಕರ್ಣಃ ಪಾರ್ಥಿವೈಃ ಸಮುದೀರಿತಮ್ |
ಶರವರ್ಷೇಣ ಮಹತಾ ಸಮಂತಾದ್ ವ್ಯಕಿರತ್ ಪ್ರಭೋ ॥ 21 ॥
ಆ ರಾಜರು ಉಂಟುಮಾಡಿದ ಆ ಬಾಣಗಳ ಮಳೆಯನ್ನು ಕರ್ಣನು ತನ್ನ ದೊಡ್ಡ ಬಾಣಗಳ ಮಳೆಯಿಂದ ಎಲ್ಲ ಕಡೆಗಳಲ್ಲಿಯೂ ಚದುರಿಸಿದನು.
ತದ್ಯುದ್ಧಮಭವತ್ತೇಷಾಂ ಕೃತಪ್ರತಿಕೃತೈಷಿಣಾಮ್ |
ಯಥಾ ದೇವಾಸುರೇ ಯುದ್ಧೇ ಶಕ್ರಸ್ಯ ಸಹ ದಾನವೈಃ ॥ 22 ॥
ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತೀಕಾರವನ್ನು ಮಾಡಲು ಬಯಸಿ ಮಾಡಿದ ಆ ಯುದ್ಧವು ದೇವಾಸುರ ಯುದ್ಧದಲ್ಲಿ ಇಂದ್ರ ಮತ್ತು ದಾನವರ ಯುದ್ಧದಂತೆ ಇದ್ದಿತು.
ತತ್ರಾದ್ಭುತಮಪಶ್ಯಾಮ ಸೂತಪುತ್ರಸ್ಯ ಲಾಘವಮ್ |
ಯದೇನಂ ಸಮರೇ ಯತ್ತಾ ನಾಪ್ನುವಂತ ಪರೇ ಯುಧಿ ॥ 23 ॥
ರಣರಂಗದಲ್ಲಿ ಪ್ರಯತ್ನಶೀಲರಾದ ರಾಜರು ಕರ್ಣನ ಸಮೀಪಕ್ಕೆ ಬರಲಾರದಂತಹ ಕರ್ಣನ ಅದ್ಭುತವಾದ ಹಸ್ತಲಾಘವವನ್ನು ನಾವು ಅಲ್ಲಿ ನೋಡಿದೆವು.
ನಿವಾರ್ಯ ಚ ಶರೌಘಾಂಸ್ತಾನ್ ಪಾರ್ಥಿವಾನಾಂ ಮಹಾರಥಃ |
ಯುಗೇಷ್ವೀಷಾಸು ಛತ್ರೇಷು ಧ್ವಜೇಷು ಚ ಹಯೇಷು ಚ |
ಆತ್ಮನಾಮಾಂಕಿತಾನ್ ಬಾಣಾನ್ ರಾಧೇಯಃ ಪ್ರಾಹಿಣೋಚ್ಛಿತಾನ್ ॥
ಮಹಾರಥನಾದ ರಾಧೇಯನು ಆ ರಾಜರ ಬಾಣಸಮೂಹಗಳನ್ನು ನಿವಾರಿಸಿ ಅವರ ನೊಗಗಳಲ್ಲಿ, ಮೂಕಿಗಳಲ್ಲಿ, ಧ್ವಜಗಳಲ್ಲಿ, ಅಶ್ವಗಳಲ್ಲಿ ತನ್ನ ನಾಮದಿಂದ ಅಂಕಿತವಾದ ನಿಶಿತವಾದ ಬಾಣಗಳನ್ನು ಪ್ರಯೋಗಿಸಿದನು.
ತತಸ್ತೇ ವ್ಯಾಕುಲೀಭೂತಾ ರಾಜಾನಃ ಕರ್ಣಪೀಡಿತಾಃ |
ಬಭ್ರಮುಸ್ತತ್ರ ತತ್ರೈವ ಗಾವಃ ಶೀತಾರ್ದಿತಾ ಇವ ॥ 25 ॥
ಆಗ ಕರ್ಣಪೀಡಿತರಾದ ರಾಜರು ವ್ಯಾಕುಲಗೊಂಡು ಶೀತಪೀಡಿತವಾದ ಗೋವುಗಳಂತೆ ಅಲ್ಲಲ್ಲಿಯೇ ತಿರುಗಾಡಿದರು.
ಹಯಾನಾಂ ವಧ್ಯಮಾನಾನಾಂ ಗಜಾನಾಂ ರಥಿನಾಂ ತಥಾ |
ತತ್ರ ತತ್ರಾಭ್ಯವೇಕ್ಷಾಮಃ ಸಂಘಾನ್ ಕರ್ಣೇನ ಪಾತಿತಾನ್ ॥ 26 ॥
ಕರ್ಣನಿಂದ ಹೊಡೆದು ಉರುಳಿಸಲ್ಪಟ್ಟ ಅಶ್ವಗಳ, ಗಜಗಳ, ರಥಿಕರ ಸಮೂಹಗಳನ್ನು ನಾವು ಅಲ್ಲಲ್ಲಿ ನೋಡಿದೆವು.
ಶಿರೋಭಿಃ ಪತಿತೈ ರಾಜನ್ ಬಾಹುಭಿಶ್ಚ ಸಮಂತತಃ |
ಆಸ್ತೀರ್ಣಾ ವಸುಧಾ ಸರ್ವಾ ಶೂರಾಣಾಮನಿವರ್ತಿನಾಮ್ ॥ 27 ॥
ಎಲೈ ರಾಜನೇ, ಭೂಮಿಯ ಮೇಲೆ ಬಿದ್ದ ಯುದ್ಧದಿಂದ ಹಿಮ್ಮೆಟ್ಟದಿರುವ ಶೂರರ ಶಿರಸ್ಸುಗಳಿಂದಲೂ, ಬಾಹುಗಳಿಂದಲೂ ಭೂಮಿಯು ಎಲ್ಲ ಕಡೆಗಳಲ್ಲಿಯೂ ಹರಡಲ್ಪಟ್ಟಿತು.
ಹತೈಶ್ಚ ಹನ್ಯಮಾನೈಶ್ಚ ನಿಷ್ಟನದ್ಭಿಶ್ಚ ಸರ್ವಶಃ |

ಬಭೂವಾಯೋಧನಂ ರೌದ್ರಂ ವೈವಸ್ವತಪುರೋಪಮಮ್ ॥ 28 ॥
ಹತರಾದ ಮತ್ತು ಹೊಡೆಯಲ್ಪಡುತ್ತಾ ಎಲ್ಲ ಕಡೆಗಳಲ್ಲಿಯೂ ಆರ್ತನಾದವನ್ನು ಮಾಡುವ ಆ ಕ್ಷತ್ರಿಯರಿಂದ ಕೂಡಿದ ರಣರಂಗವು ಯಮನ ಪಟ್ಟಣದಂತೆ ನೋಡಲು ಘೋರವಾಯಿತು.
ತತೋ ದುರ್ಯೋಧನೋ ರಾಜಾ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ ।
ಅಶ್ವತ್ಥಾಮಾನಮಾಸಾದ್ಯ ತದಾ ವಾಕ್ಯಮುವಾಚ ಹ ॥ 29 ॥
ಆಗ ರಾಜನಾದ ದುರ್ಯೋಧನನು ಕರ್ಣನ ಪರಾಕ್ರಮವನ್ನು ನೋಡಿ ಅಶ್ವತ್ಥಾಮರ ಬಳಿಗೆ ಬಂದು ಮಾತನಾಡಿದನು.
ಯುದ್ಧ್ಯತೇಽಸೌ ರಣೇ ಕರ್ಣೋ ದಂಸಿತಃ ಸರ್ವಪಾರ್ಥಿವೈಃ ।
ಪಶ್ಯೈತಾಂ ದ್ರವತೀಂ ಸೇನಾಂ ಕರ್ಣಸಾಯಕಪೀಡಿತಾಮ್ ।
ಕಾರ್ತ್ತಿಕೇಯೇನ ವಿಧ್ವಸ್ತಾಮಾಸುರೀಂ ಪೃತನಾಮಿವ ॥ 30 ॥
ಈ ಕರ್ಣನು ಸನ್ನದ್ಧನಾಗಿ ಎಲ್ಲ ರಾಜರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ. ಕರ್ಣನ ಬಾಣಗಳಿಂದ ಪೀಡಿತವಾಗಿ ಷಣ್ಮುಖನ ಬಾಣಗಳಿಂದ ಪೀಡಿತವಾದ ಅಸುರಸೇನೆಯಂತೆ ಓಡುತ್ತಿರುವ ಈ ಪಾಂಡವರ ಸೇನೆಯನ್ನು ನೋಡು.
ದೃಷ್ಟ್ವೈತಾಂ ನಿರ್ಜಿತಾಂ ಸೇನಾಂ ರಣೇ ಕರ್ಣೇನ ಧೀಮತಾ ।
ಅಭಿಯಾತ್ಯೇಷ ಬೀಭತ್ಸುಃ ಸೂತಪುತ್ರಜಿಘಾಂಸಯಾ ॥ 31 ॥
ಮೇಧಾವಿಯಾದ ಕರ್ಣನಿಂದ ಪರಾಜಿತವಾದ ಈ ಪಾಂಡವ ಸೈನ್ಯವನ್ನು ನೋಡಿ ಈ ಅರ್ಜುನನು ಕರ್ಣನನ್ನು ಕೊಲ್ಲಲು ಬಯಸಿ ಈ ಕಡೆಗೇ ಬರುತ್ತಿದ್ದಾನೆ.
ತದ್ಯಥಾ ಪಶ್ಯಮಾನಾನಾಂ ಸೂತಪುತ್ರಂ ಮಹಾರಥಮ್ ।
ನ ಹನ್ಯಾತ್ ಪಾಂಡವಃ ಸಂಖ್ಯೇ ತಥಾ ನೀತಿರ್ವಿಧೀಯತಾಮ್ ॥32॥
ನಾವೆಲ್ಲರೂ ನೋಡುತ್ತಿರುವಂತೆಯೇ ಮಹಾರಥನಾದ ಸೂತಪುತ್ರನಾದ ಕರ್ಣನನ್ನು ಅರ್ಜುನನು ಯುದ್ಧದಲ್ಲಿ ಕೊಲ್ಲದಿರುವಂತೆ ಯುದ್ಧನೀತಿಯನ್ನು ನಿರೂಪಿಸು (ಎಂದು ಹೇಳಿದನು).
ತತೋ ದ್ರೌಣಿಃ ಕೃಪಃ ಶಲ್ಯೋ ಹಾರ್ದಿಕ್ಯಶ್ಚ ಮಹಾರಥಃ ।
ಪ್ರತ್ಯುದ್ಯಯುಸ್ತದಾ ಪಾರ್ಥಂ ಸೂತಪುತ್ರಪರೀಪ್ಸಯಾ ॥ 33 ॥
ಆಗ ಅಶ್ವತ್ಥಾಮರು, ಕೃಪರು, ಶಲ್ಯ, ಮಹಾರಥನಾದ ಕೃತವರ್ಮ - ಇವರು ಕರ್ಣನನ್ನು ರಕ್ಷಿಸಲು ಬಯಸಿ ಅರ್ಜುನನ ಎದುರಾಗಿ ಧಾವಿಸಿದರು.
ಆಯಾಂತಂ ದೃಶ್ಯ ಕೌಂತೇಯಂ ವೃತ್ರಂ ದೇವಚಮೂಮಿವ ।
ಪ್ರತ್ಯುದ್ಯಯೌ ತದಾ ಕರ್ಣೋ ಯಥಾ ಶಕ್ರಃ ಪ್ರತಾಪವಾನ್ ॥ 34 ॥
ವೃತ್ರನು ದೇವಸೇನೆಯ ಕಡೆಗೆ ಬಂದಂತೆ ಅರ್ಜುನನು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ, ಕರ್ಣನು ಪ್ರತಾಪಶಾಲಿಯಾದ ಇಂದ್ರನಂತೆ ಅವನಿಗೆ ಅಭಿಮುಖವಾಗಿ ಧಾವಿಸಿದನು.
ಧೃತರಾಷ್ಟ್ರಃ
ಸಂರಬ್ಧಂ ಫಲ್ಗುನಂ ದೃಷ್ಟ್ವಾ ಕಾಲಾಂತಕಯಮೋಪಮಮ್ ।
ಕರ್ಣೋ ವೈಕರ್ತನಃ ಸೂತ ಪ್ರತ್ಯಪದ್ಯತ್ ಕಿಮುತ್ತರಮ್ ॥ 35 ॥
ಧೃತರಾಷ್ಟ್ರ ಎಲೈ ಸೂತನೇ, ಕಾಲಾಂತಕ ಯಮನಂತೆ ಕೋಪಗೊಂಡ ಅರ್ಜುನನನ್ನು ನೋಡಿ ವೈಕರ್ತನನಾದ ಕರ್ಣನು ಯಾವ ಪರಿಹಾರವನ್ನು ಯೋಚಿಸಿದನು?
ಸ ಹ್ಯಸ್ಪರ್ಧತ ಪಾರ್ಥೇನ ನಿತ್ಯಮೇವ ಮಹಾರಥಃ ।
ಆಶಂಸತೇ ಚ ಬೀಭತ್ಸುಂ ಯುದ್ಧೇ ಜೇತುಂ ಸುದಾರುಣೇ ॥ 36 ॥
ಮಹಾರಥನಾದ ಅವನು ಯಾವಾಗಲೂ ಅರ್ಜುನನ ಜೊತೆಯಲ್ಲಿ ಸ್ಪರ್ಧಿಸುತ್ತಾನಷ್ಟೆ? ದಾರುಣವಾದ ಯುದ್ಧದಲ್ಲಿ ಅರ್ಜುನನನ್ನು ಗೆಲ್ಲಲೂ ಬಯಸುತ್ತಾನೆ.
ಸ ತು ತಂ ಸಹಸಾ ಪ್ರಾಪ್ತಂ ನಿತ್ಯಮತ್ಯಂತವೈರಿಣಮ್ ।
ಕರ್ಣೋ ವೈಕರ್ತನಃ ಸೂತ ಕಿಮುತ್ತರಮಪದ್ಯತ ॥ 37 ॥
ಎಲೈ ಸೂತನೇ, ಅತ್ಯಂತ ವೈರಿಯಾದ ಅರ್ಜುನನು ತಕ್ಷಣ ಬಂದುದನ್ನು ನೋಡಿ ವೈಕರ್ತನನಾದ ಕರ್ಣನು ಯಾವ ಉತ್ತರವನ್ನು ಯೋಜಿಸಿದನು?
ಸಂಜಯಃ
ಆಯಾಂತಂ ಪಾಂಡವಂ ದೃಷ್ಟ್ವಾ ಗಜಃ ಪ್ರತಿಗಜಂ ಯಥಾ ।
ಅಸಂಭ್ರಾಂತತರಃ ಕರ್ಣಃ ಪ್ರತ್ಯುದೀಯಾದ್ ಧನಂಜಯಮ್ ॥ 38 ॥
ಸಂಜಯ ತನ್ನ ಬಳಿಗೆ ಬರುತ್ತಿದ್ದ ಅರ್ಜುನನನ್ನು ನೋಡಿ ಕರ್ಣನು ಏನೇನೂ ಗಾಬರಿಯಿಲ್ಲದೆ ಗಜವು ಪ್ರತಿಗಜದ ಕಡೆಗೆ ಹೋಗುವಂತೆ ಧನಂಜಯನ ಕಡೆಗೆ ಧಾವಿಸಿದನು.
ತಮಾಪತಂತಂ ವೇಗೇನ ವೈಕರ್ತನಮಜಿಹ್ಮಗೈಃ ।
ವಾರಯಾಮಾಸ ತೇಜಸ್ವೀ ಪಾಂಡವಃ ಶತ್ರುತಾಪನಃ ॥ 39 ॥
ಶತ್ರುತಾಪನನಾದ, ತೇಜಸ್ವಿಯಾದ ಅರ್ಜುನನು ತನ್ನ ಕಡೆಗೆ ವೇಗದಿಂದ ಸಾಗಿ ಬರುತ್ತಿದ್ದ ಕರ್ಣನನ್ನು ನೇರವಾಗಿ ಸಾಗುವ ಬಾಣಗಳಿಂದ ತಡೆದನು.
ತಂ ಕರ್ಣಃ ಶರಜಾಲೇನ ಛಾದಯಾಮಾಸ ಮಾರಿಷ ।

ವಿವ್ಯಾಧ ಚ ಸುಸಂಕ್ರುದ್ಧಃ ಶರೈಸ್ತ್ರಿಭಿರಜಿಹ್ಮಗೈಃ ॥ 40 ॥
ಎಲೈ ಪೂಜ್ಯನೇ, ಕರ್ಣನು ಅವನನ್ನು ಬಾಣಗಳ ಸಮೂಹದಿಂದ ಆವರಿಸಿದನು. ಮತ್ತು ನೇರವಾಗಿ ಸಾಗುವ ಮೂರು ಬಾಣಗಳಿಂದ ಕೋಪಗೊಂಡು ಅವನನ್ನು ಹೊಡೆದನು.
ತಸ್ಯ ತಲ್ಲಾಘವಂ ಪಾರ್ಥೋ ನಾಮೃಷ್ಯತ ಮಹಾಬಲಃ |
ತಸ್ಮೈ ಬಾಣಾನ್ ಶಿಲಾಧೌತಾನ್ ಪ್ರಸನ್ನಾಗ್ರಾನಜಿಹ್ಮಗಾನ್ ॥ 41॥
ಪ್ರಾಹಿಣೋತ್ ಸೂತಪುತ್ರಾಯ ತ್ರಿಂಶತಂ ಶತ್ರುತಾಪನಃ |
ವಿವ್ಯಾಧ ಚೈನಂ ಸಂರಬ್ಧೋ ಬಾಣೇನೈಕೇನ ವೀರ್ಯವಾನ್ ॥ 42 ॥
ಸವ್ಯೇ ಭುಜಾಗ್ರೇ ಬಲವಾನ್ ನಾರಾಚೇನ ಹಸನ್ನಿವ |
ತಸ್ಯ ವಿದ್ಧಸ್ಯ ವೇಗೇನ ಕರಾಚ್ಚಾಪಂ ಪಪಾತ ಹ ॥ 43 ॥
ಮಹಾಬಲನಾದ ಪಾರ್ಥನು ಕರ್ಣನ ಕ್ಷಿಪ್ರತೆಯನ್ನು ನೋಡಿ ಸಹಿಸಲಿಲ್ಲ. ಶತ್ರುತಾಪನನಾದ ಅವನು ನಿಶಿತವಾದ ತುದಿಯುಳ್ಳ, ನೇರವಾಗಿ ಸಾಗುವ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಮೂವತ್ತು ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು ಮತ್ತು ಪರಾಕ್ರಮಶಾಲಿಯಾದ ಅವನು ಕೋಪಗೊಂಡು ನಗುತ್ತಾ ಒಂದು ಬಾಣದಿಂದ ಕರ್ಣನನ್ನು ಅವನ ಎಡಭುಜದ ಮೂಲೆಯಲ್ಲಿ ಬಲವಾಗಿ ಹೊಡೆದನು. ಆಗ ಕರ್ಣನ ಹಸ್ತದಿಂದ ಅವನ ಧನುಸ್ಸು ಬಿದ್ದಿತು.
ಪುನರಾದಾಯ ತಚ್ಚಾಪಂ ನಿಮೇಷಾರ್ಧಾನ್ಮಹಾಬಲಃ |
ಛಾದಯಾಮಾಸ ಬಾಣೌಘೈಃ ಫಲ್ಗುನಂ ಕೃತಹಸ್ತವತ್ ॥ 44 ॥
ಮಹಾಬಲನಾದ ಕರ್ಣನು ಅರ್ಧನಿಮಿಷದಲ್ಲಿ ಆ ಧನುಸ್ಸನ್ನು ಪುನಃ ತೆಗೆದುಕೊಂಡು ಸಿದ್ಧಹಸ್ತನಂತೆ ಬಾಣಗಳ ಸಮೂಹದಿಂದ ಅರ್ಜುನನನ್ನು ಆಚ್ಛಾದಿಸಿದನು.
ಶರವೃಷ್ಟಿಂ ತು ತಾಂ ಮುಕ್ತಾಂ ಸೂತಪುತ್ರೇಣ ಭಾರತ |
ವ್ಯಧಮಚ್ಛರವರ್ಷೇಣ ಸ್ಮಯನ್ನಿವ ಧನಂಜಯಃ ॥ 45 ॥
ಎಲೈ ಭಾರತನೇ, ಸೂತಪುತ್ರನು ಪ್ರಯೋಗಿಸಿದ ಆ ಬಾಣಗಳ ಮಳೆಯನ್ನು ಅರ್ಜುನನು ನಗುತ್ತಾ ತನ್ನ ಬಾಣಗಳ ಮಳೆಯಿಂದ ನಾಶಗೊಳಿಸಿದನು.
ತೌ ಪರಸ್ಪರಮಾಸಾದ್ಯ ಶರವರ್ಷೇಣ ಪಾರ್ಥಿವ |
ಛಾದಯೇತಾಂ ಮಹೇಷ್ವಾಸೌ ಕೃತಪ್ರತಿಕೃತೈಷಿಣೌ ॥ 46 ॥
ಎಲೈ ರಾಜನೇ, ಮಹಾಧನುರ್ಧಾರಿಗಳೂ ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತಿಯಾಗಿ ಮಾಡುವವರೂ ಆದ ಅವರಿಬ್ಬರು ಪರಸ್ಪರವಾಗಿ ಸಮೀಪಿಸಿ ಬಾಣಗಳ ಮಳೆಯಿಂದ ಪರಸ್ಪರವಾಗಿ ಆಚ್ಛಾದಿಸಿದರು.
ತದದ್ಭುತಮಭೂದ್ ಯುದ್ಧಂ ಕರ್ಣಪಾಂಡವಯೋರ್ಮೃಧೇ |
ಕ್ರುದ್ಧಯೋರ್ವಾಸಿತಾಹೇತೋರ್ವನ್ಯಯೋರ್ಗಜಯೋರಿವ ॥ 47 ॥
ಕರ್ಣಾರ್ಜುನರ ಯುದ್ಧವು ಚಿಕ್ಕ ಹೆಣ್ಣಾನೆಯ ಸಲುವಾಗಿ ಕ್ರೋಧದಿಂದ ಹೋರಾಡುವ ವನಗಜಗಳ ಯುದ್ಧದಂತೆ ಅದ್ಭುತವಾಗಿದ್ದಿತು.
ತತಃ ಪಾರ್ಥೋ ಮಹೇಷ್ವಾಸೋ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ |
ಮುಷ್ಟಿದೇಶೇ ಧನುಸ್ತಸ್ಯ ಚಿಚ್ಛೇದ ತ್ವರಯಾಽನ್ವಿತಃ ॥ 48 ॥
ಆಗ ಮಹಾಧನುರ್ಧಾರಿಯಾದ ಅರ್ಜುನನು ಕರ್ಣನ ಪರಾಕ್ರಮವನ್ನು ನೋಡಿ ತ್ವರೆಯಿಂದ ಕೂಡಿ ಅವನ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು.
ಅಶ್ವಾಂಶ್ಚ ಚತುರೋ ಭಲ್ಲೈರನಯದ್ ಯಮಸಾದನಮ್ |
ಸಾರಥೇಶ್ಚ ಶಿರಃ ಕಾಯಾದಹರಚ್ಛತ್ರುತಾಪನಃ ॥ 49 ॥
ಅವನು ಭಲ್ಲಗಳಿಂದ ಕರ್ಣನ ರಥದ ನಾಲ್ಕು ಕುದುರೆಗಳನ್ನು ಯಮಪಟ್ಟಣಕ್ಕೆ ಕಳುಹಿಸಿದನು. ಶತ್ರುತಾಪನನಾದ ಅವನು ಸಾರಥಿಯ ದೇಹದಿಂದ ಅವನ ಶಿರಸ್ಸನ್ನು ಕತ್ತರಿಸಿದನು.
ಅಥೈನಂ ಛಿನ್ನಧನ್ವಾನಂ ಹತಾಶ್ವಂ ಹತಸಾರಥಿಮ್ |
ವಿವ್ಯಾಧ ಸಾಯಕೈಃ ಪಾರ್ಥಶ್ಚತುರ್ಭಿಃ ಪಾಂಡುನಂದನಃ ॥ 50 ॥
ಅನಂತರ ಪಾಂಡುನಂದನನಾದ ಅರ್ಜುನನು ಧನುಸ್ಸು ಕತ್ತರಿಸಲ್ಪಟ್ಟು, ಅಶ್ವ- ಸಾರಥಿಗಳು ಹತರಾದ ಕರ್ಣನ ಮೇಲೆ ನಾಲ್ಕು ಬಾಣಗಳನ್ನು ಪ್ರಯೋಗಿಸಿದನು.
ಹತಾಶ್ವಾತ್ ತು ರಥಾತ್ ತೂರ್ಣಮವಪ್ಲುತ್ಯ ನರರ್ಷಭಃ |
ಆರುರೋಹ ರಥಂ ತೂರ್ಣಂ ಕೃಪಸ್ಯ ಶರಪೀಡಿತಃ ॥ 51 ॥
ನರಶ್ರೇಷ್ಠನಾದ ಕರ್ಣನು ಅಶ್ವಗಳು ಹತವಾದ ತನ್ನ ರಥದಿಂದ ಶೀಘ್ರವಾಗಿ ಹಾರಿ ಅರ್ಜುನನ ಬಾಣಗಳಿಂದ ಪೀಡಿತನಾಗಿ ಕೃಪರ ರಥವನ್ನು ಏರಿದನು.
ರಾಧೇಯಂ ನಿರ್ಜಿತಂ ದೃಷ್ಟ್ವಾ ತಾವಕಾ ಭರತರ್ಷಭ |
ಧನಂಜಯಶರೈರ್ನುನ್ನಾಃ ಪ್ರಾದ್ರವಂತ ದಿಶೋ ದಶ ॥ 52 ॥
ಎಲೈ ಭರತರ್ಷಭನೇ, ಕರ್ಣನು ಪರಾಜಿತನಾದುದನ್ನು ನೋಡಿ ಅರ್ಜುನನ ಬಾಣಗಳಿಂದ ಪೀಡಿತರಾದ ನಿನ್ನ ಯೋಧರು ಹತ್ತುದಿಕ್ಕುಗಳಿಗೂ ಓಡಿಹೋದರು.
ದ್ರವತಸ್ತಾನ್ ಸಮಾಲೋಕ್ಯ ರಾಜಾ ದುರ್ಯೋಧನೋ ನೃಪ |

ನಿವರ್ತಯಾಮಾಸ ತದಾ ವಾಕ್ಯಂ ಚೇದಮುವಾಚ ಹ ॥ 53 ॥
ಎಲ್ಲೈ ರಾಜನ್, ಓಡುತ್ತಿರುವ ಅವರನ್ನು ನೋಡಿ ರಾಜನಾದ ದುರ್ಯೋಧನನು ಅವರನ್ನು ಹಿಂದಿರುಗಿಸಿ ಆಗ ಈ ಮಾತನ್ನು ಹೇಳಿದನು.
ಅಲಂ ದ್ರುತೇನ ವಃ ಶೂರಾಸ್ತಿಷ್ಠಧ್ವಂ ಕ್ಷತ್ರಿಯರ್ಷಭಾಃ |
ಏಷ ಪಾರ್ಥವಧಾಯಾಹಂ ಸ್ವಯಂ ಗಚ್ಛಾಮಿ ಸಂಯುಗೇ ॥
ಅಹಂ ಪಾರ್ಥಾನ್ ಹನಿಷ್ಯಾಮಿ ಸಪಾಂಚಾಲಾನ್ ಸಸೋಮಕಾನ್ ॥
ಎಲ್ಲೈ ಶೂರರೇ, ಓಡಬೇಡಿ. ಕ್ಷತ್ರಿಯರ್ಷಭರೇ, ನಿಲ್ಲಿ. ಅರ್ಜುನನಿಗಾಗಿ ರಣರಂಗದಲ್ಲಿ ನಾನೇ ಸ್ವತಃ ಹೋಗುತ್ತಿದ್ದೇನೆ. ನಾನು ಪಾಂಚಾಲರಿಂದ ಮತ್ತು ಸೋಮಕರಿಂದ ಸಹಿತರಾದ ಪಾಂಡವರನ್ನು ಕೊಲ್ಲುವೆನು.
ಅದ್ಯ ಮೇ ಯುದ್ಧ್ಯಮಾನಸ್ಯ ಸಹ ಗಾಂಡೀವಧನ್ವನಾ |
ದ್ರಕ್ಷ್ಯಂತಿ ವಿಕ್ರಮಂ ಪಾರ್ಥಾಃ ಕಾಲಸ್ಯೇವ ಯುಗಕ್ಷಯೇ ॥ 55 ॥
ಈ ದಿನ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವ ನನ್ನ ಯುಗಾಂತದಲ್ಲಿ ಮೃತ್ಯುವಿನಂತಹ ಪರಾಕ್ರಮವನ್ನು ಪಾಂಡವರು ನೋಡುವರು.
ಅದ್ಯಮದ್ಬಾಣಜಾಲಾನಿ ವಿಮುಕ್ತಾನಿ ಸಹಸ್ರಶಃ |
ದ್ರಕ್ಷ್ಯಂತಿ ಸಮರೇ ಯೋಧಾಃ ಶಲಭಾನಾಮಿವಾಯತೀಃ ॥ 56 ॥
ಈ ದಿನ ನನ್ನಿಂದ ಸಹಸ್ರಸಂಖ್ಯೆಯಲ್ಲಿ ಪ್ರಯೋಗಿಸಲ್ಪಟ್ಟ ಬಾಣಗಳನ್ನು ರಣರಂಗದಲ್ಲಿ ಯೋಧರು ಪತಂಗಗಳ ಪಂಕ್ತಿಗಳಂತೆ ನೋಡುವರು.
ಅದ್ಯ ಬಾಣಮಯಂ ವರ್ಷಂ ಸೃಜತೋ ಮಮ ಧನ್ವಿನಃ |
ಜೀಮೂತಸ್ಯೇವ ಘರ್ಮಾಂತೇ ದ್ರಕ್ಷ್ಯಂತಿ ಯುಧಿ ಸೈನಿಕಾಃ ॥ 57 ॥
ಧನುರ್ಧಾರಿಯಾದ ನಾನು ಈ ದಿನ ಸೃಷ್ಟಿಸುವ ಬಾಣಗಳ ಮಳೆಯನ್ನು ರಣರಂಗದಲ್ಲಿ ಸೈನಿಕರು ಬೇಸಿಗೆಯ ನಂತರ ಮೋಡಗಳು ಸುರಿಸುವ ಮಳೆಯಂತೆ ನೋಡುವರು.
ಜೇಷ್ಯಾಮ್ಯದ್ಯ ರಣೇ ಪಾರ್ಥಂ ಸಾಯಕೈರ್ನತಪರ್ವಭಿಃ |
ತಿಷ್ಠಧ್ವಂ ಸಮರೇ ಶೂರಾ ಭಯಂ ತ್ಯಜತ ಫಲ್ಗುನಾತ್ ॥ 58 ॥
ಬಾಗಿದ ತುದಿಯುಳ್ಳ ಬಾಣಗಳಿಂದ ಈ ದಿನ ನಾನು ಯುದ್ಧದಲ್ಲಿ ಅರ್ಜುನನನ್ನು ಗೆಲ್ಲುವೆನು. ಶೂರರೇ, ಯುದ್ಧದಲ್ಲಿ ನಿಲ್ಲಿ. ಅರ್ಜುನನ ಭಯವನ್ನು ಬಿಡಿ.
ನ ಹಿ ಮದ್ವೀರ್ಯಮಾಸಾದ್ಯ ಫಲ್ಗುನಃ ಪ್ರಸಹಿಷ್ಯತಿ |
ಯಥಾ ವೇಲಾಂ ಸಮಾಸಾದ್ಯ ಸಾಗರೋ ಮಕರಾಲಯಃ ॥ 59 ॥
ಮಕರಾಶ್ರಯವಾದ ಸಾಗರವು ತೀರವನ್ನು ಹೊಂದಿದಂತೆ ನನ್ನ ಪರಾಕ್ರಮವನ್ನು ಹೊಂದಿದ ಅರ್ಜುನನು ಈ ದಿನ ಅದನ್ನು ಸಹಿಸುವುದಿಲ್ಲ.
ಇತ್ಯುಕ್ತ್ವಾ ಪ್ರಯಯೌ ರಾಜಾ ಸೈನ್ಯೇನ ಮಹತಾ ವೃತಃ |
ಫಲ್ಗುನಂ ಪ್ರತಿ ದುರ್ಧರ್ಷಃ ಕ್ರೋಧಸಂರಕ್ತಲೋಚನಃ ॥ 60 ॥
ಹೀಗೆ ಹೇಳಿ ದುರ್ಧರ್ಷನಾದ, ಕೋಪದಿಂದ ಕೆಂಪಾದ ಕಣ್ಣುಳ್ಳ ರಾಜನಾದ ದುರ್ಯೋಧನನು ದೊಡ್ಡ ಸೇನೆಯಿಂದ ಸಹಿತನಾಗಿ ಅರ್ಜುನನ ಕಡೆಗೆ ಧಾವಿಸಿದನು.
ತಂ ಪ್ರಯಾಂತಂ ಮಹಾಬಾಹುಂ ದೃಷ್ಟ್ವಾ ಶಾರದ್ವತಸ್ತದಾ |
ಅಶ್ವತ್ಥಾಮಾನಮಾಸಾದ್ಯ ವಾಕ್ಯಮೇತದುವಾಚ ಹ ॥ 61 ॥
ಮಹಾಬಾಹುವಾದ ಅವನು ಹೋಗುತ್ತಿರುವುದನ್ನು ನೋಡಿದ ಕೃಪರು ಅಶ್ವತ್ಥಾಮರ ಬಳಿಗೆ ಬಂದು ಈ ಮಾತನ್ನಾಡಿದರಷ್ಟೆ!
ಏಷ ರಾಜಾ ಮಹಾಬಾಹುರಮರ್ಷೀ ಕ್ರೋಧಮೂರ್ಚ್ಛಿತಃ |
ಪತಂಗವೃತ್ತಿಮಾಸ್ಥಾಯ ಫಲ್ಗುನಂ ಯೋದ್ಧುಮಿಚ್ಛತಿ ॥ 62 ॥
ರೋಷಶೀಲನೂ, ಕ್ರೋಧಮೂರ್ಛಿತನೂ, ಮಹಾಬಾಹುವೂ ಆದ ಈ ರಾಜನು ಪತಂಗದ ನಡತೆಯನ್ನು ಅನುಸರಿಸಿ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತಾನೆ.
ಯಾವನ್ನಃ ಪಶ್ಯಮಾನಾನಾಂ ಪ್ರಾಣಾನ್ ಪಾರ್ಥೇನ ಸಂಗತಃ |
ನ ಜಹ್ಯಾತ್ ಪುರುಷವ್ಯಾಘ್ರಸ್ತಾವದ್ ವಾರಯ ಕೌರವಮ್ ॥ 63 ॥
ಪುರುಷವ್ಯಾಘ್ರನಾದ ಅವನು ಅರ್ಜುನನ ಜೊತೆಯಲ್ಲಿ ಸಮಾಗಮವನ್ನು ಹೊಂದಿ ನಾವು ನೋಡುತಿತರುವಂತೆಯೇ ಪ್ರಾಣಗಳನ್ನು ಬಿಡುವುದಕ್ಕಿಂತ ಮೊದಲು ದುರ್ಯೋಧನನನ್ನು ನಿವಾರಿಸು.
ಯಾವತ್ ಫಲ್ಗುನಬಾಣಾನಾಂ ಗೋಚರಂ ನಾಧಿಗಚ್ಛತಿ |
ಕೌರವಃ ಪಾರ್ಥಿವೋ ವೀರಸ್ತಾವದ್ ವಾರಯ ತಂ ದ್ರುತಮ್ ॥ 64 ॥
ವೀರನಾದ ಕೌರವ ರಾಜನು ಅರ್ಜುನನ ಬಾಣಗಳ ವ್ಯಾಪ್ತಿಗೆ ಸಿಲುಕುವುದಕ್ಕಿಂತ ಮೊದಲೇ ಅವನನ್ನು ಶೀಘ್ರವಾಗಿ ಹಿಂದಿರುಗಿಸು.
ಯಾವತ್ ಪಾರ್ಥಶರೈರ್ಘೋರೈರ್ನಿರ್ಮುಕ್ತೋರಗಸನ್ನಿಭೈಃ |
ನ ಭಸ್ಮೀಕ್ರಿಯತೇ ರಾಜಾ ತಾವದ್ ಯುದ್ಧಾನ್ನಿವಾರ್ಯತಾಮ್ ॥65॥
ಪೊರೆಯನ್ನು ಕಳಚಿದ ಸರ್ಪಗಳಂತಿರುವ ಅರ್ಜುನನ ಘೋರವಾದ ಬಾಣಗಳಿಂದ ರಾಜನು ದಹಿಸಲ್ಪಡುವುದಕ್ಕಿಂತ ಮೊದಲೇ ಅವನನ್ನು ಯುದ್ಧದಿಂದ ನಿವಾರಿಸು.

ಅಯುಕ್ತಮಿವ ಪಶ್ಯಾಮಿ ತಿಷ್ಠತ್ಸ್ವಸ್ಮಾಸು ಮಾನದ |
ಸ್ವಯಂ ಯುದ್ಧಾಯ ಯದ್ ರಾಜಾ ಪಾರ್ಥಂ ಯಾತ್ಯಸಹಾಯವಾನ್ ॥
ಎಲೈ ಮಾನದನೇ, ನಾವು ರಣರಂಗದಲ್ಲಿರುವಾಗ ರಾಜನು ಯಾವ ಸಹಾಯವೂ ಇಲ್ಲದೆ ಸ್ವತಃ ಅರ್ಜುನನನ್ನು ಕುರಿತು ಯುದ್ಧಕ್ಕೆ ಹೋಗುವುದು ಅಯುಕ್ತವಾದುದೆಂದು ಭಾವಿಸುತ್ತೇನೆ.
ದುರ್ಲಭಂ ಜೀವಿತಂ ಮನ್ಯೇ ಕೌರವ್ಯಸ್ಯ ಕಿರೀಟಿನಾ |
ಯುಧ್ಯಮಾನಸ್ಯ ಪಾರ್ಥೇನ ಶಾರ್ದೂಲೇನೇವ ಹಸ್ತಿನಃ ॥ 67 ॥
ವ್ಯಾಘ್ರದ ಜೊತೆಯಲ್ಲಿ ಹೋರಾಡುವ ಗಜದ ಜೀವಿತದಂತೆ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡುವ ಕೌರವನಾದ ದುರ್ಯೋಧನನ ಜೀವಿತವು ದುರ್ಲಭವಾದುದೆಂದು ಭಾವಿಸುತ್ತೇನೆ (ಎಂದು ಹೇಳಿದರು).
ಮಾತುಲೇನೈವಮುಕ್ತಸ್ತು ದ್ರೌಣಿಃ ಶಸ್ತ್ರಭೃತಾಂ ವರಃ |
ದುರ್ಯೋಧನಮಿದಂ ವಾಕ್ಯಂ ತ್ವರಿತಂ ಸಮಭಾಷತ ॥ 68 ॥
ಹೀಗೆ ಸೋದರಮಾವನಿಂದ ಹೇಳಲ್ಪಟ್ಟ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಅಶ್ವತ್ಥಾಮರು ಶೀಘ್ರವಾಗಿ ದುರ್ಯೋಧನನನ್ನು ಕುರಿತು ಈ ಮಾತನ್ನಾಡಿದರು.
ಮಯಿ ಜೀವತಿ ಗಾಂಧಾರೇ ನ ಯುದ್ಧಂ ಗಂತುಮರ್ಹಸಿ |
ಮಾಮನಾದೃತ್ಯ ಕೌರವ್ಯ ತವ ನಿತ್ಯಂ ಹಿತೈಷಿಣಮ್ ॥ 69 ॥
ಎಲೈ ಗಾಂಧಾರಿಪುತ್ರನೇ, ನಾನು ಬದುಕಿರುವಾಗ ಯಾವಾಗಲೂ ನಿನ್ನ ಹಿತೈಷಿಯಾದ ನನ್ನನ್ನು ತಿರಸ್ಕರಿಸಿ ನೀನು ಯುದ್ಧಕ್ಕೆ ಹೋಗುವುದು ಹಿತವಲ್ಲ.
ನ ಹಿ ತೇ ಸಂಭ್ರಮಃ ಕಾರ್ಯಃ ಪಾರ್ಥಸ್ಯ ವಿಜಯಂ ಪ್ರತಿ |
ಅಹಮಾವಾರಯಿಷ್ಯಾಮಿ ಪಾರ್ಥಂ ತಿಷ್ಠ ಸುಯೋಧನ ॥ 70 ॥
ಅರ್ಜುನನನ್ನು ಗೆಲ್ಲುವ ವಿಷಯದಲ್ಲಿ ನೀನು ಗಾಬರಿಯಾಗಬೇಕಾಗಿಲ್ಲ. ನಾನು ಅರ್ಜುನನನ್ನು ತಡೆಯುವೆನು. ಸುಯೋಧನನೇ, ನೀನು ನಿಲ್ಲುವವನಾಗು.
ದುರ್ಯೋಧನಃ
ಆಚಾರ್ಯಃ ಪಾಂಡುಪುತ್ರಾನ್ ವೈ ಪುತ್ರವತ್ ಪರಿರಕ್ಷತಿ |
ತ್ವಮಪ್ಯುಪೇಕ್ಷಾಂ ಕುರುಷೇ ತೇಷು ನಿತ್ಯಂ ದ್ವಿಜೋತ್ತಮ ॥ 71 ॥
ದುರ್ಯೋಧನ ದ್ರೋಣಾಚಾರ್ಯರು ಪಾಂಡುಪುತ್ರರನ್ನು ಮಕ್ಕಳಂತೆ ರಕ್ಷಿಸುತ್ತಾರೆ. ಎಲೈ ದ್ವಿಜಶ್ರೇಷ್ಠರೇ, ನೀವಾದರೋ ಯಾವಾಗಲೂ ಅವರನ್ನು ಉದಾಸೀನ ಮಾಡುತ್ತಿದ್ದೀರಿ.
ಮಮ ವಾ ಮಂದಭಾಗ್ಯತ್ವಾನ್ಮಂದಸ್ತೇ ವಿಕ್ರಮೋ ಯುಧಿ |
ಧರ್ಮರಾಜಪ್ರಿಯಾರ್ಥಂ ವಾ ದ್ರೌಪದ್ಯಾ ವಾ ನ ವಿದ್ಮ ತತ್ ॥ 72 ॥
ಯುದ್ಧದಲ್ಲಿ ನಿಮ್ಮ ಪರಾಕ್ರಮವು ಮಂದವಾಗಿರುವುದು ನನ್ನ ದುರದೃಷ್ಟದಿಂದಲೋ ಅಥವಾ ಧರ್ಮರಾಜನ ಹಿತದ ಸಲುವಾಗಿಯೋ ಅಥವಾ ದ್ರೌಪದಿಯ ಹಿತದ ಸಲುವಾಗಿಯೋ ಎಂಬುದನ್ನು ತಿಳಿಯಲಾರೆವು.
ಧಿಗಸ್ತು ಮಮ ಲುಬ್ಧಸ್ಯ ಯತ್ಕೃತೇ ಸರ್ವಬಾಂಧವಾಃ |
ಸುಖಾರ್ಹಾಃ ಪರಮಂ ದುಃಖಂ ಪ್ರಾಪ್ನುವಂತ್ಯಪರಾಜಿತಾಃ ॥ 73 ॥
ಯಾವ ನನ್ನ ಸಲುವಾಗಿ ಸುಖಾರ್ಹರಾದ, ಅಪರಾಜಿತರಾದ ಎಲ್ಲ ಬಾಂಧವರೂ ಪರಮ ದುಃಖವನ್ನು ಹೊಂದುತ್ತಿದ್ದಾರೆಯೋ ಅಂತಹ ಲೋಭಿಯಾದ ನನಗೆ ಧಿಕ್ಕಾರವಿರಲಿ.
ಕೋ ಹಿ ಶಸ್ತ್ರಭೃತಾಂ ಮುಖ್ಯೋ ಮಹೇಶ್ವರಸಮೋ ಯುಧಿ |
ಶತ್ರೂನ್ನಕ್ಷಪಯೇಚ್ಛಕ್ತೋ ಯೋ ನ ಸ್ಯಾದ್ ಗೌತಮೀಸುತಃ ॥ 74 ॥
ಗೌತಮೀಪುತ್ರರಲ್ಲದ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ, ಯುದ್ಧದಲ್ಲಿ ಮಹೇಶ್ವರನಿಗೆ ಸಮರಾದ, ಶತ್ರುಗಳನ್ನು ಸಂಹರಿಸಲು ಶಕ್ತನಾದ ಯಾವನು ತಾನೇ ಶತ್ರುಗಳನ್ನು ನಾಶಗೊಳಿಸದೆ ಇರುವನು?
ಅಶ್ವತ್ಥಾಮನ್ ಪ್ರಸೀದಸ್ವ ನಾಶಯೈತಾನ್ ಮಮಾಹಿತಾನ್ |
ತವಾಸ್ತ್ರಗೋಚರೇ ಶಕ್ತಾಃ ಸ್ಥಾತುಂ ದೇವಾಪಿ ನಾನಘ ॥ 75 ॥
ಅಶ್ವತ್ಥಾಮರೇ, ಪ್ರಸನ್ನರಾಗಿ. ನನ್ನ ಈ ಶತ್ರುಗಳನ್ನು ನಾಶಗೊಳಿಸಿ. ಎಲೈ ಅನಘರೇ, ನಿಮ್ಮ ಅಸ್ತ್ರಗಳ ವ್ಯಾಪ್ತಿಯಲ್ಲಿ ದೇವತೆಗಳೂ ನಿಲ್ಲಲಾರರು.
ಪಾಂಚಾಲಾನ್ ಸೋಮಕಾಂಶ್ಚೈವ ಜಹಿ ದ್ರೌಣೇ ಸಹಾನುಗಾನ್ |
ವಯಂ ಶೇಷಾನ್ ಹನಿಷ್ಯಾಮಸ್ತ್ವಯೈವ ಪರಿರಕ್ಷಿತಾಃ ॥ 76 ॥
ಎಲೈ ದ್ರೋಣಪುತ್ರರೇ, ಅನುಚರರಿಂದ ಸಹಿತರಾದ ಪಾಂಚಾಲರನ್ನು ಮತ್ತು ಸೋಮಕರನ್ನು ಕೊಲ್ಲಿ. ನಿಮ್ಮಿಂದ ಚೆನ್ನಾಗಿ ರಕ್ಷಿಸಲ್ಪಟ್ಟು ನಾವು ಉಳಿದವರನ್ನು ಕೊಲ್ಲುವೆವು.
ಏತೇ ಹಿ ಸೋಮಕಾ ವಿಪ್ರಾ ಪಾಂಚಾಲಾಶ್ಚ ಯಶಸ್ವಿನಃ |
ಮಮ ಸೈನ್ಯೇಷು ಸಂರಬ್ಧಾ ವಿಚರಂತಿ ದವಾಗ್ನಿವತ್ ॥ 77 ॥
ಎಲೈ ಬ್ರಾಹ್ಮಣರೇ, ಈ ಸೋಮಕರು ಮತ್ತು ಕೀರ್ತಿವಂತರಾದ ಪಾಂಚಾಲರು ಕೋಪಗೊಂಡು ನನ್ನ ಸೈನ್ಯದಲ್ಲಿ ದಾವಾಗ್ನಿಯಂತೆ ಸಂಚರಿಸುತ್ತಿದ್ದಾರೆ.
ತಾನ್ ವಾರಯ ಮಹಾಬಾಹೋ ಕೇಕಯಾಂಶ್ಚ ನರೋತ್ತಮ |

ಪರಾಕುರ್ವಂತಿ ನಿಃಶೇಷಂ ರಕ್ಷ್ಯಮಾಣಾಃ ಕಿರೀಟಿನಾ ॥ 78 ॥
ಎಲ್ಲೈ ಮಹಾಬಾಹುಗಳೇ, ನರಶ್ರೇಷ್ಠರೇ, ಅವರನ್ನು ಮತ್ತು ಕೇಕಯರನ್ನು ನಿವಾರಿಸಿ. ಅರ್ಜುನನಿಂದ ರಕ್ಷಿಸಲ್ಪಡುವ ಅವರು ಯಾವ ಶೇಷವೂ ಉಳಿಯದಂತೆ ನಮ್ಮನ್ನು ನಿರಾಕರಿಸುತ್ತಿದ್ದಾರೆ.
ಆದೌ ವಾ ಯದಿ ವಾ ಪಶ್ಚಾತ್ತವೇದಂ ಕರ್ಮ ಮಾರಿಷ |
ತ್ವಮುತ್ಪನ್ನೋ ಮಹಾಬಾಹೋ ಪಾಂಚಾಲಾನಾಂ ವಧಂ ಪ್ರತಿ ॥ 79 ॥
ಎಲ್ಲೈ ಪೂಜ್ಯರೇ, ಇದು ಮೊದಲಿನ್ನಾಗಲೀ ಅಥವಾ ಕೊನೆಯಲ್ಲಾಗಲೀ ನೀವೇ ಮಾಡಬೇಕಾದ ಕಾರ್ಯ. ಎಲ್ಲೈ ಮಹಾಬಾಹುಗಳೇ, ನೀವು ಪಾಂಚಾಲರ ವಧೆಗಾಗಿಯೇ ಜನಿಸಿದ್ದೀರಿ.
ಕರಿಷ್ಯಸಿ ಜಗತ್ ಸರ್ವಮಪಾಂಚಾಲಂ ಕಿಲಾಚ್ಯುತ |
ಏವಂ ಸಿದ್ಧಾಬ್ರುವನ್ ವಾಚೋ ಭವಿಷ್ಯತಿ ಚ ತತ್ತಥಾ ॥ 80 ॥
ಎಲ್ಲೈ ಪರಾಕ್ರಮದಿಂದ ಚ್ಯುತರಾಗದವರೇ, ನೀವು ಜಗತ್ತನ್ನು ಪಾಂಚಾಲ ರಹಿತವನ್ನಾಗಿ ಮಾಡುವಿರಿ. ಹೀಗೆ ಸಿದ್ಧಪುರುಷರು ಹೇಳಿದ್ದಾರೆ. ಅವರ ಮಾತು ಹಾಗೆಯೇ ನಡೆಯುವುದು.
ನ ತೇಽಸ್ತ್ರಗೋಚರೇ ಶಕ್ತಾಃ ಸ್ಥಾತುಂ ದೇವಾಃ ಸವಾಸವಾಃ |
ಕಿಮು ಪಾರ್ಥಾಃ ಸಪಾಂಚಾಲಾಃ ಸತ್ಯಮೇತದ್ ವಚೋ ಮಮ ॥81॥
ಇಂದ್ರನಿಂದ ಸಹಿತರಾದ ದೇವತೆಗಳೂ ಸಹ ನಿಮ್ಮ ಅಸ್ತ್ರದ ವ್ಯಾಪ್ತಿಯಲ್ಲಿ ನಿಲ್ಲಲು ಸಾಧ್ಯವಿಲ್ಲ. ಇನ್ನು ಪಾಂಡವ ಸಹಿತರಾದ ಪಾಂಚಾಲರು ಹೇಗೆ ನಿಂತಾರು? ಈ ನನ್ನ ಮಾತು ಸತ್ಯವಾದುದು.
ನ ತ್ವಾಂ ಸಮರ್ಥಾ ಸಂಗ್ರಾಮೇ ಪಾಂಡವಾಃ ಸಹ ಸೋಮಕೈಃ |
ಬಲಾದ್ ಯೋಧಯಿತುಂ ವೀರ ಸತ್ಯಮೇತದ್ ಬ್ರವೀಮಿ ತೇ ॥ 82 ॥
ಎಲ್ಲೈ ವೀರರೇ, ಯುದ್ಧದಲ್ಲಿ ಪಾಂಡವರೂ ಮತ್ತು ಸೋಮಕರೂ ಸೇರಿ ನಿಮ್ಮ ಜೊತೆಯಲ್ಲಿ ತಮ್ಮ ಬಲದಿಂದ ಯುದ್ಧವನ್ನು ಮಾಡಲು ಸಮರ್ಥರಲ್ಲ. ಇದನ್ನು ಸತ್ಯವಾಗಿ ನಿಮಗೆ ಹೇಳುತ್ತಿದ್ದೇನೆ.
ಗಚ್ಛ ಗಚ್ಛ ಮಹಾಬಾಹೋ ನ ನಃ ಕಾಲಾತ್ಯಯೋ ಭವೇತ್ |
ಇಯಂ ಹಿ ದ್ರವತೇ ಸೇನಾ ಪಾರ್ಥಸಾಯಕಪೀಡಿತಾ ॥ 83 ॥
ಮಹಾಬಾಹುಗಳೇ, ಹೊರಡಿ, ಹೊರಡಿ. ನಮಗೆ ಕಾಲವು ಮೀರುವುದು ಬೇಡ. ಅರ್ಜುನನ ಬಾಣಗಳಿಂದ ಪೀಡಿತವಾದ ನಮ್ಮ ಈ ಸೇನೆಯು ಓಡಿಹೋಗುತ್ತಿದೆ.
ಶಕ್ತೋ ಹ್ಯಸಿ ಮಹಾಬಾಹೋ ದಿವ್ಯೇನ ಸ್ವೇನ ತೇಜಸಾ |
ನಿಗ್ರಹೇ ಪಾಂಡುಪುತ್ರಾಣಾಂ ಪಾಂಚಾಲಾನಾಂ ಚ ಮಾನದ ॥ 84 ॥
ಮಹಾಬಾಹುಗಳೇ, ಮಾನದರೇ, ನಿಮ್ಮ ದಿವ್ಯವಾದ ತೇಜಸ್ಸಿನಿಂದ ಪಾಂಡು ಪುತ್ರರನ್ನು ಮತ್ತು ಪಾಂಚಾಲರನ್ನು ನಿಗ್ರಹಿಸಲು ಸಮರ್ಥರಾಗಿದ್ದೀರಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತಾರನೆಯ ಅಧ್ಯಾಯ
ಅಶ್ವತ್ಥಾಮ ಮತ್ತು ಧೃಷ್ಟದ್ಯುಮ್ನರ ಯುದ್ಧ. ಅಶ್ವತ್ಥಾಮರ ಪರಾಕ್ರಮ.
ಸಂಜಯಃ
ದುರ್ಯೋಧನೇನೈವಮುಕ್ತೋ ದ್ರೌಣಿರಾಹವದುರ್ಮದಃ |
ಪ್ರತ್ಯುವಾಚ ಮಹಾಬಾಹೋ ಯಥಾ ವದಸಿ ಕೌರವ ॥ 1 ॥
ಪ್ರಿಯಾ ಹಿ ಪಾಂಡವಾ ನಿತ್ಯಂ ಮಮ ಚಾಪಿ ಪಿತುಶ್ಚ ಮೇ |
ತಥೈವಾವಾಂ ಪ್ರಿಯೌ ತೇಷಾಂ ನ ತು ಯುದ್ಧೇ ಕುರೂದ್ವಹ |
ಶಕ್ತಿತಸ್ತಾತ ಯುಧ್ಯಾಮಸ್ತ್ಯಕತ್ವಾ ಪ್ರಾಣಾನಭೀತವತ್ ॥ 2 ॥
ಸಂಜಯ ದುರ್ಯೋಧನನಿಂದ ಹೀಗೆ ಹೇಳಲ್ಪಟ್ಟ ಯುದ್ಧ ದುರ್ಮದರಾದ ಅಶ್ವತ್ಥಾಮರು ಅವನನ್ನು ಕುರಿತು- `ಮಹಾಬಾಹುವಾದ ಕೌರವನೇ, ನೀನು ಹೇಳುವಂತೆ ನನಗೂ ಮತ್ತು ನನ್ನ ತಂದೆಗೂ ಪಾಂಡವರು ಯಾವಾಗಲೂ ಪ್ರಿಯರಾದವರು. ಹಾಗೆ ನಾವಿಬ್ಬರೂ ಸಹ ಅವರಿಗೂ ಪ್ರಿಯರಾದವರು. ಆದರೆ ಯುದ್ಧದಲ್ಲಿ ಅಲ್ಲ. ಎಲ್ಲೈ ಪ್ರೀತಿಪಾತ್ರನೇ, ನಾವು ಪ್ರಾಣದ ಹಂಗನ್ನು ತೊರೆದು ನಿರ್ಭಯವಾಗಿ ನಮ್ಮ ಶಕ್ತಿ ಇದ್ದಷ್ಟು ಯುದ್ಧವನ್ನು ಮಾಡುತ್ತಿದ್ದೇವೆ.
ಅಹಂ ಕರ್ಣಶ್ಚ ಶಲ್ಯಶ್ಚ ಕೃಪೋ ಹಾರ್ದಿಕ್ಯ ಏವ ಚ |
ನಿಮೇಷಾತ್ ಪಾಂಡವೀಂ ಸೇನಾಂ ಕ್ಷಪಯೇಮ ನೃಪೋತ್ತಮ ॥ 3 ॥
ಎಲ್ಲೈ ರಾಜಶ್ರೇಷ್ಠನೇ, ನಾನು, ಕರ್ಣ, ಶಲ್ಯ, ಕೃಪ ಮತ್ತು ಕೃತವರ್ಮರು ಒಂದು ನಿಮಿಷದಲ್ಲಿ ಪಾಂಡವರ ಸೇನೆಯನ್ನು ನಾಶಮಾಡಲು ಸಮರ್ಥರು.
ತೇ ಚಾಪಿ ಕೌರವೀಂ ಸೇನಾಂ ನಿಮೇಷಾರ್ಧಾತ್ ಕುರೂದ್ವಹ |

ಕ್ಷಪಯೇಯುರ್ಮಹಾಬಾಹೋ ನ ಸ್ಯಾಮ ಯದಿ ಸಂಯುಗೇ ॥ 4 ॥
ಎಲೈ ಮಹಾಬಾಹುವೇ, ಕುರುಶ್ರೇಷ್ಠನೇ, ಅವರೂ ಸಹ ರಣರಂಗದಲ್ಲಿ ನಾವಿಲ್ಲದಿದ್ದರೆ ಅರ್ಧನಿಮಿಷದಲ್ಲಿ ಕೌರವ ಸೇನೆಯನ್ನು ನಾಶಮಾಡಿಯಾರು.
ಯುದ್ಧ್ಯತಾಂ ಪಾಂಡವಾನ್ ಶಕ್ತ್ಯಾ ತೇಷಾಂ ಚಾಸ್ಮಾನ್ ಯುಯುತ್ಸತಾಮ್|
ತೇಜಸ್ತು ತೇಜ ಆಸಾದ್ಯ ಪ್ರಶಮಂ ಯಾತಿ ಭಾರತ ॥ 5 ॥
ಎಲೈ ಭಾರತನೇ, ಪಾಂಡವರು ನಮ್ಮ ಜೊತೆಯಲ್ಲಿ ಮತ್ತು ನಾವು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಒಂದು ತೇಜಸ್ಸು ಇನ್ನೊಂದು ತೇಜಸ್ಸನ್ನು ಸಮೀಪಿಸಿ ಶಾಂತವಾಗುತ್ತಿದೆ.
ಅಶಕ್ಯಾ ತರಸಾ ಜೇತುಂ ಪಾಂಡವಾನಾಮನೀಕಿನೀ |
ಜೀವತ್ಸು ಪಾಂಡುಪುತ್ರೇಷು ತದ್ಧಿ ಸತ್ಯಂ ಬ್ರವೀಮಿ ತೇ ॥ 6 ॥
ಪಾಂಡವರು ಬದುಕಿರುವಾಗ ಪಾಂಡವರ ಸೇನೆಯನ್ನು ನಮ್ಮ ಸಾಮರ್ಥ್ಯದಿಂದ ಗೆಲ್ಲುವುದು ಅಶಕ್ಯವಾದುದು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ಆತ್ಮಾರ್ಥಂ ಯುದ್ಧ್ಯಮಾನಾಸ್ತೇ ಸಮರ್ಥಾಃ ಪಾಂಡುನಂದನಾಃ |
ಕಿಮರ್ಥಂ ತವ ಸೈನ್ಯಾನಿ ನ ಹನಿಷ್ಯಂತಿ ಭಾರತ ॥ 7 ॥
ಎಲೈ ಭಾರತನೇ, ತಮ್ಮ ಸಲುವಾಗಿ ಯುದ್ಧವನ್ನು ಮಾಡುತ್ತಿರುವ ಸಮರ್ಥರಾದ ಪಾಂಡುನಂದನರು ನಿನ್ನ ಸೈನ್ಯಗಳನ್ನು ಏಕೆ ನಾಶಮಾಡುವುದಿಲ್ಲ?
ತ್ವಂ ಹಿ ಲುಬ್ಧತಮೋ ರಾಜನ್ ನಿಕೃತಿಜ್ಞಶ್ಚ ಕೌರವ |
ಸರ್ವಾತಿಶಂಕೀ ಮಾನೀ ಚ ತತೋಽಸ್ಮಾನತಿಶಂಕಸೇ ॥ 8 ॥
ಎಲೈ ರಾಜನೇ, ಕೌರವನೇ, ನೀನು ಅತ್ಯಂತ ದುರಾಸೆಯುಳ್ಳವನು, ಮೋಸದ ಬುದ್ಧಿಯುಳ್ಳವನು, ಎಲ್ಲರನ್ನೂ ಶಂಕಿಸುವವನು. ಅಹಂಕಾರಭರಿತನು. ಆದ್ದರಿಂದ ನಮ್ಮನ್ನೂ ಶಂಕಿಸುತ್ತಿದ್ದೀಯೆ.
ಅಹಂ ತು ಯತ್ನಮಾಸ್ಥಾಯ ತ್ವದರ್ಥೇ ತ್ಯಕ್ತಜೀವಿತಃ |
ಏಷ ಗಚ್ಛಾಮಿ ಸಂಗ್ರಾಮಂ ತ್ವತ್ಕೃತೇ ಕುರುನಂದನ ॥ 9 ॥
ಎಲೈ ಕುರುನಂದನನೇ, ನಾನು ನಿನ್ನ ಸಲುವಾಗಿ ಪ್ರಾಣದ ಆಸೆಯನ್ನು ಬಿಟ್ಟು ಯತ್ನವನ್ನು ಆಶ್ರಯಿಸಿ ಈಗ ಸಂಗ್ರಾಮಕ್ಕೆ ಹೋಗುತ್ತಿದ್ದೇನೆ.
ಯೋತ್ಸ್ಯೇಽಹಂ ಶತ್ರುಭಿಃ ಸಾರ್ಧಂ ಜೇಷ್ಯಾಮಿ ಚ ವರಾನ್ ವರಾನ್|
ಪಾಂಚಲ್ಯೈಃ ಸಹ ಯೋತ್ಸ್ಯಾಮಿ ಸೋಮಕೈಃ ಕೇಕಯೈಸ್ತಥಾ |
ಪಾಂಡವೇಯೈಶ್ಚ ಸಂಗ್ರಾಮೇ ತ್ವತ್ಪ್ರಿಯಾರ್ಥಮರಿಂದಮ ॥ 10 ॥
ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿ ಶ್ರೇಷ್ಠರಾದವರನ್ನು ಆರಿಸಿ, ಆರಿಸಿ ಗೆಲ್ಲುವೆನು. ಎಲೈ ಅರಿಂದಮನೇ, ನಾನು ಪಾಂಚಾಲರ ಜೊತೆಯಲ್ಲಿಯೂ, ಸೋಮಕರ ಜೊತೆಯಲ್ಲಿಯೂ, ಕೇಕಯರ ಜೊತೆಯಲ್ಲಿಯೂ ಹಾಗೂ ಪಾಂಡವರ ಜೊತೆಯಲ್ಲಿಯೂ ನಿನಗೆ ಪ್ರಿಯವನ್ನು ಮಾಡಲು ಯುದ್ಧವನ್ನು ಮಾಡುವೆನು.
ಅದ್ಯ ಮದ್ಬಾಣನಿರ್ದಗ್ಧಾಃ ಪಾಂಚಾಲಾಃ ಸೋಮಕಾಸ್ತಥಾ |
ಸಿಂಹೇನೇವಾರ್ದಿತಾ ಗಾವೋ ವಿದ್ರವಿಷ್ಯಂತಿ ಸರ್ವತಃ ॥ 11 ॥
ಈ ದಿನ ಪಾಂಚಾಲರು ಮತ್ತು ಸೋಮಕರು ನನ್ನ ಬಾಣಗಳಿಂದ ದಹಿಸಲ್ಪಟ್ಟು ಸಿಂಹದಿಂದ ಪೀಡಿತವಾದ ಗೋವುಗಳಂತೆ ಎಲ್ಲ ಕಡೆಗಳಲ್ಲಿಯೂ ಓಡಿಹೋಗುವರು.
ಅದ್ಯ ಧರ್ಮಸುತೋ ರಾಜಾ ದೃಷ್ಟ್ವಾ ಮಮ ಪರಾಕ್ರಮಮ್ |
ಅಶ್ವತ್ಥಾಮಮಯಂ ಲೋಕಂ ಮಂಸ್ಯತೇ ಸಹ ಸೋಮಕೈಃ ॥ 12 ॥
ಈ ದಿನ ರಾಜನಾದ ಯುಧಿಷ್ಠಿರನು ನನ್ನ ಪರಾಕ್ರಮವನ್ನು ನೋಡಿ ಸೋಮಕರ ಜೊತೆಯಲ್ಲಿ ಲೋಕವೆಲ್ಲವೂ ಅಶ್ವತ್ಥಾಮಮಯವಾಗಿದೆ ಎಂದು ತಿಳಿಯುವನು.
ಆಗಮಿಷ್ಯತಿ ನಿರ್ವೇದಂ ಧರ್ಮಪುತ್ರೋ ಯುಧಿಷ್ಠಿರಃ |
ದೃಷ್ಟ್ವಾ ವಿನಿಹತಾನ್ ಸಂಖ್ಯೇ ಪಾಂಚಾಲಾನ್ ಸೋಮಕೈಃ ಸಹ ॥13॥
ಯುದ್ಧದಲ್ಲಿ ಸೋಮಕರು ಮತ್ತು ಪಾಂಚಾಲರು ಹತರಾದುದನ್ನು ನೋಡಿ ಧರ್ಮಪುತ್ರನಾದ ಯುಧಿಷ್ಠಿರನು ವೈರಾಗ್ಯವನ್ನು ಹೊಂದುವನು.
ಯೇ ಮಾಂ ಯುದ್ಧೇಽಭಿಯೋತ್ಸ್ಯಂತಿ ತಾನ್ ಹನಿಷ್ಯಾಮಿ ಭಾರತ |
ನ ಹಿ ತೇ ವೀರ ಮುಚ್ಯೇರನ್ ಮದ್ಬಾಹ್ವಂತರಮಾಗತಾಃ ॥ 14 ॥
ಎಲೈ ಭಾರತನೇ, ನನ್ನ ಜೊತೆಯಲ್ಲಿ ಯಾರು ಯುದ್ಧವನ್ನು ಮಾಡುವರೋ ಅವರನ್ನು ಕೊಲ್ಲುವೆನು. ಎಲೈ ವೀರನೇ, ನನ್ನ ಬಾಹುಗಳ ಮಧ್ಯದಲ್ಲಿ ಸಿಲುಕುವ ಯಾರೂ ನನ್ನಿಂದ ಬಿಡಿಸಿಕೊಳ್ಳಲಾರರು (ಎಂದು ಹೇಳಿದನು).
ಏವಮುಕ್ತತ್ವ ಮಹಾಬಾಹುಃ ಪುತ್ರಂ ದುರ್ಯೋಧನಂ ತವ |
ಅಭ್ಯವರ್ತತ ಯುದ್ಧಾಯ ದ್ರಾವಯನ್ ಸರ್ವಧನ್ವಿನಃ |
ಚಿಕೀರ್ಷುಸ್ತವ ಪುತ್ರಾಣಾಂ ಪ್ರಿಯಂ ಪ್ರಾಣಭೃತಾಂ ವರಃ ॥ 15 ॥
ಮಹಾಬಾಹುವಾದ ಅಶ್ವತ್ಥಾಮರು ನಿನ್ನ ಪುತ್ರನಾದ ದುರ್ಯೋಧನನನ್ನು ಕುರಿತು ಹೀಗೆ ಹೇಳಿ ಪ್ರಾಣವನ್ನು ಧರಿಸಿದವರಲ್ಲಿ ಶ್ರೇಷ್ಠರಾದ ಅವರು ನಿನ್ನ ಪುತ್ರನಿಗೆ ಪ್ರಿಯವನ್ನುಂಟು ಮಾಡಲು ಬಯಸಿ ಎಲ್ಲ ಧನುರ್ಧಾರಿಗಳನ್ನು ಓಡಿಸುತ್ತಾ ಯುದ್ಧಕ್ಕೆ

ಹೊರಟರು.
ತತೋಽಬ್ರುವೀತ್ ಸ ಕೈಕೇಯಾನ್ ಪಾಂಚಾಲಾನ್ ಗೌತಮೀಸುತಃ |
ಪ್ರಹರಧ್ವಮಿತಃ ಸರ್ವೇ ಮಮ ಗಾತ್ರೇ ಮಹಾರಥಾಃ |
ಸ್ಥಿರೀಭೂತಾಶ್ಚ ಯುಧ್ಯಧ್ವಂ ದರ್ಶಯಂತೋಽಸ್ತ್ರಲಾಘವಮ್ ॥ 16 ॥
ಆಗ ಗೌತಮೀಪುತ್ರರಾದ ಅವರು ಕೇಕಯರನ್ನೂ ಮತ್ತು ಪಾಂಚಾಲರನ್ನೂ ಕುರಿತು ಮಹಾರಥರಾದ ನೀವೆಲ್ಲರೂ ನನ್ನ ಶರೀರಕ್ಕೇ ಹೊಡೆಯಿರಿ. ನಿಮ್ಮ ಅಸ್ತ್ರ ಕೌಶಲಗಳನ್ನು ತೋರಿಸುತ್ತಾ ಸ್ಥಿರವಾಗಿ ನಿಂತು ಯುದ್ಧವನ್ನು ಮಾಡಿ ಎಂದು ಹೇಳಿದರು.
ಏವಮುಕ್ತಾಸ್ತು ತೇ ಸರ್ವೇ ಶಸ್ತ್ರವೃಷ್ಟಿಮಪಾತಯನ್ |
ದ್ರೌಣಿಂ ಪ್ರತಿ ಮಹಾರಾಜ ಜಲಂ ಜಲಧರಾ ಇವ ॥ 17 ॥
ಎಲೈ ಮಹಾರಾಜನೇ, ಹೀಗೆ ಹೇಳಲ್ಪಟ್ಟ ಅವರು ಮೋಡಗಳು ಮಳೆಯನ್ನು ಸುರಿಸುವಂತೆ ಅಶ್ವತ್ಥಾಮರ ಮೇಲೆ ಶಸ್ತ್ರಗಳ ಮಳೆಯನ್ನು ಸುರಿಸಿದರು.
ತಾನ್ ನಿಹತ್ಯ ಶರಾನ್ ದ್ರೌಣಿರ್ದಶ ವೀರಾನಪೋಥಯತ್ |
ಪ್ರಮುಖೇ ಪಾಂಡುಪುತ್ರಾಣಾಂ ಧೃಷ್ಟದ್ಯುಮ್ನಸ್ಯ ಚಾಭಿಭೋ ॥ 18 ॥
ಎಲೈ ಶತ್ರುಸಂಹಾರಕನೇ, ಅಶ್ವತ್ಥಾಮರು ಪಾಂಡವರ ಮತ್ತು ಧೃಷ್ಟದ್ಯುಮ್ನನ ಎದುರಿನಲ್ಲಿ ಅವರನ್ನು ಬಾಣಗಳಿಂದ ಹೊಡೆದು ಅವರ ಹತ್ತು ಜನ ವೀರರನ್ನು ನಾಶಗೊಳಿಸಿದರು.
ತೇ ಹನ್ಯಮಾನಾಃ ಸಮರೇ ಪಾಂಚಾಲಾಃ ಸೃಂಜಯಾಸ್ತಥಾ |
ಪರಿತ್ಯಜ್ಯ ರಣೇ ದ್ರೌಣಿಂ ವ್ಯದ್ರವಂತ ದಿಶೋ ದಶ ॥ 19 ॥
ಯುದ್ಧದಲ್ಲಿ ಅಶ್ವತ್ಥಾಮರಿಂದ ಹೊಡೆಯಲ್ಪಡುತ್ತಿದ್ದ ಪಾಂಚಾಲರೂ ಮತ್ತು ಸೃಂಜಯರೂ ರಣರಂಗವನ್ನು ಬಿಟ್ಟು ಹತ್ತುದಿಕ್ಕುಗಳಿಗೆ ಓಡಿಹೋದರು.
ತಾನ್ ದೃಷ್ಟ್ವಾ ದ್ರವತಃ ಶೂರಾನ್ ಪಾಂಚಲಾನ್ ಸಹಸೋಮಕಾನ್ |
ಧೃಷ್ಟದ್ಯುಮ್ನೋ ಮಹಾರಾಜ ದ್ರೌಣಿಮಭ್ಯದ್ರವದ್ ಯುಧಿ ॥ 20 ॥
ಎಲೈ ಮಹಾರಾಜನೇ, ಶೂರರಾದ ಪಾಂಚಾಲರು ಸೋಮಕರ ಜೊತೆಯಲ್ಲಿ ಓಡಿಹೋಗುತಿತರುವುದನ್ನು ನೋಡಿ ರಣರಂಗದಲ್ಲಿ ಧೃಷ್ಟದ್ಯುಮ್ನನು ಅಶ್ವತ್ಥಾಮರ ಕಡೆಗೆ ಧಾವಿಸಿದನು.
ತತಃ ಕಾಂಚನಚಿತ್ರಾಣಾಂ ಸಜಲಾಂಬುದನಾದಿನಾಮ್ |
ವೃತಃ ಶತೇನ ಶೂರಾಣಾಂ ರಥಾನಾಮನಿವರ್ತಿನಾಮ್ ॥ 21 ॥
ಪುತ್ರಃ ಪಾಂಚಾಲರಾಜಸ್ಯ ಧೃಷ್ಟದ್ಯುಮ್ನೋ ಮಹಾರಥಃ |
ದ್ರೌಣಿಮಿತ್ಯಬ್ರವೀದ್ವಾಕ್ಯಂ ದೃಷ್ಟ್ವಾ ಯೋಧಾನ್ನಿಪಾತಿತಾನ್ ॥ 22 ॥
ಆಚಾರ್ಯಪುತ್ರ ದುರ್ಬುದ್ಧೇ ಕಿಮನ್ಯೈರ್ನಿಹತೈಸ್ತವ |
ಸಮಾಗಚ್ಛ ಮಯಾ ಸಾರ್ಧಂ ಯದಿ ಶೂರೋಽಸಿ ಸಂಯುಗೇ |
ಅಹಂ ತ್ವಾಂ ನಿಹನಿಷ್ಯಾಮಿ ತಿಷ್ಠೇದಾನೀಂ ಮಮಾಗ್ರತಃ ॥ 23 ॥
ಆಗ ಸುವರ್ಣಮಯವಾದ ವಿಚಿತ್ರವಾದ ಕವಚವನ್ನು ಧರಿಸಿದ, ಜಲಸಹಿತವಾದ ಮೇಘಗಳ ಘೋಷವನ್ನು ಹೊಂದಿದ, ಯುದ್ಧದಲ್ಲಿ ಹಿಮ್ಮೆಟ್ಟದಿರುವ, ಶೂರರಾದ ನೂರು ಮಹಾರಥರಿಂದ ಪರಿವೃತನಾಗಿ ಪಾಂಚಾಲರಾಜನ ಪುತ್ರನೂ, ಮಹಾರಥನೂ ಆದ ಧೃಷ್ಟದ್ಯುಮ್ನನು ತನ್ನ ಯೋಧರು ಕೆಳಗೆ ಬೀಳುತ್ತಿರುವುದನ್ನು ನೋಡಿ ಅಶ್ವತ್ಥಾಮರನ್ನು ಕುರಿತು- `ಆಚಾರ್ಯಪುತ್ರನೇ, ದುರ್ಬುದ್ಧಿಯೇ, ಬೇರೆಯವರನ್ನು ಕೊಂದು ನಿನಗೆ ಏನು ಪ್ರಯೋಜನ? ನೀನು ಶೂರನಾಗಿದ್ದರೆ ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡು. ನನ್ನ ಎದುರಿಗೆ ನಿಲ್ಲು. ಈಗ ನಾನು ನಿನ್ನನ್ನು ಕೊಲ್ಲುವೆನು' ಎಂದು ಹೇಳಿದನು.
ತತಸ್ತಮಾಚಾರ್ಯಸುತಂ ಧೃಷ್ಟದ್ಯುಮ್ನಃ ಪ್ರತಾಪವಾನ್ |
ಮರ್ಮಭಿದ್ಭಿಃ ಶರೈಸ್ತೀಕ್ಷ್ಣೈರ್ಜಘಾನ ಭರತರ್ಷಭ ॥ 24 ॥
ಎಲೈ ಭರತಶ್ರೇಷ್ಠನೇ, ಅನಂತರ ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನು ಆಚಾರ್ಯ ಪುತ್ರರಾದ ಅಶ್ವತ್ಥಾಮರನ್ನು ಮರ್ಮಭೇದಕವಾದ ತೀಕ್ಷ್ಣವಾದ ಬಾಣಗಳಿಂದ ಹೊಡೆದನು.
ತೇ ತು ಪಂಕ್ತೀಕೃತಾ ದ್ರೌಣಿಂ ಶರಾ ವಿವಿಶುರಾಶುಗಾಃ |
ರುಗ್ಮಪುಂಖಾಃ ಪ್ರಸನ್ನಾಗ್ರಾಃ ಸರ್ವಕಾಯಾವದಾರಣಾಃ |
ಮಧ್ವರ್ಥಿನ ಇವೋದ್ದಾಮಾ ಭ್ರಮರಾಃ ಪುಷ್ಪಿತಂ ದ್ರುಮಮ್ ॥ 25 ॥
ಸುವರ್ಣಮಯವಾದ ಪುಂಖವನ್ನು ಹೊಂದಿದ, ನಿಶಿತವಾದ ಅಗ್ರಭಾಗವನ್ನು ಹೊಂದಿದ, ಎಲ್ಲ ಶರೀರವನ್ನೂ ಭೇದಿಸುವ, ಪಂಕ್ತಿಯಲ್ಲಿ ಚಲಿಸುವ, ಶೀಘ್ರಗಾಮಿಗಳಾದ ಆ ಬಾಣಗಳು ಮಕರಂದವನ್ನು ಬಯಸುವ ಶ್ರೇಷ್ಠವಾದ ಭ್ರಮರಗಳು ಪುಷ್ಪ ಸಹಿತವಾದ ವೃಕ್ಷವನ್ನು ಪ್ರವೇಶಿಸುವಂತೆ ಅಶ್ವತ್ಥಾಮರ ಶರೀರವನ್ನು ಪ್ರವೇಶಿಸಿದವು.
ಸೋಽತಿವಿದ್ಧೋ ಭೃಶಂ ಕ್ರುದ್ಧಃ ಪದಾಕ್ರಾಂತ ಇವೋರಗಃ |
ಮಾನೀ ದ್ರೌಣಿರಸಂಭ್ರಾಂತೋ ಬಾಣಪಾಣಿರಭಾಷತ ॥ 26 ॥
ಧೃಷ್ಟದ್ಯುಮ್ನ ಸ್ಥಿರೋ ಭೂತ್ವಾ ಮುಹೂರ್ತಂ ಪ್ರತಿಪಾಲಯ |
ಯಾವತ್ ತ್ವಾಂ ನಿಶಿತೈರ್ಬಾಣೈಃ ಪ್ರೇಷಯಾಮಿ ಯಮಕ್ಷಯಮ್ ॥27॥
ಬಾಣಗಳಿಂದ ಗಾಢವಾಗಿ ಹೊಡೆಯಲ್ಪಟ್ಟ, ಆತ್ಮಾಭಿಮಾನವುಳ್ಳವರಾದ ಅಶ್ವತ್ಥಾಮರು ಕಾಲಿನಿಂದ ತುಳಿದ ಸರ್ಪದಂತೆ ಬಹಳ ಕೋಪಗೊಂಡು ಗಾಬರಿಗೊಳ್ಳದೆ ಕೈಯಲ್ಲಿ ಬಾಣವನ್ನು ಹಿಡಿದು- `ಎಲೈ ಧೃಷ್ಟದ್ಯುಮ್ನನೇ, ಸ್ಥಿರವಾಗಿ ನಿಂತು ಒಂದು

ಮುಹೂರ್ತದವರೆಗೆ ನೋಡು. ಅಷ್ಟರಲ್ಲಿ ನಾನು ನಿನ್ನನ್ನು ನನ್ನ ಬಾಣಗಳಿಂದ ಯಮಲೋಕಕ್ಕೆ ಕಳುಹಿಸುತ್ತೇನೆ' ಎಂದು ಹೇಳಿದರು.

ದ್ರೌಣಿರೇವಮಥಾಭಾಷ್ಯ ಪಾರ್ಷತಂ ಪರವೀರಹಾ |
ಛಾದಯಾಮಾಸ ಬಾಣೌಘೈಃ ಸಮಂತಾಲ್ಲಘುಹಸ್ತವತ್ ॥ 28 ॥
ಪರವೀರಘಾತಕರಾದ ಅಶ್ವತ್ಥಾಮರು ಧೃಷ್ಟದ್ಯುಮ್ನನನ್ನು ಕುರಿತು ಹೀಗೆ ಮಾತನಾಡಿ ಕ್ಷಿಪ್ರಹಸ್ತರಾಗಿ ತಮ್ಮ ಬಾಣಗಳ ಸಮೂಹದಿಂದ ಅವನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದರು.
ಸ ಛಾದ್ಯಮಾನಃ ಸಮರೇ ದ್ರೌಣಿನಾ ಯುದ್ಧದುರ್ಮದಃ |
ದ್ರೌಣಿಂ ಪಾಂಚಾಲತನಯೋ ವಾಗ್ಭಿರಾತರ್ಜಯತ್ ತದಾ ॥ 29 ॥
ಅಶ್ವತ್ಥಾಮರಿಂದ ಯುದ್ಧದಲ್ಲಿ ಹೀಗೆ ಆಚ್ಛಾದಿಸಲ್ಪಟ್ಟ ಯುದ್ಧದುರ್ಮದನಾದ, ಪಾಂಚಾಲಪುತ್ರನಾದ ಧೃಷ್ಟದ್ಯುಮ್ನನು ಅಶ್ವತ್ಥಾಮರನ್ನು ತನ್ನ ಮಾತುಗಳಿಂದ ಹೆದರಿಸಿದನು.
ಧೃಷ್ಟದ್ಯುಮ್ನಃ
ನ ಜಾನೀಷೇ ಪ್ರತಿಜ್ಞಾಂ ಮೇ ವಿಪ್ರೋತ್ಪತ್ತಿಂ ತಥೈವ ಚ |
ದ್ರೋಣಂ ಹತ್ವಾ ಕಿಲ ಮಯಾ ಹಂತವ್ಯಸ್ತ್ವಂ ಸುದುರ್ಮತೇ |
ತತಸ್ತ್ವಾಹಂ ನ ಹನ್ಮ್ಯದ್ಯ ದ್ರೋಣೇ ಜೀವತಿ ಸಂಯುಗೇ ॥ 30 ॥
ಧೃಷ್ಟದ್ಯುಮ್ನ ಎಲೈ ವಿಪ್ರನೇ, ಅತ್ಯಂತ ದುರ್ಬುದ್ಧಿಯುಳ್ಳವನೇ, ನೀನು ನನ್ನ ಉತ್ಪತ್ತಿಯನ್ನಾಗಲೀ ಅಥವಾ ಪ್ರತಿಜ್ಞೆಯನ್ನಾಗಲೀ ತಿಳಿದಿಲ್ಲ. ದ್ರೋಣರನ್ನು ಕೊಂದು ಅನಂತರ ನಾನು ನಿನ್ನನ್ನು ಕೊಲ್ಲಬೇಕಷ್ಟೆ? ಆದ್ದರಿಂದ ಈ ದಿನ ದ್ರೋಣರು ಬದುಕಿರುವಾಗ ನಿನ್ನನ್ನು ಕೊಲ್ಲುವುದಿಲ್ಲ.
ಇಮಾಂ ತು ರಜನೀಂ ಪ್ರಾಪ್ತಾಮಪ್ರಭಾತಾಂ ಸುದುರ್ಮತೇ |
ನಿಹತ್ಯ ಪಿತರಂ ತೇಽದ್ಯ ತತಸ್ತ್ವಾಮಪಿ ಸಂಯುಗೇ |
ನೇಷ್ಯಾಮಿ ಮೃತ್ಯುಲೋಕಾಯೇತ್ಯೇವಂ ಮೇ ಮನಸಿ ಸ್ಥಿತಮ್ ॥ 31 ॥
ಎಲೈ ಅತ್ಯಂತ ದುರ್ಬುದ್ಧಿಯುಳ್ಳವನೇ, ಈ ರಾತ್ರಿಯು ಕಳೆದು ಬೆಳಗಾಗುವುದಕ್ಕಿಂತ ಮೊದಲೇ ನಿನ್ನ ತಂದೆಯನ್ನು ಕೊಂದು ಯುದ್ಧದಲ್ಲಿ ನಿನ್ನನ್ನೂ ಕೊಲ್ಲುತ್ತೇನೆ. (ನಿನ್ನನ್ನೂ ಕೊಂದು ಮೃತ್ಯುಲೋಕಕ್ಕೆ ಕಳುಹಿಸುವೆನೆಂದು ನನ್ನ ಅಭಿಪ್ರಾಯವಿದೆ).
ಯಸ್ತೇ ಪಾರ್ಥೇಷು ವಿದ್ವೇಷೋ ಯಾ ಭಕ್ತಿಃ ಕೌರವೇಷು ಚ |
ತಾಂ ದರ್ಶಯ ಸ್ಥಿರೋ ಭೂತ್ವಾ ನ ಮೇ ಜೀವನ್ ವಿಮೋಕ್ಷ್ಯಸೇ ॥
ನಿನಗೆ ಪಾಂಡವರಲ್ಲಿ ಯಾವ ದ್ವೇಷವಿದೆಯೋ, ಕೌರವರಲ್ಲಿ ಯಾವ ಭಕ್ತಿ ಇದೆಯೋ ಅದನ್ನು ಯುದ್ಧದಲ್ಲಿ ಸ್ಥಿರವಾಗಿ ನಿಂತು ಪ್ರದರ್ಶಿಸು. ನೀನು ಈ ದಿನ ಬದುಕಿ ನನ್ನಿಂದ ಬಿಡಿಸಿಕೊಂಡು ಹೋಗುವುದಿಲ್ಲ.
ಯೋ ಹಿ ಬ್ರಾಹ್ಮಣ್ಯಮುತ್ಸೃಜ್ಯ ಕ್ಷತ್ರಧರ್ಮರತೋ ದ್ವಿಜಃ |
ಸ ವಧ್ಯಃ ಸರ್ವಲೋಕಸ್ಯ ಯಥಾ ತ್ವಂ ಪುರುಷಾಧಮ ॥ 33 ॥
ಎಲೈ ಪುರುಷಾಧಮನೇ, ಯಾವ ಬ್ರಾಹ್ಮಣನು ಬ್ರಾಹ್ಮಣ್ಯವನ್ನು ಬಿಟ್ಟು ಕ್ಷತ್ರಿಯ ಧರ್ಮದಲ್ಲಿ ನಿರತನಾಗಿರುತ್ತಾನೆಯೋ ಅವನು ನಿನ್ನಂತೆ ಸರ್ವಲೋಕಗಳಿಗೂ ವಧ್ಯನಾದವನು (ಎಂದು ಹೇಳಿದನು).
ಇತ್ಯುಕ್ತಃ ಪರುಷಂ ವಾಕ್ಯಂ ಪಾರ್ಷತೇನ ದ್ವಿಜೋತ್ತಮಃ |
ಕ್ರೋಧಮಾಹಾರಯತ್ ತೀವ್ರಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 34 ॥
ಹೀಗೆ ಧೃಷ್ಟದ್ಯುಮ್ನನಿಂದ ಉಗ್ರವಾದ ಮಾತುಗಳನ್ನು ಕೇಳಿ ದ್ವಿಜಶ್ರೇಷ್ಠರಾದ ಅಶ್ವತ್ಥಾಮರು ತೀವ್ರವಾಗಿ ಕೋಪವನ್ನು ತಂದುಕೊಂಡು ಅವನನ್ನು ಕುರಿತು `ನಿಲ್ಲು, ನಿಲ್ಲು' ಎಂದು ಹೇಳಿದರು.
ನಿರ್ದಹನ್ನಿವ ಚಕ್ಷುರ್ಭ್ಯಾಂ ಪಾರ್ಷತಂ ಸೋಽಭ್ಯವೈಕ್ಷತ |
ಛಾದಯಾಮಾಸ ಚ ಶರೈರ್ನಿಃಶ್ವಸನ್ ಪನ್ನಗೋ ಯಥಾ ॥ 35 ॥
ತಮ್ಮ ಕಣ್ಣುಗಳಿಂದ ಸುಟ್ಟುಬಿಡುವವರಂತೆ ಅವರು ಧೃಷ್ಟದ್ಯುಮ್ನನನ್ನು ನೋಡಿದರು. ಗಟ್ಟಿಯಾಗಿ ಉಸಿರಾಡುವ ಸರ್ಪದಂತಿದ್ದ ಅವರು ಧೃಷ್ಟದ್ಯುಮ್ನನನ್ನು ಬಾಣಗಳಿಂದ ಮುಚ್ಚಿಹಾಕಿದರು.
ಸ ಛಾದ್ಯಮಾನಃ ಸಮರೇ ದ್ರೌಣಿನಾ ರಾಜಸತ್ತಮ |
ಸರ್ವಪಾಂಚಾಲಸೇನಾಭಿಃ ಸಂವೃತೋ ರಥಸತ್ತಮಃ ॥ 36 ॥
ನಾಕಂಪತ ಮಹಾಬಾಹುಃ ಸ್ವಧೈರ್ಯಂ ಸಮುಪಾಶ್ರಿತಃ |
ಸಾಯಕಾಂಶ್ಚೈವ ವಿವಿಧಾನಶ್ವತ್ಥಾಮ್ನಿ ಮುಮೋಚ ಹ ॥ 37 ॥
ಎಲೈ ರಾಜಶ್ರೇಷ್ಠನೇ, ಯುದ್ಧದಲ್ಲಿ ಬಾಣಗಳಿಂದ ಹೀಗೆ ಆಚ್ಛಾದಿಸಲ್ಪಟ್ಟ ಸರ್ವ ಪಾಂಚಾಲಸೇನೆಯಿಂದ ಕೂಡಿದ, ರಥಶ್ರೇಷ್ಠನಾದ ಧೃಷ್ಟದ್ಯುಮ್ನನು ಹೆದರಲಿಲ್ಲ. ಮಹಾಬಾಹುವಾದ ಅವನು ತನ್ನ ಧೈರ್ಯವನ್ನು ಅವಲಂಬಿಸಿ ಅಶ್ವತ್ಥಾಮರ ಮೇಲೆ ಅನೇಕ ವಿಧವಾದ ಬಾಣಗಳನ್ನು ಪ್ರಯೋಗಿಸಿದನು.
ತೌ ಪುನಃ ಸನ್ನ್ಯವರ್ತೇತಾಂ ಪ್ರಾಣದ್ಯೂತಪರೇ ರಣೇ |
ನಿವಾರಯಂತೌ ಬಾಣೌಘೈಃ ಪರಸ್ಪರಮಮರ್ಷಿಣೌ |
ಉತ್ಸೃಜಂತೌ ಮಹೇಷ್ವಾಸೌ ಶರವೃಷ್ಟೀಃ ಸಮಂತತಃ ॥ 38 ॥
ಪ್ರಾಣದ್ಯೂತ ಉಳ್ಳ ಆ ಯುದ್ಧದಲ್ಲಿ ಮಹಾಧನುರ್ಧಾರಿಗಳಾದ ಅವರು ಪರಸ್ಪರವಾಗಿ ಕೋಪಗೊಂಡು ತಮ್ಮ ಬಾಣಗಳ ಸಮೂಹಗಳಿಂದ ಪರಸ್ಪರವಾಗಿ ಒಬ್ಬರನ್ನೊಬ್ಬರು ತಡೆಯುತ್ತಾ ಎಲ್ಲ ಕಡೆಗಳಲ್ಲಿಯೂ ಬಾಣಗಳ ಮಳೆಯನ್ನು ಸುರಿಸುತ್ತಾ ಪುನಃ

ಒಬ್ಬರನ್ನೊಬ್ಬರು ಎದುರಿಸಿದರು.
ದ್ರೌಣಿಪಾರ್ಷತಯೋರ್ಯುದ್ಧಂ ಘೋರರೂಪಂ ಭಯಾನಕಮ್ |
ದೃಷ್ಟ್ವಾ ಸಂಪೂಜಯಾಮಾಸುಃ ಸಿದ್ಧಚಾರಣವಾತಿಕಾಃ ॥ 39 ॥
ಘೋರರೂಪವೂ, ಭಯಂಕರವೂ ಆದ ಅಶ್ವತ್ಥಾಮ-ಧೃಷ್ಟದ್ಯುಮ್ನರಿಬ್ಬರ ಯುದ್ಧವನ್ನು ನೋಡಿ ಸಿದ್ಧ-ಚಾರಣಾದಿ ಆಕಾಶ ಸಂಚಾರಿಗಳು ಅದನ್ನು ಪೂಜಿಸಿದರು.
ಶರೌಘೈಃ ಪೂರಯಂತೌ ತಾವಾಕಾಶಂ ಪ್ರದಿಶಸ್ತಥಾ |
ಅಲಕ್ಷ್ಯೌ ಸಮಯುದ್ಧ್ಯೇತಾಂ ಮಹತ್ ಕೃತ್ವಾ ಶರೈಸ್ತಮಃ ॥ 40 ॥
ಅವರಿಬ್ಬರೂ ಆಕಾಶವನ್ನೂ ಮತ್ತು ದಿಕ್ಕುಗಳನ್ನೂ ಬಾಣಗಳ ಸಮೂಹದಿಂದ ತುಂಬುತ್ತಾ ಬಾಣಗಳಿಂದ ದೊಡ್ಡ ಕತ್ತಲೆಯನ್ನು ಸೃಷ್ಟಿಸಿ ಒಬ್ಬರಿಗೊಬ್ಬರು ಕಾಣದೆ ಯುದ್ಧವನ್ನು ಮಾಡಿದರು.
ನೃತ್ಯಮಾನಾವಿವ ರಣೇ ಮಂಡಲೀಕೃತಕಾರ್ಮುಕೌ |
ಪರಸ್ಪರವಧೇ ಯತ್ತೌ ಪರಸ್ಪರಜಯೈಷಿಣೌ ॥ 41 ॥
ಅಯುದ್ಧ್ಯೇತಾಂ ಮಹಾಬಾಹೂ ಚಿತ್ರಂ ಲಘು ಚ ಸುಷ್ಠು ಚ |
ಸಂಪೂಜ್ಯಮಾನೌ ಸಮರೇ ಯೋಧಮುಖ್ಯೈಃ ಸಹಸ್ರಶಃ ॥ 42 ॥
ಮಹಾಬಾಹುಗಳಾದ ಅವರಿಬ್ಬರೂ ರಣರಂಗದಲ್ಲಿ ನರ್ತನವನ್ನು ಮಾಡುವವರಂತೆ ಪರಸ್ಪರ ವಧೆಯನ್ನು ಮಾಡುವುದರಲ್ಲಿ ಪ್ರಯತ್ನಶೀಲರಾಗಿ, ಪರಸ್ಪರ ಜಯವನ್ನು ಬಯಸಿ ತಮ್ಮ ಧನುಸ್ಸುಗಳನ್ನು ಮಂಡಲಾಕಾರವಾಗಿ ಮಾಡಿ ವಿಚಿತ್ರವಾಗಿ, ಶೀಘ್ರವಾಗಿ ಮತ್ತು ಚೆನ್ನಾಗಿ ಯುದ್ಧವನ್ನು ಮಾಡಿದರು. ಸಹಸ್ರಾರು ಯೋಧ ಮುಖ್ಯರಿಂದ ಪೂಜಿಸಲ್ಪಟ್ಟವರಾಗಿ ಅವರು ಯುದ್ಧವನ್ನು ಮಾಡಿದರು.
ತೌ ಪ್ರಯುದ್ಧೌ ರಣೇ ದೃಷ್ಟ್ವಾ ವನೇ ವನ್ಯೌ ಗಜಾವಿವ |
ಉಭಯೋಃ ಸೇನಯೋರ್ಹರ್ಷಸ್ತುಮುಲಃ ಸಮಪದ್ಯತ ॥ 43 ॥
ಕಾಡಿನಲ್ಲಿ ವನಗಜಗಳಂತೆ ರಣರಂಗದಲ್ಲಿ ಅವರಿಬ್ಬರೂ ಯುದ್ಧ ಮಾಡುವುದನ್ನು ನೋಡಿ ಎರಡು ಸೈನ್ಯಗಳಿಗೂ ತೀವ್ರವಾದ ಹರ್ಷವುಂಟಾಯಿತು.
ಸಿಂಹನಾದರವಾಶ್ಚಾಸನ್ ದಧ್ಮುಃ ಶಂಖಾಂಶ್ಚ ಮಾರಿಷ |
ವಾದಿತ್ರಾಣ್ಯಭ್ಯವಾದ್ಯಂತ ಶತಶೋಽಥ ಸಹಸ್ರಶಃ ॥ 44 ॥
ಎಲೈ ಶ್ರೇಷ್ಠನೇ, ಯೋಧರು ಸಿಂಹನಾದವನ್ನು ಮಾಡಿದರು. ಶಂಖಗಳನ್ನು ಊದಿದರು. ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ರಣವಾದ್ಯಗಳನ್ನು ಮೊಳಗಿಸಿದರು.
ತಸ್ಮಿಂಸ್ತು ತುಮುಲೇ ಯುದ್ಧೇ ಭೀರೂಣಾಂ ಭಯವರ್ಧನೇ |
ಮುಹೂರ್ತಮಿವ ತದ್ ಯುದ್ಧಂ ಸಮರೂಪಂ ತದಾಭವತ್ ॥ 45 ॥
ಹೇಡಿಗಳಿಗೆ ಭಯವನ್ನುಂಟು ಮಾಡುವ ಆ ಯುದ್ಧವು ಒಂದು ಮುಹೂರ್ತದ ಕಾಲ ಸಮವಾಗಿ ಕಂಡುಬಂದಿತು.
ತತೋ ದ್ರೌಣಿರ್ಮಹಾರಾಜ ಪಾರ್ಷತಸ್ಯ ಮಹಾತ್ಮನಃ |
ಧ್ವಜಂ ಧನುಸ್ತಥಾ ಛತ್ರಮುಭೌ ಚ ಪಾರ್ಷ್ಣಿಸಾರಥೀ |
ಸೂತಮಶ್ವಾಂಶ್ಚ ಚತುರೋ ನಿಹತ್ಯಾಭ್ಯದ್ರವದ್ ರಣೇ ॥ 46 ॥
ಎಲೈ ಮಹಾರಾಜನೇ, ಅನಂತರ ಅಶ್ವತ್ಥಾಮರು ಮಹಾತ್ಮನಾದ ಧೃಷ್ಟದ್ಯುಮ್ನನ ಧ್ವಜವನ್ನೂ, ಧನುಸ್ಸನ್ನೂ ಮತ್ತು ಛತ್ರವನ್ನೂ ಹಾಗೂ ಇಬ್ಬರು ಪಾರ್ಷ್ಣಿಸಾರಥಿಗಳನ್ನೂ, ಸೂತನನ್ನೂ, ನಾಲ್ಕು ಅಶ್ವಗಳನ್ನೂ ಕೊಂದು ರಣರಂಗದಲ್ಲಿ ಅವನ ಕಡೆಗೆ ಧಾವಿಸಿದರು.
ಪಾಂಚಾಲಾಂಶ್ಚೈವ ತಾನ್ ಸರ್ವಾನ್ ಬಾಣೈಃ ಸನ್ನತಪರ್ವಭಿಃ |
ವ್ಯದ್ರಾವಯದಮೇಯಾತ್ಮಾ ಶತಶೋಽಥ ಸಹಸ್ರಶಃ ॥ 47 ॥
ಅತ್ಯಂತ ಸಾಮರ್ಥ್ಯವುಳ್ಳ ಅವರು ಬಾಗಿದ ತುದಿಯುಳ್ಳ ಬಾಣಗಳಿಂದ ಆ ಎಲ್ಲ ಪಾಂಚಾಲರನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಓಡಿಸಿದರು.
ತತಃ ಪ್ರವಿವ್ಯಥೇ ಸೇನಾ ಪಾಂಡವೀ ಭರತರ್ಷಭ |
ದೃಷ್ಟ್ವಾ ದ್ರೌಣೇರ್ಮಹತ್ಕರ್ಮ ವಾಸವಸ್ಯೇವ ಸಂಯುಗೇ ॥ 48 ॥
ಎಲೈ ಭರತಶ್ರೇಷ್ಠನೇ, ಆಗ ಯುದ್ಧದಲ್ಲಿ ಇಂದ್ರನ ಕರ್ಮಕ್ಕೆ ಸಮಾನವಾದ ಅಶ್ವತ್ಥಾಮರ ಮಹಾಕರ್ಮವನ್ನು ನೋಡಿ ಪಾಂಡವರ ಸೇನೆಯು ಬಹಳ ವ್ಯಥೆಗೊಂಡಿತು.
ಶತೇನ ಚ ಶತಂ ಹತ್ವಾ ಪಾಂಚಾಲಾನಾಂ ಮಹಾರಥಃ |
ತ್ರಿಭಿಶ್ಚ ನಿಶಿತೈರ್ಬಾಣೈರ್ಹತ್ವಾ ತ್ರೀನ್ ವೈ ಮಹಾರಥಾನ್ ॥ 49 ॥
ದ್ರೌಣಿರ್ದ್ರುಪದಪುತ್ರಸ್ಯ ಫಲ್ಗುನಸ್ಯ ಚ ಪಶ್ಯತಃ |
ನಾಶಯಾಮಾಸ ಪಾಂಚಾಲಾನ್ ಭೂಯಿಷ್ಠಂ ಯೇ ವ್ಯವಸ್ಥಿತಾಃ ॥50॥
ಮಹಾರಥರಾದ ಅಶ್ವತ್ಥಾಮರು ನೂರು ಬಾಣಗಳಿಂದ ಪಾಂಚಾಲರ ನೂರು ಯೋಧರನ್ನು ಕೊಂದು ಮೂರು ತೀಕ್ಷ್ಣವಾದ ಬಾಣಗಳಿಂದ ಮೂರು ಮಹಾರಥರನ್ನು ಕೊಂದರು. ಧೃಷ್ಟದ್ಯುಮ್ನ ಮತ್ತು ಅರ್ಜುನನು ನೋಡುತ್ತಿರುವಂತೆಯೇ ರಣರಂಗದಲ್ಲಿ ನಿಂತ ಹೆಚ್ಚಿನ ಸಂಖ್ಯೆಯ ಪಾಂಚಾಲರನ್ನು ನಾಶಗೊಳಿಸಿದರು.
ತೇ ವಧ್ಯಮಾನಾಃ ಪಾಂಚಾಲಾಃ ಸಮರೇ ಸಹ ಸೃಂಜಯೈಃ |

ಅಗಚ್ಛನ್ ದ್ರೌಣಿಮುತ್ಸೃಜ್ಯ ವಿಪ್ರಕೀರ್ಣರಥಧ್ವಜಾಃ ॥ 51 ॥
ರಣರಂಗದಲ್ಲಿ ಅಶ್ವತ್ಥಾಮರಿಂದ ಹೊಡೆಯಲ್ಪಟ್ಟ ಪಾಂಚಾಲರೂ ಮತ್ತು ಸೃಂಜಯರೂ ಅಶ್ವತ್ಥಾಮರನ್ನು ಬಿಟ್ಟು ತಮ್ಮ ರಥಗಳನ್ನೂ, ಧ್ವಜಗಳನ್ನೂ ಬಿಟ್ಟು ಓಡಿಹೋದರು.
ಸ ಜಿತ್ವಾ ಸಮರೇ ಶತ್ರೂನ್ ದ್ರೋಣಪುತ್ರೋ ಮಹಾರಥಃ |
ನನಾದ ಸುಮಹಾನಾದಂ ತಪಾಂತೇ ಜಲದೋ ಯಥಾ ॥ 52 ॥
ಮಹಾರಥರಾದ ದ್ರೋಣಪುತ್ರರಾದ ಅಶ್ವತ್ಥಾಮರು ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಬೇಸಿಗೆಯು ಕಳೆದ ಮೇಲೆ ಮಳೆಗಾಲದಲ್ಲಿ ಮೇಘಗಳು ಗರ್ಜಿಸುವಂತೆ ಮಹಾನಾದವನ್ನು ಮಾಡಿದರು.
ಸ ನಿಹತ್ಯ ಬಹೂನ್ ಶೂರಾನಶ್ವತ್ಥಾಮಾ ವ್ಯರೋಚತ |
ಯುಗಾಂತೇ ಸರ್ವಭೂತಾನಿ ಭಸ್ಮ ಕೃತ್ವೇವ ಪಾವಕಃ ॥ 53 ॥
ಅಶ್ವತ್ಥಾಮರು ಅನೇಕ ಶೂರರನ್ನು ಕೊಂದು ಯುಗಾಂತದಲ್ಲಿ ಸರ್ವಪ್ರಾಣಿಗಳನ್ನೂ ಭಸ್ಮ ಮಾಡುವ ಅಗ್ನಿಯಂತೆ ಶೋಭಿಸಿದರು.
ಸಂಪೂಜ್ಯಮಾನೋ ಯುಧಿ ಕೌರವೇಯೈ-
ರ್ವಿಜಿತ್ಯ ಸಂಖೇಽರಿಗಣಾನ್ ಸಹಸ್ರಶಃ |
ವ್ಯರೋಚತ ದ್ರೋಣಸುತಃ ಪ್ರತಾಪವಾನ್
ಯಥಾ ಸುರೇಂದ್ರೋಽರಿಗಣಾನ್ನಿಹತ್ಯ ॥ 54 ॥
ಯುದ್ಧದಲ್ಲಿ ಶತ್ರುಸಮೂಹವನ್ನು ಸಹಸ್ರ ಸಂಖ್ಯೆಯಲ್ಲಿ ಗೆದ್ದು, ಕೌರವರಿಂದ ಸಂಪೂಜ್ಯಮಾನರಾಗಿ, ಪ್ರತಾಪಶಾಲಿಗಳಾದ ದ್ರೋಣಪುತ್ರರಾದ ಅಶ್ವತ್ಥಾಮರು ಶತ್ರುಗಳನ್ನು ಸಂಹಾರ ಮಾಡಿದ ಸುರೇಂದ್ರನಂತೆ ಶೋಭಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್‌ಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೇಳನೆಯ ಅಧ್ಯಾಯ
ಸಂಕುಲಯುದ್ಧ.
ಸಂಜಯಃ
ತತೋ ಯುಧಿಷ್ಠಿರಶ್ಚೈವ ಭೀಮಸೇನಶ್ಚ ಪಾಂಡವಃ |
ದ್ರೋಣಪುತ್ರಂ ಮಹಾರಾಜ ಸಮಂತಾತ್ ಪರ್ಯವಾರಯನ್ ॥ 1 ॥
ಸಂಜಯ ಎಲೈ ಮಹಾರಾಜನೇ, ಆಗ ಪಾಂಡುಪುತ್ರರಾದ ಯುಧಿಷ್ಠಿರ ಮತ್ತು ಭೀಮಸೇನರು ದ್ರೋಣಪುತ್ರರಾದ ಅಶ್ವತ್ಥಾಮರನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು.
ತತೋ ದುರ್ಯೋಧನೋ ರಾಜಾ ಭಾರದ್ವಾಜೇನ ಸಂವೃತಃ |
ಅಭ್ಯಯಾತ್ ಪಾಂಡವಾನ್ ಸಂಖೇ ತತೋ ಯುದ್ಧಮವರ್ತತ |
ಘೋರರೂಪಂ ಮಹಾರಾಜ ಭೀರೂಣಾಂ ಭಯವರ್ಧನಮ್ ॥ 2 ॥
ಆಗ ರಾಜನಾದ ದುರ್ಯೋಧನನು ದ್ರೋಣರಿಂದ ಕೂಡಿ ಪಾಂಡವರ ಮೇಲೆ ಎರಗಿದನು. ಎಲೈ ಮಹಾರಾಜನೇ, ಆಗ ಭೀರುಗಳಿಗೆ ಭಯಜನಕವಾದ ಘೋರವಾದ ಯುದ್ಧವು ನಡೆಯಿತು.
ಅಂಬಷ್ಠಾನ್ ಮಾಳವಾನ್ ವಂಗಾನ್ ಶಿಬೀಂಸ್ತ್ರೈಗರ್ತಕಾನಪಿ |
ಪ್ರಾಹಿಣೋನ್ಮೃತ್ಯುಲೋಕಾಯ ಗಣಾನ್ ಕ್ರುದ್ಧೋ ಯುಧಿಷ್ಠಿರಃ ॥ 3 ॥
ಕೋಪಗೊಂಡ ಯುಧಿಷ್ಠಿರನು ಅಂಬಷ್ಠರನ್ನೂ, ಮಾಳವರನ್ನೂ, ವಂಗರನ್ನೂ, ಶಿಬಿಗಳನ್ನೂ, ತ್ರಿಗರ್ತರನ್ನೂ ಸಮೂಹಗಳಲ್ಲಿ ಮೃತ್ಯುಲೋಕಕ್ಕೆ ಕಳುಹಿಸಿದನು.
ಅಭೀಷಾಹಾನ್ ಶೂರಸೇನಾನ್ ಕ್ಷತ್ರಿಯಾನ್ ಯುದ್ಧದುರ್ಮದಾನ್ |
ನಿಕೃತ್ಯ ಪೃಥಿವೀಂ ಚಕ್ರೇ ಭೀಮಃ ಶೋಣಿತಕರ್ದಮಾಮ್ ॥ 4 ॥
ಭೀಮಸೇನನು ಅಭೀಷಾಹರನ್ನೂ, ಶೂರಸೇನರನ್ನೂ, ಯುದ್ಧದುರ್ಮದರಾದ ಕ್ಷತ್ರಿಯರನ್ನೂ ಕೊಂದು ಭೂಮಿಯನ್ನು ರಕ್ತದ ಕೆಸರಿನಿಂದ ಕೂಡಿರುವಂತೆ ಮಾಡಿದನು.
ಯೌಧೇಯಾರಟ್ಟರಾಜನ್ಯಾನ್ ಮದ್ರಕಾಂಶ್ಚ ಗಣಾನ್ ಯುಧಿ |
ಪ್ರಾಹಿಣೋನ್ಮೃತ್ಯುಲೋಕಾಯ ಕಿರೀಟೀ ನಿಶಿತೈಃ ಶರೈಃ ॥ 5 ॥
ಅರ್ಜುನನು ತನ್ನ ತೀಕ್ಷ್ಣವಾದ ಬಾಣಗಳಿಂದ ಯೌಧೇಯ ಮತ್ತು ಅರಟ್ಟ ಕ್ಷತ್ರಿಯರನ್ನು, ಮದ್ರಕರ ಗಣಗಳನ್ನು ಯುದ್ಧದಲ್ಲಿ ಮೃತ್ಯುಲೋಕಕ್ಕೆ ಕಳುಹಿಸಿದನು.
ಪ್ರಗಾಢಮಂಜೋಗತಿಭಿರ್ನಾರಾಚೈರಭಿಪೀಡಿತಾಃ |
ನಿಪೇತುರ್ದ್ವಿರದಾ ಭೂಮೌ ದ್ವಿಶೃಂಗಾ ಇವ ಪರ್ವತಾಃ ॥ 6 ॥
ನೇರವಾಗಿ ಸಾಗುವ ನಾರಾಚಗಳಿಂದ ಗಾಢವಾಗಿ ಹೊಡೆಯಲ್ಪಟ್ಟ ಗಜಗಳು ಎರಡು ಶಿಖರಗಳುಳ್ಳ ಪರ್ವತಗಳಂತೆ ಭೂಮಿಯಲ್ಲಿ ಬಿದ್ದವು.

ನಿಕೃತ್ತೈರ್ಹಸ್ತಿಹಸ್ತೈಶ್ಚ ಲುಠಮಾನೈಸ್ತತಸ್ತತಃ |
ರರಾಜ ವಸುಧಾ ಕೀರ್ಣಾ ವಿಸರ್ಪದ್ಭಿರಿವೋರಗೈಃ ॥ 7 ॥
ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದು ಹೊರಳಾಡುವ ಗಜಗಳ ಸೊಂಡಿಲುಗಳಿಂದ ಹರಡಲ್ಪಟ್ಟ ಭೂಮಿಯು ಚಲಿಸುವ ಸರ್ಪಗಳಿಂದ ಹರಡಲ್ಪಟ್ಟ ಭೂಮಿಯಂತೆ ಶೋಭಿಸಿತು.
ಕ್ಷಿಪ್ತೈಃ ಕನಕಚಿತ್ರೈಶ್ಚ ನೃಪಚ್ಛತ್ರೈಃ ಕ್ಷಿತಿರ್ಬಭೌ |
ದ್ಯೌರಿವಾದಿತ್ಯಚಂದ್ರಾದ್ಯೈರ್ಗ್ರಹೈಃ ಕೀರ್ಣಾ ಯುಗಕ್ಷಯೇ ॥ 8 ॥
ಎಸೆಯಲ್ಪಟ್ಟ ಸುವರ್ಣಚಿತ್ರವಾದ ರಾಜರ ಛತ್ರಗಳಿಂದ ಕೂಡಿದ ಭೂಮಿಯು ಯುಗಕ್ಷಯದಲ್ಲಿ ಆದಿತ್ಯ-ಚಂದ್ರಾದಿ ಗ್ರಹಗಳಿಂದ ಕೂಡಿದ ಆಕಾಶದಂತೆ ಶೋಭಿಸಿತು.
ಹತ ಪ್ರಹರತಾಭೀತಾ ವಿದ್ಧ್ಯತ ವ್ಯವಕೃಂತತ |
ಇತ್ಯಾಸೀತ್ ತುಮುಲಃ ಶಬ್ದಃ ಶೋಣಾಶ್ವಸ್ಯ ರಥಂ ಪ್ರತಿ ॥ 9 ॥
ಶೋಣಾಶ್ವರಾದ ದ್ರೋಣರ ರಥದ ಬಳಿಯಲ್ಲಿ ಕೊಲ್ಲಿ ನಿರ್ಭಯವಾಗಿ ಹೊಡೆಯಿರಿ, ಗಾಯಗೊಳಿಸಿ, ಕತ್ತರಿಸಿ ಎಂಬ ತೀವ್ರವಾದ ಶಬ್ದಗಳು ಕೇಳಿಬಂದವು.
ದ್ರೋಣಸ್ತು ಪರಮಕ್ರುದ್ಧೋ ವಾಯವ್ಯಾಸ್ತ್ರೇಣ ಸಂಯುಗೇ |
ವ್ಯಧಮತ್ ತಾನ್ ಯಥಾ ವಾಯುರ್ಮೇಘಾನಿವ ದುರತ್ಯಯಃ ॥10॥
ಪರಮಕ್ರುದ್ಧರಾದ ದ್ರೋಣರು ತಡೆಯಲು ಅಸಾಧ್ಯವಾದ ಬಿರುಗಾಳಿಯು ಮೋಡಗಳನ್ನು ಚದುರಿಸುವಂತೆ ರಣರಂಗದಲ್ಲಿ ವಾಯವ್ಯಾಸ್ತ್ರದಿಂದ ಶತ್ರುಸೇನೆಯನ್ನು ಚದುರಿಸಿದರು.
ತೇ ಹನ್ಯಮಾನಾ ದ್ರೋಣೇನ ಪಾಂಚಾಲಾಃ ಪ್ರಾದ್ರುವನ್ ಭಯಾತ್ |
ಪಶ್ಯತೋ ಭೀಮಸೇನಸ್ಯ ಪಾರ್ಥಸ್ಯ ಚ ಮಹಾತ್ಮನಃ ॥ 11 ॥
ದ್ರೋಣರಿಂದ ಹೊಡೆಯಲ್ಪಟ್ಟ ಪಾಂಚಾಲರು ಮಹಾತ್ಮರಾದ ಭೀಮಸೇನ ಮತ್ತು ಅರ್ಜುನರು ನೋಡುತ್ತಿರುವಂತೆಯೇ ಭಯದಿಂದ ಓಡಿಹೋದರು.
ತತಃ ಕಿರೀಟೀ ಭೀಮಶ್ಚ ಸಹಸಾ ಸನ್ನ್ಯವರ್ತತಾಮ್ |
ಮಹತಾ ರಥವಂಶೇನ ಪರಿಗೃಹ್ಯ ಬಲಂ ತವ ॥ 12 ॥
ಆಗ ಭೀಮಸೇನ ಮತ್ತು ಅರ್ಜುನರು ದೊಡ್ಡ ಸೈನ್ಯದ ಸಮೂಹವನ್ನು ತೆಗೆದುಕೊಂಡು ನಿನ್ನ ಸೈನ್ಯವನ್ನು ಉದ್ದೇಶಿಸಿ ತಕ್ಷಣ ಅಲ್ಲಿಗೆ ಬಂದರು.
ಬೀಭತ್ಸುರ್ದಕ್ಷಿಣಂ ಪಾರ್ಶ್ವಮುತ್ತರಂ ತು ವೃಕೋದರಃ |
ಭಾರದ್ವಾಜಂ ಶರೌಘಾಭ್ಯಾಂ ಮಹದ್ಭ್ಯಾಮಭ್ಯವರ್ಷತಾಮ್ ॥ 13 ॥
ಅರ್ಜುನನು ದ್ರೋಣರ ಬಲಭಾಗದ ಸೈನ್ಯವನ್ನೂ, ಭೀಮಸೇನನು ಎಡಭಾಗದ ಸೈನ್ಯವನ್ನೂ ಹೊಡೆದು ದೊಡ್ಡ ಬಾಣಗಳ ಸಮೂಹದಿಂದ ದ್ರೋಣರನ್ನೂ ಹೊಡೆದರು.
ತೌ ತದಾ ಸೃಂಜಯಾಶ್ಚೈವ ಪಾಂಚಲಾಶ್ಚ ಮಹಾರಥಾಃ |
ಅನ್ವಗಚ್ಛನ್ ಮಹಾರಾಜ ಮತ್ಸ್ಯಾಶ್ಚ ಸಹ ಸೋಮಕೈಃ ॥ 14 ॥
ಎಲೈ ಮಹಾರಾಜನೇ, ಆಗ ಸೃಂಜಯರು ಮಹಾರಥರಾದ ಪಾಂಚಾಲರು, ಮತ್ಸ್ಯರು ಮತ್ತು ಸೋಮಕರು ಭೀಮಾರ್ಜುನರನ್ನು ಹಿಂಬಾಲಿಸಿದರು.
ತಥೈವ ತವ ಪುತ್ರಸ್ಯ ರಥೋದಾರಾಃ ಪ್ರಹಾರಿಣಃ |
ಮಹತ್ಯಾ ಸೇನಯಾ ಸಾರ್ಧಂ ಜಗ್ಮುರ್ದ್ರೋಣರಥಂ ಪ್ರತಿ ॥ 15 ॥
ಹಾಗೆಯೇ ಪ್ರಹಾರಶೀಲರಾದ ನಿನ್ನ ಪುತ್ರನ ಮಹಾರಥರು ದೊಡ್ಡ ಸೈನ್ಯವನ್ನು ತೆಗೆದುಕೊಂಡು (ದ್ರೋಣರಿಗೆ ಬಲವನ್ನು ಕೊಡಲು) ದ್ರೋಣರ ರಥದ ಬಳಿಗೆ ಬಂದರು.
ತತಃ ಸಾ ಭಾರತೀ ಸೇನಾ ವಧ್ಯಮಾನಾ ಕಿರೀಟಿನಾ |
ತಮಸಾ ನಿದ್ರಯಾ ಚೈವ ಪುನರೇವ ವ್ಯದೀರ್ಯತ ॥ 16 ॥
ಆಗ ಅರ್ಜುನನಿಂದ ಹೊಡೆಯಲ್ಪಡುತ್ತಿದ್ದ ಕೌರವ ಸೇನೆಯು ಕತ್ತಲೆಯಿಂದಲೂ ಮತ್ತು ನಿದ್ರೆಯಿಂದಲೂ ಪುನಃ ಭಗ್ನವಾಯಿತು.
ದ್ರೋಣೇನ ವಾರ್ಯಮಾಣಾಸ್ತೇ ಸ್ವಯಂ ತವ ಸುತೇನ ಚ |
ನ ಶಕ್ಯಂತೇ ಮಹಾರಾಜ ಯೋಧಾ ವಾರಯಿತುಂ ತದಾ ॥ 17 ॥
ದ್ರೋಣರಿಂದಲೂ ಮತ್ತು ಸ್ವತಃ ನಿನ್ನ ಪುತ್ರನಿಂದಲೂ ನಿವಾರಿಸಲ್ಪಟ್ಟರೂ ಎಲೈ ಮಹಾರಾಜನೇ, ಯೋಧರನ್ನು ಆಗ ತಡೆಯಲು ಸಾಧ್ಯವಾಗಲಿಲ್ಲ.
ಸಾ ಪಾಂಡುಪುತ್ರಸ್ಯ ಶರೈರ್ದಾರ್ಯಮಾಣಾ ಮಹಾಚಮೂಃ |
ತಮಸಾ ಸಂವೃತೇ ಲೋಕೇ ವ್ಯದ್ರವತ್ ಸರ್ವತೋಮುಖೀ ॥ 18 ॥
ಪಾಂಡುಪುತ್ರನಾದ ಅರ್ಜುನನ ಬಾಣಗಳಿಂದ ಸೀಳಲ್ಪಟ್ಟ ನಿನ್ನ ಆ ದೊಡ್ಡ ಸೈನ್ಯವು ಲೋಕವೆಲ್ಲವೂ ಕತ್ತಲೆಯಿಂದ ಮುಚ್ಚಲ್ಪಡುತ್ತಿರಲು ಸರ್ವದಿಕ್ಕುಗಳಲ್ಲಿ ಓಡಿಹೋಯಿತು.
ಉತ್ಸೃಜ್ಯ ಶತಶೋ ವಾಹಾಂಸ್ತತ್ರ ಕೇಚಿನ್ನರಾಧಿಪಾಃ |
ಪ್ರಾದ್ರವಂತ ಮಹಾರಾಜ ಭಯಾವಿಷ್ಟಾಃ ಸಮಂತತಃ ॥ 19 ॥
ಎಲೈ ಮಹಾರಾಜನೇ, ಕೆಲವು ರಾಜರು ನೂರಾರು ಸಂಖ್ಯೆಯಲ್ಲಿ ತಮ್ಮ ವಾಹನಗಳನ್ನು ಬಿಟ್ಟು ಭಯದಿಂದ ಕೂಡಿದವರಾಗಿ ಎಲ್ಲ

ಕಡೆಯಲ್ಲಿಯೂ ಓಡಿಹೋದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತ
ದ್ರೋಣಪರ್ವ
ನೂರ ನಲವತ್ತೆಂಟನೆಯ ಅಧ್ಯಾಯ
ಸಾತ್ಯಕಿಯಿಂದ ಸೋಮದತ್ತನ ವಧೆ ಮತ್ತು ದ್ರೋಣರ ಪರಾಕ್ರಮ.
ಸಂಜಯಃ
ಸೋಮದತ್ತಂ ತು ಸಂಪ್ರೇಕ್ಷ್ಯ ವಿಧುನ್ವಾನಂ ಮಹದ್ಧನುಃ |
ಸಾತ್ಯಕಿಃ ಪ್ರಾಹ ಯಂತಾರಂ ಸೋಮದತ್ತಾಯ ಮಾಂ ವಹ ॥ 1 ॥
ನ ಹ್ಯಹತ್ವಾ ರಣೇ ಶತ್ರುಂ ಬಾಹ್ಲೀಕಂ ಕೌರವಾಧಮಮ್ |
ನಿವರ್ತಿಷ್ಯೇ ರಣಾತ್ ಸೂತ ಸತ್ಯಮೇತದ್ ವಚೋ ಮಮ ॥ 2 ॥
ಸಂಜಯ ಸೋಮದತ್ತನು ತನ್ನ ದೊಡ್ಡ ಧನುಸ್ಸನ್ನು ತೂಗಾಡಿಸುತ್ತಿರುವುದನ್ನು ನೋಡಿದ ಸಾತ್ಯಕಿಯು ತನ್ನ ಸಾರಥಿಯನ್ನು ಕುರಿತು- ಎಲೈ ಸಾರಥಿಯೇ, ನನ್ನನ್ನು ಸೋಮದತ್ತನ ಕಡೆಗೆ ಕರೆದುಕೊಂಡು ಹೋಗು. ಕೌರವಾಧಮನೂ, ಬಾಹ್ಲೀಕ ಪುತ್ರನೂ ಆದ ಶತ್ರುವಾದ ಸೋಮದತ್ತನನ್ನು ಕೊಲ್ಲದೆ ನಾನು ರಣರಂಗದಿಂದ ಹಿಂದಿರುಗುವುದಿಲ್ಲ. ಎಲೈ ಸೂತನೇ, ಈ ನನ್ನ ಮಾತು ಸತ್ಯವಾದುದು ಎಂದು ಹೇಳಿದನು.
ತತಃ ಸಂಪ್ರೇಷಯದ್ಯಂತಾ ಸೈಂಧವಾಂಸ್ತಾನ್ ಮಹಾಜವಾನ್ |
ತುರಂಗಮಾನ್ ಶಂಖವರ್ಣಾನ್ ಸರ್ವಶಬ್ದಾತಿಗಾನ್ ರಣೇ ॥ 3 ॥
ಆಗ ಅವನ ಸಾರಥಿಯು ಶಂಖವರ್ಣದ, ಮಹಾವೇಗಶಾಲಿಗಳಾದ, ಎಲ್ಲ ಶಬ್ದಗಳನ್ನೂ ಸಹಿಸುವ ಸೈಂಧವ ದೇಶದ ಅವನ ಕುದುರೆಗಳನ್ನು ಸೋಮದತ್ತನ ಕಡೆಗೆ ಪ್ರಚೋದಿಸಿದನು.
ತೇಽವಹನ್ ಯುಯುಧಾನಂ ತು ಮನೋಮಾರುತರಂಹಸಃ |
ಯಥೇಂದ್ರಂ ಹರಯೋ ರಾಜನ್ ಪುರಾ ದೈತ್ಯವಧೋದ್ಯತಮ್ ॥ 4 ॥
ಮನೋವಾಯುವೇಗವುಳ್ಳ ಆ ಅಶ್ವಗಳು ಎಲೈ ರಾಜನೇ, ದೈತ್ಯವಧೆಯಲ್ಲಿ ಉದ್ಯುಕ್ತನಾದ ಇಂದ್ರನನ್ನು ಹಿಂದೆ ಅಶ್ವಗಳು ಕರೆದುಕೊಂಡು ಹೋದಂತೆ ಯುಯುಧಾನನನ್ನು ಕರೆದುಕೊಂಡು ಹೋದವು.
ತಮಾಪತಂತಂ ಸಂಪ್ರೇಕ್ಷ್ಯ ಸಾತ್ವತಂ ರಭಸಂ ರಣೇ |
ಸೋಮದತ್ತೋ ಮಹಾಬಾಹುರಸಂಭ್ರಾಂತೋಽಭ್ಯವರ್ತತ ॥ 5 ॥
ರಣರಂಗದಲ್ಲಿ ತನ್ನ ಮೇಲೆ ಎರಗುತ್ತಿದ್ದ ವೇಗಶಾಲಿಯಾದ ಸಾತ್ವತಕುಲದ ಸಾತ್ಯಕಿಯನ್ನು ನೋಡಿ ಮಹಾಬಾಹುವಾದ ಸೋಮದತ್ತನು ಗಾಬರಿಗೊಳ್ಳದೆ ಅವನ ಕಡೆಗೆ ಸಾಗಿದನು.
ವಿಮುಂಚನ್ ಶರವರ್ಷಾಣಿ ಪರ್ಜನ್ಯ ಇವ ವೃಷ್ಟಿಮಾನ್ |
ಛಾದಯಾಮಾಸ ಶೈನೇಯಂ ಜಲದೋ ಭಾಸ್ಕರಂ ಯಥಾ ॥ 6 ॥
ಮಳೆಯನ್ನು ಸುರಿಸುವ ಪರ್ಜನ್ಯನಂತೆ ಅವನು ಸಾತ್ಯಕಿಯ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಮೋಡವು ಸೂರ್ಯನನ್ನು ಮುಚ್ಚುವಂತೆ ತನ್ನ ಬಾಣಗಳಿಂದ ಸಾತ್ಯಕಿಯನ್ನು ಮುಚ್ಚಿದನು.
ಅಸಂಭ್ರಾಂತಶ್ಚ ಸಮರೇ ಸಾತ್ಯಕಿಃ ಕುರುಪುಂಗವಮ್ |
ಛಾದಯಾಮಾಸ ಬಾಣೌಘೈಃ ಸಮಂತಾದ್ ಭರತರ್ಷಭ ॥ 7 ॥
ಎಲೈ ಭರತರ್ಷಭನೇ, ಸಾತ್ಯಕಿಯೂ ಸಹ ಯುದ್ಧದಲ್ಲಿ ಗಾಬರಿಗೊಳ್ಳದೆ ಕುರುಪುಂಗವನಾದ ಸೋಮದತ್ತನನ್ನು ತನ್ನ ಬಾಣಗಳ ಸಮೂಹದಿಂದ ಆಚ್ಛಾದಿಸಿದನು.
ಸೋಮದತ್ತಸ್ತು ತಂ ಷಷ್ಟ್ಯಾ ವಿವ್ಯಾಧೋರಸಿ ಮಾಧವಮ್ |
ಸಾತ್ಯಕಿಶ್ಚಾಪಿ ತಂ ರಾಜನ್ನವಿದ್ಯತ್ ಸಾಯಕೈಃ ಶಿತೈಃ ॥ 8 ॥
ಸೋಮದತ್ತನು ಮಧುಕುಲದಲ್ಲಿ ಉತ್ಪನ್ನನಾದ ಸಾತ್ಯಕಿಯನ್ನು ಅರವತ್ತು ಬಾಣಗಳಿಂದ ಎದೆಯಲ್ಲಿ ಹೊಡೆದನು. ಎಲೈ ರಾಜನೇ, ಸಾತ್ಯಕಿಯೂ ಸಹ ಅವನನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದನು.
ತಾವನ್ಯೋನ್ಯಂ ಶರೈಃ ಕೃತ್ತೌ ವ್ಯರಾಜೇತಾಂ ನರರ್ಷಭೌ |
ಸುಪುಷ್ಪೌ ಪುಷ್ಪಸಮಯೇ ಪುಷ್ಪಿತಾವಿವ ಕಿಂಶುಕೌ ॥ 9 ॥
ಪರಸ್ಪರರ ಬಾಣಗಳಿಂದ ಗಾಯಗೊಂಡ ಆ ಇಬ್ಬರು ನರಶ್ರೇಷ್ಠರು ಪುಷ್ಪ ಸಮಯದಲ್ಲಿ ಪುಷ್ಪಭರಿತವಾದ ಎರಡು ಮುತ್ತುಗದ ವೃಕ್ಷಗಳಂತೆ ಶೋಭಿಸಿದರು.
ರುಧಿರೋಕ್ಷಿತಸರ್ವಾಂಗೌ ಕುರುವೃಷ್ಣಿಯಶಸ್ಕರೌ |
ಪರಸ್ಪರಮವೇಕ್ಷೇತಾಂ ದಹಂತಾವಿವ ಲೋಚನೈಃ ॥ 10 ॥

ಕುರು-ವೃಷ್ಣಿಯಶಸ್ಕರರಾದ ಅವರಿಬ್ಬರೂ ರಕ್ತದಿಂದ ತೊಯ್ದು ಸರ್ವಾಯವಗಳುಳ್ಳವರಾಗಿ ತಮ್ಮ ಕಣ್ಣುಗಳಿಂದ ಸುಡುವಂತೆ ಪರಸ್ಪರವಾಗಿ ನೋಡಿದರು.
ರಥಮಂಡಲಮಾರ್ಗೇಷು ಚರಂತಾವರಿಮರ್ದನೌ |
ಘೋರರೂಪೌ ಹಿ ತಾವಾಸ್ತಾಂ ವೃಷ್ಟಿಮಂತಾವಿವಾಂಬುದೌ ॥ 11 ॥
ರಥಮಂಡಲಗಳಲ್ಲಿ ಮತ್ತು ಮಾರ್ಗಗಳಲ್ಲಿ ಸಂಚರಿಸುವ ಶತ್ರುಮರ್ದನರಾದ ಅವರಿಬ್ಬರೂ ವೃಷ್ಟಿಯನ್ನು ಹೊಂದಿದ ಮೋಡಗಳಂತೆ ಘೋರರೂಪವನ್ನು ಹೊಂದಿದವರಾದರು.
ಶರಸಂಭಿನ್ನಗಾತ್ರೌ ತೌ ಸರ್ವತಃ ಶಕಲೀಕೃತೌ |
ಶ್ವಾವಿಧಾವಿವ ರಾಜೇಂದ್ರ ವ್ಯದೃಶ್ಯೇತಾಂ ಶರಕ್ಷತೌ ॥ 12 ॥
ಎಲೈ ರಾಜೇಂದ್ರನೇ, ಬಾಣಗಳು ನಾಟಿದ ದೇಹವುಳ್ಳವರಾಗಿ ಸರ್ವತ್ರ ಗಾಯಗೊಂಡು ಅವರು ರಣರಂಗದಲ್ಲಿ ಮುಳ್ಳುಹಂದಿಗಳಂತೆ ಕಂಡುಬಂದರು.
ಸುವರ್ಣಪುಂಖೈರಿಷುಭಿರಾಚಿತೌ ತೌ ವ್ಯರೋಚತಾಮ್ |
ಖದ್ಯೋತೈರಾವೃತೌ ರಾಜನ್ ಪ್ರಾವೃಷೀವ ವನಸ್ಪತೀ ॥ 13 ॥
ಎಲೈ ರಾಜನೇ, ಸುವರ್ಣಪುಂಖಗಳುಳ್ಳ ಬಾಣಗಳು ತಮ್ಮ ಶರೀರಗಳಲ್ಲಿ ನಾಟಿ ಅವರು ಮಳೆಗಾಲದಲ್ಲಿ ಮಿಣುಕು ಹುಳುಗಳಿಂದ ಆವೃತವಾದ ಎರಡು ವೃಕ್ಷಗಳಂತೆ ಶೋಭಿಸಿದರು.
ಸಂಪ್ರದೀಪಿತಸರ್ವಾಂಗೌ ಸಾಯಕೈಸ್ತೌ ಮಹಾರಥೌ |
ಅದೃಶ್ಯೇತಾಂ ರಣೇ ಕ್ರುದ್ಧವುಲ್ಕಾಭಿರಿವ ಕುಂಜರೌ ॥ 14 ॥
ಮಹಾರಥರಾದ ಅವರಿಬ್ಬರೂ ಜ್ವಲಿಸುವ ಸರ್ವಾಂಗವುಳ್ಳವರಾಗಿ ರಣರಂಗದಲ್ಲಿ ಕ್ರುದ್ಧರಾಗಿ ಪಂಜುಗಳಿಂದ ಸಹಿತವಾದ ಗಜಗಳಂತೆ ಕಂಡುಬಂದರು.
ತತೋ ಯುಧಿ ಮಹಾರಾಜ ಸೋಮದತ್ತೋ ಮಹಾರಥಃ |
ಅರ್ಧಚಂದ್ರೇಣ ಚಿಚ್ಛೇದ ಮಾಧವಸ್ಯ ಮಹದ್ಧನುಃ ॥ 15 ॥
ಎಲೈ ಮಹಾರಾಜನೇ, ಆಗ ಮಹಾರಥನಾದ ಸೋಮದತ್ತನು ರಣರಂಗದಲ್ಲಿ ಅರ್ಧಚಂದ್ರದಿಂದ ಸಾತ್ಯಕಿಯ ದೊಡ್ಡ ಧನುಸ್ಸನ್ನು ಕತ್ತರಿಸಿದನು.
ಅಥೈನಂ ಪಂಚವಿಂಶತ್ಯಾ ಸಾಯಕಾನಾಂ ಸಮಾರ್ಪಯತ್ |
ತ್ವರಮಾಣಸ್ತ್ವರಾಕಾಲೇ ಪುನಶ್ಚ ದಶಭಿಃ ಶರೈಃ ॥ 16 ॥
ಅನಂತರ ತ್ವರೆ ಮಾಡಬೇಕಾದ ಕಾಲದಲ್ಲಿ ಅವನು ತ್ವರೆಯಿಂದ ಇಪ್ಪತ್ತೈದು ಬಾಣಗಳನ್ನು ಹೊಡೆದು ಪುನಃ ಸಾತ್ಯಕಿಯ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿದನು.
ಅಥಾನ್ಯದ್ ಧನುರಾದಾಯ ಸಾತ್ಯಕಿರ್ವೇಗವತ್ತರಮ್ |
ಪಂಚಭಿಃ ಸಾಯಕೈಸ್ತೂರ್ಣಂ ಸೋಮದತ್ತಮವಿದ್ಧ್ಯತ ॥ 17 ॥
ಆಗ ಸಾತ್ಯಕಿಯು ವೇಗಶಾಲಿಯಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಐದು ಬಾಣಗಳಿಂದ ಶೀಘ್ರವಾಗಿ ಸೋಮದತ್ತನನ್ನು ಹೊಡೆದನು.
ತತೋಽಪರೇಣ ಭಲ್ಲೇನ ಧ್ವಜಂ ಚಿಚ್ಛೇದ ಕಾಂಚನಮ್ |
ಬಾಹ್ಲೀಕಸ್ಯ ರಣೇ ರಾಜನ್ ಸಾತ್ಯಕಿಃ ಪ್ರಹಸನ್ನಿವ ॥ 18 ॥
ಎಲೈ ರಾಜನೇ, ಸಾತ್ಯಕಿಯು ಅನಂತರ ಇನ್ನೊಂದು ಭಲ್ಲದಿಂದ ಬಾಹ್ಲೀಕ ಪುತ್ರನಾದ ಸೋಮದತ್ತನ ಕಾಂಚನಮಯವಾದ ಧ್ವಜವನ್ನು ನಗುತ್ತಾ ಕತ್ತರಿಸಿದನು.
ಸೋಮದತ್ತಸ್ತ್ವಸಂಭ್ರಾಂತೋ ದೃಷ್ಟ್ವಾ ಕೇತುಂ ನಿಪಾತಿತಮ್ |
ಶೈನೇಯಂ ಪಂಚವಿಂಶತ್ಯಾ ಸಾಯಕಾನಾಂ ಸಮಾಚಿನೋತ್ ॥ 19 ॥
ತನ್ನ ಧ್ವಜವು ಕೆಳಗೆ ಬಿದ್ದುದನ್ನು ನೋಡಿ ಸೋಮದತ್ತನು ಗಾಬರಿಗೊಳ್ಳದೆ ಇಪ್ಪತ್ತೈದು ಬಾಣಗಳನ್ನು ಸಾತ್ಯಕಿಯ ಶರೀರದಲ್ಲಿ ನಾಟಿಸಿದನು.
ಸಾತ್ವತೋಽಪಿ ರಣೇ ಕ್ರುದ್ಧಃ ಸೋಮದತ್ತಸ್ಯ ಧನ್ವಿನಃ |
ಧನುಶ್ಚಿಚ್ಛೇದ ಸಮರೇ ಕ್ಷುರಪ್ರೇಣ ಶಿತೇನ ಹ ॥ 20 ॥
ರಣರಂಗದಲ್ಲಿ ಕ್ರುದ್ಧನಾದ ಸಾತ್ಯಕಿಯೂ ಸಹ ನಿಶಿತವಾದ ಕ್ಷುರಪ್ರದಿಂದ ಧನುರ್ಧಾರಿಯಾದ ಸೋಮದತ್ತನ ಧನುಸ್ಸನ್ನು ಕತ್ತರಿಸಿದನು.
ಅಥೈನಂ ರುಗ್ಮಪುಂಖಾನಾಂ ಶತೇನ ನತಪರ್ವಣಾಮ್ |
ಆಚಿನೋದ್ ಬಹುಧಾ ರಾಜನ್ ಭಗ್ನದಂಷ್ಟ್ರಮಿವ ದ್ವಿಪಮ್ ॥ 21 ॥
ಎಲೈ ರಾಜನೇ, ಅನಂತರ ರುಗ್ಮಪುಂಖವನ್ನು ಹೊಂದಿದ ಬಾಗಿದ ತುದಿಯುಳ್ಳ ನೂರು ಬಾಣಗಳಿಂದ ದಂತವು ಮುರಿದ ಗಜವನ್ನು ಹೊಡೆದಂತೆ ಅವನನ್ನು ಹೊಡೆದು ಬಾಣಗಳನ್ನು ನಾಟಿಸಿದನು.
ಅಥಾನ್ಯದ್ ಧನುರಾದಾಯ ಸೋಮದತ್ತೋ ಮಹಾರಥಃ |
ಸಾತ್ಯಕಿಂ ಛಾದಯಾಮಾಸ ಶರವೃಷ್ಟ್ಯಾ ಮಹಾಬಲಃ ॥ 22 ॥
ಆಗ ಮಹಾರಥನೂ, ಮಹಾಬಲನೂ ಆದ ಸೋಮದತ್ತನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಬಾಣಗಳ ಮಳೆಯಿಂದ ಸಾತ್ಯಕಿಯನ್ನು ಆಚ್ಛಾದಿಸಿದನು.

ಸೋಮದತ್ತಂ ತು ಸಂಕ್ರುದ್ಧೋ ರಣೇ ವಿವ್ಯಾಧ ಸಾತ್ಯಕಿಃ |
ಸಾತ್ಯಕಿಂ ಚೇಷುಜಾಲೇನ ಸೋಮದತ್ತೋ ಅಪೀಡಯತ್ ॥ 23 ॥
ಬಹಳ ಕೋಪಗೊಂಡ ಸಾತ್ಯಕಿಯು ಸೋಮದತ್ತನ ಮೇಲೆ ರಣರಂಗದಲ್ಲಿ ಬಾಣಗಳನ್ನು ಪ್ರಯೋಗಿಸಿದನು. ಸಾತ್ಯಕಿಯೂ ಸಹ ಬಾಣಗಳ ಸಮೂಹದಿಂದ ಸೋಮದತ್ತನನ್ನು ಪೀಡಿಸಿದನು.
ದಶಭಿಃ ಸಾತ್ವತಸ್ಯಾರ್ಥೇ ಭೀಮೋಽಹನ್ ಬಾಹ್ಲಿಕಾತ್ಮಜಮ್ |
ಸೋಮದತ್ತೋಪ್ಯಸಂಭ್ರಾಂತಃ ಶೈನೇಯಮವಧೀಚ್ಚರೈಃ ॥ 24 ॥
ಭೀಮಸೇನನು ಸಾತ್ಯಕಿಯ ಪರವಾಗಿ ಬಾಹ್ಲೀಕ ಪುತ್ರನಾದ ಸೋಮದತ್ತನನ್ನು ಹತ್ತು ಬಾಣಗಳಿಂದ ಹೊಡೆದನು. ಸೋಮದತ್ತನೂ ಗಾಬರಿಗೊಳ್ಳದೆ ಸಾತ್ಯಕಿಯನ್ನು ಬಾಣಗಳಿಂದ ಹೊಡೆದನು.
ತತಸ್ತು ಸಾತ್ವತಸ್ಯಾರ್ಥೇ ಭೈಮಸೇನಿರ್ನವಂ ದೃಢಮ್ |
ಮುಮೋಚ ಪರಿಘಂ ಘೋರಂ ಸೋಮದತ್ತಸ್ಯ ವಕ್ಷಸಿ ॥ 25 ॥
ಆಗ ಭೀಮಸೇನನ ಪುತ್ರನಾದ ಘಟೋತ್ಕಚನು ಸಾತ್ಯಕಿಯ ಸಲುವಾಗಿ ಹೊಸದಾದ ಮತ್ತು ದೃಢವಾದ ಒಂದು ಘೋರವಾದ ಪರಿಘವನ್ನು ತೆಗೆದುಕೊಂಡು ಅದನ್ನು ಸೋಮದತ್ತನ ಎದೆಯಲ್ಲಿ ಎಸೆದನು.
ತಮಾಪತಂತಂ ವೇಗೇನ ಪರಿಘಂ ಘೋರದರ್ಶನಮ್ |
ದ್ವಿಧಾ ಚಿಚ್ಛೇದ ಸಮರೇ ಪ್ರಹಸನ್ನಿವ ಕೌರವಃ ॥ 26 ॥
ಕೌರವನಾದ ಸೋಮದತ್ತನು ತನ್ನ ಕಡೆಗೆ ವೇಗದಿಂದ ಬರುತ್ತಿದ್ದ ಘೋರವಾಗಿ ಕಾಣುತ್ತಿದ್ದ ಆ ಪರಿಘವನ್ನು ನಗುತ್ತಾ ಎರಡು ಭಾಗಗಳಾಗಿ ಕತ್ತರಿಸಿದನು.
ಸ ಪಪಾತ ದ್ವಿಧಾ ಛಿನ್ನ ಆಯಸಃ ಪರಿಘೋ ಮಹಾನ್ |
ಮಹೀಧರಸ್ಯೇವ ಮಹಚ್ಛಿಖರಂ ವಜ್ರದಾರಿತಮ್ ॥ 27 ॥
ಕಬ್ಬಿಣದಿಂದ ಮಾಡಿದ ಆ ದೊಡ್ಡ ಪರಿಘವು ವಜ್ರದಿಂದ ಸೀಳಲ್ಪಟ್ಟ ಪರ್ವತದ ದೊಡ್ಡ ಶಿಖರದಂತೆ ಎರಡು ಭಾಗವಾಗಿ ಕತ್ತರಿಸಲ್ಪಟ್ಟು ಕೆಳಗೆ ಬಿದ್ದಿತು.
ತತಸ್ತು ಸಾತ್ಯಕೀ ರಾಜನ್ ಸೋಮದತ್ತಸ್ಯ ಸಂಯುಗೇ |
ಧನುಶ್ಚಿಚ್ಛೇದ ಭಲ್ಲೇನ ಹಸ್ತಾವಾಪಂ ಚ ಪಂಚಭಿಃ ॥ 28 ॥
ಎಲೈ ರಾಜನೇ, ಅನಂತರ ಸಾತ್ಯಕಿಯು ರಣರಂಗದಲ್ಲಿ ಭಲ್ಲದಿಂದ ಸೋಮದತ್ತನ ಧನುಸ್ಸನ್ನೂ ಐದು ಬಾಣಗಳಿಂದ ಅವನ ಬತ್ತಳಿಕೆಯನ್ನೂ ಕತ್ತರಿಸಿದನು.
ಚತುರ್ಭಿಸ್ತು ಶರೈಸ್ತೂರ್ಣಂ ಚತುರಸ್ತುರಗೋತ್ತಮಾನ್ |
ಸಮೀಪಂ ಪ್ರೇಷಯಾಮಾಸ ಪ್ರೇತರಾಜಸ್ಯ ಭಾರತ ॥ 29 ॥
ಎಲೈ ಭಾರತನೇ, ನಾಲ್ಕು ಬಾಣಗಳಿಂದ ಅವನ ರಥದ ನಾಲ್ಕು ಶ್ರೇಷ್ಠವಾದ ಅಶ್ವಗಳನ್ನು ಕೊಂದು ಶೀಘ್ರವಾಗಿ ಯಮನ ಸಮೀಪಕ್ಕೆ ಕಳುಹಿಸಿದನು.
ಸಾರಥೇಶ್ಚ ಶಿರಃ ಕಾಯಾದ್ ಭಲ್ಲೇನ ನತಪರ್ವಣಾ |
ಜಹಾರ ರಥಶಾರ್ದೂಲಃ ಪ್ರಹಸನ್ ಶಿನಿಪುಂಗವಃ ॥ 30 ॥
ಶಿನಿಪುಂಗವನೂ, ರಥಶಾರ್ದೂಲನೂ ಆದ ಸಾತ್ಯಕಿಯು ಬಾಗಿದ ತುದಿಯುಳ್ಳ ಭಲ್ಲದಿಂದ ನಗುತ್ತಾ ಅವನ ಸಾರಥಿಯ ಶಿರಸ್ಸನ್ನು ದೇಹದಿಂದ ಕತ್ತರಿಸಿದನು.
ತತಃ ಶರಂ ಮಹಾಘೋರಂ ಜ್ವಲಂತಮಿವ ಪಾವಕಮ್ |
ಮುಮೋಚ ಸಾತ್ವತೋ ರಾಜನ್ ಸ್ವರ್ಣಪುಂಖಂ ಶಿಲಾಶಿತಮ್ ॥31॥
ಎಲೈ ರಾಜನೇ, ಅನಂತರ ಮಹಾಘೋರವಾಗಿದ್ದ ಜ್ವಲಿಸುವ ಅಗ್ನಿಯಂತಿದ್ದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಒಂದು ಬಾಣವನ್ನು ಸಾತ್ಯಕಿಯು ಸೋಮದತ್ತನ ಎದೆಯ ಮೇಲೆ ಪ್ರಯೋಗಿಸಿದನು.
ಸ ವಿಮುಕ್ತೋ ಬಲವತಾ ಶೈನೇಯೇನ ಶರೋತ್ತಮಃ |
ಘೋರಸ್ತಸ್ಯೋರಸಿ ವಿಭೋ ನಿಪಪಾತಾಶು ಭಾರತ ॥ 32 ॥
ಬಲಿಷ್ಠನಾದ ಸಾತ್ಯಕಿಯಿಂದ ಪ್ರಯೋಗಿಸಲ್ಪಟ್ಟ ಆ ಬಾಣವು ಎಲೈ ಭಾರತನೇ, ವಿಭುವೇ, ಶೀಘ್ರವಾಗಿ ನಿನ್ನ ತಂದೆಯ ಎದೆಯಲ್ಲಿ ಬಿದ್ದಿತು.
ಪ್ರತೀಪ ಪುತ್ರರಾದ ಶಂತನು ಮತ್ತು ಬಾಹ್ಲೀಕರಲ್ಲಿ ಬಾಹ್ಲೀಕನು ದೊಡ್ಡವನು ಮತ್ತು ಶಂತನು ಚಿಕ್ಕವನು. ಬಾಹ್ಲೀಕ ಪುತ್ರರಾದ ಸೋಮದತ್ತ ಮತ್ತು ವಿಚಿತ್ರವೀರ್ಯರಲ್ಲಿ ಸೋಮದತ್ತನು ಹಿರಿಯನು, ವಿಚಿತ್ರವೀರ್ಯನು ಚಿಕ್ಕವನು. ಧೃತರಾಷ್ಟ್ರನು ವಿಚಿತ್ರವೀರ್ಯನ ಪುತ್ರ. ಆದ್ದರಿಂದ ಸೋಮದತ್ತನನ್ನು ನಿನ್ನ ತಂದೆ ಎಂದು ಹೇಳಿದ್ದಾರೆ- ಲಕ್ಷಾಲಂಕಾರ).
ಸೋಽತಿವಿದ್ಧೋ ಬಲವತಾ ಸಾತ್ವತೇನ ಮಹಾರಥಃ |
ಸೋಮದತ್ತೋ ಮಹಾಬಾಹುರ್ನಿಪಪಾತ ಮಮಾರ ಚ ॥ 33 ॥
ಬಲಿಷ್ಠನಾದ ಸಾತ್ಯಕಿಯಿಂದ ಗಾಢವಾಗಿ ಹೊಡೆಯಲ್ಪಟ್ಟ ಮಹಾರಥನೂ, ಮಹಾಬಾಹುವೂ ಆದ ಸೋಮದತ್ತನು ಕೆಳಗೆ ಬಿದ್ದು ಮೃತನಾದನು.
ತಂ ದೃಷ್ಟ್ವಾ ನಿಹತಂ ತತ್ರ ಸೋಮದತ್ತಂ ಮಹಾರಥಾಃ |
ಮಹತಾ ಶರವರ್ಷೇಣ ಯುಯುಧಾನಮುಪಾದ್ರವನ್ ॥ 34 ॥
ಸೋಮದತ್ತನು ಹತನಾದುದನ್ನು ನೋಡಿ ಮಹಾರಥರು ದೊಡ್ಡ ಶರವರ್ಷವನ್ನು ಸುರಿಸುತ್ತಾ ಯುಯುಧಾನನ ಕಡೆಗೆ ಧಾವಿಸಿದರು.

ಛಾದ್ಯಮಾನಂ ಶರೈರ್ದೃಷ್ಟ್ವಾ ಯುಯುಧಾನಂ ಯುಧಿಷ್ಠಿರಃ |
ಮಹತ್ಯಾ ಸೇನಯಾ ಸಾರ್ಧಂ ದ್ರೋಣಾನೀಕಮುಪಾದ್ರವತ್ ॥ 35 ॥
ಯುಯುಧಾನನು ಬಾಣಗಳಿಂದ ಆಚ್ಛಾದಿಸಲ್ಪಡುವುದನ್ನು ನೋಡಿದ ಯುಧಿಷ್ಠಿರನು ದೊಡ್ಡ ಸೈನ್ಯದ ಜೊತೆಯಲ್ಲಿ ದ್ರೋಣರ ಸೈನ್ಯದ ಮೇಲೆ ಎರಗಿದನು.
ತತೋ ಯುಧಿಷ್ಠಿರಃ ಕ್ರುದ್ಧಸ್ತಾವಕಾನಾಂ ಮಹಾಬಲಮ್ |
ಶರೈರ್ವಿದ್ರಾವಯಾಮಾಸ ಭಾರದ್ವಾಜಸ್ಯ ಪಶ್ಯತಃ ॥ 36 ॥
ಆಗ ಕೋಪಗೊಂಡ ಯುಧಿಷ್ಠಿರನು ದ್ರೋಣರು ನೋಡುತ್ತಿರುವಂತೆಯೇ ನಿನ್ನ ದೊಡ್ಡ ಸೈನ್ಯವನ್ನು ತನ್ನ ಬಾಣಗಳಿಂದ ಚದುರಿಸಿದನು.
ಸೈನ್ಯಾನಿ ದ್ರಾವಯಂತಂ ತು ದ್ರೋಣೋ ದೃಷ್ಟ್ವಾ ಯುಧಿಷ್ಠಿರಮ್ |
ಅಭಿದುದ್ರಾವ ವೇಗೇನ ಕ್ರೋಧಸಂರಕ್ತಲೋಚನಃ ॥ 37 ॥
ತಮ್ಮ ಸೈನ್ಯವನ್ನು ಓಡಿಸುತ್ತಿದ್ದ ಯುಧಿಷ್ಠಿರನನ್ನು ನೋಡಿ ಕ್ರೋಧದಿಂದ ಕೆಂಪಾದ ಕಣ್ಣುಳ್ಳವರಾಗಿ ದ್ರೋಣರು ವೇಗದಿಂದ ಅವನ ಕಡೆಗೆ ಸಾಗಿಬಂದರು.
ತತಃ ಸುನಿಶಿತೈರ್ಬಾಣೈಃ ಪಾರ್ಥಂ ವಿವ್ಯಾಧ ಸಪ್ತಭಿಃ |
ಸೋತಿವಿದ್ಧೋ ಮಹಾಬಾಹುಃ ಸೃಕ್ಕಿಣೀ ಪರಿಸಂಲ್ಲಿಹನ್ |
ಯುಧಿಷ್ಠಿರಸ್ಯ ಚಿಚ್ಛೇದ ಧ್ವಜಂ ಕಾರ್ಮುಕಮೇವ ಚ ॥ 38 ॥
ಆಗ ಯುಧಿಷ್ಠಿರನು ಅತ್ಯಂತ ತೀಕ್ಷ್ಣವಾದ ಏಳು ಬಾಣಗಳಿಂದ ಅವರನ್ನು ಹೊಡೆದನು. ಮಹಾಬಾಹುಗಳಾದ ದ್ರೋಣರು ಯುಧಿಷ್ಠಿರನಿಂದ ಗಾಢವಾಗಿ ಹೊಡೆಯಲ್ಪಟ್ಟು ತಮ್ಮ ಕಟಬಾಯಿಯನ್ನು ಸವರಿಕೊಳ್ಳುತ್ತಾ ಯುಧಿಷ್ಠಿರನ ಧ್ವಜವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿದರು.
ಸ ಛಿನ್ನಧನ್ವಾ ತ್ವರಿತಸ್ತ್ವರಾಕಾಲೇ ನೃಪೋತ್ತಮಃ |
ಅನ್ಯದಾದತ್ತ ವೇಗೇನ ಕಾರ್ಮುಕಂ ಸಮರೇ ದೃಢಮ್ ॥ 39 ॥
ತನ್ನ ಧನುಸ್ಸು ಕತ್ತರಿಸಲ್ಪಟ್ಟ ನೃಪಶ್ರೇಷ್ಠನಾದ ಯುಧಿಷ್ಠಿರನು ತ್ವರೆ ಮಾಡಬೇಕಾದ ಆ ಕಾಲದಲ್ಲಿ ವೇಗವಾಗಿ ಇನ್ನೊಂದು ದೃಢವಾದ ಧನುಸ್ಸನ್ನು ತೆಗೆದುಕೊಂಡನು.
ತತಃ ಶರಸಹಸ್ರೇಣ ದ್ರೋಣಂ ವಿವ್ಯಾಧ ಪಾರ್ಥಿವಃ |
ಸಾಶ್ವಸೂತಧ್ವಜರಥಂ ತದದ್ಭುತಮಿವಾಭವತ್ ॥ 40 ॥
ಅನಂತರ ರಾಜನಾದ ಅವನು ಸಾವಿರ ಬಾಣಗಳಿಂದ ದ್ರೋಣರನ್ನೂ, ಅವರ ಅಶ್ವ-ಸೂತ-ಧ್ವಜ-ರಥವನ್ನೂ ಹೊಡೆದನು. ಅದು ಅದ್ಭುತವಾಗಿದ್ದಿತು.
ತತೋ ಮುಹೂರ್ತಂ ವ್ಯಥಿತಃ ಶರಘಾತಪ್ರಪೀಡಿತಃ |
ನಿಷಸಾದ ರಥೋಪಸ್ಥೇ ದ್ರೋಣೋ ಭರತಸತ್ತಮ ॥ 41 ॥
ಎಲೈ ಭರತಸತ್ತಮನೇ, ಆಗ ಬಾಣಗಳ ಹೊಡೆತದಿಂದ ಬಹಳ ಪೀಡಿತರಾದ ದ್ರೋಣರು ಬಹಳ ವ್ಯಥೆಯಿಂದ ಕೂಡಿ ರಥಪೀಠದಲ್ಲಿ ಒಂದು ಮುಹೂರ್ತದ ಕಾಲ ಕುಳಿತರು.
ಪ್ರತಿಲಭ್ಯ ತತಃ ಸಂಜ್ಞಾಂ ಮುಹೂರ್ತಾದ್ ದ್ವಿಜಸತ್ತಮಃ |
ಕ್ರೋಧೇನ ಮಹತಾವಿಷ್ಟೋ ವಾಯವ್ಯಾಸ್ತ್ರಮವಾಸೃಜತ್ ॥ 42 ॥
ದ್ವಿಜಶ್ರೇಷ್ಠರಾದ ಅವರು ಒಂದು ಮುಹೂರ್ತವು ಕಳೆದ ಮೇಲೆ ಪುನಃ ಪ್ರಜ್ಞೆಯನ್ನು ಪಡೆದು ಬಹಳ ಕ್ರೋಧದಿಂದ ಕೂಡಿದವರಾಗಿ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದರು.
ಅಸಂಭ್ರಾಂತಸ್ತತಃ ಪಾರ್ಥೋ ಧನುರಾಕೃಷ್ಯ ವೀರ್ಯವಾನ್ |
ತದಸ್ತ್ರಮಸ್ತ್ರೇಣ ರಣೇ ಸ್ತಂಭಯಾಮಾಸ ಭಾರತ ॥ 43 ॥
ಪರಾಕ್ರಮಶಾಲಿಯಾದ ಯುಧಿಷ್ಠಿರನು ಗಾಬರಿಗೊಳ್ಳದೆ ಎಲೈ ಭಾರತನೇ, ಅವರ ಅಸ್ತ್ರವನ್ನು ರಣರಂಗದಲ್ಲಿ ತನ್ನ ಪ್ರತ್ಯಸ್ತ್ರದಿಂದ ಸ್ತಂಭಿಸಿದನು.
ತತೋಽಬ್ರುವೀದ್ ವಾಸುದೇವಃ ಕುಂತೀಪುತ್ರಂ ಯುಧಿಷ್ಠಿರಮ್ |
ಯುಧಿಷ್ಠಿರ ಮಹಾಬಾಹೋ ಯತತ್ತ್ವ ವಕ್ಷ್ಯಾಮಿ ತಚ್ಛೃಣು ॥ 44 ॥
ಉಪಾರಮಸ್ವ ಯುದ್ಧಾಯ ದ್ರೋಣಾದ್ ಭರತಸತ್ತಮ |
ಗೃಧ್ಯತೇ ಹಿ ಸದಾ ದ್ರೋಣೋ ಗ್ರಹಣೇ ತವ ಸಂಯುಗೇ ॥ 45 ॥
ನಾನುರೂಪಮಹಂ ಮನ್ಯೇ ಯುದ್ಧಮಸ್ಯ ತ್ವಯಾ ಸಹ |
ಯೋಸ್ಯ ಸೃಷ್ಟೋ ವಿನಾಶಾಯ ಸ ಏನಂ ಶ್ವೋ ಹನಿಷ್ಯತಿ ॥ 46 ॥
ಪರಿವರ್ಜ್ಯ ಗುರುಂ ಯಾಹಿ ಯತ್ರ ರಾಜಾ ಸುಯೋಧನಃ |
ಭೀಮಶ್ಚ ರಥಶಾರ್ದೂಲೋ ಯುದ್ಧ್ಯತೇ ಕೌರವೈಃ ಸಹ ॥ 47 ॥
ಆಗ ವಾಸುದೇವನು ಕುಂತೀಪುತ್ರನಾದ ಯುಧಿಷ್ಠಿರನನ್ನು ಕುರಿತು- ಎಲೈ ಮಹಾಬಾಹುವೇ, ಯುಧಿಷ್ಠಿರನೇ, ನಾನು ನಿನಗೆ ಹೇಳುವ ಮಾತುಗಳನ್ನು ಕೇಳು. ಎಲೈ ಭರತಶ್ರೇಷ್ಠನೇ, ದ್ರೋಣರ ಜೊತೆಯಲ್ಲಿ ಯುದ್ಧ ಮಾಡುವುದನ್ನು ನಿಲ್ಲಿಸು. ದ್ರೋಣರು ಯಾವಾಗಲೂ ರಣರಂಗದಲ್ಲಿ ನಿನ್ನನ್ನು ಸೆರೆಹಿಡಿಯಲು ಬಯಸುತ್ತಿದ್ದಾರೆ. ನೀನು ಅವರ ಜೊತೆಯಲ್ಲಿ ಯುದ್ಧವನ್ನು ಮಾಡುವುದು ಉಚಿತವಲ್ಲ ಎಂಬುದು ನನ್ನ ಭಾವನೆ. ಅವರ ವಿನಾಶಕ್ಕಾಗಿ ಸೃಷ್ಟನಾದ ಧೃಷ್ಟದ್ಯುಮ್ನನು ನಾಳೆ ಅವರನ್ನು ಕೊಲ್ಲುವನು. ರಥಶಾರ್ದೂಲನಾದ

ಅವನು ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ. ನೀನು ಗುರುಗಳಾದ ದ್ರೋಣರನ್ನು ಬಿಟ್ಟು ರಾಜನಾದ ಸುಯೋಧನನು ಇರುವಲ್ಲಿಗೆ ಹೋಗು ಎಂದು ಹೇಳಿದನು.
ವಾಸುದೇವವಚಃ ಶ್ರುತ್ವಾ ಧರ್ಮರಾಜೋ ಯುಧಿಷ್ಠಿರಃ |
ಮುಹೂರ್ತಂ ಚಿಂತಯಿತ್ವಾ ತು ತತೋ ದಾರುಣಮಾಹವಮ್ ॥48॥
ಪ್ರಾಯಾದ್ ದ್ರುತಮಮಿತ್ರಘ್ನೋ ಯತ್ರ ಭೀಮೋ ವ್ಯವಸ್ಥಿತಃ |
ವಿನಿಘ್ನಂಸ್ತಾವಕಾನ್ ಯೋಧಾನ್ ವ್ಯಾದಿತಾಸ್ಯ ಇವಾಂತಕಃ ॥ 49॥
ಕೃಷ್ಣನ ಮಾತುಗಳನ್ನು ಕೇಳಿದ ಧರ್ಮರಾಜನಾದ ಯುಧಿಷ್ಠಿರನು ಒಂದು ಮುಹೂರ್ತದವರೆಗೆ ಚಿಂತಿಸಿ, ಅನಂತರ ಶತ್ರುಸಂಹಾರಕನಾದ ಭೀಮನು ಬಾಯ್ತೆರೆದ ಮೃತ್ಯುವಿನಂತೆ ನಿನ್ನ ಸೈನಿಕರನ್ನು ಕೊಲ್ಲುತ್ತಿರುವ ರಣರಂಗದ ಕಡೆಗೆ ಶೀಘ್ರವಾಗಿ ಹೊರಟನು.
ರಥಘೋಷೇಣ ಮಹತಾ ನಾದಯನ್ ವಸುಧಾತಳಮ್ |
ಪರ್ಜನ್ಯ ಇವ ಘರ್ಮಾಂತೇ ನಾದಯನ್ ವೈ ದಿಶೋ ದಶ |
ಭೀಮಸ್ಯ ನಿಘ್ನತಃ ಶತ್ರೂನ್ ಪಾರ್ಷ್ಣಿಂ ಜಗ್ರಾಹ ಪಾಂಡವಃ ॥ 50 ॥
ತನ್ನ ದೊಡ್ಡ ರಥಘೋಷದಿಂದ ಭೂಮಿಯನ್ನು ಪ್ರತಿಧ್ವನಿಸುತ್ತಾ ಮಳೆಗಾಲದಲ್ಲಿ ಪರ್ಜನ್ಯನು ಹತ್ತುದಿಕ್ಕುಗಳನ್ನು ನಾದದಿಂದ ತುಂಬುವಂತೆ ತುಂಬುತ್ತಾ ಶತ್ರುಗಳನ್ನು ಸಂಹರಿಸುತ್ತಿದ್ದ ಭೀಮನ ಪಾರ್ಶ್ವವನ್ನು ಹೊಂದಿದನು.
ದ್ರೋಣೋಽಪಿ ಪಾಂಡುಪಾಂಚಾಲಾನ್ ವ್ಯಧಮದ್ ರಜನೀಮುಖೇ |
ನಾದಯಂಸ್ತಳಘೋಷೇಣ ತವ ಸೈನ್ಯಾನಿ ಮಾರಿಷ ॥ 51 ॥
ಎಲೈ ಪೂಜ್ಯನೇ, ದ್ರೋಣರೂ ಸಹ ಆ ರಾತ್ರಿಮುಖದಲ್ಲಿ ತಮ್ಮ ಧನುಸ್ಸಿನ ಜ್ಯಾತಳ ಘೋಷದಿಂದ ದೊಡ್ಡ ನಾದವನ್ನುಂಟು ಮಾಡುತ್ತಾ ಪಾಂಡುಪಾಂಚಾಲರ ಸೇನೆಯನ್ನು ನಾಶಗೊಳಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೊಂಬತ್ತನೆಯ ಅಧ್ಯಾಯ
ಎರಡು ಸೈನ್ಯಗಳಲ್ಲಿ ದೀಪಗಳ ವ್ಯವಸ್ಥೆ ಮತ್ತು ಸಂಕುಲ ಯುದ್ಧ.
ಸಂಜಯಃ
ವರ್ತಮಾನೇ ತಥಾ ಯುದ್ಧೇ ಘೋರರೂಪೇ ಭಯಾವಹೇ |
ತಮಸಾ ಸಂವೃತೇ ಲೋಕೇ ರಜಸಾ ಚ ಮಹೀಪತೇ |
ನಾಪಶ್ಯಂತ ರಣೇ ಯೋಧಾಃ ಪರಸ್ಪರಮವಸ್ಥಿತಾಃ ॥ 1 ॥
ಸಂಜಯ ಘೋರರೂಪವಾದ, ಭಯಂಕರವಾದ ಅಂತಹ ಯುದ್ಧವು ನಡೆಯುತ್ತಿರಲು ಎಲೈ ರಾಜನೇ, ಲೋಕವು ಕತ್ತಲೆಯಿಂದಲೂ ಮತ್ತು ಸೈನ್ಯದ ಧೂಳಿನಿಂದಲೂ ಆವೃತವಾಗಿರಲು ರಣರಂಗದಲ್ಲಿ ನಿಂತ ಯೋಧರು ಪರಸ್ಪರವಾಗಿ ಕಾಣಲಿಲ್ಲ.
ಅನುಮಾನೇನ ಸಂಜ್ಞಾಭಿರ್ಯುದ್ಧಂ ತದ್ ವವೃತೇ ಮಹತ್ |
ನರನಾಗಾಶ್ವಮಥನಂ ಪರಮಂ ಲೋಮಹರ್ಷಣಮ್ ॥ 2 ॥
ಗಜಾಶ್ವ-ಯೋಧರನ್ನು ವಿನಾಶಗೊಳಿಸುವ ರೋಮಾಂಚಕಾರಿಯಾದ ಆ ದೊಡ್ಡ ಯುದ್ಧವು ಕೇವಲ ಊಹೆಗಳಿಂದ ಮತ್ತು ಕರೆಯುವ ಹೆಸರುಗಳಿಂದ ನಡೆಯಿತು.
ದ್ರೋಣಕರ್ಣಕೃಪಾ ವೀರಾ ಭೀಮಪಾರ್ಷತಸಾತ್ಯಕಾಃ |
ಅನ್ಯೋನ್ಯಂ ಕ್ಷೋಭಯಾಮಾಸುಃ ಸೈನ್ಯಾನಿ ನೃಪಸತ್ತಮ ॥ 3 ॥
ಎಲೈ ರಾಜಶ್ರೇಷ್ಠನೇ, ವೀರರಾದ ದ್ರೋಣ-ಕರ್ಣ-ಕೃಪರು, ಭೀಮ- ಧೃಷ್ಟದ್ಯುಮ್ನ-ಸಾತ್ಯಕಿಯರು ಪರಸ್ಪರರ ಸೈನ್ಯಗಳನ್ನು ಕ್ಷೋಭೆಗೊಳಿಸಿದರು.
ವಧ್ಯಮಾನಾನಿ ಸೈನ್ಯಾನಿ ಸಮಂತಾತ್ ತೈರ್ಮಹಾರಥೈಃ |
ತಮಸಾ ರಜಸಾ ಚೈವ ಸಮಂತಾದ್ ವಿಪ್ರದುದ್ರುವುಃ ॥ 4 ॥
ಆ ಮಹಾರಥರಿಂದ ಪ್ರಹಾರಕ್ಕೆ ಒಳಗಾಗುತ್ತಿದ್ದ ಸೈನ್ಯಗಳು ಕತ್ತಲೆಯಿಂದಲೂ ಮತ್ತು ಸೈನ್ಯದಿಂದ ಎದ್ದ ಧೂಳಿನಿಂದಲೂ ಎಲ್ಲ ಕಡೆಗಳಲ್ಲಿಯೂ ಓಡಿಹೋದವು.
ತೇ ಸರ್ವತೋ ವಿದ್ರವಂತೋ ಯೋಧಾ ವಿತ್ರಸ್ತಚೇತಸಃ |
ಅಹನ್ಯಂತ ಮಹಾರಾಜ ಧಾವಮಾನಾಶ್ಚ ಸಂಯುಗೇ ॥ 5 ॥
ಎಲೈ ಮಹಾರಾಜನೇ, ಹೆದರಿದ ಮನಸ್ಸುಳ್ಳವರಾಗಿ ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಓಡುವ ಅವರು ತಮ್ಮವರನ್ನೇ ತುಳಿದುಕೊಂಡು ಹೋಗುವುದರಿಂದ ಅನೇಕ ಯೋಧರು ಮೃತರಾದರು.
ಮಹಾರಥಸಹಸ್ರಾಣಿ ಜಘ್ನುರನ್ಯೋನ್ಯಮಾಹವೇ |
ಅಂಧೇ ತಮಸಿ ಮೂಢಾನಿ ಪುತ್ರಸ್ಯ ತವ ಮಂತ್ರಿತೇ ॥ 6 ॥

ನಿನ್ನ ಪುತ್ರನ ದುರ್ಮಂತ್ರಣದ ಫಲವಾಗಿ ಕತ್ತಲಿನಲ್ಲಿ ಮುಳುಗಿದ ಸಹಸ್ರಾರು ಮಹಾರಥರು ಪರಸ್ಪರವಾಗಿ ಹಾಗೆಯೇ ಹೊಡೆದಾಡಿದರು.
ತತಃ ಸರ್ವಾಣಿ ಸೈನ್ಯಾನಿ ಸೇನಾಗೋಪಾಶ್ಚ ಭಾರತ |
ವ್ಯಮುಹ್ಯಂತ ರಣೇ ತತ್ರ ತಮಸಾ ಸಂವೃತೇ ಸತಿ ॥ 7 ॥
ಎಲೈ ಭಾರತನೇ, ಆಗ ಕತ್ತಲೆಯು ಪೂರ್ಣವಾಗಿ ಆವರಿಸುತ್ತಿರಲು ಎಲ್ಲ ಸೈನ್ಯಗಳೂ ಮತ್ತು ಸೈನ್ಯ ರಕ್ಷಕರೂ ಏನು ಮಾಡಬೇಕೆಂದು ತಿಳಿಯದಾದರು.
ಧೃತರಾಷ್ಟ್ರಃ
ತೇಷಾಂ ಸಲ್ಲೋಡ್ಯಮಾನಾನಾಂ ಪಾಂಡವೈರ್ನಿಹತೌಜಸಾಮ್ |
ಅಂಧೇ ತಮಸಿ ಮಗ್ನಾನಾಮಾಸೀತ್ ಕಾ ವೋ ಮತಿಸ್ತದಾ ॥ 8 ॥
ಧೃತರಾಷ್ಟ್ರ ಪಾಂಡವರಿಂದ ನಿಮ್ಮ ಸಾಮರ್ಥ್ಯವು ನಾಶಗೊಳಿಸಲ್ಪಟ್ಟು ನಿಮ್ಮ ಸೈನ್ಯವು ಕತ್ತಲಿನಲ್ಲಿ ಮುಳುಗಿ ಪಾಂಡವರಿಂದ ಕ್ಷೋಭೆಗೆ ಒಳಗಾದಾಗ ನಿಮ್ಮ ಮನಸ್ಸು ಹೇಗಿದ್ದಿತು?
ಕಥಂ ಪ್ರಕಾಶಸ್ತೇಷಾಂ ವಾ ಮಮ ಸೈನ್ಯೇಷು ವಾ ಪುನಃ |
ಬಭೂವ ಲೋಕೇ ತಮಸಾ ತಥಾ ಸಂಜಯ ಸಂವೃತೇ ॥ 9 ॥
ಎಲೈ ಸಂಜಯನೇ, ಎಲ್ಲ ಲೋಕವೂ ಕತ್ತಲೆಯಿಂದ ಆವೃತವಾಗಿದ್ದಾಗ ಅವರ ಸೈನ್ಯಕ್ಕಾಗಲೀ ಅಥವಾ ನಿಮ್ಮ ಸೈನ್ಯಕ್ಕಾಗಲೀ ಪುನಃ ಪ್ರಕಾಶವು ಹೇಗೆ ಉಂಟಾಯಿತು?
ಸಂಜಯಃ
ತತಃ ಸರ್ವಾಣಿ ಸೈನ್ಯಾನಿ ಹತಶಿಷ್ಟಾನಿ ಯಾನಿ ವೈ |
ಸೇನಾಗೋಪ್ತೄನಥಾದಿಶ್ಯ ಪುನರ್ವ್ಯೂಹಮಕಲ್ಪಯನ್ ॥ 10 ॥
ಸಂಜಯ ಆಗ ಅಳಿದುಳಿದ ಸೈನ್ಯಗಳೆಲ್ಲವೂ ಸೇನಾರಕ್ಷಕರಿಗೆ ಆದೇಶವನ್ನು ನೀಡಿ ಪುನಃ ವ್ಯೂಹವನ್ನು ರಚಿಸಿದವು.
ದ್ರೋಣಃ ಪುರಸ್ತಾಜ್ಜಘನೇ ತು ಶಲ್ಯಃ
ತಥಾ ದ್ರೌಣಿಃ ಪಾರ್ಶ್ವತಃ ಸೌಬಲಶ್ಚ |
ಸ್ವಯಂ ತು ಸರ್ವಾಣಿ ಬಲಾನಿ ರಾಜನ್
ರಾಜಾಭ್ಯಯಾದ್ ಗೋಪಯನ್ ವೈ ನಿಶಾಯಾಮ್ ॥ 11 ॥
ಮುಂಭಾಗದಲ್ಲಿ ದ್ರೋಣರು, ಹಿಂಭಾಗದಲ್ಲಿ ಶಲ್ಯ, ಎರಡು ಪಾರ್ಶ್ವಗಳಲ್ಲಿ ಅಶ್ವತ್ಥಾಮರು ಮತ್ತು ಶಕುನಿ, ಎಲೈ ರಾಜನೇ, ಮತ್ತು ರಾಜನಾದ ದುರ್ಯೋಧನನು ಸ್ವತಃ ಆ ರಾತ್ರಿಯಲ್ಲಿ ಸೈನ್ಯಗಳನ್ನು ರಕ್ಷಣೆ ಮಾಡುತ್ತಾ ತಾನೇ ಮುನ್ನುಗ್ಗಿದನು.
ಉವಾಚ ಸರ್ವಾಂಶ್ಚ ಪದಾತಿಸಂಘಾನ್
ದುರ್ಯೋಧನಃ ಪಾರ್ಥಿವ ಸಾಂತ್ವಪೂರ್ವಮ್ |
ಉತ್ಸೃಜ್ಯ ಸರ್ವೇ ಪರಮಾಯುಧಾನಿ
ಗೃಹ್ಣೀತ ಹಸ್ತೈರ್ಜ್ವಲಿತಾನ್ ಪ್ರದೀಪಾನ್ ॥ 12 ॥
ಎಲೈ ರಾಜನೇ, ದುರ್ಯೋಧನನು ಆಗ ಎಲ್ಲ ಪದಾತಿ ಸಮೂಹಗಳನ್ನು ಕುರಿತು ಶಾಂತವಾದ ಮಾತಿನಿಂದ, ಎಲ್ಲರೂ ನಿಮ್ಮ ಶ್ರೇಷ್ಠವಾದ ಆಯುಧವನ್ನು ಬಿಟ್ಟು ಹಸ್ತಗಳಲ್ಲಿ ಜ್ವಲಿಸುವ ದೀಪಗಳನ್ನು ಹಿಡಿಯಿರಿ ಎಂದು ಹೇಳಿದನು.
ತೇ ಚೋದಿತಾಃ ಪಾರ್ಥಿವಸತ್ತಮೇನ
ತತಃ ಪ್ರಹೃಷ್ಟಾ ಜಗೃಹುಃ ಪ್ರದೀಪಾನ್ |
ಸಾ ಭೂಯ ಏವ ಧ್ವಜಿನೀ ವಿಭಕ್ತಾ
ವ್ಯರೋಚತಾಗ್ನಿಪ್ರಭಯಾ ನಿಶಾಯಾಮ್ ॥ 13 ॥
ರಾಜಶ್ರೇಷ್ಠನಾದ ಅವನಿಂದ ಹೀಗೆ ಪ್ರೇರಿಸಲ್ಪಟ್ಟ ಯೋಧರು ಸಂತೋಷಗೊಂಡು ಕೈಗಳಲ್ಲಿ ದೀಪವನ್ನು ಹಿಡಿದರು. ವಿಭಕ್ತವಾಗಿದ್ದ ಆ ಸೈನ್ಯವು ರಾತ್ರಿಯಲ್ಲಿ ದೀಪಗಳ ಕಾಂತಿಯಿಂದ ಪುನಃ ಪ್ರಕಾಶವನ್ನು ಹೊಂದಿತು.
ಮಹಾಧನೈರಾಭರಣೈಶ್ಚ ದಿವ್ಯೈಃ
ಶಸ್ತ್ರೈಃ ಪ್ರದೀಪ್ತೈರಭಿಸಂಪತದ್ಭಿಃ |
ಕ್ಷಣೇನ ಸರ್ವೇ ವಿಹಿತಾಃ ಪ್ರದೀಪಾ
ವ್ಯದೀಪಯಂಶ್ಚ ಧ್ವಜಿನೀಂ ತದಾಶು ॥ 14 ॥
ಬಹಳ ಬೆಲೆಬಾಳುವ ದಿವ್ಯವಾದ ಆಭರಣಗಳಿಂದಲೂ, ಚಲಿಸುವ ಪ್ರದೀಪ್ತವಾದ ಶಸ್ತ್ರಗಳಿಂದಲೂ ಮತ್ತು ದೀಪಗಳಿಂದಲೂ ಒಂದು ಕ್ಷಣದಲ್ಲಿ ಆ ಸೈನ್ಯವು ಪ್ರಕಾಶಗೊಂಡಿತು.
ಸರ್ವಾಸ್ತು ಸೇನಾ ವ್ಯತಿಸೇವ್ಯಮಾನಾಃ
ಪದಾತಿಭಿಃ ಪಾವಕತೈಲಹಸ್ತೈಃ |
ಪ್ರಕಾಶ್ಯಮಾನಾ ದದೃಶುರ್ನಿಶಾಯಾಂ
ಯಥಾಂತರಿಕ್ಷೇ ಜಲದಾಸ್ತಡಿದ್ಭಿಃ ॥ 15 ॥
ಕೈಯಲ್ಲಿ ಅಗ್ನಿ ಮತ್ತು ತೈಲವನ್ನು ಹಿಡಿದ ಪದಾತಿಗಳಿಂದ ಪ್ರಕಾಶಿಸಲ್ಪಟ್ಟ ಆ ಸೈನ್ಯವು ರಾತ್ರಿಯ ಕಾಲದಲ್ಲಿ ಅಂತರಿಕ್ಷದಲ್ಲಿ ಮಿಂಚುಗಳಿಂದ ಕೂಡಿದ ಮೋಡಗಳಂತೆ ಇರುವುದನ್ನು ಎಲ್ಲರೂ ನೋಡಿದರು.
ಪ್ರಕಾಶಿತಾಯಾಂ ತು ತಥಾ ಧ್ವಜಿನ್ಯಾಂ

ದ್ರೋಣೋಽಗ್ನಿಕಲ್ಪಃ ಪ್ರತಪನ್ ಸಮಂತಾತ್ |
ರರಾಜ ರಾಜೇಂದ್ರ ಸುವರ್ಣವರ್ಮಾ
ಮಧ್ಯಂ ಗತಃ ಸೂರ್ಯ ಇವಾಂಶುಮಾಲೀ ॥ 16 ॥
ಎಲೈ ರಾಜೇಂದ್ರನೇ, ಸೈನ್ಯವು ದೀಪಗಳ ಬೆಳಕಿನಲ್ಲಿ ಪ್ರಕಾಶವನ್ನು ಹೊಂದುತ್ತಿರಲು ಅಗ್ನಿಸದೃಶರಾದ ದ್ರೋಣರು ಶತ್ರುಸೈನ್ಯಕ್ಕೆ ಎಲ್ಲ ಕಡೆಗಳಿಂದಲೂ ತಾಪವನ್ನುಂಟು ಮಾಡುತ್ತಾ ಸುವರ್ಣಮಯವಾದ ಕವಚವನ್ನು ಧರಿಸಿ ಸೈನ್ಯದ ಮಧ್ಯದಲ್ಲಿ ಕಿರಣಗಳಿಂದ ಕೂಡಿದ ಸೂರ್ಯನಂತೆ ಶೋಭಿಸಿದರು.
ಜಾಂಬೂನದೇಷ್ವಾಭರಣೇಷು ಚೈವ
ನಿಷ್ಕೇಷು ಶುದ್ಧೇಷು ಶರಾವರೇಷು |
ಪೀತೇಷು ಶಸ್ತ್ರೇಷು ಚ ಪಾವಕಸ್ಯ
ಪ್ರತಿಪ್ರಭಾಸ್ತತ್ರ ತತೋ ಬಭೂವುಃ ॥ 17 ॥
ಆಗ ಸುವರ್ಣಮಯವಾದ ಆಭರಣಗಳಲ್ಲಿಯೂ, ಸುವರ್ಣಮಯವಾದ ಹಾರಗಳಲ್ಲಿಯೂ, ಶುದ್ಧವಾದ ಗುರಾಣಿಗಳಲ್ಲಿಯೂ, ಜಲ-ತೈಲಾದಿಗಳನ್ನು ಕುಡಿಸಿ ತೀಕ್ಷ್ಣಗೊಳಿಸಿದ ಶಸ್ತ್ರಗಳಲ್ಲಿಯೂ, ಉರಿಯುವ ದೀಪಗಳ ಪ್ರತಿಪ್ರಭೆಗಳು ಉಂಟಾದವು.
ಗದಾಶ್ಚ ಶೈಕ್ಯಾಃ ಪರಿಘಾಶ್ಚ ಶುಭ್ರಾ
ರಥೇಷುಶಕ್ತ್ಯಶ್ಚ ವಿವರ್ತಮಾನಾಃ |
ಪ್ರತಿಪ್ರಭಾ ರಶ್ಮಿಭಿರಾಜಮೀಢ
ಪುನಃ ಪುನಃ ಸಂಜನಯಂತಿ ದೀಪ್ತಾಃ ॥ 18 ॥
ಎಲೈ ಆಜಮೀಢನೇ, ನೆಲುವಿನಲ್ಲಿಟ್ಟು ರಣರಂಗಕ್ಕೆ ತಂದ ಗದೆಗಳು, ಶುಭ್ರವಾದ ಪರಿಘಗಳು, ಚಲಿಸುವ ರಥ-ಬಾಣ ಮತ್ತು ಶಕ್ತಿಗಳು, ದೀಪದ ಪ್ರಕಾಶವು ತಮ್ಮ ಮೇಲೆ ಬಿದ್ದು ಪ್ರತಿಫಲನವನ್ನುಂಟು ಮಾಡಿ ಪುನಃ ಪುನಃ ಪ್ರಭೆಯನ್ನು ಉಂಟು ಮಾಡಿದವು.
ಛತ್ರಾಣಿ ಬಾಲ(ಣ)ವ್ಯಜನಾನುಷಂಗಾ
ದೀಪ್ತಾ ಮಹೋಲ್ಕಾಶ್ಚ ತಥೈವ ರಾಜನ್ |
ವ್ಯಾಘೂರ್ಣಮಾನಾಶ್ಚ ಸುವರ್ಣಮಾಲಾ
ವ್ಯಾಯಚ್ಛತಾಂ ತತ್ರ ತದಾ ವಿರೇಜುಃ ॥ 19 ॥
ಎಲೈ ರಾಜನೇ, ಛತ್ರಗಳು, ಬಾಣ(ಲ)ವ್ಯಜನಗಳು, ಬತ್ತಳಿಕೆಗಳು, ಪ್ರಕಾಶಮಾನವಾದ ಮಹೋಲ್ಕೆಗಳು, ಯುದ್ಧವನ್ನು ಮಾಡುವ ಯೋಧರ ಚಲಿಸುವ ಕಂಠದ ಸುವರ್ಣಮಾಲೆಗಳು ಆಗ (ದೀಪದ ಬೆಳಕಿನಲ್ಲಿ) ಶೋಭಿಸಿದವು.
ಶಸ್ತ್ರಪ್ರಭಾಭಿಶ್ಚ ವಿರಾಜಮಾನಂ
ದೀಪಪ್ರಭಾಭಿಶ್ಚ ತದಾ ಬಲಂ ತತ್ |
ಪ್ರಕಾಶಿತಂ ಚಾಭರಣಪ್ರಭಾಭಿ-
ರ್ಭೃಶಂ ಪ್ರಕಾಶಂ ನೃಪತೇ ಬಭೂವ ॥ 20 ॥
ಎಲೈ ರಾಜನೇ, ಆಗ ಶಸ್ತ್ರಗಳ ಕಾಂತಿಯಿಂದಲೂ, ದೀಪಗಳ ಪ್ರಭೆಯಿಂದಲೂ, ಆಭರಣಗಳ ಪ್ರಭೆಯಿಂದಲೂ ವಿರಾಜಮಾನವಾದ ಆ ಸೈನ್ಯದಲ್ಲಿ ಒಳ್ಳೆಯ ಪ್ರಕಾಶವುಂಟಾಯಿತು.
ಪೀತಾನಿ ಶಸತ್ರಣ್ಯಸೃಗುಕ್ಷಿತಾನಿ
ವೀರಾವಧೂತಾನಿ ತನುದ್ರುಹಾಣಿ |
ದೀಪ್ತಾಂ ಪ್ರಭಾಂ ಪ್ರಾಜನಯಂತ ತತ್ರ
ತಪಾತ್ಯಯೇ ವಿದ್ಯುದಿವಾಂತರಿಕ್ಷೇ ॥ 21 ॥
ವೀರರು ಎಸೆದ ಶರೀರಘಾತಕವಾದ, ರಕ್ತಸಿಕ್ತವಾದ ಪೀತ ಶಸ್ತ್ರಗಳು ಅಲ್ಲಿ ರಣರಂಗದಲ್ಲಿ, ಮಳೆಗಾಲದಲ್ಲಿ ಅಂತರಿಕ್ಷದಲ್ಲಿನ ಮಿಂಚುಗಳಂತೆ ದೀಪ್ತವಾದ ಪ್ರಭೆಯನ್ನುಂಟು ಮಾಡಿದವು.
ಪ್ರಕಂಪಿತಾನಾಮಭಿಘಾತವೇಗೈ-
ರಭಿಘ್ನತಾಂ ಚಾಪತತಾಂ ಜವೇನ |
ವಕತ್ರಣ್ಯಶೋಭಂತ ತದಾ ನರಾಣಾಂ
ವಾಯ್ವೀರಿತಾನೀವ ಮಹಾಂಬುಜಾನಿ ॥ 22 ॥
ವೇಗದಿಂದ ಮುನ್ನುಗ್ಗಿ ಶತ್ರುಗಳನ್ನು ಹೊಡೆದು ಆ ಪ್ರಹಾರದ ವೇಗದಿಂದ ಚಲಿಸುವ ಯೋಧರ ಮುಖಗಳು ವಾಯುವೇಗದಿಂದ ಚಲಿಸುವ ದೊಡ್ಡ ಕಮಲಗಳಂತೆ ಶೋಭಿಸಿದವು.
ಮಹಾವನೇ ದಾವ ಇವ ಪ್ರದೀಪ್ತೇ
ಯಥಾ ಪ್ರಭಾ ಭಾಸ್ಕರಸ್ಯಾಪಿ ನಶ್ಯೇತ್ |
ತಥಾ ತವಾಸೀದ್ ಧ್ವಜಿನೀ ಪ್ರದೀಪ್ತಾ
ಮಹಾಭಯೇ ಭಾರತ ಭೀಮರೂಪಾ ॥ 23 ॥
ಎಲೈ ಭಾರತನೇ, ದೊಡ್ಡ ಕಾಡಿನಲ್ಲಿ ದಾವಾಗ್ನಿಯು ಜ್ವಲಿಸುವಾಗ ಹೇಗೆ ಸೂರ್ಯನ ಪ್ರಭೆಯು ನಾಶ ಹೊಂದುವುದೋ ಹಾಗೆ ಭಯಂಕರವಾದ ನಿನ್ನ ಸೈನ್ಯವು ಮಹಾಭಯವನ್ನುಂಟು ಮಾಡುವ ಆ ಯುದ್ಧದಲ್ಲಿ ಪ್ರಕಾಶವನ್ನು ಹೊಂದಿತು.
ತತ್ ಸಂಪ್ರದೀಪ್ತಂ ಬಲಮಸ್ಮದೀಯಂ
ನಿಶಾಮ್ಯ ಪಾರ್ಥಾಸ್ತ್ವರಿತಾಸ್ತಥೈವ |

ಸರ್ವೇಷು ಸೈನ್ಯೇಷು ಪದಾತಿಸಂಘಾನ್
ಅಚೋದಯಂಸ್ತೇಥ ಚಕ್ರುಃ ಪ್ರದೀಪಾನ್ ॥ 24 ॥
ನಮ್ಮ ಸೈನ್ಯವು ಹೀಗೆ ದೀಪಗಳ ಪ್ರಭೆಯಿಂದ ಕೂಡಿರುವುದನ್ನು ನೋಡಿ ಪಾಂಡವರು ಶೀಘ್ರವಾಗಿ ತಮ್ಮ ಸೈನ್ಯಗಳಲ್ಲಿ ಪದಾತಿ ಸಮೂಹವನ್ನು ಪ್ರಚೋದಿಸಿದರು. ಅನಂತರ ಪದಾತಿಗಳು ಅಲ್ಲಿಯೂ ದೀಪಗಳನ್ನು ಬೆಳಗಿಸಿದರು.
ಗಜೇ ಗಜೇ ಸಪ್ತ ಕೃತಾಃ ಪ್ರದೀಪಾ
ರಥೇ ರಥೇ ಚೈವ ದಶ ಪ್ರದೀಪಾಃ |
ದ್ವಾವಶ್ವಪೃಷ್ಠೇ ಪರಿಪಾರ್ಶ್ವತೋಽನ್ಯೇ
ಧ್ವಜೇಷು ಚಾನ್ಯೇ ಜಘನೇಷು ಚಾನ್ಯೇ ॥ 25 ॥
ಒಂದೊಂದು ಗಜಕ್ಕೂ ಏಳು ದೀಪಗಳು. ಒಂದೊಂದು ರಥಕ್ಕೂ ಹತ್ತು ದೀಪಗಳು. ಒಂದೊಂದು ಅಶ್ವದ ಪಕ್ಕದಲ್ಲಿಯೂ ಎರಡು ದೀಪಗಳು. ಧ್ವಜಗಳ ಬಳಿ ಬೇರೆ ದೀಪಗಳು. ಹಿಂಭಾಗದಲ್ಲಿ ಬೇರೆ ದೀಪಗಳು- ಹೀಗೆ ಇದ್ದವು.
ಸೇನಾಸು ಸರ್ವಾಸು ಚ ಪಾರ್ಶ್ವತೋಽನ್ಯೇ
ಪಶ್ಚಾತ್ ಪುರಸ್ತಾಚ್ಚ ಸಮಂತತಶ್ಚ |
ಮಧ್ಯೇ ತಥಾನ್ಯೇ ಜ್ವಲಿತಾಗ್ನಿಹಸ್ತಾಃ
ಸೇನಾದ್ವಯೇಽಪಿ ಸ್ಮ ನರಾ ವಿಚೇರುಃ ॥ 26 ॥
ಎಲ್ಲ ಸೈನ್ಯಗಳಲ್ಲಿಯೂ, ಸೈನ್ಯದ ಪಾರ್ಶ್ವದಲ್ಲಿಯೂ, ಮುಂಭಾಗದಲ್ಲಿಯೂ, ಹಿಂಭಾಗದಲ್ಲಿಯೂ, ಸುತ್ತಲೂ, ಮಧ್ಯದಲ್ಲಿಯೂ ಬೇರೆ ಬೇರೆ ಯೋಧರು ಎರಡು ಸೈನ್ಯಗಳಲ್ಲಿಯೂ ಜ್ವಲಿಸುವ ದೀಪಗಳನ್ನು ಹಿಡಿದು ಸಂಚರಿಸಿದರು.
ಸರ್ವೇಷು ಸೈನ್ಯೇಷು ಪದಾತಿಸಂಘಾ
ವ್ಯಾಮಿಶ್ರಿತಾ ಹಸ್ತಿರಥಾಶ್ವವೃಂದ್ಯೈಃ |
ಮಧ್ಯೇ ತಥಾನ್ಯೇ ಜ್ವಲಿತಾಗ್ನಿಹಸ್ತಾ
ವ್ಯದೀಪಯನ್ ಪಾಂಡುಸುತಸ್ಯ ಸೇನಾಮ್ ॥ 27 ॥
ಎಲ್ಲ ಸೈನ್ಯಗಳಲ್ಲಿಯೂ ಪದಾತಿಗಳ ಸಮೂಹವು ಗಜಾಶ್ವ-ರಥಗಳ ಸಮೂಹದಿಂದ ಮಿಶ್ರಣವನ್ನು ಹೊಂದಿತು. ಇನ್ನು ಕೆಲವು ಪುರುಷರು ಕೈಯಲ್ಲಿ ದೀಪಗಳನ್ನು ಹಿಡಿದು ಪಾಂಡವರ ಸೈನ್ಯವನ್ನು ಮಧ್ಯದಲ್ಲಿ ಪ್ರಕಾಶಗೊಳಿಸಿದರು.
ತೇನ ಪ್ರದೀಪ್ತೇನ ತಥಾ ಪ್ರದೀಪ್ತಂ
ಬಲಂ ತದಾಸೀದ್ ಬಲವದ್ ಬಲೇನ |
ಭಾಃ ಕುರ್ವತಾ ಭಾನುಮತಾ ಗ್ರಹೇಣ
ದಿವಾಕರೇಣಾಗ್ನಿರಿವಾಭಿತಪ್ತಃ ॥ 28 ॥
ಜ್ವಲಿಸುವ ದೀಪಗಳಿಂದ ಪ್ರಕಾಶಿತವಾದ ಆ ಸೈನ್ಯವು ಪ್ರಕಾಶವನ್ನು ಕೊಡುವ ಕಿರಣಗಳಿಂದ ಕೂಡಿದ ಸೂರ್ಯಗ್ರಹವು ಅಗ್ನಿಯಿಂದ ರಕ್ಷಿತವಾದಂತೆ (ಅಗ್ನಿಯಿಂದ ಕೂಡಿದಂತೆ) ಆ ಸೈನ್ಯವು ಬಲಿಷ್ಠವಾಯಿತು.
ತಯೋಃ ಪ್ರಭಾಃ ಪೃಥಿವೀಮಂತರಿಕ್ಷಂ
ಸರ್ವಾ ವ್ಯತಿಕ್ರಮ್ಯ ದಿಶಶ್ಚ ವೃದ್ಧಾಃ |
ತೇನ ಪ್ರಕಾಶೇನ ಭೃಶಂ ಪ್ರಕಾಶಂ
ಬಭೂವ ತೇಷಾಂ ತವ ಚೈವ ಸೈನ್ಯಮ್ ॥ 29 ॥
ಆ ಪ್ರಕಾಶವು ಭೂಮಿಯನ್ನೂ, ಅಂತರಿಕ್ಷವನ್ನೂ ದಾಟಿ ಎಲ್ಲ ದಿಕ್ಕುಗಳಿಗೂ ಹಬ್ಬಿತು. ಆ ಪ್ರಕಾಶದಿಂದ ನಿನ್ನ ಸೈನ್ಯವೂ ಮತ್ತು ಪರರ ಸೈನ್ಯವೂ ಪ್ರಕಾಶವನ್ನು ಹೊಂದಿದವು.
ತೇನ ಪ್ರಕಾಶೇನ ದಿವಂಗಮೇನ
ಸಂಬೋಧಿತಾ ದೇವಗಣಾಶ್ಚ ರಾಜನ್ |
ಗಂಧರ್ವಯಕ್ಷಾಸುರಸಿದ್ಧಸಂಘಾಃ
ಸಮಾಗಮನ್ನಪ್ಸರಸಶ್ಚ ಸರ್ವಾಃ ॥ 30 ॥
ಎಲೈ ರಾಜನೇ, ಅಂತರಿಕ್ಷವನ್ನು ಮುಟ್ಟಿದ ಆ ಪ್ರಕಾಶದಿಂದದೇವಸಮೂಹಗಳು ಪ್ರಚೋದಿತವಾಗಿ ಗಂಧರ್ವ-ಯಕ್ಷ-ಉರಗ-ಸಿದ್ಧ ಸಮೂಹಗಳೂ, ಎಲ್ಲ ಅಪ್ಸರೆಯರೂ ಯುದ್ಧವನ್ನು ನೋಡಲು ಬಂದರು.
ತದ್ ದೇವಗಂಧರ್ವಸಮಾಕುಲಂ ಚ
ಯಕ್ಷಾಸುರೇಂದ್ರಾಪ್ಸರಸಾಂ ಗಣೈಶ್ಚ |
ಹತೈಶ್ಚ ವೀರೈರ್ದಿವಮಾರುಹದ್ಭಿ-
ರಾಯೋಧನಂ ದಿವ್ಯಕಲ್ಪಂ ಬಭೂವ ॥ 31 ॥
ದೇವತೆಗಳಿಂದಲೂ, ಗಂಧರ್ವರಿಂದಲೂ, ಯಕ್ಷರಿಂದಲೂ, ಅಸುರ ಶ್ರೇಷ್ಠರಿಂದಲೂ, ಅಪ್ಸರೆಯರ ಗಣಗಳಿಂದಲೂ, ಹತರಾಗಿ ಅಂತರಿಕ್ಷ ಮಾರ್ಗವಾಗಿ ಸ್ವರ್ಗಕ್ಕೆ ಹೋಗುವ ವೀರರಿಂದಲೂ ಕೂಡಿದ ಆ ರಣರಂಗವು (ರಣರಂಗದ ಮೇಲಿನ ಆಕಾಶವು ಸ್ವರ್ಗದಂತೆ ಇದ್ದಿತು).
ರಥಾಶ್ವನಾಗಾಕುಲದೀಪದೀಪ್ತಂ
ಸಂರಬ್ಧಯೋಧಾಹತವಿದ್ರುತಾಶ್ವಮ್ |
ಮಹದ್ಬಲಂ ವ್ಯೂಢರಥಾಶ್ವನಾಗಂ

ಸುರಾಸುರವ್ಯೂಹಸಮಂ ಬಭೂವ ॥ 32 ॥
ರಥಗಳು, ಅಶ್ವಗಳು, ಗಜಗಳು, ಚಲಿಸುವ ದೀಪಗಳಿಂದ ಪ್ರಕಾಶವನ್ನು ಹೊಂದಿದ, ರಥಾಶ್ವ-ಗಜಗಳಿಂದ ಕೂಡಿದ, ಕೋಪಗೊಂಡ ಯೋಧರಿಂದ ಪ್ರಹರಿಸಲ್ಪಟ್ಟು ಓಡುವ ಅಶ್ವಗಳಿಂದ ಕೂಡಿದ, ವೀರರಿಂದ ಏರಲ್ಪಟ್ಟ ರಥಾಶ್ವ- ಗಜಗಳಿಂದ ಕೂಡಿದ, ಆ ದೊಡ್ಡ ಸೈನ್ಯವು ದೇವಾಸುರ ಸೈನ್ಯ ಸಮೂಹಕ್ಕೆ ಸಮವಾಗಿದ್ದಿತು.
ತಚ್ಚಕ್ತಿಸಂಘಾಕುಲಚಂಡವಾತಂ
ಮಹಾರಥಾಭ್ರಾಂ ರಥವಾಜಿಘೋಷಮ್ |
ಶಸೌತ್ರಘವರ್ಷಂ ರುಧಿರಾಂಬುಧಾರಂ
ನಿಶಿ ಪ್ರವೃತ್ತಂ ನರದೇವ ಯುದ್ಧಮ್ ॥ 33 ॥
ಎಲೌ ನರದೇವನೇ, ನಿಬಿಡವಾದ ಶಕ್ತಿಸಮೂಹಗಳೆಂಬ ಚಂಡಮಾರುತದಿಂದ ಕೂಡಿದ, ಮಹಾರಥರೆಂಬ ಮೋಡಗಳಿಂದ ಕೂಡಿದ, ರಥಾಶ್ವಗಳ ಘೋಷವೆಂಬ ಗುಡುಗುಗಳಿಂದ ಕೂಡಿದ, ಶಸ್ತ್ರಸಮೂಹವೆಂಬ ಮಳೆಯಿಂದ ಕೂಡಿದ, ರಕ್ತವೆಂಬ ಜಲಧಾರೆಯಿಂದ ಕೂಡಿದ ಯುದ್ಧವು ರಾತ್ರಿಯಲ್ಲಿ ಪ್ರವೃತ್ತವಾಯಿತು.
ತಸ್ಮಿನ್ ಮಹಾಗ್ನಿಪ್ರತಿಮೋ ಮಹಾತ್ಮಾ
ಸಂತಾಪಯನ್ ಪಾಂಡವಾನ್ ವಿಪ್ರಮುಖ್ಯಃ |
ಗಭಸ್ತಿಭಿರ್ಮಧ್ಯಗತೋ ಯಥಾರ್ಕೋ
ವರ್ಷಾತ್ಯಯೇ ತದ್ವದಭೂನ್ನರೇಂದ್ರ ॥ 34 ॥
ಎಲೈ ರಾಜೇಂದ್ರನೇ, ಆ ಯುದ್ಧದಲ್ಲಿ ಮಹಾಗ್ನಿಸದೃಶರೂ, ಮಹಾತ್ಮರೂ, ಬ್ರಾಹ್ಮಣಶ್ರೇಷ್ಠರೂ ಆದ ದ್ರೋಣರು ಪಾಂಡವರನ್ನು ಸಂತಾಪಗೊಳಿಸುತ್ತಾ ಬೇಸಿಗೆಯ ಕಾಲದಲ್ಲಿ ಮಧ್ಯಂದಿನದಲ್ಲಿ ಆಕಾಶ ಮಧ್ಯದಲ್ಲಿ ತನ್ನ ಕಿರಣಗಳಿಂದ ಕೂಡಿದ ಸೂರ್ಯನಂತೆ ಶೋಭಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ನಲವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತನೆಯ ಅಧ್ಯಾಯ
ಸಂಕುಲಯುದ್ಧ.
ಸಂಜಯಃ
ಪ್ರಕಾಶಿತೇ ತಥಾ ಲೋಕೇ ರಜಸಾ ಚ ತಮೋವೃತೇ |
ಸಮಾಜಗ್ಮುರಥೋ ವೀರಾಃ ಪರಸ್ಪರವಧೈಷಿಣಃ ॥ 1 ॥
ಸಂಜಯ ಆ ರೀತಿಯಲ್ಲಿ ಲೋಕಗಳು ಪ್ರಕಾಶವಾಗಿ ಸೈನ್ಯದ ಧೂಳಿನಿಂದ ಆವರಿಸಲ್ಪಟ್ಟಿರಲು ಪರಸ್ಪರ ವಧೆಯನ್ನು ಬಯಸುವ ವೀರರು ರಣರಂಗದಲ್ಲಿ ಸೇರಿದರು.
ತೇ ಸಮೇತ್ಯ ರಣೇ ರಾಜನ್ ಶಸ್ತ್ರಪ್ರಾಸಾಸಿಧಾರಿಣಃ |
ಪರಸ್ಪರಮುದೈಕ್ಷಂತ ಪರಸ್ಪರಕೃತಾಗಸಃ ॥ 2 ॥
ಎಲೈ ರಾಜನೇ, ಪರಸ್ಪರವಾಗಿ ಅಪಚಾರವನ್ನು ಮಾಡಿದ ಶಸ್ತ್ರ- ಪ್ರಾಸ- ಖಡ್ಗಧಾರಿಗಳಾದ ಅವರು ರಣರಂಗದಲ್ಲಿ ಪರಸ್ಪರವಾಗಿ ನೋಡಿದರು.
ಪ್ರದೀಪಾನಾಂ ಸಹಸ್ರೈಶ್ಚ ದೀಪ್ಯಮಾನೈಃ ಸಮಂತತಃ |
ವಿರರಾಜ ತದಾ ಭೂಮಿರ್ದ್ಯೌರ್ಗ್ರಹೈರಿವ ಭಾರತ ॥ 3 ॥
ಎಲೈ ಭಾರತನೇ, ಸಹಸ್ರಾರು ಪ್ರದೀಪಗಳಿಂದ ಎಲ್ಲ ಕಡೆಯಲ್ಲಿಯೂ ಪ್ರಕಾಶಮಾನವಾದ ಭೂಮಿಯು ಗ್ರಹಗಳಿಂದ ಕೂಡಿದ ಅಂತರಿಕ್ಷದಂತೆ ಶೋಭಿಸಿತು.
ಉಲ್ಕಾಶತೈಃ ಪ್ರಜ್ವಲಿತೈ ರಣಭೂಮಿರ್ವ್ಯರಾಜತ |
ದಹ್ಯಮಾನೇವ ಲೋಕಾನಾಮಭಾವೇ ವೈ ವಸುಂಧರಾ ॥ 4 ॥
ಪಂಜುಗಳು ಪ್ರಜ್ವಲಿಸಲ್ಪಡುತ್ತಿರಲು ರಣಭೂಮಿಯು ಲೋಕಗಳ ನಾಶಕ್ಕಾಗಿ ಜ್ವಲಿಸುವ ಭೂಮಿಯಂತೆ ವಿರಾಜಿಸಿತು.
ಪ್ರಾದೀಪ್ಯಂತ ದಿಶಃ ಸರ್ವಾಃ ಪ್ರದೀಪೈಸ್ತೈಃ ಸಮಂತತಃ |
ವರ್ಷಾಪ್ರದೋಷೇ ಖದ್ಯೋತೈರ್ವೃತಾ ವೃಕ್ಷಾ ಇವಾಬಭುಃ ॥ 5 ॥
ಎಲ್ಲ ಕಡೆಗಳಲ್ಲಿಯೂ ಇರುವ ಆ ದೀಪಗಳಿಂದ ಎಲ್ಲ ದಿಕ್ಕುಗಳು ಮಳೆಗಾಲದಲ್ಲಿ ಮಿಣುಕುಹುಳುಗಳಿಂದ ತುಂಬಿದ ವೃಕ್ಷಗಳಂತೆ ಶೋಭಿಸಿದವು.
ಅಸಜ್ಜಂತ ತತೋ ವೀರಾ ವೀರೇಷ್ವೇವ ಪೃಥಕ್ ಪೃಥಕ್ |
ನಾಗಾ ನಾಗೈಃ ಸಮಾಜಗ್ಮುಸ್ತುರಗಾಃ ಸಹ ವಾಜಿಭಿಃ ॥ 6 ॥
ರಥಾ ರಥವರೈರೇವ ಸಮಾಜಗ್ಮುರ್ಮುದಾನ್ವಿತಾಃ |
ತಸ್ಮಿನ್ ರಾತ್ರಿಮುಖೇ ಘೋರೇ ಪುತ್ರಸ್ಯ ತವ ಶಾಸನಾತ್ ॥ 7 ॥

ಆಗ ವೀರರು ವೀರರೊಡನೆ ಯುದ್ಧದಲ್ಲಿ ಬೇರೆ ಬೇರೆಯಾಗಿ ಸಂಸಕ್ತರಾದರು. ಗಜಗಳು ಗಜಗಳ ಜೊತೆಯಲ್ಲಿಯೂ, ಅಶ್ವಗಳು ಅಶ್ವಗಳ ಜೊತೆಯಲ್ಲಿಯೂ, ರಥಗಳು ಶ್ರೇಷ್ಠ ರಥಗಳ ಜೊತೆಯಲ್ಲಿಯೂ ಕೂಡಿ, ಸಂತೋಷದಿಂದ ನಿನ್ನ ಪುತ್ರನ ಶಾಸನದಂತೆ ಆ ಘೋರವಾದ ರಾತ್ರಿಯ ಆರಂಭ ಕಾಲದಲ್ಲಿ ಪರಸ್ಪರವಾಗಿ ಎದುರಿಸಿದರು.
ತತೋಽರ್ಜುನೋ ಮಹಾರಾಜ ಕೌರವಾಣಾಮನೀಕಿನೀಮ್ |
ವ್ಯಧಮತ್ ತ್ವರಯಾ ಯುಕ್ತಃ ಕ್ಷಪಯನ್ ಸರ್ವಪಾರ್ಥಿವಾನ್ ॥ 8 ॥
ಎಲೈ ಮಹಾರಾಜನೇ, ಆಗ ಅರ್ಜುನನು ಎಲ್ಲ ರಾಜರನ್ನೂ ನಾಶಗೊಳಿಸುತ್ತಾ ತ್ವರೆಯಿಂದ ಕೂಡಿದವನಾಗಿ ಕೌರವರ ಸೇನೆಯನ್ನು ನಾಶಪಡಿಸಿದನು.
ಧೃತರಾಷ್ಟ್ರಃ
ತಸ್ಮಿನ್ ಪ್ರವಿಷ್ಟೇ ಸಂರಬ್ಧೇ ಮಮ ಪುತ್ರಸ್ಯ ವಾಹಿನೀಮ್ |
ಅಮೃಷ್ಯಮಾಣೇ ದುರ್ಧರ್ಷೇ ಕಿಂ ವ ಆಸೀನ್ಮನಸ್ತದಾ ॥ 9 ॥
ಧೃತರಾಷ್ಟ್ರ, ಸೋಲಿಸಲು ಅಸಾಧ್ಯನಾದ ನನ್ನ ಪುತ್ರರನ್ನು ಸಹಿಸದ ಅರ್ಜುನನು ಕೋಪಗೊಂಡು ನನ್ನ ಪುತ್ರನ ಸೈನ್ಯವನ್ನು ಪ್ರವೇಶಿಸಿದಾಗ ನಿಮ್ಮ ಮನಸ್ಸು ಹೇಗಿದ್ದಿತು?
ಕಿಮಮನ್ಯಂತ ಸೈನ್ಯಾನಿ ಪ್ರವಿಷ್ಟೇ ಶತ್ರುತಾಪನೇ |
ದುರ್ಯೋಧನಶ್ಚ ಕಿಂ ಕೃತ್ಯಂ ಪ್ರಾಪ್ತಕಾಲಮಮನ್ಯತ ॥ 10 ॥
ಶತ್ರುತಾಪನನಾದ ಅರ್ಜುನನು ಪ್ರವೇಶ ಮಾಡಿದಾಗ ಸೈನ್ಯಗಳು ಹೇಗೆ ಯೋಚಿಸಿದವು? ದುರ್ಯೋಧನನಾದರೂ ಆ ಕಾಲದಲ್ಲಿ ಏನನ್ನು ಮಾಡುವುದು ಯೋಗ್ಯವೆಂದು ಭಾವಿಸಿದನು?
ಕೇ ಚೈನಂ ಸಮರೇ ವೀರಂ ಪ್ರತ್ಯುದ್ಯಯುರರಿಂದಮಮ್ |
ಕೇಽರಕ್ಷನ್ ದಕ್ಷಿಣಂ ಚಕ್ರಂ ಕೇ ಚ ದ್ರೋಣಸ್ಯ ಸವ್ಯತಃ ॥ 11 ॥
ಕೇ ಪೃಷ್ಠತೋಽಸ್ಯ ಹ್ಯಭವನ್ ವೀರಾ ವೀರಸ್ಯ ಯುದ್ಧ್ಯತಃ |
ಕೇ ಪುರಸ್ತಾದಗಚ್ಛಂತ ನಿಘ್ನತಃ ಶಾತ್ರವಾನ್ ರಣೇ ॥ 12 ॥
ಅರಿಂದಮನಾದ ವೀರನಾದ ಅರ್ಜುನನನ್ನು ಎದುರಿಸಲು ಯಾರು ಮುಂದೆ ಸಾಗಿದರು? ದ್ರೋಣರ ಬಲಭಾಗದ ಸೈನ್ಯವನ್ನು ಮತ್ತು ಎಡಭಾಗದ ಸೈನ್ಯವನ್ನು ಯಾರು ರಕ್ಷಿಸಿದರು? ಯುದ್ಧವನ್ನು ಮಾಡುವ ವೀರರಾದ ದ್ರೋಣರ ಹಿಂಭಾಗದಲ್ಲಿ ಯಾವ ವೀರರಿದ್ದರು? ರಣರಂಗದಲ್ಲಿ ಶತ್ರುಗಳನ್ನು ಸಂಹಾರ ಮಾಡುವ ಅವರ ಮುಂಭಾಗದಲ್ಲಿ ಯಾರು ನಡೆದರು?
ಯತ್ ಪ್ರಾವಿಶನ್ ಮಹೇಷ್ವಾಸಃ ಪಾಂಚಾಲಾನಪರಾಜಿತಃ |
ನೃತ್ಯನ್ನಿವ ನರವ್ಯಾಘ್ರೋ ರಥಮಾರ್ಗೇಷು ವೀರ್ಯವಾನ್ ॥ 13 ॥
ದದಾಹ ಚ ಶರೈರ್ದ್ರೋಣಃ ಪಾಂಚಾಲಾನಾಂ ರಥವ್ರಜಾನ್ |
ಧೂಮಕೇತುರಿವ ಕ್ರುದ್ಧಃ ಸ ಕಥಂ ಮೃತ್ಯುಮೀಯಿವಾನ್ ॥ 14 ॥
ಅಪರಾಜಿತರಾದ, ಮಹಾಧನುರ್ಧಾರಿಗಳಾದ, ಪರಾಕ್ರಮಶಾಲಿಗಳಾದ, ರಥಮಾರ್ಗಗಳಲ್ಲಿ ಗರ್ಜಿಸುವಂತೆ ನಡೆಯುವ, ನರವ್ಯಾಘ್ರರಾದ ದ್ರೋಣರು ಪಾಂಡವರ ಸೈನ್ಯವನ್ನು ಪ್ರವೇಶಿಸಿ, ಕೋಪಗೊಂಡ ಅಗ್ನಿಯಂತೆ ಪಾಂಚಾಲರ ರಥಸಮೂಹಗಳನ್ನು ತಮ್ಮ ಬಾಣಗಳಿಂದ ದಹಿಸುತ್ತಿದ್ದಾಗ ಅವರು ಹೇಗೆ ಮೃತ್ಯುವಶರಾದರು?
ಅವ್ಯಗ್ರಾನೇವ ಹಿ ಪರಾನ್ ಕಥಯಸ್ಯಪರಾಜಿತಾನ್ |
ಹತಾಂಶ್ಚೈವ ವಿಷಣ್ಣಾಂಶ್ಚ ವಿಪ್ರಕೀರ್ಣಾಂಶ್ಚ ಶಂಸಸಿ |
ರಥಿನೋ ವಿರಥಾಂಶ್ಚೈವ ಕೃತಾನ್ ಯುದ್ಧೇಷು ಮಾಮಕಾನ್ ॥ 15 ॥
ಎಲೈ ಸಂಜಯನೇ, ನೀನು ಶತ್ರುಗಳಾದ ಪಾಂಡವರನ್ನು ಅಪರಾಜಿತರೆಂದೂ, ಯಾವ ಹಾನಿಯೂ ಇಲ್ಲದವರೆಂದೂ ಹೇಳುತ್ತಿದ್ದೀಯೆ. ನನ್ನ ಸೈನಿಕರು ಹತರಾದರೆಂದೂ, ವಿಷಾದದಿಂದ ಕೂಡಿದವರೆಂದೂ, ಚದುರಿಹೋದವರೆಂದೂ, ರಥಿಕರು ರಥಹೀನರಾಗಿ ಮಾಡಲ್ಪಟ್ಟವರೆಂದೂ ಹೇಳುತ್ತಿದ್ದೀಯೆ.
ಸಂಜಯಃ
ದ್ರೋಣಸ್ಯ ಮತಮಾಜ್ಞಾಯ ಯೋದ್ಧುಕಾಮಸ್ಯ ತಾಂ ನಿಶಾಮ್ |
ದುರ್ಯೋಧನೋ ಮಹಾರಾಜ ವಶ್ಯಾನ್ ಭ್ರಾತೄನಭಾಷತ ॥ 16 ॥
ವಿಕರ್ಣಂ ಚಿತ್ರಸೇನಂ ಚ ಮಹಾಬಾಹುಂ ಚ ಕೌರವಮ್ |
ದುರ್ಧರ್ಷಂ ದೀರ್ಘಬಾಹುಂ ಚ ಯೇ ಚ ತೇಷಾಂ ಪದಾನುಗಾಃ ॥
ದ್ರೋಣಂ ಯತ್ತಾಃ ಪರಾಕ್ರಾಂತಾಃ ಸರ್ವೇ ರಕ್ಷತ ಪೃಷ್ಠತಃ |
ಹಾರ್ದಿಕ್ಯೋ ದಕ್ಷಿಣಂ ಚಕ್ರಂ ಶಲ್ಯಶ್ಚೈವೋತ್ತರಂ ತಥಾ ॥ 18 ॥
ಸಂಜಯ ಆ ರಾತ್ರಿಯಲ್ಲಿ ಯುದ್ಧವನ್ನು ಮಾಡಬೇಕೆಂಬ ದ್ರೋಣರ ಅಭಿಪ್ರಾಯವನ್ನು ತಿಳಿದ ಮಹಾರಾಜನಾದ ದುರ್ಯೋಧನನು ತನ್ನ ವಶವರ್ತಿಗಳಾದ ತಮ್ಮಂದಿರನ್ನೂ, ವಿಕರ್ಣನನ್ನೂ (ಈ ವಿಕರ್ಣನು ದುರ್ಯೋಧನನ ತಮ್ಮನಲ್ಲ), ಕೌರವರಾದ ಚಿತ್ರಸೇನನನ್ನೂ, ಮಹಾಬಾಹುವನ್ನೂ, ದುರ್ಧರ್ಷನನ್ನೂ, ದೀರ್ಘಬಾಹುವನ್ನೂ ಮತ್ತು ಅವರ ಅನುಯಾಯಿಗಳನ್ನೂ ಕುರಿತು, ನೀವೆಲ್ಲರೂ ಎಚ್ಚರಿಕೆಯಿಂದಿದ್ದು ಪರಾಕ್ರಮವನ್ನು ತೋರಿಸಿ ದ್ರೋಣರನ್ನು ಹಿಂದಿನಿಂದ ರಕ್ಷಿಸಿ. ಹಾರ್ದಿಕ್ಯನಾದ ಕೃತವರ್ಮನು ದಕ್ಷಿಣ ಸೈನ್ಯವನ್ನೂ, ಶಲ್ಯನು ಉತ್ತರಭಾಗದ ಸೈನ್ಯವನ್ನೂ ರಕ್ಷಿಸಲಿ ಎಂದು ಹೇಳಿದನು.
ತ್ರಿಗರ್ತಾನಾಂ ಚ ಯೇ ಶೂರಾ ಹತಶಿಷ್ಟಾ ಮಹಾರಥಾಃ |
ತಾಂಶ್ಚೈವ ಸರ್ವಾನ್ ಪುತ್ರಸ್ತೇ ಸಮಚೋದಯದಗ್ರತಃ ॥ 19 ॥

ಆಚಾರ್ಯೋ ಹಿ ಸುಸಂಯತ್ತೋ ಭೃಶಂ ಯತ್ತಾಶ್ಚ ಪಾಂಡವಾಃ |
ತಂ ರಕ್ಷತ ಸುಸಂಯತ್ತಾ ನಿಘ್ನಂತಂ ಶಾತ್ರವಾನ್ ರಣೇ ॥ 20 ॥
ದ್ರೋಣೋ ಹಿ ಬಲವಾನ್ ಯುದ್ಧೇ ಕ್ಷಿಪ್ರಹಸ್ತಃ ಪರಾಕ್ರಮೀ |
ನಿರ್ಜಯೇತ್ ತ್ರಿದಶಾನ್ ಯುದ್ಧೇ ಕಿಮು ಪಾರ್ಥಾನ್ ಸಸೋಮಕಾನ್ ॥
ಮೃತರಾಗಿ ಉಳಿದ ಶೂರರಾದ ತ್ರಿಗರ್ತರ ಮಹಾರಥರೆಲ್ಲರನ್ನೂ ಕುರಿತು ನಿನ್ನ ಪುತ್ರನಾದ ದುರ್ಯೋಧನನು ಮುಂಭಾಗದಲ್ಲಿರುವಂತೆ ಪ್ರಚೋದಿಸಿದನು. ಆಚಾರ್ಯರಾದ ದ್ರೋಣರು ಸನ್ನದ್ಧರಾಗಿದ್ದಾರೆ. ಪಾಂಡವರೂ ಬಹಳ ಪ್ರಯತ್ನಶೀಲರಾಗಿದ್ದಾರೆ. ಶತ್ರುಗಳನ್ನು ಸಂಹರಿಸುವ ದ್ರೋಣರನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸಿ. ದ್ರೋಣರು ಯುದ್ಧದಲ್ಲಿ ಬಲಿಷ್ಠರಾದವರು, ಕ್ಷಿಪ್ರಹಸ್ತರಾದವರು ಮತ್ತು ಪರಾಕ್ರಮಶಾಲಿಗಳು. ಅವರು ಯುದ್ಧದಲ್ಲಿ ದೇವತೆಗಳನ್ನೂ ಗೆದ್ದಾರು. ಇನ್ನು ಸೋಮಕರಿಂದ ಸಹಿತರಾದ ಪಾಂಡವರನ್ನು ಗೆಲ್ಲುವುದು ಯಾವ ದೊಡ್ಡ ವಿಷಯ?
ತೇ ಯೂಯಂ ಸಹಿತಾಃ ಸರ್ವೇ ಭೃಶಂ ಯತ್ತಾ ಮಹಾರಥಾಃ |
ದ್ರೋಣಂ ರಕ್ಷತ ಪಾಂಚಾಲ್ಯಾದ್ ಧೃಷ್ಟದ್ಯುಮ್ನಾನ್ಮಹಾರಥಾತ್ ॥ 22 ॥
ಪಾಂಡವೇಯೇಷು ಸೈನ್ಯೇಷು ಯೋಧಂ ಪಶ್ಯಾಮ್ಯಹಂ ನ ತಮ್ |
ಯೋ ಜಯೇತ ರಣೇ ದ್ರೋಣಂ ಧೃಷ್ಟದ್ಯುಮ್ನಾದೃತೇ ನೃಪಾಃ ॥ 23 ॥
ತಸ್ಯ ಸರ್ವಾತ್ಮನಾ ಮನ್ಯೇ ಭಾರದ್ವಾಜಸ್ಯ ರಕ್ಷಣಮ್ |
ಸ ಗುಪ್ತಃ ಸೋಮಕಾನ್ ಹನ್ಯಾತ್ ಸೃಂಜಯಾಂಶ್ಚ ಸರಾಜಕಾನ್ ॥24|
ಆದ್ದರಿಂದ ಎಲೈ ಮಹಾರಥರೇ, ನೀವೆಲ್ಲರೂ ಎಚ್ಚರಿಕೆಯಿಂದ ಒಟ್ಟುಗೂಡಿ ದ್ರೋಣರನ್ನು ಮಹಾರಥನಾದ ಪಾಂಚಾಲ ದೇಶದ ಧೃಷ್ಟದ್ಯುಮ್ನನಿಂದ ರಕ್ಷಿಸಿ. ಎಲೈ ರಾಜರೇ, ಪಾಂಡವರ ಸೈನ್ಯದಲ್ಲಿ ಧೃಷ್ಟದ್ಯುಮ್ನನನ್ನೊಬ್ಬನನ್ನು ಬಿಟ್ಟು ಯುದ್ಧದಲ್ಲಿ ದ್ರೋಣರನ್ನು ಗೆಲ್ಲುವ ಯಾವನನ್ನೂ ನಾನು ಕಾಣುವುದಿಲ್ಲ. ಆದ್ದರಿಂದ ಅಂತಹ ದ್ರೋಣರ ರಕ್ಷಣೆಯನ್ನು ಸರ್ವಪ್ರಕಾರದಿಂದಲೂ ಮಾಡಿ. ರಕ್ಷಿಸಲ್ಪಟ್ಟ ದ್ರೋಣರು ರಾಜರಿಂದ ಕೂಡಿದ ಸೋಮಕರನ್ನೂ, ಸೃಂಜಯರನ್ನೂ ಕೊಂದಾರು ಎಂದು ಹೇಳಿದನು.
ಸೃಂಜಯೇಷ್ವಥ ಸರ್ವೇಷು ನಿಹತೇಷು ಚಮೂಮುಖೇ |
ಧೃಷ್ಟದ್ಯುಮ್ನಂ ರಣೇ ದ್ರೌಣಿರ್ನಾಶಯಿಷ್ಯತ್ಯಸಂಶಯಮ್ ॥ 25 ॥
ತಥಾರ್ಜುನಂ ರಣೇ ಕರ್ಣೋ ವಿಜೇಷ್ಯತಿ ಮಹಾರಥಃ |
ಭೀಮಸೇನಮಹಂ ಚಾಪಿ ಯುದ್ಧೇ ಜೇಷ್ಯಾಮಿ ದಂಸಿತಃ ॥ 26 ॥
ಸೋಽಯಂ ಮಮ ಜಯೋ ವ್ಯಕ್ತಂ ದೀರ್ಘಕಾಲಂ ಭವಿಷ್ಯತಿ |
ತಸ್ಮಾದ್ ರಕ್ಷತ ಸಂಗ್ರಾಮೇ ದ್ರೋಣಮೇವ ಮಹಾರಥಾಃ ॥ 27 ॥
ಸೇನಾಮುಖದಲ್ಲಿ ಎಲ್ಲ ಸೃಂಜಯರೂ ಹತರಾದ ಮೇಲೆ ಅಶ್ವತ್ಥಾಮರು ಧೃಷ್ಟದ್ಯುಮ್ನನನ್ನು ಕೊಲ್ಲುವರು, ಇದರಲ್ಲಿ ಸಂಶಯವಿಲ್ಲ. ಹಾಗೆಯೇ ಮಹಾರಥನಾದ ಕರ್ಣನು ಯುದ್ಧದಲ್ಲಿ ಅರ್ಜುನನನ್ನು ಗೆಲ್ಲುವನು. ನಾನೂ ಯುದ್ಧದಲ್ಲಿ ಸನ್ನದ್ಧನಾಗಿ ಭೀಮಸೇನನನ್ನು ಗೆಲ್ಲುವೆನು. ಆಗ ನನಗೆ ಉಂಟಾಗುವ ಜಯವು ದೀರ್ಘಕಾಲದವರೆಗೆ ಸ್ಪಷ್ಟವಾಗಿ ಇರುವುದು. ಆದ್ದರಿಂದ ಎಲೈ ಮಹಾರಥರೇ, ನೀವೆಲ್ಲರೂ ಯುದ್ಧದಲ್ಲಿ ದ್ರೋಣರನ್ನು ರಕ್ಷಿಸಿ (ಎಂದು ಹೇಳಿದನು).
ಸಂಜಯಃ
ಇತ್ಯುಕತ್ವ ಭರತಶ್ರೇಷ್ಠ ಪುತ್ರೋ ದುರ್ಯೋಧನಸ್ತವ |
ವ್ಯಾದಿದೇಶ ತತಃ ಸೈನ್ಯಂ ತಸ್ಮಿಂಸ್ತಮಸಿ ದಾರುಣೇ ॥ 28 ॥
ಸಂಜಯ ಎಲೈ ಭರತಶ್ರೇಷ್ಠನೇ, ನಿನ್ನ ಪುತ್ರನಾದ ದುರ್ಯೋಧನನು ಹೀಗೆ ಹೇಳಿ ಅನಂತರ ತನ್ನ ಸೈನ್ಯಕ್ಕೆ ಆ ಕತ್ತಲೆಯಲ್ಲಿ ದಾರುಣವಾದ ಯುದ್ಧವನ್ನು ಮಾಡಲು ಆಜ್ಞಾಪಿಸಿದನು.
ತತಃ ಪ್ರವವೃತೇ ಯುದ್ಧಂ ರಾತ್ರೌ ತದ್ ಭರತರ್ಷಭ |
ಉಭಯೋಃ ಸೇನಯೋರ್ಘೋರಂ ವಿಜಯಂ ಪ್ರತಿ ಕಾಂಕ್ಷಿಣೋಃ ॥
ಎಲೈ ಭರತಶ್ರೇಷ್ಠನೇ, ಆಗ ಆ ರಾತ್ರಿಯಲ್ಲಿ ಜಯವನ್ನು ಆಶಿಸುವ ಎರಡೂ ಸೈನ್ಯಗಳಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು.
ಅರ್ಜುನಃ ಕೌರವಂ ಸೈನ್ಯಮರ್ಜುನಂ ಚಾಪಿ ಕೌರವಾಃ |
ನಾನಾಶಸ್ತ್ರಸಮಾವಾಪೈರನ್ಯೋನ್ಯಂ ಪರ್ಯಪೀಡಯನ್ ॥ 30 ॥
ಅರ್ಜುನನು ಕೌರವರ ಸೈನ್ಯವನ್ನೂ ಮತ್ತು ಕೌರವರು ಅರ್ಜುನನನ್ನೂ ನಾನಾ ಶಸ್ತ್ರಗಳ ಪ್ರಹಾರದಿಂದ ಪರಸ್ಪರವಾಗಿ ಪೀಡಿಸಿದರು.
ದ್ರೌಣಿಃ ಪಾಂಚಾಲರಾಜಾನಂ ಭಾರದ್ವಾಜಶ್ಚ ಸೃಂಜಯಾನ್ |
ಛಾದಯಾಮಾಸತುಃ ಸಂಖ್ಯೇ ಶರೈಃ ಸನ್ನತಪರ್ವಭಿಃ ॥ 31 ॥
ಪಾಂಡುಪಾಂಚಾಲಸೇನಾನಾಂ ಕೌರವಾಣಾಂ ಚ ಮಾರಿಷ |
ಆಸೀನ್ನಿಷ್ಟಾನಕೋ ಘೋರೋ ನಿಘ್ನತಾಮಿತರೇತರಮ್ ॥ 32 ॥
ರಣರಂಗದಲ್ಲಿ ಅಶ್ವತ್ಥಾಮರು ಪಾಂಚಾಲರಾಜನಾದ ದ್ರುಪದನನ್ನೂ, ದ್ರೋಣರು ಸೃಂಜಯರನ್ನೂ ಬಾಗಿದ ತುದಿಯುಳ್ಳ ಬಾಣಗಳಿಂದ ಆಚ್ಛಾದಿಸಿದರು. ಎಲೈ ಪೂಜ್ಯನೇ, ಪರಸ್ಪರವಾಗಿ ಪ್ರಹಾರ ಮಾಡುವ ಪಾಂಡವರ ಮತ್ತು ಪಾಂಚಾಲರ ಸೈನ್ಯಗಳಲ್ಲಿಯೂ, ಕೌರವರ ಸೈನ್ಯಗಳಲ್ಲಿಯೂ ಘೋರವಾದ ನಾದವು ಕೇಳಿಬಂದಿತು.
ನೈವಾಸ್ಮಾಭಿರ್ನ ಪೂರ್ವೈರ್ನೋ ದೃಷ್ಟಪೂರ್ವಂ ತಥಾವಿಧಮ್ |
ಯುದ್ಧಂ ಯಾದೃಶಮೇವಾಸೀತ್ ತಾಂ ರಾತ್ರಿಂ ಸುಮಹಾಭಯಮ್ ॥

ಆ ರಾತ್ರಿಯಲ್ಲಿ ಅವರಿಗೆ ಎಂತಹ ಭಯಂಕರವಾದ ಯುದ್ಧವು ನಡೆಯಿತೋ ಅಂತಹ ಯುದ್ಧವನ್ನು ನಾವಾಗಲೀ, ನಮ್ಮ ಪೂರ್ವಜರಾಗಲೀ ನೋಡಿರಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೊಂದನೆಯ ಅಧ್ಯಾಯ
ಕೃತವರ್ಮನಿಂದ ಯುಧಿಷ್ಠಿರನ ಪರಾಜಯ.
ಸಂಜಯಃ
ವರ್ತಮಾನೇ ತಥಾ ರೌದ್ರೇ ರಾತ್ರಿಯುದ್ಧೇ ವಿಶಾಂಪತೇ |
ಸರ್ವಭೂತಕ್ಷಯಕರೇ ಧರ್ಮಪುತ್ರೋ ಯುಧಿಷ್ಠಿರಃ ॥ 1 ॥
ಅಬ್ರವೀತ್ ಪಾಂಡವಾಂಶ್ಚೈವ ಪಾಂಚಾಲಾಂಶ್ಚ ಸಸೋಮಕಾನ್ |
ಅಭ್ಯದ್ರವತ ಗಚ್ಛಧ್ವಂ ದ್ರೋಣಮೇವ ಜಿಘಾಂಸಯಾ ॥ 2 ॥
ಸಂಜಯ ಎಲೈ ರಾಜನೇ, ಸರ್ವಭೂತಕ್ಷಯಕಾರಕವಾದ ಘೋರವಾದ ರಾತ್ರಿಯುದ್ಧವು ಹಾಗೆ ನಡೆಯುತ್ತಿರಲು ಧರ್ಮಪುತ್ರನಾದ ಯುಧಿಷ್ಠಿರನು ಪಾಂಚಾಲರಿಂದ ಮತ್ತು ಸೋಮಕರಿಂದ ಸಹಿತರಾದ ಪಾಂಡವರನ್ನು ಕುರಿತು, ದ್ರೋಣರನ್ನು ಕೊಲ್ಲುವ ಇಚ್ಛೆಯಿಂದ ದ್ರೋಣರ ಮೇಲೆಯೇ ಮುನ್ನುಗ್ಗಿ ಎಂದು ಹೇಳಿದನು.
ರಾಜ್ಞಸ್ತೇ ವಚನಾದ್ರಾಜನ್ ಪಾಂಚಾಲಾಃ ಸೋಮಕಾಸ್ತಥಾ |
ದ್ರೋಣಮೇವಾಭ್ಯವರ್ತಂತ ನದಂತೋ ಭೈರವಾನ್ ರವಾನ್ ॥ 3 ॥
ಎಲೈ ರಾಜನೇ, ರಾಜನ ಅಪ್ಪಣೆಯಂತೆ ಪಾಂಚಾಲರು ಮತ್ತು ಸೋಮಕರು ಭೈರವನಾದಗಳನ್ನು ಮಾಡುತ್ತಾ ದ್ರೋಣರ ಮೇಲೆಯೇ ಎರಗಿದರು.
ತಾನ್ ವಯಂ ಪ್ರತಿಗರ್ಜಂತಃ ಪ್ರತ್ಯುದ್ಯಾತಾಸ್ತ್ವಮರ್ಷಿತಾಃ |
ಯಥಾಶಕ್ತಿ ಯಥೋತ್ಸಾಹಂ ಯಥಾಸತ್ತ್ವಂ ಚ ಸಂಯುಗೇ ॥ 4 ॥
ನಾವು ಅವರಿಗೆ ಪ್ರತಿಯಾಗಿ ಗರ್ಜಿಸುತ್ತಾ ಕೋಪದಿಂದ ಕೂಡಿದವರಾಗಿ ನಮ್ಮ ಶಕ್ತಿಗೆ, ಉತ್ಸಾಹಕ್ಕೆ ಮತ್ತು ಬಲಕ್ಕೆ ಅನುಗುಣವಾಗಿ ರಣರಂಗದಲ್ಲಿ ಅವರ ಮೇಲೆ ಎರಗಿದೆವು.
ಕೃತವರ್ಮಾ ಚ ಹಾರ್ದಿಕ್ಯೋ ಯುಧಿಷ್ಠಿರಮುಪಾದ್ರವತ್ |
ದ್ರೋಣಂ ಪ್ರತಿ ಜಿಘಾಂಸಂತಂ ಮತ್ತೋ ಮತ್ತಮಿವ ದ್ವಿಪಮ್ ॥ 5 ॥
ದ್ರೋಣರನ್ನು ಕೊಲ್ಲಲು ಬಯಸಿ ಒಂದು ಮದಗಜವು ಇನ್ನೊಂದು ಮದಗಜದ ಮೇಲೆ ಎರಗಿದಂತೆ ಹೊರಟಿದ್ದ ಯುಧಿಷ್ಠಿರನ ಮೇಲೆ ಹಾರ್ದಿಕ್ಯನಾದ ಕೃತವರ್ಮನು ಎರಗಿದನು.
ಶೈನೇಯಂ ಶರವರ್ಷಾಣಿ ವಿಕಿರಂತಂ ಸಮಂತತಃ |
ಅಭ್ಯಯಾತ್ ಕೌರವೋ ರಾಜನ್ ಭೂರಿಃ ಸಂಗ್ರಾಮಮೂರ್ಧನಿ ॥ 6 ॥
ಎಲೈ ರಾಜನೇ, ಎಲ್ಲ ಕಡೆಗಳಲ್ಲಿಯೂ ಬಾಣದ ಮಳೆಯನ್ನು ಸುರಿಸುತ್ತಿದ್ದ ಸಾತ್ಯಕಿಯನ್ನು ರಣರಂಗದಲ್ಲಿ ಕೌರವನಾದ ಭೂರಿಯು ಎದುರಿಸಿದನು.
ಸಹದೇವಮಥಾಯಾಂತಂ ದ್ರೋಣಪ್ರೇಪ್ಸುಂ ಮಹಾರಥಮ್ |
ಕರ್ಣೋ ವೈಕರ್ತನೋ ರಾಜನ್ ವಾರಯಾಮಾಸ ಪಾಂಡವಮ್ ॥7॥
ಎಲೈ ರಾಜನೇ, ಮಹಾರಥರಾದ ದ್ರೋಣರನ್ನು ಸಮೀಪಿಸಲು ಬಯಸಿ ಬರುತ್ತಿದ್ದ ಪಾಂಡವನಾದ ಸಹದೇವನನ್ನು ವೈಕರ್ತನನಾದ ಕರ್ಣನು ತಡೆದನು.
ಭೀಮಸೇನಮಥಾಯಾಂತಂ ವ್ಯಾದಿತಾಸ್ಯಮಿವಾಂತಕಮ್ |
ಸ್ವಯಂ ದುರ್ಯೋಧನೋ ಯುದ್ಧೇ ಪ್ರತೀಪಂ ಮೃತ್ಯುಮಾವ್ರಜತ್ ॥8॥
ತನ್ನ ಮೃತ್ಯುವಾದ, ಬಾಯ್ತೆರೆದ ಮೃತ್ಯುವಿನಂತೆ ತನ್ನ ಕಡೆಗೆ ಬರುತ್ತಿದ್ದ, ಭೀಮಸೇನನನ್ನು ರಣರಂಗದಲ್ಲಿ ಸ್ವತಃ ದುರ್ಯೋಧನನೇ ಎದುರಿಸಿದನು.
ನಕುಲಂ ಚ ಯುಧಾಂಶ್ರೇಷ್ಠಂ ಸರ್ವಯುದ್ಧವಿಶಾರದಮ್ |
ಶಕುನಿಃ ಸೌಬಲೋ ರಾಜನ್ ವಾರಯಾಮಾಸ ಸತ್ವರಃ ॥ 9 ॥
ಎಲೈ ರಾಜನೇ, ಎಲ್ಲ ಯುದ್ಧಗಳಲ್ಲಿ ವಿಶಾರದನಾದ, ಯೋಧರಲ್ಲಿ ಶ್ರೇಷ್ಠನಾದ ನಕುಲನನ್ನು ಸೌಬಲಪುತ್ರನಾದ ಶಕುನಿಯು ತ್ವರೆಯಿಂದ ತಡೆದನು.
ಶಿಖಂಡಿನಮಥಾಯಾಂತಂ ರಥೇನ ರಥಿನಾಂ ವರಮ್ |
ಕೃಪೋ ಶಾರದ್ವತೋ ರಾಜನ್ ವಾರಯಾಮಾಸ ಸಂಯುಗೇ ॥ 10 ॥
ಎಲೈ ರಾಜನೇ, ರಥದಲ್ಲಿ ಬರುತ್ತಿದ್ದ ರಥಿಶ್ರೇಷ್ಠನಾದ ಶಿಖಂಡಿಯನ್ನು ರಣರಂಗದಲ್ಲಿ ಶಾರದ್ವತರಾದ ಕೃಪರು ತಡೆದರು.
ಪ್ರತಿವಿಂಧ್ಯಮಥಾಯಾಂತಂ ಮಯೂರಸದೃಶೈರ್ಹಯೈಃ |

ದುಃಶಾಸನೋ ಮಹಾರಾಜ ಯತ್ತೋ ಯತ್ತಮವಾರಯತ್ ॥ 11 ॥
ನವಿಲಿನ ಬಣ್ಣದ ಕುದುರೆಗಳಿಂದ ಬರುತ್ತಿದ್ದ ಪ್ರತಿವಿಂಧ್ಯನನ್ನು, ಎಲೈ ಮಹಾರಾಜನೇ, ಸ್ವತಃ ದುಶ್ಶಾಸನನು ಪ್ರಯತ್ನಪೂರ್ವಕವಾಗಿ ತಡೆದನು.
ಭೈಮಸೇನಿಮಥಾಯಾಂತಂ ಮಾಯಾಶತವಿಶಾರದಮ್ |
ಅಶ್ವತ್ಥಾಮಾ ಪಿತುರ್ಮಾನಂ ಕುರ್ವಾಣಃ ಪ್ರತ್ಯಷೇಧಯತ್ ॥ 12 ॥
ನೂರು ವಿಧದ ಮಾಯೆಗಳಲ್ಲಿ ವಿಶಾರದನಾದ ಸಮೀಪದಲ್ಲಿ ಬರುತ್ತಿದ್ದ ಘಟೋತ್ಕಚನನ್ನು ತಂದೆಗೆ ಪ್ರಿಯವನ್ನು ಮಾಡುತ್ತಾ ಅಶ್ವತ್ಥಾಮರು ತಡೆದರು.
ದ್ರುಪದಂ ವೃಷಸೇನಸ್ತು ಸಸೈನ್ಯಂ ಸಪದಾನುಗಮ್ |
ವಾರಯಾಮಾಸ ಸಮರೇ ದ್ರೋಣಪ್ರೇಪ್ಸುಂ ಮಹಾರಥಮ್ ॥ 13 ॥
ದ್ರೋಣರನ್ನು ಸಮೀಪಿಸಲು ಬಯಸುತ್ತಿದ್ದ ಮಹಾರಥನಾದ ದ್ರುಪದನನ್ನು ಅವನ ಸೈನ್ಯ ಮತ್ತು ಅನುಯಾಯಿಗಳ ಜೊತೆಯಲ್ಲಿ ವೃಷಸೇನನು ತಡೆದನು.
ವಿರಾಟಂ ದ್ರುತಮಾಯಾಂತಂ ದ್ರೋಣಸ್ಯ ನಿಧನಂ ಪ್ರತಿ |
ಮದ್ರರಾಜಃ ಸುಸಂಕ್ರುದ್ಧೋ ವಾರಯಾಮಾಸ ಭಾರತ ॥ 14 ॥
ಎಲೈ ಭಾರತನೇ, ದ್ರೋಣರ ವಧೆಯನ್ನು ಮಾಡಲು ಬಯಸಿ ಶೀಘ್ರವಾಗಿ ಬರುತ್ತಿದ್ದ ವಿರಾಟನನ್ನು ಬಹಳ ಕೋಪಗೊಂಡ ಶಲ್ಯನು ತಡೆದನು.
ಶತಾನೀಕಮಥಾಯಾಂತಂ ನಾಕುಲಿಂ ರಭಸಂ ರಣೇ |
ಚಿತ್ರಸೇನೋ ರುರೋಧಾಶು ಶರೈರ್ದ್ರೋಣವಧೇಪ್ಸಯಾ ॥ 15 ॥
ದ್ರೋಣರ ವಧೆಯನ್ನು ಮಾಡಲು ಬಯಸಿ ಶೀಘ್ರವಾಗಿ ಬರುತ್ತಿದ್ದ ವೇಗಶಾಲಿಯಾದ ನಕುಲ ಪುತ್ರನಾದ ಶತಾನೀಕನನ್ನು ರಣರಂಗದಲ್ಲಿ ಚಿತ್ರಸೇನನು ಶೀಘ್ರವಾಗಿ ತಡೆದನು.
ಅರ್ಜುನಂ ಚ ಯುಧಾಂಶ್ರೇಷ್ಠಂ ಪ್ರಾದ್ರವಂತಂ ಮಹಾರಥಮ್ |
ಅಲಂಬುಸೋ ಮಹಾರಾಜ ರಾಕ್ಷಸೇಂದ್ರೋ ನ್ಯವಾರಯತ್ ॥ 16 ॥
ಎಲೈ ಮಹಾರಾಜನೇ, ಯೋಧರಲ್ಲಿ ಶ್ರೇಷ್ಠನಾದ ಮಹಾರಥನಾದ ಶೀಘ್ರವಾಗಿ ಬರುತ್ತಿದ್ದ ಅರ್ಜುನನನ್ನು ರಾಕ್ಷಸೇಂದ್ರನಾದ ಅಲಂಬುಸನು ತಡೆದನು.
ತಥಾ ದ್ರೋಣಂ ಮಹೇಷ್ವಾಸಂ ನಿಘ್ನಂತಂ ಶಾತ್ರವಾನ್ ರಣೇ |
ಧೃಷ್ಟದ್ಯುಮ್ನೋಽಥ ಪಾಂಚಾಲ್ಯೋ ಹೃಷ್ಟರೂಪಮವಾರಯತ್ ॥ 17 ॥
ಹಾಗೆಯೇ ರಣರಂಗದಲ್ಲಿ ಶತ್ರುಗಳನ್ನು ಕೊಲ್ಲುತ್ತಿದ್ದ ಸಂತೋಷಗೊಂಡಿದ್ದ ದ್ರೋಣರನ್ನು ಪಾಂಚಾಲ್ಯನಾದ ಧೃಷ್ಟದ್ಯುಮ್ನನು ತಡೆದನು.
ತಥಾನ್ಯಾನ್ ಪಾಂಡುಪುತ್ರಾಣಾಂ ಸಮಾಯಾತಾನ್ ಮಹಾರಥಾನ್ |
ತಾವಕಾ ರಥಿನೋ ರಾಜನ್ ವಾರಯಾಮಾಸುರೋಜಸಾ ॥ 18 ॥
ಎಲೈ ರಾಜನೇ, ಹಾಗೆ ಸಮೀಪಕ್ಕೆ ಬರುತ್ತಿದ್ದ ಪಾಂಡವ ಸೇನೆಯ ಉಳಿದ ಮಹಾರಥರನ್ನು ನಿನ್ನವರು ತಮ್ಮ ಸಾಮರ್ಥ್ಯದಿಂದ ತಡೆದರು.
ಗಜಾರೋಹಾ ಗಜೈಸ್ತೂರ್ಣಂ ಸನ್ನಿಪತ್ಯ ಮಹಾಮೃಧೇ |
ಯೋಧಯಂತಃ ಸ್ಮ ದೃಶ್ಯಂತೇ ಶತಶೋಽಥ ಸಹಸ್ರಶಃ ॥ 19 ॥
ಗಜಾರೋಹಿಗಳು ಗಜಾರೋಹಿಗಳ ಜೊತೆಯಲ್ಲಿ ಶೀಘ್ರವಾಗಿ ಸಂಸಕ್ತರಾಗಿ ದೊಡ್ಡ ಯುದ್ಧದಲ್ಲಿ ರಣರಂಗದಲ್ಲಿ ಯುದ್ಧವನ್ನು ಮಾಡುವುದು ನೂರರ ಸಂಖ್ಯೆಯಲ್ಲಿ ಸಾವಿರದ ಸಂಖ್ಯೆಯಲ್ಲಿ ಕಂಡುಬಂದಿತು.
ನಿಶೀಥೇ ತುರಗಾ ರಾಜನ್ನಾದ್ರವಂತಃ ಪರಸ್ಪರಮ್ |
ಸಮದೃಶ್ಯಂತ ವೇಗೇನ ಪಕ್ಷವಂತ ಇವಾದ್ರಯಃ ॥ 20 ॥
ಎಲೈ ರಾಜನೇ, ರಾತ್ರಿಯಲ್ಲಿ ಪರಸ್ಪರವಾಗಿ ವೇಗದಿಂದ ಧಾವಿಸುತ್ತಿದ್ದ ಅಶ್ವಗಳು ರೆಕ್ಕೆಯನ್ನು ಹೊಂದಿದ ಪರ್ವತಗಳಂತೆ ಕಂಡುಬಂದವು.
ಸಾದಿನಃ ಸಾದಿಭಿಃ ಸಾರ್ಧಂ ಪ್ರಾಸಶಕ್ತ್ಯೃಷ್ಟಿಪಾಣಯಃ |
ಸಮಾಗಚ್ಛನ್ ಮಹಾರಾಜ ವಿನದಂತಃ ಪೃಥಕ್ ಪೃಥಕ್ ॥ 21 ॥
ಎಲೈ ಮಹಾರಾಜನೇ, ಅಶ್ವಾರೋಹಿಗಳು ತಮ್ಮ ಹಸ್ತಗಳಲ್ಲಿ ಪ್ರಾಸ-ಶಕ್ತಿ- ಋಷ್ಟಿಗಳನ್ನು ಹಿಡಿದು ಬೇರೆ ಬೇರೆಯಾಗಿ ಗರ್ಜನೆಯನ್ನು ಮಾಡುತ್ತಾ ಅಶ್ವಾರೋಹಿಗಳ ಜೊತೆಯಲ್ಲಿ ಯುದ್ಧಕ್ಕೆ ನಿಂತರು.
ನರಾಸ್ತು ಬಹವಸ್ತತ್ರ ಸಮಾಜಗ್ಮುಃ ಪರಸ್ಪರಮ್ |
ಗದಾಭಿರ್ಮುಸಲೈಶ್ಚೈವ ನಾನಾಶಸ್ತ್ರೈಶ್ಚ ಸಂಘಶಃ ॥ 22 ॥
ಅನೇಕ ಪದಾತಿಗಳು ಅಲ್ಲಿ ಗದೆಗಳನ್ನೂ, ಮುಸಲಗಳನ್ನೂ, ನಾನಾವಿಧವಾದ ಶಸ್ತ್ರಗಳನ್ನೂ ಹಿಡಿದು ಗುಂಪು ಗುಂಪುಗಳಲ್ಲಿ ಪರಸ್ಪರವಾಗಿ ಎದುರಿಸಿದರು.
ಕೃತವರ್ಮಾ ತು ಹಾರ್ದಿಕ್ಯೋ ಧರ್ಮಪುತ್ರಂ ಯುಧಿಷ್ಠಿರಮ್ |
ವಾರಯಾಮಾಸ ಸಂಕ್ರುದ್ಧೋ ವೇಲೇವೋದ್ವೃತ್ತಮರ್ಣವಮ್ ॥ 23 ॥
ಹಾರ್ದಿಕ್ಯನಾದ ಕೃತವರ್ಮನು ಕ್ಷೋಭೆಗೊಂಡ ಸಮುದ್ರವನ್ನು ತೀರವು ತಡೆದಂತೆ ಕೋಪಗೊಂಡು ಧರ್ಮಪುತ್ರನಾದ

ಯುಧಿಷ್ಠಿರನನ್ನು ತಡೆದನು.
ಯುಧಿಷ್ಠಿರಸ್ತು ಹಾರ್ದಿಕ್ಯಂ ವಿದ್ಧ್ವಾ ಪಂಚಭಿರಾಶುಗೈಃ |
ಪುನರ್ವಿವ್ಯಾಧ ವಿಂಶತ್ಯಾ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 24 ॥
ಯುಧಿಷ್ಠಿರನಾದರೋ ಕೃತವರ್ಮನನ್ನು ಶೀಘ್ರಗಾಮಿಗಳಾದ ಐದು ಬಾಣಗಳಿಂದ ಹೊಡೆದು ಪುನಃ ಇಪ್ಪತ್ತು ಬಾಣಗಳಿಂದ ಹೊಡೆದು `ನಿಲ್ಲು, ನಿಲ್ಲು' ಎಂದು ಹೇಳಿದನು.
ಕೃತವರ್ಮಾ ತು ಸಂಕ್ರುದ್ಧೋ ಧರ್ಮಪುತ್ರಸ್ಯ ಮಾರಿಷ |
ಧನುಶ್ಚಿಚ್ಛೇದ ಭಲ್ಲೇನ ತಂ ಚ ವಿವ್ಯಾಧ ಸಪ್ತಭಿಃ ॥ 25 ॥
ಎಲೈ ಶ್ರೇಷ್ಠನೇ, ಕೃತವರ್ಮನಾದರೋ ಬಹಳ ಕೋಪಗೊಂಡು ಏಳು ಭಲ್ಲಗಳನ್ನು ಪ್ರಯೋಗಿಸಿ ಯುಧಿಷ್ಠಿರನ ಧನುಸ್ಸನ್ನು ಕತ್ತರಿಸಿ, ಅವನನ್ನೂ ಹೊಡೆದನು.
ಅಥಾನ್ಯದ್ ಧನುರಾದಾಯ ಧರ್ಮಪುತ್ರೋ ಯುಧಿಷ್ಠಿರಃ |
ಹಾರ್ದಿಕ್ಯಂ ದಶಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ ॥ 26 ॥
ಆಗ ಧರ್ಮಪುತ್ರನಾದ ಯುಧಿಷ್ಠಿರನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಹಾರ್ದಿಕ್ಯನಿಗೆ ಹತ್ತು ಬಾಣಗಳಿಂದ ಅವನ ಬಾಹುಗಳಲ್ಲಿಯೂ ಮತ್ತು ಎದೆಯಲ್ಲಿಯೂ ಹೊಡೆದನು.
ಮಾಧವಸ್ತು ರಣೇ ವಿದ್ಧೋ ಧರ್ಮಪುತ್ರೇಣ ಮಾರಿಷ |
ಪ್ರಾಕಂಪತ ಚ ರೋಷೇಣ ಸಪ್ತಭಿಶ್ಚಾರ್ದಯಚ್ಛರೈಃ ॥ 27 ॥
ಎಲೈ ಪೂಜ್ಯನೇ, ರಣರಂಗದಲ್ಲಿ ಧರ್ಮಪುತ್ರನಿಂದ ಹೊಡೆಯಲ್ಪಟ್ಟ ಮಾಧವನಾದ ಕೃತವರ್ಮನು ರೋಷದಿಂದ ನಡುಗಿ ಏಳು ಬಾಣಗಳಿಂದ ಧರ್ಮರಾಜನನ್ನು ಹಿಂಸಿಸಿದನು.
ತಸ್ಯ ಪಾರ್ಥೋ ಧನುಶ್ಛಿತ್ತ್ವಾ ಹಸ್ತಾವಾಪಂ ನಿಕೃತ್ಯ ಚ |
ಪ್ರಾಹಿಣೋನ್ನಿಶಿತಾನ್ ಬಾಣಾನ್ ಪಂಚ ರಾಜನ್ ಶಿಲಾಶಿತಾನ್ ॥
ಕುಂತೀಪುತ್ರನಾದ ಯುಧಿಷ್ಠಿರನು ಅವನ ಧನುಸ್ಸನ್ನೂ, ಬತ್ತಳಿಕೆಯನ್ನೂ ಕತ್ತರಿಸಿ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಐದು ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ತೇ ತಸ್ಯ ಕವಚಂ ಭಿತ್ತ್ವಾ ಹೇಮಚಿತ್ರಂ ಮಹಾಧನಮ್ |
ಪ್ರಾವಿಶನ್ ಧರಣೀಮುಗ್ರಾ ವಲ್ಮೀಕಮಿವ ಪನ್ನಗಾಃ ॥ 29 ॥
ಆ ಬಾಣಗಳು ಕೃತವರ್ಮನ ಸುವರ್ಣಾಲಂಕೃತವಾದ ಬೆಲೆಬಾಳುವ ಕವಚವನ್ನು ಭೇದಿಸಿ, ಉಗ್ರವಾದ ಸರ್ಪಗಳು ಹುತ್ತದೊಳಗೆ ಹೋಗುವಂತೆ ಭೂಮಿಯನ್ನು ಪ್ರವೇಶಿಸಿದವು.
ಅಕ್ಷ್ಣೋರ್ನಿಮೇಷಮಾತ್ರೇಣ ಸೋಽನ್ಯದಾದಾಯ ಕಾರ್ಮುಕಮ್ |
ವಿವ್ಯಾಧ ಪಾಂಡವಂ ಷಷ್ಟ್ಯಾ ಸೂತಂ ಚ ನವಭಿಃ ಶರೈಃ ॥ 30 ॥
ಕಣ್ಣು ಮುಚ್ಚಿಬಿಡುವಷ್ಟರಲ್ಲಿ ಕೃತವರ್ಮನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಧರ್ಮರಾಜನನ್ನು ಅರವತ್ತು ಬಾಣಗಳಿಂದಲೂ, ಅವನ ಸಾರಥಿಯನ್ನು ಒಂಬತ್ತು ಬಾಣಗಳಿಂದಲೂ ಹೊಡೆದನು.
ತಸ್ಯ ಶಕ್ತಿಮಮೇಯಾತ್ಮಾ ಪಾಂಡವೋ ಭುಜಗೋಪಮಾಮ್ |
ಚಿಕ್ಷೇಪ ಭರತಶ್ರೇಷ್ಠ ರಥೇ ನ್ಯಸ್ಯ ಮಹದ್ಧನುಃ ॥ 31 ॥
ಪಾಂಡವನೂ, ಅಚಿಂತ್ಯ ಸಾಮರ್ಥ್ಯವುಳ್ಳವನೂ ಆದ ಧರ್ಮರಾಜನು ಎಲೈ ಭರತಶ್ರೇಷ್ಠನೇ, ತನ್ನ ಧನುಸ್ಸನ್ನು ರಥದಲ್ಲಿ ಇಟ್ಟು ಸರ್ಪದಂತಿದ್ದ ಒಂದು ಶಕ್ತಿಯನ್ನು ಕೃತವರ್ಮನ ಮೇಲೆ ಎಸೆದನು.
ಸಾ ಹೇಮಚಿತ್ರಾ ಮಹತೀ ಪಾಂಡವೇನ ಪ್ರವೇರಿತಾ |
ನಿರ್ಭಿದ್ಯ ದಕ್ಷಿಣಂ ಬಾಹುಂ ಪ್ರಾವಿಶದ್ ಧರಣೀತಳಮ್ ॥ 32 ॥
ಪಾಂಡವನಾದ ಯುಧಿಷ್ಠಿರನಿಂದ ಪ್ರೇರಿತವಾದ ಸುವರ್ಣಚಿತ್ರಿತವಾದ ಆ ದೊಡ್ಡ ಶಕ್ತಿಯು ಕೃತವರ್ಮನ ಬಲಬಾಹುವನ್ನು ಭೇದಿಸಿ ಭೂತಳವನ್ನು ಪ್ರವೇಶಿಸಿತು.
ಏತಸ್ಮಿನ್ನೇವ ಕಾಲೇ ತು ಗೃಹ್ಯ ಪಾರ್ಥಃ ಪುನರ್ಧನುಃ |
ಹಾರ್ದಿಕ್ಯಂ ಛಾದಯಾಮಾಸ ಶರೈಃ ಸನ್ನತಪರ್ವಭಿಃ ॥ 33 ॥
ಅಷ್ಟರಲ್ಲಿಯೇ ಯುಧಿಷ್ಠಿರನು ಪುನಃ ಧನುಸ್ಸನ್ನು ತೆಗೆದುಕೊಂಡು ಬಾಗಿದ ತುದಿಯುಳ್ಳ ಬಾಣಗಳಿಂದ ಕೃತವರ್ಮನನ್ನು ಆಚ್ಛಾದಿಸಿದನು.
ತತಸ್ತು ಸಮರೇ ಶೂರೋ ವೃಷ್ಣೀನಾಂ ಪ್ರವರೋ ರಥೀ |
ವ್ಯಶ್ವಸೂತರಥಂ ಚಕ್ರೇ ನಿಮೇಷಾರ್ಧಾದ್ ಯುಧಿಷ್ಠಿರಮ್ ॥ 34 ॥
ಆಗ ಯುದ್ಧದಲ್ಲಿ ಶೂರನೂ, ವೃಷ್ಣಿಗಳಲ್ಲಿ ಶ್ರೇಷ್ಠನೂ, ಮಹಾರಥನೂ ಆದ ಕೃತವರ್ಮನು ಅರ್ಧನಿಮಿಷದಲ್ಲಿ ಯುಧಿಷ್ಠಿರನ ರಥದ ಸಾರಥಿಯನ್ನೂ ಮತ್ತು ಅಶ್ವಗಳನ್ನು ಕೊಂದನು.
ತತಸ್ತು ಪಾಂಡವೋ ಜ್ಯೇಷ್ಠಃ ಖಡ್ಗಚರ್ಮ ಸಮಾದದೇ |
ತದಸ್ಯ ನಿಶಿತೈರ್ಬಾಣೈರ್ವ್ಯಧಮನ್ ಮಾಧವೋ ರಣೇ ॥ 35 ॥
ಅನಂತರ ಪಾಂಡವರಲ್ಲಿ ಜ್ಯೇಷ್ಠನಾದ ಯುಧಿಷ್ಠಿರನು ಖಡ್ಗ ಮತ್ತು ಚರ್ಮಗಳನ್ನು ತೆಗೆದುಕೊಂಡನು. ಮಾಧವನಾದ ಕೃತವರ್ಮನು ರಣರಂಗದಲ್ಲಿ ತೀಕ್ಷ್ಣವಾದ ಬಾಣಗಳಿಂದ ಅವುಗಳನ್ನು ಹಾರಿಸಿದನು.
ತೋಮರಂ ತು ತತೋ ಗೃಹ್ಯ ಸ್ವರ್ಣದಂಡಂ ದುರಾಸದಮ್ |

ಪ್ರೇಷಯತ್ ಸಮರೇ ತೂರ್ಣಂ ಹಾರ್ದಿಕ್ಯಸ್ಯ ಯುಧಿಷ್ಠಿರಃ ॥ 36 ॥
ಅನಂತರ ಯುಧಿಷ್ಠಿರನು ಸಮೀಪಕ್ಕೆ ಸುಳಿಯಲು ಅಸಾಧ್ಯವಾದ, ಸ್ವರ್ಣದಂಡವುಳ್ಳ ತೋಮರವನ್ನು ತೆಗೆದುಕೊಂಡು ಅದನ್ನು ಶೀಘ್ರವಾಗಿ ಹಾರ್ದಿಕ್ಯನ ಮೇಲೆ ಎಸೆದನು.
ತಮಾಪತಂತಂ ಸಹಸಾ ಧರ್ಮರಾಜಭುಜಚ್ಯುತಮ್ |
ದ್ವಿಧಾ ಚಿಚ್ಛೇದ ಹಾರ್ದಿಕ್ಯಃ ಕೃತಹಸ್ತಃ ಸ್ಮಯನ್ನಿವ ॥ 37 ॥
ಕ್ಷಿಪ್ರಹಸ್ತನಾದ ಕೃತವರ್ಮನು ಧರ್ಮರಾಜನ ಭಾಜದಿಂದ ಹೊರತು ತನ್ನ ಕಡೆಗೆ ಬರುತ್ತಿದ್ದ ಆ ತೋಮರವನ್ನು ನಗುತ್ತಾ ಎರಡುಭಾಗವಾಗಿ ಕತ್ತರಿಸಿದನು.
ತತಃ ಶರಶತೇನಾಜೌ ಧರ್ಮಪುತ್ರಮವಾಕಿರತ್ |
ಕವಚಂ ಚಾಸ್ಯ ಸಂಕ್ರುದ್ಧಃ ಶರೈಸ್ತೀಕ್ಷ್ಣೈರದಾರಯತ್ ॥ 38 ॥
ಆಗ ಬಹಳ ಕೋಪಗೊಂಡ ಕೃತವರ್ಮನು ರಣರಂಗದಲ್ಲಿ ಯುಧಿಷ್ಠಿರನ ಮೇಲೆ ನೂರು ಬಾಣಗಳನ್ನು ಸುರಿಸಿ ತೀಕ್ಷ್ಣವಾದ ಬಾಣಗಳಿಂದ ಅವನ ಕವಚವನ್ನು ಸೀಳಿದನು.
ಹಾರ್ದಿಕ್ಯಶರಸಂಛಿನ್ನಂ ಕವಚಂ ತನ್ಮಹಾತ್ಮನಃ |
ವ್ಯಶೀರ್ಯತ ರಣೇ ರಾಜಂಸ್ತಾರಾಜಾಲಮಿವಾಂಬರಾತ್ ॥ 39 ॥
ಎಲೈ ರಾಜನೇ, ಕೃತವರ್ಮನ ಬಾಣಗಳಿಂದ ಕತ್ತರಿಸಲ್ಪಟ್ಟ ಮಹಾತ್ಮನಾದ ಧರ್ಮರಾಜನ ಕವಚವು ರಣರಂಗದಲ್ಲಿ ಆಕಾಶದಿಂದ ನಕ್ಷತ್ರಗಳ ಸಮೂಹವು ಬಿದ್ದಂತೆ ಬಿದ್ದು ನಾಶವನ್ನು ಹೊಂದಿತು.
ಸ ಛಿನ್ನಧನ್ವಾ ವಿರಥಃ ಶೀರ್ಣವರ್ಮಾ ಶರಾರ್ದಿತಃ |
ಅಪಾಯಾಸೀದ್ ರಣಾತ್ ತೂರ್ಣಂ ಧರ್ಮಪುತ್ರೋ ಯುಧಿಷ್ಠಿರಃ ॥
ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ರಥಹೀನನಾಗಿ, ಕವಚವು ನಾಶವನ್ನು ಹೊಂದಿ ಕೃತವರ್ಮನ ಬಾಣಗಳಿಂದ ಪೀಡಿತನಾದ ಧರ್ಮಪುತ್ರನಾದ ಯುಧಿಷ್ಠಿರನು ಶೀಘ್ರವಾಗಿ ರಣರಂಗದಿಂದ ಹೊರಟು ಹೋದನು.
ಕೃತವರ್ಮಾ ತು ನಿರ್ಜಿತ್ಯ ಧರ್ಮಪುತ್ರಂ ಯುಧಿಷ್ಠಿರಮ್ |
ಪುನರ್ದ್ರೋಣಸ್ಯ ಜುಗುಪೇ ಚಕ್ರಮೇವ ಮಹಾಬಲಃ ॥ 41 ॥
ಮಹಾಬಲನಾದ ಕೃತವರ್ಮನಾದರೋ ಧರ್ಮಪುತ್ರನಾದ ಯುಧಿಷ್ಠಿರನನ್ನು ಗೆದ್ದು ಪುನಃ ದ್ರೋಣರ ಸೈನ್ಯವನ್ನು ರಕ್ಷಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಅಷ್ಟಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೆರಡನೆಯ ಅಧ್ಯಾಯ
ಸಾತ್ಯಕಿಯಿಂದ ಭೂರಿಯ ವಧೆ. ಅಶ್ವತ್ಥಾಮರಿಂದ ಘಟೋತ್ಕಚನ ಮತ್ತು ಭೀಮಸೇನನಿಂದ ದುರ್ಯೋಧನನ ಪರಾಜಯ.
ಸಂಜಯಃ
ಭೂರಿಸ್ತು ಸಮರೇ ರಾಜನ್ ಶೈನೇಯಂ ರಥಿನಾಂ ವರಮ್ |
ಆಪತಂತಮವಾಸೇಧತ್ ಪ್ರವಣಾದಿವ ಕುಂಜರಮ್ ॥ 1 ॥
ಸಂಜಯ ಎಲೈ ರಾಜನೇ, ಭೂರಿಯಾದರೋ ತಮ್ಮ ಕಡೆಗೆ ಬರುತ್ತಿದ್ದ ರಥಿಶ್ರೇಷ್ಠನಾದ ಸಾತ್ಯಕಿಯನ್ನು ಹಳ್ಳದಿಂದ ಏಳುವ ಆನೆಯನ್ನು ತಡೆದಂತೆ ತಡೆದನು.
ಅಥೈನಂ ಸಾತ್ಯಕಿಃ ಕ್ರುದ್ಧಃ ಪಂಚಭಿರ್ನಿಶಿತೈಃ ಶರೈಃ |
ವಿವ್ಯಾಧ ಹೃದಯೇ ತೂರ್ಣಂ ಪ್ರಾಸ್ರವತ್ ತಸ್ಯ ಶೋಣಿತಮ್ ॥ 2 ॥
ಆಗ ಸಾತ್ಯಕಿಯು ಕೋಪಗೊಂಡು ಐದು ತೀಕ್ಷ್ಣವಾದ ಬಾಣಗಳಿಂದ ಭೂರಿಯನ್ನು ಶೀಘ್ರವಾಗಿ ಹೃದಯದಲ್ಲಿ ಹೊಡೆದನು. ಭೂರಿಯ ರಕ್ತವು ಸುರಿಯಿತು.
ತಥೈವ ಕೌರವೋ ಯುದ್ಧೇ ಶೈನೇಯಂ ಯುದ್ಧದುರ್ಮದಮ್ |
ದಶಭಿರ್ವಿಶಿಖೈಸ್ತೀಕ್ಷ್ಣೈರವಿಧ್ಯತ ಭುಜಾಂತರೇ ॥ 3 ॥
ಹಾಗೆಯೇ ಕೌರವನಾದ ಭೂರಿಯೂ ಸಹ ರಣರಂಗದಲ್ಲಿ ಯುದ್ಧ ದುರ್ಮದನಾದ ಸಾತ್ಯಕಿಯನ್ನು ಹತ್ತು ತೀಕ್ಷ್ಣವಾದ ಬಾಣಗಳಿಂದ ಅವನ ಭುಜಗಳ ಮಧ್ಯದಲ್ಲಿ ಹೊಡೆದನು.
ತಾವನ್ಯೋನ್ಯಂ ಮಹಾರಾಜ ತತಕ್ಷಾತೇ ಶರೈರ್ಭೃಶಮ್ |
ಕ್ರೋಧಸಂರಕ್ತನಯನೌ ಕ್ರೋಧಾದ್ ವಿಸ್ಫಾರ್ಯ ಕಾರ್ಮುಕೇ ॥ 4 ॥
ಎಲೈ ಮಹಾರಾಜನೇ, ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ಮತ್ತು ತಮ್ಮ ಧನುಸ್ಸುಗಳನ್ನು ಬಲವಾಗಿ ಎಳೆದು ಅವರು ಬಾಣಗಳಿಂದ ಪರಸ್ಪರವಾಗಿ ಗಾಯಗೊಳಿಸಿದರು.
ತಯೋರಾಸೀನ್ಮಹಾರಾಜ ಶಸ್ತ್ರವೃಷ್ಟಿಃ ಸುದಾರುಣಾ |
ಕ್ರುದ್ಧಯೋಃ ಸಾಯಕಮುಚೋರ್ಯಮಾಂತಕನಿಕಾಶಯೋಃ ॥ 5 ॥
ಎಲೈ ಮಹಾರಾಜನೇ, ಯಮ ಮತ್ತು ಮೃತ್ಯುವಿನಂತಿದ್ದ ಅವರಿಬ್ಬರೂ ಅತ್ಯಂತ ಘೋರವಾದ ಬಾಣಗಳನ್ನು ಪ್ರಯೋಗಿಸಿ ಪರಸ್ಪರವಾಗಿ ಬಾಣಗಳ ಮಳೆಯನ್ನು ಕರೆದರು.

ತಾವನ್ಯೋನ್ಯಂ ಶರೈ ರಾಜನ್ ಪ್ರಚ್ಛಾದ್ಯ ಸಮರೇ ಸ್ಥಿತೌ |
ಮುಹೂರ್ತಂ ಚೈವ ತದ್ ಯುದ್ಧಂ ಸಮರೂಪಮಿವಾಭವತ್ ॥ 6 ॥
ಎಲೈ ರಾಜನೇ, ಅವರು ರಣರಂಗದಲ್ಲಿ ತಮ್ಮ ಬಾಣಗಳಿಂದ ಪರಸ್ಪರವಾಗಿ ಮುಚ್ಚಿ ನಿಂತರು. ಒಂದು ಮುಹೂರ್ತದ ಕಾಲ ಆ ಯುದ್ಧವು ಸಮವಾಗಿ ನಡೆಯಿತು.
ತತಃ ಕ್ರುದ್ಧೋ ಮಹಾರಾಜ ಶೈನೇಯಃ ಪ್ರಹಸನ್ನಿವ |
ಧನುಶ್ಚಿಚ್ಛೇದ ಸಮರೇ ಕೌರವ್ಯಸ್ಯ ಮಹಾತ್ಮನಃ ॥ 7 ॥
ಎಲೈ ಮಹಾರಾಜನೇ, ಕೋಪಗೊಂಡ ಸಾತ್ಯಕಿಯು ರಣರಂಗದಲ್ಲಿ ನಗುತ್ತಾ ಮಹಾತ್ಮನಾದ ಕೌರವ್ಯನಾದ ಭೂರಿಯ ಧನುಸ್ಸನ್ನು ಕತ್ತರಿಸಿದನು.
ಅಥೈನಂ ಛಿನ್ನಧನ್ವಾನಂ ನವಭಿರ್ನಿಶಿತೈಃ ಶರೈಃ |
ವಿವ್ಯಾಧ ಹೃದಯೇ ತೂರ್ಣಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 8 ॥
ಅನಂತರ ಅವನ ಧನುಸ್ಸು ಕತ್ತರಿಸಲ್ಪಡುತ್ತಿರಲು ತೀಕ್ಷ್ಣವಾದ ಒಂಬತ್ತು ಬಾಣಗಳಿಂದ ಅವನನ್ನು ಹೃದಯದಲ್ಲಿ ಗಾಢವಾಗಿ ಹೊಡೆದು `ನಿಲ್ಲು, ನಿಲ್ಲು' ಎಂದು ಹೇಳಿದನು.
ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುತಾಪನಃ |
ಧನುರನ್ಯತ್ ಸಮಾದಾಯ ಸಾತ್ವತಂ ಪ್ರತ್ಯವಿದ್ಧ್ಯತ ॥ 9 ॥
ಬಲಿಷ್ಠನಾದ ಶತ್ರುವಿನಿಂದ ಗಾಢವಾಗಿ ಹೊಡೆಯಲ್ಪಟ್ಟ ಶತ್ರುತಾಪನನಾದ ಭೂರಿಯು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಸಾತ್ಯಕಿಯನ್ನು ಪ್ರತಿಯಾಗಿ ಹೊಡೆದನು.
ಸ ವಿದ್ಧ್ವಾ ಸಾತ್ವತಂ ಬಾಣೈಸ್ತ್ರಿಭಿರೇವ ವಿಶಾಂಪತೇ |
ಧನುಶ್ಚಿಚ್ಛೇದ ಭಲ್ಲೇನ ಸುತೀಕ್ಷ್ಣೇನ ಹಸನ್ನಿವ ॥ 10 ॥
ಎಲೈ ರಾಜನೇ, ಅವನು ಸಾತ್ಯಕಿಯನ್ನು ಮೂರು ಬಾಣಗಳಿಂದ ಹೊಡೆದು, ತೀಕ್ಷ್ಣವಾದ ಭಲ್ಲದಿಂದ ನಗುವವನಂತೆ ಅವನ ಧನುಸ್ಸನ್ನು ಕತ್ತರಿಸಿದನು.
ಛಿನ್ನಧನ್ವಾ ಮಹಾರಾಜ ಸಾತ್ಯಕಿಃ ಕ್ರೋಧಮೂರ್ಚ್ಛಿತಃ |
ಪ್ರಜಹಾರ ಮಹಾವೇಗಾಂ ಶಕ್ತಿಂ ತಸ್ಯ ಮಹೋರಸಿ ॥ 11 ॥
ಎಲೈ ಮಹಾರಾಜನೇ, ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಕ್ರೋಧ ಮೂರ್ಛಿತನಾದ ಸಾತ್ಯಕಿಯು ಮಹಾವೇಗವುಳ್ಳ ಶಕ್ತಿಯನ್ನು ತೆಗೆದುಕೊಂಡು ಅದನ್ನು ಭೂರಿಯ ಎದೆಯ ಮೇಲೆ ಎಸೆದನು.
ಸ ತು ಶಕ್ತ್ಯಾ ವಿಭಿನ್ನಾಂಗೋ ನಿಪಪಾತ ರಥೋತ್ತಮಾತ್ |
ಲೋಹಿತಾಂಗ ಇವಾಕಾಶಾದ್ ದೀಪ್ತರಶ್ಮಿರ್ಯದೃಚ್ಛಯಾ ॥ 12 ॥
ಭೂರಿಯು ಶಕ್ತಿಯಿಂದ ಎದೆಯು ಬಿರಿದು, ದೀಪ್ತಕಿರಣವುಳ್ಳ ಕುಜನು ಯದೃಚ್ಛೆಯಿಂದ ಆಕಾಶದಿಂದ ಬಿದ್ದಂತೆ ತನ್ನ ಶ್ರೇಷ್ಠವಾದ ರಥದಿಂದ ಭೂಮಿಯ ಮೇಲೆ ಬಿದ್ದನು.
ತಂ ತು ದೃಷ್ಟ್ವಾ ಹತಂ ಶೂರಮಶ್ವತ್ಥಾಮಾ ಮಹಾರಥಃ |
ಅಭ್ಯಧಾವತ ವೇಗೇನ ಶೈನೇಯಂ ಪ್ರತಿ ಸಂಯುಗೇ |
ಅಭ್ಯವರ್ಷಚ್ಛರೌಘೇಣ ಮೇರುಂ ವೃಷ್ಟ್ಯಾ ಯಥಾಂಬುದಃ ॥ 13 ॥
ಶೂರನಾದ ಭೂರಿಯು ಹತನಾದುದನ್ನು ನೋಡಿ ಮಹಾರಥರಾದ ಅಶ್ವತ್ಥಾಮರು ಮೋಡವು ಮೇರುಪರ್ವತದ ಮೇಲೆ ಮಳೆಯನ್ನು ಸುರಿಸುವಂತೆ ಸಾತ್ಯಕಿಯ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ರಣರಂಗದಲ್ಲಿ ಅವನ ಕಡೆಗೆ ನುಗ್ಗಿದರು.
ತಮಾಪತಂತಂ ಸಂರಬ್ಧಂ ಶೈನೇಯಸ್ಯ ರಥಂ ಪ್ರತಿ |
ಘಟೋತ್ಕಚೋಽಬ್ರವೀದ್ ರಾಜನ್ ನಾದಂ ಮುಕ್ತ್ವಾ ಮಹಾರಥಃ ॥
ಎಲೈ ರಾಜನೇ, ಕೋಪಗೊಂಡು ಸಾತ್ಯಕಿಯ ರಥದ ಕಡೆಗೆ ವೇಗವಾಗಿ ಬರುತ್ತಿದ್ದ ಅಶ್ವತ್ಥಾಮರನ್ನು ಕುರಿತು ಮಹಾರಥನಾದ ಘಟೋತ್ಕಚನು ಸಿಂಹನಾದವನ್ನು ಮಾಡಿ ಹೇಳಿದನು.
ತಿಷ್ಠ ತಿಷ್ಠ ನ ಮೇ ಜೀವನ್ ದ್ರೋಣಪುತ್ರ ಗಮಿಷ್ಯಸಿ |
ಏಷ ತ್ವಾದ್ಯ ಹನಿಷ್ಯಾಮಿ ಮಹಿಷಂ ಮೃಗರಾಡಿವ |
ಯುದ್ಧಶ್ರದ್ಧಾಮಹಂ ತೇಽದ್ಯ ವಿನೇಷ್ಯಾಮಿ ರಣಾಜಿರೇ ॥ 15 ॥
ದ್ರೋಣಪುತ್ರರೇ, ನಿಲ್ಲಿ, ನಿಲ್ಲಿ. ಜೀವಸಹಿತವಾಗಿ ನೀವು ಇಲ್ಲಿಂದ ಹೋಗುವುದಿಲ್ಲ. ಸ್ಕಂದರಾಜನು ಮಹಿಷಾಸುರನನ್ನು ಕೊಂದಂತೆ ನಾನು ನಿಮ್ಮನ್ನು ಈ ದಿನ ಕೊಲ್ಲುವೆನು. ಈ ದಿನ ರಣರಂಗದಲ್ಲಿ ನಾನು ನಿಮ್ಮ ಯುದ್ಧದ ಆಸೆಯನ್ನು ಬಿಡಿಸುವೆನು. (ಸ್ಕಂಧನಿಂದಲೂ ಒಬ್ಬ ಮಹಿಷಾಸುರನು ಹತನಾಗಿದ್ದಾನೆ - ಲಕ್ಷ್ಮಾಲಂಕಾರ).
ಇತ್ಯುಕ್ತ್ವಾ ರೋಷತಾಮ್ರಾಕ್ಷೋ ರಾಕ್ಷಸಃ ಪರವೀರಹಾ |
ದ್ರೌಣಿಮಭ್ಯದ್ರವತ್ ಕ್ರುದ್ಧೋ ಗಜೇಂದ್ರಮಿವ ಕೇಸರೀ ॥ 16 ॥
ಹೀಗೆ ಹೇಳಿ ಪರವೀರಘಾತಕನೂ, ಕೋಪದಿಂದ ಕೆಂಪಾದ ಕಣ್ಣುಳ್ಳವನೂ ಆದ ರಾಕ್ಷಸನು ಕೋಪಗೊಂಡು ಸಿಂಹವು ಗಜೇಂದ್ರನ ಮೇಲೆ ಎರಗುವಂತೆ ಅಶ್ವತ್ಥಾಮರ ಮೇಲೆ ಎರಗಿದನು.
ರಥಾಕ್ಷಮಾತ್ರೈರಿಷುಭಿರಭ್ಯವರ್ಷದ್ಘಟೋತ್ಕಚಃ |
ರಥಿನಾಮೃಷಭಂ ದ್ರೌಣಿಂ ಧಾರಾಭಿರಿವ ತೋಯದಃ ॥ 17 ॥
ಮೋಡವು ಪರ್ವತದ ಮೇಲೆ ಜಲಧಾರೆಯನ್ನು ಸುರಿಸಿದಂತೆ ಘಟೋತ್ಕಚನು ರಥಿಶ್ರೇಷ್ಠರಾದ ಅಶ್ವತ್ಥಾಮರ ಮೇಲೆ ರಥದ ಅಕ್ಷದಷ್ಟು

ಸ್ಥೂಲವಾದ ಬಾಣಗಳ ಮಳೆಯನ್ನು ಸುರಿಸಿದನು.
ಶರವೃಷ್ಟಿಂ ತು ತಾಂ ಪ್ರಾಪ್ತಾಂ ಶರೈರಾಶೀವಿಷೋಪಮೈಃ |
ಶಾತಯಾಮಾಸ ಸಮರೇ ತರಸಾ ದ್ರೌಣಿರುತ್ಸ್ಮಯನ್ ॥ 18 ॥
ಅಶ್ವತ್ಥಾಮರು ನಗುತ್ತಾ ಸರ್ಪದಂತಿದ್ದ ಆ ಬಾಣಗಳಿಂದ ಉಂಟಾದ ತಮ್ಮ ಕಡೆಗೆ ಬರುತ್ತಿದ್ದ ಆ ಬಾಣಗಳ ಮಳೆಯನ್ನು ಶೀಘ್ರವಾಗಿ ವಿನಾಶಗೊಳಿಸಿದರು.
ತತಃ ಶರಶತೈಸ್ತೀಕ್ಷ್ಣೈರ್ಮರ್ಮಭೇದಿಭಿರಾಶುಗೈಃ |
ಸಮಾಚಿನೋದ್ ರಾಕ್ಷಸೇಂದ್ರಂ ಘಟೋತ್ಕಚಮರಿಂದಮ ॥ 19 ॥
ಎಲೈ ಅರಿಂದಮನೇ, ಅನಂತರ ಮರ್ಮಭೇದಿಗಳಾದ, ಶೀಘ್ರಗಾಮಿಗಳಾದ ನೂರು ಬಾಣಗಳಿಂದ ರಾಕ್ಷಸೇಂದ್ರನಾದ ಘಟೋತ್ಕಚನ ಶರೀರವನ್ನು ತುಂಬಿದರು.
ಸ ಶರೈರಾಚಿತಸ್ತೇನ ರಾಕ್ಷಸೋ ರಣಮೂರ್ಧನಿ |
ವ್ಯಕಾಶತ ಮಹಾರಾಜ ಶ್ವಾವಿಚ್ಛಲಲಿತೋ ಯಥಾ ॥ 20 ॥
ಎಲೈ ಮಹಾರಾಜನೇ, ದ್ರೋಣರು ಪ್ರಯೋಗಿಸಿದ ಬಾಣಗಳು ತನ್ನ ಶರೀರದಲ್ಲಿ ನಾಟಿದ ರಾಕ್ಷಸನಾದ ಘಟೋತ್ಕಚನು ರಣರಂಗದಲ್ಲಿ ಮುಳ್ಳುಗಳಿಂದ ಕೂಡಿದ ಮುಳ್ಳು ಹಂದಿಯಂತೆ ಶೋಭಿಸಿದನು.
ತತಃ ಕ್ರೋಧಸಮಾವಿಷ್ಟೋ ಭೈಮಸೇನಿಃ ಪ್ರತಾಪವಾನ್ |
ಶರೈರವಚಕರ್ತೋಗ್ರೈರ್ದ್ರೌಣಿಂ ವಜ್ರಾಶನಿಸ್ವನೈಃ ॥ 21 ॥
ಕ್ಷುರಪ್ರೈರರ್ಧಚಂದ್ರೈಶ್ಚ ನಾರಾಚೈಃ ಸಶಿಲೀಮುಖೈಃ |
ವರಾಹಕರ್ಣೈರ್ನಾಲೀಕೈಸ್ತೀಕ್ಷ್ಣೈಶ್ಚಾಪಿ ವಿಕರ್ಣಿಭಿಃ ॥ 22 ॥
ಆಗ ಬಹಳ ಕೋಪಗೊಂಡ ಪ್ರತಾಪಶಾಲಿಯಾದ, ಭೀಮಸೇನ ಪುತ್ರನಾದ ಘಟೋತ್ಕಚನು ವಜ್ರದ ಘೋಷಕ್ಕೆ ಸಮವಾದ ಘೋಷವುಳ್ಳ ಉಗ್ರವಾದ ಕ್ಷುರಪ್ರಗಳಿಂದಲೂ, ಅರ್ಧಚಂದ್ರಗಳಿಂದಲೂ, ನಾರಾಚಗಳಿಂದಲೂ, ಶಿಲೀ ಮುಖಗಳಿಂದಲೂ, ವರಾಹಕರ್ಣಗಳಿಂದಲೂ, ತೀಕ್ಷ್ಣವಾದ ಆಯುಧಗಳಿಂದಲೂ, ವಿಕರ್ಣಿಗಳಿಂದಲೂ ಅಶ್ವತ್ಥಾಮರನ್ನು ಗಾಯಗೊಳಿಸಿದನು.
ತಾಂ ಶಸ್ತ್ರವೃಷ್ಟಿಮತುಲಾಂ ವಜ್ರಾಶನಿಸಮಸ್ವನಾಮ್ |
ಪತಂತೀಮುಪರಿ ಕ್ರುದ್ಧೋ ದ್ರೌಣಿರವ್ಯಥಿತೇಂದ್ರಿಯಃ ॥ 23 ॥
ಸುದುಃಸಹಾಂ ಶರೈರ್ಘೋರೈರ್ದಿವ್ಯಾಸ್ತ್ರಪ್ರತಿಮಂತ್ರಿತೈಃ |
ವ್ಯಧಮತ್ ಸ ಮಹಾತೇಜಾ ಮಹಾಭ್ರಾಣೀವ ಮಾರುತಃ ॥ 24 ॥
ಮಹಾತೇಜಸ್ವಿಗಳಾದ ಅಶ್ವತ್ಥಾಮರು ವಜ್ರಾಶನಿಗೆ ಸಮವಾದ ಘೋಷವುಳ್ಳ ಅಸದೃಶವಾದ ಆ ಶಸ್ತ್ರವೃಷ್ಟಿಯು ತಮ್ಮ ಮೇಲೆ ಬೀಳುತ್ತಿರುವುದನ್ನು ನೋಡಿ ವ್ಯಥೆಯನ್ನು ಪಡದೆ ದುಸ್ಸಹವಾದ ಆ ಶರವೃಷ್ಟಿಯನ್ನು ದಿವ್ಯಾಸ್ತ್ರಮಂತ್ರಿತವಾದ ಬಾಣಗಳಿಂದ ವಾಯುವು ಮಹಾಮೋಡಗಳನ್ನು ನಾಶಪಡಿಸಿದಂತೆ ನಾಶಪಡಿಸಿದರು.
ತತೋಽಂತರಿಕ್ಷೇ ಬಾಣಾನಾಂ ಸಂಗ್ರಾಮೋಽನ್ಯ ಇವಾಭವತ್ |
ಘೋರರೂಪೋ ಮಹಾರಾಜ ಯೋಧಾನಾಂ ಹರ್ಷವರ್ಧನಃ ॥ 25 ॥
ಆಗ ಎಲೈ ಮಹಾರಾಜನೇ, ಆಕಾಶದಲ್ಲಿ ಯೋಧರಿಗೆ ಹರ್ಷವನ್ನುಂಟು ಮಾಡುವ ಬಾಣಗಳ ಪರಸ್ಪರ ಘೋರರೂಪವಾದ ಇನ್ನೊಂದು ಸಂಗ್ರಾಮವು ಉಂಟಾಯಿತು.
ತತೋಸ್ತ್ರಸಂಘರ್ಷಕೃತೈರ್ವಿಸ್ಫುಲಿಂಗೈಃ ಸಮಂತತಃ |
ಬಭೌ ನಿಶಾಮುಖೇ ವ್ಯೋಮ ಖದ್ಯೋತೈರಿವ ಸಂವೃತಮ್ ॥ 26 ॥
ಆ ಅಸ್ತ್ರಗಳ ಸಂಘರ್ಷದಿಂದ ಉಂಟಾದ ಅಗ್ನಿಕಿಡಿಗಳಿಂದ ಆ ರಾತ್ರಿಯಲ್ಲಿ ಆಕಾಶವು ಮಿಣುಕು ಹುಳುಗಳಿಂದ ತುಂಬಿದಂತೆ ಶೋಭಿಸಿತು.
ಸ ಮಾರ್ಗಣಗಣೈರ್ದ್ರೌಣಿರ್ದಿಶಃ ಪ್ರಚ್ಛಾದ್ಯ ಸರ್ವತಃ |
ಪ್ರಿಯಾರ್ಥಂ ತವ ಪುತ್ರಾಣಾಂ ರಾಕ್ಷಸಂ ಸಮವಾಕಿರತ್ ॥ 27 ॥
ಅಶ್ವತ್ಥಾಮರು ನಿನ್ನ ಪುತ್ರನಿಗೆ ಪ್ರಿಯವನ್ನುಂಟು ಮಾಡುವುದಕ್ಕಾಗಿ ತಮ್ಮ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಆಚ್ಛಾದಿಸಿ ಘಟೋತ್ಕಚನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತತಃ ಪ್ರವವೃತೇ ಯುದ್ಧಂ ದ್ರೌಣಿರಾಕ್ಷಸಯೋರ್ಮೃಧೇ |
ವಿಗಾಢೇ ರಜನೀಮಧ್ಯೇ ಶಕ್ರಪ್ರಹ್ಲಾದಯೋರಿವ ॥ 28 ॥
ಆಗ ಗಾಢವಾದ ರಾತ್ರಿ ಉಂಟಾಗುತ್ತಿರಲು ಆ ಕಾಲದಲ್ಲಿ ಅಶ್ವತ್ಥಾಮರಿಗೂ ಮತ್ತು ಘಟೋತ್ಕಚನಿಗೂ ಇಂದ್ರ-ಪ್ರಹ್ಲಾದರಿಗೆ ನಡೆದಂತೆ ಯುದ್ಧವು ನಡೆಯಿತು.
ತತೋ ಘಟೋತ್ಕಚೋ ಬಾಣೈರ್ದಶಭಿರ್ದ್ರೌಣಿಮಾಹವೇ |
ಜಘಾನೋರಸಿ ಸಂಕ್ರುದ್ಧಃ ಕಾಲಜ್ವಲನಸನ್ನಿಭೈಃ ॥ 29 ॥
ಆಗ ಬಹಳ ಕೋಪಗೊಂಡ ಘಟೋತ್ಕಚನು ರಣರಂಗದಲ್ಲಿ ಕಾಲಾಗ್ನಿಗೆ ಸಮವಾದ ಹತ್ತು ಬಾಣಗಳಿಂದ ಅಶ್ವತ್ಥಾಮರನ್ನು ಅವರ ಎದೆಯಲ್ಲಿ ಹೊಡೆದನು.
ಸ ತೈರಭ್ಯಾಯತೈರ್ವಿದ್ಧೋ ರಾಕ್ಷಸೇನ ಮಹಾಬಲಃ |
ಚಚಾಲ ಸಮರೇ ದ್ರೌಣಿರ್ವಾತನುನ್ನ ಇವ ದ್ರುಮಃ |
ಸ ಮೋಹಮನುಸಂಪ್ರಾಪ್ತೋ ಧ್ವಜಯಷ್ಟಿಂ ಸಮಾಶ್ರಿತಃ ॥ 30 ॥

ರಾಕ್ಷಸನಾದ ಘಟೋತ್ಕಚನಿಂದ ವಿಸ್ತಾರವಾದ ಬಾಣಗಳಿಂದ ಹೊಡೆಯಲ್ಪಟ್ಟ ಮಹಾಬಲರಾದ ಅಶ್ವತ್ಥಾಮರು ರಣರಂಗದಲ್ಲಿ ಬಿರುಗಾಳಿಗೆ ಕಂಪಿಸುವ ಮರದಂತೆ ಕಂಪಿಸಿದರು. ಅವರು ಧ್ವಜದಂಡವನ್ನು ಹಿಡಿದು ಮೂರ್ಛೆಯನ್ನು ಹೊಂದಿದರು.
ತತೋ ಹಾಹಾಕೃತಂ ಸೈನ್ಯಂ ತವ ಸರ್ವಂ ಜನಾಧಿಪ |
ಹತಂ ಸ್ಮ ಮೇನಿರೇ ಸರ್ವೇ ತಾವಕಾಸ್ತಂ ವಿಶಾಂಪತೇ ॥ 31 ॥
ಎಲೈ ರಾಜನೇ, ಆಗ ನಿನ್ನ ಸೈನ್ಯದಲ್ಲಿ ಎಲ್ಲೆಡೆಯಲ್ಲಿಯೂ ಹಾಹಾಕಾರ ಉಂಟಾಯಿತು. ಎಲೈ ರಾಜನೇ, ನಿನ್ನವರೆಲ್ಲರೂ ಅಶ್ವತ್ಥಾಮರು ಹತರಾದರೆಂದು ತಿಳಿದರು.
ತಂ ತು ದೃಷ್ಟ್ವಾ ತಥಾವಸ್ಥಮಶ್ವತ್ಥಾಮಾನಮಾಹವೇ |
ಪಾಂಚಾಲಾಃ ಸೃಂಜಯಾಶ್ಚೈವ ಸಿಂಹನಾದಂ ಪ್ರಚಕ್ರಿರೇ ॥ 32 ॥
ರಣರಂಗದಲ್ಲಿ ಅಶ್ವತ್ಥಾಮರು ಅಂತಹ ಅವಸ್ಥೆಯನ್ನು ಹೊಂದಿದುದನ್ನು ನೋಡಿ ಪಾಂಚಾಲರು ಮತ್ತು ಸೃಂಜಯರು ಸಿಂಹನಾದವನ್ನು ಮಾಡಿದರು.
ಪ್ರತಿಲಭ್ಯ ತತಃ ಸಂಜ್ಞಾಮಶ್ವತ್ಥಾಮಾ ಮಹಾಬಲಃ |
ಧನುಃ ಪ್ರಪೀಡ್ಯ ವಾಮೇನ ಕರೇಣಾಮಿತ್ರಕರ್ಶನಃ ॥ 33 ॥
ಮುಮೋಚಾಕರ್ಣಪೂರ್ಣೇನ ಧನುಷಾ ಶರಮುತ್ತಮಮ್ |
ಯಮದಂಡೋಪಮಂ ಘೋರಮುದ್ದಿಶ್ಯಾಶು ಘಟೋತ್ಕಚಮ್ ॥34॥
ಅಷ್ಟರಲ್ಲಿ ಮಹಾಬಲರಾದ ಅಶ್ವತ್ಥಾಮರು ಪ್ರಜ್ಞೆಯನ್ನು ಪುನಃ ಪಡೆದು ಶತ್ರುಕರ್ಶನರಾದ ಅವರು ಎಡಗೈಯಿಂದ ಧನುಸ್ಸನ್ನು ಬಲವಾಗಿ ಎಳೆದು ಕಿವಿಯವರೆಗೂ ಹೆದೆಯನ್ನು ಎಳೆದು ಶ್ರೇಷ್ಠವಾದ, ಘೋರವಾದ, ಯಮದಂಡ ಸದೃಶವಾದ ಒಂದು ಬಾಣವನ್ನು ಘಟೋತ್ಕಚನ ಮೇಲೆ ಶೀಘ್ರವಾಗಿ ಪ್ರಯೋಗಿಸಿದರು.
ಸ ಭಿತ್ತ್ವಾ ಹೃದಯಂ ತಸ್ಯ ರಾಕ್ಷಸಸ್ಯ ಶರೋತ್ತಮಃ |
ವಿವೇಶ ವಸುಧಾಮುಗ್ರಃ ಸುಪುಂಖಃ ಪೃಥಿವೀಪತೇ ॥ 35 ॥
ಎಲೈ ರಾಜನೇ, ಆ ಶ್ರೇಷ್ಠವಾದ ಒಳ್ಳೆಯ ಪುಂಖವನ್ನು ಹೊಂದಿದ್ದ, ಘೋರವಾದ ಬಾಣವು ರಾಕ್ಷಸನಾದ ಘಟೋತ್ಕಚನ ಹೃದಯವನ್ನು ಭೇದಿಸಿ ಭೂಮಿಯೊಳಗೆ ಇಳಿಯಿತು.
ಸೋಽತಿವಿದ್ಧೋ ಮಹಾರಾಜ ರಥೋಪಸ್ಥ ಉಪಾವಿಶತ್ |
ರಾಕ್ಷಸೇಂದ್ರಃ ಸುಬಲವಾನ್ ದ್ರೌಣಿನಾ ರಣಮಾನಿನಾ ॥ 36 ॥
ಎಲೈ ಮಹಾರಾಜನೇ, ಯುದ್ಧವನ್ನು ಗೌರವಿಸುವ ಅಶ್ವತ್ಥಾಮರಿಂದ ಅತ್ಯಂತ ಗಾಢವಾಗಿ ಹೀಗೆ ಹೊಡೆಯಲ್ಪಟ್ಟ ಬಲಿಷ್ಠನಾದ ರಾಕ್ಷಸಶ್ರೇಷ್ಠನಾದ ಘಟೋತ್ಕಚನು ರಥಪೀಠದಲ್ಲಿ (ಕುಸಿದು) ಕುಳಿತನು.
ದೃಷ್ಟ್ವಾ ವಿಮೂಢಂ ಹೈಡಿಂಬಂ ಸಾರಥಿಸ್ತಂ ರಣಾಜಿರಾತ್ |
ದ್ರೌಣೇಃ ಸಕಾಶಾತ್ ಸಂಭ್ರಾಂತಸ್ತ್ವಪನಿನ್ಯೇ ತ್ವರಾನ್ವಿತಃ ॥37 ॥
ಘಟೋತ್ಕಚನು ಮೂರ್ಛೆಹೊಂದಿದುದನ್ನು ನೋಡಿ ಅವನ ಸಾರಥಿಯು ಗಾಬರಿಗೊಂಡು ತ್ವರೆಯಿಂದ ಕೂಡಿ ಅವನನ್ನು ಅಶ್ವತ್ಥಾಮರಿಂದ ಬಿಡಿಸಿ ರಣರಂಗದಿಂದ ಹೊರಗೆ ಕರೆದುಕೊಂಡು ಹೋದನು.
ತಥಾ ತು ಸಮರೇ ವಿದ್ಧ್ವಾ ರಾಕ್ಷಸೇಂದ್ರಂ ಘಟೋತ್ಕಚಮ್ |
ನನಾದ ಸುಮಹಾನಾದಂ ದ್ರೋಣಪುತ್ರೋ ಮಹಾಬಲಃ ॥ 38 ॥
ದ್ರೋಣಪುತ್ರರೂ, ಮಹಾಬಲರೂ ಆದ ಅಶ್ವತ್ಥಾಮರು ರಾಕ್ಷಸೇಂದ್ರನಾದ ಘಟೋತ್ಕಚನನ್ನು ಆ ರೀತಿಯಲ್ಲಿ ಹೊಡೆದು ಮಹಾನಾದವನ್ನು ಮಾಡಿದರು.
ಪೂಜಿತಸ್ತವ ಪುತ್ರೈಶ್ಚ ಸರ್ವಯೋಧೈಶ್ಚ ಭಾರತ |
ವಪುಷಾ ಪ್ರತಿಜಜ್ವಾಲ ಮಧ್ಯಾಹ್ನ ಇವ ಭಾಸ್ಕರಃ ॥ 39 ॥
ಎಲೈ ಭಾರತನೇ, ನಿನ್ನ ಪುತ್ರರಿಂದಲೂ ಮತ್ತು ಸರ್ವಯೋಧರಿಂದಲೂ ಪೂಜಿತರಾದ ಅವರ ಶರೀರವು ಮಧ್ಯಾಹ್ನದ ಸೂರ್ಯನಂತೆ ಪ್ರಜ್ವಲಿಸಿತು.
ಭೀಮಸೇನಂ ತು ಯುಧ್ಯಂತಂ ಭಾರದ್ವಾಜರಥಂ ಪ್ರತಿ |
ಸ್ವಯಂ ದುರ್ಯೋಧನೋ ರಾಜಾ ಪ್ರತ್ಯವಿಧ್ಯಚ್ಛಿತೈಃ ಶರೈಃ ॥ 40 ॥
ದ್ರೋಣರ ರಥದ ಬಳಿ ಯುದ್ಧವನ್ನು ಮಾಡುತ್ತಿದ್ದ ಭೀಮಸೇನನ ಮೇಲೆ ರಾಜನಾದ ದುರ್ಯೋಧನನು ಸ್ವತಃ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.
ತಂ ಭೀಮಸೇನೋ ನವಭಿಃ ಶರೈರ್ವಿವ್ಯಾಧ ಮಾರಿಷ |
ದುರ್ಯೋಧನೋಽಪಿ ವಿಂಶತ್ಯಾ ಶರಾಣಾಂ ಪ್ರತ್ಯವಿಧ್ಯತ ॥ 41 ॥
ಎಲೈ ಶ್ರೇಷ್ಠನೇ, ಭೀಮಸೇನನು ಅವನ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು. ದುರ್ಯೋಧನನೂ ಸಹ ಭೀಮಸೇನನನ್ನು ಇಪ್ಪತ್ತು ಬಾಣಗಳಿಂದ ಹೊಡೆದನು.
ತೌ ಸಾಯಕೈರವಚ್ಛನ್ನಾವದೃಶ್ಯೇತಾಂ ರಣಾಜಿರೇ |
ಮೇಘಜಾಲಸಮಾಚ್ಛನ್ನೌ ನಭಸೀವೇಂದುಭಾಸ್ಕರೌ ॥ 42 ॥
ರಣರಂಗದಲ್ಲಿ ಬಾಣ ಸಮೂಹದಿಂದ ಆಚ್ಛಾದಿತರಾದ ಅವರಿಬ್ಬರೂ ಆಕಾಶದಲ್ಲಿ ಮೇಘಜಾಲದಿಂದ ಆವೃತರಾದ ಸೂರ್ಯ-ಚಂದ್ರರಂತೆ ಶೋಭಿಸಿದರು.
ಅಥ ದುರ್ಯೋಧನೋ ರಾಜಾ ಭೀಮಂ ವಿವ್ಯಾಧ ಪತ್ರಿಭಿಃ |

ಪಂಚಭಿರ್ಭರತಶ್ರೇಷ್ಠ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 43 ॥
ಎಲೈ ಭರತಶ್ರೇಷ್ಠನೇ, ಅನಂತರ ರಾಜನಾದ ದುರ್ಯೋಧನನು ಭೀಮನನ್ನು ಐದು ಬಾಣಗಳಿಂದ ಹೊಡೆದು `ನಿಲ್ಲು, ನಿಲ್ಲು' ಎಂದು ಹೇಳಿದನು.
ತಸ್ಯ ಭೀಮೋ ಧನುಶ್ಛಿತ್ತ್ವಾ ಧ್ವಜಂ ಚ ನವಭಿಃ ಶರೈಃ |
ವಿವ್ಯಾಧ ಕೌರವಶ್ರೇಷ್ಠಂ ನವತ್ಯಾ ನತಪರ್ವಣಾಮ್ ॥ 44 ॥
ಭೀಮನು ಒಂಬತ್ತು ಬಾಣಗಳಿಂದ ಅವನ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ, ಬಾಗಿದ ತುದಿಯುಳ್ಳ ತೊಂಬತ್ತು ಬಾಣಗಳಿಂದ ಕೌರವಶ್ರೇಷ್ಠನಾದ ಅವನನ್ನು ಹೊಡೆದನು.
ತತೋ ದುರ್ಯೋಧನಃ ಕ್ರುದ್ಧೋ ಭೀಮಸೇನಸ್ಯ ಮಾರಿಷ |
ಚಿಕ್ಷೇಪ ಸ ಶರಾನ್ ರಾಜನ್ ಪಶ್ಯತಾಂ ಸರ್ವಧನ್ವಿನಾಮ್ ॥ 45 ॥
ಎಲೈ ಪೂಜ್ಯನೇ, ರಾಜನೇ, ಆಗ ದುರ್ಯೋಧನನು ಕೋಪಗೊಂಡು ಎಲ್ಲ ಧನುರ್ಧಾರಿಗಳೂ ನೋಡುತ್ತಿರುವಂತೆ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ತಾನ್ನಿಹತ್ಯ ಶರಾನ್ ಭೀಮೋ ದುರ್ಯೋಧನಧನುಶ್ಚ್ಯುತಾನ್ |
ಕೌರವಂ ಪಂಚವಿಂಶತ್ಯಾ ಕ್ಷುದ್ರಕಾಣಾಂ ಸಮಾರ್ಪಯತ್ ॥ 46 ॥
ಭೀಮಸೇನನು ದುರ್ಯೋಧನನ ಧನುಸ್ಸಿನಿಂದ ಹೊರಹೊಮ್ಮಿದ ಆ ಬಾಣಗಳನ್ನು ನಾಶಪಡಿಸಿ ಇಪ್ಪತ್ತೈದು ಸಣ್ಣ ಬಾಣಗಳಿಂದ (ಕ್ಷುದ್ರಕಗಳಿಂದ) ಕೌರವನಾದ ಅವನನ್ನು ಹೊಡೆದನು.
ದುರ್ಯೋಧನಸ್ತು ಸಂಕ್ರುದ್ಧೋ ಭೀಮಸೇನಸ್ಯ ಮಾರಿಷ |
ಕ್ಷುರಪ್ರೇಣ ಧನುಶ್ಛಿತ್ತ್ವಾ ದಶಭಿಃ ಪ್ರತ್ಯವಿಧ್ಯತ ॥ 47 ॥
ಎಲೈ ಶ್ರೇಷ್ಠನೇ, ಕೋಪಗೊಂಡ ದುರ್ಯೋಧನನು ಕ್ಷುರಪ್ರದಿಂದ ಭೀಮಸೇನನ ಧನುಸ್ಸನ್ನು ಕತ್ತರಿಸಿ ಹತ್ತು ಬಾಣಗಳಿಂದ ಅವನನ್ನು ಹೊಡೆದನು.
ಅಥಾನ್ಯದ್ ಧನುರಾದಾಯ ಭೀಮಸೇನೋ ಮಹಾಬಲಃ |
ವಿವ್ಯಾಧ ನೃಪತಿಂ ತೂರ್ಣಂ ಸಪ್ತಭಿರ್ನಿಶಿತೈಃ ಶರೈಃ ॥ 48 ॥
ಆಗ ಮಹಾಬಲನಾದ ಭೀಮಸೇನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತೀಕ್ಷ್ಣವಾದ ಏಳು ಬಾಣಗಳಿಂದ ದುರ್ಯೋಧನನನ್ನು ಹೊಡೆದನು.
ತದಪ್ಯಸ್ಯ ಧನುಃ ಕ್ಷಿಪ್ರಂ ಚಿಚ್ಛೇದ ಲಘುಹಸ್ತವತ್ |
ದ್ವಿತೀಯಂ ಚ ತೃತೀಯಂ ಚ ಚತುರ್ಥಂ ಪಂಚಮಂ ತಥಾ ॥ 49 ॥
ಆತ್ತಮಾತ್ರಂ ಮಹಾರಾಜ ಭೀಮಸ್ಯ ಧನುರಾಚ್ಛಿನತ್ |
ತವ ಪುತ್ರೋ ಮಹಾರಾಜ ಜಿತಕಾಶೀ ಮದೋತ್ಕಟಃ ॥ 50 ॥
ಎಲೈ ಮಹಾರಾಜನೇ, ಕ್ಷಿಪ್ರಹಸ್ತನಾದ ದುರ್ಯೋಧನನು ಆ ಧನುಸ್ಸನ್ನೂ ಶೀಘ್ರವಾಗಿ ಕತ್ತರಿಸಿದನು. ಎಲೈ ಮಹಾರಾಜನೇ, ಹೀಗೆ ಎರಡನೆಯ, ಮೂರನೆಯ, ನಾಲ್ಕನೆಯ, ಐದನೆಯ, ನಂತರ ಭೀಮನು ತೆಗೆದುಕೊಂಡ ಧನುಸ್ಸೆಲ್ಲವನ್ನೂ ಮದೋತ್ಕಟನೂ, ಜಯವಂತನೂ ಆದ ನಿನ್ನ ಪುತ್ರನು ಕತ್ತರಿಸಿದನು.
ಸ ತದಾ ಛಿದ್ಯಮಾನೇಷು ಕಾರ್ಮುಕೇಷು ಪುನಃ ಪುನಃ |
ಶಕ್ತಿಂ ಚಿಕ್ಷೇಪ ಸಮರೇ ಸರ್ವಪಾರಶವೀಂ ಶುಭಾಮ್ ॥ 51 ॥
ಮೃತ್ಯೋರಿವ ಸ್ವಸಾರಂ ಹಿ ದೀಪ್ತಾಂ ಕೇತುಶಿಖಾಮಿವ |
ಸೀಮಂತಮಿವ ಕುರ್ವಂತೀಂ ತಮಸೋಗ್ನಿಸಮಪ್ರಭಾಮ್ ॥
ತನ್ನ ಧನುಸ್ಸುಗಳು ಪುನಃ ಪುನಃ ಕತ್ತರಿಸಲ್ಪಡುತ್ತಿರಲು ಭೀಮಸೇನನು ಮೃತ್ಯುವಿನ ತಂಗಿಯಂತಿದ್ದ, ಜ್ವಲಿಸುವ ಅಗ್ನಿಜ್ವಾಲೆಯಂತಿದ್ದ, ಸರ್ವ ಅಯಸ್ಮಯವಾದ, ಶುಭವಾದ ಒಂದು ಶಕ್ತಿಯನ್ನು ದುರ್ಯೋಧನನ ಮೇಲೆ ಎಸೆದನು. ಅದು ಕತ್ತಲಿನಲ್ಲಿ ಕೆಂಪಾದ ಬೈತಲೆಯನ್ನು ಮಾಡುವಂತೆ ಅಗ್ನಿಸಮವಾದ ಕಾಂತಿಯುಳ್ಳದ್ದಾಗಿ ದುರ್ಯೋಧನನ ಬಳಿ ಬಂದಿತು.
ಅಪ್ರಾಪ್ತಾಮೇವ ತಾಂ ಶಕ್ತಿಂ ತ್ರಿಧಾ ಚಿಚ್ಛೇದ ಕೌರವಃ |
ಪಶ್ಯತಃ ಸರ್ವಲೋಕಸ್ಯ ಭೀಮಸ್ಯ ಚ ಮಹಾತ್ಮನಃ ॥ 52 ॥
ಆ ಶಕ್ತಿಯು ತನ್ನ ಬಳಿಗೆ ಬರುವುದಕ್ಕೆ ಮೊದಲೇ ಕೌರವನಾದ ದುರ್ಯೋಧನನು ಎಲ್ಲ ಯೋಧರೂ ಮತ್ತು ಮಹಾತ್ಮನಾದ ಭೀಮಸೇನನೂ ನೋಡುತ್ತಿರುವಂತೆಯೇ ಮೂರು ಭಾಗಗಳಾಗಿ ಕತ್ತರಿಸಿದನು.
ತತೋ ಭೀಮೋ ಮಹಾರಾಜ ಗದಾಂ ಗುರ್ವೀಂ ಮಹಾಪ್ರಭಾಮ್ |
ಚಿಕ್ಷೇಪಾವಿಧ್ಯ ವೇಗೇನ ದುರ್ಯೋಧನರಥಂ ಪ್ರತಿ ॥ 53 ॥
ಎಲೈ ಮಹಾರಾಜನೇ, ಆಗ ಭೀಮಸೇನನು ಭಾರವಾದ, ಮಹಾಕಾಂತಿಯನ್ನು ಹೊಂದಿದ ಒಂದು ಗದೆಯನ್ನು ತೆಗೆದುಕೊಂಡು ಅದನ್ನು ತಿರುಗಿಸಿ ವೇಗದಿಂದ ದುರ್ಯೋಧನನ ರಥದ ಮೇಲೆ ಎಸೆದನು.
ತತಃ ಸಾ ಸಹಸಾ ವಾಹಾಂಸ್ತವ ಪುತ್ರಸ್ಯ ಸಂಯುಗೇ |
ಸಾರಥಿಂ ಚ ಗದಾ ಗುರ್ವೀ ಮಮರ್ದ ಭರತರ್ಷಭ ॥ 54 ॥
ಎಲೈ ಭರತಶ್ರೇಷ್ಠನೇ, ಆ ಭಾರವಾದ ಗದೆಯು ಶೀಘ್ರವಾಗಿ ನಿನ್ನ ಪುತ್ರನ ರಥದ ಅಶ್ವಗಳನ್ನೂ ಮತ್ತು ಸಾರಥಿಯನ್ನೂ ನಾಶಗೊಳಿಸಿತು.
ಪುತ್ರಸ್ತು ತವ ರಾಜೇಂದ್ರ ರಥಾದ್ಧೇಮಪರಿಷ್ಕೃತಾತ್ |

ಆಪ್ಲುತಃ ಸಹಸಾ ಯಾನಂ ನಂದಕಸ್ಯ ಮಹಾತ್ಮನಃ ॥ 55 ॥
ಎಲ್ಲೈ ರಾಜೇಂದ್ರನೇ, ನಿನ್ನ ಪುತ್ರನಾದರೋ ಸುವರ್ಣಭೂಷಿತವಾದ ತನ್ನ ರಥದಿಂದ ಹಾರಿ ಶೀಘ್ರವಾಗಿ ಮಹಾತ್ಮನಾದ ನಂದಕನ ರಥವನ್ನು ಏರಿದನು.
ತತೋ ಭೀಮೋ ಹತಂ ಮತ್ವಾ ತವ ಪುತ್ರಂ ಮಹಾರಥಮ್ |
ಸಿಂಹನಾದಂ ಮಹಚ್ಚಕ್ರೇ ತರ್ಜಯನ್ನಿವ ಕೌರವಾನ್ ॥ 56 ॥
ಆಗ ಭೀಮನು ಮಹಾರಥನಾದ ನಿನ್ನ ಪುತ್ರನು ಹತನಾದನೆಂದು ತಿಳಿದು ಕೌರವರನ್ನು ಭಯಪಡಿಸುವವನಂತೆ ದೊಡ್ಡ ಸಿಂಹನಾದವನ್ನು ಮಾಡಿದನು.
ತಾವಕಾಃ ಸೈನಿಕಾಶ್ಚಾಪಿ ಮೇನಿರೇ ನಿಹತಂ ನೃಪಮ್ |
ತತೋ ವಿಚುಕ್ರುಶುಃ ಸರ್ವೇ ಹಾ ಹೇತಿ ಚ ಸಮಂತತಃ ॥ 57 ॥
ನಿನ್ನ ಸೈನಿಕರೂ ಸಹ ದುರ್ಯೋಧನನು ಮೃತನಾದನೆಂದೇ ತಿಳಿದರು. ಆಗ ಎಲ್ಲ ಕಡೆಗಳಲ್ಲಿಯೂ ಅವರು ಹಾಹಾಕಾರವನ್ನು ಮಾಡಿದರು.
ತೇಷಾಂ ತು ನಿನದಂ ಶ್ರುತ್ವಾ ತ್ರಸ್ತಾನಾಂ ಸರ್ವಯೋಧಿನಾಮ್ |
ಭೀಮಸೇನಸ್ಯ ನಾದಂ ಚ ಶ್ರುತ್ವಾ ರಾಜನ್ ಮಹಾತ್ಮನಃ ॥ 58 ॥
ತತೋ ಯುಧಿಷ್ಠಿರೋ ರಾಜಾ ಹತಂ ಮತ್ವಾ ಸುಯೋಧನಮ್ |
ಅಭ್ಯವರ್ತತ ವೇಗೇನ ಯತ್ರ ಪಾರ್ಥೋ ವೃಕೋದರಃ ॥ 59 ॥
ಎಲ್ಲೈ ರಾಜನೇ, ಹೆದರಿದ ಎಲ್ಲ ಕೌರವ ಯೋಧರ ಆ ಹಾಹಾಕಾರ ನಾದವನ್ನು ಕೇಳಿ ಮತ್ತು ಮಹಾತ್ಮನಾದ ಭೀಮಸೇನನ ಗರ್ಜನೆಯನ್ನು ಕೇಳಿ ರಾಜನಾದ ಯುಧಿಷ್ಠಿರನು ಸುಯೋಧನನು ಹತನಾದನೆಂದು ತಿಳಿದು ಶೀಘ್ರವಾಗಿ ಕುಂತೀಪುತ್ರನಾದ ವೃಕೋದರನು ಇದ್ದಲ್ಲಿಗೆ ಬಂದನು.
ಪಾಂಚಾಲಾಃ ಕೇಕಯಾ ಮತ್ಸ್ಯಾಃ ಸೃಂಜಯಾಶ್ಚ ವಿಶಾಂಪತೇ |
ಸರ್ವೋದ್ಯೋಗೇನಾಭಿಜಗ್ಮುರ್ದ್ರೋಣಮೇವ ಯುಯುತ್ಸಯಾ ॥ 60 ॥
ಎಲ್ಲೈ ರಾಜನೇ, ಪಾಂಚಾಲರು, ಕೇಕಯರು, ಮತ್ಸ್ಯರು ಮತ್ತು ಸೃಂಜಯರು ಸರ್ವಪ್ರಯತ್ನದಿಂದ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸಿ ಮುಂದೆ ಬಂದರು.
ತತ್ರಾಸೀತ್ ಸುಮಹದ್ಯುದ್ಧಂ ದ್ರೋಣಸ್ಯಾಥ ಪರೈಃ ಸಹ |
ಘೋರೇ ತಮಸಿ ಮಗ್ನಾನಾಂ ನಿಘ್ನತಾಮಿತರೇತರಮ್ ॥ 61 ॥
ಆಗ ಘೋರವಾದ ಕತ್ತಲೆಯಲ್ಲಿ ಮುಳುಗಿ ಪರಸ್ಪರವಾಗಿ ಹೊಡೆದಾಡುವ ದ್ರೋಣರಿಗೂ ಮತ್ತು ಇತರರಿಗೂ ದೊಡ್ಡ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವಿಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ಮೂರನೆಯ ಅಧ್ಯಾಯ
ಕರ್ಣನಿಂದ ಸಹದೇವನ ಪರಾಜಯ ಮತ್ತು ಅವಹೇಳನ. ಶಲ್ಯನಿಂದ ವಿರಾಟನ ಪರಾಜಯ. ಅರ್ಜುನನಿಂದ ಅಲಾಯುಧನ ಪರಾಜಯ.
ಸಂಜಯಃ
ಸಹದೇವಮಥಾಯಾಂತಂ ದ್ರೋಣಪ್ರೇಪ್ಸುಂ ವಿಶಾಂಪತೇ |
ಕರ್ಣೋ ವೈಕರ್ತನೋ ಯುದ್ಧೇ ವಾರಯಾಮಾಸ ಭಾರತ ॥ 1 ॥
ಎಲ್ಲೈ ರಾಜನೇ, ಭಾರತನೇ, ದ್ರೋಣರ ಸಮೀಪಕ್ಕೆ ಬರಲು ಯತ್ನಿಸುತ್ತಿದ್ದ ಸಹದೇವನನ್ನು ವೈಕರ್ತನನಾದ ಕರ್ಣನು ಯುದ್ಧದಲ್ಲಿ ತಡೆದನು.
ಸಹದೇವಸ್ತು ರಾಧೇಯಂ ವಿದ್ಧ್ವಾ ನವಭಿರಾಶುಗೈಃ |
ಪುನರ್ವಿವ್ಯಾಧ ದಶಭಿರ್ನಿಶಿತೈರ್ನತಪರ್ವಭಿಃ ॥ 2 ॥
ಸಹದೇವನಾದರೋ ಕರ್ಣನನ್ನು ಶೀಘ್ರಗಾಮಿಗಳಾದ ಒಂಬತ್ತು ಬಾಣಗಳಿಂದ ಹೊಡೆದು, ಪುನಃ ಬಾಗಿದ ತುದಿಯುಳ್ಳ ತೀಕ್ಷ್ಣವಾದ ಹತ್ತು ಬಾಣಗಳಿಂದ ಹೊಡೆದನು.
ತಂ ಕರ್ಣಃ ಪ್ರತಿವಿವ್ಯಾಧ ಶತೇನ ನತಪರ್ವಣಾಮ್ |
ಸಜ್ಯಂ ಚಾಸ್ಯ ಧನುಃ ಶೀಘ್ರಂ ಚಿಚ್ಛೇದ ಲಘುಹಸ್ತವತ್ ॥ 3 ॥
ಕರ್ಣನು ಬಾಗಿದ ತುದಿಯುಳ್ಳ ಮೂರು ಬಾಣಗಳಿಂದ ಅವನನ್ನು ಹೊಡೆದು ಶೀಘ್ರಹಸ್ತವುಳ್ಳವನಾಗಿ ಅವನ ಧನುಸ್ಸನ್ನೂ ಮತ್ತು ಹೆದೆಯನ್ನೂ ಕತ್ತರಿಸಿದನು.
ತತೋಽನ್ಯದ್ ಧನುರಾದಾಯ ಮಾದ್ರೀಪುತ್ರಃ ಪ್ರತಾಪವಾನ್ |
ಕರ್ಣಂ ವಿವ್ಯಾಧ ವಿಂಶತ್ಯಾ ತದದ್ಭುತಮಿವಾಭವತ್ ॥ 4 ॥
ಆಗ ಪ್ರತಾಪಶಾಲಿಯಾದ, ಮಾದ್ರೀಪುತ್ರನಾದ ಸಹದೇವನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಇಪ್ಪತ್ತು ಬಾಣಗಳಿಂದ

ಕರ್ಣನನ್ನು ಹೊಡೆದನು. ಅದು ಅದ್ಭುತವಾಗಿದ್ದಿತು.
ತಸ್ಯ ಕರ್ಣೋ ಹಯಾನ್ ಹತ್ವಾ ಶರೈಃ ಸನ್ನತಪರ್ವಭಿಃ |
ಸಾರಥಿಂ ಚಾಸ್ಯ ಭಲ್ಲೇನ ದ್ರುತಂ ನಿನ್ಯೇ ಯಮಕ್ಷಯಮ್ ॥ 5 ॥
ಕರ್ಣನು ಬಾಗಿದ ತುದಿಯುಳ್ಳ ಬಾಣಗಳಿಂದ ಅವನನ್ನು ಹೊಡೆದು ಅವನ ಸಾರಥಿಯನ್ನು ಭಲ್ಲದಿಂದ ಹೊಡೆದು ಶೀಘ್ರವಾಗಿ ಯಮಲೋಕಕ್ಕೆ ಕಳುಹಿಸಿದನು.
ವಿರಥಃ ಸಹದೇವಸ್ತು ಖಡ್ಗಂ ಚರ್ಮ ಸಮಾದದೇ |
ತದಪ್ಯಸ್ಯ ಶರೈಃ ಕರ್ಣೋ ವ್ಯಧಮತ್ ಪ್ರಹಸನ್ನಿವ ॥ 6 ॥
ರಥವನ್ನು ಕಳೆದುಕೊಂಡ ಸಹದೇವನು ಖಡ್ಗ ಮತ್ತು ಚರ್ಮವನ್ನು (ಗುರಾಣಿ) ತೆಗೆದುಕೊಂಡನು. ಕರ್ಣನು ನಗುತ್ತಲೇ ತನ್ನ ಬಾಣಗಳಿಂದ ಅವುಗಳನ್ನೂ ಹಾರಿಸಿದನು.
ತತೋ ಗುರ್ವೀಂ ಮಹಾಘೋರಾಂ ಹೇಮಚಿತ್ರಾಂ ಮಹಾಗದಾಮ್ |
ಪ್ರೇಷಯಾಮಾಸ ಸಮರೇ ವೈಕರ್ತನರಥಂ ಪ್ರತಿ ॥ 7 ॥
ಅನಂತರ ಸಹದೇವನು ಭಾರವಾದ, ಮಹಾಘೋರವಾದ, ಸುವರ್ಣಾಲಂಕೃತ- ವಾದ ದೊಡ್ಡ ಗದೆಯನ್ನು ರಣರಂಗದಲ್ಲಿ ಕರ್ಣನ ರಥದ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ಸಹದೇವಪ್ರವೇರಿತಾಮ್ |
ವ್ಯಷ್ಟಂಭಯಚ್ಛರೈಃ ಕರ್ಣೋ ಭೂಮೌ ಚೈನಾಮಪಾತಯತ್ ॥ 8 ॥
ಕರ್ಣನು ಸಹದೇವನಿಂದ ಪ್ರಯೋಗಿಸಲ್ಪಟ್ಟು ವೇಗವಾಗಿ ತನ್ನ ಕಡೆಗೆ ಬರುತ್ತಿದ್ದ ಆ ಗದೆಯನ್ನು ತನ್ನ ಬಾಣಗಳಿಂದ ತಡೆದು ಭೂಮಿಯಲ್ಲಿ ಕೆಡವಿದನು.
ಗದಾಂ ವಿನಿಹತಾಂ ದೃಷ್ಟ್ವಾ ಸಹದೇವಸ್ತ್ವರಾನ್ವಿತಃ |
ಶಕ್ತಿಂ ಚಿಕ್ಷೇಪ ಕರ್ಣಾಯ ತಾಮಪ್ಯಸ್ಯಾಚ್ಛಿನಚ್ಛರೈಃ ॥ 9 ॥
ಗದೆಯು ವಿನಾಶಗೊಂಡುದನ್ನು ನೋಡಿ ಸಹದೇವನು ತ್ವರೆಯಿಂದ ಕೂಡಿ ಕರ್ಣನ ಮೇಲೆ ಒಂದು ಶಕ್ತಿಯನ್ನು ಎಸೆದನು. ಕರ್ಣನು ಅದನ್ನೂ ಬಾಣಗಳಿಂದ ಕತ್ತರಿಸಿದನು.
ಸಸಂಭ್ರಮಸ್ತತಸ್ತೂರ್ಣಮವಪ್ಲುತ್ಯ ರಥೋತ್ತಮಾತ್ |
ಸಹದೇವೋ ಮಹಾರಾಜ ದೃಷ್ಟ್ವಾ ಕರ್ಣಂ ವ್ಯವಸ್ಥಿತಮ್ |
ರಥಚಕ್ರಂ ತತೋ ಗೃಹ್ಯ ಮುಮೋಚಾಧಿರಥಿಂ ಪ್ರತಿ ॥ 10 ॥
ಎಲೈ ಮಹಾರಾಜನೇ, ಸಹದೇವನು ಆಗ ತನ್ನ ಶ್ರೇಷ್ಠವಾದ ರಥದಿಂದ ಗಾಬರಿಗೊಂಡು ಕೆಳಗೆ ಹಾರಿ ಕರ್ಣನು ಹಾಗೆಯೇ ನಿಂತಿರುವುದನ್ನು ನೋಡಿ ರಥಚಕ್ರವನ್ನು ತೆಗೆದುಕೊಂಡು ಅದನ್ನು ಕರ್ಣನ ಮೇಲೆ ಎಸೆದನು.
ತಮಾಪತಂತಂ ಸಹಸಾ ಕಾಲಚಕ್ರಮಿವೋದ್ಯತಮ್ |
ಶರೈರನೇಕಸಾಹಸ್ರೈರಚ್ಛಿನತ್ ಸೂತನಂದನಃ ॥ 11 ॥
ಉದ್ಯತವಾದ ಕಾಲಚಕ್ರದಂತೆ ತನ್ನೆಡೆಗೆ ಶೀಘ್ರವಾಗಿ ಬರುತ್ತಿದ್ದ ಅದನ್ನೂ ಸಹ ಸೂತನಂದನನಾದ ಕಣರ್ನು ಅನೇಕ ಸಹಸ್ರ ಬಾಣಗಳಿಂದ ಕತ್ತರಿಸಿದನು.
ತಸ್ಮಿಂಸ್ತು ವಿತಥೇ ಚಕ್ರೇ ಕೃತೇ ತೇನ ಮಹಾತ್ಮನಾ |
ವಾರ್ಯಮಾಣಶ್ಚ ವಿಶಿಖೈಃ ಸಹದೇವೋ ರಣಂ ಜಹೌ ॥ 12 ॥
ಆ ಚಕ್ರವು ವ್ಯರ್ಥವಾಗುತ್ತಿರಲು ಮಹಾರಥನಾದ ಕರ್ಣನಿಂದ ಬಾಣಗಳಿಂದ ತಡೆಯಲ್ಪಡುತ್ತಿದ್ದ ಸಹದೇವನು ರಣರಂಗವನ್ನು ತ್ಯಜಿಸಿದನು.
ತಮಭಿದ್ರುತ್ಯ ರಾಧೇಯೋ ಮುಹೂರ್ತಾದ್ ಭರತರ್ಷಭ |
ಅಬ್ರುವೀತ್ ಪ್ರಹಸನ್ ವಾಕ್ಯಂ ಸಹದೇವಂ ವಿಶಾಂಪತೇ ॥ 13 ॥
ಎಲೈ ರಾಜನೇ, ಭರತಶ್ರೇಷ್ಠನೇ, ಕರ್ಣನು ಒಂದು ಮುಹೂರ್ತದ ಕಾಲ ಸಹದೇವನನ್ನು ಹಿಂಬಾಲಿಸಿ ನಗುತ್ತಾ ಅವನನ್ನು ಕುರಿತು ಮಾತನಾಡಿದನು.
ಮಾ ಯುದ್ಧ್ಯಸ್ವ ರಣೇ ವೀರ ವಿಶಿಷ್ಟೈ ರಥಿಭಿಃ ಸಹ |
ಸದೃಶೈರ್ಯುಧ್ಯ ಮಾದ್ರೇಯ ವಚೋ ಮೇ ಮಾ ವಿಶಂಕಿಥಾಃ ॥ 14 ॥
ಎಲೈ ವೀರನೇ, ನಿನಗಿಂತ ಶ್ರೇಷ್ಠರಾದ ರಥಿಕರ ಜೊತೆಯಲ್ಲಿ ಯುದ್ಧವನ್ನು ಮಾಡಬೇಡ. ಮಾದ್ರೀಪುತ್ರನೇ, ನಿನಗೆ ಸದೃಶರಾದವರ ಜೊತೆಯಲ್ಲಿ ಯುದ್ಧವನ್ನು ಮಾಡು. ನನ್ನ ಮಾತನ್ನು ಶಂಕಿಸಬೇಡ ಎಂದು ಹೇಳಿದನು.
ಅಥೈನಂ ಧನುಷೋಽಗ್ರೇಣ ತುದನ್ ಭೂಯೋಽಬ್ರವೀದ್ ವಚಃ |
ಏಷೋರ್ಜುನೋ ರಣೇ ಯತ್ತೋ ಯುದ್ಧ್ಯತೇ ಕುರುಭಿಃ ಸಹ |
ತತ್ರ ಗಚ್ಛಸ್ವ ಮಾದ್ರೇಯ ಗೃಹಂ ವಾ ಯದಿ ಮನ್ಯಸೇ ॥ 15 ॥
ಅನಂತರ ಕರ್ಣನು ಧನುಸ್ಸಿನ ತುದಿಯಿಂದ ಅವನನ್ನು ತಿವಿಯುತ್ತಾ ಪುನಃ ಅವನನ್ನು ಕುರಿತು `ಎಲೈ ಮಾದ್ರೀಪುತ್ರನೇ, ಈ ಅರ್ಜುನನು ರಣರಂಗದಲ್ಲಿ ಪ್ರಯತ್ನಪಟ್ಟು ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ. ಅಲ್ಲಿಗೆ ಹೋಗು ಅಥವಾ ಬೇಕಾದರೆ ಮನೆಗಾದರೂ ಹೋಗು' ಎಂದು ಹೇಳಿದನು.
ಏವಮುಕತ್ವ ತು ತಂ ಕರ್ಣೋ ರಥೇನ ರಥಿನಾಂ ವರಃ |
ಪ್ರಾಯಾತ್ ಪಾಂಚಾಲಪಾಂಡೂನಾಂ ಸೈನ್ಯಾನಿ ಪ್ರಹಸನ್ನಿವ ॥ 16 ॥

ರಥಿಶ್ರೇಷ್ಠನಾದ ಕರ್ಣನು ಹೀಗೆ ಹೇಳಿ ನಗುತ್ತಾ ಪಾಂಚಾಲ-ಪಾಂಡವ ಸೇನೆ ಇದ್ದ ಕಡೆಗೆ ತನ್ನ ರಥದಿಂದ ಹೊರಟನು.
ವಧಪ್ರಾಪ್ತಂ ತು ಮಾದ್ರೇಯಂ ನಾವಧೀತ್ ಸಮರೇಽರಿಹಾ |
ಕುಂತ್ಯಾಃ ಸ್ಮೃತ್ವಾ ವಚೋ ರಾಜನ್ ಸತ್ಯಸಂಧೋ ಮಹಾರಥಃ ॥ 17 ॥
ಶತ್ರುಘಾತಕನಾದ ಕರ್ಣನು ಸಹದೇವನನ್ನು ವಧಿಸಲು ಪ್ರಾಪ್ತನಾಗಿದ್ದರೂ ಕುಂತಿಯ ಮಾತುಗಳನ್ನು ಸ್ಮರಿಸಿ, ಎಲೈ ರಾಜನೇ, ಸತ್ಯಸಂಧನೂ, ಮಹಾರಥನೂ ಆದ ಅವನು ಅವನನ್ನು ಕೊಲ್ಲಲಿಲ್ಲ.
ಸಹದೇವಸ್ತತೋ ರಾಜನ್ ವಿಮನಾಃ ಶರಪೀಡಿತಃ |
ಕರ್ಣವಾಕ್ಶಲ್ಯತಪ್ತಶ್ಚ ಜೀವಿತಾನ್ನಿರವಿದ್ಯತ ॥ 18 ॥
ಎಲೈ ರಾಜನೇ, ಆಗ ಸಹದೇವನು ಕರ್ಣನ ಬಾಣಗಳಿಂದ ಪೀಡಿತನಾಗಿ, ಕರ್ಣನ ವಾಗ್ಬಾಣಗಳಿಂದಲೂ ತಪ್ತನಾಗಿ ಬೇಸರಗೊಂಡು ತನ್ನ ಜೀವನದಲ್ಲಿಯೇ ನಿರಾಶೆಯನ್ನು ಹೊಂದಿದನು.
ಆರುರೋಹ ರಥಂ ಚಾಪಿ ಪಾಂಚಾಲ್ಯಸ್ಯ ಮಹಾತ್ಮನಃ |
ಜನಮೇಜಯಸ್ಯ ಸಮರೇ ತ್ವರಾಯುಕ್ತೋ ಮಹಾರಥಃ ॥ 19 ॥
ಮಹಾರಥನಾದ ಅವನು ತ್ವರೆಯಿಂದ ಕೂಡಿ ಪಾಂಚಾಲ ದೇಶದ ಮಹಾತ್ಮನಾದ ಜನಮೇಜಯನ ರಥವನ್ನು ಏರಿದನು.
ವಿರಾಟಂ ಸಹಸೇನಂ ತು ದ್ರೋಣಾರ್ಥೇ ದ್ರುತಮಾಗತಮ್ |
ಮದ್ರರಾಜಃ ಶರೌಘೇಣ ಛಾದಯಾಮಾಸ ಧನ್ವಿನಮ್ ॥ 20 ॥
ತನ್ನ ಸೈನ್ಯದ ಜೊತೆಯಲ್ಲಿ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬರುತ್ತಿದ್ದ ಧನುರ್ಧಾರಿಯಾದ ವಿರಾಟನನ್ನು ಮದ್ರರಾಜನಾದ ಶಲ್ಯನು ಬಾಣಗಳ ಸಮೂಹದಿಂದ ಆಚ್ಛಾದಿಸಿದನು.
ತಯೋಃ ಸಮಭವದ್ ಯುದ್ಧಂ ಸಮರೇ ದೃಢಧನ್ವಿನೋಃ |
ಯಾದೃಶಂ ಹ್ಯಭವದ್ ರಾಜನ್ ಜಂಭವಾಸವಯೋಃ ಪುರಾ ॥ 21 ॥
ಎಲೈ ರಾಜನೇ, ಹಿಂದೆ ಜಂಭಾಸುರನಿಗೂ ಇಂದ್ರನಿಗೂ ನಡೆದಂತಹ ಘೋರವಾದ ಯುದ್ಧಕ್ಕೆ ಸದೃಶವಾದ ಯುದ್ಧವು ದೃಢವಾದ ಧನುಸ್ಸುಳ್ಳ ಅವರಿಬ್ಬರಿಗೆ ನಡೆಯಿತು.
ಮದ್ರರಾಜೋ ಮಹಾರಾಜ ವಿರಾಟಂ ವಾಹಿನೀಪತಿಮ್ |
ಆಜಘ್ನೇ ತ್ವರಿತಂ ತೀಕ್ಷ್ಣೈಃ ಶತೇನ ನತಪರ್ವಣಾಮ್ ॥ 22 ॥
ಎಲೈ ಮಹಾರಾಜನೇ, ಮದ್ರರಾಜನಾದ ಶಲ್ಯನು ಸೇನಾಪತಿಯಾದ ವಿರಾಟನನ್ನು ಬಾಗಿದ ತುದಿಯುಳ್ಳ ನೂರು ತೀಕ್ಷ್ಣವಾದ ಬಾಣಗಳಿಂದ ಶೀಘ್ರವಾಗಿ ಹೊಡೆದನು.
ಪ್ರತಿವಿವ್ಯಾಧ ತಂ ರಾಜಾ ನವಭಿರ್ನಿಶಿತೈಃ ಶರೈಃ |
ಪುನಶ್ಚೈವ ತ್ರಿಸಪ್ತತ್ಯಾ ಭೂಯಶ್ಚೈವ ಶತೇನ ಹ ॥ 23 ॥
ವಿರಾಟರಾಜನು ಒಂಬತ್ತು ತೀಕ್ಷ್ಣವಾದ ಬಾಣಗಳಿಂದ ಅವನನ್ನು ಪ್ರತಿಯಾಗಿ ಹೊಡೆದು ಪುನಃ ಎಪ್ಪತ್ಮೂರು ಬಾಣಗಳಿಂದಲೂ, ಪುನಃ ನೂರು ಬಾಣಗಳಿಂದಲೂ ಹೊಡೆದನು.
ತಸ್ಯ ಮದ್ರಾಧಿಪೋ ಹತ್ವಾ ಚತುರೋ ರಥವಾಜಿನಃ |
ಸೂತಂ ಧ್ವಜಂ ಚ ಸಮರೇ ರಥೋಪಸ್ಥಾದಪಾತಯತ್ ॥ 24 ॥
ಮದ್ರರಾಜನಾದ ಶಲ್ಯನು ಅವನ ರಥದ ನಾಲ್ಕು ಅಶ್ವಗಳನ್ನು ಕೊಂದು ರಥದ ಸಾರಥಿಯನ್ನೂ ಮತ್ತು ಧ್ವಜವನ್ನೂ ರಣರಂಗದಲ್ಲಿ ರಥಪೀಠದಿಂದ ಕೆಡವಿದನು.
ಹತಾಶ್ವಾತ್ ತು ರಥಾತ್ತೂರ್ಣಮವಪ್ಲುತ್ಯ ಮಹಾರಥಃ |
ತಸ್ಥೌ ವಿಸ್ಫಾರಯಂಶ್ಚಾಪಂ ವಿಮುಂಚಂಶ್ಚ ಶಿತಾನ್ ಶರಾನ್ ॥ 25॥
ಮಹಾರಥನಾದ ಜನಮೇಜಯನು ಅಶ್ವಗಳು ಮೃತವಾದ ತನ್ನ ರಥದಿಂದ ಶೀಘ್ರವಾಗಿ ಕೆಳಗೆ ಹಾರಿ ತನ್ನ ಧನುಸ್ಸನ್ನು ಎಳೆದು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ನಿಂತನು.
ಶತಾನೀಕಸ್ತತೋ ದೃಷ್ಟ್ವಾ ಭ್ರಾತರಂ ಹತವಾಹನಮ್ |
ರಥೇನಾಭ್ಯಪತತ್ ತೂರ್ಣಂ ಸರ್ವಲೋಕಸ್ಯ ಪಶ್ಯತಃ ॥ 26 ॥
ಅವನ ತಮ್ಮನಾದ ಶತಾನೀಕನು ತನ್ನ ಸಹೋದರನು ವಾಹನವನ್ನು ಕಳೆದುಕೊಂಡುದನ್ನು ನೋಡಿ ಎಲ್ಲ ಲೋಕಗಳೂ ನೋಡುತ್ತಿರುವಂತೆ ಶೀಘ್ರವಾಗಿ ತನ್ನ ರಥದಿಂದ ಅವನ ಬಳಿಗೆ ಬಂದನು.
ಶತಾನೀಕಮಥಾಯಾಂತಂ ಮದ್ರರಾಜೋ ಮಹಾಮೃಧೇ |
ವಿಶಿಖೈರ್ಬಹುಭಿರ್ವಿದ್ಧ್ವಾ ತತೋ ನಿನ್ಯೇ ಯಮಕ್ಷಯಮ್ ॥ 27 ॥
ಮದ್ರರಾಜನಾದ ಶಲ್ಯನು ಆ ದೊಡ್ಡ ಯುದ್ಧದಲ್ಲಿ ತನ್ನ ಬಳಿಗೆ ಬರುತ್ತಿದ್ದ ಶತಾನೀಕನನ್ನು ನೋಡಿ ಅನೇಕ ಬಾಣಗಳಿಂದ ಅವನನ್ನು ಹೊಡೆದು ಯಮಲೋಕಕ್ಕೆ ಕಳುಹಿಸಿದನು.
ತಸ್ಮಿಂಸ್ತು ನಿಹತೇ ವೀರೇ ವಿರಾಟೋ ರಥಸತ್ತಮಃ |
ಆರುರೋಹ ರಥಂ ತೂರ್ಣಂ ತಮೇವ ಧ್ವಜಮಾಲಿನಮ್ ॥ 28 ॥
ವೀರನೂ, ರಥಶ್ರೇಷ್ಠನೂ ಆದ ಶತಾನೀಕನು ಹತನಾಗುತ್ತಿರಲು ವಿರಾಟನು ಧ್ವಜಮಾಲೆಗಳಿಂದ ಅಲಂಕರಿಸಿದ್ದ ಅದೇ ರಥವನ್ನು ಶೀಘ್ರವಾಗಿ ಏರಿದನು.
ತತೋ ವಿಸ್ಫಾರ್ಯ ನಯನೇ ಕ್ರೋಧಾದ್ ದ್ವಿಗುಣವಿಕ್ರಮಃ |
ಮದ್ರರಾಜರಥಂ ತೂರ್ಣಂ ಛಾದಯಾಮಾಸ ಪತ್ರಿಭಿಃ ॥ 29 ॥

ಅನಂತರ ಕಣ್ಣುಗಳನ್ನು ಅರಳಿಸಿ ಕ್ರೋಧದಿಂದ ಎರಡುಪಟ್ಟು ಪರಾಕ್ರಮ ಉಳ್ಳವನಾಗಿ ಶೀಘ್ರವಾಗಿ ಬಾಣಗಳಿಂದ ಶಲ್ಯನ ರಥವನ್ನು ಆಚ್ಛಾದಿಸಿದನು.
ತತೋ ಮದ್ರಾಧಿಪಃ ಕ್ರುದ್ಧಃ ಶತೇನ ನತಪರ್ವಣಾಮ್ |
ಆಜಘಾನೋರಸಿ ದೃಢಂ ವಿರಾಟಂ ವಾಹಿನೀಪತಿಮ್ ॥ 30 ॥
ಆಗ ಕೋಪಗೊಂಡ ಶಲ್ಯನು ಬಾಗಿದ ತುದಿಯುಳ್ಳ ನೂರು ಬಾಣಗಳಿಂದ ಸೇನಾಪತಿಯಾದ ವಿರಾಟನನ್ನು ಅವನ ಎದೆಯಲ್ಲಿ ದೃಢವಾಗಿ ಹೊಡೆದನು.
ಸೋಽತಿವಿದ್ಧೋ ಮಹಾರಾಜ ರಥೋಪಸ್ಥ ಉಪಾವಿಶತ್ |
ಕಶ್ಮಲಂ ಚಾವಿಶತ್ ತೀವ್ರಂ ವಿರಾಟೋ ಭರತರ್ಷಭ |
ಸಾರಥಿಸ್ತಮಪೋವಾಹ ಸಮರೇ ಶರವಿಕ್ಷತಮ್ ॥ 31 ॥
ಎಲೈ ಮಹಾರಾಜನೇ, ಗಾಢವಾಗಿ ಹೊಡೆಯಲ್ಪಟ್ಟ ಆ ವಿರಾಟನು ರಥಪೀಠದಲ್ಲಿ ಕುಸಿದು ಮೂರ್ಛೆ ಹೋದನು. ಎಲೈ ಭರತಶ್ರೇಷ್ಠನೇ, ಬಾಣಗಳಿಂದ ಗಾಯಗೊಂಡ ಅವನನ್ನು ಅವನ ಸಾರಥಿಯು ಯುದ್ಧದಿಂದ ದೂರ ಕರೆದುಕೊಂಡು ಹೋದನು.
ತತಃ ಸಾ ಮಹತೀ ಸೇನಾ ಪ್ರಾದ್ರವನ್ನಿಶಿ ಭಾರತ |
ವಧ್ಯಮಾನಾ ಶರಶತೈಃ ಶಲ್ಯೇನಾಹವಶೋಭಿನಾ ॥ 32 ॥
ಆಗ ರಣಶೋಭಿಯಾದ ಶಲ್ಯನಿಂದ ನೂರಾರು ಬಾಣಗಳಿಂದ ಹೊಡೆಯಲ್ಪಟ್ಟ ಆ ದೊಡ್ಡ ಪಾಂಡವರ ಸೈನ್ಯವು ಎಲೈ ಭಾರತನೇ, ರಾತ್ರಿಯ ಸಮಯದಲ್ಲಿ ಓಡಿ ಹೋಯಿತು.
ತಾಂ ದೃಷ್ಟ್ವಾ ವಿದ್ರುತಾಂ ಸೇನಾಂ ವಾಸುದೇವಧನಂಜಯೌ |
ಪ್ರಾಯಾತಾಂ ತತ್ರ ರಾಜೇಂದ್ರ ಯತ್ರ ಶಲ್ಯೋ ವ್ಯವಸ್ಥಿತಃ ॥ 33 ॥
ಎಲೈ ರಾಜೇಂದ್ರನೇ, ಆ ಸೇನೆಯು ಓಡಿಹೋಗುತ್ತಿರುವುದನ್ನು ನೋಡಿ ಕೃಷ್ಣಾರ್ಜುನರು ಶಲ್ಯನಿದ್ದ ಕಡೆಗೆ ಶೀಘ್ರವಾಗಿ ಬಂದರು.
ತೌ ತು ಪ್ರತ್ಯುದ್ಯಯೌ ರಾಜನ್ ರಾಕ್ಷಸೇಂದ್ರೋ ಹ್ಯಲಾಯುಧಃ |
ಅಷ್ಟಚಕ್ರಸಮಾಯುಕ್ತಮಾಸ್ಥಾಯ ಪ್ರವರಂ ರಥಮ್ ॥ 34 ॥
ಎಲೈ ರಾಜನೇ, ರಾಕ್ಷಸೇಂದ್ರನಾದ ಅಲಾಯುಧನು ಎಂಟುಚಕ್ರಗಳುಳ್ಳ ಶ್ರೇಷ್ಠವಾದ ರಥವನ್ನು ಏರಿ ಕೃಷ್ಣಾರ್ಜುನರನ್ನು ಎದುರಿಸಿದನು.
ತುರಂಗಮಮುಖೈರ್ಯುಕ್ತಂ ಪಿಶಾಚೈರ್ಘೋರದರ್ಶನೈಃ |
ಲೋಹಿತಾರ್ದ್ರಪತಾಕಂ ತಂ ರಕ್ತಮಾಲ್ಯವಿಭೂಷಿತಮ್ |
ಕಾರ್ಷ್ಣಾಯಸಮಯಂ ಘೋರಮೃಕ್ಷಚರ್ಮಾವೃತಂ ಮಹತ್ ॥ 35 ॥
ರೌದ್ರೇಣ ಚಿತ್ರಪಕ್ಷೇಣ ವಿವೃತಾಕ್ಷೇಣ ಕೂಜತಾ |
ಧ್ವಜೇನೋಚ್ಛ್ರಿತತುಂಡೇನ ಗೃಧ್ರರಾಜೇನ ರಾಜತಾ ॥ 36 ॥
ಅಶ್ವಮುಖಗಳನ್ನು ಹೊಂದಿದ, ನೋಡಲು ಘೋರವಾದ ಪಿಶಾಚಿಗಳಿಂದ ಕೂಡಿದ, ರಕ್ತದಿಂದ ಒದ್ದೆಯಾದ ಪತಾಕೆಗಳುಳ್ಳ, ಕೆಂಪು ಹೂವಿನ ಮಾಲೆಗಳಿಂದ ಅಲಂಕೃತವಾದ, ಕಬ್ಬಿಣದಿಂದ ಮಾಡಿದ, ಕರಡಿಯ ಚರ್ಮದಿಂದ ಆವೃತವಾದ, ನೋಡಲು ಭಯಂಕರವಾದ, ವಿಚಿತ್ರವಾದ ಪಾರ್ಶ್ವವನ್ನು ಹೊಂದಿದ್ದ, ತೆರೆದ ಅಕ್ಷದಿಂದ ದೊಡ್ಡ ನಾದವನ್ನು ಮಾಡುತ್ತಿದ್ದ, ಬಾಯನ್ನು ಎತ್ತಿದ ಹದ್ದಿನ ಉನ್ನತವಾದ ಧ್ವಜದಿಂದ ವಿರಾಜಿಸುವ (ರಥದಿಂದ ಅಲ್ಲಿಗೆ ಬಂದನು).
ಸ ಬಭೌ ರಾಕ್ಷಸೋ ರಾಜನ್ ಭಿನ್ನಾಂಜನಚಯೋಪಮಃ |
ರುರೋಧಾರ್ಜುನಮಾಯಾಂತಂ ಪ್ರಭಂಜನಮಿವಾದ್ರಿರಾಟ್ |
ಕಿರನ್ ಬಾಣಗಣಾನ್ ರಾಜನ್ ಶತಶೋಽರ್ಜುನಮೂರ್ಧನಿ ॥ 37 ॥
ಎಲೈ ರಾಜನೇ, ಕಾಡಿಗೆಯ ರಾಶಿಯಂತೆ ಶೋಭಿಸುತ್ತಿದ್ದ ಆ ರಾಕ್ಷಸನು ಪರ್ವತವು ವಾಯುವನ್ನು ತಡೆಯುವಂತೆ ಅರ್ಜುನನ ಶಿರಸ್ಸಿನಲ್ಲಿ ನೂರಾರು ಬಾಣಗಳ ಸಮೂಹವನ್ನು ಸುರಿಸುತ್ತಾ ಅಲ್ಲಿಗೆ ಬರುತ್ತಿದ್ದ ಅರ್ಜುನನನ್ನು ತಡೆದನು.
ಅತಿತೀವ್ರಮಭೂದ್ ಯುದ್ಧಂ ನರರಾಕ್ಷಸಯೋರ್ಮೃಧೇ |
ದ್ರಷ್ಟ ್ರೂಣಾಂ ಪ್ರೀತಿಜನನಂ ಸರ್ವೇಷಾಂ ಭರತರ್ಷಭ ॥ 38 ॥
ಎಲೈ ಭರತಶ್ರೇಷ್ಠನೇ, ಆಗ ನರ-ರಾಕ್ಷಸರಾದ ಅವರಿಬ್ಬರಿಗೆ ನೋಡುವ ಎಲ್ಲರಿಗೂ ಸಂತೋಷವನ್ನುಂಟು ಮಾಡುವ ಬಹಳ ತೀವ್ರವಾದ ಯುದ್ಧವು ನಡೆಯಿತು.
ತಮರ್ಜುನಃ ಶತೇನೈವ ಪತ್ರಿಣಾಮಭ್ಯತಾಡಯತ್ |
ನವಭಿಶ್ಚ ಶಿತೈರ್ಬಾಣೈಶ್ಚಿಚ್ಛೇದ ಧ್ವಜಮುಚ್ಛ್ರಿತಮ್ ॥ 39 ॥
ಸಾರಥಿಂ ಚ ತ್ರಿಭಿರ್ಬಾಣೈಸ್ತ್ರಿಭಿರೇವ ತ್ರಿವೇಣುಕಮ್ |
ಧನುರೇಕೇನ ಚಿಚ್ಛೇದ ಚತುರ್ಭಿಶ್ಚತುರೋ ಹಯಾನ್ |
ವಿರಥಸ್ಯೋದ್ಯತಂ ಖಡ್ಗಂ ಶರೇಣಾಸ್ಯ ದ್ವಿಧಾಽಚ್ಛಿನತ್ ॥ 40 ॥
ಅರ್ಜುನನು ಅವನನ್ನು ನೂರು ಬಾಣಗಳಿಂದ ಹೊಡೆದು, ಒಂಬತ್ತು ತೀಕ್ಷ್ಣವಾದ ಬಾಣಗಳಿಂದ ಅವನ ಉನ್ನತವಾದ ಧ್ವಜವನ್ನು ಕತ್ತರಿಸಿದನು. ಮೂರು ಬಾಣಗಳಿಂದ ಅವನ ಸಾರಥಿಯನ್ನೂ, ಮೂರು ಬಾಣಗಳಿಂದ ರಥದ ತ್ರಿವೇಣುವನ್ನೂ, ಒಂದು ಬಾಣದಿಂದ ಅವನ ಧನುಸ್ಸನ್ನೂ ಕತ್ತರಿಸಿ, ನಾಲ್ಕು ಬಾಣಗಳಿಂದ ಅವನ ಅಶ್ವಗಳನ್ನೂ ಕೊಂದು, ರಥವನ್ನು ಕಳೆದುಕೊಂಡು ಖಡ್ಗವನ್ನು ಹಿಡಿದುನಿಂತ ಅವನ ಖಡ್ಗವನ್ನು ಒಂದು ಬಾಣದಿಂದ ಎರಡು ಭಾಗವಾಗಿ ಕತ್ತರಿಸಿದನು.
ಅಥೈನಂ ನಿಶಿತೈರ್ಬಾಣೈಶ್ಚತುರ್ಭಿರ್ಭರತರ್ಷಭ |

ಪಾರ್ಥೋಽರ್ದಯದ್ ರಾಕ್ಷಸೇಂದ್ರಂ ಸ ವಿದ್ಧಃ ಪ್ರಾದ್ರವದ್ಭಯಾತ್ ॥
ಎಲೈ ಭರತರ್ಷಭನೇ, ಅನಂತರ ತೀಕ್ಷ್ಣವಾದ ನಾಲ್ಕು ಬಾಣಗಳಿಂದ ಅರ್ಜುನನು ಅವನನ್ನು ಪೀಡಿಸಿದನು. ಆ ರೀತಿ ಬಾಣಗಳಿಂದ ಹೊಡೆಯಲ್ಪಟ್ಟ ರಾಕ್ಷಸೇಂದ್ರನಾದ ಅಲಾಯುಧನು ಭಯದಿಂದ ಓಡಿಹೋದನು.
ತಂ ವಿಜಿತ್ಯಾರ್ಜುನಸ್ತೂರ್ಣಂ ದ್ರೋಣಾಂತಿಕಮುಪಾಯಯೌ |
ಕಿರನ್ ಶರಗಣಾನ್ ರಾಜನ್ ನರವಾರಣವಾಜಿಷು ॥ 42 ॥
ಎಲೈ ರಾಜನೇ, ಅರ್ಜುನನು ಅವನನ್ನು ಶೀಘ್ರವಾಗಿ ಜಯಿಸಿ ಯೋಧರ ಮೇಲೆ, ಗಜಗಳ ಮೇಲೆ ಮತ್ತು ಅಶ್ವಗಳ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ದ್ರೋಣರ ಸಮೀಪಕ್ಕೆ ಬಂದನು.
ವಧ್ಯಮಾನಾ ಮಹಾರಾಜ ಪಾಂಡವೇನ ಯಶಸ್ವಿನಾ |
ಸೈನಿಕಾ ನ್ಯಪತನ್ನುರ್ವ್ಯಾಂ ವಾತನುನ್ನಾ ಇವ ದ್ರುಮಾಃ ॥ 43 ॥
ಎಲೈ ಮಹಾರಾಜನೇ, ಕೀರ್ತಿಶಾಲಿಯಾದ, ಪಾಂಡುಪುತ್ರನಾದ ಅರ್ಜುನನಿಂದ ಹೊಡೆಯಲ್ಪಟ್ಟ ನಿನ್ನ ಸೈನಿಕರು ಬಿರುಗಾಳಿಗೆ ಸಿಕ್ಕಿದ ಮರಗಳಂತೆ ಭೂಮಿಯ ಮೇಲೆ ಬಿದ್ದರು.
ತೇಷು ತೂತ್ಸಾದ್ಯಮಾನೇಷು ಫಲ್ಗುನೇನ ಮಹಾತ್ಮನಾ |
ಸಂಪ್ರಾದ್ರವದ್ ಬಲಂ ಸರ್ವಂ ಪುತ್ರಾಣಾಂ ತೇ ವಿಶಾಂಪತೇ ॥ 44 ॥
ಎಲೈ ರಾಜನೇ, ಮಹಾತ್ಮನಾದ ಅರ್ಜುನನಿಂದ ನಿನ್ನ ಸೈನಿಕರು ಹೀಗೆ ನಾಶಗೊಳ್ಳುತ್ತಿರಲು ನಿನ್ನ ಪುತ್ರರ ಸೈನ್ಯವು ರಣರಂಗದಿಂದ ಓಡಿಹೋಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ನಾಲ್ಕನೆಯ ಅಧ್ಯಾಯ
ಶತಾನೀಕ-ಚಿತ್ರಸೇನರ, ದ್ರುಪದ-ವೃಷಸೇನರ,
ಪ್ರತಿವಿಂಧ್ಯ-ದುಶ್ಶಾಸನರ ಸಂಕುಲಯುದ್ಧ.
ಸಂಜಯಃ
ಶತಾನೀಕಂ ಶರೈಸ್ತೂರ್ಣಂ ನಿರ್ದಹಂತಂ ಚಮೂಂ ತವ |
ಚಿತ್ರಸೇನಸ್ತವ ಸುತೋ ವಾರಯಾಮಾಸ ಭಾರತ ॥ 1 ॥
ಸಂಜಯ ಎಲೈ ಭಾರತನೇ, ನಿನ್ನ ಸೈನ್ಯವನ್ನು ತನ್ನ ಬಾಣಗಳಿಂದ ಶೀಘ್ರವಾಗಿ ದಹಿಸುತ್ತಿದ್ದ ಶತಾನೀಕನನ್ನು ನಿನ್ನ ಪುತ್ರನಾದ ಚಿತ್ರಸೇನನು ತಡೆದನು.
ನಾಕುಲಿಶ್ಚಿತ್ರಸೇನಂ ತು ನಾರಾಚೇನಾರ್ದಯದ್ ಭೃಶಮ್ |
ಸ ಚ ತಂ ಪ್ರತಿವಿವ್ಯಾಧ ದಶಭಿರ್ನಿಶಿತೈಃ ಶರೈಃ ॥ 2 ॥
ನಕುಲಪುತ್ರನಾದ ಶತಾನೀಕನು ಚಿತ್ರಸೇನನನ್ನು ನಾರಾಚದಿಂದ ದೃಢವಾಗಿ ಹೊಡೆದನು. ಚಿತ್ರಸೇನನೂ ಸಹ ಅವನನ್ನು ತೀಕ್ಷ್ಣವಾದ ಹತ್ತು ಬಾಣಗಳಿಂದ ಪ್ರತಿಯಾಗಿ ಹೊಡೆದನು.
ಚಿತ್ರಸೇನೋ ಮಹಾರಾಜ ಶತಾನೀಕಂ ಪುನರ್ಯುಧಿ |
ನವಭಿರ್ನಿಶಿತೈರ್ಬಾಣೈರಾಜಘಾನ ಸ್ತನಾಂತರೇ ॥ 3 ॥
ಎಲೈ ಮಹಾರಾಜನೇ, ಪುನಃ ಚಿತ್ರಸೇನನು ರಣರಂಗದಲ್ಲಿ ಶತಾನೀಕನನ್ನು ತೀಕ್ಷ್ಣವಾದ ಒಂಬತ್ತು ಬಾಣಗಳಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ನಾಕುಲಿಸ್ತಸ್ಯ ವಿಶಿಖೈರ್ವರ್ಮ ಸನ್ನತಪರ್ವಭಿಃ |
ಗಾತ್ರಾತ್ ಸಂಚ್ಯಾವಯಾಮಾಸ ತದದ್ಭುತಮಿವಾಭವತ್ ॥ 4 ॥
ನಕುಲಪುತ್ರನಾದ ಶತಾನೀಕನು ಬಾಗಿದ ತುದಿಯುಳ್ಳ ಬಾಣಗಳಿಂದ ಅವನ ಕವಚವನ್ನು ಶರೀರದಿಂದ ಕೆಡವಿದನು. ಅದು ಅದ್ಭುತವಾಗಿದ್ದಿತು.
ಸೋಽಪೇತವರ್ಮಾ ಪುತ್ರಸ್ತೇ ವಿರರಾಜ ಭೃಶಂ ನೃಪ |
ಉತ್ಸೃಜ್ಯ ಕಾಲೇ ರಾಜೇಂದ್ರ ನಿರ್ಮೋಕಮಿವ ಪನ್ನಗಃ ॥ 5 ॥
ಎಲೈ ರಾಜನೇ, ಕವಚವನ್ನು ಕಳೆದುಕೊಂಡ ನಿನ್ನ ಪುತ್ರನು ಯೋಗ್ಯ ಸಮಯದಲ್ಲಿ ಪೊರೆಯನ್ನು ಕಳಚಿಕೊಂಡ ಸರ್ಪದಂತೆ ಬಹಳವಾಗಿ ವಿರಾಜಿಸಿದನು.
ತತೋಽಸ್ಯ ನಿಶಿತೈರ್ಬಾಣೈರ್ಧ್ವಜಂ ಚಿಚ್ಛೇದ ನಾಕುಲಿಃ |
ಧನುಶ್ಚೈವ ಮಹಾರಾಜ ಯತಮಾನಸ್ಯ ಸಂಯುಗೇ ॥ 6 ॥
ಎಲೈ ಮಹಾರಾಜನೇ, ಅನಂತರ ನಕುಲ ಪುತ್ರನು ತೀಕ್ಷ್ಣವಾದ ಬಾಣಗಳಿಂದ ಅವನ ಧ್ವಜವನ್ನು ಕತ್ತರಿಸಿ ಯುದ್ಧದಲ್ಲಿ ಪ್ರಯತ್ನಶೀಲನಾಗಿದ್ದ ಅವನ ಧನುಸ್ಸನ್ನೂ ಕತ್ತರಿಸಿದನು.
ಸ ಛಿನ್ನಧನ್ವಾ ಸಮರೇ ವಿವರ್ಮಾ ಚ ಮಹಾರಥಃ |

ಧನುರನ್ಯನ್ಮಹಾರಾಜ ಜಗ್ರಾಹಾರಿವಿದಾರಣಮ್ ॥ 7 ॥
ಎಲೈ ಮಹಾರಾಜನೇ, ತನ್ನ ಧನುಸ್ಸು ಕತ್ತರಿಸಲ್ಪಟ್ಟು ಕವಚವನ್ನು ಕಳೆದುಕೊಂಡ ಮಹಾರಥನಾದ ಚಿತ್ರಸೇನನು ಶತ್ರುಭೇದಕವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡನು.
ತತಸ್ತೂರ್ಣಂ ಚಿತ್ರಸೇನೋ ನಾಕುಲಿಂ ನವಭಿಃ ಶರೈಃ |
ವಿವ್ಯಾಧ ಸಮರೇ ಕ್ರುದ್ಧೋ ಭರತಾನಾಂ ಮಹಾರಥಃ ॥ 8 ॥
ಅನಂತರ ಭರತರ ಮಹಾರಥನಾದ ಚಿತ್ರಸೇನನು ರಣರಂಗದಲ್ಲಿ ಕ್ರುದ್ಧನಾಗಿ ನಕುಲ ಪುತ್ರನನ್ನು ಒಂಬತ್ತು ಬಾಣಗಳಿಂದ ಶೀಘ್ರವಾಗಿ ಹೊಡೆದನು.
ಶತಾನೀಕೋಽಥ ಸಂಕ್ರುದ್ಧಶ್ಚಿತ್ರಸೇನಸ್ಯ ಮಾರಿಷ |
ಜಘಾನ ಚತುರೋ ವಾಹಾನ್ ಸಾರಥಿಂ ಚ ನರೋತ್ತಮಃ ॥ 9 ॥
ಎಲೈ ಶ್ರೇಷ್ಠನೇ, ಅನಂತರ ನರಶ್ರೇಷ್ಠನಾದ ಶತಾನೀಕನು ಕೋಪಗೊಂಡು ಚಿತ್ರಸೇನನ ರಥದ ನಾಲ್ಕು ಅಶ್ವಗಳನ್ನೂ ಮತ್ತು ಸಾರಥಿಯನ್ನೂ ಕೊಂದನು.
ಅವಪ್ಲುತ್ಯ ರಥಾತ್ ತಸ್ಮಾಚ್ಚಿತ್ರಸೇನೋ ಮಹಾರಥಃ |
ನಾಕುಲಿಂ ಪಂಚವಿಂಶತ್ಯಾ ಶರಾಣಾಮಾರ್ದಯದ್ ಬಲೀ ॥ 10 ॥
ಮಹಾರಥನಾದ ಚಿತ್ರಸೇನನು ತನ್ನ ರಥದಿಂದ ಕೆಳಗೆ ಹಾರಿ, ಬಲಿಷ್ಠನಾದ ಅವನು ನಕುಲಪುತ್ರನಾದ ಶತಾನೀಕನನ್ನು ಇಪ್ಪತ್ತೈದು ಬಾಣಗಳಿಂದ ಪೀಡಿಸಿದನು.
ತಸ್ಯ ತತ್ಕುರ್ವತಃ ಕರ್ಮ ನಕುಲಸ್ಯ ಸುತೋ ರಣೇ |
ಅರ್ಧಚಂದ್ರೇಣ ಚಿಚ್ಛೇದ ಚಾಪಂ ರತ್ನವಿಭೂಷಿತಮ್ ॥ 11 ॥
ನಕುಲಪುತ್ರನು ಆ ಕಾರ್ಯವನ್ನು ಮಾಡುತ್ತಿದ್ದ ಚಿತ್ರಸೇನನ ರತ್ನವಿಭೂಷಿತವಾದ ಧನುಸ್ಸನ್ನು ಅರ್ಧಚಂದ್ರದಿಂದ ಕತ್ತರಿಸಿದನು.
ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಆರುರೋಹ ರಥಂ ತೂರ್ಣಂ ಹಾರ್ದಿಕ್ಯಸ್ಯ ಮಹಾತ್ಮನಃ ॥ 12 ॥
ತನ್ನ ಧನುಸ್ಸು ಕತ್ತರಿಸಲ್ಪಟ್ಟು ರಥಾಶ್ವ-ಸಾರಥಿಗಳಿಂದ ಹೀನನಾದ ಚಿತ್ರಸೇನನು ಶೀಘ್ರವಾಗಿ ಮಹಾತ್ಮನಾದ ಕೃತವರ್ಮನ ರಥವನ್ನು ಏರಿದನು.
ದ್ರುಪದಂ ತು ಸಹಾನೀಕಂ ದ್ರೋಣಪ್ರೇಪ್ಸುಂ ಮಹಾರಥಮ್ |
ವೃಷಸೇನೋಽಭ್ಯಯಾತ್ ತೂರ್ಣಂ ಕಿರನ್ ಶರಶತೈಸ್ತದಾ ॥ 13 ॥
ತನ್ನ ಸೈನ್ಯದ ಜೊತೆಯಲ್ಲಿ ದ್ರೋಣರ ಸಮೀಪಕ್ಕೆ ಬರುತ್ತಿದ್ದ ಮಹಾರಥನಾದ ದ್ರುಪದನನ್ನು ಕರ್ಣನ ಪುತ್ರನಾದ ವೃಷಸೇನನು ನೂರಾರು ಬಾಣಗಳನ್ನು ಪ್ರಯೋಗಿಸುತ್ತಾ ಶೀಘ್ರವಾಗಿ ಸಮೀಪಿಸಿದನು.
ಯಜ್ಞಸೇನಸ್ತು ಸಮರೇ ಕರ್ಣಪುತ್ರಂ ಮಹಾರಥಮ್ |
ಷಷ್ಟ್ಯಾ ಶರಾಣಾಂ ವಿವ್ಯಾಧ ಬಾಹ್ವೋರುರಸಿ ಚಾನಘ ॥ 14 ॥
ಎಲೈ ಅನಘನೇ, ಯಜ್ಞಸೇನ(ದ್ರುಪದ)ನಾದರೋ ಯುದ್ಧದಲ್ಲಿ ಮಹಾರಥನಾದ ಕರ್ಣಪುತ್ರನನ್ನು ಅರವತ್ತು ಬಾಣಗಳಿಂದ ಅವನ ಬಾಹುಗಳಲ್ಲಿಯೂ, ಎದೆಯಲ್ಲಿಯೂ ಹೊಡೆದನು.
ವೃಷಸೇನಸ್ತು ಸಂಕ್ರುದ್ಧೋ ಯಜ್ಞಸೇನಂ ರಥೇ ಸ್ಥಿತಮ್ |
ಬಹುಭಿಃ ಸಾಯಕೈಸ್ತೀಕ್ಷ್ಣೈರಾಜಘಾನ ಸ್ತನಾಂತರೇ ॥ 15 ॥
ಕೋಪಗೊಂಡ ವೃಷಸೇನನು ರಥದಲ್ಲಿದ್ದ ಯಜ್ಞಸೇನನನ್ನು (ದ್ರುಪದನನ್ನು) ಅನೇಕ ತೀಕ್ಷ್ಣವಾದ ಬಾಣಗಳಿಂದ ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ತಾವುಭೌ ಶರನುನ್ನಾಂಗೌ ಶರಕಂಟಕಿನೌ ರಣೇ |
ವ್ಯಭ್ರಾಜೇತಾಂ ಮಹಾರಾಜ ಶ್ವಾವಿಧೌ ಶಲಲೈರಿವ ॥ 16 ॥
ಎಲೈ ಮಹಾರಾಜನೇ, ಅವರಿಬ್ಬರೂ ಬಾಣಗಳಿಂದ ಪೀಡಿತವಾದ ಶರೀರ ಉಳ್ಳವರಾಗಿ ಶರೀರದಲ್ಲಿ ಬಾಣಗಳು ನಾಟಿರಲು ಮುಳ್ಳುಗಳಿಂದ ಕೂಡಿದ ಮುಳ್ಳು ಹಂದಿಗಳಂತೆ ರಣರಂಗದಲ್ಲಿ ಶೋಭಿಸಿದರು.
ರುಗ್ಮಪುಂಖೈರಜಿಹ್ಮಾಗ್ರೈಃ ಶರೈಶ್ಛಿನ್ನತನುಚ್ಛದೌ |
ರುಧಿರೌಘಪರಿಕ್ಲಿನ್ನೌ ವ್ಯಭ್ರಾಜೇತಾಂ ಮಹಾಮೃಧೇ ॥ 17 ॥
ರುಗ್ಮಪುಂಖಗಳನ್ನು ಹೊಂದಿದ್ದ, ನೇರವಾದ ಅಗ್ರವನ್ನು ಹೊಂದಿದ್ದ ಬಾಣಗಳಿಂದ ಇಬ್ಬರೂ ಕವಚಗಳನ್ನು ಕಳೆದುಕೊಂಡು ರಕ್ತಪ್ರವಾಹದಿಂದ ಒದ್ದೆಯಾಗಿ ದೊಡ್ಡ ರಣರಂಗದಲ್ಲಿ ಶೋಭಿಸಿದರು.
ತಪನೀಯನಿಭೌ ಚಿತ್ರೌ ಕಲ್ಪವೃಕ್ಷಾವಿವಾದ್ಭುತೌ |
ಕಿಂಶುಕಾವಿವ ಚೋತ್ಫುಲ್ಲೌ ವ್ಯಕಾಶೇತಾಂ ರಣಾಜಿರೇ ॥ 18 ॥
ಸ್ವರ್ಣಸದೃಶಕಾಂತಿಯುಕ್ತರಾದ, ವಿಚಿತ್ರವಾದ ಕಲ್ಪವೃಕ್ಷದಂತೆ ಅದ್ಭುತವಾಗಿದ್ದ ಅವರಿಬ್ಬರೂ ರಣರಂಗದಲ್ಲಿ ಹೂವು ಅರಳಿದ ಕಿಂಶುಕ (ಮುತ್ತುಗದ) ವೃಕ್ಷದಂತೆ ಶೋಭಿಸಿದರು.
ವೃಷಸೇನಸ್ತತೋ ರಾಜನ್ನವಭಿರ್ದ್ರುಪದಂ ಶರೈಃ |
ವಿದ್ಧ್ವಾ ವಿವ್ಯಾಧ ಸಪ್ತತ್ಯಾ ಪುನಶ್ಚಾನ್ಯೈಸ್ತ್ರಿಭಿಃ ಶರೈಃ ॥19॥
ಎಲೈ ರಾಜನೇ, ಆಗ ವೃಷಸೇನನು ದ್ರುಪದನನ್ನು ಒಂಬತ್ತು ಬಾಣಗಳಿಂದ ಹೊಡೆದು, ಪುನಃ ಎಪ್ಪತ್ತು ಬಾಣಗಳಿಂದಲೂ, ಪುನಃ ಬೇರೆ ಮೂರು ಬಾಣಗಳಿಂದಲೂ ಹೊಡೆದನು.

ತತಃ ಶರಸಹಸ್ರಾಣಿ ವಿಮುಂಚನ್ ವಿಬಭೌ ತದಾ |
ಕರ್ಣಪುತ್ರೋ ಮಹಾರಾಜ ವರ್ಷಮಾಣ ಇವಾಂಬುದಃ ॥ 20 ॥
ಎಲೈ ಮಹಾರಾಜನೇ, ಅನಂತರ ಕರ್ಣಪುತ್ರನು ಮಳೆಯನ್ನು ಸುರಿಸುವ ಮೋಡದಂತೆ ಸಹಸ್ರಾರು ಬಾಣಗಳನ್ನು ಪ್ರಯೋಗಿಸುತ್ತಾ ಶೋಭಿಸಿದನು.
ತತಸ್ತು ದ್ರುಪದಾನೀಕಂ ಶರೈಶ್ಛಿನ್ನತನುಚ್ಛದಮ್ |
ಸಂಪ್ರಾದ್ರವದ್ ರಣೇ ರಾಜನ್ ನಿಶೀಥೇ ಭೈರವೇ ಸತಿ ॥ 21 ॥
ಎಲೈ ರಾಜನೇ, ಆಗ ಆ ಬಾಣಗಳಿಂದ ತಮ್ಮ ಕವಚಗಳು ಕತ್ತರಿಸಲ್ಪಡುತ್ತಿರಲು ದ್ರುಪದಸೇನೆಯು ಆ ಭಯಂಕರವಾದ ರಾತ್ರಿಯಲ್ಲಿ ರಣರಂಗದಿಂದ ಓಡಿ ಹೋಯಿತು.
ಪ್ರದೀಪ್ತೈರ್ಹಿ ಪರಿತ್ಯಕ್ತೈರ್ಜ್ವಲದ್ಭಿಸ್ತೈಃ ಸಮಂತತಃ |
ವ್ಯರಾಜತ ಮಹೀ ರಾಜನ್ ವೀತಾಭ್ರಾ ದ್ಯೌರಿವ ಗ್ರಹೈಃ ॥ 22 ॥
ಅಲ್ಲಲ್ಲಿ ಯೋಧರು ಬಿಟ್ಟುಹೋದ ಜ್ವಲಿಸುವ ದೀಪಗಳಿಂದ ಎಲೈ ರಾಜನೇ, ಭೂಮಿಯು ಮೋಡಗಳಿಲ್ಲದ ಆಕಾಶವು ಗ್ರಹಗಳಿಂದ ತುಂಬಿದಂತೆ ಶೋಭಿಸಿತು.
ತಥಾಂಗದೈರ್ನಿಪತಿತೈರ್ವ್ಯರಾಜತ ವಸುಂಧರಾ |
ಪ್ರಾವೃಟ್ಕಾಲೇ ಮಹಾರಾಜ ವಿದ್ಯುದ್ಭಿರಿವ ತೋಯದಃ ॥ 23 ॥
ಎಲೈ ಮಹಾರಾಜನೇ, ಹಾಗೆಯೇ ಕೆಳಗೆ ಬಿದ್ದ ಅಂಗದಗಳಿಂದ ಭೂಮಿಯು ಮಳೆಗಾಲದಲ್ಲಿ ಮಿಂಚುಗಳಿಂದ ಕೂಡಿದ ಮೋಡದಂತೆ ಶೋಭಿಸಿತು.
ತತಃ ಕರ್ಣಸುತತ್ರಸ್ತಾಃ ಸೋಮಕಾ ವಿಪ್ರದುದ್ರುವುಃ |
ಯಥೇಂದ್ರಭಯವಿತ್ರಸ್ತಾ ದಾನವಾಸ್ತಾರಕಾಮಯೇ ॥ 24 ॥
ಆಗ ತಾರಕಾಮಯವಾದ ಯುದ್ಧದಲ್ಲಿ ಇಂದ್ರನಿಗೆ ಹೆದರಿ ದಾನವರು ಓಡಿದಂತೆ ಕರ್ಣಪುತ್ರನಾದ ವೃಷಸೇನನಿಗೆ ಹೆದರಿ ಸೋಮಕರು ಓಡಿಹೋದರು.
ತೇನಾರ್ದ್ಯಮಾನಾಃ ಸಮರೇ ದ್ರವಮಾಣಾಶ್ಚ ಸೋಮಕಾಃ |
ವ್ಯರಾಜಂತ ಮಹಾರಾಜ ಪ್ರದೀಪ್ತೈರವಭಾಸಿತಾಃ ॥ 25 ॥
ಎಲೈ ಮಹಾರಾಜನೇ, ವೃಷಸೇನನಿಂದ ಪೀಡಿತರಾಗಿ ರಣರಂಗದಲ್ಲಿ ಓಡಿ ಹೋಗುವ ಸೋಮಕರು ದೀಪಗಳಿಂದ ಪ್ರಕಾಶಿಸಲ್ಪಟ್ಟು ವಿರಾಜಿಸಿದರು.
ತಾಂಸ್ತು ನಿರ್ಜಿತ್ಯ ಸಮರೇ ಕರ್ಣಪುತ್ರೋ ವ್ಯರೋಚತ |
ಮಧ್ಯಂದಿನಮನುಪ್ರಾಪ್ತೋ ಘರ್ಮಾಂಶುರಿವ ಭಾರತ ॥ 26 ॥
ಎಲೈ ಭಾರತನೇ, ಕರ್ಣಪುತ್ರನಾದ ವೃಷಸೇನನು ಯುದ್ಧದಲ್ಲಿ ಅವರನ್ನು ಸೋಲಿಸಿ ಮಧ್ಯಾಹ್ನದ ಸೂರ್ಯನಂತೆ ಶೋಭಿಸಿದನು.
ತೇಷು ರಾಜಸಹಸ್ರೇಷು ತಾವಕೇಷು ಪರೇಷು ಚ |
ಏಕ ಏವ ಜ್ವಲಂಸ್ತಸ್ಥೌ ವೃಷಸೇನಃ ಪ್ರತಾಪವಾನ್ ॥ 27 ॥
ನಿನ್ನವರೂ ಮತ್ತು ಅವರೂ ಸೇರಿದ ಸಾವಿರಾರು ರಾಜರಲ್ಲಿ ಪ್ರತಾಪಶಾಲಿಯಾದ ವೃಷಸೇನನೊಬ್ಬನೇ ಜ್ವಲಿಸುತ್ತಾ ನಿಂತನು.
ಸ ವಿಜಿತ್ಯ ರಣೇ ಶೂರಾನ್ ಸೋಮಕಾನಾಂ ಮಹಾರಥಾನ್ |
ಜಗಾಮ ತ್ವರಿತಸ್ತತ್ರ ಯತ್ರ ರಾಜಾ ಯುಧಿಷ್ಠಿರಃ ॥ 28 ॥
ಅವನು ರಣರಂಗದಲ್ಲಿ ಶೂರರಾದ ಸೋಮಕ ಮಹಾರಥರನ್ನು ಗೆದ್ದು ಶೀಘ್ರವಾಗಿ ರಾಜನಾದ ಯುಧಿಷ್ಠಿರನಿದ್ದಲ್ಲಿಗೆ ಹೋದನು.
ಪ್ರತಿವಿಂಧ್ಯಮಥ ಕ್ರುದ್ಧಂ ಪ್ರಹರಂತಂ ರಣೇ ರಿಪೂನ್ |
ದುಃಶಾಸನಸ್ತವ ಸುತಃ ಪ್ರತ್ಯುದ್ಗಚ್ಛನ್ ಮಹಾರಥಃ ॥ 29 ॥
ಇನ್ನೊಂದು ಕಡೆ ಕ್ರುದ್ಧನಾಗಿ ಶತ್ರುಗಳನ್ನು ದಹಿಸುತ್ತಿದ್ದ ಪ್ರತಿವಿಂಧ್ಯನ ಕಡೆಗೆ ಮಹಾರಥನಾದ ನಿನ್ನ ಪುತ್ರನಾದ ದುಶ್ಶಾಸನನು ಧಾವಿಸಿದನು.
ತಯೋಃ ಸಮಾಗಮೋ ರಾಜಂಶ್ಚಿತ್ರರೂಪೋ ಬಭೂವ ಹ |
ವ್ಯಪೇತಜಲದೇ ವ್ಯೋಮ್ನಿ ಬುಧಭಾರ್ಗವಯೋರಿವ ॥ 30 ॥
ಎಲೈ ರಾಜನೇ, ಮೋಡವಿಲ್ಲದ ಆಕಾಶದಲ್ಲಿ ನಡೆಯುವ ಬುಧ-ಶುಕ್ರಗ್ರಹಗಳ ಯುದ್ಧದಂತೆ ಅವರ ಸಂಘರ್ಷವು ವಿಚಿತ್ರವಾಗಿದ್ದಿತು.
ಪ್ರತಿವಿಂಧ್ಯಂ ತು ಸಮರೇ ಕುರ್ವಾಣಂ ಕರ್ಮ ದುಷ್ಕರಮ್ |
ದುಃಶಾಸನಸ್ತ್ರಿಭಿರ್ಬಾಣೈರ್ಲಲಾಟೇ ಸಮವಿದ್ಧ್ಯತ ॥ 31 ॥
ದುಶ್ಶಾಸನನು ಯುದ್ಧದಲ್ಲಿ ದುಷ್ಕರವಾದ ಕರ್ಮವನ್ನು ಮಾಡುವ ಪ್ರತಿವಿಂಧ್ಯನ ಹಣೆಯಲ್ಲಿ ಮೂರು ಬಾಣಗಳಿಂದ ಹೊಡೆದನು.
ಸೋಽತಿವಿದ್ಧೋ ಬಲವತಾ ಪುತ್ರೇಣ ತವ ಧನ್ವಿನಾ |
ವಿರರಾಜ ಮಹಾಬಾಹುಃ ಸಶೃಂಗ ಇವ ಪರ್ವತಃ ॥ 32 ॥
ಧನುರ್ಧಾರಿಯೂ, ಬಲಿಷ್ಠನೂ ಆದ ನಿನ್ನ ಪುತ್ರನಿಂದ ಗಾಢವಾಗಿ ಹೊಡೆಯಲ್ಪಟ್ಟ ಮಹಾಬಾಹುವಾದ ಪ್ರತಿವಿಂಧ್ಯನು ಶಿಖರಗಳಿಂದ ಕೂಡಿದ ಪರ್ವತದಂತೆ ಶೋಭಿಸಿದನು.
ದುಃಶಾಸನಂ ತು ಸಮರೇ ಪ್ರತಿವಿಂಧ್ಯೋ ಮಹಾರಥಃ |
ನವಭಿಃ ಸಾಯಕೈರ್ವಿದ್ಧ್ವಾ ಪುನರ್ವಿವ್ಯಾಧ ಸಪ್ತಭಿಃ ॥ 33 ॥
ಮಹಾರಥನಾದ ಪ್ರತಿವಿಂಧ್ಯನು ರಣರಂಗದಲ್ಲಿ ದುಶ್ಶಾಸನನನ್ನು ಒಂಬತ್ತು ಬಾಣಗಳಿಂದ ಹೊಡೆದು ಪುನಃ ಏಳು ಬಾಣಗಳಿಂದ

ಹೊಡೆದನು.
ತತ್ರ ಭಾರತ ಪುತ್ರಸ್ತೇ ಕೃತವಾನ್ ಕರ್ಮ ದುಷ್ಕರಮ್ |
ಪ್ರತಿವಿಂಧ್ಯಹಯಾನುಗ್ರೈಃ ಪಾತಯಾಮಾಸ ಯಚ್ಚರೈಃ ॥ 34 ॥
ಎಲೈ ಭಾರತನೇ, ನಿನ್ನ ಪುತ್ರನು ದುಷ್ಕರವಾದ ಕರ್ಮವನ್ನು ಮಾಡಿ ತನ್ನ ಉಗ್ರವಾದ ಬಾಣಗಳಿಂದ ಪ್ರತಿವಿಂಧ್ಯನ ಅಶ್ವಗಳನ್ನು ಉರುಳಿಸಿದನು.
ಸಾರಥಿಂ ಚಾಸ್ಯ ಭಲ್ಲೇನ ಧ್ವಜಂ ಚ ಸಮಪಾತಯತ್ |
ರಥಂ ಚ ಶತಶೋ ರಾಜನ್ ವ್ಯಧಮತ್ ತಸ್ಯ ಧನ್ವಿನಃ ॥ 35 ॥
ಧನುರ್ಧಾರಿಯಾದ ಅವನ ಸಾರಥಿಯನ್ನೂ ಮತ್ತು ಧ್ವಜವನ್ನೂ ಒಂದು ಭಲ್ಲದಿಂದ ಉರುಳಿಸಿ, ಎಲೈ ರಾಜನೇ, ಅವನ ರಥವನ್ನು ನೂರಾರು ಭಾಗವಾಗಿ ಕತ್ತರಿಸಿ ವಿನಾಶಗೊಳಿಸಿದನು.
ಪತಾಕಾಶ್ಚ ಸ ತೂಣೀರಾನ್ ರಶ್ಮೀನ್ ಯೋಕ್ತತ್ರಣಿ ಚಾಭಿಭೋ |
ಚಿಚ್ಛೇದ ತಿಲಶಃ ಕ್ರುದ್ಧಃ ಶರೈಃ ಸನ್ನತಪರ್ವಭಿಃ ॥ 36 ॥
ಶತ್ರುಸಂಹಾರಕನೇ, ದುಶ್ಶಾಸನನು ಪ್ರತಿವಿಂಧ್ಯನ ರಥದ ಪದಾತಿಗಳನ್ನೂ, ಬತ್ತಳಿಕೆಗಳನ್ನೂ, ಕುದುರೆಯ ಕಡಿವಾಣಗಳನ್ನೂ, ಕಡಗೂಟಗಳನ್ನೂ ಬಾಗಿದ ತುದಿಯುಳ್ಳ ಬಾಣಗಳಿಂದ ಎಳ್ಳಿನಷ್ಟು ಸಣ್ಣ ಚೂರುಗಳಾಗಿ ಕತ್ತರಿಸಿದನು.
ವಿರಥಃ ಸ ತು ಧರ್ಮಾತ್ಮಾ ಧನುಷ್ಪಾಣಿರವಸ್ಥಿತಃ |
ಅಯೋಧಯತ್ ತವ ಸುತಂ ಕಿರನ್ ಶರಶತಾನ್ ಬಹೂನ್ ॥ 37 ॥
ಧರ್ಮಾತ್ಮನಾದ ಪ್ರತಿವಿಂಧ್ಯನು ರಥವನ್ನು ಕಳೆದುಕೊಂಡು ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡು ನಿನ್ನ ಪುತ್ರನ ಮೇಲೆ ನೂರಾರು ಬಾಣಗಳನ್ನು ಪ್ರಯೋಗಿಸುತ್ತಾ ಯುದ್ಧವನ್ನು ಮಾಡಿದನು.
ಕ್ಷುರಪ್ರೇಣ ಧನುಸ್ತಸ್ಯ ಚಿಚ್ಛೇದ ಕೃತಹಸ್ತವತ್ |
ಅಥೈನಂ ದಶಭಿರ್ಭಲ್ಲೈಶ್ಚಿನ್ನಧನ್ವಾನಮಾರ್ದಯತ್ ॥ 38 ॥
ದುಶ್ಶಾಸನನು ಪಳಗಿದ ಹಸ್ತವುಳ್ಳವನಂತೆ ಅವನ ಧನುಸ್ಸನ್ನು ಕ್ಷುರಪ್ರದಿಂದ ಕತ್ತರಿಸಿದನು. ಅವನ ಧನುಸ್ಸು ಕತ್ತರಿಸಲ್ಪಡುತ್ತಿರಲು ಅನಂತರ ಅವನನ್ನು ಹತ್ತು ಭಲ್ಲಗಳಿಂದ ಪೀಡಿಸಿದನು.
ತಂ ದೃಷ್ಟ್ವಾ ವಿರಥಂ ತತ್ರ ಭ್ರಾತರೋಽಸ್ಯ ಮಹಾರಥಾಃ |
ಅನ್ವವರ್ತಂತ ವೇಗೇನ ಮಹತ್ಯಾ ಸೇನಯಾ ಸಹ ॥ 39 ॥
ಪ್ರತಿವಿಂಧ್ಯನು ರಥಹೀನನಾಗಿರುವುದನ್ನು ನೋಡಿ ಮಹಾರಥರಾದ ಅವನ ಸಹೋದರರು ದೊಡ್ಡ ಸೇನೆಯನ್ನು ತೆಗೆದುಕೊಂಡು ವೇಗದಿಂದ ಅವನ ಕಡೆಗೆ ಬಂದರು.
ಆಪ್ಲುತಃ ಸ ತತೋ ಯಾನಂ ಸುತಸೋಮಸ್ಯ ಭಾಸ್ವರಮ್ |
ಧನುರ್ಗೃಹ್ಯ ಮಹಾರಾಜ ವಿವ್ಯಾಧ ತನಯಂ ತವ ॥ 40 ॥
ಎಲೈ ಮಹಾರಾಜನೇ, ಆಗ ಅವನು ಸುತಸೋಮನ ಪ್ರಕಾಶಮಾನವಾದ ರಥಕ್ಕೆ ಹಾರಿ ಧನುಸ್ಸನ್ನು ಹಿಡಿದು ನಿನ್ನ ಪುತ್ರನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತತಸ್ತು ತಾವಕಾಃ ಸರ್ವೇ ಪರಿವಾರ್ಯ ಸುತಂ ತವ |
ಅಭ್ಯವರ್ತಂತ ಸಂಗ್ರಾಮೇ ಮಹತ್ಯಾ ಸೇನಯಾ ವೃತಾಃ ॥ 41 ॥
ಆಗ ನಿನ್ನವರೆಲ್ಲರೂ ದೊಡ್ಡ ಸೈನ್ಯದಿಂದ ಕೂಡಿದವರಾಗಿ ನಿನ್ನ ಪುತ್ರನನ್ನು ಸುತ್ತುವರಿದು ಯುದ್ಧದಲ್ಲಿ ಮುಂದೆ ಸಾಗಿದರು.
ತತಃ ಪ್ರವವೃತೇ ಯುದ್ಧಂ ತವ ತೇಷಾಂ ಚ ಭಾರತ |
ನಿಶೀಥೇ ದಾರುಣೇ ಕಾಲೇ ಯಮರಾಷ್ಟ್ರವಿವರ್ಧನಮ್ ॥ 42 ॥
ಎಲೈ ಭಾರತನೇ, ಅನಂತರ ದಾರುಣವಾದ ಆ ರಾತ್ರಿಯ ಕಾಲದಲ್ಲಿ ನಿನ್ನವರಿಗೂ ಮತ್ತು ಪರರಿಗೂ ಯಮರಾಷ್ಟ್ರವನ್ನು ಅಭಿವೃದ್ಧಿಪಡಿಸುವ ಯುದ್ಧವು ಜರುಗಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುಃಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 26ನೇ ಅಧ್ಯಾಯ
ಭೀಮೋಽರ್ಜುನಃ ಸಾತ್ಯಕಿಶ್ಚ ಪರ್ಯಾಯೇಣ ಗುರೋಃ ಸುತಮ್ |
ದೂರತೋ ವಾರಯಾಮಾಸುರ್ಮಹತ್ಯಾ ಸೇನಯಾ ಸಹ ॥
ಭೀಮ, ಅರ್ಜುನ, ಸಾತ್ಯಕಿಯರು ಒಬ್ಬರಾದ ಬಳಿಕ ಒಬ್ಬರಂತೆ ಅಶ್ವತ್ಥಾಮರನ್ನು ಮಹತ್ತಾದ ಸೈನ್ಯದೊಂದಿಗೆ ದುರದಲ್ಲಿಯೇ ತಡೆದು ನಿಲ್ಲಿಸಿದರು.
ಕರ್ಣದುರ್ಯೋಧನಾದೀಂಶ್ಚ ಶಲ್ಯಂ ಭೋಜಂ ಕೃಪಂ ತಥಾ |
ಭೀಮಾರ್ಜುನೌ ಶರೌಘೇಣ ವಾರಯಾಮಾಸತೂ ರಣೇ ॥
ಕರ್ಣ-ದುರ್ಯೋಧನ ಮುಂತಾದವರನ್ನೂ ಶಲ್ಯ-ಕೃತವರ್ಮ-ಕೃಪರನ್ನೂ ಭೀಮಾರ್ಜುನರು ಬಾಣ ಸಮೂಹದಿಂದ ಯುದ್ಧದಲ್ಲಿ

ತಡೆದರು.
ತತ್ರ ಭೀಮೋ ಗಜಾನೀಕಂ ಜಯತ್ಸೇನಂ ಚ ಮಾಗಧಮ್ |
ಜಘಾನ ಸುಬಹೂಂಶ್ಚೈವ ಮಾಗಧಾನಾಂ ರಥವ್ರಜಾನ್ ॥
ಆಗ ಭೀಮ ಗಜಸೆನೆಯನ್ನೂ ಜಯತ್ಸೇನನನ್ನೂ ಕೊಂದನು. ಮಗಧ ದೇಶದ ರಾಜನನ್ನೂ ಮಗಧ ದೇಶದವರ ಬಹಳ ರಥಸಮೂಹಗಳನ್ನೂ ನಾಶಪಡಿಸಿದನು.
ಅಥ ಮಾಳವರಾಜಸ್ಯ ತ್ವಶ್ವತ್ಥಾಮಾಭಿಧಂ ಗಜಮ್ |
ಭೀಮಸೇನಹತಂ ದೃಷ್ಟ್ವಾ ವಾಸುದೇವಪ್ರಚೋದಿತಃ |
ಅಶ್ವತ್ಥಾಮಾ ಹತ ಇತಿ ಪ್ರಾಹ ರಾಜಾ ಯುಧಿಷ್ಠಿರಃ ॥
ಮಾಲವರಾಜನ ಅಶ್ವತ್ಥಾಮ ಎಂಬ ಆನೆ ಭೀಮನಿಂದ ಹತವಾದುದನ್ನು ಕಂಡು ಕೃಷ್ಣನ ಪ್ರೇರಣೆಯಂತೆ ರಾಜಾ ಯುಧಿಷ್ಠಿರನು ಅಶ್ವತ್ಥಾಮ ಹತನಾದನೆಂದನು.
ಅಶ್ವತ್ಥಾಮವಧಂ ಶ್ರುತ್ವಾ ನಾಹಂ ಯೋತ್ಸ್ಯ ಇತಿ ಸ್ವಯಮ್ |
ಪುರೋಕ್ತಂ ಧರ್ಮಜಾಯೈವ ತೇನ ದ್ರೋಣೋ ಯುಧಿಷ್ಠಿರಮ್ ॥
ಬ್ರೂಹಿ ಸತ್ಯಮಿತಿ ಪ್ರಾಹ ಸತ್ಯಮಿತ್ಯೇವ ಸೋಽಬ್ರವೀತ್ |
ಉಪಾಂಶು ಕುಂಜರಶ್ಚೇತಿ ದ್ರೋಣೋಽಥೋ ವ್ಯಥಿತೋಽಭವತ್ ॥
ಅಶ್ವತ್ಥಾಮರ ವಧೆಯನ್ನು ಕೇಳಿದ ಬಳಿಕ ನಾನು ಯುದ್ಧ ಮಾಡುವುದಿಲ್ಲ ಎಂದು ದ್ರೋಣರು ತಾನೇ ಯುಧಿಷ್ಠಿರನಿಗೆ ಹಿಂದೆ ಹೇಳಿದ್ದರು. ಅದರಿಂದ ದ್ರೋಣರು ಯುಧಿಷ್ಠಿರನನ್ನು `ಸತ್ಯವೇ? ಹೇಳು' ಎಂದು ಕೇಳಿದರು. ಯುಧಿಷ್ಠಿರನು ಸತ್ಯ ಎಂದೇ ಹೇಳಿದನು. ಜೊತೆಗೆ ಅಸ್ಪಷ್ಟವಾಗಿ ಆನೆ ಎಂದೂ ಹೇಳಿದನು. ಅದರಿಂದ ದ್ರೋಣರು ವ್ಯಥೆಗೊಂಡರು.
ತಸ್ಯ ಭೀಮೋ ರಥೇಷಾಂ ಚ ಗೃಹೀತ್ವಾ ನ ತವೇದೃಶಮ್ |
ಯೋಗ್ಯಂ ಗುಣವತೋ ನಿತ್ಯಂ ಪರಧರ್ಮೋಪಜೀವನಮ್ ॥
ಇತ್ಯಾಹ ಖಸ್ಥಾ ಮುನಯಶ್ಚಾಲಮೇಹೀತಿ ತಂ ತದಾ |
ಊಚುಸ್ತದಖಿಲಂ ಜ್ಞಾತ್ವಾ ದ್ರೋಣಃ ಶಸ್ತ್ರಮವಾಸೃಜತ್ ॥
ಭೀಮನು ದ್ರೋಣರ ರಥದ ಕಂಬವನ್ನು ಹಿಡಿದು, ನಿಮ್ಮಂಥ ಗುಣವಂತರಿಗೆ ಈ ರೀತಿ ಪರಧರ್ಮದಿಂದ ಜೀವಿಸುವುದು ಒಪ್ಪುವುದಿಲ್ಲ ಎಂದನು. ಆಕಾಶದಲ್ಲಿ ವಸಿಷ್ಠಾದಿ ಮುನಿಗಳು `ಕ್ಷತ್ರಿಯರ ನಾಶಮಾಡಿದ್ದು ಇನ್ನು ಸಾಕು. ಬನ್ನಿ' ಎಂದರು. ಅದೆಲ್ಲವನ್ನೂ ಆಲೋಚಿಸಿ ದ್ರೋಣರು ಶಸ್ತ್ರವನ್ನು ಪರಿತ್ಯಾಗ ಮಾಡಿದರು.
ಸ ನ್ಯಸ್ಯ ಕರ್ಮಾಣಿ ತದಾಽಖಿಲಾನಿ
ಯೋಗಾರೂಢಃ ಪರಮಂ ವಾಸುದೇವಮ್ |
ಸರ್ವೇಶ್ವರಂ ನಿತ್ಯನಿರಸ್ತದೋಷಂ
ಧ್ಯಾಯನ್ ಮುಕ್ತ್ವಾ ದೇಹಮಗಾತ್ ಸ್ವಧಾಮ ॥
ದ್ರೋಣರು ಆಗ ಸಕಲ ಕರ್ಮಗಳನ್ನೂ ಹರಿಗೆ ಅರ್ಪಿಸಿ ಯೋಗಾರೂಢರಾಗಿ ಸರ್ವೇಶ್ವರನಾದ ನಿತ್ಯನಿರ್ದೋಷನಾದ ಸರ್ವೋತ್ತಮ ವಾಸುದೇವನನ್ನು ಧ್ಯಾನಿಸುತ್ತಾ ಶರೀರವನ್ನು ತೊರೆದು ತಮ್ಮ ಲೋಕಕ್ಕೆ ಹೊರಟು ಹೋದರು.
ತಂ ಕೇಶವಃ ಪಾಂಡವಾ ಗೌತಮಶ್ಚ
ಯಾಂತಂ ಸ್ವಲೋಕಂ ದದೃಶುರ್ವಿಹಾಯಸಾ |
ಧೃಷ್ಟದ್ಯುಮ್ನಃ ಪಾಂಡವೈರ್ವಾರ್ಯಮಾಣೋಽ
ಪ್ಯಗಾತ್ ಖಡ್ಗಂ ಚರ್ಮ ಚಾಽದಾಯ ತತ್ರ ॥
ಶ್ರೀಕೃಷ್ಣ-ಪಾಂಡವರು ಮತ್ತು ಕೃಪರು ಇವರು ಆಕಾಶಮಾರ್ಗದಿಂದ ದ್ರೋಣರು ತಮ್ಮ ಲೋಕಕ್ಕೆ ಹೋಗುವುದನ್ನು ಕಂಡರು. ಪಾಂಡವರು ತಡೆಯುತ್ತಿದ್ದರೂ ಧೃಷ್ಟದ್ಯುಮ್ನನು ಖಡ್ಗ-ಚರ್ಮಗಳನ್ನು ಹಿಡಿದು ದ್ರೋಣರಿದ್ದಲ್ಲಿಗೆ ಬಂದನು.
ಛಿತ್ವಾಽಸಿನಾ ತಸ್ಯ ಶಿರಃ ಪುನಶ್ಚ
ರಥಂ ಸ್ವಕೀಯಂ ತ್ವರಯಾ ಸಮಾಸ್ಥಿತಃ |
ದೃಷ್ಟ್ವಾ ಕೃಪಸ್ತಂ ಸುಭೃಶಂ ಭಯಾರ್ದಿತಃ
ಸಂಪ್ರಾದ್ರವದ್ ವಾಜಿನಮೇಕಮಾಸ್ಥಿತಃ ॥
ಧೃಷ್ಟದ್ಯುಮ್ನ ದ್ರೋಣರ ಶಿರಸ್ಸನ್ನು ತರಿದು ಪುನಃ ಬೇಗನೆ ತನ್ನ ರಥವನ್ನೇರಿದನು. ಕೃಪರು ನೋಡಿ ಬಹಳ ಭಯಾರ್ತರಾಗಿ ಒಂದು ಕುದುರೆಯನ್ನೇರಿ ಪಲಾಯನ ಮಾಡಿದರು.
ಸಂಭಿನ್ನೇ ದ್ರೋಣಶಿರಸಿ ಗರ್ಹಯಾಮಾಸ ವಾಸವಿಃ |
ಯುಧಿಷ್ಠಿರಂ ಚ ಪಾಂಚಾಲ್ಯಂ ಸಾತ್ಯಕಿಶ್ಚಾಪಿ ಕೋಪಿತಃ ॥
ದ್ರೋಣರ ಶಿರಶ್ಛೇದವಾದಾಗ ಅರ್ಜುನನು ಧರ್ಮರಾಜನನ್ನೂ ಧೃಷ್ಟದ್ಯುಮ್ನನನ್ನೂ ಆಕ್ಷೇಪಿಸಿದನು. ಸಾತ್ಯಕಿಯೂ ಕುಪಿತನಾದನು.
ಧೃಷ್ಟದ್ಯುಮ್ನಸ್ತು ತಾವಾಹ ಕಥಂ ಭೂರಿಶ್ರವಾ ಹತಃ |
ಇತಿ ತಂ ಸಾತ್ಯಕಿಃ ಕ್ರುದ್ಧೋ ಗದಾಪಾಣಿಃ ಸಮಭ್ಯಯಾತ್ ॥
ಧೃಷ್ಟದ್ಯುಮ್ನನು ಅರ್ಜುನ, ಸಾತ್ಯಕಿಯರನ್ನು ಕೇಳಿದನು- `ಭೂರಿಶ್ರವನು ನಿಮ್ಮಿಂದ ಹೇಗೆ ಹತನಾದನು?` ಸಾತ್ಯಕಿ ಕ್ರುದ್ಧನಾಗಿ ಗದಾಪಾಣಿಯಾಗಿ ಧೃಷ್ಟದ್ಯುಮ್ನನ ಮೇಲೇರಿ ಬಂದನು.
ಆಹ್ವಯಾಮಾಸ ಪಾಂಚಾಲ್ಯಸ್ತಂ ಧೃತಾಸಿರವಿಸ್ಮಯಃ ॥

ತದಾ ಜಗ್ರಾಹ ಶೈನೇಯಂ ಭೀಮಃ ಕೃಷ್ಣಪ್ರಚೋದಿತಃ |
ಶಮಯಾಮಾಸ ಪಾರ್ಥಂ ಚ ಪಾಂಚಾಲ್ಯಸ್ನೇಹಯಂತ್ರಿತಃ ॥
ಧೃಷ್ಟದ್ಯುಮ್ನನು ನಿರ್ಭೀತನಾಗಿ ಖಡ್ಗ ಹಿಡಿದು ಸಾತ್ಯಕಿಯನ್ನು ಯುದ್ಧಕ್ಕೆ ಕರೆದನು. ಆಗ ಕೃಷ್ಣನ ಮಾತಿನಂತೆ ಭೀಮ ಸಾತ್ಯಕಿಯನ್ನು ಗಟ್ಟಿಯಾಗಿ ಹಿಡಿದನು. ಧೃಷ್ಟದ್ಯುಮ್ನನ ಮೇಲಿನ ಪ್ರೀತಿಯಿಂದ ಬದ್ಧನಾಗಿ ಅರ್ಜುನನನ್ನು ಸಮಾಧಾನಪಡಿಸಿದನು.
ತೇ ವಾಸುದೇವೇನ ತದಾSನುಶಿಕ್ಷಿತಾಃ
ಸ್ನೇಹಂ ಪುನಃ ಪೂರ್ವವದಾಪುರುತ್ತಮಮ್ |
ಯತ್ತಾಶ್ಚ ಯುದ್ಧಾಯ ಸಮುದ್ಯತಾಶ್ಚ
ತದಾSSಗಮದ್ ದ್ರೌಣಿರಪ್ಯಾತ್ತಧನ್ವಾ ॥
ಶ್ರೀಕೃಷ್ಣನು ಆಗ ಅವರಿಗೆ ಚೆನ್ನಾಗಿ ತಿಳಿಹೇಳಿದನು. ಅವರು ಹಿಂದಿನಂತೆ ಅನ್ಯೋನ್ಯವಾಗಿ ಒಳ್ಳೆಯ ಪ್ರೀತಿಯನ್ನು ಹೊಂದಿದರು. ಯುದ್ಧಕ್ಕೆ ಆಯುಧವನ್ನು ಹಿಡಿದು ಸನ್ನದ್ಧರಾದರು. ಅಷ್ಟರಲ್ಲಿ ಧನುರ್ಧಾರಿಯಾಗಿ ಅಶ್ವತ್ಥಾಮರು ಬಂದರು.
ಆಶ್ರುತ್ಯ ತಾತಂ ನಿಹತಂ ಪ್ರತಿಜ್ಞಾಂ
ಚಕಾರ ನಿಃಶೇಷರಿಪುಪ್ರಮಾಥನೇ |
ನಾರಾಯಣಾಸ್ತ್ರಂ ವಿಸಸರ್ಜ ಕೋಪಾತ್
ತದಾ ಭೀತಾ ಭೀಮಮೃತೇ ಸಮಸ್ತಾಃ ॥
ತನ್ನ ತಂದೆಯು ಹತರಾದರೆಂದು ಕೇಳಿ ತಿಳಿದು ಅಶ್ವತ್ಥಾಮರು ಶತ್ರುಗಳನ್ನು ನಿಃಶೇಷವಾಗಿ ಕೊಲ್ಲುವ ಪ್ರತಿಜ್ಞೆ ಮಾಡಿದರು. ಕೋಪದಿಂದ ನಾರಾಯಣಾಸ್ತ್ರವನ್ನು ಪ್ರಯೋಗಿಸಿದರು. ಆಗ ಭೀಮನ ಹೊರತು ಎಲ್ಲರೂ ಭೀತರಾದರು.
ಯುಧಿಷ್ಠಿರಃ ಪ್ರಾಹ ವಿಷಣ್ಣಚೇತನಃ
ಶೈನೇಯಪೂರ್ವಾಃ ಪ್ರತಿಯಾಂತು ಸರ್ವೇ |
ಸಭ್ರಾತೃಕೋSಹಂ ದ್ರೌಣಿವರಾಸ್ತ್ರಮಗ್ನೋ
ಭವೇಯಮಿತ್ಯತ್ರ ಜಗಾದ ಕೇಶವಃ ॥
ಧರ್ಮರಾಜನು ವಿಷಾದಪೂರ್ಣವಾದ ಮನಸ್ಸಿನಿಂದ ಹೇಳಿದನು- `ಸಾತ್ಯಕಿ ಮುಂತಾದವರೆಲ್ಲರೂ ಹೊರಟು ಹೋಗಿರಿ. ನಾನು ಸಹೋದರರ ಸಮೇತನಾಗಿ ಅಶ್ವತ್ಥಾಮರ ಉತ್ತಮ ಅಸ್ತ್ರದಿಂದ ಕಣ್ಮರೆಯಾಗಿ ಹೋಗುವೆನು' ಎಂದು. ಆಗ ಕೃಷ್ಣನು ನುಡಿದನು.
ನಮಧ್ವಮಸ್ತ್ರಸ್ಯ ತತೋ ವಿಮೋಕ್ಷ್ಯಥೇ-
ತ್ಯಥ ಪ್ರಣೇಮುಶ್ಚ ಧನಂಜಯಾದಿಕಾಃ |
ಸರ್ವೇ ನ ಭೀಮಸ್ತದಮುಷ್ಯ ಮೂರ್ಧ್ನಿ
ಪಪಾತ ಸೋSಗ್ನಾವಿವ ಸಂಸ್ಥಿತೋSಗ್ನಿಃ ॥
`ಎಲ್ಲರೂ ಅಸ್ತ್ರಕ್ಕೆ ನಮಿಸಿರಿ. ಆಗ ಅಸ್ತ್ರದಿಂದ ವಿಮುಕ್ತರಾಗುವಿರಿ' ಎಂದು ಕೃಷ್ಣನು ಹೇಳಿದಾಗ, ಅರ್ಜುನ ಮುಂತಾದವರೆಲ್ಲರೂ ನಮಿಸಿದರು. ಭೀಮನು ಮಾತ್ರ ನಮಿಸಲಿಲ್ಲ. ಅದರಿಂದ ಅಸ್ತ್ರ ಎಲ್ಲರನ್ನೂ ಬಿಟ್ಟು ಭೀಮನ ತಲೆಯ ಮೇಲೆ ಬಿದ್ದಿತು. ಆದರೆ ಬೆಂಕಿಯ ನಡುವೆ ಬೆಂಕಿಯಂತೆ ಅಸ್ತ್ರದ ನಡುವೆ ಭೀಮನು ನಿಂತನು.
ಅದಹ್ಯಮಾನೇ ಭೀಮೇSಪಿ ವಹ್ನೌ ವಹ್ನಿರಿವ ಸ್ಥಿತೇ |
ಅವೇಷ್ಟಯದ್ ವಾರುಣೇನ ಪಾರ್ಥೋSತ್ರಾತ್ಮಪ್ರಪತ್ತಯೇ ॥
ಭೀಮನು ಬೆಂಕಿಯ ನಡುವೆ ಬೆಂಕಿಯಂತೆ ಅಸ್ತ್ರದಿಂದ ಸುಡದೆ ನಿಂತಾಗ ಅರ್ಜುನನು ಭಕ್ತಿಯಿಂದ ತನ್ನ ಪಾಲಿನ ಸೇವೆ ಸಲ್ಲಿಸುವುದಕ್ಕಾಗಿ ವಾರುಣಾಸ್ತ್ರದಿಂದ ಭೀಮನನ್ನು ಆವರಿಸಿದನು.
ನ ದೇಹೇ ಪತಿತಾಸ್ತ್ರಸ್ಯ ಬಹಿರ್ವೇಷ್ಟನತಃ ಫಲಮ್ |
ತಥಾSಪಿ ಸ್ನೇಹವಶಗೋ ವೇಷ್ಟಯಾಮಾಸ ಫಲ್ಗುನಃ ॥
ದೇಹದಲ್ಲಿ ಬಿದ್ದ ಅಸ್ತ್ರಕ್ಕೆ ಹೊರಗಿನಿಂದ ನೀರು ಆವರಿಸುವುದರಿಂದ ಫಲವಿಲ್ಲ. ಆದರೂ ಅಣ್ಣನೆಂದು ಪ್ರೀತಿಯಿಂದ ಅರ್ಜುನನು ವಾರುಣಾಸ್ತ್ರವನ್ನು ಸುತ್ತುವರಿಸಿದನು.
ಅಮೋಘತ್ವಂ ನಿಜಾಸ್ತ್ರಸ್ಯ ಭೀಮಸ್ಯಾವಧ್ಯತಾಮಪಿ |
ಸಾಧಯನ್ ಸಾರ್ಜುನಃ ಕೃಷ್ಣೋ ಭೀಮಸ್ಯ ರಥಮಾರುಹತ್ ॥
ನಾರಾಯಣಾಸ್ತ್ರ ಅಮೋಘವೆಂಬುದನ್ನೂ ಭೀಮನು ಅವಧ್ಯನೆಂಬುದನ್ನೂ ತೋರುತ್ತಾ ಶ್ರೀಕೃಷ್ಣನು ಅರ್ಜುನ ಸಮೇತನಾಗಿ ಭೀಮನ ರಥವನ್ನೇರಿದನು.
ವೇಷ್ಟಿತಂ ವಾರುಣಾಸ್ತ್ರೇಣ ಪ್ರವಿಷ್ಟಂ ಬಾಹ್ಯತಸ್ತದಾ |
ಸಹಿತತ್ವಾತ್ ಕೇಶವೇನ ನರತ್ವಾದಥ ಫಲ್ಗುನಮ್ ॥
ತದಸ್ತ್ರಂ ನಾದಹತ್ ತಾಭ್ಯಾಂ ಸ್ವರಥಾದವರೋಪಿತೇ |
ಭೀಮ ಆಚ್ಛಿನ್ನಹೇತೌ ಚ ತದಸ್ತ್ರಂ ಶಾಂತಿಮಾಗಮತ್ ॥
ಹೊರಗೆ ವಾರುಣಾಸ್ತ್ರದಿಂದ ಸುತ್ತುವರಿದಿದ್ದ ನಾರಾಯಣಾಸ್ತ್ರವು ಒಳಗಿದ್ದ ಭೀಮನನ್ನು ಸುಡಲಿಲ್ಲ. ಅರ್ಜುನನನ್ನೂ ಸುಡಲಿಲ್ಲ. ಏಕೆಂದರೆ ಅರ್ಜುನನು ಶ್ರೀಕೃಷ್ಣನ ಜೊತೆಗಿದ್ದನು, ನರಾವೇಶವನ್ನೂ ಹೊಂದಿದ್ದನು, ಅಸ್ತ್ರಕ್ಕೆ ನಮಸ್ಕಾರವನ್ನೂ ಮಾಡಿದ್ದನು. ಅದರಿಂದ ಕೃಷ್ಣಾರ್ಜುನರು ಭೀಮನನ್ನು ಅವನ ರಥದಿಂದ ಇಳಿಸಿದರು. ಅವನ ಆಯುಧವನ್ನು ಸೆಳೆದರು. ಅದರಿಂದ ಅಸ್ತ್ರವು ಶಾಂತವಾಯಿತು.
ಶುದ್ಧಕ್ಷತ್ರಿಯಧರ್ಮೇಷು ನಿರತೋ ಯದ್ ವೃಕೋದರಃ |

ವಾಹನಾದವತೀರ್ಯಾನ್ಯೈಃ ಪ್ರಣತೇಽಪಿ ನಿರಾಯುಧೈಃ |
ಸಾಯುಧಃ ಸರಥೋಽಯುದ್ಧ್ಯದವಿಷಹ್ಯಮಪೀಶ್ವರೈಃ ||
ಶುದ್ಧ ಕ್ಷತ್ರಿಯ ಧರ್ಮದಲ್ಲಿ ಭೀಮ ನಿರತನಾಗಿದ್ದನು. ಅದರಿಂದ ಉಳಿದವರು ನಿರಾಯುಧರಾಗಿ ವಾಹನದಿಂದ ಕೆಳಗಿಳಿದು ನಮಿಸಿದರೂ ಭೀಮ ಆಯುಧ ಸಹಿತನಾಗಿ ರಥದಲ್ಲಿ ನಿಂತೇ ಬ್ರಹ್ಮಾದಿಗಳಿಂದಲೂ ಸಹಿಸಲಾಗದಂಥ ನಾರಾಯಣಾಸ್ತ್ರದ ಮುಂದೆ ಯುದ್ಧ ಮಾಡಿದನು.
ಸ್ವಧರ್ಮಹಾನೌ ಮಿತ್ರಾಣಾಂ ಕರ್ತವ್ಯಂ ಯನ್ನಿಷೇಧನಮ್ |
ಅತಃ ಸೋಽನ್ಯಾನಪಿ ಪ್ರಾಹ ಮಾ ನಮಧ್ವಮಿತಿ ಸ್ವಯಮ್ ||
ಸ್ವಧರ್ಮಕ್ಕೆ ಚ್ಯುತಿ ಬರುವಾಗ ಮಿತ್ರರಿಗೆ ಅದನ್ನು ನಿಷೇಧ ಮಾಡುವುದು ಕರ್ತವ್ಯವಾಗುತ್ತದೆ. ಅದರಿಂದ ಭೀಮನು ಅನ್ಯರಿಗೂ ನಮಸ್ಕರಿಸಬೇಡಿ ಎಂದು ಹೇಳಿದನು.
ನಮಸ್ಕಾರ್ಯಮಪಿ ಹ್ಯಸ್ತ್ರಂ ನ ನಮ್ಯಂ ಜೀವನೇಚ್ಛಯಾ |
ಸಮರೇ ಶತ್ರುಣಾ ಮುಕ್ತಂ ತಸ್ಮಾತ್ ತನ್ನ ಚಕಾರ ಸಃ ||
ನಾರಾಯಣಾಸ್ತ್ರ ಎಲ್ಲರಿಗೂ ನಮಸ್ಕಾರ ಯೋಗ್ಯವೇ. ಆದರೂ ಯುದ್ಧದಲ್ಲಿ ಶತ್ರು ಅದನ್ನು ಪ್ರಯೋಗಿಸಿದಾಗ ಬದುಕಿನಾಸೆಯಿಂದ ನಮಿಸಕೂಡದು. ಆದ್ದರಿಂದ ಭೀಮ ನಮಸ್ಕಾರ ಮಾಡಲಿಲ್ಲ.
ಅಸ್ತ್ರಾಭಿಮಾನೀ ವಾಯುರ್ಹಿ ದೇವತಾಽಸ್ಯ ಹರಿಃ ಸ್ವಯಮ್ |
ತಸ್ಮಾದ್ ಭೀಮಂ ಸ್ವರೂಪತ್ವಾನ್ನಾದಹಚ್ಚಾಗ್ನಿಮಗ್ನಿವತ್ ||
ನಾರಾಯಣಾಸ್ತ್ರಕ್ಕೆ ಅಭಿಮಾನಿ ವಾಯು. ದೇವತೆ ಸ್ವತಃ ನಾರಾಯಣ. ಆದರಿಂದ ಅಗ್ನಿಯನ್ನು ಅಗ್ನಿ ಹೇಗೆ ಸುಡುವುದಿಲ್ಲವೋ ಹಾಗೆ ಭೀಮನಿಂದ ಅಭಿಮಾನ್ಯಮಾನವಾದ ಆ ಅಸ್ತ್ರ ಭೀಮನನ್ನು ಸುಡಲಿಲ್ಲ.
ಮನಸೈವಾಽದರಂ ಚಕ್ರೇ ಭೀಮೋಽಸ್ತ್ರೇ ಚ ಹರೌ ತದಾ |
ಕ್ಷತ್ರಧರ್ಮಾನುಸಾರೇಣ ನ ನನಾಮ ಚ ಬಾಹ್ಯತಃ ||
ಭೀಮ ಅಸ್ತ್ರಕ್ಕೂ ಅಸ್ತ್ರದೇವತೆಯಾದ ಹರಿಗೂ ಮನಸ್ಸಿನಿಂದಲೇ ಆದರ ತೋರಿದನೇ ಹೊರತು ಬಾಹ್ಯದಲ್ಲಿ ಕ್ಷತ್ರಧರ್ಮಾನುಸಾರವಾಗಿ ತಲೆಬಾಗಿ ನಮಿಸಲಿಲ್ಲ.
ವಾಸುದೇವಃ ಸ್ವಕೀಯಾಸ್ತ್ರಂ ಭೀಮಂ ಚಾಮೋಘಮೇವ ತು |
ಸಾಧಯಿತ್ವಾಽನಂತಶಕ್ತಿಃ ಪುನರಶ್ವಾನಚೋದಯತ್ ||
ಅನಂತಶಕ್ತಿ ಉಳ್ಳ ಶ್ರೀಕೃಷ್ಣ ತನ್ನ ಅಸ್ತ್ರವನ್ನು ಅಮೋಘವೆಂದೂ ಭೀಮನನ್ನು ಅವಧ್ಯನೆಂದೂ ತೋರಿಸಿ ಪುನಃ ಕುದುರೆಗಳನ್ನು ನಡೆಸಿದನು.
ಪುನಃ ಪ್ರಯೋಕ್ತುಮಸ್ತ್ರಂ ತದ್ ಧಾರ್ತರಾಷ್ಟ್ರೋಽಭ್ಯಚೋದಯತ್ |
ದ್ರೌಣಿರ್ನ ಶಕ್ಯಮಿತ್ಯುಕ್ತ್ವಾ ಧೃಷ್ಟದ್ಯುಮ್ನಂ ಸಮಭ್ಯಯಾತ್ ||
ಪುನಃ ನಾರಾಯಣಾಸ್ತ್ರವನ್ನು ಪ್ರಯೋಗಿಸುವಂತೆ ಅಶ್ವತ್ಥಾಮರನ್ನು ದುರ್ಯೋಧನ ಒತ್ತಾಯಿಸಿದನು. ಅಶ್ವತ್ಥಾಮರು ಅದು ಶಕ್ಯವಿಲ್ಲ ಎಂದು ಹೇಳಿ ಧೃಷ್ಟದ್ಯುಮ್ನನನ್ನು ಎದುರಿಸಿದರು.
ಆಯಾಂತಮೀಕ್ಷ್ಯೈವ ಗುರೋಃ ಸುತಂ ತಂ
ಧೃಷ್ಟದ್ಯುಮ್ನಂ ಸಾತ್ಯಕಿರನ್ವಯಾದ್ ರಣೇ |
ಉಭೌ ಚ ತೌ ಸಾಯಕಾಭ್ಯಾಮವಿದ್ಧ್ಯ-
ನ್ನಿಪೇತತುಸ್ತೌ ಚ ವಿಮೂರ್ಚ್ಛಿತೌ ರಣೇ ||
ಅಶ್ವತ್ಥಾಮರು ಧೃಷ್ಟದ್ಯುಮ್ನನ ಕಡೆಗೆ ಬರುವುದನ್ನು ಕಂಡು ಸಾತ್ಯಕಿಯು ಯುದ್ಧದಲ್ಲಿ ಅಶ್ವತ್ಥಾಮನ ಎದುರಿಗೆ ಬಂದನು. ಅವರಿಬ್ಬರೂ ಬಾಣಗಳಿಂದ ಹೊಡೆದುಕೊಂಡರು. ಯುದ್ಧದಲ್ಲಿ ಇಬ್ಬರೂ ಮೂರ್ಛಿತರಾಗಿ ಬಿದ್ದರು.
ಭೀಮಸ್ಯಾಭ್ಯಾಗತಸ್ಯಾಶ್ವಾನ್ ದ್ರೌಣಿರ್ವ್ಯದ್ರಾವಯದ್ ರಣೇ |
ಸಂಸ್ಥಾಪಯತಿ ತಾನ್ ಭೀಮೇ ದದರ್ಶ ದ್ರೌಣಿಮರ್ಜುನಃ ||
ಭೀಮನು ಬಂದಾಗ ಅವನ ಅಶ್ವಗಳನ್ನು ಯುದ್ಧದಲ್ಲಿ ಅಶ್ವತ್ಥಾಮನು ಓಡಿಸಿದನು. ಆ ಅಶ್ವಗಳನ್ನು ಭೀಮನು ತಡೆಯುತ್ತಿದ್ದಾಗ ಅರ್ಜುನನು ಅಶ್ವತ್ಥಾಮರನ್ನು ಕಂಡನು.
ತತೋರ್ಜುನಸ್ತಂ ಪ್ರತಿಯೋದ್ಧುಮಾಗಮದ್
ರೂಕ್ಷಾ ವಾಚಃ ಶ್ರಾವಯನ್ ಕ್ರುದ್ಧರೂಪಃ |
ತತ್ರಾಽಗ್ನೇಯಂ ದ್ರೌಣಿರಮುಂಚದಸ್ತ್ರಂ
ತೇನ ವ್ಯಾಪ್ತಾ ಪೃತನಾ ಪಾಂಡವಾನಾಮ್ ||
ಅರ್ಜುನನು ಕ್ರೂರವಾದ ಮಾತುಗಳನ್ನಾಡುತ್ತಾ ಅಶ್ವತ್ಥಾಮರೊಡನೆ ಯುದ್ಧಕ್ಕೆ ಬಂದನು. ಅಶ್ವತ್ಥಾಮರು ಕ್ರುದ್ಧರಾಗಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದರು. ಆ ಅಸ್ತ್ರವು ಪಾಂಡವರ ಸೈನ್ಯವನ್ನು ಎಲ್ಲೆಡೆಯಲ್ಲಿಯೂ ಆವರಿಸಿತು.
ಅಕ್ಷೋಹಿಣೀ ನಿಹತಾ ಚಾತ್ರ ಸೇನಾ
ಪಾರ್ಥಂ ಸಯಾನಂ ಹರಿರುಜ್ಜಹಾರ |
ಜೀವಂತಮಾಲೋಕ್ಯ ಸುರೇಂದ್ರನಂದನಂ
ದ್ರೌಣಿಃ ಕೋಪಾತ್ ಕಾರ್ಮುಕಂ ಚಾಪಹಾಯ |
ಯಯೌ ತಮಾಗತ್ಯ ಜಗಾದ ಕೃಷ್ಣೋ

ವೇದಾಂತಕೃತ್ ಪೂರ್ಣಷಾಡ್ಗುಣ್ಯದೇಹಃ ॥
ಅಶ್ವತ್ಥಾಮರ ಆಗ್ನೇಯಾಸ್ತ್ರದಿಂದ ಒಂದು ಅಕ್ಷೋಹಿಣಿ ಸೈನ್ಯವು ಸುಟ್ಟು ಹೋಯಿತು. ಆದರೆ ಅರ್ಜುನನನ್ನು ರಥ ಸಮೇತವಾಗಿ ಕೃಷ್ಣ ಪಾರು ಮಾಡಿದನು. ಅರ್ಜುನ ಬದುಕಿ ಉಳಿದುದನ್ನು ಕಂಡು ಅಶ್ವತ್ಥಾಮರು ಕೋಪದಿಂದ ತಮ್ಮ ಧನುಸ್ಸನ್ನೆಸೆದು ಹೊರಟು ಹೋದರು. ಆಗ ವೇದಾಂಕರ್ತರಾದ ಪೂರ್ಣ ಷಡ್ಗುಣ ಶರೀರಿಯಾದ ವೇದವ್ಯಾಸರು ಅವನ ಬಳಿಗೆ ಬಂದು ಹೇಳಿದರು.
ಮಾ ಯಾಹಿ ಸಾಕ್ಷಾದ್ ಗಿರಿಶಃ ಸುರಾಣಾಂ
ಕಾರ್ಯಾಯ ಭೂಮೌ ಬಲವಾನಜಾಯಥಾಃ |
ಮಹಚ್ಚ ಕಾರ್ಯಂ ಪುನರಸ್ತಿ ದೃಷ್ಟಂ
ತವಾಶು ತಚ್ಚ ಪ್ರತಿಪಾದಯೇತಿ ॥
`ಹೋಗಬೇಡಿ, ನೀವು ಸಾಕ್ಷಾತ್ ರುದ್ರಾವತಾರ. ದೇವಕಾರ್ಯಕ್ಕಾಗಿ ಭೂಮಿಯಲ್ಲಿ ಬಲಿಷ್ಠರಾಗಿ ಅವತರಿಸಿರುವಿರಿ. ನಿಮ್ಮ ಮಹತ್ತಾದ ಕಾರ್ಯವನ್ನು ನಾವು ಕಂಡಿದ್ದೇವೆ. ಇನ್ನೂ ಅಂಥ ಕಾರ್ಯವನ್ನು ನೀವು ಮಾಡಬೇಕಾಗಿದೆ. ಅದನ್ನೂ ಬೇಗನೆ ಮಾಡಿ' ಎಂದು ಹೇಳಿದರು.
ತಥೋದಿತಃ ಪ್ರಾತರಿತಿ ಬ್ರುವಾಣೋ
ಯಯೌ ಪ್ರಣಮ್ಯಾಖಿಲವೇದಯೋನಿಮ್ |
ಯಯುಸ್ತಮನ್ವೇವ ಸುಯೋಧನಾದಯೋ
ದುಃಖಾನತಾಸ್ತೇ ಶಿಬಿರಾಯ ಭೀತಾಃ ॥
ವೇದವ್ಯಾಸರು ಹೀಗೆ ಹೇಳಿದಾಗ ಅಶ್ವತ್ಥಾಮರು `ಬೆಳಿಗ್ಗೆ' ಎನ್ನುತ್ತಾ ಸಕಲ ವೇದಪ್ರತಿಪಾದ್ಯರಾದ ಆ ವ್ಯಾಸರಿಗೆ ನಮಿಸಿ ಶಿಬಿರಕ್ಕೆ ಹೊರಟು ಹೋದರು. ದುರ್ಯೋಧನಾದಿಗಳು ಭೀತರಾಗಿ ದುಃಖದಿಂದ ತಲೆತಗ್ಗಿಸಿ ಅವರ ಹಿಂದಿನಿಂದ ಶಿಬಿರಕ್ಕೆ ತೆರಳಿದರು.
ಪಾರ್ಥಾಶ್ಚ ಸರ್ವೇ ಮುದಿತಾ ಜನಾರ್ದನಂ
ಪರಂ ಸ್ತುವಂತಃ ಶಿಬಿರಾಯ ಜಗ್ಮುಃ |
ತತ್ರಾಪಿ ರಾತ್ರಾವಮಿತಾನ್ ಹರೇರ್ಗುಣಾ-
ನನುಸ್ಮರಂತೋ ಮುಮುದುಃ ಸಮೇತಾಃ ॥
ಪಾಂಡವರೆಲ್ಲರೂ ಸಂತುಷ್ಟರಾಗಿ ಸರ್ವೋತ್ತಮನಾದ ಕೃಷ್ಣನನ್ನು ಹೊಗಳುತ್ತಾ ಶಿಬಿರಕ್ಕೆ ನಡೆದರು. ಅಲ್ಲಿಯೂ ರಾತ್ರಿಯಲ್ಲಿ ಎಲ್ಲರೂ ಕೂಡಿ ಹರಿಯ ಗುಣಗಳನ್ನು ನೆನೆಯುತ್ತಾ ಆನಂದಪಟ್ಟರು.
* * * * *
ನೂರ ಐವತ್ತೈದನೆಯ ಅಧ್ಯಾಯ
ನಕುಲ-ಕೃಪಾಚಾರ್ಯರಿಂದ ಶಕುನಿ ಮತ್ತು ಶಿಖಂಡಿಗಳ ಪರಾಜಯ.
ಸಂಜಯಃ
ನಕುಲಂ ರಭಸಂ ಯುದ್ಧೇ ನಿಘ್ನಂತಂ ವಾಹಿನೀಂ ತವ |
ಅಭ್ಯಯಾತ್ ಸೌಬಲಃ ಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 1 ॥
ಸಂಜಯ ಶಕುನಿಯು ಯುದ್ಧದಲ್ಲಿ ವೇಗಶಾಲಿಯಾಗಿ ನಿನ್ನ ಸೈನ್ಯವನ್ನು ಕೊಲ್ಲುತ್ತಿದ್ದಂತಹ ನಕುಲನ ಮೇಲೆ ಎರಗಿ, ಕೋಪಗೊಂಡು `ನಿಲ್ಲು, ನಿಲ್ಲು' ಎಂದು ಹೇಳಿದನು.
ಕೃತವೈರೌ ತು ತೌ ವೀರಾವನ್ಯೋನ್ಯವಧಕಾಂಕ್ಷಿಣೌ |
ಶರೈಃ ಪೂರ್ಣಾಯತೋತ್ಸೃಷ್ಟೈರನ್ಯೋನ್ಯಮಭಿಜಘ್ನತುಃ ॥ 2 ॥
ಬಹಳ ವೈರವನ್ನು ಮಾಡಿ ಪರಸ್ಪರ ವಧೆಯನ್ನು ಬಯಸುವ ವೀರರಾದ ಅವರಿಬ್ಬರೂ ಪೂರ್ಣವಾಗಿ ಹೆದೆಯನ್ನು ಎಳೆದು ಪ್ರಯೋಗಿಸಿದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ಯಥೈವ ಸೌಬಲಃ ಕ್ಷಿಪ್ರಂ ಶರವರ್ಷಾಣಿ ಮುಂಚತಿ |
ತಥೈವ ನಕುಲೋ ರಾಜನ್ ಶಿಕ್ಷಾಂ ಸಂದರ್ಶಯನ್ ಯುಧಿ ॥ 3 ॥
ಎಲೈ ರಾಜನೇ, ಶಕುನಿಯು ಹೇಗೆ ಶೀಘ್ರವಾಗಿ ಬಾಣಗಳ ಮಳೆಯನ್ನು ಸುರಿಸುತ್ತಾನೆಯೋ ಹಾಗೆಯೇ ನಕುಲನೂ ಸಹ ತನ್ನ ಅಭ್ಯಾಸ ಪಾಟವವನ್ನು ಪ್ರದರ್ಶಿಸಿ ಬಾಣಗಳ ಮಳೆಯನ್ನು ಸುರಿಸಿದನು.
ತಾವುಭೌ ಸಮರೇ ಶೂರೌ ಶರಕಂಟಕಿನೌ ತದಾ |
ವ್ಯರಾಜೇತಾಂ ಮಹಾರಾಜ ಕಂಟಕೈರಿವ ಶಾಲ್ಮಲೀ ॥ 4 ॥
ಎಲೈ ಮಹಾರಾಜನೇ, ರಣರಂಗದಲ್ಲಿ ಬಾಣಗಳು ಶರೀರದಲ್ಲಿ ನಾಟಿದ ಶೂರರಾದ ಅವರಿಬ್ಬರೂ ಮುಳ್ಳುಗಳಿಂದ ಕೂಡಿದ ಶಾಲ್ಮಲೀ ವೃಕ್ಷದಂತೆ (ಬೂರುಗದ ಮರ) ಶೋಭಿಸಿದರು.
ಸುಜಿಹ್ಮಂ ಪ್ರೇಕ್ಷಮಾಣೌ ಚ ರಾಜನ್ ವಿವೃತಲೋಚನೌ |
ಕ್ರೋಧಸಂರಕ್ತನಯನೌ ನಿರ್ದಹಂತೌ ಪರಸ್ಪರಮ್ ॥ 5 ॥
ಎಲೈ ರಾಜನೇ, ಕಣ್ಣುಗಳನ್ನು ಪೂರ್ಣವಾಗಿ ಅರಳಿಸಿ, ವಕ್ರದೃಷ್ಟಿಯಿಂದ ಒಬ್ಬರನ್ನೊಬ್ಬರು ನೋಡುತ್ತಾ, ಕ್ರೋಧದಿಂದ ಕೆಂಪಾದ ಕಣ್ಣುಳ್ಳವರಾಗಿ ಪರಸ್ಪರವಾಗಿ ನಾಶಮಾಡಲು ಬಯಸಿದರು.
ಸ್ಯಾಲಸ್ತು ತವ ಸಂಕ್ರುದ್ಧೋ ಮಾದ್ರೀಪುತ್ರಂ ಹಸನ್ನಿವ |
ಕರ್ಣಿನೈಕೇನ ವಿವ್ಯಾಧ ಹೃದಯೇ ನಿಶಿತೇನ ಹ ॥ 6 ॥
ನಿನ್ನ ಭಾವಮೈದುನನಾದ ಶಕುನಿಯು ತೀಕ್ಷ್ಣವಾದ ಒಂದು ಬಾಣದಿಂದ ಕೋಪಗೊಂಡು ನಗುತ್ತಾ ಮಾದ್ರೀಪುತ್ರನಾದ ನಕುಲನನ್ನು

ಅವನ ಹೃದಯದಲ್ಲಿ ಹೊಡೆದನು.
ನಕುಲಸ್ತು ಭೃಶಂ ವಿದ್ಧಃ ಸ್ಯಾಲೇನ ತವ ಧನ್ವಿನಾ |
ನಿಷಸಾದ ರಥೋಪಸ್ಥೇ ಕಶ್ಮಲಂ ಚೈನಮಾವಿಶತ್ ॥ 7 ॥
ಧನುರ್ಧಾರಿಯಾದ ನಿನ್ನ ಭಾವಮೈದುನನಿಂದ ಗಾಢವಾಗಿ ಹೊಡೆಯಲ್ಪಟ್ಟ ನಕುಲನಾದರೋ ರಥಪೀಠದಲ್ಲಿ ಕುಸಿದು ಮೂರ್ಛೆಯನ್ನು ಹೊಂದಿದನು.
ಅತ್ಯಂತವೈರಿಣಂ ದೃಪ್ತಂ ದೃಷ್ಟ್ವಾ ಶತ್ರುಂ ತಥಾಗತಮ್ |
ನನಾದ ಶಕುನೀ ರಾಜಂಸ್ತಪಾಂತೇ ಜಲದೋ ಯಥಾ ॥ 8 ॥
ಎಲೈ ರಾಜನೇ, ಅತ್ಯಂತ ವೈರಿಯೂ, ದರ್ಪದಿಂದ ಕೂಡಿದವನೂ ಆದ ಶತ್ರುವು ಅಂತಹ ಅವಸ್ಥೆಯನ್ನು ಹೊಂದಿದುದನ್ನು ನೋಡಿ ಶಕುನಿಯು ಮಳೆಗಾಲದಲ್ಲಿ ಮೋಡವು ಗರ್ಜಿಸುವಂತೆ ಗರ್ಜಿಸಿದನು.
ಪ್ರತಿಲಭ್ಯ ತತಃ ಸಂಜ್ಞಾಂ ನಕುಲಃ ಪಾಂಡುನಂದನಃ |
ಅಭ್ಯಯಾತ್ ಸೌಬಲಂ ಭೂಯೋ ವ್ಯಾತ್ತಾನನ ಇವಾಂತಕಃ ॥ 9 ॥
ಅಷ್ಟರಲ್ಲಿ ಪಾಂಡುನಂದನನಾದ ನಕುಲನು ಪ್ರಜ್ಞೆಯನ್ನು ಮರಳಿ ಪಡೆದು ಬಾಯ್ತೆರೆದ ಯಮನಂತೆ ಪುನಃ ಶಕುನಿಯ ಮೇಲೆ ಎರಗಿದನು.
ಸಂಕ್ರುದ್ಧಃ ಶಕುನಿಂ ಷಷ್ಟ್ಯಾ ವಿವ್ಯಾಧ ಭರತರ್ಷಭ |
ಪುನಶ್ಚೈವ ಶತೇನೈವ ನಾರಾಚಾನಾಂ ಸ್ತನಾಂತರೇ ॥ 10 ॥
ಎಲೈ ಭರತಶ್ರೇಷ್ಠನೇ, ಅವನು ಕೋಪಗೊಂಡು ಶಕುನಿಯ ಮೇಲೆ ಅರವತ್ತು ಬಾಣಗಳನ್ನು ಪ್ರಯೋಗಿಸಿದನು. ಪುನಃ ನೂರು ನಾರಾಚಗಳಿಂದ ಅವನನ್ನು ಸ್ತನಗಳ ಮಧ್ಯದಲ್ಲಿ ಹೊಡೆದನು.
ತತೋಽಸ್ಯ ಸಶರಂ ಚಾಪಂ ಮುಷ್ಟಿದೇಶೇ ಸ ಚಿಚ್ಛಿದೇ |
ಧ್ವಜಂ ಚ ತ್ವರಿತಂ ಛಿತ್ತ್ವಾ ರಥಾದ್ ಭೂಮಾವಪಾತಯತ್ ॥ 11 ॥
ಅನಂತರ ಬಾಣ ಸಹಿತವಾದ ಅವನ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು ಮತ್ತು ಧ್ವಜವನ್ನೂ ಶೀಘ್ರವಾಗಿ ಕತ್ತರಿಸಿ ರಥದಿಂದ ಭೂಮಿಯ ಮೇಲೆ ಕೆಡವಿದನು.
ಸೋಽತಿವಿದ್ಧೋ ಮಹಾರಾಜ ರಥೋಪಸ್ಥ ಉಪಾವಿಶತ್ |
ತಂ ವಿಸಂಜ್ಞಂ ನಿಪತಿತಂ ದೃಷ್ಟ್ವಾ ಸ್ಯಾಲಂ ತವಾನಘ |
ಅಪೋವಾಹ ರಥೇನಾಶು ಸಾರಥಿರ್ಧ್ವಜಿನೀಮುಖಾತ್ ॥ 12 ॥
ಎಲೈ ಮಹಾರಾಜನೇ, ಶಕುನಿಯು ಗಾಢವಾಗಿ ಹೊಡೆಯಲ್ಪಟ್ಟು ರಥಪೀಠದಲ್ಲಿ ಕುಳಿತನು. ಎಲೈ ಅನಘನೇ, ನಿನ್ನ ಭಾವಮೈದುನನು ಪ್ರಜ್ಞಾಹೀನನಾದುದನ್ನು ನೋಡಿ ಅವನ ಸಾರಥಿಯು ಅವನನ್ನು ರಣರಂಗದಿಂದ ಶೀಘ್ರವಾಗಿ ಹೊರಗೆ ಕರೆದುಕೊಂಡು ಹೋದನು.
ತತಃ ಸಂಚುಕ್ರುಶುಃ ಪಾರ್ಥಾ ಯೇ ಚ ತೇಷಾಂ ಪದಾನುಗಾಃ |
ನಿರ್ಜಿತ್ಯ ಚ ರಣೇ ಶತ್ರೂನ್ ನಕುಲಃ ಶತ್ರುತಾಪನಃ |
ಅಬ್ರವೀತ್ ಸಾರಥಿಂ ಕ್ರುದ್ಧೋ ದ್ರೋಣಾನೀಕಾಯ ಮಾಂ ವಹ ॥13॥
ಆಗ ಪಾಂಡವರು ಮತ್ತು ಅವರ ಅನುಚರರು ಸಿಂಹನಾದವನ್ನು ಮಾಡಿದರು. ಶತ್ರುತಾಪನನಾದ ನಕುಲನು ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಕೋಪಗೊಂಡು ತನ್ನ ಸಾರಥಿಯನ್ನು ಕುರಿತು ದ್ರೋಣರ ಸೇನೆಯ ಕಡೆಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದನು.
ತಸ್ಯ ತದ್ವಚನಂ ಶ್ರುತ್ವಾ ಮಾದ್ರೀಪುತ್ರಸ್ಯ ಧೀಮತಃ |
ಪ್ರಾಯಾತ್ ತೇನ ರಣೇ ರಾಜನ್ ಯೇನ ದ್ರೋಣೋಽನ್ವಯುದ್ಧ್ಯತ ॥
ಎಲೈ ರಾಜನೇ, ಮೇಧಾವಿಯಾದ ಮಾದ್ರೀಪುತ್ರನ ಆ ಮಾತನ್ನು ಕೇಳಿದ ಸಾರಥಿಯು ರಣರಂಗದಲ್ಲಿ ಅವನನ್ನು ದ್ರೋಣರಿದ್ದ ಕಡೆಗೆ ಕರೆದುಕೊಂಡು ಹೋದನು.
ಶಿಖಂಡಿನಂ ತು ಸಮರೇ ದ್ರೋಣಪ್ರೇಪ್ಸುಂ ವಿಶಾಂಪತೇ |
ಕೃಪಃ ಶಾರದ್ವತೋ ಯತ್ತಃ ಪ್ರತ್ಯುದ್ಗಚ್ಛತ್ ಸುವೇಗಿತಃ ॥ 15 ॥
ಎಲೈ ರಾಜನೇ, ದ್ರೋಣರ ಬಳಿಗೆ ಬರಲು ಯತ್ನಿಸುತ್ತಿದ್ದ ಶಿಖಂಡಿಯ ಮೇಲೆ ಶಾರದ್ವತರಾದ ಕೃಪರು ರಣರಂಗದಲ್ಲಿ ಬಹಳ ವೇಗದಿಂದ ಮತ್ತು ಪ್ರಯತ್ನ ಪೂರ್ವಕವಾಗಿ ಎರಗಿದರು.
ಗೌತಮಂ ದ್ರುತಮಾಯಾಂತಂ ದ್ರೋಣಾಂತಿಕಮರಿಂದಮಮ್ |
ವಿವ್ಯಾಧ ನವಭಿರ್ಭಲ್ಲೈಃ ಶಿಖಂಡೀ ಪ್ರಹಸನ್ನಿವ ॥ 16 ॥
ದ್ರೋಣರಿಗೆ ಸಹಾಯವನ್ನು ಮಾಡಲು ಬಯಸಿ ಶೀಘ್ರವಾಗಿ ಬರುತ್ತಿದ್ದ ಅರಿಂದಮರಾದ ಕೃಪರನ್ನು ಶಿಖಂಡಿಯು ನಗುತ್ತಾ ಒಂಬತ್ತು ಭಲ್ಲಗಳಿಂದ ಹೊಡೆದನು.
ತಮಾಚಾರ್ಯೋ ಮಹಾರಾಜ ವಿದ್ಧ್ವಾ ಪಂಚಭಿರಾಶುಗೈಃ |
ಪುನರ್ವಿವ್ಯಾಧ ವಿಂಶತ್ಯಾ ಪುತ್ರಾಣಾಂ ಪ್ರಿಯಕೃತ್ ತವ ॥ 17 ॥
ಎಲೈ ಮಹಾರಾಜನೇ, ನಿನ್ನ ಪುತ್ರರಿಗೆ ಪ್ರಿಯವನ್ನುಂಟು ಮಾಡುವ ಕೃಪಾಚಾರ್ಯರು ಅವನನ್ನು ಶೀಘ್ರಗಾಮಿಗಳಾದ ಐದು ಬಾಣಗಳಿಂದ ಹೊಡೆದು ಪುನಃ ಇಪ್ಪತ್ತು ಬಾಣಗಳಿಂದ ಹೊಡೆದರು.
ಮಹದ್ ಯುದ್ಧಂ ತಯೋರಾಸೀದ್ ಘೋರರೂಪಂ ವಿಶಾಂಪತೇ |
ಯಥಾ ದೇವಾಸುರೇ ಯುದ್ಧೇ ಶಂಬರಾಮರರಾಜಯೋಃ ॥ 18 ॥

ಎಲೈ ರಾಜನೇ, ದೇವಾಸುರ ಯುದ್ಧದಲ್ಲಿ ಶಂಬರನಿಗೂ ಮತ್ತು ಇಂದ್ರನಿಗೂ ನಡೆದಂತೆ ಅವರಿಬ್ಬರಿಗೆ ಘೋರವಾದ ಯುದ್ಧವು ಪ್ರವೃತ್ತವಾಯಿತು.
ಶರಜಾಲಾವೃತಂ ವ್ಯೋಮ ಚಕ್ರತುಸ್ತೌ ಮಹಾರಥೌ |
ಪ್ರಕೃತ್ಯಾ ಘೋರರೂಪಂ ತದಾಸೀದ್ ಘೋರತರಂ ಪುನಃ ॥ 19 ॥
ಮಹಾರಥರಾದ ಅವರಿಬ್ಬರೂ ಆಕಾಶವನ್ನು ಬಾಣಗಳ ಸಮೂಹದಿಂದ ತುಂಬಿದರು. ಮೊದಲೇ ಘೋರವಾಗಿದ್ದ ಯುದ್ಧವು ಇನ್ನೂ ಘೋರವಾಯಿತು.
ರಾತ್ರಿಶ್ಚ ಭರತಶ್ರೇಷ್ಠ ಯೋಧಾನಾಂ ಯುದ್ಧಶಾಲಿನಾಮ್ |
ಕಾಳರಾತ್ರಿನಿಭಾ ಹ್ಯಾಸೀದ್ ಘೋರರೂಪಾ ಭಯಾವಹಾ ॥ 20 ॥
ಎಲೈ ಭರತಶ್ರೇಷ್ಠನೇ, ಆ ರಾತ್ರಿಯು ಯುದ್ಧಪ್ರಿಯರಾದ ಯೋಧರಿಗೆ ಘೋರವೂ, ಭಯಂಕರವೂ ಆಗಿ ಕಾಳರಾತ್ರಿಯಂತೆ ಆಯಿತು.
ಶಿಖಂಡೀ ತು ಮಹಾರಾಜ ಗೌತಮಸ್ಯ ಮಹದ್ ಧನುಃ |
ಅರ್ಧಚಂದ್ರೇಣ ಚಿಚ್ಛೇದ ಸಜ್ಯಂ ಸವಿಶಿಖಂ ತದಾ ॥ 21 ॥
ಎಲೈ ಮಹಾರಾಜನೇ, ಶಿಖಂಡಿಯಾದರೂ ಅರ್ಧಚಂದ್ರದಿಂದ ಹೆದೆ ಮತ್ತು ಬಾಣಗಳಿಂದ ಕೂಡಿದ ಕೃಪರ ಧನುಸ್ಸನ್ನು ಕತ್ತರಿಸಿದನು.
ತಸ್ಯ ಕ್ರುದ್ಧಃ ಕೃಪೋ ರಾಜನ್ ಶಕ್ತಿಂ ಚಿಕ್ಷೇಪ ದಾರುಣಾಮ್ |
ಸ್ವರ್ಣದಂಡಾಮಕುಂಠಾಗ್ರಾಂ ಕರ್ಮಾರಪರಿಮಾರ್ಜಿತಾಮ್ ॥ 22 ॥
ಎಲೈ ರಾಜನೇ, ಅದಕ್ಕೆ ಪ್ರತಿಯಾಗಿ ಕೃಪರು ಸ್ವರ್ಣದಂಡವನ್ನು ಹೊಂದಿದ ತೀಕ್ಷ್ಣವಾದ ತುದಿಯನ್ನು ಹೊಂದಿದ, ಕಮ್ಮಾರರಿಂದ ತೊಳೆಸಲ್ಪಟ್ಟ ದಾರುಣವಾದ ಶಕ್ತಿಯನ್ನು ಅವನ ಮೇಲೆ ಪ್ರಯೋಗಿಸಿದರು.
ತಾಮಾಪತಂತೀಂ ಚಿಚ್ಛೇದ ಶಿಖಂಡೀ ಬಹುಭಿಃ ಶರೈಃ |
ಸಾಪತನ್ಮೇದಿನೀಂ ದೀಪ್ತಾ ಭಾಸಯಂತೀ ಮಹಾಪ್ರಭಾ ॥ 23 ॥
ತನ್ನ ಕಡೆಗೆ ಬರುತ್ತಿದ್ದ ಆ ಶಕ್ತಿಯನ್ನು ಶಿಖಂಡಿಯು ಅನೇಕ ಬಾಣಗಳಿಂದ ಕತ್ತರಿಸಿದನು. ಮಹಾಪ್ರಭೆಯುಳ್ಳ ಜ್ವಲಿಸುವ ಆ ಶಕ್ತಿಯು ಭೂಮಿಯನ್ನು ಪ್ರಕಾಶಿಸುತ್ತಾ ಕೆಳಗೆ ಬಿದ್ದಿತು.
ಅಥಾನ್ಯದ್ ಧನುರಾದಾಯ ಗೌತಮೋ ರಥಿನಾಂ ವರಃ |
ಪ್ರಾಚ್ಛಾದಯಚ್ಛಿತೈರ್ಬಾಣೈರ್ಮಹಾರಾಜ ಶಿಖಂಡಿನಮ್ ॥ 24 ॥
ಎಲೈ ಮಹಾರಾಜನೇ, ಆಗ ರಥಿಶ್ರೇಷ್ಠರಾದ ಕೃಪಾಚಾರ್ಯರು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಶಿಖಂಡಿಯ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಅವನನ್ನು ಆಚ್ಛಾದಿಸಿದರು.
ಸ ಛಾದ್ಯಮಾನಃ ಸಮರೇ ಗೌತಮೇನ ಯಶಸ್ವಿನಾ |
ವ್ಯಷೀದತ ರಥೋಪಸ್ಥೇ ಶಿಖಂಡೀ ರಥಿನಾಂ ವರಃ ॥ 25 ॥
ಕೀರ್ತಿಶಾಲಿಗಳಾದ ಗೌತಮರಿಂದ ರಣರಂಗದಲ್ಲಿ ಆಚ್ಛಾದಿಸಲ್ಪಟ್ಟ ರಥಿಶ್ರೇಷ್ಠನಾದ ಶಿಖಂಡಿಯು ರಥಪೀಠದಲ್ಲಿ ಕುಸಿದನು.
ಸೀದಂತಂ ಚೈನಮಾಲೋಕ್ಯ ಕೃಪಃ ಶಾರದ್ವತೋ ಯುಧಿ |
ಆಜಘ್ನೇ ಬಹುಭಿರ್ಬಾಣೈರ್ಜಿಘಾಂಸನ್ನಿವ ಭಾರತ ॥ 26 ॥
ಎಲೈ ಭಾರತನೇ, ಶಕ್ತಿಹೀನನಾಗುತ್ತಿರುವ ಶಿಖಂಡಿಯನ್ನು ನೋಡಿ ಶಾರದ್ವತರಾದ ಕೃಪರು ಅವನನ್ನು ಕೊಲ್ಲಲು ಬಯಸಿದವರಂತೆ ರಣರಂಗದಲ್ಲಿ ಅವನನ್ನು ಅನೇಕ ಬಾಣಗಳಿಂದ ಹೊಡೆದರು.
ವಿಮುಖಂ ತಂ ರಣೇ ದೃಷ್ಟ್ವಾ ಯಾಜ್ಞಸೇನಿಂ ಮಹಾರಥಮ್ |
ಪಾಂಚಾಲಾಃ ಸೋಮಕಾಶ್ಚೈವ ಪರಿವವ್ರುಃ ಸಮಂತತಃ ॥ 27 ॥
ಯಜ್ಞಸೇನನ ಪುತ್ರನಾದ ಮಹಾರಥನಾದ ಶಿಖಂಡಿಯು ರಣರಂಗದಲ್ಲಿ ಯುದ್ಧ ವಿಮುಖನಾಗಿರುವುದನ್ನು ನೋಡಿ ಪಾಂಚಾಲರು ಮತ್ತು ಸೋಮಕರು ಎಲ್ಲ ಕಡೆಗಳಿಂದಲೂ ಅವನನ್ನು ಸುತ್ತುವರಿದರು.
ತಥೈವ ತವ ಪುತ್ರಾಶ್ಚ ಪರಿವವ್ರುರ್ದ್ವಿಜೋತ್ತಮಮ್ |
ಮಹತ್ಯಾ ಸೇನಯಾ ಸಾರ್ಧಂ ತತೋ ಯುದ್ಧಮಭೂತ್ ಪುನಃ ॥28॥
ಹಾಗೆಯೇ ನಿನ್ನ ಪುತ್ರರೂ ಸಹ ದೊಡ್ಡ ಸೈನ್ಯದಿಂದ ಕೂಡಿದವರಾಗಿ ದ್ವಿಜಶ್ರೇಷ್ಠರಾದ ಕೃಪರನ್ನು ಸುತ್ತುವರಿದರು. ಅನಂತರ ಪುನಃ ಯುದ್ಧವು ನಡೆಯಿತು.
ರಥಾನಾಂ ಚ ರಣೇ ರಾಜನ್ನನ್ಯೋನ್ಯಮಭಿಧಾವತಾಮ್ |
ಬಭೂವ ತುಮುಲಃ ಶಬ್ದೋ ಮೇಘಾನಾಂ ನದತಾಮಿವ ॥ 29 ॥
ಎಲೈ ರಾಜನೇ, ಪರಸ್ಪರವಾಗಿ ಓಡುವ ರಥರಿಂದ ಉಂಟಾದ ಶಬ್ದವು ಗರ್ಜಿಸುವ ಮೇಘಗಳ ಶಬ್ದದಂತೆ ತೀವ್ರವಾಗಿದ್ದಿತು.
ದ್ರವತಾಂ ಸಾದಿನಾಂ ಚೈವ ಗಜಾನಾಂ ಚ ವಿಶಾಂಪತೇ |
ಅನ್ಯೋನ್ಯಮಭಿತೋ ರಾಜನ್ ಕ್ರೂರಮಾಯೋಧನಂ ಬಭೌ ॥ 30 ॥
ಎಲೈ ರಾಜನೇ, ಅಶ್ವಾರೋಹಿಗಳು ಮತ್ತು ಗಜಗಳು ಎಲ್ಲ ಕಡೆಯಲ್ಲಿಯೂ ತಿರುಗುತ್ತಿರಲು ಆ ರಣರಂಗವು ಕ್ರೂರವಾಗಿ ಶೋಭಿಸಿತು.
ಪತ್ತೀನಾಂ ದ್ರವತಾಂ ಚೈವ ಪದಶಬ್ದೇನ ಮೇದಿನೀ |
ಅಕಂಪತ ಮಹಾರಾಜ ಭಯತ್ರಸ್ತೇವ ಚಾಂಗನಾ ॥ 31 ॥
ಎಲೈ ಮಹಾರಾಜನೇ, ಓಡುವ ಪದಾತಿಗಳ ಪಾದಶಬ್ದದಿಂದ ಭೂಮಿಯು ಭಯಗೊಂಡ ವನಿತೆಯಂತೆ ನಡುಗಿತು.
ರಥಾ ರಥಾನ್ ಸಮಾಸಾದ್ಯ ಪ್ರದ್ರುತಾ ವೇಗವತ್ತರಮ್ |
ನ್ಯಗೃಹ್ಣನ್ ಬಹವೋ ರಾಜನ್ ಶಲಭಾನ್ ವಾಯಸಾ ಇವ ॥ 32 ॥

ಎಲ್ಲೆ ರಾಜನೇ, ವೇಗವಾಗಿ ಸಾಗುವ ರಥಗಳನ್ನು ಅವುಗಳಿಗಿಂತ ವೇಗವಾಗಿ ಸಾಗುವ ರಥಗಳು ಹಿಂಬಾಲಿಸಿ ಕಾಗೆಗಳು ಪತಂಗಗಳನ್ನು ಹಿಡಿಯುವಂತೆ ಹಿಡಿದವು.
ತಥಾ ಗಜಾನ್ ಪ್ರಭಿನ್ನಾಂಶ್ಚ ಸುಪ್ರಭಿನ್ನಾ ಮಹಾಗಜಾಃ |
ತಸ್ಮಿನ್ನೇವ ಪದೇ ಯತ್ತಾ ನಿಗೃಹ್ಣಂತಿ ಸ್ಮ ಭಾರತ ॥ 33 ॥
ಎಲ್ಲೆ ಭಾರತನೇ, ಹಾಗೆಯೇ ಮದೋದಕವನ್ನು ಸುರಿಸುವ ಗಜಗಳನ್ನು ಅವುಗಳಿಂದ ಹೆಚ್ಚು ಮದೋದಕವನ್ನು ಸುರಿಸುವ ಗಜಗಳು ಒಂದೇ ಹೆಜ್ಜೆಯಲ್ಲಿ ನಿಗ್ರಹಿಸುತ್ತಿದ್ದವು.
ಸಾದೀ ಸಾದಿನಮಾಸಾದ್ಯ ಪದಾತೀ ಚ ಪದಾತಿನಮ್ |
ಸಮಾಸಾದ್ಯ ರಣೇಽನ್ಯೋನ್ಯಂ ಸಂರಬ್ಧಾ ನಾತಿಚಕ್ರಮುಃ ॥ 34 ॥
ಕೋಪಗೊಂಡ ಅಶ್ವಾರೋಹಿಗಳು ಅಶ್ವಾರೋಹಿಗಳನ್ನೂ, ಪದಾತಿಗಳು ಪದಾತಿಗಳನ್ನೂ ರಣರಂಗದಲ್ಲಿ ಸಮೀಪಿಸಿ ಕೋಪಗೊಂಡವರಾಗಿ ಪರಸ್ಪರವಾಗಿ ದಾಟಲಿಲ್ಲ.
ಧಾವತಾಂ ದ್ರವತಾಂ ಚೈವ ಪುನರಾವರ್ತತಾಮಪಿ |
ಬಭೂವ ತತ್ರ ಸೈನ್ಯಾನಾಂ ಶಬ್ದಃ ಸುತುಮುಲೋ ನಿಶಿ ॥ 35 ॥
ಓಡಿಹೋಗುವ ಮತ್ತು ಪುನಃ ಹಿಂದಿರುಗಿ ಬರುವ ನಿನ್ನ ಸೈನ್ಯಗಳಿಂದ ಉಂಟಾದ ಶಬ್ದವು ಆ ರಾತ್ರಿಯಲ್ಲಿ ತೀವ್ರವಾಗಿದ್ದಿತು.
ದೀಪ್ಯಮಾನಾಃ ಪ್ರದೀಪಾಶ್ಚ ರಥವಾರಣವಾಜಿಷು |
ಅದೃಶ್ಯಂತ ಮಹಾರಾಜ ಮಹೋಲ್ಕಾ ಇವ ಖಾಚ್ಚ್ಯುತಾಃ ॥ 36 ॥
ಎಲ್ಲೆ ಮಹಾರಾಜನೇ, ರಥ-ಗಜ-ಅಶ್ವಗಳಲ್ಲಿ ಬೆಳಗುವ ದೀಪಗಳು ಆಕಾಶದಿಂದ ಬಿದ್ದ ದೊಡ್ಡ ಉಲ್ಕೆಗಳಂತೆ ಕಂಡುಬಂದವು.
ಸಾ ನಿಶಾ ಭರತಶ್ರೇಷ್ಠ ಪ್ರದೀಪೈರವಭಾಸಿತಾ |
ದಿವಸಪ್ರತಿಮಾ ರಾಜನ್ ಬಭೂವ ರಣಮೂರ್ಧನಿ ॥ 37 ॥
ಎಲ್ಲೆ ರಾಜನೇ, ಭರತಶ್ರೇಷ್ಠನೇ, ಪ್ರದೀಪಗಳಿಂದ ಪ್ರಕಾಶಿಸಲ್ಪಟ್ಟ ರಣಭೂಮಿಯ, ಆ ರಾತ್ರಿಯಲ್ಲಿ ದಿವಸದಂತೆಯೇ ಆಯಿತು.
ಆದಿತ್ಯೇನ ಯಥಾ ವ್ಯಾಪ್ತಂ ತಮೋ ಲೋಕೇ ಪ್ರಣಶ್ಯತಿ |
ತಥಾ ನಷ್ಟಂ ತಮೋ ಘೋರಂ ದೀಪೈರ್ದೀಪ್ತೈರಲಂಕೃತೈಃ ॥ 38 ॥
ಲೋಕದಲ್ಲಿ ವ್ಯಾಪ್ತವಾದ ಕತ್ತಲು ಹೇಗೆ ಸೂರ್ಯನಿಂದ ನಾಶವನ್ನು ಹೊಂದುವುದೋ ಹಾಗೆ ಉರಿಯುವ ಅಲಂಕೃತ ದೀಪಗಳಿಂದ ಘೋರವಾದ ಆ ಕತ್ತಲೆಯು ನಾಶವನ್ನು ಹೊಂದಿತು.
ಶಸತ್ರಣಾಂ ಕವಚಾನಾಂ ಚ ಮಣೀನಾಂ ಚ ಮಹಾತ್ಮನಾಮ್ |
ಅಂತರ್ದಧುಃ ಪ್ರಭಾಃ ಸರ್ವಾ ದೀಪೈಸ್ತೈರವಭಾಸಿತಾಃ ॥ 39 ॥
ಅವರು ಹಚ್ಚಿದ ಎಲ್ಲಾ ದೀಪಗಳಿಂದ ಉಂಟಾದ ಪ್ರಭೆಯು ಶಸ್ತ್ರಗಳ, ಕವಚಗಳ ಮತ್ತು ಮಹಾತ್ಮರು ಧರಿಸಿದ ಮಣಿಗಳ ಕಾಂತಿಯನ್ನು ಕುಂದಿಸಿತು.
ತಸ್ಮಿನ್ ಕೋಲಾಹಲೇ ಯುದ್ಧೇ ವರ್ತಮಾನೇ ನಿಶಾಮುಖೇ |
ಅವಧೀತ್ ಸಮರೇ ಪುತ್ರಂ ಪಿತಾ ಭರತಸತ್ತಮ ॥ 40 ॥
ಪುತ್ರಶ್ಚ ಪಿತರಂ ಮೋಹಾತ್ ಸಖಾಯಂ ಚ ಸಖಾ ತಥಾ |
ಸಂಬಂಧಿನಂ ಚ ಸಂಬಂಧೀ ಸ್ವಸ್ರೀಯಂ ಚಾಪಿ ಮಾತುಲಃ ॥ 41 ॥
ಸ್ವೇ ಸ್ವಾನ್ ಪರೇ ಪರಾಂಶ್ಚಾಪಿ ನಿಜಘ್ನುರಿತರೇತರಮ್ |
ನಿರ್ಮರ್ಯಾದಮಭೂದ್ಯುದ್ಧಂ ರಾತ್ರೌ ಘೋರಂ ಭಯಾವಹಮ್ ॥
ಎಲ್ಲೆ ಭರತಶ್ರೇಷ್ಠನೇ, ಆ ರಾತ್ರಿಯ ಕಾಲದಲ್ಲಿ ಕೋಲಾಹಲ ಸಹಿತವಾದ ಯುದ್ಧವು ನಡೆಯುತ್ತಿರಲು ಯುದ್ಧದಲ್ಲಿ ತಂದೆಯು ಮಗನನ್ನು ಕೊಂದನು. ಅಜ್ಞಾನದಿಂದ ಮಗನೂ ತಂದೆಯನ್ನೂ, ಸ್ನೇಹಿತನು ಸ್ನೇಹಿತನನ್ನೂ, ಸಂಬಂಧಿಯು ಸಂಬಂಧಿಯನ್ನೂ ಮತ್ತು ಸೋದರಳಿಯನನ್ನು ಸೋದರಮಾವನನ್ನು ಕೊಂದರು. ತಮ್ಮವರು ತಮ್ಮವರನ್ನೂ, ಶತ್ರುಗಳೂ ಸಹ ತಮ್ಮವರನ್ನು ಪರಸ್ಪರವಾಗಿ ಕೊಂದರು. ರಾತ್ರಿಯಲ್ಲಿ ನಡೆದ ಘೋರವಾದ ಮತ್ತು ಭಯಂಕರವಾದ ಆ ಯುದ್ಧವು ಎಲ್ಲ ಎಲ್ಲೆಗಳನ್ನೂ ಮೀರಿದ್ದಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಃಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತಾರನೆಯ ಅಧ್ಯಾಯ
ದ್ರೋಣ-ಧೃಷ್ಟದ್ಯುಮ್ನರ ಯುದ್ಧ. ಮಧ್ಯೆ ಸಾತ್ಯಕಿಯ ಪ್ರವೇಶ.
ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಶಕುನಿಯ ಪ್ರಯಾಣ.
ಸಂಜಯಃ
ತಸ್ಮಿನ್ ಸುತುಮುಲೇ ಯುದ್ಧೇ ವರ್ತಮಾನೇ ಭಯಾವಹೇ |
ಧೃಷ್ಟದ್ಯುಮ್ನೋ ಮಹಾರಾಜ ದ್ರೋಣಮೇವಾಭ್ಯವರ್ತತ ॥ 1 ॥
ಸಂಜಯ ಎಲ್ಲೆ ಮಹಾರಾಜನೇ, ತೀವ್ರವಾದ ಆ ಭಯಂಕರ ಯುದ್ಧವು ನಡೆಯುತ್ತಿರಲು ಧೃಷ್ಟದ್ಯುಮ್ನನು ದ್ರೋಣರ ಮೇಲೆ

ಎರಗಿದನು.
ಸಂಮೃಜಾನೋ ಧನುಃಶ್ರೇಷ್ಠಂ ಜ್ಯಾಂ ವಿಕರ್ಷನ್ ಪುನಃ ಪುನಃ |
ಅಭ್ಯವರ್ತತ ದ್ರೋಣಸ್ಯ ರಥಂ ರುಗ್ಮವಿಭೂಷಿತಮ್ ॥ 2 ॥
ಅವನು ತನ್ನ ಶ್ರೇಷ್ಠವಾದ ಧನುಸ್ಸನ್ನು ನೇವರಿಸುತ್ತಾ, ಹೆದೆಯನ್ನು ಪುನಃ ಪುನಃ ಎಳೆಯುತ್ತಾ ಸುವಣರ್ಭೂಷಿತವಾದ ದ್ರೋಣರ ರಥದ ಕಡೆಗೆ ಬಂದನು.
ಧೃಷ್ಟದ್ಯುಮ್ನಂ ತದಾಯಾಂತಂ ದ್ರೋಣಸ್ಯಾಂತಚಿಕೀರ್ಷಯಾ |
ಪರಿವವ್ರುರ್ಮಹಾರಾಜ ಪಾಂಚಾಲಾಃ ಪಾಂಡವೈಃ ಸಹ ॥ 3 ॥
ಎಲೈ ಮಹಾರಾಜನೇ, ದ್ರೋಣರನ್ನು ಕೊಲ್ಲುವ ಉದ್ದೇಶದಿಂದ ಬರುತ್ತಿದ್ದ ಧೃಷ್ಟದ್ಯುಮ್ನನನ್ನು ಪಾಂಡವರು ಮತ್ತು ಪಾಂಚಾಲರು ಸುತ್ತುವರಿದರು.
ತಥಾ ಪರಿವೃತಂ ದೃಷ್ಟ್ವಾ ದ್ರೋಣಮಾಚಾರ್ಯಸತ್ತಮಮ್ |
ಪುತ್ರಾಸ್ತೇ ಸರ್ವತೋ ಯತ್ತಾ ರರಕ್ಷುರ್ದ್ರೋಣಮಾಹವೇ ॥ 4 ॥
ಆಚಾರ್ಯಶ್ರೇಷ್ಠರಾದ ದ್ರೋಣರು ಹಾಗೆ ಸುತ್ತುವರಿಯಲ್ಪಡುತ್ತಿರಲು ನಿನ್ನ ಪುತ್ರರು ಬಹಳ ಎಚ್ಚರಿಕೆಯಿಂದ ರಣರಂಗದಲ್ಲಿ ದ್ರೋಣರನ್ನು ಎಲ್ಲ ಕಡೆಯಿಂದಲೂ ರಕ್ಷಿಸಿದರು.
ಬಲಾರ್ಣವೌ ತತಸ್ತೌ ತು ಸಮೇಯಾತಾಂ ನಿಶಾಮುಖೇ |
ವಾತೋದ್ಧೂತೌ ಕ್ಷುಬ್ಧಸತ್ತ್ವೌ ಭೈರವೌ ಸಾಗರಾವಿವ ॥ 5 ॥
ಧೃಷ್ಟದ್ಯುಮ್ನ ಮತ್ತು ದ್ರೋಣರು ಆ ರಾತ್ರಿಯ ಕಾಲದಲ್ಲಿ ಬಿರುಗಾಳಿಗೆ ಎದ್ದ ಭೀಕರವಾದ ಜಲಚರ ಪ್ರಾಣಿಗಳು ಕ್ಷೋಭೆಗೊಂಡ ಎರಡು ಬಲಸಾಗರಗಳಂತೆ ಅವರು ಪರಸ್ಪರವಾಗಿ ಎದುರಿಸಿದರು.
ತತೋ ದ್ರೋಣಂ ಮಹಾರಾಜ ಪಾಂಚಾಲ್ಯಃ ಪಂಚಭಿಃ ಶರೈಃ |
ವಿವ್ಯಾಧ ಹೃದಯೇ ತೂರ್ಣಂ ಸಿಂಹನಾದಂ ನನಾದ ಚ ॥ 6 ॥
ಎಲೈ ಮಹಾರಾಜನೇ, ಆಗ ಪಾಂಚಾಲ್ಯನಾದ ಧೃಷ್ಟದ್ಯುಮ್ನನು ದ್ರೋಣರನ್ನು ಅವರ ಹೃದಯದಲ್ಲಿ ಐದು ಬಾಣಗಳಿಂದ ಹೊಡೆದು ಸಿಂಹನಾದವನ್ನು ಮಾಡಿದನು.
ತಂ ದ್ರೋಣಃ ಪಂಚವಿಂಶತ್ಯಾ ವಿದ್ಧ್ವಾ ಭಾರತ ಸಂಯುಗೇ |
ಚಿಚ್ಛೇದಾನ್ಯೇನ ಭಲ್ಲೇನ ಧನುರಸ್ಯ ಮಹಾಪ್ರಭಮ್ ॥ 7 ॥
ಎಲೈ ಭಾರತನೇ, ದ್ರೋಣರು ರಣರಂಗದಲ್ಲಿ ಅವನನ್ನು ಇಪ್ಪತ್ತೈದು ಬಾಣಗಳಿಂದ ಹೊಡೆದು ಇನೊ‌ನಂದು ಭಲ್ಲದಿಂದ ಮಹಾಕಾಂತಿಯುಕ್ತವಾದ ಅವನ ಧನುಸ್ಸನ್ನು ಕತ್ತರಿಸಿದರು.
ಧೃಷ್ಟದ್ಯುಮ್ನಸ್ತು ನಿರ್ವಿದ್ಧೋ ದ್ರೋಣೇನ ಭರತರ್ಷಭ |
ಉತ್ಸಸರ್ಜ ಧನುಸ್ತೂರ್ಣಂ ಸಂದಶ್ಯ ದಶನಚ್ಛದಮ್ ॥ 8 ॥
ಎಲೈ ಭರತರ್ಷಭನೇ, ದ್ರೋಣರಿಂದ ಗಾಢವಾಗಿ ಹೊಡೆಯಲ್ಪಟ್ಟ ಧೃಷ್ಟದ್ಯುಮ್ನನಾದರೋ ಹಲ್ಲುಮುಡಿಯನ್ನು ಕಚ್ಚಿ ಶೀಘ್ರವಾಗಿ ತನ್ನ ಧನುಸ್ಸನ್ನು ಪರಿತ್ಯಜಿಸಿದನು.
ತತಃ ಕ್ರುದ್ಧೋ ಮಹಾರಾಜ ಧೃಷ್ಟದ್ಯುಮ್ನಃ ಪ್ರತಾಪವಾನ್ |
ಆದದೇಽನ್ಯದ್ ಧನುಃಶ್ರೇಷ್ಠಂ ದ್ರೋಣಸ್ಯಾಂತಚಿಕೀರ್ಷಯಾ ॥ 9 ॥
ಎಲೈ ಮಹಾರಾಜನೇ, ಆಗ ಕ್ರುದ್ಧನೂ, ಪ್ರತಾಪಶಾಲಿಯೂ ಆದ ಧೃಷ್ಟದ್ಯುಮ್ನನು ದ್ರೋಣರ ಅಂತವನ್ನು ಮಾಡಲು ಬಯಸಿ ಇನ್ನೊಂದು ಶ್ರೇಷ್ಠವಾದ ಧನುಸ್ಸನ್ನು ತೆಗೆದುಕೊಂಡನು.
ವಿಕೃಷ್ಯ ಚ ಧನುಶ್ಚಿತ್ರಮಾಕರ್ಣಾತ್ ಪರವೀರಹಾ |
ದ್ರೋಣಸ್ಯಾಂತಕರಂ ಘೋರಂ ವ್ಯಸೃಜತ್ ಸಾಯಕಂ ತತಃ ॥ 10 ॥
ಶತ್ರುವೀರಘಾತಕನಾದ ಧೃಷ್ಟದ್ಯುಮ್ನನು ಸುಂದರವಾದ ಆ ಧನುಸ್ಸಿನ ಹೆದೆಯನ್ನು ಕಿವಿಯವರೆಗೂ ಎಳೆದು ದ್ರೋಣರ ವಿನಾಶವನ್ನುಂಟು ಮಾಡುವಂತಹ ಒಂದು ಘೋರವಾದ ಬಾಣವನ್ನು ಅದರಿಂದ ಪ್ರಯೋಗಿಸಿದನು.
ಸ ವಿಸೃಷ್ಟೋ ಬಲವತಾ ಶರೋ ಘೋರೋ ಮಹಾಮೃಧೇ |
ಭಾಸಯಾಮಾಸ ತತ್ ಸೈನ್ಯಂ ದಿವಾಕರ ಇವೋದಿತಃ ॥ 11 ॥
ಬಲಿಷ್ಠನಾದ ಧೃಷ್ಟದ್ಯುಮ್ನನಿಂದ ಪ್ರಯೋಗಿಸಲ್ಪಟ್ಟ ಆ ಘೋರವಾದ ಬಾಣವು ಮಹಾರಣರಂಗದಲ್ಲಿ ಉದಯಿಸಿದ ಸೂರ್ಯನಂತೆ ಆ ಸೈನ್ಯವನ್ನು ಪ್ರಕಾಶಗೊಳಿಸಿತು.
ತಂ ದೃಷ್ಟ್ವಾ ತು ಶರಂ ಘೋರಂ ದೇವಗಂಧರ್ವಮಾನವಾಃ |
ಸ್ವಸ್ತ್ಯಸ್ತು ಸಮರೇ ರಾಜನ್ ದ್ರೋಣಾಯೇತ್ಯಬ್ರುವನ್ ವಚಃ ॥ 12 ॥
ಎಲೈ ರಾಜನೇ, ಘೋರವಾದ ಆ ಬಾಣವನ್ನು ನೋಡಿ ದೇವ-ಮಾನವ- ಗಂಧರ್ವರು ದ್ರೋಣರಿಗೆ ಕ್ಷೇಮವಾಗಲಿ ಎಂಬ ಮಾತನ್ನು ಆಡಿದರು.
ತಂ ತು ಸಾಯಕಮಪ್ರಾಪ್ತಮಾಚಾರ್ಯಸ್ಯ ರಥಂ ಪ್ರತಿ |
ಕರ್ಣೋ ದ್ವಾದಶಧಾ ರಾಜಂಶ್ಚಿಚ್ಛೇದ ಕೃತಹಸ್ತವತ್ ॥ 13 ॥
ಎಲೈ ರಾಜನೇ, ಆ ಬಾಣವು ದ್ರೋಣರ ರಥದ ಸಮೀಪಕ್ಕೆ ಬರುವುದಕ್ಕಿಂತ ಮೊದಲೇ ಶೀಘ್ರಹಸ್ತವುಳ್ಳ ಕರ್ಣನು ಅದನ್ನು ಹನ್ನೆರಡು ಭಾಗವಾಗಿ ಕತ್ತರಿಸಿದನು.
ಸ ಛಿನ್ನೋ ಬಹುಧಾ ರಾಜನ್ ಸೂತಪುತ್ರೇಣ ಮಾರಿಷ |

ನಿಪಪಾತ ಶರಸ್ತೂರ್ಣಂ ನಿಕೃತ್ತಃ ಕರ್ಣಸಾಯಕೈಃ ॥ 14 ॥
ಎಲೈ ರಾಜನೇ, ಸೂತಪುತ್ರನಾದ ಕರ್ಣನ ಬಾಣಗಳಿಂದ ಕತ್ತರಿಸಲ್ಪಟ್ಟ ಆ ಬಾಣವು ಶೀಘ್ರವಾಗಿ ಭೂಮಿಯ ಮೇಲೆ ಬಿದ್ದಿತು.
ಛಿತ್ತ್ವಾ ತು ಸಮರೇ ಬಾಣಂ ಶರೈಃ ಸನ್ನತಪರ್ವಭಿಃ |
ಧೃಷ್ಟದ್ಯುಮ್ನಂ ರಣೇ ಕರ್ಣೋ ವಿವ್ಯಾಧ ದಶಭಿಃ ಶರೈಃ ॥ 15 ॥
ಕರ್ಣನು ಬಾಗಿದ ತುದಿಯುಳ್ಳ ಬಾಣಗಳಿಂದ ಧೃಷ್ಟದ್ಯುಮ್ನನ ಆ ಬಾಣವನ್ನು ರಣರಂಗದಲ್ಲಿ ಕತ್ತರಿಸಿ ಅವನನ್ನು ಹತ್ತು ಬಾಣಗಳಿಂದ ಹೊಡೆದನು.
ಪಂಚಭಿರ್ದ್ರೋಣಪುತ್ರಸ್ತು ಸ್ವಯಂ ದ್ರೋಣಶ್ಚ ಸಪ್ತಭಿಃ |
ಶಲ್ಯಶ್ಚ ನವಭಿರ್ಬಾಣೈಸ್ತ್ರಿಭಿರ್ದುಃಶಾಸನಸ್ತಥಾ ॥ 16 ॥
ದುರ್ಯೋಧನಶ್ಚ ವಿಂಶತ್ಯಾ ಶಕುನಿಶ್ಚಾಪಿ ಪಂಚಭಿಃ |
ಪಾಂಚಾಲ್ಯಂ ತ್ವರಿತಾಽವಿಧ್ಯನ್ ಸರ್ವ ಏವ ಮಹಾರಥಾಃ ॥ 17 ॥
ದ್ರೋಣಪುತ್ರರಾದ ಅಶ್ವತ್ಥಾಮರು ಧೃಷ್ಟದ್ಯುಮ್ನನನ್ನು ಐದು ಬಾಣಗಳಿಂದಲೂ, ದ್ರೋಣರು ಏಳು ಬಾಣಗಳಿಂದಲೂ, ಶಲ್ಯನು ಒಂಬತ್ತು ಬಾಣಗಳಿಂದಲೂ, ದುಶ್ಶಾಸನನು ಮೂರು ಬಾಣಗಳಿಂದಲೂ, ದುರ್ಯೋಧನನು ಇಪ್ಪತ್ತು ಬಾಣಗಳಿಂದಲೂ, ಶಕುನಿಯು ಐದು ಬಾಣಗಳಿಂದಲೂ - ಹೀಗೆ ಶೀಘ್ರವಾಗಿ ಆ ಎಲ್ಲ ಮಹಾರಥರೂ ಪಾಂಚಾಲ್ಯನಾದ ಧೃಷ್ಟದ್ಯುಮ್ನನನ್ನು ಹೊಡೆದರು.
ಸ ವಿದ್ಧಃ ಸಪ್ತಭಿರ್ವೀರೈರ್ದ್ರೋಣತ್ರಾಣಾರ್ಥಮಾಹವೇ |
ಸರ್ವಾನಸಂಭ್ರಮಾದ್ ರಾಜನ್ ಪ್ರತ್ಯವಿಧ್ಯತ್ ತ್ರಿಭಿಸ್ತ್ರಿಭಿಃ |
ದ್ರೋಣಂ ದ್ರೌಣಿಂ ಚ ಕರ್ಣಂ ಚ ವಿವ್ಯಾಧ ತವ ಚಾತ್ಮಜಮ್ ॥ 18 ॥
ಎಲೈ ರಾಜನೇ, ರಣರಂಗದಲ್ಲಿ ದ್ರೋಣರನ್ನು ರಕ್ಷಿಸುವ ಸಲುವಾಗಿ ಏಳು ವೀರರಿಂದ ಆ ರೀತಿಯಲ್ಲಿ ಹೊಡೆಯಲ್ಪಟ್ಟ ಧೃಷ್ಟದ್ಯುಮ್ನನು ದ್ರೋಣರು, ಅಶ್ವತ್ಥಾಮರು, ಕರ್ಣ, ನಿನ್ನ ಪುತ್ರ- ಎಲ್ಲರನ್ನೂ ಗಾಬರಿಗೊಳ್ಳದೆ ಮೂರು-ಮೂರು ಬಾಣಗಳಿಂದ ಹೊಡೆದನು.
ತೇ ವಿದ್ಧಾ ಧನ್ವಿನಾ ತೇನ ಧೃಷ್ಟದ್ಯುಮ್ನಂ ಪುನರ್ಮೃಧೇ |
ವಿವ್ಯಧುಃ ಪಂಚಭಿಸ್ತೂರ್ಣಮೇಕೈಕೋ ರಥಿನಾಂ ವರಃ ॥ 19 ॥
ಧನುರ್ಧಾರಿಯಾದ ಧೃಷ್ಟದ್ಯುಮ್ನನಿಂದ ಹೀಗೆ ಹೊಡೆಯಲ್ಪಟ್ಟ ಅವರಲ್ಲಿ ರಥಶ್ರೇಷ್ಠರಾದ ಪ್ರತಿಯೊಬ್ಬರೂ ಆ ಮಹಾಯುದ್ಧದಲ್ಲಿ ಧೃಷ್ಟದ್ಯುಮ್ನನನ್ನು ಐದೈದು ಬಾಣಗಳಿಂದ ಹೊಡೆದರು.
ದ್ರುಮಸೇನಸ್ತು ಸಂಕ್ರುದ್ಧೋ ರಾಜನ್ ವಿವ್ಯಾಧ ಪತ್ರಿಣಾ |
ತ್ರಿಭಿಶ್ಚಾನ್ಯೈಃ ಶರೈಸ್ತೂರ್ಣಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 20 ॥
ಎಲೈ ರಾಜನೇ, ದ್ರುಮಸೇನನಾದರೋ ಕೋಪಗೊಂಡು ಬಾಣಗಳಿಂದ ಅವನನ್ನು ಹೊಡೆದನು. ಪುನಃ ಮೂರು ಬಾಣಗಳಿಂದ ಹೊಡೆದು ನಿಲ್ಲು, ನಿಲ್ಲು ಎಂದು ಹೇಳಿದನು.
ಸ ತು ತಂ ಪ್ರತಿವಿವ್ಯಾಧ ತ್ರಿಭಿಸ್ತೀಕ್ಷ್ಣೈರಜಿಹ್ಮಗೈಃ |
ಸ್ವರ್ಣಪುಂಖೈಃ ಶಿಲಾಧೌತೈಃ ಪ್ರಾಣಾಂತಕರಣೈರ್ಯುಧಿ ॥ 21 ॥
ಧೃಷ್ಟದ್ಯುಮ್ನನಾದರೋ ನೇರವಾಗಿ ಸಾಗುವ, ಸ್ವರ್ಣಪುಂಖಗಳನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ, ಪ್ರಾಣಾಂತಕವಾದ ಮೂರು ಬಾಣಗಳಿಂದ ದ್ರುಮಸೇನನಿಗೆ ರಣರಂಗದಲ್ಲಿ ಪ್ರತಿಯಾಗಿ ಹೊಡೆದನು.
ಭಲ್ಲೇನಾನ್ಯೇನ ತು ಪುನಃ ಸುವರ್ಣೋಜ್ಜ್ವಲಕುಂಡಲಮ್ |
ಉನ್ಮಮಾಥ ಶಿರಃ ಕಾಯಾದ್ ದ್ರುಮಸೇನಸ್ಯ ವೀರ್ಯವಾನ್ ॥ 22 ॥
ಪರಾಕ್ರಮಶಾಲಿಯಾದ ಧೃಷ್ಟದ್ಯುಮ್ನನು ಪುನಃ ಒಂದು ಭಲ್ಲದಿಂದ ಉಜ್ವಲವಾದ ಸುವಣರ್ಕುಂಡಲವನ್ನು ಧರಿಸಿದ ಅವನ ಶಿರಸ್ಸನ್ನು ಅವನ ದೇಹದಿಂದ ಕತ್ತರಿಸಿದನು.
ತಚ್ಛಿರೋ ನ್ಯಪತದ್ ಭೂಮೌ ಸಂದಷ್ಟೌಷ್ಠಪುಟಂ ರಣೇ |
ಮಹಾವಾತಸಮುದ್ಧೂತಂ ಪಕ್ವಂ ತಾಳಫಲಂ ಯಥಾ ॥ 23 ॥
ಹಲ್ಲುಮುಡಿಯನ್ನು ಕಚ್ಚಿದ ಆ ಶಿರಸ್ಸು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಮಾಗಿದ ತಾಳಫಲದಂತೆ ಭೂಮಿಯ ಮೇಲೆ ಬಿದ್ದಿತು.
ತಾಂಶ್ಚ ವಿದ್ಧ್ವಾ ಪುನರ್ವೀರಾನ್ ವೀರಃ ಸುನಿಶಿತೈಃ ಶರೈಃ |
ರಾಧೇಯಸ್ಯಾಚ್ಛಿನದ್ ಭಲ್ಲೈಃ ಕಾರ್ಮುಕಂ ಚಿತ್ರಯೋಧಿನಃ ॥ 24 ॥
ವೀರನಾದ ಧೃಷ್ಟದ್ಯುಮ್ನನು ಆ ಎಲ್ಲ ವೀರರನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದು ಆಶ್ಚರ್ಯಕರವಾಗಿ ಯುದ್ಧವನ್ನು ಮಾಡುವ ಕರ್ಣನ ಧನುಸ್ಸನ್ನು ಭಲ್ಲದಿಂದ ಕತ್ತರಿಸಿದನು.
ನ ತು ತನ್ಮಮೃಷೇ ಕರ್ಣೋ ಧನುಷಶ್ಛೇದನಂ ತಥಾ |
ನಿಕರ್ತನಮಿವಾತ್ಯುಗ್ರೋ ಲಾಂಗೂಲಸ್ಯ ಯಥಾ ಹರಿಃ ॥ 25 ॥
ತನ್ನ ಧನುಸ್ಸು ಕತ್ತರಿಸಲ್ಪಡುತ್ತಿರಲು ಉಗ್ರವಾದ ಕಪಿಯು ತನ್ನ ಬಾಲದ ಛೇದವನ್ನು ಸಹಿಸದಂತೆ ಕಣರ್ನು ಅದನ್ನು ಸಹಿಸಲಿಲ್ಲ.
ಸೋಽನ್ಯದ್ಧನುಃ ಸಮಾದಾಯ ಕ್ರೋಧರಕ್ತೇಕ್ಷಣಃ ಶ್ವಸನ್ |
ಅಭ್ಯವರ್ಷಚ್ಛರೌಘೈಸ್ತಂ ಧೃಷ್ಟದ್ಯುಮ್ನಂ ಮಹಾಬಲಮ್ ॥ 26 ॥
ಅವನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ, ಗಟ್ಟಿಯಾಗಿ ಉಸಿರಾಡುತ್ತಾ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಮಹಾಬಲನಾದ ಧೃಷ್ಟದ್ಯುಮ್ನನನ್ನು ಬಾಣಗಳ ಸಮೂಹದಿಂದ ಹೊಡೆದನು.
ದೃಷ್ಟ್ವಾ ತು ಕರ್ಣಂ ಸಂರಬ್ಧಂ ತೇ ವೀರಾಃ ಷಡ್ರಥರ್ಷಭಾಃ |

ಪಾಂಚಾಲ್ಯಪುತ್ರಂ ತ್ವರಿತಾಃ ಪರಿವವ್ರುರ್ಜಿಘಾಂಸಯಾ ॥ 27 ॥
ಕರ್ಣನು ಕೋಪಗೊಂಡಿರುವುದನ್ನು ನೋಡಿ ವೀರರಾದ ಆ ಆರುರಥಶ್ರೇಷ್ಠರು ಪಾಂಚಾಲ್ಯಪುತ್ರನಾದ ಧೃಷ್ಟದ್ಯುಮ್ನನನ್ನು ಕೊಲ್ಲಲು ಬಯಸಿ ಶೀಘ್ರವಾಗಿ ಅವನನ್ನು ಸುತ್ತುವರಿದರು.
ಷಣ್ಣಾಂ ಯೋಧಪ್ರವೀರಾಣಾಂ ತಾವಕಾನಾಂ ಪುರಸ್ಕೃತಮ್ |
ಮೃತ್ಯೋರಾಸ್ಯಮನುಪ್ರಾಪ್ತಂ ಧೃಷ್ಟದ್ಯುಮ್ನಮಮಂಸ್ಮಹಿ ॥ 28 ॥
ನಿನ್ನ ಆರು ಯೋಧಶ್ರೇಷ್ಠರ ಮುಂದೆ ನಿಂತ ಧೃಷ್ಟದ್ಯುಮ್ನನನ್ನು ಅವರು ಮೃತ್ಯುವಿನ ಬಾಯಿಗೆ ಸಿಲುಕಿದ್ದಾನೆ ಎಂದು ತಿಳಿದರು.
ಏತಸ್ಮಿನ್ನೇವ ಕಾಲೇ ತು ದಾಶಾರ್ಹೋ ವಿಕಿರನ್ ಶರಾನ್ |
ಧೃಷ್ಟದ್ಯುಮ್ನಂ ಪರಾಕ್ರಾಂತಂ ಸಾತ್ಯಕಿಃ ಪ್ರತ್ಯಪದ್ಯತ ॥ 29 ॥
ಆ ಸಮಯಕ್ಕೆ ಸರಿಯಾಗಿ ದಾಶಾರ್ಹನಾದ ಸಾತ್ಯಕಿಯು ಬಾಣಗಳನ್ನು ಚೆಲ್ಲಿದಂತೆ ಪ್ರಯೋಗ ಮಾಡುತ್ತಾ ಪರಾಕ್ರಮಶಾಲಿಯಾದ ಧೃಷ್ಟದ್ಯುಮ್ನನ ಸಮೀಪಕ್ಕೆ ಬಂದನು.
ತಮಾಯಾಂತಂ ಮಹೇಷ್ವಾಸಂ ಸಾತ್ಯಕಿಂ ಯುದ್ಧದುರ್ಮದಮ್ |
ರಾಧೇಯೋ ದಶಭಿರ್ಬಾಣೈಃ ಪ್ರತ್ಯವಿದ್ಧ್ಯದಜಿಹ್ಮಗೈಃ ॥ 30 ॥
ಸಮೀಪಕ್ಕೆ ಬಂದ ಯುದ್ಧದುರ್ಮದನಾದ, ಮಹಾಧನುರ್ಧಾರಿಯಾದ ಸಾತ್ಯಕಿಯನ್ನು ಕರ್ಣನು ನೇರವಾಗಿ ಸಾಗುವ ಹತ್ತು ಬಾಣಗಳಿಂದ ಹೊಡೆದನು.
ತಂ ಸಾತ್ಯಕಿರ್ಮಹಾರಾಜ ವಿವ್ಯಾಧ ದಶಭಿಃ ಶರೈಃ |
ಪಶ್ಯತಾಂ ಸರ್ವವೀರಾಣಾಂ ಮಾ ಗಾಸ್ತಿಷ್ಠೇತಿ ಚಾಬ್ರವೀತ್ ॥ 31 ॥
ಎಲೈ ಮಹಾರಾಜನೇ, ಅವನು ಎಲ್ಲ ವೀರರು ನೋಡುತ್ತಿರುವಂತೆಯೇ ಕರ್ಣನನ್ನು ಹತ್ತು ಬಾಣಗಳಿಂದ ಹೊಡೆದು ಹೋಗಬೇಡ ನಿಲ್ಲು ಎಂದು ಹೇಳಿದನು.
ಸ ಸಾತ್ಯಕೇಸ್ತು ಬಲಿನಃ ಕರ್ಣಸ್ಯ ಚ ಮಹಾತ್ಮನಃ |
ಆಸೀತ್ ಸಮಾಗಮೋ ಘೋರೋ ಬಲಿವಾಸವಯೋರಿವ ॥ 32 ॥
ಆಗ ಬಲಿಷ್ಠನಾದ ಸಾತ್ಯಕಿಗೂ ಮತ್ತು ಮಹಾತ್ಮನಾದ ಕರ್ಣನಿಗೂ ಬಲಿ ಮತ್ತು ಇಂದ್ರರಿಗೆ ನಡೆದಂತೆ ಘೋರವಾದ ಸಂಘರ್ಷವು ನಡೆಯಿತು.
ತ್ರಾಸಯಂಸ್ತಳಘೋಷೇಣ ಕ್ಷತ್ರಿಯಾನ್ ಕ್ಷತ್ರಿಯರ್ಷಭಃ |
ರಾಜೀವಲೋಚನಂ ಕರ್ಣಂ ಸಾತ್ಯಕಿಃ ಪ್ರತ್ಯವಿದ್ಧ್ಯತ ॥ 33 ॥
ಕ್ಷತ್ರಿಯ ಶ್ರೇಷ್ಠನಾದ, ಸಾತ್ಯಕಿಯು ತನ್ನ ಜ್ಯಾತಳ ಘೋಷದಿಂದ ಎಲ್ಲ ಕ್ಷತ್ರಿಯರನ್ನು ಭಯಗೊಳಿಸುತ್ತಾ ರಾಜೀವನೇತ್ರನಾದ ಕರ್ಣನನ್ನು ಬಾಣಗಳಿಂದ ಹೊಡೆದನು.
ಕಂಪಯನ್ನಿವ ಘೋಷೇಣ ಧನುಷೋ ವಸುಧಾಂ ಬಲೀ |
ಸೂತಪುತ್ರೋ ಮಹಾರಾಜ ಸಾತ್ಯಕಿಂ ಪ್ರತ್ಯಯೋಧಯತ್ ॥ 34 ॥
ಎಲೈ ಮಹಾರಾಜನೇ, ಬಲಿಷ್ಠನಾದ ಸೂತಪುತ್ರನಾದ ಕರ್ಣನು ತನ್ನ ಧನುಸ್ಸಿನ ಘೋಷದಿಂದ ಭೂಮಿಯನ್ನು ನಡುಗಿಸುವವನಂತೆ ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ವಿಪಾಠಕರ್ಣಿನಾರಾಚೈರ್ವತ್ಸದಂತೈಃ ಕ್ಷುರೈರಪಿ |
ಕರ್ಣಃ ಶರಶತೈಶ್ಚಾಪಿ ಶೈನೇಯಂ ಪ್ರತ್ಯವಿದ್ಧ್ಯತ ॥ 35 ॥
ವಿಪಾಠಗಳಿಂದಲೂ, ಕರ್ಣಿಗಳಿಂದಲೂ, ನಾರಾಚಗಳಿಂದಲೂ, ವತ್ಸದಂತ- ಗಳಿಂದಲೂ, ಕ್ಷುರಗಳಿಂದಲೂ, ನೂರಾರು ಬಾಣಗಳಿಂದಲೂ ಕರ್ಣನು ಸಾತ್ಯಕಿಯ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತಥೈವ ಯುಯುಧಾನೋಽಪಿ ವೃಷ್ಣೀನಾಂ ಪ್ರವರೋ ರಥಃ |
ಅಭ್ಯವರ್ಷಚ್ಛರೈಃ ಕರ್ಣಂ ತದ್ಯುದ್ಧಮಭವತ್ ಸಮಮ್ ॥ 36 ॥
ಹಾಗೆಯೇ ವೃಷ್ಣಿಗಳಲ್ಲಿ ಶ್ರೇಷ್ಠ ಮಹಾರಥನಾದ ಯುಯುಧಾನನೂ ಸಹ ಕರ್ಣನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಆ ಯುದ್ಧವು ಸಮವಾಗಿದ್ದಿತು.
ತಾವಕಾಶ್ಚ ಮಹಾರಾಜ ಕರ್ಣಪುತ್ರಶ್ಚ ದಂಸಿತಃ |
ಸಾತ್ಯಕಿಂ ವಿವ್ಯಧುಸ್ತೂರ್ಣಂ ಸಮಂತಾನ್ನಿಶಿತೈಃ ಶರೈಃ ॥ 37 ॥
ಎಲೈ ಮಹಾರಾಜನೇ, ನಿನ್ನವರು ಮತ್ತು ಕರ್ಣಪುತ್ರನೂ ಸಹ ಸನ್ನದ್ಧರಾಗಿ ಸಾತ್ಯಕಿಯನ್ನು ಎಲ್ಲ ಕಡೆಗಳಿಂದಲೂ ಬಾಣಗಳಿಂದ ಶೀಘ್ರವಾಗಿ ಪೀಡಿಸಿದರು.
ಅಸ್ತ್ರೈರಸತ್ರಣಿ ಸಂವಾರ್ಯ ತೇಷಾಂ ಕರ್ಣಸ್ಯ ಚಾಭಿಭೋ |
ಅವಿದ್ಧ್ಯತ್ ಸಾತ್ಯಕಿಃ ಕ್ರುದ್ಧೋ ವೃಷಸೇನಂ ಸ್ತನಾಂತರೇ ॥ 38 ॥
ಎಲೈ ಶತ್ರುಸಂಹಾರಕನೇ, ಸಾತ್ಯಕಿಯಾದರೋ ತನ್ನ ಅಸ್ತ್ರಗಳಿಂದ ಅವರ ಮತ್ತು ಕರ್ಣನ ಅಸ್ತ್ರಗಳನ್ನು ನಿವಾರಿಸಿ ಕೋಪಗೊಂಡು ವೃಷಸೇನನನ್ನು ಅವನ ಸ್ತನಗಳ ಮಧ್ಯದಲ್ಲಿ ಹೊಡೆದನು.
ತೇನ ಬಾಣೇನ ನಿರ್ವಿದ್ಧೋ ವೃಷಸೇನೋ ವಿಶಾಂಪತೇ |
ನ್ಯಪತತ್ ಸ ರಥೇ ಮೂಢೋ ಧನುರುತ್ಸೃಜ್ಯ ವೀರ್ಯವಾನ್ ॥39॥
ಎಲೈ ರಾಜನೇ, ಆ ಬಾಣದಿಂದ ಹೊಡೆಯಲ್ಪಟ್ಟ ಪರಾಕ್ರಮಶಾಲಿಯಾದ ವೃಷಸೇನನು ಧನುಸ್ಸನ್ನು ಬಿಟ್ಟು ರಥದಲ್ಲಿ ಮೂರ್ಛಿತನಾಗಿ ಬಿದ್ದನು.

ತತಃ ಕರ್ಣೋ ಹತಂ ಮತ್ವಾ ವೃಷಸೇನಂ ಮಹಾರಥಃ |
ಪುತ್ರಶೋಕಾಭಿಸಂತಪ್ತಃ ಸಾತ್ಯಕಿಂ ಪ್ರತ್ಯಪೀಡಯತ್ ॥ 40 ॥
ಮಹಾರಥನಾದ ಕರ್ಣನು ತನ್ನ ಪುತ್ರನಾದ ವೃಷಸೇನನು ಹತನಾದನೆಂದು ತಿಳಿದು ಪುತ್ರಶೋಕದಿಂದ ಸಂತಪ್ತನಾಗಿ ಸಾತ್ಯಕಿಯನ್ನು ಬಾಣಗಳಿಂದ ಪೀಡಿಸಿದನು.
ಪೀಡ್ಯಮಾನಸ್ತು ಕರ್ಣೇನ ಯುಯುಧಾನೋ ಮಹಾರಥಃ |
ವಿವ್ಯಾಧ ಬಹುಭಿಃ ಕರ್ಣಂ ತ್ವರಮಾಣಃ ಪುನಃ ಪುನಃ ॥ 41 ॥
ಕರ್ಣನಿಂದ ಪೀಡಿಸಲ್ಪಡುವ ಮಹಾರಥನಾದ ಸಾತ್ಯಕಿಯಾದರೋ ಪುನಃ ಪುನಃ ತ್ವರೆಮಾಡುತ್ತಾ ಕರ್ಣನನ್ನು ಅನೇಕ ಬಾಣಗಳಿಂದ ಹೊಡೆದನು.
ಸ ಕರ್ಣಂ ದಶಭಿರ್ವಿದ್ಧ್ವಾ ವೃಷಸೇನಂ ಚ ಸಪ್ತಭಿಃ |
ಸಹಸ್ತಾವಾಪಧನುಷೀ ತಯೋಶ್ಚಿಚ್ಛೇದ ಸಾತ್ವತಃ ॥ 42 ॥
ಸಾತ್ಯಕಿಯು ಕರ್ಣನನ್ನು ಹತ್ತು ಬಾಣಗಳಿಂದ ಹೊಡೆದು, ವೃಷಸೇನನನ್ನು ಏಳು ಬಾಣಗಳಿಂದ ಹೊಡೆದನು. ಅವರಿಬ್ಬರ ಧನುಸ್ಸು ಮತ್ತು ಬತ್ತಳಿಕೆಗಳನ್ನು ಕತ್ತರಿಸಿದನು.
ತಾವನ್ಯೇ ಧನುಷೀ ಸಜ್ಯೇ ಕೃತ್ವಾ ಶತ್ರುಭಯಂಕರೇ |
ಯುಯುಧಾನಮವಿದ್ಯೇತಾಂ ಸಮಂತಾನ್ನಿಶಿತೈಃ ಶರೈಃ ॥ 43 ॥
ಅವರಿಬ್ಬರೂ ಶತ್ರುಭಯಂಕರವಾದ ಬೇರೆ ಎರಡು ಧನುಸ್ಸುಗಳನ್ನು ತೆಗೆದುಕೊಂಡು ಹೆದೆ ಏರಿಸಿ ತೀಕ್ಷ್ಣವಾದ ಬಾಣಗಳಿಂದ ಸಾತ್ಯಕಿಯನ್ನು ಎಲ್ಲ ಕಡೆಗಳಿಂದಲೂ ಹೊಡೆದರು.
ವರ್ತಮಾನೇ ತು ಸಂಗ್ರಾಮೇ ತಸ್ಮಿನ್ ವೀರವರಕ್ಷಯೇ |
ಅತೀವ ಶುಶ್ರುವೇ ರಾಜನ್ ಗಾಂಡೀವಸ್ಯ ಮಹಾಸ್ವನಃ ॥ 44 ॥
ಎಲೈ ರಾಜನೇ, ಶ್ರೇಷ್ಠರಾದ ವೀರರ ನಾಶವನ್ನುಂಟು ಮಾಡುವ ಆ ಯುದ್ಧವು ಹಾಗೆ ನಡೆಯುತ್ತಿರಲು ಗಾಂಡೀವ ಧನುಸ್ಸಿನ ಮಹಾಸ್ವನವು ಬಹಳವಾಗಿ ಕೇಳಿಬಂದಿತು.
ಶ್ರುತ್ವಾ ತು ರಥನಿರ್ಘೋಷಂ ಗಾಂಡೀವಸ್ಯ ಚ ನಿಸ್ವನಮ್ |
ಸೂತಪುತ್ರೋಽಬ್ರವೀದ್ ರಾಜನ್ ದುರ್ಯೋಧನಮಿದಂ ವಚಃ ॥ 45 ॥
ಅರ್ಜುನನ ರಥದ ಘೋಷವನ್ನು ಮತ್ತು ಗಾಂಡೀವಘೋಷವನ್ನು ಕೇಳಿದ ಸೂತಪುತ್ರನಾದ ಕರ್ಣನು ಎಲೈ ರಾಜನೇ, ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದನು.
ಏಷ ಸರ್ವಾನ್ ಶಿಬೀನ್ ಹತ್ವಾ ಮುಖ್ಯಶಶ್ಚ ನರರ್ಷಭಾನ್ |
ಪೌರವಾಂಶ್ಚ ಮಹೇಷ್ವಾಸಾನ್ ಗಾಂಡೀವನಿನದೋ ಮಹಾನ್ ॥ 46 ॥
ಶ್ರೂಯತೇ ರಥಘೋಷಶ್ಚ ವಾಸವಸ್ಯೇವ ನರ್ದತಃ |
ಕರೋತಿ ಪಾಂಡವೋ ವ್ಯಕ್ತಂ ಕರ್ಮೌಪಯಿಕಮಾತ್ಮನಃ ॥ 47 ॥
ಶಿಬಿಗಳ ಎಲ್ಲಾ ಮುಖ್ಯಯೋಧರನ್ನು ಮತ್ತು ಪೌರವರ ಮಹಾಧನುರ್ಧಾರಿಗಳನ್ನು ಕೊಂದಿರುವ ಅರ್ಜುನನ ಈ ದೊಡ್ಡ ಗಾಂಡೀವ ಧನುಸ್ಸಿನ ಘೋಷವು ಮತ್ತು ರಥಘೋಷವು ಇಂದ್ರನ ಗರ್ಜನೆಯಂತೆ ಕೇಳಿಬರುತ್ತಿದೆ. ಪಾಂಡವನಾದ ಅರ್ಜುನನು ನಿಶ್ಚಯವಾಗಿ ತನಗೆ ಹಿತವಾದ ಕರ್ಮವನ್ನು ಮಾಡುತ್ತಿದ್ದಾನೆ.
ಏಷಾ ವಿದೀರ್ಯತೇ ರಾಜನ್ ಬಹುಧಾ ಭಾರತೀ ಚಮೂಃ |
ವಿಪ್ರಕೀರ್ಣಾನ್ಯನೀಕಾನಿ ನಾವತಿಷ್ಠಂತಿ ಕರ್ಹಿಚಿತ್ ॥ 48 ॥
ವಾತೇನೇವ ಸಮುದ್ಧೂತಮಭ್ರಜಾಲಂ ವಿದೀರ್ಯತೇ |
ಸವ್ಯಸಾಚಿನಮಾಸಾದ್ಯ ಭಿನ್ನಾ ನೌರಿವ ಸಾಗರೇ ॥ 49 ॥
ಎಲೈ ರಾಜನೇ, ಈ ಕೌರವರ ಸೇನೆಯು ಭಗ್ನವಾಗಿ ಹೋಗುತ್ತಿದೆ. ಚದುರಿ ಹೋಗಿರುವ ಸೈನ್ಯವು ಒಂದು ಕಡೆಯಲ್ಲಿ ನಿಲ್ಲುತ್ತಿಲ್ಲ. ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಮೋಡಗಳ ಸಮೂಹದಂತೆ ಅರ್ಜುನನನ್ನು ಸಮೀಪಿಸಿ ಸಾಗರದಲ್ಲಿ ಒಡೆದು ಹೋದ ನೌಕೆಯಂತೆ ಸೀಳಿಹೋಗುತ್ತಿದೆ.
ದ್ರವತಾಂ ಯೋಧಮುಖ್ಯಾನಾಂ ಗಾಂಡೀವಪ್ರೇಷಿತೈಃ ಶರೈಃ |
ವಿದ್ಧಾನಾಂ ಶತಶೋ ರಾಜನ್ ಶ್ರೂಯತೇ ನಿನದೋ ಮಹಾನ್ |
ನಿಶೀಥೇ ರಾಜಶಾರ್ದೂಲ ಸ್ತನಯಿತ್ನೋರಿವಾಂಬರೇ ॥ 50 ॥
ಗಾಂಡೀವ ಧನುಸ್ಸಿನಿಂದ ಹೊರಟ ಬಾಣಗಳಿಂದ ಪೀಡಿತರಾಗಿ ನೂರರ ಸಂಖ್ಯೆಯಲ್ಲಿ ಓಡಿಹೋಗುವ ಶ್ರೇಷ್ಠಯೋಧರ ಮಹಾನಾದವು ಎಲೈ ರಾಜಶಾರ್ದೂಲನೇ, ರಾತ್ರಿಯ ವೇಳೆಯಲ್ಲಿ ಆಕಾಶದಲ್ಲಿ ಗುಡುಗುಗಳ ಶಬ್ದದಂತೆ ಕೇಳಿಬರುತ್ತಿದೆ.
ಹಾಹಾಕಾರರವಾಂಶ್ಚೈವ ಸಿಂಹನಾದಾಂಶ್ಚ ಪುಷ್ಕಳಾನ್ |
ಶೃಣು ಶಬ್ದಾನ್ ಬಹುವಿಧಾನರ್ಜುನಸ್ಯ ರಥಂ ಪ್ರತಿ ॥ 51 ॥
ಅರ್ಜುನನ ರಥದ ಸಮೀಪದಲ್ಲಿ ಪುಷ್ಕಳವಾದ ಹಾಹಾಕಾರ ಶಬ್ದಗಳು ಮತ್ತು ಸಿಂಹನಾದಗಳು ಉಂಟಾಗುತ್ತಿರುವುದನ್ನು ಕೇಳು.
ಅಯಂ ಮಧ್ಯೇ ಸ್ಥಿತೋಽಸ್ಮಾಕಂ ಸಾತ್ಯಕಿಃ ಸಾತ್ವತಾಧಮಃ |
ಇಹ ಚೇಲ್ಲಭ್ಯತೇ ಲಕ್ಷ್ಯಂ ಕೃತ್ಸ್ನಾನ್ ಜೇಷ್ಯಾಮಹೇ ಪರಾನ್ ॥ 52 ॥
ಈ ಸಾತ್ವತಾಧಮನಾದ ಸಾತ್ಯಕಿಯು ನಮ್ಮ ಮಧ್ಯದಲ್ಲಿ ಇದ್ದಾನೆ. ಇಲ್ಲಿ ನನಗೆ ಒಂದು ಮಾರ್ಗವು ದೊರಕಿದರೆ ಎಲ್ಲ ಶತ್ರುಗಳನ್ನೂ ಗೆಲ್ಲುವೆನು.

ಏಷ ಪಾಂಚಾಲರಾಜಸ್ಯ ಪುತ್ರೋ ದ್ರೋಣೇನ ಸಂಗತಃ |
ಸರ್ವತಃ ಸಂವೃತೋ ಯೋಧೈ ರಾಜನ್ ಪುರುಷಸತ್ತಮೈಃ ॥ 53 ॥
ಎಲ್ಲೆ ರಾಜನೇ, ಪಾಂಚಾಲರಾಜನ ಪುತ್ರನಾದ ಈ ಧೃಷ್ಟದ್ಯುಮ್ನನು ಪುರುಷ ಶ್ರೇಷ್ಠರಾದ ಯೋಧರಿಂದ ಕೂಡಿದವನಾಗಿ ದ್ರೋಣರ ಜೊತೆಯಲ್ಲಿ ಸೆಣೆಸುತ್ತಿದ್ದಾನೆ.
ಸಾತ್ಯಕಿಂ ಯದಿ ಹನ್ಯಾಮೋ ಧೃಷ್ಟದ್ಯುಮ್ನಂ ಚ ಪಾರ್ಷತಮ್ |
ಅಸಂಶಯಂ ಮಹಾರಾಜ ಧ್ರುವೋ ನೋ ವಿಜಯೋ ಭವೇತ್ ॥54॥
ಎಲ್ಲೆ ಮಹಾರಾಜನೇ, ನಾವು ಸಾತ್ಯಕಿಯನ್ನೂ ಮತ್ತು ಪಾರ್ಷತನಾದ ಧೃಷ್ಟದ್ಯುಮ್ನನನ್ನು ಕೊಂದರೆ ನಮಗೆ ನಿಸ್ಸಂಶಯವಾಗಿ ವಿಜಯವುಂಟಾದೀತು.
ಸೌಭದ್ರವದಿಮೌ ವೀರೌ ಪರಿವಾರ್ಯ ಮಹಾರಥೌ |
ಪ್ರಯತಾಮೋ ಮಹಾರಾಜ ನಿಹಂತುಂ ವೃಷ್ಣಿಪಾರ್ಷತೌ ॥ 55 ॥
ಎಲ್ಲೆ ಮಹಾರಾಜನೇ, ಅಭಿಮನ್ಯುವನ್ನು ಕೊಂದಂತೆ ವೀರರೂ ಮಹಾರಥರೂ ಆದ ಈ ವೃಷ್ಣಿ-ಪಾರ್ಷತರನ್ನು ಕೊಲ್ಲಲು ಪ್ರಯತ್ನಿಸೋಣ.
ಸವ್ಯಸಾಚೀ ಪುರೋಭ್ಯೇತಿ ದ್ರೋಣಾನೀಕಾಯ ಭಾರತ |
ಸಂಸಕ್ತಂ ಸಾತ್ಯಕಿಂ ಜ್ಞಾತ್ವಾ ಬಹುಭಿಃ ಕುರುಪುಂಗವೈಃ ॥ 56 ॥
ಸಾತ್ಯಕಿಯು ಅನೇಕ ಕುರುಶ್ರೇಷ್ಠರ ಜೊತೆಯಲ್ಲಿ ಯುದ್ಧಮಾಡುತ್ತಿದ್ದಾನೆಂದು ತಿಳಿದು ಅರ್ಜುನನು ದ್ರೋಣರ ಸೇನೆಯ ಮುಂಭಾಗದಲ್ಲಿ ಹೋಗುತ್ತಿದ್ದಾನೆ.
ತತ್ರ ಗಚ್ಛಂತು ಬಹವಃ ಪ್ರವರಾ ರಥಸತ್ತಮಾಃ |
ಯಾವತ್ ಪಾರ್ಥೋ ನ ಚಾಯಾತಿ ಸಾತ್ಯಕಿಂ ಬಹುಭಿರ್ವೃತಮ್ ॥
ಅನೇಕ ಕೌರವರಿಂದ ಸುತ್ತುವರಿಯಲ್ಪಟ್ಟ ಸಾತ್ಯಕಿಯ ಸಮೀಪಕ್ಕೆ ಅರ್ಜುನನು ಬರದಂತೆ ತಡೆಯಲು ನಮ್ಮ ಅನೇಕ ರಥಶ್ರೇಷ್ಠರು ಅಲ್ಲಿಗೆ ಹೋಗಲಿ.
ತೇ ತ್ವರಧ್ವಂ ಯಥಾ ಶೂರಾಃ ಶರಾಣಾಂ ಮೋಕ್ಷಣೇ ಭೃಶಮ್ |
ಯಥಾ ತೂರ್ಣಂ ವ್ರಜತ್ಯೇಷ ಪರಲೋಕಾಯ ಮಾಧವಃ ॥ 58 ॥
ಅಂತಹ ಶೂರರಾದ ನೀವು ಸಾತ್ಯಕಿಯು ಶೀಘ್ರವಾಗಿ ಪರಲೋಕಕ್ಕೆ ಹೋಗುವಂತೆ ಬಾಣಗಳನ್ನು ತ್ವರೆಯಿಂದ ಪ್ರಯೋಗಿಸುವವರಾಗಿ.

ಕರ್ಣಸ್ಯ ಮತಮಾಜ್ಞಾಯ ಪುತ್ರಸ್ತೇ ಪ್ರಾಹ ಸೌಬಲಮ್ |
ಯಥೇಂದ್ರಃ ಸಮರೇ ರಾಜನ್ ಪ್ರಾಹ ವಿಷ್ಣುಂ ಯಶಸ್ವಿನಮ್ ॥ 59 ॥
ಯುದ್ಧದಲ್ಲಿ ಇಂದ್ರನು ಕೀರ್ತಿವಂತನಾದ ವಿಷ್ಣುವನ್ನು ಕುರಿತು ಹೇಳಿದಂತೆ ಶಕುನಿಯನ್ನು ಕುರಿತು ನಿನ್ನ ಪುತ್ರನು ಮಾತನಾಡಿದನು.
ವೃತಃ ಸಹಸ್ರೈರ್ದಶಭಿರ್ಗಜಾನಾಮನಿವರ್ತಿನಾಮ್ |
ರಥೈಶ್ಚ ದಶಸಾಹಸ್ರೈರ್ವೃತೋ ಯಾಹಿ ಧನಂಜಯಮ್ ॥ 60 ॥
ಯುದ್ಧದಲ್ಲಿ ಹಿಮ್ಮೆಟ್ಟದಿರುವ ಹತ್ತು ಸಹಸ್ರ ಗಜಗಳಿಂದಲೂ ಮತ್ತು ಹತ್ತು ಸಹಸ್ರ ರಥಗಳಿಂದಲೂ ಸಹಿತನಾಗಿ ನೀನು ಅರ್ಜುನನ ಮೇಲೆ ಎರಗು.
ದುಃಶಾಸನೋ ದುರ್ವಿಷಹಃ ಸುಬಾಹುರ್ದುಷ್ಪ್ರಧರ್ಷಣಃ |
ಏತೇ ತ್ವಾಮನುಯಾಸ್ಯಂತಿ ಪತ್ತಿಭಿರ್ಬಹುಭಿರ್ವೃತಾಃ ॥ 61 ॥
ದುಶ್ಶಾಸನ, ದುರ್ವಿಷಹ, ಸುಬಾಹು, ದುಷ್ಪ್ರಧರ್ಷಣ - ಇವರು ಅನೇಕ ಪದಾತಿಗಳಿಂದ ಕೂಡಿ ನಿನ್ನನ್ನು ಹಿಂಬಾಲಿಸುವರು.
ಜಹಿ ಕೃಷ್ಣೌ ಮಹಾಬಾಹೋ ಧರ್ಮರಾಜಂ ಚ ಮಾತುಲ |
ನಕುಲಂ ಸಹದೇವಂ ಚ ಭೀಮಸೇನಂ ಚ ಭಾರತ ॥ 62 ॥
ಎಲ್ಲೆ ಸೋದರಮಾವನೇ, ಮಹಾಬಾಹುವೇ, ಭಾರತನೇ, ಕೃಷ್ಣಾರ್ಜುನರನ್ನು, ನಕುಲ-ಸಹದೇವರನೂಹಿನ, ಭೀಮಸೇನನನ್ನೂ ಕೊಲ್ಲುವವನಾಗು.
ದೇವಾನಾಮಿವ ದೇವೇಂದ್ರೇ ಜಯಾಶಾ ಮೇ ತ್ವಯಿ ಸ್ಥಿತಾ |
ಜಹಿ ಮಾತುಲ ಕೌಂತೇಯಾನಸುರಾನಿವ ಪಾವಕಿಃ ॥ 63 ॥
ದೇವತೆಗಳ ಆಸೆಯು ದೇವೇಂದ್ರನಲ್ಲಿ ನೆಲೆಸಿದಂತೆ ನನ್ನ ಜಯದ ಆಸೆಯು ನಿನ್ನಲ್ಲಿ ನೆಲೆಸಿದೆ. ಸೋದರಮಾವನೇ, ಷಣ್ಮುಖನು ಅಸುರರನ್ನು ಕೊಂದಂತೆ ಕುಂತೀಪುತ್ರನನ್ನು ಕೊಲ್ಲುವವನಾಗು (ಎಂದು ಹೇಳಿದನು).
ಏವಮುಕ್ತೋ ಯಯೌ ಪಾರ್ಥಾನ್ ಪುತ್ರೇಣ ತವ ಸೌಬಲಃ |
ಮಹತ್ಯಾ ಸೇನಯಾ ಸಾರ್ಧಂ ತವ ಪುತ್ರೈಸ್ತಥಾ ವಿಭೋ ॥ 64 ॥
ಎಲ್ಲೆ ವಿಭುವೇ, ಹೀಗೆ ನಿನ್ನ ಪುತ್ರನಿಂದ ಹೇಳಲ್ಪಟ್ಟ ಶಕುನಿಯು ದೊಡ್ಡ ಸೇನೆಯಿಂದಲೂ ಮತ್ತು ನಿನ್ನ ಪುತ್ರರಿಂದಲೂ ಕೂಡಿ ಪಾಂಡವರನ್ನು ಎದುರಿಸಲು ಹೊರಟನು.
ಪ್ರಿಯಾರ್ಥಂ ತವ ಪುತ್ರಾಣಾಂ ದಿಧಕ್ಷುಃ ಪಾಂಡುನಂದನಾನ್ |
ತತಃ ಪ್ರವವೃತೇ ಯುದ್ಧಂ ತಾವಕಾನಾಂ ಪರೈಃ ಸಹ ॥ 65 ॥
ನಿನ್ನ ಪುತ್ರರಿಗೆ ಪ್ರಿಯವುಂಟು ಮಾಡಲು ಪಾಂಡುನಂದನರನ್ನು ಕೊಲ್ಲಲು ಬಯಸಿ (ಹೊರಟನು). ಅನಂತರ ನಿನ್ನವರಿಗೂ ಮತ್ತು ನಿನ್ನ ಶತ್ರುಗಳಿಗೂ ಯುದ್ಧವು ಜರುಗಿತು.

ಪ್ರಯಾತೇ ಸೌಬಲೇ ರಾಜನ್ ಪಾಂಡವಾನಾಮನೀಕಿನೀಮ್ |
ಬಲೇನ ಮಹತಾ ಯುಕ್ತಃ ಸೂತಪುತ್ರಸ್ತು ಸಾತ್ವತಮ್ ॥ 66 ॥
ಅಭ್ಯಯಾತ್ತ್ವರಿತಂ ಯುದ್ಧೇ ಕಿರನ್ ಶರಶತಾನ್ ಬಹೂನ್ |
ತಥೈವ ಪಾಂಡವಾಃ ಸರ್ವೇ ಸಾತ್ಯಕಿಂ ಪರ್ಯವಾರಯನ್ ॥ 67 ॥
ಎಲೈ ರಾಜನೇ, ಶಕುನಿಯು ಪಾಂಡವರ ಸೇನೆಯನ್ನು ಕುರಿತು ಹೊರಟಮೇಲೆ ದೊಡ್ಡ ಸೈನ್ಯದಿಂದ ಕೂಡಿದವನಾಗಿ ಕರ್ಣನು ಶೀಘ್ರವಾಗಿ ನೂರಾರು ಬಾಣಗಳನ್ನು ಪ್ರಯೋಗಿಸುತ್ತಾ ಸಾತ್ಯಕಿಯ ಮೇಲೆ ಎರಗಿದನು. ಹಾಗೆಯೇ ಪಾಂಡವರೆಲ್ಲರೂ ಸಾತ್ಯಕಿಯನ್ನು ಸುತ್ತುವರಿದರು.
ಮಹದ್ ಯುದ್ಧಂ ತದಾಸೀತ್ ತು ದ್ರೋಣಸ್ಯ ನಿಶಿ ಭಾರತ |
ಧೃಷ್ಟದ್ಯುಮ್ನೇನ ಶೂರೇಣ ಪಾಂಚಾಲೈಶ್ಚ ಮಹಾತ್ಮನಃ ॥ 68 ॥
ಎಲೈ ಭಾರತನೇ, ಆಗ ರಾತ್ರಿಯ ಕಾಲದಲ್ಲಿ ಮಹಾತ್ಮರಾದ ದ್ರೋಣರಿಗೂ ಮತ್ತು ಶೂರನಾದ ಧೃಷ್ಟದ್ಯುಮ್ನ ಮತ್ತು ಪಾಂಚಾಲರಿಗೂ ದೊಡ್ಡ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್ಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೇಳನೆಯ ಅಧ್ಯಾಯ
ಸಾತ್ಯಕಿಯಿಂದ ದುರ್ಯೋಧನನ, ಅರ್ಜುನನಿಂದ ಶಕುನಿಯ ಮತ್ತು ಧೃಷ್ಟದ್ಯುಮ್ನನಿಂದ ದ್ರೋಣರ ಪರಾಜಯ.
ಸಂಜಯಃ
ತತಸ್ತೇ ಪ್ರಾದ್ರುವನ್ ಸರ್ವೇ ತ್ವರಿತಾ ಯುದ್ಧದುರ್ಮದಾಃ |
ಅಮೃಷ್ಯಮಾಣಾಃ ಸಂರಬ್ಧಾ ಯುಯುಧಾನರಥಂ ಪ್ರತಿ ॥ 1 ॥
ಸಂಜಯ ಆಗ ಯುದ್ಧದುರ್ಮದರಾದ ಅವರೆಲ್ಲರೂ ಶತ್ರುಗಳ ಪರಾಕ್ರಮವನ್ನು ನೋಡಿ ಸಹಿಸದೆ ಕೋಪಗೊಂಡು ಶೀಘ್ರವಾಗಿ ಸಾತ್ಯಕಿಯ ರಥದ ಕಡೆಗೆ ಧಾವಿಸಿದರು.
ತೇ ರಥೈಃ ಕಲ್ಪಿತೈ ರಾಜನ್ ಹೇಮರೂಪ್ಯವಿಭೂಷಿತೈಃ |
ಸಾದಿಭಿಶ್ಚ ಗಜೈಶ್ಚೈವ ಪರಿವವ್ರುಃ ಸ್ಮ ಸಾತ್ವತಮ್ ॥ 2 ॥
ಎಲೈ ರಾಜನೇ, ಅವರು ಚೆನ್ನಾಗಿ ಅಣಿಗೊಳಿಸಿದ, ಸುವರ್ಣದಿಂದ ಅಲಂಕೃತವಾದ ರಥಗಳಿಂದಲೂ, ಅಶ್ವಾರೋಹಿಗಳಿಂದಲೂ, ಗಜಗಳಿಂದಲೂ ಕೂಡಿ ಸಾತ್ಯಕಿಯನ್ನು ಸುತ್ತುವರಿದರು.
ಅಥೈನಂ ಕೋಷ್ಠಕೀಕೃತ್ಯ ಸರ್ವತಸ್ತೇ ಮಹಾರಥಾಃ |
ಸಿಂಹನಾದಾಂಸ್ತದಾ ಚಕ್ರುಸ್ತರ್ಜಯಂತಃ ಸ್ಮ ಸಾತ್ಯಕಿಮ್ ॥ 3 ॥
ಅನಂತರ ಮಹಾರಥರಾದ ಅವರು ಎಲ್ಲ ಕಡೆಗಳಿಂದಲೂ ಸಾತ್ಯಕಿಯನ್ನು ಕೂಡಿಹಾಕಿಕೊಂಡು ಅವನನ್ನು ಹೆದರಿಸುತ್ತಾ ಸಿಂಹನಾದಗಳನ್ನು ಮಾಡಿದರು.
ತೇಽಭ್ಯವರ್ಷನ್ ಶರೈಸ್ತೀಕ್ಷ್ಣೈಃ ಸಾತ್ಯಕಿಂ ಸತ್ಯವಿಕ್ರಮಮ್ |
ತ್ವರಮಾಣಾ ಮಹಾವೀರ್ಯಾ ಮಾಧವಸ್ಯ ವಧೈಷಿಣಃ ॥ 4 ॥
ಮಹಾಪರಾಕ್ರಮಶಾಲಿಗಳಾದ ಅವರು ಸತ್ಯವಿಕ್ರಮನಾದ ಮಾಧವನಾದ ಸಾತ್ಯಕಿಯನ್ನು ಕೊಲ್ಲಲು ಬಯಸಿ ತ್ವರೆಯನ್ನು ಮಾಡಿ ಅವನ ಮೇಲೆ ತೀಕ್ಷ್ಣವಾದ ಬಾಣಗಳ ಮಳೆಯನ್ನು ಸುರಿಸಿದರು.
ತಾನ್ ದೃಷ್ಟ್ವಾ ಪತತಸ್ತೂರ್ಣಂ ಶೈನೇಯಃ ಪರವೀರಹಾ |
ಪ್ರತ್ಯಗೃಹ್ಣಾನ್ಮಹಾಬಾಹುಃ ಪ್ರಮುಂಚನ್ ವಿಶಿಖಾನ್ ಬಹೂನ್ ॥ 5 ॥
ತನ್ನ ಮೇಲೆ ಎರಗುತ್ತಿದ್ದ ಅವರನ್ನು ನೋಡಿ ಪರವೀರಘಾತಕನೂ, ಮಹಾಬಾಹುವೂ ಆದ ಸಾತ್ಯಕಿಯು ಶೀಘ್ರವಾಗಿ ಅನೇಕ ಬಾಣಗಳನ್ನು ಪ್ರಯೋಗಿಸುತ್ತಾ ಅವರನ್ನು ಸ್ವೀಕರಿಸಿದನು.
ತತ್ರ ವೀರೋ ಮಹೇಷ್ವಾಸಃ ಸಾತ್ಯಕಿರ್ಯುದ್ಧದುರ್ಮದಃ |
ನಿಚಕರ್ತ ಶಿರಾಂಸ್ಯುಗ್ರೈಃ ಶರೈಃ ಸನ್ನತಪರ್ವಭಿಃ ॥ 6 ॥
ಆಗ ಯುದ್ಧದುರ್ಮದನೂ, ವೀರನೂ ಮತ್ತು ಮಹಾಧನುರ್ಧಾರಿಯೂ ಆದ ಸಾತ್ಯಕಿಯು ಬಾಗಿದ ತುದಿಯುಳ್ಳ ಉಗ್ರವಾದ ಬಾಣಗಳಿಂದ ಶತ್ರುಗಳ ಶಿರಸ್ಸುಗಳನ್ನು ಕತ್ತರಿಸಿದನು.
ಹಸ್ತಿಹಸ್ತಾನ್ ಹಯಗ್ರೀವಾ ಬಾಹೂನಪಿ ಚ ಸಾಯುಧಾನ್ |
ಕ್ಷುರಪ್ರೈಃ ಪಾತಯಾಮಾಸ ತಾವಕಾನಾಂ ಸ ಮಾಧವಃ ॥ 7 ॥
ಮಧುಕುಲದಲ್ಲಿ ಜನಿಸಿದ ಸಾತ್ಯಕಿಯು ಕ್ಷುರಪ್ರಗಳಿಂದ ನಿನ್ನ ಸೈನ್ಯದ ಗಜಗಳ ಸೊಂಡಿಲುಗಳನ್ನೂ, ಅಶ್ವಗಳ ಕತ್ತುಗಳನ್ನೂ, ಯೋಧರ ಆಯುಧಸಹಿತವಾದ ಬಾಹುಗಳನ್ನೂ ನೆಲದ ಮೇಲೆ ಉರುಳಿಸಿದನು.
ಪತಿತೈಶ್ಚಾಮರೈಶ್ಚೈವ ಶ್ವೇತಚ್ಛತ್ರೈಶ್ಚ ಭಾರತ |
ಬಭೂವ ಧರಣೀ ಪೂರ್ಣಾ ನಕ್ಷತ್ರೈರ್ದ್ಯೌರಿವ ಪ್ರಭೋ ॥ 8 ॥

ಎಲೈ ಭಾರತನೇ, ಪ್ರಭುವೇ, ಕೆಳಗೆ ಬಿದ್ದ ಚಾಮರಗಳಿಂದಲೂ, ಶ್ವೇತಚ್ಛತ್ರ- ಗಳಿಂದಲೂ ತುಂಬಿಹೋದ ರಣಭೂಮಿಯು ನಕ್ಷತ್ರದಿಂದ ತುಂಬಿದ ಆಕಾಶದಂತೆ ತೋರಿಬಂದಿತು.

ತೇಷಾಂ ತು ಯುಯುಧಾನೇನ ಯುದ್ಧ್ಯತಾಂ ಯುಧಿ ಭಾರತ |
ಬಭೂವ ತುಮುಲಃ ಶಬ್ದಃ ಪ್ರೇತಾನಾಮಿವ ಕ್ರಂದತಾಮ್ ॥ 9 ॥

ಎಲೈ ಭಾರತನೇ, ಸಾತ್ಯಕಿಯ ಜೊತೆಯಲ್ಲಿ ರಣರಂಗದಲ್ಲಿ ಯುದ್ಧವನ್ನು ಮಾಡುವ ನಿನ್ನವರ ಶಬ್ದವು ಪ್ರೇತಗಳ ಗೋಳಾಟದ ಶಬ್ದದಂತೆ ತೀವ್ರವಾಗಿದ್ದಿತು.

ತೇನ ಶಬ್ದೇನ ಮಹತಾ ಪೂರಿತಾಽಽಸೀದ್ ವಸುಂಧರಾ |
ರಾತ್ರಿಃ ಸಮಭವಚ್ಚೈವ ತೀವ್ರರೂಪಾ ಭಯಾವಹಾ ॥ 10 ॥

ಭೂಮಿಯು ಆ ದೊಡ್ಡ ಶಬ್ದದಿಂದ ತುಂಬಿಹೋಯಿತು ಮತ್ತು ರಾತ್ರಿಯು ತೀವ್ರವಾದ ಭಯಜನಕವಾಯಿತು.

ದೀರ್ಯಮಾಣಂ ಬಲಂ ದೃಷ್ಟ್ವಾ ಯುಯುಧಾನಶರಾಹತಮ್ |
ಶ್ರುತ್ವಾ ಚ ವಿಪುಲಂ ನಾದಂ ನಿಶೀಥೇ ಲೋಮಹರ್ಷಣಮ್ ॥ 11 ॥
ಸುತಸ್ತವಾಬ್ರವೀದ್ ರಾಜನ್ ಸಾರಥಿಂ ರಥಿನಾಂ ವರಃ |
ಯತ್ರೈಷ ಶಬ್ದಸ್ತತ್ರಾಶ್ವಾಂಶ್ಚೋದಯೇತಿ ಪುನಃ ಪುನಃ ॥ 12 ॥

ಸಾತ್ಯಕಿಯ ಬಾಣಗಳಿಂದ ಪೀಡಿತವಾಗಿ ಭಗ್ನವಾಗುತ್ತಿದ್ದ ತನ್ನ ಸೈನ್ಯವನ್ನು ನೋಡಿ ರಾತ್ರಿಯ ವೇಳೆಯಲ್ಲಿ ರೋಮಾಂಚಕಾರಿಯಾದ ವಿಸ್ತಾರವಾದ ಗೋಳಾಟನಾದವನ್ನು ಕೇಳಿ ಎಲೈ ರಾಜನೇ, ರಥಿಕರಲ್ಲಿ ಶ್ರೇಷ್ಠನಾದ ನಿನ್ನ ಪುತ್ರನು ಸಾರಥಿಯನ್ನು ಕುರಿತು ಈ ಶಬ್ದವು ಎಲ್ಲಿಂದ ಕೇಳಿ ಬರುತ್ತಿದೆಯೋ ಅಲ್ಲಿಗೆ ಶೀಘ್ರವಾಗಿ ಅಶ್ವಗಳನ್ನು ಪ್ರಚೋದಿಸು ಎಂದು ಮತ್ತೆ ಮತ್ತೆ ಹೇಳಿದನು.

ತೇನ ಸಂಚೋದ್ಯಮಾನಸ್ತು ತತಸ್ತಾಂಸ್ತುರಗೋತ್ತಮಾನ್ |
ಸೂತಃ ಸಂಚೋದಯಾಮಾಸ ಯುಯುಧಾನರಥಂ ಪ್ರತಿ ॥ 13 ॥

ದುರ್ಯೋಧನನಿಂದ ಹೀಗೆ ಪ್ರಚೋದಿಸಲ್ಪಟ್ಟ ಸಾರಥಿಯು ಅವನ ಶ್ರೇಷ್ಠವಾದ ಕುದುರೆಗಳನ್ನು ಸಾತ್ಯಕಿಯ ರಥದ ಬಳಿಗೆ ಪ್ರಚೋದಿಸಿದನು.

ತತೋ ದುರ್ಯೋಧನಃ ಕ್ರುದ್ಧೋ ದೃಢಧನ್ವಾ ಜಿತಕ್ಲಮಃ |
ಶೀಘ್ರಹಸ್ತಶ್ಚಿತ್ರಯೋಧೀ ಯುಯುಧಾನಮುಪಾದ್ರವತ್ ॥ 14 ॥

ಆಗ ಕೋಪಗೊಂಡವನೂ, ದೃಢವಾದ ಧನುಸ್ಸನ್ನು ಹೊಂದಿದವನೂ, ಶ್ರಮವನ್ನು ಮೀರಿದವನೂ, ಶೀಘ್ರಹಸ್ತನೂ, ಆಶ್ಚರ್ಯಕರವಾಗಿ ಯುದ್ಧವನ್ನು ಮಾಡುವವನೂ ಆದ ದುರ್ಯೋಧನನು ಸಾತ್ಯಕಿಯ ಮೇಲೆ ಎರಗಿದನು.

ತತಃ ಪೂರ್ಣಾಯತೋತ್ಸೃಷ್ಟೈರ್ಮಾಂಸಶೋಣಿತಭೋಜನೈಃ |
ದುರ್ಯೋಧನಂ ದ್ವಾದಶಭಿರ್ಮಾಧವಃ ಪ್ರತ್ಯವಿದ್ಧ್ಯತ ॥ 15 ॥

ಆಗ ಸಾತ್ಯಕಿಯು ಪೂರ್ಣವಾಗಿ ಎಳೆದು ಪ್ರಯೋಗಿಸಿದ, ಮಾಂಸ-ರಕ್ತ ಭೋಜಿಗಳಾದ ಹನ್ನೆರಡು ಬಾಣಗಳಿಂದ ದುರ್ಯೋಧನನನ್ನು ಹೊಡೆದನು.

ದುರ್ಯೋಧನಸ್ತೇನ ತಥಾ ಪೂರ್ವಮೇವಾರ್ದಿತಃ ಶರೈಃ |
ಶೈನೇಯಂ ದಶಭಿರ್ಬಾಣೈಃ ಪ್ರತ್ಯವಿದ್ಧ್ಯದಮರ್ಷಿತಃ ॥ 16 ॥

ಸಾತ್ಯಕಿಯಿಂದ ಮೊದಲೇ ಆ ರೀತಿಯಲ್ಲಿ ಹೊಡೆಯಲ್ಪಟ್ಟ ದುರ್ಯೋಧನನು ಕೋಪಗೊಂಡು ಹತ್ತು ಬಾಣಗಳಿಂದ ಅವನನ್ನು ಪ್ರತಿಯಾಗಿ ಹೊಡೆದನು.

ತತಃ ಸಮಭವದ್ಯುದ್ಧಮಾಕುಲಂ ಭರತರ್ಷಭ |
ಪಾಂಚಾಲಾನಾಂ ಚ ಸರ್ವೇಷಾಂ ಭಾರತಾನಾಂ ಚ ದಾರುಣಮ್ ॥

ಎಲೈ ಭರತಶ್ರೇಷ್ಠನೇ, ಅನಂತರ ಪಾಂಚಾಲರಿಗೂ ಮತ್ತು ಕೌರವರಿಗೂ ಎಲ್ಲವೂ ಮಿಶ್ರಣಗೊಂಡ ದಾರುಣವಾದ ಯುದ್ಧವು ನಡೆಯಿತು.

ಶೈನೇಯಸ್ತು ರಣೇ ಕ್ರುದ್ಧಸ್ತವ ಪುತ್ರಂ ಮಹಾರಥಮ್ |
ಸಾಯಕಾನಾಮಶೀತ್ಯಾ ತು ವಿವ್ಯಾಧೋರಸಿ ಭಾರತ ॥ 18 ॥

ಎಲೈ ಭಾರತನೇ, ರಣರಂಗದಲ್ಲಿ ಕೋಪಗೊಂಡ ಸಾತ್ಯಕಿಯು ಮಹಾರಥನಾದ ನಿನ್ನ ಪುತ್ರನನ್ನು ಎಂಬತ್ತು ಬಾಣಗಳಿಂದ ಎದೆಯಲ್ಲಿ ಹೊಡೆದನು.

ತತೋಽಸ್ಯ ವಾಹಾನ್ ಸಮರೇ ಶರೈರ್ನಿನ್ಯೇ ಯಮಕ್ಷಯಮ್ |
ಸಾರಥಿಂ ಚ ರಥಾತ್ ತೂರ್ಣಂ ಪಾತಯಾಮಾಸ ಪತ್ರಿಣಾ ॥ 19 ॥

ಅನಂತರ ಬಾಣಗಳನ್ನು ಪ್ರಯೋಗಿಸಿ ಅವನ ರಥದ ಅಶ್ವಗಳನ್ನು ಯಮಲೋಕಕ್ಕೆ ಕಳುಹಿಸಿದನು ಮತ್ತು ಪತ್ರವುಳ್ಳ ಒಂದು ಬಾಣದಿಂದ ಅವನ ಸಾರಥಿಯನ್ನು ಶೀಘ್ರವಾಗಿ ರಥದಿಂದ ಕೆಡವಿದನು.

ಹತಾಶ್ವೇ ತು ರಥೇ ತಿಷ್ಠನ್ ಪುತ್ರಸ್ತವ ವಿಶಾಂಪತೇ |
ಮುಮೋಚ ನಿಶಿತಾನ್ ಬಾಣಾನ್ ಶೈನೇಯಸ್ಯ ರಥಂ ಪ್ರತಿ ॥ 20 ॥

ಎಲೈ ರಾಜನೇ, ನಿನ್ನ ಪುತ್ರನು ಅಶ್ವಗಳು ಮೃತವಾದ ರಥದಲ್ಲಿ ನಿಂತು ಸಾತ್ಯಕಿಯ ರಥವನ್ನು ಕುರಿತು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.

ಶರಾನ್ ಪಂಚಾಶತಸ್ತಾಂಸ್ತು ಶೈನೇಯಃ ಕೃತಹಸ್ತವತ್ |
ಚಿಚ್ಛೇದ ಸಮರೇ ರಾಜನ್ ಪ್ರೇಷಿತಾಂಸ್ತನಯೇನ ತೇ ॥ 21 ॥

ಎಲೈ ರಾಜನೇ, ನಿನ್ನ ಪುತ್ರನು ಪ್ರಯೋಗಿಸಿದ ಆ ಐವತ್ತು ಬಾಣಗಳನ್ನು ಸಾತ್ಯಕಿಯು ಶೀಘ್ರಹಸ್ತನಂತೆ ರಣರಂಗದಲ್ಲಿ ಕತ್ತರಿಸಿದನು.
ಅಥಾಪರೇಣ ಭಲ್ಲೇನ ಮುಷ್ಟಿದೇಶೇ ಮಹದ್ಧನುಃ |
ಚಿಚ್ಛೇದ ರಭಸೋ ಯುದ್ಧೇ ತವ ಪುತ್ರಸ್ಯ ಮಾರಿಷ ॥ 22 ॥
ಎಲೈ ಶ್ರೇಷ್ಠನೇ, ವೇಗಶಾಲಿಯಾದ ಸಾತ್ಯಕಿಯು ಇನ್ನೊಂದು ಭಲ್ಲದಿಂದ ನಿನ್ನ ಪುತ್ರನ ದೊಡ್ಡ ಧನುಸ್ಸನ್ನು ಮುಷ್ಟಿದೇಶದಲ್ಲಿ ಕತ್ತರಿಸಿದನು.
ವಿರಥೋ ವಿಧನುಷ್ಕಶ್ಚ ಸರ್ವಲೋಕೇಶ್ವರಃ ಪ್ರಭುಃ |
ಆರುರೋಹ ರಥಂ ತೂರ್ಣಂ ಭಾಸ್ವರಂ ಕೃತವರ್ಮಣಃ ॥ 23 ॥
ರಥವನ್ನೂ, ಧನುಸ್ಸನ್ನೂ ಕಳೆದುಕೊಂಡ ಸರ್ವಲೋಕೇಶ್ವರನಾದ, ಪ್ರಭುವಾದ ದುರ್ಯೋಧನನು ಶೀಘ್ರವಾಗಿ ಕೃತವರ್ಮನ ಪ್ರಕಾಶಮಾನವಾದ ರಥವನ್ನು ಏರಿದನು.
ದುರ್ಯೋಧನೇ ಪರಾವೃತ್ತೇ ಶೈನೇಯಸ್ತವ ವಾಹಿನೀಮ್ |
ದ್ರಾವಯಾಮಾಸ ವಿಶಿಖೈರ್ನಿಶಾಮಧ್ಯೇ ವಿಶಾಂಪತೇ ॥ 24 ॥
ಎಲೈ ರಾಜನೇ, ದುರ್ಯೋಧನನು ಹಿಂದಿರುಗುತ್ತಿರಲು ರಾತ್ರಿಯ ಮಧ್ಯಭಾಗದಲ್ಲಿ ಸಾತ್ಯಕಿಯು ತನ್ನ ಬಾಣಗಳಿಂದ ನಿನ್ನ ಸೈನ್ಯವನ್ನು ಚದುರಿಸಿದನು.
ಶಕುನಿಶ್ಚಾರ್ಜುನಂ ರಾಜನ್ ಪರಿವಾರ್ಯ ಸಮಂತತಃ |
ರಥೈರನೇಕಸಾಹಸ್ರೈರ್ಗಜೈಶ್ಚೈವ ಸಹಸ್ರಶಃ |
ತಥಾ ಹಯಸಹಸ್ರೈಶ್ಚ ತುಮುಲಂ ಸರ್ವತೋಽಕರೋತ್ ॥ 25 ॥
ಎಲೈ ರಾಜನೇ, ಶಕುನಿಯು ಅನೇಕ ಸಹಸ್ರ ರಥಗಳಿಂದಲೂ, ಸಹಸ್ರಾರು ಗಜಗಳಿಂದಲೂ ಮತ್ತು ಹಾಗೆಯೇ ಸಹಸ್ರಾರು ಅಶ್ವಗಳಿಂದಲೂ ಅರ್ಜುನನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ತೀವ್ರವಾದ ಯುದ್ಧವನ್ನು ಮಾಡಿದನು.
ತೇ ಮಹಾಸ್ತ್ರಾಣಿ ದಿವ್ಯಾನಿ ವಿಕಿರಂತೋಽರ್ಜುನಂ ಪ್ರತಿ |
ಅರ್ಜುನಂ ಯೋಧಯಂತಿ ಸ್ಮ ಕ್ಷತ್ರಿಯಾಃ ಕಾಲಚೋದಿತಾಃ ॥ 26 ॥
ಮೃತ್ಯುಚೋದಿತರಾದ ಆ ಕ್ಷತ್ರಿಯರು ದಿವ್ಯವಾದ ಮಹಾಸ್ತ್ರಗಳನ್ನು ಅರ್ಜುನನ ಮೇಲೆ ಪ್ರಯೋಗಿಸುತ್ತಾ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತಾನ್ಯರ್ಜುನಃ ಸಹಸ್ರಾಣಿ ರಥವಾರಣವಾಜಿನಾಮ್ |
ಪ್ರತ್ಯವಾರಯದಾಯಸ್ತಃ ಪ್ರಕುರ್ವನ್ ವಿಪುಲಂ ಕ್ಷಯಮ್ ॥ 27 ॥
ಕೋಪಗೊಂಡ ಅರ್ಜುನನು ಶತ್ರುಸೈನ್ಯದಲ್ಲಿ ವಿಸ್ತಾರವಾದ ಕ್ಷಯವನ್ನುಂಟು ಮಾಡುತ್ತಾ ಆ ಸಹಸ್ರ ಅಶ್ವ-ಗಜ-ರಥಗಳನ್ನು ತಡೆದನು.
ತತಸ್ತು ಸಮರೇ ಶೂರಃ ಶಕುನಿಃ ಸೌಬಲಸ್ತದಾ |
ವಿವ್ಯಾಧ ನಿಶಿತೈರ್ಬಾಣೈರರ್ಜುನಂ ಪ್ರಹಸನ್ನಿವ ॥ 28 ॥
ಆಗ ಶೂರನಾದ, ಸೌಬಲನಾದ ಶಕುನಿಯು ನಗುವವನಂತೆ ತೀಕ್ಷ್ಣವಾದ ಬಾಣಗಳಿಂದ ರಣರಂಗದಲ್ಲಿ ಅರ್ಜುನನನ್ನು ಹೊಡೆದನು.
ಪುನಶ್ಚೈವ ಶತೇನಾಸ್ಯ ಸಂರುರೋಧ ಮಹಾರಥಮ್ |
ತಮರ್ಜುನಸ್ತು ವಿಂಶತ್ಯಾ ವಿವ್ಯಾಧ ಯುಧಿ ಭಾರತ ॥ 29 ॥
ಪುನಃ ನೂರು ಬಾಣಗಳನ್ನು ಪ್ರಯೋಗಿಸಿ ಮಹಾರಥನಾದ ಅರ್ಜುನನನ್ನು ತಡೆದನು. ಎಲೈ ಭಾರತನೇ, ಅರ್ಜುನನು ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಅಥೇತರಾನ್ ಮಹೇಷ್ವಾಸಾಂಸ್ತ್ರಿಭಿಸ್ತ್ರಿಭಿರವಿಧ್ಯತ |
ಸಂವಾರ್ಯ ತಾನ್ ಬಾಣಗಣೈರ್ಯುಧಿ ರಾಜನ್ ಧನಂಜಯಃ |
ಅವಧೀತ್ ತಾವಕಾನ್ ಯೋಧಾನ್ ವಜ್ರಪಾಣಿರಿವಾಸುರಾನ್ ॥30॥
ಅನಂತರ ಉಳಿದ ಮಹಾಧನುರ್ಧಾರಿಗಳನ್ನು ಮೂರು-ಮೂರು ಬಾಣಗಳಿಂದ ಹೊಡೆದನು. ಎಲೈ ರಾಜನೇ, ಅರ್ಜುನನು ಆ ಮಹಾರಥರೆಲ್ಲರನ್ನೂ ತಡೆದು ವಜ್ರಪಾಣಿಯಾದ ಇಂದ್ರನು ಅಸುರರನ್ನು ಕೊಂದಂತೆ ನಿನ್ನ ಯೋಧರನ್ನು ಕೊಂದನು.
ಭುಜೈಶ್ಛಿನ್ನೈರ್ಮಹಾರಾಜ ಶರೀರೈಶ್ಚ ಸಹಸ್ರಶಃ |
ಸಮಾಸ್ತೀರ್ಣಾ ಧರಾ ತತ್ರ ಬಭೌ ಪುಷ್ಪೈರಿವಾಚಿತಾ ॥ 31 ॥
ಎಲೈ ಮಹಾರಾಜನೇ, ಕತ್ತರಿಸಲ್ಪಟ್ಟ ಸಹಸ್ರಾರು ಭುಜಗಳಿಂದಲೂ, ಸಹಸ್ರಾರು ಶರೀರಗಳಿಂದಲೂ ಹರಡಿದ ಭೂಮಿಯು ಪುಷ್ಪಗಳು ಹರಡಿದಂತೆ ಅಲ್ಲಿ ಶೋಭಿಸಿತು.
ಸ ವಿದ್ಧ್ವಾ ಶಕುನಿಂ ಭೂಯಃ ಪಂಚಭಿರ್ನತಪರ್ವಭಿಃ |
ಉಲೂಕಂ ತ್ರಿಭಿರಾಜಘ್ನೇ ತ್ರಿಭಿರೇವ ಮಹಾಯಸೈಃ ॥ 32 ॥
ಅರ್ಜುನನು ಶಕುನಿಯನ್ನು ಪುನಃ ಬಾಗಿದ ತುದಿಯುಳ್ಳ ಐದು ಬಾಣಗಳಿಂದ ಹೊಡೆದು, ಅವನ ಪುತ್ರನಾದ ಉಲೂಕನನ್ನು ಮೂರು ಕಬ್ಬಿಣದ ಬಾಣಗಳಿಂದ ಹೊಡೆದನು.
ತಮುಲೂಕಸ್ತಥಾ ವಿದ್ಧ್ವಾ ವಾಸುದೇವಮತಾಡಯತ್ |
ನನಾದ ಚ ಮಹಾನಾದಂ ಪೂರಯನ್ ವಸುಧಾತಳಮ್ ॥ 33 ॥
ಉಲೂಕನೂ ಸಹ ಹಾಗೆಯೇ ಅವನನ್ನು ಕಬ್ಬಿಣದಿಂದ ಮಾಡಿದ ಮೂರು ಬಾಣಗಳಿಂದ ಹೊಡೆದು, ಕೃಷ್ಣನನ್ನೂ ಹೊಡೆದು, ಭೂಮಿಯನ್ನು ತುಂಬುವಂತೆ ಮಹಾನಾದವನ್ನು ಮಾಡಿದನು.

ಅರ್ಜುನಸ್ತು ದ್ರುತಂ ಗತ್ವಾ ಶಕುನೇರ್ಧನುರಾಚ್ಛಿನತ್ |
ನಿನ್ಯೇ ಚ ಚತುರೋ ವಾಹಾನ್ ಯಮಸ್ಯ ಸದನಂ ಪ್ರತಿ ॥ 34 ॥
ಅರ್ಜುನನಾದರೋ ಶೀಘ್ರವಾಗಿ ಹೋಗಿ ಶಕುನಿಯ ಧನುಸ್ಸನ್ನು ಕತ್ತರಿಸಿ, ಅವನ ರಥದ ನಾಲ್ಕು ಅಶ್ವಗಳನ್ನು ಯಮಲೋಕಕ್ಕೆ ಕಳುಹಿಸಿದನು.
ತತೋ ರಥಾದವಪ್ಲುತ್ಯ ಸೌಬಲೋ ಭರತರ್ಷಭ |
ಉಲೂಕಸ್ಯ ರಥಂ ತೂರ್ಣಮಾರುರೋಹ ವಿಶಾಂಪತೇ ॥ 35 ॥
ಎಲೈ ರಾಜನೇ, ಭರತರ್ಷಭನೇ, ಆಗ ಶಕುನಿಯು ತನ್ನ ರಥದಿಂದ ಕೆಳಗೆ ಹಾರಿ ಶೀಘ್ರವಾಗಿ ಉಲೂಕನ ರಥವನ್ನು ಹತ್ತಿದನು.
ತಾವೇಕರಥಮಾರೂಢೌ ಪಿತಾಪುತ್ರೌ ಮಹಾರಥೌ |
ಪಾರ್ಥಂ ಸಿಷಿಚತುರ್ಬಾಣೈರ್ಗಿರಿಂ ಮೇಘಾವಿವೋತ್ಥಿತೌ ॥ 36 ॥
ಒಂದೇ ರಥವನ್ನು ಏರಿದ ಮಹಾರಥರಾದ ಆ ಪಿತಾ-ಪುತ್ರರು ಎದ್ದ ಮೋಡಗಳು ಪರ್ವತದ ಮೇಲೆ ಮಳೆಯನ್ನು ಸುರಿಸುವಂತೆ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತೌ ತು ವಿದ್ಧ್ವಾ ಮಹಾರಾಜ ಪಾಂಡವೋ ನಿಶಿತೈಃ ಶರೈಃ |
ವಿದ್ರಾವಯಂಸ್ತವ ಚಮೂಂ ಶತಶೋ ವ್ಯಧಮಚ್ಛರೈಃ ॥ 37 ॥
ಎಲೈ ಮಹಾರಾಜನೇ, ಪಾಂಡವನಾದ ಅರ್ಜುನನು ತೀಕ್ಷ್ಣವಾದ ಬಾಣಗಳಿಂದ ಅವರನ್ನು ಹೊಡೆದು ನಿನ್ನ ಸೈನ್ಯವನ್ನು ಚದುರಿಸುವವನಾಗಿ ನೂರಾರು ಬಾಣಗಳಿಂದ ನಿನ್ನ ಸೈನ್ಯವನ್ನು ನಾಶಗೊಳಿಸಿದನು.
ಅನಿಲೇನ ಯಥಾಭ್ರಾಣಿ ವಿಚ್ಛಿನ್ನಾನಿ ಸಮಂತತಃ |
ವಿಚ್ಛಿನ್ನಾನಿ ತಥಾ ರಾಜನ್ ಬಲಾನ್ಯಾಸನ್ ವಿಶಾಂಪತೇ ॥ 38॥
ಎಲೈ ರಾಜನೇ, ಬಲವಾದ ವಾಯುವಿನಿಂದ ಮೋಡಗಳು ಎಲ್ಲ ಕಡೆಗಳಲ್ಲಿಯೂ ಹರಡಿಹೋದಂತೆ ನಿನ್ನ ಸೈನ್ಯಗಳು ಒಡೆದುಹೋದವು.
ತದ್ಬಲಂ ಭರತಶ್ರೇಷ್ಠ ವಧ್ಯಮಾನಂ ತಥಾ ನಿಶಿ |
ಪ್ರದುದ್ರಾವ ದಿಶಃ ಸರ್ವಾ ವೀಕ್ಷಮಾಣಂ ಭಯಾರ್ದಿತಮ್ ॥ 39 ॥
ಎಲೈ ಭರತಶ್ರೇಷ್ಠನೇ, ಆ ರಾತ್ರಿಯಲ್ಲಿ ಹೀಗೆ ಹೊಡೆಯಲ್ಪಡುತ್ತಿದ್ದ ನಿನ್ನ ಸೈನ್ಯವು ಭಯದಿಂದ ಪೀಡಿತವಾಗಿ ಎಲ್ಲ ದಿಕ್ಕುಗಳನ್ನೂ ನೋಡುತ್ತಾ ಓಡಿಹೋಯಿತು.
ಉತ್ಸೃಜ್ಯ ವಾಹಾನ್ ಸಮರೇ ಚೋದಯಂತಸ್ತಥಾಪರೇ |
ಸಂಭ್ರಾಂತಾಃ ಪರ್ಯಧಾವಂತ ತಸ್ಮಿಂಸ್ತಮಸಿ ದಾರುಣೇ ॥ 40 ॥
ಕೆಲವರು ವಾಹನವನ್ನು ಬಿಟ್ಟರು, ಕೆಲವರು ರಣರಂಗದಲ್ಲಿ ತಮ್ಮ ವಾಹನಗಳನ್ನು ಪ್ರಚೋದಿಸುತ್ತಾ ದಿಗ್ಭ್ರಾಂತರಾಗಿ ಆ ದಾರುಣವಾದ ಕತ್ತಲೆಯಲ್ಲಿ ಓಡಿಹೋದರು.
ವಿಜಿತ್ಯ ಸಮರೇ ಯೋಧಾಂಸ್ತಾವಕಾನ್ ಭರತರ್ಷಭ |
ದಧ್ಮತುರ್ಮುದಿತೌ ಶಂಖೌ ವಾಸುದೇವಧನಂಜಯೌ ॥ 41 ॥
ಎಲೈ ಭರತಶ್ರೇಷ್ಠನೇ, ವಾಸುದೇವಾರ್ಜುನರು ನಿನ್ನ ಯೋಧರನ್ನು ಯುದ್ಧದಲ್ಲಿ ಗೆದ್ದು, ಸಂತೋಷಗೊಂಡು ತಮ್ಮ ಶಂಖವನ್ನು ಊದಿದರು.
ಧೃಷ್ಟದ್ಯುಮ್ನೋ ಮಹಾರಾಜ ದ್ರೋಣಂ ವಿದ್ಧ್ವಾ ತ್ರಿಭಿಃ ಶರೈಃ |
ಚಿಚ್ಛೇದ ಧನುಷಸ್ತೂರ್ಣಂ ಜ್ಯಾಂ ಶರೇಣ ಶಿತೇನ ಹ ॥ 42 ॥
ಎಲೈ ಮಹಾರಾಜನೇ, ಧೃಷ್ಟದ್ಯುಮ್ನನು ಮೂರು ಬಾಣಗಳಿಂದ ದ್ರೋಣರನ್ನು ಹೊಡೆದು ಶೀಘ್ರವಾಗಿ ಒಂದು ನಿಶಿತವಾದ ಬಾಣದಿಂದ ಅವರ ಧನುಸ್ಸಿನ ಹೆದೆಯನ್ನು ಕತ್ತರಿಸಿದನು.
ತನ್ನಿಧಾಯ ಧನುರ್ನೀಡೇ ದ್ರೋಣಃ ಕ್ಷತ್ರಿಯಮರ್ದನಃ |
ಆದದೇಽನ್ಯದ್ಧನುಃ ಶೂರೋ ವೇಗವತ್ ಸಾರವತ್ತರಮ್ ॥ 43 ॥
ಕ್ಷತ್ರಿಯಮರ್ದನರೂ, ಶೂರರೂ ಆದ ದ್ರೋಣರು ಕತ್ತರಿಸಿದ ಆ ಧನುಸ್ಸನ್ನು ರಥದಲ್ಲಿಟ್ಟು, ವೇಗಶಾಲಿಯೂ, ಮೊದಲಿಗಿಂತಲೂ ದೃಢತರವೂ ಆದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡರು.
ಧೃಷ್ಟದ್ಯುಮ್ನಂ ತತೋ ದ್ರೋಣೋ ವಿದ್ಧ್ವಾ ಸಪ್ತಭಿರಾಶುಗೈಃ |
ಸಾರಥಿಂ ಪಂಚಭಿರ್ಬಾಣೈ ರಾಜನ್ ವಿವ್ಯಾಧ ಸಂಯುಗೇ ॥ 44 ॥
ಎಲೈ ರಾಜನೇ, ಅನಂತರ ದ್ರೋಣರು ಶೀಘ್ರಗಾಮಿಗಳಾದ ಏಳು ಬಾಣಗಳಿಂದ ಧೃಷ್ಟದ್ಯುಮ್ನನನ್ನು ಹೊಡೆದು ರಣರಂಗದಲ್ಲಿ ಐದು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದರು.
ತಂ ನಿವಾರ್ಯ ಶರೈಸ್ತೂರ್ಣಂ ಧೃಷ್ಟದ್ಯುಮ್ನೋ ಮಹಾರಥಃ |
ವ್ಯಧಮತ್ ಕೌರವೀಂ ಸೇನಾಂ ಶತಶೋಽಥ ಸಹಸ್ರಶಃ ॥ 45 ॥
ಮಹಾರಥನಾದ ಧೃಷ್ಟದ್ಯುಮ್ನನು ತನ್ನ ಬಾಣಗಳಿಂದ ಅವರನ್ನು ಶೀಘ್ರವಾಗಿ ತಡೆದು, ಕೌರವಸೈನ್ಯವನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ನಾಶಪಡಿಸಿದನು.
ವಧ್ಯಮಾನೇ ಬಲೇ ತಸ್ಮಿಂಸ್ತವ ಪುತ್ರಸ್ಯ ಮಾರಿಷ |
ಪ್ರಾವರ್ತತ ನದೀ ಘೋರಾ ಶೋಣಿತೌಘತರಂಗಿಣೀ ॥ 46 ॥
ಉಭಯೋಃ ಸೇನಯೋರ್ಮಧ್ಯೇ ನರಾಶ್ವದ್ವಿಪವಾಹಿನೀ |

ಯಥಾ ವೈತರಣೀ ರಾಜನ್ ಯಮರಾಷ್ಟ್ರಪುರಂ ಪ್ರತಿ ॥ 47 ॥
ಎಲ್ಲೈ ಶ್ರೇಷ್ಠನೇ, ರಾಜನೇ, ನಿನ್ನ ಪುತ್ರನ ಸೈನ್ಯವು ಹಾಗೆ ವಧಿಸಲ್ಪಡುತ್ತಿರಲು ಎರಡು ಸೈನ್ಯಗಳ ಮಧ್ಯದಲ್ಲಿ ಮೃತರಾದ ನರ-ಅಶ್ವ-ಗಜಗಳನ್ನು ಕೊಚ್ಚಿಕೊಂಡು ಹೋಗುವ, ಯಮಪಟ್ಟಣದ ವೈತರಣಿ ನದಿಯಂತಿರುವ ಘೋರವಾದ, ರಕ್ತಪ್ರವಾಹದ ಅಲೆಗಳುಳ್ಳ ನದಿಯು ಹರಿಯಿತು.
ದ್ರಾವಯಿತ್ವಾ ತು ತತ್ ಸೈನ್ಯಂ ಧೃಷ್ಟದ್ಯುಮ್ನಃ ಪ್ರತಾಪವಾನ್ |
ಅತ್ಯರಾಜತ ತೇಜಸ್ವೀ ಶಕ್ರೋ ದೇವಗಣೇಷ್ವಿವ ॥ 48 ॥
ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನು ಆ ನಿನ್ನ ಸೈನ್ಯವನ್ನು ಓಡಿಸಿ ತೇಜಸ್ವಿಯಾಗಿ ದೇವಗಣಗಳಲ್ಲಿ ಇಂದ್ರನಂತೆ ಬಹಳವಾಗಿ ಶೋಭಿಸಿದನು.
ಅಥ ದಧ್ಮುರ್ಮಹಾಶಂಖಾನ್ ಧೃಷ್ಟದ್ಯುಮ್ನಶಿಖಂಡಿನೌ |
ಯಮೌ ಚ ಯುಯುಧಾನಶ್ಚ ಪಾಂಡವಶ್ಚ ವೃಕೋದರಃ ॥ 49 ॥
ಅನಂತರ ಧೃಷ್ಟದ್ಯುಮ್ನ-ಶಿಖಂಡಿಗಳೂ, ನಕುಲ-ಸಹದೇವರೂ, ಸಾತ್ಯಕಿಯೂ, ಪಾಂಡವನಾದ ವೃಕೋದರನೂ ತಮ್ಮ ಶಂಖಗಳನ್ನು ಊದಿದರು.
ಜಿತ್ವಾ ರಥಸಹಸ್ರಾಣಿ ತಾವಕಾನಾಂ ಮಹಾರಥಾಃ |
ಸಿಂಹನಾದರವಾಂಶ್ಚಕ್ರುಃ ಪಾಂಡವಾ ಜಿತಕಾಶಿನಃ ॥ 50 ॥
ಪಶ್ಯತಸ್ತವ ಪುತ್ರಸ್ಯ ಕರ್ಣಸ್ಯ ಚ ಮದೋತ್ಕಟಾಃ |
ತಥಾ ದ್ರೋಣಸ್ಯ ಶೂರಸ್ಯ ದ್ರೌಣೇಶ್ಚೈವ ವಿಶಾಂಪತೇ ॥ 51 ॥
ಎಲೈ ರಾಜನೇ, ಮಹಾರಥರಾದ ಪಾಂಡವರು ನಿನ್ನ ಪುತ್ರನೂ ಮತ್ತು ಕರ್ಣನೂ, ಶೂರನಾದ ದ್ರೋಣರೂ ಮತ್ತು ಅಶ್ವತ್ಥಾಮರೂ ನೋಡುತ್ತಿರುವಂತೆಯೇ ಮದೋತ್ಕಟರಾಗಿ ಸಹಸ್ರಾರು ರಥರನ್ನು ಗೆದ್ದು ಜಯವನ್ನು ಹೊಂದಿ ಸಿಂಹನಾದವನ್ನು ಮಾಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೆಂಟನೆಯ ಅಧ್ಯಾಯ
ದ್ರೋಣ-ಕರ್ಣರನ್ನು ಕುರಿತು ದುರ್ಯೋಧನನ ನಿಂದಾವಾಕ್ಯಗಳು. ಅನಂತರದಲ್ಲಿ ಘೋರವಾದ ಸಂಗ್ರಾಮ.
ಸಂಜಯಃ
ವಿದ್ರುತಂ ಸ್ವಬಲಂ ದೃಷ್ಟ್ವಾ ವಧ್ಯಮಾನಂ ಮಹಾತ್ಮಭಿಃ |
ಕ್ರೋಧೇನ ಮಹತಾಽಽವಿಷ್ಟಃ ಪುತ್ರಸ್ತವ ವಿಶಾಂಪತೇ ॥ 1 ॥
ಅಭ್ಯೇತ್ಯ ಸಹಸಾ ಕರ್ಣಂ ದ್ರೋಣಂ ಚ ಜಯತಾಂ ವರಮ್ |
ಅಮರ್ಷವಶಮಾಪನ್ನೋ ವಾಕ್ಯಜ್ಞೋ ವಾಕ್ಯಮಬ್ರವೀತ್ ॥ 2 ॥
ಸಂಜಯ ತನ್ನ ಸೈನ್ಯವು ಮಹಾತ್ಮರಾದ ಪಾಂಡವರಿಂದ ಭಗ್ನವಾಗುತ್ತಿರುವುದನ್ನು ನೋಡಿ ಎಲೈ ರಾಜನೇ, ಬಹಳ ಕ್ರೋಧದಿಂದ ಕೂಡಿದ ನಿನ್ನ ಪುತ್ರನು ಜಯಶೀಲರಲ್ಲಿ ಶ್ರೇಷ್ಠರಾದ ಕರ್ಣನನ್ನೂ ಮತ್ತು ದ್ರೋಣರನ್ನೂ ಸಮೀಪಿಸಿ ಮಾತುಬಲ್ಲ ಅವನು ಮಾತನಾಡಿದನು.
ಭವದ್ಭ್ಯಾಮಿಹ ಸಂಗ್ರಾಮೋ ಕ್ರುದ್ಧಾಭ್ಯಾಂ ಸಂಪ್ರವರ್ತಿತಃ |
ಆಹವೇ ನಿಹತಂ ದೃಷ್ಟ್ವಾ ಸೈಂಧವಂ ಸವ್ಯಸಾಚಿನಾ ॥ 3 ॥
ಯುದ್ಧದಲ್ಲಿ ಅರ್ಜುನನಿಂದ ಸೈಂಧವನು ಹತನಾದುದನ್ನು ನೋಡಿ ಕೋಪಗೊಂಡ ನೀವಿಬ್ಬರೂ ಇಲ್ಲಿ ಯುದ್ಧವನ್ನು ಪ್ರಾರಂಭಿಸಿದಿರಿ.
ನಿಹನ್ಯಮಾನಾಂ ಪಾಂಡೂನಾಂ ಬಲೇನ ಮಮ ವಾಹಿನೀಮ್ |
ಭೂತ್ವಾ ತದ್ವಿಜಯೇ ಶಕ್ತಾವಶಕ್ತಾವಿವ ಪಶ್ಯತಃ ॥ 4 ॥
ಪಾಂಡವರ ಸೈನ್ಯದಿಂದ ಹತವಾಗುತ್ತಿರುವ ನನ್ನ ಸೈನ್ಯವನ್ನು ನೋಡುತ್ತಾ ನೀವು ಗೆಲ್ಲಲು ಶಕ್ತರಾದರೂ ಅಶಕ್ತರಂತೆ ಸುಮ್ಮನಿದ್ದೀರಿ.
ಯದ್ಯಹಂ ಭವತೋಸ್ತ್ಯಾಜ್ಯೋ ನ ವಾಚ್ಯೋಽಸ್ಮಿ ತದೈವ ಹಿ |
ಆವಾಂ ಪಾಂಡುಸುತಾನ್ ಸಂಖ್ಯೇ ಜೇಷ್ಯಾವ ಇತಿ ಮಾನದೌ ॥ 5 ॥
ನಾನು ನಿಮ್ಮಿಂದ ಪರಿತ್ಯಾಜ್ಯನಾಗಿದ್ದರೆ ಮಾನದರಾದ ನೀವು ನಾವಿಬ್ಬರೂ ಪಾಂಡು ಸುತರನ್ನು ಯುದ್ಧದಲ್ಲಿ ಗೆಲ್ಲುವೆವು ಎಂದು ಆಗಲೇ ಹೇಳಬಾರದಾಗಿದ್ದಿತು.
ತದೈವಾಹಂ ವಚಃ ಶ್ರುತ್ವಾ ಭವದ್ಭ್ಯಾಮನು ಸಮ್ಮತಮ್ |
ಕೃತವಾನ್ ಪಾಂಡವೈಃ ಸಾರ್ಧಂ ವೈರಂ ಯೋಧವಿನಾಶನಮ್ ॥ 6 ॥
ನಿಮ್ಮ ಮಾತುಗಳನ್ನು ಕೇಳಿ ನಾನು ನಿಮ್ಮ ಸಮ್ಮತಿಯಂತೆ ಪಾಂಡವರ ಜೊತೆಯಲ್ಲಿ ಯೋಧ ವಿನಾಶಕರವಾದ ವೈರವನ್ನು ಮಾಡಿದೆನು.
ಯದಿ ನಾಹಂ ಪರಿತ್ಯಾಜ್ಯೋ ಭವದ್ಭ್ಯಾಂ ಪುರುಷರ್ಷಭೌ |
ಯುದ್ಧ್ಯೇತಾಮನುರೂಪೇಣ ವಿಕ್ರಮೇಣ ಸುವಿಕ್ರಮೌ ॥ 7 ॥

ಎಲ್ಲೈ ಪುರುಷಶ್ರೇಷ್ಠರೇ, ನಾನು ನಿಮ್ಮಿಂದ ಪರಿತ್ಯಾಜ್ಯನಲ್ಲದಿದ್ದರೆ ಬಹಳ ವಿಕ್ರಮಶಾಲಿಗಳಾದ ನೀವು ನಿಮಗೆ ಅನುರೂಪವಾದ ಪರಾಕ್ರಮದಿಂದ ಯುದ್ಧವನ್ನು ಮಾಡಿ (ಎಂದು ಹೇಳಿದನು).
ಸಂಜಯಃ
ವಾಕ್ಪ್ರತೋದೇನ ತೌ ವೀರೌ ಪ್ರಣುನ್ನೌ ತನಯೇನ ತೇ |
ಪ್ರಾವರ್ತಯೇತಾಂ ತೌ ಯುದ್ಧಂ ಘಟ್ಟಿತಾವಿವ ಪನ್ನಗೌ ॥ 8 ॥
ಸಂಜಯ ನಿನ್ನ ಪುತ್ರನ ವಾಕ್ಯದ ಚಾವಟಿಗಳಿಂದ ಹೀಗೆ ಹಿಂಸಿಸಲ್ಪಟ್ಟ ಆ ವೀರರು ಕೋಲಿನಿಂದ ಹೊಡೆಯಲ್ಪಟ್ಟ ಸರ್ಪಗಳಂತೆ ಯುದ್ಧವನ್ನು ಪ್ರಾರಂಭಿಸಿದರು.
ತತಸ್ತೌ ರಥಿನಾಂ ಶ್ರೇಷ್ಠೌ ಸರ್ವಲೋಕಧನುರ್ಧರೌ |
ಶೈನೇಯಪ್ರಮುಖಾನ್ ಪಾರ್ಥಾನಭಿದುದ್ರುವತೂ ರಣೇ ॥ 9 ॥
ಆಗ ಸರ್ವಲೋಕ ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಮಹಾರಥರಾದ ಅವರಿಬ್ಬರೂ ಸಾತ್ಯಕಿಯೇ ಮೊದಲಾದ ಪಾಂಡವರನ್ನು ರಣರಂಗದಲ್ಲಿ ಸಮೀಪಿಸಿದರು.
ತಥೈವ ಸಹಿತಾಃ ಪಾರ್ಥಾಃ ಸ್ವೇನ ಸೈನ್ಯೇನ ಸಂವೃತಾಃ |
ಅಭ್ಯವರ್ತಂತ ತೌ ವೀರೌ ನರ್ದಮಾನೌ ಮುಹುರ್ಮುಹುಃ ॥ 10 ॥
ಹಾಗೆಯೇ ತಮ್ಮ ಸೈನ್ಯದಿಂದ ಒಡಗೂಡಿದ ಪಾಂಡವರೂ ಸಹ ಪುನಃ ಪುನಃ ಗರ್ಜನೆಯನ್ನು ಮಾಡುತ್ತಾ ವೀರರಾದ ಅವರಿಬ್ಬರ ಮೇಲೆ ಎರಗಿದರು.
ಅಥ ದ್ರೋಣೋ ಮಹೇಷ್ವಾಸೋ ದಶಭಿಃ ಶಿನಿಪುಂಗವಮ್ |
ಅವಿದ್ಧ್ಯತ್ ತ್ವರಿತಂ ಕ್ರುದ್ಧಃ ಸರ್ವಶಸ್ತ್ರಭೃತಾಂ ವರಃ ॥ 11 ॥
ಅನಂತರ ಮಹಾಧನುರ್ಧಾರಿಗಳೂ, ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರೂ ಆದ ದ್ರೋಣರು ಕೋಪಗೊಂಡು ಶೀಘ್ರವಾಗಿ ಹತ್ತು ಬಾಣಗಳಿಂದ ಸಾತ್ಯಕಿಯನ್ನು ಹೊಡೆದರು.
ಕರ್ಣಶ್ಚ ದಶಭಿರ್ಬಾಣೈಃ ಪುತ್ರಶ್ಚ ತವ ಸಪ್ತಭಿಃ |
ದಶಭಿರ್ವೃಷಸೇನಶ್ಚ ಸೌಬಲಶ್ಚಾಪಿ ಸಪ್ತಭಿಃ |
ಏತೇ ಕೌರವ ಸಂಕ್ರಂದೇ ಶೈನೇಯಂ ಪರ್ಯವಾರಯನ್ ॥ 12 ॥
ಎಲ್ಲೈ ಕೌರವನೇ, ಕರ್ಣನು ಹತ್ತು ಬಾಣಗಳಿಂದಲೂ, ನಿನ್ನ ಪುತ್ರನು ಏಳು ಬಾಣಗಳಿಂದಲೂ, ವೃಷಸೇನನು ಹತ್ತು ಬಾಣಗಳಿಂದಲೂ, ಶಕುನಿಯು ಏಳು ಬಾಣಗಳಿಂದಲೂ ಹೊಡೆದು ಯುದ್ಧದಲ್ಲಿ ಸಾತ್ಯಕಿಯನ್ನು ಸುತ್ತಲೂ ತಡೆದರು.
ದೃಷ್ಟ್ವಾ ಚ ಸಮರೇ ದ್ರೋಣಂ ನಿಘ್ನಂತಂ ಪಾಂಡವೀಂ ಚಮೂಮ್ |
ವಿವ್ಯಧುಃ ಸೋಮಕಾಸ್ತೂರ್ಣಂ ಸಮಂತಾಚ್ಛರವೃಷ್ಟಿಭಿಃ ॥ 13 ॥
ದ್ರೋಣರು ಪಾಂಡವರ ಸೇನೆಯನ್ನು ರಣರಂಗದಲ್ಲಿ ಕೊಲ್ಲುತ್ತಿರುವುದನ್ನು ನೋಡಿದ ಸೋಮಕರು ಶೀಘ್ರವಾಗಿ ಬಾಣಗಳ ಮಳೆಯಿಂದ ಎಲ್ಲ ಕಡೆಗಳಿಂದಲೂ ಅವರನ್ನು ಹೊಡೆದರು.
ತತೋ ದ್ರೋಣೋಽಹರತ್ ಪ್ರಾಣಾನ್ ಕ್ಷತ್ರಿಯಾಣಾಂ ವಿಶಾಂಪತೇ |
ರಶ್ಮಿಭಿರ್ಭಾಸ್ಕರೋ ರಾಜಂಸ್ತಮಸಾಮಿವ ಭಾರತ ॥ 14 ॥
ಎಲ್ಲೈ ರಾಜನೇ, ಭಾರತನೇ, ಆಗ ದ್ರೋಣರು ಸೂರ್ಯನು ತನ್ನ ಕಿರಣಗಳಿಂದ ಕತ್ತಲೆಯನ್ನು ನಾಶಮಾಡಿದಂತೆ ಕ್ಷತ್ರಿಯರ ಪ್ರಾಣಗಳನ್ನು ವಿನಾಶಗೊಳಿಸಿದರು.
ದ್ರೋಣೇನ ವಧ್ಯಮಾನಾನಾಂ ಪಾಂಚಾಲಾನಾಂ ವಿಶಾಂಪತೇ |
ಶುಶ್ರುವೇ ತುಮುಲಃ ಶಬ್ದಃ ಕ್ರೋಶತಾಮಿತರೇತರಮ್ ॥ 15 ॥
ಎಲ್ಲೈ ರಾಜನೇ, ದ್ರೋಣರಿಂದ ಹೊಡೆಯಲ್ಪಡುತ್ತಿದ್ದ ಪಾಂಚಾಲರ ಪರಸ್ಪರವಾಗಿ ಕಿರುಚುವ ತೀವ್ರವಾದ ನಾದವು ಕೇಳಿಬಂದಿತು.
ಪುತ್ರಾನನ್ಯೇ ಪಿತೄನನ್ಯೇ ಭ್ರಾತೄನನ್ಯೇ ಚ ಮಾತುಲಾನ್ |
ಭಾಗಿನೇಯಾನ್ ವಯಸ್ಯಾಂಶ್ಚ ತಥಾ ಸಂಬಂಧಿಬಾಂಧವಾನ್ |
ಉತ್ಸೃಜ್ಯೋತ್ಸೃಜ್ಯ ಗಚ್ಛಂತಿ ತ್ವರಿತಾ ಜೀವಿತೇಪ್ಸವಃ ॥ 16 ॥
ಕೆಲವರು ಪುತ್ರರನ್ನೂ, ಕೆಲವರು ಪಿತೃಗಳನ್ನೂ, ಕೆಲವರು ಸಹೋದರರರನ್ನೂ, ಕೆಲವರು ಸೋದರಮಾವಂದಿರನ್ನೂ, ಕೆಲವರು ಸೋದರಳಿಯಂದಿರನ್ನೂ, ಕೆಲವರು ಸ್ನೇಹಿತರನ್ನೂ, ಇನ್ನು ಕೆಲವರು ಸಂಬಂಧಿ ಬಾಂಧವರನ್ನೂ ಬಿಟ್ಟು ಬಿಟ್ಟು ಪ್ರಾಣವನ್ನು ಉಳಿಸಿಕೊಳ್ಳುವ ಆಸೆಯಿಂದ ಶೀಘ್ರವಾಗಿ ಓಡಿಹೋದರು.
ಅಪರೇ ಮೋಹಿತಾ ಮೋಹಾತ್ ತಮೇವಾಭಿಮುಖಾ ಯಯುಃ |
ಪಾಂಡವಾನಾಂ ರಣೇ ಯೋಧಾಃ ಪರಲೋಕಂ ತಥಾಪರೇ ॥ 17 ॥
ಇನ್ನು ಕೆಲವರು ಭ್ರಾಂತಿಗೆ ಒಳಗಾಗಿ ದ್ರೋಣರಿಗೇ ಅಭಿಮುಖವಾಗಿ ಹೋದರು. ಇನ್ನು ಕೆಲವು ಪಾಂಡವ ಯೋಧರು ಪರಲೋಕಕ್ಕೆ ಹೋದರು.
ಸಾ ತಥಾ ಪಾಂಡವೀ ಸೇನಾ ವಧ್ಯಮಾನಾ ಮಹಾತ್ಮಭಿಃ |
ನಿಶಿ ಸಂಪ್ರಾದ್ರವದ್ ರಾಜನ್ನುತ್ಸೃಜ್ಯೋಲ್ಕಾಃ ಸಹಸ್ರಶಃ ॥ 18 ॥
ಪಶ್ಯತೋ ಭೀಮಸೇನಸ್ಯ ವಿಜಯಸ್ಯಾಚ್ಯುತಸ್ಯ ಚ |
ಯಮಯೋರ್ಧರ್ಮಪುತ್ರಸ್ಯ ಪಾರ್ಷತಸ್ಯ ಚ ಪಶ್ಯತಃ ॥ 19 ॥
ಎಲ್ಲೈ ರಾಜನೇ, ಮಹಾತ್ಮರಿಂದ ಹೊಡೆಯಲ್ಪಟ್ಟ ಪಾಂಡವರ ಆ ಸೇನೆಯು ರಾತ್ರಿಯ ಕಾಲದಲ್ಲಿ ತಮ್ಮ ಪಂಜುಗಳನ್ನು ಅಲ್ಲಲ್ಲಿಯೇ

ಬಿಟ್ಟು ಭೀಮಸೇನನು, ಅರ್ಜುನನು, ಕೃಷ್ಣನು, ನಕುಲ-ಸಹದೇವರು, ಧರ್ಮಪುತ್ರನು ಮತ್ತು ಧೃಷ್ಟದ್ಯುಮ್ನನು ನೋಡುತ್ತಿರುವಂತೆಯೇ ಓಡಿಹೋಯಿತು.

ತಮಸಾ ಸಂವೃತೇ ಲೋಕೇ ನ ಪ್ರಾಜ್ಞಾಯತ ಕಿಂಚನ |
ಕೌರವಾಣಾಂ ಪ್ರಕಾಶೇನ ದೃಶ್ಯಂತೇ ತು ದ್ರುತಾಃ ಪರೇ ॥ 20 ॥

ಪ್ರಪಂಚವು ಕತ್ತಲೆಯಿಂದ ತುಂಬಿರಲು ಯಾವುದೂ ತಿಳಿಯಲಿಲ್ಲ. ಕೌರವರು ಮಾಡಿದ ದೀಪದ ಪ್ರಕಾಶದಿಂದ ಪಾಂಡವರ ಯೋಧರು ಓಡುವುದು ಕಂಡು ಬರುತ್ತಿದ್ದಿತು.

ದ್ರವಮಾಣಂ ತು ತತ್ ಸೈನ್ಯಂ ದ್ರೋಣಕರ್ಣೌ ಮಹಾರಥೌ |
ಜಘ್ನತುಃ ಪೃಷ್ಠತೋ ರಾಜನ್ ಕಿರಂತೌ ಸಾಯಕಾನ್ ಬಹೂನ್ ॥21॥

ಎಲೈ ರಾಜನೇ, ಮಹಾರಥರಾದ ದ್ರೋಣ-ಕರ್ಣರು ಓಡುತ್ತಿರುವ ಸೈನ್ಯವನ್ನು ಅನೇಕ ಬಾಣಗಳನ್ನು ಪ್ರಯೋಗಿಸುತ್ತಾ ಹಿಂಭಾಗದಿಂದ ಹೊಡೆದರು.

ಪಾಂಚಾಲೇಷು ಪ್ರಭಗ್ನೇಷು ದೀರ್ಯಮಾಣೇಷು ಸರ್ವಶಃ |
ಜನಾರ್ದನೋ ದೀನಮನಾಃ ಪ್ರತ್ಯಭಾಷತ ಫಲ್ಗುನಮ್ ॥ 22 ॥

ಪಾಂಚಾಲರು ಭಗ್ನಗೊಂಡು ಸೈನ್ಯವು ಎಲ್ಲ ಕಡೆಯಲ್ಲಿಯೂ ಚದುರಿಹೋಗುತ್ತಿರಲು ಕೃಷ್ಣನು ದೀನಮನಸ್ಸಿನಿಂದ ಕೂಡಿದವನಾಗಿ ಅರ್ಜುನನನ್ನು ಕುರಿತು ಹೇಳಿದನು.

ದ್ರೋಣಕರ್ಣೌ ಮಹೇಷ್ವಾಸಾವೇತೌ ಪಾರ್ಷತಸಾತ್ಯಕ |
ಪಾಂಚಾಲಾಂಶ್ಚೈವ ಸಹಿತೌ ಜಘ್ನತುಃ ಸಾಯಕೈರ್ಭೃಶಮ್ ॥ 23 ॥

ಮಹಾಧನುರ್ಧಾರಿಗಳಾದ ದ್ರೋಣ-ಕರ್ಣರು ಸಹಿತರಾಗಿ ತಮ್ಮ ಬಾಣಗಳಿಂದ ಧೃಷ್ಟದ್ಯುಮ್ನ-ಸಾತ್ಯಕಿಯರನ್ನು ಮತ್ತು ಪಾಂಚಾಲರನ್ನು ತೀವ್ರವಾಗಿ ಹೊಡೆಯುತ್ತಿದ್ದಾರೆ.

ಏತಯೋಃ ಶರವರ್ಷೇಣ ಪ್ರಭಗ್ನಾ ನೋ ಮಹಾರಥಾಃ |
ವಾರ್ಯಮಾಣಾಪಿ ಕೌಂತೇಯ ಪೃತನಾ ನಾವತಿಷ್ಠತೇ ॥ 24 ॥

ಎಲೈ ಕೌಂತೇಯನೇ, ಇವರಿಬ್ಬರ ಶರವೃಷ್ಟಿಯಿಂದ ನಮ್ಮ ಮಹಾರಥರು ಭಗ್ನಗೊಂಡಿದ್ದಾರೆ. ತಡೆದರೂ ನಮ್ಮ ಸೈನ್ಯವು ನಿಲ್ಲುತ್ತಿಲ್ಲ.

ಏತಾವಾವಾಂ ಸರ್ವಸೈನ್ಯೈರ್ವ್ಯೂಢೈಃ ಸಮ್ಯಗುದಾಯುಧೈಃ |
ದ್ರೋಣಂ ಚ ಸೂತಪುತ್ರಂ ಚ ಪ್ರಯತಾವಃ ಪ್ರಬಾಧಿತುಮ್ ॥ 25 ॥

ನಾವಿಬ್ಬರೂ ಶ್ರೇಷ್ಠವಾದ ಆಯುಧವನ್ನು ಹಿಡಿದ ನಮ್ಮ ಸೈನ್ಯದ ಜೊತೆಯಲ್ಲಿ ಸೇರಿ ದ್ರೋಣರನ್ನು ಮತ್ತು ಕರ್ಣನನ್ನು ಬಾಧಿಸಲು ಪ್ರಯತ್ನವನ್ನು ಮಾಡೋಣ.

ಏತೌ ಹಿ ಬಲಿನೌ ಶೂರೌ ಕೃತಾಸ್ತ್ರೌ ಜಿತಕಾಶಿನೌ |
ಉಪೇಕ್ಷಿತೌ ಬಲಂ ಕ್ರುದ್ಧೌ ನಾಶಯೇತಾಂ ನಿಶಾಮಿಮಾಮ್ |
ಏಷ ಭೀಮೋಽಭಿಯಾತ್ಯುಗ್ರಃ ಪುನರಾವರ್ತ್ಯ ವಾಹಿನೀಮ್ ॥ 26 ॥

ಇವರಿಬ್ಬರೂ ಜಯವನ್ನು ಕಂಡವರು, ಅಸ್ತ್ರಕೌಶಲವುಳ್ಳವರು, ಶೂರರಾದವರು ಮತ್ತು ಬಲಿಷ್ಠರಾದವರು. ಇವರನ್ನು ಉಪೇಕ್ಷೆ ಮಾಡಿದರೆ ಕ್ರುದ್ಧರಾದ ಇವರು ಈ ರಾತ್ರಿಯಲ್ಲಿ ನಮ್ಮ ಸೈನ್ಯವನ್ನು ನಾಶಮಾಡಿಯಾರು. ಈ ಉಗ್ರನಾದ ಭೀಮಸೇನನು ನಮ್ಮ ಸೈನ್ಯವನ್ನು ಹಿಂದಿರುಗಿಸಿ ಈ ಕಡೆಯಲ್ಲಿಯೇ ಬರುತ್ತಿದ್ದಾನೆ (ಎಂದು ಹೇಳಿದನು).

ವೃಕೋದರಂ ತಥಾಽಽಯಾಂತಂ ದೃಷ್ಟ್ವಾ ತತ್ರ ಜನಾರ್ದನಃ |
ಪುನರೇವಾಬ್ರವೀದ್ ರಾಜನ್ ಹರ್ಷಯನ್ನಿವ ಪಾಂಡವಮ್ ॥ 27 ॥

ಭೀಮಸೇನನು ಹಾಗೆ ಬರುತ್ತಿರುವುದನ್ನು ನೋಡಿ, ಎಲೈ ರಾಜನೇ, ಜನಾರ್ದನನು ಅರ್ಜುನನನ್ನು ಹರ್ಷಪಡಿಸುತ್ತಾ ಪುನಃ ಮಾತನಾಡಿದನು.

ಏಷ ಭೀಮೋ ರಣಶ್ಲಾಘೀ ವೃತಃ ಸೋಮಕಪಾಂಡವೈಃ |
ರುಷಿತೋಽಭ್ಯೇತಿ ವೇಗೇನ ದ್ರೋಣಕರ್ಣೌ ಮಹಾಬಲೌ ॥ 28 ॥

ರಣಶ್ಲಾಘಿಯಾದ ಈ ಭೀಮಸೇನನು ಸೋಮಕ-ಪಾಂಡವ ಸೈನ್ಯದಿಂದ ಕೂಡಿ ಕೋಪಗೊಂಡು ವೇಗದಿಂದ ಮಹಾಬಲರಾದ ದ್ರೋಣ-ಕರ್ಣರ ಕಡೆಗೆ ಬರುತ್ತಿದ್ದಾನೆ.

ಏತೇನ ಸಹಿತೋ ಯುದ್ಧ್ಯ ಪಾಂಚಾಲ್ಯೈಶ್ಚ ಮಹಾರಥೈಃ |
ಆಶ್ವಾಸನಾರ್ಥಂ ಸರ್ವೇಷಾಂ ಸೈನ್ಯಾನಾಂ ಪಾಂಡುನಂದನ ॥ 29 ॥

ಎಲೈ ಪಾಂಡುನಂದನನೇ, ಎಲ್ಲ ಸೈನ್ಯಗಳಲ್ಲಿಯೂ ಭರವಸೆಯನ್ನು ಕೊಡಲು ಭೀಮನಿಂದಲೂ ಮತ್ತು ಮಹಾರಥರಾದ ಪಾಂಚಾಲರಿಂದಲೂ ಸಹಿತನಾಗಿ ಯುದ್ಧವನ್ನು ಮಾಡು (ಎಂದು ಹೇಳಿದನು).

ಸಂಜಯಃ

ತತಸ್ತೌ ಪುರುಷವ್ಯಾಘ್ರಾವುಭೌ ಮಾಧವಪಾಂಡವೌ |
ದ್ರೋಣಕರ್ಣೌ ಸಮಾಸಾದ್ಯ ಧಿಷ್ಠಿತೌ ರಣಮೂರ್ಧನಿ ॥ 30 ॥

ಸಂಜಯ ಆಗ ಪುರುಷವ್ಯಾಘ್ರರಾದ ಕೃಷ್ಣಾರ್ಜುನರಿಬ್ಬರೂ ದ್ರೋಣ- ಕರ್ಣರನ್ನು ಸಮೀಪಿಸಿ ರಣರಂಗದಲ್ಲಿ ನಿಂತರು.

ತತಸ್ತತ್ಪುನರಾವೃತ್ತಂ ಯುಧಿಷ್ಠಿರಬಲಂ ಮಹತ್ |
ತತೋ ದ್ರೋಣಶ್ಚ ಕರ್ಣಶ್ಚ ಪರಾನ್ ಮಮೃದತುರ್ಯುಧಿ ॥ 31 ॥

ಅನಂತರ ಯುಧಿಷ್ಠಿರನ ದೊಡ್ಡ ಸೈನ್ಯವು ಹಿಂದಿರುಗಿತು. ಆಗ ದ್ರೋಣ-ಕರ್ಣರು ಯುದ್ಧದಲ್ಲಿ ಅವರನ್ನು ಎದುರಿಸಿದರು.

ಸ ಸಂಪ್ರಹಾರಸ್ತುಮುಲೋ ನಿಶಿ ಪ್ರತ್ಯಭವನ್ಮಹಾನ್ |
ಯಥಾ ಸಾಗರಯೋ ರಾಜಂಶ್ಚಂದ್ರೋದಯವಿವೃದ್ಧಯೋಃ ॥ 32 ॥
ಎಲೈ ರಾಜನೇ, ರಾತ್ರಿಯಲ್ಲಿ ಚಂದ್ರೋದಯವಾದಾಗ ವೃದ್ಧವಾದ ಎರಡು ಸಾಗರಗಳಂತೆ ಆ ಎರಡು ಸೈನ್ಯಗಳಿಗೆ ರಾತ್ರಿಯ ಕಾಲದಲ್ಲಿ ದೊಡ್ಡದಾದ ಸಂಘರ್ಷವು ಉಂಟಾಯಿತು.
ತತ ಉತ್ಸೃಜ್ಯ ಪಾಣಿಭ್ಯಃ ಪ್ರದೀಪಾಂಸ್ತವ ವಾಹಿನೀ |
ಯುಯುಧೇ ಪಾಂಡವೈಃ ಸಾರ್ಧಮುನ್ಮತ್ತವದಹಃಕ್ಷಯೇ ॥ 33 ॥
ಆಗ ನಿನ್ನ ಸೈನ್ಯವು ತಮ್ಮ ಕೈಯಲ್ಲಿದ್ದ ದೀಪಗಳನ್ನು ಬಿಟ್ಟು ಪಾಂಡವರ ಜೊತೆಯಲ್ಲಿ ರಾತ್ರಿಯಲ್ಲಿ ಉನ್ಮತ್ತರಂತೆ ಯುದ್ಧವನ್ನು ಮಾಡಿದರು.
ರಜಸಾ ತಮಸಾ ಚೈವ ಸಂವೃತೇ ಭೃಶದಾರುಣೇ |
ಕೇವಲಂ ನಾಮಗೋತ್ರೇಣ ಪ್ರಾಯುದ್ಧ್ಯಂತ ಜಯೈಷಿಣಃ ॥ 34 ॥
ಸೈನ್ಯದ ಧೂಳಿನಿಂದಲೂ, ದಾರುಣವಾದ ಕತ್ತಲೆಯಿಂದಲೂ ಎಲ್ಲವೂ ಮುಚ್ಚಿ ಹೋಗಿರಲು ಕೇವಲ ನಾಮ-ಗೋತ್ರ ಶ್ರವಣದಿಂದ ಜಯವನ್ನು ಬಯಸುವವರು ಯುದ್ಧವನ್ನು ಮಾಡಿದರು.
ಅಶ್ರೂಯಂತ ಹಿ ನಾಮಾನಿ ಶ್ರಾವ್ಯಮಾಣಾನಿ ಪಾರ್ಥಿವೈಃ |
ಪ್ರಹರದ್ಭಿರ್ಮಹಾರಾಜ ಸ್ವಯಂವರ ಇವಾಹವೇ ॥ 35 ॥
ಎಲೈ ಮಹಾರಾಜನೇ, ಸ್ವಯಂವರದಲ್ಲಿ ನಾಮಗಳನ್ನು ಘೋಷಿಸುವಂತೆ ದೊಡ್ಡ ಯುದ್ಧದಲ್ಲಿ ಪ್ರಹಾರವನ್ನು ಮಾಡುವ ರಾಜರಿಂದ ಘೋಷಿಸಲ್ಪಡುವ ನಾಮಗಳು ಕೇಳಿಬಂದವು.
ನಿಃಶಬ್ದಮಾಸೀತ್ ಸಹಸಾ ಪುನಃ ಶಬ್ದೋ ಮಹಾನಭೂತ್ |
ಕ್ರುದ್ಧಾನಾಂ ಯುದ್ಧ್ಯಮಾನಾನಾಂ ಜಯತಾಂ ಜೀಯತಾಮಪಿ ॥36॥
ಒಂದು ಕ್ಷಣ ಎಲ್ಲವೂ ನಿಶ್ಶಬ್ದವಾಗುತ್ತಿದ್ದಿತು. ಪುನಃ ಕ್ರುದ್ಧರಾದ ಯುದ್ಧವನ್ನು ಮಾಡುವ, ಗೆಲ್ಲುವ ಮತ್ತು ಸೋಲುವವರಿಂದ ದೊಡ್ಡ ಶಬ್ದವು ಉಂಟಾಗುತ್ತಿದ್ದಿತು.
ಯತ್ರ ಯತ್ರ ಸ್ಮ ದೃಶ್ಯಂತೇ ಪ್ರದೀಪಾಃ ಕುರುಸತ್ತಮ |
ತತ್ರ ತತ್ರ ಸ್ಮ ತೇ ಶೂರಾ ನಿಪತಂತಿ ಪತಂಗವತ್ ॥ 37 ॥
ಎಲೈ ಕುರುಶ್ರೇಷ್ಠನೇ, ಎಲ್ಲೆಲ್ಲಿ ದೀಪಗಳು ಕಾಣುತ್ತವೆಯೋ ಅಲ್ಲಲ್ಲಿ ಶೂರರು ಪತಂಗಗಳಂತೆ ಕೆಳಗೆ ಬೀಳುತ್ತಿದ್ದರು.
ತಥಾ ಸಂಯುದ್ಧ್ಯಮಾನಾನಾಂ ವಿಗಾಢಾಭೂನ್ಮಹಾನಿಶಾ |
ಪಾಂಡವಾನಾಂ ಚ ರಾಜೇಂದ್ರ ಕೌರವಾಣಾಂ ಚ ಸರ್ವಶಃ ॥ 38 ॥
ಎಲೈ ರಾಜೇಂದ್ರನೇ, ಪಾಂಡವರು ಮತ್ತು ಕೌರವರು ಎಲ್ಲ ಕಡೆಯಲ್ಲಿಯೂ ಹಾಗೆ ಯುದ್ಧವನ್ನು ಮಾಡುತ್ತಿರಲು ಮಹಾನಿಶೆಯು ಗಾಢವಾಗಿ ಪ್ರಾಪ್ತವಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಪಂಚಾಶದಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೊಂಬತ್ತನೆಯ ಅಧ್ಯಾಯ
ಕರ್ಣನ ಪ್ರತಾಪ. ಅವನ ಜೊತೆಯಲ್ಲಿ ಯುದ್ಧವನ್ನು ಮಾಡಲು
ಅರ್ಜುನನನ್ನು ನಿಷೇಧಿಸಿ, ಘಟೋತ್ಕಚನ ಪ್ರೇಷಣ.
ಸಂಜಯಃ
ತತಃ ಕರ್ಣೋ ರಣೇ ದೃಷ್ಟ್ವಾ ಪಾರ್ಷತಂ ಪರವೀರಹಾ |
ಆಜಘಾನೋರಸಿ ಶರೈರ್ದಶಭಿರ್ಮರ್ಮಭೇದಿಭಿಃ ॥ 1 ॥
ಸಂಜಯ ಆಗ ಶತ್ರುಘಾತಕನಾದ ಕರ್ಣನು ರಣರಂಗದಲ್ಲಿ ಧೃಷ್ಟದ್ಯುಮ್ನನನ್ನು ನೋಡಿ ಮರ್ಮಭೇದಿಗಳಾದ ಹತ್ತು ಬಾಣಗಳಿಂದ ಅವನನ್ನು ಎದೆಯಲ್ಲಿ ಹೊಡೆದನು.
ಪ್ರತಿವಿವ್ಯಾಧ ತಂ ತೂರ್ಣಂ ಧೃಷ್ಟದ್ಯುಮ್ನೋಽಪಿ ಮಾರಿಷ |
ಪಂಚಭಿಃ ಸಾಯಕೈರ್ಹೃಷ್ಟಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 2 ॥
ಎಲೈ ಶ್ರೇಷ್ಠನೇ, ಧೃಷ್ಟದ್ಯುಮ್ನನೂ ಸಹ ಶೀಘ್ರವಾಗಿ ಸಂತೋಷದಿಂದ ಅವನನ್ನು ಐದು ಬಾಣಗಳಿಂದ ಹೊಡೆದು `ನಿಲ್ಲು, ನಿಲ್ಲು' ಎಂದು ಹೇಳಿದನು.
ತಾವನ್ಯೋನ್ಯಂ ಶರೈಃ ಸಂಖ್ಯೇ ಸಂಛಾದ್ಯ ಸುಮಹಾರಥೌ |
ಪುನಃ ಪೂರ್ಣಾಯತೋತ್ಸೃಷ್ಟೈರ್ವಿವ್ಯಧಾತೇ ಪರಸ್ಪರಮ್ ॥ 3 ॥
ಶ್ರೇಷ್ಠ ಮಹಾರಥರಾದ ಅವರಿಬ್ಬರೂ ರಣರಂಗದಲ್ಲಿ ಪರಸ್ಪರವಾಗಿ ಬಾಣಗಳಿಂದ ಆಚ್ಛಾದಿಸಿ, ಪುನಃ ಹೆದೆಯನ್ನು ಪೂರ್ಣವಾಗಿ ಎಳೆದು ಪ್ರಯೋಗಿಸಿದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ತತಃ ಪಾಂಚಾಲಮುಖ್ಯಸ್ಯ ಧೃಷ್ಟದ್ಯುಮ್ನಸ್ಯ ಸಂಯುಗೇ |
ಸಾರಥಿಂ ಚತುರಶ್ಚಾಶ್ವಾನ್ ಕರ್ಣೋ ವಿವ್ಯಾಧ ಸಾಯಕೈಃ ॥ 4 ॥

ಆಗ ಕರ್ಣನು ಪಾಂಚಾಲ ಶ್ರೇಷ್ಠನಾದ ಧೃಷ್ಟದ್ಯುಮ್ನನ ಸಾರಥಿಯನ್ನೂ ಮತ್ತು ನಾಲ್ಕು ಅಶ್ವಗಳನ್ನೂ ಬಾಣಗಳಿಂದ ಹೊಡೆದನು.
ಕಾರ್ಮುಕಪ್ರವರಂ ಚಾಸ್ಯ ಪ್ರಚಿಚ್ಚೇದ ಶಿತೈಃ ಶರೈಃ |
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾತಯತ್ ॥ 5 ॥
ಅವನ ಶ್ರೇಷ್ಠವಾದ ಧನುಸ್ಸನ್ನು ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿದನು ಮತ್ತು ಭಲ್ಲದಿಂದ ಅವನ ಸಾರಥಿಯನ್ನು ರಥಪೀಠದಿಂದ ಕೆಳಗೆ ಉರುಳಿಸಿದನು.
ಧೃಷ್ಟದ್ಯುಮ್ನಸ್ತು ವಿರಥೋ ಹತಾಶ್ವೋ ಹತಸಾರಥಿಃ |
ಗೃಹೀತ್ವಾ ಪರಿಘಂ ಘೋರಂ ಕರ್ಣಸ್ಯಾಶ್ವಾನಪೀಪಿಷತ್ ॥ 6 ॥
ಧೃಷ್ಟದ್ಯುಮ್ನನಾದರೂ ರಥವನ್ನು, ಅಶ್ವಗಳನ್ನು ಮತ್ತು ಸಾರಥಿಯನ್ನು ಕಳೆದುಕೊಂಡು ಒಂದು ಘೋರವಾದ ಪರಿಘವನ್ನು ತೆಗೆದುಕೊಂಡು ಅದರಿಂದ ಕರ್ಣನ ರಥದ ಅಶ್ವಗಳನ್ನು ನಾಶಪಡಿಸಿದನು.
ವಿದ್ಧಶ್ಚ ಬಹುಭಿಸ್ತೇನ ಶರೈರಾಶೀವಿಷೋಪಮೈಃ |
ತತೋ ಯುಧಿಷ್ಠಿರಾನೀಕಂ ಪದ್ಭ್ಯಾಮೇವಾನ್ವವರ್ತತ |
ಆರುರೋಹ ರಥಂ ಚಾಪಿ ಸಹದೇವಸ್ಯ ಮಾರಿಷ ॥ 7 ॥
ಸರ್ಪಗಳಂತಿದ್ದ ಅನೇಕ ಬಾಣಗಳಿಂದ ಕರ್ಣನಿಂದ ಪೀಡಿಸಲ್ಪಟ್ಟ ಅವನು ಎಲೈ ಶ್ರೇಷ್ಠನೇ, ಯುಧಿಷ್ಠಿರನ ಸೈನ್ಯವಿದ್ದಲ್ಲಿಗೆ ನಡೆದುಕೊಂಡೇ ಹೋಗಿ ಸಹದೇವನ ರಥವನ್ನು ಹತ್ತಿದನು.
ಕರ್ಣಸ್ಯಾಪಿ ರಥೇ ವಾಹಾನನ್ಯಾನ್ ಸೂತೋ ನ್ಯಯೋಜಯತ್ |
ಶಂಖವರ್ಣಾನ್ ಮಹಾವೇಗಾನ್ ಸೈಂಧವಾನ್ ಸಾಧುವಾಹಿನಃ ॥8॥
ಕರ್ಣನ ಸಾರಥಿಯು ಅವನ ರಥದಲ್ಲಿ ಶಂಖವರ್ಣದ ಮಹಾವೇಗವುಳ್ಳ, ಸೈಂಧವ ದೇಶದಲ್ಲಿ ಜನಿಸಿದ, ಪಳಗಿದ ಬೇರೆ ಅಶ್ವಗಳನ್ನು ಹೂಡಿದನು.
ಲಬ್ಧಲಕ್ಷ್ಯಸ್ತು ರಾಧೇಯಃ ಪಾಂಚಾಲಾನಾಂ ಮಹಾರಥಾನ್ |
ಅಭ್ಯಪೀಡಯದಾಯಸ್ತಃ ಶರೈರ್ಮೇಘ ಇವಾಚಲಾನ್ ॥ 9 ॥
ತನ್ನ ಗುರಿಯನ್ನು ಸಾಧಿಸಿದ ಕರ್ಣನು ಕೋಪಗೊಂಡು ಪಾಂಚಾಲ ಮಹಾರಥರ ಮೇಲೆ ಮೋಡವು ಪರ್ವತಗಳ ಮೇಲೆ ಮಳೆಯನ್ನು ಸುರಿಸುವಂತೆ ಬಾಣಗಳ ಮಳೆಯನ್ನು ಸುರಿಸಿ ಪೀಡಿಸಿದನು.
ಸಾ ಪೀಡ್ಯಮಾನಾ ಕರ್ಣೇನ ಪಾಂಚಾಲಾನಾಂ ಮಹಾಚಮೂಃ |
ಸಂಪ್ರಾದ್ರುವತ್ ಸುಸಂತ್ರಸ್ತಾ ಸಿಂಹೇನೇವಾರ್ದಿತಾ ಮೃಗೀ ॥ 10 ॥
ಕರ್ಣನ ಬಾಣಗಳಿಂದ ಪೀಡಿಸಲ್ಪಟ್ಟ ಪಾಂಚಾಲರ ದೊಡ್ಡ ಸೈನ್ಯವು ಬಹಳ ಹೆದರಿ ಸಿಂಹದಿಂದ ಪೀಡಿತವಾದ ಹೆಣ್ಣು ಜಿಂಕೆಯಂತೆ ಓಡಿಹೋಯಿತು.
ಪತಿತಾಸ್ತುರಗೇಭ್ಯಶ್ಚ ಗಜೇಭ್ಯಶ್ಚ ಮಹೀತಳೇ |
ರಥೇಭ್ಯಶ್ಚ ನರಾಸ್ತೂರ್ಣಮದೃಶ್ಯಂತ ತತಸ್ತತಃ ॥ 11 ॥
ಅಶ್ವಗಳಿಂದಲೂ, ಗಜಗಳಿಂದಲೂ, ರಥಗಳಿಂದಲೂ ಶೀಘ್ರವಾಗಿ ಭೂಮಿಯ ಮೇಲೆ ಬೀಳುವ ಯೋಧರು ಅಲ್ಲಲ್ಲಿ ಕಂಡುಬಂದರು.
ಧಾವಮಾನಸ್ಯ ಯೋಧಸ್ಯ ಕ್ಷುರಪ್ರೈಃ ಸ ಮಹಾಮೃಧೇ |
ಬಾಹೂ ಚಿಚ್ಚೇದ ವೈ ಕರ್ಣಃ ಶಿರಶ್ಚೈವ ಸಕುಂಡಲಮ್ ॥ 12 ॥
ಮಹಾಸಂಗ್ರಾಮದಲ್ಲಿ ಕರ್ಣನು ಹಾಗೆ ಓಡುತ್ತಿದ್ದ ಯೋಧರ ಬಾಹುಗಳನ್ನು ಮತ್ತು ಕುಂಡಲ ಸಹಿತವಾದ ಶಿರಸ್ಸನ್ನು ಕ್ಷುರಪ್ರದಿಂದ ಕತ್ತರಿಸಿದನು.
ಊರೂ ಚಿಚ್ಚೇದ ಚಾನ್ಯಸ್ಯ ಗಜಸ್ಥಸ್ಯ ವಿಶಾಂಪತೇ |
ವಾಜಿಪೃಷ್ಠಗತಸ್ಯಾಪಿ ಭೂಮಿಷ್ಠಸ್ಯ ಚ ಮಾರಿಷ ॥ 13 ॥
ಎಲೈ ರಾಜನೇ, ಶ್ರೇಷ್ಠನೇ, ಅವನು ಗಜಾರೋಹಿಗಳ, ಅಶ್ವಾರೋಹಿಗಳ ಹಾಗೂ ಭೂಮಿಯಲ್ಲಿರುವ ಪದಾತಿಗಳ ತೊಡೆಗಳನ್ನು ಕತ್ತರಿಸಿದನು.
ನಾಜ್ಞಾಸಿಷುರ್ಧಾವಮಾನಾ ಬಹವಶ್ಚ ಮಹಾರಥಾಃ |
ಸಂಛಿನ್ನಾನ್ಯಾತ್ಮಗಾತ್ರಾಣಿ ವಾಹನಾನಿ ಚ ಸಂಯುಗೇ ॥ 14 ॥
ಓಡುತ್ತಿದ್ದ ಅನೇಕ ಮಹಾರಥರಿಗೆ ಯುದ್ಧದಲ್ಲಿ ತಮ್ಮ ದೇಹಗಳು ಮತ್ತು ತಮ್ಮ ವಾಹನಗಳು ಕತ್ತರಿಸಲ್ಪಟ್ಟರೂ ತಿಳಿಯಲಿಲ್ಲ.
ತೇ ವಧ್ಯಮಾನಾಃ ಸಮರೇ ಪಾಂಚಾಲಾಃ ಸೃಂಜಯೈಃ ಸಹ |
ತೃಣಪ್ರಸ್ಪಂದನಾಚ್ಚಾಪಿ ಸೂತಪುತ್ರಂ ಸ್ಮ ಮೇನಿರೇ ॥ 15 ॥
ಯುದ್ಧದಲ್ಲಿ ಕರ್ಣನಿಂದ ಹೊಡೆಯಲ್ಪಡುತ್ತಿದ್ದ ಪಾಂಚಾಲರು ಮತ್ತು ಸೃಂಜಯರು ಒಂದು ಹುಲ್ಲು ಅಲ್ಲಾಡಿದರೂ ಅದನ್ನು ಕರ್ಣನೆಂದು ಭಾವಿಸಿದರು.
ಅಪಿ ಸ್ವಂ ಸಮರೇ ಯೋಧಂ ಧಾವಮಾನಂ ವಿಚೇತಸಃ |
ಕರ್ಣಮೇವಾಭ್ಯಮನ್ಯಂತ ತತೋ ಭೀತಾ ದ್ರವಂತಿ ತೇ ॥ 16 ॥
ವಿವೇಕಶೂನ್ಯರಾಗಿ ರಣರಂಗದಲ್ಲಿ ಓಡುವ ತಮ್ಮವರನ್ನು ಕರ್ಣನೆಂದು ತಿಳಿದು ಅನಂತರ ಭೀತರಾಗಿ ಬೇರೆ ಕಡೆಗೆ ಓಡುತ್ತಿದ್ದರು.
ತಾನ್ಯನೀಕಾನಿ ಭಗ್ನಾನಿ ದ್ರವಮಾಣಾನಿ ಭಾರತ |
ಅಭ್ಯದ್ರವದ್ ದ್ರುತಂ ಕರ್ಣಃ ಪೃಷ್ಠತೋ ವಿಕಿರನ್ ಶರಾನ್ ॥ 17 ॥
ಎಲೈ ಭಾರತನೇ, ಭಗ್ನಗೊಂಡು ಓಡುತ್ತಿರುವ ಆ ಸೈನ್ಯಗಳನ್ನು ಕರ್ಣನು ಹಿಂದಿನಿಂದ ಓಡಿ ಶೀಘ್ರವಾಗಿ ಬಾಣಗಳಿಂದ ಹೊಡೆದನು.

ಅವೇಕ್ಷಮಾಣಾಸ್ತೇಽನ್ಯೋನ್ಯಂ ಸುಸಮ್ಮೂಢಾ ವಿಚೇತಸಃ |
ನಾಶಕ್ನುವನ್ನವಸ್ಥಾತುಂ ಕಾಲ್ಯಮಾನಾ ಮಹಾತ್ಮನಾ ॥ 18 ॥
ಮಹಾತ್ಮನಾದ ಕರ್ಣನಿಂದ ಕಲಕಾಡಲ್ಪಡುತ್ತಿದ್ದ ವಿವೇಕಶೂನ್ಯರಾದ ಆ ಯೋಧರು ಬಹಳ ಭ್ರಾಂತರಾಗಿ ತಮ್ಮನ್ನೇ ಪರಸ್ಪರವಾಗಿ ನೋಡುತ್ತಾ ರಣರಂಗದಲ್ಲಿ ನಿಲ್ಲಲು ಅಸಮರ್ಥರಾದರು.
ಕರ್ಣೇನಾಭ್ಯಾಹತಾ ರಾಜನ್ ಪಾಂಚಾಲಾಃ ಪರಮೇಷುಭಿಃ |
ದ್ರೋಣೇನ ಚ ದಿಶಃ ಸರ್ವಾ ವೀಕ್ಷಮಾಣಾಃ ಪ್ರದುದ್ರುವುಃ ॥ 19 ॥
ಎಲೈ ರಾಜನೇ, ಕರ್ಣನಿಂದಲೂ ಮತ್ತು ದ್ರೋಣರಿಂದಲೂ ಶ್ರೇಷ್ಠವಾದ ಬಾಣಗಳಿಂದ ಹೊಡೆಯಲ್ಪಟ್ಟ ಪಾಂಚಾಲರು ಎಲ್ಲ ದಿಕ್ಕುಗಳನ್ನೂ ನೋಡುತ್ತಾ ಓಡಿ ಹೋದರು.
ತತೋ ಯುಧಿಷ್ಠಿರೋ ರಾಜಾ ಸ್ವಸೈನ್ಯಂ ಪ್ರೇಕ್ಷ್ಯ ವಿದ್ರುತಮ್ |
ಅಪಯಾನೇ ಮತಿಂ ಕೃತ್ವಾ ಫಲ್ಗುನಂ ವಾಕ್ಯಮಬ್ರವೀತ್ ॥ 20 ॥
ತನ್ನ ಸೈನ್ಯವು ಓಡಿಹೋಗುತ್ತಿರುವುದನ್ನು ನೋಡಿದ ರಾಜನಾದ ಯುಧಿಷ್ಠಿರನು ರಣರಂಗದಿಂದ ಅಪಯಾನವನ್ನು ಮಾಡಲು ನಿಶ್ಚಯಿಸಿ ಅರ್ಜುನನನ್ನು ಕುರಿತು ಹೇಳಿದನು.
ಪಶ್ಯ ಕರ್ಣಂ ಮಹೇಷ್ವಾಸಂ ಧನುಷ್ಪಾಣಿಮವಸ್ಥಿತಮ್ |
ನಿಶೀಥೇ ದಾರುಣೇ ಕಾಲೇ ತಪಂತಮಿವ ಭಾಸ್ಕರಮ್ ॥ 21 ॥
ಮಹಾಧನುರ್ಧಾರಿಯಾದ ಕರ್ಣನು ಈ ದಾರುಣವಾದ ರಾತ್ರಿಯ ಕಾಲದಲ್ಲಿ ದಹಿಸುವ ಸೂರ್ಯನಂತೆ ಕೈಯಲ್ಲಿ ಧನುಸ್ಸನ್ನು ಹಿಡಿದಿರುವುದನ್ನು ನೋಡು.
ಕರ್ಣಸಾಯಕನುನ್ನಾನಾಂ ಕ್ರೋಶತಾಮೇಷ ನಿಸ್ವನಃ |
ಅನಿಶಂ ಶ್ರೂಯತೇ ಪಾರ್ಥ ತ್ವದ್ಬಂಧೂನಾಮನಾಥವತ್ ॥ 22 ॥
ಎಲೈ ಅರ್ಜುನನೇ, ಕರ್ಣನ ಬಾಣಗಳಿಂದ ಪೀಡಿಸಲ್ಪಟ್ಟು ಅನಾಥರಂತೆ ಕಿರುಚುತ್ತಿರುವ ನಿನ್ನ ಬಾಂಧವರ ಈ ಘೋರವಾದ ನಾದವು ಸತತವಾಗಿ ಕೇಳಿ ಬರುತ್ತಿದೆ.
ಯಥಾ ವಿಸೃಜತಶ್ಚಾಸ್ಯ ಸಂದಧಾನಸ್ಯ ಚಾಶುಗಾನ್ |
ಪಶ್ಯಾಮಿ ಜಯವಿಕ್ರಾಂತಂ ಕ್ಷಪಯಿಷ್ಯತಿ ನೋ ಧ್ರುವಮ್ ॥ 23 ॥
ಕರ್ಣನು ಶೀಘ್ರವೇಗಿಯಾದ ಬಾಣಗಳನ್ನು ಹೂಡುವುದನ್ನೂ, ಅದನ್ನು ಪ್ರಯೋಗಿಸುವುದನ್ನೂ, ಅವನ ಪರಾಕ್ರಮವನ್ನೂ ಮತ್ತು ಜಯವನ್ನೂ ನೋಡಿದರೆ ನಮ್ಮನ್ನು ಶೀಘ್ರವಾಗಿ ನಾಶಮಾಡುವನು ಎಂದು ತೋರುತ್ತದೆ.
ಯದತ್ರಾನಂತರಂ ಕಾರ್ಯಂ ಪ್ರಾಪ್ತಕಾಲಂ ಪ್ರಪಶ್ಯಸಿ |
ಕರ್ಣಸ್ಯ ವಧಸಂಯುಕ್ತಂ ತತ್ ಕುರುಷ್ವ ಧನಂಜಯ ॥ 24 ॥
ಎಲೈ ಧನಂಜಯನೇ, ಈ ಪ್ರಸಕ್ತವಾದ ಸಮಯದಲ್ಲಿ ಕರ್ಣನ ವಧೆಯನ್ನು ಉದ್ದೇಶಿಸಿ ಏನು ಮಾಡುವುದು ಸರಿ ಎನಿಸುತ್ತದೆಯೋ ಅದನ್ನು ಮಾಡು (ಎಂದು ಹೇಳಿದನು).
ಏವಮುಕ್ತೋ ಮಹಾಬಾಹುಃ ಪಾರ್ಥಃ ಕೃಷ್ಣಮಥಾಬ್ರವೀತ್ |
ಭೀತಃ ಕುಂತೀಸುತೋ ರಾಜಾ ರಾಧೇಯಸ್ಯಾತಿವಿಕ್ರಮಾತ್ ॥ 25 ॥
ಹೀಗೆ ಹೇಳಲ್ಪಟ್ಟ ಮಹಾಬಾಹುವಾದ ಅರ್ಜುನನು ಕೃಷ್ಣನನ್ನು ಕುರಿತು ಹೇಳಿದನು. ಕರ್ಣನ ಅತಿಶಯವಾದ ಪರಾಕ್ರಮದಿಂದ ರಾಜನಾದ ಯುಧಿಷ್ಠಿರನು ಭೀತನಾಗಿದ್ದಾನೆ.
ಏವಂ ಗತೇ ಪ್ರಾಪ್ತಕಾಲಂ ಕರ್ಣಾನೀಕೇ ಪುನಃ ಪುನಃ |
ಭವಾನ್ ವ್ಯವಸ್ಯತಾಂ ಕ್ಷಿಪ್ರಂ ದ್ರವತೇ ಹಿ ವರೂಥಿನೀ ॥ 26 ॥
ಈ ಸಂದರ್ಭದಲ್ಲಿ ಕರ್ಣನ ಸೈನ್ಯವನ್ನು ಉದ್ದೇಶಿಸಿ ಏನು ಮಾಡುವುದು ಉಚಿತವೆಂದು ನೀನು ನಿರ್ಧರಿಸು. ನಮ್ಮ ಸೈನ್ಯವು ಶೀಘ್ರವಾಗಿ ಓಡಿಹೋಗುತ್ತಿದೆ.
ದ್ರೋಣಸಾಯಕನುನ್ನಾನಾಂ ಭಗ್ನಾನಾಂ ಮಧುಸೂದನ |
ಕರ್ಣೇನ ತ್ರಾಸ್ಯಮಾನಾನಾಮವಸ್ಥಾನಂ ನ ವಿದ್ಯತೇ ॥ 27 ॥
ಎಲೈ ಮಧುಸೂದನನೇ, ದ್ರೋಣರ ಬಾಣಗಳಿಂದ ಪೀಡಿತವಾಗಿ ಭಗ್ನಗೊಂಡು, ಕರ್ಣನಿಂದ ಹೆದರಿಸಲ್ಪಡುತ್ತಿರುವ ನಮ್ಮ ಸೈನ್ಯಕ್ಕೆ ಒಂದು ಆಶ್ರಯವೂ ಕಾಣುತ್ತಿಲ್ಲ.
ಪಶ್ಯಾಮಿ ಚ ತಥಾ ಕರ್ಣಂ ವಿಚರಂತಮಭೀತವತ್ |
ದ್ರವಮಾಣಾನ್ ರಥೋದಾರಾನ್ ಕಿರಂತಂ ವಿಶಿಖೈಃ ಶಿತೈಃ ॥ 28 ॥
ಕರ್ಣನು ಓಡುತ್ತಿರುವ ರಥಶ್ರೇಷ್ಠರನ್ನು ಹಿಂಬಾಲಿಸಿ ನಿರ್ಭೀತನಾಗಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಿರುವುದನ್ನು ನಾನು ನೋಡುತ್ತಿದ್ದೇನೆ.
ನೈತದಸ್ಯೋತ್ಸಹೇ ಸೋಢುಂ ಚರಿತಂ ರಣಮೂರ್ಧನಿ |
ಪ್ರತ್ಯಕ್ಷಂ ವೃಷ್ಣಿಶಾರ್ದೂಲ ಪಾದಸ್ಪರ್ಶಮಿವೋರಗಃ ॥ 29 ॥
ಎಲೈ ವೃಷ್ಣಿಶಾರ್ದೂಲನೇ, ಸರ್ಪವು ಪಾದಸ್ಪರ್ಶವನ್ನು ಸಹಿಸದಂತೆ ಈ ಶ್ರೇಷ್ಠ ಯುದ್ಧದಲ್ಲಿ ಕರ್ಣನ ಚರ್ಯೆಯನ್ನು ನೋಡಿ ನಾನು ಸಹಿಸಲಾರೆ.
ಸ ಭವಾನತ್ರ ಯಾತ್ವಾಶು ಯತ್ರ ಕರ್ಣೋ ಮಹಾರಥಃ |
ಅಹಮೇನಂ ವಧಿಷ್ಯಾಮಿ ಮಾಂ ವೈಷ ಮಧುಸೂದನ ॥ 30 ॥

ಎಲೈ ಮಧುಸೂದನನೇ, ಮಹಾರಥನಾದ ಕರ್ಣನು ಇರುವಲ್ಲಿಗೆ ಶೀಘ್ರವಾಗಿ ಹೋಗು. ನಾನು ಅವನನ್ನು ಕೊಲ್ಲುವೆನು ಅಥವಾ ಅವನಾದರೂ ನನ್ನನ್ನು ಕೊಲ್ಲುವನು.
ವಾಸುದೇವಃ
ಪಶ್ಯಾಮಿ ಕರ್ಣಂ ಕೌಂತೇಯ ದೇವರಾಜಮಿವಾಹವೇ |
ವಿಚರಂತಂ ನರವ್ಯಾಘ್ರಮತಿಮಾನುಷವಿಕ್ರಮಮ್ ॥ 31 ॥
ವಾಸುದೇವ ಎಲೈ ಅರ್ಜುನನೇ, ನರವ್ಯಾಘ್ರನಾದ ಕರ್ಣನು ಮನುಷ್ಯರನ್ನು ಮೀರಿದ ಪರಾಕ್ರಮವನ್ನು ಹೊಂದಿ ರಣರಂಗದಲ್ಲಿ ದೇವರಾಜನಂತೆ ಸಂಚರಿಸುತ್ತಿರುವುದನ್ನು ನಾನು ನೋಡುತಿತದ್ದೇನೆ.
ನೈತಸ್ಯಾನ್ಯೋಽಸ್ತಿ ಸಮರೇ ಪ್ರತ್ಯುದ್ಯಾತಾ ಧನಂಜಯ |
ಋತೇ ತ್ವಾಂ ಪುರುಷವ್ಯಾಘ್ರ ರಾಕ್ಷಸಾದ್ವಾ ಘಟೋತ್ಕಚಾತ್ ॥ 32 ॥
ಎಲೈ ಧನಂಜಯನೇ, ಪುರುಷವ್ಯಾಘ್ರನೇ, ನಿನ್ನನ್ನು ಅಥವಾ ರಾಕ್ಷಸನಾದ ಘಟೋತ್ಕಚನನ್ನು ಬಿಟ್ಟು ಅವನ ಎದುರಿಗೆ ಹೋಗಿ ಯುದ್ಧವನ್ನು ಮಾಡುವವರು ಬೇರೆ ಯಾರೂ ಇಲ್ಲ.
ನ ತು ತಾವದಹಂ ಮನ್ಯೇ ಪ್ರಾಪ್ತಕಾಲಂ ತವಾನಘ |
ಸಮಾಗಮಂ ಮಹಾಬಾಹೋ ಸೂತಪುತ್ರೇಣ ಸಂಯುಗೇ ॥ 33 ॥
ಎಲೈ ಅನಘನೇ, ಮಹಾಬಾಹುವೇ, ನೀನು ಸದ್ಯದ ಪರಿಸ್ಥಿತಿಯಲ್ಲಿ ಕರ್ಣನ ಜೊತೆಯಲ್ಲಿ ಹೋಗಿ ಯುದ್ಧವನ್ನು ಮಾಡುವುದು ಯೋಗ್ಯವಲ್ಲವೆಂದು ಭಾವಿಸುತ್ತೇನೆ.
ದೀಪ್ಯಮಾನಾ ಮಹೋಲ್ಕೇವ ತಿಷ್ಠತ್ಯಸ್ಯ ಹಿ ವಾಸವೀ |
ತ್ವದರ್ಥಂ ಹಿ ಮಹಾಬಾಹೋ ರೌದ್ರರೂಪಂ ಬಿಭರ್ತಿ ಚ ॥ 34 ॥
ಎಲೈ ಮಹಾಬಾಹುವೇ, ನಿನ್ನ ಸಲುವಾಗಿ ರಕ್ಷಿಸಿರುವ ಭಯಂಕರ ರೂಪವುಳ್ಳ, ದೊಡ್ಡ ಉಲ್ಕೆಯಂತಹ ಇಂದ್ರನು ಕೊಟ್ಟ ಶಕ್ತಿಯು ಅವನ ಬಳಿ ಜ್ವಲಿಸುತ್ತಿದೆ.
ಘಟೋತ್ಕಚಸ್ತು ರಾಧೇಯಂ ಪ್ರತ್ಯುದ್ಯಾತು ಮಹಾಬಲಃ |
ಸ ಹಿ ಭೀಮೇನ ಬಲಿನಾ ಜಾತಃ ಸುರಪರಾಕ್ರಮಃ ॥ 35 ॥
ಮಹಾಬಲನಾದ ಘಟೋತ್ಕಚನು ಕರ್ಣನನ್ನು ಎದುರಿಸಲಿ. ದೇವತೆಗಳ ಪರಾಕ್ರಮವನ್ನು ಹೊಂದಿದ ಅವನು ಭಯಂಕರವಾದ ಬಲವನ್ನು ಹೊಂದಿ ಜನಿಸಿದ್ದಾನಷ್ಟೆ?
ತಸ್ಮಿನ್ನಸ್ತ್ರಾಣಿ ದಿವ್ಯಾನಿ ರಾಕ್ಷಸಾನ್ಯಾಸುರಾಣಿ ಚ |
ಸತತಂ ಚಾನುರಕ್ತೋ ವೋ ಹಿತೈಷೀ ಚ ಘಟೋತ್ಕಚಃ |
ವಿಜೇಷ್ಯತಿ ರಣೇ ಕರ್ಣಮಿತಿ ಮೇ ನಾತ್ರ ಸಂಶಯಃ ॥ 36 ॥
ಅವನ ಬಳಿ ದೇವತೆಗಳ ಅಸ್ತ್ರಗಳೂ, ರಾಕ್ಷಸರ ಅಸ್ತ್ರಗಳೂ ಮತ್ತು ಅಸುರರ ಅಸ್ತ್ರಗಳೂ ಇವೆ. ಅವನು ಯಾವಾಗಲೂ ನಿಮ್ಮಲ್ಲಿ ನಿಷ್ಠೆಯುಳ್ಳವನು ಮತ್ತು ನಿಮ್ಮ ಹಿತವನ್ನು ಬಯಸುವವನು. ಅವನು ಕಣರ್ನನ್ನು ಜಯಿಸುವನು ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಸಂಜಯಃ
ಏವಮುಕ್ತ್ವಾ ಮಹಾಬಾಹುಃ ಪಾರ್ಥಂ ಪುಷ್ಕರಲೋಚನಃ |
ಆಜುಹಾವಾಥ ತದ್ರಕ್ಷಃ ತಚ್ಚಾಸೀತ್ ಪ್ರಾದುರಗ್ರತಃ |
ಕವಚೀ ಸ ಶರೀ ಖಡ್ಗೀ ಸಧನ್ವಾ ಚ ವಿಶಾಂಪತೇ ॥ 37 ॥
ಸಂಜಯ ಮಹಾಬಾಹುವಾದ, ಪುಂಡರೀಕಾಕ್ಷನಾದ ಕೃಷ್ಣನು ಅರ್ಜುನನನ್ನು ಕುರಿತು ಹೀಗೆ ಹೇಳಿ, ಅನಂತರ ರಾಕ್ಷಸನಾದ ಘಟೋತ್ಕಚನನ್ನು ಕರೆದನು. ಘಟೋತ್ಕಚನು ಕವಚವನ್ನು ಧರಿಸಿ, ಧನುರ್ಬಾಣಗಳನ್ನು, ಖಡ್ಗವನ್ನು ಹಿಡಿದು ಅವರ ಎದುರಿಗೆ ಪ್ರತ್ಯಕ್ಷನಾದನು.
ಅಭಿವಾದ್ಯ ತತಃ ಕೃಷ್ಣಂ ಪಾಂಡವಂ ಚ ಧನಂಜಯಮ್ |
ಅಬ್ರುವೀತ್ ತಂ ತದಾ ಹೃಷ್ಟಸ್ತ್ವಯಮಸ್ಮ್ಯನುಶಾಧಿ ಮಾಮ್ ॥ 38 ॥
ಅವನು ಕೃಷ್ಣನನ್ನು ಮತ್ತು ಅರ್ಜುನನನ್ನು ನಮಸ್ಕರಿಸಿ ಸಂತೋಷದಿಂದ, ಇಗೋ ಬಂದಿದ್ದೇನೆ. ನನಗೆ ಅನುಶಾಸನವನ್ನು ಮಾಡಿ ಎಂದು ಹೇಳಿದನು.
ತತಸ್ತಂ ಮೇಘಸಂಕಾಶಂ ದೀಪ್ತಾಸ್ಯಂ ದೀಪ್ತಕುಂಡಲಮ್ |
ಅಭ್ಯಭಾಷತ ಹೈಡಿಂಬಂ ದಾಶಾರ್ಹಃ ಪ್ರಹಸನ್ನಿವ ॥ 39 ॥
ಆಗ ಜ್ವಲಿಸುವ ಮುಖವುಳ್ಳವನೂ, ಜ್ವಲಿಸುವ ಕುಂಡಲಗಳುಳ್ಳವನೂ, ಮೇಘ ಕಾಂತಿಯನ್ನು ಹೊಂದಿದವನೂ ಆದ ಆ ಹಿಡಿಂಬೆಯ ಪುತ್ರನನ್ನು ಕುರಿತು ಕೃಷ್ಣನು ನಗುತ್ತಾ ಮಾತನಾಡಿದನು.
ಘಟೋತ್ಕಚ ವಿಜಾನೀಹಿ ಯತ್ತ್ವಾಂ ವಕ್ಷ್ಯಾಮಿ ಪುತ್ರಕ |
ಪ್ರಾಪ್ತೋ ವಿಕ್ರಮಕಾಲೋಽಯಂ ತವ ನಾನ್ಯಸ್ಯ ಕಸ್ಯಚಿತ್ ॥ 40 ॥
ಪುತ್ರನೇ, ಘಟೋತ್ಕಚನೇ, ನಾನು ನಿನಗೆ ಹೇಳುವುದನ್ನು ತಿಳಿ. ಈಗ ನಿನ್ನ ಪರಾಕ್ರಮದ ಕಾಲವು ಪ್ರಾಪ್ತವಾಗಿದೆ. ಅದನ್ನು ಬೇರೆ ಯಾರೂ ಮಾಡಲು ಸಾಧ್ಯವಿಲ್ಲ.
ಸ ಭವಾನ್ ಮಜ್ಜಮಾನಾನಾಂ ಬಂಧೂನಾಂ ತ್ವಂ ಪ್ಲವೋ ಯಥಾ |
ವಿವಿಧಾನಿ ತವಾಸ್ತ್ರಾಣಿ ಸಂತಿ ಮಾಯಾ ಚ ರಾಕ್ಷಸೀ ॥ 41 ॥

ಮುಳುಗುತ್ತಿರುವ ಬಂಧುಗಳಿಗೆ ನೀನು ದೋಣಿಯಂತೆ ಇದ್ದೀಯೆ. ನಿನ್ನ ಬಳಿ ಅನೇಕವಾದ ಅಸ್ತ್ರಗಳೂ ಮತ್ತು ರಾಕ್ಷಸ ಮಾಯೆಯೂ ಇದೆ.
ಪಶ್ಯ ಕರ್ಣೇನ ಹೈಡಿಂಬ ಪಾಂಡವಾನಾಮನೀಕಿನೀ |
ಕಾಲ್ಯಮಾನಾ ಯಥಾ ಗಾವಃ ಪಾಲೇನ ರಣಮೂರ್ಧನಿ ॥ 42 ॥
ಎಲೈ ಹಿಡಿಂಬೆ ಪುತ್ರನೇ, ಪಶುಪಾಲಕನಿಂದ ಗೋವುಗಳು ಅಟ್ಟಾಡಿಸಲ್ಪಡುವಂತೆ ಕರ್ಣನಿಂದ ಪಾಂಡವರ ಸೈನ್ಯವು ಅಟ್ಟಾಡಿಸಲ್ಪಡುವುದನ್ನು ನೋಡು.
ಏಷ ಕರ್ಣೋ ಮಹೇಷ್ವಾಸೋ ಮತಿಮಾನ್ ದೃಢವಿಕ್ರಮಃ |
ಪಾಂಡವಾನಾಮನೀಕೇಷು ನಿಹಂತಿ ಕ್ಷತ್ರಿಯರ್ಷಭಾನ್ ॥ 43 ॥
ಮಹಾಧನುರ್ಧಾರಿಯೂ, ಮೇಧಾವಿಯೂ, ದೃಢವಾದ ಪರಾಕ್ರಮವುಳ್ಳವನೂ ಆದ ಈ ಕರ್ಣನು ಪಾಂಡವರ ಸೇನೆಯಲ್ಲಿ ಶ್ರೇಷ್ಠರಾದ ಕ್ಷತ್ರಿಯರನ್ನು ಕೊಲ್ಲುತ್ತಿದ್ದಾನೆ.
ಕಿರಂತಃ ಶರವರ್ಷಾಣಿ ಮಹಾಂತಿ ದೃಢಧನ್ವಿನಃ |
ನ ಶಕ್ನುವಂತ್ಯವಸ್ಥಾತುಂ ಪೀಡ್ಯಮಾನಾಃ ಶರಾರ್ಚಿಷಾ ॥ 44 ॥
ದೃಢವಾದ ಧನುಸ್ಸುಳ್ಳ ನಮ್ಮವರು ಅವನ ಮೇಲೆ ಬಾಣಗಳ ದೊಡ್ಡ ಮಳೆಯನ್ನು ಸುರಿಸುತ್ತಿದ್ದರೂ ಅವನ ಬಾಣಗಳ ಜ್ವಾಲೆಯಿಂದ ಪೀಡಿತರಾಗಿ ಅವನ ಎದುರಿಗೆ ನಿಲ್ಲಲು ಸಾಧ್ಯವಾಗುತ್ತಿಲ್ಲ.
ನಿಶೀಥೇ ಸೂತಪುತ್ರೇಣ ಶರವರ್ಷೇಣ ಪೀಡಿತಾಃ |
ಏತೇ ದ್ರವಂತಿ ಪಾಂಚಾಲಾಃ ಸಿಂಹಸ್ಯೇವ ಭಯಾನ್ಮೃಗಾಃ ॥ 45 ॥
ಈ ರಾತ್ರಿಯ ಕಾಲದಲ್ಲಿ ಕರ್ಣನ ಬಾಣಗಳ ಮಳೆಯಿಂದ ಪೀಡಿತರಾದ ಈ ಪಾಂಚಾಲರು ಸಿಂಹವನ್ನು ನೋಡಿ ಹೆದರಿದ ಮೃಗಗಳಂತೆ ಓಡಿಹೋಗುತ್ತಿದ್ದಾರೆ.
ಏತಸ್ಯೈವಂ ಪ್ರವೃದ್ಧಸ್ಯ ಸೂತಪುತ್ರಸ್ಯ ಸಂಯುಗೇ |
ನಿಷೇದ್ಧಾ ವಿದ್ಯತೇ ನಾನ್ಯಸ್ತ್ವದೃತೇ ಭೀಮವಿಕ್ರಮ ॥ 46 ॥
ಎಲೈ ಭಯಂಕರ ಪರಾಕ್ರಮವುಳ್ಳವನೇ, ಹೀಗೆ ಯುದ್ಧದಲ್ಲಿ ಬೆಳೆದು ನಿಂತ ಸೂತಪುತ್ರನಾದ ಕಣರ್ನನ್ನು ತಡೆಯುವವನು ನಿನ್ನನ್ನು ಬಿಟ್ಟು ಬೇರೆ ಯಾವನೂ ಇಲ್ಲ.
ಸ ತ್ವಂ ಕುರು ಮಹಾಬಾಹೋ ಕರ್ಮ ಯುಕ್ತಮಿಹಾತ್ಮನಃ |
ಮಾತುಲಾನಾಂ ಪಿತೄಣಾಂ ಚ ತೇಜಸೋಽಸ್ತ್ರಬಲಸ್ಯ ಚ ॥ 47 ॥
ಎಲೈ ಮಹಾಬಾಹುವೇ, ನಿನ್ನ ಸೋದರಮಾವಂದಿರಿಗೂ, ತಂದೆಗಳಿಗೂ, ನಿನ್ನ ತೇಜಸ್ಸಿಗೂ, ನಿನ್ನ ಬಳಿ ಇರುವ ಅಸ್ತ್ರಸಾಮರ್ಥ್ಯಕ್ಕೂ ಅನುಗುಣವಾದ ಕಾರ್ಯವನ್ನು ಮಾಡುವವನಾಗು.
ಏತದರ್ಥಂ ಹಿ ಹೈಡಿಂಬ ಪುತ್ರಾನಿಚ್ಛಂತಿ ಮಾನವಾಃ |
ಕಥಂ ನಸ್ತಾರಯೇದ್ದುಃಖಾತ್ ಸ ತ್ವಂ ತಾರಯ ಬಾಂಧವಾನ್ ॥ 48 ॥
ಎಲೈ ಹಿಡಿಂಬೆಯ ಪುತ್ರನೇ, ನಮ್ಮ ಪುತ್ರನು ನಮ್ಮನ್ನು ಹೇಗೆ ದುಃಖದಿಂದ ದಾಟಿಸಿಯಾನು ಎಂದು ಮನುಷ್ಯರು ಇದರ ಸಲುವಾಗಿ ಪುತ್ರರನ್ನು ಬಯಸುತ್ತಾರೆ. ಅಂತಹ ನೀನು ಬಾಂಧವರನ್ನು ದಾಟಿಸು.
ತವ ಹ್ಯಸ್ತ್ರಬಲಂ ಭೀಮಂ ಮಾಯಾಶ್ಚ ತವ ದುಸ್ತರಾಃ |
ಸಂಗ್ರಾಮೇ ಯುದ್ಧ್ಯಮಾನಸ್ಯ ಸತತಂ ಭೀಮನಂದನ ॥ 49 ॥
ಎಲೈ ಭೀಮಪುತ್ರನೇ, ರಣರಂಗದಲ್ಲಿ ಸತತವಾಗಿ ಯುದ್ಧವನ್ನು ಮಾಡುವ ನಿನ್ನ ಅಸ್ತ್ರಬಲವು ಭಯಂಕರವಾಗಿದೆ ಮತ್ತು ನಿನ್ನ ಮಾಯೆಗಳೂ ಸಹ ದಾಟಲು ಅಸಾಧ್ಯವಾದವುಗಳು.
ಪಾಂಡವಾನಾಂ ಪ್ರಭಗ್ನಾನಾಂ ಕರ್ಣೇನ ಶಿತಸಾಯಕೈಃ |
ಮಜ್ಜತಾಂ ಧಾರ್ತರಾಷ್ಟ್ರೇಷು ಭವ ಪಾರಂ ಪರಂತಪ ॥ 50 ॥
ಎಲೈ ಪರಂತಪನೇ, ಕರ್ಣನ ತೀಕ್ಷ್ಣವಾದ ಬಾಣಗಳಿಂದ ಭಗ್ನಗೊಂಡು, ದುರ್ಯೋಧನನ ಸೈನ್ಯಸಾಗರದಲ್ಲಿ ಮುಳುಗುತ್ತಿರುವ ಪಾಂಡವರಿಗೆ ನೀನು ದಡವಾಗು.
ರಾತ್ರೌ ಹಿ ರಾಕ್ಷಸಾ ಭೂಯೋ ಭವಂತ್ಯಮಿತವಿಕ್ರಮಾಃ |
ಬಲವಂತಃ ಸುದುರ್ಧರ್ಷಾಃ ಶೂರಾ ವಿಕ್ರಾಂತಚಾರಿಣಃ ॥ 51 ॥
ರಾತ್ರಿಯ ವೇಳೆಯಲ್ಲಿ ರಾಕ್ಷಸರು ಇನ್ನೂ ಹೆಚ್ಚಿನ ಅಗಾಧವಾದ ಪರಾಕ್ರಮವುಳ್ಳವರೂ, ಬಲಿಷ್ಠರೂ, ಸೋಲಿಸಲು ಅಸಾಧ್ಯರಾದವರೂ, ಶೂರರೂ ಮತ್ತು ಪರಾಕ್ರಮದಿಂದ ಸಂಚರಿಸುವವರೂ ಆಗುತ್ತಾರೆ.
ಜಹಿ ಕರ್ಣಂ ಮಹೇಷ್ವಾಸಂ ನಿಶೀಥೇ ಮಾಯಯಾ ರಣೇ |
ಪಾರ್ಥಾ ದ್ರೋಣಂ ವಧಿಷ್ಯಂತಿ ಧೃಷ್ಟದ್ಯುಮ್ನಪುರೋಗಮಾಃ ॥ 52 ॥
ಆದ್ದರಿಂದ ನೀನು ಈ ರಾತ್ರಿಯಲ್ಲಿ ನಿನ್ನ ಮಾಯೆಯಿಂದ ಯುದ್ಧದಲ್ಲಿ ಕರ್ಣನನ್ನು ಕೊಲ್ಲುವವನಾಗು. ಧೃಷ್ಟದ್ಯುಮ್ನನೇ ಮೊದಲಾದ ಪಾಂಡವರು ದ್ರೋಣರನ್ನು ಕೊಲ್ಲುವರು (ಎಂದು ಹೇಳಿದನು).
ಸಂಜಯಃ
ಕೇಶವಸ್ಯ ವಚಃ ಶ್ರುತ್ವಾ ಬೀಭತ್ಸುರಪಿ ರಾಕ್ಷಸಮ್ |
ಅಭ್ಯಭಾಷತ ಕೌರವ್ಯ ಘಟೋತ್ಕಚಮರಿಂದಮಮ್ ॥ 53 ॥
ಸಂಜಯ ಕೃಷ್ಣನ ಮಾತುಗಳನ್ನು ಕೇಳಿ ಎಲೈ ಕೌರವ್ಯನೇ, ಅರ್ಜುನನೂ ಸಹ ಅರಿಂದಮನಾದ ಘಟೋತ್ಕಚನನ್ನು ಕುರಿತು

ಮಾತನಾಡಿದನು.
ಘಟೋತ್ಕಚ ಭವಾಂಶ್ಚೈವ ದೀರ್ಘಬಾಹುಶ್ಚ ಸಾತ್ಯಕಿಃ |
ಮತೌ ಮೇ ಸರ್ವಸೈನ್ಯೇಷು ಭೀಮಸೇನಶ್ಚ ಪಾಂಡವಃ ॥ 54 ॥
ಎಲೈ ಘಟೋತ್ಕಚನೇ, ನೀನೂ, ದೀರ್ಘಬಾಹುವಾದ ಸಾತ್ಯಕಿಯೂ ಮತ್ತು ಪಾಂಡುಪುತ್ರನಾದ ಭೀಮಸೇನನೂ ಎಲ್ಲ ಸೈನ್ಯಗಳಲ್ಲಿಯೂ ಶ್ರೇಷ್ಠರಾದವರೆಂದು ನನ್ನ ಅಭಿಪ್ರಾಯ.
ಸ ಭವಾನ್ ಯಾತು ಕರ್ಣೇನ ದ್ವೈರಥಂ ಯುದ್ಧ್ಯತಾಂ ನಿಶಿ |
ಸಾತ್ಯಕಿಃ ಪೃಷ್ಠಗೋಪಸ್ತೇ ಭವಿಷ್ಯತಿ ಮಹಾರಥಃ ॥ 55 ॥
ಈ ರಾತ್ರಿಯಲ್ಲಿ ನೀನು ಕರ್ಣನ ಜೊತೆಯಲ್ಲಿ ದ್ವಂದ್ವಯುದ್ಧವನ್ನು ಮಾಡು. ಮಹಾರಥನಾದ ಸಾತ್ಯಕಿಯು ಹಿಂದಿನಿಂದ ನಿನ್ನನ್ನು ರಕ್ಷಿಸುವನು.
ಜಹಿ ಕರ್ಣಂ ರಣೇ ಶೂರಂ ಸಾತ್ವತೇನ ಸಹಾಯವಾನ್ |
ಯಥೇಂದ್ರಸ್ತಾರಕಂ ಪೂರ್ವಂ ಸ್ಕಂದೇನ ಸಹ ಜಘ್ನಿವಾನ್ ॥ 56 ॥
ಸಾತ್ಯಕಿಯ ಸಹಾಯವನ್ನು ಹೊಂದಿದ ನೀನು ಹಿಂದೆ ಸ್ಕಂದನ ಸಹಾಯದಿಂದ ಇಂದ್ರನು ತಾರಕಾಸುರನನ್ನು ಸಂಹರಿಸಿದಂತೆ ಶೂರನಾದ ಕರ್ಣನನ್ನು ಸಂಹರಿಸು (ಎಂದು ಹೇಳಿದನು).
ಘಟೋತ್ಕಚಃ
ಅಲಮೇವಾಸ್ಮಿ ಕರ್ಣಾಯ ದ್ರೋಣಾಯಾಲಂ ಚ ಸತ್ತಮ |
ಅನ್ಯೇಷಾಂ ಕ್ಷತ್ರಿಯಾಣಾಂ ಚ ಕೃತಾಸತ್ರಣಾಂ ಮಹಾತ್ಮನಾಮ್ ॥ 57 ॥
ಘಟೋತ್ಕಚ ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ಕರ್ಣನನ್ನೂ, ದ್ರೋಣರನ್ನೂ, ಅಸ್ತ್ರಜ್ಞರಾದ ಮಹಾತ್ಮರಾದ ಉಳಿದ ಕ್ಷತ್ರಿಯರನ್ನೂ ಯುದ್ಧದಲ್ಲಿ ಕೊಲ್ಲಲು ನಾನು ಸಮರ್ಥನಾಗಿದ್ದೇನೆ.
ಅದ್ಯ ದಾಸ್ಯಾಮಿ ಸಂಗ್ರಾಮಂ ಸೂತಪುತ್ರಾಯ ತಂ ನಿಶಿ |
ಯಂ ಜನಾಃ ಸಂಪ್ರವಕ್ಷ್ಯಂತಿ ಯಾವದ್ ಭೂಮಿರ್ಧರಿಷ್ಯತಿ ॥ 58 ॥
ನಾನು ಈ ರಾತ್ರಿಯಲ್ಲಿ ಭೂಮಿ ಇರುವವರೆಗೂ ಜನರು ಯಾವ ಯುದ್ಧವನ್ನು ಸ್ಮರಿಸಿ ಮಾತನಾಡುವರೋ ಅಂತಹ ಯುದ್ಧವನ್ನು ಕರ್ಣನಿಗೆ ಕೊಡುವೆನು.
ನ ಚಾತ್ರ ಶೂರಾನ್ ಮೋಕ್ಷ್ಯಾಮಿ ನ ಭೀತಾನ್ನ ಕೃತಾಂಜಲೀನ್ |
ಸರ್ವಾನೇವ ವಧಿಷ್ಯಾಮಿ ರಾಕ್ಷಸಂ ಧರ್ಮಮಾಸ್ಥಿತಃ ॥ 59 ॥
ರಾಕ್ಷಸಧರ್ಮವನ್ನು ಆಶ್ರಯಿಸಿದ ನಾನು ಶೂರರನ್ನಾಗಲೀ, ಭೀತರನ್ನಾಗಲೀ, ಕೈಮುಗಿದವರನ್ನಾಗಲೀ ಬಿಡುವುದಿಲ್ಲ. ಎಲ್ಲರನ್ನೂ ಕೊಲ್ಲುವೆನು.
ಸಂಜಯಃ
ಏವಮುಕತ್ವ ಮಹಾಬಾಹುರ್ಹೈಡಿಂಬಃ ಪರವೀರಹಾ |
ಅಭ್ಯಯಾತ್ ತುಮುಲೇ ಕರ್ಣಂ ತವ ಸೈನ್ಯಂ ವಿಭೀಷಯನ್ ॥ 60 ॥
ಸಂಜಯ ಹೀಗೆ ಹೇಳಿ ಪರವೀರಘಾತಕನಾದ, ಮಹಾಬಾಹುವಾದ ಘಟೋತ್ಕಚನು ರಣರಂಗದಲ್ಲಿ ನಿನ್ನ ಸೈನ್ಯವನ್ನು ಭಯಗೊಳಿಸುತ್ತಾ ಕರ್ಣನ ಕಡೆಗೆ ನುಗ್ಗಿದನು.
ತಮಾಪತಂತಂ ಸಂಕ್ರುದ್ಧಂ ದೀಪ್ತಾಸ್ಯಮಿವ ಪನ್ನಗಮ್ |
ಅಭ್ಯಸ್ಯನ್ ಪರಮೇಷ್ವಾಸಃ ಪ್ರತಿಜಗ್ರಾಹ ಸೂತಜಃ ॥ 61 ॥
ಜ್ವಲಿಸುವ ಮುಖವನ್ನು ಹೊಂದಿ ಕ್ರೋಧದಿಂದ ತನ್ನೆಡೆಗೆ ಸರ್ಪದಂತೆ ಬರುತ್ತಿದ್ದ ಅವನ ಮೇಲೆ ಸೂತಪುತ್ರನಾದ ಮಹಾಧನುರ್ಧಾರಿಯಾದ ಕರ್ಣನು ಬಾಣಗಳ ಮಳೆಯನ್ನು ಸುರಿಸುತ್ತಾ ಅವನನ್ನು ಸ್ವೀಕರಿಸಿದನು.
ತಯೋಃ ಸಮಭವದ್ ಯುದ್ಧಂ ಕರ್ಣರಾಕ್ಷಸಯೋರ್ನಿಶಿ |
ಗರ್ಜತೋ ರಾಜಶಾರ್ದೂಲ ಶಕ್ರಪ್ರಹ್ಲಾದಯೋರಿವ ॥ 62 ॥
ಎಲೈ ರಾಜಶಾರ್ದೂಲನೇ, ಆ ರಾತ್ರಿಯಲ್ಲಿ ಗರ್ಜಿಸುವ ಕರ್ಣ ಮತ್ತು ಘಟೋತ್ಕಚರಿಗೆ ಇಂದ್ರ-ಪ್ರಹ್ಲಾದರಿಗೆ ನಡೆದಂತೆ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಷಟ್‌ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತನೆಯ ಅಧ್ಯಾಯ
ಘಟೋತ್ಕಚನಿಂದ ಅಲಂಬಲನ ವಧೆ. ಅವನ ಶಿರಸ್ಸನ್ನು
ದುರ್ಯೋಧನನ ರಥದ ಮೇಲೆ ಎಸೆಯುವುದು.
ಸಂಜಯಃ
ದೃಷ್ಟ್ವಾ ಘಟೋತ್ಕಚಂ ರಾಜನ್ ಸೂತಪುತ್ರರಥಂ ಪ್ರತಿ |

ಪ್ರಯಾಂತಂ ತ್ವರಯಾ ಯುಕ್ತಂ ಜಿಘಾಂಸುಂ ಕರ್ಣಮಾಹವೇ ॥ 1 ॥
ಅಬ್ರುವೀತ್ ತವ ಪುತ್ರಸ್ತು ದುಃಶಾಸನಮಿದಂ ವಚಃ |
ಏತದ್ರುಕ್ಷೋ ರಣೇ ತೂರ್ಣಂ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ ॥ 2 ॥
ಅಭಿಯಾತಿ ದ್ರುತಂ ಕರ್ಣಂ ತದ್ವಾರಯ ಮಹಾರಥಮ್ |
ವೃತಃ ಸೈನ್ಯೇನ ಮಹತಾ ಯಾಹಿ ಯತ್ರ ಮಹಾಬಲಃ ॥ 3 ॥
ಸಂಜಯ ಎಲೈ ರಾಜನೇ, ರಣರಂಗದಲ್ಲಿ ಘಟೋತ್ಕಚನು ಕರ್ಣನನ್ನು ಕೊಲ್ಲಲು ಬಯಸಿ, ತ್ವರೆಯಿಂದ ಕೂಡಿ ಕರ್ಣನ ರಥದ ಕಡೆಗೆ ಹೋಗುತ್ತಿರುವುದನ್ನು ನೋಡಿ ನಿನ್ನ ಪುತ್ರನಾದ ದುರ್ಯೋಧನನು ದುಶ್ಶಾಸನನನ್ನು ಕುರಿತು- `ರಣರಂಗದಲ್ಲಿ ಕರ್ಣನ ಪರಾಕ್ರಮವನ್ನು ನೋಡಿ ಈ ರಾಕ್ಷಸನು ಶೀಘ್ರವಾಗಿ ಕರ್ಣನ ಕಡೆಗೆ ಹೋಗುತ್ತಿದ್ದಾನೆ. ದೊಡ್ಡ ಸೈನ್ಯದಿಂದ ಕೂಡಿ ಮಹಾಬಲನಾದ ಅವನು ಹೋಗುತ್ತಿರುವಲ್ಲಿಗೆ ಹೋಗಿ ಅವನನ್ನು ತಡೆ.
ಕರ್ಣೋ ವೈಕರ್ತನೋ ಯುದ್ಧೇ ರಾಕ್ಷಸೇನ ಯುಯುತ್ಸತಿ |
ರಕ್ಷ ಕರ್ಣಂ ರಣೇ ಯತ್ತೋ ವೃತಃ ಸೈನ್ಯೇನ ಮಾನದ ॥ 4 ॥
ವೈಕರ್ತನನಾದ ಕರ್ಣನು ರಾಕ್ಷಸನಾದ ಘಟೋತ್ಕಚನ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತಾನೆ. ಎಲೈ ಮಾನದನೇ, ಸೈನ್ಯ ಸಹಿತನಾಗಿ ಜಾಗರೂಕನಾಗಿ ರಣರಂಗದಲ್ಲಿ ಕರ್ಣನನ್ನು ರಕ್ಷಿಸು' ಎಂದು ಹೇಳಿದನು.
ಏತಸ್ಮಿನ್ನಂತರೇ ರಾಜನ್ ಜಟಾಸುರಸುತೋ ಬಲೀ |
ದುರ್ಯೋಧನಮುಪಾಗಮ್ಯ ಪ್ರಾಹ ಪ್ರಹರತಾಂ ವರಃ ॥5॥
ದುರ್ಯೋಧನ ತವಾಮಿತ್ರಾನ್ ಪ್ರಖ್ಯಾತಾನ್ ಯುದ್ಧದುರ್ಮದಾನ್ |
ಪಾಂಡವಾನ್ ಹಂತುಮಿಚ್ಛಾಮಿ ತ್ವಯಾಽಽಜ್ಞಪ್ತಃ ಸಹಾನುಗಾನ್ ॥6॥
ಜಟಾಸುರೋ ಮಮ ಪಿತಾ ರಕ್ಷಸಾಮಗ್ರಣೀಃ ಪುರಾ |
ಪ್ರಯುಜ್ಯ ಕರ್ಮ ರಕ್ಷೋಘ್ನಂ ಕ್ಷುದ್ರೈಃ ಪಾರ್ಥೈರ್ನಿಪಾತಿತಃ |
ತಸ್ಯಾಪಚಿತಿಮಿಚ್ಛಾಮಿ ತ್ವದ್ವಿಷ್ಟೋ ಗಂತುಮೀಶ್ವರ ॥7॥
ಎಲೈ ರಾಜನೇ, ಈ ಮಧ್ಯದಲ್ಲಿ ಜಟಾಸುರನ ಪುತ್ರನೂ, ಬಲಿಷ್ಠನೂ, ಪ್ರಹಾರ ಮಾಡುವವರಲ್ಲಿ ಶ್ರೇಷ್ಠನೂ ಆದ ಅಲಂಬಲನು ದುರ್ಯೋಧನನ ಸಮೀಪಕ್ಕೆ ಬಂದು `ಎಲೈ ದುರ್ಯೋಧನನೇ, ನಿನ್ನ ಅನುಮತಿಯನ್ನು ಹೊಂದಿ ನಾನು ಯುದ್ಧ ದುರ್ಮದರೂ, ಪ್ರಖ್ಯಾತರೂ, ನಿನ್ನ ಶತ್ರುಗಳೂ ಆದ ಪಾಂಡವರನ್ನು ಅವರ ಅನುಯಾಯಿಗಳ ಜೊತೆಯಲ್ಲಿ ಕೊಲ್ಲಲು ಬಯಸುತ್ತೇನೆ. ಹಿಂದೆ ರಾಕ್ಷಸರ ನಾಯಕನಾದ ಜಟಾಸುರನೆಂಬ ನನ್ನ ತಂದೆಯನ್ನು ಕ್ಷುದ್ರರಾದ ಪಾಂಡವರು ರಕ್ಷೋಘ್ನ ಕರ್ಮವನ್ನು ಮಾಡಿ ಕೊಂದಿದ್ದಾರೆ. ಎಲೈ ಪ್ರಭುವೇ, ನಿನ್ನ ಆದೇಶವನ್ನು ಪಡೆದು ನಾನು ಅದಕ್ಕೆ ಪ್ರತೀಕಾರ ಮಾಡಲು ಬಯಸುತ್ತೇನೆ' ಎಂದು ಹೇಳಿದನು.
ತಮಬ್ರುವೀತ್ ತತೋ ರಾಜಾ ಪ್ರೀಯಮಾಣಃ ಪುನಃ ಪುನಃ |
ದ್ರೋಣಕರ್ಣಾದಿಭಿಃ ಸಾರ್ಧಂ ಪರ್ಯಾಪ್ತೋಽಹಂ ದ್ವಿಷದ್ವಧೇ |
ತ್ವಂ ತು ಗಚ್ಛ ಮಯಾಜ್ಞಪ್ತೋ ಜಹಿ ಯುದ್ಧೇ ಘಟೋತ್ಕಚಮ್ ॥ 8 ॥
ರಾಜನು ಅವನ ಮಾತುಗಳನ್ನು ಕೇಳಿ ಪುನಃ ಪುನಃ ಸಂತೋಷಗೊಳ್ಳುತ್ತಾ ಅವನನ್ನು ಕುರಿತು- `ದ್ರೋಣ-ಕರ್ಣಾದಿ ಸಹಿತನಾದ ನಾನು ಶತ್ರುಗಳ ವಧೆಯನ್ನು ಮಾಡಲು ಸಮರ್ಥನಾಗಿದ್ದೇನೆ. ನೀನು ನನ್ನ ಆಜ್ಞೆಯಂತೆ ಹೋಗಿ ಯುದ್ಧದಲ್ಲಿ ಘಟೋತ್ಕಚನನ್ನು ಕೊಲ್ಲು' ಎಂದು ಹೇಳಿದನು.
ತಥೇತ್ಯುಕ್ತ್ವಾ ಮಹಾಕಾಯಃ ಸಮಾಹೂಯ ಘಟೋತ್ಕಚಮ್ |
ಜಟಾಸುರಿರ್ಭೈಮಸೇನಿಂ ನಾನಾಶಸ್ತ್ರೈರವಾಕಿರತ್ ॥ 9 ॥
ಮಹಾಕಾಯನಾದ ಅಲಂಬಲನು ಹಾಗೆಯೇ ಆಗಲೆಂದು ಹೇಳಿ ಘಟೋತ್ಕಚನನ್ನು ಆಹ್ವಾನಿಸಿ ಅವನ ಮೇಲೆ ನಾನಾಶಸ್ತ್ರಗಳನ್ನು ಪ್ರಯೋಗಿಸಿದನು.
ಅಲಂಬಲಂ ಚ ಕರ್ಣಂ ಚ ಕುರುಸೈನ್ಯಂ ಚ ದುಸ್ತರಮ್ |
ಹೈಡಿಂಬಃ ಪ್ರಮಮಾಥೈಕೋ ಮಹಾವಾತೋಂಬುದಾನಿವ ॥ 10 ॥
ಹಿಡಿಂಬೆಯ ಪುತ್ರನಾದ ಘಟೋತ್ಕಚನೊಬ್ಬನೇ ಬಿರುಗಾಳಿಯು ಮೋಡಗಳನ್ನು ನಾಶಪಡಿಸಿದಂತೆ ಅಲಂಬಲನನ್ನೂ, ಕರ್ಣನನ್ನೂ ಮತ್ತು ದುಸ್ತರವಾದ ಕುರು ಸೈನ್ಯವನ್ನೂ ಮರ್ದಿಸಿದನು.
ತತೋ ಮಾಯಾಮಯಂ ದೃಷ್ಟ್ವಾ ರಥಂ ತೂರ್ಣಮಲಂಬಲಃ |
ಘಟೋತ್ಕಚಂ ಶರವ್ರಾತೈರ್ನಾನಾಲಿಂಗೈಃ ಸಮಾರ್ದಯತ್ ॥ 11 ॥
ಆಗ ಅಲಂಬಲನು ಘಟೋತ್ಕಚನ ಮಾಯಾಮಯವಾದ ರಥವನ್ನು ನೋಡಿ ಶೀಘ್ರವಾಗಿ ನಾನಾವಿಧವಾದ ಬಾಣಗಳ ಸಮೂಹದಿಂದ ಅವನನ್ನು ಪೀಡಿಸಿದನು.
ವಿದ್ಧ್ವಾ ಚ ಬಹುಭಿರ್ಬಾಣೈರ್ಭೈಮಸೇನಿಮಲಂಬಲಃ |
ವ್ಯದ್ರಾವಯಚ್ಛರವ್ರಾತೈಃ ಪಾಂಡವಾನಾಮನೀಕಿನೀಮ್ ॥ 12 ॥
ಅಲಂಬಲನು ಭೀಮಸೇನನ ಪುತ್ರನಾದ ಘಟೋತ್ಕಚನನ್ನು ಅನೇಕ ಬಾಣಗಳಿಂದ ಹೊಡೆದು ತನ್ನ ಬಾಣಗಳ ಸಮೂಹದಿಂದ ಪಾಂಡವರ ಸೈನ್ಯವನ್ನು ಚದುರಿಸಿದನು.
ತೇನ ವಿದ್ರಾವ್ಯಮಾಣಾನಿ ಪಾಂಡುಸೈನ್ಯಾನಿ ಮಾರಿಷ |
ನಿಶೀಥೇ ವಿಪ್ರಕೀರ್ಯಂತ ವಾತನುನ್ನಾ ಘನಾ ಇವ ॥ 13 ॥
ಎಲೈ ಶ್ರೇಷ್ಠನೇ, ಅವನಿಂದ ಅಟ್ಟಿಸಲ್ಪಟ್ಟ ಪಾಂಡವರ ಸೈನ್ಯವು ರಾತ್ರಿಯ ಕಾಲದಲ್ಲಿ ಬಿರುಗಾಳಿಯಿಂದ ಚದುರಿಸಲ್ಪಟ್ಟ

ಮೋಡಗಳಂತೆ ಚದುರಿಹೋಯಿತು.
ಘಟೋತ್ಕಚಶರೈರ್ನುನ್ನಾ ತಥೈವ ಕುರುವಾಹಿನೀ |
ನಿಶೀಥೇ ಪ್ರಾದ್ರವದ್ ರಾಜನ್ನುತ್ಸೃಜ್ಯೋಲ್ಕಾಃ ಸಹಸ್ರಶಃ ॥ 14 ॥
ಎಲೈ ರಾಜನೇ, ಹಾಗೆಯೇ ಘಟೋತ್ಕಚನ ಬಾಣಗಳಿಂದ ಪೀಡಿತವಾದ ಕುರು ಸೈನ್ಯವು ರಾತ್ರಿಯ ವೇಳೆಯಲ್ಲಿ ಸಹಸ್ರಾರು ಪಂಜುಗಳನ್ನು ಅಲ್ಲಿಯೇ ಬಿಟ್ಟು ಓಡಿ ಹೋಯಿತು.
ಅಲಂಬಲಸ್ತತಃ ಕ್ರುದ್ಧೋ ಭೈಮಸೇನಿಂ ಮಹಾಮೃಧೇ |
ಆಜಘ್ನೇ ನಿಶಿತೈರ್ಬಾಣೈಸ್ತೋತ್ತ್ರೈರಿವ ಮಹಾದ್ವಿಪಮ್ ॥ 15 ॥
ಮಹಾಯುದ್ಧದಲ್ಲಿ ಕೋಪಗೊಂಡ ಅಲಂಬಲನು ಆಗ ಘಟೋತ್ಕಚನನ್ನು ಅಂಕುಶಗಳಿಂದ ಮಹಾಗಜವನ್ನು ಹೊಡೆಯುವಂತೆ ತೀಕ್ಷ್ಣವಾದ ಬಾಣಗಳಿಂದ ಚೆನ್ನಾಗಿ ಹೊಡೆದನು.
ತಿಲಶಸ್ತಸ್ಯ ತದ್ಯಾನಂ ಸೂತಂ ಸರ್ವಾಯುಧಾನಿ ಚ |
ಘಟೋತ್ಕಚಃ ಪ್ರಚಿಚ್ಛೇದ ಪ್ರಾಣದಚ್ಚಾತಿದಾರುಣಮ್ ॥ 16 ॥
ಘಟೋತ್ಕಚನು ಅವನ ರಥವನ್ನೂ, ಸಾರಥಿಯನ್ನೂ ಮತ್ತು ಎಲ್ಲ ಆಯುಧಗಳನ್ನೂ ಎಳ್ಳಿನಷ್ಟು ಸಣ್ಣ ಚೂರುಗಳಾಗಿ ಕತ್ತರಿಸಿ ಅತಿಭೈರವವಾದ ನಾದವನ್ನು ಮಾಡಿದನು.
ತತಃ ಕರ್ಣಂ ಶರವ್ರಾತೈಃ ಕುರೂನನ್ಯಾನ್ ಸಹಸ್ರಶಃ |
ಅಲಂಬಲಂ ಚಾಭ್ಯವರ್ಷನ್ಮೇಘೋ ಮೇರುಮಿವಾಚಲಮ್ ॥ 17 ॥
ಅನಂತರ ಘಟೋತ್ಕಚನು ಮೇಘವು ಮೇರುಪರ್ವತದ ಮೇಲೆ ಜಲಧಾರೆಗಳನ್ನು ಸುರಿಸಿದಂತೆ ಬಾಣಗಳ ಸಮೂಹಗಳಿಂದ ಕರ್ಣನ, ಸಹಸ್ರಾರು ಕೌರವ ಯೋಧರ, ಅಲಂಬಲನ ಬಾಣಗಳ ಮಳೆಯನ್ನು ಸುರಿಸಿದನು.
ತತಃ ಸಂಚುಕ್ಷುಭೇ ಸೈನ್ಯಂ ಕುರೂಣಾಂ ರಾಕ್ಷಸಾರ್ದಿತಮ್ |
ಉಪರ್ಯುಪರಿ ಚಾನ್ಯೋನ್ಯಂ ಚತುರಂಗಂ ಮಮರ್ದ ಹ ॥ 18 ॥
ಆಗ ಘಟೋತ್ಕಚನಿಂದ ಪೀಡಿತವಾದ ಕೌರವ ಸೇನೆಯು ಕ್ಷೋಭೆಗೊಂಡಿತು. ಘಟೋತ್ಕಚನು ಮುಂದೆ ಮುಂದೆ ಸಾಗಿ ಚತುರಂಗ ಬಲವನ್ನು ಮರ್ದಿಸಿದನು.
ಜಟಾಸುರಿರ್ಮಹಾರಾಜ ವಿರಥೋ ಹತಸಾರಥಿಃ |
ಘಟೋತ್ಕಚಂ ರಣೇ ಕ್ರುದ್ಧೋ ಮುಷ್ಟಿನಾಭ್ಯಹನದ್ ದೃಢಮ್ ॥ 19 ॥
ಎಲೈ ಮಹಾರಾಜನೇ, ರಥವನ್ನೂ ಮತ್ತು ಸಾರಥಿಯನ್ನೂ ಕಳೆದುಕೊಂಡ ಅಲಂಬಲನು ರಣರಂಗದಲ್ಲಿ ಕ್ರುದ್ಧನಾಗಿ ಘಟೋತ್ಕಚನನ್ನು ಸಮೀಪಿಸಿ ತನ್ನ ಮುಷ್ಟಿಯಿಂದ ಅವನನ್ನು ದೃಢವಾಗಿ ಹೊಡೆದನು.
ಮುಷ್ಟಿನಾಽಭಿಹತಸ್ತೇನ ಪ್ರಚಚಾಲ ಘಟೋತ್ಕಚಃ |
ಕ್ಷಿತಿಕಂಪೇ ಯಥಾ ಶೈಲಃ ಸವೃಕ್ಷಗಣಗುಲ್ಮವಾನ್ ॥ 20 ॥
ಘಟೋತ್ಕಚನು ಭೂಕಂಪವಾದಾಗ ವೃಕ್ಷಸಮೂಹದಿಂದ ಕೂಡಿದ ಪರ್ವತದಂತೆ ಅವನ ಮುಷ್ಟಿಘಾತದಿಂದ ಕಂಪಿಸಿದನು.
ತತಃ ಸ ಪರಿಘಾಭೇನ ದ್ವಿಟ್‌ಸಂಘ್ನೇನ ಬಾಹುನಾ |
ಜಟಾಸುರಿಂ ಭೈಮಸೇನಿರವಧೀನ್ಮುಷ್ಟಿನಾ ಭೃಶಮ್ ॥ 21 ॥
ಅನಂತರ ಭೀಮಸೇನ ಪುತ್ರನಾದ ಘಟೋತ್ಕಚನು ಶತ್ರುಗಳ ಸಮೂಹವನ್ನು ಕೊಲ್ಲುವ ಒನಕೆಯಂತಿದ್ದ ತನ್ನ ಬಾಹುವಿನಿಂದ ಅಲಂಬಲನನ್ನು ಮುಷ್ಟಿಯಿಂದ ಬಲವಾಗಿ ಹೊಡೆದನು.
ತಂ ಪ್ರಮಥ್ಯ ತತಃ ಕ್ರುದ್ಧಸ್ತೂರ್ಣಂ ಹೈಡಿಂಬಿರಾಕ್ಷಿಪತ್ |
ದೋರ್ಭ್ಯಾಮಿಂದ್ರಧ್ವಜಾಭಾಭ್ಯಾಂ ನಿಷ್ಪಿಪೇಷ ಮಹೀತಳೇ ॥ 22 ॥
ಕ್ರೋಧಗೊಂಡ ಘಟೋತ್ಕಚನು ಅವನನ್ನು ಮುಷ್ಟಿಯಿಂದ ಗುದ್ದಿ, ಇಂದ್ರ- ಧ್ವಜದಂತಹ ತನ್ನ ಎರಡು ಬಾಹುಗಳಿಂದ ಅವನನ್ನು ಮೇಲಕ್ಕೆ ಎಸೆದು ಭೂಮಿಯಲ್ಲಿ ಕೆಡವಿ ಕಾಲಿನಿಂದ ತುಳಿದನು.
ಅಲಂಬಲೋಽಪಿ ವಿಕ್ಷಿಪ್ಯ ಸಮುತ್ಕ್ಷಿಪ್ಯ ಚ ರಾಕ್ಷಸಮ್ |
ಘಟೋತ್ಕಚಂ ರಣೇ ರೋಷಾನ್ನಿಷ್ಪಿಪೇಷ ಮಹೀತಳೇ ॥ 23 ॥
ಅಲಂಬಲನೂ ಸಹ ರಾಕ್ಷಸನಾದ ಘಟೋತ್ಕಚನನ್ನು ರೋಷದಿಂದ ಮೇಲಕ್ಕೆಸೆದು ಭೂಮಿಯ ಮೇಲೆ ಕೆಡವಿ ತುಳಿದನು.
ತಯೋಃ ಸಮಭವದ್ ಯುದ್ಧಂ ಗರ್ಜತೋರತಿಕಾಯಯೋಃ |
ಘಟೋತ್ಕಚಾಲಂಬಲಯೋಸ್ತುಮುಲಂ ಲೋಮಹರ್ಷಣಮ್ ॥ 24 ॥
ಮಹಾಶರೀರವನ್ನು ಹೊಂದಿ ಗರ್ಜನೆಯನ್ನು ಮಾಡುತ್ತಾ ಯುದ್ಧವನ್ನು ಮಾಡುವ ಘಟೋತ್ಕಚ-ಅಲಂಬಲರಿಗೆ ತೀವ್ರವೂ ರೋಮಾಂಚನಕಾರಿಯೂ ಆದ ಯುದ್ಧವು ನಡೆಯಿತು.
ವಿಶೇಷಯಂತಾವನ್ಯೋನ್ಯಂ ಮಾಯಾಭಿರತಿಮಾಯಿನೌ |
ಯುಯುಧಾತೇ ಮಹಾವೀರ್ಯಾವಿಂದ್ರವೈರೋಚನಾವಿವ ॥ 25 ॥
ಶ್ರೇಷ್ಠ ಮಾಯೆಯನ್ನು ಹೊಂದಿದ, ಮಹಾಪರಾಕ್ರಮವನ್ನು ಹೊಂದಿದ ಅವರಿಬ್ಬರೂ ತಮ್ಮ ಮಾಯೆಯಿಂದ ಒಬ್ಬರನ್ನೊಬ್ಬರು ಮೀರಿಸುತ್ತಾ ಇಂದ್ರ- ವೈರೋಚನರಂತೆ ಯುದ್ಧವನ್ನು ಮಾಡಿದರು.
ಪಾವಕಾಂಬುನಿಧೀ ಭೂತ್ವಾ ಪುನರ್ಗರುಡತಕ್ಷಕೌ |
ಪುನರ್ಮೇಘಮಹಾವಾತೌ ಪುನರ್ವಜ್ರಮಹಾಚಲೌ |
ಪುನಃ ಕುಂಜರಶಾರ್ದೂಲೌ ಪುನಃ ಸ್ವರ್ಭಾನುಭಾಸ್ಕರೌ ॥ 26 ॥

ಏವಂ ಮಾಯಾಶತಸೃಜಾವನ್ಯೋನ್ಯವಧಕಾಂಕ್ಷಿಣೌ |
ಭೃಶಂ ಚಿತ್ರಮಯುದ್ಯೇತಾಮಲಂಬಲಘಟೋತ್ಕಚೌ ॥ 27 ॥
ಅಗ್ನಿ-ಜಲಗಳಾಗಿ, ಪುನಃ ಗರುಡ-ಸರ್ಪಗಳಾಗಿ, ಪುನಃ ಮೇಘ-ವಾತಗಳಾಗಿ, ಪುನಃ ವಜ್ರ-ಮಹಾಪರ್ವತವಾಗಿ, ಪುನಃ ಕುಂಜರ-ವ್ಯಾಘ್ರಗಳಾಗಿ, ಪುನಃ ರಾಹು- ಸೂರ್ಯರಾಗಿ - ಈ ರೀತಿಯಾಗಿ ನೂರಾರು ಮಾಯೆಗಳನ್ನು ಸೃಷ್ಟಿಸುತ್ತಾ ಪರಸ್ಪರ ವಧೆಯನ್ನು ಆಶಿಸಿದ ಅಲಂಬಲ-ಘಟೋತ್ಕಚರು ಆಶ್ಚರ್ಯಕರವಾಗಿ ತೀವ್ರವಾದ ಯುದ್ಧವನ್ನು ಮಾಡಿದರು.
ಪರಿಘೈಶ್ಚ ಗದಾಭಿಶ್ಚ ಪ್ರಾಸಮುದ್ಗರಪಟ್ಟಿಶೈಃ |
ಮುಸಲೈಃ ಪರ್ವತಾಗ್ರೈಶ್ಚ ತಾವನ್ಯೋನ್ಯಂ ನಿಜಘ್ನತುಃ ॥ 28 ॥
ಅವರು ಪರಿಘಗಳಿಂದಲೂ, ಗದೆಗಳಿಂದಲೂ, ಪ್ರಾಸ-ಮುದ್ಗರ-ಪಟ್ಟಿಶ- ಗಳಿಂದಲೂ, ಮುಸಲಗಳಿಂದಲೂ, ಪರ್ವತಶಿಖರಗಳಿಂದಲೂ ಪರಸ್ಪರವಾಗಿ ಹೊಡೆದಾಡಿದರು.
ಹಯಾಭ್ಯಾಂ ಚ ಗಜಾಭ್ಯಾಂ ಚ ಪದಾತಿರಥಿನೌ ಪುನಃ |
ಯುಯುಧಾತೇ ಮಹಾಮಾಯೌ ರಾಕ್ಷಸಪ್ರವರೌ ಯುಧಿ ॥ 29 ॥
ಮಹಾಮಾಯೆಯನ್ನು ಹೊಂದಿದ, ರಾಕ್ಷಸಶ್ರೇಷ್ಠರಾದ ಅವರಿಬ್ಬರು ಅಶ್ವಗಳಿಂದಲೂ, ಗಜಗಳಿಂದಲೂ, ರಥಗಳಿಂದಲೂ ಕೂಡಿದವರಾಗಿ ಪುನಃ ಪದಾತಿಗಳಾಗಿ ಪರಸ್ಪರವಾಗಿ ಯುದ್ಧವನ್ನು ಮಾಡಿದರು.
ತತೋ ಘಟೋತ್ಕಚೋ ರಾಜನ್ನಲಂಬಲವಧೇಪ್ಸಯಾ |
ಉತ್ಪಪಾತ ಭೃಶಂ ಕ್ರುದ್ಧಃ ಶ್ಯೇನವನ್ನಿಪಪಾತ ಹ ॥ 30 ॥
ಎಲೈ ರಾಜನೇ, ಆಗ ಘಟೋತ್ಕಚನು ಅಲಂಬಲನನ್ನು ಕೊಲ್ಲಲು ಬಯಸಿ ಬಹಳ ಕೋಪಗೊಂಡು ಹದ್ದಿನಂತೆ ತನ್ನ ರಥದಿಂದ ಹಾರಿ ಅವನ ರಥದಲ್ಲಿ ಇಳಿದನು.
ಗೃಹೀತ್ವಾ ಚ ಮಹಾಕಾಯಂ ರಾಕ್ಷಸೇಂದ್ರಮಲಂಬಲಮ್ |
ಉದ್ಯಮ್ಯ ನ್ಯವಧೀದ್ ಭೂಮೌ ಮಯಂ ವಿಷ್ಣುರಿವಾಹವೇ ॥ 31 ॥
ಮಹಾಶರೀರವುಳ್ಳವನೂ, ರಾಕ್ಷಸಶ್ರೇಷ್ಠನೂ ಆದ ಅಲಂಬಲನನ್ನು ಹಿಡಿದು ಎತ್ತಿ ಭೂಮಿಯಲ್ಲಿ ಒಗೆದು ಯುದ್ಧದಲ್ಲಿ ವಿಷ್ಣುವು ಮಯನನ್ನು ಕೊಂದಂತೆ ಅವನನ್ನು ಕೊಂದನು.
ತತೋ ಘಟೋತ್ಕಚಃ ಖಡ್ಗಮುದ್ಗೃಹ್ಯಾದ್ಭುತದರ್ಶನಮ್ |
ಚಕರ್ತ ಕಾಯಾದ್ವಿ ಶಿರೋ ಭೀಮಂ ವಿಕೃತದರ್ಶನಮ್ ॥ 32 ॥
ಅನಂತರ ಘಟೋತ್ಕಚನು ಅದ್ಭುತವಾಗಿ ಕಾಣುತ್ತಿದ್ದ ತನ್ನ ಖಡ್ಗವನ್ನು ಮೇಲಕ್ಕೆತ್ತಿ ವಿಚಿತ್ರವೂ, ಭಯಂಕರವೂ ಆಗಿದ್ದ ಅವನ ಶಿರಸ್ಸನ್ನು ದೇಹದಿಂದ ಕತ್ತರಿಸಿದನು.
ತಚ್ಛಿರೋ ರುಧಿರಾಭ್ಯಕ್ತಂ ಗೃಹ್ಯ ಕೇಶೇಷು ರಾಕ್ಷಸಃ |
ಘಟೋತ್ಕಚೋ ಯಯಾವಾಶು ದುರ್ಯೋಧನರಥಂ ಪ್ರತಿ ॥ 33 ॥
ರಾಕ್ಷಸನಾದ ಘಟೋತ್ಕಚನು ರಕ್ತವು ಸೋರುತ್ತಿದ್ದ ಅಲಂಬಲನ ಶಿರಸ್ಸನ್ನು ಕೇಶಗಳಲ್ಲಿ ಹಿಡಿದು ಶೀಘ್ರವಾಗಿ ಅದನ್ನು ದುರ್ಯೋಧನನ ರಥದ ಬಳಿಗೆ ಹೋದನು.
ಅಭ್ಯೇತ್ಯ ಚ ಮಹಾಬಾಹುಃ ಸ್ಮಯಮಾನಃ ಸ ರಾಕ್ಷಸಃ |
ರಥೇಽಸ್ಯ ನಿಕ್ಷಿಪ್ಯ ಶಿರೋ ವಿಕೃತಾನನಮೂರ್ಧಜಮ್ ॥
ಪ್ರಾಣದದ್ ಭೈರವಂ ನಾದಂ ಪ್ರಾವೃಷೀವ ಬಲಾಹಕಃ ॥ 34 ॥
ಮಹಾಬಾಹುವಾದ ರಾಕ್ಷಸನಾದ ಘಟೋತ್ಕಚನು ವಿಕಾರ ಹೊಂದಿದ, ಮುಖ ಮತ್ತು ಕೇಶಗಳುಳ್ಳ ಆ ಶಿರಸ್ಸನ್ನು ದುರ್ಯೋಧನನ ರಥದ ಮೇಲೆ ಎಸೆದು, ಅವನನ್ನು ಸಮೀಪಿಸಿ ಮಳೆಗಾಲದ ಮೋಡದಂತೆ ಭೈರವವಾದ ಗರ್ಜನೆಯನ್ನು ಮಾಡಿದನು.
ಅಬ್ರವೀಚ್ಚ ತತೋ ರಾಜನ್ ದುರ್ಯೋಧನಮಿದಂ ವಚಃ |
ಏಷ ತೇ ನಿಹತೋ ಬಂಧುಸ್ತ್ವಯಾ ದೃಷ್ಟೋಽಸ್ಯ ವಿಕ್ರಮಃ |
ಪುನರ್ದ್ರಷ್ಟಾಸಿ ಕರ್ಣಸ್ಯ ನಿಷ್ಠಾಮೇತಾಂ ತಥಾತ್ಮನಃ ॥ 35 ॥
ಎಲೈ ರಾಜನೇ, ಅವನು ದುರ್ಯೋಧನನನ್ನು ಕುರಿತು- `ಯಾವನ ಪರಾಕ್ರಮವನ್ನು ನೋಡಿದೆಯೋ ಅಂತಹ ನಿನ್ನ ಬಂಧುವು ಹತನಾಗಿದ್ದಾನೆ. ನೀನು ಕರ್ಣನ ಮತ್ತು ಅನಂತರ ನಿನ್ನ ಇಂತಹ ಪರಿಸ್ಥಿತಿಯನ್ನು ನೋಡುವಿ' ಎಂದು ಹೇಳಿದನು.
ಏವಮುಕ್ತ್ವಾ ತತಃ ಪ್ರಾಯಾತ್ ಕರ್ಣಂ ಪ್ರತಿ ಜನೇಶ್ವರ |
ಕಿರನ್ ಶರಶತಾಂಸ್ತೀಕ್ಷ್ಣಾನ್ ವಿಮುಂಚನ್ ಕರ್ಣಮೂರ್ಧನಿ ॥ 36 ॥
ಎಲೈ ರಾಜನೇ, ದುರ್ಯೋಧನನನ್ನು ಕುರಿತು ಹೀಗೆ ಹೇಳಿ, ಕರ್ಣನ ಶಿರಸ್ಸಿನ ಮೇಲೆ ತೀಕ್ಷ್ಣವಾದ ನೂರಾರು ಬಾಣಗಳನ್ನು ಪ್ರಯೋಗಿಸುತ್ತಾ ಘಟೋತ್ಕಚನು ಕರ್ಣನ ಕಡೆಗೆ ಹೋದನು.
ತತಃ ಸಮಭವದ್ ಯುದ್ಧಂ ಘೋರರೂಪಂ ಭಯಾನಕಮ್ |
ವಿಸ್ಮಾಪನಂ ಮಹಾರಾಜ ನರರಾಕ್ಷಸಯೋರ್ಮೃಧೇ ॥ 37 ॥
ಎಲೈ ಮಹಾರಾಜನೇ, ಅನಂತರ ನರ-ರಾಕ್ಷಸರಾದ ಕರ್ಣ-ಘಟೋತ್ಕಚರಿಗೆ ಘೋರವೂ, ಭಯಂಕರವೂ, ಆಶ್ಚರ್ಯಕರವೂ ಆದ ಯುದ್ಧವು ನಡೆಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಸಪ್ತವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೊಂದನೆಯ ಅಧ್ಯಾಯ
ಕರ್ಣ-ಘಟೋತ್ಕಚರ ಯುದ್ಧದ ವಿಸ್ತೃತ ಕಥನ.
ಧೃತರಾಷ್ಟ್ರಃ
ಯತ್ರ ವೈಕರ್ತನಃ ಕರ್ಣೋ ರಾಕ್ಷಸಶ್ಚ ಘಟೋತ್ಕಚಃ |
ನಿಶೀಥೇ ಸಮಸಜ್ಜೇತಾಂ ತದ್ ಯುದ್ಧಮಭವತ್ ಕಥಮ್ ॥ 1 ॥
ಧೃತರಾಷ್ಟ್ರ ರಾತ್ರಿಯ ಕಾಲದಲ್ಲಿ ವೈಕರ್ತನನಾದ ಕರ್ಣನೂ ರಾಕ್ಷಸನಾದ ಘಟೋತ್ಕಚನೂ ಸಂಸಕ್ತರಾದಾಗ ಯುದ್ಧವು ಹೇಗೆ ನಡೆಯಿತು?
ಕೀದೃಶಂ ಚಾಭವದ್ ಯುದ್ಧಂ ತಸ್ಯ ಘೋರಸ್ಯ ರಕ್ಷಸಃ |
ರಥಶ್ಚ ಕೀದೃಶಸ್ತಸ್ಯ ಮಾಯಾಃ ಸರ್ವಾಯುಧಾನಿ ಚ ॥ 2 ॥
ಘೋರರಾದ ಆ ರಾಕ್ಷಸನ ಯುದ್ಧವು ಹೇಗಿದ್ದಿತು? ರಥವು ಹೇಗಿದ್ದಿತು? ಅವನ ಮಾಯೆಗಳು ಮತ್ತು ಎಲ್ಲ ಆಯುಧಗಳು ಹೇಗಿದ್ದವು?
ಕಿಂಪ್ರಮಾಣಾ ಹಯಾಸ್ತಸ್ಯ ರಥಕೇತುರ್ಧನುಸ್ತಥಾ |
ಕೀದೃಶಂ ವರ್ಮ ಚೈವಾಸ್ಯ ಕಂಠತ್ರಾಣಂ ಚ ಕೀದೃಶಮ್ |
ಪೃಷ್ಟಸ್ತ್ವಮೇತದಾಚಕ್ಷ್ವ ಕುಶಲೋ ಹ್ಯಸಿ ಸಂಜಯ ॥ 3 ॥
ಅವನ ಅಶ್ವಗಳ ಎತ್ತರವೆಷ್ಟು? ಅವನ ರಥದ ಧ್ವಜದ ಪರಿಮಾಣವೆಷ್ಟು? ಧನುಸ್ಸಿನ ಪರಿಮಾಣವೆಷ್ಟು? ಅವನ ಕವಚವು ಹೇಗಿದ್ದಿತು? ಅವನ ಕಂಠರಕ್ಷಣ ಹೇಗಿದ್ದಿತು? ಎಲೈ ಸಂಜಯನೇ, ನನ್ನ ಪ್ರಶ್ನೆಗೆ ಉತ್ತರವಾಗಿ ನೀನು ಇದೆಲ್ಲವನ್ನೂ ಹೇಳು. ನೀನು ಕುಶಲನಾಗಿದ್ದೀಯೆ.
ಸಂಜಯಃ
ಲೋಹಿತಾಕ್ಷೋ ಮಹಾಕಾಯಸ್ತಾಮ್ರಾಸ್ಯೋ ನಿಮ್ನಿತೋದರಃ |
ಊರ್ಧ್ವರೋಮಾ ಹರಿಶ್ಮಶ್ರುಃ ಶಂಕುಕರ್ಣೋ ಮಹಾಹನುಃ ॥ 4 ॥
ಆಕರ್ಣಾದ್ ದಾರಿತಾಸ್ಯಶ್ಚ ತೀಕ್ಷ್ಣದಂಷ್ಟ್ರಃ ಕರಾಳವಾನ್ |
ಸುದೀರ್ಘತಾಮ್ರಜಿಹ್ವೋಷ್ಠೋ ಲಂಬಭ್ರೂಃ ಸ್ಥೂಲನಾಸಿಕಃ ॥ 5 ॥
ನೀಲಾಂಗೋ ಲೋಹಿತಗ್ರೀವೋ ಗಿರಿವರ್ಷ್ಮಾ ಭಯಂಕರಃ |
ಮಹಾಕಾಯೋ ಮಹಾಬಾಹುರ್ಮಹಾಶೀರ್ಷೋ ಮಹಾಬಲಃ ॥ 6 ॥
ವಿಕಚಃ ಪರುಷಸ್ಪರ್ಶೋ ವಿಕಟೋದ್ಬದ್ಧಪಿಂಡಿಕಃ |
ಸ್ಥೂಲಸ್ಫಿಗ್ ಗೂಢನಾಭಿಶ್ಚ ಶಿಥಿಲೋಪಚಯೋ ಮಹಾನ್ ॥ 7 ॥
ಸಂಜಯ ಘಟೋತ್ಕಚನು ಕೆಂಪುಕಣ್ಣುಳ್ಳವನು, ದೊಡ್ಡದೇಹ, ಕೆಂಪಾದ ಮುಖ, ಆಳವಾದ ಉದರ, ಮೇಲ್ಮುಖವಾದ ದೇಹದ ರೋಮಗಳು, ಹಸಿರು ಬಣ್ಣದ ಮೀಸೆಗಳು, ತ್ರಿಕೋಣಾಕಾರದ ಕಿವಿಗಳು, ದೊಡ್ಡದಾದ ಗಲ್ಲ, ಕಿವಿಯವರೆಗೂ ಹಬ್ಬಿರುವ ಬಾಯಿ, ತೀಕ್ಷ್ಣವೂ ಕರಾಳವೂ ಆದ ದಂತಗಳು, ದೀರ್ಘವಾದ ಕೆಂಪಾದ ನಾಲಿಗೆ ಮತ್ತು ತುಟಿಗಳು, ಇಳಿಬಿದ್ದಿರುವ ಹುಬ್ಬು, ದಪ್ಪವಾದ ಮೂಗು, ಕಪ್ಪಾದ ಶರೀರ, ಕೆಂಪಾದ ಕತ್ತು- ಇವುಗಳಿಂದ ಕೂಡಿದವನಾಗಿ ಪರ್ವತದ ಕಾಂತಿಯನ್ನು ಹೊಂದಿ, ಭಯಂಕರನಾಗಿ ದೀರ್ಘವಾದ ಬಾಹು, ದೊಡ್ಡ ತಲೆ, ಮಹಾಬಲದಿಂದ ಕೂಡಿ, ಒರಟಾದ ದೇಹಸ್ಪರ್ಶ, ವಿರೂಪವಾದ ದೇಹ, ಸ್ಥೂಲವಾದ ಜಘನಗಳು, ನಿಮ್ನವಾದ ನಾಭಿ, ಪುಷ್ಟಾಂಗಗಳು, ದೊಡ್ಡ ಆಕೃತಿ ಇವುಗಳಿಂದ ಕೂಡಿದವನಾಗಿದ್ದನು.
ತಥೈವ ಹಸ್ತಾಭರಣೀ ಮಹಾಮಾಯೋಂಗದೀ ತಥಾ |
ಉರಸಾ ಧಾರಯನ್ನಿಷ್ಕಮಗ್ನಿಮಾಲಾಂ ಯಥಾಚಲಃ ॥ 8 ॥
ಹಾಗೆಯೇ ಹಸ್ತಾಭರಣಗಳನ್ನು ಧರಿಸಿ, ಭುಜಕೀರ್ತಿಗಳನ್ನು ಧರಿಸಿ, ಎದೆಯಲ್ಲಿ ಪರ್ವತವು ಅಗ್ನಿಮಾಲೆಯನ್ನು ಧರಿಸಿದಂತೆ ಚಿನ್ನದ ನಾಣ್ಯಹಾರಗಳನ್ನು ಧರಿಸಿ ಮಹಾಮಾಯೆ ಉಳ್ಳವನಾಗಿದ್ದನು.
ತಸ್ಯ ಹೇಮಮಯಂ ಚಿತ್ರಂ ಬಹುರೂಪಾಂಗಶೋಭಿತಮ್ |
ತೋರಣಪ್ರತಿಮಂ ಶುಭ್ರಾಂ ಕಿರೀಟಂ ಮೂರ್ಧ್ನ್ಯಶೋಭತ ॥ 9 ॥
ಕುಂಡಲೇ ಬಾಲಸೂರ್ಯಾಭೇ ಮಾಲಾಂ ಹೇಮಮಯೀಂ ಶುಭಾಮ್|
ಧಾರಯನ್ ವಿಪುಲಂ ಕಾಂಸ್ಯಂ ಕವಚಂ ಚ ಮಹಾಪ್ರಭಮ್ ॥ 10 ॥
ಅವನ ಶಿರಸ್ಸಿನಲ್ಲಿ ಸುವರ್ಣಮಯವಾದ, ಆಶ್ಚರ್ಯಕರವಾದ ಅನೇಕ ರೂಪವುಳ್ಳ ಅವಯವಗಳಿಂದ ಶೋಭಿತವಾದ, ಶಿರಸ್ಸಿಗೆ ಕಟ್ಟಿದ ತೋರಣದಂತಿದ್ದ ಶುಭ್ರವಾದ ಕಿರೀಟವು ಶೋಭಿಸುತ್ತಿದ್ದಿತು. ಬಾಲಸೂರ್ಯನ ಕಾಂತಿಯನ್ನು ಹೊಂದಿದ ಕುಂಡಲಗಳನ್ನೂ, ಸುವರ್ಣಮಯವಾದ ಪುಷ್ಪಮಾಲೆಯನ್ನು ಮಹಾಕಾಂತಿಯುಳ್ಳ, ವಿಸ್ತಾರವಾದ ಕಂಚಿನ ಕವಚವನ್ನೂ ಧರಿಸಿದ್ದನು.
ಕಿಂಕಿಣೀಶತನಿರ್ಘೋಷಂ ರಕ್ತಧ್ವಜಪತಾಕಿನಮ್ |
ಋಕ್ಷಚರ್ಮಾವನದ್ಧಾಂಗಂ ನಲ್ವಮಾತ್ರಂ ಮಹಾರಥಮ್ ॥ 11 ॥
ಸರ್ವಾಯುಧವರೋಪೇತಮಾಸ್ಥಿತೋ ಧ್ವಜಮಾಲಿನಮ್ |
ಅಷ್ಟಚಕ್ರಸಮಾಯುಕ್ತಂ ಮೇಘಗಂಭೀರನಿಸ್ವನಮ್ ॥ 12 ॥
ಅವನ ರಥವು ನೂರಾರು ಕಿಂಕಿಣಿಗಳ ಘೋಷದಿಂದ ಕೂಡಿ, ಕೆಂಪು ಬಣ್ಣದ ಧ್ವಜಪತಾಕೆಗಳನ್ನು ಹೊಂದಿ, ಕರಡಿಯ ಚರ್ಮದಿಂದ

ಆಚ್ಛಾದಿಸಲ್ಪಟ್ಟು, ಒಂದು ನಲ್ವದಷ್ಟು ಎತ್ತರವನ್ನು ಹೊಂದಿ, ಸರ್ವಾಯುಧಗಳಿಂದ ತುಂಬಿದುದಾಗಿ, ಧ್ವಜಮಾಲೆಯನ್ನು ಹೊಂದಿ, ಎಂಟು ಚಕ್ರದಿಂದ ಕೂಡಿ, ಮೇಘಗಂಭೀರ ಸ್ವನವುಳ್ಳದ್ದಾಗಿದ್ದಿತು.
ತತ್ರ ಮಾತಂಗಸಂಕಾಶಾ ಲೋಹಿತಾಕ್ಷಾ ವಿಭೀಷಣಾಃ |
ಕಾಮವರ್ಣಜವಾ ಯುಕ್ತಾ ಬಲವಂತೋಽವಹನ್ ಹಯಾಃ ॥ 13 ॥
ರಾಕ್ಷಸೋಽಸ್ಯ ವಿರೂಪಾಕ್ಷಃ ಸೂತೋ ದೀಪ್ತಾಸ್ಯಕುಂಡಲಃ |
ರಶ್ಮಿಭಿಃ ಸೂರ್ಯರಶ್ಮ್ಯಾಭೈಃ ಸಂಜಗ್ರಾಹ ಹಯಾನ್ ರಣೇ |
ಸ ತೇನ ಸಹಿತಸ್ತಸ್ಥಾವರುಣೇನ ಯಥಾ ರವಿಃ ॥ 14 ॥
ಅವನ ಅಂತಹ ರಥವನ್ನು ಆನೆಯನ್ನು ಹೋಲುವ, ಕೆಂಪುಕಣ್ಣುಗಳುಳ್ಳ, ಭಯಂಕರವಾದ, ಕಾಮವರ್ಣ ಮತ್ತು ಕಾಮವೇಗಗಳನ್ನು ಹೊಂದಿದ ಬಲಿಷ್ಠವಾದ ಕುದುರೆಗಳು ಎಳೆದವು. ಆ ರಥದ ಸಾರಥಿಯಾದರೋ ವಿರೂಪಾಕ್ಷವುಳ್ಳವನೂ, ಪ್ರಕಾಶಿಸುವ ಕುಂಡಲವನ್ನು ಹೊಂದಿದ ಮುಖವುಳ್ಳವನೂ ಆದ ಒಬ್ಬ ರಾಕ್ಷಸ. ಸೂರ್ಯನ ಕಿರಣಗಳನ್ನು ಹೋಲುವ ಕಡಿವಾಣವನ್ನು ಹಿಡಿದು, ಅಶ್ವಗಳನ್ನು ನಿಯಂತ್ರಿಸುತ್ತಾ ಅವನು ರಥದಲ್ಲಿ ಅರುಣನಿಂದ ಸಹಿತನಾದ ರವಿಯಂತೆ ಘಟೋತ್ಕಚನು ಶೋಭಿಸುವಂತೆ ಮಾಡಿದನು.
ಸಂಸಕ್ತ ಇವ ಚಾಭ್ರೇಣ ಯಥಾದ್ರಿರ್ಮಹತಾ ಮಹಾನ್ |
ದಿವಸ್ಪೃಕ್ಸುಮಹಾನ್ ಕೇತುಃ ಸ್ಯಂದನೇಸ್ಯ ಸಮುಚ್ಛ್ರಿತಃ |
ರಕ್ತೋತ್ತಮಾಂಗಃ ಕ್ರವ್ಯಾದೋ ಗೃಧ್ರಃ ಪರಮಭೀಷಣಃ ॥ 15 ॥
ಅವನ ರಥದ ರಕ್ತವರ್ಣದ ಎತ್ತರವಾದ ಧ್ವಜವು ಮಹಾಪರ್ವತದಂತೆ ಮೋಡಗಳನ್ನು ಮುಟ್ಟುವಂತಿದ್ದಿತು. ಕೆಂಪಾದ ಶಿರಸ್ಸುಳ್ಳ ಮಾಂಸಾಹಾರಿಯಾದ ಪರಮ ಭಯಂಕರವಾದ ಹದ್ದು ಅವನ ಧ್ವಜಚಿಹ್ನೆಯಾಗಿದ್ದಿತು.
ವಾಸವಾಶನಿನಿರ್ಘೋಷಂ ದೃಢಜ್ಯಮಭಿವಿಕ್ಷಿಪನ್ |
ವ್ಯಕ್ತಂ ಕಿಷ್ಕುಪರೀಣಾಹಂ ದ್ವಾದಶಾರತ್ನಿ ಕಾರ್ಮುಕಮ್ ॥ 16 ॥
ಅವನು ಒಂದು ಕಿಷ್ಕು ಪರಿಮಾಣವುಳ್ಳ ಹನ್ನೆರಡು ಮೊಳ ಎತ್ತರದ ದೃಢವಾದ ಹೆದೆಯನ್ನು ಹೊಂದಿದ ಇಂದ್ರನ ವಜ್ರಾಯುಧದ ಘೋಷಕ್ಕೆ ಸಮವಾದ ಘೋಷವುಳ್ಳ ಧನುಸ್ಸನ್ನು ಹೊಂದಿದ್ದನು.
ರಥಾಕ್ಷಮಾತ್ರೈರಿಷುಭಿಃ ಸರ್ವಾಃ ಪ್ರಚ್ಛಾದಯನ್ ದಿಶಃ |
ತಸ್ಯಾಂ ವೀರಾಪಹಾರಿಣ್ಯಾಂ ನಿಶಾಯಾಂ ಕರ್ಣಮಭ್ಯಯಾತ್ ॥ 17 ॥
ರಥದ ಅಕ್ಷದಷ್ಟು ಸುತ್ತಳತೆಯುಳ್ಳ ಬಾಣಗಳಿಂದ ಎಲ್ಲಾ ದಿಕ್ಕುಗಳನ್ನೂ ಆಚ್ಛಾದಿಸುತ್ತಾ ವೀರರನ್ನು ನಾಶಗೊಳಿಸುವ ಆ ರಾತ್ರಿಯಲ್ಲಿ ಅವನು ಕರ್ಣನ ಸಮೀಪಕ್ಕೆ ಬಂದನು.
ತಸ್ಯ ವಿಕ್ಷಿಪತಶ್ಚಾಪಂ ರಥೇ ವಿಷ್ಟಭ್ಯ ತಿಷ್ಠತಃ |
ಅಶ್ರೂಯತ ಧನುರ್ಘೋಷೋ ವಿಸ್ಫೂರ್ಜಿತಮಿವಾಶನೇಃ ॥ 18 ॥
ರಥದಲ್ಲಿ ಭದ್ರವಾಗಿ ನಿಂತು ಧನುಸ್ಸನ್ನು ಎಳೆಯುವ ಅವನ ಧನುಸ್ಸಿನ ಘೋಷವು ಸಿಡಿಲಿನ ಸ್ಫೋಟದಂತೆ ಕೇಳಿಬರುತ್ತಿದ್ದಿತು.
ತೇನ ವಿತ್ರಾಸ್ಯಮಾನಾನಿ ತವ ಸೈನ್ಯಾನಿ ಭಾರತ |
ಸಮಕಂಪಂತ ಸರ್ವಾಣಿ ಸಿಂಧೋರಿವ ಮಹೋರ್ಮಯಃ ॥ 19 ॥
ಎಲೈ ಭಾರತನೇ, ಅವನಿಂದ ಹೆದರಿಸಲ್ಪಟ್ಟ ನಿನ್ನ ಸೈನ್ಯಗಳೆಲ್ಲವೂ ಸಮುದ್ರದ ಅಲೆಗಳಂತೆ ಚಂಚಲವಾದವು.
ತಮಾಪತಂತಂ ಸಂಪ್ರೇಕ್ಷ್ಯ ವಿರೂಪಾಕ್ಷಂ ವಿಭೀಷಣಮ್ |
ಉತ್ಸ್ಮಯನ್ನಿವ ರಾಧೇಯಸ್ತ್ವರಮಾಣೋಽಭ್ಯವಾರಯತ್ ॥ 20 ॥
ವಿರೂಪಾಕ್ಷನೂ, ಭಯಂಕರನೂ ಆದ ಅವನು ವೇಗದಿಂದ ಬರುತ್ತಿರುವುದನ್ನು ನೋಡಿ ಕರ್ಣನು ನಗುತ್ತಾ ಶೀಘ್ರವಾಗಿ ಅವನನ್ನು ತಡೆದನು.
ತತಃ ಕರ್ಣೋಽಭ್ಯಯಾದೇನಮಸ್ಯನ್ನಸ್ಯಂತಮಂತಿಕಾತ್ |
ಮಾತಂಗ ಇವ ಮಾತಂಗಂ ಯೂಥರ್ಷಭ ಇವರ್ಷಭಮ್ ॥ 21 ॥
ಅನಂತರ ಕರ್ಣನು ಹತ್ತಿರದಿಂದ ಬಾಣಗಳನ್ನು ಪ್ರಯೋಗಿಸುತ್ತಾ ಅವನ ಸಮೀಪಕ್ಕೆ ಗಜವು ಗಜದ ಬಳಿಗೆ ಹೋದಂತೆ, ಗೂಳಿಯು ಗೂಳಿಯ ಬಳಿಗೆ ಹೋದಂತೆ ಅವನನ್ನು ಸಮೀಪಿಸಿದನು.
ಸ ಸನ್ನಿಪಾತಸ್ತುಮುಲಸ್ತಯೋರಾಸೀದ್ ವಿಶಾಂಪತೇ |
ಕರ್ಣರಾಕ್ಷಸಯೋ ರಾಜನ್ನಿಂದ್ರಶಂಬರಯೋರಿವ ॥ 22 ॥
ರಾಜನ್, ಕರ್ಣನಿಗೂ ರಾಕ್ಷಸನಾದ ಘಟೋತ್ಕಚನಿಗೂ ಉಂಟಾದ ಆ ಸಂಘರ್ಷವು ಇಂದ್ರನಿಗೂ ಶಂಬರನಿಗೂ ಉಂಟಾದ ಸಂಘರ್ಷದಂತೆ ತೀವ್ರವಾಗಿದ್ದಿತು.
ತೌ ಪ್ರಗೃಹ್ಯ ಮಹಾವೇಗೇ ಧನುಷೀ ಭೀಮನಿಸ್ವನೇ |
ಪ್ರಾಚ್ಛಾದಯೇತಾಮನ್ಯೋನ್ಯಂ ತಕ್ಷಮಾಣೌ ಮಹೇಷುಭಿಃ ॥ 23 ॥
ಅವರು ಮಹಾವೇಗವನ್ನೂ, ಭಯಂಕರ ಘೋಷವನ್ನೂ ಹೊಂದಿದ್ದ ಧನುಸ್ಸುಗಳ ಹಿಡಿದು ದೊಡ್ಡ ಬಾಣಗಳಿಂದ ಪರಸ್ಪರವಾಗಿ ಗಾಯಗೊಳಿಸುತ್ತಾ ಪರಸ್ಪರವಾಗಿ ಮುಚ್ಚಿಹಾಕಿದರು.
ತತಃ ಪೂರ್ಣಾಯತೋತ್ಸೃಷ್ಟೈಃ ಶರೈಃ ಸನ್ನತಪರ್ವಭಿಃ |
ನ್ಯವಾರಯೇತಾಮನ್ಯೋನ್ಯಂ ಕಾಂಸ್ಯೇ ನಿರ್ಭಿದ್ಯ ವರ್ಮಣೀ ॥ 24 ॥
ಅನಂತರ ಪೂರ್ಣವಾಗಿ ಎಳೆದು ಪ್ರಯೋಗಿಸಿದ ಬಾಗಿದ ತುದಿಯುಳ್ಳ ಬಾಣಗಳಿಂದ ಅವರು ಪರಸ್ಪರವಾಗಿ ತಮ್ಮ ಕಂಚಿನ ಕವಚಗಳನ್ನು ಭೇದಿಸಿ ಒಬ್ಬರನ್ನೊಬ್ಬರು ತಡೆದರು.

ತೌ ನಖೈರಿವ ಶಾರ್ದೂಲೌ ದಂತೈರಿವ ಮಹಾದ್ವಿಪೌ |
ರಥಶಕ್ತಿಭಿರನ್ಯೋನ್ಯಂ ವಿಶಿಖೈಶ್ಚ ತತಕ್ಷತುಃ ॥ 25 ॥
ವ್ಯಾಘ್ರಗಳು ನಖಗಳಿಂದ ಹೋರಾಡಿದಂತೆ, ಮಹಾಗಜಗಳು ದಂತಗಳಿಂದ ಹೋರಾಡಿದಂತೆ ರಥಭೇದಕವಾದ ಶಕ್ತಿಗಳಿಂದಲೂ ಮತ್ತು ಬಾಣಗಳಿಂದಲೂ ಅವರು ಪರಸ್ಪರವಾಗಿ ಗಾಯಗೊಳಿಸಿದರು.
ಸಂಛಿಂದಂತೌ ಹಿ ಗಾತ್ರಾಣಿ ಸಂದಧಾನೌ ಚ ಸಾಯಕಾನ್ |
ಧಕ್ಷ್ಯಮಾಣೌ ಶರವ್ರಾತೈರ್ನೋದೀಕ್ಷಿತುಮಶಕ್ನುತಾಮ್ ॥ 26 ॥
ಧನುಸ್ಸುಗಳಲ್ಲಿ ಬಾಣಗಳನ್ನು ಹೂಡಿ, ಬಾಣಗಳ ಸಮೂಹದಿಂದ ಶತ್ರುಸೇನೆಯನ್ನು ಸುಡುವ, ಶತ್ರುಗಳ ಶರೀರವನ್ನು ಕತ್ತರಿಸುವ ಅವರನ್ನು ನೋಡಲು ಯಾರಿಗೂ ಸಾಧ್ಯವಾಗಲಿಲ್ಲ.
ತೌ ತು ವಿಕ್ಷತಸರ್ವಾಂಗೌ ರುಧಿರೌಘಪರಿಪ್ಲುತೌ |
ವ್ಯಭ್ರಾಜೇತಾಂ ಯಥಾ ವಾರಿಪ್ರಸ್ರುತೌ ಗೈರಿಕಾಚಲೌ ॥ 27 ॥
ದೇಹದಲ್ಲೆಲ್ಲಾ ಗಾಯಗೊಂಡು ರಕ್ತಪ್ರವಾಹವನ್ನು ಸುರಿಸುತ್ತಿದ್ದ ಅವರಿಬ್ಬರೂ ಗೈರಿಕಾದಿ ಧಾತು ರಸವನ್ನು ಸುರಿಸುವ ಪರ್ವತಗಳಂತೆ ಶೋಭಿಸಿದರು.
ತೌ ಶರಾಗ್ರವಿಭಿನ್ನಾಂಗೌ ನಿರ್ಭಿಂದಂತೌ ಪರಸ್ಪರಮ್ |
ನಾಕಂಪಯೇತಾಮನ್ಯೋನ್ಯಂ ಯತಮಾನೌ ಮಹಾದ್ಯುತೀ ॥ 28 ॥
ಮಹಾಕಾಂತಿಯುಳ್ಳ ಅವರಿಬ್ಬರೂ ಪರಸ್ಪರವಾಗಿ ಬಾಣದ ತುದಿಗಳಿಂದ ಗಾಯಗೊಂಡ ದೇಹವುಳ್ಳವರಾಗಿ ಇನ್ನೊಬ್ಬರನ್ನು ಗಾಯಗೊಳಿಸುತ್ತಾ ಪ್ರಯತ್ನಪಟ್ಟರೂ ಒಬ್ಬರನ್ನೊಬ್ಬರು ಅಲುಗಾಡಿಸಲು ಸಾಧ್ಯವಾಗಲಿಲ್ಲ.
ತತ್ ಪ್ರವತ್ತಂ ನಿಶಾಯುದ್ಧಂ ಚಿರಂ ಸಮಮಿವಾಭವತ್ |
ಪ್ರಾಣಯೋರ್ದೀವ್ಯತೋ ರಾಜನ್ ಕರ್ಣರಾಕ್ಷಸಯೋರ್ಮೃಧೇ ॥29॥
ಎಲೈ ರಾಜನೇ, ಪ್ರಾಣವನ್ನು ಪಣವಾಗಿಟ್ಟ ದ್ಯೂತದಂತೆ ನಡೆಯುವ ಆ ಕರ್ಣ- ರಾಕ್ಷಸರ ರಾತ್ರಿಯುದ್ಧದಲ್ಲಿ ಬಹಳ ಸಮಯ ಸಮವಾಗಿಯೇ ಯುದ್ಧವು ನಡೆಯಿತು.
ತಸ್ಯ ಸಂದಧತಸ್ತೀಕ್ಷ್ಣಾನ್ ಶರಾಂಶ್ಚಾಸಕ್ತಮಸ್ಯತಃ |
ಧನುರ್ಘೋಷೇಣ ವಿತ್ರಸ್ತಾಃ ಸ್ವೇ ಪರೇ ಚ ತದಾಭವನ್ |
ಘಟೋತ್ಕಚಂ ಯದಾ ಕರ್ಣೋ ವಿಶೇಷಯತಿ ನೋ ನೃಪ ॥ 30 ॥
ಎಲೈ ರಾಜನೇ, ಕರ್ಣನು ಘಟೋತ್ಕಚನನ್ನು ಮೀರಿಸಲು ಸಾಧ್ಯವಾಗದಿದ್ದಾಗ ಒಂದಕ್ಕೆ ಒಂದು ಸೇರಿಕೊಂಡಂತೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದ ಘಟೋತ್ಕಚನ ಧನುಸ್ಸಿನ ಘೋಷವನ್ನು ಕೇಳಿ ತಮ್ಮವರೂ ಮತ್ತು ಶತ್ರುಗಳು ಭಯವನ್ನು ಹೊಂದಿದರು.
ತತಃ ಪ್ರಾದುಷ್ಕರೋದ್ ದಿವ್ಯಮಸ್ತ್ರಮಸ್ತ್ರವಿದಾಂ ವರಃ |
ಕರ್ಣೇನ ವಿಹಿತಂ ದೃಷ್ಟ್ವಾ ದಿವ್ಯಮಸ್ತ್ರಂ ಘಟೋತ್ಕಚಃ |
ಪ್ರಾದುಶ್ಚಕ್ರೇ ಮಹಾಮಾಯಾಂ ರಾಕ್ಷಸಃ ಪಾಂಡುನಂದನಃ ॥ 31 ॥
ಅನಂತರ ಅಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಕರ್ಣನು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಕರ್ಣನು ದಿವ್ಯಾಸ್ತ್ರಗಳನ್ನು ಪ್ರಯೋಗಿಸುವುದನ್ನು ನೋಡಿ ಪಾಂಡುನಂದನನೂ, ರಾಕ್ಷಸನೂ ಆದ ಘಟೋತ್ಕಚನು ದೊಡ್ಡ ಮಾಯೆಯನ್ನು ಸೃಷ್ಟಿಮಾಡಿದನು.
ಶೂಲಮುದ್ಗರಧಾರಿಣ್ಯಾ ಶೈಲಪಾದಪಹಸ್ತಯಾ |
ರಕ್ಷಸಾಂ ಘೋರರೂಪಾಣಾಂ ಮಹತ್ಯಾ ಸೇನಯಾ ವೃತಃ ॥ 32 ॥
ತಮುದ್ಯತಮಹಾಚಾಪಂ ದೃಷ್ಟ್ವಾ ತೇ ವ್ಯಥಿತಾ ನೃಪಾಃ |
ಭೂತಾಂತಕಮಿವಾಯಾಂತಂ ಕಾಲದಂಡೋಗ್ರಧಾರಿಣಮ್ ॥ 33 ॥
ಕೈಯಲ್ಲಿ ಶೂಲ-ಮುದ್ಗರಗಳನ್ನು ಹಿಡಿದ, ಪರ್ವತ ಮತ್ತು ವೃಕ್ಷಗಳನ್ನು ಹಿಡಿದ ಘೋರರೂಪರಾದ ರಾಕ್ಷಸರ ದೊಡ್ಡ ಸೈನ್ಯದಿಂದ ಪರಿವೃತನಾಗಿ, ಕೈಯಲ್ಲಿ ದೊಡ್ಡ ಧನುಸ್ಸನ್ನು ಎತ್ತಿಹಿಡಿದ, ಉಗ್ರವಾದ ಕಾಲದಂಡವನ್ನು ಹಿಡಿದು ಬರುತ್ತಿರುವ ಭೂತಾಂತನಾದ ಯಮನಂತೆ ಇರುವ ಅವನನ್ನು ನೋಡಿ ರಾಜರು ವ್ಯಥೆಗೊಂಡರು.
ಘಟೋತ್ಕಚಪ್ರಮುಕ್ತೇನ ಸಿಂಹನಾದೇನ ಭೀಷಿತಾಃ |
ಪ್ರಸುಸ್ರುವುರ್ಗಜಾ ಮೂತ್ರಂ ವಿವ್ಯಥುಶ್ಚ ನರಾ ಭೃಶಮ್ ॥ 34 ॥
ಘಟೋತ್ಕಚನು ಮಾಡಿದ ಸಿಂಹನಾದದಿಂದ ಭಯಗೊಂಡ ಗಜಗಳು ಮೂತ್ರವನ್ನು ಸುರಿಸಿದವು. ಯೋಧರು ಬಹಳ ವ್ಯಥೆಯನ್ನು ಹೊಂದಿದರು.
ತತೋಽಶ್ಮವೃಷ್ಟಿರತ್ಯುಗ್ರಾ ಮಹತ್ಯಾಸೀತ್ ಸಮಂತತಃ |
ಅರ್ಧರಾತ್ರೇಽಧಿಕಬಲೈರ್ವಿಮುಕ್ತಾ ರಕ್ಷಸಾಂ ಬಲೈಃ ॥ 35 ॥
ಅನಂತರ ಅರ್ಧರಾತ್ರಿಯ ಸಮಯದಲ್ಲಿ ಅಧಿಕಬಲವುಳ್ಳ ರಾಕ್ಷಸರ ಸೇನೆಗಳಿಂದ ಸೃಷ್ಟಿಸಲ್ಪಟ್ಟ ಉಗ್ರವಾದ ಮತ್ತು ದೊಡ್ಡದಾದ ಕಲ್ಲಿನ ಮಳೆಯು ಎಲ್ಲ ಕಡೆಗಳಲ್ಲಿಯೂ ಉಂಟಾಯಿತು.
ಆಯಸಾನಿ ಚ ಚಕ್ರಾಣಿ ಭುಶುಂಡ್ಯಃ ಶಕ್ತಿತೋಮರಾಃ |
ಪತಂತ್ಯವಿರಲಾಃ ಶೂಲಾಃ ಶತಘ್ನ್ಯಃ ಪಟ್ಟಿಶಾಸ್ತಥಾ ॥ 36 ॥
ಕಬ್ಬಿಣದ ಚಕ್ರಗಳೂ, ಭುಶುಂಡಿಗಳೂ, ಶಕ್ತಿ-ತೋಮರಗಳೂ, ನಿಬಿಡವಾದ ಶೂಲಗಳೂ, ಶತಘ್ನಿಗಳೂ ಮತ್ತು ಪಟ್ಟಿಶಗಳೂ ಬೀಳಲು ಪ್ರಾರಂಭಿಸಿದವು.

ತದುಗ್ರಮತಿರೌದ್ರಂ ಚ ದೃಷ್ಟ್ವಾ ಯುದ್ಧಂ ನರಾಧಿಪಾಃ |
ಪುತ್ರಾಶ್ಚ ತವ ಯೋಧಾಶ್ಚ ವ್ಯಥಿತಾ ವಿಪ್ರದುದ್ರುವುಃ ॥ 37 ॥
ಅತ್ಯಂತ ಘೋರವೂ ಮತ್ತು ಭಯಂಕರವೂ ಆದ ಆ ಯುದ್ಧವನ್ನು ನೋಡಿ ರಾಜರೂ, ನಿನ್ನ ಪುತ್ರರೂ ಮತ್ತು ಉಳಿದ ಯೋಧರೂ ವ್ಯಥೆಗೊಂಡು ಓಡಿಹೋದರು.
ತತ್ರೈಕೋಽಸ್ತ್ರಬಲಶ್ಲಾಘೀ ಕರ್ಣೋ ಮಾನೀ ನ ವಿವ್ಯಥೇ |
ವ್ಯಧಮಚ್ಚ ಶರೈರ್ಮಾಯಾಂ ಘಟೋತ್ಕಚವಿನಿರ್ಮಿತಾಮ್ ॥ 38 ॥
ಅಸ್ತ್ರಬಲವನ್ನು ಶ್ಲಾಘಿಸುವ ಆತ್ಮಾಭಿಮಾನಿಯಾದ ಕರ್ಣನೊಬ್ಬನೇ ಅಲ್ಲಿ ವ್ಯಥೆಪಡಲಿಲ್ಲ. ಅವನು ಘಟೋತ್ಕಚನು ಸೃಷ್ಟಿಸಿದ ಮಾಯೆಯನ್ನು ತನ್ನ ಬಾಣಗಳಿಂದ ನಾಶಪಡಿಸಿದನು.
ಮಾಯಾಯಾಂ ತು ಪ್ರಹೀಣಾಯಾಮಮರ್ಷಾತ್ ಸ ಘಟೋತ್ಕಚಃ |
ವಿಸಸರ್ಜ ಶರಾನ್ ಘೋರಾನ್ ಸೂತಪುತ್ರಂ ತ ಆವಿಶನ್ ॥ 39 ॥
ತನ್ನ ಮಾಯೆಯು ನಾಶವನ್ನು ಹೊಂದುತ್ತಿರಲು ಕೋಪಗೊಂಡ ಘಟೋತ್ಕಚನು ಘೋರವಾದ ಬಾಣಗಳನ್ನು ಪ್ರಯೋಗಿಸಿದನು. ಅವು ಕರ್ಣನ ಶರೀರದಲ್ಲಿ ನಾಟಿದವು.
ತತಸ್ತೇ ರುಧಿರಾಭ್ಯಕ್ತಾ ಭಿತ್ತ್ವಾ ಕರ್ಣಂ ಮಹಾಹವೇ |
ವಿವಿಶುರ್ಧರಣೀಂ ಬಾಣಾಃ ಸಂಕ್ರುದ್ಧಾ ಇವ ಪನ್ನಗಾಃ ॥ 40 ॥
ಅನಂತರ ಅವು ರಣರಂಗದಲ್ಲಿ ಕರ್ಣನ ಶರೀರವನ್ನು ಭೇದಿಸಿ, ರಕ್ತಲೇಪನವನ್ನು ಹೊಂದಿ, ಬಹಳ ಕೋಪಗೊಂಡ ಸರ್ಪಗಳಂತೆ ಭೂಮಿಯಲ್ಲಿ ಇಳಿದವು.
ಸೂತಪುತ್ರಸ್ತು ಸಂಕ್ರುದ್ಧೋ ಲಘುಹಸ್ತಃ ಪ್ರತಾಪವಾನ್ |
ಘಟೋತ್ಕಚಮಭಿದ್ರುತ್ಯ ಬಿಭೇದ ದಶಭಿಃ ಶರೈಃ ॥ 41 ॥
ಪ್ರತಾಪಶಾಲಿಯೂ, ಕ್ಷಿಪ್ರಹಸ್ತನೂ ಆದ ಕರ್ಣನು ಬಹಳ ಕೋಪಗೊಂಡು ಘಟೋತ್ಕಚನ ಕಡೆಗೆ ಓಡಿ ಹತ್ತು ಬಾಣಗಳಿಂದ ಅವನ ಶರೀರವನ್ನು ಭೇದಿಸಿದನು.
ಘಟೋತ್ಕಚೋ ವಿನಿರ್ಭಿನ್ನಃ ಸೂತಪುತ್ರೇಣ ಮರ್ಮಸು |
ಚಕ್ರಂ ದಿವ್ಯಂ ಸಹಸ್ರಾರಮಗೃಹ್ಣಾದ್ ವ್ಯಥಿತೋ ಭೃಶಮ್ ॥ 42 ॥
ಸೂತಪುತ್ರನಾದ ಕರ್ಣನಿಂದ ಮರ್ಮಸ್ಥಾನಗಳಲ್ಲಿ ಕತ್ತರಿಸಲ್ಪಟ್ಟ ಘಟೋತ್ಕಚನು ಬಹಳ ವ್ಯಥೆಯನ್ನು ಹೊಂದಿ ಸಹಸ್ರ ಅಂಚುಗಳನ್ನುಳ್ಳ ದಿವ್ಯವಾದ ಚಕ್ರವನ್ನು ಕೈಯಲ್ಲಿ ತೆಗೆದುಕೊಂಡನು.
ಕ್ಷುರಾಂತಂ ಬಾಲಸೂರ್ಯಾಭಂ ಮಣಿರತ್ನವಿಭೂಷಿತಮ್ |
ಚಿಕ್ಷೇಪಾಧಿರಥೇಃ ಕ್ರುದ್ಧೋ ಭೈಮಸೇನಿರ್ಜಿಘಾಂಸಯಾ ॥ 43 ॥
ಭೀಮಸೇನನ ಪುತ್ರನಾದ ಅವನು ಕೋಪಗೊಂಡು ಕರ್ಣನನ್ನು ಕೊಲ್ಲಲು ಬಯಸಿ ಕತ್ತಿಯಂತಹ ಅಲುಗುಳ್ಳ, ಬಾಲಸೂರ್ಯನ ಕಾಂತಿಯನ್ನು ಹೊಂದಿದ, ಮಣಿರತ್ನ ವಿಭೂಷಿತವಾದ ಆ ಚಕ್ರವನ್ನು ಕರ್ಣನ ಮೇಲೆ ಎಸೆದನು.
ಪ್ರವಿದ್ಧಮತಿವೇಗೇನ ವಿಕ್ಷಿಪ್ತಂ ಕರ್ಣಸಾಯಕೈಃ |
ಅಭಾಗ್ಯಸ್ಯೇವ ಸಂಕಲ್ಪಸ್ತನ್ಮೋಘಮಪತದ್ ಭುವಿ ॥ 44 ॥
ಬಹಳ ವೇಗದಿಂದ ಎಸೆಯಲ್ಪಟ್ಟ ಆ ಚಕ್ರವು ಕರ್ಣನ ಬಾಣಗಳಿಂದ ಹೊಡೆಯಲ್ಪಟ್ಟು ದುರದೃಷ್ಟಶಾಲಿಯ ಆಸೆಯಂತೆ ವ್ಯರ್ಥವಾಗಿ ಭೂಮಿಯ ಮೇಲೆ ಬಿದ್ದಿತು.
ಘಟೋತ್ಕಚಸ್ತು ಸಂಕ್ರುದ್ಧೋ ದೃಷ್ಟ್ವಾ ಚಕ್ರಂ ನಿಪಾತಿತಮ್ |
ಕರ್ಣಂ ಪ್ರಾಚ್ಛಾದಯದ್ ಬಾಣೈಃ ಸ್ವರ್ಭಾನುರಿವ ಭಾಸ್ಕರಮ್ ॥ 45 ॥
ತನ್ನ ಚಕ್ರವು ಭೂಮಿಯ ಮೇಲೆ ಬಿದ್ದುದನ್ನು ನೋಡಿದ ಘಟೋತ್ಕಚನು ಬಹಳ ಕೋಪಗೊಂಡು ರಾಹುವು ಸೂರ್ಯನನ್ನು ಮುಚ್ಚುವಂತೆ ತನ್ನ ಬಾಣಗಳಿಂದ ಕರ್ಣನನ್ನು ಮುಚ್ಚಿಹಾಕಿದನು.
ಸೂತಪುತ್ರಸ್ತ್ವಸಂಭ್ರಾಂತೋ ರುದ್ರೋಪೇಂದ್ರೇಂದ್ರವಿಕ್ರಮಃ |
ಘಟೋತ್ಕಚರಥಂ ತೂರ್ಣಂ ಛಾದಯಾಮಾಸ ಪತ್ರಿಭಿಃ ॥ 46 ॥
ರುದ್ರ-ಉಪೇಂದ್ರ-ಇಂದ್ರನ ಪರಾಕ್ರಮವನ್ನು ಹೊಂದಿದ ಸೂತಪುತ್ರನಾದ ಕರ್ಣನು ಗಾಬರಿಗೊಳ್ಳದೆ ಶೀಘ್ರವಾಗಿ ಘಟೋತ್ಕಚನ ರಥವನ್ನು ಬಾಣಗಳಿಂದ ಆಚ್ಛಾದಿಸಿದನು.
ಘಟೋತ್ಕಚೇನ ಕ್ರುದ್ಧೇನ ಗದಾ ಹೇಮಾಂಗದಾ ತದಾ |
ಕ್ಷಿಪ್ತಾ ಭ್ರಾಮ್ಯ ಶರೈಃ ಸಾಪಿ ಕರ್ಣೇನಾಭ್ಯಾಹತಾಪತತ್ ॥ 47 ॥
ಆಗ ಕೋಪಗೊಂಡ ಘಟೋತ್ಕಚನು ಚಿನ್ನದ ಪಟ್ಟಿಯಿರುವ ಗದೆಯನ್ನು ತಿರುಗಿಸಿ ಕರ್ಣನ ಮೇಲೆ ಎಸೆದನು. ಅದನ್ನೂ ಸಹ ಕರ್ಣನು ತನ್ನ ಬಾಣಗಳಿಂದ ಹೊಡೆದು ಬೀಳಿಸಿದನು.
ತತೋಽಂತರಿಕ್ಷಮುತ್ಪತ್ಯ ಕಾಲಮೇಘ ಇವೋನ್ನದನ್ |
ಪ್ರವವರ್ಷ ಮಹಾಕಾಯೋ ದ್ರುಮವರ್ಷಂ ನಭಸ್ತಳಾತ್ ॥ 48 ॥
ಅನಂತರ ಮಹಾಕಾಯನಾದ ಘಟೋತ್ಕಚನು ಅಂತರಿಕ್ಷಕ್ಕೆ ಹಾರಿ ಕಾಲಮೇಘದಂತೆ ಗರ್ಜಿಸುತ್ತಾ ಆಕಾಶದಿಂದ ಕರ್ಣನ ಮೇಲೆ ತೀಕ್ಷ್ಣವಾದ ಮಂಗಳ ಮಳೆಯನ್ನು ಸುರಿಸಿದನು.
ತತೋ ಮಾಯಾವಿನಂ ಕರ್ಣೋ ಭೀಮಸೇನಸುತಂ ದಿವಿ |
ಮಾರ್ಗಣೈರಭಿವಿವ್ಯಾಧ ಘನಂ ಸೂರ್ಯ ಇವಾಂಶುಭಿಃ ॥ 49 ॥

ಆಗ ಕರ್ಣನು ಭೀಮಸೇನನ ಸುತನಾದ, ಮಾಯಾವಿಯಾದ ಘಟೋತ್ಕಚನನ್ನು ಅಂತರಿಕ್ಷದಲ್ಲಿಯೇ ಸೂರ್ಯನು ತನ್ನ ಕಿರಣಗಳಿಂದ ಕತ್ತಲೆಯನ್ನು ಹೊಡೆಯುವಂತೆ ತನ್ನ ಬಾಣಗಳಿಂದ ಹೊಡೆದನು.
ತಸ್ಯ ಸರ್ವಾನ್ ಹಯಾನ್ ಹತ್ವಾ ಸಂಛಿದ್ಯ ಶತಧಾ ರಥಮ್ |
ಅಭ್ಯವರ್ಷಚ್ಚರೈಃ ಕರ್ಣಃ ಪರ್ಜನ್ಯ ಇವ ವೃಷ್ಟಿಮಾನ್ ॥ 50 ॥
ಕರ್ಣನು ಪರ್ಜನ್ಯನಂತೆ ಬಾಣಗಳ ಮಳೆಯನ್ನು ಸುರಿಸಿ, ಅವನ ಎಲ್ಲ ಅಶ್ವಗಳನ್ನೂ ಮತ್ತು ರಥವನ್ನೂ ನೂರು ಭಾಗವಾಗಿ ಕತ್ತರಿಸಿದನು.
ನ ಚಾಸ್ಯಾಸೀದನಿರ್ಭಿನ್ನಂ ಗಾತ್ರೇ ದ್ವ್ಯಂಗುಲಮಂತರಮ್ |
ಸೋಽದೃಶ್ಯತ ಮುಹೂರ್ತೇನ ಶ್ವಾವಿಚ್ಚಲಲಿತೋ ಯಥಾ ॥ 51 ॥
ಘಟೋತ್ಕಚನ ದೇಹದಲ್ಲಿ ಎಲ್ಲಿಯೂ ಗಾಯಗೊಳ್ಳದ ಎರಡು ಅಂಗುಲಿಗಳಷ್ಟು ಪ್ರದೇಶವೂ ಇರಲಿಲ್ಲ. ಒಂದು ಮುಹೂರ್ತದಲ್ಲಿ ಅವನು ಮುಳ್ಳುಗಳಿಂದ ಕೂಡಿದ ಮುಳ್ಳುಹಂದಿಯಂತೆ ಕಂಡುಬಂದನು.
ನ ಹಯಾನ್ನ ರಥಂ ತಸ್ಯ ನ ಧ್ವಜಂ ನ ಘಟೋತ್ಕಚಮ್ |
ದೃಷ್ಟವಂತಃ ಸ್ಮ ಸಮರೇ ಶರೌಘೈರಭಿ ಸಂವೃತಮ್ ॥ 52 ॥
ಅವನು ಬಾಣಗಳ ಸಮೂಹದಿಂದ ಮುಚ್ಚಲ್ಪಟ್ಟಾಗ ರಣರಂಗದಲ್ಲಿ ನಾವು ಘಟೋತ್ಕಚನನ್ನಾಗಲೀ, ಅವನ ಅಶ್ವಗಳನ್ನಾಗಲೀ, ರಥವನ್ನಾಗಲೀ, ಧ್ವಜವನ್ನಾಗಲೀ ಕಾಣಲಿಲ್ಲ.
ಸ ತು ಕರ್ಣಸ್ಯ ತದ್ ದಿವ್ಯಮಸ್ತ್ರಮಸ್ತ್ರೇಣ ಶಾತಯನ್ |
ಮಾಯಾಯುದ್ಧೇನ ಮಾಯಾವೀ ಸೂತಪುತ್ರಮಯೋಧಯತ್ ॥53॥
ಮಾಯಾವಿಯಾದ ಅವನು ಕರ್ಣನ ದಿವ್ಯಾಸ್ತ್ರಗಳನ್ನು ಮಾಯಾ ಯುದ್ಧದಿಂದ ತನ್ನ ಅಸ್ತ್ರದಿಂದ ನಾಶಗೊಳಿಸುತ್ತಾ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸೋಽಯೋಧಯತ್ ತದಾ ಕರ್ಣಂ ಮಾಯಯಾ ಲಾಘವೇನ ಚ |
ಅಲಕ್ಷ್ಯಮಾಣೋಽಥ ದಿವಿ ಶರಜಾಲೇಷು ಸಂಪತನ್ ॥ 54 ॥
ಬಾಣಗಳ ಸಮೂಹದಲ್ಲಿ ಅಲಕ್ಷಿತನಾದ ಅವನು ಮಾಯೆಯನ್ನು ಮತ್ತು ಕ್ಷಿಪ್ರತೆಯನ್ನು ಆಶ್ರಯಿಸಿ ಅಂತರಿಕ್ಷಕ್ಕೆ ಹಾರಿ ಅಲ್ಲಿಂದ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಭೈಮಸೇನಿರ್ಮಹಾಮಾಯೋ ಮಾಯಯಾ ಕುರುಸತ್ತಮ |
ಪ್ರಚಕಾರ ಮಹಾಮಾಯಾಂ ಮೋಹಯನ್ನಿವ ಭಾರತ ॥ 55 ॥
ಎಲೈ ಭಾರತನೇ, ಕುರುಶ್ರೇಷ್ಠನೇ, ತನ್ನ ಮಹಾಮಾಯೆಯಿಂದ ಕರ್ಣನನ್ನು ಮೋಹಗೊಳಿಸುತ್ತಾ ಭೀಮಸೇನನ ಪುತ್ರನಾದ ಘಟೋತ್ಕಚನು ಮಾಯೆಗಳನ್ನು ಸೃಷ್ಟಿಸಿದನು.
ಸ ಸ್ಮ ಕೃತ್ವಾ ವಿರೂಪಾಣಿ ವದನಾನ್ಯಶುಭಾನನಃ |
ಅಗ್ರತಃ ಸೂತಪುತ್ರಸ್ಯ ದಿವ್ಯಾನ್ಯಸ್ತ್ರಾಣಿ ಮಾಯಯಾ ॥ 56 ॥
ಪುನಶ್ಚಾಪಿ ಮಹಾಕಾಯಃ ಸಂಛಿನ್ನಃ ಶತಧಾ ರಣೇ |
ಗತಸತ್ತ್ವೋ ನಿರುತ್ಸಾಹಃ ಪತಿತಃ ಖಾದ್ ವ್ಯದೃಶ್ಯತ |
ಹತಂ ತಂ ಮನ್ಯಮಾನಾಃ ಸ್ಮ ಪ್ರಾಣದನ್ ಕುರುಪುಂಗವಾಃ ॥ 57 ॥
ಅಶುಭವಾದ ಮುಖವುಳ್ಳ ಅವನು ಅನೇಕ ರೂಪಗಳನ್ನು ತೆಗೆದುಕೊಂಡು ತನ್ನ ಮಾಯೆಯಿಂದ ಕಣರ್ನ ಮೇಲೆ ದಿವ್ಯಾಸ್ತ್ರಗಳನ್ನು ಸುರಿಸಿದನು. ಮಹಾಕಾಯನಾದ ಅವನು ಪುನಃ ಕರ್ಣನ ಬಾಣಗಳಿಂದ ರಣರಂಗದಲ್ಲಿ ನೂರಾರು ಸ್ಥಳದಲ್ಲಿ ಗಾಯಗೊಂಡು ತನ್ನ ಬಲವನ್ನೂ, ಉತ್ಸಾಹವನ್ನೂ ಕಳೆದುಕೊಂಡು ಅಂತರಿಕ್ಷದಿಂದ ಕೆಳಗೆ ಬೀಳುವುದು ಕಂಡುಬಂದಿತು. ಘಟೋತ್ಕಚನು ಹತನಾದನೆಂದು ತಿಳಿದು ಕುರುಪುಂಗವರು ದೊಡ್ಡ ನಾದವನ್ನು ಮಾಡಿದರು.
ಅಥ ದೇಹೈರ್ನವೈರನ್ಯೈರ್ದಿಕ್ಷು ಸರ್ವಾಸ್ವದೃಶ್ಯತ |
ಪುನಶ್ಚಾಪಿ ಮಹಾಕಾಯಃ ಶತಶೀರ್ಷಃ ಶತೋದರಃ ॥ 58 ॥
ಅನಂತರ ಅವನು ನೂರು ಶಿರಸ್ಸುಗಳನ್ನು ಧರಿಸಿದ, ನೂರು ಉದರಗಳನ್ನು ಹೊಂದಿದ ದೊಡ್ಡ ಶರೀರವನ್ನು ತೆಗೆದುಕೊಂಡು ಎಲ್ಲ ದಿಕ್ಕುಗಳಲ್ಲಿಯೂ ಪುನಃ ಕಂಡುಬಂದನು.
ವ್ಯದೃಶ್ಯತ ಮಹಾಬಾಹುರ್ಮೈನಾಕ ಇವ ಪರ್ವತಃ |
ಅಂಗುಷ್ಠಮಾತ್ರೋ ಭೂತ್ವಾ ಚ ಪುನರೇವ ಸ ರಾಕ್ಷಸಃ |
ಸಾಗರೋರ್ಮಿರಿವೋದ್ಧೂತಸ್ತಿರ್ಯಗೂರ್ಧ್ವಮವರ್ತತ ॥ 59 ॥
ಮಹಾಬಾಹುವಾದ ಅವನು ಮೈನಾಕಪರ್ವತದಂತೆ ಕಂಡುಬಂದನು. ಅಂಗುಷ್ಠ ಮಾತ್ರದಷ್ಟು ಎತ್ತರವಿದ್ದ ಆ ರಾಕ್ಷಸನು ಏಳುವ ಸಾಗರದ ಅಲೆಗಳಂತೆ ಅಡ್ಡವಾಗಿ ಮತ್ತು ಮೇಲ್ಮುಖವಾಗಿ ಬೆಳೆದನು.
ವಸುಧಾಂ ದಾರಯಿತ್ವಾ ಚ ಪುನರಪ್ಸು ನ್ಯಮಜ್ಜತ |
ಅದೃಶ್ಯತ ತದಾ ತತ್ರ ಪುನರುನ್ಮಜ್ಜಿತೋನ್ಯತಃ ॥ 60 ॥
ಭೂಮಿಯನ್ನು ಸೀಳಿಕೊಂಡು ಅವನು ನೀರಿನಲ್ಲಿ ಮುಳುಗಿ ಇನ್ನೊಂದು ಸ್ಥಳದಲ್ಲಿ ಮೇಲೇಳುವುದು ಕಂಡುಬಂದಿತು.
ಸೋಽವತೀರ್ಯ ಪುನಸ್ತಸ್ಥೌ ರಥೇ ಹೇಮಪರಿಷ್ಕೃತೇ |
ಕ್ಷಿತಿಂ ದ್ಯಾಂ ಚ ದಿಶಶ್ಚೈವ ಮಾಯಯಾಽಽವೃತ್ಯ ದಂಸಿತಃ ॥ 61 ॥
ಅವನು ಇನ್ನೊಮ್ಮೆ ಭೂಮಿಯಲ್ಲಿ ಇಳಿದು ಸುವರ್ಣಾಲಂಕೃತವಾದ ರಥವನ್ನು ಏರಿ ತನ್ನ ಮಾಯೆಯಿಂದ ಭೂಮಿ-ಅಂತರಿಕ್ಷವನ್ನು

ಮತ್ತು ದಿಕ್ಕುಗಳನ್ನು ವ್ಯಾಪಿಸಿ ಶಸ್ತ್ರಕವಚ ಸನ್ನದ್ಧನಾಗಿ ನಿಂತನು.
ಗತ್ವಾ ಕರ್ಣರಥಾಭ್ಯಾಶಂ ವಿಚಲತ್ಕುಂಡಲಾನನಃ |
ಪ್ರಾಹ ವಾಕ್ಯಮಸಂಭ್ರಾಂತಃ ಸೂತಪುತ್ರಂ ವಿಶಾಂಪತೇ ॥ 62 ॥
ತಿಷ್ಠೇದಾನೀಂ ನ ಮೇ ಜೀವನ್ ಸೂತಪುತ್ರ ಗಮಿಷ್ಯಸಿ |
ಯುದ್ಧಶ್ರದ್ಧಾಮಹಂ ತೇಽದ್ಯ ವಿನೇಷ್ಯಾಮಿ ರಣಾಜಿರೇ ॥ 63 ॥
ಎಲೈ ರಾಜನೇ, ಚಲಿಸುವ ಕುಂಡಲಗಳನ್ನು ಹೊಂದಿದ ಮುಖವುಳ್ಳ ಅವನು ಕರ್ಣನ ರಥದ ಸಮೀಪಕ್ಕೆ ಹೋಗಿ, ಗಾಬರಿಗೊಳ್ಳದೆ ಸೂತಪುತ್ರನನ್ನು ಕುರಿತು- `ಎಲೈ ಸೂತಪುತ್ರನೇ, ಈಗ ನಿಲ್ಲು, ಜೀವಿಸಿ ನನಿನಂದ ಹೋಗಲಾರೆ. ನಿನಗಿರುವ ಯುದ್ಧಶ್ರದ್ಧೆಯನ್ನು ನಾನು ಈ ದಿನ ನಾಶಗೊಳಿಸುವೆನು' ಎಂದು ಹೇಳಿದನು.
ಇತ್ಯುಕ್ತ್ವಾ ರೋಷತಾಮ್ರಾಕ್ಷಂ ರಕ್ಷಃ ಕ್ರೂರಪರಾಕ್ರಮಮ್ |
ಉತ್ಪಪಾತಾಂತರಿಕ್ಷಂ ಚ ಜಹಾಸ ಚ ಸುವಿಸ್ವರಮ್ |
ಕರ್ಣಮಭ್ಯಾಹನಚ್ಚೈವ ಗಜೇಂದ್ರಮಿವ ಕೇಸರೀ ॥ 64 ॥
ಹೀಗೆ ಹೇಳಿ ರೋಷದಿಂದ ಕೆಂಪಾದ ಕಣ್ಣುಳ್ಳ, ಕ್ರೂರಪರಾಕ್ರಮವುಳ್ಳ ಆ ರಾಕ್ಷಸನು ಅಂತರಿಕ್ಷಕ್ಕೆ ಹಾರಿ, ವಿಕಾರಸ್ವರದಿಂದ ನಕ್ಕು, ಸಿಂಹವು ಗಜವನ್ನು ಹೊಡೆಯುವಂತೆ ಕರ್ಣನನ್ನು (ಬಾಣಗಳಿಂದ) ಹೊಡೆದನು.
ರಥಾಕ್ಷಮಾತ್ರೈರಿಷುಭಿರಭ್ಯವರ್ಷದ್ ಘಟೋತ್ಕಚಃ |
ರಥಿನಾಮೃಷಭಂ ಕರ್ಣಂ ಧಾರಾಭಿರಿವ ತೋಯದಃ |
ಶರವೃಷ್ಟಿಂ ಚ ತಾಂ ಕರ್ಣೋ ದೂರಪ್ರಾಪ್ತಾಮಶಾತಯತ್ ॥ 65 ॥
ರಥದ ಅಕ್ಷದಷ್ಟು ಗಾತ್ರವುಳ್ಳ ಬಾಣಗಳಿಂದ ಘಟೋತ್ಕಚನು ಮೋಡವು ಮಳೆಯನ್ನು ಸುರಿಸುವಂತೆ ರಥಿಕಶ್ರೇಷ್ಠನಾದ ಕರ್ಣನನ್ನು ಪೀಡಿಸಿದನು. ಕರ್ಣನು ಆ ಬಾಣವೃಷ್ಟಿಯು ದೂರವಿರುವಾಗಲೇ ಅದನ್ನು ನಾಶಗೊಳಿಸಿದನು.
ದೃಷ್ಟ್ವಾ ಚ ವಿಹತಾಂ ಮಾಯಾಂ ಕರ್ಣೇನ ಭರತರ್ಷಭ |
ಘಟೋತ್ಕಚಸ್ತತೋ ಮಾಯಾಂ ಸಸರ್ಜಾಂತರ್ಹಿತಃ ಪುನಃ ॥ 66 ॥
ಎಲೈ ಭರತಶ್ರೇಷ್ಠನೇ, ತನ್ನ ಮಾಯೆಯು ಕರ್ಣನಿಂದ ನಾಶಗೊಳಿಸಲ್ಪಟ್ಟುದನ್ನು ನೋಡಿ, ಘಟೋತ್ಕಚನು ಅಂತರ್ಧಾನವನ್ನು ಹೊಂದಿ, ಪುನಃ ಮಾಯೆಯನ್ನು ಸೃಷ್ಟಿಸಿದನು.
ಸೋಽಭವದ್ ಗಿರಿರತ್ಯುಚ್ಚಃ ಶಿಖರೈಸ್ತರುಸಂಕಟೈಃ |
ಶೂಲಪ್ರಾಸಾಸಿಮುಸಲಜಲಪ್ರಸ್ರವಣೋ ಮಹಾನ್ ॥ 67 ॥
ಅವನು ನಿಬಿಡವಾದ ಮರಗಳಿಂದ ಕೂಡಿದ ಎತ್ತರವಾದ ಪರ್ವತವಾದನು. ಶೂಲ-ಪ್ರಾಸ-ಖಡ್ಗ-ಮುಸಲಗಳ ಜಲವು ಹರಿಯುವ ಮಹಾನದಿಯಾದನು.
ತಮಂಜನಚಯಪ್ರಖ್ಯಂ ಕರ್ಣೋ ದೃಷ್ಟ್ವಾ ಮಹೀಧರಮ್ |
ಪ್ರಪಾತೈರಾಯುಧಾನ್ಯುಗ್ರಾಣ್ಯುದ್ವಹಂತಂ ನ ಚುಕ್ಷುಭೇ ॥ 68 ॥
ತನ್ನ ಶರೀರದಲ್ಲಿ ಆಯುಧಗಳನ್ನು ಧರಿಸಿದ್ದ, ಕಾಡಿಗೆಯ ರಾಶಿಯಂತಿದ್ದ ಆ ಪರ್ವತವನ್ನು ನೋಡಿ ಕರ್ಣನು ಧೃತಿಗೆಡಲಿಲ್ಲ.
ಸ್ಮಯನ್ನಿವ ತತಃ ಕರ್ಣೋ ದಿವ್ಯಮಸ್ತ್ರಮುದೀರಯತ್ |
ತತಃ ಸೋಽಸ್ತ್ರೇಣ ಶೈಲೇಂದ್ರೋ ವಿಕ್ಷಿಪ್ತೋ ವೈ ವ್ಯನಶ್ಯತ ॥ 69 ॥
ಅವನು ನಗುತ್ತಾ ದಿವ್ಯಾಸ್ತ್ರವನ್ನು ಪ್ರಯೋಗಿಸಿದನು. ಕರ್ಣನ ದಿವ್ಯಾಸ್ತ್ರದಿಂದ ಹೊಡೆಯಲ್ಪಟ್ಟ ಆ ಉನ್ನತವಾದ ಪರ್ವತವು ನಾಶವನ್ನು ಹೊಂದಿತು.
ತತಃ ಸ ತೋಯದೋ ಭೂತ್ವಾ ನೀಲಃ ಸೇಂದ್ರಾಯುಧೋ ದಿವಿ |
ಅಶ್ಮವೃಷ್ಟಿಭಿರತ್ಯುಗ್ರಃ ಸೂತಪುತ್ರಮವಾಕಿರತ್ ॥ 70 ॥
ಅನಂತರ ಉಗ್ರನಾದ ಅವನು ಇಂದ್ರಾಯುಧದಿಂದ ಸಹಿತವಾದ ನೀಲಮೇಘನಾಗಿ ಅಂತರಿಕ್ಷದಲ್ಲಿ ನಿಂತು ಕರ್ಣನ ಮೇಲೆ ಕಲ್ಲಿನ ಮಳೆಯನ್ನು ಸುರಿಸಿದನು.
ಅಥ ಸಂಧಾಯ ವಾಯವ್ಯಮಸ್ತ್ರಮಸ್ತ್ರವಿದಾಂ ವರಃ |
ವ್ಯಧಮತ್ ಕಾಲಮೇಘಂ ತಂ ಕರ್ಣೋ ವೈಕರ್ತನೋ ವೃಷಾ ॥ 71 ॥
ಅಸ್ತ್ರವೇತ್ತರಲ್ಲಿ ಶ್ರೇಷ್ಠನಾದ ವೈಕರ್ತನನಾದ ಕರ್ಣನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಆ ಕಪ್ಪುಮೋಡವನ್ನು ನಾಶಪಡಿಸಿದನು.
ಸ ಮಾರ್ಗಣಗಣೈಃ ಕರ್ಣೋ ದಿಶಃ ಪ್ರಚ್ಛಾದ್ಯ ಸರ್ವಶಃ |
ಜಘಾನಾಸ್ತ್ರಂ ಮಹಾರಾಜ ಘಟೋತ್ಕಚಸಮೀರಿತಮ್ ॥ 72 ॥
ಎಲೈ ಮಹಾರಾಜನೇ, ಕರ್ಣನು ತನ್ನ ಬಾಣಗಳ ಸಮೂಹದಿಂದ ಎಲ್ಲ ದಿಕ್ಕುಗಳನ್ನೂ ಆಚ್ಛಾದಿಸಿ ಘಟೋತ್ಕಚನು ಪ್ರಯೋಗಿಸಿದ ಅಸ್ತ್ರವನ್ನು ನಾಶಮಾಡಿದನು.
ತತಃ ಪ್ರಹಸ್ಯ ಸಮರೇ ಭೈಮಸೇನಿರ್ಮಹಾಬಲಃ |
ಪ್ರಾದುಶ್ಚಕ್ರೇ ಮಹಾಮಾಯಾಂ ಕರ್ಣಂ ಪ್ರತಿ ಮಹಾರಥಮ್ ॥ 73 ॥
ಅನಂತರ ಮಹಾಬಲನಾದ ಭೀಮಸೇನಪುತ್ರನಾದ ಘಟೋತ್ಕಚನು ನಕ್ಕು ಯುದ್ಧದಲ್ಲಿ ಮಹಾರಥನಾದ ಕರ್ಣನ ಸುತ್ತಲೂ ದೊಡ್ಡ ಮಾಯೆಯನ್ನು ಸೃಷ್ಟಿಸಿದನು.
ಸ ದೃಷ್ಟ್ವಾ ಪುನರಾಯಾಂತಂ ರಥೇನ ರಥಿನಾಂ ವರಮ್ |
ಘಟೋತ್ಕಚಮಸಂಭ್ರಾಂತಂ ರಾಕ್ಷಸೈರ್ಬಹುಭಿರ್ವೃತಮ್ ॥ 74 ॥

ಸಿಂಹಶಾರ್ದೂಲಸದೃಶೈರ್ಮತ್ತದ್ವಿರದವಿಕ್ರಮೈಃ |
ಗಜಸ್ಥೈಶ್ಚ ರಥಸ್ಥೈಶ್ಚ ವಾಜಿಪೃಷ್ಠಗತೈಸ್ತಥಾ ॥ 75 ॥
ನಾನಾಶಸ್ತ್ರಧರೈರ್ಘೋರೈರ್ನಾನಾಕವಚಭೂಷಣೈಃ |
ವೃತಂ ಘಟೋತ್ಕಚಂ ಕ್ರೂರೈರ್ಮರುದ್ಭಿರಿವ ವಾಸವಮ್ |
ದೃಷ್ಟ್ವಾ ಕರ್ಣೋ ಮಹೇಷ್ವಾಸೋ ಯೋಧಯಾಮಾಸ ರಾಕ್ಷಸಮ್ ॥
ಕರ್ಣನು ಸಿಂಹ-ವ್ಯಾಘ್ರ ಸದೃಶವಾದ, ಮದಗಜದ ಪರಾಕ್ರಮವುಳ್ಳ, ಕೈಯಲ್ಲಿ ನಾನಾ ಆಯುಧವನ್ನು ಹಿಡಿದು, ನಾನಾವಿಧವಾದ ಕವಚಭೂಷಣವನ್ನು ಧರಿಸಿ ರಥಗಳನ್ನು ಏರಿದ, ಅಶ್ವಗಳನ್ನು ಏರಿದ ಅನೇಕ ಕ್ರೂರರಾದ ರಾಕ್ಷಸರಿಂದ ಮರುದ್ಗಣದಿಂದ ಇಂದ್ರನು ಪರಿವೃತನಾದಂತೆ ಕೂಡಿ ಗಾಬರಿಯಿಲ್ಲದೆ ತನ್ನೆಡೆಗೆ ಬರುತ್ತಿದ್ದ ರಥಿಶ್ರೇಷ್ಠನಾದ ಘಟೋತ್ಕಚನನ್ನು ನೋಡಿ ಮಹಾಧನುರ್ಧಾರಿಯಾದ ಅವನು ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಘಟೋತ್ಕಚಸ್ತತಃ ಕರ್ಣಂ ವಿದ್ಧ್ವಾ ಪಂಚಭಿರಾಶುಗೈಃ |
ನನಾದ ಭೈರವಂ ನಾದಂ ಭೀಷಯನ್ ಸರ್ವಪಾರ್ಥಿವಾನ್ ॥ 77 ॥
ಅನಂತರ ಘಟೋತ್ಕಚನು ಐದು ಶೀಘ್ರಗಾಮಿಗಳಾದ ಬಾಣಗಳಿಂದ ಕರ್ಣನನ್ನು ಹೊಡೆದು ಎಲ್ಲ ರಾಜರನ್ನೂ ಭಯಗೊಳಿಸುತ್ತಾ ಭೈರವನಾದವನ್ನು ಮಾಡಿದನು.
ಭೂಯಶ್ಚಾಂಜಲಿಕೇನಾಥ ಸಮಾರ್ಗಣಗಣಂ ಮಹತ್ |
ಕರ್ಣಹಸ್ತಸ್ಥಿತಂ ಚಾಪಂ ಚಿಚ್ಛೇದಾಶು ಘಟೋತ್ಕಚಃ ॥ 78 ॥
ಪುನಃ ಒಂದು ಅಂಜಲಿಕವನ್ನು ಪ್ರಯೋಗಿಸಿ ಘಟೋತ್ಕಚನು ಕರ್ಣನ ಹಸ್ತದಲ್ಲಿದ್ದ ಧನುಸ್ಸನ್ನು ಮತ್ತು ಬಾಣಗಳ ದೊಡ್ಡ ಸಮೂಹವನ್ನು ಶೀಘ್ರವಾಗಿ ಕತ್ತರಿಸಿದನು.
ಅಥಾನ್ಯದ್ ಧನುರಾದಾಯ ದೃಢಂ ಭಾರಸಹಂ ಮಹತ್ |
ವ್ಯಕರ್ಷತ ಬಲಾತ್ಕರ್ಣ ಇಂದ್ರಾಯುಧಮಿವೋಚ್ಛ್ರಿತಮ್ ॥ 79 ॥
ಆಗ ಕರ್ಣನು ಇಂದ್ರಾಯುಧದಂತೆ ಉನ್ನತವಾದ, ದೃಢವಾದ, ಭಾರಸಹವಾದ ದೊಡ್ಡದಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತನ್ನ ಬಲದಿಂದ ಎಳೆದನು.
ತತಃ ಕರ್ಣೋ ಮಹಾರಾಜ ಪ್ರೇಷಯಾಮಾಸ ಸಾಯಕಾನ್ |
ಸುವರ್ಣಪುಂಖಾನ್ ಶತ್ರುಘ್ನಾನ್ ಖಚರಾನ್ ರಾಕ್ಷಸಾನ್ ಪ್ರತಿ ॥80॥
ಎಲೈ ಮಹಾರಾಜನೇ, ಆಗ ಕರ್ಣನು ಅಂತರಿಕ್ಷಚಾರಿಗಳಾದ ರಾಕ್ಷಸರ ಮೇಲೆ ಸುವರ್ಣಪುಂಖವನ್ನು ಹೊಂದಿದ, ಶತ್ರುಸಂಹಾರಕವಾದ ಬಾಣಗಳನ್ನು ಪ್ರಯೋಗಿಸಿದನು.
ತದ್ಬಾಣೈರರ್ದಿತಂ ಯೂಥಂ ರಕ್ಷಸಾಂ ಪೀನವಕ್ಷಸಾಮ್ |
ಸಿಂಹೇನೇವಾರ್ದಿತಂ ವನ್ಯಂ ಗಜಾನಾಮಾಕುಲಂ ಕುಲಮ್ ॥ 81 ॥
ಆಗ ಸಿಂಹದಿಂದ ಪೀಡಿಸಲ್ಪಟ್ಟ ವನಗಜಗಳ ಸಮೂಹದಂತೆ ಪೀನವಕ್ಷಸ್ಥಲವುಳ್ಳ ರಾಕ್ಷಸ ಸಮೂಹವು ಕರ್ಣನ ಬಾಣಗಳಿಂದ ಪೀಡಿಸಲ್ಪಟ್ಟಿತು.
ವಿಧಮ್ಯ ರಾಕ್ಷಸಾನ್ ಬಾಣೈಃ ಸಾಶ್ವಸೂತಗಜಾನ್ ವಿಭುಃ |
ದದಾಹ ಭಗವಾನ್ ವಹ್ನಿರ್ಭೂತಾನೀವ ಯುಗಕ್ಷಯೇ ॥ 82 ॥
ವಿಭುವಾದ ಕರ್ಣನು ಯುಗಕ್ಷಯ ಕಾಲದಲ್ಲಿ ಪೂಜ್ಯನಾದ ಅಗ್ನಿಯು ಪ್ರಾಣಿಗಳನ್ನು ದಹಿಸುವಂತೆ ತನ್ನ ಬಾಣಗಳಿಂದ ಅಶ್ವ-ಸೂತ-ಗಜ ಸಹಿತರಾದ ರಾಕ್ಷಸರನ್ನು ಹಾರಿಸಿದನು.
ಸ ಹತ್ವಾ ರಾಕ್ಷಸೀಂ ಸೇನಾಂ ಶುಶುಭೇ ಸೂತನಂದನಃ |
ಪುರೇವ ತ್ರಿಪುರಂ ದಗ್ಧ್ವಾ ದಿವಿ ದೇವೋ ಮಹೇಶ್ವರಃ ॥ 83 ॥
ಸೂತನಂದನನಾದ ಕರ್ಣನು ಆಕಾಶದಲ್ಲಿ ತ್ರಿಪುರವನ್ನು ದಹಿಸಿ ದೇವನಾದ ಮಹೇಶ್ವರನು ಶೋಭಿಸಿದಂತೆ ರಾಕ್ಷಸ ಸೈನ್ಯವನ್ನು ಕೊಂದು ಶೋಭಿಸಿದನು.
ತೇಷು ರಾಜಸಹಸ್ರೇಷು ಪಾಂಡವೇಯೇಷು ಮಾರಿಷ |
ನೈನಂ ನಿರೀಕ್ಷಿತುಮಪಿ ಕಶ್ಚಿಚ್ಛಕ್ನೋತಿ ಪಾರ್ಥಿವ ॥ 84 ॥
ಋತೇ ಘಟೋತ್ಕಚಾದ್ ರಾಜನ್ ರಾಕ್ಷಸೇಂದ್ರಾನ್ಮಹಾಬಲಾತ್ |
ಭೀಮವೀರ್ಯಬಲೋಪೇತಾತ್ ಕ್ರುದ್ಧಾದ್ ವೈವಸ್ವತಾದಿವ ॥ 85 ॥
ಎಲೈ ಶ್ರೇಷ್ಠನೇ, ರಾಜನೇ, ಆಗ ಪಾಂಡವರ ಸೇನೆಯ ಸಹಸ್ರಾರು ರಾಜರಲ್ಲಿ ರಾಕ್ಷಸೇಂದ್ರನೂ, ಮಹಾಬಲನೂ, ಕೋಪಗೊಂಡ ಯಮನಂತೆ ಭಯಂಕರವಾದ ಪರಾಕ್ರಮ ಮತ್ತು ಬಲವನ್ನು ಹೊಂದಿದವನೂ ಆದ ಘಟೋತ್ಕಚನನ್ನು ಬಿಟ್ಟು, ಬೇರೆ ಯಾವನೂ ಸಹ ಕರ್ಣನನ್ನು ನೋಡಲೂ ಸಾಧ್ಯವಾಗಲಿಲ್ಲ.
ತಸ್ಯ ಕ್ರುದ್ಧಸ್ಯ ನೇತ್ರಾಭ್ಯಾಂ ಪಾವಕಃ ಸಮಜಾಯತ |
ಮಹೋಲ್ಕಾಭ್ಯಾಂ ಯಥಾ ರಾಜನ್ ಸಾರ್ಚಿಷಃ ಸ್ನೇಹಬಿಂದವಃ ॥86॥
ಘಟೋತ್ಕಚನ ಕಣ್ಣುಗಳಿಂದ ಅಗ್ನಿಯುಂಟಾಯಿತು. ಎಲೈ ರಾಜನೇ, ಮಹೋಲ್ಕೆಗಳಂತಿದ್ದ ಅವನ ಕಣ್ಣುಗಳಿಂದ ಪಂಜುಗಳಿಂದ ಕಾದ ಎಣ್ಣೆಯ ಹನಿಗಳು ಬೀಳುವಂತೆ ಅಗ್ನಿಜ್ವಾಲೆಯಿಂದ ಕೂಡಿದ ಬಿಂದುಗಳು ಉದುರಿದವು.
ತಳಂ ತಳೇನ ಸಂಹತ್ಯ ಸಂದಶ್ಯ ದಶನಚ್ಛದಮ್ |
ರಥಮಾಸ್ಥಾಯ ಚ ಪುನರ್ಮಾಯಯಾ ನಿರ್ಮಿತಂ ಪುನಃ ॥ 87 ॥

ಯುಕ್ತಂ ಗಜನಿಭೈರ್ವಾಹೈಃ ಪಿಶಾಚವದನೈಃ ಖರೈಃ |
ಸ ಸೂತಮಬ್ರವೀತ್ ಕ್ರುದ್ಧಃ ಸೂತಪುತ್ರಾಯ ಮಾ ವಹ ॥ 88 ॥
ಅವನು ಅಂಗೈಯಿಂದ ಅಂಗೈಯನ್ನು ಉಜ್ಜುತ್ತಾ ಹಲ್ಲುಗಳನ್ನು ಕಚ್ಚಿ ಪುನಃ ಮಾಯೆಯಿಂದ ನಿರ್ಮಿತವಾದ, ಆನೆಯಷ್ಟು ಪರಿಮಾಣವನ್ನು ಹೊಂದಿದ್ದ ಪಿಶಾಚಿ ಮುಖಗಳುಳ್ಳ ಕತ್ತೆಗಳಿಂದ ಹೂಡಿದ, ರಥವನ್ನು ಏರಿ ಕ್ರುದ್ಧನಾದ ಅವನು ತನ್ನ ಸಾರಥಿಯನ್ನು ಕುರಿತು ಕರ್ಣನ ಕಡೆಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದನು.
ಸ ಯಯೌ ಘೋರರೂಪೇಣ ರಥೇನ ರಥಿನಾಂ ವರಃ |
ದ್ವೈರಥಂ ಸೂತಪುತ್ರೇಣ ಪುನರೇವ ವಿಶಾಂಪತೇ ॥ 89 ॥
ಎಲೈ ರಾಜನೇ, ರಥಿಶ್ರೇಷ್ಠನಾದ ಅವನು ಘೋರರೂಪವಾದ ರಥದಲ್ಲಿ ಹೋಗಿ ಪುನಃ ಕರ್ಣನ ಜೊತೆಯಲ್ಲಿ ದ್ವಂದ್ವಯುದ್ಧವನ್ನು ಮಾಡಿದನು.
ಸ ಚಿಕ್ಷೇಪ ಪುನಃ ಕ್ರುದ್ಧಃ ಸೂತಪುತ್ರಾಯ ರಾಕ್ಷಸಃ |
ಅಷ್ಟಚಕ್ರಾಂ ಮಹಾಘೋರಾಮಶನಿಂ ರುದ್ರನಿರ್ಮಿತಾಮ್ ॥ 90 ॥
ಆ ಕೋಪಗೊಂಡ ರಾಕ್ಷಸನು ಕರ್ಣನ ಮೇಲೆ ಮಹಾಘೋರವಾದ ರುದ್ರದೇವರಿಂದ ನಿರ್ಮಿತವಾದ ಎಂಟುಮೂಲೆಗಳಿಂದ ಕೂಡಿದ ಅಶನಿಯನ್ನು ಎಸೆದನು.
ತಾಮವಪ್ಲುತ್ಯ ಜಗ್ರಾಹ ಕರ್ಣೋ ನ್ಯಸ್ಯ ರಥೇ ಧನುಃ |
ಚಿಕ್ಷೇಪ ಚೈನಾಂ ತಸ್ಯೈವ ಸ್ಯಂದನಾತ್ ಸೋಽವಪುಪ್ಲುವೇ ॥ 91 ॥
ಕರ್ಣನು ರಥದಲ್ಲಿ ತನ್ನ ಧನುಸ್ಸನ್ನು ಇಟ್ಟು ಹಾರಿ ಆ ಅಶನಿಯನ್ನು ಹಿಡಿದು ಘಟೋತ್ಕಚನ ಮೇಲೆಯೇ ಎಸೆದನು. ಘಟೋತ್ಕಚನು ತನ್ನ ರಥದಿಂದ ಕೆಳಗೆ ಹಾರಿದನು.
ಸಾಶ್ವಸೂತಧ್ವಜಂ ಯಾನಂ ಭಸ್ಮ ಕೃತ್ವಾ ಮಹಾಪ್ರಭಾ |
ವಿವೇಶ ವಸುಧಾಂ ಭಿತ್ತ್ವಾ ಸುರಾಸ್ತತ್ರ ವಿಸಿಸ್ಮಿಯುಃ ॥ 92 ॥
ಮಹಾಪ್ರಭೆಯುಳ್ಳ ಆ ಅಶನಿಯು ಅಶ್ವ-ಸಾರಥಿ-ಧ್ವಜಗಳಿಂದ ಕೂಡಿದ ಘಟೋತ್ಕಚನ ರಥವನ್ನು ಭಸ್ಮವನ್ನು ಮಾಡಿ ಭೂಮಿಯನ್ನು ಸೀಳಿಕೊಂಡು ಒಳಗೆ ಇಳಿಯಿತು. ಆಗ ದೇವತೆಗಳು ವಿಸ್ಮಯಗೊಂಡರು.
ಕರ್ಣಂ ತು ಸರ್ವಭೂತಾನಿ ಪೂಜಯಾಮಾಸುರಂಜಸಾ |
ಯದವಪ್ಲುತ್ಯ ಜಗ್ರಾಹ ದೇವಸೃಷ್ಟಾಂ ಮಹಾಶನಿಮ್ ॥ 93 ॥
ರುದ್ರದೇವರು ಸೃಷ್ಟಿಸಿದ ಮಹಾಶನಿಯನ್ನು ರಥದಿಂದ ಹಾರಿ ಹಿಡಿದ ಕಾರಣದಿಂದ ಎಲ್ಲ ಪ್ರಾಣಿಗಳೂ ಕರ್ಣನನ್ನು ಚೆನ್ನಾಗಿ ಪೂಜಿಸಿದವು.
ಏವಂ ಕೃತ್ವಾ ರಣೇ ಕರ್ಣ ಆರುರೋಹ ರಥಂ ಪುನಃ |
ತತೋ ಮುಮೋಚ ನಾರಾಚಾನ್ ಸೂತಪುತ್ರಃ ಪರಂತಪಃ ॥ 94 ॥
ರಣರಂಗದಲ್ಲಿ ಸೂತಪುತ್ರನೂ, ಪರಂತಪನೂ ಆದ ಕರ್ಣನು ಹೀಗೆ ಮಾಡಿ ಪುನಃ ತನ್ನ ರಥವನ್ನು ಏರಿ ಘಟೋತ್ಕಚನ ಮೇಲೆ ನಾರಾಚಗಳನ್ನು ಪ್ರಯೋಗಿಸಿದನು.
ಅಶಕ್ಯಂ ಕರ್ತುಮನ್ಯೇನ ಸರ್ವಭೂತೇಷು ಮಾನದ |
ಯದಕಾರ್ಷೀತ್ ತದಾ ಕರ್ಣಃ ಸಂಗ್ರಾಮೇ ಭೀಮದರ್ಶನೇ ॥ 95 ॥
ಎಲೈ ಮಾನದನೇ, ಭಯಂಕರವಾಗಿ ತೋರುತ್ತಿದ್ದ ರಣರಂಗದಲ್ಲಿ ಕರ್ಣನು ಏನು ಮಾಡಿದನೋ ಅದನ್ನು ಸರ್ವಯೋಧರಲ್ಲಿ ಇನ್ನೊಬ್ಬನು ಮಾಡಲು ಸಾಧ್ಯವಿಲ್ಲ.
ಸ ಹನ್ಯಮಾನೋ ನಾರಾಚೈರ್ಧಾರಾಭಿರಿವ ಪರ್ವತಃ |
ಗಂಧರ್ವನಗರಾಕಾರಃ ಪುನರಂತರಧೀಯತ ॥ 96 ॥
ಪರ್ವತದ ಮೇಲೆ ಜಲಧಾರೆಯನ್ನು ಸುರಿಸಿದಂತೆ ಎಲ್ಲ ಕಡೆಗಳಿಂದಲೂ ಕರ್ಣನ ನಾರಾಚಗಳಿಂದ ಹೊಡೆಯಲ್ಪಟ್ಟ ಗಂಧರ್ವನಗರದಂತಿದ್ದ ಘಟೋತ್ಕಚನು ಪುನಃ ಅಂತರ್ಧಾನವನ್ನು ಹೊಂದಿದನು.
ಏವಂ ಸ ವೈ ಮಹಾಮಾಯೋ ಮಾಯಯಾ ಲಾಘವೇನ ಚ |
ಅಸ್ತ್ರಾಣಿ ತಾನಿ ದಿವ್ಯಾನಿ ಜಘಾನ ರಿಪುಸೂದನಃ ॥ 97 ॥
ಹೀಗೆ ಮಹಾಮಾಯೆಯುಳ್ಳವನೂ ಶತ್ರುಸೂದನನೂ ಆದ ಘಟೋತ್ಕಚನು ತನ್ನ ಮಾಯೆಯಿಂದಲೂ ಮತ್ತು ಕ್ಷಿಪ್ರತೆಯಿಂದಲೂ ಕರ್ಣನು ಪ್ರಯೋಗಿಸಿದ ದಿವ್ಯಾಸ್ತ್ರಗಳನ್ನು ನಾಶಪಡಿಸಿದನು.
ನಿಹನ್ಯಮಾನೇಷ್ವಸ್ತ್ರೇಷು ಮಾಯಯಾ ತೇನ ರಕ್ಷಸಾ |
ಅಸಂಭ್ರಾಂತಸ್ತತಃ ಕರ್ಣಸ್ತದ್ರಕ್ಷಃ ಪ್ರತ್ಯಯುದ್ಧ್ಯತ ॥ 98 ॥
ತನ್ನ ಅಸ್ತ್ರಗಳು ರಾಕ್ಷಸನ ಮಾಯೆಯಿಂದ ಹತವಾಗುತ್ತಿದ್ದರೂ ಕರ್ಣನು ಗಾಬರಿಗೊಳ್ಳದೆ ಪುನಃ ಆ ರಾಕ್ಷಸನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ತತಃ ಕ್ರುದ್ಧೋ ಮಹಾರಾಜ ಭೈಮಸೇನಿರ್ಮಹಾಬಲಃ |
ಚಕಾರ ಬಹುಧಾಽತ್ಮಾನಂ ಭೀಷಯಾಣೋ ನರಾಧಿಪಾನ್ ॥ 99 ॥
ಎಲೈ ಮಹಾರಾಜನೇ, ಆಗ ಮಹಾಬಲನಾದ ಘಟೋತ್ಕಚನು ಬಹಳ ಕೋಪಗೊಂಡು, ರಾಜರನ್ನು ಭಯಗೊಳಿಸುತ್ತಾ ತನ್ನನ್ನೇ ಬಹುರೂಪನನ್ನಾಗಿ ಮಾಡಿಕೊಂಡನು.
ತತೋ ದಿಗ್ಭ್ಯಃ ಸಮಾಪೇತುಃ ಸಿಂಹವ್ಯಾಘ್ರತರಕ್ಷವಃ |

ಅಗ್ನಿಜಿಹ್ವಾಶ್ಚ ಭುಜಗಾ ವಿಹಗಾಶ್ಚಾಪ್ಯಯೋಮುಖಾಃ ॥ 100 ॥
ಅನಂತರ ದಿಕ್ಕುದಿಕ್ಕುಗಳಿಂದ ಸಿಂಹ-ವ್ಯಾಘ್ರ-ಚಿರತೆಗಳು, ಅಗ್ನಿಜಿಹ್ವೆಯುಳ್ಳ ಸರ್ಪಗಳು, ಕಬ್ಬಿಣ ಮುಖವುಳ್ಳ ಪಕ್ಷಿಗಳು ಕರ್ಣನ ಮೇಲೆ ಎರಗಿದವು.
ಸ ಕೀರ್ಯಮಾಣೋ ನಿಶಿತೈಃ ಕರ್ಣಚಾಪಚ್ಯುತೈಃ ಶರೈಃ |
ನಗರಾದ್ರಿವನಪ್ರಖ್ಯಸ್ತತ್ರೈವಾಂತರಧೀಯತ ॥ 101 ॥
ಕರ್ಣನ ಬಿಲ್ಲಿನಿಂದ ಹೊರಹೊಮ್ಮಿದ ತೀಕ್ಷ್ಣವಾದ ಬಾಣಗಳಿಂದ ಹೊಡೆಯಲ್ಪಟ್ಟ ನಗರದಂತೆ, ಪರ್ವತದಂತೆ, ಕಾಡಿನಂತೆ ಇದ್ದ ಆ ಸಮೂಹವು ಅಲ್ಲಿಯೇ ಅಂತರ್ಧಾನವನ್ನು ಹೊಂದಿತು.
ರಾಕ್ಷಸಾಶ್ಚ ಪಿಶಾಚಾಶ್ಚ ಯಾತುಧಾನಾಃ ಶಲಾವೃಕಾಃ |
ತೇ ಕರ್ಣಂ ಭಕ್ಷಯಿಷ್ಯಂತಃ ಸರ್ವತಃ ಸಮುಪಾದ್ರವನ್ |
ಅಥೈನಂ ವಾಗ್ಭಿರುಗ್ರಾಭಿಸ್ತತ್ರಾಸಯಾಂಚಕ್ರಿರೇ ತದಾ ॥ 102 ॥
ರಾಕ್ಷಸರು, ಪಿಶಾಚಿಗಳು, ಯಾತುಧಾನರು ಮತ್ತು ತೋಳಗಳು ಕರ್ಣನನ್ನು ತಿನ್ನಲು ಬಯಸಿ ಎಲ್ಲ ಕಡೆಗಳಿಂದಲೂ ಅವನ ಮೇಲೆ ನುಗ್ಗಿದವು ಮತ್ತು ತಮ್ಮ ಕ್ರೂರವಾದ ನಾದಗಳಿಂದ ಅವನನ್ನು ಹೆದರಿಸಿದವು.
ಉದ್ಯತೈರ್ಬಹುಭಿರ್ಘೋರೈರಾಯುಧೈಃ ಶೋಣಿತೋಕ್ಷಿತೈಃ |
ತೇಷಾಮನೇಕೈರೇಕೈಕಂ ಕರ್ಣೋ ವಿವ್ಯಾಧ ಚಾಶುಗೈಃ ॥ 103 ॥
ಕೈಯಲ್ಲಿ ರಕ್ತಸಿಕ್ತವಾದ ಘೋರವಾದ ಆಯುಧವನ್ನು ಎತ್ತಿಹಿಡಿದ ಅನೇಕ ರಾಕ್ಷಸಾದಿಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಾ ಕರ್ಣನು ಅವರಲ್ಲಿ ಒಬ್ಬೊಬ್ಬರನ್ನೂ ಶೀಘ್ರಗಾಮಿಗಳಾದ ಬಾಣಗಳಿಂದ ಹೊಡೆದನು.
ಪ್ರತಿಹತ್ಯ ತು ತಾಂ ಮಾಯಾಂ ದಿವ್ಯೇನಾಸ್ತ್ರೇಣ ರಾಕ್ಷಸೀಮ್ |
ಆಜಘಾನ ಹಯಾನಸ್ಯ ಶರೈಃ ಸನ್ನತಪರ್ವಭಿಃ ॥ 104 ॥
ತನ್ನ ದಿವ್ಯಾಸ್ತ್ರದಿಂದ ಆ ರಾಕ್ಷಸ ಮಾಯೆಯನ್ನು ನಾಶಗೊಳಿಸಿ ಕರ್ಣನು ಬಾಗಿದ ತುದಿಯುಳ್ಳ ಬಾಣಗಳಿಂದ ಘಟೋತ್ಕಚನ ರಥದ ಅಶ್ವಗಳನ್ನು ಕೊಂದನು.
ತೇ ಭಗ್ನಾ ವಿಕೃತಾಂಗಾಶ್ಚ ಛಿನ್ನಪೃಷ್ಠಾಶ್ಚ ಸಾಯಕೈಃ |
ಸುಧಾಮನ್ವಪದ್ಯಂತ ಪಶ್ಯತಸ್ತಸ್ಯ ರಕ್ಷಸಃ ॥ 105 ॥
ಕರ್ಣನ ಬಾಣಗಳಿಂದ ಹೊಡೆಯಲ್ಪಟ್ಟು, ಭಗ್ನಗೊಂಡ ಅಂಗಗಳನ್ನು ಹೊಂದಿ, ಹಿಂಭಾಗವು ಕತ್ತರಿಸಲ್ಪಟ್ಟು ಆ ಅಶ್ವಗಳು ರಾಕ್ಷಸನಾದ ಘಟೋತ್ಕಚನು ನೋಡುತ್ತಿರುವಂತೆಯೇ ಭೂಮಿಯ ಮೇಲೆ ಬಿದ್ದವು.
ಸ ಭಗ್ನಮಾಯೋ ಹೈಡಿಂಬಃ ಕರ್ಣಂ ವೈಕರ್ತನಂ ತತಃ |
ಏಷ ತೇ ವಿದಧೇ ಮೃತ್ಯುಮಿತ್ಯುಕ್ತ್ವಾಂತರಧೀಯತ ॥ 106 ॥
ತನ್ನ ಮಾಯೆಗಳು ಭಗ್ನವಾಗುತ್ತಿರಲು ಘಟೋತ್ಕಚನು ವೈಕರ್ತನನಾದ ಕರ್ಣನನ್ನು ಕುರಿತು ಇವನು ನಿನ್ನ ಮೃತ್ಯುವಾಗಿ ಕ್ಲೃಪ್ತವಾಗಿದ್ದಾನೆ ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆರಡನೆಯ ಅಧ್ಯಾಯ
ದುರ್ಯೋಧನನ ಅನುಜ್ಞೆಯನ್ನು ಪಡೆದು ಅಲಾಯುಧನಿಂದ
ಘಟೋತ್ಕಚನ ಜೊತೆಯಲ್ಲಿ ಯುದ್ಧಕ್ಕೆ ಗಮನ.
ಸಂಜಯಃ
ತಸ್ಮಿಂಸ್ತಥಾ ವರ್ತಮಾನೇ ಕರ್ಣರಾಕ್ಷಸಯೋರ್ಮೃಧೇ |
ಅಲಾಯುಧೋ ರಾಕ್ಷಸೇಂದ್ರೋ ವೀರ್ಯವಾನಭ್ಯವರ್ತತ ॥ 1 ॥
ಸಂಜಯ ಕರ್ಣ-ರಾಕ್ಷಸರ ಯುದ್ಧವು ಹಾಗೆ ನಡೆಯುತ್ತಿರಲು ಪರಾಕ್ರಮಶಾಲಿಯೂ, ರಾಕ್ಷಸಶ್ರೇಷ್ಠನೂ ಆದ ಅಲಾಯುಧನು ಅಲ್ಲಿಗೆ ಬಂದನು.
ಮಹತ್ಯಾ ಸೇನಯಾ ಯುಕ್ತಃ ಸುಯೋಧನಮುಪಾಗಮತ್ |
ರಾಕ್ಷಸಾನಾಂ ವಿರೂಪಾಣಾಂ ಸಹಸ್ರೈಃ ಪರಿವಾರಿತಃ |
ನಾನಾರೂಪಧರೈರ್ವೀರೈಃ ಪೂರ್ವವೈರಮನುಸ್ಮರನ್ ॥ 2 ॥
ವಿರೂಪವುಳ್ಳ, ನಾನಾಯುಧಧಾರಿಗಳಾದ, ತೀವ್ರವಾದ ಸಹಸ್ರ ರಾಕ್ಷಸರಿಂದ ಪರಿವೃತನಾಗಿ, ಹಿಂದಿನ ವೈರವನ್ನು ಸ್ಮರಿಸುತ್ತಾ ದೊಡ್ಡ ಸೇನೆಯ ಜೊತೆಯಲ್ಲಿ ದುರ್ಯೋಧನನ ಸಮೀಪಕ್ಕೆ ಅಲಾಯುಧನು ಬಂದನು.
ತಸ್ಯ ಜ್ಞಾತಿರ್ಹಿ ವಿಕ್ರಾಂತೋ ಬ್ರಾಹ್ಮಣಾದೋ ಬಕೋ ಹತಃ |
ಕಿರ್ಮೀರಶ್ಚ ಮಹಾತೇಜಾ ಹಿಡಿಂಬಶ್ಚ ಸಖಾ ತಥಾ ॥ 3 ॥
ಪರಾಕ್ರಮಶಾಲಿಯೂ, ಬ್ರಾಹ್ಮಣ ಭಕ್ಷಕನೂ ಆದ ಅವನ ಬಂಧುವಾದ ಬಕನು ಹತನಾದನಷ್ಟೆ. ಹಾಗೆಯೇ ಮಹಾತೇಜಸ್ವಿಯಾದ

ಕಿರ್ಮೀರನೂ ಮತ್ತು ಅವನ ಸ್ನೇಹಿತನಾದ ಹಿಡಿಂಬನೂ ಹತರಾಗಿದ್ದರು.
ಸ ದೀರ್ಘಕಾಲಾಧ್ಯುಷಿತಂ ಪೂರ್ವವೈರಮನುಸ್ಮರನ್ |
ವಿಜ್ಞಾಯೈತನ್ನಿಶಾಯುದ್ಧಂ ಜಿಘಾಂಸುರ್ಭೀಮಮಾಹವೇ ॥ 4 ॥
ಸ ಮತ್ತ ಇವ ಮಾತಂಗಃ ಸಂಕ್ರುದ್ಧ ಇವ ಚೋರಗಃ |
ದುರ್ಯೋಧನಮಿದಂ ವಾಕ್ಯಮಬ್ರವೀದ್ ಯುದ್ಧಲಾಲಸಃ ॥ 5 ॥
ಅವನು ದೀರ್ಘಕಾಲದಿಂದ ತನ್ನಲ್ಲಿ ವಾಸವಾಗಿದ್ದ ಈ ಹಿಂದಿನ ವೈರವನ್ನು ಸ್ಮರಿಸಿಕೊಂಡು, ಈ ರಾತ್ರಿಯುದ್ಧದ ವಾರ್ತೆಯನ್ನು ಕೇಳಿ, ಯುದ್ಧದಲ್ಲಿ ಭೀಮನನ್ನು ಕೊಲ್ಲಲು ಬಯಸಿ, ಮತ್ತಮಾತಂಗದಂತೆ ಮತ್ತು ರೋಷವುಳ್ಳ ಸರ್ಪದಂತೆ ಯುದ್ಧಲಾಲಸನಾಗಿ ದುರ್ಯೋಧನನನ್ನು ಕುರಿತು ಈ ಮಾತನ್ನು ಆಡಿದನು.
ಅಲಾಯುಧಃ
ವಿದಿತಂ ತೇ ಮಹಾರಾಜ ಯಥಾ ಭೀಮೇನ ರಾಕ್ಷಸಾಃ |
ಹಿಡಿಂಬಬಕಕಿರ್ಮೀರಾ ನಿಹತಾ ಮಮ ಬಾಂಧವಾಃ ॥ 6 ॥
ಅಲಾಯುಧ ಎಲೈ ಮಹಾರಾಜನೇ, ನನ್ನ ಬಂಧುಗಳಾದ ಹಿಡಿಂಬ, ಬಕ, ಕಿರ್ಮೀರ ರಾಕ್ಷಸರು ಹೇಗೆ ಭೀಮನಿಂದ ಹತರಾದರೆಂದು ನಿನಗೆ ತಿಳಿದಿದೆ.
ಪರಾಮರ್ಶಶ್ಚ ಕನ್ಯಾಯಾ ಹಿಡಿಂಬಾಯಾಃ ಕೃತಃ ಪುರಾ |
ಕಿಮನ್ಯದ್ ರಾಕ್ಷಸಾನನ್ಯಾನಸ್ಮಾಂಶ್ಚ ಪರಿಭೂಯ ಹ ॥ 7 ॥
ಉಳಿದ ರಾಕ್ಷಸರನ್ನು ಮತ್ತು ನನ್ನನ್ನು ಪರಿಗಣಿಸದೆ ಹಿಂದೆ ಕನ್ಯೆಯಾದ ಹಿಡಿಂಬೆಯ ಮೇಲೆ ಅವನು ಕೈ ಮಾಡಿದ್ದಾನೆ. ಇದಕ್ಕಿಂತ ಇನ್ನೇನು ಬೇಕು?
ತಮಹಂ ಸಗಣಂ ರಾಜನ್ ಸವಾಜಿರಥಕುಂಜರಮ್ |
ಹೈಡಿಂಬಂ ಚ ಸಹಾಮಾತ್ಯಂ ಹಂತುಮಭ್ಯಾಗತಃ ಸ್ವಯಮ್ ॥ 8 ॥
ಎಲೈ ರಾಜನೇ, ಗಜಾಶ್ವರಥಗಳಿಂದ ಕೂಡಿದ ಪರಿವಾರ ಸಹಿತನಾದ ಅವನನ್ನೂ ಅಮಾತ್ಯರಿಂದ ಸಹಿತನಾದ ಘಟೋತ್ಕಚನನ್ನೂ ಕೊಲ್ಲಲು ನಾನಾಗಿಯೇ ಇಲ್ಲಿಗೆ ಬಂದಿದ್ದೇನೆ.
ಅದ್ಯ ಕುಂತೀಸುತಾನ್ ಸರ್ವಾನ್ ವಾಸುದೇವಪುರೋಗಮಾನ್ |
ಹತ್ವಾ ಸಂಭಕ್ಷಯಿಷ್ಯಾಮಿ ಸರ್ವೈರನುಚರೈಃ ಸಹ |
ನಿವಾರಯ ಬಲಂ ಸರ್ವಂ ವಯಂ ಯೋತ್ಸ್ಯಾಮ ಪಾಂಡವಾನ್ ॥9॥
ಕೃಷ್ಣನೇ ಮೊದಲಾದ ಎಲ್ಲ ಕುಂತೀಪುತ್ರರನ್ನೂ ಕೊಂದು, ಅನುಚರರ ಜೊತೆಯಲ್ಲಿ ಅವರನ್ನು ಭಕ್ಷಿಸುವೆನು. ನಿನ್ನ ಸೈನ್ಯವೆಲ್ಲವನ್ನೂ ಹಿಂದೆ ತೆಗೆದುಕೊ. ನಾವು ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡುವೆವು.
ತಸ್ಯ ತದ್ವಚನಂ ಶ್ರುತ್ವಾ ಹೃಷ್ಟೋ ದುರ್ಯೋಧನಸ್ತದಾ |
ಪ್ರತಿಪೂಜ್ಯಾಬ್ರವೀದ್ ವಾಕ್ಯಂ ಭ್ರಾತೃಭಿಃ ಪರಿವಾರಿತಃ ॥ 10 ॥
ತ್ವಾಂ ಪುರಸ್ಕೃತ್ಯ ಸಗಣಂ ವಯಂ ಯೋತ್ಸ್ಯಾಮಹೇ ಪರಾನ್ |
ನ ಹಿ ವೈರಾಂತಮನಸಃ ಸ್ಥಾಸ್ಯಂತಿ ಮಮ ಸೈನಿಕಾಃ ॥ 11 ॥
ಅವನ ಆ ಮಾತುಗಳನ್ನು ಕೇಳಿ ಸಂತೋಷಗೊಂಡ, ಸಹೋದರರಿಂದ ಪರಿವಾರಿತನಾದ ದುರ್ಯೋಧನನು ಅವನನ್ನು ಕುರಿತು- `ಪರಿವಾರ ಸಹಿತನಾದ ನಿನ್ನನ್ನು ಮುಂದೆ ಮಾಡಿಕೊಂಡು ನಾವು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುವೆವು. ವೈರವನ್ನು ಮುಗಿಸುವ ಮನಸ್ಸುಳ್ಳ ನನ್ನ ಸೈನಿಕರು ಮಧ್ಯದಲ್ಲಿ ಸುಮ್ಮನಿರುವುದಿಲ್ಲ' ಎಂದು ಹೇಳಿದನು.
ಏವಮಸ್ತ್ವಿತಿ ರಾಜಾನಮುಕ್ತ್ವಾ ರಾಕ್ಷಸಪುಂಗವಃ |
ಅಭ್ಯಯಾತ್ ತ್ವರಿತೋ ಭೀಮಂ ಸಹಿತಃ ಪುರುಷಾಶನೈಃ ॥ 12 ॥
ದೀಪ್ಯಮಾನೇನ ವಪುಷಾ ರಥೇನಾದಿತ್ಯವರ್ಚಸಾ |
ತಾದೃಶೇನೈವ ರಾಜೇಂದ್ರ ಯಾದೃಶೇನ ಘಟೋತ್ಕಚಃ ॥ 13 ॥
ರಾಕ್ಷಸಶ್ರೇಷ್ಠನಾದ ಅಲಾಯುಧನು ದುರ್ಯೋಧನನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ, ನರಭಕ್ಷಕರಾದ ಅವನ ಪರಿವಾರದಿಂದ ಸಹಿತನಾಗಿ, ಜ್ವಲಿಸುವ ದೇಹದಿಂದ ಕೂಡಿ, ಎಲೈ ರಾಜೇಂದ್ರನೇ, ಘಟೋತ್ಕಚನ ರಥದಂತೆಯೇ ಇದ್ದ ಸೂರ್ಯನಂತೆ ಶೋಭಿಸುವ ರಥದಿಂದ ಶೀಘ್ರವಾಗಿ ಭೀಮನ ಮೇಲೆ ಸಾಗಿದನು.
ತಸ್ಯಾಪ್ಯತುಲನಿರ್ಘೋಷೋ ಬಹುತೋರಣಚಿತ್ರಿತಃ |
ಋಕ್ಷಚರ್ಮಾವನದ್ಧಾಂಗೋ ನಲ್ವಮಾತ್ರೋ ಮಹಾರಥಃ ॥ 14 ॥
ಅವನ ರಥವೂ ಕೂಡ ಅಸದೃಶವಾದ ಘೋಷದಿಂದ ಕೂಡಿದ್ದು, ಅನೇಕ ತೋರಣಗಳಿಂದ ಆಶ್ಚರ್ಯಕರವಾಗಿದ್ದು, ಕರಡಿಯ ಚರ್ಮದಿಂದ ಆಚ್ಛಾದಿಸಲ್ಪಟ್ಟು ಒಂದು ನಲ್ವದಷ್ಟು ಎತ್ತರವಿದ್ದಿತು.
ತಸ್ಯಾಪಿ ತುರಗಾಃ ಶೀಘ್ರಾ ಹಸ್ತಿಕಾಯಾಃ ಖರಸ್ವನಾಃ |
ಶತಂ ಯುಕ್ತಾ ಮಹಾಕಾಯಾ ಮಾಂಸಶೋಣಿತಭೋಜನಾಃ ॥ 15 ॥
ಅವನ ರಥದ ನೂರು ಅಶ್ವಗಳೂ ಆನೆಯಂತಹ ಶರೀರವನ್ನು ಹೊಂದಿ, ಕರ್ಕಶವಾದ ಸ್ವರವನ್ನು ಹೊಂದಿ, ಮಾಂಸ-ರಕ್ತಭೋಜಿಗಳಾಗಿ ಶೀಘ್ರಗಾಮಿಗಳಾಗಿದ್ದವು.
ತಸ್ಯಾಪಿ ರಥನಿರ್ಘೋಷೋ ಮಹಾಮೇಘರವೋಪಮಃ |
ತಸ್ಯಾಪಿ ಸುಮಹಚ್ಚಾಪಂ ದೃಢಜ್ಯಂ ಬಲವತ್ತರಮ್ ॥ 16 ॥

ಅವನ ರಥದ ಘೋಷವೂ ಮಹಾಮೇಘಘೋಷದಂತಿದ್ದಿತು. ಅವನ ದೊಡ್ಡ ಧನುಸ್ಸೂ ಸಹ ಬಲವಾಗಿದ್ದು ದೃಢವಾದ ಹೆದೆಯನ್ನು ಹೊಂದಿದ್ದಿತು.
ತಸ್ಯಾಪ್ಯಕ್ಷಸಮಾ ಬಾಣಾ ರುಗ್ಮಪುಂಖಾಃ ಶಿಲಾಶಿತಾಃ |
ಸೋಽಪಿ ವೀರೋ ಮಹಾಬಾಹುರ್ಯಥೈವ ಸ ಘಟೋತ್ಕಚಃ ॥ 17 ॥
ಅವನ ಬಾಣಗಳೂ ಸಹ ರಥಾಕ್ಷದಷ್ಟು ಸುತ್ತಳತೆಯನ್ನು ಹೊಂದಿ, ಸುವರ್ಣ ಪುಂಖಗಳಿಂದ ಕೂಡಿ ಕಲ್ಲಿನಲ್ಲಿ ಸಾಣೆಯನ್ನು ಹಿಡಿಯಲ್ಪಟ್ಟಿದ್ದವು. ಘಟೋತ್ಕಚನಂತೆ ಆ ವೀರನೂ ಮಹಾಬಾಹುವಾಗಿದ್ದನು.
ತಸ್ಯಾಪಿ ಗೋಮಾಯುಬಲಾಭಿಗುಪ್ತೋ
ಬಭೂವ ಕೇತುರ್ಜ್ವಲನಾರ್ಕತುಲ್ಯಃ |
ಸ ಚಾಪಿ ರೂಪೇಣ ಘಟೋತ್ಕಚಸ್ಯ
ಶ್ರೀಮತ್ತಮೋ ವ್ಯಾಕುಲದೀಪಿತಾಸ್ಯಃ ॥ 18 ॥
ಅವನ ರಥದ ಧ್ವಜವೂ ಸಹ ನರಿ ಮತ್ತು ಬಲಗಳಿಂದ (ಮಾಂಸಾಹಾರಿ ಪಕ್ಷಿ) ರಕ್ಷಿತವಾಗಿ ಸೂರ್ಯಾಗ್ನಿಸದೃಶವಾಗಿದ್ದಿತು. ಅವನೂ ಸಹ ರೂಪದಲ್ಲಿ ಘಟೋತ್ಕಚನಿಗಿಂತ ಹೆಚ್ಚು ಕಾಂತಿಯುಕ್ತನಾಗಿ ಜ್ವಲಿಸುವ ಮುಖವುಳ್ಳವನಾಗಿದ್ದನು.
ದೀಪ್ತಾಂಗದೋ ದೀಪ್ತಕಿರೀಟಮಾಲೀ
ಬದ್ಧಸ್ರಗುಷ್ಣೀಷನಿಬದ್ಧಖಡ್ಗಃ |
ಗದೀ ಭುಶುಂಡೀ ಮುಸಲೀ ಹಲೀ ಚ
ಶರಾಸನೀ ವಾರಣತುಲ್ಯವರ್ಷ್ಮಾ ॥ 19 ॥
ಜ್ವಲಿಸುವ ಅಂಗದಗಳು, ಜ್ವಲಿಸುವ ಕಿರೀಟ ಮತ್ತು ಮಾಲೆಗಳು, ಕಟ್ಟಿದ ಮಾಲೆಗಳು ಮತ್ತು ರುಮಾಲುಗಳು, ಸೊಂಟಕ್ಕೆ ಕಟ್ಟಿದ ಖಡ್ಗ, ಗದೆ, ಭುಶುಂಡಿ, ಮುಸಲ, ಹಲ ಮತ್ತು ಧನುಸ್ಸುಗಳನ್ನು ಧರಿಸಿ ಗಜರಾಜನಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದನು.
ರಥೇನ ತೇನಾನಲವರ್ಚಸಾ ಚ
ವಿದ್ರಾವಯನ್ ಪಾಂಡವವಾಹಿನೀಂ ತಾಮ್ |
ರರಾಜ ಸಂಖ್ಯೇ ಪರಿವರ್ತಮಾನೋ
ವಿದ್ಯುನ್ಮಾಲೀ ಮೇಘ ಇವಾಂತರಿಕ್ಷೇ ॥ 20 ॥
ಅಗ್ನಿಯ ಕಾಂತಿಯನ್ನು ಹೊಂದಿದ ಆ ರಥದಿಂದ ಅವನು ಪಾಂಡವರ ಸೈನ್ಯವನ್ನು ಓಡಿಸುತ್ತಾ ವಿದ್ಯುತ್ತಿನ ಮಾಲೆಯನ್ನು ಧರಿಸಿದ ಮೇಘವು ಅಂತರಿಕ್ಷದಲ್ಲಿ ಸಂಚರಿಸುವಂತೆ ರಣರಂಗದಲ್ಲಿ ಸಂಚರಿಸುತ್ತಾ ಶೋಭಿಸಿದನು.
ತೇ ಚಾಪಿ ಸರ್ವೇ ಪ್ರವರಾ ನರೇಂದ್ರಾ
ಮಹಾಬಲಾ ವರ್ಮಿಣಶ್ಚರ್ಮಿಣಶ್ಚ |
ಹರ್ಷಾನ್ವಿತಾ ಯುಯುಧುಸ್ತತ್ರ ರಾಜನ್
ಸಮಂತತಃ ಪಾಂಡವಯೋಧವೀರಾಃ ॥ 21 ॥
ಅವನ ಅನುಚರರೆಲ್ಲರೂ ಸಹ ಶ್ರೇಷ್ಠರು, ರಾಜರು, ಮಹಾಬಲವುಳ್ಳವರು, ಕವಚವನ್ನು ಮತ್ತು ಚರ್ಮಗಳನ್ನು ಧರಿಸಿದವರು. ಎಲೈ ರಾಜನೇ, ಪಾಂಡವರ ವೀರ ಸೈನಿಕರೂ ಸಹ ಹರ್ಷಾನ್ವಿತರಾಗಿ ಅವರ ಜೊತೆಯಲ್ಲಿ ಎಲ್ಲ ಕಡೆಗಳಲ್ಲಿಯೂ ಯುದ್ಧವನ್ನು ಮಾಡಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ನವವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ಮೂರನೆಯ ಅಧ್ಯಾಯ
ಭೀಮ ಮತ್ತು ಅಲಾಯುಧರ ಯುದ್ಧ.
ಸಂಜಯಃ
ತಮಾಗತಮಭಿಪ್ರೇಕ್ಷ್ಯ ಭೀಮಕರ್ಮಾಣಮಾಹವೇ |
ಹರ್ಷಮಾಹಾರಯಾಂಚಕ್ರುಃ ಕುರವಃ ಸರ್ವ ಏವ ತೇ ॥ 1 ॥
ಸಂಜಯ ಯುದ್ಧದಲ್ಲಿ ಭಯಂಕರ ಕರ್ಮವನ್ನು ಮಾಡುವ ಅಲಾಯುಧನು ಬರುತ್ತಿರುವುದನ್ನು ನೋಡಿ ಪಾಂಡವರೆಲ್ಲರೂ ಬಹಳ ಸಂತೋಷವನ್ನು ತಂದುಕೊಂಡರು.
ತಥೈವ ತವ ಪುತ್ರಾಸ್ತೇ ದುರ್ಯೋಧನಪುರೋಗಮಾಃ |
ಅಪ್ಲವಾಃ ಪ್ಲವಮಾಸಾದ್ಯ ತರ್ತುಕಾಮಾ ಇವಾರ್ಣವಮ್ ॥ 2 ॥
ಪುನರ್ಜಾತಮಿವಾತ್ಮಾನಂ ಮನ್ವಾನಾಃ ಪಾರ್ಥಿವಾಸ್ತದಾ |
ಅಲಾಯುಧಂ ರಾಕ್ಷಸೇಂದ್ರಂ ಸ್ವಾಗತೇನಾಭ್ಯಪೂಜಯನ್ ॥ 3 ॥
ಹಾಗೆಯೇ ದುರ್ಯೋಧನ ಮೊದಲಾದ ನಿನ್ನ ಪುತ್ರರು, ಸಮುದ್ರವನ್ನು ದಾಟಲು ನೌಕೆಯಿಲ್ಲದವರು ನೌಕೆಯನ್ನು ಪಡೆದಂತೆ ತಮ್ಮನ್ನು ಪುನರ್ಜನ್ಮವನ್ನು ಪಡೆದವರೆಂದು ತಿಳಿದುಕೊಂಡು, ಅವರು ಮತ್ತು ಉಳಿದ ರಾಜರು ರಾಕ್ಷಸಶ್ರೇಷ್ಠನಾದ ಅಲಾಯುಧನಿಗೆ

ಸ್ವಾಗತವನ್ನು ಕೋರಿ ಪೂಜಿಸಿದರು.
ತಸ್ಮಿಂಸ್ತ್ವಮಾನುಷೇ ಯುದ್ಧೇ ವರ್ತಮಾನೇ ಭಯಾವಹೇ |
ಕರ್ಣರಾಕ್ಷಸಯೋರ್ನಕ್ತಂ ದಾರುಣಪ್ರತಿದರ್ಶನೇ ॥ 4 ॥
ಉಪಪ್ರೇಕ್ಷಂತ ಪಾಂಚಾಲಾಃ ಸ್ಮಯಮಾನಾಃ ಸರಾಜಕಾಃ |
ತಥೈವ ತಾವಕಾ ರಾಜನ್ ಘೂರ್ಣಮಾನಾಸ್ತತಸ್ತತಃ ॥ 5 ॥
ಕರ್ಣನಿಗೂ ಮತ್ತು ಘಟೋತ್ಕಚನಿಗೂ ರಾತ್ರಿಯ ಕಾಲದಲ್ಲಿ ದಾರುಣವಾಗಿ ತೋರುತ್ತಿದ್ದ, ಭಯಂಕರವಾದ ಅಮಾನುಷವಾದ ಯುದ್ಧವು ನಡೆಯುತ್ತಿರಲು ಪಾಂಚಾಲರು ಮತ್ತು ಉಳಿದ ರಾಜರು ನಗುತ್ತಾ ನೋಡುತ್ತಿದ್ದರು. ರಾಜನೇ, ಹಾಗೆಯೇ ನಿನ್ನವರು ಮುಖಗಳನ್ನು ಅರಳಿಸಿ ನೋಡುತ್ತಿದ್ದರು.
ಚುಕ್ರುಶುರ್ನೇದಮಸ್ತೀತಿ ದ್ರೋಣದ್ರೌಣಿಕೃಪಾದಯಃ |
ತತ್ಕರ್ಮ ದೃಷ್ಟ್ವಾ ಸಂಭ್ರಾಂತಾ ಹೈಡಿಂಬಸ್ಯ ರಣಾಜಿರೇ ॥ 6 ॥
ರಣರಂಗದಲ್ಲಿ ಘಟೋತ್ಕಚನ ಆ ಪರಾಕ್ರಮಯುಕ್ತವಾದ ಕರ್ಮವನ್ನು ನೋಡಿ ದ್ರೋಣರು-ಅಶ್ವತ್ಥಾಮರು-ಕೃಪರು ಮೊದಲಾದವರು ಇದು ಸರಿಯಲ್ಲ ಎಂದು ಹೇಳಿದರು.
ಸರ್ವಮಾವಿಗ್ನಮಭವದ್ಧಾಹಾಭೂತಮಚೇತನಮ್ |
ತವ ಸೈನ್ಯಂ ಮಹಾರಾಜ ನಿರಾಶಂ ಕರ್ಣಜೀವಿತೇ ॥ 7 ॥
ಎಲೈ ಮಹಾರಾಜನೇ, ನಿನ್ನ ಸೈನ್ಯವೆಲ್ಲವೂ ಶತ್ರುಗಳ ಹೊಡೆತಕ್ಕೆ ಸಿಲುಕಿ ಹಾಹಾಕಾರವನ್ನು ಹೊಂದಿ, ವಿವೇಕಶೂನ್ಯವಾಗಿ ಕರ್ಣನ ಜೀವಿತದಲ್ಲಿ ಆಸೆಯನ್ನು ಕಳೆದುಕೊಂಡವು.
ದುರ್ಯೋಧನಸ್ತು ಸಂಪ್ರೇಕ್ಷ್ಯ ಕರ್ಣಮಾರ್ತಿಂ ಪರಾಂ ಗತಮ್ |
ಅಲಾಯುಧಂ ರಾಕ್ಷಸೇಂದ್ರಮಾಹೂಯೇದಮಥಾಬ್ರವೀತ್ ॥ 8 ॥
ದುರ್ಯೋಧನನಾದರೋ ಸಂಕಟಕ್ಕೆ ಸಿಲುಕಿದ ಕರ್ಣನನ್ನು ನೋಡಿ ರಾಕ್ಷಸೇಂದ್ರನಾದ ಅಲಾಯುಧನನ್ನು ಕರೆದು ಈ ಮಾತನ್ನು ಆಡಿದನು.
ಏಷ ವೈಕರ್ತನಃ ಕರ್ಣೋ ಹೈಡಿಂಬೇನ ಸಮಾಗತಃ |
ಕುರುತೇ ಕರ್ಮ ಸುಮಹದ್ಯದಸ್ಯೌಪಯಿಕಂ ಮೃಧೇ ॥ 9 ॥
ವೈಕರ್ತನನಾದ ಈ ಕರ್ಣನು ಘಟೋತ್ಕಚನಿಂದ ಸಂಸಕ್ತನಾಗಿ ರಣರಂಗದಲ್ಲಿ ತನಗೆ ಅನುಕೂಲವಾದ ಮಹತ್ಕಾರ್ಯವನ್ನು ಮಾಡುತ್ತಿದ್ದಾನೆ.
ಪಶ್ಯೈತಾನ್ ಪಾರ್ಥಿವಾನ್ ಶೂರಾನ್ನಿಹತಾನ್ ಭೈಮಸೇನಿನಾ |
ನಾನಾಶಸ್ತ್ರೈರಭಿಹತಾನ್ ಪಾದಪಾನಿವ ದಂತಿನಾ ॥ 10 ॥
ಘಟೋತ್ಕಚನಿಂದ ನಾನಾ ಆಯುಧಗಳಿಂದ ಹೊಡೆಯಲ್ಪಟ್ಟು ಗಜೇಂದ್ರನಿಂದ ಉರುಳಿಸಲ್ಪಟ್ಟ ಮರಗಳಂತೆ ಬಿದ್ದಿರುವ ಶೂರರಾದ ಈ ರಾಜರನ್ನು ನೋಡು.
ತವೈಷ ಭಾಗಃ ಸಮರೇ ರಾಜಮಧ್ಯೇ ಮಯಾ ಕೃತಃ |
ತವೈವಾನುಮತೇ ವೀರ ತಂ ವಿಕ್ರಮ್ಯ ನಿಬರ್ಹಯ ॥ 11 ॥
ಪುರಾ ವೈಕರ್ತನಂ ಕರ್ಣಮೇಷ ಪಾಪೋ ಘಟೋತ್ಕಚಃ |
ಮಾಯಾಬಲಮುಪಾಶ್ರಿತ್ಯ ಕರ್ಶಯತ್ಯರಿಕರ್ಶನಃ ॥ 12 ॥
ಎಲೈ ವೀರನೇ, ಈ ಘಟೋತ್ಕಚನನ್ನು ನಿನ್ನ ಅಭಿಪ್ರಾಯದಂತೆಯೇ ರಾಜರ ಮಧ್ಯದಲ್ಲಿ ಯುದ್ಧದಲ್ಲಿ ನಿನ್ನ ಭಾಗವೆಂದು ಕಲ್ಪಿಸಿದ್ದೇನೆ. ಪರಾಕ್ರಮವನ್ನು ಮಾಡಿ ಅವನನ್ನು ನಾಶಗೊಳಿಸು. ಈ ಪಾಪಿಯೂ ಮತ್ತು ಶತ್ರುಕರ್ಶನನೂ ಆದ ಘಟೋತ್ಕಚನು ಮಾಯಾಬಲವನ್ನು ಆಶ್ರಯಿಸಿ ಕರ್ಣನನ್ನು ಮೊದಲು ಕ್ಲೇಶಗೊಳಿಸುತ್ತಿದ್ದಾನೆ.
ಸಂಜಯಃ
ಏವಮುಕ್ತಃ ಸ ರಾಜ್ಞಾ ತು ರಾಕ್ಷಸಸ್ತೀವ್ರವಿಕ್ರಮಃ |
ತಥೇತ್ಯುಕ್ತ್ವಾ ಮಹಾಬಾಹುರ್ಘಟೋತ್ಕಚಮುಪಾದ್ರವತ್ ॥ 13 ॥
ಸಂಜಯ ರಾಜನಿಂದ ಹೀಗೆ ಹೇಳಲ್ಪಟ್ಟ ತೀವ್ರ ಪರಾಕ್ರಮಶಾಲಿಯಾದ ಮಹಾಬಾಹುವಾದ ಆ ರಾಕ್ಷಸನು ಹಾಗೆಯೇ ಆಗಲಿ ಎಂದು ಹೇಳಿ ಘಟೋತ್ಕಚನ ಮೇಲೆ ಎರಗಿದನು.
ತತಃ ಕರ್ಣಂ ಸಮುತ್ಸೃಜ್ಯ ಭೈಮಸೇನಿರಪಿ ಪ್ರಭೋ |
ಪ್ರತ್ಯಮಿತ್ರಮುಪಾಯಾಂತಂ ಮರ್ದಯಾಮಾಸ ಮಾರ್ಗಣೈಃ ॥ 14 ॥
ಎಲೈ ಪ್ರಭುವೇ, ಆಗ ಭೀಮಸೇನ ಪುತ್ರನಾದ ಘಟೋತ್ಕಚನು ಕರ್ಣನನ್ನು ಬಿಟ್ಟು ಹೊಸದಾಗಿ ಬರುತ್ತಿದ್ದ ಶತ್ರುವನ್ನು ಬಾಣಗಳಿಂದ ಮರ್ದಿಸಿದನು.
ತಯೋಃ ಸಮಭವದ್ ಯುದ್ಧಂ ಕ್ರುದ್ಧಯೋ ರಾಕ್ಷಸೇಂದ್ರಯೋಃ |
ಮತ್ತಯೋರ್ವಾಸಿತಾಹೇತೋರ್ದ್ವಿಪಯೋರಿವ ಕಾನನೇ ॥ 15 ॥
ಅರಣ್ಯದಲ್ಲಿ ಎರಡು ಮದಗಜಗಳು ಆಗ ತಾನೇ ಪ್ರೌಢತೆಯನ್ನು ಹೊಂದಿದ ಹೆಣ್ಣಾನೆಯ ಸಲುವಾಗಿ ಹೊಡೆದಾಡುವಂತೆ ಕ್ರುದ್ಧರಾದ ಆ ಇಬ್ಬರು ರಾಕ್ಷಸಶ್ರೇಷ್ಠರಿಗೆ ಯುದ್ಧವು ನಡೆಯಿತು.
ರಕ್ಷಸಾ ವಿಪ್ರಮುಕ್ತಸ್ತು ಕರ್ಣೋಽಪಿ ರಥಿನಾಂ ವರಃ |
ಅಭ್ಯದ್ರವದ್ ಭೀಮಸೇನಂ ರಥೇನಾದಿತ್ಯವರ್ಚಸಾ ॥ 16 ॥

ರಾಕ್ಷಸನಾದ ಘಟೋತ್ಕಚನಿಂದ ಬಿಡುಗಡೆಯನ್ನು ಹೊಂದಿದ, ರಥಿಕರಲ್ಲಿ ಶ್ರೇಷ್ಠನಾದ ಕರ್ಣನೂ ಸಹ ಸೂರ್ಯನ ಕಾಂತಿಯನ್ನು ಹೊಂದಿದ್ದ ರಥದಿಂದ ಭೀಮಸೇನನ ಮೇಲೆ ಸಾಗಿದನು.
ತಮಾಯಾಂತಮನಾದೃತ್ಯ ದೃಷ್ಟ್ವಾ ಗ್ರಸ್ತಂ ಘಟೋತ್ಕಚಮ್ |
ಅಲಾಯುಧೇನ ಸಮರೇ ಸಿಂಹೇನೇವ ಗವಾಂ ಪತಿಮ್ ॥ 17 ॥
ರಥೇನಾದಿತ್ಯವಪುಷಾ ಭೀಮಃ ಪ್ರಹರತಾಂ ವರಃ |
ಕಿರನ್ ಶರೌಘಾನ್ ಪ್ರಯಯಾವಲಾಯುಧರಥಂ ಪ್ರತಿ ॥ 18 ॥
ತನ್ನ ಕಡೆಗೆ ಬರುತ್ತಿದ್ದ ಕರ್ಣನನ್ನು ಲೆಕ್ಕಿಸದೆ ಸಿಂಹವು ವೃಷಭವನ್ನು ಹಿಡಿದಂತೆ, ಯುದ್ಧದಲ್ಲಿ ಅಲಾಯುಧನು ಘಟೋತ್ಕಚನನ್ನು ಹಿಡಿದಿರುವುದನ್ನು ನೋಡಿ ಪ್ರಹಾರ ಮಾಡುವುದರಲ್ಲಿ ಶ್ರೇಷ್ಠನಾದ ಭೀಮನು ಬಾಣಗಳ ಸಮೂಹಗಳನ್ನು ಪ್ರಯೋಗಿಸುತ್ತಾ ಸೂರ್ಯಕಾಂತಿಯುಳ್ಳ ರಥದಿಂದ ಅಲಾಯುಧನ ರಥದ ಕಡೆಗೆ ಬಂದನು.
ತಮಾಯಾಂತಮಭಿಪ್ರೇಕ್ಷ್ಯ ಸ ತದಾಲಾಯುಧಃ ಪ್ರಭೋ |
ಘಟೋತ್ಕಚಂ ಸಮುತ್ಸೃಜ್ಯ ಭೀಮಸೇನಂ ಸಮಾಹ್ವಯತ್ ॥ 19 ॥
ಎಲೈ ಪ್ರಭುವೇ, ಭೀಮಸೇನನು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಅಲಾಯುಧನು ಘಟೋತ್ಕಚನನ್ನು ಬಿಟ್ಟು ಭೀಮಸೇನನನ್ನು ಯುದ್ಧಕ್ಕೆ ಆಹ್ವಾನಿಸಿದನು.
ತಂ ಭೀಮಃ ಸಹಸಾಭ್ಯೇತ್ಯ ರಾಕ್ಷಸಾಂತಕರಃ ಪ್ರಭೋ |
ಸಗಣಂ ರಾಕ್ಷಸೇಂದ್ರಂ ತಂ ಶರವರ್ಷೈರವಾಕಿರತ್ ॥ 20 ॥
ಎಲೈ ಪ್ರಭುವೇ, ರಾಕ್ಷಸಾಂತಕನಾದ ಭೀಮನು ಶೀಘ್ರವಾಗಿ ಸಮೀಪಿಸಿ ಪರಿವಾರ ಸಹಿತನಾದ ಆ ರಾಕ್ಷಸಶ್ರೇಷ್ಠನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಥೈವಾಲಾಯುಧೋ ರಾಜನ್ ಶಿಲಾಧೌತೈರಜಿಹ್ಮಗೈಃ |
ಅಭ್ಯವರ್ಷತ ಕೌಂತೇಯಂ ಪುನಃ ಪುನರರಿಂದಮಃ ॥ 21 ॥
ಎಲೈ ರಾಜನೇ, ಅರಿಂದಮನಾದ ಅಲಾಯುಧನೂ ಸಹ ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ನೇರವಾದ ಬಾಣಗಳಿಂದ ಭೀಮಸೇನನ ಮೇಲೆ ಪುನಃ ಪುನಃ ಬಾಣಗಳ ಮಳೆಯನ್ನು ಸುರಿಸಿದನು.
ತಥಾ ತೇ ರಾಕ್ಷಸಾಃ ಸರ್ವೇ ಭೀಮಸೇನಮುಪಾದ್ರವನ್ |
ನಾನಾಪ್ರಹರಣಾ ಭೀಮಾಸ್ತ್ವತ್ಸುತಾನಾಂ ಜಯೈಷಿಣಃ ॥ 22 ॥
ಹಾಗೆಯೇ ನಾನಾ ಶಸ್ತ್ರವನ್ನು ಹಿಡಿದ ಭಯಂಕರರಾದ ಆ ಎಲ್ಲ ರಾಕ್ಷಸರೂ ಸಹ ನಿನ್ನ ಪುತ್ರನ ಜಯವನ್ನು ಬಯಸಿ ಭೀಮಸೇನನ ಮೇಲೆಯೇ ಧಾವಿಸಿದರು.
ಸ ತಾಡ್ಯಮಾನೋ ಬಲಿಭಿರ್ಭೀಮಸೇನೋ ಮಹಾಬಲಃ |
ಪಂಚಭಿಃ ಪಂಚಭಿಃ ಸರ್ವಾಂಸ್ತಾನವಿದ್ಧ್ಯಚ್ಛಿತೈಃ ಶರೈಃ ॥ 23 ॥
ಬಲಿಷ್ಠರಾದ ಅವರಿಂದ ಹೊಡೆಯಲ್ಪಟ್ಟ ಮಹಾಬಲನಾದ ಭೀಮಸೇನನು ಅವರಲ್ಲಿ ಒಬ್ಬೊಬ್ಬರನ್ನೂ ತೀಕ್ಷ್ಣವಾದ ಐದೈದು ಬಾಣಗಳಿಂದ ಹೊಡೆದನು.
ತೇ ವಧ್ಯಮಾನಾ ಭೀಮೇನ ರಾಕ್ಷಸಾಃ ಖರಯೋನಯಃ |
ವಿನೇದುಸ್ತುಮುಲಾನ್ ನಾದಾನ್ ದುದ್ರುವುಶ್ಚ ದಿಶೋ ದಶ ॥ 24 ॥
ಭೀಮಸೇನನಿಂದ ಹೊಡೆಯಲ್ಪಡುತ್ತಿದ್ದ ಖರನ ಜಾತಿಯಲ್ಲಿ ಹುಟ್ಟಿದ ಆ ರಾಕ್ಷಸರು ತೀವ್ರವಾದ ನಾದಗಳನ್ನು ಮಾಡುತ್ತಾ ದಿಕ್ಕು-ದಿಕ್ಕುಗಳಿಗೆ ಓಡಿಹೋದರು.
ತಾಂಸ್ತಥಾತ್ರಸ್ಯಮಾನಾನ್ ಭೀಮೇನ ದೃಷ್ಟ್ವಾ ರಕ್ಷೋ ಮಹಾಬಲಮ್ |
ಅಭಿದುದ್ರಾವ ವೇಗೇನ ಶರೈಶ್ಚೈನಮವಾಕಿರತ್ ॥ 25 ॥
ಭೀಮಸೇನನಿಂದ ಹೆದರಿಸಲ್ಪಡುತ್ತಿದ್ದ ಅವರನ್ನು ನೋಡಿ ಮಹಾಬಲನಾದ ಅಲಾಯುಧ ರಾಕ್ಷಸನು ತನ್ನ ಬಾಣಗಳನ್ನು ಭೀಮಸೇನನ ಮೇಲೆ ಸುರಿಸುತ್ತಾ ವೇಗದಿಂದ ಅವನ ಕಡೆಗೆ ಓಡಿದನು.
ತಂ ಭೀಮಸೇನಃ ಸಮರೇ ತೀಕ್ಷ್ಣಾಗ್ರೈರಕ್ಷಿಣೋಚ್ಛರೈಃ |
ಅಲಾಯುಧಸ್ತು ತಾನಸ್ತಾನ್ ಭೀಮೇನ ವಿಶಿಖಾನ್ ರಣೇ |
ಚಿಚ್ಛೇದ ಕಾಂಶ್ಚಿತ್ ಸಮರೇ ತ್ವರಯಾ ಕಾಂಶ್ಚಿದಗ್ರಹೀತ್ ॥ 26 ॥
ಭೀಮಸೇನನು ರಣರಂಗದಲ್ಲಿ ತೀಕ್ಷ್ಣವಾದ ತುದಿಯನ್ನು ಹೊಂದಿದ್ದ ಬಾಣಗಳಿಂದ ಅವನನ್ನು ಪೀಡಿಸಿದನು. ಅಲಾಯುಧನಾದರೋ ಭೀಮಸೇನನು ಪ್ರಯೋಗಿಸಿದ ಆ ಬಾಣಗಳಲ್ಲಿ ಕೆಲವನ್ನು ರಣರಂಗದಲ್ಲಿ ಕತ್ತರಿಸಿದನು, ಇನ್ನು ಕೆಲವನ್ನು ಶೀಘ್ರವಾಗಿ ಕೈಯಲ್ಲಿ ಹಿಡಿದನು.
ಸ ತಂ ದೃಷ್ಟ್ವಾ ರಾಕ್ಷಸೇಂದ್ರಂ ಭೀಮೋ ಭೀಮಪರಾಕ್ರಮಃ |
ಗದಾಂ ಚಿಕ್ಷೇಪ ವೇಗೇನ ವಜ್ರಪಾತೋಪಮಾಂ ತದಾ ॥ 27 ॥
ಭಯಂಕರ ಪರಾಕ್ರಮವುಳ್ಳ ಭೀಮಸೇನನು ಆ ರಾಕ್ಷಸಶ್ರೇಷ್ಠನನ್ನು ನೋಡಿ ವಜ್ರಪಾತದ ವೇಗಕ್ಕೆ ಸಮವಾದ ಗದೆಯನ್ನು ಅವನ ಮೇಲೆ ಎಸೆದನು.
ತಾಮಾಪತಂತೀಂ ವೇಗೇನ ಗದಾಂ ಜ್ವಾಲಾಕುಲಾಂ ತತಃ |
ಗದಯಾ ತಾಡಯಾಮಾಸ ಸಾ ಗದಾ ಭೀಮಮಾವ್ರಜತ್ ॥ 28 ॥
ಜ್ವಾಲೆಗಳಿಂದ ಕೂಡಿ ತನ್ನ ಕಡೆಗೆ ವೇಗದಿಂದ ಬರುತ್ತಿದ್ದ ಆ ಗದೆಯನ್ನು ರಾಕ್ಷಸನು ತನ್ನ ಗದೆಯಿಂದ ಹೊಡೆದನು. ಭೀಮನ ಗದೆಯು

ಹಿಂದಿರುಗಿ ಭೀಮನ ಬಳಿಗೇ ಬಂದಿತು.
ಸ ರಾಕ್ಷಸೇಂದ್ರಂ ಕೌಂತೇಯಃ ಶರವರ್ಷೈರವಾಕಿರತ್ |
ತಾನಪ್ಯಸ್ಯಾಕರೋನ್ಮೋಘಾನ್ ರಾಕ್ಷಸೋ ನಿಶಿತೈಃ ಶರೈಃ ॥ 29 ॥
ಕುಂತೀಪುತ್ರನಾದ ಭೀಮಸೇನನು ರಾಕ್ಷಸೇಂದ್ರನಾದ ಅಲಾಯುಧನ ಮೇಲೆ ಬಾಣಗಳ ಮಳೆಯನ್ನು ಕರೆದನು. ರಾಕ್ಷಸನು ತೀಕ್ಷ್ಣವಾದ ಬಾಣಗಳಿಂದ ಆ ಬಾಣಗಳನ್ನೂ ವ್ಯರ್ಥಗೊಳಿಸಿದನು.
ತೇ ಚಾಪಿ ರಾಕ್ಷಸಾಃ ಸರ್ವೇ ಸೈನಿಕಾ ಭೀಮರೂಪಿಣಃ |
ಶಾಸನಾದ್ ರಾಕ್ಷಸೇಂದ್ರಸ್ಯ ನಿಜಘ್ನೂ ರಥಕುಂಜರಾನ್ ॥ 30 ॥
ಭಯಂಕರವಾದ ಆಕಾರವುಳ್ಳ ಸೈನಿಕರಾದ ಆ ಎಲ್ಲ ರಾಕ್ಷಸರೂ ಸಹ ರಾಕ್ಷಸೇಂದ್ರನಾದ ಅಲಾಯುಧನ ಶಾಸನದಂತೆ ರಥಗಳನ್ನೂ, ಗಜಗಳನ್ನೂ ಹೊಡೆದರು.
ಪಾಂಚಾಲಾಃ ಸೃಂಜಯಾಶ್ಚೈವ ವಾಜಿನಃ ಪರಮದ್ವಿಪಾಃ |
ನ ಶಾಂತಿಂ ಲೇಭಿರೇ ತತ್ರ ರಾಕ್ಷಸೈರ್ಭೃಶಪೀಡಿತಾಃ ॥ 31 ॥
ರಾಕ್ಷಸರಿಂದ ತೀವ್ರವಾಗಿ ಹೊಡೆಯಲ್ಪಟ್ಟ ಪಾಂಚಾಲರು, ಸೃಂಜಯರು, ಅಶ್ವಗಳು ಮತ್ತು ಶ್ರೇಷ್ಠ ಗಜಗಳು ಅಲ್ಲಿ ಶಾಂತಿಯನ್ನು ಹೊಂದಲಿಲ್ಲ.
ತಂ ತು ದೃಷ್ಟ್ವಾ ಮಹಾಘೋರಂ ವರ್ತಮಾನಂ ಮಹಾಹವೇ |
ಅಬ್ರವೀತ್ ಪುರುಷಶ್ರೇಷ್ಠೋ ಧನಂಜಯಮಿದಂ ವಚಃ ॥ 32 ॥
ದೊಡ್ಡ ರಣರಂಗದಲ್ಲಿ ಮಹಾಘೋರವಾದ ಕಾರ್ಯವು ಜರುಗುತ್ತಿರುವುದನ್ನು ನೋಡಿದ ಪುರುಷೋತ್ತಮನಾದ ಕೃಷ್ಣನು ಅರ್ಜುನನನ್ನು ಕುರಿತು ಈ ಮಾತನ್ನು ಆಡಿದನು.
ಪಶ್ಯ ಭೀಮಂ ಮಹಾಬಾಹೋ ರಾಕ್ಷಸೇಂದ್ರವಶಂ ಗತಮ್ |
ಪದವೀಮಸ್ಯ ಗಚ್ಛ ತ್ವಂ ಮಾ ವಿಚಾರಯ ಪಾಂಡವ ॥ 33 ॥
ಎಲೈ ಮಹಾಬಾಹುವೇ, ಭೀಮನು ರಾಕ್ಷಸೇಂದ್ರನ ವಶವಾಗಿರುವುದನ್ನು ನೋಡು. ಪಾಂಡವನೇ, ನೀನು ಅವನ ಮಾರ್ಗದಲ್ಲಿ ಹೋಗು. ಏನೂ ವಿಚಾರ ಮಾಡಬೇಡ.
ಧೃಷ್ಟದ್ಯುಮ್ನಃ ಶಿಖಂಡೀ ಚ ಯುಧಾಮನ್ಯೂತ್ತಮೌಜಸೌ |
ಸಹಿತಾ ದ್ರೌಪದೇಯಾಶ್ಚ ಕರ್ಣಂ ಯಾಂತು ಮಹಾರಥಾಃ ॥ 34 ॥
ಮಹಾರಥರಾದ ಧೃಷ್ಟದ್ಯುಮ್ನ, ಶಿಖಂಡಿ, ಯುಧಾಮನ್ಯು, ಉತ್ತಮೌಜ ಮತ್ತು ದ್ರೌಪದಿಯ ಮಕ್ಕಳು ಒಟ್ಟಾಗಿ ಕರ್ಣನ ಮೇಲೆ ಹೋಗಲಿ.
ನಕುಲಃ ಸಹದೇವಶ್ಚ ಯುಯುಧಾನಶ್ಚ ವೀರ್ಯವಾನ್ |
ಇತರಾನ್ ರಾಕ್ಷಸಾನ್ ಘ್ನಂತು ಶಾಸನಾತ್ತವ ಪಾಂಡವ ॥ 35 ॥
ನಕುಲ-ಸಹದೇವರು ಮತ್ತು ಪರಾಕ್ರಮಿಯಾದ ಸಾತ್ಯಕಿ, ಎಲೈ ಪಾಂಡವನೇ, ನಿನ್ನ ಶಾಸನದಂತೆ ರಾಕ್ಷಸನನ್ನು ಸಂಹಾರ ಮಾಡಲಿ.
ತ್ವಮಪೀಮಾಂ ಮಹಾಬಾಹೋ ಚಮೂಂ ದ್ರೋಣಪುರಸ್ಕೃತಾಮ್ |
ವಾರಯಸ್ವ ನರವ್ಯಾಘ್ರ ಮಹದ್ಧಿ ಭಯಮಾಗತಮ್ ॥ 36 ॥
ಎಲೈ ಮಹಾಬಾಹುವೇ, ನೀನೂ ಸಹ ದ್ರೋಣರ ಮುಂಭಾಗದಲ್ಲಿರುವ ಈ ಸೈನ್ಯವನ್ನು ತಡೆ. ಎಲೈ ನರವ್ಯಾಘ್ರನೇ, ದೊಡ್ಡ ಭಯವು ಪ್ರಾಪ್ತವಾಗಿದೆ (ಎಂದು ಹೇಳಿದನು).
ಏವಮುಕ್ತೇ ತು ಕೃಷ್ಣೇನ ಯಥೋದ್ದಿಷ್ಟಾ ಮಹಾರಥಾಃ |
ಜಗ್ಮುರ್ವೈಕರ್ತನಂ ಕರ್ಣಂ ರಾಕ್ಷಸಾಂಶ್ಚೇತರಾನ್ ರಣೇ ॥ 37 ॥
ಕೃಷ್ಣನು ಹೀಗೆ ಹೇಳುತ್ತಿರಲು ಅವನ ಅಭಿಪ್ರಾಯದಂತೆ ಮಹಾರಥರು ವೈಕರ್ತನನಾದ ಕರ್ಣನ ಮೇಲೆಯೂ ಮತ್ತು ಇತರ ರಾಕ್ಷಸರ ಮೇಲೆಯೂ ಎರಗಿದರು.
ಅಥ ಪೂರ್ಣಾಯತೋತ್ಸೃಷ್ಟೈಃ ಶರೈರಾಶೀವಿಷೋಪಮೈಃ |
ಧನುಶ್ಚಿಚ್ಛೇದ ಭೀಮಸ್ಯ ರಾಕ್ಷಸೇಂದ್ರಃ ಪ್ರತಾಪವಾನ್ ॥ 38 ॥
ಆಗ ಪ್ರತಾಪಶಾಲಿಯಾದ ರಾಕ್ಷಸೇಂದ್ರನಾದ ಅಲಾಯುಧನು ಪೂರ್ಣವಾಗಿ ಎಳೆದು ಪ್ರಯೋಗಿಸಿದ ಸರ್ಪದಂತಿದ್ದ ಬಾಣಗಳಿಂದ ಭೀಮಸೇನನ ಧನುಸ್ಸನ್ನು ಕತ್ತರಿಸಿದನು.
ಹಯಾಂಶ್ಚಾಸ್ಯ ಶಿತೈರ್ಬಾಣೈಃ ಸಾರಥಿಂ ಚ ಮಹಾಬಲಃ |
ಜಘಾನ ಮಿಷತಃ ಸಂಖ್ಯೇ ಭೀಮಸೇನಸ್ಯ ಭಾರತ ॥ 39 ॥
ಎಲೈ ಭಾರತನೇ, ಮಹಾಬಲನಾದ ಅವನು ರಣರಂಗದಲ್ಲಿ ಭೀಮಸೇನನು ನೋಡುತ್ತಿರುವಂತೆಯೇ ತನ್ನ ಬಾಣಗಳಿಂದ ಅವನ ಸಾರಥಿಯನ್ನೂ ಮತ್ತು ಅಶ್ವಗಳನ್ನೂ ಕೊಂದನು.
ಸೋಽವತೀರ್ಯ ರಥೋಪಸ್ಥಾದ್ಧತಾಶ್ವೋ ಹತಸಾರಥಿಃ |
ತಸ್ಮೈ ಗುರ್ವೀಂ ಗದಾಂ ಘೋರಾಂ ಸ ವಿನದ್ಯೋತ್ಸಸರ್ಜ ಹ ॥ 40 ॥
ಸಾರಥಿಯನ್ನು ಮತ್ತು ಅಶ್ವಗಳನ್ನು ಕಳೆದುಕೊಂಡ ಭೀಮನು ರಥಪೀಠದಿಂದ ಕೆಳಗೆ ಇಳಿದು ಸಿಂಹನಾದವನ್ನು ಮಾಡಿ ಅಲಾಯುಧನ ಮೇಲೆ ಘೋರವಾದ ಒಂದು ಭಾರವಾದ ಗದೆಯನ್ನು ಎಸೆದನು.
ತತಸ್ತಾಂ ಭೀಮನಿರ್ಘೋಷಾಮಾಪತಂತೀಂ ಮಹಾಗದಾಮ್ |
ಗದಯಾ ರಾಕ್ಷಸೋ ಘೋರೋ ನಿಜಘಾನ ನನಾದ ಚ ॥ 41 ॥

ಆಗ ಭಯಂಕರವಾದ ಘೋಷದೊಡನೆ ತನ್ನೆಡೆಗೆ ಬರುತ್ತಿದ್ದ ಆ ಮಹಾಗದೆಯನ್ನು ಘೋರನಾದ ರಾಕ್ಷಸನು ತನ್ನ ಗದೆಯಿಂದ ಹೊಡೆದು ಗರ್ಜಿಸಿದನು.
ತದ್ ದೃಷ್ಟ್ವಾ ರಾಕ್ಷಸೇಂದ್ರಸ್ಯ ಘೋರಂ ಕರ್ಮ ಭಯಾವಹಮ್ |
ಭೀಮಸೇನಃ ಪ್ರಹೃಷ್ಟಾತ್ಮಾ ಗದಾಮಾಶು ಪರಾಮೃಶತ್ ॥ 42 ॥
ರಾಕ್ಷಸೇಂದ್ರನ ಘೋರವೂ, ಭಯಂಕರವೂ ಆದ ಆ ಕರ್ಮವನ್ನು ನೋಡಿದ ಭೀಮಸೇನನು ಸಂತೋಷಗೊಂಡು ಕೈಯಲ್ಲಿ ಶೀಘ್ರವಾಗಿ ಗದೆಯನ್ನು ಹಿಡಿದನು.
ತಯೋಃ ಸಮಭವದ್ ಯುದ್ಧಂ ತುಮುಲಂ ನರರಕ್ಷಸೋಃ |
ಗದಾನಿಪಾತಸಂಹ್ರಾದೈರ್ಭುವಂ ಕಂಪಯತೋರ್ಭೃಶಮ್ ॥ 43 ॥
ಗದೆಗಳ ಆಘಾತದ ಶಬ್ದದಿಂದ ಭೂಮಿಯನ್ನು ತೀವ್ರವಾಗಿ ನಡುಗಿಸುವ ನರ-ರಾಕ್ಷಸರಾದ ಅವರಿಬ್ಬರಿಗೆ ತೀವ್ರವಾದ ಗದಾಯುದ್ಧವು ಉಂಟಾಯಿತು.
ಗದಾವಿಮುಕ್ತೌ ತೌ ಭೂಯಃ ಸಮಾಸಾದ್ಯೇತರೇತರಮ್ |
ಮುಷ್ಟಿಭಿರ್ವಜ್ರಸಂಹ್ರಾದೈರನ್ಯೋನ್ಯಮಭಿಜಘ್ನತುಃ ॥ 44 ॥
ಅವರು ಪುನಃ ಗದೆಗಳನ್ನು ಬಿಟ್ಟು ಒಬ್ಬರ ಜೊತೆಯಲ್ಲಿ ಒಬ್ಬರು ಸಂಸಕ್ತರಾಗಿ ವಜ್ರಘೋಷವನ್ನು ಮಾಡುತ್ತಿದ್ದ ಮುಷ್ಟಿಗಳಿಂದ ಪರಸ್ಪರವಾಗಿ ಹೊಡೆದಾಡಿದರು.
ರಥಚಕ್ರೈರ್ಯುಗೈರಕ್ಷೈರಧಿಷ್ಠಾನೈರುಪಸ್ಕರೈಃ |
ಯಥಾಸನ್ನಮುಪಾದಾಯ ನಿಜಘ್ನತುರಮರ್ಷಣೌ ॥ 45 ॥
ರೋಷಶೀಲರಾದ ಅವರು ರಥಚಕ್ರಗಳಿಂದಲೂ, ನೊಗಗಳಿಂದಲೂ, ರಥದ ತೂಬುಗಳಿಂದಲೂ, ರಥದ ಉಪಕರಣಗಳಿಂದಲೂ ಮತ್ತು ಕೈಗೆ ಸಿಕ್ಕಿದ ಎಲ್ಲ ಪದಾರ್ಥಗಳಿಂದಲೂ ಪರಸ್ಪರವಾಗಿ ಹೊಡೆದಾಡಿದರು.
ತೌ ವಿಕ್ಷರಂತೌ ರುಧಿರಂ ಸಮಾಸಾದ್ಯೇತರೇತರಮ್ |
ಮತ್ತಾವಿವ ಮಹಾನಾಗಾವಕೃಷ್ಯೇತಾಂ ಪುನಃ ಪುನಃ ॥ 46 ॥
ಅವರು ಪರಸ್ಪರವಾಗಿ ಸಂಧಿಸಿ ದೇಹದಿಂದ ರಕ್ತವನ್ನು ಸುರಿಸುತ್ತಾ ಎರಡು ಮತ್ತವಾದ ಮಹಾಗಜಗಳಂತೆ ಪುನಃ ಪುನಃ ಪರಸ್ಪರವಾಗಿ ಎಳೆದಾಡಿದರು.
ತಮಪಶ್ಯದ್ ಹೃಷೀಕೇಶಃ ಪಾಂಡವಾನಾಂ ಹಿತೇ ರತಃ |
ಸ ಭೀಮಸೇನರಕ್ಷಾರ್ಥಂ ಹೈಡಿಂಬಂ ಪ್ರತ್ಯಚೋದಯತ್ ॥ 47 ॥
ಪಾಂಡವರ ಹಿತದಲ್ಲಿ ಆಸಕ್ತನಾದ ಹೃಷೀಕೇಶನು ಅದನ್ನು ನೋಡಿದನು. ಅವನು ಭೀಮಸೇನನನ್ನು ರಕ್ಷಿಸುವ ಉದ್ದೇಶದಿಂದ ಘಟೋತ್ಕಚನನ್ನು ಪ್ರಚೋದಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ತ್ರಿಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ನಾಲ್ಕನೆಯ ಅಧ್ಯಾಯ
ಘಟೋತ್ಕಚನನಿಂದ ಅಲಾಯುಧನ ವಧೆ.
ಸಂಜಯಃ
ಸಂಪ್ರೇಕ್ಷ್ಯ ಸಮರೇ ಭೀಮಂ ರಕ್ಷಸಾ ಗ್ರಸ್ತಮಂತಿಕಾತ್ |
ವಾಸುದೇವೋಽಬ್ರವೀದ್ ವಾಕ್ಯಂ ಘಟೋತ್ಕಚಮಿದಂ ತದಾ ॥ 1 ॥
ಪಶ್ಯ ಭೀಮಂ ಮಹಾಬಾಹೋ ರಕ್ಷಸಾ ಗ್ರಸ್ತಮಂತಿಕಾತ್ |
ಪಶ್ಯತಾಂ ಸರ್ವಸೈನ್ಯಾನಾಂ ತವ ಚೈವ ಮಹಾದ್ಯುತೇ ॥ 2 ॥
ಸ ಕರ್ಣಂ ತ್ವಂ ಸಮುತ್ಸೃಜ್ಯ ರಾಕ್ಷಸೇಂದ್ರಮಲಾಯುಧಮ್ |
ಜಹಿ ಕ್ಷಿಪ್ರಂ ಮಹಾಬಾಹೋ ಪಶ್ಚಾತ್ ಕರ್ಣಂ ವಧಿಷ್ಯಸಿ ॥ 3 ॥
ಸಂಜಯ ಹತ್ತಿರದಲ್ಲಿ ರಣರಂಗದಲ್ಲಿ ಭೀಮನು ಅಲಾಯುಧ ರಾಕ್ಷಸನ ಹಿಡಿತಕ್ಕೆ ಸಿಕ್ಕಿರುವುದನ್ನು ನೋಡಿ ಕೃಷ್ಣನು ಘಟೋತ್ಕಚನನ್ನು ಕುರಿತು- `ಎಲೈ ಮಹಾಬಾಹುವೇ, ಸಮೀಪದಲ್ಲಿಯೇ ಸರ್ವಸೈನ್ಯಗಳೂ ಮತ್ತು ನೀನು ನೋಡುತ್ತಿರುವಂತೆಯೇ ರಾಕ್ಷಸನಿಂದ ಹಿಡಿಯಲ್ಪಟ್ಟಿರುವ ಭೀಮಸೇನನನ್ನು ನೋಡು. ಎಲೈ ಮಹಾದ್ಯುತಿಯೇ, ನೀನು ಕರ್ಣನನ್ನು ಬಿಟ್ಟು ರಾಕ್ಷಸಶ್ರೇಷ್ಠನಾದ ಅಲಾಯುಧನನ್ನು ಶೀಘ್ರವಾಗಿ ಕೊಲ್ಲು. ಎಲೈ ಮಹಾಬಾಹುವೇ, ನೀನು ಕರ್ಣನನ್ನು ಅನಂತರ ಕೊಲ್ಲುವಿ' ಎಂದು ಹೇಳಿದನು.
ಸ ವಾರ್ಷ್ಣೇಯವಚಃ ಶ್ರುತ್ವಾ ಕರ್ಣಮುತ್ಸೃಜ್ಯ ವೀರ್ಯವಾನ್ |
ಯುಯುಧೇ ರಾಕ್ಷಸೇಂದ್ರೇಣ ಬಕಭ್ರಾತ್ರಾ ಘಟೋತ್ಕಚಃ |
ತಯೋಃ ಸುತುಮುಲಂ ಯುದ್ಧಂ ಬಭೂವ ನಿಶಿ ರಕ್ಷಸೋಃ ॥ 4 ॥
ಪರಾಕ್ರಮಶಾಲಿಯಾದ ಆ ಘಟೋತ್ಕಚನು ಕೃಷ್ಣನ ಮಾತುಗಳನ್ನು ಕೇಳಿ ಕರ್ಣನನ್ನು ಬಿಟ್ಟು ಬಕನ ಸಹೋದರನೂ, ರಾಕ್ಷಸಶ್ರೇಷ್ಠನೂ ಆದ ಅಲಾಯುಧನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಆ ರಾತ್ರಿಯಲ್ಲಿ ಆ ಇಬ್ಬರು ರಾಕ್ಷಸರಿಗೆ ಘೋರವಾದ

ಯುದ್ಧವು ನಡೆಯಿತು.
ಅಲಾಯುಧಸ್ಯ ಯೋಧಾಂಸ್ತು ರಾಕ್ಷಸಾನ್ ಭೀಮದರ್ಶನಾನ್ |
ವೇಗೇನಾಪತತಃ ಶೂರಾನ್ ಪ್ರಗೃಹೀತಶರಾಸನಾನ್ ॥ 5 ॥
ಆತ್ತಾಯುಧಃ ಸುಸಂಕ್ರುದ್ಧೋ ಯುಯುಧಾನೋ ಮಹಾರಥಃ |
ನಕುಲಃ ಸಹದೇವಶ್ಚ ಚಿಚ್ಛಿದುರ್ನಿಶಿತೈಃ ಶರೈಃ ॥ 6 ॥
ಅಲಾಯುಧನ ಸೈನಿಕರಾದ, ಭಯಂಕರವಾಗಿ ಕಾಣುವ ಧನುಸ್ಸನ್ನು ಕೈಯಲ್ಲಿ ಹಿಡಿದು ವೇಗದಿಂದ ಮೇಲೆ ಬೀಳುವ, ರಾಕ್ಷಸರನ್ನು ಮಹಾರಥನೂ, ಕೋಪಗೊಂಡವನೂ, ಕೈಯಲ್ಲಿ ಆಯುಧವನ್ನು ಹಿಡಿದವನೂ ಆದ ಸಾತ್ಯಕಿಯೂ, ನಕುಲ-ಸಹದೇವರೂ ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿದನು.
ಸರ್ವಾಂಶ್ಚ ಸಮರೇ ರಾಜನ್ ಕಿರೀಟೀ ಕ್ಷತ್ರಿಯರ್ಷಭಾನ್ |
ಪರಿಚಿಕ್ಷೇಪ ಬೀಭತ್ಸುಃ ಸರ್ವತಃ ಪ್ರಕ್ಷಿಪನ್ ಶರಾನ್ ॥ 7 ॥
ಎಲೈ ರಾಜನ್ನೇ, ಅರ್ಜುನನು ರಣರಂಗದಲ್ಲಿ ಎಲ್ಲ ಕಡೆಗಳಲ್ಲಿಯೂ ಬಾಣಗಳನ್ನು ಪ್ರಯೋಗಿಸುತ್ತಾ ಎಲ್ಲ ಕ್ಷತ್ರಿಯಶ್ರೇಷ್ಠರನ್ನೂ ಎತ್ತಿ ಎಸೆದನು.
ಕರ್ಣಶ್ಚ ಸಮರೇ ರಾಜನ್ ವ್ಯದ್ರಾವಯತ ಪಾರ್ಥಿವಾನ್ |
ಧೃಷ್ಟದ್ಯುಮ್ನಶಿಖಂಡ್ಯಾದೀನ್ ಪಾಂಚಾಲಾನಾಂ ಮಹಾರಥಾನ್ ॥8॥
ಎಲೈ ರಾಜನೇ, ರಣರಂಗದಲ್ಲಿ ಕರ್ಣನು ರಾಜರನ್ನೂ, ಪಾಂಚಾಲರ ಮಹಾರಥರಾದ ಧೃಷ್ಟದ್ಯುಮ್ನ, ಶಿಖಂಡಿ ಮೊದಲಾದವರನ್ನೂ ಓಡಿಸಿದನು.
ತಾನ್ ವಧ್ಯಮಾನಾನ್ ದೃಷ್ಟ್ವಾ ತು ಭೀಮೋ ಭೀಮಪರಾಕ್ರಮಃ |
ಅಭ್ಯಯಾತ್ ತ್ವರಿತಃ ಕರ್ಣಂ ವಿಶಿಖಾನ್ ವಿಕಿರನ್ ರಣೇ ॥ 9 ॥
ಭಯಂಕರ ಪರಾಕ್ರಮವುಳ್ಳ ಭೀಮಸೇನನು ಕರ್ಣನಿಂದ ಹೊಡೆಯಲ್ಪಡುತ್ತಿದ್ದ ಅವರನ್ನು ನೋಡಿ ರಣರಂಗದಲ್ಲಿ ಬಾಣಗಳನ್ನು ಪ್ರಯೋಗಿಸುತ್ತಾ ಶೀಘ್ರವಾಗಿ ಕರ್ಣನ ಕಡೆಗೆ ಸಾಗಿದನು.
ತತಸ್ತೇಽಪ್ಯಾಯಯುರ್ಹತ್ವಾ ರಾಕ್ಷಸಾನ್ ಯತ್ರ ಸೂತಜಃ |
ನಕುಲಃ ಸಹದೇವಶ್ಚ ಸಾತ್ಯಕಿಶ್ಚ ಮಹಾರಥಃ |
ತೇ ಕರ್ಣಂ ಯೋಧಯಾಮಾಸುಃ ಪಾಂಚಾಲಾ ದ್ರೋಣಮೇವ ಚ ॥
ಅನಂತರ ನಕುಲ-ಸಹದೇವರೂ, ಮಹಾರಥನಾದ ಸಾತ್ಯಕಿಯೂ ರಾಕ್ಷಸರನ್ನು ಕೊಂದು ಕಣರ್ನಿದ್ದಲ್ಲಿಗೆ ಬಂದರು. ಅವರು ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಪಾಂಚಾಲರು ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಅಲಾಯುಧಸ್ತು ಸಂಕ್ರುದ್ಧೋ ಘಟೋತ್ಕಚಮರಿಂದಮಮ್ |
ಪರಿಘೇಣಾತಿವೇಗೇನ ತಾಡಯಾಮಾಸ ಮೂರ್ಧನಿ ॥ 11 ॥
ಕೋಪಗೊಂಡ ಅಲಾಯುಧನಾದರೋ ಅತಿವೇಗವುಳ್ಳ ಪರಿಘದಿಂದ ಅರಿಂದಮನಾದ ಘಟೋತ್ಕಚನನ್ನು ಅವನ ತಲೆಯಲ್ಲಿ ಹೊಡೆದನು.
ಸ ತು ತೇನ ಪ್ರಹಾರೇಣ ಭೈಮಸೇನಿರ್ಮಹಾಬಲಃ |
ಈಷನ್ಮೂರ್ಛಾನ್ವಿತೋಽತ್ಮಾನಂ ಸಂಸ್ತಂಭಯತ ವೀರ್ಯವಾನ್ ॥ 12 ॥
ಮಹಾಬಲನಾದ, ಭೀಮಸೇನಪುತ್ರನಾದ ಘಟೋತ್ಕಚನು ಆ ಪ್ರಹಾರದಿಂದ ಸ್ವಲ್ಪ ಮೂರ್ಛೆಯನ್ನು ಹೊಂದಿದರೂ ಪರಾಕ್ರಮಶಾಲಿಯಾದ ಅವನು ತನ್ನನ್ನೇ ಸುಧಾರಿಸಿಕೊಂಡನು.
ತತೋ ದೀಪ್ತಾಗ್ನಿಸಂಕಾಶಾಂ ಶತಘಂಟಾಮಲಂಕೃತಾಮ್ |
ಚಿಕ್ಷೇಪ ಸಮರೇ ತಸ್ಮೈ ಗದಾಂ ಕಾಂಚನಭೂಷಣಾಮ್ ॥ 13 ॥
ಅನಂತರ ನೂರು ಘಂಟೆಗಳಿಂದ ಅಲಂಕೃತವಾದ, ಜ್ವಲಿಸುವ ಅಗ್ನಿಯಂತಿದ್ದ, ಸುವರ್ಣಭೂಷಿತವಾದ ಗದೆಯನ್ನು ರಣರಂಗದಲ್ಲಿ ಅಲಾಯುಧನ ಮೇಲೆ ಎಸೆದನು.
ಸಾ ಹಯಾನ್ ಸಾರಥಿಂ ಚೈವ ರಥಂ ಚಾಸ್ಯ ಮಹಾಸ್ವನಾ |
ಚೂರ್ಣಯಾಮಾಸ ವೇಗೇನ ವಿಸೃಷ್ಟಾ ಭೀಮಕರ್ಮಣಾ ॥ 14 ॥
ಭಯಂಕರ ಕರ್ಮವನ್ನು ಮಾಡುವ ಘಟೋತ್ಕಚನಿಂದ ಪ್ರಯೋಗಿಸಲ್ಪಟ್ಟ ಆ ಗದೆಯು ಮಹಾನಾದವನ್ನು ಮಾಡುತ್ತಾ ವೇಗದಿಂದ ಸಾಗಿ ಅಲಾಯುಧನ ಅಶ್ವಗಳನ್ನೂ, ಸಾರಥಿಯನ್ನೂ ಮತ್ತು ರಥವನ್ನೂ ಪುಡಿಮಾಡಿತು.
ಸ ಭಗ್ನಹಯಚಕ್ರಾಕ್ಷೋ ವಿಶೀರ್ಣಧ್ವಜಕೂಬರಃ |
ಉತ್ಪಪಾತ ರಥಾತ್ ತೂರ್ಣಂ ಮಾಯಾಮಾಸ್ಥಾಯ ರಾಕ್ಷಸೀಮ್ ॥
ತನ್ನ ರಥದ ಅಶ್ವ-ಚಕ್ರ ಮತ್ತು ಅಕ್ಷಗಳು, ಧ್ವಜ-ಕೂಬರಗಳು ಭಗ್ನವಾಗುತ್ತಿರಲು ಅಲಾಯುಧನು ರಾಕ್ಷಸ ಮಾಯೆಯನ್ನು ಆಶ್ರಯಿಸಿ ಶೀಘ್ರವಾಗಿ ರಥದಿಂದ ಮೇಲೆ ಹಾರಿದನು.
ಸ ಸಮಾಸ್ಥಾಯ ಮಾಯಾಂ ತು ವವರ್ಷ ರುಧಿರಂ ಬಹು |
ವಿದ್ಯುದ್ವಿಭ್ರಾಜಿತಂ ಚಾಸೀತ್ ತುಮುಲಾಭ್ರಾಕುಲಂ ನಭಃ ॥ 16 ॥
ಅವನು ಮಾಯೆಯನ್ನು ಆಶ್ರಯಿಸಿ ರಕ್ತದ ಮಳೆಯನ್ನು ಸುರಿಸಿದನು. ಸಾಂದ್ರವಾದ ಮೋಡದಿಂದ ಕೂಡಿದ ಆಕಾಶವು ಮಿಂಚುಗಳಿಂದ ಪ್ರಕಾಶಮಾನವಾಗಿದ್ದಿತು.
ತತೋ ವಜ್ರನಿಪಾತಾಶ್ಚ ಸಾಶನಿಸ್ತನಯಿತ್ನವಃ |

ಮಹಾಂಶ್ಚಟಚಟಾಶಬ್ದಸ್ತತ್ರಾಸೀದ್ದಿ ಮಹಾಹವೇ ॥ 17 ॥
ಅನಂತರ ಆ ದೊಡ್ಡ ರಣರಂಗದಲ್ಲಿ ವಜ್ರಾಯುಧಗಳ ನಿಪಾತಗಳು, ಸಿಡಿಲು- ಗುಡುಗುಗಳು, ದೊಡ್ಡ ಚಟ-ಚಟ ಶಬ್ದವು ಉಂಟಾದವು.
ತಾಂ ಪ್ರೇಕ್ಷ್ಯ ವಿಹಿತಾಂ ಮಾಯಾಂ ರಾಕ್ಷಸೋ ರಾಕ್ಷಸೇನ ತು |
ಊರ್ಧ್ವಮುತ್ಪತ್ಯ ಹೈಡಿಂಬಸ್ತಾಂ ಮಾಯಾಂ ಮಾಯಯಾಽವಧೀತ್ ॥
ರಾಕ್ಷಸನು ಪ್ರಯೋಗಿಸಿದ ಆ ಮಾಯೆಯನ್ನು ನೋಡಿ ಹಿಡಿಂಬಾ ಪುತ್ರನಾದ ಘಟೋತ್ಕಚನು ತಾನೂ ಮೇಲೆ ಹಾರಿ ಅಲಾಯುಧನ ಮಾಯೆಯನ್ನು ತನ್ನ ಮಾಯೆಯಿಂದ ನಾಶಗೊಳಿಸಿದನು.
ಸೋಽಭಿವೀಕ್ಷ್ಯ ಹತಾಂ ಮಾಯಾಂ ಮಾಯಾವೀ ಮಾಯಯೈವ ಹಿ |
ಅಶ್ಮವರ್ಷಂ ಸುತುಮುಲಂ ವಿಸಸರ್ಜ ಘಟೋತ್ಕಚೇ ॥ 19 ॥
ತನ್ನ ಮಾಯೆಯು ಮಾಯೆಯಿಂದಲೇ ಹತವಾದುದನ್ನು ನೋಡಿ ಮಾಯಾವಿಯಾದ ಅಲಾಯುಧನು ಘಟೋತ್ಕಚನ ಮೇಲೆ ತೀವ್ರವಾದ ಕಲ್ಲಿನ ಮಳೆಯನ್ನು ಸುರಿಸಿದನು.
ಅಶ್ಮವರ್ಷಂ ಸ ತದ್ ಘೋರಂ ಶರವರ್ಷೇಣ ವೀರ್ಯವಾನ್ |
ದಿಶೋ ವಿಧ್ವಂಸಯಾಮಾಸ ತದದ್ಭುತಮಿವಾಭವತ್ ॥ 20 ॥
ಪರಾಕ್ರಮಶಾಲಿಯಾದ ಘಟೋತ್ಕಚನು ಆ ಕಲ್ಲಿನ ಮಳೆಯನ್ನು ದಿಕ್ಕು-ದಿಕ್ಕುಗಳಲ್ಲಿ ನಾಶಗೊಳಿಸಿದನು. ಆ ದೃಶ್ಯವು ಅದ್ಭುತವಾಗಿದ್ದಿತು.
ತತೋ ನಾನಾಪ್ರಹರಣೈರನ್ಯೋನ್ಯಮಭಿವರ್ಷತಾಮ್ |
ಆಯಸೈಃ ಪರಿಘೈಃ ಶೂಲೈರ್ಗದಾಮುಸಲಮುದ್ಗರೈಃ ॥ 21 ॥
ಪಿನಾಕೈಃ ಕರವಾಳೈಶ್ಚ ತೋಮರಪ್ರಾಸಕಂಪನೈಃ |
ನಾರಾಚೈರ್ನಿಶಿತೈರ್ಭಲ್ಲೈಃ ಶರೈಶ್ಚಕ್ರೈಃ ಪರಶ್ವಧೈಃ ॥ 22 ॥
ಅಯೋಗುಡೈರ್ಭಿಂಡಿಪಾಲೈರ್ಗೋಶೀರ್ಷೋಲೂಖಲೈರಪಿ |
ಉತ್ಪಾಟ್ಯ ಚ ಮಹಾಶಾಖೈರ್ವಿವಿಧೈರ್ಜಗತೀರುಹೈಃ ॥ 23 ॥
ಶಮೀಪೀಲುಕರೀರೈಶ್ಚ ಶಮ್ಯಾಕೈಶ್ಚೈವ ಭಾರತ |
ಇಂಗುದೈರ್ಬದರೀಭಿಶ್ಚ ಕೋವಿದಾರೈಶ್ಚ ಪುಷ್ಪಿತೈಃ ॥ 24 ॥
ಪಲಾಶೈರರಿಮೇಧೈಶ್ಚ ಪ್ಲಕ್ಷನ್ಯಗ್ರೋಧಪಿಪ್ಪಲೈಃ |
ಮಹದ್ಭಿಃ ಸಮರೇ ತಸ್ಮಿನ್ನನ್ಯೋನ್ಯಮಭಿಜಘ್ನತುಃ ॥ 25 ॥
ವಿವಿಧೈಃ ಪರ್ವತಾಗ್ರೈಶ್ಚ ನಾನಾಧಾತುಭಿರಾಚಿತೈಃ |
ತೇಷಾಂ ಶಬ್ದೋ ಮಹಾನಾಸೀದ್ವಜ್ರಾಣಾಂ ಭಿದ್ಯತಾಮಿವ ॥ 26 ॥
ಅನಂತರ ಆಯಸಗಳು, ಪರಿಘಗಳು, ಶೂಲಗಳು, ಗದಾ-ಮುಸಲ- ಮುದ್ಗರಗಳು, ಪಿನಾಕಗಳು, ಖಡ್ಗಗಳು, ತೋಮರ-ಪ್ರಾಸ-ಕಂಪನಗಳು, ನಾರಾಚಗಳು, ತೀಕ್ಷ್ಣವಾದ ಭಲ್ಲಗಳು, ಬಾಣಗಳು, ಚಕ್ರಗಳು, ಪರಶ್ವಧಗಳು, ಅಯೋಗುಡಗಳು, ಭಿಂಡಿಪಾಲಗಳು, ಗೋಶೀರ್ಷಗಳು, ಉಲೂಖಲಗಳು, ಬೇರು ಸಹಿತವಾಗಿ ಕಿತ್ತ ವಿವಿಧವಾದ ಮರಗಳ ದೊಡ್ಡ ಕೊಂಬೆಗಳು, ಶಮೀ-ಪೀಲು- ಕರೀರ-ಶಮ್ಯಾದಿ ವೃಕ್ಷಗಳು, ಇಂಗುದ-ಬದರೀ ವೃಕ್ಷಗಳು, ಪುಷ್ಪಿತವಾದ ಕೋವಿದಾರ ವೃಕ್ಷಗಳು, ಪಲಾಶ-ಅರಿಮೇಧ ವೃಕ್ಷಗಳು, ಪ್ಲಕ್ಷ-ನ್ಯಗ್ರೋಧ-ಪಿಪ್ಪಲ ವೃಕ್ಷಗಳು, ನಾನಾ ಧಾತುಗಳಿಂದ ಕೂಡಿದ ಪರ್ವತದ ಕೋಡುಗಳು ಮತ್ತು ಇನ್ನೂ ಅನೇಕ ವಿಧವಾದ ಆಯುಧಗಳು - ಇವುಗಳಿಂದ ಅವರು ಪರಸ್ಪರವಾಗಿ ಹೊಡೆದಾಡಿದರು. ಆ ಆಯುಧಗಳ ಶಬ್ದವು ಬಿರಿಯುವ ವಜ್ರಗಳ ಶಬ್ದದಂತೆ ದೊಡ್ಡದಾಗಿದ್ದಿತು.
ಯುದ್ಧಂ ತದಭವದ್ ಘೋರಂ ಭೈಮ್ಯಲಾಯುಧಯೋರ್ನೃಪ |
ಹರೀಂದ್ರಯೋರ್ಯಥಾ ರಾಜನ್ ವಾಲಿಸುಗ್ರೀವಯೋಃ ಪುರಾ ॥27॥
ಎಲೈ ರಾಜನೇ, ಭೀಮಪುತ್ರನಿಗೂ ಮತ್ತು ಅಲಾಯುಧನಿಗೂ ನಡೆದ ಯುದ್ಧವು ಹಿಂದೆ ಕಪಿಶ್ರೇಷ್ಠರಾದ ವಾಲಿ-ಸುಗ್ರೀವರಿಗೆ ನಡೆದ ಯುದ್ಧದಂತೆ ಘೋರವಾಗಿದ್ದಿತು.
ತೌ ಯುದ್ಧ್ವಾ ವಿವಿಧೈರ್ಘೋರೈರಾಯುಧೈರ್ವಿಶಿಖೈಸ್ತಥಾ |
ಪ್ರಗೃಹ್ಯ ನಿಶಿತೌ ಖಡ್ಗಾವನ್ಯೋನ್ಯಮಭಿಜಘ್ನತುಃ ॥ 28 ॥
ಅವರು ವಿವಿಧವಾದ, ಘೋರವಾದ ಆಯುಧಗಳಿಂದಲೂ, ಹಾಗೆಯೇ ಬಾಣಗಳಿಂದಲೂ ಯುದ್ಧವನ್ನು ಮಾಡಿ, ತೀಕ್ಷ್ಣವಾದ ಖಡ್ಗಗಳನ್ನು ಹಿಡಿದು ಪರಸ್ಪರವಾಗಿ ಯುದ್ಧವನ್ನು ಮಾಡಿದರು.
ತಾವನ್ಯೋನ್ಯಮಭಿದ್ರುತ್ಯ ಕೇಶೇಷು ಸುಮಹಾಬಲೌ |
ಭುಜಾಭ್ಯಾಂ ಪರ್ಯಗೃಹ್ಣೀತಾಂ ಮಹಾಕಾಯೌ ಮಹಾಬಲೌ ॥ 29 ॥
ಅತ್ಯಂತ ಶ್ರೇಷ್ಠವಾದ ಬಲವುಳ್ಳ, ಮಹಾಶರೀರವುಳ್ಳ ಅವರಿಬ್ಬರೂ ಓಡಿ ಪರಸ್ಪರವಾಗಿ ಕೇಶಗಳಲ್ಲಿ ಹಿಡಿದು, ಒಬ್ಬರನ್ನೊಬ್ಬರು ಭುಜಗಳಲ್ಲಿ ಹಿಡಿದರು.
ತೌ ಭಿನ್ನಗಾತ್ರೌ ಪ್ರಸ್ವೇದಂ ಸುಸ್ರುವಾತೇ ಜನಾಧಿಪ |
ರುಧಿರಂ ಚ ಮಹಾಕಾಯಾವಭಿವೃಷ್ಟಾವಿವಾಚಲೌ ॥ 30 ॥
ಎಲೈ ರಾಜನೇ, ಗಾಯಗೊಂಡ ಅವರಿಬ್ಬರೂ ದೇಹದಿಂದ ಬೆವರನ್ನು ಸುರಿಸಿದರು. ಮಹಾಕಾಯರಾದ ಅವರು ಪರ್ವತಗಳು ನೀರಿನ ಧಾರೆಯನ್ನು ಸುರಿಸಿದಂತೆ ರಕ್ತವನ್ನೂ ಸ್ರವಿಸಿದರು.

ಅಥಾಭಿಪತ್ಯ ವೇಗೇನ ಸಮುದ್ಭ್ರಾಮ್ಯ ಚ ರಾಕ್ಷಸಮ್ |
ಬಲೇನಾಕ್ಷಿಪ್ಯ ಹೈಡಿಂಬಶ್ಚಕರ್ತಾಸ್ಯ ಶಿರೋ ಮಹತ್ ॥ 31 ॥
ಅನಂತರ ವೇಗವಾಗಿ ಬಂದು ಅಲಾಯುಧನನ್ನು ಹಿಡಿದು, ಎತ್ತಿ ತಿರುಗಿಸಿ ಘಟೋತ್ಕಚನು ಅವನ ದೊಡ್ಡ ತಲೆಯನ್ನು ಕತ್ತರಿಸಿದನು.
ಸೋಽಪಹೃತ್ಯ ಶಿರಸ್ತಸ್ಯ ಕುಂಡಲಾಭ್ಯಾಂ ವಿಭೂಷಿತಮ್ |
ತದಾ ಸುತುಮುಲಂ ನಾದಂ ನನಾದ ಸುಮಹಾಬಲಃ ॥ 32 ॥
ಅತ್ಯಂತ ಶ್ರೇಷ್ಠ ಬಲವುಳ್ಳ ಘಟೋತ್ಕಚನು ಕುಂಡಲಗಳಿಂದ ಭೂಷಿತವಾದ ಅವನ ಶಿರಸ್ಸನ್ನು ಕತ್ತರಿಸಿ ಘೋರವಾದ ನಾದವನ್ನು ಮಾಡಿದನು.
ಹತಂ ದೃಷ್ಟ್ವಾ ಮಹಾಕಾಯಂ ಬಕಜ್ಞಾತಿಮರಿಂದಮಮ್ |
ಪಾಂಚಾಲಾಃ ಪಾಂಡವಾಶ್ಚೈವ ಸಿಂಹನಾದಾನ್ ವಿನೇದಿರೇ ॥ 33 ॥
ಬಕನ ಬಂಧುವೂ, ಅರಿಂದಮನೂ, ಮಹಾಕಾಯನೂ ಆದ ಅಲಾಯುಧನು ಹತನಾದುದನ್ನು ನೋಡಿ ಪಾಂಚಾಲರು ಮತ್ತು ಪಾಂಡವರು ಸಿಂಹನಾದಗಳನ್ನು ಮಾಡಿದರು.
ತತೋ ಭೇರೀಸಹಸ್ರಾಣಿ ಶಂಖಾನಾಮಯುತಾನಿ ಚ |
ಅವಾದಯನ್ ಪಾಂಡವೇಯಾಸ್ತಸ್ಮಿನ್ ರಕ್ಷಸಿ ಪಾತಿತೇ ॥ 34 ॥
ಆಗ ಆ ರಾಕ್ಷಸನು ಹತನಾಗುತ್ತಿರಲು ಪಾಂಡವ ಸೇನೆಯ ಯೋಧರು ಸಹಸ್ರ ಭೇರಿಗಳನ್ನು ಬಾರಿಸಿ, ಹತ್ತು ಸಹಸ್ರ ಶಂಖಗಳನ್ನು ಊದಿದರು.
ಅತೀವ ಸಾ ನಿಶಾ ತೇಷಾಂ ಬಭೂವ ವಿಜಯಾವಹಾ |
ವಿದ್ಯೋತಮಾನಾ ವಿಬಭೌ ಸಮಂತಾದ್ ದೀಪಮಾಲಿನೀ ॥ 35 ॥
ಎಲ್ಲ ಕಡೆಗಳಲ್ಲಿಯೂ ದೀಪದಿಂದ ಪ್ರಕಾಶಗೊಂಡ ಆ ರಾತ್ರಿಯು ಅವರಿಗೆ ವಿಜಯವನ್ನು ತಂದುಕೊಡುವುದಾಯಿತು.
ಅಲಾಯುಧಸ್ಯ ತು ಶಿರೋ ಭೈಮಸೇನಿರ್ಮಹಾಬಲಃ |
ದುರ್ಯೋಧನಸ್ಯ ಪ್ರಮುಖೇ ಚಿಕ್ಷೇಪ ಗತಚೇತನಮ್ ॥ 36 ॥
ಮಹಾಬಲನಾದ ಘಟೋತ್ಕಚನು ಮೃತನಾದ ಅಲಾಯುಧನ ಶಿರಸ್ಸನ್ನು ದುರ್ಯೋಧನನ ಎದುರಿಗೆ ಎಸೆದನು.
ಅಥ ದುರ್ಯೋಧನೋ ರಾಜಾ ದೃಷ್ಟ್ವಾ ಹತಮಲಾಯುಧಮ್ |
ಬಭೂವ ಪರಮೋದ್ವಿಗ್ನಃ ಸಹ ಸೈನ್ಯೇನ ಭಾರತ ॥ 37 ॥
ಎಲೈ ಭಾರತನೇ, ಅಲಾಯುಧನು ಹತನಾದುದನ್ನು ನೋಡಿ ರಾಜನಾದ ದುರ್ಯೋಧನನೂ ಮತ್ತು ಅವನ ಸೈನ್ಯವೂ ಬಹಳ ಉದ್ವೇಗವನ್ನು ಹೊಂದಿದರು.
ತೇನ ಹ್ಯಸ್ಯ ಪ್ರತಿಜ್ಞಾತಂ ಭೀಮಸೇನಮಹಂ ಯುಧಿ |
ಹಂತೇತಿ ಸ್ವಯಮಾಗಮ್ಯ ಸ್ಮರತಾ ವೈರಮುತ್ತಮಮ್ ॥ 38 ॥
ಅವನು ಹಿಂದಿನ ಪ್ರಬಲವಾದ ವೈರವನ್ನು ಸ್ಮರಿಸಿ ತಾನಾಗಿಯೇ ಬಂದು ಯುದ್ಧದಲ್ಲಿ ನಾನು ಭೀಮಸೇನನನ್ನು ಕೊಲ್ಲುವೆನು ಎಂದು ಪ್ರತಿಜ್ಞೆಯನ್ನು ಮಾಡಿದ್ದನಷ್ಟೆ?
ಧ್ರುವಂ ಸ ತೇನ ಹಂತವ್ಯ ಇತ್ಯಮನ್ಯತ ಪಾರ್ಥಿವಃ |
ಜೀವಿತಂ ಚಿರಕಾಲಾಯ ಭ್ರಾತೄಣಾಂ ಚಾಪ್ಯಮನ್ಯತ ॥ 39 ॥
ಖಂಡಿತವಾಗಿ ಭೀಮಸೇನನು ಅಲಾಯುಧನಿಂದ ಕೊಲ್ಲಲ್ಪಡಬೇಕು ಎಂದು ರಾಜನು ತಿಳಿದಿದ್ದನು ಮತ್ತು ಅದರಿಂದ ತನ್ನ ಸಹೋದರರು ಬಹುಕಾಲದವರೆಗೂ ಬದುಕುತ್ತಾರೆ ಎಂದೂ ತಿಳಿದಿದ್ದನು.
ಸ ತಂ ದೃಷ್ಟ್ವಾ ವಿನಿಹತಂ ಭೀಮಸೇನಾತ್ಮಜೇನ ವೈ |
ಪ್ರತಿಜ್ಞಾಂ ಭೀಮಸೇನಸ್ಯ ಪೂರ್ಣಾಮೇವಾಭ್ಯಮನ್ಯತ ॥ 40 ॥
ಅಂತಹ ಅಲಾಯುಧನು ಭೀಮಸೇನನ ಪುತ್ರನಾದ ಘಟೋತ್ಕಚನಿಂದ ಹತನಾದುದನ್ನು ನೋಡಿ ಭೀಮಸೇನನ ಪ್ರತಿಜ್ಞೆಯು ನೆರವೇರುವುದು ಎಂದೇ ತಿಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುಃಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೈದನೆಯ ಅಧ್ಯಾಯ
ಕರ್ಣನಿಂದ ಘಟೋತ್ಕಚನ ವಧೆ.
ಸಂಜಯಃ
ನಿಹತ್ಯಾಲಾಯುಧಂ ರಕ್ಷಃ ಪ್ರಹೃಷ್ಟಾತ್ಮಾ ಘಟೋತ್ಕಚಃ |
ನನಾದ ವಿವಿಧಾನ್ನಾದಾನ್ ವಾಹಿನ್ಯಾಃ ಪ್ರಮುಖೇ ಸ್ಥಿತಃ ॥ 1 ॥
ಸಂಜಯ ರಾಕ್ಷಸನಾದ ಘಟೋತ್ಕಚನು ಅಲಾಯುಧನನ್ನು ಕೊಂದು ಸಂತೋಷಗೊಂಡ ಮನಸ್ಸುಳ್ಳವನಾಗಿ ಸೈನ್ಯದ ಎದುರಿನಲ್ಲಿ ನಿಂತು ಅನೇಕ ನಾದಗಳನ್ನು ಮಾಡಿದನು.

ತಸ್ಯ ತಂ ತುಮುಲಂ ಶಬ್ದಂ ಶ್ರುತ್ವಾ ಕುಂಜರಕಂಪನಮ್ |
ತಾವಕಾನಾಂ ಮಹಾರಾಜ ಭಯಮಾಸೀತ್ ಸುದಾರುಣಮ್ ॥ 2 ॥
ಎಲೈ ಮಹಾರಾಜನೇ, ಆನೆಗಳನ್ನೂ ನಡುಗಿಸುವ ಅವನ ತೀವ್ರವಾದ ಶಬ್ದವನ್ನು ಕೇಳಿ ನಿನ್ನ ಯೋಧರಿಗೆ ಘೋರವಾದ ಭಯವುಂಟಾಯಿತು.
ಅಲಾಯುಧವಿಷಕ್ತಂ ತು ಭೈಮಸೇನಿಂ ಮಹಾಬಲಮ್ |
ದೃಷ್ಟ್ವಾ ಕರ್ಣೋ ಮಹಾಬಾಹುಃ ಪಾಂಚಾಲಾನ್ ಸಮುಪಾದ್ರವತ್ ॥
ಅಲಾಯುಧನ ಜೊತೆಯಲ್ಲಿ ಸಂಸಕ್ತನಾಗಿದ್ದ ಮಹಾಬಲನಾದ ಘಟೋತ್ಕಚನನ್ನು ನೋಡಿ ಮಹಾಬಾಹುವಾದ ಕರ್ಣನು ಪಾಂಚಾಲರ ಜೊತೆಯಲ್ಲಿ ಯುದ್ಧವನ್ನು ಮಾಡಲು ಹೊರಟನು.
ದಶಭಿರ್ದಶಭಿರ್ಬಾಣೈರ್ಧೃಷ್ಟದ್ಯುಮ್ನಶಿಖಂಡಿನೌ |
ದೃಢೈಃ ಪೂರ್ಣಾಯತೋತ್ಸೃಷ್ಟೈರ್ಬಿಭೇದ ನತಪರ್ವಭಿಃ ॥ 4 ॥
ಅವನು ಪೂರ್ಣವಾಗಿ ಎಳೆದು ಪ್ರಯೋಗಿಸಿದ ಬಾಗಿದ ತುದಿಯುಳ್ಳ ದೃಢವಾದ ಹತ್ತು- ಹತ್ತು ಬಾಣಗಳಿಂದ ಧೃಷ್ಟದ್ಯುಮ್ನನನ್ನೂ ಮತ್ತು ಶಿಖಂಡಿಯನ್ನೂ ಭೇದಿಸಿದನು.
ತತಃ ಪರಮನಾರಾಚೈರ್ಯುಧಾಮನ್ಯೂತ್ತಮೌಜಸೌ |
ಸಾತ್ಯಕಿಂ ಚ ರಥೋದಾರಂ ಕಂಪಯಾಮಾಸ ಮಾರ್ಗಣೈಃ ॥ 5 ॥
ಅನಂತರ ಶ್ರೇಷ್ಠವಾದ ನಾರಾಚಗಳಿಂದ ಯುಧಾಮನ್ಯು ಮತ್ತು ಉತ್ತಮೌಜರನ್ನು ಹೊಡೆದು ರಥಶ್ರೇಷ್ಠನಾದ ಸಾತ್ಯಕಿಯನ್ನು ಬಾಣಗಳಿಂದ ನಡುಗಿಸಿದನು.
ತೇಷಾಮಭ್ಯಸ್ಯತಾಂ ತತ್ರ ಸರ್ವೇಷಾಂ ಸವ್ಯದಕ್ಷಿಣಮ್ |
ಮಂಡಲಾನ್ಯೇವ ಚಾಪಾನಿ ವ್ಯದೃಶ್ಯಂತ ಜನಾಧಿಪ ॥ 6 ॥
ಎಲೈ ರಾಜನೇ, ಅವರು ಬಲಭಾಗದಲ್ಲಿಯೂ ಮತ್ತು ಎಡಭಾಗದಲ್ಲಿಯೂ ಬಾಣಗಳನ್ನು ಪ್ರಯೋಗಿಸುವಾಗ ಅವರೆಲ್ಲರ ಧನುಸ್ಸುಗಳೂ ಮಂಡಲಾಕಾರವಾಗಿಯೇ ಕಾಣುತ್ತಿದ್ದವು.
ತೇಷಾಂ ಜ್ಯಾತಳನಿರ್ಘೋಷೋ ರಥನೇಮಿಸ್ವನಶ್ಚ ಹ |
ಮೇಘಾನಾಮಿವ ಘರ್ಮಾಂತೇ ಬಭೂವ ತುಮುಲೋ ನಿಶಿ ॥ 7 ॥
ಅವರ ಜ್ಯಾತಳನಿರ್ಘೋಷಗಳು, ರಥಚಕ್ರನಾದಗಳು ರಾತ್ರಿಯ ಕಾಲದಲ್ಲಿ ಮಳೆಗಾಲದ ಮೋಡಗಳ ತೀವ್ರವಾದ ಶಬ್ದದಂತೆ ಇದ್ದವು.
ಜ್ಯಾನೇಮಿಘೋಷಸ್ತನಯಿತ್ನುಮಾನ್ ವೈ
ಧನುಸ್ತಡಿನ್ಮಂಡಲಕೇತುಶೃಂಗಃ |
ಶರೌಘವರ್ಷಾಕುಲವೃಷ್ಟಿಮಾಂಶ್ಚ
ಸಂಗ್ರಾಮಮೇಘಃ ಸ ಬಭೂವ ರಾಜನ್ ॥ 8 ॥
ಎಲೈ ರಾಜನೇ, ಆ ಸಂಗ್ರಾಮವೆಂಬ ಮೇಘವು ಹೆದೆಯ ಘೋಷ ಮತ್ತು ರಥದ ಘೋಷವೆಂಬ ಗುಡುಗುಗಳಿಂದಲೂ, ಧನುಸ್ಸುಗಳೆಂಬ ಮಿಂಚಿನ ಸಮೂಹದಿಂದಲೂ, ಧ್ವಜಗಳೆಂಬ ಶಿಖರಗಳಿಂದಲೂ, ಶರಸಮೂಹ ಪ್ರಯೋಗವೆಂಬ ಮಳೆಯಿಂದಲೂ ಕೂಡಿದ್ದಿತು.
ತದುದ್ಧತಂ ಶೈಲ ಇವಾಪ್ರಕಂಪ್ಯೋ
ವರ್ಷಂ ಮಹಚ್ಛೈಲಸಮಾನಸಾರಃ |
ವಿಧ್ವಂಸಯಾಮಾಸ ರಣೇ ನರೇಂದ್ರ
ವೈಕರ್ತನಃ ಶತ್ರುಗಣಾವಮರ್ದೀ ॥ 9 ॥
ಪರ್ವತದಂತೆ ಅಲುಗಾಡಿಸಲು ಸಾಧ್ಯವಿಲ್ಲದ, ದೊಡ್ಡ ಪರ್ವತದ ಬಲಕ್ಕೆ ಸಮಾನವಾದ ಬಲವುಳ್ಳ, ಶತ್ರುಗಣಗಳನ್ನು ನಾಶಪಡಿಸುವ ವೈಕರ್ತನನಾದ ಕರ್ಣನು ಎಲೈ ರಾಜೇಂದ್ರನೇ, ರಣರಂಗದಲ್ಲಿ ಉದ್ಧತವಾದ ಆ ಸಂಗ್ರಾಮ ಮೋಡವನ್ನು ನಾಶಗೊಳಿಸಿದನು.
ತತೋಽತುಲ್ಯೈರ್ವಜ್ರನಿಪಾತಕಲ್ಪೈಃ
ಶಿತೈಃ ಶರೈಃ ಕಾಂಚನಚಿತ್ರಪುಂಖೈಃ |
ಶತ್ರೂನ್ ವ್ಯಪೋಹತ್ ಸಮರೇ ಮಹಾತ್ಮಾ
ವೈಕರ್ತನಃ ಪುತ್ರಹಿತೇ ರತಸ್ತೇ ॥ 10 ॥
ಅನಂತರ ನಿನ್ನ ಪುತ್ರರ ಹಿತದಲ್ಲಿ ರತನಾದ ಮಹಾತ್ಮನಾದ ಕರ್ಣನು ವಜ್ರದ ನಿಪಾತದಂತಿದ್ದ, ಅಸದೃಶವಾದ, ಸುವರ್ಣಚಿತ್ರಿತವಾದ, ನಿಶಿತವಾದ ಬಾಣಗಳಿಂದ ರಣರಂಗದಲ್ಲಿ ಶತ್ರುಗಳನ್ನು ದೂರ ಸರಿಸಿದನು.
ಸಂಛಿನ್ನಭಿನ್ನಧ್ವಜಿನಶ್ಚ ಕೇಚಿತ್-
ಕೇಚಿಚ್ಛರೈರರ್ದಿತಭಿನ್ನದೇಹಾಃ |
ಕೇಚಿದ್ ವಿಸೂತಾ ವಿಹಯಾಶ್ಚ ಕೇಚಿದ್-
ವೈಕರ್ತನೇನಾಶು ಕೃತಾ ಬಭೂವುಃ ॥ 11 ॥
ಕೆಲವರ ರಥದ ಧ್ವಜಗಳು ಛಿನ್ನಭಿನ್ನವಾದವು. ಇನ್ನು ಕೆಲವರ ದೇಹಗಳು ಬಾಣಗಳಿಂದ ಪೀಡಿತವಾಗಿ ಕತ್ತರಿಸಲ್ಪಟ್ಟವು. ಇನ್ನು ಕೆಲವು ರಥರು ತಮ್ಮ ಸಾರಥಿಯನ್ನು, ಅಶ್ವಗಳನ್ನು ಕಳೆದುಕೊಂಡರು. ಹೀಗೆ ಕರ್ಣನು ಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸಿದನು.
ಅವಿಂದಮಾನಾಸ್ತ್ವಥ ಶರ್ಮ ಸಂಖೇ
ಯೌಧಿಷ್ಠಿರಂ ತೇ ಬಲಮನ್ವಪದ್ಯನ್ |
ತಾನ್ ಪ್ರೇಕ್ಷ್ಯ ಭಗ್ನಾನ್ ವಿಮುಖೀಕೃತಾಂಶ್ಚ

ಘಟೋತ್ಕಚೋ ರೋಷಮತೀವ ಚಕ್ರೇ ॥ 12 ॥
ಆ ಸೈನ್ಯವು ಯುದ್ಧದಲ್ಲಿ ಸುಖವನ್ನು ಹೊಂದದೆ, ಯುಧಿಷ್ಠಿರನ ಸೈನ್ಯವನ್ನು ಸೇರಿತು. ಪಾಂಡವಯೋಧರು ಭಗ್ನರಾಗಿ ಯುದ್ಧವಿಮುಖರಾದುದನ್ನು ನೋಡಿ ಘಟೋತ್ಕಚನು ಬಹಳ ರೋಷವನ್ನು ತಾಳಿದನು.
ಆಸ್ಥಾಯ ತಂ ಕಾಂಚನರತ್ನಚಿತ್ರಂ
ರಥೋತ್ತಮಂ ಸಿಂಹ ಇವೋನ್ನನಾದ |
ವೈಕರ್ತನಂ ಕರ್ಣಮುಪೇತ್ಯ ಚಾಪಿ
ವಿವ್ಯಾಧ ವಜ್ರಪ್ರತಿಮೈಃ ಪೃಷತ್ಕೈಃ ॥ 13 ॥
ಅವನು ಸುವರ್ಣರತ್ನಗಳಿಂದ ಚಿತ್ರಿತವಾಗಿದ್ದ ಶ್ರೇಷ್ಠವಾದ ರಥವನ್ನು ಏರಿ ಸಿಂಹದಂತೆ ಗರ್ಜಿಸಿದನು. ವೈಕರ್ತನನಾದ ಕರ್ಣನನ್ನು ಸಮೀಪಿಸಿ ವಜ್ರದಂತಹ ಬಾಣಗಳಿಂದ ಅವನನ್ನು ಹೊಡೆದನು.
ತೌ ಕರ್ಣಿನಾರಾಚಶಿಲೀಮುಖೈಶ್ಚ
ನಾಲೀಕದಂಡೈಶ್ಚ ಸವತ್ಸದಂತೈಃ |
ವರಾಹಕರ್ಣೈಃ ಸವಿಷಾಣಶೃಂಗೈಃ
ಕ್ಷುರಪ್ರವರ್ಷೈಶ್ಚ ವಿನೇದತುಃ ಖಮ್ ॥ 14 ॥
ಅವರು ಕರ್ಣಿ-ನಾರಾಚ-ಶಿಲಿಗಳಿಂದಲೂ, ನಾಲೀಕದಂಡಗಳಿಂದಲೂ, ವತ್ಸ ದಂತಗಳಿಂದಲೂ, ವರಾಹಕರ್ಣಗಳಿಂದಲೂ, ವಿಷಾಣಶೃಂಗಗಳಿಂದಲೂ, ಕ್ಷುರ ವೃಷ್ಟಿಗಳಿಂದಲೂ ಆಕಾಶವು ಪ್ರತಿಧ್ವನಿಸುವಂತೆ ಮಾಡಿದರು.
ತದ್ಬಾಣಧಾರಾವೃತಮಂತರಿಕ್ಷಂ
ತಿರ್ಯಗ್ಗತಾಭಿಃ ಸಮರೇ ರರಾಜ |
ಸುವರ್ಣಪುಂಖಜ್ವಲಿತಪ್ರಭಾಭಿಃ
ವಿಚಿತ್ರಪುಷ್ಪಾಭಿರಿವ ಸ್ರಜಾಭಿಃ ॥ 15 ॥
ರಣರಂಗದಲ್ಲಿ ಅಡ್ಡವಾಗಿ ಸಂಚರಿಸುವ ಬಾಣಧಾರೆಗಳಿಂದ ತುಂಬಿದ ಅಂತರಿಕ್ಷವು ಸುವರ್ಣಪುಂಖಗಳಿಂದ ಉಂಟಾದ ದೀಪ್ತವಾದ ಪ್ರಭೆಗಳಿಂದ ಕೂಡಿ ವಿಚಿತ್ರ ಪುಷ್ಪಮಾಲೆಗಳಿಂದ ಕೂಡಿದಂತೆ ಶೋಭಿಸಿತು.
ಸಮಂ ಹಿ ತಾವಪ್ರತಿಮಪ್ರಭಾವೌ
ಅನ್ಯೋನ್ಯಮಾಜಘ್ನತುರುತ್ತಮಾಸ್ತ್ರೈಃ |
ತಯೋರ್ಹಿ ವೀರೋತ್ತಮಯೋರ್ನ ಕಶ್ಚಿದ್
ದದರ್ಶ ತಸ್ಮಿನ್ ಸಮರೇ ವಿಶೇಷಮ್ ॥ 16 ॥
ಅಸದೃಶ ಸಾಮರ್ಥ್ಯವುಳ್ಳ ಅವರಿಬ್ಬರೂ ಉತ್ತಮಾಸ್ತ್ರಗಳಿಂದ ಪರಸ್ಪರವಾಗಿ ಸಮವಾಗಿ ಯುದ್ಧವನ್ನು ಮಾಡಿದರು. ಯುದ್ಧವನ್ನು ಮಾಡುವ ಆ ವೀರೋತ್ತಮರಲ್ಲಿ ಯಾವನಿಗೂ ಯಾವ ಆಧಿಕ್ಯವೂ ಕಾಣಲಿಲ್ಲ.
ಅತೀವ ತಚ್ಚಿತ್ರಮತುಲ್ಯರೂಪಂ
ಬಭೂವ ಯುದ್ಧಂ ರವಿಭೀಮಸೂನ್ವೋಃ |
ಸಮಾಕುಲಂ ಶಸ್ತ್ರನಿಪಾತಘೋರಂ
ದಿವೀವ ರಾಹ್ವಂಶುಮತೋಃ ಪ್ರತಪ್ತಮ್ ॥ 17 ॥
ರವಿಪುತ್ರನಿಗೂ ಮತ್ತು ಭೀಮಪುತ್ರನಿಗೂ ನಡೆದ ಶಸ್ತ್ರನಿಪಾತದಿಂದ ಘೋರವಾದ, ನಿಬಿಡವಾದ ಆ ಯುದ್ಧವು ಆಕಾಶದಲ್ಲಿ ರಾಹು ಮತ್ತು ಸೂರ್ಯರ ಪ್ರತಪ್ತವಾದ ಸಂಘರ್ಷದಂತೆ ಆಶ್ಚರ್ಯಕರವೂ ಮತ್ತು ಅಸದೃಶವೂ ಆಗಿದ್ದಿತು.
ಘಟೋತ್ಕಚೋ ಯದಾ ಕರ್ಣಂ ನ ವಿಶೇಷಯತೇ ನೃಪ |
ತದಾ ಪ್ರಾದುಶ್ಚಕಾರೋಗ್ರಮಸ್ತ್ರಮಸ್ತ್ರವಿದಾಂ ವರಃ ॥ 18 ॥
ಎಲೈ ರಾಜನೇ, ಘಟೋತ್ಕಚನು ಕರ್ಣನನ್ನು ಮೀರಿಸಲು ಸಾಧ್ಯವಿಲ್ಲದಿದ್ದಾಗ, ಅಸ್ತ್ರಜ್ಞರಲ್ಲಿ ಶ್ರೇಷ್ಠನಾದ ಅವನು ಉಗ್ರವಾದ ಅಸ್ತ್ರವನ್ನು ಪ್ರಯೋಗಿಸಿದನು.
ತೇನಾಸ್ತ್ರೇಣ ಹಯಾನ್ ಪೂರ್ವಂ ಹತ್ವಾ ಕರ್ಣಸ್ಯ ರಾಕ್ಷಸಃ |
ಸಾರಥಿಂ ಚೈವ ಹೈಡಿಂಬಃ ಕ್ಷಿಪ್ರಮಂತರಧೀಯತ ॥ 19 ॥
ರಾಕ್ಷಸನಾದ ಘಟೋತ್ಕಚನು ಆ ಅಸ್ತ್ರದಿಂದ ಮೊದಲು ಕರ್ಣನ ಅಶ್ವಗಳನ್ನು ಕೊಂದು, ಅನಂತರ ಸಾರಥಿಯನ್ನು ಕೊಂದು ಶೀಘ್ರವಾಗಿ ಅಂತರ್ಧಾನವನ್ನು ಹೊಂದಿದನು.
ಧೃತರಾಷ್ಟ್ರಃ
ತಥಾ ಹ್ಯಂತರ್ಹಿತೇ ತಸ್ಮಿನ್ ಕೂಟಯೋಧಿನಿ ರಾಕ್ಷಸೇ |
ಮಾಮಕೈಃ ಪ್ರತಿಪನ್ನಂ ಯತ್ ತನ್ಮಮಾಚಕ್ಷ್ವ ಸಂಜಯ ॥ 20 ॥
ಧೃತರಾಷ್ಟ್ರ ಸಂಜಯನೇ, ಮಾಯಾಯುದ್ಧವನ್ನು ಮಾಡುವ ಆ ರಾಕ್ಷಸನು ಅಂತರ್ಧಾನವನ್ನು ಹೊಂದಿದಾಗ ನನ್ನವರು ಏನು ಮಾಡಬೇಕೆಂದು ನಿರ್ಧರಿಸಿದರು ಎಂದು ನನಗೆ ಹೇಳು.
ಸಂಜಯಃ
ಅಂತರ್ಹಿತಂ ರಾಕ್ಷಸಂ ತಂ ವಿದಿತ್ವಾ
ಸಂಪ್ರಾಕ್ರೋಶನ್ ಕುರವಃ ಸರ್ವ ಏವ |
ಕಥಂ ನಾಯಂ ರಾಕ್ಷಸಃ ಕೂಟಯೋಧೀ

ಹನ್ಯಾತ್ ಕರ್ಣಂ ಸಮರೇಽದೃಶ್ಯಮಾನಃ ॥ 21 ॥
ಸಂಜಯ ರಾಕ್ಷಸನಾದ ಘಟೋತ್ಕಚನು ಅಂತರ್ಧಾನವನ್ನು ಹೊಂದಿದುದನ್ನು ನೋಡಿ ಎಲ್ಲ ಕುರುಗಳೂ ಮಾಯಾಯೋಧಿಯಾದ ಈ ರಾಕ್ಷಸನು ಯುದ್ಧದಲ್ಲಿ ಅದೃಶ್ಯನಾಗಿ ಹೇಗೆ ಕರ್ಣನನ್ನು ಕೊಲ್ಲದೆ ಇದ್ದಾನು! ಎಂದು ಕಿರುಚಿದರು.
ತತಃ ಕರ್ಣೋ ಲಘುಚಿತ್ರಾಸ್ತ್ರಯೋಧೀ
ಸರ್ವಾ ದಿಶೋ ವ್ಯಾವೃಣೋದ್ ಬಾಣಜಾಲೈಃ |
ನ ವೈ ಕಿಂಚಿದ್ವ್ಯಾಪತತ್ತತ್ರ ಭೂತಂ
ತಮೋಭೂತೇ ಸಾಯಕೈರಂತರಿಕ್ಷೇ ॥ 22 ॥
ಆಗ ಕ್ಷಿಪ್ರವಾಗಿ ಆಶ್ಚರ್ಯಕರವಾಗಿ ಅಸ್ತ್ರಗಳಿಂದ ಯುದ್ಧವನ್ನು ಮಾಡುವ ಆ ಕರ್ಣನು ಎಲ್ಲ ದಿಕ್ಕುಗಳನ್ನು ತನ್ನ ಬಾಣಗಳ ಸಮೂಹದಿಂದ ತುಂಬಿದನು. ಕರ್ಣನ ಬಾಣಗಳಿಂದ ಅಂತರಿಕ್ಷವೆಲ್ಲವೂ ಕತ್ತಲೆಯಿಂದ ಕೂಡಿರಲು ಯಾವ ಒಂದು ಪ್ರಾಣಿಯೂ ಅಲ್ಲಿ ಅಲುಗಾಡಲು ಸಾಧ್ಯವಾಗಲಿಲ್ಲ.
ನ ಚಾದದಾನೋ ನ ಚ ಸಂದಧಾನೋ
ನ ಚೇಷುಧೀ ಸ್ಪೃಶಮಾನಃ ಕರಾಗ್ರೈಃ |
ಅದೃಶ್ಯದ್ ವೈ ಲಾಘವಾತ್ ಸೂತಪುತ್ರಃ
ಸರ್ವಂ ಬಾಣೈಶ್ಛಾದಯಾನೋಽಂತರಿಕ್ಷಮ್ ॥ 23 ॥
ಸೂತಪುತ್ರನಾದ ಕರ್ಣನು ಬಾಣಗಳನ್ನು ತೆಗೆದುಕೊಳ್ಳುವುದಾಗಲೀ, ಬಿಲ್ಲಿನಲ್ಲಿ ಹೂಡುವುದಾಗಲೀ, ಬತ್ತಳಿಕೆಯನ್ನು ಹಸ್ತದಿಂದ ಸ್ಪರ್ಶಮಾಡುವುದಾಗಲೀ ಕಂಡು ಬರುತ್ತಿರಲಿಲ್ಲ. ಅಂತಹ ಕ್ಷಿಪ್ರತೆಯಿಂದ ಕೂಡಿದ ಅವನು ಅಂತರಿಕ್ಷವೆಲ್ಲವನ್ನೂ ಬಾಣಗಳಿಂದ ಆಚ್ಛಾದಿಸಿದನು.
ತತೋ ಮಾಯಾಂ ವಿಹಿತಾಮಂತರಿಕ್ಷೇ
ಘೋರಾಂ ಭೀಮಾಂ ದಾರುಣಾಂ ರಾಕ್ಷಸೇನ |
ಸಂಪಶ್ಯಾಮೋ ಲೋಹಿತಾಭ್ರಪ್ರಕಾಶಾಂ
ದೇದೀಪ್ಯಂತೀಮಗ್ನಿಶಿಖಾಮಿವೋಗ್ರಾಮ್ ॥ 24 ॥
ಆಗ ನಾವು ರಾಕ್ಷಸನಾದ ಘಟೋತ್ಕಚನು ಪ್ರಯೋಗಿಸಿದ ಘೋರವಾದ, ಭಯಂಕರವಾದ, ತೀವ್ರವಾದ ಮಾಯೆಯನ್ನು ಅಂತರಿಕ್ಷದಲ್ಲಿ ನೋಡಿದೆವು. ಆಕಾಶವೆಲ್ಲವೂ ಕೆಂಪುಮೋಡಗಳಿಂದ ಕೂಡಿ ಅಗ್ನಿಶಿಖೆಯಂತೆ ಉಗ್ರವಾಗಿ ಜ್ವಲಿಸುತ್ತಿದ್ದುದನ್ನು ನೋಡಿದೆವು.
ತತಸ್ತಸ್ಯಾ ವಿದ್ಯುತಃ ಪ್ರಾದುರಾಸ-
ನ್ನುಲ್ಕಾಶ್ಚಾಪಿ ಜ್ವಲಿತಾಃ ಕೌರವೇಂದ್ರ |
ಘೋಷಶ್ಚಾನ್ಯಃ ಪ್ರಾದುರಾಸೀತ್ ಸುಘೋರಃ
ಸಹಸ್ರಶೋ ನದತಾಂ ದುಂದುಭೀನಾಮ್ ॥ 25 ॥
ಎಲೈ ಕೌರವೇಂದ್ರನೇ, ಅನಂತರ ಆ ಮಾಯೆಯಿಂದ ಜ್ವಲಿಸುವ ಮಿಂಚುಗಳು ಮತ್ತು ಉಲ್ಕೆಗಳು ಪ್ರಾದುರ್ಭವಿಸಿದವು. ಸಹಸ್ರಸಂಖ್ಯೆಯಲ್ಲಿ ಬಾರಿಸಲ್ಪಡುವ ದುಂದುಭಿಗಳ ಬಹಳ ಘೋರವಾದ ಇನೊನಂದು ಶಬ್ದವು ಕೇಳಿಬಂದಿತು.
ತತಃ ಶರಾಃ ಪ್ರಾಪತನ್ ರುಗ್ಮಪುಂಖಾಃ
ಶಕ್ತ್ಯಃ ಪ್ರಾಸಾ ಮುಸಲಾನ್ಯಾಯುಧಾನಿ |
ಪರಶ್ವಧಾಸ್ತೈಲಧೌತಾಶ್ಚ ಖಡ್ಗಾಃ
ಪ್ರದೀಪ್ತಾಗ್ರಾಃ ಪಟ್ಟಿಶಾಸ್ತೋಮರಾಶ್ಚ ॥ 26 ॥
ಅನಂತರ ರುಗ್ಮಪುಂಖಗಳನ್ನು ಹೊಂದಿದ್ದ ಬಾಣಗಳೂ, ಶಕ್ತಿಗಳೂ, ಪ್ರಾಸಗಳೂ, ಮುಸಲಗಳೂ, ಬೇರೆ ಆಯುಧಗಳೂ, ಪರಶ್ವಧಗಳೂ, ತೈಲದಲ್ಲಿ ಸಾಣೆಯನ್ನು ಹಿಡಿದ ಖಡ್ಗಗಳೂ, ಜ್ವಲಿಸುವ ತುದಿಯುಳ್ಳ ಪಟ್ಟಿಶಗಳೂ, ತೋಮರಗಳೂ ಬೀಳಲು ಪ್ರಾರಂಭಿಸಿದವು.
ಮಯೂಖಿನಃ ಪರಿಘಾ ಲೋಹಬದ್ಧಾ
ಗದಾಶ್ಚಿತ್ರಾಃ ಶಿತಧಾರಾಶ್ಚ ಶೂಲಾಃ |
ಗುರ್ವ್ಯೋ ಗದಾ ಹೇಮಪಟ್ಟಾವನದ್ಧಾಃ
ಶತಘ್ನ್ಯಶ್ಚ ಪ್ರಾದುರಾಸನ್ ಸಮಂತಾತ್ ॥ 27 ॥
ಲೋಹಬದ್ಧವಾದ ಕಿರಣಗಳಿಂದ ಕೂಡಿದ ಪರಿಘಗಳೂ, ವಿಚಿತ್ರವಾದ ಗದೆಗಳೂ, ತೀಕ್ಷ್ಣವಾದ ತುದಿಯುಳ್ಳ ಶೂಲಗಳೂ, ಚಿನ್ನದ ಪಟ್ಟಿಗಳಿಂದ ಕೂಡಿದ ಭಾರವಾದ ಗದೆಗಳೂ, ಶತಘ್ನಿಗಳೂ ಎಲ್ಲ ಕಡೆಗಳಿಂದಲೂ ಪ್ರಾದುರ್ಭವಿಸಿದವು.
ಮಹಾಶಿಲಾಶ್ಚಾಪತಂಸ್ತತ್ರ ತತ್ರ
ಸಹಸ್ರಶಃ ಸಾಶನಯಃ ಸವಜ್ರಾಃ |
ಚಕ್ರಾಣಿ ಚಾನೇಕಶತಕ್ಷುರಾಣಿ
ಪ್ರಾದುರ್ಬಭೂವುರ್ಜ್ವಲನಪ್ರಭಾಣಿ ॥ 28 ॥
ಅಲ್ಲಲ್ಲಿ ಸಹಸ್ರ ಸಂಖ್ಯೆಯಲ್ಲಿ ಅಶನಿಗಳಿಂದ ಮತ್ತು ವಜ್ರಗಳಿಂದ ಕೂಡಿದ ದೊಡ್ಡ ಶಿಲೆಗಳು ಬಿದ್ದವು. ಅಗ್ನಿಯ ಕಾಂತಿಯನ್ನು ಹೊಂದಿದ ಚಕ್ರಗಳು ಮತ್ತು ನೂರಾರು ಕ್ಷುರಗಳು ಪ್ರಾದುರ್ಭವಿಸಿದವು.
ತಾಂ ಶಕ್ತಿಪಾಷಾಣಪರಶ್ವಧಾನಾಂ
ಪ್ರಾಸಾಸಿವಜ್ರಾಶನಿಮುದ್ಗರಾಣಾಮ್ |
ವೃಷ್ಟಿಂ ವಿಶಾಲಾಂ ಜ್ವಲಿತಾಂ ಪತಂತೀಂ

ಕರ್ಣಃ ಶರೌಘೈರ್ನ ಶಶಾಕ ಹಂತುಮ್ ॥ 29 ॥
ಶಕ್ತಿ-ಪಾಷಾಣ-ಪರಶ್ವಧಗಳ, ಪ್ರಾಸ-ಖಡ್ಗ-ವಜ್ರ-ಅಶನಿ-ಮುದ್ಗರಗಳ, ವಿಶಾಲವಾದ ಜ್ವಲಿಸುತ್ತಾ ಕೆಳಗೆ ಬೀಳುತ್ತಿರುವ ಆ ವೃಷ್ಟಿಯನ್ನು ಕರ್ಣನು ತನ್ನ ಬಾಣಗಳ ಸಮೂಹದಿಂದ ವಿನಾಶ ಮಾಡಲು ಸಾಧ್ಯವಾಗಲಿಲ್ಲ.
ಶರಾಹತಾನಾಂ ಪತತಾಂ ಹಯಾನಾಂ
ವಜ್ರಾಹತಾನಾಂ ಪತತಾಂ ಗಜಾನಾಮ್ ।
ಶಿಲಾಹತಾನಾಂ ಚ ಮಹಾರಥಾನಾಂ
ಮಹಾನ್ನಿನಾದಃ ಪತತಾಂ ಬಭೂವ ॥ 30 ॥
ಬಾಣಗಳಿಂದ ಹೊಡೆಯಲ್ಪಟ್ಟು ಬೀಳುವ ಅಶ್ವಗಳ, ವಜ್ರದಿಂದ ಹೊಡೆಯಲ್ಪಟ್ಟು ಬೀಳುವ ಗಜಗಳ, ಶಿಲೆಗಳಿಂದ ಹೊಡೆಯಲ್ಪಟ್ಟು ಬೀಳುವ ಮಹಾರಥರ ದೊಡ್ಡ ನಾದವು ಉಂಟಾಯಿತು.
ಸುಭೀಮನಾನಾವಿಧಶಸ್ತ್ರಪಾತೈ-
ರ್ಘಟೋತ್ಕಚೇನಾಭಿಹತಂ ಸಮಂತಾತ್ ।
ದೌರ್ಯೋಧನಂ ತದ್ಬಲಮಾರ್ತರೂಪ-
ಮಾವರ್ತಮಾನಂ ದದೃಶೇ ಭ್ರಮತ್ ತತ್ ॥ 31 ॥
ಅತ್ಯಂತ ಭಯಂಕರವಾದ ನಾನಾವಿಧವಾದ ಶಸ್ತ್ರಪಾತಗಳಿಂದ ಘಟೋತ್ಕಚನಿಂದ ಎಲ್ಲ ಕಡೆಗಳಲ್ಲಿಯೂ ಹೊಡೆಯಲ್ಪಟ್ಟ ದುರ್ಯೋಧನನ ಆ ಸೈನ್ಯವು ಬಹಳ ದುಃಖವನ್ನು ಹೊಂದಿ ಅಲ್ಲಲ್ಲಿಯೇ ತಿರುಗಾಡುವುದು ಕಂಡುಬಂದಿತು.
ಹಾಹಾಕೃತಂ ಸಂಪರಿವರ್ತಮಾನಂ
ಸಂಲೀಯಮಾನಂ ಚ ವಿಷಣ್ಣರೂಪಮ್ ।
ತೇ ತ್ವಾರ್ಯಭಾವಾತ್ ಪುರುಷಪ್ರವೀರಾಃ
ಪರಾಙ್ಮುಖಾ ನ ಬಭೂವುಸ್ತದಾನೀಮ್ ॥ 32 ॥
ಹಾಹಾಕಾರವನ್ನು ಮಾಡುತ್ತಾ ಅಲ್ಲಿಯೇ ತಿರುಗುವುದು, ವಿಷಾದವನ್ನು ಹೊಂದಿ ಅಲ್ಲಲ್ಲಿ ಅಡಗಿಕೊಳ್ಳುವುದು ಕಂಡುಬಂದಿತು. ಪುರುಷಶ್ರೇಷ್ಠರಾದ ಆ ವೀರರು ಮಾತ್ರ ಆರ್ಯಭಾವವನ್ನು ಹೊಂದಿ ಆಗ ಯುದ್ಧದಿಂದ ಪರಾಙ್ಮುಖರಾಗಲಿಲ್ಲ.
ತಾಂ ರಾಕ್ಷಸೀಂ ಘೋರತರಾಂ ಸುಭೀಮಾಂ
ವೃಷ್ಟಿಂ ಮಹಾಶಸ್ತ್ರಮಯೀಂ ಪತಂತೀಮ್ ।
ದೃಷ್ಟ್ವಾ ಬಲೌಘಾಂಶ್ಚ ನಿಪಾತ್ಯಮಾನಾನ್
ಮಹದ್ಭಯಂ ತವ ಪುತ್ರಾನ್ ವಿವೇಶ ॥ 33 ॥
ಅತ್ಯಂತ ಭಯಂಕರವಾದ ಮತ್ತು ಘೋರತರವಾದ ಮಹಾಶಸ್ತ್ರಗಳ ವೃಷ್ಟಿಯು ಕೆಳಗೆ ಬಿದ್ದು ತಮ್ಮ ಸೇನಾ ಸಮೂಹಗಳು ಓಡುತ್ತಿರುವುದನ್ನು ನೋಡಿದ ನಿನ್ನ ಪುತ್ರರಿಗೆ ದೊಡ್ಡ ಭಯವುಂಟಾಯಿತು.
ಶಿವಾಶ್ಚ ವೈಶ್ವಾನರದೀಪ್ತಜಿಹ್ವಾಃ
ಸುಭೀಮನಾದಾಃ ಶತಶೋ ನದಂತ್ಯಃ ।
ರಕ್ಷೋಗಣಾನ್ ನರ್ದತಶ್ಚಾಭಿವೀಕ್ಷ್ಯ
ನರೇಂದ್ರಯೋಧಾ ವ್ಯಥಿತಾ ಬಭೂವುಃ ॥ 34 ॥
ಅಗ್ನಿದೀಪ್ತವಾದ ನಾಲಿಗೆಯುಳ್ಳ ನರಿಗಳು ನೂರಾರು ಸಂಖ್ಯೆಯಲ್ಲಿ ಭೈರವವಾದ ನಾದವನ್ನು ಮಾಡಿದವು. ರಾಕ್ಷಸರ ಮೋಹಗಳನ್ನು ನೋಡಿ ಘೋರವಾಗಿ ಕಿರುಚುವ ಆ ನರಿಗಳನ್ನು ನೋಡಿ ಕೌರವ ಸೇನೆಯ ಯೋಧರು ವ್ಯಥೆಯನ್ನು ಹೊಂದಿದರು.
ತೇ ದೀಪ್ತಜಿಹ್ವಾನನತೀಕ್ಷ್ಣದಂಷ್ಟ್ರಾ
ವಿಭೀಷಣಾಃ ಶೈಲನಿಕಾಶಕಾಯಾಃ ।
ನಭೋಗತಾಃ ಶಕ್ತಿವಿಷಕ್ತಹಸ್ತಾ
ಮೇಘಾ ವ್ಯಮುಂಚನ್ನಿವ ವೃಷ್ಟಿಮಾರ್ಗಮ್ ॥ 35 ॥
ಜ್ವಲಿಸುವ ನಾಲಿಗೆ ಮತ್ತು ಮುಖಗಳನ್ನು, ತೀಕ್ಷ್ಣವಾದ ದಂಷ್ಟ್ರಗಳನ್ನು ಹೊಂದಿದ್ದ ಭಯಂಕರವಾದ, ಪರ್ವತದಂತಹ ದೊಡ್ಡ ಶರೀರವನ್ನು ಧರಿಸಿದ್ದ, ಕೈಯಲ್ಲಿ ಶಕ್ತಿ ಮೊದಲಾದ ಆಯುಧಗಳನ್ನು ಹಿಡಿದ ಆಕಾಶದಲ್ಲಿದ್ದ ಆ ರಾಕ್ಷಸರು ಮೋಡಗಳು ಮಳೆಯನ್ನು ಸುರಿಸುವಂತೆ ಶಸ್ತ್ರಗಳ ಮಳೆಯನ್ನು ಸುರಿಸಿದರು.
ತೈರಾಹತಾಸ್ತೇ ಶರಶಕ್ತಿಶೂಲೈ-
ರ್ಗದಾಭಿರುಗ್ರೈಃ ಪರಿಘೈಶ್ಚ ದೀಪ್ತೈಃ ।
ವಜ್ರೈಃ ಪಿನಾಕೈರಶನಿಪ್ರಹಾರೈ-
ಶ್ಚಕ್ರೈಃ ಶತಘ್ನ್ಯುನ್ಮಥಿತಾಶ್ಚ ಪೇತುಃ ॥ 36 ॥
ಅವರಿಂದ ಬಾಣ-ಶಕ್ತಿ-ಶೂಲಗಳಿಂದಲೂ, ಉಗ್ರವಾದ ಗದೆಗಳಿಂದಲೂ, ಜ್ವಲಿಸುವ ಪರಿಘಗಳಿಂದಲೂ, ವಜ್ರಗಳಿಂದಲೂ, ಪಿನಾಕಗಳಿಂದಲೂ, ಅಶನಿ- ಪ್ರಹಾರಗಳಿಂದಲೂ, ಚಕ್ರಗಳಿಂದಲೂ, ಶತಘ್ನಿಗಳಿಂದಲೂ ಹೊಡೆದು ಮರ್ದಿಸಲ್ಪಟ್ಟ ನಿನ್ನ ಸೈನ್ಯದ ಯೋಧರು ಕೆಳಗೆ ಬಿದ್ದರು.
ಹುಡಾ ಭುಶುಂಡ್ಯೋಽಶ್ಮಗುಡಾಃ ಶತಘ್ನ್ಯಃ
ಸ್ಥೂಣಾಶ್ಚ ಕಾರ್ಷ್ಣಾಯಸಪಟ್ಟನದ್ಧಾಃ ।
ಅವಾಕಿರಂಸ್ತವ ಪುತ್ರಸ್ಯ ಸೈನ್ಯಂ

ತಥಾ ರೌದ್ರಂ ಕಶ್ಮಲಂ ಪ್ರಾದುರಾಸೀತ್ ॥ 37 ॥
ಹುಡಗಳು, ಭುಶುಂಡಿಗಳು, ಅಶ್ಮಗುಡಗಳು, ಶತಘ್ನಿಗಳು, ಕಬ್ಬಿಣದ ಪಟ್ಟಿಗಳಿಂದ ಬಿಗಿಯಲ್ಪಟ್ಟ ಸ್ಥೂಣಗಳು ನಿನ್ನ ಪುತ್ರರ ಸೈನ್ಯದ ಮೇಲೆ ಬಿದ್ದವು. ಆಗ ಭಯಂಕರವಾದ ವಿಷಾದವು ಉಂಟಾಯಿತು.
ನಿಷ್ಕೀರ್ಣಾಂತ್ರಾ ವಿಹತೈರುತ್ತಮಾಂಗೈಃ
ಸಂಭಗ್ನಾಂಗಾಃ ಶೇರತೇ ತತ್ರ ಶೂರಾಃ ।
ಭಿನ್ನಾ ಹಯಾಃ ಕುಂಜರಾಶ್ಚಾವಭಗ್ನಾಃ
ಸಂಚೂರ್ಣಿತಾಶ್ಚೈವ ರಥಾಃ ಶಿಲಾಭಿಃ ॥ 38 ॥
ಶೂರರು ಹೊರಗೆಳೆದ ಕರುಳುಗಳಿಂದಲೂ, ಜಜ್ಜಿಹೋದ ಶಿರಸ್ಸುಗಳಿಂದಲೂ, ಭಗ್ನವಾದ ಅಂಗಗಳಿಂದಲೂ ಕೂಡಿ ರಣರಂಗದಲ್ಲಿ ಮಲಗಿದರು. ಅಶ್ವಗಳು ಕತ್ತರಿಸಲ್ಪಟ್ಟವು, ಗಜಗಳು ಭೇದಿಸಲ್ಪಟ್ಟವು, ರಥಗಳು ಶಿಲೆಗಳಿಂದ ಪುಡಿಮಾಡಲ್ಪಟ್ಟವು.
ಏವಂ ಮಹಚ್ಚಸ್ತ್ರವರ್ಷಂ ಸೃಜಂತ-
ಸ್ತೇ ಯಾತುಧಾನಾ ಭುವಿ ಘೋರರೂಪಾಃ ।
ಮಾಯಾಃ ಸೃಷ್ಟಾಸ್ತತ್ರ ಘಟೋತ್ಕಚೇನ
ನಾಮುಂಚನ್ ವೈ ಯಾಚಮಾನಂ ನ ಭೀತಮ್ ॥ 39 ॥
ಹೀಗೆ ಘಟೋತ್ಕಚನು ಸೃಷ್ಟಿಸಿದ ಮಾಯಾಮಯವಾದ ಘೋರರೂಪವನ್ನು ಹೊಂದಿದ ಆ ರಾಕ್ಷಸರು ಬೇಡುವವನನ್ನೂ ಮತ್ತು ಭೀತನನ್ನೂ ಬಿಡದೆ ಭೂಮಿಯ ಮೇಲೆ ದೊಡ್ಡ ಶಸ್ತ್ರಗಳ ಮಳೆಯನ್ನು ಸುರಿಸಿದರು.
ತಸ್ಮಿನ್ ಘೋರೇ ಕುರುವೀರಾವಮರ್ದೇ
ಕಾಲೋತ್ಸೃಷ್ಟೇ ಕ್ಷತ್ರಿಯಾಣಾಮಭಾವೇ ।
ತೇ ವೈ ಭಗ್ನಾಃ ಸಹಸಾ ವ್ಯದ್ರವಂತ
ಪ್ರಾಕ್ರೋಶಂತಃ ಕೌರವಾಃ ಸರ್ವ ಏವ ॥ 40 ॥
ಮೃತ್ಯುವಿನಿಂದ ಕ್ಷತ್ರಿಯರ ವಿನಾಶಕ್ಕಾಗಿ ಸೃಷ್ಟವಾದ ಘೋರವಾದ ಆ ಕುರುವೀರರ ಸಂಘರ್ಷದಲ್ಲಿ ಭಗ್ನರಾದ ಕೌರವರೆಲ್ಲರೂ ತಕ್ಷಣದಲ್ಲಿ ಕಿರುಚುತ್ತಾ ಓಡಿಹೋದರು.
ಪಲಾಯಧ್ವಂ ಕುರವೋ ನೈತದಸ್ತಿ
ಸೇಂದ್ರಾ ದೇವಾ ಘ್ನಂತಿ ನಃ ಪಾಂಡವಾರ್ಥೇ ।
ತಥಾ ತೇಷಾಂ ಮಜ್ಜತಾಂ ಭಾರತಾನಾಂ
ನ ಸ್ಮ ದ್ವೀಪಸ್ತತ್ರ ಕಶ್ಚಿದ್ ಬಭೂವ ॥ 41 ॥
ಕುರುಗಳೆಲ್ಲರೂ ಓಡಿಹೋಗಿ `ಇದು ಅಸಾಧ್ಯವಾದುದು. ಇಂದ್ರ ಸಹಿತರಾದ ದೇವತೆಗಳು ನಮ್ಮನ್ನು ಕೊಲ್ಲುತ್ತಿದ್ದಾರೆ' (ಎಂದು ಕಿರುಚುತ್ತಾ ಓಡಿಹೋದರು). ಆ ರೀತಿಯಲ್ಲಿ ಶಸ್ತ್ರವರ್ಷದಲ್ಲಿ ಮುಳುಗುವ ಕೌರವರ ಸೇನೆಗೆ ಅಲ್ಲಿ ಯಾವನೂ ದ್ವೀಪನಾಗಲಿಲ್ಲ.
ತಸ್ಮಿನ್ ಸಂಕ್ರಂದೇ ತುಮುಲೇ ವರ್ತಮಾನೇ
ಸೈನ್ಯೇ ಭಗ್ನೇ ಲೀಯಮಾನೇ ಕುರೂಣಾಮ್ ।
ಅನೀಕಾನಾಂ ಪ್ರವಿಭಾಗೇಽಪ್ರಕಾಶೇ
ನ ಜ್ಞಾಯಂತೇ ಕುರವೋ ನೇತರೇ ವಾ ॥ 42 ॥
ಅಂತಹ ತೀವ್ರವಾದ ಸಂಘರ್ಷವು ನಡೆದು ಕೌರವರ ಸೈನ್ಯವು ಭಗ್ನವಾಗಿ ಅಡಗಿಹೋಗುತ್ತಿರಲು, ರಾತ್ರಿಯ ಕತ್ತಲಿನಲ್ಲಿ ಸೈನ್ಯದ ಭಾಗಗಳು ಕಾಣದೆ ಇರುತ್ತಿರಲು ಕುರುಗಳು ಯಾರು, ಪಾಂಡವರು ಯಾರು ಎಂದು ತಿಳಿಯಲಿಲ್ಲ.
ನಿರ್ಮರ್ಯಾದೇ ವಿದ್ರವೇ ಘೋರರೂಪೇ
ಸರ್ವಾ ದಿಶಃ ಪ್ರೇಕ್ಷಮಾಣಾಃ ಸ್ಮ ಶೂನ್ಯಾಃ ।
ತಾಂ ಶಸ್ತ್ರವೃಷ್ಟಿಮುರಸಾ ಗಾಹಮಾನಂ
ಕರ್ಣಂ ಚೈಕಂ ತತ್ರ ರಾಜನ್ನಪಶ್ಯಮ್ ॥ 43 ॥
ಎಲ್ಲ ಎಲ್ಲೆಗಳನ್ನೂ ಮೀರಿದ ಘೋರವಾದ ಆ ಸಂಘರ್ಷದಲ್ಲಿ ಯೋಧರು ಎಲ್ಲ ದಿಕ್ಕುಗಳನ್ನೂ ಶೂನ್ಯವಾಗಿ ಕಾಣುತ್ತಾ ಓಡಿಹೋದರು. ಎಲೈ ರಾಜನೇ, ಆ ಶಸ್ತ್ರವೃಷ್ಟಿಯನ್ನು ತನ್ನ ಎದೆಯಿಂದ ದಾಟುತ್ತಿದ್ದ ಕರ್ಣನೊಬ್ಬನನ್ನು ಮಾತ್ರ ನಾನು ಅಲ್ಲಿ ನೋಡಿದೆನು.
ತತೋ ಬಾಣೈರಾವೃಣೋದಂತರಿಕ್ಷಂ
ದಿವ್ಯಾಂ ಮಾಯಾಂ ಯೋಧಯನ್ ರಾಕ್ಷಸಸ್ಯ ।
ಹ್ರೀಮಾನ್ ಕುರ್ವನ್ ದುಷ್ಕರಮಾರ್ಯಕರ್ಮ
ನೈವಾಮುಹ್ಯತ್ ಸಂಯುಗೇ ಸೂತಪುತ್ರಃ ॥ 44 ॥
ಆಗ ಸೂತಪುತ್ರನಾದ ಕರ್ಣನು ರಾಕ್ಷಸನ ದಿವ್ಯಮಾಯೆಯ ಜೊತೆಯಲ್ಲಿ ಯುದ್ಧವನ್ನು ಮಾಡಿ, ಅಂತರಿಕ್ಷವನ್ನು ತಾನು ಪ್ರಯೋಗಿಸಿದ ಬಾಣಗಳಿಂದ ತುಂಬಿದನು. ನಾಚಿಕೆಯುಳ್ಳವನೂ, ಯುದ್ಧದಲ್ಲಿ ದುಷ್ಕರವಾದ ಉದಾತ್ತವಾದ ಕರ್ಮವನ್ನು ಮಾಡುವವನೂ ಆದ ಅವನು ರಣರಂಗದಲ್ಲಿ ಮೋಹವನ್ನು ಹೊಂದಲಿಲ್ಲ.
ತತೋ ಭೀತಾಃ ಸಮುದೈಕ್ಷಂತ ಕರ್ಣಂ
ರಾಜನ್ ಸರ್ವೇ ಸೈಂಧವಾ ಬಾಹ್ಲಿಕಾಶ್ಚ ।
ಅಸಮ್ಮೋಹಂ ಪೂಜಯಂತೋಽಸ್ಯ ಸಂಖ್ಯೇ

ಸಂಪಶ್ಯಂತೋ ವಿಜಯಂ ರಾಕ್ಷಸಸ್ಯ ॥ 45 ॥
ಎಲೈ ರಾಜನೇ, ಆಗ ಭೀತರಾದ ಸೈಂಧವ-ಬಾಹ್ಲೀಕರೆಲ್ಲರೂ ಕರ್ಣನನ್ನು ನೋಡಿದರು. ಯುದ್ಧದಲ್ಲಿ ಅವನ ಧೈರ್ಯವನ್ನೂ, ರಾಕ್ಷಸನಾದ ಘಟೋತ್ಕಚನ ವಿಜಯವನ್ನೂ ನೋಡಿ ಕರ್ಣನನ್ನು ಪೂಜಿಸಿದರು.
ತೇನೋತ್ಸೃಷ್ಟಾ ಚಕ್ರಯುಕ್ತಾ ಶತಘ್ನೀ
ಸಮಂ ಸರ್ವಾಂಶ್ಚತುರೋಽಶ್ವಾಂಜಘಾನ |
ತೇ ಜಾನುಭಿರ್ಜಗತೀಮನ್ವಪದ್ಯನ್
ಗತಾಸವೋ ನಿರ್ದಶನಾಕ್ಷಿಜಿಹ್ವಾಃ ॥ 46 ॥
ಘಟೋತ್ಕಚನಿಂದ ಪ್ರಯುಕ್ತವಾದ ಚಕ್ರಯುಕ್ತವಾದ ಶತಘ್ನಿಯು ಕರ್ಣನ ರಥದ ನಾಲ್ಕು ಅಶ್ವಗಳನ್ನು ಒಂದೇ ಕಾಲದಲ್ಲಿ ಕೊಂದಿತು. ಆ ಅಶ್ವಗಳು ದಂತ-ಅಕ್ಷಿ-ಜಿಹ್ವೆಗಳನ್ನು ಕಳೆದುಕೊಂಡು ಮೃತವಾಗಿ ಭೂಮಿಯ ಮೇಲೆ ಬಿದ್ದವು.
ತತೋ ಹತಾಶ್ವಾದವರುಹ್ಯ ವಾಹಾ-
ದಂತರ್ಮನಾಃ ಕುರುಷು ಪ್ರಾದ್ರವತ್ಸು |
ದಿವ್ಯೇ ಚಾಸ್ತ್ರೇ ಮಾಯಯಾ ವಧ್ಯಮಾನೇ
ನೈವಾಮುಹ್ಯಚ್ಚಿಂತಯನ್ ಪ್ರಾಪ್ತಕಾಲಮ್ ॥ 47 ॥
ಆಗ ಕುರುಗಳು ಓಡುತ್ತಿರಲು, ಅಶ್ವಗಳು ಮೃತವಾದ ರಥದಿಂದ ಇಳಿದು ಮನಸ್ಸಿನಲ್ಲೇ ಚಿಂತಿಸುತ್ತಾ, ತನ್ನ ದಿವ್ಯಾಸ್ತ್ರಗಳು ಘಟೋತ್ಕಚನ ಮಾಯೆಯಿಂದ ನಾಶಗೊಳಿಸಲ್ಪಡುತ್ತಿರಲು ಆ ಪರಿಸ್ಥಿತಿಯಲ್ಲಿ ಮಾಡಬೇಕಾದ ಕಾರ್ಯವನ್ನು ಕುರಿತು ಮೋಹಗೊಳ್ಳದೆ ಕರ್ಣನು ಯೋಚಿಸಿದನು.
ತತೋಽಬ್ರುವನ್ ಕುರವಃ ಸರ್ವ ಏವ
ಕರ್ಣಂ ದೃಷ್ಟ್ವಾ ಘೋರರರೂಪಾಂ ಚ ಮಾಯಾಮ್ |
ಶಕ್ತ್ಯಾ ರಕ್ಷೋ ಜಹಿ ಕರ್ಣಾದ್ಯ ತೂರ್ಣಂ
ನಶ್ಯಂತ್ಯೇತೇ ಕುರವೋ ಧಾರ್ತರಾಷ್ಟ್ರಾಃ ॥ 48 ॥
ಆಗ ಕುರುಗಳೆಲ್ಲರೂ ಕರ್ಣನನ್ನು ಮತ್ತು ಘೋರವಾದ ಘಟೋತ್ಕಚನ ಮಾಯೆಯನ್ನು ನೋಡಿ, ಎಲೈ ಕರ್ಣನೇ, ಈ ದಿನ ಶೀಘ್ರವಾಗಿ ಶಕ್ತ್ಯಾಯುಧದಿಂದ ರಾಕ್ಷಸನನ್ನು ಕೊಲ್ಲು. ಈ ಧೃತರಾಷ್ಟ್ರ ಪುತ್ರರು ನಾಶವನ್ನು ಹೊಂದುತ್ತಿದ್ದಾರೆ ಎಂದು ಹೇಳಿದರು.
ಕರಿಷ್ಯತಃ ಕಿಂ ಚ ನೋ ಭೀಮಪಾರ್ಥೌ
ತಪಂತಮೇನಂ ಜಹಿ ರಕ್ಷೋ ನಿಶೀಥೇ |
ಯೋ ನಃ ಸಂಗ್ರಾಮಾದ್ ಘೋರರೂಪಾದ್ ವಿಮುಚ್ಯೇತ್
ಸ ನಃ ಪಾರ್ಥಾನ್ ಸಮರೇ ಯೋಧಯೇತ ॥ 49 ॥
ಭೀಮಾರ್ಜುನರು ನಮಗೆ ಏನು ಮಾಡುವರು? ಈಗ ರಾತ್ರಿಯಲ್ಲಿ ನಮ್ಮನ್ನು ದಹಿಸುತ್ತಿರುವ ಈ ರಾಕ್ಷಸನನ್ನು ಕೊಲ್ಲು. ಈ ಘೋರವಾದ ಸಂಗ್ರಾಮದಲ್ಲಿ ನಮ್ಮಲ್ಲಿ ಯಾವನು ಉಳಿಯುವನೋ ಅವನು ಅನಂತರ ಪಾರ್ಥರ ಜೊತೆಯಲ್ಲಿ ಯುದ್ಧವನ್ನು ಮಾಡಿಯಾನು.
ತಸ್ಮಾದೇನಂ ರಾಕ್ಷಸಂ ಘೋರರೂಪಂ
ಜಹಿ ಶಕ್ತ್ಯಾ ದತ್ತಯಾ ವಾಸವೇನ |
ಮಾ ಕೌರವಾಃ ಸರ್ವ ಏವೇಂದ್ರಕಲ್ಪಾ
ರಾತ್ರೀಮುಖೇ ಕರ್ಣ ನೇಶುಃ ಸಯೋಧಾಃ ॥ 50 ॥
ಆದ್ದರಿಂದ ಇಂದ್ರನು ಕೊಟ್ಟ ಶಕ್ತಿಯಿಂದ ಈ ಘೋರರರೂಪನಾದ ರಾಕ್ಷಸನನ್ನು ಕೊಲ್ಲು. ಎಲೈ ಕಣರ್ನೇ, ಈ ರಾತ್ರಿಯಲ್ಲಿಯೇ ಇಂದ್ರಕಲ್ಪರಾದ ಎಲ್ಲ ಕೌರವರೂ ಮತ್ತು ಅವರ ಯೋಧರೂ ನಾಶಹೊಂದದಿರಲಿ (ಎಂದು ಹೇಳಿದರು).
ಸ ವಧ್ಯಮಾನೋ ರಕ್ಷಸಾ ವೈ ನಿಶೀಥೇ
ದೃಷ್ಟ್ವಾ ರಾಜನ್ ನಶ್ಯಮಾನಂ ಬಲಂ ಚ |
ಮಹಚ್ಚ ಶ್ರುತ್ವಾ ನಿನದಂ ಕೌರವಾಣಾಂ
ಮತಿಂ ದಧ್ರೇ ಶಕ್ತಿಮೋಕ್ಷಾಯ ಕರ್ಣಃ ॥ 51 ॥
ಎಲೈ ರಾಜನೇ, ಕರ್ಣನು ರಾಕ್ಷಸೇಂದ್ರನಿಂದ ತಾನೂ ಹೊಡೆಯಲ್ಪಟ್ಟು ನಾಶ ಹೊಂದುತ್ತಿರುವ ಸೈನ್ಯವನ್ನು ನೋಡಿ, ಕೌರವರ ಮಹಾನಾದವನ್ನೂ ಕೇಳಿ ಶಕ್ತ್ಯಾಯುಧವನ್ನು ಪ್ರಯೋಗಿಸಲು ಮನಸ್ಸಿನಲ್ಲಿ ನಿರ್ಧರಿಸಿದನು.
ಸ ವೈ ಕ್ರುದ್ಧಃ ಸಿಂಹ ಇವಾತ್ಯಮರ್ಷೀ
ನಾಮರ್ಷಯತ್ ಪ್ರತಿಘಾತಂ ರಣೇ ತಮ್ |
ಶಕ್ತಿಂ ಶ್ರೇಷ್ಠಾಂ ವೈಜಯಂತೀಮಸಹ್ಯಾಂ
ಸಮಾದದೇ ತಸ್ಯ ವಧಂ ಚಿಕೀರ್ಷನ್ ॥ 52 ॥
ಕೋಪಗೊಂಡ ಸಿಂಹದಂತೆ ರೋಷವಶನಾದ ಕರ್ಣನು ಶತ್ರುಗಳಿಂದ ರಣರಂಗದಲ್ಲಿ ಉಂಟಾದ ಆ ಪ್ರತಿಘಾತವನ್ನು ಸಹಿಸದೆ ರಾಕ್ಷಸನ ವಧೆಯನ್ನು ಮಾಡಲು ಬಯಸಿ, ಸಹಿಸಲು ಅಸಾಧ್ಯವಾದ ಮತ್ತು ಶ್ರೇಷ್ಠವಾದ ವೈಜಯಂತೀ ಎಂಬ ಆ ಶಕ್ತಿಯನ್ನು ಕೈಯಲ್ಲಿ ತೆಗೆದುಕೊಂಡನು.
ಯಾಽಸೌ ರಾಜನ್ ನಿಹಿತಾ ವರ್ಷಪೂಗಾನ್
ವಧಾಯಾಜೌ ಸತ್ಕೃತಾ ಫಲ್ಗುನಸ್ಯ |

ಯಾಂ ವೈ ಪ್ರಾದಾತ್ ಸೂತಪುತ್ರಾಯ ಶಕ್ರಃ
ಶಕ್ತಿಂ ಶ್ರೇಷ್ಠಾಂ ಕುಂಡಲಾಭ್ಯಾಂ ನಿಮಾಯ ॥ 53 ॥
ಎಲೈ ರಾಜನೇ, ಅನೇಕ ವರ್ಷಗಳವರೆಗೆ ಯುದ್ಧದಲ್ಲಿ ಅರ್ಜುನನ ವಧೆಗಾಗಿ ಯಾವ ಶಕ್ತಿಯು ಪೂಜಿಸಲ್ಪಟ್ಟಿದ್ದಿತೋ, ಯಾವ ಶ್ರೇಷ್ಠವಾದ ಶಕ್ತಿಯನ್ನು ಇಂದ್ರನು ಕರ್ಣನಿಗೆ ಕುಂಡಲಗಳನ್ನು ವಿನಿಮಯ ಮಾಡಿಕೊಂಡು ಕೊಟ್ಟಿದ್ದನೋ (ಆ ಶಕ್ತಿಯನ್ನು ಕರ್ಣನು ಕೈಯಲ್ಲಿ ತೆಗೆದುಕೊಂಡನು).
ತಾಂ ವೈ ಶಕ್ತಿಂ ಲೇಲಿಹಾನಾಂ ಪ್ರದೀಪ್ತಾಂ
ಪಾಶೈರ್ಯುಕ್ತಾಮಂತಕಸ್ಯೇವ ರಾತ್ರಿಮ್ ।
ಮೃತ್ಯೋಃ ಸ್ವಸಾರಂ ಜ್ವಲಿತಾಮಿವೋಲ್ಕಾಂ
ವೈಕರ್ತನಃ ಪ್ರಾಹಿಣೋದ್ ರಾಕ್ಷಸಾಯ ॥ 54 ॥
ಪ್ರದೀಪ್ತವಾದ ಜ್ವಾಲೆಗಳನ್ನು ಸೂಸುತ್ತಿದ್ದ, ಪಾಶಗಳನ್ನು ಹೊಂದಿದ್ದ, ಅಂತಕನ ರಾತ್ರಿಯಂತಿದ್ದ, ಮೃತ್ಯುವಿನ ತಂಗಿಯಂತಿದ್ದ, ಜ್ವಲಿಸುವ ಉಲ್ಕೆಯಂತಿದ್ದ ಆ ಶಕ್ತಿಯನ್ನು ಕರ್ಣನು ಘಟೋತ್ಕಚನ ಮೇಲೆ ಎಸೆದನು.
ತಾಮುತ್ತಮಾಂ ಪರಕಾಯಾಪಹಂತ್ರೀಂ
ದೃಷ್ಟ್ವಾ ಸೌತೇರ್ಬಾಹುಸಂಸ್ಥಾಂ ಜ್ವಲಂತೀಮ್ ।
ಭೀತಂ ರಕ್ಷೋ ವಿಪ್ರದುದ್ರಾವ ರಾಜನ್
ಕೃತ್ವಾತ್ಮಾನಂ ವಿಂಧ್ಯಪಾದಪ್ರಮಾಣಮ್ ॥ 55 ॥
ಎಲೈ ರಾಜನೇ, ಉತ್ತಮವಾದ ಪರಕಾಯವನ್ನು ನಾಶಮಾಡುವ ಜ್ವಲಿಸುವ ಆ ಶಕ್ತಿಯು ಕರ್ಣನ ಕೈಯಲ್ಲಿ ಇದ್ದುದನ್ನು ನೋಡಿ ಭಯಗೊಂಡ ಘಟೋತ್ಕಚನು ತನ್ನನ್ನು ವಿಂಧ್ಯಪರ್ವತದಷ್ಟು ದೊಡ್ಡ ಪ್ರಮಾಣವುಳ್ಳವನಾಗಿ ಮಾಡಿಕೊಂಡು ಓಡಿದನು.
ದೃಷ್ಟ್ವಾ ಶಕ್ತಿಂ ಕರ್ಣಬಾಹ್ವಂತರಸ್ಥಾಂ
ನೇದುರ್ಭೂತಾನ್ಯಂತರಿಕ್ಷೇ ನರೇಂದ್ರ ।
ವವುರ್ವಾತಾಸ್ತುಮುಲಾಶ್ಚಾಪಿ ರಾಜನ್
ಸನಿರ್ಘಾತಾ ಚಾಶನಿರ್ಗಾಂ ಜಗಾಮ ॥ 56 ॥
ಎಲೈ ರಾಜನೇ, ಕರ್ಣನ ಬಾಹುಗಳಲ್ಲಿದ್ದ ಆ ಶಕ್ತಿಯನ್ನು ನೋಡಿ ಅಂತರಿಕ್ಷದಲ್ಲಿದ್ದ ಭೂತಗಳು ಘೋರವಾದ ನಾದವನ್ನು ಮಾಡಿದವು. ಎಲೈ ರಾಜನೇ, ತೀವ್ರವಾದ ವಾಯುವು ಬೀಸಿತು. ಭೂಮಿಯಲ್ಲಿ ದೊಡ್ಡ ಶಬ್ದದಿಂದ ಕೂಡಿದ ಸಿಡಿಲುಗಳು ಬಿದ್ದವು.
ಸಾ ತಾಂ ಮಾಯಾಂ ಭಸ್ಮ ಕೃತ್ವಾ ಜ್ವಲಂತೀ
ಭಿತ್ತ್ವಾ ಗಾಢಂ ಹೃದಯಂ ರಾಕ್ಷಸಸ್ಯ ।
ಊರ್ಧ್ವಂ ಯಯೌ ದೀಪ್ಯಮಾನಾ ನಿಶಾಯಾಂ
ನಕ್ಷತ್ರಾಣಾಮಂತರಾಣ್ಯಾವಿಶಂತೀ ॥ 57 ॥
ಜ್ವಲಿಸುವ ಆ ಶಕ್ತಿಯು ಘಟೋತ್ಕಚನ ಮಾಯೆಯನ್ನು ಭಸ್ಮಮಾಡಿ ರಾಕ್ಷಸನಾದ ಅವನ ಹೃದಯವನ್ನು ಗಾಢವಾಗಿ ಭೇದಿಸಿ, ಆ ರಾತ್ರಿಯಲ್ಲಿ ನಕ್ಷತ್ರಗಳ ಮಾರ್ಗದಿಂದ ಜ್ವಲಿಸುತ್ತಾ ಊರ್ಧ್ವಮುಖವಾಗಿ ಹೊರಟು ಹೋಯಿತು.
ಯುದ್ಧ್ವಾ ಚಿತ್ರೈರ್ವಿವಿಧೈಃ ಶಸ್ತ್ರಪೂಗೈ-
ರ್ದಿವ್ಯೈರ್ವೀರೋ ಮಾನುಷೈ ರಾಕ್ಷಸೈಶ್ಚ ।
ನದನ್ ನಾದಾನ್ ವಿವಿಧಾನ್ ಭೈರವಾಂಶ್ಚ
ಪ್ರಾಣಾನಿಷ್ಟಾಂಸ್ತ್ಯಾಜಿತಃ ಶಕ್ರಶಕ್ತ್ಯಾ ॥ 58 ॥
ವೀರನಾದ ಘಟೋತ್ಕಚನು ವಿವಿಧವಾದ ಮತ್ತು ವಿಚಿತ್ರವಾದ ಶಸ್ತ್ರಗಳಿಂದಲೂ, ಮನುಷ್ಯರ ಮತ್ತು ರಾಕ್ಷಸರ ದಿವ್ಯಾಸ್ತ್ರಗಳಿಂದಲೂ ಯುದ್ಧವನ್ನು ಮಾಡಿ, ವಿವಿಧವಾದ ಭೈರವನಾದಗಳನ್ನು ಮಾಡುತ್ತಾ ಇಂದ್ರನ ಶಕ್ತಿಯಿಂದ ಕರ್ಣನಿಂದ ಪ್ರಾಣಗಳನ್ನು ಬಿಡುವಂತೆ ಮಾಡಲ್ಪಟ್ಟನು.
ಇದಂ ಚಾನ್ಯಚ್ಚಿತ್ರಮಾಶ್ಚರ್ಯರೂಪಂ
ಚಕಾರಾಸೌ ಕರ್ಮ ಶತ್ರುಕ್ಷಯಾಯ ।
ತಸ್ಮಿನ್ ಕಾಲೇ ಶಕ್ತಿನಿರ್ಭಿನ್ನಮರ್ಮಾ
ಬಭೌ ರಾಜನ್ ಮೇಘಶೈಲಪ್ರಕಾಶಃ ॥ 59 ॥
ಎಲೈ ರಾಜನೇ, ಆ ಕಾಲದಲ್ಲಿ ಶಕ್ತಿಯಿಂದ ಭೇದಿಸಲ್ಪಟ್ಟ ಮರ್ಮಸ್ಥಾನಗಳುಳ್ಳ ಮೋಡದ ಪರ್ವತದಂತಹ ಕಾಂತಿಯುಳ್ಳ ಅವನು ಶತ್ರುಕ್ಷಯವನ್ನು ಮಾಡಲು ಇದೊಂದು ಆಶ್ಚರ್ಯಕರವಾದ ಕರ್ಮವನ್ನು ಮಾಡಿದನು.
ತತೋಽಂತರಿಕ್ಷಾದಪತದ್ ಗತಾಸುಃ
ಸ ರಾಕ್ಷಸೇಂದ್ರೋ ಭುವಿ ಭಿನ್ನದೇಹಃ ।
ಅವಾಕ್ಶಿರಾಃ ಸ್ತಬ್ಧಗಾತ್ರೋ ವಿಜಿಹ್ವೋ
ಘಟೋತ್ಕಚೋ ಮಹದಾಸ್ಥಾಯ ರೂಪಮ್ ॥ 60 ॥
ದೊಡ್ಡ ರೂಪವನ್ನು ತೆಗೆದುಕೊಂಡ ರಾಕ್ಷಸೇಂದ್ರನಾದ ಘಟೋತ್ಕಚನು ದೇಹವು ಭಿನ್ನವಾಗಿ ನಿಶ್ಚೇಷ್ಟವಾಗಿ, ಜಿಹ್ವಾಹೀನನಾಗಿ, ತಲೆಕೆಳಗಾಗಿ ಅಂತರಿಕ್ಷದಿಂದ ಭೂಮಿಯ ಮೇಲೆ ಬಿದ್ದನು.
ಸ ತದ್ರೂಪಂ ಭೈರವಂ ಭೀಮಕರ್ಮಾ
ಭೀಮಂ ಕೃತ್ವಾ ಭೈಮಸೇನಿಃ ಪಪಾತ ।

ಹತೋಽಪ್ಯೇವಂ ತವ ಸೈನ್ಯೇಕದೇಶ-
ಮಘೋಥಯತ್ ಕೌರವಾನ್ ಭೀಷಯಾಣಃ ॥ 61 ॥
ಭಯಂಕರವಾದ ಕರ್ಮವನ್ನು ಮಾಡಿ ಭೀಮಸೇನನ ಪುತ್ರನಾದ ಘಟೋತ್ಕಚನು ಘೋರವಾದ ರೂಪವನ್ನು ತಾಳಿ ಭೂಮಿಯ ಮೇಲೆ ಬಿದ್ದನು. ಮೃತನಾದರೂ ಬೀಳುತ್ತಾ ಕೌರವರಿಗೆ ಭಯವನುನಂಟು ಮಾಡುತ್ತಾ ಸೈನ್ಯದ ಒಂದು ಭಾಗವನ್ನು ಚೂರ್ಣಗೊಳಿಸಿದನು.
ತತೋ ಮಿಶ್ರಾಃ ಪ್ರಾಣದನ್ ಸಿಂಹನಾದೈ-
ರ್ಭೇರ್ಯಃ ಶಂಖಾ ಮುರಜಾಶ್ಚಾನಕಾಶ್ಚ |
ದಗ್ಧಾಂ ಮಾಯಾಂ ನಿಹತಂ ರಾಕ್ಷಸಂ ಚ
ದೃಷ್ಟ್ವಾ ಹೃಷ್ಟಾಃ ಪ್ರಾಣದನ್ ಕೌರವೇಯಾಃ ॥ 62 ॥
ಆಗ ಸಿಂಹನಾದಗಳಿಂದ ಮಿಶ್ರಿತವಾದ ಭೇರಿಗಳ, ಶಂಖಗಳ, ಮುರಜಗಳ ನಾದಗಳು ಮೊಳಗಿದವು. ರಾಕ್ಷಸನಾದ ಘಟೋತ್ಕಚನ ಮಾಯೆಯು ದಗ್ಧವಾದುದನ್ನೂ, ರಾಕ್ಷಸನು ಹತನಾದುದನ್ನೂ ನೋಡಿ ಕೌರವ ಸೇನೆಯ ಯೋಧರು ಸಂತೋಷದಿಂದ ನಾದವನ್ನು ಮಾಡಿದರು.
ತತಃ ಕರ್ಣಃ ಕುರುಭಿಃ ಪೂಜ್ಯಮಾನೋ
ಯಥಾ ಶಕ್ರೋ ವೃತ್ರವಧೇ ಮರುದ್ಭಿಃ |
ಅನ್ವಾರೂಢಸ್ತವ ಪುತ್ರಂ ರಥಸ್ಥಂ
ಹೃಷ್ಟಶ್ಚಾಪಿ ಪ್ರಾವಿಶತ್ ಸ್ವಂ ಸ ಸೈನ್ಯಮ್ ॥ 63 ॥
ಆಗ ವೃತ್ರವಧೆಯು ಉಂಟಾದಾಗ ಮರುತ್ತುಗಳು ಇಂದ್ರನನ್ನು ಪೂಜಿಸಿದಂತೆ ಕರ್ಣನು ಕೌರವರಿಂದ ಪೂಜಿಸಲ್ಪಟ್ಟು, ನಿನ್ನ ಪುತ್ರನ ರಥವನ್ನು ತನ್ನ ರಥದಲ್ಲಿ ಹಿಂಬಾಲಿಸಿ, ಸಂತೋಷದಿಂದ ಕೂಡಿದವನಾಗಿ ತನ್ನ ಸೈನ್ಯವನ್ನು ಪ್ರವೇಶಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ಘಟೋತ್ಕಚವಧಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತೈದನೆಯ ಅಧ್ಯಾಯ ಮುಗಿಯಿತು.
॥ ಘಟೋತ್ಕಚವಧಪರ್ವವು ಮುಗಿಯಿತು ॥
* * * * *
7. ದ್ರೋಣವಧಪರ್ವ
ನೂರ ಅರವತ್ತಾರನೆಯ ಅಧ್ಯಾಯ
ಘಟೋತ್ಕಚನಿಧನದಿಂದ ಪಾಂಡವರು ಶೋಕಪಡುತ್ತಿರುವಾಗ ಕೃಷ್ಣನ ಹರ್ಷ. ಅರ್ಜುನನಿಗೆ ಅದರ ಕಾರಣನಿರೂಪಣೆ.
ಧೃತರಾಷ್ಟ್ರಃ
ತಸ್ಮಿನ್ ಹತೇ ಮಹಾಮಾಯೇ ಮಹಾತೇಜಸಿ ರಾಕ್ಷಸೇ |
ಅಮರ್ಷಿತಾ ಪಾಂಡವೇಯಾ ಕಿಮಕುರ್ವನ್ ಮಹಾರಣೇ ॥ 1 ॥
ಧೃತರಾಷ್ಟ್ರ, ಮಹಾಮಾಯೆಗಳನ್ನು ಹೊಂದಿದ್ದ, ಮಹಾತೇಜಸ್ವಿಯಾದ ರಾಕ್ಷಸನು ಆ ದೊಡ್ಡಯುದ್ಧದಲ್ಲಿ ಹತನಾಗುತ್ತಿರಲು ರೋಷಗೊಂಡ ಪಾಂಡವರು ಏನು ಮಾಡಿದರು?
ಮರ್ದಿತಾಶ್ಚ ಭೃಶಂ ಯುದ್ಧೇ ಕಿಮಕುರ್ವಂತ ಸಂಜಯ |
ಯೇ ಚ ತೇಽಭ್ಯದ್ರವನ್ ದ್ರೋಣಂ ವ್ಯೂಢಾನೀಕಾಃ ಪ್ರಹಾರಿಣಃ |
ಸೃಂಜಯಾ ಸಹಪಾಂಚಾಲ್ಯೈಸ್ತೇಽಕುರ್ವನ್ ಕಿಂ ಮಹಾರಣೇ ॥ 2 ॥
ಎಲೈ ಸಂಜಯನೇ, ಯುದ್ಧದಲ್ಲಿ ಚೆನ್ನಾಗಿ ಮರ್ದಿತರಾದ ನನ್ನವರಾದರೂ ಏನು ಮಾಡಿದರು? ವ್ಯೂಹವನ್ನು ಮಾಡಿ ದ್ರೋಣರನ್ನು ಎದುರಿಸಿದ ಪ್ರಹಾರಶೀಲರಾದ ಸೃಂಜಯರು ಮತ್ತು ಪಾಂಚಾಲರು ಸಹ ಮಹಾಯುದ್ಧದಲ್ಲಿ ಏನು ಮಾಡಿದರು?
ಸೌಮದತ್ತೇರ್ವಧಾದ್ ದ್ರೋಣಮಾಯತ್ತಂ ಸೈಂಧವಸ್ಯ ಚ |
ಅಮರ್ಷಾಜ್ಜೀವಿತಂ ತ್ಯಕ್ತ್ವಾ ಗಾಹಮಾನಂ ವರೂಥಿನೀಮ್ ॥ 3 ॥
ಜೃಂಭಮಾಣಮಿವ ವ್ಯಾಘ್ರಂ ವ್ಯಾತ್ತಾನನಮಿವಾಂತಕಮ್ |
ಕಥಂ ಪ್ರತ್ಯುದ್ಯಯುರ್ದ್ರೋಣಮಜಯ್ಯಂ ಕುರುಸೃಂಜಯಾಃ ॥ 4 ॥
ಭೂರಿಶ್ರವನ ವಧೆಯಿಂದಲೂ, ಸೈಂಧವನ ವಧೆಯಿಂದಲೂ ರೋಷಗೊಂಡು ಜೀವದ ಆಸೆಯನ್ನು ತೊರೆದು ಆಕಳಿಸುವ ವ್ಯಾಘ್ರದಂತೆ, ಬಾಯ್ತೆರೆದ ಯಮನಂತೆ ಪಾಂಡವರ ಸೈನ್ಯವನ್ನು ಪ್ರವೇಶಿಸುವ, ಜಯಿಸಲು ಅಸಾಧ್ಯರಾದ ದ್ರೋಣರನ್ನು ಪಾಂಡವ-ಸೃಂಜಯರು ಹೇಗೆ ಎದುರಿಸಿದರು?
ಆಚಾರ್ಯಂ ಯೇ ಚ ರಕ್ಷಂತಿ ದುರ್ಯೋಧನಪುರೋಗಮಾಃ |
ದ್ರೌಣಿಕರ್ಣಕೃಪಾಸ್ತಾತ ತೇ ಹ್ಯಕುರ್ವನ್ ಕಿಮಾಹವೇ ॥ 5 ॥
ಎಲೈ ಪ್ರೀತಿಪಾತ್ರನೇ, ಆಚಾರ್ಯರನ್ನು ರಕ್ಷಿಸುವ ದುರ್ಯೋಧನನೇ ಮೊದಲಾದ, ಅಶ್ವತ್ಥಾಮ-ಕಣರ್-ಕೃಪರು ಯುದ್ಧದಲ್ಲಿ ಏನು ಮಾಡಿದರು?
ಭಾರದ್ವಾಜಂ ಜಿಘಾಂಸಂತೌ ಸವ್ಯಸಾಚಿವೃಕೋದರೌ |
ಆರ್ಚ್ಛತಾಂ ಮಾಮಕಾನ್ ಯುದ್ಧೇ ಕಥಂ ಸಂಜಯ ಶಂಸ ಮೇ ॥6॥

ಎಲೈ ಸಂಜಯನೇ, ದ್ರೋಣರನ್ನು ಕೊಲ್ಲುವ ಇಚ್ಛೆಯಿಂದ ಭೀಮಾರ್ಜುನರು ಯುದ್ಧದಲ್ಲಿ ಹೇಗೆ ನನ್ನವರನ್ನು ಸಮೀಪಿಸಿದರೆಂದು ನನಗೆ ಹೇಳು.
ಸಿಂಧುರಾಜವಧೇನೇಮೇ ಘಟೋತ್ಕಚವಧೇನ ತೇ |
ಅಮರ್ಷಿತಾಶ್ಚ ಸಂಕ್ರುದ್ಧಾ ರಣಂ ಚಕ್ರುಃ ಕಥಂ ಯುಧಿ ॥ 7 ॥
ಸೈಂಧವನ ವಧೆಯಿಂದ ಕೋಪಗೊಂಡ ಈ ನನ್ನವರೂ, ಘಟೋತ್ಕಚನ ವಧೆಯಿಂದ ಕೋಪಗೊಂಡ ಅವರೂ ರೋಷಾವಿಷ್ಟರಾಗಿ ರಣರಂಗದಲ್ಲಿ ಹೇಗೆ ಯುದ್ಧವನ್ನು ಮಾಡಿದರು?
ಸಂಜಯಃ
ಹೈಡಿಂಬಂ ನಿಹತಂ ದೃಷ್ಟ್ವಾ ವಿಕೀರ್ಣಮಿವ ಪರ್ವತಮ್ |
ಪಾಂಡವಾ ದೀನಮನಸಃ ಸರ್ವೇ ಬಾಷ್ಪಾಕುಲೇಕ್ಷಣಾಃ ॥ 8 ॥
ಸಂಜಯ ಬಿರಿದು ಹೋದ ಪರ್ವತದಂತೆ ಘಟೋತ್ಕಚನು ಹತನಾದುದನ್ನು ನೋಡಿ ಪಾಂಡವರೆಲ್ಲರೂ ದೀನ ಮನಸ್ಸಿನಿಂದ ಕೂಡಿ ಬಾಷ್ಪಪೂರಿತನೇತ್ರರಾದರು.
ವಾಸುದೇವಸ್ತು ಹರ್ಷೇಣ ಮಹತಾಽಭಿಪರಿಪ್ಲುತಃ |
ನನಾದ ಸಿಂಹವನ್ನಾದಂ ವ್ಯಥಯನ್ನಿವ ಭಾರತ |
ವಿನದ್ಯ ಚ ಮಹಾನಾದಂ ಪರ್ಯಷ್ವಜತ ಫಲ್ಗುನಮ್ ॥ 9 ॥
ಎಲೈ ಭಾರತನೇ, ಕೃಷ್ಣನಾದರೋ ಮಹಾಸಂತೋಷದಿಂದ ಪೂರ್ಣನಾಗಿ ಎಲ್ಲರನ್ನೂ ವ್ಯಥೆಪಡಿಸುವವನಂತೆ ಸಿಂಹನಾದವನ್ನು ಮಾಡಿದನು. ಮಹಾನಾದವನ್ನು ಮಾಡಿದ ಅವನು ಅರ್ಜುನನನ್ನು ಆಲಿಂಗಿಸಿದನು.
ಸ ವಿನದ್ಯ ಮಹಾನಾದಮಭೀಶೂನ್ ಸನ್ನಿಯಮ್ಯ ಚ |
ನನರ್ತ ಹರ್ಷಸಂವೀತೋ ವಾತೋದ್ಧೂತ ಇವ ದ್ರುಮಃ ॥ 10 ॥
ಅವನು ಮಹಾನಾದವನ್ನು ಮಾಡಿ ಕಡಿವಾಣಗಳನ್ನು ಹಿಡಿದು ಹರ್ಷಪೂರ್ಣನಾಗಿ ಬಿರುಗಾಳಿಗೆ ಸಿಕ್ಕಿದ ಮರದಂತೆ ನರ್ತನವನ್ನು ಮಾಡಿದನು.
ತತೋ ವಿನಿರ್ಭ್ರಾಮ್ಯ ಪುನಃ ಪಾರ್ಥಮಾಸ್ಫೋಟ್ಯ ಚಾಸಕೃತ್ |
ರಥೋಪಸ್ಥಗತೋ ಭೀಮಂ ಪ್ರಾಣದತ್ ಪುನರಚ್ಯುತಃ ॥ 11 ॥
ಅನಂತರ ಸುತ್ತಲೂ ತಿರುಗಿ ಅರ್ಜುನನ ಬೆನ್ನಿನ ಮೇಲೆ ಸಂತೋಷದ ಏಟನ್ನು ಹೊಡೆದು ರಥದ ಮುಂಭಾಗದಲ್ಲಿ ಕುಳಿತು ಅಚ್ಯುತನು ಪುನಃ ಭಯಂಕರವಾದ ನಾದವನ್ನು ಮಾಡಿದನು.
ಪ್ರಹೃಷ್ಟಮನಸಂ ಜ್ಞಾತ್ವಾ ವಾಸುದೇವಂ ಮಹಾಬಲಮ್ |
ಅಬ್ರವೀದರ್ಜುನೋ ರಾಜನ್ ನಾತಿಹೃಷ್ಟಮನಾ ಇವ ॥ 12 ॥
ಮಹಾಬಲನಾದ ವಾಸುದೇವನು ಸಂತೋಷಗೊಂಡ ಮನಸ್ಸುಳ್ಳವನಾಗಿದ್ದಾನೆಂದು ತಿಳಿದ ಅರ್ಜುನನು ಬಹಳ ಸಂತೋಷಗೊಳ್ಳದೆ ಎಲೈ ರಾಜನೇ, ಅವನನ್ನು ಕುರಿತು ಮಾತನಾಡಿದನು.
ಅತಿಹರ್ಷೋಽಯಮಸ್ಥಾನೇ ತವಾದ್ಯ ಮಧುಸೂದನ |
ಶೋಕಸ್ಥಾನೇ ಪರೇ ಪ್ರಾಪ್ತೇ ಹೈಡಿಂಬಸ್ಯ ವಧೇನ ವೈ ॥ 13 ॥
ಎಲೈ ಮಧುಸೂದನನೇ, ಘಟೋತ್ಕಚನ ವಧೆಯಿಂದ ಶೋಕಪಡುವ ಕಾರಣವು ಒದಗಿರುವಾಗ ಈ ಅನುಚಿತವಾದ ಕಾಲದಲ್ಲಿ ಈ ದಿನ ನಿನಗೆ ಬಹಳ ಹರ್ಷವು ಉಂಟಾಗಿದೆ!
ವಿಮುಖಾನಿ ಚ ಸೈನ್ಯಾನಿ ಹತಂ ದೃಷ್ಟ್ವಾ ಘಟೋತ್ಕಚಮ್ |
ವಯಂ ಚ ಭೃಶಮಾವಿಗ್ನಾ ಹೈಡಿಂಬಸ್ಯ ನಿಪಾತನಾತ್ ॥ 14 ॥
ಘಟೋತ್ಕಚನು ಹತನಾದುದನ್ನು ನೋಡಿ ನಮ್ಮ ಸೈನ್ಯಗಳು ವಿಮುಖವಾಗಿವೆ. ಘಟೋತ್ಕಚನ ನಿಪಾತದಿಂದ ನಾವೂ ಸಹ ಬಹಳ ದುಃಖಗೊಂಡಿದ್ದೇವೆ.
ನೈತತ್ಕಾರಣಮಲ್ಪಂ ಹಿ ಭವಿಷ್ಯತಿ ಜನಾರ್ದನ |
ತದದ್ಯ ಶಂಸ ಮೇ ಪೃಷ್ಟಃ ಸತ್ಯಂ ಸತ್ಯವತಾಂ ವರ ॥ 15 ॥
ಎಲೈ ಜನಾರ್ದನನೇ, ಇದಕ್ಕೆ ಅಲ್ಪವಾದ ಕಾರಣವು ಇರಲಾರದು. ಎಲೈ ಸತ್ಯವಂತರಲ್ಲಿ ಶ್ರೇಷ್ಠನೇ, ನನ್ನ ಪ್ರಶ್ನೆಗೆ ಉತ್ತರವಾಗಿ ಈ ದಿನ ನನಗೆ ಸತ್ಯವಾದ ವಿಷಯವನ್ನು ಹೇಳು.
ಯದ್ಯೇತನ್ನ ರಹಸ್ಯಂ ತೇ ವಕ್ತುಮರ್ಹಸ್ಯರಿಂದಮ |
ಧೈರ್ಯಸ್ಯ ವೈ ಕೃತಿಂ ಬ್ರೂಹಿ ತ್ವಮದ್ಯ ಮಧುಸೂದನ ॥ 16 ॥
ಎಲೈ ಅರಿಂದಮನೇ, ಇದು ರಹಸ್ಯವಲ್ಲದಿದ್ದರೆ ನನಗೆ ಈ ಧೈರ್ಯ ಮತ್ತು ಸಂತಸದ ಕಾರಣವನ್ನು ಎಲೈ ಮಧುಸೂದನನೇ, ಈ ದಿನ ಹೇಳುವವನಾಗು.
ಸಮುದ್ರಸ್ಯೇವ ಸಂಶೋಷಂ ಮೇರೋರಿವ ವಿಸರ್ಪಣಮ್ |
ತಥೈತಲ್ಲಾಘವಂ ಮನ್ಯೇ ತವ ಕರ್ಮ ಜನಾರ್ದನ ॥ 17 ॥
ಎಲೈ ಜನಾರ್ದನನೇ, ಈ ನಿನ್ನ ಹಗುರವಾದ ವರ್ತನೆಯನ್ನು ಸಮುದ್ರದ ಶೋಷಣದಂತೆ, ಮೇರುವಿನ ಚಲನೆಯಂತೆ ಎಂದು ನಾನು ಭಾವಿಸುತ್ತೇನೆ.
ವಾಸುದೇವಃ
ಅತಿಹರ್ಷಮಿಮಂ ಪ್ರಾಪ್ತಂ ಶೃಣು ಮೇ ತ್ವಂ ಧನಂಜಯ |

ಅತೀವ ಮನಸಃ ಸದ್ಯಃ ಪ್ರಸಾದಕರಮುತ್ತಮಮ್ ॥ 18 ॥
ವಾಸುದೇವ ಎಲ್ಯೆ ಧನಂಜಯನೇ, ತಕ್ಷಣದಲ್ಲಿಯೇ ಮನಸ್ಸಿಗೆ ಶ್ರೇಷ್ಠವಾದ ಪ್ರಸನ್ನತೆಯನ್ನು ಉಂಟು ಮಾಡುವ ಈ ಹರ್ಷದ ಸಂಗತಿಯು ಪ್ರಾಪ್ತವಾದುದನ್ನು ನೀನು ನನ್ನಿಂದ ಕೇಳು.
ಶಕ್ತಿಂ ಘಟೋತ್ಕಚೇನೇಮಾಂ ವ್ಯಂಸಯಿತ್ವಾ ಮಹಾದ್ಯುತೇ |
ಕರ್ಣಂ ನಿಹತಮೇವಾಜೌ ವಿದ್ಧಿ ಸದ್ಯೋ ಧನಂಜಯ ॥ 19 ॥
ಎಲ್ಯೆ ಧನಂಜಯನೇ, ಮಹಾದ್ಯುತಿಯೇ, ಘಟೋತ್ಕಚನ ಮೂಲಕವಾಗಿ ಕರ್ಣನ ಶಕ್ತಿಯನ್ನು ವ್ಯರ್ಥಗೊಳಿಸಿದ ಮೇಲೆ ಈ ದಿನವೇ ನೀನು ಯುದ್ಧದಲ್ಲಿ ಕರ್ಣನನ್ನು ಕೊಂದಿದ್ದೇನೆಂದು ತಿಳಿ.
ಶಕ್ತಿಹಸ್ತಂ ಪುನಃ ಕರ್ಣಂ ಕೋ ಲೋಕೇಽಸ್ತಿ ಪುಮಾನಿಹ |
ಯ ಏನಮಭಿತಸ್ತಿಷ್ಠೇತ್ ಕಾರ್ತ್ತಿಕೇಯಮಿವಾಹವೇ ॥ 20 ॥
ಕೈಯಲ್ಲಿ ಶಕ್ತಿಯನ್ನು ಹಿಡಿದು ರಣರಂಗದಲ್ಲಿ ಷಣ್ಮುಖನಂತೆ ನಿಂತ ಕರ್ಣನನ್ನು ಈ ಲೋಕದಲ್ಲಿ ಯಾವ ಮನುಷ್ಯನು ಎದುರಿಸಿಯಾನು?
ದಿಷ್ಟ್ಯಾಽಪನೀತಕವಚೋ ದಿಷ್ಟ್ಯಾಽಪಹೃತಕುಂಡಲಃ |
ದಿಷ್ಟ್ಯಾ ಚ ವ್ಯಂಸಿತಾ ಶಕ್ತಿರಮೋಘಾಽಸ್ಯ ಘಟೋತ್ಕಚೇ ॥ 21 ॥
ದೇವರ ದಯದಿಂದ ಅವನ ಕವಚವು ಅಪಹರಿಸಲ್ಪಟ್ಟಿತು. ಅವನ ಕುಂಡಲಗಳೂ ಅಪಹರಿಸಲ್ಪಟ್ಟವು. ದೇವರ ದಯದಿಂದಲೇ ಅಮೋಘವಾದ ಅವನ ಶಕ್ತಿಯು ಘಟೋತ್ಕಚನಲ್ಲಿ ವಂಚಿಸಲ್ಪಟ್ಟಿತು.
ಯದಿ ಹಿ ಸ್ಯಾತ್ ಸಕವಚಸ್ತಥೈವ ಚ ಸಕುಂಡಲಃ |
ಸಾಮರಾನಪಿ ಲೋಕಾಂಸ್ತ್ರೀನೇಕಃ ಕರ್ಣೋ ಜಯೇದ್ ಬಲೀ ॥ 22 ॥
ಕರ್ಣನು ಕವಚ-ಕುಂಡಲಗಳಿಂದ ಸಹಿತನಾಗಿದ್ದರೆ ಬಲಿಷ್ಠನಾದ ಅವನೊಬ್ಬನೇ ದೇವತೆಗಳಿಂದ ಕೂಡಿದ ಮೂರುಲೋಕಗಳನ್ನೂ ಗೆದ್ದಾನು.
ವಾಸವೋ ವಾ ಕುಬೇರೋ ವಾ ವರುಣೋ ವಾ ಜಲೇಶ್ವರಃ |
ಯಮೋ ವಾ ನೋತ್ಸಹೇತ್ ಕರ್ಣಂ ರಣೇ ಪ್ರತಿಸಮಾಸಿತುಮ್ ॥23॥
ಇಂದ್ರನಾಗಲೀ, ಕುಬೇರನಾಗಲೀ, ಜಲೇಶ್ವರನಾದ ವರುಣನಾಗಲೀ, ಯಮನಾಗಲೀ, ರಣರಂಗದಲ್ಲಿ ಕರ್ಣನ ಎದುರಿಗೆ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ.
ಗಾಂಡೀವಮಾಯಮ್ಯ ಭವಾಂಶ್ಚಕ್ರಂ ವಾಽಹಂ ಸುದರ್ಶನಮ್ |
ನ ಶಕ್ತೌ ಸ್ವೋ ರಣೇ ಜೇತುಂ ತಥಾಯುಕ್ತಂ ನರರ್ಷಭಮ್ ॥ 24 ॥
ಗಾಂಡೀವ ಧನುಸ್ಸನ್ನು ಬಗ್ಗಿಸುವ ನೀನಾಗಲೀ, ಸುದರ್ಶನಚಕ್ರವನ್ನು ಧರಿಸಿದ ನಾನಾಗಲೀ ರಣರಂಗದಲ್ಲಿ ಅಂತಹ ಪರಾಕ್ರಮದಿಂದ ಯುಕ್ತನಾದ ಕರ್ಣನನ್ನು ಗೆಲ್ಲಲು ಸಮರ್ಥರಾಗುತ್ತಿರಲಿಲ್ಲ.
ತ್ವದ್ಧಿತಾರ್ಥಂ ತು ಶಕ್ರೇಣ ಮಾಯಯಾ ಹೃತಕುಂಡಲಃ |
ವಿಹೀನಕವಚಶ್ಚಾಯಂ ಕೃತಃ ಪರಪುರಂಜಯಃ ॥ 25 ॥
ನಿನ್ನ ಹಿತಾರ್ಥವಾಗಿ ಇಂದ್ರನು ಪರಪುರಂಜಯನಾದ ಕರ್ಣನ ಕವಚ- ಕುಂಡಲಗಳನ್ನು ಕಪಟದಿಂದ ಅಪಹರಿಸಿದನು.
ಉತ್ಕೃತ್ಯ ಕವಚಂ ಯಸ್ಮಾತ್ ಕುಂಡಲೇ ವಿಮಲೇ ಚ ತೇ |
ಪ್ರಾದಾಚ್ಛಕ್ರಾಯ ಕರ್ಣೋ ವೈ ತೇನ ವೈಕರ್ತನಃ ಸ್ಮೃತಃ ॥ 26 ॥
ದೇಹವನ್ನು ಕತ್ತರಿಸಿ ಕರ್ಣನು ಇಂದ್ರನಿಗೆ ಕವಚ-ಕುಂಡಲಗಳನ್ನು ಕೊಟ್ಟ ಕಾರಣದಿಂದ ಅವನಿಗೆ ವೈಕರ್ತನ ಎಂಬ ಹೆಸರು ಬಂದಿತು.
ಆಶೀವಿಷ ಇವ ಕ್ರುದ್ಧಃ ಸ್ತಂಭಿತೋ ಮಂತ್ರತೇಜಸಾ |
ತಥಾದ್ಯ ಭಾತಿ ಕರ್ಣೋ ಮೇ ಶಾಂತಜ್ವಾಲ ಇವಾನಲಃ ॥ 27 ॥
ಮಂತ್ರತೇಜಸ್ಸಿನಿಂದ ಸ್ತಂಭಿತವಾದ ಕೋಪಗೊಂಡ ಸರ್ಪದಂತೆ ಈ ದಿನ ಕರ್ಣನು ಜ್ವಾಲೆಗಳು ಶಾಂತವಾದ ಅಗ್ನಿಯಂತೆ ನನಗೆ ಕಾಣುತ್ತಿದ್ದಾನೆ.
ಯದಾ ಪ್ರಭೃತಿ ಕರ್ಣಾಯ ಶಕ್ತಿರ್ದತ್ತಾ ಮಹಾತ್ಮನಾ |
ವಾಸವೇನ ಮಹಾಬಾಹೋ ಪ್ರಾಪ್ತಾ ಯಾಽಸೌ ಘಟೋತ್ಕಚೇ ॥ 28 ॥
ಕುಂಡಲಾಭ್ಯಾಂ ನಿಮಾಯಾಥ ದಿವ್ಯೇನ ಕವಚೇನ ಚ |
ತಾಂ ಪ್ರಾಪ್ಯಾಮನ್ಯತ ವೃಷಾ ಸತತಂ ತ್ವಾಂ ಹತಂ ರಣೇ ॥ 29 ॥
ಎಲ್ಯೆ ಮಹಾಭಾರತನೇ, ಮಹಾತ್ಮನಾದ ಇಂದ್ರನು ಈಗ ಘಟೋತ್ಕಚನ ಮೇಲೆ ಪ್ರಯೋಗಿಸಿದ ಶಕಿತಯನ್ನು ಯಾವಾಗ ಕರ್ಣನಿಗೆ ಕುಂಡಲಗಳ ಮತ್ತು ದಿವ್ಯವಾದ ಕವಚದ ವಿನಿಮಯದಿಂದ ಕೊಟ್ಟನೋ, ಆಗಲಿಂದಲೂ ವೃಷನು (ಶ್ರೇಷ್ಠನಾದ ಕರ್ಣನು) ಆ ಶಕ್ತಿಯನ್ನು ಹೊಂದಿ ನೀನು ಯುದ್ಧದಲ್ಲಿ ಮೃತನಾಗಿದ್ದೀಯೆ ಎಂದೇ ತಿಳಿದನು.
ಏವಂಗತೇಽಪಿ ಶಕ್ಯೋಽಯಂ ಹಂತುಂ ನಾನ್ಯೇನ ಕೇನಚಿತ್ |
ಋತೇ ತ್ವಾ ಪುರುಷವ್ಯಾಘ್ರ ಶಪೇ ಸತ್ಯೇನ ಚಾನಘ ॥ 30 ॥
ಎಲ್ಯೆ ಪುರುಷವ್ಯಾಘ್ರನೇ, ಅವನು ಕವಚ-ಕುಂಡಲಗಳಿಂದ ಹೀನನಾಗಿದ್ದರೂ ಅವನನ್ನು ನಿನ್ನನ್ನು ಬಿಟ್ಟು ಬೇರೆ ಯಾರೂ ಕೊಲ್ಲಲು ಸಾಧ್ಯವಿಲ್ಲ. ಎಲ್ಯೆ ಅನಘನೇ, ಶಪಥವನ್ನು ಮಾಡಿ ಇದನ್ನು ಹೇಳುತ್ತಿದ್ದೇನೆ.
ಬ್ರಹ್ಮಣ್ಯಃ ಸತ್ಯವಾದೀ ಚ ತಪಸ್ವೀ ನಿಯತವ್ರತಃ |

ರಿಪುಷ್ವಪಿ ದಯಾವಾಂಶ್ಚ ತಸ್ಮಾತ್ ಕರ್ಣೋ ವೃಷಾ ಸ್ಮೃತಃ ॥ 31॥
ಅವನು ಬ್ರಾಹ್ಮಣರಲ್ಲಿ ವತ್ಸಲನಾದವನು, ಸತ್ಯವನ್ನು ನುಡಿಯುವವನು, ತಪಸ್ವಿ, ವ್ರತನಿಷ್ಠನಾದವನು ಮತ್ತು ಶತ್ರುಗಳಲ್ಲಿಯೂ ದಯೆಯನ್ನು ತೋರಿಸುವವನು. ಆ ಕಾರಣದಿಂದ ಕರ್ಣನಿಗೆ ವೃಷ ಎಂಬ ಹೆಸರಿದೆ.
ಯುದ್ಧಶೌಂಡೋ ಮಹಾಬಾಹುರ್ನಿತ್ಯೋದ್ಯತಶರಾಸನಃ |
ಕೇಸರೀವ ವನೇ ಮರ್ದನ್ ಮತ್ತಮಾತಂಗಯೂಥಪಾನ್ |
ವಿಮದಾನ್ ರಥಶಾರ್ದೂಲಾನ್ ಕುರುತೇ ರಣಮೂರ್ಧನಿ ॥ 32 ॥
ಯುದ್ಧಕುಶಲನೂ, ಮಹಾಬಾಹುವೂ, ಯಾವಾಗಲೂ ಉದ್ಯುಕ್ತ ಧನುಸ್ಸನ್ನು ಎತ್ತಿ ಹಿಡಿದವನೂ ಆದ ಕರ್ಣನು ಮದಗಜಗಳ ಸಮೂಹವನ್ನು ಕಾಡಿನಲ್ಲಿ ಸಿಂಹವು ಮರ್ದಿಸಿದಂತೆ ಶ್ರೇಷ್ಠವಾದ ಯುದ್ಧದಲ್ಲಿ ರಥಶಾರ್ದೂಲರನ್ನು ಮದರಹಿತರನ್ನಾಗಿ ಮಾಡುತ್ತಾನೆ.
ಮಧ್ಯಂಗತ ಇವಾದಿತ್ಯೋ ಯೋ ನ ಶಕ್ಯೋ ನಿರೀಕ್ಷಿತುಮ್ |
ತ್ವದೀಯೈಃ ಪುರುಷವ್ಯಾಘ್ರ ಯೋಧಮುಖ್ಯೈರ್ಮಹಾತ್ಮಭಿಃ |
ಶರಜಾಲಸಹಸ್ರಾಂಶುಃ ಶರದೀವ ದಿವಾಕರಃ ॥ 33 ॥
ಎಲೈ ಪುರುಷವ್ಯಾಘ್ರನೇ, ಆಕಾಶದಲ್ಲಿ ಮಧ್ಯಂದಿನ ಗತನಾದ ಸೂರ್ಯನಂತೆ ನಿನ್ನ ಶ್ರೇಷ್ಠ ಯೋಧರು ಯಾರೂ ಅವನನ್ನು ನೋಡಲಾರರು. ಅವನು ಶರಜಾಲಗಳ ಕಿರಣಗಳಿಂದ ಕೂಡಿದ ಶರತ್ಕಾಲದ ಸೂರ್ಯನಂತೆ ಇದ್ದಾನೆ.
ತಪಾಂತೇ ತೋಯದೋ ಯದ್ವಚ್ಚರಧಾರಾಃ ಕ್ಷರತ್ಯಸೌ |
ದಿವ್ಯಾಸ್ತ್ರಜಲದಃ ಕರ್ಣಃ ಪರ್ಜನ್ಯ ಇವ ವೃಷ್ಟಿಮಾನ್ |
ಸೋಽದ್ಯ ಮಾನುಷತಾಂ ಪ್ರಾಪ್ತೋ ವಿಮುಕ್ತಃ ಶಕ್ರದತ್ತಯಾ ॥ 34 ॥
ಮಳೆಗಾಲದಲ್ಲಿ ಮೋಡವು ಹೇಗೆ ಜಲಧಾರೆಗಳನ್ನು ಸುರಿಸುವುದೋ ಅದರಂತೆ ಈ ದಿವ್ಯಾಸ್ತ್ರ ಮೇಘರೂಪವಾದ ಕರ್ಣನು ಪರ್ಜನ್ಯನಂತೆ ಅಸ್ತ್ರವನ್ನು ಸುರಿಸುವವನು. ಈ ದಿನ ಅವನು ಇಂದ್ರನು ಕೊಟ್ಟ ಶಕ್ತಿಯಿಂದ ರಹಿತನಾಗಿ ಸಾಧಾರಣ ಮನುಷ್ಯನಂತೆ ಆಗಿದ್ದಾನೆ.
ಏಕೋ ಹಿ ಯೋಗೋಽಸ್ಯ ಭವೇದ್ ವಧಾಯ
ಛಿದ್ರೇ ಹ್ಯೇನಂ ಸ್ವಪ್ರಮತ್ತಃ ಪ್ರಮತ್ತಮ್ |
ಕೃಚ್ಛ್ರಪ್ರಾಪ್ತಂ ರಥಚಕ್ರೇ ನಿಮಗ್ನೇ
ಹನ್ಯಾಃ ಪೂರ್ವಂ ತ್ವಂ ತು ಸಂಜ್ಞಾಂ ವಿಚಾರ್ಯ ॥ 35 ॥
ಅವನನ್ನು ವಧೆ ಮಾಡಲು ಒಂದೇ ಒಂದು ಉಪಾಯವಿದೆ. ಒಂದು ಸಣ್ಣ ಅವಕಾಶವು ದೊರೆತಾಗ ಎಂದರೆ ಅವನು ತನ್ನ ರಥಚಕ್ರವು ಭೂಮಿಯಲ್ಲಿ ಹೂತು ಕಷ್ಟಕ್ಕೆ ಸಿಲುಕಿ ಪ್ರಮತ್ತನಾದಾಗ ನೀನು ಪ್ರಮತ್ತನಾಗದೆ ನಾನು ಕೊಟ್ಟ ಸಂಕೇತವನ್ನು ಗಮನಿಸಿ ಮೊದಲು ಅವನನ್ನು ಕೊಲ್ಲಬೇಕು.
ಜರಾಸಂಧಶ್ಚೇದಿರಾಜೋ ಮಹಾತ್ಮಾ
ಮಹಾಬಲಶ್ಚೈಕಲವ್ಯೋ ನಿಷಾದಃ |
ಏಕೈಕಶೋ ನಿಹತಾಃ ಸರ್ವ ಏವ
ಯೋಗೈಸ್ತೈಸ್ತೈಸ್ತ್ವದ್ಧಿತಾರ್ಥಂ ಮಯೈವ ॥ 36 ॥
ಜರಾಸಂಧ, ಚೇದಿರಾಜನಾದ ಮಹಾತ್ಮನಾದ ಶಿಶುಪಾಲ, ಮಹಾಬಲನಾದ ಏಕಲವ್ಯ ಇವರಲ್ಲಿ ಒಬ್ಬೊಬ್ಬರನ್ನೂ ನಿನ್ನ ಹಿತದ ಸಲುವಾಗಿ ಆಯಾ ಉಪಾಯಗಳಿಂದ ನಾನೇ ಕೊಂದಿದ್ದೇನೆ.
ಅಥಾಪರೇ ನಿಹತಾ ರಾಕ್ಷಸೇಂದ್ರಾ
ಹಿಡಿಂಬಕಿರ್ಮೀರಬಕಪ್ರಧಾನಾಃ |
ಅಲಾಯುಧಃ ಪರಸೈನ್ಯಾವಮರ್ದೀ
ಘಟೋತ್ಕಚಶ್ಚೋಗ್ರಕರ್ಮಾ ತರಸ್ವೀ ॥ 37 ॥
ಹಾಗೆಯೇ ಉಳಿದ ರಾಕ್ಷಸೇಂದ್ರರಾದ ಹಿಡಿಂಬ, ಕಿರ್ಮೀರ, ಬಕ ಮೊದಲಾದವರು, ಪರಸೈನ್ಯನಾಶಕನಾದ ಅಲಾಯುಧ, ಯುದ್ಧದಲ್ಲಿ ಉಗ್ರಕರ್ಮವನ್ನು ಮಾಡುವ ಘಟೋತ್ಕಚ ಎಲ್ಲರೂ ನನ್ನಿಂದಲೇ ಹತರಾಗಿದ್ದಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್‌ಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೇಳನೆಯ ಅಧ್ಯಾಯ
ಪಾಂಡವರ ಹಿತಕ್ಕಾಗಿ ಕೃಷ್ಣನಿಂದ ತಾನು ಒಳ್ಳೆಯ ಉಪಾಯದಿಂದ
ಮಾಡಿಸಿದ ಜರಾಸಂಧಾದಿ ವಧೆಗಳ ಕಥನ.
ಅರ್ಜುನಃ
ಕಥಮಸ್ಮದ್ಧಿತಾರ್ಥಂ ತೇ ಕೈಶ್ಚ ಯೋಗೈರ್ಜನಾರ್ದನ |

ಜರಾಸಂಧಪ್ರಭೃತಯೋ ಘಾತಿತಾಃ ಪೃಥಿವೀಶ್ವರಾಃ ॥ 1 ॥
ಅರ್ಜುನ ಎಲೈ ಜನಾರ್ದನನೇ, ಹೇಗೆ ನಮ್ಮ ಹಿತಕ್ಕಾಗಿ ಜರಾಸಂಧಾದಿ ರಾಜರನ್ನು ನೀನು ಕೊಲ್ಲಿಸಿದೆ? ಮತ್ತು ಯಾವ ಉಪಾಯಗಳಿಂದ ಕೊಲ್ಲಿಸಿದೆ?
ವಾಸುದೇವಃ
ಜರಾಸಂಧಶ್ಚೇದಿರಾಜೋ ನೈಷಾದಿಶ್ಚ ಮಹಾಬಲಃ |
ಯದಿ ಸ್ಯುರ್ನ ಹತಾಃ ಪೂರ್ವಮಿದಾನೀಂ ಸ್ಯುರ್ಭಯಂಕರಾಃ ॥ 2 ॥
ವಾಸುದೇವ ಜರಾಸಂಧ, ಶಿಶುಪಾಲ, ಮಹಾಬಲನಾದ ಏಕಲವ್ಯ ಅವರು ಮೊದಲು ಹತರಾಗದಿದ್ದರೆ ಈಗ ಭಯಂಕರರಾಗಿರುತ್ತಿದ್ದರು.

ಸುಯೋಧನಸ್ತಾನವಶ್ಯಂ ವೃಣುಯಾದ್ ರಥಸತ್ತಮಾನ್ |
ತೇಽಸ್ಮಾಭಿರ್ನಿತ್ಯವಿದ್ವಿಷ್ಟಾಃ ಸಂಶ್ರಯೇಯುಶ್ಚ ಕೌರವಾನ್ ॥ 3 ॥
ಸುಯೋಧನನು ಖಂಡಿತವಾಗಿ ಆ ರಥಶ್ರೇಷ್ಠರನ್ನು ಆಹ್ವಾನಿಸಿರುತ್ತಿದ್ದನು. ನಮ್ಮ ಜೊತೆಯಲ್ಲಿ ನಿತ್ಯವೂ ದ್ವೇಷವನ್ನು ಮಾಡಿದ ಅವರು ಕೌರವರನ್ನು ಆಶ್ರಯಿಸಿರುತ್ತಿದ್ದರು.
ತೇ ಹಿ ವೀರಾ ಮಹಾತ್ಮಾನಃ ಕೃತಾಸ್ತ್ರಾ ದೃಢಯೋಧಿನಃ |
ಧಾರ್ತರಾಷ್ಟ್ರೀಂ ಚಮೂಂ ಕೃತ್ಸ್ನಾಂ ರಕ್ಷೇಯುರಮರಾ ಇವ ॥ 4 ॥
ವೀರರೂ, ಮಹಾತ್ಮರೂ, ಅಸ್ತ್ರಜ್ಞರೂ, ದೃಢಯೋಧಿಗಳೂ ಆದ ಅವರು ದುರ್ಯೋಧನನ ಸಮಗ್ರವಾದ ಸೈನ್ಯವನ್ನು ದೇವತೆಗಳಂತೆ ರಕ್ಷಿಸಿರುತ್ತಿದ್ದರು.
ಸೂತಪುತ್ರೋ ಜರಾಸಂಧಶ್ಚೇದಿರಾಜೋ ನಿಷಾದಜಃ |
ಸುಯೋಧನಂ ಸಮಾಶ್ರಿತ್ಯ ತಪೇರನ್ ಪೃಥಿವೀಮಿಮಾಮ್ ॥ 5 ॥
ಸೂತಪುತ್ರನಾದ ಕರ್ಣ, ಜರಾಸಂಧ, ಚೇದಿರಾಜನಾದ ಶಿಶುಪಾಲ, ಮಹಾತ್ಮನಾದ ಏಕಲವ್ಯ ಇವರು ದುರ್ಯೋಧನನನ್ನು ಆಶ್ರಯಿಸಿ ಈ ಭೂಮಿಯನ್ನೇ ಸಂತಾಪಪಡಿಸಿರುತ್ತಿದ್ದರು.
ಯೋಗೈರಪಿ ಹತಾ ಯೈಸ್ತೇ ತಾನ್ ಮೇ ಶೃಣು ಧನಂಜಯ |
ಅಜಯ್ಯಾ ಹಿ ವಿನಾ ಯೋಗೈರ್ಮೃಧೇ ತೇ ದೈವತೈರಪಿ ॥ 6 ॥
ಎಲೈ ಧನಂಜಯನೇ, ಅವರು ಯಾವ ಉಪಾಯಗಳಿಂದ ಹತರಾದರೆಂಬುದನ್ನು ಕೇಳು. ಉಪಾಯಗಳನ್ನು ಮಾಡದಿದ್ದರೆ ಅವರು ಯುದ್ಧದಲ್ಲಿ ದೇವತೆಗಳಿಂದಲೂ ಜಯಿಸಲು ಅಸಾಧ್ಯರಾದವರು.
ಏಕೈಕೋ ಹಿ ಪೃಥಕ್ ತೇಷಾಂ ಸಮಸ್ತಾಂ ಸುರವಾಹಿನೀಮ್ |
ಯೋಧಯೇತ್ ಸಮರೇ ಪಾರ್ಥ ಲೋಕಪಾಲಾಭಿರಕ್ಷಿತಾಮ್ ॥ 7 ॥
ಎಲೈ ಅರ್ಜುನನೇ, ಅವರಲ್ಲಿ ಒಬ್ಬೊಬ್ಬನೂ ಲೋಕಪಾಲಕರಿಂದ ರಕ್ಷಿತರಾದ ಸಮಗ್ರವಾದ ದೇವಸೇನೆಯ ಜೊತೆಯಲ್ಲಿ ಯುದ್ಧವನ್ನು ಮಾಡಿಯಾನು.
ಜರಾಸಂಧೋ ಹಿ ರುಷಿತೋ ರೌಹಿಣೇಯಪ್ರಧರ್ಷಿತಃ |
ಅಸ್ಮದ್ವಧಾರ್ಥಂ ಚಿಕ್ಷೇಪ ಗದಾಂ ವೈ ಲೋಹಿತಾಮುಖೀಮ್ ॥ 8 ॥
ಬಲರಾಮನಿಂದ ಅವಮಾನಗೊಳಿಸಲ್ಪಟ್ಟ ಜರಾಸಂಧನು ಕೋಪಗೊಂಡು ನಮ್ಮ ವಧೆಗಾಗಿ ರಕ್ತಮುಖವುಳ್ಳ ಗದೆಯನ್ನು ಎಸೆದನು.
ಸೀಮಂತಮಿವ ಕುರ್ವಾಣಾಂ ನಭಸಃ ಪಾವಕಪ್ರಭಾಮ್ |
ವ್ಯದೃಶ್ಯತಾಪತಂತೀ ಸಾ ಶಕ್ರಮುಕ್ತಾ ಯಥಾಶನಿಃ ॥ 9 ॥
ಅವನು ಎಸೆದ ಅಗ್ನಿಜ್ವಾಲೆಯ ಪ್ರಭೆಯುಳ್ಳ ಆಕಾಶದಲ್ಲಿ ಬೈತಲೆಯನ್ನು ಉಂಟು ಮಾಡುವಂತೆ ಬರುತಿತದ್ದ ಆ ಗದೆಯು ಇಂದ್ರನು ಪ್ರಯೋಗಿಸಿದ ವಜ್ರಾಯುಧದಂತೆ ನಮ್ಮ ಕಡೆಗೆ ಬರುತ್ತಿದ್ದುದು ಕಂಡುಬಂದಿತು.
ತಾಮಾಪತಂತೀಂ ದೃಷ್ಟ್ವೈವ ಗದಾಂ ರೋಹಿಣಿನಂದನಃ |
ಪ್ರತಿಘಾತಾರ್ಥಮಸ್ತ್ರಂ ವೈ ಸ್ಥೂಣಾಕರ್ಣಮವಾಸೃಜತ್ ॥ 10 ॥
ನಮ್ಮ ಕಡೆಗೆ ಬರುತ್ತಿದ್ದ ಆ ಗದೆಯನ್ನು ನೋಡಿದ ಕೂಡಲೇ ರೋಹಿಣೀ ನಂದನನಾದ ಬಲರಾಮನು ಅದಕ್ಕೆ ಪ್ರತಿಘಾತವನ್ನು ಮಾಡಲು ಸ್ಥೂಣಾಕರ್ಣಾಸ್ತ್ರವನ್ನು ಪ್ರಯೋಗ ಮಾಡಿದನು.
ಅಸ್ತ್ರವೇಗಪ್ರತಿಹತಾ ಸಾ ಗದಾ ಪ್ರಾಪತದ್ ಭುವಿ |
ದಾರಯಂತೀ ಧರಾಂ ದೇವೀಂ ಕಂಪಯಂತೀವ ಪರ್ವತಾನ್ ॥ 11 ॥
ಬಲರಾಮನ ಅಸ್ತ್ರದಿಂದ ಪ್ರತಿಹತವಾದ ಆ ಗದೆಯು ಭೂಮಿಯನ್ನು ಸೀಳುತ್ತಾ, ಪರ್ವತಗಳನ್ನು ನಡುಗಿಸುತ್ತಾ ಭೂಮಿಯಲ್ಲಿ ಬಿದ್ದಿತು.
ತತ್ರ ಸ್ಮ ರಾಕ್ಷಸೀ ಘೋರಾ ಜರಾ ನಾಮಾಶುವಿಕ್ರಮಾ |
ಸಂಧಯಾಮಾಸ ತಂ ಜಾತಂ ಜರಾಸಂಧಮರಿಂದಮಮ್ ॥ 12 ॥
ಅಲ್ಲಿ ಘೋರಳಾದ, ಶೀಘ್ರಪರಾಕ್ರಮಿಯಾದ ಜರಾ ಎಂಬ ರಾಕ್ಷಸಿಯು ಅರಿಂದಮನಾದ ಜರಾಸಂಧನು ಹುಟ್ಟಿದಾಗ ಅವನನ್ನು ಜೋಡಿಸಿದ್ದಳು.
ದ್ವಾಭ್ಯಾಂ ಜಾತೋ ಹಿ ಮಾತೃಭ್ಯಾಮರ್ಧದೇಹಃ ಪೃಥಕ್ ಪೃಥಕ್ |
ತಯಾ ಸ ಸಂಧಿತೋ ಯಸ್ಮಾಜ್ಜರಾಸಂಧಸ್ತತಃ ಸ್ಮೃತಃ ॥ 13 ॥
ಇಬ್ಬರು ತಾಯಿಯರಿಂದ ಅರ್ಧ-ಅರ್ಧ ದೇಹವುಳ್ಳವನಾಗಿ ಹುಟ್ಟಿ, ಆ ಜರೆಯಿಂದ ಜೋಡಿಸಲ್ಪಟ್ಟ ಕಾರಣದಿಂದ ಜರಾಸಂಧನೆಂಬ

ಹೆಸರನ್ನು ಹೊಂದಿದನು.
ಸಾ ತು ಭೂಮಿಗತಾ ಪಾರ್ಥ ಹತಾ ಸಸುತಬಾಂಧವಾ |
ಗದಯಾ ತೇನ ಚಾಸ್ತ್ರೇಣ ಸ್ಥೂಣಾಕರ್ಣೇನ ರಾಕ್ಷಸೀ ॥ 14 ॥
ಎಲೈ ಪಾರ್ಥನೇ, ತನ್ನ ಪುತ್ರ ಮತ್ತು ಬಾಂಧವರೊಡನೆ ಭೂಮಿಯೊಳಗಿದ್ದ ಆ ಜರೆಯು ಗದೆಯಿಂದಲೂ, ಆ ಸ್ಥೂಣಾಕರ್ಣಾಸ್ತ್ರದಿಂದಲೂ ಹತಳಾದಳು.
ವಿನಾಭೂತಃ ಸ ಗದಯಾ ಜರಾಸಂಧೋ ಮಹಾಮೃಧೇ |
ನಿಹತೋ ಭೀಮಸೇನೇನ ಪಶ್ಯತಸ್ತೇ ಧನಂಜಯ ॥ 15 ॥
ಎಲೈ ಧನಂಜಯನೇ, ಗದೆಯಿಂದ ರಹಿತನಾದ ಜರಾಸಂಧನು ದೊಡ್ಡ ಯುದ್ಧದಲ್ಲಿ ನಿನ್ನ ಎದುರಿಗೇ ಭೀಮಸೇನನಿಂದ ಹತನಾದನು.

ಯದಿ ಹಿ ಸ್ಯಾದ್ ಗದಾಪಾಣಿರ್ಜರಾಸಂಧಃ ಪ್ರತಾಪವಾನ್ |
ಸೇಂದ್ರಾ ದೇವಾ ನ ತಂ ಹಂತುಂ ರಣೇ ಶಕ್ತಾ ನರೋತ್ತಮ ॥ 16 ॥
ಎಲೈ ನರೋತ್ತಮನೇ, ಒಂದು ಪಕ್ಷ ಪ್ರತಾಪಶಾಲಿಯಾದ ಜರಾಸಂಧನು ಗದೆಯನ್ನು ಹಿಡಿದು ನಿಂತಿದ್ದರೆ ಇಂದ್ರನಿಂದ ಸಹಿತರಾದ ದೇವತೆಗಳೂ ಸಹ ಯುದ್ಧದಲ್ಲಿ ಅವನನ್ನು ಕೊಲ್ಲಲು ಸಮರ್ಥರಾಗಿರುತ್ತಿರಲಿಲ್ಲ.
ತ್ವದ್ಧಿತಾರ್ಥಂ ಹಿ ನೈಷಾದಿರಂಗುಷ್ಠೇನ ವಿಯೋಜಿತಃ |
ದ್ರೋಣೇನಾಚಾರ್ಯಕಂ ಕೃತ್ವಾ ಛದ್ಮನಾ ಸತ್ಯವಿಕ್ರಮಃ ॥ 17 ॥
ನಿನ್ನ ಹಿತಕ್ಕಾಗಿಯೇ ದ್ರೋಣರು ಗುರುಭಾವವನ್ನು ಹೊಂದಿ ಸತ್ಯವಿಕ್ರಮನಾದ ಏಕಲವ್ಯನನ್ನು ಕಪಟದಿಂದ ಅಂಗುಷ್ಠರಹಿತನಾಗುವಂತೆ ಮಾಡಿದರು.
ಸ ತು ಬದ್ಧಾಂಗುಲಿತ್ರಾಣೋ ನೈಷಾದಿರ್ದೃಢವಿಕ್ರಮಃ |
ಅಸ್ಯನ್ನೇಕೋ ವನಚರೋ ಬಭೌ ರಾಮ ಇವಾಪರಃ ॥ 18 ॥
ದೃಢವಿಕ್ರಮನಾದ ಏಕಲವ್ಯನಾದರೂ ಅಂಗುಲಿತ್ರಾಣಗಳನ್ನು ಧರಿಸಿ ಕಾಡಿನಲ್ಲಿ ಸಂಚರಿಸಿ ಬಾಣಗಳನ್ನು ಬಿಡುತ್ತಾ ಇನ್ನೊಬ್ಬ ರಾಮನಂತೆ ಶೋಭಿಸಿದನು.
ಏಕಲವ್ಯಂ ಹಿ ಸಾಂಗುಷ್ಠಮಶಕ್ತಾ ದೇವದಾನವಾಃ |
ಸರಾಕ್ಷಸೋರಗಾಃ ಪಾರ್ಥ ವಿಜೇತುಂ ಯುಧಿ ಕರ್ಹಿಚಿತ್ ॥ 19 ॥
ಎಲೈ ಪಾರ್ಥನೇ, ಅಂಗುಷ್ಠಸಹಿತನಾದ ಏಕಲವ್ಯನನ್ನು ದೇವ-ದಾನವರು, ರಾಕ್ಷಸ- ಉರಗಗಳು ಯುದ್ಧದಲ್ಲಿ ಯಾವ ರೀತಿಯಿಂದಲೂ ಗೆಲ್ಲಲು ಸಾಧ್ಯವಾಗುತ್ತಿರಲಿಲ್ಲ.
ಕಿಮು ಮಾನುಷಮಾತ್ರೇಣ ಶಕ್ಯಃ ಸ್ಯಾತ್ ಪ್ರತಿವೀಕ್ಷಿತುಮ್ |
ದೃಢಮುಷ್ಟಿಃ ಕೃತೀ ನಿತ್ಯಮಸ್ಯಮಾನೋ ದಿವಾನಿಶಮ್ |
ತ್ವದ್ಧಿತಾರ್ಥಂ ತು ಸ ಮಯಾ ಹತಃ ಸಂಗ್ರಾಮಮೂರ್ಧನಿ ॥ 20 ॥
ಇನ್ನು ದೃಢಮುಷ್ಟಿಯುಳ್ಳವನೂ, ಕುಶಲನೂ, ಹಗಲು-ರಾತ್ರಿಯೂ ಬಾಣಗಳನ್ನು ಪ್ರಯೋಗಿಸಿ ಅಭ್ಯಾಸವನ್ನು ಮಾಡುವವನೂ ಆದ ಅವನನ್ನು ಮನುಷ್ಯ ಮಾತ್ರನಾದವನು ನೋಡಲು ಸಾಧ್ಯವಾಗಿರುತ್ತಿದ್ದಿತೇ? ನಿನ್ನ ಹಿತಕ್ಕಾಗಿ ನಾನು ಅವನನ್ನು ದೊಡ್ಡ ಯುದ್ಧದಲ್ಲಿ ಕೊಂದೆನು.
ಚೇದಿರಾಜಶ್ಚ ವಿಕ್ರಾಂತಃ ಪ್ರತ್ಯಕ್ಷಂ ನಿಹತಸ್ತವ |
ಸ ಚಾಪ್ಯಶಕ್ಯಃ ಸಂಗ್ರಾಮೇ ಜೇತುಂ ಸರ್ವೈಃ ಸುರಾಸುರೈಃ ॥ 21 ॥
ಪರಾಕ್ರಮಶಾಲಿಯಾದ ಶಿಶುಪಾಲನೂ ಸಹ ನಿನ್ನ ಎದುರಿನಲ್ಲಿಯೇ ಕೊಲ್ಲಲ್ಪಟ್ಟನು. ಅವನೂ ಸಹ ಯುದ್ಧದಲ್ಲಿ ಸರ್ವಸುರಾಸುರರಿಂದಲೂ ಸೋಲಿಸಲು ಅಶಕ್ಯನಾದವನು.
ವಧಾರ್ಥಂ ತಸ್ಯ ಜಾತೋಽಹಮನ್ಯೇಷಾಂ ಚ ಸುರದ್ವಿಷಾಮ್ |
ತ್ವತ್ಸಹಾಯೋ ನರವ್ಯಾಘ್ರ ಲೋಕಾನಾಂ ಹಿತಕಾಮ್ಯಯಾ ॥ 22 ॥
ಎಲೈ ನರವ್ಯಾಘ್ರನೇ, ಅವನ ವಧೆಗಾಗಿ ಮತ್ತು ಲೋಕದ ಹಿತದ ದೃಷ್ಟಿಯಿಂದ ನಿನ್ನ ಸಹಾಯವನ್ನು ಪಡೆದು ಉಳಿದ ದೇವತಾದ್ವೇಷಿಗಳ ವಧೆಗಾಗಿ ನಾನು ಅವತರಿಸಿದ್ದೇನೆ.
ಹಿಡಿಂಬಬಕಕಿರ್ಮೀರಾ ಭೀಮಸೇನೇನ ಪಾತಿತಾಃ |
ರಾವಣೇನ ಸಮಪ್ರಾಣಾ ಬ್ರಹ್ಮಯಜ್ಞವಿನಾಶನಾಃ ॥ 23 ॥
ರಾವಣನಿಗೆ ಸಮಾನನಾದ ಪ್ರಾಣಶಕ್ತಿಯುಳ್ಳ, ಬ್ರಾಹ್ಮಣರ ಯಜ್ಞವಿನಾಶಕರಾದ ಹಿಡಿಂಬ-ಬಕ-ಕಿರ್ಮೀರರರು ಭೀಮಸೇನನಿಂದ ಉರುಳಿಸಲ್ಪಟ್ಟರು.
ಹತಸ್ತಥೈವ ಮಾಯಾವೀ ಹೈಡಿಂಬೇನಾಪ್ಯಲಾಯುಧಃ |
ಹೈಡಿಂಬಶ್ಚಾಪ್ಯುಪಾಯೇನ ಶಕ್ತ್ಯಾ ಕರ್ಣೇನ ಘಾತಿತಃ ॥ 24 ॥
ಹಾಗೆಯೇ ಮಾಯಾವಿಯಾದ ಅಲಾಯುಧನೂ ಘಟೋತ್ಕಚನಿಂದ ಹತನಾದನು. ಘಟೋತ್ಕಚನನ್ನೂ ಸಹ ಉಪಾಯವನ್ನು ಆಶ್ರಯಿಸಿ ಕರ್ಣನಿಂದ ಶಕ್ತಿಯ ಮೂಲಕ ಕೊಲ್ಲಿಸಿದೆನು.
ಯದಿ ಹ್ಯೇನಂ ನಾಹನಿಷ್ಯತ್ ಕರ್ಣಃ ಶಕ್ತ್ಯಾ ಮಹಾಮೃಧೇ |
ಮಯಾ ವಧ್ಯೋಽಭವಿಷ್ಯತ್ ಸ ಭೈಮಸೇನಿರ್ಘಟೋತ್ಕಚಃ ॥ 25 ॥
ಕರ್ಣನು ದೊಡ್ಡ ಯುದ್ಧದಲ್ಲಿ ಶಕ್ತಿಯಿಂದ ಅವನನ್ನು ಕೊಲ್ಲದಿದ್ದರೆ ಭೀಮಸೇನನ ಪುತ್ರನಾದ ಘಟೋತ್ಕಚನು ನನ್ನಿಂದ

ಹತನಾಗುತ್ತಿದ್ದನು.
ಯದ್ಯಪಿ ಭೀಮಸೇನನ ಪುತ್ರನಾದ ಘಟೋತ್ಕಚನು ದೇವತೆಯಾದ ಸರಿ. ಆದರೂ ಅಸುರಯೋನಿಯಲ್ಲಿ ಹುಟ್ಟಿದ ಕಾರಣದಿಂದ ಸ್ವಲ್ಪ ಅಸುರಾವೇಶದಿಂದಲೂ ಮತ್ತು ತನ್ನ ಸೇನೆಯಲ್ಲಿರುವ ದುರ್ಜನರಾದ ಅಸುರರ ವಶನಾದ ಕಾರಣದಿಂದಲೂ ಅವನು ತನ್ನಿಮಿತ್ತವಾಗಿ ಬ್ರಹ್ಮದ್ರೋಹಾದಿಗಳನ್ನು ಮಾಡಬಹುದು. ಆದ್ದರಿಂದ ಪುಣ್ಯಾತ್ಮರಾದ ನಿಮಗೂ ಸ್ವಲ್ಪ- ಸ್ವಲ್ಪ ಪಾಪದಲ್ಲಿ ಲೇಪವುಂಟಾದೀತು. ಆದ್ದರಿಂದ ನಿಮ್ಮ ಹಿತದ ಸಲುವಾಗಿ ಅವನನ್ನು ಕೊಲ್ಲಿಸಿದೆ ಎಂದು ಅರ್ಥ - ಲಕ್ಷಾಲಂಕಾರ.
ಮಯಾ ನ ನಿಹತಃ ಪೂರ್ವಮೇಷ ಯುಷ್ಮತ್ಪ್ರಿಯೇಪ್ಸಯಾ |
ಏಷ ಹಿ ಬ್ರಾಹ್ಮಣದ್ವೇಷೀ ಯಜ್ಞದ್ವೇಷೀ ಚ ರಾಕ್ಷಸಃ ॥ 26 ॥
ನಿಮ್ಮ ಹಿತವನ್ನು ಬಯಸಿ ನಾನು ಅವನನ್ನು ಮೊದಲು ಕೊಲ್ಲಲಿಲ್ಲ. ರಾಕ್ಷಸನಾದ ಘಟೋತ್ಕಚನು ಸ್ವಲ್ಪ ಬ್ರಾಹ್ಮಣದ್ವೇಷವನ್ನೂ, ಯಜ್ಞದ್ವೇಷವನ್ನೂ ಮಾಡುವವನು.
ಧರ್ಮಸ್ಯ ಲೋಪ್ತಾ ಪಾಪಾತ್ಮಾ ತಸ್ಮಾದೇಷ ನಿಪಾತಿತಃ |
ವ್ಯಂಸಿತಾ ಚಾಪ್ಯುಪಾಯೇನ ಶಕ್ರದತ್ತಾ ಮಯಾಽನಘ ॥ 27 ॥
ಅವನು ಧರ್ಮದ ಲೋಪವನ್ನು ಮಾಡುವವನು ಮತ್ತು ಪಾಪದಿಂದ ಕೂಡಿದವನು. ಆದ್ದರಿಂದ ಅವನನ್ನು ಕೊಲ್ಲಬೇಕಾಯಿತು. ಎಲೈ ಅನಘನೇ, ನಾನು ಇಂದ್ರನು ಕೊಟ್ಟ ಆ ಶಕ್ತಿಯನ್ನು ಉಪಾಯದಿಂದ ವ್ಯರ್ಥಗೊಳಿಸಿದೆ.
ಯೇ ಹಿ ಧರ್ಮಸ್ಯ ಲೋಪ್ತಾರೋ ವಧ್ಯಾಸ್ತೇ ಮಮ ಪಾಂಡವ |
ಧರ್ಮಸಂಸ್ಥಾಪನಾರ್ಥಂ ಹಿ ಪ್ರತಿಜ್ಞೈಷಾ ಮಮಾವ್ಯಯಾ ॥ 28 ॥
ಎಲೈ ಪಾಂಡವನೇ, ಯಾರು ಧರ್ಮಲೋಪವನ್ನು ಮಾಡುವರೋ ಅವರು ನನ್ನಿಂದ ವಧ್ಯರಾಗುತ್ತಾರೆ. ಈ ನನ್ನ ಅವತಾರವು ಧರ್ಮಸಂಸ್ಥಾಪನೆ- ಗೋಸ್ಕರವಾಗಿ ಇದೆ ಎಂದು ನನ್ನ ಶಾಶ್ವತವಾದ ಪ್ರತಿಜ್ಞೆಯಿದೆ.
ಬ್ರಹ್ಮ ಸತ್ಯಂ ದಮಃ ಶೌಚಂ ಧರ್ಮೋ ಹ್ರೀಃ ಶ್ರೀರ್ಧೃತಿಃ ಕ್ಷಮಾ |
ಯತ್ರ ತತ್ರ ರಮೇ ನಿತ್ಯಮಹಂ ಸತ್ಯೇನ ತೇ ಶಪೇ ॥ 29 ॥
ವೇದಗಳು, ಸತ್ಯ, ಇಂದ್ರಿಯನಿಗ್ರಹ, ಶೌಚ, ಧರ್ಮ, ನಾಚಿಕೆ, ಸಂಪತ್ತು, ಧೈರ್ಯ, ಕ್ಷಮೆ ಎಲ್ಲಿ ಇವೆಯೋ ಅಲ್ಲಿ ನಾನು ಸಂತೋಷವಾಗಿರುತ್ತೇನೆ. ಈ ಮಾತನ್ನು ನಿನಗೆ ಸತ್ಯದ ಮೇಲೆ ಆಣೆಯಿಟ್ಟು ನಾನು ಹೇಳುತ್ತಿದ್ದೇನೆ.
ನ ವಿಷಾದಸ್ತ್ವಯಾ ಕಾರ್ಯಃ ಕರ್ಣಂ ವೈಕರ್ತನಂ ಪ್ರತಿ |
ಉಪದೇಕ್ಷ್ಯಾಮ್ಯುಪಾಯಂ ತೇ ಯೇನ ತಂ ಪ್ರಸಹಿಷ್ಯಸಿ ॥ 30 ॥
ಎಲೈ ಪಾರ್ಥನೇ, ವೈಕರ್ತನನಾದ ಕರ್ಣನ ವಿಷಯದಲ್ಲಿ ನೀನು ವಿಷಾದವನ್ನು ಪಡಬೇಕಾಗಿಲ್ಲ. ಅವನನ್ನು ಯುದ್ಧದಲ್ಲಿ ಎದುರಿಸಿ ಸಹಿಸುವ ಉಪಾಯವನ್ನು ನಾನು ನಿನಗೆ ಹೇಳಿಕೊಡುವೆನು.
ಸುಯೋಧನಂ ಚಾಪಿ ರಣೇ ಹನಿಷ್ಯತಿ ವೃಕೋದರಃ |
ತಸ್ಯ ಚಾಪಿ ವಧೋಪಾಯಂ ವಕ್ಷ್ಯಾಮಿ ತವ ಪಾಂಡವ ॥ 31 ॥
ವೃಕೋದರನು ಸುಯೋಧನನನ್ನು ರಣರಂಗದಲ್ಲಿ ಕೊಲ್ಲುವನು. ಎಲೈ ಪಾಂಡವನೇ, ಅವನ ವಧೆಯ ಉಪಾಯವನ್ನೂ ನಿನಗೆ ಹೇಳುವೆನು.
ವರ್ಧತೇ ತುಮುಲಸ್ತ್ವೇಷ ಶಬ್ದಃ ಪರಚಮೂಂ ಪ್ರತಿ |
ವಿದ್ರವಂತಿ ಚ ಸೈನ್ಯಾನಿ ತ್ವದೀಯಾನಿ ದಿಶೋ ದಶ ॥ 32 ॥
ತೀವ್ರವಾದ ಶಬ್ದವು ಹೆಚ್ಚಾಗುತ್ತಿದೆ. ನಿನ್ನ ಸೈನ್ಯಗಳು ಹತ್ತುದಿಕ್ಕುಗಳಿಗೂ ಓಡಿ ಹೋಗುತ್ತಿವೆ.
ಲಬ್ಧಲಕ್ಷ್ಯಾ ಹಿ ಕೌರವ್ಯಾ ವಿಧಮಂತಿ ಚಮೂಂ ತವ |
ದಹತ್ಯೇಷ ಚ ವಃ ಸೈನ್ಯಂ ದ್ರೋಣಃ ಪ್ರಹರತಾಂ ವರಃ ॥ 33 ॥
ಗುರಿಯನ್ನು ಹೊಡೆಯುತ್ತಿರುವ ಕೌರವ ಸೈನಿಕರು ನಿನ್ನ ಸೈನ್ಯವನ್ನು ಹಾರಿಸುತ್ತಿದ್ದಾರೆ. ಪ್ರಹಾರ ಮಾಡುವವರಲ್ಲಿ ಶ್ರೇಷ್ಠರಾದ ಈ ದ್ರೋಣರು ನಿಮ್ಮ ಸೈನ್ಯವನ್ನು ದಹಿಸುತ್ತಿದ್ದಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆಂಟನೆಯ ಅಧ್ಯಾಯ
ಅರ್ಜುನನ ಮೇಲೆ ಶಕ್ತಿಯನ್ನು ಪ್ರಯೋಗಿಸದಿರಲು ಕಾರಣ ನಿರೂಪಣೆ. ಶಕ್ತಿಯ ವೈಫಲ್ಯದಿಂದ ಧೃತರಾಷ್ಟ್ರನ ಶೋಕ.
ಧೃತರಾಷ್ಟ್ರಃ
ಏಕವೀರವಧೇಽಮೋಘಾ ಶಕ್ತಿಃ ಸೂತಾತ್ಮಜೇ ಯದಾ |
ಕಸ್ಮಾತ್ ಸರ್ವಾನ್ ಸಮುತ್ಸೃಜ್ಯ ಸ ತಾಂ ಪಾರ್ಥೇ ನ ಮುಕ್ತವಾನ್ ॥
ಧೃತರಾಷ್ಟ್ರ ಸೂತಪುತ್ರನಾದ ಕರ್ಣನಲ್ಲಿ ಒಬ್ಬ ವೀರನ ವಧೆಯ ವಿಷಯದಲ್ಲಿ ವ್ಯರ್ಥವಾಗದ ಶಕ್ತಿ ಇದ್ದಾಗ ಅವನು ಎಲ್ಲರನ್ನೂ ಬಿಟ್ಟು ಅರ್ಜುನನ ಮೇಲೆ ಅದನ್ನು ಏಕೆ ಎಸೆಯಲಿಲ್ಲ?
ತಸ್ಮಿನ್ ಹತೇ ಹತಾ ಹಿ ಸ್ಯುಃ ಸರ್ವೇ ಪಾಂಡವಸೃಂಜಯಾಃ |

ಏಕವೀರವಧೇ ಕಸ್ಮಾನ್ನ ಯುದ್ಧೇ ಜಯಮಾದಧತ್ ॥ 2 ॥
ಅರ್ಜುನನೊಬ್ಬನು ಹತನಾಗಿದ್ದರೆ ಎಲ್ಲ ಪಾಂಡವ-ಸೃಂಜಯರೂ ಹತರಾಗಿರುತ್ತಿದ್ದರು. ಆದ್ದರಿಂದ ಒಬ್ಬ ವೀರನನ್ನು ಕೊಂದು ಏಕೆ ಅವನು ಯುದ್ಧದಲ್ಲಿ ಜಯವನ್ನು ಗಳಿಸಲಿಲ್ಲ?
ಆಹೂತೋ ನ ನಿವರ್ತೇಯಮಿತಿ ತಸ್ಯ ಮಹಾವ್ರತಮ್ |
ಸ್ವಯಮಾಹ್ವಯಿತವ್ಯಃ ಸ ಸೂತಪುತ್ರೇಣ ಫಲ್ಗುನಃ ॥ 3 ॥
ಯುದ್ಧದಲ್ಲಿ ಆಹ್ವಾನ ಮಾಡಿದರೆ ನಾನು ಹಿಂದಿರುಗುವುದಿಲ್ಲವೆಂದು ಅರ್ಜುನನ ಮಹಾವ್ರತ. ಸೂತಪುತ್ರನು ಸ್ವತಃ ಅರ್ಜುನನನ್ನು ಆಹ್ವಾನ ಮಾಡಬೇಕಾಗಿದ್ದಿತು.
ತತೋ ದ್ವೈರಥಮಾನೀಯ ಫಲ್ಗುನಂ ಶಕ್ರದತ್ತಯಾ |
ನ ಜಘಾನ ವೃಷಾ ಕಸ್ಮಾತ್ ತನ್ಮಮಾಚಕ್ಷ್ವ ಸಂಜಯ ॥ 4 ॥
ಎಲೈ ಸಂಜಯನೇ, ಅನಂತರ ಎರಡು ರಥದ ದ್ವಂದ್ವಯುದ್ಧದಲ್ಲಿ ಅರ್ಜುನನನ್ನು ಬರಮಾಡಿ ವೃಷನಾದ ಕರ್ಣನು ಇಂದ್ರದತ್ತವಾದ ಶಕ್ತಿಯಿಂದ ಅವನನ್ನು ಏಕೆ ಕೊಲ್ಲಲಿಲ್ಲವೆಂದು ನನಗೆ ಹೇಳು.
ನೂನಂ ಬುದ್ಧಿವಿಹೀನಶ್ಚಾಪ್ಯಸಹಾಯಶ್ಚ ಮೇ ಸುತಃ |
ಶತ್ರುಭಿರ್ವ್ಯಂಸಿತೋಪಾಯಃ ಕಥಂ ನು ಸ ಜಯೇದರೀನ್ ॥ 5 ॥
ನಿಶ್ಚಿತವಾಗಿ ನನ್ನ ಪುತ್ರನು ಬುದ್ಧಿಯಿಲ್ಲದವನು ಮತ್ತು ಸಹಾಯರಹಿತನಾದವನು. ಅವನ ಉಪಾಯಗಳನ್ನು ಶತ್ರುಗಳು ವ್ಯರ್ಥಗೊಳಿಸಿದ್ದಾರೆ. ಅವನು ಹೇಗೆ ಶತ್ರುಗಳನ್ನು ಗೆದ್ದಾನು?
ಯಾ ಹ್ಯಸ್ಯ ಪರಮಾ ಶಕ್ತಿರ್ಜಯಸ್ಯ ಚ ಪರಾಯಣಮ್ |
ಸಾ ಶಕ್ತಿರ್ವಾಸುದೇವೇನ ವ್ಯಂಸಿತಾಸ್ಯ ಘಟೋತ್ಕಚೇ ॥ 6 ॥
ಯಾವುದು ಅವನ ಪರಮಶಕ್ತಿಯಾಗಿದ್ದಿತೋ ಮತ್ತು ಜಯಕ್ಕೆ ಮುಖ್ಯ ಆಸರೆಯಾಗಿದ್ದಿತೋ ಅಂತಹ ಶಕ್ತಿಯನ್ನು ಕೃಷ್ಣನು ಘಟೋತ್ಕಚನಲ್ಲಿ ಪ್ರಯೋಗಿಸುವಂತೆ ಮಾಡಿ ದುರ್ಯೋಧನನು ಅದರಿಂದ ಹೀನನಾಗುವಂತೆ ಮಾಡಿದ್ದಾನೆ.
ಕುಣೇರ್ಯಥಾ ಹಸ್ತಗತಂ ಹ್ರಿಯೇದ್ ಬಿಲ್ವಂ ಬಲೀಯಸಾ |
ತಥಾ ಶಕ್ತಿರಮೋಘಾ ಸಾ ಮೋಘೀಭೂತಾ ಘಟೋತ್ಕಚೇ ॥ 7 ॥
ಕೈಚೊತ್ತಾದವನ ಹಸ್ತದಲ್ಲಿರುವ ಬಿಲ್ವಫಲವನ್ನು ಪ್ರಬಲನಾದವನು ಹಾರಿಸಿದಂತೆ ಅಮೋಘವಾದ ಶಕಿತಯು ಘಟೋತ್ಕಚನಲ್ಲಿ ಪ್ರಯೋಗಿಸಿ ವ್ಯರ್ಥಗೊಳಿಸಲ್ಪಟ್ಟಿತು.
ಯಥಾ ವರಾಹಸ್ಯ ಶುನಶ್ಚ ಯುದ್ಧ್ಯತೋ-
ಸ್ತಯೋರಭಾವೇ ಶ್ವಪಚಸ್ಯ ಲಾಭಃ |
ಮನ್ಯೇ ವಿದ್ವನ್ ವಾಸುದೇವಸ್ಯ ತದ್ವದ್-
ಯುದ್ಧೇ ಲಾಭಃ ಕರ್ಣಹೈಡಿಂಬಯೋರ್ವೈ ॥ 8 ॥
ಎಲೈ ವಿದ್ವಾಂಸನೇ, ವರಾಹ ಮತ್ತು ನಾಯಿಗಳು ಯುದ್ಧವನ್ನು ಮಾಡುವಾಗ ಅವುಗಳಲ್ಲಿ ಒಂದಿರದಿದ್ದರೂ ಹೇಗೆ ಶ್ವಪಚನಿಗೆ ಲಾಭವೋ ಹಾಗೆಯೇ ಕರ್ಣ- ಘಟೋತ್ಕಚರು ಯುದ್ಧವನ್ನು ಮಾಡುವಾಗ ಅವರಲ್ಲಿ ಒಬ್ಬರಿಲ್ಲದಿದ್ದರೂ ಅದು ವಾಸುದೇವನಿಗೆ ಲಾಭವಾಗುತ್ತದೆ.
ಘಟೋತ್ಕಚೋ ಯದಿ ಹನ್ಯಾದ್ಧಿ ಕರ್ಣಂ
ಪರೋ ಲಾಭಃ ಸ ಭವೇತ್ ಪಾಂಡವಾನಾಮ್ |
ವೈಕರ್ತನೋ ವಾ ಯದಿ ತಂ ನಿಹನ್ಯಾತ್
ತಥಾಪಿ ಕೃತ್ಯಂ ಶಕ್ತಿನಾಶಾತ್ ಕೃತಂ ಸ್ಯಾತ್ ॥ 9 ॥
ಒಂದು ಪಕ್ಷ ಘಟೋತ್ಕಚನೇ ಕರ್ಣನನ್ನು ಕೊಂದರೆ ಪಾಂಡವರಿಗೆ ಅದು ಪರಮ ಲಾಭವಾದೀತು. ಕರ್ಣನೇ ಘಟೋತ್ಕಚನನ್ನು ಕೊಂದರೂ ಶಕ್ತಿಯು ನಾಶವಾಗುವುದರಿಂದ ಪಾಂಡವ ಪ್ರಯೋಜನವು ಸಿದ್ಧಿಸುತ್ತದೆ.
ಇತಿ ಪ್ರಾಜ್ಞಃ ಪ್ರಜ್ಞಯೈತದ್ ವಿಚಾರ್ಯ
ಘಟೋತ್ಕಚಂ ಸೂತಪುತ್ರೇಣ ಯುದ್ಧೇ |
ಅಯೋಧಯದ್ ವಾಸುದೇವೋ ನೃಸಿಂಹಃ
ಪ್ರಿಯಂ ಕುರ್ವನ್ ಪಾಂಡವಾನಾಂ ಹಿತಂ ಚ ॥ 10 ॥
ಹೀಗೆ ಪ್ರಾಜ್ಞನೂ, ನರಸಿಂಹನೂ ಆದ ವಾಸುದೇವನು ತನ್ನ ಪ್ರಜ್ಞೆಯಿಂದ ವಿಚಾರ ಮಾಡಿ, ಪಾಂಡವರಿಗೆ ಪ್ರಿಯವನ್ನು ಮತ್ತು ಹಿತವನ್ನುಂಟು ಮಾಡುವವನಾಗಿ, ಘಟೋತ್ಕಚನು ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡುವುದಕ್ಕೆ ಪ್ರೇರಿಸಿದನು.
ಸಂಜಯಃ
ಏತಚ್ಚಿಕೀರ್ಷಿತಂ ಜ್ಞಾತ್ವಾ ಕರ್ಣೇ ಮಧುನಿಹಾ ನೃಪ |
ನಿಯೋಜಯಾಮಾಸ ತದಾ ದ್ವೈರಥೇ ರಾಕ್ಷಸೇಶ್ವರಮ್ ॥ 11 ॥
ಸಂಜಯ ಎಲೈ ರಾಜನೇ, ಮಧುಸೂದನನಾದ ಕೃಷ್ಣನು ಇದನ್ನು ತಿಳಿದು ಆಗ ಕರ್ಣನ ಜೊತೆಯಲ್ಲಿ ದ್ವೈರಥದಲ್ಲಿ ರಾಕ್ಷಸೇಶ್ವರನಾದ ಘಟೋತ್ಕಚನನ್ನು ನಿಯೋಜಿಸಿದನು.
ಘಟೋತ್ಕಚಂ ಮಹಾವೀರ್ಯಂ ಮಹಾಬುದ್ಧಿರ್ಜನಾರ್ದನಃ |
ಅಮೋಘಾಯಾ ವಿಘಾತಾರ್ಥಂ ರಾಜನ್ ದುರ್ಮಂತ್ರಿತೇ ತವ ॥12॥
ಮಹಾಬುದ್ಧಿಯುಳ್ಳ ಜನಾರ್ದನನು ನಿನ್ನ ದುರ್ಮಂತ್ರದ ಫಲವಾಗಿ, ಎಲೈ ರಾಜನೇ, ಅಮೋಘವಾದ ಶಕ್ತಿಯನ್ನು ವಿಘಾತಗೊಳಿಸಲು

ಮಹಾಪರಾಕ್ರಮಶಾಲಿ- ಯಾದ ಘಟೋತ್ಕಚನನ್ನು ನಿಯೋಜಿಸಿದನು.
ತದೈವ ಕೃತಕಾರ್ಯಾ ಹಿ ವಯಂ ಸ್ಯಾಮ ಕುರೂದ್ವಹ |
ನ ರಕ್ಷೇದ್ ಯದಿ ಕೃಷ್ಣಸ್ತಂ ಪಾರ್ಥಂ ಕರ್ಣಾನ್ಮಹಾರಥಾತ್ ॥ 13 ॥
ಎಲೈ ಕುರೂದ್ವಹನೇ, ಕೃಷ್ಣನು ಮಹಾರಥನಾದ ಕರ್ಣನಿಂದ ಪಾರ್ಥನನ್ನು ರಕ್ಷಿಸದಿದ್ದರೆ ನಾವು ಆಗಲೇ ಕೃತಕೃತ್ಯರಾಗಿರುತ್ತಿದ್ದೆವು.
ಸಾಶ್ವಧ್ವಜರಥಃ ಸಂಖ್ಯೇ ಧೃತರಾಷ್ಟ್ರ ಪತೇದ್ ಭುವಿ |
ವಿನಾ ಜನಾರ್ದನಂ ಪಾರ್ಥೋ ಯೋಗಾನಾಮೀಶ್ವರಂ ಪ್ರಭುಮ್ ॥
ಎಲೈ ಧೃತರಾಷ್ಟ್ರನೇ, ಯೋಗೀಶ್ವರನೂ, ಪ್ರಭುವೂ ಆದ ಜನಾರ್ದನನಿಲ್ಲದಿದ್ದರೆ ಅರ್ಜುನನು ಯುದ್ಧದಲ್ಲಿ ಅಶ್ವ-ಧ್ವಜ-ರಥ ಸಹಿತನಾಗಿ ಭೂಮಿಯಲ್ಲಿ ಬಿದ್ದಿರುತ್ತಿದ್ದನು.
ತೈಸ್ತೈರುಪಾಯೈರ್ಬಹುಭೀ ರಕ್ಷ್ಯಮಾಣಃ ಸ ಪಾರ್ಥಿವ |
ಜಯತ್ಯಭಿಮುಖಃ ಶತ್ರೂನ್ ಪಾರ್ಥಃ ಕೃಷ್ಣೇನ ಪಾಲಿತಃ ॥ 15 ॥
ಅನೇಕವಾದ ಆಯಾ ಉಪಾಯಗಳಿಂದ ರಕ್ಷಿಸಲ್ಪಟ್ಟು ಕೃಷ್ಣನಿಂದ ಪಾಲಿತನಾದ ಅರ್ಜುನನು ಶತ್ರುಗಳಿಗೆ ಅಭಿಮುಖವಾಗಿ ನಿಂತು ಗೆಲ್ಲುತ್ತಿದ್ದಾನೆ.
ಸವಿಶೇಷಂ ತ್ವಮೋಘಾಯಾಃ ಕೃಷ್ಣೋಽರಕ್ಷತ ಪಾಂಡವಮ್ |
ಹನ್ಯಾತ್ ಕ್ಷಿಪ್ತಾ ಹಿ ಕೌಂತೇಯಂ ಶಕ್ತಿರ್ವೃಕ್ಷಮಿವಾಶನಿಃ ॥ 16 ॥
ಕೃಷ್ಣನು ವಿಶೇಷವಾಗಿ ಅರ್ಜುನನನ್ನು ಅಮೋಘವಾದ ಶಕ್ತಿಯಿಂದ ರಕ್ಷಿಸಿದನು. ಆ ಶಕ್ತಿಯನ್ನು ಅರ್ಜುನನ ಮೇಲೆ ಪ್ರಯೋಗಿಸಿದ್ದರೆ ಅದು ಸಿಡಿಲು ವೃಕ್ಷವನ್ನು ನಾಶಮಾಡುವಂತೆ ಅರ್ಜುನನನ್ನು ನಾಶಮಾಡಿರುತ್ತಿದ್ದಿತು.
ಧೃತರಾಷ್ಟ್ರಃ
ವಿರೋಧೀ ಚ ಕುಮಂತ್ರೀ ಚ ಪ್ರಾಜ್ಞಮಾನೀ ಮಮಾತ್ಮಜಃ |
ಯಸ್ಯೈಷ ಸಮತಿಕ್ರಾಂತೋ ವಧೋಪಾಯೋ ಜಯಂ ಪ್ರತಿ ॥ 17 ॥
ತವಾಪಿ ಸಮತಿಕ್ರಾಂತಮೇತದ್ ಗಾವಲ್ಗಣೇ ಕಥಮ್ |
ಏತಮರ್ಥಂ ಮಹಾಬುದ್ಧೇ ಯತ್ ತ್ವಯಾ ನಾವಬೋಧಿತಃ ॥ 18 ॥
ಧೃತರಾಷ್ಟ್ರ ನನ್ನ ಪುತ್ರನು ಸಜ್ಜನರನ್ನು ವಿರೋಧ ಮಾಡುವವನು, ಕೆಟ್ಟ ಮತಿಯನ್ನು ಹೊಂದಿದವನು, ತನ್ನನ್ನೇ ಪ್ರಾಜ್ಞನೆಂದು ತಿಳಿದವನು. ಯುದ್ಧದಲ್ಲಿ ಜಯವನ್ನು ಕುರಿತು ಇದ್ದ ಒಂದೇ ಒಂದು ವಧೆಯ ಉಪಾಯವು ಅವನನ್ನು ಬಿಟ್ಟು ಹೊರಟು ಹೋಯಿತು. ಎಲೈ ಗಾವಲ್ಗಣಿಯೇ, ಮಹಾಬುದ್ಧಿಯುಳ್ಳವನೇ, ನೀನು ಅವನಿಗೆ ಈ ಬೋಧನೆಯನ್ನು ಉಂಟುಮಾಡದೆ ಇದ್ದುದರಿಂದ ಹೇಗೆ ಈ ಘಟನೆಯು ನಿನ್ನ ಬುದ್ಧಿಯನ್ನೂ ಮೀರಿತು?
ಸಂಜಯಃ
ದುರ್ಯೋಧನಸ್ಯ ಶಕುನೇರ್ಮಮ ದುಃಶಾಸನಸ್ಯ ಚ |
ರಾತ್ರೌ ರಾತ್ರೌ ಭವತ್ಯೇಷಾ ನಿತ್ಯಮೇವ ಸಮರ್ಥನಾ ॥ 19 ॥
ಸಂಜಯ ದುರ್ಯೋಧನ, ಶಕುನಿ, ನಾನು ಮತ್ತು ದುಶ್ಶಾಸನರಿಗೆ - ಈ ನಾಲ್ವರಿಗೆ ಪ್ರತಿರಾತ್ರಿಯೂ ಯಾವಾಗಲೂ ಸಮರ್ಥನೆಯು ನಡೆಯುತ್ತದೆ.
ಶ್ವಃ ಸರ್ವಸೈನ್ಯಾನುತ್ಸೃಜ್ಯ ಜಹಿ ಕರ್ಣ ಧನಂಜಯಮ್ |
ಪ್ರೇಷ್ಯವತ್ ಪಾಂಡುಪಾಂಚಾಲಾನುಪಭೋಕ್ಷ್ಯಾಮಹೇ ತತಃ ॥ 20 ॥
ನಾಳೆಯ ದಿನ ಎಲ್ಲ ಸೈನ್ಯಗಳನ್ನೂ ಬಿಟ್ಟು ಎಲೈ ಕರ್ಣನೇ, ಧನಂಜಯನನ್ನು ಕೊಲ್ಲು. ಅನಂತರ ನಾವು ಪಾಂಡು-ಪಾಂಚಾಲರನ್ನು ದಾಸರಂತೆ ಮಾಡಿಕೊಂಡು ರಾಜ್ಯವನ್ನು ಅನುಭವಿಸುವೆವು.
ಅಥ ವಾ ನಿಹತೇ ಪಾರ್ಥೇ ಪಾಂಡುಷ್ವನ್ಯತಮಂ ತತಃ |
ಸ್ಥಾಪಯೇದ್ ಯುಧಿ ವಾರ್ಷ್ಣೇಯಸ್ತಸ್ಮಾತ್ಕೃಷ್ಣೋ ನಿಪಾತ್ಯತಾಮ್ ॥
ಅಥವಾ ಒಂದು ಪಕ್ಷ ಅರ್ಜುನನು ಹತನಾದರೆ ಕೃಷ್ಣನು, ಪಾಂಡವರಲ್ಲಿ ಇನ್ನೊಬ್ಬನನ್ನು ಯುದ್ಧದಲ್ಲಿ ಮತ್ತು ರಾಜ್ಯದಲ್ಲಿ ಸ್ಥಾಪಿಸುವನು. ಆದ್ದರಿಂದ ಕೃಷ್ಣನನ್ನೇ ಕೊಲ್ಲುವವನಾಗು.
ಕೃಷ್ಣೋ ಹಿ ಮೂಲಂ ಪಾಂಡೂನಾಂ ಪಾರ್ಥಃ ಸ್ಕಂಧ ಇವೋದ್ಗತಃ |
ಶಾಖಾ ಇವೇತರೇ ಪಾರ್ಥಾಃ ಪಾಂಚಾಲಾಃ ಪತ್ರಸಂಜ್ಞಿತಾಃ ॥ 22 ॥
ಪಾಂಡವರಿಗೆ ಕೃಷ್ಣನು ಬೇರಿನಂತೆ ಇರುವವನು. ಅರ್ಜುನನು ನೆಲದಿಂದ ಮೇಲೆ ಬರುವ ಮರದ ಬುಡದಂತೆ ಇರುವವನು, ಇತರ ಪಾಂಡವರು ಶಾಖೆಗಳು, ಪಾಂಚಾಲರು ಪತ್ರಸ್ಥಾನದಲ್ಲಿದ್ದಾರೆ.
ಕೃಷ್ಣಾಶ್ರಯಾಃ ಕೃಷ್ಣಬಲಾಃ ಕೃಷ್ಣನಾಥಾಶ್ಚ ಪಾಂಡವಾಃ |
ಕೃಷ್ಣಃ ಪರಾಯಣಂ ಚೈಷಾಂ ಜ್ಯೋತಿಷಾಮಿವ ಚಂದ್ರಮಾಃ ॥ 23 ॥
ಪಾಂಡವರು ಕೃಷ್ಣನನ್ನು ಆಶ್ರಯಿಸಿದವರು, ಕೃಷ್ಣನೇ ಅವರಿಗೆ ಬಲ, ಎಲ್ಲ ಜ್ಯೋತಿಸ್ಸುಗಳಿಗೆ ಚಂದ್ರನಿದ್ದಂತೆ ಕೃಷ್ಣನೇ ಅವರಿಗೆ ಸ್ವಾಮಿ, ಕೃಷ್ಣನೇ ಅವರಿಗೆ ಗತಿ.
ತಸ್ಮಾತ್ಪರ್ಣಾನಿ ಶಾಖಾಶ್ಚ ಸ್ಕಂಧಂ ಚೋತ್ಸೃಜ್ಯ ಸೂತಜ |
ಕೃಷ್ಣಂ ನಿಕೃಂಧಿ ಪಾಂಡೂನಾಂ ಮೂಲಂ ಸರ್ವತ್ರ ಸರ್ವದಾ ॥ 24 ॥
ಆದ್ದರಿಂದ ಎಲೈ ಸೂತಪುತ್ರನೇ, ಪತ್ರಗಳನ್ನೂ, ಶಾಖೆಗಳನ್ನೂ, ಸ್ಕಂಧವನ್ನೂ ಬಿಟ್ಟು ಪಾಂಡವರಿಗೆ ಎಲ್ಲ ಕಾಲದಲ್ಲಿಯೂ ಮೂಲನಾದ ಕೃಷ್ಣನನ್ನೇ ಕೊಲ್ಲು.

ಹನ್ಯಾದ್ ಯದಿ ಹಿ ದಾಶಾರ್ಹಂ ಕರ್ಣೋ ಯಾದವನಂದನಮ್ |
ಕೃತ್ಸ್ನಾ ವಸುಮತೀ ರಾಜನ್ ವಶೇ ತೇ ಸ್ಯಾನ್ನ ಸಂಶಯಃ ॥ 25 ॥
ಎಲೈ ರಾಜನೇ, ಒಂದು ಪಕ್ಷ ಕರ್ಣನು ಯಾದವನಂದನನಾದ ಕೃಷ್ಣನನ್ನು ಕೊಂದರೆ ಸಮಗ್ರವಾದ ಭೂಮಿಯು ನಿನ್ನ ವಶವಾದೀತು. ಇದರಲ್ಲಿ ಸಂಶಯವಿಲ್ಲ.
ಯದಿ ಹಿ ಸ ನಿಹತಃ ಶಯೀತ ಭೂಮೌ
ಯದುಕುಲಪಾಂಡವನಂದನೋ ಮಹಾತ್ಮಾ |
ನನು ತವ ವಸುಧಾ ನರೇಂದ್ರ ಸರ್ವಾ
ಸಗಿರಿಸಮುದ್ರವನಾ ವಶಂ ವ್ರಜೇತ ॥ 26 ॥
ಪಾಂಡವನಂದನನೂ, ಯದುಕುಲನಂದನನೂ ಆದ ಆ ಮಹಾತ್ಮನು ಹತನಾಗಿ ಭೂಮಿಯಲ್ಲಿ ಮಲಗಿದರೆ ಎಲೈ ನರೇಂದ್ರನೇ, ಗಿರಿ-ಕಾನನ-ಸಮುದ್ರ ಸಹಿತವಾದ ಭೂಮಿಯು ನಿನ್ನ ವಶವಾದೀತು.
ಸಾ ತು ಬುದ್ಧಿಃ ಕೃತಾಪ್ಯೇವಂ ಜಾಗ್ರತಿ ತ್ರಿದಶೇಶ್ವರೇ |
ಅಪ್ರಮೇಯೇ ಹೃಷೀಕೇಶೇ ಯುದ್ಧಕಾಲೇ ವ್ಯಮುಹ್ಯತ ॥ 27 ॥
ಹೀಗೆ ನಾವು ಬುದ್ಧಿಯಿಂದ ನಿಶ್ಚಯಿಸಿದರೂ ತ್ರಿದಶಪತಿಯೂ, ಅಪ್ರಮೇಯನೂ ಆದ ಹೃಷೀಕೇಶನು ಜಾಗರೂಕನಾಗಿರುವ ಕಾರಣದಿಂದ ಯುದ್ಧಕಾಲದಲ್ಲಿ ಬುದ್ಧಿ ಮೋಹವು ಉಂಟಾಯಿತು.
ಅರ್ಜುನಂ ಚಾಪಿ ಕೌಂತೇಯಂ ಸದಾ ರಕ್ಷತಿ ಕೇಶವಃ |
ನ ಹ್ಯೇನಮೈಚ್ಛತ್ ಪ್ರಮುಖೇ ಸೌತೇಃ ಸ್ಥಾಪಯಿತುಂ ರಣೇ ॥ 28 ॥
ಕುಂತೀಪುತ್ರನಾದ ಅರ್ಜುನನನ್ನೂ ಕೇಶವನು ಸದಾ ರಕ್ಷಿಸುತ್ತಾನೆ. ಆದ್ದರಿಂದ ರಣರಂಗದಲ್ಲಿ ಕರ್ಣನ ಮುಂಭಾಗದಲ್ಲಿ ಅರ್ಜುನನಿರುವುದನ್ನು ಅವನು ಬಯಸಲಿಲ್ಲ.
ಅನ್ಯಾಂಶ್ಚಾಸ್ಮೈ ರಥೋದಾರಾನುಪಸ್ಥಾಪಯದಚ್ಯುತಃ |
ಅಮೋಘಾಂ ತಾಂ ಕಥಂ ಶಕ್ತಿಂ ಮೋಘಾಂ ಕುರ್ಯಾಮಿತಿ ಪ್ರಭೋ ॥
ಎಲೈ ಪ್ರಭುವೇ, ಅಮೋಘವಾದ ಆ ಶಕ್ತಿಯನ್ನು ನಾನು ಹೇಗೆ ವ್ಯರ್ಥಗೊಳಿಸಿ- ಯೇನು ಎಂದು ಚಿಂತಿಸಿ ಉಳಿದ ಶ್ರೇಷ್ಠರಥರನ್ನು ಕರ್ಣನ ಮುಂದೆ ನಿಯೋಜಿಸಿದನು.
ತತಃ ಕೃಷ್ಣಂ ಮಹಾಬಾಹುಃ ಸಾತ್ಯಕಿಃ ಸತ್ಯವಿಕ್ರಮಃ |
ಪಪ್ರಚ್ಛ ರಥಶಾರ್ದೂಲ ಕರ್ಣಂ ಪ್ರತಿ ಮಹಾರಥಮ್ ॥ 30 ॥
ಆಗ ಮಹಾಬಾಹುವೂ, ಸತ್ಯವಿಕ್ರಮನೂ ಆದ ಸಾತ್ಯಕಿಯು ಕೃಷ್ಣನನ್ನು ಕುರಿತು ಮಹಾರಥನಾದ ಕಣರ್ನ ವಿಷಯದಲ್ಲಿ ಇದೇ ಪ್ರಶ್ನೆಯನ್ನು ಮಾಡಿದನು.
ಅಯಂ ಚ ಪ್ರತ್ಯಯಃ ಕರ್ಣೇ ಶಕ್ತ್ಯಾ ಚಾಮಿತವಿಕ್ರಮ |
ಕಿಮರ್ಥಂ ಸೂತಪುತ್ರೇಣ ನ ಮುಕ್ತಾ ಫಲ್ಗುನೇ ತು ಸಾ ॥ 31 ॥
ಎಲೈ ಅಮಿತವಿಕ್ರಮನೇ, ಕರ್ಣನು ಶಕ್ತಿಯನ್ನು ಬಹಳ ನಂಬಿದ್ದಾನೆ. ಕರ್ಣನು ಏತಕ್ಕೆ ಅದನ್ನು ಅರ್ಜುನನ ಮೇಲೆ ಪ್ರಯೋಗಿಸಲಿಲ್ಲ?

ವಾಸುದೇವಃ
ದುಃಶಾಸನಶ್ಚ ಕರ್ಣಶ್ಚ ಶಕುನಿಶ್ಚ ಸಸೈಂಧವಃ |
ಸತತಂ ಮಂತ್ರಯಂತಿ ಸ್ಮ ದುರ್ಯೋಧನಪುರೋಗಮಾಃ ॥ 32 ॥
ವಾಸುದೇವ ದುಶ್ಶಾಸನ, ಕರ್ಣ, ಶಕುನಿ, ಜಯದ್ರಥ - ಇವರು ದುರ್ಯೋಧನನನ್ನು ಮುಂದೆ ಮಾಡಿಕೊಂಡು ಯಾವಾಗಲೂ ಮಂತ್ರಾಲೋಚನೆಯನ್ನು ಮಾಡುತ್ತಿದ್ದರು.
ಕರ್ಣ ಕರ್ಣ ಮಹೇಷ್ವಾಸ ರಣೇಽಮಿತಪರಾಕ್ರಮ |
ನಾನ್ಯಸ್ಯ ಶಕ್ತಿರೇಷಾ ತೇ ಮೋಕ್ತವ್ಯಾ ಜಯತಾಂ ವರ ॥ 33 ॥
ಋತೇ ಮಹಾರಥಾತ್ ಪಾರ್ಥಾತ್ ಕುಂತೀಪುತ್ರಾದ್ಧನಂಜಯಾತ್ |
ಸ ಹಿ ತೇಷಾಮತಿಯಶಾ ದೇವಾನಾಮಿವ ವಾಸವಃ ॥ 34 ॥
ಎಲೈ ಕರ್ಣನೇ, ಕರ್ಣನೇ, ಮಹಾಧನುರ್ಧಾರಿಯೇ, ಜಯಿಸುವವರಲ್ಲಿ ಶ್ರೇಷ್ಠನಾದವನೇ, ಅಮಿತಪರಾಕ್ರಮವುಳ್ಳವನೇ, ನೀನು ಅರ್ಜುನನನ್ನು ಬಿಟ್ಟು ಬೇರೆ ಯಾರ ಮೇಲೂ ಈ ಶಕ್ತಿಯನ್ನು ಪ್ರಯೋಗಿಸಬಾರದು. ಮಹಾರಥನಾದ ಕುಂತೀಪುತ್ರನಾದ ಧನಂಜಯನೊಬ್ಬನೇ ದೇವತೆಗಳಿಗೆ ಇಂದ್ರನಿದ್ದಂತೆ ಪಾಂಡವರಿಗೆ ಬಹಳ ಯಶಸ್ಕರನಾದವನು.
ತಸ್ಮಿನ್ ವಿನಿಹತೇ ಸರ್ವೇ ಪಾಂಡವಾಃ ಸೃಂಜಯೈಃ ಸಹ |
ಭವಿಷ್ಯಂತಿ ಗತಾತ್ಮಾನಃ ಸುರಾ ಇವ ನಿರಗ್ನಯಃ ॥ 35 ॥
ಅವನು ಹತನಾದರೆ ಪಾಂಡವರು ಮತ್ತು ಸೃಂಜಯರು ಅಗ್ನಿಯಿಲ್ಲದ ದೇವತೆಗಳಂತೆ ಪ್ರಾಣತ್ಯಾಗವನ್ನು ಮಾಡುವರು (ಎಂದು ಹೇಳುತ್ತಿದ್ದರು).
ತಥೇತಿ ಚ ಪ್ರತಿಜ್ಞಾತಂ ಕರ್ಣೇನ ಶಿನಿಪುಂಗವ |
ಹೃದಿ ನಿತ್ಯಂ ತು ಕರ್ಣಸ್ಯ ವಧೋ ಗಾಂಡೀವಧನ್ವನಃ ॥ 36 ॥
ಎಲೈ ಶಿನಿಪುಂಗವನಾದ ಸಾತ್ಯಕಿಯೇ, ಹಾಗೆಯೇ ಆಗಲಿ ಎಂದು ಕರ್ಣನು ಪ್ರತಿಜ್ಞೆಯನ್ನು ಮಾಡುತಿತದ್ದನು. ಕರ್ಣನ ಹೃದಯದಲ್ಲಿ ಯಾವಾಗಲೂ ಗಾಂಡೀವ ಧನುರ್ಧಾರಿಯಾದ ಅರ್ಜುನನ ವಧೆಯ ಚಿಂತನೆಯೇ ಇರುತ್ತಿದ್ದಿತು.

ಅಹಮೇವ ತು ರಾಧೇಯಂ ಮೋಹಯಾಮಿ ಯುಧಾಂವರ |
ಯತೋ ನಾವಸೃಜಚ್ಚಕ್ತಿಂ ಪಾಂಡವೇ ಶ್ವೇತವಾಹನೇ ॥ 37 ॥
ಎಲೈ ಯೋಧರಲ್ಲಿ ಶ್ರೇಷ್ಠನಾದವನೇ, ನಾನೇ ಕರ್ಣನಿಗೆ ಮೋಹವನ್ನು ಉಂಟು ಮಾಡುತ್ತಿದ್ದೆ. ಆ ಕಾರಣದಿಂದ ಪಾಂಡವನಾದ ಅರ್ಜುನನ ಮೇಲೆ ಶಕ್ತಿಯನ್ನು ಪ್ರಯೋಗಿಸಲಿಲ್ಲ.
ಫಲ್ಗುನಸ್ಯ ಹಿ ತಾಂ ಮೃತ್ಯುಮವಗಮ್ಯ ಯುಯುತ್ಸತಃ |
ನ ನಿದ್ರಾ ನ ಚ ಮೇ ಹರ್ಷೋ ಮನಸೋಽಸ್ತಿ ಯುಧಾಂವರ ॥38॥
ಎಲೈ ಯುದ್ಧಮಾಡುವವರಲ್ಲಿ ಶ್ರೇಷ್ಠನೇ, ಯುದ್ಧಮಾಡಲು ಬಯಸುವ ಅರ್ಜುನನಿಗೆ ಶಕ್ತಿಯು ಮೃತ್ಯುವೆಂದು ತಿಳಿದು ನಾನು ನಿದ್ರೆಯನ್ನೂ ಮಾಡಲಿಲ್ಲ, ನನ್ನ ಮನಸ್ಸಿಗೆ ಹರ್ಷವೂ ಉಂಟಾಗಲಿಲ್ಲ.
ಘಟೋತ್ಕಚೇ ವ್ಯಂಸಿತಾಂ ತು ದೃಷ್ಟ್ವಾ ತಾಂ ಶಿನಿಪುಂಗವ |
ಮೃತ್ಯೋರಾಸ್ಯಾಂತರಾನ್ಮುಕ್ತಂ ಪಶ್ಯಾಮ್ಯದ್ಯ ಧನಂಜಯಮ್ ॥ 39 ॥
ಎಲೈ ಶಿನಿಪುಂಗವನೇ, ಘಟೋತ್ಕಚನಲ್ಲಿ ಪ್ರಯೋಗಿಸಿ ವ್ಯರ್ಥವಾದ ಆ ಶಕ್ತಿಯನ್ನು ನೋಡಿ, ನಾನು ಈ ದಿನ ಧನಂಜಯನು ಮೃತ್ಯುವಿನ ಬಾಯಿಯಿಂದ ಹೊರಗೆ ಬಂದಿದ್ದಾನೆಂದು ಭಾವಿಸುತ್ತೇನೆ.
ನ ಪಿತಾ ನ ಚ ಮೇ ಮಾತಾ ನ ಯೂಯಂ ಭ್ರಾತರಸ್ತಥಾ |
ನ ಚ ಪ್ರಾಣಾಸ್ತಥಾ ರಕ್ಷ್ಯಾ ಯಥಾ ಬೀಭತ್ಸುರಾಹವೇ ॥ 40 ॥
ನನಗೆ ನನ್ನ ತಂದೆಯಾಗಲೀ, ತಾಯಿಯಾಗಲೀ, ನೀವಾಗಲೀ, ಸಹೋದರರೇ ಆಗಲೀ ಅಥವಾ ನನ್ನ ಪ್ರಾಣಗಳೇ ಆಗಲಿ, ಯುದ್ಧದಲ್ಲಿ ಅರ್ಜುನನನ್ನು ರಕ್ಷಿಸಲ್ಪಡಬೇಕಾದುದು ಬೇರೆ ಯಾವುದೂ ಇಲ್ಲ.
ತ್ರೈಲೋಕ್ಯರಾಜ್ಯಾದ್ ಯತ್ಕಿಂಚದ್ ಭವೇದನ್ಯತ್ ಸುದುರ್ಲಭಮ್ |
ನೇಚ್ಛೇಯಂ ಸಾತ್ವತಾಹಂ ತದ್ ವಿನಾ ಪಾರ್ಥಂ ಧನಂಜಯಮ್ ॥
ಎಲೈ ಸಾತ್ವತನೇ, ತ್ರೈಲೋಕ್ಯ ರಾಜ್ಯಕ್ಕಿಂತ ಹೆಚ್ಚಿನದಾದ, ಅತ್ಯಂತ ದುರ್ಲಭವಾದುದು ಏನಾದರೂ ಇದ್ದರೆ ಕುಂತೀಪುತ್ರನಾದ ಧನಂಜಯನನ್ನು ಬಿಟ್ಟು ನಾನು ಅದನ್ನು ಬಯಸುವುದಿಲ್ಲ.
ಅತಃ ಪ್ರಹರ್ಷಃ ಸುಮಹಾನ್ ಯುಯುಧಾನಾದ್ಯ ಮೇಽಭವತ್ |
ಮೃತಂ ಪ್ರತ್ಯಾಗತಮಿವ ದೃಷ್ಟ್ವಾ ಪಾರ್ಥಂ ಧನಂಜಯಮ್ ॥ 42 ॥
ಎಲೈ ಯುಯುಧಾನನೇ, ಆದ್ದರಿಂದ ನನಗೆ (ಘಟೋತ್ಕಚನು ಮೃತನಾದಾಗ) ಈ ದಿನ ಮರಣವನ್ನು ಹೊಂದಿ ಹಿಂದಿರುಗಿದಂತಹ ಧನಂಜಯನನ್ನು ನೋಡಿ ಬಹಳ ಸಂತೋಷವಾಯಿತು.
ಅತಶ್ಚ ಪ್ರಹಿತೋ ಯುದ್ಧೇ ಮಯಾ ಕರ್ಣಾಯ ರಾಕ್ಷಸಃ |
ನ ಹ್ಯನ್ಯಃ ಸಮರೇ ರಾತ್ರೌ ಶಕ್ತಃ ಕರ್ಣಂ ಪ್ರಬಾಧಿತುಮ್ ॥ 43 ॥
ಆ ಕಾರಣದಿಂದ ನಾನು ಕರ್ಣನ ಎದುರಿಗೆ ರಾಕ್ಷಸನಾದ ಘಟೋತ್ಕಚನನ್ನು ಕಳುಹಿಸಿದೆ. ರಾತ್ರಿಯ ಸಮಯದಲ್ಲಿ ಯುದ್ಧದಲ್ಲಿ ಕರ್ಣನನ್ನು ಬಾಧಿಸಲು ಬೇರೆ ಇನ್ನೊಬ್ಬನು ಶಕ್ತನಾಗಿರಲಿಲ್ಲ.
ಸಂಜಯಃ
ಇತಿ ಸಾತ್ಯಕಯೇ ಪ್ರಾಹ ತದಾ ದೇವಕಿನಂದನಃ |
ಧನಂಜಯಹಿತೇ ಯುಕ್ತಸ್ತತ್ಪ್ರಿಯೇ ಸತತಂ ರತಃ ॥ 44 ॥
ಸಂಜಯ ದೇವಕಿನಂದನನಾದ ಕೃಷ್ಣನು ಧನಂಜಯನ ಹಿತದಲ್ಲಿಯೇ ಸತತವಾಗಿಯೂ ರತನಾದವನೂ ಮತ್ತು ಅವನ ಹಿತವನ್ನೇ ಸಾಧಿಸುವವನೂ ಆಗಿ ಸಾತ್ಯಕಿಗೆ ಆಗ ಈ ರೀತಿಯಲ್ಲಿ ಹೇಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಷಷ್ಟ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೊಂಬತ್ತನೆಯ ಅಧ್ಯಾಯ
ಕರ್ಣನ ಶಕ್ತಿಯ ವೈಫಲ್ಯವನ್ನು ನೋಡಿ ಧೃತರಾಷ್ಟ್ರನ ಶೋಕ. ವ್ಯಾಸರಿಂದ
ಯುಧಿಷ್ಠಿರನಿಗೆ ಸಮಾಧಾನದ ವಚನಗಳು ಮತ್ತು ವ್ಯಾಸರ ಅಂತರ್ಧಾನ.
ಧೃತರಾಷ್ಟ್ರಃ
ಕರ್ಣದುರ್ಯೋಧನಾದೀನಾಂ ಶಕುನೇಃ ಸೌಬಲಸ್ಯ ಚ |
ಅಪನೀತಂ ಮಹತ್ ತಾತ ತವ ಚೈವ ವಿಶೇಷತಃ ॥ 1 ॥
ಧೃತರಾಷ್ಟ್ರ ಪ್ರೀತಿಪಾತ್ರನೇ, ಕರ್ಣ-ದುರ್ಯೋಧನಾದಿಗಳ ಮತ್ತು ಸೌಬಲನಾದ ಶಕುನಿಯ ಅಪಚಾರವು ದೊಡ್ಡದಾಗಿದೆ ಮತ್ತು ವಿಶೇಷವಾಗಿ ನಿನ್ನ ಅಪಚಾರವೂ ದೊಡ್ಡದಾಗಿದೆ.
ಯದಾ ಜಾನೀತ ತಾಂ ಶಕ್ತಿಮೇಕಘ್ನೀಂ ಸತತಂ ರಣೇ |
ಅನಿವಾರ್ಯಾಮಸಹ್ಯಾಂ ಚ ದೇವೈರಪಿ ಸವಾಸವೈಃ ॥ 2 ॥
ಸಾ ಕಿಮರ್ಥಂ ನ ಕರ್ಣೇನ ಪ್ರವೃತ್ತೇ ಸಮರೇ ಪುರಾ |
ನ ದೇವಕೀಸುತೇ ಮುಕ್ತಾ ಫಲ್ಗುನೇ ವಾಪಿ ಸಂಜಯ ॥ 3 ॥

ಎಲೈ ಸಂಜಯನೇ, ಶಕ್ತಿಯು ರಣರಂಗದಲ್ಲಿ ಒಬ್ಬನನ್ನು ನಿಶ್ಚಿತವಾಗಿ ಕೊಲ್ಲುವುದೆಂದೂ, ಇಂದ್ರನಿಂದ ಸಹಿತರಾದ ದೇವತೆಗಳಿಂದಲೂ ಅದನ್ನು ನಿವಾರಿಸಲು ಸಾಧ್ಯವಿಲ್ಲವೆಂದೂ, ಅದು ಅಸಹ್ಯವಾದುದೆಂದೂ, ಸತತವಾಗಿ ತಿಳಿದಿದ್ದರೂ ಯುದ್ಧವು ಪ್ರವೃತ್ತವಾದಾಗ ಕರ್ಣನು ದೇವಕೀ ಪುತ್ರನಾದ ಕೃಷ್ಣನ ಮೇಲೆ ಅಥವಾ ಅರ್ಜುನನ ಮೇಲೆ ಆ ಶಕ್ತಿಯನ್ನು ಏಕೆ ಪ್ರಯೋಗಿಸಲಿಲ್ಲ?
ಸಂಜಯಃ
ಸಂಗ್ರಾಮಾದ್ ವಿನಿವೃತ್ತಾನಾಂ ಸರ್ವೇಷಾಂ ನೋ ವಿಶಾಂಪತೇ |
ರಾತ್ರೌ ಕುರುಕುಲಶ್ರೇಷ್ಠ ಮಂತ್ರೋಽಯಂ ಸಮಜಾಯತ ॥ 4 ॥
ಸಂಜಯ ಎಲೈ ರಾಜನೇ, ಕುರುಕುಲಶ್ರೇಷ್ಠನೇ, ಸಂಗ್ರಾಮದಿಂದ ಹಿಂದಿರುಗಿದ ನಾವೆಲ್ಲರೂ ಪ್ರತಿರಾತ್ರಿಯೂ ಮಂತ್ರಾಲೋಚನೆಯನ್ನು ಮಾಡಿದೆವು.
ಪ್ರಭಾತಮಾತ್ರೇ ಶ್ವೋಭೂತೇ ಕೇಶವಾಯಾರ್ಜುನಾಯ ವಾ |
ಶಕ್ತಿರೇಷಾ ವಿಮೋಕ್ತವ್ಯಾ ಕರ್ಣ ಕರ್ಣೇತಿ ನಿತ್ಯಶಃ ॥ 5 ॥
ಎಲೈ ಕರ್ಣನೇ, ಕರ್ಣನೇ, ನಾವು ಬೆಳಗಿನ ಸಮಯದಲ್ಲಿ ತಕ್ಷಣವೇ ಕೃಷ್ಣನ ಮೇಲೆ ಅಥವಾ ಅರ್ಜುನನ ಮೇಲೆ ಈ ಶಕ್ತಿಯನ್ನು ಪ್ರಯೋಗಿಸಬೇಕು ಎಂದು ನಿತ್ಯವೂ ಹೇಳಿದೆವು.
ತತಃ ಪ್ರಭಾತಸಮಯೇ ರಾಜನ್ ಕರ್ಣಸ್ಯ ದೈವತೈಃ |
ಅನ್ಯೇಷಾಂ ಚೈವ ಯೋಧಾನಾಂ ಸಾ ಬುದ್ಧಿರ್ನಿಶ್ಯತೇ ಪುನಃ ॥ 6 ॥
ಎಲೈ ರಾಜನೇ, ಆದರೆ ಪ್ರಭಾತ ಸಮಯದಲ್ಲಿ ದೇವತೆಗಳಿಂದ ಕರ್ಣನಿಗೂ ಮತ್ತು ಇತರ ಯೋಧರಿಗೂ ಆ ಬುದ್ಧಿಯು ನಾಶಪಡಿಸಲ್ಪಡುತ್ತಿದ್ದಿತು.
ದೈವಮೇವ ಪರಂ ಮನ್ಯೇ ಯತ್ ಕರ್ಣೋ ಹಸ್ತಸಂಸ್ಥಯಾ |
ನ ಜಘಾನ ರಣೇ ಪಾರ್ಥಂ ಕೃಷ್ಣಂ ವಾ ದೇವಕೀಸುತಮ್ ॥ 7 ॥
ಕೈಯಲ್ಲಿದ್ದ ಶಕ್ತಿಯಿಂದ ಕರ್ಣನು ರಣರಂಗದಲ್ಲಿ ಅರ್ಜುನನನ್ನಾಗಲೀ, ದೇವಕೀ ಪುತ್ರನಾದ ಕೃಷ್ಣನನ್ನಾಗಲೀ ಕೊಲ್ಲದಿರುವುದಕ್ಕೆ ದೈವವೇ ಶ್ರೇಷ್ಠ ಕಾರಣವೆಂದು ತಿಳಿಯುತ್ತೇನೆ.
ತಸ್ಯ ಹಸ್ತಸ್ಥಿತಾ ಶಕ್ತಿಃ ಕಾಳರಾತ್ರಿರಿವೋದ್ಯತಾ |
ದೈವೋಪಹತಬುದ್ಧಿತ್ವಾನ್ನ ತಾಂ ಕರ್ಣೋ ವಿಮುಕ್ತವಾನ್ ॥ 8 ॥
ಕೃಷ್ಣೇ ವಾ ದೇವಕೀಪುತ್ರೇ ಮೋಹಿತೋ ದೇವಮಾಯಯಾ |
ಪಾರ್ಥೇ ವಾ ಶಕ್ರಕಲ್ಪೇ ವೈ ವಧಾರ್ಥಂ ವಾಸವೀಂ ಪ್ರಭೋ ॥ 9 ॥
ದೈವದಿಂದ ಬುದ್ಧಿಮೋಹವನ್ನು ಹೊಂದಿದ ಕರ್ಣನು ಕಾಳರಾತ್ರಿಯಂತೆ ಉದ್ಯತವಾದ ಶಕ್ತಿಯು ಕೈಯಲ್ಲಿದ್ದರೂ ಅದನ್ನು ಪ್ರಯೋಗಿಸಲಿಲ್ಲ. ಎಲೈ ಪ್ರಭುವೇ, ದೇವಮಾಯೆಯಿಂದ ಮೋಹಿತನಾದ ಅವನು ದೇವಕೀಪುತ್ರನಾದ ಕೃಷ್ಣನ ಮೇಲಾಗಲೀ ಅಥವಾ ಇಂದ್ರಸಮಾನನಾದ ಅರ್ಜುನನ ಮೇಲಾಗಲೀ ಅವರ ವಧೆಯನ್ನು ಉದ್ದೇಶಿಸಿ ಶಕ್ತಿಯನ್ನು ಪ್ರಯೋಗಿಸಲಿಲ್ಲ.
ಧೃತರಾಷ್ಟ್ರಃ
ದೈವೇನೈವ ಹತಾ ಯೂಯಂ ಸ್ವಬುದ್ಧ್ಯಾ ಕೇಶವಸ್ಯ ಚ |
ಗತಾ ಹಿ ವಾಸವೀ ಹತ್ವಾ ತೃಣಭೂತಂ ಘಟೋತ್ಕಚಮ್ ॥ 10 ॥
ಧೃತರಾಷ್ಟ್ರ ನೀವು ದೈವದಿಂದಲೂ, ನಿಮ್ಮ ಬುದ್ಧಿಯಿಂದಲೂ ಮತ್ತು ಕೇಶವನ ಬುದ್ಧಿಯಿಂದಲೂ ಹತರಾಗಿದ್ದೀರಿ. ಅರ್ಜುನನನ್ನು ಹೋಲಿಸಿದರೆ ತೃಣಪ್ರಾಯನಾದ ಘಟೋತ್ಕಚನನ್ನು ಕೊಂದು ಇಂದ್ರದತ್ತವಾದ ಶಕ್ತಿಯು ಹೊರಟು ಹೋಯಿತು.
ಕರ್ಣಶ್ಚ ಮಮ ಪುತ್ರಾಶ್ಚ ಸರ್ವೇ ಚಾನ್ಯೇ ಚ ಪಾರ್ಥಿವಾಃ |
ಅನೇನ ದುಷ್ಪ್ರಣೀತೇನ ಗತಾ ವೈವಸ್ವತಕ್ಷಯಮ್ ॥ 11 ॥
ಕರ್ಣನೂ, ನನ್ನ ಪುತ್ರರೂ ಮತ್ತು ಉಳಿದ ಎಲ್ಲಾ ರಾಜರೂ ಈ ದುರ್ನೀತಿಯಿಂದ ಯಮಲೋಕಕ್ಕೆ ಹೋಗಿದ್ದಾರೆ.
ಭೂಯ ಏವ ತು ಮೇ ಶಂಸ ಯಥಾ ಯುದ್ಧಮವರ್ತತ |
ಕುರೂಣಾಂ ಪಾಂಡವಾನಾಂ ಚ ಹೈಡಿಂಬೇ ನಿಹತೇ ತದಾ ॥ 12 ॥
ಘಟೋತ್ಕಚನು ಹತನಾಗುತ್ತಿರಲು ಆಗ ಕೌರವರಿಗೂ ಮತ್ತು ಪಾಂಡವರಿಗೂ ಹೇಗೆ ಯುದ್ಧವು ನಡೆಯಿತೆಂದು ಪುನಃ ನನಗೆ ಹೇಳು.
ಯೇ ಚ ತೇಽಭ್ಯದ್ರವನ್ ದ್ರೋಣಂ ವ್ಯೂಢಾನೀಕಾಃ ಪ್ರಹಾರಿಣಃ |
ಸೃಂಜಯಾಃ ಸಹ ಪಾಂಚಾಲೈಸ್ತೇಽಪ್ಯಕುರ್ವನ್ ಕಥಂ ರಣಮ್ ॥13॥
ವ್ಯೂಹವನ್ನು ರಚಿಸಿದ ಪ್ರಹಾರಶೀಲರಾದ ಸೃಂಜಯ ಮತ್ತು ಪಾಂಚಾಲರಲ್ಲಿ ಯಾರು ದ್ರೋಣರ ಮೇಲೆ ಮುನ್ನುಗ್ಗಿದರು? ಹೇಗೆ ಯುದ್ಧವನ್ನು ಮಾಡಿದರು?
ಸೌಮದತ್ತೇರ್ವಧಾದ್ ದ್ರೋಣಮಾಯಸ್ತಂ ಸೈಂಧವಸ್ಯ ಚ |
ಅಮರ್ಷಾಜ್ಜೀವಿತಂ ತ್ಯಕ್ತ್ವಾ ಗಾಹಮಾನಂ ವರೂಥಿನೀಮ್ ॥ 14 ॥
ಜೃಂಭಮಾಣಮಿವ ವ್ಯಾಘ್ರಂ ವ್ಯಾತ್ತಾನನಮಿವಾಂತಕಮ್ |
ಕಥಂ ಪ್ರತ್ಯುದ್ಯಯುರ್ದ್ರೋಣಮಸ್ಯಂತಂ ಪಾಂಡುಸೃಂಜಯಾಃ ॥ 15 ॥
ಭೂರಿಶ್ರವನ ವಧೆಯಿಂದಲೂ, ಸೈಂಧವನ ವಧೆಯಿಂದಲೂ ಕೋಪಗೊಂಡು, ರೋಷದಿಂದ ಕೂಡಿ, ಆಕಳಿಸುವ ವ್ಯಾಘ್ರದಂತೆ, ಬಾಯ್ತೆರೆದ ಯಮನಂತೆ ಪಾಂಡವ ಸೇನೆಯನ್ನು ಪ್ರವೇಶಿಸಿದ, ಸತತವಾಗಿ ಬಾಣಗಳನ್ನು ಪ್ರಯೋಗಿಸುತ್ತಿದ್ದ ದ್ರೋಣರ ಜೊತೆಯಲ್ಲಿ ಪಾಂಡು-ಸೃಂಜಯರು ಹೇಗೆ ಯುದ್ಧವನ್ನು ಮಾಡಿದರು?
ಆಚಾರ್ಯಂ ಯೇ ಚ ತೇಽರಕ್ಷನ್ ದುರ್ಯೋಧನಪುರೋಗಮಾಃ |

ದ್ರೌಣಿಕರ್ಣಕೃಪಾಸ್ತಾತ ತೇಽಪ್ಯಕುರ್ವನ್ ಕಿಮಾಹವೇ ॥ 16 ॥
ದುರ್ಯೋಧನ ಮೊದಲಾದವರಲ್ಲಿ ಯಾರು ಆಚಾರ್ಯರನ್ನು ರಕ್ಷಿಸಿದರು? ಎಲೈ ಪ್ರೀತಿಪಾತ್ರನೇ, ಅಶ್ವತ್ಥಾಮ-ಕರ್ಣ-ಕೃಪರು ಯುದ್ಧದಲ್ಲಿ ಏನು ಮಾಡಿದರು?
ಭಾರದ್ವಾಜಂ ಜಿಘಾಂಸಂತೌ ಸವ್ಯಸಾಚಿವೃಕೋದರೌ |
ಸಮಾರ್ಚ್ಛನ್ ಮಾಮಕಾ ಯುದ್ಧೇ ಕಥಂ ಸಂಜಯ ಶಂಸ ಮೇ ॥17॥
ಎಲೈ ಸಂಜಯನೇ, ದ್ರೋಣರನ್ನು ಕೊಲ್ಲಲು ಬಯಸಿದ ಭೀಮಾರ್ಜುನರನ್ನು ನನ್ನವರು ಯುದ್ಧದಲ್ಲಿ ಹೇಗೆ ಸಮೀಪಿಸಿದರು ಎಂಬುದನ್ನು ನನಗೆ ಹೇಳು.
ಸಿಂಧುರಾಜವಧೇನೇಮೇ ಘಟೋತ್ಕಚವಧೇನ ತೇ |
ಅಮರ್ಷಿತಾಃ ಸುಸಂಕ್ರುದ್ಧಾ ರಣಂ ಚಕ್ರುಃ ಕಥಂ ನಿಶಿ ॥ 18 ॥
ಸೈಂಧವನ ವಧೆಯಿಂದ ಕೋಪಗೊಂಡ ಇವರೂ, ಘಟೋತ್ಕಚನ ವಧೆಯಿಂದ ಕೋಪಗೊಂಡ ಅವರೂ ಸಹ ರಾತ್ರಿಯಲ್ಲಿ ಹೇಗೆ ಯುದ್ಧವನ್ನು ಮಾಡಿದರು?
ಸಂಜಯಃ
ಹತೇ ಘಟೋತ್ಕಚೇ ರಾಜನ್ ಕರ್ಣೇನ ನಿಶಿ ರಾಕ್ಷಸೇ |
ಪ್ರಣದತ್ಸು ಚ ಹೃಷ್ಟೇಷು ತಾವಕೇಷು ಯುಯುತ್ಸುಷು ॥ 19 ॥
ಆಪತತ್ಸು ಚ ವೇಗೇನ ವಧ್ಯಮಾನೇ ಬಲೇಽಪಿ ಚ |
ವಿಗಾಢಾಯಾಂ ರಜನ್ಯಾಂ ಚ ರಾಜಾ ದೈನ್ಯಂ ಪರಂ ಗತಃ ॥ 20 ॥
ಸಂಜಯ ಎಲೈ ರಾಜನೇ, ರಾತ್ರಿಯಲ್ಲಿ ಕರ್ಣನಿಂದ ರಾಕ್ಷಸನಾದ ಘಟೋತ್ಕಚನು ಹತನಾಗುತ್ತಿರಲು ನಿನ್ನ ಯೋಧರು ಸಂತೋಷದಿಂದ ಕೂಡಿದವರಾಗಿ ಸಿಂಹನಾದಗಳನ್ನು ಮಾಡುತ್ತಿರಲು ಯುದ್ಧವನ್ನು ಮಾಡಲು ಬಯಸಿ ವೇಗದಿಂದ ಮುನ್ನುಗ್ಗುತ್ತಿರಲು ನಿನ್ನ ಸೈನ್ಯವೂ ಸಹ ಪಾಂಡವರ ಸೈನ್ಯದಿಂದ ಹೊಡೆಯಲ್ಪಡುತ್ತಿರಲು ಗಾಢವಾದ ರಾತ್ರಿಯಲ್ಲಿ ರಾಜನಾದ ಯುಧಿಷ್ಠಿರನು ಬಹಳ ದೈನ್ಯವನ್ನು ಹೊಂದಿದನು.
ಅಬ್ರವೀಚ್ಚ ಮಹಾಬಾಹುರ್ಭೀಮಸೇನಂ ಪರಂತಪಃ |
ಆವಾರಯ ಮಹಾಬಾಹೋ ಧಾರ್ತರಾಷ್ಟ್ರಸ್ಯ ವಾಹಿನೀಮ್ |
ಹೈಡಿಂಬಸ್ಯಾಭಿಘಾತೇನ ಮೋಹೋ ಮಾಮಾವಿಶನ್ಮಹಾನ್ ॥21॥
ಪರಂತಪನೂ, ಮಹಾಬಾಹುವೂ ಆದ ಅವನು ಭೀಮಸೇನನನ್ನು ಕುರಿತು- `ಮಹಾಬಾಹುವೇ, ಕೌರವರ ಸೇನೆಯನ್ನು ತಡೆ. ಘಟೋತ್ಕಚನ ವಧೆಯಿಂದ ನನಗೆ ಬಹಳ ಮೋಹವು ಉಂಟಾಗಿದೆ' ಎಂದು ಹೇಳಿದನು.
ಏವಂ ಭೀಮಂ ಸಮಾದಿಶ್ಯ ಸ್ವರಥೇ ಸಮುಪಾವಿಶತ್ |
ಅಶ್ರುಪೂರ್ಣಮುಖೋ ರಾಜಾ ನಿಃಶ್ವಸಂಶ್ಚ ಪುನಃ ಪುನಃ |
ಕಶ್ಮಲಂ ಪ್ರಾವಿಶದ್ ಘೋರಂ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ ॥ 22 ॥
ಭೀಮನಿಗೆ ಹೀಗೆ ಆದೇಶವನ್ನು ನೀಡಿ ಕಣ್ಣೀರಿನಿಂದ ತುಂಬಿದ ಮುಖವುಳ್ಳವನಾಗಿ ರಾಜನು ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಾ ತನ್ನ ರಥದಲ್ಲಿ ಕುಳಿತುಕೊಂಡನು. ಕರ್ಣನ ಘೋರವಾದ ಪರಾಕ್ರಮವನ್ನು ನೋಡಿ ಮನೋಗ್ಲಾನಿಯನ್ನು ಹೊಂದಿದನು.
ತಂ ತಥಾ ವ್ಯಥಿತಂ ದೃಷ್ಟ್ವಾ ಕೃಷ್ಣೋ ವಚನಮಬ್ರವೀತ್ |
ಮಾ ವ್ಯಥಾಂ ಕುರು ಕೌಂತೇಯ ನೈತತ್ ತ್ವಯ್ಯುಪಪದ್ಯತೇ |
ವೈಕ್ಲವ್ಯಂ ಭರತಶ್ರೇಷ್ಠ ಯಥಾ ಪ್ರಾಕೃತಪೂರುಷೇ ॥ 23 ॥
ಉತ್ತಿಷ್ಠ ರಾಜನ್ ಯುದ್ಧ್ಯಸ್ವ ವಹ ಗುರ್ವೀಂ ಧುರಂ ವಿಭೋ |
ತ್ವಯಿ ವೈಕ್ಲವ್ಯಮಾಪನ್ನೇ ಸಂಶಯೋ ವಿಜಯೇ ಭವೇತ್ ॥ 24 ॥
ಅವನು ಹಾಗೆ ವ್ಯಥೆಯಿಂದ ಕೂಡಿರುವುದನ್ನು ನೋಡಿ ಕೃಷ್ಣನು ಅವನನ್ನು ಕುರಿತು- `ಕೌಂತೇಯನೇ, ವ್ಯಥೆಪಡಬೇಡ. ಭರತಶ್ರೇಷ್ಠನೇ, ಸಾಮಾನ್ಯ ಮನುಷ್ಯನಂತೆ ವೈಕ್ಲವ್ಯವನ್ನು ಹೊಂದುವುದು ನಿನಗೆ ಉಚಿತವಲ್ಲ. ರಾಜನೇ, ಎದ್ದು ಯುದ್ಧವನ್ನು ಮಾಡು. ವಿಭುವೇ, ದೊಡ್ಡ ಭಾರವನ್ನು ಹೊರುವವನಾಗು. ನೀನು ವೈಕ್ಲವ್ಯನಾದರೆ ಯುದ್ಧದಲ್ಲಿ ವಿಜಯವು ಸಂಶಯಗ್ರಸ್ತವಾದೀತು' ಎಂದು ಹೇಳಿದನು.
ಶ್ರುತ್ವಾ ಕೃಷ್ಣಸ್ಯ ವಚನಂ ಧರ್ಮರಾಜೋ ಯುಧಿಷ್ಠಿರಃ |
ವಿಮೃಜ್ಯ ನೇತ್ರೇ ಪಾಣಿಭ್ಯಾಂ ಕೃಷ್ಣಂ ವಚನಮಬ್ರವೀತ್ ॥ 25 ॥
ಕೃಷ್ಣನ ಮಾತುಗಳನ್ನು ಕೇಳಿ ಧರ್ಮರಾಜನಾದ ಯುಧಿಷ್ಠಿರನು ಹಸ್ತಗಳಿಂದ ನೇತ್ರಗಳನ್ನು ಒರೆಸಿಕೊಂಡು ಕೃಷ್ಣನನ್ನು ಕುರಿತು ಮಾತನಾಡಿದನು.
ವಿದಿತಾ ತೇ ಮಹಾಬಾಹೋ ಧರ್ಮಾಣಾಂ ಪರಮಾ ಗತಿಃ |
ಬ್ರಹ್ಮಹತ್ಯಾಫಲಂ ತಸ್ಯ ಯಃ ಕೃತಂ ನಾವಬುಧ್ಯತೇ ॥ 26 ॥
ಎಲೈ ಮಹಾಬಾಹುವೇ, ನೀನು ಧರ್ಮಗಳ ಶ್ರೇಷ್ಠವಾದ ಗತಿಯನ್ನು ತಿಳಿದಿದ್ದೀಯೆ. ಇನ್ನೊಬ್ಬರು ಮಾಡುವ ಉಪಕಾರವನ್ನು ಯಾವನು ತಿಳಿದು ಸ್ಮರಿಸುವುದಿಲ್ಲವೋ ಅವನಿಗೆ ಬ್ರಹ್ಮಹತ್ಯೆಯ ಫಲವು ಉಂಟಾಗುತ್ತದೆ.
ಅಸ್ಮಾಕಂ ಹಿ ವನಸ್ಥಾನಾಂ ಹೈಡಿಂಬೇನ ಮಹಾತ್ಮನಾ |
ಬಾಲೇನಾಪಿ ಸತಾ ತೇನ ಕೃತಂ ಸಾಹ್ಯಂ ಜನಾರ್ದನ ॥ 27 ॥
ಎಲೈ ಜನಾರ್ದನನೇ, ನಾವು ಕಾಡಿನಲ್ಲಿದ್ದಾಗ ಮಹಾತ್ಮನಾದ ಘಟೋತ್ಕಚನು ಬಾಲಕನಾಗಿದ್ದರೂ ಬಹಳ ಸಹಾಯವನ್ನು

ಮಾಡಿದನು.
ಅಸ್ತ್ರಹೇತೋರ್ಗತಂ ಜ್ಞಾತ್ವಾ ಪಾಂಡವಂ ಶ್ವೇತವಾಹನಮ್ |
ಅಸೌ ಕೃಷ್ಣ ಮಹೇಷ್ವಾಸಃ ಕಾಮ್ಯಕೇ ಮಾಮುಪಸ್ಥಿತಃ |
ಉಷಿತಶ್ಚ ಸಹಾಸ್ಮಾಭಿರ್ಯಾವನ್ನಾಸೀದ್ ಧನಂಜಯಃ ॥ 28 ॥
ಪಾಂಡುಪುತ್ರನಾದ ಅರ್ಜುನನು ಅಸ್ತ್ರಗಳನ್ನು ಸಂಪಾದಿಸಲು ಹೋಗಿದ್ದಾನೆಂದು ತಿಳಿದ ಮಹಾಧನುರ್ಧಾರಿಯಾದ ಅವನು ಕಾಮ್ಯಕವನದಲ್ಲಿ ನಮ್ಮ ಬಳಿಗೆ ಬಂದು ಅರ್ಜುನನು ಹಿಂದಿರುಗುವವರೆಗೂ ನಮ್ಮ ಜೊತೆಯಲ್ಲಿ ವಾಸಿಸಿದನು.
ಗಂಧಮಾದನಯಾತ್ರಾಯಾಂ ದುರ್ಗೇಭ್ಯಶ್ಚ ಸ್ಮ ತಾರಿತಾಃ |
ಪಾಂಚಾಲೀ ಚ ಪರಿಶ್ರಾಂತಾ ಪೃಷ್ಠೇನೋಢಾ ಮಹಾತ್ಮನಾ ॥ 29 ॥
ಗಂಧಮಾದನ ಪರ್ವತದಲ್ಲಿ ಹೋಗುವ ಸಮಯದಲ್ಲಿ ದುರ್ಗಮವಾದ ಪ್ರದೇಶಗಳಲ್ಲಿ ನಮ್ಮನ್ನು ದಾಟಿಸಿದನು. ಮಹಾತ್ಮನಾದ ಅವನು ದಣಿದ ದ್ರೌಪದಿಯನ್ನು ಬೆನ್ನಿನ ಮೇಲೆ ಹೊತ್ತುಕೊಂಡು ನಡೆದನು.
ಆರಂಭಾಚ್ಚೈವ ಯುದ್ಧಾನಾಂ ಯದೇಷ ಕೃತವಾನ್ ಪ್ರಭೋ |
ಮದರ್ಥಂ ದುಷ್ಕರಂ ಕರ್ಮ ಕೃತಂ ತೇನ ಮಹಾತ್ಮನಾ ॥ 30 ॥
ಎಲೈ ಪ್ರಭುವೇ, ಯುದ್ಧವು ಆರಂಭವಾದಾಗಿನಿಂದಲೂ ಮಹಾತ್ಮನಾದ ಅವನು ನನ್ನ ಸಲುವಾಗಿ ದುಷ್ಕರವಾದ ಕರ್ಮಗಳನ್ನು ಮಾಡಿದನು.
ಸ್ವಭಾವಾದ್ ಯಾ ಚ ಮೇ ಪ್ರೀತಿಃ ಸಹದೇವೇ ಜನಾರ್ದನ |
ಸೈವ ಮೇ ದ್ವಿಗುಣಾ ಪ್ರೀತೀ ರಾಕ್ಷಸೇಂದ್ರೇ ಘಟೋತ್ಕಚೇ ॥ 31 ॥
ಎಲೈ ಜನಾರ್ದನನೇ, ನನಗೆ ಸ್ವಾಭಾವಿಕವಾಗಿ ಸಹದೇವನಲ್ಲಿ ಯಾವ ಪ್ರೀತಿ ಇದೆಯೋ ಅದರ ಎರಡರಷ್ಟು ಪ್ರೀತಿಯು ರಾಕ್ಷಸೇಂದ್ರನಾದ ಘಟೋತ್ಕಚನಲ್ಲಿ ಇದೆ.
ಭಕ್ತಶ್ಚ ಮೇ ಮಹಾಬಾಹುಃ ಪ್ರಿಯೋಽಸ್ಯಾಹಂ ಪ್ರಿಯಶ್ಚ ಮೇ |
ಯೇನ ವಿಂದಾಮಿ ವಾರ್ಷ್ಣೇಯ ಕಶ್ಮಲಂ ಶೋಕತಾಪಿತಃ ॥ 32 ॥
ಮಹಾಬಾಹುವಾದ ಅವನು ನಮ್ಮಲ್ಲಿ ಸ್ವಾಮಿನಿಷ್ಠೆಯುಳ್ಳವನು. ನಾನು ಅವನಿಗೆ ಪ್ರಿಯನಾದವನು, ಅವನೂ ನನಗೆ ಪ್ರಿಯನಾದವನು. ಎಲೈ ವಾರ್ಷ್ಣೇಯನೇ, ಆದ್ದರಿಂದ ಶೋಕತಪ್ತನಾಗಿ ಮನಸ್ಸಿನಲ್ಲಿ ಗ್ಲಾನಿಯನ್ನು ಹೊಂದುತ್ತಿದ್ದೇನೆ.
ಪಶ್ಯ ಸೈನ್ಯಾನಿ ವಾರ್ಷ್ಣೇಯ ದ್ರಾವ್ಯಮಾಣಾನಿ ಕೌರವೈಃ |
ದ್ರೋಣಕರ್ಣೌ ಚ ಸಂಯತ್ತೌ ಪಶ್ಯ ಯುದ್ಧೇ ಮಹಾರಥೌ ॥ 33 ॥
ಎಲೈ ವಾರ್ಷ್ಣೇಯನೇ, ನಮ್ಮ ಸೈನ್ಯಗಳು ಕೌರವರಿಂದ ಓಡಿಸಲ್ಪಡುತ್ತಿರುವುದನ್ನು ನೀನು ನೋಡು. ಮಹಾರಥರಾದ ದ್ರೋಣ-ಕರ್ಣರು ಯುದ್ಧದಲ್ಲಿ ಎಚ್ಚರಿಕೆಯಿಂದ ಪ್ರಯತ್ನಪೂರ್ವಕವಾಗಿರುವುದನ್ನು ನೋಡು.
ನಿಶೀಥೇ ಪಾಂಡವಂ ಸೈನ್ಯಮಾಭ್ಯಾಂ ಪಶ್ಯ ಪ್ರಮರ್ದಿತಮ್ |
ಗಜಾಭ್ಯಾಮಿವ ಮತ್ತಾಭ್ಯಾಂ ಯಥಾ ನಡವನಂ ಮಹತ್ ॥ 34 ॥
ಈ ರಾತ್ರಿಯಲ್ಲಿ ಎರಡು ಮದಗಜಗಳು ದೊಡ್ಡ ಕಮಲವನವನ್ನು ನಾಶಮಾಡುವಂತೆ ಇವರಿಬ್ಬರಿಂದ ನಾಶಗೊಳಿಸಲ್ಪಡುತ್ತಿರುವ ಪಾಂಡವರ ಸೈನ್ಯವನ್ನು ನೋಡು.
ಅನಾದೃತ್ಯ ಬಲಂ ಬಾಹ್ವೋರ್ಭೀಮಸೇನಸ್ಯ ಮಾಧವ |
ಚಿತ್ರಾಸ್ತ್ರತಾಂ ಚ ಪಾರ್ಥಸ್ಯ ವಿಕ್ರಮಂತೇ ಸ್ಮ ಕೌರವಾಃ ॥ 35 ॥
ಎಲೈ ಮಾಧವನೇ, ಭೀಮಸೇನನ ಬಾಹುಬಲವನ್ನೂ, ಅರ್ಜುನನ ಆಶ್ಚರ್ಯಕರವಾದ ಅಸ್ತ್ರವಿದ್ಯೆಯನ್ನೂ ಕಡೆಗಣಿಸಿ, ಕೌರವರು ಪರಾಕ್ರಮವನ್ನು ತೋರಿಸುತ್ತಿದ್ದಾರೆ.
ಏಷ ದ್ರೋಣಶ್ಚ ಕರ್ಣಶ್ಚ ರಾಜಾ ಚೈವ ಸುಯೋಧನಃ |
ನಿಹತ್ಯ ರಾಕ್ಷಸಂ ಯುದ್ಧೇ ಹೃಷ್ಟಾ ನರ್ದಂತಿ ಸಂಯುಗೇ ॥ 36 ॥
ಈ ದ್ರೋಣ-ಕರ್ಣ ಮತ್ತು ಸುಯೋಧನರು ಯುದ್ಧದಲ್ಲಿ ಘಟೋತ್ಕಚನನ್ನು ಕೊಂದು ಸಿಂಹನಾದವನ್ನು ಮಾಡುತ್ತಿದ್ದಾರೆ.
ಕಥಮಸ್ಮಾಸು ಜೀವತ್ಸು ತ್ವಯಿ ಚೈವ ಜನಾರ್ದನ |
ಹೈಡಿಂಬಃ ಪ್ರಾಪ್ತವಾನ್ ಮೃತ್ಯುಂ ಸೂತಪುತ್ರೇಣ ಸಂಗತಃ ॥ 37 ॥
ಎಲೈ ಜನಾರ್ದನನೇ, ನಾವು ಬದುಕಿರುವಾಗ, ನೀನು ಬದುಕಿರುವಾಗ ಘಟೋತ್ಕಚನು ಕರ್ಣನಿಂದ ಹೇಗೆ ಮೃತನಾದನು?
ಕದರ್ಥೀಕೃತ್ಯ ನಃ ಸರ್ವಾನ್ ಪಶ್ಯತಃ ಸವ್ಯಸಾಚಿನಃ |
ನಿಹತೋ ರಾಕ್ಷಸಃ ಕೃಷ್ಣ ಭೈಮಸೇನಿರ್ಮಹಾಬಲಃ ॥ 38 ॥
ನಮ್ಮೆಲ್ಲರನ್ನೂ ತುಚ್ಛೀಕರಿಸಿ ಅರ್ಜುನನು ನೋಡುತ್ತಿರುವಂತೆಯೇ ಎಲೈ ಕೃಷ್ಣನೇ, ಮಹಾಬಲನಾದ ಭೀಮಸೇನನ ಪುತ್ರನಾದ ಘಟೋತ್ಕಚನು ಹತನಾದನು.
ಯದಾಽಭಿಮನ್ಯುರ್ನಿಹತೋ ಧಾರ್ತರಾಷ್ಟ್ರೈರ್ದುರಾತ್ಮಭಿಃ |
ನಾಸೀತ್ ತತ್ರ ರಣೇ ಕೃಷ್ಣ ಸವ್ಯಸಾಚೀ ಮಹಾರಥಃ ॥ 39 ॥
ದುರಾತ್ಮರಾದ ಧೃತರಾಷ್ಟ್ರಪುತ್ರರು ಅಭಿಮನ್ಯುವನ್ನು ಕೊಂದಾಗ ಎಲೈ ಕೃಷ್ಣನೇ, ಮಹಾರಥನಾದ ಅರ್ಜುನನು ಅಲ್ಲಿ ಇರಲಿಲ್ಲ.
ನಿರುದ್ಧಾಶ್ಚ ವಯಂ ಸರ್ವೇ ಸೈಂಧವೇನ ದುರಾತ್ಮನಾ |
ನಿಮಿತ್ತಮಭವದ್ ದ್ರೋಣಃ ಸಪುತ್ರಸ್ತತ್ರ ಕರ್ಮಣಿ ॥ 40 ॥
ದುರಾತ್ಮನಾದ ಸೈಂಧವನು ನಮ್ಮೆಲ್ಲರನ್ನೂ ತಡೆದನು. ಅಲ್ಲಿ ಆ ಕಾರ್ಯದಲ್ಲಿ ದ್ರೋಣರು ಮತ್ತು ಅವರ ಪುತ್ರರು ನಿಮಿತ್ತರಾದರು.

ಉಪದಿಷ್ಟೋ ವಧೋಪಾಯಃ ಕರ್ಣಸ್ಯ ಗುರುಣಾ ಸ್ವಯಮ್ |
ವ್ಯಾಯಚ್ಚತಶ್ಚ ಖಡ್ಗೇನ ದ್ವಿಧಾ ಖಡ್ಗಂ ಚಕಾರ ಹ ॥ 41 ॥
ಗುರುಗಳಾದ ದ್ರೋಣರು ಕರ್ಣನಿಗೆ ಅಭಿಮನ್ಯುವನ್ನು ಕೊಲ್ಲುವ ಉಪಾಯವನ್ನು ಸ್ವತಃ ಉಪದೇಶ ಮಾಡಿದರು. ಖಡ್ಗವನ್ನು ಹಿಡಿದು ಯುದ್ಧವನ್ನು ಮಾಡುತ್ತಿದ್ದ ಅವನ ಖಡ್ಗವನ್ನು ಕರ್ಣನು ಎರಡು ಭಾಗವಾಗಿ ಕತ್ತರಿಸಿದನು.
ವ್ಯಸನೇ ವರ್ತಮಾನಸ್ಯ ಕೃತವರ್ಮಾ ನೃಶಂಸವತ್ |
ಅಶ್ವಾನ್ ಜಘಾನ ಸಹಸಾ ತಥೋಭೌ ಪಾರ್ಷ್ಣಿಸಾರಥೀ |
ತತೇತರೇ ಮಹೇಷ್ವಾಸಾಃ ಸೌಭದ್ರಂ ಯುಧ್ಯಪಾತಯನ್ ॥ 42 ॥
ಸಂಕಟದಲ್ಲಿ ಸಿಲುಕಿದ ಅಭಿಮನ್ಯುವಿನ ಅಶ್ವಗಳನ್ನು ಮತ್ತು ಇಬ್ಬರು ಪಾರ್ಷ್ಣಿ ಸಾರಥಿಗಳನ್ನು ಕ್ರೂರನಾದ ಕೃತವರ್ಮನು ಶೀಘ್ರವಾಗಿ ಕೊಂದನು. ಇತರ ಮಹಾರಥರು ಅಭಿಮನ್ಯುವನ್ನು ಕೆಡವಿದರು.
ಅಲ್ಪೇ ಚ ಕಾರಣೇ ಕೃಷ್ಣ ಹತೋ ಗಾಂಡೀವಧನ್ವನಾ |
ಸೈಂಧವೋ ಯಾದವಶ್ರೇಷ್ಠ ತಚ್ಚ ನಾತಿಪ್ರಿಯಂ ಮಮ ॥ 43 ॥
ಎಲೈ ಕೃಷ್ಣನೇ, ಅಲ್ಪಕಾರಣಕ್ಕಾಗಿ ಸೈಂಧವನು ಅರ್ಜುನನಿಂದ ಕೊಲ್ಲಲ್ಪಟ್ಟನು. ಎಲೈ ಯಾದವಶ್ರೇಷ್ಠನೇ, ಅದೂ ನನಗೆ ಬಹಳ ಪ್ರಿಯವಾಗಲಿಲ್ಲ.
ಯದಿ ಶತ್ರುವಧೇ ನ್ಯಾಯ್ಯೋ ಭವೇತ್ ಕರ್ತುಂ ಚ ಪಾಂಡವೈಃ |
ದ್ರೋಣಕರ್ಣೌ ರಣೇ ಪೂರ್ವಂ ಹಂತವ್ಯಾವಿತಿ ಮೇ ಮತಿಃ ॥ 44 ॥
ಶತ್ರುವಧೆಯ ವಿಷಯದಲ್ಲಿ ಪಾಂಡವರಿಗೆ ನ್ಯಾಯವನ್ನು ಮಾಡಬೇಕಾಗಿದ್ದರೆ ಯುದ್ಧದಲ್ಲಿ ಮೊದಲು ದ್ರೋಣ-ಕರ್ಣರನ್ನು ಕೊಲ್ಲಬೇಕಾಗಿದ್ದಿತು.
ಏತೌ ಮೂಲಂ ಹಿ ದುಃಖಾನಾಮಸ್ಮಾಕಂ ಪುರುಷರ್ಷಭ |
ಏತೌ ರಣೇ ಸಮಾಸಾದ್ಯ ಪರಾಶ್ವಸ್ತಃ ಸುಯೋಧನಃ ॥ 45 ॥
ಎಲೈ ಪುರುಷಶ್ರೇಷ್ಠನೇ, ನಮ್ಮ ದುಃಖಕ್ಕೆ ಇವರಿಬ್ಬರು ಮೂಲಕಾರಣರು. ಇವರಿಬ್ಬರನ್ನು ಹೊಂದಿ ಸುಯೋಧನನು ರಣರಂಗದಲ್ಲಿ ನೆಮ್ಮದಿಯಿಂದಿದ್ದಾನೆ.
ಯತ್ರ ವಧ್ಯೋ ಭವೇದ್ ದ್ರೋಣಃ ಸೂತಪುತ್ರಶ್ಚ ಸಾನುಗಃ |
ತತ್ರಾವಧೀನ್ಮಹಾಬಾಹುಃ ಸೈಂಧವಂ ದೂರವಾಸಿನಮ್ ॥ 46 ॥
ದ್ರೋಣರನ್ನೂ, ಅನುಚರರಿಂದ ಸಹಿತನಾದ ಕರ್ಣನನ್ನೂ ಹೊಡೆಯಬೇಕಾದ ಸ್ಥಳದಲ್ಲಿ ಮಹಾಬಾಹುವಾದ ಅರ್ಜುನನು ದೂರದಲ್ಲಿದ್ದ ಸೈಂಧವನನ್ನು ಹೊಡೆದಿದ್ದಾನೆ.
ಅವಶ್ಯಂ ತು ಮಯಾ ಕಾರ್ಯಃ ಸೂತಪುತ್ರಸ್ಯ ನಿಗ್ರಹಃ |
ತತೋ ಯಾಸ್ಯಾಮ್ಯಹಂ ವೀರ ಸ್ವಯಂ ಕರ್ಣಜಿಘಾಂಸಯಾ |
ಭೀಮಸೇನೋ ಮಹಾಬಾಹುರ್ದ್ರೋಣಾನೀಕೇನ ಸಂಗತಃ ॥ 47 ॥
ನಾನು ಅವಶ್ಯವಾಗಿ ಕರ್ಣನನ್ನು ನಿಗ್ರಹಿಸಬೇಕು. ಎಲೈ ವೀರನೇ, ಅದಕ್ಕಾಗಿ ನಾನು ಕರ್ಣನನ್ನು ಕೊಲ್ಲಲು ಬಯಸಿ ಸ್ವಯಂ ಯುದ್ಧಕ್ಕೆ ಹೊರಡುವೆನು. ಮಹಾಬಾಹುವಾದ ಭೀಮಸೇನನು ದ್ರೋಣರ ಸೈನ್ಯದ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದಾನೆ.
ಏವಮುಕತ್ವ ಯಯೌ ತೂರ್ಣಂ ತ್ವರಮಾಣೋ ಯುಧಿಷ್ಠಿರಃ |
ಸ ವಿಸ್ಫಾರ್ಯ ಮಹಚ್ಚಾಪಂ ಶಂಖಂ ಪ್ರಧ್ಮಾಪ್ಯ ಭೈರವಮ್ ॥ 48 ॥
ಹೀಗೆ ಹೇಳಿ ಯುಧಿಷ್ಠಿರನು ತ್ವರೆಮಾಡುತ್ತಾ, ತನ್ನ ದೊಡ್ಡ ಧನುಸ್ಸನ್ನು ಎಳೆಯುತ್ತಾ, ಭೈರವವಾದ ಶಂಖವನ್ನು ಊದುತ್ತಾ ಹೊರಟನು.
ತತೋ ರಥಸಹಸ್ರೇಣ ಗಜಾನಾಂ ಚ ಶತೈಸ್ತ್ರಿಭಿಃ |
ವಾಜಿಭಿಃ ಪಂಚಸಾಹಸ್ರೈಸ್ತ್ರಿಸಾಹಸ್ರೈಃ ಪ್ರಭದ್ರಕೈಃ |
ವೃತಃ ಶಿಖಂಡೀ ತ್ವರಿತೋ ರಾಜಾನಂ ಪೃಷ್ಠತೋಽನ್ವಯಾತ್ ॥ 49 ॥
ಅನಂತರ ಸಹಸ್ರ ರಥಗಳಿಂದಲೂ, ಮುನ್ನೂರು ಗಜಗಳಿಂದಲೂ, ಐದು ಸಹಸ್ರ ಅಶ್ವಗಳಿಂದಲೂ, ಮೂರು ಸಹಸ್ರ ಪ್ರಭದ್ರಕ ಪದಾತಿಗಳಿಂದಲೂ ಪರಿವೃತನಾದ ಶಿಖಂಡಿಯು ಶೀಘ್ರವಾಗಿ ರಾಜನನ್ನು ಹಿಂಬಾಲಿಸಿದನು.
ತತೋ ಭೇರೀಃ ಸಮಾಜಘ್ನುಃ ಶಂಖಾನ್ ದಧ್ಮುಶ್ಚ ದಂಸಿತಾಃ |
ಪಾಂಚಾಲಾಃ ಪಾಂಡವಾಶ್ಚೈವ ಯುಧಿಷ್ಠಿರಪುರೋಗಮಾಃ ॥ 50 ॥
ಆಗ ಯುಧಿಷ್ಠಿರನನ್ನು ಮುಂದೆ ಮಾಡಿಕೊಂಡು ಪಾಂಡವರು ಮತ್ತು ಪಾಂಚಾಲರು ಭೇರಿಗಳನ್ನು ಬಾರಿಸಿ, ಯುದ್ಧಸನ್ನದ್ಧರಾಗಿ ಶಂಖಗಳನ್ನು ಊದಿದರು.
ತತೋಽಬ್ರವೀನ್ ಮಹಾಬಾಹುರ್ವಾಸುದೇವೋ ಧನಂಜಯಮ್ |
ಏಷ ಪ್ರಯಾತಿ ತ್ವರಿತೋ ಕ್ರೋಧಾವಿಷ್ಟೋ ಯುಧಿಷ್ಠಿರಃ |
ಜಿಘಾಂಸುಃ ಸೂತಪುತ್ರಸ್ಯ ತಸ್ಯೋಪೇಕ್ಷಾ ನ ಯುಜ್ಯತೇ ॥ 51 ॥
ಆಗ ಮಹಾಬಾಹುವಾದ ವಾಸುದೇವನು ಅರ್ಜುನನನ್ನು ಕುರಿತು- `ಕ್ರೋಧಾವಿಷ್ಟನಾದ ಯುಧಿಷ್ಠಿರನು ಕರ್ಣನನ್ನು ಕೊಲ್ಲಲು ಬಯಸಿ ಶೀಘ್ರವಾಗಿ ಹೋಗುತ್ತಿದ್ದಾನೆ. ಅವನನ್ನು ಒಬ್ಬನೇ ಹೋಗುವಂತೆ ಬಿಡುವುದು ಒಳ್ಳೆಯದಲ್ಲ' ಎಂದು ಹೇಳಿದನು.
ಏವಮುಕತ್ವ ಹೃಷೀಕೇಶಃ ಶೀಘ್ರಮಶ್ವಾನಚೋದಯತ್ |
ದೂರಂ ಚ ಯಾತಂ ರಾಜಾನಮನ್ವಗಚ್ಛಜ್ಜನಾರ್ದನಃ ॥ 52 ॥

ಹೀಗೆ ಹೇಳಿ ಹೃಷೀಕೇಶನು ತನ್ನ ಅಶ್ವಗಳನ್ನು ಶೀಘ್ರವಾಗಿ ಪ್ರಚೋದಿಸಿ ದೂರದಲ್ಲಿ ಹೋಗುತ್ತಿದ್ದ ರಾಜನನ್ನು ಹಿಂಬಾಲಿಸಿದನು.
ತಂ ದೃಷ್ಟ್ವಾ ಸಹಸಾ ಯಾಂತಂ ಸೂತಪುತ್ರಜಿಘಾಂಸಯಾ |
ಶೋಕೋಪಹತಸಂಕಲ್ಪಂ ದಹ್ಯಮಾನಮಿವಾಗ್ನಿನಾ |
ಅಭಿಗಮ್ಯಾಬ್ರವೀದ್ ವ್ಯಾಸೋ ಧರ್ಮಪುತ್ರಂ ಯುಧಿಷ್ಠಿರಮ್ ॥ 53 ॥
ಸೂತಪುತ್ರನನ್ನು ಕೊಲ್ಲುವ ಇಚ್ಛೆಯಿಂದ ತನ್ನ ಸಂಕಲ್ಪವು ಶೋಕದಿಂದ ಭಗ್ನವಾಗಿ ಅಗ್ನಿಯಿಂದಲೋ ಎಂಬಂತೆ ದಹಿಸಲ್ಪಟ್ಟು ಶೀಘ್ರವಾಗಿ ಹೋಗುತ್ತಿದ್ದ ಧರ್ಮಪುತ್ರನಾದ ಯುಧಿಷ್ಠಿರನ ಬಳಿಗೆ ವ್ಯಾಸರು ಬಂದು ಮಾತನಾಡಿದರು.
ಕರ್ಣಮಾಸಾದ್ಯ ಸಂಗ್ರಾಮೇ ದಿಷ್ಟ್ಯಾ ಜೀವತಿ ಫಲ್ಗುನಃ |
ಸವ್ಯಸಾಚಿವಧಾಕಾಂಕ್ಷೀ ಶಕ್ತಿಂ ರಕ್ಷಿತವಾನ್ ಹಿ ಸಃ ॥ 54 ॥
ದೇವರ ದಯದಿಂದ ಅರ್ಜುನನು ಯುದ್ಧದಲ್ಲಿ ಕರ್ಣನನ್ನು ಸಂಧಿಸಿ ಬದುಕಿದ್ದಾನೆ. ಅರ್ಜುನನನ್ನು ಕೊಲ್ಲಲು ಬಯಸಿದ ಕರ್ಣನು ಯಾವಾಗಲೂ ಶಕ್ತಿಯನ್ನು ರಕ್ಷಿಸುತ್ತಿದ್ದನು.
ನ ಚಾಗಾದ್ ದ್ವೈರಥಂ ಜಿಷ್ಣುರ್ದಿಷ್ಟ್ಯಾ ತಂ ಭರತರ್ಷಭ |
ಸೃಜೇತಾಂ ಸ್ಪರ್ಧಿನಾವೇತೌ ದಿವ್ಯಾನ್ಯಸ್ತ್ರಾಣಿ ಸರ್ವಶಃ ॥ 55 ॥
ಎಲೈ ಭರತಶ್ರೇಷ್ಠನೇ, ದೇವರ ದಯದಿಂದ ಅರ್ಜುನನು ಕರ್ಣನ ಜೊತೆಯಲ್ಲಿ ದ್ವಂದ್ವ ಯುದ್ಧಕ್ಕೆ ಹೋಗಲಿಲ್ಲ. ಹಾಗೆ ಹೋಗಿದ್ದರೆ ಸ್ಪರ್ಧಾಳುಗಳಾದ ಅವರಿಬ್ಬರು ದಿವ್ಯಾಸ್ತ್ರಗಳನ್ನು ಎಲ್ಲ ಕಡೆಗಳಲ್ಲಿಯೂ ಸೃಷ್ಟಿಸುತ್ತಿದ್ದರು.
ವಧ್ಯಮಾನೇಷು ಚಾಸ್ತ್ರೇಷು ಪೀಡಿತಃ ಸೂತನಂದನಃ |
ವಾಸವೀಂ ಸಮರೇ ಶಕ್ತಿಂ ಧ್ರುವಂ ಮುಂಚೇದ್ ಯುಧಿಷ್ಠಿರ ॥ 56 ॥
ತನ್ನ ಅಸ್ತ್ರಗಳು ಅರ್ಜುನನ ಅಸ್ತ್ರಗಳಿಂದ ನಾಶಗೊಳಿಸಲ್ಪಡುತ್ತಿರಲು ಸೂತನಂದನನಾದ ಕರ್ಣನು ಎಲೈ ಯುಧಿಷ್ಠಿರನೇ, ಖಂಡಿತವಾಗಿ ಅರ್ಜುನನ ಮೇಲೆ ಶಕ್ತಿಯನ್ನು ಪ್ರಯೋಗಿಸಿರುತ್ತಿದ್ದನು.
ತತೋ ಭವೇತ್ ತೇ ವ್ಯಸನಂ ಘೋರಂ ಭರತಸತ್ತಮ |
ದಿಷ್ಟ್ಯಾ ರಕ್ಷೋ ಹತಂ ಯುದ್ಧೇ ಸೂತಪುತ್ರೇಣ ಮಾನದ ॥ 57 ॥
ಎಲೈ ಭರತಶ್ರೇಷ್ಠನೇ, ಆಗ ನಿನಗೆ ಇನ್ನೂ ಘೋರವಾದ ದುಃಖವು ಉಂಟಾಗುತ್ತಿದ್ದಿತು. ಎಲೈ ಮಾನದನೇ, ದೇವರ ದಯದಿಂದ ರಣರಂಗದಲ್ಲಿ ಕರ್ಣನಿಂದ ರಾಕ್ಷಸನಾದ ಘಟೋತ್ಕಚನು ಹತನಾಗಿದ್ದಾನೆ.
ವಾಸವೀಂ ಕಾರಣಂ ಕೃತ್ವಾ ಕಾಲೇನಾಪಹತೋ ಹ್ಯಸೌ |
ತವೈವ ಕಾರಣಾದ್ ರಕ್ಷೋ ನಿಹತಂ ತಾತ ಸಂಯುಗೇ ॥ 58 ॥
ಇಂದ್ರನು ಕೊಟ್ಟ ಶಕ್ತಿಯನ್ನು ನಿಮಿತ್ತಮಾಡಿಕೊಂಡು ಕಾಲವು ನಿನ್ನ ಸಲುವಾಗಿ ಅವನ ಬುದ್ಧಿಯನ್ನು ಕೆಡಿಸಿದೆ. ಪ್ರೀತಿಪಾತ್ರನೇ, ಯುದ್ಧದಲ್ಲಿ ರಾಕ್ಷಸನು ಹತನಾಗಿದ್ದಾನೆ.
ಮಾ ಕ್ರುಧೋ ಭರತಶ್ರೇಷ್ಠ ಮಾ ಚ ಶೋಕೇ ಮನಃ ಕೃಥಾಃ |
ಪ್ರಾಣಿನಾಮಿಹ ಸರ್ವೇಷಾಮೇಷಾ ನಿಷ್ಠಾ ಯುಧಿಷ್ಠಿರ ॥ 59 ॥
ಭರತಶ್ರೇಷ್ಠನೇ, ಕೋಪಗೊಳ್ಳಬೇಡ. ಮನಸ್ಸಿನಲ್ಲಿ ಶೋಕಪಡಬೇಡ. ಎಲೈ ಯುಧಿಷ್ಠಿರನೇ, ಎಲ್ಲ ಪ್ರಾಣಿಗಳೂ ಕೊನೆಯಲ್ಲಿ ಇದೇ ಗತಿಯನ್ನು ಹೊಂದಬೇಕಷ್ಟೆ?
ಭ್ರಾತೃಭಿಃ ಸಹಿತಃ ಸರ್ವೈಃ ಪಾರ್ಥಿವೈಶ್ಚ ಮಹಾತ್ಮಭಿಃ |
ಕೌರವಾನ್ ಸಮರೇ ರಾಜನ್ನಭಿಯುಧ್ಯಸ್ವ ಭಾರತ |
ಪಂಚಮೇ ದಿವಸೇ ಚೈವ ಪೃಥಿವೀ ತೇ ಭವಿಷ್ಯತಿ ॥ 60 ॥
ಎಲೈ ಭಾರತನೇ, ಎಲ್ಲ ಸಹೋದರರಿಂದಲೂ ಮತ್ತು ಮಹಾತ್ಮರಾದ ರಾಜರಿಂದಲೂ ಸಹಿತನಾಗಿ ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡು. ಇವತ್ತಿಗೆ ಐದನೆಯ ದಿನದಲ್ಲಿ ಪೃಥಿವಿಯು ನಿನ್ನ ವಶವಾಗುವುದು.
ನಿತ್ಯಂ ಚ ಪುರುಷವ್ಯಾಘ್ರ ಧರ್ಮಮೇವ ವಿಚಿಂತಯ |
ಆನೃಶಂಸ್ಯಂ ತಪೋ ದಾನಂ ಕ್ಷಮಾಂ ಸತ್ಯಂ ಚ ಪಾಂಡವ ॥ 61 ॥
ಸೇವೇಥಾಃ ಪರಮಪ್ರೀತೋ ಯತೋ ಧರ್ಮಸ್ತತೋ ಜಯಃ |
ಇತ್ಯುಕ್ತ್ವಾ ಪಾಂಡವಂ ವ್ಯಾಸಸ್ತತ್ರೈವಾಂತರಧೀಯತ ॥ 62 ॥
ಎಲೈ ಪುರುಷವ್ಯಾಘ್ರನೇ, ಯಾವಾಗಲೂ ಧರ್ಮವನ್ನೇ ಚಿಂತಿಸು. ಎಲೈ ಪಾಂಡವನೇ, ದಯೆ, ತಪಸ್ಸು, ದಾನ, ಸಹನೆ, ಸತ್ಯ- ಇವುಗಳನ್ನು ಸಂತೋಷದಿಂದ ಅನುಷ್ಠಾನ ಮಾಡು. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಿದೆ. ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿ ವ್ಯಾಸರು ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಸಪ್ತತ್ಯಧಿಕಶತತಮೋऽಧ್ಯಾಯಃ ॥
॥ ದ್ರೋಣವಧಪರ್ವಣಿ ಚತುರ್ಥೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತನೆಯ ಅಧ್ಯಾಯ
ಅರ್ಜುನನ ಆದೇಶದಂತೆ ನಿದ್ರಿಸಿ ಎದ್ದ ಯೋಧರಿಂದ

ಚಂದ್ರೋದಯವಾದ ಮೇಲೆ ಪುನಃ ಯುದ್ಧ.
ಸಂಜಯಃ
ಘಟೋತ್ಕಚೇ ತು ನಿಹತೇ ಸೂತಪುತ್ರೇಣ ತಾಂ ನಿಶಾಮ್ |
ದುಃಖಾಮರ್ಷವಶಂ ಪ್ರಾಪ್ತೋ ಧರ್ಮಪುತ್ರೋ ಯುಧಿಷ್ಠಿರಃ ॥ 1 ॥
ಸಂಜಯ ಕರ್ಣನಿಂದ ಘಟೋತ್ಕಚನು ಹತನಾಗುತ್ತಿರಲು ಧರ್ಮಪುತ್ರನಾದ ಯುಧಿಷ್ಠಿರನು ದುಃಖ ಮತ್ತು ರೋಷಗಳಿಗೆ ಈಡಾದನು.
ದೃಷ್ಟ್ವಾ ಭೀಮೇನ ಮಹತೀಂ ವಾರ್ಯಮಾಣಾಂ ಚಮೂಂ ತವ |
ಧೃಷ್ಟದ್ಯುಮ್ನಮುವಾಚೇದಂ ಕುಂಭಯೋನಿಂ ನಿವಾರಯ ॥ 2 ॥
ಭೀಮಸೇನನಿಂದ ನಿವಾರಿಸಲ್ಪಡುತ್ತಿದ್ದ ನಿನ್ನ ದೊಡ್ಡ ಸೈನ್ಯವನ್ನು ನೋಡಿ ಧೃಷ್ಟದ್ಯುಮ್ನನನ್ನು ಕುರಿತು ಹೀಗೆ ಮಾತನಾಡಿದನು- ನೀನು ದ್ರೋಣರನ್ನು ನಿವಾರಿಸು.
ತ್ವಂ ಹಿ ದ್ರೋಣವಿನಾಶಾಯ ಸಮುತ್ಪನ್ನೋ ಹುತಾಶನಾತ್ |
ಸಶರಃ ಕವಚೀ ಖಡ್ಗೀ ಧನ್ವೀ ಚ ಪರತಾಪನಃ |
ಅಭಿದ್ರವ ರಣೇ ಹೃಷ್ಟೋ ನ ಚ ತೇ ಭೀಃ ಕಥಂಚನ ॥ 3 ॥
ಶತ್ರುತಾಪನನಾದ ನೀನು ದ್ರೋಣರ ವಿನಾಶಕ್ಕಾಗಿ ಧನುರ್ಬಾಣಗಳನ್ನು ಹಿಡಿದು, ಕವಚ-ಖಡ್ಗಗಳನ್ನು ಧರಿಸಿ ಅಗ್ನಿಯಿಂದ ಎದ್ದು ಬಂದಿದ್ದೀಯೆ. ರಣರಂಗದಲ್ಲಿ ಸಂತೋಷದಿಂದ ದ್ರೋಣರ ಮೇಲೆ ಎರಗು. ನೀನು ಯಾವ ರೀತಿಯಿಂದಲೂ ಭಯಪಡುವ ಕಾರಣವಿಲ್ಲ.
ಜನಮೇಜಯಃ ಶಿಖಂಡೀ ಚ ದೌರ್ಮುಖಿಶ್ಚ ಯಶೋಧನಃ |
ಅಭಿದ್ರವಂತು ಸಂಹೃಷ್ಟಾಃ ಕುಂಭಯೋನಿಂ ಸಮಂತತಃ ॥ 4 ॥
ಜನಮೇಜಯ, ಶಿಖಂಡಿ ಮತ್ತು ದುರ್ಮುಖ ಪುತ್ರನಾದ ಯಶೋಧನ ಇವರೂ ಸಂತೋಷದಿಂದ ಎಲ್ಲ ಕಡೆಗಳಿಂದಲೂ ದ್ರೋಣರ ಮೇಲೆ ಎರಗಲಿ.
ನಕುಲಃ ಸಹದೇವಶ್ಚ ದ್ರೌಪದೇಯಾಃ ಪ್ರಭದ್ರಕಾಃ |
ದ್ರುಪದಶ್ಚ ವಿರಾಟಶ್ಚ ಪುತ್ರಭ್ರಾತೃಸಮನ್ವಿತೌ ॥ 5 ॥
ಸಾತ್ಯಕಿಃ ಕೇಕಯಾಶ್ಚೈವ ಪಾಂಡವಶ್ಚ ಧನಂಜಯಃ |
ಅಭಿದ್ರವಂತು ವೇಗೇನ ಭಾರದ್ವಾಜವಧೇಪ್ಸಯಾ ॥ 6 ॥
ನಕುಲ-ಸಹದೇವರು, ದ್ರೌಪದಿಯ ಪುತ್ರರು, ಪ್ರಭದ್ರಕರು, ಪುತ್ರ-ಭ್ರಾತೃ ಸಮನ್ವಿತರಾದ ವಿರಾಟ-ದ್ರುಪದರು, ಸಾತ್ಯಕಿ, ಕೇಕಯರು ಮತ್ತು ಪಾಂಡವನಾದ ಅರ್ಜುನ ಎಲ್ಲರೂ ದ್ರೋಣರ ವಧೆಯನ್ನು ಮಾಡಲು ಬಯಸಿ ವೇಗವಾಗಿ ಅವರ ಮೇಲೆ ಎರಗಿ.
ತಥೈವ ರಥಿನಃ ಸರ್ವೇ ಹಸ್ತ್ಯಶ್ವಂ ಯಚ್ಚ ಕಿಂಚನ |
ಪಾದಾತಾಶ್ಚ ರಣೇ ದ್ರೋಣಂ ಪ್ರಾಪಯಂತು ಮಹಾರಥಮ್ ॥ 7 ॥
ಹಾಗೆಯೇ ಎಲ್ಲ ರಥಿಕರೂ, ಗಜಾಶ್ವಗಳೂ, ಪದಾತಿಗಳೂ ರಣರಂಗದಲ್ಲಿ ಮಹಾರಥರಾದ ದ್ರೋಣರ ಮೇಲೆ ಮುನ್ನುಗ್ಗಲಿ (ಎಂದು ಹೇಳಿದನು).
ತಥಾಜ್ಞಪ್ತಾಸ್ತು ತೇ ಸರ್ವೇ ಪಾಂಡವೇನ ಮಹಾತ್ಮನಾ |
ಅಭ್ಯದ್ರವಂತ ವೇಗೇನ ಕುಂಭಯೋನಿಂ ಯುಯುತ್ಸಯಾ ॥ 8 ॥
ಮಹಾತ್ಮನಾದ ಯುಧಿಷ್ಠಿರನಿಂದ ಆ ರೀತಿಯಲ್ಲಿ ಆಜ್ಞಾಪಿಸಲ್ಪಟ್ಟ ಅವರೆಲ್ಲರೂ ದ್ರೋಣರ ಜೊತೆಯಲ್ಲಿ ಯುದ್ಧವನ್ನು ಮಾಡಲು ವೇಗವಾಗಿ ಸಾಗಿದರು.
ಆಗಚ್ಛತಸ್ತಾನ್ ಸಹಸಾ ಸರ್ವೋದ್ಯೋಗೇನ ಪಾಂಡವಾನ್ |
ಪ್ರತಿಜಗ್ರಾಹ ಸಮರೇ ದ್ರೋಣಃ ಶಸ್ತ್ರಭೃತಾಂ ವರಃ ॥ 9 ॥
ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ರಣರಂಗದಲ್ಲಿ ಇದ್ದಕ್ಕಿದ್ದಂತೆಯೇ ತನ್ನ ಕಡೆಗೆ ಬರುತ್ತಿದ್ದ ಆ ಎಲ್ಲ ಪಾಂಡವರನ್ನೂ (ಪಾಂಡವಸೇನೆಯನ್ನು) ಸರ್ವ ಪ್ರಯತ್ನದಿಂದ ಸ್ವೀಕರಿಸಿದರು.
ತತೋ ದುರ್ಯೋಧನೋ ರಾಜಾ ಸರ್ವೋದ್ಯೋಗೇನ ಪಾಂಡವಾನ್ |
ಅಭ್ಯದ್ರವತ್ ಸುಸಂಕ್ರುದ್ಧ ಇಚ್ಛನ್ ದ್ರೋಣಸ್ಯ ಜೀವಿತಮ್ ॥ 10 ॥
ಆಗ ರಾಜನಾದ ದುರ್ಯೋಧನನು ದ್ರೋಣರ ಜೀವಿತವನ್ನು ರಕ್ಷಿಸಲು ಬಯಸಿ ಬಹಳ ಕೋಪಗೊಂಡವನಾಗಿ ಸರ್ವಪ್ರಯತ್ನದಿಂದ ಪಾಂಡವರಿಗೆ ಎದುರಾಗಿ ನುಗ್ಗಿದನು.
ತತಃ ಪ್ರವವೃತೇ ಯುದ್ಧಂ ಶ್ರಾಂತವಾಹನಸೈನಿಕಮ್ |
ಪಾಂಡವಾನಾಂ ಕುರೂಣಾಂ ಚ ಗರ್ಜತಾಮಿತರೇತರಮ್ ॥ 11 ॥
ಆಗ ದಣಿದ ವಾಹನ ಮತ್ತು ಯೋಧರನ್ನುಳ್ಳ ಪಾಂಡವರು ಮತ್ತು ಕೌರವರು ಪರಸ್ಪರವಾಗಿ ಗರ್ಜಿಸುತ್ತಾ ಯುದ್ಧವನ್ನು ಮಾಡಿದರು.
ನಿದ್ರಾಂಧಾಸ್ತೇ ಮಹಾರಾಜ ಪರಿಶ್ರಾಂತಾಶ್ಚ ಸಂಯುಗೇ |
ನಾಭ್ಯಪದ್ಯಂತ ಸಮರೇ ಕಾಂಚಿಚ್ಚೇಷ್ಟಾಂ ಮಹಾರಥಾಃ ॥ 12 ॥
ಎಲೈ ಮಹಾರಾಜನೇ, ನಿದ್ರೆಯಿಂದ ಪೀಡಿತರಾಗಿ ಮತ್ತು ಯುದ್ಧದಲ್ಲಿ ಬಹಳ ದಣಿದ ಮಹಾರಥರಿಗೆ ಯುದ್ಧದಲ್ಲಿ ಏನು ಮಾಡುವುದಕ್ಕೂ ತೋಚಲಿಲ್ಲ.
ತ್ರಿಯಾಮಾ ರಜನೀ ಚೈಷಾ ಘೋರರೂಪಾ ಭಯಾನಕಾ |
ಸಹಸ್ರಯಾಮಪ್ರತಿಮಾ ಬಭೂವ ಪ್ರಾಣಹಾರಿಣೀ |

ವಧ್ಯತಾಂ ಚ ತಥಾ ತೇಷಾಂ ಕ್ಷತಾನಾಂ ಚ ವಿಶೇಷತಃ ॥ 13 ॥
ಗಾಯಗೊಂಡು ವಿಶೇಷವಾಗಿ ಶಸ್ತ್ರಗಳಿಂದ ಹೊಡೆಯಲ್ಪಡುತ್ತಿದ್ದ ಅವರಿಗೆ ಮೂರು ಯಾಮದ ಘೋರವಾದ ಭಯಂಕರವಾದ, ಪ್ರಾಣಾಪಹಾರಿಣಿಯಾದ ಆ ರಾತ್ರಿಯು ಸಹಸ್ರಯಾಮಗಳಂತೆ ಕಂಡುಬಂದಿತು.
ಅಹೋ ರಾತ್ರಿಃ ಸಮಾಜಜ್ಞೇ ನಿದ್ರಾಂಧಾನಾಂ ವಿಶೇಷತಃ |
ಸರ್ವೇ ಹ್ಯಾಸನ್ನಿರುತ್ಸಾಹಾಃ ಕ್ಷತ್ರಿಯಾ ದೀನಚೇತಸಃ |
ತವ ಚೈವ ಪರೇಷಾಂ ಚ ಗತಾಸತ್ರಾ ವಿಗತೇಷವಃ ॥ 14 ॥
ನಿದ್ರಾಂಧರಾದವರಿಗೆ ಹಗಲೂ ಸಹ ರಾತ್ರಿಯಾಗುತ್ತದೆ. ದೀನ ಮನಸ್ಸುಳ್ಳ ನಿನ್ನ ಮತ್ತು ಪರಕ್ಷತ್ರಿಯರು ತಮ್ಮ ಅಸ್ತ್ರಗಳನ್ನೂ ಮತ್ತು ಬಾಣಗಳನ್ನೂ ಕಳೆದುಕೊಂಡು ಯುದ್ಧದಲ್ಲಿ ಉತ್ಸಾಹವನ್ನು ಕಳೆದುಕೊಂಡರು.
ತೇ ತಥಾ ಪಾರಯಂತಶ್ಚ ಹ್ರೀಮಂತಶ್ಚ ವಿಶೇಷತಃ |
ಸ್ವಧರ್ಮಮನುಪಶ್ಯಂತೋ ನ ಜಹುಃ ಸ್ವಾಮನೀಕಿನೀಮ್ ॥ 15 ॥
ನಾಚಿಕೆಯುಳ್ಳ ಅವರು ವಿಶೇಷವಾಗಿ ತಮ್ಮ ಧರ್ಮವನ್ನು ಪಾಲಿಸುತ್ತಾ ಆ ರಾತ್ರಿಯನ್ನು ಹಾಗೆಯೇ ಕಳೆಯಲು ನಿರ್ಧರಿಸಿ ತಮ್ಮ ತಮ್ಮ ಸೈನ್ಯಗಳನ್ನು ತ್ಯಜಿಸಲಿಲ್ಲ.
ಶಸತ್ರಣ್ಯನ್ಯೇ ಸಮುತ್ಸೃಜ್ಯ ನಿದ್ರಾಂಧಾಃ ಶೇರತೇ ಜನಾಃ |
ಗಜೇಷ್ವನ್ಯೇ ರಥೇಷ್ವನ್ಯೇ ಹಯೇಷ್ವನ್ಯೇ ಚ ಭಾರತ ॥ 16 ॥
ಎಲ್ಲೈ ಭಾರತನೇ, ಇನ್ನು ಕೆಲವರು ಶಸ್ತ್ರಗಳನ್ನು ಬಿಸುಟು ನಿದ್ರಾಂಧರಾಗಿ ಮಲಗಿದರು. ಕೆಲವರು ಆನೆಗಳ ಮೇಲೆಯೂ, ಕೆಲವರು ರಥಗಳಲ್ಲಿಯೂ, ಕೆಲವರು ಅಶ್ವಗಳ ಮೇಲೆಯೂ ಮಲಗಿದರು.
ನಿದ್ರಾಂಧಾ ನೋ ಬುಬುಧಿರೇ ಕಾಂಚಿಚ್ಚೇಷ್ಟಾಂ ನರಾಧಿಪಾಃ |
ತೇಽನ್ಯೋನ್ಯಂ ಸಮರೇ ಯೋಧಾಃ ಪ್ರೇಷಯಂತ ಯಮಕ್ಷಯಮ್ ॥
ನಿದ್ರಾಂಧರಾದ ರಾಜರು ತಮ್ಮ ಸುತ್ತಲೂ ನಡೆಯುತ್ತಿದ್ದ ಯಾವ ಚೇಷ್ಟೆಯನ್ನೂ ತಿಳಿಯಲಿಲ್ಲ. ಹಾಗೆಯೇ ಕೆಲವು ಯೋಧರು ಪರಸ್ಪರವಾಗಿ ಶತ್ರುಗಳನ್ನು ಯಮ ಲೋಕಕ್ಕೆ ಕಳುಹಿಸಿದರು.
ಸ್ವಪ್ನಾಯಮಾನಾಸ್ತ್ವಪರೇ ಪರಾನಿತಿ ವಿಚೇತಸಃ |
ಆತ್ಮಾನಂ ಸಮರೇ ಜಘ್ನುಃ ಸ್ವಾನೇವ ಚ ಪರಾನಪಿ ॥ 18 ॥
ನಿದ್ರೆಯ ಮಬ್ಬಿನಲ್ಲಿದ್ದ ಕೌರವರ ಸೈನಿಕರು ವಿವೇಕಶೂನ್ಯರಾಗಿ ಶತ್ರುಗಳೆಂದು ತಿಳಿದು ರಣರಂಗದಲ್ಲಿ ತಮ್ಮವರನ್ನೇ ಕೊಂದರು. ಪಾಂಡವ ಯೋಧರೂ ಸಹ ಶತ್ರುಗಳೆಂದು ತಿಳಿದುಕೊಂಡು ತಮ್ಮವರನ್ನೇ ಕೊಂದರು.
ನಾನಾವಾಚೋ ವಿಮುಂಚಂತೋ ನಿದ್ರಾಂಧಾಸ್ತೇ ಮಹಾರಣೇ |
ಯೋದ್ಧವ್ಯಮಿತಿ ತಿಷ್ಠಂತೋ ನಿದ್ರಾಸಂಸಕ್ತಲೋಚನಾಃ ॥ 19 ॥
ನಿದ್ರಾಂಧರಾದ ಆ ಯೋಧರು ಮಹಾರಣದಲ್ಲಿ ಯುದ್ಧವನ್ನು ಮಾಡಲೇಬೇಕು ಎಂಬ ಕಾರಣದಿಂದ ನಿಂತು, ನಿದ್ರೆಯಿಂದ ತುಂಬಿದ ಕಣ್ಣುಳ್ಳವರಾಗಿ ಅನೇಕ ವಿಧವಾದ ಮಾತುಗಳನ್ನು ಆಡಿದರು.
ಸಂಮರ್ದ್ಯಾನ್ಯೇ ರಣೇ ಕೇಚಿನ್ನಿದ್ರಾಂಧಾಶ್ಚ ಪರಸ್ಪರಮ್ |
ಜಘ್ನುಃ ಶೂರಾ ರಣೇ ರಾಜಂಸ್ತಸ್ಮಿಂಸ್ತಮಸಿ ದಾರುಣೇ ॥ 20 ॥
ಎಲ್ಲೈ ರಾಜನೇ, ನಿದ್ರಾಂಧರಾದ ಕೆಲವು ಶೂರರು ದಾರುಣವಾದ ಆ ಕತ್ತಲೆಯಲ್ಲಿ ಹಾಗೆಯೇ ಪರಸ್ಪರವಾಗಿ ಶತ್ರುಗಳನ್ನು ಮರ್ದಿಸಿದರು.
ಹನ್ಯಮಾನಂ ತಥಾತ್ಮಾನಂ ಪರೇಭ್ಯೋ ಬಹವೋ ಜನಾಃ |
ನಾಭ್ಯಜಾನಂತ ಸಮರೇ ನಿದ್ರಯಾ ಮೋಹಿತಾ ಭೃಶಮ್ ॥ 21 ॥
ಬಹಳ ಜನರು ನಿದ್ರೆಯಿಂದ ಬಹಳ ಮೋಹಿತರಾಗಿ ಶತ್ರುಗಳು ತಮ್ಮನ್ನು ಹೊಡೆಯುತ್ತಿದ್ದರೂ ಅದನ್ನು ತಿಳಿಯಲಿಲ್ಲ.
ತೇಷಾಮೇತಾದೃಶೀಂ ಚೇಷ್ಟಾಂ ವಿಜ್ಞಾಯ ಪುರುಷರ್ಷಭಃ |
ಉವಾಚ ವಾಕ್ಯಂ ಬೀಭತ್ಸುರುಚ್ಚೈಃ ಸನ್ನಾದಯನ್ ದಿಶಃ ॥ 22 ॥
ಯೋಧರ ಇಂತಹ ಅವಸ್ಥೆಯನ್ನು ತಿಳಿದ ಪುರುಷಶ್ರೇಷ್ಠನಾದ ಅರ್ಜುನನು ದಿಕ್ಕುಗಳು ಪ್ರತಿಧ್ವನಿಸುವಂತೆ ಗಟ್ಟಿಯಾಗಿ ಮಾತನಾಡಿದನು.
ಶ್ರಾಂತಾ ಭವಂತೋ ನಿದ್ರಾಂಧಾಃ ಸರ್ವ ಏವ ಸವಾಹನಾಃ |
ತಮಸಾ ಚಾವೃತೇ ಸೈನ್ಯೇ ರಜಸಾ ಬಹುಲೇನ ಚ ॥ 23 ॥
ಸೈನ್ಯವು ಕತ್ತಲೆಯಿಂದಲೂ, ಸೈನ್ಯದಿಂದೆದ್ದ ಧೂಳಿನಿಂದಲೂ ಮುಚ್ಚಲ್ಪಟ್ಟಿರುವಾಗ ನಿಮ್ಮ ವಾಹನ ಸಹಿತರಾದ ನೀವೆಲ್ಲರೂ ದಣಿದು ನಿದ್ರಾಂಧರಾಗಿದ್ದೀರಿ.
ತೇ ಯೂಯಂ ಯದಿ ಮನ್ಯಧ್ವಮುಪಾರಮತ ಸೈನಿಕಾಃ |
ನಿಮೀಲಯತ ಚಾತ್ರೈವ ರಣಭೂಮೌ ಮುಹೂರ್ತಕಮ್ ॥ 24 ॥
ಎಲ್ಲೈ ಸೈನಿಕರೇ, ನಿಮಗೆ ಅಭಿಪ್ರಾಯವಿದ್ದರೆ ಯುದ್ಧವನ್ನು ನಿಲ್ಲಿಸಿ ಇಲ್ಲಿಯೇ ರಣಭೂಮಿಯಲ್ಲಿ ಒಂದು ಮುಹೂರ್ತದ ಕಾಲ ಕಣ್ಣುಮುಚ್ಚಿ ನಿದ್ರೆಯನ್ನು ಮಾಡಿ.
ತತೋ ವಿನಿದ್ರಾ ವಿಶ್ರಾಂತಾಶ್ಚಂದ್ರಮಸ್ಯುದಿತೇ ಪುನಃ |
ಸಂಸಾಧಯಿಷ್ಯಥಾನ್ಯೋನ್ಯಂ ಸಂಗ್ರಾಮಂ ಕುರುಪಾಂಡವಾಃ ॥ 25 ॥
ಎಲ್ಲೈ ಕುರು-ಪಾಂಡವಯೋಧರೇ, ಅನಂತರ ನಿದ್ರೆಯನ್ನು ಕಳೆದುಕೊಂಡು, ವಿಶ್ರಾಂತಿಯನ್ನು ಪಡೆದು, ಚಂದ್ರನು ಉದಯಿಸಿದ

ಮೇಲೆ ಪರಸ್ಪರ ಸಂಗ್ರಾಮವನ್ನು ಮುಂದುವರಿಸಿ (ಎಂದು ಹೇಳಿದನು).
ತದ್ವಚಃ ಸರ್ವಧರ್ಮಜ್ಞಾ ಧಾರ್ಮಿಕಸ್ಯ ನಿಶಮ್ಯ ತೇ |
ಅರೋಚಯಂತ ಸೈನ್ಯಾನಿ ತಥಾ ಚಾನ್ಯೋನ್ಯಮಬ್ರುವನ್ ॥ 26 ॥
ಧಾರ್ಮಿಕನಾದ ಅರ್ಜುನನ ಆ ಮಾತುಗಳನ್ನು ಕೇಳಿ ಸರ್ವಧರ್ಮಜ್ಞರಾದ ಎಲ್ಲರೂ ಅದನ್ನು ಇಷ್ಟಪಟ್ಟರು. ಸೈನ್ಯಗಳೂ ಸಹ ಹಾಗೆಯೇ ಪರಸ್ಪರವಾಗಿ ಮಾತನಾಡಿಕೊಂಡವು.
ಚುಕ್ರುಶುಃ ಕರ್ಣ ಕರ್ಣೇತಿ ರಾಜನ್ ದುರ್ಯೋಧನೇತಿ ಚ |
ಉಪಾರಮತ ಪಾಂಡೂನಾಂ ವಿರತಾ ಹಿ ವರೂಥಿನೀ ॥ 27 ॥
ರಾಜನೇ, ಆಗ ಸೈನ್ಯಗಳು ಪಾಂಡವರ ಸೈನ್ಯವು ಯುದ್ಧದಿಂದ ಹಿಂದೆ ಸರಿದಿವೆ. ಎಲೈ ಕರ್ಣನೇ, ದುರ್ಯೋಧನನೇ, ಯುದ್ಧವನ್ನು ನಿಲ್ಲಿಸಿ ಎಂದು ಕಿರುಚಿದವು.
ತಥಾ ವಿಕ್ರೋಶಮಾನಸ್ಯ ಫಲ್ಗುನಸ್ಯ ತತಸ್ತತಃ |
ಉಪಾರಮತ ಪಾಂಡೂನಾಂ ಸೇನಾ ತವ ಚ ಭಾರತ ॥ 28 ॥
ಎಲೈ ಭಾರತನೇ, ಅರ್ಜುನನು ಗಟ್ಟಿಯಾಗಿ ಆ ರೀತಿಯಲ್ಲಿ ಘೋಷಿಸುತ್ತಿರಲು ಪಾಂಡವರ ಮತ್ತು ನಿನ್ನ ಸೈನ್ಯಗಳು ಯುದ್ಧವನ್ನು ನಿಲ್ಲಿಸಿದವು.
ತಾಮಸ್ಯ ವಾಚಂ ದೇವಾಶ್ಚ ಋಷಯಶ್ಚ ಮಹಾತ್ಮನಃ |
ಸರ್ವಸೈನ್ಯಾನಿ ಚಾಕ್ಷುದ್ರಾಃ ಪ್ರಹೃಷ್ಟಾಃ ಪ್ರತ್ಯಪೂಜಯನ್ ॥ 29 ॥
ಮಹಾತ್ಮನಾದ ಅರ್ಜುನನ ಆ ಮಾತುಗಳನ್ನು ದೇವತೆಗಳೂ, ಋಷಿಗಳೂ ಮತ್ತು ಸರ್ವಸೈನ್ಯಗಳೂ ಕ್ಷುದ್ರತನವನ್ನು ಬಿಟ್ಟು ಸಂತೋಷಗೊಂಡು ಪೂಜಿಸಿದವು.
ತತ್ ಸಂಪೂಜ್ಯ ವಚೋಽಕ್ರೂರಂ ಸರ್ವಸೈನ್ಯಾನಿ ಭಾರತ |
ಮುಹೂರ್ತಮಸ್ವಪನ್ ರಾಜನ್ ಶ್ರಾಂತಾನಿ ಭರತರ್ಷಭ ॥ 30 ॥
ಎಲೈ ರಾಜನೇ, ಭರತಶ್ರೇಷ್ಠನೇ, ಅರ್ಜುನನ ದಯಾಯುತವಾದ ಆ ಮಾತನ್ನು ಪೂಜಿಸಿ ದಣಿದ ಸೈನ್ಯಗಳು ಒಂದು ಮುಹೂರ್ತದ ಕಾಲ ನಿದ್ರೆಯನ್ನು ಮಾಡಿದವು.
ಸಾ ತು ಸಂಪ್ರಾಪ್ಯ ವಿಶ್ರಾಮಂ ಧ್ವಜಿನೀ ತವ ಭಾರತ |
ಸುಖಮಾಪ್ತವತೀ ವೀರಮರ್ಜುನಂ ಪ್ರತ್ಯಪೂಜಯತ್ ॥ 31 ॥
ಎಲೈ ಭಾರತನೇ, ನಿನ್ನ ಸೈನ್ಯವು ವಿಶ್ರಾಂತಿಯನ್ನು ಪಡೆದು ಸುಖವನ್ನು ಹೊಂದಿ ವೀರನಾದ ಅರ್ಜುನನನ್ನು ಪೂಜಿಸಿದವು.
ತ್ವಯಿ ವೇದಾಸ್ತಥಾಸ್ತ್ರಾಣಿ ತ್ವಯಿ ಬುದ್ಧಿಪರಾಕ್ರಮೌ |
ಧರ್ಮಸ್ತ್ವಯಿ ಮಹಾಬಾಹೋ ದಯಾ ಭೂತೇಷು ಚಾನಘ ॥ 32 ॥
ಎಲೈ ಅನಘನೇ, ನಿನ್ನಲ್ಲಿ ವೇದಗಳಿವೆ, ಅಸ್ತ್ರಗಳಿವೆ, ಬುದ್ಧಿ-ಪರಾಕ್ರಮಗಳಿವೆ, ಎಲೈ ಮಹಾಬಾಹುವೇ, ನಿನ್ನಲ್ಲಿ ಧರ್ಮವಿದೆ, ಭೂತದಯೆಯಿದೆ.
ಯಚ್ಚಾಶ್ವಸ್ತಾಸ್ತವೇಚ್ಛಾಮಃ ಶರ್ಮ ಪಾರ್ಥ ತದಸ್ತು ತೇ |
ಮನಸಶ್ಚ ಪ್ರಿಯಾನರ್ಥಾನ್ ವೀರ ಕ್ಷಿಪ್ರಮವಾಪ್ನುಹಿ ॥ 33 ॥
ವಿಶ್ರಾಂತಿಯನ್ನು ಪಡೆದ ನಾವು ನಿನಗೆ ಏನನ್ನು ಬಯಸುತ್ತೀಯೋ ಅಂತಹ ಸುಖವು ನಿನಗಾಗಲಿ. ಎಲೈ ವೀರನೇ, ನೀನು ಮನಸ್ಸಿನಲ್ಲಿ ಬಯಸಿದ ವಸ್ತುಗಳನ್ನು ಶೀಘ್ರವಾಗಿ ಹೊಂದುವವನಾಗು.
ಇತಿ ತೇ ತಂ ನರವ್ಯಾಘ್ರಂ ಪ್ರಶಂಸಂತೋ ಮಹಾರಥಾಃ |
ನಿದ್ರಯಾ ಸಮವಾಕ್ಷಿಪ್ತಾಸ್ತೂಷ್ಣೀಮಾಸನ್ ವಿಶಾಂಪತೇ ॥ 34 ॥
ಎಲೈ ರಾಜನೇ, ಹೀಗೆ ಆ ಮಹಾರಥರು ನರವ್ಯಾಘ್ರನಾದ ಅರ್ಜುನನನ್ನು ಹೊಗಳಿ ನಿದ್ರಾವಶರಾಗಿ ಸುಮ್ಮನಾದರು.
ಅಶ್ವಪೃಷ್ಠೇಷು ಚಾಪ್ಯನ್ಯೇ ರಥನೀಡೇಷು ಚಾಪರೇ |
ಗಜಸ್ಕಂಧಗತಾಶ್ಚಾನ್ಯೇ ಶೇರತೇ ಚಾಪರೇ ಕ್ಷಿತೌ ॥ 35 ॥
ಕೆಲವರು ಕುದುರೆಗಳ ಬೆನ್ನಿನಲ್ಲಿಯೂ, ಇನ್ನು ಕೆಲವರು ರಥಪೀಠಗಳಲ್ಲಿಯೂ, ಇನ್ನು ಕೆಲವರು ಆನೆಗಳ ಭುಜಗಳಲ್ಲಿಯೂ, ಇನ್ನು ಕೆಲವರು ಭೂಮಿಯ ಮೇಲೆಯೂ ಮಲಗಿದರು.
ಸಾಯುಧಾಃ ಸಗದಾಶ್ಚೈವ ಸಖಡ್ಗಾಃ ಸಪರಶ್ವಧಾಃ |
ಸಪ್ರಾಸಕವಚಾಶ್ಚಾನ್ಯೇ ನರಾಃ ಸುಪ್ತಾಃ ಪೃಥಕ್ ಪೃಥಕ್ ॥ 36 ॥
ಆಯುಧಗಳನ್ನೂ, ಗದೆಗಳನ್ನೂ, ಖಡ್ಗಗಳನ್ನೂ, ಪರಶ್ವಧಗಳನ್ನೂ, ಪ್ರಾಸಗಳನ್ನೂ, ಕವಚಗಳನ್ನೂ ಹಿಡಿದ ಯೋಧರು ಬೇರೆ ಬೇರೆಯಾಗಿ ನಿದ್ರೆಯನ್ನು ಮಾಡಿದರು.
ಗಜಾಸ್ತೇ ಪನ್ನಗಾಭೋಗೈರ್ಹಸ್ತೈರ್ಭೂರೇಣುರೂಷಿತೈಃ |
ನಿದ್ರಾಂಧಾ ವಸುಧಾಂ ಚಕ್ರುರ್ಘ್ರಾಣನಿಃಶ್ವಾಸಶೀತಲಾಮ್ ॥ 37 ॥
ನಿದ್ರಾಂಧವಾದ ಗಜಗಳು ಭೂಮಿಯ ಧೂಳಿನಿಂದ ತುಂಬಿದ್ದ ಸರ್ಪಶರೀರದಂತಿದ್ದ ಸೊಂಡಿಲುಗಳಿಂದ ಉಸಿರನ್ನು ಬಿಡುತ್ತಾ ಭೂಮಿಯನ್ನು ಶೀತಲವನ್ನಾಗಿ ಮಾಡಿದವು.
ಗಜಾಃ ಶುಶುಭಿರೇ ತತ್ರ ನಿಃಶ್ವಸಂತೋ ಮಹೀತಳೇ |
ವಿಶೀರ್ಣಾ ಗಿರಯೋ ಯದ್ವನ್ನಿಃಶ್ವಸದ್ಭಿರ್ಮಹೋರಗೈಃ ॥ 38 ॥
ಗಜಗಳು ಗಾಯಗೊಂಡ ಪರ್ವತಗಳಂತೆ ಭೂಮಿಯಲ್ಲಿ ಮಲಗಿ ನಿಃಶ್ವಾಸವನ್ನು ಮಾಡುತ್ತಾ, ನಿಃಶ್ವಾಸವನ್ನು ಮಾಡುವ

ಮಹಾಸರ್ಪಗಳಂತೆ ಶೋಭಿಸಿದವು.
ಸಮಾಂ ಚ ವಿಷಮಾಂ ಚಕ್ರುಃ ಖುರಾಗ್ರೈರ್ವಿಕ್ಷತಾಂ ಮಹೀಮ್ |
ಹಯಾಃ ಕಾಂಚನಯೋಕ್ತ್ರಾಶ್ಚ ಕೇಸರಾಲಂಬಿಭಿರ್ಯುಗೈಃ |
ಸುಷುಪುಸ್ತತ್ರ ರಾಜೇಂದ್ರ ಯುಕ್ತಾ ವಾಹೇಷು ಸರ್ವಶಃ ॥ 39 ॥
ಗಜಗಳು ತಮ್ಮ ಪಾದದಿಂದ ವಿಷಮವಾದ ಭೂಮಿಯನ್ನು ಸಮವನ್ನಾಗಿ ಮಾಡಿದವು. ಎಲೈ ರಾಜೇಂದ್ರನೇ, ಸುವರ್ಣಮಯವಾದ ಕಡಗೂಟಗಳನ್ನು ಹೊಂದಿದ ಅಶ್ವಗಳು ತಮ್ಮ ಕೇಸರಗಳ ಮೇಲಿದ್ದ ನೊಗಗಳ ಜೊತೆಯಲ್ಲಿಯೇ ವಾಹನಗಳಲ್ಲಿಯೇ ನಿದ್ರಿಸಿದವು.
ತತ್ತಥಾ ನಿದ್ರಯಾ ಭಗ್ನಮವಾಚಮಸ್ವಪದ್ಬಲಮ್ |
ಕುಶಲೈರಿವ ವಿನ್ಯಸ್ತಂ ಪಟೇ ಚಿತ್ರಮಿವಾದ್ಭುತಮ್ ॥ 40 ॥
ಹಾಗೆ ನಿದ್ರೆಯಿಂದ ಭಗ್ನವಾಗಿ ಮಾತಿಲ್ಲದೆ ಮಲಗಿದ ಆ ಸೈನ್ಯವು ಕುಶಲರಾದ ಕಲಾವಿದರು ವಸ್ತ್ರದಲ್ಲಿ ಬಿಡಿಸಿದ ಅದ್ಭುತವಾದ ಚಿತ್ರದಂತೆ ಇದ್ದಿತು.
ತೇ ಕ್ಷತ್ರಿಯಾಃ ಕುಂಡಲಿನೋ ಯುವಾನಃ
ಪರಸ್ಪರಂ ಸಾಯಕವಿಕ್ಷತಾಂಗಾಃ |
ಕುಂಭೇಷು ಲೀನಾಃ ಸುಷುಪುರ್ಗಜಾನಾಂ
ಕುಚೇಷು ಲಗ್ನಾ ಇವ ಕಾಮಿನೀನಾಮ್ ॥ 41 ॥
ಕುಂಡಲಗಳನ್ನು ಧರಿಸಿದ ಯುವಕರಾದ ಕ್ಷತ್ರಿಯರು ಪರಸ್ಪರವಾಗಿ ಬಾಣಗಳಿಂದ ಗಾಯಗೊಂಡ ಶರೀರವುಳ್ಳವರಾಗಿ, ಕಾಮಿನಿಯರ ಕುಚಗಳಲ್ಲಿ ಮುಖವಿಟ್ಟು ಮಲಗಿದಂತೆ ಗಜಗಳ ಕುಂಭಸ್ಥಲದಲ್ಲಿ ತಲೆಯಿಟ್ಟು ಮಲಗಿದರು.
ತತಃ ಕುಮುದನಾಥೇನ ಕಾಮಿನೀಗಂಡಪಾಂಡುನಾ |
ನೇತ್ರಾನಂದೇನ ಚಂದ್ರೇಣ ಮಾಹೇಂದ್ರೀ ದಿಗಲಂಕೃತಾ ॥ 42 ॥
ಅನಂತರ ಕುಮುದನಾಥನಾದ ವಿರಹವುಳ್ಳ ಕಾಮಿನಿಯ ಕೆನ್ನೆಯಂತೆ ಬಿಳಿಯಾದ, ನೇತ್ರಾನಂದಕನಾದ ಚಂದ್ರನು ಪೂರ್ವದಿಕ್ಕನ್ನು ಅಲಂಕರಿಸಿದನು.
ತತೋ ಮುಹೂರ್ತಾದ್ಭಗವಾನ್ ಪುರಸ್ತಾಚ್ಛಶಲಕ್ಷಣಃ |
ಅರುಣಂ ದರ್ಶಯಾಮಾಸ ಗ್ರಸನ್ ಜ್ಯೋತಿಃಪ್ರಭಂ ಪ್ರಭುಃ ॥ 43 ॥
ಅನಂತರ ಒಂದು ಮುಹೂರ್ತದಲ್ಲಿ ಶಶಾಂಕನಾದ ಚಂದ್ರನು ರಣರಂಗದ ದೀಪದ ಕಾಂತಿಗಳನ್ನು ಮಂಕುಗೊಳಿಸುತ್ತಾ ತನ್ನ ಉದಯಕ್ಕಿಂತ ಮೊದಲಿನ ಅರುಣ ವರ್ಣವನ್ನು ತೋರಿಸಿದನು.
ಅರುಣಸ್ಯ ತು ತಸ್ಯಾನು ಜಾತರೂಪಸಮಪ್ರಭಮ್ |
ರಶ್ಮಿಜಾಲಂ ಮಹಚ್ಚಂದ್ರೋ ಮಂದಂ ಮಂದಮವಾಸೃಜತ್ ॥ 44 ॥
ಅರುಣನ ಉದಯವಾದ ನಂತರ ಚಂದ್ರನು ಚಿನ್ನದ ಸಮಾನ ಕಾಂತಿಯುಳ್ಳ ತನ್ನ ದೊಡ್ಡ ರಶ್ಮಿ ಸಮೂಹವನ್ನು ಮೆಲ್ಲಮೆಲ್ಲನೆ ಸೃಷ್ಟಿಸಿದನು.
ಉತ್ಸಾರಯಂತಃ ಪ್ರಭಯಾ ತಮಸ್ತೇ ಚಂದ್ರರಶ್ಮಯಃ |
ಪರ್ಯಗಚ್ಛನ್ ಶನೈಃ ಸರ್ವಾ ದಿಶಃ ಖಂ ಚ ಕ್ಷಿತಿಂ ತಥಾ ॥ 45 ॥
ಆ ಚಂದ್ರರಶ್ಮಿಗಳು ತಮ್ಮ ಕಾಂತಿಯಿಂದ ತಮಸ್ಸನ್ನು ಹೊರದೂಡುತ್ತಾ ನಿಧಾನವಾಗಿ ಎಲ್ಲ ದಿಕ್ಕುಗಳನ್ನೂ, ಆಕಾಶವನ್ನೂ ಮತ್ತು ಭೂಮಿಯನ್ನೂ ಆವರಿಸಿದವು.
ತತೋ ಮುಹೂರ್ತಾದ್ ಭುವನಂ ಜ್ಯೋತಿರ್ಭೂತಮಿವಾಭವತ್ |
ಅಪ್ರಖ್ಯಮಪ್ರಕಾಶಂ ಚ ಜಗಾಮಾಶು ತಮಸ್ತಥಾ ॥ 46 ॥
ಅನಂತರ ಒಂದು ಮುಹೂರ್ತದಲ್ಲಿ ಎಲ್ಲ ಭೂಮಿಯೂ ಜ್ಯೋತಿರ್ಮಯ- ವಾಯಿತು. ಅಲ್ಲಿಯವರೆಗೆ ಇದ್ದ ಕತ್ತಲೆಯು ಹೆಸರಿಲ್ಲದಂತೆ ಶೀಘ್ರವಾಗಿ ನಾಶವನ್ನು ಹೊಂದಿತು.
ಪ್ರತಿಪ್ರಕಾಶಿತೇ ಲೋಕೇ ದಿವಾಭೂತೇ ನಿಶಾಕರೇ |
ವಿಚೇರುರ್ನ ವಿಚೇರುಶ್ಚ ರಾಜನ್ನಕ್ತಂಚರಾಸ್ತತಃ ॥ 47 ॥
ಚಂದ್ರನು ಹಗಲಿನಂತೆ ಬೆಳಕನ್ನು ನೀಡಿ ಪ್ರಪಂಚವನ್ನು ಪ್ರಕಾಶಿಸುತ್ತಿರಲು ಎಲೈ ರಾಜನೇ, ರಾತ್ರಿಯಲ್ಲಿ ಸಂಚರಿಸುವ ಚಕೋರಾದಿ ಪಕ್ಷಿಗಳು ಸಂಚರಿಸಿದವು. ಕತ್ತಲೆಯನ್ನು ಬಯಸುವ ಗೂಬೆ ಮೊದಲಾದ ಪಕ್ಷಿಗಳು ಸಂಚರಿಸಲಿಲ್ಲ.
ಬೋಧ್ಯಮಾನಂ ತು ತತ್ ಸೈನ್ಯಂ ರಾಜಂಶ್ಚಂದ್ರಸ್ಯ ರಶ್ಮಿಭಿಃ |
ಬುಬುಧೇ ಶತಪತ್ರಾಣಾಂ ವನಂ ಮಹದಿವಾಂಭಸಿ ॥ 48 ॥
ಎಲೈ ರಾಜನೇ, ಚಂದ್ರನ ಕಿರಣಗಳಿಂದ ಎಚ್ಚರಿಸಲ್ಪಟ್ಟ ಸೈನ್ಯವು ನೀರಿನಲ್ಲಿರುವ ದೊಡ್ಡ ಕಮಲಗಳ ವನದಂತೆ ಎಚ್ಚರಗೊಂಡಿತು.
ಯಥಾ ಚಂದ್ರೋದಯೋದ್ಧೂತಃ ಕ್ಷುಭಿತಃ ಸಾಗರೋ ಭವೇತ್ |
ತಥಾ ಚಂದ್ರೋದಯೋದ್ಧೂತಃ ಸ ಬಭೂವ ಬಲಾರ್ಣವಃ ॥ 49 ॥
ಚಂದ್ರೋದಯದಿಂದ ಸಾಗರವು ಉಕ್ಕೇರಿದಂತೆ ಇಲ್ಲಿ ಚಂದ್ರೋದಯದಿಂದ ಆ ಸೈನ್ಯ ಸಾಗರವು ಉಕ್ಕೇರಿತು.
ತತಃ ಪ್ರವವೃತೇ ಯುದ್ಧಂ ಪುನರೇವ ವಿಶಾಂಪತೇ |
ಲೋಕೇ ಲೋಕವಿನಾಶಾಯ ಪರಂ ಲೋಕಮಭೀಪ್ಸತಾಮ್ ॥ 50 ॥
ಎಲೈ ರಾಜನೇ, ಆಗ ಪರಲೋಕವನ್ನು ಬಯಸುವ ಯೋಧರಿಗೆ ಲೋಕ ವಿನಾಶಕರವಾದ ಯುದ್ಧವು ಪುನಃ ಪ್ರಾರಂಭವಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ದ್ರೋಣಪರ್ವಣಿ ಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೊಂದನೆಯ ಅಧ್ಯಾಯ
ದುರ್ಯೋಧನನಿಂದ ದ್ರೋಣರ ನಿಂದೆ. ಅರ್ಜುನನನ್ನು ಪ್ರಶಂಸಿಸಿ ದುರ್ಯೋಧನನನ್ನು ಕುರಿತು ದ್ರೋಣರ ಉಗ್ರವಚನಗಳು.
ಸಂಜಯಃ
ತತೋ ದುರ್ಯೋಧನೋ ದ್ರೋಣಮಭಿಗಮ್ಯೇದಮಬ್ರವೀತ್ ।
ಅಮರ್ಷವಶಮಾಪನ್ನೋ ಜನಯನ್ ಹರ್ಷತೇಜಸೀ ॥ 1 ॥
ಸಂಜಯ ಅನಂತರ ದುರ್ಯೋಧನನು ರೋಷಾವಿಷ್ಟನಾಗಿ ದ್ರೋಣರ ಸಮೀಪಕ್ಕೆ ಬಂದು ಅವರಿಗೆ ಸಂತೋಷವನ್ನುಂಟು ಮಾಡುತ್ತಾ ಹಾಗೆ ಅವರ ತೇಜಸ್ಸನ್ನು ಹೆಚ್ಚಿಸುತ್ತಾ ಈ ಮಾತುಗಳನ್ನು ಆಡಿದನು.
ನ ಮರ್ಷಣೀಯಾಃ ಸಂಗ್ರಾಮೇ ವಿಶ್ರಮಂತಃ ಶ್ರಮಾನ್ವಿತಾಃ ।
ಸಪತ್ನಾ ಗ್ಲಾನಮನಸೋ ಲಬ್ಧಲಕ್ಷ್ಯಾ ವಿಶೇಷತಃ ॥ 2 ॥
ಮನೋಗ್ಲಾನಿಯನ್ನು ಹೊಂದಿದ, ವಿಶೇಷವಾಗಿ ಗುರಿಯನ್ನು ಸಾಧಿಸಿ ದಣಿದ ಶತ್ರುಗಳು ರಣರಂಗದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುವಾಗ ಅವರನ್ನು ಕ್ಷಮಿಸಬಾರದು.
ತತ್ ತು ಮರ್ಷಿತಮಸ್ಮಾಭಿರ್ಭವತಃ ಪ್ರಿಯಕಾಮ್ಯಯಾ ।
ತ ಏತೇ ಪರಿವಿಶ್ರಾಂತಾಃ ಪಾಂಡವಾ ಬಲವತ್ತರಾಃ ॥ 3 ॥
ನಿಮಗೆ ಪ್ರಿಯವನ್ನು ಉಂಟುಮಾಡುವುದಕ್ಕಾಗಿ ನಾವು ಪಾಂಡವರನ್ನು ಸಹಿ(ಕ್ಷಮಿ)ಸಿದೆವು. ಈಗ ಪಾಂಡವರು ವಿಶ್ರಾಂತಿಯನ್ನು ಪಡೆದು ಇನ್ನೂ ಬಲಿಷ್ಠರಾಗಿದ್ದಾರೆ.
ಸರ್ವಥಾ ಪರಿಹೀನಾಃ ಸ್ಮ ತೇಜಸಾ ಚ ಬಲೇನ ಚ ।
ಭವತಾ ಪಾಲ್ಯಮಾನಾಸ್ತೇ ವಿವರ್ಧಂತೇ ಪುನಃ ಪುನಃ ॥ 4 ॥
ನಾವು ನಮ್ಮ ಬಲದಿಂದಲೂ ಮತ್ತು ತೇಜಸ್ಸಿನಿಂದಲೂ ಸರ್ವಥಾ ಕ್ಷೀಣರಾಗಿದ್ದೇವೆ. ನಿಮ್ಮಿಂದ ರಕ್ಷಿತರಾದ ಪಾಂಡವರು ಪುನಃ ಪುನಃ ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ.
ದಿವ್ಯಾನ್ಯಸ್ತ್ರಾಣಿ ಸರ್ವಾಣಿ ಬ್ರಹ್ಮಾಸ್ತ್ರಾದೀನಿ ಯಾನ್ಯಪಿ ।
ತಾನಿ ಸರ್ವಾಣಿ ತಿಷ್ಠಂತಿ ಭವತ್ಯೇವ ವಿಶೇಷತಃ ॥ 5 ॥
ಬ್ರಹ್ಮಾಸ್ತ್ರವೇ ಮೊದಲಾದ ಯಾವ ದಿವ್ಯಾಸ್ತ್ರಗಳು ಇವೆಯೋ ಅವೆಲ್ಲವೂ ನಿಮ್ಮಲ್ಲಿಯೇ ವಿಶೇಷವಾಗಿ ನೆಲೆಸಿವೆ.
ನ ಪಾಂಡವೇಯಾ ನ ವಯಂ ನಾನ್ಯೇ ಲೋಕೇ ಧನುರ್ಧರಾಃ ।
ಯುಧ್ಯಮಾನಸ್ಯ ತೇ ತುಲ್ಯಾಃ ಸತ್ಯಮೇತದ್ ಬ್ರವೀಮಿ ತೇ ॥ 6 ॥
ಪಾಂಡವರಾಗಲೀ, ನಾವಾಗಲೀ, ಲೋಕದ ಬೇರೆ ಧನುರ್ಧರರಾಗಲೀ ಯುದ್ಧ ಮಾಡುವ ನಿಮಗೆ ಸಮರಲ್ಲ. ಇದನ್ನು ಸತ್ಯವಾಗಿ ನಿಮಗೆ ಹೇಳುತ್ತಿದ್ದೇನೆ.
ಸಸುರಾಸುರಗಂಧರ್ವಾನಿಮಾಂಲ್ಲೋಕಾನ್ ದ್ವಿಜೋತ್ತಮ ।
ಸರ್ವಾಸ್ತ್ರವಿದ್ ಭವಾನ್ ಹನ್ಯಾದ್ ದಿವ್ಯೈರಸ್ತ್ರೈರ್ನ ಸಂಶಯಃ ॥ 7 ॥
ಎಲೈ ದ್ವಿಜಶ್ರೇಷ್ಠರೇ, ಸುರಾಸುರಗಂಧರ್ವಸಹಿತರಾದ ಈ ಲೋಕಗಳನ್ನು ಸರ್ವಾಸ್ತ್ರ ವೇತ್ತರಾದ ನೀವು ನಿಮ್ಮ ದಿವ್ಯಾಸ್ತ್ರಗಳಿಂದ ಕೊಲ್ಲಬಹುದು ಎಂಬುದರಲ್ಲಿ ಸಂಶಯವಿಲ್ಲ.
ಸ ಭವಾನ್ ಮರ್ಷಯತ್ಯೇನಾಂಸ್ತ್ವತ್ತೋ ಭೀತಾನ್ ವಿಶೇಷತಃ ।
ಶಿಷ್ಯತ್ವಂ ವಾ ಪುರಸ್ಕೃತ್ಯ ಮಮ ವಾ ಮಂದಭಾಗ್ಯತಾಮ್ ॥ 8 ॥
ಅಂತಹ ನೀವು ನಿಮಗೆ ವಿಶೇಷವಾಗಿ ಹೆದರಿದ ಪಾಂಡವರನ್ನು ಅವರು ಶಿಷ್ಯರೆಂಬ ಕಾರಣದಿಂದಲೋ ಅಥವಾ ನನ್ನ ದುರದೃಷ್ಟದ ಕಾರಣದಿಂದಲೋ ಸಹಿಸಿಕೊಂಡಿದ್ದೀರಿ (ಕ್ಷಮಿಸಿಕೊಂಡಿದ್ದೀರಿ) (ಎಂದು ಹೇಳಿದನು).
ಏವಮುದ್ಧರ್ಷಿತೋ ದ್ರೋಣಃ ಕೋಪಿತಶ್ಚಾತ್ಮಜೇನ ತೇ ।
ಸಮನ್ಯುರಬ್ರವೀದ್ ರಾಜನ್ ದುರ್ಯೋಧನಮಿದಂ ವಚಃ ॥ 9 ॥
ಎಲೈ ರಾಜನೇ, ಹೀಗೆ ದ್ರೋಣರು ನಿನ್ನ ಪುತ್ರನಿಂದ ಹರ್ಷ-ತೇಜಸ್ಸಿನಿಂದ ಕೂಡಿದವರಾಗಿ ಮಾಡಲ್ಪಡುತ್ತಿರಲು ಅವರು ದುರ್ಯೋಧನನನ್ನು ಕುರಿತು ಕೋಪದಿಂದ ಈ ಮಾತುಗಳನ್ನು ಆಡಿದರು.
ಸ್ಥವಿರಃ ಸನ್ ಪರಂ ಶಕ್ತ್ಯಾ ಘಟೇ ದುರ್ಯೋಧನಾಹವೇ ।
ಅತಃ ಪರಂ ಮಯಾ ಕಾರ್ಯಂ ಕ್ಷುದ್ರಂ ವಿಜಯಗೃದ್ಧಿನಃ ।
ಅನಸ್ತ್ರವಿದಯಂ ಸರ್ವೋ ಹಂತವ್ಯೋಽಸ್ತ್ರವಿದಾ ಜನಃ ॥ 10 ॥
ಎಲೈ ದುರ್ಯೋಧನನೇ, ವೃದ್ಧನಾದರೂ ನಾನು ರಣರಂಗದಲ್ಲಿ ಪೂರ್ಣ ಶಕ್ತಿಯಿಂದ ಯುದ್ಧಮಾಡುತ್ತಿದ್ದೇನೆ. ಇನ್ನು ಇಲ್ಲಿಂದ ಮುಂದೆ ಜಯವನ್ನು ಅಪೇಕ್ಷಿಸುವ ನಾನು ಕ್ಷುದ್ರ ಕಾರ್ಯವನ್ನು ಮಾಡಬೇಕಾದಿತು. ಅಸ್ತ್ರವನ್ನು ತಿಳಿದ ನಾನು ಅಸ್ತ್ರವನ್ನು ತಿಳಿಯದ ಇವರೆಲ್ಲರನ್ನೂ ಕೊಲ್ಲಬೇಕು.
ಯದ್ಭವಾನ್ ಮನ್ಯತೇ ಚಾಪಿ ಶುಭಂ ವಾ ಯದಿ ವಾಽಶುಭಮ್ ।
ತದ್ವೈ ಕರ್ತಾಸ್ಮಿ ಕೌರವ್ಯ ವಚನಾತ್ ತವ ನಾನ್ಯಥಾ ॥ 11 ॥

ಶುಭವಾಗಲೀ ಅಥವಾ ಅಶುಭವಾಗಲೀ ನಾನು ಏನು ಮಾಡಬೇಕೆಂದು ನೀನು ಭಾವಿಸುವೆಯೋ ಎಲ್ಲೈ ಕೌರವ್ಯನೇ, ನಿನ್ನ ಮಾತಿನಂತೆ ನಾನು ಅದನ್ನು ಮಾಡುವೆನು. ಅನ್ಯಥಾ ಮಾಡುವುದಿಲ್ಲ.
ನಿಹತ್ಯ ಸರ್ವಪಾಂಚಾಲಾನ್ ಯುದ್ಧೇ ಕೃತ್ವಾ ಪರಾಕ್ರಮಮ್ |
ವಿಮೋಕ್ಷ್ಯೇ ಕವಚಂ ರಾಜನ್ ಸತ್ಯೇನಾಯುಧಮಾಲಭೇ ॥ 12 ॥
ಎಲ್ಲೈ ರಾಜನ್ನೇ, ಯುದ್ಧದಲ್ಲಿ ಪರಾಕ್ರಮವನ್ನು ಆಶ್ರಯಿಸಿ ಎಲ್ಲ ಪಾಂಚಾಲರನ್ನೂ ಕೊಂದು, ಅನಂತರ ನನ್ನ ಕವಚವನ್ನು ಬಿಚ್ಚುತ್ತೇನೆ. ಎಲ್ಲೈ ರಾಜನೇ, ಇದನ್ನು ನನ್ನ ಆಯುಧವನ್ನು ಮುಟ್ಟಿ ಶಪಥವನ್ನು ಮಾಡಿ ಹೇಳುತ್ತಿದ್ದೇನೆ.
ಮನ್ಯಸೇ ಯಚ್ಚ ಕೌಂತೇಯಮರ್ಜುನಂ ಶ್ರಾಂತಮಾಹವೇ |
ತಸ್ಯ ವೀರ್ಯಂ ಮಹಾಬಾಹೋ ಶೃಣು ಸತ್ಯೇನ ಕೌರವ ॥ 13 ॥
ನೀನು ಕೌಂತೇಯನಾದ ಅರ್ಜುನನು ಯುದ್ಧದಲ್ಲಿ ದಣಿದಿರುವನೆಂದು ತಿಳಿದಿರುವಿಯಷ್ಟೆ? ಎಲ್ಲೈ ಮಹಾಬಾಹುವೇ, ಕೌರವನೇ, ಅವನ ಪರಾಕ್ರಮವನ್ನು ನಿಜವಾಗಿ ಕೇಳು.
ತಂ ನ ದೇವಾ ನ ಗಂಧರ್ವಾ ನ ಯಕ್ಷಾ ನ ಚ ರಾಕ್ಷಸಾಃ |
ಉತ್ಸಹಂತೇ ರಣೇ ಸೋಢುಂ ಕುಪಿತಂ ಸವ್ಯಸಾಚಿನಮ್ ॥ 14 ॥
ಕೋಪಗೊಂಡ ಅರ್ಜುನನ ಜೊತೆಯಲ್ಲಿ ರಣರಂಗದಲ್ಲಿ ಯುದ್ಧವನ್ನು ಮಾಡಲು ದೇವತೆಗಳಾಗಲೀ, ಗಂಧರ್ವರಾಗಲೀ, ಯಕ್ಷರಾಗಲೀ, ರಾಕ್ಷಸರಾಗಲೀ ಬಯಸುವುದಿಲ್ಲ. ಅವನನ್ನು ಯಾರೂ ಸಹಿಸಲಾರರು.
ಖಾಂಡವೇ ಯೇನ ಭಗವಾನ್ ಪ್ರತ್ಯುದ್ಯಾತಃ ಸುರೇಶ್ವರಃ |
ಸಾಯಕೈರ್ವಾರಿತಶ್ಚಾಪಿ ವರ್ಷಮಾಣೋ ಮಹಾತ್ಮನಾ ॥ 15 ॥
ಖಾಂಡವ ವನದಲ್ಲಿ ಪೂಜ್ಯನಾದ ದೇವೇಂದ್ರನು ಬಂದು ಬಾಣಗಳ ಮಳೆಯನ್ನು ಸುರಿಸಿದರೂ ಮಹಾತ್ಮನಾದ ಅರ್ಜುನನು ತನ್ನ ಬಾಣಗಳಿಂದ ಅವನನ್ನು ನಿವಾರಿಸಿದನು.
ಯಕ್ಷಾ ನಾಗಾಸ್ತಥಾ ದೈತ್ಯಾ ಯೇ ಚಾನ್ಯೇ ಬಲಗರ್ವಿತಾಃ |
ನಿಹತಾಃ ಪುರುಷೇಂದ್ರೇಣ ತಚ್ಚಾಪಿ ವಿದಿತಂ ತವ ॥ 16 ॥
ಯಕ್ಷರು, ಸರ್ಪಗಳು, ದೈತ್ಯರು, ಬಲಗರ್ವಿತರಾದ ಉಳಿದವರು ಪುರುಷೇಂದ್ರನಾದ ಅರ್ಜುನನಿಂದ ನಿಹತರಾಗಿರುವ ವಿಷಯವು ನಿನಗೂ ತಿಳಿದಿದೆ.
ಗಂಧರ್ವಾ ಘೋಷಯಾತ್ರಾಯಾಂ ಚಿತ್ರಸೇನಾದಯೋ ಜಿತಾಃ |
ಯೂಯಂ ತೈರ್ಹ್ರಿಯಮಾಣಾಶ್ಚ ಮೋಕ್ಷಿತಾ ದೃಢಧನ್ವನಾ ॥ 17 ॥
ಘೋಷಯಾತ್ರೆಯ ಸಮಯದಲ್ಲಿ ಚಿತ್ರಸೇನ ಮೊದಲಾದ ಗಂಧರ್ವರು ಅವನಿಂದ ಪರಾಜಿತರಾದರು. ಅವರಿಂದ ಎಳೆದುಕೊಂಡು ಹೋಗಲ್ಪಡುತ್ತಿದ್ದ ನಿಮ್ಮನ್ನು ದೃಢವಾದ ಧನುಸ್ಸುಳ್ಳ ಅರ್ಜುನನು ಬಿಡಿಸಿದನು.
ನಿವಾತಕವಚಾಶ್ಚಾಪಿ ದೇವಾನಾಂ ಶತ್ರವಸ್ತಥಾ |
ಸುರೈರವಧ್ಯಾಃ ಸಂಗ್ರಾಮೇ ತೇನ ವೀರೇಣ ನಿರ್ಜಿತಾಃ ॥ 18 ॥
ದೇವತೆಗಳಿಂದ ಅವಧ್ಯರಾದ, ದೇವತೆಗಳ ಶತ್ರುಗಳಾದ ನಿವಾತಕವಚರೂ ಸಹ ಯುದ್ಧದಲ್ಲಿ ಆ ವೀರನಿಂದ ಪರಾಜಿತರಾದರು.
ದಾನವಾನಾಂ ಸಹಸ್ರಾಣಿ ಹಿರಣ್ಯಪುರವಾಸಿನಾಮ್ |
ವಿಜಿಗ್ಯೇ ಪುರುಷವ್ಯಾಘ್ರಃ ಸ ಶಕ್ಯೋ ಮಾನುಷೈಃ ಕಥಮ್ ॥ 19 ॥
ಪುರುಷವ್ಯಾಘ್ರನಾದ ಅರ್ಜುನನು ಹಿರಣ್ಯಪುರವಾಸಿಗಳಾದ ಸಹಸ್ರಾರು ದಾನವರನ್ನು ಗೆದ್ದನು. ಅವನ ಜೊತೆಯಲ್ಲಿ ಮನುಷ್ಯರು ಹೇಗೆ ಯುದ್ಧವನ್ನು ಮಾಡಿಯಾರು?
ಪ್ರತ್ಯಕ್ಷಂ ಚೈವ ತೇ ಸರ್ವಂ ಯಥಾ ಬಲಮಿದಂ ತವ |
ಕ್ಷಪಿತಂ ಪಾಂಡುಪುತ್ರೇಣ ಚೇಷ್ಟತಾಂ ನೋ ವಿಶಾಂಪತೇ ॥ 20 ॥
ಎಲ್ಲೈ ರಾಜನೇ, ಈ ನಮ್ಮ ಸೈನ್ಯವೆಲ್ಲವೂ ನಾವು ಎಷ್ಟು ಪ್ರಯತ್ನಪಡುತ್ತಿದ್ದರೂ ಪಾಂಡುಪುತ್ರನಾದ ಅರ್ಜುನನಿಂದ ನಾಶವನ್ನು ಹೊಂದುತ್ತಿರುವುದು ನಿನ್ನ ಕಣ್ಣೆದುರಿಗೇ ನಡೆಯುತ್ತಿದೆ (ಎಂದು ಹೇಳಿದರು).
ಸಂಜಯಃ
ತಂ ತಥಾಽಭಿಪ್ರಶಂಸಂತಮರ್ಜುನಂ ಕುಪಿತಸ್ತದಾ |
ದ್ರೋಣಂ ತವ ಸುತೋ ರಾಜನ್ ಪುನರೇವೇದಮಬ್ರವೀತ್ ॥ 21 ॥
ಅಹಂ ದುಃಶಾಸನಃ ಕರ್ಣಃ ಶಕುನಿರ್ಮಾತುಲಶ್ಚ ಮೇ |
ಹನಿಷ್ಯಾಮೋಽರ್ಜುನಂ ಸಂಖ್ಯೇ ದ್ವೈಧೀಕೃತ್ಯಾದ್ಯ ಭಾರತೀಮ್ ॥22॥
ಸಂಜಯ ಹಾಗೆ ಅರ್ಜುನನನ್ನು ಪ್ರಶಂಸೆ ಮಾಡುತ್ತಿದ್ದ ದ್ರೋಣರನ್ನು ಕುರಿತು ಎಲ್ಲೈ ರಾಜನೇ, ನಿನ್ನ ಪುತ್ರನು ಕೋಪಗೊಂಡು ಪುನಃ ನಾನು, ದುಶ್ಶಾಸನ, ಕರ್ಣ ಮತ್ತು ನನ್ನ ಸೋದರ ಮಾವನಾದ ಶಕುನಿ, ನಮ್ಮ ಸೈನ್ಯವನ್ನು ಎರಡು ಭಾಗವನ್ನಾಗಿ ಮಾಡಿ, ರಣರಂಗದಲ್ಲಿ ಅರ್ಜುನನನ್ನು ಕೊಲ್ಲುವೆವು ಎಂದು ಹೇಳಿದನು.
ತಸ್ಯ ತದ್ವಚನಂ ಶ್ರುತ್ವಾ ಭಾರದ್ವಾಜೋ ಹಸನ್ನಿವ |
ಅನ್ವವರ್ತತ ರಾಜಾನಂ ಸ್ವಸ್ತಿ ತೇಽಸ್ತ್ವಿತಿ ಚಾಬ್ರವೀತ್ ॥ 23॥
ಅವನ ಮಾತನ್ನು ಕೇಳಿದ ದ್ರೋಣರು ನಗುವವರಂತೆ ರಾಜನನ್ನು ಅನುಮೋದಿಸಿ `ನಿನಗೆ ಕ್ಷೇಮವಾಗಲಿ' ಎಂದು ಹೇಳಿದರು.
ಕೋ ಹಿ ಗಾಂಡೀವಧನ್ವಾನಂ ಜ್ವಲಂತಮಿವ ತೇಜಸಾ |
ಅಕ್ಷಯಂ ಕ್ಷಪಯೇತ್ ಕಶ್ಚಿತ್ ಕ್ಷತ್ರಿಯಃ ಕ್ಷತ್ರಿಯರ್ಷಭಮ್ ॥ 24 ॥

ತನ್ನ ತೇಜಸ್ಸಿನಿಂದ ಜ್ವಲಿಸುವ ಅಕ್ಷಯನಾದ, ಕ್ಷತ್ರಿಯಶ್ರೇಷ್ಠನಾದ, ಗಾಂಡೀವ ಧನುರ್ಧಾರಿಯಾದ ಅರ್ಜುನನನ್ನು ಯಾವ ಕ್ಷತ್ರಿಯನು ನಾಶಮಾಡಿಯಾನು?
ತಂ ನ ವಿತ್ತಪತಿರ್ನೇಂದ್ರೋ ನ ಯಮೋ ನ ಜಲೇಶ್ವರಃ |
ನಾಸುರೋರಗರಕ್ಷಾಂಸಿ ಕ್ಷಪಯೇಯುಃ ಸಹಾಯುಧಮ್ ॥ 25 ॥
ಕೈಯಲ್ಲಿ ಆಯುಧವನ್ನು ಹಿಡಿದ ಅರ್ಜುನನನ್ನು ವಿತ್ತಪತಿಯಾದ ಕುಬೇರನಾಗಲೀ, ಇಂದ್ರನಾಗಲೀ, ಯಮನಾಗಲೀ, ಜಲೇಶ್ವರನಾದ ವರುಣನಾಗಲೀ, ಅಸುರೋರಗ ರಾಕ್ಷಸರಾಗಲೀ ನಾಶಪಡಿಸಲಾರರು.
ಮೂಢಾಸ್ತ್ವೇತಾನಿ ಭಾಷಂತೇ ಯಾನೀಮಾನ್ಯಾತ್ಥ ಭಾರತ |
ಯುದ್ಧೇ ಹ್ಯರ್ಜುನಮಾಸಾದ್ಯ ಸ್ವಸ್ತಿಮಾನ್ ಕೋ ವ್ರಜೇದ್ ಗೃಹಾನ್ ॥
ಎಲೈ ಭಾರತನೇ, ಮೂಢರಾದವರು ಮಾತ್ರ ನೀನು ಆಡಿದಂತೆ ಮಾತುಗಳನ್ನು ಆಡುತ್ತಾರೆ. ಅರ್ಜುನನನ್ನು ರಣರಂಗದಲ್ಲಿ ಸಮೀಪಿಸಿ ಯಾವನು ತಾನೇ ಕ್ಷೇಮದಿಂದ ಮನೆಗೆ ಹಿಂದಿರುಗಿಯಾನು?
ತ್ವಂ ತು ಸರ್ವಾತಿಶಂಕಿತ್ವಾನ್ನಿಷ್ಠುರಃ ಪಾಪನಿಶ್ಚಯಃ |
ಶ್ರೇಯಸಸ್ತ್ವದ್ಧಿತೇ ಯುಕ್ತಾಂಸ್ತತ್ತದ್ ವಕ್ತುಮಿಹೇಚ್ಛಸಿ ॥ 27 ॥
ನೀನಾದರೋ ಎಲ್ಲರನ್ನೂ ಶಂಕಿಸುವವನು, ನಿಷ್ಠುರಿ, ಪಾಪನಿಶ್ಚಯವನ್ನು ಹೊಂದಿದವನು. ನಿನ್ನ ಹಿತದಲ್ಲಿ ಆಸಕ್ತರಾದ ದೊಡ್ಡವರನ್ನು ಬಾಯಿಗೆ ಬಂದಂತೆ ಮಾತನಾಡಿ (ನಿಂದಿಸಲು) ನೀನು ಬಯಸುತ್ತಿದ್ದೀಯೆ.
ಗಚ್ಛ ತ್ವಮಪಿ ಕೌಂತೇಯಮಾತ್ಮಾರ್ಥೇಭ್ಯೋ ಹಿ ಮಾಚಿರಮ್ |
ತ್ವಮಪ್ಯಾಶಂಸಸೇ ಯೋದ್ಧುಂ ಕುಲಜಃ ಕ್ಷತ್ರಿಯೋ ಹ್ಯಸಿ ॥ 28 ॥
ಎಲೈ ದುರ್ಯೋಧನನೇ, ಇಲ್ಲಿಂದ ಹೊರಡು. ನಿನ್ನ ಸಲುವಾಗಿಯೇ ಅರ್ಜುನನ ಮೇಲೆ ಎರಗುವವನಾಗು. ನೀನೂ ಸಹ ಯುದ್ಧವನ್ನು ಮಾಡಲು ಬಯಸುತ್ತೀಯೆ. ನೀನೂ ಸಹ ಒಳ್ಳೆಯ ಕುಲದಲ್ಲಿ ಜನಿಸಿದ ಕ್ಷತ್ರಿಯನಷ್ಟೆ?
ಇಮಾನ್ ಕಿಂ ಪಾರ್ಥಿವಾನ್ ಸರ್ವಾನ್ ಘಾತಯಿಷ್ಯಸ್ಯನಾಗಸಃ |
ತ್ವಮಸ್ಯ ಮೂಲಂ ವೈರಸ್ಯ ತಸ್ಮಾದಾಸಾದಯಾರ್ಜುನಮ್ ॥ 29 ॥
ಈ ನಿರಪರಾಧಿಗಳಾದ ಎಲ್ಲ ರಾಜರನ್ನು ಏಕೆ ಕೊಲ್ಲಿಸುವಿ? ಈ ವೈರಕ್ಕೆ ನೀನೇ ಮೂಲಕಾರಣನಾದವನು. ಆದ್ದರಿಂದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡು.
ಏಷ ತೇ ಮಾತುಲಃ ಪ್ರಾಜ್ಞಃ ಕ್ಷತ್ರಧರ್ಮಮನುವ್ರತಃ |
ದೂರ್ದ್ಯೂತದೇವೀ ಗಾಂಧಾರಿಃ ಪ್ರಯಾತ್ವರ್ಜುನಮಾಹವೇ ॥ 30 ॥
ಕ್ಷತ್ರಧರ್ಮರತನಾದ, ಪ್ರಾಜ್ಞನಾದ, ಕೆಟ್ಟಜೂಜನ್ನು ಆಡುವ, ನಿನ್ನ ಸೋದರಮಾವನಾದ ಗಾಂಧಾರ ದೇಶದ ಶಕುನಿಯು ರಣರಂಗದಲ್ಲಿ ಅರ್ಜುನನನ್ನು ಸಮೀಪಿಸಲಿ.
ಏಷೋಽಕ್ಷಕುಶಲೋ ಜಿಹ್ಮೋ ದ್ಯೂತಕೃತ್ ಕಿತವಃ ಶಠಃ |
ದೇವಿತಾ ನಿಕೃತಿಪ್ರಜ್ಞೋ ಯುಧಿ ಜೇಷ್ಯತಿ ಪಾಂಡವಾನ್ ॥ 31 ॥
ಅಕ್ಷಕುಶಲನೂ, ಕಪಟಿಯೂ, ದ್ಯೂತಕಾರಿಯೂ, ಮೋಸಗಾರನೂ, ಶಠನೂ, ಮೋಸದ ಪ್ರಜ್ಞೆಯನ್ನು ಉಳ್ಳವನೂ ಆದ ಈ ಶಕುನಿಯು ಯುದ್ಧದಲ್ಲಿ ಪಾಂಡವರನ್ನು ಗೆಲ್ಲುವನು!
ತ್ವಯಾ ಕಥಿತಮತ್ಯಂತಂ ಕರ್ಣೇನ ಸಹ ಹೃಷ್ಟವತ್ |
ಅಸಕೃಚ್ಛೂರವನ್ಮೋಹಾದ್ ಧೃತರಾಷ್ಟ್ರಸ್ಯ ಶೃಣ್ವತಃ ॥ 32 ॥
ನೀನು ಮತ್ತು ಕರ್ಣನು ಧೃತರಾಷ್ಟ್ರನು ಕೇಳುವಂತೆ ಮೋಹದಿಂದ ನಿಮ್ಮ ಪ್ರತಾಪಗಳನ್ನು ಅನೇಕಬಾರಿ ಶೂರರಂತೆ ಕೊಚ್ಚಿಕೊಂಡಿದ್ದೀರಿ.
ಅಹಂ ಚ ತಾತ ಕರ್ಣಶ್ಚ ಭ್ರಾತಾ ದುಃಶಾಸನಶ್ಚ ಮೇ |
ಪಾಂಡುಪುತ್ರಾನ್ ಹನಿಷ್ಯಾಮಃ ಸಹಿತಾಃ ಸಮರೇ ತ್ರಯಃ ॥ 33 ॥
ಇತಿ ತೇ ಕತ್ಥಮಾನಸ್ಯ ಶ್ರುತಂ ಸಂಸದಿ ಸಂಸದಿ |
ಅನುತಿಷ್ಠ ಪ್ರತಿಜ್ಞಾಂ ತಾಂ ಸತ್ಯವಾಗ್ ಭವ ತೈಃ ಸಹ ॥ 34 ॥
ಎಲೈ ತಂದೆಯೇ, ನಾನೂ, ಕರ್ಣನೂ ಮತ್ತು ನನ್ನ ತಮ್ಮನಾದ ದುಶ್ಶಾಸನನೂ ಮೂರು ಜನರು ಸೇರಿ ಒಟ್ಟಾಗಿ ಯುದ್ಧದಲ್ಲಿ ಪಾಂಡುಪುತ್ರರನ್ನು ಗೆಲ್ಲುವೆವು ಎಂಬ ನಿನ್ನ ಜಂಭದ ಮಾತುಗಳನ್ನು ಪ್ರತಿಯೊಂದು ಸಭೆಯಲ್ಲಿಯೂ ಕೇಳಿದ್ದೇವೆ. ಆ ಪ್ರತಿಜ್ಞೆಯನ್ನು ನೆರವೇರಿಸು. ಅವರ ಜೊತೆಯಲ್ಲಿ ಯುದ್ಧವನ್ನು ಮಾಡಿ ಸತ್ಯವಚನನಾಗು.
ಏಷ ತೇ ಪಾಂಡವಃ ಶತ್ರುರವಿಷಹ್ಯೋಽಗ್ರತಃ ಸ್ಥಿತಃ |
ಕ್ಷತ್ರಧರ್ಮಮವೇಕ್ಷಸ್ವ ಶ್ಲಾಘ್ಯಸ್ತವ ವಧೋ ಜಯಾತ್ ॥ 35 ॥
ನಿನ್ನ ಶತ್ರುವೂ, ಸಹಿಸಲು ಅಸಾಧ್ಯನಾದವನೂ ಆದ ಈ ಅರ್ಜುನನು ನಿನ್ನ ಎದುರಿಗೇ ಇದ್ದಾನೆ. ಕ್ಷತ್ರಿಯ ಧರ್ಮವನ್ನು ನೋಡು. ನಿನ್ನ ಜಯಕ್ಕಿಂತಲೂ ವಧೆಯೇ ಶ್ಲಾಘ್ಯವಾದುದು.
ದತ್ತಂ ಭುಕ್ತಮಧೀತಂ ಚ ಪ್ರಾಪ್ತಮೈಶ್ವರ್ಯಮೀಪ್ಸಿತಮ್ |
ಕೃತಕೃತ್ಯೋಽನೃಣಶ್ಚಾಸಿ ಮಾ ಭೈರ್ಯುಧ್ಯಸ್ವ ಪಾಂಡವಮ್ ॥ 36 ॥
ನೀನು ದಾನವನ್ನು ಮಾಡಿರುವಿ, ಅಧ್ಯಯನವನ್ನು ಮಾಡಿದ್ದೀಯೆ, ಅಪೇಕ್ಷಿತವಾದ ಐಶ್ವರ್ಯವನ್ನು ಪಡೆದಿದ್ದೀಯೆ, ಭೋಗಗಳನ್ನು ಭೋಗಿಸಿದ್ದೀಯೆ, ಜೀವನದಲ್ಲಿ ಕೃತಕೃತ್ಯನಾಗಿ ಋಣಮುಕ್ತನಾಗಿದ್ದೀಯೆ. ಹೆದರಬೇಡ, ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡು (ಎಂದು ಹೇಳಿದರು).

ಇತ್ಯುಕ್ತ್ವಾ ಸಮರೇ ದ್ರೋಣೋ ನ್ಯವರ್ತತ ಯತಃ ಪರೇ |
ದ್ವೈಧೀಕೃತ್ಯ ತತಃ ಸೇನಾಂ ಯುದ್ಧಂ ಸಮಭವತ್ತದಾ ॥ 37 ॥
ಹೀಗೆ ಹೇಳಿ ದ್ರೋಣರು ರಣರಂಗದಲ್ಲಿ ಶತ್ರುವಿದ್ದ ಕಡೆಗೆ ಹೊರಟರು. ಸೈನ್ಯವನ್ನು ಎರಡು ಭಾಗವನ್ನಾಗಿ ಮಾಡಿ ಅನಂತರ ಯುದ್ಧವು ಪ್ರಾರಂಭವಾಯಿತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೆರಡನೆಯ ಅಧ್ಯಾಯ
ದ್ರೋಣರಿಂದ ದ್ರುಪದ-ವಿರಾಟಾದಿಗಳ ವಧೆ. ಭೀಮನಿಂದ ಧೃಷ್ಟದ್ಯುಮ್ನನನ್ನು ಕುರಿತು ಉಗ್ರವಚನಗಳು. ಹದಿನಾಲ್ಕನೆಯ ದಿವಸದಲ್ಲಿ ರಾತ್ರಿಯುದ್ಧದ ಸಮಾಪ್ತಿ.
ಸಂಜಯಃ
ತ್ರಿಭಾಗಮಾತ್ರಶೇಷಾಯಾಂ ರಾತ್ರ್ಯಾಂ ಯುದ್ಧಮವರ್ತತ |
ಕುರೂಣಾಂ ಪಾಂಡವಾನಾಂ ಚ ಸಂರಬ್ಧಾನಾಂ ವಿಶಾಂಪತೇ ॥ 1 ॥
ಸಂಜಯ ಎಲೈ ರಾಜನೇ, ರಾತ್ರಿಯ ಮೂರನೆಯ ಒಂದು ಭಾಗವು ಮಾತ್ರ ಉಳಿದಿರಲು ಕ್ರುದ್ಧರಾದ ಕೌರವರಿಗೂ ಮತ್ತು ಪಾಂಡವರಿಗೂ ಯುದ್ಧವು ನಡೆಯಿತು.
ಅಥ ಚಂದ್ರಪ್ರಭಾಂ ಮುಷ್ಣನ್ನಾದಿತ್ಯಸ್ಯ ಪುರಃಸರಃ |
ಅರುಣೋಽಭ್ಯುದಯಾಂಚಕ್ರೇ ತಾಮ್ರೀಕುರ್ವನ್ನಿವಾಂಬರಮ್ ॥ 2 ॥
ಅನಂತರ ಆದಿತ್ಯ ಪುರಸ್ಸರನಾದ ಅರುಣನು ಆಕಾಶವನ್ನು ಕೆಂಪಾಗಿ ಮಾಡುತ್ತಾ ಚಂದ್ರನ ಪ್ರಭೆಯನ್ನು ಅಪಹರಿಸಿ ಉದಯಿಸಿದನು.
ತತೋ ದ್ವೈಧೀಕೃತೇ ಸೈನ್ಯೇ ದ್ರೋಣಃ ಸೋಮಕಪಾಂಡವಾನ್ |
ಅಭ್ಯದ್ರವತ್ ಸಪಾಂಚಾಲಾನ್ ದುರ್ಯೋಧನಪುರೋಗಮಃ ॥ 3 ॥
ಆಗ ದ್ರೋಣರು ದುರ್ಯೋಧನನನ್ನು ಮುಂದೆ ಮಾಡಿಕೊಂಡು ತಮ್ಮ ಸೈನ್ಯವನ್ನು ಎರಡು ಭಾಗವನ್ನಾಗಿ ಮಾಡಿ, ಸೋಮಕ-ಪಾಂಡವರ ಮೇಲೆ ಮತ್ತು ಪಾಂಚಾಲರ ಮೇಲೆ ನುಗ್ಗಿದರು.
ದ್ವೈಧೀಭೂತಾನ್ ಕುರೂನ್ ದೃಷ್ಟ್ವಾ ಮಾಧವೋಽರ್ಜುನಮಬ್ರವೀತ್|
ಸಪತ್ನಾನ್ ಸವ್ಯತಃ ಕುರ್ಮಿ ಸವ್ಯಸಾಚಿನ್ನಿಮಾನ್ ಕುರೂನ್ ॥ 4 |
ಕುರುಸೈನ್ಯವು ಎರಡು ಭಾಗವಾದುದನ್ನು ನೋಡಿ ಕೃಷ್ಣನು ಅರ್ಜುನನನ್ನು ಕುರಿತು- `ಎಲೈ ಸವ್ಯಸಾಚಿಯೇ, ಶತ್ರುಗಳಾದ ಈ ಕುರುಗಳನ್ನು ಎಡಭಾಗಕ್ಕೆ ತೆಗೆದುಕೊಂಡು ಹೋಗುತ್ತೇನೆ' ಎಂದು ಹೇಳಿದನು.
ಸ ಮಾಧವಮನುಜ್ಞಾಯ ಕುರುಷ್ವೇತಿ ಧನಂಜಯಃ |
ದ್ರೋಣಕರ್ಣೌ ಮಹೇಷ್ವಾಸೌ ಸವ್ಯತಃ ಪರ್ಯವರ್ತತ ॥ 5 ॥
ಧನಂಜಯನು ಕೃಷ್ಣನಿಗೆ ಅನುಮತಿಯನ್ನು ನೀಡಿ, ಹಾಗೆ ಮಾಡು ಎಂದು ಹೇಳಿ, ಮಹಾಧನುರ್ಧಾರಿಯಾದ ದ್ರೋಣ-ಕರ್ಣರನ್ನು ಎಡಭಾಗದಲ್ಲಿಟ್ಟು ಮುಂದೆ ಸಾಗಿದನು.
ಅಭಿಪ್ರಾಯಂ ತು ಕೃಷ್ಣಸ್ಯ ಜ್ಞಾತ್ವಾ ಪರಪುರಂಜಯಃ |
ಆಜಿಶೀರ್ಷಗತಂ ದೃಷ್ಟ್ವಾ ಭೀಮಸೇನಂ ಸಮಾಸದತ್ ॥ 6 ॥
ಕೃಷ್ಣನ ಅಭಿಪ್ರಾಯವನ್ನು ತಿಳಿದ ಪರಪುರಂಜಯನಾದ ಅರ್ಜುನನು ರಣರಂಗದ ಮೇಲ್ಭಾಗದಲ್ಲಿ (ಶಿರಃಸ್ಥಾನದಲ್ಲಿ) ಭೀಮಸೇನನನ್ನು ನೋಡಿ ಅವನ ಬಳಿ ಹೋದನು.
ಭೀಮಃ
ಅರ್ಜುನಾರ್ಜುನ ಬೀಭತ್ಸೋ ಶೃಣು ಮೇ ತತ್ತ್ವತೋ ವಚಃ |
ಯದರ್ಥಂ ಕ್ಷತ್ರಿಯಾ ಸೂತೇ ತಸ್ಯ ಕಾಲೋಯಮಾಗತಃ ॥ 7 ॥
ಭೀಮ ಅರ್ಜುನನೇ, ಅರ್ಜುನನೇ, ಬೀಭತ್ಸುವೇ, ನನ್ನ ಸತ್ಯವಾದ ಮಾತನ್ನು ಕೇಳು. ಕ್ಷತ್ರಿಯ ವನಿತೆಯು ಯಾವುದಕ್ಕಾಗಿ ಪುತ್ರನನ್ನು ಪಡೆಯುತ್ತಾಳೆಯೋ ಅಂತಹ ಕಾಲವು ಈಗ ಪ್ರಾಪ್ತವಾಗಿದೆ.
ಅಸ್ಮಿಂಶ್ಚೇದಾಗತೇ ಕಾಲೇ ಶ್ರೇಯೋ ನ ಪ್ರತಿಪತ್ಸ್ಯಸೇ |
ಅಸಂಭಾವಿತರೂಪಃ ಸನ್ನಾನೃಶಂಸ್ಯಂ ಕರಿಷ್ಯಸಿ ॥ 8 ॥
ಅಂತಹ ಕಾಲವು ಪ್ರಾಪ್ತವಾದಾಗ ನೀನು ಶ್ರೇಯಸ್ಸನ್ನು ಸಾಧಿಸದಿದ್ದರೆ ಅಪಕೀರ್ತಿಯನ್ನು ಹೊಂದಿ ಕ್ರೂರನಾಗುವಿ.
ಸತ್ಯಶ್ರೀಧರ್ಮಯಶಸಾಂ ವೀರ್ಯೇಣಾನೃಣ್ಯಮಾಪ್ನುಹಿ |
ಭಿಂಧ್ಯನೀಕಂ ಯುಧಾಂಶ್ರೇಷ್ಠ ಪ್ರತಿಜ್ಞಾಂ ಸಫಲಾಂ ಕುರು ॥ 9 ॥
ನಿನ್ನ ಪರಾಕ್ರಮದಿಂದ ಸತ್ಯ, ಸಂಪತ್ತು, ಧರ್ಮ ಮತ್ತು ಕೀರ್ತಿಗಳ ಋಣದಿಂದ ಮುಕ್ತನಾಗು. ಎಲೈ ಯುದ್ಧಮಾಡುವವರಲ್ಲಿ ಶ್ರೇಷ್ಠನೇ, ಕೌರವರನ್ನು ಭೇದಿಸು. ನಿನ್ನ ಪ್ರತಿಜ್ಞೆಯನ್ನು ಸಫಲವನ್ನಾಗಿ ಮಾಡು.
ಸಂಜಯಃ
ಸ ಸವ್ಯಸಾಚೀ ಭೀಮೇನ ಚೋದಿತಃ ಕೇಶವೇನ ಚ |

ಕರ್ಣದ್ರೋಣಾವತಿಕ್ರಮ್ಯ ಸಮಂತಾತ್ ಪರ್ಯವಾರಯತ್ ॥ 10 ॥
ಸಂಜಯ ಸವ್ಯಸಾಚಿಯಾದ ಅರ್ಜುನನು ಭೀಮನಿಂದಲೂ ಮತ್ತು ಕೃಷ್ಣನಿಂದಲೂ ಹೀಗೆ ಪ್ರೇರಿಸಲ್ಪಟ್ಟವನಾಗಿ ಕರ್ಣ-ದ್ರೋಣರನ್ನು ದಾಟಿ ಕೌರವ ಸೇನೆಯನ್ನು ಎಲ್ಲ ಕಡೆಯಲ್ಲಿಯೂ ತಡೆದನು.
ತಮಾಜಿಶೀರ್ಷಮಾಯಾಂತಂ ದಹಂತಂ ಕ್ಷತ್ರಿಯರ್ಷಭಾನ್ |
ಪರಾಕ್ರಾಂತಂ ಪರಾಕ್ರಮ್ಯ ಯತಂತಃ ಕ್ಷತ್ರಿಯರ್ಷಭಾಃ |
ನಾಶಕ್ನುವನ್ ವಾರಯಿತುಂ ವರ್ಧಮಾನಮಿವಾನಲಮ್ ॥ 11 ॥
ರಣರಂಗದಲ್ಲಿ ಶಿರಸ್ಸಿನಲ್ಲಿ ಕ್ಷತ್ರಿಯ ಶ್ರೇಷ್ಠರನ್ನು ಭೇದಿಸುತ್ತಾ ತನ್ನ ಪರಾಕ್ರಮವನ್ನು ತೋರಿಸಿ ಮುಂದೆ ಬರುತ್ತಿದ್ದ ಅವನನ್ನು ಕ್ಷತ್ರಿಯಶ್ರೇಷ್ಠರು ಪ್ರಯತ್ನಪಟ್ಟರೂ ಹಬ್ಬುವ ಅಗ್ನಿಯನ್ನು ತಡೆಯಲು ಸಾಧ್ಯವಿಲ್ಲದಂತೆ ಅವನನ್ನು ತಡೆಯಲಾರದಾದರು.
ಅಥ ದುರ್ಯೋಧನಃ ಕರ್ಣಃ ಶಕುನಿಶ್ಚಾಪಿ ಸೌಬಲಃ |
ಅಭ್ಯವರ್ಷನ್ ಶರವ್ರಾತೈಃ ಕುಂತೀಪುತ್ರಂ ಧನಂಜಯಮ್ ॥ 12 ॥
ಅನಂತರ ದುರ್ಯೋಧನನೂ, ಕರ್ಣನೂ, ಸೌಬಲನಾದ ಶಕುನಿಯೂ ಕುಂತೀಪುತ್ರನಾದ ಅರ್ಜುನನ ಮೇಲೆ ಬಾಣಗಳ ಸಮೂಹದ ಮಳೆಯನ್ನು ಕರೆದರು.
ತೇಷಾಮಸ್ತ್ರಾಣಿ ಸರ್ವೇಷಾಮುತ್ತಮಾಸ್ತ್ರವಿದಾಂ ವರಃ |
ಕದರ್ಥೀಕೃತ್ಯ ರಾಜೇಂದ್ರ ಶರವರ್ಷೈರವಾಕಿರತ್ ॥ 13 ॥
ಎಲೈ ರಾಜೇಂದ್ರನೇ, ಉತ್ತಮಾಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಅರ್ಜುನನು ಅವರೆಲ್ಲರ ಅಸ್ತ್ರಗಳನ್ನು ತೃಣೀಕರಿಸಿ ಬಾಣಗಳ ಸಮೂಹದಿಂದ ಅವರನ್ನು ಹೊಡೆದನು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ಲಘುಹಸ್ತೋ ಧನಂಜಯಃ |
ಸರ್ವಾನವಿಧ್ಯನ್ನಿಶಿತೈರ್ದಶಭಿರ್ದಶಭಿಃ ಶರೈಃ ॥ 14 ॥
ಕ್ಷಿಪ್ರಹಸ್ತನಾದ ಧನಂಜಯನು ತನ್ನ ಅಸ್ತ್ರಗಳಿಂದ ಅವರ ಅಸ್ತ್ರಗಳನ್ನು ನಿವಾರಿಸಿ ಅವರಲ್ಲಿ ಒಬ್ಬೊಬ್ಬರನ್ನೂ ತೀಕ್ಷ್ಣವಾದ ಹತ್ತು-ಹತ್ತು ಬಾಣಗಳಿಂದ ಹೊಡೆದನು.
ಉದ್ಧೂತಾ ರಜಸೋ ವೃಷ್ಟಿಃ ಶರವೃಷ್ಟಿಸ್ತಥೈವ ಚ |
ತಮಶ್ಚ ಘೋರಂ ಶಬ್ದಶ್ಚ ತದಾ ಸಮಭವತ್ ಮಹಾನ್ ॥ 15 ॥
ಆಗ ಧೂಳಿನ ವೃಷ್ಟಿಯೂ, ಬಾಣಗಳ ವೃಷ್ಟಿಯೂ, ಘೋರವಾದ ತಮಸ್ಸು (ಕತ್ತಲು) ಮತ್ತು ದೊಡ್ಡ ಶಬ್ದಗಳೂ ಉಂಟಾದವು.
ನ ದ್ಯೌರ್ನ ಭೂಮಿರ್ನ ದಿಶಃ ಪ್ರಾಜ್ಞಾಯಂತ ತಥಾ ಗತೇ |
ಸೈನ್ಯೇನ ರಜಸಾ ಮೂಢಂ ಸರ್ವಮಂಧಮಿವಾಭವತ್ ॥ 16 ॥
ಆ ಸ್ಥಿತಿಯಲ್ಲಿ ಆಕಾಶವಾಗಲೀ, ಭೂಮಿಯಾಗಲೀ, ದಿಕ್ಕುಗಳಾಗಲೀ ಕಾಣಲಿಲ್ಲ. ಸೈನ್ಯದಿಂದ ಎದ್ದ ಧೂಳಿನಿಂದ ಮುಚ್ಚಲ್ಪಟ್ಟ ಎಲ್ಲವೂ ಅಂಧಕಾರಮಯವಾಯಿತು.
ನೈವ ತೇ ನ ವಯಂ ರಾಜನ್ ಪ್ರಾಜ್ಞಾಸಿಷ್ಮ ಪರಸ್ಪರಮ್ |
ಉದ್ದೇಶೇನ ಹಿ ತೇನ ಸ್ಮ ಸಮಯುದ್ಧ್ಯಂತ ಪಾರ್ಥಿವಾಃ ॥ 17 ॥
ಎಲೈ ರಾಜನೇ, ನಾವಾಗಲೀ ಅಥವಾ ಅವರಾಗಲೀ ಪರಸ್ಪರವಾಗಿ ಯಾರೆಂದು ತಿಳಿಯಲಿಲ್ಲ. ಕೇವಲ ಉದ್ದೇಶದಿಂದ (ಅಂದಾಜಿನಿಂದ) ರಾಜರು ಯುದ್ಧವನ್ನು ಮಾಡಿದರು.
ವಿರಥಾ ರಥಿನೋ ರಾಜನ್ ಸಮಾಸಾದ್ಯ ಪರಸ್ಪರಮ್ |
ಕೇಶೇಷು ಸಮಸಜ್ಜಂತ ಕವಚೇಷು ಭುಜೇಷು ಚ ॥ 18 ॥
ಎಲೈ ರಾಜನೇ, ರಥಿಕರು ರಥಗಳನ್ನು ಕಳೆದುಕೊಂಡು ಪರಸ್ಪರವಾಗಿ ಸಮೀಪಿಸಿ ಕೇಶಗಳನ್ನು, ಕವಚಗಳನ್ನು ಮತ್ತು ಭುಜಗಳನ್ನು ಹಿಡಿದು ಯುದ್ಧವನ್ನು ಮಾಡಿದರು.
ಹತಾಶ್ವಾ ಹತಸೂತಾಶ್ಚ ನಿಶ್ಚೇಷ್ಟಾ ರಥಿನಸ್ತದಾ |
ಜೀವಂತ ಇವ ತತ್ರ ಸ್ಮ ವ್ಯದೃಶ್ಯಂತ ಭಯಾರ್ದಿತಾಃ ॥ 19 ॥
ಅಶ್ವ-ಸೂತರನ್ನು ಕಳೆದುಕೊಂಡು ಮೃತರಾಗಿ ನಿಶ್ಚೇಷ್ಟರಾದ ರಥಿಕರು ಭಯಪೀಡಿತರಾಗಿ ಬದುಕಿರುವವರಂತೆ ಅಲ್ಲಿ ಕಂಡುಬಂದರು.
ಹತಾನ್ ಗಜಾನ್ ಸಮಾಶ್ಲಿಷ್ಯ ಪರ್ವತಾನಿವ ವಾಜಿನಃ |
ಗತಸತ್ತ್ವಾ ವ್ಯದೃಶ್ಯಂತ ತಥೈವ ಸಹ ಸಾದಿಭಿಃ ॥ 20 ॥
ಭಯಪೀಡಿತರಾದ ಅಶ್ವಾರೋಹಿಗಳು ಪರ್ವತದಂತಹ ಗಜಗಳನ್ನು ಆಲಿಂಗಿಸಿ ಹತರಾಗಿ ಬದುಕಿರುವವರಂತೆ ಕಂಡುಬಂದರು. ಮೃತವಾದ ಅಶ್ವಗಳೂ ಸಹ ಅಶ್ವಾರೋಹಿಗಳ ಸಹಿತವಾಗಿ ಹಾಗೆಯೇ ಕಂಡುಬಂದವು.
ತತಸ್ತ್ವಭ್ಯವಸೃತ್ಯೈವ ಸಂಗ್ರಾಮಾದುತ್ತರಾಂ ದಿಶಮ್ |
ಅತಿಷ್ಠದಾಹವೇ ದ್ರೋಣೋ ವಿಧೂಮ ಇವ ಪಾವಕಃ ॥ 21 ॥
ಆಗ ದ್ರೋಣರು ರಣರಂಗದಿಂದ ಉತ್ತರದಿಕ್ಕನ್ನು ತಲುಪಿ ಧೂಮವಿಲ್ಲದ ಅಗ್ನಿಯಂತೆ ರಣರಂಗದಲ್ಲಿ ನಿಂತರು.
ತಮಾಜಿಶೀರ್ಷಾದೇಕಾಂತಮಪಕ್ರಾಂತಂ ನಿಶಾಮ್ಯ ತು |
ಸಮಕಂಪಂತ ಸೈನ್ಯಾನಿ ಪಾಂಡವಾನಾಂ ವಿಶಾಂಪತೇ ॥ 22 ॥
ಎಲೈ ರಾಜನೇ, ರಣರಂಗದ ತುದಿಯಿಂದ ಅವರೊಬ್ಬರೇ ಹೋದುದನ್ನು ನೋಡಿ ಪಾಂಡವರ ಸೈನ್ಯಗಳು ನಡುಗಿದವು.
ಭ್ರಾಜಮಾನಂ ಶ್ರಿಯಾ ಯುಕ್ತಂ ಜ್ವಲಂತಮಿವ ತೇಜಸಾ |

ದ್ರೋಣಂ ದೃಷ್ಟ್ವಾರಯಸ್ತ್ರೇಸುಶ್ಚೇಲುರ್ಮಮ್ಲುಶ್ಚ ಮಾರಿಷ ॥ 23 ॥
ಎಲೈ ಶ್ರೇಷ್ಠನೇ, ತೇಜಸ್ಸಿನಿಂದ ಜ್ವಲಿಸುತ್ತಾ ಕಾಂತಿಯಿಂದ ಕೂಡಿದ ದ್ರೋಣರನ್ನು ನೋಡಿ ಶತ್ರುಗಳು ಹೆದರಿದರು, ನಡುಗಿದರು ಮತ್ತು ಮ್ಲಾನರಾದರು.
ಆಹ್ವಯಂತಂ ಪರಾನೀಕಂ ಪ್ರಭಿನ್ನಮಿವ ವಾರಣಮ್ |
ನೈನಂ ಶಶಂಸಿರೇ ಜೇತುಂ ದಾನವಾ ವಾಸವಂ ಯಥಾ ॥ 24 ॥
ಮದೋದಕವನ್ನು ಸುರಿಸುವ ಗಜದಂತೆ ಶತ್ರುಸೈನ್ಯವನ್ನು ಆಹ್ವಾನಿಸುತ್ತಿದ್ದ ಅವರನ್ನು ದಾನವರು ಇಂದ್ರನನ್ನು ಗೆಲ್ಲಲು ಬಯಸದಂತೆ ಗೆಲ್ಲಲು ಯಾರೂ ಬಯಸಲಿಲ್ಲ.
ಕೇಚಿದಾಸನ್ನಿರುತ್ಸಾಹಾಃ ಕೇಚಿತ್ ಕ್ರುದ್ಧಾ ಮನಸ್ವಿನಃ |
ವಿಸ್ಮಿತಾಶ್ಚಾಭವನ್ ಕೇಚಿತ್ ಕೇಚಿದಾಸನ್ನಮರ್ಷಿತಾಃ ॥ 25 ॥
ಕೆಲವರು ಉತ್ಸಾಹಶೂನ್ಯರಾದರು, ಕೆಲವು ಧೈರ್ಯಶಾಲಿಗಳು ಕೋಪಗೊಂಡರು, ಕೆಲವರು ವಿಸ್ಮಿತರಾದರು, ಇನ್ನು ಕೆಲವರು ರೋಷಾವಿಷ್ಟರಾದರು.
ಹಸ್ತೈರ್ಹಸ್ತಾಗ್ರಮಪರೇ ಪ್ರತ್ಯಪಿಂಷನ್ ನರಾಧಿಪಾಃ |
ಅಪರೇ ದಶನೈರೋಷ್ಠಾನದಶನ್ ಕ್ರೋಧಮೂರ್ಚ್ಛಿತಾಃ ॥ 26 ॥
ಕೆಲವು ರಾಜರು ಕೈಗಳಿಂದ ಕೈಗಳನ್ನು ಉಜ್ಜಿದರು. ಇನ್ನು ಕೆಲವರು ಕ್ರೋಧ ಮೂರ್ಛಿತರಾಗಿ ಹಲ್ಲುಗಳಿಂದ ತುಟಿಯನ್ನು ಕಚ್ಚಿದರು.
ವ್ಯಾಕ್ಷಿಪನ್ನಾಯುಧಾನನ್ಯೇ ಮಮೃದುಶ್ಚಾಪರೇ ಭುಜಾನ್ |
ಅನ್ಯೇ ಚಾನ್ವಪತನ್ ದ್ರೋಣಂ ತ್ಯಕ್ತಾತ್ಮಾನೋ ಮಹೌಜಸಃ ॥ 27 ॥
ಜೀವದ ಹಂಗನ್ನು ತೊರೆದ ಮಹಾಸಾಮರ್ಥ್ಯವುಳ್ಳ ಕೆಲವರು ದ್ರೋಣರ ಮೇಲೆ ಆಯುಧಗಳನ್ನು ಎಸೆದರು. ಇನ್ನು ಕೆಲವರು ತಮ್ಮ ಭುಜಗಳನ್ನು ತಟ್ಟಿದರು. ಇನ್ನು ಕೆಲವರು ದ್ರೋಣರ ಮೇಲೆ ಎರಗಿದರು.
ಪಾಂಚಾಲಾಸ್ತು ವಿಶೇಷೇಣ ದ್ರೋಣಸಾಯಕಪೀಡಿತಾಃ |
ಸಮಸಜ್ಜಂತ ರಾಜೇಂದ್ರ ಸಮರೇ ಭೃಶವೇದನಾಃ ॥ 28 ॥
ಎಲೈ ರಾಜೇಂದ್ರನೇ, ಪಾಂಚಾಲರಾದರೋ ವಿಶೇಷವಾಗಿ ದ್ರೋಣರ ಬಾಣಗಳಿಂದ ಪೀಡಿತರಾಗಿ ಬಹಳ ವೇದನೆಯನ್ನು ಹೊಂದಿದರೂ ರಣರಂಗದಲ್ಲಿ ದ್ರೋಣರ ಜೊತೆಯಲ್ಲಿ ಸಂಶಕ್ತರಾದರು.
ತತೋ ವಿರಾಟದ್ರುಪದೌ ದ್ರೋಣಂ ಪ್ರತಿಯಯೂ ರಣೇ |
ತಥಾ ಚರಂತಂ ಸಂಗ್ರಾಮೇ ಭೃಶಂ ಸಮರದುರ್ಜಯಮ್ ॥ 29 ॥
ಆಗ ರಣರಂಗದಲ್ಲಿ ಅತ್ಯಂತ ದುರ್ಜಯರಾದ, ಆ ರೀತಿಯಲ್ಲಿ ಸಂಚರಿಸುವ ದ್ರೋಣರ ಕಡೆಗೆ ವಿರಾಟ-ದ್ರುಪದರು ಹೋದರು.
ದ್ರುಪದಸ್ಯ ತತಃ ಪೌತ್ರಾಸ್ತ್ರಯ ಏವ ವಿಶಾಂಪತೇ |
ಚೇದಯಶ್ಚ ಮಹೇಷ್ವಾಸಾ ದ್ರೋಣಮೇವಾಭ್ಯಯುರ್ಯುಧಿ ॥ 30 ॥
ಎಲೈ ರಾಜನೇ, ದ್ರುಪದನ ಮೂರು ಪೌತ್ರರು ಮತ್ತು ಮಹಾಧನುರ್ಧಾರಿಗಳಾದ ಚೇದಿಗಳು ರಣರಂಗದಲ್ಲಿ ದ್ರೋಣರ ಕಡೆಗೇ ಸಾಗಿದರು.
ತೇಷಾಂ ದ್ರುಪದಪೌತ್ರಾಣಾಂ ತ್ರಯಾಣಾಂ ನಿಶಿತೈಃ ಶರೈಃ |
ತ್ರಿಭಿರ್ದ್ರೋಣೋಹರತ್ ಪ್ರಾಣಾಂಸ್ತೇ ಹತಾ ನ್ಯಪತನ್ ಭುವಿ ॥31॥
ದ್ರೋಣರು ಮೂರು ತೀಕ್ಷ್ಣವಾದ ಬಾಣಗಳಿಂದ ಮೂರು ಜನ ದ್ರುಪದ ಪೌತ್ರರ ಪ್ರಾಣಗಳನ್ನು ಅಪಹರಿಸಿದರು. ಅವರು ಹತರಾಗಿ ಭೂಮಿಯ ಮೇಲೆ ಬಿದ್ದರು.
ತತೋ ದ್ರೋಣೋಽಜಯದ್ ಯುದ್ಧೇ ಚೇದಿಕೇಕಯಸೃಂಜಯಾನ್ |
ಮತ್ಸ್ಯಾಂಶ್ಚೈವಾಜಯತ್ ಸರ್ವಾನ್ ಭಾರದ್ವಾಜೋ ಮಹಾರಥಃ ॥32॥
ಅನಂತರ ಮಹಾರಥರೂ, ಭಾರದ್ವಾಜರೂ ಆದ ದ್ರೋಣರು ಯುದ್ಧದಲ್ಲಿ ಚೇದಿ- ಕೇಕಯ-ಸೃಂಜಯರನ್ನು ಮತ್ತು ಎಲ್ಲ ಮತ್ಸ್ಯಯೋಧರನ್ನೂ ಗೆದ್ದರು.
ತತಸ್ತು ದ್ರುಪದಃ ಕ್ರೋಧಾಚ್ಛರವರ್ಷಮವಾಕಿರತ್ |
ದ್ರೋಣಂ ಪ್ರತಿ ಮಹಾರಾಜ ವಿರಾಟಶ್ಚೈವ ಸಂಯುಗೇ ॥ 33 ॥
ಎಲೈ ಮಹಾರಾಜನೇ, ಆಗ ದ್ರುಪದನೂ ಮತ್ತು ವಿರಾಟನೂ ಬಹಳ ಕೋಪಗೊಂಡು ರಣರಂಗದಲ್ಲಿ ಬಾಣಗಳ ಮಳೆಯನ್ನು ಸುರಿಸಿದರು.
ತತೋ ದ್ರೋಣಃ ಸುಪೀತಾಭ್ಯಾಂ ಭಲ್ಲಾಭ್ಯಾಮರಿಮರ್ದನಃ |
ದ್ರುಪದಂ ಚ ವಿರಾಟಂ ಚ ಪ್ರೈಷೀದ್ ವೈವಸ್ವತಕ್ಷಯಮ್ ॥ 34 ॥
ಆಗ ಶತ್ರುಮರ್ದನರಾದ ದ್ರೋಣರು ಚೆನ್ನಾಗಿ ನೀರುಕುಡಿಸಿ ಹದಮಾಡಿದ ಎರಡು ಭಲ್ಲಗಳಿಂದ ದ್ರುಪದನನ್ನು ಮತ್ತು ವಿರಾಟನನ್ನು ಯಮಸದನಕ್ಕೆ ಕಳುಹಿಸಿದರು.
ಹತೇ ವಿರಾಟೇ ದ್ರುಪದೇ ಕೇಕಯೇಷು ತಥೈವ ಚ |
ತಥೈವ ಚೇದಿಮತ್ಸ್ಯೇಷು ಪಾಂಚಾಲೇಷು ತಥೈವ ಚ |
ಹತೇಷು ತ್ರಿಷು ವೀರೇಷು ದ್ರುಪದಸ್ಯ ಚ ನಪ್ತೃಷು ॥ 35 ॥
ದ್ರೋಣಸ್ಯ ಕರ್ಮ ತದ್ ದೃಷ್ಟ್ವಾ ಕೋಪದುಃಖಸಮನ್ವಿತಃ |
ಶಶಾಪ ರಥಿನಾಂ ಮಧ್ಯೇ ಧೃಷ್ಟದ್ಯುಮ್ನೋ ಮಹಾಮನಾಃ ॥ 36 ॥

ವಿರಾಟನೂ, ದ್ರುಪದನೂ ಮತ್ತು ಕೇಕಯರೂ ಕೊಲ್ಲಲ್ಪಡುತ್ತಿರಲು, ಹಾಗೆಯೇ ಚೇದಿಗಳು, ಮತ್ಸ್ಯರು, ಪಾಂಚಾಲರು ಕೊಲ್ಲಲ್ಪಡುತ್ತಿರಲು ಮತ್ತು ವೀರರಾದ ದ್ರುಪದನ ಮೂರು ಪೌತ್ರರು ಕೊಲ್ಲಲ್ಪಡುತ್ತಿರಲು, ದ್ರೋಣರ ಆ ಕಾರ್ಯವನ್ನು ನೋಡಿ ಕೋಪ ಮತ್ತು ದುಃಖದಿಂದ ಕೂಡಿದ ಧೈರ್ಯಶಾಲಿಯಾದ ಧೃಷ್ಟದ್ಯುಮ್ನನು ರಥಿಕರ ಮಧ್ಯದಲ್ಲಿ ಶಪಥಪೂರ್ವಕವಾಗಿ ಶಾಪರೂಪವಾದ ಮಾತನ್ನು ಆಡಿದನು.
ಇಷ್ಟಾಪೂರ್ತಾತ್ತಥಾ ಕ್ಷಾತ್ರಾದ್ ಬ್ರಾಹ್ಮಣ್ಯಾಚ್ಚ ಸ ನಶ್ಯತು |
ದ್ರೋಣೋ ಯಸ್ಯಾದ್ಯ ಮುಚ್ಯೇತ ಯೋ ವಾ ದ್ರೋಣಾತ್ ಪರಾಙ್ಮುಖಃ ||
ಯಾವನು ಈ ದಿನ ದ್ರೋಣರು ತನ್ನಿಂದ ಬಿಡುಗಡೆ ಹೊಂದುವಂತೆ ಮಾಡುತ್ತಾನೆಯೋ ಅಥವಾ ಯಾವನು ದ್ರೋಣರಿಗೆ ವಿಮುಖನಾಗುತ್ತಾನೆಯೋ, ಅಂತಹವನು ತಾನು ಮಾಡಿದ ಇಷ್ಟಾಪೂರ್ತದಿಂದಲೂ, ಕ್ಷತ್ರಿಯ ಮತ್ತು ಬ್ರಾಹ್ಮಣ ಜಾತಿಗಳಿಂದಲೂ ರಹಿತನಾಗಲಿ.
ಇತಿ ತೇಷಾಂ ಪ್ರತಿಶ್ರುತ್ಯ ಮಧ್ಯೇ ಸರ್ವಧನುಷ್ಮತಾಮ್ |
ಆಯಾದ್ ದ್ರೋಣಂ ಸಹಾನೀಕಃ ಪಾಂಚಾಲ್ಯಃ ಪರವೀರಹಾ |
ಪಾಂಚಾಲಾಸ್ತ್ವೇಕತೋ ದ್ರೋಣಮಭ್ಯಘ್ನನ್ ಪಾಂಡವಾನ್ಯತಃ || 38 ||
ಹೀಗೆ ಪರವೀರಘಾತಕನಾದ ಪಾಂಚಾಲನು ಎಲ್ಲ ಧನುರ್ಧಾರಿಗಳ ಮಧ್ಯದಲ್ಲಿ ಶಪಥವನ್ನು ಮಾಡಿ, ದ್ರೋಣರ ಬಳಿಗೆ ಬಂದನು. ಪಾಂಚಾಲರು ಒಂದು ಕಡೆಯಿಂದಲೂ, ಪಾಂಡವ ಸೇನೆಗಳು ಇನ್ನೊಂದು ಕಡೆಯಿಂದಲೂ ದ್ರೋಣರನ್ನು ಹೊಡೆದವು.
ದುರ್ಯೋಧನಶ್ಚ ಕರ್ಣಶ್ಚ ಶಕುನಿಶ್ಚಾಪಿ ಸೌಬಲಃ |
ಸೋದರ್ಯಾಶ್ಚ ಯಥಾ ಮುಖ್ಯಾಸ್ತೇಽರಕ್ಷನ್ ದ್ರೋಣಮಾಹವೇ ||
ದುರ್ಯೋಧನ, ಕರ್ಣ, ಸೌಬಲನಾದ ಶಕುನಿ ಮತ್ತು ಮುಖ್ಯರಾದ ದುರ್ಯೋಧನ ಸಹೋದರರು ರಣರಂಗದಲ್ಲಿ ದ್ರೋಣರನ್ನು ರಕ್ಷಿಸಿದರು.
ರಕ್ಷ್ಯಮಾಣಂ ತಥಾ ದ್ರೋಣಂ ಸಮರೇ ತೈರ್ಮಹಾತ್ಮಭಿಃ |
ಯತಮಾನಾಪಿ ಪಾಂಚಾಲಾ ನ ಶೇಕುಃ ಪ್ರತಿವೀಕ್ಷಿತುಮ್ || 40 ||
ರಣರಂಗದಲ್ಲಿ ಆ ಮಹಾತ್ಮರಿಂದ ದ್ರೋಣರು ಆ ರೀತಿಯಲ್ಲಿ ರಕ್ಷಿಸಲ್ಪಡುತ್ತಿರಲು ಪಾಂಚಾಲರು ಪ್ರಯತ್ನಪಟ್ಟರೂ ಅವರನ್ನು ಪ್ರತಿಯಾಗಿ ನೋಡಲು ಸಾಧ್ಯವಾಗಲಿಲ್ಲ.
ತತ್ರಾಕ್ರುಧ್ಯದ್ ಭೀಮಸೇನೋ ಧೃಷ್ಟದ್ಯುಮ್ನಸ್ಯ ಮಾರಿಷ |
ಸ ಏನಂ ವಾಗ್ಭಿರುಗ್ರಾಭಿಸ್ತತಕ್ಷ ಪುರುಷರ್ಷಭಮ್ || 41 ||
ಆಗ ಎಲೈ ಶ್ರೇಷ್ಠನೇ, ಭೀಮಸೇನನು ಧೃಷ್ಟದ್ಯುಮ್ನನ ಮೇಲೆ ಕೋಪಗೊಂಡನು. ಅವನು ಪುರುಷಶ್ರೇಷ್ಠನಾದ ಧೃಷ್ಟದ್ಯುಮ್ನನನ್ನು ಉಗ್ರವಾದ ಮಾತುಗಳಿಂದ ಗಾಯಗೊಳಿಸಿದನು.
ದ್ರುಪದಸ್ಯ ಕುಲೇ ಜಾತಃ ಸರ್ವಾಸ್ತ್ರೇಷ್ವಸ್ತ್ರವಿತ್ತಮಃ |
ಕಃ ಕ್ಷತ್ರಿಯೋ ಮನ್ಯಮಾನಃ ಪ್ರೇಕ್ಷೇತಾರಿಮವಸ್ಥಿತಮ್ || 42 ||
ದ್ರುಪದನ ಕುಲದಲ್ಲಿ ಜನಿಸಿ, ಎಲ್ಲ ಅಸ್ತ್ರವೇತ್ತರಲ್ಲೂ ಶ್ರೇಷ್ಠನಾದ ತನ್ನನ್ನು ಕ್ಷತ್ರಿಯನೆಂದು ತಿಳಿಯುವ ಯಾವನು ತಾನೇ ಯುದ್ಧದಲ್ಲಿ ಶತ್ರುವನ್ನು ನೋಡಿಕೊಂಡು ಸುಮ್ಮನಿರುತ್ತಾನೆ?
ಪಿತೃಪುತ್ರವಧಂ ಪ್ರಾಪ್ಯ ಪುಮಾನ್ ಕಃ ಪರಿಹಾಪಯೇತ್ |
ವಿಶೇಷತಸ್ತು ಶಪಥಂ ಶಪಿತ್ವಾ ರಾಜಸಂಸದಿ || 43 ||
ಪಿತೃ-ಪುತ್ರ ವಧೆಯನ್ನು ಹೊಂದಿ ರಾಜಸಭೆಯಲ್ಲಿ ವಿಶೇಷವಾಗಿ ಶಪಥ ಪೂರ್ವಕ ಶಾಪವನ್ನು ನೀಡಿದ ಯಾವನು ತಾನೇ ಹೀಗೆ ನಿರೀಕ್ಷಿಸಿಕೊಂಡಿರುತ್ತಾನೆ? (ಅಥವಾ ತನ್ನ ಪ್ರತಿಜ್ಞೆಯನ್ನು ಕಳೆದುಕೊಳ್ಳುತ್ತಾನೆ).
ಏಷ ವೈಶ್ವಾನರ ಇವ ಸಮಿದ್ಧಃ ಸ್ವೇನ ತೇಜಸಾ |
ಶರಚಾಪೇಂಧನೋ ದ್ರೋಣಃ ಕ್ಷತ್ರಂ ದಹತಿ ತೇಜಸಾ || 44 ||
ಈ ದ್ರೋಣರು ತನ್ನ ತೇಜಸ್ಸಿನಿಂದ ಚೆನ್ನಾಗಿ ಜ್ವಲಿಸುವ ಅಗ್ನಿಯಂತೆ ಬಿಲ್ಲು-ಬಾಣ ರೂಪವಾದ ಇಂಧನವನ್ನು ಹೊಂದಿ ಕ್ಷತ್ರಿಯರನ್ನು ತಮ್ಮ ತೇಜಸ್ಸಿನಿಂದ ದಹಿಸುತ್ತಿದ್ದಾರೆ.
ಪುರಾ ಕರೋತಿ ನಿಃಶೇಷಾಂ ಪಾಂಡವಾನಾಮನೀಕಿನೀಮ್ |
ಸ್ಥಿತಾಃ ಪಶ್ಯತ ಮೇ ಕರ್ಮ ದ್ರೋಣಮೇವ ವ್ರಜಾಮ್ಯಹಮ್ || 45 ||
ಅವರು ಪಾಂಡವರ ಸೈನ್ಯವನ್ನು ನಿಃಶೇಷಗೊಳಿಸುವುದಕ್ಕಿಂತ ಮೊದಲೇ ನಾನು ದ್ರೋಣರ ಮೇಲೆ ಎರಗುತ್ತೇನೆ. ನೀನು ನಿಂತು ನನ್ನ ಕಾರ್ಯವನ್ನು ನೋಡು (ಎಂದು ಹೇಳಿದನು).
ಸಂಜಯಃ
ಇತ್ಯುಕ್ತ್ವಾ ಪ್ರಾವಿಶತ್ ಕ್ರುದ್ಧೋ ದ್ರೋಣಾನೀಕಂ ವೃಕೋದರಃ |
ದೃಢೈಃ ಪೂರ್ಣಾಯತೋತ್ಸೃಷ್ಟೈರ್ದ್ರಾವಯಂಸ್ತವ ವಾಹಿನೀಮ್ ||
ಸಂಜಯ ಹೀಗೆ ಹೇಳಿ ವೃಕೋದರನು ಕೋಪಗೊಂಡು ದೃಢವಾದ ಮತ್ತು ಪೂರ್ಣವಾಗಿ ಎಳೆದು ಪ್ರಯೋಗಿಸಿದ ಬಾಣಗಳಿಂದ ಶತ್ರುಸೈನ್ಯವನ್ನು ಎದುರಿಸುತ್ತಾ ದ್ರೋಣರ ಸೈನ್ಯವನ್ನು ಪ್ರವೇಶಿಸಿದನು.
ಧೃಷ್ಟದ್ಯುಮ್ನೋಽಪಿ ಪಾಂಚಾಲ್ಯಃ ಪ್ರವಿಶ್ಯ ಮಹತೀಂ ಚಮೂಮ್ |
ಆಸಸಾದ ರಣೇ ದ್ರೋಣಂ ತದಾಸೀತ್ ತುಮುಲಂ ಮಹತ್ || 47 ||
ಪಾಂಚಾಲದೇಶದ ಧೃಷ್ಟದ್ಯುಮ್ನನೂ ಸಹ ಕೌರವರ ದೊಡ್ಡ ಸೈನ್ಯವನ್ನು ಪ್ರವೇಶಿಸಿ ರಣರಂಗದಲ್ಲಿ ದ್ರೋಣರನ್ನು ಸಮೀಪಿಸಿದನು.

ಆಗ ತೀವ್ರವಾದ ಯುದ್ಧವು ನಡೆಯಿತು.
ನೈವ ನಸ್ತಾದೃಶಂ ಯುದ್ಧಂ ದೃಷ್ಟಪೂರ್ವಂ ನ ಚ ಶ್ರುತಮ್ |
ಯಥಾ ಸೂರ್ಯೋದಯೇ ರಾಜನ್ ಸಮುತ್ಪಿಂಜೋಽಭವತ್ ಮಹಾನ್ ||
ಅಂತಹ ಯುದ್ಧವನ್ನು ನಾವು ಕೇಳಿರಲಿಲ್ಲ, ನೋಡಿರಲಿಲ್ಲ. ಎಲೈ ರಾಜನೇ, ಆಗ ಸೂರ್ಯೋದಯ ಸಮಯದಲ್ಲಿ ಪಶು-ಪಕ್ಷಿಗಳ ಮತ್ತು ಯೋಧರ ದೊಡ್ಡ ಕೋಲಾಹಲ ಶಬ್ದವುಂಟಾಯಿತು.
ಸಂಸಕ್ತಾನಿ ವ್ಯದೃಶ್ಯಂತ ರಥವೃಂದಾನಿ ಮಾರಿಷ |
ಹತಾನಿ ಚ ವಿಕೀರ್ಣಾನಿ ಶರೀರಾಣಿ ಶರೀರಿಣಾಮ್ || 49 ||
ಎಲೈ ಶ್ರೇಷ್ಠನೇ, ರಥಸಮೂಹಗಳು ಒಂದಕ್ಕೊಂದು ಸೇರಿಕೊಂಡಂತೆ ಕಂಡುಬಂದವು. ಯೋಧರ ಚೆಲ್ಲಾಡಿದ ಮೃತಶರೀರಗಳೂ ಸಹ ಪರಸ್ಪರವಾಗಿ ಸೇರಿಕೊಂಡಿರುವಂತೆ ಕಂಡುಬದವು.
ಕೇಚಿದನ್ಯತ್ರ ಗಚ್ಛಂತಃ ಪಥಿ ಚಾನ್ಯೈರುಪದ್ರುತಾಃ |
ವಿಮುಖಾಃ ಪೃಷ್ಠತಶ್ಚಾನ್ಯೇ ತಾಡ್ಯಂತೇ ಪಾರ್ಶ್ವತೋಽಪರೇ || 50 ||
ಬೇರೆ ಕಡೆಗೆ ಹೋಗುವ ಕೆಲವು ಯೋಧರು ಮಾರ್ಗದಲ್ಲಿ ಬೇರೆಯವರಿಂದ ಹಿಂಸಿಸಲ್ಪಟ್ಟರು. ಯುದ್ಧದಿಂದ ವಿಮುಖರಾಗಿ ಹೋಗುವವರು ಹಿಂಭಾಗದಿಂದಲೂ, ಪಾರ್ಶ್ವಗಳಿಂದಲೂ ಹೊಡೆಯಲ್ಪಟ್ಟರು.
ತಥಾ ಸಂಸಕ್ತಯುದ್ಧಂ ತದಭವದ್ ಭೃಶದಾರುಣಮ್ |
ಅಥ ಸಂಧ್ಯಾಗತಃ ಸೂರ್ಯಃ ಕ್ಷಣೇನ ಸಮಪದ್ಯತ || 51 ||
ಹಾಗೆ ಪರಸ್ಪರವಾಗಿ ಸಂಕುಲಯುದ್ಧವು ತೀವ್ರವಾಗಿ, ದಾರುಣವಾಗಿ ನಡೆಯಿತು. ಆಗ ಸ್ವಲ್ಪ ಸಮಯದಲ್ಲಿ ಸೂರ್ಯನು ಸಂಧ್ಯಾಕಾಲಗತನಾದನು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ದ್ವಿಸಪ್ತತ್ಯಧಿಕಶತತಮೋಧ್ಯಾಯಃ ||
|| ದ್ರೋಣವಧಪರ್ವಣಿ ಸಪ್ತಮೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ಮೂರನೆಯ ಅಧ್ಯಾಯ
ಹದಿನೈದನೆಯ ದಿವಸದ ಯುದ್ಧದ ಪ್ರಾರಂಭ.
ಸಂಕುಲ ಯುದ್ಧದಲ್ಲಿ ನಕುಲನಿಂದ ದುರ್ಯೋಧನನ ಪರಾಜಯ.
ಸಂಜಯಃ
ತೇ ತಥೈವ ಮಹಾರಾಜ ದಂಸಿತಾ ರಣಮೂರ್ಧನಿ |
ಸಂಧ್ಯಾಗತಂ ಸಹಸ್ರಾಂಶುಮಾದಿತ್ಯಮುಪತಸ್ಥಿರೇ || 1 ||
ಸಂಜಯ ಎಲೈ ಮಹಾರಾಜನೇ, ಅವರು ರಣರಂಗದಲ್ಲಿ ಹಾಗೆಯೇ ಕವಚಗಳನ್ನು ಧರಿಸಿ, ಸಂಧ್ಯಾಗತನಾದ ಸಹಸ್ರಾಂಶುವಾದ ಸೂರ್ಯನ ಉಪಸ್ಥಾನವನ್ನು ಮಾಡಿದರು.
ಉದಿತೇ ತು ಸಹಸ್ರಾಂಶೌ ತಪ್ತಕಾಂಚನಸಪ್ರಭೇ |
ಪ್ರಕಾಶಿತೇಷು ಲೋಕೇಷು ಪುನರ್ಯುದ್ಧಮವರ್ತತ || 2 ||
ತಪ್ತಕಾಂಚನ ಕಾಂತಿಯುಳ್ಳ ಸಹಸ್ರಾಂಶುವು ಉದಯಿಸಿ ಲೋಕವು ಪ್ರಕಾಶಗೊಂಡಿರಲು ಪುನಃ ಯುದ್ಧವು ಜರುಗಿತು.
ದ್ವಂದ್ವಾನಿ ಯಾನಿ ತತ್ರಾಸನ್ ಸಂಸಕ್ತಾನಿ ಪುರೋದಯಾತ್ |
ತಾನ್ಯೇವಾಭ್ಯುದಿತೇ ಸೂರ್ಯೇ ಸಮಸಜ್ಜಂತ ಭಾರತ || 3 ||
ಎಲೈ ಭಾರತನೇ, ಸೂರ್ಯೋದಯಕ್ಕಿಂತ ಮೊದಲೇ ಯಾರು-ಯಾರಿಗೆ ದ್ವಂದ್ವ ಯುದ್ಧವು ನಡೆಯುತ್ತಿದ್ದವೋ ಸೂರ್ಯೋದಯವಾದ ಮೇಲೆ ಅವೇ ಮುಂದುವರೆದವು.
ರಥೈರ್ಹಯಾ ಹಯೈರ್ನಾಗಾಃ ಪಾದಾತಾಶ್ಚಾಪಿ ಕುಂಜರೈಃ |
ಹಯಾ ಹಯೈಃ ಸಮಾಜಗ್ಮುಃ ಪಾದಾತಾಶ್ಚ ಪದಾತಿಭಿಃ |
ಸಂಸಕ್ತಾಶ್ಚ ವಿಯುಕ್ತಾಶ್ಚ ಯೋಧಾಃ ಸನ್ನ್ಯಪತನ್ ರಣೇ || 4 ||
ರಥಗಳ ಜೊತೆಯಲ್ಲಿ ಅಶ್ವಗಳು, ಅಶ್ವಗಳ ಜೊತೆಯಲ್ಲಿ ಗಜಗಳು, ಗಜಗಳ ಜೊತೆಯಲ್ಲಿ ಪದಾತಿಗಳು, ಅಶ್ವಗಳ ಜೊತೆಯಲ್ಲಿ ಅಶ್ವಗಳು, ಪದಾತಿಗಳ ಜೊತೆಯಲ್ಲಿ ಪದಾತಿಗಳು ಸಮೀಪಿಸಿ ಸಂಯುಕ್ತರಾಗಿ, ಪುನಃ ವಿಯುಕ್ತರಾಗಿ ಯೋಧರು ರಣರಂಗದಲ್ಲಿ ಯುದ್ಧವನ್ನು ಮಾಡಿದರು.
ತೇ ರಾತ್ರೌ ಕೃತಕರ್ಮಾಣಃ ಶ್ರಾಂತಾಃ ಸೂರ್ಯಸ್ಯ ತೇಜಸಾ |
ಕ್ಷುತ್ಪಿಪಾಸಾಪರೀತಾಂಗಾ ವಿಸಂಜ್ಞಾ ಬಹವೋಽಭವನ್ || 5 ||
ರಾತ್ರಿಯೆಲ್ಲಾ ಯುದ್ಧಕರ್ಮವನ್ನು ಮಾಡಿ ಬಳಲಿ ಸೂರ್ಯನ ತೇಜಸ್ಸಿನಿಂದ ಬಳಲಿದ ಆ ಯೋಧರಲ್ಲಿ ಅನೇಕರು ಹಸಿವು-ನೀರಡಿಕೆಗಳಿಂದ ಬಳಲಿ ಮೂರ್ಛೆಯನ್ನು ಹೊಂದಿದರು.
ಶಂಖಭೇರೀಮೃದಂಗಾನಾಂ ಕುಂಜರಾಣಾಂ ಚ ಗರ್ಜತಾಮ್ |
ವಿಸ್ಫಾರಿತವಿಕೃಷ್ಟಾನಾಂ ಕಾರ್ಮುಕಾಣಾಂ ಚ ಕೂಜತಾಮ್ || 6 ||

ಶಬ್ದಃ ಸಮಭವದ್ ರಾಜನ್ ದಿವಿಸ್ಪೃಗ್ ಭರತರ್ಷಭ |
ಶಂಖ-ಭೇರೀ-ಮೃದಂಗಗಳ, ಗರ್ಜಿಸುವ ಗಜಗಳ, ಎಳೆದು ಹಿಂದಕ್ಕೆ ಬಿಡುವ ಧನುಸ್ಸುಗಳ ಶಬ್ದವು ಎಲ್ಲೆ ರಾಜನೇ, ಭರತರ್ಷಭನೇ, ಆಕಾಶವನ್ನು ಮುಟ್ಟಿತು.
ದ್ರವತಾಂ ಚ ಪದಾತೀನಾಂ ಶಸತತ್ರಣಾಂ ವಿನಿಪಾತ್ಯತಾಮ್ ॥ 7 ॥
ಹಯಾನಾಂ ಹೇಷತಾಂ ಚೈವ ರಥಾನಾಂ ಚ ನಿವರ್ತತಾಮ್ |
ಕ್ರೋಶತಾಂ ಗರ್ಜತಾಂ ಚೈವ ತದಾಸೀತ್ ತುಮುಲಂ ಮಹತ್ ॥ 8 ॥
ಓಡುವ ಪದಾತಿಗಳ, ಹೊಡೆಯಲ್ಪಡುವ ಶಸ್ತ್ರಗಳ, ಹೇಷಾರವವನ್ನು ಮಾಡುವ ಅಶ್ವಗಳ, ತಿರುಗುವ ರಥಗಳ, ಕಿರುಚುವ ಮತ್ತು ಗರ್ಜಿಸುವ ಯೋಧರ ಶಬ್ದಗಳು ಆಗ ಬಹಳ ತೀವ್ರವಾಗಿದ್ದವು.
ವಿವೃದ್ಧಸ್ತುಮುಲಃ ಶಬ್ದೋ ದ್ಯಾಮಗಚ್ಛನ್ಮಹಾಸ್ವನಃ |
ನಾನಾಯುಧನಿಕೃತ್ತಾನಾಂ ಚೇಷ್ಟತಾಮಾತುರಃ ಸ್ವನಃ ॥ 9 ॥
ಭೂಮಾವಶ್ರೂಯತ ಮಹಾಂಸ್ತದಾಸೀತ್ ಕೃಪಣಂ ಮಹತ್ |
ಪತತಾಂ ಪತಿತಾನಾಂ ಚ ಪತ್ತ್ಯಶ್ವರಥಹಸ್ತಿನಾಮ್ ॥ 10 ॥
ದೊಡ್ಡದಾಗಿ ಬೆಳೆದ ಆ ತೀವ್ರವಾದ ಶಬ್ದವು ಆಕಾಶವನ್ನು ಮುಟ್ಟಿತು. ನಾನಾ ವಿಧವಾದ ಆಯುಧಗಳಿಂದ ಕತ್ತರಿಸಲ್ಪಟ್ಟು ಹೊರಳಾಡುವ ವೇದನೆಯ ಮಹಾಧ್ವನಿಯು ಭೂಮಿಯಲ್ಲಿ ಕೇಳಿಬಂದಿತು. ಕೆಳಗೆ ಬಿದ್ದ ಮತ್ತು ಬೀಳುತ್ತಿದ್ದ ಪದಾತಿ-ಅಶ್ವ-ರಥ-ಗಜಗಳ ಕರುಣಾಜನಕವಾದ ದೊಡ್ಡ ಶಬ್ದವೂ ಕೇಳಿಬಂದಿತು.
ತೇಷು ಸರ್ವೇಷ್ವನೀಕೇಷು ವ್ಯತಿಷಕ್ತೇಷ್ವನೇಕಶಃ |
ಸ್ವೇ ಸ್ವಾನ್ಜಘ್ನುಃ ಪರೇ ಸ್ವಾಂಶ್ಚ ಸ್ವೇ ಪರಾಂಶ್ಚ ಪರಾನ್ ಪರೇ ॥ 11 |
ಆ ಎಲ್ಲ ಸೈನ್ಯಗಳು ಪರಸ್ಪರವಾಗಿ ಸಂಸಕ್ತವಾದಾಗ ತಮ್ಮವರು ತಮ್ಮವರನ್ನೂ ಮತ್ತು ಶತ್ರುಗಳನ್ನೂ, ಪರರು ತಮ್ಮವರನ್ನೂ ಮತ್ತು ಶತ್ರುಗಳನ್ನೂ ಕೊಂದರು.
ವೀರಬಾಹುವಿಸೃಷ್ಟಾಶ್ಚ ಯೋಧೇಷು ಚ ಗಜೇಷು ಚ |
ಅಸಯಃ ಪ್ರತ್ಯದೃಶ್ಯಂತ ವಿದ್ಯುತಃ ಪ್ರಾವೃಷೀವ ಹಿ ॥ 12 ॥
ವೀರರ ಬಾಹುಗಳಿಂದ ಯೋಧರ ಮೇಲೆಯೂ ಮತ್ತು ಗಜಗಳ ಮೇಲೆಯೂ ಎಸೆಯಲ್ಪಟ್ಟ ಖಡ್ಗಗಳು ಮಳೆಗಾಲದ ಮಿಂಚುಗಳಂತೆ ತೋರಿಬಂದವು.
ಉದ್ಯತಪ್ರತಿಪಿಷ್ಟಾನಾಂ ಖಡ್ಗಾನಾಂ ವೀರಬಾಹುಭಿಃ |
ಸ ಏವ ಶಬ್ದಸ್ತದ್ರೂಪೋ ವಾಸಸಾಂ ನಿಜ್ಯತಾಮಿವ ॥ 13 ॥
ಎತ್ತಿದ ಖಡ್ಗಗಳು ವೀರರ ಬಾಹುಗಳಿಂದ, ಖಡ್ಗಗಳಿಂದ ಪುಡಿಮಾಡಲ್ಪಟ್ಟು ಅದೇ ವಸ್ತ್ರಗಳು ಒಗೆಯುವ ಶಬ್ದದಂತೆಯೇ ಕೇಳಿಬಂದವು.
ಅರ್ಧಾಸಿಭಿಸ್ತಥಾ ಖಡ್ಗೈಸ್ತೋಮರೈಃ ಸಪರಶ್ವಧೈಃ |
ನಿಕೃಷ್ಟಯುದ್ಧಂ ಸಂಸಕ್ತಂ ಮಹದಾಸೀತ್ ಸುದಾರುಣಮ್ ॥ 14 ॥
ಅರ್ಧಖಡ್ಗಗಳಿಂದಲೂ, ತೋಮರಗಳಿಂದಲೂ, ಪರಶ್ವಧಗಳಿಂದಲೂ ಸಂಸಕ್ತವಾಗಿ ಮಾಡಿದ ಯುದ್ಧವು ಬಹಳ ದಾರುಣವಾಗಿದ್ದಿತು.
ಗಜಾಶ್ವಕಾಯಪ್ರಭವಾಂ ನರದೇಹಪ್ರವಾಹಿನೀಮ್ |
ಶಸ್ತ್ರಮತ್ಸ್ಯಸುಸಂಪೂರ್ಣಾಂ ಮಾಂಸಶೋಣಿತಕರ್ದಮಾಮ್ ॥ 15 ॥
ಆರ್ತನಾದಸ್ವನವತೀಂ ಪತಾಕಾವಸ್ತ್ರಫೇನಿಲಾಮ್ |
ನದೀಂ ಪ್ರಾವರ್ತಯನ್ ವೀರಾಃ ಪರಲೋಕಪ್ರವಾಹಿನೀಮ್ ॥ 16 ॥
ಗಜಾಶ್ವ ಶರೀರಗಳಿಂದ ಉಂಟಾದ, ಸೈನಿಕರ ದೇಹಗಳನ್ನು ಕೊಚ್ಚಿಕೊಂಡು ಹೋಗುವ, ಶಸ್ತ್ರಗಳೆಂಬ ಮತ್ಸ್ಯಗಳಿಂದ ಪೂರ್ಣವಾದ, ಮಾಂಸ-ರಕ್ತವೆಂಬ ಕೆಸರಿನಿಂದ ಕೂಡಿದ, ಆರ್ತನಾದರೂಪವಾದ ಶಬ್ದವುಳ್ಳ, ಪತಾಕೆಗಳು ಮತ್ತು ವಸ್ತ್ರಗಳೆಂಬ ನೊರೆಗಳಿಂದ ಕೂಡಿದ, ಪರಲೋಕದ ಕಡೆಗೆ ಸೆಳೆದುಕೊಂಡು ಹೋಗುವ ನದಿಯನ್ನು ವೀರರು ಪ್ರವರ್ತಿಸಿದರು.
ಶರಶಕ್ತ್ಯರ್ದಿತಾಃ ಕ್ಲಾಂತಾ ರಾತ್ರಿಮೂಢಾಲ್ಪಚೇತಸಃ |
ವಿಷ್ಟಭ್ಯ ಸರ್ವಗಾತ್ರಾಣಿ ವ್ಯತಿಷ್ಠನ್ ಗಜವಾಜಿನಃ |
ಸಂಶುಷ್ಕವದನಾ ವೀರಾಃ ಶಿರೋಭಿಶ್ಚಾರುಕುಂಡಲೈಃ ॥ 17 ॥
ಶರ-ಶಕ್ತಿಗಳಿಂದ ಪೀಡಿತರಾಗಿ ದಣಿದು, ರಾತ್ರಿಯುದ್ಧದಿಂದ ಮೂಢರಾಗಿ ಅಲ್ಪ ಪ್ರಜ್ಞೆಯುಳ್ಳ ಅಶ್ವ-ಗಜಗಳು ತಮ್ಮ ಶರೀರವನ್ನು ಗಟ್ಟಿಮಾಡಿಕೊಂಡು ರಣರಂಗದಲ್ಲಿ ನಿಂತವು. ವೀರರೂ ಸಹ ಒಣಗಿದ ಮುಖವುಳ್ಳವರಾಗಿ ಒಳ್ಳೆಯ ಕುಂಡಲಗಳನ್ನು ಧರಿಸಿದ ಶಿರಸ್ಸುಗಳನ್ನು ಹೊಂದಿ ತಮ್ಮ ದೇಹವನ್ನು ಸ್ತಂಭಿಸಿ ನಿಂತರು.
ಯುದ್ಧೋಪಕರಣೈಶ್ಚಾನ್ಯೈಸ್ತತ್ರ ತತ್ರ ಪ್ರಕಾಶಿತೈಃ |
ಕ್ರವ್ಯಾದಸಂಘೈರಾಕೀರ್ಣಂ ಮೃತೈರರ್ಧಮೃತೈರಪಿ |
ನಾಸೀದ್ ರಥಪಥಸ್ತತ್ರ ಸರ್ವಮಾಯೋಧನಂ ಪ್ರತಿ ॥ 18 ॥
ಯುದ್ಧೋಪಕರಣಗಳಿಂದಲೂ, ಅಲ್ಲಲ್ಲಿ ಪ್ರಕಾಶಿತವಾದ ಮಾಂಸಾಹಾರಿ ಪಶು-ಪಕ್ಷಿಗಳ ಸಮೂಹದಿಂದಲೂ, ಮೃತರೂ-ಅರ್ಧಮೃತರೂ ಆದ ಯೋಧರಿಂದಲೂ, ನಿಬಿಡವಾದ ಆ ರಣರಂಗದಲ್ಲಿ ಎಲ್ಲಿಯೂ ರಥದ ಗಮನಕ್ಕೆ ಯೋಗ್ಯವಾದ ಮಾರ್ಗವಿರಲಿಲ್ಲ.
ಮಜ್ಜತ್ಸು ಚಕ್ರೇಷು ರಥಾನ್ ಸತ್ತ್ವಮಾಸ್ಥಾಯ ವಾಜಿನಃ |

ಕಥಂಚಿದವಹನ್ ಶ್ರಾಂತಾ ವೇಪಮಾನಾಃ ಶರಾರ್ದಿತಾಃ |
ಕುಲಸತ್ತ್ವಬಲೋಪೇತಾ ವಾಜಿನೋ ವಾರಣೋಪಮಾಃ ॥ 19 ॥
ರಥದ ಚಕ್ರಗಳು ಹೂತುಹೋಗುತ್ತಿರಲು ಕುಲ-ಸತ್ತ್ವ-ಬಲಗಳಿಂದ ಕೂಡಿದ ಗಜಗಳಂತಿದ್ದ ಅಶ್ವಗಳೂ ಸಹ ಧೈರ್ಯವನ್ನು ಹೊಂದಿ, ಬಳಲಿ, ಬಾಣಗಳಿಂದ ಪೀಡಿತಗಳಾಗಿ ನಡುಗುತ್ತಾ ರಥಗಳನ್ನು ಹೇಗೋ ಮುಂದೆ ಎಳೆದವು.
ವಿಹ್ವಲಂ ತತ್ ಸಮುಂದ್ಭ್ರಾಂತಂ ಸಭಯಂ ಭಾರತಾತುರಮ್ |
ಬಲಮಾಸೀತ್ ತದಾ ಸರ್ವಮೃತೇ ದ್ರೋಣಾರ್ಜುನಾವುಭೌ ॥ 20 ॥
ಎಲೈ ಭಾರತನೇ, ಆಗ ವಿಹ್ವಲವೂ, ದಿಗ್ಭ್ರಾಂತವೂ, ಭಯದಿಂದ ಕೂಡಿದುದೂ ಆದ ಸೈನ್ಯವೆಲ್ಲವೂ ದ್ರೋಣಾರ್ಜುನ ಇಬ್ಬರನ್ನು ಬಿಟ್ಟು ರೋಗಗ್ರಸ್ತವಾದಂತೆ ಆಯಿತು.
ತಾವೇವಾಸ್ತಾಂ ನಿಲಯನಂ ತಾವಾರ್ತಾಯನಮೇವ ಚ |
ತಾವೇವಾನ್ಯೇ ಸಮಾಸಾದ್ಯ ಜಗ್ಮುರ್ವೈವಸ್ವತಕ್ಷಯಮ್ ॥ 21 ॥
ಅವರಿಬ್ಬರೇ ಎಲ್ಲರೂ ಅಡಗುವ ತಾಣಗಳಾದರು. ಸತ್ಯವಾದ ಆಶ್ರಯರಾದರು. ಇನ್ನು ಕೆಲವರು ಅವರಿಬ್ಬರನ್ನು ಸಮೀಪಿಸಿ ಯಮಸದನಕ್ಕೆ ಹೋದರು.
ಆವಿಗ್ನಮಭವತ್ ಸರ್ವಂ ಕೌರವಾಣಾಂ ಮಹದ್ಬಲಮ್ |
ಪಾಂಚಾಲಾನಾಂ ಚ ಸಂಸಕ್ತಂ ನ ಪ್ರಾಜ್ಞಾಯತ ಕಿಂಚನ ॥ 22 ॥
ಪಾಂಚಾಲರಿಂದ ಸಂಸಕ್ತವಾದ ಕೌರವರ ದೊಡ್ಡ ಸೈನ್ಯವೆಲ್ಲವೂ ದುಃಖಭರಿತವಾಯಿತು. ಯಾವುದೂ ಕಾಣಲಿಲ್ಲ.
ಅಂತಕಾಕ್ರೀಡಸದೃಶೇ ಭೀರೂಣಾಂ ಭಯವರ್ಧನೇ |
ಪೃಥಿವ್ಯಾಂ ರಾಜವಂಶಾನಾಮುತ್ಥಿತೇ ಮಹತಿ ಕ್ಷಯೇ ॥ 23 ॥
ನ ತತ್ರ ಕರ್ಣಂ ನ ದ್ರೋಣಂ ನಾರ್ಜುನಂ ನ ಯುಧಿಷ್ಠಿರಮ್ |
ನ ಭೀಮಸೇನಂ ನ ಯಮೌ ನ ಪಾಂಚಾಲ್ಯಂ ನ ಸಾತ್ಯಕಿಮ್ ॥ 24 ॥
ನ ಚ ದುಃಶಾಸನಂ ದ್ರೌಣಿಂ ನ ದುರ್ಯೋಧನಸೌಬಲೌ |
ನ ಕೃಪಂ ಮದ್ರರಾಜಂ ವಾ ಕೃತವರ್ಮಾಣಮೇವ ಚ ॥ 25 ॥
ನ ಚಾನ್ಯಾನ್ನೈವ ಚಾತ್ಮಾನಂ ನ ಕ್ಷಿತಿಂ ನ ದಿಶಸ್ತಥಾ |
ಪಶ್ಯಾಮ ರಾಜನ್ ಸಂಸಕ್ತಾನ್ ಸೈನ್ಯೇನ ರಜಸಾವೃತಾನ್ ॥ 26 ॥
ಯಮನ ಕ್ರೀಡಾಂಗಣ ಸದೃಶವಾದ, ಹೇಡಿಗಳಿಗೆ ಭಯವನ್ನು ಹೆಚ್ಚಿಸುವ, ದೊಡ್ಡ ಕ್ಷಯವು ಭೂಮಿಯಲ್ಲಿರುವ ರಾಜವಂಶಕ್ಕೆ ಉಂಟಾಗುತ್ತಿರಲು ಅಲ್ಲಿ ಕರ್ಣನನ್ನಾಗಲೀ, ದ್ರೋಣರನ್ನಾಗಲೀ, ಅರ್ಜುನನನ್ನಾಗಲೀ, ಯುಧಿಷ್ಠಿರನನ್ನಾಗಲೀ, ಭೀಮನನ್ನಾಗಲೀ, ನಕುಲ-ಸಹದೇವರನ್ನಾಗಲೀ, ಧೃಷ್ಟದ್ಯುಮ್ನನನ್ನಾಗಲೀ, ಸಾತ್ಯಕಿಯನ್ನಾಗಲೀ, ದುಶ್ಶಾಸನನನ್ನಾಗಲೀ, ಅಶ್ವತ್ಥಾಮರನ್ನಾಗಲೀ, ದುರ್ಯೋಧನ-ಶಕುನಿಗಳನ್ನಾಗಲೀ, ಕೃಪರನ್ನಾಗಲೀ, ಶಲ್ಯನನ್ನಾಗಲೀ, ಕೃತವರ್ಮನನ್ನಾಗಲೀ, ಬೇರೆಯವರನ್ನಾಗಲೀ, ನಮ್ಮನ್ನೇ ಆಗಲೀ, ಭೂಮಿಯನ್ನಾಗಲೀ, ದಿಕ್ಕುಗಳನ್ನಾಗಲೀ ನಾವು ಕಾಣಲಿಲ್ಲ. ಎಲೈ ರಾಜನೇ, ಎಲ್ಲರೂ ಸೈನ್ಯದಿಂದ ಎದ್ದ ಧೂಳಿನಿಂದ ಆವೃತರಾಗಿ ಪರಸ್ಪರವಾಗಿ ಸಂಸಕ್ತರಾಗಿದ್ದರು.
ಸಂಭ್ರಾಂತೇ ತುಮುಲೇ ಘೋರೇ ರಜೋಮೇಘೇ ಸಮುತ್ಥಿತೇ |
ದ್ವಿತೀಯಾಮಿವ ಸಂಪ್ರಾಪ್ತಾಮಮನ್ಯಂತ ನಿಶಾಂ ತದಾ ॥ 27 ॥
ದಿಗ್ಭ್ರಾಂತಿಗೊಳಿಸುವ ತೀವ್ರವೂ, ಘೋರವೂ ಆದ ಧೂಳಿನ ಮೇಘವು ಉಂಟಾಗುತ್ತಿರಲು ಯೋಧರು ಆಗ ಎರಡನೆಯ ಬಾರಿಗೆ ರಾತ್ರಿಯು ಪ್ರಾಪ್ತವಾಗಿದೆ ಎಂದು ತಿಳಿದರು.
ನ ಜ್ಞಾಯಂತೇ ಕೌರವೇಯಾ ನ ಪಾಂಚಾಲಾ ನ ಪಾಂಡವಾಃ |
ನ ದಿಶೋ ನ ದಿವಂ ನೋರ್ವೀಂ ನ ಸಮಂ ವಿಷಮಂ ತಥಾ ॥ 28 ॥
ಕೌರವರಾಗಲೀ, ಪಾಂಚಾಲರಾಗಲೀ, ಪಾಂಡವರಾಗಲೀ, ದಿಕ್ಕುಗಳಾಗಲಿ, ಅಂತರಿಕ್ಷವಾಗಲೀ, ಭೂಮಿಯಾಗಲೀ, ಸಮಪ್ರದೇಶವಾಗಲೀ, ವಿಷಮ ಪ್ರದೇಶವಾಗಲೀ ಯಾವುದೂ ತಿಳಿಯಲಿಲ್ಲ.
ಹಸ್ತಸಂಸ್ಪರ್ಶಮಾಪನ್ನಾನ್ ಪರಾನ್ ವಾಪ್ಯಥ ವಾ ಸ್ವಕಾನ್ |
ನ್ಯಪಾತಯಂಸ್ತದಾ ಯುದ್ಧೇ ನರಾಃ ಸ್ಮ ವಿಜಯೈಷಿಣಃ ॥ 29 ॥
ಆಗ ವಿಜಯವನ್ನು ಬಯಸುವ ಯೋಧರು ಹಸ್ತಸ್ಪರ್ಶಕ್ಕೆ ಸಿಕ್ಕಿದ ಶತ್ರುವನ್ನಾಗಲೀ ಅಥವಾ ತಮ್ಮವರನ್ನೇ ಆಗಲಿ ಹೊಡೆದು ಉರುಳಿಸಿದರು.
ಉದ್ಧೂತತ್ವಾತ್ ತು ರಜಸಃ ಪ್ರಸೇಕಾಚ್ಛೋಣಿತಸ್ಯ ಚ |
ಪ್ರಶಶಾಮ ರಜೋ ಭೌಮಂ ಶೀಘ್ರತ್ವಾದನಿಲಸ್ಯ ಚ ॥ 30 ॥
ಎಷ್ಟೋ ಧೂಳು ಮೇಲೆ ಎದ್ದುದರಿಂದ, ಗಾಳಿಯು ಶೀಘ್ರವಾಗಿ ಬೀಸುತ್ತಿದುದರಿಂದ ಭೂಮಿಯ ಮೇಲಿದ್ದ ಧೂಳು ರಕ್ತದಿಂದ ತೋಯಿಸಲ್ಪಟ್ಟಿದ್ದರಿಂದ ಭೂಮಿಯ ಮೇಲಿದ್ದ ಧೂಳು ಶೀಘ್ರವಾಗಿ ಅಡಗಿತು.
ತತ್ರ ನಾಗಾ ಹಯಾ ಯೋಧಾ ರಥಿನೋಽಥ ಪದಾತಯಃ |
ಪಾರಿಜಾತವನಾನೀವ ವ್ಯರೋಚನ್ ರುಧಿರೋಕ್ಷಿತಾಃ ॥ 31 ॥
ಅಲ್ಲಿ ರಕ್ತಸಿಕ್ತರಾದ ಗಜಗಳೂ, ಅಶ್ವಗಳೂ, ಯೋಧರೂ, ರಥಿಕರೂ, ಪದಾತಿಗಳೂ ಪಾರಿಜಾತ ವನದಂತೆ ಶೋಭಿಸಿದರು.
ತತೋ ದುರ್ಯೋಧನಃ ಕರ್ಣೋ ದ್ರೋಣೋ ದುಃಶಾಸನಸ್ತಥಾ |
ಪಾಂಡವೈಃ ಸಮಸಜ್ಜಂತ ಚತುರ್ಭಿಶ್ಚತುರೋ ರಥಾಃ ॥ 32 ॥

ಆಗ ಮಹಾರಥರಾದ ದುರ್ಯೋಧನ, ಕರ್ಣ, ದ್ರೋಣ ಮತ್ತು ದುಶ್ಶಾಸನ- ಈ ನಾಲ್ವರು ನಾಲ್ಕು ರಥಗಳಿಂದ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಸಂಸಕ್ತರಾದರು.
ದುರ್ಯೋಧನಃ ಸಹ ಭ್ರಾತ್ರಾ ಯಮಾಭ್ಯಾಂ ಸಮಸಜ್ಜತ |
ವೃಕೋದರೇಣ ರಾಧೇಯೋ ಭಾರದ್ವಾಜೇನ ಚಾರ್ಜುನಃ ॥ 33 ॥
ದುರ್ಯೋಧನನು ದುಶ್ಶಾಸನನೊಂದಿಗೆ ನಕುಲ-ಸಹದೇವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಸಂಸಕ್ತರಾದನು. ಭೀಮಸೇನನು ಕರ್ಣನ ಜೊತೆಯಲ್ಲಿಯೂ, ಅರ್ಜುನನು ದ್ರೋಣರ ಜೊತೆಯಲ್ಲಿಯೂ ಸಂಸಕ್ತರಾದರು.
ತದ್ ಘೋರಂ ಮಹದಾಶ್ಚರ್ಯಂ ಸರ್ವೇ ಪ್ರೈಕ್ಷನ್ ಸಮಂತತಃ |
ರಥರ್ಷಭಾಣಾಮುಗ್ರಾಣಾಂ ಸನ್ನಿಪಾತಮಮಾನುಷಮ್ ॥ 34 ॥
ಉಗ್ರರಾದ ರಥಶ್ರೇಷ್ಠರ ಅಮಾನುಷವಾದ, ಬಹಳ ಆಶ್ಚರ್ಯಕರವಾದ, ಘೋರವಾದ ಆ ಸಂಘರ್ಷವನ್ನು ಎಲ್ಲರೂ ಎಲ್ಲ ಕಡೆಯಿಂದಲೂ ನೋಡಿದರು.
ರಥಮಾರ್ಗೈರ್ವಿಚಿತ್ರೈಶ್ಚ ವಿಚಿತ್ರರಥಸಂಕುಲಮ್ |
ಅಪಶ್ಯನ್ ರಥಿನೋ ಯುದ್ಧಂ ವಿಚಿತ್ರಂ ಚಿತ್ರಯೋಧಿನಾಮ್ ॥ 35 ॥
ರಥಿಕರು ವಿಚಿತ್ರವಾದ ರಥಮಾರ್ಗಗಳಿಂದ ಸಂಚರಿಸುವ, ವಿಚಿತ್ರವಾಗಿ ಮತ್ತು ಆಶ್ಚರ್ಯಕರವಾಗಿ ಯುದ್ಧವನ್ನು ಮಾಡುವ ಆ ಯುದ್ಧವನ್ನು ವಿಚಿತ್ರ ರಥಗಳಿಂದ ನಿಬಿಡವಾದ ರಣರಂಗದಲ್ಲಿ ನೋಡಿದರು.
ಯತಮಾನಾಃ ಪರಾಕ್ರಾಂತಾಃ ಪರಸ್ಪರಜಿಗೀಷವಃ |
ಜೀಮೂತಾ ಇವ ಘರ್ಮಾಂತೇ ಶರವರ್ಷೈರವಾಕಿರನ್ ॥ 36 ॥
ಪರಾಕ್ರಮವನ್ನು ತೋರಿಸುತ್ತಾ, ಪ್ರಯತ್ನಪಡುತ್ತಾ, ಒಬ್ಬರನ್ನೊಬ್ಬರು ಗೆಲ್ಲುವ ಆಸೆಯನ್ನು ಹೊಂದಿ, ಬೇಸಿಗೆಯು ಕಳೆದು ಬಂದ ಮಳೆಗಾಲದಲ್ಲಿನ ಮೋಡಗಳಂತೆ ಪರಸ್ಪರವಾಗಿ ಬಾಣಗಳ ಮಳೆಯನ್ನು ಸುರಿಸಿದರು.
ತೇ ರಥಾನ್ ಸೂರ್ಯಸಂಕಾಶಾನಾಸ್ಥಿತಾಃ ಪುರುಷರ್ಷಭಾಃ |
ಅಶೋಭಂತ ಯಥಾ ಮೇಘಾಃ ಶಾರದಾಃ ಸಮುಪಸ್ಥಿತಾಃ ॥ 37 ॥
ಸೂರ್ಯಕಾಂತಿಯನ್ನು ಹೊಂದಿದ ರಥಗಳನ್ನು ಏರಿದ್ದ ಆ ಪುರುಷಶ್ರೇಷ್ಠರು ಶರತ್ಕಾಲದ ಮೇಘಗಳಂತೆ ಶೋಭಿಸಿದರು.
ಸ್ಪರ್ಧಿನಸ್ತೇ ಮಹೇಷ್ವಾಸಾಃ ಕೃತಯತ್ನಾ ಧನುರ್ಧರಾಃ |
ಅಭ್ಯಗಚ್ಛಂಸ್ತಥಾನ್ಯೋನ್ಯಂ ಮತ್ತಾ ಗಜವೃಷಾ ಇವ ॥ 38 ॥
ಸ್ಪರ್ಧಿಗಳೂ, ಮಹಾಧನುರ್ಧಾರಿಗಳೂ, ಮಹಾಪ್ರಯತ್ನವನ್ನು ಮಾಡುವವರೂ ಆದ ಆ ಧನುರ್ಧರರು ಮದಿಸಿದ ಗಜ-ವೃಷಭಗಳಂತೆ ಪರಸ್ಪರವಾಗಿ ಸೆಣೆಸಿದರು.
ನ ನೂನಂ ದೇಹಭೇದೋಽಸ್ತಿ ಕಾಲೇ ತಸ್ಮಿನ್ ಸಮಾಗತೇ |
ಯತ್ರ ಸರ್ವೇ ನ ಯುಗಪದ್ ವ್ಯಶೀರ್ಯಂತ ಮಹಾರಥಾಃ ॥ 39 ॥
ಆ ಕಾಲದಲ್ಲಿ ಉಂಟಾದ ಸಮಾಗಮದಲ್ಲಿ ಎಲ್ಲಿ ಎಲ್ಲಾ ಮಹಾರಥರೂ ಒಂದೇ ಕಾಲದಲ್ಲಿ ನಾಶವನ್ನು ಹೊಂದಿದರೋ ಆಗ ಇದು ಪಾಂಡವಯೋಧರ ದೇಹ, ಇದು ಕೌರವ ಯೋಧರ ದೇಹ ಎಂಬ ವ್ಯತ್ಯಾಸವು ತಿಳಿಯುತ್ತಿರಲಿಲ್ಲ.
ಬಾಹುಭಿಶ್ಚರಣೈಶ್ಛಿನ್ನೈಃ ಶಿರೋಭಿಶ್ಚಾರುಕುಂಡಲೈಃ |
ಕಾರ್ಮುಕೈರ್ವಿಶಿಖೈಃ ಪ್ರಾಸೈಃ ಖಡ್ಗೈಃ ಪರಶುಪಟ್ಟಿಶೈಃ ॥ 40 ॥
ನಾಲೀಕಕ್ಷುರನಾರಾಚೈರ್ನಖರೈಃ ಶಕ್ತಿತೋಮರೈಃ |
ಅನ್ಯೈಶ್ಚ ವಿವಿಧಾಕಾರೈರ್ಧೌತೈಃ ಪ್ರಹರಣೋತ್ತಮೈಃ ॥ 41 ॥
ಚಿತ್ರೈಶ್ಚ ವಿವಿಧಾಕಾರೈಃ ಶರೀರಾವರಣೈರಪಿ |
ವಿಚಿತ್ರೈಶ್ಚ ರಥೈರ್ಭಗ್ನೈರ್ಹತೈಶ್ಚ ಗಜವಾಜಿಭಿಃ ॥ 42 ॥
ಶೂನ್ಯೈಶ್ಚ ನಗರಾಕಾರೈರ್ಹತಯೋಧಧ್ವಜೈ ರಥೈಃ |
ಅಮನುಷ್ಯೈರ್ಹಯೈಸ್ತ್ರಸ್ತೈಃ ಕೃಷ್ಯಮಾಣೈಸ್ತತಸ್ತತಃ ॥ 43 ॥
ವಾತಾಯಮಾನೈರಸಕೃದ್ಧತವೀರೈರಲಂಕೃತೈಃ |
ವ್ಯಜನೈಃ ಕಂಕಟೈಶ್ಚೈವ ಧ್ವಜೈಶ್ಚ ವಿನಿಪಾತಿತೈಃ ॥ 44 ॥
ಛತ್ರೈರಾಭರಣೈರ್ವಸ್ತ್ರೈರ್ಮಾಲ್ಯೈಶ್ಚ ಸುಸುಗಂಧಿಭಿಃ |
ಹಾರೈಃ ಕಿರೀಟೈರ್ಮುಕುಟೈರುಷ್ಣೀಷೈಃ ಕಿಂಕಿಣೀಗಣೈಃ ॥ 45 ॥
ಉರಸ್ಯೈರ್ಮಣಿಭಿರ್ನಿಷ್ಕೈಶ್ಚೂಡಾಮಣಿಭಿರೇವ ಚ |
ಆಸೀದಾಯೋಧನಂ ತತ್ರ ನಭಸ್ತಾರಾಗಣೈರಿವ ॥ 46 ॥
ಕತ್ತರಿಸಲ್ಪಟ್ಟ ಬಾಹುಗಳಿಂದಲೂ, ಪಾದಗಳಿಂದಲೂ, ಮನೋಹರವಾದ ಕುಂಡಲವನ್ನು ಧರಿಸಿದ ಶಿರಸ್ಸಿನಿಂದಲೂ, ಬಿಲ್ಲುಗಳಿಂದಲೂ, ಬಾಣಗಳಿಂದಲೂ, ಪ್ರಾಸಗಳಿಂದಲೂ, ಖಡ್ಗಗಳಿಂದಲೂ, ಪರಶು-ಪಟ್ಟಿಸಗಳಿಂದಲೂ, ನಾಲೀಕ-ಕ್ಷುರ-ನಾರಾಚಗಳಿಂದಲೂ, ನಖರಗಳಿಂದಲೂ, ಶಕ್ತಿ-ತೋಮರಗಳಿಂದಲೂ, ವಿವಿಧಾಕಾರದ ಪ್ರಕಾಶಮಾನವಾದ ಶ್ರೇಷ್ಠವಾದ ಆಯುಧಗಳಿಂದಲೂ, ಆಶ್ಚರ್ಯಕರವೂ, ವಿವಿಧಾಕಾರವುಳ್ಳವೂ ಆದ ಕವಚಗಳಿಂದಲೂ, ವಿಚಿತ್ರವಾದ ಭಗ್ನ ರಥಗಳಿಂದಲೂ, ಹತವಾದ ಗಜಾಶ್ವಗಳಿಂದಲೂ, ನಗರಾಕಾರದಂತಿದ್ದ ಹತರಾದ ಸಾರಥಿ-ರಥಿಕ-ಧ್ವಜಗಳನ್ನು ಹೊಂದಿ ಶೂನ್ಯವಾದ ರಥಗಳಿಂದಲೂ, ಇಲ್ಲಿಂದಲ್ಲಿಗೆ ಎಳೆದಾಡುವ ಮನುಷ್ಯರಹಿತವಾದ ಅಶ್ವಗಳಿಂದಲೂ, ಅಲಂಕೃತವಾದ ಬಹಳ ಗಾಯಗಳನ್ನು ಹೊಂದಿದ ಅನೇಕ ವೀರರಿಂದಲೂ, ವ್ಯಜನಗಳಿಂದಲೂ, ರಥೋಪಕರಣಗಳಿಂದಲೂ, ಕೆಳಗೆ ಬಿದ್ದ ಧ್ವಜಗಳಿಂದಲೂ, ಛತ್ರಗಳಿಂದಲೂ,

ಆಭರಣಗಳಿಂದಲೂ, ವಸ್ತ್ರ-ಮಾಲ್ಯಗಳಿಂದಲೂ ಸುಗಂಧಯುಕ್ತವಾದ ಹಾರಗಳಿಂದಲೂ, ಕಿರೀಟಗಳಿಂದಲೂ, ರುಮಾಲುಗಳಿಂದಲೂ, ಸಣ್ಣಘಂಟೆಯ ಸಮೂಹದಿಂದಲೂ, ಎದೆಯಲ್ಲಿ ಧರಿಸಿದ ಮಣಿಗಳಿಂದಲೂ, ಚಿನ್ನದ ಹಾರಗಳಿಂದಲೂ, ಚೂಡಾಮಣಿಗಳಿಂದಲೂ ತುಂಬಿದ ಆ ರಣಭೂಮಿಯು ತಾರಾ ಗಣದಿಂದ ಕೂಡಿದ ಆಕಾಶದಂತೆ ಇದ್ದಿತು.

ತತೋ ದುರ್ಯೋಧನಸ್ಯಾಸೀನ್ನಕುಲೇನ ಸಮಾಗಮಃ |
ಅಮರ್ಷಿತೇನ ಕ್ರುದ್ಧಸ್ಯ ಕ್ರುದ್ಧೇನಾಮರ್ಷಿತಸ್ಯ ಚ ॥ 47 ॥
ಆಗ ದುರ್ಯೋಧನ ಮತ್ತು ನಕುಲರ ಸಮಾಗಮವುಂಟಾಯಿತು. ರೋಷಾವಿಷ್ಟ- ನಾದವನಿಂದ ಕ್ರುದ್ಧನಿಗೂ, ಕ್ರುದ್ಧನಿಂದ ರೋಷಾವಿಷ್ಟನಾದವನಿಗೂ (ಸಮಾಗಮ ಉಂಟಾಯಿತು).

ಅಪಸವ್ಯಂ ಚಕಾರಾಥ ಮಾದ್ರೀಪುತ್ರಸ್ತವಾತ್ಮಜಮ್ |
ಕಿರನ್ ಶರಶತೈರ್ಹೃಷ್ಟಸ್ತತ್ರ ನಾದೋ ಮಹಾನಭೂತ್ ॥ 48 ॥
ಮಾದ್ರೀಪುತ್ರನು ನಿನ್ನ ಪುತ್ರನನ್ನು ಸಂತೋಷದಿಂದ ನೂರಾರು ಬಾಣಗಳಿಂದ ಹೊಡೆಯುತ್ತಾ ಅಪಸವ್ಯಗೊಳಿಸಿದನು. ಆಗ ದೊಡ್ಡ ನಾದವುಂಟಾಯಿತು.

ಅಪಸವ್ಯಂ ಕೃತಃ ಸಂಖ್ಯೇ ಭ್ರಾತೃವ್ಯೇನಾತ್ಯಮರ್ಷಿಣಾ |
ಸೋಽಮರ್ಷಿತಸ್ತಮಪ್ಯಾಜೌ ಪ್ರತಿಚಕ್ರೇಽಪಸವ್ಯತಃ ॥ 49 ॥
ಅತ್ಯಂತ ರೋಷಯುಕ್ತನಾದ ಶತ್ರುವಿನಿಂದ ರಣರಂಗದಲ್ಲಿ ಅಪಸವ್ಯವನ್ನು ಮಾಡಲ್ಪಟ್ಟ ನಿನ್ನ ಪುತ್ರನೂ ಸಹ ರಣರಂಗದಲ್ಲಿ ಅವನನ್ನು ಅಪಸವ್ಯ ಮಾಡಿದನು.

ತತಃ ಪ್ರತಿಚಿಕೀರ್ಷಂತಮಪಸವ್ಯಂ ತು ತೇ ಸುತಮ್ |
ನ್ಯವಾರಯತ ತೇಜಸ್ವೀ ನಕುಲಶ್ಚಿತ್ರಮಾರ್ಗವಿತ್ ॥ 50 ॥
ಆಗ ತನಗೆ ಪ್ರತೀಕಾರವನ್ನು ಮಾಡಿ, ಅಪಸವ್ಯವನ್ನು ಮಾಡಲು ಯತ್ನಿಸುತ್ತಿದ್ದ ನಿನ್ನ ಪುತ್ರನನ್ನು ವಿಚಿತ್ರಮಾರ್ಗಗಳನ್ನು ಬಲ್ಲ ತೇಜಸ್ವಿಯಾದ ನಕುಲನು ತಡೆದನು.

ಸರ್ವತೋ ವಿನಿವಾರ್ಯೈನಂ ಶರಜಾಲೇನ ಪೀಡಯನ್ |
ವಿಮುಖಂ ನಕುಲಶ್ಚಕ್ರೇ ತತ್ ಸೈನ್ಯಾಃ ಸಮಪೂಜಯನ್ ॥ 51 ॥
ನಕುಲನು ಅವನನ್ನು ಎಲ್ಲ ಕಡೆಗಳಿಂದಲೂ ತಡೆಯುತ್ತಾ, ಬಾಣ ಸಮೂಹದಿಂದ ಪೀಡಿಸಿ ಯುದ್ಧವಿಮುಖನನ್ನಾಗಿ ಮಾಡಿದನು. ಅದನ್ನು ಸೈನಿಕರೆಲ್ಲರೂ ಪೂಜಿಸಿದರು.

ತಿಷ್ಠ ತಿಷ್ಠೇತಿ ನಕುಲೋ ಬಭಾಷೇ ತನಯಂ ತವ |
ಸಂಸ್ಮೃತ್ಯ ಸರ್ವದುಃಖಾನಿ ತವ ದುರ್ಮಂತ್ರಿತೇನ ಚ ॥ 52 ॥
ನಕುಲನು ನಿನ್ನ ದುರ್ಮಂತ್ರಣದಿಂದ ತಾನು ಅನುಭವಿಸಿದ ಎಲ್ಲ ದುಃಖಗಳನ್ನು ಸ್ಮರಿಸಿ ನಿನ್ನ ಪುತ್ರನನ್ನು ಕುರಿತು `ನಿಲ್ಲು, ನಿಲ್ಲು' ಎಂದು ಹೇಳಿದನು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರಿಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತಮೂರನೆಯ
ಅಧ್ಯಾಯ ಮುಗಿಯಿತು.

* * * * *

ನೂರ ಎಪ್ಪತ್ನಾಲ್ಕನೆಯ ಅಧ್ಯಾಯ
ದ್ರೋಣಾರ್ಜುನಾದಿಗಳ ಸಂಕುಲಯುದ್ಧ.

ಸಂಜಯಃ
ತತೋ ದುಃಶಾಸನಃ ಕ್ರುದ್ಧಃ ಸಹದೇವಮುಪಾದ್ರವತ್ |
ರಥವೇಗೇನ ತೀವ್ರೇಣ ಕಂಪಯನ್ನಿವ ಮೇದಿನೀಮ್ ॥ 1 ॥
ಸಂಜಯ ಅನಂತರ ಕ್ರುದ್ಧನಾದ ದುಶ್ಶಾಸನನು ತೀವ್ರವಾದ ರಥವೇಗದಿಂದ ಭೂಮಿಯನ್ನು ನಡುಗಿಸುವವನಂತೆ ಸಹದೇವನ ಕಡೆಗೆ ಧಾವಿಸಿದನು.

ತಸ್ಯಾಪತತ ಏವಾಶು ಭಲ್ಲೇನಾಮಿತ್ರಕರ್ಶನಃ |
ಮಾದ್ರೀಸುತಃ ಶಿರೋ ಯಂತುಃ ಸಶಿರಸ್ತ್ರಾಣಮಚ್ಛಿನತ್ ॥ 2 ॥
ಅವನು ಬರುತ್ತಿರುವಂತೆಯೇ ಶತ್ರುಕರ್ಶನನಾದ ಮಾದ್ರೀಪುತ್ರನಾದ ಸಹದೇವನು ಒಂದು ಭಲ್ಲದಿಂದ ಅವನ ಸಾರಥಿಯ ಶಿರಸ್ತ್ರಾಣ ಸಹಿತವಾದ ಶಿರಸ್ಸನ್ನು ಶೀಘ್ರವಾಗಿ ಕತ್ತರಿಸಿದನು.

ನೈನಂ ದುಃಶಾಸನಃ ಸೂತಂ ನಾಪಿ ಕಶ್ಚನ ಸೈನಿಕಃ |
ಹೃತೋತ್ತಮಾಂಗಮಾಶುತ್ವಾತ್ ಸಹದೇವೇನ ಬುದ್ಧವಾನ್ ॥ 3 ॥
ದುಶ್ಶಾಸನನಾಗಲೀ ಅಥವಾ ಬೇರೆ ಸೈನಿಕನಾಗಲೀ ಸಹದೇವನು ಶೀಘ್ರವಾಗಿ ಸಾರಥಿಯ ಶಿರಸ್ಸನ್ನು ಕತ್ತರಿಸಿದುದನ್ನು ತಿಳಿಯಲಿಲ್ಲ.

ಯದಾ ತ್ವಸಂಗೃಹೀತತ್ವಾತ್ ಪ್ರಯಾಂತ್ಯಶ್ವಾ ಯಥಾಸುಖಮ್ |
ತತೋ ದುಃಶಾಸನಃ ಸೂತಂ ಬುದ್ಧವಾನ್ ಗತಚೇತಸಮ್ ॥ 4 ॥
ಕಡಿವಾಣಗಳನ್ನು ಹಿಡಿಯದ ಕಾರಣದಿಂದ ಕುದುರೆಗಳು ಮನಬಂದಂತೆ ಹೋಗಲು ಪ್ರಾರಂಭಿಸಿದಾಗ ಸಾರಥಿಯು

ಮೃತನಾಗಿದ್ದಾನೆಂದು ದುಶ್ಶಾಸನನು ತಿಳಿದನು.
ಸ ಹಯಾನ್ ಸನ್ನಿಗೃಹ್ಯಾಜೌ ಸ್ವಯಂ ಹಯವಿಶಾರದಃ।
ಯುಯುಧೇ ರಥಿನಾಂ ಶ್ರೇಷ್ಠಶ್ಚಿತ್ರಂ ಲಘು ಚ ಸುಷ್ಠು ಚ ॥ 5 ॥
ಹಯವಿಶಾರದನೂ, ರಥಿಶ್ರೇಷ್ಠನೂ ಆದ ಅವನು ಅವನು ತಾನೇ ಅಶ್ವಗಳನ್ನು ನಿಯಂತ್ರಿಸುತ್ತಾ, ರಣರಂಗದಲ್ಲಿ ಆಶ್ಚರ್ಯಕರವಾಗಿ, ಶೀಘ್ರವಾಗಿ ಮತ್ತು ಬಹಳ ಚೆನ್ನಾಗಿ ಯುದ್ಧವನ್ನು ಮಾಡಿದನು.
ತದಸ್ಯಾಪೂಜಯನ್ ಕರ್ಮ ಸ್ವೇ ಪರೇ ಚೈವ ಸಂಯುಗೇ।
ಹತಸೂತರಥೇನಾಜೌ ವ್ಯಚರದ್ ಯದಭೀತವತ್ ॥ 6 ॥
ಸೂತನನ್ನು ಕಳೆದುಕೊಂಡ ರಥದಿಂದ ಅವನು ನಿರ್ಭಯವಾಗಿ ರಣರಂಗದಲ್ಲಿ ಸಂಚರಿಸುವುದನ್ನು ನೋಡಿ ಅವನ ಆ ಕಾರ್ಯವನ್ನು ರಣರಂಗದಲ್ಲಿ ತನ್ನವರೂ ಮತ್ತು ಪರರೂ ಪೂಜಿಸಿದರು.
ಸಹದೇವಸ್ತು ತಾನಶ್ವಾಂಸ್ತೀಕ್ಷ್ಣೈರ್ಬಾಣೈರವಾಕಿರತ್।
ಪೀಡ್ಯಮಾನಾಃ ಶರೈಶ್ಚಾಶು ಪ್ರಾದ್ರವಂಸ್ತೇ ತತಸ್ತತಃ ॥ 7 ॥
ಸಹದೇವನು ಆ ಅಶ್ವಗಳ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು. ಬಾಣಗಳಿಂದ ಪೀಡಿಸಲ್ಪಟ್ಟ ಆ ಅಶ್ವಗಳು ಶೀಘ್ರವಾಗಿ ಎಲ್ಲೆಲ್ಲೋ ಓಡಿಹೋದವು.
ಸ ರಶ್ಮಿಷು ವಿಷಕ್ತತ್ವಾದುತ್ಸಸರ್ಜ ಶರಾಸನಮ್।
ಧನುಷಾ ಕರ್ಮ ಕುರ್ವಂಸ್ತು ರಶ್ಮೀನ್ ಸ ಪುನರುತ್ಸೃಜತ್ ॥ 8 ॥
ದುಶ್ಶಾಸನನು ಕಡಿವಾಣವನ್ನು ಹಿಡಿದುದ್ದರಿಂದ ಧನುಸ್ಸನ್ನು ಬಿಡುತ್ತಿದ್ದನು. ಧನುಸ್ಸಿನಿಂದ ಕಾರ್ಯವನ್ನು ಮಾಡುತ್ತಾ ಪುನಃ ಕಡಿವಾಣವನ್ನು ಬಿಡುತ್ತಿದ್ದನು.
ಛಿದ್ರೇಷು ತೇಷು ತಂ ಬಾಣೈರ್ಮಾದ್ರೀಪುತ್ರೋಽಭ್ಯವಾಕಿರತ್।
ಪರೀಪ್ಸಂಸ್ತ್ವತ್ಸುತಂ ಕರ್ಣಸ್ತದಂತರಮವಾಪತತ್ ॥ 9 ॥
ಆ ಅಂತರಗಳಲ್ಲಿ ಮಾದ್ರೀಪುತ್ರನು ದುಶ್ಶಾಸನನನ್ನು ಬಾಣಗಳಿಂದ ಹೊಡೆದನು. ಈ ಮಧ್ಯದಲ್ಲಿ ನಿನ್ನ ಪುತ್ರನನ್ನು ರಕ್ಷಿಸಲು ಕರ್ಣನು ಶೀಘ್ರವಾಗಿ ಅಲ್ಲಿಗೆ ಬಂದನು.
ವೃಕೋದರಸ್ತತಃ ಕರ್ಣಂ ತ್ರಿಭಿರ್ಭಲ್ಲೈಃ ಸಮಾಹಿತೈಃ।
ಆಕರ್ಣಪೂರ್ಣೈರಭ್ಯಘ್ನನ್ ಬಾಹ್ವೋರುರಸಿ ಚಾನದತ್ ॥ 10 ॥
ಆಗ ಭೀಮನು ಕಿವಿಯವರೆಗೂ ಪೂರ್ಣವಾಗಿ ಎಳೆದು ಪ್ರಯೋಗಿಸಿದ ಮೂರು ಭಲ್ಲಗಳಿಂದ ಕಣರ್ನನ್ನು ಬಾಹುಗಳಲ್ಲಿ ಮತ್ತು ಎದೆಯಲ್ಲಿ ಹೊಡೆದು ಸಿಂಹನಾದವನ್ನು ಮಾಡಿದನು.
ಸನ್ನ್ಯವರ್ತತ ತಂ ಕರ್ಣಃ ಸಂಘಟ್ಟಿತ ಇವೋರಗಃ।
ತದಭೂತ್ ತುಮುಲಂ ಯುದ್ಧಂ ಭೀಮರಾಧೇಯಯೋಸ್ತದಾ ॥ 11 ॥
ಕೋಲಿನಿಂದ ಹೊಡೆದ ಸರ್ಪದಂತೆ ಕರ್ಣನು ಭೀಮನ ಕಡೆಗೆ ತಿರುಗಿದನು. ಆಗ ಭೀಮನಿಗೂ ಮತ್ತು ಕರ್ಣನಿಗೂ ತೀವ್ರವಾದ ಯುದ್ಧವಾಯಿತು.
ತೌ ವೃಷಾವಿವ ಸಂಕ್ರುದ್ಧೌ ವಿವೃತ್ತನಯನಾವುಭೌ।
ವೇಗೇನ ಮಹತಾನ್ಯೋನ್ಯಂ ಸಂರಬ್ಧಾವಭಿಪೇತತುಃ ॥ 12 ॥
ಅವರಿಬ್ಬರೂ ಕೋಪಗೊಂಡ ವೃಷಭಗಳಂತೆ ಕಣ್ಣುಗಳನ್ನರಳಿಸಿ ಕೋಪದಿಂದ ಒಬ್ಬರ ಮೇಲೊಬ್ಬರು ಬಹಳ ವೇಗದಿಂದ ಬಿದ್ದರು.
ಅಭಿಸಂಶ್ಲಿಷ್ಟಯೋಸ್ತತ್ರ ತಯೋರಾಹವಶೌಂಡಯೋಃ।
ವಿಚ್ಛಿನ್ನಶರಪಾತತ್ವಾದ್ ಗದಾಯುದ್ಧಮವರ್ತತ ॥ 13 ॥
ಪರಸ್ಪರವಾಗಿ ಸಂಶ್ಲಿಷ್ಟಗೊಂಡ ಯುದ್ಧವಿಶಾರದರಾದ ಅವರಿಬ್ಬರಿಗೆ ಬಾಣಗಳು ವಿಚ್ಛಿನ್ನವಾದ ಕಾರಣದಿಂದ ಗದಾಯುದ್ಧವು ಜರುಗಿತು.
ಗದಯಾ ಭೀಮಸೇನಸ್ತು ಕರ್ಣಸ್ಯ ರಥಕೂಬರಮ್।
ಬಿಭೇದಾಶು ತದಾ ರಾಜಂಸ್ತದದ್ಭುತಮಿವಾಭವತ್ ॥ 14 ॥
ಎಲೈ ರಾಜನೇ, ಆಗ ಭೀಮನು ಗದೆಯಿಂದ ಕರ್ಣನ ರಥದ ಕೂಬರವನ್ನು ಭಗ್ನಗೊಳಿಸಿದನು. ಅದು ಅದ್ಭುತವಾಗಿದ್ದಿತು.
ತತೋ ಭೀಮಸ್ಯ ರಾಧೇಯೋ ಗದಾಮಾದಾಯ ವೀರ್ಯವಾನ್।
ಅವಾಸೃಜದ್ ರಥೇ ತಾಂ ತು ಬಿಭೇದ ಗದಯಾ ಗದಾಮ್ ॥ 15 ॥
ಆಗ ಪರಾಕ್ರಮಶಾಲಿಯಾದ ಕರ್ಣನು ಗದೆಯನ್ನು ತೆಗೆದುಕೊಂಡು ಅದನ್ನು ಭೀಮನ ರಥದ ಮೇಲೆ ಎಸೆದು ಭೀಮನ ಗದೆಯನ್ನು ಭಗ್ನಗೊಳಿಸಿದನು.
ತತೋ ಭೀಮಃ ಪುನರ್ಗುರ್ವೀಂ ಚಿಕ್ಷೇಪಾಧಿರಥೇರ್ಗದಾಮ್।
ತಾಂ ಶರೈರ್ದಶಭಿಃ ಕರ್ಣಃ ಸುಪುಂಖೈಃ ಸುಸಮಾಹಿತೈಃ।
ಪ್ರತ್ಯವಿಧ್ಯತ್ಪುನಶ್ಚಾನ್ಯೈಃ ಸಾ ಭೀಮಂ ಪುನರಾವ್ರಜತ್ ॥ 16 ॥
ಅನಂತರ ಭೀಮನು ಇನ್ನೊಂದು ಭಾರವಾದ ಗದೆಯನ್ನು ತೆಗೆದುಕೊಂಡು ಕರ್ಣನ ಮೇಲೆ ಎಸೆದನು. ಕರ್ಣನು ಒಳ್ಳೆಯ ಪುಂಖಗಳನ್ನು ಹೊಂದಿದ್ದ, ಚೆನ್ನಾಗಿ ಪ್ರಯೋಗಿಸಲ್ಪಟ್ಟ ಹತ್ತು ಬಾಣಗಳಿಂದ ಹೊಡೆದು, ಪುನಃ ಬೇರೆ ಬಾಣಗಳಿಂದಲೂ ಹೊಡೆದನು. ಆ ಗದೆಯು ಪುನಃ ಭೀಮನ ಬಳಿಗೆ ಬಂದಿತು.
ತಸ್ಯಾಃ ಪ್ರತಿನಿಪಾತೇನ ಭೀಮಸ್ಯ ವಿಪುಲೋ ಧ್ವಜಃ।

ಪಪಾತ ಸಾರಥಿಶ್ಚಾಸ್ಯ ಮುಮೋಹ ಗದಯಾ ಹತಃ ॥ 17 ॥
ಭೀಮನ ಗದೆಯು ಹಿಂದಿರುಗಿ ಬಂದಾಗ ಭೀಮನ ರಥದ ವಿಸ್ತಾರವಾದ ಧ್ವಜವು ಕೆಳಗೆ ಬಿದ್ದಿತು. ಅವನ ಸಾರಥಿಯು ಗದೆಯಿಂದ ಹೊಡೆಯಲ್ಪಟ್ಟು ಮೂರ್ಛಿತನಾದನು.
ಸ ಕರ್ಣೇ ಸಾಯಕಾನಷ್ಟೌ ವ್ಯಸೃಜತ್ ಕ್ರೋಧಮೂರ್ಚ್ಛಿತಃ |
ಧ್ವಜೇ ಶರಾಸನೇ ಚೈವ ಶರಾವಾಪೇ ಚ ಭಾರತ ॥ 18 ॥
ಎಲೈ ಭಾರತನೇ, ಕ್ರೋಧಮೂರ್ಛಿತನಾದ ವೃಕೋದರನು ಕರ್ಣನ ಮೇಲೆ ಎಂಟು ಬಾಣಗಳನ್ನು ಪ್ರಯೋಗಿಸಿ, ಅವನ ಧ್ವಜವನ್ನು, ಧನುಸ್ಸನ್ನು ಮತ್ತು ಬತ್ತಳಿಕೆಯನ್ನು ಭಗ್ನಗೊಳಿಸಿದನು.
ತತಃ ಪುನಸ್ತು ರಾಧೇಯೋ ಹಯಾನಸ್ಯ ರಥೇಷುಭಿಃ |
ಋಷ್ಯವರ್ಣಾನ್ ಜಘಾನಾಶು ತಥೋಭೌ ಪಾರ್ಷ್ಣಿಸಾರಥೀ ॥ 19 ॥
ಆಗ ಪುನಃ ಕರ್ಣನು ರಥಬಾಣಗಳಿಂದ ಭೀಮಸೇನನ ರಥದ ಜಿಂಕೆಯ ಬಣ್ಣದ ಕುದುರೆಗಳನ್ನು ಮತ್ತು ಇಬ್ಬರು ಪಾರ್ಷ್ಣಿಸಾರಥಿಗಳನ್ನು ಶೀಘ್ರವಾಗಿ ಕೊಂದನು.
ಸ ವಿಪನ್ನರಥೋ ಭೀಮೋ ನಕುಲಸ್ಯಾಪ್ಲುತೋ ರಥಮ್ |
ಹರಿರ್ಯಥಾ ಗಿರೇಃ ಶೃಂಗಂ ಸಮಾಕ್ರಾಮದರಿಂದಮಃ ॥ 20 ॥
ರಥವನ್ನು ಕಳೆದುಕೊಂಡ ಆ ಅರಿಂದಮನಾದ ಭೀಮನು ಸಿಂಹವು ಪರ್ವತದ ಶಿಖರಕ್ಕೆ ಹಾರಿದಂತೆ ನಕುಲನ ರಥಕ್ಕೆ ಹಾರಿದನು.
ತಥಾ ದ್ರೋಣಾರ್ಜುನೌ ಚಿತ್ರಮಯುದ್ಧ್ಯೇತಾಂ ಮಹಾರಥೌ |
ಆಚಾರ್ಯಶಿಷ್ಯೌ ರಾಜೇಂದ್ರ ಕೃತಪ್ರಹರಣೌ ಯುಧಿ ॥ 21 ॥
ಎಲೈ ರಾಜೇಂದ್ರನೇ, ಆ ರೀತಿಯಲ್ಲಿ ಒಬ್ಬರು ಮಾಡಿದುದಕ್ಕೆ ಇನ್ನೊಬ್ಬರು ಪ್ರತೀಕಾರವನ್ನು ಮಾಡುವ ಮಹಾರಥರಾದ ಆಚಾರ್ಯ ಮತ್ತು ಶಿಷ್ಯನಾದ ದ್ರೋಣಾರ್ಜುನರು ಆಶ್ಚರ್ಯಕರವಾಗಿ ಯುದ್ಧವನ್ನು ಮಾಡಿದರು.
ಲಘುಸಂಧಾನಯೋಗಾಭ್ಯಾಂ ರಥಯೋಶ್ಚ ರಣೇನ ಚ |
ಮೋಹಯಂತೌ ಮನುಷ್ಯಾಣಾಂ ಚಕ್ಷೂಂಷಿ ಚ ಮನಾಂಸಿ ಚ ॥ 22 ॥
ರಥಗಳ ಸಂಚಾರದಿಂದ ಅವರು ಶೀಘ್ರವಾಗಿ ಒಬ್ಬರನ್ನೊಬ್ಬರು ಸಮೀಪಿಸಿ ಸಂಸಕ್ತರಾಗಿ ಮನುಷ್ಯರ ಕಣ್ಣುಗಳನ್ನು ಮತ್ತು ಮನಸ್ಸುಗಳನ್ನು ಮೋಹಗೊಳಿಸಿದರು.
ಉಪಾರಮಂತ ತೇ ಸರ್ವೇ ಯೋಧಾಸ್ಮಾಕಂ ಪರೇ ತಥಾ |
ಅದೃಷ್ಟಪೂರ್ವಂ ಪಶ್ಯಂತಸ್ತದ್ಯುದ್ಧಂ ಗುರುಶಿಷ್ಯಯೋಃ ॥ 23 ॥
ಹಿಂದೆ ಎಂದೂ ನೋಡದಿದ್ದಂತಹ ಗುರು-ಶಿಷ್ಯರ ಆ ಯುದ್ಧವನ್ನು ನೋಡುತ್ತಾ ನಮ್ಮ ಮತ್ತು ಪರರ ಯೋಧರೆಲ್ಲರೂ ಯುದ್ಧವನ್ನು ನಿಲ್ಲಿಸಿದರು.
ವಿಚಿತ್ರಾನ್ ಪೃತನಾಮಧ್ಯೇ ರಥಮಾರ್ಗಾನುದೀರ್ಯತಃ |
ಅನ್ಯೋನ್ಯಮಪಸವ್ಯಂ ಚ ಕರ್ತುಂ ವೀರೌ ತದೈಷತುಃ |
ಪರಾಕ್ರಮಂ ತಯೋರ್ಯೋಧಾ ದದೃಶುಸ್ತಂ ಸುವಿಸ್ಮಿತಾಃ ॥ 24 ॥
ರಣರಂಗದ ಮಧ್ಯದಲ್ಲಿ ವಿಚಿತ್ರವಾದ ರಥಮಾರ್ಗಗಳಲ್ಲಿ ಸಂಚರಿಸುತ್ತಾ ವೀರರಾದ ಅವರಿಬ್ಬರು ಪರಸ್ಪರವಾಗಿ ಅಪಸವ್ಯವನ್ನು ಮಾಡಲು ಬಯಸಿದರು. ಉಳಿದ ಯೋಧರು ಆಶ್ಚರ್ಯಚಕಿತರಾಗಿ ಅವರ ಪರಾಕ್ರಮವನ್ನು ನೋಡಿದರು.
ತಯೋಃ ಸಮಭವದ್ ಯುದ್ಧಂ ದ್ರೋಣಪಾಂಡವಯೋರ್ಮಹತ್ |
ಆಮಿಷಾರ್ಥಂ ಮಹಾರಾಜ ಗಗನೇ ಶ್ಯೇನಯೋರಿವ ॥ 25 ॥
ಎಲೈ ಮಹಾರಾಜನೇ, ಮಾಂಸದ ತುಂಡಿನ ಸಲುವಾಗಿ ಆಕಾಶದಲ್ಲಿ ಹೋರಾಡುವ ಗಿಡುಗಗಳಂತೆ ದ್ರೋಣಾರ್ಜುನರ ಯುದ್ಧವು ಬಹಳ ದೊಡ್ಡದಾಗಿದ್ದಿತು.
ಯದ್ಯಚ್ಚಕಾರ ದ್ರೋಣಸ್ತು ಕುಂತೀಪುತ್ರಜಿಗೀಷಯಾ |
ತತ್ತತ್ ಪ್ರತಿಜಘಾನಾಶು ಪ್ರಹಸಂಸ್ತಸ್ಯ ಪಾಂಡವಃ ॥ 26 ॥
ಕುಂತೀಪುತ್ರನಾದ ಅರ್ಜುನನನ್ನು ಗೆಲ್ಲಲು ಬಯಸಿ ದ್ರೋಣರು ಏನೇನು ಮಾಡಿದರೋ ಅದೆಲ್ಲದಕ್ಕೂ ಪಾಂಡುಪುತ್ರನಾದ ಅರ್ಜುನನು ನಗುತ್ತಲೇ ಶೀಘ್ರವಾಗಿ ಪ್ರತಿಘಾತವನ್ನು ಮಾಡಿದನು.
ಯದಾ ದ್ರೋಣೋ ನ ಶಕ್ನೋತಿ ಪಾಂಡವಸ್ಯ ವಿಶೇಷಣೇ |
ತತಃ ಪ್ರಾದುಶ್ಚಕಾರಾಸ್ತ್ರಮಸ್ತ್ರಮಾರ್ಗವಿಶಾರದಃ ॥ 27 ॥
ದ್ರೋಣರಿಗೆ ಅರ್ಜುನನನ್ನು ಮೀರಿಸಲು ಸಾಧ್ಯವಾಗದಿದ್ದಾಗ ಅಸ್ತ್ರಮಾರ್ಗ ವಿಶಾರದರಾದ ಅವರು ಅಸ್ತ್ರಗಳನ್ನು ಪ್ರಾದುರ್ಭಾವಗೊಳಿಸಿದರು.
ಐಂದ್ರಂ ಪಾಶುಪತಂ ತ್ವಾಷ್ಟ್ರಂ ವಾಯವ್ಯಮಥ ವಾರುಣಮ್ |
ಮುಕ್ತಂ ಮುಕ್ತಂ ದ್ರೋಣಚಾಪಾತ್ ತಜ್ಜಘಾನ ಧನಂಜಯಃ ॥ 28 ॥
ಐಂದ್ರ, ಪಾಶುಪತ, ತ್ವಾಷ್ಟ್ರ, ವಾಯವ್ಯ, ವಾರುಣ- ಹೀಗೆ ದ್ರೋಣರ ಬಿಲ್ಲಿನಿಂದ ಪ್ರಯೋಗಿಸಲ್ಪಟ್ಟ ಅಸ್ತ್ರಗಳೆಲ್ಲವನ್ನೂ ಧನಂಜಯನು ನಾಶಪಡಿಸಿದನು.
ಅಸ್ತ್ರಾಣ್ಯಸ್ತ್ರೈರ್ಯದಾ ತಸ್ಯ ವಿಧಿವದ್ಧಂತಿ ಪಾಂಡವಃ |
ತತೋಽಸ್ತ್ರೈಃ ಪರಮೈರ್ದಿವ್ಯೈರ್ದ್ರೋಣಃ ಪಾರ್ಥಮವಾಕಿರತ್ ॥29॥
ತಮ್ಮ ಅಸ್ತ್ರಗಳನ್ನು ಅರ್ಜುನನು ಶಾಸ್ತ್ರೋಕ್ತ ಮಾರ್ಗದಿಂದ ತನ್ನ ಅಸ್ತ್ರಗಳಿಂದ ವಿನಾಶಗೊಳಿಸುತ್ತಿರಲು ದ್ರೋಣರು ಅರ್ಜುನನ

ಮೇಲೆ ಅವುಗಳಿಗಿಂತ ಹೆಚ್ಚಿನ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು.
ಯದ್ಯದಸ್ತ್ರಂ ಸ ಪಾರ್ಥಾಯ ಪ್ರಯುಂಕ್ತೇ ವಿಜಿಗೀಷಯಾ |
ತಸ್ಯಾಸ್ತ್ರಸ್ಯ ವಿಘಾತಾರ್ಥಂ ತತ್ತತ್ ಸ ಕುರುತೇಽರ್ಜುನಃ ॥ 30 ॥
ಅರ್ಜುನನನ್ನು ಗೆಲ್ಲುವ ಆಸೆಯಿಂದ ದ್ರೋಣರು ಯಾವ ಯಾವ ಅಸ್ತ್ರಗಳನ್ನು ಪ್ರಯೋಗಿಸುತ್ತಾರೆಯೋ ಅರ್ಜುನನು ಆಯಾ ಅಸ್ತ್ರಗಳ ವಿಘಾತಕ್ಕಾಗಿ ಮಾಡಬೇಕಾದ ಆಯಾ ಕಾರ್ಯವನ್ನು ಮಾಡಿದನು.
ಸ ವರ್ಧ್ಯಮಾನೇಷ್ವಸ್ತ್ರೇಷು ದಿವ್ಯೇಷ್ವಪಿ ಯಥಾವಿಧಿ |
ಅರ್ಜುನೇನಾರ್ಜುನಂ ದ್ರೋಣೋ ಮನಸೈವಾಭ್ಯಪೂಜಯತ್ ॥31॥
ತಮ್ಮ ದಿವ್ಯಾಸ್ತ್ರಗಳು ಶಾಸ್ತ್ರೋಕ್ತ ರೀತಿಯಿಂದ ಅರ್ಜುನನಿಂದ ನಾಶಿಸಲ್ಪಡುತ್ತಿರಲು ದ್ರೋಣರು ಮನಸ್ಸಿನಿಂದಲೇ ಅರ್ಜುನನನ್ನು ಪೂಜಿಸಿದರು.
ಮೇನೇ ಚಾತ್ಮಾನಮಧಿಕಂ ಪೃಥಿವ್ಯಾಮಪಿ ಭಾರತ |
ತೇನ ಶಿಷ್ಯೇಣ ಸರ್ವೇಭ್ಯಃ ಶಸ್ತ್ರವಿದ್ಭ್ಯಃ ಸಮಂತತಃ ॥ 32 ॥
ಎಲೈ ಭಾರತನೇ, ಅಂತಹ ಶಿಷ್ಯನನ್ನು ಹೊಂದಿದ ತಾವು ಎಲ್ಲ ಶಸ್ತ್ರಜ್ಞರಿಗಿಂತಲೂ ಭೂಮಿಯಲ್ಲಿ ಅಧಿಕರಾದವರೆಂದು ತಿಳಿದರು.
ವಾರ್ಯಮಾಣಸ್ತು ಪಾರ್ಥೇನ ತಥಾ ಮಧ್ಯೇ ಮಹಾತ್ಮನಾಮ್ |
ಯತಮಾನೋಽರ್ಜುನಂ ಪ್ರೀತ್ಯಾ ಪ್ರತ್ಯವಾರಯದುತ್ಸ್ಮಯನ್ ॥33॥
ಮಹಾತ್ಮರ ಮಧ್ಯದಲ್ಲಿ ಅರ್ಜುನನಿಂದ ಆ ರೀತಿಯಲ್ಲಿ ನಿವಾರಿಸಲ್ಪಡುತ್ತಿದ್ದರೂ ಅವರು ಪ್ರಯತ್ನವನ್ನು ಮಾಡಿ ನಗುತ್ತಾ ಪ್ರೀತಿಯಿಂದ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅರ್ಜುನನನ್ನು ನಿವಾರಿಸಿದರು.
ತತೋಽಂತರಿಕ್ಷೇ ದೇವಾಶ್ಚ ಗಂಧರ್ವಾಶ್ಚ ಸಹಸ್ರಶಃ |
ಋಷಯಃ ಸಿದ್ಧಸಂಘಾಶ್ಚ ವ್ಯತಿಷ್ಠಂತ ದಿದೃಕ್ಷಯಾ ॥ 34 ॥
ಆಗ ಆ ಯುದ್ಧವನ್ನು ನೋಡಲು ಅಂತರಿಕ್ಷದಲ್ಲಿ ದೇವತೆಗಳು, ಗಂಧರ್ವರು, ಋಷಿಗಳು, ಸಿದ್ಧರು ಸಹಸ್ರಾರು ಸಂಖ್ಯೆಯಲ್ಲಿ ಬಂದುನಿಂತರು.
ತದಪ್ಸರೋಭಿರಾಕೀರ್ಣಂ ಯಕ್ಷರಾಕ್ಷಸಸಂಕುಲಮ್ |
ಶ್ರೀಮದಾಕಾಶಮಭವದ್ ಭೂಯೋ ಮೇಘಾಕುಲಂ ಯಥಾ ॥ 35 ॥
ಅಪ್ಸರೆಯರಿಂದ ತುಂಬಿಹೋದ, ಯಕ್ಷ-ರಾಕ್ಷಸರಿಂದ ನಿಬಿಡವಾದ ಕಾಂತಿಯುಕ್ತವಾದ ಆ ಆಕಾಶವು ಬಹಳ ಮೇಘಗಳಿಂದ ತುಂಬಿರುವಂತೆ ಕಂಡುಬಂದಿತು.
ತತ್ರ ಸ್ಮಾಂತರ್ಹಿತಾ ವಾಚೋ ವ್ಯಚರಂತ ಪುನಃ ಪುನಃ |
ದ್ರೋಣಸ್ಯ ಸ್ತವಸಂಯುಕ್ತಾಃ ಪಾರ್ಥಸ್ಯ ಚ ಮಹಾತ್ಮನಃ |
ವಿಸೃಜ್ಯಮಾನೇಷ್ವಸ್ತ್ರೇಷು ಜ್ವಾಲಯತ್ಸು ದಿಶೋ ದಶ ॥ 36 ॥
ಆಗ ಅಸ್ತ್ರಗಳು ಪ್ರಯೋಗಿಸಲ್ಪಡುತ್ತಿರಲು, ಹತ್ತುದಿಕ್ಕುಗಳೂ ಜ್ವಲಿಸುತ್ತಿರಲು ದ್ರೋಣರ ಪ್ರಶಂಸಾರೂಪವಾದ, ಹಾಗೆಯೇ ಅರ್ಜುನನ ಪ್ರಶಂಸಾರೂಪವಾದ ಅಂತರ್ಹಿತವಾದ (ಅದೃಶ್ಯವಾದ) ಮಾತುಗಳು ಅಲ್ಲಲ್ಲಿ ಪುನಃ ಕೇಳಿಬಂದವು.
ನೈವೇದಂ ಮಾನುಷಂ ಯುದ್ಧಂ ನಾಸುರಂ ನ ಚ ರಾಕ್ಷಸಮ್ |
ನ ದೈವಂ ನ ಚ ಗಾಂಧರ್ವಂ ಬ್ರಾಹ್ಮಂ ಧ್ರುವಮಿದಂ ಪರಮ್ |
ವಿಚಿತ್ರಮಿದಮಾಶ್ಚರ್ಯಂ ನ ನೋ ದೃಷ್ಟಂ ನ ಚ ಶ್ರುತಮ್ ॥ 37 ॥
ಇದು ಮನುಷ್ಯರ ಯುದ್ಧವಲ್ಲ, ಅಸುರ ಯುದ್ಧವಲ್ಲ, ರಾಕ್ಷಸ ಯುದ್ಧವಲ್ಲ, ದೇವಯುದ್ಧವಲ್ಲ, ಗಂಧರ್ವ ಯುದ್ಧವಲ್ಲ, ಬ್ರಹ್ಮ ಯುದ್ಧವಲ್ಲ. ಇದು ಅವೆಲ್ಲವನ್ನೂ ಮೀರಿಸಿದುದೂ, ವಿಚಿತ್ರವೂ ಮತ್ತು ಆಶ್ಚರ್ಯಕರವೂ ಆದುದು. ಇಂತಹ ಯುದ್ಧವನ್ನು ನಾವು ನೋಡಿಯೂ ಇರಲಿಲ್ಲ, ಕೇಳಿಯೂ ಇರಲಿಲ್ಲ.
ಅತಿ ಪಾಂಡವಮಾಚಾರ್ಯೋ ದ್ರೋಣಂ ಚಾಪ್ಯತಿ ಪಾಂಡವಃ |
ನಾನಯೋರಂತರಂ ದ್ರಷ್ಟುಂ ಶಕ್ಯಮಸ್ತ್ರೇಣ ಕೇನಚಿತ್ ॥ 38 ॥
ಆಚಾರ್ಯರು ಪಾಂಡವನನ್ನು ಮೀರಿಸುತ್ತಾರೆ, ಪಾಂಡವನು ಆಚಾರ್ಯರನ್ನು ಮೀರಿಸುತ್ತಾನೆ. ಅಸ್ತ್ರದ ವಿಷಯದಲ್ಲಿ ಇವರಿಬ್ಬರಲ್ಲಿ ಯಾವನೂ ಯಾವ ಅತಿಶಯವನ್ನು ಕಾಣಲು ಸಾಧ್ಯವಿಲ್ಲ.
ಯದಿ ರುದ್ರೋ ದ್ವಿಧಾಕೃತ್ಯ ಯುಧ್ಯೇತಾತ್ಮಾನಮಾತ್ಮನಾ |
ತತ್ರ ಶಕ್ಯೋಪಮಾ ಕರ್ತುಮನ್ಯತ್ರ ತು ನ ವಿದ್ಯತೇ ॥ 39 ॥
ರುದ್ರದೇವರೇ ಎರಡು ಶರೀರಗಳನ್ನು ತೆಗೆದುಕೊಂಡು ತಮ್ಮ ಜೊತೆಯಲ್ಲಿ ತಾವು ಯುದ್ಧವನ್ನು ಮಾಡಿದರೆ ಅದನ್ನು ಇದಕ್ಕೆ ಉಪಮಾನವನ್ನಾಗಿ ಕೊಡಬಹುದು. ಬೇರೆ ಯಾವುದನ್ನೂ ಕೊಡಲು ಸಾಧ್ಯವಿಲ್ಲ.
ಜ್ಞಾನಮೇಕಸ್ಥಮಾಚಾರ್ಯೇ ಜ್ಞಾನಂ ಯೋಗಶ್ಚ ಪಾಂಡವೇ |
ಶೌರ್ಯಮೇಕಸ್ಥಮಾಚಾರ್ಯೇ ಬಲಂ ಶೌರ್ಯಂ ಚ ಪಾಂಡವೇ ॥40॥
ಆಚಾರ್ಯರಲ್ಲಿ ಜ್ಞಾನವು ಒಂದೇ ಕಡೆಯಲ್ಲಿ ನೆಲೆಸಿದೆ. ಅರ್ಜುನನಲ್ಲಿ ಜ್ಞಾನವು ಮತ್ತು ಯೋಗವು (ಉಪಾಯವು) ನೆಲೆಸಿವೆ. ಶೌರ್ಯವು ಆಚಾರ್ಯರಲ್ಲಿ ಪೂರ್ಣವಾಗಿ ನೆಲೆಸಿದೆ. ಅರ್ಜುನನಲ್ಲಿ ಶೌರ್ಯವು ಮತ್ತು ಬಲವು ನೆಲೆಸಿವೆ.
ನೇಮೌ ಶಕ್ಯೌ ಮಹೇಷ್ವಾಸೌ ರಣೇ ಕ್ಷೇಪಯಿತುಂ ಪರೈಃ |
ಇಚ್ಛಮಾನೌ ಪುನರಿಮೌ ಹನ್ಯೇತಾಂ ಸಾಮರಂ ಜಗತ್ ॥ 41 ॥
ಯುದ್ಧದಲ್ಲಿ ಇನ್ನೊಬ್ಬರು ಇವರಿಬ್ಬರನ್ನು ಸೋಲಿಸಲು ಸಾಧ್ಯವಿಲ್ಲ. ಇವರಿಬ್ಬರು ಬಯಸಿದರೆ ದೇವತೆಗಳಿಂದ ಸಹಿತವಾದ ಜಗತ್ತನ್ನೇ

ಕೊಂದಾರು.
ಇತ್ಯಬ್ರುವನ್ ಮಹಾರಾಜ ದೃಷ್ಟ್ವಾ ತೌ ಪುರುಷರ್ಷಭೌ |
ಅಂತರ್ಹಿತಾನಿ ಭೂತಾನಿ ಪ್ರಕಾಶಾನಿ ಚ ಸಂಘಶಃ ॥ 42 ॥
ಎಲ್ಲೈ ಮಹಾರಾಜನೇ, ಆ ಇಬ್ಬರು ಪುರುಷಶ್ರೇಷ್ಠರನ್ನು ನೋಡಿ ಅಂತರ್ಧಾನವನ್ನು ಹೊಂದಿದ ಭೂತಗಳು ಮತ್ತು ಕಣ್ಣಿಗೆ ಕಾಣುವ ದೇವತಾದಿಗಳು ಈ ರೀತಿಯಲ್ಲಿ ಗುಂಪು ಗುಂಪುಗಳಲ್ಲಿ ಮಾತನಾಡಿಕೊಂಡರು.
ತತೋ ದ್ರೋಣೋ ಬ್ರಾಹ್ಮಮಸ್ತ್ರಂ ಪ್ರಾದುಶ್ಚಕ್ರೇ ಮಹಾಮತಿಃ |
ಸಂತಾಪಯನ್ ರಣೇ ಪಾರ್ಥಂ ಭೂತಾನ್ಯಂತರ್ಹಿತಾನಿ ಚ ॥ 43 ॥
ಆಗ ಮಹಾಬುದ್ಧಿಯುಳ್ಳ ದ್ರೋಣರು ರಣರಂಗದಲ್ಲಿ ಅರ್ಜುನನನ್ನು ಮತ್ತು ಅಂತರ್ಧಾನವನ್ನು ಹೊಂದಿದ ಭೂತಗಳನ್ನು ತಾಪಗೊಳಿಸುತ್ತಾ ಬ್ರಹ್ಮಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದರು.
ತತಶ್ಚಚಾಲ ಪೃಥಿವೀ ಸಪರ್ವತವನದ್ರುಮಾ |
ವವೌ ಚ ವಿಷಮೋ ವಾಯುಃ ಸಾಗರಾಶ್ಚಾಪಿ ಚುಕ್ಷುಭುಃ ॥ 44 ॥
ಆಗ ಪರ್ವತ, ವನ, ವೃಕ್ಷಗಳಿಂದ ಕೂಡಿದ ಭೂಮಿಯು ನಡುಗಿತು. ವಾಯುವು ವಿಷಮವಾಗಿ ಬೀಸಿತು. ಸಾಗರಗಳು ಕ್ಷೋಭೆಗೊಂಡವು.
ತತಸ್ತ್ರಾಸೋ ಮಹಾನಾಸೀತ್ ಕುರುಪಾಂಡವಸೇನಯೋಃ |
ಸರ್ವೇಷಾಂ ಚೈವ ಭೂತಾನಾಮುದ್ಯತೇಽಸ್ತ್ರೇ ಮಹಾತ್ಮನಾ ॥ 45 ॥
ಮಹಾತ್ಮರಾದ ದ್ರೋಣರು ಆ ಅಸ್ತ್ರವನ್ನು ಪ್ರಯೋಗಿಸುತ್ತಿರಲು ಕುರು-ಪಾಂಡವ ಸೈನ್ಯದಲ್ಲಿ ಎಲ್ಲರಿಗೂ ದೊಡ್ಡ ತ್ರಾಸವುಂಟಾಯಿತು.
ತತಃ ಪಾರ್ಥೋಽಪ್ಯಸಂಭ್ರಾಂತಸ್ತದಸ್ತ್ರಂ ಪ್ರತಿಜಘ್ನಿವಾನ್ |
ಬ್ರಹ್ಮಾಸ್ತ್ರೇಣೈವ ರಾಜೇಂದ್ರ ತತಃ ಸರ್ವಮಶೀಶಮತ್ ॥ 46 ॥
ಎಲ್ಲೈ ರಾಜೇಂದ್ರನೇ, ಆಗ ಅರ್ಜುನನೂ ಸಹ ಗಾಬರಿಗೊಳ್ಳದೆ ಬ್ರಹ್ಮಾಸ್ತ್ರದಿಂದಲೇ ದ್ರೋಣರ ಅಸ್ತ್ರವನ್ನು ಪ್ರತಿಯಾಗಿ ಹೊಡೆದನು. ಆಗ ಎಲ್ಲವೂ ಶಾಂತವಾಯಿತು.
ಯದಾ ನ ಗಮ್ಯತೇ ಪಾರಂ ತಯೋರನ್ಯತರಸ್ಯ ವಾ |
ತತಃ ಸಂಕುಲಯುದ್ಧೇನ ತದ್ ಯುದ್ಧಂ ವ್ಯಾಕುಲೀಕೃತಮ್ ॥ 47 ॥
ಅವರಿಬ್ಬರಲ್ಲಿ ಯಾರೊಬ್ಬರೂ ಇನ್ನೊಬ್ಬರನ್ನು ಮೀರಿ ಹೋಗಲು ಸಾಧ್ಯವಿಲ್ಲದಿದ್ದಾಗ ಸಂಕುಲ ಯುದ್ಧದಿಂದ ಎಲ್ಲವೂ ಮಿಶ್ರಿತವಾಯಿತು.
ನಾಜ್ಞಾಯತ ತತಃ ಕಿಂಚಿತ್ ಪುನರೇವ ವಿಶಾಂಪತೇ |
ಪ್ರವೃತ್ತೇ ತುಮುಲೇ ಯುದ್ಧೇ ದ್ರೋಣಪಾಂಡವಯೋರ್ಮೃಧೇ ॥ 48 ॥
ಎಲ್ಲೈ ರಾಜನೇ, ರಣರಂಗದಲ್ಲಿ ದ್ರೋಣ-ಪಾಂಡವರಿಗೆ ತೀವ್ರವಾದ ಯುದ್ಧವು ಪ್ರವೃತ್ತವಾದಾಗ ಯಾವುದೂ ತಿಳಿಯಲಿಲ್ಲ.
ಶರಜಾಲೈಃ ಸಮಾಕೀರ್ಣೇ ಮೇಘಜಾಲೈರಿವಾಂಬರೇ |
ನ ಸ್ಮ ಸಂಪತತೇ ಕಶ್ಚಿದಂತರಿಕ್ಷಚರಸ್ತದಾ ॥ 49 ॥
ಆಕಾಶವು ಮೇಘಜಾಲಗಳಿಂದ ತುಂಬಿದಂತೆ ಬಾಣಗಳ ಜಾಲದಿಂದ ತುಂಬಿದಾಗ ಅಂತರಿಕ್ಷದಲ್ಲಿ ಚಲಿಸುವ ಯಾವ ಪ್ರಾಣಿಯಾಗಲೀ ಅಥವಾ ಪಕ್ಷಿಯಾಗಲೀ ಚಲಿಸಲಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುಃಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೈದನೆಯ ಅಧ್ಯಾಯ
ಸಾತ್ಯಕಿ-ದುರ್ಯೋಧನಾದಿಗಳ ಯುದ್ಧ.
ಕೃಷ್ಣನ ಪ್ರೇರಣೆಯಂತೆ ಯುಧಿಷ್ಠಿರನಿಂದ `ಅಶ್ವತ್ಥಾಮಾ ಹತಃ' ಎಂಬ ವಚನ.
ಋಷಿಗಳಿಂದ ದ್ರೋಣರ ಆಹ್ವಾನ. ದ್ರೋಣರಿಗೆ ದಿವ್ಯಾಸ್ತ್ರಗಳ ವಿಸ್ಮರಣೆ.
ದ್ರೋಣರಥಕ್ಕೆ ಬಂದ ಧೃಷ್ಟದ್ಯುಮ್ನನನ ಪರಾಕ್ರಮ.
ಸಂಜಯಃ
ತಸ್ಮಿಂಸ್ತಥಾ ವರ್ತಮಾನೇ ನರಾಶ್ವಗಜಸಂಕ್ಷಯೇ |
ದುಃಶಾಸನೋ ಮಹಾರಾಜ ಧೃಷ್ಟದ್ಯುಮ್ನಮಯೋಧಯತ್ ॥ 1 ॥
ಸಂಜಯ ಎಲ್ಲೈ ಮಹಾರಾಜನೇ, ನರಾಶ್ವ-ಗಜಗಳ ಸಂಕ್ಷಯವು ಹಾಗೆ ನಡೆಯುತ್ತಿರಲು ದುಶ್ಶಾಸನನು ಧೃಷ್ಟದ್ಯುಮ್ನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸ ತು ರುಗ್ಮರಥಾಸಕ್ತೋ ದುಃಶಾಸನಶರಾರ್ದಿತಃ |
ಅಮರ್ಷಾತ್ ತವ ಪುತ್ರಸ್ಯ ಶರೈರ್ವಾಹಾನವಾಕಿರತ್ ॥ 2 ॥
ರುಗ್ಮರಥರಾದ ದ್ರೋಣರ ಜೊತೆಯಲ್ಲಿ ಸಂಸಕ್ತನಾಗಿದ್ದ ಧೃಷ್ಟದ್ಯುಮ್ನನು ದುಶ್ಶಾಸನನ ಬಾಣಗಳಿಂದ ಪೀಡಿತನಾಗಿ, ಕೋಪದಿಂದ ನಿನ್ನ ಪುತ್ರನ ರಥದ ಅಶ್ವಗಳನ್ನು ಬಾಣಗಳಿಂದ ಹೊಡೆದನು.

ಕ್ಷಣೇನ ಸ ರಥಸ್ತಸ್ಯ ಸಧ್ವಜಃ ಸಹಸಾರಥಿಃ |
ನಾದೃಶ್ಯತ ಮಹಾರಾಜ ಪಾರ್ಷತಸ್ಯ ಶರೈಶ್ಚಿತಃ ॥ 3 ॥
ಎಲೈ ಮಹಾರಾಜನೇ, ಧೃಷ್ಟದ್ಯುಮ್ನನ ಬಾಣಗಳಿಂದ ತುಂಬಲ್ಪಟ್ಟ ಅವನ ರಥವು ಧ್ವಜ-ಸಾರಥಿಗಳಿಂದ ಸಹಿತವಾಗಿ ಒಂದು ಕ್ಷಣದಲ್ಲಿ ಕಾಣದಾಯಿತು.
ದುಃಶಾಸನಸ್ತು ರಾಜೇಂದ್ರ ಪಾಂಚಾಲ್ಯಸ್ಯ ಮಹಾತ್ಮನಃ |
ನಾಶಕತ್ ಪ್ರಮುಖೇ ಸ್ಥಾತುಂ ಶರಜಾಲಪ್ರಪೀಡಿತಃ ॥ 4 ॥
ಎಲೈ ರಾಜೇಂದ್ರನೇ, ದುಶ್ಶಾಸನನಾದರೋ ಮಹಾತ್ಮನಾದ ಧೃಷ್ಟದ್ಯುಮ್ನನ ಬಾಣ ಸಮೂಹಗಳಿಂದ ಪೀಡಿತನಾಗಿ ಅವನ ಎದುರಿಗೆ ನಿಲ್ಲಲು ಶಕ್ತನಾಗಲಿಲ್ಲ.
ಸ ತು ದುಃಶಾಸನಂ ಬಾಣೈರ್ವಿಮುಖೀಕೃತ್ಯ ಪಾರ್ಷತಃ |
ಕಿರನ್ ಶರಸಹಸ್ರಾಣಿ ದ್ರೋಣಮೇವಾಭ್ಯಯಾದ್ ರಣೇ ॥ 5 ॥
ಧೃಷ್ಟದ್ಯುಮ್ನನು ತನ್ನ ಬಾಣಗಳಿಂದ ದುಶ್ಶಾಸನನನ್ನು ಯುದ್ಧವಿಮುಖನನ್ನಾಗಿ ಮಾಡಿ, ಸಹಸ್ರಾರು ಬಾಣಗಳನ್ನು ಪ್ರಯೋಗಿಸುತ್ತಾ, ರಣರಂಗದಲ್ಲಿ ದ್ರೋಣರ ಮೇಲೆಯೇ ಸಾಗಿದನು.
ಪ್ರತ್ಯಪದ್ಯತ ಹಾರ್ದಿಕ್ಯಃ ಕೃತವರ್ಮಾ ತದಂತರಮ್ |
ಸೋದರ್ಯಾಣಾಂ ತ್ರಯಶ್ಚೈವ ತ ಏನಂ ಪರ್ಯವಾರಯನ್ ॥ 6 ॥
ಈ ಮಧ್ಯದಲ್ಲಿ ಹಾರ್ದಿಕ್ಯನಾದ ಕೃತವರ್ಮನು ಅಲ್ಲಿಗೆ ಬಂದನು. ದುರ್ಯೋಧನನ ಮೂರು ಸಹೋದರರು ಸೇರಿಕೊಂಡು ಧೃಷ್ಟದ್ಯುಮ್ನನನ್ನು ಸುತ್ತುವರಿದರು.
ತಂ ಯಮೌ ಪೃಷ್ಠತೋಽನ್ವೈತಾಂ ರಕ್ಷಂತೌ ಪುರುಷರ್ಷಭೌ |
ದ್ರೋಣಾಯಾಭಿಮುಖಂ ಯಾಂತಂ ದೀಪ್ಯಮಾನಮಿವಾನಲಮ್ ॥7॥
ದ್ರೋಣರಿಗೆ ಅಭಿಮುಖವಾಗಿ ಹೋಗುತ್ತಿದ್ದ, ಜ್ವಲಿಸುವ ಅಗ್ನಿಯಂತಿದ್ದ ಧೃಷ್ಟದ್ಯುಮ್ನನನ್ನು ರಕ್ಷಿಸುತ್ತಾ, ಪುರುಷಶ್ರೇಷ್ಠರಾದ ನಕುಲ-ಸಹದೇವರು ಅವನನ್ನು ಹಿಂಬಾಲಿಸಿದರು.
ಸಂಪ್ರಹಾರಮಕುರ್ವಂಸ್ತೇ ಸರ್ವೇ ಸಪ್ತ ಮಹಾರಥಾಃ |
ಅಮರ್ಷಿತಾಃ ಸತ್ತ್ವವಂತಃ ಕೃತ್ವಾ ಮರಣಮಗ್ರತಃ ॥ 8 ॥
ಧೈರ್ಯಶಾಲಿಗಳೂ, ರೋಷಾವಿಷ್ಟರೂ ಆದ ಆ ಏಳು ಮಹಾರಥರೆಲ್ಲರೂ ಮರಣವನ್ನು ಮುಂದೆ ಮಾಡಿಕೊಂಡು ಸಂಪ್ರಹಾರವನ್ನು ಮಾಡಿದರು.
ಶುದ್ಧಾತ್ಮಾನಃ ಶುದ್ಧವೃತ್ತಾ ರಾಜನ್ ಸ್ವರ್ಗಪುರಸ್ಕೃತಾಃ |
ಆರ್ಯಂ ಯುದ್ಧಮಕುರ್ವಂತ ಪರಸ್ಪರಜಿಗೀಷವಃ ॥ 9 ॥
ಎಲೈ ರಾಜನೇ, ಶುದ್ಧಮನಸ್ಸುಳ್ಳವರೂ, ಶುದ್ಧವಾದ ನಡತೆಯುಳ್ಳವರೂ ಆದ ಅವರು ಸ್ವರ್ಗವನ್ನು ಉದ್ದೇಶಿಸಿ, ಪರಸ್ಪರವಾಗಿ ಗೆಲ್ಲಲು ಬಯಸಿ, ಉದಾತ್ತವಾದ ಯುದ್ಧವನ್ನು ಮಾಡಿದರು.
ಶುಕ್ಲಾಭಿಜನಕರ್ಮಾಣೋ ಮತಿಮಂತೋ ಜನಾಧಿಪಾಃ |
ಧರ್ಮಯುದ್ಧಮಯುದ್ಧ್ಯಂತ ಪ್ರೇಕ್ಷಂತೋ ಗತಿಮುತ್ತಮಾಮ್ ॥10॥
ಶುದ್ಧವಾದ ವಂಶ ಮತ್ತು ಕರ್ಮಗಳನ್ನು ಹೊಂದಿದ ಮೇಧಾವಿಗಳಾದ ಆ ರಾಜರು ಮುಂದಿನ ಶ್ರೇಷ್ಠವಾದ ಗತಿಯನ್ನು ನೋಡುತ್ತಾ ಧರ್ಮಯುದ್ಧವನ್ನು ಮಾಡಿದರು.
ನ ತತ್ರಾಸೀದಧರ್ಮಿಷ್ಠಮಶಸ್ತ್ರಂ ಯುದ್ಧಮೇವ ಚ |
ನಾತ್ರ ಕರ್ಣೀ ನ ನಾಲೀಕೋ ನ ಲಿಪ್ತೋ ನ ಚ ವಸ್ತಕಃ ॥ 11॥
ನ ಸೂಚೀ ಕಪಿಶೋ ನಾತ್ರ ನ ಗವಾಸ್ಥಿರ್ಗಜಾಸ್ಥಿಕಃ |
ಇಷುರಾಸೀನ್ನ ಸಂಶ್ಲಿಷ್ಟೋ ನ ಪೂತಿರ್ನ ಚ ಜಿಹ್ಮಗಃ ॥ 12 ॥
ಅಲ್ಲಿ ಅಧರ್ಮಿಷ್ಠವಾದ ಅಥವಾ ಶಸ್ತ್ರರಹಿತವಾದ ಯುದ್ಧವು ನಡೆಯಲಿಲ್ಲ. ಅಲ್ಲಿ ಕರ್ಣಿಯಾಗಲೀ, ನಾಲೀಕವಾಗಲೀ, ವಿಷಲಿಪ್ತವಾಗಲೀ, ವಸ್ತಕವಾಗಲೀ, ಸೂಚಿಗಳಾಗಲೀ, ಕಪಿಶವಾಗಲೀ, ಗೋವಿನ ಅಸ್ಥಿ ಮತ್ತು ಗಜದ ಅಸ್ಥಿಯಿಂದ ನಿರ್ಮಿತವಾದ ಆಯುಧವಾಗಲೀ, ತ್ರುಟಿತವಾದ ಬಾಣಗಳಾಗಲೀ, ಹಳೆಯವಾದ ಬಾಣಗಳಾಗಲೀ, ಜೋಡಿಸಿದ ಬಾಣಗಳಾಗಲೀ ಇರಲಿಲ್ಲ.
ಋಜೂನ್ಯೇವ ವಿಶುದ್ಧಾನಿ ಸರ್ವೇ ಶಸತ್ರಣ್ಯಧಾರಯನ್ |
ಸುಯುದ್ಧೇನ ಪರಾಂಲ್ಲೋಕಾನೀಪ್ಸಂತಃ ಕೀರ್ತಿಮೇವ ಚ ॥ 13 ॥
ಒಳ್ಳೆಯ ಯುದ್ಧದಿಂದ ಪರಲೋಕವನ್ನೂ, ಕೀರ್ತಿಯನ್ನೂ ಬಯಸುತ್ತಾ ಅವರೆಲ್ಲರೂ ನೇರವಾದ ಮತ್ತು ಶುದ್ಧವಾದ ಶಸ್ತ್ರಗಳನ್ನೇ ಧರಿಸಿದ್ದರು.
ತದಾಸೀತ್ ತುಮುಲಂ ಯುದ್ಧಂ ಸರ್ವದೋಷವಿವರ್ಜಿತಮ್ |
ಚತುರ್ಣಾಂ ತವ ಯೋಧಾನಾಂ ತೈಸ್ತ್ರಿಭಿಃ ಪಾಂಡವೈಃ ಸಹ ॥ 14 ॥
ನಿನ್ನ ನಾಲ್ಕು ಯೋಧರಿಗೂ ಮತ್ತು ಪಾಂಡವರ ಮೂರು ಯೋಧರಿಗೂ ಸರ್ವದೋಷವಿವರ್ಜಿತವಾದ, ತೀವ್ರವಾದ ಯುದ್ಧವು ನಡೆಯಿತು.
ಧೃಷ್ಟದ್ಯುಮ್ನಸ್ತು ತಾನ್ ಹಿತ್ವಾ ತವ ರಾಜನ್ ರಥರ್ಷಭಾನ್ |
ಯಮಾಭ್ಯಾಂ ವಾರಿತಾನ್ ದೃಷ್ಟ್ವಾ ಶೀಘ್ರಾಸ್ತ್ರೋ ದ್ರೋಣಮಭ್ಯಯಾತ್ ॥
ಎಲೈ ರಾಜನೇ, ಧೃಷ್ಟದ್ಯುಮ್ನನು ನಿನ್ನ ಯೋಧರಾದ ರಥಶ್ರೇಷ್ಠರು ನಕುಲ- ಸಹದೇವರಿಂದ ತಡೆಯಲ್ಪಟ್ಟುದನ್ನು ನೋಡಿ,

ಶೀಘ್ರಾಸ್ತ್ರವನ್ನು ಹೊಂದಿ ದ್ರೋಣರ ಕಡೆಗೇ ಹೋದನು.
ನಿವಾರಿತಾಸ್ತು ತೇ ವೀರಾಸ್ತಯೋಃ ಪುರುಷಸಿಂಹಯೋಃ |
ಸಮಸಜ್ಜಂತ ಚತ್ವಾರೋ ವಾತಾಃ ಪರ್ವತಯೋರಿವ ॥ 16 ॥
ಪುರುಷಸಿಂಹರಾದ ನಕುಲ-ಸಹದೇವರಿಂದ ತಡೆಯಲ್ಪಟ್ಟ ನಿನ್ನ ನಾಲ್ವರು ವೀರರು ವಾಯುಗಳು ಪರ್ವತದ ಜೊತೆಯಲ್ಲಿ ಸೇರಿದಂತೆ ಅವರೊಡನೆ ಸೆಣೆಸಿದರು.
ದ್ವಾಭ್ಯಾಂ ದ್ವಾಭ್ಯಾಂ ಯಮೌ ಸಾರ್ಧಂ ರಥಾಭ್ಯಾಂ ರಥಪುಂಗವೌ |
ಸಮಾಸಕ್ತೌ ತತೋ ದ್ರೋಣಂ ಧೃಷ್ಟದ್ಯುಮ್ನೋಽಭ್ಯವರ್ತತ ॥ 17 ॥
ರಥಪುಂಗವರಾದ ಅವರು ಎರಡೆರಡು ರಥಗಳಿಂದ ನಕುಲ-ಸಹದೇವರಲ್ಲಿ ಒಬ್ಬೊಬ್ಬರ ಜೊತೆಯಲ್ಲಿಯೂ ಯುದ್ಧಕ್ಕೆ ಸಂಸಕ್ತರಾದರು. ಆಗ ಧೃಷ್ಟದ್ಯುಮ್ನನು ದ್ರೋಣರ ಕಡೆಗೆ ಸಾಗಿದನು.
ದೃಷ್ಟ್ವಾ ದ್ರೋಣಾಯ ಪಾಂಚಾಲ್ಯಂ ವ್ರಜಂತಂ ಯುದ್ಧದುರ್ಮದಮ್ |
ಯಮಾಭ್ಯಾಂ ತಾಂಶ್ಚ ಸಂಸಕ್ತಾಂಸ್ತದಂತರಮುಪಾದ್ರವತ್ ॥ 18 ॥
ದುರ್ಯೋಧನೋ ಮಹಾರಾಜ ಕಿರನ್ ಶೋಣಿತಭೋಜನಾನ್ |
ತಂ ಸಾತ್ಯಕಿಃ ಶೀಘ್ರತರಂ ಪುನರೇವಾಭ್ಯವರ್ತತ ॥ 19 ॥
ಪಾಂಚಾಲ್ಯನೂ, ಯುದ್ಧದುರ್ಮದನೂ ಆದ ಧೃಷ್ಟದ್ಯುಮ್ನನು ದ್ರೋಣರ ಕಡೆಗೆ ಹೋಗುತಿತರುವುದನ್ನೂ, ತನ್ನ ನಾಲ್ವರು ವೀರರು ನಕುಲ-ಸಹದೇವರ ಜೊತೆಯಲ್ಲಿ ಸೆಣೆಸುತ್ತಿರುವುದನ್ನು ನೋಡಿದ ದುರ್ಯೋಧನನು ಎಲೈ ಮಹಾರಾಜನೇ, ರಕ್ತ ಭೋಜಿಗಳಾದ ಬಾಣಗಳನ್ನು ಪ್ರಯೋಗಿಸುತ್ತಾ ಈ ಮಧ್ಯದಲ್ಲಿ ಧಾವಿಸಿ ಬಂದನು. ಸಾತ್ಯಕಿಯು ಅವನಿಗಿಂತಲೂ ಶೀಘ್ರವಾಗಿ ಬಂದು ಪುನಃ ಅವನನ್ನು ಎದುರಿಸಿದನು.
ತೌ ಪರಸ್ಪರಮಾಸಾದ್ಯ ಸಮೀಪೇ ಕುರುಮಾಧವೌ |
ಹಸಮಾನೌ ನೃಶಾರ್ದೂಲಾವಭೀತೌ ಸಮಗಚ್ಛತಾಮ್ ॥ 20 ॥
ಕುರು-ಮಾಧವರಾದ, ನರಶಾರ್ದೂಲರಾದ ಅವರಿಬ್ಬರು ಒಬ್ಬರನ್ನೊಬ್ಬರು ಸಮೀಪಿಸಿ ನಗುತ್ತಾ ನಿರ್ಭಯವಾಗಿ ಯುದ್ಧದಲ್ಲಿ ಸಂಸಕ್ತರಾದರು.
ಬಾಲ್ಯೇ ವೃತ್ತಾನಿ ಸರ್ವಾಣಿ ಪ್ರೀಯಮಾಣೌ ವಿಚಿಂತ್ಯ ತೌ |
ಅನ್ಯೋನ್ಯಂ ಪ್ರೇಕ್ಷಮಾಣೌ ಚ ಹಸಮಾನೌ ಪುನಃ ಪುನಃ ॥ 21 ॥
ಬಾಲ್ಯದಲ್ಲಿ ನಡೆದ ಎಲ್ಲ ಘಟನೆಗಳನ್ನೂ ಚಿಂತಿಸಿ ಸಂತೋಷಪಡುತ್ತಿದ್ದ ಅವರು ಪರಸ್ಪರವಾಗಿ ನೋಡುತ್ತಾ, ಪುನಃ ಪುನಃ ನಗುತ್ತಾ ಯುದ್ಧವನ್ನು ಮಾಡಿದರು.
ಅಥ ದುರ್ಯೋಧನೋ ರಾಜಾ ಸಾತ್ಯಕಿಂ ಪ್ರತ್ಯಭಾಷತ |
ಪ್ರಿಯಂ ಸಖಾಯಂ ಸತತಂ ಗರ್ಹಯನ್ ವೃತ್ತಮಾತ್ಮನಃ ॥ 22 ॥
ಆಗ ರಾಜನಾದ ದುರ್ಯೋಧನನು ಪ್ರಿಯಸ್ನೇಹಿತನಾದ ಸಾತ್ಯಕಿಯನ್ನು ಕುರಿತು ತನ್ನ ಕ್ಷತ್ರಿಯಧರ್ಮವನ್ನು ಸತತವಾಗಿ ನಿಂದಿಸುತ್ತಾ ಮಾತನಾಡಿದನು.
ಧಿಕ್ಕ್ರೋಧಂ ಧಿಕ್ಸಖೇ ಲೋಭಂ ಧಿಙ್ಮೋಹಂ ಧಿಗಮರ್ಷಿತಮ್ |
ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಮೌರಸಮ್ ॥ 23 ॥
ಯತ್ತ್ವಂ ಮಾಮಭಿಸಂಧತ್ಸೇ ತ್ವಾಂ ಚಾಹಂ ಶಿನಿಪುಂಗವ |
ತ್ವಂ ಹಿ ಪ್ರಾಣೈಃ ಪ್ರಿಯತರೋ ಮಮಾಹಂ ಚ ಸದಾ ತವ ॥ 24 ॥
ಸ್ಮರಾಮಿ ತಾನಿ ಸರ್ವಾಣಿ ಬಾಲ್ಯೇ ವೃತ್ತಾನಿ ಯಾನಿ ನೌ |
ತಾನಿ ಸರ್ವಾಣಿ ಜೀರ್ಣಾನಿ ಸಾಂಪ್ರತಂ ನೌ ರಣಾಜಿರೇ |
ಕಿಮನ್ಯತ್ಕ್ರೋಧಲೋಭಾಭ್ಯಾಂ ಯುದ್ಧ್ಯಾಮಿ ತ್ವಾದ್ಯ ಸಾತ್ವತ ॥ 25 ॥
ಸ್ನೇಹಿತನೇ, ಕ್ರೋಧಕ್ಕೆ ಧಿಕ್ಕಾರವಿರಲಿ, ಲೋಭಕ್ಕೆ ಧಿಕ್ಕಾರವಿರಲಿ, ಮೋಹಕ್ಕೆ ಧಿಕ್ಕಾರವಿರಲಿ, ಕ್ಷತ್ರಿಯಧರ್ಮಕ್ಕೆ ಧಿಕ್ಕಾರವಿರಲಿ. ಸಹಜ ಬಲಕ್ಕೆ ಧಿಕ್ಕಾರವಿರಲಿ. ಏಕೆಂದರೆ ಎಲೈ ಶಿನಿಪುಂಗವನೇ ನಿನ್ನನ್ನು ನಾನು ಮತ್ತು ನನ್ನನ್ನು ನೀನು ಕೊಲ್ಲಲು ಉದ್ದೇಶಿಸುತ್ತಿದ್ದೀಯೆ. ನೀನು ನನಗೆ ನನ್ನ ಪ್ರಾಣಗಳಿಗಿಂತಲೂ ಪ್ರಿಯನಾದವನು, ನಾನು ಸಹ ನಿನಗೆ ಹಾಗೆಯೇ. ನಮಗೆ ಬಾಲ್ಯದಲ್ಲಿ ನಡೆದ ಆ ಎಲ್ಲಾ ಘಟನೆಗಳನ್ನು ಸ್ಮರಿಸುತ್ತೇನೆ. ಆದರೆ ಈಗ ರಣರಂಗದಲ್ಲಿ ಅವೆಲ್ಲವೂ ನಶಿಸಿ ಹೋಗಿವೆ. ಮತ್ತೇನೆಂದರೆ ಕ್ರೋಧ-ಲೋಭಗಳಿಂದ ಕೂಡಿ ಎಲೈ ಸಾತ್ವತನೇ, ಈ ದಿನ ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡುತಿತದ್ದೇನೆ.
ತಂ ತಥಾವಾದಿನಂ ರಾಜನ್ ಸಾತ್ಯಕಿಃ ಪ್ರತ್ಯಭಾಷತ |
ಪ್ರಹಸನ್ ವಿಶಿಖಾಂಸ್ತೀಕ್ಷ್ಣಾನುದ್ಯಮ್ಯ ಪರಮಾಸ್ತ್ರವಿತ್ ॥ 26 ॥
ನೇಯಂ ಸಭಾ ರಾಜಪುತ್ರ ನ ಚಾಚಾರ್ಯನಿವೇಶನಮ್ |
ಯತ್ರ ಕ್ರೀಡಿತಮಸ್ಮಾಭಿಸ್ತದಾ ರಾಜನ್ ಸಮಾಗತೈಃ ॥ 27 ॥
ಎಲೈ ರಾಜನೇ, ಹಾಗೆ ಮಾತನಾಡುತ್ತಿದ್ದ ದುರ್ಯೋಧನನನ್ನು ಕುರಿತು ಪರಮಾಸ್ತ್ರವೇತ್ತನಾದ ಸಾತ್ಯಕಿಯು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ ನಗುತ್ತಾ, `ಇದು ಸಭೆಯಲ್ಲ, ನಾವೆಲ್ಲರೂ ಒಟ್ಟು ಸೇರಿ ಆಟವಾಡಿದ ಆಚಾರ್ಯರ ಮನೆಯೂ ಅಲ್ಲ' ಎಂದು ಹೇಳಿದನು.
ದುರ್ಯೋಧನಃ
ಕ್ವ ಸಾ ಕ್ರೀಡಾ ಗತಾಽಸ್ಮಾಕಂ ಬಾಲ್ಯೇ ವೈ ಶಿನಿಪುಂಗವ |

ಕ್ವ ಚ ಯುದ್ಧಮಿದಂ ಭೂಯಃ ಕಾಲೋ ಹಿ ದುರತಿಕ್ರಮಃ ॥ 28 ॥
ದುರ್ಯೋಧನ ಎಲೈ ಶಿನಿಪುಂಗವನೇ, ನಾವು ಬಾಲ್ಯದಲ್ಲಿ ಆಡಿದ ಆ ಕ್ರೀಡೆಗಳು ಎಲ್ಲಿ ಹೋದವು ಮತ್ತು ಈ ದಿನ ಪುನಃ ಈ ಯುದ್ಧವು ಎಲ್ಲಿ? ಕಾಲವನ್ನು ಯಾರೂ ಮೀರಲು ಸಾಧ್ಯವಿಲ್ಲ.
ಕಿಂ ನು ನೋ ವಿದ್ಯತೇ ಕೃತ್ಯಂ ಧನೇನ ಧನಲಿಪ್ಸಯಾ |
ಯತ್ರ ಯುದ್ಧ್ಯಾಮಹೇ ಸರ್ವೇ ಧನಲೋಭಾತ್ ಸಮಾಗತಾಃ ॥29॥
ಎಲ್ಲರೂ ಧನಲೋಭದಿಂದ ಕೂಡಿದವರಾಗಿ ಒಟ್ಟುಸೇರಿ ಯುದ್ಧವನ್ನು ಮಾಡುತ್ತಿರುವೆನಷ್ಟೆ? ಆ ಧನದಿಂದಾಗಲೀ ಅಥವಾ ಧನದ ಆಸೆಯಿಂದಾಗಲೀ ನಮಗೆ ಆಗಬೇಕಾದುದು ಏನಿದೆ?
ಸಂಜಯಃ
ತಂ ತಥಾವಾದಿನಂ ತತ್ರ ರಾಜಾನಂ ಮಾಧವೋಽಬ್ರವೀತ್ |
ಏವಂವೃತ್ತಂ ಸದಾ ಕ್ಷತ್ರಂ ಯುದ್ಧ್ಯಂತೀಹ ಗುರೂನಪಿ ॥ 30 ॥
ಸಂಜಯ ಹಾಗೆ ಮಾತನಾಡುತ್ತಿದ್ದ ರಾಜನನ್ನು ಕುರಿತು ಮಾಧವನಾದ ಸಾತ್ಯಕಿಯು ಮಾತನಾಡಿದನು ಕ್ಷತ್ರಿಯರ ನಡತೆಯೇ ಹೀಗೆ. ಗುರುಗಳ ಜೊತೆಯಲ್ಲಿಯೂ ಯುದ್ಧವನ್ನು ಮಾಡುತ್ತಾರೆ.
ಯದಿ ತೇಽಹಂ ಪ್ರಿಯೋ ರಾಜನ್ ಜಹಿ ಮಾಂ ಮಾ ಚಿರಂ ಕೃಥಾಃ |
ತ್ವತ್ಕೃತೇ ಸುಕೃತಾಲ್ಲೋಕಾನ್ ಗಚ್ಛೇಯಂ ಭರತರ್ಷಭ ॥ 31 ॥
ಎಲೈ ರಾಜನೇ, ನಿನಗೆ ನಾನು ಪ್ರಿಯನಾದರೆ, ಶೀಘ್ರವಾಗಿ ನನ್ನನ್ನು ಕೊಲ್ಲು, ವಿಳಂಬ ಮಾಡಬೇಡ. ಎಲೈ ಭರತರ್ಷಭನೇ, ನಿನ್ನ ನಿಮಿತ್ತದಿಂದಾಗಿ ನಾನು ಪುಣ್ಯಲೋಕಗಳಿಗೆ ಹೋದೇನು!
ಯಾ ತೇ ಶಕ್ತಿರ್ಬಲಂ ಚೈವ ತತ್ಕ್ಷಿಪ್ರಂ ಮಯಿ ದರ್ಶಯ |
ನೇಚ್ಛಾಮ್ಯೇತದಹಂ ದ್ರಷ್ಟುಂ ಮಿತ್ರಾಣಾಂ ವ್ಯಸನಂ ಮಹತ್ ॥ 32 ॥
ನಿನ್ನ ಶಕ್ತಿ ಮತ್ತು ಬಲಗಳು ಎಷ್ಟಿವೆಯೋ ಅವನ್ನು ಶೀಘ್ರವಾಗಿ ನನ್ನ ಮೇಲೆ ತೋರಿಸು. ಮಿತ್ರರ ಕದನರೂಪವಾದ ದೊಡ್ಡ ವ್ಯಸನವನ್ನು ನಾನು ನೋಡಲು ಇಷ್ಟಪಡುವುದಿಲ್ಲ (ಎಂದು ಹೇಳಿದನು).
ಇತ್ಯೇವಂ ವ್ಯಕ್ತಮಾಭಾಷ್ಯ ಪ್ರತಿಭಾಷ್ಯ ಚ ಸಾತ್ಯಕಿಃ |
ಅಭ್ಯಯಾತ್ ತೂರ್ಣಮವ್ಯಗ್ರೋ ನಿರಪೇಕ್ಷೋ ವಿಶಾಂಪತೇ ॥ 33 ॥
ಎಲೈ ರಾಜನೇ, ಹೀಗೆ ಸ್ಪಷ್ಟವಾಗಿ ಮಾತನಾಡಿ, ದುರ್ಯೋಧನನ ಮಾತುಗಳಿಗೆ ಉತ್ತರವನ್ನು ನೀಡಿ, ಸಾತ್ಯಕಿಯು ಶೀಘ್ರವಾಗಿ ಯಾವುದನ್ನೂ ಅಪೇಕ್ಷಿಸದೆ, ವ್ಯಗ್ರತೆಯನ್ನು ಹೊಂದದೆ ಮುಂದೆ ಸಾಗಿದನು.
ತಮಾಯಾಂತಮಭಿಪ್ರೇಕ್ಷ್ಯ ಪ್ರತ್ಯಗೃಹ್ಣಾತ್ ತವಾತ್ಮಜಃ |
ಶರೈಶ್ಚಾವಾಕಿರದ್ ರಾಜನ್ ಶೈನೇಯಂ ತನಯಸ್ತವ ॥ 34 ॥
ಎಲೈ ರಾಜನೇ, ಮುಂದೆ ಬರುತ್ತಿದ್ದ ಸಾತ್ಯಕಿಯನ್ನು ನೋಡಿ ನಿನ್ನ ಪುತ್ರನು ಅವನನ್ನು ಸ್ವೀಕರಿಸಿ, ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತತಃ ಪ್ರವವೃತೇ ಯುದ್ಧಂ ಕುರುಮಾಧವಸಿಂಹಯೋಃ |
ಅನ್ಯೋನ್ಯಂ ಕ್ರುದ್ಧಯೋರ್ಘೋರಂ ಯಥಾ ದ್ವಿರದಸಿಂಹಯೋಃ ॥35॥
ಅನಂತರ ಕುರುಸಿಂಹನಿಗೂ ಮತ್ತು ಮಾಧವಸಿಂಹನಿಗೂ ಪರಸ್ಪರವಾಗಿ ಕೋಪಗೊಂಡ ಗಜ-ಸಿಂಹಗಳಿಗೆ ನಡೆಯುವಂತೆ ಘೋರವಾದ ಯುದ್ಧವು ನಡೆಯಿತು.
ತತಃ ಪೂರ್ಣಾಯತೋತ್ಸೃಷ್ಟೈಃ ಸಾತ್ವತಂ ಯುದ್ಧದುರ್ಮದಮ್ |
ದುರ್ಯೋಧನಃ ಪ್ರತ್ಯವಿದ್ಧ್ಯದ್ ದಶಭಿರ್ನಿಶಿತೈಃ ಶರೈಃ ॥ 36 ॥
ಆಗ ದುರ್ಯೋಧನನು ಪೂರ್ಣವಾಗಿ ಹೆದೆಯನ್ನು ಎಳೆದು ಪ್ರಯೋಗಿಸಿದ ಹತ್ತು ತೀಕ್ಷ್ಣವಾದ ಬಾಣಗಳಿಂದ ಯುದ್ಧದುರ್ಮದನಾದ ಸಾತ್ಯಕಿಯನ್ನು ಹೊಡೆದನು.
ತಂ ಸಾತ್ಯಕಿಃ ಪ್ರತ್ಯವಿದ್ಧ್ಯತ್ ತಥೈವ ದಶಭಿಃ ಶರೈಃ |
ಪಂಚಾಶತಾ ಪುನಶ್ಚಾಜೌ ತ್ರಿಂಶತಾ ದಶಭಿಶ್ಚ ಹ ॥ 37 ॥
ಸಾತ್ಯಕಿಯೂ ಸಹ ಹತ್ತು ಬಾಣಗಳಿಂದ ಹಾಗೆಯೇ ಅವನನ್ನು ಪ್ರತಿಯಾಗಿ ಹೊಡೆದು ಪುನಃ ರಣರಂಗದಲ್ಲಿ ಐವತ್ತು ಬಾಣಗಳನ್ನೂ, ಮೂವತ್ತು ಬಾಣಗಳನ್ನೂ ಮತ್ತು ಹತ್ತು ಬಾಣಗಳನ್ನೂ ಪ್ರಯೋಗಿಸಿದನು.
ತಸ್ಯ ಸಂದಧತಶ್ಚೇಷೂನ್ ಸಂಹಿತೇಷುಂ ಚ ಕಾರ್ಮುಕಮ್ |
ಅಚ್ಛಿನತ್ ಸಾತ್ಯಕಿಸ್ತೂರ್ಣಂ ಶರೈಶ್ಚೈವಾಭ್ಯವೀವೃಷತ್ ॥ 38 ॥
ದುರ್ಯೋಧನನು ಬಾಣವನ್ನು ಧನುಸ್ಸಿನಲ್ಲಿ ಹೂಡುತ್ತಿರುವಂತೆಯೇ ಆ ಧನುಸ್ಸನ್ನು ಮತ್ತು ಅವನ ಬಾಣಗಳನ್ನು ಸಾತ್ಯಕಿಯು ಬಾಣಗಳ ಮಳೆಯನ್ನು ಸುರಿಸಿ ಶೀಘ್ರವಾಗಿ ಕತ್ತರಿಸಿದನು.
ಸ ಗಾಢವಿದ್ಧೋ ವ್ಯಥಿತಃ ಪ್ರತ್ಯಪಾಯಾದ್ರಥಾಂತರಮ್ |
ದುರ್ಯೋಧನೋ ಮಹಾರಾಜ ದಾಶಾರ್ಹಶರಪೀಡಿತಃ ॥ 39 ॥
ಎಲೈ ಮಹಾರಾಜನೇ, ಸಾತ್ಯಕಿಯ ಬಾಣಗಳಿಂದ ಪೀಡಿತನಾದ ದುರ್ಯೋಧನನು ಗಾಢವಾಗಿ ಹೊಡೆಯಲ್ಪಟ್ಟು, ವ್ಯಥೆಯನ್ನು ಹೊಂದಿ ಇನ್ನೊಂದು ರಥಕ್ಕೆ ಹೋದನು.
ಸಮಾಶ್ವಸ್ಯ ತು ಪುತ್ರಸ್ತೇ ಸಾತ್ಯಕಿಂ ಪುನರಭ್ಯಯಾತ್ |
ವಿಸೃಜನ್ನಿಷುಜಾಲಾನಿ ಯುಯುಧಾನರಥಂ ಪ್ರತಿ ॥ 40 ॥

ನಿನ್ನ ಪುತ್ರನು ಸ್ವಲ್ಪ ಸುಧಾರಿಸಿಕೊಂಡು ಪುನಃ ಸಾತ್ಯಕಿಯ ಕಡೆಗೆ ಬಂದು ಸಾತ್ಯಕಿಯ ರಥದ ಮೇಲೆ ಬಾಣಗಳ ಸಮೂಹಗಳನ್ನು ಪ್ರಯೋಗಿಸಿದನು.
ತಥೈವ ಸಾತ್ಯಕಿರ್ಬಾಣಾನ್ ದುರ್ಯೋಧನರಥಂ ಪ್ರತಿ |
ಪ್ರತತಂ ವ್ಯಸೃಜದ್ ರಾಜಂಸ್ತತ್ ಸಂಕುಲಮವರ್ತತ ॥ 41 ॥
ಎಲೈ ರಾಜನೇ, ಹಾಗೆಯೇ ಸಾತ್ಯಕಿಯೂ ಸಹ ದುರ್ಯೋಧನನ ರಥದ ಮೇಲೆ ಸತತವಾಗಿ ಬಾಣಗಳನ್ನು ಪ್ರಯೋಗಿಸಿದನು. ಆಗ ಎಲ್ಲವೂ ಮಿಶ್ರವಾಯಿತು.
ತತ್ರೇಷುಭಿಃ ಕ್ಷಿಪ್ಯಮಾಣೈಃ ಪತದ್ಭಿಶ್ಚ ಸಮಂತತಃ |
ಅಗ್ನೇರಿವ ಮಹಾಕಕ್ಷೇ ಶಬ್ದಃ ಸಮಭವನ್ಮಹಾನ್ ॥ 42 ॥
ಧನುಸ್ಸುಗಳಿಂದ ಪ್ರಯೋಗಿಸಲ್ಪಟ್ಟು ಆಕಾಶದಲ್ಲಿ ಸಂಚರಿಸುವ ಆ ಬಾಣಗಳು ದೊಡ್ಡ ಹುಲ್ಲುಗಾವಲಿನಲ್ಲಿ ಅಗ್ನಿಯು ಶಬ್ದ ಮಾಡುವಂತೆ ದೊಡ್ಡ ಶಬ್ದವನ್ನು ಮಾಡಿದವು.
ತತ್ರಾಭ್ಯಧಿಕಮಾಲಕ್ಷ್ಯ ಮಾಧವಂ ರಥಸತ್ತಮಮ್ |
ಕ್ಷಿಪ್ರಮಭ್ಯಪತತ್ ಕರ್ಣಃ ಪರೀಪ್ಸಂಸ್ತನಯಂ ತವ ॥ 43 ॥
ಅವರಲ್ಲಿ ರಥಶ್ರೇಷ್ಠನಾದ ಸಾತ್ಯಕಿಯು ಶ್ರೇಷ್ಠನಾಗಿರುವುದನ್ನು ಗಮನಿಸಿ, ನಿನ್ನ ಪುತ್ರನನ್ನು ರಕ್ಷಿಸಲು ಬಯಸಿ ಕರ್ಣನು ಶೀಘ್ರವಾಗಿ ಅಲ್ಲಿಗೆ ಬಂದನು.
ನ ತು ತಂ ಮರ್ಷಯಾಮಾಸ ಭೀಮಸೇನೋ ಮಹಾಬಲಃ |
ಅಭ್ಯಯಾತ್ತ್ವರಿತಃ ಕರ್ಣಂ ವಿಸೃಜನ್ ಸಾಯಕಾನ್ ಬಹೂನ್ ॥ 44 ॥
ಮಹಾಬಲನಾದ ಭೀಮಸೇನನು ಅವನನ್ನು ನೋಡಿ ಸಹಿಸಲಿಲ್ಲ. ಅವನು ಕರ್ಣನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸುತ್ತಾ ಅಲ್ಲಿಗೆ ಬಂದನು.
ತಸ್ಯ ಕರ್ಣಃ ಶಿತಾನ್ ಬಾಣಾನ್ ಪ್ರತಿಹನ್ಯ ಹಸನ್ನಿವ |
ಧನುಃ ಶರಾಂಶ್ಚ ಚಿಚ್ಛೇದ ಸೂತಂ ಚಾಭ್ಯಹನಚ್ಛರೈಃ ॥ 45 ॥
ಕರ್ಣನು ಅವನ ತೀಕ್ಷ್ಣವಾದ ಬಾಣಗಳನ್ನು ನಗುತ್ತಲೇ ಪ್ರತಿಯಾಗಿ ಹೊಡೆದು ಅವನ ಧನುಸ್ಸನ್ನೂ, ಬಾಣಗಳನ್ನೂ ಕತ್ತರಿಸಿ ಸಾರಥಿಯನ್ನು ಬಾಣಗಳಿಂದ ಹೊಡೆದನು.
ಭೀಮಸೇನಸ್ತು ಸಂಕ್ರುದ್ಧೋ ಗದಾಮಾದಾಯ ಪಾಂಡವಃ |
ಧ್ವಜಂ ಧನುಶ್ಚ ಸೂತಂ ಚ ಸಮ್ಮಮರ್ದಾಹವೇ ರಿಪೋಃ ॥ 46 ॥
ಬಹಳ ಕೋಪಗೊಂಡ ಪಾಂಡವನಾದ ಭೀಮಸೇನನಾದರೋ ಗದೆಯನ್ನು ತೆಗೆದುಕೊಂಡು ರಣರಂಗದಲ್ಲಿ ಶತ್ರುವಿನ ರಥದ ಧ್ವಜವನ್ನೂ, ಸಾರಥಿಯನ್ನೂ ಮತ್ತು ಶತ್ರುವಿನ ಧನುಸ್ಸನ್ನೂ ಚೂರ್ಣ(ಪುಡಿ)ಗೊಳಿಸಿದನು.
ಅಮೃಷ್ಯಮಾಣಃ ಕರ್ಣಸ್ತು ಭೀಮಸೇನಮಯುದ್ಧ್ಯತ |
ವಿವಿಧೈರಿಷುಜಾಲೈಶ್ಚ ನಾನಾಶಸ್ತ್ರೈಶ್ಚ ಸಂಯುಗೇ ॥ 47 ॥
ಅದನ್ನು ಸಹಿಸದ ಕರ್ಣನಾದರೋ ರಣರಂಗದಲ್ಲಿ ತೀವ್ರವಾದ ಬಾಣ ಸಮೂಹಗಳಿಂದಲೂ, ನಾನಾ ಶಸ್ತ್ರಗಳಿಂದಲೂ ಭೀಮಸೇನನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.
ಸಂಕುಲೇ ವರ್ತಮಾನೇ ತು ರಾಜಾ ಧರ್ಮಸುತೋಽಬ್ರವೀತ್ |
ಪಾಂಚಾಲಾನಾಂ ನರವ್ಯಾಘ್ರಾನ್ ಮತ್ಸ್ಯಾನಾಂ ಚ ನರರ್ಷಭಾನ್ ॥48॥
ಯೇ ನಃ ಪ್ರಾಣಾಃ ಶಿರೋ ಯೇ ನೋ ಯೇ ನೋ ಯೋಧಾ ಮಹಾಬಲಾಃ |
ತ ಏತೇ ಧಾರ್ತರಾಷ್ಟ್ರೇಷು ವಿಷಕ್ತಾಃ ಪುರುಷರ್ಷಭಾಃ ॥49॥
ಕಿಂ ತಿಷ್ಠತ ಯಥಾ ಮೂಢಾಃ ಸರ್ವೇ ವಿಗತಚೇತಸಃ |
ತತ್ರ ಗಚ್ಛತ ಯತ್ರೈತೇ ಯುದ್ಧ್ಯಂತೇ ಮಾಮಕಾ ರಥಾಃ ॥50॥
ಹಾಗೆ ಸಂಕೀರ್ಣವಾದ ಯುದ್ಧವು ನಡೆಯುತ್ತಿರುವಾಗ ರಾಜನಾದ ಧರ್ಮಸುತನು ಪಾಂಚಾಲರ ಮತ್ತು ಮತ್ಸ್ಯರ ನರಶ್ರೇಷ್ಠರನ್ನು ಕುರಿತು- `ಎಲೈ ಪುರುಷರ್ಭರೇ, ನಮಗೆ ಪ್ರಾಣದಂತೆ, ಶಿರಸ್ಸಿನಂತೆ ಇರುವ ಮಹಾಬಲರಾದ ಈ ಯೋಧರು ಧೃತರಾಷ್ಟ್ರ ಪುತ್ರರ ಜೊತೆಯಲ್ಲಿ ಯುದ್ಧದಲ್ಲಿ ಸಂಸಕ್ತರಾಗಿದ್ದಾರೆ. ಎಲ್ಲರೂ ಪ್ರಜ್ಞಾಹೀನರಾಗಿ ಏಕೆ ಮೂಢರಂತೆ ನಿಂತಿದ್ದೀರಿ? ನನ್ನ ಮಹಾರಥರು ಯುದ್ಧ ಮಾಡುವ ಸ್ಥಳಕ್ಕೆ ಹೋಗಿ' ಎಂದು ಹೇಳಿದನು.
ಕ್ಷತ್ರಧರ್ಮಂ ಪುರಸ್ಕೃತ್ಯ ಸರ್ವ ಏವ ಗತಜ್ವರಾಃ |
ಜಯಂತೋ ವಧ್ಯಮಾನಾ ವಾ ಗತಿಮಿಷ್ಟಾಂ ಗಮಿಷ್ಯಥ ॥ 51 ॥
ಜಿತ್ವಾ ಚ ಬಹುಭಿರ್ಯಜ್ಞೈರ್ಯಕ್ಷ್ಯಧ್ವಂ ಭೂರಿದಕ್ಷಿಣೈಃ |
ಹತಾ ವಾ ದೇವಸಾದ್ಭೂತ್ವಾ ಲೋಕಾನ್ ಪ್ರಾಪ್ಸ್ಯಥ ಪುಷ್ಕಳಾನ್ ॥52॥
ಕ್ಷತ್ರಿಯ ಧರ್ಮವನ್ನು ಪುರಸ್ಕರಿಸಿ ಎಲ್ಲರೂ ಯಾವ ಆತಂಕವನ್ನೂ ಪಡದೆ, ಜಯಿಸಿ ಅಥವಾ ಹತರಾಗಿ, ಇಷ್ಟವಾದ ಗತಿಯನ್ನು ಹೊಂದಿ. ಗೆದ್ದು, ಅನೇಕ ದಕ್ಷಿಣೆಯಿಂದ ಕೂಡಿದ ಯಾಗಗಳನ್ನು ಆಚರಿಸಿ ಅಥವಾ ಹತರಾಗಿ ದೇವತೆಗಳಿಗೆ ವಶರಾಗಿ ಪುಷ್ಕಳವಾದ ಲೋಕಗಳನ್ನು ಹೊಂದಿ (ಎಂದು ಹೇಳಿದನು).
ತೇ ರಾಜ್ಞಾ ಚೋದಿತಾ ವೀರಾ ಯೋತ್ಸ್ಯಮಾನಾ ಮಹಾರಥಾಃ |
ಚತುರ್ಧಾ ವಾಹಿನೀಂ ಕೃತ್ವಾ ತ್ವರಿತಾ ದ್ರೋಣಮಭ್ಯಯುಃ ॥ 53 ॥
ರಾಜನಿಂದ ಪ್ರೇರಿತರಾದ ವೀರರಾದ ಆ ಮಹಾರಥರು ಯುದ್ಧವನ್ನು ಮಾಡಲು ಸಿದ್ಧರಾಗಿ ಸೈನ್ಯವನ್ನು ನಾಲ್ಕು ಭಾಗವನ್ನಾಗಿ ಮಾಡಿ

ಶೀಘ್ರವಾಗಿ ದ್ರೋಣರ ಕಡೆಗೆ ನುಗ್ಗಿದರು.
ಪಾಂಚಾಲಾಸ್ತ್ವೇಕತೋ ದ್ರೋಣಮಭ್ಯಘ್ನನ್ ಬಹುಭಿಃ ಶರೈಃ |
ಭೀಮಸೇನಪುರೋಗಾಶ್ಚ ಏಕತಃ ಪರ್ಯವಾರಯನ್ ॥ 54 ॥
ಪಾಂಚಾಲರು ಒಂದು ಕಡೆಯಿಂದ ಅನೇಕ ಬಾಣಗಳಿಂದ ದ್ರೋಣರನ್ನು ಹೊಡೆದರು. ಭೀಮಸೇನ ಮೊದಲಾದವರು ಇನ್ನೊಂದು ಕಡೆಯಿಂದ ದ್ರೋಣರನ್ನು ತಡೆದರು.
ಆಸಂಸ್ತು ಪಾಂಡುಪುತ್ರಾಣಾಂ ತ್ರಯೋಽಜಿಹ್ಮಾ ಮಹಾರಥಾಃ |
ಯಮೌ ಚ ಭೀಮಸೇನಶ್ಚ ಪ್ರಾಕ್ರೋಶಂತ ಧನಂಜಯಮ್ ॥ 55 ॥
ಅಭಿದ್ರವಾರ್ಜುನ ಕ್ಷಿಪ್ರಂ ಕುರೂನ್ ದ್ರೋಣಾದಪಾನುದ |
ತತ ಏನಂ ಹನಿಷ್ಯಂತಿ ಪಾಂಚಾಲಾ ಹತರಕ್ಷಿಣಮ್ ॥ 56 ॥
ಪಾಂಡುಪುತ್ರರ ಕಡೆಯಲ್ಲಿ ಕಪಟವನ್ನು ಮಾಡದ ಮೂರು ಮಹಾರಥರಿದ್ದರು - ನಕುಲ-ಸಹದೇವರು ಮತ್ತು ಭೀಮಸೇನ. ಅವರು ಅರ್ಜುನನನ್ನು ಕುರಿತು- `ಅರ್ಜುನನೇ, ಇಲ್ಲಿಗೆ ಓಡಿ ಬಾ. ಶೀಘ್ರವಾಗಿ ಕುರುಗಳನ್ನು ದ್ರೋಣರಿಂದ ದೂರ ಸರಿಸು. ಅನಂತರ ರಕ್ಷಣೆಯಿಲ್ಲದ ದ್ರೋಣರನ್ನು ಪಾಂಚಾಲರು ಕೊಲ್ಲುವರು' ಎಂದು ಕಿರುಚಿದರು.
ಕೌರವೇಯಾಂಸ್ತತಃ ಪಾರ್ಥಃ ಸಹಸಾ ಸಮುಪಾದ್ರವತ್ |
ಪಾಂಚಾಲಾನೇವ ತು ದ್ರೋಣೋ ಧೃಷ್ಟದ್ಯುಮ್ನಪುರೋಗಮಾನ್ ॥57॥
ಆಗ ಪಾರ್ಥನು ಕೌರವರ ಮೇಲೆ ಶೀಘ್ರವಾಗಿ ಮುನ್ನುಗ್ಗಿದನು. ದ್ರೋಣರಾದರೋ ಧೃಷ್ಟದ್ಯುಮ್ನ ಮೊದಲಾದ ಪಾಂಚಾಲರ ಮೇಲೆ ಎರಗಿದರು.
ಸಸೃಜುಸ್ತರಸಾ ವೀರಾನ್ ಪಂಚಮೇಽಹನಿ ಭಾರತ |
ಪಾಂಚಾಲಾನಾಂ ತತೋ ದ್ರೋಣೋಽಪ್ಯಕರೋತ್ ಕದನಂ ಮಹತ್ |
ಯಥಾ ಕ್ರುದ್ಧೋ ರಣೇ ಶಕ್ರೋ ದಾನವಾನಾಂ ಕ್ಷಯಂ ಪುರಾ ॥ 58 ॥
ಎಲೈ ಭಾರತನೇ, (ದ್ರೋಣರ ಸೇನಾಪತ್ಯದ) ಐದನೆಯ ದಿವಸದಲ್ಲಿ ವೀರರು ತಮ್ಮ ಸಾಮರ್ಥ್ಯದಿಂದ ಪರಸ್ಪರವಾಗಿ ಮರ್ದಿಸಿದರು. ಹಿಂದೆ ಇಂದ್ರನು ಕ್ರುದ್ಧನಾಗಿ ದಾನವರ ಜೊತೆಯಲ್ಲಿ ಯುದ್ಧವನ್ನು ಮಾಡಿ ವಿನಾಶಗೊಳಿಸಿದಂತೆ ದ್ರೋಣರು ಪಾಂಚಾಲರ ಜೊತೆಯಲ್ಲಿ ದೊಡ್ಡ ಯುದ್ಧವನ್ನು ಮಾಡಿದರು.
ದ್ರೋಣಾಸ್ತ್ರೇಣ ಮಹಾರಾಜ ವಧ್ಯಮಾನಾಃ ಪರೇ ಯುಧಿ |
ನಾತ್ರಸಂತ ರಣೇ ದ್ರೋಣಾತ್ ಸತ್ತ್ವವಂತೋ ಮಹಾರಥಾಃ ॥ 59 ॥
ಎಲೈ ಮಹಾರಾಜನೇ, ದ್ರೋಣರ ಅಸ್ತ್ರಗಳಿಂದ ವಧಿಸಲ್ಪಡುತ್ತಿದ್ದ ಧೈರ್ಯಶಾಲಿ- ಗಳಾದ, ಮಹಾರಥರಾದ ಪರರು ರಣರಂಗದಲ್ಲಿ ದ್ರೋಣರಿಗೆ ಹೆದರಲಿಲ್ಲ.
ವಧ್ಯಮಾನಾ ಮಹಾರಾಜ ಪಾಂಚಾಲಾಃ ಸೃಂಜಯಾಸ್ತಥಾ |
ದ್ರೋಣಮೇವಾಭ್ಯಯುರ್ಯುದ್ಧೇ ಮೋಹಯಂತೋ ಮಹಾರಥಮ್ ॥
ಎಲೈ ಮಹಾರಾಜನೇ, ದ್ರೋಣರಿಂದ ಹೊಡೆಯಲ್ಪಡುತ್ತಿದ್ದ ಪಾಂಚಾಲರು ಮತ್ತು ಸೃಂಜಯರು ಮಹಾರಥರಾದ ದ್ರೋಣರಿಗೆ ಆಶ್ಚರ್ಯವನ್ನುಂಟು ಮಾಡುತ್ತಾ ಯುದ್ಧದಲ್ಲಿ ದ್ರೋಣರ ಕಡೆಗೇ ವೇಗದಿಂದ ಮುನ್ನುಗ್ಗಿದರು.
ತೇಷಾಂ ತೂತ್ಪಾದ್ಯಮಾನಾನಾಂ ಪಾಂಚಾಲಾನಾಂ ಸಮಂತತಃ |
ಅಭವದ್ ಭೈರವೋ ನಾದೋ ವಧ್ಯತಾಂ ಶರಶಕ್ತಿಭಿಃ ॥ 61 ॥
ಹೀಗೆ ಶರ-ಶಕ್ತಿಗಳಿಂದ ಹೊಡೆಯಲ್ಪಟ್ಟು ಎಲ್ಲ ಕಡೆಗಳಲ್ಲಿಯೂ ನಾಶಗೊಳಿ- ಸಲ್ಪಡುತ್ತಿದ್ದಂತಹ ಪಾಂಚಾಲರಿಗೆ ಭೈರವ ನಾದವುಂಟಾಯಿತು.
ವಧ್ಯಮಾನೇಷು ಸಂಗ್ರಾಮೇ ಪಾಂಚಾಲೇಷು ಮಹಾತ್ಮನಾ |
ಉದೀರ್ಯಮಾಣೇ ದ್ರೋಣಾಸ್ತ್ರೇ ಪಾಂಡವಾನ್ ಭಯಮಾವಿಶತ್ ॥
ಮಹಾತ್ಮರಾದ ದ್ರೋಣರು ಯುದ್ಧದಲ್ಲಿ ಪಾಂಚಾಲರನ್ನು ನಾಶಪಡಿಸುತ್ತಿರಲು ದ್ರೋಣರ ಅಸ್ತ್ರಗಳು ವಿಜೃಂಭಿಸುತ್ತಿರಲು ಪಾಂಡವರಿಗೆ ಭಯವುಂಟಾಯಿತು.
ದೃಷ್ಟ್ವಾಶ್ವನರಸಂಘಾನಾಂ ವಿಪುಲಂ ಚ ಕ್ಷಯಂ ಯುಧಿ |
ಪಾಂಡವೇಯಾ ಮಹಾರಾಜ ನಾಶಂಸುರ್ವಿಜಯಂ ತದಾ ॥ 63 ॥
ಎಲೈ ಮಹಾರಾಜನೇ, ಯುದ್ಧದಲ್ಲಿ ಅಶ್ವ-ನರ ಸಮೂಹಗಳ ವಿಪುಲವಾದ ಕ್ಷಯವನ್ನು ನೋಡಿ, ಪಾಂಡವರು ಆಗ ವಿಜಯದ ಆಸೆಯನ್ನು ಹೊಂದಲಿಲ್ಲ.
ಕಚ್ಚಿದ್ ದ್ರೋಣೋ ನ ನಃ ಸರ್ವಾನ್ ಕ್ಷಪಯೇತ್ ಪರಮಾಸ್ತ್ರವಿತ್ |
ಸಮಿದ್ಧಃ ಶಿಶಿರಾಪಾಯೇ ದಹನ್ ಕಕ್ಷಮಿವಾನಲಃ ॥ 64 ॥
ಪರಮಾಸ್ತ್ರವೇತ್ತರಾದ ಈ ದ್ರೋಣರು ಶಿಶಿರಋತುವಿನ ನಂತರ ಅಗ್ನಿಯು ಹುಲ್ಲುಗಾವಲನ್ನು ಸುಡುವಂತೆ ಪ್ರಜ್ವಲಿತರಾಗಿ ನಮ್ಮೆಲ್ಲರನ್ನೂ ನಾಶಪಡಿಸುವುದಿಲ್ಲವೇ?
ನ ಚೈನಂ ಸಂಯುಗೇ ಕಶ್ಚಿತ್ ಸಮರ್ಥಃ ಪ್ರತಿವೀಕ್ಷಿತುಮ್ |
ನ ಚೈನಮರ್ಜುನೋ ಜಾತು ಪ್ರತಿಯುದ್ಧ್ಯೇತ ಧರ್ಮವಿತ್ ॥ 65 ॥
ಇವರನ್ನು ಪ್ರತಿಯಾಗಿ ನೋಡಲು ಯುದ್ಧದಲ್ಲಿ ಯಾರೂ ಸಮರ್ಥರಾಗಿಲ್ಲ. ಧಾರ್ಮಿಕನಾದ ಅರ್ಜುನನು ಇವರ ಜೊತೆಯಲ್ಲಿ ಎಂದೂ ಯುದ್ಧವನ್ನು ಮಾಡಲಾರನು (ಎಂದು ಚಿಂತಿಸಿದರು).

ತ್ರಸ್ತಾನ್ ಕುಂತೀಸುತಾನ್ ದೃಷ್ಟ್ವಾ ದ್ರೋಣಸಾಯಕಪೀಡಿತಾನ್ |
ಮತಿಮಾನ್ ಶ್ರೇಯಸೇ ಯುಕ್ತಃ ಕೇಶವೋಽರ್ಜುನಮಬ್ರವೀತ್ ॥66॥
ದ್ರೋಣರ ಬಾಣಗಳಿಂದ ಪೀಡಿತರಾಗಿ ಹೆದರಿದ ಕುಂತೀಪುತ್ರರನ್ನು ನೋಡಿ ಅವರ ಶ್ರೇಯಸ್ಸಿನಲ್ಲಿ ನಿರತನಾದ ಮೇಧಾವಿಯಾದ ಕೇಶವನು ಅರ್ಜುನನನ್ನು ಕುರಿತು ಹೇಳಿದನು.
ನೈಷ ಯುದ್ಧೇನ ಸಂಗ್ರಾಮೇ ಜೇತುಂ ಶಕ್ಯಃ ಕಥಂಚನ |
ಅಪಿ ವೃತ್ರಹಣಾ ಯುದ್ಧೇ ರಥಯೂಥಪಯೂಥಪಃ ॥ 67 ॥
ರಥಯೂಥಪಯೂಥಪರಾದ ಇವರನ್ನು ಯುದ್ಧದಲ್ಲಿ ಯಾರೂ ಗೆಲ್ಲಲಾರರು. ಇಂದ್ರನೂ ಸಹ ಗೆಲ್ಲಲಾರ.
ಆಸ್ಥೀಯತಾಂ ಜಯೇ ಯೋಗೋ ಧರ್ಮಮುತ್ಸೃಜ್ಯ ಪಾಂಡವ |
ಯಥಾ ವಃ ಸಂಯುಗೇ ಸರ್ವಾನ್ ನ ಹನ್ಯಾದ್ ರುಗ್ಮವಾಹನಃ ॥68॥
ಎಲೈ ಪಾಂಡವನೇ, ರುಕ್ಮವಾಹನರಾದ ದ್ರೋಣರು ನಿಮ್ಮೆಲ್ಲರನ್ನೂ ಕೊಲ್ಲದಂತೆ ಧರ್ಮವನ್ನು ಬಿಟ್ಟು, ಜಯವನ್ನು ಗಳಿಸುವ ಯಾವುದಾದರೂ ಉಪಾಯವನ್ನು ಆಶ್ರಯಿಸು.
ಅಶ್ವತ್ಥಾಮ್ನಿ ಹತೇ ನೈಷ ಯುದ್ಧ್ಯೇದಿತಿ ಮತಿರ್ಮಮ |
ತಂ ಹತಂ ಸಂಯುಗೇ ಕಶ್ಚಿದಸ್ಮೈ ಶಂಸತು ಮಾನವಃ ॥ 69 ॥
ಅಶ್ವತ್ಥಾಮರು ಹತರಾದರೆ ಇವರು ಯುದ್ಧ ಮಾಡಲಾರರೆಂದು ನನ್ನ ಅಭಿಪ್ರಾಯ. ಯಾವನಾದರೂ ಮನುಷ್ಯನು ಅವರಿಗೆ ಯುದ್ಧದಲ್ಲಿ ಅಶ್ವತ್ಥಾಮನು ಹತನಾದನೆಂದು ಹೇಳಲಿ (ಎಂದು ಹೇಳಿದನು).
ಏತನ್ನಾರೋಚಯದ್ ರಾಜನ್ ಕುಂತೀಪುತ್ರೋ ಧನಂಜಯಃ |
ಅನ್ಯೇ ತ್ವರೋಚಯನ್ ಸರ್ವೇ ಕೃಚ್ಛ್ರೇಣ ತು ಯುಧಿಷ್ಠಿರಃ ॥ 70 ॥
ಎಲೈ ರಾಜನೇ, ಕುಂತೀಪುತ್ರನಾದ ಅರ್ಜುನನು ಇದನ್ನು ಇಷ್ಟಪಡಲಿಲ್ಲ. ಉಳಿದವರೆಲ್ಲರೂ ಇಷ್ಟಪಟ್ಟರು. ಯುಧಿಷ್ಠಿರನು ಕಷ್ಟದಿಂದ ಒಪ್ಪಿದನು.
ತತೋ ಭೀಮೋ ಮಹಾಬಾಹುರನೀಕೇ ಸ್ವೇ ಮಹಾಗಜಮ್ |
ಜಘಾನ ಗದಯಾ ರಾಜನ್ನಶ್ವತ್ಥಾಮಾನಮಿತ್ಯುತ ॥ 71 ॥
ಎಲೈ ರಾಜನೇ, ಅನಂತರ ಮಹಾಬಾಹುವಾದ ಭೀಮನು ತನ್ನ ಸೇನೆಯಲ್ಲಿದ್ದ ಅಶ್ವತ್ಥಾಮ ಎಂಬ ಹೆಸರಿನ ಮಹಾಗಜವನ್ನು ಕೊಂದನು.
ಭೀಮಸೇನಸ್ತು ಸವ್ರೀಡಮುಪೇತ್ಯ ದ್ರೋಣಮಾಹವೇ |
ಅಶ್ವತ್ಥಾಮಾ ಹತ ಇತಿ ಶಬ್ದಮುಚ್ಚೈಶ್ಚಕಾರ ಹ ॥ 72 ॥
ಭೀಮಸೇನನಾದರೋ ರಣರಂಗದಲ್ಲಿ ನಾಚಿಕೆಯಿಂದ ದ್ರೋಣರನ್ನು ಸಮೀಪಿಸಿ `ಅಶ್ವತ್ಥಾಮಾ ಹತಃ' ಎಂಬ ಶಬ್ದವನ್ನು ಗಟ್ಟಿಯಾಗಿ ಹೇಳಿದನು.
ಅಶ್ವತ್ಥಾಮೇತಿ ಹಿ ಗಜಃ ಖ್ಯಾತೋ ನಾಮ್ನಾ ಹತೋಽಭವತ್ |
ಕೃತ್ವಾ ಮನಸಿ ತಂ ಭೀಮೋ ಮಿಥ್ಯಾ ವ್ಯಾಹೃತವಾಂಸ್ತದಾ ॥ 73 ॥
ಅಶ್ವತ್ಥಾಮ ಎಂಬ ಹೆಸರಿನಿಂದ ಪ್ರಖ್ಯಾತವಾದ ಗಜವು ಆಗ ಹತವಾಗಿದ್ದಿತು. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಭೀಮನು ಸುಳ್ಳಲ್ಲದ ಮಾತನ್ನೇ ಆಡಿದನು.
ಭೀಮಸೇನವಚಃ ಶ್ರುತ್ವಾ ದ್ರೋಣಸ್ತತ್ಪರಮಪ್ರಿಯಮ್ |
ಮನಸಾ ಸನ್ನಗಾತ್ರೋಽಭೂದ್ ಯಥಾ ಸೈಕತಮಂಭಸಿ ॥ 74 ॥
ಅತ್ಯಂತ ಅಪ್ರಿಯವಾದ ಭೀಮಸೇನನ ಆ ಮಾತುಗಳನ್ನು ಕೇಳಿ, ದ್ರೋಣರು ಮನಸ್ಸಿನಲ್ಲಿಯೇ ಮರಳು ನೀರಿನಲ್ಲಿ ಕುಗ್ಗಿಹೋಗುವಂತೆ ಕುಗ್ಗಿಹೋದರು.
ಶಂಕಮಾನಃ ಸ ತನ್ಮಿಥ್ಯಾ ವೀರ್ಯಜ್ಞಃ ಸ್ವಸುತಸ್ಯ ವೈ |
ಹತಃ ಸ ಇತಿ ಚ ಶ್ರುತ್ವಾ ನೈವ ಧೈರ್ಯಾದಕಂಪತ ॥ 75 ॥
ತನ್ನ ಪುತ್ರನ ಪರಾಕ್ರಮವನ್ನು ತಿಳಿದ ಅವರು ಭೀಮಸೇನನ ಮಾತು ಸುಳ್ಳಾಗಿರಬಹುದೆಂದು ಶಂಕಿಸಿ ಅವನು ಹತನಾಗಿದ್ದಾನೆ ಎಂದು ಕೇಳಿದರೂ ಧೈರ್ಯಗೆಡಲಿಲ್ಲ.
ಸ ಲಬ್ಧ್ವಾ ಚೇತನಾಂ ದ್ರೋಣಃ ಕ್ಷಣೇನೈವ ಸಮಾಶ್ವಸತ್ |
ಅನುಚಿಂತ್ಯಾತ್ಮನಃ ಪುತ್ರಮವಿಷಹ್ಯಮರಾತಿಭಿಃ ॥ 76 ॥
ಅವರು ತಮ್ಮ ಪುತ್ರನು ಶತ್ರುಗಳಿಂದ ಸಹಿಸಲು ಅಸಾಧ್ಯನಾದವನು ಎಂದು ಚಿಂತಿಸಿ, ಒಂದು ಕ್ಷಣದಲ್ಲಿ ವಿವೇಕವನ್ನು ಮರಳಿ ಪಡೆದು ಸಮಾಧಾನವನ್ನು ಹೊಂದಿದರು.
ಸ ಪಾರ್ಷತಮಭಿದ್ರುತ್ಯ ಜಿಘಾಂಸುರ್ಮೃತ್ಯುಮಾತ್ಮನಃ |
ಅವಾಕಿರತ್ ಸಹಸ್ರೇಣ ತೀಕ್ಷ್ಣಾನಾಂ ಕಂಕಪತ್ರಿಣಾಮ್ ॥ 77 ॥
ಅವರು ತಮ್ಮ ಮೃತ್ಯುವಾದ ಧೃಷ್ಟದ್ಯುಮ್ನನನ್ನು ಕೊಲ್ಲುವ ಉದ್ದೇಶದಿಂದ ಅವನ ಕಡೆಗೆ ಓಡಿ, ಕಂಕಪತ್ರಗಳನ್ನು ಹೊಂದಿದ್ದ ತೀಕ್ಷ್ಣವಾದ ಸಹಸ್ರ ಬಾಣಗಳನ್ನು ಅವನ ಮೇಲೆ ಸುರಿಸಿದರು.
ತಂ ವೈ ವಿಂಶತಿಸಾಹಸ್ರಾಃ ಪಾಂಚಾಲಾನಾಂ ನರರ್ಷಭಾಃ |
ತಥಾ ಚರಂತಂ ಸಂಗ್ರಾಮೇ ಸರ್ವತೋ ವ್ಯಕಿರನ್ ಶರೈಃ ॥ 78 ॥
ಪಾಂಚಾಲರ ಇಪ್ಪತ್ತು ಸಾವಿರ ನರಶ್ರೇಷ್ಠರು ರಣರಂಗದಲ್ಲಿ ಆ ರೀತಿಯಲ್ಲಿ ಸಂಚರಿಸುತ್ತಿದ್ದ ದ್ರೋಣರನ್ನು ಎಲ್ಲ ಕಡೆಗಳಿಂದಲೂ

ಬಾಣಗಳಿಂದ ಹೊಡೆದರು.
ತತಃ ಪ್ರಾದುಷ್ಕರೋದ್ ದ್ರೋಣೋ ಬ್ರಾಹ್ಮಮಸ್ತ್ರಂ ಪರಂತಪಃ |
ವಧಾಯ ತೇಷಾಂ ಶೂರಾಣಾಂ ಪಾಂಚಲಾನಾಮಮರ್ಷಿತಃ ॥ 79 ॥
ಆಗ ಪರಂತಪರಾದ ದ್ರೋಣರು ರೋಷವನ್ನು ಹೊಂದಿ ಪಾಂಚಾಲ ಶೂರರ ವಧೆಗಾಗಿ ಅವರ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದರು.
ತತೋ ವ್ಯರೋಚತ ದ್ರೋಣೋ ವಿನಿಘ್ನನ್ ಸರ್ವಸೋಮಕಾನ್ |
ಶಿರಾಂಸ್ಯಪಾತಯಚ್ಚಾಪಿ ಪಾಂಚಾಲಾನಾಂ ಮಹಾಮೃಧೇ |
ತಥೈವ ಪರಿಘಾಕಾರಾನ್ ಬಾಹೂನ್ ಕನಕಭೂಷಣಾನ್ ॥ 80 ॥
ಆಗ ದ್ರೋಣರು ಎಲ್ಲಾ ಸೋಮಕರನ್ನೂ ಕೊಲ್ಲುತ್ತಾ ವಿರಾಜಿಸಿದರು. ದೊಡ್ಡ ಯುದ್ಧದಲ್ಲಿ ಪಾಂಚಾಲರ ಶಿರಸ್ಸುಗಳನ್ನು, ಹಾಗೆಯೇ ಕನಕಭೂಷಿತವಾದ ಅವರ ಒನಕೆಯಂತಹ ಬಾಹುಗಳನ್ನು ಕತ್ತರಿಸಿ ಉರುಳಿಸಿದರು.
ತೇ ವಧ್ಯಮಾನಾಃ ಸಮರೇ ಭಾರದ್ವಾಜೇನ ಪಾರ್ಥಿವಾಃ |
ಮೇದಿನ್ಯಾಮನ್ವಕೀರ್ಯಂತ ವಾತನುನ್ನಾ ಇವ ದ್ರುಮಾಃ ॥ 81 ॥
ಯುದ್ಧದಲ್ಲಿ ದ್ರೋಣರಿಂದ ಹೊಡೆಯಲ್ಪಟ್ಟ ರಾಜರು ಬಿರುಗಾಳಿಗೆ ಸಿಕ್ಕಿ ಬಿದ್ದ ಮರಗಳಂತೆ ಭೂಮಿಯ ಮೇಲೆ ಎಲ್ಲ ಕಡೆಯಲ್ಲಿಯೂ ಹರಡಿಕೊಂಡರು.
ಕುಂಜರಾಣಾಂ ಚ ಪತತಾಂ ಹಯೌಘಾನಾಂ ಚ ಭಾರತ |
ಅಗಮ್ಯರೂಪಾ ಪೃಥಿವೀ ಮಾಂಸಶೋಣಿತಕರ್ದಮಾ ॥ 82 ॥
ಎಲೈ ಭಾರತನೇ, ಭೂಮಿಯ ಮೇಲೆ ಬೀಳುವ ಗಜಗಳಿಂದಲೂ ಮತ್ತು ಅಶ್ವ ಸಮೂಹಗಳಿಂದಲೂ ಕೂಡಿದ, ಮಾಂಸ-ರಕ್ತವುಳ್ಳ ಭೂಮಿಯು ನಡೆಯಲು ಅಸಾಧ್ಯವಾಗಿದ್ದಿತು.
ಹತ್ವಾ ವಿಂಶತಿಸಾಹಸ್ರಾನ್ ಪಾಂಚಾಲಾನಾಂ ರಥವ್ರಜಾನ್ |
ಅತಿಷ್ಠದಾಹವೇ ದ್ರೋಣೋ ವಿಧೂಮೋಽಗ್ನಿರಿವ ಜ್ವಲನ್ ॥ 83 ॥
ದ್ರೋಣರು ಪಾಂಚಾಲರ ಇಪ್ಪತ್ತು ಸಹಸ್ರರಥಸಮೂಹಗಳನ್ನು ಕೊಂದು ಯುದ್ಧದಲ್ಲಿ ಧೂಮವಿಲ್ಲದ ಅಗ್ನಿಯಂತೆ ಜ್ವಲಿಸುತ್ತಾ ನಿಂತರು.
ತಥೈವ ಚ ಪುನಃ ಕ್ರುದ್ಧೋ ಭಾರದ್ವಾಜಃ ಪ್ರತಾಪವಾನ್ |
ವಸುದಾನಸ್ಯ ಭಲ್ಲೇನ ಶಿರಃ ಕಾಯಾದಪಾಹರತ್ ॥ 84 ॥
ಹಾಗೆಯೇ ಪ್ರತಾಪಶಾಲಿಗಳಾದ ದ್ರೋಣರು ಪುನಃ ಕ್ರುದ್ಧರಾಗಿ ಭಲ್ಲದಿಂದ ವಸುದಾನನ ಶಿರಸ್ಸನ್ನು ಅವನ ದೇಹದಿಂದ ಕತ್ತರಿಸಿದರು.
ಪುನಃ ಪಂಚಶತಾನ್ ಮತ್ಸ್ಯಾನ್ ಷಟ್‌ಸಹಸ್ರಾಂಶ್ಚ ಸೃಂಜಯಾನ್ |
ಹಸ್ತಿನಾಮಯುತಂ ಹತ್ವಾ ಜಘಾನಾಶ್ವಾಯುತಂ ಪುನಃ ॥ 85 ॥
ಪುನಃ ಐದುನೂರು ಮತ್ಸ್ಯರನ್ನೂ, ಆರು ಸಾವಿರ ಸೃಂಜಯರನ್ನೂ, ಹತ್ತು ಸಾವಿರ ಗಜಗಳನ್ನೂ ಕೊಂದು, ಪುನಃ ಹತ್ತು ಸಾವಿರ ಅಶ್ವಗಳನ್ನು ಕೊಂದರು.
ಕ್ಷತ್ರಿಯಾಣಾಮಭಾವಾಯ ದೃಷ್ಟ್ವಾ ದ್ರೋಣಮವಸ್ಥಿತಮ್ |
ಋಷಯೋಽಭ್ಯಾಗಮಂಸ್ತೂರ್ಣಂ ಹವ್ಯವಾಹಪುರೋಗಮಾಃ ॥ 86 ॥
ಕ್ಷತ್ರಿಯರನ್ನು ವಿನಾಶ ಮಾಡುವುದಕ್ಕಾಗಿ ರಣರಂಗದಲ್ಲಿ ನಿಂತ ದ್ರೋಣರನ್ನು ನೋಡಿ ಋಷಿಗಳು ಅಗ್ನಿಯನ್ನು ಮುಂದೆ ಮಾಡಿಕೊಂಡು ಶೀಘ್ರವಾಗಿ ಅಲ್ಲಿಗೆ ಬಂದರು.
ವಿಶ್ವಾಮಿತ್ರೋ ಜಮದಗ್ನಿರ್ಭಾರದ್ವಾಜೋಽಥ ಗೌತಮಃ |
ವಸಿಷ್ಠಃ ಕಶ್ಯಪೋಽತ್ರಿಶ್ಚ ಬ್ರಹ್ಮಲೋಕಂ ನಿನೀಷವಃ ॥ 87 ॥
ಸಿಕತಾಃ ಪೃಶ್ನಯೋ ಗರ್ಗಾ ವಾಲಖಿಲ್ಯಾ ಮರೀಚಿಪಾಃ |
ಭೃಗವೋಽಂಗೀರಸಶ್ಚೈವ ಸೂಕ್ಷ್ಮಾಶ್ಚಾನ್ಯೇ ಮಹರ್ಷಯಃ ॥ 88 ॥
ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ವಸಿಷ್ಠ, ಕಶ್ಯಪ, ಅತ್ರಿ, ಸಿಕತರು, ಗರ್ಗರು, ವಾಲಖಿಲ್ಯರು, ಮರೀಚಿಪರು, ಭೃಗುಗಳು, ಅಂಗಿರಸರು, ಸೂಕ್ಷ್ಮವಾದ ಇನ್ನೂ ಅನೇಕ ಮಹರ್ಷಿಗಳು ಅವರನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗಲು ಬಯಸಿ ಅಲ್ಲಿಗೆ ಬಂದರು.
ತ ಏನಮಬ್ರುವನ್ ಸರ್ವೇ ದ್ರೋಣಮಾಹವಶೋಭಿನಮ್ |
ಅಧರ್ಮತಃ ಕೃತಂ ಯುದ್ಧಂ ಸಮಯೋ ನಿಧನಸ್ಯ ತೇ ॥ 89 ॥
ಅವರೆಲ್ಲರೂ ರಣದಲ್ಲಿ ಶೋಭಿಸುವ ದ್ರೋಣರನ್ನು ಕುರಿತು ನೀವು ಅಧರ್ಮದಿಂದ ಯುದ್ಧವನ್ನು ಮಾಡಿದ್ದೀರಿ. ನಿಮ್ಮ ಮರಣಕ್ಕೆ ಇದು ಸಮಯವಾಗಿದೆ ಎಂದು ಹೇಳಿದರು.
ನ್ಯಸ್ಯಾಯುಧಂ ರಣೇ ದ್ರೋಣ ಸಮೇತ್ಯಾಸ್ಮಾನವಸ್ಥಿತಾನ್ |
ನಾತಃ ಕ್ರೂರತರಂ ಕರ್ಮ ಪುನಃ ಕರ್ತುಂ ತ್ವಮರ್ಹಸಿ ॥ 90 ॥
ವೇದವೇದಾಂಗವಿದುಷಃ ಸತ್ಯಧರ್ಮಪರಸ್ಯ ಚ |
ಬ್ರಾಹ್ಮಣಸ್ಯ ವಿಶೇಷೇಣ ತವೈತನ್ನೋಪಪದ್ಯತೇ ॥ 91 ॥
ನ್ಯಸ್ಯಾಯುಧಮಮೋಘೇಷೋ ತಿಷ್ಠ ವರ್ತ್ಮನಿ ಶಾಶ್ವತೇ |
ಪರಿಪೂರ್ಣಶ್ಚ ಕಾಲಸ್ತೇ ವಸ್ತುಂ ಲೋಕೇಽದ್ಯ ಮಾನುಷೇ ॥ 92 ॥

ಎಲೈ ದ್ರೋಣರೇ, ರಣರಂಗದಲ್ಲಿ ಶಸ್ತ್ರನ್ಯಾಸವನ್ನು ಮಾಡಿ ಇಲ್ಲಿಗೆ ಬಂದ ನಮ್ಮ ಜೊತೆಯಲ್ಲಿ ಸೇರಿ, ಇಲ್ಲಿಂದ ಮುಂದೆ ಪುನಃ ಇಂತಹ ಕ್ರೂರಕರ್ಮವನ್ನು ಮಾಡಬಾರದು. ವೇದವೇದಾಂಗ ವಿದ್ವಾಂಸರೂ, ಸತ್ಯಧರ್ಮರತರೂ, ವಿಶೇಷವಾಗಿ ಬ್ರಾಹ್ಮಣರೂ ಆದ ನಿಮಗೆ ಇದು ಯೋಗ್ಯವಲ್ಲ. ಎಲೈ ಅಮೋಘ ಬಾಣವುಳ್ಳವರೇ, ಆಯುಧಗಳನ್ನು ತ್ಯಜಿಸಿ ಶಾಶ್ವತವಾದ ಬ್ರಾಹ್ಮಣಮಾರ್ಗದಲ್ಲಿ ನಿಲ್ಲಿ. ನಿಮಗೆ ಮನುಷ್ಯಲೋಕದಲ್ಲಿ ವಾಸಮಾಡುವ ಕಾಲವು ಪೂರ್ಣವಾಗಿ ತುಂಬಿದೆ (ಎಂದು ಹೇಳಿದರು).

ಇತಿ ತೇಷಾಂ ವಚಃ ಶ್ರುತ್ವಾ ಭೀಮಸೇನವಚಶ್ಚ ತತ್ |
ಧೃಷ್ಟದ್ಯುಮ್ನಂ ಚ ಸಂಪ್ರೇಕ್ಷ್ಯ ರಣೇ ಸ ವಿಮನಾಽಭವತ್ ॥ 93 ॥

ಹೀಗೆ ಆಡಿದ ಅವರ ಮಾತುಗಳನ್ನು ಕೇಳಿ, ಭೀಮಸೇನನ ಆ ಮಾತನ್ನೂ ಕೇಳಿ ಧೃಷ್ಟದ್ಯುಮ್ನನನ್ನು ನೋಡಿ, ರಣರಂಗದಲ್ಲಿ ದ್ರೋಣರು ಉತ್ಸಾಹಶೂನ್ಯರಾದರು.

ಸ ದಹ್ಯಮಾನೋ ವ್ಯಥಿತಃ ಕುಂತೀಪುತ್ರಂ ಯುಧಿಷ್ಠಿರಮ್ |
ಅಹತಂ ವಾ ಹತಂ ವೇತಿ ಪಪ್ರಚ್ಛ ಸುತಮಾತ್ಮನಃ ॥ 94 ॥

ಅವರು ಶೋಕದಿಂದ ದಹಿಸಲ್ಪಡುತ್ತಾ, ವ್ಯಥೆಯಿಂದ ಕೂಡಿ, ಕುಂತೀಪುತ್ರನಾದ ಯುಧಿಷ್ಠಿರನನ್ನು ಕುರಿತು ನನ್ನ ಪುತ್ರನು ಹತನಾಗಿದ್ದಾನೆಯೇ, ಇಲ್ಲವೇ ಎಂದು ಪ್ರಶ್ನೆ ಮಾಡಿದರು.

ಸ್ಥಿರಾ ಬುದ್ಧಿರ್ಹಿ ದ್ರೋಣಸ್ಯ ನ ಪಾರ್ಥೋ ವಕ್ಷ್ಯತೇಽನೃತಮ್ |
ತ್ರಯಾಣಾಮಪಿ ಲೋಕಾನಾಮೈಶ್ವರ್ಯಾರ್ಥೇ ಕಥಂಚನ ॥ 95 ॥

ಮೂರುಲೋಕಗಳ ಐಶ್ವರ್ಯದ ಸಲುವಾಗಿಯೂ ಯುಧಿಷ್ಠಿರನು ಯಾವ ರೀತಿಯಲ್ಲಿಯೂ ಸುಳ್ಳು ಹೇಳುವುದಿಲ್ಲವೆಂಬುದು ದ್ರೋಣರ ದೃಢವಾದ ನಂಬಿಕೆ.

ತಸ್ಮಾತ್ ತಂ ಪರಿಪಪ್ರಚ್ಛ ನಾನ್ಯಂ ಕಂಚಿದ್ವಿಶೇಷತಃ |
ತಸ್ಮಿಂಸ್ತಸ್ಯ ಹಿ ವಿಶ್ವಾಸೋ ಬಾಲ್ಯಾತ್ಪ್ರಭೃತಿ ಪಾಂಡವೇ ॥ 96॥

ಆದ್ದರಿಂದ ಅವನನ್ನೇ ಕೇಳಿದರು, ಬೇರೆ ಯಾರನ್ನೂ ವಿಶೇಷವಾಗಿ ಕೇಳಲಿಲ್ಲ. ಬಾಲ್ಯದಿಂದಲೂ ಯುಧಿಷ್ಠಿರನಲ್ಲಿ ದ್ರೋಣರಿಗೆ ಪರಮ ವಿಶ್ವಾಸವಿದೆ.

ತತೋ ನಿಷ್ಪಾಂಡವಾಮುರ್ವೀಂ ಕರಿಷ್ಯಂತಂ ಯುಧಾಂಪತಿಮ್ |
ದ್ರೋಣಂ ಜ್ಞಾತ್ವಾ ಧರ್ಮರಾಜಂ ಗೋವಿಂದೋ ವ್ಯಥಿತೋಽಬ್ರವೀತ್ ॥

ಆಗ ಭೂಮಿಯನ್ನು ನಿಷ್ಪಾಂಡವರನ್ನಾಗಿ ಮಾಡಲಿರುವ, ಯುದ್ಧಪತಿಗಳಾದ ದ್ರೋಣರನ್ನು ತಿಳಿದು ಗೋವಿಂದನು ಧರ್ಮರಾಜನನ್ನು ಕುರಿತು ವ್ಯಥೆಯಿಂದ ಹೇಳಿದನು.

ಯದ್ಯರ್ಧದಿವಸಂ ದ್ರೋಣೋ ಯುದ್ಧ್ಯತೇ ಮನ್ಯುಮಾಸ್ಥಿತಃ |
ಸತ್ಯಂ ಬ್ರವೀಮಿ ತೇ ಸೇನಾ ವಿನಾಶಂ ಸಮುಪೈಷ್ಯತಿ ॥ 98 ॥

ದ್ರೋಣರು ಕೋಪವನ್ನು ಹೊಂದಿ ಇನ್ನು ಅರ್ಧದಿವಸ ಯುದ್ಧವನ್ನು ಮಾಡಿದರೆ ನಿನ್ನ ಸೈನ್ಯವು ವಿನಾಶವನ್ನು ಹೊಂದುವುದು ಎಂದು ಸತ್ಯವನ್ನು ಹೇಳುತ್ತಿದ್ದೇನೆ.

ಸ ಭವಾಂಸಾತ್ರತು ನೋ ದ್ರೋಣಾತ್ ಸತ್ಯಾಜ್ಜ್ಯಾಯೋಽನೃತಂ ಭವೇತ್|
ಅನೃತಂ ಜೀವಿತಸ್ಯಾರ್ಥೇ ವದನ್ನ ಸ್ಪೃಶ್ಯತೇಽನೃತೈಃ ॥ 99 ॥

ನೀನು ನಮ್ಮನ್ನು ದ್ರೋಣರಿಂದ ರಕ್ಷಿಸುವವನಾಗು. ಸತ್ಯಕ್ಕಿಂತಲೂ ಅನೃತವೇ ಶ್ರೇಷ್ಠವಾದೀತು. ಜೀವನದ ಸಲುವಾಗಿ ಅನೃತವನ್ನು ಹೇಳುವವನು ಅನೃತದ (ಸುಳ್ಳಿನ) ದೋಷದಿಂದ ಲಿಪ್ತನಾಗುವುದಿಲ್ಲ (ಎಂದು ಹೇಳಿದನು).

ತಯೋಃ ಸಂವದತೋರೇವಂ ಭೀಮಸೇನೋಽಬ್ರವೀದಿದಮ್ |
ಶ್ರುತ್ವೈವ ತಂ ಮಹಾರಾಜ ವಧೋಪಾಯಂ ಮಹಾತ್ಮನಃ ॥ 100 ॥
ಗಾಹಮಾನಸ್ಯ ತೇ ಸೇನಾಂ ಮಾಲವಸ್ಯೇಂದ್ರವರ್ಮಣಃ |
ಅಶ್ವತ್ಥಾಮೇತಿ ವಿಖ್ಯಾತೋ ಗಜಃ ಶಕ್ರಗಜೋಪಮಃ ॥ 101 ॥
ನಿಹತೋ ಯುಧಿ ವಿಕ್ರಮ್ಯ ತತೋಽಹಂ ದ್ರೋಣಮಬ್ರುವಮ್ |
ಅಶ್ವತ್ಥಾಮಾ ಹತೋ ಬ್ರಹ್ಮನ್ ನಿವರ್ತಸ್ವಾಹವಾದಿತಿ ॥ 102 ॥

ಅವರಿಬ್ಬರೂ ಮಾತನಾಡುತ್ತಿರುವಾಗ ಎಲೈ ಮಹಾರಾಜನೇ, ಮಹಾತ್ಮರಾದ ದ್ರೋಣರ ವಧೆಯ ಉಪಾಯವನ್ನು ಕೇಳಿದ ಭೀಮಸೇನನು, ನಿಮ್ಮ ಸೈನ್ಯವನ್ನು ಪ್ರವೇಶಿಸುತ್ತಿದ್ದ ಮಾಲವ ದೇಶದ ಇಂದ್ರವರ್ಮನ ಇಂದ್ರನ ಗಜಕ್ಕೆ ಸಮಾನವಾದ ಅಶ್ವತ್ಥಾಮ ಎಂಬ ಗಜವು ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿ, ನನ್ನಿಂದ ಕೊಲ್ಲಲ್ಪಟ್ಟಿತು. ಆಗ ನಾನು ದ್ರೋಣರನ್ನು ಕುರಿತು `ಬ್ರಾಹ್ಮಣರೇ, ಅಶ್ವತ್ಥಾಮನು ಹತನಾಗಿದ್ದಾನೆ. ಯುದ್ಧದಿಂದ ಹಿಂದಿರುಗಿ' ಎಂದು ಹೇಳಿದೆನು.

ನೂನಂ ನಾಶ್ರದ್ದಧದ್ ವಾಕ್ಯಮೇಷ ಮೇ ಪುರುಷರ್ಷಭಃ |
ಸ ತ್ವಂ ಗೋವಿಂದವಾಕ್ಯಾನಿ ಮಾನಯಸ್ವ ಜಯೈಷಿಣಃ ॥ 103 ॥

ಪುರುಷಶ್ರೇಷ್ಠರಾದ ದ್ರೋಣರು ನನ್ನ ವಾಕ್ಯವನ್ನು ನಂಬಲಿಲ್ಲ. (ಎಲೈ ಧರ್ಮರಾಜನೇ) ನಮ್ಮ ಜಯವನ್ನು ಬಯಸುವ ಕೃಷ್ಣನ ಮಾತುಗಳನ್ನು ಗೌರವಿಸು.

ದ್ರೋಣಾಯ ನಿಹತಂ ಶಂಸ ರಾಜನ್ ಶಾರದ್ವತೀಸುತಮ್ |
ತ್ವಯೋಕ್ತೋ ನೈಷ ಯುದ್ಧ್ಯೇತ ಜಾತು ರಾಜನ್ ದ್ವಿಜರ್ಷಭಃ |
ಸತ್ಯವಾನ್ ಹಿ ನೃಲೋಕೇಽಸ್ಮಿನ್ ಭವಾನ್ ಖ್ಯಾತೋ ಜನಾಧಿಪ ॥

ಎಲೈ ರಾಜನೇ, ಶಾರದ್ವತೀ ಸುತರಾದ ಅಶ್ವತ್ಥಾಮರು ಹತರಾಗಿದ್ದಾರೆಂದು ದ್ರೋಣರಿಗೆ ಹೇಳು. ಎಲೈ ರಾಜನೇ, ದ್ವಿಜಶ್ರೇಷ್ಠರಾದ

ಅವರು ನೀನು ಹಾಗೆ ಹೇಳಿದರೆ ಖಂಡಿತವಾಗಿಯೂ ಯುದ್ಧವನ್ನು ಮಾಡಲಾರರು. ಎಲ್ಲೈ ಜನಾಧಿಪನೇ, ನೀನು ಈ ಮನುಷ್ಯಲೋಕದಲ್ಲಿ ಸತ್ಯವಂತನೆಂದು ಪ್ರಖ್ಯಾತನಾಗಿದ್ದೀಯೆ (ಎಂದು ಹೇಳಿದನು).

ತಸ್ಯ ತದ್ವಚನಂ ಶ್ರುತ್ವಾ ಕೃಷ್ಣವಾಕ್ಯಪ್ರಚೋದಿತಃ |
ಭಾವಿತ್ವಾಚ್ಚ ಮಹಾರಾಜ ವಕ್ತುಂ ಸಮುಪಚಕ್ರಮೇ ॥ 105 ॥

ಭೀಮಸೇನನ ಆ ಮಾತುಗಳನ್ನು ಕೇಳಿ, ಕೃಷ್ಣನ ಮಾತುಗಳಿಂದಲೂ ಪ್ರಚೋದಿತನಾಗಿ ಎಲ್ಲೈ ಮಹಾರಾಜನೇ, ಮುಂದಿನ ಕಾರ್ಯವು ಹಾಗೆಯೇ ನಡೆಯಬೇಕಾದ ಕಾರಣದಿಂದ ಧರ್ಮರಾಜನು ಮಾತನಾಡಲು ಉಪಕ್ರಮಿಸಿದನು.

ತಮತಥ್ಯಭಯೇ ಮಗ್ನೋ ಜಯೇ ಸಕ್ತೋ ಯುಧಿಷ್ಠಿರಃ |
ಅವ್ಯಕ್ತಮಬ್ರವೀದ್ ರಾಜನ್ ಹತಃ ಕುಂಜರ ಇತ್ಯುತ ॥ 106 ॥

ಎಲ್ಲೈ ರಾಜನೇ, ಮಿಥ್ಯಾವಚನದ ಭಯದಲ್ಲಿ ಮಗ್ನನಾಗಿ, ಜಯದಲ್ಲೇ ಆಸಕ್ತನಾದ ಯುಧಿಷ್ಠಿರನು ಅಸ್ಪಷ್ಟವಾಗಿ `ಹತಃ ಕುಂಜರಃ' ಎಂದೂ ಹೇಳಿದನು.

ತಸ್ಯ ಪೂರ್ವಂ ರಥಃ ಪೃಥ್ವ್ಯಾಶ್ಚತುರಂಗುಲ ಉತ್ತರಃ |
ಬಭೂವೈವಂ ತು ತೇನೋಕ್ತೇ ತಸ್ಯ ವಾಹಾಸ್ಪೃಶನ್ ಮಹೀಮ್ ॥

ಅವರ ರಥವು ಮೊದಲು ಭೂಮಿಗಿಂತ ನಾಲ್ಕು ಅಂಗುಲ ಎತ್ತರವಾಗಿದ್ದಿತು. ಧರ್ಮರಾಜನು ಹೀಗೆ ಹೇಳುತ್ತಿರಲು ಅವನ ಅಶ್ವಗಳು ಭೂಮಿಯನ್ನು ಸ್ಪರ್ಶಿಸಿದವು.

ಯುದ್ಧಸನ್ನದ್ಧರಾದ ದ್ರೋಣರು ಹ್ರಸ್ವಕಾಯರಾದುದರಿಂದ ನೊಗಕ್ಕೆ ಹೂಡಿದ ಅಶ್ವಗಳು ಎತ್ತರವಾಗಿದ್ದುದರಿಂದ ರಥವು ಭೂಮಿಗಿಂತ ನಾಲ್ಕು ಅಂಗುಲದಷ್ಟು ಮೇಲಿದ್ದಿತು. `ಅಶ್ವತ್ಥಾಮಾ ಹತಃ' ಎಂಬ ಮಾತನ್ನು ಕೇಳಿದ ಮೇಲೆ ದುಃಖದಿಂದ ಸಾರಥಿಯು ಕಡಿವಾಣಗಳನ್ನು ಬಿಡುತ್ತಿರಲು, ಕುದುರೆಗಳು ಕತ್ತನ್ನು ಬಗ್ಗಿಸಿದ್ದರಿಂದ ದುಃಖದಿಂದಲೂ ಮತ್ತು ದ್ರೋಣರಿಗೆ ಅತಿಭಾರವಾದ ಕಾರಣದಿಂದಲೂ, ಅವರು ರಥಪೀಠದಲ್ಲಿಯೇ ಕುಳಿತಿದ್ದರಿಂದಲೂ ಅವರ ರಥವು ಭೂಮಿಯನ್ನು ಸ್ಪರ್ಶಿಸಿತು ಎಂದು ಯೋಜನೆಯನ್ನು ಮಾಡಬೇಕು - ಲಕ್ಷಾಲಂಕಾರ.

ಯುಧಿಷ್ಠಿರಾತ್ ತು ತದ್ವಾಕ್ಯಂ ಶ್ರುತ್ವಾ ದ್ರೋಣೋ ಮಹಾರಥಃ |
ಪುತ್ರವ್ಯಸನಸಂತಪ್ತೋ ನಿರಾಶೋ ಜೀವಿತೇಽಭವತ್ ॥ 108 ॥

ಯುಧಿಷ್ಠಿರನಿಂದ ಆ ಮಾತನ್ನು ಕೇಳಿದ ಮಹಾರಥರಾದ ದ್ರೋಣರು ಪುತ್ರಶೋಕದಿಂದ ಸಂತಪ್ತರಾಗಿ ತಮ್ಮ ಜೀವಿತದಲ್ಲಿ ಆಸೆಯನ್ನು ತೊರೆದರು.

ಆಗಸ್ಕೃತಮಿವಾತ್ಮಾನಂ ಪಾಂಡವಾನಾಂ ಮಹಾತ್ಮನಾಮ್ |
ಋಷಿವಾಕ್ಯಂ ಚ ಮನ್ವಾನಃ ಶ್ರುತ್ವಾ ಚ ನಿಹತಂ ಸುತಮ್ ॥ 109॥
ವಿಚೇತಾಃ ಪರಮೋದ್ವಿಗ್ನೋ ಧೃಷ್ಟದ್ಯುಮ್ನಮವೇಕ್ಷ್ಯ ಚ |
ಯೋದ್ಧುಂ ನಾಶಕ್ನುವದ್ರಾಜನ್ ಯಥಾಪೂರ್ವಮರಿಂದಮ ॥ 110 ॥

ಎಲ್ಲೈ ಅರಿಂದಮನೇ, ತಾವು ಮಹಾತ್ಮರಾದ ಪಾಂಡವರಿಗೆ ಅಪಚಾರವನ್ನು ಮಾಡಿದವರೆಂದು ತಿಳಿದು, ಋಷಿವಾಕ್ಯಗಳನ್ನು ಕೇಳಿ ತಿಳಿದು, ಪುತ್ರನು ನಿಹತನಾದನೆಂದೂ ಕೇಳಿ, ಚೇತನವನ್ನು ಕಳೆದುಕೊಂಡು, ಬಹಳ ಉದ್ವಿಗ್ನರಾಗಿ ಧೃಷ್ಟದ್ಯುಮ್ನನನ್ನು ನೋಡಿದರೂ ಎಲ್ಲೈ ರಾಜನೇ, ಮೊದಲಿನಂತೆ ಯುದ್ಧವನ್ನು ಮಾಡಲು ಸಮರ್ಥರಾಗಲಿಲ್ಲ.

ತಂ ದೃಷ್ಟ್ವಾ ಪರಮೋದ್ವಿಗ್ನಂ ಶೋಕೋಪಹತಚೇತಸಮ್ |
ಪಾಂಚಾಲರಾಜಸ್ಯ ಸುತೋ ಧೃಷ್ಟದ್ಯುಮ್ನಃ ಸಮಾದ್ರವತ್ ॥ 111 ॥

ಅವರು ದುಃಖದಿಂದ ಪೀಡಿತವಾದ ಮನಸ್ಸುಳ್ಳವರಾಗಿ ಬಹಳ ಉದ್ವಿಗ್ನರಾಗಿರುವುದನ್ನು ನೋಡಿ ಪಾಂಚಾಲರಾಜನ ಪುತ್ರನಾದ ಧೃಷ್ಟದ್ಯುಮ್ನನು ಅವರ ಕಡೆಗೆ ಓಡಿದನು.

ಯ ಇಷ್ಟ್ವಾ ಮನುಜೇಂದ್ರೇಣ ದ್ರುಪದೇನ ಮಹಾಮಖೇ |
ಲಬ್ಧೋ ದ್ರೋಣವಿನಾಶಾಯ ಸಮಿದ್ಧಾದ್ಧವ್ಯವಾಹನಾತ್ ॥ 112 ॥
ಸ ಧನುರ್ಜೈತ್ರಮಾದಾಯ ಘೋರಂ ಜಲದನಿಸ್ವನಮ್ |
ದೃಢಜ್ಯಮಜರಂ ದಿವ್ಯಂ ಶರಾಂಶ್ಚಾಶೀವಿಷೋಪಮಾನ್ ॥ 113 ॥
ಸಂದಧೇ ಕಾರ್ಮುಕೇ ತಸ್ಮಿನ್ ಶರಮಾಶೀವಿಷೋಪಮಮ್ |
ದ್ರೋಣಂ ಜಿಘಾಂಸುಃ ಪಾಂಚಾಲ್ಯೋ ಮಹಾಜ್ವಾಲಮಿವಾನಲಮ್ ॥

ಮನುಷ್ಯೇಂದ್ರನಾದ ದ್ರುಪದನು ದೊಡ್ಡ ಯಾಗವನ್ನು ಮಾಡಿ ಅಗ್ನಿಯನ್ನು ಪೂಜಿಸಿ ಸಮಿದ್ಧವಾದ ಅಗ್ನಿಯಿಂದ ದ್ರೋಣವಿನಾಶಕ್ಕಾಗಿ ಧೃಷ್ಟದ್ಯುಮ್ನನನ್ನು ಮಗನಾಗಿ ಪಡೆದನು. ಪಾಂಚಾಲ ಪುತ್ರನಾದ ಅವನು ಮಹಾಜ್ವಾಲೆಯಿಂದ ಕೂಡಿದ ಅಗ್ನಿಯಂತೆ ಇರುವ ದ್ರೋಣರನ್ನು ಕೊಲ್ಲಲು ಬಯಸಿ ಜಯಶೀಲವೂ, ಘೋರವೂ, ಮೇಘ ನಾದವನ್ನು ಹೊಂದಿದುದೂ, ದೃಢವೂ, ಅಜರವೂ, ದಿವ್ಯವೂ ಆದ ಧನುಸ್ಸನ್ನು ತೆಗೆದುಕೊಂಡು, ಆ ಧನುಸ್ಸಿನಲ್ಲಿ ಸರ್ಪಗಳಂತಿದ್ದ ಬಾಣಗಳನ್ನು ಹೂಡಿದನು.

ತಸ್ಯ ರೂಪಂ ಶರಸ್ಯಾಸೀದ್ಧನುರ್ಜ್ಯಾಮಂಡಲಾಂತರೇ |
ದ್ಯೋತತೋ ಭಾಸ್ಕರಸ್ಯೇವ ಘನಾಂತೇ ಪರಿವೇಶಿನಃ ॥ 115 ॥

ಧನುಸ್ಸಿನ ಹೆದೆಯ ಮಂಡಲದ ಮಧ್ಯದಲ್ಲಿ ಇದ್ದ ಆ ಬಾಣದ ರೂಪವು ಮೋಡಗಳ ಕೊನೆಯಲ್ಲಿ ಪರಿವೇಷದಿಂದ ಕೂಡಿ ಬೆಳಗುವ ಸೂರ್ಯನಂತೆ ಇದ್ದಿತು.

ಪಾರ್ಷತೇನ ಪರಾಮೃಷ್ಟಂ ಜ್ವಲಂತಮಿವ ತದ್ಧನುಃ |
ಅಂತಕಾಲಮಿವ ಪ್ರಾಪ್ತಂ ಮೇನಿರೇ ವೀಕ್ಷ್ಯ ಸೈನಿಕಾಃ ॥ 116 ॥

ಧೃಷ್ಟದ್ಯುಮ್ನನು ಹಿಡಿದ ಜ್ವಲಿಸುವ ಆ ಧನುಸ್ಸನ್ನು ನೋಡಿ ಸೈನಿಕರು ಮೃತ್ಯುವು ಪ್ರಾಪ್ತವಾಗಿದೆ ಎಂದು ತಿಳಿದರು.
ತಮಿಷುಂ ಸಂಹಿತಂ ತೇನ ಭಾರದ್ವಾಜಃ ಪ್ರತಾಪವಾನ್ |
ದೃಷ್ಟ್ವಾಽಮನ್ಯತ ದೇಹಸ್ಯ ಕಾಲಪರ್ಯಾಯಮಾಗತಮ್ ॥ 117 ॥
ಪ್ರತಾಪಶಾಲಿಗಳಾದ ದ್ರೋಣರು ಧೃಷ್ಟದ್ಯುಮ್ನನು ಆ ಬಾಣವನ್ನು ಹೂಡಿದುದನ್ನು ನೋಡಿ, ತಮ್ಮ ದೇಹವನ್ನು ತ್ಯಜಿಸುವ ಕಾಲವು ಒದಗಿದೆ ಎಂದು ತಿಳಿದರು.
ತತಃ ಸ ಯತ್ನಮಾತಿಷ್ಠದಾಚಾರ್ಯಸ್ತಸ್ಯ ವಾರಣೇ |
ನ ಚಾಸ್ಯಾಸ್ತ್ರಾಣಿ ರಾಜೇಂದ್ರ ಪ್ರಾದುರಾಸನ್ ಮಹಾತ್ಮನಃ ॥ 118 ॥
ಆಗ ಆಚಾರ್ಯರು ಧೃಷ್ಟದ್ಯುಮ್ನನ ಬಾಣಗಳನ್ನು ತಡೆಯಲು ಪ್ರಯತ್ನ ಪಟ್ಟರೂ ಎಲೈ ರಾಜೇಂದ್ರನೇ, ಮಹಾತ್ಮರಾದ ಅವರಿಗೆ ಅಸ್ತ್ರಗಳು ಸ್ಫುರಿಸಲಿಲ್ಲ.
ತಸ್ಯ ತ್ವಹಾನಿ ಚತ್ವಾರಿ ಕ್ಷಪಾ ಚೈಕಾಸ್ಯತೋ ಗತಾ |
ತಸ್ಯ ಚಾಹ್ನಸ್ತ್ರಿಭಾಗೇನ ಕ್ಷಯಂ ಜಗ್ಮುಃ ಪತತ್ರಿಣಃ ॥ 119 ॥
ಅವರು ಯುದ್ಧವನ್ನು ಮಾಡುತ್ತಾ ನಾಲ್ಕು ಹಗಲುಗಳು ಮತ್ತು ಒಂದು ರಾತ್ರಿಯನ್ನು ಕಳೆದಿದ್ದರು. ಆ ಹಗಲಿನ ಮೂರನೆಯ ಭಾಗದಲ್ಲಿ ಅವರ ಬಾಣಗಳು ಮುಗಿದು ಹೋದವು.
ಸ ಶರಕ್ಷಯಮಾಸಾದ್ಯ ಪುತ್ರಶೋಕೇನ ಚಾರ್ದಿತಃ |
ವಿವಿಧಾನಾಂ ಚ ದಿವ್ಯಾನಾಮಸ್ತ್ರಾಣಾಮಪ್ರಸನ್ನತಾಮ್ ॥ 120 ॥
ಉತ್ಸ್ರಷ್ಟುಕಾಮಃ ಶಸ್ತ್ರಾಣಿ ವಿಪ್ರವಾಕ್ಯಾಭಿಚೋದಿತಃ |
ತೇಜಸಾ ಪ್ರೇರ್ಯಮಾಣಶ್ಚ ಯುಯುಧೇ ಸೋಽತಿಮಾನುಷಮ್ ॥
ಅವರು ತಮ್ಮ ಬಾಣಗಳ ವಿನಾಶವನ್ನು ಹೊಂದಿ, ಪುತ್ರಶೋಕದಿಂದ ಪೀಡಿತರಾಗಿ, ವಿವಿಧವಾದ ದಿವ್ಯಾಸ್ತ್ರಗಳು ಪ್ರಸನ್ನವಾಗದೆ ಸ್ಫುರಿಸದಿರುವುದನ್ನು ನೋಡಿ, ಋಷಿಗಳ ವಾಕ್ಯದಿಂದಲೂ ಪ್ರಚೋದಿತರಾಗಿ ಶಸ್ತ್ರಗಳನ್ನು ಪರಿತ್ಯಾಗ ಮಾಡಲು ಬಯಸಿ, ಆದರೂ ತಮ್ಮ ಪರಾಕ್ರಮದಿಂದ ಪ್ರೇರಿತರಾಗಿ ಅತಿಮಾನುಷ ಯುದ್ಧವನ್ನು ಮಾಡಿದರು.
ಅಥಾನ್ಯತ್ ಸ ಸಮಾದಾಯ ದಿವ್ಯಮಾಂಗೀರಸಂ ಧನುಃ |
ಶರಾಂಶ್ಚ ಬ್ರಹ್ಮದಂಡಾಭಾನ್ ಧೃಷ್ಟದ್ಯುಮ್ನಮಯೋಧಯತ್ ॥ 122 ॥
ಆಗ ಅವರು ಇನ್ನೊಂದು ದಿವ್ಯವಾದ ಆಂಗೀರಸ ಧನುಸ್ಸನ್ನು ತೆಗೆದುಕೊಂಡು ಬ್ರಹ್ಮದಂಡದಂತಿದ್ದ ಬಾಣಗಳನ್ನೂ ತೆಗೆದುಕೊಂಡು ಧೃಷ್ಟದ್ಯುಮ್ನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ತತಸ್ತಂ ಶರವರ್ಷೇಣ ಮಹತಾ ಸಮವಾಕಿರತ್ |
ವ್ಯಶಾತಯಚ್ಚ ಸಂಕ್ರುದ್ಧೋ ಧೃಷ್ಟದ್ಯುಮ್ನಮಮರ್ಷಣಃ ॥ 123 ॥
ಅನಂತರ ರೋಷಾವಿಷ್ಟರಾದ ಅವರು ದೊಡ್ಡ ಬಾಣಗಳ ವೃಷ್ಟಿಯಿಂದ ಧೃಷ್ಟದ್ಯುಮ್ನನನ್ನು ಹೊಡೆದು ಅವನನ್ನು ಘಾಸಿಗೊಳಿಸಿದರು.
ತಂ ಶರಂ ಶತಧಾ ಚಾಸ್ಯ ದ್ರೋಣಶ್ಚಿಚ್ಛೇದ ಸಾಯಕೈಃ |
ಧ್ವಜಂ ಧನುಶ್ಚ ನಿಶಿತೈಃ ಸಾರಥಿಂ ಚಾಪ್ಯಪಾತಯತ್ ॥ 124 ॥
ಧೃಷ್ಟದ್ಯುಮ್ನನು ಬಿಲ್ಲಿನಲ್ಲಿ ಹೂಡಿದ ಆ ಬಾಣವನ್ನು ತನ್ನ ಬಾಣಗಳಿಂದ ನೂರಾರು ಭಾಗಗಳಾಗಿ ಕತ್ತರಿಸಿದರು. ದ್ರೋಣರು ತೀಕ್ಷ್ಣವಾದ ಬಾಣಗಳಿಂದ ಅವನ ಧ್ವಜವನ್ನೂ, ಧನುಸ್ಸನ್ನೂ ಮತ್ತು ಸಾರಥಿಯನ್ನೂ ಕೆಡವಿದರು.
ಧೃಷ್ಟದ್ಯುಮ್ನಃ ಪ್ರಹಸ್ಯಾನ್ಯತ್ ಪುನರಾದಾಯ ಕಾರ್ಮುಕಮ್ |
ಶಿತೇನ ಚೈನಂ ಬಾಣೇನ ಪ್ರತ್ಯವಿದ್ಯ್ಯತ್ ಸ್ತನಾಂತರೇ ॥ 125 ॥
ಧೃಷ್ಟದ್ಯುಮ್ನನು ನಕ್ಕು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ತೀಕ್ಷ್ಣವಾದ ಒಂದು ಬಾಣದಿಂದ ದ್ರೋಣರನ್ನು ಅವರ ಸ್ತನಗಳ ಮಧ್ಯದಲ್ಲಿ ಹೊಡೆದನು.
ಸೋಽತಿವಿದ್ಧೋ ಮಹೇಷ್ವಾಸಃ ಸಂಭ್ರಾಂತ ಇವ ಸಂಯುಗೇ |
ಭಲ್ಲೇನ ಶಿತಧಾರೇಣ ಚಿಚ್ಛೇದಾಸ್ಯ ಮಹದ್ಧನುಃ ॥ 126 ॥
ಗಾಢವಾಗಿ ಹೊಡೆಯಲ್ಪಟ್ಟ ಮಹಾಧನುರ್ಧಾರಿಗಳಾದ ದ್ರೋಣರು ರಣರಂಗದಲ್ಲಿ ದಿಗ್ಭ್ರಾಂತರಾದಂತೆ ತೀಕ್ಷ್ಣವಾದ ಅಲುಗುಳ್ಳ ಭಲ್ಲದಿಂದ ಧೃಷ್ಟದ್ಯುಮ್ನನ ದೊಡ್ಡ ಧನುಸ್ಸನ್ನು ಕತ್ತರಿಸಿದರು.
ಯಚ್ಚಾಸ್ಯ ಬಾಣಂ ವಿಕೃತಂ ಧನೂಂಷಿ ಚ ವಿಶಾಂಪತೇ |
ಸರ್ವಂ ಸಂಚ್ಛಿದ್ಯ ದುರ್ಧರ್ಷೋ ಗದಾಂ ಖಡ್ಗಮಥಾಪಿ ಚ ॥ 127 ॥
ಧೃಷ್ಟದ್ಯುಮ್ನಂ ತತೋಽವಿದ್ಯ್ಯನ್ನವಭಿರ್ನಿಶಿತೈಃ ಶರೈಃ |
ಜೀವಿತಾಂತಕರೈಃ ಕ್ರುದ್ಧಃ ಕ್ರುದ್ಧರೂಪಂ ಪರಂತಪಃ ॥ 128 ॥
ಎಲೈ ರಾಜನೇ, ಅವನ ಸುವರ್ಣಭೂಷಿತವಾದ ಬಾಣಗಳನ್ನೂ, ಧನುಸ್ಸುಗಳನ್ನೂ ಎಲ್ಲವನ್ನೂ ಕತ್ತರಿಸಿ, ಅನಂತರ ಗದೆಯನ್ನೂ, ಖಡ್ಗವನ್ನೂ ಕತ್ತರಿಸಿ, ದುರ್ಧರ್ಷರೂ, ಪರಂತಪರೂ, ಕ್ರುದ್ಧರೂ ಆದ ದ್ರೋಣರು ಕ್ರುದ್ಧನಾದ ಧೃಷ್ಟದ್ಯುಮ್ನನನ್ನು ತೀಕ್ಷ್ಣವಾದ ಜೀವಿತಾಂತಕರವಾದ ಒಂಬತ್ತು ಬಾಣಗಳಿಂದ ಹೊಡೆದರು.
ಧೃಷ್ಟದ್ಯುಮ್ನರಥಸ್ಯಾಶ್ವಾನ್ ಸ್ವರಥಾಶ್ವೈರ್ಮಹಾರಥಃ |
ಅಮಿಶ್ರಯದಮೇಯಾತ್ಮಾ ಬ್ರಾಹ್ಮಮಸ್ತ್ರಮುದೀರಯನ್ ॥ 129 ॥
ಅಚಿಂತ್ಯವಾದ ಸಾಮರ್ಥ್ಯವುಳ್ಳ ಮಹಾರಥರಾದ ಅವರು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾ ಧೃಷ್ಟದ್ಯುಮ್ನನ ರಥದ ಅಶ್ವಗಳ

ಜೊತೆಯಲ್ಲಿ ತಮ್ಮ ರಥದ ಅಶ್ವಗಳನ್ನು ಮಿಶ್ರಣ ಮಾಡಿದರು.
ತೇ ಮಿಶ್ರಾ ಬಹ್ವಶೋಭಂತ ಜವನಾ ವಾತರಂಹಸಃ |
ಪಾರಾವತಸವರ್ಣಾಶ್ಚ ಶೋಣಾಶ್ಚ ಭರತರ್ಷಭ ॥ 130 ॥
ಎಲೈ ಭರತರ್ಷಭನೇ, ವೇಗಶಾಲಿಗಳೂ, ವಾಯುವೇಗವುಳ್ಳವೂ ಆದ ಪಾರಿವಾಳದ ಬಣ್ಣದ ಅಶ್ವಗಳು ಮತ್ತು ಕೆಂಪುಬಣ್ಣದ ಅಶ್ವಗಳು ಮಿಶ್ರಣಗೊಂಡು ಬಹಳವಾಗಿ ಶೋಭಿಸಿದವು.
ಯಥಾ ಸವಿದ್ಯುತೋ ಮೇಘಾ ನದಂತೋ ಜಲದಾಗಮೇ |
ತಥಾ ರೇಜುರ್ಮಹಾರಾಜ ಮಿಶ್ರಿತಾ ರಣಮೂರ್ಧನಿ ॥ 131 ॥
ವರ್ಷಾಕಾಲದ ಆರಂಭದಲ್ಲಿ ಮಿಂಚುಗಳಿಂದ ಕೂಡಿದ ಮೇಘಗಳು ಶೋಭಿಸುವಂತೆ ಎಲೈ ಮಹಾರಾಜನೇ, ರಣರಂಗದಲ್ಲಿ ಮಿಶ್ರಿತವಾದ ಆ ಅಶ್ವಗಳು ಶೋಭಿಸಿದವು.
ಈಷಾಬಂಧಂ ಚಕ್ರಬಂಧಂ ರಥಬಂಧಂ ತಥೈವ ಚ |
ಪ್ರಣಾಶಯದಮೇಯಾತ್ಮಾ ಧೃಷ್ಟದ್ಯುಮ್ನಸ್ಯ ಸ ದ್ವಿಜಃ ॥ 132 ॥
ಅಚಿಂತ್ಯ ಸಾಮರ್ಥ್ಯವುಳ್ಳ ಬ್ರಾಹ್ಮಣರಾದ ದ್ರೋಣರು ಧೃಷ್ಟದ್ಯುಮ್ನನ ರಥದ ಮೂಕಿಯ ಬಂಧವನ್ನೂ, ಚಕ್ರಬಂಧವನ್ನೂ, ರಥಬಂಧವನ್ನೂ ಭಗ್ನಗೊಳಿಸಿದರು.
ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಉತ್ತಮಾಮಾಪದಂ ಪ್ರಾಪ್ಯ ಗದಾಂ ವೀರಃ ಪರಾಮೃಶತ್ ॥ 133 ॥
ತನ್ನ ಧನುಸ್ಸು ಕತ್ತರಿಸಲ್ಪಟ್ಟು ರಥಾಶ್ವ-ಸಾರಥಿಗಳಿಂದ ಹೀನನಾದ, ವೀರನಾದ ಧೃಷ್ಟದ್ಯುಮ್ನನು ದೊಡ್ಡ ಆಪತ್ತಿಗೆ ಸಿಲುಕಿ ಗದೆಯನ್ನು ತೆಗೆದುಕೊಂಡನು.
ತಾಮಸ್ಯ ವಿಶಿಖೈಸ್ತೀಕ್ಷ್ಣೈಃ ಕ್ಷಿಪ್ಯಮಾಣಾಂ ಮಹಾರಥಃ |
ನಿಜಘಾನ ಶರೈರ್ದ್ರೋಣಃ ಕ್ರುದ್ಧಃ ಸತ್ಯಪರಾಕ್ರಮಃ ॥ 134 ॥
ತಮ್ಮ ರಥದ ಮೇಲೆ ಎಸೆದ ಆ ಗದೆಯನ್ನು ಮಹಾರಥರೂ, ಕ್ರುದ್ಧರೂ, ಸತ್ಯಪರಾಕ್ರಮರೂ ಆದ ದ್ರೋಣರು ತೀಕ್ಷ್ಣವಾದ ಬಾಣಗಳಿಂದ ಹೊಡೆದು ನಾಶಗೊಳಿಸಿದರು.
ತಾಂ ದೃಷ್ಟ್ವಾ ತು ನರವ್ಯಾಘ್ರೋ ದ್ರೋಣೇನ ನಿಹತಾಂ ಶರೈಃ |
ವಿಮಲಂ ಖಡ್ಗಮಾದತ್ತ ಶತಚಂದ್ರಂ ಚ ಭಾನುಮತ್ ॥ 135 ॥
ನರವ್ಯಾಘ್ರನಾದ ಧೃಷ್ಟದ್ಯುಮ್ನನು ದ್ರೋಣರ ಬಾಣಗಳಿಂದ ವಿನಾಶವನ್ನು ಹೊಂದಿದ ಆ ಗದೆಯನ್ನು ನೋಡಿ, ವಿಮಲವಾದ ಖಡ್ಗವನ್ನು ಮತ್ತು ಶತಚಂದ್ರಗಳಿಂದ ಕೂಡಿ ಪ್ರಕಾಶಮಾನವಾದ ಗುರಾಣಿಯನ್ನು ತೆಗೆದುಕೊಂಡನು.
ಅಸಂಶಯಂ ತಥಾಭೂತೇ ಪಾಂಚಾಲ್ಯಃ ಸಾಧ್ವಮನ್ಯತ |
ವಧಮಾಚಾರ್ಯಮುಖ್ಯಸ್ಯ ಪ್ರಾಪ್ತಕಾಲಂ ಮಹಾತ್ಮನಃ ॥ 136 ॥
ಪರಿಸ್ಥಿತಿಯು ಹಾಗಿರುವಾಗ ಮಹಾತ್ಮರಾದ, ಶ್ರೇಷ್ಠರಾದ ಆಚಾರ್ಯರನ್ನು ವಧಿಸುವ ಕಾಲವು ಪ್ರಾಪ್ತವಾಗಿದೆ ಮತ್ತು ಸಾಧು ಎಂದು ಯಾವ ಸಂಶಯವೂ ಇಲ್ಲದೆ ಪಾಂಚಾಲ್ಯನಾದ ಧೃಷ್ಟದ್ಯುಮ್ನನು ತಿಳಿದನು.
ತತಃ ಸ್ವರಥನೀಡಸ್ಥಃ ಸ್ವರಥಸ್ಯ ರಥೇಷಯಾ |
ಅಗಚ್ಛದಸಿಮುದ್ಯಮ್ಯ ಶತಚಂದ್ರಂ ಚ ಭಾನುಮತ್ ॥ 137 ॥
ಅನಂತರ ತನ್ನ ರಥದ ಪೀಠದಲ್ಲಿದ್ದ ಅವನು ತನ್ನ ರಥದ ಮೂಕಿಯಿಂದ ಖಡ್ಗವನ್ನು ಹಿಡಿದು ಶತಚಂದ್ರಗಳನ್ನು ಮತ್ತು ಸೂರ್ಯಚಿಹ್ನೆಗಳನ್ನು ಹೊಂದಿದ ಗುರಾಣಿಯನ್ನು ಹಿಡಿದು ಹೊರಟನು.
ಚಿಕೀರ್ಷುರ್ದುಷ್ಕರಂ ಕರ್ಮ ಧೃಷ್ಟದ್ಯುಮ್ನೋ ಮಹಾರಥಃ |
ಇಯೇಷ ವಕ್ಷೋ ಭೇತ್ತುಂ ಚ ಭಾರದ್ವಾಜಸ್ಯ ಸಂಯುಗೇ ॥ 138 ॥
ಮಹಾರಥನಾದ ಧೃಷ್ಟದ್ಯುಮ್ನನು ರಣರಂಗದಲ್ಲಿ ದುಷ್ಕರವಾದ ಕರ್ಮವನ್ನು ಮಾಡಲು ಬಯಸಿ, ದ್ರೋಣರ ವಕ್ಷಃಸ್ಥಲವನ್ನು ಭೇದಿಸಲು ಬಯಸಿದನು.
ಸೋಽತಿಷ್ಠದ್ ಯುಗಮಧ್ಯೇ ವೈ ಯುಗಸನ್ನಹನೇಷು ಚ |
ಶೋಣಾನಾಂ ಜಘನಾರ್ಧೇಷು ತತ್ ಸೈನ್ಯಾಃ ಸಮಪೂಜಯನ್ ॥
ಅವನು ದ್ರೋಣರ ರಥಕ್ಕೆ ಹಾರಿ ನೊಗದ ಮಧ್ಯದಲ್ಲಿ, ನೊಗದ ಬಂಧನಗಳಲ್ಲಿಯೂ ಶೋಣಾಶ್ವಗಳ ಹಿಂದಿನ ಅರ್ಧಭಾಗದಲ್ಲಿಯೂ ನಿಂತನು. ಅದನ್ನು ಸೈನ್ಯಗಳು ಪೂಜಿಸಿದವು.
ತಿಷ್ಠತೋ ಯುಗಪಾಲೀಷು ಶೋಣಾನಪ್ಯಧಿತಿಷ್ಠತಃ |
ನಾಪಶ್ಯದಂತರಂ ದ್ರೋಣಸ್ತದದ್ಭುತಮಿವಾಭವತ್ ॥ 140 ॥
ಅವನು ಯುಗಪಾಲಿಗಳಲ್ಲಿ ನಿಂತು ಶೋಣಾಶ್ವಗಳನೂ ನಿಯಂತ್ರಿಸುತ್ತಿರಲು ಅವನಲ್ಲಿ, ಅವನನ್ನು ಹೊಡೆಯಲು ದ್ರೋಣರು ಯಾವ ಸೂಕ್ಷ್ಮ ಅವಕಾಶವನ್ನೂ ಪಡೆಯಲಿಲ್ಲ. ಅದು ಅದ್ಭುತವಾಗಿದ್ದಿತು.
ಕ್ಷಿಪ್ರಂ ಶ್ಯೇನಸ್ಯ ಚರತೋಯಥೈವಾಮಿಷಗೃದ್ಧಿನಃ |
ತದ್ವದಾಸೀದಭೀಸಾರೋ ದ್ರೋಣಂ ಪ್ರಾರ್ಥಯತೋ ರಣೇ ॥ 141 ॥
ಮಾಂಸ-ರಕ್ತವನ್ನು ಬಯಸುವ ಹದ್ದಿನ ಸಂಚಾರವು ಕ್ಷಿಪ್ರವಾಗಿರುವಂತೆ ರಣರಂಗದಲ್ಲಿ ದ್ರೋಣರನ್ನು ಕೊಲ್ಲಲು ಬಯಸುವ ಧೃಷ್ಟದ್ಯುಮ್ನನ ಅಭೀಸಾರವು (ದ್ರೋಣರ ಕಡೆಗೆ ಗಮನವು) ಹಾಗೆ ಇದ್ದಿತು.
ತಸ್ಯಾಶ್ವಾನ್ ರಥಶಕ್ತ್ಯಾಽಸೌ ತದಾ ಕ್ರುದ್ಧಃ ಪರಾಕ್ರಮೀ |

ಸರ್ವಾನೇಕೈಕಶೋ ದ್ರೋಣಃ ಕಪೋತಾಭಾನಜೀಘನತ್ ॥ 142 ॥
ಆಗ ಪರಾಕ್ರಮಶಾಲಿಗಳಾದ ದ್ರೋಣರು ಕೋಪಗೊಂಡು ಧೃಷ್ಟದ್ಯುಮ್ನನ ರಥದ ಕಪೋತಬಣ್ಣದ ಕುದುರೆಗಳನ್ನು ಒಂದೊಂದಾಗಿ ರಥಶಕ್ತಿಯಿಂದ ಕೊಂದರು.
ತೇ ಹತಾ ನ್ಯಪತನ್ ಭೂಮೌ ಧೃಷ್ಟದ್ಯುಮ್ನಸ್ಯ ವಾಜಿನಃ |
ಶೋಣಾಶ್ಚ ಪರ್ಯಮುಚ್ಯಂತ ರಥಬಂಧಾದ್ ವಿಶಾಂಪತೇ ॥ 143 ॥
ಧೃಷ್ಟದ್ಯುಮ್ನನ ರಥದ ಕುದುರೆಗಳು ಮೃತವಾಗಿ ಭೂಮಿಯಲ್ಲಿ ಬಿದ್ದವು. ಎಲೈ ರಾಜನೇ, ದ್ರೋಣರ ರಥದ ಕೆಂಪು ಕುದುರೆಗಳು ರಥಬಂಧದಿಂದ ಬಿಡಿಸಿಕೊಂಡವು.
ತಾನ್ ಹಯಾನ್ ನಿಹತಾನ್ ದೃಷ್ಟ್ವಾ ದ್ವಿಜಾಗ್ರೇಣ ಸ ಪಾರ್ಷತಃ |
ನಾಮೃಷ್ಯತ ಯುಧಾಂ ಶ್ರೇಷ್ಠೋ ಯಾಜ್ಞಸೇನಿರ್ಮಹಾರಥಃ ॥ 144 ॥
ತನ್ನ ರಥದ ಆ ಅಶ್ವಗಳು ಶ್ರೇಷ್ಠ ಬ್ರಾಹ್ಮಣರಾದ ದ್ರೋಣರಿಂದ ಹತವಾದುದನ್ನು ನೋಡಿ ಮಹಾರಥನೂ, ಯಜ್ಞಸೇನನ ಪುತ್ರನೂ ಯುದ್ಧ ಮಾಡುವರಲ್ಲಿ ಶ್ರೇಷ್ಠನೂ ಆದ ಧೃಷ್ಟದ್ಯುಮ್ನನು ಅದನ್ನು ಸಹಿಸಲಿಲ್ಲ.
ವಿರಥಃ ಸ ಗೃಹೀತ್ವಾ ತು ಖಡ್ಗಂ ಖಡ್ಗಭೃತಾಂ ವರಃ |
ದ್ರೋಣಮಭ್ಯಪತದ್ ರಾಜನ್ ವೈನತೇಯ ಇವೋರಗಮ್ ॥ 145 ॥
ಖಡ್ಗಧಾರಿಗಳಲ್ಲಿ ಶ್ರೇಷ್ಠನಾದ ಅವನು ರಥವನ್ನು ಕಳೆದುಕೊಂಡು, ಖಡ್ಗವನ್ನು ಹಿಡಿದು, ಎಲೈ ರಾಜನೇ, ಗರುಡನು ಸರ್ಪದ ಕಡೆಗೆ ಬರುವಂತೆ ದ್ರೋಣರ ಕಡೆಗೆ ಧಾವಿಸಿ ಬಂದನು.
ತಸ್ಯ ರೂಪಂ ಬಭೌ ರಾಜನ್ ಭಾರದ್ವಾಜಂ ಜಿಘಾಂಸತಃ |
ಯಥಾ ರೂಪಂ ಪರಂ ವಿಷ್ಣೋರ್ಹಿರಣ್ಯಕಶಿಪೋರ್ವಧೇ ॥ 146 ॥
ಎಲೈ ರಾಜನೇ, ದ್ರೋಣರನ್ನು ವಧಿಸಲು ಇಚ್ಛಿಸಿದ ಅವನ ರೂಪವು ಹಿರಣ್ಯ ಕಶಿಪುವಿನ ವಧೆಗೆ ಉದ್ಯುಕ್ತನಾದ ವಿಷ್ಣುವಿನ ಶ್ರೇಷ್ಠವಾದ ರೂಪದಂತೆ ಶೋಭಿಸಿತು.
ಸೋಽಚರದ್ವಿವಿಧಾನ್ ಮಾರ್ಗಾನ್ ಪ್ರಕಾರಾನೇಕವಿಂಶತಿಮ್ |
ಭ್ರಾಂತಮುದ್ಭ್ರಾಂತಮಾವಿದ್ಧಮಾಪ್ಲುತಂ ಪ್ರಸೃತಂ ಸೃತಮ್ ॥ 147 ॥
ಪರಿವೃತ್ತಂ ನಿವೃತ್ತಂ ಚ ಖಡ್ಗಂ ಚರ್ಮ ಚ ಧಾರಯನ್ |
ಸಂಪಾತಂ ಸಮುದೀರ್ಣಂ ಚ ದರ್ಶಯಾಮಾಸ ಪಾರ್ಷತಃ ॥ 148 ॥
ಧೃಷ್ಟದ್ಯುಮನು ಖಡ್ಗ-ಚರ್ಮಗಳನ್ನು ಹಿಡಿದು ಭ್ರಾಂತ, ಉದ್ಭ್ರಾಂತ, ಆವಿದ್ಧ, ಆಪ್ಲುತ, ಪ್ರಸೃತ, ಸೃತ, ಪರಿವೃತ್ತ, ನಿವೃತ್ತ, ಸಂಪಾತ, ಸಮುದೀರ್ಣ ಮೊದಲಾದ ಇಪ್ಪತ್ತೊಂದು ಖಡ್ಗಯುದ್ಧದ ಪ್ರಕಾರಗಳನ್ನು ಪ್ರದರ್ಶಿಸಿದನು.
ತತಃ ಶರಸಹಸ್ರೇಣ ಶತಚಂದ್ರಮಪಾತಯತ್ |
ಖಡ್ಗಂ ಚರ್ಮ ಚ ಸಂಬಾಧೇ ಧೃಷ್ಟದ್ಯುಮ್ನಸ್ಯ ಸ ದ್ವಿಜಃ ॥ 149 ॥
ಆಗ ಆ ಯುದ್ಧದಲ್ಲಿ ಬ್ರಾಹ್ಮಣರಾದ ದ್ರೋಣರು ಧೃಷ್ಟದ್ಯುಮ್ನನ ಶತಚಂದ್ರ ಸಹಿತವಾದ ಚರ್ಮವನ್ನು ಮತ್ತು ಖಡ್ಗವನ್ನು ಸಹಸ್ರ ಬಾಣಗಳಿಂದ ಕೆಡವಿದರು.
ತೇ ತು ವೈತಸ್ತಿಕಾ ನಾಮ ಶರಾ ಹ್ಯಾಸನ್ನಘಾತಿನಃ |
ನಿಕೃಷ್ಟಯುದ್ಧೇ ದ್ರೋಣಸ್ಯ ನಾನ್ಯೇಷಾಂ ಸಂತಿ ತೇ ಶರಾಃ ॥ 150 ॥
ಅವು ಹತ್ತಿರದಿಂದ ಹೊಡೆಯುವ ವೈತಸ್ತಿಕ ಎಂಬ ಬಾಣಗಳು. ಸಮೀಪದ ಯುದ್ಧದಲ್ಲಿ ಮಾತ್ರ ಉಪಯೋಗಿಸುವ ಆ ಬಾಣಗಳು ದ್ರೋಣರ ಬಳಿ ಮಾತ್ರ ಇದ್ದವು. ಉಳಿದವರ ಬಳಿ ಇರಲಿಲ್ಲ.
ಶಾರದ್ವತಸ್ಯ ಪಾರ್ಥಸ್ಯ ದ್ರೌಣೇರ್ವೈಕರ್ತನಸ್ಯ ಚ |
ಪ್ರದ್ಯುಮ್ನಯುಯುಧಾನಾಭ್ಯಾಮಭಿಮನ್ಯೋಶ್ಚ ತೇ ಶರಾಃ ॥ 151 ॥
ಶಾರದ್ವತರಾದ ಕೃಪರ, ಅರ್ಜುನನ, ಅಶ್ವತ್ಥಾಮರ, ಕರ್ಣನ, ಪ್ರದ್ಯುಮ್ನನ, ಸಾತ್ಯಕಿಯ ಮತ್ತು ಅಭಿಮನ್ಯುವಿನ ಬಳಿಯಲ್ಲಿಯೂ ಆ ಬಾಣಗಳು ಇವೆ.
ಅಥಾಸ್ಯೇಷುಂ ಸಮಾಧತ್ತ ದೃಢಂ ಪರಮಸಂಶಿತಮ್ |
ಅಂತೇವಾಸಿನಮಾಚಾರ್ಯೋ ಜಿಘಾಂಸುಃ ಪುತ್ರಸಮ್ಮಿತಮ್ ॥ 152 ॥
ಆಗ ಆಚಾರ್ಯರು ಪುತ್ರಸದೃಶನಾದ ಶಿಷ್ಯನನ್ನು ಕೊಲ್ಲಲು ಬಯಸಿ ದೃಢವೂ, ಅತ್ಯಂತ ತೀಕ್ಷ್ಣವೂ ಆದ ಒಂದು ಬಾಣವನ್ನು ಹೂಡಿದರು.
ತಂ ಶರೈರ್ದಶಭಿಸ್ತೀಕ್ಷ್ಣೈಶ್ಚಿಚ್ಛೇದ ಶಿನಿಪುಂಗವಃ |
ಪಶ್ಯತಸ್ತವ ಪುತ್ರಸ್ಯ ಕರ್ಣಸ್ಯ ಚ ಮಹಾತ್ಮನಃ |
ಗ್ರಸ್ತಮಾಚಾರ್ಯಮುಖ್ಯೇನ ಧೃಷ್ಟದ್ಯುಮ್ನಮಮೋಚಯತ್ ॥ 153 ॥
ಶಿನಿಪುಂಗವನಾದ ಸಾತ್ಯಕಿಯು ಆ ಬಾಣವನ್ನು ತೀಕ್ಷ್ಣವಾದ ಹತ್ತು ಬಾಣಗಳಿಂದ ಕತ್ತರಿಸಿದನು. ನಿನ್ನ ಪುತ್ರನು ಮತ್ತು ಮಹಾತ್ಮನಾದ ಕರ್ಣನು ನೋಡುತ್ತಿರುವಂತೆಯೇ ಆಚಾರ್ಯಮುಖ್ಯರಾದ ದ್ರೋಣರಿಂದ ಗ್ರಸ್ತನಾದ ಧೃಷ್ಟದ್ಯುಮ್ನನನ್ನು ವಿಮೋಚನೆ-ಗೊಳಿಸಿದನು.
ಚರಂತಂ ರಥಮಾರ್ಗೇಷು ಸಾತ್ಯಕಿಂ ಸತ್ಯವಿಕ್ರಮಮ್ |
ದ್ರೋಣಕರ್ಣಾಂತರಗತಂ ಕೃಪಸ್ಯಾಪಿ ಚ ಭಾರತ |
ಅಪಶ್ಯೇತಾಂ ಮಹಾತ್ಮಾನೌ ವಿಷ್ವಕ್ಸೇನಧನಂಜಯೌ ॥ 154 ॥

ರಥಮಾರ್ಗಗಳಲ್ಲಿ ಸಂಚರಿಸುವ ಪರಾಕ್ರಮಶಾಲಿಯಾದ ಸಾತ್ಯಕಿಯು ಎಲ್ಲೈ ಭಾರತನೇ, ದ್ರೋಣ-ಕರ್ಣರ ಮಧ್ಯದಲ್ಲಿಯೂ, ಕೃಪರ ಮಧ್ಯದಲ್ಲಿಯೂ ಇರುವುದನ್ನು ಮಹಾತ್ಮರಾದ ಕೃಷ್ಣಾರ್ಜುನರು ನೋಡಿದರು.
ಅಪೂಜಯೇತಾಂ ವಾರ್ಷ್ಣೇಯಂ ಬ್ರುವಾಣೌ ಸಾಧು ಸಾಧ್ವಿತಿ |
ದಿವ್ಯಾನ್ಯಸ್ತ್ರಾಣಿ ಸರ್ವೇಷಾಂ ಯುಧಿ ನಿಘ್ನಂತಮಚ್ಯುತಮ್ |
ಅಭಿಪತ್ಯ ತತಃ ಸೇನಾಂ ವಿಷ್ವಕ್ಸೇನಧನಂಜಯೌ ॥ 155 ॥
ಆಗ ಕೃಷ್ಣಾರ್ಜುನರು ಆ ಸೇನೆಯ ಮೇಲೆ ಎರಗಿ ದಿವ್ಯಾಸ್ತ್ರವನ್ನು ಪ್ರಯೋಗಿಸುತ್ತಾ ಎಲ್ಲರನ್ನೂ ಯುದ್ಧದಲ್ಲಿ ಕೊಲ್ಲುತ್ತಿದ್ದ, ತನ್ನ ಮನೋಬಲದಿಂದ ಚ್ಯುತನಾಗದ ಸಾತ್ಯಕಿಯನ್ನು `ಸಾಧು, ಸಾಧು' ಎಂದು ಹೇಳುತ್ತಾ ಪೂಜಿಸಿದರು.
ಧನಂಜಯಸ್ತತಃ ಕೃಷ್ಣಮಬ್ರವೀತ್ ಪಶ್ಯ ಕೇಶವ |
ಆಚಾರ್ಯವರಮುಖ್ಯಾನಾಂ ಮಧ್ಯೇ ಕ್ರೀಡನ್ ಮಧೂದ್ವಹಃ ॥156॥
ಆನಂದಯತಿ ಮಾಂ ಭೂಯಃ ಸಾತ್ಯಕಿಃ ಸತ್ಯವಿಕ್ರಮಃ |
ಮಾದ್ರೀಪುತ್ರೌ ಚ ಭೀಮಂ ಚ ರಾಜಾನಂ ಚ ಯುಧಿಷ್ಠಿರಮ್ ॥157॥
ಆಗ ಅರ್ಜುನನು ಕೃಷ್ಣನನ್ನು ಕುರಿತು ಕೃಷ್ಣನೇ ನೋಡು, ಶ್ರೇಷ್ಠರಾದ ಆಚಾರ್ಯರ ಮಧ್ಯದಲ್ಲಿ ಆಟವಾಡುತ್ತಿರುವ ಮಧುಕುಲೋತ್ಪನ್ನನಾದ, ಸತ್ಯಪರಾಕ್ರಮಿಯಾದ ಈ ಸಾತ್ಯಕಿಯು ನನಗೂ, ಮಾದ್ರೀಪುತ್ರನಿಗೂ, ಭೀಮನಿಗೂ ಮತ್ತು ರಾಜನಾದ ಯುಧಿಷ್ಠಿರನಿಗೂ ಹೆಚ್ಚು ಸಂತೋಷವನುನಂಟು ಮಾಡುತ್ತಿದ್ದಾನೆ.
ಯಚ್ಛಿಕ್ಷಯಾನುದ್ಧತಃ ಸನ್ ರಣೇ ಚರತಿ ಸಾತ್ಯಕಿಃ |
ಮಹಾರಥಾನುಪಕ್ರೀಡನ್ ವೃಷ್ಣೀನಾಂ ಕೀರ್ತಿವರ್ಧನಃ |
ತಮೇತೇ ಪ್ರತಿನಂದಂತಿ ಸಿದ್ಧಾಃ ಸೈನ್ಯಾಶ್ಚ ವಿಸ್ಮಿತಾಃ ॥ 158 ॥
ಯಾರ ಶಿಕ್ಷಣದಿಂದ ಅನುದ್ಧತನಾದ ಸಾತ್ಯಕಿಯು ಮಹಾರಥರ ಜೊತೆಯಲ್ಲಿ ಆಡುತ್ತಾ ವೃಷ್ಣಿಗಳ ಕೀರ್ತಿಯನ್ನು ಹೆಚ್ಚಿಸುತ್ತಿದ್ದಾನೆಯೋ ಅಂತಹ ಅವನನ್ನು ಸಿದ್ಧರು ಮತ್ತು ವಿಸ್ಮಿತರಾದ ಸೈನಿಕರು ಅಭಿನಂದಿಸುತ್ತಿದ್ದಾರೆ (ಎಂದು ಹೇಳಿದನು).
ಸಂಜಯಃ
ಅಜಯ್ಯಂ ಸಮರೇ ದೃಷ್ಟ್ವಾ ಸಾಧು ಸಾಧ್ವಿತಿ ಸಾತ್ವತಮ್ |
ಯೋಧಾಶ್ಚೋಭಯತಃ ಸರ್ವೇ ಕರ್ಮಭಿಃ ಸಮಪೂಜಯನ್ ॥159॥
ಸಂಜಯ ಸಾತ್ಯಕಿಯು ಯುದ್ಧದಲ್ಲಿ ಅಜೇಯನಾಗಿರುವುದನ್ನು ನೋಡಿ ಎರಡೂ ಪಕ್ಷದ ಯೋಧರು `ಸಾಧು-ಸಾಧು' ಎಂದು ಹೇಳುತ್ತಾ ಅವನು ಮಾಡಿದ ಕರ್ಮದ ನಿಮಿತ್ತದಿಂದಾಗಿ ಅವನನ್ನು ಪೂಜಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಸಪ್ತತ್ಯಧಿಕಶತತಮೋಧ್ಯಾಯಃ ॥
॥ ದ್ರೋಣವಧಪರ್ವಣಿ ದಶಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತಾರನೆಯ ಅಧ್ಯಾಯ
ದ್ರೋಣರ ಪ್ರಯಾಣ. ಧೃಷ್ಟದ್ಯುಮ್ನನಿಂದ ಅವರ ಶಿರಶ್ಛೇದ.
ಸಂಜಯಃ
ಸಾತ್ವತಸ್ಯ ತು ತತ್ಕರ್ಮ ದೃಷ್ಟ್ವಾ ದುರ್ಯೋಧನಾದಯಃ |
ಶೈನೇಯಂ ಸರ್ವತಃ ಕ್ರುದ್ಧಾ ವಾರಯಾಮಾಸುರಂಜಸಾ ॥ 1 ॥
ಸಂಜಯ ಸಾತ್ಯಕಿಯ ಆ ಕರ್ಮವನ್ನು ನೋಡಿ ಕ್ರುದ್ಧರಾದ ದುರ್ಯೋಧನಾದಿಗಳು ಅವನನ್ನು ಎಲ್ಲ ಕಡೆಗಳಿಂದಲೂ ಚೆನ್ನಾಗಿ ಸುತ್ತುವರಿದರು.
ಕೃಪಕರ್ಣೌ ಚ ಸಮರೇ ಪುತ್ರಾಶ್ಚ ತವ ಮಾರಿಷ |
ಶೈನೇಯಂ ತ್ವರಯಾಽಭ್ಯೇತ್ಯ ವಿನಿಘ್ನನ್ ನಿಶಿತೈಃ ಶರೈಃ ॥ 2 ॥
ಎಲೈ ಶ್ರೇಷ್ಠನೇ, ಕೃಪ-ಕರ್ಣರು ಮತ್ತು ನಿನ್ನ ಪುತ್ರರು ಶೀಘ್ರವಾಗಿ ಶೈನೇಯನ ಬಳಿಗೆ ಬಂದು ಅವನನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದರು.
ಯುಧಿಷ್ಠಿರಸ್ತತೋ ರಾಜಾ ಮಾದ್ರೀಪುತ್ರೌ ಚ ಪಾಂಡವೌ |
ಭೀಮಸೇನಶ್ಚ ಬಲವಾನ್ ಸಾತ್ವತಂ ಪರ್ಯವಾರಯನ್ ॥ 3 ॥
ಆಗ ರಾಜನಾದ ಯುಧಿಷ್ಠಿರನೂ, ಮಾದ್ರೀಪುತ್ರರಾದ ನಕುಲ-ಸಹದೇವರೂ, ಬಲಿಷ್ಠನಾದ ಭೀಮಸೇನನೂ ಸಾತ್ಯಕಿಯ ರಕ್ಷಣೆಗೆ ಬಂದರು.
ಕರ್ಣಶ್ಚ ಶರವರ್ಷೇಣ ಗೌತಮಶ್ಚ ಮಹಾರಥಃ |
ದುರ್ಯೋಧನಾದಯಸ್ತೇ ಚ ಶೈನೇಯಂ ಪರ್ಯವಾರಯನ್ ॥ 4 ॥
ಕರ್ಣನೂ, ಮಹಾರಥರಾದ ಕೃಪರೂ ಮತ್ತು ದುರ್ಯೋಧನಾದಿಗಳೂ ಸಾತ್ಯಕಿಯ ಮೇಲೆ ಬಾಣಗಳ ಮಳೆಯನ್ನು ಸುರಿಸಿ ಅವನನ್ನು ಸುತ್ತುವರಿದರು.
ತಾಂ ವೃಷ್ಟಿಂ ಸಹಸಾ ರಾಜನ್ನುತ್ಥಿತಾ ಘೋರರೂಪಿಣೀಮ್ |
ವಾರಯಾಮಾಸ ಶೈನೇಯೋ ಯೋಧಯಂಸ್ತಾನ್ ಮಹಾರಥಾನ್ ॥5॥

ಎಲೈ ರಾಜನೇ, ತಕ್ಷಣದಲ್ಲಿಯೇ ಉಂಟಾದ ಘೋರವಾದ ಮಹಾರಥರ ಆ ಬಾಣಗಳ ವೃಷ್ಟಿಯನ್ನು ಆ ಮಹಾರಥರ ಜೊತೆಯಲ್ಲಿ ಯುದ್ಧ ಮಾಡುತ್ತಾ ಸಾತ್ಯಕಿಯು ತಡೆದನು.
ತೇಷಾಮಸ್ತ್ರಾಣಿ ದಿವ್ಯಾನಿ ಸಹಿತಾನಿ ಮಹಾತ್ಮನಾಮ್ |
ವಾರಯಾಮಾಸ ವಿಧಿವದ್ ದಿವ್ಯೈರಸ್ತ್ರೈರ್ಮಹಾಮೃಧೇ ॥ 6 ॥
ಮಹಾತ್ಮರಾದ ಅವರೆಲ್ಲರೂ ಸಹಿತರಾಗಿ ಪ್ರಯೋಗಿಸಿದ ದಿವ್ಯಾಸ್ತ್ರಗಳನ್ನು ಸಾತ್ಯಕಿಯು ದೊಡ್ಡ ಯುದ್ಧದಲ್ಲಿ ಶಾಸ್ತ್ರೋಕ್ತವಾದ ದಿವ್ಯಾಸ್ತ್ರಗಳಿಂದ ನಿವಾರಿಸಿದನು.
ಕ್ರೂರಮಾಯೋಧನಂ ಜಜ್ಞೇ ತಸ್ಮಿನ್ ರಾಜಸಮಾಗಮೇ |
ರುದ್ರಸ್ಯೇವ ಹಿ ಕ್ರುದ್ಧಸ್ಯ ನಿಘ್ನತಸ್ತು ಪಶೂನ್ ಯಥಾ ॥ 7 ॥
ಆ ರಾಜರ ಸಮಾಗಮ ಉಂಟಾದಾಗ ಪಶುಗಳನ್ನು ಸಂಹರಿಸುವ ಕ್ರುದ್ಧರಾದ ರುದ್ರದೇವರ ಕ್ಷೇತ್ರದಂತೆ ರಣರಂಗವು ಕ್ರೂರವಾಯಿತು.
ಹಸ್ತಾನಾಮುತ್ತಮಾಂಗಾನಾಂ ಕಾರ್ಮುಕಾಣಾಂ ಚ ಭಾರತ |
ಛತ್ರಾಣಾಂ ಚಾಪವಿದ್ಧಾನಾಂ ಚಾಮರಾಣಾಂ ಚ ಸಂಯುಗೇ ॥ 8 ॥
ಭಗ್ನಚಕ್ರೈ ರಥೈಶ್ಚಾಪಿ ಪಾತಿತೈಶ್ಚ ಮಹಾಧ್ವಜೈಃ |
ಸಾದಿಭಿಶ್ಚ ಹತೈಃ ಶೂರೈಃ ಸಂಕೀರ್ಣಾ ವಸುಧಾಽಭವತ್ ॥ 9 ॥
ಎಲೈ ಭಾರತನೇ, ಕತ್ತರಿಸಲ್ಪಟ್ಟ ಹಸ್ತಗಳಿಂದಲೂ, ಶಿರಸ್ಸುಗಳಿಂದಲೂ, ಧನುಸ್ಸುಗಳಿಂದಲೂ, ಛತ್ರಗಳಿಂದಲೂ, ಎಸೆಯಲ್ಪಟ್ಟ ಚಾಮರಗಳಿಂದಲೂ, ಚಕ್ರಗಳು ಮುರಿದ ರಥಗಳಿಂದಲೂ, ಕೆಳಗೆ ಬಿದ್ದ ಮಹಾಧ್ವಜಗಳಿಂದಲೂ, ಹತರಾದ ಶೂರರಾದ ಅಶ್ವಾರೋಹಿಗಳಿಂದಲೂ ರಣರಂಗವು ತುಂಬಿಹೋಯಿತು.
ಬಾಣಪಾತನಿಕೃತ್ತಾಸ್ತು ಯೋಧಾಸ್ತೇ ಕುರುಸತ್ತಮ |
ಚೇಷ್ಟಂತೋ ವಿವಿಧಾಶ್ಚೇಷ್ಟಾ ವ್ಯದೃಶ್ಯಂತ ಮಹಾಹವೇ ॥ 10 ॥
ಎಲೈ ಕುರುಶ್ರೇಷ್ಠನೇ, ಬಾಣಗಳ ಆಘಾತದಿಂದ ಕತ್ತರಿಸಲ್ಪಟ್ಟ ದೇಹವುಳ್ಳ ಯೋಧರು ಬಹುವಿಧವಾಗಿ ಹೊರಳಾಡುವುದು ಕಂಡುಬಂದಿತು.
ವರ್ತಮಾನೇ ತಥಾ ಯುದ್ಧೇ ಘೋರೇ ದೇವಾಸುರೋಪಮೇ |
ಅಬ್ರವೀತ್ ಕ್ಷತ್ರಿಯಾಂಸ್ತತ್ರ ಧರ್ಮರಾಜೋ ಯುಧಿಷ್ಠಿರಃ |
ಅಭಿದ್ರವತ ಸಂಯತ್ತಾಃ ಕುಂಭಯೋನಿಂ ಮಹಾರಥಾಃ ॥ 11 ॥
ದೇವಾಸುರ ಯುದ್ಧಕ್ಕೆ ಸಮವಾದ ಘೋರವಾದ ಯುದ್ಧವು ಹಾಗೆ ನಡೆಯುತ್ತಿರಲು ಧರ್ಮರಾಜನಾದ ಯುಧಿಷ್ಠಿರನು ಕ್ಷತ್ರಿಯರನ್ನು ಕುರಿತು- `ಎಲೈ ಮಹಾರಥರೇ, ದ್ರೋಣರನ್ನು ಕುರಿತು ಪ್ರಯತ್ನಶೀಲರಾಗಿ ಎಲ್ಲರೂ ಮುನ್ನುಗ್ಗಿ' ಎಂದು ಹೇಳಿದನು.
ಏಷ ವೈ ಪಾರ್ಷತೋ ವೀರೋ ಭಾರದ್ವಾಜೇನ ಸಂಗತಃ |
ಘಟತೇ ಚ ಯಥಾಶಕ್ತಿ ಭಾರದ್ವಾಜಸ್ಯ ನಾಶನೇ ॥ 12 ॥
ದ್ರುಪದನ ಪುತ್ರನಾದ ಈ ವೀರನು ದ್ರೋಣರ ಜೊತೆಯಲ್ಲಿ ಸಂಸಕ್ತನಾಗಿ ತನ್ನ ಶಕ್ತಿಗೆ ಅನುಗುಣವಾಗಿ ದ್ರೋಣರನ್ನು ನಾಶಮಾಡಲು ಪ್ರಯತ್ನಪಡುತ್ತಿದ್ದಾನೆ.
ಯಾದೃಶಾನಿ ಹಿ ರೂಪಾಣಿ ದೃಶ್ಯಂತೇ ನೋ ಮಹಾರಣೇ |
ಅದ್ಯ ದ್ರೋಣಂ ರಣೇ ಕ್ರುದ್ಧಃ ಪಾತಯಿಷ್ಯತಿ ಪಾರ್ಷತಃ ॥
ತೇ ಯೂಯಂ ಸಹಿತಾ ಭೂತ್ವಾ ಕುಂಭಯೋನಿಂ ಪರೀಪ್ಸತ ॥ 13 ॥
ಈ ರಣರಂಗದಲ್ಲಿ ನಮಗೆ ತೋರುತ್ತಿರುವ ಸೂಚನೆಗಳನ್ನು ನೋಡಿದರೆ ಈ ದಿನ ಧೃಷ್ಟದ್ಯುಮ್ನನು ಕ್ರುದ್ಧನಾಗಿ ರಣರಂಗದಲ್ಲಿ ದ್ರೋಣರನ್ನು ಸಂಹರಿಸುವನು. ಆದ್ದರಿಂದ ನೀವೆಲ್ಲರೂ ಒಟ್ಟಾಗಿ ದ್ರೋಣರ ಮೇಲೆ ಎರಗಿ (ಎಂದು ಹೇಳಿದನು).
ಯುಧಿಷ್ಠಿರಸಮಾಜ್ಞಪ್ತಾಃ ಸೃಂಜಯಾನಾಂ ಮಹಾರಥಾಃ |
ಅಭ್ಯದ್ರುವಂತ ಸಂಯತ್ತಾ ಭಾರದ್ವಾಜಂ ಜಿಘಾಂಸವಃ ॥ 14 ॥
ಯುಧಿಷ್ಠಿರನಿಂದ ಆಜ್ಞಪ್ತರಾದ ಸೃಂಜಯರ ಮಹಾರಥರು ದ್ರೋಣರನ್ನು ಕೊಲ್ಲಲು ಬಯಸಿ ಎಚ್ಚರಿಕೆಯಿಂದ ಮುನ್ನುಗ್ಗಿದರು.
ತಾನ್ ಸಮಾಪತತಃ ಸರ್ವಾನ್ ಭಾರದ್ವಾಜೋ ಮಹಾರಥಃ |
ಅಭ್ಯದ್ರವತ ವೇಗೇನ ಮರ್ತವ್ಯಮಿತಿ ನಿಶ್ಚಿತಃ ॥ 15 ॥
ಮಹಾರಥರಾದ ದ್ರೋಣರು ಮರಣವನ್ನು ಹೊಂದಬೇಕೆಂದು ನಿಶ್ಚಯಿಸಿ ತನ್ನ ಕಡೆಗೆ ಬರುತ್ತಿದ್ದ ಅವರೆಲ್ಲರ ಕಡೆಗೆ ವೇಗದಿಂದ ಧಾವಿಸಿದರು.
ಪ್ರಯಾತೇ ಸತ್ಯಸಂಧೇ ತು ಸಮಕಂಪತ ಮೇದಿನೀ |
ವವುರ್ವಾತಾಃ ಸನಿರ್ಘಾತಾಸ್ತ್ರಾಸಯಂತೋ ವರೂಥಿನೀಮ್ ॥ 16 ॥
ಸತ್ಯಸಂಧರಾದ ಅವರು ಹಾಗೆ ಧಾವಿಸುತ್ತಿರಲು ಭೂಮಿಯು ನಡುಗಿತು. ವಾಯುವು ಒರಟಾಗಿ ಬೀಸಿ ಸೈನ್ಯವನ್ನು ಭಯಗೊಳಿಸಿತು.
ಪಪಾತ ಮಹತೀ ಚೋಲ್ಕಾ ಆದಿತ್ಯಾನ್ನಿರ್ಗತೇವ ಹ |
ದೀಪಯಂತೀವ ತಾಪೇನ ಶಂಸಂತೀವ ಮಹದ್ಭಯಮ್ ॥ 17 ॥
ದೊಡ್ಡ ಉಲ್ಕೆಯು ಸೂರ್ಯನಿಂದ ಹೊರಬಂದಂತೆ ತನ್ನ ತಾಪದಿಂದ ಎಲ್ಲ ಕಡೆಯಲ್ಲಿಯೂ ಪ್ರಕಾಶವನ್ನು ಉಂಟುಮಾಡುತ್ತಾ, ದೊಡ್ಡ ಭಯವನ್ನು ಸೂಚಿಸುವಂತೆ ಕೆಳಗೆ ಬಿದ್ದಿತು.
ಜಜ್ವಲುಶ್ಚೈವ ಶಸ್ತ್ರಾಣಿ ಭಾರದ್ವಾಜಸ್ಯ ಮಾರಿಷ |
ರಥಾಃ ಸ್ವನಂತಿ ಚಾತ್ಯರ್ಥಂ ಹಯಾಶ್ಚಾಶ್ರೂಣ್ಯವಾಸೃಜನ್ ॥ 18 ॥

ಎಲೈ ಶ್ರೇಷ್ಠನೇ, ದ್ರೋಣರ ಶಸ್ತ್ರಗಳು ಜ್ವಲಿಸಿದವು. ರಥಗಳು ಹಾಗೆಯೇ ಮೊರೆದವು. ಅಶ್ವಗಳು ಕಣ್ಣೀರನ್ನು ಸುರಿಸಿದವು.
ಹತೌಜಾ ಇವ ಚಾಪ್ಯಾಸೀದ್ ಭಾರದ್ವಾಜೋ ಮಹಾರಥಃ |
ಋಷೀಣಾಂ ಬ್ರಹ್ಮವಾದಾನಾಂ ಸ್ವರ್ಗಸ್ಯ ಗಮನಂ ಪ್ರತಿ |
ಸುಯುದ್ಧೇನ ತತಃ ಪ್ರಾಣಾನುತ್ಸ್ರಷ್ಟುಮುಪಚಕ್ರಮೇ ॥ 19 ॥
ಮಹಾರಥರಾದ ದ್ರೋಣರು ಸಾಮರ್ಥ್ಯಹೀನರಂತೆ ಆದರು. ಬ್ರಹ್ಮವಾದಿಗಳಾದ ಋಷಿಗಳ ತಮ್ಮ ಸ್ವರ್ಗಗಮನದ ವಿಷಯದ ಮಾತುಗಳನ್ನು ಕೇಳಿ, ಒಳ್ಳೆಯ ಯುದ್ಧವನ್ನು ಮಾಡಿ ಪ್ರಾಣಗಳನ್ನು ತ್ಯಜಿಸಲು ಉಪಕ್ರಮಿಸಿದರು.
ತತಶ್ಚತುರ್ದಿಶಂ ಸೈನ್ಯೈರ್ದ್ರುಪದಸ್ಯಾಭಿಸಂವೃತಃ |
ನಿರ್ದಹನ್ ಕ್ಷತ್ರಿಯವ್ರಾತಾನ್ ದ್ರೋಣಃ ಪರ್ಯಚರದ್ ರಣೇ ॥20॥
ಆಗ ನಾಲ್ಕು ದಿಕ್ಕುಗಳಲ್ಲಿಯೂ ದ್ರುಪದನ ಸೈನ್ಯದಿಂದ ಸುತ್ತುವರಿಯಲ್ಪಟ್ಟ ದ್ರೋಣರು ಕ್ಷತ್ರಿಯರ ಸಮೂಹವನ್ನು ದಹಿಸುತ್ತಾ ರಣರಂಗದಲ್ಲಿ ಸಂಚರಿಸಿದರು.
ಹತ್ವಾ ವಿಂಶತಿಸಾಹಸ್ರಾನ್ ಕ್ಷತ್ರಿಯಾನರಿಮರ್ದನಃ |
ದಶಾಯುತಾನಿ ತೀಕ್ಷ್ಣಾಗ್ರೈರವಧೀದ್ ವಿಶಿಖೈಃ ಶಿತೈಃ ॥ 21 ॥
ಶತ್ರುಮರ್ದನರಾದ ದ್ರೋಣರು ಇಪ್ಪತ್ತು ಸಾವಿರ ಕ್ಷತ್ರಿಯರನ್ನು ಕೊಂದು, ಅನಂತರ ತೀಕ್ಷ್ಣವಾದ ತುದಿಯುಳ್ಳ ಬಾಣಗಳಿಂದ ಒಂದು ಲಕ್ಷ ಯೋಧರನ್ನು ಕೊಂದರು.
ಸೋಽತಿಷ್ಠದಾಹವೇ ಯತ್ತೋ ವಿಧೂಮ ಇವ ಪಾವಕಃ |
ಕ್ಷತ್ರಿಯಾಣಾಮಭಾವಾಯ ಬ್ರಾಹ್ಮಮಸ್ತ್ರಂ ಸಮಾಸ್ಥಿತಃ ॥ 22 ॥
ರಣರಂಗದಲ್ಲಿ ಧೂಮವಿಲ್ಲದ ಅಗ್ನಿಯಂತೆ ನಿಂತು ಅವರು ಕ್ಷತ್ರಿಯರ ವಿನಾಶಕ್ಕಾಗಿ ಬ್ರಹ್ಮಾಸ್ತ್ರವನ್ನು ಕೈಯಲ್ಲಿ ಹಿಡಿದರು.
ಪಾಂಚಾಲ್ಯಂ ವಿರಥಂ ಭೀಮೋ ಹತಸರ್ವಾಯುಧಂ ವಶೀ |
ಸುವಿಷಣ್ಣಂ ಮಹಾತ್ಮಾನಂ ತ್ವರಮಾಣಃ ಸಮಭ್ಯಯಾತ್ ॥ 23 ॥
ರಥವನ್ನು ಕಳೆದುಕೊಂಡು, ತನ್ನ ಎಲ್ಲಾ ಆಯುಧಗಳನ್ನೂ ಕಳೆದುಕೊಂಡು ಬಹಳ ವಿಷಣ್ಣನಾದ ಮಹಾತ್ಮನಾದ ಧೃಷ್ಟದ್ಯುಮ್ನನ ಕಡೆಗೆ ಸಮರ್ಥನಾದ ಭೀಮನು ತ್ವರೆಯಿಂದ ಬಂದನು.
ತತಃ ಸ್ವರಥಮಾರೋಪ್ಯ ಪಾಂಚಾಲ್ಯಮರಿಮರ್ದನಃ |
ಅಬ್ರವೀದಭಿಸಂಪ್ರೇಕ್ಷ್ಯ ದ್ರೋಣಮಸ್ಯಂತಮಂತಿಕಾತ್ ॥ 24 ॥
ಅರಿಮರ್ದನನಾದ ಭೀಮಸೇನನು ಧೃಷ್ಟದ್ಯುಮ್ನನನ್ನು ತನ್ನ ರಥಕ್ಕೆ ಏರಿಸಿಕೊಂಡು ಸಮೀಪದಿಂದಲೇ ಬಾಣಪ್ರಯೋಗವನ್ನು ಮಾಡುತ್ತಿದ್ದ ದ್ರೋಣರನ್ನು ನೋಡಿ ಧೃಷ್ಟದ್ಯುಮ್ನನಿಗೆ ಹೇಳಿದನು.
ನ ತ್ವದನ್ಯ ಇಹಾಚಾರ್ಯಂ ಯೋದ್ಧುಮುತ್ಸಹತೇ ಪುಮಾನ್ |
ತ್ವರಸ್ವ ಪ್ರಾಗ್ ವಧಾಯೈವ ತ್ವಯಿ ಭಾರಃ ಸಮಾಹಿತಃ ॥ 25 ॥
ನಿನ್ನನ್ನು ಬಿಟ್ಟು ಬೇರೆ ಯಾವ ಯೋಧನೂ ಆಚಾರ್ಯರ ಜೊತೆಯಲ್ಲಿ ಯುದ್ಧವನ್ನು ಮಾಡಲಾರ. ನೀನು ಆಚಾರ್ಯರ ವಧೆಗಾಗಿಯೇ ತ್ವರೆಮಾಡು. ಈ ಭಾರವು ನಿನ್ನ ಮೇಲೆಯೇ ಇದೆ (ಎಂದು ಹೇಳಿದನು).
ಸ ತಥೋಕ್ತೋ ಮಹಾಬಾಹುಃ ಸರ್ವಭಾರಸಹಂ ನವಮ್ |
ಅಭಿಪತ್ಯಾದದೇ ಕ್ಷಿಪ್ರಮಾಯುಧಪ್ರವರಂ ದೃಢಮ್ ॥ 26 ॥
ಹೀಗೆ ಹೇಳಲ್ಪಟ್ಟ ಮಹಾಬಾಹುವಾದ ಧೃಷ್ಟದ್ಯುಮ್ನನು ಶೀಘ್ರವಾಗಿ ದೃಢವಾದ, ಹೊಸದಾದ, ಕಾರ್ಯಸಮರ್ಥವಾದ ಒಂದು ಆಯುಧವನ್ನು (ಧನುಸ್ಸನ್ನು) ತೆಗೆದುಕೊಂಡನು.
ಸಂರಬ್ಧಶ್ಚ ಶರಾನಸ್ಯನ್ ದ್ರೋಣಂ ದುರ್ವಾರಣಂ ರಣೇ |
ವಿವಾರಯಿಷುರಾಚಾರ್ಯಂ ಶರವರ್ಷೈರವಾಕಿರತ್ ॥ 27 ॥
ಕೋಪಗೊಂಡು ನಿವಾರಿಸಲು ಸಾಧ್ಯವಿಲ್ಲದ ದ್ರೋಣರನ್ನು ನಿವಾರಿಸಲು ಇಚ್ಛಿಸಿ ಬಾಣಗಳನ್ನು ಪ್ರಯೋಗಿಸುತ್ತಾ ದ್ರೋಣರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತೌ ನ್ಯವಾರಯತಾಂ ಶ್ರೇಷ್ಠೌ ಸಂರಬ್ಧೌ ರಣಶೋಭಿನೌ |
ಉದೀರಯೇತಾಂ ಬ್ರಾಹ್ಮಾಣಿ ದಿವ್ಯಾನ್ಯಸ್ತ್ರಾಣ್ಯನೇಕಶಃ ॥ 28 ॥
ಶ್ರೇಷ್ಠರೂ, ಕ್ರುದ್ಧರೂ, ರಣಶೋಭಿಗಳೂ ಆದ ಅವರಿಬ್ಬರೂ ಪರಸ್ಪರವಾಗಿ ನಿವಾರಿಸಿ ದಿವ್ಯವಾದ ಅನೇಕ ಬ್ರಹ್ಮಾಸ್ತ್ರಗಳನ್ನು ಪ್ರಯೋಗಿಸಿದರು.
ಸ ಮಹಾಸ್ತ್ರೈರ್ಮಹಾರಾಜ ದ್ರೋಣಮಾಚ್ಛಾದಯದ್ ರಣೇ |
ನಿಹತ್ಯ ಸರ್ವಾಣ್ಯಸ್ತ್ರಾಣಿ ಭಾರದ್ವಾಜಸ್ಯ ಪಾರ್ಷತಃ ॥ 29 ॥
ಎಲೈ ಮಹಾರಾಜನೇ, ಧೃಷ್ಟದ್ಯುಮ್ನನು ದ್ರೋಣರ ಎಲ್ಲ ಅಸ್ತ್ರಗಳನ್ನೂ ವಿನಾಶಗೊಳಿಸಿ ಮಹಾಸ್ತ್ರಗಳಿಂದ ರಣರಂಗದಲ್ಲಿ ಅವರನ್ನು ಮುಚ್ಚಿಹಾಕಿದನು.
ಸ ವಸಾತೀನ್ ಶಿಬೀಂಶ್ಚೈವ ಬಾಹ್ಲೀಕಾನ್ ಕೌರವಾನಪಿ |
ರಕ್ಷಿಷ್ಯಮಾಣಾನ್ ಸಂಗ್ರಾಮೇ ದ್ರೋಣಂ ವ್ಯಧಮದಚ್ಯುತಃ ॥ 30 ॥
ಅವನು ತನ್ನ ಪರಾಕ್ರಮದಿಂದ ಚ್ಯುತನಾಗದೆ ದ್ರೋಣರನ್ನು ರಣರಂಗದಲ್ಲಿ ರಕ್ಷಿಸುವ ವಸಾತಿಗಳನ್ನೂ, ಶಿಬಿಗಳನ್ನೂ, ಬಾಹ್ಲೀಕರನ್ನೂ ಮತ್ತು ಕೌರವರನ್ನೂ ನಾಶಗೊಳಿಸಿದನು.
ಧೃಷ್ಟದ್ಯುಮ್ನಸ್ತದಾ ರಾಜನ್ ಗಭಸ್ತಿಭಿರಿವಾಂಶುಮಾನ್ |

ಬಭೌ ಪ್ರಚ್ಛಾದಯನ್ನಾಶಾಃ ಶರಜಾಲೈಃ ಸಮಂತತಃ ॥ 31 ॥
ಎಲೈ ರಾಜನೇ, ಧೃಷ್ಟದ್ಯುಮ್ನನು ಆಗ ಸೂರ್ಯನು ತನ್ನ ಕಿರಣಗಳಿಂದ ತುಂಬಿದಂತೆ ಎಲ್ಲ ದಿಕ್ಕುಗಳನ್ನೂ ತನ್ನ ಬಾಣಗಳ ಸಮೂಹದಿಂದ ತುಂಬಿ ಶೋಭಿಸಿದನು.
ತಸ್ಯ ದ್ರೋಣೋ ಧನುಶ್ಚಿತ್ತ್ವಾ ವಿದ್ಧ್ವಾ ಚೈನಂ ಶಿಲೀಮುಖೈಃ |
ಮರ್ಮಾಣ್ಯಭ್ಯಹನದ್ ಭೂಯಃ ಸ ವ್ಯಥಾಂ ಪರಮಾಮಗಾತ್ ॥32॥
ದ್ರೋಣರು ಅವನ ಧನುಸ್ಸನ್ನು ಕತ್ತರಿಸಿ ತೀಕ್ಷ್ಣವಾದ ಬಾಣಗಳಿಂದ ಹೊಡೆದು, ಅವನ ಮರ್ಮಗಳನ್ನು ಭೇದಿಸಿ ಅವನಿಗೆ ಬಹಳ ವ್ಯಥೆಯನ್ನು ಉಂಟುಮಾಡಿದರು.
ತತೋ ಭೀಮೋ ದೃಢಕ್ರೋಧೋ ದ್ರೋಣಸ್ಯಾಶ್ಲಿಷ್ಯ ತಂ ರಥಮ್ |
ಶನಕೈರಿವ ರಾಜೇಂದ್ರ ದ್ರೋಣಂ ವಚನಮಬ್ರವೀತ್ ॥ 33 ॥
ಆಗ ದೃಢವಾದ ಕ್ರೋಧವುಳ್ಳ ಭೀಮನು ದ್ರೋಣರ ಸಮೀಪಕ್ಕೆ ಬಂದು ದ್ರೋಣರ ರಥವನ್ನು ಹಿಡಿದು, ಎಲೈ ರಾಜೇಂದ್ರನೇ, ದ್ರೋಣರನ್ನು ಕುರಿತು ಮೆಲ್ಲನೆ ಮಾತನಾಡಿದನು.
ಯದಿ ನಾಮ ನ ಯುದ್ಧ್ಯೇರನ್ ಶಿಕ್ಷಿತಾ ಬ್ರಹ್ಮಬಂಧವಃ |
ಸ್ವಕರ್ಮಭಿರಸಂತುಷ್ಟಾ ನ ಸ್ಮ ಕ್ಷತ್ರಂ ಕ್ಷಯಂ ವ್ರಜೇತ್ ॥ 34 ॥
ಅಹಿಂಸಾ ಸರ್ವಭೂತೇಷು ಧರ್ಮಂ ಜ್ಯಾಯಸ್ತರಂ ವಿದುಃ |
ತಸ್ಯ ಚ ಬ್ರಾಹ್ಮಣೋ ಮೂಲಂ ಭವಾಂಶ್ಚ ಬ್ರಹ್ಮವಿತ್ತಮಃ ॥ 35 ॥
ಶ್ವಪಾಕವನ್ಮ್ಲೇಚ್ಛಗಣಾನ್ ಹತ್ವಾ ಚಾನ್ಯಾನ್ ಪೃಥಗ್ವಿಧಾನ್ |
ಅಜ್ಞಾನಾನ್ಮೂಢವದ್ ಬ್ರಹ್ಮನ್ ಪುತ್ರದಾರಧನೇಪ್ಸಯಾ ॥ 36 ॥
ಏಕಸ್ಯಾರ್ಥೇ ಬಹೂನ್ ಹತ್ವಾ ಪುತ್ರಸ್ಯಾಧರ್ಮವಿದ್ಯಥಾ |
ಸ್ವಕರ್ಮಸ್ಥಾನ್ ವಿಕರ್ಮಸ್ಥೋ ನ ವ್ಯಪತ್ರಪಸೇ ಕಥಮ್ ॥ 37 ॥
ಸ ಚಾದ್ಯ ಪತಿತಃ ಶೇತೇ ಪೃಷ್ಠೇನಾವೇದಿತಸ್ತವ |
ಧರ್ಮರಾಜೇನ ತದ್ವಾಕ್ಯಂ ನಾತಿಶಂಕಿತುಮರ್ಹಸಿ ॥ 38 ॥
ಸುಶಿಕ್ಷಿತರಾದ ಬ್ರಹ್ಮಬಂಧುಗಳು ತಮ್ಮ ಕರ್ಮಗಳಲ್ಲಿ ಸಂತೋಷರಹಿತರಾಗಿ ಯುದ್ಧವನ್ನು ಮಾಡದಿದ್ದರೆ ಕ್ಷತ್ರಿಯ ಕುಲವು ನಾಶವನ್ನು ಹೊಂದುತ್ತಿರಲಿಲ್ಲ. ಎಲ್ಲ ಧರ್ಮಗಳಲ್ಲಿಯೂ ಸರ್ವಭೂತಗಳ ಅಹಿಂಸೆಯು ಅತ್ಯಂತ ಶ್ರೇಷ್ಠವಾದ ಧರ್ಮವೆಂದು ಜ್ಞಾನಿಗಳು ತಿಳಿಯುತ್ತಾರೆ. ಆ ಧರ್ಮಕ್ಕೆ ಬ್ರಾಹ್ಮಣನೇ ಮೂಲ. ನೀವಾದರೂ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರು. ಎಲೈ ಬ್ರಾಹ್ಮಣರೇ, ಶ್ವಪಾಕರಂತೆ ಮ್ಲೇಚ್ಛ ಸಮೂಹಗಳನ್ನು ಮತ್ತು ಬೇರೆ ಬೇರೆ ಕ್ಷತ್ರಿಯರನ್ನು ಮೂಢರಂತೆ ಅಜ್ಞಾನದಿಂದ ಪುತ್ರ-ದಾರ-ಧನಗಳನ್ನು ಪಡೆಯಲು ಬಯಸಿ ಒಬ್ಬ ಪುತ್ರನ ಸಲುವಾಗಿ ಧರ್ಮಜ್ಞಾನ ಶೂನ್ಯರಾಗಿ ಸ್ವಕರ್ಮನಿರತರಾದ ಕ್ಷತ್ರಿಯರನ್ನು ವಿಕರ್ಮಸ್ಥರಾದ ನೀವು ಕೊಂದು, ಏಕೆ ನಾಚಿಕೆ ಪಡುವುದಿಲ್ಲ? ಅಂತಹ ನಿಮ್ಮ ಪುತ್ರನು ಈ ದಿನ ರಣರಂಗದಲ್ಲಿ ಮಲಗಿದ್ದಾನೆ ನೀವು ಕೇಳಿದ ಪ್ರಶ್ನೆಗೆ ಉತ್ತರವಾಗಿ ಹೇಳಿದ ಧರ್ಮರಾಜನ ಮಾತನ್ನು ನೀವು ಶಂಕಿಸುವ ಕಾರಣವಿಲ್ಲ ಎಂದು ಹೇಳಿದನು.
ಏವಮುಕ್ತಸ್ತತೋ ದ್ರೋಣೋ ಭೀಮೇನೋತ್ಸೃಜ್ಯ ತದ್ಧನುಃ |
ಸರ್ವಾಣ್ಯಸ್ತ್ರಾಣಿ ಧರ್ಮಾತ್ಮಾ ಹಾತುಕಾಮೋಽಭ್ಯಭಾಷತ |
ಕರ್ಣ ಕರ್ಣ ಮಹೇಷ್ವಾಸ ಕೃಪ ದುರ್ಯೋಧನೇತಿ ಚ ॥ 39 ॥
ಸಂಗ್ರಾಮೇ ಕ್ರಿಯತಾಂ ಯತ್ನೋ ಬ್ರವೀಮ್ಯೇಷ ಪುನಃ ಪುನಃ |
ಪಾಂಡವೇಭ್ಯಃ ಶಿವಂ ವೋಽಸ್ತು ಶಸ್ತ್ರಮಭ್ಯುತ್ಸೃಜಾಮ್ಯಹಮ್ ॥ 40 ॥
ಹೀಗೆ ಭೀಮಸೇನನಿಂದ ಹೇಳಲ್ಪಟ್ಟ ದ್ರೋಣರು ತಮ್ಮ ಕೈಯಲ್ಲಿದ್ದ ಧನುಸ್ಸನ್ನು ಪರಿತ್ಯಜಿಸಿ, ಧರ್ಮಾತ್ಮರಾದ ಅವರು ಎಲ್ಲ ಅಸ್ತ್ರಗಳನ್ನೂ ಪರಿತ್ಯಜಿಸಲು ಬಯಸಿ ಮಾತನಾಡಿದರು, ಮಹಾಧನುರ್ಧಾರಿಯಾದ ಕರ್ಣನೇ, ಕೃಪರೇ, ದುರ್ಯೋಧನನೇ, ನೀವು ಯುದ್ಧದಲ್ಲಿ ಪ್ರಯತ್ನಪಡಿ. ನಾನು ಈ ಮಾತನ್ನು ಪುನಃ ಪುನಃ ಹೇಳುತ್ತಿದ್ದೇನೆ. ನಿಮಗೆ ಪಾಂಡವರಿಂದ ಕ್ಷೇಮವುಂಟಾಗಲಿ. ನಾನು ಶಸ್ತ್ರಗಳನ್ನು ಪರಿತ್ಯಜಿಸುತ್ತಿದ್ದೇನೆ (ಎಂದು ಹೇಳಿದರು).
ಇತಿ ತತ್ರ ಮಹಾರಾಜ ಪ್ರಾಕ್ರೋಶದ್ ದ್ರೌಣಿಮೇವ ಚ |
ಉತ್ಸೃಜ್ಯ ಚ ರಣೇ ಶಸ್ತ್ರಂ ರಥೋಪಸ್ಥೇ ನಿವೇಶ್ಯ ಚ |
ಅಭಯಂ ಸರ್ವಭೂತಾನಾಂ ಪ್ರದದೌ ಯೋಗಮಾಸ್ಥಿತಃ ॥ 41 ॥
ಎಲೈ ಮಹಾರಾಜನೇ, ಹೀಗೆ ಅಶ್ವತ್ಥಾಮರನ್ನೂ ಕುರಿತು ಕಿರುಚಿ ಹೇಳಿದರು. ಅನಂತರ ರಣರಂಗದಲ್ಲಿ ರಥಪೀಠದಲ್ಲಿ, ಶಸ್ತ್ರಗಳೆಲ್ಲವನ್ನೂ ಇಟ್ಟು ತ್ಯಜಿಸಿ ಯೋಗವನ್ನು ಆಶ್ರಯಿಸಿ ಎಲ್ಲ ಪ್ರಾಣಿಗಳಿಗೂ ಅಭಯವನ್ನು ನೀಡಿದರು.
ತಸ್ಯ ತಚ್ಛಿದ್ರಮಾಜ್ಞಾಯ ಧೃಷ್ಟದ್ಯುಮ್ನಃ ಸಮುತ್ಥಿತಃ |
ಖಡ್ಗೀ ರಥಾದವಪ್ಲುತ್ಯ ಸಹಸಾ ದ್ರೋಣಮಭ್ಯಯಾತ್ ॥ 42 ॥
ಅವರ ಆ ಒಂದು ಅಲ್ಪ ಅವಕಾಶವನ್ನು ನೋಡಿದ ಧೃಷ್ಟದ್ಯುಮ್ನನು ಎದ್ದು, ಖಡ್ಗವನ್ನು ಹಿಡಿದು ರಥದಿಂದ ಹಾರಿ ಶೀಘ್ರವಾಗಿ ದ್ರೋಣರ ಬಳಿಗೆ ಓಡಿದನು.
ಹಾಹಾಕೃತಾನಿ ಭೂತಾನಿ ಮಾನುಷಾಣೀತರಾಣಿ ಚ |
ದ್ರೋಣಂ ತಥಾಗತಂ ದೃಷ್ಟ್ವಾ ಧೃಷ್ಟದ್ಯುಮ್ನವಶಂ ಗತಮ್ ॥ 43 ॥
ಶಸ್ತ್ರಸಂನ್ಯಾಸವನ್ನು ಮಾಡಿದ ದ್ರೋಣರು ಆ ರೀತಿಯಲ್ಲಿ ಧೃಷ್ಟದ್ಯುಮ್ನನಿಗೆ ವಶವಾಗಿರುವುದನ್ನು ನೋಡಿ ಮನುಷ್ಯರು ಮತ್ತು ಭೂತಗಳು ಹಾಹಾಕಾರವನ್ನು ಮಾಡಿದವು.

ಹಾಹಾಕಾರಂ ಭೃಶಂ ಚಕ್ರುರಹೋ ಧಿಗಿತಿ ಚಾಬ್ರುವನ್ |
ದ್ರೋಣೋಽಪಿ ಶಸ್ತ್ರಾಣ್ಯುತ್ಸೃಜ್ಯ ಪರಮಂ ಸಾಮ್ಯಮಾಸ್ಥಿತಃ ॥ 44 ॥
ತೀವ್ರವಾದ ಹಾಹಾಕಾರವನ್ನು ಮಾಡಿ `ಅಯ್ಯೋ ಧಿಕ್ಕಾರವಿರಲಿ' ಎಂದು ಹೇಳಿದರು. ದ್ರೋಣರಾದರೋ ಶಸ್ತ್ರಗಳನ್ನು ವಿಸರ್ಜಿಸಿ ಪರಮ ಸಮಾಧಾನದಿಂದ ಕುಳಿತಿದ್ದರು.
ತಥೋಕ್ತ್ವಾ ಯೋಗಮಾಸ್ಥಾಯ ಜ್ಯೋತಿರ್ಭೂತೋ ಮಹಾತಪಾಃ |
ದಿವಮಾಕ್ರಾಮದಾಚಾರ್ಯಃ ಸದ್ಭಿಃ ಸಹ ದುರಾಕ್ರಮಮ್ ॥ 45 ॥
ಮಹಾತಪಸ್ವಿಗಳಾದ ಆಚಾರ್ಯರು ಹಾಗೆ ಮಾತನಾಡಿ ಯೋಗವನ್ನು ಆಶ್ರಯಿಸಿ ಜ್ಯೋತೀರೂಪರಾಗಿ ಸಜ್ಜನರ ಜೊತೆಯಲ್ಲಿ ಹೊಂದಲು ಅಸಾಧ್ಯವಾದ ಸ್ವರ್ಗವನ್ನು ಸೇರಿದರು.
ದ್ವೌ ಸೂರ್ಯಾವಿತಿ ನೋ ಬುದ್ಧಿರಾಸೀತ್ ತಸ್ಮಿಂಸ್ತಥಾ ಗತೇ |
ಏಕಾಗ್ರಮಿವ ಚಾಸೀದ್ಧಿ ಜ್ಯೋತಿರ್ಭಿಃ ಪೂರಿತಂ ನಭಃ |
ಸಮಪದ್ಯತ ಚಾರ್ಕಾಭೇ ಭಾರದ್ವಾಜನಿಶಾಕರೇ ॥ 46 ॥
ಅವರು ಜ್ಯೋತೀರೂಪರಾಗಿ ಮೇಲೆ ಹೋಗುತ್ತಿದ್ದಾಗ ನಮ್ಮೆಲ್ಲರಿಗೂ ಆಕಾಶದಲ್ಲಿ ಇಬ್ಬರು ಸೂರ್ಯರಿದ್ದಾರೆ ಎಂಬ ಬುದ್ಧಿಯು ಉಂಟಾಯಿತು. ದ್ರೋಣರೆಂಬ ಚಂದ್ರನು ಸೂರ್ಯನ ಪ್ರಕಾಶವನ್ನು ಹೊಂದಿ ಪ್ರಯಾಣ ಮಾಡುತ್ತಿರುವಾಗ ಆಕಾಶವು ಪ್ರಕಾಶದಿಂದ ಸಾಂದ್ರವಾಗಿ ತುಂಬಿಹೋಯಿತು.
ನಿಮೇಷಮಾತ್ರೇಣ ಚ ತಜ್ಜ್ಯೋತಿರಂತರಧೀಯತ |
ಆಸೀತ್ಕಿಲಕಿಲಾಶಬ್ದಃ ಪ್ರಹೃಷ್ಟಾನಾಂ ದಿವೌಕಸಾಮ್ |
ಬ್ರಹ್ಮಲೋಕಂ ಗತೇ ದ್ರೋಣೇ ಧೃಷ್ಟದ್ಯುಮ್ನೇ ಚ ಮೋಹಿತೇ ॥ 47 ॥
ಒಂದು ನಿಮಿಷದಲ್ಲಿ ಆ ಜ್ಯೋತಿಸ್ಸು ಅಂತರ್ಧಾನವನ್ನು ಹೊಂದಿತು. ದ್ರೋಣರು ಬ್ರಹ್ಮಲೋಕವನ್ನು ತಲುಪಿ ಧೃಷ್ಟದ್ಯುಮ್ನನು ಮೋಹಗೊಂಡಿರುವಾಗ ಸಂತೋಷಗೊಂಡ ದೇವತೆಗಳ ಸಂತೋಷದ ಕಿಲಕಿಲ ಶಬ್ದವು ಉಂಟಾಯಿತು.
ವಯಮೇವ ತದಾದ್ರಾಕ್ಷ್ಮ ಪಂಚ ಮಾನುಷಯೋನಯಃ |
ಯೋಗಯುಕ್ತಂ ಮಹಾತ್ಮಾನಂ ಗಚ್ಛಂತಂ ಪರಮಾಂ ಗತಿಮ್ ॥ 48 ॥
ಅಹಂ ಧನಂಜಯಃ ಪಾರ್ಥಃ ಕೃಪಃ ಶಾರದ್ವತೋ ದ್ವಿಜಃ |
ವಾಸುದೇವಶ್ಚ ವಾರ್ಷ್ಣೇಯೋ ಧರ್ಮರಾಜಶ್ಚ ಪಾಂಡವಃ ॥ 49 ॥
ಮನುಷ್ಯಯೋನಿಯಲ್ಲಿ ಜನಿಸಿದ ನಾನು, ಕುಂತೀಪುತ್ರನಾದ ಅರ್ಜುನ, ಶಾರದ್ವಾತರಾದ ಬ್ರಾಹ್ಮಣರಾದ ಕೃಪರು, ವಾರ್ಷ್ಣೇಯನಾದ ಕೃಷ್ಣ ಮತ್ತು ಪಾಂಡುಪುತ್ರನಾದ ಧರ್ಮರಾಜ - ಈ ಐದುಜನರು ಮಾತ್ರ ಮಹಾತ್ಮರಾದ ಯೋಗಯುಕ್ತರಾದ ಅವರು ಶ್ರೇಷ್ಠವಾದ ಗತಿಯನ್ನು ಹೊಂದುವುದನ್ನು ನೋಡಿದೆವು.
ಅನ್ಯೇ ತು ಸರ್ವೇ ನಾಪಶ್ಯನ್ ಭಾರದ್ವಾಜಸ್ಯ ಧೀಮತಃ |
ಮಹಿಮಾನಂ ಮಹಾರಾಜ ಯೋಗಯುಕ್ತಸ್ಯ ಗಚ್ಛತಃ ॥ 50 ॥
ಎಲೈ ಮಹಾರಾಜನೇ, ಮೇಧಾವಿಗಳಾದ ದ್ರೋಣರು ಯೋಗಯುಕ್ತರಾಗಿ ಪ್ರಯಾಣ ಮಾಡುವ ಅವರ ಮಹಿಮೆಯನ್ನು ಉಳಿದವರು ಯಾರೂ ನೋಡಲಿಲ್ಲ.
ಗತಿಂ ಪರಮಿಕಾಂ ಪ್ರಾಪ್ತಮಜಾನಂತೋ ನೃಯೋನಯಃ |
ನಾಪಶ್ಯನ್ ಗಚ್ಛಮಾನಂ ಹಿ ತಂ ಸಾರ್ಧಮೃಷಿಪುಂಗವೈಃ |
ಆಚಾರ್ಯಂ ಯೋಗಮಾಸ್ಥಾಯ ಬ್ರಹ್ಮಲೋಕಮರಿಂದಮಮ್ ॥51॥
ಮನುಷ್ಯಯೋನಿಯಲ್ಲಿ ಹುಟ್ಟಿದ ಉಳಿದ ಯೋಧರು ಆಚಾರ್ಯರ ಪರಮ ಗತಿಯನ್ನು ತಿಳಿಯದೆ ಯೋಗವನ್ನು ಧರಿಸಿ ಋಷಿಶ್ರೇಷ್ಠರ ಜೊತೆಯಲ್ಲಿ ಬ್ರಹ್ಮಲೋಕಕ್ಕೆ ಹೋಗುತ್ತಿದ್ದ ಅರಿಂದಮರಾದ ಆ ಆಚಾರ್ಯರನ್ನು ಕಾಣಲಿಲ್ಲ.
ವಿತುನ್ನಾಂಗಂ ಶರಶತೈರ್ನ್ಯಸ್ತಾಯುಧಮಸೃಕ್ಕರಮ್ |
ಧಿಕ್ಕೃತಃ ಪಾರ್ಷತಸ್ತಂ ತು ಸರ್ವಭೂತೈಃ ಪರಾಮೃಶತ್ ॥ 52 ॥
ದೇಹವೆಲ್ಲವೂ ನೂರಾರು ಬಾಣಗಳಿಂದ ಗಾಯಗೊಂಡು ರಕ್ತವನ್ನು ಸುರಿಸುತ್ತಾ ಶಸ್ತ್ರಸಂನ್ಯಾಸವನ್ನು ಮಾಡಿದ ಅವರನ್ನು (ಅವರ ದೇಹವನ್ನು) ಸರ್ವಪ್ರಾಣಿಗಳಿಂದಲೂ ಧಿಕ್ಕೃತನಾದ ಧೃಷ್ಟದ್ಯುಮ್ನನು ಕೈಯಲ್ಲಿ ಹಿಡಿದನು.
ತಸ್ಯ ಮೂರ್ಧಾನಮಾಲಂಬ್ಯ ಗತಸತ್ತ್ವಸ್ಯ ದೇಹಿನಃ |
ಕಿಂಚಿದಬ್ರುವತಃ ಕಾಯಾದ್ ವಿಚಕರ್ತಾಸಿನಾ ಶಿರಃ॥ 53 ॥
ಮೃತರಾದ ಅವರ ದೇಹದಲ್ಲಿ ತಲೆಯನ್ನು ಹಿಡಿದು ಏನೂ ಮಾತನಾಡದಿದ್ದ ಅವರ ಶಿರಸ್ಸನ್ನು ಖಡ್ಗದಿಂದ ಕತ್ತರಿಸಿದನು.
ಹರ್ಷೇಣ ಮಹತಾ ಯುಕ್ತೋ ಭಾರದ್ವಾಜೇ ನಿಪಾತಿತೇ |
ಸಿಂಹನಾದರವಂ ಚಕ್ರೇ ಭ್ರಾಮಯನ್ ಖಡ್ಗಮಾಹವೇ ॥ 54 ॥
ದ್ರೋಣರು ಅಂತಹ ಪಾತವನ್ನು ಹೊಂದುತ್ತಿರಲು ಬಹಳ ಹರ್ಷದಿಂದ ಕೂಡಿದವನಾಗಿ ರಣರಂಗದಲ್ಲಿ ಖಡ್ಗವನ್ನು ತಿರುಗಿಸುತ್ತಾ ಸಿಂಹನಾದವನ್ನು ಮಾಡಿದನು.
ಆಕರ್ಣಪಲಿತಃ ಶ್ಯಾಮೋ ವಯಸಾಶೀತಿಪಂಚಕಃ |
ತ್ವತ್ಕೃತೇ ವ್ಯಚರತ್ ಸಂಖ್ಯೇ ಸ ತು ಷೋಡಶವರ್ಷವತ್ ॥ 55 ॥
ಕಿವಿಯವರೆಗೂ ನರೆತ ಶ್ಯಾಮವರ್ಣದ, ವಯಸ್ಸಿನಲ್ಲಿ ನಾಲ್ಕುನೂರು ವರ್ಷಗಳನ್ನು ದಾಟಿದ ದ್ರೋಣರು ನಿನ್ನ ಸಲುವಾಗಿ ಹದಿನಾರು ವರ್ಷದ ಯುವಕನಂತೆ ಸಂಚರಿಸಿದರು (ಲಕ್ಷಾಲಂಕಾರ).

ಉಕ್ತವಾಂಶ್ಚ ಮಹಾಬಾಹುಃ ಕುಂತೀಪುತ್ರೋ ಧನಂಜಯಃ ।
ಜೀವಂತಮಾನಯಾಚಾರ್ಯಂ ಮಾ ವಧೀರ್ದ್ರುಪದಾತ್ಮಜ ॥ 55 ॥
ಮಹಾಬಾಹುವಾದ ಕುಂತೀಪುತ್ರನಾದ ಧನಂಜಯನು ಎಲೈ ದ್ರುಪದಾತ್ಮಜನೇ, ಜೀವಂತವಾಗಿರುವ ಆಚಾರ್ಯರನ್ನು ಕರೆದುಕೊಂಡು ಬಾ, ಕೊಲ್ಲಬೇಡ ಎಂದು ಹೇಳಿದನು.
ನ ಹಂತವ್ಯೋ ನ ಹಂತವ್ಯ ಇತಿ ತೇ ಸೈನಿಕಾಶ್ಚ ಹ ।
ಉತ್ಕ್ರೋಶನ್ನರ್ಜುನಶ್ಚೈವ ಸಾನುಕ್ರೋಶಸ್ತಮಾದ್ರವತ್ ॥ 56 ॥
ಸೈನಿಕರೂ ಸಹ ಕೊಲ್ಲಬಾರದು, ಕೊಲ್ಲಬಾರದು ಎಂದು ಕಿರುಚಿದರು. ಅರ್ಜುನನು ಹಾಗೇ ಕಿರುಚುತ್ತಾ ಮೃದುವಾದ ಹೃದಯವುಳ್ಳವನಾಗಿ ಧೃಷ್ಟದ್ಯುಮ್ನನನ್ನು ಹಿಂಬಾಲಿಸಿ ಓಡಿಬಂದನು.
ಕ್ರೋಶಮಾನೇಽರ್ಜುನೇ ಚೈವ ಪಾರ್ಥಿವೇಷು ಚ ಸರ್ವಶಃ ।
ಧೃಷ್ಟದ್ಯುಮ್ನೋಽವಧೀದ್ ದ್ರೋಣಂ ರಥತಲ್ಪೇ ನರರ್ಷಭಮ್ ॥ 57 ॥
ಅರ್ಜುನನೂ ಮತ್ತು ಉಳಿದ ರಾಜರೂ ಎಲ್ಲ ಕಡೆಗಳಿಂದಲೂ ಕಿರುಚುತ್ತಿದ್ದರೂ ಧೃಷ್ಟದ್ಯುಮ್ನನು ರಥಪೀಠದಲ್ಲಿ ಕುಳಿತಿದ್ದ ಪುರುಷಶ್ರೇಷ್ಠರಾದ ದ್ರೋಣರನ್ನು ಕೊಂದನು.
ಶೋಣಿತೇನ ಪರಿಕ್ಲಿನ್ನೋ ರಥಾದ್ಭೂಮಿಮರಿಂದಮಃ ।
ಲೋಹಿತಾಂಗ ಇವಾದಿತ್ಯೋ ದುರ್ದರ್ಶಃ ಸಮಪದ್ಯತ ।
ಏವಂ ತಂ ನಿಹತಂ ಸಂಖ್ಯೇ ದದೃಶೇ ಸೈನಿಕೋ ಜನಃ ॥ 58 ॥
ರಕ್ತದಿಂದ ತೊಯ್ದ ದೇಹವುಳ್ಳವರಾಗಿ, ರಥದಿಂದ ಭೂಮಿಯ ಮೇಲೆ ಲೋಹಿತ ಶರೀರರಾಗಿ ಆದಿತ್ಯನಂತೆ ಬಿದ್ದ ಅರಿಂದಮರಾದ (ದ್ರೋಣರ ಶರೀರವು) ನೋಡಲು ಅಸಾಧ್ಯವಾಯಿತು. ಹೀಗೆ ರಣರಂಗದಲ್ಲಿ ಕೊಲ್ಲಲ್ಪಟ್ಟ ಅವರನ್ನು ಸೈನಿಕ ಜನರು ನೋಡಿದರು.
ಧೃಷ್ಟದ್ಯುಮ್ನಸ್ತು ತದ್ರಾಜನ್ ಭಾರದ್ವಾಜಶಿರೋ ಮಹತ್ ।
ತಾವಕಾನಾಂ ಮಹೇಷ್ವಾಸಃ ಪ್ರಮುಖೇ ತತ್ ಸಮಾಕ್ಷಿಪತ್ ॥ 59 ॥
ಎಲೈ ರಾಜನೇ, ಮಹಾಧನುರ್ಧಾರಿಯಾದ ಧೃಷ್ಟದ್ಯುಮ್ನನಾದರೋ ದ್ರೋಣರ ಆ ದೊಡ್ಡ ಶಿರಸ್ಸನ್ನು ನಿನ್ನವರ ಮುಂದೆ ಎಸೆದನು.
ತೇ ತು ದೃಷ್ಟ್ವಾ ಶಿರೋ ರಾಜನ್ ಭಾರದ್ವಾಜಸ್ಯ ತಾವಕಾಃ ।
ಪಲಾಯನಕೃತೋತ್ಸಾಹಾ ದುದ್ರುವುಃ ಸರ್ವತೋ ದಿಶಮ್ ॥ 60 ॥
ಎಲೈ ರಾಜನೇ, ನಿನ್ನವರು ದ್ರೋಣರ ಆ ಶಿರಸ್ಸನ್ನು ನೋಡಿ ಪಲಾಯನವನ್ನು ಮಾಡಲು ಬಯಸಿ ಎಲ್ಲ ದಿಕ್ಕುಗಳಲ್ಲಿಯೂ ಓಡಿಹೋದರು.
ದ್ರೋಣಸ್ತು ದಿವಮಾಸ್ಥಾಯ ನಕ್ಷತ್ರಪಥಮಾವಿಶತ್ ।
ಅಹಮೇವ ತದದ್ರಾಕ್ಷಂ ದ್ರೋಣಸ್ಯ ನಿಧನಂ ನೃಪ ।
ಋಷೇಃ ಪ್ರಸಾದಾತ್ ಕೃಷ್ಣಸ್ಯ ಸತ್ಯವತ್ಯಾಃ ಸುತಸ್ಯ ಚ ॥ 61 ॥
ದ್ರೋಣರಾದರೋ ಆಕಾಶವನ್ನು ಸೇರಿ ನಕ್ಷತ್ರಮಾರ್ಗವನ್ನು ಪ್ರವೇಶಿಸಿದರು. ಎಲೈ ರಾಜನೇ, ದ್ರೋಣರ ಆ ನಿಧನವನ್ನು ಋಷಿಗಳಾದ ಸತ್ಯವತೀಸುತರಾದ, ವಾಸಿಷ್ಠಕೃಷ್ಣರಾದ ವೇದವ್ಯಾಸರ ಅನುಗ್ರಹದಿಂದ ನಾನೇ ನೋಡಿದೆನು.
ವಿಧೂಮಾಮಿವ ಸಂಯಾಂತೀಮುಲ್ಕಾಂ ಪ್ರಜ್ವಲಿತಾಮಿವ ।
ಅಪಶ್ಯಾಮ ದಿವಂ ಸ್ತಬ್ಧ್ವಾ ಗಚ್ಛಂತಂ ತಂ ಮಹಾದ್ಯುತಿಮ್ ॥ 62 |
ಆ ಮಹಾತೇಜಸ್ವಿಗಳು ಧೂಮವಿಲ್ಲದೆ ಪ್ರಜ್ವಲಿಸುವ ಉಲ್ಕೆಯಂತೆ ಅಂತರಿಕ್ಷವನ್ನು ಸ್ತಂಭಿಸಿ ಹೋಗುವುದನ್ನು ನಾವು (ಐದು ಜನರು) ನೋಡಿದೆವು.
ಹತೇ ದ್ರೋಣೇ ನಿರುತ್ಸಾಹಾನ್ ಕುರೂನ್ ಪಾಂಡವಸೃಂಜಯಾಃ ।
ಅಭ್ಯದ್ರವನ್ ಮಹಾವೇಗಾಸ್ತತಃ ಸೈನ್ಯಂ ವ್ಯದೀರ್ಯತ ॥ 63 ॥
ದ್ರೋಣರು ಹತರಾಗುತ್ತಿರಲು ಪಾಂಡವ-ಸೃಂಜಯರು ಮಹಾವೇಗದಿಂದ ನಿರುತ್ಸಾಹರಾದ ಕುರುಗಳ ಮೇಲೆ ಎರಗಿದರು. ಆಗ ಕೌರವ ಸೈನ್ಯವು ಭಗ್ನವಾಯಿತು.
ನಿಹತಾ ಹಯಭೂಯಿಷ್ಠಾಃ ಸಂಗ್ರಾಮೇ ನಿಶಿತೈಃ ಶರೈಃ ।
ತಾವಕಾ ನಿಹತೇ ದ್ರೋಣೇ ಗತಾಸವ ಇವಾಭವನ್ ॥ 64 ॥
ಅಶ್ವಗಳು ಪ್ರಧಾನವಾಗಿದ್ದ ನಿನ್ನ ಸೈನಿಕರು ರಣರಂಗದಲ್ಲಿ ತೀಕ್ಷ್ಣವಾದ ಬಾಣಗಳಿಂದ ಹತರಾದರು. ದ್ರೋಣರು ಹತರಾಗುತ್ತಿರಲು ನಿನ್ನವರು ಪ್ರಾಣಗಳನ್ನು ಕಳೆದುಕೊಂಡಂತಾದರು.
ಪರಾಜಯಮಥಾವಾಪ್ಯ ಪರತ್ರ ಚ ಮಹದ್ಭಯಮ್ ।
ಉಭಯೇನೈವ ತೇ ಹೀನಾ ನಾವಿಂದನ್ ಧೃತಿಮಾತ್ಮನಃ ॥ 65 ॥
ಕೌರವರು ಪರಾಜಯವನ್ನು ಹೊಂದಿ ಈ ಲೋಕದಲ್ಲಿ ಸುಖವನ್ನು ಕಳೆದುಕೊಂಡು ಮಹದ್ಭಯವನ್ನು ಹೊಂದಿ, ಪರಲೋಕದ ಸುಖವನ್ನೂ ಕಳೆದುಕೊಂಡು ಎಲ್ಲದರಿಂದಲೂ ಹೀನರಾಗಿ ಧೈರ್ಯವನ್ನು ಹೊಂದಲಿಲ್ಲ.
ಅನ್ವಿಚ್ಛಂತಃ ಶರೀರಂ ತು ಭಾರದ್ವಾಜಸ್ಯ ಪಾರ್ಥಿವಾಃ ।
ನಾಧ್ಯಗಚ್ಛಂಸ್ತದಾ ರಾಜನ್ ಕಬಂಧಾಯುತಸಂಕುಲೇ ॥ 66 ॥
ಎಲೈ ರಾಜನೇ, ರಾಜರು ದ್ರೋಣರ ಶರೀರವನ್ನು ಹುಡುಕಿದರೂ ಹತ್ತಾರು ಸಾವಿರ ರುಂಡಗಳಿಂದ ನಿಬಿಡವಾದ ರಣರಂಗದಲ್ಲಿ ಅದನ್ನು ಕಾಣಲಿಲ್ಲ.
ಪಾಂಡವಾಸ್ತು ಜಯಂ ಲಬ್ಧ್ವಾ ಪರತ್ರ ಚ ಮಹದ್ಯಶಃ ।

ಬಾಣಶಬ್ದರವಾಂಶ್ಚಕ್ರುಃ ಸಿಂಹನಾದಾಂಶ್ಚ ಪುಷ್ಕಳಾನ್ ॥ 67 ॥
ಪಾಂಡವರಾದರೋ ಈ ಲೋಕದಲ್ಲಿ ಜಯವನ್ನೂ, ಪರಲೋಕದಲ್ಲಿ ಮಹಾಕೀರ್ತಿಯನ್ನೂ ಪಡೆದು ಬಾಣಗಳ ಶಬ್ದಗಳಿಂದಲೂ ಮತ್ತು ಪುಷ್ಕಳ ಸಿಂಹನಾದಗಳಿಂದಲೂ ದೊಡ್ಡ ಶಬ್ದವನ್ನು ಉಂಟುಮಾಡಿದರು.
ಭೀಮಸೇನಸ್ತತೋ ರಾಜನ್ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ವರೂಥಿನ್ಯಾಮನೃತ್ಯೇತಾಂ ಪರಿಷ್ವಜ್ಯ ಪರಸ್ಪರಮ್ ॥ 68 ॥
ಎಲೈ ರಾಜನೇ, ಆಗ ಭೀಮಸೇನನೂ ಮತ್ತು ಪಾರ್ಷತನಾದ ಧೃಷ್ಟದ್ಯುಮ್ನನೂ ಪರಸ್ಪರವಾಗಿ ಆಲಿಂಗಿಸಿ ಸೈನ್ಯಮಧ್ಯದಲ್ಲಿ ನರ್ತನವನ್ನು ಮಾಡಿದರು.
ಅಬ್ರುವೀಚ್ಚ ತದಾ ಭೀಮಃ ಪಾರ್ಷತಂ ಶತ್ರುತಾಪನಮ್ |
ಭೂಯೋಽಹಂ ತ್ವಾಂ ವಿಜಯಿನಂ ಪರಿಷ್ವಕ್ಷ್ಯಾಮಿ ಪಾರ್ಷತ |
ಸೂತಪುತ್ರೇ ಹತೇ ಪಾಪೇ ಧಾರ್ತರಾಷ್ಟ್ರೇ ಚ ಸಂಯುಗೇ ॥ 69 ॥
ಆಗ ಭೀಮಸೇನನು ಶತ್ರುತಾಪನನಾದ ಧೃಷ್ಟದ್ಯುಮ್ನನನ್ನು ಕುರಿತು- `ಎಲೈ ಧೃಷ್ಟದ್ಯುಮ್ನನೇ, ಸೂತಪುತ್ರನಾದ ಕರ್ಣನು ಹತನಾದ ಮೇಲೆ, ಪಾಪಿಯಾದ ದುರ್ಯೋಧನನೂ ಯುದ್ಧದಲ್ಲಿ ಹತನಾದ ಮೇಲೆ ನಾನು ಪುನಃ ವಿಜಯಶಾಲಿಯಾದ ನಿನ್ನನ್ನು ಆಲಿಂಗಿಸುವೆನು' ಎಂದು ಹೇಳಿದನು.
ಏತಾವದುಕ್ತ್ವಾ ಭೀಮಸ್ತು ಹರ್ಷೇಣ ಮಹತಾ ಯುತಃ |
ಬಾಹುಶಬ್ದೇನ ಪೃಥಿವೀಂ ಕಂಪಯಾಮಾಸ ಪಾಂಡವಃ ॥ 70 ॥
ಈ ಮಾತುಗಳನ್ನು ಹೇಳಿ ಭೀಮಸೇನನು ಬಹಳ ಸಂತೋಷದಿಂದ ಕೂಡಿದವನಾಗಿ ತನ್ನ ಭುಜಗಳನ್ನು ತಟ್ಟಿ ಭೂಮಿಯನ್ನು ನಡುಗಿಸಿದನು.
ತಸ್ಯ ಶಬ್ದೇನ ವಿತ್ರಸ್ತಾಃ ಪ್ರಾದ್ರವಂಸ್ತಾವಕಾ ಯುಧಿ |
ಕ್ಷತ್ರಧರ್ಮಂ ಸಮುತ್ಸೃಜ್ಯ ಪಲಾಯನಪರಾಯಣಾಃ ॥ 71 ॥
ಆ ಶಬ್ದವನ್ನು ಕೇಳಿದ ನಿನ್ನವರು ಯುದ್ಧದಲ್ಲಿ ಹೆದರಿ, ಕ್ಷತ್ರಿಯಧರ್ಮವನ್ನು ತ್ಯಜಿಸಿ ಪಲಾಯನಪರಾಯಣರಾಗಿ ಓಡಿಹೋದರು.
ಪಾಂಡವಾಸ್ತು ಜಯಂ ಲಬ್ಧ್ವಾ ಹೃಷ್ಟಾ ಹ್ಯಾಸನ್ ವಿಶಾಂಪತೇ |
ಅರಿಕ್ಷಯಂ ಚ ಸಂಗ್ರಾಮೇ ತೇನ ತೇ ಸುಖಮಾಪ್ನುವನ್ ॥ 72 ॥
ಎಲೈ ರಾಜನೇ, ಪಾಂಡವರು ಜಯವನ್ನೂ, ಯುದ್ಧದಲ್ಲಿ ಶತ್ರುಕ್ಷಯವನ್ನೂ ಸಂಪಾದಿಸಿ ಹರ್ಷಗೊಂಡರು. ಅದರಿಂದ ಅವರು ಸುಖವನ್ನು ಪಡೆದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಷಟ್‌ಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ದ್ರೋಣವಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತಾರನೆಯ
ಅಧ್ಯಾಯ ಮುಗಿಯಿತು.
॥ ದ್ರೋಣವಧಪರ್ವವು ಮುಗಿಯಿತು ॥
* * * * *

8. ನಾರಾಯಣಾಸ್ತ್ರಮೋಕ್ಷಪರ್ವ

ನೂರ ಎಪ್ಪತ್ತೇಳನೆಯ ಅಧ್ಯಾಯ

ಕೃಪರಿಂದ ಅಶ್ವತ್ಥಾಮರನ್ನು ಕುರಿತು ದ್ರೋಣರ ವಧೆಯ ಪ್ರಕಾರದ ಕಥನ. ನಾರಾಯಣಾಸ್ತ್ರದಿಂದ ಪಾಂಡವರ ವಧೆಯನ್ನು ಮಾಡಲು ಅಶ್ವತ್ಥಾಮರ ಪ್ರತಿಜ್ಞೆ.
ಸಂಜಯಃ
ತತೋ ದ್ರೋಣೇ ಹತೇ ರಾಜನ್ ಕುರವಃ ಶಸ್ತ್ರಪೀಡಿತಾಃ |
ಹತಪ್ರವೀರಾ ವಿಧ್ವಸ್ತಾ ಭೃಶಂ ಶೋಕಪರಾಯಣಾಃ ॥ 1 ॥
ವಿಚೇತಸೋ ಹತೋತ್ಸಾಹಾಃ ಕಶ್ಮಲಾಭಿಹತೌಜಸಃ |
ಆರ್ತಸ್ವರೇಣ ಮಹತಾ ಪುತ್ರಂ ತೇ ಪರ್ಯವಾರಯನ್ ॥ 2 ॥
ರಜಸ್ವಲಾ ವೇಪಮಾನಾ ವೀಕ್ಷಮಾಣಾ ದಿಶೋ ದಶ |
ಅಶ್ರುಕಂಠಾ ಯಥಾ ದೈತ್ಯಾ ಹಿರಣ್ಯಾಕ್ಷೇ ಪುರಾ ಹತೇ ॥ 3 ॥
ಸಂಜಯ ಎಲೈ ರಾಜನೇ, ದ್ರೋಣರು ಹತರಾಗಲು ಶಸ್ತ್ರಪೀಡಿತರೂ, ಶ್ರೇಷ್ಠರಾದ ವೀರರನ್ನು ಕಳೆದುಕೊಂಡವರೂ, ನಷ್ಟವನ್ನು ಅನುಭವಿಸಿದವರೂ, ಬಹಳ ಶೋಕದಿಂದ ಕೂಡಿದವರೂ, ವಿವೇಕಶೂನ್ಯರಾದವರೂ, ಉತ್ಸಾಹವನ್ನು ಕಳೆದು ಕೊಂಡವರೂ, ಮನೋವಿಷಾದದಿಂದ ಪರಾಕ್ರಮವನ್ನು ಕಳೆದುಕೊಂಡವರೂ ಆದ ಕೌರವರು ದೊಡ್ಡ ಆರ್ತಸ್ವರದಿಂದ ನಿನ್ನ ಪುತ್ರನನ್ನು ಸುತುತವರಿದರು. ಕೌರವ ಸೈನ್ಯವು ಧೂಳಿನಿಂದ ಕೂಡಿ ನಡುಗುತ್ತಾ, ಹತ್ತುದಿಕ್ಕುಗಳನ್ನು ನೋಡುತ್ತಾ ಬಾಷ್ಪಕಂಠದಿಂದ ಕೂಡಿ, ಹಿಂದೆ ಹಿರಣ್ಯಾಕ್ಷನು ಹತನಾದಾಗ ಇದ್ದ ದೈತ್ಯರಂತಾದರು.
ಸ ತೈಃ ಪರಿವೃತೋ ರಾಜಾ ತ್ರಸ್ತೈಃ ಕ್ಷುದ್ರಮೃಗೈರಿವ |
ಅಶಕ್ನುವನ್ನವಸ್ಥಾತುಮಪಾಯಾತ್ ತನಯಸ್ತವ ॥ 4 ॥
ಕ್ಷುದ್ರಮೃಗಗಳಂತೆ ಹೆದರಿದ ಅವರಿಂದ ಸುತ್ತುವರಿಯಲ್ಪಟ್ಟ ನಿನ್ನ ಪುತ್ರನು ಅಲ್ಲಿ ನಿಲ್ಲಲು ಸಾಧ್ಯವಾಗದೆ ಅಲ್ಲಿಂದ ಹೊರಟು

ಹೋದನು.
ಕ್ಷುತ್ಪಿಪಾಸಾಪರಿಶ್ರಾಂತಾಸ್ತೇ ಯೋಧಾಸ್ತವ ಭಾರತ |
ಆದಿತ್ಯೇನ ಚ ಸಂತಪ್ತಾ ಭೃಶಂ ವಿಮನಸೋಽಭವನ್ ॥ 5 ॥
ಎಲೈ ಭಾರತನೇ, ಹಸಿವು- ನೀರಡಿಕೆಗಳಿಂದ ಬಳಲಿದ ಮತ್ತು ಸೂರ್ಯನ ಬಿಸಿಲಿನಿಂದ ಸಂತಪ್ತರಾದ ನಿನ್ನ ಯೋಧರು ಬಹಳ ವಿಷಾದವನ್ನು ಹೊಂದಿದರು.
ಭಾಸ್ಕರಸ್ಯೇವ ಪತನಂ ಸಮುದ್ರಸ್ಯೇವ ಶೋಷಣಮ್ |
ವಿಪರ್ಯಾಸಂ ಯಥಾ ಮೇರೋರ್ವಾಸವಸ್ಯೇವ ನಿರ್ಜಯಮ್ ॥ 6 ॥
ಅಮರ್ಷಣೀಯಂ ತದ್ ದೃಷ್ಟ್ವಾ ಭಾರದ್ವಾಜಸ್ಯ ಪಾತನಮ್ |
ತ್ರಸ್ತರೂಪತರಾ ರಾಜನ್ ಕೌರವಾಃ ಪ್ರಾದ್ರುವನ್ ಭಯಾತ್ ॥ 7 ॥
ಎಲೈ ರಾಜನೇ, ಸೂರ್ಯನ ಪತನದಂತೆ, ಸಮುದ್ರದ ಶೋಷಣದಂತೆ, ಮೇರು ಪರ್ವತವನ್ನು ಮಗುಚಿಹಾಕಿದಂತೆ, ಇಂದ್ರನನ್ನು ಸೋಲಿಸಿದಂತೆ ಇದ್ದ, ಸಹಿಸಲು ಅಸಾಧ್ಯವಾದ ದ್ರೋಣರ ಪತನವನ್ನು ನೋಡಿ ಅತ್ಯಂತ ಹೆದರಿಕೆಯಿಂದ ಕೂಡಿದವರಾಗಿ ಕೌರವರು ಭಯದಿಂದ ಓಡಿಹೋದರು.
ಗಾಂಧಾರರಾಜಃ ಶಕುನಿಸ್ತ್ರಸ್ತಸ್ತ್ರಸ್ತತರೈಃ ಸಹ |
ಹತಂ ರುಗ್ಮರಥಂ ದೃಷ್ಟ್ವಾ ಪ್ರಾದ್ರುವತ್ ಸಹಿತೋ ರಥೈಃ ॥ 8 ॥
ಹೆದರಿದ ಗಾಂಧಾರರಾಜನಾದ ಶಕುನಿಯು ರುಗ್ಮರಥರಾದ ದ್ರೋಣರು ಹತರಾದುದನ್ನು ನೋಡಿ ತನಗಿಂತಲೂ ಹೆಚ್ಚಾಗಿ ಹೆದರಿದ ರಥಿಕರ ಜೊತೆಯಲ್ಲಿ ಓಡಿ ಹೋದನು.
ವರೂಥಿನೀಂ ವೇಗವತೀಂ ವಿದ್ರುತಾಂ ಸಪತಾಕಿನೀಮ್ |
ಪರಿಗೃಹ್ಯ ಮಹಾಸೇನಾಂ ಸೂತಪುತ್ರೋಽಪಯಾದ್ ಭಯಾತ್ ॥ 9 ॥
ಪತಾಕೆಗಳಿಂದ ಕೂಡಿದ ವೇಗವಾಗಿ ಓಡುತ್ತಿದ್ದ ದೊಡ್ಡ ಸೈನ್ಯದ ಜೊತೆಯಲ್ಲಿ ಸೇರಿ ಸೂತಪುತ್ರನಾದ ಕರ್ಣನು ಭಯದಿಂದ ಓಡಿಹೋದನು.
ರಥನಾಗಾಶ್ವಕಲಿಲಾಂ ಪುರಸ್ಕೃತ್ಯ ತು ವಾಹಿನೀಮ್ |
ಮದ್ರಾಣಾಮೀಶ್ವರಃ ಶಲ್ಯೋ ವೀಕ್ಷಮಾಣೋಽಪಯಾದ್ ಭಯಾತ್ ॥
ದ್ರೋಣರ ವಧೆಯನ್ನು ನೋಡಿದ ಮದ್ರಾಧಿಪತಿಯಾದ ಶಲ್ಯನು ರಥ- ಗಜಾಶ್ವಗಳಿಂದ ನಿಬಿಡವಾದ ತನ್ನ ಸೈನ್ಯವನ್ನು ಮುಂದೆ ಮಾಡಿಕೊಂಡು ಭಯದಿಂದ ಹೊರಟುಹೋದನು.
ಹತಪ್ರವೀರೈರ್ಭೂಯಿಷ್ಠಂ ದ್ವಿಪೈರ್ಬಹುಪದಾತಿಭಿಃ |
ವೃತಃ ಶಾರದ್ವತೋಽಗಚ್ಛತ್ ಕಷ್ಟಂ ಕಷ್ಟಮಿತಿ ಬ್ರುವನ್ ॥ 11 ॥
ಗಜ ಮತ್ತು ಅನೇಕ ಪದಾತಿಗಳಿಂದ ಕೂಡಿದ ಗಾಯಗೊಂಡ ಅನೇಕ ವೀರರಿಂದ ಪರಿವೃತರಾದ ಕೃಪರು `ಕಷ್ಟ-ಕಷ್ಟ' ಎಂದು ಹೇಳುತ್ತಾ ಹೊರಟು ಹೋದರು.
ಭೋಜಾನೀಕೇನ ಶಿಷ್ಟೇನ ಕಳಿಂಗಾರಟ್ಟಬಾಹ್ಲಿಕೈಃ |
ಕೃತವರ್ಮಾ ವೃತೋ ರಾಜನ್ ಪ್ರಾಯಾತ್ ಸುಜವನೈರ್ಹಯೈಃ ॥12॥
ಎಲೈ ರಾಜನೇ, ಕೃತವರ್ಮನು ಉಳಿದ ಭೋಜ ಸೈನ್ಯದಿಂದಲೂ, ಕಳಿಂಗ- ಅರಟ್ಟ-ಬಾಹ್ಲಿಕ ಸೈನ್ಯದಿಂದಲೂ ಕೂಡಿ ವೇಗವುಳ್ಳ ಅಶ್ವಗಳಿಂದ ಹೊರಟು ಹೋದನು.
ಪದಾತಿಗಣಸಂಯುಕ್ತಸ್ತ್ರಸ್ತೋ ರಾಜನ್ ಭಯಾರ್ದಿತಃ |
ಉಲೂಕಃ ಪ್ರಾದ್ರುವತ್ ತತ್ರ ದೃಷ್ಟ್ವಾ ದ್ರೋಣಂ ನಿಪಾತಿತಮ್ ॥ 13 ॥
ಎಲೈ ರಾಜನೇ, ದ್ರೋಣರ ಪತನವನ್ನು ನೋಡಿ ಭಯಾರ್ದಿತನಾದ ಶಕುನಿ ಪುತ್ರನಾದ ಉಲೂಕನು ಪದಾತಿ ಸಮೂಹಗಳಿಂದ ಯುಕ್ತನಾಗಿ ಹೆದರಿ ಓಡಿ ಹೋದನು.
ದರ್ಶನೀಯೋ ಯುವಾ ಚೈವ ಶೌರ್ಯೇ ಚ ಕೃತಲಕ್ಷಣಃ |
ದುಃಶಾಸನೋ ಭೃಶೋದ್ವಿಗ್ನಃ ಪ್ರಾದ್ರುವದ್ ಗಜಸಂವೃತಃ ॥ 14 ॥
ಯುವಕನೂ, ಮನೋಹರನೂ ಮತ್ತು ಶೌರ್ಯದ ವಿಷಯದಲ್ಲಿ ಹೆಸರು ಮಾಡಿದವನೂ ಆದ ದುಶ್ಶಾಸನನು ಬಹಳ ಹೆದರಿ ಗಜಗಳಿಂದ ಸಂವೃತನಾಗಿ ಓಡಿಹೋದನು.
ಗಜಾಶ್ವರಥಸಂಯುಕ್ತೋ ವೃತಶ್ಚೈವ ಪದಾತಿಭಿಃ |
ದುರ್ಯೋಧನೋ ಮಹಾರಾಜ ಪ್ರಾಯಾತ್ ತತ್ರ ಮಹಾರಥಃ ॥15॥
ಎಲೈ ಮಹಾರಾಜನೇ, ಗಜಾಶ್ವ-ರಥ ಸಂಯುಕ್ತನಾಗಿ, ಪದಾತಿಗಳಿಂದ ಕೂಡಿ ಮಹಾರಥನಾದ ದುರ್ಯೋಧನನು ಅಲ್ಲಿಂದ ಹೊರಟು ಹೋದನು.
ಗಜಾನ್ ರಥಾನ್ ಸಮಾರುಹ್ಯ ಪರಸ್ಯಾಪಿ ಹಯಾನ್ ಜನಾಃ |
ಪ್ರಕೀರ್ಣಕೇಶಾ ವಿಧ್ವಸ್ತಾ ನ ದ್ವಾವೇಕತ್ರ ಧಾವತಃ ॥ 16 ॥
ಗಜಗಳನ್ನೂ, ರಥಗಳನ್ನೂ ಏರಿ ಅಥವಾ ಇನ್ನೊಬ್ಬರ ಅಶ್ವಗಳನ್ನು ಏರಿ, ಯೋಧರು ತಲೆಕೂದಲನ್ನು ಕೆದರಿಕೊಂಡು ವಿಧ್ವಸ್ತರಾಗಿ ಓಡಿದರು. ಇಬ್ಬರು ಜೊತೆಯಲ್ಲಿ ಓಡಲಿಲ್ಲ.
ನೇದಮಸ್ತೀತಿ ಪುರುಷಾ ಹತೋತ್ಸಾಹಾ ಹತೌಜಸಃ |
ಉತ್ಸೃಜ್ಯ ಕವಚಾನನ್ಯೇ ಪ್ರಾದ್ರುವಂಸ್ತಾವಕಾ ವಿಭೋ ॥ 17 ॥

ಎಲ್ಲೈ ವಿಭುವೇ, ಇದು ಸರಿಯಲ್ಲ (ಇದು ಅಲ್ಲ) ಎಂದು ಹೇಳುತ್ತಾ, ಉತ್ಸಾಹವನ್ನು ಮತ್ತು ಪರಾಕ್ರಮವನ್ನು ಕಳೆದುಕೊಂಡ ನಿನ್ನ ಕೆಲವು ಪುರುಷರು ಕವಚಗಳನ್ನು ಬಿಚ್ಚಿ ಓಡಿಹೋದರು.
ಅನ್ಯೋನ್ಯಂ ತೇ ಸಮಾಕ್ರೋಶನ್ ಸೈನಿಕಾ ಭರತರ್ಷಭ |
ತಿಷ್ಠ ತಿಷ್ಠೇತಿ ನ ಚ ತೇ ಸ್ವಯಂ ತತ್ರಾವತಸ್ಥಿರೇ ॥ 18 ॥
ಎಲ್ಲೈ ಭರತರ್ಷಭನೇ, ಸೈನಿಕರು ಪರಸ್ಪರವಾಗಿ `ನಿಲ್ಲು-ನಿಲ್ಲು' ಎಂದು ಕಿರುಚುತ್ತಿದ್ದರು. ಆದರೆ ತಾವೂ ಅಲ್ಲಿ ನಿಲ್ಲುತ್ತಿರಲಿಲ್ಲ.
ಧುರ್ಯಾನ್ ಪ್ರಮುಚ್ಯ ತು ರಥಾದ್ಧತಸೂತಾನ್ ಸ್ವಲಂಕೃತಾನ್ |
ಅಧಿರುಹ್ಯ ಹಯಾನ್ ಯೋಧಾಃ ಕ್ಷಿಪ್ರಂ ಪದ್ಭಿರಚೋದಯನ್ ॥19॥
ರಥಕ್ಕೆ ಹೂಡಿದ ಭಾರವನ್ನು ಹೊರುವ ಅಲಂಕೃತವಾದ ಕುದುರೆಗಳನ್ನು, ಸೂತರಿಲ್ಲದ ರಥದಿಂದ ಬಿಚ್ಚಿ ಅವುಗಳನ್ನು ಏರಿ ಪಾದದಿಂದಲೇ ಅವುಗಳನ್ನು ಪ್ರಚೋದಿಸುತ್ತಾ ಓಡಿದರು.
ದ್ರವಮಾಣೇ ತಥಾ ಸೈನ್ಯೇ ತ್ರಸ್ತರೂಪೇ ಹತೌಜಸಿ |
ಪ್ರತಿಸ್ರೋತ ಇವ ಗ್ರಾಹೋ ದ್ರೋಣಪುತ್ರಃ ಪರಾನಿಯಾತ್ ॥ 20 ॥
ಅತ್ಯಂತ ಹೆದರಿಕೆಯಿಂದ ಕೂಡಿ, ಪರಾಕ್ರಮಹೀನವಾಗಿ ನಿನ್ನ ಸೈನ್ಯವು ಓಡುತ್ತಿರಲು ಮೊಸಳೆಯು ಪ್ರವಾಹದ ವಿರುದ್ಧವಾಗಿ ಹೋಗುವಂತೆ ದ್ರೋಣಪುತ್ರರಾದ ಅಶ್ವತ್ಥಾಮರು ಪಾಂಡವರ ಮೇಲೆ ನುಗ್ಗಿದರು.
ಹತ್ವಾ ಬಹುವಿಧಾಂ ಸೇನಾಂ ಪಾಂಡೂನಾಂ ಯುದ್ಧದುರ್ಮದಃ |
ಕಥಂಚಿತ್ ಸಂಕಟಾನ್ಮುಕ್ತೋ ಮತ್ತದ್ವಿರದವಿಕ್ರಮಃ॥ 21 ॥
ದ್ರವಮಾಣಂ ಬಲಂ ದೃಷ್ಟ್ವಾ ಪಲಾಯನಕೃತಕ್ಷಣಮ್ |
ದುರ್ಯೋಧನಂ ಸಮಾಸಾದ್ಯ ದ್ರೋಣಪುತ್ರೋಽಬ್ರವೀದಿದಮ್ ॥22॥
ಯುದ್ಧದುರ್ಮದರೂ, ಮದಗಜ ಪರಾಕ್ರಮವುಳ್ಳವರೂ ಆದ ಅಶ್ವತ್ಥಾಮರು ಪಾಂಡವರ ಬಹುವಿಧವಾದ ಸೈನ್ಯವನ್ನು ಸಂಹರಿಸಿ ಹೇಗೋ ಸಂಕಟದಿಂದ ಮುಕ್ತರಾಗಿ, ಪಲಾಯನದ ಅವಕಾಶವನ್ನು ಹೊಂದಿ ಓಡುತ್ತಿದ್ದ ಸೈನ್ಯವನ್ನು ನೋಡಿ ದುರ್ಯೋಧನನನ್ನು ಸಮೀಪಿಸಿ ಹೀಗೆ ಮಾತನಾಡಿದರು.
ಕಿಮಿಯಂ ದ್ರವತೇ ಸೇನಾ ತ್ರಸ್ತರೂಪೇವ ಭಾರತ |
ದ್ರವಮಾಣಾಂ ಚ ರಾಜೇಂದ್ರ ನಾವಸ್ಥಾಪಯಸೇ ರಣೇ ॥ 23 ॥
ಎಲ್ಲೈ ಭಾರತನೇ, ಈ ಸೈನ್ಯವು ಹೆದರಿದಂತೆ ಏಕೆ ಓಡುತ್ತಿದೆ? ಎಲ್ಲೈ ರಾಜೇಂದ್ರನೇ, ರಣರಂಗದಲ್ಲಿ ಓಡುತ್ತಿರುವ ಈ ಸೈನ್ಯವನ್ನು ನೀನು ಏಕೆ ನಿಲ್ಲಿಸುತ್ತಿಲ್ಲ?
ತ್ವಂ ಚಾಪಿ ನ ಯಥಾಪೂರ್ವಂ ಪ್ರಕೃತಿಸ್ಥೋ ನರಾಧಿಪ |
ಕರ್ಣಪ್ರಭೃತಯಶ್ಚೇಮೇ ನಾವತಿಷ್ಠಂತಿ ಪಾರ್ಥಿವಾಃ ॥ 24 ॥
ಎಲ್ಲೈ ರಾಜನೇ, ನೀನೂ ಸಹ ಹಿಂದಿನಂತೆ ಸ್ವಾಭಾವಿಕವಾಗಿಲ್ಲ. ಈ ಕರ್ಣ ಮೊದಲಾದ ರಾಜರು ರಣರಂಗದಲ್ಲಿ ನಿಲ್ಲುತ್ತಿಲ್ಲ.
ಅನ್ಯೇಷ್ವಪಿ ಚ ಯುದ್ಧೇಷು ನೈವ ಸೇನಾಽದ್ರವತ್ ತದಾ |
ಕಚ್ಚಿತ್ ಕ್ಷೇಮಂ ಮಹಾಬಾಹೋ ತವ ಸೈನ್ಯಸ್ಯ ಭಾರತ ॥ 25 ॥
ಬೇರೆ ಯುದ್ಧಗಳಲ್ಲಿ ಸೈನ್ಯವು ಓಡಿಹೋಗಲಿಲ್ಲ. ಎಲ್ಲೈ ಭಾರತನೇ, ಮಹಾಬಾಹುವೇ, ನಿನ್ನ ಸೈನ್ಯಕ್ಕೆ ಕ್ಷೇಮವಷ್ಟೆ?
ಕಸ್ಮಿನ್ನಿದಂ ಹತೇ ರಾಜನ್ ರಥಸಿಂಹೇ ಬಲಂ ತವ |
ಏತಾಮವಸ್ಥಾಂ ಸಂಪ್ರಾಪ್ತಂ ತನ್ಮಮಾಚಕ್ಷ್ವ ಕೌರವ ॥ 26 ॥
ಎಲ್ಲೈ ರಾಜನೇ, ಯಾವ ರಥಸಿಂಹನು ಹತವಾದ ಕಾರಣದಿಂದ ನಿನ್ನ ಸೈನ್ಯಕ್ಕೆ ಇಂತಹ ಅವಸ್ಥೆಯು ಪ್ರಾಪ್ತವಾಗಿದೆ? ಎಲ್ಲೈ ಕೌರವನೇ, ಅದನ್ನು ನನಗೆ ಹೇಳು.
ತತ್ತು ದುರ್ಯೋಧನಃ ಶ್ರುತ್ವಾ ದ್ರೋಣಪುತ್ರಸ್ಯ ಭಾಷಿತಮ್ |
ಘೋರಮಪ್ರಿಯಮಾಖ್ಯಾತುಂ ನಾಶಕತ್ ಪಾರ್ಥಿವರ್ಷಭಃ ॥ 27 ॥
ಪಾರ್ಥಿವಶ್ರೇಷ್ಠನಾದ ದುರ್ಯೋಧನನು ದ್ರೋಣಪುತ್ರರ ಆ ಮಾತನ್ನು ಕೇಳಿ ಘೋರವಾದ ಅಪ್ರಿಯವನ್ನು ಹೇಳಲು ಶಕ್ತನಾಗಲಿಲ್ಲ.
ಭಿನ್ನಾ ನೌರಿವ ತೇ ಪುತ್ರೋ ನಿಮಗ್ನಃ ಶೋಕಸಾಗರೇ |
ಬಾಷ್ಪೇಣ ಪಿಹಿತೋ ದೃಷ್ಟ್ವಾ ದ್ರೋಣಪುತ್ರಂ ರಥೇ ಸ್ಥಿತಮ್ ॥ 28 ॥
ತತಃ ಶಾರದ್ವತಂ ರಾಜಾ ಸವ್ರೀಡಮಿದಮಬ್ರವೀತ್ |
ಶಂಸೇಹ ಸರ್ವಂ ಭದ್ರಂ ತೇ ಯಥಾ ಸೈನ್ಯಮಿದಂ ದ್ರುತಮ್ ॥ 29 ॥
ಸಾಗರದಲ್ಲಿ ಒಡೆದುಹೋದ ಹಡಗಿನಂತೆ ನಿನ್ನ ಪುತ್ರನು ಶೋಕಸಾಗರದಲ್ಲಿ ಮುಳುಗಿ ಬಾಷ್ಪಪೂರಿತನೇತ್ರನಾಗಿ ರಥದಲ್ಲಿದ್ದ ಅಶ್ವತ್ಥಾಮರನ್ನು ನೋಡಿ ನಾಚಿಕೆಯಿಂದ, ಕೃಪರನ್ನು ಕುರಿತು ನಿಮಗೆ ಕ್ಷೇಮವಾಗಲಿ, ಈ ಸೈನ್ಯವು ಏತಕ್ಕೆ ಓಡುತ್ತಿದೆ ಎಂದು ಎಲ್ಲವನ್ನೂ ಹೇಳಿ ಎಂದು ಹೇಳಿದನು.
ಅಥ ಶಾರದ್ವತೋ ರಾಜನ್ನಾರ್ತಿಂ ಗಚ್ಛನ್ ಪುನಃ ಪುನಃ |
ಶಶಂಸ ದ್ರೋಣಪುತ್ರಾಯ ಯಥಾ ದ್ರೋಣೋ ನಿಪಾತಿತಃ ॥ 30 ॥
ಎಲ್ಲೈ ರಾಜನೇ, ಆಗ ಕೃಪರು ಪುನಃ ಪುನಃ ದುಃಖಕ್ಕೆ ತುತ್ತಾಗಿ ಅಶ್ವತ್ಥಾಮರಿಗೆ ದ್ರೋಣರನ್ನು ವಧೆ ಮಾಡಿದ ಪ್ರಕಾರವನ್ನು ತಿಳಿಸಿದರು.
ಕೃಪಃ
ವಯಂ ದ್ರೋಣಂ ಪುರಸ್ಕೃತ್ಯ ಪೃಥಿವ್ಯಾಂ ಪ್ರವರಂ ರಥಮ್ |
ಪ್ರಾವರ್ತಯಾಮ ಸಂಗ್ರಾಮಂ ಪಾಂಚಾಲ್ಯೈರೇವ ಕೇವಲೈಃ ॥ 31 ॥

ಕೃಪ ನಾವು ಪೃಥಿವಿಯಲ್ಲಿ ಶ್ರೇಷ್ಠರಥರಾದ ದ್ರೋಣರನ್ನು ಮುಂದೆ ಮಾಡಿಕೊಂಡು ಕೇವಲ ಪಾಂಚಾಲರ ಜೊತೆಯಲ್ಲಿ ಯುದ್ಧವನ್ನು ಪ್ರವರ್ತಿಸಿದೆವು.
ತತಃ ಪ್ರವೃತ್ತೇ ಸಂಗ್ರಾಮೇ ವಿಮಿಶ್ರಾಃ ಕುರುಸೋಮಕಾಃ |
ಅನ್ಯೋನ್ಯಮಭಿಗರ್ಜಂತಃ ಶಸ್ತ್ರೈರ್ದೇಹಾನಪಾತಯನ್ ॥ 32 ॥
ಆ ಯುದ್ಧವು ನಡೆಯುತ್ತಿರಲು ಕೌರವರು ಮತ್ತು ಸೋಮಕರು ಮಿಶ್ರಗೊಂಡು ಪರಸ್ಪರವಾಗಿ ಗರ್ಜಿಸುತ್ತಾ ಶಸ್ತ್ರಗಳಿಂದ ದೇಹಗಳನ್ನು ಹೊಡೆದು ಕೆಡವಿದರು.
ತತೋ ದ್ರೋಣೋ ಬ್ರಾಹ್ಮಮಸ್ತ್ರಂ ವಿಕುರ್ವಾಣೋ ನರರ್ಷಭಃ |
ಅಹನಚ್ಚಾತ್ರವಾನ್ ಭಲ್ಲೈಃ ಶತಶೋಽಥ ಸಹಸ್ರಶಃ ॥ 33 ॥
ಅನಂತರ ಪುರುಷಶ್ರೇಷ್ಠರಾದ ದ್ರೋಣರು ಬ್ರಹ್ಮಾಸ್ತ್ರಗಳನ್ನು ಪ್ರಯೋಗಿಸುತ್ತಾ ಭಲ್ಲಗಳಿಂದ ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ಶತ್ರುಗಳನ್ನು ಕೊಂದರು.
ಪಾಂಡವಾಃ ಕೇಕಯಾ ಮತ್ಸ್ಯಾಃ ಪಾಂಚಾಲಾಶ್ಚ ವಿಶೇಷತಃ |
ಸಂಖ್ಯೇ ದ್ರೋಣರಥಂ ಪ್ರಾಪ್ಯ ವ್ಯನಶನ್ ಕಾಲಚೋದಿತಾಃ ॥ 34 ॥
ಪಾಂಡವರು, ಕೇಕಯರು, ಮತ್ಸ್ಯರು ಮತ್ತು ವಿಶೇಷವಾಗಿ ಪಾಂಚಾಲರು ಮೃತ್ಯುಚೋದಿತರಾಗಿ ದ್ರೋಣರನ್ನು ಸಮೀಪಿಸಿ ನಾಶವನ್ನು ಹೊಂದಿದರು.
ಸಹಸ್ರಂ ರಥಸಿಂಹಾನಾಂ ದ್ವಿಸಾಹಸ್ರಂ ಚ ದಂತಿನಾಮ್ |
ದ್ರೋಣೋ ಬ್ರಹ್ಮಾಸ್ತ್ರನಿರ್ದಗ್ಧಂ ಪ್ರೇಷಯಾಮಾಸ ಮೃತ್ಯವೇ ॥ 35 ॥
ದ್ರೋಣರು ಬ್ರಹ್ಮಾಸ್ತ್ರದಿಂದ ದಹಿಸಲ್ಪಟ್ಟ ಸಹಸ್ರ ಶ್ರೇಷ್ಠರಥರನ್ನೂ, ಎರಡು ಸಾವಿರ ಗಜಗಳನ್ನೂ ಮೃತ್ಯುಲೋಕಕ್ಕೆ ಕಳುಹಿಸಿದರು.
ಆಕರ್ಣಪಲಿತಃ ಶ್ಯಾಮೋ ವಯಸಾಶೀತಿಪಂಚಕಃ |
ರಣೇ ಪರ್ಯಚರದ್ ದ್ರೋಣೋ ವೃದ್ಧಃ ಷೋಡಶವರ್ಷವತ್ ॥36॥
ಕಿವಿಯವರೆಗೂ ನೆರೆಕೂದಲನ್ನು ಹೊಂದಿದ, ಶ್ಯಾಮವರ್ಣದ, ವಯಸ್ಸಿನಿಂದ ನಾಲ್ಕುನೂರು ವರ್ಷವನ್ನು ದಾಟಿದ ವೃದ್ಧರಾದ ದ್ರೋಣರು ರಣರಂಗದಲ್ಲಿ ಹದಿನಾರು ವರ್ಷದವರಂತೆ ಸಂಚರಿಸಿದರು.
ಕ್ಲಿಶ್ಯಮಾನೇಷು ಸೈನ್ಯೇಷು ವಧ್ಯಮಾನೇಷು ರಾಜಸು |
ಅಮರ್ಷವಶಮಾಪನ್ನಾಃ ಪಾಂಚಾಲಾ ವಿಮುಖಾಭವನ್ ॥ 37 ॥
ಪಾಂಚಾಲರ ಸೈನ್ಯಗಳು ಕ್ಲೇಶಕ್ಕೆ ಒಳಗಾಗುತ್ತಿರಲು, ರಾಜರು ದಹಿಸಲ್ಪಡುತ್ತಿರಲು, ರೋಷಗೊಂಡ ಪಾಂಚಾಲರು ಯುದ್ಧವಿಮುಖರಾದರು.
ತೇಷು ಕಿಂಚತ್ ಪ್ರಭಗ್ನೇಷು ವಿಮುಖೇಷು ಸಪತ್ನಜಿತ್ |
ದಿವ್ಯಮಸ್ತ್ರಂ ವಿಕುರ್ವಾಣೋ ಬಭೂವಾರ್ಕ ಇವೋದಿತಃ ॥ 38 ॥
ಅವರಲ್ಲಿ ಕೆಲವು ಯೋಧರು ಭಗ್ನರಾಗಿ ಯುದ್ಧವಿಮುಖರಾಗುತ್ತಿರಲು ಶತ್ರು ಸಂಹಾರಕರಾದ ನಿನ್ನ ತಂದೆಯು ಅಶ್ವತ್ಥಾಮರು ಹತರಾದರು ಎಂದು ತಿಳಿದರು (ಅಶ್ವತ್ಥಾಮರು ಹತರಾದರು, ಯುದ್ಧ ಮಾಡಬೇಡಿ ಎಂಬ ಮಾತನ್ನು ಕೇಳಿದರು).
ಸ ಮಧ್ಯಂ ಪ್ರಾಪ್ಯ ಪಾಂಡೂನಾಂ ಶರರಶ್ಮಿಃ ಪ್ರತಾಪವಾನ್ |
ಮಧ್ಯಂಗತ ಇವಾದಿತ್ಯೋ ದುಷ್ಪ್ರೇಕ್ಷ್ಯಸ್ತೇ ಪಿತಾಽಭವತ್ ॥ 39 ॥
ತೇ ದಹ್ಯಮಾನಾ ದ್ರೋಣೇನ ಸೂರ್ಯೇಣೇವ ವಿರಾಜತಾ |
ದಗ್ಧವೀರ್ಯಾ ನಿರುತ್ಸಾಹಾ ಬಭೂವುರ್ಗತಚೇತಸಃ ॥ 40 ॥
ಸೂರ್ಯನಂತೆ ವಿರಾಜಿಸುವ ದ್ರೋಣರಿಂದ ದಹಿಸಲ್ಪಡುತ್ತಿದ್ದ ಪಾಂಡವವೀರರು ತಮ್ಮ ಪರಾಕ್ರಮವನ್ನೂ, ಯುದ್ಧದಲ್ಲಿ ಉತ್ಸಾಹವನ್ನೂ ಕಳೆದುಕೊಂಡು ವಿಮನಸ್ಕರಾದರು.
ತಾನ್ ದೃಷ್ಟ್ವಾ ಪೀಡಿತಾನ್ ಬಾಣೈರ್ದ್ರೋಣೇನ ಮಧುಸೂದನಃ |
ಜಯೈಷೀ ಪಾಂಡುಪುತ್ರಾಣಾಮಿದಂ ವಚನಮಬ್ರವೀತ್ ॥ 41 ॥
ದ್ರೋಣರ ಬಾಣಗಳಿಂದ ಪೀಡಿತರಾದ ಆ ವೀರರನ್ನು ನೋಡಿ, ಪಾಂಡುಪುತ್ರರ ಜಯವನ್ನು ಆಶಿಸುವ ಮಧುಸೂದನನು ಪಾಂಡುಪುತ್ರರನ್ನು ಕುರಿತು ಈ ಮಾತನ್ನು ಆಡಿದನು.
ನೈಷ ಜಾತು ಪರೈಃ ಶಕ್ಯೋ ಜೇತುಂ ಶಸ್ತ್ರಭೃತಾಂ ವರಃ |
ಅಪಿ ವೃತ್ರಹಣಾ ಸಂಖ್ಯೇ ರಥಯೂಥಪಯೂಥಪಃ ॥ 42 ॥
ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ, ರಥಯೂಥಪಯೂಥಪರಾದ ದ್ರೋಣರನ್ನು ಯುದ್ಧದಲ್ಲಿ ಸಾಕ್ಷಾತ್ ಇಂದ್ರನೇ ಬಂದರೂ ಇನ್ನೊಬ್ಬನು ಸೋಲಿಸಲಾರ.
ತೇ ಯೂಯಂ ಧರ್ಮಮುತ್ಸೃಜ್ಯ ಜಯಂ ರಕ್ಷತ ಪಾಂಡವಾಃ |
ಯಥಾ ವಃ ಸಂಯುಗೇ ಸರ್ವಾನ್ ನ ಹನ್ಯಾದ್ ರುಗ್ಮವಾಹನಃ ॥43॥
ಎಲೈ ಪಾಂಡವರೇ, ನೀವು ಧರ್ಮವನ್ನು ಒಟ್ಟು ಜಯದ ಮೇಲೆ ದೃಷ್ಟಿ ಇಡಿ. ರುಗ್ಮವಾಹನರಾದ ದ್ರೋಣರು ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಕೊಲ್ಲದಂತೆ ನೋಡಿಕೊಳ್ಳಿ.
ಅಶ್ವತ್ಥಾಮ್ನಿ ಹತೇ ನೈಷ ಯುದ್ಧ್ಯೇದಿತಿ ಮತಿರ್ಮಮ |
ಹತಂ ತಂ ಸಂಯುಗೇ ಕಶ್ಚಿದಾಖ್ಯಾತ್ವಸ್ಮೈ ಮೃಷಾ ನರಃ ॥ 44 ॥
ಅಶ್ವತ್ಥಾಮರು ಹತರಾದರೆ ಅವರು ಯುದ್ಧಮಾಡಲಾರರೆಂದು ನನ್ನ ಅಭಿಪ್ರಾಯ. ಯಾವನಾದರೂ ಮನುಷ್ಯನು ಅವರ ಬಳಿಗೆ

ಹೋಗಿ ಅಶ್ವತ್ಥಾಮರು ಹತರಾಗಿದ್ದಾರೆಂದು ಸುಳ್ಳನ್ನು ಹೇಳಲಿ (ಎಂದು ಹೇಳಿದನು).
ಏತನ್ನಾರೋಚಯದ್ ವಾಕ್ಯಂ ಕುಂತೀಪುತ್ರೋ ಧನಂಜಯಃ |
ಅರೋಚಯಂಸ್ತು ಸರ್ವೇಽನ್ಯೇ ಕೃಚ್ಛ್ರೇಣ ತು ಯುಧಿಷ್ಠಿರಃ ॥ 45 ॥
ಕುಂತೀಪುತ್ರನಾದ ಧನಂಜಯನು ಈ ಮಾತನ್ನು ಒಪ್ಪಲಿಲ್ಲ. ಉಳಿದವರೆಲ್ಲರೂ ಒಪ್ಪಿದರು ಯುಧಿಷ್ಠಿರನು ಕಷ್ಟದಿಂದ ಒಪ್ಪಿದನು.
ಭೀಮಸೇನಸ್ತು ಸವ್ರೀಡಮಬ್ರವೀತ್ ಪಿತರಂ ತವ |
ಅಶ್ವತ್ಥಾಮಾ ಹತ ಇತಿ ತಚ್ಚಾಬುಧ್ಯತ ತೇ ಪಿತಾ ॥ 46 ॥
ಭೀಮಸೇನನು ನಿನ್ನ ತಂದೆಯ ಬಳಿಗೆ ಹೋಗಿ ನಾಚಿಕೆಯಿಂದ, ಅಶ್ವತ್ಥಾಮರು ಹತರಾಗಿದ್ದಾರೆ ಎಂದು ಹೇಳಿದನು. ನಿನ್ನ ತಂದೆಯು ಅದನ್ನು ಹಾಗೆಯೇ ತಿಳಿದರು.
ಸ ಶಂಕಮಾನಸ್ತನ್ಮಿಥ್ಯಾ ಧರ್ಮರಾಜಮಪೃಚ್ಛತ |
ಹತಂ ವಾಪ್ಯಹತಂ ವಾಜೌ ತ್ವಾಂ ಪಿತಾ ಪುತ್ರವತ್ಸಲಃ ॥ 47 ॥
ಪುತ್ರವತ್ಸಲರಾದ ನಿನ್ನ ತಂದೆಯು ಅದನ್ನು ಸುಳ್ಳು ಎಂದು ಶಂಕಿಸಿ, ಧರ್ಮರಾಜನನ್ನು ಕುರಿತು `ಯುದ್ಧದಲ್ಲಿ ನೀನು ಹತನಾಗಿದ್ದೀಯಾ, ಇಲ್ಲವೆ' ಎಂದು ಪ್ರಶ್ನೆಯನ್ನು ಮಾಡಿದರು.
ತದತಥ್ಯಭಯೇ ಮಗ್ನೋ ಜಯೇ ಸಕ್ತೋ ಯುಧಿಷ್ಠಿರಃ |
ಅಶ್ವತ್ಥಾಮಾನಮಾಹೇದಂ ಹತಃ ಕುಂಜರ ಇತ್ಯುತ |
ಭೀಮೇನ ಗಿರಿವರ್ಷ್ಮಾಣಂ ಮಾಲವಸ್ಯೇಂದ್ರವರ್ಮಣಃ ॥ 48 ॥
ಸುಳ್ಳಿನ ಭಯದಲ್ಲಿ ಮಗ್ನನಾದ ಮತ್ತು ಜಯದಲ್ಲಿ ಆಸಕ್ತನಾದ ಯುಧಿಷ್ಠಿರನು `ಅಶ್ವತ್ಥಾಮಾ ಹತಃ' ಎಂದು ಹೇಳಿ ಭೀಮಸೇನನಿಂದ ಮಾಲವರಾಜನಾದ ಇಂದ್ರವರ್ಮನ ಪರ್ವತದ ಸ್ವರೂಪವನ್ನು ಹೊಂದಿದ್ದ `ಕುಂಜರಃ' ಎಂದೂ ಹೇಳಿದನು.
ಉಪಸೃತ್ಯ ತದಾ ದ್ರೋಣಮುಚ್ಚೈರಿದಮಭಾಷತ |
ಯಸ್ಯಾರ್ಥೇ ಶಸ್ತ್ರಮಾಧತ್ಸೇ ಯಮವೇಕ್ಷ್ಯ ಚ ಜೀವಸಿ |
ಪುತ್ರಸ್ತೇ ದಯಿತೋ ನಿತ್ಯಂ ಸೋಽಶ್ವತ್ಥಾಮಾ ನಿಪಾತಿತಃ ॥ 49 ॥
ಆಗ ಭೀಮಸೇನನು ದ್ರೋಣರನ್ನು ಸಮೀಪಿಸಿ ಗಟ್ಟಿಯಾದ ಸ್ವರದಿಂದ, ಯಾರ ಸಲುವಾಗಿ ನೀವು ಶಸ್ತ್ರವನ್ನು ಹಿಡಿದಿದ್ದೀರೋ, ಯಾರನ್ನು ನೋಡಿಕೊಂಡು ಜೀವಿಸುತ್ತಿದ್ದೀರೋ ಅಂತಹ ನಿತ್ಯವೂ ನಿಮಗೆ ಪ್ರಿಯರಾದ ಪುತ್ರರಾದ ಅಶ್ವತ್ಥಾಮರು ಹತರಾಗಿದ್ದಾರೆ ಎಂದು ಹೇಳಿದನು.
ತಚ್ಛ್ರುತ್ವಾ ವಿಮನಾಸ್ತತ್ರ ಆಚಾರ್ಯೋ ಮಹದಪ್ರಿಯಮ್ |
ನಿಯಮ್ಯ ದಿವ್ಯಾನ್ಯಸ್ತ್ರಾಣಿ ನಾಯುದ್ಧ್ಯತ ಯಥಾ ಪುರಾ ॥ 50 ॥
ಆ ದೊಡ್ಡ ಅಪ್ರಿಯ ಸುದ್ದಿಯನ್ನು ಕೇಳಿದ ಆಚಾರ್ಯರು ಯುದ್ಧದ ಮನಸ್ಸನ್ನು ತೊರೆದು, ಎಲ್ಲ ಅಸ್ತ್ರಗಳನ್ನು ಎಸೆದು ಮೊದಲಿನಂತೆ ಯುದ್ಧವನ್ನು ಮಾಡಲಿಲ್ಲ.
ತಂ ದೃಷ್ಟ್ವಾ ಪರಮೋದ್ವಿಗ್ನಂ ಶೋಕೋಪಹತಚೇತಸಮ್ |
ಪಾಂಚಾಲರಾಜಸ್ಯ ಸುತಃ ಕ್ರೂರಕರ್ಮಾ ಸಮಾದ್ರವತ್ ॥ 51 ॥
ಅತ್ಯಂತ ದುಃಖದಿಂದ ಬಳಲಿ ಶೋಕದಿಂದ ಕೂಡಿದ ಮನಸ್ಸುಳ್ಳ ದ್ರೋಣರನ್ನು ನೋಡಿ ಕ್ರೂರಕರ್ಮವನ್ನು ಮಾಡುವ ಪಾಂಚಾಲ ಪುತ್ರನಾದ ಧೃಷ್ಟದ್ಯುಮ್ನನು ಓಡಿ ಬಂದನು.
ತಂ ದೃಷ್ಟ್ವಾ ವಿಹಿತಂ ಮೃತ್ಯುಂ ಲೋಕತತ್ತ್ವವಿಚಕ್ಷಣಃ |
ದಿವ್ಯಾನ್ಯಸ್ತ್ರಾಣ್ಯಥೋತ್ಸೃಜ್ಯ ರಣೇ ಪ್ರಾಯ ಉಪಾವಿಶತ್ ॥ 52 ॥
ಲೋಕತತ್ತ್ವವಿಚಕ್ಷಣರಾದ ದ್ರೋಣರು ಅವನನ್ನು ತನಗೆ ವಿಹಿತನಾದ ಮೃತ್ಯುವೆಂದು ತಿಳಿದು ದಿವ್ಯಾಸ್ತ್ರಗಳನ್ನು ಪರಿತ್ಯಜಿಸಿ ರಣರಂಗದಲ್ಲಿ ಪ್ರಾಯೋಪವೇಶಕ್ಕೆ ಕುಳಿತರು.
ತತೋಽಸ್ಯ ಕೇಶಾನ್ ಸವ್ಯೇನ ಗೃಹೀತ್ವಾ ಪಾಣಿನಾ ತದಾ |
ಪಾರ್ಷತಃ ಕ್ರೋಶಮಾನಾನಾಂ ವೀರಾಣಾಮಚ್ಛಿನಚ್ಛಿರಃ ॥ 53 ॥
ಆಗ ಧೃಷ್ಟದ್ಯುಮ್ನನು ಅವರ ತಲೆಕೂದಲುಗಳನ್ನು ಎಡಗೈಯಿಂದ ಹಿಡಿದು ವೀರರು ಬೇಡವೆಂದು ಕಿರುಚುತ್ತಿದ್ದರೂ ಅವರ ಶಿರಸ್ಸನ್ನು ಕತ್ತರಿಸಿದನು.
ನ ಹಂತವ್ಯೋ ನ ಹಂತವ್ಯ ಇತಿ ತೇ ಸರ್ವತೋಽಬ್ರುವನ್ |
ತಥೈವ ಚಾರ್ಜುನೋ ವಾಹಾದವರುಹ್ಯೈನಮಾದ್ರವತ್ ॥ 54 ॥
ಉದ್ಯಮ್ಯ ಬಾಹೂ ತ್ವರಿತೋ ಬ್ರುವಾಣಶ್ಚ ಪುನಃ ಪುನಃ |
ಜೀವಂತಮಾನಯಾಚಾರ್ಯಂ ಮಾ ವಧೀರಿತಿ ಧರ್ಮವಿತ್ ॥ 55 ॥
ಕೊಲ್ಲಬಾರದು, ಕೊಲ್ಲಬಾರದು ಎಂದು ಯೋಧರು ಎಲ್ಲ ಕಡೆಗಳಿಂದಲೂ ಹೇಳಿದರು. ಹಾಗೆಯೇ ಧರ್ಮಜ್ಞನಾದ ಅರ್ಜುನನೂ ಸಹ ತನ್ನ ರಥದಿಂದ ಇಳಿದು ಬಾಹುಗಳನ್ನು ಎತ್ತಿ, ಅವನ ಕಡೆಗೆ ಓಡುತ್ತಾ ಪುನಃ ಪುನಃ `ಆಚಾರ್ಯರನ್ನು ಜೀವ ಸಹಿತವಾಗಿ ಕರೆದುಕೊಂಡು ಬಾ, ಕೊಲ್ಲಬೇಡ' ಎಂದು ಹೇಳಿದನು.
ತಥಾಪಿ ವಾರ್ಯಮಾಣೇನ ಕೌರವೈರರ್ಜುನೇನ ಚ |
ಹತ ಏವ ನೃಶಂಸೇನ ಪಿತಾ ತವ ನರರ್ಷಭ ॥ 56 ॥
ಎಲೈ ನರಶ್ರೇಷ್ಠನೇ, ಅರ್ಜುನನಿಂದಲೂ, ಕೌರವರಿಂದಲೂ ತಡೆಯಲ್ಪಡುತ್ತಿದ್ದರೂ ಕ್ರೂರಿಯಾದ ಧೃಷ್ಟದ್ಯುಮ್ನನು ನಿನ್ನ ತಂದೆಯನ್ನು ಕೊಂದನು.

ಸೈನಿಕಾಶ್ಚ ತತಃ ಸರ್ವೇ ಪ್ರಾದ್ರವಂತ ಭಯಾರ್ದಿತಾಃ |
ವಯಂ ಚಾಪಿ ನಿರುತ್ಸಾಹಾ ಹತೇ ಪಿತರಿ ತೇಽನಘ ॥ 57 ॥
ಆಗ ಸೈನಿಕರೆಲ್ಲರೂ ಭಯದಿಂದ ಪೀಡಿತರಾಗಿ ಓಡಿಹೋದರು. ಎಲೈ ಅನಘನೇ, ನಿನ್ನ ತಂದೆಯು ಹತನಾಗುತ್ತಿರಲು ನಾವೂ ಯುದ್ಧದಲ್ಲಿ ಉತ್ಸಾಹವನ್ನು ಕಳೆದುಕೊಂಡೆವು.
ಸಂಜಯಃ
ತಚ್ಛ್ರುತ್ವಾ ದ್ರೋಣಪುತ್ರಸ್ತು ನಿಧನಂ ಪಿತುರಾಹವೇ |
ಕ್ರೋಧಮಾಹಾರಯತ್ತೀವ್ರಂ ಪದಾಹತ ಇವೋರಗಃ ॥ 58 ॥
ಸಂಜಯ ರಣರಂಗದಲ್ಲಿ ತಂದೆಯ ಆ ನಿಧನವನ್ನು ತಿಳಿದ ದ್ರೋಣಪುತ್ರರಾದ ಅಶ್ವತ್ಥಾಮರು ಕಾಲಿನಿಂದ ತುಳಿದ ಸರ್ಪದಂತೆ ತೀವ್ರವಾದ ಕ್ರೋಧವನ್ನು ತಂದುಕೊಂಡರು.
ಧೃತರಾಷ್ಟ್ರಃ
ಅಧರ್ಮೇಣ ಹತಂ ಶ್ರುತ್ವಾ ಧೃಷ್ಟದ್ಯುಮ್ನೇನ ಸಂಜಯ |
ಬ್ರಾಹ್ಮಣಂ ಪಿತರಂ ವೃದ್ಧಮಶ್ವತ್ಥಾಮಾ ಕಿಮಬ್ರವೀತ್ ॥ 59 ॥
ಧೃತರಾಷ್ಟ್ರ ಎಲೈ ಸಂಜಯನೇ, ಬ್ರಾಹ್ಮಣರೂ, ತಂದೆಯೂ, ವೃದ್ಧರೂ ಆದ ದ್ರೋಣರು ಧೃಷ್ಟದ್ಯುಮ್ನನಿಂದ ಅಧರ್ಮದಿಂದ ಹತರಾದುದನ್ನು ಕೇಳಿ ಅಶ್ವತ್ಥಾಮರು ಏನು ಹೇಳಿದರು?
ಮಾನುಷಂ ವಾರುಣಾಗ್ನೇಯಂ ಬ್ರಾಹ್ಮಮಸ್ತ್ರಂ ಚ ವೀರ್ಯವಾನ್ |
ಐಂದ್ರಂ ನಾರಾಯಣಂ ಚೈವ ಯಸ್ಮಿನ್ನಿತ್ಯಂ ಪ್ರತಿಷ್ಠಿತಮ್ ॥ 60 ॥
ತಮಧರ್ಮೇಣ ಧರ್ಮಿಷ್ಠಂ ಧೃಷ್ಟದ್ಯುಮ್ನೇನ ಸಂಜಯ |
ಶ್ರುತ್ವಾ ನಿಹತಮಾಚಾರ್ಯಮಶ್ವತ್ಥಾಮಾ ಕಿಮಬ್ರವೀತ್ ॥ 61 ॥
ಮಾನುಷಾಸ್ತ್ರಗಳು, ವಾರುಣಾಸ್ತ್ರ, ಆಗ್ನೇಯಾಸ್ತ್ರ, ಬ್ರಹ್ಮಾಸ್ತ್ರ, ಐಂದ್ರಾಸ್ತ್ರ, ನಾರಾಯಣಾಸ್ತ್ರ - ಇವು ಯಾರಲ್ಲಿ ನಿತ್ಯವೂ ಪ್ರತಿಷ್ಠಿತವಾಗಿದ್ದವೋ ಅಂತಹ ಧರ್ಮಿಷ್ಠರಾದ ದ್ರೋಣರು ಧೃಷ್ಟದ್ಯುಮ್ನನಿಂದ ಅಧರ್ಮದಿಂದ ಹತರಾದುದನ್ನು ಕೇಳಿ ಪರಾಕ್ರಮಶಾಲಿಗಳಾದ ಅಶ್ವತ್ಥಾಮರು ಏನು ಹೇಳಿದರು?
ಯೇನ ರಾಮಾದವಾಪ್ಯೇಹ ಧನುರ್ವೇದಂ ಮಹಾತ್ಮನಾ |
ಪ್ರೋಕ್ತಾನ್ಯಸ್ತ್ರಾಣಿ ದಿವ್ಯಾನಿ ಪುತ್ರಾಯ ಗುರುಕಾಂಕ್ಷಿಣೇ ॥ 62 ॥
ಯಾವ ದ್ರೋಣರು ಮಹಾತ್ಮನಾದ ಪರಶುರಾಮನಿಂದ ಧನುರ್ವೇದವನ್ನು ಕಲಿತು ಆ ಎಲ್ಲ ದಿವ್ಯಾಸ್ತ್ರಗಳನ್ನೂ ಗುರುಭಕ್ತಿಯುಳ್ಳ ಪುತ್ರನಿಗೆ ನೀಡಿದ್ದರೋ (ಅಂತಹ ಅಶ್ವತ್ಥಾಮರು ಏನು ಹೇಳಿದರು?)
ಏಕಮೇವ ಹಿ ಲೋಕೇಽಸ್ಮಿನ್ನಾತ್ಮನೋ ಗುಣವತ್ತರಮ್ |
ಇಚ್ಛಂತಿ ಪುತ್ರಂ ಪುರುಷಾ ಲೋಕೇ ನಾನ್ಯಂ ಕಥಂಚನ ॥ 63 ॥
ಪುರುಷರು ಈ ಲೋಕದಲ್ಲಿ ತಮ್ಮ ಪುತ್ರನೊಬ್ಬನೇ ಎಲ್ಲರಿಗಿಂತಲೂ ಗುಣಗಳಲ್ಲಿ ಶ್ರೇಷ್ಠನಾಗಿರಬೇಕು ಎಂದು ಬಯಸುತ್ತಾರೆ. ಲೋಕದಲ್ಲಿ ಇನ್ನೊಬ್ಬನು ಹಾಗಿರಬೇಕೆಂದು ಬಯಸುವುದಿಲ್ಲ.
ಆಚಾರ್ಯಾಣಾಂ ಭವಂತ್ಯೇವ ರಹಸ್ಯಾನಿ ಮಹಾತ್ಮನಾಮ್ |
ತಾನಿ ಪುತ್ರಾಯ ವಾ ದದ್ಯುಃ ಶಿಷ್ಯಾಯಾನುಗತಾಯ ವಾ ॥ 64 ॥
ಮಹಾತ್ಮರಾದ ಆಚಾರ್ಯರ ಬಳಿ ವಿದ್ಯೆಯ ಅನೇಕ ರಹಸ್ಯಗಳಿರುತ್ತವೆ. ಅದನ್ನು ಪುತ್ರನಿಗಾಗಲೀ, ಶಿಷ್ಯನಿಗಾಗಲೀ ಅಥವಾ ಅತ್ಯಂತ ಆಪ್ತನಿಗಾಗಲೀ ಹೇಳುತ್ತಾರೆ.
ಸ ಶಿಲ್ಪಂ ಪ್ರಾಪ್ಯ ತತ್ ಸರ್ವಂ ಸವಿಶೇಷಂ ಚ ಸಂಜಯ |
ಶೂರಃ ಶಾರದ್ವತೀಪುತ್ರಃ ಸಂಖ್ಯೇ ದ್ರೋಣಾದನಂತರಃ ॥ 65 ॥
ರಾಮಸ್ಯಾನುಮತಃ ಶಸ್ತ್ರೇ ಪುರಂದರಸಮೋ ಯುಧಿ |
ಕಾರ್ತವೀರ್ಯಸಮೋ ವೀರ್ಯೇ ಬೃಹಸ್ಪತಿಸಮೋ ಮತೌ ॥ 66 ॥
ಮಹೀಧರಸಮೋ ಧೃತ್ಯಾ ತೇಜಸಾಽಗ್ನಿಸಮೋ ಯುವಾ |
ಸಮುದ್ರ ಇವ ಗಾಂಭೀರ್ಯೇ ಕ್ರೋಧೇ ಸರ್ಪವಿಷೋಪಮಃ ॥ 67 ॥
ಶೂರರಾದ ಶಾರದ್ವತೀಪುತ್ರರಾದ ಅಶ್ವತ್ಥಾಮರು ಅದೆಲ್ಲ ಕೌಶಲವನ್ನೂ ಅತಿಶಯಗಳೊಡನೆ ತಂದೆಯಿಂದ ಕಲಿತು- ಎಲೈ ಸಂಜಯನೇ, ಯುದ್ಧದಲ್ಲಿ ದ್ರೋಣರಿಗೆ ಅನಂತರರಾದವರೂ, ಶಸ್ತ್ರದಲ್ಲಿ ಪರಶುರಾಮನಿಗೆ ಸಮ್ಮತರಾದವರೂ, ಯುದ್ಧದಲ್ಲಿ ಇಂದ್ರನಿಗೆ ಸಮರಾದವರೂ, ಪರಾಕ್ರಮದಲ್ಲಿ ಕಾರ್ತವೀರ್ಯನಿಗೆ ಸಮರಾದವರೂ, ಬುದ್ಧಿಶಕ್ತಿಯಲ್ಲಿ ಬೃಹಸ್ಪತಿಗೆ ಸಮರಾದವರೂ, ಧೈರ್ಯದಲ್ಲಿ ಪರ್ವತಕ್ಕೆ ಸಮರಾದವರೂ, ತೇಜಸ್ಸಿನಲ್ಲಿ ಅಗ್ನಿಸಮರಾದ ಯುವಕರೂ, ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮರಾದಂತೆ ಇರುವವರೂ, ಕ್ರೋಧದಲ್ಲಿ ಸರ್ಪವಿಷಕ್ಕೆ ಸದೃಶರಾದವರೂ (ಆದ ಅಶ್ವತ್ಥಾಮರು ಆಗ ಏನು ಹೇಳಿದರು?)
ಸ ರಥೀ ಪ್ರಥಮೋ ಲೋಕೇ ದೃಢಧನ್ವಾ ಜಿತಕ್ಲಮಃ |
ಶೀಘ್ರೋಽನಿಲ ಇವಾಕ್ರಂದೇ ಚರನ್ ಕ್ರುದ್ಧ ಇವಾಂತಕಃ ॥ 68 ॥
ಅಸ್ಯತಾ ಯೇನ ಸಂಗ್ರಾಮೇ ಧರಣ್ಯಭಿನಿಪೀಡಿತಾ |
ಯೋ ನ ವ್ಯಥತಿ ಸಂಗ್ರಾಮೇ ವೀರಃ ಸತ್ಯಪರಾಕ್ರಮಃ ॥ 69 ॥
ವೇದಸ್ನಾತೋ ವ್ರತಸ್ನಾತೋ ಧನುರ್ವೇದೇ ಚ ಪಾರಗಃ |
ಮಹೋದಧಿರಿವಾಕ್ಷೋಭ್ಯೋ ರಾಮೋ ದಾಶರಥಿರ್ಯಥಾ ॥ 70 ॥

ತಮಧರ್ಮೇಣ ಧರ್ಮಿಷ್ಠಂ ಧೃಷ್ಟದ್ಯುಮ್ನೇನ ಸಂಯುಗೇ |
ಶ್ರುತ್ವಾ ನಿಹತಮಾಚಾರ್ಯಮಶ್ವತ್ಥಾಮಾ ಕಿಮಬ್ರವೀತ್ ॥ 71 ॥
ಅವರು ಲೋಕದಲ್ಲಿ ಪ್ರಥಮ ಮಹಾರಥರು, ದೃಢವಾದ ಧನುಸ್ಸುಳ್ಳವರು, ದಣಿವನ್ನು ಗೆದ್ದವರು, ವಾಯುವಿನಂತೆ ಶೀಘ್ರಗತಿಯುಳ್ಳವರು, ರಣರಂಗದಲ್ಲಿ ಕ್ರುದ್ಧನಾದ ಯಮನಂತೆ ಸಂಚರಿಸುವವರು. ರಣರಂಗದಲ್ಲಿ ಬಾಣಗಳನ್ನು ಪ್ರಯೋಗಿಸುವಾಗ ಅವರು ನಿಂತ ಭೂಮಿಯು ಪೀಡಿತವಾಗುತ್ತಿದ್ದಿತು. ವೀರರೂ, ಸತ್ಯಪರಾಕ್ರಮರೂ ಆದ ಅವರು ಯುದ್ಧದಲ್ಲಿ ವ್ಯಥೆಯನ್ನು ಹೊಂದುತ್ತಿರಲಿಲ್ಲ. ಅವರು ವೇದಸ್ನಾತರು, ವ್ರತಸ್ನಾತರು, ಧನುರ್ವೇದದಲ್ಲಿ ಪಾರಂಗತರು, ಮಹಾಸಮುದ್ರದಂತೆ, ದಾಶರಥಿ ರಾಮನಂತೆ ಅಲುಗಾಡಿಸಲು ಸಾಧ್ಯವಿಲ್ಲದವರು. ಅಂತಹ ಧರ್ಮಿಷ್ಠರಾದ ದ್ರೋಣಾಚಾರ್ಯರು ಯುದ್ಧದಲ್ಲಿ ಧೃಷ್ಟದ್ಯುಮ್ನನಿಂದ ಅಧರ್ಮದಿಂದ ಹತರಾದುದನ್ನು ಕೇಳಿ ಅಶ್ವತ್ಥಾಮರು ಏನು ಹೇಳಿದರು?
ಧೃಷ್ಟದ್ಯುಮ್ನಸ್ಯ ಯೋ ಮೃತ್ಯುಃ ಸೃಷ್ಟಸ್ತೇನ ಮಹಾತ್ಮನಾ |
ಯಥಾ ದ್ರೋಣಸ್ಯ ಪಾಂಚಾಲ್ಯೋ ಯಜ್ಞಸೇನಸುತೋಽಭವತ್ ॥72॥
ತಂ ನೃಶಂಸೇನ ಪಾಪೇನ ಕ್ರೂರೇಣಾತ್ಯಲ್ಪದರ್ಶಿನಾ |
ಶ್ರುತ್ವಾ ನಿಹತಮಾಚಾರ್ಯಮಶ್ವತ್ಥಾಮಾ ಕಿಮಬ್ರವೀತ್ ॥ 73 ॥
ದ್ರೋಣರಿಗೆ ಯಜ್ಞಸುತನಾದ ಪಾಂಚಾಲ್ಯನಾದ ಧೃಷ್ಟದ್ಯುಮ್ನನು ಮೃತ್ಯುವಾದಂತೆ ಧೃಷ್ಟದ್ಯುಮ್ನನಿಗೆ ಮಹಾತ್ಮರಾದ ದ್ರೋಣರಿಂದ ಯಾವ ಅಶ್ವತ್ಥಾಮರು ಮೃತ್ಯುವಾಗಿ ಸೃಷ್ಟಿಸಲ್ಪಟ್ಟಿದ್ದರೋ ಅಂತಹ ದ್ರೋಣರು ಕ್ರೂರನೂ, ಪಾಪಕರ್ಮದಲ್ಲಿ ರತನಾದವನೂ, ಅಲ್ಪದರ್ಶಿಯೂ ಆದ ಧೃಷ್ಟದ್ಯುಮ್ನನಿಂದ ಹತರಾದುದನ್ನು ಕೇಳಿ ಅಶ್ವತ್ಥಾಮರು ಏನು ಹೇಳಿದರು?
ಸಂಜಯಃ
ಛದ್ಮನಾ ನಿಹತಂ ಶ್ರುತ್ವಾ ಪಿತರಂ ಪಾಪಕರ್ಮಣಾ |
ಬಾಷ್ಪೇಣಾಪೂರ್ಯತ ದ್ರೌಣೀ ರೋಷೇಣ ಚ ನರರ್ಷಭ ॥ 74 ॥
ಸಂಜಯ ಎಲೈ ನರಶ್ರೇಷ್ಠನೇ, ತನ್ನ ತಂದೆಯು ಪಾಪಕರ್ಮವನ್ನು ಮಾಡುವ ಧೃಷ್ಟದ್ಯುಮ್ನನಿಂದ ಮೋಸದಿಂದ ಹತನಾದನೆಂದು ಕೇಳಿ ಅಶ್ವತ್ಥಾಮರು ರೋಷದಿಂದ ಕಣ್ಣೀರಿನಿಂದ ತುಂಬಿದ ಮುಖವುಳ್ಳವರಾಗಿ ರೋಷಗೊಂಡರು.
ತಸ್ಯ ಕ್ರುದ್ಧಸ್ಯ ರಾಜೇಂದ್ರ ವಪುರ್ದಿವ್ಯಮದೃಶ್ಯತ |
ಅಂತಕಸ್ಯೇವ ಭೂತಾನಿ ಜಿಹೀರ್ಷೋಃ ಕಾಲಪರ್ಯಯೇ ॥ 75 ॥
ಎಲೈ ರಾಜೇಂದ್ರನೇ, ಕೋಪಗೊಂಡ ಅವರ ದಿವ್ಯವಾದ ಶರೀರವು ಸರ್ವ ಸಂಹಾರ ಕಾಲದಲ್ಲಿ ಎಲ್ಲ ಪ್ರಾಣಿಗಳನ್ನೂ ಸಂಹರಿಸುವ ಯಮನ ದೇಹದಂತಿದ್ದಿತು.
ಅಶ್ರುಪೂರ್ಣೇ ತತೋ ನೇತ್ರೇ ಅಪಮೃಜ್ಯ ಪುನಃ ಪುನಃ |
ಉವಾಚ ಕೋಪಾನ್ನಿಃಶ್ವಸ್ಯ ದುರ್ಯೋಧನಮಿದಂ ವಚಃ ॥ 76 ॥
ನೀರು ತುಂಬಿದ ಕಣ್ಣುಗಳನ್ನು ಪುನಃ ಪುನಃ ಒರೆಸಿಕೊಂಡು, ಕೋಪಗೊಂಡು ನಿಟ್ಟುಸಿರನ್ನು ಬಿಡುತ್ತಾ, ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಆಡಿದರು.
ಪಿತಾ ಮಮ ಯಥಾ ಕ್ಷುದ್ರೈರ್ನ್ಯಸ್ತಶಸೊತ್ರೇ ನಿಪಾತಿತಃ |
ಧರ್ಮಧ್ವಜವತಾ ಪಾಪಂ ಕೃತಂ ತದ್ ವಿದಿತಂ ಮಮ |
ಅನಾರ್ಯಂ ಸುನೃಶಂಸಸ್ಯ ಧರ್ಮಪುತ್ರಸ್ಯ ಮೇ ಶ್ರುತಮ್ ॥ 77 ॥
ಶಸ್ತ್ರಸಂನ್ಯಾಸವನ್ನು ಮಾಡಿದ ನನ್ನ ತಂದೆಯು ಕ್ಷುದ್ರನಿಂದ ಹೇಗೆ ಹತರಾದರೆಂದು ನಾನು ಕೇಳಿದೆನು. ಧರ್ಮಚ್ಛೇದವನ್ನು ಮಾಡಿದ ಧೃಷ್ಟದ್ಯುಮ್ನನು ಮಾಡಿದ ಪಾಪಕೃತ್ಯವನ್ನು ತಿಳಿದೆನು. ಕ್ರೂರನಾದ ಯುಧಿಷ್ಠಿರನು ಮಾಡಿದ ಅನಾರ್ಯ ಕಾರ್ಯವನ್ನೂ ಕೇಳಿದೆನು.
ಯುದ್ಧೇಷ್ವಪಿ ಪ್ರವೃತ್ತಾನಾಂ ಧ್ರುವೌ ಜಯಪರಾಜಯೌ |
ದ್ವಯಮೇತದ್ ಭವೇದ್ ರಾಜನ್ ವಧಸ್ತತ್ರ ಪ್ರಶಸ್ಯತೇ ॥ 78 ॥
ಎಲೈ ರಾಜನೇ, ಯುದ್ಧದಲ್ಲಿ ಪ್ರವೃತ್ತರಾದವರಿಗೆ ಜಯ-ಪರಾಜಯಗಳೆರಡೂ ನಿತ್ಯವಾದವುಗಳು. ಅವುಗಳಲ್ಲಿ ವಧೆಯು ಶ್ರೇಷ್ಠವಾದುದು.
ನ್ಯಾಯವೃತ್ತೋ ವಧೋ ಯಸ್ತು ಸಂಗ್ರಾಮೇ ಯುದ್ಧ್ಯತೋ ಭವೇತ್ |
ನ ಸ ದುಃಖಾಯ ಭವತಿ ತಥಾ ದೃಷ್ಟೋ ಹಿ ಸ ದ್ವಿಜಃ ॥ 79 ॥
ರಣರಂಗದಲ್ಲಿ ಯುದ್ಧ ಮಾಡುವವನಿಗೆ ನ್ಯಾಯವಾದ ವಧೆಯು ಏನು ಉಂಟಾಗುವುದೋ ಅದು ದುಃಖವನ್ನುಂಟು ಮಾಡುವುದಿಲ್ಲ. ನನ್ನ ತಂದೆಯೂ ಹಾಗೆಯೇ ತಿಳಿದಿದ್ದರು.
ಗತಃ ಸ ವೀರಲೋಕಾಯ ಪಿತಾ ಮಮ ನ ಸಂಶಯಃ |
ನ ಶೋಚ್ಯಃ ಪುರುಷವ್ಯಾಘ್ರಸ್ತಥಾ ಸ ನಿಧನಂ ಗತಃ ॥ 80 ॥
ನನ್ನ ತಂದೆಯು ವೀರಲೋಕಕ್ಕೆ ಹೋಗಿದ್ದಾರೆ ಎಂಬುದರಲ್ಲಿ ನನಗೆ ಸಂಶಯವಿಲ್ಲ. ಅಂತಹ ನಿಧನ ಹೊಂದಿದ ಪುರುಷವ್ಯಾಘ್ರರು ಶೋಚನೀಯರಲ್ಲ.
ಯತ್ತು ಧರ್ಮಪ್ರವೃತ್ತಃ ಸನ್ ಕೇಶಗ್ರಹಣಮಾಪ್ತವಾನ್ |
ಪಶ್ಯತಾಂ ಸರ್ವಸೈನ್ಯಾನಾಂ ತನ್ಮೇ ಮರ್ಮಾಣಿ ಕೃಂತತಿ ॥ 81 ॥
ಆದರೆ ಧರ್ಮನಿಷ್ಠರಾದ ಅವರು ಎಲ್ಲ ಸೇನೆಗಳೂ ನೋಡುತ್ತಿದ್ದಂತೆಯೇ ಕೇಶಗ್ರಹಣ ಹೊಂದಿದುದು ನನ್ನ ಮರ್ಮಗಳನ್ನು ಕತ್ತರಿಸುತ್ತಿದೆ.

ಕಾಮಾತ್ ಕ್ರೋಧಾದವಜ್ಞಾನಾದ್ ದರ್ಪಾದ್ ಬಾಲ್ಯೇನ ವಾ ಪುನಃ |
ವೈಧರ್ಮಿಕಾನಿ ಕುರ್ವಂತಿ ತಥಾ ಪರಿಭವೇನ ಚ ॥ 82 ॥
ಕಾಮದಿಂದ, ಕ್ರೋಧದಿಂದ, ತಿರಸ್ಕಾರದಿಂದ, ದರ್ಪದಿಂದ ಅಥವಾ ಬಾಲ್ಯದಿಂದ ಅಥವಾ ಸೋಲಿನಿಂದ ಪುರುಷರು ಅಧಾರ್ಮಿಕವಾದ ಕಾರ್ಯಗಳನ್ನು ಮಾಡುತ್ತಾರೆ.
ತದಿದಂ ಪಾರ್ಷತೇನೇಹ ಮಹದಧಾರ್ಮಿಕಂ ಕೃತಮ್ |
ಅವಜ್ಞಾಯ ಚ ಮಾಂ ನೂನಂ ನೃಶಂಸೇನ ದುರಾತ್ಮನಾ ॥ 83 ॥
ತಸ್ಯಾನುಬಂಧಂ ಸ ದ್ರಷ್ಟಾ ಧೃಷ್ಟದ್ಯುಮ್ನಃ ಸುದಾರುಣಮ್ |
ಅನಾರ್ಯಂ ಪರಮಂ ಕೃತ್ವಾ ಮಿಥ್ಯಾವಾದೀ ಚ ಪಾಂಡವಃ ॥ 84 ॥
ಇಲ್ಲಿ ಕ್ರೂರಿಯೂ, ದುರಾತ್ಮನೂ ಆದ ಧೃಷ್ಟದ್ಯುಮ್ನನು ನನ್ನನ್ನು ಅವಮಾನಗೊಳಿಸಿ ದೊಡ್ಡ ಅಧಾರ್ಮಿಕ ಕಾರ್ಯವನ್ನು ಮಾಡಿದ್ದಾನೆ. ಮಿಥ್ಯಾವಾದಿಯಾದ ಧರ್ಮರಾಜನು ಕ್ಷುದ್ರನಾದ ಧೃಷ್ಟದ್ಯುಮ್ನನ ಸ್ನೇಹವನ್ನು ಮಾಡಿ ಅನಾರ್ಯನೂ ಮತ್ತು ಅತ್ಯಂತ ದಾರುಣನೂ ಆಗಿದ್ದಾನೆ (ಲಕ್ಷಾಲಂಕಾರ).
ಯೋ ಹ್ಯಸೌ ಛದ್ಮನಾಽಽಚಾರ್ಯಂ ಶಸ್ತ್ರಂ ಸಂನ್ಯಾಸಯತ್ ತದಾ |
ತಸ್ಯಾದ್ಯ ಧರ್ಮರಾಜಸ್ಯ ಭೂಮಿಃ ಪಾಸ್ಯತಿ ಶೋಣಿತಮ್ ॥ 85 ॥
ಯಾವ ಈ ಧರ್ಮರಾಜನು ಕಪಟವನ್ನು ಮಾಡಿ ಆಚಾರ್ಯರು ಶಸ್ತ್ರಸಂನ್ಯಾಸವನ್ನು ಮಾಡುವಂತೆ ಮಾಡಿದನೋ ಅಂತಹ ಧರ್ಮರಾಜನ ರಕ್ತವನ್ನು ಈ ಭೂಮಿಯು ಕುಡಿಯುವುದು.
ಸರ್ವೋಪಾಯೈರ್ಯತಿಷ್ಯಾಮಿ ಪಾಂಚಾಲಾನಾಮಹಂ ವಧೇ |
ಧೃಷ್ಟದ್ಯುಮ್ನಂ ಚ ಸಮರೇ ಹಂತಾಽಹಂ ಪಾಪಕಾರಿಣಮ್ ॥ 86 ॥
ನಾನು ಪಾಂಚಾಲರನ್ನು ವಧೆಮಾಡಲು ಎಲ್ಲ ಉಪಾಯಗಳಿಂದಲೂ ಪ್ರಯತ್ನಪಡುವೆನು. ಪಾಪಕರ್ಮವನ್ನು ಮಾಡಿದ ಧೃಷ್ಟದ್ಯುಮ್ನನನ್ನು ಯುದ್ಧದಲ್ಲಿ ಕೊಲ್ಲುವೆನು.
ಕರ್ಮಣಾ ಯೇನ ತೇನೇಹ ಮೃದುನಾ ದಾರುಣೇನ ವಾ |
ಪಾಂಚಾಲಾನಾಂ ವಧಂ ಕೃತ್ವಾ ಶಾಂತಿಂ ಲಬ್ಧಾಸ್ಮಿ ಕೌರವ ॥ 87॥
ಎಲೈ ಕೌರವನೇ, ಮೃದುವಾಗಲೀ ಅಥವಾ ಘೋರವಾಗಲೀ ಯಾವುದಾದರೂ ಕರ್ಮವನ್ನು ಮಾಡಿ, ಪಾಂಚಾಲರ ವಧೆಯನ್ನು ಮಾಡಿ ನಾನು ಶಾಂತಿಯನ್ನು ಪಡೆಯುವೆನು.
ಯದರ್ಥಂ ಪುರುಷವ್ಯಾಘ್ರ ಪುತ್ರಮಿಚ್ಛಂತಿ ಮಾನವಾಃ |
ಪ್ರೇತ್ಯ ಚೇಹ ಚ ಸಂಪ್ರಾಪ್ತಂ ತ್ರಾಣಾಯ ಮಹತೋ ಭಯಾತ್ ॥88॥
ಎಲೈ ಪುರುಷವ್ಯಾಘ್ರನೇ, ಮಾನವರು ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ತಮ್ಮನ್ನು ದೊಡ್ಡ ಭಯದಿಂದ ರಕ್ಷಿಸಲು ಪುತ್ರನು ಪ್ರಾಪ್ತನಾಗುವನೆಂದು ಪುತ್ರನನ್ನು ಇಚ್ಛಿಸುತ್ತಾರೆ.
ಪಿತ್ರಾ ತು ಮಮ ಸಾವಸ್ಥಾ ಪ್ರಾಪ್ತಾ ನಿರ್ಬಂಧುನಾ ಯಥಾ |
ಮಯಿ ಶೈಲಪ್ರತೀಕಾಶೇ ಪುತ್ರೇ ಶಿಷ್ಯೇ ಚ ಜೀವತಿ ॥ 89 ॥
ಪುತ್ರನೂ, ಶಿಷ್ಯನೂ ಆದ ನಾನು ಪರ್ವತಸದೃಶನಾಗಿ ಬದುಕಿರುವಾಗ ನನ್ನ ತಂದೆಯು ಯಾವ ಬಂಧುವೂ ಇಲ್ಲದಂತಹ ಅವಸ್ಥೆಯನ್ನು ಹೊಂದಿದರು.
ಧಿಙ್ಮಮಾಸ್ತ್ರಾಣಿ ದಿವ್ಯಾನಿ ಧಿಗ್ಬಾಹೂ ಧಿಕ್ಪರಾಕ್ರಮಮ್ |
ಯನ್ಮಾಂ ದ್ರೋಣಃ ಸುತಂ ಪ್ರಾಪ್ಯ ಕೇಶಗ್ರಹಣಮಾಪ್ತವಾನ್ ॥ 90 ॥
ನನ್ನ ದಿವ್ಯಾಸ್ತ್ರಗಳಿಗೆ ಧಿಕ್ಕಾರವಿರಲಿ, ನನ್ನ ಬಾಹುಗಳಿಗೆ ಧಿಕ್ಕಾರವಿರಲಿ. ನನ್ನನ್ನು ಪುತ್ರನಾಗಿ ಪಡೆದು, ದ್ರೋಣರ ಕೇಶಗ್ರಹಣವಾದ್ದರಿಂದ ನನ್ನ ಪರಾಕ್ರಮಕ್ಕೆ ಧಿಕ್ಕಾರವಿರಲಿ.
ಸ ತಥಾಽಹಂ ಕರಿಷ್ಯಾಮಿ ಯಥಾ ಭರತಸತ್ತಮ |
ಪರಲೋಕಗತಸ್ಯಾಪಿ ಗಮಿಷ್ಯಾಮ್ಯನೃಣಃ ಪಿತುಃ ॥ 91 ॥
ಎಲೈ ಭರತಶ್ರೇಷ್ಠನೇ, ನಾನು ನನ್ನ ತಂದೆಯು ಪರಲೋಕಕ್ಕೆ ಹೋಗಿದ್ದರೂ ಅವರ ಋಣವನ್ನು ತೀರಿಸುವಂತಹ ಕಾರ್ಯವನ್ನು ಮಾಡುವೆನು.
ಆರ್ಯೇಣ ತು ನ ವಕ್ತವ್ಯಾ ಕದಾಚಿತ್ ಸ್ತುತಿರಾತ್ಮನಃ |
ಪಿತುರ್ವಧಮಮೃಷ್ಯಂಸ್ತು ವಕ್ಷ್ಯಾಮ್ಯದ್ಯೇಹ ಪೌರುಷಮ್ ॥ 92 ॥
ಆರ್ಯಸ್ವಭಾವವುಳ್ಳವನು ಎಂದೂ ತನ್ನ ಸ್ತುತಿಯನ್ನು ಮಾಡಿಕೊಳ್ಳಬಾರದು. ಆದರೆ ತಂದೆಯ ವಧೆಯಿಂದ ರೋಷಗೊಂಡವನಾಗಿ ನಾನು ಇಲ್ಲಿ ಈ ದಿನ ನನ್ನ ಪೌರುಷವನ್ನು ಹೇಳುವೆನು.
ಅದ್ಯ ಪಶ್ಯಂತು ಮೇ ವೀರ್ಯಂ ಪಾಂಡವಾಃ ಸಜನಾರ್ದನಾಃ |
ಮೃದ್ನತಃ ಸರ್ವಸೈನ್ಯಾನಿ ಯುಗಾಂತಮಿವ ಕುರ್ವತಃ ॥ 93 ॥
ಎಲ್ಲ ಸೈನ್ಯಗಳನ್ನೂ ಮರ್ದಿಸಿ ಯುಗಾಂತದಂತೆ ಮಾಡುವ ನನ್ನ ಪರಾಕ್ರಮನ್ನು ಈ ದಿನ ಕೃಷ್ಣನಿಂದ ಸಹಿತರಾದ ಪಾಂಡವರು ನೋಡಲಿ.
ನ ಹಿ ದೇವಾ ನ ಗಂಧರ್ವಾ ನಾಸುರಾ ನ ಚ ರಾಕ್ಷಸಾಃ |
ಅದ್ಯ ಶಕ್ತಾ ರಣೇ ಜೇತುಂ ರಥಸ್ಥಂ ಮಾಂ ನರರ್ಷಭ ॥ 94 ॥
ಎಲೈ ನರರ್ಷಭನೇ, ಈ ದಿನ ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ, ರಾಕ್ಷಸರಾಗಲೀ, ರಥದಲ್ಲಿ ನಿಂತು ಯುದ್ಧವನ್ನು

ಮಾಡುವ ನನ್ನನ್ನು ರಣರಂಗದಲ್ಲಿ ಜಯಿಸಲು ಶಕ್ತರಲ್ಲ.
ಮದನ್ಯೋ ನಾಸ್ತಿ ಲೋಕೇಽಸ್ಮಿನ್ನರ್ಜುನಾದ್ವಾಽಸ್ತ್ರವಿತ್ತಮಃ |
ಅಹಂ ಹಿ ಜ್ವಲತಾಂ ಮಧ್ಯೇ ಮಯೂಖಾನಾಮಿವಾಂಶುಮಾನ್ |
ಪ್ರಯೋಕ್ತಾ ದೇವಸೃಷ್ಟಾನಾಮಸ್ತ್ರಾಣಾಂ ಪೃತನಾಗತಃ ॥ 95 ॥
ನನ್ನನ್ನು ಮತ್ತು ಅರ್ಜುನನನ್ನು ಬಿಟ್ಟು ಲೋಕದಲ್ಲಿ ಶ್ರೇಷ್ಠನಾದ ಅಸ್ತ್ರಜ್ಞರಾದವನು ಯಾವನೂ ಇಲ್ಲ. ನಾನು ಜ್ವಲಿಸುವವರಲ್ಲಿ ಕಿರಣಗಳ ಮಧ್ಯೆ ಇರುವ ಸೂರ್ಯನಂತೆ ಇದ್ದು, ಈ ದಿನ ಸೈನ್ಯದ ಮಧ್ಯದಲ್ಲಿ ನಿಂತು ದೇವಸೃಷ್ಟವಾದ ಅಸ್ತ್ರಗಳನ್ನು ಪ್ರಯೋಗಿಸುವೆನು.
ಕೃಶಾಶ್ವತನಯಾ ಹ್ಯದ್ಯ ಮತ್ಪ್ರಯುಕ್ತಾ ಮಹಾಮೃಧೇ |
ದರ್ಶಯಂತೋ ಹ್ಯಾತ್ಮನೋ ವೀರ್ಯಂ ಪ್ರಮಥಿಷ್ಯಂತಿ ಪಾಂಡವಾನ್ ॥
ಈ ದಿನ ದೊಡ್ಡ ಯುದ್ಧದಲ್ಲಿ ನನ್ನಿಂದ ಪ್ರಯೋಗಿಸಲ್ಪಡುವ ಅಗ್ನಿಪುರರಂತಿರುವ ಅಸ್ತ್ರಗಳು ತಮ್ಮ ಸಾಮರ್ಥ್ಯವನ್ನು ತೋರಿಸುತ್ತಾ ಪಾಂಡವರನ್ನು ಮರ್ದಿಸುವವು.
ಅದ್ಯ ಸರ್ವಾ ದಿಶೋ ರಾಜನ್ ಧಾರಾಭಿರಿವ ಸಂಕುಲಾಃ |
ಆವೃತಾಃ ಪತ್ರಿಭಿಸ್ತೀಕ್ಷ್ಣೈರ್ದ್ರಷ್ಟಾರೋ ಮಾಮಕೈರಿಹ ॥ 97 ॥
ಎಲೈ ರಾಜನೇ, ಈ ದಿನ ಎಲ್ಲ ದಿಕ್ಕುಗಳೂ ಮಳೆಗಾಲದಲ್ಲಿ ಜಲಧಾರೆಗಳಿಂದ ನಿಬಿಡವಾದಂತೆ ನನ್ನ ತೀಕ್ಷ್ಣವಾದ ಅಸ್ತ್ರಗಳಿಂದ ಆವೃತವಾಗುವುದನ್ನು ಯೋಧರು ನೋಡುವರು.
ಕಿರನ್ ಹಿ ಶರಜಾಲಾನಿ ಸರ್ವತೋ ಭೈರವಸ್ವರಮ್ |
ಶತ್ರೂನ್ ನಿಪಾತಯಿಷ್ಯಾಮಿ ಮಹಾವಾತ ಇವ ದ್ರುಮಾನ್ ॥ 98 ॥
ಭಯಂಕರವಾದ ಸ್ವನವುಳ್ಳ ಅಸ್ತ್ರಸಮೂಹಗಳನ್ನು ಎಲ್ಲ ಕಡೆಗಳಲ್ಲಿಯೂ ಪ್ರಯೋಗಿಸುತ್ತಾ, ಬಿರುಗಾಳಿಯು ಮರಗಳನ್ನು ಉರುಳಿಸುವಂತೆ ನಾನು ಶತ್ರುಗಳನ್ನು ಉರುಳಿಸುವೆನು.
ನ ಚ ಜಾನಾತಿ ಬೀಭತ್ಸುಸ್ತದಸ್ತ್ರಂ ನ ಜನಾರ್ದನಃ |
ನ ಭೀಮಸೇನೋ ನ ಯಮೌ ನ ಚ ರಾಜಾ ಯುಧಿಷ್ಠಿರಃ ॥ 99 ॥
ನ ಪಾರ್ಷತೋ ದುರಾತ್ಮಾಽಸೌ ನ ಶಿಖಂಡೀ ನ ಸಾತ್ಯಕಿಃ |
ಯದಿದಂ ಮಯಿ ಕೌರವ್ಯ ಸಕಲ್ಪಂ ಸನಿವರ್ತನಮ್ ॥ 100 ॥
ಎಲೈ ಕೌರವ್ಯನೇ, ನನ್ನಲ್ಲಿ ಪ್ರಯೋಗನಿವರ್ತನ ಸಹಿತವಾದ ಯಾವ ಅಸ್ತ್ರವಿದೆಯೋ, ಅದನ್ನು ಅರ್ಜುನನಾಗಲೀ, ಕೃಷ್ಣನಾಗಲೀ, ಭೀಮಸೇನನಾಗಲೀ, ನಕುಲ- ಸಹದೇವರಾಗಲೀ, ರಾಜನಾದ ಯುಧಿಷ್ಠಿರನಾಗಲೀ, ದುರಾತ್ಮನಾದ ಈ ಧೃಷ್ಟದ್ಯುಮ್ನನಾಗಲೀ, ಶಿಖಂಡಿಯಾಗಲೀ ಅಥವಾ ಸಾತ್ಯಕಿಯಾಗಲೀ ತಿಳಿದಿಲ್ಲ.
ನಾರಾಯಣಾಯ ಮೇ ಪಿತ್ರಾ ಪ್ರಣಮ್ಯ ವಿಧಿಪೂರ್ವಕಮ್ |
ಉಪಹಾರಃ ಪುರಾ ದತ್ತೋ ಬ್ರಹ್ಮರೂಪ ಉಪಸ್ಥಿತೇ ॥ 101 ॥
ಹಿಂದೆ ಬ್ರಾಹ್ಮಣ ರೂಪವನ್ನು ಧರಿಸಿದ ನಾರಾಯಣನಿಗೆ ನನ್ನ ತಂದೆಯು ವಿಧಿಪೂರ್ವಕವಾಗಿ ಪ್ರಣಾಮವನ್ನು ಮಾಡಿ ಪೂಜೆಯನ್ನು ಮಾಡಿದರು.
ತಂ ಸ್ವಯಂ ಪ್ರತಿಗೃಹ್ಯಾಥ ಭಗವಾನ್ ಸ ವರಂ ದದೌ |
ವವ್ರೇ ಪಿತಾ ಮೇ ಪರಮಮಸ್ತ್ರಂ ನಾರಾಯಣಂ ತತಃ ॥ 102 ॥
ಆ ಪೂಜೆಯನ್ನು ಸ್ವತಃ ಸ್ವೀಕರಿಸಿ ಭಗವಂತನು ನನ್ನ ತಂದೆಗೆ ವರವನ್ನು ನೀಡಿದನು. ನನ್ನ ತಂದೆಯು ಶ್ರೇಷ್ಠವಾದ ನಾರಾಯಣಾಸ್ತ್ರವನ್ನು ವರವಾಗಿ ಬೇಡಿದರು.
ಅಥೈನಮಬ್ರವೀದ್ ರಾಜನ್ ಭಗವಾನ್ ದೇವಸತ್ತಮಃ |
ಭವಿತಾ ತ್ವತ್ಸಮೋ ನಾನ್ಯಃ ಕಶ್ಚಿದ್ಯುಧಿ ನರಃ ಕ್ವಚಿತ್ ॥ 103 ॥
ಎಲೈ ರಾಜನೇ, ದೇವಶ್ರೇಷ್ಠನಾದ ಭಗವಂತನು ಆಗ ನನ್ನ ತಂದೆಯನ್ನು ಕುರಿತು ಯುದ್ಧದಲ್ಲಿ ಬೇರೆ ಯಾವ ಮನುಷ್ಯನೂ ನಿನಗೆ ಸಮಾನನಾಗುವುದಿಲ್ಲ ಎಂದು ಹೇಳಿದನು.
ನ ತ್ವಿದಂ ಸಹಸಾ ಬ್ರಹ್ಮನ್ ಪ್ರಯೋಕ್ತವ್ಯಂ ಕಥಂಚನ |
ನ ಹ್ಯೇತದಸ್ತ್ರಮನ್ಯತ್ರ ವಧಾಚ್ಛತ್ರೋರ್ನಿವರ್ತತೇ ॥ 104 ॥
ಎಲೈ ಬ್ರಾಹ್ಮಣನೇ, ಇದನ್ನು ಇದಕ್ಕಿದ್ದಂತೆಯೇ ಪ್ರಯೋಗಿಸಬಾರದು. ಈ ಅಸ್ತ್ರವು ಶತ್ರುವಿನ ವಧೆಯನ್ನು ಮಾಡದೆ ಹಿಂದೆ ಬರುವುದಿಲ್ಲ.
ನ ಚೈತಚ್ಛಕ್ಯತೇ ಜ್ಞಾತುಂ ಕೋ ನ ವಧ್ಯೇದಿತಿ ಪ್ರಭೋ |
ಅವಧ್ಯಮಪಿ ಹನ್ಯಾದ್ಧಿ ತಸ್ಮಾನ್ನೈತತ್ ಪ್ರಯೋಜಯೇತ್ ॥ 105 ॥
ಎಲೈ ಪ್ರಭುವೇ, ಈ ಅಸ್ತ್ರವು ಯಾರನ್ನು ವಧಿಸೀತು ಎಂದು ತಿಳಿಯಲು ಸಾಧ್ಯವಿಲ್ಲ. ಇದು ಅವಧ್ಯರಾದವರನ್ನೂ ಕೊಂದೀತು. (ಆದ್ದರಿಂದ ಇದನ್ನು ಸುಮ್ಮನೆ ಪ್ರಯೋಗಿಸಬಾರದು).
ವಧಃ ಸಂಖೇ ದ್ರುವಶ್ಚೈವ ಶಸ್ತ್ರಾಣಾಂ ಚ ವಿಸರ್ಜನಮ್ |
ಪ್ರಯಾಚನಂ ಚ ಶತ್ರೂಣಾಂ ಗಮನಂ ಶರಣಸ್ಯ ಚ ॥ 106 ॥
ಏತೇ ಪ್ರಶಮನೇ ಯೋಗಾ ಮಹಾಸ್ತ್ರಸ್ಯ ಪರಂತಪ |
ಸರ್ವಥಾ ಪೀಡಿತೋ ಹಿ ಸ್ಯಾದವಧ್ಯಾನ್ ಪೀಡಯನ್ ರಣೇ ॥ 107॥

ಶತ್ರುಗಳ ವಧೆ, ರಣರಂಗದಿಂದ ಓಡುವುದು, ಶಸ್ತ್ರವನ್ನು ತ್ಯಾಗ ಮಾಡುವುದು, ಅಸ್ತ್ರವನ್ನು ಬೇಡುವುದು, ಶತ್ರುವಿಗೆ ಶರಣಾಗುವುದು - ಇವು ಈ ಮಹಾಸ್ತ್ರದ ಉಪಶಮನಕ್ಕೆ ಉಪಾಯಗಳು. ಅವಧ್ಯರಾದವರನ್ನು ಪೀಡಿಸಿದರೆ ರಣರಂಗದಲ್ಲಿ ಈ ಅಸ್ತ್ರವು ಪ್ರಯೋಗ ಮಾಡುವವನನ್ನೇ ಸರ್ವಥಾ ಪೀಡಿಸುವುದು (ಎಂದು ಹೇಳಿದನು).
ತಜ್ಜಗ್ರಾಹ ಪಿತಾ ಮಹ್ಯಮಬ್ರವೀಚ್ಚೈವ ಸ ಪ್ರಭುಃ |
ತ್ವಂ ವರ್ಷಿಷ್ಯಸಿ ದಿವ್ಯಾನಿ ಶಸ್ತ್ರವರ್ಷಾಣ್ಯನೇಕಶಃ |
ಅನೇನಾಸ್ತ್ರೇಣ ಸಂಗ್ರಾಮೇ ತೇಜಸಾ ಚ ಜ್ವಲಿಷ್ಯಸಿ ॥ 108 ॥
ಅದನ್ನು ನನ್ನ ತಂದೆಯು ತೆಗೆದುಕೊಂಡರು. ಆಗ ಪ್ರಭುವಾದ ನಾರಾಯಣನು, ನೀನು ಈ ಅಸ್ತ್ರದ ಸಾಮರ್ಥ್ಯದಿಂದ ಅನೇಕ ದಿವ್ಯಾಸ್ತ್ರಗಳ ವರ್ಷವನ್ನು ಉಂಟುಮಾಡುವಿ. ರಣರಂಗದಲ್ಲಿ ತೇಜಸ್ಸಿನಿಂದ ಜ್ವಲಿಸುವಿ ಎಂದು ಹೇಳಿದನು.
ಏವಮುಕತ್ವ ಸ ಭಗವಾನ್ ದಿವಮಾಚಕ್ರಮೇ ಪ್ರಭುಃ |
ಏತನ್ನಾರಾಯಣಾದಸ್ತ್ರಂ ತತ್ಪ್ರಾಪ್ತಂ ಮಮ ಬಂಧುನಾ ॥ 109 ॥
ಹೀಗೆ ಹೇಳಿ ಭಗವಂತನೂ, ಪ್ರಭುವೂ ಆದ ನಾರಾಯಣನು ಸ್ವರ್ಗಕ್ಕೆ ಹೊರಟು ಹೋದನು. ಈ ಅಸ್ತ್ರವು ನಾರಾಯಣನಿಂದ ನನ್ನ ತಂದೆಗೆ ಬಂದಿತು.
ತೇನಾಹಂ ಪಾಂಡವಾಂಶ್ಚೈವ ಪಾಂಚಾಲಾನ್ ಮತ್ಸ್ಯಕೇಕಯಾನ್ |
ವಿದ್ರಾವಯಿಷ್ಯಾಮಿ ರಣೇ ಶಚೀಪತಿರಿವಾಸುರಾನ್ ॥ 110 ॥
ಆ ಅಸ್ತ್ರದಿಂದ ನಾನು ಶಚೀಪತಿಯಾದ ಇಂದ್ರನು ದಾನವರನ್ನು ಓಡಿಸಿದಂತೆ, ಪಾಂಡವರನ್ನೂ, ಪಾಂಚಾಲರನ್ನೂ, ಮತ್ಸ್ಯ-ಕೇಕಯರನ್ನೂ ರಣರಂಗದಿಂದ ಓಡಿಸುವೆನು.
ಯಥಾ ಯಥಾಹಮಿಚ್ಛೇಯಂ ತಥಾ ಭೂತ್ವಾ ಶರಾ ಮಮ |
ನಿಪತೇಯುಃ ಸಪತ್ನೇಷು ವಿಕ್ರಮತ್ಸ್ವಪಿ ಭಾರತ ॥ 111 ॥
ಎಲೈ ಭಾರತನೇ, ನಾನು ಹೇಗೆ ಹೇಗೆ ಬಯಸುತ್ತೇನೆಯೋ ಬಾಣಗಳು ಅಂತಹ ಆಕಾರವನ್ನು ತಳೆದು, ಶತ್ರುಗಳು ಪರಾಕ್ರಮವನ್ನು ಮಾಡುತ್ತಿದ್ದರೂ ಅವರ ಮೇಲೆ ಬೀಳುವವು.
ಯಥೇಷ್ಟಮಶ್ಮವರ್ಷೇಣ ಪ್ರವರ್ಷಿಷ್ಯೇ ರಣೇ ಸ್ಥಿತಃ |
ಅಯೋಮುಖೈಶ್ಚ ವಿಹಗೈರ್ದ್ರಾವಯಿಷ್ಯೇ ಮಹಾರಥಾನ್ |
ಪರಶ್ವಧಾಂಶ್ಚ ವಿವಿಧಾನ್ ಪ್ರಸ್ರಕ್ಷ್ಯೇಽಹಮಸಂಶಯಮ್ ॥ 112 ॥
ನಾನು ನನ್ನ ಮನಸ್ಸಿಗೆ ಬಂದಂತೆ ರಣರಂಗದಲ್ಲಿ ನಿಂತು ಕಲ್ಲಿನ ಮಳೆಯನ್ನು ಸುರಿಸುವೆನು. ಕಬ್ಬಿಣದ ಮುಖವುಳ್ಳ ಪಕ್ಷಿಗಳಿಂದ ಮಹಾರಥರನ್ನು ಓಡಿಸುವೆನು. ವಿವಿಧವಾದ ಪರಶ್ವಧಗಳನ್ನು ನಾನು ನಿಸ್ಸಂಶಯವಾಗಿ ಸೃಷ್ಟಿಸುವೆನು.
ಸೋಽಹಂ ನಾರಾಯಣಾಸ್ತ್ರೇಣ ಮಹತಾ ಶತ್ರುತಾಪನ |
ಶತ್ರೂನ್ ವಿಧ್ವಂಸಯಿಷ್ಯಾಮಿ ಕದರ್ಥೀಕೃತ್ಯ ಪಾಂಡವಾನ್ ॥ 113 ॥
ಎಲೈ ಶತ್ರುತಾಪನನೇ, ಅಂತಹ ನಾನು ಶ್ರೇಷ್ಠವಾದ ನಾರಾಯಣಾಸ್ತ್ರದಿಂದ ಪಾಂಡವರನ್ನು ತೃಣೀಕರಿಸಿ ಶತ್ರುಗಳನ್ನು ಧ್ವಂಸಗೊಳಿಸುವೆನು.
ಮಿತ್ರಬ್ರಹ್ಮಗುರುದ್ವೇಷೀ ಜಾಲ್ಮಕಃ ಸುವಿಗರ್ಹಿತಃ |
ಪಾಂಚಾಲಾಪಸದಶ್ಚಾದ್ಯ ನ ಮೇ ಜೀವನ್ ವಿಮೋಕ್ಷ್ಯತೇ ॥ 114 ॥
ಮಿತ್ರ-ಬ್ರಹ್ಮ-ಗುರು ದ್ವೇಷಿಯೂ, ಕ್ಷುಲ್ಲಕನೂ, ಅತ್ಯಂತ ನಿಂದನೀಯನೂ ಆದ ಪಾಂಚಾಲಾಪಸದನು ಈ ದಿನ ನನ್ನಿಂದ ಜೀವಸಹಿತನಾಗಿ ಬಿಡುಗಡೆಯನ್ನು ಹೊಂದುವುದಿಲ್ಲ (ಎಂದು ಹೇಳಿದನು).
ತಚ್ಛ್ರುತ್ವಾ ದ್ರೋಣಪುತ್ರಸ್ಯ ಪರ್ಯವರ್ತತ ವಾಹಿನೀ |
ತತಃ ಸರ್ವೇ ಮಹಾಶಂಖಾನ್ ದಧ್ಮುಃ ಪುರುಷಸತ್ತಮಾಃ ॥ 115 ॥
ಸಂಜಯ ದ್ರೋಣಪುತ್ರರಾದ ಅಶ್ವತ್ಥಾಮರ ಆ ಮಾತುಗಳನ್ನು ಕೇಳಿ ಸೈನ್ಯವು ಹಿಂದಿರುಗಿತು. ಆಗ ಎಲ್ಲ ಪುರುಷಶ್ರೇಷ್ಠರೂ ಮಹಾಶಂಖಗಳನ್ನು ಊದಿದರು.
ಭೇರೀಶ್ಚಾಭ್ಯಹನನ್ ಹೃಷ್ಟಾ ಡಿಂಡಿಮಾಂಶ್ಚ ಸಹಸ್ರಶಃ |
ತಥಾ ನನಾದ ವಸುಧಾ ಖುರನೇಮಿಪ್ರಪೀಡಿತಾ |
ಸ ಶಬ್ದಸ್ತುಮುಲಃ ಖಂ ದ್ಯಾಂ ಪೃಥಿವೀಂ ಚ ವ್ಯನಾದಯತ್ ॥ 116॥
ಸಂತೋಷಗೊಂಡು ಸೈನಿಕರು ಭೇರಿಗಳನ್ನೂ ಮತ್ತು ಡಿಂಡಿಮಗಳನ್ನೂ ಬಾರಿಸಿದರು. ಹಾಗೆಯೇ ಅಶ್ವಗಳ ಖುರಗಳಿಂದಲೂ, ರಥದ ಚಕ್ರಗಳಿಂದಲೂ ಪೀಡಿತವಾದ ಭೂಮಿಯು ಶಬ್ದವನ್ನುಂಟು ಮಾಡಿತು. ತೀವ್ರವಾದ ಆ ಶಬ್ದವು ಆಕಾಶದಲ್ಲಿಯೂ, ಅಂತರಿಕ್ಷದಲ್ಲಿಯೂ ಮತ್ತು ಭೂಮಿಯಲ್ಲಿಯೂ ಪ್ರತಿಧ್ವನಿಸಿತು.
ತಂ ಶಬ್ದಂ ಪಾಂಡವಾಃ ಶ್ರುತ್ವಾ ಪರ್ಜನ್ಯನಿನದೋಪಮಮ್ |
ಸಮೇತ್ಯ ರಥಿನಾಂ ಶ್ರೇಷ್ಠಾಃ ಸಹಿತಾಃ ಸನ್ಮ್ಯಮಂತ್ರಯನ್ ॥ 117 ॥
ಪಾಂಡವರು ಪರ್ಜನ್ಯಘೋಷದಂತಿದ್ದ ಆ ಶಬ್ದವನ್ನು ಕೇಳಿ ರಥಿಶ್ರೇಷ್ಠರಾದ ಅವರು ಒಟ್ಟಾಗಿ ಸೇರಿ ಮಂತ್ರಾಲೋಚನೆಯನ್ನು ಮಾಡಿದರು.
ತಥೋಕತ್ವ ದ್ರೋಣಪುತ್ರೋಽಪಿ ತದೋಪಸ್ಪೃಶ್ಯ ಭಾರತ |
ಪ್ರಾದುಶ್ಚಕಾರ ತದ್ ದಿವ್ಯಮಸ್ತ್ರಂ ನಾರಾಯಣಂ ತದಾ ॥ 118 ॥
ಎಲೈ ಭಾರತನೇ, ಆಗ ದ್ರೋಣಪುತ್ರರಾದ ಅಶ್ವತ್ಥಾಮರು ಆ ರೀತಿಯಲ್ಲಿ ಮಾತನಾಡಿ, ನೀರನ್ನು ಮುಟ್ಟಿ ಶುಚಿಯಾಗಿ ದಿವ್ಯವಾದ

ನಾರಾಯಣಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೆಂಟನೆಯ ಅಧ್ಯಾಯ
ಕೌರವಸೇನೆಯ ದೊಡ್ಡ ಶಬ್ದವನ್ನು ಕೇಳಿ ಯುಧಿಷ್ಠಿರನ ಪ್ರಶ್ನೆ.
ಅರ್ಜುನನಿಂದ ಕಾರಣನಿರೂಪಣೆ ಮತ್ತು ದ್ರೋಣರ
ವಧೆಯನ್ನು ಉಪೇಕ್ಷಿಸುದುದಕ್ಕೆ ಆತ್ಮನಿಂದೆ.
ಸಂಜಯಃ
ಪ್ರಾದುರ್ಭೂತೇ ತತಸ್ತಸ್ಮಿನ್ನಸ್ತ್ರೇ ನಾರಾಯಣೇ ತದಾ |
ಪ್ರಾವಾತ್ ಸುಪ್ರಹಿತೋ ವಾಯುರನಭ್ರೇ ಸ್ತನಯಿತ್ನುಮಾನ್ ॥ 1 ॥
ಸಂಜಯ ನಾರಾಯಣಾಸ್ತ್ರವು ಪ್ರಾದುರ್ಭಾವಗೊಳಿಸಲ್ಪಡುತ್ತಿರಲು ಆಗ ಮೋಡವಿಲ್ಲದ ಆಕಾಶದಲ್ಲಿ ಗುಡುಗುಗಳಿಂದ ಕೂಡಿದ ಚಂಡಮಾರುತವು ಬೀಸಿತು.
ಚಚಾಲ ಪೃಥಿವೀ ಚಾಪಿ ಚುಕ್ಷುಭೇ ಚ ಮಹೋದಧಿಃ |
ಪ್ರತಿಸ್ರೋತಃ ಪ್ರವೃತ್ತಾಶ್ಚ ಗಂತುಂ ತತ್ರ ಸಮುದ್ರಗಾಃ ॥ 2 ॥
ಭೂಮಿಯು ನಡುಗಿತು. ಸಾಗರವು ಕ್ಷೋಭೆಗೊಂಡಿತು. ಸಮುದ್ರಗಾಮಿನಿಗಳಾದ ನದಿಗಳು ಪ್ರವಾಹಕ್ಕೆ ವಿರುದ್ಧವಾಗಿ ಹರಿಯಲು ಪ್ರಾರಂಭಿಸಿದವು.
ಶಿಖರಾಣಿ ವ್ಯದೀರ್ಯಂತ ಗಿರೀಣಾಂ ತತ್ರ ಭಾರತ |
ಅಪಸವ್ಯಂ ಮೃಗಾಶ್ಚೈವ ಪಾಂಡುಪುತ್ರಾನ್ ಪ್ರಚಕ್ರಿರೇ ॥ 3 ॥
ಎಲೈ ಭಾರತನೇ, ಪರ್ವತದ ಶಿಖರಗಳು ಬಿರಿದವು. ಮೃಗಗಳು ಪಾಂಡುಪುತ್ರರಿಗೆ ಅಪಸವ್ಯದಲ್ಲಿ ಬಂದವು.
ತಮಸಾ ಚಾವಕೀರ್ಯಂತ ಸೂರ್ಯಶ್ಚ ಕಲುಷೋಽಭವತ್ |
ಸಂಪತಂತಿ ಚ ಭೂತಾನಿ ಕ್ರವ್ಯಾದಾನಿ ಪ್ರಹೃಷ್ಟವತ್ ॥ 4 ॥
ಕತ್ತಲೆಯು ಹಬ್ಬಿತು. ಸೂರ್ಯನು ಮಂಕಾದನು. ಮಾಂಸಾಹಾರಿ ಪ್ರಾಣಿಗಳು ಸಂತೋಷದಿಂದ ಓಡಾಡಿದವು.
ದೇವದಾನವಗಂಧರ್ವಾಸ್ತ್ರಸ್ತಾ ಆಸನ್ ವಿಶಾಂಪತೇ |
ಕಥಂಕಥಾಭವತ್ ತೀವ್ರಾ ದೃಷ್ಟ್ವಾ ತದ್ ವ್ಯಾಕುಲಂ ಮಹತ್ ॥ 5 ॥
ಎಲೈ ರಾಜನೇ, ದೇವ-ದಾನವ-ಗಂಧರ್ವರು ಹೆದರಿದರು. ಆ ದೊಡ್ಡ ವ್ಯತ್ಯಾಸವನ್ನು ನೋಡಿ ಜನರು ಏನು ಮಾಡುವುದು, ಏನು ಮಾಡುವುದು ಎಂದು ತೀವ್ರವಾಗಿ ಮಾತನಾಡಿದರು.
ವ್ಯಥಿತಾಃ ಸರ್ವರಾಜಾನಸ್ತದಾ ಹ್ಯಾಸನ್ ವಿಚೇತಸಃ |
ತದ್ ದೃಷ್ಟ್ವಾ ಘೋರರೂಪಂ ತು ದ್ರೌಣೇರಸ್ತ್ರಂ ಭಯಾವಹಮ್ ॥6॥
ಅಶ್ವತ್ಥಾಮರ ಘೋರವೂ, ಭಯಂಕರವೂ ಆದ ಆ ಅಸ್ತ್ರವನ್ನು ನೋಡಿ ಎಲ್ಲ ರಾಜರೂ ತಮ್ಮ ವಿವೇಕವನ್ನು ಕಳೆದುಕೊಂಡು ವ್ಯಥೆಯಿಂದ ಕೂಡಿದರು.
ಧೃತರಾಷ್ಟ್ರಃ
ನಿವರ್ತಿತೇಷು ಸೈನ್ಯೇಷು ದ್ರೋಣಪುತ್ರೇಣ ಸಂಯುಗೇ |
ಭೃಶಂ ಶೋಕಾಭಿತಪ್ತೇನ ಪಿತುರ್ವಧಮಮೃಷ್ಯತಾ ॥ 7 ॥
ಕುರೂನಾಪತತೋ ದೃಷ್ಟ್ವಾ ಧೃಷ್ಟದ್ಯುಮ್ನಸ್ಯ ರಕ್ಷಣೇ |
ಕೋ ಮಂತ್ರಃ ಪಾಂಡವೇಷ್ವಾಸೀತ್ ತನ್ಮಮಾಚಕ್ಷ್ವ ಸಂಜಯ ॥ 8 ॥
ಧೃತರಾಷ್ಟ್ರ ತಂದೆಯ ವಧೆಯನ್ನು ಕೇಳಿ ಸಹಿಸದೆ ಶೋಕಾಭಿತಪ್ತರಾಗಿ ದ್ರೋಣಪುತ್ರರಿಂದ ರಣರಂಗದಲ್ಲಿ ಸೈನ್ಯಗಳು ಹಿಂದಿರುಗಿಸಲ್ಪಡುತ್ತಿರಲು ಕುರುಗಳು ತಮ್ಮ ಮೇಲೆ ಎರಗುವುದನ್ನು ನೋಡಿದ ಪಾಂಡವರು ಧೃಷ್ಟದ್ಯುಮ್ನನನ್ನು ರಕ್ಷಿಸುವ ವಿಷಯದಲ್ಲಿ ಏನು ಮಂತ್ರಾಲೋಚನೆಯನ್ನು ಮಾಡಿದರೆಂದು ಎಲೈ ಸಂಜಯನೇ, ನನಗೆ ಹೇಳು.
ಸಂಜಯಃ
ಪ್ರಾಗೇವ ವಿದ್ರುತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಯುಧಿಷ್ಠಿರಃ |
ಪುನಶ್ಚ ತುಮುಲಂ ಶಬ್ದಂ ಶ್ರುತ್ವಾಽರ್ಜುನಮಭಾಷತ ॥ 9 ॥
ಸಂಜಯ ಮೊದಲೇ ಓಡಿಹೋಗಿದ್ದ ಕೌರವ ಸೇನೆಯು ಪುನಃ ದೊಡ್ಡ ಶಬ್ದವನ್ನು ಮಾಡುವುದನ್ನು ಕೇಳಿದ ಯುಧಿಷ್ಠಿರನು ಅರ್ಜುನನನ್ನು ಕುರಿತು ಹೇಳಿದನು.
ಆಚಾರ್ಯೇ ನಿಹತೇ ದ್ರೋಣೇ ಧೃಷ್ಟದ್ಯುಮ್ನೇನ ಸಂಯುಗೇ |
ನಿಹತೇ ವಜ್ರಹಸ್ತೇನ ಯಥಾ ವೃತ್ರೇ ಮಹಾಸುರೇ ॥ 10 ॥
ನಾಶಂಸಂತ ಜಯಂ ಯುದ್ಧೇ ದೀನಾತ್ಮಾನೋ ಧನಂಜಯ |
ಆತ್ಮತ್ರಾಣೇ ಮತಿಂ ಕೃತ್ವಾ ಪ್ರಾದ್ರವನ್ ಕುರವೋ ಯಥಾ ॥ 11 ॥

ಎಲೈ ಧನಂಜಯನೇ, ದ್ರೋಣಾಚಾರ್ಯರು ರಣರಂಗದಲ್ಲಿ ವಜ್ರಾಯುಧಧಾರಿಯಾದ ಇಂದ್ರನಿಂದ ವೃತ್ರಾಸುರನು ಹತನಾದಂತೆ ಧೃಷ್ಟದ್ಯುಮ್ನನಿಂದ ಹತರಾಗುತ್ತಿರಲು, ದೀನಮನಸ್ಕರಾದ ಕೌರವರು ಯುದ್ಧದಲ್ಲಿ ಜಯವನ್ನು ಆಶಿಸಲಿಲ್ಲ. ಅವರು ತಮ್ಮನ್ನು ರಕ್ಷಿಸಿಕೊಳ್ಳುವುದರಲ್ಲಿ ಆಸಕ್ತರಾಗಿ ಸಿಕ್ಕಿದ ದಾರಿಯಲ್ಲಿ ಓಡಿಹೋದರು.
ಕೇಚಿದ್ ಭ್ರಾಂತೈ ರಥೈಸ್ತೂರ್ಣಂ ನಿಹತೈಃ ಪಾರ್ಷ್ಣಿಯಂತೃಭಿಃ |
ವಿಪತಾಕಧ್ವಜಚ್ಛತ್ರೈಃ ಪಾರ್ಥಿವಾಃ ಶೀರ್ಣಕೂಬರೈಃ ॥ 12 ॥
ಭಗ್ನನೀಡೈರಾಕುಲಾಶ್ವೈರಾರುಹ್ಯಾನ್ಯೇ ವಿಚೇತಸಃ |
ಭೀತಾಃ ಪಾದೈರ್ಹಯಾನ್ ಕೇಚಿತ್ ತ್ವರಯಂತಃ ಸ್ವಯಂ ರಥೈಃ ॥
ಯುಗಚಕ್ರಾಕ್ಷಭಗ್ನೈಶ್ಚ ದ್ರುತಾಃ ಕೇಚಿದ್ ಭಯಾತುರಾಃ ॥ 13 ॥
ಕೆಲವರು ಪಾರ್ಷ್ಣಿಸಾರಥಿಗಳು ಮೃತರಾದ ಪತಾಕೆ-ಧ್ವಜ-ಚಕ್ರಗಳಿಂದ ಹೀನವಾದ, ಕೂಬರಗಳು ಭಗ್ನವಾದ, ಪೀಠಗಳು ಭಗ್ನವಾದ ರಥಗಳಿಂದ ದಿಗ್ಭ್ರಾಂತರಾಗಿ ಓಡಿಹೋದರು. ಇನ್ನು ಕೆಲವರು ಅಶ್ವಗಳನ್ನು ಏರಿ ವಿಚೇತಸರಾಗಿ ಓಡಿಹೋದರು. ಭೀತರಾದ ಕೆಲವರು ಅಶ್ವಗಳನ್ನು ತಮ್ಮ ಪಾದಗಳಿಂದಲೇ ಪ್ರಚೋದಿಸುತ್ತಾ ಶೀಘ್ರವಾಗಿ ಓಡಿಹೋದರು. ಭಯಾತುರರಾದ ಕೆಲವರು ನೊಗ, ಚಕ್ರ ಮತ್ತು ಅಕ್ಷಗಳು ಮುರಿದ ರಥದಲ್ಲಿ ಓಡಿದರು.
ಗಜಸ್ಕಂಧೇಷು ಸಂಸ್ಯೂತಾ ನಾರಾಚೈಶ್ಚಲಿತಾಸನಾಃ |
ಶರಾರ್ತೈರ್ವಿದ್ರುತೈರ್ನಾಗೈರ್ಹೃತಾಃ ಕೇಚಿದ್ ದಿಶೋ ದಶ ॥ 14 ॥
ಆನೆಗಳ ಕೊರಳುಗಳಲ್ಲಿ ಗಟ್ಟಿಯಾಗಿ ಕುಳಿತ ಕೆಲವರು ನಾರಾಚಗಳಿಂದ ಹೊಡೆಯಲ್ಪಟ್ಟು (ನಾರಾಚಗಳಿಂದ ತಮ್ಮ ಆಸನಗಳು ನಾಶಗೊಳ್ಳುತ್ತಿರಲು) ಬಾಣಗಳಿಂದ ಪೀಡಿತವಾದ ಗಜಗಳಿಂದ ದಿಕ್ಕು-ದಿಕ್ಕುಗಳಿಗೆ ಎಳೆದೊಯ್ಯಲ್ಪಟ್ಟರು.
ವಿಶಸ್ತ್ರಕವಚಾಶ್ಚಾನ್ಯೇ ವಾಹನೇಭ್ಯಃ ಕ್ಷಿತಿಂ ಗತಾಃ |
ಸಂಛಿನ್ನಾ ನೇಮಿಷು ಗತಾ ಮೃದಿತಾಶ್ಚ ಹಯದ್ವಿಪೈಃ ॥ 15 ॥
ಇನ್ನು ಕೆಲವರು ಶಸ್ತ್ರ-ಕವಚಗಳಿಲ್ಲದೆ ತಮ್ಮ ವಾಹನಗಳಿಂದ ಕೆಳಗೆ ಹಾರಿ ಓಡುತ್ತಾ, ರಥಚಕ್ರಗಳಿಂದಲೂ, ಗಜಾಶ್ವಗಳಿಂದಲೂ ಮರ್ದಿತರಾದರು.
ಕ್ರೋಶಂತಸ್ತಾತ ಪುತ್ರೇತಿ ಪಲಾಯಂತೋಽಪರೇ ಭಯಾತ್ |
ನಾಭಿಜಾನಂತಿ ಚಾನ್ಯೋನ್ಯಂ ಕಶ್ಮಲಾಭಿಹತೌಜಸಃ ॥ 16 ॥
ಎಲೈ ತಂದೆಯೇ, ಎಲೈ ಪುತ್ರನೇ ಎಂದು ಕಿರುಚುತ್ತಾ ಭಯದಿಂದ ಓಡುತ್ತಿದ್ದ ಕೆಲವರು ವಿಷಾದದಿಂದ ತಮ್ಮ ಪರಾಕ್ರಮವನ್ನು ಕಳೆದುಕೊಂಡು ಓಡುತ್ತಿರುವವರು ಯಾರೆಂದು ಪರಸ್ಪರವಾಗಿ ತಿಳಿಯಲಿಲ್ಲ.
ಪುತ್ರಾನ್ ಪಿತೄನ್ ಸಖೀನ್ ಭ್ರಾತೄನ್ ಸಮಾರೋಪ್ಯ ದೃಢಕ್ಷತಾನ್ |
ಜಲೇನ ಕ್ಲೇದಯಂತ್ಯನ್ಯೇ ವಿಮುಚ್ಯ ಕವಚಾನ್ಯಪಿ ॥ 17 ॥
ಬಹಳ ಗಾಯಗೊಂಡ ಪುತ್ರರನ್ನೂ, ಪಿತೃಗಳನ್ನೂ, ಸ್ನೇಹಿತರನ್ನೂ, ಸಹೋದರರರನ್ನೂ ತೊಡೆಯ ಮೇಲಿಟ್ಟುಕೊಂಡು ಅವರ ಕವಚಗಳನ್ನು ತೆಗೆದುಕೊಂಡು ಇನ್ನು ಕೆಲವರು ನೀರನ್ನು ಚುಮುಕಿಸುತಿತದ್ದರು.
ಅವಸ್ಥಾಂ ತಾದೃಶೀಂ ಪ್ರಾಪ್ಯ ಹತೇ ದ್ರೋಣೇ ದ್ರುತಂ ಬಲಮ್ |
ಪುನರಾವರ್ತಿತಂ ಕೇನ ಯದಿ ಜಾನಾಸಿ ಶಂಸ ಮೇ ॥ 18 ॥
ದ್ರೋಣರು ಹತರಾದಾಗ ಅಂತಹ ಅವಸ್ಥೆಯನ್ನು ಹೊಂದಿ ಓಡಿಹೋದ ಸೈನ್ಯವು ಯಾರಿಂದ ಹಿಂದಿರುಗಿಸಲ್ಪಟ್ಟಿತು ಎಂದು ನಿನಗೆ ತಿಳಿದಿದ್ದರೆ ನನಗೆ ಹೇಳು.
ಹಯಾನಾಂ ಹೇಷತಾಂ ಶಬ್ದಃ ಕುಂಜರಾಣಾಂ ಚ ಬೃಂಹತಾಮ್ |
ರಥನೇಮಿಸ್ವನಶ್ಚಾತ್ರ ವಿಮಿಶ್ರಃ ಶ್ರೂಯತೇ ಮಹಾನ್ ॥ 19 ॥
ಏತೇ ಶಬ್ದಾ ಭೃಶಂ ತೀವ್ರಾಃ ಪ್ರವೃತ್ತಾಃ ಕುರುಸಾಗರೇ |
ಮುಹುರ್ಮುಹುರುದೀರ್ಯಂತಃ ಕಂಪಯಂತಿ ಹಿ ಮಾಮಕಾನ್ ॥
ಹೇಷಾರವವನ್ನು ಮಾಡುವ ಅಶ್ವಗಳ, ಬೃಂಹಣವನ್ನು ಮಾಡುವ ಗಜಗಳ, ಚಲಿಸುವ ರಥದ ಚಕ್ರಗಳ ನಾದಗಳು ಮಿಶ್ರಿತವಾಗಿ ದೊಡ್ಡದಾಗಿ ಕೇಳಿಬರುತ್ತಿವೆ. ಕೌರವ ಸೈನ್ಯಸಾಗರದಲ್ಲಿ ಉಂಟಾಗಿರುವ ಅತ್ಯಂತ ತೀವ್ರವಾದ ಈ ಶಬ್ದಗಳು ಪುನಃ ಪುನಃ ಕೇಳಿಬರುತ್ತಾ ನನ್ನ ಯೋಧರನ್ನು ನಡುಗಿಸುತ್ತಿವೆ.
ಯ ಏಷ ತುಮುಲಃ ಶಬ್ದಃ ಶ್ರೂಯತೇ ಲೋಮಹರ್ಷಣಃ |
ಸೇಂದ್ರಾನಪ್ಯೇಷ ಲೋಕಾಂಸ್ತ್ರೀನ್ ಭಂಜ್ಯಾದಿತಿ ಮತಿರ್ಮಮ ॥ 21 ॥
ಕೇಳಿಬರುತ್ತಿರುವ ರೋಮಾಂಚಕಾರಿಯಾದ ಈ ತೀವ್ರವಾದ ಶಬ್ದವು ಇಂದ್ರನಿಂದ ಸಹಿತವಾದ ಮೂರುಲೋಕಗಳನ್ನೂ ಭಗ್ನಗೊಳಿಸೀತು ಎಂದು ನನ್ನ ಅಭಿಪ್ರಾಯ.
ಮನ್ಯೇ ವಜ್ರಧರಸ್ಯೈಷ ನಿನಾದೋ ಭೈರವಸ್ವನಃ |
ದ್ರೋಣೇ ಹತೇ ಕೌರವಾರ್ಥಂ ವ್ಯಕ್ತಮಭ್ಯೇತಿ ವಾಸವಃ ॥ 22 ॥
ಈ ಭೈರವನಾದವು ಇಂದ್ರನದೆಂದು ನಾನು ತಿಳಿಯುತ್ತೇನೆ. ದ್ರೋಣರು ಹತರಾದುದರಿಂದ ಕೌರವರ ಸಲುವಾಗಿ ಇಂದ್ರನೇ ಸ್ಪಷ್ಟವಾಗಿ ಬರುತ್ತಿದ್ದಾನೆ.
ಪ್ರಹೃಷ್ಟಲೋಮಕೂಪಾಃ ಸ್ಮ ಸಂವಿಗ್ನರಥಕುಂಜರಾಃ |
ಧನಂಜಯ ಗುರುಂ ಶ್ರುತ್ವಾ ತತ್ರ ನಾದಂ ಸುಭೀಷಣಮ್ ॥ 23 ॥
ಕ ಏಷ ಕೌರವಾನ್ ದೀರ್ಣಾನವಸ್ಥಾಪ್ಯ ಮಹಾರಥಃ |

ನಿವರ್ತಯತಿ ಯುದ್ಧಾರ್ಥಂ ಮೃಧೇ ದೇವೇಶ್ವರೋ ಯಥಾ ॥ 24 ॥
ಎಲೈ ಅರ್ಜುನನೇ, ಭಯಂಕರವಾದ ಈ ದೊಡ್ಡದಾದ ನಾದವನ್ನು ಕೇಳಿ ನನ್ನ ರೋಮಕೂಪಗಳು ಹೆದರಿಕೆಯಿಂದ ರೋಮಾಂಚಗೊಂಡಿವೆ. ರಥದ ಅಶ್ವಗಳು ಮತ್ತು ಗಜಗಳು ಭಯದಿಂದ ಕೂಡಿವೆ. ಯಾವ ಮಹಾರಥನು ಭಗ್ನವಾದ ಈ ಕೌರವರನ್ನು ದೇವೇಶ್ವರನಂತೆ ಯುದ್ಧಕ್ಕೆ ಹಿಂದಿರುಗಿಸಿ ರಣರಂಗದಲ್ಲಿ ಬರುತ್ತಿದ್ದಾನೆ?
ಅರ್ಜುನಃ
ಉದ್ಯಮ್ಯಾತ್ಮಾನಮುಗ್ರಾಯ ಕರ್ಮಣೇ ಧೈರ್ಯಮಾಸ್ಥಿತಾಃ |
ಧಮಂತಿ ಕೌರವಾಃ ಶಂಖಾನ್ಯಸ್ಯ ವೀರ್ಯಮುಪಾಶ್ರಿತಾಃ ॥ 25 ॥
ಯತ್ರ ತೇ ಸಂಶಯೋ ರಾಜನ್ನ್ಯಸ್ತಶಸ್ತ್ರೇ ಗುರೌ ಹತೇ |
ಧಾರ್ತರಾಷ್ಟ್ರಾನವಸ್ಥಾಪ್ಯ ಕ ಏಷ ನದತೀತಿ ಹ ॥ 26 ॥
ಹ್ರೀಮಂತಂ ತಂ ಮಹಾಬಾಹುಂ ಮತ್ತದ್ವಿರದಗಾಮಿನಮ್ |
ವ್ಯಾಖ್ಯಾಸ್ಯಾಮ್ಯುಗ್ರಕರ್ಮಾಣಂ ಕುರೂಣಾಮಭಯಂಕರಮ್ ॥ 27 ॥
ಅರ್ಜುನ ತಮ್ಮನ್ನು ಉಗ್ರವಾದ ಕಾರ್ಯವನ್ನು ಮಾಡುವುದಕ್ಕೆ ಸಿದ್ಧರನ್ನಾಗಿ ಮಾಡಿಕೊಂಡು ಧೈರ್ಯವನ್ನು ಅವಲಂಬಿಸಿ, ಯಾರ ಪರಾಕ್ರಮವನ್ನು ಆಶ್ರಯಿಸಿ ಕೌರವರು ಶಂಖವನ್ನು ಊದುತಿತದ್ದಾರೆಯೋ, ಎಲೈ ರಾಜನೇ, ಶಸ್ತ್ರವನ್ನು ಹಿಡಿದ ಗುರುಗಳು ಹತರಾದ ಮೇಲೆ ಕೌರವರನ್ನು ನಿಲ್ಲಿಸಿ ಯಾವನು ಗರ್ಜನೆಯನ್ನು ಮಾಡುತ್ತಿದ್ದಾನೆ ಎಂಬ ನಿನ್ನ ಸಂಶಯವು ಎಲ್ಲಿದೆಯೋ ಅಂತಹ ಮತ್ತಗಜಗಾಮಿಯಾದ, ನಾಚಿಕೆಯಿಂದ ಕೂಡಿದ, ಉಗ್ರಕರ್ಮನಾದ, ಕುರುಗಳಿಗೆ ಅಭಯಂಕರನಾದ ಪುರುಷನನ್ನು ನಿನಗೆ ಹೇಳುವೆನು.
ಯಸ್ಮಿನ್ ಜಾತೇ ದದೌ ದ್ರೋಣೋ ಗವಾಂ ದಶಶತಂ ಧನಮ್ |
ಬ್ರಾಹ್ಮಣೇಭ್ಯೋ ಮಹಾರ್ಹೇಭ್ಯಃ ಸೋಽಶ್ವತ್ಥಾಮೈಷ ಗರ್ಜತಿ ॥ 28 ॥
ಯಾರು ಜನಿಸಿದಾಗ ದ್ರೋಣರು ಬಹಳ ಯೋಗ್ಯರಾದ ಬ್ರಾಹ್ಮಣರಿಗೆ ಸಾವಿರ ಗೋವುಗಳನ್ನು ಮತ್ತು ಧನವನ್ನು ನೀಡಿದರೋ ಅಂತಹ ಅಶ್ವತ್ಥಾಮರು ಗರ್ಜಿಸುತ್ತಿದ್ದಾರೆ.
ಜಾತಮಾತ್ರೇಣ ವೀರೇಣ ಯೇನೋಚ್ಚೈಃಶ್ರವಸಾ ಇವ |
ಹೇಷತಾ ಕಂಪಿತಾ ಭೂಮಿರ್ಲೋಕಾಶ್ಚ ಸಕಲಾಸ್ತ್ರಯಃ ॥ 29 ॥
ತಚ್ಛ್ರುತ್ವಾಂತರ್ಹಿತಂ ಭೂತಂ ನಾಮ ಚಾಸ್ಯಾಕರೋತ್ತದಾ |
ಅಶ್ವತ್ಥಾಮೇತಿ ಸೋಽದ್ಯೈಷ ಶೂರೋ ನದತಿ ಪಾಂಡವ ॥ 30 ॥
ಯಾವ ವೀರರಾದ ಅವರು ಜನಿಸಿದ ತಕ್ಷಣವೇ ಉಚ್ಚೈಃಶ್ರವಸ್ಸಿನಂತೆ ಹೇಷಾರವವನ್ನು ಮಾಡಿ ಭೂಕಂಪವನ್ನು ಮತ್ತು ಮೂರುಲೋಕಗಳ ಕಂಪವನ್ನು ಉಂಟುಮಾಡಿದರೋ, ಯಾವ ಆ ಶಬ್ದವನ್ನು ಕೇಳಿ ಅದೃಶ್ಯವಾದ ಭೂತಗಳು ಅಶ್ವತ್ಥಾಮರೆಂದು ನಾಮಕರಣ ಮಾಡಿದವೋ, ಎಲೈ ಪಾಂಡವನೇ, ಅಂತಹ ಶೂರರಾದ ಅಶ್ವತ್ಥಾಮರು ಈ ದಿನ ಗರ್ಜಿಸುತ್ತಿದ್ದಾರೆ.
ಯೋಽದ್ಯಾನಾಥ ಇವಾಕ್ರಮ್ಯ ಪಾರ್ಷತೇನ ಹತಸ್ತಥಾ |
ಕರ್ಮಣಾ ಸುನೃಶಂಸೇನ ತಸ್ಯ ನಾಥೋ ವ್ಯವಸ್ಥಿತಃ ॥ 31 ॥
ಯಾವ ದ್ರೋಣರು ಅನಾಥರಂತೆ ಧೃಷ್ಟದ್ಯುಮ್ನನಿಂದ ಆಕ್ರಮಿಸಲ್ಪಟ್ಟು ಹತರಾದರೋ ಅಂತಹ ಅತ್ಯಂತ ಕ್ರೂರಕರ್ಮದ ಫಲವಾಗಿ ಈ ದಿನ ನಾಥರಾದ ಅಶ್ವತ್ಥಾಮರು ಬರುತ್ತಿದ್ದಾರೆ.
ಗುರುಂ ಮೇ ಯತ್ರ ಪಾಂಚಾಲ್ಯಃ ಕೇಶಪಕ್ಷೇ ಪರಾಮೃಶತ್ |
ತನ್ನ ಜಾತು ಕ್ಷಮೇದ್ ದ್ರೌಣಿರ್ಜಾನನ್ ಪೌರುಷಮಾತ್ಮನಃ ॥ 32 ॥
ನನ್ನ ಗುರುಗಳಾದ ದ್ರೋಣರನ್ನು ಪಾಂಚಾಲ್ಯನಾದ ಧೃಷ್ಟದ್ಯುಮ್ನನು ಕೇಶಪಕ್ಷಗಳಲ್ಲಿ ಏನು ಹಿಡಿದನೋ ಅದನ್ನು, ತಮ್ಮ ಪರಾಕ್ರಮವನ್ನು ತಿಳಿದ ಅಶ್ವತ್ಥಾಮರು ಎಂದೂ ಕ್ಷಮಿಸಲಾರರು.
ಉಪಚೀರ್ಣೋ ಗುರುರ್ಮಿಥ್ಯಾ ಭವತಾ ರಾಜ್ಯಕಾರಣಾತ್ |
ಧರ್ಮಜ್ಞೇನ ಸತಾ ನಾಮ ಸೋಽಧರ್ಮಃ ಸುಮಹಾನ್ ಕೃತಃ ॥33॥
ರಾಜ್ಯದ ಪ್ರಾಪ್ತಿಯ ಕಾರಣದಿಂದ ನೀನು ಗುರುಗಳಿಗೆ ಮಿಥ್ಯಾವಚನವನ್ನು ಮಾತನಾಡಿದೆ. ಧರ್ಮಜ್ಞನಾದ ನೀನು ದೊಡ್ಡ ಅಧರ್ಮವನ್ನುಮಾಡಿದೆ.
ಸರ್ವಧರ್ಮೋಪಪನ್ನೋಽಯಂ ಮಮ ಶಿಷ್ಯಶ್ಚ ಪಾಂಡವಃ |
ನಾಯಂ ವಕ್ಷ್ಯತಿ ಮಿಥ್ಯೇತಿ ಪ್ರತ್ಯಯಂ ಕೃತವಾಂಸ್ತ್ವಯಿ ॥ 34 ॥
ಗುರುಗಳು, ಧರ್ಮರಾಜನು ಸರ್ವಧರ್ಮೋಪಪನ್ನನಾದವನು. ನನ್ನ ಶಿಷ್ಯನಾದವನು. ಅವನು ಸುಳ್ಳನ್ನು ಹೇಳುವುದಿಲ್ಲ ಎಂದು ನಿನ್ನನ್ನು ನಂಬಿದರು.
ಸ ಸತ್ಯಕಂಚುಕಂ ನಾಮ ಪ್ರವಿಷ್ಟೇನ ತತೋಽನೃತಮ್ |
ಆಚಾರ್ಯ ಉಕ್ತೋ ಭವತಾ ಹತಃ ಕುಂಜರ ಇತ್ಯುತ ॥ 35 ॥
ಅಂತಹ ನೀನು ಆಚಾರ್ಯರನ್ನು ಕುರಿತು ಸತ್ಯದ ಕಂಚುಕವನ್ನು ಧರಿಸಿದ ಅನೃತ(ಸುಳ್ಳು)ವನ್ನು ಹೇಳಿದೆ. ಹತಃ ಕುಂಜರಃ ಎಂದೂ ಹೇಳಿದೆ.
ತತಃ ಶಸ್ತ್ರಂ ಸಮುತ್ಸೃಜ್ಯ ನಿರ್ಮಮೋ ಗತಚೇತನಃ |
ಆಸೀತ್ ಸ ವಿಹ್ವಲೋ ರಾಜನ್ ಯಥಾ ದೃಷ್ಟಸ್ತ್ವಯಾ ವಿಭುಃ ॥ 36॥
ಎಲೈ ರಾಜನೇ, ಆಗ ಶಸ್ತ್ರವನ್ನು ಬಿಸುಟು, ಅಹಂಕಾರವನ್ನು ತೊರೆದು, ವಿಹ್ವಲರಾಗಿ, ಲೋಕಜ್ಞಾನವನ್ನು ತೊರೆದು ಅವರು

ಕುಳಿತರು. ಗುರುಗಳಾದ ಅವರು ಹಾಗೆ ಕುಳಿತಿದುದನ್ನು ನೀನು ನೋಡಿದ್ದೀಯೆ?
ಸ ತು ಶೋಕೇನ ಚಾವಿಷ್ಟೋ ವಿಮುಖಃ ಪುತ್ರವತ್ಸಲಃ |
ಶಾಶ್ವತಂ ಧರ್ಮಮುತ್ಸೃಜ್ಯ ಗುರುಃ ಶಿಷ್ಯೇಣ ಘಾತಿತಃ ॥ 37 ॥
ಪುತ್ರವತ್ಸಲರಾದ ಅವರು ಶೋಕದಿಂದ ಕೂಡಿ ಯುದ್ಧವಿಮುಖರಾದರು. ಶಿಷ್ಯನಾದ ಧೃಷ್ಟದ್ಯುಮ್ನನು ಶಾಶ್ವತವಾದ ಧರ್ಮವನ್ನು ತ್ಯಜಿಸಿ ಅವರನ್ನು ಕೊಂದನು.
ನ್ಯಸ್ತಶಸ್ತ್ರಮಧರ್ಮೇಣ ಘಾತಯಿತ್ವಾ ಗುರುಂ ಭವಾನ್ |
ರಕ್ಷತ್ವಿದಾನೀಂ ಸಾಮಾತ್ಯೋ ಯದಿ ಶಕ್ನೋಷಿ ಪಾರ್ಷತಮ್ ॥ 38 ॥
ಶಸ್ತ್ರಸಂನ್ಯಾಸವನ್ನು ಮಾಡಿದ ಗುರುಗಳನ್ನು ಅಧರ್ಮದಿಂದ ಕೊಲ್ಲಿಸಿದ ನೀನು ಈಗ ನಿನ್ನ ಮಂತ್ರಿಗಳ ಜೊತೆಯಲ್ಲಿ ಸಾಧ್ಯವಾದರೆ ಧೃಷ್ಟದ್ಯುಮ್ನನನ್ನು ರಕ್ಷಿಸುವವನಾಗು.
ಗ್ರಸ್ತಮಾಚಾರ್ಯಪುತ್ರೇಣ ಕ್ರುದ್ಧೇನ ಹತಬಂಧುನಾ |
ಸರ್ವೇ ವಯಂ ಪರಿತ್ರಾತುಂ ನ ಶಕ್ಷ್ಯಾಮೋಽದ್ಯ ಪಾರ್ಷತಮ್ ॥39॥
ತಮ್ಮ ತಂದೆಯನ್ನು ಕಳೆದುಕೊಂಡು ಕ್ರುದ್ಧರಾದ, ಆಚಾರ್ಯಪುತ್ರರಾದ ಅಶ್ವತ್ಥಾಮರಿಂದ ಗ್ರಸ್ತನಾದ ಧೃಷ್ಟದ್ಯುಮ್ನನನ್ನು ನಾವೆಲ್ಲರೂ ಸೇರಿದರೂ ರಕ್ಷಿಸಲಾರೆವು.
ಸೌಹಾರ್ದಂ ಸರ್ವಭೂತೇಷು ಯಃ ಕರೋತ್ಯತಿಮಾತ್ರಶಃ |
ಸೋಽದ್ಯ ಕೇಶಗ್ರಹಂ ಶ್ರುತ್ವಾ ಪಿತುರ್ಧಕ್ಷ್ಯತಿ ನೋ ರಣೇ ॥ 40 ॥
ಯಾವ ಅಶ್ವತ್ಥಾಮರು ಎಲ್ಲ ಭೂತಗಳಲ್ಲಿಯೂ ಅತ್ಯಂತ ಸೌಹಾರ್ದವನ್ನು ಮಾಡುತ್ತಾರೆಯೋ ಅಂತಹ ಅವರು ತನ್ನ ತಂದೆಯು ಕೇಶಗ್ರಹವನ್ನು ಹೊಂದಿದರೆಂದು ತಿಳಿದು ಈ ದಿನ ನಮ್ಮನ್ನು ಯುದ್ಧದಲ್ಲಿ ದಹಿಸುವರು.
ವಿಕ್ರೋಶಮಾನೇ ಹಿ ಮಯಿ ಭೃಶಮಾಚಾರ್ಯಗೃದ್ಧಿನಿ |
ಅವಕೀರ್ಯ ಸ್ವಧರ್ಮಂ ಹಿ ಶಿಷ್ಯೇಣ ನಿಹತೋ ಗುರುಃ ॥ 41 ॥
ಆಚಾರ್ಯರ ಮೇಲೆ ಭಕ್ತಿಯುಳ್ಳ ನಾನು ತೀವ್ರವಾಗಿ ಕಿರುಚುತ್ತಿದ್ದರೂ ತನ್ನ ಕ್ಷತ್ರಿಯಧರ್ಮವನ್ನು ಚೆಲ್ಲಿ ಶಿಷ್ಯನಾದ ಧೃಷ್ಟದ್ಯುಮ್ನನು ಗುರುಗಳನ್ನು ಕೊಂದನು.
ಯದಾ ಗತಂ ವಯೋ ಭೂಯಃ ಶಿಷ್ಟಮಲ್ಪತರಂ ಚ ನಃ |
ತಸ್ಯೇದಾನೀಂ ವಿಕಾರೋಽಯಮಧರ್ಮೋ ಯತ್ಕೃತೋ ಮಹಾನ್ ॥
ನಮ್ಮ ಆಯುಸ್ಸಿನಲ್ಲಿ ಬಹಳ ಭಾಗವು ಕಳೆದುಹೋಗಿ ಸ್ವಲ್ಪವೇ ಭಾಗ ಉಳಿದಿದೆ. ನಾವು ಮಾಡಿದ ಈ ದೊಡ್ಡ ಅಧರ್ಮವು ಉಳಿದ ಅಲ್ಪವಾದ ಆಯುಸ್ಸಿಗೆ ವಿರುದ್ಧವಾದುದು (ವಿರುದ್ಧವಾದ ಆಕಾರವನ್ನು ಹೊಂದಿದುದು).
ಪಿತೇವ ನಿತ್ಯಂ ಸೌಹಾರ್ದಾತ್ ಪಿತೇವ ಸ ಹಿ ಧರ್ಮತಃ |
ಸೋಽಲ್ಪಕಾಲಸ್ಯ ರಾಜ್ಯಸ್ಯ ಕಾರಣಾನ್ನಿಹತೋ ಗುರುಃ ॥ 43 ॥
ದ್ರೋಣರು ತಮ್ಮ ಸೌಹಾರ್ದದಿಂದ ನಮಗೆ ತಂದೆಯಂತೆ ಇದ್ದರು. ಧರ್ಮದಿಂದಲೂ ಸಹ ಅವರು ತಂದೆಯಂತಿದ್ದರು. ಅಂತಹವರನ್ನು ಅಲ್ಪಕಾಲದ ರಾಜ್ಯದ ಕಾರಣದಿಂದ ಕೊಲ್ಲಿಸಲಾಯಿತು.
ಧೃತರಾಷ್ಟ್ರೇಣ ಭೀಷ್ಮಾಯ ದ್ರೋಣಾಯ ಚ ವಿಶಾಂಪತೇ |
ವಿಸೃಷ್ಟಾ ಪೃಥಿವೀ ಸರ್ವಾ ಸಹ ಪುತ್ರೈಶ್ಚ ತತ್ಪರೈಃ ॥ 44 ॥
ಎಲೈ ರಾಜನೇ, ಧೃತರಾಷ್ಟ್ರನು ಭೀಷ್ಮರಿಗೆ ಮತ್ತು ದ್ರೋಣರಿಗೆ ತನ್ನ ಪುತ್ರನಿಂದ ಸಹಿತವಾದ ಎಲ್ಲಾ ಭೂಮಿಯನ್ನು ಕೊಟ್ಟಿದ್ದನು.
ಸ ಪ್ರಾಪ್ಯ ತಾದೃಶೀಂ ವೃತ್ತಿಂ ಸತ್ಕೃತಃ ಸತತಂ ಪರೈಃ |
ಅವೃಣೀತ ಸದಾ ಪುತ್ರಾನ್ಮಾಮೇವಾಭ್ಯಧಿಕಂ ಗುರುಃ ॥ 45 ॥
ದ್ರೋಣರು ಅಂತಹ ವೃತ್ತಿಯನ್ನು ಪಡೆದು, ಸತತವಾಗಿ ಪರರಿಂದ ಸತ್ಕೃತರಾಗಿ ಯಾವಾಗಲೂ ಅವರ ಪುತ್ರರಿಗಿಂತ ನನ್ನನ್ನೇ ಅಧಿಕವಾಗಿ ಪ್ರೀತಿಸುತ್ತಿದ್ದರು.
ಅಕ್ಷೀಯಮಾಣೋ ನ್ಯಸ್ತಾಸ್ತ್ರಸ್ತ್ವದ್ವಾಕ್ಯೇನಾಹವೇ ಹತಃ |
ನ ತ್ವೇನಂ ಯುದ್ಧ್ಯಮಾನಂ ವೈ ಹನ್ಯಾದಪಿ ಶತಕ್ರತುಃ ॥ 46 ॥
ತಮ್ಮ ಬಲವನ್ನು ಎಂದೂ ಕಳೆದುಕೊಳ್ಳದ ಅವರು ಶಸ್ತ್ರಸಂನ್ಯಾಸವನ್ನು ಮಾಡಿ ನಿನ್ನ ಮಾತಿನಿಂದ ರಣರಂಗದಲ್ಲಿ ಹತರಾದರು. ಅವರು ಯುದ್ಧವನ್ನೇ ಮಾಡಿರುತ್ತಿದ್ದರೆ ಇಂದ್ರನೂ ಅವರನ್ನು ಕೊಲ್ಲಲು ಸಾಧ್ಯವಿರುತ್ತಿರಲಿಲ್ಲ.
ತಸ್ಯಾಚಾರ್ಯಸ್ಯ ವೃದ್ಧಸ್ಯ ದ್ರೋಹೋ ನಿತ್ಯೋಪಕಾರಿಣಃ |
ಕೃತೋ ಹ್ಯನಾರ್ಯೈರಸ್ಮಾಭೀ ರಾಜ್ಯಾರ್ಥೇ ಲಘುಬುದ್ಧಿಭಿಃ ॥ 47 ॥
ರಾಜ್ಯದ ಆಸೆಯಿಂದ ಅಲ್ಪಬುದ್ಧಿಯುಳ್ಳವರಾದ, ಅನಾರ್ಯರೂ ಆದ ನಾವು ನಿತ್ಯವೂ ನಮಗೆ ಉಪಕಾರವನ್ನು ಮಾಡುವ, ವೃದ್ಧರಾದ ಆಚಾರ್ಯರಿಗೆ ದ್ರೋಹವನ್ನು ಮಾಡಿದ್ದೇವೆ.
ಪುತ್ರಾನ್ ಭ್ರಾತೄನ್ ಪಿತೄನ್ ದಾರಾನ್ ಜೀವಿತಂ ಚೈವ ವಾಸವಿಃ |
ತ್ಯಜೇತ್ ಸರ್ವಂ ಮಮ ಪ್ರೇಮ್ಣಾ ಜಾನಾತ್ಯೇವಂ ಹಿ ಮೇ ಗುರುಃ ॥
ಇಂದ್ರನ ಪುತ್ರನಾದ ಅರ್ಜುನನು ನನ್ನ ಮೇಲಿನ ಪ್ರೀತಿಯಿಂದ ಪುತ್ರರನ್ನೂ, ಸಹೋದರರನ್ನೂ, ಪಿತೃಗಳನ್ನೂ, ಪತಿಗಳನ್ನೂ, ಸಹೋದರರನ್ನೂ, ತನ್ನ ಜೀವಿತವನ್ನೂ ತೊರೆದಾನು ಎಂದು ನನ್ನ ಗುರುಗಳು ತಿಳಿದಿದ್ದರು.
ಸ ಮಯಾ ರಾಜ್ಯಕಾಮೇನ ಹನ್ಯಮಾನೋಽಪ್ಯುಪೇಕ್ಷಿತಃ |
ತಸ್ಮಾದವಾಕ್ಶಿರಾ ರಾಜನ್ ಪ್ರಾಪ್ತೋಽಸ್ಮಿ ನರಕಂ ವಿಭೋ ॥ 49 ॥

ಅಂತಹ ಅವರು ಹತರಾಗುತ್ತಿದ್ದಾಗ ರಾಜ್ಯದ ಆಸೆಯಿಂದ ನಾನು ಉದಾಸೀನ ಮಾಡಿದೆ. ಆದ್ದರಿಂದ ಎಲೈ ರಾಜನೇ, ವಿಭುವೇ, ನಾನು ತಲೆಕೆಳಗಾಗಿ ನರಕವನ್ನು ಸೇರಿದ್ದೇನೆ.
ಬ್ರಾಹ್ಮಣಂ ವೃದ್ಧಮಾಚಾರ್ಯಂ ನ್ಯಸ್ತಶಸ್ತ್ರಂ ಯಥಾ ಮುನಿಮ್ |
ಘಾತಯಿತ್ವಾದ್ಯ ರಾಜ್ಯಾರ್ಥೇ ಮೃತಂ ಶ್ರೇಯೋ ನ ಜೀವಿತಮ್ ॥50॥
ಬ್ರಾಹ್ಮಣರೂ, ವೃದ್ಧರೂ, ಆಚಾರ್ಯರೂ, ಶಸ್ತ್ರಸಂನ್ಯಾಸವನ್ನು ಮಾಡಿದವರೂ, ಋಷಿಗಳಂತೆ ಇದ್ದವರೂ ಆದ ದ್ರೋಣರನ್ನು ರಾಜ್ಯದ ಸಲುವಾಗಿ ಕೊಲ್ಲಿಸಿ ಬದುಕಿರುವುದಕ್ಕಿಂತ ಮರಣವೇ ಶ್ರೇಯಸ್ಕರವಾದುದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಷ್ಟಸಪ್ತತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ
ಭೀಮಸೇನನಿಂದ ಅರ್ಜುನನನ್ನು ನಿಂದಿಸಿ ಧರ್ಮರಾಜನ ಸಮಾಶ್ವಾಸನೆ. ಧೃಷ್ಟದ್ಯುಮ್ನನಿಂದ ತನ್ನ ಸಮರ್ಥನೆ.
ಸಂಜಯಃ
ಅರ್ಜುನಸ್ಯ ವಚಃ ಶ್ರುತ್ವಾ ನೋಚುಸ್ತತ್ರ ಮಹಾರಥಾಃ |
ಅಪ್ರಿಯಂ ವಾ ಪ್ರಿಯಂ ವಾಪಿ ಮಹಾರಾಜ ಧನಂಜಯಮ್ ॥ 1 ॥
ಸಂಜಯ ಎಲೈ ಮಹಾರಾಜನೇ, ಅರ್ಜುನನ ಮಾತುಗಳನ್ನು ಕೇಳಿ ಅಲ್ಲಿ ಮಹಾರಥರು ಅರ್ಜುನನನ್ನು ಕುರಿತು ಪ್ರಿಯವಾಗಲೀ, ಅಪ್ರಿಯವಾಗಲೀ ಏನನ್ನೂ ಮಾತನಾಡಲಿಲ್ಲ.
ತತಃ ಕ್ರುದ್ಧೋ ಮಹಾಬಾಹುರ್ಭೀಮಸೇನೋಽಭ್ಯಭಾಷತ |
ಉತ್ಸ್ಮಯನ್ನಿವ ಕೌಂತೇಯಮರ್ಜುನಂ ಭರತರ್ಷಭ ॥ 2 ॥
ಆಗ ಎಲೈ ಭರತರ್ಷಭನೇ, ಕೋಪಗೊಂಡ ಮಹಾಬಾಹುವಾದ ಭೀಮಸೇನನು ಅರ್ಜುನನನ್ನು ನೋಡಿ ನಗುತ್ತಾ ಮಾತನಾಡಿದನು.
ಮುನಿರ್ಯಥಾಽರಣ್ಯಗತೋ ಭಾಷಸೇ ಧರ್ಮಸಂಹಿತಮ್ |
ನ್ಯಸ್ತದಂಡೋ ಯಥಾ ಪಾರ್ಥ ಬ್ರಾಹ್ಮಣಃ ಸಂಶಿತವ್ರತಃ ॥ 3 ॥
ಎಲೈ ಪಾರ್ಥನೇ, ಅರಣ್ಯಗತನಾದ ಮುನಿಯಂತೆ, ಸಂನ್ಯಾಸವನ್ನು ತೆಗೆದುಕೊಂಡ ವ್ರತಶೀಲನಾದ ಬ್ರಾಹ್ಮಣನಂತೆ, ಧರ್ಮದ ಮಾತುಗಳನ್ನು ಆಡುತ್ತಿದ್ದೀಯೆ.
ಕ್ಷತಾತ್ ತ್ರಾತಾ ಕ್ಷತಾಜ್ಜೀವನ್ ಕ್ಷಾಂತಃಸ್ತ್ರೀಷ್ವಪಿ ಸಾಧುಷು |
ಕ್ಷತ್ರಿಯಃ ಕ್ಷಿತಿಮಾಪ್ನೋತಿ ಕ್ಷಿಪ್ರಂ ಧರ್ಮಂ ಯಶಃ ಶ್ರಿಯಮ್ ॥ 4 ॥
ತನ್ನ ಸೈನ್ಯವನ್ನು ಗಾಯದಿಂದ ರಕ್ಷಿಸುತ್ತಾನೆ. ಪರಸೈನ್ಯದಲ್ಲಿ ಗಾಯವನ್ನು ಮಾಡುತ್ತಾನೆ. ಸ್ತ್ರೀಯರಲ್ಲಿ ಮತ್ತು ಸಜ್ಜನರಲ್ಲಿ ಸಹನೆಯನ್ನು ರಕ್ಷಿಸುತ್ತಾನೆ ಎಂಬ ವ್ಯುತ್ಪತ್ತಿಯಿಂದ ಕ್ಷತ್ರಿಯ ಎಂಬ ಶಬ್ದವು ಹೇಳಲ್ಪಡುತ್ತದೆ. (ಕ್ಷತದಿಂದ ಜೀವಿಸುತ್ತಾನೆ ಎಂಬುದು ಒಟ್ಟು ಅಭಿಪ್ರಾಯ).
ಸ ಭವಾನ್ ಕ್ಷತ್ರಿಯಗುಣೈರ್ಯುಕ್ತಃ ಸರ್ವೈಃ ಕುಲೋದ್ವಹಃ |
ಅವಿಪಶ್ಚಿದ್ ಯಥಾ ವಾಕ್ಯಂ ವ್ಯಾಹರನ್ ನಾದ್ಯ ಶೋಭಸೇ ॥ 5 ॥
ಅಂತಹ ಕ್ಷತ್ರಿಯನು ಶೀಘ್ರವಾಗಿ ಭೂಮಿಯನ್ನೂ, ಧರ್ಮವನ್ನೂ, ಯಶಸ್ಸನ್ನೂ ಮತ್ತು ಸಂಪತ್ತನ್ನೂ ಪಡೆಯುತ್ತಾನೆ. ನೀನು ಅಂತಹ ಎಲ್ಲ ಕ್ಷತ್ರಿಯಗುಣಗಳಿಂದ ಯುಕ್ತನಾಗಿ ನಮ್ಮ ಕುಲೋದ್ಧಾರಕನಾಗಿ, ಈ ದಿನ ಅಜ್ಞಾನಿಯಂತೆ ಮಾತನಾಡುವುದು ಶೋಭಿಸುವುದಿಲ್ಲ.
ಪರಾಕ್ರಮಸ್ತೇ ಕೌಂತೇಯ ಶಕ್ರಸ್ಯೇವ ಶಚೀಪತೇಃ |
ನ ಚಾತಿವರ್ತಸೇ ಧರ್ಮಂ ವೇಲಾಮಿವ ಮಹೋದಧಿಃ ॥ 6 ॥
ಎಲೈ ಕೌಂತೇಯನೇ, ನಿನ್ನ ಪರಾಕ್ರಮವು ಶಚೀಪತಿಯಾದ ಇಂದ್ರನ ಪರಾಕ್ರಮದಂತಿದೆ. ಸಮುದ್ರವು ತೀರವನ್ನು ಮೀರದಂತೆ ನೀನು ಧರ್ಮವನ್ನುು ಮೀರುವವನಲ್ಲ.
ನ ಪೂಜಯೇತ್ತ್ವಾ ಕೋಽನ್ವದ್ಯ ಯತ್ ತ್ರಯೋದಶವಾರ್ಷಿಕಮ್ |
ಅಮರ್ಷಂ ಪೃಷ್ಠತಃ ಕೃತ್ವಾ ಧರ್ಮಮೇವಾಭಿಕಾಂಕ್ಷಸೇ ॥ 7 ॥
ಹದಿಮೂರು ವರ್ಷಗಳ ಕಾಲ ಅನುಭವಿಸಿದ ಕ್ಲೇಶವನ್ನು ಹಿಂದೆ ಮಾಡಿ ಧರ್ಮವನ್ನೇ ಬಯಸುವ ನಿನ್ನನ್ನು ಯಾವನೂ ಪೂಜಿಸುವುದಿಲ್ಲ.
ದಿಷ್ಟ್ಯಾ ತಾತ ಮನಸ್ತೇಽದ್ಯ ಸ್ವಧರ್ಮಮನುವರ್ತತೇ |
ಆನೃಶಂಸ್ಯೇ ಚ ತೇ ದಿಷ್ಟ್ಯಾ ಬುದ್ಧಿಃ ಸತತಮಚ್ಯುತ ॥ 8 ॥
ಎಲೈ ಪ್ರೀತಿಪಾತ್ರನೇ, ದೇವರ ದಯದಿಂದ ಈ ದಿನ ನಿನ್ನ ಮನಸ್ಸು ಧರ್ಮವನ್ನು ಅನುಸರಿಸುತ್ತಿದೆ. ದೇವರ ದಯದಿಂದಲೇ ನಿನ್ನ ಬುದ್ಧಿಯು ಎಲೈ ಅಚ್ಯುತನೇ, ಯಾವಾಗಲೂ ಮಾರ್ದವದಲ್ಲಿ ರತವಾಗಿದೆ.
ಯತ್ತು ಧರ್ಮಪ್ರವತ್ತಸ್ಯ ಹೃತಂ ರಾಜ್ಯಮಧರ್ಮತಃ |
ದ್ರೌಪದೀ ಚ ಪರಾಮೃಷ್ಟಾ ಸಭಾಮಾನೀಯ ಶತ್ರುಭಿಃ ॥ 9 ॥
ವನಂ ಪ್ರವ್ರಾಜಿತಾಶ್ಚಾಸ್ಮ ವಲ್ಕಲಾಜಿನವಾಸಸಃ |

ಅನರ್ಹಮಾಣಾಸ್ತಂ ಭಾವಂ ತ್ರಯೋದಶ ಸಮಾಃ ಪರ್ಯೈಃ ॥ 10 ॥
ಏತಾನ್ಯಮರ್ಷಸ್ಥಾನಾನಿ ಮರ್ಷಿತಾನಿ ತ್ವಯಾಽನಘ |
ಕ್ಷತ್ರಧರ್ಮಪ್ರಸಕ್ತೇನ ಸರ್ವಮೇತದನುಷ್ಠಿತಮ್ ॥ 11 ॥
ಧರ್ಮನಿಷ್ಠರಾದ ನಾವು ಅಧರ್ಮದಿಂದ ಏನು ರಾಜ್ಯವನ್ನು ಕಳೆದುಕೊಂಡೆವೋ, ಶತ್ರುಗಳು ಸಭೆಗೆ ಎಳೆದುತಂದು ದ್ರೌಪದಿಯನ್ನು ಏನು ಅವಮಾನಗೊಳಿಸಿದರೋ, ಅರಣ್ಯವಾಸಕ್ಕೆ ಅನರ್ಹರಾದ ನಾವು ಕೃಷ್ಣಾಜಿನ-ನಾರುಮಡಿಗಳನ್ನುಟ್ಟು ಹದಿಮೂರು ವರ್ಷಗಳ ಕಾಲ ಶತ್ರುಗಳಿಂದ ಏನು ಕಾಡಿಗೆ ಕಳುಹಿಸಲ್ಪಟ್ಟೆವೋ, ಎಲೈ ಅನಘನೇ, ಅಂತಹ ರೋಷದ ಕಾರಣಗಳನ್ನು ನೀನು ಸಹಿಸಿದೆ. ಕ್ಷತ್ರಿಯಧರ್ಮನಿರತನಾದ ನೀನು ಇದೆಲ್ಲವನ್ನೂ ಅನುಷ್ಠಾನ ಮಾಡಿದೆ.
ತಮಧರ್ಮಮಪಾಕೃಷ್ಟುಮಾರಬ್ಧಃ ಸಹಿತಸ್ತ್ವಯಾ |
ಸಾನುಬಂಧಾನ್ ಹನಿಷ್ಯಾಮಿ ಕ್ಷುದ್ರಾನ್ ರಾಜ್ಯಹರಾನಹಮ್ ॥ 12 ॥
ತ್ವಯಾ ತು ಕಥಿತಂ ಪೂರ್ವಂ ಯುದ್ಧಾಯಾಭ್ಯಾಗತಾ ವಯಮ್ |
ಘಟಾಮಶ್ಚ ಯಥಾಶಕ್ತಿ ತ್ವಂ ತು ನೋಽದ್ಯ ಜುಗುಪ್ಸಸೇ ॥ 13 ॥
ಆ ಅಧರ್ಮವನ್ನು ಅಳಿಸಿಹಾಕಲು ನಿನ್ನಿಂದ ಸಹಿತನಾಗಿ ನಾನು ಕ್ಷುದ್ರರಾದ ನಮ್ಮ ರಾಜ್ಯಾಪಹಾರಕರಾದ ಶತ್ರುಗಳನ್ನು ಅವರ ಪರಿವಾರ ಸಹಿತರಾಗಿ ಕೊಲ್ಲುವೆನು ಎಂದು ನೀನೇ ಮೊದಲು ಹೇಳಿದೆ. ಅದಕ್ಕಾಗಿ ನಾವು ಯುದ್ಧಕ್ಕೆ ಬಂದು ನಮ್ಮ ಶಕ್ತಿ ಇದ್ದಷ್ಟು ಪ್ರಯತ್ನಪಡುತ್ತಿದ್ದೇವೆ. ಆದರೆ ಈ ದಿನ ನೀನು ನಮ್ಮನ್ನು ರಕ್ಷಿಸಲು ಬಯಸುತ್ತಿಲ್ಲ.
ಸ್ವಧರ್ಮಂ ನೇಚ್ಛಸೇ ಜ್ಞಾತುಂ ಮಿಥ್ಯಾ ವಚನಮೇವ ತೇ |
ಭಯಾರ್ದಿತಾನಾಮಸ್ಮಾಕಂ ವಾಚಾ ಮರ್ಮಾಣಿ ಕೃಂತಸಿ ॥ 14 ॥
ನಿನ್ನ ಧರ್ಮವನ್ನು ತಿಳಿಯಲು ನೀನು ಬಯಸುತ್ತಿಲ್ಲ. ನೀನು ಈಗ ಆಡಿದ ಮಾತುಗಳು ಸುಳ್ಳುಮಾತುಗಳು. ಭಯದಿಂದ ಪೀಡಿತರಾದ ನಮಗೆ ಅಂತಹ ಮಾತುಗಳಿಂದ ನೀನು ಮರ್ಮಸ್ಥಾನಗಳನ್ನು ಕತ್ತರಿಸುತ್ತಿದ್ದೀಯೆ.
ವಪನ್ ವ್ರಣೇ ಕ್ಷಾರಮಿವ ಕ್ಷತಾನಾಂ ಶತ್ರುಕರ್ಶನ |
ವಿದೀರ್ಯತೇ ಮೇ ಹೃದಯಂ ತ್ವಯಾ ವಾಕ್ಶಲ್ಯಪೀಡಿತಮ್ ॥ 15 ॥
ಎಲೈ ಶತ್ರುಕರ್ಶನನೇ, ಹುಣ್ಣಿನ ಮೇಲೆ ಉಪ್ಪನ್ನು ಹಾಕಿದಂತೆ ಮೊದಲೇ ಗಾಯಗೊಂಡ ನನ್ನ ಹೃದಯವು ನಿನ್ನ ವಾಗ್ಬಾಣಗಳಿಂದ ಪೀಡಿತವಾಗಿ ಬಿರಿದುಹೋಗುತ್ತಿದೆ.
ಅಧರ್ಮಮೇತದ್ ವಿಪುಲಂ ಧಾರ್ಮಿಕಃ ಸನ್ನ ಬುಧ್ಯಸೇ |
ಯತ್ತ್ವಮಾತ್ಮಾನಮಸ್ಮಾಂಶ್ಚ ಪ್ರಶಂಸ್ಯಾನ್ ನ ಪ್ರಶಂಸಸಿ |
ಯಃ ಕಲಾಂ ಷೋಡಶೀಂ ತ್ವತ್ತೋ ನಾರ್ಹತೇ ತಂ ಪ್ರಶಂಸಸಿ ॥ 16 ॥
ಧಾರ್ಮಿಕನಾಗಿ ನೀನು ಈ ವಿಸ್ತಾರವಾದ ಅಧರ್ಮವನ್ನು ತಿಳಿಯುತ್ತಿಲ್ಲ. ಏಕೆಂದರೆ ನೀನು ಪ್ರಶಂಸೆಗೆ ಯೋಗ್ಯರಾದ ನಮ್ಮನ್ನು ಮತ್ತು ನಿನ್ನನ್ನು ಪ್ರಶಂಸಿಸುತ್ತಿಲ್ಲ. ಯಾವನು ನಿನ್ನ ಗುಣಗಳ ಹದಿನಾರನೆಯ ಒಂದು ಭಾಗಕ್ಕೆ ಯೋಗ್ಯನಲ್ಲವೋ ಅಂತಹವನನ್ನು ಪ್ರಶಂಸಿಸುತ್ತಿದ್ದೀಯೆ.
ಸ್ವಯಮೇವಾತ್ಮನೋ ವಕ್ತುಂ ನ ಯುಕ್ತಂ ಗುಣಸಂಸ್ತವಮ್ |
ದಾರಯೇಯಂ ಮಹೀಂ ಕ್ರೋಧಾದ್ ವಿಕಿರೇಯಂ ಚ ಪರ್ವತಾನ್ ॥ ಆವಿದ್ಧ್ಯ ಚ ಗದಾಂ ಗುರ್ವೀಂ ಭೀಮಾಂ ಕಾಂಚನಮಾಲಿನೀಮ್ |
ಗಿರಿಪ್ರಕಾಶಾನ್ ಕ್ಷಿತಿಜಾನ್ ಭಂಜೇಯಮನಿಲೋ ಯಥಾ ॥ 18 ॥
ತಾನೇ ತನ್ನ ಗುಣವನ್ನು ಹೇಳಿಕೊಳ್ಳುವುದು ಯೋಗ್ಯವಲ್ಲ. ಆದರೆ ಕೋಪದಿಂದ ಹೇಳಿಕೊಳ್ಳುತ್ತೇನೆ. ನಾನು ಭೂಮಿಯನ್ನು ಸೀಳಿಯೇನು. ಪರ್ವತವನ್ನು ಒಡೆದೇನು. ನನ್ನ ಕಾಂಚನಭೂಷಿತವಾದ, ಭಯಂಕರವಾದ, ಭಾರವಾದ ಗದೆಯಿಂದ ಹೊಡೆದು ವಾಯುವಿನಂತೆ ಪರ್ವತದಂತಹ ಎತ್ತರವಾದ ವೃಕ್ಷಗಳನ್ನು ಮುರಿದೇನು.
ಸ ತ್ವಮೇವಂವಿಧಂ ಜಾನನ್ ಭ್ರಾತರಂ ಮಾಂ ನರರ್ಷಭ |
ದ್ರೋಣಪುತ್ರಾದ್ ಭಯಂ ಕರ್ತುಂ ನಾರ್ಹಸ್ಯಮಿತವಿಕ್ರಮ ॥ 19 ॥
ಎಲೈ ನರಶ್ರೇಷ್ಠನೇ, ಅಮಿತವಿಕ್ರಮನೇ, ನೀನು ಅಂತಹ ನಿನ್ನ ಸಹೋದರನಾದ ನನ್ನನ್ನು ತಿಳಿದು ದ್ರೋಣಪುತ್ರರಿಂದ ಭಯಪಡುವುದು ಯೋಗ್ಯವಲ್ಲ.
ಅಥ ವಾ ತಿಷ್ಠ ಬೀಭತ್ಸೋ ಸಹ ಸರ್ವೈರ್ನರರ್ಷಭೈಃ |
ಅಹಮೇನಂ ಗದಾಪಾಣಿರ್ಜೇಷ್ಯಾಮ್ಯೇಕೋ ಮಹಾಹವೇ ॥ 20 ॥
ಅಥವಾ ಎಲೈ ಬೀಭತ್ಸುವೇ, ಎಲ್ಲ ರಾಜರ ಜೊತೆಯಲ್ಲಿ ನೀನು ಇಲ್ಲಿಯೇ ನಿಲ್ಲು. ನಾನು ಗದೆಯನ್ನು ಹಿಡಿದು ರಣರಂಗದಲ್ಲಿ ಒಬ್ಬನೇ ಅಶ್ವತ್ಥಾಮರನ್ನು ಜಯಿಸುವೆನು (ಎಂದು ಹೇಳಿದನು).
ಸಂಜಯಃ
ತತಃ ಪಾಂಚಾಲರಾಜಸ್ಯ ಪುತ್ರಃ ಪಾರ್ಥಮಥಾಬ್ರವೀತ್ |
ಸಂಕ್ರುದ್ಧಮಿವ ನರ್ದಂತಂ ಹಿರಣ್ಯಕಶಿಪುಂ ಹರಿಃ ॥ 21 ॥
ಸಂಜಯ ಆಗ ಪಾಂಚಾಲ ರಾಜಪುತ್ರನಾದ ಧೃಷ್ಟದ್ಯುಮ್ನನು ಹಿರಣ್ಯಕಶಿಪುವನ್ನು ನೋಡಿ ಗರ್ಜಿಸುವ ನರಹರಿಯಂತೆ ಕೋಪದಿಂದ ಅರ್ಜುನನನ್ನು ಕುರಿತು ಹೇಳಿದನು.
ಬೀಭತ್ಸೋ ವಿಪ್ರಕರ್ಮಾಣಿ ವಿದಿತಾನಿ ಮನೀಷಿಣಾಮ್ |
ಯಾಜನಾಧ್ಯಾಪನೇ ದಾನಂ ತಥಾ ಯಜ್ಞಪ್ರತಿಗ್ರಹೌ ॥ 22 ॥

ಷಷ್ಠಮಧ್ಯಯನಂ ನಾಮ ತೇಷಾಂ ಕಸ್ಮಿನ್ ಪ್ರತಿಷ್ಠಿತಃ |
ಹತೋ ದ್ರೋಣೋ ಮಯಾ ಯತ್ ತತ್ ಕಿಂ ಮಾಂ ಪಾರ್ಥ ವಿಗರ್ಹಸೇ ॥ 23 ॥
ಎಲೈ ಅರ್ಜುನನೇ, ವಿವೇಕಿಗಳಾದವರಿಗೆ ಬ್ರಾಹ್ಮಣರ ಕರ್ಮಗಳು ತಿಳಿದಿವೆ. ಯಾಜನ, ಅಧ್ಯಾಪನ, ದಾನ, ಯಜ್ಞ, ಪ್ರತಿಗ್ರಹ ಮತ್ತು ಆರನೆಯದಾದ ಅಧ್ಯಯನ. ನನ್ನಿಂದ ಹತರಾದ ದ್ರೋಣರು ಇವುಗಳಲ್ಲಿ ಯಾವುದರಲ್ಲಿ ಪ್ರತಿಷ್ಠಿತರಾಗಿದ್ದಾರೆ ಎಂದು, ಎಲೈ ಅರ್ಜುನನೇ, ನೀನು ನನ್ನನ್ನು ನಿಂದಿಸುತ್ತಿದ್ದೀಯೆ?
ಅಪಕ್ರಾಂತಃ ಸ್ವಧರ್ಮಾಚ್ಚ ಕ್ಷತ್ರಧರ್ಮಮುಪಾಶ್ರಿತಃ |
ಅಮಾನುಷೇಣ ಹಂತ್ಯಸ್ಮಾನಸ್ತ್ರೇಣ ಕ್ಷುದ್ರಕರ್ಮಕೃತ್ ॥ 24 ॥
ತಮ್ಮ ಧರ್ಮದಿಂದ ಚ್ಯುತರಾಗಿ, ಕ್ಷತ್ರಿಯಧರ್ಮವನ್ನು ಆಶ್ರಯಿಸಿ, ಕ್ಷುದ್ರಕರ್ಮವನ್ನು ಮಾಡುವವರಾಗಿ ಅಮಾನುಷವಾದ ಅಸ್ತ್ರಗಳಿಂದ ನಮ್ಮನ್ನು ಕೊಲ್ಲುತ್ತಿದ್ದಾರೆ.
ತಥಾ ಮಾಯಾಂ ಪ್ರಯುಂಜಾನಮಸಹ್ಯಂ ಬ್ರಾಹ್ಮಣಬ್ರುವಮ್ |
ಮಾಯಯೈವ ನಿಹನ್ಯಾದ್ ಯೋ ನ ಯುಕ್ತಂ ಪಾರ್ಥ ತತ್ರ ಕಿಮ್ ॥
ಎಲೈ ಪಾರ್ಥನೇ, ಆ ರೀತಿಯಲ್ಲಿ ತಾನು ಬ್ರಾಹ್ಮಣ ಎಂದು ಹೇಳಿಕೊಂಡು ಸಹಿಸಲು ಅಸಾಧ್ಯವಾದ ಮಾಯೆಯನ್ನು ಸೃಷ್ಟಿಸುವ ಅವರನ್ನು ಯಾವನು ಮಾಯೆಯಿಂದಲೇ ಕೊಲ್ಲುತ್ತಾನೆಯೋ ಅದರಲ್ಲಿ ಅಯುಕ್ತವಾದುದು ಏನಿದೆ?
ತಸ್ಮಿಂಸ್ತಥಾ ಮಯಾ ಶಸ್ತೇ ಯದಿ ದ್ರೌಣಾಯನೀ ರುಷಾ |
ಕುರುತೇ ಭೈರವಂ ನಾದಂ ತತ್ರ ಕಿಂ ಮಮ ಹೀಯತೇ ॥ 26 ॥
ನಾನು ಅವರನ್ನು ಹಾಗೆ ಕೊಂದಿರುವಾಗ ದ್ರೋಣರ ಪುತ್ರರಾದ ಅಶ್ವತ್ಥಾಮರು ಭೈರವನಾದವನ್ನು ಮಾಡಿದರೆ ನನ್ನದೇನು ಹೋಗುತ್ತದೆ?
ನ ಚಾದ್ಭುತಮಿದಂ ಮನ್ಯೇ ಯದ್ ದ್ರೌಣಿಃ ಶುದ್ರಗರ್ಜಯಾ |
ಘಾತಯಿಷ್ಯತಿ ಕೌರವ್ಯಾನ್ ಪರಿತ್ರಾತುಮಶಕ್ನುವನ್ ॥ 27 ॥
ಕೌರವ್ಯರನ್ನು ರಕ್ಷಿಸಲು ಸಮರ್ಥರಾಗದೆ ಅಶ್ವತ್ಥಾಮರು ಯುದ್ಧಗರ್ಜನೆಯನ್ನು ಮಾಡಿ ಅವರನ್ನೇ ಕೊಲ್ಲುತ್ತಿರುವುದರಲ್ಲಿ ನಾನು ಯಾವ ಅದ್ಭುತವನ್ನೂ ಕಾಣುತ್ತಿಲ್ಲ. ನಮ್ಮನ್ನು ಕೊಲ್ಲುತ್ತಿದ್ದಾರೆಂಬುದು ಬಹಳ ಅದ್ಭುತವಾದುದು.
ಯಚ್ಚ ಮಾಂ ಧಾರ್ಮಿಕೋ ಭೂತ್ವಾ ಬ್ರವೀಷಿ ಗುರುಘಾತಿನಮ್ |
ತದರ್ಥಮಹಮುತ್ಪನ್ನಃ ಪಾಂಚಾಲ್ಯಸ್ಯ ಸುತೋಽನಲಾತ್ ॥ 28 ॥
ನೀನು ಧಾರ್ಮಿಕನಾಗಿ ನನ್ನನ್ನು ಗುರುಘಾತಕನೆಂದು ಕರೆಯುವಿಯಷ್ಟೆ? ದ್ರೋಣರನ್ನು ವಧೆ ಮಾಡುವುದಕ್ಕಾಗಿಯೇ ನಾನು ಪಾಂಚಾಲರಾಜನ ಕುಮಾರನಾಗಿ ಅಗ್ನಿಯಿಂದ ಜನಿಸಿದ್ದೇನೆ.
ಯಸ್ಯ ಕಾರ್ಯಮಕಾರ್ಯಂ ವಾ ಯುಧ್ಯತಃ ಸ್ಯಾತ್ ಸಮಂ ರಣೇ |
ತಂ ಕಥಂ ಬ್ರಾಹ್ಮಣಂ ಬ್ರೂಯಾಃ ಕ್ಷತ್ರಿಯಂ ವಾ ಧನಂಜಯ ॥ 29 ॥
ಯುದ್ಧವನ್ನು ಮಾಡುವವನಿಗೆ ಕಾರ್ಯವೂ, ಅಕಾರ್ಯವೂ ಸಮವಾಗುತ್ತದೆ. ಅವನು ಕಾರ್ಯವನ್ನೂ ಮಾಡುತ್ತಾನೆ, ಅಕಾರ್ಯವನ್ನೂ ಮಾಡುತ್ತಾನೆ. ಅಂತಹವನನ್ನು ಬ್ರಾಹ್ಮಣನೆಂದು ಹೇಗೆ ಹೇಳುತಿತೀಯೆ? ಅಥವಾ ಕ್ಷತ್ರಿಯನೆಂದು ಹೇಗೆ ಹೇಳುತ್ತೀಯೆ? (ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿರುವುದರಿಂದ ಕ್ಷತ್ರಿಯನಲ್ಲ, ಅಸ್ತ್ರದಿಂದ ಯುದ್ಧವನ್ನು ಮಾಡುವುದರಿಂದ ಬ್ರಾಹ್ಮಣನೂ ಅಲ್ಲ. ಉಭಯಭ್ರಷ್ಟನಾದುದರಿಂದ ಪತಿತನಾದವನು. ಅವನನ್ನು ವಧೆ ಮಾಡಿದರೆ ಏನು ದೋಷ ಎಂದು ಅಭಿಪ್ರಾಯ).
ಯೋ ಹ್ಯನಸ್ತ್ರವಿದೋ ಹನ್ಯಾದ್ ಬ್ರಹ್ಮಾಸ್ತ್ರೈಃ ಕ್ರೋಧಮೂರ್ಚ್ಛಿತಃ |
ಸರ್ವೋಪಾಯೈರ್ನ ಸ ಕಥಂ ವಧ್ಯಃ ಪುರುಷಸತ್ತಮ ॥ 30 ॥
ಎಲೈ ಪುರುಷಶ್ರೇಷ್ಠನೇ, ಯಾವನು ಕ್ರೋಧಮೂರ್ಛಿತನಾಗಿ ಅಸ್ತ್ರಜ್ಞರಲ್ಲದವರನ್ನು ಬ್ರಹ್ಮಾಸ್ತ್ರಗಳಿಂದ ಕೊಲ್ಲುವನೋ ಅವನು ಸರ್ವೋಪಾಯಗಳಿಂದಲೂ ವಧ್ಯನಾಗಲು ಏಕೆ ಅರ್ಹನಾಗುವುದಿಲ್ಲ?
ವಿಧರ್ಮಿಣೋ ಧರ್ಮವಿದ್ಭಿಃ ಪ್ರೋಕ್ತಂ ತೇಷಾಂ ವಿಷೋಪಮಾಃ |
ಜಾನನ್ ಧರ್ಮಾರ್ಥತತ್ತ್ವಜ್ಞಃ ಕಿಮರ್ಜುನ ವಿಗರ್ಹಸೇ ॥ 31 ॥
ಎಲೈ ಅರ್ಜುನನೇ, ಧರ್ಮಹೀನರಾದ ಪುರುಷರನ್ನು ನೀನು ಧರ್ಮಜ್ಞನೆಂದು ಹೇಳುತ್ತಿದ್ದೀಯೆ. ಅಧರ್ಮವನ್ನು ಮಾಡುವ ಅಂತಹ ಪುರುಷರು ವಿಷಪ್ರಾಯರೆ? (ವಿಷದಂತೆ ನಿನ್ನನ್ನು ಕೊಲ್ಲುವರೇ? ಇಲ್ಲ. ಆದ್ದರಿಂದ ಅವರಿಗೆ ಏಕೆ ಹೆದರುವಿ ಎಂದು ಅಭಿಪ್ರಾಯ) ಧರ್ಮಾತ್ಮತತ್ತ್ವವನ್ನು ತಿಳಿದ ನೀನು ಏತಕ್ಕೆ ನನ್ನನ್ನು ನಿಂದಿಸುತ್ತಿದ್ದೀಯೆ?
ನೃಶಂಸಃ ಸ ಮಯಾಽಽಕ್ರಮ್ಯ ರಥ ಏವ ನಿಪಾತಿತಃ |
ತನ್ಮಾಽಭಿನಂದ್ಯಂ ಬೀಭತ್ಸೋ ಕಿಮರ್ಥಂ ನಾಭಿನಂದಸೇ ॥ 32 ॥
ಕ್ರೂರರಾದ ಅವರನ್ನು ನಾನು ರಥದಲ್ಲಿಯೇ ಕೆಡವಿದೆ. ಎಲೈ ಅರ್ಜುನನೇ, ಅಭಿನಂದಿಸಲ್ಪಡಬೇಕಾದ ನನ್ನನ್ನು ನೀನು ಏಕೆ ಅಭಿನಂದಿಸುತ್ತಿಲ್ಲ?
ಕೃತೇ ರಣೇ ಕಥಂ ಪಾರ್ಥ ಜ್ವಲನಾರ್ಕವಿಷೋಪಮಮ್ |
ಭೀಮಂ ದ್ರೋಣಶಿರಶ್ಛೇದೇ ಪ್ರಶಸ್ಯಂ ನ ಪ್ರಶಂಸಸಿ ॥ 33 ॥
ಎಲೈ ಅರ್ಜುನನೇ, ರಣರಂಗದಲ್ಲಿ ದ್ರೋಣರ ಶಿರಶ್ಛೇದವನ್ನು ಮಾಡಿದಾಗ (ಅದಕ್ಕೆ ಸಹಾಯಕನಾದ) ಸೂರ್ಯಾಗ್ನಿಗೆ ಸದೃಶನಾದ, ಪ್ರಶಂಸೆಗೆ ಅರ್ಹನಾದ ಭೀಮನನ್ನು ನೀನು ಏಕೆ ಪ್ರಶಂಸಿಸುವುದಿಲ್ಲ?
ಯೋಽಸೌ ಮಮೈವ ನಾನ್ಯಸ್ಯ ಬಾಂಧವಾನ್ ಯುಧಿ ಜಘ್ನಿವಾನ್ |

ಛಿತ್ತತ್ವಽಪಿ ತಸ್ಯ ಮೂರ್ಧಾನಂ ನೈವಾಸ್ಮಿ ವಿಗತಜ್ವರಃ ॥ 34 ॥
ಯಾವನು ನನ್ನ ಬಂಧುಗಳನ್ನು- ಇನ್ನೊಬ್ಬರ ಬಂಧುಗಳನ್ನಲ್ಲ - ಯುದ್ಧದಲ್ಲಿ ಕೊಂದನೋ, ಅವನ ಶಿರಸ್ಸನ್ನು ಕತ್ತರಿಸಿದರೂ ನನ್ನ ಬಂಧುಶೋಕದಿಂದ ಉಂಟಾದ ಜ್ವರವು ಹೋಗುತ್ತಿಲ್ಲ.
ತಚ್ಚ ಮೇ ಕೃಂತತೇ ಮರ್ಮ ಯನ್ನ ತಸ್ಯ ಶಿರೋ ಮಯಾ |
ನಿಷಾದವಿಷಯೇ ಕ್ಷಿಪ್ತಂ ಜಯದ್ರಥಶಿರೋ ಯಥಾ ॥ 35 ॥
ಅವರ ಶಿರಸ್ಸನ್ನು ಜಯದ್ರಥನ ಶಿರಸ್ಸಿನಂತೆ ನಿಷಾದದೇಶದಲ್ಲಿ ಎಸೆಯಲಿಲ್ಲ ಎಂಬುದು ನನಗೆ ಮರ್ಮಭೇದಕವಾಗಿದೆ.
ಅವಧಶ್ಚಾಪಿ ಶತ್ರೂಣಾಮಧರ್ಮಃ ಶಿಷ್ಯತೇಽರ್ಜುನ |
ಕ್ಷತ್ರಿಯಸ್ಯ ಹ್ಯಯಂ ಧರ್ಮೋ ಹನ್ಯಾದ್ಧನ್ಯೇತ ವಾ ಪುನಃ ॥ 36 ॥
ಎಲೈ ಅರ್ಜುನನೇ, ಶತ್ರುಗಳನ್ನು ಕೊಲ್ಲದಿರುವುದು ಅಧರ್ಮ ಎಂದು ಹೇಳಲ್ಪಡುತ್ತದೆ. ಕೊಲ್ಲಬೇಕು ಅಥವಾ ವಧಿಸಲ್ಪಡಬೇಕು. ಇದು ಕ್ಷತ್ರಿಯ ಧರ್ಮ.
ಸ ಶತ್ರುರ್ನಿಹತಃ ಸಂಖೇ ಮಯಾ ಧರ್ಮೇಣ ಪಾಂಡವ |
ಯಥಾ ತ್ವಯಾ ಹತಃ ಶೂರೋ ಭಗದತ್ತಃ ಪಿತುಃ ಸಖಾ ॥ 37 ॥
ಎಲೈ ಪಾಂಡವನೇ, ಶೂರನೂ, ನಿನ್ನ ತಂದೆಯ ಸ್ನೇಹಿತನಾದ ಭಗದತ್ತನನ್ನು ನೀನು ಕೊಂದಂತೆ ನಾನು ಯುದ್ಧದಲ್ಲಿ ಧರ್ಮದಿಂದಲೇ ಶತ್ರುವಾದ ದ್ರೋಣರನ್ನು ಕೊಂದಿದ್ದೇನೆ.
ಪಿತಾಮಹಂ ರಣೇ ಹತ್ವಾ ಮನ್ಯಸೇ ಧರ್ಮಮಾತ್ಮನಃ |
ಮಯಾ ಶತ್ರೌ ಹತೇ ಕಸ್ಮಾತ್ ಪಾಪೇ ಧರ್ಮಂ ನ ಮನ್ಯಸೇ ॥ 38 ॥
ಪಿತಾಮಹರಾದ ಭೀಷ್ಮರನ್ನು ರಣರಂಗದಲ್ಲಿ ಕೊಂದು ಅದನ್ನು ನೀನು ನಿನ್ನ ಧರ್ಮವೆಂದು ತಿಳಿಯುತಿತೇಯೆ. ನಾನು ಪಾಪಿಯಾದ ಶತ್ರುವನ್ನು ಕೊಂದರೆ ಅದನ್ನು ಧರ್ಮವೆಂದು ತಿಳಿಯುವುದಿಲ್ಲ.
ನಾನೃತಃ ಪಾಂಡವೋ ಜ್ಯೇಷ್ಠೋ ನಾಹಂ ವಾಽಧಾರ್ಮಿಕೋಽರ್ಜುನ |
ಶಿಷ್ಯಧ್ರುಕ್ ನಿಹತಃ ಪಾಪೋ ಯುದ್ಧ್ಯಸ್ವ ವಿಜಯಸ್ತವ ॥ 39 ॥
ಎಲೈ ಅರ್ಜುನನೇ, ಪಾಂಡವರ ಹಿರಿಯಣ್ಣನಾದ ಯುಧಿಷ್ಠಿರನು ಸುಳ್ಳು ಮಾತನಾಡುವವನಲ್ಲ. ನಾನೂ ಅಧಾರ್ಮಿಕನಲ್ಲ. ನಿರಪರಾಧಿ ಶಿಷ್ಯರಾದ ನಮ್ಮಂತಹವರಿಗೆ ದ್ರೋಹವನ್ನು ಮಾಡುವ ಪಾಪಾಚರಣೆಯ ಗುರುಗಳು ಹತರಾದರು (ನಿರಪರಾಧಿಗಳಾದ ಶಿಷ್ಯರಿಗೆ ದ್ರೋಹವನ್ನು ಮಾಡುವುದು ಅದು ಪಾಪವೇ ಎಂಬುದು ಅಂಬರೀಷನಿಗೆ ದ್ರೋಹವನ್ನು ಮಾಡಿದ ದುರ್ವಾಸರ ದೃಷ್ಟಾಂತದಲ್ಲಿ ತಿಳಿದಿದೆ). ಯುದ್ಧವನ್ನು ಮಾಡು. ನಿನಗೆ ವಿಜಯವುಂಟಾಗುವುದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕೋನಾಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಎಂಬತ್ತನೆಯ ಅಧ್ಯಾಯ
ಅರ್ಜುನ-ಧೃಷ್ಟದ್ಯುಮ್ನರ ವಿರಸ. ಕೃಷ್ಣ ಪ್ರೇರಣೆಯಂತೆ
ಭೀಮನಿಂದ ಸಮಾಧಾನ ಪುನಃ ಯುದ್ಧಸನ್ನಾಹ.
ಧೃತರಾಷ್ಟ್ರಃ
ಸಾಂಗಾ ವೇದಾ ಯಥಾನ್ಯಾಯಂ ಯೇನಾಧೀತಾ ಮಹಾತ್ಮನಾ |
ಯಸ್ಮಿನ್ ಸಾಕ್ಷಾದ್ ಧನುರ್ವೇದೋ ಹ್ರೀನಿಷೇಧೇ ಪ್ರತಿಷ್ಠಿತಃ ॥ 1 ॥
ತಸ್ಮಿನ್ನಾಕ್ರುಶ್ಯತಿ ದ್ರೋಣೇ ಮಹರ್ಷಿತನಯೇ ತದಾ |
ನೀಚಾತ್ಮನಾ ನೃಶಂಸೇನ ಕ್ಷುದ್ರೇಣ ಗುರುಘಾತಿನಾ ॥ 2 ॥
ಯಸ್ಯ ಪ್ರಸಾದಾತ್ ಕರ್ಮಾಣಿ ಕುರ್ವಂತಿ ಪುರುಷರ್ಷಭಾಃ |
ಅಮಾನುಷಾಣಿ ಸಂಗ್ರಾಮೇ ದೇವೈರಸುಕರಾಣಿ ಚ ॥ 3 ॥
ತಸ್ಮಿನ್ನಾಕ್ರುಶ್ಯತಿ ದ್ರೋಣೇ ಸಮಕ್ಷಂ ಪಾಪಕರ್ಮಿಣಃ |
ನಾಮರ್ಷಂ ತತ್ರ ಕುರ್ವಂತಿ ಧಿಕ್ ಕ್ಷತ್ರಂ ಧಿಗಮರ್ಷಿತಮ್ ॥ 4 ॥
ಧೃತರಾಷ್ಟ್ರ ಯಾವ ಮಹಾತ್ಮರಾದ ದ್ರೋಣರು ಸಾಂಗವಾದ ವೇದಗಳನ್ನು ವಿಧಿಪೂರ್ವಕವಾಗಿ ಅಧ್ಯಯನವನ್ನು ಮಾಡಿದರೋ, ಪಾಪಕರ್ಮಗಳನ್ನು ಮಾಡಲು ನಾಚಿ ನಿಷೇಧಿಸುವ ಯಾರಲ್ಲಿ ಧನುರ್ವೇದವು ಸಾಕ್ಷಾತ್ತಾಗಿ ಪ್ರತಿಷ್ಠಿತವಾಗಿದ್ದಿತೋ, ಯಾರ ಅನುಗ್ರಹದಿಂದ ಪುರುಷಶ್ರೇಷ್ಠರಾದವರು ಯುದ್ಧದಲ್ಲಿ ದೇವತೆಗಳೂ ಮಾಡಲು ಸಾಧ್ಯವಿಲ್ಲದ ಅತಿಮಾನುಷಕರ್ಮವನ್ನು ಮಾಡುತ್ತಾರೆಯೋ ಅಂತಹ ಮಹರ್ಷಿ ಪುತ್ರರಾದ ದ್ರೋಣರು ಕ್ಷುದ್ರನೂ, ಕ್ರೂರನೂ, ನೀಚವಾದ ಮನಸ್ಸುಳ್ಳವನೂ, ಗುರುಘಾತಕನೂ ಆದ ಧೃಷ್ಟದ್ಯುಮ್ನನಿಂದ ಪಾಪಕರ್ಮವನ್ನು ಮಾಡುವವರ ಎದುರಿನಲ್ಲಿ ನಿಂದಿಸಲ್ಪಡುತಿತರಲು ಅಲ್ಲಿ ಯಾರೂ ಅವನ ಮೇಲೆ ರೋಷವನ್ನು ಹೊಂದಲಿಲ್ಲ. ಕ್ಷತ್ರಿಯರಿಗೆ ಧಿಕ್ಕಾರವಿರಲಿ. ರೋಷಕ್ಕೂ ಧಿಕ್ಕಾರವಿರಲಿ.
ಪಾರ್ಥಾಃ ಸರ್ವೇ ಚ ರಾಜಾನಃ ಪೃಥಿವ್ಯಾಂ ಯೇ ಧನುರ್ಧರಾಃ |
ಶ್ರುತ್ವಾ ಕಿಮಾಹುಃ ಪಾಂಚಾಲ್ಯಂ ತನ್ಮಮಾಚಕ್ಷ್ವ ಸಂಜಯ ॥ 5 ॥

ಎಲೈ ಸಂಜಯನೇ, ಪಾಂಡವರೂ ಭೂಮಿಯಲ್ಲಿ ಇರುವ ಧನುರ್ಧಾರಿಗಳಾದ ರಾಜರೂ ಧೃಷ್ಟದ್ಯುಮ್ನನ ಮಾತುಗಳನ್ನು ಕೇಳಿ ಏನು ಹೇಳಿದರೆಂದು ನನಗೆ ಹೇಳು.
ಸಂಜಯಃ
ಶ್ರುತ್ವಾ ದ್ರುಪದಪುತ್ರಸ್ಯ ತಾ ವಾಚಃ ಕ್ರೂರಕರ್ಮಣಃ |
ತೂಷ್ಣೀಂ ಬಭೂವೂ ರಾಜಾನಃ ಸರ್ವ ಏವ ವಿಶಾಂಪತೇ ॥ 6 ॥
ಸಂಜಯ ಎಲೈ ರಾಜನೇ, ಕ್ರೂರಕರ್ಮವನ್ನು ಮಾಡಿದ ದ್ರುಪದ ಪುತ್ರನ ಆ ಮಾತುಗಳನ್ನು ಕೇಳಿ ಎಲ್ಲ ರಾಜರೂ ಸುಮ್ಮನಾದರು.
ಅರ್ಜುನಸ್ತು ಕಟಾಕ್ಷೇಣ ಜಿಹ್ಮಂ ಪ್ರೇಕ್ಷ್ಯ ಚ ಪಾರ್ಷತಮ್ |
ಸಬಾಷ್ಪಮಭಿನಿಃಶ್ವಸ್ಯ ಧಿಗ್ಧಿಗಿತಿ ಚಾಬ್ರವೀತ್ ॥ 7 ॥
ಅರ್ಜುನನು ಮಾತ್ರ ಧೃಷ್ಟದ್ಯುಮ್ನನನ್ನು ಕಡೆಗಣ್ಣಿನಿಂದ ವಕ್ರವಾಗಿ ನೋಡಿ ಉಷ್ಣವಾದ ನಿಟ್ಟುಸಿರನ್ನು ಬಿಟ್ಟು `ಧಿಕ್ಕಾರ, ಧಿಕ್ಕಾರ' ಎಂದು ಹೇಳಿದನು.
ಯುಧಿಷ್ಠಿರಶ್ಚ ಭೀಮಶ್ಚ ಯಮೌ ಕೃಷ್ಣಸ್ತಥಾಪರೇ |
ಆಸನ್ ಸುವ್ರೀಡಿತಾ ರಾಜನ್ ಸಾತ್ಯಕಿರಿದಮಬ್ರವೀತ್ ॥ 8 ॥
ಎಲೈ ರಾಜನೇ, ಯುಧಿಷ್ಠಿರ, ಭೀಮಸೇನ, ನಕುಲ-ಸಹದೇವರು, ಕೃಷ್ಣ ಮತ್ತು ಉಳಿದವರು ಬಹಳ ನಾಚಿಕೆಗೊಂಡರು. ಆದರೆ ಸಾತ್ಯಕಿಯು ಮಾತ್ರ ಈ ಮಾತುಗಳನ್ನು ಆಡಿದನು.
ಸಾತ್ಯಕಿಃ
ನೇಹಾಸ್ತಿ ಪುರುಷಃ ಕಶ್ಚಿದ್ಯ ಇಮಂ ಪಾಪಪೂರುಷಮ್ |
ಭಾಷಮಾಣಮಕಲ್ಯಾಣಂ ಶೀಘ್ರಂ ಹನ್ಯಾನ್ನರಾಧಮಮ್ ॥ 9 ॥
ಸಾತ್ಯಕಿ ಅಮಂಗಳವನ್ನು ಮಾತನಾಡುತ್ತಿರುವ ಪಾಪಪುರುಷನಾದ ಈ ನರಾಧಮನನ್ನು ಕೊಲ್ಲುವ ಯಾವ ಪುರುಷನೂ ಈ ದಿನ ಇಲ್ಲಿ ಇಲ್ಲ.
ಕಥಂ ಚ ಶತಧಾ ಜಿಹ್ವಾ ನ ತೇ ಮೂರ್ಧಾ ಚ ದೀರ್ಯತೇ |
ಗುರುಮಾಕ್ರೋಶತಃ ಕ್ಷುದ್ರ ನ ಚಾಧರ್ಮೇಣ ಪಾತ್ಯಸೇ ॥ 10 ॥
ಎಲೈ ಕ್ಷುದ್ರನೇ, ಗುರುಗಳನ್ನು ನಿಂದಿಸುತ್ತಿರುವ ನಿನ್ನ ನಾಲಿಗೆಯು ಏಕೆ ಸಹಸ್ರ ಹೋಳಾಗುವುದಿಲ್ಲ? ನಿನ್ನ ಶಿರಸ್ಸು ಏಕೆ ಬಿರಿದುಹೋಗುವುದಿಲ್ಲ? ಏಕೆ ನೀನು ಅಧರ್ಮದಿಂದ ನಿಪಾತವನ್ನು ಹೊಂದುತಿತಲ್ಲ?
ಯಾಪ್ಯಸ್ತ್ವಮಸಿ ಪಾರ್ಥೈಶ್ಚ ಸರ್ವೈಶ್ಚಾಂಧಕವೃಷ್ಣಿಭಿಃ |
ಯತ್ ಕರ್ಮ ಕಲುಷಂ ಕೃತ್ವಾ ಶ್ಲಾಘಸೇ ಜನಸಂಸದಿ ॥ 11 ॥
ನೀಚಕರ್ಮವನ್ನು ಮಾಡಿ ಜನರ ಸಭೆಯ ಮುಂದೆ ನಿನ್ನನ್ನೇ ಹೊಗಳಿಕೊಳ್ಳುತ್ತಿರುವ ನೀನು ಪಾಂಡವರಿಂದಲೂ ಮತ್ತು ಎಲ್ಲ ಅಂಧಕವೃಷ್ಣಿಗಳಿಂದಲೂ ಯಮಲೋಕಕ್ಕೆ ಕಳುಹಿಸಲ್ಪಡಬೇಕು.
ಅಕಾರ್ಯಂ ತಾದೃಶಂ ಕೃತ್ವಾ ಪುನರೇವ ಗುರುಂ ಕ್ಷಿಪನ್ |
ವಧ್ಯಸ್ತ್ವಂ ನ ತ್ವಯಾರ್ಥೋಽಸ್ತಿ ಮುಹೂರ್ತಮಪಿ ಜೀವತಾ ॥ 12 ॥
ಅಂತಹ ಅಕಾರ್ಯವನ್ನು ಮಾಡಿ ಪುನಃ ಗುರುಗಳನ್ನು ನಿಂದಿಸುವ ನೀನು ವಧ್ಯನಾದವನು. ನೀನು ಒಂದು ಮುಹೂರ್ತ ಜೀವಿಸಿದರೂ ನಿನ್ನಿಂದ ಯಾವ ಪ್ರಯೋಜನವೂ ಇಲ್ಲ.
ಕಸ್ತ್ವೇತದ್ ವ್ಯವಸೇದಾರ್ಯಸ್ತ್ವದನ್ಯಃ ಪುರುಷಾಧಮಃ |
ನಿಗೃಹ್ಯ ಕೇಶೇಷು ವಧಂ ಗುರೋರ್ಧರ್ಮಾತ್ಮನಃ ಸತಃ ॥ 13 ॥
ಎಲೈ ಪುರುಷಾಧಮನೇ, ನಿನ್ನನ್ನು ಬಿಟ್ಟು ಯಾವ ಶ್ರೇಷ್ಠ ಪುರುಷನು ತಾನೇ ಧರ್ಮಾತ್ಮನಾದ ಗುರುಗಳನ್ನು ಕೇಶಗಳಲ್ಲಿ ಹಿಡಿದು ವಧೆಯನ್ನು ಮಾಡಲು ನಿರ್ಧರಿಸಿಯಾನು?
ಸಪ್ತಾವರೇ ತಥಾ ಪೂರ್ವೇ ಬಾಂಧವಾಸ್ತೇ ನಿಪಾತಿತಾಃ |
ಯಶಸಾ ಚ ಪರಿತ್ಯಕ್ತಾಸ್ತ್ವಾಂ ಪ್ರಾಪ್ಯ ಕುಲಪಾಂಸನಮ್ ॥ 14 ॥
ನಿನ್ನಂತಹ ಕುಲಾಧಮನನ್ನು ಹೊಂದಿ ನಿನ್ನ ಕುಲದಲ್ಲಿ ನಿನ್ನ ಹಿಂದಿನ ಏಳು ಬಾಂಧವರು ಪತಿತರಾಗಿದ್ದಾರೆ, ಮುಂದಿನ ಏಳು ಬಾಂಧವರು ಪತಿತರಾಗುವರು ಮತ್ತು ಕೀರ್ತಿಯಿಂದಲೂ ಚ್ಯುತರಾಗುವರು.
ಉಕ್ತವಾಂಶ್ಚಾಪಿ ಯತ್ ಪಾರ್ಥಂ ಭೀಷ್ಮಂ ಪ್ರತಿ ನರರ್ಷಭಮ್ |
ತಥಾಂತೋ ವಿಹಿತಸ್ತೇನ ಸ್ವಯಮೇವ ಮಹಾತ್ಮನಾ ॥ 15 ॥
ನರಶ್ರೇಷ್ಠರಾದ ಭೀಷ್ಮರ ವಿಷಯದಲ್ಲಿ ಅರ್ಜುನನನ್ನು ಕುರಿತು ಮಹಾತ್ಮರಾದ ಭೀಷ್ಮರು ತಮ್ಮ ನಾಶವನ್ನು ತಾವೇ ತಂದುಕೊಂಡರು ಎಂದು ಹೇಳಿದೆಯಷ್ಟೆ?
ತಸ್ಯಾಪಿ ತವ ಸೋದರ್ಯೋ ನಿಹಂತಾ ಪಾಪಕೃತ್ತಮಃ |
ನಾನ್ಯಃ ಪಾಂಚಾಲಪುತ್ರೇಭ್ಯೋ ವಿದ್ಯತೇ ಭುವಿ ಪಾಪಕೃತ್ ॥ 16 ॥
ಆ ಕಾರ್ಯವನ್ನು ಮಾಡಿದವನೂ ಸಹ ನಿನ್ನ ಸಹೋದರನಾದ ಶಿಖಂಡಿಯೇ. ಪಾಪವನ್ನು ಮಾಡಲು ಅಗ್ರಗಣ್ಯನಾದ ಅವನೇ ಭೀಷ್ಮರನ್ನು ಕೊಂದವನು. ಪಾಂಚಾಲ ಪುತ್ರರಿಗಿಂತಲೂ ಅಧಿಕವಾದ ಪಾಪವನ್ನು ಮಾಡುವ ಯಾವನೂ ಭೂಮಿಯಲ್ಲಿ ಇಲ್ಲ.
ಸ ಚಾಪಿ ಸೃಷ್ಟಃ ಪಿತ್ರಾ ತೇ ಭೀಷ್ಮಸ್ಯಾಂತಕರಃ ಕಿಲ |
ಶಿಖಂಡೀ ರಕ್ಷಿತಸ್ತೇನ ಸ ಚ ಮೃತ್ಯುರ್ಮಹಾತ್ಮನಃ ॥ 17 ॥
ಶಿಖಂಡಿಯೂ ಸಹ ಭೀಷ್ಮರ ವಿನಾಶಕ್ಕಾಗಿ ನಿನ್ನ ತಂದೆಯಿಂದ ಸೃಷ್ಟಿಸಲ್ಪಟ್ಟು, ರಕ್ಷಿಸಲ್ಪಟ್ಟನಷ್ಟೆ? ಆ ಶಿಖಂಡಿಯೇ ಮಹಾತ್ಮರಾದ

ಭೀಷ್ಮರ ಮರಣಕ್ಕೆ ಕಾರಣನಾದವನು.
ಪಾಂಚಾಲಾಶ್ಚಲಿತಾ ಧರ್ಮಾತ್ ಕ್ಷುದ್ರಾ ಮಿತ್ರಗುರುದ್ರುಹಃ |
ತ್ವಾಂ ಪ್ರಾಪ್ಯ ಸಹಸೋದರ್ಯಂ ಧಿಕ್ಕೃತಂ ಸರ್ವಸಾಧುಭಿಃ ॥ 18 ॥
ಸರ್ವಸಜ್ಜನರಿಂದ ಧಿಕ್ಕೃತರಾದ ನಿನ್ನನ್ನು ಮತ್ತು ನಿನ್ನ ಸಹೋದರನನ್ನು ಪಡೆದು, ಮಿತ್ರದ್ರೋಹಿಗಳೂ, ಗುರುದ್ರೋಹಿಗಳೂ, ಕ್ಷುದ್ರರೂ ಆದ ಪಾಂಚಾಲರು ಧರ್ಮಭ್ರಷ್ಟರಾಗಿದ್ದಾರೆ.
ಪುನಶ್ಚೇದೀದೃಶೀಂ ವಾಚಂ ಮತ್ಸಮೀಪೇ ವದಿಷ್ಯಸಿ |
ಶಿರಸ್ತೇ ಪಾತಯಿಷ್ಯಾಮಿ ಗದಯಾ ವಜ್ರಕಲ್ಪಯಾ ॥ 19 ॥
ನೀನು ನನ್ನ ಬಳಿಯಲ್ಲಿ ಪುನಃ ಇಂತಹ ಮಾತನ್ನಾಡಿದರೆ ವಜ್ರದಂತಹ ಗದೆಯಿಂದ ನಿನ್ನ ಶಿರಸ್ಸನ್ನು ಹೊಡೆದು ಉರುಳಿಸುವೆನು.
ಸಾತ್ವತೇನೈವಮಾಕ್ಷಿಪ್ತಃ ಪಾರ್ಷತಃ ಪರುಷಾಕ್ಷರಮ್ |
ಸಂರಬ್ಧಃ ಸಾತ್ಯಕಿಂ ಪ್ರಾಹ ಸಂಕ್ರುದ್ಧಃ ಪ್ರಹಸನ್ನಿವ ॥ 20 ॥
ಸಾತ್ಯಕಿಯಿಂದ ಉಗ್ರವಾದ ಮಾತುಗಳಿಂದ ಹೀಗೆ ನಿಂದಿಸಲ್ಪಟ್ಟ ಧೃಷ್ಟದ್ಯುಮ್ನನು ಕೋಪಗೊಂಡು ನಗುವವನಂತೆ ಸಾತ್ಯಕಿಯನ್ನು ಕುರಿತು ಮಾತನಾಡಿದನು.
ಧೃಷ್ಟದ್ಯುಮ್ನಃ
ಶ್ರೂಯತೇ ಶ್ರೂಯತೇ ಚೇತಿ ಕ್ಷಮ್ಯತೇ ಚೇತಿ ಮಾಧವ |
ನ ಚಾನಾರ್ಯ ಶುಭಂ ಸಾಧುಂ ಪುರುಷಂ ಕ್ಷೇಪ್ತುಮರ್ಹಸಿ ॥ 21 ॥
ಧೃಷ್ಟದ್ಯುಮ್ನ ಎಲೈ ಮಧುಕುಲೋತ್ಪನ್ನನಾದ ಸಾತ್ಯಕಿಯೇ, ಎಲೈ ಅನಾರ್ಯನೇ, ಕೇಳುತ್ತಿದ್ದೇನೆ, ಕೇಳುತ್ತಿದ್ದೇನೆ, ಕ್ಷಮಿಸುತ್ತಿದ್ದೇನೆ ಎಂದು ಸಜ್ಜನನಾದ ಪವಿತ್ರನಾದ ಪುರುಷನನ್ನು ನೀನು ನಿಂದಿಸಬೇಡ.
ಕ್ಷಮಾ ಪ್ರಶಸ್ಯತೇ ಲೋಕೇ ನ ತು ಪಾಪೋಽರ್ಹತಿ ಕ್ಷಮಾಮ್ |
ಕ್ಷಮಾವಂತಂ ಹಿ ಪಾಪಾತ್ಮಾ ಜಿತೋಽಯಮಿತಿ ಮನ್ಯತೇ ॥ 22 ॥
ಲೋಕದಲ್ಲಿ ಕ್ಷಮೆಯು ಪ್ರಶಂಸನೀಯವಾದುದು. ಆದರೆ ಪಾಪಿಯು ಕ್ಷಮೆಗೆ ಅರ್ಹನಲ್ಲ. ಕ್ಷಮಿಸುವವನನ್ನು ಪಾಪಾತ್ಮನು ಇವನು ಪರಾಜಿತನಾಗಿದ್ದಾನೆಂದು ತಿಳಿಯುತ್ತಾನೆ.
ಸ ತ್ವಂ ಕ್ಷುದ್ರಸಮಾಚಾರೋ ನೀಚಾತ್ಮಾ ಪಾಪನಿಶ್ಚಯಃ |
ಆಕೇಶಾಗ್ರಾನ್ನಖಾಗ್ರಾಚ್ಚ ವಕ್ತವ್ಯೋ ವಕ್ತುಮಿಚ್ಛಸಿ ॥ 23 ॥
ನೀನೇ ಕ್ಷುದ್ರವಾದ ಆಚಾರವುಳ್ಳವನು, ನೀಚನಾದವನು ಮತ್ತು ಪಾಪ ನಿರ್ಧಾರಗಳುಳ್ಳವನು. ನಖದ ತುದಿಯಿಂದ ಶಿರಸ್ಸಿನ ಕೇಶದ ತುದಿಯವರೆಗೂ ನಿಂದಿಸಲ್ಪಡಬೇಕಾದವನು. ನೀನು ನನ್ನನ್ನು ನಿಂದಿಸಲು ಇಚ್ಛಿಸುತ್ತಿದ್ದೀಯೆ.
ಯಃ ಸ ಭೂರಿಶ್ರವಾಶ್ಛಿನ್ನೇ ಭುಜೇ ಪ್ರಾಯಗತಸ್ತ್ವಯಾ |
ವಾರ್ಯಮಾಣೇನ ನಿಹತಸ್ತತಃ ಪಾಪತರಂ ನು ಕಿಮ್ ॥ 24 ॥
ಭುಜವು ಕತ್ತರಿಸಲ್ಪಟ್ಟ ಭೂರಿಶ್ರವನು ರಣರಂಗದಲ್ಲಿ ಪ್ರಾಯೋಪವೇಶಕ್ಕೆ ಕುಳಿತಾಗ ಎಲ್ಲರೂ ನಿಷೇಧಿಸಿದರೂ ಅವನನ್ನು ಕೊಂದೆಯಷ್ಟೆ? ಅದಕ್ಕಿಂತ ಹೆಚ್ಚಿನ ಪಾಪಕರ್ಮವು ಯಾವುದಿದೆ?
ವ್ಯೂಹಮಾನೋ ಮಯಾ ದ್ರೋಣೋ ದಿವ್ಯೇನಾಸ್ತ್ರೇಣ ಸಂಯುಗೇ |
ವಿಸೃಷ್ಟಶಸ್ತ್ರೋ ನಿಹತಃ ಕಿಂ ತತ್ರ ಕ್ರೂರ ದುಷ್ಕೃತಮ್ ॥ 25 ॥
ನಾನಾದರೆ ರಣರಂಗದಲ್ಲಿ ವ್ಯೂಹವನ್ನು ಮಾಡುತ್ತಿದ್ದ, ಶಸ್ತ್ರವನ್ನು ತ್ಯಜಿಸಿದ ದ್ರೋಣರನ್ನು ದಿವ್ಯಾಸ್ತ್ರದಿಂದ ಕೊಂದೆನು. ಎಲೈ ಕ್ರೂರನೇ, ಅದರಲ್ಲಿ ಪಾಪವೇನು?
ಅಯುದ್ಧ್ಯಮಾನಂ ಯಸ್ತ್ವಜೌ ತಥಾ ಪ್ರಾಯಗತಂ ಮುನಿಮ್ |
ಛಿನ್ನಬಾಹುಂ ಪರೈರ್ಹನ್ಯಾತ್ ಸಾತ್ಯಕೇ ಸ ಕಥಂ ಭವೇತ್ ॥ 26 ॥
ಎಲೈ ಸಾತ್ಯಕಿಯೇ, ರಣರಂಗದಲ್ಲಿ ಯುದ್ಧವನ್ನು ಮಾಡದ, ಪ್ರಾಯೋಪವೇಶಕ್ಕೆ ಕುಳಿತ, ಇನ್ನೊಬ್ಬರಿಂದ ಬಾಹುವು ಕತ್ತರಿಸಲ್ಪಟ್ಟ ಪುರುಷನನ್ನು ಕೊಲ್ಲುವುದು ಹೇಗೆ ಸರಿಯಾದೀತು?
ನಿಹತ್ಯ ತ್ವಾಂ ಯದಾ ಭೂಮೌ ಸ ವಿಕ್ರಾಮತಿ ವೀರ್ಯವಾನ್ |
ಕಿಂ ತದಾ ನ ನಿಹಂಸ್ಯೇನಂ ಭೂತ್ವಾ ಪುರುಷಸತ್ತಮಃ ॥ 27 ॥
ಪರಾಕ್ರಮಶಾಲಿಯಾದ ಭೂರಿಶ್ರವನು ನಿನ್ನನ್ನು ಹೊಡೆದು, ಭೂಮಿಯ ಮೇಲೆ ಕೆಡವಿ ಆಕ್ರಮಿಸಿದಾಗ ನೀನು ಶ್ರೇಷ್ಠ ಪುರುಷನಾಗಿ ಏಕೆ ಅವನನ್ನು ಕೊಲ್ಲಲಿಲ್ಲ?
ತ್ವಯಾ ಪುನರನಾರ್ಯೇಣ ಪೂರ್ವಂ ಪಾರ್ಥೇನ ನಿರ್ಜಿತಃ |
ಯದಾ ತದಾ ಹತಃ ಶೂರಃ ಸೌಮದತ್ತಿಃ ಪ್ರತಾಪವಾನ್ ॥ 28 ॥
ಮೊದಲು ಅರ್ಜುನನಿಂದ ಪರಾಜಿತನಾದ ಮೇಲೆ ಪುನಃ ಅನಾರ್ಯನಾದ ನಿನ್ನಿಂದ ಪ್ರತಾಪಶಾಲಿಯಾದ, ಶೂರನಾದ, ಸೋಮದತ್ತಪುತ್ರನಾದ ಭೂರಿಶ್ರವನು ಹತನಾದನು.
ಯತ್ರ ಯತ್ರ ತು ಪಾಂಡೂನಾಂ ದ್ರೋಣೋ ದ್ರಾವಯತೇ ಚಮೂಮ್ |
ಕಿರನ್ ಶರಸಹಸ್ರಾಣಿ ತತ್ರ ತತ್ರ ಪ್ರಯಾಮ್ಯಹಮ್ ॥ 29 ॥
ನಾನಾದರೆ ಎಲ್ಲೆಲ್ಲಿ ದ್ರೋಣರು ಪಾಂಡವರ ಸೇನೆಯನ್ನು ಸಾವಿರಾರು ಬಾಣಗಳನ್ನು ಪ್ರಯೋಗಿಸಿ ಚದುರಿಸುತ್ತಾರೆಯೋ ಅಲ್ಲೆಲ್ಲ ಹೋಗುತ್ತೇನೆ.
ಸ ತ್ವಮೇವಂವಿಧಂ ಕೃತ್ವಾ ಕರ್ಮ ಚಾಂಡಾಲವತ್ ಸ್ವಯಮ್ |

ವಕ್ತುಮಿಚ್ಛಸಿ ವಕ್ತವ್ಯಃ ಕಸ್ಮಾನ್ಮಾಂ ಪರುಷಾಣ್ಯಥ ॥ 30 ॥
ನೀನು ಅಂತಹ ಕರ್ಮವನ್ನು ಮಾಡದೆ ಸ್ವತಃ ಚಂಡಾಲರಿಗೆ ಯೋಗ್ಯವಾದ ಕರ್ಮವನ್ನು ಮಾಡಿ ನಿಂದಿಸಲ್ಪಡಬೇಕಾದ ನೀನು ನನಗೆ ಏಕೆ ಉಗ್ರವಾದ ಮಾತುಗಳನ್ನು ಆಡಲು ಬಯಸುತ್ತಿದ್ದೀಯೆ?
ಕರ್ತಾ ತ್ವಂ ಕರ್ಮಣೋಗ್ರಸ್ಯ ನಾಹಂ ವೃಷ್ಣಿಕುಲಾಧಮ |
ಪಾಪಾನಾಂ ಚ ತ್ವಮಾವಾಸಃ ಕರ್ಮಣಾಂ ಮಾ ಪುನರ್ವದ ॥ 31 ॥
ಎಲೈ ವೃಷ್ಣಿಕುಲಾಧಮನೇ, ಉಗ್ರವಾದ ಕರ್ಮವನ್ನು ಮಾಡುವವನು ನೀನು, ನಾನಲ್ಲ. ಪಾಪಕರ್ಮಗಳಿಗೆ ಆಶ್ರಯನಾದವನು ನೀನು. ಪುನಃ ನನ್ನ ಜೊತೆಯಲ್ಲಿ ಮಾತನಾಡಬೇಡ.
ಜೋಷಮಾಸ್ಸ್ವ ನ ಮಾಂ ಭೂಯೋ ವಕ್ತುಮರ್ಹಸ್ಯತಃ ಪರಮ್ |
ಅಧರೋತ್ತರಮೇತದ್ಧಿ ಯನ್ಮಾ ತ್ವಂ ವಕ್ತುಮಿಚ್ಛಸಿ ॥ 32 ॥
ಸುಮ್ಮನಿರು. ಇನ್ನು ಮುಂದೆ ನನ್ನ ಜೊತೆಯಲ್ಲಿ ಪುನಃ ಮಾತನಾಡಬೇಡ. ನೀನು ನನ್ನನ್ನು ನಿಂದಿಸಲು ಬಯಸುವುದು ತಲೆಕೆಳಗಾದ ವ್ಯಾಪಾರ.
ಅಥ ವಕ್ಷ್ಯಸಿ ಮಾಂ ಮೌರ್ಖ್ಯಾದ್ ಭೂಯಃ ಪರುಷಮೀದೃಶಮ್ |
ಗಮಯಿಷ್ಯಾಮಿ ಬಾಣೈಸ್ತ್ವಂ ಯುಧಿ ವೈವಸ್ವತಕ್ಷಯಮ್ ॥ 33 ॥
ಅಥವಾ ಮೂರ್ಖತನದಿಂದ ಪುನಃ ನೀನು ಇದೇ ರೀತಿಯ ಒರಟು ಮಾತುಗಳಿಂದ ನಿಂದಿಸಿದರೆ ಯುದ್ಧದಲ್ಲಿ ಬಾಣಗಳಿಂದ ನಿನ್ನನ್ನು ಯಮಲೋಕಕ್ಕೆ ಕಳುಹಿಸುವೆನು.
ನ ಚೈವ ಮೂರ್ಖ ಧರ್ಮೇಣ ಕೇವಲೇನೈವ ಶಕ್ಯತೇ |
ತೇಷಾಮಪಿ ಹ್ಯಧರ್ಮೇಣ ಚೇಷ್ಟಿತಂ ಶೃಣು ಯಾದೃಶಮ್ ॥ 34 ॥
ಎಲೈ ಮೂರ್ಖನೇ, ಕೇವಲ ಧರ್ಮದಿಂದ ಎಲ್ಲವನ್ನೂ ಸಾಧಿಸಲು ಸಾಧ್ಯವಿಲ್ಲ. ಕೌರವರು ಮಾಡಿದ ಅಧರ್ಮಗಳು ಎಂತಹವುಗಳೆಂದು ಕೇಳು.
ವಂಚಿತಃ ಪಾಂಡವಃ ಪೂರ್ವಮಧರ್ಮೇಣ ಯುಧಿಷ್ಠಿರಃ |
ದ್ರೌಪದೀ ಚ ಪರಿಕ್ಲಿಷ್ಟಾ ತಥಾಽಧರ್ಮೇಣ ಸಾತ್ಯಕೇ ॥ 35 ॥
ಪಾಂಡವನಾದ ಯುಧಿಷ್ಠಿರನು ಮೊದಲು ಅಧರ್ಮದಿಂದ ದ್ಯೂತದಲ್ಲಿ ವಂಚಿಸಲ್ಪಟ್ಟನು. ಎಲೈ ಸಾತ್ಯಕಿಯೇ, ಹಾಗೆಯೇ ಅಧರ್ಮದಿಂದಲೇ ದ್ರೌಪದಿಯು ಕ್ಲೇಶಗೊಳಿಸಲ್ಪಟ್ಟಳು.
ಪ್ರವ್ರಾಜಿತಾ ವನಂ ಸರ್ವೇ ಪಾಂಡವಾಃ ಸಹ ಕೃಷ್ಣಯಾ |
ಸರ್ವಸ್ವಮಪಕೃಷ್ಟಂ ಚ ತಥಾಽಧರ್ಮೇಣ ಬಾಲಿಶ ॥ 36 ॥
ಎಲೈ ಬಾಲಿಶನೇ, ಎಲ್ಲ ಪಾಂಡವರೂ ದ್ರೌಪದಿಯ ಜೊತೆಯಲ್ಲಿ ಅಧರ್ಮದಿಂದಲೇ ವನಕ್ಕೆ ಕಳುಹಿಸಲ್ಪಟ್ಟರು. ಅಧರ್ಮದಿಂದಲೇ ಅವರ ಸರ್ವಸ್ವವೂ ಅಪಹೃತವಾಯಿತು.
ಅಧರ್ಮೇಣಾಪಕೃಷ್ಟಶ್ಚ ಮದ್ರರಾಜಃ ಪರೈರಿತಃ |
ಇತೋಽಪ್ಯಧರ್ಮೇಣ ಹತೋ ಭೀಷ್ಮಃ ಕುರುಪಿತಾಮಹಃ |
ಭೂರಿಶ್ರವಾ ಹ್ಯಧರ್ಮೇಣ ತ್ವಯಾ ಧರ್ಮವಿದಾ ಹತಃ ॥ 37 ॥
ನಮ್ಮ ಬಳಿಗೆ ಬರುತ್ತಿದ್ದ ಮದ್ರರಾಜನಾದ ಶಲ್ಯನನ್ನು ಅವರು ಅಧರ್ಮದಿಂದಲೇ ಅಪಹರಿಸಿದರು. ಇದಕ್ಕಿಂತ ಹೆಚ್ಚಿನ ಅಧರ್ಮದಿಂದ ಕುರುಪಿತಾಮಹರಾದ ಭೀಷ್ಮರು ಹತರಾದರು. ಧರ್ಮಜ್ಞನಾದ ನಿನ್ನಿಂದ ಭೂರಿಶ್ರವನು ಹತನಾದನು.
ಏವಂ ಪರೈರಾಚರಿತಂ ಪಾಂಡವೇಯೈಶ್ಚ ಸಂಯುಗೇ |
ರಕ್ಷಮಾಣೈರ್ಜಯಂ ವೀರೈರ್ಧರ್ಮಜ್ಞೈರಪಿ ಸಾತ್ವತ ॥ 38 ॥
ಎಲೈ ಸಾತ್ವತನೇ, ಜಯವನ್ನು ಬಯಸುವ ವೀರರೂ, ಧರ್ಮಜ್ಞರೂ ಆದ ಪಾಂಡವರೂ ಮತ್ತು ಪರರೂ ಯುದ್ಧದಲ್ಲಿ ಅಧರ್ಮವನ್ನು ಆಚರಿಸಿದ್ದಾರೆ.
ದುರ್ಜ್ಞೇಯಃ ಪರಮೋ ಧರ್ಮಸ್ತಥಾಽಧರ್ಮಃ ಸುದುರ್ವಿದಃ |
ಯುದ್ಧ್ಯಸ್ವ ಕೌರವ್ಯೈಃ ಸಾರ್ಧಂ ಮಾ ಗಾಃ ಪಿತೃನಿವೇಶನಮ್ ॥ 39 ॥
ಶ್ರೇಷ್ಠವಾದ ಧರ್ಮವು ತಿಳಿಯಲು ಅಸಾಧ್ಯವಾದುದು. ಅಧರ್ಮವನ್ನು ತಿಳಿಯುವುದು ಅದಕ್ಕಿಂತಲೂ ಅಸಾಧ್ಯವಾದುದು. ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡು, ಪಿತೃಲೋಕಕ್ಕೆ ಹೋಗಬೇಡ.
ಸಂಜಯಃ
ಏವಮಾದೀನಿ ವಾಕ್ಯಾನಿ ಕ್ರೂರಾಣಿ ಪರುಷಾಣಿ ಚ |
ಶ್ರಾವಿತಃ ಸಾತ್ಯಕಿಃ ಶ್ರೀಮಾನಾಕಂಪಿತ ಇವಾಭವತ್ ॥ 40 ॥
ಸಂಜಯ ಇಂತಹ ಕ್ರೂರವಾದ ಮತ್ತು ಒರಟಾದ ಅನೇಕ ಮಾತುಗಳನ್ನು ಕೇಳಿದ ಕಾಂತಿಯುಕ್ತನಾದ ಸಾತ್ಯಕಿಯು ನಡುಗುವಂತಾದನು.
ತಚ್ಛ್ರುತ್ವಾ ಕ್ರೋಧತಾಮ್ರಾಕ್ಷಃ ಸಾತ್ಯಕಿಸ್ತತ್ವದದೇ ಗದಾಮ್ |
ವಿನಿಃಶ್ವಸ್ಯ ಯಥಾ ಸರ್ಪಃ ಪ್ರಣಿಧಾಯ ರಥೇ ಧನುಃ ॥ 41 ॥
ಆ ಮಾತುಗಳನ್ನು ಕೇಳಿದ ಸಾತ್ಯಕಿಯು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಸರ್ಪದಂತೆ ನಿಟ್ಟುಸಿರನ್ನು ಬಿಟ್ಟು, ರಥದಲ್ಲಿ ಧನುಸ್ಸನ್ನು ಇಟ್ಟು ಕೈಯಲ್ಲಿ ಗದೆಯನ್ನು ತೆಗೆದುಕೊಂಡನು.
ತತೋಽಭಿಪತ್ಯ ಪಾಂಚಾಲ್ಯಂ ಸಂರಂಭೇಣೇದಮಬ್ರವೀತ್ |

ನ ತ್ವಾಂ ವಕ್ಷ್ಯಾಮಿ ಪರುಷಂ ಹನಿಷ್ಯೇ ತ್ವಾಂ ವಧಕ್ಷಮಮ್ ॥ 42 ॥
ಅನಂತರ ವೇಗವಾಗಿ ಕೋಪದಿಂದ ಧೃಷ್ಟದ್ಯುಮ್ನನ ಕಡೆಗೆ ಸಾಗಿ ನಿನ್ನ ಜೊತೆಯಲ್ಲಿ ಮಾತನಾಡುವುದಿಲ್ಲ. ಕ್ರೂರನೂ, ವಧೆಗೆ ಯೋಗ್ಯನಾದವನೂ ಆದ ನಿನ್ನನ್ನು ಕೊಲ್ಲುವೆನು ಎಂದು ಹೇಳಿದನು.
ತಮಾಪತಂತಂ ಸಹಸಾ ಮಹಾಬಲಮಮರ್ಷಣಮ್ |
ಪಾಂಚಾಲ್ಯಾಯಾಭಿಸಂಕ್ರುದ್ಧಮಂತಕಾಯಾಂತಕೋಪಮಮ್ ॥ 43 ॥
ಚೋದಿತೋ ವಾಸುದೇವೇನ ಭೀಮಸೇನೋ ಮಹಾಬಲಃ |
ಅವಪ್ಲುತ್ಯ ರಥಾತ್ ತೂರ್ಣಂ ಬಾಹುಭ್ಯಾಂ ಸಮವಾರಯತ್ ॥ 44 ॥
ಮಹಾಬಲನೂ, ರೋಷವುಳ್ಳವನೂ, ಗದೆಯನ್ನು ಹಿಡಿದು ವೇಗವಾಗಿ ಸಾಗುತ್ತಿರುವವನೂ, ಅಂತಕನ ಕಡೆಗೆ ಅಂತಕನು ಬಂದಂತೆ ಧೃಷ್ಟದ್ಯುಮ್ನನ ಕಡೆಗೆ ಬರುತ್ತಿರುವವನೂ ಆದ ಸಾತ್ಯಕಿಯನ್ನು ಕೃಷ್ಣನಿಂದ ಪ್ರೇರಿಸಲ್ಪಟ್ಟ ಮಹಾಬಲನಾದ ಭೀಮಸೇನನು ಶೀಘ್ರವಾಗಿ ತನ್ನ ರಥದಿಂದ ಕೆಳಗೆ ಹಾರಿ ತನ್ನ ಬಾಹುಗಳಿಂದ ತಡೆದನು.
ದ್ರವಮಾಣಂ ತಥಾ ಕ್ರುದ್ಧಂ ಸಾತ್ಯಕಿಂ ಪಾಂಡವೋ ಬಲೀ |
ಪ್ರಸ್ಕಂದಮಾನಮಾದಾಯ ಜಗಾಮ ಬಲಿನಂ ಬಲಾತ್ ॥ 45 ॥
ಆ ರೀತಿಯಲ್ಲಿ ಕ್ರೋಧಗೊಂಡು ವೇಗವಾಗಿ ಸಾಗುತ್ತಿದ್ದ ಸಾತ್ಯಕಿಯನ್ನು ಅವನು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರೂ ಬಲಿಷ್ಠನಾದ ಪಾಂಡವನಾದ ಭೀಮನು ಬಾಹುಗಳಲ್ಲಿ ಹಿಡಿದುಕೊಂಡೇ ಹೆಜ್ಜೆಗಳನ್ನು ಹಾಕಿದನು.
ಸ್ಥಿತ್ವಾ ವಿಷ್ಟಭ್ಯ ಚರಣೌ ಭೀಮೇನ ಶಿನಿಪುಂಗವಃ |
ನಿಗೃಹೀತಃ ಪದೇ ಷಷ್ಠೇ ಬಲೇನ ಬಲಿನಾಂ ವರಃ ॥ 46 ॥
ನಿಂತು, ತನ್ನ ಪಾದಗಳನ್ನು ಭದ್ರವಾಗಿ ಊರಿ ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನು ಆರನೆಯ ಹೆಜ್ಜೆಯಲ್ಲಿ ಶಿನಿಪುಂಗವನಾದ ಸಾತ್ಯಕಿಯನ್ನು ನಿಲ್ಲಿಸಿದನು.
ಅವರುಹ್ಯ ರಥಾತ್ ತಂ ತು ಹ್ರಿಯಮಾಣಂ ಬಲೀಯಸಾ |
ಉವಾಚ ಶ್ಲಕ್ಷ್ಣಯಾ ವಾಚಾ ಸಹದೇವೋ ವಿಶಾಂಪತೇ ॥ 47 ॥
ಎಲೈ ರಾಜನೇ, ಬಲಿಷ್ಠನಾದ ಸಾತ್ಯಕಿಯಿಂದ ಎಳೆದುಕೊಂಡು ಹೋಗಲ್ಪಡುತ್ತಿದ್ದ ಭೀಮನನ್ನು ನೋಡಿ ಸಹದೇವನು ತನ್ನ ರಥದಿಂದ ಇಳಿದು ವಿವೇಕದಿಂದ ಮಾತುಗಳನ್ನು ಆಡಿದನು.
ಅಸ್ಮಾಕಂ ಪುರುಷವ್ಯಾಘ್ರ ಮಿತ್ರಮನ್ಯನ್ನ ವಿದ್ಯತೇ |
ಪರಮಂಧಕವೃಷ್ಣಿಭ್ಯಃ ಪಾಂಚಾಲೇಭ್ಯಶ್ಚ ಮಾಧವ ॥ 48 ॥
ಎಲೈ ಪುರುಷವ್ಯಾಘ್ರನೇ, ಮಾಧವನೇ, ನಮಗೆ ಅಂಧಕ-ವೃಷ್ಣಿಗಳನ್ನು ಮತ್ತು ಪಾಂಚಾಲರನ್ನು ಬಿಟ್ಟು ಬೇರೆ ಯಾರೂ ಮಿತ್ರರಿಲ್ಲ.
ತಥೈವಾಂಧಕವೃಷ್ಣೀನಾಂ ತವ ಚೈವ ವಿಶೇಷತಃ |
ಕೃಷ್ಣಸ್ಯ ಚ ತಥಾಸ್ಮತ್ತೋ ಮಿತ್ರಮನ್ಯನ್ನ ವಿದ್ಯತೇ ॥ 49 ॥
ಹಾಗೆಯೇ ಅಂಧಕ-ವೃಷ್ಣಿಗಳಿಗೂ ಮತ್ತು ವಿಶೇಷವಾಗಿ ನಿನಗೂ ಮತ್ತು ಕೃಷ್ಣನಿಗೂ ನಮ್ಮನ್ನು ಬಿಟ್ಟು ಬೇರೆ ಮಿತ್ರರಿಲ್ಲ.
ಪಾಂಚಾಲಾನಾಂ ಚ ವಾರ್ಷ್ಣೇಯ ಸಮುದ್ರಾಂತಾಂ ವಿಚಿನ್ವತಾಮ್ |
ನಾನ್ಯದಸ್ತಿ ಪರಂ ಮಿತ್ರಂ ಯಥಾ ಪಾಂಡವವೃಷ್ಣಯಃ ॥ 50 ॥
ಎಲೈ ವಾರ್ಷ್ಣೇಯನೇ, ಪಾಂಚಾಲರಿಗೂ ಸಹ ಸಮುದ್ರದ ಕೊನೆಯವರೆಗೂ ಹುಡುಕಿದರೂ ಪಾಂಡವರಿಗಿಂತ ಮತ್ತು ವೃಷ್ಣಿಗಳಿಗಿಂತ ಅಧಿಕರಾದ ಮಿತ್ರರು ಇನ್ನೊಬ್ಬರಿಲ್ಲ.
ಸ ಭವಾನೀದೃಶಂ ಮಿತ್ರಂ ಮನ್ಯತೇ ಚ ಯಥಾ ಭವಾನ್ |
ಭವಂತಶ್ಚ ಯಥಾಸ್ಮಾಕಂ ಭವತಾಂ ಚ ತಥಾ ವಯಮ್ ॥ 51 ॥
ನೀನು ಇಂತಹ ಮಿತ್ರನನ್ನು ಬೇರೆ ರೀತಿಯಲ್ಲಿ ನೋಡುತ್ತಿದ್ದೀಯೆ. ನೀನು ನಮಗೆ ಹೇಗೆಯೋ, ನಾವೂ ನಿನಗೆ ಹಾಗೆಯೇ ಸರಿ.
ಸ ಏವಂ ಸರ್ವಧರ್ಮಜ್ಞೋ ಮಿತ್ರಧರ್ಮಮನುಸ್ಮರನ್ |
ನಿಯಚ್ಛ ಮನ್ಯುಂ ಪಾಂಚಾಲ್ಯಾತ್ ಪ್ರಶಾಮ್ಯ ಶಿನಿಪುಂಗವ ॥ 52 ॥
ಎಲೈ ಶಿನಿಪುಂಗವನೇ, ಎಲ್ಲ ಧರ್ಮವನ್ನೂ ತಿಳಿದ ನೀನು ಮಿತ್ರಧರ್ಮವನ್ನು ಸ್ಮರಿಸಿ, ಧೃಷ್ಟದ್ಯುಮ್ನನ ಮೇಲಿರುವ ಸಿಟ್ಟನ್ನು ನಿಯಂತ್ರಿಸಿ ಶಾಂತಿಯನ್ನು ಹೊಂದು.
ಪಾರ್ಷತಸ್ಯ ಕ್ಷಮ ತ್ವಂ ವೈ ಕ್ಷಮತಾಂ ತವ ಪಾರ್ಷತಃ |
ವಯಂ ಕ್ಷಮಯಿತಾರಶ್ಚ ಕಿಮನ್ಯತ್ರ ಶಮಾದ್ ಭವೇತ್ ॥ 53 ॥
ಧೃಷ್ಟದ್ಯುಮ್ನನ ಅಪರಾಧವನ್ನು ನೀನು ಕ್ಷಮಿಸು, ನಿನ್ನನ್ನೂ ಧೃಷ್ಟದ್ಯುಮ್ನನು ಕ್ಷಮಿಸಲಿ. ನಾವು ಕ್ಷಮಿಸುವವರು. ಕ್ಷಮೆಯನ್ನು ಬಿಟ್ಟು ಬೇರೆ ಯಾವುದರಿಂದ ಏನಾದೀತು? (ಎಂದು ಹೇಳಿದನು).
ಸಂಜಯಃ
ಪ್ರಶಾಮ್ಯಮಾನೇ ಶೈನೇಯೇ ಸಹದೇವೇನ ಮಾರಿಷ |
ಪಾಂಚಾಲರಾಜಸ್ಯ ಸುತಃ ಪ್ರಹಸನ್ನಿದಮಬ್ರವೀತ್ ॥ 54 ॥
ಸಂಜಯ ಎಲೈ ಶ್ರೇಷ್ಠನೇ, ಸಹದೇವನ ಮಾತುಗಳಿಂದ ಸಾತ್ಯಕಿಯು ಶಾಂತನಾಗುತ್ತಿರಲು ಪಾಂಚಾಲರಾಜನ ಪುತ್ರನಾದ ಧೃಷ್ಟದ್ಯುಮ್ನನು ನಗುತ್ತಾ ಈ ಮಾತನ್ನು ಆಡಿದನು.
ಧೃಷ್ಟದ್ಯುಮ್ನಃ
ಮುಂಚ ಮುಂಚ ಶಿನೇಃ ಪೌತ್ರಂ ಭೀಮ ಯುದ್ಧಮದಾನ್ವಿತಮ್ |

ಆಸಾದಯತು ಮಾಮೇಷ ಧರಾಧರಮಿವಾನಿಲಃ ॥ 55 ॥
ಧೃಷ್ಟದ್ಯುಮ್ನ ಎಲ್ಲ ಭೀಮಸೇನನನ್ನೇ, ಯುದ್ಧಮದಾನ್ವಿತನಾದ ಶಿನಿಯ ಮೊಮ್ಮಗನಾದ ಸಾತ್ಯಕಿಯನ್ನು ಬಿಡು, ಬಿಡು. ವಾಯುವು ಪರ್ವತವನ್ನು ಅಪ್ಪಳಿಸಿದಂತೆ ನನ್ನನ್ನು ಇವನು ಹೊಂದಲಿ.
ಯಾವದಸ್ಯ ಶಿತೈರ್ಬಾಣೈಃ ಸಂರಂಭಂ ವಿನಯಾಮ್ಯಹಮ್ |
ಯುದ್ಧಶ್ರದ್ಧಾಂ ಚ ಕೌಂತೇಯ ಜೀವಿತಸ್ಯ ಚ ಸಂಯುಗೇ ॥ 56 ॥
ಎಲ್ಲ ಕೌಂತೇಯನೇ, ನಾನು ತೀಕ್ಷ್ಣವಾದ ಬಾಣಗಳಿಂದ ಅವನ ಕೋಪವನ್ನೂ, ಯುದ್ಧಶ್ರದ್ಧೆಯನ್ನೂ ಮತ್ತು ಜೀವಿತವನ್ನೂ ವಿನಾಶಗೊಳಿಸುತ್ತೇನೆ.
ಕಿಂ ನು ಶಕ್ಯಂ ಮಯಾ ಕರ್ತುಂ ಕಾರ್ಯಂ ಯದಿದಮುದ್ಯತಮ್ |
ಸುಮಹತ್ಪಾಂಡುಪುತ್ರಾಣಾಮಾಯಾಂತ್ಯೇತೇ ಹಿ ಕೌರವಾಃ ॥ 57 ॥
ಆದರೆ ಏನು ಮಾಡಲಿ, ಪಾಂಡವರಿಗೆ ದೊಡ್ಡ ಕಾರ್ಯವು ಈಗ ಪ್ರಾಪ್ತವಾಗಿದೆ. ಈ ಕೌರವರು ಯುದ್ಧಕ್ಕಾಗಿ ಬರುತ್ತಿದ್ದಾರೆ.
ಅಥ ವಾ ಫಲ್ಗುನಃ ಸರ್ವಾನ್ ವಾರಯಿಷ್ಯತಿ ಸಂಯುಗೇ |
ಅಹಮಪ್ಯಸ್ಯ ಮೂರ್ಧಾನಂ ಪಾತಯಿಷ್ಯಾಮಿ ಸಾಯಕೈಃ ॥ 58 ॥
ಅಥವಾ ಅರ್ಜುನನು ಯುದ್ಧದಲ್ಲಿ ಅವರೆಲ್ಲರನ್ನೂ ತಡೆಯುವನು. ನಾನು ಬಾಣಗಳಿಂದ ಇವನ ತಲೆಯನ್ನು ಕೆಡವುವೆನು.
ಮನ್ಯತೇ ಛಿನ್ನಬಾಹುಂ ಮಾಂ ಭೂರಿಶ್ರವಸಮಾಹವೇ |
ಉತ್ಸೃಜ್ಯೈನಮಹಂ ವೈನಮೇಷ ಮಾಂ ವಾ ಹನಿಷ್ಯತಿ ॥ 59 ॥
ಇವನು ನನ್ನನ್ನು ಬಾಹುವು ಕತ್ತರಿಸಲ್ಪಟ್ಟ ಭೂರಿಶ್ರವನೆಂದು ತಿಳಿದಿದ್ದಾನೆ. ಅವನನ್ನು ಬಿಡು. ನಾನು ಅವನನ್ನಾಗಲೀ, ಅವನು ನನ್ನನ್ನಾಗಲೀ ಕೊಲ್ಲುವೆವು (ಎಂದು ಹೇಳಿದನು).
ಸಂಜಯಃ
ಶೃಣ್ವನ್ ಪಾಂಚಾಲವಾಕ್ಯಾನಿ ಸಾತ್ಯಕಿಃ ಸರ್ಪವಚ್ಚ್ವಸನ್ |
ಭೀಮಬಾಹ್ವಂತರೇ ಸಕ್ತೋ ವಿಸ್ಫುರತ್ಯನಿಶಂ ಬಲೀ ॥ 60 ॥
ಸಂಜಯ ಧೃಷ್ಟದ್ಯುಮ್ನನ ಮಾತುಗಳನ್ನು ಕೇಳಿ ಸಾತ್ಯಕಿಯು ಭೀಮನ ಭುಜದ ಮಧ್ಯದಲ್ಲಿಯೇ ಇದ್ದು ಸರ್ಪದಂತೆ ಉಸಿರನ್ನು ಬಿಡುತ್ತಾ ಬಲಿಷ್ಠನಾದ ಅವನು ಬಿಡಿಸಿಕೊಳ್ಳಲು ಸತತ ಪ್ರಯತ್ನವನ್ನು ಮಾಡಿದನು.
ತ್ವರಯಾ ವಾಸುದೇವಶ್ಚ ಧರ್ಮರಾಜಶ್ಚ ಮಾರಿಷ |
ಯತ್ನೇನ ಮಹತಾ ವೀರೌ ವಾರಯಾಮಾಸತುಸ್ತತಃ ॥ 61 ॥
ಎಲ್ಲ ಶ್ರೇಷ್ಠನೇ, ಆಗ ವೀರರಾದ ಕೃಷ್ಣ ಮತ್ತು ಯುಧಿಷ್ಠಿರರು ದೊಡ್ಡ ಪ್ರಯತ್ನವನ್ನು ಮಾಡಿ ತ್ವರೆಯಿಂದ ಅವನನ್ನು ತಡೆದರು.
ನಿವಾರ್ಯ ಪರಮೇಷ್ವಾಸೌ ಕ್ರೋಧಸಂರಕ್ತಲೋಚನೌ |
ಯುಯುತ್ಸವಃ ಪರಾನ್ ಸಂಖ್ಯೇ ಪ್ರತೀಯುಃ ಕ್ಷತ್ರಿಯರ್ಷಭಾಃ ॥ 62 ॥
ಕ್ರೋಧದಿಂದ ರಕ್ತಲೋಚನರಾದ ಮಹಾಧನುರ್ಧಾರಿಗಳಾದ ಆ ಇಬ್ಬರನ್ನು ತಡೆದು ಕ್ಷತ್ರಿಯರ್ಷಭರು ಕೌರವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಹೊರಟರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಅಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂದನೆಯ ಅಧ್ಯಾಯ
ಅಶ್ವತ್ಥಾಮರಿಂದ ನಾರಾಯಣಾಸ್ತ್ರ ಪ್ರಯೋಗ.
ಕೃಷ್ಣನ ವಚನದಂತೆ ಯೋಧರ ಆತ್ಮರಕ್ಷಣೆ.
ಭೀಮಸೇನನ ಶಿರಸ್ಸಿನಲ್ಲಿ ಅಸ್ತ್ರದ ಪ್ರಜ್ವಲನ.
ಸಂಜಯಃ
ತತಃ ಸ ಕದನಂ ಚಕ್ರೇ ರಿಪೂಣಾಂ ದ್ರೋಣನಂದನಃ |
ಯುಗಾಂತೇ ಸರ್ವಭೂತಾನಾಂ ಕಾಲಸೃಷ್ಟ ಇವಾಂತಕಃ ॥ 1 ॥
ಸಂಜಯ ಅನಂತರ ದ್ರೋಣಪುತ್ರರಾದ ಅಶ್ವತ್ಥಾಮರು ಯುಗಾಂತಕಾಲದಲ್ಲಿ ಸೃಷ್ಟನಾದ ಯಮನು ಸರ್ವಭೂತಗಳನ್ನು ಸಂಹರಿಸುವಂತೆ ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿದರು.
ಧ್ವಜದ್ರುಮಂ ಶಸ್ತ್ರಶೃಂಗಂ ಹತನಾಗಮಹಾಶಿಲಮ್ |
ಅಶ್ವಕಿಂಪುರುಷಾಕೀರ್ಣಂ ಶರಾಸನಲತಾವೃತಮ್ ॥ 2 ॥
ಶೂಲಕ್ರವ್ಯಾದಸಂಘುಷ್ಟಂ ಭೂತಯಕ್ಷಗಣಾಕುಲಮ್ |
ನಿಹತ್ಯ ಶಾತ್ರವಾನ್ ಭಲ್ಲೈಃ ಸೋಽಚಿನೋದ್ ದೇಹಪರ್ವತಮ್ ॥3॥
ತಮ್ಮ ಭಲ್ಲಗಳಿಂದ ಶತ್ರುಗಳನ್ನು ಕೊಂದು ಅಶ್ವತ್ಥಾಮರು ಧ್ವಜಗಳೆಂಬ ವೃಕ್ಷಗಳಿಂದ ಕೂಡಿದ, ಶಸ್ತ್ರಗಳೆಂಬ ಶಿಖರದಿಂದ ಕೂಡಿದ, ಮೃತವಾದ ಗಜಗಳೆಂಬ ಕೋಡುಗಲ್ಲುಗಳಿಂದ ಕೂಡಿದ, ಅಶ್ವಗಳೆಂಬ ಕಿಂಪುರುಷರಿಂದ ಕೂಡಿದ, ಧನುಸ್ಸುಗಳೆಂಬ ರಥಗಳಿಂದ ಕೂಡಿದ, ಶೂರರೆಂಬ ಮಾಂಸಾಹಾರಿ ಪ್ರಾಣಿಗಳಿಂದ ಕೂಡಿದ, ಭೂತ-ಯಕ್ಷಗಣದಿಂದ ನಿಬಿಡವಾದ ದೇಹಪರ್ವತವನ್ನು ರಾಶಿ

ಮಾಡಿದರು.
ತತೋ ವೇಗೇನ ಮಹತಾ ವಿನದ್ಯ ಸ ನರರ್ಷಭಃ |
ಪ್ರತಿಜ್ಞಾಂ ಶ್ರಾವಯಾಮಾಸ ಪುನರೇವ ತವಾತ್ಮಜಮ್ ॥ 4 ॥
ಅನಂತರ ಪುರುಷ ಶ್ರೇಷ್ಠರಾದ ಅವರು ವೇಗದಿಂದ ದೊಡ್ಡ ನಾದವನ್ನು ಮಾಡಿ ಪುನಃ ನಿನ್ನ ಪುತ್ರನಿಗೆ ತಮ್ಮ ಪ್ರತಿಜ್ಞೆಯನ್ನು ತಿಳಿಸಿದರು.
ಯಸ್ಮಾದ್ಯುಧ್ಯನ್ ತಮಾಚಾರ್ಯಂ ಧರ್ಮಕಂಚುಕಮಾಸ್ಥಿತಃ |
ಮುಂಚ ಶಸ್ತ್ರಮಿತಿ ಪ್ರಾಹ ಕುಂತೀಪುತ್ರೋ ಯುಧಿಷ್ಠಿರಃ ॥ 5 ॥
ತಸ್ಮಾತ್ ಸಂಪಶ್ಯತಸ್ತಸ್ಯ ದ್ರಾವಯಿಷ್ಯಾಮಿ ವಾಹಿನೀಮ್ |
ವಿದ್ರಾವ್ಯ ಸತ್ಯಂ ಹಂತಾಸ್ಮಿ ಪಾಪಂ ಪಾಂಚಾಲ್ಯಮೇವ ತು ॥ 6 ॥
ಸರ್ವಾನೇತಾನ್ ಹನಿಷ್ಯಾಮಿ ಯದಿ ಯೋತ್ಸ್ಯಂತಿ ಮಾಂ ರಣೇ |
ಸತ್ಯಂ ತೇ ಪ್ರತಿಜಾನಾಮಿ ಪರಾವರ್ತಯ ವಾಹಿನೀಮ್ ॥ 7 ॥
ಯಾವ ಕಾರಣದಿಂದ ಕುಂತೀಪುತ್ರನಾದ ಯುಧಿಷ್ಠಿರನು ಯುದ್ಧವನ್ನು ಮಾಡುತ್ತಾ ಧರ್ಮದ ಸೋಗನ್ನು ಧರಿಸಿ ಆಚಾರ್ಯರನ್ನು ಕುರಿತು- `ಶಸ್ತ್ರತ್ಯಾಗವನ್ನು ಮಾಡಿ. ಎಂದು ಹೇಳಿದನೋ ಆ ಕಾರಣದಿಂದ ಅವನು ನೋಡುತ್ತಿರುವಂತೆಯೇ ಅವನ ಸೈನ್ಯವನ್ನು ಚದುರಿಸುವೆನು. ಅವನ ಸೈನ್ಯವನ್ನು ಚದುರಿಸಿ ಸತ್ಯವಾಗಿ ಪಾಪಿಯಾದ ಧೃಷ್ಟದ್ಯುಮ್ನನನ್ನು ಕೊಲ್ಲುವೆನು. ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ಇವರೆಲ್ಲರನ್ನೂ ನಾನು ಕೊಲ್ಲುವೆನು. ಎಲೈ ದುರ್ಯೋಧನನೇ, ನಿನಗೆ ಸತ್ಯ ಪ್ರತಿಜ್ಞೆಯನ್ನು ಮಾಡಿ ಹೇಳುತ್ತಿದ್ದೇನೆ, ಸೈನ್ಯವನ್ನು ಹಿಂದಿರುಗಿಸು' (ಎಂದು ಹೇಳಿದರು).
ತಚ್ಛ್ರುತ್ವಾ ತವ ಪುತ್ರಸ್ತು ವಾಹಿನೀಂ ಪರ್ಯವರ್ತಯತ್ |
ಸಿಂಹನಾದೇನ ಮಹತಾ ವ್ಯಪೋಹ್ಯ ಸುಮಹದ್ಭಯಮ್ ॥ 8 ॥
ಅದನ್ನು ಕೇಳಿದ ನಿನ್ನ ಪುತ್ರನು ಉಂಟಾದ ದೊಡ್ಡ ಭಯವನ್ನು ತ್ಯಜಿಸಿ ದೊಡ್ಡ ಸಿಂಹನಾದದಿಂದ ಸೈನ್ಯವನ್ನು ಹಿಂದಿರುಗಿಸಿದನು.
ತತಃ ಸಮಾಗಮೋ ರಾಜನ್ ಕುರುಪಾಂಡವಸೇನಯೋಃ |
ಪುನರೇವಾಭವತ್ ತೀವ್ರಃ ಪೂರ್ಣಸಾಗರಯೋರಿವ ॥ 9 ॥
ಎಲೈ ರಾಜನೇ, ಅನಂತರ ಕುರು-ಪಾಂಡವರ ಸೇನೆಗಳಿಗೆ ಎರಡು ಸಾಗರಗಳಿಗೆ ಉಂಟಾಗುವಂತೆ ತೀವ್ರವಾದ ಸಮಾಗಮವುಂಟಾಯಿತು.
ಸಂರಬ್ಧಾ ಹಿ ಸ್ಥಿರೀಭೂತಾ ದ್ರೋಣಪುತ್ರೇಣ ಕೌರವಾಃ |
ಉದಗ್ರಾಃ ಪಾಂಡುಪಾಂಚಾಲಾ ದ್ರೋಣಸ್ಯ ನಿಧನೇನ ಚ ॥ 10 ॥
ಕೋಪಗೊಂಡ ಕೌರವರು ದ್ರೋಣಪುತ್ರರಾದ ಅಶ್ವತ್ಥಾಮರ ಮಾತುಗಳಿಂದ ಸ್ಥಿರವಾಗಿ ನಿಂತರು. ಪಾಂಡು-ಪಾಂಚಾಲರು ದ್ರೋಣರ ವಧೆಯಿಂದ ಸನ್ನದ್ಧರಾಗಿ ನಿಂತರು.
ತೇಷಾಂ ಪರಮಹೃಷ್ಟಾನಾಂ ಜಯಮಾತ್ಮನಿ ಪಶ್ಯತಾಮ್ |
ಸಂರಬ್ಧಾನಾಂ ಮಹಾವೇಗಃ ಪ್ರಾದುರಾಸೀದ್ ರಣಾಜಿರೇ ॥ 11 ॥
ಬಹಳ ಸಂತೋಷಗೊಂಡು ತಮ್ಮ ಜಯವನ್ನು ಕಾಣುವ ಕ್ರುದ್ಧರಾದ ಅವರ ಮಹಾವೇಗವು ರಣಾಂಗಣದಲ್ಲಿ ಕಂಡುಬಂದಿತು.
ಯಥಾ ಶಿಲೋಚ್ಚಯೇ ಶೈಲಃ ಸಾಗರೇ ಸಾಗರೋ ಯಥಾ |
ಪ್ರತಿಹನ್ಯೇತ ರಾಜೇಂದ್ರ ತಥಾऽऽಸನ್ ಕುರುಪಾಂಡವಾಃ ॥ 12 ॥
ಎಲೈ ರಾಜೇಂದ್ರನೇ, ಪರ್ವತದಿಂದ ಪರ್ವತವನ್ನು ಹೊಡೆದಂತೆ, ಸಾಗರದಿಂದ ಸಾಗರವನ್ನು ಹೊಡೆದಂತೆ ಕುರು-ಪಾಂಡವರು ಹೊಡೆದಾಡಿದರು.
ತತಃ ಶಂಖಸಹಸ್ರಾಣಿ ಭೇರೀಣಾಮಯುತಾನಿ ಚ |
ಅವಾದಯಂತ ಸಂಹೃಷ್ಟಾಃ ಕುರುಪಾಂಡವಸೈನಿಕಾಃ ॥ 13 ॥
ಆಗ ಕುರು-ಪಾಂಡವ ಯೋಧರು ಸಂತೋಷಗೊಂಡು ಸಹಸ್ರ ಶಂಖಗಳನ್ನು ಊದಿ, ಹತ್ತು-ಸಹಸ್ರ ಭೇರಿಗಳನ್ನು ಬಾರಿಸಿದರು.
ತತೋ ನಿರ್ಮಥ್ಯಮಾನಸ್ಯ ಸಾಗರಸ್ಯೇವ ನಿಸ್ವನಃ |
ಅಭವತ್ ತಸ್ಯ ಸೈನ್ಯಸ್ಯ ಸುಮಹಾನದ್ಭುತೋಪಮಃ ॥ 14 ॥
ಆಗ ಎರಡು ಸೈನ್ಯಗಳು ಯುದ್ಧ ಮಾಡುತ್ತಿರಲು ಕಡೆಯಲ್ಪಟ್ಟ ಸಾಗರದ ಘೋಷದಂತೆ ಅದ್ಭುತವಾದ ದೊಡ್ಡ ನಾದವು ಉಂಟಾಯಿತು.
ಪ್ರಾದುಶ್ಚಕ್ರೇ ತತೋ ದ್ರೌಣಿರಸ್ತ್ರಂ ನಾರಾಯಣಂ ತದಾ |
ಅಭಿಸಂಧಾಯ ಪಾಂಡೂನಾಂ ಪಾಂಚಾಲಾನಾಂ ಚ ವಾಹಿನೀಮ್ ॥
ಆಗ ಅಶ್ವತ್ಥಾಮರು ಪಾಂಡವರ ಮತ್ತು ಪಾಂಚಾಲರ ಸೈನ್ಯವನ್ನು ಉದ್ದೇಶಿಸಿ ನಾರಾಯಣಾಸ್ತ್ರವನ್ನು ಪ್ರಯೋಗಿಸಿದರು.
ಪ್ರಾದುರಾಸಂಸ್ತತೋ ಬಾಣಾ ದೀಪ್ತಾಗ್ರಾಃ ಖೇ ಸಹಸ್ರಶಃ |
ಪಾಂಡವಾನ್ ಭಕ್ಷಯಿಷ್ಯಂತೋ ದೀಪ್ತಾಸ್ಯಾ ಇವ ಪನ್ನಗಾಃ ॥ 16 ॥
ಆಗ ಆಕಾಶದಲ್ಲಿ ಜ್ವಲಿಸುವ ತುದಿಯುಳ್ಳ ಸಹಸ್ರಾರು ಬಾಣಗಳು ಜ್ವಲಿಸುವ ಮುಖವುಳ್ಳ ಸರ್ಪಗಳಂತೆ ಪಾಂಡವರನ್ನು ಭಕ್ಷಿಸುತ್ತಾ ಪ್ರಾದುರ್ಭವಿಸಿದವು.
ತೇ ದಿಶಃ ಖಂ ಚ ಸೈನ್ಯಂ ಚ ಸಮಾವೃಣ್ವನ್ ಮಹಾಹವೇ |
ಮುಹೂರ್ತಾದ್ ಭಾಸ್ಕರಸ್ಯೇವ ರಾಜಲ್ಲೋಕಂ ಗಭಸ್ತಯಃ ॥ 17 ॥

ಎಲ್ಲೈ ರಾಜನ್, ಸೂರ್ಯನ ಕಿರಣಗಳು ವ್ಯಾಪಿಸುವಂತೆ ಒಂದು ಮುಹೂರ್ತದಲ್ಲಿ ರಣರಂಗದಲ್ಲಿ ಆ ಬಾಣಗಳು ಎಲ್ಲ ದಿಕ್ಕುಗಳನ್ನೂ, ಅಂತರಿಕ್ಷವನ್ನೂ ಮತ್ತು ಸೈನ್ಯಗಳನ್ನೂ ವ್ಯಾಪಿಸಿದವು.
ತಥಾಪರೇ ದ್ಯೋತಮಾನಾ ಜ್ಯೋತೀಂಷೀವಾಂಬರೇಽಮಲೇ |
ಪ್ರಾದುರಾಸನ್ ಮಹೀಪಾಲ ಕಾರ್ಷ್ಣಾಯಸಮಯಾ ಗುಡಾಃ ॥ 18 ॥
ಎಲ್ಲೈ ರಾಜನ್, ಆಗ ಇನ್ನು ಕೆಲವು ಕಬ್ಬಿಣದ ಗುಡಗಳು (ಆಯುಧವಿಶೇಷಗಳು) ನಿರ್ಮಲವಾದ ಆಕಾಶದಲ್ಲಿ ಜ್ಯೋತಿಸ್ಸುಗಳಂತೆ ಪ್ರಕಾಶಮಾನವಾಗಿ ಪ್ರಾದುರ್ಭವಿಸಿದವು.
ಚತುರ್ದಿಶಂ ವಿಚಿತ್ರಾಶ್ಚ ಶತಘ್ನ್ಯೋಽಥ ಹುತಾಶಭಾಃ |
ಚಕ್ರಾಣಿ ಚ ಕ್ಷುರಾಂತಾನಿ ಮಂಡಲಾನೀವ ಭಾಸ್ವತಃ ॥ 19 ॥
ಶಸ್ತ್ರಾಕೃತಿಭಿರಾಕೀರ್ಣಮತೀವ ಭರತರ್ಷಭ |
ದೃಷ್ಟ್ವಾಽಂತರಿಕ್ಷಮಾವಿಗ್ನಾಃ ಪಾಂಡುಪಾಂಚಾಲಸೃಂಜಯಾಃ ॥ 20 ॥
ಎಲ್ಲೈ ಭರತರ್ಷಭನೇ, ನಾಲ್ಕು ದಿಕ್ಕುಗಳಲ್ಲಿಯೂ ಅಗ್ನಿಯನ್ನು ಹೋಲುವ ವಿಚಿತ್ರವಾದ ಶತಘ್ನಿಗಳು, ಸೂರ್ಯಮಂಡಲದಂತಿರುವ ಕತ್ತಿಯ ಧಾರೆಯಂತಹ ಅಲುಗುಳ್ಳ ಚಕ್ರಗಳು ಕಾಣಿಸಿಕೊಂಡವು. ಅಂತರಿಕ್ಷವು ಶಸ್ತ್ರಾಕೃತಿಗಳಿಂದ ಬಹಳ ನಿಬಿಡವಾಗಿ ತುಂಬಿರುವುದನ್ನು ನೋಡಿ ಪಾಂಡು-ಪಾಂಚಾಲ-ಸೃಂಜಯರು ಭೀತರಾದರು.
ಯಥಾ ಯಥಾ ಹ್ಯಯುಧ್ಯಂತ ಪಾಂಡವಾನಾಂ ಮಹಾರಥಾಃ |
ತಥಾ ತಥಾ ತದಸ್ತ್ರಂ ವೈ ವ್ಯವರ್ಧತ ಜನಾಧಿಪ ॥ 21 ॥
ಎಲ್ಲೈ ರಾಜನ್, ಪಾಂಡವ ಮಹಾರಥರು ಯುದ್ಧ ಮಾಡಿದಂತೆ ಮಾಡಿದಂತೆ ಆ ಅಸ್ತ್ರವು ಅಭಿವೃದ್ಧಿಯನ್ನು ಹೊಂದಿತು.
ವಧ್ಯಮಾನಾಸ್ತಥಾಸ್ತ್ರೇಣ ತೇನ ನಾರಾಯಣೇನ ವೈ |
ದಹ್ಯಮಾನಾನಲೇನೇವ ಸರ್ವತೋಽಭ್ಯರ್ದಿತಾ ರಣೇ ॥ 22 ॥
ನಾರಾಯಣಾಸ್ತ್ರದಿಂದ ಹೊಡೆಯಲ್ಪಡುತ್ತಿದ್ದ ಆ ಯೋಧರು ಹಬ್ಬುವ ಅಗ್ನಿಯಿಂದಲೋ ಎಂಬಂತೆ ಎಲ್ಲ ಕಡೆಯಲ್ಲಿಯೂ ರಣರಂಗದಲ್ಲಿ ಪೀಡಿಸಲ್ಪಟ್ಟರು.
ಯಥಾ ಹಿ ಶಿಶಿರಾಪಾಯೇ ದಹೇತ್ ಕಕ್ಷಂ ಹುತಾಶನಃ |
ತಥಾ ತದಸ್ತ್ರಂ ಪಾಂಡೂನಾಂ ದದಾಹ ಧ್ವಜಿನೀಂ ಪ್ರಭೋ ॥ 23 ॥
ಎಲ್ಲೈ ಪ್ರಭುವೇ, ಹಿಮಕಾಲವು ಕಳೆದ ಮೇಲೆ ಅಗ್ನಿಯು ಹುಲ್ಲಿನ ಹೊಲವನ್ನು ಸುಡುವಂತೆ ಆ ಅಸ್ತ್ರವು ಪಾಂಡವರ ಸೇನೆಯನ್ನು ದಹಿಸಿತು.
ಆಪೂರ್ಯಮಾಣೇನಾಸ್ತ್ರೇಣ ಸೈನ್ಯೇ ಕ್ಷೀಯತಿ ಚಾಭಿಭೋ |
ಜಗಾಮ ಪರಮಂ ತ್ರಾಸಂ ಧರ್ಮಪುತ್ರೋ ಯುಧಿಷ್ಠಿರಃ ॥ 24 ॥
ಎಲ್ಲೈ ಶತ್ರುಪರಿಭಾವಕನೇ, ಅಭಿವೃದ್ಧಿಯನ್ನು ಹೊಂದುತ್ತಿದ್ದ ಅಸ್ತ್ರದಿಂದ ತನ್ನ ಸೈನ್ಯವು ಕ್ಷೀಣಿಸುತ್ತಿರಲು ಧರ್ಮಪುತ್ರನಾದ ಯುಧಿಷ್ಠಿರನು ಬಹಳ ತ್ರಾಸವನ್ನು ಹೊಂದಿದನು.
ದ್ರವಮಾಣಂ ತು ತತ್ ಸೈನ್ಯಂ ದೃಷ್ಟ್ವಾ ವಿಗತಚೇತನಮ್ |
ಮಧ್ಯಸ್ಥತಾಂ ಚ ಪಾರ್ಥಸ್ಯ ಧರ್ಮಪುತ್ರೋಽಬ್ರವೀದಿದಮ್ ॥ 25 ॥
ವಿವೇಕವನ್ನು ಕಳೆದುಕೊಂಡು ಓಡುತ್ತಿದ್ದ ಆ ಸೈನ್ಯವನ್ನೂ ಅರ್ಜುನನು ಸುಮ್ಮನಿರುವುದನ್ನೂ ನೋಡಿ ಧರ್ಮಪುತ್ರನು ಹೀಗೆ ಮಾತನಾಡಿದನು.
ಧೃಷ್ಟದ್ಯುಮ್ನ ಪಲಾಯಸ್ವ ಸಹ ಪಾಂಚಾಲಸೇನಯಾ |
ಸಾತ್ಯಕೇ ತ್ವಂ ಚ ಗಚ್ಛಸ್ವ ವೃಷ್ಣ್ಯಂಧಕವೃತೋ ಗೃಹಾನ್ ॥ 26 ॥
ಎಲ್ಲೈ ಧೃಷ್ಟದ್ಯುಮ್ನನೇ, ಪಾಂಚಾಲ ಸೇನೆಯ ಜೊತೆಯಲ್ಲಿ ಓಡಿಹೋಗು. ಎಲ್ಲೈ ಸಾತ್ಯಕಿಯೇ, ವೃಷ್ಣ್ಯಂಧಕನಿಂದ ಪರಿವೃತನಾಗಿ ನೀನೂ ಮನೆಗೆ ಹೋಗು.
ವಾಸುದೇವೋಽಪಿ ಧರ್ಮಾತ್ಮಾ ಕರಿಷ್ಯತ್ಯಾತ್ಮನಃ ಕ್ಷಮಮ್ |
ಉಪದೇಷ್ಟುಂ ಸಮರ್ಥೋಽಯಂ ಲೋಕಸ್ಯ ಕಿಮುತಾತ್ಮನಃ ॥ 27 ॥
ಧರ್ಮಾತ್ಮನಾದ ಕೃಷ್ಣನೂ ಸಹ ತನಗೆ ಯೋಗ್ಯವಾದುದನ್ನು ಮಾಡುವನು. ಜಗತ್ತಿಗೇ ಉಪದೇಶ ಮಾಡುವ ಅವನು ತನ್ನನ್ನು ರಕ್ಷಿಸಿಕೊಳ್ಳಲಾರನೆ?
ಸಂಗ್ರಾಮಸ್ತು ನ ಕರ್ತವ್ಯಃ ಸರ್ವಸೈನ್ಯಾನ್ ಬ್ರವೀಮಿ ವಃ |
ಅಹಂ ಹಿ ಸಹ ಸೋದರ್ಯೈಃ ಪ್ರವೇಕ್ಷ್ಯೇ ಹವ್ಯವಾಹನಮ್ ॥ 28 ॥
ಎಲ್ಲ ಸೈನ್ಯಗಳಿಗೂ ಹೇಳುತ್ತಿದ್ದೇನೆ. ಯುದ್ಧವನ್ನು ಮಾಡಬೇಡಿ. ನಾನು ನನ್ನ ಎಲ್ಲ ಸಹೋದರರ ಜೊತೆಯಲ್ಲಿ ಅಗ್ನಿಯನ್ನು ಪ್ರವೇಶಿಸುವೆನು.
ಭೀಷ್ಮದ್ರೋಣಾರ್ಣವಂ ತೀರ್ತ್ವಾ ಸಂಗ್ರಾಮಂ ಭೀರುದುಸ್ತರಮ್ |
ಅವಸೇತ್ಸ್ಯಾಮ್ಯಸಲಿಲೇ ಸಗಣೋ ದ್ರೌಣಿಗೋಷ್ಪದೇ ॥ 29 ॥
ಭೀರುಗಳಿಂದ ದಾಟಲು ದುಸ್ತರವಾದ ಯುದ್ಧರೂಪವಾದ ಭೀಷ್ಮ-ದ್ರೋಣರೆಂಬ ಸಮುದ್ರವನ್ನು ದಾಟಿ, ಅಶ್ವತ್ಥಾಮರೆಂಬ ಗೋಷ್ಪದಜಲದಲ್ಲಿ ನಾನು ಪರಿವಾರ ಸಹಿತನಾಗಿ ಮುಳುಗುವೆನು.
ಕಾಮಃ ಸಂಪದ್ಯತಾಮಸ್ಯ ಬೀಭತ್ಸೋರಾಶು ಮಾಂ ಪ್ರತಿ |
ಕಲ್ಯಾಣವೃತ್ತ ಆಚಾರ್ಯೋ ಮಯಾ ಯುಧಿ ನಿಪಾತಿತಃ ॥ 30 ॥

ಶುಭವಾದ ನಡತೆಯುಳ್ಳ ಆಚಾರ್ಯರು ನನ್ನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟುದರಿಂದ ಅರ್ಜುನನ ಆಸೆಯು ನನ್ನ ವಿಷಯದಲ್ಲಿ ಶೀಘ್ರವಾಗಿ ನೆರವೇರಲಿ.
ಯೇನ ಬಾಲಃ ಸ ಸೌಭದ್ರೋ ಯುದ್ಧಾನಾಮವಿಶಾರದಃ |
ಸಮರ್ಥೈರ್ಬಹುಭಿಃ ಕ್ರೂರೈರ್ಘಾತಿತೋ ನಾಭಿಪಾಲಿತಃ ॥ 31 ॥
ಯೇನಾವಿಬ್ರುವತಾ ಪ್ರಶ್ನಂ ತಥಾ ಕೃಷ್ಣಾ ಸಭಾಂ ಗತಾ |
ಉಪೇಕ್ಷಿತಾ ಸಪುತ್ರೇಣ ದಾಸಭಾವಂ ನಿಯಚ್ಛತೀ ॥ 32 ॥
ಜಿಘಾಂಸುರ್ಧಾರ್ತರಾಷ್ಟ್ರಶ್ಚ ಶ್ರಾಂತೇಷ್ವಶ್ವೇಷು ಫಲ್ಗುನಮ್ |
ಕವಚೇನ ತಥಾ ಯುಕ್ತೋ ರಕ್ಷಾರ್ಥಂ ಸೈಂಧವಸ್ಯ ಚ ॥ 33 ॥
ಯೇನ ಬ್ರಹ್ಮಾಸ್ತ್ರವಿದುಷಾ ಪಾಂಚಾಲಾಃ ಸತ್ಯಜಿನ್ಮುಖಾಃ |
ಕುರ್ವಾಣಾ ಮಜ್ಜಯೇ ಯತ್ನಂ ಸಮೂಲಾ ವಿನಿಪಾತಿತಾಃ ॥ 34 ॥
ಯೇನ ಪ್ರವ್ರಾಜ್ಯಮಾನಾಶ್ಚ ರಾಜ್ಯಾದ್ ವಯಮಧರ್ಮತಃ |
ನಿವಾರ್ಯಮಾಣೇನಾಸ್ಮಾಭಿರನುಗಂತುಂ ತದೇಷಿತಾಃ ॥ 35 ॥
ಯೋಽಸಾವತ್ಯಂತಮಸ್ಮಾಸು ಕುರ್ವಾಣಃ ಸೌಹೃದಂ ಪರಮ್ |
ಹತಸ್ತದರ್ಥೇ ಮರಣಂ ಗಮಿಷ್ಯಾಮಿ ಸಬಾಂಧವಃ ॥ 36 ॥
ಯಾವ ಕಾರಣದಿಂದ ಯುದ್ಧವಿಶಾರದನಲ್ಲದ ಬಾಲಕನಾದ ಅಭಿಮನ್ಯುವು ಸಮರ್ಥರಾದ ಕೌರವರಾದ ಅನೇಕರಿಂದ ಕೊಲ್ಲಲ್ಪಟ್ಟಾಗ ನಾನು ರಕ್ಷಿಸಲಿಲ್ಲವೋ, ಯಾವ ಪುತ್ರಸಹಿತರಾದ ದ್ರೋಣರು ಸಭೆಗೆ ಬಂದ ದ್ರೌಪದಿಯು ದಾಸಭಾವವನ್ನು ವಿರೋಧಿಸಿ ಪ್ರಶ್ನೆಯನ್ನು ಮಾಡಿದಾಗ ಉತ್ತರವನ್ನು ಕೊಡದೆ ಸುಮ್ಮನಿದ್ದರೋ, ಯಾವ ದ್ರೋಣರು ಅಶ್ವಗಳು ದಣಿದಿರಲು ಅರ್ಜುನನು ಕೊಲ್ಲಲು ಬಯಸಿದ ದುರ್ಯೋಧನನಿಗೆ ಸೈಂಧವನನ್ನು ರಕ್ಷಣೆ ಮಾಡುವುದಕ್ಕಾಗಿ ದಿವ್ಯಕವಚವನ್ನು ತೊಡಿಸಿದರೋ, ಬ್ರಹ್ಮಾಸ್ತ್ರವನ್ನು ತಿಳಿದ ಯಾವ ದ್ರೋಣರಿಂದ ನನ್ನ ಜಯದಲ್ಲಿ ಪ್ರಯತ್ನಿಸುವ ಸತ್ಯಜಿತನೇ ಮೊದಲಾದ ಪಾಂಚಾಲರು ಯುದ್ಧದಲ್ಲಿ ಮೂಲ ಸಹಿತವಾಗಿ ವಿನಾಶಗೊಳಿಸಲ್ಪಟ್ಟರೋ, ಯಾವ ದ್ರೋಣರು ನಾವು ಅಧರ್ಮದಿಂದ ರಾಜ್ಯಭ್ರಷ್ಟರಾಗಿ ಕಾಡಿಗೆ ಹೋಗುವಾಗ ನಿವಾರಿಸಿದರೂ ನಮ್ಮ ಜೊತೆಯಲ್ಲಿ ಬರುವುದಕ್ಕೆ ಬಯಸಿದರೋ, ಯಾವ ದ್ರೋಣರು ನಮ್ಮಲ್ಲಿ ಪರಮ ಸೌಹಾರ್ದವನ್ನು ಮಾಡಿದರೋ ಅಂತಹ ಅವರ ವಧೆಯ ಕಾರಣದಿಂದಾಗಿ ನಾನು ಬಂಧುಗಳೊಡನೆ ಮರಣವನ್ನು ಹೊಂದುವೆನು.
ಏವಂ ಬ್ರುವತಿ ಕೌಂತೇಯೇ ದಾಶಾರ್ಹಸ್ತ್ವರಿತಸ್ತತಃ |
ನಿವಾರ್ಯ ಸೈನ್ಯಂ ಬಾಹುಭ್ಯಾಮಿದಂ ವಚನಮಬ್ರವೀತ್ ॥ 37 ॥
ಕೌಂತೇಯನಾದ ಯುಧಿಷ್ಠಿರನು ಹೀಗೆ ಹೇಳುತ್ತಿರಲು ದಾಶಾರ್ಹನಾದ ಕೃಷ್ಣನು ತನ್ನ ಬಾಹುಗಳಿಂದ ಸೈನ್ಯವನ್ನು ತಡೆದು ಈ ಮಾತನ್ನು ಆಡಿದನು.
ಶೀಘ್ರಂ ನ್ಯಸ್ಯತ ಶಸ್ತ್ರಾಣಿ ವಾಹೇಭ್ಯಶ್ಚಾವರೋಹತ |
ಏಷ ಯೋಗೋಽತ್ರ ವಿಹಿತಃ ಪ್ರತಿಘಾತೋ ಮಹಾತ್ಮನಾ ॥ 38 ॥
ಶೀಘ್ರವಾಗಿ ಅಸ್ತ್ರಗಳನ್ನು ಕೆಳಗಿಡಿ. ವಾಹನದಿಂದ ಕೆಳಗೆ ಇಳಿಯಿರಿ. ಈ ಅಸ್ತ್ರಕ್ಕೆ ಇದು ಪ್ರತಿಘಾತ ಮಾಡುವ ಉಪಾಯವೆಂದು ಮಹಾತ್ಮನಾದ ನಾರಾಯಣನು ವಿಧಿಸಿದ್ದಾನೆ.
ದ್ವಿಪಾಶ್ವಸ್ಯಂದನೇಭ್ಯಶ್ಚ ಕ್ಷಿತಿಂ ಸರ್ವೇಽವರೋಹತ |
ಏವಮೇತನ್ನ ವೋ ಹನ್ಯಾದಸ್ತ್ರಂ ಭೂಮೌ ನಿರಾಯುಧಾನ್ ॥ 39 ॥
ಎಲ್ಲರೂ ಗಜಗಳಿಂದಲೂ, ಅಶ್ವಗಳಿಂದಲೂ, ರಥಗಳಿಂದಲೂ ಭೂಮಿಯ ಮೇಲೆ ಇಳಿಯಿರಿ. ಹಾಗೆ ಮಾಡಿದರೆ ಭೂಮಿಯಲ್ಲಿ ನಿರಾಯುಧರಾಗಿ ನಿಂತ ನಿಮ್ಮನ್ನು ಅಸ್ತ್ರವು ಕೊಲ್ಲುವುದಿಲ್ಲ.
ಯಥಾ ಯಥಾ ಹಿ ಯುದ್ಧ್ಯಂತೇ ಯೋಧಾ ಹ್ಯಸ್ತ್ರಬಲಂ ಪ್ರತಿ |
ತಥಾ ತಥಾ ಭವಂತ್ಯೇತೇ ಕೌರವಾ ಬಲವತ್ತರಾಃ ॥ 40 ॥
ಸೈನಿಕರು ಅಸ್ತ್ರದ ವಿರುದ್ಧವಾಗಿ ಯುದ್ಧವನ್ನು ಮಾಡಿದಂತೆ ಮಾಡಿದಂತೆ ಅಸ್ತ್ರದ ಬಲವು ಹೆಚ್ಚಿ ಈ ಕೌರವರು ಹೆಚ್ಚು ಬಲಿಷ್ಠರಾಗುತ್ತಾರೆ.
ನಿಕ್ಷೇಪ್ಸ್ಯಂತಿ ಚ ಶಸ್ತ್ರಾಣಿ ವಾಹನೇಭ್ಯೋಽವರುಹ್ಯ ಯೇ |
ತಾನ್ ನೈತದಸ್ತ್ರಂ ಸಂಗ್ರಾಮೇ ನಿಹನಿಷ್ಯತಿ ಮಾನವಾನ್ ॥ 41 ॥
ಯಾರು ವಾಹನದಿಂದ ಇಳಿದು ಶಸ್ತ್ರವನ್ನು ತ್ಯಜಿಸುವರೋ ಅಂತಹ ಯೋಧರನ್ನು ಯುದ್ಧದಲ್ಲಿ ಈ ಅಸ್ತ್ರವು ಕೊಲ್ಲುವುದಿಲ್ಲ.
ಯೇ ತ್ವೇತತ್ ಪ್ರತಿಯೋತ್ಸ್ಯಂತಿ ಮನಸಾಪೀಹ ಕೇಚನ |
ನಿಹನಿಷ್ಯತಿ ತಾನ್ ಸರ್ವಾನ್ ರಸಾತಳಗತಾನಪಿ ॥ 42 ॥
ಯಾರು ಮನಸ್ಸಿನಿಂದಾದರೂ ಈ ಅಸ್ತ್ರದ ಜೊತೆಯಲ್ಲಿ ಯುದ್ಧವನ್ನು ಮಾಡುವರೋ ಅವರು ರಸಾತಳಲೋಕದಲ್ಲಿದ್ದರೂ ಈ ಅಸ್ತ್ರವು ಅವರನ್ನು ಕೊಲ್ಲುವುದು (ಎಂದು ಹೇಳಿದನು).
ತೇ ವಚಸ್ತಸ್ಯ ತಚ್ಛ್ರುತ್ವಾ ವಾಸುದೇವಸ್ಯ ಭಾರತ |
ಈಷುಃ ಸರ್ವೇಽಸ್ತ್ರಮುತ್ಸ್ರಷ್ಟುಂ ಮನೋಭಿಃ ಕರಣೇನ ಚ ॥ 43 ॥
ಎಲೈ ಭಾರತನೇ, ಕೃಷ್ಣನ ಆ ಮಾತುಗಳನ್ನು ಕೇಳಿ ಎಲ್ಲರೂ ಮನಸ್ಸಿನಿಂದಲೂ ಮತ್ತು ದೇಹದಿಂದಲೂ ಆ ಅಸ್ತ್ರವನ್ನು ತ್ಯಜಿಸಲು ಬಯಸಿದರು.
ತತ ಉತ್ಸ್ರಷ್ಟುಕಾಮಾಂಸ್ತಾನಸ್ತ್ರಾಣ್ಯಾಲಕ್ಷ್ಯ ಪಾಂಡವಃ |

ಭೀಮಸೇನೋऽಬ್ರವೀದ್ ರಾಜನ್ನಿದಂ ಸಂಹರ್ಷಯನ್ ವಚಃ ॥ 44 ॥
ಎಲೈ ರಾಜನೇ, ಆಗ ಪಾಂಡುಪುತ್ರನಾದ ಭೀಮಸೇನನು ಯೋಧರು ಅಸ್ತ್ರಗಳನ್ನು ತ್ಯಜಿಸಲು ಉದ್ಯುಕ್ತರಾಗಿರುವುದನ್ನು ನೋಡಿ ಅವರಿಗೆ ಸಂತೋಷವನ್ನುಂಟು ಮಾಡುತ್ತಾ ಈ ಮಾತನ್ನು ಹೇಳಿದನು.
ನ ಕಥಂಚನ ಶಸತ್ರಣಿ ಮೋಕ್ತವ್ಯಾನೀಹ ಕೇನಚಿತ್ |
ಅಹಮಾವಾರಯಿಷ್ಯಾಮಿ ದ್ರೋಣಪುತ್ರಾಸ್ತ್ರಮಾಶುಗೈಃ ॥ 45 ॥
ಯಾರೂ ಶಸ್ತ್ರವನ್ನು ತ್ಯಜಿಸಬೇಡಿ, ಅಶ್ವತ್ಥಾಮರ ಅಸ್ತ್ರವನ್ನು ಶೀಘ್ರವಾದ ಬಾಣಗಳಿಂದ ನಾನು ತಡೆಯುವೆನು.
ಅಥ ವಾಪ್ಯನಯಾ ಗುರ್ವ್ಯಾ ಹೇಮವಿಗ್ರಹಯಾ ರಣೇ |
ಕಾಲವದ್ ವಿಚರಿಷ್ಯಾಮಿ ದ್ರೌಣೇರಸ್ತ್ರಂ ವಿಶಾತಯನ್ ॥ 46 ॥
ಅಥವಾ ಸುವರ್ಣಾಲಂಕೃತವಾದ ಭಾರವಾದ ಈ ಗದೆಯನ್ನು ಧರಿಸಿ ರಣರಂಗದಲ್ಲಿ ಅಶ್ವತ್ಥಾಮರ ಅಸ್ತ್ರವನ್ನು ನಾಶಗೊಳಿಸುತ್ತಾ ಯಮನಂತೆ ಸಂಚರಿಸುವೆನು.
ನ ಹಿ ಮೇ ವಿಕ್ರಮೇ ತುಲ್ಯಃ ಕಶ್ಚಿದಸ್ತಿ ಪುಮಾನಿಹ |
ಯಥೈವ ಸವಿತುಸ್ತುಲ್ಯಂ ಜ್ಯೋತಿರನ್ಯನ್ನ ವಿದ್ಯತೇ ॥ 47 ॥
ಸೂರ್ಯನಿಗೆ ಸದೃಶವಾದ ಇನ್ನೊಂದು ಪ್ರಕಾಶವು ಇಲ್ಲದಿರುವಂತೆ ನನ್ನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವುಳ್ಳ ಬೇರೆ ಯಾವ ಪುರುಷನೂ ಇಲ್ಲ.
ಪಶ್ಯಧ್ವಂ ಮೇ ದೃಢೌ ಬಾಹೂ ನಾಗರಾಜಕರೋಪಮೌ |
ಸಮರ್ಥೌ ಪರ್ವತಸ್ಯಾಪಿ ಶೈಶಿರಸ್ಯ ನಿವಾರಣೇ ॥ 48 ॥
ಆನೆಯ ಸೊಂಡಿಲಿನಂತಿರುವ ನನ್ನ ದೃಢವಾದ ಬಾಹುಗಳನ್ನು ನೋಡಿ. ಇವು ಹಿಮಾಲಯ ಪರ್ವತವನ್ನು ತಡೆಯಲೂ ಸಹ ಸಮರ್ಥವಾದವು.
ನಾಗಾಯುತಸಮಪ್ರಾಣೋ ಹ್ಯಹಮೇಕೋ ನರೇಷ್ವಿಹ |
ಶಕ್ರೋ ಯಥಾऽಪ್ರತಿದ್ವಂದ್ವೋ ದಿವಿ ದೇವೇಷು ವಿಶ್ರುತಃ ॥ 49 ॥
ಮನುಷ್ಯರಲ್ಲಿ ನಾನೊಬ್ಬನೇ ಹತ್ತು ಸಾವಿರ ಆನೆಗಳ ಬಲವುಳ್ಳವನು. ಇಂದ್ರನು ದೇವತೆಗಳಲ್ಲಿ ಸ್ವರ್ಗಲೋಕದಲ್ಲಿ ಅಪ್ರತಿದ್ವಂದ್ವನೆಂದು ಪ್ರಸಿದ್ಧನಾದಂತೆ ನಾನೂ ಸಹ ಅಪ್ರತಿದ್ವಂದ್ವನಾಗಿದ್ದೇನೆ.
ಅದ್ಯ ಪಶ್ಯತ ಮೇ ವೀರ್ಯಂ ಬಾಹ್ವೋಃ ಪೀನಾಂಸಯೋರ್ಯುಧಿ |
ಜ್ವಲಮಾನಸ್ಯ ದೀಪ್ತಸ್ಯ ದ್ರೌಣೇರಸ್ತ್ರಸ್ಯ ವಾರಣೇ ॥ 50 ॥
ಈ ದಿನ ಜ್ವಲಿಸುತ್ತಿರುವ ಅಶ್ವತ್ಥಾಮರ ಅಸ್ತ್ರಗಳ ನಿವಾರಣೆಯ ವಿಷಯದಲ್ಲಿ ನನ್ನ ಬಾಹುಗಳ ಮತ್ತು ಪೀನವಾದ ವಕ್ಷಃಸ್ಥಲದ ಪರಾಕ್ರಮವನ್ನು ರಣರಂಗದಲ್ಲಿ ನೋಡಿ.
ಯದಿ ನಾರಾಯಣಾಸ್ತ್ರಸ್ಯ ಪ್ರತಿಯೋದ್ಧಾ ನ ವಿದ್ಯತೇ |
ಅದ್ಯೈನಂ ಪ್ರತಿಯೋತ್ಸ್ಯಾಮಿ ಪಶ್ಯತ್ಸು ಕುರುಪಾಂಡುಷು ॥ 51 ॥
ನಾರಾಯಣಾಸ್ತ್ರಕ್ಕೆ ಪ್ರತಿಯಾಗಿ ಯುದ್ಧಮಾಡುವವನು ಇನ್ನೊಬ್ಬನು ಇಲ್ಲದಿದ್ದರೆ ಈ ದಿನ ಕೌರವರು ಮತ್ತು ಪಾಂಡವರು ನೋಡುತ್ತಿರುವಂತೆಯೇ ನಾನು ಪ್ರತಿಯಾಗಿ ಯುದ್ಧವನ್ನು ಮಾಡುವೆನು.
ಸಂಜಯಃ
ಏವಮುಕತ್ವ ತತೋ ಭೀಮೋ ದ್ರೋಣಪುತ್ರಮರಿಂದಮಃ |
ಅಭ್ಯಯಾನ್ಮೇಘಘೋಷೇಣ ರಥೇನಾದಿತ್ಯವರ್ಚಸಾ ॥ 52 ॥
ಸಂಜಯ ಹೀಗೆ ಹೇಳಿ ಅರಿಂದಮನಾದ ಭೀಮನು ಮೇಘಘೋಷವುಳ್ಳ ಆದಿತ್ಯಕಾಂತಿಯುಳ್ಳ ತನ್ನ ರಥದಿಂದ ಶೀಘ್ರವಾಗಿ ಅಶ್ವತ್ಥಾಮರ ಮೇಲೆ ನುಗ್ಗಿದನು.
ಸ ಏನಮಿಷುಜಾಲೇನ ಲಘುತ್ವಾಚ್ಛೀಘ್ರವಿಕ್ರಮಃ |
ನಿಮೇಷಮಾತ್ರೇಣಾಸಾದ್ಯ ಕುಂತೀಪುತ್ರೋऽಭ್ಯವಾಕಿರತ್ ॥ 53 ॥
ಶೀಘ್ರವಿಕ್ರಮನೂ, ಮಹಾವೇಗವುಳ್ಳವನೂ ಆದ ಕುಂತೀಪುತ್ರನಾದ ಭೀಮಸೇನನು ಒಂದು ನಿಮಿಷದಲ್ಲಿ ಅಶ್ವತ್ಥಾಮರನ್ನು ತಲುಪಿ ಅವರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತತೋ ದ್ರೌಣಿಃ ಪ್ರಹಸ್ಯೈನಂ ಮುದಾ ಸಮಭಿಭಾಷ್ಯ ಚ |
ಅವಾಕಿರತ್ ಪ್ರದೀಪ್ತಾಗ್ರೈಃ ಶರೈಸ್ತೈರಭಿಮಂತ್ರಿತೈಃ ॥ 54 ॥
ಆಗ ಅಶ್ವತ್ಥಾಮರು ನಕ್ಕು ಸಂತೋಷದಿಂದ ಅವನ ಜೊತೆಗೆ ಮಾತನಾಡಿ, ಜ್ವಲಿಸುವ ತುದಿಯುಳ್ಳ ಅಭಿಮಂತ್ರಿತವಾದ ಬಾಣಗಳಿಂದ ಅವನನ್ನು ಪೀಡಿಸಿದರು.
ಪನ್ನಗೈರಿವ ದೀಪ್ತಾಸ್ಯೈರ್ವಮದ್ಭಿರನಲಂ ರಣೇ |
ಅವಕೀರ್ಣೋऽಭವತ್ ಪಾರ್ಥಃ ಸ್ಫುಲಿಂಗೈರಿವ ಕಾಂಚನೈಃ ॥ 55 ॥
ದೀಪ್ತವಾದ ಮುಖವುಳ್ಳ, ಅಗ್ನಿಯನ್ನು ಹೋಲುವ ಸರ್ಪಗಳಿಂದಲೋ ಎಂಬಂತೆ, ಕಾಂಚನಮಯವಾದ ಕಿಡಿಳಿಂದಲೋ ಎಂಬಂತೆ ರಣರಂಗದಲ್ಲಿ ಆ ಬಾಣಗಳಿಂದ ಭೀಮಸೇನನು ತುಂಬಿಹೋದನು.
ತಸ್ಯ ರೂಪಮಭೂದ್ ರಾಜನ್ ಭೀಮಸೇನಸ್ಯ ಸಂಯುಗೇ |
ಖದ್ಯೋತೈರಾವೃತಸ್ಯೇವ ಪರ್ವತಸ್ಯ ದಿನಕ್ಷಯೇ ॥ 56 ॥
ಎಲೈ ರಾಜನೇ, ರಣರಂಗದಲ್ಲಿ ಭೀಮಸೇನನ ಆ ರೂಪವು ರಾತ್ರಿಯಲ್ಲಿ ಮಿಣುಕು ಹುಳುಗಳಿಂದ ಆವೃತವಾದ ಪರ್ವತದಂತೆ ಇದ್ದಿತು.

ತದಸ್ತ್ರಂ ದ್ರೋಣಪುತ್ರಸ್ಯ ತಸ್ಮಿನ್ ಪ್ರತಿಸಮಸ್ಯತಿ |
ಅವರ್ಧತ ಮಹಾರಾಜ ಯಥಾಗ್ನಿರನಿಲೋದ್ಧತಃ ॥ 57 ॥
ಭೀಮಸೇನನು ಪ್ರತಿಯಾಗಿ ಬಾಣವನ್ನು ಬಿಡುತ್ತಿರಲು ಎಲೈ ಮಹಾರಾಜನೇ, ದ್ರೋಣಪುತ್ರರ ಆ ಅಸ್ತ್ರವು ವಾಯುವಿನಿಂದ ಉದ್ಧತವಾದ ಅಗ್ನಿಯಂತೆ ವೃದ್ಧಿಯನ್ನು ಹೊಂದಿತು.
ವಿವರ್ಧಮಾನಮಾಲಕ್ಷ್ಯ ತದಸ್ತ್ರಂ ಭೀಮವಿಕ್ರಮಮ್ |
ಪಾಂಡುಸೈನ್ಯಮೃತೇ ಭೀಮಂ ಸುಮಹದ್ ಭಯಮಾವಿಶತ್ ॥ 58 ॥
ಭಯಂಕರವಾದ ಸಾಮರ್ಥ್ಯವುಳ್ಳ ಆ ಅಸ್ತ್ರವು ಅಭಿವೃದ್ಧಿಯನ್ನು ಹೊಂದುತ್ತಿರುವುದನ್ನು ನೋಡಿ ಭೀಮನನ್ನು ಬಿಟ್ಟು ಉಳಿದ ಪಾಂಡವ ಸೈನ್ಯವು ಬಹಳ ಭಯದಿಂದ ಕೂಡಿದುದಾಯಿತು.
ತತಃ ಶಸಾಣಿತ್ರಣಿ ತೇ ಸರ್ವೇ ಸಮುತ್ಸೃಜ್ಯ ಮಹೀತಳೇ |
ಅವಾರೋಹನ್ ರಥೇಭ್ಯಶ್ಚ ಹಸ್ತ್ಯಶ್ವೇಭ್ಯಶ್ಚ ಸರ್ವಶಃ ॥ 59 ॥
ಆಗ ಅವರೆಲ್ಲರೂ ಭೂಮಿಯಲ್ಲಿ ಶಸ್ತ್ರಗಳನ್ನಿಟ್ಟು ರಥಗಳಿಂದಲೂ, ಗಜಾಶ್ವಗಳಿಂದಲೂ ಎಲ್ಲ ಕಡೆಗಳಲ್ಲಿಯೂ ಕೆಳಗೆ ಇಳಿದರು.
ತೇಷು ನಿಕ್ಷಿಪ್ತಶಸ್ತ್ರೇಷು ವಾಹನೇಭ್ಯಶ್ಚ್ಯುತೇಷು ಚ |
ತದಸ್ತ್ರವೀರ್ಯಂ ವಿಪುಲಂ ಭೀಮಮೂರ್ಧನ್ಯಥಾಪತತ್ ॥ 60 ॥
ಅವರು ಶಸ್ತ್ರಗಳನ್ನು ಕೆಳಗಿಟ್ಟು, ವಾಹನಗಳಿಂದ ಇಳಿಯುತ್ತಿರಲು ಆ ಅಸ್ತ್ರದ ವಿಪುಲವಾದ ಪರಾಕ್ರಮವು ಭೀಮಸೇನನ ತಲೆಯ ಮೇಲೆ ಬಿದ್ದಿತು.
ಹಾಹಾಕೃತಾನಿ ಭೂತಾನಿ ಪಾಂಡವಾಶ್ಚ ವಿಶೇಷತಃ |
ಭೀಮಸೇನಮಪಶ್ಯಂತ ತೇಜಸಾ ಸಂವೃತಂ ತದಾ ॥ 61 ॥
ಜ್ವಲಿಸುವ ಅಗ್ನಿಯಿಂದ ಸಂವೃತನಾದ ಭೀಮಸೇನನನ್ನು ನೋಡಿ ಪಾಂಡವರೂ, ಎಲ್ಲ ಪ್ರಾಣಿಗಳೂ ವಿಶೇಷವಾಗಿ ಹಾಹಾಕಾರವನ್ನು ಮಾಡಿದವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಏಕಾಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಂಬತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೆರಡನೆಯ ಅಧ್ಯಾಯ
ಕೃಷ್ಣಾರ್ಜುನರು ಭೀಮನ ಶಿರಸ್ಸಿನಿಂದ ಅಸ್ತ್ರವನ್ನು ಕಿತ್ತು,
ಅವನನ್ನು ಕೆಳಗಿಳಿಸಿದ ಮೇಲೆ ಅಸ್ತ್ರದ ಪ್ರಶಮನ. ಅನಂತರ ಪುನಃ ಯುದ್ಧ.
ಸಂಜಯಃ
ಭೀಮಸೇನಂ ಸಮಾಕೀರ್ಣಂ ದೃಷ್ಟ್ವಾಽಸ್ತ್ರೇಣ ಧನಂಜಯಃ |
ತೇಜಸಃ ಪ್ರತಿಘಾತಾರ್ಥಂ ವಾರುಣೇನ ಸಮಾವೃಣೋತ್ ॥ 1 ॥
ಸಂಜಯ ಅರ್ಜುನನು ಭೀಮಸೇನನು ನಾರಾಯಣಾಸ್ತ್ರದಿಂದ ಕೂಡಿರುವುದನ್ನು ನೋಡಿ ತೇಜಸ್ಸನ್ನು ಪ್ರತಿಘಾತ ಮಾಡಲು ವಾರುಣಾಸ್ತ್ರವನ್ನು ಪ್ರಯೋಗಿಸಿ ಅವನನ್ನು ಮುಚ್ಚಿದನು.
ನಾಲಕ್ಷಯತ ತಂ ಕಶ್ಚಿದ್ ವಾರುಣಾಸ್ತ್ರೇಣ ಸಂವೃತಮ್ |
ಅರ್ಜುನಸ್ಯ ಲಘುತ್ವಾಚ್ಚ ಸಂವೃತತ್ವಾಚ್ಚ ತೇಜಸಃ ॥ 2 ॥
ಅರ್ಜುನನು ಬಹಳ ಕ್ಷಿಪ್ರವಾಗಿ ಆ ಕಾರ್ಯವನ್ನು ಮಾಡಿದುದರಿಂದ ಒಳಗಿನ ತೇಜಸ್ಸಿನಿಂದಲೂ, ಹೊರಗಿನ ವಾರುಣಾಸ್ತ್ರದಿಂದಲೂ ಆವೃತನಾದ ಭೀಮಸೇನನನ್ನು ಯಾರೂ ಗಮನಿಸಲಿಲ್ಲ.
ಸಾಶ್ವಸೂತರಥೋ ಭೀಮೋ ದ್ರೋಣಪುತ್ರಾಸ್ತ್ರಸಂವೃತಃ |
ಅಗ್ನಾವಗ್ನಿರಿವ ನ್ಯಸ್ತೋ ಜ್ವಾಲಾಮಾಲೀ ಸುದುರ್ದೃಶಃ ॥ 3 ॥
ಅಶ್ವ-ಸೂತ-ರಥದಿಂದ ಸಹಿತನಾದ ಭೀಮನು ದ್ರೋಣರ ಅಸ್ತ್ರದಿಂದ ಆವೃತನಾಗಿ ಅಗ್ನಿಯಲ್ಲಿ ಇಟ್ಟ ಅಗ್ನಿಯಂತೆ ಜ್ವಾಲೆಯ ಮಾಲೆಗಳಿಂದ ಕೂಡಿ ನೋಡಲು ಅಸಾಧ್ಯನಾದನು.
ಯಥಾ ರಾತ್ರಿಕ್ಷಯೇ ರಾಜನ್ ಜ್ಯೋತೀಂಷ್ಯಸ್ತಗಿರಿಂ ಪ್ರತಿ |
ಸಮಾಪೇತುಸ್ತಥಾ ಬಾಣಾ ಭೀಮಸೇನರಥಂ ಪ್ರತಿ ॥ 4 ॥
ಎಲೈ ರಾಜನೇ, ರಾತ್ರಿಯ ಅವಸಾನದಲ್ಲಿ ಆಕಾಶದಲ್ಲಿ ಜ್ಯೋತಿಸ್ಸುಗಳು ಅಸ್ತಗಿರಿಯ ಕಡೆಗೆ ಹೋದಂತೆ ಬಾಣಗಳು ಭೀಮಸೇನನ ರಥದ ಕಡೆಗೆ ಶೀಘ್ರವಾಗಿ ಬಂದವು.
ಸ ಹಿ ಭೀಮೋ ರಥಶ್ಚಾಸ್ಯ ಹಯಾಃ ಸೂತಶ್ಚ ಮಾರಿಷ |
ಸಂವೃತಾ ದ್ರೋಣಪುತ್ರೇಣ ಪಾವಕಾಂತರ್ಗತಾಭವನ್ ॥ 5 ॥
ಎಲೈ ಶ್ರೇಷ್ಠನೇ, ಭೀಮಸೇನನೂ, ಅವನ ರಥವೂ, ಅಶ್ವಗಳೂ ಮತ್ತು ಸೂತನೂ ಅಶ್ವತ್ಥಾಮರ ರಥದಿಂದ ಸಂವೃತರಾಗಿ ಅಗ್ನಿಯೊಳಗೆ ಸೇರಿದರು.
ಯಥಾ ದಗ್ಧ್ವಾ ಜಗತ್ ಕೃತ್ಸ್ನಂ ಸಮಯೇ ಸಚರಾಚರಮ್ |

ಗಚ್ಛೇದಗ್ನಿರ್ವಿಭೋರಾಸ್ಯಂ ತಥಾಸ್ತ್ರಂ ಭೀಮಮಾವೃಣೋತ್ ॥ 6 ॥
ಹೇಗೆ ಜಗತ್ತಿನ ವಿನಾಶದ ಸಮಯದಲ್ಲಿ ಅಗ್ನಿಯು ಚರಾಚರಸಹಿತವಾದ ಸಮಗ್ರವಾದ ಜಗತ್ತನ್ನು ದಹಿಸಿ, ವಿಭುವಾದ ನಾರಾಯಣನ ಮುಖವನ್ನು ಪ್ರವೇಶಿಸುವುದೋ ಹಾಗೆ ಅಸ್ತ್ರವು ಭೀಮನನ್ನು ಆವರಿಸಿತು.
ಸೂರ್ಯಮಗ್ನಿಃ ಪ್ರವಿಷ್ಟಃ ಸ್ಯಾದ್ ಯಥಾ ಚಾಗ್ನಿಂ ದಿವಾಕರಃ |
ತಥಾ ಪ್ರವಿಷ್ಟಂ ತತ್ ತೇಜೋ ನ ಪ್ರಾಜ್ಞಾಯತ ಕಿಂಚನ ॥ 7 ॥
ಸೂರ್ಯನು ಅಗ್ನಿಯನ್ನು ಪ್ರವೇಶಿಸಿದಂತೆ, ಅಗ್ನಿಯು ಸೂರ್ಯನನ್ನು ಪ್ರವೇಶಿಸಿದಂತೆ ತೇಜಸ್ಸು ಭೀಮಸೇನನ ತೇಜಸ್ಸನ್ನು ಪ್ರವೇಶಿಸಿತು. ಯಾವುದೂ ತಿಳಿಯಲಿಲ್ಲ.
ವಿಕೀರ್ಣಮಸ್ತ್ರಂ ತದ್ ದೃಷ್ಟ್ವಾ ತಥಾ ಭೀಮರಥಂ ಪ್ರತಿ |
ಉದೀರ್ಯಮಾಣಂ ದ್ರೌಣಿಂ ಚ ನಿಷ್ಪ್ರತಿದ್ವಂದ್ವಮಾಹವೇ ॥ 8 ॥
ಸರ್ವಸೈನ್ಯಾನಿ ಪಾಂಡೂನಾಂ ನ್ಯಸ್ತಶಸ್ತ್ರಾಣ್ಯಚೇತಸಃ |
ಯುಧಿಷ್ಠಿರಪುರೋಗಾಂಶ್ಚ ವಿಮುಖಾಂಸ್ತಾನ್ ಮಹಾರಥಾನ್ ॥ 9 ॥
ಅರ್ಜುನೋ ವಾಸುದೇವಶ್ಚ ತ್ವರಮಾಣೌ ಮಹಾದ್ಯುತೀ |
ಅವಪ್ಲುತ್ಯ ರಥಾದ್ ವೀರೌ ಭೀಮಮಾದ್ರವತಾಂ ತತಃ ॥ 10 ॥
ಭೀಮಸೇನನ ರಥದ ಬಳಿ ಅಸ್ತ್ರವು ಹಾಗೆ ಸುತ್ತುವರಿದಿರುವುದನ್ನೂ, ಯುದ್ಧದಲ್ಲಿ ಅಶ್ವತ್ಥಾಮರು ಅಪ್ರತಿದ್ವಂದ್ವರಾಗಿ ವರ್ಧಿಸುತ್ತಿರುವುದನ್ನೂ, ಪಾಂಡವರ ಎಲ್ಲ ಸೈನ್ಯಗಳು ಶಸ್ತ್ರಗಳನ್ನು ಕೆಳಗಿಟ್ಟು ವಿವೇಕಹೀನರಾಗಿರುವುದನ್ನೂ, ಯುಧಿಷ್ಠಿರ ಮೊದಲಾದ ಮಹಾರಥರು ಯುದ್ಧವಿಮುಖರಾಗಿರುವುದನ್ನೂ ನೋಡಿದ ಮಹಾಕಾಂತಿಯುಕ್ತರಾದ ವೀರರಾದ ಕೃಷ್ಣಾರ್ಜುನರು ತ್ವರೆಯಿಂದ ತಮ್ಮ ರಥದಿಂದ ಕೆಳಗೆ ಹಾರಿ ಭೀಮನ ಕಡೆಗೆ ಓಡಿದರು.
ತತಸ್ತದ್ ದ್ರೋಣಪುತ್ರಸ್ಯ ತೇಜೋಽಸ್ತ್ರಬಲಸಂಭವಮ್ |
ವಿಗಾಹ್ಯ ತೌ ಸುಬಲಿನೌ ಮಾಯಯಾಽವಿಶತಾಂ ತದಾ ॥ 11 ॥
ಅತ್ಯಂತ ಬಲಿಷ್ಠರಾದ ಅವರಿಬ್ಬರೂ ದ್ರೋಣಪುತ್ರರ ತೇಜಸ್ಸಿನಿಂದಲೂ, ಅಸ್ತ್ರ- ಬಲದಿಂದಲೂ ಉಂಟಾದ ಆ ಅಗ್ನಿಯನ್ನು ತಮ್ಮ ಸಾಮರ್ಥ್ಯದಿಂದ ಪ್ರವೇಶಿಸಿ ಭೀಮನ ರಥದ ಕಡೆಗೆ ಹೋದರು.
ನ್ಯಸ್ತಶಸ್ತ್ರೌ ತತಸ್ತೌ ತು ನಾದಹದಸ್ತ್ರಜೋಽನಲಃ |
ವಾರುಣಾಸ್ತ್ರಪ್ರಯೋಗಾಚ್ಚ ವೀರ್ಯವತ್ತ್ವಾಚ್ಚ ಕೃಷ್ಣಯೋಃ ॥ 12 ॥
ಅವರಿಬ್ಬರೂ ಶಸ್ತ್ರಗಳನ್ನು ಕೆಳಗಿಟ್ಟುದುದರಿಂದಲೂ, ವಾರುಣಾಸ್ತ್ರವನ್ನು ಪ್ರಯೋಗ ಮಾಡಿದುದರಿಂದಲೂ ಮತ್ತು ಪರಾಕ್ರಮಶಾಲಿಗಳಾದುದರಿಂದಲೂ ಅಸ್ತ್ರದಿಂದ ಉಂಟಾದ ಅಗ್ನಿಯು ಕೃಷ್ಣಾರ್ಜುನರನ್ನು ದಹಿಸಲಿಲ್ಲ.
ತತಶ್ಚಕೃಷತುರ್ಭೀಮಂ ತಸ್ಯ ಸರ್ವಾಯುಧಾನಿ ಚ |
ನಾರಾಯಣಾಸ್ತ್ರಶಾಂತ್ಯರ್ಥಂ ನರನಾರಾಯಣೌ ಬಲಾತ್ ॥ 13 ॥
ಆಗ ನರನಾರಾಯಣರಾದ ಅವರು ನಾರಾಯಣಾಸ್ತ್ರದ ಶಮನವನ್ನು ಮಾಡಲು ತಮ್ಮ ಬಲದಿಂದ ಭೀಮನನ್ನೂ ಮತ್ತು ಅವನ ಎಲ್ಲ ಆಯುಧಗಳನ್ನೂ ಕೆಳಗೆ ಎಳೆದರು.
ಅಪಕೃಷ್ಯಮಾಣಃ ಕೌಂತೇಯೋ ನದತ್ಯೇವ ಮಹಾರಥಃ |
ವರ್ಧತೇ ಚೈವ ತದ್ ಘೋರಂ ದ್ರೌಣೇರಸ್ತ್ರಂ ಸುದುರ್ಜಯಮ್ ॥
ಕೆಳಗೆ ಎಳೆಯಲ್ಪಡುತ್ತಿದ್ದರೂ ಮಹಾರಥನಾದ ಕುಂತೀಪುತ್ರನಾದ ಭೀಮಸೇನನು ಗರ್ಜಿಸುತ್ತಲೇ ಇದ್ದನು. ದುರ್ಜಯವಾದ ಅಶ್ವತ್ಥಾಮರ ಆ ಘೋರವಾದ ಅಸ್ತ್ರವೂ ಗರ್ಜಿಸುತ್ತಲೇ ಇದ್ದಿತು.
ತಮಬ್ರವೀದ್ ವಾಸುದೇವಃ ಕಿಮಿದಂ ಪಾಂಡುನಂದನ |
ವಾರ್ಯಮಾಣೋಽಪಿ ಕೌಂತೇಯ ಯದ್ ಯುದ್ಧಾನ್ನ ನಿವರ್ತಸೇ ॥
ಕೃಷ್ಣನು ಆಗ ಭೀಮನನ್ನು ಕುರಿತು- `ಕೌಂತೇಯನೇ, ಪಾಂಡುನಂದನನೇ, ಇದೇನು? ನಾವು ನಿಷೇಧ ಮಾಡುತ್ತಿದ್ದರೂ ನೀನು ಯುದ್ಧವನ್ನು ನಿಲ್ಲಿಸುತ್ತಿಲ್ಲ?
ಯದಿ ಯುದ್ಧೇನ ಜೇಯಾಃ ಸ್ಯುರಿಮೇ ಕೌರವನಂದನಾಃ |
ವಯಮಪ್ಯತ್ರ ಯುಧ್ಯೇಮ ತಥಾ ಚೇಮೇ ನರರ್ಷಭಾಃ ॥ 16 ॥
ಯುದ್ಧದಿಂದ ಈ ಕೌರವನಂದನರನ್ನು ಗೆಲ್ಲಬಹುದಾದರೆ ನಾವೂ ಯುದ್ಧವನ್ನು ಮಾಡುತ್ತೇವೆ, ಈ ರಾಜರೂ ಯುದ್ಧವನ್ನು ಮಾಡುವರು.
ರಥೇಭ್ಯಸ್ತ್ವವತೀರ್ಣಾಸ್ತು ಸರ್ವ ಏವ ಸ್ಮ ತಾವಕಾಃ |
ತಸ್ಮಾತ್ ತ್ವಮಪಿ ಕೌಂತೇಯ ರಥಾತ್ ತೂರ್ಣಮಪಾಕ್ರಮ ॥ 17 ॥
ಎಲೈ ಕೌಂತೇಯನೇ, ನಿನ್ನವರೆಲ್ಲರೂ ರಥದಿಂದ ಇಳಿದಿದ್ದಾರೆ. ಆದ್ದರಿಂದ ನೀನೂ ಸಹ ಶೀಘ್ರವಾಗಿ ರಥದಿಂದ ಇಳಿ.
ಏವಮುಕ್ತ್ವಾ ತತಃ ಕೃಷ್ಣೋ ರಥಾದ್ ಭೂಮಿಮಪಾತಯತ್ |
ನಿಃಶ್ವಸಂತಂ ಯಥಾ ನಾಗಂ ಕ್ರೋಧಸಂರಕ್ತಲೋಚನಮ್ ॥ 18 ॥
ಹೀಗೆ ಹೇಳಿ ಕೃಷ್ಣಾರ್ಜುನರು ಸರ್ಪದಂತೆ ಶ್ವಾಸವನ್ನು ಬಿಡುತ್ತಿದ್ದ, ಕ್ರೋಧದಿಂದ ಕೆಂಪಾದ ಕಣ್ಣುಳ್ಳ ಭೀಮಸೇನನನ್ನು ರಥದಿಂದ ಭೂಮಿಯ ಮೇಲೆ ಕೆಡವಿದರು.
ಯದಾಽಪಕೃಷ್ಟಃ ಸ ರಥಾನ್ನ್ಯಾಸಿತಶ್ಚಾಯುಧಂ ಭುವಿ |
ತತೋ ನಾರಾಯಣಾಸ್ತ್ರಂ ತತ್ ಪ್ರಶಾಂತಂ ಶತ್ರುತಾಪನಮ್ ॥ 19 ॥

ಭೀಮಸೇನನನ್ನು ರಥದಿಂದ ಎಳೆದು ಅವನ ಶಸ್ತ್ರವನ್ನು ಭೂಮಿಯಲ್ಲಿ ಕಿತ್ತು ಇಟ್ಟಾಗ ಶತ್ರುತಾಪನನಾದ ಆ ನಾರಾಯಣಾಸ್ತ್ರವು ಶಾಂತವಾಯಿತು.
ತಸ್ಮಿನ್ ಪ್ರಶಾಂತೇ ವಿಧಿನಾ ತದಾ ತೇಜಸಿ ದುಃಸಹೇ |
ಬಭೂವುರ್ವಿಮಲಾಃ ಸರ್ವಾ ದಿಶಃ ಪ್ರದಿಶ ಏವ ಚ || 20 ||
ಶಾಸೊತ್ರೇಕ್ತ ರೀತಿಯಲ್ಲಿ ದುಃಸಹವಾದ ಆ ತೇಜಸ್ಸು ಪ್ರಶಾಂತವಾಗುತ್ತಿರಲು ಎಲ್ಲ ದಿಕ್ಕು-ವಿದಿಕ್ಕುಗಳೂ ವಿಮಲವಾದವು.
ಪ್ರವವುಶ್ಚ ಶಿವಾ ವಾತಾಃ ಪ್ರಶಾಂತಾ ಮೃಗಪಕ್ಷಿಣಃ |
ವಾಹನಾನಿ ಚ ಹೃಷ್ಟಾನಿ ಯೋಧಾಶ್ಚ ಮನುಜೇಶ್ವರ || 21 ||
ಮಂಗಳಕರವಾದ ವಾಯುವು ಬೀಸಿತು. ಮೃಗ-ಪಕ್ಷಿಗಳು ಶಾಂತವಾದವು. ವಾಹನಗಳು ಮತ್ತು ಯೋಧರು ಸಂತುಷ್ಟರಾದರು.
ವ್ಯಪೋಢೇ ಚ ತತೋ ಘೋರೇ ತಸ್ಮಿಂಸ್ತೇಜಸಿ ಭಾರತ |
ಬಭೌ ಭೀಮೋ ನಿಶಾಪಾಯೇ ಧೀಮಾನ್ ಸೂರ್ಯ ಇವೋದಿತಃ ||
ಎಲೈ ಭಾರತನೇ, ಆ ಘೋರವಾದ ತೇಜಸ್ಸನ್ನು ಭೀಮನಿಂದ ತೆಗೆಯುತ್ತಿರಲು ಮೇಧಾವಿಯಾದ ಭೀಮನು ರಾತ್ರಿಯು ಕಳೆದು ಉದಯಿಸಿದ ಸೂರ್ಯನಂತೆ ಶೋಭಿಸಿದನು.
ಹತಶೇಷಂ ಬಲಂ ತತ್ರ ಪಾಂಡವಾನಾಮತಿಷ್ಠತ |
ಅಸ್ತ್ರವ್ಯುಪರಮಾದ್ ಧೃಷ್ಟಂ ತವ ಪುತ್ರಜಿಘಾಂಸಯಾ || 23 ||
ಅಸ್ತ್ರವು ಶಾಂತವಾದ ಕಾರಣದಿಂದ ಪಾಂಡವರ ಅಳಿದುಳಿದ ಸೇನೆಯು ಧೈರ್ಯವನ್ನು ಹೊಂದಿ ನಿನ್ನ ಪುತ್ರನನ್ನು ಕೊಲ್ಲಲು ಬಯಸಿ ನಿಂತಿತು.
ವ್ಯವಸ್ಥಿತೇ ಬಲೇ ತಸ್ಮಿನ್ನಸ್ತ್ರೇ ಪ್ರತಿಹತೇ ತಥಾ |
ದುರ್ಯೋಧನೋ ಮಹಾರಾಜ ದ್ರೋಣಪುತ್ರಮಥಾಬ್ರವೀತ್ || 24 ||
ಅಶ್ವತ್ಥಾಮನ್ ಪುನಃ ಶೀಘ್ರಮಸ್ತ್ರಮೇತತ್ ಪ್ರಯೋಜಯ |
ವ್ಯವಸ್ಥಿತಾ ಹಿ ಪಾಂಚಾಲಾಃ ಪುನರೇವ ಜಯೈಷಿಣಃ || 25 ||
ಅಸ್ತ್ರವು ಪ್ರತಿಹತವಾಗಿ ಪಾಂಡವರ ಸೇನೆಯು ಉದ್ಯುಕ್ತವಾಗಿ ನಿಂತಿರಲು, ಎಲೈ ಮಹಾರಾಜನೇ, ದುರ್ಯೋಧನನು ಅಶ್ವತ್ಥಾಮರನ್ನು ಕುರಿತು- `ಅಶ್ವತ್ಥಾಮರೇ, ಪುನಃ ಶೀಘ್ರವಾಗಿ ಆ ಅಸ್ತ್ರವನ್ನು ಪ್ರಯೋಗಿಸಿ. ಪಾಂಚಾಲರು ಜಯವನ್ನು ಬಯಸಿ ಪುನಃ ಯುದ್ಧಕ್ಕೆ ಸನ್ನದ್ಧರಾಗಿದ್ದಾರೆ' ಎಂದು ಹೇಳಿದನು.
ಅಶ್ವತ್ಥಾಮಾ ತಥೋಕ್ತಸ್ತು ತವ ಪುತ್ರೇಣ ಮಾರಿಷ |
ಸುದೀನಮಭಿನಿಃಶ್ವಸ್ಯ ರಾಜಾನಮಿದಮಬ್ರವೀತ್ || 26 ||
ನೈತದಾವರ್ತತೇ ರಾಜನ್ನಸ್ತ್ರಂ ದ್ವಿರ್ನೋಪಪದ್ಯತೇ |
ಆವರ್ತಯನ್ನಿಹಂತ್ಯೇತತ್ ಪ್ರಯೋಕ್ತಾರಂ ನ ಸಂಶಯಃ || 27 ||
ಏಷ ಚಾಸ್ತ್ರಪ್ರತೀಘಾತಂ ವಾಸುದೇವಃ ಪ್ರಯುಕ್ತವಾನ್ |
ಅನ್ಯಥಾ ವಿಹಿತಃ ಸಂಖ್ಯೇ ವಧಃ ಶತ್ರೋರ್ಜನಾಧಿಪ || 28 ||
ಪರಾಜಯೋ ವಾ ಮೃತ್ಯುರ್ವಾ ಶ್ರೇಯೋ ಮೃತ್ಯುರ್ನ ನಿರ್ಜಯಃ |
ನಿರ್ಜಿತಾಶ್ಚಾರಯೋ ಹ್ಯೇತೇ ಶಸೊತ್ರೇತ್ಸರ್ಗಾನ್ಮೃತೋಪಮಾಃ || 29 ||
ಎಲೈ ಶ್ರೇಷ್ಠನೇ, ನಿನ್ನ ಪುತ್ರನಿಂದ ಹೀಗೆ ಹೇಳಲ್ಪಟ್ಟ ಅಶ್ವತ್ಥಾಮರು ಧೈರ್ಯದಿಂದ ನಿಃಶ್ವಾಸವನ್ನು ಮಾಡಿ ರಾಜನನ್ನು ಕುರಿತು- `ಎಲೈ ರಾಜನೇ, ಈ ಅಸ್ತ್ರವು ಹಿಂದಿರುಗಿ ಬರುವುದಿಲ್ಲ. ಇದನ್ನು ಎರಡು ಬಾರಿ ಪ್ರಯೋಗಿಸಲು ಸಾಧ್ಯವಿಲ್ಲ. ಹಾಗೆ ಪ್ರಯೋಗಿಸಿದರೆ ಇದು ನಿಸ್ಸಂಶಯವಾಗಿ ಪ್ರಯೋಗಿಸುವವನನ್ನೇ ಕೊಲ್ಲುತ್ತದೆ. ವಾಸುದೇವನು ತಿಳಿದು ಈ ಅಶಸ್ತ್ರದ ಪ್ರತಿಘಾತವನ್ನು ಪ್ರಯೋಗಿಸಿದನು. ಎಲೈ ರಾಜನೇ, ಇಲ್ಲದಿದ್ದರೆ ಈ ಅಸ್ತ್ರವು ನಿಸ್ಸಂಶಯವಾಗಿ ಶತ್ರುಗಳ ವಧೆಯನ್ನು ಮಾಡುವುದೆಂದು ನಿಯತವಾಗಿದೆ. ಪರಾಜಯ ಮತ್ತು ಮರಣದಲ್ಲಿ, ಮರಣವು ಶ್ರೇಷ್ಠವಾಗಿದೆ, ಪರಾಜಯವಲ್ಲ. ಶಸ್ತ್ರ ಪರಿತ್ಯಾಗದಿಂದ ಪರಾಜಿತರಾದ ಈ ಶತ್ರುಗಳು ಮೃತರಂತೆ ಆಗಿದ್ದಾರೆ' ಎಂದು ಹೇಳಿದರು.
ದುರ್ಯೋಧನಃ
ಆಚಾರ್ಯಪುತ್ರ ಯದ್ಯೇತದ್ ದ್ವಿರಸ್ತ್ರಂ ನ ಪ್ರಯುಜ್ಯತೇ |
ಅನ್ಯೈರ್ಗುರುಘ್ನಾ ವಧ್ಯಂತಾಮಸ್ತ್ರೈರಸ್ತ್ರವಿದಾಂ ವರ || 30 ||
ದುರ್ಯೋಧನ ಎಲೈ ಆಚಾರ್ಯಪುತ್ರರೇ, ಅಸ್ತ್ರಜ್ಞರಲ್ಲಿ ಶ್ರೇಷ್ಠರಾದವರೇ, ಈ ಅಸ್ತ್ರವನ್ನು ಎರಡು ಬಾರಿ ಪ್ರಯೋಗಿಸಲು ಸಾಧ್ಯವಿಲ್ಲದಿದ್ದರೆ ಬೇರೆ ಅಸ್ತ್ರಗಳಿಂದ ಗುರುಗಳನ್ನು ವಧೆ ಮಾಡಿದ ಈ ಪಾಂಡವರು ಕೊಲ್ಲಲ್ಪಡಲಿ.
ತ್ವಯಿ ಹ್ಯಸತ್ರಣಿ ದಿವ್ಯಾನಿ ಯಥಾ ಸ್ಯುಸ್ತ್ರ್ಯಂಬಕೇ ತಥಾ |
ಇಚ್ಛತೋ ನ ಹಿ ತೇ ಮುಚ್ಯೇತ್ ಕ್ರುದ್ಧಸ್ಯಾಪಿ ಪುರಂದರಃ || 31 ||
ರುದ್ರನಲ್ಲಿ ಇದ್ದಂತೆ ನಿಮ್ಮಲ್ಲಿ ದಿವ್ಯಾಸ್ತ್ರಗಳಿವೆ. ನೀವು ಕ್ರುದ್ಧರಾಗಿ ಬಯಸಿದರೆ ಇಂದ್ರನೂ ನಿಮ್ಮಿಂದ ತಪ್ಪಿಸಿಕೊಳ್ಳಲಾರ.
ಧೃತರಾಷ್ಟ್ರಃ
ತಸ್ಮಿನ್ನಸ್ತ್ರೇ ಪ್ರತಿಹತೇ ದ್ರೋಣೇ ಚೋಪಧಿನಾ ಹತೇ |
ತಥಾ ದುರ್ಯೋಧನೇನೋಕ್ತೋ ದ್ರೌಣಿಃ ಕಿಮಕರೋತ್ ಪುನಃ ||32||
ದೃಷ್ಟ್ವಾ ಪಾರ್ಥಾಂಶ್ಚ ಸಂಗ್ರಾಮೇ ಯುದ್ಧಾಯ ಸಮವಸ್ಥಿತಾನ್ |
ನಾರಾಯಣಾಸ್ತ್ರನಿರ್ಮುಕ್ತಾಂಶ್ಚರತಃ ಪೃತನಾಮುಖೇ || 33 ||

ಧೃತರಾಷ್ಟ್ರ: ದ್ರೋಣರು ಮೋಸದಿಂದ ಹತರಾಗಿ ನಾರಾಯಣಾಸ್ತ್ರವು ಪ್ರತಿಹತವಾಗಿ ದುರ್ಯೋಧನನು ಹಾಗೆ ಹೇಳಿದಾಗ, ಯುದ್ಧಕ್ಕೆ ಸನ್ನದ್ಧರಾದ ಪಾಂಡವರು ನಾರಾಯಣಾಸ್ತ್ರದಿಂದ ಮುಕ್ತರಾಗಿ ಸೇನಾಮುಖದಲ್ಲಿ ನಿಂತಿರುವುದನ್ನು ನೋಡಿ ಅಶ್ವತ್ಥಾಮರು ಪುನಃ ಏನು ಮಾಡಿದರು?
ಸಂಜಯಃ
ಜಾನನ್ ಪಿತುಃ ಸ ನಿಧನಂ ಸಿಂಹಲಾಂಗೂಲಕೇತನಃ |
ಸಕ್ರೋಧೋ ಭಯಮುತ್ಸೃಜ್ಯ ಅಭಿದುದ್ರಾವ ಪಾರ್ಷತಮ್ ॥ 34 ॥
ಸಂಜಯ ತಂದೆಯ ಮರಣವನ್ನು ತಿಳಿದ ಸಿಂಹಲಾಂಗೂಲಧ್ವಜರಾದ ಅಶ್ವತ್ಥಾಮರು ಕ್ರೋಧವನ್ನು ಹೊಂದಿ ಭಯವನ್ನು ತ್ಯಜಿಸಿ ಧೃಷ್ಟದ್ಯುಮ್ನನ ಮೇಲೆ ಎರಗಿದರು.
ಅಭಿದ್ರುತ್ಯ ಚ ವಿಂಶತ್ಯಾ ಕ್ಷುದ್ರಕಾಣಾಂ ನರರ್ಷಭಃ |
ಪಂಚಭಿಶ್ಚಾತಿವೇಗೇನ ವಿವ್ಯಾಧ ಪುರುಷರ್ಷಭಮ್ ॥ 35 ॥
ನರರ್ಷಭರಾದ ಅವರು ಪುರುಷಶ್ರೇಷ್ಠನಾದ ಧೃಷ್ಟದ್ಯುಮ್ನನ ಕಡೆಗೆ ಶೀಘ್ರವಾಗಿ ಸಾಗಿ ಅತಿವೇಗವುಳ್ಳ ಇಪ್ಪತ್ತು ಮತ್ತು ಐದು ಕ್ಷುದ್ರಬಾಣಗಳಿಂದ ಅವನನ್ನು ಹೊಡೆದರು.
ಧೃಷ್ಟದ್ಯುಮ್ನಸ್ತತೋ ರಾಜನ್ ಜ್ವಲಂತಮಿವ ಪಾವಕಮ್ |
ದ್ರೋಣಪುತ್ರಂ ತ್ರಿಷಷ್ಟ್ಯಾ ತು ರಾಜನ್ ವಿವ್ಯಾಧ ಪತ್ರಿಣಾಮ್ ॥36॥
ಎಲೈ ರಾಜನೇ, ಆಗ ಧೃಷ್ಟದ್ಯುಮ್ನನು ಜ್ವಲಿಸುವ ಅಗ್ನಿಯಂತಿರುವ ದ್ರೋಣ ಪುತ್ರರನ್ನು ಪತ್ರವನ್ನು ಹೊಂದಿದ ಅರವತ್ಮೂರು ಬಾಣಗಳಿಂದ ಹೊಡೆದನು.
ಸಾರಥಿಂ ಚಾಸ್ಯ ವಿಂಶತ್ಯಾ ಸ್ವರ್ಣಪುಂಖೈಃ ಶಿಲಾಶಿತೈಃ |
ಹಯಾಂಶ್ಚ ಚತುರೋಽವಿದ್ಧ್ಯಚ್ಚತುರ್ಭಿರ್ನಿಶಿತೈಃ ಶರೈಃ ॥ 37 ॥
ಸ್ವರ್ಣಪುಂಖಗಳನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಇಪ್ಪತ್ತು ಬಾಣಗಳಿಂದ ಅವರ ಸಾರಥಿಯನ್ನೂ, ನಾಲ್ಕು ತೀಕ್ಷ್ಣವಾದ ಬಾಣಗಳಿಂದ ಅವರ ರಥದ ನಾಲ್ಕು ಅಶ್ವಗಳನ್ನೂ ಹೊಡೆದನು.
ವಿದ್ಧ್ವಾ ವಿದ್ಧ್ವಾನದದ್ ದ್ರೌಣಿಃ ಕಂಪಯನ್ನಿವ ಮೇದಿನೀಮ್ |
ಆದದತ್ ಸರ್ವಲೋಕಸ್ಯ ಪ್ರಾಣಾನಿವ ಮಹಾರಣೇ ॥ 38 ॥
ಅಶ್ವತ್ಥಾಮರು ಅವನನ್ನು ಬಾಣಗಳಿಂದ ಹೊಡೆದು ಹೊಡೆದು ಭೂಮಿಯನ್ನು ನಡುಗಿಸುವವರಂತೆ, ಮಹಾಯುದ್ಧದಲ್ಲಿ ಎಲ್ಲ ಜೀವರ ಪ್ರಾಣಗಳನ್ನು ಭಕ್ಷಿಸುವವರಂತೆ ನಾದವನ್ನು ಮಾಡಿದರು.
ಪಾರ್ಷತಸ್ತು ಬಲೀ ರಾಜನ್ ಕೃತಾಸ್ತ್ರಃ ಕೃತನಿಶ್ರಮಃ |
ದ್ರೌಣಿಮೇವಾಭಿದುದ್ರಾವ ಕೃತ್ವಾ ಮೃತ್ಯುಂ ನಿವರ್ತನಮ್ ॥ 39 ॥
ಎಲೈ ರಾಜನೇ, ಬಲಿಷ್ಠನಾದ ಧೃಷ್ಟದ್ಯುಮ್ನನಾದರೋ ಅಸ್ತ್ರವಿದ್ಯೆಯಿಂದಲೂ ಅಭ್ಯಾಸ ಬಲದಿಂದಲೂ, ಮೃತ್ಯುವನ್ನು ಕಡೆಗಣಿಸಿ ಅಶ್ವತ್ಥಾಮರ ಅಭಿಮುಖವಾಗಿಯೇ ಓಡಿದನು.
ತತೋ ಬಾಣಮಯಂ ವರ್ಷಂ ದ್ರೋಣಪುತ್ರಸ್ಯ ಮೂರ್ಧನಿ |
ಅವಾಸೃಜದಮೇಯಾತ್ಮಾ ಪಾಂಚಾಲ್ಯೋ ರಥಿನಾಂ ವರಃ ॥ 40 ॥
ಅನಂತರ ರಥಿಗಳಲ್ಲಿ ಶ್ರೇಷ್ಠನಾದ, ಅಚಿಂತ್ಯಸಾಮರ್ಥ್ಯವುಳ್ಳ, ಪಾಂಚಾಲನಾದ ಧೃಷ್ಟದ್ಯುಮ್ನನು ಅಶ್ವತ್ಥಾಮರ ಶಿರಸ್ಸಿನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಂ ದ್ರೌಣಿಃ ಸಮರೇ ಕ್ರುದ್ಧಶ್ಛಾದಯಾಮಾಸ ಪತ್ರಿಭಿಃ |
ವಿವ್ಯಾಧ ಚೈನಂ ದಶಭಿಃ ಪಿತುರ್ವಧಮನುಸ್ಮರನ್ ॥ 41 ॥
ಅಶ್ವತ್ಥಾಮರು ಕ್ರೋಧಗೊಂಡು ತಮ್ಮ ತಂದೆಯ ವಧೆಯನ್ನು ಸ್ಮರಿಸುತ್ತಾ ರಣರಂಗದಲ್ಲಿ ಅವನನ್ನು ಹತ್ತು ಬಾಣಗಳಿಂದ ಹೊಡೆದರು.
ದ್ವಾಭ್ಯಾಂ ಚ ಸುವಿಕೃಷ್ಟಾಭ್ಯಾಂ ಕ್ಷುರಾಭ್ಯಾಂ ಧ್ವಜಕಾರ್ಮುಕೇ |
ಛಿತ್ತ್ವಾ ಪಾಂಚಾಲರಾಜಸ್ಯ ದ್ರೌಣಿರನ್ಯೈಃ ಸಮಾರ್ದಯತ್ ॥ 42 ॥
ಅವರು ಚೆನ್ನಾಗಿ ಎಳೆದು ಪ್ರಯೋಗಿಸಿದ ಎರಡು ಕ್ಷುರಗಳಿಂದ ಧೃಷ್ಟದ್ಯುಮ್ನನ ಧ್ವಜ ಮತ್ತು ಧನುಸ್ಸುಗಳನ್ನು ಕತ್ತರಿಸಿ, ಬೇರೆ ಬಾಣಗಳಿಂದ ಅವನನ್ನು ಪೀಡಿಸಿದರು.
ವ್ಯಶ್ವಸೂತರಥಂ ಚೈನಂ ದ್ರೌಣಿಶ್ಚಕ್ರೇ ಮಹಾಹವೇ |
ತಸ್ಯ ಚಾನುಚರಾನ್ ಸರ್ವಾನ್ ಕ್ರುದ್ಧಃ ಪ್ರಾಚ್ಛಾದಯಚ್ಛರೈಃ ॥ 43 ॥
ಅಶ್ವತ್ಥಾಮರು ದೊಡ್ಡ ಯುದ್ಧದಲ್ಲಿ ಅವನನ್ನು ಅಶ್ವ-ಸೂತ-ರಥ ಹೀನನನ್ನಾಗಿ ಮಾಡಿ ಕ್ರುದ್ಧರಾಗಿ ಅವನ ಅನುಚರರೆಲ್ಲರನ್ನೂ ಬಾಣಗಳಿಂದ ಮುಚ್ಚಿಹಾಕಿದರು.
ಪ್ರದುದ್ರಾವ ತತಃ ಸೈನ್ಯಂ ಪಾಂಚಾಲಾನಾಂ ವಿಶಾಂಪತೇ |
ಸಂಭ್ರಾಂತರೂಪಮಾರ್ತಂ ಚ ಶರವರ್ಷಪರಿಕ್ಷತಮ್ ॥ 44 ॥
ಎಲೈ ರಾಜನೇ, ಆಗ ಪಾಂಚಾಲರ ಸೈನ್ಯವು ಬಾಣಗಳ ಮಳೆಯಿಂದ ಗಾಯಗೊಂಡು ದಿಗ್ಭ್ರಾಂತವಾಗಿ ದುಃಖದಿಂದ ಕೂಡಿ ಅಲ್ಲಿಂದ ಓಡಿಹೋಯಿತು.
ದೃಷ್ಟ್ವಾ ಚ ವಿಮುಖಾನ್ ಯೋಧಾನ್ ಧೃಷ್ಟದ್ಯುಮ್ನಂ ಚ ಪೀಡಿತಮ್ |
ಶೈನೇಯೋಽಚೋದಯತ್ ತೂರ್ಣಂ ರಥಂ ದ್ರೌಣಿರಥಂ ಪ್ರತಿ ॥

ಯೋಧರು ಯುದ್ಧವಿಮುಖರಾಗಿರುವುದನ್ನೂ, ಧೃಷ್ಟದ್ಯುಮ್ನನು ಪೀಡಿತನಾಗಿರುವುದನ್ನೂ ನೋಡಿದ ಸಾತ್ಯಕಿಯು ತನ್ನ ರಥದ ಅಶ್ವಗಳನ್ನು ಅಶ್ವತ್ಥಾಮರ ರಥದ ಕಡೆಗೆ ಪ್ರಚೋದಿಸಿದನು.
ಅಷ್ಟಭಿರ್ನಿಶಿತೈಶ್ಚೈವ ಸೋಽಶ್ವತ್ಥಾಮಾನಮಾರ್ದಯತ್ |
ವಿಂಶತ್ಯಾ ಪುನರಾಹತ್ಯ ನಾನಾರೂಪೈರಮರ್ಷಣಮ್ |
ವಿವ್ಯಾಧ ಚ ತಥಾ ಸೂತಂ ಚತುರ್ಭಿಶ್ಚತುರೋ ಹಯಾನ್ ॥ 46 ॥
ತೀಕ್ಷ್ಣವಾದ ಎಂಟು ಬಾಣಗಳಿಂದ ಅವನು ಅಶ್ವತ್ಥಾಮರನ್ನು ಪೀಡಿಸಿದನು. ಪುನಃ ನಾನಾ ರೂಪದ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿ ರೋಷಗೊಂಡಿದ್ದ ಅವರನ್ನು ಹೊಡೆದು ಅವರ ಸಾರಥಿಯನ್ನು ಮತ್ತು ನಾಲ್ಕು ಬಾಣಗಳಿಂದ ಅವರ ರಥದ ಅಶ್ವಗಳನ್ನು ಹೊಡೆದನು.
ಸೋಽತಿವಿದ್ಧೋ ಮಹೇಷ್ವಾಸೋ ನಾನಾಲಿಂಗೈರಮರ್ಷಣಃ |
ಯುಯುಧಾನೇನ ವೈ ದ್ರೌಣಿಃ ಪ್ರಹಸನ್ ವಾಕ್ಯಮಬ್ರವೀತ್ ॥ 47 ॥
ಶೈನೇಯಾಭ್ಯವಪತ್ತಿಂ ತೇ ಜಾನಾಮ್ಯಾಚಾರ್ಯಘಾತಿನಃ |
ನ ತ್ವೇನಂ ತ್ರಾಸ್ಯಸಿ ಮಯಾ ಗ್ರಸ್ತಮಾತ್ಮಾನಮೇವ ಚ ॥ 48 ॥
ನಾನಾ ವಿಧವಾದ ಬಾಣಗಳಿಂದ ಸಾತ್ಯಕಿಯಿಂದ ಅತ್ಯಂತವಾಗಿ ಹೊಡೆಯಲ್ಪಟ್ಟ ಅಶ್ವತ್ಥಾಮರು ಅವನನ್ನು ಕುರಿತು- `ಎಲೈ ಸಾತ್ಯಕಿಯೇ, ಆಚಾರ್ಯರನ್ನು ಕೊಂದ ಧೃಷ್ಟದ್ಯುಮ್ನನನ್ನು ರಕ್ಷಿಸುವ ನಿನ್ನ ಅಭಿಪ್ರಾಯವನ್ನು ನಾನು ತಿಳಿದಿದ್ದೇನೆ. ನಾನು ನುಂಗುತ್ತಿರುವ ಈ ಧೃಷ್ಟದ್ಯುಮ್ನನನ್ನಾಗಲೀ ಅಥವಾ ನಿನ್ನನ್ನೇ ಆಗಲೀ ನೀನು ರಕ್ಷಿಸಿಕೊಳ್ಳಲಾರೆ' ಎಂದು ಹೇಳಿದರು.
ಏವಮುಕತ್ವರ್ಕರಶ್ಮ್ಯಾಭಂ ಸುಪರ್ವಾಣಂ ಶರೋತ್ತಮಮ್ |
ವ್ಯಸೃಜತ್ ಸಾತ್ವತೇ ದ್ರೌಣಿರ್ವಜ್ರಂ ವೃತ್ರೇ ಯಥಾ ಹರಿಃ ॥ 49 ॥
ಹೀಗೆ ಹೇಳಿ ಅಶ್ವತ್ಥಾಮರು ಒಳ್ಳೆಯ ಅಲುಗುಳ್ಳ ಸೂರ್ಯರಶ್ಮಿಯಂತಿದ್ದ ಶ್ರೇಷ್ಠವಾದ ಬಾಣವನ್ನು ಇಂದ್ರನು ವೃತ್ರಾಸುರನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದಂತೆ ಸಾತ್ಯಕಿಯ ಮೇಲೆ ಪ್ರಯೋಗಿಸಿದರು.
ಸ ತಂ ನಿರ್ಭಿದ್ಯ ತೇನಾಸ್ತಃ ಸಾಯಕಃ ಸಶರಾವರಮ್ |
ವಿವೇಶ ವಸುಧಾಂ ಭಿತ್ತತ್ವ ಶ್ವಸನ್ ಬಿಲಮಿವೋರಗಃ ॥ 50 ॥
ಅಶ್ವತ್ಥಾಮರು ಪ್ರಯೋಗಿಸಿದ ಆ ಬಾಣವು ಸಾತ್ಯಕಿಯ ಕವಚವನ್ನೂ, ಅವನ ದೇಹವನ್ನೂ ಭೇದಿಸಿ, ಭುಸುಗುಟ್ಟುವ ಸರ್ಪವು ಬಿಲವನ್ನು ಸೇರುವಂತೆ ಭೂಮಿಯನ್ನು ಪ್ರವೇಶಿಸಿತು.
ಸ ಭಿನ್ನಕವಚಃ ಶೂರಸ್ತೋತ್ತ್ರಾರ್ದಿತ ಇವ ದ್ವಿಪಃ |
ವಿಮುಚ್ಯ ಸಶರಂ ಚಾಪಂ ಭೂರಿವ್ರಣಪರಿಸ್ರವಃ ॥ 51 ॥
ಸೀದನ್ ರುಧಿರಸಿಕ್ತಶ್ಚ ರಥೋಪಸ್ಥ ಉಪಾವಿಶತ್ |
ಸೂತೇನಾಪಹೃತಸ್ತೂರ್ಣಂ ದ್ರೋಣಪುತ್ರಾದ್ ರಥಾಂತರಮ್ ॥ 52 ॥
ತನ್ನ ಕವಚವು ಭೇದಿಸಲ್ಪಟ್ಟ ಶೂರನಾದ ಅವನು ಅಂಕುಶದಿಂದ ಪೀಡಿಸಲ್ಪಟ್ಟ ಗಜದಂತೆ ತನ್ನ ಬಿಲ್ಲು-ಬಾಣಗಳನ್ನು ಬಿಟ್ಟು, ಉಂಟಾದ ಗಾಯಗಳಿಂದ ಬಹಳ ರಕ್ತವನ್ನು ಸುರಿಸುತ್ತಾ, ರಕ್ತಲಿಪ್ತವಾದ ದೇಹವುಳ್ಳವನಾಗಿ ರಥಪೀಠದಲ್ಲಿ ಕುಸಿದು ಕುಳಿತನು. ಅವನ ಸೂತನು ಅವನನ್ನು ಅಶ್ವತ್ಥಾಮರಿಂದ ದೂರ ಕರೆದುಕೊಂಡು ಹೋಗಿ ಇನ್ನೊಂದು ರಥಕ್ಕೆ ಸೇರಿಸಿದನು.
ಅಥಾನ್ಯೇನ ಸುಪುಂಖೇನ ಶರೇಣ ನತಪರ್ವಣಾ |
ಆಜಘಾನ ಭ್ರುವೋರ್ಮಧ್ಯೇ ಧೃಷ್ಟದ್ಯುಮ್ನಂ ಪರಂತಪಃ ॥ 53 ॥
ಅನಂತರ ಪರಂತಪರಾದ ಅಶ್ವತ್ಥಾಮರು ಒಳ್ಳೆಯ ಪುಂಖವನ್ನು ಹೊಂದಿ ಬಾಗಿದ ತುದಿಯುಳ್ಳ ಒಂದು ಬಾಣದಿಂದ ಧೃಷ್ಟದ್ಯುಮ್ನನನ್ನು ಅವನ ಭ್ರೂಮಧ್ಯದಲ್ಲಿ ಹೊಡೆದರು.
ಸ ಪೂರ್ವಮತಿವಿದ್ಧಶ್ಚ ಭೃಶಂ ಪಶ್ಚಾಚ್ಚ ಪೀಡಿತಃ |
ಸಸಾದ ಯುಧಿ ಪಾಂಚಾಲ್ಯೋ ವ್ಯಪಾಶ್ರಯತ ಚ ಧ್ವಜಮ್ ॥ 54 ॥
ಧೃಷ್ಟದ್ಯುಮ್ನನು ಮೊದಲೇ ಬಹಳವಾಗಿ ಹೊಡೆಯಲ್ಪಟ್ಟು, ಅನಂತರವೂ ಈ ಬಾಣದಿಂದ ಪೀಡಿತನಾಗಿ ರಣರಂಗದಲ್ಲಿ ಕುಸಿದು ರಥದ ಧ್ವಜವನ್ನು ಆಶ್ರಯಿಸಿದನು.
ತಂ ಮತ್ತಮಿವ ಸಿಂಹೇನ ರಾಜನ್ ಕುಂಜರಮರ್ದಿತಮ್ |
ಜವೇನಾಭ್ಯದ್ರವನ್ ಶೂರಾಃ ಪಂಚ ಪಾಂಡವತೋ ರಥಾಃ ॥ 55 ॥
ಎಲೈ ರಾಜನೇ, ಮದಗಜವು ಸಿಂಹದಿಂದ ಪೀಡಿತವಾದಂತೆ ಪೀಡಿತನಾದ ಅವನನ್ನು ನೋಡಿ ಶೂರರಾದ ಪಂಚಪಾಂಡವರ ರಥಗಳು ವೇಗದಿಂದ ಅವನ ಬಳಿಗೆ ಬಂದವು.
ಕಿರೀಟೀ ಭೀಮಸೇನಶ್ಚ ವೃದ್ಧಕ್ಷತ್ರಶ್ಚ ಪೌರವಃ |
ಯುವರಾಜಶ್ಚ ಚೇದೀನಾಂ ಮಾಲವಶ್ಚ ಸುದರ್ಶನಃ |
ಪಂಚಭಿಃಪಂಚಭಿರ್ಬಾಣೈರಭ್ಯಘ್ನನ್ ಸರ್ವತಃ ಸಮಮ್ ॥ 56 ॥
ಅರ್ಜುನ, ಭೀಮಸೇನ, ಪೌರವನಾದ ವೃದ್ಧಕ್ಷತ್ರ, ಚೇದಿರಾಜ್ಯದ ಯುವರಾಜ, ಮಾಲವನಾದ ಸುದರ್ಶನ - ಇವರೆಲ್ಲರೂ ಒಂದೇ ಕಾಲದಲ್ಲಿ ಐದೈದು ಬಾಣಗಳಿಂದ ಎಲ್ಲ ಕಡೆಗಳಿಂದಲೂ ಅಶ್ವತ್ಥಾಮರನ್ನು ಹೊಡೆದರು.
ಆಶೀವಿಷಾಭೈರ್ವಿಂಶದ್ಭಿಃ ಪಂಚಭಿಶ್ಚಾಪಿ ತಾನ್ ಶರೈಃ |
ಚಿಚ್ಛೇದ ಯುಗಪದ್ ದ್ರೌಣಿಃ ಪಂಚವಿಂಶತಿಸಾಯಕಾನ್ ॥ 57 ॥
ಅಶ್ವತ್ಥಾಮರು ಸರ್ಪದಂತಿದ್ದ ಇಪ್ಪತ್ತೈದು ಬಾಣಗಳಿಂದ ಅವರು ಪ್ರಯೋಗಿಸಿದ ಇಪ್ಪತ್ತೈದು ಬಾಣಗಳನ್ನು ಒಂದೇ ಕಾಲದಲ್ಲಿ

ಕತ್ತರಿಸಿದರು.
ಸಪ್ತಭಿಶ್ಚ ಶಿತೈರ್ಬಾಣೈಃ ಪೌರವಂ ದ್ರೌಣಿರಾರ್ದಯತ್ |
ಮಾಲವಂ ತ್ರಿಭಿರೇಕೇನ ಪಾರ್ಥಂ ಷಡ್ಭಿರ್ವೃಕೋದರಮ್ ॥ 58 ॥
ಅಶ್ವತ್ಥಾಮರು ತೀಕ್ಷ್ಣವಾದ ಏಳು ಬಾಣಗಳಿಂದ ಪೌರವನನ್ನು ಪೀಡಿಸಿದರು. ಮಾಲವನನ್ನು ಮೂರು ಬಾಣಗಳಿಂದಲೂ, ಅರ್ಜುನನನ್ನು ಒಂದು ಬಾಣದಿಂದಲೂ, ವೃಕೋದರನನ್ನು ಆರು ಬಾಣಗಳಿಂದಲೂ ಪೀಡಿಸಿದರು.
ತತಸ್ತೇ ವಿವ್ಯಧುಃ ಸರ್ವೇ ದ್ರೌಣಿಂ ರಾಜನ್ ಮಹಾರಥಾಃ |
ಯುಗಪಚ್ಚ ಪೃಥಕ್ಚೈವ ರುಗ್ಮಪುಂಖೈಃ ಶಿಲಾಶಿತೈಃ ॥ 59 ॥
ಎಲೈ ರಾಜನೇ, ಆಗ ಆ ಮಹಾರಥರೆಲ್ಲರೂ ಒಟ್ಟಿಗೆ ಮತ್ತು ಬೇರೆ ಬೇರೆಯಾಗಿಯೂ ರುಗ್ಮಪುಂಖವನ್ನು ಹೊಂದಿದ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳಿಂದ ಅಶ್ವತ್ಥಾಮರನ್ನು ಹೊಡೆದರು.
ಯುವರಾಜಸ್ತು ವಿಂಶತ್ಯಾ ದ್ರೌಣಿಂ ವಿವ್ಯಾಧ ಪತ್ರಿಣಾಮ್ |
ಪಾರ್ಥಶ್ಚ ಪುನರಷ್ಟಾಭಿಸ್ತಥಾ ಸರ್ವೇ ತ್ರಿಭಿಸ್ತ್ರಿಭಿಃ ॥ 60 ॥
ಚೇದಿದೇಶದ ಯುವರಾಜನು ಇಪ್ಪತ್ತು ಬಾಣಗಳಿಂದ ಅಶ್ವತ್ಥಾಮರನ್ನು ಹೊಡೆದನು. ಅರ್ಜುನನು ಎಂಟು ಬಾಣಗಳಿಂದಲೂ, ಉಳಿದೆಲ್ಲರೂ ಮೂರು- ಮೂರು ಬಾಣಗಳಿಂದಲೂ ಹೊಡೆದರು.
ತತೋಽರ್ಜುನಂ ಷಡ್ಭಿರಥಾಜಘಾನ
ದ್ರೌಣಾಯನಿರ್ದಶಭಿರ್ವಾಸುದೇವಮ್ |
ಭೀಮಂ ದಶಾರ್ಧೈರ್ಯುವರಾಜಂ ಚತುರ್ಭಿ-
ರ್ದ್ವಾಭ್ಯಾಂ ಛಿತ್ವಾ ಕಾರ್ಮುಕಂ ಚ ಧ್ವಜಂ ಚ ॥
ಪುನಃ ಪಾರ್ಥಂ ಶರವರ್ಷೇಣ ವಿದ್ಧ್ವಾ
ದ್ರೌಣಿರ್ಘೋರಂ ಸಿಂಹನಾದಂ ನನಾದ ॥ 61 ॥
ಆಗ ದ್ರೋಣಪುತ್ರರಾದ ಅಶ್ವತ್ಥಾಮರು ಅರ್ಜುನನನ್ನು ಆರು ಬಾಣಗಳಿಂದಲೂ, ಕೃಷ್ಣನನ್ನು ಹತ್ತು ಬಾಣಗಳಿಂದಲೂ, ಭೀಮನನ್ನು ಐದು ಬಾಣಗಳಿಂದಲೂ, ಯುವರಾಜನನ್ನು ಎರಡು ಬಾಣಗಳಿಂದ ಅವನ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ, ನಾಲ್ಕು ಬಾಣಗಳಿಂದಲೂ ಹೊಡೆದರು. ಅಶ್ವತ್ಥಾಮರು ಪುನಃ ಅರ್ಜುನನಿಗೆ ಬಾಣಗಳ ಮಳೆಯಿಂದ ಹೊಡೆದು ಘೋರವಾದ ಸಿಂಹನಾದವನ್ನು ಮಾಡಿದರು.
ತಸ್ಯಾಸ್ಯತಃ ಸುನಿಶಿತಾನ್ ಪೀತಧಾರಾನ್
ದ್ರೌಣೇಃ ಶರಾನ್ ಪೃಷ್ಠತಶ್ಚಾಗ್ರತಶ್ಚ |
ಧರಾ ವಿಯದ್ದ್ಯೌಃ ಪ್ರದಿಶೋ ದಿಶಶ್ಚ
ಛನ್ನಾ ಬಾಣೈರಭವನ್ ಘೋರರೂಪೈಃ ॥ 62 ॥
ಅತ್ಯಂತ ತೀಕ್ಷ್ಣವಾದ ಜಲಪಾನ ಮಾಡಿದ ಅಲುಗುಳ್ಳ ಬಾಣಗಳನ್ನು ಅಶ್ವತ್ಥಾಮರು ಹಿಂಭಾಗದಲ್ಲಿಯೂ, ಮುಂಭಾಗದಲ್ಲಿಯೂ ಪ್ರಯೋಗಿಸುವಾಗ ಭೂಮಿಯೂ, ಅಂತರಿಕ್ಷವೂ, ಆಕಾಶವೂ, ದಿಕ್ಕು-ವಿದಿಕ್ಕುಗಳೂ ಘೋರರೂಪವನ್ನು ಹೊಂದಿದ ಆ ಬಾಣಗಳಿಂದ ಮುಚ್ಚಲ್ಪಟ್ಟವು.
ಆಸೀನಸ್ಯ ಸ್ವರಥಂ ತೂಗ್ರತೇಜಾಃ
ಸುದರ್ಶನಸ್ಯೇಂದ್ರಕೇತುಪ್ರಕಾಶೌ |
ಭುಜೌ ಶಿರಶ್ಚೇಂದ್ರಸಮಾನವೀರ್ಯ-
ಸ್ತ್ರಿಭಿಃ ಶರೈರ್ಯುಗಪತ್ ಸಂಚಕರ್ತ ॥ 63 ॥
ತನ್ನ ರಥದಲ್ಲಿಯೇ ನಿಂತು ಯುದ್ಧ ಮಾಡುತ್ತಿದ್ದ ಮಾಲವ ದೇಶದ ಸುದರ್ಶನನ ಇಂದ್ರಧ್ವಜ ಸದೃಶವಾದ ಎರಡು ಭುಜವನ್ನು ಮತ್ತು ಶಿರಸ್ಸನ್ನು ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ಉಗ್ರವಾದ ತೇಜಸ್ಸನ್ನು ಹೊಂದಿದ ಅಶ್ವತ್ಥಾಮರು ಮೂರು ಬಾಣಗಳಿಂದ ಒಂದೇ ಕಾಲದಲ್ಲಿ ಕತ್ತರಿಸಿದರು.
ಸ ಪೌರವಂ ರಥಶಕ್ತ್ಯಾ ನಿಹತ್ಯ
ಛಿತ್ವಾ ರಥಂ ತಿಲಶಶ್ಚಾಪಿ ಬಾಣೈಃ |
ಛಿತ್ವಾಽಸ್ಯ ಬಾಹೂ ವರಚಂದನಾಕ್ತೌ
ಭಲ್ಲೇನ ಕಾಯಾಚ್ಛಿರ ಉಚ್ಚಕರ್ತ ॥ 64 ॥
ಅವರು ಪೌರವನನ್ನು ರಥಶಕ್ತಿಯಿಂದ ಹೊಡೆದು, ತಮ್ಮ ಬಾಣಗಳಿಂದ ಅವನ ರಥವನ್ನು ಎಳ್ಳುಕಾಳುಗಳಷ್ಟು ಸಣ್ಣ ಭಾಗವಾಗಿ ಕತ್ತರಿಸಿ, ಚಂದನಲೇಪಿತವಾದ ಅವನ ಬಾಹುಗಳನ್ನು ಕತ್ತರಿಸಿ, ಭಲ್ಲದಿಂದ ಅವನ ದೇಹದಿಂದ ಅವನ ಶಿರಸ್ಸನ್ನು ಕತ್ತರಿಸಿದರು.
ಯುವಾನಮಿಂದೀವರದಾಮವರ್ಣಂ
ಚೇದಿಪ್ರಿಯಂ ಯುವರಾಜಂ ಪ್ರಹಸ್ಯ |
ಬಾಣೈಸ್ತ್ವರಾವಾನ್ ಜ್ವಲಿತಾಗ್ನಿಕಲ್ಪೈ-
ರ್ವಿದ್ಧ್ವಾಪ್ರಾದಾನ್ಮೃತ್ಯವೇ ಸಾಶ್ವಸೂತಮ್ ॥ 65 ॥
ಯುವಕನೂ, ಇಂದೀವರಮಾಲೆಯನ್ನು ಹೊಂದಿದವನೂ ಚೇದಿಪ್ರಿಯನಾದ ಯುವರಾಜನನ್ನು ನೋಡಿ ನಕ್ಕು, ತ್ವರೆಯಿಂದ ಕೂಡಿ ಜ್ವಲಿಸುವ ಅಗ್ನಿಯಂತಿದ್ದ ಬಾಣಗಳಿಂದ ಅವನನ್ನು ಹೊಡೆದು ಅಶ್ವ-ಸೂತರ ಜೊತೆಯಲ್ಲಿ ಅವನನ್ನು ಮೃತ್ಯುವಿಗೆ ಕೊಟ್ಟರು.
ತಾನ್ ನಿಹತ್ಯ ರಣೇ ವೀರೋ ದ್ರೋಣಪುತ್ರೋ ಯುಧಾಂಪತಿಃ |

ದಧ್ಮೌ ಪ್ರಮುದಿತಃ ಶಂಖಂ ಬೃಹಂತಮಪರಾಜಿತಃ ॥ 66 ॥
ಯುದ್ಧಪತಿಗಳಾದ ವೀರರಾದ ದ್ರೋಣಪುತ್ರರು ಯುದ್ಧದಲ್ಲಿ ಅವರನ್ನು ಕೊಂದು ಸಂತೋಷದಿಂದ ಕೂಡಿದವರಾಗಿ, ಅಪರಾಜಿತರಾಗಿ ದೊಡ್ಡ ಶಂಖವನ್ನು ಊದಿದರು.
ತತಃ ಸರ್ವೇ ಚ ಪಾಂಚಾಲಾ ಭೀಮಸೇನಶ್ಚ ಪಾಂಡವಃ |
ಧೃಷ್ಟದ್ಯುಮ್ನರಥಂ ಭೀತಾಸ್ತ್ಯಕ್ತ್ವಾ ಸಂಪ್ರಾದ್ರವನ್ ದಿಶಃ ॥ 67 ॥
ಆಗ ಎಲ್ಲ ಪಾಂಚಾಲರೂ, ಪಾಂಡವನಾದ ಭೀಮಸೇನನೂ ಭೀತರಾಗಿ ಧೃಷ್ಟದ್ಯುಮ್ನನ ರಥವನ್ನು ಬಿಟ್ಟು ಬೇರೆ ದಿಕ್ಕುಗಳಿಗೆ ಓಡಿಹೋದರು.
ತಾನ್ ಪ್ರಭಗ್ನಾಂಸ್ತಥಾ ದ್ರೌಣಿಃ ಪೃಷ್ಠತೋ ವಿಕಿರನ್ ಶರೈಃ |
ಅಭ್ಯವರ್ತತ ವೇಗೇನ ಕಾಲವತ್ ಪಾಂಡುವಾಹಿನೀಮ್ ॥ 68 ॥
ಅಶ್ವತ್ಥಾಮರು ಹಾಗೆ ಭಗ್ನಗೊಂಡು ಓಡುತ್ತಿದ್ದ ಅವರನ್ನು ಹಿಂದಿನಿಂದ ಬಾಣಗಳನ್ನು ಪ್ರಯೋಗಿಸುತ್ತಾ, ವೇಗದಿಂದ ಯಮನಂತೆ ಪಾಂಡವಸೇನೆಯನ್ನು ಹಿಂಬಾಲಿಸಿದರು.
ತೇ ವಧ್ಯಮಾನಾಃ ಸಮರೇ ದ್ರೋಣಪುತ್ರೇಣ ಕ್ಷತ್ರಿಯಾಃ |
ದ್ರೋಣಪುತ್ರಂ ಭಯಾದ್ ರಾಜನ್ ದಿಕ್ಷು ಸರ್ವಾಸು ಮೇನಿರೇ ॥69॥
ಎಲೈ ರಾಜನೇ, ದ್ರೋಣಪುತ್ರರಾದ ಅಶ್ವತ್ಥಾಮರಿಂದ ಹಾಗೆ ಹೊಡೆಯಲ್ಪಡುತ್ತಿದ್ದ ಕ್ಷತ್ರಿಯರು ಭಯದಿಂದ ಅಶ್ವತ್ಥಾಮರು ಎಲ್ಲ ದಿಕ್ಕುಗಳಲ್ಲಿಯೂ ಇದ್ದಾರೆಂದು ಭಾವಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ದ್ರೋಣಪರ್ವಣಿ ದ್ವ್ಯಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ಮೂರನೆಯ ಅಧ್ಯಾಯ
ಭೀಮ ಮತ್ತು ಅಶ್ವತ್ಥಾಮರ ಯುದ್ಧ.
ಅಶ್ವತ್ಥಾಮರಿಂದ ಪಾಂಡವಸೇನೆಯ ಪರಾಜಯ.
ಸಂಜಯಃ
ಮಾಲವಂ ಪೌರವಂ ಚೈವ ಯುವರಾಜಂ ಚ ಚೇದಿಪಮ್ |
ದೃಷ್ಟ್ವಾ ಸಮಕ್ಷಂ ನಿಹತಂ ದ್ರೋಣಪುತ್ರೇಣ ಪಾಂಡವಃ ॥ 1 ॥
ಭೀಮಸೇನೋ ಮಹಾಬಾಹುಃ ಕ್ರೋಧಮಾಹಾರಯತ್ ಪರಮ್ |
ತತಃ ಶರಶತೈಸ್ತೀಕ್ಷ್ಣೈಃ ಸಂಕ್ರುದ್ಧಾಶೀವಿಷೋಪಮೈಃ |
ಛಾದಯಾಮಾಸ ಸಮರೇ ದ್ರೋಣಪುತ್ರಂ ಪರಂತಪಃ ॥ 2 ॥
ಸಂಜಯ ಮಾಲವನನ್ನೂ, ಪೌರವನನ್ನೂ, ಯುವರಾಜನನ್ನೂ ಮತ್ತು ಚೇದಿ ರಾಜನನ್ನೂ ದ್ರೋಣಪುತ್ರರು ತಮ್ಮ ಎದುರಿಗೇ ವಧೆ ಮಾಡಿದುದನ್ನು ನೋಡಿ, ಮಹಾಬಾಹುವಾದ ಪಾಂಡವನಾದ ಭೀಮಸೇನನು ಬಹಳ ಕ್ರೋಧವನ್ನು ತಂದುಕೊಂಡನು. ಆಗ ಕೋಪಗೊಂಡ ಸರ್ಪದಂತಿರುವ ಇನ್ನೂ ತೀಕ್ಷ್ಣವಾದ ಬಾಣಗಳಿಂದ ಪರಂತಪನಾದ ಭೀಮನು ಯುದ್ಧದಲ್ಲಿ ದ್ರೋಣಪುತ್ರರನ್ನು ಆಚ್ಛಾದಿಸಿದನು.
ತತೋ ದ್ರೌಣಿರ್ಮಹಾತೇಜಾಃ ಶರವರ್ಷಂ ನಿಹತ್ಯ ತಮ್ |
ವಿವ್ಯಾಧ ನಿಶಿತೈರ್ಬಾಣೈರ್ಭೀಮಸೇನಮಮರ್ಷಣಃ ॥ 3 ॥
ಆಗ ಮಹಾತೇಜಸ್ವಿಗಳಾದ ಅಶ್ವತ್ಥಾಮರು ಆ ಬಾಣಗಳ ಮಳೆಯನ್ನು ನಾಶಪಡಿಸಿ ರೋಷಗೊಂಡು ತೀಕ್ಷ್ಣವಾದ ಬಾಣಗಳಿಂದ ಭೀಮಸೇನನನ್ನು ಹೊಡೆದರು.
ತತೋ ಭೀಮೋ ಮಹಾಬಾಹುರ್ದ್ರೌಣೇರ್ಯುಧಿ ಮಹಾಬಲಃ |
ಕ್ಷುರಪ್ರೇಣ ಧನುಶ್ಛಿತ್ತ್ವಾ ದ್ರೌಣಿಂ ವಿವ್ಯಾಧ ಪತ್ರಿಣಾ ॥ 4 ॥
ಅನಂತರ ಮಹಾಬಾಹುವೂ ಮತ್ತು ಮಹಾಬಲನೂ ಆದ ಭೀಮನು ಯುದ್ಧದಲ್ಲಿ ಕ್ಷುರಪ್ರದಿಂದ ಅಶ್ವತ್ಥಾಮರ ಧನುಸ್ಸನ್ನು ಕತ್ತರಿಸಿ ಅವರನ್ನು ಬಾಣಗಳಿಂದ ಹೊಡೆದನು.
ತದಪಾಸ್ಯ ಧನುಶ್ಛಿನ್ನಂ ದ್ರೋಣಪುತ್ರೋ ಮಹಾಮನಾಃ |
ಅನ್ಯತ್ ಕಾರ್ಮುಕಮಾದಾಯ ಭೀಮಂ ವಿವ್ಯಾಧ ಪತ್ರಿಭಿಃ ॥ 5 ॥
ಧೈರ್ಯಶಾಲಿಗಳಾದ ಅಶ್ವತ್ಥಾಮರು ಕತ್ತರಿಸಲ್ಪಟ್ಟ ಧನುಸ್ಸನ್ನು ಬಿಟ್ಟು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಭೀಮನನ್ನು ಬಾಣಗಳಿಂದ ಹೊಡೆದರು.
ತೌ ದ್ರೌಣಿಭೀಮೌ ಸಮರೇ ಪರಾಕ್ರಾಂತೌ ಮಹಾಬಲೌ |
ಅವರ್ಷತಾಂ ಶರವರ್ಷಂ ವೃಷ್ಟಿಮಂತಾವಿವಾಂಬುದೌ ॥ 6 ॥
ಮಹಾಬಲರೂ, ಪರಾಕ್ರಮಶಾಲಿಗಳೂ ಆದ ಭೀಮ ಮತ್ತು ಅಶ್ವತ್ಥಾಮರು ಮಳೆಯಿಂದ ಕೂಡಿದ ಮೋಡಗಳಂತೆ ಬಾಣಗಳ ಮಳೆಯನ್ನು ಸುರಿಸಿದರು.

ಭೀಮನಾಮಾಂಕಿತಾ ಬಾಣಾಃ ಸ್ವರ್ಣಪುಂಖಾಃ ಶಿಲಾಶಿತಾಃ |
ದ್ರೌಣಿಂ ಸಂಛಾದಯಾಮಾಸುರ್ಘನೌಘಾ ಇವ ಭಾಸ್ಕರಮ್ ॥ 7 ॥
ಭೀಮನ ಹೆಸರಿನಿಂದ ಅಂಕಿತವಾದ ಸುವರ್ಣಪುಂಖವುಳ್ಳ, ಕಲ್ಲಿನಲ್ಲಿ ಸಾಣೆಯನ್ನು ಹಿಡಿದ ಬಾಣಗಳು ಮೋಡದ ಸಮೂಹಗಳು ಸೂರ್ಯನನ್ನು ಆಚ್ಛಾದಿಸಿದಂತೆ ಅಶ್ವತ್ಥಾಮರನ್ನು ಆಚ್ಛಾದಿಸಿದವು.
ತಥೈವ ದ್ರೌಣಿನಿರ್ಮುಕ್ತೈರ್ಭೀಮಃ ಸನ್ನತಪರ್ವಭಿಃ |
ಅವಾಕೀರ್ಯತ ಸ ಕ್ಷಿಪ್ರಂ ಶರೈಃ ಶತಸಹಸ್ರಶಃ ॥ 8 ॥
ಹಾಗೆಯೇ ಭೀಮನೂ ಸಹ ಅಶ್ವತ್ಥಾಮರು ಪ್ರಯೋಗಿಸಿದ, ಸೂರ್ಯನ ಪ್ರಭೆಯುಳ್ಳ ಶತ-ಸಹಸ್ರಾರು ಬಾಣಗಳಿಂದ ಶೀಘ್ರವಾಗಿ ಮುಚ್ಚಲ್ಪಟ್ಟನು.
ಸ ಛಾದ್ಯಮಾನಃ ಸಮರೇ ದ್ರೌಣಿನಾ ರಣಶಾಲಿನಾ |
ನ ವಿವ್ಯಥೇ ಮಹಾರಾಜ ತದದ್ಭುತಮಿವಾಭವತ್ ॥ 9 ॥
ಎಲೈ ಮಹಾರಾಜನೇ, ಯುದ್ಧಶಾಲಿಗಳಾದ ಅಶ್ವತ್ಥಾಮರಿಂದ ಯುದ್ಧದಲ್ಲಿ ಆಚ್ಛಾದಿಸಲ್ಪಟ್ಟ ಭೀಮನು ವ್ಯಥೆಯನ್ನು ಹೊಂದಲಿಲ್ಲ. ಅದು ಅದ್ಭುತವಾಗಿದ್ದಿತು.
ತತೋ ಭೀಮೋ ಮಹಾಬಾಹುಃ ಕಾರ್ತಸ್ವರವಿಭೂಷಿತಾನ್ |
ನಾರಾಚಾನ್ ದಶ ಸಂಪ್ರೈಷೀದ್ ಯಮದಂಡನಿಭಾನ್ ಶಿತಾನ್ ॥10॥
ಅನಂತರ ಮಹಾಬಾಹುವಾದ ಭೀಮನು ಸ್ವರ್ಣಭೂಷಿತವಾದ, ಯಮದಂಡವನ್ನು ಹೋಲುವ ತೀಕ್ಷ್ಣವಾದ ಹತ್ತು ನಾರಾಚಗಳನ್ನು ಪ್ರಯೋಗಿಸಿದನು.
ತೇ ಜತ್ರುದೇಶಮಾಸಾದ್ಯ ದ್ರೋಣಪುತ್ರಸ್ಯ ಮಾರಿಷ |
ನಿರ್ಭಿದ್ಯ ವಿವಿಶುಸ್ತೂರ್ಣಂ ವಲ್ಮೀಕಮಿವ ಪನ್ನಗಾಃ ॥ 11 ॥
ಎಲೈ ಶ್ರೇಷ್ಠನೇ, ಅವು ಅಶ್ವತ್ಥಾಮರ ಭುಜಸಂಧಿ ದೇಶವನ್ನು ಸಮೀಪಿಸಿ, ಭೇದಿಸಿ ಶೀಘ್ರವಾಗಿ ಸರ್ಪಗಳು ಹುತ್ತದೊಳಗೆ ಹೋದಂತೆ ಭೂಮಿಯನ್ನು ಪ್ರವೇಶಿಸಿದವು.
ಸೋಽತಿವಿದ್ಧೋ ಭೃಶಂ ದ್ರೌಣಿಃ ಪಾಂಡವೇನ ಮಹಾತ್ಮನಾ |
ಧ್ವಜಯಷ್ಟಿಂ ಸಮಾಶ್ರಿತ್ಯ ನ್ಯಮೀಲಯತ ಲೋಚನೇ ॥ 12 ॥
ಮಹಾತ್ಮನಾದ ಪಾಂಡವನಾದ ಭೀಮಸೇನನಿಂದ ದೃಢವಾಗಿ ಹೊಡೆಯಲ್ಪಟ್ಟ ಅಶ್ವತ್ಥಾಮರು ಧ್ವಜಯಷ್ಟಿಯನ್ನು ಆಶ್ರಯಿಸಿ ಕಣ್ಣುಗಳನ್ನು ಮುಚ್ಚಿದರು.
ಸ ಮುಹೂರ್ತಾತ್ ಪುನಃ ಸಂಜ್ಞಾಂ ಲಬ್ಧ್ವಾ ದ್ರೌಣಿರ್ನರಾಧಿಪ |
ಕ್ರೋಧಂ ಪರಮಮಾತಸ್ಥೌ ಸಮರೇ ರುಧಿರೋಕ್ಷಿತಃ ॥ 13 ॥
ಎಲೈ ನರಾಧಿಪನೇ, ಒಂದು ಮುಹೂರ್ತದ ನಂತರ ಅವರು ಪುನಃ ಸಂಜ್ಞೆಯನ್ನು ಪಡೆದು ರಕ್ತದಿಂದ ತೊಯ್ದವರಾಗಿ ರಣರಂಗದಲ್ಲಿ ಬಹಳ ಕ್ರೋಧವನ್ನು ಹೊಂದಿದರು.
ದೃಢಂ ಸೋಽಭಿಹತಸ್ತೇನ ಪಾಂಡವೇನ ಮಹಾತ್ಮನಾ |
ವೇಗಂ ಚಕ್ರೇ ಮಹಾಬಾಹುರ್ಭೀಮಸೇನರಥಂ ಪ್ರತಿ ॥ 14 ॥
ಮಹಾತ್ಮನಾದ ಪಾಂಡವನಿಂದ ದೃಢವಾಗಿ ಹೊಡೆಯಲ್ಪಟ್ಟ ಮಹಾಬಾಹುವಾದ ಅವರು ಭೀಮಸೇನನ ರಥದ ಬಳಿಯಲ್ಲಿ ವೇಗವನ್ನು ಮಾಡಿದರು.
ತತ ಆಕರ್ಣಪೂರ್ಣಾನಾಂ ಶರಾಣಾಂ ತಿಗ್ಮತೇಜಸಾಮ್ |
ಶತಮಾಶೀವಿಷಾಭಾನಾಂ ಪ್ರೇಷಯಾಮಾಸ ಭಾರತ ॥ 15 ॥
ಎಲೈ ಭಾರತನೇ, ಆಗ ತೀಕ್ಷ್ಣವಾದ ಸಾಮರ್ಥ್ಯವುಳ್ಳ, ಸರ್ಪಗಳನ್ನು ಹೋಲುವ ನೂರು ಬಾಣಗಳನ್ನು ಹೆದೆಯನ್ನು ಕಿವಿಯವರೆಗೂ ಎಳೆದು ಭೀಮಸೇನನ ರಥದ ಮೇಲೆ ಪ್ರಯೋಗಿಸಿದರು.
ಭೀಮೋಽಪಿ ಸಮರಶ್ಲಾಘೀ ತಸ್ಯ ವೀರ್ಯಮಚಿಂತಯನ್ |
ತೂರ್ಣಂ ಪ್ರಾಸೃಜದುಗ್ರಾಣಿ ಶರವರ್ಷಾಣಿ ಪಾಂಡವಃ ॥ 16 ॥
ಸಮರಶ್ಲಾಘಿಯಾದ ಭೀಮನೂ ಅಶ್ವತ್ಥಾಮರ ಪರಾಕ್ರಮವನ್ನು ಚಿಂತಿಸದೆ ಶೀಘ್ರವಾಗಿ ಉಗ್ರವಾದ ಬಾಣಗಳ ಮಳೆಯನ್ನು ಸೃಷ್ಟಿಸಿದನು.
ತತೋ ದ್ರೌಣಿರ್ಮಹಾರಾಜ ಛಿತ್ತ್ವಾಽಸ್ಯ ವಿಶಿಖೈರ್ಧನುಃ |
ಆಜಘಾನೋರಸಿ ಕ್ರುದ್ಧಃ ಪಾಂಡವಂ ನಿಶಿತೈಃ ಶರೈಃ ॥ 17 ॥
ಎಲೈ ಮಹಾರಾಜನೇ, ಅನಂತರ ಅಶ್ವತ್ಥಾಮರು ತಮ್ಮ ಬಾಣಗಳಿಂದ ಪಾಂಡವನ ಧನುಸ್ಸನ್ನು ಕತ್ತರಿಸಿ ಕ್ರುದ್ಧರಾಗಿ ತೀಕ್ಷ್ಣವಾದ ಬಾಣಗಳಿಂದ ಅವನನ್ನು ಎದೆಯಲ್ಲಿ ಹೊಡೆದರು.
ತತೋಽನ್ಯದ್ಧನುರಾದಾಯ ಭೀಮಸೇನೋಽತ್ಯಮರ್ಷಣಃ |
ವಿವ್ಯಾಧ ನಿಶಿತೈರ್ಬಾಣೈರ್ದ್ರೌಣಿಂ ಪಂಚಭಿರಾಹವೇ ॥ 18 ॥
ಆಗ ಬಹಳ ರೋಷವನ್ನು ಹೊಂದಿದ ಭೀಮಸೇನನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ಐದು ತೀಕ್ಷ್ಣವಾದ ಬಾಣಗಳಿಂದ ಯುದ್ಧದಲ್ಲಿ ಅಶ್ವತ್ಥಾಮರನ್ನು ಹೊಡೆದನು.
ಜೀಮೂತಾವಿವ ಘರ್ಮಾಂತೇ ತೌ ಶರೌಘಪ್ರವರ್ಷಿಣೌ |
ಅನ್ಯೋನ್ಯಕ್ರೋಧತಾಮ್ರಾಕ್ಷೌ ಛಾದಯಾಮಾಸತುರ್ಯುಧಿ ॥ 19 ॥

ಬೇಸಿಗೆಯ ಕಾಲದ ಕೊನೆಯಲ್ಲಿ ಮಳೆಗಾಲವು ಪ್ರಾರಂಭವಾದಾಗ ಇರುವ ಎರಡು ಮೋಡಗಳಂತೆ ಅವರು ಪರಸ್ಪರವಾಗಿ ಕ್ರೋಧದಿಂದ ಕೆಂಪಾದ ಕಣ್ಣುಳ್ಳವರಾಗಿ ರಣರಂಗದಲ್ಲಿ ಬಾಣಗಳ ಮಳೆಯನ್ನು ಸುರಿಸಿ ಪರಸ್ಪರವಾಗಿ ಆಚ್ಛಾದಿಸಿದರು.
ತಳಶಬ್ದೈಸ್ತತೋ ಘೋರೈಸ್ತತ್ರಸಯಂತೌ ಪರಸ್ಪರಮ್ |
ಅಯುದ್ಧ್ಯೇತಾಂ ಸುಸಂರಬ್ಧೌ ಕೃತಪ್ರತಿಕೃತೈಷಿಣೌ ॥ 20 ॥
ಅನಂತರ ಘೋರವಾದ ತಳಶಬ್ದಗಳಿಂದ ಪರಸ್ಪರವಾಗಿ ಹೆದರಿಸುತ್ತಾ, ಒಬ್ಬರು ಮಾಡಿದುದಕ್ಕೆ ಇನೊಬ್ಬರು ಪ್ರತಿಯಾಗಿ ಮಾಡುತ್ತಾ ಬಹಳ ಕೋಪವನ್ನು ಹೊಂದಿದವರಾಗಿ ಯುದ್ಧವನ್ನು ಮಾಡಿದರು.
ತತೋ ವಿಸ್ಫಾರ್ಯ ಸುಮಹಚ್ಚಾಪಂ ರುಗ್ಮವಿಭೂಷಿತಮ್ |
ಭೀಮಂ ಪ್ರೈಕ್ಷತ ಸ ದ್ರೌಣಿಃ ಶರಾನಸ್ಯಂತಮಂತಿಕಾತ್ |
ಶರದ್ಯಹರ್ಮಧ್ಯಗತೋ ದೀಪ್ತಾರ್ಚಿರಿವ ಭಾಸ್ಕರಃ ॥ 21 ॥
ಅನಂತರ ಶರತ್ಕಾಲದಲ್ಲಿ ಪ್ರಕಾಶಮಾನವಾದ ಕಿರಣಗಳಿಂದ ಕೂಡಿದ ಮಧ್ಯಂದಿನದ ಸೂರ್ಯನಂತಿದ್ದ ಅಶ್ವತ್ಥಾಮರು ಸುವರ್ಣಾಲಂಕೃತವಾದ ತಮ್ಮ ದೊಡ್ಡ ಧನುಸ್ಸನ್ನು ಎಳೆದು ಸಮೀಪದಿಂದಲೇ ಬಾಣಗಳನ್ನು ಪ್ರಯೋಗಿಸುತ್ತಿದ್ದ ಭೀಮಸೇನನನ್ನು ನೋಡಿದರು.
ಆದದಾನಸ್ಯ ವಿಶಿಖಾನ್ ಸಂದಧಾನಸ್ಯ ಚಾಶುಗಾನ್ |
ವಿಕರ್ಷತೋ ಮುಂಚತಶ್ಚ ನಾಂತರಂ ದದೃಶುರ್ಜನಾಃ ॥ 22 ॥
ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಂಡು ಶೀಘ್ರಗಾಮಿಗಳಾದ ಅವುಗಳನ್ನು ಧನುಸ್ಸಿನಲ್ಲಿ ಹೂಡಿ ಹೆದೆಯನ್ನು ಎಳೆದು ಅಶ್ವತ್ಥಾಮರು ಪ್ರಯೋಗಿಸುವಾಗ ಜನರಿಗೆ ಅವುಗಳ ಮಧ್ಯದಲ್ಲಿ ಕಾಲದ ವ್ಯತ್ಯಾಸವೇ ತಿಳಿಯಲಿಲ್ಲ.
ಅಲಾತಚಕ್ರಪ್ರತಿಮಂ ತಸ್ಯ ಮಂಡಲಮಾಯುಧಮ್ |
ದ್ರೌಣೇರಾಸೀನ್ಮಹಾರಾಜ ಬಾಣಾನ್ ವಿಸೃಜತಸ್ತದಾ ॥ 23 ॥
ಎಲೈ ಮಹಾರಾಜನೇ, ಬಾಣಗಳನ್ನು ಪ್ರಯೋಗಿಸುವ ಅಶ್ವತ್ಥಾಮರ ಆಯುಧವಾದ ಧನುಸ್ಸು ಯಾವಾಗಲೂ ಅಲಾತಚಕ್ರದಂತೆಯೇ ಮಂಡಲಾಕಾರವಾಗಿದ್ದಿತು.
ಧನುಶ್ಚ್ಯುತಾಃ ಶರಾಸ್ತಸ್ಯ ಶತಶೋಽಥ ಸಹಸ್ರಶಃ |
ಆಕಾಶೇ ಪ್ರತ್ಯದೃಶ್ಯಂತ ಶಲಭಾನಾಮಿವಾಯತೀಃ ॥ 24 ॥
ಅವರ ಧನುಸ್ಸಿನಿಂದ ಹೊರಹೊಮ್ಮಿದ ನೂರಾರು ಸಾವಿರಾರು ಬಾಣಗಳು ಆಕಾಶದಲ್ಲಿ ಪತಂಗಗಳ ಪಂಕ್ತಿಯಂತೆ ಕಂಡವು.
ತೇ ತು ದ್ರೌಣಿಧನುರ್ಮುಕ್ತಾಃ ಶರಾ ಹೇಮವಿಭೂಷಿತಾಃ |
ಅಜಸ್ರಮನ್ವಕೀರ್ಯಂತ ಘೋರಾ ಭೀಮರಥಂ ಪ್ರತಿ ॥ 25 ॥
ಅಶ್ವತ್ಥಾಮರ ಧನುಸ್ಸಿನಿಂದ ಹೊರಹೊಮ್ಮಿದ ಸುವರ್ಣಭೂಷಿತವಾದ ಘೋರವಾದ ಬಾಣಗಳು ಭೀಮಸೇನನ ರಥದ ಸುತ್ತಲೂ ಸತತವಾಗಿ ಪ್ರಯೋಗಿಸಲ್ಪಟ್ಟವು.
ತತ್ರಾದ್ಭುತಮಪಶ್ಯಾಮ ಭೀಮಸೇನಸ್ಯ ವಿಕ್ರಮಮ್ |
ಬಲಂ ವೀರ್ಯಂ ಪ್ರಭಾವಂ ಚ ವ್ಯವಸಾಯಂ ಚ ಭಾರತ ॥ 26 ॥
ಎಲೈ ಭಾರತನೇ, ಆಗ ನಾವು ಭೀಮಸೇನನ ಅದ್ಭುತವಾದ ಪರಾಕ್ರಮವನ್ನೂ, ಬಲವನ್ನೂ, ವೀರ್ಯವನ್ನೂ, ಸಾಮರ್ಥ್ಯವನ್ನೂ ಮತ್ತು ನಿರ್ಧಾರವನ್ನೂ ನೋಡಿದೆವು.
ತಾಂ ಸ ಮೇಘಾದಿವೋದ್ಭೂತಾಂ ಬಾಣವೃಷ್ಟಿಂ ಸಮಂತತಃ |
ಜಲವೃಷ್ಟಿಂ ಮಹಾಘೋರಾಂ ತಪಾಂತ ಇವ ಚಿಂತಯನ್ ॥ 27 ॥
ದ್ರೋಣಪುತ್ರವಧಪ್ರೇಪ್ಸುರ್ಭೀಮೋ ಭೀಮಪರಾಕ್ರಮಃ |
ಅಮುಂಚಚ್ಛರವರ್ಷಾಣಿ ಪ್ರಾವೃಷೀವ ಬಲಾಹಕಃ ॥ 28 ॥
ಬೇಸಿಗೆಯ ನಂತರ ಮಳೆಗಾಲದಲ್ಲಿ ಮೋಡದಿಂದ ಉಂಟಾದ ಜಲವೃಷ್ಟಿಯಂತೆ ಮಹಾಘೋರವಾದ ಆ ಬಾಣವೃಷ್ಟಿಯನ್ನು ನೋಡಿ ಭಯಂಕರ ಪರಾಕ್ರಮವುಳ್ಳ ಭೀಮನು ಅಶ್ವತ್ಥಾಮರ ವಧೆಯನ್ನು ಬಯಸಿ ಮೋಡವು ಮಳೆಗಾಲದಲ್ಲಿ ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸಿದನು.
ತದ್ ರುಗ್ಮಪೃಷ್ಠಂ ಭೀಮಸ್ಯ ಧನುರ್ಘೋರಂ ಮಹದ್ ರಣೇ |
ವಿಕೃಷ್ಯಮಾಣಂ ವಿಬಭೌ ಶಕ್ರಚಾಪಮಿವಾಪರಮ್ ॥ 29 ॥
ಭೀಮಸೇನನ ಸುವರ್ಣಾಲಂಕೃತವಾದ, ಘೋರವಾದ ಮಹಾಧನುಸ್ಸು ರಣರಂಗದಲ್ಲಿ ಎಳೆಯಲ್ಪಟ್ಟು ಇನ್ನೊಂದು ಇಂದ್ರಧನುಸ್ಸಿನಂತೆ ಶೋಭಿಸಿತು.
ತಸ್ಮಾಚ್ಛರಾಃ ಪ್ರಾದುರಾಸನ್ ಶತಶೋಽಥ ಸಹಸ್ರಶಃ |
ಸಂಛಾದಯಂತಃ ಸಮರೇ ದ್ರೌಣಿಮಾಹವಶೋಭಿನಮ್ ॥ 30 ॥
ಅದರಿಂದ ಬಾಣಗಳು ನೂರಾರು, ಸಾವಿರಾರು ಸಂಖ್ಯೆಯಲ್ಲಿ ಹೊರಟು ರಣರಂಗದಲ್ಲಿ ಯುದ್ಧದಲ್ಲಿ ಶೋಭಿಸುವ ಅಶ್ವತ್ಥಾಮರನ್ನು ಆಚ್ಛಾದಿಸಿದವು.
ತಯೋರ್ವಿಸೃಜತೋರೇವಂ ಶರಜಾಲಾನಿ ಮಾರಿಷ |
ವಾಯುರಪ್ಯಂತರಾ ರಾಜನ್ ನಾಶಕ್ನೋತ್ ಪ್ರತಿಸರ್ಪಿತುಮ್ ॥ 31 ॥
ಎಲೈ ಶ್ರೇಷ್ಠನೇ, ರಾಜನೇ, ಅವರು ಹೀಗೆ ಬಾಣಗಳ ಸಮೂಹವನ್ನು ಸೃಷ್ಟಿಸುತ್ತಿರುವಾಗ ಬಾಣಗಳ ಮಧ್ಯದಲ್ಲಿ ಗಾಳಿಯೂ ನುಸುಳಲು ಸಾಧ್ಯವಿರಲಿಲ್ಲ.

ತಥಾ ದ್ರೌಣಿರ್ಮಹಾರಾಜ ಶರಾನ್ ಹೇಮವಿಭೂಷಿತಾನ್ |
ತೈಲಧೌತಾನ್ ಪ್ರಸನ್ನಾಗ್ರಾನ್ ಪ್ರಾಹಿಣೋದ್ ವಧಕಾಂಕ್ಷಯಾ ॥ 32 ॥
ಎಲೈ ಮಹಾರಾಜನೇ, ಆಗ ಅಶ್ವತ್ಥಾಮರು ಭೀಮಸೇನನ ವಧೆಯನ್ನು ಬಯಸಿ ಹೇಮವಿಭೂಷಿತವಾದ, ಎಣ್ಣೆಯಲ್ಲಿ ಸಾಣೆಯನ್ನು ಹಿಡಿದ, ತೀಕ್ಷ್ಣವಾದ ತುದಿಯುಳ್ಳ ಬಾಣಗಳನ್ನು ಭೀಮಸೇನನ ಮೇಲೆ ಪ್ರಯೋಗಿಸಿದರು.
ತಾನಂತರಿಕ್ಷೇ ವಿಶಿಖೈಸ್ತ್ರಿಧೈಕೈಕಮಶಾತಯತ್ |
ವಿಶೇಷಯನ್ ದ್ರೋಣಸುತಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 33 ॥
ಭೀಮಸೇನನು ಕೌಶಲದಲ್ಲಿ ಅಶ್ವತ್ಥಾಮರನ್ನು ಮೀರಿಸುತ್ತಾ ಅಂತರಿಕ್ಷದಲ್ಲಿಯೇ ಅವರ ಒಂದೊಂದು ಬಾಣವನ್ನೂ ಮೂರು-ಮೂರು ಭಾಗವಾಗಿ ಕತ್ತರಿಸಿ, `ನಿಲ್ಲು- ನಿಲ್ಲು' ಎಂದು ಹೇಳಿದನು.
ಪುನಶ್ಚ ಶರವರ್ಷಾಣಿ ಘೋರಾಣ್ಯುಗ್ರಾಣಿ ಪಾಂಡವಃ |
ವ್ಯಸೃಜದ್ ಬಲವಾನ್ ಕ್ರುದ್ಧೋ ದ್ರೋಣಪುತ್ರವಧೇಪ್ಸಯಾ ॥ 34 ॥
ಪುನಃ ಪಾಂಡವನಾದ ಬಲಿಷ್ಠನಾದ ಭೀಮಸೇನನು ಕ್ರುದ್ಧನಾಗಿ ದ್ರೋಣ ಪುತ್ರರನ್ನು ಕೊಲ್ಲಲು ಬಯಸಿ ಘೋರವಾದ, ಉಗ್ರವಾದ ಬಾಣಗಳ ಮಳೆಯನ್ನು ಸೃಷ್ಟಿಸಿದನು.
ತತೋಽಸ್ತ್ರಮಾಯಯಾ ತೂರ್ಣಂ ಶರವೃಷ್ಟಿಂ ನಿವಾರ್ಯ ತಾಮ್ |
ಧನುಶ್ಚಿಚ್ಛೇದ ಭೀಮಸ್ಯ ದ್ರೋಣಪುತ್ರೋ ಮಹಾಸ್ತ್ರವಿತ್ |
ಶರೈಶ್ಚೈನಂ ಸುಬಹುಭಿಃ ಕ್ರುದ್ಧಃ ಸಂಖೇ ಪರಾಭಿನತ್ ॥ 35 ॥
ಮಹಾಸ್ತ್ರವೇತ್ತರಾದ ದ್ರೋಣಪುತ್ರರಾದ ಅಶ್ವತ್ಥಾಮರು ತಮ್ಮ ಅಸ್ತ್ರ ಸಾಮರ್ಥ್ಯದಿಂದ ಶೀಘ್ರವಾಗಿ ಆ ಬಾಣವೃಷ್ಟಿಯನ್ನು ನಿವಾರಿಸಿ ಭೀಮಸೇನನ ಧನುಸ್ಸನ್ನು ಕತ್ತರಿಸಿದರು ಮತ್ತು ಕ್ರುದ್ಧರಾದ ಅವರು ಅನೇಕ ಬಾಣಗಳಿಂದ ರಣರಂಗದಲ್ಲಿ ಅವನನ್ನು ಬಹಳವಾಗಿ ಭೇದಿಸಿ, ಗಾಯಗೊಳಿಸಿದರು.
ಸ ಛಿನ್ನಧನ್ವಾ ಬಲವಾನ್ ರಥಶಕ್ತಿಂ ಸುದಾರುಣಾಮ್ |
ವೇಗೇನಾವಿಧ್ಯ ಚಿಕ್ಷೇಪ ದ್ರೋಣಪುತ್ರರಥಂ ಪ್ರತಿ ॥ 36 ॥
ತನ್ನ ಧನುಸ್ಸು ಕತ್ತರಿಸಲ್ಪಟ್ಟ ಬಲಿಷ್ಠನಾದ ಭೀಮಸೇನನು ಘೋರವಾದ ರಥಶಕ್ತಿಯನ್ನು ತೆಗೆದುಕೊಂಡು ವೇಗದಿಂದ ತಿರಿಗಿಸಿ ಅದನ್ನು ಅಶ್ವತ್ಥಾಮರ ರಥದ ಮೇಲೆ ಎಸೆದನು.
ತಾಮಾಪತಂತೀಂ ಸಹಸಾ ಮಹೋಲ್ಕಾಭಾಂ ಶಿತೈಃ ಶರೈಃ |
ಚಿಚ್ಛೇದ ಸಮರೇ ದ್ರೌಣಿರ್ದರ್ಶಯನ್ ಪಾಣಿಲಾಘವಮ್ ॥ 37 ॥
ದೊಡ್ಡ ಉಲ್ಕೆಯಂತೆ ತಮ್ಮೆಡೆಗೆ ಶೀಘ್ರವಾಗಿ ಬರುತ್ತಿದ್ದ ಆ ರಥಶಕ್ತಿಯನ್ನು ನೋಡಿ ಅಶ್ವತ್ಥಾಮರು ತಮ್ಮ ಹಸ್ತಲಾಘವವನ್ನು ತೋರಿಸುತ್ತಾ ತೀಕ್ಷ್ಣವಾದ ಬಾಣಗಳಿಂದ ರಣರಂಗದಲ್ಲಿ ಅದನ್ನು ಕತ್ತರಿಸಿದರು.
ಏತಸ್ಮಿನ್ನಂತರೇ ಭೀಮೋ ದೃಢಮಾದಾಯ ಕಾರ್ಮುಕಮ್ |
ದ್ರೌಣಿಂ ವಿವ್ಯಾಧ ವಿಶಿಖೈಃ ಸ್ಮಯಮಾನೋ ವೃಕೋದರಃ ॥ 38 ॥
ಈ ಮಧ್ಯದಲ್ಲಿ ಭೀಮನು ದೃಢವಾದ ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ನಗುತ್ತಾ ಅಶ್ವತ್ಥಾಮರನ್ನು ಬಾಣಗಳಿಂದ ಹೊಡೆದನು.
ತತೋ ದ್ರೌಣಿರ್ಮಹಾರಾಜ ಭೀಮಸೇನಸ್ಯ ಸಾರಥಿಮ್ |
ಲಲಾಟೇ ದಾರಯಾಮಾಸ ಶರೇಣಾನತಪರ್ವಣಾ ॥ 39 ॥
ಎಲೈ ಮಹಾರಾಜನೇ, ಆಗ ಅಶ್ವತ್ಥಾಮರು ಬಾಗಿದ ತುದಿಯುಳ್ಳ ಒಂದು ಬಾಣದಿಂದ ಭೀಮಸೇನನ ಸಾರಥಿಯ ಹಣೆಯನ್ನು ಸೀಳಿಹಾಕಿದರು.
ಸೋಽತಿವಿದ್ಧೋ ಬಲವತಾ ದ್ರೋಣಪುತ್ರೇಣ ಸಾರಥಿಃ |
ವ್ಯಾಮೋಹಮಗಮದ್ ರಾಜನ್ ರಶ್ಮೀನುತ್ಸೃಜ್ಯ ವಾಜಿನಾಮ್ ॥40॥
ಎಲೈ ರಾಜನೇ, ಬಲಿಷ್ಠರಾದ ದ್ರೋಣಪುತ್ರರಿಂದ ಅತಿಯಾಗಿ ಹೊಡೆಯಲ್ಪಟ್ಟ ಆ ಸಾರಥಿಯು ಕುದುರೆಗಳ ಕಡಿವಾಣವನ್ನು ಬಿಟ್ಟು ಮೂರ್ಛೆಯನ್ನು ಹೊಂದಿದನು.
ತತೋಽಶ್ವಾಃ ಪ್ರಾದ್ರವಂಸ್ತೂರ್ಣಂ ಮೋಹಿತೇ ರಥಸಾರಥೌ |
ಭೀಮಸೇನಸ್ಯ ರಾಜೇಂದ್ರ ಪಶ್ಯತಾಂ ಸರ್ವಧನ್ವಿನಾಮ್ ॥ 41 ॥
ಎಲೈ ರಾಜೇಂದ್ರನೇ, ಆಗ ಭೀಮಸೇನನ ಸಾರಥಿಯು ಮೂರ್ಛೆಯನ್ನು ಹೊಂದುತ್ತಿರಲು ಎಲ್ಲ ಧನುರ್ಧಾರಿಗಳೂ ನೋಡುತ್ತಿರುವಂತೆಯೇ ಭೀಮಸೇನನ ರಥದ ಅಶ್ವಗಳು ಶೀಘ್ರವಾಗಿ ಓಡಿಹೋದವು.
ತಂ ದೃಷ್ಟ್ವಾ ಪ್ರದ್ರುತೈರಶ್ವೈರಪಕೃಷ್ಟಂ ರಣಾಜಿರಾತ್ |
ದಧ್ಮೌ ಪ್ರಮುದಿತಃ ಶಂಖಂ ಬೃಹಂತಮಪರಾಜಿತಃ ॥ 42 ॥
ಓಡುವ ಅಶ್ವಗಳಿಂದ ಭೀಮಸೇನನು ರಣಾಂಗಣದಿಂದ ದೂರ ಎಳೆಯಲ್ಪಟ್ಟುದನ್ನು ನೋಡಿ ಸಂತೋಷಗೊಂಡ ಅಶ್ವತ್ಥಾಮರು ಅಪರಾಜಿತರಾಗಿ ತಮ್ಮ ದೊಡ್ಡ ಶಂಖವನ್ನು ಊದಿದರು.
ತತಃ ಸರ್ವೇ ಚ ಪಾಂಚಾಲಾ ಭೀಮಸೇನಶ್ಚ ಪಾಂಡವಃ |
ಧೃಷ್ಟದ್ಯುಮ್ನರಥಂ ತ್ಯಕ್ತ್ವಾ ಭೀತಾಃ ಸಂಪ್ರಾದ್ರವನ್ ದಿಶಃ ॥ 43 ॥
ಆಗ ಎಲ್ಲ ಪಾಂಚಾಲರೂ, ಪಾಂಡವನಾದ ಭೀಮಸೇನನೂ ಧೃಷ್ಟದ್ಯುಮ್ನನ ರಥವನ್ನು ಬಿಟ್ಟು ಭೀತರಾಗಿ ದಿಕ್ಕು-ದಿಕ್ಕುಗಳಿಗೆ ಓಡಿಹೋದರು.

ತಾನ್ ಪ್ರಭಗ್ನಾಂಸ್ತತೋ ದ್ರೌಣಿಃ ಪೃಷ್ಠತೋ ವಿಕಿರನ್ ಶರಾನ್ |
ಅಭ್ಯವರ್ತತ ವೇಗೇನ ಕಾಲಯನ್ ಪಾಂಡುವಾಹಿನೀಮ್ ॥ 44 ॥
ಅಶ್ವತ್ಥಾಮರು ಹಾಗೆ ಓಡುತ್ತಿದ್ದ ಪಾಂಡವಸೇನೆಯನ್ನು ಹಿಂದಿನಿಂದ ಬಾಣಗಳನ್ನು ಪ್ರಯೋಗಿಸುತ್ತಾ ಹಿಂಬಾಲಿಸಿ ಶೀಘ್ರವಾಗಿ ಚದುರಿಸಿದರು.
ತೇ ವಧ್ಯಮಾನಾಃ ಸಮರೇ ದ್ರೋಣಪುತ್ರೇಣ ಪಾರ್ಥಿವಾಃ |
ದ್ರೋಣಪುತ್ರಭಯಾದ್ ರಾಜನ್ ದಿಶಃ ಸರ್ವಾಶ್ಚ ಭೇಜಿರೇ ॥ 45 ॥
ಎಲೈ ರಾಜನೇ, ಯುದ್ಧದಲ್ಲಿ ದ್ರೋಣಪುತ್ರರಿಂದ ಹೊಡೆಯಲ್ಪಟ್ಟ ಆ ರಾಜರು ಅವರ ಭಯದಿಂದ ಎಲ್ಲ ದಿಕ್ಕುಗಳಿಗೂ ಓಡಿಹೋದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ತ್ರ್ಯಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ನಾಲ್ಕನೆಯ ಅಧ್ಯಾಯ
ಅಶ್ವತ್ಥಾಮರಿಂದ ಆಗ್ನೇಯಾಸ್ತ್ರಪ್ರಯೋಗ. ಅದರ ನಿಷ್ಫಲತೆ.
ವ್ಯಾಸರಲ್ಲಿ ಕಾರಣಪ್ರಶ್ನೆ. ವ್ಯಾಸರಿಂದ ಉತ್ತರದಾನ.
ಅಶ್ವತ್ಥಾಮರಿಂದ ಸೈನ್ಯಾವಹಾರ.
ಸಂಜಯಃ
ತತ್ ಪ್ರಭಗ್ನಂ ಬಲಂ ದೃಷ್ಟ್ವಾ ಕುಂತೀಪುತ್ರೋ ಧನಂಜಯಃ |
ನ್ಯವಾರಯದಮೇಯಾತ್ಮಾ ದ್ರೋಣಪುತ್ರವಧೇಪ್ಸಯಾ ॥ 1 ॥
ಸಂಜಯ ಕುಂತೀಪುತ್ರನಾದ ಧನಂಜಯನು ತನ್ನ ಸೈನ್ಯವು ಭಗ್ನವಾದುದನ್ನು ನೋಡಿ, ಅಚಿಂತ್ಯಸಾಮರ್ಥ್ಯವುಳ್ಳ ಅವನು ಅಶ್ವತ್ಥಾಮರ ವಧೆಯನ್ನು ಬಯಸಿ ತನ್ನ ಸೈನ್ಯವನ್ನು ತಡೆದನು.
ತತಸ್ತೇ ಸೈನಿಕಾ ರಾಜನ್ನೈವ ತತ್ರಾವತಸ್ಥಿರೇ |
ಸಂಸ್ಥಾಪ್ಯಮಾನಾ ಯತ್ನೇನ ಗೋವಿಂದೇನಾರ್ಜುನೇನ ಚ ॥ 2 ॥
ಎಲೈ ರಾಜನೇ, ಪ್ರಯತ್ನಪೂರ್ವಕವಾಗಿ ಕೃಷ್ಣಾರ್ಜುನರಿಂದ ತಡೆಯಲ್ಪಟ್ಟರೂ ಸೈನಿಕರು ಆಗ ಅಲ್ಲಿ ನಿಲ್ಲಲಿಲ್ಲ.
ಏಕ ಏವ ತು ಬೀಭತ್ಸುಃ ಸೋಮಕಾವಯವೈಃ ಸಹ |
ಮತ್ಸ್ಯೈರನ್ಯೈಶ್ಚ ಸಂಧಾಯ ಕೌರವಾನ್ ಸಂನ್ಯವರ್ತತ ॥ 3 ॥
ಅರ್ಜುನನೊಬ್ಬನೇ ಉಳಿದ ಸೋಮಕರಿಂದಲೂ, ಮತ್ಸ್ಯರಿಂದಲೂ ಮತ್ತು ಉಳಿದವರಿಂದಲೂ ಸಹಿತನಾಗಿ ಕೌರವರ ಮೇಲೆ ಹಿಂದಿರುಗಿ ಯುದ್ಧಕ್ಕೆ ನಿಂತನು.
ತತೋ ದ್ರುತಮತಿಕ್ರಮ್ಯ ಸಿಂಹಲಾಂಗೂಲಕೇತನಮ್ |
ಸವ್ಯಸಾಚೀ ಮಹೇಷ್ವಾಸಮಶ್ವತ್ಥಾಮಾನಮಬ್ರವೀತ್ ॥ 4 ॥
ಯಾ ಶಕ್ತಿರ್ಯಚ್ಚ ತೇ ವೀರ್ಯಂ ಯಜ್ಜ್ಞಾನಂ ಯಚ್ಚ ಪೌರುಷಮ್ |
ಧಾರ್ತರಾಷ್ಟ್ರೇಷು ಯಾ ಪ್ರೀತಿಃ ಪ್ರದ್ವೇಷೋಽಸ್ಮಾಸು ಯಶ್ಚ ತೇ |
ಯಚ್ಚ ಭೂಯೋಽಸ್ತಿ ತೇಜಸ್ತತ್ ಪರಮಂ ಮಮ ದರ್ಶಯ ॥ 5 ॥
ಸ ಏವ ದ್ರೋಣಹಂತಾ ತೇ ದರ್ಪಂ ಭೇತ್ಸ್ಯತಿ ಪಾರ್ಷತಃ |
ಕಾಲಾನಲಸಮಪ್ರಖ್ಯೋ ದ್ವಿಷತಾಮಂತಕೋ ಯುಧಿ |
ಸಮಾಸಾದಯ ಪಾಂಚಾಲ್ಯಂ ಮಾಂ ಚಾಪಿ ಸಹಕೇಶವಮ್ ॥ 6 ॥
ಆಗ ಅರ್ಜುನನು ಶೀಘ್ರವಾಗಿ ಸಿಂಹಲಾಂಗೂಲ ಧ್ವಜವುಳ್ಳ, ಮಹಾಧನುರ್ಧಾರಿ ಗಳಾದ ಅಶ್ವತ್ಥಾಮರ ಬಳಿಗೆ ಧಾವಿಸಿ ಅವರನ್ನು ಕುರಿತು- `ನಿಮ್ಮ ಶಕ್ತಿ ಏನಿದೆಯೋ, ನಿಮ್ಮ ಪರಾಕ್ರಮ, ಜ್ಞಾನ ಮತ್ತು ಪೌರುಷಗಳು ಏನಿವೆಯೋ, ದುರ್ಯೋಧನನಲ್ಲಿ ಯಾವ ಪ್ರೀತಿಯಿದೆಯೋ ಮತ್ತು ನಮ್ಮಲ್ಲಿ ಎಂತಹ ದ್ವೇಷವಿದೆಯೋ ಮತ್ತು ನಿಮ್ಮ ಯಾವ ಶ್ರೇಷ್ಠವಾದ ಸಾಮರ್ಥ್ಯವಿದೆಯೋ ಅದನ್ನು ನನಗೆ ತೋರಿಸಿ. ಕಾಲಾನಲಕ್ಕೆ ಸಮನಾದ, ಯುದ್ಧದಲ್ಲಿ ಶತ್ರುಸಂಹಾರಕನಾದ, ದ್ರೋಣರನ್ನು ಸಂಹಾರ ಮಾಡಿದ ಧೃಷ್ಟದ್ಯುಮ್ನನೇ ನಿಮ್ಮ ಅಹಂಕಾರವನ್ನು ಭೇದಿಸುವನು. ಧೃಷ್ಟದ್ಯುಮ್ನನನ್ನು ಮತ್ತು ಕೃಷ್ಣನಿಂದ ಕೂಡಿದ ನನ್ನನ್ನು ಯುದ್ಧದಲ್ಲಿ ಎದುರಿಸಿ' ಎಂದು ಹೇಳಿದನು.
ಧೃತರಾಷ್ಟ್ರಃ
ಆಚಾರ್ಯಪುತ್ರೋ ಮಾನಾರ್ಹೋ ಬಲವಾಂಶ್ಚಾಪಿ ಸಂಜಯ |
ಪ್ರೀತಿರ್ಧನಂಜಯೇ ಚಾಸ್ಯ ಪ್ರಿಯಶ್ಚಾಪಿ ಸ ವಾಸವೇಃ ॥ 7 ॥
ನ ಭೂತಪೂರ್ವಂ ಬೀಭತ್ಸೋರ್ವಾಕ್ಯಂ ಪರುಷಮೀದೃಶಮ್ |
ಅಥ ಕಸ್ಮಾತ್ ಸ ಕೌಂತೇಯಃ ಸಖಾಯಂ ರೂಕ್ಷಮಬ್ರವೀತ್ ॥ 8 ॥
ಧೃತರಾಷ್ಟ್ರ ಎಲೈ ಸಂಜಯನೇ, ಆಚಾರ್ಯಪುತ್ರರಾದ ಅಶ್ವತ್ಥಾಮರು ಗೌರವಕ್ಕೆ ಅರ್ಹರಾದವರು ಮತ್ತು ಬಲಿಷ್ಠರಾದವರು. ಅವರಿಗೆ ಅರ್ಜುನನಲ್ಲಿ ಪ್ರೀತಿಯಿದೆ, ಅರ್ಜುನನಿಗೂ ಅವರಲ್ಲಿ ಪ್ರೀತಿಯಿದೆ. ಅರ್ಜುನನು ಇಂತಹ ಉಗ್ರವಾದ ಮಾತುಗಳನ್ನು ಹಿಂದೆ ಎಂದೂ

ಆಡಿದವನಲ್ಲ. ಆದ್ದರಿಂದ ಯಾವ ಕಾರಣದಿಂದ ಅರ್ಜುನನು ತನ್ನ ಸ್ನೇಹಿತರಾದ ಅಶ್ವತ್ಥಾಮರನ್ನು ಕುರಿತು ಉಗ್ರವಾಗಿ ಮಾತನಾಡಿದನು?
ಸಂಜಯಃ
ಯುವರಾಜೇ ಹತೇ ಚೈವ ವೃದ್ಧಕ್ಷತ್ರೇ ಚ ಪೌರವೇ |
ಇಷ್ವಸ್ತ್ರವಿಧಿಸಂಪನ್ನೇ ಮಾಲವೇ ಚ ಸುದರ್ಶನೇ ॥ 9 ॥
ಧೃಷ್ಟದ್ಯುಮ್ನೇ ಸಾತ್ಯಕೌ ಚ ಭೀಮೇ ಚಾಪಿ ಪರಾಜಿತೇ |
ಯುಧಿಷ್ಠಿರಸ್ಯ ತೈರ್ವಾಕ್ಯೈರ್ಮರ್ಮಣ್ಯಪಿ ಚ ಘಟ್ಟಿತೇ ॥ 10 ॥
ಅಂತರ್ಭೇದೇ ಚ ಸಂಜಾತೇ ದುಃಖಂ ಸಂಸ್ಮೃತ್ಯ ಚ ಪ್ರಭೋ |
ಅಭೂತಪೂರ್ವೋ ಬೀಭತ್ಸೋರ್ದುಃಖಾನ್ಮನ್ಯುರಜಾಯತ ॥ 11 ॥
ಸಂಜಯ ಯುವರಾಜನೂ, ಪೌರವನಾದ ವೃದ್ಧಕ್ಷತ್ರನೂ, ಇಷ್ವಸ್ತ್ರವಿಧಿಯನ್ನು ತಿಳಿದ ಮಾಲವದೇಶದ ಸುದರ್ಶನನೂ ಹತರಾಗುತ್ತಿರಲು ಧೃಷ್ಟದ್ಯುಮ್ನನೂ, ಸಾತ್ಯಕಿಯೂ ಮತ್ತು ಭೀಮಸೇನನು ಪರಾಜಿತರಾಗುತ್ತಿರಲು ಯುಧಿಷ್ಠಿರನ ಆ ವಾಕ್ಯಗಳಿಂದ ಅರ್ಜುನನು ಮರ್ಮಗಳಲ್ಲಿ ಭೇದಿಸಲ್ಪಟ್ಟು ಪಾಂಡವರೊಳಗೆ ಅಭಿಪ್ರಾಯಭೇದವುಂಟಾಗಿರಲು, ಎಲೈ ಪ್ರಭುವೇ, ಹಿಂದೆ ಅನುಭವಿಸಿದ ದುಃಖಗಳನ್ನು ಸ್ಮರಿಸಿ, ಅರ್ಜುನನಿಗೆ ಹಿಂದೆಂದೂ ಬರದಿದ್ದ ದುಃಖವೂ ಮತ್ತು ಅದರಿಂದ ಕೋಪವೂ ಉಂಟಾಯಿತು.
ತಸ್ಮಾದನರ್ಹಮಶ್ಲೀಲಮಪ್ರಿಯಂ ದ್ರೌಣಿಮುಕ್ತವಾನ್ |
ಮಾನ್ಯಮಾಚಾರ್ಯತನಯಂ ರೂಕ್ಷಂ ಕಾಪುರುಷೋ ಯಥಾ ॥ 12 ॥
ಆದ್ದರಿಂದ ಗೌರವಕ್ಕೆ ಯೋಗ್ಯರಾದ ಆಚಾರ್ಯಪುತ್ರರಾದ ಅಶ್ವತ್ಥಾಮರನ್ನು ಕುರಿತು ಕೆಟ್ಟ ಮನುಷ್ಯನಂತೆ, ಅಯೋಗ್ಯವಾದ, ಅಶ್ಲೀಲವಾದ, ಅಪ್ರಿಯವಾದ, ಉಗ್ರವಾದ ಮಾತುಗಳನ್ನು ಆಡಿದನು.
ಏವಮುಕ್ತಃ ಶ್ವಸನ್ ಕ್ರೋಧಾನ್ಮಹೇಷ್ವಾಸತಮೋ ನೃಪ |
ಪಾರ್ಥೇನ ಪರುಷಂ ವಾಕ್ಯಂ ಸರ್ವಮರ್ಮಘ್ನಯಾ ಗಿರಾ |
ದ್ರೌಣಿಶ್ಚುಕೋಪ ಪಾರ್ಥಾಯ ಕೃಷ್ಣಾಯ ಚ ವಿಶೇಷತಃ ॥ 13 ॥
ಎಲೈ ರಾಜನೇ, ಅರ್ಜುನನಿಂದ ಹೀಗೆ ಸರ್ವಮರ್ಮಭೇದಕವಾದ ಮಾತುಗಳಿಂದ ಉಗ್ರವಾಗಿ ಹೇಳಲ್ಪಟ್ಟ (ಚುಚ್ಚಲ್ಪಟ್ಟ), ಮಹಾಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಅಶ್ವತ್ಥಾಮರು ಬಹಳ ಕ್ರೋಧವನ್ನು ಹೊಂದಿ, ಕೃಷ್ಣಾರ್ಜುನರ ಮೇಲೆ ವಿಶೇಷವಾದ ಕ್ರೋಧವನ್ನು ಹೊಂದಿದರು.
ಸ ತು ಯತ್ತೋ ರಥೇ ಸ್ಥಿತ್ವಾ ವಾರ್ಯುಪಸ್ಪೃಶ್ಯ ವೀರ್ಯವಾನ್ |
ದೇವೈರಪಿ ಸುದುರ್ಧರ್ಷಮಸ್ತ್ರಮಾಗ್ನೇಯಮಾದದೇ |
ದೃಶ್ಯಾದೃಶ್ಯಾನರಿಗಣಾನುದ್ದಿಶ್ಯಾಚಾರ್ಯನಂದನಃ ॥ 14 ॥
ಪರಾಕ್ರಮಶಾಲಿಗಳಾದ ಆಚಾರ್ಯಪುತ್ರರಾದ ಅಶ್ವತ್ಥಾಮರು ಅವಧಾನವನ್ನು ಹೊಂದಿ, ರಥದಲ್ಲಿಯೇ ಇದ್ದು, ಜಲಸ್ಪರ್ಶ ಮಾಡಿ ಶುದ್ಧರಾಗಿ, ದೇವತೆಗಳೂ ತಡೆಯಲು ಅಸಾಧ್ಯವಾದ ಆಗ್ನೇಯಾಸ್ತ್ರವನ್ನು ತೆಗೆದುಕೊಂಡು, ದೃಶ್ಯರಾದ ಮತ್ತು ಅದೃಶ್ಯರಾದ ಶತ್ರುಸಮೂಹವನ್ನು ಉದ್ದೇಶಿಸಿ ಅದನ್ನು ಪ್ರಯೋಗಿಸಿದರು.
ಸೋಽಭಿಮಂತ್ರ್ಯ ಶರಂ ದೀಪ್ತಂ ವಿಧೂಮಮಿವ ಪಾವಕಮ್ |
ಸರ್ವತಃ ಕ್ರೋಧಮಾವಿಶ್ಯ ಚಿಕ್ಷೇಪ ಪರವೀರಹಾ ॥ 15 ॥
ಪರವೀರಘಾತಕರಾದ ಅವರು ಧೂಮರಹಿತವಾದ ಅಗ್ನಿಯಂತಿದ್ದ ಪ್ರಕಾಶಮಾನವಾದ ಒಂದು ಬಾಣವನ್ನು ತೆಗೆದುಕೊಂಡು ಅಭಿಮಂತ್ರಿಸಿ ಎಲ್ಲ ಕಡೆಯಲ್ಲಿಯೂ ಕ್ರೋಧವನ್ನು ತೆಗೆದುಕೊಂಡು ಅದನ್ನು ಪ್ರಯೋಗಿಸಿದರು.
ತತಸ್ತುಮುಲಮಾಕಾಶೇ ಶರವರ್ಷಮಜಾಯತ |
ವವುಶ್ಚ ಪರುಷಾ ವಾತಾಃ ಸೂರ್ಯೋ ನೈವ ತತಾಪ ಚ ॥ 16 ॥
ಆಗ ಆಕಾಶದಲ್ಲಿ ತೀವ್ರವಾದ ಬಾಣಗಳ ಮಳೆಯುಂಟಾಯಿತು. ವಾಯುಗಳು ಉಗ್ರವಾಗಿ ಬೀಸಿದವು. ಸೂರ್ಯನು ತಾಪರಹಿತನಾದನು.
ಚುಕ್ರುಶುರ್ದಾನವಾಶ್ಚಾಪಿ ದಿಕ್ಷು ಸರ್ವಾಸು ಭೈರವಮ್ |
ರುಧಿರಂ ಚಾಪಿ ವರ್ಷಂತೋ ವಿನೇದುಸ್ತೋಯದಾಂಬರೇ ॥ 17 ॥
ದಾನವರು ಎಲ್ಲ ದಿಕ್ಕುಗಳಲ್ಲಿಯೂ ಭೈರವನಾದವನ್ನು ಮಾಡಿದರು. ಮೋಡಗಳು ರಕ್ತದ ಮಳೆಯನ್ನು ಸುರಿಸುತ್ತಾ ಆಕಾಶದಲ್ಲಿ ಗುಡುಗಿದವು.
ಪಕ್ಷಿಣಃ ಪಶವೋ ಗಾವೋ ಮುನಯಶ್ಚಾಪಿ ಸುವ್ರತಾಃ |
ಪರಮಂ ಪ್ರಯತಾತ್ಮಾನೋ ನ ಶಾಂತಿಮುಪಲೇಭಿರೇ ॥ 18 ॥
ಪಕ್ಷಿಗಳು, ಪಶುಗಳು, ಗೋವುಗಳು, ಒಳ್ಳೆಯ ವ್ರತಧಾರಿಗಳಾದ ಪರಮ ಮನಸ್ಸಾಮ್ಯವನ್ನು ಹೊಂದಿದ ಮುನಿಗಳೂ ಸಹ ಶಾಂತಿಯನ್ನು ಹೊಂದಲಿಲ್ಲ.
ಭ್ರಾಂತಸರ್ವಮಹಾಭೂತಮಾವರ್ಜಿತದಿವಾಕರಮ್ |
ತ್ರೈಲೋಕ್ಯಮಭಿಸಂತಪ್ತಂ ಜ್ವರಾವಿಷ್ಟಮಿವಾತುರಮ್ ॥ 19 ॥
ಎಲ್ಲ ಮಹಾಭೂತಗಳು ಭ್ರಾಂತರಾಗಿ ಸೂರ್ಯನನ್ನು ಕಾಣದೆ ಮೂರುಲೋಕಗಳು ಜ್ವರದಿಂದ ಪೀಡಿತವಾದ ರೋಗಿಯಂತೆ ಸಂತಪ್ತವಾದವು.
ಶರತೇಜೋಽಭಿಸಂತಪ್ತಾ ನಾಗಾ ಭೂಮಿಶಯಾಸ್ತಥಾ |

ನಿಃಶ್ವಸಂತಃ ಸಮುತ್ಪೇತುಸ್ತೇಜೋ ಘೋರಂ ಮುಮುಕ್ಷವಃ ॥ 20 ॥
ಬಾಣದ ತೇಜಸ್ಸಿನಿಂದ ತಪ್ತವಾದ ಭೂಮಿಯಲ್ಲಿ ಮಲಗಿದ ಸರ್ಪಗಳು ನಿಟ್ಟುಸಿರನ್ನು ಬಿಡುತ್ತಾ ಘೋರವಾದ ತೇಜಸ್ಸನ್ನು ಉಗುಳುತ್ತಾ ಮೇಲೆ ಹಾರಿದವು.
ಜಲಜಾನಿ ಚ ಸತ್ತ್ವಾನಿ ದಹ್ಯಮಾನಾನಿ ಭಾರತ |
ನ ಶಾಂತಿಮುಪಜಗ್ಮುರ್ಹಿ ತಪ್ಯಮಾನೈರ್ಜಲಾಶಯೈಃ ॥ 21 ॥
ಎಲೈ ಭಾರತನೇ, ಜಲಾಶಯಗಳು ತಪ್ತವಾಗುತ್ತಿರಲು ನೀರಿನಲ್ಲಿ ಬೆಳೆಯುವ ಸಸ್ಯಗಳು ದಹಿಸಲ್ಪಟ್ಟು ಶಾಂತಿಯನ್ನು ಹೊಂದಲಿಲ್ಲ.
ದಿಶಃ ಖಂ ಪ್ರದಿಶಶ್ಚೈವ ಭುವಂ ಚ ಶರವೃಷ್ಟಯಃ |
ಉಚ್ಚಾವಚಾ ನಿಪೇತುರ್ವೈ ಗರುಡಾನಿಲರಂಹಸಃ ॥ 22 ॥
ಎಲ್ಲ ದಿಕ್ಕುಗಳಲ್ಲಿಯೂ, ಭೂಮಿ-ಆಕಾಶಗಳಲ್ಲಿಯೂ, ಗರುಡಾನಿಲ ವೇಗಗಳುಳ್ಳ ಶ್ರೇಷ್ಠವಾದ ಮತ್ತು ಕನಿಷ್ಠವಾದ ಬಾಣಗಳ ಮಳೆಗಳು ಉಂಟಾದವು.
ತೈಃ ಶರೈರ್ದ್ರೋಣಪುತ್ರಸ್ಯ ವಜ್ರವೇಗಸಮಾಹಿತೈಃ |
ಪ್ರದಗ್ಧಾಃ ಶತ್ರವಃ ಪೇತುರಗ್ನಿದಗ್ಧಾ ಇವ ದ್ರುಮಾಃ ॥ 23 ॥
ದ್ರೋಣಪುತ್ರರ ವಜ್ರವೇಗಕ್ಕೆ ಸಮವಾದ ಅಹಿತವಾದ ಆ ಬಾಣಗಳಿಂದ ದಹಿಸಲ್ಪಟ್ಟ ಶತ್ರುಗಳು ಅಗ್ನಿದಗ್ಧವಾದ ವೃಕ್ಷಗಳಂತೆ ಬಿದ್ದರು.

ದಹ್ಯಮಾನಾ ಮಹಾನಾಗಾಃ ಪೇತುರುರ್ವ್ಯಾಂ ಸಮಂತತಃ |
ನದಂತೋ ಭೈರವಾನ್ ನಾದಾನ್ ಜಲದೋಪಮನಿಸ್ವನಾನ್ ॥ 24 ॥
ಮಹಾಗಜಗಳು ದಹಿಸಲ್ಪಟ್ಟು ಮೇಘಘೋಷದಂತೆ ಭೈರವವಾದ ನಾದಗಳನ್ನು ಮಾಡುತ್ತಾ ಭೂಮಿಯಲ್ಲಿ ಎಲ್ಲ ಕಡೆಗಳಲ್ಲಿಯೂ ಬಿದ್ದವು.
ಅಪರೇ ಪ್ರದ್ರುತಾಸ್ತತ್ರ ದಹ್ಯಮಾನಾ ಮಹಾಗಜಾಃ |
ತ್ರೇಸುಸ್ತಥಾಪರೇ ಘೋರೇ ವನೇ ದಾವಾಗ್ನಿಸಂವೃತಾಃ ॥ 25 ॥
ಇನ್ನು ಕೆಲವು ಮಹಾಗಜಗಳು ದಾಹಕ್ಕೆ ಒಳಗಾಗಿ ಅಲ್ಲಿಂದ ಓಡಿಹೋದವು. ಘೋರವಾದ ವನವು ದಾವಾಗ್ನಿಯಿಂದ ಸಂವೃತವಾದಾಗ ಇನ್ನು ಕೆಲವು ಗಜಗಳು ಹೆದರಿದವು.
ದ್ರುಮಾಣಾಂ ಶಿಖರಾಣೀವ ದಾವದಗ್ಧಾನಿ ಮಾರಿಷ |
ಅಶ್ವವೃಂದಾನ್ಯದೃಶ್ಯಂತ ರಥವೃಂದಾನಿ ಚಾಭಿಭೋ |
ಅಪತಂತ ರಥೌಘಾಶ್ಚ ತತ್ರ ತತ್ರ ಸಹಸ್ರಶಃ ॥ 26 ॥
ಎಲೈ ಶ್ರೇಷ್ಠನೇ, ಎಲೈ ಶತ್ರುಪರಿಭಾವಕನೇ, ದಾವದಗ್ಧವಾದ ವೃಕ್ಷದ ಶಿಖರದಂತೆ ಅಲ್ಲಲ್ಲಿ ಬಿದ್ದ ಅಶ್ವವೃಂದಗಳು, ರಥವೃಂದಗಳು ಕಂಡುಬಂದವು. ರಥಸಮೂಹಗಳೂ ಸಹ ಅಲ್ಲಲ್ಲಿ ಸಹಸ್ರಸಂಖ್ಯೆಯಲ್ಲಿ ಬಿದ್ದವು.
ತತ್ ಸೈನ್ಯಂ ಭಗವಾನಗ್ನಿರ್ದದಾಹ ಯುಧಿ ಭಾರತ |
ಯುಗಾಂತೇ ಸರ್ವಭೂತಾನಿ ಸಂವರ್ತಕ ಇವಾನಲಃ ॥ 27 ॥
ಎಲೈ ಭಾರತನೇ, ಯುಗಾಂತದಲ್ಲಿ ಸಂವರ್ತಕಾಗ್ನಿಯು ಎಲ್ಲ ಭೂತಗಳನ್ನೂ ಸುಡುವಂತೆ ಕ್ರುದ್ಧನಾದ ಅಗ್ನಿಯು ಯುದ್ಧದಲ್ಲಿ ಪಾಂಡವ ಸೈನ್ಯವನ್ನು ದಹಿಸಿದನು.
ದೃಷ್ಟ್ವಾ ತು ಪಾಂಡವೀಂ ಸೇನಾಂ ದಹ್ಯಮಾನಾಂ ಮಹಾಹವೇ |
ಪ್ರಹೃಷ್ಟಾಸ್ತಾವಕಾ ರಾಜನ್ ಸಿಂಹನಾದಾನ್ ವಿನೇದಿರೇ ॥ 28 ॥
ಎಲೈ ರಾಜನೇ, ಆ ಮಹಾಯುದ್ಧದಲ್ಲಿ ಪಾಂಡವಸೇನೆಯು ದಹಿಸಲ್ಪಡುತ್ತಿರುವುದನ್ನು ನೋಡಿ ನಿನ್ನವರು ಸಂತೋಷಗೊಂಡು ಸಿಂಹನಾದಗಳನ್ನು ಮಾಡಿದರು.
ತತಸ್ತೂರ್ಯಸಹಸ್ರಾಣಿ ನಾನಾಲಿಂಗಾನಿ ಭಾರತ |
ತೂರ್ಣಮಾಜಘ್ನಿರೇ ಹೃಷ್ಟಾಸ್ತಾವಕಾ ಜಿತಕಾಶಿನಃ ॥ 29 ॥
ಆಗ ಜಯವನ್ನು ಪಡೆದ ನಿನ್ನವರು ಸಂತುಷ್ಟರಾಗಿ, ಎಲೈ ಭಾರತನೇ, ನಾನಾ ವಿಧವಾದ ಸಹಸ್ರಾರು ತೂರ್ಯಗಳನ್ನು ಶೀಘ್ರವಾಗಿ ಬಾರಿಸಿದರು.
ಕೃತ್ಸ್ನಾ ಹ್ಯಕ್ಷೋಹಿಣೀ ರಾಜನ್ ಸವ್ಯಸಾಚೀ ಚ ಪಾಂಡವಃ |
ತಮಸಾ ಸಂವೃತೇ ಲೋಕೇ ನಾದೃಶ್ಯತ ಮಹಾಹವೇ ॥ 30 ॥
ಎಲೈ ರಾಜನೇ, ಲೋಕವೆಲ್ಲವೂ ಕತ್ತಲಿನಿಂದ ಆವೃತವಾಗಿರಲು ಆ ದೊಡ್ಡ ಯುದ್ಧದಲ್ಲಿ ಸಮಗ್ರವಾದ ಅಕ್ಷೋಹಿಣೀ ಸೈನ್ಯವೂ ಪಾಂಡವನಾದ ಸವ್ಯಸಾಚಿಯೂ ಕಾಣಲಿಲ್ಲ.
ನೈವ ನಸ್ತಾದೃಶಂ ರಾಜನ್ ದೃಷ್ಟಪೂರ್ವಂ ನ ಚ ಶ್ರುತಮ್ |
ಯಾದೃಶಂ ದ್ರೋಣಪುತ್ರೇಣ ಸೃಷ್ಟಮಸ್ತ್ರಮಮರ್ಷಿಣಾ ॥ 31 ॥
ಎಲೈ ರಾಜನೇ, ದ್ರೋಣಪುತ್ರರಾದ ಅಶ್ವತ್ಥಾಮರು ಕೋಪದಿಂದ ಎಂತಹ ಅಸ್ತ್ರವನ್ನು ಸೃಷ್ಟಿಮಾಡಿದರೋ ಅಂತಹ ಅಸ್ತ್ರವನ್ನು ನಾವು ಹಿಂದೆ ನೋಡಿಯೂ ಇರಲಿಲ್ಲ, ಕೇಳಿಯೂ ಇರಲಿಲ್ಲ.
ಅರ್ಜುನಸ್ತು ಮಹಾರಾಜ ಬ್ರಾಹ್ಮಮಸ್ತ್ರಮುದೈರಯತ್ |
ಸರ್ವಾಸ್ತ್ರಪ್ರತಿಘಾತಾಯ ವಿಹಿತಂ ಪದ್ಮಯೋನಿನಾ ॥ 32 ॥
ಎಲೈ ಮಹಾರಾಜನೇ, ಅರ್ಜುನನಾದರೋ ಸರ್ವಾಸ್ತ್ರಗಳನ್ನು ಪ್ರತಿಘಾತ ಮಾಡಲು ಬ್ರಹ್ಮದೇವರು ವಿಧಿಸಿದ ಬ್ರಹ್ಮಾಸ್ತ್ರವನ್ನು

ಪ್ರಯೋಗಿಸಿದನು.
ತತೋ ಮುಹೂರ್ತಾದಿವ ತತ್ ತಮೋ ವ್ಯುಪಶಶಾಮ ಹ |
ಪ್ರವವೌ ಚಾನಿಲಃ ಶೀತೋ ದಿಶಶ್ಚ ವಿಮಲಾಽಭವನ್ ॥ 33 ॥
ಆಗ ಒಂದುಮುಹೂರ್ತದಲ್ಲಿ ಆ ಕತ್ತಲೆಯು ನಾಶವನ್ನು ಹೊಂದಿತು, ತಂಪಾದ ಗಾಳಿಯು ಬೀಸಿತು, ದಿಕ್ಕುಗಳು ಪ್ರಸನ್ನವಾದವು.
ತತ್ರಾದ್ಭುತಮಪಶ್ಯಾಮ ಕೃತ್ಸ್ನಾಮಕ್ಷೋಹಿಣೀಂ ಹತಾಮ್ |
ಅನಭಿಜ್ಞೇಯರೂಪಾಂ ಚ ಪ್ರದಗ್ಧಾಮಸ್ತ್ರಮಾಯಯಾ ॥ 34 ॥
ಒಂದು ಅಕ್ಷೋಹಿಣೀ ಸೈನ್ಯವು ಗುರುತಿಲ್ಲದಂತೆ ಅಶ್ವತ್ಥಾಮರ ಅಸ್ತ್ರತೇಜಸ್ಸಿನಿಂದ ದಹಿಸಲ್ಪಟ್ಟ ಆ ಅದ್ಭುತವನ್ನು ನೋಡಿದೆವು.
ತತೋ ವೀರೌ ಮಹೇಷ್ವಾಸೌ ವಿಮುಕ್ತೌ ಕೇಶವಾರ್ಜುನೌ |
ಸಹಿತೌ ಸಂಪ್ರದೃಶ್ಯೇತಾಂ ನಭಸೀವ ತಮೋನುದೌ ॥ 35 ॥
ಆಗ ಆಗ್ನೇಯಾಸ್ತ್ರದಿಂದ ವಿಮುಕ್ತರಾದ ವೀರರಾದ ಮಹಾಧನುರ್ಧಾರಿಗಳಾದ ಕೃಷ್ಣಾರ್ಜುನರು ಆಕಾಶದಲ್ಲಿ ತಮಸ್ಸನ್ನು ವಿನಾಶಮಾಡುವ ಸೂರ್ಯ-ಚಂದ್ರರಂತೆ ಜೊತೆಯಲ್ಲಿ ಕಂಡುಬಂದರು.
ಸಪತಾಕಧ್ವಜಹಯಃ ಸಾನುಕರ್ಷವರಾಯುಧಃ |
ಪ್ರಬಭೌ ಸ ರಥೋ ಮುಕ್ತಸ್ತಾವಕಾನಾಂ ಭಯಂಕರಃ ॥ 36 ॥
ಪತಾಕೆ-ಹಯ-ಧ್ವಜಗಳಿಂದ ಕೂಡಿದ, ಅನುಕರ್ಷ ಮತ್ತು ಶ್ರೇಷ್ಠವಾದ ಆಯುಧವನ್ನು ಹೊಂದಿದ ನಿನ್ನವರಿಗೆ ಭಯವನ್ನುಂಟು ಮಾಡುವ ಆ ಅರ್ಜುನನ ರಥವು ಆಗ್ನೇಯಾಸ್ತ್ರದಿಂದ ಮುಕ್ತವಾಗಿ ಶೋಭಿಸಿತು.
ತತಃ ಕಿಲಕಿಲಾಶಬ್ದಃ ಶಂಖಭೇರೀರವೈಃ ಸಹ |
ಪಾಂಡವಾನಾಂ ಪ್ರಹೃಷ್ಟಾನಾಂ ಕ್ಷಣೇನ ಸಮಜಾಯತ ॥ 37 ॥
ಅನಂತರ ಶಂಖ-ಭೇರಿ ನಾದಗಳಿಂದ ಮಿಶ್ರಿತವಾದ ಕಿಲಕಿಲ ಶಬ್ದವು ಸಂತೋಷಗೊಂಡ ಪಾಂಡವರ ಸೇನೆಯಲ್ಲಿ ಒಂದುಕ್ಷಣದಲ್ಲಿ ಉಂಟಾಯಿತು.
ಹತಾವಿತಿ ತಯೋರಾಸೀತ್ ಸೇನಯೋರುಭಯೋರ್ಮತಿಃ |
ತರಸಾಽಭ್ಯಾಗತೌ ದೃಷ್ಟ್ವಾ ವಿಶ್ರಾಂತೌ ಕೇಶವಾರ್ಜುನೌ ॥ 38 ॥
ಎರಡು ಸೇನೆಗಳಿಗೂ ಕೃಷ್ಣಾರ್ಜುನರು ಹತರಾದರು ಎಂದೇ ಅಭಿಪ್ರಾಯವಿದ್ದಿತು. ಶೀಘ್ರವಾಗಿ ಎದುರಿಗೆ ಬಂದ ವಿಶ್ರಾಂತರಾದ ಕೃಷ್ಣಾರ್ಜುನರನ್ನು ನೋಡಿ (ಪಾಂಡವರ ಸೇನೆಯು ಹರ್ಷಗೊಂಡಿತು).
ತಾವಕ್ಷತೌ ಪ್ರಮುದಿತೌ ದಧ್ಮತುರ್ವಾರಿಜೋತ್ತಮೌ |
ದೃಷ್ಟ್ವಾ ಪ್ರಮುದಿತಾನ್ ಪಾರ್ಥಾಂಸ್ತ್ವದೀಯಾ ವ್ಯಥಿತಾಽಭವನ್ ॥
ಅವರಿಬ್ಬರೂ (ಕೃಷ್ಣಾರ್ಜುನರು) ಗಾಯಗೊಳ್ಳದೆ ಸಂತೋಷದಿಂದ ಕೂಡಿದವರಾಗಿ ತಮ್ಮ ಶ್ರೇಷ್ಠವಾದ ಶಂಖವನ್ನು ಊದಿದರು. ಪಾಂಡವರು ಸಂತೋಷದಿಂದ ಕೂಡಿರುವುದನ್ನು ನೋಡಿ ನಿನ್ನವರು ವ್ಯಥೆಪಟ್ಟರು.
ವಿಮುಕ್ತೌ ಚ ಮಹಾತ್ಮಾನೌ ದೃಷ್ಟ್ವಾ ದ್ರೌಣಿಃ ಸುದುಃಖಿತಃ |
ಮುಹೂರ್ತಂ ಚಿಂತಯಾಮಾಸ ಕಿಂ ತ್ವೇತದಿತಿ ಮಾರಿಷ ॥ 40 ॥
ಎಲೈ ಶ್ರೇಷ್ಠನೇ, ಆಗ್ನೇಯಾಸ್ತ್ರದಿಂದ ವಿಮುಕ್ತರಾದ, ಮಹಾತ್ಮರಾದ ಕೃಷ್ಣಾರ್ಜುನರನ್ನು ನೋಡಿ ಅಶ್ವತ್ಥಾಮರು ಬಹಳ ದುಃಖಗೊಂಡು ಇದೇನು ಎಂದು ಒಂದು ಮುಹೂರ್ತದ ಕಾಲ ಚಿಂತಿಸಿದರು.
ಚಿಂತಯಿತ್ವಾ ತು ರಾಜೇಂದ್ರ ಧ್ಯಾನಶೋಕಪರಾಯಣಃ |
ನಿಃಶ್ವಸನ್ ದೀರ್ಘಮುಷ್ಣಂ ಚ ವಿಮನಾಶ್ಚಾಭವತ್ ತದಾ ॥ 41 ॥
ಎಲೈ ರಾಜೇಂದ್ರನೇ, ಧ್ಯಾನ-ಶೋಕಪರಾಯಣರಾದ ಅವರು ಒಂದು ಮುಹೂರ್ತದ ಕಾಲ ಚಿಂತಿಸಿ, ದೀರ್ಘವಾದ ಉಷ್ಣವಾದ ನಿಟ್ಟುಸಿರನ್ನು ಬಿಡುತ್ತಾ ಬೇಸರಗೊಂಡರು.
ತತೋ ದ್ರೌಣಿರ್ಧನುರ್ನ್ಯಸ್ಯ ರಥಾತ್ ಪ್ರಸ್ಕಂದ್ಯ ವೇಗಿತಃ |
ಧಿಗ್ಧಿಕ್ಸರ್ವಮಿದಂ ಮಿಥ್ಯೇತ್ಯುಕ್ತ್ವಾ ಸಂಪ್ರಾದ್ರವದ್ ರಣಾತ್ ॥ 42 ॥
ಆಗ ಅಶ್ವತ್ಥಾಮರು ಧನುಸ್ಸನ್ನು ಬಿಟ್ಟು ಶೀಘ್ರವಾಗಿ ರಥದಿಂದ ಕೆಳಗೆ ಹಾರಿ `ಧಿಕ್ಕಾರ, ಧಿಕ್ಕಾರ, ಇವೆಲ್ಲವೂ ಮಿಥ್ಯಾ' ಎಂದು ಹೇಳುತ್ತಾ ರಣರಂಗದಿಂದ ಓಡಿದರು.
ತತಃ ಸ್ನಿಗ್ಧಾಂಬುಧಾಭಾಸಂ ವೇದವ್ಯಾಸಮಕಲ್ಮಷಮ್ |
ಆವಾಸಂ ಚ ಸರಸ್ವತ್ಯಾಃ ಸ ವೈ ವ್ಯಾಸಂ ದದರ್ಶ ಹ ॥ 43 ॥
ಆಗ ಅವರು ಸ್ನಿಗ್ಧಾಂಬುಧಕಾಂತಿಯುಳ್ಳವರೂ, ದೋಷರಹಿತರೂ, ಸರಸ್ವತೀ ನದಿಯ ತೀರದಲ್ಲಿ ವಾಸಿಸುವವರೂ ಆದ ವೇದವ್ಯಾಸರನ್ನು ನೋಡಿದರು.
ತಂ ದ್ರೌಣಿರಗ್ರತೋ ದೃಷ್ಟ್ವಾ ಸ್ಥಿತಂ ಕುರುಕುಲೋದ್ವಹ |
ಸನ್ನಕಂಠೋಽಬ್ರವೀದ್ ವಾಕ್ಯಮಭಿವಾದ್ಯ ಸುದೀನವತ್ ॥ 44 ॥
ಎಲೈ ಕುರುಕುಲೋದ್ವಹನೇ, ಅಶ್ವತ್ಥಾಮರು ತಮ್ಮ ಎದುರಿನಲ್ಲಿ ನಿಂತ ವ್ಯಾಸರನ್ನು ನೋಡಿ ನಮಸ್ಕರಿಸಿ, ದೈನ್ಯದಿಂದ ಕೂಡಿದವರಾಗಿ ಉಡುಗಿಹೋದ ಕಂಠದಿಂದ ಮಾತನಾಡಿದರು.
ಭೋ ಭೋ ಮಾಯಾ ಯದೃಚ್ಛಾ ವಾ ನ ವಿದ್ಮಃ ಕಿಮಿದಂ ಭವೇತ್ |
ಅಸ್ತ್ರಂ ತ್ವಿದಂ ಕಥಂ ಮಿಥ್ಯಾ ಮಮ ಕಶ್ಚ ವ್ಯತಿಕ್ರಮಃ ॥ 45 ॥
ಪ್ರಭುವೇ, ಇದೇನು ಮಾಯೆಯೋ, ಭಗವದಿಚ್ಛೆಯೋ, ಏನೆಂದು ನಾನು ತಿಳಿಯುತ್ತಿಲ್ಲ. ಈ ನನ್ನ ಅಸ್ತ್ರವು ಹೇಗೆ ಸುಳ್ಳಾಯಿತು? ನಾನು

ಯಾವ ಅಪಚಾರವನ್ನು ಮಾಡಿದೆ?
ಅಧರೋತ್ತರಮೇತದ್ವಾ ಲೋಕಾನಾಂ ವಾ ಪರಾಭವಃ |
ಯದಿಮೌ ಜೀವತಃ ಕೃಷ್ಣೌ ಕಾಲೋ ಹಿ ದುರತಿಕ್ರಮಃ ॥ 46 ॥
ಇದೇನು ಎಲ್ಲವೂ ತಲೆಕೆಳಗಾಗಿದೆ? ಲೋಕಗಳ ಪರಾಭವವಾಗಲೀ, ಬದುಕಿ ಉಳಿದಿರುವ ಕೃಷ್ಣಾರ್ಜುನರಾಗಲೀ (ಎಲ್ಲವೂ ತಲೆಕೆಳಗಾಗಿದೆ). ಕಾಲವನ್ನು ಯಾರೂ ಮೀರಲಾರರಷ್ಟೆ?
ನಾಸುರಾಮರಗಂಧರ್ವಾ ನ ಪಿಶಾಚಾ ನ ರಾಕ್ಷಸಾಃ |
ನ ಸರ್ಪಯಕ್ಷಪತಗಾ ನ ಮನುಷ್ಯಾಃ ಕಥಂಚನ ॥ 47 ॥
ಉತ್ಸಹಂತೇಽನ್ಯಥಾಕರ್ತುಮೇತದಸ್ತ್ರಂ ಮಯೇರಿತಮ್ |
ತದಿದಂ ಕೇವಲಂ ಹತ್ವಾ ಯುಕ್ತಾಮಕ್ಷೋಹಿಣೀಂ ಜ್ವಲತ್ ॥ 48 ॥
ಕೇನೇಮೌ ಮರ್ತ್ಯಧರ್ಮಾಣೌ ನಾವಧೀತ್ ಕೇಶವಾರ್ಜುನೌ |
ಏತತ್ ಪ್ರಬ್ರೂಹಿ ಭಗವನ್ ಮಯಾ ಪೃಷ್ಟೋ ಯಥಾತಥಮ್ ॥49॥
ನಾನು ಪ್ರಯೋಗಿಸಿದ ಈ ಅಸ್ತ್ರವನ್ನು ಅಸುರರಾಗಲೀ, ದೇವತೆಗಳಾಗಲೀ, ಗಂಧರ್ವರಾಗಲೀ, ಪಿಶಾಚರಾಗಲೀ, ರಾಕ್ಷಸರಾಗಲೀ, ಸರ್ಪ-ಯಕ್ಷ- ಪತಗಗಳಾಗಲೀ, ಮನುಷ್ಯರಾಗಲೀ ಯಾವ ರೀತಿಯಿಂದಲೂ ವಿಫಲಗೊಳಿಸಲಾರರು. ಅಂತಹ ಈ ಅಸ್ತ್ರವು ಜ್ವಲಿಸುತ್ತಾ ಕೇವಲ ಒಂದು ಅಕ್ಷೋಹಿಣಿಯನ್ನು ಕೊಂದು ಮರ್ತ್ಯಧರ್ಮವನ್ನು ಹೊಂದಿದ ಕೇಶವಾರ್ಜುನರನ್ನು ಏತಕ್ಕೆ ಕೊಲ್ಲಲಿಲ್ಲ? ಎಲೈ ಭಗವಂತನೇ, ಸತ್ಯಾಂಶವನ್ನು ಕೇಳುತ್ತಿರುವ ನನಗೆ ಈ ಪ್ರಶ್ನೆಗೆ ಉತ್ತರವನ್ನು ಹೇಳಿ (ಎಂದು ಕೇಳಿದರು).
ವ್ಯಾಸಃ
ಮಹಾಂತಮೇತಮರ್ಥಂ ಮಾಂ ಯಂ ತ್ವಂ ಪೃಚ್ಛಸಿ ವಿಸ್ಮಯಾತ್ |
ತತ್ ಪ್ರವಕ್ಷ್ಯಾಮಿ ತೇ ಸರ್ವಂ ಸಮಾಧಾಯ ಮನಃ ಶೃಣು ॥ 50 ॥
ವ್ಯಾಸರು ನೀನು ಆಶ್ಚರ್ಯಚಕಿತನಾಗಿ ಈ ದೊಡ್ಡ ವಿಷಯವನ್ನು ಕುರಿತು ಕೇಳುತ್ತಿದ್ದೀಯಷ್ಟೆ? ನಾನದೆಲ್ಲವನ್ನೂ ಹೇಳುವೆನು. ಮನಸ್ಸಮಾಧಾನದಿಂದ ಕೇಳು.
ಯೋಽಸೌ ನಾರಾಯಣೋ ನಾಮ ಪೂರ್ವೇಷಾಮಪಿ ಪೂರ್ವಜಃ |
ಅಜಾಯತ ಚ ಕಾರ್ಯಾರ್ಥಂ ಪುತ್ರೋ ಧರ್ಮಸ್ಯ ವಿಶ್ವಕೃತ್ ॥ 51 ॥
ಪೂರ್ವಜರಿಗೂ ಪೂರ್ವಜನಾದ ವಿಶ್ವಕರ್ತೃವಾದ ಈ ನಾರಾಯಣನು ದೇವತಾ ಕಾರ್ಯವನ್ನು ಉದ್ದೇಶಿಸಿ ಯಮದೇವನ ಪುತ್ರನಾಗಿ ಅವತರಿಸಿದನು.
ಸ ತಪಸ್ತೀವ್ರಮಾತಸ್ಥೇ ಮೈನಾಕಂ ಗಿರಿಮಾಸ್ಥಿತಃ |
ಊರ್ಧ್ವಬಾಹುರ್ಮಹಾತೇಜಾ ಜ್ವಲನಾದಿತ್ಯಸನ್ನಿಭಃ ॥ 52 ॥
ಮಹಾತೇಜಸ್ವಿಯಾದ, ಜ್ವಲಿಸುವ ಸೂರ್ಯನ ಕಾಂತಿಯನ್ನು ಹೊಂದಿದ ಅವನು ಮೈನಾಕಪರ್ವತಕ್ಕೆ ಹೋಗಿ ಊರ್ಧ್ವಬಾಹುವಾಗಿ ತೀವ್ರವಾದ ತಪಸ್ಸನ್ನು ಮಾಡಿದನು.
ಷಷ್ಟಿಂ ವರ್ಷಸಹಸ್ರಾಣಿ ತಾವಂತ್ಯೇವ ಶತಾನಿ ಚ |
ಅಶೋಷಯತ್ ತದಾತ್ಮಾನಂ ವಾಯುಭಕ್ಷೋಽಂಬುಜೇಕ್ಷಣಃ ॥ 53 ॥
ಅಂಬುಜೇಕ್ಷಣನಾದ ಅವನು ವಾಯುಭಕ್ಷನಾಗಿ ಅರವತ್ತುಸಾವಿರ ಮತ್ತು ಅರವತ್ತು ನೂರು ವರ್ಷಗಳ ಕಾಲ ದೇಹವನ್ನು ಶೋಷಿಸಿದನು.
ಅಥಾಪರಂ ತಪಸ್ತಪ್ತ್ವಾ ದ್ವಿಸ್ತತೋಽನ್ಯತ್ ಪುನರ್ಮಹತ್ |
ದ್ಯಾವಾಪೃಥಿವ್ಯೋರ್ವಿವರಂ ತೇಜಸಾ ಸಮಪೂರಯತ್ ॥ 54 ॥
ಅನಂತರ ಪುನಃ ಅದರ ಎರಡರಷ್ಟು ಕಾಲದವರೆಗೆ ತಪಸ್ಸನ್ನು ಮಾಡಿ ತನ್ನ ತೇಜಸ್ಸಿನಿಂದ ಭೂಮಿ ಮತ್ತು ಅಂತರಿಕ್ಷದ ಮಧ್ಯಪ್ರದೇಶವನ್ನು ತುಂಬಿದನು.
ಸ ತೇನ ತಪಸಾ ತಾತ ಬ್ರಹ್ಮಭೂತೋ ಯದಾಭವತ್ |
ತತೋ ವಿಶ್ವೇಶ್ವರಂ ಯೋನಿಂ ವಿಶ್ವಸ್ಯ ಜಗತಃ ಪತಿಮ್ ॥ 55 ॥
ದದರ್ಶ ಭೃಶದುರ್ದರ್ಶಂ ಸರ್ವದೇವೈರಪೀಶ್ವರಮ್ |
ಅಣೀಯಸಾಮಣೀಯಾಂಸಂ ಬೃಹದ್ಭ್ಯಶ್ಚ ಬೃಹತ್ತರಮ್ ॥ 56 ॥
ಎಲೈ ಪ್ರೀತಿಪಾತ್ರನೇ, ಆ ತಪಸ್ಸನ್ನು ಅವನು ಪೂರ್ಣಗೊಳಿಸುತ್ತಿರಲು ವಿಶ್ವೇಶ್ವರನೂ, ಜಗದ್ಯೋನಿಯೂ, ಜಗತ್ಪತಿಯೂ, ನೋಡಲು ಕಷ್ಟಸಾಧ್ಯನಾದವನೂ, ಸರ್ವಪ್ರಾಣಿಗಳಿಂದಲೂ ಅಭೀಪ್ಸಿತನಾದವನೂ, ಅಣುಗಳಿಗಿಂತಲೂ ಅಣುವಾದವನೂ, ಮಹತ್ತಿಗಿಂತಲೂ ಮಹತ್ತಾದವನೂ ಆದ ವಿಶ್ವೇಶ್ವರನನ್ನು ನೋಡಿದನು.
ರುದ್ರಮೀಶಾನಮೃಷಭಂ ಚೇಕಿತಾನಮಜಂ ಪರಮ್ |
ಗಚ್ಛತಸ್ತಿಷ್ಠತೋ ವಾಪಿ ಸರ್ವಭೂತಹೃದಿ ಸ್ಥಿತಮ್ ॥ 57 ॥
ದುರ್ವಾರಣಂ ದುರ್ದೃಶಂ ತಿಗ್ಮಮನ್ಯುಂ
ಮಹಾತ್ಮಾನಂ ಸರ್ವಹರಂ ಪ್ರಚೇತಸಮ್ |
ದಿವ್ಯಂ ಚಾಪಮಿಷುಧೀ ಚಾದದಾನಂ
ಹಿರಣ್ಯವರ್ಮಾಣಮನಂತವೀರ್ಯಮ್ ॥ 58 ॥
ಈಶಾನನೂ, ಶ್ರೇಷ್ಠನೂ, ಧ್ಯಾನರೂಪಿಯೂ, ಅಜನೂ, ಉತ್ತಮನೂ, ನಡೆದರೂ ಅಥವಾ ನಿಂತರೂ ಎಲ್ಲರ ಹೃದಯದಲ್ಲಿಯೂ

ಇರುವವನೂ, ನಿವಾರಿಸಲು ಅಸಾಧ್ಯನಾದವನೂ, ತೀಕ್ಷ್ಣವಾದ ಕೋಪವುಳ್ಳವನೂ, ಮಹಾತ್ಮನೂ, ಸರ್ವಸಂಹಾರಕನೂ, ದಿವ್ಯಜ್ಞಾನವನ್ನು ಹೊಂದಿದವನೂ, ದಿವ್ಯವಾದ ಧನುಸ್ಸು ಮತ್ತು ಬತ್ತಳಿಕೆಯನ್ನು ಧರಿಸಿದವನೂ, ಸುವರ್ಣಕವಚವನ್ನು ಧರಿಸಿದವನೂ, ಅನಂತ ಪರಾಕ್ರಮಿಯೂ ಆದ (ರುದ್ರನನ್ನು ನೋಡಿದನು).

ಪಿನಾಕಿನಂ ವಜ್ರಿಣಂ ದೀಪ್ತಶೂಲಂ
ಪರಶ್ವಧಿಂ ಗದಿನಂ ಸ್ವಾಯತಾಸಿಮ್ |
ಸುಭ್ರುಂ ಜಟಾಮಂಡಲಚಂದ್ರಮೌಳಿಂ
ವ್ಯಾಘ್ರಾಜಿನಂ ಪರಿಘಂ ದಂಡಪಾಣಿಮ್ ॥ 59 ॥
ಶುಭಾಂಗದಂ ನಾಗಯಜ್ಞೋಪವೀತಿಂ
ವಿಶ್ವೈರ್ಗಣೈಃ ಶೋಭಿತಂ ಭೂತಸಙ್ಘೈಃ |
ಏಕೀಭೂತಂ ತಪಸಾಂ ಸನ್ನಿಧಾನಂ
ವಯೋತಿಗ್ಯೈಃ ಸುಷ್ಟುತಮಿಷ್ಟವಾಗ್ಭಿಃ ॥ 60 ॥

ಪಿನಾಕವನ್ನೂ, ವಜ್ರವನ್ನೂ, ಜ್ವಲಿಸುವ ಶೂಲವನ್ನೂ, ಪರಶ್ವಧವನ್ನೂ, ಗದೆಯನ್ನೂ, ವಿಪುಲವಾದ ಖಡ್ಗವನ್ನೂ ಹಿಡಿದು, ಒಳ್ಳೆಯ ಹುಬ್ಬುಗಳನ್ನು ಹೊಂದಿ, ಜಟಾಮಂಡಲದಲ್ಲಿ ಚಂದ್ರನನ್ನು ಧರಿಸಿ, ವ್ಯಾಘ್ರಾಜಿನವನ್ನು ಧರಿಸಿ, ಪರಿಘವನ್ನೂ ಮತ್ತು ದಂಡವನ್ನೂ ಹಿಡಿದು, ಶುಭವಾದ ಧ್ವಜಕೀರ್ತಿಯನೂಡನ, ಸರ್ಪ ಯಜ್ಞೋಪವೀತವನ್ನೂ ಧರಿಸಿ, ಎಲ್ಲ ಭೂತಗಣಗಳಿಂದಲೂ ಶೋಭಿತನಾಗಿ ಒಂದುಗೂಡಿ ಮಹಾವೃದ್ಧರಿಂದ ಇಷ್ಟವಾದ ವೇದವಾಕ್ಯಗಳಿಂದ ಸ್ತೋತ್ರ ಮಾಡಲ್ಪಟ್ಟು ತಪಸ್ಸಿನ ನಿಧಿಯಾಗಿದ್ದ (ರುದ್ರನನ್ನು ನೋಡಿದನು).

ಜಲಂ ದಿವಂ ಖಂ ಕ್ಷಿತಿಂ ಚಂದ್ರಸೂರ್ಯೌ
ತಥಾ ವಾಯ್ವಗ್ನೀ ಪ್ರತಿಮಾನಂ ಜಗಚ್ಚ |
ನಾಲಂ ದ್ರಷ್ಟುಂ ಯಮಜಂ ಭಿನ್ನವೃತ್ತಾ
ಬ್ರಹ್ಮದ್ವಿಷಘ್ನಮಮೃತಸ್ಯ ಯೋನಿಮ್ ॥ 61 ॥

ಜಲ, ದ್ಯುಲೋಕ, ಆಕಾಶ, ಭೂಮಿ, ಚಂದ್ರ-ಸೂರ್ಯರು ಹಾಗೆ ವಾಯ್ವಗ್ನಿಗಳು ಮತ್ತು ಜಗತ್ತು ಅವನ ಪ್ರತಿಮೆ. ಅಜನಾದ ಬ್ರಹ್ಮದೇವರ ಶಿರಸ್ಸನ್ನು ಕತ್ತರಿಸಿದ, ಮೋಕ್ಷಕಾರಣನಾದ ಅವನನ್ನು ಭಿನ್ನನಡತೆಯುಳ್ಳವರು ನೋಡಲಾರರು.

ಯಂ ಪಶ್ಯಂತಿ ಬ್ರಾಹ್ಮಣಾಃ ಸಾಧುವೃತ್ತಾಃ
ಕ್ಷೀಣೇ ಪಾಪೇ ಮನಸಾ ಯೇ ವಿಶೋಕಾಃ |
ಸ ತನ್ನಿಷ್ಠಸ್ತಪಸಾ ಧರ್ಮಮೀಡ್ಯಂ
ತದ್ಭಕ್ತ್ಯಾ ವೈ ವಿಶ್ವರೂಪಂ ದದರ್ಶ ॥
ದೃಷ್ಟ್ವಾ ಚೈನಂ ವಾಙ್ಮನೋಬುದ್ಧಿದೇಹೈಃ
ಸಂಹೃಷ್ಟಾತ್ಮಾ ಮುಮುದೇ ದೇವದೇವಮ್ ॥ 62 ॥

ಸಾಧು ನಡತೆಯುಳ್ಳ ಬ್ರಾಹ್ಮಣರು ಪಾಪವು ನಾಶವಾದ ನಂತರ ಶೋಕರಹಿತರಾಗಿ ಯಾವನನ್ನು ನೋಡುತ್ತಾರೆಯೋ, ಅಂತಹ ಜಗದ್ಧಾರಕನಾದ, ಸ್ತುತ್ಯನಾದ, ವಿಶ್ವರೂಪನಾದ ಶಿವನನ್ನು, ಅವನಲ್ಲಿರುವ ಭಕ್ತಿಯಿಂದ ಮತ್ತು ಅವನಲ್ಲಿ ನಿಷ್ಠೆಯುಳ್ಳ ತಪಸ್ಸಿನಿಂದ ನಾರಾಯಣನು ನೋಡಿದನು. ದೇವದೇವನಾದ ಅವನನ್ನು ನೋಡಿ ವಾಙ್ಮನೋಬುದ್ಧಿಗಳಲ್ಲಿ ಸಂತೋಷಗೊಂಡು ಬಹಳ ಸುಖಪಟ್ಟನು.

ಅಕ್ಷಮಾಲಾಪರಿಕ್ಷಿಪ್ತಂ ಜ್ಯೋತಿಷಾಂ ಪರಮಂ ನಿಧಿಮ್ |
ತತೋ ನಾರಾಯಣೋ ದೃಷ್ಟ್ವಾ ವವಂದೇ ವಿಶ್ವಸಂಭವಮ್ ॥ 63 ॥

ಅನಂತರ ನಾರಾಯಣನು ಅಕ್ಷಮಾಲೆಯನ್ನು ಧರಿಸಿದ, ಜ್ಯೋತಿಸ್ಸುಗಳಿಗೆ ಪರಮನಿಧಿಯಾದ, ವಿಶ್ವಕಾರಣನಾದ ಅವನಿಗೆ ನಮಸ್ಕರಿಸಿದನು.

ವರದಂ ಪೃಥುಚಾರ್ವಂಗ್ಯಾ ಪಾರ್ವತ್ಯಾ ಸಹಿತಂ ಪ್ರಭುಮ್ |
ಅಜಮೀಶಾನಮವ್ಯಗ್ರಂ ಕಾರಣಾತ್ಮಾನಮಚ್ಯುತಮ್ ॥ 64 ॥
ಅಭಿವಾದ್ಯಾಥ ರುದ್ರಾಯ ಸದ್ಯೋಽಂಧಕನಿಪಾತಿನೇ |
ಪದ್ಮಾಕ್ಷಸ್ತಂ ವಿರೂಪಾಕ್ಷಮಭಿತುಷ್ಟಾವ ಭಕ್ತಿಮಾನ್ ॥ 65 ॥

ವರದನಾದ, ಸೌಂದರ್ಯಾದಿ ಯುಕ್ತಳಾದ ಪಾರ್ವತಿಯಿಂದ ಸಹಿತನಾದ, ಪ್ರಭುವಾದ, ಅಜನಾದ, ಈಶಾನನಾದ, ಅವ್ಯಗ್ರನಾದ, ಅಚ್ಯುತನಾದ, ಜಗತ್ತಿಗೆ ಕಾರಣನಾದ, ಅಂಧಕಾಸುರ ಸಂಹಾರಕನಾದ, ರುದ್ರನಿಗೆ ನಮಸ್ಕಾರವನ್ನು ಮಾಡಿ, ಪದ್ಮಾಕ್ಷನಾದ ನಾರಾಯಣನು ಭಕ್ತಿಯಿಂದ ವಿರೂಪಾಕ್ಷನನ್ನು ಸೊತತ್ರ ಮಾಡಿದನು.

`ಪ್ರತ್ಯುದ್ಗಮ-ಪ್ರಶ್ರಯಣಾಭಿವಾದನಂ ವಿಧೀಯತೇ ಸಾಧು ಮಿಥಃ ಸುಮಧ್ಯಮೇ |
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನ ದೇಹಮಾನಿನೇ ॥'

ಎಂದು ಶ್ರೀಮದ್ಭಾಗವತದಲ್ಲಿ ಶಿವನೇ ಪಾರ್ವತಿಯನ್ನು ಕುರಿತು ಹೇಳಿರುವುದರಿಂದ, ಇಲ್ಲಿ ಮಹಾಪ್ರಾಜ್ಞನಾದ ನಾರಾಯಣನು ಮಾಡಿರುವ ಸ್ತುತಿಯು ಶಿವಾಂತರ್ಯಾಮಿ- ಯಾದ ತನ್ನದೇ ಸ್ತುತಿ. ಋಷಿರೂಪನಾಗಿ ಅವತಾರ ಮಾಡಿರುವುದರಿಂದಲೂ, ಋಷಿಗಳಂತೆ ನಡೆದುಕೊಳ್ಳಬೇಕಾಗಿರುವುದರಿಂದ ಇಂತಹ ಸ್ತುತಿಯು ಉಂಟಾಗಿದೆ. ಅಲ್ಲದೆ, ಮುಂದಿನ ಶ್ಲೋಕಗಳಲ್ಲಿ ಆದಿಸೃಷ್ಟಿಯು ವರ್ಣಿಸಲ್ಪಡುತ್ತದೆ. ಆದ್ದರಿಂದಲೂ ಇದು ರುದ್ರಾಂತರ್ಗತನಾದ ನಾರಾಯಣನ ಸ್ತುತಿಯೇ. ರುದನು ಸಂಹಾರಕರ್ತೃ ಹೊರತು ಸ್ಥಿತಿಕರ್ತನಲ್ಲ ಎಂಬುದು ಎಲ್ಲರೂ ನಿರ್ವಿವಾದವಾಗಿ ಒಪ್ಪಿಕೊಂಡಿರುವ ವಿಷಯ (ಲಕ್ಷಾಲಂಕಾರ).

ತ್ವತ್ಸಂಭೂತಾ ಭೂತಕೃತೋ ವರೇಣ್ಯ
ಗೋಪ್ತಾರೋಽದ್ಯ ಭುವನಂ ಪೂರ್ವದೇವಾಃ |
ಆವಿಶ್ಯೇಮಾಂ ಧರಣೀಂ ಯೇಽಭ್ಯರಕ್ಷನ್
ಪುರಾ ಪುರಾಣಾಂ ತವ ದೇವ ಸೃಷ್ಟಿಮ್ ॥ 66 ॥
ಎಲೈ ಭಜನೀಯನಾದವನೇ, ಈ ಭೂಮಿಯನ್ನು ರಕ್ಷಿಸುವ ಮೊದಲಿನ ದೇವತೆಗಳು ನಿನ್ನಿಂದ ಜನ್ಮವನ್ನು ಪಡೆದು, ನಿನ್ನಿಂದ ಸೃಷ್ಟವಾದ ಈ ಪ್ರಾಚೀನವಾದ, ಪುರಾತನವಾದ ಭೂಮಿಯನ್ನು ಪ್ರವೇಶಿಸಿ ರಕ್ಷಿಸಿದರು.
ಸುರಾಸುರಾನ್ನಾಗರಕ್ಷಃಪಿಶಾಚಾನ್
ನರಾನ್ ಸುಪರ್ಣಾನಥ ಗಂಧರ್ವಯಕ್ಷಾನ್ |
ಪೃಥಗ್ವಿಧಾನ್ ಭೂತಸಂಘಾಂಶ್ಚ ವಿಶ್ವಾಂ-
ಸ್ತ್ವತ್ಸಂಭೂತಾನ್ ವಿದ್ಮ ಸರ್ವಾಂಸ್ತಥೈವ ॥
ಐಂದ್ರಂ ಯಾಮ್ಯಂ ವಾರುಣಂ ವೈತ್ತಪಾಲ್ಯಂ
ಮೈತ್ರಂ ತ್ವಾಷ್ಟ್ರಂ ಕರ್ಮ ಸೌಮ್ಯಂ ಚ ತುಭ್ಯಮ್ ॥ 67 ॥
ದೇವತೆಗಳು, ಅಸುರರು, ನಾಗಗಳು, ರಾಕ್ಷಸರು, ಪಿಶಾಚಿಗಳು, ಮನುಷ್ಯರು, ಪಕ್ಷಿಗಳು, ಗಂಧರ್ವರು, ಯಕ್ಷರು, ವಿಧವಿಧವಾದ ಭೂತಸಂಘಗಳು ಎಲ್ಲವೂ ನಿನ್ನಿಂದಲೇ ಜನಿಸಿವೆ ಎಂದು ನಾವು ತಿಳಿದಿದ್ದೇವೆ. ಇಂದ್ರನ, ಯಮನ, ವರುಣನ, ಕುಬೇರನ, ಮಿತ್ರನ, ತ್ವಷ್ಟೃವಿನ, ಚಂದ್ರನ ಎಲ್ಲ ಕರ್ಮಗಳೂ ನಿನ್ನದೇ ಆಗಿವೆ.
ರೂಪಂ ಜ್ಯೋತಿಃ ಶಬ್ದ ಆಕಾಶವಾಯುಃ
ಸ್ಪರ್ಶಃ ಸ್ವಾದ್ಯಂ ಸಲಿಲಂ ಗಂಧ ಉರ್ವೀ |
ಕಾಮೋ ಬ್ರಹ್ಮಾ ಬ್ರಹ್ಮ ಚ ಬ್ರಾಹ್ಮಣಾಶ್ಚ
ತ್ವತ್ಸಂಭೂತಂ ಸ್ಥಾಸ್ನು ಚರಿಷ್ಣು ಚೇದಮ್ ॥ 68 ॥
ರೂಪ, ಜ್ಯೋತಿಸ್ಸು, ಶಬ್ದ, ಆಕಾಶ, ವಾಯು, ಸ್ಪರ್ಶ, ರಸ, ಜಲ, ಗಂಧ, ಭೂಮಿ, ಮನ್ಮಥ, ಬ್ರಹ್ಮದೇವರು, ವೇದಗಳು, ಬ್ರಾಹ್ಮಣರು ಮತ್ತು ಸ್ಥಾವರ- ಜಂಗಮಾತ್ಮಕವಾದ ಈ ಎಲ ಜಗತ್ತೂ ನಿನ್ನಿಂದ ಜನಿಸಿದೆ.
ಅದ್ಭ್ಯಃ ಸ್ತೋಕಾ ಯಾಂತಿ ಯಥಾ ಪೃಥಕ್ತ್ವಂ
ತಾಭಿಶ್ಚೈಕ್ಯಂ ಸಂಕ್ಷಯೇ ಯಾಂತಿ ಭೂಯಃ |
ಏವಂ ವಿದ್ವಾನ್ ಪ್ರಭವಂ ಚಾಪ್ಯಯಂ ಚ
ಹಿತ್ವಾ ಭೂತಾನಾಂ ತತ್ರ ಸಾಯುಜ್ಯಮೇತಿ ॥ 69 ॥
ನೀರಿನ ಹನಿಗಳು ನೀರಿನಿಂದ ಬೇರೆಯಾಗಿ ಹೋಗಿ ಪುನಃ ಒಂದಾಗುವಂತೆ ಯಾವ ಜ್ಞಾನಿಯು ನೀನು ಜಗತ್ತಿನ ಉತ್ಪತ್ತಿಗೆ ಮತ್ತು ಸಂಹಾರಕ್ಕೆ ಕಾರಣನೆಂದು ತಿಳಿಯುವನೋ ಅವನು ಭೂತಗಳ ಸಂಬಂಧದಿಂದ ಬಿಡುಗಡೆಯನ್ನು ಹೊಂದಿ, ನಿನ್ನ ಸಾಯುಜ್ಯವನ್ನು ಪಡೆಯುವನು.
ದಿವ್ಯಾವೃತೌ ಮಾನಸೌ ದ್ವೌ ಸುಪರ್ಣಾ-
ವವಾಕ್ರಾಖಃ ಪಿಪ್ಪಲಃ ಸಪ್ತ ಗೋಪಾಃ |
ದಶಾಪ್ಯನ್ಯೇ ಯೇ ಪುರಂ ಧಾರಯಂತಿ
ತ್ವಯಾ ಸೃಷ್ಟಾಸ್ತೇ ಹಿ ತೇಭ್ಯಃ ಪರಸ್ತ್ವಮ್ |
ಭೂತಂ ಭವ್ಯಂ ಭವಿತಾ ಚಾಪ್ಯಧೃಷ್ಯಂ
ತ್ವತ್ಸಂಭೂತಾ ಭುವನಾನೀಹ ವಿಶ್ವಾ ॥ 70 ॥
ಜ್ಞಾನರೂಪವಾದ ಆಕಾಶದಲ್ಲಿ ಸಂಚರಿಸುವ ಜೀವ-ಪರಮಾತ್ಮರೆಂಬಆ ಎರಡು ಪಕ್ಷಿಗಳು, ಮಹದಹಂಕಾರ ಮತ್ತು ಪಂಚಭೂತಗಳೆಂಬ ಮೂಲಕಾರಣಗಳಿಂದ ಕೆಳಮುಖವಾಗಿ ಹಬ್ಬಿದ ಈ ಸಂಸಾರವೆಂಬ ಅಶ್ವತ್ಥವೃಕ್ಷ ಮತ್ತು ಪಂಚತನ್ಮಾತ್ರಗಳು ಮತ್ತು ಅವುಗಳ ಅಭಿಮಾನಿದೇವತೆಗಳು ಇವರೆಲ್ಲರೂ ಈ ಅಶ್ವತ್ಥವನ್ನು ಧರಿಸಿರುವವರು. ಇವರೆಲ್ಲರೂ ನಿನ್ನಿಂದಲೇ ಸೃಷ್ಟರಾದವರು, ನೀನು ಅವರೆಲ್ಲರಿಗಿಂತಲೂ ಉತ್ತಮನಾದವನು. ಭೂತ-ಭವಿಷ್ಯತ್-ವರ್ತಮಾನ ಕಾಲೀನವಾದ, ನಾಶಗೊಳಿಸಲು ಅಸಾಧ್ಯವಾದ (ಪ್ರವಾಹರೂಪದಿಂದ ನಿತ್ಯವಾದ) ಎಲ್ಲ ಪ್ರಪಂಚಗಳೂ ನಿನ್ನಿಂದ ಜನಿಸಿದವು.
ಭಕ್ತಂ ಚ ಮಾಂ ಭಜಮಾನಂ ಭಜಸ್ವ
ಮಾ ರೀರಿಷೋ ಮಾಮಹಿತಾಹಿತೇನ |
ಆತ್ಮಾನಂ ತ್ವಾಮಾತ್ಮನೋಽನನ್ಯಭಾವೋ
ವಿದ್ವಾನೇವಂ ಗಚ್ಛತಿ ಬ್ರಹ್ಮ ಶುಕ್ರಮ್ ॥ 71 ॥
ನಿನ್ನ ಭಕ್ತನಾಗಿ ನಿನ್ನನ್ನು ಭಜಿಸುವ ನನ್ನನ್ನು ಅನುಗ್ರಹಿಸು. ಅಹಿತವನ್ನುಂಟು ಮಾಡಿ ನನ್ನನ್ನು ನಾಶಮಾಡಬೇಡ. ನಿನ್ನನ್ನು ಈ ರೀತಿಯಾಗಿ ಆತ್ಮನಿಂದ ಅನನ್ಯನಾದವನು (ಶಿವಾಂತರ್ಯಾಮಿಯಾದ ರೂಪಕ್ಕೂ ಮತ್ತು ಮೂಲರೂಪಕ್ಕೂ ಅಭೇದವನ್ನು ತಿಳಿಯುವವನು) ಶೋಕರಹಿತನಾದ ಬ್ರಹ್ಮನನ್ನು ಹೊಂದುವನು.
ಅಸ್ತೌಷಂ ತ್ವಾಂ ತವ ಸಮ್ಮಾನಮಿಚ್ಛನ್
ವಿಚಿನ್ವನ್ ವೈ ಸವೃಷಂ ದೇವವರ್ಯ |
ಸುದುರ್ಲಭಾನ್ ದೇಹಿ ವರಾನ್ ಮಮೇಷ್ಟಾ-
ನಭಿಷ್ಟುತಃ ಪ್ರತಿಕಾರ್ಷೀಶ್ಚ ಮಾ ಮಾಮ್ ॥ 72 ॥

ಎಲೈ ದೇವವರ್ಯನೇ, ವೃಷಭಸಹಿತನಾದ ನಿನ್ನನ್ನು ಹುಡುಕುತ್ತಾ, ನಿನ್ನನ್ನು ನೋಡಿ, ನಿನ್ನನ್ನು ಗೌರವಿಸಲು ಈ ಸ್ತೋತ್ರವನ್ನು ಮಾಡಿದೆನು. ಹೀಗೆ ಸ್ತೋತ್ರ ಮಾಡಲ್ಪಟ್ಟ ನೀನು ನನಗೆ ಇಷ್ಟವಾದ, ಅತ್ಯಂತ ದುರ್ಲಭವಾದ ವರಗಳನ್ನು ಕೊಡು. ನನ್ನನ್ನು ನಿರಾಕರಿಸಬೇಡ.
ತಸ್ಮೈ ವರಾನಚಿಂತ್ಯಾತ್ಮಾ ನೀಲಕಂಠಃ ಪಿನಾಕಧೃಕ್ |
ಅರ್ಹತೇ ದೇವಮುಖ್ಯಾಯ ಪ್ರಾಯಚ್ಛದೃಷಿಸಂಸ್ತುತಃ ॥ 73 ॥
ಋಷಿಯಾದ ನಾರಾಯಣನಿಂದ ಸ್ತೋತ್ರಮಾಡಲ್ಪಟ್ಟ ಪಿನಾಕಧಾರಿಯೂ, ನೀಲಕಂಠನೂ, ಅಚಿಂತ್ಯಮಹಿಮೆಯುಳ್ಳವನೂ ಆದ ಶಿವನು ವರಗಳಿಗೆ ಯೋಗ್ಯನಾದ ದೇವಶ್ರೇಷ್ಠನಾದ ಅವನಿಗೆ ವರಗಳನ್ನು ಕೊಟ್ಟನು.
ನೀಲಕಂಠಃ
ಮತ್ಪ್ರಸಾದಾನ್ಮನುಷ್ಯೇಷು ದೇವಗಂಧರ್ವಯೋನಿಷು |
ಅಪ್ರಮೇಯಬಲಾತ್ಮಾ ತ್ವಂ ನಾರಾಯಣ ಭವಿಷ್ಯಸಿ ॥ 74 ॥
ನೀಲಕಂಠ ಎಲೈ ನಾರಾಯಣನೇ, ನನ್ನ ಅನುಗ್ರಹದಿಂದ ನೀನು ಮನುಷ್ಯರಲ್ಲಿಯೂ, ದೇವ-ಗಂಧರ್ವಜಾತಿಗಳಲ್ಲಿಯೂ ಅಚಿಂತ್ಯವಾದ ಮಹಿಮೆಯುಳ್ಳವನೂ ಮತ್ತು ಬಲವುಳ್ಳವನೂ ಆಗುವಿ.
ನ ಚ ತ್ವಾ ಪ್ರಸಹಿಷ್ಯಂತಿ ದೇವಾಸುರಮಹೋರಗಾಃ |
ನ ಪಿಶಾಚಾ ನ ಗಂಧರ್ವಾ ನ ನರಾ ನ ಚ ರಾಕ್ಷಸಾಃ ॥ 75 ॥
ನ ಸುಪರ್ಣಾಸ್ತಥಾ ನಾಗಾ ನ ಚ ವಿಶ್ವೇ ವಿಯೋನಿಜಾಃ |
ನ ಕಶ್ಚಿತ್ತತ್ವಂ ಚ ದೇವೋಽಪಿ ಸಮರೇಷು ವಿಜೇಷ್ಯತಿ ॥ 76 ॥
ದೇವಾಸುರ-ಮಹಾಸರ್ಪಗಳಾಗಲೀ, ಪಿಶಾಚಿಗಳಾಗಲೀ, ಗಂಧರ್ವರಾಗಲೀ, ರಾಕ್ಷಸರಾಗಲೀ, ಪಕ್ಷಿಗಳಾಗಲೀ, ನಾಗಗಳಾಗಲೀ ಅಥವಾ ಅಯೋನಿಜಗಳಾದ ಯಾವುದೇ ಪ್ರಾಣಿಯಾಗಲೀ ಯಾರೂ ನಿನ್ನನ್ನು ಸಹಿಸಲಾರರು. ಯುದ್ಧಗಳಲ್ಲಿ ನೀನು ಎಲ್ಲರನ್ನೂ ಗೆಲ್ಲುವಿ.
ನ ಶಸ್ತ್ರೇಣ ನ ವಜ್ರೇಣ ನಾಗ್ನಿನಾ ನ ಚ ವಾಯುನಾ |
ನಾದ್ರೇಣ ನ ಚ ಶುಷ್ಕೇಣ ತ್ರಸೇನ ಸ್ಥಾವರೇಣ ವಾ ॥ 77 ॥
ಕಶ್ಚಿತ್ ತವ ರುಜಂ ಕರ್ತಾ ಮತ್ಪ್ರಸಾದಾತ್ ಕಥಂಚನ |
ಅಪಿ ಚೇತ್ ಸಮರಂ ಗತ್ವಾ ಭವಿಷ್ಯಸಿ ಮಮಾಧಿಕಃ ॥ 78 ॥
ನನ್ನ ಅನುಗ್ರಹದಿಂದ ಶಸ್ತ್ರದಿಂದಾಗಲೀ, ವಜ್ರದಿಂದಾಗಲೀ, ಅಗ್ನಿ- ವಾಯುವಿನಿಂದಾಗಲೀ, ಹಸಿಯ ಅಥವಾ ಒಣಗಿದ ವಸ್ತುವಿನಿಂದಾಗಲೀ, ಚಲಿಸುವ ಅಥವಾ ಚಲಿಸದ ವಸ್ತುಗಳಿಂದಾಗಲೀ ಯಾರೂ ನಿನಗೆ ವ್ರಣವನ್ನು ಉಂಟು ಮಾಡಲಾರರು. ನೀನು ಯುದ್ಧಕ್ಕೆ ಹೋದರೂ ನನಗಿಂತಲೂ ಶ್ರೇಷ್ಠನಾಗುವಿ.
ವ್ಯಾಸಃ
ಏವಮೇತೇ ವರಾ ಲಬ್ಧಾಃ ಪುರಸ್ತಾದ್ ವಿದ್ಧಿ ಶೌರಿಣಾ |
ಸ ಏಷ ದೇವಶ್ಚರತಿ ಮಾಯಯಾ ಮೋಹಯನ್ ಜಗತ್ ॥ 79 ॥
ವ್ಯಾಸ ಹೀಗೆ ಶೌರಿಯಾದ ಕೃಷ್ಣನು ಹಿಂದೆ ಇಂತಹ ವರವನ್ನು ಪಡೆದಿದ್ದಾನೆಂದು ತಿಳಿ. ದೇವನಾದ ಅವನು ತನ್ನ ಸಾಮರ್ಥ್ಯದಿಂದ ಜಗತ್ತನ್ನು ಮೋಹಿಸುತ್ತಾ ಜಗತ್ತಿನಲ್ಲಿ ತಿರುಗುತ್ತಿದ್ದಾನೆ.
ತಸ್ಯೈವ ತಪಸಾ ಜಾತಂ ನರಂ ನಾಮ ಮಹಾಮುನಿಮ್ |
ತುಲ್ಯಮೇತೇನ ದೇವೇನ ತಂ ಜಾನೀಹ್ಯರ್ಜುನಂ ಸದಾ ॥ 80 ॥
ಅವನ ತಪಸ್ಸಿನಿಂದಲೇ ಆ ದೇವನಿಗೆ ಸಮಾನವಾದ ನರನು ಜನಿಸಿದನು. ಅವನನ್ನೇ ಅರ್ಜುನನೆಂದು ತಿಳಿ.
ತಾವೇತೌ ಪೂರ್ವದೇವಾನಾಂ ಪರಮೋಪಚಿತಾವೃಷೀ |
ಲೋಕಯಾತ್ರಾವಿಧಾನಾರ್ಥಂ ಸಂಜಾಯೇತೇ ಯುಗೇ ಯುಗೇ ॥81॥
ಇವರಿಬ್ಬರೂ ಪ್ರಾಚೀನರಾದ ದೇವತೆಗಳಿಂದಲೂ ಬಹಳವಾಗಿ ಪೂಜಿಸಲ್ಪಟ್ಟ ಋಷಿಗಳು. ಲೋಕಯಾತ್ರೆಯನ್ನು ಸುಗಮವಾಗಿ ನಡೆಸಲು ಯುಗಯುಗಗಳಲ್ಲಿ ಅವತರಿಸುತ್ತಾರೆ.
ತಥೈವ ಕರ್ಮಣಃ ಕೃತ್ಸ್ನಂ ಮಹತಸ್ತಪಸೋಽಪಿ ಚ |
ತೇಜೋಮನ್ಯುಶ್ಚ ವಿದ್ವಂಸ್ತ್ವಂ ಜಾತೋ ರೌದ್ರೋ ಮಹಾಮತೇ ॥82॥
ಹಾಗೆಯೇ ನೀನೂ ಸಹ ಎಲೈ ಮಹಾಮತಿಯೇ, ಸಕಲ ಕರ್ಮಗಳ ಮತ್ತು ದೊಡ್ಡ ತಪಸ್ಸುಗಳ ತೇಜಸ್ಸನ್ನು ತಿಳಿದು ಮನ್ಯುನಾಮಕನಾಗಿ ರುದ್ರನಿಂದ ಜನಿಸಿದ್ದೀಯೆ.
ಸ ಭವಾನ್ ದೇವವತ್ಪ್ರಾಜ್ಞೋ ಜ್ಞಾತ್ವಾ ಭವಮಯಂ ಜಗತ್ |
ಅವಾಕರ್ಷಸ್ತ್ವಮಾತ್ಮಾನಂ ನಿಯಮೈಸ್ತತ್ಪ್ರಿಯೇಪ್ಸಯಾ ॥ 83 ॥
ಅಂತಹ ದೇವತೆಯಂತೆ ಪ್ರಾಜ್ಞನಾದ ನೀನು ಜಗತ್ತೆಲ್ಲವನ್ನೂ ರುದ್ರಮಯವನ್ನಾಗಿ ತಿಳಿದು, ರುದ್ರನನ್ನು ಸಂತೋಷಪಡಿಸಲು ನಿಯಮಗಳಿಂದ ದೇಹವನ್ನು ಶೋಷಿಸಿದೆ.
ಶುಭಮೌರ್ವಂ ನವಂ ಕೃತ್ವಾ ಮಹಾಪುರುಷವಿಗ್ರಹಮ್ |
ಈಜಿವಾಂಸ್ತ್ವಂ ಜಪ್ಯೈರ್ಹೋಮೈರುಪಹಾರೈಶ್ಚ ಮಾನದ ॥ 84 ॥
ಭೂಮಿಯಲ್ಲಿ ಶುಭವಾದ ಹೊಸದಾದ ಇನ್ನೊಂದು ಪುರುಷವಿಗ್ರಹವನ್ನು ಧರಿಸಿ ಎಲೈ ಮಾನದನೇ, ನೀನು ಜಪ-ಹೋಮಗಳಿಂದಲೂ, ಪೂಜೆಗಳಿಂದಲೂ ಈಶ್ವರನನ್ನು ಪೂಜಿಸಿದೆ.
ಸ ತಥಾ ಪೂಜ್ಯಮಾನಸ್ತೇ ಪೂರ್ವದೇವೋಽಪ್ಯತೂತುಷತ್ |

ಪುಷ್ಕಳಾಂಶ್ಚ ವರಾನ್ ಪ್ರಾದಾತ್ತವ ವಿದ್ವನ್ ಹೃದಿ ಸ್ಥಿತಾನ್ ॥ 85 ॥
ನಿನ್ನಿಂದ ಹೀಗೆ ಪೂಜಿಸಲ್ಪಟ್ಟ ಪೂರ್ವದೇವನಾದ ಅವನು ಎಲ್ಲೈ ವಿದ್ವಾಂಸನೇ, ಸಂತೋಷಗೊಂಡು, ನಿನ್ನ ಹೃದಯದಲ್ಲಿದ್ದ ನಿನಗೆ ಅಪೇಕ್ಷಿತವಾದ ಪುಷ್ಕಳವಾದ ವರಗಳನ್ನು ನಿನಗೆ ಕೊಟ್ಟನು.
ಜನ್ಮಕರ್ಮತಪೋಯೋಗಾಸ್ತಯೋಸ್ತವ ಚ ಪುಷ್ಕಳಾಃ |
ತಾಭ್ಯಾಂ ಲಿಂಗೇರ್ಚಿತೋ ದೇವಸ್ತ್ವಯಾರ್ಚಾಯಾಂ ಯುಗೇ ಯುಗೇ ॥
ಜನ್ಮಕರ್ಮ-ತಪೋಯೋನಿಗಳು ಆ ನರ-ನಾರಾಯಣರಿಗೂ ಮತ್ತು ನಿನಗೂ ಪುಷ್ಕಳವಾಗಿವೆ. ಅವರಿಂದಲೂ ಮತ್ತು ನಿನ್ನಿಂದಲೂ ಯುಗಯುಗಗಳಲ್ಲಿ ಮಹಾದೇವನು ನಿಮ್ಮಿಂದಲೇ ಅರ್ಚಿಸಲ್ಪಡುತ್ತಾನೆ.
ಸರ್ವರೂಪಂ ಭವಂ ಜ್ಞಾತ್ವಾ ಲಿಂಗೇ ಯೋಽರ್ಚಯತಿ ಪ್ರಭುಮ್ |
ಆತ್ಮಯೋಗಾಶ್ಚ ತಸ್ಮಿನ್ ವೈ ಶಾಸ್ತ್ರಯೋಗಾಶ್ಚ ಶಾಶ್ವತಾಃ ॥ 87 ॥
ಈಶ್ವರನು ಸರ್ವರೂಪನೆಂದು ತಿಳಿದು ಪ್ರಭುವಾದ ಅವನನ್ನು ಯಾವನು ಲಿಂಗದಲ್ಲಿ ಪೂಜಿಸುತ್ತಾನೆಯೋ ಅವನು ಶಾಶ್ವತವಾದ ಎಲ್ಲ ಅಧ್ಯಾತ್ಮ ಯೋಗಗಳನ್ನೂ ಮತ್ತು ಶಾಸ್ತ್ರಯೋಗಗಳನ್ನೂ ಹೊಂದುವನು.
ಏವಂ ದೇವಾ ಯಜಂತೋ ಹಿ ಸಿದ್ಧಾಶ್ಚ ಪರಮರ್ಷಯಃ |
ಪ್ರಾರ್ಥಯಂತಿ ಪರಂ ಲೋಕೇ ಸ್ಥಾನಮೇವ ಚ ಶಾಶ್ವತಮ್ ॥ 88 ॥
ದೇವತೆಗಳು ಮತ್ತು ಪರಮರ್ಷಿಗಳು ಹೀಗೆ ಅವನನ್ನು ಪೂಜಿಸುತ್ತಾ ಸಿದ್ಧಿಯನ್ನು ಪಡೆದು ಪರಲೋಕದಲ್ಲಿ ಶಾಶ್ವತವಾದ, ಶ್ರೇಷ್ಠವಾದ ಸ್ಥಾನವನ್ನು ಬೇಡುತ್ತಾರೆ.
ಸ ಏಷ ರುದ್ರಭಕ್ತಶ್ಚ ಕೇಶವೋ ರುದ್ರಸಂಭವಃ |
ಕೃಷ್ಣ ಏವ ಹಿ ಯಷ್ಟವ್ಯೋ ಯಜ್ಞೈಶ್ಚೈಷ ಸನಾತನಃ ॥ 89 ॥
ರುದ್ರಭಕ್ತನೂ, ರುದ್ರನಿಂದ ಜನಿಸಿದವನೂ ಆದ ಕೇಶವನಾದ, ಸನಾತನನಾದ ಈ ಕೃಷ್ಣನೇ ಯಜ್ಞಗಳಿಂದ ಪೂಜಿಸಲ್ಪಡಬೇಕಾದವನು.
ಸರ್ವಭೂತಭವಂ ಜ್ಞಾತ್ವಾ ಲಿಂಗೇಽರ್ಚಯತಿ ಯಃ ಪ್ರಭುಮ್ |
ತಸ್ಮಿನ್ನಭ್ಯಧಿಕಾಂ ಪ್ರೀತಿಂ ಕರೋತಿ ವೃಷಭಧ್ವಜಃ ॥ 90 ॥
ಸರ್ವಭೂತಗಳಿಗೆ ಆಶ್ರಯನಾದ ಕೃಷ್ಣನನ್ನು ತಿಳಿದು ಯಾವನು ಲಿಂಗದಲ್ಲಿ ಪ್ರಭುವಾದ ಅವನನ್ನು ತನ್ನ ಅಂತರ್ಯಾಮಿಯಾಗಿ ಪೂಜಿಸುತ್ತಾನೆಯೋ ಅವನಲ್ಲಿ ವೃಷಭಧ್ವಜನಾದ ಶಿವನು ಬಹಳ ಪ್ರೀತಿಯನ್ನು ಮಾಡುತ್ತಾನೆ.
ಸನಾತನನಾದ ಈ ಕೃಷ್ಣನೇ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞಗಳಿಂದ ಅವರವರ ಅಂತರ್ಯಾಮಿಯಾಗಿ ಪೂಜಿಸಲ್ಪಡಬೇಕಾದವನು. ಕೇವಲ ದೇವಾದಿಗಳನ್ನೇ ಪೂಜಿಸುವುದಲ್ಲ. ಆದ್ದರಿಂದ ಪೃಥಿವ್ಯಾದಿ ಸರ್ವಭೂತಗಳಲ್ಲಿರುವ (ಶಿಲಾಮಯವಾದ ಸುವರ್ಣಮಯವಾದ ಪೃಥಿವೀಭೂತದ ಲಿಂಗಗಳಲ್ಲಿ ವಿಷ್ಣುವಿನ ಸನ್ನಿಧಾನವನ್ನು ಇರುವುದನ್ನು ತಿಳಿಸಲು `ಸರ್ವಭೂತಭವಃ' ಎಂದು ತಿಳಿಸಿದ್ದಾರೆ) ಆ ಕೃಷ್ಣನನ್ನು ಲಿಂಗಗಳಲ್ಲಿ ಯಾವನು ಅರ್ಚಿಸುತ್ತಾನೆಯೋ ಅವನಿಗೆ ಶಿವನು ಬಹಳ ಪ್ರೀತಿಯನ್ನು ಮಾಡುತ್ತಾನೆ. ಲಿಂಗದಲ್ಲಿ ಕೇವಲ ಶಿವನನ್ನು ಪೂಜಿಸುವವನ ಮೇಲೆ ಪ್ರಸನ್ನನಾಗುವುದಿಲ್ಲ. ಲಿಂಗದಲ್ಲಿಯೂ ವಿಷ್ಣುವಿನ ಸನ್ನಿಧಾನವನ್ನೇ ಹೇಳಿರುವುದರಿಂದ ಅಲ್ಲಲ್ಲಿ ಮಾಡುವ ಸ್ತೋತ್ರ ಮತ್ತು ಪೂಜೆಗಳು ಶಿವಾಂತರ್ಯಾಮಿಯಾದ ವಿಷ್ಣುವಿಗೇ ಸಲ್ಲುವವು ಎಂದು ತಿಳಿಸುತ್ತದೆ - ಲಕ್ಷಾಲಂಕಾರ.
ಸಂಜಯಃ
ತಸ್ಯ ತದ್ವಚನಂ ಶ್ರುತ್ವಾ ದ್ರೋಣಪುತ್ರೋ ಮಹಾರಥಃ |
ನಮಶ್ಚಕಾರ ರುದ್ರಾಯ ಬಹು ಮೇನೇ ಚ ಕೇಶವಮ್ ॥ 91 ॥
ಸಂಜಯ ಅವರ ಆ ಮಾತುಗಳನ್ನು ಕೇಳಿದ ಮಹಾರಥರಾದ ಅಶ್ವತ್ಥಾಮರು ರುದ್ರನಿಗೆ ನಮಸ್ಕಾರ ಮಾಡಿ ಕೃಷ್ಣನಲ್ಲಿ ಬಹಳ ಗೌರವವನ್ನು ಹೊಂದಿದನು.
ಹೃಷ್ಟಲೋಮಾ ಚ ವಶ್ಯಾತ್ಮಾ ನಮಸ್ಕೃತ್ಯ ಮಹರ್ಷಯೇ |
ವರೂಥಿನೀಮಭಿಪ್ರೇತ್ಯ ಅವಹಾರಮಕಾರಯತ್ ॥ 92 ॥
ಜಿತಮನಸ್ಕರಾದ ಅವರು ರೋಮಾಂಚಗೊಂಡು ಮಹರ್ಷಿಗಳಾದ ವ್ಯಾಸರಿಗೆ ನಮಸ್ಕಾರ ಮಾಡಿ ತಮ್ಮ ಸೈನ್ಯವನ್ನು ಹಿಂತೆಗೆದುಕೊಂಡರು.
ತತಃ ಪ್ರತ್ಯವಹಾರೋಽಭೂತ್ ಪಾಂಡವಾನಾಂ ವಿಶಾಂಪತೇ |
ಕೌರವಾಣಾಂ ಚ ದೀನಾನಾಂ ದ್ರೋಣೇ ಯುಧಿ ನಿಪಾತಿತೇ ॥ 93 ॥
ಎಲ್ಲೈ ರಾಜನೇ, ಆಗ ದೀನರಾದ ಕೌರವರ ಪಕ್ಷದ ರಥದಲ್ಲಿ ದ್ರೋಣರು ಯುದ್ಧದಲ್ಲಿ ಹತರಾಗುತಿತರಲು ಪಾಂಡವರೂ ತಮ್ಮ ಸೈನ್ಯವನ್ನು ಅವಹಾರ ಮಾಡಿದರು.
ಯುದ್ಧಂ ಕೃತ್ವಾ ದಿನಾನ್ ಪಂಚ ದ್ರೋಣೋ ಹತ್ವಾ ವರೂಥಿನೀಮ್ |
ಬ್ರಹ್ಮಲೋಕಂ ಗತೋ ರಾಜನ್ ಬ್ರಾಹ್ಮಣೋ ವೇದಪಾರಗಃ ॥ 94 ॥
ಎಲ್ಲೈ ರಾಜನೇ, ವೇದಪಾರಂಗತರೂ, ಬ್ರಾಹ್ಮಣರೂ ಆದ ದ್ರೋಣರು ಐದು ದಿವಸಗಳ ಕಾಲ ಯುದ್ಧವನ್ನು ಮಾಡಿ ಪಾಂಡವರ ಸೇನೆಯನ್ನು ಸಂಹರಿಸಿ ಬ್ರಹ್ಮಲೋಕವನ್ನು ಸೇರಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಚತುರಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ಅಷ್ಟಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ದ್ರೋಣಪರ್ವದಲ್ಲಿ ನೂರ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೈದನೆಯ ಅಧ್ಯಾಯ
ಇತರರಿಗೆ ಕಾಣದಂತೆ ತನ್ನ ಮುಂದೆ ತನಗೆ ಅನುಕೂಲವಾಗಿ ಯುದ್ಧವನ್ನು ಮಾಡುವ ಶೂಲಪಾಣಿಯನ್ನು ನೋಡಿ ಅರ್ಜುನನ ಪ್ರಶ್ನೆ. ವ್ಯಾಸರು ಅವನು ಶಿವನೆಂದು ಉತ್ತರವನ್ನು ಹೇಳಿ, ಶತರುದ್ರೀಯ ಉಪದೇಶ.
ಧೃತರಾಷ್ಟ್ರಃ
ತಸ್ಮಿನ್ನತಿರಥೇ ದ್ರೋಣೇ ನಿಹತೇ ತತ್ರ ಸಂಜಯ |
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವನ್ನತಃ ಪರಮ್ ॥ 1 ॥
ಧೃತರಾಷ್ಟ್ರ ಎಲೈ ಸಂಜಯನೇ, ಅತಿರಥರಾದ ಆ ದ್ರೋಣರು ಹತರಾಗುತ್ತಿರಲು ನನ್ನವರು ಮತ್ತು ಪಾಂಡವರು ಮುಂದೆ ಏನು ಮಾಡಿದರು?
ಸಂಜಯಃ
ತಸ್ಮಿನ್ನತಿರಥೇ ದ್ರೋಣೇ ನಿಹತೇ ಪಾರ್ಷತೇನ ವೈ |
ಕೌರವೇಷು ಚ ಭಗ್ನೇಷು ಕುಂತೀಪುತ್ರೋ ಧನಂಜಯಃ ॥ 2 ॥
ದೃಷ್ಟ್ವಾ ಸುಮಹದಾಶ್ಚರ್ಯಮಾತ್ಮನೋ ವಿಜಯಾವಹಮ್ |
ಯದೃಚ್ಛಯಾಽಽಗತಂ ವ್ಯಾಸಂ ಪಪ್ರಚ್ಛ ಭರತರ್ಷಭ ॥ 3 ॥
ಸಂಜಯ ಎಲೈ ಭರತರ್ಷಭನೇ, ಧೃಷ್ಟದ್ಯುಮ್ನನಿಂದ ಅತಿರಥರಾದ ಆ ದ್ರೋಣರು ಹತರಾಗಿ, ಕೌರವರೆಲ್ಲರೂ ಭಗ್ನರಾಗುತ್ತಿರಲು ಕುಂತೀಪುತ್ರನಾದ ಧನಂಜಯನು ತನಗೆ ವಿಜಯವನ್ನು ಉಂಟುಮಾಡುವ ಆಶ್ಚರ್ಯಕರವಾದ ಘಟನೆಯನ್ನು ನೋಡಿ ಅಕಸ್ಮಾತ್ತಾಗಿ ಅಲ್ಲಿ ಬಂದ ವ್ಯಾಸರನ್ನು ಕುರಿತು ಪ್ರಶ್ನೆಯನ್ನು ಮಾಡಿದನು.
ಸಂಗ್ರಾಮೇ ನಿಘ್ನತಃ ಶತ್ರೂನ್ ಶರೌಘೈರ್ವಿಮಲೈರಹಮ್ |
ಅಗ್ರತೋ ಲಕ್ಷಯೇ ಯಾಂತಂ ಪುರುಷಂ ಪಾವಕಪ್ರಭಮ್ ॥ 4 ॥
ಶುದ್ಧವಾದ ಶಸ್ತ್ರಸಮೂಹದಿಂದ ಯುದ್ಧದಲ್ಲಿ ನಾನು ಶತ್ರುಸಮೂಹವನ್ನು ಕೊಲ್ಲುವಾಗ ನನ್ನ ಎದುರಿನಲ್ಲಿ ಅಗ್ನಿಗೆ ಸಮಾನವಾದ ಕಾಂತಿಯುಳ್ಳ ಒಬ್ಬ ಪುರುಷನು ಹೋಗುವುದನ್ನು ಗಮನಿಸುತ್ತೇನೆ.
ಜ್ವಲಂತಂ ಶೂಲಮುದ್ಯಮ್ಯ ಯಾಂ ದಿಶಂ ಪ್ರತಿಪದ್ಯತೇ |
ತಸ್ಯಾಂ ದಿಶಿ ವಿಶೀರ್ಯಂತೇ ಶತ್ರವೋ ಮೇ ಮಹಾಮುನೇ ॥ 5 ॥
ಜ್ವಲಿಸುವ ಶೂಲವನ್ನು ಎತ್ತಿಹಿಡಿದು ಅವನು ಯಾವ ದಿಕ್ಕಿಗೆ ಹೋಗುತ್ತಾನೆಯೋ, ಎಲೈ ಮಹಾಮುನಿಯೇ, ಆ ದಿಕ್ಕಿನಲ್ಲಿ ನನ್ನಿಂದ ಶತ್ರುಗಳು ವಿನಾಶವನ್ನು ಹೊಂದುತ್ತಾರೆ.
ನ ಪದ್ಭ್ಯಾಂ ಸ್ಪೃಶತೇ ಭೂಮಿಂ ನ ಚ ಶೂಲಂ ವಿಮುಂಚತಿ |
ಶೂಲಾಚ್ಛೂಲಸಹಸ್ರಾಣಿ ನಿಷ್ಪೇತುಸ್ತಸ್ಯ ತೇಜಸಾ ॥ 6 ॥
ಅವನು ಪಾದದಿಂದ ಭೂಮಿಯನ್ನು ಮುಟ್ಟುವುದಿಲ್ಲ ಮತ್ತು ಹಸ್ತದಲ್ಲಿದ್ದ ಶೂಲವನ್ನೂ ಬಿಡುವುದಿಲ್ಲ. ಅವನ ಸಾಮರ್ಥ್ಯದಿಂದ ಹಸ್ತದಲ್ಲಿರುವ ಆ ಶೂಲದಿಂದ ಸಹಸ್ರಾರು ಶೂಲಗಳು ಹೊರಬರುತ್ತವೆ.
ತೇನ ಭಗ್ನಾನರೀನ್ ಸರ್ವಾನ್ ಮದ್ಭಗ್ನಾನ್ ಮನ್ಯತೇ ಜನಃ |
ತೇನ ದಗ್ಧಾನಿ ಸೈನ್ಯಾನಿ ಪೃಷ್ಠತೋಽನುದಹಾಮ್ಯಹಮ್ ॥ 7 ॥
ಅವನು ನಾಶಪಡಿಸಿದ ಎಲ್ಲ ಶತ್ರುಗಳನ್ನೂ ಜನರು ನನ್ನಿಂದ ನಾಶಗೊಂಡಿದ್ದಾರೆ ಎಂದು ತಿಳಿಯುತ್ತಾರೆ. ಅವನು ದಹಿಸಿದ ಸೈನ್ಯವನ್ನು, ಅವನನ್ನು ಹಿಂಬಾಲಿಸಿ ಅನಂತರ ನಾನು ದಹಿಸುತ್ತೇನೆ.
ಭಗವಂಸ್ತನ್ಮಮಾಚಕ್ಷ್ವ ಕೋ ವೈ ಸ ಪುರುಷೋತ್ತಮಃ |
ಶೂಲಪಾಣಿರ್ಮಹಾನ್ ಕೃಷ್ಣ ತೇಜಸಾ ಸೂರ್ಯಸನ್ನಿಭಃ ॥ 8 ॥
ಪೂಜ್ಯನೇ, ಕೃಷ್ಣನೇ, ತೇಜಸ್ಸಿನಿಂದ ಸೂರ್ಯನಿಗೆ ಸಮಾನವಾಗಿರುವ, ಕೈಯಲ್ಲಿ ಶೂಲವನ್ನು ಹಿಡಿದಿರುವ ಆ ಮಹಾತ್ಮನಾದ ಪುರುಷೋತ್ತಮನು ಯಾರೆಂದು ನನಗೆ ಹೇಳು.
ವ್ಯಾಸಃ
ಪ್ರಜಾಪತೀನಾಂ ಪ್ರಥಮಂ ತೈಜಸಂ ಪುರುಷಂ ವಿಭುಮ್ |
ಭುವನಂ ಭೂರ್ಭುವಂ ದೇವಂ ಸರ್ವಲೋಕೇಶ್ವರಂ ಪ್ರಭುಮ್ ॥ 9 ॥
ಈಶಾನಂ ವರದಂ ಪಾರ್ಥ ದೃಷ್ಟವಾನಸಿ ಶಂಕರಮ್ |
ತಂ ಗಚ್ಛ ಶರಣಂ ದೇವಂ ಸರ್ವಾದಿಂ ಭುವನೇಶ್ವರಮ್ ॥ 10 ॥
ವ್ಯಾಸ ಎಲೈ ಅರ್ಜುನನೇ, ನೀನು ಪ್ರಜಾಪತಿಯಲ್ಲಿ ಮೊದಲನೆಯವನೂ, ತೈಜಸಾಹಂಕಾರಕ್ಕೆ ಅಧಿಪತಿಯಾದವನೂ, ವಿಭುವೂ, ಭೂಮಿ- ಅಂತರಿಕ್ಷಗಳಿಗೆ ಒಡೆಯನಾದವನೂ, ದೇವನೂ, ಸರ್ವಲೋಕೇಶ್ವರನೂ, ಪ್ರಭುವೂ, ಈಶಾನನೂ, ವರದನೂ ಆದ ಶಂಕರನನ್ನು ನೋಡಿದ್ದೀಯೆ. ಭುವನೇಶ್ವರನಾದ ಸರ್ವಕಾರಣನಾದ ಆ ದೇವನಿಗೆ ಶರಣಾಗತನಾಗು.
ಮಹಾದೇವಂ ಮಹಾತ್ಮಾನಮೀಶಾನಂ ಜಟಿಲಂ ಶಿವಮ್ |
ತ್ರ್ಯಕ್ಷಂ ಮಹಾಭುಜಂ ರುದ್ರಂ ಶಿಖಿನಂ ಚೀರವಾಸಸಮ್ |
ದಾತಾರಂ ಚೈವ ಭಕ್ತಾನಾಂ ಪ್ರಸಾದವಿಹಿತಾನ್ ವರಾನ್ ॥ 11 ॥
ಮಹಾದೇವನೂ, ಮಹಾತ್ಮನೂ, ಈಶಾನನೂ, ಜಟಿಲನೂ, ಮಂಗಳ ಸ್ವರೂಪನೂ, ತ್ರಿನೇತ್ರನೂ, ಮಹಾಭುಜನೂ, ಚೀರಗಳನ್ನು

ಧರಿಸಿದವನೂ, ಅನುಗ್ರಹವನ್ನು ಮಾಡಿ ಭಕ್ತರಿಗೆ ಶ್ರೇಷ್ಠವಾದ ವರಗಳನ್ನು ಕೊಡುವವನೂ (ಆದ ಶಿವನನ್ನು ನೋಡಿದ್ದೀಯೆ).
ತಸ್ಯ ತೇ ಪಾರ್ಷದಾ ದಿವ್ಯಾ ರೂಪೈರ್ನಾನಾವಿಧೈರ್ವಿಭೋಃ |
ವಾಮನಾ ಜಟಿಲಾ ಮುಂಡಾ ಹ್ರಸ್ವಗ್ರೀವಾ ಮಹೋದರಾಃ ॥ 12 ॥
ಮಹಾಕಾಯಾ ಮಹೋತ್ಸಾಹಾ ಮಹಾಕರ್ಣಾಸ್ತಥಾಪರೇ |
ಆನನೈರ್ವಿಕೃತೈಃ ಪಾದೈಃ ಪಾರ್ಥ ವೇಷೈಶ್ಚ ವೈಕೃತೈಃ ॥ 13 ॥
ಎಲೈ ಪಾರ್ಥನೇ, ವಿಭುವಾದ ಅವನ ಪಾರ್ಷದರು ದಿವ್ಯವಾದ, ನಾನಾವಿಧವಾದ ರೂಪಗಳನ್ನು ಧರಿಸಿರುತ್ತಾರೆ. ಅವರು ವಾಮನರೂ, ಜಟಿಲರೂ, ಮುಂಡರೂ (ತಲೆಯ ಮೇಲೆ ಕೇಶವಿಲ್ಲದವರು), ಸಣ್ಣಕತ್ತುಳ್ಳವರೂ, ದೊಡ್ಡ ಹೊಟ್ಟೆಯುಳ್ಳವರೂ, ದೊಡ್ಡ ಶರೀರವುಳ್ಳವರೂ, ದೊಡ್ಡ ಕಿವಿಯುಳ್ಳವರೂ, ದೊಡ್ಡ ನಾಸಿಕವುಳ್ಳವರೂ, ವಿಕೃತವಾದ ಮುಖಗಳಿಂದಲೂ, ಪಾದಗಳಿಂದಲೂ, ವಿಕೃತವಾದ ವೇಷದಿಂದಲೂ ಕೂಡಿದವರೂ ಆಗಿರುತ್ತಾರೆ.
ಈದೃಶೈಃ ಸ ಮಹಾದೇವಃ ಪೂಜ್ಯಮಾನೋ ಮಹೇಶ್ವರಃ |
ಸ ಶಿವಸ್ತಾತ ತೇಜಸ್ವೀ ಪ್ರಸಾದಾದ್ ಯಾತಿ ತೇಽಗ್ರತಃ |
ತಸ್ಮಿನ್ ಘೋರೇ ತದಾ ಪಾರ್ಥ ಸಂಗ್ರಾಮೇ ಲೋಮಹರ್ಷಣೇ ॥14॥
ಎಲೈ ಪಾರ್ಥನೇ, ಆ ಮಹೇಶ್ವರನೂ, ಮಹಾದೇವನೂ ಆದ ಶಿವನು ಇಂತಹವರಿಂದ ಪೂಜಿಸಲ್ಪಡುತ್ತಾನೆ. ಎಲೈ ಪ್ರೀತಿಪಾತ್ರನೇ, ಆ ತೇಜಸ್ವಿಯಾದ ಶಿವನು ನಿನಗೆ ಅನುಗ್ರಹವನ್ನು ಮಾಡಿ ನಿನ್ನ ಮುಂದೆ ಘೋರವೂ, ರೋಮಾಂಚಕಾರಿಯೂ ಆದ ಆ ಸಂಗ್ರಾಮದಲ್ಲಿ ಹೋಗುತ್ತಿರುತ್ತಾನೆ.
ದ್ರೋಣಕರ್ಣಕೃಪೈರ್ಗುಪ್ತಾಂ ಮಹೇಷ್ವಾಸೈಃ ಪ್ರಹಾರಿಭಿಃ |
ಕಸ್ತಾಂ ಸೇನಾಂ ತದಾ ಪಾರ್ಥ ಮನಸಾಽಪಿ ಪ್ರಧರ್ಷಯೇತ್ |
ಋತೇ ದೇವಾನ್ ಮಹೇಷ್ವಾಸಾದ್ ಬಹುರೂಪಾನ್ ಮಹೇಶ್ವರಾತ್ ॥
ಎಲೈ ಪಾರ್ಥನೇ, ಮಹಾಧನುರ್ಧಾರಿಯಾದ, ಬಹುರೂಪಿಯಾದ ಮಹೇಶ್ವರನನ್ನು ಬಿಟ್ಟು ಮಹಾಧನುರ್ಧಾರಿಗಳೂ, ಪ್ರಹಾರಶೀಲರೂ ಆದ ದ್ರೋಣ- ಕರ್ಣ-ಕೃಪರಿಂದ ರಕ್ಷಿತವಾದ ಆ ಸೈನ್ಯವನ್ನು ಸೋಲಿಸಲು ಯಾವನು ತಾನೇ ಮನಸ್ಸಿನಲ್ಲಾದರೂ ಯೋಚಿಸಿಯಾನು?
ಸ್ಥಾತುಮುತ್ಸಹತೇ ಕಶ್ಚಿನ್ನ ತಸ್ಮಿನ್ನಗ್ರತಃ ಸ್ಥಿತೇ |
ನ ಹಿ ಭೂತಂ ಸಮಂ ತೇನ ತ್ರಿಷು ಲೋಕೇಷು ವಿದ್ಯತೇ ॥ 16 ॥
ಅವನು ಮುಂದಿರುವಾಗ ಯಾವನೂ ಅವನ ಎದುರಿಗೆ ನಿಲ್ಲಲಾರ. ಅವನಿಗೆ ಸಮವಾದ ಒಂದು ಪ್ರಾಣಿಯು ಮೂರುಲೋಕಗಳಲ್ಲಿಯೂ ಇರುವುದಿಲ್ಲ.
ಗಂಧೇನಾಪಿ ಹಿ ಸಂಗ್ರಾಮೇ ತಸ್ಯ ಕ್ರುದ್ಧಸ್ಯ ಶತ್ರವಃ |
ವಿಸಂಜ್ಞಾ ಹತಭೂಯಿಷ್ಠಾ ವೇಪಂತಿ ಚ ಪತಂತಿ ಚ ॥ 17 ॥
ಕೋಪಗೊಂಡ ಅವನ ದೇಹದಿಂದ ಉಂಟಾದ ಗಂಧದಿಂದಲೂ ಸಹ ಶತ್ರುಗಳು ಮೃತರಾದಂತೆ ಸಂಜ್ಞಾಹೀನರಾಗಿ ನಡುಗಿ ಬೀಳುತ್ತಾರೆ.
ತಸ್ಮೈ ನಮಸ್ತು ಕುರ್ವಂತೋ ದೇವಾಸ್ತಿಷ್ಠಂತಿ ವೈ ದಿವಿ |
ಯೇ ಚಾನ್ಯೇ ಮಾನವಾ ಲೋಕೇ ಯೇ ಚ ಸ್ವರ್ಗಜಿತೋ ನರಾಃ ॥18॥
ಯೇ ಭಕ್ತಾ ವರದಂ ದೇವಂ ಶಿವಂ ರುದ್ರಮುಮಾಪತಿಮ್ |
ಇಹ ಲೋಕೇ ಸುಖಂ ಪ್ರಾಪ್ಯ ತೇ ಯಾಂತಿ ಪರಮಾಂ ಗತಿಮ್ ॥19॥
ದೇವತೆಗಳು ಅವನಿಗೆ ನಮಸ್ಕಾರವನ್ನು ಮಾಡುತ್ತಾ ಸ್ವರ್ಗದಲ್ಲಿ ನೆಲೆಸಿರುತ್ತಾರೆ. ಲೋಕದ ಮಾನವರು ಮತ್ತು ಸ್ವರ್ಗವನ್ನು ಸಂಪಾದಿಸಿದ ಮಾನವರು (ಅವನನ್ನು ನಮಸ್ಕರಿಸಿ ಸ್ವರ್ಗದಲ್ಲಿ ಇರುತ್ತಾರೆ). ಯಾವ ಭಕ್ತರು ಅನನ್ಯವಾದ ಮನಸ್ಸಿನಿಂದ ಸರ್ವೇಶ್ವರನೂ, ಶಿವನೂ, ರುದ್ರನೂ, ಉಮಾಪತಿಯೂ, ವರದನೂ ಆದ ಅವನನ್ನು ಭಕ್ತಿಯಿಂದ ಉಪಾಸನೆ ಮಾಡುತ್ತಾರೆಯೋ ಅವರು ಈ ಲೋಕದಲ್ಲಿ ಸುಖವನ್ನು ಪಡೆದು ಪರಲೋಕದಲ್ಲಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ನಮಸ್ಕುರುಷ್ವ ಕೌಂತೇಯ ತಸ್ಮೈ ಶಾಂತಾಯ ವೈ ಸದಾ |
ರುದ್ರಾಯ ಶಿತಿಕಂಠಾಯ ಕನಿಷ್ಠಾಯ ಸುವರ್ಚಸೇ ॥ 20 ॥
ಎಲೈ ಕೌಂತೇಯನೇ, (ಭಕ್ತರಿಗೆ) ಶಾಂತನಾದ (ಶತ್ರುಗಳಿಗೆ) ಘೋರನಾದ, ನೀಲಕಂಠನಾದ ಕನಿಷ್ಠರಲ್ಲಿಯೂ ಇರುವ, ಒಳ್ಳೆಯ ಕಾಂತಿಯುಕ್ತನಾದ ಅವನಿಗೆ ನಮಸ್ಕಾರವನ್ನು ಮಾಡು.
ಕಪರ್ದಿನೇ ಕರಾಳಾಯ ಹರ್ಯಕ್ಷ್ಣೇ ವರದಾಯ ಚ |
ಯಾಮ್ಯಾಯಾವ್ಯಕ್ತರೂಪಾಯ ಸದ್ವೃತ್ತಾಯ ಕಪರ್ದಿನೇ ॥ 21 ॥
ಜಟಾಮಂಡಲವನ್ನು ಧರಿಸಿದ, ಕರಾಳರೂಪವನ್ನು ಧರಿಸಿದ, ಕುಬೇರನಿಗೆ ವರಪ್ರದಾಯಕನಾದ, ಯಮನಿಗೆ ಅನುಗ್ರಹವನ್ನು ಮಾಡುವ, ಅವ್ಯಕ್ತವಾದ ಕೇಶಗಳನ್ನು ಹೊಂದಿರುವ, ಒಳ್ಳೆಯ ನಡತೆಯನ್ನು ಹೊಂದಿರುವ ಶಂಕರನಾದ ಅವನಿಗೆ (ನಮಸ್ಕಾರವನ್ನು ಮಾಡು).
ಕಾಮ್ಯಾಯ ಹರಿನೇತ್ರಾಯ ಸ್ಥಾಣವೇ ಪುರುಷಾಯ ಚ |
ಹರಿಕೇಶಾಯ ಮುಂಡಾಯ ಕೃಶಾಯೋತ್ತರಣಾಯ ಚ ॥ 22 ॥
ಭಕ್ತರಿಂದ ಪ್ರೀತಿಸಲ್ಪಡುವ, ಹರಿನೇತ್ರನಾದ, ಸ್ಥಾಣುವಾದ, ಪುರುಷನಾದ, ಹರಿಕೇಶನಾದ, ಮುಂಡನಾದ, ಕೃಶನಾದ, ಕಷ್ಟಗಳನ್ನು ದಾಟಿಸುವ ಅವನಿಗೆ (ನಮಸ್ಕಾರವನ್ನು ಮಾಡು).

ಭಾಸ್ಕರಾಯ ಸುತೀರ್ಥಾಯ ದೇವದೇವಾಯ ರಂಹಸೇ |
ಬಹುರೂಪಾಯ ಶರ್ವಾಯ ಪ್ರಿಯಾಯ ಪ್ರಿಯವಾಸಸೇ ॥ 23 ॥
ಉಷ್ಣೀಷಿಣೇ ಸುವಕ್ತ್ರಾಯ ಸಹಸ್ರಾಕ್ಷಾಯ ಮೀಢುಷೇ |
ಗಿರೀಶಾಯ ಪ್ರಶಾಂತಾಯ ಪತಯೇ ಚೀರವಾಸಸೇ ॥ 24 ॥
ಪ್ರಭೆಯನ್ನುಂಟು ಮಾಡುವ, ಬಹಳ ಪವಿತ್ರನಾದ, ದೇವದೇವನಾದ, ವೇಗಶಾಲಿಯಾದ, ಅನೇಕ ರೂಪಗಳನ್ನು ಧರಿಸಿದ, ಶರ್ವನಾದ, ಪ್ರಿಯನಾದ, ಪ್ರಿಯವಾದ ವಸ್ತ್ರವನ್ನು ಧರಿಸಿದ, ರುಮಾಲನ್ನು ಧರಿಸಿದ, ಒಳ್ಳೆಯ ಮುಖವುಳ್ಳ, ಸಹಸ್ರನೇತ್ರನಾದ, ಭಕ್ತಾಭೀಷ್ಟವರಪ್ರದನಾದ, ಗಿರೀಶನಾದ, ಪ್ರಶಾಂತನಾದ, ಸ್ವಾಮಿಯಾದ, ಪೀನವಸ್ತ್ರವನ್ನು ಧರಿಸಿದ (ಅವನಿಗೆ ನಮಸ್ಕಾರವನ್ನು ಮಾಡು).
ಹಿರಣ್ಯಬಾಹವೇ ಚೈವ ಉಗ್ರಾಯ ಪತಯೇ ದಿಶಾಮ್ |
ಪರ್ಜನ್ಯಪತಯೇ ಚೈವ ಭೂತಾನಾಂ ಪತಯೇ ನಮಃ ॥ 25 ॥
ವೃಕ್ಷಾಣಾಂ ಪತಯೇ ಚೈವ ಅಪಾಂ ಚ ಪತಯೇ ತಥಾ |
ವೃಕ್ಷೈರಾವೃತಕಾಯಾಯ ಸೇನಾನ್ಯೇ ಮಧ್ಯಮಾಯ ಚ ॥ 26 ॥
ಹಿರಣ್ಯಬಾಹುಗಳನ್ನುಳ್ಳ, ಉಗ್ರನಾದ, ದಿಕ್ಕುಗಳಿಗೆ ಪತಿಯಾದ, ಪರ್ಜನ್ಯನಿಗೆ ಪತಿಯಾದ, ಭೂತಗಳಿಗೆ ಪತಿಯಾದ, ವೃಕ್ಷಗಳಿಗೆ ಪತಿಯಾದ, ಜಲಗಳಿಗೆ ಪತಿಯಾದ, ವೃಕ್ಷಗಳಿಂದ ಆವೃತವಾದ ಶರೀರವುಳ್ಳ, ಸೇನಾನಾಯಕನಾದ, ಸೇನಾ ಮಧ್ಯದಲ್ಲಿರುವ (ಅವನಿಗೆ ನಮಸ್ಕಾರವನ್ನು ಮಾಡು).
ಸ್ರುವಹಸ್ತಾಯ ದೇವಾಯ ಧನ್ವಿನೇ ಭಾರ್ಗವಾಯ ಚ |
ಬಹುರೂಪಾಯ ವಿಶ್ವಸ್ಯ ಪತಯೇ ಚೀರವಾಸಸೇ ॥ 27 ॥
ಹಸ್ತದಲ್ಲಿ ಸ್ರುವವನ್ನು ಹಿಡಿದಿರುವ, ದೇವನಾದ, ಧನುರ್ಧಾರಿಯಾದ, ಭಕ್ತರ ಪಾಪವನ್ನು ಭಂಜಿಸುವ, ಬಹುರೂಪನಾದ, ವಿಶ್ವಪತಿಯಾದ, ಮೌಂಜವಸ್ತ್ರವನ್ನು ಧರಿಸಿದ (ಅವನಿಗೆ ನಮಸ್ಕಾರ).
ಸಹಸ್ರಶಿರಸೇ ಚೈವ ಸಹಸ್ರನಯನಾಯ ಚ |
ಸಹಸ್ರಬಾಹವೇ ಚೈವ ಸಹಸ್ರಚರಣಾಯ ಚ ॥ 28 ॥
ಸಹಸ್ರಶಿರಸ್ಸುಗಳುಳ್ಳ, ಸಹಸ್ರಪಾದಗಳುಳ್ಳ, ಸಹಸ್ರನೇತ್ರಗಳುಳ್ಳ, ಸಹಸ್ರ ಬಾಹುಗಳುಳ್ಳ, ಸಹಸ್ರ ಮುಖಗಳನ್ನುಳ್ಳ (ಅವನಿಗೆ ನಮಸ್ಕಾರ).

ಶರಣಂ ಗಚ್ಛ ಕೌಂತೇಯ ವರದಂ ಭುವನೇಶ್ವರಮ್ |
ಉಮಾಪತಿಂ ವಿರೂಪಾಕ್ಷಂ ದಕ್ಷಯಜ್ಞನಿಬರ್ಹಣಮ್ |
ಪ್ರಜಾನಾಂ ಪತಿಮವ್ಯಗ್ರಂ ಭೂತಾನಾಂ ಪತಿಮವ್ಯಯಮ್ ॥ 29 ॥
ಎಲೈ ಕೌಂತೇಯನೇ, ಭುವನೇಶ್ವರನೂ, ವರಪ್ರದನೂ, ವಿರೂಪಾಕ್ಷನೂ, ದಕ್ಷಯಜ್ಞನಾಶಕನೂ, ಪ್ರಜಾಪತಿಯೂ, ಅವ್ಯಕ್ತನಾದವನೂ, ಭೂತಪತಿಯೂ, ಶಾಶ್ವತನೂ ಆದ ಉಮಾಪತಿಯನ್ನು ಶರಣುಹೊಂದು.
ಕಪರ್ದಿನಂ ವೃಷಾವರ್ತಂ ವೃಷನಾಭಂ ವೃಷಧ್ವಜಮ್ |
ವೃಷದರ್ಪಂ ವೃಷಪತಿಂ ವೃಷಶೃಂಗಂ ವೃಷರ್ಷಭಮ್ ॥ 30 ॥
ವೃಷಾಂಕಂ ವೃಷಭೋದಾರಂ ವೃಷಭಂ ವೃಷಭೇಕ್ಷಣಮ್ |
ವೃಷಾಯುಧಂ ವೃಷಶರಂ ವೃಷಭೂತಂ ಮಹೇಶ್ವರಮ್ ॥ 31 ॥
ಜಟೆಗಳನ್ನು ಧರಿಸಿದ, ಶ್ರೇಷ್ಠವಾದ ಸುಳಿಗಳನ್ನು ಹೊಂದಿದ, ಶ್ರೇಷ್ಠವಾದ ನಾಭಿಯನ್ನು ಹೊಂದಿದ, ವೃಷಧ್ವಜನಾದ, ವೃಷಭದ ದರ್ಪವನ್ನು ಹೊಂದಿರುವ, ಶ್ರೇಷ್ಠಪತಿಯಾದ, ವೃಷಶೃಂಗವನ್ನು ಹೊಂದಿರುವ, ವೃಷರ್ಷಭನಾದ, ವೃಷಾಂಕನಾದ, ವೃಷಭದಂತೆ ಉದಾರನಾದ, ಶ್ರೇಷ್ಠನಾದ, ವೃಷಭನೇತ್ರನಾದ, ಶ್ರೇಷ್ಠವಾದ ಆಯುಧವನ್ನೂ, ಶ್ರೇಷ್ಠವಾದ ಶರವನ್ನೂ ಹೊಂದಿದ, ಶ್ರೇಷ್ಠಪತಿಯಾದ ಅವನಿಗೆ ಶರಣಾಗತನಾಗು.
ಮಹೋದರಂ ಮಹಾಕಾಯಂ ದ್ವೀಪಿಚರ್ಮನಿವಾಸಿನಮ್ |
ಲೋಕೇಶಂ ವರದಂ ಪುಣ್ಯಂ ಬ್ರಹ್ಮಣ್ಯಂ ಬ್ರಾಹ್ಮಣಪ್ರಿಯಮ್ ॥ 32 ॥
ತ್ರಿಶೂಲಪಾಣಿಂ ವರದಂ ಖಡ್ಗಚರ್ಮಧರಂ ಪ್ರಭುಮ್ |
ಪಿನಾಕಿನಂ ಖಂಡಪರಶುಂ ಲೋಕಾನಾಂ ಪತಿಮೀಶ್ವರಮ್ |
ಪ್ರಪದ್ಯೇ ಶರಣಂ ದೇವಂ ಶರಣ್ಯಂ ಚೀರವಾಸಸಮ್ ॥ 33 ॥
ಮಹೋದರನೂ, ಮಹಾಕಾಯನೂ, ವ್ಯಾಘ್ರಚರ್ಮವನ್ನು ಧರಿಸಿದವನೂ, ಲೋಕೇಶನೂ, ವರಪ್ರದನೂ, ಪವಿತ್ರನೂ, ಬ್ರಾಹ್ಮಣವತ್ಸಲನೂ, ಬ್ರಾಹ್ಮಣಪ್ರಿಯನೂ, ತ್ರಿಶೂಲಪಾಣಿಯೂ, ಖಡ್ಗಚರ್ಮಧರನೂ, ಪ್ರಭುವೂ, ಪಿನಾಕವನ್ನೂ ಖಂಡ ಪರಶುವನ್ನೂ ಧರಿಸಿದವನೂ, ಲೋಕಗಳಿಗೆ ಪತಿಯೂ, ಚೀರವಸ್ತ್ರವನ್ನು ಧರಿಸಿದವನೂ, ಶರಣು ಹೊಂದಲು ಯೋಗ್ಯನೂ ಆದ ಈಶ್ವರನನ್ನು ನಾನು ಶರಣು ಹೊಂದುತ್ತೇನೆ.
ನಮಸ್ತಸ್ಮೈ ಸುರೇಶಾಯ ಯಸ್ಯ ವೈಶ್ರವಣಃ ಸಖಾ |
ಸುವಾಸಸೇ ನಮೋ ನಿತ್ಯಂ ಸುವ್ರತಾಯ ಸುಧನ್ವಿನೇ ॥ 34 ॥
ಕುಬೇರನನ್ನು ಸ್ನೇಹಿತನನ್ನಾಗಿ ಹೊಂದಿದ ಸುರೇಶ್ವರನಾದ ಅವನಿಗೆ ನಮಸ್ಕಾರ. ಒಳ್ಳೆಯ ವ್ರತವನ್ನು ಧರಿಸಿದವನೂ, ಒಳ್ಳೆಯ ಧನುರ್ಧಾರಿಯೂ, ಒಳ್ಳೆಯ ವಸ್ತ್ರವನ್ನು ಧರಿಸಿದವನೂ ಆದ ಅವನಿಗೆ ನಿತ್ಯದಲ್ಲಿಯೂ ನಮಸ್ಕಾರ.
ಸ್ರುವಹಸ್ತಾಯ ದೇವಾಯ ಸುಖಧನ್ವಾಯ ಧನ್ವಿನೇ |

ಧನ್ವಂತರಾಯ ಧನುಷೇ ಧನ್ವಾಚಾರ್ಯಾಯ ಧನ್ವಿನೇ ॥ 35 ॥
ಹಸ್ತದಲ್ಲಿ ಸ್ರುವವನ್ನು ಹಿಡಿದ ದೇವನಾದ, ಸುಖವಾದ ಧನುಸ್ಸನ್ನು ಹೊಂದಿದ, ಧನುರ್ಧಾರಿಯಾದ, ಕಷ್ಟಗಳನ್ನು ದಾಟಿಸುವ, ಧನುಸ್ಸಿಗೆ ನಿಯಾಮಕನಾದ, ಧನುರಾಚಾರ್ಯನಾದ ನಿನಗೆ ನಮಸ್ಕಾರ.
ಉಗ್ರಾಯುಧಾಯ ದೇವಾಯ ನಮಃ ಸುರವರಾಯ ಚ |
ನಮೋಽಸ್ತು ಬಹುರೂಪಾಯ ನಮಶ್ಚ ಬಹುಧನ್ವಿನೇ ॥ 36 ॥
ಉಗ್ರಾಯುಧನಾದ, ದೇವನಾದ, ದೇವಶ್ರೇಷ್ಠನಾದ ನಿನಗೆ ನಮಸ್ಕಾರ. ಬಹುರೂಪನಾದ ನಿನಗೆ ನಮಸ್ಕಾರ. ಅನೇಕ ಧನುಸ್ಸುಗಳನ್ನು ಧರಿಸಿದ ನಿನಗೆ ನಮಸ್ಕಾರ.
ನಮೋಽಸ್ತು ಸ್ಥಾಣವೇ ನಿತ್ಯಂ ಸುವ್ರತಾಯ ಸುಧನ್ವಿನೇ |
ನಮೋಽಸ್ತು ತ್ರಿಪುರಘ್ನಾಯ ಭಗಘ್ನಾಯ ಚ ವೈ ನಮಃ ॥ 37 ॥
ಸ್ಥಾಣುವಾದ (ಅಚಲನಾದ) ನಿನಗೆ ಯಾವಾಗಲೂ ನಮಸ್ಕಾರ. ತಪಶ್ಶೀಲನಾದ ನಿನಗೆ ನಮಸ್ಕಾರ. ತ್ರಿಪುರಘ್ನನಾದ ನಿನಗೆ ನಮಸ್ಕಾರ. ಭಗನ ನೇತ್ರಗಳನ್ನು ಸಂಹರಿಸಿದ ನಿನಗೆ ನಮಸ್ಕಾರ.
ವನಸ್ಪತೀನಾಂ ಪತಯೇ ನರಾಣಾಂ ಪತಯೇ ನಮಃ |
ಅಪಾಂ ಚ ಪತಯೇ ನಿತ್ಯಂ ಯಜ್ಞಾನಾಂ ಪತಯೇ ನಮಃ ॥ 38 ॥
ವನಸ್ಪತಿಗಳ ಪತಿಯಾದ ನಿನಗೆ, ನರಪತಿಯಾದ ನಿನಗೆ ನಮಸ್ಕಾರ. ಜಲಪತಿಯಾದ ನಿನಗೆ, ಯಜ್ಞಪತಿಯಾದ ನಿನಗೆ ಯಾವಾಗಲೂ ನಮಸ್ಕಾರ.
ಪೂಷ್ಣೋ ದಂತವಿನಾಶಾಯ ತ್ರ್ಯಕ್ಷಾಯ ವರದಾಯ ಚ |
ನೀಲಕಂಠಾಯ ಪಿಂಗಾಯ ಸ್ವರ್ಣಕೇಶಾಯ ವೈ ನಮಃ ॥ 39 ॥
ಪೂಷ್ಣದೇವತೆಯ ದಂತವನ್ನು ವಿನಾಶಮಾಡಿದ, ತ್ರಿನೇತ್ರನಾದ, ವರಪ್ರದನಾದ, ನೀಲಕಂಠನಾದ, ಪಿಂಗಲವರ್ಣದಿಂದ ಕೂಡಿದ, ಸ್ವರ್ಣಕೇಶನಾದ ನಿನಗೆ ನಮಸ್ಕಾರ.
ಕರ್ಮಾಣಿ ಚೈವ ದಿವ್ಯಾನಿ ಮಹಾದೇವಸ್ಯ ಧೀಮತಃ |
ತಾನಿ ತೇ ಕೀರ್ತಯಿಷ್ಯಾಮಿ ಯಥಾಪ್ರಜ್ಞಂ ಯಥಾಶ್ರುತಮ್ ॥ 40 ॥
ಮೇಧಾವಿಯಾದ ಮಹಾದೇವನ ದಿವ್ಯಕರ್ಮಗಳು ಏನಿವೆಯೋ ಅವುಗಳನ್ನು ನಾನು ತಿಳಿದಷ್ಟು ಮತ್ತು ನಾನು ಕೇಳಿದಷ್ಟು ನಿನಗೆ ಹೇಳುವೆನು.
ನ ಸುರಾ ನಾಸುರಾ ಲೋಕೇ ನ ಗಂಧರ್ವಾ ನ ರಾಕ್ಷಸಾಃ |
ಸುಖಮೇಧಂತಿ ಕುಪಿತೇ ತಸ್ಮಿನ್ನಪಿ ಗುಹಾಗತಾಃ ॥ 41 ॥
ದೇವತೆಗಳಾಗಲೀ, ಅಸುರರಾಗಲೀ, ಗಂಧರ್ವರಾಗಲೀ, ರಾಕ್ಷಸರಾಗಲೀ, ಶಿವನು ಕುಪಿತನಾದರೆ ಅವರು ಪಾತಾಳ ಗುಹೆಯಲ್ಲಿದ್ದರೂ ಸುಖವನ್ನು ಹೊಂದುವುದಿಲ್ಲ.
ವಿವ್ಯಾಧ ಕುಪಿತೋ ಯಜ್ಞಂ ನಿರ್ದಯಸ್ತು ಭವಸ್ತದಾ |
ಧನುಷಾ ಬಾಣಮುತ್ಸೃಜ್ಯ ಸಘೋಷಂ ವಿನನಾದ ಚ ॥ 42 ॥
ಹಿಂದೆ ಯಜಮಾನನಾದ ದಕ್ಷನು ವಿಧಿಪೂರ್ವಕವಾಗಿ ಸಂಪಾದಿಸಿದ ಯಜ್ಞವನ್ನು ಕುಪಿತನಾದ ಶಿವನು ನಿರ್ದಯನಾಗಿ ವಿನಾಶಗೊಳಿಸಿದನು. ತನ್ನ ಧನುಸ್ಸಿನಿಂದ ಬಾಣವನ್ನು ಪ್ರಯೋಗಿಸಿ ಒಳ್ಳೆಯ ನಾದದಿಂದ ಗರ್ಜಿಸಿದನು.
ತೇ ನ ಶರ್ಮ ಕುತಃ ಶಾಂತಿಂ ಲೇಭಿರೇ ಸ್ಮ ಸುರಾಸ್ತದಾ |
ವಿದ್ರುತೇ ಸಹಸಾ ಯಜ್ಞೇ ಕುಪಿತೇ ಚ ಮಹೇಶ್ವರೇ ॥ 43 ॥
ಯಜ್ಞವು ನಾಶಗೊಂಡು ಮಹೇಶ್ವರನು ಕೋಪಗೊಳ್ಳುತ್ತಿರಲು ಆಗ ದೇವತೆಗಳು ಸುಖವನ್ನಾಗಲೀ, ಶಾಂತಿಯನ್ನಾಗಲೀ ಹೊಂದಲಿಲ್ಲ.
ತೇನ ಜ್ಯಾತಳಘೋಷೇಣ ಸರ್ವೇ ಲೋಕಾಃ ಸಮಾಕುಲಾಃ |
ಬಭೂವುರ್ವಶಗಾಃ ಪಾರ್ಥ ನಿಪೇತುಶ್ಚ ಸುರಾಸುರಾಃ ॥ 44 ॥
ಎಲೈ ಪಾರ್ಥನೇ, ಶಿವನ ಜ್ಯಾತಳ ಘೋಷದಿಂದ ಎಲ್ಲ ಲೋಕಗಳೂ ಭಯಗ್ರಸ್ತವಾಗಿ ಅವನಿಗೆ ವಶವಾದವು. ದೇವತೆಗಳು ಮತ್ತು ಅಸುರರು ಬಿದ್ದರು.
ಆಪಶ್ಚುಕ್ಷುಭಿರೇ ಸರ್ವಾಶ್ಚಕಂಪೇ ಚ ವಸುಂಧರಾ |
ಪರ್ವತಾಶ್ಚ ವ್ಯಶೀರ್ಯಂತ ದಿಶೋ ನಾಗಾಶ್ಚ ಮೋಹಿತಾಃ ॥ 45 ॥
ಎಲ್ಲ ಸಮುದ್ರಗಳು ಕ್ಷೋಭೆಗೊಂಡವು. ಭೂಮಿಯು ನಡುಗಿತು. ಪರ್ವತಗಳು ಬಿರಿದವು. ದಿಗ್ಗಜಗಳು ಭ್ರಾಂತಿಗೊಂಡವು.
ಅಂಧಾಶ್ಚ ತಮಸಾ ಲೋಕಾ ನ ಪ್ರಕಾಶಂತ ಸಂವೃತಾಃ |
ಜಘ್ನಿವಾನ್ ಸಹ ಸೂರ್ಯೇಣ ಸರ್ವೇಷಾಂ ಜ್ಯೋತಿಷಾಂ ಪ್ರಭಾಃ ॥
ಲೋಕವೆಲ್ಲವೂ ಕುರುಡುತನವನ್ನುಂಟು ಮಾಡುವಂತಹ ಕತ್ತಲೆಯಿಂದ ಕವಿದು ಯಾವುದೂ ಪ್ರಕಾಶಿಸಲಿಲ್ಲ. ಶಿವನು ಸೂರ್ಯನಿಂದ ಹಿಡಿದು ಎಲ್ಲ ಜ್ಯೋತಿಸ್ಸುಗಳ ಪ್ರಭೆಯನ್ನು ವಿನಾಶಗೊಳಿಸಿದನು.
ಚುಕ್ರುಶುರ್ಭಯಭೀತಾಶ್ಚ ಶಾಂತಿಂ ಚಕ್ರುಸ್ತಥೈವ ಚ |
ಋಷಯಃ ಸರ್ವಭೂತಾನಾಮಾತ್ಮನಶ್ಚ ಸುಖೈಷಿಣಃ ॥ 47 ॥
ಎಲ್ಲ ಪ್ರಾಣಿಗಳು ಭಯಭೀತವಾಗಿ ಕಿರುಚಿಕೊಂಡವು. ಋಷಿಗಳು ಎಲ್ಲ ಪ್ರಾಣಿಗಳ ಮತ್ತು ತಮ್ಮ ಹಿತವನ್ನೂ, ಸುಖವನ್ನೂ ಬಯಸಿ ಶಾಂತಿಯನ್ನು ಮಾಡಿದರು.
ಪೂಷಾಣಮಭ್ಯದ್ರವತ ಶಂಕರಃ ಪ್ರಹಸನ್ನಿವ |

ಪುರೋಡಾಶಂ ಭಕ್ಷಯತೋ ದಶನಾನ್ ವೈ ವ್ಯಶಾತಯತ್ ॥ 48 ॥
ಶಂಕರನು ನಗುತ್ತಾ ಪುರೋಡಾಶವನ್ನು ಭಕ್ಷಿಸುತ್ತಿದ್ದ ಪೂಷಾದೇವತೆಯ ಸಮೀಪಕ್ಕೆ ಹೋಗಿ ಅವನ ದಂತಗಳನ್ನು ಕೆಡವಿದನು.
ತತೋ ನಿಶ್ಚಕ್ರಮುರ್ದೇವಾ ವೇಪಮಾನಾ ನತಾಃ ಸ್ಮ ತಮ್ |
ಪುನಶ್ಚ ಸಂದಧೇ ದೀಪ್ತಂ ದೇವಾನಾಂ ನಿಶಿತಂ ಶರಮ್ ॥ 49 ॥
ಆಗ ದೇವತೆಗಳು ಭಯಪೀಡಿತರಾಗಿ ನಡುಗುತ್ತಾ ಅವನಿಗೆ ನಮಸ್ಕರಿಸಿ, ಓಡಿಹೋದರು. ಶಿವನು ಪುನಃ ದೇವತೆಗಳ ಮೇಲೆ ಜ್ವಲಿಸುತ್ತಿದ್ದ ತೀಕ್ಷ್ಣವಾದ ಒಂದು ಬಾಣವನ್ನು ಪ್ರಯೋಗಿಸಲು ಅದನ್ನು ಬಿಲ್ಲಿನಲ್ಲಿ ಹೂಡಿದನು.
ರುದ್ರಸ್ಯ ಯಜ್ಞಭಾಗಂ ಚ ವಿಶಿಷ್ಟಂ ಸಮಕಲ್ಪಯನ್ |
ಭಯೇನ ತ್ರಿದಶಾ ರಾಜನ್ ಶರಣಂ ಚ ಪ್ರಪೇದಿರೇ ॥ 50 ॥
ಅದನ್ನು ನೋಡಿದ ಎಲ್ಲ ದೇವತೆಗಳು ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ, ಯಜ್ಞದ ಅವಶಿಷ್ಟ ಭಾಗವನ್ನು ರುದ್ರನ ಭಾಗವಾಗಿ ಕಲ್ಪಿಸಿದರು. ಎಲೈ ರಾಜನೇ, ದೇವತೆಗಳು ಭಯದಿಂದ ರುದ್ರನಿಗೆ ಶರಣಾಗತರಾದರು.
ತೇನ ಚೈವಾತಿಕೋಪೇನ ಸ ಯಜ್ಞಃ ಸಂಧಿತಸ್ತದಾ |
ಯತ್ತಾಶ್ಚಾಪಿ ಸುರಾ ಆಸನ್ ಯತ್ತಾಶ್ಚಾದ್ಯಾಪಿ ತಂ ಪ್ರತಿ ॥ 51 ॥
ಬಹಳ ಕೋಪಗೊಂಡಿದ್ದ ರುದ್ರನು ಶಾಂತನಾಗಿ ಆ ಯಜ್ಞವನ್ನು ಪೂರ್ಣಗೊಳಿಸಿದನು. ಆಗ ಅವನಿಂದ ಭಗ್ನರಾದ ದೇವತೆಗಳು ಈಗಲೂ ಎಚ್ಚರಿಕೆಯಿಂದ ಅವನಿಗೆ ಶರಣಾಗತರಾಗಿದ್ದಾರೆ.
ಅಸುರಾಣಾಂ ಪುರಾಣ್ಯಾಸಂಸ್ತ್ರೀಣಿ ವೀರ್ಯವತಾಂ ದಿವಿ |
ಆಯಸಂ ರಾಜತಂ ಚೈವ ಸೌವರ್ಣಮಪರಂ ಮಹತ್ ॥ 52 ॥
ಪರಾಕ್ರಮಶಾಲಿಗಳಾದ ಅಸುರರ ಬಳಿ ಸುವರ್ಣದ, ರಜತದ ಮತ್ತು ಕಬ್ಬಿಣದ ಮೂರು ದೊಡ್ಡ ಪುರಗಳಿದ್ದವು.
ಆಯಸಂ ತಾರಕಾಕ್ಷಸ್ಯ ಕಮಲಾಕ್ಷಸ್ಯ ರಾಜತಮ್ |
ಸೌವರ್ಣಂ ಪರಮಂ ಹ್ಯಾಸೀದ್ವಿದ್ಯುನ್ಮಾಲಿನ ಏವ ಚ ॥ 53 ॥
ಆಯಸದ (ಕಬ್ಬಿಣದ) ಪಟ್ಟಣವು ತಾರಕಾಕ್ಷನಿಗೂ, ರಜತಮಯವಾದ ಪುರವು ಕಮಲಾಕ್ಷನಿಗೂ, ಸುವರ್ಣಮಯವಾದ ಶ್ರೇಷ್ಠವಾದ ಪುರವು ವಿದ್ಯುನ್ಮಾಲಿನಿಗೂ ಸೇರಿದ್ದಿತು.
ನ ಶಕ್ತಸ್ತಾನಿ ಮಘವಾನ್ ಭೇತ್ತುಂ ಸರ್ವಾಯುಧೈರಪಿ |
ಅಥ ಸರ್ವೇಽಮರಾ ರುದ್ರಂ ಜಗ್ಮುಃ ಶರಣಮರ್ದಿತಾಃ ॥ 54 ॥
ಇಂದ್ರನು ತನ್ನ ಸರ್ವಾಯುಧಗಳಿಂದಲೂ ಆ ಪುರಗಳನ್ನು ಭೇದಿಸಲು ಸಮರ್ಥನಾಗಲಿಲ್ಲ. ತ್ರಿಪುರರಿಂದ ಪೀಡಿತರಾದ ಎಲ್ಲ ದೇವತೆಗಳೂ ಆಗ ರುದ್ರನಿಗೆ ಶರಣಾಗತರಾದರು.
ತೇ ತಮೂಚುರ್ಮಹಾತ್ಮಾನಂ ಸರ್ವೇ ದೇವಾಃ ಸವಾಸವಾಃ |
ರುದ್ರ ರೌದ್ರಾ ಭವಿಷ್ಯಂತಿ ಪಶವಃ ಸರ್ವಕರ್ಮಸು |
ನಿಪಾತಯಿಷ್ಯಸೇ ಚೈನಾನಸುರಾನ್ ಭುವನೇಶ್ವರ ॥ 55 ॥
ಸ ತಥೋಕ್ತಸ್ತಥೇತ್ಯುಕ್ತ್ವಾ ದೇವಾನಾಂ ಹಿತಕಾಮ್ಯಯಾ |
ಅತಿಷ್ಠತ್ ಸ್ಥಾಣುಭೂತಃ ಸ ಸಹಸ್ರಂ ಪರಿವತ್ಸರಾನ್ ॥ 56 ॥
ಯದಾ ತ್ರೀಣಿ ಸಮೇತಾನಿ ಅಂತರಿಕ್ಷೇ ಪುರಾಣಿ ವೈ |
ತ್ರಿಪರ್ವಣಾ ತ್ರಿಶಲ್ಯೇನ ತೇನ ತಾನಿ ಬಿಭೇದ ಸಃ ॥ 57 ॥
ಇಂದ್ರನಿಂದ ಸಹಿತರಾದ ಎಲ್ಲ ದೇವತೆಗಳು ಮಹಾತ್ಮನಾದ ಅವನನ್ನು ಕುರಿತು- `ಈ ತ್ರಿಪುರವಾಸಿಗಳು ಬ್ರಹ್ಮದೇವರು ಕೊಟ್ಟ ವರಗಳಿಂದ ಘೋರರಾಗಿದ್ದಾರೆ. ವರದಿಂದ ದರ್ಪವನ್ನು ಹೊಂದಿದ ಕಾರಣ ಅವರು ಲೋಕಗಳನ್ನು ಪೀಡಿಸುತ್ತಿದ್ದಾರೆ. ಎಲೈ ದೇವದೇವೇಶನೆ, ನಿನ್ನನ್ನು ಬಿಟ್ಟು ಬೇರೆ ಯಾವನೂ ಈ ದೈತ್ಯರನ್ನು ಕೊಲ್ಲಲು ಸಮರ್ಥನಲ್ಲ. ಎಲೈ ಮಹಾದೇವನೇ, ಈ ದೇವಶತ್ರುಗಳನ್ನು ನೀನು ಕೊಲ್ಲುವವನಾಗು. ಇವರು ಎಲ್ಲ ಕರ್ಮಗಳನ್ನು ಮಾಡುವಾಗಲೂ ಪಶುಗಳಂತೆ ಭಯಂಕರರಾಗುತ್ತಾರೆ. ಎಲೈ ಭುವನೇಶ್ವರನೇ, ನೀನು ಈ ಅಸುರರನ್ನು ಸಂಹರಿಸುವಿ ಎಂದು ಹೇಳಿದರು. ದೇವತೆಗಳಿಗೆ ಹಿತವನ್ನು ಮಾಡುವ ಇಚ್ಛೆಯಿಂದ ಶಿವನು ಹಾಗೆಯೇ ಆಗಲಿ ಎಂದು ಹೇಳಿ ಸ್ಥಾಣುವಿನಂತೆ (ಮರದ ಬುಡದಂತೆ) ಅಚಲನಾಗಿ ನಿಂತು, ಒಂದು ಸಹಸ್ರವರ್ಷಗಳ ಕಾಲ ತಪಸ್ಸನ್ನು ಆಚರಿಸಿದನು. ಅಂತರಿಕ್ಷದಲ್ಲಿ ಆ ಮೂರು ಪುರಗಳು ಒಟ್ಟಿಗೆ ಸೇರಿದಾಗ ಮೂರು ಅಲುಗುಗಳನ್ನು ಮೂರು ಶಿಲ್ಯಗಳನ್ನು ಹೊಂದಿದ್ದ ಆ ಬಾಣದಿಂದ ಅವನು ಅವುಗಳನ್ನು ಭೇದಿಸಿದನು.
ಪುರಾಣಿ ನ ಚ ತಂ ಶೇಕುರ್ದಾನವಾಃ ಪ್ರತಿವೀಕ್ಷಿತುಮ್ |
ಶರಂ ಕಾಲಾಗ್ನಿಸಂಯುಕ್ತಂ ವಿಷ್ಣುಸೋಮಸಮಾಯುತಮ್ ॥ 58 ॥
ಕಾಲಾಗ್ನಿ ಸನ್ನಿಧಾನಯುಕ್ತವಾದ, ವಿಷ್ಣು ಮತ್ತು ಚಂದ್ರನ ಸನ್ನಿಧಾನಯುಕ್ತವಾದ ಆ ಬಾಣವನ್ನು ನೋಡಲು ದಾನವರು ಶಕ್ತರಾಗಲಿಲ್ಲ.
ಬಾಲಮಂಕಗತಂ ಕೃತ್ವಾ ಸ್ವಯಂ ಪಂಚಶಿಖಂ ಪುನಃ |
ಉಮಾ ಜಿಜ್ಞಾಸಮಾನಾ ವೈ ಕೋಽಯಮಿತ್ಯಬ್ರವೀತ್ ಸುರಾನ್ ॥59॥
ಶಿವನು ತ್ರಿಪುರಗಳನ್ನು ಧರಿಸಿದಾಗ ಪಾರ್ವತಿದೇವಿಯು ಅವನನ್ನು ನೋಡಲು ಬಾಲರೂಪವನ್ನು ಧರಿಸಿದ ಪಂಚಶಿರವುಳ್ಳ ಅವನ ಇನ್ನೊಂದು ರೂಪವನ್ನು ತನ್ನ ತೊಡೆಯ ಮೇಲೆ ಧರಿಸಿ, ಅಲ್ಲಿಗೆ ಬಂದು ದೇವತೆಗಳ ಜ್ಞಾನವನ್ನು ಪರೀಕ್ಷಿಸುವ ದೃಷ್ಟಿಯಿಂದ ದೇವತೆಗಳನ್ನು ಕುರಿತು- `ಇವನು ಯಾರು?' ಎಂದು ಕೇಳಿದಳು.
ಅಸೂಯತಶ್ಚ ಶಕ್ರಸ್ಯ ವಜ್ರೇಣ ಪ್ರಹರಿಷ್ಯತಃ |

ಬಾಹುಂ ಸವಜ್ರಂ ಶಕ್ರಸ್ಯ ಕ್ರುದ್ಧಸ್ಯಾಸ್ತಂಭಯತ್ ಪ್ರಭುಃ |
ಸ ಏಷ ಭಗವಾನ್ ದೇವಃ ಸರ್ವಲೋಕೇಶ್ವರಃ ಪ್ರಭುಃ ॥ 60 ॥
ತ್ರಿಪುರಾಸುರರ ಸಂಹಾರವನ್ನು ಮಾಡಿದಾಗ ಅಸೂಯೆಯನ್ನು ಹೊಂದಿದ ಇಂದ್ರನು ವಜ್ರದಿಂದ ಶಿವನಿಗೆ ಪ್ರಹಾರವನ್ನು ಮಾಡಲು ಉದ್ಯುಕ್ತನಾದಾಗ, ಕ್ರುದ್ಧನೂ, ಪ್ರಭುವೂ ಆದ ಶಿವನು ಇಂದ್ರನ ವಜ್ರಸಹಿತವಾದ ಬಾಹುವನ್ನು ಸ್ತಂಭನಗೊಳಿಸಿದನು. ಅಂತಹ ಇವನು ಸುರಲೋಕೇಶ್ವರನೂ, ಪ್ರಭುವೂ ಆದ ಪೂಜ್ಯನಾದ ದೇವನು.
ನ ಸಂಬುಬುಧಿರೇ ಚೈನಂ ದೇವಾಸ್ತಂ ಭುವನೇಶ್ವರಮ್ |
ಸಪ್ರಜಾಪತಯಃ ಸರ್ವೇ ಬಾಲಾರ್ಕಸದೃಶಪ್ರಭಮ್ ॥ 61 ॥
ಪ್ರಜಾಪತಿಗಳಿಂದ ಸಹಿತರಾದ ಎಲ್ಲ ದೇವತೆಗಳು ಬಾಲಸೂರ್ಯನ ಕಾಂತಿಯನ್ನು ಹೊಂದಿದ ಭುವನೇಶ್ವರನಾದ ಅವನನ್ನು ನೋಡಿ ಅವನು ಯಾರೆಂದು ತಿಳಿಯಲಿಲ್ಲ.
ಅಥಾಭ್ಯೇತ್ಯ ತತೋ ಬ್ರಹ್ಮಾ ದೃಷ್ಟ್ವಾ ಚ ಸ ಮಹೇಶ್ವರಮ್ |
ಅಯಂ ಶ್ರೇಷ್ಠ ಇತಿ ಜ್ಞಾತ್ವಾ ವವಂದೇ ತಂ ಪಿತಾಮಹಃ ॥ 62 ॥
ಆಗ ಬ್ರಹ್ಮದೇವನು ಬಂದು ಮಹೇಶ್ವರನನ್ನು ನೋಡಿ, ಇವನು ಶ್ರೇಷ್ಠನಾದವನು ಎಂದು ತಿಳಿದು ಅವನಿಗೆ ನಮಸ್ಕಾರವನ್ನು ಮಾಡಿದನು.
ತ್ವಂ ಯಜ್ಞೋ ಭುವನಸ್ಯಾಸ್ಯತ್ವಂ ಗತಿಸ್ತ್ವಂ ಪರಾಯಣಮ್ |
ತ್ವಂ ಭವಸ್ತ್ವಂ ಮಹಾದೇವಸ್ತ್ವಂ ಧಾಮ ಪರಮಂ ಪದಮ್ ॥ 63 ॥
ಬ್ರಹ್ಮಾ ನೀನೇ ಯಜ್ಞನಾಮಕನಾದವನು, ಈ ಲೋಕಕ್ಕೆ ನೀನೇ ಗತಿಯಾದವನು ಮತ್ತು ಶ್ರೇಷ್ಠವಾದ ಆಶ್ರಯನಾದವನು. ನೀನು ಭವ, ಮಹಾದೇವ, ಆಶ್ರಯನಾದವನು, ಪರಮಪ್ರಾಪ್ಯನಾದವನು. ನೀನು ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತೆಲ್ಲವನ್ನೂ ವ್ಯಾಪಿಸಿದ್ದೀಯೆ. ಪೂಜ್ಯನೇ, ಭೂತಭವ್ಯಪ್ರಭುವೇ, ಲೋಕನಾಥನೇ, ಜಗತ್ಪತಿಯೇ, ನಿನ್ನ ಕ್ರೋಧದಿಂದ ಪೀಡಿತನಾದ ಇಂದ್ರನ ಮೇಲೆ ಅನುಗ್ರಹವನ್ನು ಮಾಡು.
ವ್ಯಾಸಃ
ಪದ್ಮಯೋನಿವಚಃ ಶ್ರುತ್ವಾತತಃ ಪ್ರೀತೋ ಮಹೇಶ್ವರಃ |
ಪ್ರಸಾದಾಭಿಮುಖೋ ಭೂತ್ವಾ ಮಂದಹಾಸಮಧಾಕರೋತ್ ॥ 64 ॥
ವ್ಯಾಸ ಬ್ರಹ್ಮದೇವರ ಈ ಮಾತುಗಳನ್ನು ಕೇಳಿ ಸಂತೋಷದಿಂದ ಮಹೇಶ್ವರನು ಪ್ರಸಾದಾಭಿಮುಖನಾಗಿ ಮಂದಹಾಸವನ್ನು ಬೀರಿದನು.
ತತಃ ಪ್ರಸಾದಯಾಮಾಸುರುಮಾಂ ರುದ್ರಂ ಚ ತೇ ಸುರಾಃ |
ಅಭವಚ್ಚ ಪುನರ್ಬಾಹುರ್ಯಥಾಪ್ರಕೃತಿ ವಜ್ರಿಣಃ ॥ 65 ॥
ಆಗ ದೇವತೆಗಳು ಪಾರ್ವತಿಯನ್ನು ಮತ್ತು ರುದ್ರನನ್ನು ಪ್ರಸನ್ನಗೊಳಿಸಿದರು. ಇಂದ್ರನ ಬಾಹುವು ಮೊದಲಿನಂತೆಯೇ ಆಯಿತು.
ತೇಷಾಂ ಪ್ರಸನ್ನೋ ಭಗವಾನ್ ಸಪತ್ನೀಕೋ ವೃಷಧ್ವಜಃ |
ದೇವಾನಾಂ ತ್ರಿದಶಶ್ರೇಷ್ಠೋ ದಕ್ಷಯಜ್ಞವಿನಾಶನಃ ॥ 66 ॥
ತ್ರಿದಶಶ್ರೇಷ್ಠನೂ, ದಕ್ಷಯಜ್ಞವಿನಾಶಕನೂ, ವೃಷಧ್ವಜನೂ ಆದ ಶಿವನು ಪತ್ನೀ ಸಹಿತನಾಗಿ ಅವರಿಗೆ ಪ್ರಸನ್ನನಾದನು.
ಸ ವೈ ರುದ್ರಃ ಸ ಚ ಶಿವಃ ಸೋಽಗ್ನಿಃ ಶರ್ವಃ ಸ ಸರ್ವವಿತ್ |
ಸ ಚೇಂದ್ರಶ್ಚೈವ ವಾಯುಶ್ಚ ಸೋಽಶ್ವಿನೌ ಸ ಚ ವಿದ್ಯುತಃ ॥ 67 ॥
ಅವನೇ ರುದ್ರ, ಅವನೇ ಶಿವ, ಅವನೇ ಅಗ್ನಿ, ಅವನೇ ಶರ್ವ, ಅವನೇ ಇಂದ್ರ, ಅವನೇ ವಾಯು, ಅವನೇ ಅಶ್ವಿನಿಗಳು, ಅವನೇ ವಿದ್ಯುತ್ತುಗಳು.
ಸ ಭವಃ ಸ ಚ ಪರ್ಜನ್ಯೋ ಮಹಾದೇವಃ ಸ ಚಾನಘಃ |
ಸ ಚಂದ್ರಮಾಃ ಸ ಚೇಶಾನಃ ಸ ಸೂರ್ಯೋ ವರುಣಶ್ಚ ಸಃ ॥ 68 ॥
ಅವನು ಭವ, ಅವನು ಪರ್ಜನ್ಯ, ಮಹಾದೇವ, ಅವನು ಅನಘ, ಅವನು ಚಂದ್ರ, ಅವನು ಈಶಾನ, ಅವನು ಸೂರ್ಯ, ಅವನು ವರುಣ.
ಸ ಕಾಲಃ ಸೋಽಂತಕೋ ಮೃತ್ಯುಃ ಸ ಯಮೋ ರಾತ್ರ್ಯಹಾನಿ ಚ |
ಮಾಸಾರ್ಧಮಾಸಾ ಋತವಃ ಸಂಧ್ಯೇ ಸಂವತ್ಸರಶ್ಚ ಸಃ ॥ 69 ॥
ಅವನು ಕಾಲ, ಅವನು ಅಂತಕ, ಅವನು ಮೃತ್ಯು, ಅವನು ಹಗಲು-ರಾತ್ರಿಗಳು, ಮಾಸಾರ್ಧಮಾಸಗಳು, ಋತುಗಳು, ಸಂಧ್ಯಾಕಾಲಗಳು ಮತ್ತು ಸಂವತ್ಸರ.
ಸ ಚ ಧಾತಾ ವಿಧಾತಾ ಚ ವಿಶ್ವಾತ್ಮಾ ವಿಶ್ವಕರ್ಮಕೃತ್ |
ಸರ್ವಾಸಾಂ ದೇವತಾನಾಂ ಚ ಧಾರಯತ್ಯವಪುರ್ವಪುಃ ॥ 68 ॥
ಅವನು ಧಾತ, ಅವನೇ ವಿಧಾತ, ಅವನು ವಿಶ್ವಸ್ವಾಮಿ, ಅವನು ಎಲ್ಲ ಕರ್ಮಗಳನ್ನು ಮಾಡುವವನು, ಪ್ರಾಕೃತಶರೀರ ರಹಿತನಾಗಿ ಎಲ್ಲ ದೇವತೆಗಳ ಶರೀರವನ್ನು ಧರಿಸಿದ್ದಾನೆ (ಪ್ರಾಕೃತ ಶರೀರ ರಹಿತನಾಗಿ ಎಲ್ಲ ದೇವತೆಗಳಂತಹ ಅಪ್ರಾಕೃತ ಶರೀರವನ್ನು ಧರಿಸಿದ್ದಾನೆ).
ಇಲ್ಲಿ ರುದ್ರ, ಶಿವ ಮೊದಲಾದ ಎಲ್ಲ ನಾಮಗಳಿಂದ ಹಿಂದೆ ತಿಳಿಸಿದಂತೆ ರುದ್ರಾಂತರ್ಯಾಮಿಯಾದ ನಾರಾಯಣನೇ ವಾಚ್ಯನಾದವನು ಎಂದು ಅರ್ಥ. ಇದು ಕೇವಲ ರುದ್ರಸ್ತೋತ್ರವಲ್ಲದೆ ರುದ್ರಾಂತರ್ಯಾಮಿಯಾದ ನಾರಾಯಣನ ಸ್ತೋತ್ರವೂ ಆಗಿದೆ (ಲಕ್ಷಾಲಂಕಾರ).
ಸರ್ವೈರ್ದೇವೈಃ ಸ್ತುತೋ ದೇವಃ ಸೈಕಧಾ ಬಹುಧಾ ಚ ಸಃ |

ಶತಧಾ ಸಹಸ್ರಧಾ ಚೈವ ತಥಾ ಶತಸಹಸ್ರಧಾ ॥ 71 ॥
ದೇವನಾದ ಅವನು ಎಲ್ಲ ದೇವತೆಗಳಿಂದಲೂ ಸ್ತುತನಾದವನು. ಅವನು ಒಂದು ರೀತಿಯಲ್ಲಿ, ಅನೇಕ ರೀತಿಯಲ್ಲಿ, ನೂರು ರೀತಿಯಲ್ಲಿ, ಸಹಸ್ರ ರೀತಿಯಲ್ಲಿ, ಲಕ್ಷ ರೀತಿಯಲ್ಲಿ ಇರುವವನು (ಅಂತಹ ಅನೇಕ ರೂಪಗಳನ್ನು ಧರಿಸಿದವನು).
ಈದೃಶಃ ಸ ಮಹಾದೇವೋ ಭೂಯಶ್ಚ ಭಗವಾನಜಃ |
ನ ಹಿ ಸರ್ವೇ ಮಯಾ ಶಕ್ಯಾ ವಕ್ತುಂ ಭಗವತೋ ಗುಣಾಃ ॥ 72 ॥
ಮಹಾದೇವನೂ ಭಗವಂತನೂ ಆದ ಅಜನು ಇಂತಹವನು ಮತ್ತು ಇದಕ್ಕಿಂತಲೂ ಹೆಚ್ಚಿನ ಗುಣವುಳ್ಳವನು. ಎಲೈ ಪಾಂಡುನಂದನನೇ, ನಾನು ಸಹಸ್ರವರ್ಷಗಳ ಕಾಲ ಸತತವಾಗಿ ಹೇಳಿದರೂ ಅವನ ಎಲ್ಲ ಗುಣಗಳನ್ನೂ ಹೇಳಲು ಸಾಧ್ಯವಿಲ್ಲ.
ಸರ್ವೈರ್ಗ್ರಹೈರ್ಗೃಹೀತಾನ್ ವೈ ಸರ್ವಪಾಪ ಪ್ರತಾಪಿತಾನ್ |
ಸ ಮೋಚಯತಿ ಸುಪ್ರೀತಃ ಶರಣ್ಯಃ ಶರಣಾಗತಾನ್ ॥ 73 ॥
ಸರ್ವಗ್ರುಹಗಳಿಂದಲೂ ಪೀಡಿತರಾಗಿ, ಸರ್ವಪಾಪಗಳಿಂದ ತಪ್ತರಾಗಿ ಶರಣಾಗತರಾದ ಭಕ್ತರಿಗೆ ಅವನು ಸುಪ್ರೀತನಾಗಿ ಅವರನ್ನು ಎಲ್ಲ ದುಃಖಗಳಿಂದಲೂ ಮತ್ತು ಪಾಪಗಳಿಂದಲೂ ವಿಮೋಚನೆಗೊಳಿಸುತ್ತಾನೆ.
ಆಯುರಾರೋಗ್ಯಮೈಶ್ವರ್ಯಂ ವಿತ್ತಂ ಕಾಮಾಂಶ್ಚ ಪುಷ್ಕಳಾನ್ |
ಸ ದದಾತಿ ಮನುಷ್ಯೇಭ್ಯಃ ಸ ಚೈವಾಕ್ಷಿಪತೇ ಪುನಃ ॥ 74 ॥
ಮನುಷ್ಯರಿಗೆ ಆಯುರಾರೋಗ್ಯ ಐಶ್ವರ್ಯಗಳನ್ನೂ, ಧನವನ್ನೂ, ಪುಷ್ಕಳವಾದ ಬಯಸಿದ ವಸುತವನ್ನೂ ಅವನೇ ಕೊಡುತ್ತಾನೆ ಪುನಃ ಅವನೇ ನಾಶಗೊಳಿಸುತ್ತಾನೆ.
ಸೇಂದ್ರಾದಿಷು ಚ ದೇವೇಷು ತಸ್ಯ ಚೈಶ್ವರ್ಯಮುಚ್ಯತೇ |
ಸ ಚೈವ ವ್ಯಾಪೃತೋ ಲೋಕೇ ಮನುಷ್ಯಾಣಾಂ ಶುಭಾಶುಭೇ ॥ 75 ॥
ಇಂದ್ರಾದಿ ದೇವತೆಗಳಲ್ಲಿರುವ ಐಶ್ವರ್ಯವೆಲ್ಲವೂ ಅವನದೇ. ಅವನು ಮನುಷ್ಯರು ಮಾಡಿದ ಕರ್ಮಗಳಿಗೆ ಶುಭಾಶುಭ ಫಲಗಳನ್ನು ಕೊಡುವುದರಲ್ಲಿ ಉದ್ಯುಕ್ತನಾಗಿರುತ್ತಾನೆ.
ಐಶ್ವರ್ಯಾಚ್ಚೈವ ಕಾಮಾನಾಮೀಶ್ವರಃ ಪುನರುಚ್ಯತೇ |
ಮಹೇಶ್ವರಶ್ಚ ಭೂತಾನಾಂ ಮಹತಾಮೀಶ್ವರಶ್ಚ ಸಃ ॥ 76 ॥
ಎಲ್ಲ ಕಾಮಗಳನ್ನು ಕೊಡಲು ಸಮರ್ಥನಾದ್ದರಿಂದ ಅವನನ್ನು ಈಶ್ವರನೆಂದು ಕರೆಯುತ್ತಾರೆ. ಮಹಾತ್ಮರಾದ ಪುರುಷರಿಗೆ ಒಡೆಯನಾದ ಕಾರಣನಿಂದ ಮಹೇಶ್ವರನೆಂದು ಕರೆಯುತ್ತಾರೆ.
ಬಹುಭಿರ್ಬಹುಧಾ ರೂಪೈರ್ವಿಶ್ವಂ ವ್ಯಾಪ್ನೋತಿ ವೈ ಜಗತ್ |
ಅಸ್ಯ ದೇವಸ್ಯ ಯದ್ ವಕ್ತ್ರಂ ಸಮುದ್ರೇ ತದತಿಷ್ಠತ ॥ 77 ॥
ತಸ್ಯ ದೇವಸ್ಯ ಯದ್‌ವಕ್ತ್ರಂ ಸಮುದ್ರೇ ತದಧಿಷ್ಠಿತಮ್ |
ವಡವಾಮುಖೇತಿ ವಿಖ್ಯಾತಂ ಪಿಬತ್ತೋಯಮಯ ಹವಿಃ ॥ 78॥
ಅನೇಕ ಪ್ರಕಾರದಿಂದ ತಿಳಿದ, ಅನೇಕ ರೂಪಗಳಿಂದ ಅವನು ಈ ಸಮಸ್ತ ಜಗತ್ತನ್ನು ವ್ಯಾಪಿಸುತ್ತಾನೆ. ಈ ದೇವನ ಒಂದು ಮುಖವು ಸಮುದ್ರದಲ್ಲಿದೆ. ಅದು ವಡವಾಮುಖವೆಂದು ಪ್ರಸಿದ್ಧವಾಗಿದೆ. ಅದು ಜಲಮಯವಾದ ಹವಿಸ್ಸನ್ನು ಯಾವಾಗಲೂ ಪಾನ ಮಾಡುತ್ತಿರುತ್ತದೆ.
ಏಷ ಚೈವ ಶ್ಮಶಾನೇಷು ದೇವೋ ವಸತಿ ನಿತ್ಯಶಃ |
ಯಜಂತ್ಯೇನಂ ಜನಾಸ್ತತ್ರ ವೀರಸ್ಥಾನ ಇತೀಶ್ವರಮ್॥ 79 ॥
ಈ ದೇವನೇ ಯಾವಾಗಲೂ ಸ್ಮಶಾನದಲ್ಲಿ ವಾಸಿಸುತ್ತಾನೆ. ಆ ವೀರಸ್ಥಾನದಲ್ಲಿ ಈಶ್ವರನಾದ ಇವನನ್ನು ಜನರು ಪೂಜಿಸುತ್ತಾರೆ.
ಅಸ್ಯ ದೀಪ್ತಾನಿ ರೂಪಾಣಿ ಘೋರಾಣಿ ಚ ಬಹೂನಿ ಚ |
ಲೋಕೇ ಯಾನ್ಯಸ್ಯ ಕುರ್ವಂತಿ ಮನುಷ್ಯಾಃ ಪ್ರವದಂತಿ ಚ ॥ 80 ॥
ಲೋಕದಲ್ಲಿ ಅವನ ಪ್ರಕಾಶಮಾನವಾದ, ಘೋರವಾದ ಅನೇಕ ರೂಪಗಳಿವೆ. ಅವನ್ನು ಮನುಷ್ಯರು ಪೂಜಿಸುತ್ತಾರೆ ಮತ್ತು ಪ್ರವಚನವನ್ನು ಮಾಡಿ ಅವುಗಳ ಮಹಿಮೆಯನ್ನು ಹೇಳುತ್ತಾರೆ.
ನಾಮಧೇಯಾನಿ ಲೋಕೇಷು ಬಹೂನ್ಯತ್ರ ಯಥಾರ್ಥವತ್ |
ನಿರುಚ್ಯಂತೇ ಮಹತ್ತ್ವಾಚ್ಚ ವಿಭುತ್ವಾತ್ ಕರ್ಮಭಿಸ್ತಥಾ ॥ 81 ॥
ಅವನಿಗೆ ಲೋಕಗಳಲ್ಲಿ ಅನೇಕ ನಾಮಗಳಿವೆ. ಎಲ್ಲವೂ ಅನ್ವರ್ಥಕವಾದವು. ಅವನು ಮಹಾತ್ಮನಾದುದರಿಂದಲೂ, ವಿಭುವಾದುದರಿಂದಲೂ, ಎಲ್ಲ ಕರ್ಮಗಳನ್ನು ಮಾಡುವುದರಿಂದಲೂ ಎಲ್ಲ ಶಬ್ದಗಳೂ ಅವನಲ್ಲಿಯೇ ನಿರ್ವಚನ ಮಾಡಲ್ಪಡುತ್ತವೆ.

ವೇದೇ ಚಾಸ್ಯ ಸಮಾಮ್ನಾತಂ ಶತರುದ್ರೀಯಮುತ್ತಮಮ್ |
ನಾಮ್ನಾ ಚಾನಂತರುದ್ರೇತಿ ಉಪಸ್ಥಾನಂ ಮಹಾತ್ಮನಃ ॥ 82 ॥
ವೇದದಲ್ಲಿಯೂ, ಶತರುದ್ರೀಯ ಮತ್ತು ಅನಂತರುದ್ರ ಎಂಬ ಈ ಮಹಾತ್ಮನ ಶ್ರೇಷ್ಠವಾದ ಸ್ತೋತ್ರವು ಹೇಳಲ್ಪಟ್ಟಿದೆ.
ಸ ಕಾಮಾನಾಂ ಪ್ರಭುರ್ದೇವೋ ಯೇ ದಿವ್ಯಾ ಯೇ ಚ ಮಾನುಷಾಃ |
ಸ ವಿಭುಃ ಸ ಪ್ರಭುರ್ದೇವೋ ವಿಶ್ವಂ ವ್ಯಾಪ್ನುವತೇ ಮಹತ್ ॥ 83 ॥
ದೇವಲೋಕದಲ್ಲಿ ಮತ್ತು ಮನುಷ್ಯಲೋಕದಲ್ಲಿ ಯಾವ ಶ್ರೇಷ್ಠವಾಗಿ ಕಾಣುವ ವಸ್ತುಗಳಿವೆಯೋ ಅವೆಲ್ಲದಕ್ಕೂ ದೇವನಾದ ಅವನು ಒಡೆಯನು. ಅವನು ವ್ಯಾಪ್ತನಾದವನು, ಸಮರ್ಥನಾದವನು, ಶ್ರೇಷ್ಠನಾದವನು, ವಿಶ್ವವ್ಯಾಪಿಯಾದವನು.
ಜ್ಯೇಷ್ಠಂ ಭೂತಂ ವದಂತ್ಯೇನಂ ಬ್ರಾಹ್ಮಣಾ ಮುನಯಸ್ತಥಾ |

ಪ್ರಥಮೋ ಹ್ಯೇಷ ದೇವಾನಾಂ ಮುಖಾದಸ್ಯಾನಲೋಽಭವತ್ ॥ 84 ॥
ಬ್ರಾಹ್ಮಣರು ಮತ್ತು ಮುನಿಗಳು ಅವನನ್ನು ಜ್ಯೇಷ್ಠನಾದ ಚೇತನನೆಂದು (ಅನಾದಿ ಕಾಲದಿಂದಿರುವ ಚೇತನನೆಂದು) ಹೇಳುತ್ತಾರೆ. ಅವನು ದೇವತೆಗಳಲ್ಲಿ ಪ್ರಥಮನಾದವನು (ಶ್ರೇಷ್ಠನಾದವನು). ಅವನ ಮುಖದಿಂದ ಅಗ್ನಿಯುಂಟಾಯಿತು (ಇವೆಲ್ಲ ಪುರುಷಸೂಕ್ತದಲ್ಲಿ ಹೇಳಿದ ವಿಷ್ಣುಮಹಿಮೆಯಾದ್ದರಿಂದ ಈ ಶತರುದ್ರಿಯವೂ ಸಹ ವಿಷ್ಣು ಮಹಿಮೆ ಎಂದು ತಿಳಿಯಬೇಕು).
ಸರ್ವಥಾ ಯತ್ ಪಶೂನ್ ಪಾತಿ ತೈಶ್ಚ ಯದ್ ರಮತೇ ಪುನಃ |
ತೇಷಾಮಧಿಪತಿರ್ಯಚ್ಚ ತಸ್ಮಾತ್ ಪಶುಪತಿಃ ಸ್ಮೃತಃ ॥ 85 ॥
ಎಲ್ಲ ಪಶುಗಳನ್ನೂ (ಪ್ರಜೆಗಳನ್ನೂ) ಸರ್ವಥಾ ರಕ್ಷಣೆ ಮಾಡುವುದರಿಂದ, ಅವರ ಜೊತೆಯಲ್ಲಿ ಸಂತೋಷಪಡುವುದರಿಂದ ಮತ್ತು ಅವರಿಗೆ ಅಧಿಪತಿಯಾದುದರಿಂದಲೂ ಅವನನ್ನು ಪಶುಪತಿ ಎಂದು ಕರೆಯುತ್ತಾರೆ.
ನಿತ್ಯೇನ ಬ್ರಹ್ಮಚರ್ಯೇಣ ಲಿಂಗಮಸ್ಯ ಯದಾಸ್ಥಿತಮ್ |
ಮಹಯಂತಿ ಚ ಲೋಕಾಶ್ಚ ಮಹೇಶ್ವರ ಇತಿ ಸ್ಮೃತಃ ॥ 86 ॥
ನಿತ್ಯವಾದ ಬ್ರಹ್ಮಚರ್ಯದಿಂದ ಅವನ ಲಿಂಗವು ಯಾವಾಗಲೂ ಸ್ಥಿತವಾಗಿದೆ. ಅದನ್ನು ಜನರು ಪೂಜಿಸುತ್ತಾರೆ. ಆದ್ದರಿಂದ ಅವನಿಗೆ ಮಹೇಶ್ವರ ಎಂದು ಹೆಸರು.
ಋಷಯಶ್ಚೈವ ದೇವಾಶ್ಚ ಗಂಧರ್ವಾಪ್ಸರಸಸ್ತಥಾ |
ಲಿಂಗಮಸ್ಯಾರ್ಚಯಂತಿ ಸ್ಮ ತಚ್ಚಾಪ್ಯೂರ್ಧ್ವಂ ಸಮಾಸ್ಥಿತಮ್ ॥ 87 ॥
ಋಷಿಗಳೂ, ದೇವತೆಗಳೂ, ಗಂಧರ್ವರೂ ಮತ್ತು ಅಪ್ಸರೆಯರು ಅವನ ಲಿಂಗವನ್ನು ಪೂಜಿಸುತ್ತಾರೆ. ಅದಾದರೂ ಊರ್ಧ್ವಮುಖವಾಗಿ ಸ್ಥಿತವಾಗಿ ಉತ್ಥಿತವಾಗಿದೆ.
ಪೂಜ್ಯಮಾನೇ ತತಸ್ತಸ್ಮಿನ್ ಮೋದತೇ ಸ ಮಹೇಶ್ವರಃ |
ಸುಖೀ ಪ್ರೀತಶ್ಚ ಭವತಿ ಪ್ರಹೃಷ್ಟಶ್ಚೈವ ಶಂಕರಃ ॥ 88 ॥
ತನ್ನ ಲಿಂಗವನ್ನು ಪೂಜಿಸಿದರೆ ಮಹೇಶ್ವರನು ಸಂತೋಷಪಡುತ್ತಾನೆ. ಶಂಕರನಾದ ಅವನು ಸುಖವನ್ನು ಹೊಂದಿ ಸಂತುಷ್ಟನಾಗುತ್ತಾನೆ.
ಯದಸ್ಯ ಬಹುಧಾ ರೂಪಂ ಭೂತಭವ್ಯಭವತ್ಸ್ಥಿತಮ್ |
ಸ್ಥಾವರಂ ಜಂಗಮಂ ಚೈವ ಬಹುರೂಪಸ್ತತಃ ಸ್ಮೃತಃ ॥ 89 ॥
ಭೂತ-ಭವ್ಯ-ಭವಿಷ್ಯತ್ಕಾಲಗಳಲ್ಲಿ, ಸ್ಥಾವರ-ಜಂಗಮಗಳಲ್ಲಿ ಅವನು ಬಹು ವಿಧವಾದ ರೂಪಗಳಲ್ಲಿ ಇರುವುದರಿಂದ ಅವನನ್ನು ಬಹುರೂಪನೆಂದು ಕರೆಯುತ್ತಾರೆ.
ಏಕಾಕ್ಷೋ ಜಾಜ್ವಲನ್ನಾಸ್ತೇ ಸರ್ವತೋಽಕ್ಷಿಮಯೋಽಪಿ ವಾ |
ಕ್ರೋಧಾದ್ಯಶ್ಚಾವಿಶಲ್ಲೋಕಾಂಸ್ತಸ್ಮಾಚ್ಛರ್ವ ಇತಿ ಸ್ಮೃತಃ ॥ 90 ॥
ಅವನು ಎಲ್ಲ ಕಡೆಗಳಲ್ಲೂ ಚಕ್ಷುಸ್ಸನ್ನು ಹೊಂದಿದ್ದರೂ ಅವನ ಒಂದು ಚಕ್ಷುಸ್ಸು ಬಹಳ ಪ್ರಕಾಶವನ್ನು ಹೊಂದಿದೆ. ಅವನು ಕೋಪದಿಂದ ಜಗತ್ತನ್ನು ಪ್ರವೇಶಿಸುವುದರಿಂದ ಅವನನ್ನು ಶರ್ವನೆಂದು ಕರೆಯುತ್ತಾರೆ.
ಧೂಮ್ರಂ ರೂಪಂ ಚ ಯತ್ ತಸ್ಯ ಧೂರ್ಜಟಿಸ್ತೇನ ಉಚ್ಯತೇ |
ವಿಶ್ವೇ ದೇವಾಶ್ಚ ಯತ್ ತಸ್ಮಿನ್ ವಿಶ್ವರೂಪಸ್ತತಃ ಸ್ಮೃತಃ ॥ 91 ॥
ಅವನ ರೂಪವು ಹೊಗೆಯಿಂದ ಯುಕ್ತವಾದಂತೆ ಕಂಡುಬರುವುದರಿಂದ ಅವನನ್ನು ಧೂರ್ಜಟಿ ಎಂದು ಕರೆಯುತ್ತಾರೆ. ಎಲ್ಲ ದೇವತೆಗಳೂ ಅವನನ್ನು ಆಶ್ರಯಿಸಿರುವುದರಿಂದ ಅವನನ್ನು ವಿಶ್ವರೂಪ ಎಂದು ಕರೆಯುತ್ತಾರೆ.
ತಿಸ್ರೋ ದೇವೀರ್ಯದಾ ಚೈವ ಭಜತೇ ಭುವನೇಶ್ವರಃ |
ದ್ಯಾಮಪಃ ಪೃಥಿವೀಂ ಚೈವ ತ್ರ್ಯಂಬಕಶ್ಚ ತತಃ ಸ್ಮೃತಃ ॥ 92 ॥
ದ್ಯುಲೋಕ, ಜಲ ಮತ್ತು ಪೃಥಿವಿ ಇವುಗಳಿಗೆ ಅಭಿಮಾನಿಗಳಾದ ಮೂರು ದೇವಿಯರನ್ನು ಅವನು ಪ್ರೀತಿಯಿಂದ ನೋಡುವುದರಿಂದ ಅವನಿಗೆ ತ್ರ್ಯಂಬಕ ಎಂದು ಹೆಸರು.
ಸಮೇಧಯತಿ ಯನ್ನಿತ್ಯಂ ಸರ್ವಾರ್ಥಾನ್ ಸರ್ವಕರ್ಮಸು |
ಶಿವಮಿಚ್ಛನ್ ಮನುಷ್ಯಾಣಾಂ ತಸ್ಮಾದೇಷ ಶಿವಃ ಸ್ಮೃತಃ ॥ 93 ॥
ಎಲ್ಲ ಕರ್ಮಗಳನ್ನು ಅಭಿವೃದ್ಧಿಗೊಳಿಸಿ, ಯಾವಾಗಲೂ ಮನುಷ್ಯರಿಗೆ ಹಿತವನ್ನು ಬಯಸಿ, ಸರ್ವಾರ್ಥಗಳನ್ನು ಕೊಡುವುದರಿಂದ ಅವನಿಗೆ ಶಿವ ಎಂದು ಹೆಸರು.
ಸಹಸ್ರಾಕ್ಷೋಽಯುತಾಕ್ಷೋ ವಾ ಸರ್ವತೋಽಕ್ಷಿಮಯೋಽಪಿ ವಾ |
ಯಚ್ಚ ವಿಶ್ವಂ ಮಹತ್ಪಾತಿ ಮಹಾದೇವಸ್ತತಃ ಸ್ಮೃತಃ ॥ 94 ॥
ಅವನು ಸಹಸ್ರಾಕ್ಷನಾಗಲೀ ಅಥವಾ ಹತ್ತುಸಹಸ್ರ ನೇತ್ರನಾಗಲೀ ಅಥವಾ ಸರ್ವತ್ರ ಅಕ್ಷಿಮಯನಾಗಲೀ ಅವನು ವಿಶ್ವವನ್ನು ರಕ್ಷಣೆ ಮಾಡುವುದರಿಂದ ಅವನಿಗೆ ಮಹಾದೇವನೆಂದು ಹೆಸರು.
ದಹತ್ಯೂರ್ಧ್ವಂ ಸ್ಥಿತೋ ಯಚ್ಚ ಪ್ರಾಣೋತ್ಪತ್ತಿಸ್ಥಿತಶ್ಚ ಯತ್ |
ಸ್ಥಿತಲಿಂಗಶ್ಚ ಯನ್ನಿತ್ಯಂ ತಸ್ಮಾತ್ ಸ್ಥಾಣುರಿತಿ ಸ್ಮೃತಃ ॥ 95 ॥
ಊರ್ಧ್ವಮುಖವಾಗಿ ದಹಿಸುವುದರಿಂದ, ಪ್ರಾಣೋತ್ಪತ್ತಿಸ್ಥಿತಿಯಲ್ಲಿ ಪ್ರಸನ್ನನಾಗುವುದರಿಂದ ಅವನ ಲಿಂಗವು ನಿತ್ಯವೂ ಉತ್ಥಿತವಾಗಿರುವುದರಿಂದ ಅವನನ್ನು ಸ್ಥಾಣುವೆಂದು ಕರೆಯುತ್ತಾರೆ.
ವಿಷಮಸ್ಥಃ ಶರೀರೇಷು ಸಮಶ್ಚ ಪ್ರಾಣಿನಾಮಿಹ |
ಸ ವಾಯುರ್ವಿಷಮಸ್ಥೇಷು ಪ್ರಾಣಾಪಾನಶರೀರಿಷು ॥ 96 ॥

ಅವನು ಪ್ರಾಣಿಗಳ ವಿಷಮವಾದ ಶರೀರದಲ್ಲಿಯೂ, ಸಮವಾದ ಶರೀರದಲ್ಲಿಯೂ ಇರುತ್ತಾನೆ. ಅವನು ವಿಷಮವಾದ ಶರೀರದಲ್ಲಿ ಪ್ರಾಣಾಪಾನ ಎಂಬ ವಾಯುರೂಪದಿಂದ ಇರುತ್ತಾನೆ.
ಪೂಜಯೇದ್ ವಿಗ್ರಹಂ ಯಸ್ತು ಲಿಂಗಂ ವಾऽಪಿ ಸಮರ್ಚಯೇತ್ |
ಲಿಂಗಂ ಪೂಜಯತಾ ನಿತ್ಯಂ ಮಹತೀಂ ಶ್ರಿಯಮಶ್ನುತೇ ॥ 97 ॥
ಅವನ ಮೂರ್ತಿಯನ್ನಾದರೂ, ಲಿಂಗವನ್ನಾದರೂ ಪೂಜಿಸಬೇಕು. ದೇಹವನ್ನು ಪೂಜಿಸುವವನು ಮಹಾಸಂಪತ್ತನ್ನು ಹೊಂದುತ್ತಾನೆ.
ಊರುಭ್ಯಾಮರ್ಧಮಾಗ್ನೇಯಂ ಸೋಮಾರ್ಧಂ ಚ ಶಿವಾ ತನುಃ |
ಆತ್ಮನೋऽರ್ಧಂ ಚ ತಸ್ಯಾಗ್ನಿಃ ಸೋಮೋऽರ್ಧಂ ಪುನರುಚ್ಯತೇ ॥98॥
ಅವನ ತೊಡೆಗಳಿಂದ ಕೆಳಗಿನ ಭಾಗವು ಅಗ್ನಿಸನ್ನಿಹಿತವಾಗಿದೆ. ಮೇಲಿನ ಭಾಗವು ಚಂದ್ರನಿಂದ ಸನಿನಹಿತವಾಗಿದೆ. ಅವನ ದೇಹವು ಮಂಗಳಕರವಾದುದು. ಅವನ ದೇಹದ ಅರ್ಧಭಾಗವನ್ನು ಅಗ್ನಿ ಎಂದೂ, ಇನ್ನು ಅರ್ಧಭಾಗವನ್ನು ಚಂದ್ರನೆಂದೂ ಕರೆಯುತ್ತಾರೆ.
ತೈಜಸೀ ಮಹತೀ ದೀಪ್ತಾ ದೇವೇಭ್ಯಶ್ಚ ಶಿವಾ ತನುಃ |
ಭಾಸ್ವತೀ ಮಾನುಷೇಷ್ವಸ್ಯ ತನುರ್ಘೋರಾಗ್ನಿರುಚ್ಯತೇ ॥ 99 ॥
ಅವನ ದೀಪ್ತವಾದ ದೊಡ್ಡ ತೇಜಸ್ಸನ್ನು ಹೊಂದಿದ ಶರೀರವು ದೇವತೆಗಳಿಗೆ ಮಂಗಳಪ್ರದವಾಗುತ್ತದೆ. ಶಿವ ಎಂದು ಕರೆಯಲ್ಪಡುತ್ತದೆ. ಮನುಷ್ಯರ ವಿಷಯದಲ್ಲಿ ಪ್ರಕಾಶಮಾನವಾದ ಅವನ ಘೋರವಾದ ಶರೀರವು ಅಗ್ನಿ ಎಂದು ಕರೆಯಲ್ಪಡುತ್ತದೆ.
ಬ್ರಹ್ಮಚರ್ಯಂ ಚರತ್ಯೇಷ ಶಿವಾ ಯಾಸ್ಯ ತನುಸ್ತಯಾ |
ಯಾಸ್ಯ ಘೋರತರಾ ಮೂರ್ತಿಃ ಸರ್ವಾನತ್ತಿ ತಯೇಶ್ವರಃ ॥100॥
ಯನ್ನಿರ್ದಹತಿ ಯತ್ತೀಕ್ಷ್ಣೋ ಯದುಗ್ರೋ ಯತ್ ಪ್ರತಾಪವಾನ್ |
ಮಾಂಸಶೋಣಿತಮಜ್ಜಾದೋ ಯತ್ ತತೋ ರುದ್ರ ಉಚ್ಯತೇ ॥101॥
ಅವನ ಶಿವ ಎಂಬ ಶರೀರವು ಬ್ರಹ್ಮಚರ್ಯವನ್ನು ಆಚರಿಸುತ್ತದೆ. ಅವನ ಘೋರತರವಾದ ಶರೀರವು ಎಲ್ಲರನ್ನೂ ಸಂಹಾರ ಮಾಡುತ್ತದೆ. ಅವನು ಎಲ್ಲರನ್ನೂ ದಹಿಸುವುದರಿಂದ, ತೀಕ್ಷ್ಣನಾಗಿರುವುದರಿಂದ, ಉಗ್ರನಾಗಿರುವುದರಿಂದ, ಪ್ರತಾಪಶಾಲಿಯಾಗಿರುವುದರಿಂದ, ಮಾಂಸ-ಶೋಣಿತ-ಮಜ್ಜಗಳನ್ನು ಭಕ್ಷಿಸುವುದರಿಂದ ಅವನನ್ನು ರುದ್ರನೆಂದು ಕರೆಯುತ್ತಾರೆ.
ಏಷ ದೇವೋ ಮಹಾದೇವೋ ಯೋऽಸೌ ಪಾರ್ಥ ತವಾಗ್ರತಃ |
ಸಂಗ್ರಾಮೇ ಶಾತ್ರವಾನ್ ನಿಘ್ನಂಸ್ತ್ವಯಾ ದೃಷ್ಟಃ ಪಿನಾಕಧೃಕ್ ॥ 102 ॥
ಎಲೈ ಅರ್ಜುನನೇ, ನಿನ್ನ ಮುಂದೆ ಹೋಗುವ ಆ ಪುರುಷನು ದೇವನಾದ ಮಹಾದೇವ. ಅವನು ಪಿನಾಕಪಾಣಿಯಾಗಿ ಯುದ್ಧದಲ್ಲಿ ಶತ್ರುಗಳನ್ನು ಸಂಹಾರ ಮಾಡುವುದನ್ನು ನೀನು ನೋಡಿದ್ದೀಯೆ.
ಸಿಂಧುರಾಜವಧಾರ್ಥಾಯ ಪ್ರತಿಜ್ಞಾತೇ ತ್ವಯಾऽನಘ |
ಕೃಷ್ಣೇನ ದರ್ಶಿತಃ ಸ್ವಪ್ನೇ ಯಸ್ತು ಶೈಲೇಂದ್ರ ಮೂರ್ಧನಿ ॥ 103 ॥
ಎಲೈ ಅನಘನೇ, ನೀನು ಸೈಂಧವನ ವಧೆಯನ್ನು ಪ್ರತಿಜ್ಞೆ ಮಾಡಿದಾಗ ಕೃಷ್ಣನು ಸ್ವಪ್ನದಲ್ಲಿ ನಿನ್ನನ್ನು ಕರೆದುಕೊಂಡು ಹೋಗಿ ಪರ್ವತದ ಶಿಖರದಲ್ಲಿ ತೋರಿಸಿದ ವ್ಯಕ್ತಿಯು ಈತನೇ.
ಏಷ ವೈ ಭಗವಾನ್ ದೇವಃ ಸಂಗ್ರಾಮೇ ಯಾತಿ ತೇऽಗ್ರತಃ |
ಯೇನ ದತ್ತಾನಿ ತೇऽಸ್ತ್ರಾಣಿ ಯೈಸ್ತ್ವಯಾ ದಾನವಾ ಹತಾಃ ॥ 104 ॥
ಭಗವಂತನಾದ ಈ ದೇವನು ರಣರಂಗದಲ್ಲಿ ನಿನ್ನ ಮುಂಭಾಗದಲ್ಲಿ ನಡೆಯುತ್ತಾನೆ. ಅವನು ಕೊಟ್ಟ ಅಸ್ತ್ರಗಳಿಂದಲೇ ನೀನು ದಾನವರನ್ನು ಸಂಹರಿಸಿದೆ.
ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ವೇದೈಶ್ಚ ಸಂಜ್ಞಿತಮ್ |
ದೇವದೇವಸ್ಯ ತೇ ಪಾರ್ಥ ವ್ಯಾಖ್ಯಾತಂ ಶತರುದ್ರಿಯಮ್ ॥ 105 ॥
ಎಲೈ ಪಾರ್ಥನೇ, ವೇದಗಳಲ್ಲಿಯೂ ಹೊಗಳಲ್ಪಟ್ಟ ದೇವದೇವನಾದ ಮಹದೇವನಿಗೆ ಸಂಬಂಧಿಸಿದ ಈ ಶತರುದ್ರೀಯ ಸ್ತೋತ್ರವು ಧನಪ್ರದವಾದುದು, ಕೀರ್ತಿಪ್ರದವಾದುದು, ಪುಣ್ಯಪ್ರದವಾದುದು.
ಸರ್ವಾರ್ಥಸಾಧಕಂ ಪುಣ್ಯಂ ಸರ್ವಕಿಲ್ಬಿಷನಾಶನಮ್ |
ಸರ್ವಪಾಪಪ್ರಶಮನಂ ಸರ್ವದುಃಖಭಯಾಪಹಮ್ ॥ 106 ॥
ಸರ್ವಾರ್ಥಸಾಧಕವಾದುದು, ಪವಿತ್ರವಾದುದು, ಸರ್ವದೋಷವಿನಾಶಕ- ವಾದುದು. ಸರ್ವದುಃಖ, ಭಯಪರಿಹಾರಕವಾದುದು, ಸರ್ವಪಾಪಪ್ರಶಮನ ರೂಪವಾದುದು.
ಚತುರ್ವಿಧಮಿದಂ ಸ್ತೋತ್ರಂ ಯಃ ಶೃಣೋತಿ ನರಃ ಸದಾ |
ವಿಜಿತ್ಯ ಸರ್ವಾನ್ ಶತ್ರೂನ್ ಸ ರುದ್ರಲೋಕೇ ಮಹೀಯತೇ ॥107॥
ಚತುರ್ವಿಧವಾದ ಈ ಸ್ತೋತ್ರವನ್ನು ಯಾವನು ಕೇಳುತ್ತಾನೆಯೋ ಅಂತಹ ಮನುಷ್ಯನು ಎಲ್ಲ ಶತ್ರುವನ್ನೂ ಜಯಿಸಿ ರುದ್ರಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಚರಿತಂ ಮಹಾತ್ಮನೋ ದಿವ್ಯಂ ಸಾಂಗ್ರಾಮಿಕಮಿದಂ ಶುಭಮ್ |
ಪಠನ್ ವೈ ಶತರುದ್ರೀಯಂ ಶೃಣ್ವಂಶ್ಚ ಸತತೋತ್ಥಿತಃ ॥ 108 ॥
ಭಕ್ತೋ ವಿಶ್ವೇಶ್ವರಂ ದೇವಂ ಮಾನುಷೇಷು ತು ಯಃ ಸದಾ |
ವರಾನ್ ಸ ಕಾಮಾಂಲ್ಲಭತೇ ಪ್ರಸನ್ನೇ ತ್ರ್ಯಂಬಕೇ ನರಃ ॥ 109 ॥
ಮಹಾತ್ಮನಾದ ಶಿವನ ದಿವ್ಯವಾದ, ಸಂಗ್ರಾಮಸಂಬಂಧಿಯಾದ ಈ ಶತರುದ್ರೀಯವನ್ನು ನಿತ್ಯವೂ ಶ್ರದ್ಧೆಯಿಂದ ಪಾರಾಯಣ ಮಾಡುವ ಮತ್ತು ಕೇಳುವ ಮನುಷ್ಯನು ವಿಶ್ವೇಶ್ವರನಾದ ಶಿವನ ಭಕ್ತನಾಗಿ, ಅವನ ಅನುಗ್ರಹದಿಂದ ಪ್ರಸನ್ನನಾದ ಅವನಿಂದ ಎಲ್ಲ

ಇಷ್ಟಾರ್ಥಗಳನ್ನೂ ಪಡೆಯುತ್ತಾನೆ.
ಗಚ್ಛ ಯುದ್ಧ್ಯಸ್ವ ಕೌಂತೇಯ ನ ತವಾಸ್ತಿ ಪರಾಜಯಃ |
ಯಸ್ಯ ಮಂತ್ರೀ ಚ ಗೋಪ್ತಾ ಚ ಪಾರ್ಶ್ವತಸ್ತೇ ಜನಾರ್ದನಃ ॥ 110 ॥
ಎಲೈ ಕೌಂತೇಯನೇ, ಹೋಗಿ ಯುದ್ಧವನ್ನು ಮಾಡು. ಯಾವ ನಿನಗೆ ಜನಾರ್ದನನು ಮಂತ್ರಿಯೂ, ರಕ್ಷಕನಾಗಿಯೂ ಪಾರ್ಶ್ವದಲ್ಲಿದ್ದಾನೆಯೋ ಅಂತಹ ನಿನಗೆ ಪರಾಜಯವಿಲ್ಲ.
ಸಂಜಯಃ
ಏವಮುಕತ್ವಾರ್ಜುನಂ ಸಂಖ್ಯೇ ಪರಾಶರಸುತಸ್ತದಾ |
ಜಗಾಮ ಭರತಶ್ರೇಷ್ಠ ಯಥಾಗತಮರಿಂದಮ ॥ 111 ॥
ಸಂಜಯ ಎಲೈ ಅರಿಂದಮನೇ, ಭರತಶ್ರೇಷ್ಠನೇ, ಪರಾಶರಸುತರಾದ ವ್ಯಾಸರು ರಣರಂಗದಲ್ಲಿ ಹೀಗೆ ಹೇಳಿ ಬಂದಂತೆಯೇ ಹೊರಟು ಹೋದರು.
ವೈಶಂಪಾಯನಃ
ಏತದಾಖ್ಯಾಯ ವೈ ಸೂತೋ ರಾಜ್ಞಃ ಸರ್ವಂ ತು ಸಂಜಯಃ |
ಪ್ರಯಾತಃ ಶಿಬಿರಾಯೈವ ದ್ರಷ್ಟುಂ ಕರ್ಣಸ್ಯ ವೈಶಸಮ್ ॥ 112 ॥
ವೈಶಂಪಾಯನ ಸೂತನಾದ ಸಂಜಯನು ಇವೆಲ್ಲವನ್ನೂ ಧೃತರಾಷ್ಟ್ರನಿಗೆ ಹೇಳಿ ಕರ್ಣನ ಯುದ್ಧವನ್ನು ನೋಡಲು (ಶರೀರದಲ್ಲಿ ಉಂಟಾದ ವ್ರಣಗಳನ್ನು ನೋಡಲು) ಶಿಬಿರಕ್ಕೇ ಹೋದನು.
ಯುದ್ಧಂ ಕೃತ್ವಾ ಮಹಾಘೋರಂ ಪಂಚಾಹಾನಿ ಮಹಾಬಲಃ |
ಬ್ರಾಹ್ಮಣೋ ನಿಹತೋ ರಾಜನ್ ಬ್ರಹ್ಮಲೋಕಮವಾಪ್ತವಾನ್ ॥113॥
ಎಲೈ ರಾಜನೇ, ಮಹಾಬಲರಾದ, ಬ್ರಾಹ್ಮಣರಾದ ದ್ರೋಣರು ಹದಿನೈದು ದಿನಗಳ ಕಾಲ ಅತ್ಯಂತ ಘೋರವಾದ ಯುದ್ಧವನ್ನು ಮಾಡಿ ಬ್ರಹ್ಮಲೋಕವನ್ನು ಹೊಂದಿದರು.
ಸ್ವಧೀತೇ ಯತ್ ಫಲಂ ವೇದೇ ತದಸ್ಮಿನ್ನಪಿ ಪರ್ವಣಿ |
ಕ್ಷತ್ರಿಯಾಣಾಮಭೀರೂಣಾಂ ಯುಕ್ತಮತ್ರ ಮಹದ್ ಯಶಃ ॥ 114 ॥
ವೇದವನ್ನು ಅಧ್ಯಯನ ಮಾಡಿದರೆ ಯಾವ ಫಲವಿದೆಯೋ, ಈ ದ್ರೋಣರ ಪರ್ವವನ್ನು ಅಧ್ಯಯನ ಮಾಡಿದರೂ ಅದೇ ಫಲವಿದೆ. ಹೇಡಿಗಳಲ್ಲದ ಕ್ಷತ್ರಿಯರಿಗೆ ಇದರಿಂದ ದೊಡ್ಡ ಕೀರ್ತಿಯು ಪ್ರಾಪ್ತವಾಗುತ್ತದೆ.
ಯ ಇದಂ ಪಠತೇ ಸರ್ವಂ ಶೃಣುಯಾದ್ ವಾಽಪಿ ನಿತ್ಯಶಃ |
ಸ ಮುಚ್ಯತೇ ಮಹಾಪಾಪೈಃ ಕೃತೈರ್ಘೋರೈಶ್ಚ ಕರ್ಮಭಿಃ ॥ 115 ॥
ಯಾವನು ನಿತ್ಯದಲ್ಲಿಯೂ ಈ ಪರ್ವವನ್ನು ಶ್ರವಣ ಮಾಡುತ್ತಾನೆಯೋ ಅವನು ಮಾಡಿದ ಘೋರಕರ್ಮದಿಂದ ಉಂಟಾದ ಮಹಾಪಾಪಗಳೂ ನಾಶವನ್ನು ಹೊಂದುತ್ತವೆ.
ಯಜ್ಞಾವಾಪ್ತಿರ್ಬ್ರಾಹ್ಮಣಸ್ಯೇಹ ನಿತ್ಯಂ
ಘೋರೇ ಯುದ್ಧೇ ಕ್ಷತ್ರಿಯಾಣಾಂ ಯಶಶ್ಚ |
ಶೇಷೌ ವರ್ಣೌ ಕಮನಿಷ್ಟಂ ಲಭೇತೇ
ಪುತ್ರಾನ್ ಪೌತ್ರಾನ್ ನಿತ್ಯಮಿಷ್ಟಾಂಸ್ತಥೈವ ॥ 116 ॥
ಬ್ರಾಹ್ಮಣನು ಕೇಳಿದರೆ ಅವನಿಗೆ ಯಜ್ಞಪ್ರಾಪ್ತಿಯುಂಟಾಗುತ್ತದೆ. ಕ್ಷತ್ರಿಯರಿಗೆ ಘೋರವಾದ ಯುದ್ಧದಲ್ಲಿ ನಿಯಮೇನ ಜಯವೂ ಮತ್ತು ಕೀರ್ತಿಯೂ ಉಂಟಾಗುತ್ತದೆ. ಉಳಿದ ಎರಡು ವಣರ್ಗಳಿಗೆ ಯಾವ ಅನಿಷ್ಟವುಂಟಾದೀತು? ಪುತ್ರರನ್ನೂ, ಪೌತ್ರರನ್ನೂ, ಇಷ್ಟವಾದ ಎಲ್ಲ ವಸ್ತುಗಳನ್ನೂ ಯಾವಾಗಲೂ ಪಡೆಯುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ದ್ರೋಣಪರ್ವಣಿ ಪಂಚಾಶೀತ್ಯಧಿಕಶತತಮೋಽಧ್ಯಾಯಃ ॥
॥ ನಾರಾಯಣಾಸ್ತ್ರಮೋಕ್ಷಪರ್ವಣಿ ನವಮೋಽಧ್ಯಾಯಃ ॥

॥ ನಾರಾಯಣಾಸ್ತ್ರಮೋಕ್ಷಪರ್ವವು ಮುಗಿಯಿತು ॥

॥ ಸಮಾಪ್ತಂ ದ್ರೋಣಪರ್ವ ॥

* * * * *
ಶ್ರೀ ಗುರುಭ್ಯೋ ನಮಃ॥
ಓಂ ನಮೋ ಭಗವತೇ ವಾಸುದೇವಾಯ॥
ಓಂ ನಮೋ ವೇದವ್ಯಾಸಾಯ ॥
ಮಹಾಭಾರತ
ಓಂ ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ |
ಕರ್ಣಪರ್ವ

ಒಂದನೆಯ ಅಧ್ಯಾಯ
ಕರ್ಣವಧೆಯ ಸಂಕ್ಷಿಪ್ತ ವೃತ್ತಾಂತ
ವೈಶಂಪಾಯನಃ
ತತೋ ದ್ರೋಣೇ ಹತೇ ರಾಜನ್ ದುರ್ಯೋಧನಮುಖಾ ನೃಪಾಃ |
ಭೃಶಮುದ್ವಿಗ್ನಮನಸೋ ದ್ರೋಣಪುತ್ರಮುಪಾಗಮನ್ ॥1॥
ವೈಶಂಪಾಯನರು ಜನಮೇಜಯ ರಾಜನಿಗೆ ಹೇಳುತ್ತಾರೆ– ರಾಜನೇ, ದ್ರೋಣಾಚಾರ್ಯರು ಹತರಾದಾಗ ದುರ್ಯೋಧನ ಮುಂತಾದ ರಾಜರೆಲ್ಲರು ಬಲು ಉದ್ವಿಗ್ನಚಿತ್ತರಾಗಿ ಅಶ್ವತ್ಥಾಮನ ಬಳಿಗೆ ಬಂದರು.
ತೇ ದ್ರೋಣಮನುಶೋಚಂತಃ ಕಶ್ಮಲಾಭಿಹತೌಜಸಃ |
ಪರ್ಯುಪಾಸಂತ ಶೋಕಾರ್ತಾಸ್ತತಃ ಶಾರದ್ವತೀಸುತಮ್ ॥2॥
ಅವರು ದ್ರೋಣನ ಬಗ್ಗೆ ಶೋಕಿಸುತ್ತ ಶೋಕದಿಂದ ಶಕ್ತಿಗುಂದಿ ಶೋಕಾರ್ತರಾಗಿ ಅಶ್ವತ್ಥಾಮನ ಬಳಿಯಲ್ಲಿ ಕುಳಿತರು.
ತೇ ಮುಹೂರ್ತಂ ಸಮಾಶ್ವಾಸ್ಯ ಹೇತುಭಿಃ ಶಾಸ್ತ್ರಸಮ್ಮಿತೈಃ |
ರಾತ್ರ್ಯಾಗಮೇ ಮಹೀಪಾಲಾಃ ಸ್ವಾನಿ ವೇಶ್ಮಾನಿ ಭೇಜಿರೇ ॥3॥
ಅವರು ಮುಹೂರ್ತಕಾಲ ಶಾಸ್ತ್ರಸಮ್ಮತವಾದ ಮಾತುಗಳಿಂದ ಅವನನ್ನು ಸಂತೈಸಿ, ಕತ್ತಲಾದಾಗ ತಮ್ಮ ಬಿಡಾರಗಳಿಗೆ ನಡೆದರು.
ತೇ ವೇಶ್ಮಸ್ವಪಿ ಕೌರವ್ಯ ಪೃಥ್ವೀಶಾ ನಾಪ್ನುವನ್ ಸುಖಮ್ |
ಚಿಂತಯಂತಃ ಕ್ಷಯಂ ತೀವ್ರಂ ದುಃಖಶೋಕಸಮನ್ವಿತಾಃ ॥4॥
ಜನಮೇಜಯ ರಾಜನೆ, ಅವರಿಗೆ ಬಿಡಾರಗಳಲ್ಲಿಯೂ ನೆಮ್ಮದಿ ಸಿಗಲಿಲ್ಲ. ತೀವ್ರವಾದ ದುಃಖ, ಶೋಕಗಳಿಂದ ಯುಕ್ತರಾಗಿ ತಮಗಾದ ನಷ್ಟವನ್ನೇ ಚಿಂತಿಸಿದರು.
ವಿಶೇಷತಃ ಸೂತಪುತ್ರೋ ರಾಜಾ ಚೈವ ಸುಯೋಧನಃ |
ದುಃಶಾಸನಶ್ಚ ಶಕುನಿಃ ಸೌಬಲಶ್ಚ ಮಹಾಬಲಃ ॥5॥
ಉಷಿತಾಸ್ತೇ ನಿಶಾಂ ತಾಂ ತು ದುರ್ಯೋಧನನಿವೇಶನೇ |
ಚಿಂತಯಂತಃ ಪರಿಕ್ಲೇಶಾನ್ ಪಾಂಡವಾನಾಂ ಮಹಾತ್ಮನಾಮ್ ॥6॥
ಅವರಲ್ಲಿಯೂ ವಿಶೇಷವಾಗಿ ರಾಜಾ ಸುಯೋಧನ, ಕರ್ಣ, ದುಃಶಾಸನ, ಶಕುನಿ ಇವರು ನಾಲ್ವರು ದುರ್ಯೋಧನನ ಬಿಡಾರದಲ್ಲಿದ್ದು ರಾತ್ರಿ ಇಡೀ ಮಹಾತ್ಮರಾದ ಪಾಂಡವರಿಗೆ ತಾವು ಕೊಟ್ಟಿದ್ದ ಕಷ್ಟ-ನಷ್ಟಗಳನ್ನೇ ಚಿಂತಿಸಿದರು.
ಯತ್ತದ್ ದ್ಯೂತೇ ಪರಿಕ್ಲಿಷ್ಟಾ ಕೃಷ್ಣಾ ಚಾನಾಯಿತಾ ಸಭಾಮ್ |
ತತ್ ಸ್ಮರಂತೋಽನುಶೋಚಂತೋ ಭೃಶಮುದ್ವಿಗ್ನಚೇತಸಃ ॥7॥
ದ್ಯೂತಸಭೆಯಲ್ಲಿ ದ್ರೌಪದಿಯನ್ನು ಸೆಳೆದು ತಂದು ಅವಳಿಗೆ ನಾನಾ ಬಗೆಯ ಕ್ಲೇಶ ಉಂಟುಮಾಡಿದ್ದನ್ನು ನೆನೆದು ಪರಿತಪಿಸುತ್ತ ಬಹಳ ಉದ್ವಿಗ್ನಚಿತ್ತರಾದರು.
ತಥಾ ತು ಸಂಚಿಂತಯತಾಂ ತಾನ್ ಕ್ಲೇಶಾನ್ ದ್ಯೂತಕಾರಿತಾನ್ |
ಕೃಚ್ಛ್ರೇಣ ಕ್ಷಣದಾ ರಾಜನ್ ಜಗಾಮಾಬ್ದಶತೋಪಮಾ ॥8॥
ಹಾಗೇ ದ್ಯೂತದ ಮೂಲಕ ತಾವು ಅವರಿಗೆ ನೀಡಿದ ಕ್ಲೇಶಗಳನ್ನೇ ಚಿಂತಿಸುತ್ತ ಕಷ್ಟದಿಂದ ಆ ಒಂದು ರಾತ್ರಿಯನ್ನು ನೂರು ವರ್ಷಗಳಂತೆ ಕಳೆದರು.
ತತಃ ಪ್ರಭಾತೇ ವಿಮಲೇ ಸ್ಥಿತಾ ದಿಷ್ಟಸ್ಯ ಶಾಸನೇ |
ಚಕ್ರುರಾವಶ್ಯಕಂ ಸರ್ವೇ ವಿಧಿದೃಷ್ಟೇನ ಕರ್ಮಣಾ ॥9॥
ಬಳಿಕ ದೈವಸಂಕಲ್ಪವಿದ್ದಂತಾಗಲಿ ಎಂದುಕೊಂಡು, ಬೆಳಗಾದಾಗ ಎಲ್ಲರೂ ವಿಧ್ಯುಕ್ತರೀತಿಯಿಂದ ಆವಶ್ಯಕ ಕರ್ಮಗಳನ್ನು ಮಾಡಿ ಮುಗಿಸಿದರು.
ತೇ ಕೃತ್ವಾಽವಶ್ಯಕಾರ್ಯಾಣಿ ಸಮಾಶ್ವಸ್ಯ ಚ ಭಾರತ |
ಯೋಗಮಾಜ್ಞಾಪಯಾಮಾಸುರ್ಯುದ್ಧಾಯ ಚ ವಿನಿರ್ಯಯುಃ ॥10॥
ರಾಜನೇ, ಆವಶ್ಯಕ ಕರ್ಮಗಳನ್ನು ತೀರಿಸಿದ ಬಳಿಕ ಅವರು ತಮಗೆ ತಾವೇ ಸಮಾಧಾನ ತಂದುಕೊಂಡು ಯುದ್ಧಸನ್ನಾಹಕ್ಕೆ ಸೇನೆಗೆ ಆದೇಶ ನೀಡಿದರು. ಯುದ್ಧಕ್ಕೆ ಹೊರಟರು.
ಕರ್ಣಂ ಸೇನಾಪತಿಂ ಕೃತ್ವಾ ಕೃತಕೌತುಕಮಂಗಲಾಃ |
ಪೂಜಯಿತ್ವಾ ದ್ವಿಜಶ್ರೇಷ್ಠಾನ್ ದಧಿಪಾತ್ರಘೃತಾಕ್ಷತೈಃ ॥11॥
ಗೋಭಿರಶ್ವೈಶ್ಚ ನಿಷ್ಕೈಶ್ಚ ವಾಸೋಭಿಶ್ಚ ಮಹಾಧನೈಃ |
ವಂದ್ಯಮಾನಾ ಜಯಾಶೀರ್ಭಿಃ ಸೂತಮಾಗಧವಂದಿಭಿಃ ॥12॥
ತಥೈವ ಪಾಂಡವಾ ರಾಜನ್ ಕೃತಪೂರ್ವಾಹ್ಣಿಕಕ್ರಿಯಾಃ |
ಶಿಬಿರಾನ್ನಿರ್ಯಯುಸ್ತೂರ್ಣಂ ಯುದ್ಧಾಯ ಕೃತನಿಶ್ಚಯಾಃ ॥13॥
ಕರ್ಣನಿಗೆ ಸೇನಾಧಿಪತ್ಯ ನೀಡಿ ವಿಧ್ಯುಕ್ತವಾಗಿ ಮಂಗಳಕಾರ್ಯಗಳನ್ನು ನಡೆಸಿದರು. ಬ್ರಾಹ್ಮಣರಿಗೆ ದಧಿಪಾತ್ರೆ, ತುಪ್ಪ, ಅಕ್ಷತೆ, ಗೋ, ಅಶ್ವ, ಕಂಠಾಭರಣ, ಅಮೂಲ್ಯ ವಸ್ತ್ರಗಳನ್ನು ನೀಡಿ ಅವರಿಂದ ಜಯದ ಆಶೀರ್ವಾದ ಪಡೆದು ಸೂತ ಮಾಗಧ ವಂದಿಗಳಿಂದ ಸ್ತುತಿಸಲ್ಪಡುತ್ತ ಶಿಬಿರದಿಂದ ಹೊರಗೆ ನಡೆದರು. ರಾಜನೇ, ಪಾಂಡವರೂ ಕೂಡ ಹಾಗೆಯೇ ಪ್ರಾತರಾಹ್ನಿಕಗಳನ್ನು ತೀರಿಸಿ ಯುದ್ಧಕ್ಕೆ ನಿಶ್ಚಯಮಾಡಿಕೊಂಡು ಶಿಬಿರದಿಂದ ಹೊರಗೆ ನಡೆದರು.
ತತಃ ಪ್ರವವೃತೇ ಯುದ್ಧಂ ತುಮುಲಂ ರೋಮಹರ್ಷಣಮ್ |

ಕುರೂಣಾಂ ಪಾಂಡವಾನಾಂ ಚ ಪರಸ್ಪರಜಯೈಷಿಣಾಮ್ ॥14॥
ಬಳಿಕ ಪರಸ್ಪರ ಜಯಾಕಾಂಕ್ಷೆಯಿಂದ ಹೊರಟ ಕುರುಪಾಂಡವರಲ್ಲಿ ರೋಮಾಂಚಕರವಾದ ತುಮುಲ ಯುದ್ಧ ನಡೆಯಿತು.
ತಯೋರ್ದ್ವಿದಿವಸಂ ಯುದ್ಧಂ ಕುರುಪಾಂಡವಸೇನಯೋಃ |
ಕರ್ಣೇ ಸೇನಾಪತೌ ರಾಜನ್ ಬಭೂವಾದ್ಭುತದರ್ಶನಮ್ ॥15॥
ಕುರುಪಾಂಡವಸೈನ್ಯಗಳಲ್ಲಿ ಕರ್ಣನ ಸೇನಾಧಿಪತ್ಯದಲ್ಲಿ ನಡೆದ ಎರಡು ದಿನಗಳ ಯುದ್ಧ ನೋಡಲು ಅದ್ಭುತವಾಗಿತ್ತು.
ತತಃ ಶತ್ರುಕ್ಷಯಂ ಕೃತ್ವಾ ಸುಮಹಾಂತಂ ರಣೇ ವೃಷಃ |
ಪಶ್ಯತಾಂ ಧಾರ್ತರಾಷ್ಟ್ರಾಣಾಂ ಫಲ್ಗುನೇನ ನಿಪಾತಿತಃ ॥16॥
ಬಳಿಕ ಕರ್ಣನು ಶತ್ರುಪಕ್ಷದಲ್ಲಿ ಅಪಾರ ನಷ್ಟ ಉಂಟುಮಾಡಿ ಕೌರವರು ನೋಡುತ್ತಿದ್ದಂತೇ ಅರ್ಜುನನಿಂದ ಹತನಾದ.
ತತಸ್ತು ಸಂಜಯಃ ಸರ್ವಂ ಗತ್ವಾ ನಾಗಪುರಂ ದ್ರುತಮ್ |
ಆಚಷ್ಟ ಧೃತರಾಷ್ಟ್ರಾಯ ಯದ್ ವೃತ್ತಂ ಕುರುಜಾಂಗಲೇ ॥17॥
ಆಗ ಸಂಜಯನು ಬೇಗನೆ ಹಸ್ತಿನಾಪುರಕ್ಕೆ ಹೋಗಿ, ಧೃತರಾಷ್ಟ್ರನಿಗೆ ಕುರುಕ್ಷೇತ್ರದಲ್ಲಿ ನಡೆದ ಎಲ್ಲ ವೃತ್ತಾಂತವನ್ನೂ ಹೇಳಿದ
ಜನಮೇಜಯಃ
ಆಪಗೇಯಂ ಹತಂ ಶ್ರುತ್ವಾ ದ್ರೋಣಂ ಚಾಪಿ ಮಹಾರಥಮ್ |
ಆಜಗಾಮ ಪರಾಮಾರ್ತಿಂ ವೃದ್ಧೋ ರಾಜಾಽಂಬಿಕಾಸುತಃ ॥18॥
ಸ ಶ್ರುತ್ವಾ ನಿಹತಂ ಕರ್ಣಂ ದುರ್ಯೋಧನಹಿತೈಷಿಣಮ್ |
ಕಥಂ ದ್ವಿಜವರ ಪ್ರಾಣಾನಧಾರಯತ ದುಃಖಿತಃ ॥19॥
ಜನಮೇಜಯರಾಜನು ವೈಶಂಪಾಯನರನ್ನು ಕೇಳುತ್ತಾನೆ– ಮಹಾರಥರಾದ ಭೀಷ್ಮ ಹಾಗೂ ದ್ರೋಣರಿಬ್ಬರೂ ಹತರಾದುದನ್ನು ಕೇಳಿದಾಗಲೆ ರಾಜಾ ಧೃತರಾಷ್ಟ್ರನು ಅತ್ಯಂತ ದುಃಖಾರ್ತನಾಗಿದ್ದ. ಇದೀಗ ದುರ್ಯೋಧನನಿಗೆ ಹಿತೈಷಿಯಾದ ಕರ್ಣನೂ ಹತನಾದುದನ್ನು ಕೇಳಿ ದುಃಖಿತನಾದ ರಾಜ ಬದುಕಿರಲು ಹೇಗೆ ಶಕ್ತನಾದ?
ಯಸ್ಮಿನ್ ಜಯಾಶಾಂ ಪುತ್ರಾಣಾಂ ಸಮಮನ್ಯತ ಪಾರ್ಥಿವಃ |
ತಸ್ಮಿನ್ ಹತೇ ಸ ಕೌರವ್ಯಃ ಕಥಂ ಪ್ರಾಣಾನಧಾರಯತ್ ॥20॥
ತನ್ನ ಮಕ್ಕಳಿಗೆ ಜಯದಾಸೆ ಕರ್ಣನನ್ನೇ ಅವಲಂಬಿಸಿದ್ದಾಗ ಅವನು ಹತನಾದು ದನ್ನು ಕೇಳಿ ಅವನು ಹೇಗೆ ತಾನೇ ಪ್ರಾಣಗಳನ್ನು ಹಿಡಿದುಕೊಂಡಿದ್ದ?
ದುರ್ಮರತ್ವಮಹಂ ಮನ್ಯೇ ನೃಣಾಂ ಕೃಚ್ಛ್ರೇಽಪಿ ವರ್ತತಾಮ್ |
ಯತ್ರ ಕರ್ಣಂ ಹತಂ ಶ್ರುತ್ವಾ ನಾತ್ಯಜಜ್ಜೀವಿತಂ ನೃಪಃ ॥21॥
ಮನುಷ್ಯರಿಗೆ ಎಷ್ಟೇ ಕಷ್ಟಬಂದರೂ ಪ್ರಾಣತ್ಯಾಗ ಮಾಡುವುದು ಶಕ್ಯವಲ್ಲ ಎಂದು ನಾನು ಭಾವಿಸುತ್ತೇನೆ. ಏಕೆಂದರೆ, ಕರ್ಣ ಹತನಾದುದನ್ನು ಕೇಳಿಯೂ ರಾಜ ಪ್ರಾಣಗಳನ್ನು ಬಿಡಲಿಲ್ಲ!
ತಥಾ ಶಾಂತನವಂ ವೃದ್ಧಂ ಬ್ರಹ್ಮನ್ ಬಾಹ್ಲೀಕಮೇವ ಚ |
ದ್ರೋಣಂ ಚ ಸೋಮದತ್ತಂ ಚ ಭೂರಿಶ್ರವಸಮೇವ ಚ ॥22॥
ತಥೈವ ಚಾನ್ಯಾನ್ ಸುಹೃದಃ ಪುತ್ರಾನ್ ಪೌತ್ರಾಂಶ್ಚ ಪಾತಿತಾನ್ |
ಶ್ರುತ್ವಾ ಯನ್ನಾಜಹಾತ್ ಪ್ರಾಣಾಂಸ್ತನ್ಮನ್ಯೇ ದುಷ್ಕರಂ ದ್ವಿಜ ॥23॥
ಮುನಿಯೇ, ವೃದ್ಧನಾದ ಭೀಷ್ಮ ಬಾಹ್ಲೀಕ ದ್ರೋಣ ಸೋಮದತ್ತ ಭೂರಿಶ್ರವ, ಇವರನ್ನೂ ಹಾಗೇ ಬೇರೆ ಮಿತ್ರ ರಾಜರನ್ನೂ ಪುತ್ರ ಪೌತ್ರರನ್ನೂ ತಾನು ಅಗಲಿದುದನ್ನು ಕೇಳಿಯೂ ರಾಜ ಪ್ರಾಣಗಳನ್ನು ಬಿಡಲಿಲ್ಲ ಎಂದಮೇಲೆ ಅದು ದುಷ್ಕರವೆಂದೇ ನಾನು ಭಾವಿಸುತ್ತೇನೆ.
ಏತನ್ಮೇ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮುನೇ |
ನ ಹಿ ತೃಪ್ಯಾಮಿ ಪೂರ್ವೇಷಾಂ ಶೃಣ್ವಾನಶ್ಚರಿತಂ ಮಹತ್ ॥24॥
ಮಹಾಮುನಿಯೇ, ಇದನ್ನೆಲ್ಲ ವಿಸ್ತಾರವಾಗಿ ನನಗೆ ಹೇಳು, ಪೂರ್ವಿಕರ ದೊಡ್ಡ ಇತಿಹಾಸವನ್ನು ಕೇಳಿದಷ್ಟೂ ನನಗೆ ತೃಪ್ತಿಯಾಗುವುದಿಲ್ಲ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಪ್ರಥಮೋಽಧ್ಯಾಯಃ ॥1॥

ಎರಡನೆಯ ಅಧ್ಯಾಯ
ದ್ರೋಣವಧೆಗೆ ಕುರುಸೈನ್ಯ ಶೋಕಿಸಿತು.
ವೈಶಂಪಾಯನಃ
ಹತೇ ಕರ್ಣೇ ಮಹಾರಾಜ ನಿಶಿ ಗಾವಲ್ಗಣಿಸ್ತದಾ |
ದೀನೋ ಯಯೌ ನಾಗಪುರಮಶ್ವೈರ್ವಾತಸಮೈರ್ಜವೇ ॥1॥
ವೈಶಂಪಾಯನರು ಜನಮೇಜಯ ರಾಜನಿಗೆ ಹೇಳುತ್ತಾರೆ–
ಮಹಾರಾಜ, ಕರ್ಣನು ಹತನಾದಾಗ ಅದೇರಾತ್ರಿ ಸಂಜಯನು ದುಃಖಿತನಾಗಿ ವಾಯುವೇಗದ ಕುದುರೆಗಳನ್ನು ಕಟ್ಟಿದ ರಥದಿಂದ ಹಸ್ತಿನಾವತಿಗೆ ಹೋದನು.

ಸ ಹಾಸ್ತಿನಪುರಂ ಗತ್ವಾ ಭೃಶಮುದ್ವಿಗ್ನಚೇತನಃ |
ಜಗಾಮ ಧೃತರಾಷ್ಟ್ರಸ್ಯ ಕ್ಷಯಂ ಪ್ರಕ್ಷೀಣಬಾಂಧವಮ್ ॥2॥
ಬಲು ಉದ್ವಿಗ್ನಚಿತ್ತನಾದ ಅವನು ಹಸ್ತಿನಾವತಿಗೆ ಹೋಗಿ ಬಂಧುಜನರಿಂದ ಶೂನ್ಯವಾಗಿದ್ದ ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿದ.
ಸ ತಮುದ್ವೀಕ್ಷ್ಯ ರಾಜಾನಂ ಕಶ್ಮಲಾಭಿಹತೌಜಸಮ್ |
ವವಂದೇ ಪ್ರಾಂಜಲಿರ್ಭೂತ್ವಾ ಮೂರ್ಧ್ನಾ ಪಾದೌ ನೃಪಸ್ಯ ಹ ॥3॥
ದುಃಖದಿಂದ ಬಲಗುಂದಿದ್ದ ರಾಜನನ್ನು ಕಂಡು ಕೈಮುಗಿದು ತಲೆಯಿಂದ ರಾಜನ ಕಾಲುಗಳನ್ನು ವಂದಿಸಿದ.
ಸಂಪೂಜ್ಯ ಚ ಯಥಾನ್ಯಾಯಂ ಧೃತರಾಷ್ಟ್ರಂ ಮಹೀಪತಿಮ್ |
ಹಾ ಕಷ್ಟಮಿತಿ ಚೋಕ್ತ್ವಾ ಸ ತತೋ ವಚನಮಾದದೇ ॥4॥
ರಾಜಾ ಧೃತರಾಷ್ಟ್ರನನ್ನು ವಿಧ್ಯುಕ್ತವಾಗಿ ಉಪಚರಿಸಿ `ಅಯ್ಯೋ ಕಷ್ಟವೇ!' ಎನ್ನುತ್ತ ಮಾತನಾಡಲು ಪ್ರಾರಂಭಿಸಿದ.
ಸಂಜಯೋಽಹಂ ಕ್ಷಿತಿಪತೇ ಕಚ್ಚಿದಾಸ್ತೇ ಸುಖಂ ಭವಾನ್ |
ಸ್ವದೋಷೈರಾಪದಂ ಪ್ರಾಪ್ಯ ಕಚ್ಚಿನ್ನಾದ್ಯ ವಿಮುಹ್ಯತಿ ॥5॥
ರಾಜನೇ, ನಾನು ಸಂಜಯ, ನೀನು ಸುಖವಾಗಿರುವೆ ತಾನೆ? ನಿನ್ನ ತಪ್ಪು ಗಳಿಂದಲೇ ನೀನು ಕಷ್ಟಕ್ಕೆ ಈಡಾಗಿ ಇಂದಿಗೂ ಮೈಮರೆಯದೇ ಇರುವೆ ತಾನೆ?
ಹಿತಾನ್ಯುಕ್ತಾನಿ ವಿದುರದ್ರೋಣಗಾಂಗೇಯಕೇಶವೈಃ |
ಅಗೃಹೀತಾನ್ಯನುಸ್ಮೃತ್ಯ ಕಚ್ಚಿನ್ನ ಕುರುಷೇ ವ್ಯಥಾಮ್ ॥6॥
ವಿದುರ ದ್ರೋಣ ಭೀಷ್ಮ ಕೃಷ್ಣ ಎಲ್ಲರೂ ನಿನಗೆ ಹಿತವನ್ನು ಬೋಧಿಸಿದರು. ಅದನ್ನು ನೀನು ಕೇಳಲಿಲ್ಲ. ಅದಕ್ಕೆ ವ್ಯಥೆಪಡುತ್ತಿಲ್ಲ ತಾನೆ?
ಸುಹೃದಸ್ತ್ವದ್ವಿತೇ ಯುಕ್ತಾನ್ ಭೀಷ್ಮದ್ರೋಣಮುಖಾನ್ ಪರೈಃ |
ನಿಹತಾನ್ ಯುಧಿ ಸಂಸ್ಮೃತ್ಯ ಕಚ್ಚಿನ್ನ ಕುರುಷೇ ವ್ಯಥಾಮ್ ॥7॥
ನಿನ್ನ ಹಿತವನ್ನೇ ಬಯಸಿದ ಬಂಧುಗಳಾದ ಭೀಷ್ಮದ್ರೋಣಾದಿಗಳು ಯುದ್ಧದಲ್ಲಿ ಮಡಿದುದನ್ನು ನೆನೆದು ವ್ಯಥೆಪಡುತ್ತಿಲ್ಲ ತಾನೆ?
ರಾಮನಾರದಕಣ್ವಾದ್ಯೈರ್ಹಿತಮುಕ್ತಂ ಸಭಾತಳೇ |
ನ ಗೃಹೀತಮನುಸ್ಮೃತ್ಯ ಕಚ್ಚಿನ್ನ ಕುರುಷೇ ವ್ಯಥಾಮ್ ॥8॥
ಸಭೆಯ ಅಂಗಣದಲ್ಲಿ ಪರಶುರಾಮ ನಾರದ ಕಣ್ವ ಮುಂತಾದವರು ಹಿತೋಪದೇಶ ಮಾಡಿದರೂ ಅದನ್ನು ಕೇಳದಿದ್ದುದನ್ನು ನೆನೆದು ವ್ಯಥೆಪಡುತ್ತಿಲ್ಲ ತಾನೆ?
ತಮೇವಂವಾದಿನಂ ರಾಜಾ ಸೂತಪುತ್ರಂ ಕೃತಾಂಜಲಿಮ್ |
ಸುದೀರ್ಘಮಥ ನಿಃಶ್ವಸ್ಯ ದುಃಖಾರ್ತ ಇದಮಬ್ರವೀತ್ ॥9॥
ಸಂಜಯನು ಕೈಮುಗಿದು ಹೀಗೆ ಹೇಳಿದಾಗ ರಾಜನು ದುಃಖಾರ್ತನಾಗಿ ನಿಟ್ಟುಸಿರಿಟ್ಟು ಹೇಳಿದ–
ಧೃತರಾಷ್ಟ್ರಃ
ಆಪಗೇಯೇ ಹತೇ ಶೂರೇ ದಿವ್ಯಾಸ್ತ್ರವತಿ ಸಂಜಯ |
ದ್ರೋಣೇ ಚ ಪರಮೇಷ್ವಾಸೇ ಭೃಶಂ ಮೇ ವ್ಯಥಿತಂ ಮನಃ ॥10॥
ಸಂಜಯ, ದಿವ್ಯಾಸ್ತ್ರಗಳನ್ನು ಹೊಂದಿದ್ದ ಶೂರನಾದ ಭೀಷ್ಮನೂ ಮಹಾ ಬಿಲ್ಲುಗಾರನಾದ ದ್ರೋಣನೂ ಹತನಾದಾಗ ನನ್ನ ಮನಸ್ಸು ಬಹಳ ವ್ಯಥೆಗೆ ಈಡಾಯಿತು.
ಯೋ ರಥಾನಾಂ ಸಹಸ್ರಾಣಿ ದಂಸಿತಾನಾಂ ದಶೈವ ತು |
ಅಹನ್ಯಹನಿ ತೇಜಸ್ವೀ ನಿಜ್ಘ್ನೇ ವಸುಸಂಭವಃ ॥11॥
ತಂ ಹತಂ ಯಜ್ಞಸೇನಸ್ಯ ಪುತ್ರೇಣೇಹ ಶಿಖಂಡಿನಾ |
ಪಾಂಡವೇಯಾಭಿಗುಪ್ತೇನ ಶ್ರುತ್ವಾ ಮೇ ವ್ಯಥಿತಂ ಮನಃ ॥12॥
ಭೀಷ್ಮನು ಕವಚಧಾರಿಗಳಾದ ಹತ್ತುಸಾವಿರ ರಥಿಕರನ್ನು ಪ್ರತಿದಿನ ಸಂಹರಿಸು ತ್ತಿದ್ದ. ವಸುಗಳ ಅವತಾರನಾದ ಆತ ತೇಜಸ್ವಿಯಾಗಿದ್ದ. ಅವನನ್ನು ಅರ್ಜುನನಿಂದ ರಕ್ಷಿತನಾದ ಶಿಖಂಡಿ ಕೊಂದುದನ್ನು ಕೇಳಿ ನನ್ನ ಮನಸ್ಸು ವ್ಯಥೆಗೊಂಡಿತು.
ಭಾರ್ಗವಃ ಪ್ರದದೌ ಯಸ್ಮೈ ಪರಮಾಸ್ತ್ರಂ ಮಹಾಹವೇ |
ಸಾಕ್ಷಾದ್ ರಾಮೇಣ ಯೋ ಬಾಲ್ಯೇ ಧನುರ್ವೇದ ಉಪಾಕೃತಃ ॥13॥
ಸಾಕ್ಷಾತ್ ಪರಶುರಾಮನು ದ್ರೋಣರನ್ನು ಬಾಲ್ಯದಲ್ಲಿಯೇ ಧನುರ್ವೇದದಲ್ಲಿ ತರಬೇತುಗೊಳಿಸಿದ್ದ. ಮಹಾಯುದ್ಧಕ್ಕೆ ಯೋಗ್ಯವಾದ ಮಹಾಸ್ತ್ರವನ್ನು ಅವನಿಗೆ ಉಪದೇಶಿಸಿದ್ದ.
ಯಸ್ಯ ಪ್ರಸಾದಾತ್ ಕೌಂತೇಯಾ ರಾಜಪುತ್ರಾ ಮಹಾರಥಾಃ |
ಮಹಾರಥತ್ವಂ ಸಂಪ್ರಾಪ್ತಾಸ್ತಥಾಽನ್ಯೇ ವಸುಧಾಧಿಪಾಃ ॥14॥
ಆ ದ್ರೋಣರ ಅನುಗ್ರಹದಿಂದ ಪಾಂಡವರೂ ಬೇರೆ ರಾಜರೂ ರಾಜಕುಮಾರರೂ ಮಹಾರಥರಾಗುವುದಕ್ಕೆ ಶಿಕ್ಷಣ ಪಡೆದು ಮಹಾರಥರು ಎನಿಸಿದರು.
ತಂ ದ್ರೋಣಂ ನಿಹತಂ ಶ್ರುತ್ವಾ ಧೃಷ್ಟದ್ಯುಮ್ನೇನ ಸಂಯುಗೇ |
ಸತ್ಯಸಂಧಂ ಮಹೇಷ್ವಾಸಂ ಭೃಶಂ ಮೇ ವ್ಯಥಿತಂ ಮನಃ ॥15॥
ಸತ್ಯಸಂಧನಾದ ಮಹಾ ಬಿಲ್ಲೋಜನಾದ ಆ ದ್ರೋಣನೂ ಕೂಡ ಯುದ್ಧ ದಲ್ಲಿ ಧೃಷ್ಟದ್ಯುಮ್ನನಿಂದ ಹತನಾದುದನ್ನು ಕೇಳಿ ನನ್ನ

ಮನಸ್ಸು ಬಹಳ ವ್ಯಥೆಗೊಂಡಿತು.
ಯಯೋರ್ಲೋಕೇ ಪುಮಾನಸ್ತ್ರೇ ನ ಸಮೋಽಸ್ತಿ ಚತುರ್ವಿಧೇ |
ತೌ ದ್ರೋಣಭೀಷ್ಮೌ ಶ್ರುತ್ವಾ ತು ಹತೌ ಮೇ ವ್ಯಥಿತಂ ಮನಃ ॥16॥
ಚತುರ್ವಿಧವಾದ ಅಸ್ತ್ರವಿದ್ಯೆಯಲ್ಲಿ ದ್ರೋಣರಿಗೆ ಸಮನಾದ ಪುರುಷ ಲೋಕದಲ್ಲಿಲ್ಲ. ಅವರೂ ಹತರಾದುದನ್ನು ಕೇಳಿ ನನ್ನ ಮನಸ್ಸು ವ್ಯಥೆಗೊಂಡಿತು.
ಆದಾನಅಭಿಮಂತ್ರಣಸಂಧಾನಪ್ರಯೋಗಗಳೆಂದು ಅಸ್ತ್ರವಿದ್ಯೆ ನಾಲ್ಕು ಬಗೆ. ಮಂತ್ರಬಾಣಪ್ರಯೋಗಉಪಸಂಹಾರಗಳೆಂದೂ ನಾಲ್ಕು ಬಗೆ. ಚತುರ್ವಿಧ ಅಸ್ತ್ರಗಳು: ಎಂದರೆ ಮುಕ್ತಾಮುಕ್ತ, ಅಮುಕ್ತ, ಕರಮುಕ್ತ, ಯಂತ್ರಮುಕ್ತ ಎಂದು ನಾಲ್ಕು ಬಗೆಯ ಆಯುಧಗಳು. ಈಟಿ ಮುಂತಾದವು ಕೈಯಿಂದ ಪ್ರಯೋಗಿಸುವವು ಕರಮುಕ್ತ ಅಸ್ತ್ರಗಳು, ಬಾಣ ಪಾಷಾಣಗಳು ಯಂತ್ರಮುಕ್ತಗಳು, ಕೋಲು ಬಡಿಗೆಗಳು ಮುಕ್ತಾಮುಕ್ತಗಳು, ಸಣ್ಣ ಕತ್ತಿ ಚೂರಿಗಳು ಅಮುಕ್ತ ಅಸ್ತ್ರಗಳು.
ತ್ರೈಲೋಕ್ಯೇ ಯಸ್ಯ ಚಾಸ್ತ್ರೇಷು ನ ಪುಮಾನ್ ವಿದ್ಯತೇ ಸಮಃ |
ತಂ ದ್ರೋಣಂ ನಿಹತಂ ಶ್ರುತ್ವಾ ಕಿಮಕುರ್ವತ ಮಾಮಕಾಃ ॥17॥
ಮೂರ್ಲೋಕದಲ್ಲಿ ಅಸ್ತ್ರವಿದ್ಯೆಗಳಲ್ಲಿ ದ್ರೋಣರಿಗೆ ಸಮನಾದ ಪುರುಷನಿಲ್ಲ. ಅಂಥ ದ್ರೋಣರೂ ಹತನಾದುದನ್ನು ಕೇಳಿ ನನ್ನವರು ಏನು ಮಾಡಿದರು?
ಸಂಶಪ್ತಕಾನಾಂ ಚ ಬಲೇ ಪಾಂಡವೇನ ಮಹಾತ್ಮನಾ |
ಧನಂಜಯೇನ ವಿಕ್ರಮ್ಯ ಗಮಿತೇ ಯಮಸಾದನಮ್ ॥18॥
ನಾರಾಯಣಾಸ್ತ್ರೇ ಚ ಹತೇ ದ್ರೋಣಪುತ್ರಸ್ಯ ಧೀಮತಃ |
ವಿಪ್ರದ್ರುತೇಷ್ವನೀಕೇಷು ಕಿಮಕುರ್ವತ ಮಾಮಕಾಃ ॥19॥
ಸಂಶಪ್ತಕರ ಸೈನ್ಯವನ್ನು ಮಹಾತ್ಮ ಅರ್ಜುನ ಪರಾಕ್ರಮದಿಂದ ಯಮಲೋಕಕ್ಕೆ ಕಳಿಸಿದಾಗ, ಧೀಮಂತ ಅಶ್ವತ್ಥಾಮನ ನಾರಾಯಣಾಸ್ತ್ರವೂ ಆಗ್ನೇಯಾಸ್ತ್ರವೂ ಕೂಡ ಶಾಂತವಾದಾಗ, ನಮ್ಮ ಸೈನ್ಯವೆಲ್ಲವೂ ಪಲಾಯನ ಮಾಡಿದಾಗ, ನಮ್ಮವರೇನು ಮಾಡಿದರು?
ಆಗ್ನೇಯಾಸ್ತ್ರಕ್ಕೆ ವಾರುಣಾಸ್ತ್ರವು ಪ್ರತ್ಯಸ್ತ್ರವಾಗಬಲ್ಲುದು. ಆದರೆ ನಾರಾಯಣಾಸ್ತ್ರಕ್ಕೆ ಪ್ರತ್ಯಸ್ತ್ರವಿಲ್ಲ. ಅದರಿಂದ ಕೇವಲ ನಾರಾಯಣಾಸ್ತ್ರದ ಉಲ್ಲೇಖವಿದೆ.
ವಿಪ್ರದ್ರುತಾನಹಂ ಮನ್ಯೇ ನಿಮಗ್ನಾನ್ ಶೋಕಸಾಗರೇ |
ಪ್ಲವಮಾನಾನ್ ಹತೇ ದ್ರೋಣೇ ಸನ್ನನೌಕಾನಿವಾರ್ಣವೇ ॥20॥
ನೌಕೆ ಸಮುದ್ರದಲ್ಲಿ ಒಡೆದಾಗ ಪ್ರಯಾಣಿಕರು ಈಜುವಂತೆ ದ್ರೋಣರು ಹತರಾದಾಗ ನಮ್ಮವರು ಶೋಕಸಾಗರದಲ್ಲಿ ಮುಳುಗಿ ಈಜಿ ಪಲಾಯನ ಮಾಡಿದರೆಂದೇ ಭಾವಿಸುತ್ತೇನೆ.
ದುರ್ಯೋಧನಸ್ಯ ಕರ್ಣಸ್ಯ ಭೋಜಸ್ಯ ಕೃತವರ್ಮಣಃ |
ಮದ್ರರಾಜಸ್ಯ ಶಲ್ಯಸ್ಯ ದ್ರೌಣೇಶ್ಚೈವ ಕೃಪಸ್ಯ ಚ ॥21॥
ಮತ್ಪುತ್ರಸ್ಯ ಚ ಶೇಷಸ್ಯ ತಥಾಽನ್ಯೇಷಾಂ ಚ ಸಂಜಯ |
ವಿಪ್ರದ್ರುತೇಷ್ವನೀಕೇಷು ಮುಖವರ್ಣೋಽಭವತ್ ಕಥಮ್ ॥22॥
ದುರ್ಯೋಧನ, ಕರ್ಣ, ಯದುವಂಶದ ಕೃತವರ್ಮ, ಮದ್ರರಾಜ ಶಲ್ಯ, ಅಶ್ವತ್ಥಾಮ, ಕೃಪ, ನನ್ನ ಉಳಿದ ಮಕ್ಕಳು, ಬೇರೆ ರಾಜರು, ಇವರೆಲ್ಲರ ಸೈನ್ಯಗಳು ಪಲಾಯನ ಮಾಡಿದಾಗ, ಅವರ ಮುಖವರ್ಣ ಹೇಗಿತ್ತು, ಸಂಜಯ?
ಏತತ್ಸರ್ವಂ ಯಥಾವೃತ್ತಂ ಮಯಾ ಗಾವಲ್ಗಣೇ ಮಮ |
ಆಚಕ್ಷ್ವ ಪಾಂಡವೇಯಾನಾಂ ಮಾಮಕಾನಾಂ ಚ ವಿಕ್ರಮಮ್ ॥23॥
ಸಂಜಯ, ಇದೆಲ್ಲವನ್ನೂ ಯಥಾವತ್ತಾಗಿ ನನಗೆ ಹೇಳು, ಪಾಂಡವರು ಮತ್ತು ನನ್ನವರು ತೋರಿದ ಯುದ್ಧ ಪರಾಕ್ರಮವನ್ನು ಹೇಳು.
ಸಂಜಯಃ
ತವಾಪರಾಧಾದ್ಯದ್ ವೃತ್ತಂ ಕೌರವೇಯೇಷು ಮಾರಿಷ |
ತಚ್ಛ್ರುತ್ವಾ ಮಾ ವ್ಯಥಾಂ ಕಾರ್ಷೀರ್ದಿಷ್ಟೇ ನ ವ್ಯಥತೇ ಬುಧಃ ॥24॥
ಸಂಜಯನು ಹೇಳುತ್ತಾನೆ ರಾಜನೆ, ನಿನ್ನ ತಪ್ಪಿಂದಾಗಿ ಕೌರವ ಸೈನಿಕರಲ್ಲಿ ಉಂಟಾದ ಅನಾಹುತ, ಕ್ಲೇಶಗಳನ್ನು ಕೇಳಿ ನೀನು ವ್ಯಥೆ ಪಡಬೇಡ. ದೈವಸಂಕಲ್ಪಕ್ಕೆ ತಿಳಿದವನು ವ್ಯಥೆ ಪಡುವುದಿಲ್ಲ.
ಯಸ್ಮಾದಭಾವೀ ಭಾವೀ ವಾ ಭವೇದರ್ಥೋ ನರಂ ಪ್ರತಿ |
ಅಪ್ರಾಪ್ತೌ ತಸ್ಯ ವಾ ಪ್ರಾಪ್ತೌ ನ ಕಶ್ಚಿದ್ ವ್ಯಥತೇ ಬುಧಃ ॥25॥
ದೈವಸಂಕಲ್ಪಾನುಸಾರ ಅಭೀಷ್ಟವು ಮಾನವನಿಗೆ ಲಭಿಸಬಹುದು, ಲಭಿಸದಿರ ಬಹುದು. ಅದು ಲಭಿಸದಿದ್ದರೂ ಲಭಿಸಿದರೂ ತಿಳಿದವನು ಯಾವನೂ ಅದಕ್ಕೆ ಸ್ಪಂದಿಸುವುದಿಲ್ಲ.
ಧೃತರಾಷ್ಟ್ರಃ
ನ ವ್ಯಥಾಽಭ್ಯಧಿಕಾ ಕಾಚಿದ್ ವಿದ್ಯತೇ ಮಮ ಸಂಜಯ |
ದಿಷ್ಟಮೇತತ್ ಪುರಾ ಮನ್ಯೇ ಕಥಯಸ್ವ ಯಥೇಚ್ಛಕಮ್ ॥26॥
ಧೃತರಾಷ್ಟ್ರ ಹೇಳುತ್ತಾನೆ– ಹೆಚ್ಚಿನ ವ್ಯಥೆ ಏನೂ ನನಗೆ ಇಲ್ಲ, ಸಂಜಯ! ಇದು ದೈವಸಂಕಲ್ಪವೆಂದು ನಾನು ತಿಳಿದೇ ಇದ್ದೇನೆ. ನಡೆದ ವೃತ್ತಾಂತವನ್ನು ಯಥೇಚ್ಛ ಹೇಳು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ

ವೈಯಾಸಿಕ್ಯಾಂ ಕರ್ಣಪರ್ವಣಿ ದ್ವಿತೀಯೋಽಧ್ಯಾಯಃ ॥2॥

ಮೂರನೆಯ ಅಧ್ಯಾಯ
ಕರ್ಣವಧೆಯ ಸಂಕ್ಷೇಪ
ಸಂಜಯಃ
ಹತೇ ದ್ರೋಣೇ ಮಹೇಷ್ವಾಸೇ ತವ ಪುತ್ರಾ ಮಹಾರಥಾಃ |
ಬಭೂವುರಸ್ವಸ್ಥಮುಖಾ ವಿಷಣ್ಣಾ ಗತಚೇತಸಃ ॥1॥
ಅವಾಙ್ಮುಖಾಃ ಶಸ್ತ್ರಭೃತಃ ಸರ್ವ ಏವ ವಿಶಾಂಪತೇ |
ಅವೇಕ್ಷಮಾಣಾಃ ಶೋಕಾರ್ತಾ ನಾಭ್ಯಭಾಷನ್ ಪರಸ್ಪರಮ್ ॥2॥
ಸಂಜಯ ಹೇಳುತ್ತಾನೆ– ಮಹಾ ಬಿಲ್ಗಾರನಾದ ದ್ರೋಣ ಹತನಾದಾಗ ಮಹಾರಥರಾದ ನಿನ್ನ ಮಕ್ಕಳು ಮುಖ ಬಾಡಿಸಿಕೊಂಡು ವಿಷಾದದಿಂದ ದಿಕ್ಕು ತೋಚದವರಾಗಿ ಮುಖ ತಗ್ಗಿಸಿಕೊಂಡು ಕುಳಿತರು. ಪರಸ್ಪರ ಮುಖಾವಲೋಕನ ಗೈದರೂ ಶೋಕಾರ್ತರಾಗಿದ್ದು ಏನೂ ಮಾತಾಡಲಿಲ್ಲ.
ತಾನ್ ದೃಷ್ಟ್ವಾ ವ್ಯಥಿತಾಕಾರಾನ್ ಸೈನ್ಯಾನಿ ತವ ಭಾರತ |
ಊರ್ಧ್ವಮೇವ ನಿರೈಕ್ಷಂತ ದುಃಖತಪ್ತಾನ್ಯನೇಕಶಃ ॥3॥
ಈ ಸ್ಥಿತಿಯಲ್ಲಿ ಅವರ ವ್ಯಥೆಯನ್ನು ವ್ಯಕ್ತಗೊಳಿಸುವ ಮುಖಚರ್ಯೆಯನ್ನು ಮತ್ತೆಮತ್ತೆ ಕಂಡ ನಿನ್ನ ಸೈನಿಕರು ದುಃಖತಪ್ತರಾಗಿ ಮೇಲೆ ಆಗಸದ ಕಡೆಗೇ ನೋಡಿದರು.
ಶಸ್ತ್ರಾಣ್ಯೇಷಾಂ ತು ರಾಜೇಂದ್ರ ಶೋಣಿತಾಕ್ತಾನಿ ಸರ್ವಶಃ |
ಪ್ರಾಭ್ರಶ್ಯಂತ ಕರಾಗ್ರೇಭ್ಯೋ ದೃಷ್ಟ್ವಾ ದ್ರೋಣಂ ಹತಂ ಯುಧಿ ॥4॥
ಮಹಾರಾಜ, ಪೂರ್ತಿ ನೆತ್ತರಿಂದ ತೊಯ್ದ ಅವರ ಆಯುಧಗಳು, ಯುದ್ಧದಲ್ಲಿ ದ್ರೋಣ ಹತನಾದುದನ್ನು ಕಂಡೊಡನೆ, ಕೈತುದಿಗಳಿಂದ ಕೆಳಗೆ ಜಾರಿದುವು. ಇದು ಅನಿಷ್ಟ ಸೂಚಕ.
ತಾನಿ ಬದ್ಧಾನ್ಯರಿಷ್ಟಾನಿ ಲಂಬಮಾನಾನಿ ಭಾರತ |
ಅದೃಶ್ಯಂತ ಮಹಾರಾಜ ನಕ್ಷತ್ರಾಣಿ ಯಥಾ ದಿವಿ ॥5॥
ಮಹಾರಾಜ, ಆಕಾಶದಿಂದ ಕೆಳಗೆ ಜಾರುವ ನಕ್ಷತ್ರಗಳಂತೆ, ಸೊಂಟಕ್ಕೆ ಕಟ್ಟಿದ್ದ ಅವರ ಆಯುಧಗಳೂ ಕೂಡ ಕೆಳಮುಖವಾಗಿ ನೇತಾಡುತ್ತ ಅರಿಷ್ಟಸೂಚಕ ವಾದುವು.
ತಥಾ ತು ಸ್ತಿಮಿತಂ ದೃಷ್ಟ್ವಾ ಗತಸತ್ತ್ವಮವಸ್ಥಿತಮ್ |
ಬಲಂ ತವ ಮಹಾರಾಜ ರಾಜಾ ದುರ್ಯೋಧನೋಽಬ್ರವೀತ್ ॥6॥
ಹಾಗೆ ಶಕ್ತಿಗುಂದಿ ಸ್ತಬ್ಧವಾಗಿ ನಿಂತ ನಿನ್ನ ಸೈನ್ಯವನ್ನು ಕಂಡು ರಾಜಾ ದುರ್ಯೋಧನ ನುಡಿದ.
ಭವತಾಂ ಬಾಹುವೀರ್ಯಂ ಹಿ ಸಮಾಶ್ರಿತ್ಯ ಮಯಾ ಯುಧಿ |
ಪಾಂಡವೇಯಾಃ ಸಮಾಹೂತಾ ಯುದ್ಧಂ ಚೇದಂ ಪ್ರವರ್ತಿತಮ್ ॥7॥
ನಿಮ್ಮ ಬಾಹುಬಲವನ್ನು ನೆಚ್ಚಿ ನಾನು ಯುದ್ಧಕ್ಕೆ ಪಾಂಡವಸೈನಿಕರನ್ನು ಆಹ್ವಾನಿಸಿದ್ದೇನೆ. ಅದರಂತೆ ಯುದ್ಧ ನಡೆಯುತ್ತಿದೆ.
ತದಿದಂ ನಿಹತೇ ದ್ರೋಣೇ ವಿಷಣ್ಣಮಿವ ಲಕ್ಷ್ಯತೇ |
ಯುಧ್ಯಮಾನಾಶ್ಚ ಸಮರೇ ಯೋಧಾ ವಧ್ಯಂತಿ ಸರ್ವಶಃ ॥8॥
ಜಯೋ ವಾಽಪಿ ವಧೋ ವಾಽಪಿ ಯುಧ್ಯಮಾನಸ್ಯ ಸಂಯುಗೇ |
ಭವೇತ್ ಕಿಮತ್ರ ಚಿತ್ರಂ ವೈ ಯುಧ್ಯಧ್ವಂ ಸರ್ವತೋಮುಖಾಃ ॥9॥
ಆದರೆ, ದ್ರೋಣ ಹತನಾದೊಡನೆ ಆ ನಿಮ್ಮ ಬಾಹುಬಲ ಕುಗ್ಗಿದಂತೆ ಕಾಣುತ್ತಿದೆ. ರಣರಂಗದಲ್ಲಿ ಹೋರಾಡುವ ಯೋಧರು ಸಾಮಾನ್ಯವಾಗಿ ಶತ್ರುಗಳಿಂದ ಹತರಾಗುತ್ತಲೆ ಇರುತ್ತಾರೆ. ಅವರು ಹೋರಾಡುವಾಗ ಯುದ್ಧದಲ್ಲಿ ಕೆಲವೊಮ್ಮೆ ಜಯವೋ ವಧೆಯೋ ಸಂಭವಿಸಬಹುದು. ಅದರಲ್ಲಿ ಆಶ್ಚರ್ಯ ವೇನಿದೆ? ನೀವಂತೂ ಸರ್ವತೋಮುಖವಾಗಿ ಹೋರಾಡುತ್ತಿರಿ.
ಪಶ್ಯಧ್ವಂ ಚ ಮಹಾತ್ಮಾನಂ ಕರ್ಣಂ ವೈಕರ್ತನಂ ಯುಧಿ |
ಪ್ರಚರಂತಂ ಮಹೇಷ್ವಾಸಂ ದಿವ್ಯೈರಸ್ತ್ರೈರ್ಮಹಾಬಲಮ್ ॥10॥
ಮತ್ತು ಮಹಾತ್ಮಾ ವೈಕರ್ತನ ಕರ್ಣನು ದಿವ್ಯಾಸ್ತ್ರಗಳಿಂದ ಬಲಿಷ್ಠನಾಗಿ ಮಹಾಧನುರ್ಧಾರಿಯಾಗಿ ರಣರಂಗದಲ್ಲಿ ಸಂಚರಿಸುವುದನ್ನು ಗಮನಿಸಿರಿ.
ಯಸ್ಯ ವೈ ಯುಧಿ ಸಂತ್ರಾಸಾತ್ ಕುಂತೀಪುತ್ರೋ ಧನಂಜಯಃ |
ನಿವರ್ತತೇ ಸದಾ ಮಂದಃ ಸಿಂಹಾತ್ ಕ್ಷುದ್ರಮೃಗೋ ಯಥಾ ॥11॥
ಕರ್ಣನಿಗೆ ಹೆದರಿ ಅಲ್ಪಶಕ್ತನಾದ ಕುಂತೀಪುತ್ರ ಅರ್ಜುನ ಸಿಂಹಕ್ಕೆ ಹೆದರುವ ಅಲ್ಪಮೃಗದಂತೆ ರಣರಂಗದಿಂದ ಸದಾ ಹಿಂದೆ ಸರಿಯುತ್ತಾನೆ.
ಯೇನ ನಾಗಾಯುತಪ್ರಾಣೋ ಭೀಮಸೇನೋ ಮಹಾಬಲಃ |
ಮಾನುಷೇಣೈವ ಯುದ್ಧೇನ ತಾಮವಸ್ಥಾಂ ಪ್ರವೇಶಿತಃ ॥12॥
ಹತ್ತು ಸಾವಿರ ಆನೆಗಳ ಬಲವಿರುವ ಮಹಾಬಲಿ ಭೀಮಸೇನನನ್ನು ಕೂಡ ಕರ್ಣನು ದಿವ್ಯಾಸ್ತ್ರ ಪ್ರಯೋಗವಿಲ್ಲದೆ ಕೇವಲ ಮಾನುಷ ಯುದ್ಧದಿಂದಲೇ, ಹಿಂದೆ ನೀವೇ ಕಂಡಿರುವಂತೆ ದುರವಸ್ಥೆಗೆ ಈಡುಮಾಡಿದ್ದಾನೆ.
ಯೇನ ದಿವ್ಯಾಸ್ತ್ರವಿಚ್ಛೂರೋ ಮಾಯಾವೀ ಸ ಘಟೋತ್ಕಚಃ |

ಅಮೋಘಯಾ ರಣೇ ಶಕ್ತ್ಯಾ  ನಿಹತೋ ಭೈರವಂ ನದನ್ ॥13॥
ದಿವ್ಯಾಸ್ತ್ರವನ್ನು ತಿಳಿದಿರುವ ಶೂರನೂ ಮಾಯಾವಿಯೂ ಆದ ಆ ಘಟೋತ್ಕಚನನ್ನು ಕೂಡ ಕರ್ಣನು ರಣರಂಗದಲ್ಲಿ ಭಯಂಕರ ಗರ್ಜನೆ ಮಾಡುತ್ತ ಅಮೋಘವಾದ ಶಕ್ತ್ಯಾಯುಧದಿಂದ ಸಂಹರಿಸಿದ್ದಾನೆ.
ತಸ್ಯ ದುರ್ವಾರವೀರ್ಯಸ್ಯ ಸತ್ಯಸಂಧಸ್ಯ ಧೀಮತಃ।
ಬಾಹ್ವೋರ್ದ್ರವಿಣಮಕ್ಷಯ್ಯಮದ್ಯ ದ್ರಕ್ಷ್ಯಥ ಸಂಯುಗೇ ॥14॥
ಸತ್ಯಸಂಧನಾದ ಧೀಮಂತನಾದ ಆ ಕರ್ಣನ ಪರಾಕ್ರಮವನ್ನು ಯಾರಿಗೂ ತಡೆಯಲಾಗದು. ಅಕ್ಷಯವಾದ ಅವನ ಬಾಹುಬಲದ ಸಂಪತ್ತನ್ನು ಇಂದು ಯುದ್ಧದಲ್ಲಿ ಪ್ರತ್ಯಕ್ಷ ಕಾಣಲಿರುವಿರಿ.
ದ್ರೋಣಪುತ್ರಸ್ಯ ವಿಕ್ರಾಂತಂ ರಾಧೇಯಸ್ಯೈವ ಚೋಭಯೋಃ।
ಪಶ್ಯಂತು ಪಾಂಡುಪುತ್ರಾಸ್ತೇ ವಿಷ್ಣುವಾಸವಯೋರಿವ ॥15॥
ವಿಷ್ಣು ಇಂದ್ರರ ಪರಾಕ್ರಮದಂತೆಯೇ ಅಶ್ವತ್ಥಾಮಕರ್ಣರಿಬ್ಬರ ಪರಾಕ್ರಮ ಇರುವುದನ್ನು ಆ ಪಾಂಡವರು ಕಣ್ಣಾರೆ ಕಾಣಲಿ
ಸರ್ವ ಏವ ಭವಂತಶ್ಚ ಶಕ್ತಾಃ ಪ್ರತ್ಯೇಕಶೋಽಪಿ ವಾ।
ಪಾಂಡುಪುತ್ರಾನ್ ರಣೇ ಹಂತುಂ ಸಸೈನ್ಯಾನ್ ಕಿಮು ಸಂಹತಾಃ ॥16॥
ವೀರ್ಯವಂತಃ ಕೃತಾಸ್ತ್ರಾಶ್ಚ ದ್ರಕ್ಷ್ಯಥಾದ್ಯ ಪರಸ್ಪರಮ್ ॥17॥
ಪಾಂಡವರನ್ನು ಅವರ ಸೈನ್ಯಸಮೇತ ಸಂಹರಿಸಲು ನೀವೆಲ್ಲರೂ ಕೂಡ ಪ್ರತ್ಯೇಕವಾಗಿಯೇ ಸಮರ್ಥರಿದ್ದೀರಿ. ಇನ್ನು ಎಲ್ಲರೂ ಸೇರಿದರೆ ಏನು ಹೇಳಬೇಕು? ನೀವು ಪರಾಕ್ರಮಶಾಲಿಗಳೂ ಅಸ್ತ್ರವೇತ್ತರೂ ಆಗಿರುವುದನ್ನು ಪರಸ್ಪರವಾಗಿ ನೀವೇ ನೋಡುವಿರಿ.
ಸಂಜಯಃ
ಏವಮುಕ್ತ್ವಾ ತತಃ ಕರ್ಣಂ ಚಕ್ರೇ ಸೇನಾಪತಿಂ ತದಾ।
ತವ ಪುತ್ರೋ ಮಹಾವೀರ್ಯೋ ಭ್ರಾತೃಭಿಃ ಸಹಿತೋಽನಘ ॥18॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ಹೀಗೆ ಹೇಳಿ ಮಹಾವೀರ್ಯ ಶಾಲಿಯಾದ ನಿನ್ನ ಮಗ ಸೋದರರೊಂದಿಗೆ ಕರ್ಣನನ್ನು ಸೇನಾಧಿಪತಿಯನ್ನಾಗಿ ಮಾಡಿದ.
ಸೈನಾಪತ್ಯಮಥಾವಾಪ್ಯ ಕರ್ಣೋ ರಾಜನ್ ಮಹಾರಥಃ।
ಸಿಂಹನಾದಂ ವಿನದ್ಯೋಚ್ಚೈಃ ಪ್ರಾಯುಧ್ಯತ ರಣೋತ್ಕಟಃ ॥19॥
ರಾಜನೇ, ಮಹಾರಥನಾದ ಕರ್ಣನು ಸೇನಾಧಿಪತ್ಯವನ್ನು ಹೊಂದಿ ರಣೋನ್ಮತ್ತನಾಗಿ ಗಟ್ಟಿಯಾಗಿ ಸಿಂಹನಾದ ಮಾಡುತ್ತ ಯುದ್ಧ ಮಾಡತೊಡಗಿದ
ಸಸೃಂಜಯಾನಾಂ ಸರ್ವೇಷಾಂ ಪಾಂಚಾಲಾನಾಂ ಚ ಪಶ್ಯತಾಮ್।
ಕೇಕಯಾನಾಂ ವಿದೇಹಾನಾಂ ಚಕಾರ ಕದನಂ ಮಹತ್ ॥20॥
ಸೃಂಜಯರೊಂದಿಗೆ ಎಲ್ಲ ಪಾಂಚಾಲರೂ ಕೇಕಯರೂ ವಿದೇಹರೂ ನೋಡುತ್ತಿದ್ದಂತೇ ಮಹಾಯುದ್ಧವನ್ನು ನಡೆಸಿದ
ತಸ್ಯೇಷುಧಾರಾಃ ಶತಶಃ ಪ್ರಾದುರಾಸಞ್ಶರಾಸನಾತ್।
ಅಗ್ರೇ ಪುಂಖೇಷು ಸಂಸಕ್ತಾ ಯಥಾ ಭ್ರಮರಪಂಕ್ತಯಃ ॥21॥
ಒಂದು ಬಾಣದ ತುದಿ ಮತ್ತೊಂದರ ಬುಡಕ್ಕೆ ತಗುಲಿಕೊಂಡಂತೆ ನೂರಾರು ಬಾಣಗಳ ಪ್ರವಾಹಗಳು ಕರ್ಣನ ಬಿಲ್ಲಿನಿಂದ ಪ್ರಾದುರ್ಭವಿಸಿ ದುಂಬಿಗಳ ಸಾಲಿನಂತೆ ಕಂಡುಬಂದುವು.
ಸ ಪೀಡಯಿತ್ವಾ ಪಾಂಚಾಲಾನ್ ಪಾಂಡವಾಂಶ್ಚ ತರಸ್ವಿನಃ।
ಹತ್ವಾ ಸಹಸ್ರಶೋ ಯೋಧಾನರ್ಜುನೇನ ನಿಪಾತಿತಃ ॥22॥
ವೇಗಶಾಲಿಗಳಾದ ಪಾಂಚಾಲರನ್ನೂ ಪಾಂಡವರನ್ನೂ ಪೀಡಿಸುತ್ತ ಸಾವಿರಾರು ಯೋಧರನ್ನು ಸಂಹರಿಸುತ್ತ ಕೊನೆಯಲ್ಲಿ ಕರ್ಣನು ಅರ್ಜುನನಿಂದ ಹತನಾದ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ತೃತೀಯೋಽಧ್ಯಾಯಃ ॥3॥

## ನಾಲ್ಕನೆಯ ಅಧ್ಯಾಯ
### ಕರ್ಣವಧೆಗೆ ಧೃತರಾಷ್ಟ್ರನ ಶೋಕ
ವೈಶಂಪಾಯನಃ
ಏತಚ್ಛ್ರುತ್ವಾ ಮಹಾರಾಜ ಧೃತರಾಷ್ಟ್ರೋಽಂಬಿಕಾಸುತಃ।
ಶೋಕಸ್ಯಾಂತಮಪಶ್ಯನ್ ವೈ ಹತಂ ಮತ್ವಾ ಸುಯೋಧನಮ್ ॥1॥
ವಿಹ್ವಲಃ ಪತಿತೋ ಭೂಮೌ ನಷ್ಟಚೇತಾ ಇವ ದ್ವಿಪಃ ॥2॥
ವೈಶಂಪಾಯನರು ಜನಮೇಜಯನಿಗೆ ನುಡಿದರು– ಮಹಾರಾಜ, ಕರ್ಣ ಹತನಾದುದನ್ನು ಕೇಳಿದೊಡನೆ ಧೃತರಾಷ್ಟ್ರ ತನ್ನ ಶೋಕಕ್ಕೆ ಪಾರವನ್ನೇ ಕಾಣದಾದ. ದುರ್ಯೋಧನ ಇನ್ನು ಸತ್ತನೆಂದೇ ಭಾವಿಸಿ ಆತ ವಿಹ್ವಲನಾಗಿ ಮೂರ್ಛೆಗೊಂಡು ಸ್ಮೃತಿ ತಪ್ಪಿದ ಆನೆಯಂತೆ ನೆಲಕ್ಕೆ ಬಿದ್ದ.
ತಸ್ಮಿನ್ ನಿಪತಿತೇ ಭೂಮೌ ವಿಹ್ವಲೇ ರಾಜಸತ್ತಮೇ।
ಆರ್ತನಾದೋ ಮಹಾನಾಸೀತ್ ಸ್ತ್ರೀಣಾಂ ಭರತಸತ್ತಮ ॥3॥
ಸ ಶಬ್ದಃ ಪೃಥಿವೀಂ ಸರ್ವಾಂ ಪೂರಯಾಮಾಸ ಸರ್ವತಃ ॥4॥

ಮಹಾರಾಜ ಧೃತರಾಷ್ಟ್ರನು ವಿಹ್ವಲನಾಗಿ ನೆಲದಲ್ಲಿ ಬಿದ್ದಾಗ ಅಂತಃಪುರದಲ್ಲಿ ಸ್ತ್ರೀಯರ ದೊಡ್ಡ ಆರ್ತನಾದ ಉಂಟಾಯಿತು. ಆ ಶಬ್ದವು ಇಡಿ ಭೂಮಿಯನ್ನು ಪೂರ್ತಿಯಾಗಿ ತುಂಬಿಕೊಂಡಿತು.
ಶೋಕಾರ್ಣವೇ ಮಹಾಘೋರೇ ತದಾ ಪುಪ್ಲುವಿರೇ ಸ್ತ್ರಿಯಃ |
ನೇತ್ರಾಣಿ ವಾರಿಣಾಽಽಪೂರ್ಯ ಸರಿತಃ ಸಾಗರಂ ಯಥಾ ॥5॥
ನದಿಗಳು ಸಾಗರವನ್ನು ನೀರಿನಿಂದ ತುಂಬುವಂತೆ ಸ್ತ್ರೀಯರು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಮಹಾಘೋರವಾದ ಶೋಕಸಾಗರದಲ್ಲಿ ಮುಳುಗಿದರು.
ರಾಜಾನಂ ಚ ಸಮಾಸಾದ್ಯ ಗಾಂಧಾರೀ ಭರತರ್ಷಭ |
ನಿಃಸಂಜ್ಞಾ ನ್ಯಪತದ್ ಭೂಮೌ ಸರ್ವಾಣ್ಯಂತಃಪುರಾಣಿ ಚ ॥6॥
ಜನಮೇಜಯನೆ, ಗಾಂಧಾರಿ ಹಾಗೂ ಸಮಸ್ತ ಅಂತಃಪುರಸ್ತ್ರೀಯರು ರಾಜನ ಬಳಿಗೆ ಬಂದು ಸ್ಮೃತಿ ತಪ್ಪಿ, ನೆಲದಲ್ಲಿ ಒರಗಿದರು.
ತತಸ್ತಾಃ ಸಂಜಯೋ ರಾಜನ್ನಾಶ್ವಾಸಯತ ಯೋಷಿತಃ |
ಮುಹ್ಯಮಾನಾಃ ಸುಬಹುಶೋ ಮುಂಚಂತೀರ್ವಾರಿ ನೇತ್ರಜಮ್ ॥7॥
ರಾಜನೆ, ಆಗ ಸಂಜಯನು ಆ ಸ್ತ್ರೀಯರನ್ನು ಸಂತೈಸಿದ. ಅವರು ಮತ್ತೆಮತ್ತೆ ಮೂರ್ಛೆಹೋಗುತ್ತ ಬಹುವಾಗಿ ಕಣ್ಣೀರು ಸುರಿಸಿದರು.
ಆಶ್ವಾಸಿತಾಃ ಸ್ತ್ರಿಯಸ್ತಾಸ್ತು ವೇಪಮಾನಾಃ ಮುಹುರ್ಮುಹುಃ(ಪ್ರದೃಶ್ಯತ)
ಕದಲ್ಯ ಇವ ವಾತೇನ ಧೂಯಮಾನಾಃ ಸಮಂತತಃ ॥8॥
ಎಷ್ಟು ಸಂತೈಸಿದರೂ ಆ ಸ್ತ್ರೀಯರು ಬಿರುಗಾಳಿಗೆ ಸಿಲುಕಿದ ಬಾಳೆಗಿಡಗಳಂತೆ ಥರಥರನೆ ನಡುಗಿದರು.
ರಾಜಾನಂ ವಿದುರಶ್ಚಾಪಿ ಪ್ರಜ್ಞಾಚಕ್ಷುರ್ನರಾಧಿಪಮ್ |
ಆಶ್ವಾಸಯತ್ ಸುಶೀತೇನ ಸಿಂಚಂಸ್ತೋಯೇನ ಕೌರವಮ್ ॥9॥
ವಿದುರನೂ ಕೂಡ ಅಂಧನಾದ ರಾಜಾ ಧೃತರಾಷ್ಟ್ರನಿಗೆ ಒಳ್ಳೆಯ ಶೀತಲ ಜಲ ಸೇಚನ ಮಾಡಿ ಸಂತೈಸಿದ.
ಸ ಲಬ್ಧ್ವಾ ಶನಕೈಃ ಸಂಜ್ಞಾಂ ತಾಶ್ಚ ದೃಷ್ಟ್ವಾ ಸ್ತ್ರಿಯೋ ನೃಪ |
ಉನ್ಮತ್ತ ಇವ ರಾಜಾ ವೈ ತೂಷ್ಣೀಮಾಸೀದ್ ವಿಶಾಂಪತೇ ॥10॥
ಧೃತರಾಷ್ಟ್ರನು ನಿಧಾನವಾಗಿ ಎಚ್ಚರಗೊಂಡು, ಸ್ತ್ರೀಯರು ದುಃಖಿತರಾಗಿರುವು ದನ್ನು ಪ್ರಜ್ಞಾಚಕ್ಷುವಾದ್ದರಿಂದ ಮನಸ್ಸಿನಲ್ಲಿಯೇ ಕಂಡು, ಉನ್ಮತ್ತನಂತೆ ಸುಮ್ಮನೆ ಕುಳಿತ.
ಸಂಪ್ರಧ್ಯಾಯ ಚಿರಂ ರಾಜಾ ವಿನಿಶ್ವಸ್ಯ ಪುನಃ ಪುನಃ |
ದೈವಂ ಚ ಗರ್ಹಯಾಮಾಸ ಬಹು ಮೇನೇ ಚ ಪಾಂಡವಾನ್ ॥11॥
ರಾಜನು ಬಲು ಹೊತ್ತು ಆಲೋಚಿಸಿ ಪುನಃಪುನಃ ನಿಟ್ಟುಸಿರಿಟ್ಟು ದೈವವನ್ನು ನಿಂದಿಸಿದ, ಪಾಂಡವರನ್ನು ಪ್ರಶಂಸಿಸಿದ.
ನಿನಿಂದ ಚಾತ್ಮನೋ ಬುದ್ಧಿಂ ಶಕುನೇಃ ಸೌಬಲಸ್ಯ ಚ |
ಧ್ಯಾತ್ವಾ ಚ ಸುಚಿರಂ ಕಾಲಂ ವೇಪಮಾನೋ ಮುಹುರ್ಮುಹುಃ ॥12॥
ತನ್ನ ಬುದ್ಧಿಯನ್ನು ನಿಂದಿಸಿದ, ಪುನಃ ಪುನಃ ನಡುಗುತ್ತ ಬಹುಹೊತ್ತು ಆಲೋಚಿಸಿ ಶಕುನಿಯ ಬುದ್ಧಿಯನ್ನು ನಿಂದಿಸಿದ.
ಸಂಸ್ತಭ್ಯ ಚ ಮನೋ ಭೂಯೋ ರಾಜಾ ಧೈರ್ಯಸಮನ್ವಿತಃ |
ಪುನರ್ಗಾವಲ್ಗಣಿಂ ಸೂತಂ ಪರ್ಯಪೃಚ್ಛತ್ ಸ ಸಂಜಯಮ್ ॥13॥
ಮನಸ್ಸನ್ನು ಸ್ತಿಮಿತಗೊಳಿಸಿ ಧೈರ್ಯತಂದುಕೊಂಡು ತಿರುಗಿ ಸಂಜಯನನ್ನು ಕೇಳಿದ
ನ ತ್ವಯಾ ಕಥಿತಂ ವಾಕ್ಯಂ ಶ್ರುತಂ ಸಂಜಯ ತತ್ತ್ವತಃ ॥14॥
ಕಚ್ಚಿದ್ ದುರ್ಯೋಧನಃ ಸೂತ ನ ಗತೋ ವೈ ಯಮಕ್ಷಯಮ್ |
ಬ್ರೂಯಾ ನಿರಾಶಾಂ ಸತತಂ ಪುತ್ರಾಣಾಂ ಶಿವತಾಮುತ ॥15॥
ಬ್ರೂಹಿ ಸಂಜಯ ತತ್ತ್ವೇನ ಪುನರುಕ್ತಾಂ ಕಥಾಮಿಮಾಮ್ ॥16॥
ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ– ಸಂಜಯ, ನೀನು ಹೇಳಿದ ಮಾತನ್ನು ನಾನು ಸರಿಯಾಗಿ ಗಮನಿಸಲಿಲ್ಲ. ದುರ್ಯೋಧನನು ಯಮಸದನಕ್ಕೆ ಹೋಗಲಿಲ್ಲ ತಾನೆ? ಹೇಳು, ನನ್ನ ಮಕ್ಕಳಿಗೆ ಸತತ ಕೇವಲ ನಿರಾಸೆಯೆ? ಅಥವಾ ಶುಭವೂ ಏನಾದರೂ ಉಂಟೆ? ಹೇಳು ಸಂಜಯ, ನೀನು ಹೇಳಿದ ವೃತ್ತಾಂತವನ್ನೆ ತಿರುಗಿ ಸರಿಯಾಗಿ ಹೇಳು
ವೈಶಂಪಾಯನಃ
ಏವಮುಕ್ತೋಽಬ್ರವೀತ್ ಸೂತೋ ರಾಜಾನಂ ಜನಮೇಜಯ ॥17॥
ಹತೋ ವೈಕರ್ತನೋ ರಾಜನ್ ಸಹ ಪುತ್ರೈರ್ಮಹಾರಥಃ |
ಸೋದರ್ಯೈಶ್ಚ ಮಹೇಷ್ವಾಸೈಃ ಸೂತಪುತ್ರೈಸ್ತನುತ್ಯಜೈಃ ॥18॥
ವೈಶಂಪಾಯನರು ಹೇಳಿದರು– ಜನಮೇಜಯ, ಧೃತರಾಷ್ಟ್ರನು ಹೀಗೆ ಹೇಳಿದಾಗ ಸಂಜಯನು ಹೇಳತೊಡಗಿದನು : `ರಾಜನೆ, ಮಹಾರಥನಾದ ಕರ್ಣನು ತನ್ನ ಮಕ್ಕಳೊಡನೆ ಮತ್ತು ಮಹಾಧನುರ್ಧಾರಿಗಳಾದ ಸೋದರ ರೊಡನೆ ಹತನಾಗಿದ್ದಾನೆ.
ದುಃಶಾಸನಶ್ಚ ನಿಹತಃ ಪಾಂಡವೇನ ಮಹಾತ್ಮನಾ |
ಪೀತಂ ಚ ರುಧಿರಂ ಕೋಪಾದ್ ಭೀಮಸೇನೇನ ಸಂಯುಗೇ ॥19॥
ಮಹಾತ್ಮನಾದ ಭೀಮಸೇನನಿಂದ ದುಃಶಾಸನನೂ ಯುದ್ಧದಲ್ಲಿ ಹತನಾಗಿದ್ದಾನೆ, ಅವನ ರಕ್ತವನ್ನು ಕೋಪದಿಂದ ಭೀಮಸೇನ ಕುಡಿದಿದ್ದಾನೆ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಚತುರ್ಥೋಽಧ್ಯಾಯಃ ॥4॥

ಐದನೆಯ ಅಧ್ಯಾಯ
ಕುರುಸೈನ್ಯದಲ್ಲಿ ಮಡಿದವರು
ವೈಶಂಪಾಯನಃ
ಏತಚ್ಛ್ರುತ್ವಾ ಮಹಾರಾಜ ಧೃತರಾಷ್ಟ್ರೋಽಂಬಿಕಾಸುತಃ |
ಅಬ್ರುವೀತ್ ಸಂಜಯಂ ಸೂತಂ ಶೋಕೇನಾಕುಲಚೇತನಃ ॥1॥
ವೈಶಂಪಾಯನರು ಹೇಳಿದರು– ಮಹಾರಾಜ ಜನಮೇಜಯ, ಸಂಜಯನಾಡಿದ ಮಾತನ್ನು ಕೇಳಿ ಧೃತರಾಷ್ಟ್ರನು ಶೋಕದಿಂದ ಆಕುಲಚಿತ್ತನಾಗಿ ಹೇಳಿದ.
ದುಷ್ಪ್ರಣೀತೇನ ಮೇ ತಾತ ಸುತಸ್ಯಾದೀರ್ಘದರ್ಶಿನಃ |
ಹತಂ ವೈಕರ್ತನಂ ಶ್ರುತ್ವಾ ಶೋಕೋ ಮರ್ಮಾಣಿ ಕೃಂತತಿ ॥2॥
ಸಂಜಯ, ದೂರದೃಷ್ಟಿರಹಿತನಾದ ನನ್ನ ಮಗನ ತಪ್ಪಾದ ರಾಜನೀತಿಯ ಫಲವಾಗಿ ಕರ್ಣನು ಹತನಾದುದನ್ನು ಕೇಳಿ ಶೋಕಿಸುತ್ತಿದ್ದೇನೆ. ಈ ಶೋಕ ನನಗೆ ಮರ್ಮಭೇದಕವಾಗಿದೆ.
ತಸ್ಯ ಮೇ ಸಂಶಯಂ ಛಿಂಧಿ ಶೋಕಪಾರಂ ತಿತೀರ್ಷತಃ |
ಕುರೂಣಾಂ ಸೃಂಜಯಾನಾಂ ಚ ಕೇ ನು ಜೀವಂತಿ ಕೇ ಹತಾಃ ॥3॥
ಕುರುಗಳಲ್ಲಿ ಮತ್ತು ಸೃಂಜಯರಲ್ಲಿ ಯಾರು ಬದುಕಿ ಉಳಿದಿದ್ದಾರೆ, ಯಾರು ಸತ್ತಿದ್ದಾರೆ, ನನ್ನ ಈ ಸಂಶಯವನ್ನು ಹೋಗಲಾಡಿಸು. ನಾನು ಶೋಕದ ಪಾರವನ್ನು ಕಾಣಬಯಸಿದ್ದೇನೆ.
ಸಂಜಯಃ
ಹತಃ ಶಾಂತನವೋ ರಾಜನ್ ದುರಾಧರ್ಷಃ ಪ್ರತಾಪವಾನ್ |
ಹತ್ವಾ ಪಾಂಡವಯೋಧಾನಾಮರ್ಬುದಂ ದಶಭಿರ್ದಿನೈಃ ॥4॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ರಾಜನೆ, ಪ್ರತಾಪಶಾಲಿ, ದುರ್ಜಯನಾದ ಭೀಷ್ಮನು ಪಾಂಡವರ ಕಡೆಯಲ್ಲಿ ಹತ್ತುಕೋಟಿ ಯೋಧರನ್ನು ಹತ್ತುದಿನಗಳಲ್ಲಿ ಸಂಹರಿಸಿ ಹತನಾದ.
ತಥಾ ದ್ರೋಣೋ ಮಹೇಷ್ವಾಸಃ ಪಾಂಚಾಲಾನಾಂ ಮಹಾರಥಾನ್ |
ನಿಹತ್ಯ ಯುಧಿ ದುರ್ಧರ್ಷಃ ಪಶ್ಚಾದ್ ರುಗ್ಮರಥೋ ಹತಃ ॥5॥
ಹಾಗೇ ದ್ರೋಣನೂ ಬಿಲ್ಗಾರ, ಚಿನ್ನದ ರಥವೇರಿ ದುರ್ಜಯನಾಗಿ, ಪಾಂಚಾಲರ ಮಹಾರಥರನ್ನು ಯುದ್ಧದಲ್ಲಿ ಸಂಹರಿಸಿಯೇ ಬಳಿಕ ಹತನಾದ.
ಹತಶಿಷ್ಟಸ್ಯ ಭೀಷ್ಮೇಣ ದ್ರೋಣೇನ ಚ ಮಹಾತ್ಮನಾ |
ಅರ್ಧಂ ನಿಹತ್ಯ ಸೈನ್ಯಸ್ಯ ಕರ್ಣೋ ವೈಕರ್ತನೋ ಹತಃ ॥6॥
ಮಹಾತ್ಮ ಭೀಷ್ಮ, ಮಹಾತ್ಮ ದ್ರೋಣರಿಂದ ಹತರಾಗದೆ ಉಳಿದ ಸೈನ್ಯದಲ್ಲಿ ಅರ್ಧಾಂಶವನ್ನು ಸಂಹರಿಸಿ ವೈಕರ್ತನ ಕರ್ಣನೂ ಹತನಾದ.
ವಿವಿಂಶತಿರ್ಮಹಾರಾಜ ರಾಜಪುತ್ರೋ ಮಹಾರಥಃ |
ಆನರ್ತಯೋಧಾನ್ ಶತಶೋ ನಿಹತ್ಯ ನಿಹತೋ ಯುಧಿ ॥7॥
ಮಹಾರಾಜ, ಮಹಾರಥನಾದ ರಾಜಕುಮಾರ ವಿವಿಂಶತಿಯು ರಣದಲ್ಲಿ ನೂರಾರು ಆನರ್ತದೇಶದ ಯೋಧರನ್ನು ಕೊಂದು ಹತನಾದ.
ದುರ್ಯೋಧನನ ತಮ್ಮನಾದ ಈತನನ್ನು (ವಿವಿಂಶತಿ) ಭೀಮ ಕೊಂದ.
ತಥಾ ಪುತ್ರೋ ವಿಕರ್ಣಸ್ತೇ ಕ್ಷತ್ರಧರ್ಮಮನುಸ್ಮರನ್ |
ಕ್ಷೀಣಬಾಣೋ ಹತಃ ಶೂರಃ ಸ್ಥಿತೋ ಹ್ಯಭಿಮುಖಃ ಪರೈಃ ॥8॥
ಹಾಗೆ ನಿನ್ನ ಇನ್ನೊಬ್ಬ ಪುತ್ರ ವಿಕರ್ಣನೂ ಭೀಮನಿಂದ ಹತನಾದ. ಆತ ಶೂರ, ಕ್ಷಾತ್ರಧರ್ಮವನ್ನು ನೆನೆದು, ತನ್ನ ಬಾಣಗಳೆಲ್ಲ ಬರಿದಾದರೂ, ಶತ್ರುಗಳ ಮುಂದೆ ನಿಂತ.
ಘೋರರೂಪಾನತಿಕ್ಲೇಶಾನ್ ದುರ್ಯೋಧನಕೃತಾನ್ ಬಹೂನ್ |
ಪ್ರತಿಜ್ಞಾಂ ಸ್ಮರತಾ ತೇನ ಭೀಮಸೇನೇನ ಪಾತಿತಃ ॥9॥
ದುರ್ಯೋಧನನು ಉಂಟುಮಾಡಿದ್ದ ಬಹಳ ಘೋರವಾದ ಮಹಾಕ್ಲೇಶ ಗಳನ್ನೂ, ಅದಕ್ಕೆ ತಾನು ಗೈದಿದ್ದ ಪ್ರತಿಜ್ಞೆಯನ್ನೂ ನೆನೆದು ಭೀಮಸೇನ ಆ ವಿಕರ್ಣನನ್ನು ಸಂಹರಿಸಿದ.
ವಿಂದಾನುವಿಂದಾವಾವಂತ್ಯೌ ರಾಜಪುತ್ರೌ ಮಹಾಬಲೌ |
ಕೃತ್ವಾ ಸುದುಷ್ಕರಂ ಕರ್ಮ ಗತೌ ವೈವಸ್ವತಕ್ಷಯಮ್ ॥10॥
ಮಹಾಬಲಿಷ್ಠರಾದ ಅವಂತೀದೇಶದ ರಾಜಕುಮಾರರು ವಿಂದಅನು ವಿಂದರು ಬಲು ದುಷ್ಕರವಾದ ಸಾಹಸಕರ್ಮ ಮಾಡಿಯೂ ಅರ್ಜುನನಿಂದ ಹತರಾಗಿ ಯಮಲೋಕವನ್ನು ಸೇರಿದರು.
ಸಿಂಧುರಾಷ್ಟ್ರಮುಖಾನೀಹ ದಶ ರಾಷ್ಟ್ರಾಣಿ ಯಸ್ಯ ವೈ |
ವಶೇ ತಿಷ್ಠಂತಿ ವೀರಸ್ಯ ಸ್ಥಿತಸ್ಯ ತವ ಶಾಸನೇ ॥11॥
ಮಹಾವೀರನಾದ ಜಯದ್ರಥ ಸಿಂಧು ಸೌವೀರಾದಿ ಹತ್ತು ರಾಷ್ಟ್ರಗಳನ್ನು ಆಳುತ್ತಿದ್ದವನು. ನಿನ್ನ ಆಜ್ಞೆಯನ್ನು ಪಾಲಿಸುತ್ತಿದ್ದವನು.
ಅಕ್ಷೋಹಿಣೀರ್ದಶೈಕಾಂ ಚ ವಿನಿರ್ಜಿತ್ಯ ಶಿತೈಃ ಶರೈಃ |

ಸೋಽರ್ಜುನೇನ ಹತೋ ರಾಜನ್ ಮಹಾವೀರ್ಯೋ ಜಯದ್ರಥಃ ॥
ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಹರಿತವಾದ ಬಾಣಗಳಿಂದ ಪರಾಜಯ ಗೊಳಿಸುತ್ತ ಅರ್ಜುನ ಆ ಜಯದ್ರಥನನ್ನು ಸಂಹರಿಸಿದ.
ತಥಾ ದುರ್ಯೋಧನಸುತಃ ತರಸ್ವೀ ಯುದ್ಧದುರ್ಮದಃ।
ವರ್ತಮಾನಃ ಪಿತುಃ ಶಾಸ್ತ್ರೇ ಸೌಭದ್ರೇಣ ನಿಪಾತಿತಃ ॥13॥
ದುರ್ಯೋಧನನ ಪುತ್ರ ಲಕ್ಷಣನು ವೇಗಶಾಲಿ, ಯುದ್ದದಲ್ಲಿ ಮದವೇರು ವವನು, ತಂದೆಯ ಆಜ್ಞೆಯನ್ನು ಪಾಲಿಸುವವನು. ಅಭಿಮನ್ಯುವಿನಿಂದ ಹತನಾದ.
ತಥಾ ದೌಃಶಾಸನಿರ್ವೀರೋ ಬಾಹುಶಾಲೀ ರಣೋತ್ಕಟಃ।
ದ್ರೌಪದೇಯೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥14॥
ಹಾಗೇ ವೀರ, ಬಾಹುಶಾಲಿ, ರಣಶೂರನಾದ ದುಃಶಾಸನನ ಪುತ್ರನೂ ದ್ರೌಪದೀಪುತ್ರನೊಂದಿಗೆ ಹೋರಾಡಿ ಹತನಾದ.
ಕಿರಾತಾನಾಮಧಿಪತಿಃ ಸಾಗರಾನೂಪವಾಸಿನಾಮ್।
ದೇವರಾಜಸ್ಯ ಧರ್ಮಾತ್ಮಾ ಪ್ರಿಯೋ ಬಹುಮತಃ ಸಖಾ ॥15॥
ಭಗದತ್ತೋ ಮಹೀಪಾಲಃ ಕ್ಷಾತ್ರಧರ್ಮರತಃ ಸದಾ।
ಧನಂಜಯೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥16॥
ಸಮುದ್ರತೀರವಾಸಿ ಕಿರಾತರ ಅಧಿಪತಿ ಭಗದತ್ತನು ಧರ್ಮಾತ್ಮ, ದೇವರಾಜ ಇಂದ್ರನಿಂದಲೂ ಸಮ್ಮಾನಿತನಾಗಿದ್ದು ಅವನಿಗೆ ಅತಿಪ್ರಿಯನಾಗಿದ್ದ. ಕ್ಷಾತ್ರಧರ್ಮ ನಿರತನಾಗಿದ್ದ. ಅವನೂ ಅರ್ಜುನನೊಂದಿಗೆ ಹೋರಾಡಿ ಮಡಿದ.
ತಥಾ ಕೌರವದಾಯಾದಃ ಸೌಮದತ್ತಿರ್ಮಹಾಯಶಾಃ।
ಹತೋ ಭೂರಿಶ್ರವಾ ರಾಜನ್ ಶೂರಃ ಸಾತ್ಯಕಿನಾ ಯುಧಿ ॥17॥
ಹಾಗೇ ಕೌರವರ ಜ್ಞಾತಿ, ಸೋಮದತ್ತನ ಪುತ್ರ ಭೂರಿಶ್ರವನು ಮಹಾಕೀರ್ತಿ ಶಾಲಿ, ಶೂರ. ರಾಜನೆ, ಅವನೂ ಯುದ್ಧದಲ್ಲಿ ಸಾತ್ಯಕಿಯಿಂದ ಹತನಾದ.
ಶ್ರುತಾಯುರಪಿ ಚಾಂಬಷ್ಠಃ ಕ್ಷತ್ರಿಯಾಣಾಂ ಧುರಂಧರಃ।
ಚರನ್ನಭೀತವತ್ ಸಂಖೇ ನಿಹತಃ ಸವ್ಯಸಾಚಿನಾ ॥18॥
ಅಂಬಷ್ಠದೇಶದ ರಾಜ ಶ್ರುತಾಯುವು ಕ್ಷತ್ರಿಯಧರ್ಮದಲ್ಲಿ ಧುರಂಧರ, ರಣರಂಗದಲ್ಲಿ ನಿರ್ಭಯವಾಗಿ ಹೋರಾಡಿ ಅರ್ಜುನನಿಂದ ಹತನಾದ.
ತವ ಪುತ್ರಃ ಸದಾಽಮರ್ಷೀ ಕೃತಾಸ್ತ್ರೋ ಯುದ್ಧದುರ್ಮದಃ।
ದುಃಶಾಸನೋ ಮಹಾರಾಜ ಭೀಮಸೇನೇನ ಪಾತಿತಃ ॥19॥
ನಿನ್ನ ಪುತ್ರ ದುಃಶಾಸನ, ಸದಾ ಕೋಪಿಷ್ಠ. ಅಸ್ತ್ರವಿದ್ಯಾನಿಪುಣ, ಯುದ್ದದಲ್ಲಿ ಮದವೇರಿ ಹೋರಾಡುವವನು. ಮಹಾರಾಜನೆ, ಅವನೂ ಭೀಮನಿಂದ ಹತನಾದ.
ಯಸ್ಯ ರಾಜನ್ ಗಜಾನೀಕಂ ಬಹುಸಾಹಸ್ರಮುತ್ತಮಮ್।
ಸುದಕ್ಷಿಣಃ ಸ ಸಂಗ್ರಾಮೇ ನಿಹತಃ ಸವ್ಯಸಾಚಿನಾ ॥20॥
ರಾಜನೆ, ಅನೇಕ ಸಾವಿರ ಗಜಸೇನೆಗೆ ಅಧಿಪತಿಯಾಗಿದ್ದ ಸುದಕ್ಷಿಣನೂ ಯುದ್ದದಲ್ಲಿ ಅರ್ಜುನನಿಂದ ಹತನಾದ.
ಕೋಸಲಾನಾಮಧಿಪತಿರ್ಹತ್ವಾ ಬಹುಶತಾನ್ ಪರಾನ್।
ಸೌಭದ್ರೇಣೇಹ ವಿಕ್ರಮ್ಯ ಗಮಿತೋ ಯಮಸಾದನಮ್ ॥21॥
ಕೋಸಲಾಧಿಪತಿ ಬೃಹದ್ಬಲ ಶಕುನಿಯ ಸೋದರ. ನೂರಾರು ಶತ್ರು ಯೋಧ ರನ್ನು ಕೊಂದು ಅಭಿಮನ್ಯುವಿನಿಂದ ಹತನಾದ.
ಬಹುಶೋ ಯೋಧಯಿತ್ವಾ ತು ಭೀಮಸೇನಂ ಮಹಾರಥಃ।
ಚಿತ್ರಸೇನಸ್ತವ ಸುತೋ ಭೀಮಸೇನೇನ ಪಾತಿತಃ ॥22॥
ನಿನ್ನ ಮಗ ಚಿತ್ರಸೇನ ಮಹಾರಥ, ಭೀಮಸೇನನೊಂದಿಗೆ ಬಹಳ ಹೋರಾಡಿ ಅವನಿಂದಲೆ ಹತನಾದ.
ಮದ್ರರಾಜಾತ್ಮಜಃ ಶೂರಃ ಪರೇಷಾಂ ಭಯವರ್ಧನಃ।
ಅಸಿಚರ್ಮಧರಃ ಶ್ರೀಮಾನ್ ಸೌಭದ್ರೇಣ ನಿಪಾತಿತಃ ॥23॥
ಮದ್ರರಾಜಶಲ್ಯನ ಪುತ್ರ, ಶತ್ರುಗಳಿಗೆ ಭಯವನ್ನು ಹೆಚ್ಚಿಸುವವನು, ಖಡ್ಗಚರ್ಮ ಧರಿಸುವವನು ಶ್ರೀಮಂತ, ಅವನೂ ಅಭಿಮನ್ಯುವಿನಿಂದ ಹತನಾದ.
ಸಮಃ ಕರ್ಣೇನ ಸಮರೇ ಸ ಕರ್ಣಸ್ಯೈವ ಪಶ್ಯತಃ।
ವೃಷಸೇನೋ ಮಹಾತೇಜಾಃ ಶೀಘ್ರಾಸ್ತ್ರೋ ದೃಢವಿಕ್ರಮಃ ॥24॥
ಅಭಿಮನ್ಯೋರ್ವಧಂ ಸ್ಮೃತ್ವಾ ಪ್ರತಿಜ್ಞಾಮಪಿ ಚಾತ್ಮನಃ।
ಧನಂಜಯೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥25॥
ಯುದ್ದದಲ್ಲಿ ಕರ್ಣನಿಗೇ ಸಮಾನ ಕರ್ಣಪುತ್ರ, ವೃಷಸೇನ. ಮಹಾ ಪರಾಕ್ರಮಿ. ಶೀಘ್ರವಾಗಿ ಅಸ್ತ್ರವನ್ನೆಸೆಯುವವನು. ದೃಢ ಪರಾಕ್ರಮಿ. ಅರ್ಜುನ ನೊಂದಿಗೆ ಹೋರಾಡಿದ. ಕರ್ಣನು ಮಾಡಿದ ಅಭಿಮನ್ಯು ವಧೆಯನ್ನೂ, ತಾನು ಮಾಡಿದ ಪ್ರತಿಜ್ಞೆಯನ್ನೂ ನೆನೆದು ಅರ್ಜುನನು ಕರ್ಣ ನೋಡುತ್ತಿದ್ದಂತೆಯೇ ಆ ವೃಷಸೇನನನ್ನು ವಧಿಸಿದ.
ನಿತ್ಯಪ್ರಯುಕ್ತವೈರೋ ಯಃ ಪಾಂಡವೈಃ ಪೃಥಿವೀಪತಿಃ।
ವಿಶ್ರಾವ್ಯ ವೈರಂ ಪಾರ್ಥೇನ ಶ್ರುತಾಯುಃ ಸ ನಿಪಾತಿತಃ ॥26॥

ಪಾಂಡವರೊಂದಿಗೆ ಸದಾ ವೈರಮಾಡುತ್ತಿದ್ದ ಶ್ರುತಾಯುರಾಜ ವೈರವನ್ನು ಹೇಳಿಕೊಳ್ಳುತ್ತ ಪಾರ್ಥನಿಂದ ಹತನಾದ.
ಶಲ್ಯಪುತ್ರಸ್ತು ವಿಕ್ರಾಂತಃ ಸಹದೇವೇನ ಮಾರಿಷ |
ಹತೋ ರುಗ್ಮರಥೋ ರಾಜನ್ ಸ್ಯಾಲೋ ಮಾತುಲಜೋ ಯುಧಿ ॥27॥
ಶಲ್ಯಪುತ್ರ ರುಕ್ಮರಥನು ಸಹದೇವನಿಗೆ ಸೋದರಮಾವನ ಮಗನಾಗಿದ್ದು ಮೈದುನನೂ ಹೌದು. ಪೂಜ್ಯನಾದ ರಾಜನೆ, ಅವನು ಸಹದೇವನಿಂದ ಯುದ್ಧದಲ್ಲಿ ಹತನಾಗಿದ್ದಾನೆ.
ರಾಜಾ ಭಾಗೀರಥೋ ವೃದ್ಧೋ ಬೃಹತ್ಕ್ಷತ್ರಶ್ಚ ಕೇಕಯಃ |
ಪರಾಕ್ರಾಂತೌ ಸುವಿಕ್ರಾಂತೌ ನಿಹತೌ ವೀರ್ಯವತ್ತರೌ ॥28॥
ಭಗೀರಥವಂಶದ ಬೃಹತ್ಕ್ಷತ್ರರಾಜ ಮತ್ತು ಕೇಕಯ ಬೃಹತ್ಕ್ಷತ್ರರಾಜರು ಇಬ್ಬರೂ ಯುದ್ಧದಲ್ಲಿ ಮಹಾವಿಕ್ರಮ ವೀರ್ಯವಂತರು. ಪರಾಕ್ರಮಶಾಲಿಗಳು, ವೃದ್ಧರು, ಧೃಷ್ಟದ್ಯುಮ್ನನಿಂದ ಹತರಾದರು.
ಭಗದತ್ತಸುತೋ ರಾಜನ್ ಕೃತಪ್ರಜ್ಞೋ ಮಹಾಬಲಃ |
ಶ್ಯೇನವಚ್ಚರತಾ ಸಂಖ್ಯೇ ನಕುಲೇನ ನಿಪಾತಿತಃ ॥29॥
ರಾಜನೆ, ಪ್ರಜ್ಞಾವಂತನೂ, ಮಹಾಬಲಿಯೂ ಆದ ಭಗದತ್ತನ ಪುತ್ರನು ರಣರಂಗದಲ್ಲಿ ಹದ್ದಿನಂತೆ ವೇಗವಾಗಿ ಸಂಚರಿಸುತ್ತಿರುವ ನಕುಲನಿಂದ ಹತನಾದ.
ಪಿತಾಮಹಸ್ತವ ತಥಾ ಬಾಹ್ಲೀಕಃ ಸಹ ಬಾಹ್ಲಿಕೈಃ |
ನಿಹತೋ ಭೀಮಸೇನೇನ ಮಹಾಬಲಪರಾಕ್ರಮಃ ॥30॥
ಹಾಗೇ ನಿನ್ನ ತಾತನಾದ ಮಹಾಬಲಪರಾಕ್ರಮಿ ಬಾಹ್ಲೀಕರಾಜನೂ ಬಾಹ್ಲಿಕ ಯೋಧರೊಂದಿಗೆ ಭೀಮಸೇನನಿಂದ ಹತನಾಗಿದ್ದಾನೆ.
ಜಯತ್ಸೇನಸ್ತಥಾ ರಾಜನ್ ಜಾರಾಸಂಧಿರ್ಮಹಾಬಲಃ |
ಮಾಗಧೋ ನಿಹತಃ ಸಂಖ್ಯೇ ಸೌಭದ್ರೇಣ ಮಹಾತ್ಮನಾ ॥31॥
ರಾಜನೆ, ಜರಾಸಂಧನ ಪುತ್ರ, ಮಹಾಬಲಿಯಾದ ಮಗಧರಾಜ, ಜಯತ್ಸೇನನು ಯುದ್ಧದಲ್ಲಿ ಮಹಾತ್ಮನಾದ ಅಭಿಮನ್ಯುವಿನಿಂದ ಹತನಾದ.
ನಿರ್ಣಯ(26.286)ದ ಪ್ರಕಾರ ಭೀಮನಿಂದ ಜಯತ್ಸೇನ ಹತನಾದ. ಅದರಿಂದ ಇದನ್ನು ಪುರುಷವ್ಯತ್ಯಾಸವೆಂಬ ಒಂದು ಪುರಾಣಶೈಲಿ ಎಂದು ನಾವು ಗ್ರಹಿಸಬೇಕು.
ಅಸಿಚರ್ಮಧರಃ ಶೂರಃ ಪರೇಷಾಂ ಭಯವರ್ಧನಃ |
ಅಗ್ನಿಚಕ್ರವದಾಘೂರ್ಣನ್ ಸೌಮದತ್ತಿರ್ನಿಪಾತಿತಃ ॥32॥
ಸೋಮದತ್ತನ ಪುತ್ರ ಭೂರಿಶ್ರವನು ಶೂರ, ಶತ್ರುಗಳಿಗೆ ಭಯವನ್ನು ಹೆಚ್ಚಿಸುವವನು, ಅಗ್ನಿಚಕ್ರದಂತೆ ರಣರಂಗದಲ್ಲಿ ಸಂಚರಿಸುವವನು. ಅವನನ್ನು ಸಾತ್ಯಕಿ ಸಂಹರಿಸಿದ.
ಪುತ್ರಸ್ತೇ ದುರ್ಮುಖೋ ರಾಜನ್ ದುಃಸಹಶ್ಚ ಮಹಾರಥಃ |
ಗದಯಾ ಭೀಮಸೇನೇನ ನಿಹತೌ ಶೂರಮಾನಿನೌ ॥33॥
ರಾಜನೆ, ನಿನ್ನ ಪುತ್ರನಾದ ಮಹಾರಥನಾದ ದುರ್ಮುಖನೂ ದುಃಸಹನೂ ತಾವು ಶೂರರೆಂದು ಅಭಿಮಾನಪಡುತ್ತಿದ್ದವರು, ಭೀಮಸೇನನ ಗದೆಯಿಂದ ಹತರಾದರು.
ದುರ್ಮರ್ಷಣೋ ದುರ್ವಿಷಹೋ ದುರ್ಜಯಶ್ಚ ಮಹಾರಥಃ |
ಕೃತ್ವಾ ಸುದುಷ್ಕರಂ ಕರ್ಮ ಗತಾ ವೈವಸ್ವತಕ್ಷಯಮ್ ॥34॥
ದುರ್ಮರ್ಷಣ ದುರ್ವಿಷಹ ದುರ್ಜಯರು ನಿನ್ನ ಪುತ್ರರು ಮಹಾರಥರು, ರಣರಂಗದಲ್ಲಿ ಮಹಾಸಾಹಸ ಕರ್ಮಮಾಡಿ ಭೀಮನಿಂದ ಹತರಾದರು.
ಉಭೌ ಕಲಿಂಗವೃಷಭೌ ಭ್ರಾತರೌ ಯುದ್ಧದುರ್ಮದೌ |
ಕೃತ್ವಾ ಸುದುಷ್ಕರಂ ಕರ್ಮ ಗತೌ ವೈವಸ್ವತಕ್ಷಯಮ್ ॥35॥
ಕಲಿಂಗವೃಷಭರು ಇಬ್ಬರು ಸೋದರರು, ಯುದ್ಧದ ಮದ ಉಳ್ಳವರು, ಯುದ್ಧದಲ್ಲಿ ಸಾಹಸ ಕರ್ಮಮಾಡಿ ಹತರಾದರು.
ಸಚಿವೋ ವೃಷಪರ್ವಾ ತೇ ತಥಾ ಪರಮವೀರ್ಯವಾನ್ |
ಭೀಮಸೇನೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥36॥
ನಿನ್ನ ಮಂತ್ರಿಯಾದ ವೃಷಪರ್ವನೂ ಮಹಾವೀರ, ಭೀಮನೊಂದಿಗೆ ಹೋರಾಡಿ ಯಮಲೋಕಕ್ಕೆ ಹೋದ.
ತಥೈವ ಪೌರವೋ ರಾಜಾ ನಾಗಾಯುತಬಲೋ ಮಹಾನ್ |
ಸಗಣಃ ಪಾಂಡುಪುತ್ರೇಣ ನಿಹತಃ ಸವ್ಯಸಾಚಿನಾ ॥37॥
ಹತ್ತುಸಾವಿರ ಆನೆಯ ಬಲ ಉಳ್ಳ ಪೌರವ ಮಹಾರಾಜನೂ ಪರಿವಾರ ಸಮೇತನಾಗಿ ಪಾಂಡುಪುತ್ರ ಸವ್ಯಸಾಚಿಯಿಂದ ಹತನಾದ.
ವಸಾತಯೋ ಮಹಾರಾಜ ದ್ವಿಸಾಹಸ್ರಾಃ ಪ್ರಹಾರಿಣಃ |
ಶೂರಸೇನಾಶ್ಚ ವಿಕ್ರಾಂತಾಃ ಸರ್ವೇ ಯುಧಿ ನಿಪಾತಿತಾಃ ॥38॥
ಮಹಾರಾಜ, ಪರಾಕ್ರಮಿಯೋಧರಾದ ಎರಡುಸಾವಿರ ಮಂದಿ ವಸಾತಿಗಳೂ ಶೂರಸೇನರೂ ಎಲ್ಲರೂ ಯುದ್ಧದಲ್ಲಿ ಅರ್ಜುನನಿಂದ ಹತರಾದರು.
ಆಭೀರಕಾಃ ಕವಚಿನಃ ಪ್ರಹರಂತೋ ರಣೋತ್ಕಟಾಃ |
ಶಿಬಯಶ್ಚ ರಥೋದಾರಾಃ ಕಲಿಂಗಸಹಿತಾ ಹತಾಃ ॥39॥
ಆಭೀರಕರು, ಶಿಬಿಗಳು, ಕಲಿಂಗರು ಎಲ್ಲರೂ ರಣಧೀರರು, ರಥಿಕರು, ಕವಚಗಳನ್ನು ಧರಿಸಿ ಹೋರಾಡುವವರು. ಎಲ್ಲರೂ

ಅರ್ಜುನನಿಂದ ಹತರಾದರು.
ಗೋಕುಲೇ ನಿತ್ಯಸಂವೃದ್ಧಾ ಯುದ್ಧೇ ಪರಮಕೋವಿದಾಃ |
ಗೋಪಾಲಾಃ ಕೃತವೀರ್ಯಾಶ್ಚ ನಿಹತಾಃ ಸವ್ಯಸಾಚಿನಾ ॥40॥
ಗೋಕುಲದಲ್ಲಿಯೇ ಸದಾ ಬೆಳೆದವರು, ಯುದ್ಧದಲ್ಲಿ ಒಳ್ಳೆಯ ನಿಪುಣರು, ಮಹಾ ಪರಾಕ್ರಮಿಗಳು, ಇಂಥ ಗೋಪಾಲಯೋಧರು ಅರ್ಜುನನಿಂದ ಹತರಾದರು.
ಶ್ರೇಣಯೋ ಬಹುಸಾಹಸ್ರಾಃ ಸಂಶಪ್ತಕಗಣಾಶ್ಚ ಯೇ |
ತೇ ಸರ್ವೇ ಪಾರ್ಥಮಾಸಾದ್ಯ ಗತಾ ವೈವಸ್ವತಕ್ಷಯಮ್ ॥41॥
ಸಂಶಪ್ತಕಗಣದವರು ಬಹುಸಹಸ್ರ ಸಂಖ್ಯೆಯಲ್ಲಿದ್ದು ರಾಜನಿಗೆ `ಶ್ರೇಣಿ' ಗಳಾಗಿದ್ದರು, ಅಂದರೆ ರಾಜನಿಗೆ ಸಮಾನವಯಸ್ಕರಾದ ಅಂಗರಕ್ಷಕರಾಗಿದ್ದರು. ಅವರೆಲ್ಲರೂ ಅರ್ಜುನನ ರಥಕ್ಕೆ ಮುತ್ತಿಗೆ ಹಾಕಿ ಅವನಿಂದ ಹತರಾದರು.
ಶ್ಯಾಲೌ ತವ ಮಹಾರಾಜ ರಾಜಾನೌ ವೃಷಕಾಚಲೌ |
ತ್ವದರ್ಥಂ ತೌ ಪರಾಕ್ರಾಂತೌ ನಿಹತೌ ಸವ್ಯಸಾಚಿನಾ ॥42॥
ಮಹಾರಾಜ, ಶಕುನಿಯ ಸೋದರರಾದ ವೃಷಕ ಮತ್ತು ಅಚಲರಾಜರು ನಿನಗೆ ಮೈದುನರು, ನಿನಗಾಗಿ ಯುದ್ಧದಲ್ಲಿ ಅತಿಯಾದ ಪರಾಕ್ರಮವನ್ನು ತೋರಿ ಅರ್ಜುನನಿಂದ ಹತರಾದರು.
ಉಗ್ರಕರ್ಮಾ ಮಹೇಷ್ವಾಸೋ ನಾಮತಃ ಕರ್ಮತಸ್ತಥಾ |
ಸಾಲ್ವರಾಜೋ ಮಹಾರಾಜ ಭೀಮಸೇನೇನ ಪಾತಿತಃ ॥43॥
ಮಹಾಬಿಲ್ಲುಗಾರನಾದ ಸಾಲ್ವರಾಜ ಉಗ್ರಕರ್ಮನು, ಅವನ ಹೆಸರೇ ಹೇಳುವಂತೆ ಉಗ್ರಕರ್ಮಗಳನ್ನೇ ಮಾಡುವವನು. ಮಹಾರಾಜ, ಅವನೂ ಭೀಮನಿಂದ ಹತನಾದ.
ಓಘವಾಂಶ್ಚ ಮಹಾರಾಜ ಬೃಹಂತಸಹಿತೋ ರಣೇ |
ಪರಾಕ್ರಮೀ ಚ ಮಿತ್ರಾರ್ಥೇ ಗತೋ ವೈವಸ್ವತಕ್ಷಯಮ್ ॥44॥
ಓಘವಂತ ಮತ್ತು ಬೃಹಂತರು ಯುದ್ಧದಲ್ಲಿ ಪರಾಕ್ರಮಿಗಳು. ಮಹಾರಾಜ, ಅವರೂ ಮಿತ್ರನಾದ ನಿನಗಾಗಿ ಅಸುನೀಗಿದರು.
ತಥೈವ ರಥಿನಾಂ ಶ್ರೇಷ್ಠಃ ಕ್ಷೇಮಧೂರ್ತಿರ್ವಿಶಾಂಪತೇ |
ನಿಹತೋ ಗದಯಾ ರಾಜನ್ ಭೀಮಸೇನೇನ ಸಂಯುಗೇ ॥45॥
ಹಾಗೆಯೇ, ರಾಜನೆ, ರಥಿಕರಲ್ಲಿ ಶ್ರೇಷ್ಠನಾದ ಕ್ಷೇಮಧೂರ್ತಿಯೂ ಯುದ್ಧ ದಲ್ಲಿ ಭೀಮಸೇನನ ಗದೆಯಿಂದ ಹತನಾದ.
ತಥಾ ರಾಜನ್ ಮಹೇಷ್ವಾಸೋ ಜಲಸಂಧೋ ಮಹಾಬಲಃ |
ಸುಮಹತ್ ಕದನಂ ಕೃತ್ವಾ ಹತಃ ಸಾತ್ಯಕಿನಾ ಯುಧಿ ॥46॥
ಹಾಗೆಯೇ ಮಹಾಬಲಿ ಬಿಲ್ಲಾಳುವಾದ ಮಗಧರಾಜ ಜಲಸಂಧ ಬಲು ದೊಡ್ಡ ಕಾಳಗ ಮಾಡಿ ಸಾತ್ಯಕಿಯಿಂದ ಹತನಾದ.
ಅಲಾಯುಧೋ ರಾಕ್ಷಸೇಂದ್ರೋ ಬಕಬಂಧುಶ್ಚ ಯಾನವಾನ್ |
ಘಟೋತ್ಕಚೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥47॥
ಅಲಾಯುಧನು ಬಕಾಸುರನ ಸೋದರನಾದ ಮಹಾರಾಕ್ಷಸ. ದೊಡ್ಡ ರಥ ಏರಿ ಬಂದು, ಬಲು ಪರಾಕ್ರಮ ತೋರಿ ಘಟೋತ್ಕಚನಿಂದ ಶಿರಶ್ಛೇದ ಹೊಂದಿದ.
ವಿಕ್ರಾಂತಾ ಬಲವಂತಶ್ಚ ಭ್ರಾತರಃ ಸಹ ಭಾರತ |
ಕೇಕಯಾಃ ಸರ್ವತಶ್ಚಾಪಿ ನಿಹತಾಃ ಸವ್ಯಸಾಚಿನಾ ॥48॥
ರಾಜನೇ, ಪರಾಕ್ರಮಿಗಳು ಹಾಗೂ ಬಲಿಷ್ಠರೂ ಆದ ಕೇಕಯದೇಶದ ಸೋದರರೆಲ್ಲರೂ ಅರ್ಜುನನಿಂದ ಹತರಾದರು.
ರಾಧೇಯಾಃ ಸೂತಪುತ್ರಾಶ್ಚ ಕರ್ಣಸ್ಯ ಭ್ರಾತರಸ್ತಥಾ |
ರಿಪೂಣಾಂ ಕದನಂ ಕೃತ್ವಾ ಗತಾ ವೈವಸ್ವತಕ್ಷಯಮ್ ॥49॥
ಕರ್ಣನ ಸೋದರರು ಅಧಿರಥರಾಧೆಯರ ಮಕ್ಕಳು. ಶತ್ರುಗಳೊಂದಿಗೆ ಹೋರಾಡಿ ಮಡಿದರು.
ಮದ್ರಕಾ ಮಾಲವಾಶ್ಚೈವ ದ್ರವಿಡಾಶ್ಚೋಗ್ರವಿಕ್ರಮಾಃ |
ಯೌಧೇಯಾಶ್ಚ ಲಿಲಿಂಧ್ರಾಶ್ಚ ಕ್ಷುದ್ರಕಾಶ್ಚಾಪ್ಯುಶೀನರಾಃ ॥50॥
ಮಚ್ಚಿಲ್ಲಕಾಸ್ತುಂಡಿಕೇರಾಃ ಸಾವಿತ್ರೀಪುತ್ರಕಾಸ್ತಥಾ |
ಪ್ರಾಗುದೀಚ್ಯಾಃ ಪ್ರತೀಚ್ಯಾಶ್ಚ ದಾಕ್ಷಿಣಾತ್ಯಾಶ್ಚ ಭಾರತ ॥51॥
ಪತ್ತೀನಾಂ ನಿಹತಾಃ ಸಂಘಾ ಹಯಾನಾಮರ್ಬುದಾನಿ ಚ |
ರಥವ್ರಾತಾಶ್ಚ ನಿಹತಾಃ ಹತಾಶ್ಚ ವರವಾರಣಾಃ ॥52॥
ಸಧ್ವಜಾಃ ಸಾಯುಧಾಃ ಶೂರಾಃ ಸವರ್ಮಾಂಬರಭೂಷಣಾಃ |
ಕಾಲೇನ ಮಹತಾ ಯತ್ತಾಃ ಕುಶಲೈರ್ಯೇಽಭಿವರ್ಧಿತಾಃ ॥53॥
ತೇ ಹತಾಃ ಸಮರೇ ರಾಜನ್ ಪಾರ್ಥೇನಾಕ್ಲಿಷ್ಟಕರ್ಮಣಾ ॥54॥
ಮದ್ರಕರು ಮಾಲವರು ದ್ರವಿಡರು ಯೌಧೇಯರು ಲಿಲಿಂಧ್ರರು ಕ್ಷುದ್ರಕರು ಉಶೀನರರು ಮಚ್ಚಿಲ್ಲಕರು ತುಂಡಿಕೇರರು ಸಾವಿತ್ರೀಪುತ್ರಕರು ಮುಂತಾದ ಪೂರ್ವ ಉತ್ತರ ಪಶ್ಚಿಮ ದಕ್ಷಿಣ ದೇಶಗಳ ಯೋಧರು, ಕಾಲಾಳು ಪಡೆಗಳು, ಹತ್ತುಲಕ್ಷ ಅಶ್ವಸೈನ್ಯ ರಥಸೈನ್ಯ ಗಜಸೈನ್ಯಗಳು ಧ್ವಜ ಆಯುಧಗಳಿಂದ ಕೂಡಿದವರು, ಕವಚ ವಸತತ್ರಭರಣಭೂಷಿತರು, ಎಲ್ಲರೂ ಭಯಂಕರ ಪರಾಕ್ರಮ ತೋರುತ್ತಿದ್ದ ವೀರರು. ದೀರ್ಘಕಾಲ ಪ್ರಯತ್ನದಿಂದ ಯುದ್ಧಕುಶಲರ ತರಬೇತಿಯಲ್ಲಿ ಪ್ರವರ್ಧಮಾನರು ಆದವರು, ಇವರು ಎಲ್ಲರೂ ಯುದ್ಧದಲ್ಲಿ ಅರ್ಜುನನಿಂದ ಅನಾಯಾಸವಾಗಿ ಹತರಾದರು.

ಅನ್ಯೇ ತಥಾಽಮಿತಬಲಾಃ ಪರಸ್ಪರವಧೈಷಿಣಃ |
ನಿಹತಾಃ ಸಮರೇ ಶೂರಾಃ ಪರಸ್ಪರಸಮಾಗಮೇ ॥55॥
ಅಮಿತ ಬಲಶಾಲಿಗಳು, ಪರಸ್ಪರ ವಧಾಪೇಕ್ಷೆ ಉಳ್ಳವರು, ಶೂರರು ರಣರಂಗದಲ್ಲಿ ಪರಸ್ಪರ ಇದಿರಿಸಿ ಹತರಾದರು.
ಏತೇ ಚಾನ್ಯೇ ಚ ಬಹವೋ ರಾಜಾನಃ ಸಗಣಾ ರಣೇ |
ಹತಾಃ ಸಹಸ್ರಶೋ ರಾಜನ್ ಯನ್ಮಾಂ ತ್ವಂ ಪರಿಪೃಚ್ಛಸಿ ॥56॥
ಇವರೂ ಅಲ್ಲದೆ ಬೇರೆಯೂ ಕೂಡ ಬಹುಮಂದಿ ರಾಜರು ಪರಿವಾರ ಸಮೇತರಾಗಿ ಸಹಸ್ರಾರು ಸಂಖ್ಯೆಯಲ್ಲಿ ಹತರಾದರು. ರಾಜನೆ, ಇನ್ನೇನು ನನ್ನಲ್ಲಿ ಕೇಳಬಯಸುವೆ?
ಏವಮೇಷ ಕ್ಷಯೋ ವೃತ್ತಃ ಕರ್ಣಾರ್ಜುನಸಮಾಗಮೇ |
ಮಹೇಂದ್ರೇಣ ಯಥಾ ವೃತ್ರೋ ಯಥಾ ರಾಮೇಣ ರಾವಣಃ ॥57॥
ಹೀಗೇ ಕರ್ಣಅರ್ಜುನರು ಸೇರಿದಾಗಲೂ, ಇಂದ್ರನೊಡನೆ ವೃತ್ರ ಸೇರಿದಾಗ ಮತ್ತು ರಾಮನೊಡನೆ ರಾವಣ ಸೇರಿದಾಗ ಹೇಗೋ ಹಾಗೇ, ದೊಡ್ಡ ವಿನಾಶವೇ ಸಂಭವಿಸಿತು.
ಯಥಾ ಕೃಷ್ಣೇನ ನರಕೋ ಮುರಶ್ಚ ನಿಹತೋ ರಣೇ |
ಕಾರ್ತವೀರ್ಯಶ್ಚ ರಾಮೇಣ ಭಾರ್ಗವೇಣ ಯಥಾ ಹತಃ ॥58॥
ಸಜ್ಞಾತಿಬಾಂಧವಃ ಶೂರಃ ಸಮರೇ ಯುದ್ಧದುರ್ಮದಃ |
ರಣೇ ಕೃತ್ವಾ ಮಹದ್ಯುದ್ಧಂ ಘೋರಂ ತ್ರೈಲೋಕ್ಯಮೋಹನಮ್ ॥59
ಯಥಾ ಸ್ಕಂದೇನ ಮಹಿಷೋ ಯಥಾ ರುದ್ರೇಣ ಚಾಂಧಕಃ |
ತಥಾಽರ್ಜುನೇನ ನಿಹತೋ ದ್ವೈರಥೇ ಯುದ್ಧದುರ್ಮದಃ ॥60॥
ಸಾಮಾತ್ಯಬಾಂಧವಃ ಶೂರಃ ಕರ್ಣಃ ಪ್ರಹರತಾಂ ವರಃ ॥61॥
ಜಯಾಶಾ ಧಾರ್ತರಾಷ್ಟ್ರಾಣಾಂ ವೈರಸ್ಯ ಚ ಮುಖಂ ನೃಪ ॥62॥
ಕೃಷ್ಣನಿಂದ ನರಕಾಸುರ ಮತ್ತು ಮುರಾಸುರರು ಯುದ್ಧದಲ್ಲಿ ಹತರಾದಂತೆ, ಭೃಗುರಾಮನಿಂದ ಕಾರ್ತವೀರ್ಯನು ಹತನಾದಂತೆ, ಸ್ಕಂದನಿಂದ ಮಹಿಷ, ರುದ್ರನಿಂದ ಅಂಧಕರು ಹತರಾದಂತೆ, ಯುದ್ಧದಲ್ಲಿ ಮದಭರಿತನಾಗುವ ಶೂರ ಕರ್ಣನು ಮೂಲೋಕವನ್ನು ಮೈಮರೆಸುವಂಥ ಮಹಾಘೋರ ಯುದ್ಧಮಾಡಿ ದ್ವಿರಥಯುದ್ಧದಲ್ಲಿ ಅರ್ಜುನನಿಂದ ಬಂಧುಬಾಂಧವರ ಸಮೇತವಾಗಿ ಹತನಾದ. ನಿನ್ನ ಮಕ್ಕಳಿಗೆ ಪಾಂಡವರಲ್ಲಿ ವೈರ ಸಾಧಿಸುವ, ಜಯಗಳಿಸುವ ಆಸೆಗೆ ಏಕಮಾತ್ರ ಆಸರೆಯಾಗಿದ್ದ ಶೂರಕರ್ಣ, ಯೋಧರಲ್ಲಿಯೇ ಉತ್ತಮನೆನಿಸಿದ್ದ ಕರ್ಣ ಅಮಾತ್ಯ, ಬಾಂಧವರೊಂದಿಗೆ ರಣರಂಗದಲ್ಲಿ ಒರಗಿದ.
ತೀರ್ಣಂ ತತ್ ಪಾಂಡವೈ ರಾಜನ್ ಯತ್ಪುರಾ ನಾವಬುಧ್ಯಸೇ |
ಪ್ರೋಚ್ಯಮಾನಂ ಮಹಾರಾಜ ಬಂಧುಭಿರ್ಹಿತಕಾಂಕ್ಷಿಭಿಃ ॥63॥
ಪಾಂಡವರು ಈ ಸ್ಪರ್ಧೆಯಲ್ಲಿ ವಿಜೇತರಾದರು. ರಾಜನೆ, ಹಿತೈಷಿಗಳಾದ ಬಂಧುಗಳು ನಿನಗೆ ಎಷ್ಟು ಬೋಧಿಸಿದರೂ ನೀನು ಅದನ್ನು ಅರಿತುಕೊಳ್ಳಲಿಲ್ಲ.
ನ ಕೃತಂ ಚ ತ್ವಯಾ ಪೂರ್ವಂ ದೈವೇನ ವಿಧಿನಾ ಬಲಾತ್ |
ತದಿದಂ ಸಮನುಪ್ರಾಪ್ತಂ ವ್ಯಸನಂ ತ್ವಾಂ ಮಹಾತ್ಯಯಮ್ ॥64॥
ದುರ್ದೈವದ ಬಲದಿಂದ, ವಿಧಿವಶಾತ್ ನೀನು ಬಂಧುಗಳ ಹಿತೋಕ್ತಿಯನ್ನು ಅಂದು ನಡೆಸಿಕೊಡಲಿಲ್ಲ. ಇದೀಗ ನಿನಗೆ ಮಹಾ ವಿನಾಶಕರವಾದ ಅನಿಷ್ಟವೇ ಸಂಭವಿಸಿದೆ.
ಪುತ್ರಾಣಾಂ ರಾಜ್ಯಕಾಮಾನಾಂ ತ್ವಯಾ ರಾಜನ್ ಹಿತೈಷಿಣಾ |
ಅಹಿತಾನ್ಯೇವ ಚೀರ್ಣಾನಿ ತೇಷಾಂ ತೇ ಫಲಮಾಗತಮ್ ॥65॥
ರಾಜನೆ, ರಾಜ್ಯಲೋಲುಪರಾದ ಮಕ್ಕಳ ಹಿತವನ್ನು ಬಯಸಿದ ನೀನು ಅಹಿತಗಳನ್ನೇ ಗಳಿಸಿರುವೆ. ಅವುಗಳ ದುಷ್ಪರಿಣಾಮ ನಿನಗೆ ಈಗ ಪ್ರಾಪ್ತವಾಗಿದೆ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಪಂಚಮೋಽಧ್ಯಾಯಃ ॥5॥

ಆರನೆಯ ಅಧ್ಯಾಯ
ಪಾಂಡವರ ಸೈನ್ಯದಲ್ಲಿ ಮಡಿದವರು.
ಧೃತರಾಷ್ಟ್ರಃ
ಆಖ್ಯಾತಾ ಮಾಮಕಾಸ್ತಾತ ನಿಹತಾ ಯುಧಿ ಪಾಂಡವೈಃ |
ಮಾಮಕೈರ್ನಿಹತಾನ್ ಬ್ರೂಹಿ ಪಾಂಡವೇಯಾಂಸ್ತು ಸಂಜಯ ॥1॥
ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ– ಸಂಜಯ, ನಮ್ಮ ಕಡೆಯಲ್ಲಿ ಯಾರು ಯಾರು ಪಾಂಡವರಿಂದ ಹತರಾದರೆಂಬುದನ್ನು ನೀನು ಹೇಳಿರುವೆ. ಮುಂದೆ ಪಾಂಡವರ ಕಡೆಯಲ್ಲಿ ನಮ್ಮಿಂದ ಹತರಾದವರನ್ನು ಹೇಳು.
ಸಂಜಯಃ
ಕೃತಿನೋ ಯುಧಿ ವಿಕ್ರಾಂತಾ ಮಹಾಸತತತ್ವ ಮಹಾಬಲಾಃ |
ಸಾನುಬಂಧಾಃ ಸಹಾಮಾತ್ಯಾ ಭೀಷ್ಮೇಣ ಯುಧಿ ಪಾತಿತಾಃ ॥2॥
ಸಂಜಯನು ಹೇಳಿದನು– ಯುದ್ಧವಿಶಾರದರು ಪರಾಕ್ರಮಿಗಳು ಮಹಾ ಸತ್ವಶಾಲಿಗಳು ಮಹಾಬಲಿಗಳು ಪಾಂಡವರ ಕಡೆಯಲ್ಲಿ

ಬಂಧುಮಿತ್ರಸಮೇತರಾಗಿ ಭೀಷ್ಮನಿಂದ ಹತರಾಗಿದ್ದಾರೆ.
ನಾರಾಯಣಾ ವಲ್ಲವಾಶ್ಚ ಶೂರಾಶ್ಚ ಶತಶೋಽಪರೇ |
ಅನುರಕ್ತಾಶ್ಚ ವೀರೇಣ ಭೀಷ್ಮೇಣ ನಿಹತಾ ರಣೇ ॥3॥
ನಾರಾಯಣರು ಗೊಲ್ಲರು ಮತ್ತು ಪಾಂಡವರಲ್ಲಿ ಅನುಕ್ತರಾಗಿರುವ ಬೇರೆ ನೂರಾರು ಶೂರ ಯೋಧರು ಭೀಷ್ಮನಿಂದ ಯುದ್ಧದಲ್ಲಿ ಹತರಾಗಿದ್ದಾರೆ.
ಸಮಃ ಕಿರೀಟಿನಾ ಸಂಖ್ಯೇ ವೀರ್ಯೇಣ ಚ ಬಲೇನ ಚ |
ಸತ್ಯಜಿತ್ ಸತ್ಯಸಂಧೇನ ದ್ರೋಣೇನ ನಿಹತೋ ಯುಧಿ ॥4॥
ವೀರ್ಯದಲ್ಲಿ ಬಲದಲ್ಲಿ ಅರ್ಜುನನಿಗೆ ಸರಿಸಾಟಿಯಾದ ಸತ್ಯಜಿತ್‌ರಾಜ ದ್ರುಪದನ ಸೋದರ, ಸತ್ಯಸಂಧನಾದ ದ್ರೋಣನಿಂದ ಯುದ್ಧದಲ್ಲಿ ಹತನಾದ.
ಪಾಂಚಾಲಾಶ್ಚ ಮಹೇಷ್ವಾಸಾಃ ಪ್ರಾಯೋ ರಾಜನ್ನಮರ್ಷಿಣಃ |
ದ್ರೋಣೇನ ಸಹ ಸಂಗಮ್ಯ ಗತಾ ವೈವಸ್ವತಕ್ಷಯಮ್ ॥5॥
ಮಹಾ ಬಿಲ್ಲಾಳುಗಳಾದ ಪಾಂಚಾಲರು ಪ್ರಾಯಃ ಎಲ್ಲರೂ ಕುಪಿತರಾಗಿ ದ್ರೋಣನೊಡನೆ ಹೋರಾಡಿ ಅಸುನೀಗಿದರು.
ತಥಾ ವಿರಾಟದ್ರುಪದೌ ವೃದ್ಧೌ ಸಹಸುತೌ ನೃಪ |
ಪರಾಕ್ರಾಂತೌ ಚ ಮಿತ್ರಾರ್ಥೇ ದ್ರೋಣೇನ ನಿಹತೌ ಯುಧಿ ॥6॥
ರಾಜನೆ, ಪರಾಕ್ರಮಿಗಳಾದ ವೃದ್ಧರಾದ ವಿರಾಟ ದ್ರುಪದರೂ ಮಿತ್ರರಾದ ಪಾಂಡವರಿಗಾಗಿ ದ್ರೋಣನಿಂದ ಯುದ್ಧದಲ್ಲಿ ಹತರಾದರು.
ಯೋ ಬಾಲ ಏವ ಸಮರೇ ಸಮ್ಮಿತಃ ಸವ್ಯಸಾಚಿನಾ |
ಕೇಶವೇನ ಚ ದುರ್ಧರ್ಷೋ ಬಲದೇವೇನ ಚಾಭಿಭೂಃ ॥7॥
ಪರೇಷಾಂ ಕದನಂ ಕೃತ್ವಾ ಮಹದ್ ರಣವಿಶಾರದಃ |
ಪರಿವಾರ್ಯ ಮಹಾಮಾತ್ರೈಃ ಷಡ್ಭಿಃ ಪರಮಕೈಃ ರಥೈಃ ॥8॥
ಅಶಕ್ನುವದ್ಭಿರ್ಬೀಭತ್ಸುಮಭಿಮನ್ಯುರಭಿದ್ರುತಃ ॥9॥
ಅಭಿಮನ್ಯು, ಇನ್ನೂ ಬಾಲಕನಾಗಿದ್ದಾಗಲೇ ಯುದ್ಧದಲ್ಲಿ ಅರ್ಜುನನಿಗೂ ಕೃಷ್ಣನಿಗೂ ಬಲರಾಮನಿಗೂ ಸಮನಾಗಿದ್ದವನು, ಸೋಲನ್ನು ಕಾಣದವನು, ಪರ ರನ್ನು ಸೋಲಿಸುವವನು, ಯುದ್ಧವಿಶಾರದ, ಶತ್ರುಗಳೊಡನೆ ದೊಡ್ಡ ಯುದ್ಧವನ್ನು ಮಾಡಿದ. ಅರ್ಜುನನನ್ನು ಇದಿರಿಸಲು ಅಶಕ್ತರಾದ ದ್ರೋಣ ದ್ರೌಣಿ ಶಲ್ಯ ಕರ್ಣ ಕೃಪ ಕೃತವರ್ಮರೆಂಬ ಆರುಮಂದಿ ಪ್ರಧಾನ ಮಹಾರಥರು ಅಭಿಮನ್ಯುವನ್ನು ಸುತ್ತುವರಿದರು.
ತಂ ಕೃತಂ ವಿರಥಂ ವೀರಂ ಕ್ಷತ್ರಧರ್ಮೇ ವ್ಯವಸ್ಥಿತಮ್ |
ದೌಃಶಾಸನಿರ್ಮಹಾರಾಜ ಸೌಭದ್ರಂ ಹತವಾನ್ ರಣೇ ॥10॥
ವೀರ ಅಭಿಮನ್ಯುವನ್ನು ಷಡ್‌ರಥಿಕರು ವಿರಥನನ್ನಾಗಿ ಮಾಡಿದರೂ ಅವನು ಕ್ಷಾತ್ರಧರ್ಮವಾದ ಯುದ್ಧದಲ್ಲಿ ಸ್ಥಿರನಾಗಿ ನಿಂತಾಗ ದುಃಶಾಸನ ಪುತ್ರನು ಅವನನ್ನು ವಧಿಸಿ ತಾನೂ ಹತನಾದ.
ಪಾಟಚ್ಚರಾನ್ ನಿಹಂತಾ ತು ಮಹತ್ಯಾ ಸೇನಯಾ ವೃತಃ |
ಅಂಬಷ್ಠಸ್ಯ ಸುತಃ ಶ್ರೀಮಾನ್ ಮಿತ್ರಹೇತೋಃ ಪರಾಕ್ರಮನ್ ॥11॥
ಆಸಾದ್ಯ ಲಕ್ಷಣಂ ವೀರಂ ದುರ್ಯೋಧನಸುತಂ ರಣೇ |
ಸುಮಹತ್ ಕದನಂ ಕೃತ್ವಾ ಗತೋ ವೈವಸ್ವತಕ್ಷಯಮ್ ॥12॥
ದಸ್ಯುಗಳನ್ನು ನಾಶಮಾಡುವ ಶ್ರೀಮಾನ್ ಎಂಬ ಅಂಬಷ್ಠಪುತ್ರನು ದೊಡ್ಡ ಸೈನ್ಯದಿಂದ ಯುಕ್ತನಾಗಿ ಮಿತ್ರರಾದ ಪಾಂಡವರಿಗಾಗಿ ಪರಾಕ್ರಮ ತೋರುತ್ತ ದುರ್ಯೋಧನಸುತನಾದ ವೀರ ಲಕ್ಷಣನೊಡನೆ ಹೋರಾಡಿ ಅಸುನೀಗಿದ.
ಬೃಹಂತಸ್ತು ಮಹಾರಾಜ ಕೃತಾಸ್ತ್ರೋ ಯುದ್ಧದುರ್ಮದಃ |
ದುಃಶಾಸನೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥13॥
ಮಹಾರಾಜ, ಬೃಹಂತನೂ ಅಸ್ತ್ರಜ್ಞನಾಗಿದ್ದು ಯುದ್ಧದಲ್ಲಿ ಮದಿಸುವವನು, ದುಃಶಾಸನನೊಡನೆ ಹೋರಾಡಿ ಮಡಿದ.
ಮಣಿಮಾನ್ ದಂಡಧಾರಶ್ಚ ರಾಜಾನೌ ಯುದ್ಧದುರ್ಮದೌ |
ಪರಾಕ್ರಾಂತೌ ತು ಮಿತ್ರಾರ್ಥೇ ದ್ರೋಣೇನ ಯುಧಿ ಪಾತಿತೌ ॥14॥
ಮಣಿಮಾನ್ ಮತ್ತು ದಂಡಧಾರರಿಬ್ಬರೂ ಯುದ್ಧದಲ್ಲಿ ಮದಿಸುವರಾಜರು ಮಿತ್ರರಾದ ಪಾಂಡವರಿಗಾಗಿ ಯುದ್ಧದಲ್ಲಿ ಪರಾಕ್ರಮವನ್ನು ಮೆರೆದು ದ್ರೋಣ ನಿಂದ ಹತರಾದರು.
ಅಂಶುಮಾನ್ ಭೋಜರಾಜಶ್ಚ ಸಹಸೈನ್ಯೌ ಮಹಾರಥೌ |
ಭಾರದ್ವಾಜೇನ ವಿಕ್ರಮ್ಯ ಗಮಿತೌ ಯಮಸಾದನಮ್ ॥15॥
ಅಂಶುಮಾನ್ ಮತ್ತು ಭೋಜರಾಜರು ಇಬ್ಬರೂ ಮಹಾರಥರು, ಸೈನ್ಯ ಸಮೇತರಾಗಿ ಬಂದು ದ್ರೋಣರೊಂದಿಗೆ ಹೋರಾಡಿ ಹತರಾದರು.
ಸಾಮುದ್ರಶ್ಚಿತ್ರಸೇನಶ್ಚ ಸಹ ಪುತ್ರೇಣ ಭಾರತ |
ಸಮುದ್ರಸೇನೇನ ಬಲಾದ್ ಗಮಿತೋ ಯಮಸಾದನಮ್ ॥16॥
ಸಮುದ್ರತೀರವಾಸಿ ಚಿತ್ರಸೇನನೂ ಪುತ್ರಸಮೇತನಾಗಿ ಸಮುದ್ರಸೇನನೊಡನೆ ಹೋರಾಡಿ ಬಲಾತ್ಕಾರದಿಂದ ಹತನಾದ.
ಅನೂಪವಾಸೀ ನೀಲಶ್ಚ ವ್ಯಾಘ್ರದತ್ತಶ್ಚ ವೀರ್ಯವಾನ್ |
ಅಶ್ವತ್ಥಾಮ್ನಾ ವಿಕರ್ಣೇನ ಗಮಿತೌ ಯಮಸಾದನಮ್ ॥17॥

ವೀರನಾದ ಅನೂಪವಾಸಿ ನೀಲನೂ ವ್ಯಾಘ್ರದತ್ತನೂ ಅಶ್ವತ್ಥಾಮ ವಿಕರ್ಣರಿಂದ ಹತರಾದರು.
ಚಿತ್ರಾಯುಧಶ್ಚಿತ್ರವರ್ಮಾ ಕೃತ್ವಾಽಽಜೌ ಕದನಂ ಮಹತ್ |
ಚಿತ್ರಮಾರ್ಗೇಣ ವಿಕ್ರಮ್ಯ ವಿಕರ್ಣೇನ ಹತೌ ಯುಧಿ ||18||
ಚಿತ್ರಾಯುಧ ಚಿತ್ರವರ್ಮರೂ ದೊಡ್ಡ ಯುದ್ಧವನ್ನು ಮಾಡಿ ವಿಚಿತ್ರ ಮಾರ್ಗದಿಂದ ಪರಾಕ್ರಮವನ್ನು ತೋರಿ ವಿಕರ್ಣನಿಂದ ಹತರಾದರು.
ಆತಪಗ್ರಾಸೀ ವೀರಶ್ಚ ವ್ಯಾಘ್ರದಂತಃ ಸುವೀರ್ಯವಾನ್ |
ಅಶ್ವತ್ಥಾಮ್ನಾ ಮಹಾರಾಜ ಗಮಿತೋ ಯಮಸಾದನಮ್ ||19||
ಮಹಾರಾಜ, ವೀರ ಆತಪಗ್ರಾಸಿಯೂ ವೀರ ವ್ಯಾಘ್ರದಂತನೂ ಅಶ್ವತ್ಥಾಮ ನಿಂದ ಹತರಾದರು.
ವೃಕೋದರಸಮೋ ಯುದ್ಧೇ ವೃಕಃ ಕೇಕಯಜೋ ಯುಧಿ |
ಕೇಕಯೇನ ಚ ವಿಕ್ರಮ್ಯ ಭ್ರಾತಾ ಭ್ರಾತ್ರಾ ನಿಪಾತಿತಃ ||20||
ಕೇಕಯರಾಜಪುತ್ರ ವೃಕನು ಯುದ್ಧದಲ್ಲಿ ಭೀಮನಂತಿದ್ದು ಯುದ್ಧದಲ್ಲಿ ಸೋದರನಾದ ಕೇಕಯನೊಂದಿಗೇ ಹೋರಾಡಿ ಮಡಿದ.
ಜನಮೇಜಯೋ ಹಿ ವಿಕ್ರಾಂತಃ ಪಾರ್ವತೀಯಃ ಪ್ರತಾಪವಾನ್ |
ದುರ್ಮುಖೇನ ಮಹಾರಾಜ ತವ ಪುತ್ರೇಣ ಪಾತಿತಃ ||21||
ಪರ್ವತವಾಸಿ ಪ್ರತಾಪಶಾಲಿ ಜನಮೇಜಯನು ಪರಾಕ್ರಮ ತೋರುತ್ತ ನಿನ್ನ ಪುತ್ರನಾದ ದುರ್ಮುಖನಿಂದ ಹತನಾದ.
ರೋಚಮಾನೌ ನೃಪಶ್ರೇಷ್ಠೌ ರೋಚಮಾನೌ ಗ್ರಹಾವಿವ |
ದ್ರೋಣೇನ ಯುಗಪದ್ ರಾಜನ್ ದಿವಂ ಸಂಪ್ರಾಪಿತೌ ಶರೈಃ ||22||
ರಾಜನೆ, ಎರಡು ಗ್ರಹಗಳಂತೆ ಪ್ರಕಾಶಿಸುತ್ತಿದ್ದ ರೋಚಮಾನರೆಂಬ ಒಂದೇ ಹೆಸರಿನ ಇಬ್ಬರು ಮಹಾರಾಜರು ಒಮ್ಮೆಲೆ ಇಬ್ಬರೂ ದ್ರೋಣನ ಬಾಣಗಳಿಗೆ ತುತ್ತಾಗಿ ಸ್ವರ್ಗಸ್ಥರಾದರು.
ನೃಪಾಶ್ಚಾನ್ಯೇ ಪ್ರಯುಧ್ಯಂತಃ ಪರಾಕ್ರಾಂತಾ ಮಹೀಪತೇ |
ಕೃತ್ವಾ ಹ್ಯಸುಕರಂ ಕರ್ಮ ಗತಾ ವೈವಸ್ವತಕ್ಷಯಮ್ ||23||
ರಾಜನೆ, ಬೇರೆ ರಾಜರೂ ಯುದ್ಧದಲ್ಲಿ ಪರಾಕ್ರಮವನ್ನು ತೋರುತ್ತ ಕಷ್ಟಸಾಧ್ಯವಾದ ಹೋರಾಟವನ್ನು ನಡೆಸಿ ಯಮಲೋಕವನ್ನು ಸೇರಿದರು.
ಪುರುಜಿತ್ ಕುಂತಿಭೋಜಶ್ಚ ಮಾತುಲೌ ಸವ್ಯಸಾಚಿನಃ |
ಸಂಗ್ರಾಮೇ ನಿರ್ಜಿತಾನ್ ಲೋಕಾನ್ ಗಮಿತೌ ದ್ರೋಣಸಾಯಕೈಃ ||24|
ಪುರುಜಿತ್ ಮತ್ತು ಕುಂತಿಭೋಜರು ಅರ್ಜುನನ ಸೋದರಮಾವಂದಿರು, ಯುದ್ಧದಲ್ಲಿ ದ್ರೋಣರ ಬಾಣಗಳಿಂದ ವೀರಸ್ವರ್ಗವನ್ನು ಪಡೆದರು.
ಅಭಿಭೂಃ ಕಾಶಿರಾಜಶ್ಚ ಕಾಶಿಕೈರ್ಬಹುಭಿರ್ವೃತಃ |
ವಸುದಾನಸ್ಯ ಪುತ್ರೇಣ ತ್ಯಾಜಿತೋ ದೇಹಮಾಹವೇ ||25||
ಅಭಿಭೂ ಎಂಬ ಕಾಶಿರಾಜನು ಬಹು ಕಾಶಿಯೋಧರಿಂದ ಕೂಡಿ ಯುದ್ಧದಲ್ಲಿ ವಸುದಾನನ ಪುತ್ರನಿಂದ ಮಡಿದ.
ಅಮಿತೌಜಾ ಜಯತ್ಸೇನೋ ಜಯಾನೀಕಶ್ಚ ವೀರ್ಯವಾನ್ |
ಲಕ್ಷಣೇನ ಹತೌ ರಾಜನ್ ತವ ಪೌತ್ರೇಣ ಮಾರಿಷ ||26||
ರಾಜನೆ, ಅಮಿತಪರಾಕ್ರಮಿಯಾದ ಜಯತ್ಸೇನ ಮತ್ತು ಪರಾಕ್ರಮಿ ಜಯಾನೀಕರು ನಿನ್ನ ಮೊಮ್ಮಗನಾದ ಲಕ್ಷಣನಿಂದ ಹತರಾದರು.
ವೃದ್ಧಕ್ಷತ್ರೋ ಮಹೇಷ್ವಾಸಃ ಕ್ಷತ್ರದೇವಶ್ಚ ವೀರ್ಯವಾನ್ |
ನಿಹತ್ಯ ಶಾತ್ರವಾನ್ ಶೂರಾನ್ ಪರ್ರ್ಯೈರ್ವಿನಿಹತೌ ಯುಧಿ ||27||
ಮಹಾಧನುರ್ಧಾರಿ ವೃದ್ಧಕ್ಷತ್ರ ಮತ್ತು ವೀರ್ಯಶಾಲಿ ಕ್ಷತ್ರದೇವರು ಶೂರರಾದ ಶತ್ರುಯೋಧರನ್ನು ವಧಿಸಿ ಅಶ್ವತ್ಥಾಮನಿಂದ ಹತರಾದರು.
ಕ್ಷತ್ರಧರ್ಮಶ್ಚ ಪಾಂಚಾಲ್ಯಃ ಮಿತ್ರಧರ್ಮಶ್ಚ ಭಾರತ |
ದ್ರೋಣೇನ ಪರಮೇಷ್ವಾಸೌ ಗಮಿತೌ ಯಮಸಾದನಮ್ ||28||
ಪಾಂಚಾಲದೇಶದ ಕ್ಷತ್ರಧರ್ಮ ಮತ್ತು ಮಿತ್ರಧರ್ಮರು ಮಹಾ ಧನುರ್ಧರರು, ದ್ರೋಣನಿಂದ ಹತರಾದರು.
ಶಿಖಂಡಿತನಯೋ ಯುದ್ಧೇ ಕ್ಷತ್ರದೇವೋ ಯುಧಾಂಪತಿಃ |
ಲಕ್ಷಣೇನ ಹತೋ ರಾಜನ್ ತವ ಪೌತ್ರೇಣ ಮಾರಿಷ ||29||
ಶಿಖಂಡಿಪುತ್ರನಾದ ಶ್ರೇಷ್ಠಯೋಧನಾದ ಕ್ಷತ್ರದೇವನು ನಿನ್ನ ಮೊಮ್ಮಗನಾದ ಲಕ್ಷಣನಿಂದ ಹತನಾದ.
ಸುಚಿತ್ರಶ್ಚಿತ್ರವರ್ಮಾ ಚ ಪಿತಾಪುತ್ರೌ ಮಹಾರಥೌ |
ಪ್ರಹರಂತೌ ರಣೇ ವೀರೌ ದ್ರೋಣೇನ ನಿಹತೌ ನೃಪ ||30||
ಸುಚಿತ್ರ ಮತ್ತು ಚಿತ್ರವರ್ಮರು ಮಹಾರಥರಾದ ಪಿತಾಪುತ್ರರು ವೀರರು. ಯುದ್ಧದಲ್ಲಿ ಹೋರಾಡಿ ದ್ರೋಣನಿಂದ ಹತರಾದರು.
ವಾರ್ಧಕ್ಷೇಮಿರ್ಮಹಾರಾಜ ಸಮುದ್ರ ಇವ ಪರ್ವಣಿ |
ಆಯುಧಕ್ಷಯಮಾಸಾದ್ಯ ಪ್ರಶಾಂತಿಂ ಪರಮಾಂ ಗತಃ ||31||
ಮಹಾರಾಜ, ಸಮುದ್ರವು ಪರ್ವಕಾಲದಲ್ಲಿ ವೃದ್ಧಿಸುವಂತೆ ವಾರ್ಧಕ್ಷೇಮಿಯ ಪರಾಕ್ರಮ ವೃದ್ಧಿಸುವಂಥದ್ದೇ. ಆದರೆ ಆಯುಧಕ್ಷಯವಾದ್ದರಿಂದ ಹತನಾಗಿ ಚಿರಶಾಂತಿಯನ್ನು ಪಡೆಯಬೇಕಾಯಿತು.
ಸೇನಾಬಿಂದುರ್ನೃಪಶ್ರೇಷ್ಠಃ ಶಾತ್ರವಾನ್ ಪ್ರತಪನ್ ಯುಧಿ |

ಬಾಹ್ಲೀಕೇನ ಮಹಾರಾಜ ಕೌರವೇಂದ್ರೇಣ ಪಾತಿತಃ ॥32॥
ಮಹಾರಾಜ, ಸೇನಾಬಿಂದು ಮಹಾರಾಜನೂ ಶತ್ರುಗಳನ್ನು ಯುದ್ಧದಲ್ಲಿ ಸಂತಾಪ ಪಡಿಸುತ್ತಲೆ ಕುರುಶ್ರೇಷ್ಠನಾದ ಬಾಹ್ಲೀಕನಿಂದ ಹತನಾದ.
ಧೃಷ್ಟಕೇತುರ್ಮಹಾರಾಜ ಚೇದೀನಾಂ ಪ್ರವರೋ ರಣೇ |
ಕೃತ್ವಾ ನಸುಕರಂ ಕರ್ಮ ಗತೋ ವೈವಸ್ವತಕ್ಷಯಮ್ ॥33॥
ಮಹಾರಾಜ, ಧೃಷ್ಟಕೇತುವು ಚೇದಿಗಳಲ್ಲಿ ಶ್ರೇಷ್ಠ. ಅವನೂ ಕಷ್ಟಸಾಧ್ಯವಾದ ಹೋರಾಟವನ್ನು ನಡೆಸಿ ಹತನಾದ.
ತಥಾ ಸತ್ಯಧೃತಿರ್ವೀರಃ ಕೃತ್ವಾ ಕದನಮಾಹವೇ |
ಪಾಂಡವಾರ್ಥೇ ಪರಾಕ್ರಾಂತೋ ಗಮಿತೋ ಯಮಸಾದನಮ್ ॥34॥
ಹಾಗೇ ವೀರನಾದ ಸತ್ಯಧೃತಿಯೂ ಯುದ್ಧದಲ್ಲಿ ಪಾಂಡವರಿಗಾಗಿ ಹೋರಾಡಿ ಮಡಿದ.
ಪುತ್ರಶ್ಚ ಶಿಶುಪಾಲಸ್ಯ ಸುಕೇತುಃ ಪೃಥಿವೀಪತಿಃ |
ನಿಹತ್ಯ ಶಾತ್ರವಾನ್ ಸಂಖ್ಯೇ ದ್ರೋಣೇನ ನಿಹತೋ ರಣೇ ॥35॥
ಶಿಶುಪಾಲಪುತ್ರ ಸುಕೇತುರಾಜನೂ ಯುದ್ಧದಲ್ಲಿ ಶತ್ರುಗಳನ್ನು ತರಿದು ದ್ರೋಣನಿಂದ ಹತನಾದ.
ವಿರಾಟಪುತ್ರಃ ಶಂಖಸ್ತು ಉತ್ತರಶ್ಚ ಮಹಾರಥಃ |
ಕುರ್ವಂತೌ ಸುಮಹತ್ ಕರ್ಮ ಗತೌ ವೈವಸ್ವತಕ್ಷಯಮ್ ॥36॥
ವಿರಾಟಪುತ್ರನಾದ ಮಹಾರಥನಾದ ಶಂಖನೂ ಉತ್ತರನೂ ದೊಡ್ಡ ಹೋರಾಟ ನಡೆಸಿ ಮಡಿದರು.
ತಥಾ ಸತ್ಯಧೃತಿರ್ಮಾತ್ಸ್ಯೋ ಮದಿರಾಶ್ವಶ್ಚ ವೀರ್ಯವಾನ್ |
ಸೂರ್ಯದತ್ತಶ್ಚ ವಿಕ್ರಾಂತೋ ನಿಹತೋ ದ್ರೋಣಸಾಯಕೈಃ ॥37॥
ಹಾಗೇ ವಿರಾಟರಾಜನ ಸೋದರರಾದ ಸತ್ಯಧೃತಿ ಮದಿರಾಶ್ವ ಮತ್ತು ವೀರನಾದ ಸೂರ್ಯದತ್ತರು ಪರಾಕ್ರಮಿಗಳು ದ್ರೋಣಬಾಣಗಳಿಂದ ಹತ ರಾದರು.
ಮಾತ್ಸ್ಯಾದವರಜಃ ಶ್ರೀಮಾನ್ ಶತಾನೀಕೋ ನಿಪಾತಿತಃ |
ಶ್ರೇಣಿಮಾಂಸ್ತು ಮಹಾರಾಜ ಯುಧ್ಯಮಾನಃ ಪರಾಕ್ರಮೀ |
ಕೃತ್ವಾ ನಸುಕರಂ ಕರ್ಮ ಗತೋ ವೈವಸ್ವತಕ್ಷಯಮ್ ॥38॥
ವಿರಾಟರಾಜನ ತಮ್ಮ ಶ್ರೀಮಾನ್ ಶತಾನೀಕ ಮತ್ತು ಶ್ರೇಣಿಮಂತರೂ ಕೂಡ ಕಷ್ಟಸಾಧ್ಯವಾದ ಯುದ್ಧಮಾಡಿ ಅಸುನೀಗಿದರು.
ತಥೈವ ಯುಧಿ ವಿಕ್ರಾಂತೋ ಬಲವಾನತಿವೀರ್ಯವಾನ್ |
ಮಾಗಧಃ ಪರಮಾಸ್ತ್ರಜ್ಞೋ ಗಮಿತೋ ಯಮಸಾದನಮ್ ॥39॥
ಭೀಷ್ಮೇಣ ನಿಹತೋ ರಾಜನ್ ಶೇತೇಽದ್ಯ ಪರವೀರಹಾ ॥40॥
ಹಾಗೇ ಯುದ್ಧದಲ್ಲಿ ಪರಾಕ್ರಮತೋರುತ್ತಿದ್ದ ಬಲಪರಾಕ್ರಮಶಾಲಿಯಾದ ಮಹಾಅಸ್ತ್ರಜ್ಞಾನಿಯಾದ ಮಾಗಧನೂ ಭೀಷ್ಮನಿಂದ ಹತನಾದ.
ದ್ರೋಣೇನ ನಿಹತೋ ರಾಜನ್ ಸಹದೇವಃ ಪ್ರತಾಪವಾನ್ |
ಪ್ರತಾಪಶಾಲಿಯಾದ ಜರಾಸಂಧಪುತ್ರ ಸಹದೇವನೂ ದ್ರೋಣನಿಂದ ಹತನಾದ.
ವಸುದಾನಶ್ಚ ಕದನಂ ಕುರ್ವಾಣೋ ದಿವಸಂ ರಣೇ |
ಭಾರದ್ವಾಜೇನ ವಿಕ್ರಮ್ಯ ಗಮಿತೋ ವೈ ಯಮಕ್ಷಯಮ್ ॥41॥
ಪಾಂಶುರಾಜ ವಸುದಾನನೂ ಪಾಂಚಾಲರಾಜಕುಮಾರ ವಸುದಾನನೂ ಹಗಲಿಡೀ ಯುದ್ಧಮಾಡಿ ದ್ರೋಣನಿಂದ ಹತರಾದರು.
ಪಾಂಡ್ಯರಾಜಶ್ಚ ವಿಕ್ರಾಂತೋ ಬಲವಾನ್ ಬಾಹುಶಾಲಿನಾ |
ಅಶ್ವತ್ಥಾಮ್ನಾ ಹತಸ್ತತ್ರ ಗಮಿತೋ ವೈ ಯಮಕ್ಷಯಮ್ ॥42॥
ಬಲಿಷ್ಠ ಬಾಹುಶಾಲಿ ಪರಾಕ್ರಮಿಯಾದ ಪಾಂಡ್ಯರಾಜನೂ ಅಶ್ವತ್ಥಾಮನಿಂದ ಹತನಾದ.
ಏತೇ ಚಾನ್ಯೇ ಚ ಬಹವಃ ಪಾಂಡವಾನಾಂ ಮಹಾರಥಾಃ |
ಹತಾ ದ್ರೋಣೇನ ಭೂಯಿಷ್ಠಂ ಯನ್ಮಾಂ ತ್ವಂ ಪರಿಪೃಚ್ಛಸಿ ॥43॥
ಇವರಲ್ಲದೆ ಬೇರೆ ಪಾಂಡವಪಕ್ಷದಲ್ಲಿದ್ದ ಮಹಾರಥರೂ ಕೂಡ ದ್ರೋಣ ನಿಂದ ಹತರಾದರು. ಇನ್ನು ಹೆಚ್ಚಿನದನ್ನು ಏನು ಕೇಳಲು ಬಯಸುವೆ, ಮಹಾರಾಜ?
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಷಷ್ಠೋಽಧ್ಯಾಯಃ ॥6॥

ಏಳನೆಯ ಅಧ್ಯಾಯ
ಕುರುಸೈನ್ಯದಲ್ಲಿ ಉಳಿದವರು.
ಧೃತರಾಷ್ಟ್ರಃ
ಮಾಮಕಸ್ಯಾಸ್ಯ ಸೈನ್ಯಸ್ಯ ಹೃತೋತ್ಸೇಧಸ್ಯ ಸಂಜಯ |
ಅವಶೇಷಂ ನ ಪಶ್ಯಾಮಿ ಕಕುದೇ ಮೃದಿತೇ ಸತಿ ॥1॥
ಧೃತರಾಷ್ಟ್ರನು ಸಂಜಯನಿಗೆ ಹೇಳಿದನು– ಸಂಜಯ, ನನ್ನ ಈ ಸೈನ್ಯದ ಹಿರಿಮೆ ಅಪಹೃತವಾಯಿತು. ಅದರಲ್ಲಿ `ಕಕುದ'ನಾದ ಅಂದರೆ ಮುಖ್ಯನಾದ ಕರ್ಣ ಹತನಾದ ಮೇಲಂತೂ ಸೈನ್ಯಕ್ಕೆ ಉಳಿವೇ ಇಲ್ಲವೆಂದು ಭಾವಿಸುತ್ತೇನೆ.

`ಕಕು' ಎಂದರೆ ಎತ್ತಿಗೆ ಹೆಗಲಿನ ಮೇಲಿರುವ ಭುಜ. ಅದನ್ನು ಎತ್ತು ಭಾರವನ್ನು ಹೊರುವುದಕ್ಕೆ ಸ್ಥಾನವಾಗಿ ನೀಡುತ್ತದೆ. ಅದರಿಂದ `ಕಕುದ' ಅಂದರೆ ಎತ್ತು, ವೃಷಭ. `ವೃಷಭ'ವನ್ನು ಹೇಳುವ ಶಬ್ದವು `ಶ್ರೇಷ್ಠ' ಎಂಬ ಅರ್ಥದಲ್ಲಿ ಇರುತ್ತದೆ. ಪ್ರಕೃತ ಸೈನ್ಯದಲ್ಲಿ ಶ್ರೇಷ್ಠ, ಪ್ರಧಾನ ವ್ಯಕ್ತಿ ಕರ್ಣ. ಅವನು ಹತನಾದನೆಂದರೆ ಸೈನ್ಯಕ್ಕೆ ಇನ್ನು ಉಳಿವೇ ಇಲ್ಲ ಎನ್ನುತ್ತಾನೆ ಧೃತರಾಷ್ಟ್ರ. ಲಕ್ಷ್ಯಾಲಂಕಾರ. ದುಃಶಾಸನ ವಧೆಯನ್ನು ಕೇಳಿಯೂ ಸುಮ್ಮನಿದ್ದ ಧೃತರಾಷ್ಟ್ರ `ಕಕುದ'ನಾದ ಕರ್ಣನ ವಧೆಯನ್ನು ಕೇಳಿದಾಗ ಬಹಳ ಉದ್ವಿಗ್ನನಾದ.
ತೌ ಹಿ ವೀರೌ ಮಹೇಷ್ವಾಸೌ ಮದರ್ಥೇ ಕುರುಸತ್ತಮೌ |
ಭೀಷ್ಮದ್ರೋಣೌ ಹತೌ ಶ್ರುತ್ವಾ ಕೋ ನ್ವರ್ಥೋ ಜೀವಿತೇನ ಮೇ ॥2॥
ಕುರುಸೈನ್ಯಶ್ರೇಷ್ಠರಾದ ಮಹಾಧನುರ್ಧರರಾದ ಆ ವೀರ ಭೀಷ್ಮದ್ರೋಣರು ನನಗಾಗಿ ಹೋರಾಡಿ ಹತರಾದುದನ್ನು ಕೇಳಿದಾಗಲೇ ನನಗೆ ನಾನಿನ್ನು ಬದುಕಿದ್ದು ಏನು ಪ್ರಯೋಜನ ಎನಿಸಿತ್ತು.
ನ ಚ ಮೃಷ್ಯಾಮಿ ರಾಧೇಯಂ ಹತಮಾಹವಶೋಭಿನಮ್ |
ಯಸ್ಯ ಬಾಹ್ವೋರ್ಬಲಂ ತುಲ್ಯಂ ಕುಂಜರಾಣಾಂ ಶತೈಃ ಶತೈಃ ॥3॥
ಇದೀಗ ರಣರಂಗದಲ್ಲಿ ಶೋಭಿಸುತ್ತಿದ್ದ ಕರ್ಣನೂ ಹತನಾಗಿದ್ದಾನೆ. ಇದನ್ನು ನಾನು ತಡೆದುಕೊಳ್ಳಲಾರೆ. ಅವನ ಬಾಹುಗಳ ಬಲ ನೂರಾರು ಆನೆಗಳಿಗೆ ಸಮವಾಗಿತ್ತು.
ಹತಪ್ರವೀರಂ ಸೈನ್ಯಂ ಮೇ ಯಥಾ ಶಂಸಸಿ ಸಂಜಯ |
ಅಹತಾನಪಿ ಮೇ ಶಂಸ ಯೇಽತ್ರ ಜೀವಂತಿ ಕೇಚನ ॥4॥
ಸಂಜಯ, ನನ್ನ ಸೈನ್ಯದಲ್ಲಿ ಪ್ರಧಾನವೀರರು ಯಾರಾರು ಹತರಾದ ರೆಂಬುದನ್ನು ಹೇಳಿದಂತೆ, ಇನ್ನೂ ಹತರಾಗದೆ ಉಳಿದಿರುವವರು ಕೆಲವರು ಯಾರೆಂದೂ ಹೇಳು.
ಏತೇಷು ಚ ಹತೇಷ್ವದ್ಯ ಯೇ ತ್ವಯಾ ಪರಿಕೀರ್ತಿತಾಃ |
ಯೇಽಪಿ ಜೀವಂತಿ ತೇ ಸರ್ವೇ ಹತಾ ಇತಿ ಮತಿರ್ಮಮ ॥5॥
ಈಗ ನೀನು ಹತರಾದರೆಂದು ಯಾರನ್ನು ಹೇಳಿರುವೆಯೋ ಅವರು ಮಾತ್ರವಲ್ಲದೆ, ಇನ್ನೂ ಬದುಕಿ ಉಳಿದವರೂ ಕೂಡ, ಎಲ್ಲರೂ ಸತ್ತಹಾಗೇ ಎಂದು ನನಗೆ ಅನಿಸುತ್ತಿದೆ. ಆದರೂ ಅವರು ಯಾರೆಂದು ಹೇಳು.
ಸಂಜಯಃ
ಯಸ್ಮಿನ್ ಮಹಾಸಾಸ್ತ್ರಾಣಿ ಸಮರ್ಪಿತಾನಿ
ಚಿತ್ರಾಣಿ ಶುಭ್ರಾಣಿ ಸಸಂಗ್ರಹಾಣಿ |
ದಿವ್ಯಾನಿ ರಾಜಂತಿ ಹಿತಾನಿ ಚೈವ
ದ್ರೋಣೇನ ವೀರೇ ದ್ವಿಜಸತ್ತಮೇನ ॥6॥
ಸಂಜಯ ಹೇಳುತ್ತಾನೆ– ನಮ್ಮ ಸೈನ್ಯದಲ್ಲಿ ಈಗ ಅಶ್ವತ್ಥಾಮ ಇದ್ದಾನೆ. ದ್ರೋಣರು ಅವನಿಗೆ ಮಹಾ ಅಸ್ತ್ರಗಳನ್ನು ಉಪದೇಶಿಸಿದ್ದಾರೆ. ಆ ಅಸ್ತ್ರಗಳು ಪ್ರತಿಯೊಂದೂ ಅತ್ಯದ್ಭುತ, ಜಾಜ್ವಲ್ಯಮಾನವಾಗಿ ಪ್ರಕಾಶಮಾನ ಮತ್ತು ಸುಲಭ ವಾಗಿ ಪ್ರಯೋಗಿಸಲು ಶಕ್ಯವಾದವು, ದಿವ್ಯ ಹಾಗೂ ಹಿತಕರವಾದವು.
ಮಹಾರಥಃ ಕೃತಿಮಾನ್ ಕ್ಷಿಪ್ರಹಸ್ತೋ
ದೃಢಾಯುಧೋ ದೃಢಮುಷ್ಟಿರ್ದೃಢೇಷುಃ |
ಆಚಾರ್ಯವದ್ ದ್ರೋಣಸುತಸ್ತರಸ್ವೀ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥7॥
ಅಶ್ವತ್ಥಾಮನು ಸ್ವಯಂ ಮಹಾರಥ, ಸಫಲ ಪ್ರಯತ್ನಶೀಲ, ಶೀಘ್ರಹಸ್ತ, ದೃಢ ಆಯುಧ, ದೃಢಮುಷ್ಟಿ, ದೃಢವಾದ ಬಾಣಗಳು ಉಳ್ಳವನು, ದ್ರೋಣರಂತೆಯೇ ದ್ರೋಣಪುತ್ರ. ಬಲುವೇಗ ಉಳ್ಳವನು, ನಿನಗಾಗಿ ನಿನ್ನ ಕಡೆ ಯುದ್ಧಮಾಡಲು ನಿಂತಿದ್ದಾನೆ.
ಆನರ್ತವಾಸೀ ಹೃದಿಕಾತ್ಮಜೋಽಸೌ
ಮಹಾರಥಃ ಸಾತ್ವತಾನಾಂ ವರಿಷ್ಠಃ |
ಸ್ವಯಂ ಭೋಜಃ ಕೃತವರ್ಮಾ ಕೃತಾಸ್ತ್ರೋ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥8॥
ಆನರ್ತದೇಶವಾಸಿ, ಯಾದವಕುಲಶ್ರೇಷ್ಠ ಮಹಾರಥ ಭೋಜವಂಶದವನು ಸ್ವತಃ ಅಸ್ತ್ರವಿದ್ಯಾಪಾರಂಗತನು ಕೃತವರ್ಮ. ಅವನೂ ನಿನಗಾಗಿ ಯುದ್ಧಮಾಡಲು ಬಯಸಿ ನಿನ್ನಕಡೆ ನಿಂತಿದ್ದಾನೆ.
ಆರ್ತಾಯನಿಃ ಸಮರೇ ದುಷ್ಪ್ರಕಂಪ್ಯಃ
ಸೇನಾಗ್ರಣೀಃ ಪ್ರಥಮಸ್ತಾವಕಾನಾಮ್ |
ಸ್ವಾನ್ ಸ್ವಸ್ರೀಯಾನ್ ಪಾಂಡವೇಯಾನ್ ವಿಸೃಜ್ಯ
ಸತ್ಯಾಂ ವಾಚಂ ಸ್ವಾಂ ಚಿಕೀರ್ಷನ್ ತರಸ್ವೀ ॥9॥
ಋತಾಯನರಾಜನ ಪುತ್ರ ಶಲ್ಯ ಯುದ್ಧಕ್ಕೆ ನಿಂತರೆ ವಿಚಲಿತನಾಗದವನು. ಸೈನ್ಯದಲ್ಲಿ ಅಗ್ರಗಣ್ಯ, ನಿನ್ನ ಕಡೆಯವರಲ್ಲಿ ಮೊದಲನೆಯವನು, ವೇಗಶಾಲಿ, ತಾನು ಕೊಟ್ಟಮಾತಿಗೆ ತಪ್ಪದಿರುವುದಕ್ಕಾಗಿ ಸ್ವಂತ ತಂಗಿಯ ಮಕ್ಕಳಾದ ಪಾಂಡವರನ್ನೂ ಬಿಟ್ಟು ನಿನ್ನ ಪಕ್ಷಕ್ಕೆ ಬಂದವನು.
ತೇಜೋವಧಂ ಸೂತಪುತ್ರಸ್ಯ ಸಂಖ್ಯೇ
ಪ್ರತಿಶ್ರುತ್ಯಾಜಾತಶತ್ರೋಃ ಪುರಸ್ತಾತ್ |
ದುರಾಧರ್ಷಃ ಶಕ್ರಸಮಾನವೀರ್ಯಃ

ಶಲ್ಯಃ ಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥10॥
ಯುದ್ಧದಲ್ಲಿ ಕರ್ಣನ ತೇಜೋವಧೆ ಮಾಡುವೆನೆಂದು ಯುಧಿಷ್ಠಿರನ ಮುಂದೆ ಪ್ರತಿಜ್ಞೆ ಮಾಡಿ ನಿನಗಾಗಿ ಯುದ್ಧ ಮಾಡಲು ಬಯಸಿ ನಿಂತಿದ್ದಾನೆ. ಶತ್ರುಗಳಿಗೆ ವಶನಾಗದ ಇಂದ್ರಸಮಾನ ವೀರ್ಯಉಳ್ಳ ಶಲ್ಯಮಹಾರಾಜ.
ಆಜಾನೇಯೈಃ ಸೈಂಧವೈಃ ಪಾರ್ವತೀಯೈಃ
ನದೀಜ ಕಾಂಭೋಜ ವನಾಯುಬಾಹ್ಲಿಕೈಃ |
ಗಾಂಧಾರರಾಜಃ ಸ್ವಬಲೇನ ಯುಕ್ತೋ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥11॥
ಆಜಾನೇಯ, ಸೈಂಧವ, ಪರ್ವತೀಯ, ನದೀಜ, ಕಾಂಬೋಜ, ವನಾಯುಜ ಮುಂತಾದ ನಾನಾ ಜಾತಿಯ ಶ್ರೇಷ್ಠ ಕುದುರೆಗಳ ಒಡೆಯನಾದ ಗಾಂಧಾರರಾಜ ಶಕುನಿ ತನ್ನ ಸೈನ್ಯದೊಂದಿಗೆ ನಿನ್ನ ಕಡೆ ನಿಂತು ಯುದ್ಧಮಾಡಲು ಬಯಸಿದ್ದಾನೆ.
ಶಾರದ್ವತೋ ಗೌತಮಶ್ಚಾಪಿ ರಾಜನ್
ಮಹಾಬಲೋ ಬಹುಚಿತ್ರಾಸ್ತ್ರಯೋಧೀ |
ಧನುಶ್ಚಿತ್ರಂ ಸಂವಹನ್ ಭಾರಸಾಹಂ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥12॥
ರಾಜನೆ, ಮಹಾಬಾಹು, ಬಹು ಅದ್ಭುತ ಅಸ್ತ್ರ ಯುದ್ಧಗಳನ್ನು ಮಾಡುವವನು ಶರದ್ವಂತನ ಪುತ್ರ ಗೌತಮವಂಶದವನು ಕೃಪಾಚಾರ್ಯ ಅದ್ಭುತವಾದ, ಬಹುಭಾರವನ್ನು ಸಹಿಸುವ ಧನುಸ್ಸನ್ನು ಹಿಡಿದು ನಿನಗಾಗಿ ಯುದ್ಧಮಾಡಲು ಬಯಸಿ ನಿಂತಿದ್ದಾನೆ.
ಮಹಾರಥಃ ಕೇಕಯರಾಜಪುತ್ರಃ
ಸದಶ್ವಯುಕ್ತಂ ಚ ಪತಾಕಿನಂ ಚ |
ರಥಾಗ್ರ್ಯಮಾರುಹ್ಯ ಕುರುಪ್ರವೀರ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥13॥
ಮಹಾರಥನಾದ ಒಬ್ಬ ಕೇಕಯರಾಜಕುಮಾರನು ಒಳ್ಳೆಯ ಕುದುರೆಗಳಿಂದ ಯುಕ್ತವಾದ ಪತಾಕೆಯಿಂದಲೂ ಕೂಡಿದ ರಥದಲ್ಲಿ ನಿನ್ನ ಸಲುವಾಗಿ ಯುದ್ಧಮಾಡಲು ಬಯಸಿ ನಮ್ಮ ಕಡೆ ನಿಂತಿದ್ದಾನೆ.
ತಥಾ ಸುತಸ್ತೇ ಜ್ವಲನಾರ್ಕವರ್ಣಂ
ರಥಂ ಸಮಾಸ್ಥಾಯ ಕುರುಪ್ರವೀರಃ |
ವ್ಯವಸ್ಥಿತಃ ಕುರುರಾಜೋ ನರೇಂದ್ರ
ವ್ಯಭ್ರೇ ಸೂರ್ಯೋ ಭ್ರಾಜಮಾನೋ ಯಥಾ ಖೇ ॥14॥
ರಾಜನೆ, ನಿನ್ನ ಪುತ್ರನಾದ ಕುರುವಂಶದ ವೀರನಾದ ಪುರುಮಿತ್ರನು ಅಗ್ನಿಸೂರ್ಯರಂತೆ ಬೆಳಗುವ ರಥದಲ್ಲಿ, ಮೋಡವಿಲ್ಲದ ಆಕಾಶದಲ್ಲಿ ಬೆಳಗುವ ಸೂರ್ಯನಂತೆ, ಕುಳಿತಿರುತ್ತಾನೆ.
ದುರ್ಯೋಧನೋ ನಾಗಕುಲಸ್ಯ ಮಧ್ಯೇ
ವ್ಯವಸ್ಥಿತಃ ಸಿಂಹ ಇವಾಬಭಾಸೇ |
ರಥೇನ ಜಾಂಬೂನದಭೂಷಣೇನ
ವ್ಯವಸ್ಥಿತಃ ಸಮರೇ ಯೋತ್ಸ್ಯಮಾನಃ ॥15॥
ದುರ್ಯೋಧನನೂ ಕೂಡ ಆನೆಗಳ ನಡುವೆ ಸಿಂಹದಂತೆ ಬೆಳಗುತ್ತಾನೆ. ಚಿನ್ನ ದಿಂದ ಅಲಂಕೃತವಾದ ರಥವೇರಿ ರಣರಂಗದಲ್ಲಿ ಯುದ್ಧಮಾಡಲು ನಿಂತಿರುತ್ತಾನೆ.
ಸ ರಾಜಮಧ್ಯೇ ಪುರುಷಪ್ರವೀರೋ
ವ್ಯವಸ್ಥಿತೋ ಯೋತ್ಸ್ಯಮಾನಸ್ತ್ವದರ್ಥೇ |
ಪದ್ಮಾಂತರಾಭೋಽಗ್ನಿರಿವಾಲ್ಪಧೂಮೋ
ಮೇಘಾಂತರೇ ಸೂರ್ಯ ಇವ ಪ್ರಕಾಶಃ ॥16॥
ಪುರುಷಶ್ರೇಷ್ಠನಾದ ದುರ್ಯೋಧನ ಚಿನ್ನದ ಸುಂದರ ಕವಚ ತೊಟ್ಟುರಾಜರ ಮಧ್ಯದಲ್ಲಿ ಶೋಭಿಸುತ್ತಾನೆ. ಕಮಲದ ಕಾಂತಿಯಿಂದ ಅಲ್ಪಧೂಮಯುಕ್ತವಾದ ಅಗ್ನಿಯಂತೆ ಮೋಡಗಳ ನಡುವಿನ ಸೂರ್ಯನಂತೆ ಪ್ರಕಾಶಿಸುತ್ತಾನೆ.
ತಥಾ ಸುಷೇಣೋಽಪ್ಯಸಿಚರ್ಮಪಾಣಿಃ
ತವಾತ್ಮಜಃ ಸತ್ಯಸೇನಶ್ಚ ವೀರಃ |
ವ್ಯವಸ್ಥಿತಶ್ಚಿತ್ರಸೇನೇನ ಸಾರ್ಧಂ
ಹೃಷ್ಟಾತ್ಮಾನೌ ಸಮರೇ ಯೋದ್ಧುಕಾಮೌ ॥17॥
ಹಾಗೇ ಖಡ್ಗಚರ್ಮಧಾರಿಯಾದ ಕರ್ಣಪುತ್ರ ಸುಷೇಣನೂ ನಿನ್ನ ಪುತ್ರರಾದ ವೀರ ಸತ್ಯಸೇನ ಚಿತ್ರಸೇನರೂ ಹೃಷ್ಟಚಿತ್ತರಾಗಿ ಯುದ್ಧದಲ್ಲಿ ಹೋರಾಡಲು ಬಯಸಿ ನಿಂತಿದ್ದಾರೆ.
ಹ್ರೀನಿಷೇವೋ ಭಾರತ ರಾಜಪುತ್ರ-
ಶ್ಚಿತ್ರಾಯುಧಃ ಶ್ರುತವರ್ಮಾ ಜಯಶ್ಚ |
ಶಲಶ್ಚ ಸತ್ಯವ್ರತದುಃಶಲೌ ಚ
ವ್ಯವಸ್ಥಿತಾ ಬಲಿನೋ ಯೋದ್ಧುಕಾಮಾಃ ॥18॥
ರಾಜನೆ, ಲಜ್ಜಾವಿನಯಧರ್ಮವನ್ನಾಚರಿಸುವ ರಾಜಕುಮಾರರಾದ ಚಿತ್ರಾಯುಧ ಶ್ರುತವರ್ಣ ಜಯ ಶಲ ಸತ್ಯವ್ರತ ದುಶ್ಶಲ ಈ ಎಲ್ಲ

ನರಶ್ರೇಷ್ಠರೂ ಸೈನ್ಯಸಮೇತರಾಗಿ ನಮ್ಮ ಕಡೆ ನಿಂತಿದ್ದಾರೆ.
ಕೈತವ್ಯಾನಾಮಧಿಪಃ ಶೂರಘಾತೀ
ರಣೇ ರಣೇ ಶತ್ರುಹಾ ರಾಜಪುತ್ರಃ |
ಪತ್ತೀ ರಥೀ ನಾಗಹಯಪ್ರಯಾಯೀ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥19॥
ಗಾಂಧಾರರಾಜಪುತ್ರ ಶಕುನಿ, ಜೂಜುಗಾರರಲ್ಲಿ ಅಗ್ರಗಣ್ಯ, ತಾನೇ ಶೂರನೆಂದು ಹೆಮ್ಮೆ ಪಡುವವನು. ಪ್ರತಿಯೊಂದು ಯುದ್ಧದಲ್ಲಿ ಕಾಲಾಳುವಾಗಿ ರಥಿಕನಾಗಿ ಗಜಾರೋಹಿಯಾಗಿ ಅಶ್ವಾರೋಹಿಯಾಗಿ ರಣರಂಗದಲ್ಲಿ ಸಂಚರಿಸಿ ಶತ್ರುನಾಶ ಮಾಡಬಲ್ಲವನು. ಅವನೂ ನಿನಗಾಗಿ ಯುದ್ಧಮಾಡಲು ಬಯಸಿ ಸಜ್ಜಾಗಿ ನಿಂತಿದ್ದಾನೆ.
ಗಾಂಧಾರರಾಜಃ ಸಸುತಶ್ಚ ರಾಜನ್
ದುರ್ದ್ಯೂತವೇದೀ ಕಲಹಪ್ರಿಯಶ್ಚ |
ಗಾಂಧಾರಮುಖ್ಯೈರ್ಯವನೈಶ್ಚ ರಾಜನ್
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥20॥
ಶಕುನಿ ತನ್ನ ಪುತ್ರನೊಂದಿಗೂ ಗಾಂಧಾರ ಯೋಧರಿಂದ ಹಾಗೂ ಯವನ ರಿಂದಲೂ ಯುಕ್ತನಾಗಿದ್ದು, ಕಲಹಪ್ರಿಯನಾದ್ದರಿಂದ ಅನ್ಯಾಯದ ಜೂಜಾಡುತ್ತಲೇ, ನಿನ್ನ ಸಲುವಾಗಿ ಈಗ ಯುದ್ಧಮಾಡಲು ಬಯಸಿ ಸಜ್ಜಾಗಿದ್ದಾನೆ.
ವೀರಃ ಶ್ರುತಾಯುಶ್ಚ ಶ್ರುತಾಯುಧಶ್ಚ
ಚಿತ್ರಾಂಗದಶ್ಚಿತ್ರವರ್ಮಾ ಚ ಯೋಧೀ |
ವ್ಯವಸ್ಥಿತಾ ಯತ್ತಸೈನ್ಯಾ ನರಾಗ್ರ್ಯಾಃ
ಪ್ರಹಾರಿಣೋ ಮಾನಿನಃ ಸತ್ಯಸಂಧಾಃ ॥21॥
ವೀರ ಶ್ರುತಾಯು, ಶ್ರುತಾಯುಧ, ಚಿತ್ರಾಂಗದ, ಚಿತ್ರವರ್ಮ ಇವರೆಲ್ಲರೂ ಯುದ್ಧದಲ್ಲಿ ಶತ್ರುಗಳನ್ನು ಪ್ರಹರಿಸುವ ಸ್ವಾಭಿಮಾನಿ ಸತ್ಯಸಂಧರಾದ ಶ್ರೇಷ್ಠಯೋಧರು ಯುದ್ಧದ ಬಯಕೆಯಿಂದ ಅದಕ್ಕೆ ಸಜ್ಜಾಗಿ ನಿಂತಿದ್ದಾರೆ.
ಕರ್ಣಾತ್ಮಜಃ ಸತ್ಯಸೇನೋ ಮಹಾತ್ಮಾ
ವ್ಯವಸ್ಥಿತಃ ಸಮರೇ ಯೋದ್ಧುಕಾಮಃ ॥22॥
ರಾಜನೆ, ಮಹಾತ್ಮ ಕರ್ಣಪುತ್ರ ಸತ್ಯಸೇನನೂ ಯುದ್ಧದಲ್ಲಿ ಹೋರಾಡಲು ಬಯಸಿ ನಿಂತಿದ್ದಾನೆ.
ಅಥಾಪರೌ ಕರ್ಣಸುತೌ ವರಾಸ್ತ್ರೌ
ಮಹಾಬಲೌ ಲಘುಹಸ್ತೌ ನರೇಂದ್ರ |
ಬಲೇ ಮಹತ್ಯುಲ್ಬಣಸತ್ತ್ವವೀರ್ಯೌ
ವ್ಯವಸ್ಥಿತೌ ಯೋದ್ಧುಕಾಮೌ ತ್ವದರ್ಥೇ ॥23॥
ರಾಜನೆ, ಇನ್ನಿಬ್ಬರು ಕರ್ಣಪುತ್ರರೂ ಶ್ರೇಷ್ಠ ಅಸ್ತ್ರಧಾರಿಗಳು ಮಹಾಬಲಶಾಲಿ ಗಳು, ಶೀಘ್ರಹಸ್ತರು, ಉತ್ತಮವಾದ ಸತ್ವವೀರ್ಯಗಳಿಂದ ಸಂಪನ್ನರು. ನಿನ್ನ ಸಲುವಾಗಿ ಯುದ್ಧಮಾಡಲು ಅವರು ದೊಡ್ಡ ಸೈನ್ಯ ತಂದು ನಿಂತಿದ್ದಾರೆ.
ಏತೈಶ್ಚ ಮುಖ್ಯೈರಪರೈಶ್ಚ ರಾಜನ್
ಯೋಧಪ್ರವೀರೈರಮಿತಪ್ರಭಾವೈಃ |
ವೃತೋ ರಣಪ್ರೇಪ್ಸುರಮಿತ್ರಸ್ಯೆ◌ಿ◌ಂ◌ಃ
ವ್ಯವಸ್ಥಿತಃ ಕುರುರಾಜೋ ಜಯಾಯ ॥24॥
ಈ ಎಲ್ಲ ಮುಖ್ಯ ವೀರಯೋಧ ಶ್ರೇಷ್ಠರೊಂದಿಗೆ, ಅಮಿತಶಕ್ತಿಉಳ್ಳ ಬೇರೆ ಯೋಧರಿಂದಲೂ ಕೂಡಿಕೊಂಡು ಜಯಸಂಪಾದನೆಯ ಉದ್ದೇಶದಿಂದ ಶತ್ರುಸಮೂಹಗಳೊಡನೆ ಯುದ್ಧ ಮಾಡಲು ಬಯಸಿ ನಿಂತಿದ್ದಾನೆ ದುರ್ಯೋಧನ.
ಧೃತರಾಷ್ಟ್ರಃ
ಆಖ್ಯಾತಾ ಜೀವಮಾನಾ ಯೇ ಪರೇಭ್ಯೋಽನ್ಯೇ ಯಥಾತಥಮ್ |
ಇತೀದಮಧಿಗಚ್ಛಾಮಿ ತ್ಯಕ್ತಮರ್ಥಾಭಿಪತ್ತಿತಃ ॥25॥
ಧೃತರಾಷ್ಟ್ರ ಹೇಳುತ್ತಾನೆ– `ಸಂಜಯ, ನೀನೀಗ ಪಾಂಡವಪಕ್ಷದವರಿಗಿಂತ ಬೇರೆಯಾಗಿ ನಮ್ಮ ಪಕ್ಷದಲ್ಲಿ ಬದುಕಿ ಉಳಿದಿರುವವರ ಬಗ್ಗೆ ಯಥಾವತ್ತಾಗಿ ಹೇಳಿರುವೆ. ಅದರಿಂದ ನೀನು ಹೇಳಿದಂತೆ ನೋಡಿದರೆ ನಮ್ಮ ಸೈನ್ಯ ಯಶಸ್ಸನ್ನು ಕಾಣುವುದರಲ್ಲಿ ವಿಫಲವೇ ಆಗುವುದೆಂದು ನನಗೆ ಮನವರಿಕೆಯಾಗುತ್ತಿದೆ.
`ವ್ಯಕ್ತಮರ್ಥಾಭಿಪತ್ತಿತಃ' ಎಂದು ಪ್ರಚಲಿತಪಾಠ ಸರಿಯಲ್ಲ. `ತ್ಯಕ್ತಮರ್ಥಾಭಿಪತ್ತಿತಃ' ಎಂದಿರಬೇಕೆಂದು ಲಕ್ಷಾಲಂಕಾರ ಹೇಳುತ್ತಿದೆ. `ಅರ್ಥಾಭಿಪತ್ತಿ' ಉದ್ದಿಷ್ಟವಾದ ಯಶಸ್ಸಿನ ಪ್ರಾಪ್ತಿಯು `ತ್ಯಕ್ತ' ಸೈನ್ಯವನ್ನು ಬಿಟ್ಟು ದೂರ ಹೋಗಿದೆ ಎಂದರ್ಥ. ಸೈನ್ಯ ಅದರಾಸೆಯನ್ನು ಬಿಡಬೇಕು ಎಂದು ಹೇಳಿದಂತಾಗುವುದು.
ವೈಶಂಪಾಯನಃ
ಏವಂ ಬ್ರುವನ್ನೇವ ತದಾ ಧೃತರಾಷ್ಟ್ರೋಽ◌ಂಬಿಕಾಸುತಃ |
ಹತಪ್ರವೀರಭೂಯಿಷ್ಠಂ ಕಿಂಚಿಚ್ಛೇಷಂ ಸ್ವಕಂ ಬಲಮ್ |
ಶ್ರುತ್ವಾ ವ್ಯಾಮೋಹಮಾಗಚ್ಛತ್ ಶೋಕವ್ಯಾಕುಲಚೇತನಃ ॥26॥
ವೈಶಂಪಾಯನರು ಜನಮೇಜಯರಾಜನಿಗೆ ಹೇಳುತ್ತಾರೆ– ಹೀಗೆ ಹೇಳುತ್ತಲೇ ಧೃತರಾಷ್ಟ್ರ ತನ್ನ ಕಡೆಯಲ್ಲಿ ಹೆಚ್ಚಿನವರು ಮಡಿದು ಕೆಲವೇ ಮಂದಿ ಉಳಿದಿರುವುದನ್ನು ಕೇಳಿ ಶೋಕಾಕುಲಚಿತ್ತನಾಗಿ ಮೂರ್ಛೆಗೊಂಡ.

ಮುಹ್ಯಮಾನೋಽಬ್ರವೀಚ್ಚೈನಂ ಮುಹೂರ್ತಂ ತಿಷ್ಠ ಸಂಜಯ |
ವ್ಯಾಕುಲಂ ಮೇ ಮನಃ ಸೂತ ಶ್ರುತ್ವೈತನ್ಮಹದಪ್ರಿಯಮ್ ||27||
ಮೂರ್ಛೆ ಹೋಗುತ್ತಿರುವಾಗ ಆತ ಹೇಳಿದ, `ಸ್ವಲ್ಪ ಹೊತ್ತು ನಿಲ್ಲು ಸಂಜಯ, ನೀನು ಹೇಳಿದ ಮಹಾ ಅನಿಷ್ಟ ವೃತ್ತಾಂತವನ್ನು ಕೇಳಿ ನನ್ನ ಮನಸ್ಸು ವ್ಯಾಕುಲ ಗೊಂಡಿದೆ.
ಮನೋ ಮುಹ್ಯತಿ ಚಾಂಗಾನಿ ನ ಚ ಶಕ್ನೋಮಿ ಧಾರಿತುಮ್ |
ಇತ್ಯೇವಮುಕತ್ತ್ವ ವಚನಂ ಧೃತರಾಷ್ಟ್ರೋಽಂಬಿಕಾಸುತಃ |
ನಷ್ಟಚಿತ್ತಸ್ತತಃ ಸೋಽಥ ಬಭೂವ ಜಗತೀಪತಿಃ ||28||
ನನ್ನ ಮನಸ್ಸು ನಿಶ್ಚೇಷ್ಟವಾಗುತ್ತಿದೆ. ಕಣ್ಣು ಕೈಕಾಲು ಮುಂತಾದ ಅವಯವ ಗಳನ್ನು ವಶದಲ್ಲಿಟ್ಟುಕೊಳ್ಳಲು ನಾನು ಅಶಕ್ತನಾಗುತ್ತಿದ್ದೇನೆ' ಹೀಗೆ ಹೇಳುತ್ತ ಧೃತರಾಷ್ಟ್ರ ಎಚ್ಚರ ತಪ್ಪಿದ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಸಪ್ತಮೋಽಧ್ಯಾಯಃ ||7||

ಎಂಟನೆಯ ಅಧ್ಯಾಯ
ಕರ್ಣ ಮಡಿದನೆಂದರೆ ನಂಬಲಾಗದು.
ಜನಮೇಜಯಃ
ಶ್ರುತ್ವಾ ಕರ್ಣಂ ಹತಂ ಯುದ್ಧೇ ಪುತ್ರಾಂಶ್ಚೈವ ನಿಪಾತಿತಾನ್ |
ನರೇಂದ್ರಃ ಕಿಂಚಿದಾಶ್ವಸ್ತೋ ದ್ವಿಜಶ್ರೇಷ್ಠ ಕಿಮಬ್ರವೀತ್ ||1||
ಜನಮೇಜಯರಾಜ ವೈಶಂಪಾಯನರಲ್ಲಿ ಕೇಳುತ್ತಾನೆ– `ಮುನಿಗಳೆ, ಕರ್ಣನು ಯುದ್ಧದಲ್ಲಿ ಹತನಾದುದನ್ನು, ತನ್ನ ಪುತ್ರರೂ ಕೂಡ ಅನೇಕರು ಅಸುನೀಗಿದ್ದನ್ನು ಕೇಳಿ ಮೂರ್ಛೆಗೊಂಡ ಧೃತರಾಷ್ಟ್ರ ಸ್ವಲ್ಪ ಚೇತರಿಸಿಕೊಂಡಾಗ ಏನು ಹೇಳಿದ?
ಪಾಪ್ತವಾನ್ ಪರಮಂ ದುಃಖಂ ಪುತ್ರವ್ಯಸನಜಂ ಮಹತ್ |
ತಸ್ಮಿನ್ ಯದುಕ್ತವಾನ್ ಕಾಲೇ ತನ್ಮಮಾಚಕ್ಷ್ವ ಪೃಚ್ಛತಃ ||2||
ಪುತ್ರಶೋಕದಿಂದಾಗಿರುವ ಅಸಹನೀಯವಾದ ಮಹಾದುಃಖವನ್ನು ಹೊಂದಿದ ಧೃತರಾಷ್ಟ್ರನೇನು ನುಡಿದನೆಂಬುದನ್ನು ಹೇಳಿರಿ, ನಾನು ಕೇಳಲು ಬಯಸಿದ್ದೇನೆ.
ವೈಶಂಪಾಯನಃ
ಶ್ರುತ್ವಾ ಕರ್ಣಸ್ಯ ನಿಧನಮಶ್ರದ್ಧೇಯಮಿವಾದ್ಭುತಮ್ |
ಭೂತಸಮ್ಮೋಹನಂ ಭೀಮಂ ಮೇರೋಃ ಪರ್ಯಸನಂ ಯಥಾ ||3||
ವೈಶಂಪಾಯನರು ನುಡಿದರು– ಕರ್ಣನ ಸಾವೆಂದರೆ ಅದು ನಂಬಲು ಸಾಧ್ಯವಾಗದಂತಿತ್ತು. ಅದ್ಭುತವಾಗಿತ್ತು. ಭೀಕರವಾದ ಪಂಚಭೂತವಿನಾಶದಂತೆ, ಮೇರುವಿನ ಪತನದಂತೆ.
ಚಿತ್ತಮೋಹಮಿವಾಯುಕ್ತಂ ಭಾರ್ಗವಸ್ಯ ಮಹಾತ್ಮನಃ |
ಪರಾಜಯಮಿವೇಂದ್ರಸ್ಯ ದ್ವಿಷದ್ಭ್ಯೋ ಭೀಮಕರ್ಮಣಃ ||4||
ಭೃಗುವಂಶದ ಪರಶುರಾಮನ, ಅಥವಾ ಶುಕ್ರಾಚಾರ್ಯನ ಬುದ್ಧಿಗೆ ಮೋಹಕವಿದಂತೆ. ಭಯಂಕರ ಕರ್ಮ ಮಾಡುವ ದೇವೇಂದ್ರನಿಗೆ ಶತ್ರುಗಳಿಂದ ಪರಾಜಯ ಬಂದಂತೇ ಇದು ಅಯುಕ್ತ.
ದಿವಃ ಪ್ರಪತನಂ ಭಾನೋರುರ್ವ್ಯಾಮಿವ ಮಹಾದ್ಯುತೇಃ |
ಸಂಶೋಷಣಮಿವಾಚಿಂತ್ಯಂ ಸಮುದ್ರಸ್ಯಾಕ್ಷಯಾಂಭಸಃ ||5||
ಆಕಾಶ ನೆಲಕ್ಕೆ ಬಿದ್ದಿತೆಂದರೆ, ಮಹಾತೇಜವಾದ ಸೂರ್ಯ ನೆಲಕ್ಕೆ ಉರುಳಿತೆಂದರೆ, ಅಕ್ಷಯ ಜಲಪೂರ್ಣವಾದ ಸಾಗರವೆ ಒಣಗಿ ಹೋಯಿತೆಂದರೆ ಹೇಗೋ ಹಾಗೆ ಕರ್ಣ ಅಸುನೀಗಿದನೆಂದರೆ ಅದನ್ನು ಮನಸ್ಸಿನಲ್ಲಿ ಕಲ್ಪನೆ ಮಾಡಿಕೊಳ್ಳುವುದೂ ಅಸಾಧ್ಯ.
ಮಹೀವಿಯದ್‌ದಿಗಂಬೂನಾಂ ಸರ್ವನಾಶಮಿವಾದ್ಭುತಮ್ |
ಕರ್ಮಣೋರಿವ ವೈಫಲ್ಯಮುಭಯೋಃ ಪುಣ್ಯಪಾಪಯೋಃ ||6||
ಭೂಮಿ ಆಕಾಶ ದಿಕ್ಕುಗಳು ಸಮುದ್ರ ಎಲ್ಲವೂ ನಾಶವಾಗುವುದೆಂದರೆ, ಪುಣ್ಯಪಾಪಕರ್ಮಗಳಿಗೆ ಫಲವಿಲ್ಲವೆಂದಾಗುವುದೆಂದರೆ ಅದೆಷ್ಟು ಅಚ್ಚರಿಯೋ ಅಷ್ಟೇ ಅಚ್ಚರಿ ಕರ್ಣನ ಸಾವು.
ಸಂಚಿಂತ್ಯ ನಿಪುಣಂ ಬುದ್ಧ್ಯಾ ಧೃತರಾಷ್ಟ್ರೋ ಜನೇಶ್ವರಃ |
ನೇದಮಸ್ತೀತಿ ಸಂಚಿಂತ್ಯ ಕರ್ಣಸ್ಯ ಸಮರೇ ವಧಮ್ ||7||
ಹೀಗೆ ಮನಸಿನಲ್ಲಿ ಯುಕ್ತಿಯುಕ್ತವಾಗಿ ಆಲೋಚಿಸಿ ಧೃತರಾಷ್ಟ್ರನು ಕರ್ಣ ಯುದ್ಧದಲ್ಲಿ ಮಡಿದುದನ್ನು `ಇದು ಹೀಗಾಗುವುದು ಶಕ್ಯವೆ ಇಲ್ಲ' ಎಂದು ಆಲೋಚಿಸಿದ.
ಪ್ರಾಣಿನಾಮೇವಮಾತ್ಮತ್ವಾತ್ ಸ್ಯಾದಪೀತಿ ವಿಚಾರ್ಯ ಚ |
ಶೋಕಾಗ್ನಿನಾ ದಹ್ಯಮಾನೋ ದಹ್ಯಮಾನ ಇವಾಶಯೇ ||8||
ಆದರೂ ಇನ್ನೂ ವಿಚಾರಮಾಡಿ, ಉಸಿರಾಡುವ ಪ್ರಾಣಿ ಒಂದುದಿನ ಕೊನೆಯುಸಿರೆಳೆಯುವುದು ಸ್ವಾಭಾವಿಕವಾದ್ದರಿಂದ ಕರ್ಣನ ಸಾವು ಸಂಭವಿಸಿರಲೂ ಬಹುದೆಂದುಕೊಂಡು ಶೋಕದ ಬೆಂಕಿಯಲ್ಲಿ ಮನಸಿನೊಳಗೇ ಕಾದ ಬಾಣಲಿಯಲ್ಲಿ ಬೇಯುವಂತೆ ಬೆಂದುಹೋದ.
ವಿಸ್ರಸ್ತಾಂಗಃ ಶ್ವಸನ್ ದೀನೋ ಹಾ ಹೇತ್ಯುಕತ್ತ್ವ ಸುದುಃಖಿತಃ |

ವಿಲಲಾಪ ಮಹಾರಾಜ ಧೃತರಾಷ್ಟ್ರೋಽಂಬಿಕಾಸುತಃ ॥9॥
ಧೃತರಾಷ್ಟ್ರನಿಗೆ ಮೈಯಲ್ಲಿ ಅವಯವಗಳೆಲ್ಲವೂ ಶಿಥಿಲಗೊಂಡುವು. ಬಹಳ ದುಃಖದಿಂದ ನಿಟ್ಟುಸಿರಿಡುತ್ತ ದೈನ್ಯದಿಂದ `ಹಾ! ಹಾ!' ಎನ್ನುತ್ತ ಆತ ಗೋಳಾಡಿದ.
ಧೃತರಾಷ್ಟ್ರಃ
ಸಂಜಯಾಧಿರಥಿರ್ವೀರಃ ಸಿಂಹದ್ವಿರದವಿಕ್ರಮಃ |
ವೃಷಭಪ್ರತಿಮಸ್ಕಂಧೋ ವೃಷಭಾಕ್ಷಗತಿಸ್ವರಃ ॥10॥
ಧೃತರಾಷ್ಟ್ರ ನುಡಿದ– ಸಿಂಹದಂತೆ ಆನೆಯಂತೆ ಪರಾಕ್ರಮ ತೋರುವ ಕರ್ಣನು ಗೂಳಿಯಂತೆ ಹೆಗಲುಳ್ಳವನು ಗೂಳಿಯಂಥ ದೃಷ್ಟಿ, ಗತಿ, ಸ್ವರಗಳುಳ್ಳವನು.
ವೃಷಭೋ ವೃಷಭಸ್ಯೇವ ಯೋ ಯುದ್ಧೇ ನ ನಿವರ್ತತೇ |
ಶತ್ರೋರಪಿ ಮಹೇಂದ್ರಸ್ಯ ಸಿಂಹಸಂಹನನೋ ಯುವಾ ॥11॥
ಗೂಳಿ ಗೂಳಿಯ ಕಾಳಗದಿಂದ ಹಿಂಜರಿಯದಿರುವಂತೆ ಕರ್ಣನು ಕೂಡ ಹಾಗೆ ದೇವೇಂದ್ರನೇ ಶತ್ರುವಾಗಿ ಯುದ್ಧಕ್ಕೆ ಬಂದರೂ, ಅವನೊಡನೆ ಹೋರಾಡುವಾಗ ಸಿಂಹದಂಥ ಮೈಯವನು ವೃದ್ಧನಾದ ಕರ್ಣ ಯುವಕನಂತೆ ಹೋರಾಡುತ್ತಾನೆ, ಹಿಂಜರಿಯುವುದಿಲ್ಲ.
ಯಸ್ಯ ಜ್ಯಾತಳಶಬ್ದೇನ ಶರವೃಷ್ಟಿರಯೇಣ ಚ |
ರಥಾಶ್ವನರಮಾತಂಗಾ ನ ಚ ತಿಷ್ಠಂತಿ ಸಂಯುಗೇ ॥12॥
ಕರ್ಣನ ಧನುಷ್ಟಂಕಾರಕ್ಕೆ, ಕರ್ಣನ ಬಾಣದ ಮಳೆಗಳ ವೇಗಕ್ಕೆ ರಣದಲ್ಲಿ ರಥ ಅಶ್ವ ಪದಾತಿ ಗಜ ಸೈನ್ಯ ಯಾವುದೂ ಇದಿರಾಗಿ ನಿಲ್ಲುತ್ತಿರಲಿಲ್ಲ.
ಯಮಾಶ್ರಿತ್ಯ ಮಹಾಬಾಹುಂ ದ್ವಿಷತ್ಸಂಘಘ್ನಮಚ್ಯುತಮ್ |
ದುರ್ಯೋಧನೋಽಕರೋದ್ ವೈರಂ ಪಾಂಡುಪುತ್ರೈರ್ಮಹಾರಥೈಃ |13|
ಮಹಾಬಾಹುವಾದ ಕರ್ಣನೇ ಸಹಸ್ರ ಸಂಖ್ಯೆಯ ಶತ್ರುಗಳನ್ನೂ ತಪ್ಪದೆ ಧ್ವಂಸ ಮಾಡುವವನೆಂದು ಅವನನ್ನೇ ಆಶ್ರಯಿಸಿ ದುರ್ಯೋಧನ ಮಹಾರಥರಾದ ಪಾಂಡವರೊಡನೆ ವೈರ ಮಾಡಿದ್ದ.
ಸ ಕಥಂ ರಥಿನಾಂ ಶ್ರೇಷ್ಠಃ ಕರ್ಣಃ ಪಾರ್ಥೇನ ಸಂಯುಗೇ |
ನಿಹತಃ ಪುರುಷವ್ಯಾಘ್ರಃ ಪ್ರಸಹ್ಯಾಮಿತವಿಕ್ರಮಃ ॥14॥
ಅಂಥ ಶ್ರೇಷ್ಠ ರಥಿಕ, ಅಮಿತ ಪರಾಕ್ರಮಿ, ಪುರುಷಶ್ರೇಷ್ಠನಾದ ಕರ್ಣ ಅರ್ಜುನನಿಂದ ಹೇಗೆ ಹತನಾದ?
ಯೋ ನಾಮನ್ಯತ ವೈ ನಿತ್ಯಮಚ್ಯುತಂ ಸಧನಂಜಯಮ್ |
ನ ವೃಷ್ಣೀನ್ ನಾಹಿತಾನನ್ಯಾನ್ ಸ್ವಬಾಹುಬಲಮಾಶ್ರಿತಃ ॥15॥
ತನ್ನ ಬಾಹುಬಲವನ್ನೇ ನೆಚ್ಚಿ ಕರ್ಣ ಕೃಷ್ಣಾರ್ಜುನರನ್ನೇ ಗಣನೆಗೆ ತಾರದಿದ್ದ ವನು, ಯಾದವರನ್ನಾಗಲಿ ಬೇರೆ ಯಾವ ಶತ್ರುಗಳನ್ನೇ ಆಗಲಿ ಆತ ಲೆಕ್ಕಿಸಲಿಲ್ಲ.
ಶಾರ್ಙ್ಗಗಾಂಡೀವಧನ್ವಾನೌ ಸಹಿತಾವಪರಾಜಿತೌ |
ಅಹಂ ದಿವ್ಯಾದ್ ರಥಾದೇಕಃ ಪಾತಯಿಷ್ಯಾಮಿ ಸಂಯುಗೇ ॥16॥
`ಶಾರ್ಂಗಪಾಣಿ ಕೃಷ್ಣ ಮತ್ತು ಗಾಂಡೀವಧಾರಿ ಅರ್ಜುನರಿಬ್ಬರು ಕೂಡಿದರೆ ಎಂದೂ ಸೋಲರಿಯದವರಾದ ಅವರಿಬ್ಬರನ್ನೂ ನಾನು ಒಬ್ಬನೇ ಯುದ್ಧದಲ್ಲಿ ದಿವ್ಯರಥದಿಂದ ನೆಲಕ್ಕೆ ಉರುಳಿಸಬಲ್ಲೆ.'
ಇತಿ ಯಃ ಸತತಂ ಮಂದಮವೋಚಲ್ಲೋಭಮೋಹಿತಮ್ |
ದುರ್ಯೋಧನಮವಾಚೀನಂ ರಾಜ್ಯಕಾಮುಕಮಾತುರಮ್ ॥17॥
ಹೀಗೆ, ಲೋಭ ಮೋಹಪರವಶನಾಗಿ ರಾಜ್ಯದಾಸೆಯಿಂದ ಬುದ್ಧಿಗೆಟ್ಟು ಸತತ ಮುಖ ಕೆಳಗೆ ಮಾಡಿ ಕುಳಿತಿದ್ದ ಮೂರ್ಖ ದುರ್ಯೋಧನನಿಗೆ ಕರ್ಣ ಸಂತೈಸುತ್ತಿದ್ದ.
ಯೋಽಜಯತ್ ಸರ್ವಕಾಂಭೋಜಾನ್ ಅಂಬಷ್ಠಾನ್ ಕೇಕಯೈಃ ಸಹ |
ಗಾಂಧಾರಾನ್ ಮದ್ರಕಾನ್ ಮಾತ್ಸ್ಯಾಂಸ್ತ್ರಿಗರ್ತಾನ್
ತಂಕಣಾನ್ ಶಕಾನ್ ॥18॥
ಪಾಂಚಾಲಾಂಶ್ಚ ವಿದೇಹಾಂಶ್ಚ ಕುಣಿಂದಾನ್ ಕಾಶಿಕೋಸಲಾನ್ |
ಸುಹ್ಮಾನಂಗಾಂಶ್ಚ ವಂಗಾಂಶ್ಚ ನಿಷಾದಾನ್ ಪುಂಡ್ರಕೀಕಟಾನ್ ॥19॥
ವತ್ಸಾನ್ ಕಲಿಂಗಾನ್ ದರದಾನ್ ಅಶ್ಮಕಾನ್ ಋಷಿಕಾನಪಿ ॥20॥
ಯೋ ಜಿತ್ವಾ ಸಮರೇ ಶೂರಾನ್ ಚಕ್ರೇ ಬಲಿಭೃತಃ ಪುರಾ |
ಶರವ್ರಾತೈಃ ಸುನಿಶಿತೈಃ ಸುತೀಕ್ಷ್ಣೈಃ ಕಂಕಪತ್ರಿಭಿಃ ॥21॥
ಎಲ್ಲ ಕಂಬೋಜ ಅಂಬಷ್ಠ ಕೇಕಯ ಗಾಂಧಾರ ಮದ್ರಕ ಮಾತ್ಸ್ಯ ತ್ರಿಗರ್ತ ತಂಕಣ ಶಕ ಪಾಂಚಾಲ ವಿದೇಹ ಕುಣಿಂದ ಕಾಶಿ ಕೋಸಲ ಸುಹ್ಮ ಅಂಗ ವಂಗ ನಿಷಾದ ಪುಂಡ್ರ ಕೀಕಟ ವತ್ಸ ಕಲಿಂಗ ದರದ ಅಶ್ಮಕ ಋಷಿಕ ಮುಂತಾದ ದೇಶಗಳ ಶೂರ ರಾಜರನ್ನೂ ಹಿಂದೆ ಕರ್ಣ ಯುದ್ಧದಲ್ಲಿ ಹದ್ದಿನ ಗರಿಯ ಪುಕ್ಕದ ಹರಿತವಾದ ತೀಕ್ಷ್ಣವಾದ ಬಾಣಗಳಿಂದ ಗೆದ್ದು, ಅವರೆಲ್ಲರೂ ದುರ್ಯೋಧನನಿಗೆ ಕಪ್ಪಕೊಡುವಂತೆ ಮಾಡಿದ್ದ.
ದುರ್ಯೋಧನಸ್ಯ ವೃದ್ಧ್ಯರ್ಥಂ ವರ್ತತೇ ಯೋ ಜಯಾಯ ಚ |
ಸೇನಾಗೋಪಶ್ಚ ಸ ಕಥಂ ಶತ್ರುಭಿಃ ಪರಮಾಸ್ತ್ರವಿತ್ ॥22॥

ಘಾತಿತಃ ಪಾಂಡವೈಃ ಶೂರೈಃ ಸಮರ್ಥೈರ್ವೀರ್ಯಶಾಲಿಭಿಃ ॥ 23॥
ದುರ್ಯೋಧನನಿಗೆ ದಿಗ್ವಿಜಯಕ್ಕಾಗಿ ಮತ್ತು ಐಶ್ವರ್ಯ ವೃದ್ಧಿಗಾಗಿ ಕರ್ಣನು ಸೈನ್ಯರಕ್ಷಕನಾಗಿದ್ದ. ಮಹಾ ಅಸ್ತ್ರವೇತ್ತನಾದ ಅಂಥ ಕರ್ಣನು ಶೂರವೀರಸಮರ್ಥ ರಾದ ಪಾಂಡವರಿಂದ ಹೇಗೆ ಹತನಾದ?
ವೃಷೋ ಮಹೇಂದ್ರೋ ದೇವೇಷು ವೃಷಃ ಕರ್ಣೋ ನರೇಷ್ವಪಿ |
ತೃತೀಯಮನ್ಯಂ ಲೋಕೇಸ್ಮಿನ್ ವೃಷಂ ನೈವಾನುಶುಶ್ರುಮ ॥24॥
ದೇವತೆಗಳಲ್ಲಿ ಮಹೇಂದ್ರನು ವೃಷ. ನೀರಿನ ಮಳೆಸುರಿಸುವುದರಿಂದ ಅವನಿಗೆ ಆ ಬಿರುದು. ಮನುಷ್ಯರಲ್ಲಿ ಕರ್ಣನು ವೃಷ. ಬೇಡಿದವರಿಗೆ ಇಷ್ಟಾರ್ಥಗಳ ಮಳೆ ಸುರಿಸುತ್ತಾನೆ ಆತ. ಹೀಗೆ ಲೋಕದಲ್ಲಿ ವೃಷರು ಇಬ್ಬರೆ ಹೊರತು ಮೂರನೆಯ ಇನ್ನೊಬ್ಬ ವೃಷನನ್ನು ನಾವು ಕೇಳಿಯೇ ಇಲ್ಲ
ಶಬರಾನ್ ಪರಹೂಣಾಂಶ್ಚ ಪ್ರಹೂಣಾನ್ ಸರಲಾನಪಿ ॥25॥
ಮ್ಲೇಚ್ಛರಾಷ್ಟ್ರಾಧಿಪಾಂಶ್ಚೈವ ದುರ್ಗಾನಾಟವಿಕಾಂಸ್ತಥಾ ॥26॥
ಜಿತ್ವೈತಾನ್ ಸಮರೇ ವೀರಃ ಸುತೀಕ್ಷ್ಣೈಃ ಕಂಕಪತ್ರಿಭಿಃ |
ಕರಮಾಹಾರಯಾಮಾಸ ಜಿತ್ವಾ ಸರ್ವಾನರೀಂಸ್ತಥಾ ॥27॥
ಶಬರ ಪರಹೂಣ ಪ್ರಹೂಣ ಸರಲ ಮ್ಲೇಚ್ಛ ದುರ್ಗ ಆಟವಿಕ ಈ ಎಲ್ಲ ದೇಶದ ಶತ್ರುರಾಜರನ್ನೂ ವೀರಕರ್ಣನು ಹದ್ದಿನ ರೆಕ್ಕೆಗಳ ಪುಕ್ಕಉಳ್ಳ ಬಲು ತೀಕ್ಷ್ಣವಾದ ಬಾಣಗಳಿಂದ ಗೆದ್ದು ಅವರೆಲ್ಲರೂ ದುರ್ಯೋಧನನಿಗೆ ಕರ ನೀಡುವಂತೆ ಮಾಡಿದ್ದಾನೆ.
ಉಚ್ಚೈಃಶ್ರವಾ ವರೋಽಶ್ವಾನಾಂ ರಾಜ್ಞಾಂ ವೈಶ್ರವಣೋ ವರಃ |
ವರೋ ಮಹೇಂದ್ರೋ ದೇವಾನಾಂ ಕರ್ಣಃ ಪ್ರಹರತಾಂ ವರಃ ॥28॥
ಕುದುರೆಗಳಲ್ಲಿ ಉಚ್ಚೈಃಶ್ರವವು ಶ್ರೇಷ್ಠ, ರಾಜರಲ್ಲಿ ಕುಬೇರ ಶ್ರೇಷ್ಠ. ದೇವತೆಗಳಲ್ಲಿ ಮಹೇಂದ್ರ ಶ್ರೇಷ್ಠ, ಯೋಧರಲ್ಲಿ ಕರ್ಣನು ಶ್ರೇಷ್ಠ.
ಯೋಽಜಿತಃ ಪಾರ್ಥಿವೈಃ ಶೂರೈಃ ಸಮರ್ಥೈರ್ವೀರ್ಯಶಾಲಿಭಿಃ |
ದುರ್ಯೋಧನಸ್ಯ ವೃದ್ಧ್ಯರ್ಥಂ ಕೃತ್ಸ್ನಾಮುರ್ವೀಮಥಾಜಯತ್ ॥29॥
ಕರ್ಣನು ಶೂರ ಸಮರ್ಥ ವೀರ್ಯಶಾಲಿ ರಾಜರಿಂದ ಸೋಲನ್ನು ಕಂಡವನಲ್ಲ. ಅದರಿಂದ ಅವನು ದುರ್ಯೋಧನನ ಸಂಪತ್‌ಸಮೃದ್ಧಿಗಾಗಿ ಇಡಿ ಭೂಮಿಯನ್ನು ಗೆದ್ದ.
ಯಂ ಲಬ್ಧ್ವಾ ಮಾಗಧೋ ರಾಜಾ ಸಾಂತ್ವಮಾನೋಽಥ ಸೌಹೃದೈಃ |
ಅರೌತ್ಸೀತ್ ಕ್ಷತ್ರಮತುಲಮೃತೇ ಕೌರವಯಾದವಾನ್ ॥30॥
ಕರ್ಣನನ್ನು ಸಹಾಯಕನನ್ನಾಗಿ ಪಡೆದು ಅವನನ್ನು ಸೌಹಾರ್ದವರ್ತನೆ ಗಳಿಂದ ಒಲಿಸಿಕೊಂಡು ಮಗಧರಾಜ ಜರಾಸಂಧನು ಕೌರವ, ಯಾದವರ ಹೊರತಾಗಿ ಎಲ್ಲ ರಾಜರನ್ನೂ ಕಾರಾಗೃಹದಲ್ಲಿ ಬಂಧಿಸಿದ್ದ.
ತಂ ಶ್ರುತ್ವಾ ನಿಹತಂ ಕರ್ಣಂ ದ್ವೈರಥೇ ಸವ್ಯಸಾಚಿನಾ |
ಶೋಕಾರ್ಣವೇ ನಿಮಗ್ನೋಽಹಮಪ್ಲವಃ ಸಾಗರೇ ಯಥಾ ॥31॥
ಅಂಥ ಕರ್ಣ ದ್ವಂದ್ವರಥಯುದ್ಧದಲ್ಲಿ ಅರ್ಜುನನಿಂದ ಹತನಾದುದನ್ನು ಕೇಳಿ ನಾನು, ನೌಕೆ ಇಲ್ಲದವನು ಸಾಗರದಲ್ಲಿ ಮುಳುಗುವಂತೆ ಶೋಕಸಾಗರದಲ್ಲಿ ಮುಳುಗಿದ್ದೇನೆ.
ಈದೃಶೈರ್ಯದಹಂ ದುಃಖೈರ್ನ ವಿನಶ್ಯಾಮಿ ಸಂಜಯ |
ವಜ್ರಾದ್ ದೃಢತರಂ ಮನ್ಯೇ ಹೃದಯಂ ಮಮ ದುರ್ಭಿದಮ್ ॥32॥
ಸಂಜಯ, ಇಂಥ ದುಃಖಗಳಿಂದಲೂ ನಾನು ನಶಿಸದಿರುವೆನೆಂದರೆ, ನನ್ನ ಎದೆ ವಜ್ರಕ್ಕಿಂತ ಹೆಚ್ಚು ಕಠಿನ, ಒಡೆಯಲಾಗದುದು ಎಂದು ಭಾವಿಸುತ್ತೇನೆ.
ಜ್ಞಾತಿಸಂಬಂಧಿಮಿತ್ರಾಣಾಮಿಮಂ ಶ್ರುತ್ವಾ ಪರಾಭವಮ್ |
ಕೋ ಮದನ್ಯಃ ಪುಮಾನ್ ಲೋಕೇ ನ ಜಹ್ಯಾತ್ ಸೂತ
ಜೀವಿತಮ್ ॥33॥
ಸಂಜಯ, ಜ್ಞಾತಿ ಸಂಬಂಧಿಗಳ ಮಿತ್ರರ ಪರಾಭವವನ್ನು ಕೇಳಿಯೂ ನನ್ನ ಹೊರತು ಇನ್ನಾವ ಪುರುಷನು ಲೋಕದಲ್ಲಿ ಪ್ರಾಣತ್ಯಾಗ ಮಾಡದಿರುತ್ತಾನೆ?
ವಿಷಮಗ್ನಿಂ ಪ್ರಪಾತಂ ವಾ ಪರ್ವತಾಗ್ರಾದಹಂ ವೃಣೇ |
ಮಹಾಪ್ರಸ್ಥಾನಗಮನಂ ಜಲಂ ಪ್ರಾಯೋಪವೇಶನಮ್ ॥34॥
ನ ಹಿ ಶಕ್ಷ್ಯಾಮಿ ದುಃಖಾನಿ ಸೋಢುಂ ಕಷ್ಟಾನಿ ಸಂಜಯ ॥35॥
ವಿಷಪ್ರಾಶನ, ಅಗ್ನಿಪ್ರವೇಶ, ಪರ್ವತಾಗ್ರದಿಂದ ಪ್ರಪಾತಕ್ಕೆ ಬೀಳುವುದು, ಮಹಾಪ್ರಸ್ಥಾನ, ನೀರಲ್ಲಿ ಮುಳುಗುವುದು, ಪ್ರಾಯೋಪವೇಶ– ಇವುಗಳಿಂದಲ್ಲದೆ ಬೇರಾವ ಬಗೆಯಿಂದಲೂ ನಾನು ಕಷ್ಟದಾಯಕವಾದ ಈ ದುಃಖಗಳನ್ನು ಸಹಿಸಿಕೊಳ್ಳಲಾರೆ, ಸಂಜಯ!'
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಅಷ್ಟಮೋಽಧ್ಯಾಯಃ ॥8॥

ಒಂಬತ್ತನೆಯ ಅಧ್ಯಾಯ
ಕರ್ಣಮರಣದ ದುಃಖ ಅಸಹನೀಯ
ಸಂಜಯಃ
ಶ್ರಿಯಾ ಕುಲೇನ ಯಶಸಾ ತಪಸಾ ಚ ಶ್ರುತೇನ ಚ |

ತ್ವಾಮದ್ಯ ಸಂತೋ ಮನ್ಯಂತೇ ಯಯಾತಿಮಿವ ನಾಹುಷಮ್ ॥1॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ಸಂಪತ್ತು ಸತ್ಕುಲ ಕೀರ್ತಿ ತಪಸ್ಸು ಶಾಸ್ತ್ರಜ್ಞಾನ ಇವುಗಳಲ್ಲಿ ನಿನ್ನನ್ನು ಈಗ ನಹುಷಪುತ್ರನಾದ ಯಯಾತಿಗೆ ಸಮನೆಂದು ಸಜ್ಜನರು ಪರಿಗಣಿಸುತ್ತಾರೆ.
ಶ್ರುತೇ ಮಹರ್ಷಿಪ್ರತಿಮಃ ಕೃತಕೃತ್ಯೋಽಸಿ ಪಾರ್ಥಿವ |
ಪರ್ಯವಸ್ಥಾಪಯಾತ್ಮಾನಂ ಮಾ ವಿಷಾದೇ ಮನಃ ಕೃಥಾಃ ॥2॥
ಶಾಸ್ತ್ರಜ್ಞಾನದಲ್ಲಿ ನೀನು ಋಷಿತುಲ್ಯನಾಗಿರುವೆ. ಕೃತಕೃತ್ಯನಾಗಿರುವೆ. ರಾಜನೆ, ನಿನ್ನನ್ನು ಸಾವರಿಸಿಕೊಳ್ಳು, ಮನಸಿನಿಂದ ವಿಷಾದವನ್ನು ದೂರಮಾಡಿಕೊಳ್ಳು.
ಧೃತರಾಷ್ಟ್ರಃ
ದೈವಮೇವ ಪರಂ ಮನ್ಯೇ ಪೌರುಷಂ ತು ನಿರರ್ಥಕಮ್ |
ಯತ್ರ ಸಾಲಪ್ರತೀಕಾಶಃ ಕರ್ಣೋಽವಧ್ಯತ ಸಂಯುಗೇ ॥3॥
ಧೃತರಾಷ್ಟ್ರನು ಹೇಳುತ್ತಾನೆ– ದೈವವೇ ಮೇಲು ಎಂದು ನನಗೆ ಅನಿಸುತ್ತಿದೆ, ಪೌರುಷ ವ್ಯರ್ಥ. ಏಕೆಂದರೆ ಸಾಲವೃಕ್ಷದಂತೆ ಉನ್ನತಗಾತ್ರದವನಾದ ಕರ್ಣ ಯುದ್ಧದಲ್ಲಿ ಹತನಾದ.
ಹತ್ವಾ ಯೌಧಿಷ್ಠಿರಂ ಸೈನ್ಯಂ ಪಾಂಚಾಲಾಂಶ್ಚ ಮಹಾರಥಾನ್ |
ಪ್ರತಾಪ್ಯ ಶರವರ್ಷೇಣ ದಿಶಃ ಸರ್ವಾ ಮಹಾರಥಃ ॥4॥
ಮೋಹಯಿತ್ವಾ ರಣೇ ಪಾರ್ಥಾನ್ ವಜ್ರಹಸ್ತ ಇವಾಸುರಾನ್ |
ಕಥಂ ಸ ನಿಹತಃ ಶೇತೇ ವಾತನುನ್ನ ಇವ ದ್ರುಮಃ ॥5॥
ಯುಧಿಷ್ಠಿರನ ಸೈನ್ಯವನ್ನು ನಾಶಪಡಿಸಿ, ಮಹಾರಥರಾದ ಪಾಂಚಾಲರನ್ನು ವಧಿಸಿ ಬಾಣಗಳ ಮಳೆಯಿಂದ ಎಲ್ಲ ದಿಕ್ಕುಗಳನ್ನೂ ಬೆಂದುಹೋಗುವಂತೆ ಮಾಡಿ, ಇಂದ್ರನು ಅಸುರರನ್ನು ಹೇಗೋ ಹಾಗೆ ಪಾಂಡವರನ್ನು ಕಂಗೆಡಿಸಿದ ಮಹಾರಥನಾದ ಕರ್ಣ ಬಿರುಗಾಳಿಗೆ ಸಿಲುಕಿದ ಮರದಂತೆ ಹೇಗೆ ರಣರಂಗದಲ್ಲಿ ಹತನಾಗಿ ಒರಗಿದ್ದಾನೆ?
ಶೋಕಸ್ಯಾಂತಂ ನ ಪಶ್ಯಾಮಿ ಪಾರಂ ಜಲನಿಧೇರಿವ |
ಚಿಂತಾ ಮೇ ವರ್ಧತೇ ತೀವ್ರಾ ಮುಮೂರ್ಷಾ ಚೋಪಜಾಯತೇ ॥6॥
ಸಮುದ್ರದ ಆಚೆ ದಡದಂತೆ ನನಗೆ ಶೋಕದ ಕೊನೆಯೆ ಕಾಣುತ್ತಿಲ್ಲ. ಚಿಂತೆ ಹೆಚ್ಚುತ್ತಲೇ ಇದೆ. ಸಾಯಬೇಕೆನಿಸುತ್ತಿದೆ.
ಕರ್ಣಸ್ಯ ನಿಧನಂ ಶ್ರುತ್ವಾ ವಿಜಯಂ ಫಲ್ಗುನಸ್ಯ ಚ |
ಅಶ್ರದ್ಧೇಯಮಿದಂ ಮನ್ಯೇ ವಧಂ ಕರ್ಣಸ್ಯ ಸಂಜಯ ॥7॥
ಕರ್ಣನ ಮರಣವನ್ನು, ಅರ್ಜುನನ ವಿಜಯವನ್ನು ನಾನು ಕೇಳಿದೆ. ಆದರೆ ಸಂಜಯ, ಕರ್ಣನ ವಧೆಯಾಯಿತೆಂಬುದನ್ನು ನನಗೆ ನಂಬಲು ಆಗುತ್ತಿಲ್ಲ.
ವಜ್ರಸಾರಮಯಂ ನೂನಂ ಹೃದಯಂ ಮಮ ದುರ್ಭಿದಮ್ |
ಯಚ್ಛ್ರುತ್ವಾ ಪುರುಷವ್ಯಾಘ್ರಂ ಹತಂ ಕರ್ಣಂ ನ ದೀರ್ಯತೇ ॥8॥
ನನ್ನ ಎದೆ ನಿಶ್ಚಯವಾಗಿ ವಜ್ರದ ಸಾರದಿಂದಾದುದು. ಅಭೇದ್ಯವಾದುದು, ಪುರುಷಶ್ರೇಷ್ಠನಾದ ಕರ್ಣ ಹತನಾದುದನ್ನು ಕೇಳಿಯೂ ಅದು ಸೀಳಿ ಹೋಗುತ್ತಿಲ್ಲ !
ಆಯುರ್ನೂನಂ ಸುದೀರ್ಘಂ ಮೇ ವಿಹಿತಂ ದೈವತೈಃ ಪುರಾ |
ಯತ್ರ ಕರ್ಣಂ ಹತಂ ಶ್ರುತ್ವಾ ಜೀವಾಮೀಹ ಸುದುಃಖಿತಃ ॥9॥
ನನ್ನ ಆಯುಸ್ಸು ಬಲು ದೀರ್ಘವಾಗಿರಬೇಕೆಂದು ದೇವತೆಗಳು ಪ್ರಾಯಃ ವಿಧಿಸಿರಬೇಕು. ಏಕೆಂದರೆ ಕರ್ಣ ಹತನಾಗಿದ್ದಾನೆ ಎಂದು ಕೇಳಿಯೂ ನಾನು ಬಲು ದುಃಖಿತನಾಗಿ ಬದುಕಿಯೇ ಇದ್ದೇನೆ.
ಧಿಗ್ ಜೀವಿತಮಿದಂ ಚೈವ ಸುಹೃದ್ವಿಹೀನಸ್ಯ ಸಂಜಯ |
ಅದ್ಯ ಚಾಹಂ ದಶಾಮೇತಾಂ ಗತಃ ಸಂಜಯ ಕುತ್ಸಿತಾಮ್ ॥10॥
ಸಂಜಯ, ಸಂಜಯ, ಆಪ್ತರಿಲ್ಲದ ನನ್ನ ಈ ಬಾಳನ್ನು ಸುಡಬೇಕು. ಅದರ ಸಲುವಾಗಿ ನಾನು ಈ ಹೀನಸ್ಥಿತಿಯಲ್ಲಿರುವಂತಾಯಿತು.
ಕೃಪಣಂ ವರ್ತಯಿಷ್ಯಾಮಿ ಶೋಚ್ಯಃ ಸರ್ವಸ್ಯ ಮಂದಧೀಃ ॥11॥
ಮುಂದೆ ನಾನು ತುಚ್ಛವಾದ ಬಾಳನ್ನು ಬಾಳುತ್ತೇನೆ. ಮಂದಬುದ್ಧಿಯವನಾದ ನನ್ನಲ್ಲಿ ಎಲ್ಲರೂ ಕನಿಕರಪಡುವಂತಾಗುತ್ತದೆ.
ಅಹಮೇವ ಪುರಾ ಭೂತ್ವಾ ಸರ್ವಲೋಕಸ್ಯ ಸತ್ಕೃತಃ |
ಪರಿಭೂತಃ ಪುನಃ ಸೂತ ಕಥಂ ಶಕ್ಷ್ಯಾಮಿ ಜೀವಿತುಮ್ ॥12॥
ನಾನು ಹಿಂದೆ ಎಲ್ಲರಿಗೂ ಆದರಣೀಯನಾಗಿದ್ದು ಈಗ ಅವಮಾನಿತನಾಗಿ ಹೇಗೆ ಬದುಕಿರಬಲ್ಲೆ?
ದುಃಖಾದ್ ದುಃಖತರಂ ಮನ್ಯೇ ಪ್ರಾಪ್ತವಾನಸ್ಮಿ ಸಂಜಯ |
ಭೀಷ್ಮದ್ರೋಣವಧೇನೈವ ಕರ್ಣಸ್ಯ ಚ ಮಹಾತ್ಮನಃ ॥13॥
ದುಃಖದ ಮೇಲೆ ಹೆಚ್ಚಿನ ದುಃಖವನ್ನು ಹೊಂದಿದ್ದೇನೆ, ಸಂಜಯ, ಭೀಷ್ಮ ದ್ರೋಣರ ವಧೆಯಾಯಿತು, ಇದೀಗ ಮಹಾತ್ಮ ಕರ್ಣನ ವಧೆಯಾಗಿದೆ!
ನಾತ್ರ ಶೇಷಂ ಪ್ರಪಶ್ಯಾಮಿ ಸೂತಪುತ್ರೇ ಹತೇ ಯುಧಿ |
ಸ ಹಿ ಪಾರೋ ಮಹಾನಾಸೀತ್ ಪುತ್ರಾಣಾಂ ಮಮ ಸಂಜಯ ॥14॥
ಕರ್ಣ ಯುದ್ಧದಲ್ಲಿ ಹತನಾದ ಬಳಿಕ ನನಗೆ ಇನ್ನೇನೂ ಉಳಿದಂತೆ ಕಾಣುತ್ತಿಲ್ಲ. ಅವನೇ ನನ್ನ ಮಕ್ಕಳಿಗೆ ದೊಡ್ಡ ಆಸರೆಯಾಗಿದ್ದ.
ಯುದ್ಧೇ ವಿನಿಹತಃ ಶೂರೋ ವಿಸೃಜನ್ ಸಾಯಕಾನ್ ಬಹೂನ್ |

ಕೋ ನು ಮೇ ಜೀವಿತೇನಾರ್ಥಸ್ತಮೃತೇ ಪುರುಷರ್ಷಭಮ್ ॥15॥
ಶೂರನಾದ ಕರ್ಣ ಯುದ್ಧದಲ್ಲಿ ಬಹಳ ಬಾಣಗಳನ್ನು ಎಸೆದು ಹತನಾಗಿದ್ದಾನೆ. ಪುರುಷ ಶ್ರೇಷ್ಠನಾದ ಅವನಿಲ್ಲವೆಂದ ಮೇಲೆ ನಾನು ಬದುಕಿದ್ದು ಏನು ಫಲ?
ರಥಾದಾಧಿರಥಿರ್ನೂನಮಪತತ್ ಸಾಯಕಾರ್ದಿತಃ |
ಪರ್ವತಸ್ಯೇವ ಶಿಖರಂ ವಜ್ರಪಾತಾದ್ ವಿದಾರಿತಮ್ ॥16॥
ವಜ್ರಾಯುಧದ ಪ್ರಹಾರದಿಂದ ಒಡೆದು ಪರ್ವತದ ಶಿಖರ ಬೀಳುವಂತೆ ಪ್ರಾಯಃ ಬಾಣದ ಏಟಿನಿಂದ ಕರ್ಣನು ರಥದಿಂದ ಉರುಳಿಬಿದ್ದ.
ಸ ಶೇತೇ ಪೃಥಿವೀಂ ನೂನಂ ಶೋಭಯನ್ ರುಧಿರೋಕ್ಷಿತಃ |
ಮಾತಂಗ ಇವ ಮತ್ತೇನ ಮಾತಂಗೇನ ನಿಪಾತಿತಃ ॥17॥
ಒಂದು ಮದ್ದಾನೆಯಿಂದ ಕೆಡವಲ್ಪಟ್ಟು ಇನ್ನೊಂದುಆನೆ ಬೀಳುವಂತೆ ಪ್ರಾಯಃ ಕರ್ಣನೂ ನೆತ್ತರಿಂದ ತೊಯ್ದು ನೆಲದಲ್ಲಿ ಒರಗಿ ನೆಲಕ್ಕೆ ಶೋಭೆ ಉಂಟುಮಾಡಿದ್ದಾನೆ!
ಯೋ ಬಲಂ ಧಾರ್ತರಾಷ್ಟ್ರಾಣಾಂ ಪಾಂಡವಾನಾಂ ಯತೋ ಭಯಮ್
ಸೋಽರ್ಜುನೇನ ಹತಃ ಕರ್ಣಃ ಪ್ರತಿಮಾನಂ ಧನುಷ್ಮತಾಮ್ ॥18॥
ಕರ್ಣನೆಂದರೆ ಕೌರವರಿಗೆ ಬಲಸ್ವರೂಪ, ಪಾಂಡವರಿಗೆ ಅವನಿಂದ ಭಯ ಇದ್ದಿತು. ಅರ್ಜುನನಿಂದ ಹತನಾದರೂ ಬಿಲ್ಲಾಳುಗಳಿಗೆ ಅವನು ಎಂದೆಂದೂ ಆದರ್ಶಪ್ರಾಯ.
ಸ ಹಿ ವೀರೋ ಮಹೇಷ್ವಾಸಃ ಪುತ್ರಾಣಾಮಭಯಂಕರಃ |
ಶೇತೇ ವಿನಿಹತಃ ಶೂರಃ ಶಕ್ರೇಣೇವ ಪುರಾ ಬಲಃ ॥19॥
ವೀರ ಕರ್ಣನು ದೊಡ್ಡ ಬಿಲ್ಲುಗಾರ. ನನ್ನ ಮಕ್ಕಳಿಗೆ ಅಭಯಪ್ರದನಾಗಿದ್ದ. ಈಗ ಅವನು, ಹಿಂದೆ ಇಂದ್ರನಿಂದ ಬಲಾಸುರ ಹತನಾದಂತೆ, ಅರ್ಜುನನಿಂದ ಹತನಾಗಿ ನೆಲದಲ್ಲಿ ಒರಗಿದ್ದಾನೆ.
ಪಂಗೋರಿವಾಧ್ವಗಮನಂ ದರಿದ್ರಸ್ಯೇವ ಕಾಮಿತಾ |
ದುರ್ಯೋಧನಸ್ಯ ಲೋಭಶ್ಚ ಸಮಾನ್ಯೇತಾನಿ ಸಂಜಯ ॥20॥
ಇನ್ನು, ಕಾಲಿಲ್ಲದವನು ಹಾದಿ ನಡೆಯುವುದು, ದರಿದ್ರನು ಭೋಗಕ್ಕೆ ಆಸೆ ಪಡುವುದು, ದುರ್ಯೋಧನನು ಜಿಪುಣತನ ತೋರುವುದು ಇವು ಮೂರೂ ಸಮಾನ. ಯಾವುದೂ ಕೈಗೂಡುವುದಿಲ್ಲ.
ಅನ್ಯಥಾ ಚಿಂತಿತಂ ಕಾರ್ಯಮನ್ಯಥಾ ತಚ್ಚ ಜಾಯತೇ |
ಅಹೋ ನು ಬಲವದ್ ದೈವಂ ಕಾಲಶ್ಚ ದುರತಿಕ್ರಮಃ ॥21॥
ಒಂದು ರೀತಿಯಿಂದ ಬಗೆವ ಕೆಲಸ ಇನ್ನೊಂದು ರೀತಿಯಿಂದ ನಡೆದು ಹೋಗುವುದು! ಆಶ್ಚರ್ಯವೆಂದರೆ ಇದೇ. ದೈವ ಬಲವತ್ತರ, ಕಾಲ ಅನುಲ್ಲಂಘ್ಯ, ಸಂಜಯ!
ಪಲಾಯಮಾನಃ ಕೃಪಣೋ ದೀನಾತ್ಮಾ ದೀನಪೌರುಷಃ |
ಕಚ್ಚಿನ್ನ ನಿಹತಃ ಸೂತ ಪುತ್ರೋ ದುಃಶಾಸನೋ ಮಮ ॥22॥
ದೀನನಾಗಿ, ಪಲಾಯನ ಮಾಡುವ ದೀನಸ್ವಭಾವದವನಾಗಿ, ದೀನ ಪೌರುಷ ಉಳ್ಳವನಾಗಿ ನನ್ನ ಮಗ ದುಃಶಾಸನ ಹತನಾಗಿಲ್ಲ ತಾನೆ?
ಕಚ್ಚಿನ್ನ ನೀಚಾಚರಿತಂ ಕೃತವಾಂಸ್ತಾತ ಸಂಯುಗೇ |
ಪುತ್ರೋ ದುರ್ಯೋಧನಃ ಸಂಖೇ ನ ಹತೋ ಮಮ ಸಂಜಯ ॥23॥
ಸಂಜಯ, ಯುದ್ಧದಲ್ಲಿ ಎಂದೂ ನೀಚಕಾರ್ಯ ಮಾಡದಿದ್ದವನು ನನ್ನ ಪುತ್ರ ದುರ್ಯೋಧನ, ಅವನು ಯುದ್ಧದಲ್ಲಿ ಹತನಾಗಿಲ್ಲ ತಾನೆ?
ಕಚ್ಚಿತ್ ತೇ ನಿಹತಾಃ ಶೂರಾ ಯಥಾ ತೇ ಕ್ಷತ್ರಿಯಾ ಸ್ತಥಾ ॥24॥
ಕ್ಷತ್ರಿಯರಂತೇ ನಮ್ಮ ಶೂರರು ಹತರಾದರು ತಾನೆ?
ಯುಧಿಷ್ಠಿರಸ್ಯ ವಚನಂ ಮಾ ಯುದ್ಧಮಿತಿ ಸರ್ವದಾ |
ದುರ್ಯೋಧನೋ ನಾಭ್ಯಗೃಹ್ಣಾನ್ಮೂಢಃ ಪಥ್ಯಮಿವೌಷಧಮ್ ॥25॥
ಯುಧಿಷ್ಠಿರ ಹೇಳುತ್ತಿದ್ದುದು ಸದಾ ಒಂದೇ ಮಾತು `ಬೇಡ ಯುದ್ಧ'ವೆಂದು. ಮೂಢನಾದ ದುರ್ಯೋಧನ ಔಷಧದಂತೆ ಪಥ್ಯವಾಗಿದ್ದ ಆ ಮಾತನ್ನು ಸ್ವೀಕರಿಸಲಿಲ್ಲ.'
ಶರತಲ್ಪೇ ಶಯಾನೇನ ಭೀಷ್ಮೇಣ ಸುಮಹಾತ್ಮನಾ |
ಪಾನೀಯಂ ಯಾಚಿತಃ ಪಾರ್ಥಃ ಸೋಽವಿಧ್ಯನ್ಮೇದಿನೀತಳಮ್ ॥26॥
ಶರತಲ್ಪದಲ್ಲಿ ಮಲಗಿದ್ದ ಮಹಾ ಮಹಾತ್ಮ ಭೀಷ್ಮ ನೀರನ್ನು ಬೇಡಿದರೆ ಅರ್ಜುನ ಬಾಣದಿಂದ ನೆಲವನ್ನು ಭೇದಿಸಿ ನೀರನ್ನು ಕೊಟ್ಟ.
ಜಲಸ್ಯ ಧಾರಾಂ ಜನಿತಾಂ ದೃಷ್ಟ್ವಾ ತಾಂ ಪಾಂಡವೇನ ಚ |
ಅಬ್ರವೀತ್ ಸುಮಹಾಬುದ್ಧಿಸ್ತಾತ ಸಂಶಾಮ್ಯ ಪಾಂಡವೈಃ ॥27॥
ಅರ್ಜುನ ನೆಲದಿಂದ ನೀರಿನ ಧಾರೆ ಚಿಮ್ಮುವಂತೆ ಮಾಡಿದ್ದನ್ನು ಕಂಡು ಮಹಾಜ್ಞಾನಿಯಾದ ಭೀಷ್ಮ ದುರ್ಯೋಧನನಿಗೆ ಬೋಧಿಸಿದ, `ಮಗು ಪಾಂಡವ ರೊಂದಿಗೆ ಶಾಂತಿ ಸಂಧಾನ ಮಾಡಿಕೊಳ್ಳು' ಎಂದು.
ಪ್ರಶಮಾದ್ಧಿ ಭವೇಚ್ಛ್ರೇಯೋ ಮದಂತಂ ಯುದ್ಧಮೇವ ಚ |
ಭ್ರಾತೃಭಾವೇನ ಪೃಥಿವೀಂ ಭುಂಕ್ಷ್ವ ಪಾಂಡುಸುತೈಃ ಸಹ ॥28॥
`ಶಾಂತಿಸಂಧಾನದಿಂದ ನಿನಗೆ ಶ್ರೇಯಸ್ಸಾದೀತು. ಯುದ್ಧವು ನನ್ನ ಅವಸಾನ ದಲ್ಲಿಯೆ ಕೊನೆಗೊಂಡೀತು. ಪಾಂಡವರೊಂದಿಗೆ

ಸೋದರಭಾವದಿಂದ ಇದ್ದು ಭೂಮಿಯ ಭೋಗವನ್ನು ಅನುಭವಿಸು' ಎಂದು.
ಅಕುರ್ವನ್ ವಚನಂ ತಸ್ಯ ನೂನಂ ಶೋಚತಿ ಪುತ್ರಕಃ |
ತದಿದಂ ಸಮನುಪ್ರಾಪ್ತಂ ವಚನಂ ದೀರ್ಘದರ್ಶಿನಃ ॥29॥
ಭೀಷ್ಮನ ಮಾತಿನಂತೆ ನಡೆಯದಿದ್ದುದರಿಂದಲೇ ದುಷ್ಟಪುತ್ರನು ಈಗ ನಿಶ್ಚಯವಾಗಿ ಶೋಕಿಸುತ್ತಾನೆ. ದೀರ್ಘದೃಷ್ಟಿಯವನಾದ ಭೀಷ್ಮನ ಮಾತು ಇದೀಗ ನಿಜವಾಗುತ್ತಿದೆ.
ಅಹಂ ತು ನಿಹತಾಮಾತ್ಯೋ ಹತಪುತ್ರಶ್ಚ ಸಂಜಯ |
ದ್ಯೂತೇನ ಕೃಚ್ಛ್ರಮಾಪನ್ನೋ ಲೂನಪಕ್ಷ ಇವ ದ್ವಿಜಃ ॥30॥
ಸಂಜಯ, ನನ್ನ ಮಂತ್ರಿಗಳು ಹತರಾದರು. ಪುತ್ರರು ಹತರಾದರು. ಜೂಜಿನ ಪರಿಣಾಮವಾಗಿ ನಾನು ಈ ಕಷ್ಟದಲ್ಲಿ ಸಿಲುಕಿ ರೆಕ್ಕೆ ಕಳೆದುಕೊಂಡ ಹಕ್ಕಿಯಂತೆ ಆಗಿದ್ದೇನೆ.
ಯಥಾ ಗೃಹೀತ್ವಾ ಶಕುನಿಂ ಪಕ್ಷೌ ಲುಪ್ತ್ವಾಽಥ ಸಂಜಯ |
ವಿಸರ್ಜಯಂತೇ ಸಂಹೃಷ್ಟಾಃ ಕ್ರೀಡಮಾನಾಃ ಕುಮಾರಕಾಃ ॥31॥
ಆಟವಾಡುವ ಮಕ್ಕಳು ಹಕ್ಕಿಯನ್ನು ಹಿಡಿದು ರೆಕ್ಕೆಗಳನ್ನು ಕತ್ತರಿಸಿ ಬಿಟ್ಟುಬಿಡುತ್ತಾರೆ, ಸಂತೋಷಪಡುತ್ತಾರೆ.
ಲೂನಪಕ್ಷತಯಾ ತಸ್ಯ ಗಮನಂ ನೋಪಪದ್ಯತೇ |
ತಥಾಽಹಮಪಿ ಸಂಪ್ರಾಪ್ತೋ ಲೂನಪಕ್ಷ ಇವ ದ್ವಿಜಃ ॥32॥
ಆಗ ರೆಕ್ಕೆಗಳು ಕಡಿದುಹೋಗಿರುವುದರಿಂದ ಹಕ್ಕಿ ಹಾರಲು ಶಕ್ತವಾಗುವುದಿಲ್ಲ. ಹಾಗೇ ನಾನೂ ಕೂಡ ರೆಕ್ಕೆ ಕಳೆದುಕೊಂಡ ಹಕ್ಕಿಯಂತಾಗಿದ್ದೇನೆ.
ಕ್ಷೀಣಃ ಸರ್ವಾರ್ಥಹೀನಶ್ಚ ನಿರ್ಬಂಧುರ್ಜ್ಞಾತಿಸಂಕ್ಷಯೇ |
ಕಾಂ ದಿಶಂ ಪ್ರತಿಪತ್ಸ್ಯಾಮಿ ದೀನಃ ಶೋಕವಶಂ ಗತಃ ॥33॥
ದುರ್ಬಲನಾಗಿದ್ದೇನೆ, ಎಲ್ಲ ಸಂಪತ್ತನ್ನೂ ಕಳೆದುಕೊಂಡಿದ್ದೇನೆ. ಜ್ಞಾತಿ ಬಾಂಧವರು ನಶಿಸಿರುವುದರಿಂದ ಬಂಧುಹೀನನಾಗಿದ್ದೇನೆ, ದೀನನಾಗಿ, ಶೋಕಕ್ಕೆ ವಶನಾಗಿ, ನಾನು ಈಗ ಯಾವ ದಿಕ್ಕಿಗೆ ಹೋಗಲಿ?
ವೈಶಂಪಾಯನಃ
ಇತ್ಯೇವಂ ಧೃತರಾಷ್ಟ್ರೋಽಥ ವಿಲಪ್ಯ ಬಹು ದುಃಖಿತಃ |
ಪ್ರೋವಾಚ ಸಂಜಯಂ ಭೂಯಃ ಶೋಕವ್ಯಾಕುಲಲೋಚನಃ ॥34॥
ವೈಶಂಪಾಯನರು ನುಡಿದರು– ಧೃತರಾಷ್ಟ್ರ ಹೀಗೆ ಬಹು ದುಃಖಿತನಾಗಿ ಗೋಳಿಟ್ಟು ಶೋಕದಿಂದ ಕಂಗೆಟ್ಟು ಪುನಃ ಸಂಜಯನಿಗೆ ಹೇಳಿದ.
ಧೃತರಾಷ್ಟ್ರಃ
ಯೋಽಜಯತ್ ಸರ್ವಕಾಂಭೋಜಾನಂಬಷ್ಠಾನ್ ಕೇಕಯ್ಯೈಃ ಸಹ |
ಗಾಂಧಾರಾಂಶ್ಚ ವಿದೇಹಾಂಶ್ಚ ಜಿತ್ವಾ ಕಾರ್ಯಾರ್ಥಮಾಹವೇ ॥35॥
ದೃಷ್ಟರಾಷ್ಟ್ರ ನುಡಿದ– ಕರ್ಣನು ಎಲ್ಲ ಕಾಂಬೋಜ ಅಂಬಷ್ಠ ಕೇಕಯ ಗಾಂಧಾರ ವಿದೇಹ ರಾಜರನ್ನೂ ನನ್ನ ಕಾರ್ಯಾರ್ಥವಾಗಿ ಯುದ್ಧದಲ್ಲಿ ಗೆದ್ದನು.
ದುರ್ಯೋಧನಸ್ಯ ವೃದ್ಧ್ಯರ್ಥಂ ಪೃಥಿವೀಂ ಯೋಽಜಯತ್ ಪ್ರಭುಃ |
ಸ ಜಿತಃ ಪಾಂಡವೈಃ ಶೂರೈಃ ಸಮರ್ಥೈರ್ವೀರ್ಯಶಾಲಿಭಿಃ ॥36॥
ಕರ್ಣನು ದುರ್ಯೋಧನನ ಸಂಪತ್‌ಸಮೃದ್ಧಿಗಾಗಿ ಇಡಿ ಭೂಮಂಡಲವನ್ನೆ ಗೆದ್ದುಕೊಟ್ಟ. ಆದರೆ ಸಮರ್ಥನಾದ ಆತ ಸಮರ್ಥರಾದ ವೀರ್ಯಶಾಲಿಗಳಾದ ಶೂರರಾದ ಪಾಂಡವರಿಂದ ಜಿತನಾದ.
ತಸ್ಮಿನ್ ಹತೇ ಮಹೇಷ್ವಾಸೇ ಕರ್ಣೇ ಯುಧಿ ಕಿರೀಟಿನಾ |
ಕೇ ವೀರಾಃ ಪರ್ಯತಿಷ್ಠಂತ ತನ್ಮಮಾಚಕ್ಷ್ವ ಸಂಜಯ ॥37॥
ಮಹಾಬಿಲ್ಲಾರನಾದ ಕರ್ಣ ಯುದ್ಧದಲ್ಲಿ ಅರ್ಜುನನಿಂದ ಹತನಾದಾಗ ಯಾವ ವೀರರು ಅವನನ್ನು ಸುತ್ತುವರಿದಿದ್ದರು? ಸಂಜಯ, ಅದನ್ನು ನನಗೆ ಈಗ ಹೇಳು.
ಕಚ್ಚಿನ್ನೈಕಃ ಪರಿತ್ಯಕ್ತಃ ಪಾಂಡವೈರ್ನಿಹತೋ ರಣೇ |
ಉಕ್ತಂ ತ್ವಯಾ ಪುರಾ ಸೂತ ಯಥಾ ಶೂರೌ ನಿಪಾತಿತೌ ॥38॥
ಕರ್ಣನೊಬ್ಬನನ್ನೇ ಮುಂದೆಬಿಟ್ಟು ಎಲ್ಲರೂ ಹಿಂದೆ ಸರಿದಾಗ ಆತ ಯುದ್ಧದಲ್ಲಿ ಪಾಂಡವರಿಂದ ನಿಹತನಾಗಲಿಲ್ಲ ತಾನೆ? ಏಕೆಂದರೆ ನೀನು ಹಿಂದೆ ಶೂರರಾದ ಭೀಷ್ಮದ್ರೋಣರು ಹೇಗೆ ಹತರಾದರೆಂಬುದನ್ನು ಹೇಳಿರುವೆ.
ಭೀಷ್ಮಮಪ್ರತಿಯುಧ್ಯಂತಂ ಶಿಖಂಡೀ ಸಾಯಕೋತ್ತಮೈಃ |
ಪಾತಯಾಮಾಸ ಸಮರೇ ಸರ್ವಶಸ್ತ್ರಭೃತಾಂ ವರಮ್ ॥39॥
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಭೀಷ್ಮ ಯುದ್ಧದಲ್ಲಿ ಪ್ರತಿಯಾಗಿ ಹೋರಾಡುವುದನ್ನು ನಿಲ್ಲಿಸಿದ್ದಾಗ ಅವನನ್ನು ಶಿಖಂಡಿಯು ಉತ್ತಮವಾದ ಬಾಣಗಳಿಂದ ಕೆಳಗೆ ಬೀಳಿಸಿದ್ದ.
ತಥಾ ದ್ರೌಪದಿನಾ ದ್ರೋಣೋ ನ್ಯಸ್ತಸರ್ವಾಯುಧೋ ಯುಧಿ |
ಧರ್ಮರಾಜವಚಃ ಶ್ರುತ್ವಾ ಅಶ್ವತ್ಥಾಮಾ ಹತಸಿತ್ವತಿ ॥40॥
ಹಾಗೇ ದ್ರೋಣನೂ ರಣರಂಗದಲ್ಲಿ ಸರ್ವಶಸ್ತ್ರ ಸನ್ಯಾಸ ಮಾಡಿದ್ದಾಗ ಧೃಷ್ಟದ್ಯುಮ್ನ ಅವನನ್ನು ಬೀಳಿಸಿದ್ದ. `ಅಶ್ವತ್ಥಾಮಾ ಹತಃ' ಎಂದು ಧರ್ಮರಾಜ ಹೇಳಿದ ಮಾತನ್ನು ಕೇಳಿ ದ್ರೋಣ ಶಸ್ತ್ರ ಸನ್ಯಾಸ ಮಾಡಿದ್ದ.

ಯುಕ್ತಯೋಗೋ ಮಹೇಷ್ವಾಸಃ ಶರೈರ್ಬಹುಭಿರಾಚಿತಃ |
ನಿಹತಃ ಖಡ್ಗಮುದ್ಯೃತ್ಯ ಧೃಷ್ಟದ್ಯುಮ್ನೇನ ಸಂಜಯ ॥41॥
ದ್ರೋಣನು ಮಹಾಬಿಲ್ಗಾರ. ಬಹುಬಾಣಗಳಿಂದ ಪೀಡಿತನಾಗಿದ್ದ. ಅವನು ಯೋಗ ಸಮಾಧಿಯಿಂದ ಯುಕ್ತನಾದಾಗ ಧೃಷ್ಟದ್ಯುಮ್ನನು ಖಡ್ಗವನ್ನೆತ್ತಿ ಅವನನ್ನು ವಧಿಸಿದ.
ಅಂತರೇಣ ಹತಾವೇತೌ ಚ್ಛಲೇನ ಚ ವಿಶೇಷತಃ |
ಅಶ್ರೌಷಮಹಮೇತದ್ ವೈ ಭೀಷ್ಮದ್ರೋಣೌ ನಿಪಾತಿತೌ ॥42॥
ಈ ಭೀಷ್ಮದ್ರೋಣರಿಬ್ಬರೂ ಹೀಗೆ ಸಮಯ ಕಾದು ವಿಶೇಷವಾಗಿ ಮೋಸದಿಂದಲೇ ಬೀಳಿಸಲ್ಪಟ್ಟರು. ಇದನ್ನು ನಿನ್ನಿಂದ ನಾನು ಕೇಳಿದ್ದಾಯಿತು.
ಭೀಷ್ಮದ್ರೌಣೌ ಹಿ ಸಮರೇ ನ ಹನ್ಯಾದ್ ವಜ್ರಭೃತ್ ಸ್ವಯಮ್ |
ನ್ಯಾಯೇನ ಯುಧ್ಯನ್ ಸಮರೇ ತದ್ವ್ಯೆ ಸತ್ಯಂ ಬ್ರವೀಮಿ ತೇ ॥43॥
ಭೀಷ್ಮದ್ರೋಣರನ್ನು ಯುದ್ಧದಲ್ಲಿ ಸ್ವತಃ ದೇವೇಂದ್ರನೂ ಕೂಡ ನ್ಯಾಯ ದಿಂದ ಹೋರಾಡಿ ಕೊಲ್ಲಲು ಶಕ್ತನಾಗುತ್ತಿರಲಿಲ್ಲ, ನಾನು ಹೇಳುತ್ತಿದ್ದೇನೆ, ಇದು ಸತ್ಯ
ಧೃತರಾಷ್ಟ್ರ ತಪ್ಪು ತಿಳಿದಿದ್ದ.
ವಸ್ತುತಃ, ಯತ್ರಯೋಗೇಶ್ವರಃ ಕೃಷ್ಣಃ ಯತ್ರ ಪಾರ್ಥೋ ಧನುರ್ಧರಃ |
ತತ್ರ ಶ್ರೀರ್ವಿಜಯೋ ಭೂತಿಃ ಧ್ರುವಾ ನೀತಿರ್ಮತಿರ್ಮಮ ॥
ಎಂದು ಮುಂದೆ ಸಂಜಯ ಹೇಳುವಂತೆ ಕೃಷ್ಣಾರ್ಜುನರಿಗೆ ಅಶಕ್ಯವೇನೂ ಇರಲಿಲ್ಲ. ಭೀಷ್ಮದ್ರೋಣರನ್ನು ಅವರು ಮೋಸದಿಂದ ಕೊಂದಿದ್ದು `ನೇರ ಯುದ್ಧ ದಲ್ಲಿ ಕೊಲ್ಲಲಾಗದಂಥ ವೀರರೆ'ಂದು ಅವರಿಗೆ ಕೀರ್ತಿ ಬರಲಿ ಎಂಬ ಸದುದ್ದೇಶ ದಿಂದಲೆ. ಅವರೂ ಇದನ್ನೇ ಬಯಸಿದ್ದರು. ಅವರ ಬಯಕೆಯಂತೆಯೇ ಅವರನ್ನು ಮೋಸದಿಂದ ಕೃಷ್ಣಾರ್ಜುನರು ವಧಿಸಿದ್ದರು ನಿರ್ಣಯ.
ಕರ್ಣಂ ತ್ವಸ್ಯಂತಮಸತ್ರಾಣಿ ದಿವ್ಯಾನಿ ಚ ಲಘೂನಿ ಚ |
ಕಥಮಿಂದ್ರೋಪಮಂ ಸಂಖೇ ಮೃತ್ಯುರ್ವೀರಂ ಸಮಸ್ಪೃಶತ್ ॥44॥
ಭೀಷ್ಮದ್ರೋಣರು ಶಸ್ತ್ರಸನ್ಯಾಸ ಮಾಡಿದರೂ ಕರ್ಣ ಹಾಗೆ ಮಾಡಲಿಲ್ಲ. ದಿವ್ಯವಾದ ವೇಗಉಳ್ಳ ಅಸ್ತ್ರಗಳನ್ನು ಎಸೆಯುತ್ತಲೇ ಇದ್ದ. ಇಂದ್ರನಂತೆ ಪರಾಕ್ರಮಿಯಾಗಿದ್ದ ವೀರಕರ್ಣನನ್ನು ಅವನು ಯುದ್ಧದಲ್ಲಿ ಅಸ್ತ್ರಪ್ರಯೋಗ ಮಾಡುತ್ತಿದ್ದ ಕಾಲದಲ್ಲಿಯೇ ಮೃತ್ಯು ಅವನನ್ನು ಹೇಗೆ ಸೆಳೆದೊಯ್ದಿತು?
ಯಸ್ಯ ವಿದ್ಯುತ್ಪ್ರಭಾಂ ಶಕ್ತಿಂ ದಿವ್ಯಾಂ ಕನಕಭೂಷಣಾಮ್ |
ಪ್ರಾಯಚ್ಛದ್ ದ್ವಿಷತಾಂ ಹಂತ್ರೀಂ ಕುಂಡಲಾಭ್ಯಾಂ ಪುರಂದರಃ ॥45॥
ಕರ್ಣನಿಗೆ ದೇವೇಂದ್ರ ಅವನ ಕುಂಡಲಗಳಿಗೆ ಬದಲಾಗಿ ಚಿನ್ನದಿಂದ ಅಲಂಕೃತ ವಾದ ಮಿಂಚಿನಂತೆ ಹೊಳೆವ ಶತ್ರುನಾಶಕವಾದ ದಿವ್ಯವಾದ ಶಕ್ತ್ಯಾಯುಧವನ್ನು ನೀಡಿದ್ದ.
ಯಸ್ಯ ಸರ್ಪಮುಖೋ ದಿವ್ಯಃ ಶರಃ ಕಾಂಚನಭೂಷಣಃ |
ಸ ಶೇತೇ ನಿಹತಃ ಸಂಖೇ ಕರ್ಣಶ್ಚಾರಿನಿಷೂದನಃ ॥46॥
ಕರ್ಣನ ಬಳಿ ಚಿನ್ನದಿಂದ ಅಲಂಕೃತವಾದ ಸರ್ಪಮುಖವಾದ ದಿವ್ಯ ಬಾಣವಿದ್ದಿತು. ಶತ್ರುನಾಶಕನಾದ ಆ ಕರ್ಣನು ರಣರಂಗದಲ್ಲಿ ಹತನಾಗಿ ಬಿದ್ದನೆ?
ಭೀಷ್ಮದ್ರೋಣಮುಖಾನ್ ವೀರಾನ್ ಯೋಽವಮತ್ಯ ಮಹಾರಥಾನ್ |
ಜಾಮದಗ್ನ್ಯಾನ್ಮಹಾಘೋರಂ ಬ್ರಾಹ್ಮಮಸ್ತ್ರಮಶಿಕ್ಷಯತ್ ॥47॥
ಕರ್ಣನು ಪರಶುರಾಮನಿಂದ ಮಹಾಭಯಂಕರವಾದ ಬ್ರಹ್ಮಾಸ್ತ್ರಮಂತ್ರೋಪ ದೇಶವನ್ನು ಪಡೆದಿದ್ದ. ಅದರಿಂದ ಭೀಷ್ಮದ್ರೋಣ ಮುಂತಾದ ವೀರ ಮಹಾರಥ ರನ್ನೂ ಆತ ಕಡೆಗಣಿಸಿದ್ದ.
ಯಶ್ಚ ದ್ರೋಣಮುಖಾನ್ ದೃಷ್ಟ್ವಾ ವಿಮುಖಾನರ್ದಿತಾನ್ ಶರೈಃ |
ಸೌಭದ್ರಸ್ಯ ಮಹಾಬಾಹುರ್ವ್ಯಧಮತ್ ಕಾರ್ಮುಕಂ ಶರೈಃ ॥48॥
ಅಭಿಮನ್ಯುವಿನ ಬಾಣಗಳಿಂದ ಪೀಡಿತರಾಗಿ ದ್ರೋಣ ಮುಂತಾದವರು ಯುದ್ಧದಿಂದ ಹಿಂಜರಿಯುತ್ತಿದ್ದುದನ್ನು ಕಂಡು ಮಹಾಬಾಹುಶಾಲಿಯಾದ ಕರ್ಣ ಅವನ ಧನುಸ್ಸನ್ನು ಬಾಣಗಳಿಂದ ತುಂಡರಿಸಿದ.
ಯಶ್ಚ ನಾಗಾಯುತಪ್ರಾಣಂ ವಾತರಂಹಸಮಚ್ಯುತಮ್ |
ವಿರಥಂ ಸಹಸಾ ಕೃತ್ವಾ ಭೀಮಸೇನಮಪಾಹಸತ್ ॥49॥
ಹತ್ತುಸಾವಿರ ಆನೆಗಳ ಬಲಯುಕ್ತನಾಗಿದ್ದ. ವಾಯುವೇಗದಿಂದ ರಣರಂಗದಲ್ಲಿ ಸಂಚರಿಸುತ್ತಿದ್ದ ಸೋಲನ್ನರಿಯದಿದ್ದ ಭೀಮಸೇನನನ್ನು ಕರ್ಣನು ಕೂಡಲೆ ವಿರಥನನ್ನಾಗಿ ಮಾಡಿ ಅಪಹಾಸ ಮಾಡಿದ.
ಸಹದೇವಂ ಚ ನಿರ್ಜಿತ್ಯ ಶರೈಃ ಸನ್ನತಪರ್ವಭಿಃ |
ಕೃಪಯಾ ವಿರಥಂ ಕೃತ್ವಾ ನಾವಧೀದ್ ಧರ್ಮವಿತ್ತಮಃ ॥50॥
ಸಹದೇವನನ್ನು ಬಗ್ಗಿದ ಗಿಣ್ಣುಗಳಿಂದ ಬಾಣಗಳಿಂದ ಸೋಲಿಸಿ ವಿರಥನನ್ನಾಗಿ ಮಾಡಿಯೂ ಧರ್ಮಜ್ಞರಲ್ಲಿ ಮೊದಲಿಗನಾದ ಕರ್ಣ ಕೃಪೆಯಿಂದ ಅವನನ್ನು ಕೊಲ್ಲದೆ ಬಿಟ್ಟ.
ಯಶ್ಚ ಮಾಯಾಸಹಸ್ರಾಣಿ ಧ್ವಂಸಯಿತ್ವಾ ಘಟೋತ್ಕಚಮ್ |
ರಣೋತ್ಕಟಂ ರಾಕ್ಷಸೇಂದ್ರಂ ಶಕ್ರಶಕ್ತ್ಯಾ ನಿಜಘ್ನಿವಾನ್ ॥51॥
ಯುದ್ಧದಲ್ಲಿ ಪ್ರಬಲನಾದ ಘಟೋತ್ಕಚನೆಂಬ ದೊಡ್ಡ ರಾಕ್ಷಸನನ್ನು ಅವನ ಸಾವಿರ ಸಾವಿರ ಮಾಯೆಗಳನ್ನು ನಾಶಪಡಿಸಿ ಕರ್ಣನು

ಇಂದ್ರನ ಶಕ್ತ್ಯಾಯುಧದಿಂದ ವಧಿಸಿದ.
ಏತಾಂಶ್ಚ ದಿವಸಾನ್ ಯಸ್ಯ ಯುದ್ಧೇ ಭೀತೋ ಧನಂಜಯಃ |
ನಾಗಮದ್ ದ್ವೈರಥಂ ವೀರಃ ಸ ಕಥಂ ನಿಹತೋ ರಣೇ ||52||
ಈ ದಿವಸಗಳಲ್ಲಿ ವೀರನಾದ ಅರ್ಜುನ ಕರ್ಣನೊಡನೆ ಯುದ್ಧಕ್ಕೆ ಹೆದರಿ ದ್ವಂದ್ವರಥ ಯುದ್ಧಕ್ಕೆ ಬರಲಿಲ್ಲ. ಅಂಥ ಕರ್ಣ ಯುದ್ಧದಲ್ಲಿ ಹೇಗೆ ಹತನಾದ?
ರಥಭಂಗೋ ನ ಚೇತ್ ತಸ್ಯ ಧನುರ್ಜ್ಯಾ ನ ವ್ಯಶೀರ್ಯತ |
ನ ಚೇದಸ್ತ್ರಾಣಿ ನಷ್ಟಾನಿ ಕಥಂ ಸ ನಿಹತಃ ಪರೈಃ ||53||
ಕರ್ಣನ ರಥ ಮುರಿಯದಿರುತ್ತಿದ್ದರೆ, ಧನುಸ್ಸಿನ ಹೆದೆ ಕಡಿಯದಿರುತ್ತಿದ್ದರೆ, ಅಸ್ತ್ರಮಂತ್ರಗಳು ಮರೆತು ಹೋಗದಿರುತ್ತಿದ್ದರೆ ಕರ್ಣ ಯುದ್ಧದಲ್ಲಿ ಹೇಗೆ ಹತನಾಗುತ್ತಿದ್ದ?
ಕೋ ಹಿ ಶಕ್ತೋ ರಣೇ ಕರ್ಣಂ ವಿಧುನ್ವಾನಂ ಮಹದ್ಧನುಃ |
ವಿಮುಂಚಂತಂ ಶರಾನ್ ಘೋರಾನ್ ದಿವ್ಯಾನ್ಯಸ್ತ್ರಾಣಿ ಚಾಹವೇ ||54||
ಜೇತುಂ ಪುರುಷಶಾರ್ದೂಲಂ ಶಾರ್ದೂಲಮಿವ ವೇಗಿತಮ್ ||55||
ಮಹಾಧನುಸ್ಸನ್ನು ಓಲಾಡಿಸುತ್ತ ಭಯಂಕರಬಾಣಗಳನ್ನು ದಿವ್ಯ ಅಸ್ತ್ರಗಳನ್ನೂ ಎಸೆಯುತ್ತಿದ್ದವನು, ಹುಲಿಯಂತೆ ವೇಗದಿಂದ ಸಂಚರಿಸುತ್ತಿದ್ದವನು, ಕರ್ಣ. ಪುರುಷಶ್ರೇಷ್ಠನಾದ ಆತನನ್ನು ಯುದ್ಧದಲ್ಲಿ ಗೆಲ್ಲಲು ಯಾವನು ತಾನೆ ಶಕ್ತನಾದಾನು?
ಧ್ರುವಮಸ್ಯ ಧನುಶ್ಛಿನ್ನಂ ರಥೋ ವಾಽಭಿಗತೋ ಮಹೀಮ್ |
ಅಸ್ತ್ರಾಣಿ ವಾ ಪ್ರಣಷ್ಟಾನಿ ಯಥಾ ಶಂಸಸಿ ಮೇ ಹತಮ್ ||56||
ನ ಹ್ಯನ್ಯದನುಪಶ್ಯಾಮಿ ಕಾರಣಂ ತಸ್ಯ ಪಾತನೇ ||57||
ನಿಶ್ಚಯವಾಗಿ ಅವನ ಬಿಲ್ಲು ಕಡಿದಿರಬೇಕು, ರಥ ನೆಲದಲ್ಲಿ ಹೂತು ಹೋಗಿರಬೇಕು. ಅಸ್ತ್ರಮಂತ್ರಗಳಾದರೂ ಮರೆತುಹೋಗಿರಬೇಕು. ಏಕೆಂದರೆ ಅವನು ಹತನಾದನೆಂದು ನೀನು ಹೇಳುತ್ತಿರುವೆ. ಅವನು ಬೀಳಬೇಕೆಂದರೆ ಬೇರೆ ಕಾರಣವೇನೂ ನನಗೆ ಕಾಣುತ್ತಿಲ್ಲ.
ನ ಹನ್ಯಾಮರ್ಜುನಂ ಯಾವತ್ ತಾವತ್ ಪಾದೌ ನ ಧಾವಯೇ |
ಇತಿ ಯಸ್ಯ ಮಹಾಘೋರಂ ವ್ರತಮಾಸೀತ್ ಮಹಾತ್ಮನಃ ||58||
`ಅರ್ಜುನನನ್ನು ಸಂಹರಿಸುವರೆಗೆ ನಾನು ಬೇರೆಯವರಿಂದ ಕಾಲುಗಳನ್ನು ತೊಳೆಸಿಕೊಳ್ಳುವುದಿಲ್ಲ' ಎಂದು ಮಹಾತ್ಮಕರ್ಣನ ಮಹಾಭಯಂಕರ ಪ್ರತಿಜ್ಞೆ ಇತ್ತು.
ಯಸ್ಮಾದ್ ಭೀತೋ ವನೇ ನಿತ್ಯಂ ಧರ್ಮರಾಜೋ ಯುಧಿಷ್ಠಿರಃ |
ತ್ರಯೋದಶ ಸಮಾ ನಿದ್ರಾಂ ನ ಲೇಭೇ ಪುರುಷರ್ಷಭಃ ||59||
ಪುರುಷಶ್ರೇಷ್ಠನಾದ, ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನು ಕೂಡ ಕರ್ಣನ ಭಯದಿಂದ ಹದಿಮೂರು ವರ್ಷಕಾಲ ವನವಾಸದಲ್ಲಿ ರಾತ್ರಿ ನಿತ್ಯ ಜಾಗರಣ ಮಾಡುತ್ತಿದ್ದ, ಅವನಿಗೆ ನಿದ್ರೆಯೆ ಬರುತ್ತಿರಲಿಲ್ಲ.
ಯಸ್ಯ ವೀರ್ಯವತೋ ವೀರ್ಯಂ ಸಮಾಶ್ರಿತ್ಯ ಮಹಾತ್ಮನಃ |
ಮಮ ಪುತ್ರಃ ಸಭಾಂ ಭಾರ್ಯಾಂ ಪಾಂಡೂನಾಂ ನೀತವಾನ್
ಬಲಾತ್ ||60||
ಮಹಾತ್ಮ ಪರಾಕ್ರಮಿಯಾದ ಕರ್ಣನ ಪರಾಕ್ರಮವನ್ನೇ ಅವಲಂಬಿಸಿ ನನ್ನ ಮಗ ದುರ್ಯೋಧನ ಪಾಂಡವರ ಪತ್ನಿಯನ್ನು ಬಲಾತ್ಕಾರವಾಗಿ ಜೂಜಿನ ಸಭೆಗೆ ತರಿಸಿದ.
ತತ್ರಾಪಿ ಚ ಸಭಾಮಧ್ಯೇ ಪಾಂಡವಾನಾಂ ಸ್ಮ ಪಶ್ಯತಾಮ್ |
ದಾಸಭಾರ್ಯೇತಿ ಪಾಂಚಾಲೀಮಬ್ರವೀತ್ ಕುರುಸನ್ನಿಧೌ ||61||
ಕರ್ಣನ ಪರಾಕ್ರಮವನ್ನು ಅವಲಂಬಿಸಿಯೇ ಆ ಸಭಾ ಮಧ್ಯದಲ್ಲಿ ಪಾಂಡವರು ನೋಡುತ್ತಿದ್ದಂತೆಯೇ ಕೌರವರ ಸನ್ನಿಧಿಯಲ್ಲಿ ದುರ್ಯೋಧನ ದ್ರೌಪದಿಯನ್ನು ದಾಸಭಾರ್ಯೆ ಎಂದು ಕರೆದ.
ಯಶ್ಚ ಗಾಂಡೀವಮುಕ್ತಾನಾಂ ಸ್ಪರ್ಶಮುಗ್ರಮಚಿಂತಯನ್ |
ಅಪತಿರ್ಹ್ಯಸಿ ಕೃಷ್ಣೇತಿ ಬ್ರುವನ್ ಪಾರ್ಥಾನವೈಕ್ಷತ ||62||
ಕರ್ಣನು ತಾನೂ ಗಾಂಡೀವಧನುಸ್ಸಿನಿಂದ ಬರುವ ಬಾಣಗಳ ಉಗ್ರಸ್ಪರ್ಶ ವನ್ನೂ ಲೆಕ್ಕಿಸದೆ `ದ್ರೌಪದಿ, ನಿನಗೆ ಪತಿಗಳು ಇನ್ನಿಲ್ಲ' ಎನ್ನುತ್ತ ಪಾಂಡವರ ಕಡೆಗೆ ನೋಡಿದ.
ಯಸ್ಯ ನಾಸೀದ್ ಭಯಂ ಪಾರ್ಥಾತ್ ಸಪುತ್ರಾತ್ ಸಜನಾರ್ದನಾತ್ |
ಸ್ವಬಾಹುಬಲಮಾಶ್ರಿತ್ಯ ಮುಹೂರ್ತಮಪಿ ಸಂಜಯ ||63||
ಸಂಜಯ, ಕರ್ಣ ತನ್ನ ಬಾಹುಬಲವನ್ನೇ ನಂಬಿದವನು, ಒಂದು ಮುಹೂರ್ತ ಕಾಲವೂ ಅವನಿಗೆ ಅರ್ಜುನನ ಭಯವಿರಲಿಲ್ಲ. ಅವನ ಪುತ್ರರ ಭಯ ಶ್ರೀಕೃಷ್ಣನ ಭಯಗಳೂ ಇರಲಿಲ್ಲ.
ತಸ್ಯ ನಾಹಂ ವಧಂ ಮನ್ಯೇ ದೇವೈರಪಿ ಸವಾಸವೈಃ |
ಪ್ರತೀಪಮಭಿಧಾವದ್ಭಿಃ ಕಿಂ ಪುನಸ್ತಾತ ಪಾಂಡವೈಃ ||64||
ಇಂದ್ರಾದಿ ದೇವತೆಗಳೇ ಅವನಿಗೆ ಇದಿರಾಗಿ ಮುನ್ನುಗ್ಗಿ ಬಂದರೂ, ಅವರಿಂದ ಅವನಿಗೆ ಸಾವು ಬಂದೀತೆಂದು ನಾನು ಭಾವಿಸಲಾರೆ. ಇನ್ನು ಪಾಂಡವರಿಂದ ಅವನಿಗೆ ಸಾವು ಬಂದೀತೆ?
ನ ಹಿ ಜ್ಯಾಂ ಸಂಸ್ಪೃಶಾನಸ್ಯ ತಳತ್ರೇ ಚಾಪಿ ಗೃಹ್ಣತಃ |
ಪುಮಾನಾಧಿರಥೇಃ ಸ್ಥಾತುಂ ಕಶ್ಚಿತ್ ಪ್ರಮುಖತೋಽರ್ಹತಿ ||65||

ಕರ್ಣನು ಬಿಲ್ಲಿಗೆ ಹೆದೆ ಏರಿಸಿ ಕೈಚೀಲವನ್ನು ಕೈಹಾಕಿಕೊಂಡನೆಂದರೆ,
ಅಧಿರಥನ ಮಗನಾದ ಆ ಕರ್ಣನ ಮುಂದೆ ನಿಲ್ಲಲು ಯಾವನೂ ಶಕ್ತನಾಗುವು ದಿಲ್ಲ.
ಅಪಿ ಸ್ಯಾನ್ಮೇದಿನೀ ಹೀನಾ ಸೂರ್ಯಸೋಮಪ್ರಭಾಂಶುಭಿಃ |
ನ ವಧಃ ಪುರುಷೇಂದ್ರಸ್ಯ ಸಮರೇಷ್ವಪಲಾಯಿನಃ ॥66॥
ಭೂಮಿಯು ಒಂದುವೇಳೆ ಸೂರ್ಯ ಚಂದ್ರ ಮತ್ತು ಅಗ್ನಿ ಈ ಮೂವರ ಕಿರಣಗಳಿಂದಲೂ `ಹೀನಾ ಸ್ಯಾತ್' ಶೂನ್ಯವಾಗಬೇಕು. `ನ ಚೇತ್' ಇಲ್ಲದಿದ್ದರೆ ಯುದ್ಧಗಳಲ್ಲಿ ಸೋತು ಪಲಾಯನ ಮಾಡದಿರುವ ಶ್ರೇಷ್ಠ ಪುರುಷನಾದ ಕರ್ಣನ `ವಧೋ ನ ಸ್ಯಾತ್' ವಧೆಯಾಗಲಾರದು. ಅದು ಅಸಂಭವ.
ಯೇನ ಮಂದಃ ಸಹಾಯೇನ ಭ್ರಾತ್ರಾ ದುಃಶಾಸನೇನ ಚ |
ಬ್ರುವತೋ ವಾಸುದೇವಸ್ಯ ಪ್ರತ್ಯಾಖ್ಯಾನಮರೋಚಯತ್ ॥67॥
ಈ ಕರ್ಣನ ಮತ್ತು ತಮ್ಮನಾದ ದುಃಶಾಸನನ ಸಹಾಯ ಇದ್ದುದರಿಂದಲೇ ಮೂರ್ಖನಾದ ದುರ್ಯೋಧನನಿಗೆ ಶ್ರೀಕೃಷ್ಣನ ಸಂಧಾನದ ಮಾತುಗಳನ್ನು ತಿರಸ್ಕರಿಸುವ ಬುದ್ಧಿ ಬಂದಿತು.
ಸ ನೂನಂ ವೃಷಭಸ್ಕಂಧಂ ದೃಷ್ಟ್ವಾ ಕರ್ಣಂ ನಿಪಾತಿತಮ್ |
ದುಃಶಾಸನಂ ಚ ನಿಹತಂ ಮನ್ಯೇ ಶೋಚತಿ ಪುತ್ರಕಃ ॥68॥
ಗೂಳಿಯಂಥ ಹೆಗಲಿನ ಕರ್ಣ ಹತನಾದುದನ್ನೂ ದುಃಶಾಸನ ಹತನಾದು ದನ್ನೂ ಕಂಡ ಬಳಿಕ ಈಗ ಮೂರ್ಖನಾದ ನನ್ನ ಮಗ ನಿಶ್ಚಯವಾಗಿ ಶೋಕಿಸುತ್ತಾನೆ.
ಹತಂ ವೈಕರ್ತನಂ ದೃಷ್ಟ್ವಾ ದ್ವೈರಥೇ ಸವ್ಯಸಾಚಿನಾ |
ಜಯತಃ ಪಾಂಡವಾಂಶ್ಚಾಪಿ ಕಿಂಸ್ವಿದ್ ದುರ್ಯೋಧನೋಽಬ್ರವೀತ್ 69
ಅರ್ಜುನನೊಡನೆ ದ್ವಂದ್ವರಥಯುದ್ಧದಲ್ಲಿ ಕರ್ಣ ಹತನಾದುನ್ನೂ ಪಾಂಡವರು ಜಯಗಳಿಸಿದ್ದನ್ನೂ ಕಂಡಬಳಿಕ ದುರ್ಯೋಧನ ಏನು ನುಡಿದ?
ದುರ್ಮರ್ಷಣಂ ಚ ನಿಹತಂ ಜಯತ್ಸೇನಂ ಚ ಸಂಯುಗೇ |
ಪ್ರಭಗ್ನಂ ಚ ಬಲಂ ದೃಷ್ಟ್ವಾ ವಧ್ಯಮಾನಂ ಮಹಾರಥೈಃ ॥70॥
ಪರಾಙ್ಮುಖಾಂಶ್ಚ ನೃಪತೀನ್ ಪಲಾಯನಪರಾಯಣಾನ್ |
ವಿದ್ರುತಾನ್ ರಥಿನೋ ದೃಷ್ಟ್ವಾ ಮನ್ಯೇ ಶೋಚತಿ ಪುತ್ರಕಃ ॥71॥
ಯುದ್ಧದಲ್ಲಿ ದುರ್ಮರ್ಷಣ ಜಯತ್ಸೇನರು ಮಡಿದುದನ್ನೂ, ಮಹಾರಥ ರಿಂದ ಹತವಾಗಿ ನಮ್ಮ ಸೈನ್ಯನಾಶವಾದುದನ್ನೂ ನಮ್ಮ ಕಡೆಯ ರಾಜರು ಹಿಂಜರಿದು ಪಲಾಯನಕ್ಕೆ ತೊಡಗಿದ್ದನ್ನೂ ರಥಿಕರು ಧಾವಿಸುವುದನ್ನೂ ಕಂಡು ಮೂರ್ಖನಾದ ನನ್ನ ಮಗ ಶೋಕಿಸುತ್ತಿರಬಹುದು.
ಅನಯಶ್ಚಾತಿಮಾನೀ ಚ ಬಾಲಬುದ್ಧಿರಮರ್ಷಣಃ |
ಹತೋತ್ಸಾಹಂ ಬಲಂ ದೃಷ್ಟ್ವಾ ಕಿಂಸ್ವಿದ್ ದುರ್ಯೋಧನೋಽಬ್ರವೀತ್॥
ನೀತಿ ಇಲ್ಲದವನು ಅತಿ ಸ್ವಾಭಿಮಾನಿ ಹುಡುಗುಬುದ್ಧಿಯವನು ಸಹನೆ ಇಲ್ಲದವನು ಇಂಥ ದುರ್ಯೋಧನನು ತನ್ನ ಸೈನ್ಯ ಉತ್ಸಾಹವನ್ನು ಕಳೆದು ಕೊಂಡಿದ್ದನ್ನು ನೋಡಿ ಏನು ಹೇಳಿರಬಹುದು?
ಸ್ವಯಂ ವೈರಂ ಮಹತ್ ಕೃತ್ವಾ ವಾರ್ಯಮಾಣಃ ಸುಹೃದ್ಗಣೈಃ |
ಪ್ರಧನೇ ಹತಭೂಯಿಷ್ಠೇ ಬಲೇ ಕಿಂ ವಾಽಬ್ರವೀದಸೌ ॥73॥
ಬಂಧುಗಳೆಲ್ಲರೂ ತಡೆಯುತ್ತಿದ್ದಂತೆಯೇ ತಾನು ಮಹತ್ತಾದ ವೈರವನ್ನು ಮಾಡಿದ ಬಳಿಕ ಇದೀಗ ಯುದ್ಧದಲ್ಲಿ ಸೈನ್ಯ ಬಹುಪಾಲು ಹತವಾದಾಗ ಅವನು ಏನು ತಾನೆ ಹೇಳಿರಬಹುದು?
ಭ್ರಾತರಂ ನಿಹತಂ ದೃಷ್ಟ್ವಾ ಭೀಮಸೇನೇನ ಸಂಯುಗೇ |
ರುಧಿರೇ ಪೀಯಮಾನೇ ಚ ಕಿಂಸ್ವಿದ್ ದುರ್ಯೋಧನೋಽಬ್ರವೀತ್
॥74॥
ತಮ್ಮನಾದ ದುಃಶಾಸನ ಯುದ್ಧದಲ್ಲಿ ಭೀಮಸೇನನಿಂದ ಹತನಾದುದನ್ನು ಕಂಡಾಗ, ಭೀಮಸೇನ ಅವನ ನೆತ್ತರನ್ನು ಕುಡಿಯುತ್ತಿದ್ದಾಗ ದುರ್ಯೋಧನ ಏನು ತಾನೆ ನುಡಿದಿರಬಹುದು?
ಸಹ ಗಾಂಧಾರರಾಜೇನ ಸಭಾಯಾಂ ಯದಭಾಷತ |
ಕರ್ಣೋಽರ್ಜುನಂ ರಣೇ ಹಂತಾ ಹತೇ ತಸ್ಮಿನ್ ಕಿಮಬ್ರವೀತ್ ॥75॥
ಜೂಜಿನ ಸಭೆಯಲ್ಲಿ ದುರ್ಯೋಧನ ಶಕುನಿಯೊಂದಿಗೆ ಸೇರಿಕೊಂಡು `ಕರ್ಣನು ಅರ್ಜುನನನ್ನು ವಧಿಸುತ್ತಾನೆ' ಎಂದು ಹೇಳಿದ್ದ. ಇದೀಗ ಅದೇ ಕರ್ಣ ಹತನಾದಾಗ ಅವನೇನು ತಾನೆ ಹೇಳಿಯಾನು?
ದ್ಯೂತಂ ಕೃತ್ವಾ ಪುರಾ ಹೃಷ್ಟೋ ವಂಚಯಿತ್ವಾ ಚ ಪಾಂಡವಾನ್ |
ಶಕುನಿಃ ಸೌಬಲಸ್ತಾತ ಹತೇ ಕರ್ಣೇ ಕಿಮಬ್ರವೀತ್ ॥76॥
ಸಂಜಯ, ಅಂದು ಸುಬಲಪುತ್ರ ಶಕುನಿ ಸಂತೋಷದಿಂದ ಜೂಜಾಡಿ ಪಾಂಡವರನ್ನು ವಂಚಿಸಿ ಈಗ ಕರ್ಣ ಹತನಾದಾಗ ಏನು ತಾನೆ ಹೇಳಿರಬಹುದು?
ಕೃತವರ್ಮಾ ಮಹೇಷ್ವಾಸಃ ಸಾತ್ವತಾನಾಂ ಮಹಾರಥಃ |
ಹತಂ ವೈಕರ್ತನಂ ದೃಷ್ಟ್ವಾ ಹಾರ್ದಿಕ್ಯಃ ಕಿಮಭಾಷತ ॥77॥
ಯಾದವರಲ್ಲಿ ಮಹಾ ಬಿಲ್ಲುಗಾರ ಮಹಾರಥನಾದ ಹೃದಿಕಪುತ್ರ ಕೃತವರ್ಮ ಕರ್ಣ ಹತನಾದುದನ್ನು ಕಂಡು ಏನು ಹೇಳಿದ?

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಯಸ್ಯ ಶಿಕ್ಷಾಮುಪಾಸತೇ |
ಧನುರ್ವೇದಂ ಚಿಕೀರ್ಷಂತೋ ದ್ರೋಣಪುತ್ರಸ್ಯ ಧೀಮತಃ ॥78॥
ದಿವ್ಯರೂಪೇಣ ಸಂಪನ್ನೋ ದರ್ಶನೀಯೋ ಮಹಾಯಶಾಃ |
ಅಶ್ವತ್ಥಾಮಾ ಹತೇ ಕರ್ಣೇ ಕಿಮಭಾಷತ ಸಂಜಯ ॥79॥
ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಧನುರ್ವೇದದ ಅಭ್ಯಾಸ ಮಾಡಲು ಬಯಸಿ ದ್ರೋಣಪುತ್ರನಾದ ಧೀಮಂತ ಅಶ್ವತ್ಥಾಮನ ಬಳಿಗೇ ಬರುತ್ತಾರೆ. ಅವನು ದಿವ್ಯರೂಪಸಂಪನ್ನ ಸ್ಫುರದ್ರೂಪಿ ಮಹಾಕೀರ್ತಿಶಾಲಿ, ಸಂಜಯ, ಕರ್ಣ ಹತನಾದಾಗ ಈ ಅಶ್ವತ್ಥಾಮನೇನು ನುಡಿದ?
ಆಚಾರ್ಯೋ ಯೋ ಧನುರ್ವೇದೇ ಗೌತಮೋ ರಥಸತ್ತಮಃ |
ಸ ಕೃಪಸ್ತಾತ ತೇಜಸ್ವೀ ಹತೇ ಕರ್ಣೇ ಕಿಮಬ್ರವೀತ್ ॥80॥
ಧನುರ್ವೇದಾಚಾರ್ಯ, ಮಹಾರಥ, ತೇಜಸ್ವಿಯಾದ ಗೌತಮವಂಶೋತ್ಪನ್ನ ನಾದ ಕೃಪನು ಕರ್ಣ ಹತನಾದಾಗ ಏನು ನುಡಿದ?
ಮದ್ರರಾಜೋ ಮಹೇಷ್ವಾಸಃ ಶಲ್ಯಸ್ತತ್ರ ಕಿಮಬ್ರವೀತ್ |
ದೃಷ್ಟ್ವಾ ವಿನಿಹತಂ ಕರ್ಣಂ ಸಾರಥ್ಯೇ ರಥಿನಾಂ ವರಃ ॥81॥
ಮದ್ರರಾಜ ಶಲ್ಯ ಮಹಾ ಬಿಲ್ಲುಗಾರ ಮಹಾರಥ. ತನ್ನ ಸಾರಥ್ಯದಲ್ಲಿ ಕರ್ಣ ಹತನಾದಾಗ ಅದರ ಬಗ್ಗೆ ಏನು ನುಡಿದ?
ಕಿಮಭಾಷತ ಸೌವೀರೋ ಮದ್ರಾಣಾಮಧಿಪೋ ಬಲೀ ॥82॥
ದೃಷ್ಟಂ ತೇನ ಹಿ ತತ್ ಸರ್ವಂ ಯಥಾ ಕರ್ಣೋ ನಿಪಾತಿತಃ ॥83॥
ಬಲಿಷ್ಠನಾದ ಸೌವೀರ ಮದ್ರದೇಶಗಳ ಅಧಿಪತಿ ಶಲ್ಯನೇನು ನುಡಿದ? ಕರ್ಣ ಹೇಗೆ ಹತನಾದನೆಂಬುದನ್ನು ಎಲ್ಲವನ್ನೂ ಅವನು ನೋಡಿರುತ್ತಾನೆ ತಾನೆ?
ಯೇ ಚ ಕೇಚನ ರಾಜಾನಃ ಪೃಥಿವ್ಯಾಂ ಯೋದ್ಧುಮಾಗತಾಃ |
ವೈಕರ್ತನಂ ಹತಂ ದೃಷ್ಟ್ವಾ ಕಾನ್ಯಭಾಷಂತ ಸಂಜಯ ॥84॥
ಸಂಜಯ, ಯುದ್ಧ ಮಾಡಲು ಬಂದಿರುವ ಭೂಮಿಯಲ್ಲಿರುವ ಎಲ್ಲ ರಾಜರೂ ಕರ್ಣ ಹತನಾದುದನ್ನು ಕಂಡು ಯಾವ ಮಾತುಗಳನ್ನು ಆಡಿದರು?
ಕರ್ಣೇ ವಿನಿಹತೇ ವೀರೇ ರಥವ್ಯಾೇ ನರರ್ಷಭೇ |
ಕೋ ವಾ ಮುಖಮನೀಕಾನಾಮಾಸೀತ್ ಸಂಜಯ ಭಾಗಶಃ ॥85॥
ರಥಿಕರಲ್ಲಿ ಶ್ರೇಷ್ಠನಾದ ವೀರಕರ್ಣ ಹತನಾಗುವಾಗ ಸೈನ್ಯಗಳಿಗೆ ಬೇರೆ ಬೇರೆ ಭಾಗಗಳಲ್ಲಿ ಯಾರ್ಯಾರು ಮುಖ್ಯರಾಗಿದ್ದರು?
ಮದ್ರರಾಜಃ ಕಥಂ ಶಲ್ಯೋ ನಿಯುಕ್ತೋ ರಥಿನಾಂ ವರಃ |
ವೈಕರ್ತನಸ್ಯ ಸಾರಥ್ಯೇ ತನ್ಮಮಾಚಕ್ಷ್ವ ಸಂಜಯ ॥86॥
ರಥಿಕರಲ್ಲಿ ಶ್ರೇಷ್ಠನಾದ ಮದ್ರರಾಜ ಶಲ್ಯ ಕರ್ಣನ ಸಾರಥ್ಯದಲ್ಲಿ ಹೇಗೆ ನಿಯುಕ್ತನಾದ? ಸಂಜಯ, ಅದನ್ನು ಹೇಳು.
ಕೇऽರಕ್ಷನ್ ದಕ್ಷಿಣಂ ಚಕ್ರಂ ಸೂತಪುತ್ರಸ್ಯ ಸಂಯುಗೇ |
ವಾಮಂ ಚಕ್ರಂ ರರಕ್ಷುರ್ವಾ ಕೇ ವಾಸನ್ನಸ್ಯ ಪೃಷ್ಠತಃ ॥87॥
ಕರ್ಣನಿಗೆ ಯುದ್ಧದಲ್ಲಿ ಅವನು ಹತನಾಗುತ್ತಿದ್ದಾಗ ಬಲಗಡೆ ಚಕ್ರರಕ್ಷಣೆ ಯನ್ನು ಯಾರು ಮಾಡುತ್ತಿದ್ದರು? ಎಡಗಡೆ ಚಕ್ರರಕ್ಷಣೆಯನ್ನು ಯಾರು ಮಾಡುತ್ತಿದ್ದರು? ಹಿಂಬದಿ ಚಕ್ರರಕ್ಷಣೆಯನ್ನು ಯಾರು ಮಾಡುತ್ತಿದ್ದರು?
ಕೇ ಕರ್ಣಂ ನ ಜಹುಃ ಶೂರಾಃ ಕೇ ಕ್ಷುದ್ರಾಃ ಪ್ರಾದ್ರವನ್ ಭಯಾತ್ |
ಕಥಂ ಚ ವಃ ಸಮೇತಾನಾಂ ಹತಃ ಕರ್ಣೋ ಮಹಾರಥಃ ॥88॥
ಯಾರು ಶೂರರಾಗಿ ಕರ್ಣನನ್ನು ಬಿಡದೇ ನಿಂತಿದ್ದರು? ಯಾರು ಕ್ಷುದ್ರರಾಗಿ ಭಯದಿಂದ ಓಡಿದರು? ನೀವೆಲ್ಲರೂ ಜೊತೆಗೇ ಕೂಡಿರುವಾಗ ಮಹಾರಥನಾದ ಕರ್ಣ ಹೇಗೆ ಹತನಾದ?
ಪಾಂಡವಾಶ್ಚ ಕಥಂ ಶೂರಾಃ ಪ್ರತ್ಯುದೀಯುರ್ಮಹಾರಥಾಃ |
ಸೃಜಂತಃ ಶರವರ್ಷಾಣಿ ವಾರಿಧಾರಾ ಇವಾಂಬುದಾಃ ॥89॥
ಮಹಾರಥರಾದ ಶೂರರಾದ ಪಾಂಡವರು ಮೋಡಗಳು ಧಾರಾಕಾರವಾಗಿ ಮಳೆ ಸುರಿಸುವಂತೆ ಬಾಣಗಳ ಮಳೆಗರೆಯುತ್ತ ಮುನ್ನುಗ್ಗಿ ಹೇಗೆ ಬಂದರು?
ಸ ಚ ಸರ್ಪಮುಖೋ ದಿವ್ಯೋ ಮಹೇಷುಪ್ರವರಸ್ತದಾ |
ವ್ಯರ್ಥಃ ಕಥಂ ಸಮಭವತ್ ತನ್ಮಮಾಚಕ್ಷ್ವ ಸಂಜಯ ॥90॥
ಬಾಣಗಳಲ್ಲಿ ಶ್ರೇಷ್ಠವಾದ ಸರ್ಪಮುಖದ ದಿವ್ಯವಾದ ಆ ದೊಡ್ಡ ಬಾಣ ಆಗ ಹೇಗೆ ವ್ಯರ್ಥವಾಯಿತು? ಸಂಜಯ, ಅದನ್ನು ನನಗೆ ಹೇಳು
ಮಾಮಕಸ್ಯಾಸ್ಯ ಸೈನ್ಯಸ್ಯ ಹತೋತ್ಸಾಹಸ್ಯ ಸಂಜಯ |
ಅವಶೇಷಂ ನ ಪಶ್ಯಾಮಿ ಅರ್ಜುನೇ ಮುದಿತೇ ಸತಿ ॥91॥
ಅರ್ಜುನ ವಿಜಯದಿಂದ ಬೀಗಿರುವಾಗ ಉತ್ಸಾಹವನ್ನು ಕಳೆದುಕೊಂಡ ನನ್ನ ಸೈನ್ಯಕ್ಕೆ ಇನ್ನು ಉಳಿವನ್ನು ನಾ ಕಾಣೆ.
ತೌ ಹಿ ವೀರೌ ಮಹೇಷ್ವಾಸೌ ಮದರ್ಥೇ ತ್ಯಕ್ತಜೀವಿತೌ |
ಭೀಷ್ಮದ್ರೋಣೌ ಹತೌ ಶ್ರುತ್ವಾ ಕೋ ನ್ವರ್ಥೋ ಜೀವಿತೇನ ಮೇ ॥92॥
ಮಹಾ ಬಿಲ್ಗಾಳುಗಳಾದ ಆ ವೀರ ಭೀಷ್ಮದ್ರೋಣರು ನನ್ನ ಸಲುವಾಗಿ ಪ್ರಾಣವನ್ನು ಒತ್ತೆಇಟ್ಟವರು. ಅವರು ಹತರಾದುದನ್ನು ಕೇಳಿದ ಮೇಲೆ ನಾನು ಬದುಕಿದ್ದೇನು ಫಲ?

ಪುನಃ ಪುನರ್ನ ಮೃಷ್ಯಾಮಿ ಹತಂ ಕರ್ಣಂ ಚ ಪಾಂಡವೈಃ |
ಯಸ್ಯ ಬಾಹ್ವೋರ್ಬಲಂ ತುಲ್ಯಂ ಕುಂಜರಾಣಾಂ ಶತೈಃ ಶತೈಃ ॥93॥
ಪುನಃ ಪುನಃ ಹೇಳುತ್ತೇನೆ, ಸಾವಿರ ಸಾವಿರ ಆನೆಗಳಂತೆ ಬಾಹುಬಲಯುಕ್ತ ನಾಗಿದ್ದ ಕರ್ಣನೂ ಪಾಂಡವರಿಂದ ಹತನಾದುದನ್ನು ನಾನು ಸೈರಿಸಲಾರೆ.
ದ್ರೋಣೇ ಹತೇ ಚ ಯದ್ವೃತ್ತಂ ಕೌರವಾಣಾಂ ಪರೈಃ ಸಹ |
ಸಂಗ್ರಾಮೇ ನರವೀರಾಣಾಂ ತನ್ಮಮಾಚಕ್ಷ್ವ ಸಂಜಯ ॥94॥
ದ್ರೋಣನು ಹತನಾದಾಗ ಕೌರವಪಕ್ಷದ ನರಶ್ರೇಷ್ಠರಿಗೆ ಪರರೊಡನೆ ನಡೆದ ಯುದ್ಧದಲ್ಲಿ ಏನಾಯಿತೆಂಬುದನ್ನು ನನಗೆ ಹೇಳು, ಸಂಜಯ!
ಯಥಾ ಕರ್ಣಶ್ಚ ಕೌಂತೇಯೈಃ ಸಹ ಯುದ್ಧಮಯೋಜಯತ್ |
ಯಥಾ ವಾ ದ್ವಿಷತಾಂ ಹಂತಾ ಹತೋ ಯುದ್ಧೇ ತದುಚ್ಯತಾಮ್॥95॥
ಕರ್ಣನು ಪಾಂಡವರೊಡನೆ ಯುದ್ಧವನ್ನು ಹೇಗೆ ಆಯೋಜಿಸಿದ ಮತ್ತು ಶತ್ರುನಾಶಕನಾದ ಆತ ಹೇಗೆ ಹತನಾದ, ಅದನ್ನು ಹೇಳು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ನವಮೋಽಧ್ಯಾಯಃ ॥9॥

ಮಹಾಭಾರತತಾತ್ಪರ್ಯನಿರ್ಣಯ
ಅಥಾನುಜ್ಞಾಮುಪಾದಾಯ
ದ್ರೌಣೇರ್ದುರ್ಯೋರ್ಧನೋ ನೃಪಃ |
ಕರ್ಣಂ ಸೇನಾಪತಿಂ ಚಕ್ರೇ
ಸೋಽಗಾದ್ ಯುದ್ಧಾಯ ದಂಶಿತಃ ॥1॥
ಬಳಿಕ ರಾಜ ದುರ್ಯೋರ್ಧನ ಅಶ್ವತ್ಥಾಮನ ಅನುಜ್ಞೆ ಪಡೆದು ಕರ್ಣನನ್ನು ಸೇನಾಧಿಪತಿಯನ್ನಾಗಿ ಮಾಡಿದ. ಕರ್ಣ ಕವಚವನ್ನು ತೊಟ್ಟು ಯುದ್ಧಕ್ಕೆ ಹೊರಟ.

ಹತ್ತನೆಯ ಅಧ್ಯಾಯ
ಅಶ್ವತ್ಥಾಮನ ಸಲಹೆಯಂತೆ ಕರ್ಣನಿಗೆ ಸೇನಾಧಿಪತ್ಯ
ಸಂಜಯಃ
ಹತೇ ದ್ರೋಣೇ ಮಹೇಷ್ವಾಸೇ ತಸ್ಮಿನ್ನಹನಿ ಭಾರತ |
ಕೃತೇ ಚ ಮೋಘಸಂಕಲ್ಪೇ ದ್ರೋಣಪುತ್ರೇ ಮಹಾರಥೇ ॥1॥
ತ್ರಾಸಯಿತ್ವಾ ಮಹಾರಾಜ ಕೌರವಾಣಾಮನೀಕಿನೀಮ್ |
ವ್ಯೂಹ್ಯ ಪಾರ್ಥಃ ಸ್ವಕಂ ಸೈನ್ಯಮತಿಷ್ಠದ್ ಭ್ರಾತೃಭಿಃ ಸಹ ॥2॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ಮಹಾ ಬಿಲ್ಗಾರನಾದ ದ್ರೋಣ ಹತನಾದಾಗ ಆ ಹಗಲಿನಲ್ಲಿ ಮಹಾರಥನಾದ ಅಶ್ವತ್ಥಾಮನ ಆಗ್ನೇಯಾಸ್ತ್ರವೂ ನಿರೀಕ್ಷಿತ ಪರಿಣಾಮ ಮಾಡಲಿಲ್ಲ. ಅವನ ಸಂಕಲ್ಪ ವ್ಯರ್ಥವಾಯಿತು. ಅತ್ತ ಅರ್ಜುನ ಕೌರವಸೈನ್ಯವನ್ನು ಭಯಪಡಿಸಿ ತನ್ನ ಸೈನ್ಯವನ್ನು ಸೋದರರೊಂದಿಗೆ ತಾನು ವ್ಯೂಹ ಮಾಡಿ ಯುದ್ಧಕ್ಕೆ ನಿಂತ.
ತಮವಸ್ಥಿತಮಾಜ್ಞಾಯ ಪುತ್ರಸ್ತೇ ಭರತರ್ಷಭ |
ದ್ರುವಮಾಣಂ ಬಲಂ ದೃಷ್ಟ್ವಾ ಪೌರುಷೇಣ ನ್ಯವಾರಯತ್ ॥3॥
ರಾಜನೆ, ಅರ್ಜುನ ರಣರಂಗದಲ್ಲಿ ನಿಂತುದನ್ನು ನಿನ್ನ ಪುತ್ರ ತಿಳಿದು, ಓಡಿಹೋಗುತ್ತಿದ್ದ ತನ್ನ ಸೈನ್ಯವನ್ನು ಪೌರುಷದ ಮಾತುಗಳಿಂದ ತಡೆದ.
ಸ್ವಮನೀಕಮವಸ್ಥಾಪ್ಯ ಬಾಹುವೀರ್ಯಮುಪಾಶ್ರಿತಃ |
ಸಂಯುದ್ಧ್ಯ ಸುಚಿರಂ ಕಾಲಂ ಪಾಂಡವೈಃ ಸಹ ಭಾರತ ॥4॥
ಲಬ್ಧಲಕ್ಷೈಃ ಪರೈರ್ಹೃಷ್ಟೈಃ ವ್ಯಾಯಚ್ಛದ್ಭಿಶ್ಚಿರಂ ತದಾ |
ಸಂಧ್ಯಾಕಾಲಂ ಸಮಾಸಾದ್ಯ ಪ್ರತ್ಯಾಹಾರಮಕಾರಯತ್ ॥5॥
ಜಯಗಳಿಸಿ ಸಂತುಷ್ಟರಾದ ಪಾಂಡವರು ದೀರ್ಘಕಾಲ ಯುದ್ಧ ಮಾಡುತ್ತಿದ್ದುದರಿಂದ ದುರ್ಯೋರ್ಧನ ತಾನೂ ತನ್ನ ಸೈನ್ಯವನ್ನು ಸ್ಥಿರವಾಗಿ ನಿಲ್ಲಿಸಿ ಬಹಳ ಹೊತ್ತು ಬಾಹುಬಲವನ್ನು ಉಪಯೋಗಿಸಿ ಯುದ್ಧಮಾಡಿದ. ಬಳಿಕ ಸಂಧ್ಯಾಕಾಲ ಬಂದಾಗ ಸೈನ್ಯವನ್ನು ಹಿಂತಿರುಗಿಸಿದ.
ನಿವೇಶ್ಯ ಬಲವದ್ಘೋರಕ್ಷುತ್ಪಿಪಾಸಾಭಯೈರ್ಯುತಮ್ |
ಶ್ರಮೇಣ ಮಹತಾ ಯುಕ್ತಂ ತಥಾ ದ್ರೋಣವಧೇನ ಚ ॥6॥
ದ್ರೋಣವಧದಿಂದ ಕೌರವಸೈನ್ಯ ಮಹಾ ಶ್ರಮದಿಂದ ಯುಕ್ತವಾಗಿತ್ತು. ಬಲವತ್ತಾಗಿ ಘೋರವಾಗಿ ಹಸಿವು ಬಾಯಾರಿಕೆ ಭಯಗಳಿಂದ ಯುಕ್ತವಾಗಿತ್ತು. ಅದನ್ನು ದುರ್ಯೋರ್ಧನ ಶಿಬಿರಕ್ಕೆ ಕಳಿಸಿದ.
ದೀನರೂಪಾ ರಣೇ ಕರ್ಮ ಕೃತ್ವಾ ಘೋರಾಂ ಚ ಶರ್ವರೀಮ್ |
ನಿವೇಶಂ ಪ್ರಾಪ್ಯ ಸಾ ಸೇನಾ ವಿಶ್ರಮ್ಯ ಮುದಿತಾಽಭವತ್ ॥7॥
ಯುದ್ಧದಲ್ಲಿ ಹೋರಾಟಮಾಡಿ ದುರ್ಬಲವಾಗಿದ್ದ ಆ ಸೇನೆ ಘೋರವಾದ ಆ ರಾತ್ರಿ ಪೂರ್ತಿ ಶಿಬಿರದಲ್ಲಿದ್ದು ವಿಶ್ರಮಿಸಿ

ಪ್ರಸನ್ನವಾಯಿತು.
ಕೃತ್ವಾಽವಹಾರಂ ಸೈನ್ಯಾನಾಂ ಪ್ರವಿಶ್ಯ ಶಿಬಿರಂ ಸ್ವಕಮ್ |
ಕುರವಃ ಸಹಿತಾ ಮಂತ್ರಂ ಮಂತ್ರಯಾಂಚಕ್ರಿರೇ ಮಿಥಃ ॥8॥
ದುರ್ಯೋಧನ ಮುಂತಾದವರು ರಣರಂಗದಿಂದ ಸೈನ್ಯವನ್ನು ಹಿಂತೆಗೆದು ಕೊಂಡ ಬಳಿಕ ತಮ್ಮ ಶಿಬಿರವನ್ನು ಪ್ರವೇಶಿಸಿ ಒಂದೆಡೆ ಸೇರಿ ಪರಸ್ಪರವಾಗಿ ಮಂತ್ರಾಲೋಚನೆ ಮಾಡಿದರು.
ಪರ್ಯಂಕೇಷು ಪರಾರ್ಧ್ಯೇಷು ವರಾಸ್ತರಣವತ್ಸು ಚ |
ಉಪವಿಷ್ಟೇಷು ತೇಷ್ವೇವಂ ರಾಜಪುತ್ರೇಷು ಭಾರತ ॥9॥
ರಾಜನೆ, ಶಿಬಿರದಲ್ಲಿ ರಾಜಕುಮಾರರು ಬೆಲೆಬಾಳುವ ಒಳ್ಳೆಯ ಹಾಸುಗಳಿರುವ ಮಂಚಗಳಲ್ಲಿ ಕುಳಿತುಕೊಂಡರು.
ತತ್ರ ದುರ್ಯೋಧನೋ ರಾಜಾ ಸಾಮ್ನಾ ಪರಮವಲ್ಗುನಾ |
ತಾನಾಭಾಷ್ಯ ಮಹೇಷ್ವಾಸಾನ್ ಪ್ರಾಪ್ತಕಾಲಮಭಾಷತ ॥10॥
ಆಗ ಆ ಬಿಲ್ಗಾರರಿಗೆ ರಾಜಾ ದುರ್ಯೋಧನನು ಬಲು ಮಧುರವಾಗಿ ಸಂತೈಸುವ ಮಾತುಗಳಿಂದ ಕಾಲೋಚಿತವಾಗಿ ಹೀಗೆ ನುಡಿದ–
ದುರ್ಯೋಧನಃ
ಮತಂ ಮತಿಮತಾಂ ಶ್ರೇಷ್ಠಾಃ ಸರ್ವೇ ಪ್ರಬ್ರೂತ ಮಾ ಚಿರಮ್ |
ಏವಂಗತೇನ ಯತ್ಕಾರ್ಯಂ ಭವೇತ್ ಕಾರ್ಯತರಂ ನೃಪಾಃ ॥11॥
ದುರ್ಯೋಧನ ನುಡಿದ– ರಾಜರೆ, ಬುದ್ಧಿವಂತರಲ್ಲಿ ಶ್ರೇಷ್ಠರಾದ ನೀವೆಲ್ಲರೂ ಈ ಪರಿಸ್ಥಿತಿಯಲ್ಲಿ ನಾವು ಅತಿ ಮುಖ್ಯವಾಗಿ ಮಾಡಬೇಕಾಗಿರುವ ಕಾರ್ಯವೇನೆಂದು ಬೇಗನೆ ಹೇಳಿರಿ.
ಸಂಜಯಃ
ಏವಮುಕತಸ್ತ್ವ ನರೇಂದ್ರೇಣ ನರಸಿಂಹಾ ಯುಯುತ್ಸವಃ |
ಚಕ್ರುರ್ನಾನಾವಿಧಾಶ್ಚೇಷ್ಟಾಃ ಸಿಂಹಾಸನಗತಾಸ್ತದಾ ॥12॥
ಸಂಜಯನು ನುಡಿದ– ದುರ್ಯೋಧನ ಹೀಗೆ ಹೇಳಿದಾಗ
ಸಿಂಹಾಸನಾಧೀಶರಾಗಿದ್ದ ರಾಜರು ಯುದ್ಧೇಚ್ಛುಗಳಾಗಿ ನಾನಾವಿಧವಾಗಿ ಸನ್ನೆ ಮಾಡಿದರು.
ಇಂಗಿತಾನಿ ನಿಶಾಮ್ಯೈಷಾಂ ಪ್ರಾಣಾನ್ ಯುದ್ಧೇ ಜುಹೂಷತಾಮ್ |
ಸಮುದ್ವೀಕ್ಷ್ಯ ಮುಖಂ ರಾಜ್ಞೋ ಬಾಲಾರ್ಕಸಮವರ್ಚಸಮ್ ॥13॥
ಆಚಾರ್ಯಪುತ್ರೋ ಮೇಧಾವೀ ವಾಕ್ಯಮರ್ಥವದಾದದೇ ॥14॥
ಯುದ್ಧದಲ್ಲಿ ಆತ್ಮಾಹುತಿ ಮಾಡಿಕೊಳ್ಳಲು ಬಯಸಿದ್ದ ಆ ರಾಜರ ಇಂಗಿತಗಳನ್ನು ಕಂಡು ಮೇಧಾವಿಯಾದ ದ್ರೋಣಪುತ್ರ ಅಶ್ವತ್ಥಾಮನು ಉದಿಸುವ ಸೂರ್ಯ ನಂತೆ ವರ್ಚಸ್ಸುಳ್ಳ ದುರ್ಯೋಧನನ ಮುಖವನ್ನು ನೋಡಿ ಅರ್ಥವತ್ತಾದ ಮಾತನ್ನಾಡಿದ.
ಅಶ್ವತ್ಥಾಮಾ
ರಾಗೋ ಯೋಗಸ್ತಥಾ ದಾಕ್ಷ್ಯಂ ನಯಶ್ಚೇತ್ಯರ್ಥಸಾಧಕಾಃ |
ಉಪಾಯಾಃ ಪಂಡಿತೈಃ ಪ್ರೋಕ್ತಾಸ್ತೇ ತು ದೈವಂ ಸಮಾಶ್ರಿತಾಃ ॥15॥
ಅಶ್ವತ್ಥಾಮನು ನುಡಿದ– ಯೋಧರಿಗೆ ಸ್ವಾಮಿಭಕ್ತಿ ದೇಶಕಾಲಾದಿ ಸಾಧನ ಸಂಪತ್ತು ದಕ್ಷತೆ ಚತುರತೆಗಳು ಇವು ನಾಲ್ಕು ಉದ್ದೇಶ ಸಾಧನೆಗಿರುವ ಮುಖ್ಯ ಉಪಾಯಗಳೆಂದು ರಾಜಕೀಯತಜ್ಞರು ಹೇಳುತ್ತಾರೆ. ಆದರೆ ಇವು ನಾಲ್ಕೂ ದೈವೇಚ್ಛೆಯನ್ನು ಅವಲಂಬಿಸುತ್ತವೆ.
ಲೋಕಪ್ರವೀರಾ ಯೇಽಸ್ಮಾಕಂ ದೇವಕಲ್ಪಾ ಮಹಾರಥಾಃ |
ನೀತಿಮಂತಸ್ತಥಾ ಯುಕ್ತಾ ರಕ್ತಾ ದಕ್ಷಾಶ್ಚ ತೇ ಹತಾಃ ॥16॥
ನಮ್ಮ ಪಕ್ಷದಲ್ಲಿದ್ದ ಲೋಕಪ್ರಸಿದ್ಧವೀರರಾದ, ಮಹಾರಥರಾದ ದೇವತಾ ಸಮಾನರಾದ ನೀತಿವೇತ್ತರೂ ಕಾರ್ಯಾಸಕ್ತರೂ ಅನುರಕ್ತರೂ ದಕ್ಷರೂ ಆಗಿದ್ದ ರಾಜರು ಹತರಾಗಿದ್ದಾರೆ.
ನ ತ್ವೇವ ಕಾರ್ಯಂ ನೈರಾಶ್ಯಮಸ್ಮಾಭಿರ್ವಿಜಯಂ ಪ್ರತಿ |
ಸುನೀತೈರಿಹ ಸರ್ವಾರ್ಥೈರ್ದೈವಮಪ್ಯನುಲೋಮ್ಯತೇ ॥17॥
ಹೀಗೆಂದ ಮಾತ್ರಕ್ಕೆ ನಾವು ಜಯಸಂಪಾದನೆಯ ವಿಷಯದಲ್ಲಿ ನಿರಾಶರಾಗ ಬೇಕಿಲ್ಲ. ಸರ್ವಾರ್ಥಸಾಧಕರು ಒಳ್ಳೆಯ ರಾಜನೀತಿಯನ್ನು ಕೈಗೊಳ್ಳಬೇಕು. ಆಗ ಅವರಿಗೆ ದೈವವೂ ಅನುಕೂಲವಾಗುತ್ತದೆ.
ತೇ ವಯಂ ಪ್ರವರಂ ನೃಣಾಂ ಸರ್ವೈರ್ಯೋಧಗುಣೈರ್ಯುತಮ್ |
ಕರ್ಣಮೇವಾಭಿಷೇಕ್ಷ್ಯಾಮಃ ಸೈನಾಪತ್ಯೇನ ಭಾರತ |
ಕರ್ಣಂ ಸೇನಾಪತಿಂ ಕೃತ್ವಾ ಪ್ರಮಥಿಷ್ಯಾಮಹೇ ರಿಪೂನ್ ॥18॥
ದುರ್ಯೋಧನ, ಯೋಧರಿಗಿರಬೇಕಾದ ಎಲ್ಲ ಗುಣಗಳಿಂದ ಯುಕ್ತನಾಗಿರುವ ಪುರುಷ ಶ್ರೇಷ್ಠನಾದ ಕರ್ಣನನ್ನೇ ಸೇನಾಧಿಪತ್ಯದಲ್ಲಿ ಅಭಿಷೇಕ ಮಾಡೋಣ. ಕರ್ಣನನ್ನು ಸೇನಾಧಿಪತಿಯಾಗಿ ಮಾಡಿಕೊಂಡು ಶತ್ರುಗಳನ್ನು ನಾಶಮಾಡೋಣ.
ಏಷ ಹ್ಯತಿಬಲಃ ಶೂರಃ ಕೃತಾಸೊತ್ರೇ ಯುದ್ಧದುರ್ಮದಃ |
ವೈವಸ್ವತ ಇವಾಸಹ್ಯಃ ಶಕ್ತೋ ಜೇತುಂ ರಣೇ ರಿಪೂನ್ ॥19॥
ಕರ್ಣ ಅತಿಬಲಿಷ್ಠ. ಶೂರ, ಅಸ್ತ್ರಜ್ಞಾನಿ, ಯುದ್ಧದಲ್ಲಿ ಮದಿಸುವವನು, ಶತ್ರುಗಳಿಗೆ ಯಮನಂತೆ ಅಸಹನೀಯ, ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲಲು ಸಮರ್ಥನಾಗಿದ್ದಾನೆ.
ಸಂಜಯಃ

ಏತದಾಚಾರ್ಯತನಯಾಚ್ಛ್ರುತ್ವಾ ರಾಜಂಸ್ತವಾತ್ಮಜಃ |
ದುರ್ಯೋಧನೋ ಮಹಾರಾಜ ಭೃಶಂ ಪ್ರೀತಮನಾಸ್ತದಾ ॥20॥
ಸಂಜಯನು ನುಡಿದ– ಮಹಾರಾಜ, ಈ ಮಾತನ್ನು ಅಶ್ವತ್ಥಾಮನ ಮುಖದಿಂದ ಕೇಳಿದ ನಿನ್ನ ಮಗ ದುರ್ಯೋಧನ ಮನಸಿನಲ್ಲಿ ಬಲು ಸಂತೋಷಪಟ್ಟ.
ಆಶಾಂ ಬಲವತೀಂ ಚಕ್ರೇ ಕರ್ಣಂ ಪ್ರತಿ ಮಹಾರಥಮ್ |
ಹತೇ ಭೀಷ್ಮೇ ಮೃತೇ ದ್ರೋಣೇ ಕರ್ಣೋ ಜೇಷ್ಯತಿ
ಪಾಂಡವಾನ್ ॥21॥
ಭೀಷ್ಮ ಹತನಾದರೂ ದ್ರೋಣ ಹತನಾದರೂ ಕರ್ಣನೆ ಪಾಂಡವರನ್ನು ಗೆದ್ದು ಕೊಡುತ್ತಾನೆ ಎಂದು ದುರ್ಯೋಧನ ಮಹಾರಥನಾದ ಕರ್ಣನ ಬಗ್ಗೆ ಬಲವಾದ ಆಸೆ ಇಟ್ಟುಕೊಂಡಿದ್ದ.
ತಾಮಾಶಾಂ ಹೃದಯೇ ಕೃತ್ವಾ ಸಮಾಶ್ವಸ್ಯ ಚ ಭಾರತ ॥22॥
ತತೋ ದುರ್ಯೋಧನಃ ಪ್ರೀತಃ ಪ್ರಿಯಂ ಶ್ರುತ್ವಾಽಸ್ಯ ತದ್ವಚಃ |
ಪ್ರೀತಿಸತ್ಕಾರಸಂಯುಕ್ತಂ ತಥ್ಯಮಾತ್ಮಹಿತಂ ಶುಭಮ್ ॥23॥
ಆ ಆಸೆಯನ್ನೇ ಮನಸಿನಲ್ಲಿಟ್ಟುಕೊಂಡು ಭರವಸೆ ಇಟ್ಟು ದುರ್ಯೋಧನ ಅಶ್ವತ್ಥಾಮನ ಬಾಯಿಂದ ಬಂದ ಪ್ರಿಯಕರವಾದ ಆ ಮಾತನ್ನು ಕೇಳಿ ಸಂತುಷ್ಟನಾದ. ಆ ಮಾತು ಅವನಿಗೆ ಪ್ರೀತಿ ಸತ್ಕಾರ ಯುಕ್ತವಾಗಿದ್ದು ತನಗೆ ಹಿತಕರ, ಸತ್ಯ, ಶುಭಕರವಾದ ಮಾತಾಗಿತ್ತು
ಸ್ವಮನಶ್ಚ ವ್ಯವಸ್ಥಾಪ್ಯ ಬಾಹುವೀರ್ಯಮುಪಾಶ್ರಿತಃ ॥24॥
ಪ್ರೀತಿಸತ್ಕಾರಸಂಯುಕ್ತಂ ತಥ್ಯಮಾತ್ಮಹಿತೇ ರತಮ್ |
ದುರ್ಯೋಧನೋ ಯುಧಾಂಶ್ರೇಷ್ಠೋ ರಾಧೇಯಮಿದಮಬ್ರವೀತ್ ॥
ಬಾಹುಬಲವನ್ನೇ ನಂಬಿದ್ದ ಶ್ರೇಷ್ಠಯೋಧನಾದ ದುರ್ಯೋಧನ ತನ್ನ ಮನಸ್ಸನ್ನು ಸ್ಥಿರವಾಗಿ ಮಾಡಿಕೊಂಡು ಕರ್ಣನಿಗೆ ಪ್ರಿಯ ಸತ್ಕಾರಯುಕ್ತವಾದ ತಥ್ಯವಾದ ಆತ್ಮಹಿತಕರವಾದ ಮಾತನ್ನು ನುಡಿದ.
ದುರ್ಯೋಧನಃ
ಕರ್ಣ ಜಾನಾಮಿ ತೇ ವೀರ್ಯಂ ಸೌಹೃದಂ ಚ ಪರಂ ಮಯಿ |
ತಥಾऽಪಿ ತ್ವಾಂ ಮಹಾಬಾಹೋ ಪ್ರವಕ್ಷ್ಯಾಮಿ ಹಿತಂ ವಚಃ ॥26॥
ದುರ್ಯೋಧನನು ನುಡಿದ– ಕರ್ಣ, ನನಗೆ ನಿನ್ನ ಸಾಮರ್ಥ್ಯಗೊತ್ತು. ನಿನಗೆ ನನ್ನಲ್ಲಿ ಬಹಳ ಪ್ರೀತಿ ಇರುವುದೂ ಗೊತ್ತು. ಆದರೂ ಮಹಾಬಾಹುವೆ, ನಿನಗೊಂದು ಹಿತಕರವಾದ ಮಾತನ್ನು ಹೇಳುತ್ತೇನೆ.
ಶ್ರುತ್ವಾ ಯಥೇಷ್ಟಂ ಕುರು ವೈ ವೀರ ಯತ್ ತವ ರೋಚತೇ |
ಭವಾನ್ ಪ್ರಾಜ್ಞತಮೋ ನಿತ್ಯಂ ಮಮ ಚೈವ ಪರಾ ಗತಿಃ ॥27॥
ವೀರನೆ, ನಾನು ನುಡಿಯುವುದನ್ನು ಕೇಳಿದ ಬಳಿಕ ನಿನಗೆ ಇಷ್ಟವಾದುದನ್ನು ಯಥೇಚ್ಛ ಮಾಡು. ನೀನು ಬಹಳ ತಿಳಿದವನು. ನನಗೆ ಸದಾ ದೊಡ್ಡ ಆಸರೆ ಆಗಿರುವವನು.
ಭೀಷ್ಮದ್ರೋಣೌ ತ್ವತಿರಥೌ ಹತೌ ಸೇನಾಪತೀ ಮಮ |
ಸೇನಾಪತಿರ್ಭವಾನಸ್ತು ತಾಭ್ಯಾಂ ದ್ರವಿಣವತ್ತರಃ ॥28॥
ಭೀಷ್ಮದ್ರೋಣರು ಅತಿರಥರು ನನಗೆ ಸೇನಾಧಿಪತಿಗಳಾಗಿದ್ದವರು. ಅವರು ಹತರಾಗಿದ್ದಾರೆ. ಈಗ ನೀನೇ ಸೇನಾಧಿಪತಿಯಾಗು. ಅವರಿಗಿಂತ ಹೆಚ್ಚು ಸಾಮರ್ಥ್ಯ ಉಳ್ಳವನು ನೀನು.
ವೃದ್ಧೌ ಚ ತೌ ಮಹೇಷ್ವಾಸೌ ಸಾಪೇಕ್ಷೌ ಚ ಧನಂಜಯೇ |
ಮಾನಿತೌ ಚ ಮಯಾ ವೀರೌ ರಾಧೇಯ ವಚನಾತ್ ತವ ॥29॥
ಆ ಭೀಷ್ಮ ದ್ರೋಣರು ಮಹಾಬಿಲ್ಲುಗಾರರಾಗಿದ್ದರೂ ವೃದ್ಧರಾಗಿದ್ದರು ಮತ್ತು ಅರ್ಜುನನ ವಿಷಯದಲ್ಲಿ ಪಕ್ಷಪಾತಿಗಳಾಗಿದ್ದರು. ಕರ್ಣ, ನಾನು ನಿನ್ನ ಮಾತಿನಿಂದ ವೀರರಾದ ಅವರನ್ನು ದಂಡನಾಯಕನನ್ನಾಗಿ ಮಾಡಿ ಗೌರವಿಸಿದ್ದೆ.
ಪಿತಾಮಹತ್ವಂ ಸಂಪ್ರೇಕ್ಷ್ಯ ಪಾಂಡುಪುತ್ರಾ ಮಹಾರಣೇ |
ರಕ್ಷಿತಾಸ್ತಾತ ಭೀಷ್ಮೇಣ ದಿವಸಾನಿ ದಶೈವ ತು ॥30॥
ಪಾಂಡವರಿಗೆ ತಾನು ತಾತನೆಂದುಕೊಂಡು ಭೀಷ್ಮ ಮಹಾಯುದ್ಧದಲ್ಲಿ ಹತ್ತು ದಿವಸಗಳ ಕಾಲ ಪಾಂಡವರನ್ನು ಕೊಲ್ಲದೆ ರಕ್ಷಿಸಿಟ್ಟುಕೊಂಡ.
ನ್ಯಸ್ತಶಸ್ತ್ರೇ ತು ಭವತಿ ಹತೋ ಭೀಷ್ಮಃ ಪಿತಾಮಹಃ |
ಶಿಖಂಡಿನಂ ಪುರಸ್ಕೃತ್ಯ ಫಲ್ಗುನೇನ ಮಹಾರಣೇ ॥31॥
ಹತ್ತುದಿನಗಳ ಕಾಲ ನೀನು ಶಸ್ತ್ರತ್ಯಾಗ ಮಾಡಿದ್ದರಿಂದ ಅರ್ಜುನನು ಮಹಾಯುದ್ಧದಲ್ಲಿ ಶಿಖಂಡಿಯನ್ನು ಮುಂದೆ ಮಾಡಿ ಭೀಷ್ಮನನ್ನು ಬೀಳಿಸಿದ.
ಹತೇ ತಸ್ಮಿನ್ ಮಹೇಷ್ವಾಸೇ ಶರತಲ್ಪಗತೇ ಪುನಃ |
ತ್ವಯೋಕ್ತಃ ಪುರುಷವ್ಯಾಘ್ರೋ ದ್ರೋಣೋ ಹ್ಯಾಸೀತ್ ಪುರಸ್ಸರಃ॥32॥
ಮಹಾಬಿಲ್ಗಾರ ಭೀಷ್ಮ ಪತನ ಹೊಂದಿ ಶರತಲ್ಪದಲ್ಲಿ ಮಲಗಿದಾಗ ನಿನ್ನ ಮಾತಿನಂತೆ ಪುರುಷಶ್ರೇಷ್ಠನಾದ ದ್ರೋಣ ಮುಂದಾಳೆನಿಸಿದ.
ತೇನಾಪಿ ರಕ್ಷಿತಾಃ ಪಾರ್ಥಾಃ ಶಿಷ್ಯತ್ವಾದಿಹ ಸಂಯುಗೇ |

ಸ ಚಾಪಿ ನಿಹತೋ ವೃದ್ಧೋ ಧೃಷ್ಟದ್ಯುಮ್ನೇನ ಸತ್ವರಮ್ ॥33॥
ದ್ರೋಣನೂ ಕೂಡ ಪಾಂಡವರನ್ನು, ಅವರು ಶಿಷ್ಯರಾದ್ದರಿಂದ, ಯುದ್ಧದಲ್ಲಿ ರಕ್ಷಿಸಿಕೊಂಡ. ವೃದ್ಧನಾದ ಆತನನ್ನು ಕೂಡ ಬೇಗನೆ ಧೃಷ್ಟದ್ಯುಮ್ನ ವಧಿಸಿದ.
ನಿಹತಾಭ್ಯಾಂ ಪ್ರಧಾನಾಭ್ಯಾಂ ತಾಭ್ಯಾಮತುಲವಿಕ್ರಮ |
ತ್ವತ್ಸಮಂ ಸಮರೇ ಯೋಧಂ ನಾನ್ಯಂ ಪಶ್ಯಾಮಿ ಚಿಂತಯನ್ ॥34॥
ಅನುಪಮ ಪರಾಕ್ರಮಿಯಾದ ಕರ್ಣನೆ, ಸೈನ್ಯದಲ್ಲಿ ಪ್ರಧಾನರಾಗಿದ್ದ ಭೀಷ್ಮದ್ರೋಣರು ಹತರಾದ ಬಳಿಕ ಯುದ್ಧದಲ್ಲಿ ಎಷ್ಟು ಯೋಚಿಸಿದರೂ ನಿನಗೆ ಸಮಾನನಾದ ಯೋಧನನ್ನು ಇನ್ನೊಬ್ಬನನ್ನು ನಾ ಕಾಣೆ.
ಭವಾನೇವ ಚ ನಃ ಶಕ್ತೋ ವಿಜಯಾಯ ನ ಸಂಶಯಃ |
ಪೂರ್ವಂ ಮಧ್ಯೇ ತು ಪಶ್ಚಾಚ್ಚ ವಿಹಿತಂ ಚ ಸ್ವಕಂ ಹಿತಮ್ ॥35॥
ನಮಗೆ ನಮ್ಮ ಹಿತಸಾಧನೆ ಹಿಂದೆ ನಿನ್ನಿಂದಲೇ ಆಗಿತ್ತು. ಮಧ್ಯಕಾಲದಲ್ಲಿಯೂ ನಿನ್ನಿಂದಲೇ ಆಯಿತು, ಮುಂದೆಯೂ ಈಗ ನಿನ್ನಿಂದಲೇ ಆಗಬೇಕು. ನಮಗೆ ಜಯ ತಂದುಕೊಡಲು ನೀನೇ ಶಕ್ತ, ಇದರಲ್ಲಿ ಸಂಶಯವಿಲ್ಲ.
ಸ ಭವಾನ್ ಧುರ್ಯವತ್ ಸಂಖ್ಯೇ ಧುರಮುದ್ವೋಢುಮರ್ಹತಿ |
ಅಭಿಷೇಚಯ ಸೈನಾನ್ಯೇ ಸ್ವಯಮಾತ್ಮಾನಮಾತ್ಮನಾ ॥36॥
ಭೀಷ್ಮದ್ರೋಣರು ಇಷ್ಟರವರೆಗೆ ಮುಂದಾಳುಗಳಾಗಿದ್ದಂತೆ ಇನ್ನು ಮುಂದೆ ನೀನು ಯುದ್ಧದಲ್ಲಿ ಮುಂದಾಳುತ್ವವನ್ನು ವಹಿಸಿಕೊಳ್ಳಬೇಕು. ನಿನಗೆ ನೀನೇ ಸೇನಾಧಿಪತ್ಯದಲ್ಲಿ ಅಭಿಷೇಕ ಮಾಡಿಕೊಳ್ಳಬೇಕು.
ದೇವತಾನಾಂ ಯಥಾ ಸ್ಕಂದಃ ಸೇನಾನೀಃ ಪ್ರಭುರವ್ಯಯಃ |
ತಥಾ ಭವಾನಿಮಾಂ ಸೇನಾಂ ಧಾರ್ತರಾಷ್ಟ್ರೀಂ ಬಿಭರ್ತು ವೈ ॥37॥
ಜಹಿ ಶತ್ರುಗಣಾನ್ ಸರ್ವಾನ್ ಮಹೇಂದ್ರೋ ದಾನವಾನಿವ ॥38॥
ದೇವತೆಗಳಿಗೆ ಸ್ಕಂದನು ಅವಿನಾಶಿಯಾದ ಸಮರ್ಥನಾದ ದಂಡನಾಯಕ ನಾದಂತೆ ನಮಗೆ ನೀನೇ ನಾಯಕನಾಗಿ ಈ ಕೌರವಸೇನೆಯನ್ನು ರಕ್ಷಿಸಬೇಕು. ಮಹೇಂದ್ರನು ದಾನವರನ್ನು ಕೊಂದಂತೆ ನಮ್ಮ ಎಲ್ಲ ಶತ್ರುಗಳನ್ನೂ ನೀನು ಕೊಲ್ಲು.
ಅವಸ್ಥಿತಂ ರಣೇ ಜ್ಞಾತ್ವಾ ಪಾಂಡವಾಸ್ತ್ವಾಂ ಮಹಾರಥಾಃ |
ದ್ರವಿಷ್ಯಂತಿ ಸಪಾಂಚಾಲಾ ವಿಷ್ಣುಂ ದೃಷ್ಟ್ವೇವ ದಾನವಾಃ ॥39॥
ತಸ್ಮಾತ್ ತ್ವಂ ಪುರುಷವ್ಯಾಘ್ರ ಪ್ರಕರ್ಷೇಥಾ ಮಹಾಚಮೂಮ್ ॥40॥
ನೀನು ಯುದ್ಧದಲ್ಲಿ ನಾಯಕನಾಗಿ ನಿಂತರೆ ವಿಷ್ಣುವನ್ನು ಕಂಡು ದಾನವರು ಪಲಾಯನ ಮಾಡುವಂತೆ ನಿನ್ನನ್ನು ಕಂಡು ಮಹಾರಥರಾದ ಪಾಂಡವರು ಪಲಾಯನ ಮಾಡುವರು. ಅದರಿಂದ, ನೀನೇ ನಮ್ಮ ಮಹಾಸೈನ್ಯವನ್ನು ಮುನ್ನಡೆಸಬೇಕು.
ಭವತ್ಯವಸ್ಥಿತೇ ಯತ್ತೇ ಪಾಂಡವಾ ಮಂದಚೇತಸಃ |
ದ್ರವಿಷ್ಯಂತಿ ಸಹಾಮಾತ್ಯಾಃ ಪಾಂಚಾಲಾಶ್ಚ ಸಕೇಕಯಾಃ ॥41॥
ನೀನು ನಿಂತು ಪ್ರಯತ್ನ ಮಾಡಿದೆ ಎಂದರೆ ಪಾಂಡವರು ಮಂದಬುದ್ಧಿಗಳಾದ್ದರಿಂದ ಮಿತ್ರರಾಜರೊಂದಿಗೆ ಪಲಾಯನವನ್ನೇ ಮಾಡುತ್ತಾರೆ. ಹಾಗೇ ಪಾಂಚಾಲರೂ ಸೃಂಜಯರೂ ಕೂಡ ಪಲಾಯನ ಮಾಡುತ್ತಾರೆ.
ಯಥಾ ಹ್ಯಭ್ಯುದಿತಃ ಸೂರ್ಯಃ ಪ್ರತಪನ್ ಸ್ವೇನ ತೇಜಸಾ |
ವ್ಯಪೋಹತಿ ತಮಸ್ತೀವ್ರಂ ತಥಾ ಶತ್ರೂನ್ ವ್ಯಪೋಹಯ ॥42॥
ಉದಿಸಿದ ಸೂರ್ಯನು ತನ್ನ ತೇಜಸ್ಸಿನಿಂದ ಎಲ್ಲವನ್ನೂ ಸುಡುತ್ತ ಗಾಢವಾದ ಕತ್ತಲನ್ನು ನಾಶಮಾಡುತ್ತಾನೆ. ಹಾಗೇ ನೀನೂ ಶತ್ರುಗಳನ್ನು ನಾಶಮಾಡು.
ಸಂಜಯಃ
ಏವಮುಕ್ತಸ್ತು ರಾಧೇಯೋ ರಾಜ್ಞಾ ದುರ್ಯೋಧನೇನ ಹ |
ರಾಜ್ಞಾಂ ಮಧ್ಯೇ ಮಹಾಬಾಹುಃ ಪ್ರೀತಾತ್ಮಾ ಸ ಮಹಾಬಲಃ ॥43॥
ಹರ್ಷಯನ್ನಬ್ರವೀತ್ ಕರ್ಣೋ ದುರ್ಯೋಧನಮಿದಂ ವಚಃ ॥44॥
ಸಂಜಯನು ನುಡಿದ– ರಾಜಾ ದುರ್ಯೋಧನ ಹೀಗೆ ನುಡಿದಾಗ ಸಂತುಷ್ಟನಾದ ಮಹಾಬಾಹು ಮಹಾಬಲಿಯಾದ ಕರ್ಣ ರಾಜರೆಲ್ಲರ ನಡುವೆ ದುರ್ಯೋಧನನಿಗೆ ಸಂತೋಷವಾಗುವಂತೆ ಈ ಮಾತನ್ನು ಹೇಳಿದ.
ಕರ್ಣಃ
ಉಕ್ತಮೇತನ್ಮಯಾ ಪೂರ್ವಂ ಗಾಂಧಾರೇ ತವ ಸನ್ನಿಧೌ |
ಜೇಷ್ಯಾಮಿ ಪಾಂಡವಾನ್ ರಾಜನ್ ಸಪುತ್ರಾನ್
ಸಜನಾರ್ದನಾನ್ ॥45॥
ಕರ್ಣ ನುಡಿದ– ದುರ್ಯೋಧನ, ನಾನು ಹಿಂದೆಯೆ ನಿನ್ನ ಬಳಿ ಹೇಳಿದ್ದೆ, `ರಾಜನೆ, ಪಾಂಡವರನ್ನು ಅವರ ಮಕ್ಕಳೊಂದಿಗೆ ಕೃಷ್ಣನೊಂದಿಗೆ ನಾನು ಗೆಲ್ಲುತ್ತೇನೆ' ಎಂದು.
ಸೇನಾಪತಿರ್ಭವಿಷ್ಯಾಮಿ ತವಾಹಂ ನಾತ್ರ ಸಂಶಯಃ |
ಸ್ಥಿರೋ ಭವ ಮಹಾರಾಜ ಜಿತಾನ್ ವಿದ್ಧಿ ಚ ಪಾಂಡವಾನ್ ॥46॥
`ಮಹಾರಾಜ, ನಾನು ನಿನಗೆ ಸೇನಾಧಿಪತಿಯಾಗುತ್ತೇನೆ. ಇದರಲ್ಲಿ ಸಂಶಯ ವಿಲ್ಲ. ನೀನು ನಿಶ್ಚಿಂತನಾಗಿರು, ಪಾಂಡವರು ನನಗೆ ಸೋತರೆಂದೇ ತಿಳಿ.'
ಸಂಜಯಃ

ಏವಮುಕ್ತೋ ಮಹಾತೇಜಾಸ್ತದಾ ದುರ್ಯೋಧನೋ ನೃಪ |
ಉತ್ತಸ್ಥೌ ರಾಜಭಿಃ ಸಾರ್ಧಂ ದೇವೈರಿವ ಶತಕ್ರತುಃ ॥47॥
ಸಂಜಯನು ನುಡಿದ– ರಾಜನೆ, ಕರ್ಣ ಹೀಗೆ ನುಡಿದಾಗ ಮಹಾತೇಜಸ್ವಿ ಯಾದ ದುರ್ಯೋಧನ, ದೇವತೆಗಳೊಂದಿಗೆ ದೇವೇಂದ್ರ ಎದ್ದು ನಿಲ್ಲುವಂತೆ, ರಾಜರೊಂದಿಗೆ ತಾನು ಎದ್ದು ನಿಂತ.
ಸೈನಾಪತ್ಯೇನ ಸತ್ಕರ್ತುಂ ಕರ್ಣಂ ಸ್ಕಂದಮಿವಾಮರಾಃ |
ತತೋऽಭಿಷಿಷಿಚುಃ ಕರ್ಣಂ ವಿಧಿದೃಷ್ಟೇನ ಕರ್ಮಣಾ ॥48॥
ಸೇನಾಧಿಪತ್ಯವನ್ನಿತ್ತು ಸತ್ಕರಿಸಲು, ದೇವತೆಗಳು ಸ್ಕಂದನಿಗೆ ಹೇಗೋ ಹಾಗೇ ರಾಜರು ಕರ್ಣನಿಗೆ ವಿಧ್ಯುಕ್ತರೀತಿಯಿಂದ ಅಭಿಷೇಕ ಮಾಡಿದರು.
ದುರ್ಯೋಧನಮುಖಾ ರಾಜನ್ ರಾಜಾನೋ ವಿಜಯೈಷಿಣಃ |
ಶಾತಕುಂಭಮಯೈಃ ಕುಂಭೈಃ ಬ್ರಾಹ್ಮಣೈಶ್ಚಾಭಿಮಂತ್ರಿತೈಃ ॥49॥
ರಾಜನೆ, ವಿಜಯೇಚ್ಛುಗಳಾದ ರಾಜರು ಬ್ರಾಹ್ಮಣರಿಂದ ಅಭಿಮಂತ್ರಿತವಾದ ಬಂಗಾರದ ಕಲಶಗಳಿಂದ ಕರ್ಣನಿಗೆ ಅಭಿಷೇಕ ಮಾಡಿದರು.
ತೋಯಪೂರ್ಣೈರ್ವಿಷಾಣೈಶ್ಚ ದ್ವಿಪಖಡ್ಗಮಹರ್ಷಭೈಃ |
ಮಣಿಮುಕ್ತಾಮಯೈರ್ಧಾನ್ಯೈಃ ಪುಣ್ಯೈರ್ಗಂಧೈಸ್ತಥೌಷಧೈಃ ॥50॥
ಆನೆ ಘೇಂಡಾಮೃಗ ಮತ್ತು ಎತ್ತುಗಳ ಕೊಂಬುಗಳಿಂದ ಮಾಡಿದ ರತ್ನ ಖಚಿತ ವಾದ ಪಾತ್ರೆಗಳಲ್ಲಿ ಮಣಿ ಮುತ್ತು ಧಾನ್ಯ ಸುಗಂಧದ್ರವ್ಯ ಗಿಡಮೂಲಿಕೆಗಳನ್ನಿರಿಸಿ ಕರ್ಣನಿಗೆ ಅಭಿಷೇಕಗೈದರು.
ಔದುಂಬರೇ ಸಮಾಸೀನಮಾಸನೇ ಕ್ಷೌಮಸಂವೃತೇ |
ಶಾಸ್ತ್ರದೃಷ್ಟೇನ ವಿಧಿನಾ ಸಂಭಾರೈಶ್ಚ ಸುಸಂಭೃತೈಃ ॥51॥
ಅತ್ತಿಮರದ ಕಟ್ಟಿಗೆಯ ಆಸನಕ್ಕೆ ರೇಶ್ಮೆವಸ್ತ್ರ ಹೊದ್ದಿಸಿ ಅದರಮೇಲೆ ಕರ್ಣನನ್ನು ಕುಳ್ಳಿರಿಸಿ ಶಾಸ್ತ್ರೋಕ್ತವಿಧಿಯಿಂದ ಸಜ್ಜುಗೊಳಿಸಿದ ಅಭಿಷೇಕದ್ರವ್ಯಗಳಿಂದ ಅಭಿಷೇಕ ಮಾಡಿದರು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತಥಾ ಶೂದ್ರಾಶ್ಚ ಸಮ್ಮತಾಃ |
ತುಷ್ಟುವುಸ್ತಂ ಮಹಾತ್ಮಾನಮಭಿಷಿಕ್ತಂ ವರಾಸನೇ ॥52॥
ಆಗ ಆಪ್ತರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಲ್ಲರೂ ಉತ್ತಮವಾದ ಆಸನದಲ್ಲಿ ಅಭಿಷಿಕ್ತನಾದ ಮಹಾತ್ಮಾ ಕರ್ಣನನ್ನು ಸ್ತುತಿಸಿದರು.
ತತೋऽಭಿಷಿಕ್ತೋ ರಾಜೇಂದ್ರ ಗೋಭಿರ್ನಿಷ್ಕೈರ್ಧನೇನ ಚ |
ವಾಚಯಾಮಾಸ ವಿಪ್ರಾಗ್ರ್ಯಾನ್ ರಾಧೇಯಃ ಪರವೀರಹಾ ॥53॥
ಮಹಾರಾಜ, ಹೀಗೆ ಅಭಿಷಿಕ್ತನಾದ ಪರವೀರ ಹಂತಕನಾದ ಕರ್ಣನು ಗೋವು ಬಂಗಾರ ಧನಗಳನ್ನು ಶ್ರೇಷ್ಠ ಬ್ರಾಹ್ಮಣರಿಗೆ ಇತ್ತು, ಅವರಿಂದ ಆಶೀರ್ವಾದ ಪಡೆದ.
ಸ ವ್ಯರೋಚತ ರಾಧೇಯಃ ಸೂತಮಾಗಧವಂದಿಭಿಃ |
ಸ್ತೂಯಮಾನೋ ಯಥಾ ಭಾನುರುದಯೇ ಬ್ರಹ್ಮವಾದಿಭಿಃ ॥54॥
ಉದಯಕಾಲದಲ್ಲಿ ಬ್ರಹ್ಮವಾದಿಗಳು ಸೂರ್ಯನನ್ನು ಸ್ತುತಿಸುವಂತೆ ಆಗ ಸೂತಮಾಗಧವಂದಿಗಳು ಕರ್ಣನನ್ನು ಹೊಗಳಿದರು. ಕರ್ಣ ಉದಿಸುವ ಸೂರ್ಯನಂತೆ ಬೆಳಗಿದ.
ತತಃ ಪುಣ್ಯಾಹಘೋಷೇಣ ವಾದಿತ್ರನಿನದೇನ ಚ |
ಜಯಶಬ್ದೇನ ಶೂರಾಣಾಂ ತುಮುಲಃ ಸರ್ವತೋऽಭವತ್ ॥55॥
ಆಗ ಪುಣ್ಯಾಹವಾಚನಶಬ್ದ ವಾದ್ಯಘೋಷ ಜಯಕಾರಗಳಿಂದ ಎಲ್ಲೆಡೆ ಶೂರಯೋಧರಲ್ಲಿ ದೊಂಬಿ ಉಂಟಾಯಿತು.
ಜಯೇತ್ಯೂಚುರ್ನೃಪಾಃ ಸರ್ವೇ ರಾಧೇಯಂ ತತ್ರ ಸಂಗತಾಃ |
ಜಯ ಪಾರ್ಥಾನ್ ಸಗೋವಿಂದಾನ್ ಸಾನುಬಂಧಾನ್
ಮಹಾಹವೇ ॥56॥
ಇತಿ ತಂ ವಂದಿನಃ ಪ್ರಾಹುರ್ದ್ವಿಜಾಶ್ಚ ಭರತರ್ಷಭ ॥57॥
ರಾಜರು ಎಲ್ಲರೂ ಸೇರಿ ಕರ್ಣನಿಗೆ ಜಯಕಾರ ಮಾಡಿದರು, `ಮಹಾಯುದ್ಧ ದಲ್ಲಿ ಪಾಂಡವರನ್ನು ಅವರ ಬಂಧುಮಿತ್ರರನ್ನು ಕೃಷ್ಣನನ್ನು ಗೆಲ್ಲು' ಎಂದು ವಂದಿಗಳೂ ಬ್ರಾಹ್ಮಣರೂ ಹಾರೈಸಿದರು.
ವಂದಿನಃ
ಜಯ ಪಾರ್ಥಾನ್ ಸಪಾಂಚಾಲಾನ್ ರಾಧೇಯ ವಿಜಯಾಯ ನಃ |
ಉದ್ಯನ್ನಿವ ಯಥಾऽऽದಿತ್ಯಃ ತಮಾಂಸ್ಯುಗ್ರೈರ್ಗಭಸ್ತಿಭಿಃ ॥58॥
ವಂದಿಗಳು ನುಡಿದರು– ಕರ್ಣ, ಉದಿಸುವ ಸೂರ್ಯನು ಉಗ್ರವಾದ ಕಿರಣಗಳಿಂದ ಕತ್ತಲನ್ನು ಓಡಿಸುವಂತೆ ನಮ್ಮ ವಿಜಯಕ್ಕಾಗಿ ನೀನು ಪಾಂಡವರನ್ನೂ ಪಾಂಚಾಲರನ್ನೂ ಗೆಲ್ಲು.
ನ ಹ್ಯಲಂ ತ್ವದ್ವಿಸೃಷ್ಟಾನಾಂ ಶರಾಣಾಂ ತೇ ಸಕೇಶವಾಃ |
ಉಲೂಕಾಃ ಸೂರ್ಯರಶ್ಮೀನಾಂ ಜ್ವಲತಾಮಿವ ದರ್ಶನೇ ॥59॥
ಜ್ವಲಿಸುವ ಸೂರ್ಯಕಿರಣಗಳನ್ನು ನೋಡಲು ಗೂಬೆಗಳು ಶಕ್ತವಾಗದಿರು ವಂತೆ ನೀನು ಪ್ರಯೋಗಿಸಿದ ಬಾಣಗಳನ್ನು ಇದಿರಿಸಲು ಪಾಂಡವರೂ ಕೃಷ್ಣನೂ ಶಕ್ತರಾಗಲಾರರು.

ನ ಚ ಪಾರ್ಥಾಃ ಸಪಾಂಚಾಲಾಃ ಶಕ್ತಾಸ್ತಃ ಸ್ಥಾತುಂ ತವಾಗ್ರತಃ |
ಆತ್ತವಜ್ರಸ್ಯ ಸಮರೇ ಮಹೇಂದ್ರಸ್ಯೇವ ದಾನವಾಃ ॥60॥
ಯುದ್ಧದಲ್ಲಿ ಶಸ್ತ್ರವನ್ನೆತ್ತಿಕೊಂಡ ಮಹೇಂದ್ರನ ಇದಿರಿನಲ್ಲಿ ದಾನವರು ನಿಲ್ಲಲು ಶಕ್ತರಲ್ಲ. ಹಾಗೇ ನೀನು ಶಸ್ತ್ರವೆತ್ತಿಕೊಂಡರೆ ಪಾಂಡವರೂ ಪಾಂಚಾಲರೂ ಇದಿರಿಸಲು ಶಕ್ತರಲ್ಲ.
ಸಂಜಯಃ
ಸ ಸತ್ಕೃತಃ ಸ್ತೂಯಮಾನಃ ಸುಹೃದ್ಗಣವೃತೋ ವೃಷಾ |
ಕರ್ಣೋ ದುರ್ಯೋಧನಂ ವಾಕ್ಯಮಬ್ರವೀತ್ ಪ್ರಹಸನ್
ಪ್ರಿಯಮ್ ॥61॥
ಸಂಜಯನು ನುಡಿದ– ಹೀಗೆ ಸತ್ಕಾರಮಾಡಿ ಹೊಗಳಿದಾಗ ಬಂಧುಮಿತ್ರ ಪರಿವೃತನಾದ ಕರ್ಣನು ನಗುತ್ತ ದುರ್ಯೋಧನನಿಗೆ ಪ್ರಿಯವಾಗುವಂಥ ಮಾತನ್ನು ನುಡಿದ.
ಕರ್ಣಃ
ದುರ್ಯೋಧನಾದ್ಯ ಸಗಣಂ ಪಾಂಡೂನಾಂ ಪ್ರವರೈಃ ಸಹ |
ಫಲ್ಗುನಂ ಸೂದಯಿಷ್ಯಾಮಿ ತ್ವತ್ಪ್ರಿಯಾರ್ಥಂ ಸಬಾಂಧವಮ್ ॥62॥
ಕರ್ಣ ನುಡಿದ– ದುರ್ಯೋಧನ, ನಾನು ಅರ್ಜುನನನ್ನು ಅವನ ಬಂಧು ಗಳೊಂದಿಗೆ ಸೈನ್ಯದೊಂದಿಗೆ ಮತ್ತು ಪ್ರಧಾನಪಾಂಡವರೊಂದಿಗೆ ನಿನ್ನ ಸಂತೋಷಕ್ಕಾಗಿ ಇಂದೇ ವಧಿಸುತ್ತೇನೆ.
ಸಪರ್ವತಾರ್ಣವದ್ವೀಪಾಂ ಶಾಧಿ ಗಾಂ ಗತಪಾಂಡವಾಮ್ |
ಪುತ್ರಪೌತ್ರಪ್ರಪೌತ್ರೇಷು ಪ್ರತಿಷ್ಠಾಂ ಗಮಯಿಷ್ಯಸಿ ॥63॥
ಇನ್ನುಮೇಲೆ ಭೂಮಿಯ ಮೇಲೆ ಪಾಂಡವರಿಲ್ಲ. ಪರ್ವತ ಸಮುದ್ರಗಳಿಂದ ಕೂಡಿದ ಇಡೀ ಭೂಮಿಯಲ್ಲಿ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳೊಂದಿಗೆ ನೀನೊಬ್ಬನೇ ಇದ್ದು ಆಳುವೆ.
ನಾಸಾಧ್ಯಂ ವಿದ್ಯತೇ ಮಹ್ಯಂ ತ್ವತ್ಪ್ರಿಯಾರ್ಥಮರಿಂದಮ |
ಸತ್ಯಧರ್ಮಾನುರಕ್ತಸ್ಯ ಸಿದ್ಧಿರಾತ್ಮವತೋ ಯಥಾ ॥64॥
ಸತ್ಯಧರ್ಮದಲ್ಲಿ ಆಸಕ್ತನಾದ ಧೈರ್ಯಶಾಲಿಗೆ ಅಸಾಧ್ಯವೇನೂ ಇರುವುದಿಲ್ಲ. ಹಾಗೇ ಶತ್ರುದಮನಕಾರಿಯಾದ ದುರ್ಯೋಧನನೆ, ನಿನ್ನ ಸಂತೋಷಕ್ಕಾಗಿ ನಾನೇನನ್ನೂ ಮಾಡಬಲ್ಲೆ, ನನಗೆ ಅಸಾಧ್ಯವಾದುದು ಏನೂ ಇಲ್ಲ.
ಸಂಜಯಃ
ಅಭಿಷಿಕ್ತಸ್ತು ರಾಧೇಯಃ ಪ್ರಭಯಾ ಸೋಽಮಿತಪ್ರಭಃ |
ವ್ಯತ್ಯರಿಚ್ಯತ ರೂಪೇಣ ದಿವಾಕರ ಇವಾಪರಃ | |65॥
ಸಂಜಯ ನುಡಿದ– ಅಮಿತಪ್ರಭೆಯಿಂದ ಯುಕ್ತನಾದ ಕರ್ಣ ಅಭಿಷಿಕ್ತ ನಾದೊಡನೆ ಪ್ರಭೆಯಿಂದಲೂ ರೂಪದಿಂದಲೂ ಅವನು ಇನ್ನೊಬ್ಬ ಸೂರ್ಯ ನಂತೆಯೇ ಹೆಚ್ಚು ಪ್ರಕಾಶಿಸಿದ.
ಸೈನಾಪತ್ಯೇ ತು ರಾಧೇಯಮಭಿಷಿಚ್ಯ ಸುತಸ್ತವ |
ಅಮನ್ಯತ ತದಾತ್ಮಾನಂ ಕೃತಾರ್ಥಂ ಕಾಲಚೋದಿತಃ ॥66॥
ಸರ್ವನಾಶಕರವಾದ ಕಾಲದ ಪ್ರೇರಣೆಯಿಂದ ನಿನ್ನ ಮಗನು ಕರ್ಣನಿಗೆ ಸೇನಾಪತಿಯ ಪಟ್ಟ ಕಟ್ಟಿ ತಾನು ಕೃತಕೃತ್ಯನಾದನೆಂದುಕೊಂಡ!
ಈ ಕಾಲ ಬೇರಾರೂ ಅಲ್ಲ, ಶ್ರೀಕೃಷ್ಣನೆ. `ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ' ಎಂದು ಅರ್ಜುನನಿಗೆ ಮೊದಲೇ ಇದನ್ನು ಕೃಷ್ಣ ಬೋಧಿಸಿದ್ದ.
ಕರ್ಣೋಽಪಿ ರಾಜ್ಞಃ ಸಂಪ್ರಾಪ್ಯ ಸೈನಾಪತ್ಯಮರಿಂದಮಃ |
ಯೋಗಮಾಜ್ಞಾಪಯಾಮಾಸ ಸೂರ್ಯಸ್ಯೋದಯನಾದಧಿ ॥67॥
ಶತ್ರುದಮನಕಾರಿಯಾದ ಕರ್ಣ ದುರ್ಯೋಧನನಿಂದ ಸೇನಾಧಿಪತ್ಯವನ್ನು ಸ್ವೀಕರಿಸಿ ಸೂರ್ಯೋದಯವಾದೊಡನೆ ಯುದ್ಧವೆಂದು ಸೈನ್ಯಕ್ಕೆ ಆಜ್ಞೆ ಹೊರಡಿಸಿದ.
ತವ ಪುತ್ರೈರ್ವೃತಃ ಕರ್ಣಃ ಶುಶುಭೇ ತತ್ರ ಭಾರತ |
ದೇವೈರಿವ ಯಥಾ ಸ್ಕಂದಃ ಸಂಗ್ರಾಮೇ ತಾರಕಾಮಯೇ ॥68॥
ರಾಜನೆ, `ತಾರಕಾಮಯ' ಅಂದರೆ `ತಾರಕ' ಕಣ್ಣಾಲಿಗೆ `ಆಮಯ' ನೋವನ್ನು ಉಂಟುಮಾಡುವಂಥ, ಕಣ್ಣುಕೋರೈಸುವಂತೆ ಆಯುಧಗಳನ್ನು ಝಳಪಿಸುವ ದೇವಾಸುರ ಸಂಗ್ರಾಮದಲ್ಲಿ ಸ್ಕಂದನು ಶೋಭಿಸಿದಂತೆ, ಕೌರವಸೈನ್ಯದಲ್ಲಿ ಕರ್ಣನೂ ಪುತ್ರರೊಂದಿಗೆ ಶೋಭಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ದಶಮೋಽಧ್ಯಾಯಃ ॥10॥

ಹನ್ನೊಂದನೆಯ ಅಧ್ಯಾಯ
ಕುರುಸೈನ್ಯದ ಮಕರವ್ಯೂಹ. ಪಾಂಡವರ ಅರ್ಧಚಂದ್ರವ್ಯೂಹ.
ಧೃತರಾಷ್ಟ್ರಃ
ಸೈನಾಪತ್ಯಂ ತು ಸಂಪ್ರಾಪ್ಯ ಕರ್ಣೋ ವೈಕರ್ತನಸ್ತದಾ |

ತಥೋಕ್ತಶ್ಚ ಸ್ವಯಂ ರಾಜ್ಞಾ ಸ್ನಿಗ್ಧಂ ಭ್ರಾತೃಸಮಂ ವಚಃ ॥1॥
ಯೋಗಮಾಜ್ಞಾಪಯಾಮಾಸ ಆದಿತ್ಯಾಭ್ಯುದಯಂ ಪ್ರತಿ ॥2॥
ಧೃತರಾಷ್ಟ್ರ ನುಡಿದ– ಸೇನಾಧಿಪತ್ಯವನ್ನು ಹೊಂದಿದ ಬಳಿಕ, ದುರ್ಯೋಧನ ಸ್ವತಃ ಸೋದರನಂತೆ ಸ್ನೇಹದಿಂದ ನುಡಿದ ಮಾತನ್ನು ಕೇಳಿ ಕರ್ಣ ಸೂರ್ಯೋದಯವಾಗುತ್ತಿದ್ದಂತೆ ಯುದ್ಧವೆಂದು ಸೈನ್ಯಕ್ಕೆ ಆಜ್ಞೆ ಹೊರಡಿಸಿದನೆಂದು ನೀನು ಹೇಳಿರುವೆ.
ಹಿತಶ್ಚ ಪ್ರಿಯಕಾಮಶ್ಚ ಮಮ ಪುತ್ರಸ್ಯ ನಿತ್ಯಶಃ |
ಕಿಮಕಾರ್ಷೀನ್ಮಹಾಪ್ರಾಜ್ಞಸ್ತನ್ಮಮಾಚಕ್ಷ್ವ ಸಂಜಯ ॥3॥
ನನ್ನ ಮಗನಿಗೆ ಸದಾ ಹಿತಕರನೂ ಪ್ರಿಯವನ್ನೇ ಬಯಸುವವನೂ ಆದ ಮಹಾಪ್ರಾಜ್ಞ ಕರ್ಣ ಮುಂದೆ ಏನು ಮಾಡಿದನೆಂಬುದನ್ನು ಹೇಳು, ಸಂಜಯ!
ಸಂಜಯಃ
ಕರ್ಣಸ್ಯ ಮತಮಾಜ್ಞಾಯ ಪುತ್ರಸ್ತೇ ಭರತರ್ಷಭ |
ಯೋಗಮಾಜ್ಞಾಪಯಾಮಾಸ ನಾಂದೀತೂರ್ಯಪುರಸ್ಸರಮ್ ॥4॥
ಸಂಜಯ ನುಡಿದ– ಕರ್ಣನ ಅಭಿಪ್ರಾಯವನ್ನು ತಿಳಿದು, ರಾಜನೆ, ನಿನ್ನ ಪುತ್ರ ಮಂಗಳವಾದ್ಯ ಘೋಷದೊಂದಿಗೆ ಯುದ್ಧಸನ್ನಾಹದ ಆಜ್ಞೆಯನ್ನು ಹೊರಡಿಸಿದ.
ಮಹತ್ಯಪರರಾತ್ರೇ ಚ ತವ ಸೈನ್ಯಸ್ಯ ಮಾರಿಷ |
ಯೋಗೋ ಯೋಗ ಇತಿ ಹ್ಯಾಶು ಪ್ರಾದುರಾಸೀನ್ಮಹಾಸ್ವನಃ ॥5॥
ಕಲ್ಪ್ಯತಾಂ ನಾಗಮುಖ್ಯಾನಾಂ ರಥಾನಾಂ ಚ ವರೂಥಿನಾಮ್ |
ಸನ್ನಹ್ಯತಾಂ ಪದಾತೀನಾಂ ವಾಜಿನಾಂ ಚ ವಿಶಾಂಪತೇ ॥6॥
ರಾಜನೆ, ಮಹಾ ಅಪರರಾತ್ರಿಯಲ್ಲಿಯೇ ನಿನ್ನ ಸೈನ್ಯದಲ್ಲಿ ಯುದ್ಧಸನ್ನಾಹಕ್ಕೆ ತೊಡಗಿರುವ ಗಜಸೈನ್ಯ, ರಥಸೈನ್ಯ, ಪದಾತಿಸೈನ್ಯ ಹಾಗೂ ಅಶ್ವಸೈನ್ಯಗಳಲ್ಲಿ `ಬೇಗ ಬೇಗನೆ ಯುದ್ಧಸಿದ್ಧತೆ! ಯುದ್ಧಸಿದ್ಧತೆಯಾಗಲಿ!' ಎಂಬ ಮಹಾಶಬ್ದ ಕೇಳಿಬಂದಿತ್ತು.
ಕ್ರೋಶತಾಂ ಚಾಪಿ ಯೋಧಾನಾಂ ತ್ವರಿತಾನಾಂ ಪರಸ್ಪರಮ್ |
ಬಭೂವ ತುಮುಲಃ ಶಬ್ದೋ ದಿವಸ್ಪೃಕ್ ಸುಮಹಾಂಸ್ತತಃ ॥7॥
ಅವಸರವಸರವಾಗಿ ಯುದ್ಧಸನ್ನಾಹದಲ್ಲಿದ್ದ ಯೋಧರು ಪರಸ್ಪರ ಕೂಗಿಕೊಳ್ಳುವ ಮಹತ್ತಾದ ದೊಂಬಿಯ ಶಬ್ದ ಮುಗಿಲು ಮುಟ್ಟುತ್ತಿತ್ತು.
ತತಃ ಶ್ವೇತಪತಾಕೇನ ಬಲಾಕಾವರ್ಣವಾಜಿನಾ |
ಹೇಮಪೃಷ್ಠೇನ ಧನುಷಾ ಹಸ್ತಿಕಕ್ಷ್ಯೇಣ ಕೇತುನಾ ॥8॥
ತೂಣೀರಶತಪೂರ್ಣೇನ ಸಗದೇನ ವರೂಥಿನಾ |
ಶತಘ್ನೀಕಿಂಕಿಣೀಶಕ್ತಿಶೂಲತೋಮರಧಾರಿಣಾ ॥9॥
ಕಾರ್ಮುಕೈರುಪಪನ್ನೇನ ವಿಮಲಾದಿತ್ಯವರ್ಚಸಾ |
ರಥೇನಾಭಿಪತಾಕೇನ ಸೂತಪುತ್ರೋ ವ್ಯದೃಶ್ಯತ ॥10॥
ಬಳಿಕ ಸೂರ್ಯೋದಯವಾಗುತ್ತಿದ್ದಂತೆ, ನಿರ್ಮಲ ಸೂರ್ಯನಂತೆ ಬೆಳಗುವ ರಥದಲ್ಲಿ ನಿಂತು ಕರ್ಣ ಕಾಣಿಸಿಕೊಂಡ. ಆ ರಥಕ್ಕೆ ಬಿಳಿಯಾದ ಪತಾಕೆಗಳು, ಬೆಳ್ಳಕ್ಕಿಯಂಥ ಶುಭ್ರವರ್ಣದ ಕುದುರೆಗಳು, ಸುವರ್ಣ ಪೃಷ್ಠವುಳ್ಳ ಧನುಸ್ಸುಗಳು, ಕಾಗೆಯ ಪ್ರತಿಮೆಯಿಂದ ಯುಕ್ತವಾದ ಧ್ವಜದಂಡಗಳಿದ್ದವು. ನೂರಾರು ಬತ್ತಳಿಕೆಗಳು, ಗದೆಗಳು, ರಥಾವರಣ, ಶತಘ್ನಿಕಿಂಕಿಣಿ ಶಕ್ತಿ ಶೂಲ ತೋಮರ ಮುಂತಾದ ಆಯುಧಗಳು ತುಂಬಿದ್ದುವು. ಸೂರ್ಯನಂತೇ ಹೊಳೆಯುತ್ತದೆ ರಥ, ಆದರೆ ಪತಾಕೆ ಕರ್ಣನಿಗೆ ಅಭಿಮುಖವಾಗಿದೆ.
`ಹಸ್ತಿಕಕ್ಷ್ಯೇಣ ಕೇತುನಾ' ಅಂದರೆ ಆನೆಯ ನಡುಕಟ್ಟಿನ ಹಗ್ಗದ ಚಿಹ್ನೆಯಿದ್ದ ಬಾವುಟ ಕರ್ಣನ ರಥದ ಮೇಲೆ ಹಾರಾಡುತ್ತಿತ್ತೆಂದು ಹೇಳಿದಂತೆ ಮೇಲುನೋಟಕ್ಕೆ ಕಾಣುತ್ತದೆ. ವಸ್ತುತಃ `ಕೇತು', `ಧ್ವಜ' ಅಂದರೆ ಹಾರಾಡುವ ಬಾವುಟವಲ್ಲ. ಬಾವುಟವನ್ನು ಇಲ್ಲಿಯೆ `ಶ್ವೇತಪತಾಕೇನ' ಎಂದು ಹೇಳಿಯಾಗಿದೆ. ಮತ್ತು ಬಾವುಟವನ್ನೇರಿಸುವ ಕಂಬವೇ ಬೇರೆ, ಧ್ವಜಚಿಹ್ನೆ ಯನ್ನು ಹೊರುವ ಕಂಬವೇ ಬೇರೆ ಇದೆ. ಧ್ವಜಚಿಹ್ನೆಯು ಬಾವುಟದಲ್ಲಿ ಚಿತ್ರಿತವಾಗಿರುವುದಿಲ್ಲ. ಆ ಆಕಾರದ ಪ್ರತಿಮೆಗಳೇ ಕಂಬದ ತುದಿಯಲ್ಲಿ ಪ್ರತಿಷ್ಠೆಗೊಂಡು ಸ್ಥಿರವಾಗಿ ಸೇರಿಕೊಂಡಿರುತ್ತವೆ.
ಪ್ರತಿಮೆಗಳಲ್ಲಿ ಆಯಾ ಹೆಸರಿನ ದೇವತೆಗಳು ಮತ್ತು ಅಸುರರು ಸನ್ನಿಹಿತರಾಗಿರುತ್ತಾರೆ. ರಥಿಕರ ಯುದ್ಧಕ್ಕೆ ಪೂರ್ವಭಾವಿಯಾಗಿ ಅವರ ಈ ಧ್ವಜದೇವತೆಗಳಿಗೆ ಮತ್ತು ಅಸುರರಿಗೇ ಪರಸ್ಪರ ಯುದ್ಧ ನಡೆಯುತ್ತದೆ. ಬಳಿಕ ವಾಹನಗಳ ಆನೆ ಕುದುರೆಗಳ ಪರಸ್ಪರ ಯುದ್ಧ. ಬಳಿಕ ಸಾರಥಿಗಳ ಪರಸ್ಪರ ದೃಷ್ಟಿಯುದ್ಧ. ಬಳಿಕ ರಥಿಕರು ದೃಷ್ಟಿಯುದ್ಧಕ್ಕೆ ತೊಡಗುತ್ತಾರೆ.
ಇದು ಮುಂದೆ ಕರ್ಣಾರ್ಜುನರ ಯುದ್ಧದಲ್ಲಿ 83ನೇ ಅಧ್ಯಾಯದಲ್ಲಿ 81-86ನೇ ಶ್ಲೋಕದವರೆಗೆ ವರ್ಣಿತವಾಗುತ್ತದೆ. ಅಲ್ಲಿ ಅರ್ಜುನನು ಕಪಿಧ್ವಜ, ಕರ್ಣ ಕಾಕಧ್ವಜ ಎಂದು ಸ್ಪಷ್ಟ ಹೇಳಿದೆ–
`ಉತ್ಪತ್ಯ ತು ಮಹಾವೇಗಃ ಕಾಕಮಭ್ಯಾಹನತ್ ಕಪಿಃ'
`ಅಭ್ಯದ್ರುವತ್ ಸುಸಂಕ್ರುದ್ಧಾ ಹಸ್ತಕಾಕ್ಯಾಽಥ ತಂ ಕಪಿಮ್'
`ಕಪಿಯು ಕಾಗೆಯ ಮೇಲೆ ಮತ್ತು ಕಾಗೆ ಕಪಿಯ ಮೇಲೆ ಹಾರಿ ಆಕ್ರಮಣ ಮಾಡಿದುವು' ಎಂದು ಅಲ್ಲಿ ಹೇಳಿದೆ.
ಪ್ರಚಲಿತ ಪಾಠದಲ್ಲಿ `ಕಕ್ಷ್ಯಾಮಭ್ಯಾಹನತ್' `ಹಸ್ತಿಕಕ್ಷ್ಯಾಥ ತಂ ಕಪಿಂ' ಎಂದೇ ಕಾಣುತ್ತದೆ. `ಕಕ್ಷ್ಯಾ' ಎಂದರೆ ಆನೆಗೆ ನಡುವಿನಲ್ಲಿ ಬಿಗಿಯುವ ತೊಗಲ ಹಗ್ಗ. ಅದು ಕರ್ಣನ ಧ್ವಜವೆಂದಾಗುತ್ತದೆ. ಲಕ್ಷಾಲಂಕಾರದ ಪಾಠದಲ್ಲಿ ಕಾಗೆ ಕರ್ಣನ ಧ್ವಜವಾದ್ದರಿಂದ ಪ್ರಚಲಿತ ಪಾಠದಲ್ಲಿರುವ `ಕಕ್ಷ್ಯಾ' ಶಬ್ದವೂ ಕಾಗೆ ಯನ್ನು ಹೇಳುತ್ತದೆ. ಕಕ್ಷವೆಂದರೆ ಕಾಡು. ಕಾಡುಕಾಗೆಯ ಕಬ್ಬಿಣದ ಪ್ರತಿಮೆ `ಕಕ್ಷ್ಯಾ'. ಅದು ಹಸ್ತಪ್ರಮಾಣದಾದ್ದರಿಂದ `ಹಸ್ತಿಕಕ್ಷ್ಯಾ' ಅಥವಾ `ಹಸ್ತ ಕಾಕ್ಯಾ' ಎನಿಸುತ್ತದೆ. ಮೇಲೆ ಹೇಳಿದ ಎರಡು ಕಡೆ ಹೊರತು ಬೇರೆ ಎಲ್ಲ ಕಡೆ

`ಹಸ್ತಿಕಕ್ಷ್ಯ' ಎಂದೇ ಪಾಠ. ಅದೂ ತಪ್ಪಲ್ಲ. ಅದಕ್ಕೆ ಒಂದು ಮೊಳ ದೀರ್ಘ ವಾದ ಕಬ್ಬಿಣದ ಕಾಗೆಯ ಪ್ರತಿಮೆಯೇ ಅರ್ಥ ಎಂದೂ ಲಕ್ಷಾಲಂಕಾರ ಹೇಳಿದೆ.
`ಕಕ್ಷ್ಯ' ಶಬ್ದಕ್ಕೆ ಪ್ರಸಿದ್ಧವಾದ `ಆನೆಯ ತೊಗಲ ಹಗ್ಗ' ಎಂದು ಅರ್ಥವನ್ನು ಬಿಟ್ಟು `ಕಾಗೆ' ಎಂದು ಅರ್ಥವೆನ್ನುವುದಕ್ಕೆ ಮೇಲೆ ಹೇಳಿದ ಎರಡು ಕಡೆ `ಕಾಕ' ಶಬ್ದವಿರುವುದೇ ಸಾಕ್ಷಿ. ಈ ಅರ್ಥಕಲ್ಪನೆ ಕ್ಲಿಷ್ಟವೆನಿಸಿದರೂ ಅದು ವ್ಯಾಸರಿಗೆ ಇಷ್ಟವೇ. ಏಕೆಂದರೆ ಅವರು ಗುಹ್ಯಭಾಷಾಪ್ರಿಯರು ಎನ್ನುತ್ತಾರೆ, ವಾದಿರಾಜರು.
ಕರ್ಣನ ರಥದ ಪತಾಕೆ ಕರ್ಣನಿಗೇ ಅಭಿಮುಖವಾಗಿ ಹಾರಾಡುತ್ತಿದೆ. ಇದು ಅವನಿಗೆ ಅಪಜಯ ಸೂಚಕ. ಏಕೆಂದರೆ ಪತಾಕೆ ಬಟ್ಟೆಯ ತುಂಡು. ಆಗ ಗಾಳಿ ಅನುಕೂಲವಾಗಿರಲಿಲ್ಲ, ಪ್ರತಿಕೂಲವಾಗಿ, ಕರ್ಣನಿಗೆ ಅಭಿಮುಖವಾಗಿ ಅದು ಬೀಸುತ್ತಿದ್ದುದನ್ನು ಅಭಿಮುಖವಾದ ಪತಾಕೆ ತೋರಿಸುತ್ತಿತ್ತು. ಪ್ರತಿಕೂಲವಾಗಿ ಗಾಳಿ ಬೀಸುವುದು ಅನಿಷ್ಟಕರ.
ಧ್ಮಾಪಯಿತ್ವಾ ರಣೇ ಶಂಖಂ ಹೇಮಜಾಲವಿಭೂಷಿತಮ್ |
ವಿಧುನ್ವಾನಂ ಮಹಚ್ಚಾಪಂ ಹೇಮಪೃಷ್ಠಂ ದೃಢಂ ನೃಪ ॥11॥
ರಾಜನೆ, ಬಂಗಾರದ ಬಲೆಯಿಂದ ಅಲಂಕೃತವಾದ ಶಂಖವನ್ನು ಊದಿ ರಣರಂಗದಲ್ಲಿ ಬಂಗಾರದ ಪೃಷ್ಠವುಳ್ಳ ದೃಢವಾದ ಮಹತ್ತಾದ ಧನುಸ್ಸನ್ನು ತೂಗುತ್ತಾನೆ ಕರ್ಣ.
ದೃಷ್ಟ್ವಾ ಕರ್ಣಂ ಮಹೇಷ್ವಾಸಂ ರಥಸ್ಥಂ ರಥಿನಾಂ ವರಮ್ |
ಭಾನುಮಂತಮಿವೋದ್ಯಂತಂ ತಮೋ ಘ್ನಂತಂ ದುರಾಸದಮ್ ॥12॥
ರಥಿಕರಲ್ಲಿ ಉತ್ತಮನೂ ಮಹಾ ಬಿಲ್ಗಾರನೂ ಶತ್ರುಗಳಿಗೆ ಮಣಿಯದವನೂ ಆದ ಆ ಕರ್ಣ ಕತ್ತಲನ್ನು ನಾಶಪಡಿಸುತ್ತ ಉದಿಸುವ ಸೂರ್ಯನಂತೆ ಕಾಣುತ್ತಿದ್ದ.
ನ ಭೀಷ್ಮವ್ಯಸನಂ ಕೇಚಿನ್ನಾಪಿ ದ್ರೋಣಸ್ಯ ಮಾರಿಷ |
ನಾನ್ಯೇಷಾಂ ಪುರುಷವ್ಯಾಘ್ರ ಮೇನಿರೇ ತತ್ರ ಕೌರವಾಃ ॥13॥
ಅಂಥ ಕರ್ಣನನ್ನು ನೋಡಿದ ಬಳಿಕ, ರಾಜನೆ, ಕೌರವರು ಯಾರೂ ಭೀಷ್ಮನ ವಿಯೋಗವನ್ನಾಗಲಿ ದ್ರೋಣನ ವಿಯೋಗವನ್ನಾಗಲಿ ಬೇರೆ ಸೇನಾಪ್ರಮುಖರ ವಿಯೋಗವನ್ನಾಗಲಿ ಮನಸಿಗೆ ತಂದುಕೊಳ್ಳಲಿಲ್ಲ. ಮರೆತೇಬಿಟ್ಟರು
ತತಸ್ತು ತ್ವರಯನ್ ಯೋಧಾನ್ ಶಂಖಶಬ್ದೇನ ಮಾರಿಷ |
ಕರ್ಣೋ ನಿಷ್ಕಾಮಯಾಮಾಸ ಕೌರವಾಣಾಂ ಮಹದ್ಬಲಮ್ ॥14॥
ರಾಜನೆ, ಕರ್ಣನು ಶಂಖಘೋಷದಿಂದ ಯೋಧರನ್ನು ಆತುರಪಡಿಸುತ್ತ ಕೌರವರ ದೊಡ್ಡ ಸೈನ್ಯವನ್ನು ಹೊರಡಿಸಿದ.
ವ್ಯೂಹಂ ವ್ಯೂಹ್ಯ ಮಹೇಷ್ವಾಸೋ ಮಕರಂ ಶತ್ರುತಾಪನಃ |
ಪ್ರತ್ಯುದ್ಯಯೌ ತದಾ ಕರ್ಣಃ ಪಾಂಡವಾನ್ ವಿಜಿಗೀಷಯಾ ॥15॥
ಮಕರವ್ಯೂಹಮಾಸ್ಥಾಯ ದಂಸಿತೋ ರವಿನಂದನಃ |
ಮಕರಸ್ಯಾಥ ತುಂಡೇ ತು ಕರ್ಣೋ ರಾಜನ್ ವ್ಯವಸ್ಥಿತಃ ॥16॥
ಶತ್ರುಗಳಿಗೆ ತಾಪಉಂಟುಮಾಡುವ ಮಹಾಬಿಲ್ಗಾರ ಕರ್ಣನು ಪಾಂಡವರನ್ನು ಗೆಲ್ಲುವ ಇಚ್ಛೆಯಿಂದ ತನ್ನ ಸೈನ್ಯವನ್ನು `ಮಕರ' ಮೊಸಳೆಯ ವ್ಯೂಹಾಕಾರವಾಗಿ ನಿಲ್ಲಿಸಿ ತಾನು ಅವರ ಮುಂದೆ `ಮೊಸಳೆ'ಯ ಮುಖದಲ್ಲಿ ಯುದ್ಧಸನ್ನದ್ಧನಾಗಿ ನಿಂತ.
ನೇತ್ರಯೋಃ ಶಕುನಿಃ ಶೂರ ಉಲೂಕಶ್ಚ ಮಹಾರಥಃ |
ದ್ರೋಣಪುತ್ರಸ್ತು ಶಿರಸಿ ಗ್ರೀವಾಯಾಂ ಸರ್ವಸೋದರಾಃ ॥17॥
ಮಧ್ಯೇ ದುರ್ಯೋಧನೋ ರಾಜಾ ಬಲೇನ ಮಹತಾ ವೃತಃ ॥18॥
ಮೊಸಳೆಯ ಕಣ್ಣುಗಳಲ್ಲಿ ಶೂರ ಮಹಾರಥನಾದ ಶಕುನಿ ಮತ್ತು ಉಲೂಕರು ನಿಂತರು. ಅಶ್ವತ್ಥಾಮನು ತಲೆಯಲ್ಲಿ ಮತ್ತು ಕುತ್ತಿಗೆಯಲ್ಲಿ ಎಲ್ಲ ಸೋದರರು, ಮಧ್ಯದಲ್ಲಿ ರಾಜಾ ದುರ್ಯೋಧನ ದೊಡ್ಡ ಸೈನ್ಯದೊಂದಿಗೆ ನಿಂತ.
ವಾಮಪಾದೇ ತು ರಾಜೇಂದ್ರ ಕೃತವರ್ಮಾ ವ್ಯವಸ್ಥಿತಃ |
ನಾರಾಯಣಬಲೈರ್ಯುಕ್ತೋ ಗೋಪಾಲೈರ್ಯುದ್ಧದುರ್ಮದೈಃ ॥19॥
ಮೊಸಳೆಯ ಎಡಗಾಲಿನಲ್ಲಿ ಕೃತವರ್ಮನು ನಾರಾಯಣ ಸೈನ್ಯ ಗೋಪಾಲ ಸೈನ್ಯಗಳೊಂದಿಗೆ ನಿಂತ.
ಪಾದೇ ತು ದಕ್ಷಿಣೇ ರಾಜನ್ ಗೌತಮಃ ಸತ್ಯವಿಕ್ರಮಃ |
ತ್ರಿಗರ್ತೈಶ್ಚ ಮಹೇಷ್ವಾಸೈರ್ದಾಕ್ಷಿಣಾತ್ಯೈಶ್ಚ ಸಂವೃತಃ ॥20॥
ಮೊಸಳೆಯ ಬಲಗಾಲಿನಲ್ಲಿ, ಅಮೋಘ ಪರಾಕ್ರಮಿ ಕೃಪನು ಮಹಾ ಬಿಲ್ಗಾರರಾದ ತ್ರಿಗರ್ತರಿಂದಲೂ ದಾಕ್ಷಿಣಾತ್ಯರಿಂದಲೂ ಯುಕ್ತನಾಗಿ ನಿಂತ.
ಅನುಪಾದಸ್ತು ಯೋ ವಾಮಸ್ತತ್ರ ಶಲ್ಯೋ ವ್ಯವಸ್ಥಿತಃ |
ಮಹತ್ಯಾ ಸೇನಯಾ ಸಾರ್ಧಂ ಮದ್ರದೇಶಸಮುತ್ಥಯಾ ॥21॥
ಮೊಸಳೆಯ ಎಡಹಿಮ್ಮಡಿಯಲ್ಲಿ ಮದ್ರದೇಶದಿಂದ ಬಂದ ಮಹಾಸೈನ್ಯ ದೊಂದಿಗೆ ಶಲ್ಯ ನಿಂತ.
ದಕ್ಷಿಣೇ ತು ಮಹಾರಾಜ ಸುಷೇಣಃ ಸತ್ಯಸಂಗರಃ |
ವೃತೋ ರಥಸಹಸ್ರೈಶ್ಚ ದಂತಿನಾಂ ಚ ಶತೈಸ್ತಥಾ ॥22॥
ಅಮೋಘ ಯುದ್ಧಮಾಡುವ ಸುಷೇಣ ಸಾವಿರ ರಥಸೈನ್ಯ ಮತ್ತು ನೂರು ಗಜಸೈನ್ಯಗಳೊಂದಿಗೆ ಮೊಸಳೆಯ ಬಲಹಿಮ್ಮಡಿಯಲ್ಲಿ ನಿಂತ.
ಪುಚ್ಛೇ ಹ್ಯಾಸ್ತಾಂ ಮಹಾವೀರ್ಯೌ ಭ್ರಾತರೌ ಪಾರ್ಥಿವಾತ್ಮಜೌ |
ವಿಚಿತ್ರಶ್ಚಿತ್ರಸೇನಶ್ಚ ಮಹತ್ಯಾ ಸೇನಯಾ ವೃತೌ ॥23॥

ಮೊಸಳೆಯ ಬಾಲದಲ್ಲಿ ಮಹಾಪರಾಕ್ರಮಿ ಸೋದರರು ವಿಚಿತ್ರ ಚಿತ್ರಸೇನರು ದೊಡ್ಡಸೈನ್ಯದೊಂದಿಗೆ ನಿಂತರು.
ತತಃ ಪ್ರಯಾತೇ ರಾಜೇಂದ್ರ ಕರ್ಣೇ ರಥವರೋತ್ತಮೇ |
ಧನಂಜಯಮಭಿಪ್ರೇಕ್ಷ್ಯ ಧರ್ಮರಾಜೋಽಬ್ರವೀದಿದಮ್ ॥24॥
ರಥಿಕರಲ್ಲಿ ಉತ್ತಮನಾದ ಕರ್ಣ ಈರೀತಿ ರಣರಂಗಕ್ಕೆ ಪ್ರಯಾಣ ಮಾಡಿದಾಗ ಧರ್ಮರಾಜ ಅರ್ಜುನನನ್ನು ನೋಡಿ ಹೇಳಿದ.
ಪಶ್ಯ ಪಾರ್ಥ ಮಹಾಸೇನಾಂ ಧಾರ್ತರಾಷ್ಟ್ರೀಂ ತು ಸಂಯುಗೇ |
ಕರ್ಣೇನ ನಿರ್ಮಿತಾಂ ವೀರ ಗುಪ್ತಾಂ ವೀರೈರ್ಮಹಾರಥೈಃ ॥25॥
ಧರ್ಮರಾಜ ನುಡಿದ– ನೋಡು, ಅರ್ಜುನ, ಕರ್ಣನು ರಣರಂಗದಲ್ಲಿ ವೀರ ಮಹಾರಥರ ರಕ್ಷಣೆಯಲ್ಲಿ ವ್ಯೂಹ ರಚನೆ ಮಾಡಿ ನಿಲ್ಲಿಸಿದ ಕೌರವರ ಮಹಾಸೈನ್ಯವನ್ನು.
ಹತವೀರತಮಾ ಹ್ಯೇಷಾ ಧಾರ್ತರಾಷ್ಟ್ರೀ ಮಹಾಚಮೂಃ |
ಫಲ್ಗುಶೇಷಾ ಮಹಾಬಾಹೋ ತೃಣೈಸ್ತುಲ್ಯತಮಾ ಮತಾ ॥26॥
ಈ ಕೌರವಸೈನ್ಯ ಅತ್ಯಂತ ಅಧಿಕ ಸಂಖ್ಯೆಯಲ್ಲಿ ವೀರರನ್ನು ಕಳೆದುಕೊಂಡಿದೆ. ಉಳಿದಿರುವವರ ಸಂಖ್ಯೆ ಅತ್ಯಲ್ಪ. ಅತ್ಯಂತ ತೃಣಪ್ರಾಯವೆನಿಸಿದೆ.
ಏಕೋ ಹ್ಯತ್ರ ಮಹೇಷ್ವಾಸಃ ಸೂತಪುತ್ರೋ ವ್ಯರೋಚತ ॥27॥
ಒಬ್ಬನೇ ಒಬ್ಬ ಮಹಾ ಬಿಲ್ಗಾರ ಕರ್ಣ ಮೆರೆಯುತ್ತಿದ್ದಾನೆ.
ಸದೇವಾಸುರಗಂಧರ್ವೈಃ ಸಕಿನ್ನರಮಹೋರಗೈಃ |
ಚರಾಚರೈಸ್ತ್ರಿಭಿರ್ಲೋಕೈರಜೇಯೋ ಯೋ ಮಹಾರಥಃ ॥28॥
ಅವನು ದೇವ ಅಸುರ ಗಂಧರ್ವ ಕಿನ್ನರ ಮಹಾನಾಗರಿಂದ ಚರಾಚರ ಮೂರ್ಲೋಕಗಳಿಂದ ಅಜೇಯನಾದ ಮಹಾರಥನಾಗಿದ್ದಾನೆ.
ತಂ ಹತ್ವಾಽದ್ಯ ಮಹಾಬಾಹೋ ವಿಜಯಸ್ತವ ಫಲ್ಗುನ |
ಉದ್ಧೃತಶ್ಚ ಭವೇಚ್ಛಲ್ಯೋ ಮಮ ದ್ವಾದಶವಾರ್ಷಿಕಃ ॥29॥
ಅವನನ್ನು ನೀನು ಕೊಂದರೆ, ಮಹಾಬಾಹು ಅರ್ಜುನ, ನೀನು ಗೆದ್ದೆ ಮತ್ತು ಹನ್ನೆರಡು ವರ್ಷಗಳಿಂದಲೂ ನನ್ನೆದೆಯಲ್ಲಿ ನಾಟಿರುವ ಮುಳ್ಳನ್ನು ನೀನು ಹೊರತೆಗೆದಂತಾಗುತ್ತದೆ.
ಏತಜ್ಜ್ಞಾತ್ವಾ ಮಹಾಬಾಹೋ ವ್ಯೂಹಂ ವ್ಯೂಹ ಯಥೇಚ್ಛಸಿ ॥30॥
ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನಿನಗೆ ಇಚ್ಛೆ ತೋರಿದಂತೆ ವ್ಯೂಹರಚನೆ ಮಾಡು.
ಸಂಜಯಃ
ಶ್ರುತ್ವಾ ತದ್ವಚನಂ ಭ್ರಾತುಃ ಕೌಂತೇಯಃ ಶ್ವೇತವಾಹನಃ |
ಅರ್ಧಚಂದ್ರೇಣ ವ್ಯೂಹೇನ ಪ್ರತ್ಯವ್ಯೂಹತ ತಾಂ ಚಮೂಮ್ ॥31॥
ಸಂಜಯ ನುಡಿದ– ಸೋದರನು ಹೇಳಿದ ಮಾತನ್ನು ಕೇಳಿ ಅರ್ಜುನ ಮಕರವ್ಯೂಹಕ್ಕೆ ಪ್ರತಿಯಾಗಿ ಅರ್ಧಚಂದ್ರ ವ್ಯೂಹವನ್ನು ರಚಿಸಿದ.
ವಾಮಶೃಂಗೇ ತು ರಾಜೇಂದ್ರ ಭೀಮಸೇನೋ ವ್ಯವಸ್ಥಿತಃ |
ದಕ್ಷಿಣೇ ತು ಮಹಾಬಾಹುರ್ಧೃಷ್ಟದ್ಯುಮ್ನೋ ವ್ಯವಸ್ಥಿತಃ ॥32॥
ರಾಜನೆ, ಎಡತುದಿಯಲ್ಲಿ ಭೀಮಸೇನ ನಿಂತ. ಬಲತುದಿಯಲ್ಲಿ ಮಹಾಬಾಹು ಧೃಷ್ಟದ್ಯುಮ್ನ ನಿಂತ.
ಮಧ್ಯೇ ವ್ಯೂಹಸ್ಯ ರಾಜೇಂದ್ರ ಪಾಂಡವಶ್ಚ ಧನಂಜಯಃ |
ನಕುಲಃ ಸಹದೇವಶ್ಚ ಧರ್ಮರಾಜಸ್ಯ ಪೃಷ್ಠತಃ ॥33॥
ವ್ಯೂಹದ ಮಧ್ಯದಲ್ಲಿ ಧರ್ಮರಾಜ ಮತ್ತು ಅರ್ಜುನನು ನಿಂತರು. ಧರ್ಮ ರಾಜನ ಹಿಂಭಾಗದಲ್ಲಿ ನಕುಲಸಹದೇವರು ನಿಂತರು.
ಚಕ್ರರಕ್ಷೌ ತು ಪಾಂಚಾಲ್ಯೌ ಯುಧಾಮನ್ಯೂತ್ತಮೌಜಸೌ |
ಪಾರ್ಥಂ ನ ಜಹತುರ್ಯುದ್ಧೇ ಪಾಲ್ಯಮಾನೌ ಕಿರೀಟಿನಾ ॥34॥
ಪಾಂಚಾಲದೇಶದ ಯುಧಾಮನ್ಯು ಮತ್ತು ಉತ್ತಮೌಜರು ಯುದ್ಧದಲ್ಲಿ ಅರ್ಜುನನ ರಕ್ಷಣೆಯಲ್ಲಿದ್ದು ಅರ್ಜುನನಿಗೆ ಚಕ್ರರಕ್ಷಕರಾದರು. ಅವನನ್ನು ಅವರು ಬಿಟ್ಟುಹೋಗುತ್ತಿರಲಿಲ್ಲ.
ಶೇಷಾ ನೃಪತಯೋ ವೀರಾಃ ಸ್ಥಿತಾ ವ್ಯೂಹಸ್ಯ ದಂಸಿತಾಃ |
ಯಥಾಭಾಗಂ ಯಥೋತ್ಸಾಹಂ ಯಥಾಯತ್ನಂ ಚ ಭಾರತ ॥35॥
ಬೇರೆ ರಾಜರು, ವೀರರು, ವ್ಯೂಹದಲ್ಲಿ ಆಯಾ ಭಾಗಗಳಲ್ಲಿ ಉತ್ಸಾಹ, ಯತ್ನ ಗಳಿಗನುಸಾರವಾಗಿ ಯುದ್ಧಸನ್ನದ್ಧರಾಗಿ ನಿಂತರು.
ಏವಮೇತನ್ಮಹಾವ್ಯೂಹಂ ವ್ಯೂಹ್ಯ ಭಾರತ ಪಾಂಡವಾಃ |
ತಾವಕಾಶ್ಚ ಮಹೇಷ್ವಾಸಾ ಯುದ್ಧಾಯೈವಾವತಸ್ಥಿರೇ ॥36॥
ರಾಜನೆ, ಪಾಂಡವರೂ ನಿನ್ನವರೂ ಹೀಗೆ ಮಹಾವ್ಯೂಹಗಳನ್ನು ರಚಿಸಿ ಕೊಂಡು ಮಹಾಧನುರ್ಧಾರಿಗಳಾಗಿ ಯುದ್ಧಕ್ಕೇ ಸನ್ನದ್ಧರಾಗಿ ನಿಂತರು. ಶಾಂತಿಸಂಧಾನ ಅವರಿಗೆ ಬೇಕಾಗಿರಲಿಲ್ಲ.
ದೃಷ್ಟ್ವಾ ವ್ಯೂಹಂ ತವ ಚಮೂಂ ಸೂತಪುತ್ರೇಣ ಸಂಯುಗೇ |
ನಿಹತಾನ್ ಪಾಂಡವಾನ್ ಮೇನೇ ಸಕೃಷ್ಣಾನ್ ವೈ ಜನಾಧಿಪಃ ॥37॥
ಕರ್ಣನು ರಣರಂಗದಲ್ಲಿ ನಿನ್ನ ಸೈನ್ಯವನ್ನು ವ್ಯೂಹಮಾಡಿ ನಿಲ್ಲಿಸಿದ್ದನ್ನು ಕಂಡು ದುರ್ಯೋಧನ `ಪಾಂಡವರೂ ಕೃಷ್ಣನೂ ಇನ್ನು ಹತರಾದಂತೆಯೆ' ಎಂದು ಭಾವಿಸಿದ.
ತಥೈವ ಪಾಂಡವೀಂ ಸೇನಾಂ ದೃಷ್ಟ್ವಾ ವ್ಯೂಢಾಂ ಯುಧಿಷ್ಠಿರಃ |

ಧಾರ್ತರಾಷ್ಟ್ರಾನ್ ಹತಾನ್ ಮೇನೇ ಸಕರ್ಣಾನ್
ಸಸುಯೋಧನಾನ್ ॥38॥
ಹಾಗೆಯೇ ಪಾಂಡವ ಸೇನೆಯೂ ವ್ಯೂಹಾಕಾರವಾಗಿ ನಿಂತಿರುವುದನ್ನು ಕಂಡು ಯುಧಿಷ್ಠಿರನೂ ಕೂಡ `ಇನ್ನು ಕೌರವರು ಕರ್ಣ ದುರ್ಯೋಧನಸಹಿತರಾಗಿ ಎಲ್ಲರೂ ಹತರಾದಂತೆಯೇ' ಎಂದು ಭಾವಿಸಿದ.
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ |
ಪಟಹಾಶ್ಚಾಭ್ಯಹನ್ಯಂತ ಝರ್ಝರ್ಯಶ್ಚ ಸಮಂತತಃ ॥39॥
ಅನಂತರ ರಣರಂಗದಲ್ಲಿ ಎಲ್ಲೆಡೆ ಶಂಖ ನಗಾರಿ ಪಣವ ಡೋಲು ತಮಟೆ ಕಹಳೆ ಝರ್ಝರಿಗಳ ಧ್ವನಿ ಎಲ್ಲೆಡೆ ತುಂಬಿತು.
ಸೇನಯೋರುಭಯೋ ರಾಜನ್ ಡಿಂಡಿಮಾಶ್ಚ ಮಹಾಸ್ವನಾಃ |
ಸಿಂಹನಾದಶ್ಚ ಸಂಜಜ್ಞೇ ಶೂರಾಣಾಂ ಜಯಗೃದ್ಧಿನಾಮ್ ॥40॥
ರಾಜನೆ, ಎರಡೂ ಸೈನ್ಯಗಳಲ್ಲಿ ದೊಡ್ಡ ಶಬ್ದ ಮಾಡುವ ಡಿಂಡಿಮಗಳ ಜೊತೆಗೆ ಜಯೇಚ್ಛುಗಳಾದ ಶೂರ ಯೋಧರ ಸಿಂಹನಾದವೂ ಕೇಳಿಬಂದಿತು.
ಹಯಹೇಷಿತಶಬ್ದಾಶ್ಚ ವಾರಣಾನಾಂ ಚ ಬೃಂಹಿತಾಃ |
ರಥನೇಮಿಸ್ವನಾಶ್ಚೋಗ್ರಾಃ ಸಂಬಭೂವುರ್ಜನಾಧಿಪ ॥41॥
ರಾಜನೆ, ಕುದುರೆಗಳು ಕೆನೆಯುವ ಶಬ್ದ, ಆನೆಗಳು ಘೀಳಿಡುವ ಶಬ್ದ, ರಥಚಕ್ರಗಳ ಗಡುಸಾದ ಶಬ್ದಗಳೂ ಉಂಟಾದವು.
ನ ದ್ರೋಣವ್ಯಸನಂ ಕೇಚಿದ್ ವಿಜಗ್ಮುಸ್ತತ್ರ ಭಾರತ |
ದೃಷ್ಟ್ವಾ ಕರ್ಣಂ ಮಹೇಷ್ವಾಸಂ ಮುಖೇ ವ್ಯೂಹಸ್ಯ ದಂಸಿತಮ್ ॥42॥
ರಾಜನೆ, ಮಹಾಬಿಲ್ಗಾರ ಕರ್ಣನು ಕವಚ ಧರಿಸಿ ವ್ಯೂಹದ ಮುಂಭಾಗದಲ್ಲಿ ನಿಂತಿದ್ದನ್ನು ನೋಡಿದ ಬಳಿಕ ಯಾರೂ ದ್ರೋಣನ ಅಗಲಿಕೆಯ ಬೇಸರವನ್ನು ಮನಸಿಗೆ ತಂದುಕೊಳ್ಳಲಿಲ್ಲ.
ಉಭೇ ಸೇನೇ ಮಹಾರಾಜ ಪ್ರಹೃಷ್ಟನರಕುಂಜರೇ |
ಯೋದ್ಧುಕಾಮೇ ಸ್ಥಿತೇ ಯತ್ತೇ ಹಂತುಮನ್ಯೋನ್ಯಮಂಜಸಾ ॥43॥
ಮಹಾರಾಜ, ಎರಡೂ ಸೈನ್ಯಗಳು ಪ್ರಹೃಷ್ಟರಾದ ಪುರುಷಶ್ರೇಷ್ಠರಿಂದ ಯುಕ್ತವಾಗಿದ್ದು ಯುದ್ಧದ ಬಯಕೆಯಿಂದ ಪರಸ್ಪರ ಹೊಡೆದುಕೊಳ್ಳಲು ಸಿದ್ಧವಾಗಿ ನಿಂತುವು.
ವಿಜಯೇ ಜಾತಸಂರಂಭೇ ದೃಷ್ಟ್ವಾಽನ್ಯೋನ್ಯಮವಸ್ಥಿತೇ |
ಅನೀಕಮಧ್ಯೇ ರಾಜೇಂದ್ರ ರೇಜತುಃ ಕರ್ಣಪಾಂಡವೌ ॥44॥
ಎರಡೂ ಸೈನ್ಯಗಳು ಪರಸ್ಪರ ಗೆಲ್ಲುವ ಉದ್ದೇಶದಿಂದ ಕೋಪಗೊಂಡು ದಿಟ್ಟಿಸಿ ನೋಡುತ್ತ ನಿಂತುವು. ರಾಜನೆ, ಸೈನ್ಯದ ಮಧ್ಯದಲ್ಲಿ ಕರ್ಣಾರ್ಜುನರು ಶೋಭಿಸಿದರು.
ನೃತ್ಯಂತಾವಿವ ತೇ ಸೇನೇ ಪ್ರಜಗ್ಮತುರಭೀತವತ್ |
ತಯೋಃ ಪಕ್ಷಪ್ರಪಕ್ಷೇಭ್ಯೋ ನಿರ್ಯಯುಶ್ಚ ಯುಯುತ್ಸವಃ ॥45॥
ಆ ಎರಡೂ ಸೈನ್ಯಗಳು ನೃತ್ಯಮಾಡುವಂತೆ ಹೆಜ್ಜೆ ಇಡುತ್ತ ಪರಸ್ಪರ ಸೇರಿದುವು. ಆ ಪಕ್ಷಪ್ರಪಕ್ಷಗಳಿಂದ ಯೋಧರು ಯುದ್ಧದ ತವಕದಿಂದ ಹೊರಗೆ ಬರತೊಡಗಿದರು.
ತತಃ ಪ್ರವವೃತೇ ಯುದ್ಧಂ ನರವಾರಣವಾಜಿನಾಮ್ |
ರಥಿನಾಂ ಚ ಮಹಾರಾಜ ತ್ವನ್ಯೋನ್ಯಂ ನಿಘ್ನತಾಂ ಭೃಶಮ್ ॥46॥
ಒಡನೆ, ಮಹಾರಾಜ, ಎರಡೂ ಕಡೆಯ ಕಾಲಾಳು ಗಜಸೈನ್ಯ ಅಶ್ವಸೈನ್ಯ ರಥಸೈನ್ಯಗಳು ಪರಸ್ಪರ ಚೆನ್ನಾಗಿ ಹೊಡೆದುಕೊಳ್ಳುತ್ತಿದ್ದಂತೆ ಯುದ್ಧ ನಡೆಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಏಕಾದಶೋಽಧ್ಯಾಯಃ ॥11॥

ಮಹಾಭಾರತತಾತ್ಪರ್ಯನಿರ್ಣಯ
ತತ್ರಾಭವದ್ ಯುದ್ಧಮತೀವ ದಾರುಣಂ
ಪಾಂಡೋಃ ಸುತಾನಾಂ ಧೃತರಾಷ್ಟ್ರಜೈರ್ಗಜೇ |
ತತ್ರೋದಯಾದ್ರಿಪ್ರತಿಮೇ ಪ್ರದೃಶ್ಯತೇ
ಭೀಮೋ ಯಥೋದ್ಯನ್ ಸವಿತಾತಿನಿರ್ಮಲಃ ॥2॥
ಕರ್ಣನ ಸೇನಾಧಿಪತ್ಯದಲ್ಲಿ ಪಾಂಡವರಿಗೆ ಕೌರವರೊಡನೆ ಅತ್ಯಂತ ದಾರುಣವಾದ ಯುದ್ಧ ನಡೆಯಿತು. ರಣರಂಗದಲ್ಲಿ ಉದಯಾಚಲದಂಥ ಆನೆಯ ಮೇಲೆ ಅತಿನಿರ್ಮಲನಾದ ಉದಿಸುವ ಸೂರ್ಯನಂತೆ ಕಾಣಿಸಿಕೊಂಡ, ಭೀಮ.
ತಂ ಕಾಲಯಂತಂ ನೃಪತೀನ್ ಕ್ಷೇಮಧೂರ್ತಿ
ರಭ್ಯಾಗಮತ್ ತಸ್ಯ ಗಜಂ ಜಘಾನ ಚ |
ತಂ ವೀರ್ಯಮತ್ತಂ ಪ್ರತಿಲಭ್ಯ ಭೀಮೋ
ನಿನಾಯ ಮೃತ್ಯೋಃ ಸದನಾಯ ಶೀಘ್ರಮ್ ॥ 3॥
ರಾಜರನ್ನೆಲ್ಲ ಪುಡಿಮಾಡುತ್ತಿದ್ದ ಭೀಮನನ್ನು ಕ್ಷೇಮಧೂರ್ತಿ ಇದಿರಿಸಿದ. ಭೀಮನ ಆನೆಯನ್ನು ಕ್ಷೇಮಧೂರ್ತಿ ಕೊಂದ. ಕ್ಷೇಮಧೂರ್ತಿಯ ಆನೆಯನ್ನು ಭೀಮ ಕೊಂದ. ಬಳಿಕ ಬಲದಿಂದ ದರ್ಪಿತನಾದ ಆ ಕ್ಷೇಮಧೂರ್ತಿಯನ್ನು ಆಕ್ರಮಿಸಿ ಭೀಮ ಬೇಗನೆ

ಯಮಲೋಕಕ್ಕೆ ಅಟ್ಟಿದ.
ನಿಹತ್ಯ ತಂ ಮಾರುತಿರಭ್ಯಕೃಂತ-
ಚ್ಛಿರಾಂಸಿ ಯೂನಾಂ ಪರಪಕ್ಷಪಾತಿನಾಮ್
ವಿಕ್ಷೋಭಯಾಮಾಸ ಚ ಶತ್ರುಸೈನ್ಯಂ
ಸಿಂಹೋ ಯಥೈವ ಶ್ವಸೃಗಾಲಯೂಥಮ್ ॥ 4 ॥
ಕ್ಷೇಮಧೂರ್ತಿಯನ್ನು ಕೊಂದ ಬಳಿಕ ಭೀಮ ಶತ್ರುಪಕ್ಷದಲ್ಲಿ ಹೋರಾಡುತ್ತಿದ್ದ ಯುವಕರ ಶಿರಗಳನ್ನು ತರಿದ. ಮತ್ತು ನಾಯಿನರಿಗಳ ಹಿಂಡನ್ನು ಸಿಂಹ ಹೇಗೋ ಹಾಗೆ ಶತ್ರುಸೈನ್ಯವನ್ನು ಕ್ಷೋಭೆಗೊಳಿಸಿದ.
ಹನ್ನೆರಡನೆಯ ಅಧ್ಯಾಯ
ಭೀಮನಿಂದ ಕ್ಷೇಮಧೂರ್ತಿಯ ವಧ
ಸಂಜಯಃ
ತೇ ಸೇನೇऽನ್ಯೋನ್ಯಮಾಸಾದ್ಯ ಪ್ರಹೃಷ್ಟಾಶ್ವನರದ್ವಿಪೇ |
ಬೃಹತ್ಯೌ ಸಂಪ್ರಜಹ್ರಾತೇ ದೇವಾಸುರಚಮೂಸಮೇ ॥1॥
ಹರ್ಷಗೊಂಡ ಅಶ್ವನರಗಜಗಳಿಂದ ತುಂಬಿದ ದೇವಾಸುರ ಸೈನ್ಯಗಳಿಗೆ ಸಮವಾದ ಆ ಎರಡು ಮಹಾಸೈನ್ಯಗಳು ಪರಸ್ಪರ ಸೇರಿ ಹೊಡೆದುಕೊಂಡುವು.
ತತೋ ವರರಥಾಶ್ವೇಭಾಃ ಪತ್ತಯಶ್ಚ ಮಹಾಹವೇ |
ಸಂಪ್ರಹಾರಂ ಮಹಚ್ಚಕ್ರುರ್ದೇಹಪಾಪ್ಮವಿನಾಶನಮ್ ॥2॥
ಆ ಮಹಾಯುದ್ಧದಲ್ಲಿ ಶ್ರೇಷ್ಠವಾದ ರಥ ಅಶ್ವ ಗಜ ಪದಾತಿಗಳು ಶರೀರನಾಶ ಪಾಪನಾಶಗಳನ್ನು ಮಾಡುವ ದೊಡ್ಡ ಹೋರಾಟವನ್ನು ನಡೆಸಿದರು.
`ಮಹಾ ಆಹವ' ಮಹಾಯುದ್ಧವು `ಮಹಾ ಹವ' `ದೊಡ್ಡ ಯಜ್ಞ' ರೂಪವಾಗಿರುವುದರಿಂದ ಯುದ್ಧದಲ್ಲಿ ಶರೀರನಾಶವಾಯಿತೆಂದರೆ ಅದು ಪುಣ್ಯಕರವಾದ ಬಲಿದಾನ. ಶರೀರ ಉಳಿದು ಕೇವಲ ರಕ್ತಪಾತವಾದರೂ ಪಾಪವೇ ರಕ್ತರೂಪದಿಂದ ಹೊರಗೆ ಹರಿಯುತ್ತದೆ, ಅದೂ ಪುಣ್ಯಕರ. ಹೀಗಾಗಿ ಯುದ್ಧವು ಪುಣ್ಯಕರವಾಗಿದ್ದು ರಾಜ್ಯಭೋಗಕ್ಕಾಗಲಿ ಸ್ವರ್ಗಸುಖಕ್ಕಾಗಲಿ ಸಾಧನವಾಗುತ್ತದೆ. ಅದರಿಂದ ಭೀಕರವಾದ ಯುದ್ಧವು ವೀರಯೋಧರಿಗೆ ಬಹಳ ಹರ್ಷದಾಯಕವೇ ಹೊರತು ದುಃಖದಾಯಕವಾದ ಕ್ರೂರ ಹಿಂಸೆ ಎನ್ನುವ ಭಾವನೆ ವೀರಕ್ಷತ್ರಿಯರಿಗೆ ಇರುವುದಿಲ್ಲ. ಹೆಣಗಳ ರಾಶಿಯಿಂದ ರಣಭೂಮಿ ಭೀಕರ ಭೀಭತ್ಸವೆನಿಸುವುದಿಲ್ಲ.
ಪೂರ್ಣಚಂದ್ರಾರ್ಕಪದ್ಮಾನಾಂ ಕಾಂತಿತ್ವಿಡ್ಗಂಧತಃ ಸಮೈಃ |
ಉತ್ತಮಾಂಗೈರ್ನೃಸಿಂಹಾನಾಮ್ ಆವೃತಾ ಪತಿತೈರ್ಮಹೀ ॥3॥
ಪೂರ್ಣಚಂದ್ರನಂಥ ಮಿದುವಾದ ಹೊಳಪು, ಸೂರ್ಯನಂಥ ಪ್ರಖರದೀಪ್ತಿ ಮತ್ತು ಕಮಲದ ಹೂಗಳಂಥ ಸುಗಂಧಯುಕ್ತವಾದ ವೀರಯೋಧರ ರುಂಡಗಳು ಉರುಳಿದುವು. ರಣಭೂಮಿ ಅವುಗಳಿಂದ ಆವೃತವಾಯಿತು.
ಅರ್ಧಚಂದ್ರೈಸ್ತಥಾ ಭಲ್ಲೈಃ ಕ್ಷುರಪ್ರೈರಸಿಪಟ್ಟಿಸೈಃ |
ಪರಶ್ವಧೈಸ್ತ್ವಪಾಕೃಂತನ್ನುತ್ತಮಾಂಗಾನಿ ಯುಧ್ಯತಾಮ್ ॥4॥
ಅರ್ಧಚಂದ್ರ ಭಲ್ಲ ಕ್ಷುರಪ್ರ ಖಡ್ಗ ಪಟ್ಟಿಶ ಮತ್ತು ಗಂಡುಗೊಡಲಿ ಮುಂತಾದ ಆಯುಧಗಳಿಂದ ಯೋಧರು ಯೋಧರ ಶಿರಗಳನ್ನು ತರಿದರು.
ವ್ಯಾಯತಾಯತಬಾಹೂನಾಂ ವ್ಯಾಯತಾಯತಬಾಹುಭಿಃ ॥5॥
ಬಾಹವಃ ಪತಿತಾ ರೇಜುಃ ಸಾಂಗದಾ ರುಧಿರೋಕ್ಷಿತಾಃ ॥6॥
ದಪ್ಪ ಹಾಗೂ ನಿಡಿದಾದ ತೋಳುಗಳುಳ್ಳ ಯೋಧರಿಂದ ಕಡಿದು ಬಿದ್ದ ದಪ್ಪನಾದ ನಿಡಿದಾದ ತೋಳುಗಳು ತೊಳ್ಬಳೆಗಳಿಂದ ಕೂಡಿದ್ದು ರಕ್ತದಿಂದ ತೋಯ್ದು ಶೋಭಿಸಿದುವು.
ತೈಃ ಸ್ಫುರದ್ಭಿರ್ಮಹೀ ಭಾತಿ ರಕ್ತಾಂಗುಲಿತಲೈಸ್ತಥಾ |
ಗರುಡಪ್ರಹಾರತೋ ರುಗ್ಣೈಃ ಪಂಚಾಸ್ಯೈರಿವ ಪನ್ನಗೈಃ ॥7॥
ಕೆಂಪಾದ ಐದು ಬೆರಳು ಹಾಗೂ ಅಂಗೈಗಳಿಂದ ಕೂಡಿದ ಆ ಬಾಹುಗಳು ರಣಭೂಮಿಯ ಮೇಲೆ ಹೊಳೆಯುತ್ತ ಗರುಡನ ಪ್ರಹಾರದಿಂದ ಬಿದ್ದ ಐದು ಹೆಡೆಗಳ ಹಾವುಗಳಂತೆ ಕಂಡುವು.
ದ್ವಿರದಸ್ಯಂದನಾಶ್ವೇಭ್ಯಃ ಪೇತುರ್ವೀರಾ ದ್ವಿಷದ್ಧತಾಃ |
ವಿಮಾನೇಭ್ಯೋ ಯಥಾ ಪುಣ್ಯೇ ಕ್ಷೀಣೇ ಸ್ವರ್ಗಸದಸ್ತಥಾ ॥8॥
ಪುಣ್ಯಕ್ಷಯವಾದಾಗ ಸ್ವರ್ಗವಾಸಿಗಳು ವಿಮಾನಗಳಿಂದ ಕೆಳಗೆ ಬೀಳುವಂತೆ ಶತ್ರುಗಳಿಂದ ಹತರಾದ ವೀರರು ಆನೆ ರಥ ಕುದುರೆಗಳಿಂದ ಕೆಳಗೆ ಬಿದ್ದರು.
ಗದಾಭಿರನ್ಯೇ ಗುರ್ವೀಭಿರ್ಯಷ್ಟಿಭಿರ್ಮುಸಲೈರಪಿ ॥9॥
ಪೋಥಿತಾಃ ಶತಧಾ ಪೇತುರ್ವೀರಾ ವರಶಿತೈಃ ಶರೈಃ |
ರಥಾ ರಥೈರ್ವಿನಿಹತಾಃ ಪಾತಿತಾಶ್ಚ ದ್ವಿಪೈರ್ದ್ವಿಪಾಃ ॥10॥
ಸಾದಿಭಿಃ ಸಾದಿನಶ್ಚೈವ ತಸ್ಮಿನ್ ಪರಮಸಂಕುಲೇ ॥11॥
ಕೆಲವರು ವೀರರು ಭಾರವಾದ ಗದೆ ಪರಿಘ ಮುಸಲಾದಿ ಆಯುಧಗಳಿಂದ ನೂರಾಗಿ ಪುಡಿಯಾಗುತ್ತ ಬಿದ್ದರು. ಹರಿತವಾದ ಬಾಣಗಳಿಂದ ರಥಿಕರು ರಥಿಕರನ್ನು ಗಜಾರೋಹಿಗಳು ಗಜಾರೋಹಿಗಳನ್ನು ಅಶ್ವಾರೋಹಿಗಳು ಅಶ್ವಾರೋಹಿಗಳನ್ನು ಕೆಡವಿದರು. ಹೀಗೆ ಯುದ್ಧವು ಮಹಾಭಯಂಕರವಾಯಿತು.

ರಥೈರ್ನರಾ ರಥಾ ನಾಗೈರಶ್ವಾರೋಹಾಶ್ಚ ಪತ್ತಿಭಿಃ |
ಅಶ್ವಾರೋಹೈಃ ಪದಾತಾಶ್ಚ ನಿಹತಾ ಯುಧಿ ಶೇರತೇ ॥12॥
ರಥಿಕರಿಂದ ಪದಾತಿಗಳು, ಗಜಾರೋಹಿಗಳಿಂದ ರಥಿಕರು, ಪದಾತಿಗಳಿಂದ ಅಶ್ವಾರೋಹಿಗಳು, ಅಶ್ವಾರೋಹಿಗಳಿಂದ ಪದಾತಿಗಳು ಹೀಗೂ ಹತರಾಗಿ ರಣರಂಗದಲ್ಲಿ ಬಿದ್ದರು.
ರಥಾಶ್ವಪತ್ತಯೋ ನಾಗೈರಶ್ವೈರ್ನಾಗೈಶ್ಚ ಪತ್ತಯಃ |
ರಥಪತ್ತಿದ್ವಿಪಾಶ್ಚಾಶ್ವೈರ್ನೃಭಿಶ್ಚಾಶ್ವರಥದ್ವಿಪಾಃ ॥13॥
ಗಜಾರೋಹಿಗಳಿಂದ ರಥಿಕರು ಅಶ್ವಾರೋಹಿಗಳು ಪದಾತಿಗಳು, ಅಶ್ವಾರೋಹಿ ಗಜಾರೋಹಿಗಳಿಂದ ಪದಾತಿಗಳು, ಅಶ್ವಾರೋಹಿಗಳಿಂದ ರಥಿಕರು ಪದಾತಿಗಳು ಗಜಾರೋಹಿಗಳು, ಪದಾತಿಗಳಿಂದ ಅಶ್ವಾರೋಹಿ ರಥಾರೋಹಿ ಗಜಾರೋಹಿಗಳು ಹೀಗೂ ಹತರಾಗಿ ವೀರರು ಬಿದ್ದರು.
ರಥಾಶ್ವೇಭನರಾಣಾಂ ತು ರಥಾಶ್ವೇಭನರೈಃ ಕೃತಮ್ |
ಪಾಣಿಪಾದೈಶ್ಚ ಶಸ್ತ್ರೈಶ್ಚ ರಥೈಶ್ಚ ಕದನಂ ಮಹತ್ ॥14॥
ರಥ ಅಶ್ವ ಗಜ ಪದಾತಿಗಳೊಡನೆ ರಥ ಅಶ್ವ ಗಜ ಪದಾತಿಗಳು ಯುದ್ಧ ಮಾಡಿದರು. ಕೈಕಾಲುಗಳಿಂದಲೂ ಶಸ್ತ್ರಗಳಿಂದಲೂ ರಥಗಳಿಂದಲೂ ಯುದ್ಧ ಮಾಡಿದರು.
ತಥಾ ತಸ್ಮಿನ್ ಬಲೇ ಶೂರೈರ್ವಧ್ಯಮಾನೇ ಹತೇಽಪಿ ಚ |
ಅಸ್ಮಾನಭ್ಯಾಯಯುಃ ಪಾರ್ಥಾ ವೃಕೋದರಪುರೋಗಮಾಃ ॥15॥
ಹೀಗೆ ಸೈನ್ಯವು ಪರಸ್ಪರ ಯೋಧರಿಂದ ಹೊಡೆಸಿಕೊಂಡು ಹತವಾಗುತ್ತಿರು ವಾಗ ಭೀಮಸೇನನನ್ನು ಮುಂದೆ ಮಾಡಿಕೊಂಡು ಪಾಂಡವರು ನಮ್ಮ ಮೇಲೆ ಏರಿಬಂದರು.
ಧೃಷ್ಟದ್ಯುಮ್ನಃ ಶಿಖಂಡೀ ಚ ದ್ರೌಪದೇಯಾಃ ಪ್ರಭದ್ರಕಾಃ |
ಸಾತ್ಯಕಿಶ್ಚೇಕಿತಾನಶ್ಚ ದ್ರಮಿಳೈಃ ಸೈನಿಕೈಃ ಸಹ ॥16॥
ಭೃತಾ ವ್ಯೂಹೇನ ಮಹತಾ ಪಾಂಡ್ಯಾಶ್ಚೋಳಾಃ ಸಕೇರಲಾಃ |
ವ್ಯೂಢೋರಸ್ಕಾ ದೀರ್ಘಭುಜಾಃ ಪ್ರಾಂಶವಃ ಪೃಥುಲೋಚನಾಃ ॥17॥
ಧೃಷ್ಟದ್ಯುಮ್ನ ಶಿಖಂಡಿ ದ್ರೌಪದೀಪುತ್ರರು ಪ್ರಭದ್ರಕರು ಸಾತ್ಯಕಿ ಚೇಕಿತಾನ ಇವರೆಲ್ಲರೂ ದ್ರಾವಿಡಸೈನಿಕರೊಂದಿಗೆ ಬಂದರು. ಪಾಂಡ್ಯರು ಚೋಳರು ಕೇರಳರು ಕೂಡ ಬಂದರು. ದೊಡ್ಡ ವ್ಯೂಹದಿಂದ ರಕ್ಷಿತರಾಗಿದ್ದರು. ಅಗಲವಾದ ಎದೆ ನಿಡಿದಾದ ತೋಳುಗಳುಳ್ಳವರು ಎತ್ತರವಾಗಿರುವವರು ವಿಶಾಲನೇತ್ರರು.
ಆಪೀಡಿನೋ ರಕ್ತದಂತಾ ಮತ್ತಮಾತಂಗವಿಕ್ರಮಾಃ |
ನಾನಾವಿರಾಗವಸನಾ ಗಂಧಚೂರ್ಣಾವಚರ್ಚಿತಾಃ ॥18॥
ಆಭರಣಗಳಿಂದ ಅಲಂಕೃತರು ಕೆಂಪುಹಲ್ಲಿನವರು ಮದಿಸಿದ ಆನೆಯಂತೆ ಪರಾಕ್ರಮಿಗಳು. ನಾನಾ ವರ್ಣದ ವಸ್ತ್ರ ಉಟ್ಟುಕೊಂಡಿದ್ದರು. ಸುಗಂಧದ್ರವ್ಯ ಚೂರ್ಣ ಲೇಪಿಸಿಕೊಂಡವರು.
ಬದ್ಧಾಸಯಃ ಪಾಶಹಸ್ತಾಃ ವಾರಣಪ್ರತಿವಾರಣಾಃ |
ಸಮಾನಮೃತ್ಯವೋ ರಾಜನ್ ಪ್ರಸಕ್ತಾಶ್ಚ ಪರಸ್ಪರಮ್ ॥19॥
ಖಡ್ಗವನ್ನು ಸೊಂಟಕ್ಕೆ ಕಟ್ಟಿಕೊಂಡವರು ಕೈಯಲ್ಲಿ ಪಾಶವನ್ನು ಹಿಡಿದವರು ಆನೆಗಳನ್ನು ಕೂಡ ತಡೆಯಬಲ್ಲವರು. ಪರಸ್ಪರ ಹೋರಾಡಿ ಏಕಕಾಲದಲ್ಲಿ ಅಸು ನೀಗಬಲ್ಲವರು.
ಕಲಾಪಿನಶ್ಚಾಪಹಸ್ತಾ ದೀರ್ಘಕೇಶಾಃ ಪ್ರಿಯಂವದಾಃ |
ಪತ್ತಯಃ ಸಾಯಕೈರ್ವಿದ್ಧಾ ಘೋರರೂಪಾ ಭಯಾವಹಾಃ ॥20॥
ಶಿರೋಭೂಷಣ ಧರಿಸಿದವರು ಧನುಸ್ಸನ್ನು ಹಿಡಿದಿರುವವರು ನೀಳವಾದ ತಲೆಗೂದಲುಳ್ಳವರು ಪ್ರಿಯಭಾಷಿಗಳು, ಬಾಣಗಳಿಂದ ತಾಡಿತರಾಗಿ ಘೋರ ರೂಪಗಳಿಂದ ಭಯ ಉಂಟುಮಾಡುವವರು. ಇಂಥ ಪದಾತಿಗಳು ಪಾಂಡವರ ದಳದಲ್ಲಿದ್ದರು.
ಅಥಾಪರೇ ಪುನಃ ಶೂರಾಶ್ಚೇದಿಪಾಂಚಾಲಕೇಕಯಾಃ |
ಕಾರೂಶಾಃ ಕೋಸಲಾ ವಂಗಾ ಮಾಗಧಾಶ್ಚಾಪಿ ದುದ್ರುವುಃ ॥21॥
ಇವರು ಮಾತ್ರವಲ್ಲದೆ ಮತ್ತೆ ಬೇರೆ ವೀರರು ಚೇದಿ ಪಾಂಚಾಲ ಕೇಕಯ ಕರೂಶ ಕೋಸಲ ವಂಗ ಮಗಧ ದೇಶಗಳವರು ಕೂಡ ನಮ್ಮ ಸೈನ್ಯದ ಮೇಲೆ ಏರಿಬಂದರು.
ತೇಷಾಂ ರಥಾಶ್ಚ ನಾಗಾಶ್ಚ ಪ್ರವರಾಶ್ಚಾಪಿ ಪತ್ತಯಃ |
ನಾನಾವಾದ್ಯಧರೈರ್ಹೃಷ್ಟಾ ನೃತ್ಯಂತಿ ಚ ಹಸಂತಿ ಚ ॥22॥
ಅವರ ಶ್ರೇಷ್ಠ ರಥಿಕರು ಗಜಾರೋಹಿಗಳು ಪದಾತಿಗಳು ಕೂಡ ಬಂದರು. ನಾನಾ ವಾದ್ಯಧಾರಿಗಳೊಂದಿಗೆ ಹರ್ಷದಿಂದ ಕುಣಿಯುತ್ತ ನಗುತ್ತ ಬಂದರು.
ತಸ್ಯ ಸೈನ್ಯಸ್ಯ ಮಹತೋ ಮಹಾಮಾತ್ರಶತೈರ್ವೃತಃ |
ಮಧ್ಯೇ ವೃಕೋದರೋಽಭ್ಯಾಯಾನ್ನಾಗಪ್ರವರ ಧೂರ್ಗತಃ ॥23॥
ಆ ಮಹಾಸೈನ್ಯದ ಮಧ್ಯದಲ್ಲಿ ನೂರಾರು ಮಾವಟಿಗರಿಂದ ಪರಿವೃತನಾಗಿ ದೊಡ್ಡ ಆನೆಯ ಹೆಗಲ ಮೇಲೆ ಕುಳಿತು ಭೀಮಸೇನನು ಬಂದ.
ಸ ನಾಗಪ್ರವರೋ ಹ್ಯುಗ್ರೋ ವಿಧಿವತ್ ಕಲ್ಪಿತೋ ಬಭೌ |
ಉದಯಾಗ್ರ್ಯದ್ರಿಭವನಂ ಯಥಾಽಭ್ಯುದಿತಭಾಸ್ಕರಮ್ ॥24॥

ಶತ್ರುಗಳಿಗೆ ಉಗ್ರವಾದ ಶ್ರೇಷ್ಠವಾದ ಆ ಆನೆ ವಿಧ್ಯುಕ್ತವಾಗಿ ಯುದ್ಧಕ್ಕೆ ಅಣಿಯಾಗಿ ಶೋಭಿಸುತ್ತಿತ್ತು. ಭೀಮಸೇನ ಅದರ ಮೇಲೆ ಕುಳಿತಿದ್ದರಿಂದ ಉದಿಸುವ ಸೂರ್ಯನಿಂದ ಅಲಂಕೃತವಾದ ಶ್ರೇಷ್ಠವಾದ ಉದಯಾಚಲವೆಂಬ ಉಚ್ಛ್ರಭವನದಂತೆ ಶೋಭಿಸಿತು.
ತಸ್ಯಾಯಸಂ ವರ್ಮವರಂ ವರರತ್ನವಿಭೂಷಿತಮ್ |
ತಾರೋದ್ಭಾಸಸ್ಯ ನಭಸಃ ಶಾರದಸ್ಯ ಸಮಂ ತ್ವಿಷಾ ॥25॥
ಆ ಆನೆಯ ಲೋಹಮಯವಾದ ಕವಚವು ಶ್ರೇಷ್ಠ ರತ್ನಗಳಿಂದ ಅಲಂಕೃತವಾಗಿದ್ದು ಅದು ಶರತ್ಕಾಲದ ರಾತ್ರಿಯ ಆಕಾಶವು ನಕ್ಷತ್ರಗಳಿಂದ ಶೋಭಿಸುವಂತೆ ಶೋಭಿಸಿತ್ತು.
ಸ ತೋಮರಪ್ರಾಸಕರಃ ಚಾರುಮೌಳಿಃ ಸ್ವಲಂಕೃತಃ |
ಶರನ್ಮಧ್ಯಂದಿನಾರ್ಕಾಭಸ್ತೇಜಸಾ ಪ್ರಾದಹದ್ ರಿಪೂನ್ ॥26॥
ಭೀಮಸೇನ ಸುಂದರವಾದ ಕಿರೀಟ ಧರಿಸಿ ಆಭರಣಗಳಿಂದ ಅಲಂಕೃತನಾಗಿ ಕೈಯಲ್ಲಿ ಈಟಿ ಮತ್ತು ಕೊಂತಗಳನ್ನು ಹಿಡಿದು ಶರತ್ಕಾಲದ ಮಧ್ಯಾಹ್ನ ಸೂರ್ಯನಂತೆ ಬೆಳಗಿ ಶತ್ರುಗಳನ್ನು ದಹಿಸತೊಡಗಿದ.
ತಂ ದೃಷ್ಟ್ವಾ ದ್ವಿರದಂ ದೂರಾತ್ ಕ್ಷೇಮಧೂರ್ತಿಃ ಸ್ಥಿತೋ ದ್ವಿಪೇ |
ಆಹ್ವಯಾನೋಽಭಿದುದ್ರಾವ ಪ್ರಹಸನ್ ಪೃತನಾಮುಖೇ ॥27॥
ಆ ಆನೆಯನ್ನು ಕ್ಷೇಮಧೂರ್ತಿ ದೂರದಿಂದ ಕಂಡ. ಅವನೂ ಆನೆಯ ಮೇಲೇರಿ ಕುಳಿತಿದ್ದ. ಅವನು ಸೈನ್ಯದ ಮುಂಭಾಗಕ್ಕೆ ಧಾವಿಸಿ ಬಂದು ಅಟ್ಟಹಾಸದಿಂದ ಭೀಮನನ್ನು ಆಹ್ವಾನಿಸಿದ.
ತಯೋಃ ಸಮಭವದ್ ಯುದ್ಧಂ ದ್ವಿಪಯೋರುಗ್ರರೂಪಯೋಃ |
ಯದೃಚ್ಛಯಾ ದ್ರುಮವತೋರ್ಮಹಾಪರ್ವತಯೋರಿವ ॥28॥
ಅವರಿಬ್ಬರ ಆ ಉಗ್ರ ಆನೆಗಳಿಗೆ ಹೋರಾಟ ನಡೆಯಿತು, ವೃಕ್ಷಯುಕ್ತವಾದ ಎರಡು ಬೆಟ್ಟಗಳಿಗೇ ದೈವಾತ್ ಹೋರಾಟ ನಡೆದಂತೇ ಅದು ಅದ್ಭುತವಾಗಿತ್ತು.
ಸಂಸಕ್ತನಾಗೌ ತೌ ವೀರೌ ತೋಮರೈರಿತರೇತರಮ್ |
ಬಲವತ್ ಸೂರ್ಯರಶ್ಮ್ಯಾಭೈರ್ಭಿತ್ತ್ವಾ ಭಿತ್ತ್ವಾ ವಿನೇದತುಃ ॥29॥
ಅವರ ಆನೆಗಳು ಪರಸ್ಪರ ಹೋರಾಡುತ್ತಿದ್ದಂತೆಯೇ ಆ ವೀರರೂ ಕೂಡ ಪರಸ್ಪರವಾಗಿ ಬೆಳಗುವ ಈಟಿಗಳಿಂದ ಬಲವಾಗಿ ತಿವಿದು ತಿವಿದು ಗರ್ಜನೆ ಮಾಡಿದರು.
ವ್ಯತಿಸೃತ್ಯ ಚ ನಾಗಾಭ್ಯಾಂ ಮಂಡಲಾನಿ ವಿಚೇರತುಃ |
ಪ್ರಗೃಹ್ಯ ಚೋಭೌ ಧನುಷೀ ಜಘ್ನತುರ್ವೈ ಪರಸ್ಪರಮ್ ॥30॥
ಬಳಿಕ ಇಬ್ಬರೂ ಆನೆಗಳನ್ನು ಹಿಂದೆ ಸರಿಯುವಂತೆ ಮಾಡಿ ಮಂಡಲಾಕಾರ ವಾಗಿ ತಿರುಗಿದರು. ಇಬ್ಬರೂ ಬಿಲ್ಲುಗಳನ್ನೆತ್ತಿಕೊಂಡು ಪರಸ್ಪರ ಪ್ರಹಾರ ಮಾಡಿದರು.
ಕ್ಷ್ವೇಳಿತಾಸ್ಫೋಟಿತರವೈಃ ಬಾಣಶಬ್ದೈಶ್ಚ ಸರ್ವಶಃ |
ತೌ ಜನಾನ್ ಹರ್ಷಯಂತೌ ಚ ಸಿಂಹನಾದಂ ಪ್ರಚಕ್ರತುಃ ॥31॥
ಗರ್ಜನೆ, ಭುಜ ತಟ್ಟಿಕೊಳ್ಳುವುದು, ಬಾಣಪ್ರಯೋಗ ಇವುಗಳ ಧ್ವನಿಯಿಂದ ಸಮಸ್ತ ಯೋಧರಿಗೂ ಹರ್ಷಉತ್ಸಾಹಗಳನ್ನುಂಟು ಮಾಡುತ್ತ ಸಿಂಹನಾದ ಗೈದರು.
ಸಮುದ್ಯತಕರಾಭ್ಯಾಂ ತೌ ದ್ವಿಪಾಭ್ಯಾಂ ಕೃತಿನಾವುಭೌ |
ವಾತೋದ್ಧೂತಪತಾಕಾಭ್ಯಾಂ ಯುಯುಧಾತೇ ಮಹಾಬಲೌ ॥32॥
ಗಾಳಿಯಿಂದ ಪರಪರನೆ ಶಬ್ದಮಾಡಿ ಹಾರಾಡುತ್ತಿದ್ದ ಪತಾಕೆಗಳಿಂದ ಕೂಡಿದ ಆ ಆನೆಗಳು ಸೊಂಡಿಲುಗಳನ್ನು ಮೇಲೆತ್ತಿಕೊಂಡಿದ್ದುವು. ಆ ಆನೆಗಳ ಮೂಲಕ ಮಹಾಬಲಿಷ್ಠರಾದ ಇಬ್ಬರೂ ವೀರರು ಯುದ್ಧ ಮಾಡಿದರು.
ತಾವನ್ಯೋನ್ಯಸ್ಯ ಧನುಷೀ ಪುನಶ್ಛಿತ್ತ್ವಾ ವಿನೇದತುಃ |
ಶಕ್ತಿತೋಮರವರ್ಷೇಣ ಪ್ರಾವೃಣ್ಮೇಘಾವಿವಾಂಬುಧಿಃ ॥33॥
ಮಳೆಗಾಲದ ಮೋಡಗಳು ನೀರಿನ ಮಳೆಗರೆಯುವಂತೆ ಇಬ್ಬರು ವೀರರು ಪರಸ್ಪರ ಧನುಸ್ಸುಗಳನ್ನು ಪುನಃಪುನಃ ಕಡಿದು ಶಕ್ತ್ಯಾಯುಧ ಈಟಿಗಳ ಮಳೆಗರೆದು ಗುಡುಗಿದರು.
ಕ್ಷೇಮಧೂರ್ತಿಸ್ತದಾ ಭೀಮಂ ತೋಮರೇಣ ಸ್ತನಾಂತರೇ |
ನಿರ್ಬಿಭೇದಾಶು ವೇಗೇನ ಷಡ್ಭಿಶ್ಚಾಪ್ಯಪರೈರ್ನದನ್ ॥34॥
ಕ್ಷೇಮಧೂರ್ತಿ ಆಗ ಭೀಮನ ಎದೆಗೆ ಈಟಿಯಿಂದ ಹೊಡೆದು ಬೇರೆ ಆರು ಈಟಿಗಳಿಂದಲೂ ವೇಗವಾಗಿ ಹೊಡೆಯುತ್ತ ಗರ್ಜಿಸಿದ.
ಸ ಭೀಮಸೇನಃ ಶುಶುಭೇ ತೋಮರೈರಂಗಸಂಶ್ರಿತೈಃ |
ಕ್ರೋಧದೀಪ್ತವಪುರ್ಮೇಘೈಃ ಸಪ್ತಸಪ್ತಿರಿವಾಂಶುಮಾನ್ ॥35॥
ಭೀಮಸೇನನ ಮೈಗೆ ಆ ಎಲ್ಲ ಈಟಿಗಳು ಚುಚ್ಚಿದರೂ ಕ್ರೋಧದಿಂದ ಉರಿವ ಅವನು ಮೇಘಾವೃತನಾದ ಏಳು ಅಶ್ವಗಳಿಂದ ಹೊಳೆವ ಸೂರ್ಯನಂತೆ ಶೋಭಿಸಿದ.
ತತೋ ಭಾಸ್ಕರರಶ್ಮ್ಯಾಭಮಂಜೋಗತಿಮಯಸ್ಮಯಮ್ |
ಸಸರ್ಜ ತೋಮರಂ ಭೀಮಃ ಪ್ರತ್ಯಮಿತ್ರಾಯ ಯತ್ನವಾನ್ ॥36॥
ಆಗ ಭೀಮಸೇನನು ಲೋಹಮಯವಾದ ಸೂರ್ಯಕಿರಣದಂತೆ ಹೊಳೆವ ವೇಗವಾದ ಗತಿಯುಳ್ಳ ಈಟಿಯನ್ನು ಶತ್ರುವಿಗೆ ಬಲವಾಗಿ ಎಸೆದ.
ತತಃ ಕುಲೂತಾಧಿಪತಿಶ್ಚಾಪಮಾಯಮ್ಯ ಸಾಯಕೈಃ |

ದಶಭಿಸ್ತೋಮರಂ ಛಿತ್ತ್ವಾ ಷಷ್ಟ್ಯಾ ವಿವ್ಯಾಧ ಪಾಂಡವಮ್ ॥37॥
ಅದಕ್ಕೆ ಕುಲೂತಾಧಿಪತಿಯಾದ ಕ್ಷೇಮಧೂರ್ತಿ ಬಿಲ್ಲಿನ ಹಗ್ಗವನ್ನೆಳೆದು ಹತ್ತು ಬಾಣಗಳಿಂದ ಈಟಿಯನ್ನು ತುಂಡರಿಸಿ ಅರವತ್ತು ಬಾಣಗಳಿಂದ ಭೀಮನನ್ನು ಪ್ರಹರಿಸಿದ.
ಅಥ ಕಾರ್ಮುಕಮಾದಾಯ ಮಹಾಜಲದನಿಃಸ್ವನಮ್ ।
ರಿಪೋರಭ್ಯರ್ದಯನ್ನಾಗಮುನ್ನದನ್ ಪಾಂಡವಃ ಶರೈಃ ॥38॥
ಭೀಮ ದೊಡ್ಡ ಗುಡುಗಿನ ಧ್ವನಿ ಮಾಡುವ ಬಿಲ್ಲನ್ನೆತ್ತಿಕೊಂಡು ಗರ್ಜಿಸುತ್ತ ಶತ್ರುವಿನ ಆನೆಯನ್ನು ಬಾಣಗಳಿಂದ ಪ್ರಹರಿಸಿದ.
ಸ ಶರಾಭ್ಯರ್ದಿತೋ ನಾಗೋ ಭೀಮಸೇನೇನ ಸಂಯುಗೇ ।
ನಿಗೃಹ್ಯಮಾಣೋ ನಾತಿಷ್ಠದ್ ವಾತಧ್ವಸ್ತ ಇವಾಂಬುದಃ ॥39॥
ಭೀಮಸೇನನಿಂದ ರಣರಂಗದಲ್ಲಿ ಬಾಣದ ಹೊಡೆತಕ್ಕೆ ಸಿಲುಕಿದ ಆನೆ ಎಷ್ಟು ತಡೆದರೂ ನಿಲ್ಲದೆ ಬಿರುಗಾಳಿಗೆ ಸಿಲುಕಿದ ಮೋಡದಂತೆ ಓಡಿತು.
ತಮಭ್ಯಧಾವದ್ ದ್ವಿರದಂ ಭೀಮಸೇನಸ್ಯ ನಾಗರಾಟ್ ।
ಮಹಾವಾತೇರಿತಂ ಮೇಘಂ ವಾತೋದ್ಧೂತ ಇವಾಂಬುದಃ ॥40॥
ಆ ಆನೆಯನ್ನು ಭೀಮಸೇನನ ಆನೆ ಬಿರುಗಾಳಿಗೆ ಸಿಲುಕಿದ ಮೋಡವನ್ನು ಬಿರುಗಾಳಿಯಿಂದ ಹಾರುವ ಇನ್ನೊಂದು ಮೋಡದಂತೆ ಬೆನ್ನಟ್ಟಿತು.
ಸ ನಿವರ್ತ್ಯಾತ್ಮನೋ ನಾಗಂ ಕ್ಷೇಮಧೂರ್ತಿಃ ಪ್ರಯತ್ನತಃ ।
ವಿವ್ಯಾಧಾಭಿದ್ರುತಂ ಬಾಣೈರ್ಭೀಮಸೇನಂ ಸಕುಂಜರಮ್ ॥41॥
ಆ ಆನೆಯನ್ನು ಕ್ಷೇಮಧೂರ್ತಿ ಹೇಗೋ ಪ್ರಯತ್ನದಿಂದ ಹಿಂತಿರುಗಿಸಿ, ತನ್ನನ್ನು ಬೆನ್ನಟ್ಟಿ ಬರುತ್ತಿದ್ದ ಭೀಮಸೇನನನ್ನೂ ಅವನ ಆನೆಯನ್ನೂ ಬಾಣಗಳಿಂದ ಹೊಡೆದ.
ತತಃ ಸಾಧುವಿಸೃಷ್ಟೇನ ಕ್ಷುರೇಣಾನತಪರ್ವಣಾ ।
ಛಿತ್ತ್ವಾ ಶರಾಸನಂ ಶತ್ರೋರ್ನಾಗಂ ಚಾಪಿ ಪ್ರಮರ್ದಯತ್ ॥42॥
ಆಗ ಭೀಮಸೇನ ಡೊಂಕುಗಿಣ್ಣಿನ ಬಾಣವನ್ನು ಸರಿಯಾಗಿ ಎಸೆದು ಶತ್ರುವಿನ ಬಿಲ್ಲನ್ನು ಕಡಿದು ಆನೆಯನ್ನೂ ಹೊಡೆದ.
ತತಃ ಕ್ರುದ್ಧೋ ರಣೇ ಭೀಮಂ ಕ್ಷೇಮಧೂರ್ತಿಃ ಪರಾಭಿನತ್ ।
ಜಘಾನ ತಸ್ಯ ದ್ವಿರದಂ ನಾರಾಚೈಃ ಸರ್ವಮರ್ಮಸು ॥43॥
ಆಗ ಕ್ರುದ್ಧನಾದ ಕ್ಷೇಮಧೂರ್ತಿ ಬಾಣಗಳಿಂದ ಭೀಮನನ್ನು ಹೊಡೆದ. ಅವನ ಆನೆಯನ್ನು ಎಲ್ಲ ಮರ್ಮಸ್ಥಾನಗಳಲ್ಲಿಯೂ ಹೊಡೆದ.
ತತಃ ಪಪಾತ ನಾಗೇಂದ್ರೋ ಭೀಮಸೇನಸ್ಯ ಮಾರಿಷ ।
ಪುರಾ ನಾಗಸ್ಯ ಪತನಾತ್ ಸೋಽವಪ್ಲುತ್ಯ ಸ್ಥಿತೋ ಮಹೀಮ್ ॥44॥
ರಾಜನೆ, ಆಗ ಭೀಮಸೇನನ ಮದ್ದಾನೆ ನೆಲಕ್ಕೆ ಉರುಳಿತು. ಆನೆ ಬೀಳುವುದರೊಳಗಾಗಿ ಭೀಮ ಕೆಳಗೆ ನೆಲಕ್ಕೆ ಹಾರಿ ನಿಂತ.
ಭೀಮಸೇನೋಽಪಿ ತನ್ನಾಗಂ ಗದಯಾ ಸಮಪೋಥಯತ್ ।
ತಸ್ಮಾತ್ ಪ್ರಮಥಿತಾನ್ನಾಗಾತ್ ಕ್ಷೇಮಧೂರ್ತಿರವಪ್ಲುತಃ ॥45॥
ಭೀಮನೂ ಕ್ಷೇಮಧೂರ್ತಿಯ ಆನೆಯನ್ನು ಗದೆಯಿಂದ ಚೆನ್ನಾಗಿ ಹೊಡೆದ. ಆ ಕ್ಷೇಮಧೂರ್ತಿಯೂ ಆನೆಯಿಂದ ಕೆಳಗೆ ಹಾರಿದ.
ಉದ್ವೃತ್ಯ ಖಡ್ಗಂ ನಿಶಿತಮಭ್ಯಧಾವತ್ ಸ ಪಾಂಡವಮ್ ।
ಉದ್ಯತಾಸಿಮುಪಾಯಾಂತಂ ಗದಯಾಽಹನ್ ವೃಕೋದರಃ ॥46॥
ಕ್ಷೇಮಧೂರ್ತಿ ಹರಿತವಾದ ಖಡ್ಗವನ್ನು ಎತ್ತಿ ಭೀಮನ ಮುಂದೆ ನುಗ್ಗಿದ. ಖಡ್ಗಹಿರಿದು ಆತ ಸಮೀಪಿಸುತ್ತಿದ್ದಂತೆ ಭೀಮ ಅವನನ್ನು ಗದೆಯಿಂದ ಹೊಡೆದ.
ಸ ಪಪಾತ ಹತಃ ಸಾಸಿರ್ವ್ಯಸುಸ್ತಮಭಿತೋ ದ್ವಿಪಮ್ ।
ವಜ್ರಪ್ರರುಗ್ಣಮಚಲಂ ಸಿಂಹೋ ವಜ್ರಹತೋ ಯಥಾ ॥47॥
ಆ ಹೊಡೆತಕ್ಕೆ ಕ್ಷೇಮಧೂರ್ತಿ ಕೈಯಲ್ಲಿ ಖಡ್ಗವಿದ್ದಂತೆಯೇ ಆನೆಯ ಇದಿರಿನಲ್ಲಿ ವಜ್ರಾಯುಧದಿಂದ ಪೀಡಿತವಾದ ಪರ್ವತದ ಮುಂದೆ ವಜ್ರಾಘಾತ ದಿಂದ ಸತ್ತ ಸಿಂಹದಂತೆ ಸತ್ತುಬಿದ್ದ.
ತಂ ಹತಂ ನೃಪತಿಂ ದೃಷ್ಟ್ವಾ ಕರೂಶಾನಾಂ ಯಶಸ್ಕರಮ್ ।
ಪ್ರಾದ್ರವದ್ ವ್ಯಥಿತಾ ಸೇನಾ ತ್ವದೀಯಾ ಭರತರ್ಷಭ ॥48॥
ರಾಜನೆ, ಕರೂಶ ದೇಶಕ್ಕೆ ಕೀರ್ತಿ ತಂದಿದ್ದ ಕ್ಷೇಮಧೂರ್ತಿ ಸತ್ತುಬಿದ್ದುದನ್ನು ಕಂಡು ವ್ಯಥೆಗೊಂಡ ನಿನ್ನ ಸೈನ್ಯ ಪಲಾಯನ ಮಾಡಿತು.
ಹಿಂದೆ (ದ್ರೋಣ107.6) ಬೃಹತ್ಕ್ಷತ್ರನಿಂದ, ಮುಂದೆ (ಶಲ್ಯ21.8) ಸಾತ್ಯಕಿಯಿಂದ ಹತರಾಗುವ ಇನ್ನಿಬ್ಬರು ಕ್ಷೇಮಧೂರ್ತಿಗಳ ಉಲ್ಲೇಖಗಳಿವೆ.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ದ್ವಾದಶೋಽಧ್ಯಾಯಃ ॥12॥

ಮಹಾಭಾರತತಾತ್ಪರ್ಯನಿರ್ಣಯ
ವಿಂದಾನುವಿಂದಾವಥ ಕೈಕಯೌ ರಣೇ
ಸಮಾಸದತ್ ಸಾತ್ಯಕಿರುಗ್ರವಿಕ್ರಮಃ ।

ತಯೋರಮುಷ್ಯಾಭವದುಗ್ರವೈಶಸಂ
ಪ್ರವರ್ಷತೋರುತ್ತಮಸಾಯಕಾನ್ ಬಹೂನ್ ॥17॥
ಕೇಕಯ ದೇಶದ ವಿಂದ ಅನುವಿಂದರನ್ನು ಯುದ್ಧದಲ್ಲಿ ಉಗ್ರ ಪರಾಕ್ರಮಿ ಸಾತ್ಯಕಿ ಇದಿರಿಸಿದ. ಅವರಿಗೂ ಸಾತ್ಯಕಿಗೂ ಭಯಂಕರ ಯುದ್ಧ ನಡೆಯಿತು. ಅವರು ಒಳ್ಳೆಯ ಬಹಳ ಬಾಣಗಳನ್ನು ಮಳೆಗರೆದರು.
ತಾಭ್ಯಾಂ ನಿರುದ್ಧಃ ಸಹಸಾ ಜಹಾರ
ತತ್ರಾನುವಿಂದಸ್ಯ ಶಿರೋಽಥ ವಿಂದಃ।
ಯುಯೋಧ ಶೈನೇಯಮಥಾರಥಾವುಭೌ
ಪರಸ್ಪರಂ ಚಕ್ರತುರುತ್ತಮಾಹವೇ ॥18॥
ವಿಂದ ಅನುವಿಂದರಿಂದ ತಡೆಯಲ್ಪಟ್ಟ ಸಾತ್ಯಕಿ ತಕ್ಷಣವೆ ಅನುವಿಂದನ ತಲೆಯನ್ನು ಕತ್ತರಿಸಿದ. ಬಳಿಕ ವಿಂದ ಸಾತ್ಯಕಿಯೊಡನೆ ಹೋರಾಡಿದ. ಉತ್ತಮವಾದ ಯುದ್ಧದಲ್ಲಿ ಅವರು ಒಬ್ಬರನ್ನೊಬ್ಬರು ವಿರಥರನ್ನಾಗಿ ಮಾಡಿದರು.
ತತಶ್ಚ ಚರ್ಮಾಸಿಧರೌ ಪ್ರಚೇರತುಃ
ಶ್ಯೇನೌ ಯಥಾಕಾಶತಲೇ ಕೃತಶ್ರಮೌ।
ನಿಕೃತ್ಯ ಚಾನ್ಯೋನ್ಯಮುಭೌ ಚ ಚರ್ಮಣೀ
ವರಾಸಿಪಾಣೀ ಯುಗಪತ್ ಸಮೀಯತುಃ ॥19॥
ಒಳ್ಳೆಯ ಶಸತ್ರಭ್ಯಾಸ ಮಾಡಿದ್ದ ವಿಂದ ಸಾತ್ಯಕಿಗಳು ಕತ್ತಿ ಗುರಾಣಿ ಹಿಡಿದು ಆಕಾಶದಲ್ಲಿ ಗಿಡುಗಗಳು ಹೇಗೋ ಹಾಗೆ ಸಂಚರಿಸಿದರು. ಇಬ್ಬರೂ ಪರಸ್ಪರ ಗುರಾಣಿಗಳನ್ನು ತುಂಡರಿಸಿಕೊಂಡು ಉತ್ತಮ ಖಡ್ಗವನ್ನು ಕೈಯಲ್ಲಿ ಹಿಡಿದು ಒಮ್ಮೆಲೆ ಮುಂದೆ ಬಂದರು.
ತತ್ರಾಪಹಸ್ತೇನ ಶಿರಃ ಸಕುಂಡಲಂ
ಜಹಾರ ವಿಂದಸ್ಯ ಮೃಧೇ ಸ ಸಾತ್ಯಕಿಃ।
ನಿಹತ್ಯ ತೌ ಬಂಧುಜನೈಃ ಸುಪೂಜಿತೋ
ಜಗಾಮ ಶತ್ರೂನಪರಾನ್ ಪ್ರಕಂಪಯನ್ ॥20॥
ಸಾತ್ಯಕಿ ಯುದ್ಧದಲ್ಲಿ ವಿಂದನ ಕುಂಡಲಯುಕ್ತವಾದ ತಲೆಯನ್ನು ಅಂಗೈಯ ಪಾರ್ಶ್ವದಿಂದಲೆ ಹಾರಿಸಿದ. ಹೀಗೆ ವಿಂದ ಅನುವಿಂದ ಇಬ್ಬರನ್ನೂ ಕೊಂದು ಸಾತ್ಯಕಿ ಬಂಧುಜನರಿಂದ ಹೊಗಳಿಸಿಕೊಂಡು ಇತರ ಶತ್ರುಗಳನ್ನು ನಡುಗಿಸುತ್ತ ಮುಂದೆ ನಡೆದ.

ಹದಿಮೂರನೆಯ ಅಧ್ಯಾಯ
ಸಾತ್ಯಕಿಯಿಂದ ಕೇಕಯರ ವಿಂದಾನುವಿಂದರ ವಧ
ಸಂಜಯಃ
ತತಃ ಕರ್ಣೋ ಮಹೇಷ್ವಾಸಃ ಪಾಂಡವಾನಾಮನೀಕಿನೀಮ್।
ಜಘಾನ ಸಮರೇ ಶೂರಃ ಶರೈಃ ಸನ್ನತಪರ್ವಭಿಃ ॥1॥
ಸಂಜಯನು ನುಡಿದ– ಬಳಿಕ ಮಹಾಬಿಲ್ಗಾರ ಶೂರಕರ್ಣ ಯುದ್ಧದಲ್ಲಿ ಪಾಂಡವಸೈನ್ಯವನ್ನು ಡೊಂಕುಗಿಣ್ಣಿನ ಬಾಣಗಳಿಂದ ಪ್ರಹರಿಸಿದ.
ತಥೈವ ಪಾಂಡವಾ ರಾಜನ್ ತವ ಪುತ್ರಸ್ಯ ವಾಹಿನೀಮ್।
ಕರ್ಣಸ್ಯ ಪಶ್ಯತೋ ರಾಜನ್ ನಿಜಘ್ನುಸ್ತೇ ಮಹಾರಥಾಃ ॥2॥
ಹಾಗೆಯೆ, ರಾಜನೆ, ಮಹಾರಥರಾದ ಪಾಂಡವರೂ ಕೂಡ ನಿನ್ನ ಸೈನ್ಯವನ್ನು ಕರ್ಣನು ನೋಡುತ್ತಿದ್ದಂತೆಯೇ ಸಂಹರಿಸಿದರು.
ಕರ್ಣೋಽಪಿ ಸುಮಹಾಬಾಹುರವಿಧ್ಯತ್ ಪಾಂಡವೀಂ ಚಮೂಮ್।
ನಾರಾಚೈರರ್ಕರಶ್ಮ್ಯಾಭೈಃ ಕರ್ಮಾರಪರಿಮಾರ್ಜಿತೈಃ ॥3॥
ಕರ್ಣನೂ ಕೂಡ ಮಹಾಬಾಹು. ಕಮ್ಮಾರರು ಚೆನ್ನಾಗಿ ಸಾಣೆಹಿಡಿದಿರುವ, ಸೂರ್ಯಕಿರಣಗಳಂತೆ ಹೊಳೆಯುವ ಬಾಣಗಳಿಂದ ಪಾಂಡವಸೈನ್ಯವನ್ನು ಹೊಡೆದ.
ತತ್ರ ಭಾರತ ಕರ್ಣೇನ ನಾರಾಚೈಸ್ತಾಡಿತಾ ಗಜಾಃ।
ನೇದುಃ ಸೇದುಶ್ಚ ಮಮ್ಲುಶ್ಚ ಬಭ್ರಮುಶ್ಚ ದಿಶೋ ದಶ ॥4॥
ರಾಜನೆ, ಕರ್ಣನ ಬಾಣಗಳ ಹೊಡೆತಕ್ಕೆ ಪೀಡಿತವಾದ ಆನೆಗಳು ಕೂಗಿ ಕೊಂಡುವು. ಎದೆಗುಂದಿದವು, ಆಯಾಸಗೊಂಡು ಹತ್ತು ದಿಕ್ಕುಗಳಿಗೆ ಪಲಾಯನ ಮಾಡಿದುವು.
ವಧ್ಯಮಾನೇ ಬಲೇ ತಸ್ಮಿನ್ ಸೂತಪುತ್ರೇಣ ಮಾರಿಷ।
ನಕುಲೋಽಭ್ಯದ್ರವತ್ ತೂರ್ಣಂ ಸೂತಪುತ್ರಂ ಮಹಾರಥಮ್ ॥5॥
ಹೀಗೆ, ರಾಜನೆ, ಕರ್ಣನು ಪಾಂಡವಸೈನ್ಯವನ್ನು ವಧಿಸುವಾಗ ಮಹಾರಥ ನಾದ ಕರ್ಣನ ಕಡೆಗೆ ನಕುಲನು ವೇಗವಾಗಿ ನುಗ್ಗಿಬಂದ.
ಭೀಮಸೇನಸ್ತಥಾ ದ್ರೌಣಿಂ ಕುರ್ವಾಣಂ ಕರ್ಮ ದುಷ್ಕರಮ್।
ವಿಂದಾನುವಿಂದೌ ಕೈಕೇಯೌ ಸಾತ್ಯಕಿಃ ಸಮವಾರಯತ್ ॥6|
ಭೀಮಸೇನನು ಅಶ್ವತ್ಥಾಮನ ಕಡೆಗೆ ನುಗ್ಗಿಬಂದ. ಅಶ್ವತ್ಥಾಮ ಮಾಡುವ ಯುದ್ಧ ಇನ್ನೊಬ್ಬರಿಗೆ ದುಃಸಾಧ್ಯ. ಸಾತ್ಯಕಿಯು ಕೇಕಯದೇಶಾಧಿಪತಿಗಳಾದ ವಿಂದ ಮತ್ತು ಅನುವಿಂದರನ್ನು ಇದಿರಿಸಿದ.
ಹಿಂದೆ ದ್ರೋಣಪರ್ವದಲ್ಲಿ ಅರ್ಜುನನಿಂದ ಹತರಾದವರು ಅವಂತಿ ದೇಶಾಧಿಪತಿಗಳಾದ ವಿಂದ ಮತ್ತು ಅನುವಿಂದರು, ಬೇರೆ. ಮತ್ತು ದುರ್ಯೋಧನನ ತಮ್ಮಂದಿರು ಇವೇ ಹೆಸರಿನವರೂ ಬೇರೆ.

ಶ್ರುತಕರ್ಮಾಣಮಾಯಾಂತಂ ಚಿತ್ರಸೇನೋ ಮಹೀಪತಿಃ |
ಪ್ರತಿವಿಂಧ್ಯಸ್ತಥಾ ಚಿತ್ರಂ ಚಿತ್ರಕೇತನಕಾರ್ಮುಕಮ್ ॥7॥
ಅಭಿಸಾರ ದೇಶಾಧಿಪತಿಯಾದ ಚಿತ್ರಸೇನನು ಸಹದೇವಪುತ್ರನಾದ ಶ್ರುತ ಕರ್ಮನನ್ನು ಇದಿರಿಸಿದ. ಯುಧಿಷ್ಠಿರಪುತ್ರನಾದ ಪ್ರತಿವಿಂಧ್ಯ ಸುಂದರವಾದ ಧ್ವಜ ಧನುಸ್ಸುಳ್ಳ ಚಿತ್ರರಾಜನನ್ನು ಇದಿರಿಸಿದ.
ದುರ್ಯೋಧನಸ್ತು ರಾಜಾನಂ ಧರ್ಮಪುತ್ರಂ ಯುಧಿಷ್ಠಿರಮ್ |
ಸಂಶಪ್ತಕಗಣಾ ಹೃಷ್ಟಾ ಹ್ಯಭ್ಯಧಾವನ್ ಧನಂಜಯಮ್ ॥8॥
ದುರ್ಯೋಧನನು ಧರ್ಮಪುತ್ರ ರಾಜಾ ಯುಧಿಷ್ಠಿರನನ್ನು ಇದಿರಿಸಿದ. ಸಂಶಪ್ತಕಗಣದವರು ಉತ್ಸಾಹಗೊಂಡು ಅರ್ಜುನನ ಮುಂದೆ ನುಗ್ಗಿ ಬಂದರು.
ಧೃಷ್ಟದ್ಯುಮ್ನಃ ಕೃಪಂ ಪ್ರಾಯಾತ್ ತಸ್ಮಿನ್ ವೀರವರಕ್ಷಯೇ |
ಶಿಖಂಡೀ ಕೃತವರ್ಮಾಣಮಾಸಸಾದ ಮಹಾಬಲಃ ॥9॥
ಧೃಷ್ಟದ್ಯುಮ್ನನು ವೀರಶ್ರೇಷ್ಠರ ನಾಶಕ್ಕೆ ಕಾರಣವಾದ ಆ ಸಮರದಲ್ಲಿ ಕೃಪನನ್ನು ಇದಿರಿಸಿದ. ಮಹಾಬಲಿ ಶಿಖಂಡಿ ಕೃತವರ್ಮನನ್ನು ಇದಿರಿಸಿದ.
ಶ್ರುತಕೀರ್ತಿಸ್ತಥಾ ಶಲ್ಯಂ ಮಾದ್ರೀಪುತ್ರಃ ಸುತಂ ತವ |
ದುಃಶಾಸನಂ ಮಹಾರಾಜ ಸಹದೇವಃ ಪ್ರತಾಪವಾನ್ ॥10॥
ಅರ್ಜುನಪುತ್ರ ಶ್ರುತಕೀರ್ತಿಯು ಶಲ್ಯನನ್ನು ಇದಿರಿಸಿದ. ಮಹಾರಾಜ, ನಿನ್ನ ಮಗನಾದ ದುಃಶಾಸನನನ್ನು ಮಾದ್ರೀಪುತ್ರನಾದ ಪ್ರತಾಪಶಾಲಿ ಸಹದೇವ ಇದಿರಿಸಿದ.
ಕೈಕೇಯೌ ಸಾತ್ಯಕಿಂ ಯುದ್ಧೇ ಶರವರ್ಷೇಣ ಭಾಸ್ವತಾ |
ಸಾತ್ಯಕಿಃ ಕೇಕಯೌ ಚೈವ ಛಾದಯಾಮಾಸ ಸಾಯಕೈಃ ॥11॥
ಕೇಕಯರಾಜರಾದ ವಿಂದಾನುವಿಂದರು ಯುದ್ಧದಲ್ಲಿ ಸಾತ್ಯಕಿಯನ್ನು ಹೊಳೆಯುವ ಬಾಣಗಳ ಮಳೆಯಿಂದ ಮುಚ್ಚಿದರು. ಸಾತ್ಯಕಿಯು ಬಾಣಗಳಿಂದ ಕೇಕಯರನ್ನು ಮುಚ್ಚಿದ.
ತಾವೇನಂ ಭ್ರಾತರೌ ವೀರೌ ಯುಧಿ ವಿವ್ಯಧತುರ್ಭೃಶಮ್ |
ವಿಷಾಣಾಭ್ಯಾಂ ಯಥಾ ನಾಗೌ ಪ್ರತಿನಾಗಂ ಮಹಾವನೇ ॥12॥
ಮಹಾರಣ್ಯದಲ್ಲಿ ಎರಡು ಆನೆಗಳು ಎದುರಾಗಿ ಬಂದ ಒಂದು ಆನೆಯನ್ನು ದಂತಗಳಿಂದ ತಿವಿಯುವಂತೆ ವೀರರಾದ ವಿಂದಾನುವಿಂದಸೋದರರು ಯುದ್ಧದಲ್ಲಿ ಸಾತ್ಯಕಿಯನ್ನು ಬಹಳವಾಗಿ ಪ್ರಹರಿಸಿದರು.
ಶರಸಂಭಿನ್ನವರ್ಮಾಣೌ ತಾವುಭೌ ಭ್ರಾತರೌ ರಣೇ |
ಸಾತ್ಯಕಿಂ ಸತ್ಯಕರ್ಮಾಣಂ ರಣೇ ವಿವ್ಯಧತುರ್ಭೃಶಮ್ ॥13॥
ಯುದ್ಧದಲ್ಲಿ ಆ ವಿಂದಾನುವಿಂದ ಸೋದರರ ಕವಚಗಳು ಪುಡಿಯಾದುವು. ಅವರೂ ಕೂಡ ಅಮೋಘ ಕರ್ಮಶೀಲನಾದ ಸಾತ್ಯಕಿಯನ್ನು ಬಹಳವಾಗಿ ಗಾಯಗೊಳಿಸಿದರು.
ತೌ ಸಾತ್ಯಕಿರ್ಮಹಾರಾಜ ಪ್ರಹಸನ್ ಯುದ್ಧದುರ್ಮದಃ |
ಛಾದಯನ್ ಶರವರ್ಷೇಣ ವಾರಯಾಮಾಸ ಸರ್ವತಃ ॥14॥
ಮಹಾರಾಜ, ಯುದ್ಧದ ಗೀಳಿನವನಾದ ಸಾತ್ಯಕಿ ಅಟ್ಟಹಾಸಗೈದು ಆ ಸೋದರರನ್ನು ಎಲ್ಲೆಡೆ ಬಾಣಗಳ ಮಳೆಯಿಂದ ಮುಚ್ಚಿ ತಡೆದ.
ವಾರ್ಯಮಾಣೌ ತತಸ್ತೌ ತು ಶೈನೇಯಶರವೃಷ್ಟಿಭಿಃ |
ಶೈನೇಯಸ್ಯ ರಥಂ ತೂರ್ಣಂ ಛಾದಯಾಮಾಸತುಃ ಶರೈಃ ॥15॥
ಸಾತ್ಯಕಿಯ ಬಾಣದ ಮಳೆಗಳು ತಡೆಯುತ್ತಿದ್ದರೂ ಅವರು ಸಾತ್ಯಕಿಯ ರಥವನ್ನು ಬೇಗನೆ ಬಾಣಗಳಿಂದ ಮುಚ್ಚಿದರು.
ತಯೋಸ್ತು ಧನುಷೀ ಚಿತ್ರೇ ಛಿತ್ತಾತ್ವ ಶೌರಿರ್ಮಹಾಹವೇ |
ಅಥ ತೌ ಸಾಯಕೈಸ್ತೀಕ್ಷ್ಣೈಶ್ಛಾದಯಾಮಾಸ ಸಾತ್ವತಃ ॥16॥
ಯಾದವನಾದ ಸಾತ್ಯಕಿ ಮಹಾಯುದ್ಧದಲ್ಲಿ ವಿಂದಾನುವಿಂದರ ಸುಂದರವಾದ ಬಿಲ್ಲುಗಳನ್ನು ತುಂಡರಿಸಿ ತೀಕ್ಷ್ಣವಾದ ಬಾಣಗಳಿಂದ ಅವರನ್ನು ಮುಚ್ಚಿದ.
ಅಥಾನ್ಯೇ ಧನುಷೀ ಚಿತ್ರೇ ಪ್ರಗೃಹ್ಯಾಶು ಮಹಾಶರಾನ್ |
ಸಾತ್ಯಕಿಂ ಛಾದಯಂತೌ ತೌ ಚೇರತುರ್ಲಘು ಸುಷ್ಠು ಚ ॥17॥
ಆ ಸೋದರರು ಬಳಿಕ ಬೇಗನೆ ಸುಂದರವಾದ ಬೇರೆ ಬಿಲ್ಲುಗಳನ್ನೂ ದೊಡ್ಡ ಬಾಣಗಳನ್ನೂ ಎತ್ತಿಕೊಂಡು ಸಾತ್ಯಕಿಯನ್ನು ಮುಚ್ಚುತ್ತ ರಣರಂಗದಲ್ಲಿ ವೇಗವಾಗಿ ಚೆನ್ನಾಗಿ ಸಂಚರಿಸಿದರು.
ತಾಭ್ಯಾಂ ಮುಕ್ತಾ ಮಹಾಬಾಣಾಃ ಕಂಕಬರ್ಹಿಣವಾಸಸಃ |
ದ್ಯೋತಯಂತೋ ದಿಶಃ ಸರ್ವಾಃ ಸಂಪೇತುರ್ಹೇಮಭೂಷಣಾಃ ॥18॥
ಸೋದರರು ಬಿಟ್ಟ ಆ ದೊಡ್ಡ ಬಾಣಗಳು ರಣಹದ್ದಿನ ನವಿಲಿನ ಪುಕ್ಕಗಳಿಂದ ಕೂಡಿ ಬಂಗಾರದಿಂದ ಅಲಂಕೃತವಾಗಿದ್ದುವು. ಅವು ಎಲ್ಲ ದಿಕ್ಕುಗಳನ್ನೂ ಬೆಳಗುತ್ತ ಸಾತ್ಯಕಿಯ ಮೇಲೆ ಬಿದ್ದುವು.
ಬಾಣಾಂಧಕಾರಮಭವತ್ ತತೋ ರಾಜನ್ ಮಹಾಹವೇ |
ಅನ್ಯೋನ್ಯಸ್ಯ ತು ಚಾಪಾನಿ ಚಿಚ್ಛಿದುಸ್ತೇ ಮಹಾರಥಾಃ ॥19॥
ರಾಜನೆ, ಆ ಮಹಾಯುದ್ಧದಲ್ಲಿ ಬಾಣಗಳ ಮಳೆಯಿಂದ ಅಂಧಕಾರ ಕವಿದಾಗ ಮಹಾರಥರಾದ ಅವರು ಪರಸ್ಪರ ಬಿಲ್ಲುಗಳನ್ನು ಕಡಿದರು.

ತತಃ ಕ್ರುದ್ಧೋ ಮಹಾರಾಜ ಸಾತ್ಯಕಿರ್ಯುದ್ಧದುರ್ಮದಃ |
ಧನುರನ್ಯತ್ ಸಮಾದಾಯ ಸಜ್ಯಂ ಕೃತ್ವಾ ಮಹಾಬಲಃ ॥20॥
ಅನುಮೃಜ್ಯ ಚ ರಾಜೇಂದ್ರ ತದ್ಧನುರ್ಭಾರಸಾಧನಮ್ |
ಕ್ಷುರಪ್ರೇಣ ಸುತೀಕ್ಷ್ಣೇನ ಹ್ಯನುವಿಂದಶಿರೋಽಹರತ್ ॥21॥
ಮಹಾರಾಜ, ಯುದ್ಧದ ಹವ್ಯಾಸದವನಾದ ಮಹಾಬಲಿ ಸಾತ್ಯಕಿಯು ಕ್ರುದ್ಧನಾಗಿ ಬೇರೇ ಒಂದು ಬಿಲ್ಲನ್ನೆತ್ತಿಕೊಂಡ. ಬಲು ಕಾರ್ಯಸಮರ್ಥವಾದ ಆ ಬಿಲ್ಲನ್ನು ಕೈಯಿಂದ ಚೆನ್ನಾಗಿ ಸವರಿ, ಹೆದೆ ಏರಿಸಿ, ತೀಕ್ಷ್ಣವಾದ ಒಂದು ಬಾಣದಿಂದ ಅನುವಿಂದನ ಶಿರಚ್ಛೇದಗೈದ.
ತಚ್ಛಿರೋ ಹ್ಯಪತದ್ ಭೂಮೌ ಕುಂಡಲೋಪಚಿತಂ ಶುಭಮ್ |
ಶಂಬರಸ್ಯ ಶಿರೋ ಯದ್ವತ್ ನಿಹತಸ್ಯ ಮಹಾಮೃಧೇ ॥22॥
ಶೋಚಯತ್ ಕೇಕಯಾನ್ ಸರ್ವಾನ್ ಜಗಾಮಾಥ
ವಸುಂಧರಾಮ್ ॥23॥
ಕುಂಡಲಗಳಿಂದ ಅಲಂಕೃತವಾಗಿದ್ದ ಆ ಶಿರಸ್ಸು ಕೇಕಯ ದೇಶದವರೆಲ್ಲರನ್ನೂ ಶೋಕಪಡಿಸುತ್ತ ಮಹಾಯುದ್ಧದಲ್ಲಿ ಪ್ರದ್ಯುಮ್ನನಿಂದ ಹತನಾದ ಶಂಬರಾಸುರನ ಶಿರಸ್ಸಿನಂತೆ ನೆಲದ ಮೇಲೆ ಬಿದ್ದಿತು.
ತಂ ದೃಷ್ಟ್ವಾ ನಿಹತಂ ಶೂರಂ ಭ್ರಾತಾ ತಸ್ಯ ಮಹಾರಥಃ |
ಸಜ್ಯಮನ್ಯದ್ ಧನುಃ ಕೃತ್ವಾ ಶೈನೇಯಂ ಪ್ರತ್ಯವಾರಯತ್ ॥24॥
ಶೂರ ಅನುವಿಂದ ಹತನಾದುದನ್ನು ಕಂಡು ಮಹಾರಥನಾದ ಸೋದರ ವಿಂದನು ಇನ್ನೊಂದು ಬಿಲ್ಲಿಗೆ ಹೆದೆಯೇರಿಸಿ ಸಾತ್ಯಕಿಯನ್ನು ತಡೆದ.
ಸಹಸಾ ಸಾತ್ಯಕಿರ್ವಿದ್ಧಃ ಸ್ವರ್ಣಪುಂಖೈಃ ಶಿಲಾಶಿತೈಃ |
ನನಾದ ಬಲವನ್ನಾದಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥25॥
ಮಸೆಗಲ್ಲಿಗೆ ತಿಕ್ಕಿ ಹರಿತಗೊಳಿಸಿದ ಮತ್ತು ಚಿನ್ನದ ಪುಕ್ಕಗಳಿಂದ ಕೂಡಿದ ಬಾಣಗಳಿಂದ ಸಾತ್ಯಕಿ ಬಲವಾಗಿ ಹೊಡೆಸಿಕೊಂಡು, ದೊಡ್ಡ ಧ್ವನಿಯಿಂದ `ನಿಲ್ಲು, ನಿಲ್ಲೆಂ'ದು ಗರ್ಜಿಸಿದ.
ಸಾತ್ಯಕಿಂ ಚ ಪುನಸ್ತೂರ್ಣಂ ಕೇಕಯಾನಾಂ ಮಹಾರಥಃ |
ಶರೈರಗ್ನಿಶಿಖಾಕಾರೈಃ ಬಾಹ್ವೋರುರಸಿ ಚಾರ್ಪಯತ್ ॥26॥
ಆದರೂ ಮಹಾರಥನಾದ ವಿಂದನು ಪುನಃ ವೇಗವಾಗಿ ಬೆಂಕಿಯ ಜ್ವಾಲೆಯಂತಿರುವ ಬಾಣಗಳಿಂದ ಸಾತ್ಯಕಿಯನ್ನು ಎರಡು ತೋಳುಗಳಲ್ಲಿ ಮತ್ತು ಎದೆಯಲ್ಲಿ ಪ್ರಹಾರಮಾಡಿದ.
ಸ ಶರಾಹತಸರ್ವಾಂಗಃ ಸಾತ್ಯಕಿಃ ಸತ್ಯವಿಕ್ರಮಃ |
ರರಾಜ ಸಮರೇ ರಾಜನ್ ಸಪುಷ್ಪ ಇವ ಕಿಂಶುಕಃ ॥27॥
ಅಮೋಘ ಪರಾಕ್ರಮವುಳ್ಳ ಸಾತ್ಯಕಿಯು ಯುದ್ಧದಲ್ಲಿ ಬಾಣಗಳಿಂದ ಸರ್ವಾಂಗಗಳಲ್ಲಿ ಹೊಡೆಸಿಕೊಂಡು, ರಾಜನೆ, ಹೂಬಿಟ್ಟ ಮುತ್ತುಗದ ಮರದಂತೆ ಶೋಭಿಸಿದ.
ಸಾತ್ಯಕಿಃ ಸಮರೇ ವಿದ್ಧಃ ಕೈಕಯೇನ ಮಹಾತ್ಮನಾ |
ಕೈಕೇಯಂ ಪಂಚವಿಂಶತ್ಯಾ ವಿವ್ಯಾಧ ಪ್ರಹಸನ್ನಿವ ॥28॥
ಹೀಗೆ ಮಹಾತ್ಮಾ ವಿಂದನಿಂದ ಯುದ್ಧದಲ್ಲಿ ಹೊಡೆಸಿಕೊಂಡ ಸಾತ್ಯಕಿ ನಗುತ್ತ ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದ.
ತಾವನ್ಯೋನ್ಯಸ್ಯ ಧನುಷೀ ಸಂಛಿದ್ಯ ಸಮರೇ ಶುಭೇ |
ಹತ್ವಾ ಚ ಸಾರಥೀ ತೂರ್ಣಂ ಹಯಾಂಶ್ಚ ರಥಿನಾಂ ವರೌ ॥29॥
ವಿರಥಾವಸಿಯುದ್ಧಾಯ ಸಮಾಜಗ್ಮತುರಾಹವೇ |
ಶತಚಂದ್ರಚಿತೇ ಗೃಹ್ಯ ಚರ್ಮಣೀ ಸುಭುಜೌ ತು ತೌ ॥30॥
ವಿರೋಚೇತಾಂ ಮಹಾರಂಗೇ ನಿಸ್ತ್ರಿಂಶವರಧಾರಿಣೌ |
ಯಥಾ ದೈವಾಸುರೇ ಯುದ್ಧೇ ಬಲಶಕ್ರೌ ಮಹಾಬಲೌ ॥31॥
ಶ್ರೇಷ್ಠರಥಿಕರಾದ ಅವರಿಬ್ಬರೂ ಶುಭಕರವಾದ ಸಮರದಲ್ಲಿ ಪರಸ್ಪರ ಬಿಲ್ಲುಗಳನ್ನು ಕಡಿದು, ಸಾರಥಿಗಳನ್ನೂ ಕುದುರೆಗಳನ್ನೂ ಕೊಂದು, ರಥವಿಲ್ಲದವರಾಗಿ ರಣರಂಗದಲ್ಲಿ ಖಡ್ಗಯುದ್ಧಕ್ಕೆ ಜತೆಗೂಡಿದರು. ನೂರು ಚಂದ್ರ ಚಿಹ್ನೆಗಳಿಂದ ಕೂಡಿದ ಗುರಾಣಿ ಮತ್ತು ಶ್ರೇಷ್ಠವಾದ ಖಡ್ಗಗಳನ್ನು ಹಿಡಿದು ದೇವಾಸುರರ ಸಂಗ್ರಾಮದಲ್ಲಿ ಖಡ್ಗಯುದ್ಧಕ್ಕೆ ನಿಂತ ದೇವೇಂದ್ರ ಮತ್ತು ಬಲಾಸುರರಂತೆ ಕಂಗೊಳಿಸಿದರು.
ಮಂಡಲಾನಿ ತತಸ್ತೌ ತು ವಿಚರಂತೌ ಮಹಾರಣೇ |
ಅನ್ಯೋನ್ಯಮಸಿಭಿಸ್ತೂರ್ಣಂ ಸಮಾಜಘ್ನತುರಾಹವೇ ॥32॥
ರಣರಂಗದಲ್ಲಿ ಮಂಡಲಾಕಾರವಾಗಿ ಸಂಚರಿಸುತ್ತ ಮಹಾಯುದ್ಧದಲ್ಲಿ ಪರಸ್ಪರ ವೇಗವಾಗಿ ಖಡ್ಗಗಳಿಂದ ಹೊಡೆದರು.
ಅನ್ಯೋನ್ಯಸ್ಯ ವಧೇ ಚೈವ ಚಕ್ರತುರ್ಯತ್ನಮುತ್ತಮಮ್ |
ಕೈಕೇಯಸ್ಯ ತತಶ್ಚರ್ಮ ದ್ವಿಧಾ ಚಿಚ್ಛೇದ ಸಾತ್ಯಕಿಃ ॥33॥
ಸಾತ್ಯಕೇಶ್ಚ ತಥೈವಾಸೌ ಚರ್ಮ ಚಿಚ್ಛೇದ ಪಾರ್ಥಿವಃ ॥34॥
ಪರಸ್ಪರ ವಧಕ್ಕೆ ಒಳ್ಳೆಯ ಪ್ರಯತ್ನ ಮಾಡಿದರು. ಸಾತ್ಯಕಿ ಕೈಕೇಯನ ಗುರಾಣಿ ಯನ್ನು ಎರಡಾಗಿ ಕತ್ತರಿಸಿದ. ಕೈಕೇಯನೂ ಸಾತ್ಯಕಿಯ ಗುರಾಣಿಯನ್ನು ಹಾಗೇ ಎರಡಾಗಿ ಕತ್ತರಿಸಿದ.

ಶೈನೇಯಶ್ಚರ್ಮ ಛಿತ್ತ್ವಾ ತು ತಾರಾಗಣಶತೈಶ್ಚಿತಮ್ |
ಚಚಾರ ಮಂಡಲಾನ್ಯೇವ ಗತಪ್ರತ್ಯಾಗತಾನಿ ಚ ॥35॥
ನೂರಾರು ನಕ್ಷತ್ರ ಪುಂಜಗಳ ಚಿಹ್ನೆಯಿಂದ ಕೂಡಿದ ಗುರಾಣಿಯನ್ನು ಕತ್ತರಿಸಿ ಸಾತ್ಯಕಿಯು ಗತ ಪ್ರತ್ಯಾಗತ ಮಂಡಲವಾಗಿ ಸಂಚರಿಸಿದ.
ಚರಂತಂ ತಂ ಮಹಾರಂಗೇ ನಿಸ್ತ್ರಿಂಶವರಧಾರಿಣಮ್ |
ಅಪಹಸ್ತೇನ ಚಿಚ್ಛೇದ ಸಾತ್ಯಕಿಸ್ತ್ವರಯಾಽನ್ವಿತಃ ॥36॥
ದೊಡ್ಡ ಖಡ್ಗವನ್ನು ಹಿಡಿದು ಸಂಚರಿಸುತ್ತಿದ್ದ ವಿಂದನನ್ನು ಮಹಾರಣಭೂಮಿ ಯಲ್ಲಿ ಸಾತ್ಯಕಿಯು ವೇಗವಾಗಿ ತನ್ನ ಮುಂಗೈಯಿಂದಲೇ ಖಡ್ಗದಿಂದ ಸೀಳಿದ.
ಸವರ್ಮಾ ಕೇಕಯೋ ರಾಜನ್ ದ್ವಿಧಾ ಚ್ಛಿನ್ನೋ ಮಹಾಹವೇ |
ನಿಪಪಾತ ಮಹೇಷ್ವಾಸೋ ವಜ್ರನುನ್ನ ಇವಾಚಲಃ ॥37॥
ಮಹಾಯುದ್ಧದಲ್ಲಿ ರಾಜನೆ, ಸಾತ್ಯಕಿಯಿಂದ ಮಹಾಬಿಲ್ಗಾರನಾದ ವಿಂದನು ಕವಚಯುಕ್ತನಾಗೇ ವಜ್ರಾಯುಧದ ಏಟಿಗೆ ತುತ್ತಾದ ಪರ್ವತದಂತೆ ಎರಡಾಗಿ ಸೀಳಿ ನೆಲದ ಮೇಲೆ ಬಿದ್ದ.
ತಂ ನಿಹತ್ಯ ರಣೇ ಶೂರಃ ಶೈನೇಯೋ ರಥಸತ್ತಮಃ |
ಯುಧಾಮನ್ಯೋ ರಥಂ ತೂರ್ಣಮಾರುರೋಹ ಪರಂತಪಃ ॥38॥
ಮಹಾರಥಿಕನಾದ ಶತ್ರುನಾಶಕನಾದ ಶೂರ ಸಾತ್ಯಕಿ ಯುದ್ಧದಲ್ಲಿ ವಿಂದನನ್ನೂ ಕೊಂದು ಬೇಗನೆ ಯುಧಾಮನ್ಯುವಿನ ರಥವನ್ನು ಏರಿದ.
ತತೋಽನ್ಯಂ ರಥಮಾರುಹ್ಯ ವಿಧಿವತ್ ಕಲ್ಪಿತಂ ಪುನಃ |
ಕೈಕಯಾನಾಂ ಮಹತ್ ಸೈನ್ಯಂ ವ್ಯಧಮತ್ ಸಾತ್ಯಕಿಃ ಶರೈಃ ॥39॥
ಬಳಿಕ ಪುನಃ ವಿಧ್ಯುಕ್ತವಾಗಿ ಸಜ್ಜಾದ ಬೇರೆ ರಥವನ್ನು ಏರಿ ಸಾತ್ಯಕಿಯು ಬಾಣಗಳಿಂದ ಕೇಕಯರ ಮಹಾಸೈನ್ಯವನ್ನು ಸಂಹರಿಸಿದ.
ಸಾ ವಧ್ಯಮಾನಾ ಸಮರೇ ಕೇಕಯಾನಾಂ ಮಹಾಚಮೂಃ |
ಸಮುತ್ಸೃಜ್ಯ ರಣೇ ಶಸ್ತ್ರಂ ಪ್ರದುದ್ರಾವ ದಿಶೋ ದಶ ॥40॥
ಕೇಕಯರ ಆ ಮಹಾಸೈನ್ಯ ಯುದ್ಧದಲ್ಲಿ ಸಾತ್ಯಕಿಯ ದಾಳಿಗೆ ತುತ್ತಾಗಿ ಆಯುಧವನ್ನು ಚೆಲ್ಲಿ ಹತ್ತುದಿಕ್ಕುಗಳಿಗೆ ಪಲಾಯನ ಮಾಡಿತು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ತ್ರಯೋದಶೋಽಧ್ಯಾಯಃ ॥13॥

ಮಹಾಭಾರತತಾತ್ಪರ್ಯನಿರ್ಣಯ
ಸಂಕ್ಷೋಭ್ಯಮಾಣಂ ತದನೀಕಮೀಕ್ಷ್ಯ
ದ್ರೌಣೀ ರಥೇನ ಪ್ರತಿಜಗ್ಮಿವಾಂಸ್ತಮ್ |
ತದ್ ಯುದ್ಧಮಾಸೀದತಿಘೋರಮದ್ಭುತಂ
ಪುರಾ ಯಥಾ ನಾಸ ಚ ಕಸ್ಯಚಿತ್ ಕ್ವಚಿತ್ ॥ 5 ॥
ಭೀಮನಿಂದ ತನ್ನ ಸೇನೆ ಕ್ಷೋಭೆಗೊಳ್ಳುವುದನ್ನು ಕಂಡು ಅಶ್ವತ್ಥಾಮ ರಥದಿಂದ ಭೀಮನನ್ನು ಇದಿರಿಸಿದ. ಅವರ ಯುದ್ಧ ಬಲು ಘೋರ, ಅದ್ಭುತವಾಗಿತ್ತು. ಹಿಂದೆ ಯಾರಿಗೂ ಎಲ್ಲಿಯೂ ನಡೆದಿರಲಾದಂಥದ್ದಾಗಿತ್ತು.
ದೃಷ್ಟ್ವೈವ ತದ್ ದೇವಗಂಧರ್ವವಿಪ್ರಾ
ಊಚುರ್ನೇದೃಗ್ ದೃಷ್ಟಪೂರ್ವಂ ಸುಯುದ್ಧಮ್ |
ನ ಚೋತ್ತರಂ ವಾಪಿ ಭವಿಷ್ಯತೀದೃಕ್
ಕಲಾಂ ಚ ಸರ್ವಾಣಿ ನ ಷೋಡಶೀಮಿಯುಃ ॥ 6 ॥
ದೇವತೆಗಳೂ ಗಂಧರ್ವರೂ ಮುನಿಗಳೂ ನೋಡಿದೊಡನೆ ಹೇಳಿದರು. `ಇಂಥ ಒಳ್ಳೆಯ ಯುದ್ಧವನ್ನು ಹಿಂದೆ ಎಂದೂ ನಾವು ಕಂಡಿರಲಿಲ್ಲ. ಮುಂದೆ ಇಂಥ ಯುದ್ಧ ನಡೆಯಲಾರದು. ಹಿಂದು ಮುಂದಿನ ಎಲ್ಲ ಯುದ್ಧಗಳೂ ಈ ಯುದ್ಧದ ಹದಿನಾರನೆ ಒಂದಂಶಕ್ಕೆ ಸಮವಾಗಲಾರವು' ಎಂದು.
ನೈತಾದೃಶೀ ಜ್ಞಾನಸಂಪದ್ ಬಲಂ ವಾ
ದ್ವಯಂ ಕುತೋ ವಾಯುಮೃತೇ ಶಿವಂ ತಥಾ |
ದ್ವಯೋಃ ಸಮಾಹಾರ ಇಹ ದ್ವಯೋರಪಿ
ಜ್ಞಾನಸ್ಯ ಬಾಹ್ವೋಶ್ಚ ಬಲಸ್ಯ ಸೂರ್ಜಿತಃ ॥ 7 ॥
`ಇಂಥ ಜ್ಞಾನಸಂಪತ್ತಾಗಲಿ ಇಂಥ ಬಲವಾಗಲಿ ವಾಯುವಿನಲ್ಲಿ ಮತ್ತು ಶಿವನಲ್ಲಿ ಹೊರತು ಇನ್ನೆಲ್ಲಿಯೂ ಇಲ್ಲ. ಈ ಎರಡೂ ಸೇರಿರುವುದು ಇನ್ನೆಲ್ಲಿ? ಇವರಿಬ್ಬರ ಜ್ಞಾನಬಲ ಮತ್ತು ಬಾಹುಗಳ ಬಲ ಈ ಎರಡರ ಉತ್ತಮವಾದ ಮೇಲನ ಇವರಿಬ್ಬರಲ್ಲಿ ಮಾತ್ರವಿದೆ.'
ಇತೀರ್ಯಮಾಣೇ ವಿಬುಧೈರ್ನರೋತ್ತಮೌ
ದಿಶಃ ಸಮಸ್ತಾ ಗಗನಂ ಚ ಪತ್ರಿಭಿಃ |
ನಿರಂತರಂ ಚಕ್ರತುರುತ್ತಮೌಜಸೌ
ದೃಷ್ಟ್ವೈವ ತತ್ಪ್ರೀತಿಮಗುರ್ಮಹಾರಥಾಃ ॥ 8 ॥
ಹೀಗೆ ದೇವತೆಗಳು ಮಾತನಾಡಿಕೊಳ್ಳುತ್ತಿದ್ದಾಗ ಮಹಾಬಲಶಾಲಿಗಳಾದ ಪುರುಷಶ್ರೇಷ್ಠರಾದ ಆ ಭೀಮ, ಅಶ್ವತ್ಥಾಮರು ಬಾಣಗಳಿಂದ

ಎಲ್ಲ ದಿಕ್ಕುಗಳನ್ನೂ ಆಕಾಶವನ್ನೂ ಪೂರ್ತಿ ತುಂಬಿಸಿದರು. ಅದನ್ನು ನೋಡಿದ ಮಾತ್ರಕ್ಕೆ ಮಹಾರಥಿಕರು ಆನಂದಪಟ್ಟರು.

ಹದಿನಾಲ್ಕನೆಯ ಅಧ್ಯಾಯ
ಶ್ರುತಕರ್ಮನಿಂದ ಚಿತ್ರಸೇನವಧ. ಪ್ರತಿವಿಂಧ್ಯನಿಂದ ಚಿತ್ರನ ವಧ. ಭೀಮಾಶ್ವತ್ಥಾಮರ ಯುದ್ಧ ಘೋರ, ಅದ್ಭುತ.
ಸಂಜಯಃ
ಶ್ರುತಕರ್ಮಾ ಮಹಾರಾಜ ಚಿತ್ರಸೇನಂ ಮಹೀಪತಿಮ್ |
ಆಜಘಾನ ರಣೇ ಕ್ರುದ್ಧಃ ಪಂಚಾಶದ್ಭಿಃ ಶಿಲೀಮುಖೈಃ ||1||
ಸಂಜಯ ನುಡಿದ– ಮಹಾರಾಜ, ಸಹದೇವ ಪುತ್ರನಾದ ಶ್ರುತಕರ್ಮನು ಯುದ್ಧದಲ್ಲಿ ಕ್ರುದ್ಧನಾಗಿ ರಾಜಾಚಿತ್ರಸೇನನನ್ನು ಐವತ್ತು ಬಾಣಗಳಿಂದ ಹೊಡೆದ.
ಅಭಿಸಾರಸ್ತು ತಂ ರಾಜನ್ ನವಭಿರ್ನಿಶಿತೈಃ ಶರೈಃ |
ಶ್ರುತಕರ್ಮಾಣಮಾಹತ್ಯ ಸೂತಂ ವಿವ್ಯಾಧ ಪಂಚಭಿಃ ||2||
ಅಭಿಸಾರ ದೇಶಾಧಿಪತಿಯಾದ ಚಿತ್ರಸೇನನು, ರಾಜನೆ, ಆ ಶ್ರುತಕರ್ಮನನ್ನು ಹರಿತವಾದ ಒಂಬತ್ತು ಬಾಣಗಳಿಂದ ಹೊಡೆದು ಐದು ಬಾಣಗಳಿಂದ ಅವನ ಸಾರಥಿಯನ್ನೂ ಹೊಡೆದ.
ಶ್ರುತಕರ್ಮಾ ತತಃ ಕ್ರುದ್ಧಶ್ಚಿತ್ರಸೇನಂ ಚಮೂಮುಖೇ |
ನಾರಾಚೇನ ಸುತೀಕ್ಷ್ಣೇನ ಮರ್ಮದೇಶೇ ಸಮಾರ್ಪಯತ್ ||3||
ಆಗ ಶ್ರುತಕರ್ಮ ಕುಪಿತನಾಗಿ ಸೈನ್ಯದ ಮುಂಭಾಗದಲ್ಲಿ ತೀಕ್ಷ್ಣವಾದ ಬಾಣದಿಂದ ಚಿತ್ರಸೇನನನ್ನು ಮರ್ಮಸ್ಥಳದಲ್ಲಿ ಹೊಡೆದ.
ಸೋಽತಿವಿದ್ಧೋ ಮಹಾರಾಜ ತದಾ ತೇನ ಮಹಾತ್ಮನಾ |
ಮೂರ್ಚ್ಛಾಮಪಿ ಜಗಾಮಾಶು ಕಶ್ಮಲಂ ಚ ಸಮಾವಿಶತ್ ||4||
ಮಹಾರಾಜ, ಚಿತ್ರಸೇನನು ಮಹಾತ್ಮ ಶ್ರುತಕರ್ಮನಿಂದ ಬಹಳ ಗಾಯ ಗೊಂಡು ಮೈಮರೆತ. ಮೂರ್ಛೆಯನ್ನೂ ಹೊಂದಿದ.
ಏತಸ್ಮಿನ್ನಂತರೇ ಚೈವ ಶ್ರುತಕರ್ಮಾ ಮಹಾಯಶಾಃ |
ನವತ್ಯಾ ಜಗತೀಪಾಲಂ ಛಾದಯಾಮಾಸ ಪತ್ರಿಭಿಃ ||5||
ಇದೇ ಸಮಯದಲ್ಲಿ ಮಹಾಕೀರ್ತಿಶಾಲಿಯಾದ ಶ್ರುತಕರ್ಮನು ರಾಜನನ್ನು ತೊಂಬತ್ತು ಬಾಣಗಳಿಂದ ಮುಚ್ಚಿದ.
ಪ್ರತಿಲಭ್ಯ ತತಃ ಸಂಜ್ಞಾಂ ಚಿತ್ರಸೇನೋ ಮಹಾಬಲಃ |
ಧನುಶ್ಚಿಚ್ಛೇದ ಭಲ್ಲೇನ ತಂ ಚ ವಿವ್ಯಾಧ ಸಪ್ತಭಿಃ ||6||
ಅಷ್ಟರಲ್ಲಿ ಮಹಾಬಲಿ ಚಿತ್ರಸೇನ ಎಚ್ಚರಗೊಂಡು ಭಲ್ಲೆಯಿಂದ ಶ್ರುತಕರ್ಮನ ಬಿಲ್ಲನ್ನು ಕತ್ತರಿಸಿ ಅವನನ್ನು ಏಳು ಬಾಣಗಳಿಂದ ಪ್ರಹರಿಸಿದ.
ಸೋಽನ್ಯತ್ ಕಾರ್ಮುಕಮಾದಾಯ ವೇಗಘ್ನಂ ರುಗ್ಮಭೂಷಿತಮ್ |
ಚಿತ್ರಸೇನಂ ಶರೈಶ್ಚಿತ್ರೈಶ್ಚಿತ್ರರೂಪಮಥಾಕರೋತ್ ||7||
ಶ್ರುತಕರ್ಮನು ಶತ್ರುಗಳ ವೇಗವನ್ನು ತಡೆಯಬಲ್ಲ, ಬಂಗಾರದಿಂದ ಅಲಂಕೃತವಾದ ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಚಿತ್ರಸೇನನನ್ನು ವಿಚಿತ್ರ ಬಾಣಗಳಿಂದ ಹೊಡೆದು ವಿಚಿತ್ರರೂಪನನ್ನಾಗಿ ಮಾಡಿದ.
ಸ ಶರೈಶ್ಚಿತ್ರಿತೋ ರಾಜಾ ಚಿತ್ರಮಾಲ್ಯಧರೋ ಯುವಾ |
ಅಶೋಭತ ಮಹಾರಂಗೇ ಶ್ವಾವಿಚ್ಛಲಲತೋ ಯಥಾ ||8||
ಸುಂದರ ಮಾಲೆಗಳನ್ನು ಧರಿಸಿದ್ದ ರಾಜಾ ಚಿತ್ರಸೇನ ಮಹಾರಣಭೂಮಿಯಲ್ಲಿ ಮೈಯೆಲ್ಲ ಬಾಣಗಳಿಂದ ಅಲಂಕೃತನಾದಾಗ ಮುಳ್ಳುಗಳಿಂದ ಕೂಡಿದ ಮುಳ್ಳು ಹಂದಿಯಂತೆ ಕಂಗೊಳಿಸಿದ.
ರಾಜಾ ತು ಶ್ರುತಕರ್ಮಾಣಂ ನಾರಾಚೇನ ಸ್ತನಾಂತರೇ |
ಬಿಭೇದ ಸಮರೇ ಕ್ರೂರಸ್ತಿಷ್ಠ ತಿಷ್ಠೇತಿ ಚಾಬ್ರುವೀತ್ ||9||
ಸಮರದಲ್ಲಿ ಕ್ರೂರನಾದ ರಾಜನು ಶ್ರುತಕರ್ಮನನ್ನು ಎದೆಯಲ್ಲಿ ಬಾಣದಿಂದ ಹೊಡೆದ ಮತ್ತು ನಿಲ್ಲುನಿಲ್ಲೆಂದು ಗರ್ಜಿಸಿದ.
ಶ್ರುತಕರ್ಮಾ ತು ಸಮರೇ ನಾರಾಚೇನ ಸಮರ್ಪಿತಃ |
ಸುಸ್ರಾವ ರುಧಿರಂ ತತ್ರ ಗೈರಿಕಾಂಬು ಯಥಾಽಚಲಃ ||10||
ಶ್ರುತಕರ್ಮನು ಯುದ್ಧದಲ್ಲಿ ಬಾಣದಿಂದ ಗಾಯಗೊಂಡು ನೆತ್ತರು, ಗೈರಿಕಧಾತುವಿನಿಂದ ಕೂಡಿದ ಕೆನ್ನೀರನ್ನು ಬೆಟ್ಟವು ಸುರಿಸುವಂತೆ ಸುರಿಸಿದ.
ತತಃ ಸ ರುಧಿರಾಕ್ತಾಂಗೋ ರುಧಿರಾರ್ದ್ರೀಕೃತಚ್ಛವಿಃ |
ರರಾಜ ಸಮರೇ ರಾಜನ್ ಸಪುಷ್ಪ ಇವ ಕಿಂಶುಕಃ ||11||
ಮೈಯೆಲ್ಲ ರಕ್ತದಿಂದ ತೊಯ್ದು ರಕ್ತದಿಂದ ಮಿದುವಾದ ಕಾಂತಿ ಸೂಸುತ್ತ ಶ್ರುತಕರ್ಮನು ಯುದ್ಧದಲ್ಲಿ, ರಾಜನೆ, ಹೂಬಿಟ್ಟ ಮುತ್ತುಗದ ಮರದಂತೆ ಶೋಭಿಸಿದ.
ಶ್ರುತಕರ್ಮಾ ಮಹಾರಾಜ ಶತ್ರುಣಾ ಸಮಭಿದ್ರುತಃ |
ಶತ್ರುಸಂವರಣಂ ಕ್ರುದ್ಧೋ ದ್ವಿಧಾ ಚಿಚ್ಛೇದ ಕಾರ್ಮುಕಮ್ ||12||
ಶತ್ರುವಿನಿಂದ ಹೀಗೆ ಆಕ್ರಮಿಸಲ್ಪಟ್ಟ ಶ್ರುತಕರ್ಮನು ಕ್ರುದ್ಧನಾಗಿ ಶತ್ರುವನ್ನು ತಡೆಯಬಲ್ಲ ಶತ್ರುವಿನ ಬಿಲ್ಲನ್ನು ಎರಡಾಗಿ ತುಂಡರಿಸಿದ.
ಅಥೈನಂ ಛಿನ್ನಧನ್ವಾನಂ ನಾರಾಚಾನಾಂ ಶತೈಸ್ತ್ರಿಭಿಃ |

ವಿವ್ಯಾಧ ಭರತಶ್ರೇಷ್ಠ ಶ್ರುತಕರ್ಮಾ ಮಹಾಯಶಾಃ ॥13॥
ನವತ್ಯಾ ಜಗತೀಪಾಲಂ ಛಾದಯನ್ ನತಪರ್ವಭಿಃ ॥14॥
ಬಳಿಕ, ರಾಜನೆ, ಮಹಾಕೀರ್ತಿಶಾಲಿಯಾದ ಶ್ರುತಕರ್ಮನು ಬಿಲ್ಲನ್ನು ಕಡಿದುಕೊಂಡಿದ್ದ ರಾಜನನ್ನು ಮುನ್ನೂರು ಬಾಣಗಳಿಂದ ಹೊಡೆದ. ಡೊಂಕು ಗಿಣ್ಣಿನ ತೊಂಬತ್ತು ಬಾಣಗಳಿಂದ ಅವನನ್ನು ಮುಚ್ಚಿದ.
ತತೋಽಪರೇಣ ಭಲ್ಲೇನ ಭೃಶಂ ತೀಕ್ಷ್ಣೇನ ಸತ್ವರಃ |
ಜಹಾರ ಸಶಿರಸ್ತ್ರಾಣಂ ಶಿರಸ್ತಸ್ಯ ಮಹಾತ್ಮನಃ ॥15॥
ಬಳಿಕ ತ್ವರೆಯಿಂದ ಅತಿ ತೀಕ್ಷ್ಣವಾದ ಇನ್ನೊಂದು ಭಲ್ಲೆಯಿಂದ ಮಹಾತ್ಮನಾದ ರಾಜನ ಶಿರಸ್ತ್ರಾಣಯುಕ್ತವಾದ ಶಿರಸ್ಸನ್ನೇ ಕತ್ತರಿಸಿದ.
ತಚ್ಛಿರೋ ನ್ಯಪತದ್ ಭೂಮೌ ಚಿತ್ರಸೇನಸ್ಯ ದೀಪ್ತಿಮತ್ |
ಯದೃಚ್ಛಯಾ ಯಥಾ ಚಂದ್ರಶ್ಚ್ಯುತಃ ಸ್ವರ್ಗಾನ್ಮಹೀತಳೇ ॥16॥
ಅಕಸ್ಮಾತ್ ಸ್ವರ್ಗದಿಂದ ಕಳಚಿ ಭೂಮಿಯಲ್ಲಿ ಚಂದ್ರ ಬಿದ್ದರೆ ಹೇಗೋ ಹಾಗೆ ಚಿತ್ರಸೇನನ ಪ್ರಕಾಶಮಾನವಾದ ಶಿರವು ಭೂಮಿಯಲ್ಲಿ ಬಿದ್ದಿತು.
ರಾಜಾನಂ ನಿಹತಂ ದೃಷ್ಟ್ವಾ ಅಭಿಸಾರಾಸ್ತು ಮಾರಿಷ |
ಅಭ್ಯದ್ರವಂತ ವೇಗೇನ ಶ್ರುತಕರ್ಮಾಣಮಾಹವೇ ॥17॥
ರಾಜನೆ, ಅಭಿಸಾರದೇಶದ ಸೈನಿಕರು ತಮ್ಮ ರಾಜನು ರಣರಂಗದಲ್ಲಿ ಹತನಾದುದನ್ನು ಕಂಡು ವೇಗದಿಂದ ಶ್ರುತಕರ್ಮನ ಮೇಲೇರಿ ಬಂದರು.
ತತಃ ಕ್ರುದ್ಧೋ ಮಹೇಷ್ವಾಸಃ ತತ್ಸೈನ್ಯಂ ಸಮಭಿದ್ರವತ್ |
ಅಂತಕಾಲೇ ಯಥಾ ಕ್ರುದ್ಧಃ ಸರ್ವಭೂತಾನಿ ಚಾಂತಕಃ ॥18॥
ಆಗ ಅಂತ್ಯಕಾಲದಲ್ಲಿ ಯಮ ಎಲ್ಲ ಜಂತುಗಳ ಮೇಲೆ ಕ್ರುದ್ಧನಾಗುವಂತೆ ಮಹಾಬಿಲ್ಗಾರ ಶ್ರುತಕರ್ಮ ಕ್ರುದ್ಧನಾಗಿ ಆ ಸೈನ್ಯವನ್ನು ಓಡಿಸಿದ.
ತೇ ವಧ್ಯಮಾನಾಃ ಸಮರೇ ತವ ಪೌತ್ರೇಣ ಧನ್ವಿನಾ |
ವ್ಯದ್ರವಂತ ದಿಶಸ್ತೂರ್ಣಂ ಮೃಗಾ ವ್ಯಾಘ್ರಾರ್ದಿತಾ ಇವ ॥19॥
ರಾಜನೆ, ಬಿಲ್ಗಾರನಾದ ನಿನ್ನ ಮೊಮ್ಮಗ ಶ್ರುತಕರ್ಮನಿಂದ ಹೊಡೆಸಿಕೊಂಡು, ಹುಲಿಯಿಂದ ಪೀಡಿತವಾದ ಮೃಗಗಳಂತೆ, ಆ ಸೈನಿಕರು ಬೇಗನೆ ಎಲ್ಲ ದಿಕ್ಕುಗಳಿಗೆ ಓಡಿದರು.
ತಾಂಸ್ತು ವಿದ್ರುವತೋ ದೃಷ್ಟ್ವಾ ನಿರುತ್ಸಾಹಾನ್ ದ್ವಿಷಜ್ಜಯೇ |
ದ್ರಾವಯನ್ನಿಷುಭಿಸ್ತೂರ್ಣಂ ಶ್ರುತಕರ್ಮಾ ವ್ಯರೋಚತ ॥20॥
ಶತ್ರುಗಳನ್ನು ಪರಾಭವಗೊಳಿಸುವಲ್ಲಿ ನಿರುತ್ಸಾಹಿಗಳಾಗಿ ಆ ಸೈನಿಕರು ಓಡಲು ತೊಡಗಿದುದನ್ನು ಕಂಡು ಶ್ರುತಕರ್ಮನು ಅವರನ್ನು ವೇಗವಾಗಿ ಬಾಣಗಳಿಂದ ಹೊಡೆದೋಡಿಸಿದ.
ಪ್ರತಿವಿಂಧ್ಯಸ್ತತಶ್ಚಿತ್ರಂ ವಿದ್ಧ್ವಾ ಪಂಚಭಿರಾಯಸೈಃ |
ಸಾರಥಿಂ ತ್ರಿಭಿರಾನರ್ಚ್ಛದ್ ಧ್ವಜಮೇಕೇನ ಪತ್ರಿಣಾ ॥21॥
ಯುಧಿಷ್ಠಿರನ ಪುತ್ರ ಪ್ರತಿವಿಂಧ್ಯನು ಚಿತ್ರರಾಜನನ್ನು ಐದು ಕಬ್ಬಿಣದ ಬಾಣಗಳಿಂದ ಹೊಡೆದು ಮೂರು ಬಾಣಗಳಿಂದ ಸಾರಥಿಯನ್ನು ಹೊಡೆದ. ಒಂದು ಬಾಣದಿಂದ ಧ್ವಜವನ್ನು ಕತ್ತರಿಸಿದ.
ತಂ ಚಿತ್ರೋ ನವಭಿರ್ಬಾಣೈರ್ಬಾಹ್ವೋರುರಸಿ ಚಾರ್ಪಯತ್ |
ಸ್ವರ್ಣಪುಂಖೈಃ ಶಿಲಾಧೌತೈಃ ಕಂಕಬರ್ಹಿಣವಾಜಿತೈಃ ॥22॥
ಚಿತ್ರರಾಜನು ಚಿನ್ನದ ಬುಡ ಹರಿತವಾದ ತುದಿ ಮತ್ತು ಹದ್ದು ನವಿಲುಗಳ ಪುಕ್ಕಗಳುಳ್ಳ ಒಂಬತ್ತು ಬಾಣಗಳಿಂದ ಪ್ರತಿವಿಂಧ್ಯನನ್ನು ತೋಳುಗಳಲ್ಲಿಯೂ ಎದೆಯಲ್ಲಿಯೂ ಘಾಸಿಗೊಳಿಸಿದ.
ಪ್ರತಿವಿಂಧ್ಯೋ ಧನುಸ್ತಸ್ಯ ಛಿತ್ತ್ವಾ ಭಾರತ ಸಾಯಕೈಃ |
ಪಂಚಭಿರ್ನಿಶಿತೈರ್ಬಾಣೈರಥೈನಮಭಿಜಘ್ನಿವಾನ್ ॥23॥
ಪ್ರತಿವಿಂಧ್ಯನು ಬಾಣಗಳಿಂದ ಚಿತ್ರರಾಜನ ಬಿಲ್ಲನ್ನು ಕಡಿದು, ಬಳಿಕ ಐದು ಹರಿತವಾದ ಬಾಣಗಳಿಂದ ರಾಜನನ್ನು ಹೊಡೆದ.
ತತಃ ಶಕ್ತಿಂ ಮಹಾರಾಜ ಹೇಮದಂಡಾಂ ದುರಾಸದಾಮ್ |
ಪ್ರಾಹಿಣೋತ್ ಪ್ರತಿವಿಂಧ್ಯಾಯ ವಿಚಿನ್ವಂತೀಮಸೂನಿವ ॥24॥
ಆಗ, ಮಹಾರಾಜ, ಶತ್ರುವಿನ ಪ್ರಾಣಗಳನ್ನು ಅವನ ಹೃದಯದಲ್ಲಿ ಅರಸುವಂತಿರುವ ಶತ್ರುಗಳಿಗೆ ತಡೆಯಲಸಾಧ್ಯವಾದ, ಬಂಗಾರದ ಕೋಲಿನ ಶಕ್ತ್ಯಾಯುಧವನ್ನು ಚಿತ್ರರಾಜ ಪ್ರತಿವಿಂಧ್ಯನ ಮೇಲೆ ಎಸೆದ.
ತಾಮಾಪತಂತೀಂ ಸಹಸಾ ಶಕ್ತಿಮುಲ್ಕಾಮಿವಾಂಬರಾತ್ |
ತ್ರಿಧಾ ಚಿಚ್ಛೇದ ಸಮರೇ ಪ್ರತಿವಿಂಧ್ಯೋ ಹಸನ್ನಿವ ॥25॥
ತನ್ನ ಮೈಮೇಲೆ ಆಗಸದಿಂದ ಉಲ್ಕೆಯಂತೆ ಬಂದೆರಗುತ್ತಿದ್ದ ಆ ಶಕ್ತ್ಯಾಯುಧ ವನ್ನು ಒಡನೆ ಪ್ರತಿವಿಂಧ್ಯನು ನಗುತ್ತ ರಣರಂಗದಲ್ಲಿ ಮೂರಾಗಿ ಕಡಿದು ಬೀಳಿಸಿದ.
ಸಾ ಪಪಾತ ತ್ರಿಧಾ ಛಿನ್ನಾ ಪ್ರತಿವಿಂಧ್ಯಶರೈಸ್ತ್ರಿಭಿಃ |
ಯುಗಾಂತೇ ಸರ್ವಭೂತಾನಿ ತ್ರಾಸಯಂತೀ ಯಥಾಽಶನಿಃ ॥26॥
ಆ ಶಕ್ತ್ಯಾಯುಧವು ಯುಗಾಂತ್ಯದಲ್ಲಿ ಎಲ್ಲ ಜಂತುಗಳನ್ನೂ ಭಯಪಡಿಸುವ ಸಿಡಿಲಿನಂತಿದ್ದರೂ ಅದು ಪ್ರತಿವಿಂಧ್ಯನ ಮೂರು ಬಾಣಗಳಿಂದ ಮೂರು ಭಾಗವಾಗಿ ಕಡಿದು ಬಿದ್ದಿತು.

ಶಕ್ತಿಂ ವಿನಿಹತಾಂ ದೃಷ್ಟ್ವಾ ಚಿತ್ರೋ ಗೃಹ್ಯ ಮಹಾಗದಾಮ್ |
ಪ್ರತಿವಿಂಧ್ಯಾಯ ಚಿಕ್ಷೇಪ ರುಗ್ಮಪಟ್ಟೈರ್ವಿಭೂಷಿತಾಮ್ ॥27॥
ಶಕ್ತ್ಯಾಯುಧವು ನಾಶವಾದುದನ್ನು ಕಂಡು ಚಿತ್ರರಾಜನು ಚಿನ್ನದ ಬಲೆಯಿಂದ ಅಲಂಕೃತವಾದ ಮಹಾಗದೆಯನ್ನು ಎತ್ತಿಕೊಂಡು ಪ್ರತಿವಿಂಧ್ಯನ ಮೇಲೆಸೆದ.
ಸಾ ಹತ್ವಾ ಸಹಸಾ ಸೂತಂ ಹಯಾಂಸ್ತಸ್ಯ ಮಹಾತ್ಮನಃ |
ರಥಂ ಪ್ರಮೃದ್ಯ ವೇಗೇನ ಧರಣೀಮನ್ವಪದ್ಯತ ॥28॥
ಆ ಗದೆಯು ಕ್ಷಣದಲ್ಲಿ ಮಹಾತ್ಮನಾದ ಪ್ರತಿವಿಂಧ್ಯನ ಸಾರಥಿಯನ್ನು ಕುದುರೆಗಳನ್ನೂ ರಥವನ್ನೂ ಪುಡಿಮಾಡಿ ವೇಗದಿಂದ ನೆಲದಲ್ಲಿ ನೆಟ್ಟಿತು.
ಪ್ರತಿವಿಂಧ್ಯಸ್ತತಃ ಕ್ರುದ್ಧೋ ರಥಾದಾಪ್ಲುತ್ಯ ಭಾರತ |
ಶಕ್ತಿಂ ಚಿಕ್ಷೇಪ ಚಿತ್ರಾಯ ಸ್ವರ್ಣದಂಡಾಮಲಂಕೃತಾಮ್ ॥29॥
ರಾಜನೆ, ಪ್ರತಿವಿಂಧ್ಯನು ಆಗ ಕುಪಿತನಾಗಿ ರಥದಿಂದ ಕೆಳಗೆ ಹಾರಿ ಚಿತ್ರರಾಜನ ಮೇಲೆ ಬಂಗಾರದ ದಂಡವಿರುವ, ಅಲಂಕೃತವಾದ ಶಕ್ತ್ಯಾಯುಧವನ್ನೆಸೆದ.
ತಾಮಾಪತಂತೀಂ ಜಗ್ರಾಹ ಚಿತ್ರೋ ರಾಜನ್ ಮಹಾಮನಾಃ |
ತತಸ್ತಾಮೇವ ಚಿಕ್ಷೇಪ ಪ್ರತಿವಿಂಧ್ಯಾಯ ಪಾರ್ಥಿವಃ ॥30॥
ರಾಜನೆ, ಮಹಾಬುದ್ಧಿಶಾಲಿಯಾದ ಚಿತ್ರರಾಜನು ತನ್ನ ಮೇಲೆರಗುತ್ತಿದ್ದ ಶಕ್ತ್ಯಾಯುಧವನ್ನು ಹಿಡಿದುಕೊಂಡ. ಅದನ್ನೇ ಪ್ರತಿವಿಂಧ್ಯನ ಮೇಲೆಸೆದ.
ಸಾ ಸಮಾಸಾದ್ಯ ತಂ ಶೂರಂ ಪ್ರತಿವಿಂಧ್ಯಂ ಮಹಾಪ್ರಭಾ |
ನಿರ್ಭಿದ್ಯ ದಕ್ಷಿಣಂ ಬಾಹುಂ ನಿಪಪಾತ ಮಹೀತಳೇ ॥31॥
ಮಹಾಪ್ರಭೆಯುಳ್ಳ ಆ ಶಕ್ತ್ಯಾಯುಧವು ಶೂರನಾದ ಪ್ರತಿವಿಂಧ್ಯನ ಮೇಲೆ ಬಿದ್ದು ಅವನ ಬಲಭುಜವನ್ನು ಗಾಯಗೊಳಿಸಿ ನೆಲದಲ್ಲಿ ಬಿದ್ದಿತು.
ಪತಿತಾಽಭಾಸಯಚ್ಚೈವ ತಂ ದೇಶಮಶನಿರ್ಯಥಾ ॥32॥
ಬಿದ್ದ ಆ ಆಯುಧವು ಮಿಂಚಿನಂತೆ ಆ ಪ್ರದೇಶವನ್ನು ಬೆಳಗಿತು.
ಪ್ರತಿವಿಂಧ್ಯಸ್ತತೋ ರಾಜನ್ ತೋಮರಂ ಸ್ವರ್ಣಭೂಷಿತಮ್ |
ಪ್ರೇಷಯಾಮಾಸ ಸಂಕ್ರುದ್ಧಶ್ಚಿತ್ರಸ್ಯ ವಧಕಾಂಕ್ಷಯಾ ॥33॥
ಪ್ರತಿವಿಂಧ್ಯನು ಚಿತ್ರರಾಜನನ್ನು ವಧಿಸುವ ಸಂಕಲ್ಪದಿಂದ ಬಲುಕ್ರುದ್ಧನಾಗಿ ಬಂಗಾರದಿಂದ ಅಲಂಕೃತವಾದ ಈಟಿಯನ್ನು ಎಸೆದ.
ಸ ತಸ್ಯ ದೇಹಾವರಣಂ ಭಿತ್ತ್ವಾ ಹೃದಯಮೇವ ಚ |
ಜಗಾಮ ಧರಣೀಂ ತೂರ್ಣಂ ಮಹೋರಗ ಇವಾಶಯಮ್ ॥34॥
ಆ ಈಟಿ ಬೇಗನೆ ರಾಜನ ಶರೀರದ ಕವಚವನ್ನು ಸೀಳಿ ಎದೆಯನ್ನು ಬಗಿದು ದೊಡ್ಡ ಹಾವು ಬಿಲವನ್ನು ಸೇರುವಂತೆ ಭೂಮಿಯನ್ನು ಪ್ರವೇಶಿಸಿತು.
ಸ ಪಪಾತ ತದಾ ರಾಜಾ ತೋಮರೇಣ ಸಮಾಹತಃ |
ಪ್ರಸಾರ್ಯ ವಿಪುಲೌ ಬಾಹೂ ಮಹಾಪರಿಘಸನ್ನಿಭೌ ॥35॥
ಚಿತ್ರರಾಜ ಆ ಈಟಿಯ ಆಘಾತದಿಂದ ಮಹಾ ಪರಿಘಾಯುಧದಂಥ ಪುಷ್ಟವಾದ ತೋಳುಗಳನ್ನು ಅಗಲವಾಗಿ ಚಾಚಿಕೊಂಡು ಬಿದ್ದ.
ಚಿತ್ರಂ ಸಂಪ್ರೇಕ್ಷ್ಯ ನಿಹತಂ ತಾವಕಾ ರಣಶೋಭಿನಮ್ |
ಅಭ್ಯಧಾವಂತ ವೇಗೇನ ಪ್ರತಿವಿಂಧ್ಯಂ ಸಮಂತತಃ ॥36॥
ಯುದ್ಧದಿಂದ ಶೋಭಿಸುತ್ತಿದ್ದ ಚಿತ್ರರಾಜ ಹತನಾದುದನ್ನು ಕಂಡು, ನಿನ್ನ ಸೈನಿಕರು ಪ್ರತಿವಿಂಧ್ಯನ ಕಡೆಗೆ ಎಲ್ಲೆಡೆಯಿಂದಲೂ ವೇಗವಾಗಿ ಧಾವಿಸಿ ಬಂದರು.
ಸೃಜಂತೋ ವಿವಿಧಾನ್ ಬಾಣಾನ್ ಶತಘ್ನೀಶ್ಚ ಸಕಿಂಕಿಣೀಃ |
ತಮೇಕಂ ಛಾದಯಾಮಾಸುಃ ಸೂರ್ಯಮಭ್ರಗಣಾ ಇವ ॥37॥
ನಾನಾಬಗೆಯ ಬಾಣಗಳನ್ನೂ ಕಿರುಘಂಟೆಗಳಿಂದ ಯುಕ್ತವಾದ ಶತಘ್ನಿಗಳನ್ನೂ ಎಸೆಯುತ್ತ ಒಬ್ಬ, ಸೂರ್ಯನನ್ನು ಎಲ್ಲ ಮೋಡಗಳು ಆಚ್ಛಾದಿಸುವಂತೆ ಒಬ್ಬ, ಪ್ರತಿವಿಂಧ್ಯನನ್ನು ಸಮಸ್ತ ಸೈನಿಕರೂ ಆಚ್ಛಾದಿಸಿದರು.
ತಾನ್ ವಿವ್ಯಾಧ ಮಹಾಬಾಹುಃ ಶರಜಾಲೈರ್ಮಹಾಹವೇ |
ವ್ಯದ್ರಾವಯತ್ ತವ ಚಮೂಂ ವಜ್ರಹಸ್ತ ಇವಾಸುರಾನ್ ॥38॥
ಮಹಾಯುದ್ಧದಲ್ಲಿ ಮಹಾಬಾಹು ಪ್ರತಿವಿಂಧ್ಯನು ಆ ಸೈನಿಕರನ್ನು ಬಾಣಸಮೂಹಗಳಿಂದ ಚೆನ್ನಾಗಿ ಹೊಡೆದ. ವಜ್ರಾಯುಧಧಾರಿ ಇಂದ್ರನು ಅಸುರರನ್ನು ಓಡಿಸುವಂತೆ, ನಿನ್ನ ಸೈನ್ಯವನ್ನು ಓಡಿಸಿದ.
ತೇ ವಧ್ಯಮಾನಾಃ ಸಮರೇ ತಾವಕಾಃ ಪಾಂಡವೈರ್ನೃಪ |
ವಿಪ್ರಕೀರ್ಯಂತ ಸಹಸಾ ವಾತನುನ್ನಾ ಘನಾ ಇವ ॥39॥
ರಾಜನೆ, ಹೀಗೆ ಯುದ್ಧದಲ್ಲಿ ಪಾಂಡವರಿಂದ ಹೊಡೆಸಿಕೊಂಡ ನಿನ್ನವರು ಕ್ಷಣದಲ್ಲಿ ಬಿರುಗಾಳಿಗೆ ಸಿಲುಕಿದ ಮೋಡಗಳಂತೆ ಚದುರಿದರು.
ವಿದ್ರುತೇ ತು ಬಲೇ ತಸ್ಮಿನ್ ವಧ್ಯಮಾನೇ ಸಮಂತತಃ |
ದ್ರೌಣಿರೇಕೋಽದ್ರವತ್ ತೂರ್ಣಂ ಭೀಮಸೇನಂ

ಮಹಾಬಲಮ್ ॥40॥
ನಿನ್ನ ಸೈನ್ಯವು ಎಲ್ಲೆಡೆ ಹೊಡೆಸಿಕೊಂಡು ಓಡುವಾಗ ಅಶ್ವತ್ಥಾಮನೊಬ್ಬನೆ ಮಹಾಬಲನಾದ ಭೀಮಸೇನನ ಮುಂದೆ ಬೇಗನೆ ಧಾವಿಸಿ ಬಂದ.
ತಯೋಃ ಸಮಾಗಮೋ ಘೋರೋ ಬಭೂವ ಸಮರೇ ನೃಪ |
ಯಥಾ ದೈವಾಸುರೇ ಯುದ್ಧೇ ವೃತ್ರವಾಸವಯೋರಿವ ॥41॥
ರಾಜನೆ, ಭೀಮಾಶ್ವತ್ಥಾಮರ ಸಮಾಗಮವು ರಣರಂಗದಲ್ಲಿ ದೇವಾಸುರ ಸಂಗ್ರಾಮದಲ್ಲಿ ವೃತ್ರಾಸುರ ದೇವೇಂದ್ರರ ಸಮಾಗಮದಂತೆ ಬಲು ಭೀಕರವಾಗಿತ್ತು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಚಿತ್ರವಧೋ ನಾಮ ಚತುರ್ದಶೋಽಧ್ಯಾಯಃ ॥14॥

ಮಹಾಭಾರತತಾತ್ಪರ್ಯನಿರ್ಣಯ
ಶರಾಸನೇ ಮಾರುತಿನಾ ನಿರಾಕೃತೇ
ದ್ರೌಣಿರ್ಮಹಾಸ್ತ್ರಾಣಿ ಮುಮೋಚ ತಸ್ಮಿನ್ |
ತಾನ್ಯಸ್ತ್ರವರ್ಯೈರ್ಬಲವಾನವಿಸ್ಮಯಃ
ಸಂಶಾಮಯಾಮಾಸ ಸುತೋಽನಿಲಸ್ಯ ॥9॥
ಅಶ್ವತ್ಥಾಮನ ಬಿಲ್ಲನ್ನು ಭೀಮ ತುಂಡರಿಸಿದಾಗ ಅಶ್ವತ್ಥಾಮ ಅವನ ಮೇಲೆ ಬೇರೆ ಮಹಾ ಅಸ್ತ್ರಗಳನ್ನು ಪ್ರಯೋಗಿಸಿದ. ಬಲಿಷ್ಠನಾದ ಭೀಮ ಏನೂ ಶಂಕೆಪಡದೆ ಅವುಗಳನ್ನು ಶ್ರೇಷ್ಠ ಅಸ್ತ್ರಗಳಿಂದ ಶಮನಗೊಳಿಸಿದ.
ಪುನಃ ಶರೈರೇವ ಪರಸ್ಪರಂ ತಾ-
ವಯುದ್ಧ್ಯತಾಂ ಚಿತ್ರಮಲಂ ಚ ಸುಷ್ಠು |
ತದಾ ತು ಭೀಮಸ್ಯ ಶರೈರ್ಭೃಶಾರ್ದಿತೋ
ದ್ರೌಣಿಃ ಪಪಾತಾಶು ದೃಢಂ ವಿಚೇತನಃ ॥10॥
ಪುನಃ ಬಾಣಗಳಿಂದಲೆ ಅವರು ಇಬ್ಬರೂ ಬಲು ಆಶ್ಚರ್ಯಕರವಾಗಿ ಚೆನ್ನಾಗಿ ಪರಸ್ಪರ ಹೋರಾಡಿದರು. ಆಗ ಭೀಮನ ಬಾಣಗಳಿಂದ ಬಹಳ ಪೀಡಿತನಾದ ಅಶ್ವತ್ಥಾಮ ಬೇಗನೆ ಚೆನ್ನಾಗಿ ಮೂರ್ಛಿತನಾಗಿ ಬಿದ್ದ.
ಭೀಮಶ್ಚ ವಿಹ್ವಲತನುಃ ಸ ತು ಕಿಂಚಿದೇವ
ಪೂರ್ವಂ ಗತೇ ಗುರುಸುತೇ ಪ್ರಯಯೌ ಕ್ಷಣೇನ |
ನಿರ್ಧೂತಯುದ್ಧಶ್ರಮ ಆತ್ತಧನ್ವಾ
ಯೋದ್ಧುಂ ಗಜೌಘಂ ಪ್ರತಿನಾದಿತಾಶಃ ॥11॥
ಅಶ್ವತ್ಥಾಮ ಮೂರ್ಛಿತನಾಗಿ ಹೊರಟು ಹೋದಾಗ ಮೊದಲು ಸ್ವಲ್ಪ ಮಾತ್ರ ಆಯಾಸಗೊಂಡಿದ್ದ ಭೀಮ ಕ್ಷಣದಲ್ಲಿ ಯುದ್ಧದ ಆಯಾಸವನ್ನು ಪರಿಹರಿಸಿ ಕೊಂಡು ಬಿಲ್ಲನ್ನೆತ್ತಿ ಸಿಂಹ ಗರ್ಜನೆಯಿಂದ ದಿಕ್ಕುಗಳಲ್ಲಿ ಪ್ರತಿಧ್ವನಿ ಉಂಟುಮಾಡುತ್ತ ಗಜಸೇನೆಯೊಡನೆ ಯುದ್ಧ ಮಾಡಲು ಹೊರಟ.

ಹದಿನೈದನೆಯ ಅಧ್ಯಾಯ
ಭೀಮನಿಂದ ಅಶ್ವತ್ಥಾಮನ ಪರಾಜಯ
ಸಂಜಯಃ
ಭೀಮಸೇನಂ ತತೋ ರಾಜನ್ ದ್ರೌಣಿರ್ವಿವ್ಯಾಧ ಪತ್ರಿಣಾ |
ತ್ವರಯಾ ಪರಯಾ ಯುಕ್ತೋ ದರ್ಶಯನ್ನಸ್ತ್ರಲಾಘವಮ್ ॥1॥
ಸಂಜಯ ಹೇಳತ್ತಾನೆ– ರಾಜನೆ, ಅಶ್ವತ್ಥಾಮನು ಆಗ ತನ್ನ ಅಸ್ತ್ರಕೌಶಲವನ್ನು ತೋರಿಸುವ ಸಲುವಾಗಿ ಬಲು ವೇಗದಿಂದ ಭೀಮಸೇನನನ್ನು ಬಾಣದಿಂದ ಹೊಡೆದ.
ಅಥೈನಂ ಪುನರಾಜ್ಞೇ ನವತ್ಯಾ ನಿಶಿತೈಃ ಶರೈಃ |
ಸರ್ವಮರ್ಮಾಣಿ ಸಂಪ್ರೇಕ್ಷ್ಯ ಮರ್ಮಜ್ಞೋ ಲಘುಹಸ್ತವತ್ ॥2॥
ಬಳಿಕ ತಿರುಗಿ ಮರ್ಮಜ್ಞನಾದ ಅಶ್ವತ್ಥಾಮ ಭೀಮಸೇನನ ಎಲ್ಲ ಮರ್ಮಸ್ಥಾನಗಳನ್ನು ಚೆನ್ನಾಗಿ ನೋಡಿ ಹಸ್ತಕೌಶಲದಿಂದ ಹರಿತವಾದ ತೊಂಬತ್ತು ಬಾಣಗಳಿಂದ ಅವನನ್ನು ಚೆನ್ನಾಗಿ ಹೊಡೆದ.
ಭೀಮಸೇನಃ ಸಮಾಕೀರ್ಣೋ ದ್ರೌಣಿನಾ ನಿಶಿತೈಃ ಶರೈಃ |
ರರಾಜ ಸಮರೇ ರಾಜನ್ ರಶ್ಮಿಮಾನಿವ ಭಾಸ್ಕರಃ ॥3॥
ಭೀಮಸೇನ ಅಶ್ವತ್ಥಾಮನ ಹರಿತವಾದ ಬಾಣಗಳಿಂದ ಆಚ್ಛಾದಿತನಾಗಿ ರಣರಂಗದಲ್ಲಿ ಕಿರಣಗಳಿಂದ ಆಚ್ಛಾದಿತನಾದ ಸೂರ್ಯನಂತೆ ಬೆಳಗಿದ.
ತತಃ ಶರಸಹಸ್ರೇಣ ಸುಪ್ರಯುಕ್ತೇನ ಪಾಂಡವಃ |
ದ್ರೋಣಪುತ್ರಮವಚ್ಛಾದ್ಯ ಸಿಂಹನಾದಮಥಾನದತ್ ॥4॥
ಬಳಿಕ ಭೀಮಸೇನ ಸಾವಿರ ಬಾಣಗಳನ್ನು ಚೆನ್ನಾಗಿ ಪ್ರಯೋಗಿಸಿ ಅಶ್ವತ್ಥಾಮನನ್ನು ಆಚ್ಛಾದಿಸಿ ಸಿಂಹಗರ್ಜನೆ ಮಾಡಿದ.
ಶರೈಃ ಶರಾಂಸ್ತಥಾ ದ್ರೌಣಿಃ ಸಂವಾರ್ಯ ಯುಧಿ ಪಾಂಡವಮ್ |

ಲಲಾಟೇಽಭ್ಯಹನದ್ ರಾಜನ್ ನಾರಾಚೇನ ಸ್ಮಯನ್ನಿವ ॥5॥
ರಾಜನೆ, ರಣರಂಗದಲ್ಲಿ ಅಶ್ವತ್ಥಾಮನು ಬಾಣಗಳನ್ನು ಬಾಣಗಳಿಂದ ತಡೆಯುತ್ತ ನಗುತ್ತ ಭೀಮಸೇನನನ್ನು ಹಣೆಯಲ್ಲಿ ಬಾಣದಿಂದ ಹೊಡೆದ.
ಲಲಾಟಸ್ಥಂ ತತೋ ಬಾಣಂ ಧಾರಯಾಮಾಸ ಪಾಂಡವಃ |
ಯಥಾಶೃಂಗಂ ವನೇ ದೃಪ್ತಃ ಖಡ್ಗೋ ಧಾರಯತೇ ನೃಪ ॥6॥
ರಾಜನೆ, ಮದಿಸಿದ ಖಡ್ಗಮೃಗವು ಕಾಡಿನಲ್ಲಿ ತಲೆಯ ಮೇಲೆ ಕೋಡನ್ನು ಧರಿಸುವಂತೆ ಭೀಮಸೇನ ಹಣೆಯಲ್ಲಿ ನೆಟ್ಟ ಆ ಬಾಣವನ್ನು ಧರಿಸಿದ.
ತತೋ ದ್ರೌಣಿಂ ರಣೇ ಭೀಮಃ ಸ್ಮಯಮಾನಃ ಪರಾಕ್ರಮೀ |
ತ್ರಿಭಿರ್ವಿವ್ಯಾಧ ನಾರಾಚೈರ್ಲಲಾಟೇ ವಿಸ್ಮಯನ್ನಿವ ॥7॥
ಭೀಮನು ಪರಾಕ್ರಮಿ, ನಗುತ್ತಲೇ ಅಶ್ವತ್ಥಾಮನ ಹಣೆಯಲ್ಲಿ ಮೂರು ಬಾಣಗಳಿಂದ ಆಶ್ಚರ್ಯಕರವಾಗುವಂತೆ ಹೊಡೆದ.
ಲಲಾಟಸ್ಥೈಸ್ತ್ರಿಭಿರ್ಬಾಣೈರಶ್ವತ್ಥಾಮಾ ವ್ಯರೋಚತ |
ಪ್ರಾವೃಷ್ಯಂಬುಪರಿಕ್ಷಿಪ್ತಸ್ತ್ರಿಶೃಂಗ ಇವ ಪರ್ವತಃ ॥8॥
ಹಣೆಯಲ್ಲಿ ನೆಟ್ಟ ಮೂರುಬಾಣಗಳಿಂದ ಅಶ್ವತ್ಥಾಮನು ಮಳೆನೀರಿಂದ ತೊಯ್ದ ಮೂರು ಶಿಖರವುಳ್ಳ ಪರ್ವತದಂತೆ ಶೋಭಿಸಿದ.
ತತಃ ಶರಶತೈರ್ದ್ರೌಣಿರರ್ದಯಾಮಾಸ ಪಾಂಡವಮ್ |
ನ ಚೈನಂ ಕಂಪಯಾಮಾಸ ಮಾತರಿಶ್ವೇವ ಪರ್ವತಮ್ ॥9॥
ನೂರು ಬಾಣಗಳಿಂದ ಅಶ್ವತ್ಥಾಮನು ಭೀಮನನ್ನು ಹೊಡೆದರೂ ಬಿರುಗಾಳಿಗೆ ಪರ್ವತದಂತೆ ಬಾಣಗಳಿಗೆ ಭೀಮಸೇನ ಅಲ್ಲಾಡಲಿಲ್ಲ.
ತಥೈವ ಪಾಂಡವೋ ಯುದ್ಧೇ ದ್ರೌಣಿಂ ಶರಶತೈಃ ಶಿತೈಃ |
ನಾಕಂಪಯತ ಸಂಹೃಷ್ಟೋ ವಾರ್ಯೋಘ ಇವ ಪರ್ವತಮ್ ॥10॥
ಹಾಗೇ ನೂರುಬಾಣಗಳಿಂದ ಭೀಮ ಅಶ್ವತ್ಥಾಮನನ್ನು ಹೊಡೆದರೂ ಜಲಪ್ರವಾಹಕ್ಕೆ ಪರ್ವತದಂತೆ ಬಾಣಗಳಿಗೆ ಅಶ್ವತ್ಥಾಮನೂ ಅಲ್ಲಾಡಲಿಲ್ಲ.
ತಾವನ್ಯೋನ್ಯಂ ಶರೈರ್ಘೋರೈಶ್ಛಾದಯಂತೌ ಮಹಾರಥೌ |
ರಥಚರ್ಯಾಗತೌ ವೀರೌ ಶುಶುಭಾತೇ ನರರ್ಷಭೌ ॥11॥
ಅವರಿಬ್ಬರು ಪುರುಷೋತ್ತಮರು ಮಹಾರಥರು ವೀರರು, ರಥಚಲನದಿಂದ ಚಲಿಸುತ್ತ ಭಯಂಕರವಾದ ಬಾಣಗಳಿಂದ ಪರಸ್ಪರರನ್ನು ಮುಚ್ಚುತ್ತ ಕಂಗೊಳಿಸಿದರು.
ಆದಿತ್ಯಾವಿವ ಸಂದೀಪ್ತೌ ಲೋಕಕ್ಷಯಕರಾವುಭೌ |
ಸ್ವರಶ್ಮಿಭಿರಿವಾನ್ಯೋನ್ಯಂ ತಾಪಯಂತೌ ಶರೋತ್ತಮೈಃ ॥12॥
ಲೋಕಕ್ಷಯ ಮಾಡಲು ತೊಡಗಿದ ಇಬ್ಬರು ಸೂರ್ಯರು ತಮ್ಮ ಕಿರಣಗಳಿಂದ ಒಬ್ಬನು ಇನ್ನೊಬ್ಬನನ್ನು ಸುಡುವಂತೆ ಭೀಮ ಅಶ್ವತ್ಥಾಮರು ಶ್ರೇಷ್ಠ ಬಾಣಗಳಿಂದ ಜ್ವಲಿಸುತ್ತ ಒಬ್ಬನು ಇನ್ನೊಬ್ಬನನ್ನು ನೋಯಿಸುತ್ತ ಶೋಭಿಸಿದರು.
ಕೃತಪ್ರತಿಕೃತೇ ಯತ್ನಂ ಕುರ್ವಾಣೌ ತೌ ಮಹಾರಥೌ |
ಕೃತಪ್ರತಿಕೃತೇ ಯತ್ತೌ ಬಾಣಸ್ಯಂರಭೀತವತ್ ॥13॥
ಏಟಿಗೆ ಇದಿರೇಟು ಕೊಡುವುದರಲ್ಲಿ ಯತ್ನಮಾಡುತ್ತ ಆ ಮಹಾರಥರಿಬ್ಬರೂ ನಿರ್ಭೀತರಾಗಿ ಬಾಣಸಮೂಹಗಳಿಂದ ಏಟಿಗೆ ಇದಿರೇಟು ಕೊಟ್ಟರು.
ವ್ಯಾಘ್ರಾವಿವ ಚ ಸಂರಬ್ಧೌ ಚೇರತುಸ್ತೌ ನರೋತ್ತಮೌ |
ಶರದಂಷ್ಟ್ರೌ ದುರಾಧರ್ಷೌ ಚಾಪಹಸ್ತೌ ಭಯಂಕರೌ ॥14॥
ಪುರುಷೋತ್ತಮರಿಬ್ಬರೂ ಒಬ್ಬರಿಗೊಬ್ಬರು ಮಣಿಯದವರು, ಧನುಸ್ಸನ್ನು ಹಿಡಿದು ಕೋರೆದಾಡೆಗಳಂಥ ಬಾಣಗಳಿಂದ ಕುಪಿತವಾದ ಎರಡು ಹುಲಿಗಳಂತೆ ರಣರಂಗದಲ್ಲಿ ಸಂಚರಿಸಿದರು.
ಅದೃಶ್ಯೌ ಚ ಮುಹೂರ್ತೇನ ಶರಜಾಲೈರ್ಬಭೂವತುಃ |
ಮೇಘಜಾಲೈಃ ಪ್ರತಿಚ್ಛನ್ನೌ ಸೂರ್ಯಾಚಂದ್ರಮಸಾವಿವ ॥15॥
ಬಾಣಸಮೂಹಗಳಿಂದ ಆಚ್ಛಾದಿತವಾಗಿ ಮೋಡಗಳಿಂದ ಮರೆಯಾಗುವ ಸೂರ್ಯಚಂದ್ರರಂತೆ ಮುಹೂರ್ತಕಾಲ ಅದೃಶ್ಯರಾಗಿ ಬಿಡುತ್ತಿದ್ದರು.
ಪ್ರಕಾಶೌ ಚ ಮುಹೂರ್ತೇನ ತತ್ರೈವಾಸ್ತಾಮರಿಂದವೌ |
ವಿಮುಕ್ತೌ ಮೇಘಜಾಲೇನ ಶಶಿಸೂರ್ಯೌ ಯಥಾ ದಿವಿ ॥16॥
ಶತ್ರುದಮನಕಾರಿಗಳಾದ ಭೀಮಾಶ್ವತ್ಥಾಮರು ಆಗಸದಲ್ಲಿ ಮೋಡಗಳಿಂದ ಮುಕ್ತರಾಗುವ ಚಂದ್ರಸೂರ್ಯರಂತೆ ಬಾಣಸಮೂಹಗಳಿಂದ ಮುಕ್ತರಾಗಿ ಮುಹೂರ್ತಕಾಲ ಅದೇ ರಣರಂಗದಲ್ಲಿ ಬೆಳಗುತ್ತಲೂ ಇದ್ದರು.
ಅಥ ತತ್ರೈವ ಸಂಗ್ರಾಮೇ ವರ್ತಮಾನೇ ಸುದಾರುಣೇ |
ಅಪಸವ್ಯಂ ತತಶ್ಚಕ್ರೇ ದ್ರೌಣಿಸ್ತತ್ರ ವೃಕೋದರಮ್ ॥17॥
ಕಿರನ್ ಶರಶತೈರುಗ್ರೈರ್ಧಾರಾಭಿರಿವ ಪರ್ವತಮ್ |
ನ ತು ತನ್ಮಮೃಷೇ ಭೀಮಃ ಶತ್ರೋರ್ವಿಜಯಲಕ್ಷಣಮ್ ॥18॥
ಬಳಿಕ ಅದೇ ದಾರುಣ ಸಂಗ್ರಾಮ ನಡೆಯುತ್ತಿರುವಾಗಲೇ ಜಲಧಾರೆಗಳಿಂದ ಬೆಟ್ಟವನ್ನು ಮುಚ್ಚುವಂತೆ ಭಯಂಕರವಾದ ನೂರಾರು ಬಾಣಗಳಿಂದ ಭೀಮಸೇನನ್ನು ಮುಚ್ಚುತ್ತ ಅವನಿಗೆ ಅಶ್ವತ್ಥಾಮ ಪ್ರದಕ್ಷಿಣೆ ಮಾಡಲು ತೊಡಗಿದ. ಶತ್ರುವಿನ ಮೇಲೆ ಜಯವನ್ನು

ಸಾಧಿಸಿದುದಕ್ಕೆ ಸೂಚಕವಾಗಬಲ್ಲ ಈ ಪ್ರದಕ್ಷಿಣೆಯನ್ನು ಭೀಮ ಸಹಿಸಲಿಲ್ಲ.
ಪ್ರತಿಚಕ್ರೇ ತತೋ ರಾಜನ್ ಪಾಂಡವೋಽಪ್ಯಪಸವ್ಯತಃ।
ಮಂಡಲಾನಾಂ ವಿಭಾಗೇನ ಗತಪ್ರತ್ಯಾಗತೇನ ಚ ॥19॥
ರಾಜನೆ, ಇದಕ್ಕೆ ಪ್ರತಿಯಾಗಿ ಭೀಮನೂ ಕೂಡ ಮಂಡಲವಿಭಾಗ ಗತಪ್ರತ್ಯಾಗತಗಳಿಂದ ಅಶ್ವತ್ಥಾಮನಿಗೆ ಪ್ರದಕ್ಷಿಣೆ ಬರಲು ತೊಡಗಿದ.
ಬಭೂವ ತುಮುಲಂ ಯುದ್ಧಂ ತಯೋಸ್ತತ್ರ ಮಹಾಮೃಧೇ।
ಚರಿತ್ವಾ ವಿವಿಧಾನ್ ಮಾರ್ಗಾನ್ ಮಂಡಲಸ್ಥಾನಮೇವ ಚ ॥20॥
ಶರೈಃ ಪೂರ್ಣಾಯತೋತ್ಸೃಷ್ಟೈರನ್ಯೋನ್ಯಮಭಿಜಗ್ಮತುಃ।
ಅನ್ಯೋನ್ಯಸ್ಯ ವಧೇ ಚೈವ ಚಕ್ರತುರ್ಯತ್ನಮಾಹವೇ ॥21॥
ಹೀಗೆ ಮಹಾಯುದ್ಧದಲ್ಲಿ ಅವರಿಬ್ಬರಿಗೆ ದೊಂಬಿಕಾಳಗ ಉಂಟಾಯಿತು. ಮಂಡಲಸ್ಥಾನವನ್ನೂ ನಾನಾ ಮಾರ್ಗಗಳನ್ನೂ ಆಚರಿಸಿ ಹೆದೆಯನ್ನು ಪೂರ್ಣಸೆಳೆದು ಪ್ರಯೋಗಿಸಿದ ಬಾಣಗಳಿಂದ ಅವರು ಪರಸ್ಪರವಾಗಿ ಇದಿರಿಸಿದರು. ಕಾಳಗದಲ್ಲಿ ಪರಸ್ಪರರ ವಧೆಗೆ ಪ್ರಯತ್ನ ಮಾಡಿದರು.
ಇಯೇಷತುಶ್ಚ ವಿರಥಂ ಕರ್ತುಮನ್ಯೋನ್ಯಮಾಹವೇ ॥22॥
ಕಾಳಗದಲ್ಲಿ ಅವರು ಪರಸ್ಪರ ರಥಗಳನ್ನು ಪುಡಿಮಾಡಲು ಬಯಸಿದರು.
ತತೋ ದ್ರೌಣಿರ್ಮಹಾಸಶತ್ರಣಿ ಪ್ರಾದುಶ್ಚಕ್ರೇ ಮಹಾರಥಃ ॥23॥
ತಾನ್ಯಸ್ತ್ರೈರೇವ ಸಮರೇ ಪ್ರತಿಜಘ್ನೇ ಸ ಪಾಂಡವಃ ॥24॥
ಮಹಾರಥನಾದ ಅಶ್ವತ್ಥಾಮ ಮಹಾಅಸ್ತ್ರಗಳನ್ನು ಪ್ರಯೋಗಿಸಿದ. ಅವುಗಳನ್ನು ಅಸ್ತ್ರಗಳಿಂದಲೆ ಭೀಮ ತಡೆದ.
ತತೋ ಘೋರಂ ಮಹಾರಾಜ ಹ್ಯಸ್ತ್ರಯುದ್ಧಮವರ್ತತ।
ಗ್ರಹಯುದ್ಧಂ ಯಥಾ ಘೋರಂ ಪ್ರಜಾಸಂಹರಣೇ ಹ್ಯಭೂತ್ ॥25॥
ಆಗ ಮಹಾರಾಜ, ಸಕಲ ಪ್ರಾಣಿಸಂಹಾರಕಾಲದಲ್ಲಿ ಗ್ರಹಗಳ ನಡುವೆ ನಡೆಯುವ ಘೋರವಾದ ಯುದ್ಧದಂತೆ ಭೀಮ ಅಶ್ವತ್ಥಾಮರ ನಡುವೆ ಘೋರವಾದ ಅಸ್ತ್ರಯುದ್ಧ ನಡೆಯಿತು.
ತೇ ಬಾಣಾಃ ಸಮಸಜ್ಜಂತ ತಾಭ್ಯಾಂ ಕ್ಷಿಪ್ತಾ ಇತಸ್ತತಃ।
ದ್ಯೋತಯಂತೋ ದಿಶಃ ಸರ್ವಾಸ್ತಚ್ಚ ಸೈನ್ಯಂ ಸಮಂತತಃ ॥26॥
ಅವರಿಬ್ಬರಿಂದ ಪ್ರಯುಕ್ತವಾದ ಆ ಬಾಣಗಳು ಎಲ್ಲ ದಿಕ್ಕುಗಳನ್ನೂ ಬೆಳಗಿಸುತ್ತ ಒಂದನ್ನೊಂದು ಹೊಡೆದುಕೊಂಡವು. ಸೈನ್ಯವನ್ನು ಎಲ್ಲೆಡೆ ಹೊಡೆದುವು.
ಬಾಣಸಂಘಾವೃತಂ ಸರ್ವಮಾಕಾಶಂ ಸಮಪದ್ಯತ।
ಉಲ್ಕಾಪಾತಾವೃತಂ ಯದ್ವತ್ ಪ್ರಜಾಸಂಹರಣೇ ನೃಪ ॥27॥
ಇಡಿ ಆಕಾಶ ಬಾಣಸಮೂಹದಿಂದ, ಸರ್ವಪ್ರಾಣಿ ಸಂಹಾರಕಾಲದಲ್ಲಿ ಆಕಾಶವು ಉಲ್ಕಾಪಾತದಿಂದ ಆವೃತವಾಗುವಂತೆ ಆವೃತವಾಯಿತು.
ಬಾಣಾಭಿಘಾತಾತ್ ಸಂಜಜ್ಞೇ ತತ್ರ ಭಾರತ ಪಾವಕಃ।
ಸವಿಷ್ಫುಲಿಂಗೋ ದೀಪ್ತಾರ್ಚಿರ್ಯೋಽದಹದ್ ವಾಹಿನೀದ್ವಯಮ್ 28
ರಾಜನೆ, ಬಾಣಗಳ ಘರ್ಷಣದಿಂದ ಪ್ರಖರವಾದ ಜ್ವಾಲೆಗಳಿಂದ ಕಿಡಿಗಳಿಂದ ಕೂಡಿದ ಬೆಂಕಿ ಕಾಣಿಸಿಕೊಂಡಿತು. ಎರಡೂ ಸೈನ್ಯಗಳನ್ನು ದಹಿಸಿತು.
ತತ್ರ ಸಿದ್ಧಾ ಮಹಾರಾಜ ಸಂಪತಂತೋಽಬ್ರುವನ್ ವಚಃ ॥29॥
ಮಹಾರಾಜ, ಆಗ ಆಕಾಶದಲ್ಲಿ ಹಾರಾಡುತ್ತಿರುವ ಸಿದ್ಧರು ಆಗಸದಿಂದ ಕೆಳಗೆ ಇಳಿದು ಹೇಳತೊಡಗಿದರು.
ಅತಿ ಯುದ್ಧಾನಿ ಸರ್ವಾಣಿ ಯುದ್ಧಮೇತದವರ್ತತ।
ಸರ್ವಯುದ್ಧಾನಿ ಚೈತಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥30॥
``ಎಲ್ಲ ಯುದ್ಧಗಳನ್ನು ಮೀರಿಸಿದುದು ಈ ಯುದ್ಧ. ಯಾವ ಯುದ್ಧವೂ ಇದಕ್ಕೆ ಹದಿನಾರನೆ ಒಂದಂಶಕ್ಕೆ ಸಮವಾಗದು.
ನೈತಾದೃಶಂ ಪುನರ್ಯುದ್ಧಂ ಭವಿಷ್ಯತಿ ಕದಾಚನ।
ಅಹೋ ಜ್ಞಾನೇನ ಸಂಪನ್ನಾವುಭೌ ಚೋಗ್ರಪರಾಕ್ರಮೌ ॥31॥
``ಇಂಥ ಯುದ್ಧ ಮುಂದೆ ಎಂದೂ ಆಗದು. ಆಹಾ! ಇಬ್ಬರೂ ಜ್ಞಾನಸಂಪನ್ನರು! ಇಬ್ಬರೂ ಭಯಂಕರ ಪರಾಕ್ರಮಿಗಳು!
ಅಹೋಽನಯೋರ್ಬಲಂ ಯುದ್ಧೇ ಅಹೋ ಚಾಪಿ ಕೃತಾಸ್ತ್ರತಾ।
ಅಹೋ ಜ್ಞಾನಸ್ಯ ಸಂಪಚ್ಚ ಅಹೋ ಸೌಷ್ಠವಮೇವ ಚ ॥32॥
``ಆಹಾ! ಇವರ ಯುದ್ಧ ಸಾಮರ್ಥ್ಯವೆ! ಆಹಾ! ಇವರ ಅಸ್ತ್ರಪಾಂಡಿತ್ಯವೆ! ಆಹಾ! ಇವರ ಜ್ಞಾನಸಂಪತ್ತೆ! ಆಹಾ! ಇವರ ಕೌಶಲವೆ!
ಸ್ಥಿತಾವೇತೌ ಹಿ ಸಮರೇ ಕಾಲಾಂತಕಯಮೋಪಮೌ।
ರುದ್ರೌ ದ್ವಾವಿವ ಸಂಭೂತೌ ತಥಾ ದ್ವಾವಿವ ಭಾಸ್ಕರೌ ॥33॥
``ರಣರಂಗದಲ್ಲಿ ಇವರು ಕಾಲಾಂತಕ ಯಮರಂತೆ ನಿಂತಿದ್ದಾರೆ! ಇಬ್ಬರೂ ಇಬ್ಬರು ರುದ್ರರಂತೇ, ಇಬ್ಬರು ಸೂರ್ಯರಂತೇ ಆಗಿದ್ದಾರೆ.
ಯಮಾವಿವ ನರವ್ಯಾಘ್ರೌ ಘೋರರೂಪಾವಿಮೌ ರಣೇ। |34॥
``ಪುರುಷೋತ್ತಮರು ಇವರು, ರಣರಂಗದಲ್ಲಿ ಇಬ್ಬರೂ ಘೋರರೂಪದ ಯಮರಂತಿದ್ದಾರೆ.''
ಇತಿ ಸ್ಮ ವಾಚಃ ಶ್ರೂಯಂತೇ ಸಂಪತಂತ್ಯೋ ಮುಹುರ್ಮುಹುಃ।
ಸಿಂಹನಾದಶ್ಚ ಸಂಜಜ್ಞೇ ಸಮೇತಾನಾಂ ದಿವೌಕಸಾಮ್ ॥35॥

ಹೀಗೆ ಮಾತುಗಳು ಮತ್ತೆ ಮತ್ತೆ ಕೇಳಿ ಬಂದುವು ಮತ್ತು ದೇವತೆಗಳು ಆಕಾಶದಲ್ಲಿ ಬಂದು ನೆರೆದು ಸಿಂಹನಾದವನ್ನೂ ಮಾಡಿದರು.
ಅದ್ಭುತಂ ಚಾಪ್ಯಚಿಂತ್ಯಂ ಚ ದೃಷ್ಟ್ವಾ ಯುದ್ಧಂ ಮಹಾರಣೇ ॥36॥
ಸಿದ್ಧಚಾರಣಸಂಘಾನಾಂ ವಿಸ್ಮಯಃ ಸಮಪದ್ಯತ |
ಪ್ರಶಂಸಂತಿ ತದಾ ದೇವಾಃ ಸಿದ್ಧಾಶ್ಚ ಪರಮರ್ಷಯಃ ॥37॥
ಸಾಧು ದ್ರೌಣೇ ಮಹಾಬಾಹೋ ಸಾಧು ಭೀಮೇತಿ ಚಾಬ್ರುವನ್॥38॥
ಮಹಾರಣರಂಗದಲ್ಲಿ ಅದ್ಭುತ ಅಚಿಂತ್ಯವಾದ ಯುದ್ಧವನ್ನು ಕಂಡು ಸಿದ್ಧ ಚಾರಣಸಮೂಹಗಳಿಗೆ ವಿಸ್ಮಯ ಉಂಟಾಯಿತು.
ದೇವತೆಗಳೂ ಸಿದ್ಧರೂ ಮಹರ್ಷಿಗಳೂ ಹೊಗಳುತ್ತ `ಭೇಷ್ ಮಹಾಬಾಹು ಅಶ್ವತ್ಥಾಮ, ಭೇಷ್ ಮಹಾಬಾಹು ಭೀಮ' ಎಂದರು.
ತೌ ಶೂರೌ ಸಮರೇ ರಾಜನ್ ಪರಸ್ಪರಕೃತಾಗಸೌ ॥39॥
ಪರಸ್ಪರಮುದೀಕ್ಷೇತಾಂ ಕ್ರೋಧಾದುದ್ವೃತ್ಯ ಚಕ್ಷುಷೀ |
ಕ್ರೋಧರಕ್ತೇಕ್ಷಣೌ ತೌ ತು ಕ್ರೋಧಾತ್ ಪ್ರಸ್ಫುರಿತಾಧರೌ ॥40॥
ರಾಜನೆ, ಯುದ್ಧದಲ್ಲಿ ಅವರಿಬ್ಬರು ಪರಸ್ಪರ ಹೊಡೆದು ಕೋಪದಿಂದ ಕಣ್ಣುಗಳನ್ನು ಎತ್ತಿ ಪರಸ್ಪರ ದುರುಗುಟ್ಟಿ ನೋಡಿದರು.
ಕ್ರೋಧದಿಂದ ಅವರ ಕಣ್ಣು ಕೆಂಪಾದುವು. ಕ್ರೋಧದಿಂದ ತುಟಿಗಳು ಅದುರಿದುವು.
ಕ್ರೋಧಾತ್ ಸಂದಶ್ಯ ದಶನೈಸ್ತಥೈವ ದಶನಚ್ಛದೌ |
ಛಾದಯಾಮಾಸತುರುಭೌ ತಾವನ್ಯೋನ್ಯಂ ರಣೇ ಶರೈಃ ॥41॥
ಕ್ರೋಧದಿಂದ ಹಲ್ಲುಗಳಿಂದ ತುಟಿಗಳನ್ನು ಕಚ್ಚಿಕೊಂಡು ಇಬ್ಬರೂ ರಣರಂಗ ದಲ್ಲಿ ಬಾಣಗಳಿಂದ ಪರಸ್ಪರ ಮುಚ್ಚಿದರು.
ಶರಾಂಬುಧಾರೌ ಸಮರೇ ಶಸ್ತ್ರವಿದ್ಯುತ್ಪ್ರಕಾಶಿನೌ |
ತಾವನ್ಯೋನ್ಯಂ ಧ್ವಜೌ ವಿದ್ಧ್ವಾ ಸಾರಥೀ ಚ ಮಹಾರಥೌ ॥42॥
ಅನ್ಯೋನ್ಯಸ್ಯ ಹಯಾಂಶ್ಚಾಪಿ ಸಾಯಕೈರ್ನಿರ್ಬಿಭೇದತುಃ ॥43॥
ಮಿಂಚಿನಂಥ ಶಸ್ತ್ರವನ್ನು ಝಳಪಿಸಿದರು. ಬಾಣಗಳ ಮಳೆಗರೆದರು. ಮಹಾರಥರಿಬ್ಬರೂ ಯುದ್ಧದಲ್ಲಿ ಪರಸ್ಪರ ಧ್ವಜಗಳನ್ನು
ಕಡಿದರು. ಸಾರಥಿಗಳನ್ನು ಹೊಡೆದರು. ಪರಸ್ಪರವಾಗಿ ಕುದುರೆಗಳನ್ನು ಬಾಣಗಳಿಂದ ಹೊಡೆದರು.
ತತಃ ಕ್ರುದ್ಧೌ ಮಹಾರಾಜ ಬಾಣೌ ಗೃಹ್ಯ ಮಹಾಹವೇ |
ಉಭೌ ಚಿಕ್ಷಿಪತುಸ್ತೂರ್ಣಮನ್ಯೋನ್ಯಸ್ಯ ವಧೈಷಿಣೌ ॥44॥
ಮಹಾರಾಜ, ಬಳಿಕ ಕ್ರುದ್ಧರಾದ ಭೀಮ ಅಶ್ವತ್ಥಾಮರು ಇಬ್ಬರೂ ಪರಸ್ಪರ ವಧವನ್ನು ಬಯಸಿ ಬೇಗನೆ ಎರಡು ಬಾಣಗಳನ್ನು
ಎತ್ತಿಕೊಂಡು ಎಸೆದರು.
ತೌ ಸಾಯಕೌ ಮಹಾರಾಜ ದ್ಯೋತಮಾನೌ ಚಮೂಮುಖೇ |
ಆಜಘ್ನತುಃ ಸಮಾಸಾದ್ಯ ವಜ್ರವೇಗೌ ದುರಾಸದೌ ॥45॥
ಮಹಾರಾಜ, ಆ ಎರಡು ಬಾಣಗಳು ಮಿಂಚಿನ ವೇಗದವು, ತಡೆಯ ಲಾಗದವು. ಸೈನ್ಯದ ಮುಂಭಾಗದಲ್ಲಿ ಹೊಳೆಯುತ್ತ ಇಬ್ಬರನ್ನೂ
ಹೊಡೆದುವು.
ತೌ ಪರಸ್ಪರವೇಗೇನ ಶರಾಭ್ಯಾಮಾಹತೌ ಭೃಶಮ್ |
ನಿಪೇತತುರ್ಮಹಾರಾಜ ಸ್ವರಥೋಪಸ್ಥಯೋಸ್ತದಾ ॥46॥
ಮಹಾರಾಜ, ಅವರಿಬ್ಬರೂ ವೇಗದಿಂದ ಬಾಣಗಳಿಂದ ಬಹಳವಾಗಿ ಹೊಡೆದುಕೊಂಡು ತಮ್ಮ ರಥದ ಮಧ್ಯದಲ್ಲಿ ಬಿದ್ದರು.
ತತಸ್ತು ಸಾರಥಿರ್ಜ್ಞಾತ್ವಾ ದ್ರೋಣಪುತ್ರಮಚೇತನಮ್ |
ಅಪೋವಾಹ ರಣಾದ್ ರಾಜನ್ ಸರ್ವಕ್ಷತ್ರಸ್ಯ ಪಶ್ಯತಃ ॥47॥
ರಾಜನೆ, ಅಶ್ವತ್ಥಾಮ `ಅಚೇತನ' ಶವದಂತೆ ಬಹಳ ಮೂರ್ಛೆಗೊಂಡು ಪ್ರಜ್ಞಾಶೂನ್ಯನಾದುದನ್ನು ತಿಳಿದು ಸಾರಥಿಯು ಎಲ್ಲ
ಕ್ಷತ್ರಿಯಯೋಧರು ನೋಡುತ್ತಿದ್ದಂತೆ ರಣರಂಗದಿಂದಾಚೆಗೇ ಒಯ್ದನು.
ತಥೈವ ಪಾಂಡವಂ ರಾಜನ್ ವಿಹ್ವಲಂತಂ ಮುಹುರ್ಮುಹುಃ |
ಅಪೋವಾಹ ರಥೇನಾಜೌ ವಿಶೋಕಃ ಶತ್ರುತಾಪನಮ್ ॥48॥
ಬಳಿಕ ಹಾಗೆಯೇ ಪುನಃಪುನಃ ಶತ್ರುಗಳಿಗೆ ತಾಪ ಉಂಟುಮಾಡುವ ಭೀಮ ಸೇನನೂ ಕೂಡ `ವಿಹ್ವಲ' ಮೈ ನಡುಕಗೊಂಡಿದ್ದರಿಂದ
ಸಾರಥಿ ವಿಶೋಕನು ರಥದಿಂದ ಅವನನ್ನು `ತಥೈವ ಆಜೌ' ಆ ರಣರಂಗದಲ್ಲಿಯೇ ಬೇರೆ ಕಡೆ ಒಯ್ದನು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಪಂಚದಶೋಽಧ್ಯಾಯಃ ॥15॥
ಹದಿನಾರನೆಯ ಅಧ್ಯಾಯ
ಅರ್ಜುನಸಂಶಪ್ತಕರ ಯುದ್ಧ
ಧೃತರಾಷ್ಟ್ರಃ
ಕಥಂ ಸಂಶಪ್ತಕೈಃ ಸಾರ್ಧಮರ್ಜುನಸ್ಯಾಭವದ್ ರಣಃ |
ಅನ್ಯೇಷಾಂ ಚ ಮದೀಯಾನಾಂ ಸಹ ಪಾರ್ಥೈರ್ಬ್ರವೀಹಿ ಮೇ ॥1॥
ಅಶ್ವತ್ಥಾಮ್ನಶ್ಚ ಯದ್ ಯುದ್ಧಮರ್ಜುನಸ್ಯ ಚ ಸಂಜಯ ॥2॥
ಧೃತರಾಷ್ಟ್ರ ನುಡಿದ, `ಸಂಜಯ, ಸಂಶಪ್ತಕರೊಂದಿಗೆ ಅರ್ಜುನನ ಯುದ್ಧ ಹೇಗೆ ನಡೆಯಿತು? ಬೇರೆ ನಮ್ಮವರಿಗೆ ಪಾಂಡವರೊಂದಿಗೆ
ಹೇಗೆ ಯುದ್ಧ ನಡೆಯಿತು? ಅಶ್ವತ್ಥಾಮನಿಗೂ ಅರ್ಜುನನಿಗೂ ಹೇಗೆ ಯುದ್ಧ ನಡೆಯಿತು? ಹೇಳು.'
ಸಂಜಯಃ
ಶೃಣು ರಾಜನ್ ಯಥಾವೃತ್ತಂ ಸಂಗ್ರಾಮಂ ಬ್ರುವತೋ ಮಮ |

ವೀರಾಣಾಂ ಶತ್ರುಭಿಃ ಸಾರ್ಧಂ ದೇಹಪಾಪ್ಮವಿನಾಶನಮ್ ॥3॥
ಸಂಜಯನು ನುಡಿದ– ರಾಜನೆ, ವೀರರಿಗೆ ಶತ್ರುಗಳೊಂದಿಗೆ ಶರೀರ ಮತ್ತು ಪಾಪಗಳನ್ನು ನಾಶಗೊಳಿಸುವ ಸಂಗ್ರಾಮವನ್ನು ಹೇಗೆ ನಡೆಯಿತೋ ಹಾಗೇ ಹೇಳುತ್ತೇನೆ, ಕೇಳು.
ದುರ್ಯೋಧನನು ದ್ರೋಣರಲ್ಲಿ `ಯುಧಿಷ್ಠಿರನನ್ನು ಜೀವಂತ ಸೆರೆಹಿಡಿದು ತನ್ನಿರಿ' ಎಂದು ಕೇಳಿಕೊಂಡ. ದ್ರೋಣನಿಗೆ ಸಂತೋಷವಾಯಿತು. `ಏಕೆ?
ಯುಧಿಷ್ಠಿರನನ್ನು ಕೊಲ್ಲಕೂಡದೆ? ನಿನಗೆ ಇಂಥಾ ಒಳ್ಳೆಯ ಬುದ್ಧಿ ಬಂತೆ?
ಯುಧಿಷ್ಠಿರನನ್ನು ಗೆದ್ದು ಅವನಿಗೆ ಅವನ ರಾಜ್ಯ ನೀಡಿ ಸೋದರಸ್ನೇಹವನ್ನು ಉಳಿಸಿಕೊಳ್ಳುವ ಅಭಿಪ್ರಾಯ ನಿನಗೆ ಇದೆಯೇ?' ಎಂದು ದ್ರೋಣ ಕೇಳಿದ. ದುರ್ಯೋಧನನೆಂದ, `ಪುನಃ ಜೂಜಾಡಿ ಅವನನ್ನು ಶಾಶ್ವತವಾಗಿ ಕಾಡಿಗೆ ಕಳಿಸಬೇಕು' ಎಂದು.
ದ್ರೋಣ ನಿರಾಶನಾಗಿ ನುಡಿದ, `ಧರ್ಮರಾಜನು ಅರ್ಜುನನ ರಕ್ಷಣೆಯಲ್ಲಿ ಇಲ್ಲದಿದ್ದರೆ ನಾನು ಸೆರೆ ಹಿಡಿಯಬಲ್ಲೆ. ಅವನನ್ನು ಹೇಗಾದರೂ ದೂರ ಒಯ್ಯಿರಿ. ಕೃಷ್ಣಾರ್ಜುನರು ಅಜೇಯರು.'
ಆಗ ತ್ರಿಗರ್ತರಾಜ ಸುಶರ್ಮನೆಂದ : `ನಮ್ಮಲ್ಲಿ ಅರ್ಜುನ ಅಪರಾಧ ಗೈದಿದ್ದಾನೆ. ಅವನನ್ನು ನಾನು ಕೊಲ್ಲುತ್ತೇನೆ. ಇಲ್ಲವೆ, ನಾನು ಸಾಯುತ್ತೇನೆ.' ದುರ್ಯೋಧನ `ಆಗಲಿ, ನೀನೆ ಕೊಲ್ಲು' ಎಂದು ಅವನನ್ನೆ ಆ ಕಾರ್ಯಕ್ಕೆ ನೇಮಿಸಿದ. ಸತ್ಯರಥ ಸತ್ಯವರ್ಮ ಸತ್ಯವ್ರತ ಸತ್ಯೇಷು ಸತ್ಯಕರ್ಮ ಈ ಐದು ಮಂದಿ ಸುಶರ್ಮನ ಸೋದರರು ಕೂಡಿ ಅಗ್ನಿಪ್ರತಿಷ್ಠೆ ಮಾಡಿ ಯಜ್ಞಮಾಡಿ ಅಗ್ನಿಯ ಮುಂದೆ ಅರ್ಜುನನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದರು. `ಕೊಲ್ಲದೆ ಹೋದರೆ ಪಂಚಮಹಾಪಾತಕಿಗಳ ಎಲ್ಲ ನರಕಗಳೂ ನಮಗಾಗಲಿ' ಎಂದು `ಸಂಶಪ್ತಕ' ದೃಢವಾದ ಶಪಥ ಮಾಡಿದವರಾದ್ದರಿಂದ ಅವರು ಸಂಶಪ್ತಕರೆನಿಸಿದರು. ಅವರ ಸೈನ್ಯದಲ್ಲಿ ಒಂದು ಸಾವಿರ ರಥಗಳು, ಮುನ್ನೂರು ಆನೆಗಳು, ಹದಿನಾಲ್ಕು ಸಾವಿರ ಕುದುರೆಗಳು, ಎರಡು ಲಕ್ಷ ಕಾಲಾಳುಗಳಿದ್ದರು. ಜೊತೆಗೆ ಶಿಬಿಗಳೂ ಸಾಲ್ವರೂ ನಾರಾಯಣಸೈನ್ಯದವರೂ ಸೇರಿದ್ದರು. ಅರ್ಜುನನನ್ನು ಬಲುದೂರದಲ್ಲಿ ಯುದ್ಧಕ್ಕೆ ಆಹ್ವಾನಿಸಿ ಯುಧಿಷ್ಠಿರನಿಂದ ಅರ್ಜುನ ದೂರದಲ್ಲಿರುವಂತೆ ನೋಡಿಕೊಂಡರು. ಅವರ ಯುದ್ಧದ ವಿವರವನ್ನು ಧೃತರಾಷ್ಟ್ರ ಸಂಜಯನಿಂದ ತಿಳಿಯಲು ಬಯಸುತ್ತಾನೆ.
ಪಾರ್ಥಃ ಸಂಶಪ್ತಕಬಲಂ ಪ್ರವಿಶ್ಯಾರ್ಣವಸನ್ನಿಭಮ್ |
ವ್ಯಕ್ಷೋಭಯದಮಿತ್ರಘ್ನೋ ಮಹಾವಾತ ಇವಾರ್ಣವಮ್ ॥4॥
ರಾಜನೆ, ಶತ್ರುಸಂಹಾರಕನಾದ ಅರ್ಜುನ ಸಾಗರದಂತೆ ಅಪಾರವಾದ ಸಂಶಪ್ತಕಸೈನ್ಯವನ್ನು ಹೊಕ್ಕು ಚಂಡಮಾರುತವು ಸಾಗರವನ್ನು ಕ್ಷೋಭೆಗೊಳಿಸು ವಂತೆ ಕ್ಷೋಭೆಗೊಳಿಸಿದ.
ಶಿರಾಂಸ್ಯುನ್ಮಥ್ಯ ವೀರಾಣಾಂ ಶಿತೈರ್ಭಲ್ಲೈರ್ಧನಂಜಯಃ |
ಪೂರ್ಣಚಂದ್ರಾಭವಕತ್ರಣಿ ಸ್ವಕ್ಷಿಭ್ರೂದಶನಾನಿ ಚ ॥5॥
ಸಂತಸ್ತಾರ ಕ್ಷಿತಿಂ ಕ್ಷಿಪ್ರಂ ವಿನಾಲೈರ್ನಲಿನೈರಿವ ॥6॥
ಅರ್ಜುನನು ಹರಿತವಾದ ಭಲ್ಲೆಗಳಿಂದ ವೀರರ ಶಿರಸ್ಸುಗಳನ್ನು ತರಿದು ರಣಭೂಮಿಯಲ್ಲಿ ಚೆಲ್ಲಿದ. ಪೂರ್ಣಚಂದ್ರನಂಥ ಮುಖಗಳಿಂದ ಸುಂದರವಾದ ಕಣ್ಣು ಹುಬ್ಬು ಹಲ್ಲುಗಳಿಂದ ಕೂಡಿದ್ದು ನಾಳದಿಂದ ಕತ್ತರಿಸಿದ ಕಮಲಗಳಂತಿದ್ದ ಆ ಶಿರಸ್ಸುಗಳಿಂದ ಕ್ಷಣದಲ್ಲಿ ರಣಭೂಮಿಯನ್ನು ಆಚ್ಛಾದಿಸಿದ.
ಸುವೃತ್ತಾನಾಯತಾನ್ ಪುಷ್ಟಾನ್ ಚಂದನಾಗರುರೂಷಿತಾನ್ |
ಸಾಯುಧಾನ್ ಸತಲತ್ರಾಣಾನ್ ಪಂಚಾಸ್ಯಾನಿವ ಪನ್ನಗಾನ್ ॥7॥
ಬಾಹೂನ್ ಪಾದಾನಮಿತ್ರಾಣಾಮುಚ್ಚಕರ್ತಾರ್ಜುನೋ ರಣೇ ॥8॥
ದುಂಡಾದ ನಿಡಿದಾದ ಪುಷ್ಟವಾದ ಚಂದನ ಅಗರು ಲೇಪಿತವಾದ ಆಯುಧವನ್ನು ಕೈಚೀಲವನ್ನು ಹಿಡಿದಿರುವ ಐದು ಹೆಡೆಗಳ ಸರ್ಪಗಳಂತಿರುವ ಶತ್ರುಗಳ ಕೈಕಾಲುಗಳನ್ನು ಕತ್ತರಿಸಿದ ಅರ್ಜುನ.
ಧುರ್ಯಾನ್ ಧುರ್ಯೇತರಾನ್ ಸೂತಾನ್ ಧ್ವಜಾಂಶ್ಚಾಪಾನಿ
ಸಾಯಕಾನ್ |
ಪಾಣೀನೂರೂಂಶ್ಚ ನಿಶಿತೈರ್ಭಲ್ಲೈಶ್ಚಿಚ್ಛೇದ ಪಾಂಡವಃ ॥9॥
ಶ್ರೇಷ್ಠರಥಿಕರನ್ನೂ ಇತರ ರಥಿಕರನ್ನೂ ಸೂತರನ್ನೂ ಧ್ವಜಗಳನ್ನೂ ಧನುಸ್ಸು ಗಳನ್ನೂ ಬಾಣಗಳನ್ನೂ ಯೋಧರ ಕೈತೊಡೆಗಳನ್ನೂ ಹರಿತವಾದ ಭಲ್ಲೆಗಳಿಂದ ಅರ್ಜುನ ಕತ್ತರಿಸಿದ.
ದ್ವಿಪಾನ್ ರಥಾನ್ ಹಯಾಂಶ್ಚೈವ ಸಾರೋಹಾನರ್ಜುನೋ ಯುಧಿ |
ಶರೈರನೇಕಸಾಹಸ್ರೈರ್ನಿನ್ಯೇ ರಾಜನ್ ಯಮಕ್ಷಯಮ್ ॥10॥
ಆನೆ ರಥ ಕುದುರೆಗಳನ್ನು ಅವುಗಳ ಸವಾರರನ್ನು ರಣರಂಗದಲ್ಲಿ, ರಾಜನೆ, ಅರ್ಜುನನು ಅನೇಕ ಸಾವಿರ ಬಾಣಗಳಿಂದ ಯಮಲೋಕಕ್ಕೆ ಕಳಿಸಿದ.
ತೇ ಪ್ರವೀರಾಃ ಸುಸಂರಬ್ಧಾ ನರ್ದಮಾನಾ ಇವರ್ಷಭಾಃ |
ವಾಶಿತಾರ್ಥಮಭಿಕ್ರುದ್ಧಾ ಅಭಿದ್ರುತ್ಯ ಮದೋತ್ಕಟಾಃ ॥11॥
ನಿಘ್ನಂತಮಭಿಜಘ್ನುಸ್ತೇ ಶರೈಃ ಶೃಂಗೈರಿವರ್ಷಭಾಃ ॥12॥
ಆ ಮಹಾವೀರರರು ಕುಪಿತರಾಗಿ, ಬೆದೆಗೆ ಬಂದ ಹಸುವಿಗಾಗಿ ಗುರುಗುಟ್ಟುವ ಮದಿಸಿದ ಗೂಳಿಗಳಂತೆ ಗರ್ಜಿಸುತ್ತ, ಕ್ರೋಧದಿಂದ ಮುನ್ನುಗ್ಗಿ, ಹೋರಿಗಳು ಕೊಂಬುಗಳಿಂದ ಹೋರಿಯನ್ನು ತಿವಿಯುವಂತೆ, ಬಾಣಗಳಿಂದ ಹೊಡೆಯುತ್ತಿದ್ದ ಅರ್ಜುನನನ್ನು ಹೊಡೆದರು.
ತಸ್ಯ ತೇಷಾಂ ಚ ತದ್ಯುದ್ಧಮಭವದ್ ರೋಮಹರ್ಷಣಮ್ |
ತ್ರೈಲೋಕ್ಯವಿಜಯೇ ಯದ್ವದ್ ದೈತ್ಯಾನಾಂ ಸಹ ವಜ್ರಿಣಾ ॥13॥

ಅರ್ಜುನನಿಗೆ ಆ ಸಂಶಪ್ತಕರೊಡನೆ ರೋಮಾಂಚಕರವಾದ ಯುದ್ಧ ನಡೆಯಿತು. ಮೂರ್ಲೋಕದ ವಿಜಯಕ್ಕಾಗಿ ದೈತ್ಯರೊಡನೆ ಇಂದ್ರ ನಡೆಸಿದ ಯುದ್ಧ ದಂತಿತ್ತು ಆ ಯುದ್ಧ.
ಅಸ್ತ್ರೈರಸ್ತ್ರಾಣಿ ಸಂವಾರ್ಯ ದ್ವಿಷತಾಂ ಸರ್ವತೋಽರ್ಜುನಃ |
ಇಷುಭಿರ್ಬಹುಭಿಸ್ತೂರ್ಣಂ ವಿದ್ಧ್ವಾ ಪ್ರಾಣಾನ್ ನಿರಾಸದತ್ ॥14॥
ಶತ್ರುಗಳ ಎಲ್ಲ ಅಸ್ತ್ರಗಳನ್ನು ಅಸ್ತ್ರಗಳಿಂದ ತಡೆಯುತ್ತ ಅರ್ಜುನ ವೇಗವಾಗಿ ಬಹಳ ಬಾಣಗಳಿಂದ ಅವರ ಪ್ರಾಣಗಳನ್ನು ತೆಗೆದ.
ಛಿನ್ನತ್ರಿವೇಣುಚಕ್ರಾಕ್ಷಾನ್ ಹತಯೋಧಾಶ್ವಸಾರಥೀನ್ |
ವಿಧ್ವಸ್ತಾಯುಧತೂಣೀರಾನ್ ಸಮುನ್ಮಥಿತಕೇತನಾನ್ ॥15॥
ಸಂಛಿನ್ನಯೋಕ್ತ್ರರಶ್ಮೀಷಾನ್ ವಿತ್ರಿವೇಣೂನ್ ವಿಕೂಬರಾನ್ |
ವಿಶಮ್ಯಾಬಂಧುರಯುಗಾನ್ ವಿಜಂಘಾಜಾನುಮಂಡಲಾನ್ ॥16॥
ರಥಾನ್ ವಿಶಕಲೀಕುರ್ವನ್ ಮಹಾಭ್ರಾಣೀವ ಮಾರುತಃ |
ವಿಸ್ಮಾಪಯನ್ ಪ್ರೇಕ್ಷಕಾಣಾಂ ದ್ವಿಷತಾಂ ಭಯವರ್ಧನಮ್ ॥17॥
ಮಹಾರಥಸಹಸ್ರಸ್ಯ ಸಮಂ ಕರ್ಮಾರ್ಜುನೋಽಕರೋತ್ ॥18॥
ಶತ್ರುಗಳ ರಥಗಳಲ್ಲಿ, ತ್ರಿವೇಣು ಚಕ್ರ ಅಚ್ಚುಮರಗಳು ಪುಡಿಯಾದವು. ಯೋಧ ಅಶ್ವ ಸಾರಥಿಗಳು ಮಡಿದರು. ಆಯುಧ ಬತ್ತಳಿಕೆಗಳು ನಾಶವಾದವು. ಧ್ವಜಸ್ತಂಭಗಳು ಬಿದ್ದುವು. ನೊಗದ ಹಗ್ಗ ಕಡಿವಾಣಗಳು ಕಡಿದುವು. ತ್ರಿವೇಣು ಕೂಬರ ಶಮ್ಯಾ ಬಂಧುರ ಯುಗ ಜಂಘಾ ಜಾನುಮಂಡಲಗಳು ಎಲ್ಲವೂ ಪುಡಿಯಾದವು. ಬಿರುಗಾಳಿ ಮೋಡಗಳನ್ನು ಚದುರಿಸುವಂತೆ ಅರ್ಜುನ ಸಂಶಪ್ತಕರ ರಥಗಳನ್ನು ಚೂರುಚೂರು ಮಾಡುತ್ತ ಪ್ರೇಕ್ಷಕರಿಗೆ ವಿಸ್ಮಯ ಉಂಟುಮಾಡಿದ, ಶತ್ರುಗಳಿಗೆ ಭಯ ಹೆಚ್ಚಿಸಿದ. ಸಾವಿರಮಹಾರಥರು ಮಾಡುವ ಸಾಹಸಗಳನ್ನು ಒಮ್ಮೆಲೆ ಅರ್ಜುನ ಮಾಡಿ ತೋರಿಸಿದ.
ಸಿದ್ಧದೇವರ್ಷಿಸಂಘಾಶ್ಚ ಚಾರಣಾಶ್ಚಾಪಿ ತುಷ್ಟುವುಃ ॥19॥
ದೇವದುಂದುಭಯೋ ನೇದುಃ ಪುಷ್ಪವರ್ಷಾಣಿ ಚಾಪತನ್ |
ಕೇಶವಾರ್ಜುನಯೋರ್ಮೂರ್ಧ್ನಿ ಪ್ರಾಹ ವಾಕ್ ಚಾಶರೀರಿಣೀ ॥20॥
ಸಿದ್ಧರು ದೇವತೆಗಳು ಮತ್ತು ಋಷಿಗಳ ಸಮೂಹಗಳು ಚಾರಣರೂ ಕೊಂಡಾಡಿದರು. ದೇವದುಂದುಭಿಗಳು ಮೊಳಗಿದುವು. ಕೃಷ್ಣಾರ್ಜುನರ ತಲೆಯ ಮೇಲೆ ಹೂಮಳೆ ಸುರಿದವು. ಅಶರೀರವಾಣಿ ಕೇಳಿಸಿತು.
ಅಶರೀರಿಣೀ ವಾಕ್
ಚಂದ್ರಾರ್ಕಾನಿಲವಹ್ನೀನಾಂ ಕಾಂತಿದೀಪ್ತಿಬಲದ್ಯುತೀಃ |
ಯೌ ಸದಾ ಬಿಭೃತೋ ವೀರಾವಿಮೌ ತೌ ಕೇಶವಾರ್ಜುನೌ ॥21॥
ಅಶರೀರವಾಣಿ ನುಡಿಯಿತು– `ಚಂದ್ರನ ಕಾಂತಿ, ಸೂರ್ಯಪ್ರಕಾಶ, ವಾಯು ಬಲ, ಅಗ್ನಿಯ ತೇಜಸ್ಸೆಲ್ಲವೂ ಸದಾ ವೀರರಾದ ಈ ಕೃಷ್ಣಾರ್ಜುನರಲ್ಲಿದೆ.
ಬ್ರಹ್ಮೇಶಾನಾವಿವ ಪುರಾ ವೀರಾವೇಕರಥೇ ಸ್ಥಿತೌ |
ಸರ್ವಭೂತವರೌ ವೀರೌ ನರನಾರಾಯಣಾವಿಮೌ ॥22॥
`ಹಿಂದೆ ಬ್ರಹ್ಮರುದ್ರರು ಒಂದು ರಥಧಲ್ಲಿ ಕುಳಿತಂತೆ ಈಗ ಒಂದು ರಥದಲ್ಲಿ ಕುಳಿತ ಈ ಇಬ್ಬರು ವೀರರು ಎಲ್ಲ ಪ್ರಾಣಿಗಳಲ್ಲಿ ಶ್ರೇಷ್ಠರಾದ ನರನಾರಾಯಣರು' ಎಂದು.
ಸಂಜಯಃ
ಇತ್ಯೇತನ್ಮಹದಾಶ್ಚರ್ಯಂ ದೃಷ್ಟ್ವಾ ಶ್ರುತ್ವಾ ಚ ಭಾರತ |
ಅಶ್ವತ್ಥಾಮಾ ಸುಸಂಕ್ರುದ್ಧಃ ಕೃಷ್ಣಾವಭ್ಯದ್ರವದ್ ರಣೇ ॥23॥
ಸಂಜಯನು ನುಡಿದ– ರಾಜನೇ, ಈ ಮಹಾಶ್ಚರ್ಯವನ್ನು ಅಶ್ವತ್ಥಾಮನು ಕಂಡು, ಕೇಳಿ ಕುಪಿತನಾಗಿ ರಣರಂಗದಲ್ಲಿ ಕೃಷ್ಣಾರ್ಜುನರ ಕಡೆಗೆ ಮುನ್ನುಗ್ಗಿ,ಬಂದ.
ಅಥ ಪಾಂಡವಮಸ್ಯಂತಮಮಿತ್ರಾಂತಕರಾನ್ ಶರಾನ್ |
ಸೇಷುಣಾ ಪಾಣಿನಾಽಽಹೂಯ ಪ್ರಹಸನ್ ದ್ರೌಣಿರಬ್ರವೀತ್ ॥24॥
ಶತ್ರುಗಳನ್ನು ನಾಶಮಾಡುವ ಬಾಣಗಳನ್ನು ಪ್ರಯೋಗಿಸುತ್ತಿದ್ದ ಅರ್ಜುನನನ್ನು ಬಾಣಸಹಿತವಾದ ಕೈಯಿಂದ ಯುದ್ಧಕ್ಕೆ ಆಹ್ವಾನಿಸಿ ನಗುತ್ತ ನುಡಿದ.
ಅಶ್ವತ್ಥಾಮಾ
ಯದಿ ಮಾಂ ಮನ್ಯಸೇ ವೀರ ಪ್ರಾಪ್ತಮಾರ್ಯಮಿವಾತಿಥಿಮ್ |
ತತಃ ಸರ್ವಾತ್ಮನಾಽದ್ಯ ತ್ವಂ ಯುದ್ಧಾತಿಥ್ಯಂ ಪ್ರಯಚ್ಛ ಮೇ ॥25॥
ಅಶ್ವತ್ಥಾಮ ನುಡಿದ– ವೀರನೆ, ಯೋಗ್ಯ ಅತಿಥಿಯಾಗಿ ನಾನು ಬರುವು ದನ್ನು ನೀನು ಒಪ್ಪುವುದಾದರೆ ನನಗೆ ಎಲ್ಲ ರೀತಿಯ ಯುದ್ಧಾತಿಥ್ಯರೂಪ ಸತ್ಕಾರ ವನ್ನು ನೀಡು.
ಸಂಜಯಃ
ಏವಮಾಚಾರ್ಯಪುತ್ರೇಣ ಸಮಾಹೂತೋ ಯುಯುತ್ಸಯಾ |
ಬಹುಮೇನೇಽರ್ಜುನೋಽತ್ಮಾನಮಿದಂ ಚಾಹ ಜನಾರ್ದನಮ್ ॥26॥
ಸಂಜಯ ನುಡಿದ– ಹೀಗೆ ಗುರುಪುತ್ರನು ಯುದ್ಧೇಚ್ಛೆಯಿಂದ ಅರ್ಜುನ ನನ್ನು ಆಹ್ವಾನಿಸಿದ್ದರಿಂದ ಅರ್ಜುನ ಇದು ತನಗೆ ಸಂದ ಗೌರವವೆಂದು ಭಾವಿಸಿ ಕೃಷ್ಣನೊಡನೆ ಹೇಳಿದ

ಅರ್ಜುನಃ
ಸಂಶಪ್ತಕಾಶ್ಚ ಮೇ ವಧ್ಯಾ ದ್ರೌಣಿರಾಹ್ವಯತೇ ಚ ಮಾಮ್ |
ಯದತ್ರಾನಂತರಂ ಪ್ರಾಪ್ತಂ ತತ್ ಪ್ರಶಾಧಿ ಮಹಾಭುಜ ॥27॥
ಅರ್ಜುನ ನುಡಿದ– ನಾನೀಗ ಸಂಶಪ್ತಕರನ್ನು ಕೊಲ್ಲಬೇಕಾಗಿದೆ, ಅಶ್ವತ್ಥಾಮನ ಆಹ್ವಾನವನ್ನು ಮನ್ನಿಸಬೇಕಾಗಿದೆ. ಈಗ ಮೊದಲಿಗೆ ಮಾಡಬೇಕಾದು ದನ್ನು, ಹೇ ಮಹಾಬಾಹುವೆ, ನನಗೆ ಹೇಳು.
ಆತಿಥ್ಯಕರ್ಮಾಭ್ಯರ್ಥಾಯ ದೀಯತಾಂ ಯದಿ ರೋಚತೇ ॥28॥
`ಅಭಿಅರ್ಥಾಯ' ಅತಿಥಿಯಾಗಿ ಮುಂದೆ ಬಂದು ಬೇಡಿರುವ ಅಶ್ವತ್ಥಾಮನಿಗೆ ಅವನು ಬೇಡಿದ ಯುದ್ಧರೂಪವಾದ ಆತಿಥ್ಯಕರ್ಮವನ್ನೇ, ನಿನಗೆ ಅದು ಇಷ್ಟವಾಗುವುದಾದರೆ, ನೀಡೋಣ ಎಂದು.
ಇಲ್ಲಿ `ಅಭ್ಯರ್ಥಾಯ' ಎಂಬುದಕ್ಕೆ `ಅಶ್ವತ್ಥಾಮ್ನೇ' ಎಂದು ಪಾಠಾಂತರವಿದೆ. ಅದಕ್ಕೆ ಅರ್ಥ ಸ್ಪಷ್ಟವೇ ಇದೆ ಎಂದು ಲಕ್ಷ್ಮಾಲಂಕಾರ ಹೇಳಿದೆ. ನೀಲಕಂಠೀಯಾನುಸಾರಿ ಪಾಠ ಇಲ್ಲಿ `ಅಭ್ಯುತ್ಥಾಯ' ಎಂದು. `ಎದ್ದು' ಅತಿಥಿಸತ್ಕಾರ ನೀಡು ಎಂದರ್ಥ. ಇದರಿಂದ ಲಕ್ಷ್ಮಾಲಂಕಾರಕ್ಕೆ ಒಂದು ಮೂಲಪಾಠದ ಸಂಶೋಧನದಲ್ಲಿ ಆಗ್ರಹವಿಲ್ಲವೆಂದು ತಿಳಿಯುತ್ತದೆ. ಯುಕ್ತ ವಾದ ಯಾವುದೇ ಪಾಠವನ್ನು ಸ್ವೀಕರಿಸಬಹುದೆಂದು ಅವರ ಅಭಿಪ್ರಾಯವಿದೆ.
ಏವಮುಕ್ತೋಽವದತ್ ಪಾರ್ಥಂ ಕೃಷ್ಣೋ ದ್ರೋಣಾತ್ಮಜಾಂತಿಕೇ |
ಜೈತ್ರೇಣ ವಿಧಿನಾಽಽಹೂತಂ ವಾಯುಮಿಂದ್ರಮಿವಾಧ್ವರೇ ॥29॥
ಅರ್ಜುನನು ಹೀಗೆ ಹೇಳಿದಾಗ ಶ್ರೀಕೃಷ್ಣ ಅವನನ್ನು ಅಶ್ವತ್ಥಾಮನ ಬಳಿಗೆ ಒಯ್ದು ಹೇಳಿದ, `ಅರ್ಜುನ, ಯಜ್ಞದಲ್ಲಿ ಆಹುತಿ ಸ್ವೀಕರಿಸಲು ವಾಯುವೂ ಇಂದ್ರನೂ ಆಹ್ವಾನಿತರಾಗುತ್ತಾರೆ. ಹಾಗೇ ನೀನೂ `ಜೈತ್ರವಿಧಿ'ಯಿಂದ, ಅಂದರೆ ಜಯದಾಯಕವಾದ ದೈವದಿಂದ ಯುದ್ಧಯಜ್ಞದಲ್ಲಿ ಆಹ್ವಾನಿತನಾಗಿರುವೆ' ಎಂದು.
ತಮಾಮಂತ್ರ್ಯೈಕಮನಸಂ ಕೇಶವೋ ದ್ರೌಣಿಮಬ್ರವೀತ್ | |30॥
ಶ್ರೀಭಗವಾನ್
ಅಶ್ವತ್ಥಾಮನ್ ಸ್ಥಿರೋ ಭೂತ್ವಾ ಪ್ರಹರಾಶು ಸಹಸ್ವ ಚ |
ನಿರ್ವೇಷ್ಟುಂ ಭರ್ತೃಪಿಂಡಂ ಹಿ ಕಾಲೋಽಯಮುಪಜೀವಿನಾಮ್ 31॥
ಅಶ್ವತ್ಥಾಮನನ್ನು ಶ್ರೀಕೃಷ್ಣ ಸಂಬೋಧಿಸಿ, ತದೇಕಚಿತ್ತನಾಗಿ ಆಲಿಸುತ್ತಿದ್ದ ಅವನಿಗೆ ಹೇಳಿದ, `ಅಶ್ವತ್ಥಾಮನೆ, ಯುದ್ಧದಲ್ಲಿ ಸ್ಥಿರವಾಗಿ ನಿಂತು ಬಾಣಪ್ರಹಾರ ಮಾಡು ಮತ್ತು ಬಾಣಪ್ರಹಾರವನ್ನು ಸಹಿಸಿಕೊಳ್ಳು. `ಭರ್ತೃಪಿಂಡ'ವನ್ನು ಅಂದರೆ, ಯಜಮಾನನಾಗಿ ಅರ್ಜುನನು ನಿನಗೆ ನೀಡುತ್ತಿರುವ ಅನ್ನವನ್ನು `ನಿರ್ವೇಷ್ಟುಂ' ಉಣಲು, ಅದನ್ನು ಉಪಜೀವಿಸುವ ಅತಿಥಿ ಬ್ರಾಹ್ಮಣರಿಗೆ ಇದು ಕಾಲ.
ಸೂಕ್ಷ್ಮೌ ವಿವಾದೌ ವಿಪ್ರಾಣಾಂ ಸ್ಥೂಲೌ ಕ್ಷಾತ್ರೌ ಜಯಾಜಯೌ ॥32॥
ನ ಹಿ ಸಂಕ್ಷಮಸೇ ಮೋಹಾದ್ ದಿವ್ಯಾಂ ಪಾರ್ಥಸ್ಯ ಸತ್ಕ್ರಿಯಾಮ್ |
ಸಮಾಪ್ತುಮಿಚ್ಛನ್ ಯುಧ್ಯಸ್ವ ಸ್ಥಿರೋ ಭೂತ್ವಾಽದ್ಯ
ಪಾಂಡವಮ್ ॥33॥
`ವಿಪ್ರರ ವಾದವಿವಾದಗಳು ಬುದ್ಧಿಮೂಲವಾಗಿದ್ದು. ಸೂಕ್ಷ್ಮವಾಗಿರುತ್ತವೆ. ಆದರೆ ಕ್ಷತ್ರಿಯರ ಜಯಾಪಜಯಗಳು ಶಾರೀರಕವಾಗಿದ್ದು ಸ್ಥೂಲವಾಗಿರುತ್ತವೆ. ವಿಪ್ರನಾದ ನೀನು ಅವನ್ನು ಅರಗಿಸಿಕೊಳ್ಳಲಾರೆ, `ಮೋಹದಿಂದ' ಅಜ್ಞಾನದಿಂದ, ಅರ್ಜುನನು ನೀಡುವ ದಿವ್ಯವಾದ ಅತಿಥಿ ಸತ್ಕಾರವನ್ನು ಹೊಂದಲು ಬಯಸುವ ನೀನು ಈಗ ಸ್ಥಿರವಾಗಿ ನಿಂತು ಅರ್ಜುನನೊಂದಿಗೆ ಯುದ್ಧಮಾಡು.'
ಸಂಜಯಃ
ಇತ್ಯುಕ್ತೋ ವಾಸುದೇವೇನ ತಥೇತ್ಯುಕ್ತ್ವಾ ದ್ವಿಜೋತ್ತಮಃ |
ವಿವ್ಯಾಧ ಕೇಶವಂ ಷಷ್ಟ್ಯಾ ನಾರಾಚೈರರ್ಜುನಂ ತ್ರಿಭಿಃ ॥34॥
ಶ್ರೀಕೃಷ್ಣ ಹೀಗೆ ಹೇಳಿದಾಗ `ಹಾಗೇ ಆಗಲಿ' ಎಂದು ಹೇಳಿ ವಿಪ್ರೋತ್ತಮ ಅಶ್ವತ್ಥಾಮನು ಶ್ರೀಕೃಷ್ಣನನ್ನು ಅರವತ್ತು ಬಾಣಗಳಿಂದ ಹೊಡೆದ, ಅರ್ಜುನನನ್ನು ಮೂರು ಬಾಣಗಳಿಂದ ಹೊಡೆದ.
ತಸ್ಯಾರ್ಜುನಃ ಸುಸಂಕ್ರುದ್ಧಃ ತ್ರಿಭಿರ್ಭಲ್ಲೈಃ ಶರಾಸನಮ್ |
ಚಿಚ್ಛೇದಾಥಾನ್ಯದಾದತ್ತ ದ್ರೌಣಿರ್ಘೋರತರಂ ಧನುಃ ॥35॥
ಅರ್ಜುನ ಕುಪಿತನಾಗಿ ಮೂರು ಭಲ್ಲೆಗಳಿಂದ ಅಶ್ವತ್ಥಾಮನ ಬಿಲ್ಲನ್ನು ಕಡಿದ. ಒಡನೆ ಅಶ್ವತ್ಥಾಮ ಇನ್ನೂ ಹೆಚ್ಚು ಭಯಂಕರವಾದ ಇನ್ನೊಂದು ಧನುಸ್ಸನ್ನು ಎತ್ತಿಕೊಂಡ.
ಸಜ್ಯಂ ಕೃತ್ವಾ ನಿಮೇಷಾತ್ತು ವಿವ್ಯಾಧಾರ್ಜುನಕೇಶವೌ |
ತ್ರಿಭಿಃ ಶತೈರ್ವಾಸುದೇವಂ ಸಹಸ್ರೇಣ ಚ ಫಲ್ಗುನಮ್ ॥36॥
ಆ ಧನುಸ್ಸನ್ನು ನಿಮಿಷದಲ್ಲಿ ಹೆದೆಯೇರಿಸಿ ಅಶ್ವತ್ಥಾಮನು ಅರ್ಜುನ ಕೃಷ್ಣರನ್ನು ಹೊಡೆದ ಮುನ್ನೂರು ಬಾಣಗಳಿಂದ ಕೃಷ್ಣನನ್ನು ಮತ್ತು ಸಾವಿರ ಬಾಣಗಳಿಂದ ಅರ್ಜುನನನ್ನು.
ತತಃ ಶರಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಸಸೃಜೇ ದ್ರೌಣಿರಾಯತ್ತಃ ಸ್ತಂಭಯಾಮಾಸ ಚಾರ್ಜುನಮ್ ॥37॥
ಬಳಿಕ ಅಶ್ವತ್ಥಾಮ ಸಾವಿರದಶಲಕ್ಷದಶಕೋಟಿ ಬಾಣಗಳನ್ನು ಎಸೆದ. ಪ್ರಯತ್ನದಿಂದ ಅರ್ಜುನನನ್ನು ಅಲ್ಲಾಡದಂತೆ ಮಾಡಿದ.
ಇಷುಧೇರ್ಧನುಷೋ ಜ್ಯಾಯಾಸ್ತ್ವಂಗುಲಿಭ್ಯಶ್ಚ ಮಾರಿಷ |
ಬಾಹ್ವೋಃ ಕರಾಭ್ಯಾಮುರಸೋ ವದನಾದ್ ಘ್ರಾಣನೇತ್ರತಃ ॥38॥
ಕರ್ಣಾಭ್ಯಾಂ ಶಿರಸೋಽಂಗೇಭ್ಯೋ ಲೋಮವರ್ಮಭ್ಯ ಏವ ಚ |

ರಥಧ್ವಜಾಭ್ಯಾಂ ಚ ಶರಾ ನಿಷ್ಪೇತುರ್ಬ್ರಹ್ಮವಾದಿನಃ ॥39॥
ರಾಜನೆ, ಇದು ಹೇಗೆ ಸಾಧ್ಯವಾಯಿತೆಂದರೆ ಬ್ರಹ್ಮವಾದಿಯಾದ ಅಶ್ವತ್ಥಾಮನ ಬತ್ತಳಿಕೆಯಿಂದ, ಬಿಲ್ಲು, ಹೆದೆ ತೋಳುಗಳು ಕೈಗಳು ಎದೆ ಬಾಯಿ ಮೂಗು ಕಣ್ಣು ಕಿವಿ ಮುಂತಾದ ಅಂಗಗಳಿಂದ, ತಲೆಯಿಂದ ಕೂದಲು ಕವಚ ರಥ ಧ್ವಜಗಳಿಂದಲೂ ಬಾಣಗಳು ಹೊರಟು ಬಂದುವು.
ಶರಜಾಲೇನ ಮಹತಾ ಬದ್ಧ್ವಾ ಕೇಶವಪಾಂಡವೌ |
ನನಾದ ಮುದಿತೋ ದ್ರೌಣಿರ್ಮಹಾಮೇೌಘನಿಸ್ವನಃ ॥40॥
ಬಾಣಗಳ ದೊಡ್ಡ ಸಮೂಹದಿಂದ ಕೃಷ್ಣಾರ್ಜುನರನ್ನು ಬಂಧಿಸಿ ಅಶ್ವತ್ಥಾಮ ಸಂತುಷ್ಟನಾಗಿ ದೊಡ್ಡ ಮೋಡಗಳ ಗುಡುಗಿನಂತೆ ಗರ್ಜನೆ ಮಾಡಿದ.
ತೈಃ ಪತದ್ಭಿರ್ಮಹಾರಾಜ ದ್ರೌಣಿಮುಕ್ತೈಃ ಸಮಂತತಃ |
ಸಂಛಾದಿತೌ ರಥಸ್ಥೌ ತಾವುಭೌ ಕೃಷ್ಣಧನಂಜಯೌ ॥41॥
ಮಹಾರಾಜ, ಅಶ್ವತ್ಥಾಮನು ಎಸೆದ ಬಾಣಗಳು ರಥದಲ್ಲಿದ್ದ ಕೃಷ್ಣಾರ್ಜುನ ರನ್ನು ಪೂರ್ತಿ ಆಚ್ಛಾದಿಸಿದುವು.
ತತಃ ಶರಶತೈಸ್ತೀಕ್ಷ್ಣೈರ್ಭಾರದ್ವಾಜಃ ಪ್ರತಾಪವಾನ್ |
ನಿಶ್ಚೇಷ್ಟೌ ತಾವುಭೌ ಚಕ್ರೇ ರಣೇ ಮಾಧವಪಾಂಡವೌ ॥42॥
ಪ್ರತಾಪಶಾಲಿ ಅಶ್ವತ್ಥಾಮನು ನೂರಾರು ತೀಕ್ಷ್ಣಬಾಣಗಳಿಂದ ಕೃಷ್ಣಾರ್ಜುನ ರಿಬ್ಬರನ್ನೂ ನಿಶ್ಚೇಷ್ಟರನ್ನಾಗಿ ಮಾಡಿದ.
ಹಾಹಾಕೃತಮಭೂತ್ ಸರ್ವಂ ಸ್ಥಾವರಂ ಜಂಗಮಂ ತಥಾ |
ಚರಾಚರಸ್ಯ ಗೋಪ್ತಾರೌ ದೃಷ್ಟ್ವಾ ಸಂಛಾದಿತೌ ಶರೈಃ ॥43॥
ಎಲ್ಲ ಸ್ಥಾವರ ಜಂಗಮಗಳೂ ಆಗ ಚರಾಚರ ರಕ್ಷಕರಾದ ಕೃಷ್ಣಾರ್ಜುನರೇ ಬಾಣಗಳಲ್ಲಿ ಮುಳುಗಿದುದನ್ನು ಕಂಡು ಹಾಹಾಕಾರ ಮಾಡಿದುವು.
ಸಿದ್ಧಚಾರಣಸಂಘಾಶ್ಚ ಸಂಪೇತುರ್ವೈ ಸಮಂತತಃ |
ಅಪಿ ಸ್ವಸ್ತಿ ಭವೇದದ್ಯ ಲೋಕಾನಾಮಿತಿ ಚಾಬ್ರುವನ್ ॥44॥
ಸಿದ್ಧಚಾರಣ ಸಮೂಹಗಳು ಎಲ್ಲೆಡೆಯಿಂದ ಬಂದವು, `ಲೋಕಗಳಿಗೆ ಈಗ ಕ್ಷೇಮವಾಗುವುದೆ?' ಎಂದವು.
ನ ಮಯಾ ತಾದೃಶೋ ರಾಜನ್ ದೃಷ್ಟಪೂರ್ವಃ ಪರಾಕ್ರಮಃ |
ಸಂಜಜ್ಞೇ ಯಾದೃಶೋ ದ್ರೌಣೇಃ ಕೃಷ್ಣೌ ಛಾದಯತೋ ರಣೇ ॥45॥
ರಾಜನೆ, ನಾನು ಆ ರೀತಿಯ ಪರಾಕ್ರಮವನ್ನು ಎಂದೂ ಕಂಡಿಲ್ಲ. ರಣದಲ್ಲಿ ಕೃಷ್ಣಾರ್ಜುನರನ್ನು ಕೂಡ ಆಚ್ಛಾದನ ಮಾಡುವ ಪರಾಕ್ರಮ ಅಶ್ವತ್ಥಾಮನದು.
ದ್ರೌಣೇಸ್ತು ಧನುಷಃ ಶಬ್ದಂ ರಥಾನಾಂ ತ್ರಾಸನಂ ರಣೇ |
ಅಶ್ರೌಷಂ ಬಹುಶೋ ರಾಜನ್ ಸಿಂಹಸ್ಯ ನದತೋ ಯಥಾ ॥46॥
ಅಶ್ವತ್ಥಾಮನ ಧನುಸ್ಸಿನ ಶಬ್ದ, ರಥಗಳ ಚಲನಶಬ್ದಗಳು ಸಿಂಹಗರ್ಜನೆಯಂತೆ. ಬಹುಬಾರಿ ಅವುಗಳನ್ನು ನಾನು ಆಲಿಸಿದೆ.
ಜ್ಯಾ ಚಾಸ್ಯ ಚರತೋ ಯುದ್ಧೇ ಸವ್ಯಂ ದಕ್ಷಿಣಮಸ್ಯತಃ |
ವಿದ್ಯುದಂಭೋಧರಸ್ಯೇವ ಭ್ರಾಜಮಾನಾ ವ್ಯದೃಶ್ಯತ ॥47॥
ಅಶ್ವತ್ಥಾಮನ ಬಿಲ್ಲಿನ ಹೆದೆ, ಅವನು ಎಡಕ್ಕೆ ಬಲಕ್ಕೆ ಬಾಣಗಳನ್ನೆಸೆಯುವಾಗ ರಣರಂಗದಲ್ಲಿ ಅವನು ಸಂಚರಿಸಿದಾಗ, ಮಿಂಚಿನಂತೆ ಹೊಳೆಯುತ್ತಿದ್ದುದು ಕಂಡುಬಂದಿತು.
ಸ ತದಾ ಕ್ಷಿಪ್ರಕಾರೀ ಚ ದೃಢಹಸ್ತಶ್ಚ ಪಾಂಡವಃ |
ಪ್ರಮೋಹಂ ಪರಮಂ ಗತ್ವಾ ಪ್ರೇಕ್ಷನ್ನಾಸ್ತೇ ಧನಂಜಯಃ ॥48॥
ವೇಗವುಳ್ಳವನು ದೃಢಹಸ್ತನು ಅರ್ಜುನನಾದರೂ ಆಗ ಬಹಳ ಮೈಮರೆತು ನೋಡುತ್ತಲೇ ಇದ್ದ.
ವಿಕ್ರಮಂ ಚ ಹೃತಂ ಮೇನೇ ಆತ್ಮನಸ್ತೇನ ಸಂಯುಗೇ ॥49॥
ತನ್ನ ಪರಾಕ್ರಮವನ್ನು ಯುದ್ಧದಲ್ಲಿ ಅಶ್ವತ್ಥಾಮ ಅಪಹರಿಸಿದನೆಂದೇ ಭಾವಿಸಿದ, ಅರ್ಜುನ.
ತದಾಽಸ್ಯ ಸಮರೇ ರಾಜನ್ ವಪುರಾಸೀತ್ ಸುದುರ್ದೃಶಮ್ |
ದ್ರೌಣೇಸ್ತತ್ ಕುರ್ವತಃ ಕರ್ಮ ಯಾದೃಗ್ರೂಪಂ ಪಿನಾಕಿನಃ ॥50॥
ಅಶ್ವತ್ಥಾಮನ ಶರೀರ, ಅವನು ಆ ಸಾಹಸಕರ್ಮವನ್ನು ಮಾಡುವಾಗ ರುದ್ರನ ರೂಪದಂತೆ ನೋಡಲು ಅಸಾಧ್ಯವಾಗಿತ್ತು.
ವರ್ಧಮಾನೇ ತತಸ್ತತ್ರ ದ್ರೋಣಪುತ್ರೇ ವಿಶಾಂಪತೇ |
ಹೀಯಮಾನೇ ಚ ಕೌಂತೇಯೇ ಕೃಷ್ಣಂ ರೋಷಃ ಸಮಾವಿಶತ್ ॥51॥
ರಾಜನೆ, ಅಶ್ವತ್ಥಾಮನ ಪರಾಕ್ರಮ ಹೆಚ್ಚುತ್ತಿರುವಾಗ ಅರ್ಜುನನ ಪರಾಕ್ರಮ ಕ್ಷೀಣಿಸುತ್ತಿದ್ದುದನ್ನು ಕಂಡು ಕೃಷ್ಣನಿಗೆ ರೋಷ ಉಕ್ಕಿಬಂದಿತು.
ಸ ರೋಷಾನ್ನಿಶ್ವಸನ್ ರಾಜನ್ ನಿರ್ದಹನ್ನಿವ ಚಕ್ಷುಷಾ |
ದ್ರೌಣಿಂ ದದರ್ಶ ಸಂಗ್ರಾಮೇ ಫಲ್ಗುನಂ ಚ ಮುಹುರ್ಮುಹುಃ ॥52॥
ಕೃಷ್ಣ ರೋಷದಿಂದ, ಕಣ್ಣುಗಳಿಂದ ದಹಿಸುವಂತೆ, ಮತ್ತೆಮತ್ತೆ ಅಶ್ವತ್ಥಾಮನನ್ನು ದಿಟ್ಟಿಸಿದ. ಅರ್ಜುನನನ್ನೂ ದಿಟ್ಟಿಸಿದ.
ತತಃ ಕ್ರುದ್ಧೋಽಬ್ರವೀತ್ ಕೃಷ್ಣಃ ಪಾರ್ಥಂ ಸಪ್ರಣಯಂ ವಚಃ ॥53॥
ಕ್ರುದ್ಧನಾದ ಕೃಷ್ಣ ಅರ್ಜುನನನ್ನು ಪ್ರೀತಿಯಿಂದ ಮಾತನಾಡಿಸಿದ.
ಶ್ರೀಭಗವಾನ್

ಅತ್ಯದ್ಭುತಮಹಂ ಪಾರ್ಥ ತ್ವಯಿ ಪಶ್ಯಾಮಿ ಸಂಯುಗೇ |
ಯತ್ ತ್ವಾಂ ವಿಶೇಷಯತ್ಯಾಜೌ ದ್ರೋಣಪುತ್ರೋಽದ್ಯ ಭಾರತ ॥54॥
ಶ್ರೀಭಗವಂತ ನುಡಿದ– ಅರ್ಜುನ, ನಾನು ಯುದ್ಧದಲ್ಲಿ ನಿನ್ನ ಅತ್ಯದ್ಭುತ ಪರಾಕ್ರಮವನ್ನು ಕಂಡೆ! ಏಕೆಂದರೆ, ಅಶ್ವತ್ಥಾಮ ಇಂದು ಯುದ್ಧದಲ್ಲಿ ನಿನ್ನನ್ನು ಮೀರಿಸುತ್ತಿದ್ದಾನೆ!
ಕಚ್ಚಿತ್ತೇ ಗಾಂಡಿವಂ ಹಸ್ತೇ ಮುಷ್ಟಿರ್ವಾ ನ ವ್ಯಶೀರ್ಯತ |
ಕಚ್ಚಿದ್ವೀರ್ಯಂ ಯಥಾಪೂರ್ವಂ ಭುಜಯೋರ್ವಾ ಬಲಂ ತವ ॥55॥
ನಿನ್ನ ಕೈಯಲ್ಲಿ ಗಾಂಡೀವವಾಗಲಿ ಮುಷ್ಟಿಯಾಗಲಿ ಹಾಳಾಗಿಲ್ಲ ತಾನೆ? ನಿನ್ನ ಪರಾಕ್ರಮ ಹಿಂದಿನಂತೆಯೆ ಇದೆ ತಾನೆ? ಭುಜಬಲವೂ ಹಿಂದಿನಂತೆಯೆ ಇದೆ ತಾನೆ?
ಉದೀರ್ಯಮಾಣಂ ಹಿ ರಣೇ ಪಶ್ಯಾಮಿ ದ್ರೌಣಿಮಾಹವೇ ॥56॥
ಅಶ್ವತ್ಥಾಮ ಯುದ್ಧದಲ್ಲಿ ಹೆಚ್ಚುತ್ತಿರುವುದನ್ನು ಕಾಣುತ್ತಿದ್ದೇನೆ!
ಗುರುಪುತ್ರ ಇತಿ ಹ್ಯೇನಂ ಮಾನಯನ್ ಪಾಂಡವರ್ಷಭ |
ಉಪೇಕ್ಷಾಂ ಮಾ ಕೃಥಾಃ ಪಾರ್ಥ ನಾಯಂ ಕಾಲೋ
ಹ್ಯುಪೇಕ್ಷಿತುಮ್ ॥57॥
ಗುರುಪುತ್ರನೆಂದು ಈತನನ್ನು, ಅರ್ಜುನ, ಉಪೇಕ್ಷೆ ಮಾಡಬೇಡ. ಇದು ಉಪೇಕ್ಷಿಸುವ ಕಾಲವಲ್ಲ' ಎಂದು.
ತಸ್ಯ ನಾದಂ ತತಃ ಶ್ರುತ್ವಾ ಪಾಂಡವೋಽಚ್ಯುತಮಬ್ರವೀತ್ ॥58॥
ಆಗ ಅರ್ಜುನ ಅಶ್ವತ್ಥಾಮನ ಸಿಂಹನಾದವನ್ನು ಕೇಳಿ ಶ್ರೀಕೃಷ್ಣನಿಗೆ ಹೇಳಿದ.
ಅರ್ಜುನಃ
ಪಶ್ಯ ಮಾಧವ ದೌರಾತ್ಮ್ಯಂ ಗುರುಪುತ್ರಸ್ಯ ಸಾಂಪ್ರತಮ್ |
ವಧಂ ಪ್ರಾಪ್ತೌ ಮನ್ಯತೇ ನೌ ಪ್ರಾವೇಶ್ಯ ಶರವೇಶ್ಮನಿ ॥59॥
ಅರ್ಜುನ ನುಡಿದ– `ನೋಡು ಈಗ ಕೃಷ್ಣ, ಗುರುಪುತ್ರನು ಎಷ್ಟು ದುರಾತ್ಮ ನಾಗಿರುವನು. ಬಾಣಗಳ ಮನೆಯೊಳಗೆ ನಮ್ಮನ್ನು ಇರಿಸಿ ಹತರಾದೇವೆಂದು ತಿಳಿಯುತ್ತಾನೆ !
ಏಷೋಽಸ್ಯ ಹನ್ಮಿ ಸಂಕಲ್ಪಂ ಶಿಕ್ಷಯಾ ಚ ಬಲೇನ ಚ ॥60॥
ನಾನು ನನ್ನ ವಿದ್ಯೆಯಿಂದಲೂ ಬಲದಿಂದಲೂ ಅವನ ಸಂಕಲ್ಪವನ್ನು ಸುಳ್ಳಾಗಿಸು ತ್ತೇನೆ.'
ಏವಮುಕತ್ತ್ವಾಽಸ್ಯ ಚಿಚ್ಛೇದ ಭಲ್ಲೈಃ ಸನ್ನತಪರ್ವಭಿಃ |
ಧನುಶ್ಛತ್ರಂ ಪತಾಕಾಂ ಚ ರಥಂ ಶಕ್ತಿಂ ಗದಾಂ ವರಾಮ್ ॥61॥
ಸಂಜಯನು ನುಡಿದ– ಹೀಗೆ ಹೇಳಿದ ಅರ್ಜುನನು ಡೊಂಕುಗಿಣ್ಣಿನ ಭಲ್ಲೆಗಳಿಂದ ಅಶ್ವತ್ಥಾಮನ, ಧನುಸ್ ಛತ್ರ ಪತಾಕೆ ರಥ ಉತ್ತಮವಾದ ಶಕ್ತಿ ಗದೆಗಳನ್ನು ತುಂಡರಿಸಿದನು.
ಅಶ್ವತ್ಥಾಮ್ನಃ ಶರಾನಸ್ತಾನ್ ಛಿತ್ತ್ವೈಕೈಕಂ ತ್ರಿಭಿಸ್ತ್ರಿಭಿಃ |
ವ್ಯಧಮದ್ ಭರತಶ್ರೇಷ್ಠೋ ನೀಹಾರಮಿವ ಮಾರುತಃ ॥62॥
ಅಶ್ವತ್ಥಾಮನು ಎಸೆದ ಒಂದೊಂದೂ ಬಾಣವನ್ನು ಮೂರುಮೂರಾಗಿ ಕತ್ತರಿಸಿ, ಗಾಳಿಯು ಮಂಜನ್ನು ದೂರಮಾಡುವಂತೆ ಅರ್ಜುನ ಅವುಗಳನ್ನು ನಾಶಮಾಡಿದ.
ತತಃ ಸಂಶಪ್ತಕಾನ್ ಭೂಯಃ ಸಾಶ್ವಸೂತರಥದ್ವಿಪಾನ್ |
ಸಪದಾತಿಗಣಾನುಗ್ರೈರ್ಬಾಣೈರ್ವಿವ್ಯಾಧ ಪಾಂಡವಃ ॥63॥
ಬಳಿಕ ಅರ್ಜುನ ಅಶ್ವ ಸೂತ ರಥ ಆನೆ ಪದಾತಿಗಳೊಂದಿಗೆ ಸಂಶಪ್ತಕರನ್ನೂ ಭಯಂಕರ ಬಾಣಗಳಿಂದ ಮತ್ತೆಮತ್ತೆ ಹೊಡೆದ.
ಯೇ ಯೇ ದದೃಶಿರೇ ತತ್ರ ಯದ್ಯದ್ರೂಪಂ ತದಾ ಜನಾಃ |
ತೇ ತೇ ತತ್ತಚ್ಛರೈರ್ವ್ಯಾಪ್ತಂ ಮೇನಿರೇಽತ್ಮಾನಮೇವ ಚ ॥64॥
ಜನರು ಯಾರು ಯಾರು, ಯಾರು ಯಾರ ಮೈಗಳನ್ನು ಕಂಡರೋ, ಅವರನ್ನು ಮಾತ್ರವಲ್ಲದೆ, ತಮ್ಮ ಮೈಗಳನ್ನೂ ಕೂಡ ಅರ್ಜುನನ ಆಯಾ ಬಾಣಗಳಿಂದ ತುಂಬಿ ಕೊಂಡಂತೆಯೇ ಕಂಡರು.
ಗಾಂಡೀವಪ್ರಚ್ಯುತಾಸ್ತೇ ವೈ ನಾನಾರೂಪಾಃ ಪತತ್ರಿಣಃ |
ಕ್ರೋಶೇ ಸಾಗ್ರೇ ಸ್ಥಿತಾನ್ ಜಘ್ನುರ್ದ್ವಿಪಾಂಶ್ಚ ಪುರುಷಾನ್ ರಣೇ ॥65॥
ಅರ್ಜುನನ ಗಾಂಡೀವದಿಂದ ಹೊರಟ ನಾನಾ ರೂಪವಾದ ಬಾಣಗಳು ಎದುರಿನಲ್ಲಿ ಮಾತ್ರವಲ್ಲದೆ ಕ್ರೋಶ ದೂರದಷ್ಟು ಆಚೆಇರುವ ಆನೆಗಳನ್ನೂ ಯೋಧರನ್ನೂ ಸಂಹರಿಸುತ್ತಿದ್ದುವು.
ಭಲ್ಲೈಶ್ಛಿನ್ನಾಃ ಕರಾಃ ಪೇತುರ್ದ್ವಿಪಾನಾಂ ಮದವರ್ಷಿಣಾಮ್ |
ವನೇ ಯಥಾ ಪರಶುಭಿಃ ನಿಕೃತ್ತಾಃ ಶಾಲ್ಮಲಿದ್ರುಮಾಃ ॥66॥
ಕಾಡಿನಲ್ಲಿ ಕೊಡಲಿಯಿಂದ ಕಡಿದುಬೀಳುವ ಶಾಲ್ಮಲಿ ವೃಕ್ಷಗಳಂತೆ ಅರ್ಜುನನ ಭಲ್ಲೆಗಳಿಂದ ಮದಸುರಿಸುವ ಆನೆಗಳ ಸೊಂಡಿಲುಗಳು ಕಡಿದು ಬಿದ್ದುವು.
ಪಶ್ಚಾತ್ತು ಶೈಲವತ್ ಪೇತುಸ್ತೇ ಗಜಾಃ ಸಹ ಸಾದಿಭಿಃ |
ವಜ್ರಿವಜ್ರಪ್ರಮಥಿತಾ ಯಥಾ ಶೈಲಚಯಾಸ್ತಥಾ ॥67॥
ಬಳಿಕ ಇಂದ್ರನ ವಜ್ರಾಯುಧದಿಂದ ಪರ್ವತಸಮೂಹಗಳು ಕಡಿದುಬಿದ್ದಂತೆ, ಸೊಂಡಿಲು ಕಳೆದುಕೊಂಡ ಬೆಟ್ಟಗಳಂತಿದ್ದ ಗಜಗಳು ಗಜಾರೋಹಿಗಳೊಂದಿಗೆ ಕಡಿದುಬಿದ್ದುವು.

ಗಂಧರ್ವನಗರಾಕಾರಾನ್ ವಿಧಿವತ್ ಕಲ್ಪಿತಾನ್ ರಥಾನ್ |
ವಿನೀತೈರ್ಜವನೈರ್ಯುಕ್ತಾನಾಸ್ಥಿತಾನ್ ಯುದ್ಧದುರ್ಮದೈಃ ॥68॥
ಶರೈರ್ವಿಶಕಲೀಕುರ್ವನ್ನಮಿತ್ರಾನಭ್ಯವೀವೃಷತ್ |
ಸ್ವಲಂಕೃತಾನಶ್ವಸಾದೀನ್ ಪತ್ತೀನ್ ನಿಘ್ನನ್ ರಣಾಜಿರೇ ॥69॥
ಆಗಸದಲ್ಲಿ ಕಂಡುಬರುವ ಕಾಲ್ಪನಿಕ ಗಂಧರ್ವನಗರಾಕಾರದಲ್ಲಿ ವಿಧ್ಯುಕ್ತವಾಗಿ ಸಜ್ಜಾಗಿ ನಿಂತ ರಥಗಳಿಗೆ ಸುಶಿಕ್ಷಿತವಾದ ವೇಗದ ಕುದುರೆಗಳನ್ನು ಕಟ್ಟಿ ಅವುಗಳನ್ನೇರಿ ಯುದ್ಧಮಾಡುವ ಹವ್ಯಾಸದವರಾದ ಯೋಧರನ್ನೂ , ಆಭರಣಗಳಿಂದ ಅಲಂಕೃತರಾದ ಅಶ್ವಾರೋಹಿಗಳನ್ನೂ ಪದಾತಿಗಳನ್ನೂ ರಣರಂಗದಲ್ಲಿ ಅರ್ಜುನನು ಬಾಣಗಳಿಂದ ಚೂರುಚೂರಾಗಿ ಮಾಡುತ್ತ ಶತ್ರುಗಳ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದ.
ಧನಂಜಯಯುಗಾಂತಾಗ್ನಿಃ ಸಂಶಪ್ತಕಮಹಾರ್ಣವಮ್ |
ವ್ಯಶೋಷಯತ ದುಃಶೇಷಂ ತಿಗ್ಮೈಃ ಶರಗಭಸ್ತಿಭಿಃ ॥70॥
ಶೋಷಿಸಲಾಗದ ಮಹಾ ಸಮುದ್ರದ ಗರ್ಭದಲ್ಲಿ ವಾಡವಾಗ್ನಿಯು ಇದ್ದು ಪ್ರಳಯಕಾಲದಲ್ಲಿ ಅದು ಇಡೀ ಸಮುದ್ರವನ್ನೇ ಉಂಡು ಬರಿದುಮಾಡುತ್ತದೆ. ತೀಕ್ಷ್ಣಬಾಣಗಳೆಂಬ ಕಿರಣಗಳಿಂದ ಅರ್ಜುನನೆಂಬ ವಾಡವಾಗ್ನಿಯೂ ಹಾಗೇ, ಶೋಷಿಸಲಾಗದಂಥ ಸಂಶಪ್ತಕ ಸೈನ್ಯವೆಂಬ ಮಹಾಸಾಗರವನ್ನು ಪೂರ್ತಿ ಶೋಷಿಸಿದ.
ತಂ ಚ ದ್ರೌಣಿಮಹಾಶೈಲಂ ನಾರಾಚೈರ್ವಜ್ರಸನ್ನಿಭೈಃ |
ನಿರ್ಬಿಭೇದ ಮಹಾವೇಗೈಃ ತ್ವರನ್ ವಜ್ರೀವ ಪರ್ವತಮ್ ॥71॥
ಇಂದ್ರನು ವಜ್ರಾಯುಧದಿಂದ ಪರ್ವತವನ್ನು ಕಡಿಯುವಂತೆ ಅರ್ಜುನನು ವಜ್ರಾಯುಧದಂಥ ಮಹಾವೇಗ ಉಳ್ಳ ಬಾಣಗಳಿಂದ ಅಶ್ವತ್ಥಾಮನೆಂಬ ಮಹಾಪರ್ವತವನ್ನು ಕೂಡ ಬೇಗನೆ ಭೇದಿಸಿದ.
ತಮಾಚಾರ್ಯಸುತಃ ಕ್ರುದ್ಧಃ ಸಾಶ್ವಯಂತಾರಮಾಶುಗೈಃ |
ಛಾದಯಾಮಾಸ ಸಮರೇ ಪಾರ್ಥಸ್ತಾನಂತರಾಽಚ್ಛಿನತ್ ॥72॥
ದ್ರೋಣಾಚಾರ್ಯರ ಪುತ್ರನಾದ ಅಶ್ವತ್ಥಾಮ ಕ್ರುದ್ಧನಾಗಿ ಅರ್ಜುನನನ್ನೂ ಅವನ ಕುದುರೆಗಳನ್ನೂ ಸಾರಥಿಯನ್ನೂ ಬಾಣಗಳ ಮಳೆಯಿಂದ ಮುಚ್ಚಿದ. ಆದರೆ ಅರ್ಜುನ ಅವುಗಳನ್ನು ನಡುವೆಯೇ ಕತ್ತರಿಸಿದ.
ತತಃ ಪರಮಸಂಕ್ರುದ್ಧಃ ಕಾಂಡಕೋಶಮವಾಸೃಜತ್ |
ಅಶ್ವತ್ಥಾಮಾಭಿರೂಪಾಯ ಗೃಹಾನತಿಥಯೇ ಯಥಾ ॥73॥
ಯೋಗ್ಯ ಅತಿಥಿ ಮನೆಗೆ ಬಂದಾಗ ಗೃಹಸ್ಥನು ಅವನಿಗೆ ಅಪೇಕ್ಷಿತವಾದ ಎಲ್ಲ ಉಪಚಾರಗಳನ್ನು ಅರ್ಪಿಸುವಂತೆ ಬಲು ಕ್ರುದ್ಧನಾದ ಅಶ್ವತ್ಥಾಮ ಅರ್ಜುನನಿಗೆ ಅಪೇಕ್ಷಿತವಾದ ಬಾಣಗಳ ಬೊಕ್ಕಸವನ್ನೇ ಸುರಿದ.
ಅಥ ಸಂಶಪ್ತಕಾಂಸ್ತ್ಯಕ್ತ್ವಾ ಪಾಂಡವೋ ದ್ರೌಣಿಮಭ್ಯಯಾತ್ |
ಅಪಾಂಕ್ತೇಯಾನಿವ ತ್ಯಕ್ತ್ವಾ ದಾತಾ ಪಾಂಕ್ತೇಯಮರ್ಥಿನಮ್ ॥74॥
ಸ್ಥಿತಾಃ ಸಂಶಪ್ತಕಾ ರಾಜನ್ ದೃಷ್ಟ್ವಾ ಯುದ್ಧಂ ಮಹಾತ್ಮನೋಃ ॥75॥
ಬಳಿಕ ಅರ್ಜುನ ಸಂಶಪ್ತಕರೊಡನೆ ಯುದ್ಧ ಮಾಡುವುದನ್ನು ಬಿಟ್ಟು ಅಶ್ವತ್ಥಾಮನೊಡನೇ ಯುದ್ಧವನ್ನು ಮಾಡಲುತೊಡಗಿದ, ದಾನ ಮಾಡುವ ಗೃಹಸ್ಥನು ಪಂಕ್ತಿಗೆ ಯೋಗ್ಯರಲ್ಲದವರನ್ನು ಬಿಟ್ಟು ಯೋಗ್ಯರಿಗೇ ಅನ್ನದಾನ ಮಾಡುವಂತೆ. ರಾಜನೆ, ಸಂಶಪ್ತಕರು ಆಗ ಮಹಾತ್ಮರಾದ ಅರ್ಜುನ ಅಶ್ವತ್ಥಾಮರ ಯುದ್ಧವನ್ನೇ ನೋಡುತ್ತ ನಿಂತರು.
ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಷೋಡಶೋಽಧ್ಯಾಯಃ ॥16॥

ಮಹಾಭಾರತತಾತ್ಪರ್ಯನಿರ್ಣಯ
ತದಾಭವದ್ ಯುದ್ಧಮತೀವ ದಾರುಣಂ
ದ್ರೌಣೇಸ್ತನೂಜೇನ ತು ವಜ್ರಪಾಣೇಃ |
ತತ್ರಾಪಿ ಬದ್ಧಃ ಶರಪಂಜರೇಣ
ಪಾರ್ಥೋಪನುತ್ತಾಪಿ ಚ ಗಾಂಡಿವಜ್ಯಾ ॥ 92 ॥
ಆಗ ಅಶ್ವತ್ಥಾಮ ಅರ್ಜುನರಿಗೆ ಅತ್ಯಂತ ದಾರುಣವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿಯೂ ಅರ್ಜುನ ಶರಪಂಜರದಲ್ಲಿ ಬದ್ಧನಾದ ಮತ್ತು ಗಾಂಡೀವದ ಹೆದೆಯೂ ಕಡಿಯಲ್ಪಟ್ಟಿತು.
ಪಾರ್ಥೋಽಥ ಕೃಷ್ಣೇ ೃಧಿತಬಾಹುವೀರ್ಯೋ
ನಿಹತ್ಯ ಸೂತಂ ಗುರುಪುತ್ರಕಸ್ಯ |
ಛಿತ್ವಾ ಚ ರಶ್ಮೀಂಸ್ತುರಗಾನಮುಷ್ಯ
ವಿದ್ರಾವಯಾಮಾಸ ಶರೈಃ ಸುದೂರಮ್ ॥ 93 ॥
ಬಳಿಕ ಅರ್ಜುನನ ಬಾಹುಪರಾಕ್ರಮವನ್ನು ಶ್ರೀಕೃಷ್ಣ ಹೆಚ್ಚಿಸಿದ. ಅರ್ಜುನನು ಅಶ್ವತ್ಥಾಮನ ಸಾರಥಿಯನ್ನು ಕೊಂದು ಅವನ ಕುದುರೆಗಳ ಹಗ್ಗಗಳನ್ನೂ ಕತ್ತರಿಸಿ ಕುದುರೆಗಳನ್ನು ಬಾಣಗಳಿಂದ ಬಲು ದೂರಕೆ ಓಡಿಸಿದ.

ಹದಿನೇಳನೆಯ ಅಧ್ಯಾಯ
ಅರ್ಜುನನಿಂದ ಅಶ್ವತ್ಥಾಮನ ಪರಾಜಯ.
ಸಂಜಯಃ

ತತಃ ಸಮಭವದ್ ಯುದ್ಧಂ ಶುಕ್ರಾಂಗಿರಸವರ್ಚಸೋಃ |
ನಕ್ಷತ್ರಮಭಿತೋ ವ್ಯೋಮ್ನಿ ಶುಕ್ರಾಂಗಿರಸಯೋರಿವ ||1||
ಸಂಜಯನು ಹೇಳುತ್ತಾನೆ– ಆಕಾಶದಲ್ಲಿ ನಕ್ಷತ್ರಗಳ ನಡುವೆ ಶುಕ್ರ ಗುರು ಗ್ರಹಗಳಿಗೆ ಯುದ್ಧ ನಡೆದರೆ ಹೇಗಿರಬಹುದೋ ಹಾಗೆ ಶುಕ್ರ ಬೃಹಸ್ಪತಿಗಳಂತಿರುವ ಅರ್ಜುನ ಅಶ್ವತ್ಥಾಮರಿಗೆ ಯುದ್ಧ ನಡೆಯಿತು.
ಸನ್ತಾಪಯನ್ತಾವನ್ಯೋನ್ಯಂ ತೌ ದೀಪ್ತೈಃ ಶರರಶ್ಮಿಭಿಃ |
ಲೋಕತ್ರಾಸಕರಾವಾಸ್ತಾಂ ವಿಮಾರ್ಗಸ್ಥಾವಿವ ಗ್ರಹೌ ||2||
ವಕ್ರಗತಿಯಿಂದ ಸಂಚರಿಸುವ ಎರಡು ಗ್ರಹಗಳಿಗೆ ಯುದ್ಧವಾದರೆ ಲೋಕ ಭಯಗೊಳ್ಳುತ್ತದೆ. ಹಾಗೇ ಅರ್ಜುನ ಅಶ್ವತ್ಥಾಮರು ಯುದ್ಧಮಾಡಲು ತೊಡಗಿದಾಗ ಲೋಕ ಭಯಗೊಂಡಿತು. ಅವರಿಬ್ಬರೂ ಪ್ರಕಾಶಮಾನವಾದ ಬಾಣಗಳೆಂಬ ಕಿರಣಗಳಿಂದ ಪರಸ್ಪರ ತಾಪ ಉಂಟುಮಾಡಿದರು.
ತತೋಽವಿಧ್ಯದ್ ಭ್ರುವೋರ್ಮಧ್ಯೇ ನಾರಾಚೇನಾರ್ಜುನೋ ಭೃಶಮ್|
ಸ ತೇನ ವಿಬಭೌ ದ್ರೌಣಿರೂರ್ಧ್ವರಶ್ಮಿರ್ಯಥಾ ರವಿಃ ||3||
ಅರ್ಜುನ ಅಶ್ವತ್ಥಾಮನನ್ನು ಹುಬ್ಬುಗಳ ನಡುವೆ ಬಾಣದಿಂದ ಚೆನ್ನಾಗಿ ಹೊಡೆದ. ಆಗ ಊರ್ಧ್ವಮುಖವಾದ ರಶ್ಮಿಯಿಂದ ಸೂರ್ಯನು ಹೊಳೆಯುವಂತೆ ಆ ಬಾಣದಿಂದ ಅಶ್ವತ್ಥಾಮ ಶೋಭಿಸಿದ.
ಅಥ ಕೃಷ್ಣೌ ಶರಶತೈರಶ್ವತ್ಥಾಮ್ನಾಽರ್ದಿತೌ ಭೃಶಮ್ |
ಸ್ವರಶ್ಮಿಜಾಲವಿಕಚೌ ಯುಗಾಂತಾರ್ಕಾವಿವಾಸತುಃ ||4||
ತಮ್ಮ ರಶ್ಮಿಸಮೂಹಗಳಿಂದ ಬೆಳಗುವ ಇಬ್ಬರು ಯುಗಾಂತಕಾಲದ ಸೂರ್ಯರಂತೆ, ಅಶ್ವತ್ಥಾಮನೆಸೆದ ನೂರಾರು ಬಾಣಗಳಿಂದ ಬಲವಾಗಿ ಹೊಡೆಸಿಕೊಂಡ ಕೃಷ್ಣಾರ್ಜುನರಿಬ್ಬರು ಬೆಳಗಿದರು.
ತತೋಽರ್ಜುನಃ ಸರ್ವತೋಧಾರಮಸ್ತ್ರಮ್
ಅವಾಸೃಜದ್ ವಾಸುದೇವೇಽಭಿಭೂತೇ |
ದ್ರೌಣಾಯನಿಶ್ಚಾಪ್ಯಹನತ್ ಪೃಷತ್ಕೈ-
ರ್ವಜ್ರಾಗ್ನಿವೈವಸ್ವತದಂಡಕಲ್ಪೈಃ ||5||
ಕೃಷ್ಣ ಅಶ್ವತ್ಥಾಮನ ಬಾಣಗಳಿಂದ ಆವೃತನಾದಾಗ ಅರ್ಜುನ ಎಲ್ಲಕಡೆ ಅಲುಗುಳ್ಳ ಬಾಣವನ್ನು ಎಸೆದ. ಅದಕ್ಕೆ ಅಶ್ವತ್ಥಾಮನೂ ವಜ್ರಾಯುಧ ಅಗ್ನಿ ಯಮ ದಂಡಗಳಿಗೆ ಸಮವಾದ ಬಾಣಗಳಿಂದ ಹೊಡೆದ.
ಸ ಕೇಶವಂ ಚಾರ್ಜುನಂ ಚಾತಿತೇಜಾ
ವಿವ್ಯಾಧ ಮರ್ಮಸ್ವತಿತೀವ್ರಕರ್ಮಾ |
ಬಾಣೈಃ ಸುಮುಕ್ತೈರತಿತೀವ್ರವೇಗೈ-
ರ್ಯೈರಾಹತೋ ಮೃತ್ಯುರಪಿ ವ್ಯಥೇತ ||6||
ಅತಿಪರಾಕ್ರಮಿ, ಅತಿತೀವ್ರವಾಗಿ ಅಸ್ತ್ರಪ್ರಯೋಗಮಾಡುವವನು ಅಶ್ವತ್ಥಾಮ. ಅತಿತೀವ್ರ ವೇಗದಿಂದ ಚೆನ್ನಾಗಿ ಬಾಣಪ್ರಯೋಗ ಮಾಡಿ ಆತ ಕೃಷ್ಣಾರ್ಜುನ ರಿಬ್ಬರನ್ನೂ ಮರ್ಮಗಳಲ್ಲಿ ಭೇದಿಸಿದ. ಆ ಬಾಣಗಳ ಹೊಡೆತಕ್ಕೆ ಮೃತ್ಯುಕೂಡ ವ್ಯಥೆಗೊಂಡೀತು.
ದ್ರೌಣೇರಿಷೂನರ್ಜುನಃ ಸನ್ನಿವಾರ್ಯ
ವ್ಯಾಯಚ್ಛತಸ್ತದ್ದ್ವಿಗುಣೈಃ ಸುಪುಂಖೈಃ |
ತಂ ಸಾಶ್ವಸೂತಧ್ವಜಮೇಕವೀರಮ್
ಆವೃತ್ಯ ಸಂಶಪ್ತಕಸೈನ್ಯಮಾರ್ಚ್ಛತ್ ||7||
ಆದರೂ ಅರ್ಜುನ ಪ್ರಯತ್ನಪೂರ್ವಕವಾಗಿ ಅಶ್ವತ್ಥಾಮನೆಸೆದ ಆ ಬಾಣ ಗಳನ್ನು ಅವುಗಳಿಗಿಂತ ಎರಡುಪಟ್ಟು ಹೆಚ್ಚು, ಸುಂದರ ರೆಕ್ಕೆ ಉಳ್ಳ ಬಾಣಗಳಿಂದ ತಡೆದ. ಏಕೈಕ ವೀರನಾದ ಅಶ್ವತ್ಥಾಮನನ್ನೂ ಅವನ ಕುದುರೆ ಸಾರಥಿ ಧ್ವಜಗಳೊಂದಿಗೆ ಬಾಣಗಳಿಂದ ಆಚ್ಛಾದಿಸಿ, ಬಳಿಕ ಸಂಶಪ್ತಕಸೈನ್ಯವನ್ನೂ ಆಕ್ರಮಿಸಿದ.
ಧನೂಂಷಿ ಬಾಣಾನಿಷುಧೀರ್ಧನುರ್ಜ್ಯಾಃ
ಪಾಣೀನ್ ಭುಜಾನ್ ಪಾಣಿಗತಂ ಚ ಶಸ್ತ್ರಮ್ |
ಛತ್ರಾಣಿ ಕೇತೂಂಸ್ತುರಗಾನ್ ಅಥೈಷಾಂ
ವಸತ್ರಾಣಿ ಮಾಲ್ಯಾನ್ಯಥ ಭೂಷಣಾನಿ ||8||
ಚರ್ಮಾಣಿ ವರ್ಮಾಣಿ ಸತೋಮರಾಣಿ
ಪ್ರಸಹ್ಯ ತೇಷಾಂ ಸ ಶಿರಾಂಸಿ ಚೈವ |
ಚಿಚ್ಛೇದ ಪಾರ್ಥೋ ದ್ವಿಷತಾಂ ಸುಮುಕ್ತೈ
ರ್ಬಾಣೈಃ ಸ್ಥಿತಾನಾಮಪರಾಙ್ಮುಖಾನಾಮ್ ||9||
ಶತ್ರುಗಳಾದ ಸಂಶಪ್ತಕರ ಧನುಸ್ ಬಾಣ ಬತ್ತಳಿಕೆ ಹೆದೆ ಕೈ ತೋಳು ಕೈಯಲ್ಲಿ ಹಿಡಿದ ಆಯುಧ ಛತ್ರ ಧ್ವಜ ಕುದುರೆ ವಸ್ತ್ರ ಮಾಲೆ ಆಭರಣ ಗುರಾಣಿ ಕವಚ ಈಟಿ ಹೀಗೆ ಎಲ್ಲವನ್ನೂ ತಲೆಗಳನ್ನೂ ಕೂಡ, ಅವರು ಪಲಾಯನ ಮಾಡದೆ ಇದಿರಿಗೆ ನಿಂತಿದ್ದರೆ ಮಾತ್ರ, ಚೆನ್ನಾಗಿ ಪ್ರಯೋಗಿಸಿದ ಬಾಣಗಳಿಂದ ಬಲಾತ್ಕಾರವಾಗಿ ಅರ್ಜುನ ಕಡಿದುಹಾಕಿದ.
ಸುಕಲ್ಪಿತಾಃ ಸ್ಯಂದನವಾಜಿನಾಗಾಃ
ಸಮಾಸ್ಥಿತಾಃ ಕೃತಯತ್ನೈರ್ನೃವೀರೈಃ |
ಪಾರ್ಥೇರಿತೈರ್ಬಾಣಗಣೈರ್ನಿರಸ್ತಾ

ಸ್ಸೈರೇವ ಸಾರ್ಧಂ ನೃವರ್ಯೈರ್ವಿನೇಶುಃ ॥10॥
ಚೆನ್ನಾಗಿ ಸಜ್ಜಾಗಿದ್ದ ರಥ ಕುದುರೆ ಆನೆ ಸೈನ್ಯಗಳೂ ಒಳ್ಳೆಯ ಪ್ರಯತ್ನಮಾಡುವ ಪದಾತಿ ಸೈನ್ಯಗಳೂ ಅವುಗಳನ್ನು ತಂದಿದ್ದ ರಾಜರೊಂದಿಗೆ ಅರ್ಜುನನ ಬಾಣಗಳಿಗೆ ತುತ್ತಾಗಿ ನಾಶಹೊಂದಿದುವು.
ಪದ್ಮಾರ್ಕಪೂರ್ಣೇಂದುಸಮಾನನಾನಿ
ಕಿರೀಟಮಾಲಾಭರಣೋಜ್ವಲಾನಿ |
ಭಲ್ಲಾರ್ಧಚಂದ್ರಕ್ಷುರಸನ್ನಿಕೃತ್ತಾ-
ನ್ಯಪಾತಯಚ್ಛತ್ರುಶಿರಾಂಸ್ಯಜಸ್ರಮ್ ॥11॥
ಕಮಲದಂಥ ಸೂರ್ಯನಂಥ ಪೂರ್ಣಚಂದ್ರನಂಥ ಮುಖಗಳಿಂದ, ಕಿರೀಟ ಮಾಲೆ ಆಭರಣಗಳಿಂದ ಯುಕ್ತವಾಗಿ ಉಜ್ವಲವಾಗಿ ಕಾಣುತ್ತಿದ್ದ ಶತ್ರುಯೋಧರ ತಲೆಗಳನ್ನು , ಅರ್ಜುನ ಭಲ್ಲೆ, ಅರ್ಧಚಂದ್ರ, ಕ್ಷುರಗಳಿಂದ ಕತ್ತರಿಸುತ್ತ ಒಂದೇ ಸವನೆ ಕೆಡವಿದ.
ಅಥ ದ್ವಿಪೈರ್ದೈತ್ಯರಿಪುದ್ವಿಪಾಭೈ
ರ್ದೇವಾರಿಕಲ್ಪಾ ಬಲಮನ್ಯುದರ್ಪಾಃ |
ಕಲಿಂಗವಂಗಾಂಗನಿಷಾದವೀರಾ
ಜಿಘಾಂಸವಃ ಪಾಂಡವಮಭ್ಯಧಾವನ್ ॥12॥
ದೈತ್ಯರಿಗೆ ಶತ್ರುವಾದ ದೇವೇಂದ್ರನ ಆನೆಯಂತಿರುವ ಆನೆಗಳನ್ನೇರಿ ದೇವೇಂದ್ರನಂತೆ ಬಲ ಕೋಪದರ್ಪಗಳಿಂದ ದೈತ್ಯರಂಥ ಯುಕ್ತರಾದ ಕಲಿಂಗ ವಂಗ ಅಂಗ ನಿಷಾದದೇಶಗಳ ವೀರರು ಅರ್ಜುನನನ್ನು ಕೊಲ್ಲಲು ಬಯಸಿ ಇದಿರಿಗೆ ಬಂದರು.
ತೇಷಾಂ ದ್ವಿಪಾನಾಂ ನಿಚಕರ್ತ ಪಾರ್ಥ
ಶ್ಚರ್ಮಾಣಿ ವರ್ಮಾಣಿ ಕರಾನ್ ನಿಯಂತ್ರೂನ್ |
ಧ್ವಜಾಃ ಪತಾಕಾಶ್ಚ ತತಃ ಪ್ರಪೇತು-
ರ್ವಜ್ರಾಹತಾನೀವ ಗಿರೇಃ ಶಿರಾಂಸಿ ॥13॥
ಆ ವೀರರ ಆನೆಗಳ ಚರ್ಮ ಕವಚ ಸೊಂಡಿಲುಗಳೂ ಗಜಾರೋಹಿ ಗಳೊಂದಿಗೆ ಅರ್ಜುನನ ಬಾಣಗಳಿಂದ ಕಡಿದುವು ಮಾತ್ರವಲ್ಲ, ವಜ್ರಾಘಾತಕ್ಕೆ ಪರ್ವತಶಿಖರಗಳು ಉರುಳುವಂತೆ ರಥದ ಧ್ವಜ ಪತಾಕೆಗಳೂ ಉರುಳಿದುವು.
ತೇಷು ಪ್ರಭಗ್ನೇಷು ಗುರೋಸ್ತನೂಜಂ
ಬಾಣೈಃ ಕಿರೀಟೀ ನವಸೂರ್ಯವರ್ಣೈಃ |
ಪ್ರಚ್ಛಾದಯಾಮಾಸ ಮಹಾಭ್ರಜಾಲೈ-
ರ್ವಾಯುಃ ಸಮುದ್ಯಂತಮಿವಾಂಶುಮಂತಮ್ ॥14॥
ಹೀಗೆ ವೀರರ ಸೈನ್ಯ ನಾಶವಾದಾಗ ಅರ್ಜುನ ಬಾಲಸೂರ್ಯನಂತೆ ಹೊಳೆವ ಬಾಣಗಳಿಂದ ಅಶ್ವತ್ಥಾಮನನ್ನು, ವಾಯುವು ಉದಿಸುವ ಸೂರ್ಯನನ್ನು ದೊಡ್ಡಮೋಡಗಳ ಸಮೂಹದಿಂದ ಆಚ್ಛಾದಿಸುವಂತೆ ಆಚ್ಛಾದಿಸಿದ.
ತತೋಽರ್ಜುನೇಷೂನಿಷುಭಿರ್ನಿರಸ್ಯ
ದ್ರೌಣಿಃ ಶರೈರರ್ಜುನವಾಸುದೇವೌ |
ಪ್ರಚ್ಛಾದಯಿತ್ವಾ ದಿವಿ ಚಂದ್ರಸೂರ್ಯೌ
ನನಾದ ಸೋಽಂಭೋದ ಇವಾತಪಾಂತೇ ॥15॥
ಅಶ್ವತ್ಥಾಮನೂ ಕೂಡ ಅರ್ಜುನನ ಬಾಣಗಳನ್ನು ಬಾಣಗಳಿಂದ ನಾಶಪಡಿಸಿ, ಬಿಸಿಲುಗಾಲದ ಕೊನೆಯಲ್ಲಿ ಆಕಾಶದಲ್ಲಿ ಚಂದ್ರಸೂರ್ಯರನ್ನು ಮೋಡವು ಆಚ್ಛಾದಿಸಿ ಗುಡುಗುವಂತೆ, ಕೃಷ್ಣಾರ್ಜುನರನ್ನು ಬಾಣಗಳಿಂದ ಆಚ್ಛಾದಿಸಿ ಗುಡುಗಿದ.
ತಮರ್ಜುನಸ್ತಾಂಶ್ಚ ಪುನಸ್ತ್ವದೀಯಾನ್
ಅಭ್ಯರ್ದಿತಸ್ಸೈರಭಿಸೃತ್ಯ ಶಸ್ತ್ರೈಃ |
ಬಾಣಾಂಧಕಾರಂ ಸಹಸೈವ ಕೃತ್ವಾ
ವಿವ್ಯಾಧ ಸರ್ವಾನಿಷುಭಿಃ ಸಪುಂಖೈಃ ॥16॥
ಅಶ್ವತ್ಥಾಮನ ಮತ್ತು ನಿನ್ನ ಸೈನಿಕರ ಬಾಣಗಳಿಂದ ಪೀಡಿತನಾದ ಅರ್ಜುನ ಪುನಃ ಅವರನ್ನು ಶಸ್ತ್ರಗಳಿಂದ ಇದಿರಿಸಿ, ಕ್ಷಣದಲ್ಲಿ ಬಾಣಗಳಿಂದ ಅಂಧಕಾರವನ್ನು ನಿರ್ಮಿಸಿ, ಒಳ್ಳೆಯ ಪುಕ್ಕಗಳುಳ್ಳ ಬಾಣಗಳಿಂದ ಎಲ್ಲರನ್ನೂ ಹೊಡೆದ.
ನಾಪ್ಯಾದದತ್ ಸನ್ದಧನ್ನೈವ ಮುಂಚನ್
ಬಾಣಾನ್ ರಣೇಽದೃಶ್ಯತ ಸವ್ಯಸಾಚೀ |
ರಥಾನ್ ಸನಾಗಾಂಸ್ತುರಗಾನ್ ಪದಾತೀನ್
ಸಂಸ್ಯೂತದೇಹಾನ್ ದದೃಶುರ್ಹತಾಂಶ್ಚ ॥17॥
ಅರ್ಜುನನು ಬಾಣಗಳನ್ನು ಎತ್ತಿಕೊಳ್ಳುವುದನ್ನಾಗಲಿ, ಹೆದೆಗೇರಿಸುವು ದನ್ನಾಗಲಿ, ಎಸೆಯುವುದನ್ನಾಗಲಿ ಯಾರೂ ನೋಡಲೇ ಇಲ್ಲ. ರಥ ಗಜ ತುರಗ ಪದಾತಿಗಳಲ್ಲಿ ಮೈಗೆ ಬಾಣಗಳು ನೆಟ್ಟಿದ್ದನ್ನು ಮತ್ತು ಅವರು ಹತರಾದುದನ್ನು ಮಾತ್ರ ನೋಡಿದರು. ಅಷ್ಟು ವೇಗದಿಂದ ಅರ್ಜುನ ಬಾಣಗಳನ್ನೆಸೆದ.
ಸಂಧಾಯ ನಾರಾಚವರಾನ್ ದಶಾಶು
ದ್ರೌಣಿಸ್ತ್ವರನ್ನೇಕಮಿವೋತ್ಸಸರ್ಜ |
ತೇಷಾಂ ಚ ಪಂಚಾರ್ಜುನಮಭ್ಯವಿಧ್ಯನ್
ಪಂಚಾಚ್ಯುತಂ ನಿರ್ಬಿಭಿದುಃ ಸುಮುಕ್ತಾಃ ॥18॥

ಅದಕ್ಕೆ ಅಶ್ವತ್ಥಾಮ ಬೇಗನೆ ಅವಸರದಿಂದ ಹತ್ತು ಉತ್ತಮ ಬಾಣಗಳನ್ನು ಒಂದೇ ಬಾಣದಂತೆ ಹೆದೆಗೆ ಏರಿಸಿ ಒಮ್ಮೆಲೆ ಎಸೆದ. ಆದರೆ ಅವುಗಳಲ್ಲಿ ಐದು ಬಾಣಗಳು ಅರ್ಜುನನನ್ನು ಹೊಡೆದಿದ್ದುವು. ಐದು ಕೃಷ್ಣನನ್ನು ಹೊಡೆದಿದ್ದುವು.
ತೈರಾಹತೌ ಸರ್ವಮನುಷ್ಯಮುಖ್ಯಾ-
ವಸೃಕ್ಕ್ಷರೌ ವೈಶ್ರವಣೇಂದ್ರಕಲ್ಪೌ |
ಸಮಾಪ್ತವಿದ್ಯೇನ ತಥಾಽಭಿಭೂತೌ
ಹತೌ ಸ್ವಿದೇತಾವಿತಿ ಮೇನಿರೇಽನ್ಯೇ ॥19॥
ಎಲ್ಲ ಮನುಷ್ಯರಲ್ಲಿ ಶ್ರೇಷ್ಠರಾದ, ಕುಬೇರ ಇಂದ್ರರಿಗೆ ಸಮಾನರಾದ ಕೃಷ್ಣಾರ್ಜುನರು ಅಸ್ತ್ರವಿದ್ಯೆಯನ್ನು ಚೆನ್ನಾಗಿ ಕರಗತ ಮಾಡಿಕೊಂಡಿದ್ದ ಅಶ್ವತ್ಥಾಮನ ಬಾಣಗಳಿಂದ ಹೊಡೆಸಿಕೊಂಡು ನೆತ್ತರು ಸುರಿದರು. ಅವರನ್ನು ಕಂಡವರು ಇತರರು, ಅವರು ಪರಾಜಿತರಾಗಿ ಹತರಾದರೆಂದೇ ಭಾವಿಸಿದರು.
ಅಥಾರ್ಜುನಂ ಪ್ರಾಹ ದಶಾರ್ಹನಾಥಃ
ಪ್ರಮಾದ್ಯಸೇ ಕಿಂ ಜಹಿ ಯೋಧಮೇನಮ್ |
ಕುರ್ಯಾದ್ಧಿ ದೋಷಂ ಸಮುಪೇಕ್ಷಿತೋಽಸೌ
ಕಷ್ಟೋ ಭವೇದ್ ವ್ಯಾಧಿರಿವಾಕ್ರಿಯಾವಾನ್ ॥20॥
ಶ್ರೀಕೃಷ್ಣ ಅರ್ಜುನನಿಗೆ ಹೇಳಿದ, `ಏಕೆ ಪ್ರಮಾದ ಮಾಡುವೆ? ಈತನನ್ನು ಬಿಡಬೇಡ, ಹೊಡೆ. ಸುಮ್ಮನೆ ಬಿಟ್ಟರೆ, ವ್ಯಾಧಿಗೆ ಸಕಾಲದಲ್ಲಿ ಸರಿಯಾದ ಚಿಕಿತ್ಸೆ ಮಾಡದೆ ಬಿಟ್ಟರೆ ಅದು ಕಷ್ಟ ಉಂಟುಮಾಡುತ್ತದೆ, ಹಾಗೆ, ಈತನೂ ನಮಗೆ ಹಾನಿಕಾರಕನಾಗುವನು.'
ತಥೇತಿ ಚೋಕ್ತತ್ವಽಚ್ಯುತಮಪ್ರಮಾದೀ
ದ್ರೌಣಿಂ ಪ್ರಯತ್ನಾದಿಷುಭಿಸ್ತತಕ್ಷ |
ಭುಜೌ ವರೌ ಚಂದನಸಾರದಿಗ್ಧೌ
ವಕ್ಷಃ ಶಿರೋಽಥಾಪ್ರತಿಮಂ ತಥೋರೂ ॥21॥
ಅರ್ಜುನ ಪ್ರಮಾದ ಮಾಡುವವನಲ್ಲ. ಶ್ರೀಕೃಷ್ಣನಿಗೆ `ತಥಾಸ್ತು' ಹಾಗೇ ಆಗಲೆಂದು ಹೇಳಿ ಪ್ರಯತ್ನಮಾಡಿ ಬಾಣಗಳಿಂದ ಅಶ್ವತ್ಥಾಮನನ್ನು ಚೆನ್ನಾಗಿ ಹೊಡೆದ. ಶ್ರೀಗಂಧಲೇಪಿತವಾದ ಉತ್ತಮವಾದ ಆತನ ತೋಳುಗಳನ್ನೂ ಅಪ್ರತಿಮವಾದ ಆತನ ಎದೆ ತಲೆ ತೊಡೆಗಳನ್ನೂ ಹೊಡೆದ.
ಗಾಂಡೀವಮುಕ್ತೈಃ ಕುಪಿತಾಹಿಕಲ್ಪೈ-
ರ್ದ್ರೌಣಿಂ ಶರೈಃ ಸಂಯತಿ ನಿರ್ಬಿಭೇದ ॥22॥
ಗಾಂಡೀವದಿಂದ ಹೊರಟ, ಕುಪಿತವಾದ ಹಾವಿನಂಥ ಬಾಣಗಳಿಂದ ಅರ್ಜುನ ಅಶ್ವತ್ಥಾಮನನ್ನು ರಣದಲ್ಲಿ ಭೇದಿಸಿದ.
ಛಿತ್ತ್ವಾ ಚ ರಶ್ಮೀಂಸ್ತುರಗಾನವಿಧ್ಯತ್
ತೇ ತಂ ರಣಾದೂಹುರತೀವ ದೂರಮ್ ॥23॥
ಕುದುರೆಗಳ ಹಗ್ಗಗಳನ್ನೂ ಕಡಿದು ಕುದುರೆಗಳನ್ನೂ ಹೊಡೆದ. ಅವುಗಳು ಅಶ್ವತ್ಥಾಮನನ್ನು ರಣರಂಗದಿಂದ ದೂರಕ್ಕೆ ಒಯ್ದುವು.
ಸ ತೈರ್ಹೃತೋ ವಾತಜವೈಸ್ತುರಂಗೈ-
ರ್ದ್ರೌಣಿರ್ದೃಢಂ ಪಾರ್ಥಶರಾಭಿಭೂತಃ |
ಆವೃತ್ಯ ನೇಯೇಷ ಪುನಃ ಸ ಯೋದ್ಧುಂ
ಪಾರ್ಥೇನ ಸಾರ್ಧಂ ಮತಿಮಾನ್ ವಿಮೃಶ್ಯ ॥24॥
ಅರ್ಜುನನ ಬಾಣಗಳಿಂದ ಪರಾಜಿತನಾಗಿದ್ದು ಗಾಳಿಯ ವೇಗದ ಕುದುರೆ ಗಳಿಂದ ದೂರಕ್ಕೆ ಒಯ್ಯಲ್ಪಟ್ಟ ಅಶ್ವತ್ಥಾಮ ಹಿಂತಿರುಗಿ ಪುನಃ ಅರ್ಜುನನೊಡನೆ ಯುದ್ಧಮಾಡಲು ಬಯಸಲಿಲ್ಲ. ಬುದ್ಧಿಶಾಲಿಯಾದ ಆತ ವಿಮರ್ಶೆ ಮಾಡಿ ಯುದ್ಧ ಮಾಡದಿರಲು ನಿರ್ಧರಿಸಿದ.
ಜಾನನ್ ಜಯಂ ನಿಯತಂ ವೃಷ್ಣಿವೀರೇ
ಧನಂಜಯೇ ಚಾಂಗಿರಸಾಂ ವರಿಷ್ಠಃ |
ವಿವೇಶ ಕರ್ಣಸ್ಯ ಬಲಂ ತರಸ್ವೀ
ಕ್ಷೀಣೋತ್ಸಾಹಃ ಕ್ಷೀಣಬಾಣಾಸ್ತ್ರಯೋಗಃ ॥25॥
ಕೃಷ್ಣಅರ್ಜುನರಿಗೇ ಜಯ ಖಚಿತವೆಂದು ತಿಳಿದು ನಿರುತ್ಸಾಹಗೊಂಡು ಬಾಣ ಗಳ ಆಯುಧಗಳ ಪ್ರಯೋಗ ಮಾಡುವುದನ್ನು ಬಿಟ್ಟು, ಬೇಗನೆ ಕರ್ಣನ ಸೈನ್ಯವನ್ನು ಸೇರಿಕೊಂಡ, ಅಶ್ವತ್ಥಾಮ.
ನಿಯಮ್ಯ ತು ಹಯಾನ್ ದ್ರೌಣಿಃ ಸಮಾಶ್ವಾಸ್ಯ ಪುನಃ ಪುನಃ |
ಗಜಾಶ್ವರಥಸಂಬಾಧಂ ಕರ್ಣಸ್ಯ ಪ್ರಾವಿಶದ್ ಬಲಮ್ ॥26॥
ಓಡುತ್ತಿದ್ದ ಕುದುರೆಗಳನ್ನು ವಶಕ್ಕೆ ತಂದುಕೊಂಡು, ಪುನಃಪುನಃ ಸಂತೈಸಿ ಗಜ ಅಶ್ವ ರಥಗಳಿಂದ ತುಂಬಿದ್ದ ಕರ್ಣನ ಸೈನ್ಯವನ್ನು ಪ್ರವೇಶಿಸಿದ, ಅಶ್ವತ್ಥಾಮ.
ಪ್ರತೀಪಕಾಮೇ ತು ರಣಾದ್ ಅಶ್ವತ್ಥಾಮ್ನಿ ಹೃತೇ ಹಯೈಃ |
ಮಂತ್ರೌಷಧಿಕ್ರಿಯಾಯೋಗೈರ್ವ್ಯಾಧೌ ದೇಹಾದಿವಾಹೃತೇ ॥27॥
ಸಂಶಪ್ತಕಾನಭಿಮುಖೌ ಪ್ರಯಾತೌ ಕೇಶವಾರ್ಜುನೌ |
ವಾತೋದ್ಧೂತಪತಾಕೇನ ಸ್ಯಂದನೇನೌಘನಾದಿನಾ ॥28॥
ಮಂತ್ರ ಔಷಧ ಚಿಕಿತ್ಸೆಗಳಿಂದ ವ್ಯಾಧಿಯು ದೇಹದಿಂದ ದೂರವಾಗುವಂತೆ, ತಮಗೆ ವಿರೋಧಮಾಡಲು ಬಯಸಿದ್ದ ಅಶ್ವತ್ಥಾಮನು ರಣರಂಗದಿಂದಾಚೆಗೆ ಸರಿದಾಗ, ಜಲಪ್ರವಾಹದಂತೆ ಸದ್ದುಮಾಡುವ, ಗಾಳಿಗೆ ಹಾರಾಡುವ ಪತಾಕೆಗಳುಳ್ಳ ರಥದಿಂದ ಕೃಷ್ಣಾರ್ಜುನರು

ಸಂಶಪ್ತಕರಿಗೆ ಅಭಿಮುಖವಾಗಿ ಹೊರಟರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ದ್ರೌಣಿಪರಾಜಯೋ ನಾಮ ಸಪ್ತದಶೋಽಧ್ಯಾಯಃ ॥17॥

ಮಹಾಭಾರತತಾತ್ಪರ್ಯನಿರ್ಣಯ
ಅಥ ವಿದ್ರಾವಯಾಮಾಸ ಪೃತನಾಂ ಪಾಂಡವೀಂ ಶರೈಃ |
ತದಾ ಜಘಾನ ಪಾರ್ಥೋಽಪಿ ದಂಡಧಾರಾಖ್ಯಮಾಗಧಮ್ ॥ 66 ॥
ಬಳಿಕ ಅಶ್ವತ್ಥಾಮ ಪಾಂಡವಸೇನೆಯನ್ನು ಬಾಣಗಳಿಂದ ಓಡಿಸಿದ. ಆಗ ಅರ್ಜುನನೂ ದಂಡಧಾರನೆಂಬ ಮಗಧರಾಜನನ್ನು ಕೊಂದ.

ಹದಿನೆಂಟನೆಯ ಅಧ್ಯಾಯ
ಅರ್ಜುನನಿಂದ ದಂಡಧಾರ ಮತ್ತು ದಂಡರ ವಧ.
ಸಂಜಯಃ
ಅಥೋತ್ತರೇಣ ಪಾಂಡೂನಾಂ ಸೇನಾಯಾಂ ಧ್ವನಿರುತ್ಥಿತಃ |
ರಥನಾಗಾಶ್ವಪತ್ತೀನಾಂ ದಂಡಧಾರೇಣ ವಧ್ಯತಾಮ್ ॥1॥
ಸಂಜಯನು ನುಡಿದ– ಅನಂತರ ಪಾಂಡವ ಸೈನ್ಯದಲ್ಲಿ ದಂಡಧಾರನಿಂದ ಹತರಾಗುತ್ತಿದ್ದ ರಥ ಗಜ ಅಶ್ವ ಪದಾತಿಗಳ ಆರ್ತನಾದ ಕೇಳಿ ಬರತೊಡಗಿತು.
ನಿವರ್ತಯಿತ್ವಾ ತು ರಥಂ ಕೇಶವೋಽರ್ಜುನಮಬ್ರವೀತ್ |
ವಾಹಯನ್ನೇವ ತುರಗಾನ್ ಗರುಡಾನಿಲರಂಹಸಃ ॥2॥
ಅಶ್ವತ್ಥಾಮನ ಇದಿರಿನಿಂದ ಈಚೆಗೆ ರಥವನ್ನು ತಿರುಗಿಸಿದ ಬಳಿಕ ಶ್ರೀಕೃಷ್ಣ ಗರುಡವೇಗದ ವಾಯುವೇಗದ ಕುದುರೆಗಳನ್ನು ನಡೆಸುತ್ತಲೇ ಅರ್ಜುನನಿಗೆ ಹೇಳುತ್ತಾನೆ–
ಮಾಗಧೋಽಸಾವತಿಕ್ರಾಂತೋ ದ್ವಿರದೇನ ಪ್ರಮಾಥಿನಾ |
ಭಗದತ್ತಾದನವರಃ ಶಿಕ್ಷಯಾ ಚ ಬಲೇನ ಚ ॥3॥
`ಅರ್ಜುನ, ಮಗಧರಾಜ ದಂಡಧಾರ ಈತ, ಸೈನ್ಯವನ್ನು ಪುಡಿಗೈವ ಆನೆಯನ್ನೇರಿ, ಸೈನ್ಯವನ್ನು ಅತಿಯಾಗಿ ಆಕ್ರಮಿಸುತ್ತಿದ್ದಾನೆ. ಅವನು ಯುದ್ಧವಿದ್ಯೆ ಯಲ್ಲಿಯೂ ಬಲದಲ್ಲಿಯೂ ಭಗದತ್ತನಿಗೆ ಸಮಾನ, ಅವನಿಗಿಂತ ಕಡಿಮೆಯವ ನೇನಲ್ಲ.'
ಏನಂ ಹತ್ವಾ ನಿಹಂತಾಸಿ ಪುನಃ ಸಂಶಪ್ತಕಾನಿತಿ |
ವಾಕ್ಯಾಂತೇ ಪ್ರಾಪಯತ್ ಪಾರ್ಥಂ ದಂಡಧಾರಾಂತಿಕಂ ಪ್ರತಿ ॥4॥
`ಈತನನ್ನು ಕೊಂದೇ ಪುನಃ ಸಂಶಪ್ತಕರನ್ನು ಕೊಲ್ಲುವಿಯಂತೆ!' ಎಂದು ಶ್ರೀಕೃಷ್ಣ ಹೇಳುತ್ತ, ಮಾತು ಮುಗಿಯುತ್ತಲೇ, ಅರ್ಜುನನನ್ನು ದಂಡಧಾರನ ಬಳಿಗೆ ಒಯ್ದನು.
ಸ ಮಾಗಧಾನಾಂ ಪ್ರವರೋಽಂಕುಶಗ್ರಹೇ
ಮಹಾಬಲಃ ಶೌರ್ಯಗುಣೈಃ ಸಮನ್ವಿತಃ |
ಸಪತ್ನಸೇನಾಂ ಪ್ರಮಮಾಥ ದಾರುಣೋ
ಮಹೀಂ ಸಮಗ್ರಾಂ ಬಲವಾನಿವ ಗ್ರಹಃ ॥5॥
ಆ ಮಾಗಧಯೋಧನು ಅಂಕುಶಗ್ರಹಣದಲ್ಲಿ ಅದ್ವಿತೀಯ. ಮಹಾಬಲಶಾಲಿ. ಶೌರ್ಯಾದಿ ಗುಣಗಳಿಂದ ಯುಕ್ತನಾಗಿದ್ದ. ಅವನು ದಾರುಣನಾಗಿ ಶತ್ರುಸೈನ್ಯವನ್ನು ಬಲಿಷ್ಠವಾದ ಉತ್ಪಾತಗ್ರಹವು ಸಮಗ್ರಭೂಮಿಯನ್ನು ಹೇಗೆ ಪೀಡಿಸುವುದೋ ಹಾಗೆ ಪುಡಿಮಾಡತೊಡಗಿದ.
ಸುಕಲ್ಪಿತಂ ದಾನವನಾಗಸನ್ನಿಭಂ
ಮಹಾಭ್ರನಿರ್ಹ್ರಾದಸಮಸ್ವನಂ ರಣೇ |
ಸಮಾಸ್ಥಿತೋ ನಾಗವರಂ ನರೇಶ್ವರೋ
ರಥಾಶ್ವಮಾತಂಗನರಪ್ರಮಾಥಿನಮ್ ॥6॥
ಗಜಾಸುರನಂಥ, ಮಹಾಮೇಘದ ಗರ್ಜನೆಯಂಥ ಶಬ್ದ ಮಾಡುವ, ರಥ ಅಶ್ವ ಗಜ ಪದಾತಿಗಳನ್ನು ಪುಡಿಗೈವ, ಬಲುಸಜ್ಜಾದ ದೊಡ್ಡ ಆನೆಯನ್ನೇರಿದ್ದ ಆ ದಂಡಧಾರ.
ಸ ನಾಗಯಂತೄನ್ ಸಮರೇ ಮಹಾರಥಾನ್
ಸಪತ್ತಿಸಂಘಾನ್ ತುರಗಾನ್ ಸಸಾದಿನಃ |
ದ್ವಿಪಾಂಶ್ಚ ಬಾಣೈರ್ನಿಜಘಾನ ವೀರ್ಯವಾನ್
ದ್ವಿಪಾಸ್ಥಿತೋ ಹಂತಿ ಚ ಕಾಲಚಕ್ರವತ್ ॥7॥
ಗಜಾರೋಹಿಗಳನ್ನೂ ಮಹಾರಥರನ್ನೂ ಪದಾತಿಸಮೂಹಗಳನ್ನೂ ಅಶ್ವಾ ರೋಹಿಗಳೊಂದಿಗೆ ಅಶ್ವಗಳನ್ನೂ ಗಜಗಳನ್ನೂ ವೀರ್ಯಶಾಲಿಯಾದ ದಂಡಧಾರ ಬಾಣಗಳಿಂದ ಸಂಹರಿಸಿದ. ಆನೆಯನ್ನೇರಿ ಕುಳಿತು ಕಾಲಚಕ್ರದಂತೆ ಎಲ್ಲರನ್ನೂ ಸಂಹರಿಸಿದ.
ನಾಗಾಂಶ್ಚ ಕಾಂಸ್ಯಾಯಸವರ್ಮಭೂಷಣಾನ್
ನಿಪಾತ್ಯ ಪತ್ತೀನಪಿ ವಾಜಿಭಿಃ ಸಹ |
ವ್ಯಪೋಥಯದ್ ದಂತಿವರೇಣ ಶುಷ್ಮಿಣಾ

ಸಶಬ್ದವತ್ ಸ್ಥೂಲನಲಂ ಯಥಾ ಗಜಃ ॥8॥
ಕಂಚು ಕಬ್ಬಿಣಗಳ ಕವಚತೊಟ್ಟು ಆಭರಣ ಧರಿಸಿದ ಆನೆಗಳನ್ನೂ ಅಶ್ವಾರೋಹಿಗಳೊಂದಿಗೆ ಪದಾತಿಗಳನ್ನೂ ದಂಡಧಾರನು ಬಲಿಷ್ಠವಾದ ಮಹಾಗಜದ ಮೂಲಕ ದೊಡ್ಡ ಲಾಳದ ಕಾಡನ್ನು ಮದ್ದಾನೆ ತುಳಿಯುವಂತೆ ಶಬ್ದಮಾಡುತ್ತ ತುಳಿಸಿದ.
ಅಥಾರ್ಜುನೋ ಜ್ಯಾತಲನೇಮಿನಿಃಸ್ವನೇ
ಮೃದಂಗಭೇರೀಬಹುಶಂಖನಾದಿತೇ |
ರಥಾಶ್ವಮಾತಂಗಸಹಸ್ರಸಂಕುಲೇ
ರಥೋತ್ತಮೇನಾಭ್ಯಪತದ್ ದ್ವಿಪೋತ್ತಮಮ್ ॥9॥
ಧನುಷ್ಟಂಕಾರಶಬ್ದಗಳು ರಥಚಕ್ರಧ್ವನಿಗಳು ಮೃದಂಗ ಭೇರಿ ಬಹುಶಂಖ ಧ್ವನಿಗಳು ಎಲ್ಲೆಡೆ ತುಂಬುವಂತೆ ರಥ ಅಶ್ವ ಗಜಗಳು ಸಾವಿರಗಟ್ಟಲೆ ಪರಸ್ಪರ ಕಾದಾಡುತ್ತಿದ್ದಾಗ ಅರ್ಜುನ ಉತ್ತಮವಾದ ರಥದಿಂದ ಆ ಮದ್ದಾನೆಯನ್ನು ಇದಿರಿಸಿದ.
ತತೋಽರ್ಜುನಂ ದ್ವಾದಶಭಿಃ ಶರೋತ್ತಮೈ-
ರ್ಜನಾರ್ದನಂ ಷೋಡಶಭಿಃ ಸಮಾರ್ಪಯತ್ |
ಸ ದಂಡಧಾರಸ್ತುರಗಾಂಸ್ತ್ರಿಭಿಸ್ತ್ರಿಭಿ-
ಸ್ತತೋ ನನಾದ ಪ್ರಜಹಾಸ ಚಾಸಕೃತ್ ॥10॥
ಆಗ ದಂಡಧಾರ ಅರ್ಜುನನನ್ನು ಹನ್ನೆರಡು ದೊಡ್ಡಬಾಣಗಳಿಂದಲೂ ಕೃಷ್ಣನನ್ನು ಹದಿನಾರು ಬಾಣಗಳಿಂದಲೂ ಹೊಡೆದ. ಮೂರು ಬಾಣಗಳಿಂದ ಅವನ ಕುದುರೆಗಳನ್ನೂ ಹೊಡೆದು ಪುನಃ ಪುನಃ ಗರ್ಜನೆ ಮಾಡಿದ.
ತತೋಽಸ್ಯ ಪಾರ್ಥಃ ಸಗುಣೇಷುಕಾರ್ಮುಕಂ
ಚಕರ್ತ ಭಲ್ಲೈರ್ಧ್ವಜಮಪ್ಯಲಂಕೃತಮ್ |
ಪುನರ್ನಿಯಂತ್ರೂನ್ ಸಹಸಾऽಥ ಗೋಪ್ತೃಭಿ
ಸ್ತತಃ ಸ ಚುಕ್ರೋಧ ಗಿರಿವ್ರಜೇಶ್ವರಃ ॥11॥
ಅದಕ್ಕೆ ಅರ್ಜುನ ಭಲ್ಲೆಗಳಿಂದ ದಂಡಧಾರನ ಬಿಲ್ಲನ್ನು ಹೆದೆ ಬಾಣಗಳೊಂದಿಗೆ ಕತ್ತರಿಸಿದ. ಅಲಂಕೃತವಾದ ಧ್ವಜವನ್ನೂ ಕತ್ತರಿಸಿದ. ಆನೆಯ ಮಾವಟಿಗರನ್ನೂ ರಕ್ಷಕರನ್ನೂ ಸಂಹರಿಸಿದ. ಆಗ ಗಿರಿವ್ರಜಾಧಿಪತಿ ದಂಡಧಾರ ಕುಪಿತನಾದ.
ತತೋಽರ್ಜುನಂ  ಭಿನ್ನಕಟೇನ ದಂತಿನಾ
ಘನಾಘನೇನಾನಿತುಲ್ಯರಂಹಸಾ |
ಅತೀವ ಚುಕ್ಷೋಭಯಿಷುರ್ಜನಾರ್ದನಂ
ಧನಂಜಯಂ ಚಾಪಿ ಜಘಾನ ತೋಮರೈಃ ॥12॥
ಗಾಳಿಗೆ ಸಮಾನ ವೇಗವುಳ್ಳ, ಗಂಡಸ್ಥಳದಿಂದ ಮದಜಲವನ್ನು ಸುರಿಸುವ ಬಲು ದೊಡ್ಡ ಗಾತ್ರದ ಆ ಆನೆಯ ಮೂಲಕ ಅರ್ಜುನನನ್ನೂ ಕೃಷ್ಣನನ್ನೂ ಅತಿಯಾಗಿ ನೋಯಿಸುವ ಬಯಕೆಯಿಂದ ತೋಮರಗಳಿಂದ ಇಬ್ಬರನ್ನೂ ಹೊಡೆದ.
ಅಥಾಸ್ಯ ಬಾಹೂ ದ್ವಿಪಹಸ್ತಸನ್ನಿಭೌ
ಶಿರಶ್ಚ ಪೂರ್ಣೇಂದುನಿಭಾನನಂ ತ್ರಿಭಿಃ |
ಕ್ಷುರೈಃ ಪ್ರಚಿಚ್ಛೇದ ಸಹೈವ ಪಾಂಡವಃ
ತತೋ ದ್ವಿಪಂ ಬಾಣಶತೈಃ ಸಮಾರ್ಪಯತ್ ॥13॥
ಬಳಿಕ ಅರ್ಜುನ ಆನೆಯ ಸೊಂಡಿಲಿನಂಥ ದಂಡಧಾರನ ತೋಳುಗಳನ್ನೂ ಪೂರ್ಣಚಂದ್ರನಂಥ ಮುಖಯುಕ್ತವಾದ ತಲೆಯನ್ನೂ ಒಮ್ಮೆಲೇ ಮೂರು ಕ್ಷುರಗಳಿಂದ ಕೂಡಿದ ನೂರಾರು ಬಾಣಗಳಿಂದ ಆನೆಯನ್ನೂ ಪೀಡಿಸಿದ.
ಸ ಪಾರ್ಥಬಾಣೈಸ್ತಪನೀಯಭೂಷಣೈಃ
ಸಮಾವೃತಃ ಕಾಂಚನವರ್ಮಭೃದ್ ದ್ವಿಪಃ |
ಭೃಶಂ ಚಕಾಶೇ ನಿಶಿ ಪರ್ವತೋತ್ತಮೋ
ಯಥಾಗ್ನಿನಾ ಪ್ರಜ್ವಲಿತೌಷಧಿದ್ರುಮಃ ॥14॥
ಬಂಗಾರದ ಅಲಂಕಾರಗಳಿಂದ ಆವೃತವಾಗಿದ್ದ ಬಂಗಾರದ ಕವಚ ಧರಿಸಿದ್ದ ಆನೆ ಈಗ ಅರ್ಜುನನ ಬಾಣಗಳಿಂದ ಆವೃತವಾಗಿ, ರಾತ್ರಿಕಾಲದಲ್ಲಿ ಕಾಳ್ಗಿಚ್ಚಿನಿಂದ ಔಷಧಿವೃಕ್ಷಗಳು ಸುಡುವಾಗಿನ ದೊಡ್ಡ ಬೆಟ್ಟದಂತೆ ಕಂಡುಬಂದಿತು.
ಸ ವೇದನಾರ್ತೋಽಂಬುದನಿಸ್ವನೋ ನದನ್
ಭ್ರಮಂಶ್ಚಲನ್  ಪ್ರಸ್ಖಲಿತಾತುರೋಽದ್ರವತ್ |
ಪಪಾತ ರುಗ್ಣಃ ಸನಿಯಂತೃಕಸ್ತಥಾ
ಯಥಾ ಗಿರಿರ್ವಜ್ರವಿಘೂರ್ಣಿತಃ ಪುರಾ ॥15॥
ಆನೆ ಬಾಣಗಳ ಏಟಿನ ವೇದನೆಯಿಂದ ಸಂಕಟಪಡುತ್ತ ಮೇಘಗರ್ಜನೆ ಯಂತೆ ಚೀತ್ಕಾರ ಮಾಡುತ್ತ ಸುತ್ತು ತಿರುಗುತ್ತ ಚಲಿಸುತ್ತ ತತ್ತರಿಸುತ್ತ ಧಾವಿಸಿತು. ಹಿಂದೆ ಪರ್ವತವು ವಜ್ರಾಘಾತದಿಂದ ಉರುಳಿದಂತೆ ಆನೆ ದಂಡಧಾರ ಸಹಿತವಾಗಿ ನೋವಿಂದ ನರಳುತ್ತ ಧರೆಗೊರಗಿತು.
ಹಿಮಾವದಾತೇನ ಸುವರ್ಣಮಾಲಿನಾ
ಹಿಮಾದ್ರಿಕೂಟಪ್ರತಿಮೇನ ದಂತಿನಾ |
ಹತೇ ರಣೇ ಭ್ರಾತರಿ ದಂಡ ಆವ್ರಜ-
ಜ್ಜಿಘಾಂಸುರಿಂದ್ರಾವರಜಂ ಸಹಾರ್ಜುನಮ್ ॥16॥

ಬಂಗಾರದ ಮಾಲೆಗಳಿಂದ ಅಲಂಕೃತವಾದ ಹಿಮದಂತೆ ಬಿಳಿಯಾದ ಹಿಮಾಲಯದ ಬೆಟ್ಟದ ಶಿಖರದಂತೆ ಕಾಣುತ್ತಿದ್ದ ಆನೆಯನ್ನೇರಿ ಬಂದಿದ್ದ ದಂಡಧಾರನೂ ಆನೆಯೊಂದಿಗೆ ಹತನಾದಾಗ ಅಲ್ಲಿಗೆ ಅವನ ಸೋದರನಾದ ದಂಡನು ಕೃಷ್ಣಾರ್ಜುನರನ್ನು ವಧಿಸಲೆಂದು ಬಂದ.

ಸ ತೋಮರೈರರ್ಕಕರಪ್ರಭೈಸ್ತ್ರಿಭಿ-
ರ್ಜನಾರ್ದನಂ ಪಂಚಭಿರೇವ ಚಾರ್ಜುನಮ್ ।
ಸಮರ್ಪಯಿತ್ವಾ ವಿನನಾದ ಚಾರ್ದಯನ್
ತತೋಽಸ್ಯ ಬಾಹೂ ವಿಚಕರ್ತ ಪಾಂಡವಃ ॥17॥

ದಂಡನು ಸೂರ್ಯಕಿರಣಗಳಂತೆ ಹೊಳೆಯುವ ಮೂರು ತೋಮರಗಳಿಂದ ಕೃಷ್ಣನನ್ನೂ ಐದು ತೋಮರಗಳಿಂದ ಅರ್ಜುನನನ್ನೂ ಹೊಡೆದು ಜೋರಾಗಿ ಗರ್ಜಿಸಿದ. ಆಗ ಅರ್ಜುನ ಅವನ ತೋಳುಗಳನ್ನು ಕಡಿದ.

ಕ್ಷುರಪ್ರಕೃತ್ತೌ ಸುಭೃಶಂ ಸುಮಾಂಸಲೌ
ಶುಭಾಂಗದೌ ಚಂದನರೂಷಿತೌ ಭುಜೌ ।
ಗಜಾತ್ ಪತಂತೌ ಯುಗಪದ್ ವಿರೇಜತು-
ರ್ಯಥಾದ್ರಿಶೃಂಗಾತ್ ಪತಿತೌ ಮಹೋರಗೌ ॥18॥

ಬಲು ಪುಷ್ಟವಾಗಿದ್ದು ಶ್ರೀಗಂಧಲೇಪಿತವಾಗಿ ಒಳ್ಳೆಯ ತೋಳ್ಬಳೆಯಿಂದ ಕೂಡಿದ್ದ ದಂಡನ ತೋಳುಗಳು ಎರಡೂ ಜೊತೆಯಾಗಿ ಕ್ಷುರದಿಂದ ಕತ್ತರಿಸಿ ಆನೆಯ ಮೇಲಿಂದ ಕೆಳಗೆ ಬೀಳುವಾಗ, ಬೆಟ್ಟದ ಶಿಖರದಿಂದ ಎರಡು ದೊಡ್ಡ ಹಾವುಗಳು ಬಿದ್ದಂತೆ ಕಂಡುಬಂದವು.

ತಥಾರ್ಧಚಂದ್ರೇಣ ಹತಂ ಕಿರೀಟಿನಾ
ಪಪಾತ ದಂಡಸ್ಯ ಶಿರಃ ಕ್ಷಿತಿಂ ದ್ವಿಪಾತ್ ।
ಸ ಶೋಣಿತಾರ್ದ್ರೋ ನಿಪತನ್ ವಿರೇಜೇ
ದಿವಾಕರೋಽಸ್ತಾದಿವ ಪಶ್ಚಿಮಾಂ ದಿಶಮ್ ॥19॥

ಹಾಗೇ ಅರ್ಜುನನ ಅರ್ಧಚಂದ್ರ ಬಾಣದಿಂದ ದಂಡನ ತಲೆಯೂ ಕಡಿದು ಆನೆಯ ಮೇಲಿಂದ ನೆಲದ ಮೇಲೆ ಬಿದ್ದಿತು. ರಕ್ತಸಿಕ್ತನಾಗಿ ಆನೆಯ ಮೇಲಿಂದ ದಂಡನೂ ಕೆಳಗೆ ಉರುಳುತ್ತ ಅಸ್ತಾಚಲದಿಂದ ಪಶ್ಚಿಮದಿಕ್ಕಿಗೆ ಜಾರುವ ಸೂರ್ಯನಂತೆ ಕಂಡುಬಂದ.

ಅಥ ದ್ವಿಪಂ ಶ್ವೇತನಗಾಗ್ರಸನ್ನಿಭಂ
ದಿವಾಕರಾಂಶುಪ್ರತಿಮೈಃ ಶರೋತ್ತಮೈಃ ।
ಬಿಭೇದ ಪಾರ್ಥಃ ಸ ಪಪಾತ ನಾಗೋ
ಹಿಮಾದ್ರಿಕೂಟಂ ಕುಲಿಶಾಹತಂ ಯಥಾ ॥20॥

ಬಳಿಕ ಶ್ವೇತಪರ್ವತದ ಶಿಖರದಂತಿದ್ದ ಆನೆಯನ್ನು ಅರ್ಜುನ ಸೂರ್ಯ ಕಿರಣಗಳಂಥ ಉತ್ತಮ ಬಾಣಗಳಿಂದ ಭೇದಿಸಿದ. ಆ ಆನೆ ವಜ್ರಾಯುಧದ ಏಟಿಗೆ ಬಿದ್ದ ಹಿಮಾಲಯ ಶಿಖರದಂತೇ ಬಿದ್ದಿತು.

ತತೋಽಪರೇ ತತ್ಪ್ರತಿಮಾ ಗಜೋತ್ತಮಾ
ಜಿಗೀಷವಃ ಸಂಯತಿ ಸವ್ಯಸಾಚಿನಮ್ ।
ತಥಾ ಹತಾಸ್ತೇಽಪಿ ಯಥೈವ ತೌ ದ್ವಿಪೌ
ತತಃ ಪ್ರಭಗ್ನಂ ಸುಮಹದ್ ರಿಪೋರ್ಬಲಮ್ ॥21॥

ಬಳಿಕ ಆ ಆನೆಯಂತೆಯೇ ಇದ್ದ ಬೇರೆ ಮದ್ದಾನೆಗಳು ಅರ್ಜುನನನ್ನು ಗೆಲ್ಲಲು ಬಯಸಿದವು. ಆದರೆ ಅವುಗಳು ಕೂಡ ಈ ಎರಡು ಅನೆಗಳಂತೆಯೇ ಹತವಾದುವು. ಬಳಿಕ ಬಲು ದೊಡ್ಡ ಶತ್ರುಸೈನ್ಯವೂ ನಾಶವಾಯಿತು.

ಗಜಾ ರಥಾಶ್ವಾಃ ಪುರುಷಾಶ್ಚ ಸಂಘಶಃ
ಪರಸ್ಪರಘ್ನಾಃ ಪರಿಪೇತುರಾಹವೇ ।
ಪರಸ್ಪರಂ ಪ್ರಸ್ಖಲಿತಾಃ ಸಮಾಹತಾ
ಭೃಶಂ ಚ ತತ್ತದ್‌ಬಹುಭಾಷಿಣೋ ಹತಾಃ ॥22॥
ಅಥಾರ್ಜುನಂ ಸಂಪರಿವಾರ್ಯ ಸೈನಿಕಾಃ
ಪುರಂದರಂ ದೇವಗಣಾ ಇವಾಬ್ರುವನ್ ॥23॥

ಆನೆಗಳು ರಥಕ್ಕೆ ಕಟ್ಟಿದ್ದ ಕುದುರೆಗಳು ಯೋಧರು ಎಲ್ಲರೂ ಗುಂಪುಗುಂಪಾಗಿ ರಣರಂಗದಲ್ಲಿ ಪರಸ್ಪರ ಕಾದಾಡಿ ಸತ್ತು ಬಿದ್ದರು. ಪರಸ್ಪರ ಹೊಡೆದುಕೊಂಡು ಮನಬಂದಂತೆ ಆಡಿಕೊಳ್ಳುತ್ತ ತತ್ತರಿಸಿ ಬಿದ್ದು ಅಸುನೀಗಿದರು. ಬಳಿಕ ದೇವತೆಗಳು ದೇವೇಂದ್ರನನ್ನು ಸುತ್ತುವರಿದು ನಿಲ್ಲುವಂತೆ ಪಾಂಡವ ಸೈನಿಕರು ಅರ್ಜುನನನ್ನು ಸುತ್ತುವರಿದು ಹೇಳಿದರು–

ಪಾಂಡವಸೈನಿಕಾಃ
ಅಭೈಷ್ಮ ಯಸ್ಮಾನ್ಮರಣಾದಿವ ಪ್ರಜಾಃ
ಸ ವೀರ ದಿಷ್ಟ್ಯಾ ನಿಹತಸ್ತ್ವಯಾ ರಿಪುಃ ॥24॥

ಪಾಂಡವರ ಸೈನಿಕರು ಹೇಳಿದರು– `ಜಂತುಗಳು ಮರಣಕ್ಕೆ ಭಯಪಡು ವಂತೆ ನಾವೆಲ್ಲರೂ ಯಾವ ಶತ್ರುಗಳಿಗೆ ಭಯಪಡುತ್ತಿದ್ದೆವೋ ಅವರನ್ನು ಹೇ ವೀರ, ನಮ್ಮ ಅದೃಷ್ಟದಿಂದ ನೀನು ಈಗ ಸಂಹರಿಸಿಬಿಟ್ಟೆ.

ನ ಚೇತ್ ಪರಿಭ್ರಾಮ್ಯದಿಮಾನ್ ಜನಾನ್ ಭವಾನ್
ದ್ವಿಷದ್ಭಿರೇವಂ ಬಲಿಭಿಃ ಪ್ರಪೀಡಿತಾನ್ ।

ತತೋಽಭವಿಷ್ಯದ್ ದ್ವಿಷತಾಂ ಪ್ರಮೋದನಂ
ಯಥಾ ಹತೇಷ್ವೇಷ್ವಿಹ ನೋಽರಿಸೂದನ ॥25॥
`ಶತ್ರುಗಳು ತಮ್ಮೊಳಗೇ ದುರ್ಬಲರು ಬಲಿಷ್ಠರಿಂದ ಹತರಾಗಿದ್ದಾರೆ. ನೀನು ಹೀಗೆ ಈ ಜನರನ್ನು ಭ್ರಮೆಯಲ್ಲಿ ಬೀಳಿಸದಿರುತ್ತಿದ್ದರೆ ಅವರಿಗೇ ಹಬ್ಬವಾಗುತ್ತಿತ್ತು, ಶತ್ರುನಾಶಕನೆ, ಈಗ ಅವರ ಮರಣದಿಂದ ನಮಗೆ ಹಬ್ಬ ಉಂಟಾಗಿದೆ.'
ಅರ್ಜುನ ಇಲ್ಲಿ ತ್ವಾಷ್ಟ್ರವೆಂಬ ಸಂಮೋಹನಾಸ್ತ್ರದಿಂದ ಸಂಶಪ್ತಕರನ್ನು ನಾಶಗೊಳಿಸಿದನೆಂದು ಪರ್ಯಾಯವಾಗಿ ಹೇಳಿದಂತಾಗಿದೆ. ಶತ್ರುಗಳು ಭ್ರಮೆಯಲ್ಲಿ ಬಿದ್ದು ತಮ್ಮವರನ್ನೇ ಶತ್ರುಗಳೆಂದು ಭ್ರಮಿಸಿ ಮನಬಂದಂತೆ ಮಾತನಾಡಿ ಒಬ್ಬರಿಗೊಬ್ಬರು ಹೊಡೆದುಕೊಂಡು ಸತ್ತರು. ಇದು ಸಂಮೋಹನಾಸ್ತ್ರಪ್ರಭಾವ. ಹಿಂದೆ (ದ್ರೋಣ. 19.11,13) ಅರ್ಜುನ ಇದೇ ರೀತಿ ತ್ವಾಷ್ಟ್ರಾಸ್ತ್ರಪ್ರಯೋಗದಿಂದ ಶತ್ರುಗಳನ್ನು ಭ್ರಮೆಯಲ್ಲಿ ಕೆಡವಿ `ಇವನೇ ಅರ್ಜುನ, ಇವನೇ ಕೃಷ್ಣ, ಇವರೇ ಪಾಂಡವರು' ಎಂದು ತಮ್ಮವರನ್ನೇ ಭ್ರಮಿಸುವಂತೆ ಮಾಡಿ ಪರಸ್ಪರ ಹೊಡೆದುಕೊಂಡು ಸತ್ತುಬೀಳುವಂತೆ ಮಾಡಿದ್ದು ವರ್ಣಿತವಾಗಿದೆ. ಅದರಿಂದ ಇಲ್ಲಿ `ನ ಚೇತ್ ಪರಿಭ್ರಾಮ್ಯದಿಮಾನ್ ಜನಾನ್ ಭವಾನ್' ಎಂಬ ಪಾಠ ಸಂಗತವಾಗಿದೆ.
`ನ ಚೇದರಕ್ಷಿಷ್ಯ ಇಮಂ ಜನಂ ಭಯಾತ್' `ನೀನು ನಮ್ಮನ್ನು ರಕ್ಷಿಸದಿರುತ್ತಿದ್ದರೆ' ಎಂಬ ಇದು ಪ್ರಚಲಿತ ಪಾಠಕ್ಕಿಂತ ಈ ಪಾಠ ಚೆನ್ನಾಗಿದೆ.
ಸಂಜಯಃ
ಇತೀವ ಭೂಯಶ್ಚ ಸುಹೃದ್ಭಿರೀರಿತಾ
ನಿಶಮ್ಯ ವಾಚಃ ಸುಮನಾಸ್ತದಾಽರ್ಜುನಃ |
ಯಥಾನುರೂಪಂ ಪ್ರತಿಪೂಜ್ಯ ತಂ ಜನಂ
ಜಗಾಮ ಸಂಶಪ್ತಕಸಂಘಹಾ ಪುನಃ ॥26॥
ಸಂಜಯ ನುಡಿದ– ಹೀಗೇ ಮತ್ತೂ ಮತ್ತೂ ಪ್ರೀತಿಯ ಸಜ್ಜನರು ಪ್ರಶಂಸೆ ಮಾಡಿದ್ದನ್ನು ಕೇಳಿ ಸಂತುಷ್ಟನಾದ ಅರ್ಜುನ ಅವರನ್ನು ಯೋಗ್ಯರೀತಿಯಲ್ಲಿ ಅಭಿನಂದಿಸಿ ಪುನಃ ಸಂಶಪ್ತಕರನ್ನು ಪೂರ್ತಿಯಾಗಿ ಸಂಹರಿಸಲು ಅವರ ಕಡೆಗೆ ತೆರಳಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಅಷ್ಟಾದಶೋಽಧ್ಯಾಯಃ ॥18॥

ಹತ್ತೊಂಬತ್ತನೆಯ ಅಧ್ಯಾಯ
ಅರ್ಜುನ ಸಂಶಪ್ತಕರ ಯುದ್ಧ
ಸಂಜಯಃ
ಪ್ರತ್ಯೇತ್ಯಾಥ ಪುನರ್ಜಿಷ್ಣುರ್ಹತ್ವಾ ಸಂಶಪ್ತಕಾನ್ ಬಭೌ |
ವಕ್ರಾನುವಕ್ರಗಮನಾದ್ ಅಂಗಾರಕ ಇವ ಗ್ರಹಃ ॥1॥
ಸಂಜಯ ನುಡಿದ– ಅರ್ಜುನ ಹಿಂತಿರುಗಿ ಬಂದು ಪುನಃ ಸಂಶಪ್ತಕರನ್ನು ಸಂಹರಿಸಿ, ಆಕಾಶದಲ್ಲಿ ವಕ್ರ ಅತಿಚಾರಗತಿಗಳಿಂದ ಲೋಕಕ್ಕೆ ಅನಿಷ್ಟ ಉಂಟುಮಾಡುವ ಮಂಗಳಗ್ರಹದಂತೆ ಶೋಭಿಸಿದ.
ಪಾರ್ಥಬಾಣೈರ್ಹತಾಸ್ತೇಽಥ ನರಾಶ್ವರಥಕುಂಜರಾಃ |
ವಿಚೇಲುರ್ಬಭ್ರಮುರ್ನೇದುಃ ಪೇತುರ್ಮಮ್ರುಶ್ಚ ಭಾರತ ॥2॥
ರಾಜನೆ, ಅರ್ಜುನನ ಬಾಣಗಳಿಗೆ ತುತ್ತಾಗಿ ಪದಾತಿ ಅಶ್ವ ರಥ ಗಜ ಸೈನಿಕರೆಲ್ಲರೂ ಓಡಿದರು. ಸುತ್ತು ಸುತ್ತಿದರು, ಕೂಗಿಕೊಂಡರು. ಬಿದ್ದರು, ಸತ್ತರು.
ಧುರ್ಯಾನ್ ಧುರ್ಯೇತರಾನ್ ಸೂತಾನ್
ಧ್ವಜಾಂಶ್ಚಾಪಾಸಿಸಾಯಕಾನ್ |
ಪಾಣೀನ್ ಪಾಣಿಗತಂ ಶಸ್ತ್ರಂ
ಬಾಹೂನಪಿ ಶಿರಾಂಸಿ ಚ ॥3॥
ಭಲ್ಲೈಃ ಕ್ಷುರೈರರ್ಧಚಂದ್ರೈರ್ವತ್ಸದಂತೈಶ್ಚ ಪಾಂಡವಃ |
ಚಿಚ್ಛೇದಾಮಿತ್ರವೀರಾಣಾಂ ಸಮರೇ ಪ್ರತಿಯುಧ್ಯತಾಮ್ ॥4॥
ರಣರಂಗದಲ್ಲಿ ಅರ್ಜುನನು ಎದುರಾಗಿ ನಿಂತು ಯುದ್ಧಮಾಡಿದ ಶತ್ರುವೀರರ ರಥದ ಕುದುರೆ, ಮತ್ತು ಬೇರೆ ಕುದುರೆಗಳನ್ನೂ, ಸಾರಥಿ ಧ್ವಜ ಧನುಸ್ಸು ಖಡ್ಗ ಬಾಣಗಳನ್ನೂ, ಕೈಗಳು, ಕೈಯಲ್ಲಿ ಹಿಡಿದ ಆಯುಧ, ತೋಳು, ತಲೆಗಳನ್ನೂ ಭಲ್ಲೆ ಕ್ಷುರ ಅರ್ಧಚಂದ್ರ ವತ್ಸದಂತ ಬಾಣಗಳಿಂದ ಕತ್ತರಿಸಿದ.
ತಂ ಪ್ರವೀರಾಸ್ತ್ವದೀಯಾನಾಂ ನರ್ದಮಾನಾ ಹಿ ದುದ್ರುವುಃ |
ವಾಶಿತಾರ್ಥಂ ಯುಧ್ಯಮಾನಾ ವೃಷಭಾ ವೃಷಭಂ ಯಥಾ ॥5॥
ಅಪತನ್ನರ್ಜುನಂ ಶೂರಾಃ ಶತಶೋಽಥ ಸಹಸ್ರಶಃ ॥6॥
ಬೆದೆಗೆ ಬಂದ ಹಸುವಿಗಾಗಿ ಹೋರಿಗಳು ಹೋರಿಯೊಡನೆ ಹೋರಾಡು ವಂತೆ, ನಿನ್ನ ಕಡೆಯ ವೀರರು ಶೂರರು ಗರ್ಜನೆ ಮಾಡುತ್ತ ನೂರಾರು ಸಾವಿರಾರು ಸಂಖ್ಯೆಯಲ್ಲಿ ಧಾವಿಸಿದರು, ಅರ್ಜುನನ ಮೇಲೇರಿ ಬಂದರು.
ತೇಷಾಂ ತಸ್ಯಾಪಿ ತದ್ಯುದ್ಧಮಭವದ್ ರೋಮಹರ್ಷಣಮ್ |
ತ್ರೈಲೋಕ್ಯವಿಜಯೇ ಯಾದೃಗ್ ದೈತ್ಯಾನಾಂ ಸಹ ವಜ್ರಿಣಾ ॥7॥
ಅವರಿಗೂ ಅವನಿಗೂ ನಡೆದ ಆ ಯುದ್ಧ, ತ್ರೈಲೋಕ್ಯವಿಜಯಕ್ಕಾಗಿ ದೈತ್ಯರಿಗೂ ಇಂದ್ರನಿಗೂ ಎಂಥ ಯುದ್ಧ ನಡೆಯಿತೋ ಅಂಥ

ಯುದ್ಧವಾಗಿತ್ತು. ರೋಮಾಂಚಕರವಾಗಿತ್ತು.
ಅಥಾವಿಧ್ಯತ್ ತ್ರಿಭಿರ್ಬಾಣೈರ್ದಂದಶೂಕೈರಿವಾಹಿಭಿಃ।
ಉಗ್ರಾಯುಧೋಽಸ್ಯ ತಜ್ಜಿಷ್ಣುಃ ಶಿರಃ ಕಾಯಾದಪಾಹರತ್ ॥8॥
ಉಗ್ರಾಯುಧನು ಭಯಂಕರ ಸರ್ಪಗಳಂಥ ಮೂರು ಬಾಣಗಳಿಂದ ಅರ್ಜುನನಿಗೆ ಹೊಡೆದ, ಅರ್ಜುನ ಅವನ ರುಂಡವನ್ನೇ ಮುಂಡದಿಂದ ಕತ್ತರಿಸಿ ತೆಗೆದ.
ತೇಽರ್ಜುನಂ ಸರ್ವತಃ ಕ್ರುದ್ಧಾ ನಾನಾಶಸ್ತ್ರೈರವೀವೃಷನ್।
ಮರುದ್ಭಿಃ ಪ್ರೇರಿತಾ ಮೇಘಾ ಹಿಮವಂತಮಿವೋಷ್ಣಗೇ ॥9॥
ಆ ಸಂಶಪ್ತಕರು ಕ್ರುದ್ಧರಾಗಿ ಎಲ್ಲ ಕಡೆಯಿಂದ ಅರ್ಜುನನ ಮೇಲೆ ನಾನಾ ಆಯುಧಗಳ ಮಳೆಗರೆದರು, ಬೇಸಿಗೆಯ ಕೊನೆಯಲ್ಲಿ ಗಾಳಿಯ ಹೊಡೆತಕ್ಕೆ ಮೋಡಗಳು ಹಿಮಾಲಯದ ಮೇಲೆ ನೀರಿನ ಮಳೆಗೆರವಂತೆ.
ಅಸ್ತ್ರೈರಸ್ತ್ರಾಣಿ ಸಂವಾರ್ಯ ದ್ವಿಷತಾಂ ಸರ್ವತೋಽರ್ಜುನಃ।
ಸಮ್ಯಗಸ್ತೈಃ ಶರೈಃ ಸರ್ವಾನ್ ಅಹಿತಾನಹನದ್ ಬಹೂನ್ ॥10॥
ಅರ್ಜುನ ಎಲ್ಲಕಡೆ ಶತ್ರುಗಳ ಅಸ್ತ್ರಗಳನ್ನು ಅಸ್ತ್ರಗಳಿಂದ ತಡೆದು, ಚೆನ್ನಾಗಿ ಬಾಣಗಳನ್ನು ಎಸೆದು ಬಹುಸಂಖ್ಯೆಯ ಶತ್ರುಗಳನ್ನೆಲ್ಲರನ್ನೂ ವಧಿಸಿದ.
ಛಿನ್ನತ್ರಿವೇಣುಸಂಘಾತಾನ್ ಹತಾಶ್ವಪಾರ್ಷ್ಣಿಸಾರಥೀನ್।
ವಿಧ್ವಸ್ತಾಯುಧತೂಣೀರಾನ್ ವಿಚಕ್ರರಥಕೇತನಾನ್ ॥11॥
ಸಂಛಿನ್ನರಶ್ಮಿಯೋಕ್ತ್ರಾಕ್ಷಾನ್ ವ್ಯನುಕರ್ಷಯುಗಾನ್ ರಥಾನ್ ॥12॥
ವಿಧ್ವಸ್ತಸರ್ವಸನ್ನಾಹಾನ್ ಬಾಣೈಶ್ಚಕ್ರೇಽರ್ಜುನಸ್ತ್ವರನ್ ॥13॥
ರಥಗಳ ತ್ರಿವೇಣುಸಮೂಹಗಳನ್ನೂ ಕತ್ತರಿಸಿ, ಕುದುರೆಗಳ ಹಿಂದಿನ ಮುಂದಿನ ಸಾರಥಿಗಳನ್ನೂ ವಧಿಸಿ, ಆಯುಧ ಬತ್ತಳಿಕೆಗಳನ್ನೂ ನಾಶಪಡಿಸಿ, ರಥಗಳ ಚಕ್ರ ಧ್ವಜಗಳನ್ನೂ ಕಡಿದು, ಕುದುರೆಗಳ ಕಡಿವಾಣ ಹಗ್ಗಗಳನ್ನು ರಥಗಳ ಅಚ್ಚು ಮರ ನೊಗಗಳನ್ನು ಕತ್ತರಿಸಿ ಅರ್ಜುನ ತ್ವರೆಯಿಂದ ಸಂಶಪ್ತಕರ ಯುದ್ಧ ಸನ್ನಾಹವೆಲ್ಲವನ್ನೂ ಬಾಣಗಳಿಂದ ಧ್ವಂಸಮಾಡಿದ.
ತೇ ರಥಾಸ್ತತ್ರ ವಿಧ್ವಸ್ತಾಃ ಪರಾರ್ಧ್ಯಾ ಭಾಂತ್ಯನೇಕಶಃ।
ಧನಿನಾಮಿವ ವೇಶ್ಮಾನಿ ಹತಾನ್ಯಗ್ನ್ಯನಿಲಾಂಬುಭಿಃ ॥14॥
ಬೆಂಕಿ ಗಾಳಿ ಮಳೆಗಳ ಅನಾಹುತಗಳಿಂದ ಬಹುಮೂಲ್ಯವಾದ ಶ್ರೀಮಂತರ ಮನೆಗಳು ನಾಶವಾಗುವಂತೆ ಶತ್ರುರಥಗಳು ಬಹುಸಂಖ್ಯೆಯಲ್ಲಿ, ನಾಶ ಹೊಂದಿದುದು ಕಂಡುಬಂದಿತು.
ದ್ವಿಪಾಃ ಸಂಭಿನ್ನಮರ್ಮಾಣೋ ವಜ್ರಾಶನಿನಿಭೈಃ ಶರೈಃ।
ಪೇತುರ್ಗಿರ್ಯಗ್ರವೇಶ್ಮಾನಿ ವಜ್ರವಾತಾಗ್ನಿಭಿರ್ಯಥಾ ॥15॥
ಪರ್ವತ ಶಿಖರಗಳಂಥ ಮನೆಗಳು ಸಿಡಿಲು ಗಾಳಿ ಬೆಂಕಿ ಅನಾಹುತಗಳಿಂದ ಮುರಿದು ಬೀಳುವಂತೆ, ವಜ್ರಾಯುಧ ಸಿಡಿಲುಗಳಂಥ ಅರ್ಜುನನ ಬಾಣಗಳಿಂದ ಆನೆಗಳು ಮರ್ಮಸ್ಥಳಗಳಲ್ಲಿ ಹೊಡೆಸಿಕೊಂಡು ಸತ್ತುಬಿದ್ದವು.
ಸಾರೋಹಾಸ್ತುರಗಾಃ ಪೇತುರ್ಬಹವೋಽರ್ಜುನಪೀಡಿತಾಃ।
ನಿರ್ಜಿಹ್ವಾಂತಾಃ ಕ್ಷಿತೌ ಕ್ಷೀಣಾ ರುಧಿರಾರ್ದ್ರಾಃ ಸುದುರ್ದೃಶಃ ॥16॥
ಕುದುರೆಗಳು ಆರೋಹಿಗಳೊಂದಿಗೇ ಅರ್ಜುನನಿಂದ ಪೀಡಿತವಾಗಿ ಬಹುಸಂಖ್ಯೆಯಲ್ಲಿ ನೆಲದಲ್ಲಿ ಬಿದ್ದುವು. ಅವು ನೆತ್ತರಿಂದ ತೊಯ್ದು ಕ್ಷೀಣವಾಗಿ ನಾಲಿಗೆಯ ತುದಿಯನ್ನು ಹೊರಚಾಚಿದ್ದುವು. ಆ ಸ್ಥಿತಿಯಲ್ಲಿ ಅವು ನೋಡಲು ಸಾಧ್ಯವಾಗದಂತಿದ್ದುವು.
ನರಾಶ್ವನಾಗಾ ನಾರಾಚೈಃ ಸಂಸ್ಯೂತಾಃ ಸವ್ಯಸಾಚಿನಾ।
ಬಭ್ರಮುಶ್ಚಸ್ಖಲುರ್ನೇದುಃ ಪೇತುರ್ಮಮ್ಲುಶ್ಚ ಮಾರಿಷ ॥17॥
ರಾಜನೆ, ಅರ್ಜುನನ ಬಾಣಗಳು ಮೈಯೆಲ್ಲ ಚುಚ್ಚಿದ್ದರಿಂದ ಯೋಧರೂ ಕುದುರೆಗಳೂ ಆನೆಗಳೂ ನೋವಿನಿಂದ ಸುತ್ತು ಸುತ್ತಿದರು, ಎಡವಿದರು, ಕೂಗಿಕೊಂಡರು, ಬಿದ್ದರು, ಸತ್ತರು.
ಅನೇಕೈಶ್ಚ ಶಿಲಾಧೌತೈರ್ವಜ್ರಾನಲವಿಷೋಪಮೈಃ।
ಶರೈರ್ನಿಜಘ್ನಿವಾನ್ ಪಾರ್ಥೋ ಮಹೇಂದ್ರ ಇವ ದಾನವಾನ್ ॥18॥
ದೇವೇಂದ್ರ ದಾನವರನ್ನು ಸಂಹರಿಸುವಂತೆ, ಅರ್ಜುನ ಮಸೆಗಲ್ಲಿಂದ ತಿಕ್ಕಿ ವಜ್ರಾಯುಧ ಬೆಂಕಿ ವಿಷಗಳಂತಾಗಿರುವ ಬಹುಸಂಖ್ಯೆಯ ಬಾಣಗಳಿಂದ ಸಂಶಪ್ತಕರನ್ನು ಸಂಹರಿಸಿದ.
ಮಹಾರ್ಹವರ್ಮಾಭರಣಾ ನಾನಾವರ್ಣಾಂಬರಾಯುಧಾಃ।
ಸರಥಾಶ್ವದ್ವಿಪಾ ವೀರಾ ಹತಾಃ ಪಾರ್ಥೇನ ಶೇರತೇ ॥19॥
ಬಹುಮೂಲ್ಯವಾದ ಕವಚ ಆಭರಣ ನಾನಾ ಬಣ್ಣದ ಉಡುಗೆ ಆಯುಧ ಗಳಿಂದ ಕೂಡಿದ ರಥ ಅಶ್ವ ಗಜ ಸೈನಿಕರೂ ಪದಾತಿವೀರರೂ ಅರ್ಜುನನಿಂದ ಹತರಾಗಿ ಬಿದ್ದರು.
ನಿರ್ಭಯಾಃ ಪುಣ್ಯಕರ್ಮಾಣೋ ವಿಶಿಷ್ಟಾಭಿಜನಶ್ರುತಾಃ।
ಗತಾಃ ಶರೀರೈರ್ವಸುಧಾಮೂರ್ಜಿತೈಃ ಕರ್ಮಭಿರ್ದಿವಮ್ ॥20॥
ಒಳ್ಳೆಯ ಕುಲ ವಿದ್ಯೆಗಳಿಂದ ನಿರ್ಭೀತಿಯಿಂದ ಯುದ್ಧರೂಪ ಪುಣ್ಯಕರ್ಮ ಮಾಡಿ ಸಂಶಪ್ತಕರು ಶರೀರದಿಂದ ಭೂಮಿಯಲ್ಲಿ ಬಿದ್ದರೂ ಉತ್ತಮ ಕರ್ಮಗಳಿಂದ ವೀರಸ್ವರ್ಗವನ್ನೇ ಸೇರಿದರು.
ಅಥಾರ್ಜುನರಥಂ ವೀರಾಸ್ತ್ವದೀಯಾಃ ಸಮಭಿದ್ರವನ್।
ನಾನಾಜನಪದಾಧ್ಯಕ್ಷಾಃ ಸಗಣಾ ಜಾತಮನ್ಯವಃ ॥21॥

ನಿನ್ನ ಕಡೆಯ ನಾನಾ ದೇಶಾಧಿಪತಿಗಳಾದ ವೀರರಾದ ರಾಜರೂ ಅವರ ಪರಿವಾರಗಳೂ ಕೋಪಗೊಂಡು ಅರ್ಜುನನ ರಥವನ್ನು ಆಕ್ರಮಿಸಿದರು.
ಊಹ್ಯಮಾನಾ ರಥಾಶ್ವೇಭೈಃ ಪತ್ತಯಶ್ಚ ಜಿಘಾಂಸವಃ |
ಸಮಭ್ಯಧಾವನ್ನಸ್ಯಂತೋ ವಿವಿಧಂ ಕ್ಷಿಪ್ರಮಾಯುಧಮ್ ॥22॥
ರಥ ಅಶ್ವ ಗಜಗಳನ್ನೇರಿದವರೂ ಪದಾತಿಗಳೂ ಅರ್ಜುನನನ್ನು ಕೊಲ್ಲುವ ಬಯಕೆಯಿಂದ ನಾನಾಬಗೆಯ ವೇಗದ ಆಯುಧಗಳನ್ನೆಸೆಯುತ್ತ ಇದಿರಿಗೆ ಧಾವಿಸಿ ಬಂದರು.
ತದಾಯುಧಮಹಾವರ್ಷಂ ಕ್ಷಿಪ್ತಂ ಯೋಧಮಹಾಂಬುದೈಃ |
ವ್ಯಧಮನ್ನಿಶಿತೈರ್ಬಾಣೈಃ ಕ್ಷಿಪ್ರಮರ್ಜುನಮಾರುತಃ ॥23॥
ಯೋಧರೆಂಬ ಮಹಾಮೇಘಗಳು ಸುರಿಸಿದ ಆಯುಧಗಳ ಜಡಿಮಳೆಯನ್ನು ಅರ್ಜುನನೆಂಬ ಬಿರುಗಾಳಿ ಬೇಗನೆ ಹರಿತವಾದ ಬಾಣಗಳಿಂದ ಧ್ವಂಸಮಾಡಿತು.
ಸಾಶ್ವಪತ್ತಿದ್ವಿಪರಥಂ ಮಹಾಶಸೌತ್ರಘವಿಪ್ಲವಮ್ |
ಸಹಸಾ ಸಂತಿತೀರ್ಷಂತಂ ಪಾರ್ಥಂ ಶಸಾತ್ರಸ್ತ್ರಸೇತುನಾ ॥24॥
ಅಥಾಬ್ರುವೀದ್ ವಾಸುದೇವಃ ಪಾರ್ಥ ಕಿಂ ಕ್ರೀಡಸೇSನಘ |
ಸಂಶಪ್ತಕಾನ್ ಪ್ರಮಥ್ಯೈನಾನ್ ಅಥ ಕರ್ಣವಧೇ ತ್ವರ ॥25॥
ಅಶ್ವ ಪದಾತಿ ಗಜ ರಥಗಳಿಂದ ತುಂಬಿ ಮಹಾ ಶಸ್ತ್ರಪ್ರವಾಹಗಳಿಂದ ಪೀಡೆ ಉಂಟುಮಾಡುತ್ತಿದ್ದ ಶತ್ರುಸೈನ್ಯವನ್ನು ಕೇವಲ ಶಸಾತ್ರಸ್ತ್ರಗಳ ಸೇತುವಿನಿಂದಲೇ ಬಲಪ್ರಯೋಗದಿಂದ ಗೆದ್ದು ದಾಟಲು ಹೊರಟಿದ್ದ ಅರ್ಜುನನನ್ನು ತಡೆದು ಕೃಷ್ಣ ಹೇಳಿದ: `ಅನಘ ಅರ್ಜುನ, ಇದೇನು, ಕ್ರೀಡೆ ಮಾಡುತ್ತಿರುವೆ? ಈ ಸಂಶಪ್ತಕರನ್ನು ಗೆಲ್ಲುವ ಯೋಚನೆಯನ್ನು ಬಿಟ್ಟು ಧ್ವಂಸವನ್ನೇ ಮಾಡಿ ಬಳಿಕ ಕರ್ಣನ ವಧೆಗೆ ಧಾವಿಸು'.
ತಥೇತ್ಯುಕತ್ತ್ವSರ್ಜುನಃ ಕ್ರೋಧಾಚ್ಛಿಷ್ಟಾನ್ ಸಂಶಪ್ತಕಾನಥ |
ಕ್ಷಪಯಿಷ್ಯನ್ ತದಾSಸ್ತ್ರೇಣ ದೈತ್ಯಾನಿಂದ್ರ ಇವಾವಧೀತ್ ॥26॥
`ಹಾಗೇ ಆಗಲಿ' ಎಂದು ಅರ್ಜುನ ನುಡಿದು, ಕ್ರೋಧದಿಂದ, ಉಳಿದ ಸಂಶಪ್ತಕರನ್ನು ನಾಶಮಾಡುವುದಕ್ಕಾಗಿ, ಇಂದ್ರನು ದೈತ್ಯರನ್ನು ಸಂಹರಿಸಿದಂತೆ, ಅಸ್ತ್ರದಿಂದ ಅವರನ್ನು ಸಂಹರಿಸಿದ.
ನಾದದತ್ ಸಂದಧಚ್ಚೈವ ದೃಷ್ಟಃ ಕೈಶ್ಚಿದ್ ರಣೇSರ್ಜುನಃ |
ವಿಮುಂಚನ್ ವಾ ಶರಾನ್ ಘೋರಾನ್ ದೃಶ್ಯಂತೇ ವೈ ನರಾ
ಹತಾಃ ॥27॥
ಆಶ್ಚರ್ಯಮಿತಿ ಗೋವಿಂದೋ ಬ್ರುವನ್ನಶ್ವಾನಚೋದಯತ್ ॥28॥
ಅರ್ಜುನ ರಣರಂಗದಲ್ಲಿ ಘೋರವಾದ ಬಾಣವನ್ನು ಎತ್ತಿಕೊಳ್ಳುವು ದನ್ನಾಗಲಿ ಬಿಲ್ಲಿಗೆ ಏರಿಸುವುದನ್ನಾಗಲಿ ಅಥವಾ ಪ್ರಯೋಗ ಮಾಡುವುದನ್ನಾಗಲಿ ಯಾರೂ ನೋಡಲಿಲ್ಲ. ಬಾಣದಿಂದ ಹತರಾಗಿ ಯೋಧರು ಬೀಳುವುದನ್ನೇ ಕಂಡರು. `ಆಶ್ಚರ್ಯ!' ಎನ್ನುತ್ತ ಕೃಷ್ಣ ಕುದುರೆಗಳನ್ನು ಮುಂದೆ ನಡೆಸಿದ.
ತತಸ್ತೇ ಹಂಸಸದೃಶಾಃ ತುರಗಾ ವಾತರಂಹಸಃ |
ತಾಂ ಸೇನಾಂ ವಿವಿಶುರ್ಹೃಷ್ಟಾ ಹಂಸಾ ಇವ ಮಹಾಸರಃ ॥29॥
ಆಗ ಗಾಳಿಯ ವೇಗ ಉಳ್ಳ, ಹಂಸದಂತೆ ಬಿಳಿಯಾದ ಆ ಕುದುರೆಗಳು, ದೊಡ್ಡ ಸರೋವರವನ್ನು ಹಂಸಗಳು ಪ್ರವೇಶಿಸುವಂತೆ, ಉತ್ಸಾಹದಿಂದ ಆ ಶತ್ರುಸೈನ್ಯದೊಳಗೆ ಪ್ರವೇಶಿಸಿದುವು.
ತತಃ ಸಂಗ್ರಾಮಭೂಮಿಂ ತಾಂ ವರ್ತಮಾನೇ ಜನಕ್ಷಯೇ |
ಅವೇಕ್ಷಮಾಣೋ ಗೋವಿಂದಃ ಸವ್ಯಸಾಚಿನಮಬ್ರವೀತ್ ॥30॥
ಹೀಗೆ ಸೈನ್ಯ ನಾಶವಾಗುವಾಗ ಆ ರಣಭೂಮಿಯನ್ನು ನೋಡುತ್ತ ಕೃಷ್ಣ ಅರ್ಜುನನಿಗೆ ನುಡಿದ.
ಶ್ರೀಭಗವಾನ್
ಏಷ ಪಾರ್ಥ ಮಹಾರೌದ್ರೋ ವರ್ತತೇ ಭರತಕ್ಷಯಃ |
ಪೃಥಿವ್ಯಾಂ ಪಾರ್ಥಿವಾನಾಂ ಚ ದುರ್ಯೋಧನಕೃತೇ ಮಹಾನ್ | |31॥
ಶ್ರೀಭಗವಾನ್ ನುಡಿದ– ಅರ್ಜುನ, ನೋಡು, ಇದು ದುರ್ಯೋಧನನ ಸ್ವಾರ್ಥಕ್ಕಾಗಿ ಭೂಮಿಯ ಮೇಲೆ ಎಲ್ಲ ರಾಜರ ಮಹಾಭಯಂಕರವಾದ ಮಹಾವಿನಾಶ ನಡೆಯುತ್ತಿದೆ. ಕುರುಕುಲ ಕ್ಷಯವಾಗುತ್ತಿದೆ.
ಪಶ್ಯ ಭಾರತ ಚಾಪಾನಿ ರುಗ್ಮಪೃಷ್ಠಾನಿ ಧನ್ವಿನಾಮ್ |
ಹತಾನಾಮಪವಿದ್ಧಾನಿ ಕಲಾಪಾನಿಷುಧೀಂಸ್ತಥಾ ॥32॥
ಅರ್ಜುನ, ನೋಡು ಬಂಗಾರದ ಪೃಷ್ಠದಿಂದ ಯುಕ್ತವಾದ ಹತರಾದ ಬಿಲ್ಗಾರರ ಬಿಲ್ಲುಗಳು, ಆಭರಣಗಳು, ಬತ್ತಳಿಕೆಗಳು, ಅಸ್ತವ್ಯಸ್ತವಾಗಿ ಬಿದ್ದಿವೆ.
ಜಾತರೂಪಮಯೈಃ ಪುಂಖೈಃ ಶರಾಂಶ್ಚ ನತಪರ್ವಣಃ |
ತೈಲಧೌತಾಂಶ್ಚ ನಾರಾಚಾನ್ ನಿರ್ಮುಕ್ತಾನಿವ ಪನ್ನಗಾನ್ ॥33॥
ಎಣ್ಣೆಯಿಂದ ಹದಮಾಡಿದ್ದರಿಂದ ಪೊರೆಬಿಟ್ಟ ಹಾವುಗಳಂತೆ ಕಾಣುವ ಬಂಗಾರದ ಗರಿಯುಳ್ಳ ಡೊಂಕುಗಿಣ್ಣಿನ ಬಾಣಗಳನ್ನು ನೋಡು.
ಆಕೀರ್ಣಾಂಸ್ತೋಮರಾಂಶ್ಚಾಪಿ ಚಿತ್ರಾನ್ ಹೇಮವಿಭೂಷಿತಾನ್ |

ದಂಡಾನ್ ಕನಕಚಿತ್ರಾಂಶ್ಚ ರಣಭೂಮಿಂ ಚ ಸಂವೃತಾಮ್ ॥34॥
ಬಂಗಾರದಿಂದ ಅಲಂಕೃತವಾದ ಸುಂದರವಾದ ತೋಮರಗಳು ನೆಲದ ಮೇಲೆ ಹರಡಿರುವುದನ್ನು ನೋಡು. ಬಂಗಾರದ ಸುಂದರ ದಂಡಗಳನ್ನು ಅವು ರಣಭೂಮಿಯನ್ನು ಮುಚ್ಚಿರುವುದನ್ನು ನೋಡು.
ಹಸ್ತಿದಂತತ್ಸರೂನ್ ಖಡ್ಗಾನ್ ಜಾತರೂಪಪರಿಷ್ಕೃತಾನ್ |
ವರ್ಮಾಣಿ ಚಾಪವಿದ್ಧಾನಿ ತೋಮರಾಂಶ್ಚ ಬಹೂನ್ ರಣೇ ॥35॥
ಆನೆಯ ದಂತದ ಹಿಡಿಯುಳ್ಳ, ಬಂಗಾರದಿಂದ ಅಲಂಕೃತವಾದ ಖಡ್ಗಗಳು ಕವಚಗಳು ತೋಮರಗಳು ರಣರಂಗದಲ್ಲಿ ಬಹುವಾಗಿ ಚೆಲ್ಲಿರುವುದನ್ನು ನೋಡು.
ಸುವರ್ಣವಿಕೃತಾನ್ ಪ್ರಾಸಾನ್ ಶಕ್ತೀಃ ಕನಕಭೂಷಿತಾಃ |
ಜಾಂಬೂನದಮಯೈಃ ಪಟ್ಟೈರ್ಬದ್ಧಾಶ್ಚ ವಿವಿಧಾ ಗದಾಃ ॥36॥
ಬಂಗಾರದಿಂದ ಮಾಡಿದ ಪ್ರಾಸಗಳು ಬಂಗಾರದಿಂದ ಅಲಂಕೃತವಾದ ಶಕ್ತಿಗಳು, ಬಂಗಾರದ ಪಟ್ಟಿಗಳಿಂದ ಖಚಿತವಾದ ನಾನಾ ಬಗೆಯ ಗದೆಗಳು, ಚೆಲ್ಲಿರುವುದನ್ನು ನೋಡು.
ಜಾತರೂಪಮಯಾಂಶ್ಚೋಗ್ರಾನ್ ಪಟ್ಟಿಸಾನ್ ಹೇಮಭೂಷಿತಾನ್ |
ದಂಡೈಃ ಕನಕಚಿತ್ರೈಶ್ಚ ವಿಪ್ರವಿದ್ಧಾನ್ ಪರಶ್ವಧಾನ್ ॥37॥
ಬಂಗಾರದಿಂದ ಮಾಡಿ ಬಂಗಾರದಿಂದ ಅಲಂಕೃತವಾದ ಪಟ್ಟಿಸಗಳು, ಬಂಗಾರದ ಸುಂದರ ದಂಡಗಳು ಗಂಡುಗೊಡಲಿಗಳು ಚೆಲ್ಲಿರುವುದನ್ನು ನೋಡು.
ಪರಿಘಾನ್ ಭಿಂಡಿಪಾಲಾಂಶ್ಚ ಮುಸುಂಠೀಃ ಕ್ರಕಚಾನಪಿ |
ಅಯಸ್ಕಂಧಾಂಶ್ಚ ಪತಿತಾನ್ ಮುಸಲಾನಿ ಗುರೂಣಿ ಚ ॥38॥
ಪರಿಘ, ಭಿಂಡಿಪಾಲ ಮುಸುಂಠಿ, ಗರಗಸ, ಅಯಸ್ಕಂಧ, ದೊಡ್ಡ ಮುಸಲಗಳು ಬಿದ್ದಿರುವುದನ್ನು ನೋಡು.
ಶತಘ್ನೀಃ ಪಶ್ಯ ಚಿತ್ರಾಶ್ಚ ವಿಪುಲಾನ್ ಪರಿಘಾಂಸ್ತಥಾ |
ಚಕ್ರಾಣಿ ಚಾಪವಿದ್ಧಾನಿ ಖಡ್ಗಾಂಶ್ಚಾಪಿ ಮಹಾರಥಾನ್ ॥39॥
ಸುಂದರವಾದ ಶತಘ್ನಿಗಳು ದೊಡ್ಡ ಪರಿಘಗಳು ಚಕ್ರಗಳು ಖಡ್ಗಗಳು ದೊಡ್ಡ ರಥಗಳು ಚೆಲ್ಲಿರುವುದನ್ನು ನೋಡು.
ನಾನಾವಿಧಾನಿ ಶಸತ್ರಣಿ ಪ್ರಗೃಹ್ಯ ಜಯಗೃದ್ಧಿನಃ |
ಜೀವಂತ ಇವ ದೃಶ್ಯಂತೇ ಗತಸತ್ವಾಸ್ತರಸ್ವಿನಃ ॥40॥
ವೀರರು ಜಯಾಕಾಂಕ್ಷಿಗಳಾಗಿ ನಾನಾವಿಧವಾದ ಶಸ್ತ್ರಗಳನ್ನು ಹಿಡಿದೇ ಅಸುನೀಗಿದ್ದಾರೆ, ಜೀವಂತರಾಗಿರುವಂತೆ ಕಾಣುತ್ತಾರೆ.
ಗದಾವಿಮಥಿತೈರ್ಗಾತ್ರೈರ್ಮುಸಲೈರ್ಭಿನ್ನಮಸ್ತಕಾನ್ |
ಗಜವಾಜಿರಥಕ್ಷುಣ್ಣಾನ್ ಪಶ್ಯ ಯೋಧಾನ್ ಸಹಸ್ರಶಃ ॥41॥
ಗದೆಯಿಂದ ಮೈ ಜರ್ಝರಿತವಾಗಿವೆ. ಮುಸಲಗಳಿಂದ ತಲೆ ಒಡೆದಿವೆ, ಸಾವಿರಾರು ಯೋಧರು ಗಜ ಅಶ್ವ ರಥಗಳಿಂದ ಪುಡಿಯಾಗಿದ್ದಾರೆ. ನೋಡು.
ಗಜವಾಜಿಮನುಷ್ಯಾಣಾಂ ಶರಶಕ್ತ್ಯ ೃಷ್ಟಿತೋಮರೈಃ |
ನಿಸಿತ್ರಂಶೈಃ ಪಟ್ಟಿಸೈಃ ಪ್ರಾಸೈರ್ನಖರೈರ್ಲಗುಡೈರಪಿ ॥42॥
ಶರೀರೈರ್ಬಹುಧಾ ಚ್ಛಿನ್ನೈಃ ಶೋಣಿತೌಘಪರಿಪ್ಲುತೈಃ |
ಗತಾಸುಭಿರಮಿತ್ರಘ್ನ ಸಂವೃತಾ ರಣಭೂಮಯಃ ॥43॥
ಶರ ಶಕ್ತಿ ಋಷ್ಟಿ ತೋಮರ ಖಡ್ಗ ಪಟ್ಟಿಸ ಪ್ರಾಸ ನಖರ ಲಗುಡಗಳಿಂದ ಬಹುವಾಗಿ ತುಂಡರಿಸಲ್ಪಟ್ಟ ವೀರರ ಶರೀರಗಳು ರಕ್ತಪ್ರವಾಹದಲ್ಲಿ ತೇಲುತ್ತಿವೆ. ಶತ್ರುನಾಶಕ ಅರ್ಜುನನೆ, ರಣಭೂಮಿ ಎಲ್ಲವೂ ಇಂಥ ಶರೀರಯುಕ್ತರಾಗಿ ಹತರಾದ ವೀರರಿಂದ ಮುಚ್ಚಿಹೋಗಿವೆ.
ಬಹುಭಿಶ್ಚಂದನಾದಿಗ್ಧೈಃ ಸಾಂಗದೈರ್ಲಬ್ಧಭೂಷಣೈಃ |
ಸತಳತ್ರೈಃ ಸಕೇಯೂರೈರ್ಭಾತಿ ಭಾರತ ಮೇದಿನೀ ॥44॥
ಚಂದನದಿಂದ ಚೆನ್ನಾಗಿ ಲಿಪ್ತವಾದ ತೋಳ್ಬಳೆಗಳಿಂದ ಅಲಂಕೃತವಾದ ಕೈಚೀಲ ಹಿಡಿದಿರುವ ಕೇಯೂರಗಳಿಂದ ಕೂಡಿದ ಬಾಹುಗಳಿಂದ ರಣಭೂಮಿ ಶೋಭಿಸುತ್ತಿದೆ.
ಸಾಂಗುಲಿತ್ರೈರ್ಭುಜಾಗ್ರೈಶ್ಚ ವಿಪ್ರವಿದ್ಧೈರಲಂಕೃತೈಃ |
ಹಸ್ತಿಹಸ್ತೋಪಮೈಶ್ಛಿನ್ನೈರೂರುಭಿಶ್ಚ ತರಸ್ವಿನಾಮ್ ॥45॥
ಬೆರಳಿನ ಚೀಲ ಹಾಕಿಕೊಂಡು ಅಲಂಕೃತವಾಗಿರುವ ವೀರರ ಭುಜಾಗ್ರಗಳು ಕಡಿದುಬಿದ್ದಿವೆ. ಆನೆಯ ಸೊಂಡಿಲುಗಳಂಥ ತೊಡೆಗಳೂ ಕಡಿದುಬಿದ್ದಿವೆ.
ಬದ್ಧಚೂಡಾಮಣಿವರೈಃ ಶಿರೋಭಿಶ್ಚಾರುಕುಂಡಲೈಃ |
ನಿಕೃತ್ತೈರ್ವೃಷಭಾಕ್ಷಾಣಾಂ ವಿರಾಜತಿ ವಸುಂಧರಾ ॥46॥
ಚೂಡಾಮಣಿಗಳನ್ನು ಧರಿಸಿರುವ ಸುಂದರಕುಂಡಲಗಳಿಂದ ಕೂಡಿದ ಯೋಧರ ಶಿರಸ್ಸುಗಳು ಕಡಿದುಬಿದ್ದಿವೆ. ಅದರಿಂದ ರಣಭೂಮಿಗೆ ಶೋಭೆ ಬಂದಿದೆ.
ಗಜವಾಜಿಮನುಷ್ಯಾಣಾಂ ಶರಶಕ್ತ್ಯ ೃಷ್ಟಿತೋಮರೈಃ |
ಕಬಂಧೈಃ ಶೋಣಿತಾದಿಗ್ಧೈಶ್ಛಿನ್ನಗಾತ್ರಶಿರೋಧರೈಃ ॥47॥
ಭೂರ್ಭಾತಿ ಭರತಶ್ರೇಷ್ಠ ಶಾಂತಾರ್ಚಿಭಿರಿವಾಗ್ನಿಭಿಃ ॥48॥

ಆನೆ ಕುದುರೆ ಪದಾತಿಗಳ ಶರ ಶಕ್ತಿ ಋಷ್ಟಿ ತೋಮರಗಳಿಂದ ಅವರ ರುಂಡವಿಲ್ಲದ ನೆತ್ತರಿಂದ ತೊಯ್ದ ಮುಂಡಗಳಿಂದ, ಮುಂಡವಿಲ್ಲದ ರುಂಡಗಳಿಂದ ಜ್ವಾಲೆ ಆರಿದ ಬೆಂಕಿಯಿಂದ ಎಂಬಂತೆ ರಣಭೂಮಿಯು ಶೋಭಿಸುತ್ತಿದೆ.

ರಥಾಂಶ್ಚ ಬಹುಧಾ ಚ್ಛಿನ್ನಾನ್ ಹೇಮಕಿಂಕಿಣಿಭೂಷಿತಾನ್ |
ವಾಜಿನಶ್ಚ ಹತಾನ್ ಪಶ್ಯ ನಿಷ್ಕೀರ್ಣಾಂತ್ರಾನ್ ಶರಾಚಿತಾನ್ ॥49॥

ಚಿನ್ನದ ಗಂಟೆಗಳಿಂದ ಅಲಂಕೃತವಾದ ರಥಗಳು ಬಹುವಾಗಿ ಚೂರಾಗಿವೆ. ಕುದುರೆಗಳು ಬಾಣಗಳಿಂದ ತುಂಬಿಕೊಂಡು ಕರುಳುಗಳನ್ನು ಹೊರಗೆ ಹಾಕಿ ಹತವಾಗಿವೆ ನೋಡು.

ಅನುಕರ್ಷಾನುಪಾಸಂಗಾನ್ ಪತಾಕಾ ವಿವಿಧಾನ್ ಧ್ವಜಾನ್ |
ರಥಿನಾಂ ಚ ಮಹಾಶಂಖಾನ್ ಪಾಂಡುರಾಂಶ್ಚ ಪ್ರಕೀರ್ಣಕಾನ್ ॥50॥

ತೋಳುಮರಗಳು ಬತ್ತಳಿಕೆಗಳು ಪತಾಕೆಗಳು ನಾನಾಬಗೆಯ ಧ್ವಜಗಳು. ಯೋಧರ ಬಿಳಿಯಾದ ಮಹಾಶಂಖಗಳು ಎಲ್ಲವೂ ಹರಡಿರುವುದನ್ನು ನೋಡು.

ನಿರಸ್ತಜಿಹ್ವಾನ್ ಮಾತಂಗಾನ್ ಶಯಾನಾನ್ ಪರ್ವತೋಪಮಾನ್ |
ವೈಜಯಂತೀರ್ವಿಚಿತ್ರಾಶ್ಚ ಹತಾಂಶ್ಚ ಗಜಯೋಧಿನಃ ॥51॥

ಬೆಟ್ಟದಂಥ ಗಾತ್ರದ ಆನೆಗಳು ನಾಲಿಗೆ ಹೊರಚಾಚಿ ಬಿದ್ದಿವೆ ನೋಡು. ಹತರಾದ ಗಜಯೋಧರನ್ನೂ ಅವರ ವಿಚಿತ್ರ ಪತಾಕೆಗಳನ್ನೂ ನೋಡು.

ವಾರಣಾನಾಂ ಪರಿಸ್ತೋಮಾನ್ ಸಂಯುಕ್ತಾನೇಕಕಂಬಳಾನ್ |
ವಿಪಾಟಿತವಿಚಿತ್ರಾಶ್ಚ ರೌಪ್ಯಚಿತ್ರಾಃ ಕುಥಾಸ್ತಥಾ ॥52॥

ಆನೆಗಳಿಗೆ ಹೊದ್ದಿಸಿದ ರಾಶಿರಾಶಿಯಾದ ಅನೇಕ ಕಂಬಳಿಗಳು, ಹರಿದುವಿಚಿತ್ರವಾಗಿರುವ, ಬೆಳ್ಳಿಯಿಂದ ಅಲಂಕೃತವಾದ ರತ್ನಕಂಬಳಿಗಳು ಬಿದ್ದಿವೆ.

ಭಿನ್ನಾಶ್ಚ ಬಹುಧಾ ಘಣ್ಟಾಃ ಪತದ್ಭಿಸ್ತಾ_ಡಿತಾ ಗಜೈಃ |
ವೈಡೂರ್ಯಮಣಿದಂಡಾಂಶ್ಚ ಪತಿತಾನಂಕುಶಾನ್ ಭುವಿ ॥53॥

ಆನೆಗಳು ಬಿಳುವಾಗ ತಗುಲಿ ಒಡೆದ ಗಂಟೆಗಳು ಬಹಳವಾಗಿ ನೆಲದಲ್ಲಿ ಬಿದ್ದಿವೆ. ವೈಡೂರ್ಯಮಣಿ ದಂಡಗಳೂ ಅಂಕುಶಗಳೂ ಬಿದ್ದಿವೆ.

ಅಶ್ವಾನಾಂ ಚ ಯುಗಾನೀಷಾನ್ ರತ್ನಚಿತ್ರಪರಿಚ್ಛದಾನ್ |
ಪಶ್ಯ ಸಾದಿಭುಜಾಗ್ರೇಷು ಸುವರ್ಣವಿಕೃತಾಃ ಕಶಾಃ ॥54॥

ಕುದುರೆಗಳ ಆಭರಣಗಳು ರತ್ನಚಿತ್ರಿತವಾದ ಕವಚಗಳು ನೆಲದಲ್ಲಿ ಬಿದ್ದಿವೆ. ಅಶ್ವಾರೋಹಿಗಳು ಭುಜಾಗ್ರಗಳಲ್ಲಿ ಧರಿಸುವ ಸುವರ್ಣಮಯವಾದ ಬಾರುಕೋಲುಗಳೂ ಬಿದ್ದಿವೆ, ನೋಡು

ವಿಚಿತ್ರಾನ್ ಮಣಿಚಿತ್ರಾಂಶ್ಚ ಜಾತರೂಪಪರಿಷ್ಕೃತಾನ್ |
ಅಶ್ವಾಸ್ತರಪರಿಸ್ತೋಮಾನ್ ರಾಂಕವಾನ್ ಪತಿತಾನ್ ಭುವಿ ॥55॥

ಕುದುರೆಗಳ ಬೆನ್ನಮೇಲೆ ಹಾಸಿದ, ಸುವರ್ಣದಿಂದ ಮತ್ತು ಮಣಿಗಳಿಂದ ಅಲಂಕೃತವಾದ ವಿಚಿತ್ರವಾದ ಉಣ್ಣೆ ಕಂಬಳಿಗಳು ನೆಲದಲ್ಲಿ ಬಿದ್ದಿವೆ.

ಚೂಡಾಮಣೀನ್ ನರೇಂದ್ರಾಣಾಂ ವಿಚಿತ್ರಾಃ ಕಾಂಚನಸ್ರಜಃ |
ಛತ್ರಾಣಿ ಚಾಪವಿದ್ಧಾನಿ ಚಾಮರವ್ಯಜನಾನಿ ಚ ॥56॥

ರಾಜರ ಚೂಡಾಮಣಿಗಳು, ವಿಚಿತ್ರವಾದ ಚಿನ್ನದ ಹಾರಗಳು ಛತ್ರ ಚಾಮರ ವ್ಯಜನಗಳೂ ನೆಲದ ಮೇಲೆ ಚೆಲ್ಲಿವೆ.

ಚಂದ್ರನಕ್ಷತ್ರಭಾಸೈಶ್ಚ ವದನೈಶ್ಚಾರುಕುಂಡಲೈಃ |
ಕ್ಲಪ್ತಶ್ಮಶ್ರುಭಿರತ್ಯರ್ಥಂ ವೀರಾಣಾಂ ಸಮಲಂಕೃತೈಃ ॥57॥

ಚಂದ್ರನಂಥ ಮುಖ ನಕ್ಷತ್ರಗಳಂಥ ಸುಂದರಕುಂಡಲಗಳಿಂದ ಮತ್ತು ಅಲಂಕೃತವಾದ ಗಡ್ಡಮೀಸೆಗಳಿಂದೊಪ್ಪುವ ವೀರರ ಮುಖಗಳಿಂದ ರಣಭೂಮಿ ಅಲಂಕೃತವಾಗಿದೆ.

ಕುಮುದೋತ್ಪಲಪದ್ಮಾನಾಂ ಷಂಡೈಃ ಪೂರ್ಣಂ ಯಥಾ ಸರಃ |
ತಥಾ ಮಹೀಭೃತಾಂ ವಕ್ತ್ರೈಃ ಕುಮುದೋತ್ಪಲಸನ್ನಿಭೈಃ ॥58॥

ಕುಮುದ ಉತ್ಪಲ ಪದ್ಮಗಳ ಸಮೂಹಗಳಿಂದ ತುಂಬಿದ ಕೊಳದಂತೆ ರಾಜರ ಕುಮುದ ಉತ್ಪಲ ಸದೃಶವಾದ ಮುಖಗಳಿಂದಲೂ ಕಂಗೊಳಿಸುತ್ತಿದೆ.

ತಾರಾಗಣವಿಚಿತ್ರಸ್ಯ ನಿರ್ಮಲೇಂದುದ್ಯುತಿತ್ವಿಷಃ |
ಪಶ್ಯೇಮಾಂ ನಭಸಸ್ತುಲ್ಯಾಂ ಶಿರೋನಕ್ಷತ್ರಮಾಲಿನೀಮ್ ॥59॥
ವದನೈಃ ಪಶ್ಯ ಸಂಛನ್ನಾಂ ಮಹೀಂ ಶೋಣಿತಕರ್ದಮಾಮ್ ॥60॥

ರಾಜರ ಶಿರಸ್ಸುಗಳೆಂಬ ನಕ್ಷತ್ರಮಾಲೆಗಳಿಂದ ಯುಕ್ತವಾದ ರಕ್ತಮಯವಾದ ಈ ರಣಭೂಮಿಯು ಅವರ ಮುಖಗಳಿಂದ ಆಚ್ಛಾದಿತವಾಗಿದ್ದು ನಿರ್ಮಲಚಂದ್ರನ ಬೆಳದಿಂಗಳ ಪ್ರಕಾಶದಿಂದ ಬೆಳಗುವ, ನಕ್ಷತ್ರ ಸಮೂಹಗಳಿಂದ ಶೋಭಿತವಾದ ಆಕಾಶದಂತೆ ಕಾಣುತ್ತಿದೆ, ನೋಡು.

ಸಜೀವಾಂಶ್ಚ ನರಾನ್ ಪಶ್ಯ ಕೂಜಮಾನಾನ್ ಸಮಂತತಃ |
ಉಪಾಸ್ಯಮಾನಾಂಶ್ಚ ಬಹೂನ್ ನ್ಯಸ್ತಶಸ್ತ್ರೈರ್ವಿಶಾಂಪತೇ ॥61॥

ಇನ್ನೂ ಉಸಿರಾಡುತ್ತ ನೋವಿಂದ ನರಳುತ್ತಿರುವ ಯೋಧರನ್ನು ನೋಡು. ಎಲ್ಲೆಡೆ ಬಹುಸಂಖ್ಯೆಯಲ್ಲಿ ಅವರು ಶಸ್ತ್ರಸನ್ಯಾಸ

ಮಾಡಿದ ಇತರ ಯೋಧರಿಂದ ಶೈತ್ಯೋಪಚಾರ ಮಾಡಿಸಿಕೊಳ್ಳುತ್ತಿದ್ದಾರೆ.
ಜ್ಞಾತಿಭಿಶ್ಚ ಜಲಕ್ಲಿನ್ನಾನ್ ರೋದಮಾನೈರ್ಮುಹುರ್ಮುಹುಃ |
ವ್ಯುತ್ಕ್ರಾಂತಾನಪರಾನ್ ಯೋಧಾಂಶ್ಚಾದಯಿತ್ವಾ ತರಸ್ವಿನಃ ॥62॥
ಪುನರ್ಯುದ್ಧಾಯ ಗಚ್ಛಂತಿ ಜಯೇ ಲುಬ್ಧಾಃ ಪ್ರಮನ್ಯವಃ ॥63॥
ಅವರ ಸಂಬಂಧಿಗಳು ಮತ್ತೆಮತ್ತೆ ಕಣ್ಣೀರಿಡುತ್ತ ಅವರನ್ನು ನೀರು ಚಿಮುಕಿಸಿ ಉಪಚರಿಸುತ್ತಿದ್ದಾರೆ. ಇನ್ನು ಕೆಲವರು ವೀರಯೋಧರು ಮಡಿದವರನ್ನು ಬಟ್ಟೆ ಯಿಂದ ಮುಚ್ಚಿ ಬಹಳ ಕೋಪಗೊಂಡು ಜಯದ ಆಕಾಂಕ್ಷೆಯಿಂದ ಪುನಃ ಯುದ್ಧಕ್ಕೆ ಹೋಗುತ್ತಿದ್ದಾರೆ.
ಅಪರೇ ತತ್ರ ತತ್ರೈವ ಪರಿಧಾವಂತಿ ಮಾನವಾಃ |
ಜ್ಞಾತಿಭಿಃ ಪತಿತೈಃ ಶೂರಾ ಯಾಚ್ಯಮಾನಾ ಜಲಂ ತದಾ ॥64॥
ಇನ್ನುಳಿದ ಮಾನವರು, ತಮ್ಮ ಸಂಬಂಧಿಗಳು ನೆಲದಲ್ಲಿ ಬಿದ್ದು ನೀರನ್ನು ಬೇಡುತ್ತಿರುವುದರಿಂದ, ನೀರಿಗಾಗಿ ಅಲ್ಲಲ್ಲಿ ಓಡಾಡುತ್ತಿದ್ದಾರೆ.
ಜಲಾರ್ಥಂ ಚ ಗತಾಃ ಕೇಚಿನ್ನೃತಾ ವೈ ಬಹವೋ ಜನಾಃ |
ಸನ್ನಿವೃತ್ತಾಶ್ಚ ತೇ ಶೂರಾ ದೃಷ್ಟ್ವಾ ಚೈನಾನ್ ವಿಚೇತಸಃ ॥65॥
ನೀರಿಗಾಗಿ ಹೊರಟವರು ಬಹುಮಂದಿ ಕೆಲವರು ಹಾಗೇ ಅಸುನೀಗಿದರು. ಕೆಲವರು ಶೂರರು, ಈ ಬಂಧುಗಳು ಪ್ರಜ್ಞೆ ತಪ್ಪಿದ್ದನ್ನು ಕಂಡು, ಹಿಂತಿರುಗಿ ಬಂದಿದ್ದಾರೆ.
ಜಲಂ ತ್ಯಕ್ತ್ವಾ ಪ್ರಧಾವಂತಿ ಕ್ರೋಶಮಾನಾಃ ಪರಸ್ಪರಮ್ ॥66॥
ಜಲಂ ಪೀತ್ವಾ ಮೃತಾನ್ ಪಶ್ಯ ಪಿಬಂತ್ಯನ್ಯೇ ಚ ಭಾರತ ॥67॥
ಅವರು ನೀರನ್ನು ಬಿಟ್ಟು ಪರಸ್ಪರವಾಗಿ ಗೋಳಿಡುತ್ತ ಓಡಾಡುತ್ತಿದ್ದಾರೆ. ನೀರು ಕುಡಿದು ಕೆಲವರು ಸತ್ತಿದ್ದಾರೆ, ಕೆಲವರು ನೀರು ಕುಡಿಯುತ್ತಿದ್ದಾರೆ, ನೋಡು ಅರ್ಜುನ.
ಪರಿಷ್ವಜ್ಯ ಪ್ರಿಯಾನನ್ಯೇ ಬಾಂಧವಾನ್ ಬಂಧುವತ್ಸಲಾಃ |
ವಿಸಂಜ್ಞಾಃ ಸಮರೇ ಯೋಧಾಸ್ತತ್ರ ತತ್ರ ಮಹಾರಣೇ ॥68॥
ಈ ಮಹಾಯುದ್ಧದಲ್ಲಿ ಕೆಲವರು ಬಂಧುವತ್ಸಲರಾದ ಯೋಧರು ಪ್ರಿಯ ಬಾಂಧವರನ್ನು ತಬ್ಬಿಕೊಂಡೇ ಪ್ರಜ್ಞೆತಪ್ಪಿ ಬಿದ್ದಿದ್ದಾರೆ.
ಪಶ್ಯಾಪರಾನ್ ನರಶ್ರೇಷ್ಠ ಸಂದಷ್ಟೋಷ್ಠಪುಟಾನ್ ಪುನಃ |
ಭ್ರುಕುಟೀಕುಟಿಲೈರ್ವಕ್ತ್ರೈಃ ಪ್ರೇಕ್ಷಮಾಣಾನ್ ಮಹಾರಣಮ್ ॥69॥
ಇನ್ನು ಕೆಲವರನ್ನು ನೋಡು, ಅರ್ಜುನ, ಅವರು ಮತ್ತೆಮತ್ತೆ ಅವುಡು ಕಚ್ಚಿ ಹುಬ್ಬುಗಂಟಿಕ್ಕಿದ ಮುಖಗಳಿಂದ ಮಹಾಯುದ್ಧವನ್ನು ವೀಕ್ಷಿಸುತ್ತಿದ್ದಾರೆ.
ಗಾಯಗೊಂಡ ಯೋಧರಿಗೆ ಪ್ರಥಮಚಿಕಿತ್ಸೆಯ ಏರ್ಪಾಡು ಇರಲಿಲ್ಲವೆ? ಎಂದರೆ, ಇಲ್ಲ, ಅದು ಬೇಡ. ರಣರಂಗದಲ್ಲಿ ಶಸ್ತ್ರದಿಂದ ಗಾಯಗೊಂಡು ಮರಣ ಹೊಂದುವುದೇ ಸ್ವರ್ಗಸಾಧನ. ಅದನ್ನು ಕಳೆದುಕೊಳ್ಳಲು ಯಾರೂ ಸಿದ್ಧರಿರುವುದಿಲ್ಲ. ದಾರುಣವಾದ ಈ ಯೋಧರ ಸ್ಥಿತಿಯೆ ರಣಭೂಮಿಗೆ ಭೂಷಣವಾದ್ದರಿಂದ ಅದರ ದರ್ಶನವೂ ಪುಣ್ಯಕರವಾದ್ದರಿಂದ ಶ್ರೀಕೃಷ್ಣ ನಿಃಸಂಕೋಚವಾಗಿ ನಿರರ್ಗಳವಾಗಿ ವರ್ಣಿಸುತ್ತಿದ್ದಾನೆ. ರಣಭೂಮಿಯಲ್ಲಿ ನಡೆಯುವ ಹಿಂಸೆ ಹಿಂಸೆಯೆ ಅಲ್ಲ. ಯಜ್ಞದಲ್ಲಿ ಪಶುಹಿಂಸೆಯಂತೆ ರಣಯಜ್ಞದಲ್ಲಿ ಯೋಧರ ಹಿಂಸೆಯೂ ಪುಣ್ಯಕರವೆಂಬ ಭಾವನೆ ಆ ಕಾಲದಲ್ಲಿತ್ತು.
ಏತತ್ತ್ವಯ್ಯೇವಾನುರೂಪಂ ಕರ್ಮಾರ್ಜುನ ಮಹಾಹವೇ |
ದಿವಿ ವಾ ದೇವರಾಜಸ್ಯ ತ್ವಯಾ ಯತ್ ಕೃತಮದ್ಯ ವೈ ॥70॥
ಅರ್ಜುನ, ನೀನೇನು ಈಗ ಮಹಾಯುದ್ಧದಲ್ಲಿ ಪರಾಕ್ರಮ ತೋರಿ ವೀರ ಕ್ಷತ್ರಿಯರ ನಾಶ ಮಾಡಿರುವೆ. ಅದು ನಿನಗೇ ಒಪ್ಪುವಂಥದ್ದು. ಅಥವಾ ಸ್ವರ್ಗದಲ್ಲಿ ದೇವರಾಜನಿಗೇ ಒಪ್ಪುವಂಥದ್ದು. ಇನ್ನೊಬ್ಬರಿಗೆ ಇದು ಸಾಧ್ಯವಲ್ಲ.
ಸಂಜಯಃ
ಏವಂ ತಾಂ ದರ್ಶಯನ್ ಕೃಷ್ಣೋ ರಣಭೂಮಿಂ ಕಿರೀಟಿನೇ |
ಗಚ್ಛನ್ನೇವಾಶೃಣೋಚ್ಛಬ್ದಂ ದುರ್ಯೋಧನಬಲೇ ಮಹತ್ ॥71॥
ಸಂಜಯನು ನುಡಿದ– ಹೀಗೆ ಕೃಷ್ಣ ಅರ್ಜುನನಿಗೆ ರಣಭೂಮಿಯನ್ನು ತೋರಿಸುತ್ತ ಹೋಗುತ್ತಿದ್ದಂತೆಯೆ ಅತ್ತ ದುರ್ಯೋಧನನ ಸೈನ್ಯದಲ್ಲಿ ಮಹಾಶಬ್ದ ಕೇಳಿ ಬಂದಿತು.
ಶಂಖದುಂದುಭಿನಿರ್ಘೋಷಂ ಭೇರೀಪಣವಮಿಶ್ರಿತಮ್ |
ರಥಾಶ್ವನರನಾಗಾನಾಂ ಪಾದಶಬ್ದಾಂಶ್ಚ ದಾರುಣಾನ್ ॥72॥
ಶಂಖ ದುಂದುಭಿ ಘೋಷ, ಅದರೊಂದಿಗೆ ಭೇರಿಪಣವಗಳ ಶಬ್ದ, ರಥ ಅಶ್ವ ಪದಾತಿ ಗಜ ಸೈನಿಕರ ದಾರುಣವಾದ ಆಯುಧಗಳ ಶಬ್ದಗಳು ಕೇಳಿಬಂದುವು.
ಪ್ರವಿಶ್ಯ ತದ್ಬಲಂ ಕೃಷ್ಣಸ್ತುರಗೈರ್ವಾತವೇಗಿತೈಃ |
ಪಾಂಡ್ಯೇನಾಭ್ಯರ್ದಿತಾಂ ಸೇನಾಂ ತ್ವದೀಯಾಂ ವೀಕ್ಷ್ಯ ವಿಸ್ಮಿತಃ ॥73॥
ರಾಜನೆ, ಗಾಳಿ ವೇಗದ ಕುದುರೆಗಳಿಂದ ಕೃಷ್ಣ, ಆ ಸೈನ್ಯವನ್ನು ಪ್ರವೇಶಿಸಿ ಅಲ್ಲಿ ಪಾಂಡ್ಯರಾಜನು ನಿನ್ನ ಸೈನ್ಯವನ್ನು ಧ್ವಂಸಗೊಳಿಸುತ್ತಿದ್ದುದನ್ನು ನೋಡುತ್ತ ನಿಂತ.
ಸ ಹಿ ನಾನಾವಿಧೈಃ ಶಸ್ತ್ರೈರಿಷ್ವಸ್ತ್ರಪ್ರವರೋ ಯುಧಿ |
ನ್ಯಹನದ್ ದ್ವಿಷತಾಂ ವ್ರಾತಾನ್ ಗತಾಸೂನಂತಕೋ ಯಥಾ ॥74॥
ಪಾಂಡ್ಯರಾಜನು ಬಾಣಪ್ರಯೋಗದಲ್ಲಿ ನಿಷ್ಣಾತನಾಗಿದ್ದು ಆಯುಷ್ಯ ಮುಗಿದವರನ್ನು ಯಮನು ಹೇಗೋ ಹಾಗೇ

ಶತ್ರುಸಮೂಹಗಳನ್ನು ಯುದ್ಧದಲ್ಲಿ ನಾನಾ ವಿಧ ಶಸ್ತ್ರಗಳಿಂದ ಸಂಹರಿಸುತ್ತಿದ್ದ.
ಗಜವಾಜಿಮನುಷ್ಯಾಣಾಂ ಶರೀರಾಣಿ ಶಿತೈಃ ಶರೈಃ |
ಹತ್ವಾ ಪ್ರಹರತಾಂ ಶ್ರೇಷ್ಠೋ ವಿದೇಹಾಸೂನಥಾಕರೋತ್ ॥75॥
ಶಸ್ತ್ರಪ್ರಹಾರ ಮಾಡುವವರಲ್ಲಿ ಶ್ರೇಷ್ಠನಾದ ಪಾಂಡ್ಯರಾಜ ಗಜ ಅಶ್ವ ಪದಾತಿಗಳ ಶರೀರಗಳನ್ನು ಹರಿತವಾದ ಬಾಣಗಳಿಂದ ಹೊಡೆದು ಶರೀರ ಮತ್ತು ಪ್ರಾಣಗಳೆರಡನ್ನೂ ಇಲ್ಲದಂತೆ ಮಾಡುತ್ತಿದ್ದ.
ಶತ್ರುಪ್ರವೀರೈರಸ್ತಾನಿ ನಾನಾಶಸಶತ್ರಣಿ ಸಾಯಕೈಃ |
ಛಿತ್ತ್ವಾ ತಾನವಧೀತ್ ಪಾಂಡ್ಯಃ ಶತ್ರೂನ್ ಶಕ್ರ ಇವಾಸುರಾನ್ ॥76॥
ಶತ್ರುವೀರರು ಎಸೆಯುವ ನಾನಾ ಶಸ್ತ್ರಗಳನ್ನು ಬಾಣಗಳಿಂದಲೇ ಕತ್ತರಿಸಿ ಇಂದ್ರನು ಅಸುರರನ್ನು ಹೇಗೋ ಹಾಗೆ, ಪಾಂಡ್ಯರಾಜ ಆ ಶತ್ರುಗಳನ್ನು ಸಂಹರಿಸುತ್ತಿದ್ದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಪಾಂಡ್ಯಯುದ್ಧಂ ನಾಮ ಏಕೋನವಿಂಶೋಽಧ್ಯಾಯಃ ॥19॥

ಮಹಾಭಾರತತಾತ್ಪರ್ಯನಿರ್ಣಯ
ಏವಂ ಸ ಮತ್ವಾ ಪ್ರವಿವೇಶ ಸೇನಾಂ
ಪಾಂಡೋಃ ಸುತಾನಾಮಥ ತಂ ಸಮಭ್ಯಯಾತ್ |
ಪಾಂಡ್ಯಸ್ತಯೋರಾಸ ಸುಯುದ್ಧಮದ್ಭುತಂ
ಪ್ರವರ್ಷತೋಃ ಸಾಯಕಪೂಗಮುಗ್ರಮ್ ॥ 63 ॥
ಹೀಗೆ ಅಶ್ವತ್ಥಾಮ ಆಲೋಚಿಸಿ ಪಾಂಡವರ ಸೈನ್ಯವನ್ನು ಹೊಕ್ಕ. ಆಗ ಪಾಂಡ್ಯದೇಶದ ರಾಜ ಅವನನ್ನು ಇದಿರಿಸಿದ. ಅವರೊಳಗೆ ಅದ್ಭುತವಾದ ಒಳ್ಳೆಯ ಯುದ್ಧ ನಡೆಯಿತು. ಅವರಿಬ್ಬರೂ ಭಯಂಕರ ಬಾಣಸಮೂಹದ ಮಳೆಗರೆದರು.
ಅಷ್ಟಾವಷ್ಟಗವಾನ್ಯೂಹುಃ ಶಕಟಾನಿ ಯದಾಯುಧಮ್ |
ಅಹ್ನಸ್ತದಷ್ಟಭಾಗೇನ ದ್ರೌಣಿಶ್ಚಿಕ್ಷೇಪ ತತ್ರ ಹ ॥ 64 ॥
ಎಂಟು ಎತ್ತುಗಳು ಎಳೆಯುವ ಎಂಟು ಬಂಡಿಗಳು ಎಷ್ಟು ಆಯುಧಗಳನ್ನು ಹೊರಬಲ್ಲುವೋ ಅಷ್ಟು ಆಯುಧಗಳನ್ನು ಅಶ್ವತ್ಥಾಮ ಆ ಯುದ್ಧದಲ್ಲಿ ಹಗಲಿನ ಎಂಟನೆ ಒಂದು ಭಾಗ ಕಾಲದಲ್ಲಿ ಎಸೆದ.
ಅಥ ತಂ ವಿರಥಂ ಕೃತ್ವಾ ಛಿತ್ವಾ ಕಾರ್ಮುಕಮಾಹವೇ |
ಸಕುಂಡಲಂ ಶಿರೋ ದ್ರೌಣಿರ್ಜಹಾರ ಮಕುಟೋಜ್ಜ್ವಲಮ್ ॥65॥
ಅಶ್ವತ್ಥಾಮ ಯುದ್ಧದಲ್ಲಿ ಪಾಂಡ್ಯರಾಜನನ್ನು ವಿರಥನನ್ನಾಗಿ ಮಾಡಿ ಅವನ ಬಿಲ್ಲನ್ನು ಕಡಿದು ಕುಂಡಸಲಹಿತವಾದ, ಕಿರೀಟದಿಂದ ಶೋಭಿಸುತ್ತಿದ್ದ ಅವನ ಶಿರಸ್ಸನ್ನು ಕಡಿದ.

ಇಪ್ಪತ್ತನೆಯ ಅಧ್ಯಾಯ
ಅಶ್ವತ್ಥಾಮನಿಂದ ಪಾಂಡ್ಯಮಲಯಧ್ವಜನ ವಧ ಮತ್ತು
ಕರ್ಣಧೃಷ್ಟದ್ಯುಮ್ನರ ಯುದ್ಧ
ಧೃತರಾಷ್ಟ್ರಃ
ಪ್ರೋಕ್ತಸ್ತ್ವಯಾ ಪೂರ್ವಮೇವ ಪ್ರವೀರೋ ಲೋಕವಿಶ್ರುತಃ |
ನ ತ್ವಸ್ಯ ಕರ್ಮ ಸಂಗ್ರಾಮೇ ತ್ವಯಾ ಸಂಜಯ ಕೀರ್ತಿತಮ್ ॥1॥
ಧೃತರಾಷ್ಟ್ರ ಹೇಳುತ್ತಾನೆ– ಸಂಜಯ, ಪಾಂಡ್ಯರಾಜ ಮಲಯಧ್ವಜನು ಲೋಕಪ್ರಸಿದ್ಧನಾದ ವೀರನೆಂದು ನೀನು ಹಿಂದೆಯೇ ಹೇಳಿರುವೆ. ಯುದ್ಧದಲ್ಲಿ ಅವನ ಸಾಹಸಕಾರ್ಯವನ್ನು ನೀನು ಹೇಳಿಲ್ಲ.
ತಸ್ಯ ವಿಸ್ತರತೋ ಬ್ರೂಹಿ ಪ್ರವೀರಸ್ಯಾಸ್ಯ ವಿಕ್ರಮಮ್ |
ಶಿಕ್ಷಾಂ ವೀರ್ಯಂ ಚ ಮಾನಂ ಚ ಪ್ರಭಾವಂ ದರ್ಪಮೇವ ಚ ॥2॥
ಈ ವೀರನ ಪರಾಕ್ರಮ ವಿದ್ಯೆ ಬಲ ಅಭಿಮಾನ ಪ್ರಭಾವ ದರ್ಪವೆಲ್ಲವನ್ನೂ ವಿಸ್ತಾರವಾಗಿ ಹೇಳು.
ಸಂಜಯಃ
ದ್ರೋಣಭೀಷ್ಮಕೃಪದ್ರೌಣಿಕರ್ಣಾರ್ಜುನಜನಾರ್ದನಾನ್ |
ಸಮಾಪ್ತವಿದ್ಯಾನ್ ಧನುಷಿ ಶ್ರೇಷ್ಠಾನ್ ಯಾನ್ ಮನ್ಯಸೇ ರಥಾನ್ ॥3॥
ಸಂಜಯ ಹೇಳುತ್ತಾನೆ– ದ್ರೋಣ ಭೀಷ್ಮ ಕೃಪ ಅಶ್ವತ್ಥಾಮ ಕರ್ಣ ಅರ್ಜುನ ಕೃಷ್ಣರನ್ನು ಚೆನ್ನಾಗಿ ವಿದ್ಯೆಯನ್ನು ಗಳಿಸಿದವರು, ಧನುರ್ವಿದ್ಯೆಯಲ್ಲಿ ಶ್ರೇಷ್ಠರಾದ ರಥಿಕರು ಎಂದು ನೀನು ತಿಳಿದಿರುವೆ ತಾನೆ?
ಯೋ ಹ್ಯಾಕ್ಷಿಪತಿ ವೀರ್ಯೇಣ ಸರ್ವಾನೇತಾನ್ಮಹಾರಥಾನ್ |
ನ ಮೇನೇ ಚಾತ್ಮನಾ ತುಲ್ಯಂ ಕಂಚಿದೇವ ನರೇಶ್ವರಮ್ ॥4॥
ಪಾಂಡ್ಯರಾಜ ಮಲಯಧ್ವಜನು ಈ ಎಲ್ಲ ಮಹಾರಥರನ್ನೂ ಕೂಡ ಪರಾಕ್ರಮದಿಂದ ಕಡೆಗಣಿಸುತ್ತಾನೆ. ಯಾವ ರಾಜನನ್ನೂ ಈತ ತನಗೆ ಸಮಾನನೆಂದು ಪರಿಗಣಿಸುವುದಿಲ್ಲ.
ತುಲ್ಯತಾಂ ದ್ರೋಣಭೀಷ್ಮಾಭ್ಯಾಮಾತ್ಮನೋ ಯೋ ನ ಮೃಷ್ಯತೇ |
ವಾಸುದೇವಾರ್ಜುನಾಭ್ಯಾಂ ಚ ನ್ಯೂನತಾಂ ಚಾಪಿ ನೇಚ್ಛತಿ ॥5॥

ದ್ರೋಣ ಭೀಷ್ಮರಿಗೆ ತನ್ನನ್ನು ಸಮಾನ ಎಂದು ತಿಳಿದರೆ ಅದನ್ನು ಈತ ಸಹಿಸುವುದಿಲ್ಲ. ಕೃಷ್ಣಅರ್ಜುನರಿಗಿಂತ ತಾನು ಕಡಿಮೆಯವನೆಂದರೆ ಅದನ್ನೂ ಒಪ್ಪುವುದೇ ಇಲ್ಲ.
ಈತ ಚಿತ್ರಾಂಗದೆಯ ತಂದೆ. ವೀರಸೇನ, ಪ್ರವೀರ, ಚಿತ್ರವಾಹನ ಎಂದೂ ಈತನಿಗೆ ಹೆಸರಿವೆ.
ಸ ಪಾಂಡ್ಯೋ ನೃಪತಿಶ್ರೇಷ್ಠಃ ಸರ್ವಶಸ್ತ್ರಭೃತಾಂ ವರಃ |
ಕರ್ಣಸ್ಯಾನೀಕಮಹನತ್ ಪರಿಕ್ಷಿಪ್ತಮಿವಾಂತಕಃ ॥6॥
ಆಯುಷ್ಯ ತೀರಿದವನನ್ನು ಯಮ ಸಂಹರಿಸುವಂತೆ, ಎಲ್ಲ ಶಸ್ತ್ರಧಾರಿಗಳಲ್ಲಿ ಶ್ರೇಷ್ಠ ರಾಜರಲ್ಲಿ ಶ್ರೇಷ್ಠನಾದ ಆ ಪಾಂಡ್ಯನು ಕರ್ಣನ ಸೈನ್ಯವನ್ನು ನಾಶ ಮಾಡತೊಡಗಿದ.
ತದುದೀರ್ಣರಥಾಶ್ವೇಭಪತ್ತಿಪ್ರವರಸಂಕುಲಮ್ |
ಕುಲಾಲಚಕ್ರವದ್ ಭ್ರಾಂತಂ ಪಾಂಡ್ಯೇನಾಭ್ಯರ್ದಿತಂ ಬಲಮ್ ॥7॥
ಶ್ರೇಷ್ಠ ರಥ ಅಶ್ವ ಗಜ, ಪದಾತಿಶ್ರೇಷ್ಠರಿಂದ ತುಂಬಿರುವ ಕರ್ಣನ ಸೈನ್ಯವು ಪಾಂಡ್ಯನಿಂದ ಪೀಡಿತವಾಗಿ ಕುಂಬಾರನ ಚಕ್ರದಂತೆ ತಿರುಗುತ್ತಿದೆ.
ವ್ಯಶ್ವಸೂತಧ್ವಜರಥಾನ್ ವಿಪ್ರಯುಕ್ತಶರಾಸನಾನ್ |
ಸಮ್ಯಗಸ್ತೈಃ ಶರೈಃ ಪಾಂಡ್ಯೋ ವಾಯುರ್ಮೇಘಾನಿವಾಕ್ಷಿಪತ್ ॥8॥
ಪಾಂಡ್ಯನು ಚೆನ್ನಾಗಿ ಬಾಣಗಳನ್ನೆಸೆದು ಶತ್ರುಗಳನ್ನು ಕುದುರೆ ಸಾರಥಿ ಧ್ವಜ ರಥ ಧನುಸ್ಸುಗಳಿಂದ ರಹಿತರನ್ನಾಗಿಸಿ, ವಾಯು ಮೋಡಗಳನ್ನು ಹೇಗೋ ಹಾಗೆ ಹೊಡೆದೋಡಿಸಿದ.
ದ್ವಿರದಾನ್ ಪ್ರವರಾರೋಹಾನ್ ವಿಪತಾಕಾಯುಧಧ್ವಜಾನ್ |
ಸಪಾದರಕ್ಷಾನ್ ನ್ಯಹನದ್ ವಜ್ರೇಣಾದ್ರೀನಿವಾದ್ರಿಹಾ ॥9॥
ಗಜ ಮತ್ತು ಗಜಾರೋಹಿಗಳನ್ನು ಪತಾಕೆ ಆಯುಧ ಧ್ವಜರಹಿತರನ್ನಾಗಿಸಿ ಪಾದರಕ್ಷಕರೊಂದಿಗೇ ಅವರನ್ನು ಇಂದ್ರನು ಪರ್ವತಗಳನ್ನು ವಜ್ರಾಯುಧದಿಂದ ಹೊಡೆದಂತೆ ಹೊಡೆದ.
ಸಶಕ್ತಿಪ್ರಾಸಯಷ್ಟೀಂಶ್ಚ ಹಯಾರೋಹಾನ್ ಹಯಾನಪಿ |
ಪುಳಿಂದಕಷಬಾಹ್ಲೀಕಾನ್ ನಿಷಾದಾಂಧ್ರಕಕುಂತಲಾನ್ ॥10॥
ದಾಕ್ಷಿಣಾತ್ಯಾಂಶ್ಚ ಭೋಜಾಂಶ್ಚ ಕ್ರೂರಾನ್ ಸಂಗ್ರಾಮಕರ್ಕಶಾನ್ |
ವಿಶಸ್ತ್ರಕವಚಾನ್ ಬಾಣೈಃ ಕೃತ್ವಾ ಪಾಂಡ್ಯೋಽಕರೋದ್
ವ್ಯಸೂನ್ ॥11॥
ಶಕ್ತಿ ಪ್ರಾಸ ಯಷ್ಟಿಗಳನ್ನು ಹಿಡಿದಿದ್ದ ಅಶ್ವಾರೋಹಿಗಳನ್ನೂ ಅಶ್ವಗಳನ್ನೂ, ಯುದ್ಧದಲ್ಲಿ ಬಲುಕ್ರೂರಿಗಳಾದ ಪುಲಿಂದ ಕಷ ಬಾಹ್ಲೀಕ ನಿಷಾದ ಆಂಧ್ರ ಕುಂತಲ ದಾಕ್ಷಿಣಾತ್ಯ ಭೋಜ ಮುಂತಾದವರನ್ನೂ ಪಾಂಡ್ಯನು ಬಾಣಗಳಿಂದ ಶಸ್ತ್ರ ಕವಚಗಳಿಲ್ಲದವರನ್ನಾಗಿ ಮಾಡಿ ಸಂಹರಿಸಿದ.
ಚತುರಂಗಂ ಬಲಂ ರಾಜನ್ ನಿಘ್ನಂತಂ ಪಾಂಡ್ಯಮಾಹವೇ |
ದೃಷ್ಟ್ವಾ ದ್ರೌಣಿರಸಂಭ್ರಾಂತಮಸಂಭ್ರಾಂತತರೋ ಯಯೌ ॥12॥
ರಾಜನೆ, ಯುದ್ಧದಲ್ಲಿ ಭಯೋದ್ವೇಗರಹಿತನಾಗಿ ಚತುರಂಗಬಲವನ್ನು ಪುಡಿಗೈಯುತ್ತಿದ್ದ ಪಾಂಡ್ಯನನ್ನು ಕಂಡು, ಭಯೋದ್ವೇಗಲೇಶವೂ ಇಲ್ಲದವನಾದ ಅಶ್ವತ್ಥಾಮ ಇದಿರಿಗೆ ಬಂದು ನಿಂತ.
ಆಭಾಷ್ಯ ಚೈನಂ ಮಧುರಮನುಸೃತ್ಯ ಹ್ಯಭೀತವತ್ |
ಪ್ರಾಹ ಪ್ರಹರತಾಂ ಶ್ರೇಷ್ಠಃ ಸ್ಮಿತಪೂರ್ವಂ ಸಮಾಹ್ವಯತ್ ॥13॥
ಪ್ರಹರಿಸುವವರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ನಿರ್ಭೀತನಾಗಿ ನಯವಾಗಿ ಅವನನ್ನು ಮಾತನಾಡಿಸಿ, ಅವನನ್ನು ಅನುಸರಿಸಿ, ಅವನಂತೆಯೆ, ನಗುತ್ತ, ಯುದ್ಧಕ್ಕೆ ಆಹ್ವಾನಿಸಿದ.
ಅಶ್ವತ್ಥಾಮಾ
ರಾಜನ್ ಕಮಲಪತ್ರಾಕ್ಷ ಪ್ರಧಾನಾಯುಧವಾಹನ |
ವಜ್ರಸಂಹನನಾಚಿಂತ್ಯ ಪ್ರಖ್ಯಾತಬಲಪೌರುಷ ॥14॥
ಅಶ್ವತ್ಥಾಮ ನುಡಿದ– ಕಮಲದಳದಂಥ ಕಣ್ಣುಳ್ಳವನು, ಉತ್ತಮ ಆಯುಧ ವಾಹನಗಳುಳ್ಳವನು, ವಜ್ರಕಾಯ, ಅಚಿಂತ್ಯಪ್ರಖ್ಯಾತ ಬಲಪೌರುಷಉಳ್ಳವನೂ ಆದ ರಾಜನೆ!
ಮುಷ್ಟಿಶ್ಲಿಷ್ಟಾಂಗುಲಿಭ್ಯಾಂ ಚ ವ್ಯಾಯತಾಭ್ಯಾಂ ಮಹದ್ಧನುಃ |
ದೋರ್ಭ್ಯಾಂ ವಿಷ್ಫಾರಯನ್ ಭಾಸಿ ಮಹಾಜಲದವದ್
ಭೃಶಮ್ ॥15॥
ಮುಷ್ಟಿಯಾಗಿ ಬಿಗಿದ ಬೆರಳುಗಳುಳ್ಳ ನೀಳವಾದ ತೋಳುಗಳಿಂದ ಮಹಾ ಧನುಸ್ಸನ್ನು ಬಹಳ ಠೇಂಕರಿಸುತ್ತಿದ್ದರೆ ನೀನು ಮಹಾಮೇಘದಂತೆ ಶೋಭಿಸುವೆ.
ಶರವರ್ಷೈರ್ಮಹಾವೇಗೈರಮಿತ್ರಾನಭಿವರ್ಷಸಿ |
ಮದನ್ಯಂ ನಾನುಪಶ್ಯಾಮಿ ಪ್ರತಿವೀರಂ ತವಾಹವೇ ॥16॥
ಶತ್ರುಗಳ ಮೇಲೆ ಬಲು ವೇಗದ ಬಾಣಗಳ ಮಳೆ ಸುರಿಸುವಿ. ನಿನಗೆ ಯುದ್ಧದಲ್ಲಿ ಇದಿರಾಗಿ ಹೋರಾಡಬಲ್ಲ ವೀರನನ್ನು, ನನ್ನನ್ನು ಬಿಟ್ಟರೆ, ಇನ್ನೊಬ್ಬನನ್ನು ನಾ ಕಾಣೆ.
ರಥದ್ವಿರದಪತ್ತ್ಯಶ್ವಾನ್ ಏಕಃ ಪ್ರಮಥಸೇ ಬಹೂನ್ |

ಮೃಗಸಂಘಾನಿವಾರಣ್ಯೇ ನಖೈರ್ಭೀಮಬಲೋ ಹರಿಃ ॥17॥
ಅರಣ್ಯದಲ್ಲಿ ಭಯಂಕರ ಬಲಶಾಲಿಯಾದ ಸಿಂಹವು ಉಗುರುಗಳಿಂದ ಮೃಗ ಸಮೂಹಗಳನ್ನು ಹೇಗೋ ಹಾಗೆ ಒಬ್ಬನೇ ನೀನು ಬಹುಸಂಖ್ಯೆಯಲ್ಲಿ ರಥ ಗಜ ಪದಾತಿ ಅಶ್ವಸೈನ್ಯಗಳನ್ನು ಸಂಹರಿಸುವಿ.
ಮಹತಾ ರಥಘೋಷೇಣ ದಿವಂ ಭೂಮಿಂ ಚ ನಾದಯನ್ |
ವರ್ಷಾಂತೇ ಸಮ್ಯಗಾದಿತ್ಯೋ ಭಾಭಿರಾಪೂರಯನ್ನಿವ ॥18॥
ವರ್ಷಾಕಾಲ ಕಳೆದಾಗ ಸೂರ್ಯನು ಕಿರಣಗಳಿಂದ ಭೂಮಿ ಅಂತರಿಕ್ಷಗಳನ್ನು ಚೆನ್ನಾಗಿ ತುಂಬಿಸುವಂತೆ, ನೀನೂ ದೊಡ್ಡ ರಥಧ್ವನಿಯಿಂದ ಭೂಮ್ಯಂತರಿಕ್ಷಗಳನ್ನು ತುಂಬಿಸುವಿ.
ಸಂಸ್ಪೃಶಾನಃ ಶರೈಃ ಪೂರ್ಣೌ ತೂಣೀ ಚಾಶೀವಿಷೋಪಮೈಃ |
ಮಯ್ಯೈವೈಕೇನ ಯುಧ್ಯಸ್ವ ತ್ರ್ಯಂಬಕೇಣ ಯಥಾಽಂತಕಃ ॥19॥
ಸರ್ಪಸದೃಶವಾದ ಬಾಣಗಳಿಂದ ತುಂಬಿದ ಎರಡು ಬತ್ತಳಿಕೆಗಳನ್ನು ಸ್ಪರ್ಶಿ ಸುತ್ತ, ಶಿವನೊಡನೆ ಯಮನಂತೆ, ನನ್ನೊಬ್ಬನೊಡನೇ ನೀನು ಯುದ್ಧಮಾಡು.
ಸಂಜಯಃ
ಏವಮುಕ್ತಸ್ತಥೇತ್ಯುಕ್ತ್ವಾ ಪ್ರಹಸ್ಯೈನಂ ಸ ಪಾರ್ಥಿವಃ |
ಕರ್ಣಿನಾ ದ್ರೋಣತನಯಂ ವಿವ್ಯಾಧ ಮಲಯಧ್ವಜಃ ॥20॥
ಸಂಜಯ ನುಡಿದ– ಅಶ್ವತ್ಥಾಮ ಹೀಗೆ ಹೇಳಿದಾಗ ರಾಜಾ ಮಲಯಧ್ವಜನು ಹಾಗೇ ಆಗಲೆಂದು ಹೇಳಿ ನಕ್ಕು ಬಾಣದಿಂದ ಅಶ್ವಾತ್ಥಾಮನಿಗೆ ಹೊಡೆದ.
ಮರ್ಮಭೇದಿಭಿರತ್ಯುಗ್ರೈರ್ಬಾಣೈರಗ್ನಿಶಿಖೋಪಮೈಃ |
ಮರ್ಮಸ್ವಭ್ಯಹನದ್ ದ್ರೌಣಿಃ ಪಾಂಡ್ಯಮಾಚಾರ್ಯನಂದನಃ ॥21॥
ದ್ರೋಣಪುತ್ರ ಅಶ್ವತ್ಥಾಮನೂ ಅಗ್ನಿಜ್ವಾಲೆಗೆ ಸಮವಾದ ಮರ್ಮಭೇದಿ ಅತ್ಯುಗ್ರವಾದ ಬಾಣಗಳಿಂದ ಮರ್ಮಸ್ಥಳಗಳಲ್ಲಿ ಪಾಂಡ್ಯನಿಗೆ ಹೊಡೆದ.
ತತೋಽಪರಾನ್ ನವಾಂಸ್ತೂರ್ಣಂ ನಾರಾಚಾನ್ ಕಂಕವಾಸಸಃ |
ಗತ್ಯಾ ದಶಮ್ಯಾ ಸಂಯುಕ್ತಾನ್ ಅಶ್ವತ್ಥಾಮಾಽಪ್ಯವಾಸೃಜತ್ ॥22॥
ಬಳಿಕ ಕಂಕಪತ್ರಯುಕ್ತವಾದ ಬೇರೆ ಹೊಸ ಬಾಣಗಳನ್ನು ಕೂಡ ಬೇಗನೆ ದಶಮಗತಿ ಯುಕ್ತವಾಗಿ ಅಶ್ವತ್ಥಾಮ ಎಸೆದ.
ಉನ್ಮುಖ್ಯಭಿಮುಖೀ ತಿರ್ಯಙ್ ಮಂದಾ ಗೋಮೂತ್ರಿಕಾ ಧ್ರುವಾ |
ಸ್ಖಲಿತಾ ಯಮಕಾಕ್ರಾಂತಾ ಕ್ರುಷ್ಟೇತೀಷುಗತೀರ್ವಿದುಃ ॥
ಬಾಣವು ತಲೆ, ಎದೆ, ಪಾರ್ಶ್ವಗಳಿಗೆ ನಾಟುವುದು ಮೊದಲಿನ ಮೂರು ಗತಿಗಳುಉನ್ಮುಖೀ, ಅಭಿಮುಖೀ ಮತ್ತು ತಿರ್ಯಕ್ ಎಂದು. ಸ್ವಲ್ಪ ಚರ್ಮದಲ್ಲಿ ಗಾಯಮಾಡುವುದು ಮಂದಾ. ಎಡಬಲಗಳಿಗೆ ನಾಟಿ ಕವಚವನ್ನು ಪುಡಿಮಾಡುವುದು ಗೋಮೂತ್ರಿಕಾ. ಗುರಿ ತಪ್ಪದಿರುವುದು ಧ್ರುವಾ, ಗುರಿ ತಪ್ಪುವುದು ಸ್ಖಲಿತಾ. ಅನೇಕಬಾರಿ ಚುಚ್ಚಿ ಹೊರಗೆ ಬರುವುದು ಯಮಕಾಕ್ರಾಂತಾ. ತೋಳು ಮುಂತಾದ ಅಂಗಗಳನ್ನು ಕತ್ತರಿಸುವುದು ಕ್ರುಷ್ಟಾ. ಹೀಗೆ ಬಾಣದ ಗತಿಗಳು ಒಂಬತ್ತು ಬಗೆ. ತಲೆಯನ್ನು ಕತ್ತರಿಸಿ ಅದರೊಂದಿಗೇ ಬಾಣವು ದೂರ ಹೋಗಿ ಬೀಳುವುದು ಅತಿಕ್ರುಷ್ಟಾ ಎಂಬ ಹತ್ತನೇ ಗತಿ.
ತಾನಚ್ಛಿನತ್ ತದಾ ಪಾಂಡ್ಯಶ್ಚತುರ್ಭಿರಪರೈಃ ಶರೈಃ |
ಚತುರೋಭ್ಯಾಹನಚ್ಚಾಶ್ವಾನ್ ಆಶು ತೇ ವ್ಯಸವೋಽಭವನ್ ॥23॥
ಆ ಬಾಣಗಳನ್ನು ಆಗ ನಾಲ್ಕು ಬೇರೆ ಬಾಣಗಳಿಂದ ಪಾಂಡ್ಯ ಕತ್ತರಿಸಿದ. ಮತ್ತು ನಾಲ್ಕೂ ಕುದುರೆಗಳನ್ನು ಹೊಡೆದ. ಅವು ಒಡನೆ ಅಸುನೀಗಿದುವು.
ಅಥ ದ್ರೋಣಸುತಸ್ಯೇಷೂನ್ ಛಿತ್ತ್ವಾ ಛಿತ್ವಾ ಶಿತೈಃ ಶರೈಃ |
ಧನುರ್ಜ್ಯಾಂ ವಿತತಾಂ ಪಾಂಡ್ಯಶ್ಚಿಚ್ಛೇದಾದಿತ್ಯತೇಜಸಃ ॥24॥
ಸೂರ್ಯನಂತೆ ಬೆಳಗುವ ಆ ಅಶ್ವತ್ಥಾಮನ ಬಾಣಗಳನ್ನು ಹರಿತವಾದ ಬಾಣಗಳಿಂದ ಪುನಃಪುನಃ ಕಡಿದು, ಉದ್ದವಾದ ಹೆದೆಯನ್ನೂ ಕಡಿದ, ಪಾಂಡ್ಯ.
ಅಥಾಧಿಜ್ಯಂ ಮಹತ್ ಕೃತ್ವಾ ಧನುರ್ದ್ರೌಣಿರಮಿತ್ರಹಾ |
ಪ್ರೇಕ್ಷ ೯ಯ ಚಾಶು ರಥೇ ಯುಕ್ತಾನ್ ನರೈರನ್ಯಾನ್ ಹಯೋತ್ತಮಾನ್ |25|
ಶತ್ರುನಾಶಕನಾದ ಅಶ್ವತ್ಥಾಮ ಮಹಾಧನುಸ್ಸಿಗೆ ಬೇರೆ ಹೆದೆಯೇರಿಸಿ, ಬೇರೆ ಉತ್ತಮವಾದ ಕುದುರೆಗಳನ್ನು ಪರೀಕ್ಷಿಸಿ ನೋಡಿ, ಸೇವಕರಿಂದ ಬೇಗನೆ ರಥಕ್ಕೆ ಕಟ್ಟಿಸಿದ.
ತತಃ ಶರಸಹಸ್ರಾಣಿ ಪ್ರೇಷಯಾಮಾಸ ಸ ದ್ವಿಜಃ |
ಇಷುಸಂಬಾಧಮಾಕಾಶಮಕರೋದ್ ದಿಶ ಏವ ಚ ॥26॥
ಬಳಿಕ ಅಶ್ವತ್ಥಾಮ ಸಾವಿರಾರು ಬಾಣಗಳನ್ನು ಎಸೆದ. ಆಕಾಶ ಮತ್ತು ದಿಕ್ಕುಗಳನ್ನು ಬಾಣಗಳಿಂದ ದಟ್ಟವಾಗಿ ತುಂಬಿಸಿದ.
ತತಸ್ತಾನಸ್ಯತಃ ಸರ್ವಾನ್ ದ್ರೌಣೇರ್ಬಾಣಾನ್ ಮಹಾತ್ಮನಃ |
ಜಾನನ್ನಪ್ಯಕ್ಷಯಾನ್ ಪಾಂಡ್ಯೋಽಶಾತಯತ್ ಪುರುಷರ್ಷಭಃ ॥27॥
ಮಹಾತ್ಮ ಅಶ್ವತ್ಥಾಮ ಬಾಣಗಳನ್ನು ಎಸೆಯುತ್ತಿದ್ದಂತೆಯೇ ಅವೆಲ್ಲವನ್ನೂ ಅಕ್ಷಯವೆಂದು ತಿಳಿದೂ ಸಹ ಪುರುಷಶ್ರೇಷ್ಠನಾದ ಪಾಂಡ್ಯನು ತುಂಡರಿಸಿದ.
ಪ್ರತತಾಂಸ್ತಾನ್ ಪ್ರಯತ್ನೇನ ಛಿತ್ತ್ವಾ ದ್ರೌಣೇರಿಷೂನರಿಃ |

ಚಕ್ರರಕ್ಷೌ ತತಸ್ತಸ್ಯ ಪ್ರಾಣುದನ್ ನಿಶಿತೈಃ ಶರೈಃ ॥28॥
ಎಲ್ಲೆಡೆ ಹಬ್ಬಿದ ಅಶ್ವತ್ಥಾಮನ ಆ ಬಾಣಗಳನ್ನು ಪಾಂಡ್ಯನು ಪ್ರಯತ್ನದಿಂದ ಹರಿತವಾದ ಬಾಣಗಳಿಂದ ಕತ್ತರಿಸಿ, ಅವನ ಚಕ್ರರಕ್ಷಕರನ್ನೂ ಸಂಹರಿಸಿದ.
ಅಥ ತಲ್ಲಾಘವಂ ದೃಷ್ಟ್ವಾ ಮಂಡಲೀಕೃತಕಾರ್ಮುಕಃ |
ಪ್ರಾಸ್ಯದ್ ದ್ರೋಣಸುತೋ ಬಾಣಾನ್ ವರ್ಷಂ
ಪೂಷಾನುಜೋ ಯಥಾ ॥29॥
ಪಾಂಡ್ಯನ ಬಾಣವೇಗವನ್ನು ಕಂಡು ಅಶ್ವತ್ಥಾಮನು ತನ್ನ ಬಿಲ್ಲನ್ನು ಮಂಡಲಾಕಾರವಾಗಿ ಸೆಳೆದು, ಪೂಷನ ತಮ್ಮನಾದ ಪರ್ಜನ್ಯನು ಮಳೆಗರೆವಂತೆ, ಬಾಣಗಳನ್ನು ಎಸೆದ.
ಅಷ್ಟಾವಷ್ಟಗವಾನ್ಯೂಹುಃ ಶಕಟಾನಿ ಯದಾಯುಧಮ್ |
ಅಹ್ನಸ್ತದಷ್ಟಭಾಗೇನ ದ್ರೌಣಿಶ್ಚಿಕ್ಷೇಪ ಮಾರಿಷ ॥30|
ರಾಜನೆ, ಎಂಟು ಎತ್ತುಗಳು ಎಳೆಯುವ ಎಂಟು ಬಂಡಿಗಳು ಎಷ್ಟು ಆಯುಧ ಗಳನ್ನು ಹೊರಬಲ್ಲವೋ ಅಷ್ಟು ಆಯುಧಗಳನ್ನು ಅಶ್ವತ್ಥಾಮ ಹಗಲಿನ ಎಂಟನೆ ಒಂದು ಭಾಗದಷ್ಟು ಕಾಲದಲ್ಲಿ ಎಸೆದಿದ್ದಾನೆ ಎಂದರೆ ಅದರ ವೇಗ ಎಷ್ಟಿರಬಹುದು!
ತಮಂತಕಮಿವ ಕ್ರುದ್ಧಮಂತಕಾಲಾಂತಕೋಪಮಮ್ |
ಯೇ ಯೇ ದದೃಶಿರೇ ರೂಪಂ ವಿಸಂಜ್ಞಾಃ ಪ್ರಾಯಶೋಽಭವನ್|31॥
ಅಂತಕನಾದ ಯಮನಂತೆ ಕ್ರುದ್ಧನಾಗಿ ಪ್ರಳಯಕಾಲದ ಅಂತಕನಂತಾಗಿದ್ದ ಅಶ್ವತ್ಥಾಮನ ರೂಪವನ್ನು ಯಾರಾರು ಕಂಡರೋ ಅವರೆಲ್ಲರೂ ಪ್ರಾಯಃ ಪ್ರಜ್ಞೆ ತಪ್ಪಿ ಬಿದ್ದರು.
ಪರ್ಜನ್ಯ ಇವ ಘರ್ಮಾಂತೇ ವೃಷ್ಟ್ಯಾ ಸಾದ್ರಿದ್ರುಮಾಂ ಮಹೀಮ್ |
ಆಚಾರ್ಯಪುತ್ರಸ್ತಾಂ ಸೇನಾಂ ಬಾಣವೃಷ್ಟ್ಯಾ ಹ್ಯವೀವೃಷತ್ ॥32॥
ಬೇಸಿಗೆ ಕಳೆದೊಡನೆ ಮೋಡವು ಬೆಟ್ಟಕಾಡುಗಳೊಂದಿಗೆ ಇಡೀ ಭೂಮಿಯ ಮೇಲೆ ಮಳೆಗೆರೆಯುವಂತೆ, ಅಶ್ವತ್ಥಾಮ ಆ ಪಾಂಡ್ಯನ ಸೈನ್ಯದ ಮೇಲೆ ಬಾಣಗಳ ಮಳೆಗರೆದ.
ದ್ರೌಣಿಪರ್ಜನ್ಯಸೃಷ್ಟಾಂ ತಾಂ ಬಾಣವೃಷ್ಟಿಂ ದುರಾಸದಾಮ್ |
ವಾಯವ್ಯಾಸ್ತ್ರೇಣ ಸ ಕ್ಷಿಪ್ರಂ ವಿದ್ಧ್ವಾ ಪಾಂಡ್ಯಾನಿಲೋಽನದತ್ ॥33॥
ಅಶ್ವತ್ಥಾಮನೆಂಬ ಪರ್ಜನ್ಯನು ಸುರಿಸಿದ ತಡೆಯಲಾಗದ ಆ ಬಾಣಗಳ ಮಳೆಯನ್ನು ಪಾಂಡ್ಯನೆಂಬ ಬಿರುಗಾಳಿ ವಾಯವ್ಯಾಸ್ತ್ರದಿಂದ ಬೇಗನೆ ದೂರಕ್ಕೆ ಹೊಡೆದೋಡಿಸಿ ಗರ್ಜನೆ ಮಾಡಿದ.
ತಸ್ಯ ನಾನದತಃ ಕೇತುಂ ಚಂದನಾಗುರುರೂಷಿತಮ್ |
ಮಲಯಪ್ರತಿಮಂ ದ್ರೌಣಿಶ್ಛಿತ್ತ್ವಾ ಬಾಣೈರಪಾತಯತ್ ॥34॥
ಪಾಂಡ್ಯ ಗರ್ಜಿಸುತ್ತಿದ್ದಂತೆಯೇ ಮಲಯಾಚಲದಂತೆ ಇದ್ದ ಚಂದನ ಅಗುರುಗಳಿಂದ ಲೇಪಿತವಾಗಿದ್ದ ಅವನ ಧ್ವಜವನ್ನು ಅಶ್ವತ್ಥಾಮ ಬಾಣಗಳಿಂದ ಕಡಿದುರುಳಿಸಿದ.
ಸೂತಮೇಕೇಷುಣಾ ಹತ್ವಾ ಮಹಾಜಲದನಿಸ್ವನಮ್ |
ಧನುಶ್ಛಿತ್ತ್ವಾರ್ಧಚಂದ್ರೇಣ ವ್ಯಧಮತ್ ತಿಲಶೋ ರಥಮ್ ॥35॥
ಒಂದು ಬಾಣದಿಂದ ಸಾರಥಿಯನ್ನು ಕೊಂದು, ದೊಡ್ಡ ಮೋಡದಂತೆ ಸದ್ದು ಮಾಡುವ ಧನುಸ್ಸನ್ನೂ ಕಡಿದು, ಅರ್ಧಚಂದ್ರ ಬಾಣದಿಂದ ರಥವನ್ನು ಎಳ್ಳು ಕಾಳಿನಷ್ಟು ಸಣ್ಣಗೆ ಚೂರು ಮಾಡಿದ, ಅಶ್ವತ್ಥಾಮ.
ಅಸ್ತ್ರೈರಸ್ತ್ರಾಣಿ ಸಂವಾರ್ಯ ಛಿತ್ತ್ವಾ ಸರ್ವಾಯುಧಾನಿ ಚ |
ಪ್ರಾಪ್ತಮಪ್ಯಹಿತಂ ದ್ರೌಣಿರ್ನಾವಧೀದ್ ಯುದ್ಧತೃಷ್ಣಯಾ ॥36॥
ಶತ್ರುವಿನ ಅಸ್ತ್ರಗಳನ್ನು ಅಸ್ತ್ರಗಳಿಂದ ತಡೆದು, ಎಲ್ಲ ಆಯುಧಗಳನ್ನೂ ಕತ್ತರಿಸಿ, ಶತ್ರು ತನ್ನ ನಿಯಂತ್ರಣದಲ್ಲಿ ಬಂದಿದ್ದರೂ ಇನ್ನೂ ಯುದ್ಧಮಾಡುವ ಬಯಕೆಯಿಂದ ಅವನನ್ನು ಕೊಲ್ಲದೆ ಬಿಟ್ಟ ಅಶ್ವತ್ಥಾಮ.
ಏತಸ್ಮಿನ್ನಂತರೇ ಕರ್ಣೋ ಮಹಾನೀಕಮುಪಾದ್ರವತ್ |
ದ್ರಾವಯಾಮಾಸ ಸ ತದಾ ಪಾಂಡವಾನಾಂ ಮಹದ್ ಬಲಮ್ ॥37॥
ಈ ನಡುವೆ ಕರ್ಣನು ಪಾಂಡವರ ಮಹಾಸೈನ್ಯವನ್ನು ಆಕ್ರಮಿಸಿದ. ಆ ಮಹಾಸೈನ್ಯವನ್ನು ಆಗ ಹೊಡೆದೋಡಿಸಿದ.
ವಿರಥಂ ರಥಿನಶ್ಚಕ್ರೇ ಗಜಾನಶ್ವಾಂಶ್ಚ ಭಾರತ |
ರಾಜನ್ ಬಹುಭಿರಹನಚ್ಛರೈಃ ಸನ್ನತಪರ್ವಭಿಃ ॥38॥
ರಾಜನೆ, ಕರ್ಣನು ಪಾಂಡವರ ರಥಿಕರನ್ನು ರಥರಹಿತರನ್ನಾಗಿ ಮಾಡಿದ. ಆನೆ ಕುದುರೆಗಳನ್ನು ಡೊಂಕುಗಿಣ್ಣಿನ ಬಹು ಬಾಣಗಳಿಂದ ಸಂಹರಿಸಿದ.
ಅಥ ದ್ರೌಣಿರ್ಮಹೇಷ್ವಾಸಃ ಪಾಂಡ್ಯಂ ಶತ್ರುನಿಬರ್ಹಣಮ್ |
ವಿರಥಂ ರಥಿನಾಂ ಶ್ರೇಷ್ಠಂ ನಾಹನದ್ ಯುದ್ಧಕಾಂಕ್ಷಯಾ ॥39॥
ಮಹಾಬಿಲ್ಗಾರ ಅಶ್ವತ್ಥಾಮನು ಶತ್ರುನಾಶಕನಾದ ರಥಿಕರಲ್ಲಿ ಶ್ರೇಷ್ಠನಾದ ಪಾಂಡ್ಯರಾಜನನ್ನು ರಥರಹಿತನನ್ನಾಗಿ ಮಾಡಿಯೂ ಕೊಲ್ಲದೆ ಬಿಟ್ಟ, ಇನ್ನೂ ಯುದ್ಧನಡೆಸುವ ಬಯಕೆಯಿಂದ.
ಹತೇಶ್ವರೋ ದ್ವಿರದವರಃ ಸುಕಲ್ಪಿತಃ
ಶರಾಭಿಮೃಷ್ಟಃ ಪ್ರತಿಶಬ್ದಗೋ ಬಲೀ ॥40॥
ತಮಾದ್ರವದ್ ದ್ರೌಣಿಶರಾಹತಸ್ತ್ವರನ್

ಜವೇನ ಕೃತ್ವಾ ಪ್ರತಿಹಸ್ತಿಗರ್ಜಿತಮ್ |
ಆಗ ಯುದ್ಧಸಾಮಗ್ರಿಗಳಿಂದ ಸಜ್ಜಾಗಿದ್ದ ಒಂದು ದೊಡ್ಡ ಬಲಿಷ್ಠ ಆನೆ ಅಶ್ವತ್ಥಾಮನ ಬಾಣದಿಂದ ಸವಾರನನ್ನು ಕಳೆದುಕೊಂಡು ತಾನೂ ಗಾಯಗೊಂಡು ಇನ್ನೊಂದು ಆನೆಗೆ ಪ್ರತಿಯಾಗಿ ಗರ್ಜಿಸುತ್ತ ವೇಗವಾಗಿ ಪಾಂಡ್ಯರಾಜನ ಕಡೆಗೆ ಧಾವಿಸಿ ಬಂದಿತು.
ತಂ ವಾರಣಂ ವಾರಣಯುದ್ಧಕೋವಿದೋ
ದ್ವಿಪೋತ್ತಮಂ ಪರ್ವತಸಾನುಸನ್ನಿಭಮ್ ॥41॥
ತದಾಽಧ್ಯತಿಷ್ಠನ್ ಮಲಯಧ್ವಜಸ್ತ್ವರನ್
ಯಥಾಽದ್ರಿಶೃಂಗಂ ಹರಿರುನ್ನದಂಸ್ತಥಾ ॥42॥
ಪರ್ವತಶಿಖರದಂತಿದ್ದ ಆ ಆನೆಯನ್ನು ಗಜಯುದ್ಧಕೋವಿದನಾದ ಮಲಯ ಧ್ವಜ ಬೇಗನೆ ಏರಿದ. ಸಿಂಹವು ಪರ್ವತ ಶಿಖರವೇರಿ ಗರ್ಜಿಸುವಂತೆ ಗರ್ಜಿಸಿದ.
ಸ ತೋಮರಂ ಭಾಸ್ಕರರಶ್ಮಿವರ್ಚಸಂ
ಬಲಾಸ್ತ್ರಸರ್ಗೋತ್ತಮಯತ್ನಮನ್ಯುಭಿಃ |
ಸಸರ್ಜ ಶೀಘ್ರಂ ಪ್ರತಿಪೀಡಯನ್ ಗಜಂ
ಗುರೋಃ ಸುತಾಯ ದ್ರುಮಿಳೇಶ್ವರೋ ನದನ್ ॥43॥
ದ್ರವಿಡದೇಶಾಧಿಪತಿ ಪಾಂಡ್ಯನು ಬಲ, ಅಸ್ತ್ರಪ್ರಯೋಗದ ಒಳ್ಳೆಯ ಯತ್ನ ಮತ್ತು ಕೋಪಗಳಿಂದ ಆನೆಯನ್ನು ಅಂಕುಶದಿಂದ ನಿಯಂತ್ರಿಸುತ್ತ ಸೂರ್ಯ ರಶ್ಮಿಯಂತೆ ಹೊಳೆಯುವ ತೋಮರವನ್ನು ಅಶ್ವತ್ಥಾಮನ ಮೇಲೆ ವೇಗವಾಗಿ ಎಸೆದ, ಗರ್ಜಿಸಿದ.
ಮಣಿಪ್ರವೇಕೋತ್ತಮವಜ್ರಹಾಟಕೈ-
ರಲಂಕೃತಂ ಚಾಂಶುಕಮಾಲ್ಯಮೌಕ್ತಿಕೈಃ |
ಹತೋ ಮಯಾಽಸೀತ್ಯಸಕೃನ್ಮುದಾ ನದನ್
ಪರಾಹನದ್ ದ್ರೌಣಿವರಾಂಗಭೂಷಣಮ್ ॥44॥
ಉತ್ತಮರತ್ನ ಉತ್ತಮವಜ್ರ ಬಂಗಾರಗಳಿಂದಲೂ ವಸ್ತ್ರ ಮಾಲೆ ಮುತ್ತು ಗಳಿಂದಲೂ ಅಲಂಕೃತವಾದ ಅಶ್ವತ್ಥಾಮನ ಕಿರೀಟವನ್ನು, `ಹತನಾದೆ ಹತನಾದೆ' ಎಂದು ಪುನಃಪುನಃ ಗರ್ಜಿಸುತ್ತ ತೋಮರದಿಂದ ಹೊಡೆದ, ಪಾಂಡ್ಯರಾಜ.
ತದರ್ಕಚಂದ್ರಗ್ರಹವೈದ್ಯುತತ್ವಿಷಂ
ಭೃಶಾಭಿಘಾತಾತ್ ಪತಿತಂ ವಿಘೂರ್ಣಿತಮ್ |
ಮಹೇಂದ್ರವಜ್ರಾಭಿಹತಂ ಮಹಾಸ್ವನಂ
ಯಥಾಽದ್ರಿಶೃಂಗಂ ಧರಣೀತಳೇ ಯಥಾ ॥45॥
ಸೂರ್ಯ ಚಂದ್ರ ಗ್ರಹ ಮಿಂಚುಗಳ ಕಾಂತಿಯಿಂದ ಹೊಳೆಯುತ್ತಿದ್ದ ಅಶ್ವತ್ಥಾಮನ ಕಿರೀಟ ತಿರುಗಿತಿರುಗಿ ದೊಡ್ಡ ಶಬ್ದದೊಂದಿಗೆ, ಮಹೇಂದ್ರನ ವಜ್ರಾಯುಧದೇಟಿಗೆ ಬೀಳುವ ಗಿರಿ ಶಿಖರದಂತೆ ನೆಲಕ್ಕೆ ಬಿದ್ದಿತು.
ತತಃ ಪ್ರಜಜ್ವಾಲ ಪರೇಣ ಮನ್ಯುನಾ
ಪದಾಹತೋ ನಾಗಪತಿರ್ಯಥಾ ತಥಾ |
ಸಮಾದದೇ ಚಾಂತಕದಂಡಸನ್ನಿಭಾನ್
ಇಷೂನಮಿತ್ರಾನ್ತಕರಾಂಶ್ಚತುರ್ದಶ ॥46॥
ಆಗ ಕಾಲಿಂದ ತುಳಿಸಿಕೊಂಡ ಮಹಾಸರ್ಪದಂತೆ ಅಶ್ವತ್ಥಾಮ ಮಹಾ ಕೋಪದಿಂದ ಉರಿದ, ಶತ್ರುನಾಶಕವಾದ ಯಮದಂಡದಂಥ ಹದಿನಾಲ್ಕು ಬಾಣಗಳನ್ನು ಎತ್ತಿಕೊಂಡ.
ದ್ವಿಪಸ್ಯ ಪಾದಾಗ್ರಕರಾನ್ ಸ ಪಂಚಭಿಃ
ನೃಪಸ್ಯ ಬಾಹೂರು ಶಿರೋಽಥ ಪತ್ರಿಭಿಃ |
ಜಘಾನ ಷಡ್ಭಿಃ ಷಡನುತ್ತಮತ್ವಿಷಃ
ಸ ಪಾಂಡ್ಯರಾಜಾನುಚರಾನ್ ಮಹಾರಥಾನ್ ॥47॥
ಐದು ಬಾಣಗಳಿಂದ ಆನೆಯ ಕಾಲುಗಳನ್ನು ಮತ್ತು ಸೊಂಡಿಲುಗಳನ್ನು, ಮೂರು ಬಾಣಗಳಿಂದ ಪಾಂಡ್ಯರಾಜನ ತೋಳು ತೊಡೆ ಶಿರಸ್ಸುಗಳನ್ನು, ಆರು ಬಾಣಗಳಿಂದ ಮಹಾಪರಾಕ್ರಮಿಗಳಾದ ಪಾಂಡ್ಯರಾಜನ ಕಡೆಯ ಆರುಮಂದಿ ಮಹಾರಥರನ್ನು ಹೊಡೆದುರುಳಿಸಿದ.
ಸುದೀರ್ಘವೃತ್ತೌ ವರಚಂದನೋಕ್ಷಿತೌ
ಸುವರ್ಣಮುಕ್ತಾಮಣಿವಜ್ರಭೂಷಿತೌ |
ಭುಜೌ ಧರಾಯಾಂ ಪತಿತೌ ನೃಪಸ್ಯ ತೌ
ವಿಚೇಷ್ಟತುಸ್ತಾರ್ಕ್ಷ್ಯಹತಾವಿವೋರಗೌ ॥48॥
ನೀಳವಾದ ದುಂಡಾದ ಒಳ್ಳೆಯ ಶ್ರೀಗಂಧಪೂಸಿದ ಚಿನ್ನ ಮುತ್ತು ರತ್ನ ವಜ್ರಗಳಿಂದ ಅಲಂಕೃತವಾದ ಪಾಂಡ್ಯರಾಜನ ಎರಡೂ ತೋಳುಗಳು ನೆಲದಲ್ಲಿ ಬಿದ್ದು ಗರುಡನ ಏಟಿನಿಂದ ಬಿದ್ದ ಎರಡು ಹಾವುಗಳಂತೆ ವಿಲವಿಲನೆ ಒದ್ದಾಡಿದುವು.
ಶಿರಶ್ಚ ತತ್ಪೂರ್ಣಶಶಿಪ್ರಭಾನನಂ
ಸರೋಷತಾಮ್ರಾಯತನೇತ್ರಮುನ್ನಸಮ್ |
ಕ್ಷಿತಾವಪಿ ಭ್ರಾಜತಿ ತತ್ಸಕುಂಡಲಂ
ವಿಶಾಖಯೋರ್ಮಧ್ಯಗತೋ ಯಥಾ ಶಶೀ ॥49॥

ಪಾಂಡ್ಯರಾಜನ ಶಿರಸ್ಸೂ ಕೂಡ ಕುಂಡಲ ಸಮೇತವಾಗಿ ನೆಲದಲ್ಲಿ ಬಿದ್ದಿತು. ಅದರಿಂದ ಪೂರ್ಣಚಂದ್ರನಂತೆ ಹೊಳೆಯುವ ಮುಖ, ಕೋಪದಿಂದ ಕೆಂಪಾದ ಉದ್ದವಾದ ಕಣ್ಣು, ಉನ್ನತ ನಾಸಿಕೆಗಳಿಂದ ಕೂಡಿದ ಆ ಶಿರಸ್ಸು ನೆಲದಲ್ಲಿ, ವಿಶಾಖಾ ನಕ್ಷತ್ರದ ಎರಡು ತಾರೆಗಳ ನಡುವೆ ಆಕಾಶದಲ್ಲಿ ಕಾಣುವ ಚಂದ್ರನಂತೆ ಶೋಭಿಸಿತು.

ಸ ತು ದ್ವಿಪಃ ಪಂಚಭಿರುತ್ತಮೇಷುಭಿಃ
ಕೃತಃ ಷಡಂಶಶ್ಚತುರೋ ನೃಪಸ್ತ್ರಿಭಿಃ |
ಕೃತೋ ದಶಾಂಶಃ ಕುಲಿಶೇನ ಯುಧ್ಯತಾ
ಹರಿರ್ಯಥಾದ್ರಿಂ ದಶಧೈವ ತಂ ತಥಾ ||50||

ಪಾಂಡ್ಯರಾಜನ ಆನೆಯನ್ನು ಅಶ್ವತ್ಥಾಮ ಐದು ಬಾಣಗಳಿಂದ ಹೊಡೆದು ಆರು ಭಾಗವಾಗಿ ಮಾಡಿದ. ರಾಜನನ್ನು ಮೂರು ಬಾಣಗಳಿಂದ ಹೊಡೆದು ನಾಲ್ಕು ಭಾಗವಾಗಿ ಮಾಡಿದ. ಹೀಗೆ ಒಟ್ಟು ಹತ್ತು ಭಾಗಗಳಾದುವು. ವಜ್ರಾಯುಧದಿಂದ ದೇವೇಂದ್ರನು ಒಂದು ಬೆಟ್ಟವನ್ನು ಹತ್ತು, ಅಂದರೆ ಹತ್ತಾರು, ಭಾಗವಾಗಿ ಮಾಡುವಂತೇ ಇದು.

ಸ ಪಾದಪಾನ್ ರಾಕ್ಷಸಭೋಜನಾನ್ ಬಹೂನ್
ಪ್ರದಾಹ್ಯ ಪಾಂಡ್ಯೋಽಶ್ವಮನುಷ್ಯಕುಂಜರಾನ್ |
ಸ್ವಧಾಮವಾಪ್ಯ ಜ್ವಲನಃ ಪಿತೃಪ್ರಿಯ-
ಸ್ತತಃ ಪ್ರಶಾಂತಃ ಸಲಿಲಪ್ರವಾಹತಃ ||51||

ಪಾಂಡ್ಯರಾಜನು ದಾವಾಗ್ನಿಯಂತೆ ರಾಕ್ಷಸರಿಗೆ ಭೋಜನ ಯೋಗ್ಯವಾದ ಅಶ್ವ ಪದಾತಿ ಗಜಗಳೆಂಬ ಮರಗಳನ್ನು ಸುಟ್ಟು , ಪಿತೃಪ್ರಿಯವಾದ ಚಿತಾಗ್ನಿಯಂತೆ ಕೀರ್ತಿರೂಪವಾದ ಸ್ವಧೆ ಎಂಬ ಆಹುತಿಯನ್ನು ಉಂಡು, ಬಳಿಕ ಅಶ್ವತ್ಥಾಮನ ಬಾಣಗಳೆಂಬ ನೀರಿನ ಪ್ರವಾಹದಿಂದ ಆರಿಹೋಯಿತು.

ಸಮಾಪ್ತವಿದ್ಯಂ ತು ಗುರೋಃ ಸುತಂ ನೃಪಃ
ಸಮಾಪ್ತಕರ್ಮಾಣಮುಪೇತ್ಯ ತೇ ಸುತಃ |
ಸುಹೃದ್ವ ೃತೋಽತ್ಯರ್ಥಮಪೂಜಯನ್ ಮುದಾ
ಜಿತೇ ಬಲೌ ವಿಷ್ಣುಮಿವಾಮರೇಶ್ವರಃ ||52||

ಗುರುವಿನಿಂದ ಅಸ್ತ್ರವಿದ್ಯೆಯನ್ನು ಪೂರ್ತಿಯಾಗಿ ಸಂಪಾದಿಸಿದ್ದ ಗುರುಸುತನಾದ ಅಶ್ವತ್ಥಾಮ ಶತ್ರುಸಂಹಾರ ಕಾರ್ಯವನ್ನು ಯಶಸ್ವಿಯಾಗಿ ಮಾಡಿ ಮುಗಿಸಿದಾಗ, ರಾಜನೆ, ನಿನ್ನ ಮಗ ದುರ್ಯೋಧನ ಮಿತ್ರರೊಂದಿಗೆ ಅಶ್ವತ್ಥಾಮನ ಬಳಿಗೆ ಹೋಗಿ, ಅವನನ್ನು ಸಂತೋಷದಿಂದ ಬಹಳವಾಗಿ ವಿಷ್ಣು ಬಲಿಚಕ್ರವರ್ತಿ ಯನ್ನು ಗೆದ್ದಾಗ ಅವನನ್ನು ದೇವೇಂದ್ರ ಅಭಿನಂದಿಸಿದಂತೆ ಅಭಿನಂದಿಸಿದ,

ಧೃತರಾಷ್ಟ್ರಃ
ಪಾಂಡ್ಯೇ ಹತೇ ಕಿಮಕರೋದರ್ಜುನೋ ಜಯತಾಂವರಃ |
ಏಕವೀರೇಣ ಕರ್ಣೇನ ದ್ರಾವಿತೇ ಚ ಯುಧಿಷ್ಠಿರೇ ||53||

ಧೃತರಾಷ್ಟ್ರ ನುಡಿದ– ಪಾಂಡ್ಯ ಹತನಾದಾಗ, ಮುಖ್ಯವೀರನಾದ ಕರ್ಣನು ಯುಧಿಷ್ಠಿರನನ್ನು ರಣರಂಗದಿಂದ ಓಡಿಸಿದಾಗ, ಜಯಶಾಲಿಗಳಲ್ಲಿ ಶ್ರೇಷ್ಠನಾದ ಅರ್ಜುನ ಏನು ಮಾಡಿದ?

ಸಮಾಪ್ತವಿದ್ಯೋ ಬಲವಾನ್ ಯುಕ್ತೋ ವೀರಃ ಸ ಪಾಂಡವಃ |
ಸರ್ವಭೂತೇಷ್ವನುಜ್ಞಾತಃ ಶಂಕರೇಣ ಮಹಾತ್ಮನಾ ||54||

ಅರ್ಜುನನು ಚೆನ್ನಾಗಿ ವಿದ್ಯೆ ಸಂಪಾದಿಸಿದವನು, ಬಲಿಷ್ಠ, ಪ್ರಯತ್ನಶೀಲ, ಎಲ್ಲ ಯೋಧರಲ್ಲಿ ಶ್ರೇಷ್ಠನಾದ ವೀರಯೋಧ, ಹಾಗೆ ಮಹಾತ್ಮನಾದ ಶಂಕರನಿಗೂ ಸಮ್ಮತನಾದವನು.

ತಸ್ಮಾನ್ಮಹದ್ಭಯಂ ತೀವ್ರಮಮಿತ್ರಘ್ನಾದ್ ಧನಂಜಯಾತ್ |
ಸ ಯತ್ ತತ್ರಾಕರೋತ್ ಪಾರ್ಥಸ್ತನ್ಮಮಾಚಕ್ಷ ್ವ ಸಂಜಯ ||55||

ಅದರಿಂದ, ಶತ್ರುನಾಶಕನಾದ ಅರ್ಜುನನಿಂದ ನಮಗೆ ತೀವ್ರವಾದ ಮಹಾಭಯವಿದೆ. ಅವನು ಆಗ ಏನು ಮಾಡಿದನೆಂದು ಹೇಳು, ಸಂಜಯ!

ಸಂಜಯಃ
ಹತೇ ಪಾಂಡ್ಯೇಽರ್ಜುನಂ ಕೃಷ್ಣಸ್ತ್ವರನ್ನಾಹ ವಚೋ ಹಿತಮ್ |
ಪಶ್ಯಾಮಿ ನಾಹಂ ರಾಜಾನಮಪಾಯಾತಾಂಶ್ಚ ಪಾಂಡವಾನ್ ||56||

ಸಂಜಯ ನುಡಿದ– ಪಾಂಡ್ಯರಾಜ ಹತನಾದಾಗ ಅರ್ಜುನನಿಗೆ ಶ್ರೀಕೃಷ್ಣ ಬೇಗನೆ ಹಿತವನ್ನು ನುಡಿದ,`ರಾಜಾಯುಧಿಷ್ಠಿರನನ್ನು ನಾನು ಕಾಣುತ್ತಿಲ್ಲ, ದೂರಹೋಗಿರುವ ಪಾಂಡವರನ್ನೂ ಕಾಣುತ್ತಿಲ್ಲ.

ಕರ್ಣಂ ಪಶ್ಯ ಮಹಾರಂಗೇ ಜ್ವಲಂತಮಿವ ಪಾವಕಮ್ |
ಅಸೌ ಭೀಮೋ ಮಹೇಷ್ವಾಸಃ ಪ್ರತಿವೃತ್ತೋ ರಣಂ ಪ್ರತಿ ||57||

`ಕರ್ಣನನ್ನು ನೋಡು, ಮಹಾರಣರಂಗದಲ್ಲಿ ಬೆಂಕಿಯಂತೆ ಜ್ವಲಿಸುತ್ತಿದ್ದಾನೆ. ಬಿಲ್ಗಾರ ಭೀಮನೊಬ್ಬನೆ ಯುದ್ಧಕ್ಕೆ ಹಿಂತಿರುಗಿ ಬಂದಿದ್ದಾನೆ.'

ತ ಇಮೇ ನಾನುವರ್ತಂತೇ ಧೃಷ್ಟದ್ಯುಮ್ನಪುರೋಗಮಾಃ |
ಪಾಂಚಾಲಾಃ ಸೃಂಜಯಾಶ್ಚೈವ ಪಾಂಡವಾನಾಂ
ಚಮೂಮುಖಮ್ ||58||

`ದೃಷ್ಟದ್ಯುಮ್ನ ಮುಂತಾದ ಪಾಂಚಾಲರು ಸೃಂಜಯರು ಪಾಂಡವರಸೈನ್ಯದ ಮುಂಭಾಗದಲ್ಲಿ ಭೀಮನನ್ನು ಬೆಂಬಲಿಸುತ್ತಿಲ್ಲ.'

ನಿವೃತ್ತೈಶ್ಚ ಪುನಃ ಪಾರ್ಥೈರ್ಭಗ್ನಂ ಶತ್ರುಬಲಂ ಮಹತ್ |
ಕೌರವಾನ್ ದ್ರವತೋ ಹ್ಯೇಷ ಕರ್ಣೋ ವಾರಯತೇ ಭೃಶಮ್ ॥59॥
`ಏಕೆಂದರೆ, ಪಾಂಡವಸೈನಿಕರು ಹಿಂತಿರುಗಿ ಬಂದು ಮಹತ್ತಾದ ಶತ್ರುಸೈನ್ಯ ವನ್ನು ಹೊಡೆದೋಡಿಸಿದರು. ಆದರೂ ಓಡುವ ಕುರುಸೈನಿಕರನ್ನು ಈ ಕರ್ಣ ಚೆನ್ನಾಗಿ ತಡೆಯುತ್ತಾನೆ.'
ಅಂತಕಪ್ರತಿಮೋ ವೇಗೇ ಶಕ್ರತುಲ್ಯಪರಾಕ್ರಮಃ |
ಅಸೌ ಗಚ್ಛತಿ ಕೌಂತೇಯ ದ್ರೌಣಿಃ ಶಸ್ತ್ರಭೃತಾಂ ವರಃ ॥60॥
`ಮತ್ತು, ಅರ್ಜುನ, ಯಮನಂಥವನೂ, ವೇಗದಲ್ಲಿ ಇಂದ್ರಸಮಾನ ಪರಾಕ್ರಮ ಉಳ್ಳವನೂ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ ಆಗಿರುವ ಅಶ್ವತ್ಥಾಮ ನಮ್ಮ ಸೈನ್ಯದ ಕಡೆಗೆ ಹೋಗುತ್ತಿದ್ದಾನೆ.'
ತಮೇಷ ಪ್ರದ್ರುತಃ ಸಂಖ್ಯೇ ಧೃಷ್ಟದ್ಯುಮ್ನೋ ಮಹಾರಥಃ |
ಅಶ್ವತ್ಥಾಮ್ನಾ ಹತಾಃ ಸಂಖ್ಯೇ ಸರ್ವೇ ಕೌಂತೇಯ ಸೃಂಜಯಾಃ ॥61॥
`ಅವನನ್ನು ಇದಿರಿಸಲು ಮಹಾರಥನಾದ ಧೃಷ್ಟದ್ಯುಮ್ನ ಧಾವಿಸುತ್ತಿದ್ದಾನೆ. ಅಶ್ವಯುದ್ಧದಲ್ಲಿ ಎಲ್ಲ ಸೃಂಜಯರನ್ನು ಅಶ್ವತ್ಥಾಮ ಸಂಹರಿಸಿದ್ದಾನೆ.'
ರಥಾಶ್ವನರನಾಗಾನಾಂ ಕೃತಂ ಚ ಕದನಂ ಮಹತ್ |
ಇತ್ಯೇತತ್ ಸರ್ವಮಾಚಷ್ಟ ವಾಸುದೇವಃ ಕಿರೀಟಿನೇ ॥62॥
`ರಥ ಅಶ್ವ ಪದಾತಿ ಗಜ ಸೈನ್ಯಗಳ ದೊಡ್ಡ ಯುದ್ಧ ನಡೆಯುತ್ತಿದೆ' ಎಂದು ಮುಂತಾಗಿ ಎಲ್ಲವನ್ನೂ ಶ್ರೀಕೃಷ್ಣ ಅರ್ಜುನನಿಗೆ ಹೇಳಿದ್ದಾನೆ.
ಏತಚ್ಛ್ರುತ್ವಾ ಚ ದೃಷ್ಟ್ವಾ ಚ ಭ್ರಾತೄಣಾಂ ವ್ಯಸನಂ ಮಹತ್ |
ವಾಹಯಾಶ್ವಾನ್ ಹೃಷೀಕೇಶ ಕ್ಷಿಪ್ರಮಿತ್ಯಾಹ ಪಾಂಡವಃ ॥63॥
ಅರ್ಜುನನು ಸೋದರರ ಮಹಾಕಷ್ಟವನ್ನು ಕೇಳಿ, ನೋಡಿ `ಕೃಷ್ಣ, ಕುದುರೆ ಗಳನ್ನು ಬೇಗನೆ ನಡೆಸು' ಎಂದ.
ತತಃ ಪ್ರಾಯಾದ್ ಹೃಷೀಕೇಶೋ ರಥೇನಾಪ್ರತಿಮೋ ಯುಧಿ |
ತತೋ ರೇಣುಃ ಸಮಭವತ್ ಪುನಸ್ತತ್ರ ಮಹಾರಣೇ ॥64॥
ಯುದ್ಧದಲ್ಲಿ ಅಪ್ರತಿಮನಾದ ಶ್ರೀಕೃಷ್ಣ ರಥದಿಂದ ಮುಂದೆ ನಡೆದ. ಆದರೆ ಪುನಃ ಮಹಾರಣರಂಗದಲ್ಲಿ, ಧೂಳೆದ್ದಿತು
ತತೋ ರಾಜನ್ ಮಹಾನಾಸೀತ್ ಸಂಗ್ರಾಮೋ ರೋಮಹರ್ಷಣಃ |
ಸಿಂಹನಾದರವಾಶ್ಚಾತ್ರ ಪ್ರಾದುರಾಸನ್ ಸಮಾಗಮೇ |
ಉಭಯೋಃ ಸೇನಯೋಃ ರಾಜನ್ ಮೃತ್ಯುಂ ಕೃತ್ವಾ ನಿವರ್ತನಮ್ ॥65|
ರಾಜನೆ, ರೋಮಾಂಚಕರವಾದ ಮಹಾಯುದ್ಧ ನಡೆಯಿತು. ಎರಡೂ ಸೈನ್ಯಗಳ ಸಮಾಗಮದಿಂದ ಸಿಂಹನಾದ ಧ್ವನಿ ಎದ್ದಿತು. ಶತ್ರು ಮರಣವನ್ನು ಕಂಡೇ ಹಿಂತಿರುಗುವ ಸಂಕಲ್ಪ ಮಾಡಿದ್ದರು, ಯೋಧರು.
ತತಃ ಪುನಃ ಸಮಾಜಗ್ಮುರಭೀತಾಃ ಕುರುಸೃಂಜಯಾಃ |
ಯುಧಿಷ್ಠಿರಮುಖಾಃ ಪಾರ್ಥಾ ವೈಕರ್ತನಮುಖಾ ವಯಮ್ ॥66॥
ಅದರಿಂದ ಕುರು ಸೃಂಜಯರ ಸಮಾಗಮದಲ್ಲಿ ಎರಡೂ ಸೈನ್ಯ ನಿರ್ಭೀತ ವಾಗಿತ್ತು. ಯುಧಿಷ್ಠಿರನನ್ನು ಮುಂದೆ ಮಾಡಿಕೊಂಡು ಪಾಂಡವರೂ ಕರ್ಣನನ್ನು ಮುಂದೆ ಮಾಡಿಕೊಂಡು ಕೌರವರೂ ಬಂದಿದ್ದರು.
ತತಃ ಪ್ರವವೃತೇ ಯುದ್ಧಂ ಘೋರರೂಪಂ ವಿಶಾಂಪತೇ |
ಕರ್ಣಸ್ಯ ಪಾಂಡವಾನಾಂ ಚ ಯಮರಾಷ್ಟ್ರವಿವರ್ಧನಮ್ ॥67॥
ರಾಜನೆ, ಯಮರಾಜನ ರಾಜ್ಯ ದೊಡ್ಡದಾಗಲು ಕಾರಣವಾಗಬಲ್ಲ ಘೋರ ಯುದ್ಧ ಕರ್ಣನಿಗೂ ಪಾಂಡವರಿಗೂ ಪ್ರಾರಂಭವಾಯಿತು
ತಸ್ಮಿನ್ ಪ್ರವೃತ್ತೇ ಸಂಗ್ರಾಮೇ ತುಮುಲೇ ರೋಮಹರ್ಷಣೇ |
ಸಂಶಪ್ತಕೇಷು ವೀರೇಷು ಕಿಂಚಚ್ಛೇಷೇಷು ಭಾರತ ॥68॥
ರಾಜನೆ, ಸಂಶಪ್ತಕವೀರರೊಳಗೆ ಕೆಲವರು ಮಾತ್ರ ಉಳಿದಿರುವಾಗಲೆ ಈ ರೋಮಾಂಚಕರ ಯುದ್ಧ ನಡೆಯಿತು.
ಧೃಷ್ಟದ್ಯುಮ್ನೋ ಮಹಾರಾಜ ಸಹಿತಃ ಸರ್ವರಾಜಭಿಃ |
ಕರ್ಣಮೇವಾಭಿದುದ್ರಾವ ಪಾಂಡವಾಶ್ಚ ಮಹಾರಥಾಃ ॥69॥
ಮಹಾರಾಜ, ಮಹಾರಥರಾದ ಪಾಂಡವರೂ ಎಲ್ಲ ರಾಜರಿಂದ ಕೂಡಿದ ಧೃಷ್ಟದ್ಯುಮ್ನನೂ ಕರ್ಣನ ಇದಿರಿಗೆ ನುಗ್ಗಿ ಬಂದರು.
ಆಗಚ್ಛಮಾನಾಂಸ್ತಾನ್ ದೃಷ್ಟ್ವಾ ಸಂಗ್ರಾಮೇ ವಿಜಯೈಷಿಣಃ |
ದಧಾರೈಕೋ ರಣೇ ಕರ್ಣೋ ಜಲೌಘಾನಿವ ಪರ್ವತಃ ॥70॥
ನೀರಿನ ಪ್ರವಾಹಗಳನ್ನು ಬೆಟ್ಟ ಸಹಿಸಿಕೊಳ್ಳುವಂತೆ ಕರ್ಣನೊಬ್ಬನೇ ಯುದ್ಧದಲ್ಲಿ ವಿಜಯೇಚ್ಛೆಯಿಂದ ಬರುತ್ತಿದ್ದ ಪಾಂಡವರನ್ನು ನೋಡಿ ಇದಿರಿಸಿದ.
ಸಮಾಸಾದ್ಯ ತು ತೇ ಕರ್ಣಂ ವ್ಯಶೀರ್ಯಂತ ಮಹಾರಥಾಃ |
ಯಥಾಽಚಲಂ ಸಮಾಸಾದ್ಯ ವಾರ್ಯೋಘಾಃ
ಸರ್ವತೋದಿಶಮ್ ॥71॥
ಎಲ್ಲ ದಿಕ್ಕುಗಳಿಂದ ಬರುವ ನೀರಿನ ಪ್ರವಾಹಗಳು ಬೆಟ್ಟದ ಬುಡಕ್ಕೆ ಬಂದರೆ ವೇಗವನ್ನು ಕಳೆದುಕೊಳ್ಳುವಂತೆ, ಕರ್ಣನಿದಿರಿಗೆ ಬಂದ ಮಹಾರಥರು ಅಧೀರ ರಾದರು.
ತಯೋರಾಸೀನ್ ಮಹಾರಾಜ ಸಂಗ್ರಾಮೋ ಘೋರದರ್ಶನಃ |

ಪ್ರವೃದ್ಧಯೋರ್ಮಹಾರಂಗೇ ಬಲಿನೋರ್ವಿಜಿಗೀಷತೋಃ ॥72॥
ಮಹಾರಾಜ, ಕರ್ಣನಿಗೂ ಧೃಷ್ಟದ್ಯುಮ್ನನಿಗೂ ಘೋರ ದೃಶ್ಯವಾಗಿ ತೋರುವಂಥ ಯುದ್ಧ ನಡೆಯಿತು. ಇಬ್ಬರೂ ಮಹಾರಣರಂಗದಲ್ಲಿ ಬಲದಿಂದ ಕೊಬ್ಬಿದವರು, ಪರಸ್ಪರ ಜಯೇಚ್ಛುಗಳಾಗಿದ್ದರು.
ಧೃಷ್ಟದ್ಯುಮ್ನಸ್ತು ರಾಧೇಯಂ ಶರೇಣಾನತಪರ್ವಣಾ |
ಛಾದಯಾಮಾಸ ಸಂಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥73॥
ಧೃಷ್ಟದ್ಯುಮ್ನ ಕ್ರುದ್ಧನಾಗಿ ಡೊಂಕುಗಿಣ್ಣಿನ ಬಾಣಗಳನ್ನು ಕರ್ಣನಿಗೆ ಎಸೆದು `ನಿಲ್ಲು ನಿಲ್ಲು' ಎಂದ.
ವಿಜಯಂ ತು ಧನುಃ ಶ್ರೇಷ್ಠಂ ವಿಧೂನ್ವಾನೋ ಮಹಾರಥಃ |
ಪಾರ್ಷತಸ್ಯ ಧನುಶ್ಛಿತ್ತ್ವಾ ಶರಾಂಶ್ಚಾಶೀವಿಷೋಪಮಾನ್ ॥74॥
ವವರ್ಷ ಶರವರ್ಷಾಣಿ ತೋಯವರ್ಷಾನಿವಾಂಬುದಃ |
ಛಾದಯಾಮಾಸ ಸಂಕ್ರುದ್ಧಃ ಪಾರ್ಷತಂ ನವಭಿಃ ಶರೈಃ ॥75॥
ಮಹಾರಥನಾದ ಕರ್ಣ ಕುಪಿತನಾಗಿ ವಿಜಯ ಎಂಬ ಶ್ರೇಷ್ಠ ಧನುಸ್ಸನ್ನು ಹಿಡಿದು ತೂಗುತ್ತ, ಹಾವುಗಳಂಥ ಬಾಣಗಳನ್ನೆಸೆದು ಧೃಷ್ಟದ್ಯುಮ್ನನ ಬಿಲ್ಲನ್ನು ಕಡಿದು, ಮೋಡವು ನೀರಿನ ಮಳೆ ಸುರಿಸುವಂತೆ, ಬಾಣಗಳ ಮಳೆ ಸುರಿಸಿದ. ಧೃಷ್ಟದ್ಯುಮ್ನನನ್ನು ಬಾಣಗಳ ಮಳೆಯಿಂದ ಆಚ್ಛಾದಿಸಿದ. ಬೇರೆ ಒಂಬತ್ತು ಬಾಣಗಳಿಂದಲೂ ಹೊಡೆದ.
ತೇ ಹೇಮವಿಕೃತಂ ವರ್ಮ ಭಿತ್ತ್ವಾ ತಸ್ಯ ಮಹಾತ್ಮನಃ |
ಶೋಣಿತಾಕ್ತಾ ವ್ಯರಾಜಂತ ಶಕ್ರಗೋಪಾ ಇವಾನಘ ॥76॥
ಆ ಬಾಣಗಳು ಮಹಾತ್ಮ ಧೃಷ್ಟದ್ಯುಮ್ನನ ಬಂಗಾರದ ಕವಚವನ್ನು ಭೇದಿಸಿ ನೆತ್ತರಿಂದ ಒದ್ದೆಯಾಗಿ ಇಂದ್ರಗೋಪದ ಹುಳುವಿನಂತೆ ಹೊಳೆದುವು.
ತದಪಾಸ್ಯ ಧನುಶ್ಛಿನ್ನಂ ಧೃಷ್ಟದ್ಯುಮ್ನಃ ಪ್ರತಾಪವಾನ್ |
ತತೋಽನ್ಯದ್ ಧನುರಾದಾಯ ಸಾರವದ್ ಭಾರಸಾಧನಮ್ |
ಕರ್ಣಂ ವಿವ್ಯಾಧ ಸಪ್ತತ್ಯಾ ಶರೈಃ ಸನ್ನತಪರ್ವಭಿಃ ॥77॥
ಕಡಿದುಹೋದ ಧನುಸ್ಸನ್ನು ದೂರ ಎಸೆದು, ಗಟ್ಟಿಯಾದ, ಭಾರವನ್ನು ತಡೆದುಕೊಳ್ಳಬಲ್ಲ ಇನ್ನೊಂದು ಧನುಸ್ಸನ್ನು ಪ್ರತಾಪಶಾಲಿ ಧೃಷ್ಟದ್ಯುಮ್ನ ಹಿಡಿದು ಡೊಂಕುಗಿಣ್ಣಿನ ಎಪ್ಪತ್ತು ಬಾಣಗಳಿಂದ ಕರ್ಣನನ್ನು ಹೊಡೆದ.
ತಥೈವ ರಾಜನ್ ಕರ್ಣೋಽಪಿ ಪಾರ್ಷತಂ ಶತ್ರುತಾಪನಮ್ |
ದ್ರೋಣಶತ್ರುಂ ಮಹೇಷ್ವಾಸೋ ವಿವ್ಯಾಧ ನಿಶಿತೈಃ ಶರೈಃ ॥78॥
ರಾಜನೆ, ಮಹಾಬಿಲ್ಗಾರನಾದ ಕರ್ಣನೂ ಕೂಡ ಶತ್ರುತಾಪಕನಾದ ದ್ರೋಣಶತ್ರುವಾದ ಧೃಷ್ಟದ್ಯುಮ್ನನನ್ನು ಹರಿತವಾದ ಬಾಣಗಳಿಂದ ಹೊಡೆದ.
ಪುನರನ್ಯಂ ಮಹಾರಾಜ ಶರಂ ಕನಕಭೂಷಣಮ್ |
ಪ್ರೇಷಯಾಮಾಸ ಸಮರೇ ಮೃತ್ಯುದಂಡಮಿವಾಪರಮ್ ॥79॥
ಮಹಾರಾಜ, ಕರ್ಣನು ಯುದ್ಧದಲ್ಲಿ ಪುನಃ ಬಂಗಾರದಿಂದ ಅಲಂಕೃತವಾದ ಯಮದಂಡದಂಥ ಇನ್ನೊಂದು ಬಾಣವನ್ನು ಎಸೆದ.
ತಮಾಪತಂತಂ ಸಹಸಾ ಘೋರರೂಪಂ ವಿಶಾಂಪತೇ |
ಚಿಚ್ಛೇದ ಶತಧಾ ರಾಜನ್ ಪಾರ್ಷತಃ ಕೃತಹಸ್ತವತ್ ॥80॥
ರಾಜನೆ, ಘೋರರೂಪದ ಆ ಬಾಣವು ವೇಗದಿಂದ ತನ್ನ ಮೇಲೆ ಎರಗುತ್ತಿದ್ದಂತೆಯೆ ಧೃಷ್ಟದ್ಯುಮ್ನನು ಕೈಚಳಕದಿಂದ ಅದನ್ನು ನೂರಾಗಿ ಕತ್ತರಿಸಿದ.
ದೃಷ್ಟ್ವಾನ್ ಪತಿತಂ ಭೂಮೌ ಶರಂ ಕರ್ಣೋ ವಿಶಾಂಪತೇ ॥81॥
ರಾಜನೆ, ಕರ್ಣನು ಆ ಬಾಣ ನೆಲದಲ್ಲಿ ಬಿದ್ದುದನ್ನು ಕಂಡ.
ಪಾರ್ಷತಃ ಶರವರ್ಷೇಣ ಸಮಂತಾತ್ ಪರ್ಯವಾರಯತ್ |
ವಿವ್ಯಾಧ ಚೈನಂ ತ್ವರಿತೋ ನಾರಾಚೈಃ ಸಪ್ತಭಿಸ್ತದಾ ॥82॥
ಧೃಷ್ಟದ್ಯುಮ್ನ ಕರ್ಣನನ್ನು ಬಾಣಗಳ ಮಳೆಯಿಂದ ಸುತ್ತಲೂ ಆಚ್ಛಾದಿಸಿದ. ಮತ್ತು ತ್ವರೆಯಿಂದ ಏಳು ಬಾಣಗಳಿಂದಲೂ ಹೊಡೆದ.
ತಂ ಪ್ರತ್ಯವಿಧ್ಯದ್ ದಶಭಿಃ ಶರೈರ್ಹೇಮವಿಭೂಷಿತೈಃ |
ತಯೋರ್ಯುದ್ಧಂ ಸಮಭವದ್ ದೃಷ್ಟಿಶ್ರೋತ್ರಮನೋಹರಮ್ ॥83॥
ಆಸೀದ್ ಘೋರಂ ಚ ಚಿತ್ರಂ ಚ ಪ್ರೇಕ್ಷಣೀಯಂ ಚ ಸರ್ವಶಃ ॥84॥
ಅವನನ್ನು ಕರ್ಣನೂ ಬಂಗಾರದಿಂದ ಅಲಂಕೃತವಾದ ಹತ್ತು ಬಾಣಗಳಿಂದ ಹೊಡೆದ. ಅವರ ಯುದ್ಧ ಕಣ್ಣು ಕಿವಿಗಳಿಗೆ ಆಕರ್ಷಕವಾಗಿತ್ತು. ಎಲ್ಲ ರೀತಿಯಿಂದಲೂ ಅದು ಘೋರ ವಿಚಿತ್ರ ಪ್ರೇಕ್ಷಣೀಯವಾಗಿತ್ತು.
ಸರ್ವೇಷಾಂ ತತ್ರ ಭೂತಾನಾಂ ರೋಮಹರ್ಷೋ ವ್ಯಜಾಯತ |
ದೃಷ್ಟ್ವಾ ತತ್ಸಮರೇ ಕರ್ಮ ಕರ್ಣಪಾರ್ಷತಯೋರ್ನೃಪ ॥85॥
ರಾಜನೆ, ಕರ್ಣ ಧೃಷ್ಟದ್ಯುಮ್ನರ ಆ ಯುದ್ಧಕೌಶಲವನ್ನು ಕಂಡು ಎಲ್ಲ ಜನರಿಗೂ ರೋಮಾಂಚವಾಯಿತು.
ಏತಸ್ಮಿನ್ನಂತರೇ ದ್ರೌಣಿರಭ್ಯಯಾತ್ ತಂ ಮಹಾರಥಮ್ |
ಪಾರ್ಷತಂ ಶತ್ರುದಮನಂ ಶತ್ರುವೀರ್ಯಾಸುನಾಶನಮ್ ॥86॥
ಈ ನಡುವೆ ಶತ್ರುಗಳ ಬಲ, ಪ್ರಾಣಾಪಹಾರಕನಾದ ಶತ್ರುದಮನಕಾರಿಯಾದ ಮಹಾರಥನಾದ ಧೃಷ್ಟದ್ಯುಮ್ನನನ್ನು ಅಶ್ವತ್ಥಾಮ ಇದಿರಿಸಿ ನಿಂತ.

ಸ ದೃಷ್ಟ್ವಾ ಸಮರೇ ಯಾಂತಮಭೀತಂ ಚ ಮಹಾರಥಮ್ |
ಅಭ್ಯಭಾಷತ ಸಂಕ್ರುದ್ಧಃ ಪಾರ್ಷತಂ ಶತ್ರುತಾಪನಮ್ ||87||
ಮಹಾರಥನಾದ ಶತ್ರುತಾಪಕನಾದ ಧೃಷ್ಟದ್ಯುಮ್ನ ರಣರಂಗದಲ್ಲಿ ನಿರ್ಭೀತನಾಗಿ ಸಂಚರಿಸುತ್ತಿದ್ದುದನ್ನು ಕಂಡು ಕುಪಿತನಾದ ಅಶ್ವತ್ಥಾಮ ಆಕ್ಷೇಪಿಸಿ ನುಡಿದ.
ರಥಂ ರಥೇನ ಸಂಪೀಡ್ಯ ಪಾರ್ಷತಸ್ಯ ತು ಬ್ರಾಹ್ಮಣಃ ||88||
ತಿಷ್ಠ ತಿಷ್ಠೇತಿ ಬ್ರಹ್ಮಘ್ನ ನ ಮೇ ಜೀವನ್ ವಿಮೋಕ್ಷ್ಯಸೇ |
ಇತ್ಯುಕತ್ವ ಸುಭೃಶಂ ವೀರಃ ಶೀಘ್ರಕೃನ್ನಿಶಿತೈಃ ಶರೈಃ |
ಛಾದಯಾಮಾಸ ಸಮರೇ ಯತಮಾನೋ ಮಹಾರಥಃ ||89||
ಧೃಷ್ಟದ್ಯುಮ್ನನ ರಥವನ್ನು ತನ್ನ ರಥದಿಂದ ಹೊಡೆದು ಅಶ್ವತ್ಥಾಮ `ನಿಲ್ಲು ನಿಲ್ಲೆಂ'ದು, `ಬ್ರಹ್ಮಹತ್ಯೆ ಮಾಡುವವನೆ, ನನ್ನಿಂದ ನೀನು ಬದುಕಿ ಉಳಿಯಲಾರೆ' ಎಂದು ಹೇಳಿ ಶೀಘ್ರಕಾರಿಯಾದ ಮಹಾರಥನಾದ, ಯತ್ನಶೀಲನಾದ ಆತ ಹರಿತವಾದ ಬಾಣಗಳಿಂದ ಅವನನ್ನು ಆಚ್ಛಾದಿಸಿದ.
ಯತ್ನತಃ ಪರಯಾ ಶಕ್ತ್ಯಾ ಧೃಷ್ಟದ್ಯುಮ್ನಂ ಮಹಾರಥಮ್ |
ಯೋಧಯಾಮಾಸ ಸಮರೇ ಕ್ರುದ್ಧರೂಪೋ ವಿಶಾಂಪತೇ ||90||
ತಯೋಸ್ತು ಸನ್ನಿಪಾತೋ ಹಿ ಘೋರರೂಪೋ ವಿಶಾಂಪತೇ ||91||
ಕ್ರುದ್ಧರೂಪನಾದ ಅಶ್ವತ್ಥಾಮನು ಮಹಾರಥನಾದ ಧೃಷ್ಟದ್ಯುಮ್ನನನ್ನು ಮಹಾಶಕ್ತಿಯಿಂದ ಯತ್ನಪಟ್ಟು ಆಯುಧಗಳಿಂದ ಪ್ರಹರಿಸಿದ. ರಾಜನೆ, ಅವರ ಹೋರಾಟ ಭಯಂಕರಾಕಾರದ್ದಾಗಿತ್ತು.
ಯಥಾ ಹಿ ಸಮರೇ ದ್ರೋಣಃ ಪಾರ್ಷತಂ ದೃಶ್ಯ ಮಾರಿಷ |
ತಥಾ ದ್ರೌಣಿಂ ರಣೇ ದೃಷ್ಟ್ವಾ ಪಾರ್ಷತಃ ಪರವೀರಹಾ |
ನಾತಿಹೃಷ್ಟಮನಾ ಹ್ಯಾಸೀನ್ಮನ್ಯಾನೋ ಮೃತ್ಯುಮಾತ್ಮನಃ ||92||
ರಾಜನೆ, ರಣರಂಗದಲ್ಲಿ ದ್ರೋಣನು ಧೃಷ್ಟದ್ಯುಮ್ನನನ್ನು ಕಂಡಾಗ ಮನಸಿನ ಮಹೋತ್ಸಾಹವನ್ನು ಕಳೆದುಕೊಂಡ. ಹಾಗೇ ಪರವೀರನಾಶಕನಾದ ಧೃಷ್ಟದ್ಯುಮ್ನನೂ ಅಶ್ವತ್ಥಾಮನನ್ನು ಕಂಡಾಗ ಮನದ ಉತ್ಸಾಹವನ್ನು ಕಳೆದುಕೊಂಡ. ತನಗೆ ಅವನೇ ಮೃತ್ಯು ಎಂದು ಭಾವಿಸಿದ.
ಆತ್ಮಾನಂ ಸಮರೇ ಜ್ಞಾತ್ವಾಽಶಸ್ತ್ರವಧ್ಯಂ ಮಹಾಬಲಃ |
ಜವೇನಾಭಿಯಯೌ ದ್ರೌಣಿಂ ಕಾಲಃ ಕಾಲಕ್ಷಯೇ ಯಥಾ ||93||
ಹಾಗಿದ್ದರೂ ಯುದ್ಧದಲ್ಲಿ ಮಹಾಬಲನಾದ ತಾನು ಅಶ್ವತ್ಥಾಮನಿಗೆ ಶಸ್ತ್ರವಧಾರ್ಹನಲ್ಲವೆಂದು ವಿಶ್ವಾಸವಿದ್ದುದರಿಂದ ವೇಗದಿಂದ, ಕಾಲಪ್ರಳಯ ಕಾಲದಲ್ಲಿ ಕಾಲ ಆಕ್ರಮಣ ಮಾಡುವಂತೆ, ಅಶ್ವತ್ಥಾಮನ ಕಡೆಗೆ ಮುನ್ನುಗ್ಗಿದ.
ಧೃಷ್ಟದ್ಯುಮ್ನ ಗೈದ ದ್ರೋಣವಧೆ ಶತ್ರುವಧರೂಪವಾದ್ದರಿಂದ ಅದು ಅವನಿಗೆ ಪುಣ್ಯಕರವಾಗಬೇಕಿತ್ತು. ಆದರೆ ಗುರುಹತ್ಯಾರೂಪವಾದ್ದರಿಂದ ಪುಣ್ಯಕರವಾಗಲಿಲ್ಲ. ಅವನು ದ್ರೋಣವಧೆಗೇ ಜನಿಸಿದವನಾದ್ದರಿಂದ ಪಾಪವೂ ಬರಲಿಲ್ಲ. ಹೀಗಾಗಿ ಅವನಿಗೆ ಅಶ್ವತ್ಥಾಮನಿಂದ ಪುಣ್ಯಕರವಾದ ಶಸ್ತ್ರವಧೆಯನ್ನು ಹೊಂದಲು ಯೋಗ್ಯತೆ ಬರಲಿಲ್ಲ. ತಾನು ಅಶಸ್ತ್ರ ವಧ್ಯನೆಂದು ಅವನಿಗೆ ತಿಳಿದಿತ್ತು.
ದ್ರೌಣಿಸ್ತು ದೃಷ್ಟ್ವಾ ರಾಜೇಂದ್ರ ಧೃಷ್ಟದ್ಯುಮ್ನಮವಸ್ಥಿತಮ್ |
ಕ್ರೋಧೇನ ನಿಃಶ್ವಸನ್ ವೀರಃ ಪಾರ್ಷದಂ ಸಮಭಿದ್ರವತ್ ||94||
ಅಶ್ವತ್ಥಾಮನು ಧೃಷ್ಟದ್ಯುಮ್ನ ತನ್ನನ್ನು ಇದಿರಿಸುತ್ತಿದ್ದುದನ್ನು ಕಂಡು ಕ್ರೋಧ ದಿಂದ ಉಸಿರುಬಿಡುತ್ತ ಅವನನ್ನು ಆಕ್ರಮಿಸಿದ.
ತಾವನ್ಯೋನ್ಯಂ ತು ದೃಷ್ಟ್ವೈವ ಸಂರಂಭಂ ಜಗ್ಮತುಃ ಪರಮ್ |
ಪ್ರಗೃಹ್ಯ ಮಹತೀ ಚಾಪೇ ಶರಾಸನಸಮನ್ವಿತೇ ||95|
ಅವರಿಬ್ಬರೂ ದೊಡ್ಡ ಬಿಲ್ಲು ಬತ್ತಳಿಕೆಗಳನ್ನು ಧರಿಸಿ ಪರಸ್ಪರ ದಿಟ್ಟಿಸುತ್ತ ಬಲು ಕ್ರೋಧವಶರಾದರು.
ಅಥಾಬ್ರವೀನ್ಮಹಾರಾಜ ದ್ರೋಣಪುತ್ರಃ ಪ್ರತಾಪವಾನ್ |
ಧೃಷ್ಟದ್ಯುಮ್ನಂ ಸಮೀಪಸ್ಥಂ ತ್ವರಮಾಣೋ ವಿಶಾಂಪತೇ ||96||
ಮಹಾರಾಜ, ಅಶ್ವತ್ಥಾಮನು ತನ್ನ ಸಮೀಪಕ್ಕೆ ಬಂದು ನಿಂತ ಧೃಷ್ಟದ್ಯುಮ್ನನಿಗೆ ತ್ವರೆಯಿಂದ ಹೀಗೆ ನುಡಿದ–
ಪಾಂಚಾಲಾಪಶದಾದ್ಯ ತ್ವಾಂ ಪ್ರೇಷಯಾಮಿ ಯಮಕ್ಷಯಮ್ |
ಪಾಪಂ ಹಿ ಯತ್ ತ್ವಯಾ ಕರ್ಮ ಕೃತಂ ತಾತಂ ಘ್ನತಾ ರಣೇ ||97||
ಅದ್ಯ ತ್ವಂ ಪ್ರಾಪ್ಸ್ಯಸೇ ತದ್ವೈ ಯಥಾ ಹ್ಯಕುಶಲಸ್ತಥಾ |
ಅರಕ್ಷ್ಯಮಾಣಃ ಪಾರ್ಥೇನ ಯದಿ ತಿಷ್ಠಸಿ ಸಂಯುಗೇ |
ನಾಪಕ್ರಾಮಸಿ ವಾ ಮೋಹಾತ್ ಸತ್ಯಮೇತದ್ ಬ್ರವೀಮಿ ತೇ ||98||
`ನೀಚನಾದ ಪಾಂಚಾಲನೆ, ನಾನೀಗಲೆ ನಿನ್ನನ್ನು ಯಮಸದನಕ್ಕೆ ಅಟ್ಟುವೆ, ರಣರಂಗದಲ್ಲಿ ತಾತ ದ್ರೋಣರನ್ನು ಕೊಂದು ನೀನು ಏನು ಪಾಪಕರ್ಮ ಮಾಡಿರುವೆಯೊ ಅದನ್ನೇ ನೀನೀಗ ನನ್ನ ಕೈಯಿಂದ ಹೊಂದಲಿರುವೆ. ಮೂರ್ಖನು ಪರರಿಗೆ ಮಾಡುವ ಪಾಪಕರ್ಮಕ್ಕೆ ತಾನೂ ಭಾಗಿಯಾಗುತ್ತಾನೆ. ಯುದ್ಧದ ಮೇಲಿನ ಮೋಹದಿಂದ ನೀನು ಪಲಾಯನ ಮಾಡದೆ ಅರ್ಜುನನ ರಕ್ಷಣೆ ಇಲ್ಲದಿದ್ದರೂ ನನ್ನಿದಿರಲ್ಲಿ ಯುದ್ಧಕ್ಕೆ ನಿಂತರೆ, ಇದು ಸತ್ಯವೇ ಆಗುವುದು, ನಾನು ಹೇಳುತ್ತೇನೆ, ಕೇಳು.'
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ವಿಂಶೋಽಧ್ಯಾಯಃ ||20||

ಇಪ್ಪತ್ತೊಂದನೆಯ ಅಧ್ಯಾಯ
ಧೃಷ್ಟದ್ಯುಮ್ನ ಅಶ್ವತ್ಥಾಮರ ಯುದ್ಧ, ಅರ್ಜುನನಿಂದ ಧೃಷ್ಟದ್ಯುಮ್ನನ ರಕ್ಷಣೆ
ಸಂಜಯಃ
ಏವಮುಕ್ತಃ ಪ್ರತ್ಯುವಾಚ ಧೃಷ್ಟದ್ಯುಮ್ನಃ ಪ್ರತಾಪವಾನ್ |
ಪ್ರತಿವಾಕ್ಯಂ ಸ ಏವಾಸಿರ್ಮಾಮಕೋ ದಾಸ್ಯತೇ ತವ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಅಶ್ವತ್ಥಾಮನ ಈ ಮಾತಿಗೆ ಪ್ರತಾಪಶಾಲಿಯಾದ ಧೃಷ್ಟದ್ಯುಮ್ನ ಪ್ರತ್ಯುತ್ತರ ನುಡಿದ `ನಿನಗೆ ನನ್ನ ಕತ್ತಿಯೇ ಉತ್ತರ ನೀಡುತ್ತದೆ'
ಯೇನೈವ ತೇ ಪಿತುರ್ದತ್ತಂ ಯತಮಾನಸ್ಯ ಸಂಯುಗೇ ॥2॥
`ಯುದ್ಧದಲ್ಲಿ ನನ್ನನ್ನು ಕೊಲ್ಲಲು ಯತ್ನಿಸಿದ ನಿನ್ನ ತಂದೆಗೆ ನನ್ನ ಕತ್ತಿಯೇ ಉತ್ತರ ನೀಡಿದೆ.'
ಯದಿ ತಾವನ್ಮಯಾ ದ್ರೋಣೋ ನಿಹತೋ ಬ್ರಾಹ್ಮಣಬ್ರುವಃ |
ತ್ವಾಮಿದಾನೀಂ ಕಥಂ ಯುದ್ಧೇ ನ ಹನಿಷ್ಯಾಮಿ ಕಿಲ್ಬಿಷಮ್ ॥3॥
`ದುರ್ಬ್ರಾಹ್ಮಣನಾದ ದ್ರೋಣನನ್ನು ನಾನು ಕೊಂದಿರುವುದು ನಿಜವಾದರೆ ಪಾಪಿಯಾದ ನಿನ್ನನ್ನು ನಾನು ಈಗ ಹೇಗೆ ಕೊಲ್ಲದೆ ಬಿಟ್ಟೇನು?'
ಏವಮುಕತ್ವ ಮಹಾತೇಜಾಃ ಸೇನಾಪತಿರರಿಂದಮಃ |
ಸುತೀಕ್ಷ್ಣೇನಾಥ ಭಲ್ಲೇನ ದ್ರೌಣಿಂ ವಿವ್ಯಾಧ ಪಾರ್ಷತಃ ॥4॥
ಮಹಾಪರಾಕ್ರಮಿ ಸೇನಾಪತಿ ಶತ್ರುನಾಶಕನಾದ ಧೃಷ್ಟದ್ಯುಮ್ನ ಹೀಗೆ ಹೇಳಿ ಬಲುತೀಕ್ಷ್ಣವಾದ ಭಲ್ಲೆಯಿಂದ ಅಶ್ವತ್ಥಾಮನಿಗೆ ಹೊಡೆದ.
ತತೋ ದ್ರೌಣಿಃ ಸುಸಂಕ್ರುದ್ಧಃ ಶರೈಃ ಸನ್ನತಪರ್ವಭಿಃ |
ಆಚ್ಛಾದಯದ್ ದಿಶೋ ರಾಜನ್ ಧೃಷ್ಟದ್ಯುಮ್ನಸ್ಯ ಸಂಯುಗೇ ॥5॥
ಆಗ ಅಶ್ವತ್ಥಾಮ ಬಹಳ ಕುಪಿತನಾಗಿ ಡೊಂಕುಗಿಣ್ಣಿನ ಬಾಣಗಳಿಂದ ಧೃಷ್ಟದ್ಯುಮ್ನನ ಎಲ್ಲದಿಕ್ಕುಗಳನ್ನೂ ರಣರಂಗದಲ್ಲಿ ಆಚ್ಛಾದಿಸಿದ.
ನೈವಾಂತರಿಕ್ಷಂ ನ ದಿಶೋ ನಾಪಿ ಯೋಧಾಃ ಸಹಸ್ರಶಃ |
ದೃಶ್ಯಂತೇ ವೈ ಮಹಾರಾಜ ಶರೈಶ್ಛನ್ನಾಃ ಸಮಂತತಃ |
ಏಕಃ ಸನ್ ವಾರಯಾಮಾಸ ಪ್ರೇಕ್ಷಣೀಯಃ ಸಮಂತತಃ ॥6॥
ಮಹಾರಾಜ, ಅಂತರಿಕ್ಷ ಕಾಣುವುದಿಲ್ಲ, ದಿಕ್ಕುಗಳು ಕಾಣುವುದಿಲ್ಲ. ಸಾವಿರಾರು ಸಂಖ್ಯೆಯಲ್ಲಿರುವ ಯೋಧರೂ ಯಾರೂ ಕಾಣುವುದಿಲ್ಲ. ಎಲ್ಲ ಕಡೆ ಬಾಣಗಳೇ ಆವರಿಸಿವೆ.
ತಥೈವ ಪಾರ್ಷತೋ ರಾಜನ್ ದ್ರೌಣಿಮಾಹವಶೋಭಿನಮ್ |
ಶರೈಃ ಸಂಛಾದಯಾಮಾಸ ಸೂತಪುತ್ರಸ್ಯ ಪಶ್ಯತಃ ॥7॥
ರಾಜನೇ, ಅದೇರೀತಿ ಧೃಷ್ಟದ್ಯುಮ್ನನೂ ಯುದ್ಧದಲ್ಲಿ ಶೋಭಿಸುವ ಅಶ್ವತ್ಥಾಮ ನನ್ನು ಕರ್ಣ ನೋಡುತ್ತಿದ್ದಂತೆಯೆ ಬಾಣಗಳಿಂದ ಆವರಿಸಿದ.
ರಾಧೇಯೋಽಪಿ ಮಹಾರಾಜ ಪಾಂಚಾಲಾನ್ ಸಹ ಪಾಂಡವೈಃ |
ದ್ರೌಪದೇಯಾನ್ ಯುಧಾಮನ್ಯುಮುತ್ತಮೌಜಸಮೇವ ಚ ॥8॥
ಸಾತ್ಯಕಿಶ್ಚ ಮಹಾರಾಜ ಯೋಧಾಂಶ್ಚಾನ್ಯಾನ್ ಸಹಸ್ರಶಃ |
ಏಕಸ್ತಾನ್ ವಾರಯಾಮಾಸ ಪ್ರೇಕ್ಷಣೀಯಃ ಸಮಂತತಃ ॥9॥
ಕರ್ಣನೂ ಕೂಡ, ಮಹಾರಾಜ, ಪಾಂಚಾಲರನ್ನು ಪಾಂಡವರನ್ನು ದ್ರೌಪದೀ ಪುತ್ರರನ್ನು ಯುಧಾಮನ್ಯುವನ್ನು ಉತ್ತಮೋಜನನ್ನು ಸಾತ್ಯಕಿಯನ್ನು ಬೇರೆ ಸಹಸ್ರಾರು ಯೋಧರನ್ನೂ ಒಬ್ಬನೆ ಪ್ರೇಕ್ಷಣೀಯನಾಗಿ ಬಾಣಗಳಿಂದ ಆವರಿಸಿದ.
ಧೃಷ್ಟದ್ಯುಮ್ನಸ್ತು ಸಮರೇ ದ್ರೌಣೇಶ್ಚಿಚ್ಛೇದ ಕಾರ್ಮುಕಮ್ |
ಕ್ಷುರಪ್ರೇಣ ಸುತೀಕ್ಷ್ಣೇನ ಪಶ್ಯತಾಂ ಸರ್ವಯೋಧಿನಾಮ್ ॥10॥
ಧೃಷ್ಟದ್ಯುಮ್ನನು ರಣರಂಗದಲ್ಲಿ ಎಲ್ಲ ಯೋಧರೂ ನೋಡುತ್ತಿದ್ದಂತೆಯೆ ಬಲು ತೀಕ್ಷ್ಣವಾದ ಬಾಣದಿಂದ ಅಶ್ವತ್ಥಾಮನ ಬಿಲ್ಲನ್ನು ಕಡಿದ.
ತದಪಾಸ್ಯ ಧನುಶ್ಛಿನ್ನಮನ್ಯದಾದತ್ತ ಕಾರ್ಮುಕಮ್ |
ವೇಗವಾನ್ ಸಮರೇ ಘೋರೇ ಶರಾಂಶ್ಚಾಶೀವಿಷೋಪಮಾನ್ ॥11॥
ಅಶ್ವತ್ಥಾಮನು ಕಡಿದುಹೋದ ಬಿಲ್ಲನ್ನು ದೂರಎಸೆದು ಇನ್ನೊಂದು ಬಿಲ್ಲನ್ನೆತ್ತಿ ಕೊಂಡ. ಘೋರವಾದ ರಣರಂಗದಲ್ಲಿ ಸರ್ಪಗಳಂಥ ಬಾಣಗಳನ್ನು ವೇಗದಿಂದ ಎತ್ತಿಕೊಂಡ.
ಸ ಪಾರ್ಷತಸ್ಯ ರಾಜೇಂದ್ರ ಧನುಃ ಶಕ್ತಿಂ ಗದಾಂ ಧ್ವಜಮ್ |
ಹಯಾನ್ ಸೂತಂ ರಥಂ ಚೈವ ನಿಮೇಷಾದ್ ವ್ಯಧಮಚ್ಛರೈಃ ॥12॥
ರಾಜೇಂದ್ರ, ಅವನು ಧೃಷ್ಟದ್ಯುಮ್ನನ ಧನುಸ್ಸು ಶಕ್ತಿ ಗದೆ ಧ್ವಜ ಕುದುರೆಗಳು ಸಾರಥಿ ರಥ ಇವೆಲ್ಲವನ್ನೂ ನಿಮಿಷದಲ್ಲಿ ಬಾಣಗಳಿಂದ ಪುಡಿಮಾಡಿದ.
ಸ ಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಖಡ್ಗಮಾದತ್ತ ವಿಪುಲಂ ಶತಚಂದ್ರಂ ಚ ಭಾನುಮತ್ ॥13॥

ಧೃಷ್ಟದ್ಯುಮ್ನನಿಗೆ ಬಿಲ್ಲು ಕಡಿದುಹೋಗಿದೆ, ರಥ ಇಲ್ಲ. ಕುದುರೆಗಳೂ ಸಾರಥಿ ಹತರಾಗಿದ್ದಾರೆ. ಅದರಿಂದ ಹೊಳೆಯುವ ದೊಡ್ಡ ಖಡ್ಗವನ್ನೂ ಶತಚಂದ್ರ ಗುರಾಣಿಯನ್ನೂ ಎತ್ತಿಕೊಂಡ.
ದ್ರೌಣಿಸ್ತದಪಿ ರಾಜೇಂದ್ರ ಭಲ್ಲೈಃ ಕ್ಷಿಪ್ರಂ ಮಹಾರಥಃ |
ಚಿಚ್ಛೇದ ಸಮರೇ ವೀರಃ ಕ್ಷಿಪ್ರಹಸ್ತೋ ದೃಢಾಯುಧಃ ||14||
ರಾಜೇಂದ್ರ, ಮಹಾರಥ, ವೀರ, ವೇಗದ ಹಸ್ತ ಮತ್ತು ದೃಢವಾದ ಆಯುಧ ಗಳುಳ್ಳವನಾದ ಅಶ್ವತ್ಥಾಮ ಬೇಗನೆ, ರಣರಂಗದಲ್ಲಿ ಭಲ್ಲೆಗಳಿಂದ ಧೃಷ್ಟದ್ಯುಮ್ನನ ಖಡ್ಗವನ್ನೂ ತುಂಡರಿಸಿದ.
ರಥಾದನವರೂಢಸ್ಯ ಧನ್ವಿನೋ ಬಾಹುಶಾಲಿನಃ |
ಪಶ್ಯತಾಂ ಸರ್ವಸೈನ್ಯಾನಾಂ ತದದ್ಭುತಮಿವಾಭವತ್ ||15||
ಧನುರ್ಧಾರಿ ಬಾಹುಶಾಲಿ ಅಶ್ವತ್ಥಾಮ ರಥದಿಂದ ಕೆಳಗೆ ಇಳಿಯದೆಯೆ, ಎಲ್ಲ ಸೈನ್ಯಗಳು ನೋಡುತ್ತಿದ್ದಂತೆಯೆ ಹೀಗೆ ಮಾಡಿದ್ದು ಅದ್ಭುತವಾಗಿತ್ತು.
ಧೃಷ್ಟದ್ಯುಮ್ನಂ ತು ವಿರಥಂ ಹತಾಶ್ವರಥಸಾರಥಿಮ್ |
ಶಸ್ತ್ರೈಶ್ಚ ಬಹುಧಾ ವಿದ್ಧಮಸ್ತ್ರೈಶ್ಚ ಶಕಲೀಕೃತಮ್
ನಾತರದ್ ಭರತಶ್ರೇಷ್ಠ ಯತಮಾನೋ ಮಹಾರಥಃ ||16||
ಧೃಷ್ಟದ್ಯುಮ್ನ ರಥವಿಲ್ಲದವನಾಗಿದ್ದಾನೆ. ಅಶ್ವ ರಥ ಸಾರಥಿಗಳು ನಾಶ ವಾಗಿದ್ದಾರೆ. ಶಸ್ತ್ರಗಳಿಂದ ಬಹಳ ಗಾಯಗೊಂಡಿದ್ದಾನೆ. ಅಸ್ತ್ರಗಳಿಂದ ಕ್ಷತವಿಕ್ಷತ ನಾಗಿದ್ದಾನೆ. ಆದರೂ ಅವನನ್ನು ಕೊಲ್ಲಲು ಮಹಾರಥನಾದ ಅಶ್ವತ್ಥಾಮ ಯತ್ನಿಸಿದರೂ ಶಕ್ತನಾಗಲಿಲ್ಲ.
ತಸ್ಯಾಂತಮಿಷುಭೀ ರಾಜನ್ ಯದಾ ದ್ರೌಣಿರ್ನ ಗಚ್ಛತಿ |
ಅಥ ತ್ಯಕ್ತ್ವಾ ರಥಂ ವೀರಃ ಪಾರ್ಷತಂ ತ್ವರಿತೋಽನ್ವಗಾತ್ |
ಪ್ರಗೃಹ್ಯ ವಿಪುಲಂ ಖಡ್ಗಂ ಜಾತರೂಪಪರಿಷ್ಕೃತಮ್ ||17||
ಅವನ ನಾಶವನ್ನು ಬಾಣಗಳಿಂದ ಮಾಡಲು ವೀರ ಅಶ್ವತ್ಥಾಮ ಶಕ್ತನಾಗ ದಿದ್ದಾಗ, ಬೇಗನೆ ರಥವನ್ನು ಬಿಟ್ಟು ಚಿನ್ನದಿಂದ ಅಲಂಕೃತವಾದ ದೊಡ್ಡ ಖಡ್ಗವನ್ನು ಹಿಡಿದು ಧೃಷ್ಟದ್ಯುಮ್ನನನ್ನು ಬೆನ್ನಟ್ಟಿದ.
ತಸ್ಯ ಸಂಪತತೋ ರಾಜನ್ ವಪುರಾಸೀನ್ ಮಹಾತ್ಮನಃ |
ಗರುಡಸ್ಯೇವ ಪತತೋ ಜಿಘೃಕ್ಷೋಃ ಪನ್ನಗೋತ್ತಮಮ್ ||18||
ರಾಜನೆ, ಧೃಷ್ಟದ್ಯುಮ್ನನನ್ನು ಬೆನ್ನಟ್ಟುತ್ತಿದ್ದಾಗ ಮಹಾತ್ಮ ಅಶ್ವತ್ಥಾಮನ ಶರೀರ ದೊಡ್ಡ ಹಾವನ್ನು ಹಿಡಿಯಲು ಹಾರುವ ಗಿಡುಗನ ಶರೀರದಂತೆ ವೇಗಯುಕ್ತ ವಾಗಿತ್ತು.
ಏತಸ್ಮಿನ್ನೇವ ಕಾಲೇ ತು ಕೇಶವಃ ಪರವೀರಹಾ |
ಅಬ್ರವೀದ್ ಭರತಶ್ರೇಷ್ಠಮರ್ಜುನಂ ಜಯತಾಂ ವರಮ್ ||19||
ಇದೇ ಸಮಯದಲ್ಲಿ ಶತ್ರುವೀರನಾಶಕನಾದ ಶ್ರೀಕೃಷ್ಣ, ಜಯಶಾಲಿಗಳಲ್ಲಿ ಶ್ರೇಷ್ಠನಾದ ಮತ್ತು ಕುರುಕುಲಶ್ರೇಷ್ಠನಾದ ಅರ್ಜುನನಿಗೆ ಹೀಗೆ ಹೇಳಿದ.
ಪಶ್ಯ ದ್ರೌಣಿಂ ಪಾರ್ಷತಸ್ಯ ಯತಮಾನಂ ವಧಂ ಪ್ರತಿ |
ಯತ್ನಂ ಕರೋತಿ ವಿಪುಲಂ ಹನ್ಯಾಚ್ಚೈನಂ ನ ಸಂಶಯಃ ||20||
ನೋಡು, ಅಶ್ವತ್ಥಾಮನು ಧೃಷ್ಟದ್ಯುಮ್ನನ ವಧೆಗೆ ಯತ್ನ ಮಾಡುತ್ತಿದ್ದಾನೆ. ಬಹಳ ಯತ್ನ ಮಾಡಿದರೆ ಅವನನ್ನು ಆತ ಕೊಲ್ಲುತ್ತಾನೆ, ಸಂಶಯವಿಲ್ಲ
ತ್ರಾಯಸ್ವೈನಂ ಮಹಾಬಾಹೋ ಪಾರ್ಷತಂ ಯುದ್ಧದುರ್ಮದಮ್ |
ದ್ರೌಣೇರಾಸ್ಯಗತಂ ವೀರ ಮೃತ್ಯೋರಾಸ್ಯಗತಂ ಯಥಾ ||21||
ವೀರನೆ, ಮಹಾಬಾಹುವೆ, ಯುದ್ಧದಲ್ಲಿ ಸುಖಕಾಣುವ ಈ ಧೃಷ್ಟದ್ಯುಮ್ನನನ್ನು ಕಾಪಾಡು. ಅವನು ಅಶ್ವತ್ಥಾಮನ ಕೈಯಲ್ಲಿ ಸಿಕ್ಕಿಹಾಕಿಕೊಂಡನೆಂದರೆ ಮೃತ್ಯುವಿನ ದವಡೆಯಲ್ಲಿ ಸಿಕ್ಕಿಕೊಂಡಂತೆಯೆ.
ಏವಮುಕ್ತ್ವಾ ಮಹಾರಾಜ ವಾಸುದೇವಃ ಪ್ರತಾಪವಾನ್ |
ಪ್ರೈಷಯತ್ ತುರಗಾನ್ ಯತ್ರ ದ್ರೌಣಿರ್ವೀರೋ ವ್ಯವಸ್ಥಿತಃ ||22||
ಹೀಗೆ ಹೇಳಿ ಪ್ರತಾಪಶಾಲಿಯಾದ ಶ್ರೀಕೃಷ್ಣ, ವೀರ ಅಶ್ವತ್ಥಾಮನಿದ್ದೆಡೆಗೆ ಕುದುರೆಗಳನ್ನು ನಡೆಸಿದ.
ತೇ ಹಯಾಶ್ಚಂದ್ರಸಂಕಾಶಾಃ ಕೇಶವೇನ ಪ್ರಚೋದಿತಾಃ |
ಪಿಬಂತ ಇವ ಚಾಕಾಶಂ ಜಗ್ಮುರ್ದ್ರೌಣೇರ್ಮಹಾರಥಮ್ ||23||
ಆ ಕುದುರೆಗಳು ಚಂದ್ರನಂತೆ ಬೆಳ್ಳಗೆ ಹೊಳೆಯುವವು, ಆಕಾಶವನ್ನು ನುಂಗಿ ಬಿಡುವಂತೆ ಮುಖವನ್ನು ಮೇಲೆತ್ತಿಕೊಂಡು ಅಶ್ವತ್ಥಾಮನ ರಥದ ಮುಂದೆ ಬಂದುವು.
ದೃಷ್ಟ್ವಾ ದ್ರೌಣಿರ್ಮಹಾರಾಜ ವಾಸುದೇವಧನಂಜಯೌ |
ಧೃಷ್ಟದ್ಯುಮ್ನವಧೇ ರಾಜಂಶ್ಚಕ್ರೇ ಯತ್ನಂ ಮಹಾಬಲಃ ||24||
ಮಹಾರಾಜ, ಮಹಾಬಲಿ ಅಶ್ವತ್ಥಾಮ ಕೃಷ್ಣಾರ್ಜುನರನ್ನು ನೋಡುತ್ತಲೇ ಧೃಷ್ಟದ್ಯುಮ್ನನ ವಧೆಗೆ ಯತ್ನಿಸಿದ.
ವಿಕೃಷ್ಯಮಾಣಂ ದೃಷ್ಟ್ವೈವ ಧೃಷ್ಟದ್ಯುಮ್ನಂ ಜನೇಶ್ವರ |
ಶರಾಂಶ್ಚಿಕ್ಷೇಪ ವೈ ಪಾರ್ಥೋ ದ್ರೌಣಿಂ ಪ್ರತಿ ಮಹಾರಥಃ ||25||
ರಾಜನೆ, ಅಶ್ವತ್ಥಾಮ ಧೃಷ್ಟದ್ಯುಮ್ನನನ್ನು ಸೆಳೆಯುತ್ತಿದ್ದುದನ್ನು ಕಂಡು ಮಹಾರಥನಾದ ಅರ್ಜುನ ಅಶ್ವತ್ಥಾಮನ ಮೇಲೆ ಬಾಣಗಳನ್ನು ಎಸೆದ.

ತೇ ಶರಾ ಹೇಮವಿಕೃತಾ ಗಾಂಡೀವಪ್ರೇಷಿತಾ ಭೃಶಮ್ |
ದ್ರೌಣಿಮಾಸಾದ್ಯ ವಿವಿಶುರ್ವಲ್ಮೀಕಮಿವ ಪನ್ನಗಾಃ ॥26॥
ಗಾಂಡೀವದಿಂದ ವೇಗವಾಗಿ ಹೊರಟ ಆ ಚಿನ್ನದ ಬಾಣಗಳು ಹಾವು ಹುತ್ತದಲ್ಲಿ ಹೋಗುವಂತೆ ಅಶ್ವತ್ಥಾಮನ ಮೈಗೆ ಬಿದ್ದು ನಾಟಿಕೊಂಡುವು.
ವಿದ್ಧಸ್ತು ತೈಃ ಶರೈರ್ಘೋರೈರ್ದ್ರೋಣಪುತ್ರಃ ಪ್ರತಾಪವಾನ್ |
ಉತ್ಸ ೃಜ್ಯ ಸಮರೇ ರಾಜನ್ ಪಾಂಚಾಲಮಮಿತೌಜಸಮ್ ॥27॥
ಆರುರೋಹ ರಥಂ ವೀರೋ ಧನಂಜಯಶರಾರ್ದಿತಃ |
ಪ್ರಗೃಹ್ಯ ಚ ಧನುಃ ಶ್ರೇಷ್ಠಂ ಪಾರ್ಥಂ ವಿವ್ಯಾಧ ಸಾಯಕೈಃ ॥28॥
ಪ್ರತಾಪಶಾಲಿ ವೀರ ಅಶ್ವತ್ಥಾಮನು ಘೋರವಾದ ಆ ಬಾಣಗಳಿಂದ ಹೊಡೆಸಿಕೊಂಡು, ಅಮಿತ ಪರಾಕ್ರಮಿಯಾದ ಧೃಷ್ಟದ್ಯುಮ್ನನನ್ನು ರಣರಂಗದಲ್ಲಿ ಬಿಟ್ಟು ರಥವನ್ನೇರಿದ. ಅರ್ಜುನನ ಬಾಣಗಳಿಂದ ಪೀಡಿತನಾಗಿದ್ದ ಆತ ಶ್ರೇಷ್ಠವಾದ ಧನುಸ್ಸನ್ನೆತ್ತಿಕೊಂಡ. ಅರ್ಜುನನನ್ನು ಬಾಣಗಳಿಂದ ಹೊಡೆದ.
ಏತಸ್ಮಿನ್ನಂತರೇ ಶೂರಃ ಸಹದೇವೋ ಜನಾಧಿಪ |
ಅಪೋವಾಹ ರಥೇನಾಜೌ ಪಾರ್ಷತಂ ಶತ್ರುತಾಪನಮ್ ॥29॥
ರಾಜನೆ, ಈ ನಡುವೆ ಶೂರನಾದ ಸಹದೇವ ರಣರಂಗದಲ್ಲಿದ್ದ, ಶತ್ರುತಾಪಕನಾದ ಧೃಷ್ಟದ್ಯುಮ್ನನನ್ನು ರಥದಿಂದ ದೂರಕ್ಕೆ ಒಯ್ದ.
ಅರ್ಜುನೋಽಪಿ ಮಹಾರಾಜ ದ್ರೌಣಿಂ ವಿವ್ಯಾಧ ಪತ್ರಿಭಿಃ |
ತಂ ದ್ರೋಣಪುತ್ರಃ ಸಂರಬ್ಧೋ ಬಾಹ್ವೋರುರಸಿ ಚಾರ್ಪಯತ್ ॥30॥
ಮಹಾರಾಜ, ಅರ್ಜುನನು ಬಾಣಗಳಿಂದ ಅಶ್ವತ್ಥಾಮನನ್ನು ಹೊಡೆದನು. ಅವನನ್ನು ಕುಪಿತನಾದ ಅಶ್ವತ್ಥಾಮ ತೋಳು, ಎದೆಗಳಲ್ಲಿ ಹೊಡೆದ.
ಕ್ರೋಧಿತಸ್ತು ರಣೇ ಪಾರ್ಥೋ ನಾರಾಚಂ ಕಾಲಸನ್ನಿಭಮ್ |
ದ್ರೋಣಪುತ್ರಾಯ ಚಿಕ್ಷೇಪ ಯಮದಂಡಮಿವಾಪರಮ್ ॥31॥
ಕೋಪಗೊಂಡ ಅರ್ಜುನ ಯುದ್ಧದಲ್ಲಿ ಯಮದಂಡದಂಥ ಮೃತ್ಯು ಸದೃಶವಾದ ಇನ್ನೊಂದು ಬಾಣವನ್ನು ಅಶ್ವತ್ಥಾಮನ ಮೇಲೆ ಎಸೆದ.
ಸ ಬ್ರಾಹ್ಮಣಸ್ಯಾಂಸದೇಶೇ ನಿಪಪಾತ ಮಹಾದ್ಯುತೇಃ |
ಸ ವಿಹ್ವಲೋ ಮಹಾರಾಜ ಶರವೇಗೇನ ಸಂಯುಗೇ |
ನಿಷಸಾದ ರಥೋಪಸ್ಥೇ ವೈಕ್ಲವ್ಯಂ ಪರಮಂ ಯಯೌ ॥32॥
ಮಹಾರಾಜ, ಆ ಬಾಣ ಮಹಾತೇಜಸ್ವಿಯಾದ ಅಶ್ವತ್ಥಾಮನ ಹೆಗಲಿನಲ್ಲಿ ಬಿದ್ದಿತು. ಅವನು ಯುದ್ಧದಲ್ಲಿ ಬಾಣದ ವೇಗದಿಂದ ವಿಹ್ವಲನಾದ. ಬಹು ಕಷ್ಟಕ್ಕೀಡಾಗಿ ರಥದ ಮಧ್ಯದಲ್ಲಿ ಕುಳಿತ.
ತಂ ತು ಮತ್ವಾ ಹತಂ ವೀರಂ ಸಾರಥಿಃ ಶತ್ರುಕರ್ಶನಮ್ |
ಅಪೋವಾಹ ರಥೇನಾಜೌ ತ್ವರಮಾಣೋ ರಣಾಜಿರಾತ್ ॥33॥
ಶತ್ರುಪೀಡಕನಾದ ಅಶ್ವತ್ಥಾಮ ಹತನಾಗುವನೆಂದು ಆಲೋಚಿಸಿ ಸಾರಥಿಯು ರಣರಂಗದಲ್ಲಿ ಅವನನ್ನು ಬೇಗನೆ ರಥದಿಂದ ಬೇರೆಡೆಗೆ ಒಯ್ದ.
ಅಥೋದ್ಘುಷ್ಟಂ ಮಹಾರಾಜ ಪಾಂಚಾಲ್ಯೈರ್ಜಿತಕಾಶಿಭಿಃ |
ಮೋಕ್ಷಿತಂ ಪಾರ್ಷತಂ ದೃಷ್ಟ್ವಾ ದ್ರೋಣಪುತ್ರಂ ಚ ಪೀಡಿತಮ್ ॥34॥
ಮಹಾರಾಜ, ಧೃಷ್ಟದ್ಯುಮ್ನ ಬಿಡುಗಡೆಯಾದುದನ್ನೂ ಅಶ್ವತ್ಥಾಮ ಪೀಡಿತ ನಾದುದನ್ನೂ ಕಂಡು ಪಾಂಚಾಲರು ವಿಜಯೋತ್ಸಾಹಗೊಂಡು ಗರ್ಜನೆ ಮಾಡಿದರು.
ವಾದಿತ್ರಾಣಿ ಚ ದಿವ್ಯಾನಿ ಪ್ರಾವಾದ್ಯಂತ ಸಹಸ್ರಶಃ |
ಸಿಂಹನಾದಶ್ಚ ಸಂಜಜ್ಞೇ ದೃಷ್ಟ್ವಾ ಯುದ್ಧಂ ತದದ್ಭುತಮ್ ॥35॥
ಸಹಸ್ರಾರು ದಿವ್ಯ ರಣವಾದ್ಯಗಳು ಮೊಳಗಿದುವು. ಆ ಅದ್ಭುತವಾದ ಯುದ್ಧವನ್ನು ನೋಡಿದವರಿಗೆ ಸಿಂಹನಾದ ಕೇಳಿ ಬಂದಿತು.
ತತಃ ಕರ್ಣೋ ಮಹಾರಾಜ ವ್ಯಾಕ್ಷಿಪದ್ ವಿಜಯಂ ಧನುಃ |
ದೃಷ್ಟ್ವಾರ್ಜುನಂ ರಣೇ ಕ್ರುದ್ಧಃ ಪ್ರೇಕ್ಷತೇ ಚ ಮುಹುರ್ಮುಹುಃ |
ದ್ವೈರಥಂ ಚಾಪಿ ಪಾರ್ಥೇನ ಗಂತುಕಾಮೋ ಮಹಾದ್ಯುತಿಃ ॥36॥
ಆಗ ಕರ್ಣ ರಣರಂಗದಲ್ಲಿ ಅರ್ಜುನನನ್ನು ಕಂಡು ಕ್ರುದ್ಧನಾಗಿ ವಿಜಯಧನುಸ್ಸನ್ನು ಸೆಳೆದ. ಅರ್ಜುನನೊಡನೆ ದ್ವಂದ್ವರಥಯುದ್ಧ ಮಾಡಲು ಬಯಸಿ ಮಹಾತೇಜಸ್ವಿಯಾದ ಕರ್ಣ ಅವನನ್ನು ಪುನಃ ಪುನಃ ದಿಟ್ಟಿಸಿ ನೋಡಿದ.
ಏವಂ ಕೃತ್ವಾಬ್ರವೀತ್ ಪಾರ್ಥೋ ವಾಸುದೇವಂ ಧನಂಜಯಃ |
ಯಾಹಿ ಸಂಶಪ್ತಕಾನ್ ಕೃಷ್ಣ ಕಾರ್ಯಮೇತತ್ ಪರಂ ಮಮ ॥37॥
ಆದರೆ ಅರ್ಜುನ ಹೀಗೆ ಧೃಷ್ಟದ್ಯುಮ್ನನನ್ನು ರಕ್ಷಿಸಿದ ಬಳಿಕ ಕೃಷ್ಣನಿಗೆ `ಕೃಷ್ಣ, ಸಂಶಪ್ತಕರ ಕಡೆಗೆ ನಡೆ, ನನಗೆ ಅದು ಮುಖ್ಯವಾದ ಕಾರ್ಯವಾಗಿದೆ' ಎಂದ.
ತತಃ ಪ್ರಯಾತೋ ಗೋವಿಂದಃ ಶ್ರುತ್ವಾ ಪಾಂಡವಭಾಷಿತಮ್ |
ರಥೇನಾತಿಪತಾಕೇನ ಮನೋಮಾರುತರಂಹಸಾ ॥38॥
ಆಗ ಅರ್ಜುನನ ಮಾತನ್ನು ಕೇಳಿ ಕೃಷ್ಣ ಉತ್ತಮಪತಾಕೆಗಳಿಂದ ಕೂಡಿದ, ಮನೋವೇಗ ಗಾಳಿಯ ವೇಗಗಳಿಂದ ಯುಕ್ತವಾದ

ರಥದಿಂದ ಹೊರಟ.
ಏವಮೇವ ಕ್ಷಯೋ ವೃತ್ತಃ ಪೃಥಿವ್ಯಾಂ ಪೃಥಿವೀಪತೇ |
ತಾವಕಾನಾಂ ಪರೇಷಾಂ ಚ ರಾಜನ್ ದುರ್ಮಂತ್ರಿತೇ ತವ ॥39॥
ಹೀಗೆಯೇ, ರಾಜನೆ, ನಿನ್ನ ದುರಾಲೋಚನೆಯ ಫಲವಾಗಿ ಭೂಮಿಯ ಮೇಲೆ ವೀರಯೋಧರ ವಿನಾಶ ಉಂಟಾಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಏಕವಿಂಶೋಽಧ್ಯಾಯಃ ॥21॥

ಇಪ್ಪತ್ತೆರಡನೆಯ ಅಧ್ಯಾಯ
ನಕುಲಸಹದೇವರಿಂದ ಅಂಗರಾಜವಧ, ಗಜಸೈನ್ಯದ ನಾಶ.
ಸಂಜಯಃ
ತತಃ ಪ್ರವವೃತೇ ಭೂಯಃ ಸಂಗ್ರಾಮೋ ರಾಜಸತ್ತಮ |
ಕರ್ಣಸ್ಯ ಪಾಂಡವಾನಾಂ ಚ ಯಮರಾಷ್ಟ್ರವಿವರ್ಧನಃ ॥1॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ರಾಜನೆ, ಮುಂದೆ ಕರ್ಣನಿಗೂ ಪಾಂಡವರಿಗೂ ಯಮನ ರಾಜ್ಯವನ್ನು ಸಮೃದ್ಧಿಗೊಳಿಸುವಂಥ ಯುದ್ಧ ಪುನಃ ನಡೆಯಿತು.
ಧನೂಂಷಿ ಬಾಣಾನ್ ಪರಿಘಾನಸಿಪಟ್ಟಿಸತೋಮರಾನ್ |
ಮುಸಲಾನಿ ಭುಶುಂಡೀಶ್ಚ ಶಕ್ತಿರಿಷ್ಟಿಪರಶ್ವಧಾನ್ ॥2॥
ಗದಾಃ ಪ್ರಾಸಾನ್ ಶಿತಾನ್ ಕುಂತಾನ್ ಭಿಂಡಿಪಾಲಾನ್ ಮಹಾಂಕುಶಾನ್
ಪ್ರಗೃಹ್ಯ ಕ್ಷಿಪ್ರಮಾಪೇತುಃ ಪರಸ್ಪರಜಿಘಾಂಸಯಾ ॥3॥
ಧನುಸ್ಸು ಬಾಣ ಪರಿಘ ಖಡ್ಗ ಪಟ್ಟಿಶ ತೋಮರ ಮುಸಲ ಭುಶುಂಡಿ ಶಕ್ತಿ ರಿಷ್ಟಿ ಪರಶು ಗದೆ ಪ್ರಾಸ ಹರಿತವಾದ ಕುಂತ ಭಿಂದಿಪಾಲ ಮಹಾ ಅಂಕುಶಗಳನ್ನು ಹಿಡಿದು ಯೋಧರು ಪರಸ್ಪರ ವಧಿಸುವ ಇಚ್ಛೆಯಿಂದ ಇದಿರಿಸಿ ನಿಂತರು.
ಬಾಣಜ್ಯಾತಳಶಬ್ದೇನ ದ್ಯಾಂ ದಿಶಃ ಪ್ರದಿಶೋ ವಿಯತ್ |
ಪೃಥಿವೀಂ ನೇಮಿಘೋಷೇಣ ನಾದಯಂತೋಽಭ್ಯಯುಃ ಪರಾನ್ ॥4॥
ಬಾಣಗಳ ಶಬ್ದ, ಹೆದೆಮೀಟುವ ಧ್ವನಿಗಳಿಂದ ಅಂತರಿಕ್ಷದಿಕ್ಕುವಿದಿಕ್ಕು ಆಕಾಶಗಳನ್ನು ಮತ್ತು ರಥಚಕ್ರಧ್ವನಿಯಿಂದ ಪೃಥಿವಿಯನ್ನು ಪ್ರತಿಧ್ವನಿಸುವಂತೆ ಮಾಡುತ್ತ ಶತ್ರುಗಳನ್ನು ಆಕ್ರಮಿಸಿದರು.
ತೇನ ಶಬ್ದೇನ ಮಹತಾ ಸಂಹೃಷ್ಟಾಶ್ಚಕ್ರುರಾಹವಮ್ |
ವೀರಾ ವೀರೈರ್ಮಹಾಘೋರಕಲಹಾಂತಂ ತಿತೀರ್ಷವಃ ॥5॥
ಆ ಮಹಾಧ್ವನಿಯಿಂದ ಉತ್ಸಾಹಗೊಂಡು ಮಹಾಭಯಂಕರ ಯುದ್ಧದಲ್ಲಿ ಜಯವನ್ನು ಗೆದ್ದುಕೊಳ್ಳುವ ಬಯಕೆಯಿಂದ ವೀರರು ವೀರರನ್ನು ಇದಿರಿಸಿ ಯುದ್ಧ ಮಾಡಿದರು.
ಜ್ಯಾತಳತ್ರಧನುಃಶಬ್ದಾನ್ ಶಸಶತ್ರಣಾಂ ಚ ನಿಪಾತ್ಯತಾಮ್ |
ತಾಡಿತಾನಾಂ ಚ ಪತತಾಂ ನಿನದಾಂಶ್ಚೈವ ದಂತಿನಾಮ್ ॥6॥
ಬಾಣಶಬ್ದಾಂಶ್ಚ ವಿವಿಧಾನ್ ಶೂರಾಣಾಂ ಚಾಭಿಗರ್ಜತಾಮ್ |
ಶ್ರುತ್ವಾ ಗಜಾ ಭೃಶಂ ತ್ರೇಸುಃ ಪೇತುರ್ಮಮ್ಲುಶ್ಚ ಭಾರತ ॥7॥
ಹೆದೆ ಕೈಚೀಲ ಧನುಸ್ಸುಗಳ ಶಬ್ದ, ಶಸ್ತ್ರಗಳು ಬೀಳುವ ಶಬ್ದ, ಹೊಡೆಸಿಕೊಂಡು ಬೀಳುವ ಆನೆಗಳ ಶಬ್ದ ಬಾಣಶಬ್ದಗಳು ಮತ್ತು ಸಿಂಹನಾದಗೈವ ವೀರರ ನಾನಾ ಬಗೆಯ ಶಬ್ದ ಇವೆಲ್ಲವನ್ನು ಕೇಳಿಯೆ ಆನೆಗಳು ಬಹಳ ಭಯಪಟ್ಟವು, ಆಯಾಸಗೊಂಡುವು, ಬಿದ್ದವು.
ತೇಷಾಂ ನಿನದತಾಂ ಚೈವ ಶಸ್ತ್ರವರ್ಷಂ ಚ ಮುಂಚತಾಮ್ |
ಬಹೂನಾಧಿರಥಿರ್ವೀರಃ ಪ್ರಮಮಾಥೇಷುಭಿಃ ಪರಾನ್ ॥8॥
ಶತ್ರುವೀರರು ಗರ್ಜಿಸುತ್ತಿದ್ದಂತೆಯೇ, ಶಸ್ತ್ರಗಳ ಮಳೆಗರೆಯುತ್ತಿದ್ದಂತೆಯೆ ವೀರ ಕರ್ಣನು ಬಹಳ ಶತ್ರುಗಳನ್ನು ಬಾಣಗಳಿಂದ ನಾಶಪಡಿಸಿದ.
ಪಂಚ ಪಾಂಚಾಲವೀರಾಣಾಂ ರಥಾನ್ ದಶ ಚ ಪಂಚ ಚ |
ಸಾಶ್ವಸೂತಧ್ವಜಾನ್ ಕರ್ಣಃ ಶರೈರ್ನಿನ್ಯೇ ಯಮಕ್ಷಯಮ್ ॥9॥
ಪಾಂಚಾಲವೀರರ ಇಪ್ಪತ್ತು ರಥಿಗಳನ್ನು ಅಶ್ವ ಸಾರಥಿ ಧ್ವಜಗಳೊಂದಿಗೇ ಬಾಣಗಳಿಂದ ಯಮಲೋಕಕ್ಕೆ ಕಳಿಸಿದ, ಕರ್ಣ.
ಯೋಧಮುಖ್ಯಾ ಮಹಾವೀರ್ಯಾಃ ಪಾಂಡೂನಾಂ ಕರ್ಣಮಾಹವೇ |
ಶಿಕ್ಷಿತಾಸ್ತಮಭಿದ್ರುತ್ಯ ಪರಿವವ್ರುಃ ಸಮಂತತಃ ॥10॥
ಮಹಾವೀರ್ಯಶಾಲಿಗಳಾದ ಅಸ್ತ್ರವಿದ್ಯೆಯಲ್ಲಿ ನುರಿತ ಪಾಂಡವಪಕ್ಷದ ಮುಖ್ಯ ಯೋಧರು ರಣರಂಗದಲ್ಲಿ ಕರ್ಣನನ್ನು ಇದಿರಿಸಿ ಎಲ್ಲೆಡೆ ಮುತ್ತಿದರು.
ತತಃ ಕರ್ಣೋ ದ್ವಿಷತ್ಸೇನಾಂ ಶರವರ್ಷೈರ್ವಿಲೋಡಯನ್ |
ವಿಜಗಾಹಾಂಡಜಾಕೀರ್ಣಾಂ ಪದ್ಮಿನೀಮಿವ ಯೂಥಪಃ ॥11॥
ಮೀನುಗಳಿಂದ ತುಂಬಿದ ಕೊಳವನ್ನು ಕದಡುತ್ತ ಆನೆ ಪ್ರವೇಶಿಸುವಂತೆ, ಶತ್ರು ಸೈನ್ಯವನ್ನು ಬಾಣಗಳ ಮಳೆಗಳಿಂದ ಕದಡುತ್ತ ಕರ್ಣ ಪ್ರವೇಶಿಸಿದ.
ದ್ವಿಷತ್ಸ ೈನ್ಯಮವಸ್ಕಂದ್ಯ ರಾಧೇಯೋ ಧನುರುತ್ತಮಮ್ |

ವಿಧುನ್ವಾನಃ ಶಿತೈರ್ಬಾಣೈಃ ಶಿರಾಂಸ್ಯುನ್ಮಥ್ಯ ಪಾತಯತ್ ॥12॥
ಶತ್ರುಸೈನ್ಯವನ್ನು ಕದಡಿ ಕರ್ಣನು ಉತ್ತಮವಾದ ಧನುಸ್ಸನ್ನು ಸೆಳೆಯುತ್ತ ಹರಿತವಾದ ಬಾಣಗಳಿಂದ ಶಿರಗಳನ್ನು ತರಿದು ಬೀಳಿಸಿದ.
ಹಸ್ತಿನಃ ಸಮಹಾಮಾತ್ರಾನ್ ಸಾಶ್ವಾರೋಹಾನ್ ಹಯಾನಪಿ |
ರಥಿನೋಽಪ್ಯೇಕಬಾಣೇನ ಭ್ರಮತಶ್ಚಾವಪಾತಯತ್ ॥13॥
ಗಜಗಳನ್ನು ಗಜಾರೋಹಿಗಳೊಂದಿಗೆ ಅಶ್ವಗಳನ್ನು ಅಶ್ವಾರೋಹಿಗಳೊಂದಿಗೆ ಮತ್ತು ರಣರಂಗದಲ್ಲಿ ಸಂಚರಿಸುವ ರಥಗಳನ್ನು ಕೂಡ ಒಂದೊಂದು ಬಾಣದಿಂದಲೇ ಕೆಳಗೆ ಬೀಳಿಸಿದ.
ವರ್ಮ ವಾ ಚರ್ಮ ವಾಽಶ್ರಿತ್ಯ ನಿಪಾತಮಪಿ ದೇಹಿನಃ |
ವಿಷೇಹುರ್ನಾಸ್ಯ ಸಂಸ್ಪರ್ಶಂ ದ್ವಿತೀಯಸ್ಯ ಪತತ್ರಿಣಃ ॥14॥
ಕವಚದ ಅಥವಾ ಗುರಾಣಿಯ ಸಹಾಯದಿಂದ ಒಂದು ವೇಳೆ ಯೋಧರು ಕರ್ಣನ ಒಂದು ಬಾಣದಿಂದ ತಮ್ಮ ಪತನವನ್ನು ತಪ್ಪಿಸಿಕೊಂಡರೂ ಎರಡನೇ ಬಾಣದ ಸ್ಪರ್ಶವನ್ನು ಸಹಿಸದಾದರು.
ವರ್ಮಯುಕ್ತೇಷು ದೇಹೇಷು ಧನುಷೋಽಸ್ಯನ್ ಶಿತಾನ್ ಶರಾನ್ |
ಮೌರ್ವ್ಯಾ ತಳತ್ರೇ ನ್ಯಹನತ್ ಕಶಯಾ ವಾಜಿನೋ ಯಥಾ ॥15॥
ಕವಚಯುಕ್ತವಾದ ದೇಹಗಳಲ್ಲಿ ಬಿಲ್ಲಿನ ಹೆದೆಯಿಂದ ಹರಿತವಾದ ಬಾಣಗಳನ್ನು ಎಸೆಯುತ್ತ, ಚಾವಟಿಯಿಂದ ಕುದುರೆಗಳಿಗೆ ಹೊಡೆಯುವಂತೆ, ಯೋಧರ ಕೈಚೀಲಗಳಲ್ಲಿಯೇ ಹೊಡೆದ, ಯೋಧರಿಗೆ ಬಾಣ ಎಸೆಯಲು ಸಾಧ್ಯವಾಗದಂತೆ ಮಾಡಿದ.
ಪಾಂಡುಸೃಂಜಯಪಾಂಚಾಲಾನ್ ಶರಗೋಚರಮಾಗತಾನ್ |
ಮಮರ್ದ ತರಸಾ ಕರ್ಣಃ ಸಿಂಹೋ ಮೃಗಗಣಾನಿವ ॥16॥
ಸಿಂಹವು ಜಿಂಕೆಗಳ ಹಿಂಡುಗಳನ್ನು ಹೇಗೋ ಹಾಗೇ ಕರ್ಣನು ಬಾಣಗಳ ಮಾರ್ಗದಲ್ಲಿ ಸಿಕ್ಕ ಪಾಂಡವ ಸೃಂಜಯ ಪಾಂಚಾಲಯೋಧರನ್ನು ಬಲವಾಗಿ ಮರ್ದನಗೈದ.
ತತಃ ಪಾಂಚಾಲಪುತ್ರಶ್ಚ ದ್ರೌಪದೇಯಾಶ್ಚ ಮಾರಿಷ |
ಯಮೌ ಚ ಯುಯುಧಾನಶ್ಚ ತ್ವರಿತಾಃ ಕರ್ಣಮಭ್ಯಯುಃ ॥17॥
ಆಗ ರಾಜನೆ, ಧೃಷ್ಟದ್ಯುಮ್ನ, ದ್ರೌಪದೀಪುತ್ರರು, ನಕುಲಸಹದೇವರು ಮತ್ತು ಸಾತ್ಯಕಿ ಇವರೆಲ್ಲರೂ ವೇಗವಾಗಿ ಕರ್ಣನ ಕಡೆಗೆ ಮುನ್ನುಗ್ಗಿದರು.
ತೇಷು ವ್ಯಾಯಚ್ಛಮಾನೇಷು ಕುರುಪಾಂಚಾಲಪಾಂಡುಷು |
ಪ್ರಿಯಾನಸೂನ್ ರಣೇ ತ್ಯಕತ್ವ ಯೋಧಾ ಜಘ್ನುಃ ಪರಸ್ಪರಮ್ ॥18॥
ಕೌರವ ಪಾಂಚಾಲ ಪಾಂಡವ ಸೈನ್ಯಗಳು ಯುದ್ಧನಿರತರಾದಾಗ ಯೋಧರು ಪ್ರಿಯವಾದ ಪ್ರಾಣದ ಹಂಗನ್ನು ತೊರೆದು ಪರಸ್ಪರವಾಗಿ ಹೋರಾಡಿದರು.
ಸುಸನ್ನದ್ಧಾಃ ಕವಚಿನಃ ಸಶಿರಸತ್ರಣಭೂಷಣಾಃ |
ಗದಾಭಿರ್ಮುಸಲೈಶ್ಚಾನ್ಯೇ ಪರಿಘೈಶ್ಚ ಮಹಾಬಲಾಃ ॥19॥
ಸಮಭ್ಯಧಾವಂತ ಭೃಶಂ ಕಾಲದಂಡೈರಿವೋದ್ಯತೈಃ |
ನರ್ದಂತಶ್ಚಾಹ್ವಯಂತಶ್ಚ ಪ್ರವಲ್ಗಂತಶ್ಚ ಮಾರಿಷ ॥20॥
ಮಹಾಬಲಿಗಳಾದ, ಕವಚ ಶಿರಸತ್ರಣಯುಕ್ತರಾದ ಸನ್ನದ್ಧರಾದ ಯೋಧರು ಗದೆಗಳಿಂದ ಮುಸಲಗಳಿಂದ ಯಮದಂಡದಂಥ ಪರಿಘಗಳಿಂದ ಯುಕ್ತರಾಗಿ ಚೆನ್ನಾಗಿ ಗರ್ಜನ ಮಾಡುತ್ತ ಇದಿರಾಳಿಯನ್ನು ಆಹ್ವಾನಿಸುತ್ತ ಕುಣಿಯುತ್ತ ಪರಸ್ಪರ ಆಕ್ರಮಣಗೈದರು.
ತತೋ ನಿಜಘ್ನುರನ್ಯೋನ್ಯಂ ಪೇತುಶ್ಚಾನ್ಯೋನ್ಯತಾಡಿತಾಃ |
ವಮಂತೋ ರುಧಿರಂ ಗಾತ್ರೈರ್ವಿಮಸ್ತಿಷ್ಕೇಕ್ಷಣಾ ಯುಧಿ ॥21॥
ಪರಸ್ಪರ ಹೊಡೆದರು, ಪರಸ್ಪರ ಹೊಡೆಸಿಕೊಂಡು ಬಿದ್ದರು. ರಣರಂಗದಲ್ಲಿ ಶರೀರದಿಂದ ನೆತ್ತರು ಹರಿಸುತ್ತ ತಲೆಯ ಮಿದುಳನ್ನು ಕಳೆದುಕೊಂಡರು, ಕಣ್ಣುಗಳನ್ನು ಕಳೆದುಕೊಂಡರು
ದಂತಪೂರ್ಣೈಃ ಸರುಧಿರೈರ್ವಕ್ತ್ರೈರ್ದಾಡಿಮಸನ್ನಿಭೈಃ |
ಜೀವಂತ ಇವ ಚಾಪ್ಯೇಕೇ ತಸ್ಥುಃ ಶಸೌತ್ರಘಬೃಂಹಿತಾಃ ॥22॥
ಕೆಲವರು ಶಸ್ತ್ರಸಮೂಹದಿಂದ ತುಂಬಿಕೊಂಡು ರಕ್ತಸಿಕ್ತವಾದ ಹಲ್ಲುಗಳಿಂದ ಕೂಡಿ ದಾಳಿಂಬೆ ಹಣ್ಣಿನಂತಾದ ಮುಖಗಳಿಂದ ಜೀವಂತರಾಗಿಯೇ ಇರುವಂತೆ ಕಂಡುಬಂದರು.
ಪರಶ್ವಧೈಶ್ಚಾಪ್ಯಪರೇ ಪಟ್ಟಿಶೈರಸಿಭಿಸ್ತಥಾ |
ಶಕ್ತಿಭಿರ್ಭಿಂಡಿಪಾಲೈಶ್ಚ ನಖರಪ್ರಾಸತೋಮರೈಃ ॥23॥
ತತಕ್ಷುಶ್ಚಿಚ್ಛಿದುಶ್ಚಾನ್ಯೇ ಬಿಭಿದುಶ್ಚಿಕ್ಷಿಪುಸ್ತಥಾ |
ಸಂಚಕರ್ತುಶ್ಚ ಜಘ್ನುಶ್ಚ ರಾಜನ್ ಯೋಧಾ ಮಹಾರಣೇ ॥24॥
ಪರಶು ಪಟ್ಟಿಶ ಖಡ್ಗ ಶಕ್ತಿ ಭಿಂದಿಪಾಲ ನಖರ ಪ್ರಾಸ ತೋಮರಗಳಿಂದ ಕೆಲವರು ಯೋಧರು ಆ ಮಹಾಯುದ್ಧದಲ್ಲಿ ಪರಸ್ಪರ ಕಡಿದರು, ತುಂಡು ಮಾಡಿದರು, ಗಾಯಗೊಳಿಸಿದರು, ಎಸೆದರು,ಕತ್ತರಿಸಿದರು ಮತ್ತು ಕೊಂದರು.
ಪೇತುರನ್ಯೋನ್ಯನಿಹತಾ ವ್ಯಸವೋ ರುಧಿರೋಕ್ಷಿತಾಃ |
ಕ್ಷರಂತಃ ಸ್ವರಸಂ ರಕ್ತಂ ಪ್ರಕೃತ್ತಾಶ್ಚಂದನಾ ಇವ ॥25॥
ಅನ್ಯೋನ್ಯವಾಗಿ ಹೊಡೆದುಕೊಂಡು ರಕ್ತಸಿಕ್ತರಾಗಿ ಸತ್ತುಬಿದ್ದರು. ಕತ್ತರಿಸಿದ ಚಂದನವೃಕ್ಷವು ಕೆಂಪಾದ ತನ್ನ ರಸವನ್ನು ಸುರಿಸುವಂತೆ, ರಕ್ತವನ್ನು ಸುರಿಸಿದರು.

ರಥೈ ರಥಾ ವಿನಿಹತಾ ಹಸ್ತಿಭಿಶ್ಚಾಪಿ ಹಸ್ತಿನಃ |
ನರೈರ್ನರಾ ಹತಾಃ ಪೇತುರಶ್ವಾಶ್ಚಾಶ್ವೈ ್ಯಃ ಸಹಸ್ರಶಃ ||26||
ರಥಗಳಿಂದ ರಥಗಳು ಆನೆಗಳಿಂದ ಆನೆಗಳು ಪದಾತಿಗಳಿಂದ ಪದಾತಿಗಳು ಅಶ್ವಗಳಿಂದ ಅಶ್ವಗಳು ಸಹಸ್ರಾರು ಸಂಖ್ಯೆಯಲ್ಲಿ ಹತವಾಗಿ ಬಿದ್ದವು.
ಧ್ವಜಾಃ ಶಿರಾಂಸಿ ಚ್ಛತ್ರಾಣಿ ದ್ವಿಪಹಸ್ತಾ ನೃಣಾಂ ಭುಜಾಃ |
ಕ್ಷುರೈರ್ಭಲ್ಲಾರ್ಧಚಂದ್ರೈಶ್ಚ ಚ್ಛಿನ್ನಾಃ ಪೇತುರ್ಮಹೀತಳೇ ||27||
ಧ್ವಜಗಳು ಶಿರಸ್ಸುಗಳು ಛತ್ರಗಳು ಆನೆಯ ಸೊಂಡಿಲುಗಳು ಯೋಧರ ತೋಳುಗಳು ಕ್ಷುರ ಭಲ್ಲ ಅರ್ಧಚಂದ್ರಗಳಿಂದ ಕಡಿದು ನೆಲದಲ್ಲಿ ಬಿದ್ದುವು.
ವಧ್ಯತಾಂ ದಾರುಣಾಃ ಶಬ್ದಾಃ ಪತತಾಂ ಸ್ತನತಾಮಪಿ |
ನರಾಶ್ವೇಭರಥಾನಾಂ ಹಿ ನರಾಶ್ವೇಭರಥೈಸ್ತಥಾ ||28||
ಪದಾತಿಅಶ್ವಗಜರಥ ಸೈನಿಕರಿಂದ, ಪದಾತಿಅಶ್ವಗಜರಥ ಸೈನಿಕರು ಹತರಾಗುವಾಗ, ಬೀಳುವಾಗ, ಕೂಗಿಕೊಳ್ಳುವಾಗ ದಾರುಣವಾದ ಶಬ್ದಗಳು ಕೇಳಿಬಂದುವು.
ನರಾಶ್ಚ ನಾಗಾಶ್ಚ ರಥಾ ಹಯಾನ್ ಮಮೃದುರಾಹವೇ ||29||
ಅಶ್ವಾರೋಹೈರ್ಹತಾಃ ಶೂರಾಶ್ಛಿನ್ನಹಸ್ತಾಶ್ಚ ದಂತಿನಃ |
ಸಪತಾಕಾಧ್ವಜಾಃ ಪೇತುರ್ವಿಶೀರ್ಣಾ ಇವ ಪರ್ವತಾಃ ||30||
ಪದಾತಿಗಜರಥಗಳು ಅಶ್ವಗಳನ್ನು ಯುದ್ಧದಲ್ಲಿ ಕೆಡವಿದುವು. ಅಶ್ವಾರೋಹಿಗಳು ಪದಾತಿಗಳನ್ನು ಕೊಂದರು, ಆನೆಗಳ ಸೊಂಡಿಲುಗಳನ್ನು ಕತ್ತರಿಸಿದರು. ಆಗ ಕಡಿದ ಬೆಟ್ಟಗಳಂತೆ ಆನೆಗಳು ಪತಾಕೆ, ಧ್ವಜಗಳೊಂದಿಗೇ ನೆಲದಲ್ಲಿ ಬಿದ್ದವು.
ಪತ್ತಿಭಿಶ್ಚ ಸಮಾಪ್ಲುತ್ಯ ದ್ವಿರದಾಃ ಸ್ಯಂದನಾಸ್ತಥಾ |
ಹತಾಶ್ಚ ಹನ್ಯಮಾನಾಶ್ಚ ಪತಿತಾಶ್ಚೈವ ಸರ್ವಶಃ ||31||
ಪದಾತಿಗಳಿಂದ ಹೊಡೆಸಿಕೊಂಡು ಎಲ್ಲ ಆನೆ ರಥ ಸೈನ್ಯಗಳು ಹತರಾಗಿಯೋ ಅಥವಾ ಹತರಾಗುತ್ತಿರುವಾಗಲೋ ಬೀಳುತ್ತಿದ್ದವು.
ಅಶ್ವಾರೋಹಾಃ ಸಮಾಸಾದ್ಯ ತ್ವರಿತಾಃ ಪತ್ತಿಭಿರ್ಹತಾಃ |
ಸಾದಿಭಿಃ ಪತ್ತಿಸಂಘಾಶ್ಚ ನಿಹತಾ ಯುಧಿ ಶೇರತೇ ||32||
ಅಶ್ವಾರೋಹಿಗಳೂ ಪದಾತಿಗಳಿಂದ ಹೊಡೆಸಿಕೊಂಡು, ಪದಾತಿಗಳು ಅಶ್ವಾರೋಹಿಗಳಿಂದ ಹೊಡೆಸಿಕೊಂಡು ರಣರಂಗದಲ್ಲಿ ಒರಗಿದರು.
ಮೃದಿತಾನೀವ ಪದ್ಮಾನಿ ಪ್ರಮ್ಲಾನಾ ಇವ ಚ ಸ್ರಜಃ |
ಹತಾನಾಂ ವದನಾನ್ಯಾಸನ್ ಗಾತ್ರಾಣಿ ಚ ಮಹಾಹವೇ ||33||
ಮಹಾರಣದಲ್ಲಿ ಹತರಾದ ಯೋಧರ ಮುಖಗಳು ಹೊಸಕಿದ ಕಮಲಗಳಂತೆ, ಶರೀರಗಳು ಬಾಡಿದ ಹೂಮಾಲೆಗಳಂತೆ ನಿಷ್ಪ್ರಭವಾದುವು.
ರೂಪಾಣ್ಯತ್ಯರ್ಥಕಾಂತಾನಿ ದ್ವಿರದಾಶ್ವನೃಣಾಂ ನೃಪ |
ಸಮುನ್ನಾನೀವ ವಸ್ತ್ರಾಣಿ ಯಯುರ್ದುರ್ದರ್ಶತಾಂ ಪರಾಮ್ ||34||
ಗಜ ಅಶ್ವ ಪದಾತಿಗಳ ಅತಿಸುಂದರವಾದ ರೂಪಗಳು ಕೆಸರಲ್ಲಿ ಅದ್ದಿದ ಬಟ್ಟೆಗಳಂತೆ ಸರ್ವಥಾ ಕಣ್ಣಿಂದ ನೋಡಲಾಗದಂಥ ಸ್ಥಿತಿಯನ್ನು ಹೊಂದಿದುವು.
ಹಸ್ತಿಭಿಸ್ತು ಮಹಾಮಾತ್ರಾಸ್ತವ ಪುತ್ರೇಣ ಚೋದಿತಾಃ |
ಧೃಷ್ಟದ್ಯುಮ್ನಂ ಹತೇತ್ಯಾಶು ಕ್ರುದ್ಧಾಃ ಪಾರ್ಷತಮಭ್ಯಯುಃ ||35||
ನಿನ್ನ ಮಗನಿಂದ ಗಜಾರೋಹಿಗಳು `ಧೃಷ್ಟದ್ಯುಮ್ನನನ್ನು ಸಂಹರಿಸಿರಿ' ಎನ್ನುವ ಆಜ್ಞೆಯನ್ನು ಪಡೆದು, ಕ್ರುದ್ಧರಾಗಿ, ಧೃಷ್ಟದ್ಯುಮ್ನನ ಬಳಿಗೆ ಧಾವಿಸಿದರು.
ಪ್ರಾಚ್ಯಾಶ್ಚ ದಾಕ್ಷಿಣಾತ್ಯಾಶ್ಚ ಪ್ರವರಾ ಗಜಯೋಧಿನಃ |
ಅಂಗಾ ವಂಗಾಶ್ಚ ಪುಂಡ್ರಾಶ್ಚ ಮಾಗಧಾಸ್ತಾಮ್ರಲಿಪ್ತಿಕಾಃ ||36||
ಮೇಕಲಾಃ ಕೋಶಲಾ ಮದ್ರಾ ದಶಾರ್ಣಾ ನಿಷಧಾಸ್ತಥಾ |
ಗಜಯುದ್ಧೇಷು ಕುಶಲಾಃ ಕಲಿಂಗ್ಯೈಃ ಸಹ ಭಾರತ ||37||
ಪೂರ್ವದೇಶದವರು ದಕ್ಷಿಣದೇಶದವರು ಅಂಗ ವಂಗ ಪುಂಡ್ರ ಮಗಧ ತಾಮ್ರಲಿಪ್ತಿಕ ಮೇಕಲ ಕೋಶಲ ಕಲಿಂಗ ದೇಶಗಳ ಶ್ರೇಷ್ಠಗಜಾರೋಹಿ ಸೈನಿಕರು ಧೃಷ್ಟದ್ಯುಮ್ನನ ಮೇಲೇರಿ ಹೋದರು.
ಶರತೋಮರನಾರಾಚೈರ್ವೃಷ್ಟಿಮಂತ ಇವಾಂಬುದಾಃ |
ಸಿಷಿಚುಸ್ತೇ ತತಃ ಸರ್ವೇ ಪಾಂಚಾಲಬಲಮಾಹವೇ ||38||
ಮಳೆಮೋಡಗಳಂತೆ ಅವರು ಎಲ್ಲರೂ ರಣರಂಗದಲ್ಲಿ ಧೃಷ್ಟದ್ಯುಮ್ನನ ಸೈನ್ಯದ ಮೇಲೆ ಶರ ತೋಮರ ನಾರಾಚಗಳ ಮಳೆಗರೆದರು.
ತಾನಭಿದ್ರವತೋ ನಾಗಾನ್ ಮದವೇಗಸಮುದ್ಧತಾನ್ |
ವಿಪಾಠಕ್ಷುರನಾರಾಚೈರ್ಧೃಷ್ಟದ್ಯುಮ್ನೋ ಹ್ಯವೀವೃಷತ್ ||39||
ಮದ ಮತ್ತು ವೇಗಗಳಿಂದ ಬಹಳ ಉದ್ಧತವಾದ, ನುಗ್ಗಿ ಬರುತ್ತಿದ್ದ ಆನೆಗಳ ಮೇಲೆ ಧೃಷ್ಟದ್ಯುಮ್ನ ವಿಪಾಠ ಕ್ಷುರ ನಾರಾಚಗಳ ಮಳೆಗರೆದ.
ಏಕೈಕಂ ದಶಭಿಃ ಷಡ್ಭಿರಷ್ಟಾಭಿರಪಿ ಪಾರ್ಷತಃ |

ದ್ವಿರದಾನಭಿವಿವ್ಯಾಧ ಕ್ಷಿಪ್ರಂ ಗಿರಿನಿಭಾನ್ ಶರೈಃ ॥40॥
ಬೆಟ್ಟದಷ್ಟು ಗಾತ್ರದ ಆ ಆನೆಗಳನ್ನು ಪ್ರತಿಯೊಂದನ್ನೂ ಹತ್ತು ಆರು ಎಂಟು ಬಾಣಗಳಿಂದ ಧೃಷ್ಟದ್ಯುಮ್ನ ಬೇಗನೆ ಹೊಡೆದ.
ಪ್ರಚ್ಛಾದ್ಯಮಾನಂ ದ್ವಿರದೈರ್ಮೇಘೈರಿವ ದಿವಾಕರಮ್ |
ಪರ್ಯಯುಃ ಪಾಂಡುಪಾಂಚಾಲಾ ನದಂತೋ
ಹ್ಯಾತ್ತಕಾರ್ಮುಕಾಃ ॥41॥
ಸೂರ್ಯನನ್ನು ಮೋಡಗಳಂತೆ ಧೃಷ್ಟದ್ಯುಮ್ನನನ್ನು ಆನೆಗಳು ಆವರಿಸಿದಾಗ ಪಾಂಡವ ಪಾಂಚಾಲ ಸೈನಿಕರು ಬಿಲ್ಲು ಹಿಡಿದು ಗರ್ಜನೆ ಮಾಡುತ್ತ ಅವನನ್ನು ಸುತ್ತುವರಿದರು.
ತಾನ್ ನಾಗಾನಭಿವರ್ಷಂತೋ ಜ್ಯಾತಳತ್ರವಿನಾದಿನಃ |
ವೀರನೃತ್ಯಂ ಪ್ರನೃತ್ಯಂತಃ ಶೂರತಾಲಪ್ರಚೋದಿತೈಃ |
ನಕುಲಃ ಸಹದೇವಶ್ಚ ದ್ರೌಪದೇಯಾಃ ಪ್ರಭದ್ರಕಾಃ ॥42॥
ಸಾತ್ಯಕಿಶ್ಚ ಶಿಖಂಡೀ ಚ ಚೇಕಿತಾನಶ್ಚ ವೀರ್ಯವಾನ್ |
ಸಮಂತಾತ್ ಸಿಷಿಚುರ್ವೀರಾ ಮೇಘಾಸ್ತೋಯೈರಿವಾಚಲಾನ್ ॥43॥
ಆ ಸೈನಿಕರು ಬಿಲ್ಲಿನ ಹೆದೆ ಕೈಚೀಲಗಳ ಶಬ್ದಮಾಡುತ್ತ ಆನೆಗಳ ಮೇಲೆ ಬಾಣಗಳ ಮಳೆಗರೆಯುತ್ತ ವೀರನೃತ್ಯ ಮಾಡಿದರು, ಶೂರರು ಚಪ್ಪಾಳೆಗಳಿಂದ ಅದನ್ನು ಹುರಿದುಂಬಿಸಿದರು. ನಕುಲ ಸಹದೇವ ದ್ರೌಪದೀಪುತ್ರರು ಪ್ರಭದ್ರಕರು ಸಾತ್ಯಕಿ ಶಿಖಂಡಿ ವೀರನಾದ ಚೇಕಿತಾನ ಇವರೆಲ್ಲರೂ ಬೆಟ್ಟದ ಮೇಲೆ ಮೋಡಗಳು ಮಳೆಗರೆವಂತೆ ಎಲ್ಲೆಡೆ ಆನೆಗಳ ಮೇಲೆ ಬಾಣಗಳ ಮಳೆಗರೆದರು.
ತೇ ಮ್ಲೇಚ್ಛೈಃ ಪ್ರೇಷಿತಾ ನಾಗಾ ನರಾನಶ್ವಾನ್ ರಥಾನಪಿ |
ಹಸ್ತೈರಾಕ್ಷಿಪ್ಯ ಮಮೃದುಃ ಪದ್ಭಿಶ್ಚಾಪ್ಯತಿಮನ್ಯವಃ ॥44॥
ಮ್ಲೇಚ್ಛರು ಕಳಿಸಿಕೊಟ್ಟ ಆ ಆನೆಗಳು ಬಹಳ ಕೋಪ ಉಳ್ಳವುಗಳು. ಪದಾತಿಗಳನ್ನು ಅಶ್ವಗಳನ್ನು ರಥಗಳನ್ನೂ ಸೊಂಡಿಲುಗಳಿಂದ ಮತ್ತು ಕಾಲುಗಳಿಂದ ಎತ್ತಿಹಾಕಿ ತುಳಿದು ಧ್ವಂಸ ಮಾಡಿದುವು.
ಬಿಭಿದುಶ್ಚ ವಿಷಾಣಾಗ್ರೈಃ ಸಮುತ್ಕ್ಷಿಪ್ಯ ಚ ಚಿಕ್ಷಿಪುಃ |
ವಿಷಾಣಭಗ್ನಾಶ್ಚಾಪ್ಯನ್ಯೇ ತದಾ ಪೇತುರ್ವಿಭೀಷಣಮ್ ॥45॥
ಪದಾತಿ ಅಶ್ವರಥಗಳನ್ನು ಆನೆಗಳು ದಂತದ ತುದಿಗಳಿಂದ ಚುಚ್ಚಿ ಎತ್ತಿ ನೆಲಕ್ಕೆ ಅಪ್ಪಳಿಸಿದುವು. ದಂತದ ತುದಿಯಿಂದ ಸೀಳಾದವರು ಕೆಲವರು ಭೀಕರವಾಗಿ ಪತನ ಹೊಂದಿದರು.
ಪ್ರಮುಖೇ ವರ್ತಮಾನಂ ತು ದ್ವಿಪಮಂಗಸ್ಯ ಸಾತ್ಯಕಿಃ |
ನಾರಾಚೇನೋಗ್ರವೇಗೇನ ಭಿತ್ತ್ವಾ ಮರ್ಮಾಣ್ಯತಾಡಯತ್ ॥46॥
ಸಾತ್ಯಕಿಯು ತನ್ನೆದುರಿಗೆ ಬಂದಿದ್ದ ಅಂಗರಾಜನ ಆನೆಯನ್ನು ಉಗ್ರವೇಗದ ಬಾಣದಿಂದ ಭೇದಿಸಿ ಮರ್ಮಸ್ಥಾನಗಳಿಗೆ ಹೊಡೆದ.
ತಸ್ಯಾವರ್ಜಿತಕಾಯಸ್ಯ ದ್ವಿರದಾದುತ್ಪತಿಷ್ಯತಃ |
ನಾರಾಚೇನಾಹನದ್ ವಕ್ಷಃ ಸಾತ್ಯಕಿಃ ಸೋಽಪತದ್ ಭುವಿ ॥47॥
ಆಗ ಆ ಆನೆಯ ಮೇಲಿಂದ ಅಂಗರಾಜ ಕೆಳಗೆ ಹಾರುವುದಕ್ಕಾಗಿ ಮೈಯನ್ನು ಬಗ್ಗಿಸಿಕೊಂಡು ಮೇಲೆ ಮಾಡುತ್ತಿದ್ದಾಗ ಅವನ ಎದೆಗೆ ಸಾತ್ಯಕಿ ಬಾಣದಿಂದ ಹೊಡೆದ. ಆತ ನೆಲದಲ್ಲಿ ಸತ್ತುಬಿದ್ದ.
ಈ ಅಂಗರಾಜ ಹಿಂದೆ ಹನ್ನೆರಡನೇ ದಿನದ ಯುದ್ಧದಲ್ಲಿ ಭೀಮನಿಂದ ಹತನಾದ ಅಂಗರಾಜನಲ್ಲ. ಇನ್ನೊಬ್ಬ ಅಂಗರಾಜ.
ಪುಂಡ್ರಸ್ಯಾಪತತೋ ನಾಗಂ ಚಲಂತಮಿವ ಪರ್ವತಮ್ |
ಸಹದೇವಃ ಪ್ರಯತ್ನಾಸ್ತೈರ್ನಾರಾಚೈರಹನತ್ ತ್ರಿಭಿಃ ॥48॥
ನಡೆದಾಡುವ ಬೆಟ್ಟದಂತಿದ್ದ ಪುಂಡ್ರರಾಜನ ಆನೆ ಇದಿರಿಗೆ ನುಗ್ಗಿ ಬಂದಾಗ ಸಹದೇವ ಪ್ರಯತ್ನಪೂರ್ವಕವಾಗಿ ಮೂರು ಬಾಣಗಳನ್ನು ಎಸೆದು ಅದನ್ನು ಹೊಡೆದ.
ವಿಪತಾಕಂ ವಿಯಂತಾರಂ ವಿವರ್ಮಧ್ವಜಜೀವಿತಮ್ |
ತಂ ಕೃತ್ವಾ ದ್ವಿರದಂ ಭೂಯಃ ಸಹದೇವೋಽಂಗಮಭ್ಯಯಾತ್ ॥49॥
ಆ ಆನೆಯನ್ನು ಸಹದೇವನು ಪತಾಕೆ ಇಲ್ಲದಂತೆ, ಮಾವುತನಿಲ್ಲದಂತೆ, ಕವಚಧ್ವಜ ರಹಿತವಾಗಿ, ಕೇವಲ ಬದುಕಿರುವಂತೆ ಮಾಡಿ ಪುನಃ ಪುಂಡ್ರರಾಜನನ್ನು ಇದಿರಿಸಿದ.
ಸಹದೇವಂ ತು ನಕುಲೋ ವಾರಯಿತ್ವಾಂಗಮಾರ್ದಯತ್ |
ನಾರಾಚೈರ್ಯಮದಂಡಾಭೈಸ್ತ್ರಿಭಿರ್ನಾಗಂ ಶತೇನ ತಮ್ ॥50॥
ಆದರೆ ನಕುಲನು ಬಂದು ಸಹದೇವನನ್ನು ತಡೆದು ತಾನೇ ಅಂಗರಾಜನನ್ನು ಯಮದಂಡದಂಥ ಮೂರು ಬಾಣಗಳಿಂದ ಹೊಡೆದ. ಆನೆಯನ್ನು ನೂರು ಬಾಣಗಳಿಂದ ಹೊಡೆದ.
ಇಲ್ಲಿ `ಅಂಗರಾಜ'ನೆಂದರೆ ಅಂಗದೇಶದ ಇನ್ನೊಬ್ಬ ರಾಜ. ಅವನ ಹೆಸರು ಪುಂಡ್ರ ಎಂದು 48ನೇ ಶ್ಲೋಕ ಹೇಳಿದೆ. ಅದರಿಂದ ವಿರೋಧವಿಲ್ಲ. ಮತ್ತು `ವಿ-ವರ್ಮ ಧ್ವಜಜೀವಿತಂ' ಎಂದರೆ ಕವಚ ಧ್ವಜ ಪ್ರಾಣಗಳು ಮೂರೂ ಇಲ್ಲದ್ದೆಂದು ಅರ್ಥವಿಟ್ಟುಕೊಂಡರೆ ಆಗಲೆ ಪ್ರಾಣಬಿಟ್ಟಿದ್ದ ಆನೆಗೆ ನೂರು ಬಾಣಗಳನ್ನು ನಕುಲ ಏಕೆ ಎಸೆಯುತ್ತಾನೆ? ಅದರಿಂದ `ವರ್ಮ ಧ್ವಜಗಳು ಇಲ್ಲದೆಯೆ ಬದುಕಿರುವಂತೆ ಸಹದೇವ ಮಾಡಿದ್ದನೆಂ'ದು ಹೇಳಬೇಕು. ಅಥವಾ ಇದೀಗ ಬೇರೆ ಒಂದು ಆನೆಗೆ ನಕುಲ ಬಾಣಗಳನ್ನೆಸೆಯುತ್ತಿದ್ದಾನೆ ಎನ್ನಬೇಕು.
ದಿವಾಕರಕರಪ್ರಖ್ಯಾನಂಗಶ್ಚಿಕ್ಷೇಪ ತೋಮರಾನ್ |
ನಕುಲಾಯ ಶತಾನ್ಯಷ್ಟೌ ತ್ರಿಧೈಕೈಕಂ ತು ಸೋಽಚ್ಛಿನತ್ ॥51॥

ಅಂಗರಾಜ ಸೂರ್ಯಕಿರಣಗಳಂಥ ಎಂಟುನೂರು ತೋಮರಗಳನ್ನು ನಕುಲನ ಮೇಲೆ ಎಸೆದ. ಅವೆಲ್ಲವನ್ನೂ ಒಂದೊಂದನ್ನು ಮೂರು ಮೂರು ತುಂಡುಗಳಾಗಿ ನಕುಲ ಕತ್ತರಿಸಿದ.
ತಥಾಽರ್ಧಚಂದ್ರೇಣ ಶಿರಸ್ತಸ್ಯ ಚಿಚ್ಛೇದ ಪಾಂಡವಃ |
ಸ ಪಪಾತ ಹತೋ ಮ್ಲೇಚ್ಛಸ್ತೇನೈವ ಸಹ ದಂತಿನಾ ||52||
ಮತ್ತು ಅರ್ಧಚಂದ್ರಬಾಣದಿಂದ ಅಂಗರಾಜನ ಶಿರವನ್ನೇ ತರಿದ. ಮ್ಲೇಚ್ಛನಾದ ಅಂಗರಾಜ ಆ ಆನೆಯೊಂದಿಗೇ ತಾನೂ ಸತ್ತುಬಿದ್ದ.
ಅಥಾಂಗಪುತ್ರೇ ನಿಹತೇ ಹಸ್ತಿಶಿಕ್ಷಾವಿಶಾರದೇ |
ಅಂಗಾಃ ಕ್ರುದ್ಧಾ ಮಹಾಮಾತ್ರಾ ನಾಗೈರ್ನಕುಲಮಭ್ಯಯುಃ ||53||
ಹಸ್ತಿಶಿಕ್ಷಾವಿಶಾರದನಾದ ಅಂಗಪುತ್ರನು ಹೀಗೆ ಹತನಾದಾಗ ಬಲುಕುಪಿತರಾದ ಅಂಗರಾಜ್ಯದ ಗಜಾರೋಹಿಗಳು ಗಜಗಳನ್ನೇರಿ ನಕುಲನ ಕಡೆಗೆ ನುಗ್ಗಿ ಬಂದರು.
ಇಲ್ಲಿ ಪುಂಡ್ರನೆಂಬ ಮ್ಲೇಚ್ಛ ಅಂಗರಾಜನನ್ನು `ಅಂಗಪುತ್ರ' ಎಂದುದರಿಂದ ಈತ ಹಿಂದೆ ಹನ್ನೆರಡನೆ ದಿನದ ಯುದ್ಧದಲ್ಲಿ ಭೀಮನಿಂದ ಹತನಾದ ಮ್ಲೇಚ್ಛ ಅಂಗರಾಜನ ಪುತ್ರ ಎಂದಂತಾಯಿತು.
ಚಲತ್ಪತಾಕೈಃ ಸುಮುಖೈರ್ಹೇಮಕಕ್ಷ್ಯಾತನುಚ್ಛದೈಃ |
ಮಿಮರ್ದಿಷಂತಸ್ತ್ವರಿತಾಃ ಪ್ರದೀಪ್ತೈರಿವ ಪರ್ವತೈಃ ||54||
ಮೇಕಲೋತ್ಕಲಕಾಲಿಂಗಾ ನಿಷಧಾಸ್ತಾಮ್ರಲಿಪ್ತಿಕಾಃ |
ಶರತೋಮರವರ್ಷಾಣಿ ವಿಮುಂಚಂತೋ ಜಿಘಾಂಸವಃ ||55||
ಚಲಿಸುವ ಪತಾಕೆಗಳಿಂದ ಸುಂದರ ಮುಖಗಳಿಂದ ಕೂಡಿದ ಆ ಆನೆಗಳು ಬಂಗಾರದ ಕವಚ ಹಗ್ಗಗಳಿಂದ ಕಾಳ್ಗಿಚ್ಚಿನಿಂದ ಹೊತ್ತಿ ಉರಿವ ಬೆಟ್ಟದಂತೆ ಕಂಡುಬಂದುವು. ಮೇಕಲ ಉತ್ಕಲ ಕಲಿಂಗ ನಿಷಧ ತಾಮ್ರಲಿಪ್ತಿಕ ದೇಶಗಳ ಯೋಧರು ಆ ಆನೆಗಳ ಮೂಲಕ ಪಾಂಡವರ ಸೈನ್ಯವನ್ನು ಮರ್ದಿಸುವಾಸೆಯಿಂದ ಬೇಗನೆ ಬಂದು ಶರ ತೋಮರಗಳ ಮಳೆಗರೆದು ಕೊಲ್ಲಲು ಬಯಸಿದರು.
ತೈಶ್ಛಾದ್ಯಮಾನಂ ನಕುಲಂ ನಿಶಾಕರಮಿವಾಂಬುದೈಃ |
ಪರಿಪೇತುಃ ಸುಸಂರಬ್ಧಾಃ ಪಾಂಡುಪಾಂಚಾಲಸಾತ್ಯಕಾಃ ||56||
ಮೋಡಗಳು ಚಂದ್ರನನ್ನು ಮುಚ್ಚುವಂತೆ ಅವರು ನಕುಲನನ್ನು ಆವರಿಸುವಾಗ ಪಾಂಡವ ಪಾಂಚಾಲ ಸಾತ್ಯಕ ಸೈನಿಕರು ಕೋಪಗೊಂಡು ಸುತ್ತಲೂ ಆಕ್ರಮಿಸಿದರು.
ತತಸ್ತದಭವದ್ಯುದ್ಧಂ ರಥಿನಾಂ ಹಸ್ತಿಭಿಃ ಸಹ |
ಸೃಜತಾಂ ಶರವರ್ಷಾಣಿ ತೋಮರಾಂಶ್ಚ ಸಹಸ್ರಶಃ ||57||
ಆಗ ರಥಿಕರಿಗೆ ಆನೆಗಳೊಂದಿಗೆ ಯುದ್ಧ ನಡೆಯಿತು. ರಥಿಕರು ಬಾಣಗಳ ಮಳೆಗರೆದರು ಮತ್ತು ಸಾವಿರಾರು ತೋಮರಗಳನ್ನೆಸೆದರು.
ನಾಗಾನಾಂ ಪ್ರಾಸ್ಫುಟನ್ ಕುಂಭಾ ಮರ್ಮಾಣಿ ವಿವಿಧಾನಿ ಚ |
ದಂತಾಶ್ಚೈವಾತಿವಿದ್ಧಾನಾಂ ನಾರಾಚೈರ್ಹೇಮಭೂಷಣೈಃ ||58||
ಆನೆಗಳ ಕುಂಭಸ್ಥಳಗಳು ಒಡೆದುವು. ನಾನಾ ಬಗೆಯ ಕವಚಗಳು ಪುಡಿಯಾದುವು. ದಂತಗಳು ಮುರಿದುವು. ಏಕೆಂದರೆ ಬಂಗಾರದಿಂದ ಅಲಂಕೃತವಾದ ಬಾಣಗಳಿಂದ ಆನೆಗಳು ಬಹಳವಾಗಿ ಹೊಡೆಸಿಕೊಂಡುವು.
ತೇಷಾಮಷ್ಟೌ ಮಹಾನಾಗಾಂಶ್ಚತುಃಷಷ್ಟ್ಯಾ ಸುತೇಜನೈಃ |
ನಾರಾಚೈಃ ಸಹದೇವಸ್ತಾನ್ ಪಾತಯಾಮಾಸ ಸಾದಿಭಿಃ ||59||
ಅವುಗಳಲ್ಲಿ ಎಂಟು ಆನೆಗಳನ್ನು ಸವಾರರೊಂದಿಗೆ ಹರಿತವಾದ ಅರವತ್ತನಾಲ್ಕು ಬಾಣಗಳಿಂದ ಸಹದೇವನು ಹೊಡೆದು ಕೆಡವಿದ.
ಅಂಜೋಗತಿಭಿರಾಯಮ್ಯ ಪ್ರಯತ್ನಾದ್ಧನುರುತ್ತಮಮ್ |
ನಾರಾಚೈರಹನನ್ನಾಗಾನ್ ನಕುಲಃ ಕುಲನಂದನಃ ||60||
ಕುಲನಂದನನಾದ ನಕುಲನು ತನ್ನ ಉತ್ತಮವಾದ ಧನುಸ್ಸನ್ನು ಪ್ರಯತ್ನ ಪೂರ್ವಕವಾಗಿ ಬಗ್ಗಿಸಿ ಚೆನ್ನಾಗಿ ಹಾರುವ ಬಾಣಗಳಿಂದ ಆನೆಗಳನ್ನು ಸಂಹರಿಸಿದ.
ತತಃ ಪಾಂಚಾಲಶೈನೇಯೌ ದ್ರೌಪದೇಯಾಃ ಪ್ರಭದ್ರಕಾಃ |
ಶಿಖಂಡೀ ಚ ಮಹಾನಾಗಾನ್ ಸಿಷಿಚುಃ ಶರವೃಷ್ಟಿಭಿಃ ||61||
ಧೃಷ್ಟದ್ಯುಮ್ನ ಸಾತ್ಯಕಿ ದ್ರೌಪದೀಪುತ್ರರು ಪ್ರಭದ್ರಕರು ಮತ್ತು ಶಿಖಂಡಿ ಎಲ್ಲರೂ ಮಹಾಗಜಗಳ ಮೇಲೆ ಬಾಣಗಳ ಮಳೆಗರೆದರು.
ತೇ ಪಾಂಡುಯೋಧಾಂಬುಧರೈಃ ಶತ್ರುದ್ವಿರದಪರ್ವತಾಃ |
ಬಾಣವರ್ಷೈರ್ಹತಾಃ ಪೇತುರ್ವಜ್ರವರ್ಷೈರಿವಾಚಲಾಃ ||62||
ಪಾಂಡವಯೋಧರೆಂಬ ಮೋಡಗಳು ಸುರಿಸಿದ ಬಾಣಗಳ ಮಳೆಯಿಂದ, ವಜ್ರಪಾತಗಳ ಮಳೆಗಳಿಂದ ಬೆಟ್ಟಗಳು ಬೀಳುವಂತೆ, ಶತ್ರುಗಜಗಳೆಂಬ ಬೆಟ್ಟಗಳು ಪುಡಿಯಾಗಿ ಬಿದ್ದುವು.
ಏವಂ ಹತ್ವಾ ತವ ಗಜಾಂಸ್ತೇ ಪಾಂಡುರಥಕುಂಜರಾಃ |
ದ್ರುತಂ ಸೇನಾಂ ಚ ವರ್ಷಂತೋ ಭಿನ್ನಕೂಲಾಮಿವಾಪಗಾಮ್ ||63||
ಪಾಂಡವರ ರಥ ಗಜ ಸೈನಿಕರು, ನಿನ್ನ ಗಜಸೇನೆಯನ್ನು ಸಂಹರಿಸಿ ನಿನ್ನ ಸಮಸ್ತ ಸೈನ್ಯದ ಮೇಲೂ ಆಯುಧಗಳ ಮಳೆಗರೆದರು. ದಡಗಳನ್ನೊಡೆದುಕೊಂಡ ನದಿ ದಿಕ್ಕು ದಿಕ್ಕುಗಳಿಗೆ ಹರಿಯುವಂತೆ ಸೈನ್ಯ ದಿಕ್ಕಾಪಾಲಾಗಿ ಓಡುವಂತೆ ಮಾಡಿದರು.
ತಾಂ ತೇ ಸೇನಾಂ ಸಮಾಲೋಡ್ಯ ಪಾಂಡುಪುತ್ರಸ್ಯ ಸೈನಿಕಾಃ |
ವಿಕ್ಷೋಭಯಿತ್ವಾ ಚ ಪುನಃ ಕರ್ಣಂ ಸಮಭಿದುದ್ರುವುಃ ||64||
ಹೀಗೆ ಪಾಂಡವರ ಸೈನಿಕರು ಕೌರವಸೈನ್ಯವನ್ನು ಚೆನ್ನಾಗಿ ಕದಡಿ ಕ್ಷೋಭೆಗೊಳಿಸಿ ತಿರುಗಿ ಕರ್ಣನ ಕಡೆಗೆ ಮುನ್ನುಗ್ಗಿದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ದ್ವಾವಿಂಶೋಽಧ್ಯಾಯಃ ॥22॥
ಇಪ್ಪತ್ತಮೂರನೆಯ ಅಧ್ಯಾಯ
ಸಹದೇವನಿಂದ ದುಃಶಾಸನನ ಪರಾಜಯ.
ಸಂಜಯಃ
ಸಹದೇವಂ ತದಾ ಕ್ರುದ್ಧಂ  ನಿಘ್ನಂತಂ ತವ ವಾಹಿನೀಮ್ ।
ದುಃಶಾಸನೋ ಮಹಾರಾಜ ಭ್ರಾತಾ ಭ್ರಾತರಮಭ್ಯಯಾತ್ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ–  ಮಹಾರಾಜ, ನಿನ್ನ ಸೈನ್ಯವನ್ನು ಸಹದೇವನು ಕ್ರುದ್ಧನಾಗಿ ಸಂಹರಿಸುತ್ತಿದ್ದಾಗ ಸೋದರ ದುಃಶಾಸನನು ಸೋದರನಾದ ಸಹದೇವನನ್ನು ಇದಿರಿಸಿದ.
ತೌ ಸಮೇತೌ ಮಹಾರಂಗೇ ದೃಷ್ಟ್ವಾ ತತ್ರ  ನರಾಧಿಪಾಃ ।
ಸಿಂಹನಾದರವಾಂಶ್ಚಕ್ರುರ್ವಾಸಾಂಸ್ಯಾದುಧುವುಶ್ಚ ಹ ॥2॥
ಸಹದೇವ ದುಃಶಾಸನರಿಬ್ಬರು ಮಹಾ ರಣಭೂಮಿಯಲ್ಲಿ  ಸಂಧಿಸಿದುದನ್ನು ಕಂಡು ರಾಜರು ಸಿಂಹನಾದ ಮಾಡಿದರು. ಅಂಗವಸ್ತ್ರಗಳನ್ನು ಮೇಲಕ್ಕೆ ಹಾರಿಸಿದರು.
ತತ್ರ ಭಾರತ ರುಷ್ಟೇನ ತವ ಪುತ್ರೇಣ ಧನ್ವಿನಾ ।
ಪಾಂಡುಪುತ್ರಸ್ತ್ರಿಭಿರ್ಬಾಣೈರ್ವಕ್ಷಸ್ಯಭಿಹತೋ ಭೃಶಮ್ ॥3॥
ರಾಜನೆ, ಧನುರ್ಧಾರಿಯಾದ ನಿನ್ನ ಪುತ್ರ ಕುಪಿತನಾಗಿ ಸಹದೇವನನ್ನು ಎದೆಯಲ್ಲಿ ಮೂರು ಬಾಣಗಳಿಂದ ಚೆನ್ನಾಗಿ ಹೊಡೆದ.
ಸಹದೇವಸ್ತತೋ ರಾಜನ್ ನಾರಾಚೈಸ್ತು ತವಾತ್ಮಜಮ್ ।
ವಿವ್ಯಾಧೋರಸಿ ಸಪ್ತತ್ಯಾ ಸಾರಥಿಂ ಚೇಷುಭಿಸ್ತ್ರಿಭಿಃ ॥4॥
ರಾಜನೆ, ಸಹದೇವನು ಆಗ ನಿನ್ನ ಪುತ್ರನನ್ನು ಎಪ್ಪತ್ತು ಬಾಣಗಳಿಂದ ಎದೆಯಲ್ಲಿ ಹೊಡೆದ. ಮೂರು ಬಾಣಗಳಿಂದ ಸಾರಥಿಯನ್ನು ಹೊಡೆದ.
ದುಃಶಾಸನಸ್ತತಶ್ಚಾಪಂ ಛಿತ್ತ್ವಾ ರಾಜನ್ ಮಹಾಹವೇ ।
ಸಹದೇವಂ ತ್ರಿಸಪ್ತತ್ಯಾ ಬಾಹ್ವೋರುರಸಿ ಚಾರ್ಪಯತ್ ॥5॥
ರಾಜನೆ, ದುಃಶಾಸನನು ಮಹಾಯುದ್ಧದಲ್ಲಿ ಸಹದೇವನ ಬಿಲ್ಲನ್ನು ಕಡಿದು ಅವನನ್ನು ತೋಳುಗಳಲ್ಲಿ ಎದೆಯಲ್ಲಿ ಎಪ್ಪತ್ತಮೂರು ಬಾಣಗಳಿಂದ ಹೊಡೆದ.
ಸಹದೇವಸ್ತತಃ ಕ್ರುದ್ಧಃ ಖಡ್ಗಮುದ್ಯಮ್ಯ ಮಾರಿಷ ।
ಆವಿಧ್ಯ ವ್ಯಸೃಜತ್ ತೂರ್ಣಂ ತವ ಪುತ್ರರಥಂ ಪ್ರತಿ ॥6॥
ರಾಜನೆ, ಸಹದೇವನು ಆಗ ಕ್ರುದ್ಧನಾಗಿ ಖಡ್ಗವನ್ನೆತ್ತಿ ತಿರುಗಿಸಿ ವೇಗವಾಗಿ ನಿನ್ನ ಪುತ್ರನ ರಥದ ಕಡೆಗೆ ಎಸೆದ.
ಸಮಾರ್ಗಣಗುಣಂ ಚಾಪಂ ದ್ವಿಧಾ ಕೃತ್ವಾ ಮಹಾನಸಿಃ ।
ನಿಪಪಾತ ತತೋ ಭೂಮೌ ಚ್ಯುತಃ ಸರ್ಪ ಇವಾಂಬರಾತ್ ॥7॥
ಆ ಖಡ್ಗವು ದುಃಶಾಸನನ ಬಿಲ್ಲನ್ನು ಬಾಣ ಹೆದೆಗಳೊಂದಿಗೆ ಎರಡಾಗಿ ಛೇದಿಸಿದಾಗ ಆಕಾಶದಿಂದ ಚ್ಯುತವಾದ ಸರ್ಪದಂತೆ ಭೂಮಿಯಲ್ಲಿ ಬಿದ್ದಿತು.
ಅಥಾನ್ಯದ್ಧನುರಾದಾಯ ಮಾದ್ರೇಯಃ ಕ್ರೋಧಮೂರ್ಛಿತಃ ।
ದುಃಶಾಸನಾಯ ಚಿಕ್ಷೇಪ ಬಾಣಮಂತಕರಂ ಪರಮ್ ॥8॥
ಬಳಿಕ ಸಹದೇವ ಕ್ರೋಧಪರವಶನಾಗಿ ಇನ್ನೊಂದು ಬಿಲ್ಲನ್ನೆತ್ತಿಕೊಂಡು ಬಹಳ ನಾಶಕರವಾದ ಬಾಣವನ್ನು ದುಃಶಾಸನನಿಗೆ ಎಸೆದ.
ತಮಾಪತಂತಂ  ವೇಗೇನ  ಯಮದಂಡಮಿವಾಪರಮ್ ।
ಖಡ್ಗೇನ ಶಿತಧಾರೇಣ ದ್ವಿಧಾ ಚಿಚ್ಛೇದ ಕೌರವಃ ॥9॥
ವೇಗವಾಗಿ ತನ್ನ ಮೇಲೆ ಬೀಳುತ್ತಿದ್ದ ಇನ್ನೊಂದು ಯಮದಂಡದಂತಿದ್ದ ಆ ಬಾಣವನ್ನು ದುಃಶಾಸನ ಹರಿತವಾದ ಅಲುಗಿನ ಕತ್ತಿಯಿಂದ ಎರಡಾಗಿ ಛೇದಿಸಿದ.
ತತಸ್ತಂ ನಿಶಿತಂ  ಖಡ್ಗಂ ಪ್ರಾವಿಧ್ಯತ್ ತಸ್ಯ ಸತ್ವರಮ್ ।
ಧನುಶ್ಚಾನ್ಯತ್ ಸಮಾದಾಯ ಶರಂ ಜಗ್ರಾಹ ವೀರ್ಯವಾನ್ ॥10॥
ಹರಿತವಾದ ಆ ಖಡ್ಗವನ್ನೆ ತಿರುಗಿಸಿ ವೇಗವಾಗಿ ಸಹದೇವನ ಮೇಲೆಸೆದ, ವೀರ್ಯಶಾಲಿಯಾದ ದುಃಶಾಸನ. ಇನ್ನೊಂದು ಬಿಲ್ಲನ್ನೆತ್ತಿಕೊಂಡು ಬಾಣವನ್ನು ಹೂಡಿದ.
ತಮಾಪತಂತಂ ವೇಗೇನ ನಿಸ್ತ್ರಿಂಶಂ ನಿಶಿತೈಃ ಶರೈಃ ।
ಸಮರೇಽಪಾತಯದ್ ಧೃಷ್ಟಃ ಸಹದೇವೋ ಹಸನ್ನಿವ ॥11॥
ವೇಗವಾಗಿ ತನ್ನ ಮೇಲೆ ಬೀಳುತ್ತಿದ್ದ ಖಡ್ಗವನ್ನು ಧೀರನಾದ ಸಹದೇವ ನಗುತ್ತ ಹರಿತವಾದ ಬಾಣಗಳಿಂದ ರಣಭೂಮಿಯಲ್ಲಿ ಬೀಳಿಸಿದ.
ತತೋ ಬಾಣಾಂಶ್ಚತುಷ್ಷಷ್ಟಿಂ ತವ ಪುತ್ರೋ ಮಹಾರಥಃ ।
ಸಹದೇವರಥೇ ತೂರ್ಣಂ ಪ್ರೇಷಯಾಮಾಸ ಭಾರತ ॥12॥
ರಾಜನೆ, ಮಹಾರಥನಾದ ನಿನ್ನ ಪುತ್ರನು ಅರವತ್ತನಾಲ್ಕು ಬಾಣಗಳನ್ನು ಸಹದೇವನ ರಥಕ್ಕೆ ವೇಗವಾಗಿ ಎಸೆದ.
ಶರಾನಾಪತತಸ್ತೂರ್ಣಂ ಸಮರೇ ತಾನ್ ಸುವೇಗಿನಃ ।
ಏಕೈಕಂ ಪಂಚಭಿರ್ಬಾಣೈರ್ಮಾದ್ರೇಯಸ್ತು ಸಮಾಚ್ಛಿನತ್ ॥13॥

ಯುದ್ಧದಲ್ಲಿ ವೇಗವಾಗಿ ತನ್ನ ಮೇಲೆ ಬೀಳುತ್ತಿದ್ದ ಆ ಬಾಣಗಳನ್ನು ಒಂದೊಂದನ್ನೂ ಐದು ಬಾಣಗಳಿಂದ ಸಹದೇವ ಕತ್ತರಿಸಿದ.
ತಾನ್ ನಿವಾರ್ಯ ತತೋ ಬಾಣೈಃ ಸಹದೇವಃ ಪ್ರತಾಪವಾನ್ |
ಶತಸಂಖ್ಯಾಂಸ್ತತೋ ಬಾಣಾನ್ ಪ್ರೇಷಯಾಮಾಸ ಸಂಯುಗೇ ॥14॥
ಹೀಗೆ ಆ ಬಾಣಗಳನ್ನು ಪ್ರತಾಪಶಾಲಿಯಾದ ಸಹದೇವ ಬಾಣಗಳಿಂದ ತಡೆದು ಯುದ್ಧದಲ್ಲಿ ನೂರು ಬಾಣಗಳನ್ನು ದುಃಶಾಸನನ ಮೇಲೆಸೆದ.
ತಾನ್ ಬಾಣಾಂಸ್ತವ ಪುತ್ರೋಽಪಿ ಛಿತ್ತ್ವೈಕೈಕಂ ತ್ರಿಭಿಸ್ತ್ರಿಭಿಃ |
ನನಾದ ಸುಮಹಾನಾದಂ ನಾದಯಾನೋ ವಸುಂಧರಾಮ್ ॥15॥
ಆ ಬಾಣಗಳನ್ನು ನಿನ್ನ ಪುತ್ರನು ಒಂದೊಂದನ್ನು ಮೂರು ಮೂರು ಬಾಣಗಳಿಂದ ಕಡಿದು ರಣಭೂಮಿ ಪ್ರತಿಧ್ವನಿಸುವಂತೆ ಮಹಾನಾದಗೈದ.
ತತೋ ದುಃಶಾಸನೋ ರಾಜನ್ ದ್ವಾಭ್ಯಾಂ ಪಾಂಡುಸುತಂ ರಣೇ |
ಸಾರಥಿಂ ನವಭಿರ್ಬಾಣೈರ್ಮಾದ್ರೇಯಸ್ಯ ಸಮಾಚಿನೋತ್ ॥16॥
ರಾಜನೆ, ಬಳಿಕ ದುಃಶಾಸನ ಎರಡು ಬಾಣಗಳಿಂದ ಸಹದೇವನನ್ನು ಹೊಡೆದು, ಒಂಬತ್ತು ಬಾಣಗಳಿಂದ ಸಹದೇವನ ಸಾರಥಿಯನ್ನು ಪ್ರಹರಿಸಿದ.
ತತಃ ಕ್ರುದ್ಧೋ ಮಹಾರಾಜ ಸಹದೇವಃ ಪ್ರತಾಪವಾನ್ |
ಸಮಧತ್ತ ಶರಂ ಘೋರಂ ಮೃತ್ಯುಕಾಲಾಂತಕೋಪಮಮ್ ॥17॥
ವಿಕೃಷ್ಯ ಬಲವಚ್ಚಾಪಂ ತವ ಪುತ್ರಾಯ ಸೋಽಸೃಜತ್ ॥18॥
ಮಹಾರಾಜ, ಆಗ ಕ್ರುದ್ಧನಾದ ಪ್ರತಾಪಶಾಲಿ ಸಹದೇವನು ಮೃತ್ಯು ಕಾಲ ಅಂತಕರಿಗೆ ಸಮವಾದ ಭಯಂಕರವಾದ ಬಾಣವನ್ನು ಬಿಲ್ಲಿಗೆ ಹೂಡಿ, ಬಲವಾಗಿ ಬಿಲ್ಲನ್ನು ಸೆಳೆದು, ನಿನ್ನ ಪುತ್ರನ ಮೇಲೆಸೆದ.
ಸ ತಂ ನಿರ್ಭಿದ್ಯ ವೇಗೇನ ಭಿತ್ತ್ವಾ ಚ ಕವಚಂ ಮಹತ್ |
ಪ್ರಾವಿಶದ್ ಧರಣೀಂ ತೂರ್ಣಂ ವಲ್ಮೀಕಮಿವ ಪನ್ನಗಃ ॥19॥
ಆ ಬಾಣವು ವೇಗದಿಂದ ದುಃಶಾಸನನ ದೊಡ್ಡಕವಚವನ್ನು ಭೇದಿಸಿ, ಅವನನ್ನೂ ಭೇದಿಸಿ ಹಾವು ಹುತ್ತದೊಳಗೆ ಸೇರಿಕೊಳ್ಳುವಂತೆ ರಣಭೂಮಿಯನ್ನು ಹೊಕ್ಕಿತು.
ಸ ಮುಮೋಹ ತತಃ ಪುತ್ರಸ್ತವ ರಾಜನ್ ಮಹಾಬಲಃ ॥20॥
ರಾಜನೆ, ಆಗ ಮಹಾಬಲಿಯಾದ ನಿನ್ನ ಪುತ್ರ ಮೂರ್ಛೆಗೊಂಡ.
ಮೂಢಂ ಚೈನಂ ಸಮಾಲಕ್ಷ್ಯ ಸಾರಥಿಸ್ತ್ವರಿತೋ ರಣಾತ್ |
ಅಪೋವಾಹ ಸುಸನ್ತ್ರಸ್ತೋ ವಧ್ಯಮಾನಂ ಶಿತೈಃ ಶರೈಃ ॥21॥
ಮೂರ್ಛಿತನಾದ ದುಃಶಾಸನನು ಹರಿತವಾದ ಬಾಣಗಳಿಂದ ಹೊಡೆಸಿ ಕೊಳ್ಳುತ್ತಿರುವುದನ್ನು ಕಂಡು ಸಾರಥಿ ಭಯಪಟ್ಟು ಬೇಗನೆ ರಣಭೂಮಿಯಿಂದ ಅವನನ್ನು ದೂರಕ್ಕೆ ಒಯ್ದ.
ಪರಾಜಿತ್ಯ ರಣೇ ತಂ ತು ಪಾಂಡವಃ ಪಾಂಡುಪೂರ್ವಜ |
ದುರ್ಯೋಧನಬಲಂ ಬಾಣೈಃ ಪ್ರಾಮಥದ್ ವೈ ಸಮಂತತಃ ॥22॥
ರಾಜನೆ, ಸಹದೇವ ಹೀಗೆ ದುಃಶಾಸನನನ್ನು ಪರಾಭವಗೊಳಿಸಿ ದುರ್ಯೋಧನನ ಸೈನ್ಯವನ್ನು ಎಲ್ಲಕಡೆ ಬಾಣಗಳಿಂದ ಮಥಿಸಿದ.
ಪಿಪೀಲಿಕಾಪುಟಂ ರಾಜನ್ ಯಥಾ ಮೃದ್ನನ್ ನರೋ ರುಷಾ |
ತಥಾ ಸಾ ಕೌರವೀ ಸೇನಾ ಮೃದಿತಾ ತೇನ ಭಾರತ ॥23॥
ರಾಜನೆ, ಕುಪಿತನಾದ ಮನುಷ್ಯನು ಇರುವೆಗಳ ಎಲೆದೊನ್ನೆಗಳನ್ನು ಹೊಸಕುವಂತೆ ಸಹದೇವನು ಆ ಕೌರವಸೈನ್ಯವನ್ನು ಮರ್ದಿಸಿದನು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಸಹದೇವಯುದ್ಧವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ ॥23॥

ಮಹಾಭಾರತತಾತ್ಪರ್ಯನಿರ್ಣಯ
ದೃಷ್ಟ್ವಾ ಕೃಪಸ್ತಂ ಸ್ವರಥಮಾರೋಪ್ಯಾಪಯಯೌ ತತಃ |
ತದೈವ ಕರ್ಣನಕುಲೌ ಭೃಶಂ ಬಾಣೈರಯುದ್ಧ್ಯತಾಮ್ ॥14॥
ಭೀಮನನ್ನು ಕಂಡು ಕೃಪ ದುರ್ಯೋಧನನನ್ನು ತನ್ನ ರಥದ ಮೇಲೆ ಹತ್ತಿಸಿಕೊಂಡು ಅಲ್ಲಿಂದ ಪಲಾಯನ ಮಾಡಿದ. ಆಗಲೆ ಕರ್ಣ ನಕುಲರೂ ಬಾಣಗಳಿಂದ ಚೆನ್ನಾಗಿ ಯುದ್ಧ ಮಾಡಿದರು.
ನಕುಲಂ ವಿರಥಂ ಕೃತ್ವಾ ಕರ್ಣೋಽಥ ಪ್ರಪಲಾಯಿನಮ್ |
ಅನುದ್ರುತ್ಯ ಚ ವೇಗೇನ ಕಂಠೇ ಧನುರವಾಸೃಜತ್ ॥15॥
ಕರ್ಣ ನಕುಲನನ್ನು ವಿರಥನನ್ನಾಗಿ ಮಾಡಿ, ಅವನು ಪಲಾಯನ ಮಾಡತೊಡಗಿದಾಗ ವೇಗದಿಂದ ಬೆನ್ನಟ್ಟಿ ಕುತ್ತಿಗೆಗೆ ಬಿಲ್ಲಿಂದ ತಿವಿದ.
ಉಕ್ತ್ವಾ ಚ ಪರುಷಾ ವಾಚಃ ಕುಂತ್ಯಾ ವಚನಗೌರವಾತ್ |
ನ ಜಘಾನೈವ ನಕುಲಂ ವಿಸೃಜ್ಯ ಚ ಪರಾನ್ ಯಯೌ ॥16॥
ಕರ್ಣ ಕುಂತಿಗೆ ಕೊಟ್ಟ ಮಾತಿಗೆ ಗೌರವ ಕೊಟ್ಟು ನಕುಲನನ್ನು ಕೊಲ್ಲದೆ ಬಿಟ್ಟ. ಅವನಿಗೆ ಕಟುವಾದ ನಿಂದೆಯ ಮಾತುಗಳನ್ನಾಡಿ ಕಳಿಸಿ ಬೇರೆ ಯೋಧರೊಡನೆ ಯುದ್ಧಕ್ಕೆ ಹೊರಟುಹೋದ.

ಇಪ್ಪತ್ತನಾಲ್ಕನೆಯ ಅಧ್ಯಾಯ
ಕರ್ಣನಿಂದ ನಕುಲ ಪರಾಭವ. ಪಾಂಡವ ಸೈನ್ಯ ಪರಾಭವ.
ಸಂಜಯಃ
ನಕುಲಂ ರಭಸಂ ಯುದ್ಧೇ ತಪನ್ತಂ ತವ ವಾಹಿನೀಮ್ |
ಕರ್ಣೋ ವೈಕರ್ತನೋ ರಾಜನ್ ವಾರಯಾಮಾಸ ವೈ ರುಷಾ ॥1॥
ಸಂಜಯನು ಧೃತರಾಷ್ಟ್ರನಿಗೆ ನುಡಿಯುತ್ತಾನೆ– ರಾಜನೆ, ಯುದ್ಧದಲ್ಲಿ ವೇಗಶಾಲಿಯಾದ ನಕುಲನು ನಿನ್ನ ಸೈನ್ಯವನ್ನು ನಾಶಪಡಿಸುವಾಗ ಕರ್ಣನು ಕೋಪದಿಂದ ಅವನನ್ನು ತಡೆದ.
ನಕುಲಸ್ತು ತತಃ ಕರ್ಣಂ ಪ್ರಹಸನ್ನಿದಮಬ್ರವೀತ್ ॥2॥
ನಕುಲನು ಆಗ ನಗುತ್ತ ಕರ್ಣನಿಗೆ ಹೇಳಿದ–
ನಕುಲಃ
ಚಿರಸ್ಯ ಬತ ದೃಷ್ಟೋಽಹಂ ದೈವತೈಃ ಸೌಮ್ಯಚಕ್ಷುಷಾ |
ಯಸ್ಯ ಮೇ ತ್ವಂ ರಣೇ ಪಾಪ ಚಕ್ಷುರ್ವಿಷಯಮಾಗತಃ ॥3॥
ನಕುಲನು ನುಡಿದ, `ಬಹುಕಾಲದ ಮೇಲೆ ನಾನೀಗ ದೇವತೆಗಳ ಸೌಮ್ಯದೃಷ್ಟಿಗೆ ಗೋಚರನಾಗಿದ್ದೇನೆ. ಏಕೆಂದರೆ ಪಾಪಿಯೆ, ನೀನು ರಣರಂಗದಲ್ಲಿ ನನ್ನ ದೃಷ್ಟಿಗೆ ಗೋಚರವಾಗಿರುವೆ.
ತ್ವಂ ಹಿ ಮೂಲಮನರ್ಥಾನಾಂ ವೈರಸ್ಯ ಕಲಹಸ್ಯ ಚ |
ತ್ವದ್ದೋಷಾತ್ ಕೌರವಾಃ ಕ್ಷೀಣಾಃ ಸಮಾಸಾದ್ಯ ಪರಸ್ಪರಮ್ ॥4॥
ನೀನೆ ಎಲ್ಲ ಅನರ್ಥಗಳಿಗೆ ಮೂಲ, ವೈರಕ್ಕೆ ಕಲಹಕ್ಕೆ ಪ್ರೇರಕ. ನಿನ್ನ ಅಪರಾಧದಿಂದಲೆ ಕುರುಕುಲದವರು ಪರಸ್ಪರ ವಿರೋಧಿಸಿ ಕ್ಷಯಹೊಂದಿದರು
ತ್ವಾಮದ್ಯ ಸಮರೇ ಹತ್ವಾ ಕೃತಕೃತ್ಯೋಽಸ್ಮಿ ಸತ್ವರಃ ॥5॥
ನಾನಿಂದು ಯುದ್ಧದಲ್ಲಿ ನಿನ್ನನ್ನು ಬೇಗನೆ ಕೊಂದು ಕೃತಕೃತ್ಯನಾಗುತ್ತಿದ್ದೇನೆ.
ಸಂಜಯಃ
ಏವಮುಕ್ತಃ ಪ್ರತ್ಯುವಾಚ ನಕುಲಂ ಸೂತನಂದನಃ ॥6॥
ಸಂಜಯ ನುಡಿದ– ಹೀಗೆ ನಕುಲ ಹೇಳಿದಾಗ ಕರ್ಣ ಪ್ರತಿಯಾಗಿ ಹೀಗೆ ನುಡಿದ–
ಕರ್ಣಃ
ಸದೃಶಂ ರಾಜಪುತ್ರಸ್ಯ ವಿಶೇಷೇಣ ಧನುಷ್ಮತಃ |
ಪ್ರಹರಸ್ವ ರಣೇ ವೀರ ಪಶ್ಯಾಮಃ ಪುರುಷೋ ಭವ ॥7॥
ಕರ್ಮ ಕೃತ್ವಾ ರಣೇ ಶೂರ ತತಃ ಕತ್ಥಿತುಮರ್ಹಸಿ ॥8॥
ಕರ್ಣ ನುಡಿದ– ನೀನು ಹೇಳುವುದು ರಾಜಕುಮಾರನಿಗೆ, ವಿಶೇಷವಾಗಿ ಧನುರ್ಧಾರಿಗೆ ಒಪ್ಪುತ್ತದೆ. ಆದರಿಂದ ವೀರನೆ, ನೀನು ಯುದ್ಧಮಾಡು, ನಾನು ನೋಡುತ್ತೇನೆ, ನಿನ್ನ ಪೌರುಷ ತೋರು. ಯುದ್ಧದಲ್ಲಿ ಪೌರುಷ ತೋರಿದ ಬಳಿಕ ಕೊಚ್ಚಿಕೊಳ್ಳು.
ಅನುಕತ್ವ ಸಮರೇ ತಾತ ಶೂರಾ ಯುಧ್ಯನ್ತಿ ಶಕ್ತಿತಃ |
ಯುಧ್ಯಸ್ವ ಸಮರೇ ಶಕ್ತ್ಯಾ ಪ್ರತಿಯೋತ್ಸ್ಯಾಮಿ ತೇ ರಣೇ ॥9॥
ಮಗು, ತಮ್ಮ ಬಗ್ಗೆ ಕೊಚ್ಚಿಕೊಳ್ಳದೇ ಶೂರರು ಮೊದಲಿಗೆ ಶಕ್ತ್ಯನುಸಾರ ಯುದ್ಧ ಮಾಡುತ್ತಾರೆ. ರಣರಂಗದಲ್ಲಿ ಶಕ್ತ್ಯನುಸಾರ ಯುದ್ಧಮಾಡು. ಯುದ್ಧದಲ್ಲಿ ನಿನಗೆ ನಾನು ಪ್ರತಿಯಾಗಿ ಯುದ್ಧ ಮಾಡುವೆನು.
ಸಂಜಯಃ
ಇತ್ಯುಕತ್ವ ಪ್ರಾಹರತ್ ತೂರ್ಣಂ ಪಾಂಡುಪುತ್ರಾಯ ಸೂತಜಃ |
ವಿವ್ಯಾಧ ಚೈನಂ ಸಮರೇ ತ್ರಿಸಪ್ತತ್ಯಾ ಶಿಲೀಮುಖೈಃ ॥10॥
ಸಂಜಯನು ನುಡಿಯುತ್ತಾನೆ– ಕರ್ಣನು ಹೀಗೆ ನಕುಲನಿಗೆ ಹೇಳಿ ಬೇಗನೆ ಪ್ರಹಾರಗೈದ. ಯುದ್ಧದಲ್ಲಿ ಎಪ್ಪತ್ತಮೂರು ಬಾಣಗಳಿಂದ ಅವನನ್ನು ಹೊಡೆದ.
ನಕುಲಸ್ತು ತತೋ ವಿದ್ಧಃ ಸೂತಪುತ್ರೇಣ ಭಾರತ |
ಅಶೀತ್ಯಾಽಽಶೀವಿಷಪ್ರಖ್ಯೈಃ ಸೂತಪುತ್ರಮವಿಧ್ಯತ ॥11॥
ರಾಜನೆ, ನಕುಲನು ಕರ್ಣನಿಂದ ಹೊಡೆಸಿಕೊಂಡು ಭಯಂಕರ ವಿಷದ ಹಾವಿನಂಥ ಎಂಬತ್ತು ಬಾಣಗಳಿಂದ ಕರ್ಣನನ್ನು ಹೊಡೆದ.
ತಸ್ಯ ಕರ್ಣೋ ಧನುಶ್ಛಿತ್ತ್ವ ಸ್ವರ್ಣಪುಂಖೈಃ ಶಿಲಾಶಿತೈಃ |
ತ್ರಿಂಶತಂ ಪ್ರೇಷಯಾಮಾಸ ಶರಾನಾಶೀವಿಷೋಪಮಾನ್ ॥12॥
ಕರ್ಣನು ಚಿನ್ನದ ಪುಕ್ಕಉಳ್ಳ ಸಾಣೆ ಹಿಡಿದ ತೀಕ್ಷ್ಣವಾದ ಬಾಣಗಳಿಂದ ನಕುಲನ ಬಿಲ್ಲನ್ನು ಕಡಿದು, ಹಾವಿನಂಥ ಮೂವತ್ತು ಬಾಣಗಳನ್ನು ಅವನ ಮೇಲೆಸೆದ.
ತೇ ತಸ್ಯ ಕವಚಂ ಭಿತ್ತ್ವ ಪಪುಃ ಶೋಣಿತಮಾಹವೇ |
ಆಶೀವಿಷಾ ಯಥಾ ರಾಜನ್ ಭಿತ್ತ್ವ ಗಾಂ ಸಲಿಲಂ ಭೃಶಮ್ ॥13॥
ರಾಜನೆ, ಆ ಬಾಣಗಳು ಹಾವುಗಳಂಥವು, ಯುದ್ಧದಲ್ಲಿ ನಕುಲನ ಕವಚವನ್ನು ಚೆನ್ನಾಗಿ ಪುಡಿಮಾಡಿ ಮೈಗೆ ಚುಚ್ಚಿ ಅವನ ನೆತ್ತರನ್ನು ಹಾವುಗಳು ನೆಲವನ್ನು ಕೊರೆದು ನೀರು ಕುಡಿಯುವಂತೆ ಕುಡಿದವು.

ಅಥಾನ್ಯದ್ಧನುರಾದಾಯ ಹೇಮಪೃಷ್ಠಂ ದುರಾನಮಮ್ |
ಕರ್ಣಂ ವಿವ್ಯಾಧ ಸಪ್ತತ್ಯಾ ಸಾರಥಿಂ ಚ ತ್ರಿಭಿಃ ಶರೈಃ ॥14॥
ನಕುಲನು ಬಂಗಾರದ ಹಿಂಭಾಗವುಳ್ಳ, ಬಗ್ಗಿಸಲಾಗದ ಬಿಲ್ಲನ್ನೆತ್ತಿಕೊಂಡು ಎಪ್ಪತ್ತು ಬಾಣಗಳಿಂದ ಕರ್ಣನನ್ನು ಹೊಡೆದ ಮತ್ತು ಮೂರು ಬಾಣಗಳಿಂದ ಸಾರಥಿಯನ್ನು ಹೊಡೆದ.
ತತಃ ಕ್ರುದ್ಧೋ ಮಹಾರಾಜ ನಕುಲಃ ಪರವೀರಹಾ |
ಕ್ಷುರಪ್ರೇಣ ಸುತೀಕ್ಷ್ಣೇನ ಕರ್ಣಸ್ಯ ಧನುರಾಚ್ಛಿನತ್ ॥15॥
ಮಹಾರಾಜ, ಬಳಿಕ ಶತ್ರುವೀರನಾಶಕನಾದ ನಕುಲನು ಕ್ರುದ್ಧನಾಗಿ ಬಲು ತೀಕ್ಷ್ಣವಾದ ಕ್ಷುರಪ್ರಬಾಣದಿಂದ ಕರ್ಣನ ಬಿಲ್ಲನ್ನು ಕಡಿದ.
ಅಥೈನಂ ಛಿನ್ನಧನ್ವಾನಂ ಸಾಯಕಾನಾಂ ತ್ರಿಭಿಃ ಶತೈಃ |
ಆಜಘ್ನೇ ಪ್ರಹಸನ್ ವೀರಃ ಸರ್ವಲೋಕಮಹಾರಥಮ್ ॥16॥
ಬಳಿಕ ವೀರ ನಕುಲನು ನಗುತ್ತ ಬಿಲ್ಲನ್ನು ಕಡಿದುಕೊಂಡಿದ್ದ, ಸರ್ವಲೋಕ ಮಹಾರಥನೆನಿಸಿದ್ದ ಕರ್ಣನನ್ನು ಮುನ್ನೂರು ಬಾಣಗಳಿಂದ ಚೆನ್ನಾಗಿ ಹೊಡೆದ.
ಕರ್ಣಮಭ್ಯರ್ದಿತಂ ದೃಷ್ಟ್ವಾ ಪಾಂಡುಪುತ್ರೇಣ ಮಾರಿಷ |
ವಿಸ್ಮಯಂ ಪರಮಂ ಜಗ್ಮುಃ ಋಷಯಃ ಸಹ ದೈವತೈಃ ॥17॥
ರಾಜನೆ, ನಕುಲನು ಕರ್ಣನನ್ನು ಹೀಗೆ ಹೊಡೆದುದನ್ನು ಕಂಡು ದೇವತೆಗಳೂ ಋಷಿಗಳೂ ಬಹಳ ವಿಸ್ಮಯಗೊಂಡರು.
ಅಥಾನ್ಯದ್ಧನುರಾದಾಯ ಕರ್ಣೋ ವೈಕರ್ತನಸ್ತದಾ |
ನಕುಲಂ ಪಂಚಭಿರ್ಬಾಣೈರ್ಜತ್ರುದೇಶೇ ಸಮಾರ್ಪಯತ್ ॥18॥
ಕರ್ಣನು ಇನ್ನೊಂದು ಬಿಲ್ಲನ್ನೆತ್ತಿಕೊಂಡು ಐದು ಬಾಣಗಳಿಂದ ನಕುಲನ ಕೊರಳಿನ ಎಲುಬಿನ ಭಾಗದಲ್ಲಿ ಹೊಡೆದ.
ತತ್ರಸ್ಥೈರಥ ತೈರ್ಬಾಣೈರ್ಮಾದ್ರೀಪುತ್ರೋ ವ್ಯರೋಚತ |
ಸ್ವರಶ್ಮಿಭಿರಿವಾದಿತ್ಯೋ ಭುವನೇ ವಿಸೃಜನ್ ಪ್ರಭಾಮ್ ॥19॥
ಆ ಭಾಗದಲ್ಲಿ ನೆಟ್ಟ ಬಾಣಗಳಿಂದ ನಕುಲ ಸೂರ್ಯನು ತನ್ನ ಕಿರಣಗಳಿಂದ ಲೋಕದಲ್ಲಿ ಪ್ರಭೆಯನ್ನು ಹರಡುವಂತೆ ಶೋಭಿಸಿದ.
ನಕುಲಸ್ತು ತತಃ ಕರ್ಣಂ ವಿದ್ಧ್ವಾ ಸಪ್ತಭಿರಾಶುಗೈಃ |
ಅಥಾಸ್ಯ ಧನುಷಃ ಕೋಟಿಂ ಪುನಶ್ಚಿಚ್ಛೇದ ಮಾರಿಷ ॥20॥
ರಾಜನೆ, ನಕುಲನು ಏಳು ಬಾಣಗಳಿಂದ ಕರ್ಣನನ್ನು ಹೊಡೆದು ಪುನಃ ಅವನ ಬಿಲ್ಲಿನ ತುದಿಯನ್ನು ಕಡಿದ.
ಸೋಽನ್ಯತ್ ಕಾರ್ಮುಕಮಾದಾಯ ಸಮರೇ ವೇಗವತ್ತರಮ್ |
ನಕುಲಸ್ಯ ತತೋ ಬಾಣೈಃ ಸಮಂತಾದ್ ವಾರಯನ್ ದಿಶಃ ॥21॥
ಕರ್ಣನು ಯುದ್ಧದಲ್ಲಿ ಬಾಣಗಳಿಗೆ ಇನ್ನೂ ಹೆಚ್ಚಿನ ವೇಗವನ್ನು ಕೊಡುವ ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಬಾಣಗಳಿಂದ ನಕುಲನ ಸುತ್ತಲೂ ಎಲ್ಲ ದಿಕ್ಕುಗಳನ್ನೂ ಆವರಿಸಿದ.
ಸಂಛಾದ್ಯಮಾನಃ ಸಮರೇ ಕರ್ಣಚಾಪಚ್ಯುತೈಃ ಶರೈಃ |
ಚಿಚ್ಛೇದ ಸ ಶರಾಂಸ್ತೂರ್ಣಂ ಶರೈರೇವ ಮಹಾಯಶಾಃ ॥22॥
ಮಹಾಯಶಸ್ವಿಯಾದ ನಕುಲನು ಯುದ್ಧದಲ್ಲಿ ಕರ್ಣನ ಬಿಲ್ಲಿನಿಂದ ಹೊರಟ ಬಾಣಗಳಿಂದ ಆಚ್ಛಾದಿತನಾಗುತ್ತಿದ್ದಂತೆ ಆ ಎಲ್ಲ ಬಾಣಗಳನ್ನು ಆತ ಬಾಣಗಳಿಂದಲೇ ಕತ್ತರಿಸಿದ.
ತತೋ ಬಾಣಮಯಂ ಜಾಲಂ ವಿತತಂ ವ್ಯೋಮ್ನ್ಯದೃಶ್ಯತ |
ಖದ್ಯೋತಾನಾಮಿವ ವ್ರಾತೈಃ ಸಂಪತದ್ಭಿರ್ಯಥಾ ನಭಃ ॥23॥
ಆಗ ಮಿಣುಕುಹುಳುಗಳು ರಾಶಿರಾಶಿಗಳಾಗಿ ಆಕಾಶದಲ್ಲಿ ಹಾರಾಡಿದಂತೆ, ಬಾಣಗಳ ರಾಶಿಗಳು ಆಕಾಶದಲ್ಲಿ ಹರಡಿದುದು ಗೋಚರವಾಯಿತು.
ತೈರ್ವಿಮುಕ್ತೈಃ ಶರಶತೈಶ್ಛಾದಿತಂ ಗಗನಂ ಮಹತ್ |
ಶಲಭಾನಾಂ ಯಥಾ ವ್ರಾತೈಸ್ತದ್ವದಾಸೀದ್ ವಿಶಾಂಪತೇ ॥24॥
ರಾಜನೆ, ಮಿಡತೆಗಳ ರಾಶಿಗಳು ಆಕಾಶದಲ್ಲಿ ಹಾರಾಡಿದರೆ ಹೇಗೋ ಹಾಗೇ ವೀರರಿಬ್ಬರು ಎಸೆದ ನೂರಾರು ಬಾಣಗಳಿಂದ ವಿಶಾಲವಾದ ಆಕಾಶ ಆವೃತ ವಾಯಿತು.
ತೇ ಶರಾ ಹೇಮವಿಕೃತಾಃ ಸಂಪತಂತೋ ಮುಹುರ್ಮುಹುಃ |
ಶ್ರೇಣೀಕೃತಾ ವ್ಯರೋಚಂತ ಕ್ರೌಂಚಾಃ ಶ್ರೇಣೀಕೃತಾ ಇವ ॥25॥
ಬಂಗಾರದ ಬಾಣಗಳು ಮತ್ತೂ ಮತ್ತೂ ಸಾಲುಸಾಲಾಗಿ ಹಾರಾಡುತ್ತ, ಸಾಲು ಸಾಲಾಗಿ ಹಾರುವ ಕ್ರೌಂಚಪಕ್ಷಿಗಳಂತೆ ಶೋಭಿಸಿದುವು.
ಬಾಣಜಾಲಾವೃತೇ ವ್ಯೋಮ್ನಿ ಚ್ಛಾದಿತೇ ಚ ದಿವಾಕರೇ |
ನ ಸ್ಮ ಸಂಪತತೇ ಭೂತಂ ಕಿಂಚಿದಪ್ಯಂತರಿಕ್ಷಗಮ್ ॥26॥
ನಿರುದ್ಧೇ ತತ್ರ ಮಾರ್ಗೇ ತು ಶರಸ್ಯೈರ್ಬಾಣೈಃ ಸಮಂತತಃ |
ವ್ಯರೋಚೇತಾಂ ಮಹಾತ್ಮಾನೌ ಕಾಲಸೂರ್ಯಾವಿವೋದಿತೌ ॥27॥
ಆಕಾಶವು ಬಾಣರಾಶಿಗಳಿಂದ ಆವೃತವಾದಾಗ, ಸೂರ್ಯನೂ ಆಚ್ಛಾದಿತ ನಾದಾಗ, ಆಕಾಶದಲ್ಲಿ ಸಂಚರಿಸುವ ಯಾವ ಪ್ರಾಣಿಪಕ್ಷಿಗಳೂ ಹಾರಾಡಲಿಲ್ಲ. ಏಕೆಂದರೆ ಹಾರಾಡುವ ಆಕಾಶಮಾರ್ಗ ಪೂರ್ತಿಯಾಗಿ ಬಾಣಸಮೂಹಗಳಿಂದಲೆ ತುಂಬಿತ್ತು. ಹೀಗಾಗಿ ಉದಿಸಿದ ಪ್ರಳಯಕಾಲದ ಇಬ್ಬರು ಸೂರ್ಯರಂತೆ ಮಹಾತ್ಮರಾದ ಕರ್ಣನಕುಲರೇ ಆಕಾಶದಲ್ಲಿ ಪ್ರಕಾಶಿಸಿದರು.
ಕರ್ಣಚಾಪಚ್ಯುತೈರ್ಬಾಣೈರ್ವಧ್ಯಮಾನಾಸ್ತು ಸೋಮಕಾಃ |

ಅವಾಲೀಯಂತ ರಾಜೇಂದ್ರ ವೇದನಾರ್ತಾ ಭೃಶಾರ್ದಿತಾಃ ॥28॥
ರಾಜನೆ, ಕರ್ಣನ ಬಿಲ್ಲಿನಿಂದ ಹೊರಟ ಬಾಣಗಳಿಂದ ಹೊಡೆಸಿಕೊಂಡ ಪಾಂಡವರ ಸೈನಿಕರು ಬಹಳ ಗಾಯಗೊಂಡು, ವೇದನೆಪಡುತ್ತ ಅಲ್ಲಲ್ಲಿ ಮರೆಯಾಗುತ್ತಿದ್ದರು.
ನಕುಲಸ್ಯ ತತೋ ಬಾಣೈರ್ವಧ್ಯಮಾನಾ ಚಮೂಸ್ತವ |
ವ್ಯದೀರ್ಯತ ತತೋ ರಾಜನ್ ವಾತನುನ್ನ ಇವಾಂಬುದಃ ॥29॥
ರಾಜನೆ, ನಿನ್ನ ಸೈನ್ಯವೂ ಕೂಡ ನಕುಲನ ಬಾಣಗಳಿಂದ ಹೊಡೆಸಿಕೊಂಡು ಬಿರುಗಾಳಿಗೆ ಸಿಲುಕಿದ ಮೋಡದಂತೆ ಚದುರಿಹೋಗುತ್ತಿತ್ತು.
ತೇ ಸೇನೇ ವಧ್ಯಮಾನೇ ತು ತಾಭ್ಯಾಂ ದಿವ್ಯೈರ್ಮಹಾಶರೈಃ |
ಶರಪಾತಾನತಿಕ್ರಮ್ಯ ತಸ್ಥತುಃ ಪ್ರೇಕ್ಷಕೇ ಇವ ॥30॥
ಎರಡೂ ಸೈನ್ಯಗಳ ಯೋಧರು ಅವರಿಬ್ಬರ ದಿವ್ಯವಾದ ಮಹಾಬಾಣಗಳಿಂದ ಹೊಡೆಸಿಕೊಳ್ಳಲು ತೊಡಗಿದಾಗ, ಬಾಣಗಳು ಬೀಳುವ ಪ್ರದೇಶಗಳನ್ನು ಬಿಟ್ಟು ಆಚೆ ಹೋಗಿ ಪ್ರೇಕ್ಷಕರಂತೆ ನಿಂತುಬಿಟ್ಟರು.
ಪ್ರೋತ್ಸಾರಿತೇ ಜನೇ ತಸ್ಮಿನ್ ಕರ್ಣಪಾಂಡವಯೋಃ ಶರೈಃ |
ಜಘ್ನತುಸ್ತೌ ಮಹಾತ್ಮಾನಾವನ್ಯೋನ್ಯಂ ಶರವೃಷ್ಟಿಭಿಃ ॥31॥
ಕರ್ಣ ಮತ್ತು ನಕುಲರ ಬಾಣಗಳು ಆ ಪ್ರದೇಶವನ್ನು ಜನರಿಂದ ತೆರವು ಗೊಳಿಸಿದ್ದರಿಂದ ಮಹಾತ್ಮರಾದ ಅವರಿಬ್ಬರೇ ಪರಸ್ಪರ ಬಾಣಗಳ ಮಳೆಗಳಿಂದ ಹೊಡೆಸಿಕೊಂಡರು.
ವಿದರ್ಶಯಂತೌ ಶಸ್ತ್ರಾಣಿ ದಿವ್ಯಾನಿ ರಣಮೂರ್ಧನಿ |
ಛಾದಯಂತೌ ಚ ಸಹಸಾ ಪರಸ್ಪರವಧೈಷಿಣೌ ॥32॥
ರಣಾಂಗಣದಲ್ಲಿ ದಿವ್ಯಶಸ್ತ್ರಗಳನ್ನು ಪ್ರದರ್ಶಿಸುತ್ತ ಪರಸ್ಪರ ವಧೆ ಮಾಡಲು ಬಯಸಿ ಬಲವಾಗಿ ಒಬ್ಬನಿನ್ನೊಬ್ಬನನ್ನು ಬಾಣಗಳಿಂದ ಮರೆಮಾಡುತ್ತಿದ್ದರು.
ನಕುಲೇನ ಶರಾ ಮುಕ್ತಾಃ ಕಂಕಬರ್ಹಿಣವಾಸಸಃ |
ಸೂತಪುತ್ರಮವಚ್ಛಾದ್ಯ ವ್ಯತಿಷ್ಠಂತ ಇವಾಂಬರೇ ॥33॥
ನಕುಲನು ಬಿಟ್ಟ ಹದ್ದು ನವಿಲುಗಳ ಗರಿಗಳಿಂದ ಯುಕ್ತವಾದ ಬಾಣಗಳು ಕರ್ಣನನ್ನು ಆಚ್ಛಾದಿಸಿ ಆಕಾಶದಲ್ಲಿ ನಿಂತಂತೆ ಕಂಡುಬಂದುವು.
ತಥೈವ ಸೂತಪುತ್ರೇಣ ಪ್ರೇಷಿತಾಃ ಪರಮಾಹವೇ |
ಪಾಂಡುಪುತ್ರಮವಚ್ಛಾದ್ಯ ವ್ಯತಿಷ್ಠಂತ ಇವಾಂಬರೇ ॥34॥
ಹಾಗೆಯೇ ಕರ್ಣನು ಮಹಾಯುದ್ಧದಲ್ಲಿ ಎಸೆದ ಬಾಣಗಳು ನಕುಲನನ್ನು ಆಚ್ಛಾದಿಸಿ ಆಕಾಶದಲ್ಲೇ ನಿಂತಂತೆ ಕಂಡುಬಂದುವು.
ಶರವೇಶ್ಮಪ್ರವಿಷ್ಟೌ ತೌ ನ ದೃಶ್ಯೇತೇ ಕಥಂಚನ |
ಚಂದ್ರಸೂರ್ಯೌ ಯಥಾ ರಾಜನ್ ಛಾದ್ಯಮಾನೌ ಜಲಾಗಮೇ ॥35॥
ಬಾಣಗಳ ಮನೆಯಲ್ಲಿ ಪ್ರವಿಷ್ಟರಾದ ಅವರಿಬ್ಬರೂ ಮಳೆಗಾಲ ಬಂದಾಗ ಆಚ್ಛಾದಿತರಾಗುವ ಚಂದ್ರಸೂರ್ಯರಂತೆ ಯಾರಿಗೂ ಕಾಣಿಸುತ್ತಿರಲಿಲ್ಲ.
ತತಃ ಕ್ರುದ್ಧೋ ರಣೇ ಕರ್ಣಃ ಕೃತ್ವಾ ಘೋರತರಂ ವಪುಃ |
ಪಾಂಡವಂ ಛಾದಯಾಮಾಸ ಸಮಂತಾಚ್ಛರವೃಷ್ಟಿಭಿಃ ॥36॥
ಬಳಿಕ ಕ್ರುದ್ಧನಾದ ಕರ್ಣನು ರಣದಲ್ಲಿ ಉಗ್ರರೂಪ ತಳೆದು ನಕುಲನನ್ನು ಎಲ್ಲೆಡೆ ಬಾಣಗಳ ಮಳೆಯಿಂದ ಆಚ್ಛಾದಿಸಿದ.
ಸ ಚ್ಛಾದ್ಯಮಾನಃ ಸಮರೇ ಸೂತಪುತ್ರೇಣ ಪಾಂಡವಃ |
ನ ಚಕಾರ ವ್ಯಥಾಂ ರಾಜನ್ ಭಾಸ್ಕರೋ ಜಲದೈರ್ಯಥಾ ॥37॥
ನಕುಲನು ಯುದ್ಧದಲ್ಲಿ ಕರ್ಣನಿಂದ ಆಚ್ಛಾದಿತನಾದರೂ ಮೋಡಗಳಿಂದ ಆಚ್ಛಾದಿತನಾದ ಸೂರ್ಯನಂತೆ ವೇದನೆಯನ್ನು ಹೊಂದಲಿಲ್ಲ.
ತತಃ ಪ್ರಹಸ್ಯಾಧಿರಥಿಃ ಶರಜಾಲಾನಿ ಮಾರಿಷ |
ಪ್ರೇಷಯಾಮಾಸ ಸಮರೇ ಶತಶೋಽಥ ಸಹಸ್ರಶಃ ॥38॥
ರಾಜನೆ, ಕರ್ಣನು ನಕ್ಕು ಬಾಣಗಳ ಬಲೆಗಳನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ರಣರಂಗದಲ್ಲಿ ಎಸೆದ.
ಏಕಚ್ಛಾಯಮಭೂತ್ ಸರ್ವಂ ತಸ್ಯ ಬಾಣೈರ್ಮಹಾತ್ಮನಃ |
ಅಭ್ರಚ್ಛಾಯೇವ ಸಂಜಜ್ಞೇ ಸಂಪತದ್ಭಿಃ ಶರೋತ್ತಮೈಃ ॥39॥
ಮಹಾತ್ಮ ಕರ್ಣನ ಬಾಣಗಳಿಂದ ಎಲ್ಲ ಪ್ರದೇಶವು ಅಂಧಕಾರಮಯ ವಾಯಿತು. ಹಾರುವ ಉತ್ತಮ ಬಾಣಗಳಿಂದ ಮೋಡ ಕವಿದಂತಾಯಿತು.
ತತಃ ಕರ್ಣೋ ಮಹಾರಾಜ ಧನುಶ್ಛಿತ್ತ್ವಾ ಮಹಾತ್ಮನಃ |
ಸಾರಥಿಂ ಪಾತಯಾಮಾಸ ರಥನೀಡಾದ್ಧಸನ್ನಿವ ॥40॥
ಮಹಾರಾಜ, ಕರ್ಣನು ಮಹಾತ್ಮ ನಕುಲನ ಬಿಲ್ಲನ್ನು ಕತ್ತರಿಸಿ ನಗುತ್ತ ಸಾರಥಿಯನ್ನು ರಥಪೀಠದಿಂದ ಕೆಳಗೆ ಉರುಳಿಸದ.
ತತೋಽಶ್ವಾಂಶ್ಚತುರಸ್ತಸ್ಯ ಚತುರ್ಭಿರ್ನಿಶಿತೈಃ ಶರೈಃ |
ಯಮಸ್ಯ ಸದನಂ ತೂರ್ಣಂ ಪ್ರೇಷಯಾಮಾಸ ಭಾರತ ॥41॥
ಬಳಿಕ ನಕುಲನ ನಾಲ್ಕೂ ಕುದುರೆಗಳನ್ನು ಹರಿತವಾದ ನಾಲ್ಕು ಬಾಣಗಳಿಂದ ಬೇಗನೆ ಯಮಸದನಕ್ಕೆ ಅಟ್ಟಿದ.

ಅಥಾಸ್ಯ ತಂ ರಥಂ ದಿವ್ಯಂ ತಿಲಶೋ ವ್ಯಧಮಚ್ಛರೈಃ |
ಪತಾಕಾಂ ಚಕ್ರರಕ್ಷಾಂಶ್ಚ ಗದಾಂ ಖಡ್ಗಂ ಚ ಮಾರಿಷ ॥42॥
ಶತಚಂದ್ರಂ ಚ ತಚ್ಚರ್ಮ ಸರ್ವೋಪಕರಣಾನಿ ಚ |
ಸುವರ್ಣವಿಕೃತಂ ತಚ್ಚ ಧನುಃ ಸಶರಮಾಹವೇ ॥43॥
ಬಳಿಕ ನಕುಲನ ದಿವ್ಯವಾದ ರಥವನ್ನೂ ಪತಾಕೆಯನ್ನೂ ಚಕ್ರರಕ್ಷಕರನ್ನೂ ಗದೆಯನ್ನೂ ಖಡ್ಗವನ್ನೂ ಶತಚಂದ್ರಗುರಾಣಿಯನ್ನೂ ಎಲ್ಲ ಯುದ್ಧೋಪಕರಣ ಗಳನ್ನೂ ಬಂಗಾರದಿಂದ ಮಾಡಿದ ಧನುರ್ಬಾಣಗಳನ್ನೂ ಕರ್ಣನು ಯುದ್ಧದಲ್ಲಿ ಎಳ್ಳುಕಾಳಿನಷ್ಟು ಪುಡಿಗೈದ.
ಹತಾಶ್ವೋ ವಿರಥಶ್ಚೈವ ವಿಚರ್ಮಾ ಚ ವಿಶಾಂಪತೇ |
ಅವತೀರ್ಯ ರಥಾತ್ ತೂರ್ಣಂ ಪರಿಘಂ ಗೃಹ್ಯ ವಿಷ್ಠಿತಃ ॥44॥
ರಾಜನೆ, ನಕುಲ ಈಗ ಕುದುರೆ ರಥ ಗುರಾಣಿಗಳಿಲ್ಲದವನಾಗಿ ರಥದಿಂದ ಬೇಗನೆ ಕೆಳಗೆ ಇಳಿದು ಪರಿಘವನ್ನು ಹಿಡಿದು ನಿಂತ.
ಸಮುದ್ಯತಂ ಮಹಾಘೋರಂ ಪರಿಘಂ ತಸ್ಯ ಸೂತಜಃ |
ವ್ಯಧಮತ್ ಸಾಯಕೈಸ್ತೂರ್ಣಂ ತದದ್ಭುತಮಿವಾಭವತ್ ॥45॥
ನಕುಲನು ಎತ್ತಿದ ಮಹಾಭಯಂಕರವಾದ ಪರಿಘವನ್ನು ಕೂಡ ಕರ್ಣ ಬೇಗನೆ ಬಾಣಗಳಿಂದ ಕತ್ತರಿಸಿದ. ಇದು ಅದ್ಭುತವಾಗಿತ್ತು.
ವ್ಯಾಯುಧಂ ಚೈನಮಾಲಕ್ಷ್ಯ ಶರೈಃ ಸನ್ನತಪರ್ವಭಿಃ |
ಅರ್ದಯನ್ ಬಹುಶಃ ಕರ್ಣೋ ನ ಚೈನಂ ಸಮಪೀಡಯತ್ ॥46॥
ನಕುಲ ಆಯುಧರಹಿತನಾಗಿರುವುದನ್ನು ನೋಡಿ ಕರ್ಣ ಅವನನ್ನು ಡೊಂಕುಗಿಣ್ಣಿನ ಬಾಣಗಳಿಂದ ಬಹುವಾಗಿ ಹೊಡೆದ. ಆದರೆ ಅವನನ್ನು ಪೀಡಿಸಲಿಲ್ಲ.
ಸ ವಧ್ಯಮಾನಃ ಸಮರೇ ಕೃತಾಸ್ತ್ರೇಣ ಬಲೀಯಸಾ |
ಪ್ರಾದ್ರವತ್ ಸಹಸಾ ರಾಜನ್ ನಕುಲೋ ವ್ಯಾಕುಲೇಂದ್ರಿಯಃ ॥47॥
ಕರ್ಣನು ಅಸ್ತ್ರವಿದ್ಯಾ ಪಾರಂಗತ, ಬಲಿಷ್ಠ. ರಾಜನೆ, ಅವನು ಹೊಡೆಯುವಾಗ ನಕುಲನು ಇಂದ್ರಿಯಗಳಲ್ಲಿ ವ್ಯಾಕುಲಗೊಂಡು ಬೇಗನೆ ಪಲಾಯನ ಮಾಡತೊಡಗಿದ.
ತಮಭಿದ್ರುತ್ಯ ರಾಧೇಯಃ ಪ್ರಹಸನ್ ವೈ ಪುನಃ ಪುನಃ |
ಸಜ್ಯಂ ಚ ಸ್ವಧನುಃ ಕಂಠೇ ವಿಸಸರ್ಜ ಚ ಭಾರತ ॥48॥
ಕರ್ಣ ಅವನನ್ನು ಬೆನ್ನಟ್ಟಿ ಪುನಃ ಪುನಃ ನಗುತ್ತ ಹೆದೆಯೇರಿಸಿದ್ದ ಬಿಲ್ಲನ್ನು ಕುತ್ತಿಗೆಗೆ ಹಾಕಿದ.
ತತಃ ಸ ಶುಶುಭೇ ರಾಜನ್ ಕಂಠಸಕ್ತಮಹಾಧನುಃ |
ಪರಿವೇಷಮನುಪ್ರಾಪ್ತೋ ನಭಸೀವ ತಮೋನುದಃ ॥49॥
ಯಥಾ ಚೈವಾಸಿತೋ ಮೇಘಃ ಶಕ್ರಚಾಪೇನ ಶೋಭಿತಃ |
ಅಶೋಭತ ಮಹಾರಾಜ ಪಾಂಡುಪುತ್ರಸ್ತಥಾ ರಣೇ ॥50॥
ಕುತ್ತಿಗೆಯಲ್ಲಿ ಮಹಾಧನುಸ್ಸನ್ನು ಹೊತ್ತು ನಕುಲನು ಪರಿವೇಷಗೊಂಡ ಚಂದ್ರ ಆಕಾಶದಲ್ಲಿ ಶೋಭಿಸುವಂತೆ, ಕರಿಮೋಡ ಕಾಮನ ಬಿಲ್ಲಿನಿಂದ ಶೋಭಿಸುವಂತೆ ಶೋಭಿಸಿದ.
ತಮಬ್ರವೀತ್ ತದಾ ಕರ್ಣೋ ವ್ಯರ್ಥಂ ವ್ಯಾಹೃತವಾನಸಿ |
ವದೇದಾನೀಂ ಪುನರ್ಹೃಷ್ಟೋ ವಧ್ಯೋ ಮೇ ತ್ವಂ ಪುನಃ ಪುನಃ ॥51॥
ಆಗ ಕರ್ಣ ನಕುಲನಿಗೆ ಹೇಳಿದ– ನಕುಲ, ನೀನು ವ್ಯರ್ಥವಾದ ಮಾತನ್ನಾಡಿರುವೆ. ಈಗ ಪುನಃ ಹೃಷ್ಟನಾಗಿ `ನೀನು ನನ್ನ ಕೈಯಿಂದ ಸಾಯುವೆ' ಎಂದು ಪುನಃಪುನಃ ಹೇಳು, ನೋಡೋಣ.
ಮಾ ಯೋತ್ಸೀಃ ಕುರುಭಿಃ ಸಾರ್ಧಂ ಬಲವದ್ಭಿಶ್ಚ ಪಾಂಡವ |
ಸದೃಶೈಸ್ತಾತ ಯುಧ್ಯಸ್ವ ವ್ರೀಡಾಂ ಮಾ ಕುರು ಪಾಂಡವ ॥52॥
`ಮಗು, ನಕುಲ, ಬಲಿಷ್ಠರಾದ ಕೌರವರೊಂದಿಗೆ ಯುದ್ಧಕ್ಕೆ ಬರಬೇಡ. ನಾಚಿಕೆ ಪಡಬೇಡ, ಸಮಾನಿಕರೊಂದಿಗೆ ಯುದ್ಧಮಾಡು.'
ಗೃಹಂ ವಾ ಗಚ್ಛ ಮಾದ್ರೇಯ ಯತ್ರ ವಾ ಕೇಶವಾರ್ಜುನೌ |
ಏವಮುಕ್ತ್ವಾ ಮಹಾರಾಜ ವಿಸಸರ್ಜ ಸ ತಂ ತದಾ ॥53॥
`ನಕುಲ, ನೀನು ಮನೆಗೇ ಹೋಗು, ಅಥವಾ ಕೃಷ್ಣಾರ್ಜುನರಿರುವಲ್ಲಿಗೇ ಹೋಗು.' ಮಹಾರಾಜ, ಕರ್ಣನು ಹೀಗೆ ನಕುಲನನ್ನು ಆಗ ಬಿಟ್ಟುಬಿಟ್ಟ.
ವಧೇ ಪ್ರಾಪ್ತೇ ತು ತಂ ಶತ್ರುಂ ನಾವಧೀತ್ ಸೂತನಂದನಃ |
ಸ್ಮೃತ್ವಾ ಮಾತುರ್ವಚೋ ರಾಜನ್ ತತ ಏನಂ ವ್ಯಸರ್ಜಯತ್ ॥54॥
ವಧಮಾಡಲು ಅವಕಾಶ ಸಿಕ್ಕಿರುವಾಗಲೂ ಶತ್ರುವನ್ನು ಕರ್ಣ ಕೊಲ್ಲಲಿಲ್ಲ. ಏಕೆಂದರೆ ಅವನು ತಾಯಿಗೆ ಕೊಟ್ಟಿದ್ದ ಮಾತನ್ನು ನೆನೆದ. ಅದರಿಂದ ನಕುಲನನ್ನು ಬಿಟ್ಟ.
ವಿಸೃಷ್ಟಃ ಪಾಂಡವೋ ರಾಜನ್ ಸೂತಪುತ್ರೇಣ ಧನ್ವಿನಾ |
ವ್ರೀಡನ್ನಿವ ಜಗಾಮಾಥ ಯುಧಿಷ್ಠಿರರಥಂ ಪ್ರತಿ ॥55॥
ರಾಜನೆ, ಧನುರ್ಧಾರಿಯಾದ ಕರ್ಣನು ಬಿಟ್ಟಾಗ ನಕುಲ ನಾಚಿ ಯುಧಿಷ್ಠಿರನ ರಥಕ್ಕೆ ನಡೆದ.
ಕರ್ಣನು ನಕುಲನನ್ನೇಕೆ ಕೊಲ್ಲದೆ ಬಿಟ್ಟ? ತಾಯಿಗೆ ಹಾಗೆ ಆತ ಮಾತು ಕೊಟ್ಟಿದ್ದನೆಂದರೆ ಇದು ಸರಿಯಾದ ಕಾರಣವಾಗಲಾರದು. ಇದು ರಹಸ್ಯದಲ್ಲಿ ನಡೆದ ಮಾತುಕತೆ. ಸಂಜಯನಿಗೆ ಇದು ತಿಳಿದಿರುವುದು ಶಕ್ಯವಿಲ್ಲ. ಅದರಿಂದ ಈ ಭಾಗ ಭಾರತದಲ್ಲಿ ಪ್ರಕ್ಷಿಪ್ತ.

ಕರ್ಣನು ಕುತ್ತಿಗೆಗೆ ಬಿಲ್ಲನ್ನು ಹಾಕುವಾಗ ನಕುಲನೇಕೆ ಸುಮ್ಮನಿದ್ದ? ಅದನ್ನು ಪೌರುಷದಿಂದ ಕಿತ್ತೊಗೆಯಲಾಗುತ್ತಿದ್ದಿಲ್ಲವೆ? ಅದರಿಂದಲೂ ಈ ಭಾಗ ಪ್ರಕ್ಷಿಪ್ತ ಎಂದು ವಿಮರ್ಶಕರು ಆಕ್ಷೇಪಿಸುತ್ತಾರೆ.
ವಸ್ತುತಃ ಈ ಆಕ್ಷೇಪ ಸಲ್ಲದು. ವ್ಯಾಸರ ಅನುಗ್ರಹದಿಂದ ಸಂಜಯ ಎಲ್ಲವನ್ನೂ ತಿಳಿದಿದ್ದಾನೆ. ಅದನ್ನು ಧೃತರಾಷ್ಟ್ರನಿಗೆ ಹೇಳಿದ್ದಾನೆ. ಮತ್ತು ನಕುಲನು ತನ್ನ ಕುತ್ತಿಗೆಯಿಂದ ಬಿಲ್ಲನ್ನು ಕಿತ್ತುಹಾಕಿದ ಮಾತ್ರಕ್ಕೆ ಅದು ಪೌರುಷ ಎನಿಸುವುದಿಲ್ಲ ಮತ್ತು ಹಾಕಿಸಿಕೊಂಡಿದ್ದರಿಂದ ತನಗಾದ ಅಪಮಾನವನ್ನು ಕಿತ್ತುಹಾಕಿದ್ದರಿಂದ ಕಳೆದುಕೊಂಡಂತಾಗುವುದಿಲ್ಲ. ಅದರಿಂದ ಸುಮ್ಮನಿದ್ದ.
ಆರುರೋಹ ರಥಂ ಚಾಪಿ ಧರ್ಮರಾಜಸ್ಯ ಪಾಂಡವಃ |
ನಿಃಶ್ವಸನ್ ದುಃಖಸಂತಪ್ತಃ ಕುಂಭಕ್ಷಿಪ್ತ ಇವೋರಗಃ ॥56॥
ನಕುಲನು ಧರ್ಮರಾಜನ ರಥವನ್ನೇರಿದ. ತಾನು ಕರ್ಣನಿಗೆ ಸೋತೆನೆಂದು ದುಃಖ, ಅಪಮಾನಗಳಿಂದ ಮಡಕೆಯಲ್ಲಿ ಹಿಡಿದಿಟ್ಟ ಹಾವಿನಂತೆ ನಿಟ್ಟುಸಿರಿಟ್ಟ. ದುಃಖ ಸಂತಪ್ತನಾದ.
ತಂ ವಿಜಿತ್ಯ ರಣೇ ಕರ್ಣಃ ಪಾಂಚಾಲಾಂಸ್ತ್ವರಿತೋ ಯಯೌ |
ರಥೇನಾತಿಪತಾಕೇನ ಚಂದ್ರವರ್ಣಹಯೇನ ಚ ॥57॥
ನಕುಲನನ್ನು ರಣದಲ್ಲಿ ಗೆದ್ದು ಕರ್ಣನು ಬಹಳ ಪತಾಕೆಗಳಿಂದ ಯುಕ್ತವಾದ, ಚಂದ್ರನಂತೆ ಬಿಳಿಬಣ್ಣದ ಕುದುರೆಗಳಿಂದ ಕೂಡಿದ ರಥದಿಂದ ಬೇಗನೆ ಪಾಂಚಾಲಸೈನ್ಯದ ಕಡೆಗೆ ತೆರಳಿದ.
ತತ್ರಾಕ್ರಂದೋ ಮಹಾನಾಸೀತ್ ಪಾಂಡವಾನಾಂ ವಿಶಾಂಪತೇ |
ದೃಷ್ಟ್ವಾ ಸೇನಾಪತಿಂ ಯಾಂತಂ ಪಾಂಚಾಲಾನಾಂ ರಥವ್ರಜಾನ್ ॥58॥
ರಾಜನೆ, ಸೇನಾಪತಿ ಕರ್ಣನು ಪಾಂಚಾಲರ ರಥಸೈನ್ಯದ ಕಡೆಗೆ ಹೋಗುತ್ತಿದ್ದುದನ್ನು ಕಂಡು ಪಾಂಡವರು ಬಹಳ ಹಾಹಾಕಾರ ಮಾಡಿದರು.
ತತ್ರಾಕರೋನ್ಮಹಾರಾಜ ಕದನಂ ಸೂತನಂದನಃ |
ಮಧ್ಯಂ ಪ್ರಾಪ್ತೇ ದಿನಕರೇ ಚಕ್ರವದ್ ವ್ಯಚರತ್ ಪ್ರಭುಃ ॥59॥
ಅಲ್ಲಿ, ಮಹಾರಾಜ, ಕರ್ಣನು ಯುದ್ಧಮಾಡಿದ. ಸೂರ್ಯನು ಆಕಾಶದಲ್ಲಿ ಮಧ್ಯಕ್ಕೆ ಬಂದಿದ್ದಾಗ ವೀರ ಕರ್ಣನು ಚಕ್ರದಂತೆ ಸಂಚರಿಸಿದ.
ಭಗ್ನಚಕ್ರೈ ರಥೈಃ ಕೇಚಿಚ್ಛಿನ್ನಧ್ವಜಪತಾಕಿಭಿಃ |
ಹತಾಶ್ವೈರ್ಹತಸೂತೈಶ್ಚ ಭಗ್ನಾಕ್ಷೈ ೃಶ್ಚಾಪಿ ಮಾರಿಷ ॥60॥
ಹ್ರಿಯಮಾಣಾನಪಶ್ಯಾಮ ಪಾಂಚಾಲಾನಾಂ ರಥವ್ರಜಾನ್ ॥61॥
ರಥಗಳಲ್ಲಿ ಚಕ್ರಗಳು ಧ್ವಜಪತಾಕೆಗಳು ಕುದುರೆ ಸಾರಥಿಗಳು ಅಚ್ಚುಮರಗಳು ಎಲ್ಲವೂ ಪುಡಿಯಾದುವು. ಹೀಗೆ ಪಾಂಚಾಲರ ರಥಗಳ ಸಮೂಹಗಳೇ ನಾಶವಾಗುತ್ತಿದ್ದುದನ್ನು ಕಂಡೆವು.
ತತ್ರ ತತ್ರ ಚ ಸಂಭ್ರಾಂತಾ ವಿಚೇರುಸ್ತತ್ರ ಕುಂಜರಾಃ |
ದಾವಾಗ್ನ್ಯಭಿಪರೀತಾಂಗಾ ಯಥೈವ ಸ್ಯುರ್ಮಹಾವನೇ ॥62॥
ಆನೆಗಳೂ ಅಲ್ಲಲ್ಲಿ, ಮಹಾ ಅರಣ್ಯದಲ್ಲಿ ಕಾಳ್ಗಿಚ್ಚಿನಿಂದ ಸುತ್ತುವರಿಯಲ್ಪಟ್ಟ ಆನೆಗಳಂತೆ ಗಾಬರಿಗೊಂಡು ಸಂಚರಿಸಿದುವು.
ಭಿನ್ನಕುಂಭಾಃ ಸರುಧಿರಾಶ್ಛಿನ್ನಹಸ್ತಾಶ್ಚ ವಾರಣಾಃ |
ಭಿನ್ನಗಾತ್ರಾವರಾಶ್ಚೈವ ಛಿನ್ನವಾಲಾಶ್ಚ ಮಾರಿಷ ॥63॥
ಭಿನ್ನಾಭ್ರಾಣೀವ ಸಂಪೇತುರ್ವಧ್ಯಮಾನಾ ಮಹಾತ್ಮನಾ ॥64॥
ಆನೆಗಳ ಕುಂಭಸ್ಥಳಗಳು ಒಡೆದುವು. ಸೊಂಡಿಲುಗಳು ಕಡಿದುಹೋದವು. ನೆತ್ತರು ಸುರಿಸಿದುವು, ಕವಚಗಳು ಪುಡಿಯಾದುವು, ಬಾಲಗಳು ಕತ್ತರಿಸಿ ಹೋದುವು. ಮಹಾತ್ಮನಾದ ಕರ್ಣನಿಂದ ಹತವಾಗುತ್ತಿದ್ದ ಆನೆಗಳು ಚದುರಿದ ಕಾರ್ಮೋಡ ಗಳಂತೆ ನೆಲದಲ್ಲಿ ಬಿದ್ದುವು.
ಅಪರೇ ತ್ರಾಸಿತಾ ನಾಗಾ ನಾರಾಚಶರತೋಮರೈಃ |
ತಮೇವಾಭಿಮುಖಂ ಜಗ್ಮುಃ ಶಲಭಾ ಇವ ಪಾವಕಮ್ ॥65॥
ಕೆಲವು ಆನೆಗಳು ಕರ್ಣನ ನಾರಾಚ ಶರ ತೋಮರಗಳಿಂದ ಹೊಡೆಸಿ ಕೊಂಡು ಅವನೆದುರಿಗೇ ದೀಪದ ಹುಳುಗಳು ಬೆಂಕಿಯಲ್ಲಿಯೇ ಬೀಳುವಂತೆ ಧಾವಿಸಿದುವು.
ಅಪರೇ ನಿಷ್ಟನಂತಸ್ತು ವ್ಯದೃಶ್ಯಂತ ಮಹಾದ್ವಿಪಾಃ |
ಕ್ಷರಂತಃ ಶೋಣಿತಂ ಗಾತ್ರೈರ್ನಗಾ ಇವ ಜಲಸ್ರವಾಃ ॥66॥
ಇನ್ನು ಕೆಲವು ದೊಡ್ಡ ಆನೆಗಳು ಗಟ್ಟಿಯಾಗಿ ಕೂಗಿಕೊಳ್ಳುತ್ತ ಬೆಟ್ಟಗಳು ನೀರಿನ ಪ್ರವಾಹವನ್ನು ಹರಿಸುವಂತೆ ಮೈಯಿಂದ ರಕ್ತದ ಹೊಳೆ ಹರಿಸಿದುವು.
ಉರಶ್ಛದೈರ್ವಿಮುಕ್ತಾಶ್ಚ ವಾಲಬಂಧೈಶ್ಚ ವಾಜಿನಃ |
ರಾಜತೈಶ್ಚ ತಥಾ ಕಾಂಸ್ಯೈಃ ಸೌವರ್ಣೈಶ್ಚ ವಿಭೂಷಣೈಃ ॥67॥
ಕುದುರೆಗಳಿಗೆ ಎದೆಮುಚ್ಚುವ ಕವಚಗಳಿಲ್ಲವಾಯಿತು. ಬಾಲಕ್ಕೆ ಚರ್ಮದ ಪಟ್ಟಿಗಳಿಲ್ಲವಾಯಿತು. ಬೆಳ್ಳಿ ಕಂಚು ಬಂಗಾರಗಳ ಒಡವೆಗಳಿಲ್ಲವಾದುವು.
ಹೀನಾಂಶ್ಚಾಭರಣೈಶ್ಚೈವ ಖಲೀನೈಶ್ಚ ವಿವರ್ಜಿತಾನ್ |
ಚಾಮರೈಶ್ಚ ಕುಥಾಭಿಶ್ಚ ತೂಣೀರೈಃ ಪತಿತೈರಪಿ ॥68॥
ಆಭರಣಗಳಿಲ್ಲ, ಕಡಿವಾಣಗಳಿಲ್ಲ , ಚಾಮರ ರತ್ನಗಂಬಳಿ ಬತ್ತಳಿಕೆಗಳೆಲ್ಲವೂ ಬಿದ್ದುಹೋದುವು.

ನಿಹತ್ಯೈಃ ಸಾದಿಭಿಶ್ಚೈವ ಶೂರೈರಾಹವಶೋಭಿಭಿಃ |
ಅಪಶ್ಯಾಮ ರಣೇ ತತ್ರ ಭ್ರಾಮ್ಯಮಾಣಾನ್ ಹಯೋತ್ತಮಾನ್ ॥69॥
ಯುದ್ಧದಲ್ಲಿ ಶೋಭಿಸುವ ಶೂರರಾದ ಅಶ್ವಾರೋಹಿಗಳೂ ಇಲ್ಲದೆ ರಣರಂಗದಲ್ಲಿ ಶ್ರೇಷ್ಠವಾದ ಕೆಲವು ಕುದುರೆಗಳು ಓಡಾಡುತ್ತಿದ್ದುದನ್ನು ಕಂಡೆವು.
ಪ್ರಾಸೈಃ ಖಡ್ಗೈಶ್ಚ ಸಂಸ್ಯೂತಾನೃಷ್ಟಿಭಿಶ್ಚೈವ ಭಾರತ ॥70॥
ಹಯಯೋಧಾನಪಶ್ಯಾಮ ಕಂಚುಕೋಷ್ಣೀಷವೇಷ್ಟಿತಾನ್ |
ನಿಹತಾನ್ ಧಾವಮಾನಾಂಶ್ಚ ವೇಷ್ಟಮಾನಾಂಶ್ಚ ಮಾರಿಷ ॥71॥
ನಾನಾಂಗಾವಯವೈರ್ಹೀನಾಂಸ್ತತ್ರತತ್ರೈವ ಭಾರತ ॥72॥
ಕೆಲವು ಕುದುರೆಗಳು ಪ್ರಾಸ ಖಡ್ಗ ಖುಷ್ಟಿ ಮುಂತಾದವುಗಳಿಂದ ಗಾಯಗೊಂಡು ಹತವಾದವು. ಕವಚ ಶಿರಸ್ತ್ರಾಣಗಳನ್ನು ಧರಿಸಿದ ಅಶ್ವಾರೋಹಿ ಯೋಧರು ಹೊಡೆಸಿಕೊಂಡು ಧಾವಿಸುವುದನ್ನೂ ನಾನಾ ಅಂಗ ಅವಯವಗಳಿಂದ ರಹಿತರಾಗಿ ಅಲ್ಲಲ್ಲಿ ಬಿದ್ದು ಹೊರಳಾಡುವುದನ್ನೂ ಕಂಡೆವು.
ರಥಾನ್ ಹೇಮಪರಿಷ್ಕಾರಾನ್ ಸುಯುಕ್ತಾನ್ ಜವನೈರ್ಹಯೈಃ |
ಭ್ರಾಮ್ಯಮಾಣಾನಪಶ್ಯಾಮ ಹತೇಷು ರಥಿಷು ದ್ರುತಮ್ ॥73॥
ಬಂಗಾರದ ಅಲಂಕಾರಗಳಿಂದ ಕೂಡಿದ್ದ ವೇಗದ ಕುದುರೆಗಳನ್ನು ಕಟ್ಟಿದ್ದ ರಥಗಳು, ರಥಿಕರು ಹತರಾದಾಗ ವೇಗವಾಗಿ ರಣಾಂಗಣದಲ್ಲಿ ಸಂಚರಿಸುತ್ತಿದ್ದು ದನ್ನು ಕಂಡೆವು.
ಹತಾಕ್ಷಕೂಬರಾನ್ ಕಾಂಶ್ಚಿದ್ ಭಗ್ನಚಕ್ರಾಂಶ್ಚ ಭಾರತ |
ವಿಪತಾಕಧ್ವಜಾಂಶ್ಚೈವ ಛಿನ್ನೇಷಾದಂಡಬಂಧುರಾನ್ ॥74॥
ವಿಹೀನಾನ್ ರಥಿಭಿಸ್ತತ್ರ ಧಾವಮಾನಾಂಸ್ತತಸ್ತತಃ |
ರಥಾಂಸ್ತು ತತ್ರ ವಿಚ್ಛಿನ್ನಾಸ್ತಿಲಶಃ ಕರ್ಣವಿಕ್ರಮೈಃ ॥75॥
ರಥಗಳಲ್ಲಿ ಅಚ್ಚುಮರ ಮೂಕಿಗಳು ಚಕ್ರಗಳು ಪತಾಕೆ ಧ್ವಜಗಳು ಈಷಾ ದಂಡಗಳು ಮುರಿದುದನ್ನು ಕಂಡೆವು. ಅಂಥ ರಥಗಳು ರಥಿಕರಿಲ್ಲದೆ ಅಲ್ಲಲ್ಲಿ ಓಡಾಡುವುದನ್ನೂ ಕಂಡೆವು. ಅನೇಕ ರಥಗಳು ಕರ್ಣನ ಪರಾಕ್ರಮದಿಂದ ಎಳ್ಳುಕಾಳಿನಷ್ಟು ಚೂರಾದುದನ್ನು ಕಂಡೆವು.
ಸೂತಪುತ್ರಶರೈಸ್ತಪ್ತಾನ್ ಅಪಶ್ಯಾಮ ಜಗತ್ಪತೇ |
ವಿಶಸ್ತ್ರಾಂಶ್ಚ ತಥೈವಾನ್ಯಾನ್ ಸಶಸ್ತ್ರಾಂಶ್ಚ ಬಹೂನ್ ಹತಾನ್ ॥76॥
ರಾಜನೆ, ಕರ್ಣನ ಬಾಣಗಳಿಂದ ಸತ್ತವರು ಕೆಲವರು ವಿಶಸ್ತ್ರರಾಗಿ ಸತ್ತರು. ಸಶಸ್ತ್ರರಾಗಿ ಬಹುಮಂದಿ ಸತ್ತಿರುವುದನ್ನು ಕಂಡೆವು.
ನಾನಾವರ್ಣವಿಚಿತ್ರಾಭಿಃ ಪತಾಕಾಭಿರಲಂಕೃತಾನ್ |
ನಾಗಾನವಯವೈರ್ಹೀನಾಂಸ್ತತ್ರ ತತ್ರ ವಿನಿಷ್ಕಿತಾನ್ ॥77॥
ನಾನಾ ವರ್ಣಗಳ ವಿಚಿತ್ರ ಪತಾಕೆಗಳಿಂದ ಅಲಂಕೃತವಾದ ಆನೆಗಳು ಅವಯವಗಳನ್ನು ಕಡಿದುಕೊಂಡು ಅಲ್ಲಲ್ಲಿ ನಿಂತಿದ್ದುದನ್ನು ಕಂಡೆವು.
ತಾರಕಾಜಾಲಸಂಛನ್ನಾನ್ ಉರುಘಂಟೋಪಶೋಭಿತಾನ್ |
ವಾರಣಾನನುಪಶ್ಯಾಮ ಧಾವಮಾನಾನ್ ಸಮಂತತಃ ॥78॥
ನಕ್ಷತ್ರಸಮೂಹದ ಚಿನ್ನ ಬೆಳ್ಳಿ ಅಲಂಕಾರಗಳಿಂದ, ದೊಡ್ಡ ಗಂಟೆಗಳಿಂದ ಶೋಭಿಸುವ ಆನೆಗಳು ಆರೋಹಿಗಳಿಲ್ಲದೆ ಎಲ್ಲೆಡೆ ಧಾವಿಸುವುದನ್ನು ಕಂಡೆವು.
ಶಿರೋಭಿರ್ಬಾಹುಭಿರ್ಹೀನಾನ್ ಭಿನ್ನೈರೂರುಭಿರೇವ ಚ |
ಕರ್ಣಚಾಪಚ್ಯುತೈರ್ಬಾಣೈರದೃಶ್ಯಂತ ವಿನಾಕೃತಾಃ ॥79॥
ಕರ್ಣನ ಬಿಲ್ಲಿನಿಂದ ಹೊರಟ ಬಾಣಗಳು ಯೋಧರನ್ನು ತಲೆ ತೋಳು ತೊಡೆಗಳಿಲ್ಲದವರಾಗಿ ಮಾಡಿದುದು ಎಲ್ಲೆಡೆ ಕಂಡುಬಂದಿತು.
ಮಹಾನ್ ವ್ಯತಿಕರೋ ರೌದ್ರೋ ಯೋಧಾನಾಮನ್ವದೃಶ್ಯತ |
ಕರ್ಣಸಾಯಕನುನ್ನಾನಾಂ ವಧ್ಯತಾಂ ನಿಶಿತೈಃ ಶರೈಃ ॥80॥
ಕರ್ಣನ ಬಾಣಗಳಿಂದ ಪೀಡಿತರಾಗಿ ಹರಿತವಾದ ಬಾಣಗಳಿಂದ ಹತರಾಗುವ ಯೋಧರ ಮಹಾಭಯಂಕರ ವಿನಾಶ ಕಂಡುಬಂದಿತು.
ತೇ ವಧ್ಯಮಾನಾಃ ಸಮರೇ ಸೂತಪುತ್ರೇಣ ಸೃಂಜಯಾಃ |
ತಮೇವಾಭಿಮುಖಾ ಯಾಂತಿ ಪತಂಗಾ ಇವ ಪಾವಕಮ್ ॥81॥
ಸೃಂಜಯಯೋಧರು ಕರ್ಣನಿಂದ ಯುದ್ಧದಲ್ಲಿ ಹೊಡೆಸಿಕೊಂಡು, ದೀಪದ ಹುಳುಗಳು ಬೆಂಕಿಯ ಕಡೆಗೆ ಧಾವಿಸುವಂತೆ, ಕರ್ಣನ ಕಡೆಗೇ ಧಾವಿಸಿದರು.
ತಂ ದಹಂತಮನೀಕಾನಿ ತತ್ರ ತತ್ರ ಮಹಾರಥಮ್ |
ಕ್ಷತ್ರಿಯಾ ವರ್ಜಯಾಮಾಸುರ್ಯುಗಾಂತಾಗ್ನಿಮಿವೋಲ್ಬಣಮ್ ॥82॥
ಮಹಾರಥನಾದ ಕರ್ಣನು ಘೋರವಾದ ಪ್ರಳಯಾಗ್ನಿಯಂತೆ ಸೈನ್ಯಗಳನ್ನು ಸುಡುತ್ತಿದ್ದರೆ, ಕ್ಷತ್ರಿಯರು ಕೈಲಾಗದೆ ಅಸಹಾಯಕರಾಗಿ ದೂರ ನಿಂತರು.
ಹತಶೇಷಾಸ್ತು ಯೇ ವೀರಾಃ ಪಾಂಚಾಲಾನಾಂ ರಥವ್ರಜಾಃ |
ತಾನ್ ಭಗ್ನಾನ್ ದ್ರುತಂ ಕರ್ಣಃ ಪೃಷ್ಠತೋ ವಿಕಿರನ್ ಶರೈಃ ॥83॥
ಅಳಿದುಳಿದ ಪಾಂಚಾಲರ ವೀರರಥಿಕರು ಕೂಡ ಸೋತು ಓಡಿದರು. ಅವರನ್ನು ಕರ್ಣ ಬಾಣಗಳನ್ನೆಸೆಯುತ್ತ ಬೆನ್ನಟ್ಟಿದ.

ಅಭ್ಯದ್ರುವತ ತೇಜಸ್ವೀ ವಿಶೀರ್ಣಕವಚಧ್ವಜಾನ್ |
ತಾಪಯನ್ ಸಮರೇ ಬಾಣೈಃ ಸೂತಪುತ್ರೋ ಮಹಾರಥಃ |
ಮಧ್ಯಂದಿನಮನುಪ್ರಾಪ್ತೋ ಭೂತಾನೀವ ತಮೋನುದಃ ॥84॥
ಕವಚಧ್ವಜರಹಿತರಾದ ಆ ಯೋಧರನ್ನು ಪರಾಕ್ರಮಶಾಲಿ ಮಹಾರಥನಾದ ಕರ್ಣ ಬೆನ್ನಟ್ಟಿದ. ಮಧ್ಯಾಹ್ನದ ಸೂರ್ಯ ಪ್ರಾಣಿಗಳನ್ನು ಸುಡುವಂತೆ ಬಾಣಗಳಿಂದ ಕರ್ಣ ಅವರನ್ನು ಸಂತಾಪಗೊಳಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಚತುರ್ವಿಂಶೋಽಧ್ಯಾಯಃ ॥24॥

ಇಪ್ಪತ್ತೈದನೆಯ ಅಧ್ಯಾಯ
ಉಲೂಕಯುಯುತ್ಸು, ಶತಾನೀಕಶ್ರುತಕರ್ಮ,
ಸುತಸೋಮಶಕುನಿ ಯುದ್ಧಗಳು ಸಮವಾದುವು.
ಸಂಜಯಃ
ಯುಯುತ್ಸುಂ ತವ ಪುತ್ರಸ್ಯ ತಾಪಯಂತಂ ವರೂಥಿನೀಮ್ |
ಉಲೂಕೋಽಭ್ಯಪತತ್ ತೂರ್ಣಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ ಯುಯುತ್ಸು ನಿನ್ನ ಮಗನ ಸೈನ್ಯವನ್ನು ಸಂತಾಪಗೊಳಿಸುತ್ತಿದ್ದಾಗ ಉಲೂಕ ಬೇಗನೆ ಎದುರಿಗೆ ಬಂದು `ನಿಲ್ಲುನಿಲ್ಲು' ಎಂದ.
ಯುಯುತ್ಸುಶ್ಚ ತತೋ ರಾಜನ್ ಶಿತಧಾರೇಣ ಪತ್ರಿಣಾ |
ಉಲೂಕಂ ತಾಡಯಾಮಾಸ ವಜ್ರೇಣೇವ ಮಹಾಚಲಮ್ ॥2॥
ರಾಜನೆ, ಯುಯುತ್ಸು ತೀಕ್ಷ್ಣವಾದ ಅಲುಗುಳ್ಳ ಬಾಣದಿಂದ ಉಲೂಕನನ್ನು ಇಂದ್ರನು ವಜ್ರಾಯುಧದಿಂದ ಪರ್ವತವನ್ನು ಹೊಡೆದಂತೆ ಹೊಡೆದ.
ಉಲೂಕಸ್ತು ತತಃ ಕ್ರುದ್ಧಸ್ತವ ಪುತ್ರಸ್ಯ ಮಾರಿಷ |
ಕ್ಷುರಪ್ರೇಣ ಸುತೀಕ್ಷ್ಣೇನ ಧನುಶ್ಚಿಚ್ಛೇದ ಸಂಯುಗೇ ॥3॥
ಉಲೂಕನು ಕ್ರುದ್ಧನಾಗಿ ಬಲು ತೀಕ್ಷ್ಣವಾದ ಬಾಣದಿಂದ ರಣದಲ್ಲಿ ನಿನ್ನ ಪುತ್ರನಾದ ಯುಯುತ್ಸುವಿನ ಬಿಲ್ಲನ್ನು ಕಡಿದ.
ಅಪಾಸ್ಯ ತದ್ಧನುಶ್ಛಿನ್ನಂ ಯುಯುತ್ಸುರ್ವೇಗವತ್ತರಮ್ |
ಅನ್ಯದಾದತ್ತ ಸುಮಹಚ್ಚಾಪಂ ಸಂರಕ್ತಲೋಚನಃ ॥4॥
ಯುಯುತ್ಸು ಕೋಪದಿಂದ ಕಣ್ಣು ಕೆಂಪುಮಾಡಿಕೊಂಡು ಕಡಿದ ಬಿಲ್ಲನ್ನು ಆಚೆಗೆ ಎಸೆದು ಬಾಣಗಳಿಗೆ ಇನ್ನೂ ಹೆಚ್ಚು ವೇಗ ಉಂಟುಮಾಡುವ ಇನ್ನೊಂದು ದೊಡ್ಡ ಬಿಲ್ಲನ್ನು ಎತ್ತಿಕೊಂಡ.
ಶಾಕುನಿಂ ತು ತತಃ ಷಷ್ಟ್ಯಾ ವಿವ್ಯಾಧ ಭರತರ್ಷಭ |
ಸಾರಥಿಂ ತ್ರಿಭಿರಾನರ್ಚ್ಛತ್ತಂ ಚ ಭೂಯೋ ವ್ಯವಿಧ್ಯತ ॥5॥
ಶಕುನಿಪುತ್ರನಾದ ಉಲೂಕನನ್ನು ಯುಯುತ್ಸು, ಅರವತ್ತು ಬಾಣಗಳಿಂದ ಹೊಡೆದು ಮೂರು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದ. ಪುನಃ ಉಲೂಕನನ್ನೂ ಹೊಡೆದ.
ಉಲೂಕಃ ಪಂಚವಿಂಶತ್ಯಾ ವಿದ್ಧ್ವಾ ರುಗ್ಮವಿಭೂಷಿತೈಃ |
ಅಥಾಸ್ಯ ಸಮರೇ ಕ್ರುದ್ಧೋ ಧ್ವಜಂ ಚಿಚ್ಛೇದ ಕಾಂಚನಮ್ ॥6॥
ಉಲೂಕನು ಕ್ರುದ್ಧನಾಗಿ ಬಂಗಾರದಿಂದ ಅಲಂಕೃತವಾದ ಇಪ್ಪತ್ತೈದು ಬಾಣಗಳಿಂದ ಯುಯುತ್ಸುವನ್ನು ಹೊಡೆದು ಬಂಗಾರದ ಧ್ವಜವನ್ನೂ ಕತ್ತರಿಸಿದ.
ಸ ಚ್ಛಿನ್ನಯಷ್ಟಿಃ ಸುಮಹಾನ್ ಶೀರ್ಯಮಾಣೋ ಮಹಾಧ್ವಜಃ |
ಪಪಾತ ಪ್ರಮುಖೇ ರಾಜನ್ ಯುಯುತ್ಸೋರ್ವಿಶ್ರುತೋ
ರಥಾತ್ ॥7॥
ಧ್ವಜ ದಂಡ ಕಡಿದು ಬಿದ್ದಾಗ, ರಾಜನೆ, ಬಲು ದೊಡ್ಡದಾದ ಪ್ರಸಿದ್ಧವಾದ ಮಹಾಧ್ವಜ ಕಡಿದು ಯುಯುತ್ಸುವಿನ ಮುಂಭಾಗದಲ್ಲಿ ರಥದಿಂದ ಕೆಳಗೆ ಬಿದ್ದಿತು.
ಧ್ವಜಮುನ್ಮಥಿತಂ ದೃಷ್ಟ್ವಾ ಯುಯುತ್ಸುಃ ಕ್ರೋಧಮೂರ್ಚ್ಛಿತಃ |
ಉಲೂಕಂ ಪಂಚಭಿರ್ಬಾಣೈರಾಜಘಾನ ಸ್ತನಾಂತರೇ ॥8॥
ಧ್ವಜ ನಾಶವಾದುದನ್ನು ನೋಡಿ ಕೋಪದಿಂದ ಮೈಮರೆತು ಯುಯುತ್ಸು ಐದು ಬಾಣಗಳಿಂದ ಉಲೂಕನನ್ನು ಎದೆಯಲ್ಲಿ ಪ್ರಹರಿಸಿದ.
ಉಲೂಕಸ್ತಸ್ಯ ಭಲ್ಲೇನ ತೈಲಧೌತೇನ ಮಾರಿಷ |
ಯಂತುಶ್ಚಿಚ್ಛೇದ ಸಮರೇ ಶಿರೋ ಭರತಸತ್ತಮ ॥9॥
ರಾಜನೆ, ಉಲೂಕನು ಎಣ್ಣೆಯಿಂದ ಹದಮಾಡಲ್ಪಟ್ಟ ಭಲ್ಲೆಯಿಂದ ಯುಯುತ್ಸುವಿನ ಸಾರಥಿಯ ಶಿರಸ್ಸನ್ನು ಯುದ್ಧದಲ್ಲಿ ಕೆಡವಿದ.
ತಚ್ಛಿನ್ನಮಪತದ್ ಭೂಮೌ ಯುಯುತ್ಸೋಃ ಸಾರಥೇಸ್ತದಾ |
ತಾರಾರೂಪಂ ಯಥಾ ಚಿತ್ರಂ ನಿಪಪಾತ ಮಹೀತಳೇ ॥10॥
ಕಡಿದುಹೋದ ಯುಯುತ್ಸುವಿನ ಸಾರಥಿಯ ಆ ಶಿರಸ್ಸು, ಆಕಾಶದಿಂದ ವಿಚಿತ್ರವಾದ ನಕ್ಷತ್ರ ಭೂಮಿಯಲ್ಲಿ, ಬೀಳುವಂತೆ,

ಭೂಮಿಯಲ್ಲಿ ಬಿದ್ದಿತು.
ಜಘಾನ ಚತುರೋಽಶ್ವಾಂಶ್ಚ ತಂ ಚ ವಿವ್ಯಾಧ ಪಂಚಭಿಃ |
ಸೋಽತಿವಿದ್ಧೋ ಬಲವತಾ ಪ್ರತ್ಯಪಾಯಾದ್ ರಥಾಂತರಮ್ ||11||
ಯುಯುತ್ಸುವಿನ ರಥದ ನಾಲ್ಕು ಕುದುರೆಗಳನ್ನೂ ಯುಯುತ್ಸುವನ್ನೂ ಉಲೂಕನು ಐದು ಬಾಣಗಳಿಂದ ಹೊಡೆದ. ಬಲಿಷ್ಠನಾದ ಉಲೂಕನಿಂದ ಬಹಳ ಹೊಡೆಸಿಕೊಂಡ ಯುಯುತ್ಸು ಬೇರೊಬ್ಬನ ರಥವನ್ನು ಏರಿದ.
ನಿರ್ಜಿತ್ಯ ತಂ ರಣೇ ರಾಜನ್ನುಲೂಕಸ್ತ್ವರಿತೋ ಯಯೌ |
ಪಾಂಚಾಲಾನ್ ಸೃಂಜಯಾಂಶ್ಚೈವ ವಿಕಿರನ್ ನಿಶಿತೈಃ ಶರೈಃ ||12||
ಹೀಗೆ, ರಾಜನೆ, ಉಲೂಕನು ಯುಯುತ್ಸುವನ್ನು ರಣದಲ್ಲಿ ಪರಾಭವಗೊಳಿಸಿ ವೇಗದಿಂದ ಪಾಂಚಾಲರನ್ನೂ ಸೃಂಜಯರನ್ನೂ ತೀಕ್ಷ್ಣವಾದ ಬಾಣಗಳಿಂದ ಹೊಡೆಯಲು ತೆರಳಿದ.
ಶತಾನೀಕಂ ಮಹಾರಾಜ ಶ್ರುತಕರ್ಮಾ ಸುತಸ್ತವ |
ವ್ಯಶ್ವಸೂತರಥಂ ಚಕ್ರೇ ನಿಮೇಷಾರ್ಧಾದಸಂಭ್ರಮಃ ||13||
ಮಹಾರಾಜ, ನಿನ್ನ ಮಗ ಶ್ರುತಕರ್ಮನು ಶತಾನೀಕನನ್ನು ನಿರ್ಭೀತಿಯಿಂದ ಅರೆಕ್ಷಣದಲ್ಲಿ ಅಶ್ವ ಸಾರಥಿ ರಥಗಳಿಲ್ಲದವನನ್ನಾಗಿ ಮಾಡಿದ.
ನಕುಲನಿಂದ ದ್ರೌಪದಿಯಲ್ಲಿ ಜನಿಸಿದ ಪುತ್ರ ಶತಾನೀಕ. ಸಹದೇವನಿಂದ ದ್ರೌಪದಿಯಲ್ಲಿ ಜನಿಸಿದ ಪುತ್ರನೂ ಶ್ರುತಕರ್ಮ. ಆದರೆ ಪ್ರಕೃತದಲ್ಲಿ ಶ್ರುತಕರ್ಮ ಧೃತರಾಷ್ಟ್ರ ಪುತ್ರರಲ್ಲೊಬ್ಬ.
ಹತಾಶ್ವೇ ತು ರಥೇ ತಿಷ್ಠನ್ ಶತಾನೀಕೋ ಮಹಾರಥಃ |
ಗದಾಂ ಚಿಕ್ಷೇಪ ಸಂಕ್ರುದ್ಧಸ್ತವ ಪುತ್ರಸ್ಯ ಮಾರಿಷ ||14||
ರಾಜನೆ, ಕುದುರೆ ಇಲ್ಲದೆ ರಥದಲ್ಲಿ ನಿಂತು ಮಹಾರಥನಾದ ಶತಾನೀಕ ಕ್ರುದ್ಧನಾಗಿ ನಿನ್ನ ಮಗನ ಮೇಲೆ ಗದೆಯನ್ನೆಸೆದ.
ಸಾ ಕೃತ್ವಾ ಸ್ಯಂದನಂ ಭಸ್ಮ ಹಯಾನ್ ಸಾರಥಿಮೇವ ಚ |
ಧ್ವಜಂ ಚೈವ ಪತಾಕಾಂ ಚ ಮೇದಿನೀಮನ್ವಪದ್ಯತ ||15||
ಆ ಗದೆ ಶ್ರುತಕರ್ಮನ ರಥ ಕುದುರೆ ಸಾರಥಿ ಧ್ವಜ ಪತಾಕೆಗಳೆಲ್ಲವನ್ನೂ ಭಸ್ಮಮಾಡಿ ನೆಲದಲ್ಲಿ ಬಿದ್ದಿತು.
ತಾವುಭೌ ವಿರಥೌ ವೀರೌ ಕುರೂಣಾಂ ಕೀರ್ತಿವರ್ಧನೌ |
ವ್ಯಪಾಕ್ರಮೇತಾಂ ಯುದ್ಧಾತ್ತು ಪ್ರೇಕ್ಷಮಾಣೌ ಪರಸ್ಪರಮ್ ||16||
ಶತಾನೀಕ ಶ್ರುತಕರ್ಮರಿಬ್ಬರೂ ಕುರುವಂಶದ ಕೀರ್ತಿಯನ್ನು ಹೆಚ್ಚಿಸುವವರು. ಇಬ್ಬರೂ ವಿರಥರಾಗಿ ಪರಸ್ಪರ ದಿಟ್ಟಿಸಿ ನೋಡುತ್ತ ಯುದ್ಧದಿಂದ ಹಿಂದೆ ಸರಿದರು.
ಪುತ್ರಸ್ತು ತವ ಸಂಭ್ರಾಂತೋ ವಿವಿಂಶೋ ರಥಮಾವ್ರಜತ್ |
ಶತಾನೀಕೋಽಪಿ ರಾಜೇಂದ್ರ ಪ್ರತಿವಿಂಧ್ಯರಥಂ ಗತಃ ||17||
ರಾಜನೆ, ಸಂಭ್ರಾಂತನಾದ ನಿನ್ನ ಪುತ್ರ ಶ್ರುತಕರ್ಮನು ವಿವಿಂಶುವಿನ ರಥವನ್ನೇರಿದ. ಶತಾನೀಕನು ಪ್ರತಿವಿಂಧ್ಯನ ರಥವನ್ನೇರಿದ.
ಸುತಸೋಮಂ ತು ಶಕುನಿರ್ವಿದ್ಧ್ವಾ ಸುನಿಶಿತೈಃ ಶರೈಃ |
ನಾಕಂಪಯತ ಸಂಕ್ರುದ್ಧೋ ವಾರ್ಯೌಘ ಇವ ಪರ್ವತಮ್ ||18||
ದ್ರೌಪದೀಪುತ್ರನಾದ ಸುತಸೋಮನನ್ನು ಬಲುಕ್ರುದ್ಧನಾದ ಶಕುನಿ ತೀಕ್ಷ್ಣವಾದ ಬಾಣಗಳಿಂದ ಹೊಡೆದೂ ಕೂಡ ಅವನನ್ನು ವಿಚಲಿತನನ್ನಾಗಿ ಮಾಡಲು ಶಕ್ತನಾಗಲಿಲ್ಲ. ನೀರಿನ ಪ್ರವಾಹವು ಪರ್ವತವನ್ನು ವಿಚಲಿತಗೊಳಿಸದು.
ಸುತಸೋಮಸ್ತು ತಂ ದೃಷ್ಟ್ವಾ ಪಿತುರತ್ಯಂತವೈರಿಣಮ್ |
ಶರೈರನೇಕಸಾಹಸ್ರೈಶ್ಛಾದಯಾಮಾಸ ಭಾರತ ||19||
ಆದರೆ ರಾಜನೆ, ಸುತಸೋಮನು ತಂದೆಯಾದ ಭೀಮನಿಗೆ ಅತ್ಯಂತ ವೈರಿಯಾದ ಶಕುನಿಯನ್ನು ಕಂಡು ಅನೇಕ ಸಾವಿರ ಬಾಣಗಳಿಂದ ಅವನನ್ನು ಆಚ್ಛಾದಿಸಿದ.
ತಾನ್ ಶರಾನ್ ಶಕುನಿಸ್ತೂರ್ಣಂ ಚಿಚ್ಛೇದಾನ್ಯೈಃ ಪತತ್ರಿಭಿಃ |
ಲಘ್ವಸ್ತ್ರಶ್ಚಿತ್ರಯೋಧೀ ಚ ಜಿತಕಾಶೀ ಚ ಸಂಯುಗೇ ||20||
ಶಕುನಿಯು ಆ ಬಾಣಗಳನ್ನು ಬೇಗನೆ ಬೇರೆ ಬಾಣಗಳಿಂದ ಕತ್ತರಿಸಿದ. ಏಕೆಂದರೆ ಶಕುನಿ ಅಸ್ತ್ರಪ್ರಯೋಗದಲ್ಲಿ ಹಸ್ತಲಾಘವ(ಕೌಶಲ)ಉಳ್ಳವನು. ವಿಚಿತ್ರ ಯುದ್ಧ ಮಾಡುವವನು ಮತ್ತು ಜಯಶಾಲಿಯಾಗಿ ಮೆರೆಯುವವನು.
ನಿವಾರ್ಯ ಸಮರೇ ಚಾಪಿ ಶರಾಂಸ್ತಾನ್ ನಿಶಿತೈಃ ಶರೈಃ |
ಆಜಘಾನ ಸುಸಂಕ್ರುದ್ಧಃ ಸುತಸೋಮಂ ತ್ರಿಭಿಃ ಶರೈಃ ||21||
ಶಕುನಿ ಆ ಬಾಣಗಳನ್ನು ಯುದ್ಧದಲ್ಲಿ ತೀಕ್ಷ್ಣಬಾಣಗಳಿಂದ ತಡೆದು ಬಹಳ ಕುಪಿತನಾಗಿ ಸುತಸೋಮನನ್ನು ಮೂರು ಬಾಣಗಳಿಂದ ಹೊಡೆದ.
ತಸ್ಯಾಶ್ವಾನ್ ಸ್ಯಂದನಂ ಕೇತುಂ ತಿಲಶೋ ವ್ಯಧಮಚ್ಛರೈಃ |
ಶ್ಯಾಲಸ್ತವ ಮಹಾರಾಜ ತತ ಉಚ್ಚುಕ್ರುಶುರ್ಜನಾಃ ||22||
ಮಹಾರಾಜ, ನಿನ್ನ ಭಾವಮೈದುನ ಶಕುನಿ ಸುತಸೋಮನ ಕುದುರೆ ರಥ ಧ್ವಜಗಳನ್ನು ಬಾಣಗಳಿಂದ ಎಳ್ಳುಕಾಳುಗಳಷ್ಟು ಚೂರಾಗಿ ಮಾಡಿದ. ಜನರು ಹರ್ಷೋದ್ಗಾರ ಮಾಡಿದರು.
ಹತಾಶ್ವೋ ವಿರಥಶ್ಚೈವ ಛಿನ್ನಕೇತುಶ್ಚ ಮಾರಿಷ |
ಧನ್ವೀ ಧನುರ್ವರಂ ಗೃಹ್ಯ ರಥಾದ್ ಭೂಮೌ ವ್ಯತಿಷ್ಠತ ||23||

ವ್ಯಸೃಜತ್ ಸಾಯಕಾಂಶ್ಚೈವ ಸ್ವರ್ಣಪುಂಖಾನ್ ಶಿಲಾಶಿತಾನ್ ॥24॥
ರಾಜನೆ, ಸುತಸೋಮನ ಕುದುರೆಗಳು ಹತವಾದುವು. ರಥ ನಾಶವಾಯಿತು. ಧ್ವಜ ಮುರಿಯಿತು. ಬಿಲ್ಗಾರನಾದ ಆತ ಒಳ್ಳೆಯ ಬಿಲ್ಲನ್ನು ಹಿಡಿದು ರಥದಿಂದ ನೆಲಕ್ಕೆ ಹಾರಿ ನಿಂತ. ಮತ್ತು ಬಂಗಾರದ ಪುಕ್ಕಉಳ್ಳ ಸಾಣೆಹಿಡಿದ ಬಾಣಗಳನ್ನೆಸೆದ.
ಛಾದಯಾಮಾಸುರಥ ತೇ ತವ ಶ್ಯಾಲಸ್ಯ ತಂ ರಥಮ್ |
ಪತಂಗಾನಾಮಿವ ವ್ರಾತಾಃ ಶರವ್ರಾತಾ ಮಹಾರಥಮ್ ॥25॥
ಆ ಬಾಣಗಳು ನಿನ್ನ ಭಾವಮೈದುನನ ರಥವನ್ನು ಆಚ್ಛಾದಿಸಿದವು. ಮಿಡತೆಗಳ ಸಮೂಹಗಳಂಥ ಬಾಣಸಮೂಹಗಳು ಆ ಮಹಾರಥವನ್ನು ಆವರಿಸಿದುವು.
ಸಂಛಾದ್ಯಮಾನೋಽಪಿ ದೃಢಂ ವಿವ್ಯಥೇ ನೈವ ಸೌಬಲಃ |
ಪ್ರಾಮರ್ದತ ಶರಾನಸ್ತಾನ್ ಶರಜಾಲೈರ್ಮಹಾರಥಃ ॥26॥
ತನ್ನ ರಥವನ್ನು ದೃಢವಾಗಿ ಬಾಣಗಳು ಆವರಿಸುತ್ತಿದ್ದರೂ ಶಕುನಿ ವಿಚಲಿತ ನಾಗಲಿಲ್ಲ. ಮಹಾರಥನಾದ ಆತ ಬಾಣಸಮೂಹಗಳಿಂದ ಆ ಬಾಣಗಳನ್ನು ನಾಶಪಡಿಸಿದ.
ತತ್ರಾತುಷ್ಯಂತ ಯೋಧಾಶ್ಚ ಸಿದ್ಧಾಶ್ಚೈವ ದಿವಿ ಸ್ಥಿತಾಃ |
ಸುತಸೋಮಸ್ಯ ತತ್ ಕರ್ಮ ದೃಷ್ಟ್ವಾಽಶ್ರದ್ಧೇಯಮದ್ಭುತಮ್ ॥27॥
ರಥಸ್ಥಂ ನೃಪತಿಂ ಯತ್ತು ಪದಾತಿಃ ಸಮಯೋಧಯತ್ ॥28॥
ಆಗ ರಥದಲ್ಲಿ ಕುಳಿತಿದ್ದ ರಾಜನೊಡನೆ ಒಬ್ಬ ಪದಾತಿ ಚೆನ್ನಾಗಿ ಯುದ್ಧಮಾಡುತ್ತಾನೆ ಎಂದರೆ ಇದೊಂದು ಅದ್ಭುತವೇ ಸರಿ. ಸುತಸೋಮ ಪದಾತಿಯಾಗಿ ರಥಿಕನಾದ ಶಕುನಿಯೊಡನೆ ಚೆನ್ನಾಗಿ ಯುದ್ಧಮಾಡುವುದನ್ನು ಕಂಡ ಯೋಧರೂ ಆಕಾಶದಲ್ಲಿ ನಿಂತ ಸಿದ್ಧರೂ ಸಂತುಷ್ಟರಾದರು. ಅದನ್ನು ಅದ್ಭುತ, ನಂಬಲು ಅಸಾಧ್ಯ ಎಂದರು.
ತಸ್ಯ ತೀಕ್ಷ್ಣೈರ್ಮಹಾವೇಗೈರ್ಭಲ್ಲೈಃ ಸನ್ನತಪರ್ವಭಿಃ |
ವ್ಯಧಮತ್ ಕಾರ್ಮುಕಂ ರಾಜನ್ ತೂಣೀರಾಂಶ್ಚೈವ ಸರ್ವಶಃ ॥29॥
ಶಕುನಿಯು ತೀಕ್ಷ್ಣವಾದ ಮಹಾವೇಗಉಳ್ಳ ಡೊಂಕುಗಿಣ್ಣಿನ ಭಲ್ಲೆಗಳಿಂದ ಸುತಸೋಮನ ಬಿಲ್ಲನ್ನೂ ಎಲ್ಲ ಬತ್ತಳಿಕೆಗಳನ್ನೂ ಧ್ವಂಸ ಮಾಡಿದ.
ಸ ಚ್ಛಿನ್ನಧನ್ವಾ ವಿರಥಃ ಖಡ್ಗಮುದ್ಯಮ್ಯ ಚಾನದತ್ |
ವೈದೂರ್ಯೋತ್ಪಲವರ್ಣಾಭಂ ದಂತಿದಂತಮಯತ್ಸರುಮ್ ॥30॥
ಸುತಸೋಮನ ಧನುಸ್ಸು ಕಡಿದರೂ ರಥಪುಡಿಯಾದರೂ ವೈಡೂರ್ಯ ನೀಲಕಮಲಗಳಂಥ ವರ್ಣದ, ಆನೆಯ ದಂತದಿಂದ ಅಲಂಕೃತವಾದ ಹಿಡಿಯುಳ್ಳ ಖಡ್ಗವನ್ನೆತ್ತಿ ಅವನು ಗರ್ಜಿಸಿದ.
ಭ್ರಾಮ್ಯಮಾಣಂ ತತಸ್ತಂ ತು ವಿಮಲಾಂಬರದರ್ಶನಮ್ |
ಕಾಲೋಪಮಂ ತದಾ ಮೇನೇ ಸುತಸೋಮಸ್ಯ ಧೀಮತಃ ॥31॥
ಧೀಮಂತನಾದ ಸುತಸೋಮನು ನಿರ್ಮಲವಾದ ಆಕಾಶದಂತೆ ನೀಲ ವಾಗಿರುವ ಆ ಖಡ್ಗವನ್ನು ತಿರುಗಿಸಿದರೆ ಶಕುನಿ ಅದನ್ನು ಯಮದಂಡಸದೃಶವೇ ಎಂದುಕೊಂಡ.
ಸೋಽಚರತ್ ಸಹಸಾ ಖಡ್ಗೀ ಮಂಡಲಾನಿ ಸಮಂತತಃ |
ಚತುರ್ದಶ ಮಹಾರಾಜ ಶಿಕ್ಷಾಬಲಸಮನ್ವಿತಃ ॥32॥
ಮಹಾರಾಜ, ಸುತಸೋಮನು, ಖಡ್ಗಧಾರಿ, ಶಿಕ್ಷಣ ಮತ್ತು ಬಲಗಳಿಂದ ಯುಕ್ತನಾಗಿದ್ದ. ಅವನು ಎಲ್ಲೆಡೆ ಹದಿನಾಲ್ಕು ಬಗೆಯ ಕತ್ತಿವರಸೆಗಳನ್ನು ಯುದ್ಧದಲ್ಲಿ ತೋರಿಸುತ್ತಿದ್ದ.
ಭ್ರಾಂತಮುದ್ಭ್ರಾಂತಮಾವಿದ್ಧಮಾಪ್ಲುತಂ ವಿಪ್ಲುತಂ ಸ ೃತಮ್ |
ಸಂಪಾತಂ ಸಮುದೀರ್ಯಂ ಚ ದರ್ಶಯಾಮಾಸ ಸಂಯುಗೇ ॥33॥
ಭ್ರಾಂತ ಉದ್ಭ್ರಾಂತ ಆವಿದ್ಧ ಆಪ್ಲುತ ವಿಪ್ಲುತ ಸೃತ ಸಂಪಾತ ಸಮುದೀರ್ಯ ಮೊದಲಾದ ಹದಿನಾಲ್ಕು ಬಗೆಯ ಕತ್ತಿವರಸೆಗಳನ್ನು ಸುತಸೋಮನು ರಣದಲ್ಲಿ ಪ್ರದರ್ಶಿಸಿದ.
ಸೌಬಲಸ್ತು ತತಸ್ತಸ್ಯ ಶರಾಂಶ್ಚಿಕ್ಷೇಪ ವೀರ್ಯವಾನ್ |
ತಾನಾಪತತ ಏವಾಶು ಚಿಚ್ಛೇದ ಪರಮಾಸಿನಾ ॥34॥
ವೀರ್ಯಶಾಲಿ ಶುಕುನಿಯು ಸುತಸೋಮನ ಮೇಲೆ ಬಾಣಗಳನ್ನೆಸೆದ. ಸುತಸೋಮ ಅವುಗಳನ್ನು ಒಡನೆ ಉತ್ತಮವಾದ ಖಡ್ಗದಿಂದ ಕತ್ತರಿಸಿದ.
ತತಃ ಕ್ರುದ್ಧೋ ಮಹಾರಾಜ ಸೌಬಲಃ ಪರವೀರಹಾ |
ಪ್ರಾಹಿಣೋತ್ ಸುತಸೋಮಸ್ಯ ಶರಾನಾಶೀವಿಷೋಪಮಾನ್ ॥35॥
ಮಹಾರಾಜ, ಪರವೀರಹಂತಕನಾದ ಶಕುನಿ ಕ್ರುದ್ಧನಾಗಿ ಹಾವುಗಳಂಥ ಬಾಣಗಳನ್ನು ಎಸೆದ.
ಚಿಚ್ಛೇದ ತಾಂಸ್ತು ಖಡ್ಗೇನ ಶಿಕ್ಷಯಾ ಚ ಬಲೇನ ಚ |
ದರ್ಶಯಂಲ್ಲಾಘವಂ ಯುದ್ಧೇ ತಾರ್ಕ್ಷ್ಯತುಲ್ಯಪರಾಕ್ರಮಃ ॥36॥
ಸುತಸೋಮನು ಗರುಡಸದೃಶ ಪರಾಕ್ರಮಿ. ಯುದ್ಧದಲ್ಲಿ ಶಿಕ್ಷಣದಿಂದಲೂ ಬಲದಿಂದಲೂ ಕೈಚಳಕ ತೋರಿಸುತ್ತ ಖಡ್ಗದಿಂದ ಆ ಎಲ್ಲ ಬಾಣಗಳನ್ನು ಕತ್ತರಿಸಿದ.
ತಸ್ಯ ಸಂಚರತೋ ರಾಜನ್ ಮಂಡಲಾವರ್ತನೇ ತದಾ |
ಕ್ಷುರಪ್ರೇಣ ಸುತೀಕ್ಷ್ಣೇನ ಖಡ್ಗಂ ಚಿಚ್ಛೇದ ಸುಪ್ರಭಮ್ ॥37॥

ರಾಜನೆ, ಮಂಡಲಾವರ್ತನದಲ್ಲಿ ಸಂಚರಿಸುತ್ತಿದ್ದ ಸುತಸೋಮನ ಒಳ್ಳೆ ಪ್ರಭೆಯ ಖಡ್ಗವನ್ನೂ ಕೂಡ ಶಕುನಿ ಬಲುತೀಕ್ಷ್ಣವಾದ ಬಾಣದಿಂದ ಕತ್ತರಿಸಿದ.
ಸ ಚ್ಛಿನ್ನಃ ಸಹಸಾ ಭೂಮೌ ನಿಪಪಾತ ಮಹಾನಸಿಃ ॥38॥
ಕಡಿದುಹೋದ ಆ ದೊಡ್ಡ ಖಡ್ಗ ತಕ್ಷಣ ನೆಲದಲ್ಲಿ ಬಿದ್ದಿತು.
ಅರ್ಧಮಸ್ಯ ಸ್ಥಿತಂ ಹಸ್ತೇ ಸತ್ಸರೋರ್ಯತ್ತು ಭಾರತ |
ಛಿನ್ನಮಾಜ್ಞಾಯ ನಿಶಿತ್ರಂಶಮವಪ್ಲುತ್ಯ ಪದಾನಿ ಷಟ್ ॥39॥
ಪ್ರಾವಿಧ್ಯತಾಸೇಸ್ತಚ್ಛೇಷಂ ಸುತಸೋಮೋ ಮಹಾಬಲಃ ॥40॥
ರಾಜನೆ, ಒಳ್ಳೆಯ ಹಿಡಿಯುಳ್ಳ ಆ ಖಡ್ಗದ ಅರ್ಧ ಸುತಸೋಮನ ಕೈಯಲ್ಲಿಯೆ ಉಳಿಯಿತು. ತನ್ನ ಖಡ್ಗ ಕಡಿದುಹೋದುದನ್ನು ತಿಳಿದು ಮಹಾಬಲಿ ಸುತಸೋಮ ಆರು ಹೆಜ್ಜೆಗಳಷ್ಟು ಮುಂದಕ್ಕೆ ಹಾರಿ ಕೈಯಲ್ಲಿದ್ದ ಖಡ್ಗದ ಆ ತುಂಡನ್ನು ಶಕುನಿಯ ಕಡೆಗೆ ಎಸೆದ.
ತಚ್ಛಿತ್ತ್ವಾ ಸಗುಣಂ ಚಾಪಂ ರಣೇ ತಸ್ಯ ಮಹಾತ್ಮನಃ |
ಪಪಾತ ಧರಣೀಂ ತೂರ್ಣಂ ಸ್ವರ್ಣವಜ್ರವಿಭೂಷಿತಮ್ ॥41॥
ಆ ಖಡ್ಗದ ತುಂಡು ಮಹಾತ್ಮ ಶಕುನಿಯ ಬಿಲ್ಲನ್ನೂ ಹೆದೆಯನ್ನೂ ಒಡನೆ ಕಡಿದು ನೆಲಕ್ಕೆ ಬಿದ್ದಿತು. ಅದು ಬಂಗಾರ ವಜ್ರಗಳಿಂದ ಅಲಂಕೃತವಾಗಿತ್ತು.
ಸುತಸೋಮಸ್ತತೋ ರಾಜನ್ ಶ್ರುತಕೀರ್ತಿರಥಂ ಗತಃ ॥42॥
ರಾಜನೆ, ಸುತಸೋಮನು ಬಳಿಕ ಶ್ರುತಕೀರ್ತಿಯ ರಥವನ್ನೇರಿದ.
ಸೌಬಲೋಽಪಿ ಧನುರ್ಗೃಹ್ಯ ಘೋರಮನ್ಯತ್ ಸುದುಃಸಹಮ್ |
ಅಭ್ಯಯಾತ್ ಪಾಂಡವಾನೀಕಂ ನಿಘ್ನನ್ ಶತ್ರುಗಣಾನ್ ಬಹೂನ್ ॥
ಶಕುನಿಯೂ ಬೇರೆ ಭಯಂಕರವಾದ ಬಲು ದುಃಸಹವಾದ ಧನುಸ್ಸನ್ನು ಹಿಡಿದು ಬಹು ಶತ್ರುಸಮೂಹಗಳನ್ನು ಸಂಹರಿಸುತ್ತ ಪಾಂಡವಸೈನ್ಯವನ್ನು ಆಕ್ರಮಿಸಿದ.
ತತ್ರ ನಾದೋ ಮಹಾನಾಸೀತ್ ಪಾಂಡವಾನಾಂ ವಿಶಾಂಪತೇ |
ಸೌಬಲಂ ಸಮರೇ ದೃಷ್ಟ್ವಾ ವಿಚರಂತಮಭೀತವತ್ ॥44॥
ರಾಜನೆ, ಶಕುನಿಯು ರಣದಲ್ಲಿ ನಿರ್ಭೀತನಾಗಿ ಸಂಚರಿಸುವುದನ್ನು ಕಂಡು ಪಾಂಡವರ ಸೈನ್ಯದಲ್ಲಿ ಕೋಲಾಹಲ ಉಂಟಾಯಿತು.
ತಾನ್ಯನೀಕಾನಿ ದೃಪ್ತಾನಿ ಶಸ್ತ್ರವಂತಿ ಮಹಾಂತಿ ಚ |
ದ್ರಾವ್ಯಮಾಣಾನ್ಯದೃಶ್ಯಂತ ಸೌಬಲೇನ ಮಹಾತ್ಮನಾ ॥45॥
ಪಾಂಡವರ ಸೈನ್ಯವು ದರ್ಪದಿಂದ ಕೂಡಿತ್ತು. ಶಸ್ತ್ರಗಳಿಂದ ಕೂಡಿತ್ತು. ಮಹತ್ತಾಗಿತ್ತು. ಮಹಾತ್ಮ ಶಕುನಿ ಅದನ್ನು ಓಡಿಸುತ್ತಿದ್ದುದು ಕಂಡುಬಂದಿತು.
ಯಥಾ ದೈತ್ಯಚಮೂಂ ರಾಜನ್ ದೇವರಾಜೋ ಮಮರ್ದ ಹ |
ತಥೈವ ಪಾಂಡವಾನೀಕಂ ಸೌಬಲೇಯೋ ವ್ಯನಾಶಯತ್ ॥46॥
ರಾಜನೆ, ದೈತ್ಯಸೈನ್ಯವನ್ನು ದೇವರಾಜ ಮರ್ದಿಸಿದಂತೆ ಪಾಂಡವಸೈನ್ಯವನ್ನು ಶಕುನಿ ನಾಶಮಾಡತೊಡಗಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಸುತಸೋಮ ಸೌಬಲಯುದ್ಧಂ ನಾಮ ಪಂಚವಿಂಶೋಽಧ್ಯಾಯಃ |25॥

ಮಹಾಭಾರತತಾತ್ಪರ್ಯನಿರ್ಣಯ
ಕೃಪಮಾಯಾಂತಮೀಕ್ಷ್ಯೈವ ತಪಸಾ ಮಾಂ ಪ್ರಪೀಡಯೇತ್ |
ಇತಿ ಮತ್ವಾ ಪಾರ್ಷತಸ್ತು ಭೀಮಂ ಶರಣಮೇಯಿವಾನ್ ॥ 21 ॥
ಧೃಷ್ಟದ್ಯುಮ್ನ ತನಗೆ ಇದಿರಾಗಿ ಕೃಪ ಬರುತ್ತಿದ್ದುದನ್ನು ಕಂಡು ಅವನು ತನ್ನನ್ನು ತಪೋಬಲದಿಂದ ಬಹಳ ಪೀಡಿಸಬಹುದೆಂದುಬಗೆದು ಭೀಮನನ್ನು ಮೊರೆಹೊಕ್ಕ.

ಇಪ್ಪತ್ತಾರನೆಯ ಅಧ್ಯಾಯ
ಧೃಷ್ಟದ್ಯುಮ್ನಕೃಪರ ಯುದ್ಧ. ಕೃತವರ್ಮನಿಂದ ಶಿಖಂಡಿ ಪರಾಜಯ.
ಸಂಜಯಃ
ಧೃಷ್ಟದ್ಯುಮ್ನಂ ಕೃಪೋ ರಾಜನ್ ವಾರಯಾಮಾಸ ಸಂಯುಗೇ |
ಯಥಾ ದೃಪ್ತಂ ವನೇ ಸಿಂಹಂ ಶರಭೋ ವಾರಯೇದ್ ಯುಧಿ ॥1॥
ಸಂಜಯ ಧೃತರಾಷ್ಟ್ರನಿಗೆ ಹೇಳುತ್ತಾನೆ– ರಾಜನೆ, ಕೃಪಾಚಾರ್ಯರು ಯುದ್ಧದಲ್ಲಿ ಧೃಷ್ಟದ್ಯುಮ್ನನನ್ನು ದರ್ಪದ ಸಿಂಹವನ್ನು ಕಾಡಿನಲ್ಲಿ ಶರಭವು ಇದಿರಿಸಿದಂತೆ ಇದಿರಿಸಿದರು.
ಶರಭ ಪ್ರಾಚೀನಕಾಲದ ಮೃಗರಾಜ, ಎಂಟುಕಾಲಿನ ಈ ಮೃಗಕ್ಕೆ ಸಿಂಹವೂ ಕೂಡ ಹೆದರುತ್ತಿತ್ತು.
ನಿರುದ್ಧಃ ಪಾರ್ಷತಸ್ತೇನ ಗೌತಮೇನ ಬಲೀಯಸಾ |
ಪದಾತ್ ಪದಂ ವಿಚಲಿತುಂ ನಾಶಕತ್ ತತ್ರ ಭಾರತ ॥2॥
ಬಲಿಷ್ಠನಾದ ಕೃಪ ಧೃಷ್ಟದ್ಯುಮ್ನನನ್ನು ತಡೆದು ನಿಲ್ಲಿಸಿದಾಗ ಧೃಷ್ಟದ್ಯುಮ್ನ ಒಂದು ಹೆಜ್ಜೆ ಕೂಡ ಮುಂದುವರಿಯಲು ಶಕ್ತನಾಗಲಿಲ್ಲ.

ಗೌತಮಸ್ಯ ರಥಂ ದೃಷ್ಟ್ವಾ ಧೃಷ್ಟದ್ಯುಮ್ನರಥಂ ಪ್ರತಿ |
ವಿತ್ರೇಸುಃ ಸರ್ವಭೂತಾನಿ ಕ್ಷಯಂ ಪ್ರಾಪ್ತಂ ಚ ಮೇನಿರೇ ॥3॥
ಧೃಷ್ಟದ್ಯುಮ್ನನ ರಥಕ್ಕೆ ಇದಿರಾಗಿ ಕೃಪನ ರಥ ನಿಂತುದನ್ನು ಕಂಡು ಎಲ್ಲರೂ ಭಯಪಟ್ಟರು. ಪ್ರಳಯಕಾಲವೇ ಬಂದಿತೇನೋ ಎಂದುಕೊಂಡರು.
ತತ್ರ ಜಲ್ಪಂತಿ ಪಾಂಡೂನಾಂ ರಥಿನಃ ಸಾದಿನಸ್ತಥಾ ॥4॥
ಪಾಂಡವರ ರಥಿಕರೂ ಅಶ್ವಾರೋಹಿಗಳು ಆಗ ಮಾತನಾಡಿಕೊಂಡರು–
ಪಾಂಡುಸೈನಿಕಾಃ
ದ್ರೋಣಸ್ಯ ನಿಧನಾನ್ನೂನಂ ಸಂಕ್ರುದ್ಧೋ ದ್ವಿಪದಾಂ ವರಃ |
ಶಾರದ್ವತೋ ಮಹಾತೇಜಾ ದಿವ್ಯಾಸ್ತ್ರವಿದುದಾರಧೀಃ ॥5॥
ಪಾಂಡವ ಸೈನಿಕರು ಹೇಳಿದರು– `ದ್ರೋಣವಧೆಯಿಂದ ಪ್ರಾಯಶಃ ಕೃಪ ಬಲು ಕ್ರುದ್ಧನಾಗಿದ್ದಾನೆ. ಅವನು ಗೌತಮವಂಶದ ಶರದ್ವಂತನ ಮಗ, ಮಹಾ ಪರಾಕ್ರಮಿ, ದಿವ್ಯಾಸ್ತ್ರಜ್ಞಾನಿ, ಸರ್ವಜ್ಞ.
ಅಪಿ ಸ್ವಸ್ತಿ ಭವೇದದ್ಯ ಧೃಷ್ಟದ್ಯುಮ್ನಸ್ಯ ಗೌತಮಾತ್ |
ಅಪೀಯಂ ವಾಹಿನೀ ಕೃತ್ಸ್ನಾ ಮುಚ್ಯೇತ ಮಹತೋ ಭಯಾತ್ ॥6॥
ಧೃಷ್ಟದ್ಯುಮ್ನನಿಗೆ ಕೃಪನಿಂದ ಕ್ಷೇಮವಾದೀತು ತಾನೆ? ನಮ್ಮ ಇಡೀ ಸೈನ್ಯ ಕೃಪನ ಭಯದಿಂದ ಮುಕ್ತವಾದೀತು ತಾನೆ?
ಅಪ್ಯಯಂ ಬ್ರಾಹ್ಮಣಃ ಸರ್ವಾನ್ ನ ನೋ ಹನ್ಯಾತ್ ಸಮಾಗತಾನ್ ॥
ಈ ಬ್ರಾಹ್ಮಣ ಯುದ್ಧಕ್ಕೆ ಬರುವ ನಮ್ಮೆಲ್ಲರನ್ನೂ ಕೊಲ್ಲಲಾರ ತಾನೆ?
ಯಾದೃಶಂ ದೃಶ್ಯತೇ ರೂಪಮಂತಕಪ್ರತಿಮಂ ರಣೇ |
ಗಮಿಷ್ಯತ್ಯದ್ಯ ಪದವೀಂ ಭಾರದ್ವಾಜಸ್ಯ ಗೌತಮಃ ॥8॥
ಈತನ ರೂಪ ಯಮನ ರೂಪದಂತೆ ಇದೆ. ಇವನು ದ್ರೋಣನ ಹಾದಿಯನ್ನೇ ಹಿಡಿಯುವನೇ? ದ್ರೋಣನಂತೆ ಸೇನಾಧಿಪತಿಯಾಗುವನೆ?
ಆಚಾರ್ಯಃ ಕ್ಷಿಪ್ರಹಸ್ತಶ್ಚ ವಿಜಯೀ ಚ ಸದಾ ಯುಧಿ |
ಅಸ್ತ್ರವಾನ್ ವೀರ್ಯಸಂಪನ್ನಃ ಕ್ರೋಧೇನ ಚ ಸಮನ್ವಿತಃ ॥9॥
ಪಾರ್ಷತಶ್ಚ ಮಹಾಯುದ್ಧೇ ವಿಮುಖೋಽದ್ಯಾಪಿ ಲಕ್ಷ್ಯತೇ ॥10॥
ಆಚಾರ್ಯ ಕೃಪನು ಯುದ್ಧದಲ್ಲಿ ಕೈಚಳಕ ಉಳ್ಳವನು, ಸದಾ ಜಯಶೀಲ, ಅಸ್ತ್ರಜ್ಞ , ವೀರ್ಯಉಳ್ಳವನು ಕ್ರೋಧದಿಂದಲೂ ಕೂಡಿದವನು. ಇತ್ತ ಧೃಷ್ಟದ್ಯುಮ್ನನು ಇವನೊಂದಿಗೆ ಮಹಾಯುದ್ಧ ಮಾಡಲು ಈಗ ಹಿಂಜರಿಯು ತ್ತಿದ್ದಾನೆ.'
ಸಂಜಯಃ
ಇತ್ಯೇವಂ ವಿವಿಧಾ ವಾಚೋ ವ್ಯಶ್ರೂಯಂತ ರಣಾಜಿರೇ |
ವ್ಯಶ್ರೂಯಂತ ಮಹಾರಾಜ ತಯೋಸ್ತತ್ರ ಸಮಾಗಮೇ ॥11॥
ಸಂಜಯ ನುಡಿದ– ರಣರಂಗದಲ್ಲಿ ಹೀಗೆ ನಾನಾವಿಧವಾದ ಮಾತು ಕೇಳಿಸಿತು. ಕೇಳಿಸಿತು, ಮಹಾರಾಜ, ಅವರಿಬ್ಬರ ಸಮಾಗಮವಾದಾಗ.
ವಿನಿಶ್ವಸ್ಯ ತತಃ ಕ್ರೋಧಾತ್ ಕೃಪಃ ಶಾರದ್ವತೋ ನೃಪ |
ಪಾರ್ಷತಂ ಛಾದಯಾಮಾಸ ನಿಶ್ಚೇಷ್ಟಂ ಶರವೃಷ್ಟಿಭಿಃ ॥12॥
ಬಳಿಕ ರಾಜನೆ, ಕೃಪನು ಕೋಪದಿಂದ ನಿಟ್ಟುಸಿರು ಬಿಟ್ಟು ಧೃಷ್ಟದ್ಯುಮ್ನನನ್ನು ಬಾಣಗಳ ಮಳೆಯಲ್ಲಿ ಆಚ್ಛಾದಿಸಿ ನಿಶ್ಚೇಷ್ಟನನ್ನಾಗಿ ಮಾಡಿದ.
ಸ ವಧ್ಯಮಾನಃ ಸಮರೇ ಗೌತಮೇನ ಮಹಾತ್ಮನಾ |
ಕರ್ತವ್ಯಂ ನಾಭಿಜಜ್ಞೇ ವೈ ಮೋಹೇನ ಮಹತಾ ವೃತಃ ॥13॥
ರಣದಲ್ಲಿ ಮಹಾತ್ಮ ಕೃಪನಿಂದ ಹೊಡೆಸಿಕೊಳ್ಳುವಾಗ ಧೃಷ್ಟದ್ಯುಮ್ನ ದೊಡ್ಡ ಗೊಂದಲದಲ್ಲಿ ಮುಳುಗಿ ಏನು ಮಾಡಬೇಕೆಂಬುದನ್ನು ತಿಳಿಯದೆ ಹೋದ.
ತಮಬ್ರವೀತ್ ತತೋ ಯಂತಾ ಕಚ್ಚಿತ್ ಕ್ಷೇಮಂ ನು ಮಾರಿಷ |
ಈದೃಶಂ ವ್ಯಸನಂ ಯುದ್ಧೇ ನ ಮೇ ದೃಷ್ಟಂ ಕದಾಚನ ॥14॥
ಆಗ ಸಾರಥಿ, `ರಾಜನೆ, ಕ್ಷೇಮದಿಂದಿರುವೆ ತಾನೆ? ಯುದ್ಧದಲ್ಲಿ ಹೀಗೆ ನೀನು ಗೊಂದಲಕ್ಕೊಳಗಾದುದನ್ನು ನಾನೆಂದೂ ನೋಡೇ ಇಲ್ಲ.
ದೈವಯೋಗಾದಿಮೇ ಬಾಣಾ ನ ಜಘ್ನುರ್ಮರ್ಮ ಚಾಹವೇ |
ಪ್ರೇಷಿತಾ ದ್ವಿಜಮುಖ್ಯೇನ ಮರ್ಮಾಣ್ಯುದ್ದಿಶ್ಯ ಸರ್ವಶಃ ॥15॥
ದೈವಾತ್ ಈ ಬಾಣಗಳು ಯುದ್ಧದಲ್ಲಿ ನನ್ನ ಮರ್ಮಸ್ಥಾನವನ್ನು ಹೊಡೆಯ ಲಿಲ್ಲ. ಬ್ರಾಹ್ಮಣ ಶ್ರೇಷ್ಠನು ಎಲ್ಲ ಮರ್ಮಸ್ಥಾನಗಳಿಗೆ ಬಾಣವೆಸೆಯುತ್ತಿದ್ದಾನೆ.
ವ್ಯಾವರ್ತಯೇ ತವ ರಥಂ ನದೀ ವೇಗಮಿವಾಹವಾತ್ |
ಅವಧ್ಯಂ ಬ್ರಾಹ್ಮಣಂ ಮನ್ಯೇ ಯೇನ ತೇ ವಿಕ್ರಮೋ ಹತಃ ॥16॥
ಬ್ರಾಹ್ಮಣನಿಗೆ ಹೊಡೆಯಬಾರದೆಂದು ನಿನ್ನ ಅಭಿಪ್ರಾಯವಿರಬಹುದು. ಅದರಿಂದ ನಿನ್ನ ಪರಾಕ್ರಮ ಕುಂಠಿತವಾಗುತ್ತಿದೆ ತಾನೆ? ನದಿಯು ಸಮುದ್ರವನ್ನು ಸೇರುವಲ್ಲಿ ತನ್ನ ವೇಗವನ್ನು ಹಿಂತಿರುಗಿಸಿಕೊಳ್ಳುವಂತೆ ನಾನೂ ನಿನ್ನ ರಥವನ್ನು ಯುದ್ಧದಿಂದ ಈಚೆಗೆ ಹಿಂತಿರುಗಿಸುತ್ತೇನೆ.'
ಧೃಷ್ಟದ್ಯುಮ್ನಸ್ತತೋ ರಾಜನ್ ಶನಕೈರಬ್ರವೀದ್ ವಚಃ ॥17॥

ರಾಜನೆ, ಆಗ ಧೃಷ್ಟದ್ಯುಮ್ನ ಸಾರಥಿಗೆ ನಿಧಾನವಾಗಿ ಹೇಳಿದ.
ಧೃಷ್ಟದ್ಯುಮ್ನಃ
ಮುಹ್ಯತೇ ಮೇ ಮನಸ್ತಾತ ಗಾತ್ರಸ್ವೇದಶ್ಚ ಜಾಯತೇ |
ವೇಪಥುಶ್ಚ ಕ್ಲಮಶ್ಚೈವ ರೋಮಹರ್ಷಶ್ಚ ಜಾಯತೇ ||18||
ಧೃಷ್ಟದ್ಯುಮ್ನ ನುಡಿದ– ಸಾರಥಿ, ನನ್ನ ಮನಸ್ಸು ಗೊಂದಲಕ್ಕೀಡಾಗಿದೆ. ಮೈ ಬೆವರುತ್ತಿದೆ. ನಡುಕ, ಆಯಾಸ, ರೋಮಾಂಚನಗಳುಂಟಾಗುತ್ತಿವೆ.
ಬ್ರಾಹ್ಮಣಂ ವರ್ಜಯನ್ ಯುದ್ಧೇ ಶನೈರ್ಯಾಹಿ ಯತೋಽಚ್ಯುತೌ ||
ಬ್ರಾಹ್ಮಣನನ್ನು ಸುಮ್ಮನೆ ಬಿಟ್ಟು ನಿಧಾನವಾಗಿ ಕೃಷ್ಣಾರ್ಜುನರಿರುವಲ್ಲಿಗೇ ಹೋಗು.
ಅರ್ಜುನಂ ಭೀಮಸೇನಂ ವಾ ಸಮರೇ ಪ್ರಾಪ್ಯ ಸಾರಥೇ |
ಕ್ಷೇಮಮದ್ಯ ಭವೇನ್ಮಹ್ಯಮಿತಿ ಮೇ ನೈಷ್ಠಿಕೀ ಮತಿಃ ||20||
ಅರ್ಜುನನ್ನಾಗಲಿ ಭೀಮನನ್ನಾಗಲಿ ಸೇರಿದರೆ ನನಗೆ ಕ್ಷೇಮವೆಂದು ನನಗೆ ವಿಶ್ವಾಸವಿದೆ.
ಸಂಜಯಃ
ತತಃ ಪ್ರಾಯಾನ್ಮಹಾರಾಜ ಸಾರಥಿಸ್ತ್ವರಯನ್ ಹಯಾನ್ |
ಯತೋ ಭೀಮೋ ಮಹೇಷ್ವಾಸೋ ಯುಯುಧೇ ತವ ಸೈನಿಕೈಃ ||21||
ಸಂಜಯ ನುಡಿದ– ಮಹಾರಾಜ, ಆಗ ಸಾರಥಿ ಬೇಗನೆ ಕುದುರೆಗಳನ್ನು, ಮಹಾ ಬಿಲ್ಲಾಳುವಾದ ಭೀಮಸೇನ ನಿನ್ನ ಸೈನಿಕರೊಂದಿಗೆ ಯುದ್ಧಮಾಡುವಲ್ಲಿಗೆ ಓಡಿಸಿದ.
ಪ್ರದ್ರುತಂ ತು ರಥಂ ದೃಷ್ಟ್ವಾ ಧೃಷ್ಟದ್ಯುಮ್ನಸ್ಯ ಮಾರಿಷ |
ಕಿರನ್ ಶರಶತಾನ್ಯೇವ ಗೌತಮೋಽನುಯಯೌ ತದಾ ||22||
ರಾಜನೆ, ಧೃಷ್ಟದ್ಯುಮ್ನನ ರಥ ಪಲಾಯನ ಮಾಡುವುದನ್ನು ಕಂಡು ಕೃಪ ಅವನ ಮೇಲೆ ನೂರಾರು ಬಾಣಗಳನ್ನು ಎಸೆಯುತ್ತ ಬೆನ್ನಟ್ಟಿದ.
ಶಂಖಂ ಚ ಪೂರಯಾಮಾಸ ಮುಹುರ್ಮುಹುರರಿಂದಮಃ |
ಪಾರ್ಷತಂ ದ್ರಾವಯಾಮಾಸ ಮಹೇಂದ್ರ ಇವ ಶಂಬರಮ್ ||23||
ಶತ್ರುನಾಶಕನಾದ ಕೃಪ ಪುನಃಪುನಃ ಶಂಖನಾದ ಮಾಡುತ್ತ ಧೃಷ್ಟದ್ಯುಮ್ನನನ್ನು ಮಹೇಂದ್ರನು ಶಂಬರಾಸುರನನ್ನು ಅಟ್ಟಿದಂತೆ ಅಟ್ಟಿದ.
ಶಿಖಂಡಿನಂ ತು ಸಮರೇ ಭೀಷ್ಮಮೃತ್ಯುಂ ದುರಾಸದಮ್ |
ಹಾರ್ದಿಕ್ಯೋ ವಾರಯಾಮಾಸ ಸ್ಮಯನ್ನಿವ ಮುಹುರ್ಮುಹುಃ ||24||
ಭೀಷ್ಮನ ಮರಣಕ್ಕೆ ಕಾರಣನಾದ, ಶತ್ರುಗಳಿಗೆ ವಶನಾಗದ ಶಿಖಂಡಿಯನ್ನು ಹೃದಿಕನ ಪುತ್ರನಾದ ಕೃತವರ್ಮನು ಪುನಃ ಪುನಃ ಅಟ್ಟಹಾಸಗೈಯುತ್ತ ತಡೆದ.
ಶಿಖಂಡೀ ತು ಸಮಾಸಾದ್ಯ ಹೃದಿಕಾನಾಂ ಮಹಾರಥಮ್ |
ಪಂಚಭಿರ್ನಿಶಿತೈರ್ಭಲ್ಲೈರ್ಜತ್ರುದೇಶೇ ಸಮಾರ್ದಯತ್ ||25||
ಶಿಖಂಡಿಯು ಹೃದಿಕರ ಮಹಾರಥನಾದ ಕೃತವರ್ಮನನ್ನು ಸಂಧಿಸಿ ತೀಕ್ಷ್ಣವಾದ ಐದು ಭಲ್ಲೆಗಳಿಂದ ಕೊರಳಿನ ಎಲುಬಿಗೆ ಹೊಡೆದ.
ಕೃತವರ್ಮಾ ತು ಸಂಕ್ರುದ್ಧೋ ವಿದ್ಧ್ವಾ ಷಷ್ಟಿಭಿರಾಶುಗೈಃ |
ಧನುರೇಕೇನ ಚಿಚ್ಛೇದ ಸ್ಮಯನ್ನಿವ ಮಹಾರಥಃ ||26||
ಮಹಾರಥನಾದ ಕೃತವರ್ಮ ನಗುತ್ತ ಕೋಪದಿಂದ ಶಿಖಂಡಿಯನ್ನು ಅರವತ್ತು ಬಾಣಗಳಿಂದ ಹೊಡೆದು ಒಂದು ಬಾಣದಿಂದ ಅವನ ಬಿಲ್ಲನ್ನು ಕಡಿದ.
ಅಥಾನ್ಯದ್ ಧನುರಾದಾಯ ದ್ರುಪದಸ್ಯಾತ್ಮಜೋ ಬಲೀ |
ತಿಷ್ಠ ತಿಷ್ಠೇತಿ ಸಂಕ್ರುದ್ಧಃ ಹಾರ್ದಿಕ್ಯಂ ಪ್ರತ್ಯಭಾಷತ ||27||
ಬಲಿಷ್ಠನಾದ ಶಿಖಂಡಿ ಇನ್ನೊಂದು ಬಿಲ್ಲನ್ನೆತ್ತಿ ಕೋಪದಿಂದ `ನಿಲ್ಲುನಿಲ್ಲು' ಎಂದು ಕೃತವರ್ಮನಿಗೆ ಪ್ರತಿಯಾಗಿ ನುಡಿದ.
ತತೋಽಸ್ಯ ನವತಿಂ ಬಾಣಾನ್ ರುಗ್ಮಪುಂಖಾನ್ ಸುತೇಜಸಃ |
ಪ್ರೇಷಯಾಮಾಸ ಸಮರೇ ತೇಽಸ್ಯಾಭ್ರಶ್ಯಂತ ವರ್ಮಣಾ ||28||
ಮತ್ತು ಕೃತವರ್ಮನ ಮೇಲೆ ಬಂಗಾರದ ಪುಕ್ಕಉಳ್ಳ ತೇಜಸ್ವಿಯಾದ ತೊಂಬತ್ತು ಬಾಣಗಳನ್ನು ರಣದಲ್ಲಿ ಎಸೆದ. ಆದರೆ ಅವು ಕವಚಕ್ಕೆ ತಗುಲಿ ಕೆಳಕ್ಕೆ ಜಾರಿದುವು.
ವಿತಥಾಂಸ್ತಾನ್ ಸಮಾಲಕ್ಷ ್ಯ ಪತಿತಾಂಶ್ಚ ಮಹೀತಳೇ |
ಕ್ಷುರಪ್ರೇಣ ಸುತೀಕ್ಷ್ಣೇ ನ ಸೋಽಚ್ಛಿನತ್ ಕಾರ್ಮುಕಂ ದೃಢಮ್ ||29||
ಬಾಣಗಳು ವ್ಯರ್ಥವಾಗಿ ನೆಲದಲ್ಲಿ ಬಿದ್ದಿದ್ದನ್ನು ನೋಡಿ ಶಿಖಂಡಿ ಬಲು ತೀಕ್ಷ್ಣವಾದ ಬಾಣದಿಂದ ಕೃತವರ್ಮನ ಬಿಲ್ಲನ್ನು ದೃಢವಾಗಿ ಕತ್ತರಿಸಿದ.
ಅಥೈನಂ ಛಿನ್ನಧನ್ವಾನಂ ಭಗ್ನಶೃಂಗಮಿವರ್ಷಭಮ್ |
ಅಶೀತ್ಯಾ ಮಾರ್ಗಣೈಃ ಕ್ರುದ್ಧೋ ಬಾಹ್ವೋರುರಸಿ ಚಾರ್ಪಯತ್ ||
ಬಿಲ್ಲನ್ನು ಕಡಿದುಕೊಂಡ ಕೃತವರ್ಮ ಕೊಂಬು ಮುರಿದ ಎತ್ತಿನಂತಾದ. ಕ್ರುದ್ಧನಾದ ಶಿಖಂಡಿ ಅವನ ತೋಳುಗಳಲ್ಲಿಯೂ ಎದೆಯಲ್ಲಿಯೂ ಎಂಬತ್ತು ಬಾಣಗಳನ್ನು ಎಸೆದ.

ಕೃತವರ್ಮಾ ತು ಸಂಕ್ರುದ್ಧೋ ಮಾರ್ಗಣೈಃ ಕ್ಷತವಿಕ್ಷತಃ |
ಸುಸ್ರಾವ ರುಧಿರಂ ಗಾತ್ರೈಃ ಕುಂಭವಕ್ತ್ರಾದಿವೋದಕಮ್ ॥31॥
ಕ್ರುದ್ಧನಾದ ಕೃತವರ್ಮನು ಬಾಣಗಳಿಂದ ಕ್ಷತ ವಿಕ್ಷತನಾಗಿ, ಬಿಂದಿಗೆ ಬಾಯಿಂದ ನೀರು ಸುರಿಸುವಂತೆ ಎಲ್ಲ ಅವಯವಗಳಿಂದ ರಕ್ತವನ್ನು ಸುರಿಸಿದ.
ರುಧಿರೇಣ ಪರಿಕ್ಲಿನ್ನಃ ಕೃತವರ್ಮಾ ವ್ಯರೋಚತ |
ವರ್ಷೇಣ ಕ್ಲೇದಿತೋ ರಾಜನ್ ಯಥಾ ಗೈರಿಕಪರ್ವತಃ ॥32॥
ರಾಜನೆ, ಕೆಂಬಣ್ಣದ ಗೈರಿಕಧಾತುವಿನ ಪರ್ವತ ಮಳೆನೀರಿನಿಂದ ನೆನೆದಾಗ ಹೇಗೆ ಕಾಣುವುದೋ ಹಾಗೆ ರಕ್ತದಿಂದ ತೊಯ್ದ ಕೃತವರ್ಮ ಶೋಭಿಸಿದ.
ಅಥಾನ್ಯದ್ ಧನುರಾದಾಯ ಸಮಾರ್ಗಣಗಣಂ ತತಃ |
ಶಿಖಂಡಿನಂ ತ್ರಿಭಿರ್ಬಾಣೈಃ ಸ್ಕಂಧದೇಶೇಽಭ್ಯತಾಡಯತ್ ॥33॥
ಕೃತವರ್ಮ ಬೇರೆ ಬಿಲ್ಲು ಬಾಣಗಳನ್ನೆತ್ತಿಕೊಂಡು ಮೂರು ಬಾಣಗಳಿಂದ ಶಿಖಂಡಿಯನ್ನು ಕೊರಳ ಎಲುಬಿನ ಮೇಲೆ ಹೊಡೆದ.
ಸ್ಕಂಧದೇಶೇ ಸ್ಥಿತೈರ್ಬಾಣೈಃ ಶಿಖಂಡೀ ತು ವ್ಯರಾಜತ |
ಶಾಖಾಪ್ರಶಾಖೈರ್ವಿಮಲೈಃ ಸುಮಹಾನ್ ವೈ ಯಥಾ ದ್ರುಮಃ ॥34॥
ಹೆಗಲಿನಲ್ಲಿ ನೆಟ್ಟ ಬಾಣಗಳಿಂದ ಶಿಖಂಡಿ ನಿರ್ಮಲವಾದ ಕೊಂಬೆರೆಂಬೆ ಗಳಿಂದ ಯುಕ್ತವಾದ ಬಲು ದೊಡ್ಡ ಮರದಂತೆ ಶೋಭಿಸಿದ.
ತಾವನ್ಯೋನ್ಯಂ ರಣೇ ವಿದ್ಧ್ವಾ ರುಧಿರೇಣ ಸಮುಕ್ಷಿತೌ |
ಪ್ರೋಪ್ಲೂಯಮಾನೌ ಹಿ ಯಥಾ ಮಹಾಂತೌ ಶೋಣಿತಹ್ರದೌ ॥35॥
ಶಿಖಂಡಿ ಕೃತವರ್ಮರು ಪರಸ್ಪರ ಹೊಡೆದುಕೊಂಡು ರಕ್ತದಿಂದ ತೊಯ್ದು ಹೋದರು. ಮಡುಗಟ್ಟಿದ ರಕ್ತದಿಂದ ಕೂಡಿದ ಅವರು ದೊಡ್ಡ ಎರಡು ಕೆನ್ನೀರ ಕೊಳಗಳಂತೆ ಕಂಡರು.
ತದ್ವದ್ವಿರೇಜತುರ್ವೀರೌ ಶೋಣಿತೇನ ಪರಿಪ್ಲುತೌ |
ಯಥಾ ಚ ಕಿಂಶುಕೌ ಫುಲ್ಲೌ ಪುಷ್ಪಮಾಸೇಽಭ್ಯುಪಾಗತೇ ॥36॥
ಇಬ್ಬರೂ ವೀರರು ರಕ್ತದಿಂದ ತೊಯ್ದು ಪುಷ್ಪಮಾಸದಲ್ಲಿ ಹೂಬಿಟ್ಟ ಎರಡು ಕಿಂಶುಕ(ಮುತ್ತುಗದ) ವೃಕ್ಷಗಳಂತೆ ಕಂಡರು.
ರುಧಿರೋಕ್ಷಿತಸರ್ವಾಂಗೌ ರಕ್ತಚಂದನರೂಷಿತೌ |
ಭುಜಗಾವಿವ ಸಂಕ್ರುದ್ಧೌ ರೇಜತುಸ್ತೌ ನರೋತ್ತಮೌ ॥37॥
ಸರ್ವಾಂಗಗಳಲ್ಲಿ ರಕ್ತದಿಂದ ತೊಯ್ದ ಇಬ್ಬರು ಕೆಂಪುಗಂಧ ಬಳಿದುಕೊಂಡ ರಾಜರ, ಕುಪಿತವಾದ ಎರಡು ಹಾವುಗಳಂತೆ ಕಂಡುಬಂದರು.
ತಾವುಭೌ ಶರನುನ್ನಾಂಗೌ ಪರಸ್ಪರಶರಕ್ಷತೌ |
ಅನ್ಯೋನ್ಯಶೃಂಗಾಭಿಹತೌ ರೇಜತುರ್ವೃಷಭಾವಿವ ॥38॥
ಅವರಿಬ್ಬರು ಬಾಣಪೀಡಿತಶರೀರರಾಗಿ, ಪರಸ್ಪರ ಬಾಣಗಳಿಂದ ಗಾಯ ಗೊಂಡು, ಪರಸ್ಪರ ಕೊಂಬುಗಳಿಂದ ಹೋರಾಡಿದ ಎತ್ತುಗಳಂತೆ ಶೋಭಿಸಿದರು.
ಅನ್ಯೋನ್ಯಸ್ಯ ವಧೇ ಯತ್ನಂ ಕುರ್ವಾಣೌ ತೌ ಮಹಾರಥೌ |
ರಥಾಭ್ಯಾಂ ಚೇರತುಸ್ತತ್ರ ಮಂಡಲಾನಿ ಸಹಸ್ರಶಃ ॥39॥
ಮಹಾರಥರಾದ ಇಬ್ಬರು ಪರಸ್ಪರ ವಧೆಗೆ ಯತ್ನ ಮಾಡುತ್ತ ಸಾವಿರಾರು ಮಂಡಲ ಗತಿಗಳಿಂದ ರಥಸಂಚಾರ ಮಾಡಿದರು.
ಕೃತವರ್ಮಾ ಮಹಾರಾಜ ಪಾರ್ಷತಂ ನಿಶಿತೈಃ ಶರೈಃ |
ರಣೇ ವಿವ್ಯಾಧ ಸಪ್ತತ್ಯಾ ಸ್ವರ್ಣಪುಂಖೈಃ ಶಿಲಾಶಿತೈಃ ॥40॥
ಮಹಾರಾಜ, ಕೃತವರ್ಮನು ಬಂಗಾರದ ಪುಕ್ಕವುಳ್ಳ ಸಾಣೆಹಿಡಿದ ಹರಿತವಾದ ಎಪ್ಪತ್ತು ಬಾಣಗಳಿಂದ ಶಿಖಂಡಿಯನ್ನು ಹೊಡೆದ.
ತತೋಽಸ್ಯ ಸಮರೇ ಬಾಣಂ ಭೋಜಃ ಪ್ರಹರತಾಂ ವರಃ |
ಜೀವಿತಾಂತಕರಂ ಘೋರಂ ವ್ಯಸಜ್ಯತ್ ತ್ವರಯಾಽನ್ವಿತಃ ॥41॥
ಯೋಧರಲ್ಲಿ ಶ್ರೇಷ್ಠನಾದ ಕೃತವರ್ಮ ಯುದ್ಧದಲ್ಲಿ ಶಿಖಂಡಿಯ ಮೇಲೆ ಪ್ರಾಣಾಂತಕರವಾದ ಭಯಂಕರ ಬಾಣವನ್ನು ವೇಗವಾಗಿ ಎಸೆದ.
ಸ ತೇನಾಭಿಹತೋ ರಾಜನ್ ಮೂರ್ಚ್ಛಯಾಽಭಿಪರಿಪ್ಲುತಃ |
ಧ್ವಜಯಷ್ಟಿಂ ಚ ಸಹಸಾ ಶಿಶ್ರಿಯೇ ಕಶ್ಮಲಾವೃತಃ ॥42॥
ರಾಜನೆ, ಶಿಖಂಡಿ ಆ ಬಾಣದಿಂದ ಹೊಡೆಸಿಕೊಂಡು ಮೈಮರೆತು ಒಡನೆ ಧ್ವಜಸ್ತಂಭವನ್ನು ಗಟ್ಟಿಯಾಗಿ ಹಿಡಿದು ಮೂರ್ಛೆಗೊಂಡ
ಅಪೋವಾಹ ರಣಾತ್ ತಂ ತು ಸಾರಥೀ ರಥಿನಾಂ ವರಮ್ |
ಹಾರ್ದಿಕ್ಯಶರಸಂತಪ್ತಂ ನಿಃಶ್ವಸಂತಂ ಪುನಃ ಪುನಃ ॥43॥
ರಥಿಕರಲ್ಲಿ ಶ್ರೇಷ್ಠನಾದ ಶಿಖಂಡಿ ಕೃತವರ್ಮನ ಬಾಣಗಳಿಂದ ಪೀಡಿತನಾಗಿ ನಿಟ್ಟುಸಿರು ಬಿಡುತ್ತಿದ್ದುದನ್ನು ಕಂಡು ಅವನನ್ನು ಸಾರಥಿಯು ರಣರಂಗದಿಂದಾಚೆಗೆ ಒಯ್ದ.
ಪರಾಜಿತೇ ತತ್ರ ಶೂರೇ ದ್ರುಪದಸ್ಯ ಸುತೇ ಪ್ರಭೋ |
ಪ್ರಾದ್ರವತ್ ಪಾಂಡವೀ ಸೇನಾ ವಧ್ಯಮಾನಾ ಸಮಂತತಃ ॥44॥
ರಾಜನೆ, ಶೂರನಾದ ದ್ರುಪದಪುತ್ರ ಶಿಖಂಡಿ ಪರಾಜಿತನಾದಾಗ ಎಲ್ಲೆಡೆಯಿಂದ ಹೊಡೆಸಿಕೊಂಡು ಪಾಂಡವ ಸೈನ್ಯ ಪಲಾಯನ ಮಾಡಿತು.

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಷಡ್ವಿಂಶೋಽಧ್ಯಾಯಃ ॥26॥

ಇಪ್ಪತ್ತೇಳನೆಯ ಅಧ್ಯಾಯ
ಅರ್ಜುನನಿಂದ ಸಂಶಪ್ತಕರ ವಧ.
ಸಂಜಯಃ
ಶ್ವೇತಾಶ್ವೋಽಪಿ ಮಹಾರಾಜ ವ್ಯಧಮತ್ ತಾವಕಂ ಬಲಮ್ |
ಯಥಾ ವಾಯುಃ ಸಮಾಸಾದ್ಯ ತೂಲರಾಶಿಂ ಸಮಂತತಃ ॥1॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ಮಹಾರಾಜ, ಗಾಳಿ ಬೀಸಿ ಹತ್ತಿಯ ರಾಶಿಯನ್ನು ಎಲ್ಲೆಡೆ ಚದುರಿಸುವಂತೆ ಅರ್ಜುನ ನಿನ್ನ ಸೈನ್ಯವನ್ನು ನಾಶಮಾಡಿದ್ದಾನೆ.
ಪ್ರತ್ಯುದ್ಯಯುಸ್ತ್ರಿಗರ್ತಾಸ್ತಂ ಶಿಬಯಃ ಸಹ ಕೌರವೈಃ |
ವಸಾತಯೋಽಥ ಸಾಲ್ವಾಶ್ಚ ಗೋಪಾಲಾಶ್ಚ ಯಶಸ್ವಿನಃ ॥2॥
ಅರ್ಜುನನನ್ನು ಯಶಸ್ವಿಗಳಾದ ತ್ರಿಗರ್ತರು, ಶಿಬಿಗಳು, ಕೌರವರು, ವಸಾತಿಗಳು ಸಾಲ್ವರು ಗೋಪಾಲರು ಇದಿರಿಸಿದರು.
ಸತ್ಯದೇವಃ ಸತ್ಯಕೀರ್ತಿರ್ಮಿತ್ರದೇವಃ ಶ್ರುತಂಜಯಃ |
ಸೌಶ್ರುತಿಶ್ಚಂದ್ರದೇವಶ್ಚ ಮಿತ್ರವರ್ಮಾ ಚ ಭಾರತ ॥3॥
ಸತ್ಯದೇವ, ಸತ್ಯಕೀರ್ತಿ ಮಿತ್ರದೇವ ಶ್ರುತಂಜಯ ಸೌಶ್ರುತಿ ಚಂದ್ರದೇವ ಮಿತ್ರವರ್ಮರೂ ಅರ್ಜುನನನ್ನು ಇದಿರಿಸಿದರು.
ತ್ರಿಗರ್ತರಾಜಃ ಸಮರೇ ಭ್ರಾತೃಭಿಃ ಪರಿವಾರಿತಃ |
ಪುತ್ರೈಶ್ಚೈವ ಮಹೇಷ್ವಾಸೈರ್ನಾನಾಶಸ್ತ್ರಧರೈರ್ಯುಧಿ ॥4॥
ತ್ರಿಗರ್ತರಾಜ ಸುಶರ್ಮನು, ಮಹಾಬಿಲ್ಲಾರರಾದ ನಾನಾಶಸ್ತ್ರಧಾರಿಗಳಾದ ಸೋದರರಿಂದಲೂ ಪುತ್ರರಿಂದಲೂ ಪರಿವಾರಿತನಾಗಿ ರಣದಲ್ಲಿ ಅರ್ಜುನನನ್ನು ಇದಿರಿಸಿದ.
ತೇ ಸೃಜಂತಃ ಶರಾನ್ ಘೋರಾನ್ ಕಿರಂತೋಽರ್ಜುನಮಾಹವೇ |
ಅಭ್ಯವರ್ತಂತ ಸಹಸಾ ವಾರ್ಯೌಘಾ ಇವ ಸಾಗರಮ್ ॥5॥
ನೀರಿನ ಪ್ರವಾಹ ಸಾಗರವನ್ನು ಪ್ರವೇಶಿಸುವಂತೆ ಇವರೆಲ್ಲರೂ ಒಡನೆ ರಣದಲ್ಲಿ ಘೋರವಾದ ಬಾಣಗಳನ್ನು ಎಸೆಯುತ್ತ ಅರ್ಜುನನ ಇದಿರಿಗೆ ಬಂದರು.
ತೇ ತ್ವರ್ಜುನಂ ಸಮಾಸಾದ್ಯ ಯೋಧಾಃ ಶತಸಹಸ್ರಶಃ |
ಅಗಚ್ಛನ್ ವಿಲಯಂ ಸರ್ವೇ ತಾರ್ಕ್ಷ್ಯಂ ದೃಷ್ಟ್ವೇವ ಪನ್ನಗಾಃ ॥6॥
ಆದರೆ ನೂರಾರು ಸಾವಿರಾರು ಸಂಖ್ಯೆಯಲ್ಲಿದ್ದ ಆ ಯೋಧರೆಲ್ಲರೂ ಅರ್ಜುನನ ಇದಿರಿಗೆ ಬಂದು, ಗರುಡನನ್ನು ಕಂಡ ಹಾವುಗಳಂತೆ, ನಾಶ ಹೊಂದಿದರು.
ತೇ ವಧ್ಯಮಾನಾಃ ಸಮರೇ ನ ಜಹುಃ ಪಾಂಡವಂ ತದಾ |
ದಹ್ಯಮಾನಾ ಮಹಾರಾಜ ಶಲಭಾ ಇವ ಪಾವಕಮ್ ॥7॥
ಮಹಾರಾಜ, ಅವರು ಯುದ್ಧದಲ್ಲಿ ಹೊಡೆಸಿಕೊಂಡರೂ ಅರ್ಜುನನನ್ನು ಬಿಟ್ಟು ಮಿಡತೆಗಳು ಬೆಂಕಿಯಿಂದ ಸುಡಿಸಿಕೊಂಡರೂ ಬೆಂಕಿಯನ್ನು ಬಿಟ್ಟು ಬೇರೆ ಕಡೆಗೆ ಹೇಗೆ ಹೋಗುವುದಿಲ್ಲವೋ ಹಾಗೆ ಪಲಾಯನ ಮಾಡಲಿಲ್ಲ.
ಸತ್ಯದೇವಸ್ತ್ರಿಭಿರ್ಬಾಣೈರ್ವಿವ್ಯಾಧ ಯುಧಿ ಪಾಂಡವಮ್ |
ಮಿತ್ರದೇವಸ್ತ್ರಿಷಷ್ಟ್ಯಾ ಚ ಚಂದ್ರದೇವಶ್ಚ ಸಪ್ತಭಿಃ ॥8॥
ಮಿತ್ರವರ್ಮಾ ತ್ರಿಸಪ್ತತ್ಯಾ ಸೌಶ್ರುತಿಶ್ಚಾಪಿ ಪಂಚಭಿಃ |
ಶ್ರುತಂಜಯಶ್ಚ ವಿಂಶತ್ಯಾ ಸುಶರ್ಮಾ ನವಭಿಃ ಶರೈಃ ॥9॥
ಸತ್ಯದೇವನು ಅರ್ಜುನನನ್ನು ಯುದ್ಧದಲ್ಲಿ ಮೂರು ಬಾಣಗಳಿಂದ ಹೊಡೆದ. ಮಿತ್ರದೇವನು ಅರವತ್ತು ಬಾಣಗಳಿಂದ, ಚಂದ್ರದೇವನು ಏಳು ಬಾಣಗಳಿಂದ. ಮಿತ್ರವರ್ಮನು ಎಪ್ಪತ್ತಮೂರು ಬಾಣಗಳಿಂದ, ಸೌಶ್ರುತಿಯು ಐದು ಬಾಣಗಳಿಂದ, ಶ್ರುತಂಜಯನು ಇಪ್ಪತ್ತು ಬಾಣಗಳಿಂದ, ಸುಶರ್ಮನು ಒಂಬತ್ತು ಬಾಣಗಳಿಂದ ಅರ್ಜುನನನ್ನು ಹೊಡೆದರು.
ಸ ವಿದ್ಧೋ ಬಹುಭಿಃ ಸಂಖ್ಯೇ ಪ್ರತಿವಿವ್ಯಾಧ ತಾನ್ ನೃಪಾನ್ |
ಸೌಶ್ರುತಿಂ ಪಂಚವಿಂಶತ್ಯಾ ಸತ್ಯದೇವಂ ತ್ರಿಭಿಃ ಶರೈಃ ॥10॥
ಮಿತ್ರದೇವಂ ಶತೇನೈವ ಚಂದ್ರದೇವಂ ತಥಾಽಷ್ಟಭಿಃ |
ಅಷ್ಟಾಭಿರ್ಮಿತ್ರವರ್ಮಾಣಂ ಸುಶರ್ಮಾಣಂ ತಥೈವ ಚ ॥11॥
ಬಹುಮಂದಿ ಶತ್ರುಗಳಿಂದ ಹೀಗೆ ಹೊಡೆಸಿಕೊಳ್ಳುತ್ತಿದ್ದ ಅರ್ಜುನನು ರಣದಲ್ಲಿ ಆ ರಾಜರಿಗೆ ಪ್ರತಿಯಾಗಿ ಬಾಣಗಳಿಂದ ಹೊಡೆದ. ಸೌಶ್ರುತಿಯನ್ನು ಇಪ್ಪತ್ತೈದು ಬಾಣಗಳಿಂದ, ಸತ್ಯದೇವನನ್ನು ಮೂರು ಬಾಣಗಳಿಂದ, ಮಿತ್ರದೇವನನ್ನು ನೂರು ಬಾಣಗಳಿಂದ, ಚಂದ್ರದೇವನನ್ನು ಎಂಟು ಬಾಣಗಳಿಂದ, ಮಿತ್ರವರ್ಮನನ್ನು ಎಂಟು ಬಾಣಗಳಿಂದ, ಸುಶರ್ಮನನ್ನೂ ಎಂಟು ಬಾಣಗಳಿಂದ ಹೊಡೆದ.
ಶ್ರುತಂಜಯಂ ಚ ರಾಜಾನಂ ಹತ್ವಾ ತತ್ರ ಶಿಲಾಶಿತೈಃ |
ಸೌಶ್ರುತೇಃ ಸಶಿರಸ್ತ್ರಾಣಂ ಶಿರಃ ಕಾಯಾದಪಾಹರತ್ ॥12॥
ತ್ವರಿತಂ ಚಂದ್ರದೇವಂ ಚ ಶರೈರ್ನಿನ್ಯೇ ಯಮಕ್ಷಯಮ್ ॥13॥

ಸಾಣೆ ಹಿಡಿದ ಹರಿತವಾದ ಬಾಣಗಳಿಂದ ರಾಜಾ ಶ್ರುತಂಜಯನನ್ನು ಕೊಂದು, ಸೌಶ್ರುತಿಯ ಶಿರಸ್ತ್ರಾಣಸಹಿತವಾದ ಶಿರಸ್ಸನ್ನು ಶರೀರದಿಂದ ಕಿತ್ತು ತೆಗೆದ. ಮತ್ತು ಬೇಗನೆ ಚಂದ್ರದೇವನನ್ನೂ ಯಮಲೋಕಕ್ಕೆ ಅಟ್ಟಿದ.
ಅಥೇತರಾನ್ ಮಹಾರಾಜ ಯತಮಾನಾನ್ ಮಹಾರಥಾನ್ |
ಪಂಚಭಿಃ ಪಂಚಭಿರ್ಬಾಣೈರೇಕೈಕಂ ಪ್ರತ್ಯತಾಡಯತ್ ||14||
ಮಹಾರಾಜ, ಬಳಿಕ ಅರ್ಜುನನು ತನ್ನನ್ನು ಕೊಲ್ಲಲು ಯತ್ನಿಸಿದ ಇತರ ಮಹಾರಥರನ್ನು ಐದೈದು ಬಾಣಗಳಿಂದ ಪ್ರತಿಯೊಬ್ಬನನ್ನೂ ಹೊಡೆದ.
ಸತ್ಯದೇವಸ್ತು ಸಂಕ್ರುದ್ಧಸ್ತೋಮರಂ ಸಸೃಜೇ ಶಿತಮ್ |
ಸಮುದ್ದಿಶ್ಯ ರಣೇ ಕೃಷ್ಣಂ ಸಿಂಹನಾದಂ ನನಾದ ಚ ||15||
ಸತ್ಯದೇವನು ಕ್ರುದ್ಧನಾಗಿ ರಣದಲ್ಲಿ ಕೃಷ್ಣನ ಮೇಲೆ ಹರಿತವಾದ ತೋಮರವನ್ನು ಎಸೆದು ಸಿಂಹನಾದ ಗೈದ.
ಸ ನಿರ್ಭಿದ್ಯ ಭುಜಂ ಸವ್ಯಂ ಮಾಧವಸ್ಯ ಮಹಾತ್ಮನಃ |
ಅಯಸ್ಮಯಃ ಸ್ವರ್ಣದಂಡೋ ಜಗಾಮ ಧರಣೀತಳಮ್ ||16||
ಮಹಾತ್ಮನಾದ ಕೃಷ್ಣನ ಎಡತೋಳನ್ನು ಹೊಡೆದು, ಬಂಗಾರದ ದಂಡಯುಕ್ತ ವಾದ ಕಬ್ಬಿಣದ ಆ ತೋಮರವು ನೆಲದಲ್ಲಿ ಬಿದ್ದಿತು.
ಮಾಧವಸ್ಯ ತು ವಿದ್ಧಸ್ಯ ತೋಮರೇಣ ಮಹಾರಣೇ |
ಪ್ರತೋದೋ ನ್ಯಪತದ್ಧಸ್ತಾದ್ ರಶ್ಮಯಶ್ಚ ವಿಶಾಂಪತೇ ||17||
ಮಹಾಯುದ್ಧದಲ್ಲಿ ಕೃಷ್ಣನು ತೋಮರದಿಂದ ಹೊಡೆಸಿಕೊಂಡಾಗ, ರಾಜನೆ, ಕೃಷ್ಣನ ಕೈಯಿಂದ ಕಡಿವಾಣವೂ ಲಗಾಮುಗಳೂ ಬಿದ್ದುವು.
ವಿಷ್ವಕ್ಸೇನಂ ಸುನಿರ್ವಿದ್ಧಂ ದೃಷ್ಟ್ವಾ ಪಾರ್ಥೋ ಧನಂಜಯಃ |
ಕ್ರೋಧಮಾಹಾರಯತ್ ತೀವ್ರಂ ಕೃಷ್ಣಂ ಚೇದಮುವಾಚ ಹ ||18||
ಕೃಷ್ಣನು ಬಹಳ ಹೊಡೆಸಿಕೊಂಡಿದ್ದನ್ನು ಕಂಡು ಅರ್ಜುನ ತೀವ್ರಕ್ರೋಧ ತಂದುಕೊಂಡು ಕೃಷ್ಣನಿಗೆ ಹೇಳಿದ.
ಅರ್ಜುನಃ
ಚೋದಯಾಶ್ವಾನ್ ಮಹಾಬಾಹೋ ಸತ್ಯದೇವರಥಂ ಪ್ರತಿ |
ಯಾವದೇನಂ ಶರೈಸ್ತೀಕ್ಷ್ಣೈರ್ನಯಾಮಿ ಯಮಸಾದನಮ್ ||19||
ಅರ್ಜುನ ಕೃಷ್ಣನಿಗೆ ಹೇಳಿದ– ಮಹಾಬಾಹುವೆ, ಕುದುರೆಗಳನ್ನು ಸತ್ಯದೇವನ ರಥದ ಕಡೆಗೆ ಇನ್ನೂ ಮುಂದಕ್ಕೆ ಓಡಿಸು, ತೀಕ್ಷ್ಣವಾದ ಬಾಣಗಳಿಂದ ಅವನನ್ನು ಯಮಸದನಕ್ಕೆ ಅಟ್ಟುತ್ತೇನೆ.
ಸಂಜಯಃ
ಪ್ರತೋದಂ ಗೃಹ್ಯ ಸೋನ್ಯತ್ ತು ರಶ್ಮೀನ್ ಸಂಗೃಹ್ಯ ಚ ದ್ರುತಮ್ ||
ತತಃ ಸ ಚೋದಯಾಮಾಸ ಸತ್ಯದೇವರಥಂ ಪ್ರತಿ ||21||
ಅಥ ದಿವ್ಯಾಸ್ತ್ರವಿಚ್ಛೂರೋ ಜಾತಮನ್ಯುರ್ಧನಂಜಯಃ ||22||
ವಿಷ್ವಕ್ಸೇನಂ ತು ನಿರ್ಭಿಣ್ಣಂ ದೃಷ್ಟ್ವಾ ಪಾರ್ಥೋ ಧನಂಜಯಃ |
ಸತ್ಯದೇವಂ ಶರೈಸ್ತೀಕ್ಷ್ಣೈರ್ವಾರಯಿತ್ವಾ ಮಹಾಬಲಃ ||23||
ತತಃ ಸುನಿಶಿತೈರ್ಭಲ್ಲೈ ರಾಜಂಸ್ತಸ್ಯ ಮಹಾತ್ಮನಃ |
ಕುಂಡಲೋಪಚಿತಂ ಕಾಯಾಚ್ಚಕರ್ತ ಪ್ರಹಸನ್ ಶಿರಃ ||24||
ಸಂಜಯನು ನುಡಿದ, ಕೃಷ್ಣನು ಬೇರೆ ಕಡಿವಾಣವನ್ನು ಮತ್ತು ಲಗಾಮುಗಳನ್ನು ಎತ್ತಿಕೊಂಡು ಬೇಗನೆ ಕುದುರೆಗಳನ್ನು ಸತ್ಯದೇವನ ರಥದ ಕಡೆಗೆ ಇನ್ನೂ ಮುಂದಕ್ಕೆ ಓಡಿಸಿದ. ಬಳಿಕ ದಿವ್ಯಾಸ್ತ್ರಗಳನ್ನು ಬಲ್ಲ ಶೂರ ಮಹಾಬಲಿ ಅರ್ಜುನನು ಕೋಪಗೊಂಡು, ಕೃಷ್ಣನು ಗಾಯಗೊಂಡಿರುವುದನ್ನು ನೋಡುತ್ತ ತೀಕ್ಷ್ಣವಾದ ಬಾಣಗಳಿಂದ ಸತ್ಯದೇವನನ್ನು ತಡೆದು, ಬಲು ಹರಿತವಾದ ಭಲ್ಲೆಗಳಿಂದ ಮಹಾತ್ಮನಾದ ಆ ಸತ್ಯದೇವನ ಕುಂಡಲಗಳಿಂದ ಅಲಂಕೃತವಾದ ಶಿರಸ್ಸನ್ನು ನಗುತ್ತ ಶರೀರದಿಂದ ಕತ್ತರಿಸಿದ.
ತಂ ನಿಹತ್ಯ ಶಿತೈರ್ಬಾಣೈರ್ಮಿತ್ರವರ್ಮಾಣಮಾಕ್ಷಿಪತ್ |
ವತ್ಸದಂತೇನ ತೀಕ್ಷ್ಣೇನ ಸಾರಥಿಂ ಚಾಸ್ಯ ಮಾರಿಷ ||25||
ತೀಕ್ಷ್ಣವಾದ ಬಾಣಗಳಿಂದ ಆ ಮಿತ್ರವರ್ಮನನ್ನು ಕೊಂದು ತೀಕ್ಷ್ಣವಾದ ವತ್ಸದಂತ ಬಾಣದಿಂದ ಸಾರಥಿಯನ್ನೂ ಅರ್ಜುನ ಕೊಂದ.
ತತಃ ಶರಶತೈರ್ಭೂಯಃ ಸಂಶಪ್ತಕಗಣಾನ್ ಬಹೂನ್ |
ಪಾತಯಾಮಾಸ ಸಂಕ್ರುದ್ಧಃ ಶತಶೋऽಥ ಸಹಸ್ರಶಃ ||26||
ಬಳಿಕ ನೂರಾರು ಸಾವಿರಾರು ಸಂಖ್ಯೆಯ ಬಹುಮಂದಿ ಸಂಶಪ್ತಕಗಣಗಳನ್ನು ಬಹಳ ಕ್ರುದ್ಧನಾದ ಅರ್ಜುನ ನೂರಾರು ಬಾಣಗಳಿಂದ ಪುನಃ ಕೊಂದ.
ತತೋ ರಜತಪುಂಖೇನ ರಾಜನ್ ಶೀರ್ಷಂ ಮಹಾತ್ಮನಃ |
ಮಿತ್ರಸೇನಸ್ಯ ಚಿಚ್ಛೇದ ಕ್ಷುರಪ್ರೇಣ ಮಹಾಯಶಾಃ ||27||
ರಾಜನೆ, ಬಳಿಕ ಮಹಾಯಶಸ್ವಿಯಾದ ಅರ್ಜುನ ಮಹಾತ್ಮನಾದ ಮಿತ್ರಸೇನನ ಶಿರಸ್ಸನ್ನು ಬೆಳ್ಳಿಯ ಪುಕ್ಕಉಳ್ಳ ಕ್ಷುರಪ್ರ ಬಾಣದಿಂದ ಕತ್ತರಿಸಿದ.
ಸುಶರ್ಮಾಣಂ ಸುಸಂಕ್ರುದ್ಧೋ ಜತ್ರುದೇಶೇ ಸಮರ್ಪಯತ್ |
ನಾರಾಚೇನ ಸುಮುಕ್ತೇನ ಸುತೀಕ್ಷ್ಣೇನ ಮಹಾಯಶಾಃ ||28||
ಮಹಾಯಶಸ್ವಿ ಅರ್ಜುನನು ಬಲು ಕ್ರುದ್ಧನಾಗಿ ಬಲುತೀಕ್ಷ್ಣವಾದ ಬಾಣವನ್ನು ಸರಿಯಾಗಿ ಪ್ರಯೋಗಿಸಿ ಸುಶರ್ಮನನ್ನು ಹೆಗಲಿನಲ್ಲಿ

ಹೊಡೆದ.
ತತಃ ಸಂಶಪ್ತಕಾಃ ಸರ್ವೇ ಪರಿವಾರ್ಯ ಧನಂಜಯಮ್ |
ಶಸೌತ್ರಘೈರ್ಮಮೃದುಃ ಕ್ರುದ್ಧಾ ನಾದಯಂತೋ ದಿಶೋ ದಶ ॥29॥
ಒಡನೆ ಸಂಶಪ್ತಕರು ಎಲ್ಲರೂ ಕ್ರುದ್ಧರಾಗಿ ಅರ್ಜುನನನ್ನು ಸುತ್ತುವರಿದು ಶಸ್ತ್ರಪ್ರವಾಹಗಳಿಂದ ಮರ್ದನ ಮಾಡಿದರು.
ಹತ್ತುದಿಕ್ಕುಗಳನ್ನು ಸಿಂಹನಾದದಿಂದ ತುಂಬಿದರು.
ಸ ತೈರಭ್ಯರ್ದಿತೋ ಜಿಷ್ಣುಃ ಶಕ್ರತುಲ್ಯಪರಾಕ್ರಮಃ |
ಐಂದ್ರಮಸ್ತ್ರಮಮೇಯಾತ್ಮಾ ಪ್ರಾದುಶ್ಚಕ್ರೇ ಮಹಾರಥಃ ॥30॥
ಇಂದ್ರನಂತೆ ಪರಾಕ್ರಮಿ, ಅಮೇಯ ಸ್ವರೂಪಿಯಾದ ಮಹಾರಥ ಅರ್ಜುನನು ಸಂಶಪ್ತಕಗಣಗಳಿಂದ ಪೀಡಿತನಾಗಿ
ಇಂದ್ರದೇವತಾಕವಾದ ಅಸ್ತ್ರವನ್ನು ಪ್ರಾದುರ್ಭಾವಗೊಳಿಸಿದ.
ತತಃ ಶರಸಹಸ್ರಾಣಿ ಪ್ರಾದುರಾಸನ್ ವಿಶಾಂಪತೇ ॥31॥
ಕಾರ್ಮುಕಾತ್ ಪಾಂಡುಪುತ್ರಸ್ಯ ಪಾರ್ಥಸ್ಯಾಮಿತತೇಜಸಃ ॥32॥
ರಾಜನೆ, ಆಗ ಸಾವಿರಾರು ಬಾಣಗಳು ಅಮಿತ ತೇಜನಾದ ಪಾಂಡುಪುತ್ರ ಪಾರ್ಥನ ಬಿಲ್ಲಿನಿಂದ ಪ್ರಾದುರ್ಭವಿಸಿದುವು.
ತತಸ್ತು ಚ್ಛಿದ್ಯಮಾನಾನಾಂ ಧ್ವಜಾನಾಂ ಧನುಷಾಂ ತಥಾ |
ರಥಾನಾಂ ಸಪತಾಕಾನಾಂ ತೂಣೀರಾಣಾಂ ಯುಗೈಃ ಸಹ ॥33॥
ಅಕ್ಷಾಣಾಮಥ ಚಕ್ರಾಣಾಂ ಯೋಕತತ್ರಣಾಂ ರಶ್ಮಿಭಿಃ ಸಹ |
ಕೂಬರಾಣಾಂ ವರೂಥಾನಾಂ ಪೃಷತ್ಕಾನಾಂ ಚ ಸಂಯುಗೇ ॥34॥
ಅಶ್ವಾನಾಂ ಪತತಾಂ ಚಾಪಿ ಪ್ರಾಸಾನಾಮಸಿಚರ್ಮಣಾಮ್ |
ಗದಾನಾಂ ಪರಿಘಾನಾಂ ಚ ಶಕ್ತೀನಾಂ ತೋಮರೈಃ ಸಹ ॥35॥
ಶತಘ್ನೀನಾಂ ಸಚಕ್ರಾಣಾಂ ಭುಜಾನಾಂ ಚೋರುಭಿಃ ಸಹ |
ಕಂಠಸೂತ್ರಾಂಗದಾನಾಂ ಚ ಕೇಯೂರಾಣಾಂ ಚ ಮಾರಿಷ ॥36॥
ಹಾರಾಣಾಂ ಹೇಮಸೂತ್ರಾಣಾಂ ಕಟಕಾನಾಂ ಚ ಭಾರತ |
ಛತ್ರಾಣಾಂ ಮಕುಟಾನಾಂ ಚ ವ್ಯಜನಾನಾಂ ಮಹಾತ್ಮನಾಮ್ ॥37॥
ಅಶ್ರೂಯತ ಮಹಾಶಬ್ದಸ್ತತ್ರತತ್ರ ವಿಶಾಂಪತೇ ॥38॥
ರಾಶಯಶ್ಚಾತ್ರ ದೃಶ್ಯಂತೇ ಪತಿತಾನಾಂ ಮಹೀತಳೇ ॥39॥
ಆಗ ಧ್ವಜ ಧನುಸ್ಸು ರಥ ಪತಾಕೆ ಬತ್ತಳಿಕೆ ನೊಗ ಅಕ್ಷ ಚಕ್ರ ಯೋಕ್ತ್ರ ರಶ್ಮಿ ಕೂಬರ ವರೂಥ ಬಾಣ ಅಶ್ವ ಪ್ರಾಸ ಖಡ್ಗ ಗುರಾಣಿ ಗದೆ
ಪರಿಘ ಶಕ್ತಿ ತೋಮರ ಶತಘ್ನಿ ಚಕ್ರ ತೋಳು ತೊಡೆ ಕಂಠಹಾರ ತೋಳ್ಬಳೆ ಹಾರ ಚಿನ್ನದ ದಾರ ಕಟಕ ಛತ್ರ ಕಿರೀಟ ವ್ಯಜನ ಮುಂತಾದ
ಮಹಾತ್ಮರಾದ ಯೋಧರ ಯುದ್ಧ ಸಾಮಗ್ರಿಗಳು ಅರ್ಜುನನ ಬಾಣಗಳಿಂದ ಕಡಿದು ಬೀಳುವಾಗ ಅಲ್ಲಲ್ಲಿ ಮಹಾಶಬ್ದ ಕೇಳಿಬಂದಿತು.
ರಣಭೂಮಿಯಲ್ಲಿ ಸತ್ತುಬಿದ್ದ ಯೋಧರ ಹೆಣಗಳ ರಾಶಿಗಳು ಕಂಡು ಬಂದುವು.
ಸಕುಂಡಲಾನಿ ಸ್ರಗ್ವೀಣಿ ಪೂರ್ಣಚಂದ್ರನಿಭಾನಿ ಚ |
ಶಿರಾಂಸ್ಯುರ್ವ್ಯಾಮದೃಶ್ಯಂತ ತಾರಾಗಣ ಇವಾಂಬರೇ ॥40॥
ಆಕಾಶದಲ್ಲಿ ನಕ್ಷತ್ರ ಪುಂಜಗಳಂತೆ, ರಣಭೂಮಿಯಲ್ಲಿ ಕುಂಡಲಹಾರಗಳಿಂದ ಕೂಡಿದ ಪೂರ್ಣಚಂದ್ರನಂಥ ಶಿರಸ್ಸುಗಳು
ಕಂಡುಬಂದುವು.
ಸುಖಾರ್ಹಾಣಿ ಸುವಾಸಾಂಸಿ ಚಂದನೇನೋಕ್ಷಿತಾನಿ ಚ |
ಶರೀರಾಣಿ ವ್ಯದೃಶ್ಯಂತ ನಿಹತಾನಾಂ ಮಹೀತಳೇ ॥41॥
ಸುಖಭೋಗಾರ್ಹವಾದ ಒಳ್ಳೆಯ ಬಟ್ಟೆ ಉಟ್ಟ ಚಂದನಲಿಪ್ತವಾದ ಹತರಾದ ಯೋಧರ ಶರೀರಗಳು ರಣಭೂಮಿಯಲ್ಲಿ
ಕಂಡುಬಂದುವು.
ರುದ್ರಸ್ಯಾಕ್ರೀಡಸದೃಶಂ ಘೋರಮಾಯೋಧನಂ ತದಾ ॥42॥
ನಿಹತೈ ರಾಜಪುತ್ರೈಶ್ಚ ಕ್ಷತ್ರಿಯೈಶ್ಚ ಮಹಾಬಲೈಃ |
ಅರ್ಜುನೇನ ಮಹಾರಾಜ ತತ್ರ ತತ್ರ ಮಹಾರಣೇ ॥43॥
ಮಹಾರಾಜ, ಅರ್ಜುನನಿಂದ ಮಹಾರಣದಲ್ಲಿ ಹತರಾದ ಮಹಾಬಲಶಾಲಿ ರಾಜಕುಮಾರರ ಮತ್ತು ಕ್ಷತ್ರಿಯಯೋಧರ ಶವಗಳಿಂದ
ಭಯಂಕರವಾದ ರಣಭೂಮಿ ರುದ್ರನ ವಿಹಾರಭೂಮಿಯಾದ ಸ್ಮಶಾನಕ್ಕೆ ಸದೃಶವಾಯಿತು.
ಹಸ್ತಿಭಿಃ ಪತಿತೈಶ್ಚೈವ ತುರಂಗೈಶ್ಚಾಭವನ್ಮಹೀ |
ಅಗಮ್ಯರೂಪಾ ಸಮರೇ ವಿಶೀರ್ಣೈರಿವ ಪರ್ವತೈಃ ॥44॥
ಒಡೆದು ಬಿದ್ದ ಪರ್ವತಗಳಂಥ ಸತ್ತುಬಿದ್ದ ಆನೆಕುದುರೆಗಳಿಂದ ರಣಭೂಮಿಯು ಅಗಮ್ಯವಾಯಿತು.
ನಾಸೀದ್ರಥಪಥಸ್ತಸ್ಯ ಪಾಂಡವಸ್ಯ ಮಹಾತ್ಮನಃ |
ನಿಘ್ನತಃ ಶಾತ್ರವಾನ್ ಭಲ್ಲೈರ್ಹಸ್ತ್ಯಶ್ವಂ ಚಾಮಿತಂ ಮಹತ್ ॥45॥
ಶತ್ರುಯೋಧರನ್ನು ಅಮಿತವಾದ ಮಹತ್ತಾದ ಆನೆ ಕುದುರೆಗಳ ಸಮೂಹವನ್ನು ಭಲ್ಲೆಗಳಿಂದ ಕೊಲ್ಲಬೇಕೆಂದರೆ ಮಹಾತ್ಮನಾದ
ಅರ್ಜುನನಿಗೆ ಆ ರಣಭೂಮಿಯಲ್ಲಿ ತನ್ನ ರಥ ಚಲಿಸಲು ಮಾರ್ಗವಿಲ್ಲದಂತಾಯಿತು.
ಆರ್ತವಚ್ಚಾವಸೀದಂತಿ ರಥಚಕ್ರಾಣಿ ಮಾರಿಷ |
ರಣೇ ವಿಚರತಸ್ತಸ್ಯ ತಸ್ಮಿನ್ ಲೋಹಿತಕರ್ದಮೇ ॥46॥

ರಾಜನೆ, ರಣಭೂಮಿಯಲ್ಲಿ ಸಂಚರಿಸುವ ಅರ್ಜುನನ ರಥಚಕ್ರಗಳು ನೆತ್ತರಿನ ಕೆಸರಲ್ಲಿ ಹೂತುಹೋಗುತ್ತಿವೆ. ರೋಗದಿಂದ ಬಳಲಿದವುಗಳಂತೆ ನಿಧಾನವಾಗಿ ಚಲಿಸುತ್ತಿವೆ.
ಸೀದಮಾನೇ ತು ಚಕ್ರೇ ತೇ ಸಮೂಹುಸ್ತುರಗಾ ಭೃಶಮ್ |
ಶ್ರಮೇಣ ಮಹತಾ ಯುಕ್ತಾ ಮನೋಮಾರುತರಂಹಸಃ ||47||
ಚಕ್ರ ಹೂತು ಹೋದಾಗ ಮನೋವೇಗ ಗಾಳಿವೇಗವುಳ್ಳ ಕುದುರೆಗಳು ಕೂಡ ಮಹಾಶ್ರಮದಿಂದ ಯುಕ್ತವಾಗಿ ರಥವನ್ನು ಎಳೆಯುತ್ತವೆ.
ವಧ್ಯಮಾನಂ ತು ತತ್ಸೈನ್ಯಂ ಪಾಂಡುಪುತ್ರೇಣ ಧನ್ವಿನಾ |
ಪ್ರಾಯಶೋ ವಿಮುಖಂ ಸೈನ್ಯಂ ನಾವತಿಷ್ಠತ ಸಂಯುಗೇ ||48||
ಧನುರ್ಧಾರಿ ಅರ್ಜುನನಿಂದ ಹೊಡೆಸಿಕೊಳ್ಳುವಾಗ ಸೈನ್ಯ ಪ್ರಾಯಶಃ ಬೆನ್ನುಹಾಕಿ ಪಲಾಯನ ಮಾಡುತ್ತಿತ್ತೆ ಹೊರತು ಧೈರ್ಯದಿಂದ ನಿಂತೇ ಇಲ್ಲ.
ತಾನ್ ಜಿತ್ವಾ ಸಮರೇ ಜಿಷ್ಣುಃ ಸಂಶಪ್ತಕಗಣಾನ್ ಬಹೂನ್ |
ರರಾಜ ಸ ಮಹಾರಾಜ ವಿಧೂಮೋಽಗ್ನಿರಿವ ಜ್ವಲನ್ ||49||
ಮಹಾರಾಜ, ಬಹುಸಂಖ್ಯೆಯಲ್ಲಿದ್ದ ಸಂಶಪ್ತಕಗಣಗಳನ್ನು ಅರ್ಜುನ ಪರಾಭವಗೊಳಿಸಿ ಧೂಮರಹಿತವಾದ ಅಗ್ನಿಯಂತೆ ಜ್ವಲಿಸುತ್ತ ಪ್ರಕಾಶಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಸಂಶಪ್ತಕಯುದ್ಧಂ ನಾಮ ಸಪ್ತವಿಂಶೋಽಧ್ಯಾಯಃ ||27||

## ಇಪ್ಪತ್ತೆಂಟನೆಯ ಅಧ್ಯಾಯ
### ಯುಧಿಷ್ಠಿರನಿಂದ ದುರ್ಯೋಧನನ ಪರಾಭವ, ಎರಡು ಸೈನ್ಯಗಳ ದೊಂಬಿಕಾಳಗ

ಸಂಜಯಃ
ಯುಧಿಷ್ಠಿರಂ ಮಹಾರಾಜ ವಿಸೃಜಂತಂ ಶರಾನ್ ಬಹೂನ್ |
ಸ್ವಯಂ ದುರ್ಯೋಧನೋ ರಾಜಾ ಪ್ರತ್ಯಗೃಹ್ಣಾದಭೀತವತ್ ||1||
ಸಂಜಯ ಧೃತರಾಷ್ಟ್ರನಿಗೆ ನುಡಿದ– ಮಹಾರಾಜ, ಯುಧಿಷ್ಠಿರನು ನಿನ್ನ ಸೈನ್ಯದ ಮೇಲೆ ಬಹಳ ಬಾಣಗಳನ್ನು ಎಸೆಯುವಾಗ ಸ್ವತಃ ರಾಜಾ ದುರ್ಯೋಧನ ಭಯರಹಿತನಾಗಿ ಅವನನ್ನು ಇದಿರಿಸಿದ.
ತಮಾಪತಂತಂ ಸಹಸಾ ತವ ಪುತ್ರಂ ಮಹಾರಥಮ್ |
ಧರ್ಮರಾಜೋ ದ್ರುತಂ ವಿದ್ಧ್ವಾ ತಿಷ್ಠ ತಿಷ್ಠೇತಿ ಚಾಬ್ರವೀತ್ ||2||
ಬಲವಾಗಿ ನುಗ್ಗಿಬಂದ ಮಹಾರಥನಾದ ದುರ್ಯೋಧನನನ್ನು ಧರ್ಮರಾಜನು ಬೇಗನೆ ಹೊಡೆದು `ನಿಲ್ಲು ನಿಲ್ಲು' ಎಂದ.
ಸ ತು ತಂ ಪ್ರತಿವಿವ್ಯಾಧ ನವಭಿರ್ನಿಶಿತೈಃ ಶರೈಃ |
ಸಾರಥಿಂ ಚಾಸ್ಯ ಭಲ್ಲೇನ ಭೃಶಂ ಕ್ರುದ್ಧೋಽಭ್ಯತಾಡಯತ್ ||3||
ದುರ್ಯೋಧನ ಅವನನ್ನು ತೀಕ್ಷ್ಣವಾದ ಒಂಬತ್ತು ಬಾಣಗಳಿಂದ ಹೊಡೆದ, ಮತ್ತು ಕ್ರುದ್ಧನಾಗಿ ಅವನ ಸಾರಥಿಯನ್ನು ಭಲ್ಲೆಯಿಂದ ಚೆನ್ನಾಗಿ ಹೊಡೆದ.
ತತೋ ಯುಧಿಷ್ಠಿರೋ ರಾಜನ್ ಸ್ವರ್ಣಪುಂಖಾನ್ ಶಿಲೀಮುಖಾನ್ |
ದುರ್ಯೋಧನಾಯ ಚಿಕ್ಷೇಪ ತ್ರಯೋದಶ ಶಿಲಾಶಿತಾನ್ ||4||
ಆಗ ರಾಜನೆ, ಯುಧಿಷ್ಠಿರನು ಬಂಗಾರದ ಪುಕ್ಕಉಳ್ಳ ಸಾಣೆಹಿಡಿದ ಹದಿಮೂರು ಬಾಣಗಳನ್ನು ದುರ್ಯೋಧನನಿಗೆ ಎಸೆದ.
ಚತುರ್ಭಿಶ್ಚತುರೋ ವಾಹಾಂಸ್ತಸ್ಯ ಹತ್ವಾ ಮಹಾರಥಃ |
ಪಂಚಮೇನ ಶಿರಃ ಕಾಯಾತ್ ಸಾರಥೇಶ್ಚ ಸಮಾಕ್ಷಿಪತ್ ||5||
ಮಹಾರಥನಾದ ಯುಧಿಷ್ಠಿರನು ದುರ್ಯೋಧನನ ನಾಲ್ಕೂ ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದು, ಐದನೇ ಬಾಣದಿಂದ ಸಾರಥಿಯ ಶಿರಸ್ಸನ್ನು ಶರೀರದಿಂದ ಕಿತ್ತೆಸೆದ.
ಷಷ್ಠೇನ ತು ಧ್ವಜಂ ರಾಜ್ಞಃ ಸಪ್ತಮೇನ ತು ಕಾರ್ಮುಕಮ್ |
ಅಷ್ಟಮೇನ ತಥಾ ಖಡ್ಗಂ ಪಾತಯಾಮಾಸ ಭೂತಳೇ ||6||
ಪಂಚಭಿರ್ನೃಪತಿಂ ಚಾಪಿ ಧರ್ಮರಾಜೋಽರ್ದಯದ್ ಭೃಶಮ್ ||7||
ಆರನೆ ಬಾಣದಿಂದ ರಾಜನ ಧ್ವಜವನ್ನು , ಏಳನೇ ಬಾಣದಿಂದ ಬಿಲ್ಲನ್ನು , ಎಂಟನೇ ಬಾಣದಿಂದ ಖಡ್ಗವನ್ನೂ ನೆಲದಲ್ಲಿ ಕೆಡವಿದ. ಐದು ಬಾಣಗಳಿಂದ ದುರ್ಯೋಧನನನ್ನು ಚೆನ್ನಾಗಿ ಹೊಡೆದ.
ಹತಾಶ್ವಾತ್ತು ರಥಾತ್ತಸ್ಮಾದವಪ್ಲುತ್ಯ ಸುತಸ್ತವ |
ಉತ್ತಮಂ ವ್ಯಸನಂ ಪ್ರಾಪ್ತೋ ಭೂಮಾವೇವಾವತಿಷ್ಠತ ||8||
ಕುದುರೆಗಳು ಸತ್ತಿದ್ದರಿಂದ ದುರ್ಯೋಧನ ರಥದಿಂದ ಕೆಳಗೆ ಹಾರಿ ಬಹಳ ಚಿಂತೆ ಮಾಡುತ್ತ ನೆಲದಲ್ಲಿಯೇ ನಿಂತ.
ತಂ ತು ಕೃಚ್ಛ್ರಗತಂ ದೃಷ್ಟ್ವಾ ಕರ್ಣದ್ರೌಣಿಕೃಪಾದಯಃ |
ಅಭ್ಯವರ್ತಂತ ಸಹಸಾ ಪರೀಪ್ಸಂತೋ ನರಾಧಿಪಮ್ ||9||
ದುರ್ಯೋಧನ ದುರವಸ್ಥೆಗೀಡಾದುದನ್ನು ಕಂಡು ಕರ್ಣ ಅಶ್ವತ್ಥಾಮ ಕೃಪ ಮುಂತಾದವರು ಬೇಗನೆ ಅವನ ರಕ್ಷಣೆಗೆ ಧಾವಿಸಿ ಬಂದರು.
ಅಥ ಪಾಂಡುಸುತಾಃ ಸರ್ವೇ ಪರಿವಾರ್ಯ ಯುಧಿಷ್ಠಿರಮ್ |

ಅನ್ವಯುಃ ಸಮರೇ ರಾಜನ್ ತತೋ ಯುದ್ಧಮವರ್ತತ ॥10॥
ತತಸ್ತೂರ್ಯಸಹಸ್ರಾಣಿ ಪ್ರಾವಾದ್ಯಂತ ಮಹಾಮೃಧೇ ॥11॥
ಆಗ ಪಾಂಡವರೆಲ್ಲರೂ ಯುಧಿಷ್ಠಿರನನ್ನು ಸುತ್ತುವರಿದು ಶತ್ರುಗಳನ್ನು ಬೆನ್ನಟ್ಟಿದರು. ರಾಜನೆ, ಆಗ, ಯುದ್ಧ ನಡೆಯಿತು. ಸಾವಿರಾರು ರಣವಾದ್ಯಗಳು ಮಹಾರಣದಲ್ಲಿ ಮೊಳಗಿಸಲ್ಪಟ್ಟವು.
ಕ್ಷ್ವೇಲಾಃ ಕಿಲಕಿಲಾಶಬ್ದಾಃ ಪ್ರಾದುರಾಸನ್ ಮಹೀಪತೇ |
ಯತ್ರಾಭ್ಯಗಚ್ಛನ್ ಸಮರೇ ಪಾಂಚಾಲಾಃ ಕೌರವೈಃ ಸಹ ॥12॥
ಸಿಂಹನಾದಗಳೂ ಅಟ್ಟಹಾಸಧ್ವನಿಗಳೂ, ರಾಜನೆ! ಪಾಂಚಾಲರು ಕೌರವ ರೊಂದಿಗೆ ಹೋರಾಡುವಾಗ ಸಮರಾಂಗಣದಲ್ಲಿ ಕೇಳಿ ಬಂದುವು.
ನರಾ ನರೈಃ ಸಮಾಜಗ್ಮುರ್ವಾರಣಾ ವರವಾರಣೈಃ |
ರಥಾಶ್ಚ ರಥಿಭಿಃ ಸಾರ್ಧಂ ಹಯಾಶ್ಚ ಹಯಸಾದಿಭಿಃ ॥13॥
ಪದಾತಿಗಳು ಪದಾತಿಗಳೊಂದಿಗೆ, ಗಜಾರೋಹಿಗಳು ಗಜಾರೋಹಿ ಗಳೊಂದಿಗೆ, ರಥಿಕರು ರಥಿಕರೊಂದಿಗೆ, ಅಶ್ವಾರೋಹಿಗಳು ಅಶ್ವಾರೋಹಿ ಗಳೊಂದಿಗೆ ಸೆಣಸಾಡಿದರು.
ದ್ವಂದ್ವಾನ್ಯಾಸನ್ ಮಹಾರಾಜ ಪ್ರೇಕ್ಷಣೀಯಾನಿ ಸಂಯುಗೇ |
ವಿವಿಧಾನ್ಯಪ್ಯಚಿಂತ್ಯಾನಿ ಶಸ್ತ್ರವಂತ್ಯುತ್ತಮಾನಿ ಚ ॥14॥
ಮಹಾರಾಜ, ರಣರಂಗದಲ್ಲಿ ಪ್ರೇಕ್ಷಣೀಯವಾದ ದ್ವಂದ್ವಯುದ್ಧಗಳು ನಡೆದುವು. ಅವು ನಾನಾ ಬಗೆಯವುಗಳಾಗಿದ್ದು, ಅಚಿಂತ್ಯವಾಗಿದ್ದುವು. ಉತ್ತಮ ವಾದ ಶಸ್ತ್ರಯುದ್ಧಗಳಾಗಿದ್ದುವು.
ತೇ ಶೂರಾಃ ಸಮರೇ ಸರ್ವೇ ಚಿತ್ರಂ ಲಘು ಚ ಸುಷ್ಠು ಚ |
ಅಯುಧ್ಯಂತ ಮಹಾವೇಗಾಃ ಪರಸ್ಪರವಧೈಷಿಣಃ ॥15॥
ಆ ಶೂರರೆಲ್ಲರೂ ಯುದ್ಧದಲ್ಲಿ ಮಹಾವೇಗ ಉಳ್ಳವರು ಪರಸ್ಪರ ವಧೇಚ್ಛು ಗಳಾಗಿದ್ದು ಸುಂದರವಾಗಿ ವೇಗವಾಗಿ ಹಾಗೂ ಉತ್ತಮವಾಗಿ ಹೋರಾಡಿದರು.
ಅನ್ಯೋನ್ಯಂ ಸಮರೇ ಜಘ್ನುರ್ಯೋಧವ್ರತಮನುಷ್ಠಿತಾಃ |
ನ ಹಿ ತೇ ಸಮರಂ ಚಕ್ರುಃ ಪೃಷ್ಠತೋ ವೈ ಕಥಂಚನ ॥16॥
ಪರಸ್ಪರ ಯುದ್ಧದಲ್ಲಿ ಕೊಲ್ಲುತ್ತಿದ್ದರು. ಆದರೆ ಆಗ ಯೋಧರ ಯುದ್ಧ ನಿಯಮವನ್ನು ಅನುಷ್ಠಾನ ಮಾಡಿದರು. ಹಿಂದಿನಿಂದ ಬಂದು ಹೊಡೆಯುತ್ತಿರಲಿಲ್ಲ.
ಮುಹೂರ್ತಮೇವ ತದ್ಯುದ್ಧಮಾಸೀನ್ಮಧುರದರ್ಶನಮ್ |
ತತ ಉನ್ಮತ್ತವದ್ ರಾಜನ್ನಿರ್ಮರ್ಯಾದಮವರ್ತತ ॥17॥
ಆ ಯುದ್ಧ ಯುದ್ಧದ ನಿಯಮಾನುಸಾರ ನಡೆದುದರಿಂದ ಪ್ರೇಕ್ಷಣೀಯ ವಾಗಿತ್ತು. ಆದರೆ ಇದು ಒಂದು ಮುಹೂರ್ತಕಾಲಮಾತ್ರ. ಮುಂದೆ, ರಾಜನೆ, ಎಲ್ಲರೂ ಹದ್ದುಬಸ್ತು ತಪ್ಪಿದ ಯುದ್ಧವನ್ನೇ ನಡೆಸಿದರು. ಎಲ್ಲ ಯುದ್ಧ ನಿಯಮಗಳನ್ನು ಗಾಳಿಗೆ ತೂರಿ ಹುಚ್ಚರಂತೆ ಹೋರಾಡಿದರು.
ರಥೀ ನಾಗಂ ಸಮಾಸಾದ್ಯ ದಾರಯನ್ನಿಶಿತೈಃ ಶರೈಃ |
ಪ್ರೇಷಯಾಮಾಸ ಕಾಲಾಯ ಶರೈಃ ಸನ್ನತಪರ್ವಭಿಃ ॥18॥
ರಥಿಕನು ಆನೆಯನ್ನು ಆಕ್ರಮಿಸಿ ತೀಕ್ಷ್ಣವಾದ ಡೊಂಕುಗಿಣ್ಣಿನ ಬಾಣಗಳಿಂದ ಸೀಳಿ ಯಮನೂರಿಗೆ ಕಳಿಸಿದ.
ನಾಗಾ ಹಯಾನ್ ಸಮಾಸಾದ್ಯ ವಿಕ್ಷಿಪಂತೋ ಬಹೂನ್ ರಣೇ |
ದಾರಯಾಮಾಸುರತ್ಯುಗ್ರಂ ತತ್ರ ತತ್ರ ತದಾ ತದಾ ॥19॥
ಆನೆಗಳು ಕುದುರೆಗಳನ್ನು ಅಲ್ಲಲ್ಲಿ ಆಗಾಗ ಆಕ್ರಮಿಸಿ ಎತ್ತಿ ಎಸೆದು ಅತಿ ಉಗ್ರವಾಗಿ ತುಳಿದು ಸೀಳಿದುವು.
ಹಯಾರೋಹಾಶ್ಚ ಬಹವಃ ಪರಿವಾರ್ಯ ಗಜೋತ್ತಮಾನ್ |
ತಳಶಬ್ದರವಾಂಶ್ಚಕ್ರುಃ ಸಂಪತಂತಸ್ತತಸ್ತತಃ ॥20॥
ಅಶ್ವಾರೋಹಿಗಳು ಬಹುಮಂದಿ ಅಲ್ಲಲ್ಲಿ ಆನೆಗಳನ್ನು ಸುತ್ತುವರಿದು ಆಕ್ರಮಿಸಿ ಚಪ್ಪಾಳೆ ತಟ್ಟಿ ಗಾಬರಿಪಡಿಸಿದರು.
ಧಾವಮಾನಾಂಸ್ತತಸ್ತಾಂಸ್ತು ಯುಧ್ಯಮಾನಾನ್ ಮಹಾಗಜಾನ್ |
ಪಾರ್ಶ್ವತಃ ಪೃಷ್ಠತಶ್ಚೈವ ನಿಜಘ್ನುರ್ಹಯಸಾದಿನಃ ॥21॥
ಆನೆಗಳು ಓಡುತ್ತಿದ್ದರೆ ಅಥವಾ ಹೋರಾಡಲು ತೊಡಗಿದರೆ ಅಶ್ವಾರೋಹಿಗಳು ಅದಕ್ಕೆ ಪಾರ್ಶ್ವಗಳಲ್ಲಿ ಹಿಂಬದಿಯಲ್ಲಿ ಹೊಡೆದು ಕೊಂದರು.
ವಿದ್ರಾವ್ಯ ಚ ಬಹೂನಶ್ವಾನ್ನಾಗಾ ರಾಜನ್ ಮದೋತ್ಕಟಾಃ |
ವಿಷಾಣೈಶ್ಚಾಪರೇ ಜಘ್ನುರ್ಮಮೃದುಶ್ಚಾಪರೇ ಭೃಶಮ್ ॥21॥
ರಾಜನೆ, ಮದಿಸಿದ ಆನೆಗಳು ಬಹು ಅಶ್ವಗಳನ್ನು ಓಡಿಸಿದುವು. ದಂತಗಳಿಂದ ತಿವಿದುವು. ಕಾಲಿಂದ ತುಳಿದು ಪುಡಿಗೈದುವು.
ಸಾಶ್ವಾರೋಹಾಂಶ್ಚ ತುರಗಾನ್ ವಿಷಾಣೈರ್ವಿವ್ಯಧೂ ರುಷಾ |
ಅಪರೇ ಚಿಕ್ಷಿಪುರ್ವೇಗಾತ್ ಪ್ರಗೃಹ್ಯಾತಿಬಲಾಸ್ತದಾ ॥23॥
ಸವಾರರ ಸಮೇತವಾಗಿ ಕುದುರೆಗಳನ್ನು ಬಲಿಷ್ಠ ಆನೆಗಳು ದಂತಗಳಿಂದ ತಿವಿದುವು. ಹಿಡಿದೆತ್ತಿ ವೇಗದಿಂದ ನೆಲಕ್ಕೆ ಅಪ್ಪಳಿಸಿದುವು.
ಪದಾತ್ಯೈರಾಹತಾ ನಾಗಾ ವಿವರೇಷು ಸಮಂತತಃ |
ಚಕ್ರುರಾರ್ತಸ್ವರಂ ಘೋರಂ ದುದ್ರುವುಶ್ಚ ದಿಶೋ ದಶ ॥24॥

ಪದಾತಿಗಳು ಆನೆಗಳನ್ನು ಮರ್ಮಸ್ಥಾನಗಳಲ್ಲಿ ಎಲ್ಲೆಡೆ ಇರಿದಾಗ ಅವು ನೋವಿನಿಂದ ಭಯಂಕರವಾಗಿ ಕೂಗಿಕೊಂಡು ಹತ್ತು ದಿಕ್ಕುಗಳಿಗೆ ಓಡಿದುವು.
ಪದಾತೀನಾಂ ತು ಸಹಸಾ  ಪ್ರದ್ರುತಾನಾಂ ಮಹಾಹವೇ |
ಉತ್ಸೃಜ್ಯ ಚ ರಣಂ ತೂರ್ಣಮವಪವ್ರೂ ರಣಾಜಿರೇ ||25||
ನಿಮಿತ್ತಂ ಮನ್ಯಮಾನಾಸ್ತು ಪರಿಕ್ರಮ್ಯ ಮಹಾಗಜಾಃ |
ಜಗೃಹುರ್ಬಿಭಿದುಶ್ಚೈವ ಚಿತ್ರಾಣ್ಯಾಭರಣಾನಿ ಚ ||26||
ಯುದ್ಧವನ್ನು ಬಿಟ್ಟು ಪದಾತಿಗಳು ವೇಗದಿಂದ ಪಲಾಯನ ಮಾಡುವಾಗ ಹಾಗೆ ಸ್ಪರ್ಧೆಯಿಂದ ಓಡುವುದನ್ನೇ ಜಯನಿಮಿತ್ತವೆಂದು ಭಾವಿಸಿ ಮಹಾಗಜಗಳು ತಾವೂ ವೇಗದಿಂದ ಓಡಿ ಅವರನ್ನೂ ಅವರ ಸುಂದರವಾದ ಆಭರಣಗಳನ್ನು ಹಿಡಿದು ಪುಡಿಮಾಡಿದುವು.
ತಾಂಸ್ತು ತತ್ರ ಪ್ರಸಕ್ತಾನ್ ವೈ ಪರಿವಾರ್ಯ ಪದಾತಯಃ |
ಹಸ್ತ್ಯಾರೋಹಾನ್ನಿಜಘ್ನುಸ್ತೇ ಮಹಾವೇಗಾ ಬಲೋತ್ಕಟಾಃ ||27||
ಪದಾತಿಗಳ ನಾಶಕ್ಕೆ ತೊಡಗಿದ ಗಜಗಳನ್ನು ಮಹಾವೇಗದ ಬಲಿಷ್ಠ ಪದಾತಿಗಳು ಸುತ್ತುವರಿದು ಗಜಾರೋಹಿಗಳನ್ನು ಹೊಡೆದರು.
ಅಪರೇ ಹಸ್ತಿಭಿರ್ಹಸ್ತೈಃ ಖಂ ವಿಕ್ಷಿಪ್ತಾ ಮಹಾಹವೇ |
ನಿಪತಂತೋ ವಿಷಾಣಾಗ್ರೈರ್ಭೃಶಂ ವಿದ್ಧಾಃ ಸುಶಿಕ್ಷಿತೈಃ ||28||
ಸುಶಿಕ್ಷಿತವಾದ ಆನೆಗಳು ಪದಾತಿಗಳನ್ನು ಸೊಂಡಿಲುಗಳಿಂದ ಎತ್ತಿ ಮೇಲೆಸೆದು ಅವರು ಬೀಳುವಾಗ ದಂತದ ತುದಿಗಳಿಂದ ಸೀಳಿದವು.
ಅಪರೇ ಸಹಸಾ ಗೃಹ್ಯ ವಿಷಾಣೈರೇವ ಸೂದಿತಾಃ |
ಸೇನಾಂತರಂ ಸಮಾಸಾದ್ಯ ಕೇಚಿತ್ತತ್ರ ಮಹಾಗಜೈಃ ||29||
ಇನ್ನು ಕೆಲವು ಪದಾತಿಗಳು ಸೈನ್ಯದೊಳಗೆ ನುಗ್ಗಿ ಬಂದ ಗಜಗಳ ದಂತಗಳಿಂದ ಇರಿಯಲ್ಪಟ್ಟು ಅಸುನೀಗಿದರು.
ಕ್ಷುಣ್ಣಗಾತ್ರಾ ಮಹಾರಾಜ ವಿಕ್ಷಿಪ್ಯ ಚ ಪುನಃ ಪುನಃ |
ಅಪರೇ ವ್ಯಜನಾನೀವ ವಿಭ್ರಾಮ್ಯ ನಿಹತಾ ಮೃಧೇ ||30||
ಇನ್ನು ಕೆಲವರನ್ನು ಆನೆಗಳು ಸೊಂಡಿಲುಗಳಿಂದ ಎತ್ತಿ ಬೀಸಣಿಗೆಯಂತೆ ಬೀಸಿ ಪುನಃ ಪುನಃ ನೆಲದ ಮೇಲೆ ಅಪ್ಪಳಿಸಿದುವು.
ಪುರೋಗಮ್ಯೈಶ್ಚ ನಾಗಾನಾಮಪರೇಷಾಂ ವಿಶಾಂಪತೇ |
ಶರೀರಾಣ್ಯತಿವಿದ್ಧಾನಿ ತತ್ರ ತತ್ರ ರಣಾಜಿರೇ ||31||
ಪದಾತಿಗಳಲ್ಲಿ ಮುಂದಾಳುಗಳಾದವರು ಅಲ್ಲಲ್ಲಿ ಬೇರೆ ಆನೆಗಳ ಶರೀರಗಳನ್ನು ಅತಿಯಾಗಿ ಇರಿದರು.
ಪ್ರತಿಮಾನೇಷು ಕುಂಭೇಷು ದಂತವೇಷ್ಟೇಷು ಚಾಪರೇ |
ನಿಗೃಹೀತಾ ಭೃಶಂ ನಾಗಾಃ ಪ್ರಾಸತೋಮರಶಕ್ತಿಭಿಃ ||32||
ದಂತಮೂಲಗಳಲ್ಲಿ ಪ್ರಾಸಗಳಿಂದ, ಕುಂಭಸ್ಥಳಗಳಲ್ಲಿ ತೋಮರಗಳಿಂದ, ಕೆಳತುಟಿಗಳಲ್ಲಿ ಶಕ್ತ್ಯಾಯುಧಗಳಿಂದ ಪದಾತಿಗಳು ಆನೆಗಳನ್ನು ಬಹುವಾಗಿ ಪೀಡಿಸಿದರು.
ನಿಗೃಹ್ಯ ಚ ಗಜಾಃ ಕೇಚಿತ್ ಪಾರ್ಶ್ವಸ್ಥೈರ್ಭೃಶದಾರುಣೈಃ |
ರಥಾಶ್ವಸಾದಿಭಿಸ್ತತ್ರ ಸಂಭಿನ್ನಾ ನ್ಯಪತನ್ ಭುವಿ ||33||
ಕೆಲವು ಆನೆಗಳನ್ನು ಪಾರ್ಶ್ವಗಳಲ್ಲಿದ್ದ ಬಲುಕ್ರೂರಿಯಾದ ರಥಿಕರು ಅಶ್ವಾರೋಹಿಗಳು ಬಾಣಗಳಿಂದ ಹೊಡೆದು ನೆಲದಲ್ಲಿ ಕೆಡವಿದರು.
ಸರಥಂ ಸಾದಿನಂ ತತ್ರ ಅಪರೇ ತೇ ಮಹಾಗಜಾಃ |
ಭೂಮಾವಮೃದ್ನನ್ ವೇಗೇನ ಸವರ್ಮಾಣಂ ಪದಾತಿನಮ್ ||34||
ರಥಿಕನನ್ನೂ ಅಶ್ವಾರೋಹಿಯನ್ನೂ ಪದಾತಿಯನ್ನೂ ಕವಚಸಹಿತವಾಗಿ ಕೆಲವು ಆನೆಗಳು ವೇಗದಿಂದ ನೆಲದಲ್ಲಿ ಕೆಡವಿ ಮರ್ದಿಸಿದುವು.
ತಥಾ ಸಾವರಣಾನ್ ಕಾಂಶ್ಚಿತ್ ತತ್ರ ತತ್ರ ವಿಶಾಂಪತೇ |
ರಥಾನ್ನಾಗಾಃ ಸಮಾಸಾದ್ಯ ಪರಿಗೃಹ್ಯ ಚ ಮಾರಿಷ ||35||
ವ್ಯಾಕ್ಷಿಪನ್ ಸಹಸಾ ತತ್ರ ಘೋರರೂಪೇ ಮಹಾಮೃಧೇ ||36||
ಆನೆಗಳು ಆವರಣಸಹಿತವಾಗಿ ರಥಗಳನ್ನು ಘೋರ ಮಹಾರಣದಲ್ಲಿ ಮೇಲೆ ಎತ್ತಿ ಹಿಡಿದು ಬಲವಾಗಿ ಬಿಸುಟುವು.
ನಾರಾಚೈರ್ನಿಹತಾಶ್ಚಾಪಿ ಗಜಾಃ ಪೇತುರ್ಮಹಾಬಲಾಃ |
ಗಿರೀಣಾಂ ಶಿಖರಾಣೀವ ವಜ್ರರುಗ್ಣಾನಿ ಭೂತಲೇ ||37||
ಅಂಥ ಮಹಾಬಲಿಷ್ಠ ಆನೆಗಳು ಬಾಣಗಳಿಂದ ಹತವಾಗಿ ವಜ್ರಾಯುಧದಿಂದ ಕಡಿದುರುಳುವ ಗಿರಿಶಿಖರಗಳಂತೆ ನೆಲದಲ್ಲಿ ಬಿದ್ದುವು.
ಯೋಧಾ ಯೋಧಾನ್ ಸಮಾಸಾದ್ಯ ಮುಷ್ಟಿಭಿರ್ವ್ಯಹನನ್ಯುಧಿ |
ಕೇಶೇಷ್ವನ್ಯೋನ್ಯಮಾಕ್ಷಿಪ್ಯ ಚಿಕ್ಷಿಪುರ್ಬಿಭಿದುಶ್ಚ ಹ ||38||
ಯೋಧರು ಯೋಧರನ್ನು ಆಕ್ರಮಿಸಿ ಮುಷ್ಟಿಗಳಿಂದ ಹೊಡೆಸಿಕೊಂಡರು. ಪರಸ್ಪರ ಒಬ್ಬರು ಮತ್ತೊಬ್ಬರ ಜುಟ್ಟು ಹಿಡಿದು ಸೆಳೆದು ತಳ್ಳಿದರು, ಮುಷ್ಟಿಗಳಿಂದ ಗುದ್ದಿದರು.
ಉತ್ಪಾಟ್ಯ ಚ ಭುಜಾನನ್ಯೋ ನಿಕ್ಷಿಪ್ಯ ಚ ಮಹೀತಳೇ |
ಪದಾ ಚೋರಃ ಸಮಾಕ್ರಮ್ಯ ಸ್ಫುರತೋಽಪಾಹರಚ್ಛಿರಃ ||39||
ಒಬ್ಬನು ಇನ್ನೊಬ್ಬನ ತೋಳುಗಳನ್ನು ಕಿತ್ತು, ಅವನನ್ನು ನೆಲದಲ್ಲಿ ಕೆಡವಿ, ಅವನು ಹೊರಳಾಡುತ್ತಿದ್ದಂತೆಯೇ ಎದೆಯ ಮೇಲೆ ಕಾಲಿಂದ ತುಳಿದು, ತಲೆಯನ್ನು ಕತ್ತರಿಸಿದರು.

ಪತತಶ್ಚಾಪರೋ ರಾಜನ್ ವಿಜಹಾರಾಸಿನಾ ಶಿರಃ |
ಮೃತಮನ್ಯೋ ಮಹಾರಾಜ ಪದಾ ತಾಡಿತವಾಂಸ್ತದಾ ॥40॥
ಸತ್ತುಬೀಳುವ ಒಬ್ಬನ ತಲೆಯನ್ನು ಇನ್ನೊಬ್ಬ ಕತ್ತಿಯಿಂದ ಕಡಿದ, ಸತ್ತುಬಿದ್ದವನನ್ನು ಇನ್ನೊಬ್ಬ ಕಾಲಿಂದ ತುಳಿದ.
ಜೀವತಶ್ಚ ತಥೈವಾನ್ಯಃ ಶಸ್ತ್ರಂ ಕಾಯೇ ನ್ಯಮಜ್ಜಯತ್ |
ಮುಷ್ಟಿಯುದ್ಧಂ ಮಹಚ್ಚಾಸೀದ್ ಯೋಧಾನಾಂ ತತ್ರ ಭಾರತ ॥41॥
ತಥಾ ಕೇಶಗ್ರಹಶ್ಚೋಗ್ರೋ ಬಾಹುಯುದ್ಧಂ ಚ ಭೈರವಮ್ ॥42॥
ಸಾಯುತ್ತಿರುವವನು ಒಬ್ಬ ಇನ್ನೂ ಉಸಿರಾಡುತ್ತಿರುವಾಗ ಅವನ ಶರೀರದೊಳಗೆ ಇನ್ನೊಬ್ಬ ಶಸ್ತ್ರದಿಂದ ಇರಿದ. ದೊಡ್ಡ ಮುಷ್ಟಿಯುದ್ಧ, ಉಗ್ರಕೇಶ ಗ್ರಹಣ ಮತ್ತು ಭಯಂಕರ ಬಾಹುಯುದ್ಧಗಳು ನಡೆದುವು.
ಸಮಾಸಕ್ತಸ್ಯ ಚಾನ್ಯೇನ ಅವಿಜ್ಞಾತಸ್ತಥಾಽಪರಃ |
ಜಹಾರ ಸಮರೇ ಪ್ರಾಣಾನ್ನಾನಾಶಸ್ತ್ರೈರನೇಕಶಃ ॥43॥
ಒಬ್ಬನು ಇನ್ನೊಬ್ಬನೊಡನೆ ಹೋರಾಡುತ್ತಿರುವಾಗ ಅವನಿಗೆ ತಿಳಿಯದಂತೆ ಮತ್ತೊಬ್ಬ ಬಂದು ನಾನಾಶಸ್ತ್ರಗಳಿಂದ ಅವನ ಪ್ರಾಣಗಳನ್ನು ಅಪಹರಿಸಿದ.
ಸಂಸಕ್ತೇಷು ಚ ಯೋಧೇಷು ವರ್ತಮಾನೇ ಚ ಸಂಕುಲೇ |
ಕಬಂಧಾನ್ಯುತ್ಥಿತಾನಿ ಸ್ಮ ಶತಶೋಽಥ ಸಹಸ್ರಶಃ ॥44॥
ಯೋಧರು ಯೋಧರೊಂದಿಗೆ ಪರಸ್ಪರ ಹೋರಾಡುತ್ತ ದೊಂಬಿಕಾಳಗ ನಡೆಸುತ್ತಿದ್ದಾಗ ರುಂಡವಿಲ್ಲದ ಮುಂಡಗಳು ನೂರಾರು ಸಾವಿರಾರು ಸಂಖ್ಯೆಯಲ್ಲಿ ಎದ್ದು ಕುಣಿದುವು.
ಶೋಣಿತೈಃ ಸಿಚ್ಯಮಾನಾನಿ ಶಸಹತ್ರಣಿ ಕವಚಾನಿ ಚ |
ಮಹಾರಜನರಕ್ತಾನಿ ವಸಹತ್ರಣೀವ ಚಕಾಶಿರೇ ॥45॥
ನೆತ್ತರಿನಲ್ಲಿ ತೊಯ್ದ ಶಸ್ತ್ರಗಳು ಕವಚಗಳು ಕುಸುಬೆ ಹೂವಿನ ರಂಗಿನಲ್ಲಿ (ಬಣ್ಣದಲ್ಲಿ) ಅದ್ದಿದ ಬಟ್ಟೆಗಳಂತೆ ಕಂಡುಬಂದುವು.
ಏವಮೇತನ್ಮಹದ್ ಯುದ್ಧಂ ದಾರುಣಂ ಶಸ್ತ್ರಸಂಕುಲಮ್ |
ಉನ್ಮತ್ತರಂಗಪ್ರತಿಮಂ ಶಬ್ದೇನಾಪೂರಯಜ್ಜಗತ್ ॥46॥
ಹೀಗೆ ಬಲು ದಾರುಣವಾದ ದೊಡ್ಡ ಶಸ್ತ್ರಗಳ ದೊಂಬಿಕಾಳಗ ಹುಚ್ಚರ ಕುಣಿತದಂತೆ ಜಗತ್ತನ್ನೇ ಗದ್ದಲದಿಂದ ತುಂಬಿತು.
ನೈವ ಸ್ವೇ ನ ಪರೇ ರಾಜನ್ ವಿಜ್ಞಾಯಂತೇ ಶರಾತುರಾಃ |
ಯೋದ್ಧವ್ಯಮಿತಿ ಯುಧ್ಯಂತೇ ರಾಜಾನೋ ಜಯಗೃದ್ಧಿನಃ ॥47॥
ಆ ಮಹಾಯುದ್ಧದಲ್ಲಿ ಯೋಧರು ತಮ್ಮವರಾರು, ಹೆರವರು ಯಾರೆಂದು ನೋಡಲಿಲ್ಲ. ಜಯದಾಸೆಯಿಂದ ಯುದ್ಧಮಾಡಬೇಕೆಂದು ಯುದ್ಧಮಾಡಿದರು.
ಸ್ವಾನ್ ಸ್ವೇ ಜಘ್ನುರ್ಮಹಾರಾಜ ಪರಾಂಶ್ಚೈವ ಸಮಾಗತಾನ್ |
ಉಭಯೋಃ ಸೇನಯೋರ್ವೀರೈರ್ವ್ಯಾಕುಲಂ ಸಮಪದ್ಯತ ॥48॥
ಇದಿರಿಗೆ ಬಂದ ತಮ್ಮವರನ್ನೂ ಕೊಂದರು. ಪರರನ್ನೂ ಕೊಂದರು. ಎರಡೂ ಸೈನ್ಯಗಳಲ್ಲಿ ವೀರರಿಗೆ ಹಿಂದುಮುಂದು ತಿಳಿಯದಂತಾಯಿತು.
ರಥೈರ್ಭಗ್ನೈರ್ಮಹಾರಾಜ ವಾರಣೈಶ್ಚ ನಿಪಾತಿತೈಃ |
ಹಯೈಶ್ಚ ಪತಿತೈಸ್ತತ್ರ ನರೈಶ್ಚ ವಿನಿಪಾತಿತೈಃ ॥49॥
ಅಗಮ್ಯರೂಪಾ ಪೃಥಿವೀ ಕ್ಷಣೇನ ಸಮಪದ್ಯತ |
ಕ್ಷಣೇನಾಸೀನ್ಮಹೀಪಾಲ ಕ್ಷತಜೌಘಪ್ರವರ್ತಿನೀ ॥50॥
ಮುರಿದ ರಥಗಳಿಂದ ಕೆಡವಿ, ಆನೆಕುದುರೆಗಳಿಂದ ಹತರಾದ ಪದಾತಿ ಗಳಿಂದ ರಣಭೂಮಿ ಕ್ಷಣದಲ್ಲಿ ಕಾಲಿಡಲಾಗದಂತಾಯಿತು. ಕ್ಷಣದಲ್ಲಿ ನೆತ್ತರ ಹೊಳೆ ಹರಿಸಿತು.
ಪಾಂಚಾಲಾನಹನತ್ ಕರ್ಣಸ್ತ್ರಿಗರ್ತಾಂಶ್ಚ ಧನಂಜಯಃ |
ಭೀಮಸೇನಃ ಕುರೂನ್ ರಾಜನ್ ಹಸ್ತ್ಯನೀಕಂ ಚ ಸರ್ವಶಃ ॥51॥
ಪಾಂಚಾಲರನ್ನು ಕರ್ಣ, ತ್ರಿಗರ್ತರನ್ನು ಅರ್ಜುನ, ಕೌರವರನ್ನೂ ಗಜಸೈನ್ಯ ವನ್ನೂ ಭೀಮ ಪೂರ್ತಿಯಾಗಿ ಸಂಹರಿಸಿದರು.
ಏವಮೇವ ಕ್ಷಯೋ ವೃತ್ತಃ ಕುರುಪಾಂಡವಸೇನಯೋಃ |
ಅಪರಾಹ್ಣೇ ಗತೇ ಸೂರ್ಯೇ ಕಾಂಕ್ಷಂತ್ಯೋರ್ವಿಪುಲಂ ಯಶಃ ॥52॥
ಹೀಗೆ ಕೌರವ-ಪಾಂಡವ ಸೈನ್ಯಗಳು ದೊಡ್ಡ ಯಶಸ್ಸನ್ನು ಬಯಸಿ ಸೂರ್ಯನು ಅಪರಾಹ್ಣಕ್ಕೆ ಹೋಗುವ ವೇಳೆಗೆ ಅಪಾರ ನಷ್ಟವನ್ನು ಅನುಭವಿಸಿದುವು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥28॥

ಮಹಾಭಾರತತಾತ್ಪರ್ಯನಿರ್ಣಯ
ತಸ್ಮಿನ್ ಗಜಾನ್ ಮರ್ದಯತಿ ಧಾರ್ತರಾಷ್ಟ್ರೋ ಯುಧಿಷ್ಠಿರಮ್ |
ಆಗಾದ್ ಯುದ್ಧಾಯ ತೌ ಯುದ್ಧಂ ರಾಜಾನೌ ಚಕ್ರತುಶ್ಚಿರಮ್ 12॥
ಭೀಮ ಆನೆಗಳನ್ನು ಮರ್ದಿಸುತ್ತಿದ್ದಾಗ ದುರ್ಯೋಧನ ಧರ್ಮರಾಜ ನೊಡನೆ ಯುದ್ಧಕ್ಕೆ ಬಂದ. ಅವರಿಬ್ಬರೂ ಬಹುಕಾಲ ಯುದ್ಧ

ಮಾಡಿದರು.
ತತ್ರ ತಂ ವಿರಥಂ ಚಕ್ರೇ ಸಹಸೈವ ಯುಧಿಷ್ಠಿರಃ |
ಸ ಗದಾಮಾದದೇ ಗುರ್ವೀಂ ತಂ ಭೀಮೋಭ್ಯಪತದ್ ಗದೀ ॥13॥
ಆ ಯುದ್ಧದಲ್ಲಿ ಧರ್ಮರಾಜ ದುರ್ಯೋಧನನನ್ನು ತಕ್ಷಣವೆ ವಿರಥನನ್ನಾಗಿ ಮಾಡಿದ. ದುರ್ಯೋಧನ ದೊಡ್ಡ ಗದೆಯನ್ನೆತ್ತಿಕೊಂಡ. ಆಗ ಗದಾಧಾರಿಯಾದ ಭೀಮ ಅವನನ್ನು ಆಕ್ರಮಿಸಿದ.
ದೃಷ್ಟ್ವಾ ಕೃಪಸ್ತಂ ಸ್ವರಥಮಾರೋಪ್ಯಾಪಯಯೌ ತತಃ |
ತದೈವ ಕರ್ಣನಕುಲೌ ಭೃಶಂ ಬಾಣೈರಯುದ್ಧ್ಯತಾಮ್ ॥ 14 ॥
ಭೀಮನನ್ನು ಕಂಡು ಕೃಪ ದುರ್ಯೋಧನನನ್ನು ತನ್ನ ರಥದ ಮೇಲೆ ಹತ್ತಿಸಿಕೊಂಡು ಅಲ್ಲಿಂದ ಪಲಾಯನ ಮಾಡಿದ. ಆಗಲೆ ಕರ್ಣ ನಕುಲರೂ ಬಾಣಗಳಿಂದ ಚೆನ್ನಾಗಿ ಯುದ್ಧ ಮಾಡಿದರು.

ಇಪ್ಪತ್ತೊಂಬತ್ತನೆಯ ಅಧ್ಯಾಯ
ಯುಧಿಷ್ಠಿರನಿಂದ ದುರ್ಯೋಧನ ಪರಾಜಯ ಮುಂದುವರಿಯುತ್ತದೆ.
ಧೃತರಾಷ್ಟ್ರಃ
ಅತಿತೀವ್ರಾಣಿ ದುಃಖಾನಿ ದುಃಸಹಾನಿ ಬಹೂನಿ ಚ |
ತ್ವತ್ತೋಽಹಂ ಸಂಜಯಾಶ್ರೌಷಂ ಪುತ್ರಾಣಾಂ ಚೈವ ಸಂಕ್ಷಯಮ್ ॥1॥
ಧೃತರಾಷ್ಟ್ರ ಸಂಜಯನಿಗೆ ನುಡಿದ– ಸಂಜಯ, ಅತಿ ತೀವ್ರವಾದ ದುಃಸಹವಾದ ಬಹು ದುಃಖ ಪ್ರಸಂಗಗಳನ್ನೂ ಪುತ್ರರ ವಿನಾಶವನ್ನೂ ನಾನು ನಿನ್ನಿಂದ ಕೇಳಿ ತಿಳಿದೆ.
ಯಥಾ ತ್ವಂ ಮೇ ಕಥಯಸೇ ಯಥಾ ಯುದ್ಧಮವರ್ತತ |
ನ ಸಂತಿ ಸೂತ ಕೌರವ್ಯಾ ಇತಿ ಮೇ ನಿಶ್ಚಿತಾ ಮತಿಃ ॥2॥
ನೀನು ಹೇಳಿದ ರೀತಿಯಲ್ಲಿ ಯುದ್ಧ ನಡೆಯಿತೆಂದರೆ ಕೌರವರು ಇನ್ನಿಲ್ಲವಾಗುತ್ತಾರೆ ಎನ್ನುವುದು ನನಗೆ ಮನವರಿಕೆಯಾಗಿದೆ.
ದುರ್ಯೋಧನಶ್ಚ ವಿರಥಃ ಕೃತಸ್ತತ್ರ ಮಹಾರಥಃ |
ಧರ್ಮಪುತ್ರಃ ಕಥಂ ಚಕ್ರೇ ತಸ್ಯ ವಾ ನೃಪತಿಃ ಕಥಮ್ ॥3॥
ಮಹಾರಥನಾದ ದುರ್ಯೋಧನ ವಿರಥನಾದ ಬಳಿಕ ಧರ್ಮರಾಜ ಹೇಗೆ ಯುದ್ಧ ಮಾಡಿದ? ದುರ್ಯೋಧನ ಹೇಗೆ ಯುದ್ಧ ಮಾಡಿದ?
ಅಪರಾಹ್ಣೇ ಕಥಂ ಯುದ್ಧಮಭವದ್ ರೋಮಹರ್ಷಣಮ್ |
ತನ್ಮಮಾಚಕ್ಷ್ವ ತತ್ತ್ವೇನ ಕುಶಲೋ ಹ್ಯಸಿ ಸಂಜಯ ॥4॥
ರೋಮಾಂಚಕರವಾದ ಈ ಯುದ್ಧ ಅಪರಾಹ್ಣದಲ್ಲಿ ಹೇಗೆ ನಡೆಯಿತು? ಅದನ್ನು ನನಗೆ ಹೇಳು. ಸಂಜಯ, ಹೇಳುವಲ್ಲಿ ನೀನು ಕುಶಲನಾಗಿರುವೆ ತಾನೆ?
ಸಂಜಯಃ
ಸಂಸಕ್ತೇಷು ತು ಸೈನ್ಯೇಷು ವಧ್ಯಮಾನೇಷು ಭಾಗಶಃ |
ರಥಮನ್ಯಂ ಸಮಾಸ್ಥಾಯ ಪುತ್ರಸ್ತವ ವಿಶಾಂಪತೇ ॥5॥
ಕ್ರೋಧೇನ ಮಹತಾ ಯುಕ್ತಃ ಸವಿಷೋ ಭುಜಗೋ ಯಥಾ |
ದುರ್ಯೋಧನಃ ಸಮಾಲಕ್ಷ್ಯ ಧರ್ಮರಾಜಂ ಯುಧಿಷ್ಠಿರಮ್ ॥6॥
ಪ್ರೋವಾಚ ಸೂತಂ ತ್ವರಿತೋ ಯಾಹಿ ಯಾಹೀತಿ ಭಾರತ ॥7॥
ಸಂಜಯನು ನುಡಿದ– ಸೈನ್ಯಗಳು ಪರಸ್ಪರವಾಗಿ ಹೋರಾಡಿ ಭಾಗಶಃ ನಾಶಹೊಂದುವಾಗ ರಾಜನೆ, ನಿನ್ನ ಮಗನು ಇನ್ನೊಂದು ರಥವನ್ನೇರಿ ವಿಷಸರ್ಪದಂತೆ ಮಹಾಕೋಪಯುಕ್ತನಾಗಿ ಧರ್ಮರಾಜನನ್ನು ನೋಡುತ್ತ ಸೂತನಿಗೆ ``ಹೋಗು, ಬೇಗನೆ ಹೋಗು' ಎಂದ.
ತತ್ರ ಮಾಂ ಪ್ರಾಪಯ ಕ್ಷಿಪ್ರಂ ಸಾರಥೇ ಯತ್ರ ಪಾಂಡವಃ |
ಧ್ರಿಯಮಾಣಾತಪತ್ರೇಣ ರಾಜಾ ರಾಜತಿ ದಂಸಿತಃ ॥8॥
`ಸಾರಥಿ, ರಾಜಾ ಧರ್ಮರಾಜನು ಕವಚ ಧರಿಸಿ, ಶ್ವೇತಚ್ಛತ್ರಯುಕ್ತನಾಗಿ ಇರುವಲ್ಲಿಗೆ ನನ್ನನ್ನು ಬೇಗ ಒಯ್ಯು' ಎಂದ.
ಸ ಸೂತಶ್ಚೋದಿತೋ ರಾಜ್ಞಾ ರಾಜ್ಞಃ ಸ್ಯಂದನಮುತ್ತಮಮ್ |
ಯುಧಿಷ್ಠಿರಸ್ಯಾಭಿಮುಖಂ ಪ್ರೇಷಯಾಮಾಸ ಸಂಯುಗೇ ॥9॥
ರಾಜಾ ದುರ್ಯೋಧನನ ಆದೇಶದಂತೆ ಸಾರಥಿ ರಾಜನ ಉತ್ತಮವಾದ ರಥವನ್ನು ರಣದಲ್ಲಿ ಯುಧಿಷ್ಠಿರನ ಕಡೆಗೆ ನಡೆಸಿದ.
ತತೋ ಯುಧಿಷ್ಠಿರಃ ಕ್ರುದ್ಧಃ ಪ್ರಭಿನ್ನ ಇವ ಕುಂಜರಃ |
ಸಾರಥಿಂ ಚೋದಯಾಮಾಸ ಯಾಹಿ ಯತ್ರ ಸುಯೋಧನಃ ॥10॥
ಮದಜಲವನ್ನು ಸುರಿಸುವ ಆನೆಯಂತೆ ಕ್ರುದ್ಧನಾದ ಯುಧಿಷ್ಠಿರ ಸಾರಥಿಗೆ ಹೇಳಿದ, `ಸುಯೋಧನನಿರುವಲ್ಲಿಗೆ ನಡೆ'
ತೌ ಸಮಾಜಗ್ಮತುರ್ವೀರೌ ಭ್ರಾತರೌ ರಥಸತ್ತಮೌ ॥11॥
ಸಮೇತ್ಯ ಚ ಮಹಾವೀರೌ ಸಂರಬ್ಧೌ ಯುದ್ಧದುರ್ಮದೌ |
ವವರ್ಷತುರ್ಮಹೇಷ್ವಾಸೌ ಶರೈರನ್ಯೋನ್ಯಮಾಹವೇ ॥12॥
ಶ್ರೇಷ್ಠರಥಿಕರಾದ ಇಬ್ಬರು ವೀರಸೋದರರಾದ ಯುಧಿಷ್ಠಿರ ದುರ್ಯೋಧನರು ಪರಸ್ಪರ ಸೇರಿದರು. ಮಹಾಬಿಲ್ಗಾರರಾದ ಮಹಾವೀರರಾದ ಯುದ್ಧರಸಿಕರಾದ ಆ ಇಬ್ಬರೂ ಕೋಪಗೊಂಡು ರಣದಲ್ಲಿ ಪರಸ್ಪರವಾಗಿ ಬಾಣಗಳ ಮಳೆಗರೆದರು.
ತತೋ ದುರ್ಯೋಧನೋ ರಾಜಾ ಧರ್ಮಶೀಲಸ್ಯ ಮಾರಿಷ |

ಶಿಲಾಶಿತೇನ ಭಲ್ಲೇನ ಧನುಶ್ಚಿಚ್ಛೇದ ಸಂಯುಗೇ ॥13॥
ರಾಜಾ ದುರ್ಯೋಧನ ಯುದ್ಧದಲ್ಲಿ ಧರ್ಮಶೀಲನಾದ ಯುಧಿಷ್ಠಿರನ ಧನುಸ್ಸನ್ನು ಸಾಣೆಹಿಡಿದು ತೀಕ್ಷ್ಣವಾಗಿರುವ ಭಲ್ಲೆಯಿಂದ ಕತ್ತರಿಸಿದ.
ತಂ ನಾಮೃಷ್ಯತ ಸಂಕ್ರುದ್ಧೋ ಹ್ಯವಮಾನಂ ಯುಧಿಷ್ಠಿರಃ |
ಅಪವಿಧ್ಯ ಧನುಶ್ಛಿನ್ನಂ ಕ್ರೋಧಸಂರಕ್ತಲೋಚನಃ ॥14॥
ಅನ್ಯತ್ಕಾರ್ಮುಕಮಾದಾಯ ಧರ್ಮಪುತ್ರಶ್ಚಮೂಮುಖೇ |
ದುರ್ಯೋಧನಸ್ಯ ಚಿಚ್ಛೇದ ಧ್ವಜಂ ಕಾರ್ಮುಕಮೇವ ಚ ॥15॥
ಯುಧಿಷ್ಠಿರ ಈ ಅವಮಾನವನ್ನು ಸಹಿಸಲಿಲ್ಲ. ಕುಪಿತನಾಗಿ ಕಡಿದುಹೋಗಿದ್ದ ಧನುಸ್ಸನ್ನು ತ್ಯಜಿಸಿ ಕೋಪದಿಂದ ಕಣ್ಣುಕೆಂಪಾಗಿಸಿಕೊಂಡು ಇನ್ನೊಂದು ಧನುಸ್ಸನ್ನು ಎತ್ತಿಕೊಂಡು ದುರ್ಯೋಧನನ ಧ್ವಜವನ್ನು ಧನುಸ್ಸನ್ನೂ ಕತ್ತರಿಸಿದ.
ಅಥಾನ್ಯದ್ಧನುರಾದಾಯ ಪುತ್ರಸ್ತೇ ಭರತರ್ಷಭ |
ಯುಧಿಷ್ಠಿರಸ್ಯ ಚಿಕ್ಷೇಪ ಶರಾನ್ ಕನಕಭೂಷಣಾನ್ ॥16॥
ರುಗ್ಮಪುಂಖಾನ್ ಪ್ರಸನ್ನಾಗ್ರಾನ್ ಸವಿಷಾನಿವ ಪನ್ನಗಾನ್ ॥17॥
ರಾಜನೆ, ನಿನ್ನ ಮಗನು ಇನ್ನೊಂದು ಧನುಸ್ಸನ್ನೆತ್ತಿಕೊಂಡು ಚಿನ್ನದಿಂದ ಅಲಂಕೃತವಾದ ಚಿನ್ನದಪುಕ್ಕ ಉಳ್ಳ ತೀಕ್ಷ್ಣವಾದ ತುದಿಯುಳ್ಳ ವಿಷದ ಹಾವುಗಳಂತಿರುವ ಯುಧಿಷ್ಠಿರನ ಬಾಣಗಳನ್ನು ನಾಶಪಡಿಸಿದ.
ತಾವನ್ಯೋನ್ಯಂ ಸುಸಂಕ್ರುದ್ಧೌ ಶಸ್ತ್ರವರ್ಷಾಣ್ಯಮುಂಚತಾಮ್ |
ಸಿಂಹಾವಿವ ಸುಸಂರಬ್ಧೌ ಪರಸ್ಪರಜಿಗೀಷಯಾ ॥18॥
ಅವರಿಬ್ಬರೂ ಪರಸ್ಪರ ಜಯೇಚ್ಛೆಯಿಂದ ಸಿಂಹಗಳಂತೆ ಕ್ರುದ್ಧರಾಗಿ ಕುಪಿತರಾಗಿ ಪರಸ್ಪರವಾಗಿ ಶಸ್ತ್ರಗಳ ಮಳೆ ಸುರಿಸಿದರು.
ಜಘ್ನತುಸ್ತೌ ರಣೇಽನ್ಯೋನ್ಯಂ ನರ್ದಮಾನೌ ವೃಷಾವಿವ |
ಅಂತರಂ ಮಾರ್ಗಮಾಣೌ ಚ ಚೇರತುಸ್ತೌ ಮಹಾರಥೌ ॥19॥
ಮಹಾರಥರಾದ ಅವರಿಬ್ಬರೂ ಎರಡು ಎತ್ತುಗಳಂತೆ ಗರ್ಜನೆ ಮಾಡುತ್ತ ಒಬ್ಬರು ಮತ್ತೊಬ್ಬರಲ್ಲಿ ದೌರ್ಬಲ್ಯವನ್ನು ಹುಡುಕುತ್ತ ಸಂಚರಿಸಿದರು.
ಅಂತರಂ ನಾಗಮತ್ ತತ್ರ ರಾಜಾ ನ ಸುಯೋಧನಃ ॥20॥
ಯುಧಿಷ್ಠಿರನೂ ದುರ್ಯೋಧನನಲ್ಲಿ ದೌರ್ಬಲ್ಯವನ್ನು ಕಾಣಲಿಲ್ಲ. ದುರ್ಯೋಧನನೂ ಯುಧಿಷ್ಠಿರನಲ್ಲಿ ದೌರ್ಬಲ್ಯವನ್ನು ಕಾಣಲಿಲ್ಲ.
ತತಃ ಪೂರ್ಣಾಯತೋತ್ಸೃಷ್ಟೈ ್ಃ ಶರೈಸ್ತೌ ತು ಕೃತವ್ರಣೌ |
ವಿರೇಜತುರ್ಮಹಾರಾಜ ಪುಷ್ಪಿತೌ ಕಿಂಶುಕಾವಿವ ॥21॥
ಮಹಾರಾಜ, ಇಬ್ಬರೂ ಬಿಲ್ಲನ್ನು ಪೂರ್ತಿಸೆಳೆದು ಎಸೆದ ಬಾಣಗಳಿಂದ ಗಾಯಗೊಂಡು ಹೂಬಿಟ್ಟ ಕಿಂಶುಕವೃಕ್ಷದಂತೆ ಶೋಭಿಸಿದರು.
ತತೋ ರಾಜನ್ ವಿಮುಂಚಂತೌ ಸಿಂಹನಾದಾನ್ ಮುಹುರ್ಮುಹುಃ |
ತಳಯೋಶ್ಚ ಯಥಾ ಶಬ್ದಾನ್ ಧನುಷಶ್ಚ ಮಹಾಹವೇ ॥22॥
ಶಂಖಶಬ್ದವರಾಂಶ್ಚೈವ ಚಕ್ರತುಸ್ತೌ ನರೇಶ್ವರೌ |
ಅನ್ಯೋನ್ಯಂ ತೌ ಮಹಾರಾಜ ಪೀಡಯಾಂಚಕ್ರತುರ್ಭೃಶಮ್ ॥23॥
ರಾಜನೆ, ಆ ಇಬ್ಬರೂ ರಾಜರು ಪುನಃ ಪುನಃ ಸಿಂಹಗರ್ಜನೆ ಮಾಡುತ್ತ, ಕೈತಾಳಗಳ ಶಬ್ದ, ಧನುಸ್ಸಿನ ಶಬ್ದ, ಶಂಖಶಬ್ದಗಳನ್ನು ಮಹಾರಣದಲ್ಲಿ ಮಾಡಿದರು, ಒಬ್ಬರು ಮತ್ತೊಬ್ಬರನ್ನು ಚೆನ್ನಾಗಿ ಪೀಡಿಸಿದರು.
ತತೋ ಯುಧಿಷ್ಠಿರೋ ರಾಜಾ ಪುತ್ರಂ ತವ ಶರೈಸ್ತ್ರಿಭಿಃ |
ಆಜಘಾನೋರಸಿ ಕ್ರುದ್ಧೋ ವಜ್ರವೇಗೈರ್ದುರಾಸದೈಃ ॥24॥
ರಾಜಾ ಯುಧಿಷ್ಠಿರನು ಕ್ರುದ್ಧನಾಗಿ ನಿನ್ನ ಮಗನನ್ನು ಎದೆಯಲ್ಲಿ ಮಿಂಚಿನಂಥ ವೇಗದ, ತಡೆಯಲಸಾಧ್ಯವಾದ ಮೂರು ಬಾಣಗಳಿಂದ ಹೊಡೆದ.
ಪ್ರತಿವಿವ್ಯಾಧ ತಂ ತೂರ್ಣಂ ತವ ಪುತ್ರೋ ಮಹೀಪತೇ |
ಪಂಚಭಿರ್ನಿಶಿತೈರ್ಬಾಣೈಃ ಸ್ವರ್ಣಪುಂಖೈಃ ಶಿಲಾಶಿತೈಃ ॥25॥
ರಾಜನೆ, ಅದಕ್ಕೆ ಪ್ರತಿಯಾಗಿ ನಿನ್ನ ಪುತ್ರನೂ ಚಿನ್ನದ ಪುಕ್ಕಉಳ್ಳ ಸಾಣೆಹಿಡಿದ ತೀಕ್ಷ್ಣವಾದ ಐದು ಬಾಣಗಳಿಂದ ಯುಧಿಷ್ಠಿರನನ್ನು ಹೊಡೆದ.
ತತೋ ದುರ್ಯೋಧನೋ ರಾಜಾ ಶಕ್ತಿಂ ಚಿಕ್ಷೇಪ ಭಾರತ |
ಸರ್ವಪಾರಶವೀಂ ತೀಕ್ಷ್ಣಾಂ ಮಹೋಲ್ಕಾಪ್ರತಿಮಾಂ ತದಾ ॥26॥
ರಾಜನೆ, ಮಹಾ ಉಲ್ಕೆಯಂಥ, ಕಬ್ಬಿಣದಿಂದ ಮಾಡಿದ ತೀಕ್ಷ್ಣವಾದ ಶಕ್ತಿಯನ್ನು ರಾಜಾ ದುರ್ಯೋಧನ ಯುಧಿಷ್ಠಿರನಿಗೆ ಎಸೆದ.
ತಾಮಾಪತಂತಿಂ ಸಹಸಾ ಧರ್ಮರಾಜಃ ಶಿತೈಃ ಶರೈಃ |
ತ್ರಿಭಿಶ್ಚಿಚ್ಛೇದ ಸಹಸಾ ತಂ ಚ ವಿವ್ಯಾಧ ಪಂಚಭಿಃ ॥27॥
ಆ ಶಕ್ತಿಯು ತನ್ನಮೇಲೆ ಬೀಳುತ್ತಿದ್ದಂತೆಯೇ ಧರ್ಮರಾಜ ಅದನ್ನು ತೀಕ್ಷ್ಣವಾದ ಮೂರು ಬಾಣಗಳಿಂದ ಕಡಿದು, ಐದು ಬಾಣಗಳಿಂದ ದುರ್ಯೋಧನನನ್ನೂ ಹೊಡೆದ.
ನಿಪಪಾತ ತತಃ ಸಾಽಥ ಸ್ವರ್ಣದಂಡಾ ಮಹಾಸ್ವನಾ |
ನಿಪತಂತೀ ಮಹೋಲ್ಕೇವ ವ್ಯರಾಜಚ್ಛಿಖಿಸನ್ನಿಭಾ ॥28॥

ಬಂಗಾರದ ದಂಡದಿಂದ ಯುಕ್ತವಾದ ದೊಡ್ಡ ಶಬ್ದಮಾಡುವ ಆ ಶಕ್ತಿ ಬೆಂಕಿಯಂತೆ ಹೊಳೆಯುತ್ತ ಬಿದ್ದಿತು. ಬೀಳುವಾಗ ದೊಡ್ಡ ಉಲ್ಕೆಯಂತೆಯೇ ಬೆಳಗಿತು.
ಶಕ್ತಿಂ ವಿನಿಹತಾಂ ದೃಷ್ಟ್ವಾ ಪುತ್ರಸ್ತವ ವಿಶಾಂಪತೇ |
ನವಭಿರ್ನಿಶಿತೈರ್ಭಲ್ಲೈರ್ನಿಜಘಾನ ಯುಧಿಷ್ಠಿರಮ್ ||29||
ರಾಜನೆ! ಶಕ್ತಿಯು ಕಡಿದು ಬಿದ್ದಿದ್ದನ್ನು ಕಂಡು ನಿನ್ನ ಮಗನು ಹರಿತವಾದ ಒಂಬತ್ತು ಭಲ್ಲೆಗಳಿಂದ ಯುಧಿಷ್ಠಿರನನ್ನು ಹೊಡೆದ.
ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುತಾಪನಃ |
ದುರ್ಯೋಧನಂ ಸಮುದ್ದಿಶ್ಯ ಬಾಣಂ ಜಗ್ರಾಹ ಸತ್ವರಃ ||30||
ಶತ್ರುನಾಶಕನಾದ ಯುಧಿಷ್ಠಿರನು ಬಲಿಷ್ಠ ಶತ್ರುವಾದ ದುರ್ಯೋಧನನಿಂದ ಅತಿಯಾಗಿ ಗಾಯಗೊಂಡು ದುರ್ಯೋಧನನಿಗೆ ಎಸೆಯುವುದಕ್ಕಾಗಿ ಬೇಗನೆ ಬಾಣವನ್ನು ಎತ್ತಿಕೊಂಡ.
ಸಮಾಧತ್ತ ಚ ತಂ ಬಾಣಂ ಧನುರ್ಮಧ್ಯೇ ಮಹಾಬಲಃ |
ಚಿಕ್ಷೇಪ ಚ ಮಹಾರಾಜ ತತಃ ಕ್ರುದ್ಧಃ ಪರಾಕ್ರಮೀ ||31||
ಆ ಬಾಣವನ್ನು ಮಹಾಬಲಶಾಲಿಯಾದ ಯುಧಿಷ್ಠಿರ ಧನುಸ್ಸಿನ ಮಧ್ಯದಲ್ಲಿ ಹೂಡಿದ. ಪರಾಕ್ರಮಿಯಾದ ಆತ ಕ್ರುದ್ಧನಾಗಿ ಅದನ್ನು ಎಸೆದ.
ಸ ತು ಬಾಣಃ ಸಮಾಸಾದ್ಯ ತವ ಪುತ್ರಂ ಮಹಾರಥಮ್ |
ವ್ಯಾಮೋಹಯತ ರಾಜಾನಂ ಧರಣೀಂ ಚ ದದಾರ ಹ ||32||
ಆ ಬಾಣವು ಮಹಾರಥನಾದ ನಿನ್ನ ಮಗನಾದ ರಾಜಾ ದುರ್ಯೋಧನನನ್ನು ಹೊಡೆದು ಮೂರ್ಛೆಗೊಳಿಸಿತು, ನೆಲವನ್ನು ಸೀಳಿತು.
ತತೋ ದುರ್ಯೋಧನಃ ಕ್ರುದ್ಧೋ ಗದಾಮುದ್ಯಮ್ಯ ವೇಗಿತಃ |
ವಿಧಿತ್ಸುಃ ಕಲಹಸ್ಯಾಂತಂ  ಧರ್ಮರಾಜಮುಪಾದ್ರವತ್ ||33||
ಮೂರ್ಛೆಯಿಂದ ಎಚ್ಚೆತ್ತ ಬಳಿಕ ದುರ್ಯೋಧನ ಕ್ರುದ್ಧನಾಗಿ ಯುದ್ಧವನ್ನು ಕೊನೆಗಾಣಿಸಲು ಬಯಸಿ ವೇಗದಿಂದ ಗದೆಯನ್ನೆತ್ತಿಕೊಂಡು ಯುಧಿಷ್ಠಿರನ ಸಮೀಪಕ್ಕೆ ರಥದಿಂದ ನುಗ್ಗಿದ.
ತಮುದ್ಯತಗದಂ ದೃಷ್ಟ್ವಾ ದಂಡಹಸ್ತಮಿವಾಂತಕಮ್ |
ಧರ್ಮರಾಜೋ ಮಹಾಶಕ್ತಿಂ ಪ್ರಾಹಿಣೋತ್ತವ ಸೂನವೇ ||34||
ದುರ್ಯೋಧನ ಗದೆಯನ್ನೆತ್ತಿ, ದಂಡಧಾರಿಯಮನಂತೇ ಬರುತ್ತಿರುವುದನ್ನು ಕಂಡು ಧರ್ಮರಾಜ ಅವನ ಮೇಲೆ ಮಹಾಶಕ್ತಿಯನ್ನು ಎಸೆದ.
ದೀಪ್ಯಮಾನಾಂ ಮಹಾವೇಗಾಂ ಮಹೋಲ್ಕಾಂ ಜ್ವಲಿತಾಮಿವ |
ಯಮದಂಡನಿಭಾಂ ಘೋರಾಂ ಕಾಲರಾತ್ರಿಮಿವಾಪರಾಮ್ ||35||
ಆ ಮಹಾಶಕ್ತಿ ಹೊಳೆಯುವುದು, ಮಹಾವೇಗಉಳ್ಳದ್ದು. ಉರಿವ ದೊಡ್ಡ ಉಲ್ಕೆಯಂಥದ್ದು, ಯಮದಂಡಸದೃಶ, ಘೋರ ಹಾಗೂ ಇನ್ನೊಂದು ಕಾಲರಾತ್ರಿಯೊ ಎಂಬಂತಿರುವುದು.
ರಥಸ್ಥಃ ಸ ತಯಾ ವಿದ್ಧೋ ವರ್ಮ ಭಿತ್ತ್ವಾ ಸ್ತನಾಂತರೇ |
ಭೃಶಂ  ಸಂವಿಗ್ನಹೃದಯಃ ಪಪಾತ ಚ ಮುಮೋಹ ಚ ||36||
ದುರ್ಯೋಧನ ರಥದಲ್ಲಿದ್ದಂತೆಯೇ ಆ ಶಕ್ತಿ ಅವನ ಕವಚವನ್ನು ಒಡೆದು ಎದೆಯನ್ನು ಸೀಳಿ ಹೃದಯದಲ್ಲಿ ಚುಚ್ಚಿತು. ದುರ್ಯೋಧನ ಅಲ್ಲಿಯೇ ಕುಸಿದು ಬಿದ್ದು ಮೂರ್ಛಿತನಾದ.
ಭೀಮಸ್ತಮಾಹ ಚ ತತಃ ಪ್ರತಿಜ್ಞಾಮನುಪಾಲಯ |
ನಾಯಂ ವಧ್ಯಸ್ತವ ನೃಪ ಇತ್ಯುಕ್ತಃ ಸ ನ್ಯವರ್ತತ ||37||
ಒಡನೆ ಭೀಮ ನುಡಿದ, `ನನ್ನ ಪ್ರತಿಜ್ಞೆಯನ್ನು ಕಾಪಾಡು, ಈ ರಾಜ ನಿನ್ನ ಕೈಯಲ್ಲಿ ಸಾಯಬಾರದು. ಪುನಃ ಶಕ್ತಿಯನ್ನು ಅವನ ಮೇಲೆ ಪ್ರಯೋಗಿಸಬೇಡ' ಎಂದು. ಆಗ ಧರ್ಮರಾಜ ಸುಮ್ಮನಾದ.
ತತಸ್ತ್ವರಿತಮಾಗಮ್ಯ ಕೃತವರ್ಮಾ ತವಾತ್ಮಜಮ್ |
ಪ್ರತ್ಯಪದ್ಯತ ರಾಜಾನಂ ನಿಮಗ್ನಂ ವ್ಯಸನಾರ್ಣವೇ ||38||
ಆಗ ಕೃತವರ್ಮನು ಗದಾಧಾರಿ ಭೀಮನನ್ನು ಕಂಡು ಬೇಗನೆ ದುಃಖಸಾಗರದಲ್ಲಿ ಮುಳುಗಿದ್ದ ನಿನ್ನ ಮಗನ ಬಳಿಗೆ ಧಾವಿಸಿಬಂದ. ನಿರ್ಣಯ ಪ್ರಕಾರ, ಕೃಪನು ದುರ್ಯೋಧನನನ್ನು ತನ್ನ ರಥವೇರಿಸಿಕೊಂಡು ರಕ್ಷಣೆ ಮಾಡುತ್ತಾನೆ. ಕೃತವರ್ಮನಲ್ಲ. ಇದನ್ನು ಪುರುಷವ್ಯತ್ಯಾಸಶೈಲಿ ಎಂದು ತಿಳಿಯಬೇಕು.
ಗದಾಮಾದಾಯ ಭೀಮೋಽಪಿ ಹೇಮಪಟ್ಟಪರಿಷ್ಕೃತಾಮ್ |
ಅಭಿದುದ್ರಾವ ವೇಗೇನ ಕೃತವರ್ಮಾಣಮಾಹವೇ ||39||
ಬಂಗಾರದ ಪಟ್ಟಿಯಿಂದ ಅಲಂಕೃತವಾದ ಗದೆಯನ್ನು ಹಿಡಿದು ಬಂದಿದ್ದ ಭೀಮ ವೇಗದಿಂದ ಕೃತವರ್ಮನನ್ನು ಆಕ್ರಮಿಸಿದ.
ಏವಂ ತದಭವದ್ ಯುದ್ಧಂ ತ್ವದೀಯಾನಾಂ ಪರೈಃ ಸಹ ||40||
ಅಪರಾಹ್ಣೇ ಮಹಾರಾಜ ಕಾಂಕ್ಷತಾಂ ವಿಜಯಂ ಯುಧಿ ||41||
ಹೀಗೆ, ಮಹಾರಾಜ, ಯುದ್ಧದಲ್ಲಿ ಜಯವನ್ನು ಬಯಸಿದ್ದ ನಿನ್ನವರಿಗೆ ಪಾಂಡವರೊಡನೆ ಅಪರಾಹ್ಣದಲ್ಲಿ ಯುದ್ಧ ನಡೆಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಏಕೋನತ್ರಿಂಶೋಽಧ್ಯಾಯಃ ||29||

ಮಹಾಭಾರತತಾತ್ಪರ್ಯನಿರ್ಣಯ
ಕರ್ಣಂ ಸಮಂತಾತ್ ಪ್ರತಿಕಾಲಯಂತಂ
ವರೂಥಿನೀಮಿಂದ್ರಸುತಃ ಸಮಭ್ಯಯಾತ್ |
ಕ್ಷಣಾತ್ ತಮಾಜೌ ವಿರಥಂ ಚ ಚಕ್ರೇ
ತತೋಪಹಾರಂ ಸ ಚಕಾರ ಚಮ್ವಾಃ ॥ 22 ॥
ಸೈನ್ಯವನ್ನು ಯುದ್ಧದಲ್ಲಿ ಎಲ್ಲೆಡೆಯೂ ಮರ್ದಿಸುತ್ತಿದ್ದ ಕರ್ಣನನ್ನು ಅರ್ಜುನ ಇದಿರಿಸಿದ. ಕ್ಷಣದಲ್ಲಿ ಅವನನ್ನು ವಿರಥನನ್ನಾಗಿ ಮಾಡಿದ. ಆಗ ಕರ್ಣ ಸೈನ್ಯವನ್ನು ಹಿಂದೆ ಕರೆಸಿಕೊಂಡ.
ಮೂವ್ವತ್ತನೆಯ ಅಧ್ಯಾಯ
ಅರ್ಜುನನಿಂದ ದುರ್ಯೋಧನ ಪರಾಭವ, ಕರ್ಣನ ಆಕ್ರಮಣಕ್ಕೆ ತಡೆ.
ಸಂಜಯಃ
ತತಃ ಕರ್ಣಂ ಪುರಸ್ಕೃತ್ಯ ತ್ವದೀಯಾ ಯುದ್ಧದುರ್ಮದಾಃ |
ಪುನರಾವರ್ತ್ಯ ಸಂಗ್ರಾಮಂ ಚಕ್ರುರ್ದೇವಾಸುರೋಪಮಮ್ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಬಳಿಕ ಕರ್ಣನನ್ನು ಮುಂದೆ ಮಾಡಿಕೊಂಡು ಯುದ್ಧರಸಿಕರಾದ ನಿನ್ನವರು ಪುನಃ ಬಂದು ದೇವಾಸುರ ಯುದ್ಧದಂಥ ಯುದ್ಧವನ್ನು ಮಾಡಿದರು.
ದ್ವಿರದನರರಥಾಶ್ವಶಂಖಶಬ್ದೈಃ
ಪರಿಹೃಷಿತಾ ವಿವಿಧೈಶ್ಚ ಶಸ್ತ್ರಪಾತೈಃ |
ದ್ವಿರದರಥಪದಾತಿಸಾದಿಸಂಘಾಃ
ಪರಿಕುಪಿತಾಭಿಮುಖಾಃ ಪ್ರಜಘ್ನಿರೇ ತೇ ॥2॥
ರಥ ಗಜ ಅಶ್ವ ಪದಾತಿಗಳ ಘೋಷಗಳಿಂದ ಮತ್ತು ಶಂಖಧ್ವನಿಗಳಿಂದ ಉತ್ಸಾಹಗೊಂಡ ಗಜ ರಥ ಪದಾತಿ ಅಶ್ವ ಸೈನಿಕರ ಸಮೂಹಗಳು ಕುಪಿತರಾಗಿ ಇದಿರಿಸಿ ನಾನಾ ಬಗೆಯ ಶಸ್ತ್ರಪ್ರಯೋಗಗಳಿಂದ ಶತ್ರುಗಳನ್ನು ಪ್ರಹರಿಸಿದರು.
ಶಿತಪರಶುವರಾಸಿಪಟ್ಟಿಸೈ-
ರಿಷುಭಿರನೇಕವಿಧೈಶ್ಚ ಸೂದಿತಾಃ |
ದ್ವಿರದರಥಹಯಾ ಮಹಾಹವೇ
ವರಪುರುಷೈಃ ಪುರುಷಾಶ್ಚ ತೇ ಹತಾಃ ॥3॥
ಮಹಾಯುದ್ಧದಲ್ಲಿ ಗಜ ರಥ ಅಶ್ವ ಪದಾತಿಗಳು ಉತ್ತಮಯೋಧರಿಂದ ತೀಕ್ಷ್ಣವಾದ ಪರಶು ಖಡ್ಗ ಪಟ್ಟಿಶ ಅನೇಕವಿಧ ಬಾಣಗಳಿಂದ ಹೊಡೆಸಿಕೊಂಡು ಹತರಾದರು.
ಕಮಲದಿನಕರೇಂದುಸನ್ನಿಭೈಃ
ಸಿತದಶನೈಃ ಸುಮುಖಾಕ್ಷಿನಾಸಿಕೈಃ |
ರುಚಿರಮಕುಟಕುಂಡಲೈರ್ಮಹೀ
ಪುರುಷಶಿರೋಭಿರುಪಸ್ತೃತಾ ಬಭೌ ॥4॥
ಕಮಲದಂತೆ ಸೂರ್ಯಚಂದ್ರರಂತೆ ಹೊಳೆವ, ಬಿಳಿ ಹಲ್ಲು, ಬಾಯಿ, ಮೂಗುಗಳಿಂದ ಯುಕ್ತವಾದ, ಸುಂದರವಾದ ಮುಕುಟಕುಂಡಲಗಳಿಂದ ಯುಕ್ತವಾದ ಯೋಧರ ಶಿರಸ್ಸುಗಳಿಂದ ರಣಭೂಮಿ ತುಂಬಿ ಶೋಭಿಸಿತು.
ಪರಿಘಮುಸಲಶಕ್ತಿತೋಮರೈ-
ರ್ನಖರಭುಶುಂಡಿಗದಾಶತೈರ್ಹತಾಃ |
ದ್ವಿರದನರಹಯಾಃ ಸಹಸ್ರಶೋ
ರುಧಿರನದೀಪ್ರವಹಾಸ್ತದಾಽಭವನ್ ॥5॥
ಸಹಸ್ರಾರು ಗಜ ಪದಾತಿ ಅಶ್ವಗಳು ಪರಿಘ ಮುಸಲ ಶಕ್ತಿ ತೋಮರ ನಖರ ಭುಶುಂಡಿ ಗದೆ ಮುಂತಾದ ನೂರಾರು ಆಯುಧಗಳಿಂದ ಹತರಾದರು. ರಕ್ತನದೀಪ್ರವಾಹಗಳು ಹರಿದುವು.
ಪ್ರಹತರಥನರಾಶ್ವಕುಂಜರಂ
ಪ್ರತಿಭಯದರ್ಶನಮುಲ್ಬಣವ್ರಣಮ್ |
ತದಹಿತಹತಮಾಬಭೌ ಬಲಂ
ಪಿತೃಪತಿರಾಷ್ಟ್ರಮಿವ ಪ್ರಜಾಕ್ಷಯೇ ॥6॥
ಶತ್ರುಗಳಿಂದ ಹೊಡೆಸಿಕೊಂಡು ಹತರಾದ ರಥ ಪದಾತಿ ಅಶ್ವ ಗಜಗಳಿಂದ ಕೂಡಿದ ಸೈನ್ಯವು ಉಲ್ಬಣವಾಗಿ ಗಾಯಗೊಂಡು, ನೋಡಲು ಭೀಕರವಾಗಿದ್ದು, ಲಯಕಾಲದಲ್ಲಿ ಗೋಚರವಾಗುವ ಯಮರಾಷ್ಟ್ರದಂತೆ ಕಂಡುಬಂದಿತು.
ಅಥ ತವ ನರದೇವ ಸೈನಿಕಾ-
ಸ್ತವ ಚ ಸುತಾಃ ಸುರಸೂನುಸನ್ನಿಭಾಃ |
ಅಮಿತಬಲಪುರಃಸರಾ ರಣೇ
ಕುರುವೃಷಭಾಃ ಶಿನಿಪೌತ್ರಮಭ್ಯಯುಃ ॥7॥
ರಾಜನೆ, ನಿನ್ನ ಸೈನಿಕರೂ ಕುರುಶ್ರೇಷ್ಠರಾದ ದೇವಪುತ್ರರಂಥ ನಿನ್ನ ಪುತ್ರರೂ ಅಮಿತ ಸೈನ್ಯವನ್ನು ಮುಂದು ಮಾಡಿಕೊಂಡು ರಣದಲ್ಲಿ ಸಾತ್ಯಕಿಯನ್ನು ಇದಿರಿಸಿದರು.

ತದತಿರುಧಿರಭೀಮಮಾಬಭೌ
ಪುರುಪ್ರವರಾಶ್ವರಥದ್ವಿಪಾಕುಲಮ್ |
ಲವಣಜಲಸಮುದ್ಧತಸ್ವನಂ
ಬಲಮಸುರಾಮರಸೈನ್ಯಸಪ್ರಭಮ್ ॥8॥
ಸಾತ್ಯಕಿಯ ಸೈನ್ಯವು ಶ್ರೇಷ್ಠ ಪದಾತಿ ಅಶ್ವ ರಥ ಗಜಯುಕ್ತವಾಗಿದ್ದು ಸಮುದ್ರದಂತೆ ಭೋರ್ಗರೆಯುತ್ತ ದೇವಾಸುರರ ಸೈನ್ಯದಂತಿದ್ದರೂ ಅತಿಯಾಗಿ ರಕ್ತರಂಜಿತವಾಗಿ ಭೀಕರವಾಗಿ ಕಂಡಿತು.
ಸುರಪತಿಸಮವಿಕ್ರಮಸ್ತತ-
ಸ್ತ್ರಿದಶವರಾವರಜೋಪಮಂ ಯುಧಿ |
ದಿನಕರಕಿರಣಪ್ರಭೈಃ ಪೃಷತ್ಕೈ
ರವಿತನಯೋಽಭ್ಯಹನಚ್ಛಿನಿಪ್ರವೀರಮ್ ॥9॥
ಇಂದ್ರಸಮಾನ ಪರಾಕ್ರಮವುಳ್ಳ ಸೂರ್ಯಪುತ್ರ ಕರ್ಣನು ಯುದ್ಧದಲ್ಲಿ ಇಂದ್ರನ ತಮ್ಮನಾದ ಉಪೇಂದ್ರನಿಗೆ ಸಮಾನನಾದ ಸಾತ್ಯಕಿಯನ್ನು ಸೂರ್ಯ ಕಿರಣದಂತೆ ಹೊಳೆಯುವ ಬಾಣಗಳಿಂದ ಹೊಡೆದ.
ತಮಪಿ ಸರಥವಾಜಿಸಾರಥಿಂ
ಶಿನಿವೃಷಭೋ ವಿವಿಧೈಃ ಶರೈಸ್ತ್ವರನ್ |
ಭುಜಗವಿಷಸಮಪ್ರಭೈ ರಣೇ
ಪುರುಷವರಂ ಸಮವಾಸ್ತೃಣೋತ್ತದಾ ॥10॥
ಪುರುಷಶ್ರೇಷ್ಠನಾದ ಕರ್ಣನನ್ನು ರಥ ಕುದುರೆ ಸಾರಥಿಗಳೊಂದಿಗೆ ಸಾತ್ಯಕಿಯು ಹಾವಿನ ವಿಷದಂತೆ ಜ್ವಲಿಸುವ ನಾನಾವಿಧ ಬಾಣಗಳಿಂದ ಬೇಗನೆ ಹೊಡೆದ.
ಶಿನಿವೃಷಭಶರೈರ್ನಿಪೀಡಿತಂ
ತವ ಸುಹೃದೋ ವಸುಷೇಣಮಭ್ಯಯುಃ |
ತ್ವರಿತಮತಿರಥಾ ರಥರ್ಷಭಂ
ದ್ವಿರದರಥಾಶ್ವಪದಾತಿಭಿಃ ಸಹ ॥11॥
ರಥಿಕಶ್ರೇಷ್ಠನಾದ ಕರ್ಣನು ಸಾತ್ಯಕಿಯ ಬಾಣಗಳಿಂದ ಪೀಡಿತನಾದಾಗ ಅವನ ಬಳಿಗೆ ಅತಿರಥರಾದ ನಿನ್ನ ಮಿತ್ರರು ಗಜರಥ ಅಶ್ವಪದಾತಿ ಸೈನ್ಯಗಳೊಂದಿಗೆ ಬೇಗನೆ ಬಂದರು.
ತದುದಧಿನಿಭಮಾದ್ರವದ್ ಬಲಂ
ತ್ವರಿತತರೈಃ ಸಮಭಿದ್ರುತಂ ಪರೈಃ |
ದ್ರುಪದಸುತಮುಖೈಸ್ತದಾಽಭವತ್
ಪುರುಷರಥಾಶ್ವಗಜಕ್ಷಯೋ ಮಹಾನ್ ॥12॥
ಸಾಗರದಂತೆ ಅಪಾರವಾದ ಆ ನಿನ್ನ ಸೈನ್ಯವನ್ನು ಧೃಷ್ಟದ್ಯುಮ್ನ ಮುಂತಾದ ಶತ್ರುಗಳು ಅತಿವೇಗದಿಂದ ಆಕ್ರಮಿಸಿದರು. ಆಗ ಪದಾತಿ ರಥ ಅಶ್ವ ಗಜ ಸೈನ್ಯಗಳ ಮಹಾವಿನಾಶ ನಡೆಯಿತು.
ಅಥ ಪುರುಷವರೌ ಮಹಾಬಲೌ
ಯುಧಿ ಸಂಶಪ್ತಕ ಸೈನ್ಯಮುಲ್ಬಣಮ್ |
ಪ್ರಸಭಮಭಿನಿಹತ್ಯ ಸತ್ವರೌ
ತವ ಬಲಮರ್ಜುನಕೇಶವೌ ಸೃತೌ ॥13॥
ಮಹಾಬಲಿಷ್ಠರಾದ ಪುರುಷೋತ್ತಮರಾದ ಕೃಷ್ಣಾರ್ಜುನರು ರಣದಲ್ಲಿ ಕ್ರೂರವಾದ ಸಂಶಪ್ತಕಸೈನ್ಯವನ್ನು ರಭಸದಿಂದ ನಿಗ್ರಹಿಸಿ ಬೇಗನೆ ನಿನ್ನ ಸೈನ್ಯವನ್ನು ಪ್ರವೇಶಿಸಿದರು.
ಜಲದನಿನದನಿಃಸ್ವನಂ ರಥಂ
ಪವನವಿಧೂತಪತಾಕಕೇತನಮ್ |
ಸಿತಹಯಮುಪಯಾಂತಮಂತಿಕಂ
ಹೃತಮನಸೋ ದದೃಶುಸ್ತದಾಽರಯಃ ॥14॥
ಮೋಡದ ಗುಡುಗಿನಂಥ ಧ್ವನಿ ಮತ್ತು ಗಾಳಿಗೆ ಹಾರಾಡುವ ಪತಾಕೆ ಧ್ವಜಗಳುಳ್ಳ ಬಿಳಿಕುದುರೆ ಕಟ್ಟಿದ ಅರ್ಜುನನ ರಥ ಹತ್ತಿರಕ್ಕೆ ಬರುತ್ತಿದ್ದಂತೆ ಶತ್ರುಗಳು ಅಧೀರರಾಗಿ ನೋಡಿದರು.
ಅಥ ವಿಷ್ಫಾರ್ಯ ಗಾಂಡೀವಂ ರಥೇ ನೃತ್ಯನ್ನಿವಾರ್ಜುನಃ |
ಶರಸಂಬಾಧಮಕರೋತ್ ಖಂ ದಿಶಃ ಪ್ರದಿಶಸ್ತಥಾ ॥15॥
ಅರ್ಜುನನು ರಥದಲ್ಲಿ ಗಾಂಡೀವವನ್ನು ಠೇಂಕರಿಸಿ ತಾನು ಸ್ವತಃ ಕುಣಿಯುವಂತೆ ಕಾಣಿಸಿಕೊಳ್ಳುತ್ತ, ಅಂತರಿಕ್ಷ ದಿಕ್ಕು ವಿದಿಕ್ಕುಗಳನ್ನೆಲ್ಲ ದಟ್ಟವಾಗಿ ಬಾಣಗಳಿಂದ ತುಂಬಿಸಿದ.
ರಥಾನ್ ವಿಮಾನಪ್ರತಿಮಾನ್ ಸಹಯಾನ್ ಸಾಯುಧಧ್ವಜಾನ್ |
ಸಸಾರಥೀಂಸ್ತದಾ ಬಾಣೈರಭ್ರಾಣೀವಾನಿಲೋಽವಧೀತ್ ॥16॥
ಅರ್ಜುನನು ಬಾಣಗಳಿಂದ ಶತ್ರುಗಳ ರಥಗಳನ್ನು ಕುದುರೆ ಆಯುಧ ಧ್ವಜ ಸಾರಥಿಗಳೊಂದಿಗೆ ವಿಮಾನಗಳಂತೆ ಮೇಲೆ ಹಾರಿಸಿ, ಹಾರುವ ಮೋಡಗಳನ್ನು ಗಾಳಿಯು ನಾಶಮಾಡುವಂತೆ, ನಾಶಗೊಳಿಸಿದ.

ಗಜಾನ್ ಗಜನಿಯಂತೄಂಶ್ಚ ವೈಜಯಂತೀಶುಭಧ್ವಜಾನ್ |
ಸಾದಿನೋಽಶ್ವಾಂಶ್ಚ ಪತ್ತೀಂಶ್ಚ ಶರೈರ್ನಿನ್ಯೇ ಯಮಕ್ಷಯಮ್ ||17||
ಅರ್ಜುನನು ಗಜಗಳನ್ನು ಗಜಾರೋಹಿಗಳೊಂದಿಗೆ ಮತ್ತು ಪತಾಕೆಗಳಿಂದ ಶುಭಕರವಾದ ಧ್ವಜಗಳೊಂದಿಗೆ, ಅಶ್ವಗಳನ್ನು ಅಶ್ವಾರೋಹಿಗಳೊಂದಿಗೆ ಮತ್ತು ಪದಾತಿಗಳನ್ನೂ ಕೂಡ ಯಮಸದನಕ್ಕೆ ಅಟ್ಟಿದ.
ತಮಂತಕಮಿವ ಕ್ರುದ್ಧಮನಿವಾರ್ಯಂ ಮಹಾರಥಮ್ |
ದುರ್ಯೋಧನೋಭ್ಯಯಾದೇಕೋ ನಿಘ್ನನ್ ಬಾಣೈರಜಿಹ್ಮಗೈಃ ||18||
ಯಮನಂತೆ ಕ್ರುದ್ಧನಾದ, ಯಾರಿಗೂ ತಡೆಯಲಾಗದ ಮಹಾರಥನಾದ ಅರ್ಜುನನನ್ನು ದುರ್ಯೋಧನನೊಬ್ಬನೇ ನೇರವಾಗಿ ಹೋಗುವ ಬಾಣಗಳಿಂದ ಹೊಡೆಯುತ್ತ ಇದಿರಿಸಿದ.
ತಸ್ಯಾರ್ಜುನೋ ಧನುಃ ಸೂತಮಶ್ವಾನ್ ಕೇತುಂ ಚ ಸಾಯಕೈಃ |
ಹತ್ವಾ ಸಪ್ತಭಿರೇಕೇನ ಚ್ಛತ್ರಂ ಚಿಚ್ಛೇದ ಪತ್ರಿಣಾ ||19||
ಅರ್ಜುನನು ದುರ್ಯೋಧನನ ಬಿಲ್ಲು ಸಾರಥಿ ಕುದುರೆ ಧ್ವಜಗಳನ್ನು ಏಳುಬಾಣಗಳಿಂದ ವಧಿಸಿದ ಮತ್ತು ಛತ್ರವನ್ನು ಒಂದು ಬಾಣದಿಂದ ಛೇದಿಸಿದ.
ನವಮಂ ಚ ಸಮಾಧಾಯ ವ್ಯಸೃಜತ್ ಪ್ರಾಣಘಾತಿನಮ್ |
ದುರ್ಯೋಧನಾಯೇಷುವರಂ ತಂ ದ್ರೌಣಿಃ ಸಪ್ತಧಾಽಚ್ಛಿನತ್ ||20||
ಪ್ರಾಣಾಂತಕವಾದ ಒಂಬತ್ತನೇ ಬಾಣವನ್ನು ಹೂಡಿ ಅರ್ಜುನ ದುರ್ಯೋಧನನ ಮೇಲೆಸೆದ. ಅದನ್ನು ಅಶ್ವತ್ಥಾಮ ಏಳು ಚೂರಾಗಿ ಕತ್ತರಿಸಿದ.
ತತೋ ದ್ರೌಣೇರ್ಧನುಶ್ಛಿತ್ವಾ ಹತ್ವಾ ಚಾಶ್ವರಥಾನ್ ಶರೈಃ |
ಕೃಪಸ್ಯಾಪಿ ತದತ್ಯುಗ್ರಂ ಧನುಶ್ಚಿಚ್ಛೇದ ಪಾಂಡವಃ ||21||
ಅರ್ಜುನನು ಬಾಣಗಳಿಂದ ಅಶ್ವತ್ಥಾಮನ ಬಿಲ್ಲನ್ನು ಕಡಿದು ಅಶ್ವರಥಗಳನ್ನೂ ವಧಿಸಿ ಕೃಪನ ಅತಿಉಗ್ರವಾದ ಬಿಲ್ಲನ್ನೂ ಕಡಿದ.
ಹಾರ್ದಿಕ್ಯಸ್ಯ ಧನುಶ್ಛಿತ್ತ್ವ ಧ್ವಜಂ ಚಾಶ್ವಾಂಸ್ತದಾಽವಧೀತ್ |
ದುಃಶಾಸನಸ್ಯೇಷ್ವಸನಂ ಛಿತ್ತ್ವ ರಾಧೇಯಮಭ್ಯಯಾತ್ ||22||
ಅರ್ಜುನನು ಕೃತವರ್ಮನ ಬಿಲ್ಲನ್ನೂ ಕಡಿದು ಧ್ವಜವನ್ನು ಅಶ್ವಗಳನ್ನು ವಧಿಸಿದ. ದುಃಶಾಸನನ ಬಿಲ್ಲನ್ನೂ ಕಡಿದು ಕರ್ಣನನ್ನೂ ಇದಿರಿಸಿದ.
ಅಥ ಸಾತ್ಯಕಿಮುತ್ಸೃಜ್ಯ ತ್ವರನ್ ಕರ್ಣೋರ್ಜುನಂ ತ್ರಿಭಿಃ |
ವಿದ್ಧ್ವಾ ವಿವ್ಯಾಧ ವಿಂಶತ್ಯಾ ಕೃಷ್ಣಂ ಪಾರ್ಥಂ ಪುನಃ ಪುನಃ ||23||
ಕರ್ಣನು ಸಾತ್ಯಕಿಯನ್ನು ಬಿಟ್ಟು ಬೇಗನೆ ಅರ್ಜುನನನ್ನು ಮೂರು ಬಾಣಗಳಿಂದ ಹೊಡೆದು, ಇಪ್ಪತ್ತು ಬಾಣಗಳಿಂದ ಕೃಷ್ಣನನ್ನೂ ಅರ್ಜುನನನ್ನೂ ಪುನಃ ಪುನಃ ಹೊಡೆದ.
ನ ಗ್ಲಾನಿರಾಸೀತ್ ಕರ್ಣಸ್ಯ ಕ್ಷಿಪತಃ ಸಾಯಕಾನ್ ಬಹೂನ್ |
ರಣೇ ವಿನಿಘ್ನತಃ ಶತ್ರೂನ್ ಕ್ರುದ್ಧಸ್ಯೇವ ಶತಕ್ರತೋಃ ||24||
ಬಹಳ ಬಾಣಗಳನ್ನು ಎಸೆದರೂ, ರಣದಲ್ಲಿ ಶತ್ರುಗಳನ್ನು ವಧಿಸಿದರೂ, ಕ್ರುದ್ಧನಾದ ಇಂದ್ರನಂತೆ, ಕ್ರುದ್ಧನಾದ ಕರ್ಣನಿಗೂ ನಿರುತ್ಸಾಹ ಉಂಟಾಗಲಿಲ್ಲ.
ಅಥ ಸಾತ್ಯಕಿರಾಗತ್ಯ ಕರ್ಣಂ ವಿದ್ಧ್ವಾ ಶಿತೈಃ ಶರೈಃ |
ನವತ್ಯಾ ನವಭಿಶ್ಚೋಗ್ರೈಃ ಶತೇನ ಪುನರಾರ್ಪಯತ್ ||25||
ಬಳಿಕ ಸಾತ್ಯಕಿ ಬಂದು ತೀಕ್ಷ್ಣವಾದ ತೊಂಬತ್ತೊಂಬತ್ತು ಬಾಣಗಳಿಂದ ಕರ್ಣನನ್ನು ಹೊಡೆದು ಪುನಃ ನೂರು ಬಾಣಗಳನ್ನು ಎಸೆದ.
ತತಃ ಪ್ರವೀರಾಃ ಪಾರ್ಥಾನಾಂ ಸರ್ವೇ ಕರ್ಣಮಪೀಡಯನ್ |
ಯುಧಾಮನ್ಯುಃ ಶಿಖಂಡೀ ಚ ದ್ರೌಪದೇಯಾಃ ಪ್ರಭದ್ರಕಾಃ ||26||
ಯುಧಾಮನ್ಯು ಶಿಖಂಡಿ ದ್ರೌಪದೀಪುತ್ರರು ಪ್ರಭದ್ರಕರು ಮುಂತಾದ ಪಾಂಡವರ ವೀರರು ಎಲ್ಲರೂ ಕರ್ಣನನ್ನು ಪೀಡಿಸಿದರು.
ಉತ್ತಮೌಜಾ ಯುಯುತ್ಸುಶ್ಚ ಯಮೌ ಪಾರ್ಷತ ಏವ ಚ |
ಚೇದಿಕಾರೂಶಮಾತ್ಸ್ಯಾನಾಂ ಕೈಕಯಾನಾಂ ಚ ತದ್ ಬಲಮ್ ||27||
ಉತ್ತಮೌಜ ಯುಯುತ್ಸು ನಕುಲ ಸಹದೇವ ಧೃಷ್ಟದ್ಯುಮ್ನರು ಚೇದಿ ಕರೂಶ ಮತ್ಸ್ಯ ಕೇಕಯರ ಸೈನ್ಯಗಳನ್ನು ಪೀಡಿಸಿದರು.
ಚೇಕಿತಾನಶ್ಚ ಬಲವಾನ್ ಧರ್ಮರಾಜಶ್ಚ ಸುವ್ರತಃ |
ಏತೇ ರಥಾಶ್ವದ್ವಿರದೈಃ ಪತ್ತಿಭಿಶ್ಚೋಗ್ರವಿಕ್ರಮೈಃ ||28||
ಪರಿವಾರ್ಯ ರಣೇ ಕರ್ಣಂ ನಾನಾಶಸ್ತ್ರೈರವಾಕಿರನ್ |
ಭಾಷಂತೋ ವಾಗ್ಭಿರುಗ್ರಾಭಿಃ ಸರ್ವೇ ಕರ್ಣವಧೇ ಧೃತಾಃ ||29||
ಬಲಿಷ್ಠನಾದ ಚೇಕಿತಾನ ವ್ರತನಿಷ್ಠನಾದ ಧರ್ಮರಾಜ ಮತ್ತು ಎಲ್ಲ ವೀರರೂ ಉಗ್ರಪರಾಕ್ರಮಿಗಳಾದ ರಥ ಅಶ್ವ ಗಜ ಪದಾತಿಗಳೊಂದಿಗೆ ಕರ್ಣನನ್ನು ಸುತ್ತುವರಿದು ರಣದಲ್ಲಿ ನಾನಾ ಶಸ್ತ್ರಗಳಿಂದ ಹೊಡೆದರು. ಕರ್ಣನ ವಧೆಯಲ್ಲಿ ಮನಸ್ಸಿಟ್ಟು ಉಗ್ರಮಾತುಗಳಿಂದ ಆಕ್ಷೇಪಿಸಿ ನುಡಿದರು.
ತಾಂ ಶಸ್ತ್ರವೃಷ್ಟಿಂ ಬಹುಧಾ ಕರ್ಣಶ್ಛಿತ್ತ್ವ ಶಿತೈಃ ಶರೈಃ |
ಅಪೋವಾಹಾಸ್ತ್ರವೀರ್ಯೇಣ ದ್ರುಮಂ ಭಂಕ್ತ್ವೇವ ಮಾರುತಃ ||30||
ಆ ಶಸ್ತ್ರಗಳ ಮಳೆಯನ್ನು ಕರ್ಣನು ಹರಿತವಾದ ಬಾಣಗಳಿಂದ ಬಹುವಾಗಿ ಛೇದಿಸಿ, ಬಿರುಗಾಳಿ ಮರವನ್ನು ಮುರಿದು ಕೆಡೆಯುವಂತೆ,

ಅಸ್ತ್ರಬಲದಿಂದ ನಾಶಮಾಡಿದ.
ರಥಿನಸ್ತು ಮಹಾಮಾತ್ರಾನ್ ಗಜಾನಶ್ವಾನ್ ಸಸಾದಿನಃ |
ಪತ್ತಿವ್ರಾತಾಂಶ್ಚ ಸಂಕ್ರುದ್ಧೋ ನಿಘ್ನನ್ ಕರ್ಣೋ ವ್ಯದೃಶ್ಯತ ॥31॥
ರಥಿಕರನ್ನೂ ಗಜಾರೋಹಿಗಳನ್ನೂ ಗಜಗಳನ್ನೂ ಅಶ್ವಗಳನ್ನೂ ಅಶ್ವಾರೋಹಿ ಗಳನ್ನೂ ಪದಾತಿ ಸಮೂಹಗಳನ್ನೂ ಕ್ರುದ್ಧನಾದ ಕರ್ಣನು ವಧಿಸುತ್ತ ಪ್ರೇಕ್ಷಣೀಯ ನಾದ.
ತದ್ವಧ್ಯಮಾನಂ ಪಾಂಡೂನಾಂ ಬಲಂ ಕರ್ಣಾಸ್ತ್ರತೇಜಸಾ |
ವಿಶಸ್ತ್ರಕ್ಷತದೇಹಂ ಚ ಪ್ರಾಯ ಆಸೀತ್ ಪರಾಙ್ಮುಖಮ್ ॥32॥
ಕರ್ಣನ ಅಸ್ತ್ರಬಲದಿಂದ ವಧಿಸಲ್ಪಡುತ್ತ ಪಾಂಡವಸೈನ್ಯವು ವಿವಿಧ ಶಸ್ತ್ರಗಳಿಂದ ಶರೀರದಲ್ಲಿ ಗಾಯಗೊಂಡು ಪ್ರಾಯಃ ಪಲಾಯನಕ್ಕೇ ತೊಡಗಿತು.
ಅಥ ಕರ್ಣಾಸ್ತ್ರಮಸ್ತ್ರೇಣ ಪ್ರತಿಹತ್ಯಾರ್ಜುನಃ ಸ್ಮಯನ್ |
ದಿಶಂ ಖಂ ಚೈವ ಭೂಮಿಂ ಚ ಪ್ರಾವೃಣೋಚ್ಛರವೃಷ್ಟಿಭಿಃ ॥33॥
ಅರ್ಜುನನು ನಸುನಕ್ಕು ಕರ್ಣನ ಅಸ್ತ್ರವನ್ನು ಅಸ್ತ್ರದಿಂದ ತಡೆದು ದಿಕ್ಕುಗಳನ್ನೂ ಅಂತರಿಕ್ಷವನ್ನೂ ಭೂಮಿಯನ್ನೂ ಬಾಣಗಳ ಮಳೆಗಳಿಂದ ಮುಚ್ಚಿದ.
ಮುಸಲಾನೀವ ಸಂಪೇತುಃ ಪರಿಘಾ ಇವ ಚೇಷವಃ |
ಶತಘ್ನ್ಯ ಇವ ಚಾಪ್ಯನ್ಯೇ ವಜ್ರಾಣ್ಯುಗ್ರಾಣಿ ಚಾಪರೇ ॥34॥
ಅರ್ಜುನನ ಬಾಣಗಳು ಕೆಲವು ಮುಸಲಗಳಂತೆ, ಪರಿಘಗಳಂತೆ, ಇನ್ನೂ ಕೆಲವು ಶತಘ್ನಿಗಳಂತೆ, ಉಗ್ರವಾದ ವಜ್ರಾಯುಧಗಳಂತೆ ಶತ್ರುಗಳ ಮೇಲೆ ಬಿದ್ದುವು.
ತೈರ್ವಧ್ಯಮಾನಂ ತತ್ಸೈನ್ಯಂ ಸಪತ್ತ್ಯಶ್ವರಥದ್ವಿಪಮ್ |
ನಿಮೀಲಿತಾಕ್ಷಮತ್ಯರ್ಥಂ ಬಭ್ರಾಮ ಚ ನನಾದ ಚ ॥35॥
ಆ ಬಾಣಗಳಿಂದ ಪದಾತಿ ಅಶ್ವ ರಥ ಗಜಗಳೊಂದಿಗೆ ಆ ಸೈನ್ಯವು ಹೊಡೆಸಿಕೊಳ್ಳುತ್ತ ಕಣ್ಣುಮುಚ್ಚಿ ಬುದ್ಧಿಭ್ರಮಣ ಹೊಂದಿ ಬಹಳ ಕೂಗಿಕೊಂಡಿತು.
ನಿಷ್ಕೈವಲ್ಯಂ ತದಾ ಯುದ್ಧಂ ಪ್ರಾಪುರಶ್ವನರದ್ವಿಪಾಃ |
ಹನ್ಯಮಾನಾಃ ಶರೈರಾರ್ತಾಸ್ತದಾ ಭೀತಾಃ ಪ್ರದುದ್ರುವುಃ ॥36॥
ಅಶ್ವ ಪದಾತಿ ಗಜಗಳು `ನಿಷ್ಕೈವಲ್ಯ'ಯುದ್ಧವನ್ನು ಕೈಗೊಂಡವು. ಅಂದರೆ ಅವಿರತವಾಗಿ ಹೊಡೆಸಿಕೊಂಡವು. ಬಾಣಗಳಿಂದ ಪೀಡಿತರಾಗಿ ಭಯದಿಂದ ಪಲಾಯನಗೈದವು.
`ನಿಷ್ಕೈವಲ್ಯವಾದ ಯುದ್ಧ' ಅಂದರೆ, ಕೈವಲ್ಯ, ಯುದ್ಧವಿಲ್ಲದ ಕ್ಷಣ. ಅದು ಒಂದೂ ಇಲ್ಲದ ಅವಿರತವಾದ ಯುದ್ಧ.
ತ್ವದೀಯಾನಾಂ ತದಾ ಯುದ್ಧೇ ಸಂಸಕ್ತಾನಾಂ ಜಯೈಷಿಣಾಮ್ |
ಗಿರಿಮಸ್ತಂ ಸಮಾಸಾದ್ಯ ಪ್ರತ್ಯಪದ್ಯತ ಭಾನುಮಾನ್ ॥37॥
ಜಯದಾಸೆಯಿಂದ ಯುದ್ಧದಲ್ಲಿ ನಿನ್ನ ಸೈನಿಕರು ಆಸಕ್ತರಾಗಿರುವಾಗಲೇ ಸೂರ್ಯನು ಅಸ್ತಾಚಲವನ್ನು ಸೇರಿದ.
ತಮಸಾ ಚ ಮಹಾರಾಜ ರಜಸಾ ಚ ವಿಶೇಷತಃ |
ನ ಕಿಂಚಿತ್ ಪ್ರತ್ಯಪಶ್ಯಾಮ ಶುಭಂ ವಾ ಯದಿ ವಾಽಶುಭಮ್ ॥37॥
ಮಹಾರಾಜ, ಕತ್ತಲಿನಿಂದಲೂ, ವಿಶೇಷವಾಗಿ ಧೂಳಿನಿಂದಲೂ ಶುಭವಾಗಲಿ ಅಶುಭವಾಗಲಿ ಒಂದೂ ಕೂಡ ನಮಗೆ ಕಾಣಿಸದಾಯಿತು.
ತೇ ತ್ರಸ್ಯಂತೋ ಮಹೇಷ್ವಾಸಾ ರಾತ್ರಿಯುದ್ಧಸ್ಯ ಭಾರತ |
ಅಪಯಾನಂ ತತಶ್ಚಕ್ರುಃ ಸಹಿತಾಃ ಸರ್ವಯೋಧಿಭಿಃ ॥38॥
ರಾಜನೆ, ಮಹಾಬಿಲ್ಲಾಳುಗಳು ರಾತ್ರಿಯುದ್ಧಕ್ಕೆ ಹೆದರಿ, ಎಲ್ಲ ಯೋಧ ರೊಂದಿಗೆ ಶಿಬಿರಗಳಿಗೆ ಹಿಂತಿರುಗಿದರು.
ಕೌರವೇಷ್ವಪಯಾತೇಷು ತದಾ ರಾಜನ್ ದಿನಕ್ಷಯೇ |
ಜಯಂ ಸುಮನಸಃ ಪ್ರಾಪ್ಯ ಪಾರ್ಥಾಃ ಸ್ವಶಿಬಿರಂ ಯಯುಃ ॥39॥
ರಾಜನೆ, ಹಗಲಿನ ಕೊನೆಯಲ್ಲಿ ಕೌರವರು ಹಿಂತಿರುಗಿದಾಗ, ಜಯ ಸಂಪಾದಿಸಿ ಹರ್ಷಚಿತ್ತರಾದ ಪಾಂಡವರು ತಮ್ಮ ಶಿಬಿರಗಳಿಗೆ ಹೋದರು.
ವಾದಿತ್ರಶಬ್ದೈರ್ವಿವಿಧೈಃ ಸಿಂಹನಾದೈಃ ಸಗರ್ಜಿತೈಃ |
ಪರಾನುಪಹಸಂತಶ್ಚ ಸ್ತುವಂತಶ್ಚಾಚ್ಯುತಾರ್ಜುನೌ ॥40॥
ನಾನಾ ವಾದ್ಯಘೋಷ ಸಿಂಹನಾದ ಗರ್ಜನೆಗಳಿಂದ ಶತ್ರುಗಳನ್ನು ಅಪಹಾಸಗೈಯುತ್ತ , ಕೃಷ್ಣಾರ್ಜುನರನ್ನು ಹೊಗಳುತ್ತ ಶಿಬಿರಗಳನ್ನು ಸೇರಿದರು.
ಕೃತೇಽವಹಾರೇ ತೈರ್ವೀರೈಃ ಸೈನಿಕಾಃ ಸರ್ವ ಏವ ತೇ |
ಆಶೀರ್ವಾಚಃ ಪಾಂಡವೇಷು ಪ್ರಾಯುಂಜಂತ ನರೇಶ್ವರಾಃ ॥41॥
ವೀರಪಾಂಡವರು ಸೈನ್ಯವನ್ನು ಹಿಂದಕ್ಕೆ ಕರೆಸಿಕೊಂಡಾಗ ನಿನ್ನ ಸೈನಿಕರೆಲ್ಲರೂ ರಾಜರೂ ಕೂಡ ಪಾಂಡವರನ್ನು ಹರಸಿದರು.
ತತಃ ಕೃತೇಽವಹಾರೇ ಚ ಪ್ರಹೃಷ್ಟಾಸ್ತತ್ರ ಪಾಂಡವಾಃ |
ನಿಶಾಯಾಂ ಶಿಬಿರಂ ಗತ್ವಾ ನ್ಯವಸಂತ ನರೇಶ್ವರಾಃ ॥42॥
ಪಾಂಡವರ ಕಡೆಯವರು ಸೈನ್ಯವನ್ನು ಹಿಂದಕ್ಕೆ ಕರೆಸಿಕೊಂಡು ಹರ್ಷಗೊಂಡು ಶಿಬಿರವನ್ನು ಸೇರಿ ರಾತ್ರಿಯಲ್ಲಿ ಸುಖವಾಗಿ

ವಾಸಮಾಡಿದರು.
ತತೋ ರಕ್ಷಃಪಿಶಾಚಾಶ್ಚ ಶ್ವಾಪದಾಶ್ಚೈವ ಸಂಘಶಃ |
ಜಗ್ಮುರಾಯೋಧನಂ ಘೋರಂ ರುದ್ರಸ್ಯಾಕ್ರೀಡಸನ್ನಿಭಮ್ ॥43॥
ರಾಕ್ಷಸ ಪಿಶಾಚಗಳೂ ಹಿಂಸ್ರಪ್ರಾಣಿಗಳೂ ಗುಂಪುಗುಂಪಾಗಿ ರುದ್ರವಿಹಾರ ಸ್ಥಳವಾದ ಸ್ಮಶಾನದಂತೆ ಭೀಕರವಾದ ರಣಭೂಮಿಯನ್ನು ಪ್ರವೇಶಿಸಿದುವು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ತ್ರಿಂಶೋಽಧ್ಯಾಯಃ ॥30॥

ಮಹಾಭಾರತತಾತ್ಪರ್ಯನಿರ್ಣಯ
ಪರಾಜಿತಃ ಸಂಯತಿ ಸೂರ್ಯಸೂನುಃ
ಸುತೇನ ಶಕ್ರಸ್ಯ ಸ ಧಾರ್ತರಾಷ್ಟ್ರಮ್ |
ಜಗಾದ ಬಾಹುಂ ಪ್ರತಿಗೃಹ್ಯ ಪಾರ್ಥೋ
ಜಿಗಾಯ ಮಾಮನ್ಯಮನಸ್ಕಮಾಜೌ ॥23॥
ಕಾಮಂ ರಥೋ ಮೇ ಧನುರಪ್ಯಭೇದ್ಯಂ
ದತ್ತಂ ಭೃಗೂಣಾಮಧಿಪೇನ ದಿವ್ಯಮ್ |
ಯಂತಾ ನ ತಾದೃಙ್ ಮಮ ಯಾದೃಶೋ ಹರಿಃ
ಶಲ್ಯೋ ಯದಿ ಸ್ಯಾತ್ ತ್ವದರಿಂ ನಿಹನ್ಯಾಮ್ ॥24॥
ಯುದ್ಧದಲ್ಲಿ ಅರ್ಜುನನಿಂದ ಪರಾಜಿತನಾದ ಕರ್ಣ ದುರ್ಯೋಧನನ ಕೈಹಿಡಿದು ಹೇಳಿದ, `ನನ್ನ ಲಕ್ಷ್ಯ ಬೇರೆ ಕಡೆ ಇದ್ದಾಗ ಅರ್ಜುನ ನನ್ನನ್ನು ಪರಾಭವಗೊಳಿಸಿದ. ಪರಶುರಾಮ ನನಗೆ ಯಥೇಚ್ಛವಾಗಿ ರಥವನ್ನೂ ದಿವ್ಯವೂ ಅಭೇದ್ಯವೂ ಆದ ಧನುಸ್ಸನ್ನೂ ಕೊಟ್ಟಿದ್ದಾನೆ. ಆದರೂ ನನಗೆ ಕೃಷ್ಣನಂಥ ಸಾರಥಿ ಇಲ್ಲ. ಶಲ್ಯ ನನಗೆ ಸಾರಥಿಯಾದರೆ ನಾನು ನಿನ್ನ ಶತ್ರುವನ್ನು ನಿಶ್ಚಯವಾಗಿ ಕೊಲ್ಲಬಲ್ಲೆ.'

ಮೂವತ್ತೊಂದನೆಯ ಅಧ್ಯಾಯ
ಶಲ್ಯಸಾರಥ್ಯಕ್ಕೆ ಕರ್ಣನ ಒತ್ತಾಯ.
ಧೃತರಾಷ್ಟ್ರಃ
ಸ್ವೇನ ಚ್ಛಂದೇನ ನಃ ಸರ್ವಾನವಧೀದ್ವ್ಯಕ್ತಮರ್ಜುನಃ |
ನ ಹ್ಯಸ್ಯ ಸಮರೇ ಮುಚ್ಯೇದಂತಕೋಽಪ್ಯಾತತಾಯಿನಃ ॥1॥
ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ– ಅರ್ಜುನನು ಸ್ವಚ್ಛಂದವಾಗಿ ನಮ್ಮ ಎಲ್ಲ ಸೈನಿಕರನ್ನೂ ವ್ಯಕ್ತವಾಗಿ ಸಂಹರಿಸಿದ. ಅರ್ಜುನ ಶಸ್ತ್ರಹಿಡಿದು ಇದಿರಿಗೆ ಬಂದರೆ ಯುದ್ಧದಲ್ಲಿ ಅವನಿಂದ ಯಮನೂ ತಪ್ಪಿಸಿಕೊಳ್ಳಲಾರ.
ಪಾರ್ಥೋ ಹ್ಯೇಕೋಽಹರದ್ ಭದ್ರಾಮೇಕಶ್ಚಾಗ್ನಿಮತರ್ಪಯತ್ |
ಏಕಶ್ಚೇಮಾಂ ಮಹೀಂ ಜಿತ್ವಾ ಚಕ್ರೇ ಬಲಿಭೃತೋ ನೃಪಾನ್ ॥2॥
ಅರ್ಜುನ ಏಕಾಕಿಯಾಗಿ ಸುಭದ್ರೆಯನ್ನು ಹರಣ ಮಾಡಿದ. ಒಬ್ಬನೇ ಖಾಂಡವದಲ್ಲಿ ಅಗ್ನಿಯನ್ನು ತೃಪ್ತಿಪಡಿಸಿದ. ಒಬ್ಬನೇ ಭೂಮಿಯನ್ನು ಗೆದ್ದು ರಾಜರನ್ನು ಯುಧಿಷ್ಠಿರನಿಗೆ ಕಪ್ಪಕೊಡುವಂತೆ ಮಾಡಿದ.
ಏಕೋ ನಿವಾತಕವಚಾನ್ ಅಹನದ್ ದಿವ್ಯಕಾರ್ಮುಕಃ |
ಏಕಃ ಕಿರಾತರೂಪೇಣ ಸ್ಥಿತಂ ಶರ್ವಮಯೋಧಯತ್ ॥3॥
ಅರ್ಜುನ ದಿವ್ಯಧನುಸ್ಸನ್ನು ಹಿಡಿದು ಏಕಾಕಿಯಾಗಿ ನಿವಾತಕವಚರನ್ನು
ವಧಿಸಿದ. ಒಬ್ಬನೇ ಕಿರಾತರೂಪದಿಂದ ನಿಂತ ಈಶ್ವರನೊಡನೆ ಯುದ್ಧ ಮಾಡಿದ.
ಏಕೋ ಹ್ಯರಕ್ಷದ್ ಭರತಾನೇಕೋ ಭವಮತೋಷಯತ್ |
ತೇನೈಕೇನ ಜಿತಾಃ ಸರ್ವೇ ಮದೀಯಾ ಹ್ಯುಗ್ರತೇಜಸಃ ॥4॥
ಅರ್ಜುನನೊಬ್ಬನೇ ಘೋಷಯಾತ್ರೆಯಲ್ಲಿ ಕೌರವರನ್ನು ಗಂಧರ್ವರಿಂದ ರಕ್ಷಿಸಿದ. ಒಬ್ಬನೇ ಯುದ್ಧದಿಂದ ಈಶ್ವರನನ್ನು ಸಂತೋಷಗೊಳಿಸಿದ. ಅವನೇ ಈಗ ಉಗ್ರಪರಾಕ್ರಮದಿಂದ ಒಬ್ಬನೇ ನನ್ನವರೆಲ್ಲರನ್ನೂ ಪರಾಭವಗೊಳಿಸಿದ್ದಾನೆ.
ನ ತೇ ನಿಂದ್ಯಾಃ ಪ್ರಶಸ್ಯಾಸ್ತೇ ಯತ್ತೇ ಚಕ್ರುರ್ಬ್ರವೀಹಿ ತತ್ |
ತತೋ ದುರ್ಯೋಧನಃ ಸೂತ ಪಶ್ಚಾತ್ ಕಿಮಕರೋತ್ ತದಾ ॥5॥
ಅದರಿಂದ ನನ್ನವರನ್ನು ಕೈಲಾಗದವರೆಂದು ನಿಂದಿಸುವಂತಿಲ್ಲ. ಮುಂದೆ ಅವರೇನು ಮಾಡಿದರು ಹೇಳು, ಸಂಜಯ, ಬಳಿಕ ದುರ್ಯೋಧನನೇನು ಮಾಡಿದ?
ಸಂಜಯಃ
ಹತಪ್ರವೀರಾ ವಿಧ್ವಸ್ತಾ ವಿವರ್ಮಾಯುಧವಾಹನಾಃ |
ದೀನಸ್ವರಾ ದೂಯಮಾನಾ ಮಾನಿನಃ ಶತ್ರುನಿರ್ಜಿತಾಃ ॥6॥
ಶಿಬಿರಸ್ಥಾಃ ಪುನರ್ಮಂತ್ರಂ ಮಂತ್ರಯಂತಿ ಸ್ಮ ಕೌರವಾಃ |
ಭಗ್ನದಂಷ್ಟ್ರಾ ಹತವಿಷಾಃ ಪಾದಾಕ್ರಾಂತಾ ಇವೋರಗಾಃ ॥7॥

ಸಂಜಯ ನುಡಿದ– ಅಭಿಮಾನಿಗಳಾದ ಕೌರವರು ಶತ್ರುಗಳಿಗೆ ಸೋತು ತಮ್ಮ ವೀರಯೋಧರನ್ನು ಕಳೆದುಕೊಂಡು, ಕವಚ ಆಯುಧ ವಾಹನರಹಿತರಾಗಿ ದುಃಖಿತರಾದರು. ಹಲ್ಲುಕಿತ್ತು ವಿಷರಹಿತವಾಗಿ ಮಾಡಿ ಕಾಲಿಂದ ತುಳಿದ ಹಾವುಗಳಂತಾದರು. ಶಿಬಿರದಲ್ಲಿ ಕುಳಿತು ಪುನಃ ಮಂತ್ರಾಲೋಚನೆಗೈದರು.
ತಾನಬ್ರುವೀತ್ ತತಃ ಕರ್ಣಃ ಕ್ರುದ್ಧಃ ಸರ್ಪ ಇವ ಶ್ವಸನ್ |
ಕರಂ ಕರೇಣ ನಿಷ್ಪೀಡ್ಯ ಪ್ರೇಕ್ಷಮಾಣಸ್ತವಾತ್ಮಜಮ್ ॥8॥
ಕರ್ಣನು ಕ್ರುದ್ಧನಾಗಿ ಕ್ರುದ್ಧವಾದ ಸರ್ಪದಂತೆ ಭುಸುಗುಟ್ಟುತ್ತ ಕೈಕೈ ಹಿಸುಕಿಕೊಂಡು ದುರ್ಯೋಧನನನ್ನು ನೋಡುತ್ತ ಅವರ ಮುಂದೆ ನುಡಿದ.
ಯತ್ತೋ ದೃಢಶ್ಚ ದಕ್ಷಶ್ಚ ಧೃತಿಮಾನರ್ಜುನಃ ಸದಾ |
ಸಂಬೋಧಯತಿ ಚಾಪ್ಯೇನಂ ಯಥಾಕಾಲಮಧೋಕ್ಷಜಃ ॥9॥
ಅರ್ಜುನ ಯತ್ನಶೀಲ, ದೃಢ, ದಕ್ಷ, ಧೈರ್ಯಶಾಲಿಯೂ ಆಗಿದ್ದಾನೆ. ಜೊತೆಗೆ ಕೃಷ್ಣ ಅವನಿಗೆ ಸಮಯೋಚಿತವಾಗಿ ಯೋಗ್ಯ ಸಲಹೆಯನ್ನೂ ಕೊಡುತ್ತಾನೆ.
ಸಹಸಾಽಸ್ತ್ರವಿಸರ್ಗೇಣ ಕಥಂ ತೇನಾದ್ಯ ವಂಚಿತಾಃ |
ಶ್ವಸ್ತ್ವಹಂ ತಸ್ಯ ಸಂಕಲ್ಪಂ ಸರ್ವಂ ಹಂತಾ ಮಹೀಪತೇ ॥10॥
ಅಕಸ್ಮಾತ್ ಅಸ್ತ್ರಪ್ರಯೋಗದಿಂದ ಹೇಗೋ ಅವನು ಇಂದು ನಮ್ಮನ್ನು ಜಯದಿಂದ ವಂಚಿಸಿದ್ದಾನೆ. ರಾಜನೆ, ನಾಳೆ ಮಾತ್ರ ನಾನು ಅವನ ಎಲ್ಲ ಸಂಕಲ್ಪವನ್ನು ನಿರರ್ಥಗೊಳಿಸುತ್ತೇನೆ.
ಏವಮುಕ್ತಸ್ತಥೇತ್ಯುಕತ್ವ ಸೋಽನುಜಜ್ಞೇ ನೃಪೋತ್ತಮಾನ್ |
ತೇಽನುಜ್ಞಾತಾ ನೃಪಾಃ ಸರ್ವೇ ಸ್ವಾನಿ ವೇಶ್ಮಾನಿ ಭೇಜಿರೇ ॥11॥
ಕರ್ಣ ಹೀಗೆ ಹೇಳಿ ರಾಜರನ್ನು ತಮ್ಮ ನಿವಾಸಗಳಿಗೆ ಹೋಗಲು ಅನುಮತಿ ನೀಡಿದ. ಅವರು ಹೊರಟುಹೋದರು.
ಸುಖೋಷಿತಾಸ್ತಾಂ ರಜನೀಂ ಹೃಷ್ಟಾ ಯುದ್ಧಾಯ ನಿರ್ಯಯುಃ |
ತೇಽಪಶ್ಯನ್ ವಿಹಿತಂ ವ್ಯೂಹಂ ಧರ್ಮರಾಜೇನ ದುರ್ಜಯಮ್ ॥12॥
ಪ್ರಯತ್ನಾತ್ ಕುರುಮುಖ್ಯೇನ ಬೃಹಸ್ಪತ್ಯುಶನೋಮತಾತ್ ॥13॥
ಆ ರಾತ್ರಿಯನ್ನು ಸುಖವಾಗಿ ಕಳೆದು ಮರುದಿನ ಉತ್ಸಾಹದಿಂದ ಯುದ್ಧಕ್ಕೆ ಹೊರಟರು. ಅಲ್ಲಿ ಧರ್ಮರಾಜನು ಬೃಹಸ್ಪತಿ ಶುಕ್ರರ ಮತಾನುಸಾರವಾಗಿ ಪ್ರಯತ್ನಪೂರ್ವಕ ದುರ್ಜಯವಾದ ವ್ಯೂಹ ರಚಿಸಿದ್ದನ್ನು ಕಂಡರು.
ಅಥ ಪ್ರತೀಪಕರ್ತಾರಂ ಸತತಂ ವಿಜಯಾತ್ಮನಃ |
ಸಸ್ಮಾರ ವೃಷಭಸ್ಕಂಧಂ ಕರ್ಣಂ ದುರ್ಯೋಧನಸ್ತದಾ ॥14॥
ದುರ್ಯೋಧನನು ಆಗ ಅರ್ಜುನನ ಪ್ರಯತ್ನಕ್ಕೆ ಸತತ ವಿರೋಧವಾಗಿ ಯತ್ನಮಾಡುವ ವೃಷಭಸ್ಕಂಧನಾದ ಕರ್ಣನನ್ನು ನೆನೆದ.
ಪುರಂದರಸಮಂ ಯುದ್ಧೇ ಮರುದ್ಗಣಸಮಂ ಬಲೇ |
ಕಾರ್ತವೀರ್ಯಸಮಂ ವೀರ್ಯೇ ಕರ್ಣಂ ರಾಜ್ಞೋಽಗಮನ್ಮನಃ ॥15॥
ಯುದ್ಧದಲ್ಲಿ ಇಂದ್ರನಿಗೆ ಸಮಾನ, ಬಲದಲ್ಲಿ ಮರುದ್ಗಣದವರಿಗೆ ಸಮಾನ, ವೀರ್ಯದಲ್ಲಿ ಕಾರ್ತವೀರ್ಯನಿಗೆ ಸಮಾನನೆನಿಸಿದ ಕರ್ಣನನ್ನು ರಾಜಾ ದುರ್ಯೋಧನ ನೆನೆದ.
ಸರ್ವೇಷಾಂ ಚೈವ ಸೈನ್ಯಾನಾಂ ಕರ್ಣಮೇವಾಗಮನ್ಮನಃ |
ಸೂತಪುತ್ರಂ ಮಹೇಷ್ವಾಸಂ ಬಂಧುಮಾತ್ಯಂತಿಕೇಷ್ವಿವ ॥16॥
ಎಲ್ಲ ಸೈನಿಕರೂ ಕೂಡ ಆಪತ್ಕಾಲದಲ್ಲಿ ಬಂಧುವನ್ನು ನೆನೆಯುವಂತೆ ರಣರಂಗದಲ್ಲಿ ಮಹಾಬಿಲ್ಗಾರನಾದ ಕರ್ಣನನ್ನೇ ನೆನೆದರು.
ಧೃತರಾಷ್ಟ್ರಃ
ಯದ್ವೋಽಗಮನ್ಮನೋ ಮಂದಾಃ ಕರ್ಣಂ ವೈಕರ್ತನಂ ಪ್ರತಿ ॥17॥
ಅಪ್ಯಪಶ್ಯತ ರಾಧೇಯಂ ಶೀತಾರ್ತಾ ಇವ ಭಾಸ್ಕರಮ್ |
ಕೃತೇಽವಹಾರೇ ಸೈನ್ಯಾನಾಂ ಪ್ರವೃತ್ತೇ ಚ ರಣೇ ಪುನಃ ॥18॥
ದುರ್ಯೋಧನಂ ಚ ತತ್ರಾಜೌ ಪಾಂಡವೇನ ಭೃಶಾರ್ದಿತಮ್ |
ಪರಾಕ್ರಾಂತಾನ್ ಪಾಂಡುಸುತಾನ್ ದೃಷ್ಟ್ವಾಪಿ ಚ ಮಹಾರಣೇ ॥19॥
ಧೃತರಾಷ್ಟ್ರ ಸಂಜಯನನ್ನು ಕೇಳಿದ– ಮೂರ್ಖರೆ, ಕರ್ಣನನ್ನೇಕೆ ನೆನೆದಿರಿ? ಚಳಿಯಿಂದ ನಡುಗುವವರು ಸೂರ್ಯನ ಕಡೆಗೆ ನೋಡುವಂತೆ ನೀವು ಕರ್ಣನನ್ನು ಹಿಂದೆ ನೋಡಿರುವಿರಿ ತಾನೆ? ಸೈನ್ಯವನ್ನು ಹಿಂದೆ ಕರೆಸಿಕೊಂಡ ಬಳಿಕ ಪುನಃ ಯುದ್ಧ ನಡೆದಾಗ ಆ ಯುದ್ಧದಲ್ಲಿ ಯುಧಿಷ್ಠಿರನಿಂದ ಬಹಳ ಪೀಡಿತನಾದ ದುರ್ಯೋಧನನನ್ನೂ ಪರಾಕ್ರಮ ತೋರಿದ ಪಾಂಡವರನ್ನೂ ಮಹಾರಣದಲ್ಲಿ ನೋಡಿದ ಬಳಿಕವೂ ಈಗ ಏಕೆ ಪುನಃ ಕರ್ಣನನ್ನು ನೆನೆದಿರಿ?
ಕಥಂ ವೈಕರ್ತನಃ ಕರ್ಣಸ್ತತ್ರಾಯುಧ್ಯತ ಸಂಜಯ |
ಕಥಂ ಚ ಪಾಂಡವಾಃ ಸರ್ವೇ ಯುಯುಧುಸ್ತತ್ರ ಸೂತಜಮ್ ॥20॥
ಸಂಜಯ, ಕರ್ಣನು ಹೇಗೆ ಯುದ್ಧಮಾಡಿದ? ಪಾಂಡವರು ಅವನೊಡನೆ ಹೇಗೆ ಯುದ್ಧ ಮಾಡಿದರು?
ಕರ್ಣೋ ಹ್ಯೇಕೋ ಮಹಾಬಾಹುರ್ಹನ್ಯಾತ್ ಪಾರ್ಥಾನ್
ಸಸೃಂಜಯಾನ್ |
ಕರ್ಣಸ್ಯ ಭುಜಯೋರ್ವೀರ್ಯಂ ಶಕ್ರವಿಷ್ಣುಸಮಂ ಯುಧಿ ॥21॥
ತಸ್ಯ ಶಸತ್ರಣಿ ಘೋರಾಣಿ ವಿಕ್ರಮಶ್ಚ ಮಹಾತ್ಮನಃ |

ಕರ್ಣಮಾಶ್ರಿತ್ಯ ಸಂಗ್ರಾಮೇ ಮತ್ತೋ ದುರ್ಯೋಧನೋ ನೃಪಃ ॥22॥
ಜೇತುಮುತ್ಸಹತೇ ಪಾರ್ಥಾನ್ ಸಪುತ್ರಾನ್ ಸಹಕೇಶವಾನ್ ॥23॥
`ಕರ್ಣನೊಬ್ಬನೇ ಮಹಾಬಾಹು. ಪಾಂಡವರನ್ನೂ ಸೃಂಜಯರನ್ನೂ ಕೊಲ್ಲಬಲ್ಲ. ಕರ್ಣನ ಬಾಹುಬಲವು ಯುದ್ಧದಲ್ಲಿ ಇಂದ್ರ, ಉಪೇಂದ್ರರಿಗೆ ಸಮ. ಅವನ ಶಸ್ತ್ರಗಳು ಘೋರ. ಮಹಾತ್ಮನಾದ ಅವನ ಪರಾಕ್ರಮವೂ ಘೋರ.' ಎಂದುಕೊಂಡು ರಾಜಾ ದುರ್ಯೋಧನ ಹುಚ್ಚನಾಗಿ ಯುದ್ಧದಲ್ಲಿ ಕರ್ಣನ ಸಹಾಯದಿಂದ ಪಾಂಡವರನ್ನೂ ಅವರ ಪುತ್ರರನ್ನೂ ಕೃಷ್ಣನನ್ನೂ ಪರಾಭವಗೊಳಿಸಲು ಹೊರಡುತ್ತಿದ್ದಾನೆ!
ಯಃ ಸೌಬಲಂ ತಥಾ ತಾತ ನೀತಿಮಾನಿತಿ ಮನ್ಯತೇ |
ಕರ್ಣಂ ಚಾಪ್ರತಿಮಂ ಯುದ್ಧೇ ದೇವೈರಪಿ ದುರುತ್ಸಹಮ್ ॥24॥
ಮನ್ಯತೇಽಭ್ಯಧಿಕಂ ಪಾರ್ಥಾದೇವಂ ಚಾಸ್ಯ ಹೃದಿ ಸ್ಥಿತಮ್ |
ವಿಜೇಷ್ಯತಿ ರಣೇ ಕರ್ಣ ಏಕಃ ಪಾರ್ಥಾನ್ ಸಸೋಮಕಾನ್ ॥25॥
ಮಮ ಚೈವ ಸದಾ ಮಂದಃ ಶಂಸತೇ ನಿತ್ಯಮಗ್ರತಃ ॥26॥
ಸಂಜಯ, ದುರ್ಯೋಧನನು ಶಕುನಿಯನ್ನು ನೀತಿಜ್ಞನೆಂದು ತಿಳಿಯುತ್ತಾನೆ! `ಕರ್ಣನನ್ನು ಯುದ್ಧದಲ್ಲಿ ಅಪ್ರತಿಮ, ದೇವತೆಗಳಿಗೂ ಅಜೇಯ, ಪಾರ್ಥನಿಗಿಂತ ಹೆಚ್ಚು ಎಂದು ತಿಳಿಯುತ್ತಾನೆ!' `ಕರ್ಣನೊಬ್ಬನೆ ರಣದಲ್ಲಿ ಪಾರ್ಥರನ್ನೂ ಸೋಮಕರನ್ನೂ ಗೆಲ್ಲುತ್ತಾನೆ' ಎನ್ನುತ್ತಾನೆ! ಮೂರ್ಖ, ನನ್ನ ಮುಂದೆಯೂ ಸದಾ ಹೀಗೆ ಹೇಳುತ್ತಿರುತ್ತಾನೆ!
ಅಹೋ ಬತ ಮಹದ್ ದುಃಖಂ ಯತ್ರ ಪಾಂಡುಸುತಾನ್ ರಣೇ |
ನಾತರದ್ ರಭಸಃ ಕರ್ಣೋ ದೈವಂ ನೂನಂ ಪರಾಯಣಮ್ ॥27॥
ಅಯ್ಯೋ! ಮಹಾದುಃಖ ಪ್ರಾಪ್ತವಾಗಿದೆ! ಯುದ್ಧದಲ್ಲಿ ಪಾಂಡವರನ್ನು ಮಹಾವೇಗಶಾಲಿ ಕರ್ಣ ಗೆಲ್ಲಲಾರದೆ ಹೋಗಿದ್ದಾನೆ! ನಿಶ್ಚಯವಾಗಿಯೂ ದೈವಬಲವೇ ಬಲ!
ಅಹೋ ದ್ಯೂತಸ್ಯ ನಿಷ್ಠೇಯಂ ಘೋರಾ ಸಂಪ್ರತಿ ವರ್ತತೇ ॥28॥
ಅಯ್ಯೋ! ಜೂಜನ್ನು ನಂಬಿದ್ದರ ಪರಿಣಾಮವಿದೊ ಘೋರವಾಗಿದೆ!
ಅಹೋ ತೀವ್ರಾಣಿ ದುಃಖಾನಿ ದುರ್ಯೋಧನಕೃತಾನ್ಯಹಮ್ |
ಸೋಢಾ ಘೋರಾಣಿ ಬಹುಶಃ ಶಲ್ಯಭೂತಾನಿ ಸಂಜಯ ॥29॥
ಅಯ್ಯೋ! ದುರ್ಯೋಧನನು ಹುಟ್ಟುಹಾಕಿದ ತೀವ್ರದುಃಖಗಳನ್ನು ನಾನು ಈಗ ಸಹಿಸಿಕೊಳ್ಳಬೇಕಾಗಿದೆ. ಅವು ಬಹಳವಾಗಿವೆ, ಎದೆಯಲ್ಲಿ ಶೂಲದಂತೆ ನಾಟಿವೆ.
ಸೌಬಲಂ ಚ ತದಾ ತಾತ ನೀತಿಮಾನಿತಿ ಮನ್ಯತೇ |
ಕರ್ಣಶ್ಚ ರಭಸೋ ನಿತ್ಯಂ ರಾಜಾ ತಂ ಚಾಪ್ಯನುವ್ರತಃ ॥30॥
ಆಗ ದುರ್ಯೋಧನ ಜೂಜಿನ ವಿಷಯದಲ್ಲಿ ಶಕುನಿಯೇ ನೀತಿಜ್ಞನೆಂದು ಭ್ರಮಿಸಿದ್ದ. ಕರ್ಣನೂ ರಥದಲ್ಲಿ ವೇಗಶಾಲಿ ಎಂದು ನಂಬಿದ್ದ. ಅದರಿಂದ ಸದಾ ಅವನನ್ನೇ ಆಶ್ರಯಿಸಿದ.
ಯದೇವಂ ವರ್ತಮಾನೇಷು ಮಹಾಯುದ್ಧೇಷು ಸಂಜಯ |
ಅಶ್ರೌಷಂ ನಿಹತಾನ್ ಪುತ್ರಾನ್ನಿತ್ಯಮೇವ ವಿನಿರ್ಜಿತಾನ್ ॥31॥
ಸಂಜಯ, ಹೀಗಾಗಿ ಈಗ ನಡೆಯುತ್ತಿರುವ ಮಹಾಯುದ್ಧಗಳಲ್ಲಿ ನನ್ನ ಪುತ್ರರು ಸೋಲುತ್ತಿರುವುದನ್ನೇ ಹತರಾಗುತ್ತಿರುವುದನ್ನೇ ಪ್ರತಿದಿನವೂ ಕೇಳುತ್ತಿದ್ದೇನೆ.
ನ ಪಾಂಡವಾನಾಂ ಸಮರೇ ಕಶ್ಚಿದಸ್ತಿ ನಿವಾರಕಃ |
ಸ್ತ್ರೀಮಧ್ಯಮಿವ ಗಾಹಂತೇ ದೈವಂ ತು ಬಲವತ್ತರಮ್ ॥32॥
ಯುದ್ಧದಲ್ಲಿ ಪಾಂಡವರನ್ನು ತಡೆಯುವವರು ಯಾರೂ ಇಲ್ಲ. ಅವರು ನಮ್ಮ ಸೈನ್ಯದ ಮಧ್ಯಕ್ಕೆ ಸ್ತ್ರೀಯರ ಮಧ್ಯಕ್ಕೆ ಹೋಗುವಂತೆ ನುಗ್ಗಿ ಹೋಗುತ್ತಾರೆ! ದೈವವೆ ಎಲ್ಲಕ್ಕಿಂತ ಪ್ರಬಲ.
ಸಂಜಯಃ
ರಾಜನ್ ಪೂರ್ವನಿಮಿತ್ತಾನಿ ಧರ್ಮಿಷ್ಠಾನಿ ವಿಚಿಂತಯ ॥33॥
ಸಂಜಯ ನುಡಿದ– ರಾಜನೆ, ಹಿಂದಿನ ಜೂಜು ಮುಂತಾದ ನಿಮಿತ್ತಗಳು ಧರ್ಮಸಮ್ಮತವಾಗಿದ್ದುವೆ? ಆಲೋಚಿಸು. ದೈವವನ್ನು ಹಳಿಯಬೇಡ.
ಅತಿಕ್ರಾಂತಂ ಹಿ ಯತ್ಕಾರ್ಯಂ ಪಶ್ಚಾಚ್ಚಿಂತಯತೇ ನರಃ |
ತಚ್ಚಾಸ್ಯ ನ ಭವೇತ್ ಕಾರ್ಯಂ ಚಿಂತಯಾ ಚ ವಿನಶ್ಯತಿ ॥34॥
ಹಿಂದೆ ನಡೆದ ಅಚಾತುರ್ಯದ ಕೃತ್ಯವನ್ನು ಮಾನವನು ಮತ್ತೆ ಚಿಂತಿಸಿದರೆ ಅದರಿಂದ ಅವನಿಗೇನೂ ಪ್ರಯೋಜಜನವಾಗುವುದಿಲ್ಲ. ಚಿಂತೆ ಮಾಡಿದರೂ ವಿನಾಶ ತಪ್ಪುವುದಿಲ್ಲ.
ತದಿದಂ ತವ ಕಾರ್ಯಂ ತು ದೂರಪ್ರಾಪ್ತಂ ವಿಜಾನತಃ |
ನ ಕೃತಂ ಯತ್ತ್ವಯಾ ಪೂರ್ವಂ ಪ್ರಾಪ್ತಾಪ್ರಾಪ್ತವಿಚಾರಣಮ್ ॥35॥
ತಿಳಿದೂ ತಿಳಿದೂ ನೀನು ಮಾಡಿದ್ದ ಅಕೃತ್ಯ ಇಂದು ಹಿಂತಿರುಗಿ ಬರಲಾಗದಷ್ಟು ದೂರಹೋಗಿಬಿಟ್ಟಿದೆ. ಅದನ್ನು ಈಗ ಸರಿಪಡಿಸಲಾಗದು. ಹಿಂದೆಯೇ ಅದನ್ನು `ಪ್ರಾಪ್ತವಾಗುವುದೆ? ಅಪ್ರಾಪ್ತವಾಗುವುದೇ?' ಎಂದು ವಿಚಾರಣೆ ಮಾಡಬೇಕಿತ್ತು. ನೀನು ಮಾಡಲಿಲ್ಲ.
ಉಕ್ತೋಽಸಿ ಬಹುಧಾ ರಾಜನ್ ಮಾ ಯುಧ್ಯಸ್ವೇತಿ ಪಾಂಡವೈಃ |

ನ ಚ ತತ್ತ್ವಗ್ರಹೀದ್ವೇಷಾತ್ ಪಾಂಡವೇಷು ವಿಶಾಂಪತೇ ॥36॥
ರಾಜನೆ, ಯುದ್ಧ ಬೇಡವೆಂದು ಪಾಂಡವರು ಬಹುಬಾರಿ ಹೇಳಿದ್ದರು. ಪಾಂಡವರ ಮೇಲಿನ ದ್ವೇಷದಿಂದ ನೀನು ಅದನ್ನು ಕೇಳಲಿಲ್ಲ.
ತ್ವಯಾ ಪಾಪಾನಿ ಘೋರಾಣಿ ಸಮಾಚೀರ್ಣಾನಿ ಪಾಂಡುಷು |
ತ್ವತ್ಕೃತೇ ವರ್ತತೇ ಘೋರಃ ಪಾರ್ಥಿವಾನಾಂ ಜನಕ್ಷಯಃ ॥37॥
ಪಾಂಡವರಲ್ಲಿ ನೀನು ಘೋರ ಪಾಪಕೃತ್ಯಗಳನ್ನು ಮಾಡಿರುವೆ. ನಿನ್ನ ಸಲುವಾಗಿ ಈಗ ರಾಜರಿಗೆ ಘೋರ ಜನಕ್ಷಯ ಬಂದೊದಗಿದೆ.
ತತಿತ್ವದಾನೀಮತಿಕ್ರಾಂತಂ ಮಾ ಶುಚೋ ಭರತರ್ಷಭ |
ಶೃಣು ಸರ್ವಂ ಯಥಾವೃತ್ತಂ ಘೋರಂ ವೈಶಸಮುಚ್ಯತೇ ॥38॥
ರಾಜನೆ, ಹಿಂದೆ ಆಗಿಹೋದುದಕ್ಕೆ ಈಗ ಶೋಕಿಸಬೇಡ. ಘೋರವಾದ ವಿನಾಶಕಾರ್ಯವನ್ನೆಲ್ಲವನ್ನೂ ಅದು ನಡೆದಂತೆಯೇ ಹೇಳುತ್ತೇನೆ, ಕೇಳು.
ಪ್ರಭಾತಾಯಾಂ ರಜನ್ಯಾಂ ತು ಕರ್ಣೋ ರಾಜಾನಮಭ್ಯಯಾತ್ |
ಸಮೇತ್ಯ ಚ ಮಹಾಬಾಹುರ್ದುರ್ಯೋಧನಮಥಾಬ್ರವೀತ್ ॥39॥
ರಾತ್ರಿ ಬೆಳಗಾದಾಗ ಮಹಾಬಾಹು ಕರ್ಣ ರಾಜಾ ದುರ್ಯೋಧನನ ಬಳಿಗೆ ಬಂದು ಹೇಳಿದ.
ಕರ್ಣಃ
ಅದ್ಯ ರಾಜನ್ ಸಮೇಷ್ಯಾಮಿ ಪಾಂಡವೇನ ಯಶಸ್ವಿನಾ |
ನಿಹನಿಷ್ಯಾಮಿ ತಂ ವೀರಂ ಸ ವಾ ಮಾಂ ನಿಹನಿಷ್ಯತಿ ॥40॥
ಕರ್ಣ ನುಡಿದ– ರಾಜನೆ, ಇಂದು ಯಶಸ್ವಿಯಾದ ಅರ್ಜುನನೊಡನೆ ಹೋರಾಡುವೆನು. ನಾನು ಅವನನ್ನು ಕೊಲ್ಲುತ್ತೇನೆ ಅಥವಾ ಅವನು ನನ್ನನ್ನು ಕೊಲ್ಲುತ್ತಾನೆ.
ಬಹುತ್ವಾನ್ಮಮ ಕಾರ್ಯಾಣಾಂ ತಥಾ ಪಾರ್ಥಸ್ಯ ಭಾರತ |
ನಾಭೂತ್ಸಮಾಗಮೋ ರಾಜನ್ ಮಮ ಚೈವಾರ್ಜುನಸ್ಯ ಚ ॥41॥
ರಾಜನೆ, ಪಾಂಚಾಲ ಸೃಂಜಯಾದಿ ನಿಗ್ರಹರೂಪವಾದ ಕಾರ್ಯಗಳು ನನಗೂ ಸಂಶಪ್ತಕವಧಾದಿರೂಪಕಾರ್ಯಗಳು ಅರ್ಜುನನಿಗೂ ಬಹಳ ಇದ್ದಿದ್ದರಿಂದ ನಮ್ಮಿಬ್ಬರ ಸಮಾಗಮ ಸರಿಯಾಗಿ ಆಗಿರಲಿಲ್ಲ.
ಇದಂ ತು ಮೇ ಮಹಾರಾಜ ಶೃಣು ವಾಕ್ಯಂ ವಿಶಾಂಪತೇ |
ಅನಿಹತ್ಯ ರಣೇ ಪಾರ್ಥಂ ನಾಹಮೇಷ್ಯಾಮಿ ಭಾರತ ॥42॥
ರಾಜನೆ, ನನ್ನ ಈ ಒಂದು ಮಾತನ್ನು ಕೇಳು. ಯುದ್ಧದಲ್ಲಿ ಅರ್ಜುನನನ್ನು ಕೊಲ್ಲದೆ ನಾನು ಹಿಂತಿರುಗಿ ಬರುವುದಿಲ್ಲ.
ಹತಪ್ರವೀರೇ ಸೈನ್ಯೇಽಸ್ಮಿನ್ ಮಯಿ ಚಾವಸ್ಥಿತೇ ಯುಧಿ |
ಅಭಿಯಾಸ್ಯತಿ ಮಾಂ ಪಾರ್ಥಃ ಶಕ್ರಶಕ್ತಿವಿನಾಕೃತಮ್ ॥43॥
ನಮ್ಮ ಈ ಸೈನ್ಯದಲ್ಲಿ ಪ್ರಧಾನವೀರರು ಎಲ್ಲರೂ ಹತರಾಗಿದ್ದಾರೆ. ನಾನೊಬ್ಬನೆ ಈಗ ಇದ್ದೇನೆ. ಮತ್ತು ನನ್ನಲ್ಲಿ ಇಂದ್ರನು ಕೊಟ್ಟ ಶಕ್ತಿ ಇರುವುದಿಲ್ಲ. ಅದರಿಂದ ಅರ್ಜುನ ನನ್ನನ್ನೇ ಇದಿರಿಸುತ್ತಾನೆ.
ತತ್ರ ಶ್ರೇಯಸ್ಕರಂ ಯಚ್ಚ ತನ್ನಿಬೋಧ ಜನೇಶ್ವರ |
ಆಯುಧಾನಾಂ ಚ ಮೇ ವೀರ್ಯಂ ದಿವ್ಯಾನಾಮರ್ಜುನಸ್ಯ ಚ ॥44॥
ನನ್ನ ಮತ್ತು ನನ್ನ ಆಯುಧಗಳ ಬಲ ಹಾಗೂ ಅರ್ಜುನ ಮತ್ತು ಅವನ ಆಯುಧಗಳ ಬಲ, ಇವುಗಳಲ್ಲಿ ಯಾವುದು ಹೆಚ್ಚು ಕಾರ್ಯಕಾರಿ ಎಂಬುದನ್ನು ನೀನು ಆಲೋಚಿಸು.
ಕಾಯಸ್ಯ ಮಹತೋ ಭೇದೇ ಲಾಘವೇ ದೂರಪಾತನೇ |
ಸೌಷ್ಠವೇ ಚಾಸ್ತ್ರವೀರ್ಯೇ ಚ ಸವ್ಯಸಾಚೀ ನ ಮತ್ಸಮಃ ॥45॥
ದೊಡ್ಡ ಆನೆಗಳಂಥ ಶರೀರಭೇದನದಲ್ಲಿ, ಕೈಚಳಕದಲ್ಲಿ, ದೂರಕ್ಕೆ ಶಸ್ತ್ರ ಎಸೆಯುವುದರಲ್ಲಿ, ಅಸ್ತ್ರಕೌಶಲದಲ್ಲಿ, ಅಸ್ತ್ರಬಲದಲ್ಲಿ ಸವ್ಯಸಾಚಿಯು ನನಗೆ ಸಮನಲ್ಲ.
ಪ್ರಾಣೇ ಶೌರ್ಯೇಽಥ ವಿಜ್ಞಾನೇ ವಿಕ್ರಮೇ ಚಾಪಿ ಭಾರತ |
ನಿಮಿತ್ತಜ್ಞಾನಯೋಗೇ ಚ ಸವ್ಯಸಾಚೀ ನ ಮತ್ಸಮಃ ॥46॥
ಶರೀರಬಲ, ಶೌರ್ಯ, ಅಸ್ತ್ರ ಜ್ಞಾನ, ಪರಾಕ್ರಮ, ಲಕ್ಷ್ಯಭೇದಜ್ಞಾನಯೋಗ ಇವುಗಳಲ್ಲಿ ಸವ್ಯಸಾಚಿ ನನಗೆ ಸಾಟಿಯಲ್ಲ.
ಸರ್ವಾಯುಧಮಹಾಮಾತ್ರಂ ವಿಜಯಂ ನಾಮ ತದ್ಧನುಃ |
ಇಂದ್ರಾರ್ಥಂ ಪ್ರಿಯಕಾಮೇನ ನಿರ್ಮಿತಂ ವಿಶ್ವಕರ್ಮಣಾ ॥47॥
ಎಲ್ಲ ಆಯುಧಗಳಲ್ಲಿ ಶ್ರೇಷ್ಠ ವಿಜಯ ಎಂಬ ಧನುಸ್ಸು. ಅದು ಇಂದ್ರನಿಗಾಗಿ ಅವನಿಗೆ ಪ್ರಿಯವನ್ನುಂಟು ಮಾಡುವ ಬಯಕೆಯಿಂದ ವಿಶ್ವಕರ್ಮ ನಿರ್ಮಿಸಿದುದು.
ಯೇನ ದೈತ್ಯಗಣಾನ್ ರಾಜನ್ ಜಿತವಾನ್ ವೈ ಶತಕ್ರತುಃ |
ತಸ್ಯ ಘೋಷೇಣ ದೈತ್ಯಾನಾಂ ವ್ಯಾಮುಹ್ಯಂತ ದಿಶೋ ದಶ ॥48॥
ರಾಜನೆ, ಆ ಧನುಸ್ಸಿನಿಂದ ಇಂದ್ರನು ದೈತ್ಯಸಮೂಹಗಳನ್ನು ಗೆದ್ದ. ಅದರ ಠೇಂಕಾರದಿಂದ ದೈತ್ಯರಿಗೆ ಹತ್ತು ದಿಕ್ಕುಗಳೇ ಕಾಣುತ್ತಿರಲಿಲ್ಲ.
ತದ್ ಭಾರ್ಗವಾಯ ಪ್ರಾಯಚ್ಛತ್ ಶಕ್ರಃ ಪರಮಸಮ್ಮತಮ್ |
ತದ್ದಿವ್ಯಂ ಭಾರ್ಗವೋ ಮಹ್ಯಮದದಾದ್ ಧನುರುತ್ತಮಮ್ ॥49॥
ಆ ಧನುಸ್ಸನ್ನು ಇಂದ್ರನು ಪರಶುರಾಮನಿಗಿತ್ತ. ಪರಮಸಂಮತವಾದ ಉತ್ತಮ ವಾದ ದಿವ್ಯವಾದ ಆ ಧನುಸ್ಸನ್ನು ಪರಶುರಾಮ ನನಗೆ

ಇತ್ತ.
ತೇನ ಯೋತ್ಸ್ಯೇ ಮಹಾಬಾಹುಮರ್ಜುನಂ ಜಯತಾಂ ವರಮ್ |
ಯಥೇಂದ್ರಃ ಸಮರೇ ಸರ್ವಾನ್ ದೈತೇಯಾನ್ ವೈ ಸಮಾಗತಾನ್ ॥
ನಿಜಘಾನ ತಥಾ ಸರ್ವಾನ್ ಜೇಷ್ಯಾಮಿ ಯುಧಿ ಪಾಂಡವಾನ್ ॥51॥
ಆ ಧನುಸ್ಸಿನಿಂದ ನಾನು ಜಯಶಾಲಿಗಳಲ್ಲಿ ಉತ್ತಮನಾದ ಅರ್ಜುನನೊಡನೆ ಯುದ್ಧಕ್ಕೆ ಬಂದ ಎಲ್ಲ ದೈತ್ಯರನ್ನು ಈ ಧನುಸ್ಸಿನಿಂದ ಇಂದ್ರ ಹೇಗೆ ವಧಿಸಿದನೋ ಹಾಗೆ ಹೋರಾಡುವೆನು.
ಧನುರ್ಘೋರಂ ರಾಮದತ್ತಂ ಗಾಂಡೀವಾತ್ ತದ್ ವಿಶಿಷ್ಯತೇ |
ತ್ರಿಃಸಪ್ತಕೃತ್ವಃ ಪೃಥಿವೀ ಧನುಷಾ ಯೇನ ನಿರ್ಜಿತಾ ॥52॥
ಪರಶುರಾಮ ನನಗೆ ನೀಡಿದ್ದ ಆ ಧನುಸ್ಸು ಗಾಂಡೀವಕ್ಕಿಂತ ಶ್ರೇಷ್ಠ. ಪರಶುರಾಮ ಆ ಧನುಸ್ಸಿನಿಂದ ಇಪ್ಪತ್ತೊಂದು ಬಾರಿ ಭೂಮಿಯನ್ನು ಗೆದ್ದ.
ಧನುಷೋ ಹ್ಯಸ್ಯ ಕರ್ಮಾಣಿ ದಿವ್ಯಾನಿ ಪ್ರಾಹ ಭಾರ್ಗವಃ |
ತದ್ರಾಮೋ ಹ್ಯದದಾನ್ಮಹ್ಯಂ ತೇನ ಯೋತ್ಸ್ಯಾಮಿ ಪಾಂಡವಮ್ ॥53॥
ಆ ಧನುಸ್ಸಿನ ದಿವ್ಯ ಕಾರ್ಯಸಾಧನಗಳನ್ನು ಪರಶುರಾಮ ತಾನೇ ನನಗೆ ಹೇಳಿ ಅದನ್ನು ನನಗೆ ಕೊಟ್ಟಿದ್ದಾನೆ. ಆ ಧನುಸ್ಸಿನಿಂದ ಅರ್ಜುನನನ್ನು ಇದಿರಿಸುತ್ತೇನೆ.
ಅದ್ಯ ದುರ್ಯೋಧನಾಹಂ ತ್ವಾಂ ನಂದಯಿಷ್ಯೇ ಸಬಾಂಧವಮ್ |
ನಿಹತ್ಯ ಸಮರೇ ವೀರಮರ್ಜುನಂ ಜಯತಾಂ ವರಮ್ ॥54॥
ದುರ್ಯೋಧನ, ಇಂದು ನಾನು ಯುದ್ಧದಲ್ಲಿ ಜಯಶಾಲಿಗಳಲ್ಲಿ ಶ್ರೇಷ್ಠನಾದ ವೀರ ಅರ್ಜುನನನ್ನು ಸಂಹರಿಸಿ, ನಿನಗೂ ನಿನ್ನ ಬಂಧುಗಳಿಗೂ ಸಂತೋಷ ನೀಡುತ್ತೇನೆ.
ಸಪರ್ವತವನದ್ವೀಪಾ ಹತದ್ವಿಟ್ಸಾಗಾರಾಂಬರಾ |
ಪುತ್ರಪೌತ್ರಪ್ರತಿಷ್ಠಾ ತೇ ಭವಿಷ್ಯತ್ಯದ್ಯ ಮೇದಿನೀ ॥55॥
ರಾಜನೆ, ಪರ್ವತ ವನ ದ್ವೀಪ ಸಾಗರಗಳಿಂದ ಕೂಡಿದ ಈ ಭೂಮಂಡಲದಲ್ಲಿ ನಿನ್ನ ದ್ವೇಷಿಗಳು ಹತರಾಗಿ ಇನ್ನಿಲ್ಲವಾಗುವಂತೆ ಮಾಡುವೆನು. ಭೂಮಿ ನಿನ್ನ ಪುತ್ರ, ಪೌತ್ರರಲ್ಲಿಯೂ ಪ್ರತಿಷ್ಠಿತವಾಗುವಂತೆ ಮಾಡುವೆನು.
ನಾಶಕ್ಯಂ ವಿದ್ಯತೇ ಮೇಽದ್ಯ ತ್ವತ್ಪ್ರಿಯಾರ್ಥಂ ವಿಶೇಷತಃ |
ಸತ್ಯಧರ್ಮಾನುರಕ್ತಸ್ಯ ಸಿದ್ಧಿರಾತ್ಮವತೋ ಯಥಾ ॥56॥
ನನಗೆ ಅಶಕ್ಯವಾದುದು ಏನೂ ಇಲ್ಲ. ವಿಶೇಷವಾಗಿ ನಿನ್ನ ಸಂತೋಷದ ಸಲುವಾಗಿ ಏನು ಬೇಕಾದರೂ ಮಾಡಬಲ್ಲೆ. ಸತ್ಯಧರ್ಮನಿಷ್ಠನಿಗೆ ಸಿದ್ಧಿ ಯಾವ ವಿಷಯದಲ್ಲಿಯೂ ಅಶಕ್ಯವಿರುವುದಿಲ್ಲ.
ನ ಹಿ ಮೇ ವಿಕ್ರಮಂ ಸೋಢುಂ ಸ ಶಕ್ತೋಽಗ್ನಿಂ ತರುರ್ಯಥಾ |
ಅವಶ್ಯಂ ತು ಮಯಾ ವಾಚ್ಯಂ ಯೇನ ಹೀನೋಽಸ್ಮಿ ಫಲ್ಗುನಾತ್ |57|
ಕಾಳ್ಗಿಚ್ಚನ್ನು ಇದಿರಿಸಲು ಕಾಡುಮರದಂತೆ, ನನ್ನನ್ನು ಇದಿರಿಸಲು ಅರ್ಜುನ ಶಕ್ತನಾಗಲಾರ. ಆದರೆ ಒಂದು ವಿಷಯದಲ್ಲಿ ನಾನು ಅರ್ಜುನನಿಗಿಂತ ಕಡಿಮೆಯವನು. ಅದನ್ನು ನಾನು ನಿನಗೆ ಹೇಳಬೇಕಾಗಿದೆ.
ಜ್ಯಾ ತಸ್ಯ ಧನುಷೋ ದಿವ್ಯಾ ತಥಾಽಕ್ಷಯ್ಯೌ ಮಹೇಷುಧೀ |
ಸಾರಥಿಸ್ತಸ್ಯ ಗೋವಿಂದೋ ಮಮ ತಾದೃಙ್ ನ ವಿದ್ಯತೇ ॥58॥
ಅರ್ಜುನನ ಹಿರಿಮೆ ಇದು– ಅವನ ಧನುಸ್ಸಿನ ಹೆದೆ ದಿವ್ಯವಾಗಿದೆ. ಬತ್ತಳಿಕೆಗಳೂ ಅಕ್ಷಯವಾಗಿವೆ. ಅವನಿಗೆ ಕೃಷ್ಣ ಸಾರಥಿಯಾಗಿದ್ದಾನೆ. ನನಗೆ ಸಾರಥಿ ಅಂಥವನಿಲ್ಲ.
ತಸ್ಯ ದಿವ್ಯಂ ಧನುಃ ಶ್ರೇಷ್ಠಂ ಗಾಂಡೀವಮಜಿತಂ ಯುಧಿ |
ವಿಜಯಂ ಚ ಮಹದ್ದಿವ್ಯಂ ಮಮಾಪಿ ಧನುರುತ್ತಮಮ್ ॥59॥
ಅವನ ಗಾಂಡೀವ ಧನುಸ್ಸು ದಿವ್ಯ, ಯುದ್ಧದಲ್ಲಿ ಅದು ಅಜೇಯ. ಆದರೆ ನನ್ನ ವಿಜಯ ಧನುಸ್ಸೂ ಕೂಡಾ ಹಾಗೇ ದಿವ್ಯ, ಉತ್ತಮವೇ ಆಗಿದೆ.
ತತ್ರಾಹಮಧಿಕಃ ಪಾರ್ಥಾದ್ ಧನುಷಾ ತೇನ ಪಾರ್ಥಿವ |
ಯೇನ ಚಾಪ್ಯಧಿಕೋ ವೀರಃ ಪಾಂಡವಸ್ತನ್ನಿಬೋಧ ಮೇ ॥60॥
ರಾಜನೆ, ಧನುಸ್ಸಿನ ವಿಷಯದಲ್ಲಿ ನಾನು ಅರ್ಜುನನಿಗಿಂತ ಹೆಚ್ಚು. ವೀರ ಅರ್ಜುನ ಯಾವ ವಿಷಯದಲ್ಲಿ ನನಗಿಂತ ಹೆಚ್ಚೆಂಬುದನ್ನು ಹೇಳಿದ್ದೇನೆ, ಅದನ್ನು ಮನವರಿಕೆ ಮಾಡಿಕೊಳ್ಳು.
ರಶ್ಮಿಗ್ರಾಹಶ್ಚ ದಾಶಾರ್ಹಃ ಸರ್ವಲೋಕನಮಸ್ಕೃತಃ |
ಅಗ್ನಿದತ್ತಶ್ಚ ವೈ ದಿವ್ಯೋ ರಥಃ ಕಾಂಚನಭೂಷಣಃ ॥61॥
ಅರ್ಜುನನಿಗೆ ಸಾರಥಿ ಕೃಷ್ಣ. ಅವನು ಸರ್ವಲೋಕಗಳಿಂದ ನಮಸ್ಕೃತ ನೆನಿಸಿದ್ದಾನೆ. ಅರ್ಜುನನ ರಥ ಬಂಗಾರದಿಂದ ಅಲಂಕೃತ, ದಿವ್ಯ, ಅಗ್ನಿಯಿಂದ ದತ್ತವಾದುದು.
ಅಚ್ಛೇದ್ಯಾಃ ಸರ್ವತೋ ವೀರ ವಾಜಿನಶ್ಚ ಮನೋಜವಾಃ |
ಧ್ವಜಶ್ಚ ದಿವ್ಯೋ ದ್ಯುತಿಮಾನ್ ವಾನರೋಽಪಿ ಭಯಂಕರಃ ॥62॥
ಅರ್ಜುನನ ಕುದುರೆಗಳೂ ಮನೋವೇಗದವು, ಶತ್ರುಗಳಿಗೆಲ್ಲರಿಗೂ ಅವು ಅಚ್ಛೇದ್ಯವಾಗಿವೆ. ಧ್ವಜವೂ ದಿವ್ಯ, ಪ್ರಕಾಶಮಾನ, ಶತ್ರುಭಯಂಕರವಾದ ವಾನರನೆ ಧ್ವಜವಾಗಿ ನೆಲೆಸಿದ್ದಾನೆ.

ಕೃಷ್ಣಶ್ಚ ಜಗತಃ ಸ್ರಷ್ಟಾ ರಥಂ ತಮಭಿರಕ್ಷತಿ |
ಏಭಿಸ್ತ್ರಿಭಿರಹಂ ಹೀನೋ ಯೋದ್ಧುಮಿಚ್ಛಾಮಿ ಪಾಂಡವಮ್ ॥63॥
ಜಗತ್ತಿನ ಸೃಷ್ಟಿಕರ್ತನಾದ ಕೃಷ್ಣ ಆ ರಥವನ್ನು ರಕ್ಷಿಸುತ್ತಾನೆ. ಹೀಗೆ ಸಾರಥಿ ಕುದುರೆ ಧ್ವಜ ಮೂರೂ ವಿಷಯದಲ್ಲಿ ಅರ್ಜುನನಿಗಿಂತ ಕಡಿಮೆಯವನಾದ ನಾನೀಗ ಅರ್ಜುನನೊಂದಿಗೆ ಹೋರಾಡಲು ಬಯಸಿದ್ದೇನೆ.
ಅಯಂ ತು ಸದೃಶಃ ಶೌರೇಃ ಶಲ್ಯಃ ಸಮಿತಿಶೋಭನಃ |
ಸಾರಥ್ಯಂ ಯದಿ ಮೇ ಕುರ್ಯಾದ್ ಧ್ರುವಸ್ತೇ ವಿಜಯೋ ಭವೇತ್ ॥
ಯುದ್ಧದಲ್ಲಿ ಶೋಭಿಸುವ ಈ ಶಲ್ಯಮಹಾರಾಜ ಸಾರಥ್ಯದಲ್ಲಿ ಕೃಷ್ಣನಿಗೆ ಸಮಾನ. ಅವನು ನನಗೆ ಸಾರಥಿಯಾಗುವುದಾದರೆ ನಿನಗೆ ವಿಜಯ ನಿಶ್ಚಿತ.
ತಸ್ಯ ಮೇ ಸಾರಥಿಃ ಶಲ್ಯೋ ಭವತ್ವಸುಕರಃ ಪರೈಃ |
ನಾರಾಚಾನ್ ಗಾರ್ಧ್ರಪತ್ರಾಂಶ್ಚ ಶಕಟಾನಿ ವಹಂತು ಮೇ ॥65॥
ಶತ್ರುಗಳಿಗೆ ಮಣಿಸಲಾಗದ ಶಲ್ಯ ನನಗೆ ಸಾರಥಿಯಾಗಲಿ. ರಣಹದ್ದಿನ ರೆಕ್ಕೆವುಳ್ಳ ಬಾಣಗಳನ್ನು ನನಗೆ ಗಾಡಿಗಳು ಹೊತ್ತು ತರಲಿ.
ರಥಾಶ್ಚ ಮುಖ್ಯಾ ರಾಜೇಂದ್ರ ಯುಕ್ತಾ ವಾಜಿಭಿರುತ್ತಮೈಃ |
ಆಯಾಂತು ಪಶ್ಚಾತ್ಸತತಂ ಮಾಮೇವ ಭರತರ್ಷಭ ॥66॥
ರಾಜನೆ, ಉತ್ತಮ ಅಶ್ವಗಳನ್ನು ಹೂಡಿದ ದೊಡ್ಡರಥಗಳು ಸದಾ ನನ್ನ ಹಿಂದೆಯೇ ಬರುತ್ತಿರಲಿ.
ಏವಮಭ್ಯಧಿಕಃ ಪಾರ್ಥಾದ್ ಭವಿಷ್ಯಾಮಿ ಗುಣೈರಹಮ್ |
ಶಲ್ಯೋಽಪ್ಯಭ್ಯಧಿಕಃ ಕೃಷ್ಣಾದರ್ಜುನಾದಪಿ ಚಾಪ್ಯಹಮ್ ॥67॥
ಆಗ ನಾನು ಗುಣಗಳಿಂದ ಪಾರ್ಥನಿಗಿಂತ ಮೇಲೆನಿಸುತ್ತೇನೆ. ಹೀಗಾಗಿ ಶಲ್ಯನೂ ಕೃಷ್ಣನಿಗಿಂತ ಮೇಲು, ನಾನೂ ಅರ್ಜುನನಿಗಿಂತ ಮೇಲು.
ಯಥಾSಶ್ವಹೃದಯಂ ವೇದ ದಾಶಾರ್ಹಃ ಪರವೀರಹಾ |
ತಥಾ ಶಲ್ಯೋ ವಿಜಾನೀತೇ ಹಯಜ್ಞಾನಂ ಮಹಾರಥಃ ॥68॥
ಶತ್ರುವೀರನಾಶಕನಾದ ಕೃಷ್ಣ ಹೇಗೆ ಅಶ್ವಶಾಸ್ತ್ರವನ್ನು ಬಲ್ಲನೋ ಹಾಗೇ ಮಹಾರಥನಾದ ಶಲ್ಯನೂ ಅಶ್ವಶಾಸ್ತ್ರವನ್ನು ಬಲ್ಲ.
ಬಾಹುವೀರ್ಯೇ ಸಮೋ ನಾಸ್ತಿ ಮದ್ರರಾಜಸ್ಯ ಕಶ್ಚನ |
ತಥಾSಸ್ತ್ರೇ ಮತ್ಸಮೋ ನಾಸ್ತಿ ಕಶ್ಚಿದೇವ ಧನುರ್ಧರಃ ॥69॥
ಬಾಹುಬಲದಲ್ಲಿ ಶಲ್ಯನಿಗೆ ಹೇಗೆ ಯಾರೂ ಸಮರಿಲ್ಲವೋ ಹಾಗೇ ಅಸ್ತ್ರಬಲದಲ್ಲಿ ನನಗೆ ಸಮಾನನಾದ ಧನುರ್ಧರ ಯಾರೂ ಇಲ್ಲ.
ತಥಾ ಶಲ್ಯಸಮೋ ನಾಸ್ತಿ ಹಯಜ್ಞಾನೇ ಹಿ ಕಶ್ಚನ |
ಸೋಽಯಮಭ್ಯಧಿಕಃ ಪಾರ್ಥಾದ್ ಭವಿಷ್ಯತಿ ರಥೋ ಮಮ ॥70॥
ಅಶ್ವಶಾಸ್ತ್ರದಲ್ಲಿ ಶಲ್ಯಸಮಾನ ಯಾರೂ ಇಲ್ಲದ್ದರಿಂದ ನನ್ನ ಈ ರಥವೂ ಪಾರ್ಥನ ರಥಕ್ಕಿಂತ ಮೇಲೆನಿಸುತ್ತದೆ.
ಸಮುದ್ಯಂತಂ ನ ಶಕ್ಷ್ಯಂತಿ ದೇವಾ ಅಪಿ ಸವಾಸವಾಃ |
ಏತತ್ಕೃತಂ ಮಹಾರಾಜ ತ್ವಯೇಚ್ಛಾಮಿ ಪರಂತಪ ॥71॥
ಆಗ ಇಂದ್ರಾದಿ ದೇವತೆಗಳೂ ಕೂಡ ನನ್ನನ್ನು ಗೆಲ್ಲಲು ಶಕ್ತರಾಗಲಾರರು. ಮಹಾರಾಜ, ನೀನಿದನ್ನು ಮಾಡೆಂದು ನಾನು ಬಯಸುತ್ತೇನೆ.
ಕ್ರಿಯತಾಮೇಷ ಕಾಮೋ ಮೇ ಮಾ ವಃ ಕಾಲೋಽತ್ಯಗಾದಯಮ್ 72
ಈ ನನ್ನ ಅಭಿಲಾಷೆಯನ್ನು ಪೂರೈಸು. ನಿಮಗೆ ಕಾಲ ಮೀರಿ ಹೋಗದಿರಲಿ.
ಏವಂ ಕೃತೇ ರಥಸ್ಥೋಽಹಂ ಗುಣೈರಭ್ಯಧಿಕೋಽರ್ಜುನಾತ್ |
ವಿಜಯೇಯಮಹಂ ಸಂಖ್ಯೇ ಫಲ್ಗುನಂ ಕುರುಸತ್ತಮ ॥73॥
ಹೀಗೆ ಮಾಡಿದರೆ ನಾನು ರಥದಲ್ಲಿದ್ದು ಅರ್ಜುನನಿಗಿಂತ ಗುಣದಲ್ಲಿ ಮೇಲೆನಿಸುತ್ತೇನೆ. ಯುದ್ಧದಲ್ಲಿ ಅರ್ಜುನನನ್ನು ಗೆಲ್ಲುತ್ತೇನೆ.
ಏವಂ ಕೃತೇ ಕೃತಂ ಸಾಹ್ಯಂ ತ್ವಯಾ ಸರ್ವಂ ಭವಿಷ್ಯತಿ ॥74॥
ಇದೊಂದು ಕೆಲಸ ಮಾಡಿಕೊಟ್ಟರೆ ನನಗೆ ನೀನು ಎಲ್ಲ ಸಹಾಯ ಮಾಡಿಕೊಟ್ಟಂತಾಗುತ್ತದೆ.
ತತೋ ದ್ರಕ್ಷ್ಯಸಿ ಸಂಗ್ರಾಮೇ ಯತ್ಕರಿಷ್ಯಾಮಿ ಭಾರತ |
ಸರ್ವಥಾ ಪಾಂಡವಾನ್ ಸಂಖ್ಯೇ ವಿಜೇಷ್ಯೇ ವೈ ಸಮಾಗತಾನ್ ॥75॥
ಆಗ ನೀನೆ ನೋಡುವೆ, ಯುದ್ಧದಲ್ಲಿ ನಾನೇನು ಮಾಡುವೆನೆಂದು. ಯುದ್ಧಕ್ಕೆ ಬರುವ ಪಾಂಡವರನ್ನು ನಾನು ಸರ್ವಥಾ ಪರಾಭವಗೊಳಿಸುತ್ತೇನೆ.
ನ ಹಿ ಮೇ ಸಮರೇ ಶಕ್ತಾಃ ಸಮುದ್ಯಾತುಂ ಸುರಾಸುರಾಃ |
ಕಿಮು ಪಾಂಡುಸುತಾ ರಾಜನ್ ರಣೇ ಮಾನುಷಯೋನಯಃ ॥76॥
ರಾಜನೆ, ಯುದ್ಧದಲ್ಲಿ ನನ್ನನ್ನು ಮೀರಿಸಲು ದೇವದಾನವರೂ ಶಕ್ತರಲ್ಲ. ಇನ್ನು ಮಾನವರಾಗಿ ಜನಿಸಿದ ಪಾಂಡುಪುತ್ರರ ಬಗ್ಗೆ ಏನು ಹೇಳಬೇಕು?
ಸಂಜಯಃ
ಏವಮುಕ್ತಸ್ತವ ಸುತಃ ಕರ್ಣೇನಾಹವಶೋಭಿನಾ |
ಸಂಪೂಜ್ಯ ಸಂಪ್ರಹೃಷ್ಟಾತ್ಮಾ ತತೋ ರಾಧೇಯಮಬ್ರವೀತ್ ॥77॥
ಸಂಜಯ ನುಡಿದ– ಯುದ್ಧದಲ್ಲಿ ಶೋಭಿಸುವ ಕರ್ಣ ಹೀಗೆ ನುಡಿದಾಗ, ನಿನ್ನ ಪುತ್ರ ಬಲು ಪ್ರಸನ್ನಚಿತ್ತನಾಗಿ ಕರ್ಣನನ್ನು ಅಭಿನಂದಿಸಿ ಹೇಳಿದ.

ದುರ್ಯೋಧನಃ
ಸರ್ವಮೇತತ್ಕರಿಷ್ಯಾಮಿ ಯಥಾ ತ್ವಂ ಕರ್ಣ ಮನ್ಯಸೇ |
ಸೋಪಾಸಂಗಾ ರಥಾಃ ಸಾಶ್ವಾಃ ಸ್ವನುಯಾಸ್ಯಂತಿ ಸಂಯುಗೇ ॥78॥
ದುರ್ಯೋಧನ ನುಡಿದ– ಕರ್ಣ, ನೀನು ಅಪೇಕ್ಷಿಸಿದಂತೆ ನಾನು ಎಲ್ಲವನ್ನೂ ಮಾಡುವೆ. ಕುದುರೆಗಳನ್ನು ಹೂಡಿದ ಸುಸಜ್ಜಿತವಾದ ರಥಗಳು ಯುದ್ಧದಲ್ಲಿ ನಿನ್ನನ್ನು ಹಿಂಬಾಲಿಸಿ ಬರುತ್ತವೆ.
ನಾರಾಚಾನ್ ಗಾರ್ಧ್ರಪತ್ರಾಂಶ್ಚ ಶಕಟಾನಿ ವಹಂತು ತೇ |
ಅನುಯಾಸ್ಯಾಮ ಕರ್ಣ ತ್ವಾಂ ವಯಂ ಸರ್ವೇ ಚ ಪಾರ್ಥಿವಾಃ ॥79॥
ಹದ್ದಿನ ಪುಕ್ಕಗಳುಳ್ಳ ಬಾಣಗಳನ್ನು ಬಂಡಿಗಳು ನಿನಗೆ ಹೊತ್ತು ತರುತ್ತವೆ. ಕರ್ಣ, ನಾವೆಲ್ಲ ರಾಜರೂ ನಿನ್ನನ್ನು ಹಿಂಬಾಲಿಸಿ ಬರುತ್ತೇವೆ.
ಸಂಜಯಃ
ಏವಮುಕತ್ವಾ ಮಹಾರಾಜ ತವ ಪುತ್ರಃ ಪ್ರತಾಪವಾನ್ |
ಅಭಿಗಮ್ಯಾಬ್ರವೀದ್ ರಾಜಾ ಮದ್ರರಾಜಮಿದಂ ವಚಃ ॥80॥
ಮಹಾರಾಜ, ಪ್ರತಾಪಶಾಲಿಯಾದ ನಿನ್ನ ಪುತ್ರ ರಾಜಾ ದುರ್ಯೋಧನ ಶಲ್ಯನ ಬಳಿಗೆ ಹೋಗಿ ಹೀಗೆ ಹೇಳಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಏಕತ್ರಿಂಶೋಽಧ್ಯಾಯಃ ॥31॥

ಮಹಾಭಾರತತಾತ್ಪರ್ಯನಿರ್ಣಯ
ಇತೀರಿತೇ ಸೌತ್ಯಕೃತೇ ಸ ಶಲ್ಯಂ
ಪ್ರೋವಾಚ ಸ ಕ್ರುದ್ಧ ಇವಾಭವತ್ ತದಾ |
ದುರ್ಯೋಧನೋ ರಥಿನಃ ಸಾರಥೇಸ್ತು
ವ್ಯಾವರ್ಣಯನ್ನುತ್ತಮತಾಮಶಾಮಯತ್ ॥ 25 ॥
ಕರ್ಣ ಹೀಗೆ ಹೇಳಿದಾಗ ದುರ್ಯೋಧನ ಶಲ್ಯನಲ್ಲಿ ಕರ್ಣನಿಗೆ ಸಾರಥಿ ಆಗಲು ಕೇಳಿಕೊಂಡ. ಆಗ ಶಲ್ಯ ಕೋಪಗೊಂಡವನಂತೆ ತೋರಿಕೊಂಡ. ರಥಿಕನಿಗಿಂತ ಸಾರಥಿ ಉತ್ತಮನಾಗಿರಬೇಕೆಂದು ಹೇಳುತ್ತ ದುರ್ಯೋಧನ ಅವನನ್ನು ಸಮಾಧಾನಪಡಿಸಿದ.

ಮೂವತ್ತೆರಡನೆಯ ಅಧ್ಯಾಯ
ಕರ್ಣನಿಗೆ ಸಾರಥ್ಯ ಮಾಡಲು ಶಲ್ಯನ ಒಪ್ಪಿಗೆ.
ಸಂಜಯಃ
ಏವಮುಕ್ತೋ ಮಹಾರಾಜ ತವ ಪುತ್ರಃ ಪ್ರತಾಪವಾನ್ |
ಮದ್ರೇಶ್ವರಂ ಪ್ರತಿ ರಣೇ ಪರಸೈನ್ಯಭಯಂಕರಮ್ ॥1॥
ಸರ್ವಂ ತಥಾಽಕರೋತ್ ತೂರ್ಣಂ ರಾಧೇಯಸ್ತದ್ಯಥಾಽಬ್ರವೀತ್॥2॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಮಹಾರಾಜ, ಪ್ರತಾಪಶಾಲಿಯಾದ ನಿನ್ನ ಮಗನು ರಣದಲ್ಲಿ ಶತ್ರುಸೈನ್ಯಕ್ಕೆ ಭಯ ಉಂಟುಮಾಡಬಲ್ಲ ಮಹಾರಥನಾದ ಶಲ್ಯನ ವಿಷಯದಲ್ಲಿ ಕರ್ಣನು ಹೇಳಿದಂತೆ ಎಲ್ಲ ಕಾರ್ಯಗಳನ್ನು ಬೇಗನೆ ಮಾಡಿದ.
ಮದ್ರರಾಜಂ ಚ ಸಮರೇ ಪ್ರಣಮ್ಯ ಚ ಮಹಾರಥಮ್ |
ವಿನಯೇನೋಪಸಂಗಮ್ಯ ಪ್ರಣಯಾದ್ ವಾಕ್ಯಮಬ್ರವೀತ್ ॥3॥
ಪುತ್ರಸ್ತವ ಮಹಾರಾಜ ಮದ್ರರಾಜಂ ಮಹಾರಥಮ್ ॥4॥
ಮಹಾರಾಜ, ರಣರಂಗದಲ್ಲಿ ಮಹಾರಥನಾದ ಶಲ್ಯನನ್ನು ನಮಸ್ಕರಿಸಿ ವಿನಯದಿಂದ ಬಳಿಯಲ್ಲಿ ನಿಂತು ನಿನ್ನ ಪುತ್ರ ನುಡಿದ.
ಸತ್ಯವ್ರತ ಮಹಾಭಾಗ ದ್ವಿಷತಾಂ ತಾಪವರ್ಧನ |
ಮದ್ರೇಶ್ವರ ರಣೇ ಶೂರ ಪರಸೈನ್ಯಭಯಂಕರ ॥5॥
ಸತ್ಯವ್ರತ, ಮಹಾಭಾಗ್ಯಶಾಲಿ, ಶತ್ರುಗಳಿಗೆ ತಾಪವನ್ನು ಹೆಚ್ಚಿಸುವ ಮತ್ತು ಶತ್ರುಸೈನ್ಯಗಳಿಗೆ ಭಯಂಕರನಾದ ರಣದಲ್ಲಿ ಶೂರನಾದ ಶಲ್ಯನೇ!
ಮತ್ಪ್ರಿಯಾರ್ಥಂ ಹಿತಾರ್ಥಂ ಚ ತಥಾ ಪಾರ್ಥವಧಾಯ ಚ |
ಶ್ರುತವಾನಸಿ ಕರ್ಣಸ್ಯ ಬ್ರುವತೋ ವದತಾಂ ವರ ॥6॥
ಉತ್ತಮ ಮಾತುಗಾರನೆ, ಕರ್ಣನು ಪಾರ್ಥನ ವಧೆಗಾಗಿ ನನ್ನ ಸಂತೋಷಕ್ಕಾಗಿ ಹಿತಕ್ಕಾಗಿ ನುಡಿದುದನ್ನು ನೀನು ಕೇಳಿಸಿಕೊಂಡಿರುವೆ.
ಯಥಾ ನೃಪತಿಸಿಂಹಾನಾಂ ಮಧ್ಯೇ ತ್ವಾಂ ವರಯೇ ಸ್ವಯಮ್ ॥7॥
ನಾನು ಸ್ವತಃ ರಾಜಶ್ರೇಷ್ಠರ ಮಧ್ಯದಲ್ಲಿ ನಿನ್ನನ್ನು ಕೇಳಿಕೊಳ್ಳುತ್ತೇನೆ.
ತತಶ್ತ್ವಮಪ್ರತಿವೀರ್ಯಾದ್ಯ ಶತ್ರುಪಕ್ಷಕ್ಷಯಾವಹ |
ಮದ್ರೇಶ್ವರ ಪ್ರಯಾಚೇಽಹಂ ಶಿರಸಾ ವಿನಯೇನ ಚ ॥8॥
ನಿನ್ನ ವೀರ್ಯ ಅಪ್ರತಿಮ. ಶತ್ರುಪಕ್ಷ ಕ್ಷಯಕಾರಿಯಾಗಿರುವ, ಅಂಥ ಶಲ್ಯನೆ, ನಿನಗೆ ತಲೆಬಾಗಿ ವಿನಯದಿಂದ ಬೇಡುತ್ತೇನೆ.
ತಸ್ಮಾತ್ ಪಾರ್ಥವಿನಾಶಾರ್ಥಂ ಹಿತಾರ್ಥಂ ಮಮ ಚೈವ ಹಿ |
ತ್ವಂ ಪಾಹಿ ಸರ್ವತಃ ಕರ್ಣಂ ಭವಂ ಬ್ರಹ್ಮೇವ ಸುವ್ರತ ॥9॥
ಅದರಿಂದ ಪಾರ್ಥನ ವಿನಾಶಕ್ಕಾಗಿ, ನನ್ನ ಹಿತಕ್ಕಾಗಿ, ರುದ್ರನನ್ನು ಬ್ರಹ್ಮನಂತೆ, ಕರ್ಣನನ್ನು ನೀನು ಎಲ್ಲ ಆಪತ್ತುಗಳಲ್ಲಿ ರಕ್ಷಿಸು.

ಸಾರಥ್ಯಂ ರಥಿನಾಂ ಶ್ರೇಷ್ಠ ಪ್ರಣಯಾತ್ ಕರ್ತುಮರ್ಹಸಿ |
ತ್ವಯಿ ಯಂತರಿ ರಾಧೇಯೋ ವಿದ್ವಿಷೋ ಮೇ ವಿಜೇಷ್ಯತೇ ||10||
ರಥಿಕರಲ್ಲಿ ಶ್ರೇಷ್ಠನೆ, ನೀನು ಕರ್ಣನಿಗೆ ಪ್ರೀತಿಯಿಂದ ಸಾರಥ್ಯಮಾಡು. ನೀನು ಸಾರಥಿಯಾದರೆ ಕರ್ಣ ಶತ್ರುಗಳನ್ನು ಗೆಲ್ಲುತ್ತಾನೆ.
ಅಭೀಷೂಣಾಂ ಹಿ ಕರ್ಣಸ್ಯ ಗ್ರಹೀತಾನ್ಯೋ ನ ವಿದ್ಯತೇ |
ಋತೇ ಹಿ ತ್ವಾಂ ಮಹಾಭಾಗ ವಾಸುದೇವಸಮಂ ಯುಧಿ ||11||
ಮಹಾಶಯನೆ, ಕೃಷ್ಣಸದೃಶನಾದ ನಿನ್ನನ್ನು ಬಿಟ್ಟರೆ ಕರ್ಣನ ಕುದುರೆ ಲಗಾಮುಗಳನ್ನು ಹಿಡಿಯಬಲ್ಲವನು ಇನ್ನೊಬ್ಬನಿಲ್ಲ.
ಲೋಕೇಽಭೀಷುಗ್ರಹೀತಾ ಹಿ ನಾನ್ಯೋಽಸ್ತಿ ಭವತಾ ಸಮಃ |
ಸ ಪಾಹಿ ಸರ್ವಥಾ ಕರ್ಣಂ ಯಥಾ ಬ್ರಹ್ಮಾ ಮಹೇಶ್ವರಮ್ ||12||
ಲೋಕದಲ್ಲಿ ನಿನಗೆ ಸಮಾನನಾದ ಸಾರಥಿ ಇನ್ನೊಬ್ಬನಿಲ್ಲ. ಅದರಿಂದ ಬ್ರಹ್ಮನು ಮಹೇಶ್ವರನನ್ನು ಹೇಗೋ ಹಾಗೆ ನೀನು ಕರ್ಣನನ್ನು ಸರ್ವಾಪತ್ತುಗಳಲ್ಲಿ ಕಾಪಾಡು.
ಪಾರ್ಥಸ್ಯ ಸಚಿವಃ ಕೃಷ್ಣೋ ಯಥಾಽಭೀಷುವರಗ್ರಹಃ ||13||
ಯಥಾ ಚ ಸರ್ವಥಾಽಽಪತ್ಸು ವಾರ್ಷ್ಣೇಯಃ ಪಾತಿ ಪಾಂಡವಮ್ |
ತಥಾ ಮದ್ರೇಶ್ವರಾದ್ಯ ತ್ವಂ ರಾಧೇಯಂ ಪ್ರತಿಪಾಲಯ ||14||
ಅರ್ಜುನನಿಗೆ ಕೃಷ್ಣ ಸಾರಥಿಯಾಗಿ ಸಹಾಯಕನಾಗಿರುವಂತೆ, ಎಲ್ಲ ಆಪತ್ತುಗಳಲ್ಲಿ ಕೃಷ್ಣ ಅರ್ಜುನನನ್ನು ಕಾಪಾಡುವಂತೆ, ಮದ್ರೇಶ್ವರ, ಈಗ ನೀನು ಕರ್ಣನನ್ನು ಕಾಪಾಡಬೇಕಿದೆ.
ಭೀಷ್ಮೋ ದ್ರೋಣಃ ಕೃಪಃ ಕರ್ಣೋ ಭವಾನ್ ಭೋಜಶ್ಚ
ವೀರ್ಯವಾನ್ |
ಶಕುನಿಃ ಸೌಬಲೋ ದ್ರೌಣಿರಹಮೇವ ಚ ನೋ ಬಲಮ್ ||15||
ಭೀಷ್ಮ, ದ್ರೋಣ, ಕೃಪ, ಕರ್ಣ, ನೀನು ಶಲ್ಯ, ವೀರ್ಯಶಾಲಿ ಕೃತವರ್ಮ, ಶಕುನಿ, ಅಶ್ವತ್ಥಾಮ ಮತ್ತು ನಾನುಇವರೆ ನಮ್ಮ ಬಲ.
ಏವಮೇಷ ಕೃತೋ ಭಾಗೋ ನವಧಾ ಪೃಥಿವೀಪತೇ |
ನ ಚ ಭಾಗೋಽತ್ರ ಭೀಷ್ಮಸ್ಯ ದ್ರೋಣಸ್ಯ ಚ ಮಹಾತ್ಮನಃ ||16||
ರಾಜನೆ, ಈ ಒಂಬತ್ತುಮಂದಿಗೆ ಶತ್ರುಸೈನ್ಯದಲ್ಲಿ ಒಂಬತ್ತು ಭಾಗಗಳಿದ್ದುವು. ಈಗ ಮಹಾತ್ಮ ಭೀಷ್ಮನ ಭಾಗ, ದ್ರೋಣನ ಭಾಗಗಳಿಲ್ಲ.
ತಾಭ್ಯಾಮತೀತ್ಯ ತೌ ಭಾಗೌ ನಿಹತಾ ಮಮ ಶತ್ರವಃ |
ವೃದ್ಧೌ ಹಿ ತೌ ಮಹೇಷ್ವಾಸೌ ಛಲೇನ ನಿಹತೌ ಯುಧಿ ||17||
ಅವರಿಬ್ಬರೂ ಆ ಭಾಗಗಳನ್ನು ಮೀರಿ ಇನ್ನೂ ಹೆಚ್ಚಾಗಿಯೆ ಶತ್ರುಗಳನ್ನು ಸಂಹರಿಸಿದ್ದಾರೆ. ವೃದ್ಧರಾದರೂ ಮಹಾಬಿಲ್ಲಾಳುಗಳಾಗಿದ್ದರು. ವಂಚನೆಯಿಂದ ಅವರನ್ನು ಶತ್ರುಗಳು ಸಂಹರಿಸಿದರು.
ಕೃತ್ವಾ ಚಾಸುಕರಂ ಕರ್ಮ ಗತೌ ಸ್ವರ್ಗಮಿತೋಽನಘ |
ತಥಾಽನ್ಯೇ ಪುರುಷವ್ಯಾಘ್ರಾಃ ಪರೈರ್ವಿನಿಹತಾ ಯುಧಿ ||18||
ಅವರು ರಣದಲ್ಲಿ ಅಸಾಧ್ಯಕಾರ್ಯಗಳನ್ನು ಮಾಡಿ ಇಲ್ಲಿಂದ ಸ್ವರ್ಗಕ್ಕೆ ತೆರಳಿದರು. ಹಾಗೆಯೇ ಬೇರೆ ಉತ್ತಮ ಯೋಧರೂ ಶತ್ರುಗಳಿಂದ ಹತರಾಗಿ ಸ್ವರ್ಗಕ್ಕೆ ಹೋದರು.
ಅಸ್ಮದೀಯಾಶ್ಚ ಬಹವಃ ಸ್ವರ್ಗಾಯ ಗಮಿತಾಃ ಪರೈಃ |
ತ್ಯಕ್ತ್ವಾ ಪ್ರಾಣಾನ್ ಯಥಾಶಕ್ತಿ ಚೇಷ್ಟಾಂ ಕೃತ್ವಾ ಚ ಪುಷ್ಕಲಾಮ್ ||19||
ನಮ್ಮಲ್ಲಿ ಬಹುಮಂದಿ ಪ್ರಾಣಗಳನ್ನು ಒತ್ತೆಯಿಟ್ಟು ಯಥಾಶಕ್ತಿ ಬಹಳ ಸಾಹಸಕಾರ್ಯ ಮಾಡಿ ಶತ್ರುಗಳಿಂದ ಸ್ವರ್ಗಕ್ಕೆ ಕಳಿಸಲ್ಪಟ್ಟರು.
ತದಿದಂ ಹತಭೂಯಿಷ್ಠಂ ಬಲಂ ಮಮ ನರಾಧಿಪ |
ಪೂರ್ವಮಪ್ಯಲ್ಪಕೈಃ ಪಾರ್ಥೈರ್ಹತಂ ಕಿಮುತ ಸಾಂಪ್ರತಮ್ ||20||
ರಾಜನೆ, ನಮ್ಮ ಸೈನ್ಯದಲ್ಲಿ ಹೆಚ್ಚಿನವರು ಹತರಾಗಿದ್ದಾರೆ. ಹಿಂದೆಯೂ ಅಲ್ಪಸಂಖ್ಯೆಯಲ್ಲಿದ್ದ ಪಾಂಡವರಿಂದ ನಮ್ಮ ಸೈನ್ಯ ಹತವಾಯಿತು. ಇನ್ನು ಈಗ ಹೇಳುವುದೇನಿದೆ?
ಬಲವಂತೋ ಮಹಾತ್ಮಾನಃ ಕೌಂತೇಯಾಃ ಸತ್ಯವಿಕ್ರಮಾಃ |
ಬಲಂ ಶೇಷಂ ನ ಹನ್ಯುರ್ಮೇ ಯಥಾ ತತ್ಕುರು ಪಾರ್ಥಿವ ||21||
ಬಲಿಷ್ಠರು, ಮಹಾತ್ಮರು, ಸಫಲವಾಗುವಂಥ ಪರಾಕ್ರಮವುಳ್ಳವರು ಪಾಂಡವರು. ರಾಜನೆ, ಅವರು ನಮ್ಮ ಅಳಿದುಳಿದ ಸೈನ್ಯವನ್ನು ರಣದಲ್ಲಿ ನಾಶಮಾಡದಂತೆ ಮಾಡು.
ಹತವೀರಮಿದಂ ಸೈನ್ಯಂ ಪಾಂಡವೈಃ ಸಮರೇ ವಿಭೋ |
ಕರ್ಣೋ ಹ್ಯೇಕೋ ಮಹಾಬಾಹುರಸ್ಮತ್ಪ್ರಿಯಹಿತೇ ರತಃ ||22||
ರಾಜನೆ, ಪಾಂಡವರಿಂದ ನಮ್ಮ ಸೈನ್ಯದಲ್ಲಿ ಬಹಳಷ್ಟು ವೀರರು ರಣದಲ್ಲಿ ಹತರಾಗಿದ್ದಾರೆ. ಮಹಾಬಾಹು ಕರ್ಣನೊಬ್ಬನೇ ಈಗ ನಮ್ಮ ಸಂತೋಷ, ಹಿತಸಾಧನೆಗಳಲ್ಲಿ ನಿರತನಾಗಿದ್ದಾನೆ.
ಭವಾಂಶ್ಚ ಪುರುಷವ್ಯಾಘ್ರ ಸರ್ವಲೋಕಮಹಾರಥಃ |
ಶಲ್ಯ ಕರ್ಣೋಽರ್ಜುನೇನಾದ್ಯ ಯೋದ್ಧುಮಿಚ್ಛತಿ ಸಂಯುಗೇ ||23||
ಹಾಗೇ ಪುರುಷಶ್ರೇಷ್ಠನೆ, ಸರ್ವಲೋಕಗಳಲ್ಲಿ ಉತ್ತಮ ಮಹಾರಥನೆನಿಸಿರು ವವನು ನೀನು ಕೂಡ. ಶಲ್ಯ, ಕರ್ಣನು ಈಗ ಅರ್ಜುನನೊಡನೆ ರಣರಂಗದಲ್ಲಿ ಹೋರಾಡಲು ಬಯಸಿದ್ದಾನೆ.

ತಸ್ಮಿನ್ ಜಯಾಶಾ ವಿಪುಲಾ ಮದ್ರರಾಜ ನರಾಧಿಪ |
ತಸ್ಯಾಭೀಷುಗ್ರಹವರೋ ನಾನ್ಯೋಽಸ್ತಿ ಭುವಿ ಕಶ್ಚನ ॥24॥
ಮದ್ರರಾಜ ಶಲ್ಯ, ಕರ್ಣನಲ್ಲಿ ನಮ್ಮ ಪಕ್ಷಕ್ಕೆ ಜಯದಾಸೆ ಬಹಳ ಇದೆ. ಅವನಿಗೆ ಸಾರಥಿಯಾಗಬಲ್ಲವನು ಭೂಮಿಯಲ್ಲಿ ಬೇರೊಬ್ಬನು ಯಾವನೂ ಇಲ್ಲ.
ಪಾರ್ಥಸ್ಯ ಸಮರೇ ಕೃಷ್ಣೋ ಯಥಾಽಭೀಷುಗ್ರಹೋ ವರಃ |
ತಥಾ ತ್ವಮಪಿ ಕರ್ಣಸ್ಯ ರಥೇಽಭೀಷುಗ್ರಹೋ ಭವ ॥25॥
ಅರ್ಜುನನಿಗೆ ಯುದ್ಧದಲ್ಲಿ ಹೇಗೆ ಕೃಷ್ಣನು ಉತ್ತಮ ಸಾರಥಿಯಾಗಿರುವನೋ ಹಾಗೇ ನೀನೂ ಕರ್ಣನಿಗೆ ರಥದಲ್ಲಿ ಸಾರಥಿಯಾಗು.
ತೇನ ಯುಕ್ತೋ ರಣೇ ಪಾರ್ಥೋ ರಕ್ಷ್ಯಮಾಣಶ್ಚ ಪಾರ್ಥಿವ |
ಯಾನಿ ಕರ್ಮಾಣಿ ಕುರುತೇ ಪ್ರತ್ಯಕ್ಷಾಣಿ ತಥೈವ ಚ ॥26॥
ಅರ್ಜುನನು ಕೃಷ್ಣನಿಂದ ಯುಕ್ತನಾಗಿ, ರಣದಲ್ಲಿ ಅವನಿಂದ ರಕ್ಷಿತನಾಗಿ ಏನು ಕಾರ್ಯಗಳನ್ನು ಮಾಡುತ್ತಿರುವನೋ ಅವು ಪ್ರತ್ಯಕ್ಷ ಕಾಣುತ್ತಿವೆ.
ಪೂರ್ವಂ ನ ಸಮರೇ ಹ್ಯೇವಮವಧೀದರ್ಜುನೋ ರಿಪೂನ್ |
ಇದಾನೀಂ ವಿಕ್ರಮೋ ಹ್ಯಸ್ಯ ಕೃಷ್ಣೇನ ಸಹಿತಸ್ಯ ಚ ॥27॥
ಹಿಂದೆ ಅರ್ಜುನ ಯುದ್ಧದಲ್ಲಿ ಈ ರೀತಿ ಶತ್ರುಗಳನ್ನು ಕೊಲ್ಲುತ್ತಿರಲಿಲ್ಲ. ಈಗ ಕೃಷ್ಣನ ಸಹಾಯದಿಂದ ಅವನು ಪರಾಕ್ರಮ ತೋರುತ್ತಿದ್ದಾನೆ.
ಕೃಷ್ಣೇನ ಸಹಿತಃ ಪಾರ್ಥೋ ಧಾರ್ತರಾಷ್ಟ್ರೀಂ ಮಹಾಚಮೂಮ್ |
ಅಹನ್ಯಹನಿ ಮದ್ರೇಶ ದ್ರಾವಯನ್ ದೃಶ್ಯತೇ ಯುಧಿ ॥28॥
ಮದ್ರರಾಜ, ಕೃಷ್ಣನೊಡಗೂಡಿ ಅರ್ಜುನನು ಕೌರವಸೈನ್ಯವನ್ನು ಯುದ್ಧದಲ್ಲಿ ಪ್ರತಿದಿನ ಹೊಡೆದೋಡಿಸುವುದು ಕಂಡುಬರುತ್ತಿದೆ.
ಭಾಗೋಽವಶಿಷ್ಟಃ ಕರ್ಣಸ್ಯ ತವ ಚೈವ ಮಹಾದ್ಯುತೇ |
ತಂ ಭಾಗಂ ಸಹ ಕರ್ಣೇನ ಯುಗಪನ್ನಾಶಯಾದ್ಯ ಹಿ ॥29॥
ಮಹಾಪರಾಕ್ರಮಿಯೆ, ಪಾಂಡವಸೈನ್ಯದಲ್ಲಿ ಈಗ ಕರ್ಣನ ಭಾಗ ಮತ್ತು ನಿನ್ನ ಭಾಗ ಉಳಿದಿದೆ. ಅವೆರಡನ್ನೂ ನೀನು ಕರ್ಣನ ಜೊತೆಗೂಡಿ ಒಮ್ಮೆಲೆ ವಿನಾಶ ಮಾಡಿಬಿಡು.
ಅರುಣೇನ ಯಥಾ ಸಾರ್ಧಂ ತಮಃ ಸೂರ್ಯೋ ವ್ಯಪೋಹತಿ |
ತಥಾ ಕರ್ಣೇನ ಸಹಿತೋ ಜಹಿ ಪಾರ್ಥಂ ಮಹಾಹವೇ ॥30॥
ಅರುಣನ ಜೊತೆಗೂಡಿ ಸೂರ್ಯನು ಕತ್ತಲನ್ನು ನಾಶಮಾಡುವಂತೆ ಕರ್ಣನ ಜೊತೆಗೂಡಿ ನೀನು ಅರ್ಜುನನನ್ನು ಮಹಾರಣದಲ್ಲಿ ನಾಶಮಾಡು.
ಉದ್ಯಂತೌ ಚ ಯಥಾ ಸೂರ್ಯೌ ಬಾಲಸೂರ್ಯಸಮಪ್ರಭೌ |
ಕರ್ಣಶಲ್ಯೌ ರಣೇ ದೃಷ್ಟ್ವಾ ವಿದ್ರವಂತು ಮಹಾರಥಾಃ ॥31॥
ಸೂರ್ಯರಂತೆ ಉದಿಸುತ್ತಲೇ ಹಾಗೇ ಬಾಲಸೂರ್ಯರಂತಿರುವ ನೀವಿಬ್ಬರು ಕರ್ಣಶಲ್ಯರು ರಣದಲ್ಲಿ ಗೋಚರರಾಗಿರಿ, ನಿಮ್ಮನ್ನು ಕಂಡೊಡನೆ ಪಾಂಡವರ ಮಹಾರಥರು ಪಲಾಯನ ಮಾಡಲಿ.
ಸೂರ್ಯಾರುಣೌ ಯಥಾ ದೃಷ್ಟ್ವಾ ತಮೋ ನಶ್ಯತಿ ಮಾರಿಷ |
ತಥಾ ನಶ್ಯಂತು ಕೌಂತೇಯಾಃ ಸಪಾಂಚಾಲಾಃ ಸಸೃಂಜಯಾಃ ॥32॥
ಸೂರ್ಯಅರುಣರನ್ನು ಕಂಡೊಡನೆ ಕತ್ತಲು ನಶಿಸುತ್ತದೆ. ಹಾಗೆಯೇ ನಿಮ್ಮಿಬ್ಬರನ್ನು ಕಂಡೊಡನೆ ಪಾಂಡವ ಪಾಂಚಾಲ ಸೃಂಜಯರು ನಶಿಸಲಿ.
ರಥಿನಾಂ ಪ್ರವರಃ ಕರ್ಣೋ ಯಂತೄಣಾಂ ಪ್ರವರೋ ಭವಾನ್ |
ಸಂಯೋಗೋ ಯುವಯೋರ್ಲೋಕೇ ನಾಭೂನ್ನ ಚ ಭವಿಷ್ಯತಿ ॥33॥
ರಥಿಕರಲ್ಲಿ ಶ್ರೇಷ್ಠನು ಕರ್ಣ. ಸಾರಥಿಗಳಲ್ಲಿ ಶ್ರೇಷ್ಠನು ನೀನು. ನೀವಿಬ್ಬರು ಜೊತೆಗೂಡಿದರೆ ಅದು ನ ಭೂತೋ ನ ಭವಿಷ್ಯತಿಹಿಂದೆ ಆಗಿರಲಿಲ್ಲ, ಮುಂದೆ ಆಗುವಂಥದ್ದೂ ಅಲ್ಲ. ಅಪೂರ್ವವೆನಿಸುವುದು.
ಯಥಾ ಸರ್ವಾಸ್ವವಸ್ಥಾಸು ವಾರ್ಷ್ಣೇಯಃ ಪಾತಿ ಪಾಂಡವಮ್ |
ತಥಾ ಭವಾನ್ ಪರಿತ್ರಾತು ಕರ್ಣಂ ವೈಕರ್ತನಂ ರಣೇ ॥34॥
ಎಲ್ಲ ಪರಿಸ್ಥಿತಿಗಳಲ್ಲಿಯೂ ಅರ್ಜುನನನ್ನು ಕೃಷ್ಣ ರಕ್ಷಿಸುವಂತೆ ನೀನೂ ರಣದಲ್ಲಿ ಕರ್ಣನನ್ನು ರಕ್ಷಿಸುತ್ತಿರು.
ಸಾರಥ್ಯಂ ಕ್ರಿಯತಾಂ ತಸ್ಯ ಯುಧ್ಯಮಾನಸ್ಯ ಸಂಯುಗೇ ॥35॥
ರಣರಂಗದಲ್ಲಿ ಹೋರಾಡುವಾಗ ಕರ್ಣನಿಗೆ ನೀನು ಸಾರಥ್ಯಮಾಡು.
ಯಥಾ ಚ ಸಮರೇ ಕೃಷ್ಣೋ ರಕ್ಷತೇ ಸರ್ವತೋಽರ್ಜುನಮ್ |
ತಥಾ ತ್ವಮಪಿ ರಾಧೇಯಂ ರಕ್ಷಸ್ವ ಚ ಮಹಾರಣೇ ॥36॥
ರಣರಂಗದಲ್ಲಿ ಕೃಷ್ಣ ಅರ್ಜುನನನ್ನು ಎಲ್ಲ ಕಡೆಗಳಿಂದ ರಕ್ಷಿಸುವಂತೆ ನೀನೂ ಕೂಡ ಕರ್ಣನನ್ನು ರಕ್ಷಿಸುತ್ತಿರು.
ತ್ವಯಾ ಸಾರಥಿನಾ ಹ್ಯೇಷ ಅಪ್ರಧೃಷ್ಯೋ ಭವಿಷ್ಯತಿ |
ದೇವತಾನಾಮಪಿ ರಣೇ ಸಶಕ್ರಾಣಾಂ ಮಹೀಪತೇ ॥37॥
ಕಿಂ ಪುನಃ ಪಾಂಡವೇಯಾನಾಂ ಮಾ ವಿಶಂಕೀರ್ವಚೋ ಮಮ ॥38॥
ರಾಜನೆ, ನೀನು ಸಾರಥಿಯಾದರೆ ಕರ್ಣನು ಇಂದ್ರಾದಿ ದೇವತೆಗಳಿಗೂ ಮಣಿಸಲಾಗದವನಾಗುತ್ತಾನೆ ಎಂದಮೇಲೆ

ಪಾಂಡವಯೋಧರಿಗೆ ಇನ್ನೇನು ಹೇಳಬೇಕು? ಅದರಿಂದ ನಿನ್ನನ್ನು ಕರ್ಣನಿಗೆ ಸಾರಥಿಯಾಗಲು ಕೇಳಿಕೊಂಡೆನಷ್ಟೇ. ನನ್ನ ಮಾತನ್ನು ತಪ್ಪಾಗಿ ತಿಳಿಯಬೇಡ.
ಸಂಜಯಃ
ದುರ್ಯೋರ್ಧನವಚಃ ಶ್ರುತ್ವಾ ಶಲ್ಯಃ ಕ್ರೋಧಸಮನ್ವಿತಃ|
ಧಾರ್ತರಾಷ್ಟ್ರಮಥೋವಾಚ ಸೃಕ್ಕಿಣೀ ಪರಿಲೇಲಿಹನ್ ॥39॥
ಸಂಜಯ ನುಡಿದ– ದುರ್ಯೋರ್ಧನನ ಮಾತನ್ನು ಕೇಳಿ ಶಲ್ಯನು ಕೋಪಿಸಿ ಕೊಂಡು, ಕಟವಾಯಿಯನ್ನು ನೆಕ್ಕಿ ನುಡಿದ.
ತ್ರಿಶಿಖಾಂ ಭ್ರುಕುಟಿಂ ಕೃತ್ವಾ ಧುನ್ವನ್ ಹಸ್ತೌ ಪುನಃ ಪುನಃ|
ಕ್ರೋಧರಕ್ತೇ ಮಹಾನೇತ್ರೇ ಪರಿವೃತ್ಯ ಮಹಾಭುಜಃ ॥40॥
ಕುಲೈಶ್ವರ್ಯಶ್ರುತಬಲೈರ್ದೃಪ್ತಃ ಶಲ್ಯೋಽಬ್ರವೀದಿದಮ್ ॥41॥
ಹಣೆ ಮೇಲೆ ಮೂರು ಗೆರೆಗಳು ಕಾಣಿಸಿಕೊಳ್ಳುವಂತೆ ಹುಬ್ಬುಗಂಟಿಕ್ಕಿ, ಎರಡು ತೋಳುಗಳನ್ನು ಬೀಸುತ್ತ, ಕೋಪದಿಂದ ಕೆಂಪಾದ ದೊಡ್ಡ ಕಣ್ಣುಗಳನ್ನು ತಿರುಗಿಸುತ್ತ ಕುಲ ಐಶ್ವರ್ಯ ವಿದ್ಯೆ ಬಲದಿಂದ ದೃಪ್ತನಾದ ಮಹಾ ಬಾಹುವಾದ ಶಲ್ಯ ಹೀಗೆ ನುಡಿದ.
ಶಲ್ಯಃ
ಅವಮನ್ಯಸೇ ಮಾಂ ಗಂಧಾರೇ ಧ್ರುವಂ ಮಾಂ ಪರಿಶಂಕಸೇ|
ಯನ್ಮಾ ಬ್ರವೀಷಿ ವಿಸ್ರಬ್ಧಃ ಸಾರಥ್ಯಂ ಕ್ರಿಯತಾಮಿತಿ ॥42॥
ಶಲ್ಯ ನುಡಿದ– ದುರ್ಯೋರ್ಧನ, ನೀನು ಅಳುಕದೆ ನನ್ನ ಮುಂದೆ `ಸಾರಥ್ಯ ಮಾಡೆಂ'ದು ಹೇಳಿ ನನ್ನನ್ನು
ಅವಮಾನಿಸುತ್ತಿರುವೆ.ನಿಶ್ಚಯವಾಗಿ ನನ್ನ ಸಾಮರ್ಥ್ಯದ ವಿಷಯದಲ್ಲಿ ಸಂದೇಹಪಡುತ್ತಿರುವೆ.
ಅಸ್ಮತ್ತೋಽಭ್ಯಧಿಕಂ ಕರ್ಣಂ ಮನ್ವಾನಸ್ತಂ ಪ್ರಶಂಸಸಿ|
ನ ಚಾಹಂ ಯುಧಿ ರಾಧೇಯಂ ಗಣಯೇ ತುಲ್ಯಮಾತ್ಮನಃ ॥43॥
ಕರ್ಣನನ್ನು ನನಗಿಂತ ಮೇಲೆಂದು ತಿಳಿದು ನನ್ನ ಮುಂದೆ ಕರ್ಣನ ಪ್ರಶಂಸೆ ಮಾಡುತ್ತಿರುವೆ. ಕರ್ಣನನ್ನು ರಣದಲ್ಲಿ ನನಗೆ
ಸಮಾನನೆಂದರೂ ಕೂಡ ನಾನು ಒಪ್ಪಲಾರೆ.
ಆದಿಶ್ಯತಾಮಭ್ಯಧಿಕೇ ಮಮಾಂಶಃ ಪೃಥಿವೀಪತೇ|
ತಮಹಂ ಸಮರೇ ಹತ್ವಾ ಗಮಿಷ್ಯಾಮಿ ಯಥಾಗತಮ್ ॥44॥
ಶತ್ರುಪಕ್ಷದಲ್ಲಿ ನನ್ನ ಭಾಗವನ್ನು ನನಗಿಂತ ಮೇಲೆನಿಸಿದವನೊಬ್ಬನಿಗೆ ವಹಿಸಿಕೊಡು. ಅವನನ್ನು ರಣದಲ್ಲಿ ಕೊಂದು ನಾನು ಬಂದ ದಾರಿಯಿಂದ ಹಿಂತಿರುಗುವೆನು.
ಅಥವಾಪ್ಯೇಕ ಏವಾಹಂ ಯೋತ್ಸ್ಯಾಮಿ ತವ ಶತ್ರುಭಿಃ|
ಪಶ್ಯ ವೀರ್ಯಂ ಮಮಾದ್ಯ ತ್ವಂ ಸಂಗ್ರಾಮೇ ದಹತೋ ರಿಪೂನ್ ॥
ಅಥವಾ ನಾನೊಬ್ಬನೇ ನಿನ್ನ ಶತ್ರುಗಳೊಂದಿಗೆ ಹೋರಾಡುವೆನು. ರಣದಲ್ಲಿ ಶತ್ರುಗಳನ್ನು ನಾನು ಸುಡುವಾಗ ನೀನೆ ನನ್ನ ಬಲವನ್ನು ಕಣ್ಣಾರೆ ನೋಡು.
ತವಾತಿಕಾಮಂ ಕೌರವ್ಯ ನಿಧಾಯ ಹೃದಯೇ ಪುಮಾನ್|
ಅಸ್ಮದ್ವಿಧಃ ಪ್ರವರ್ತೇತ ಮಾ ಮಾ ತ್ವಮತಿಶಂಕಿಥಾಃ ॥46॥
ದುರ್ಯೋರ್ಧನ, ಹೀನನಾದ ಕರ್ಣನಿಗೆ ನನ್ನಿಂದ ಸಾರಥ್ಯ ಮಾಡಿಸುವ ಈ ಹೀನ ಕಾಮನೆಯನ್ನು ಬಿಟ್ಟು ಬೇರೆ `ಅತಿಕಾಮ'ವನ್ನು ಅತಿಶಯಿತವಾದ ಒಳ್ಳೆಯ ಕಾಮನೆಯನ್ನು ಮಾಡು. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ನಮ್ಮಂಥ ಪುರುಷರು ಪ್ರವೃತ್ತಿ
ಮಾಡುತ್ತಾರೆ, ನನ್ನ ಸಾಮರ್ಥ್ಯದಲ್ಲಿ ಅತಿಯಾಗಿ ಸಂದೇಹಿಸಬೇಡ.
ಅಪಿ ಚಾಪ್ಯವಮಾನೋ ಮೇ ನ ಕರ್ತವ್ಯಃ ಕಥಂಚನ|
ಪಶ್ಯ ಭೀಮೌ ಮಮ ಭುಜೌ ವಜ್ರಸಂಹನನೌ ದೃಢೌ ॥47॥
ಮತ್ತು ನನಗೆ ನೀನು ಯಾವ ದೃಷ್ಟಿಯಿಂದಲೂ ಅವಮಾನ ಮಾಡುವುದು ಸರಿಯಲ್ಲ. ವಜ್ರದಂತೆ ದೃಢವಾದ ಭಯಂಕರವಾದ ನನ್ನ ಬಾಹುಗಳನ್ನು ನೋಡು.
ಧನುಃ ಪಶ್ಯ ಚ ಮೇ ಚಿತ್ರಂ ಶರಾಂಶ್ಚಾಶೀವಿಷೋಪಮಾನ್|
ರಥಂ ಚ ಪಶ್ಯ ಮೇ ಕ್ಲಪ್ತಂ ಸದಶ್ವೈರ್ವಾತವೇಗಿಭಿಃ ॥48॥
ನನ್ನ ಸುಂದರವಾದ ಧನುಸ್ಸನ್ನು ನೋಡು. ಹಾವುಗಳಂಥ ಬಾಣಗಳನ್ನು ನೋಡು. ಗಾಳಿವೇಗದ ಒಳ್ಳೆ ಜಾತಿಯ ಕುದುರೆಗಳನ್ನು ಹೂಡಿರುವ ನನ್ನ ರಥವನ್ನು ನೋಡು.
ಗದಾಂ ಚ ಪಶ್ಯ ಗಾಂಧಾರೇ ಹೇಮಪಟ್ಟವಿಭೂಷಿತಾಮ್|
ದಾರಯೇಯಂ ಮಹೀಂ ಕ್ರುದ್ಧೋ ವಿಕಿರೇಯಂ ಚ ಪರ್ವತಾನ್ ॥49॥
ಬಂಗಾರದ ಪಟ್ಟಿಯಿಂದ ಅಲಂಕೃತವಾದ ನನ್ನ ಗದೆಯನ್ನೂ ನೋಡು. ನಾನು ಇಡೀ ಭೂಮಿಯನ್ನು ಸೀಳಬಲ್ಲೆ. ಪರ್ವತಗಳನ್ನು ಪುಡಿಮಾಡಿ ಎರಚಬಲ್ಲೆ.
ಶೋಷಯೇಯಂ ಸಮುದ್ರಾಂಶ್ಚ ಪಾತಯೇಯಂ ಚ ಭಾಸ್ಕರಮ್ ॥
ಸಮುದ್ರವನ್ನು ಶೋಷಿಸಬಲ್ಲೆ. ಸೂರ್ಯನನ್ನು ಕೆಳಗೆ ಬೀಳಿಸಬಲ್ಲೆ.
ತಂ ಮಾಮೇವಂವಿಧಂ ರಾಜನ್ ಸಮರ್ಥಮರಿನಿಗ್ರಹೇ|
ಕಸ್ಮಾದ್ಯುನಂಕ್ಷಿ ಸಾರಥ್ಯೇ ಸೂತಸ್ಯಾಧಿರಥೇಸ್ತು ಮಾಮ್ ॥51॥
ರಾಜನೆ, ಶತ್ರುನಿಗ್ರಹದಲ್ಲಿ ಸಮರ್ಥನಾದ ಇಂಥ ನನ್ನನ್ನು ಸೂತನಾದ ಕರ್ಣನ ಸಾರಥ್ಯ ಮಾಡಲು ಏನು ಕಾರಣ

ನಿಯೋಜಿಸುತ್ತಿರುವೆ?
ನ ಚಾಪಿ ಮಮ ರಾಧೇಯಃ ಕಲಾಮರ್ಹತಿ ಷೋಡಶೀಮ್ ॥52॥
ಕರ್ಣ ನನ್ನ ಹದಿನಾರನೆ ಒಂದಂಶಕ್ಕೂ ಸಮನಾಗಲಾರ.
ಸಕರ್ಣಾ ಯೇ ತ್ರಯೋ ಲೋಕಾಃ ಸಾರ್ಜುನಾಃ ಸಜನಾರ್ದನಾಃ।
ನಿಬದ್ಧಾಂಸ್ತಾನ್ ರಣೇ ರಾಜನ್ನ ಗಣೇಯಂ ಕಥಂಚನ ॥53॥
ಕರ್ಣನಿಂದ ಅರ್ಜುನನಿಂದ ಮತ್ತು ಕೃಷ್ಣನಿಂದ ಕೂಡಿದ ಮೂರುಲೋಕ ರಣದಲ್ಲಿ ನನಗೆ ಇದಿರಾಗಿ ನಿಂತರೂ, ರಾಜನೆ, ಅದನ್ನು ನಾನು ಲೆಕ್ಕಿಸುವುದಿಲ್ಲ.
ನ ಚಾಹಂ ಪ್ರಾಕೃತಃ ಕಶ್ಚಿನ್ನ ಚಾಸ್ಮ್ಯಧಿಗತಃ ಸ್ವಯಮ್ ॥54॥
ನಾನೇನೂ ಒಬ್ಬ ನೀಚವ್ಯಕ್ತಿಯಲ್ಲ , ಸ್ವತಃ ಆಶ್ರಯ ಬೇಡಿ ನಿನ್ನ ಬಳಿಗೆ ಬಂದವನೂ ಅಲ್ಲ.
ನ ಮಾಮರ್ಹಸಿ ರಾಜೇಂದ್ರ ನಿಯೋಕ್ತುಂ ಕರ್ಮಣೀದೃಶೇ।
ನ ಹಿ ಪಾಪೀಯಸಃ ಶ್ರೇಯಾನ್ ಪ್ರೇಷ್ಯತ್ವಂ ಕರ್ತುಮರ್ಹತಿ ॥55॥
ಏಕೆಂದರೆ ರಾಜೇಂದ್ರ, ನನ್ನನ್ನು ನೀನು ಇಂಥ ನೀಚಕಾರ್ಯದಲ್ಲಿ ನಿಯೋಜಿಸಬಾರದು. ನೀಚನಲ್ಲಿ ಉತ್ತಮನು ಸೇವಕತ್ವವನ್ನು ವಹಿಸಬಾರದು.
ಯೋ ಹ್ಯಭ್ಯುಪಗತಂ ಮಿತ್ರಂ ಗರೀಯಾಂಸಂ ವಿಶೇಷತಃ।
ವಶೇ ಪಾಪೀಯಸೋ ಧತ್ತೇ ತತ್ಕಾರ್ಯಮಧರೋತ್ತರಮ್ ॥56॥
ಬಳಿಗೆ ಬಂದ ಮಿತ್ರನನ್ನು, ಅದರಲ್ಲಿಯೂ ವಿಶೇಷವಾಗಿ ಉತ್ತಮನಾದ ನನ್ನಂಥ ಮಿತ್ರನನ್ನು ನೀಚನ ವಶದಲ್ಲಿ ಇರಿಸಬಾರದು. ಇರಿಸಿದರೆ ಆ ಕಾರ್ಯ ತಲೆಕೆಳಗಾಗುವುದು, ವಿಪರೀತ ಪರಿಣಾಮ ಉಂಟುಮಾಡುವುದು.
ಬ್ರಹ್ಮಣಾ ಬ್ರಾಹ್ಮಣಾಃ ಸೃಷ್ಟಾ ಮುಖಾತ್ ಕ್ಷತ್ರಂ ಚ ಬಾಹುತಃ।
ಊರುಭ್ಯಾಮಥ ವೈಶ್ಯಾ ವೈ ಶೂದ್ರಾಃ ಪದ್ಭ್ಯಾಮಿತಿ ಶ್ರುತಿಃ ॥57॥
ಬ್ರಹ್ಮನು ಮುಖದಿಂದ ಬ್ರಾಹ್ಮಣರನ್ನು, ಬಾಹುವಿನಿಂದ ಕ್ಷತ್ರಿಯರನ್ನು, ತೊಡೆಗಳಿಂದ ವೈಶ್ಯರನ್ನು, ಪಾದಗಳಿಂದ ಶೂದ್ರರನ್ನು ಹುಟ್ಟಿಸಿದನೆಂದು ಶ್ರುತಿ ಸಾರುತ್ತಿದೆ.
ತೇಭ್ಯೋ ವರ್ಣವಿಶೇಷಾಶ್ಚ ಪ್ರತಿಲೋಮಾನುಲೋಮಜಾಃ।
ಅಥಾನ್ಯೋನ್ಯಸ್ಯ ಸಂಯೋಗಾಚ್ಚಾತುರ್ವರ್ಣ್ಯಸ್ಯ ಭಾರತ ॥58॥
ಸೂತ ವೈದೇಹಿಕ ಚಂಡಾಲಾದಿಗಳು ಪಿತನಿಗೆ ಪ್ರತಿಲೋಮ ಮಾತೆಗೆ ಅನುಲೋಮವಾಗಿ ಹುಟ್ಟುತ್ತಾರೆ, ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯನಿಂದ ಸೂತ, ವೈಶ್ಯನಿಂದ ವೈದೇಹಿಕ, ಶೂದ್ರನಿಂದ ವೃಷಲ ಹುಟ್ಟುತ್ತಾನೆ. ನಾಲ್ಕು ವರ್ಣಗಳ ಪರಸ್ಪರ ಸಂಬಂಧದಿಂದ ಈ ಜಾತಿಗಳು ಹುಟ್ಟುತ್ತವೆ.
ಗೋಪ್ತಾರಃ ಸಂಗ್ರಹೀತಾರೋ ದಾತಾರಃ ಕ್ಷತ್ರಿಯಾಃ ಸ್ಮೃತಾಃ ॥59॥
ರಾಜ್ಯರಕ್ಷಣೆ ಮಾಡಿ ಕರ ವಸೂಲಿ ಮಾಡಿ ದಾನಮಾಡುವವರು ಕ್ಷತ್ರಿಯರು.
ಯಾಜನಾಧ್ಯಾಪನೈರ್ವಿಪ್ರಾ ವಿಶುದ್ಧೈಶ್ಚ ಪ್ರತಿಗ್ರಹೈಃ।
ಲೋಕಸ್ಯಾನುಗ್ರಹಾರ್ಥಾಯ ಸ್ಥಾಪಿತಾ ಬ್ರಾಹ್ಮಣಾ ಭುವಿ ॥60॥
ಯಜ್ಞ ಮಾಡಿಸುವುದು, ವಿದ್ಯೆ ಹೇಳಿಕೊಡುವುದು, ಶುದ್ಧವಾದ ದಾನ ಸ್ವೀಕರಿಸುವುದು, ಇವುಗಳಿಂದ ಲೋಕಾನುಗ್ರಹ ಮಾಡುವುದು ಈ ಕಾರ್ಯಗಳಿಂದಾಗಿ ಭೂಮಿಯಲ್ಲಿ ಬ್ರಾಹ್ಮಣರನ್ನು ಬ್ರಹ್ಮ ಇರಿಸಿದ್ದಾನೆ.
ಕೃಷಿಶ್ಚ ಪಾಶುಪಾಲ್ಯಂ ಚ ವಿಶಾಂ ದಾನಂ ಚ ಧರ್ಮತಃ।
ಬ್ರಹ್ಮಕ್ಷತ್ರವಿಶಾಂ ಶೂದ್ರಾ ವಿಹಿತಾಃ ಪರಿಚಾರಕಾಃ ॥61॥
ಕೃಷಿ ಪಶುಪಾಲನೆ ಧರ್ಮಾನುಸಾರ ದಾನಗಳು ವೈಶ್ಯರ ಕರ್ಮ. ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಪರಿಚರ್ಯೆಯು ಶೂದ್ರರಿಗೆ ವಿಹಿತ.
ಬ್ರಹ್ಮಕ್ಷತ್ರಸ್ಯ ವಿಹಿತಾಃ ಸೂತಾ ವೈ ಪರಿಚಾರಕಾಃ।
ನ ಕ್ಷತ್ರಿಯೋ ವೈ ಸೂತಾನಾಂ ಶೃಣು ಚೇದಂ ವಚೋ ಮಮ ॥62॥
ಸೂತರು ಬ್ರಾಹ್ಮಣ ಕ್ಷತ್ರಿಯರ ಪರಿಚರ್ಯೆ ಮಾಡುವುದು ವಿಹಿತ. ಕ್ಷತ್ರಿಯನು ಸೂತನ ಪರಿಚರ್ಯೆ ಮಾಡಬಾರದು. ನನ್ನ ಮಾತನ್ನು ಕೇಳು.
ಅಹಂ ಮೂರ್ಧಾಭಿಷಿಕ್ತೋ ಹಿ ರಾಜರ್ಷಿಕುಲಜೋ ನೃಪಃ।
ಮಹಾರಥಸಮಾಖ್ಯಾತಃ ಸೇವ್ಯಃ ಸ್ತುತ್ಯಶ್ಚ ವಂದಿನಾಮ್ ॥63॥
ನಾನು ರಾಜರ್ಷಿಗಳ ಕುಲದಲ್ಲಿ ಜನಿಸಿ ಪಟ್ಟಾಭಿಷಿಕ್ತನಾದ ರಾಜನೆನಿಸಿದ್ದೇನೆ. ಮಹಾರಥನೆಂದು ಪ್ರಸಿದ್ಧನಾಗಿದ್ದೇನೆ. ವಂದಿಮಾಗಧರಿಂದ ಸೇವ್ಯನೂ ಸ್ತುತ್ಯನೂ ಆಗಿದ್ದೇನೆ.
ಸೋಽಹಮೇತಾದೃಶೋ ಭೂತ್ವಾ ನೇಹಾರಿಬಲಸೂದನಃ।
ಸೂತಪುತ್ರಸ್ಯ ಸಂಗ್ರಾಮೇ ಸಾರಥ್ಯಂ ಕರ್ತುಮುತ್ಸಹೇ ॥64॥
ಶತ್ರು ಸೈನ್ಯನಾಶಕನಾದ ನಾನು ಇಂಥವನಾಗಿದ್ದೂ ಸೂತಪುತ್ರನಿಗೆ ರಣದಲ್ಲಿ ಸಾರಥ್ಯ ಮಾಡಲು ಒಪ್ಪುವುದಿಲ್ಲ.
ಅವಮನ್ಯಸೇ ಮಾಂ ಗಾಂಧಾರೇ ಧ್ರುವಂ ಚಾಪ್ಯತಿಶಂಕಸೇ।
ಅಯಂ ಚಾಪ್ಯವಮಾನೋ ಮೇ ನ ಕರ್ತವ್ಯಃ ಕಥಂಚನ ॥65॥
ದುರ್ಯೋಧನ, ನೀನು ನನ್ನನ್ನು ಅವಮಾನಿಸುವೆ, ನಿಶ್ಚಯವಾಗಿಯೂ ನನ್ನ ಸಾಮರ್ಥ್ಯದ ವಿಷಯದಲ್ಲಿ ಅತಿಯಾಗಿ ಸಂದೇಹಪಡುವೆ. ಇಂಥ ಅವಮಾನವನ್ನು ನನಗೆ ನೀನು ಮಾಡಬಾರದಾಗಿತ್ತು.

ಆಪೃಚ್ಛೇ ತ್ವಾದ್ಯ ಗಾಂಧಾರೇ ಯಾಸ್ಯಾಮಿ ವಿಷಯಂ ಪ್ರತಿ |
ನ ಚಾಹಂ ಸೂತಪುತ್ರಸ್ಯ ಸಾರಥ್ಯಮುಪಜಗ್ಮಿವಾನ್ ॥66॥
ನನಗೆ ಅನುಜ್ಞೆ ಕೊಡು, ದುರ್ಯೋಧನ, ನಾನು ನನ್ನ ದೇಶಕ್ಕೆ ಹಿಂತಿರುಗುವೆ. ಸೂತಪುತ್ರನಿಗೆ ನಾನು ಸಾರಥ್ಯ ಮಾಡಲಾರೆ.
ಅವಮಾನಮಹಂ ಪ್ರಾಪ್ಯ ನ ಯೋತ್ಸ್ಯಾಮಿ ಕಥಂಚನ |
ಆಪೃಚ್ಛೇ ತ್ವಾಽದ್ಯ ಗಾಂಧಾರೇ ಗಮಿಷ್ಯಾಮಿ ಗೃಹಾಯ ವೈ ॥67॥
ದುರ್ಯೋಧನ, ನಿನ್ನಿಂದ ಅವಮಾನಿತನಾದ ಮೇಲೆ ನಾನು ಸರ್ವಥಾ ನಿನ್ನ ಯುದ್ಧದಲ್ಲಿ ಭಾಗವಹಿಸುವುದಿಲ್ಲ. ಈಗಲೇ ನಾನು ನಿನ್ನ ಅನುಜ್ಞೆಯನ್ನು ಕೇಳುವೆ, ಮನೆಗೆ ಹೋಗುವೆ.
ಸಂಜಯಃ
ಏವಮುಕ್ತ್ವಾ ಮಹಾರಾಜ ಶಲ್ಯಃ ಸಮಿತಿಶೋಭನಃ |
ಉತ್ಥಾಯ ಪ್ರಯಯೌ ತೂರ್ಣಂ ರಾಜಮಧ್ಯಾದಮರ್ಷಿತಃ ॥68॥
ಸಂಜಯ ನುಡಿದ– ಮಹಾರಾಜ, ಯುದ್ಧದಲ್ಲಿ ಶೋಭಿಸುವ ಶಲ್ಯ ಕುಪಿತನಾಗಿ ರಾಜರ ಮಧ್ಯದಿಂದ ಎದ್ದು ಸರಸರನೆ ಹೊರಟ.
ಪ್ರಣಯಾದ್ ಬಹುಮಾನಾಚ್ಚ ತಂ ನಿಗೃಹ್ಯ ಸುತಸ್ತವ |
ಅಬ್ರವೀನ್ಮಧುರಂ ವಾಕ್ಯಂ ಸಾಮ್ನಾ ಸರ್ವಾರ್ಥಸಾಧಕಮ್ ॥69॥
ನಿನ್ನ ಮಗನು ಅವನನ್ನು ಹಿಡಿದು ನಿಲ್ಲಿಸಿ ಪ್ರೀತಿಗೌರವಪೂರ್ವಕವಾಗಿ ಎಲ್ಲ ಅಭೀಷ್ಟವನ್ನು ಸಾಧಿಸಲು ಸಮರ್ಥವಾದ ಸಂತೈಸುವ ಮಾತನ್ನು ಮಧುರವಾಗಿ ನುಡಿದ.
ಯಥಾ ಶಲ್ಯ ತ್ವಮಾತ್ಥೇದಮೇವಮೇತದಸಂಶಯಮ್ |
ಅಭಿಪ್ರಾಯಸ್ತು ಮೇ ಕಶ್ಚಿತ್ತಂ ನಿಬೋಧ ಜನೇಶ್ವರ ॥70॥
ಶಲ್ಯ, ನೀನು ಏನು ಹೇಳಿದೆಯೋ ಅದು ಸರಿಯಾಗಿಯೇ ಇದೆ, ಸಂಶಯ ವಿಲ್ಲ. ಆದರೆ ರಾಜನೆ, ನನ್ನ ಅಭಿಪ್ರಾಯ ಬೇರೆಯೆ ಒಂದಿತ್ತು. ಅದನ್ನು ತಿಳಿ.
ನ ಕರ್ಣೋಽಭ್ಯಧಿಕಸ್ತ್ವತ್ತೋ ನ ಚಾನ್ಯೇ ಚೈವ ಪಾರ್ಥಿವಾಃ |
ನ ಚ ಮದ್ರೇಶ್ವರ ತ್ವಾಂ ವೈ ಕರ್ಣಃ ಸೋಢುಂ ಚ ಶಕ್ಷ್ಯತಿ ॥71॥
ನಿನಗಿಂತ ಕರ್ಣನಾಗಲಿ, ಬೇರೆ ರಾಜರಾಗಲಿ ಶ್ರೇಷ್ಠರೆಂದು ನನ್ನ ಅಭಿಪ್ರಾಯ ವಲ್ಲ. ರಾಜನೆ, ನಿನ್ನನ್ನು ರಣದಲ್ಲಿ ಇದಿರಿಸಲು ಕರ್ಣನೂ ಶಕ್ತನಾಗಲಾರ.
ಋತಮೇವ ಹಿ ಪೂರ್ವಾಸ್ತೇ ವದಂತಿ ಪುರುಷೋತ್ತಮಾಃ |
ತಸ್ಮಾದಾರ್ತಾಯನಿಃ ಪ್ರೋಕ್ತೋ ಭವಾನಿತಿ ಮತಿರ್ಮಮ ॥72॥
ನಿನ್ನ ಪೂರ್ವಜರಾದ ಉತ್ತಮ ಪುರುಷರು `ಋತ'ವನ್ನೇ ಸತ್ಯವನ್ನೇ ನುಡಿದರು. ಅದರಿಂದ `ಆರ್ತಾಯನಿ' `ಋತವನ್ನು ಸತ್ಯವನ್ನೇ ನುಡಿಯುವವರ ವಂಶಜ' ಎಂದು ನಿನ್ನನ್ನು ಕರೆಯುತ್ತಾರೆ ಎಂದು ನಾನು ತಿಳಿದಿದ್ದೇನೆ.
ಶಲ್ಯಭೂತಸ್ತು ಶತ್ರೂಣಾಂ ಯಸ್ಮಾತ್ತ್ವಂ ಯುಧಿ ಮಾನದ |
ತಸ್ಮಾಚ್ಛಲ್ಯೇತಿ ತೇ ನಾಮ ಕಥ್ಯತೇ ಪೃಥಿವೀತಳೇ ॥73॥
ಶತ್ರುಗಳ ದರ್ಪವಡಗಿಸುವವನೆ, ರಣದಲ್ಲಿ ನೀನು ಶತ್ರುಗಳಿಗೆ `ಶಲ್ಯ' ಮುಳ್ಳು ಎನಿಸಿರುವುದರಿಂದ ಭೂತಳದಲ್ಲಿ ಶಲ್ಯನಾಮದಿಂದಲೇ ನಿನ್ನನ್ನು ಕರೆಯುತ್ತಾರೆ.
ಯದೇತದ್ವ್ಯಾಹೃತಂ ಪೂರ್ವಂ ಭವತಾ ಭೂರಿದಕ್ಷಿಣ |
ತದೇವ ಕುರು ಧರ್ಮಜ್ಞ ಮದರ್ಥಂ ಯದ್ಯದುಚ್ಯಸೇ ॥74॥
ಯುದ್ಧದಲ್ಲಿ ಸಹಾಯಮಾಡುವೆನೆಂದು ಮಾತುಕೊಟ್ಟು ಅದನ್ನು ನಡೆಸಿ ಕೊಡುವೆನೆಂದು ಏನು ನೀನು ಹಿಂದೆ ಮಾತುಕೊಟ್ಟಿರುವೆಯೋ ಅದನ್ನು ನಡೆಸಿಕೊಡು, ಧರ್ಮಜ್ಞನೆ, ಬಹಳ ದಕ್ಷಿಣೆ ನೀಡುವವನೆ, ನನ್ನ ಹಿತಕ್ಕಾಗಿ ನಾನು ನಿನಗೆ ಏನೇನು ಹೇಳುವೆನೋ ಅದನ್ನು ನಡೆಸಿಕೊಡು.
ನ ಚ ತ್ವತ್ತೋ ಹಿ ರಾಧೇಯೋ ನ ಚಾಹಮಪಿ ವೀರ್ಯವಾನ್ |
ವೃಣೇಽಹಂ ತ್ವಾಂ ಹಯಾಗ್ರ್ಯಾಣಾಂ ಯಂತಾರಮಿಹ
ಸಂಯುಗೇ ॥75॥
ನಿನಗಿಂತ ಯುದ್ಧದಲ್ಲಿ ಕರ್ಣನಾಗಲಿ, ನಾನಾಗಲಿ ಹೆಚ್ಚು ವೀರ್ಯಶಾಲಿಯಲ್ಲ. ಅದರಿಂದ ನೀನು ಯುದ್ಧದಲ್ಲಿ ಕರ್ಣನಿಗೆ ಉತ್ತಮಾಶ್ವಗಳ ನಿಯಂತ್ರಣ ಸಮರ್ಥನಾದ ಸಾರಥಿಯಾಗೆಂದು ನಿನ್ನನ್ನು ಕೇಳಿಕೊಳ್ಳುತ್ತೇನೆ.
ಮನ್ಯೇ ಚಾಭ್ಯಧಿಕಂ ಶಲ್ಯ ಗುಣೈಃ ಕರ್ಣಂ ಧನಂಜಯಾತ್ |
ಭವಂತಂ ವಾಸುದೇವಾಚ್ಚ ಲೋಕೋಽಯಮತಿಮನ್ಯತೇ ॥76॥
ಶಲ್ಯ, ಅರ್ಜುನನಿಗಿಂತ ಕರ್ಣ ಗುಣದಲ್ಲಿ ಮೇಲೆಂದು ನಾನು ತಿಳಿದಿದ್ದೇನೆ. ನಿನ್ನನ್ನು ಕೃಷ್ಣನಿಗಿಂತ ಮೇಲೆಂದು ನಾನು ಮಾತ್ರವಲ್ಲ, ಈ ಲೋಕವೂ ತಿಳಿದಿದೆ.
ಕರ್ಣೋ ಹ್ಯಭ್ಯಧಿಕಃ ಪಾರ್ಥಾದಸ್ತ್ರೈರೇವ ನರರ್ಷಭ |
ಭವಾನಭ್ಯಧಿಕಃ ಕೃಷ್ಣಾದಶ್ವಜ್ಞಾನೇ ಬಲೇ ತಥಾ ॥77॥
ರಾಜನೆ, ಅಸ್ತ್ರಜ್ಞಾನದಲ್ಲಿ ಮಾತ್ರ ಕರ್ಣನು ಅರ್ಜುನನಿಗಿಂತ ಮೇಲು. ನೀನು ಕೃಷ್ಣನಿಗಿಂತ ಅಶ್ವಜ್ಞಾನದಲ್ಲಿ ಮಾತ್ರವಲ್ಲದೆ ಬಲದಲ್ಲಿಯೂ ಮೇಲು.
ಯಥಾಽಶ್ವಹೃದಯಂ ವೇದ ವಾಸುದೇವೋ ಮಹಾಮನಾಃ |

ದ್ವಿಗುಣಂ ತ್ವಂ ತಥಾ ವೇತ್ಸಿ ಮದ್ರರಾಜೇಶ್ವರಾತ್ಮಜ ॥78॥
ರಾಜನೆ, ಸರ್ವಜ್ಞನಾದ ಕೃಷ್ಣನು ಹೇಗೆ ಅಶ್ವಶಾಸ್ತ್ರಜ್ಞನೋ ಹಾಗೆ ಅದಕ್ಕಿಂತಲೂ ಎರಡು ಪಾಲು ಮಿಗಿಲಾಗಿ ನೀನು ಅಶ್ವಶಾಸ್ತ್ರವನ್ನು ಬಲ್ಲೆ.
ಶಲ್ಯಃ
ಯನ್ಮಾಂ ಬ್ರವೀಷಿ ಗಾಂಧಾರೇ ಮಧ್ಯೇ ಸೈನ್ಯಸ್ಯ ಕೌರವ |
ವಿಶಿಷ್ಟಂ ದೇವಕೀಪುತ್ರಾತ್ ಪ್ರೀತಿಮಾನಸ್ಮ್ಯಹಂ ತ್ವಯಿ ॥79॥
ಶಲ್ಯನುಡಿದ– ದುರ್ಯೋಧನ, ಸೈನ್ಯದ ಮಧ್ಯದಲ್ಲಿ ನನ್ನನ್ನು ಕೃಷ್ಣನಿಗಿಂತ ಮಿಗಿಲು ಎಂದು ನೀನು ಹೇಳುತ್ತಿರುವುದರಿಂದ ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ.
ಏಷ ಸಾರಥ್ಯಮಾತಿಷ್ಠೇ ರಾಧೇಯಸ್ಯ ಯಶಸ್ವಿನಃ |
ಯುಧ್ಯತಃ ಪಾಂಡವಾಗ್ರ್ಯೇಣ ಯಥಾ ತ್ವಂ ವೀರ ಮನ್ಯಸೇ ॥80॥
ಯಶಸ್ವಿಯಾದ ಕರ್ಣನಿಗೆ ಅವನು ಅರ್ಜುನನೊಂದಿಗೆ ಯುದ್ಧಮಾಡುವಾಗ ನಿನ್ನ ಅಪೇಕ್ಷೆಯಂತೆ ನಾನು ಸಾರಥ್ಯ ಮಾಡುತ್ತೇನೆ.
ಸಮಯಶ್ಚ ಹಿ ಮೇ ವೀರ ಕಶ್ಚಿದ್ವೈಕರ್ತನಂ ಪ್ರತಿ |
ಉತ್ಸ ೃಜೇಯಂ ಯಥಾಶ್ರದ್ಧಮಹಂ ವಾಚೋಽಸ್ಯ ಸನ್ನಿಧೌ ॥81॥
ಆದರೆ ನನ್ನದೊಂದು ನಿಬಂಧನೆ ಇದೆ ನಾನು ಕರ್ಣನ ಬಳಿ ನನ್ನ ಗ್ರಹಿಕೆಗೆ ಅನುಗುಣವಾಗಿ, ಅದು ಅವನಿಗೆ ಇಷ್ಟವಾಗಲಿ ಬಿಡಲಿ, ಮಾತನ್ನಾಡುತ್ತೇನೆ.
ಸಂಜಯಃ
ತಥೇತಿ ರಾಜನ್ ಪುತ್ರಸ್ತೇ ಸಹ ಕರ್ಣೇನ ಭಾರತ |
ಅಬ್ರುವೀನ್ಮದ್ರರಾಜಸ್ಯ ಮತಂ ಭರತಸತ್ತಮ ॥82॥
ಸಂಜಯ ನುಡಿದ– ರಾಜನೆ, ನಿನ್ನ ಮಗನು ಕರ್ಣನೊಡಗೂಡಿ ಶಲ್ಯನ ಅಭಿಪ್ರಾಯಕ್ಕೆ `ತಥಾಸ್ತು' ಎಂದು ಹೇಳಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಶಲ್ಯಸಾರಥ್ಯನಿರ್ಣಯೋ ನಾಮ ದ್ವಾತ್ರಿಂಶೋಽಧ್ಯಾಯಃ ॥32॥

ಮಹಾಭಾರತತಾತ್ಪರ್ಯನಿರ್ಣಯ
ಯಥಾ ಶಿವಸ್ಯ ಬ್ರಹ್ಮಾಭೂದ್ ದಹತಸ್ತ್ರಿಪುರಂ ಪುರಾ |
ಇತ್ಯಾದಿವಾಕ್ಯೈಃ ಸಂಶಾಂತ ಇವ ಶಲ್ಯೋಽಸ್ಯ ಸಾರಥಿಃ ॥27॥
ಹಿಂದೆ ತ್ರಿಪುರದಹನ ಮಾಡುವಾಗ ಶಿವನಿಗೆ ಬ್ರಹ್ಮ ಹೇಗೆ ಸಾರಥಿಯಾದನೋ ಹಾಗೆ, ನೀನೂ ಕರ್ಣನಿಗೆ ಸಾರಥಿಯಾಗಬೇಕು, ಎಂಬ ಮುಂತಾದ ಮಾತುಗಳಿಂದ ಸಮಾಧಾನಗೊಂಡವನಂತೆ ತೋರಿಕೊಂಡು ಶಲ್ಯ ಕರ್ಣನಿಗೆ ಸಾರಥಿಯಾದ.

ಮೂವತ್ತಮೂರನೆಯ ಅಧ್ಯಾಯ
ತ್ರಿಪುರ ಸಂಹಾರಕ್ಕೆ ದೇವತೆಗಳ ಪ್ರಾರ್ಥನೆ.
ದುರ್ಯೋಧನಃ
ಭೂಯ ಏವ ತು ಮದ್ರೇಶ ಯತ್ತತ್ವಂ ವಕ್ಷ್ಯಾಮಿ ತಚ್ಛ ೃಣು |
ಯಥಾ ಪುರಾವೃತ್ತಮಿದಂ ಯುದ್ಧೇ ದೇವಾಸುರೇ ಪ್ರಭೋ ॥1॥
ದುರ್ಯೋಧನ ಶಲ್ಯನಿಗೆ ನುಡಿದ– ಶಲ್ಯ, ಹಿಂದೆ ದೇವಾಸುರರ ಯುದ್ಧದಲ್ಲಿ ನಡೆದ ಒಂದು ಸಂಗತಿಯನ್ನು ಕೂಡ ನಿನಗೆ ಹೇಳುತ್ತೇನೆ, ಕೇಳು.
ಯದುಕ್ತವಾನ್ ಪಿತುರ್ಮಹ್ಯಂ ಮಾರ್ಕಂಡೇಯೋ ಮಹಾತಪಾಃ |
ಬ್ರುವತಸ್ತದಶೇಷೇಣ ಮಮ ರಾಜರ್ಷಿಸತ್ತಮ ॥2॥
ನಿಬೋಧ ಮನಸಾ ಚಾತ್ರ ನ ತೇ ಕಾರ್ಯಾ ವಿಚಾರಣಾ ॥3॥
ಅದನ್ನು ಮಹಾತಪಸ್ವಿಯಾದ ಮಾರ್ಕಂಡೇಯಮುನಿ ನನ್ನ ತಂದೆಗೆ ಹೇಳಿದರು. ರಾಜರ್ಷಿ ಶಲ್ಯನೆ, ಅದನ್ನು ಪೂರ್ತಿ ಹೇಳುತ್ತೇನೆ, ಮನಸಿಟ್ಟು ಕೇಳು. ಅನುಮಾನಿಸಬೇಡ.
ಮುಂದೆ ದುರ್ಯೋಧನ ತ್ರಿಪುರಾಖ್ಯಾನವನ್ನು ಹೇಳುತ್ತಾನೆ. ಯದ್ಯಪಿ `ಶಲ್ಯನು ಕರ್ಣನ ಸಾರಥ್ಯಮಾಡುವುದಾಗಿ ಒಪ್ಪಿಕೊಂಡನಂತರ ತ್ರಿಪುರಾಖ್ಯಾನ ವನ್ನು ಹೇಳುವ ಅವಶ್ಯಕತೆ ಇರಲಿಲ್ಲ. ಅದರಿಂದ ಈ ಭಾಗ ಪ್ರಕ್ಷಿಪ್ತವಿರ ಬಹುದು. ಇದನ್ನು ಬಿಟ್ಟು ಓದಿದರೂ ಕಥೆಯ ಓಟದಲ್ಲಿ, ವಸ್ತುನಿರೂಪಣೆ ಯಲ್ಲಾಗಲಿ ಏನೂ ವ್ಯತ್ಯಯ ಉಂಟಾಗುವುದಿಲ್ಲ' ಎಂಬ ಸಮಸ್ಯೆ ಬರುತ್ತದೆ. ಆದರೆ ಶಲ್ಯ ತಾನು ಕೊಟ್ಟ ಮಾತಿಗೆ ಕಟ್ಟುಬಿದ್ದು ಸಾರಥ್ಯ ಮಾಡಲು ಒಪ್ಪಿದ್ದಾನೆ. ಮನಃಪೂರ್ವಕವಾಗಿ ಅಲ್ಲ. ಕ್ಷತ್ರಿಯರಾಜನಾದ ತಾನು ಸೂತಪುತ್ರನಿಗೆ ಸಾರಥ್ಯ ಮಾಡುವುದು ಸರಿಯಲ್ಲ ಎಂಬ ಅಸಮಾಧಾನವಿದ್ದೇ ಇದ್ದಿತು. ಅದನ್ನು ಕಳೆಯಲು ದುರ್ಯೋಧನ ಈ ಉಪಾಖ್ಯಾನವನ್ನು ಹೇಳಿ `ಬ್ರಹ್ಮನು ತನಗಿಂತ ಕಡಿಮೆಯವನಾದ ಶಿವನಿಗೆ ಸಾರಥ್ಯ ಮಾಡಿದಂತೆ ನೀನೂ ಕಡಿಮೆಯವನಾದ ಕರ್ಣನಿಗೆ ಸಾರಥ್ಯ ಮಾಡಿದರೆ ತಪ್ಪಾಗುವುದಿಲ್ಲ' ಎನ್ನುತ್ತಾನೆ. ದ್ರೋಣಪರ್ವದ ಕೊನೆಯಲ್ಲಿ (ದ್ರೋಣ 202.76) ಈ ಉಪಾಖ್ಯಾನ ಹಿಂದೆ ಒಮ್ಮೆ ಬಂದಿದೆ. ಆದರೆ ಬ್ರಹ್ಮನು ಶಿವನಿಗಿಂತ ಹೆಚ್ಚೆನ್ನುವ ಪ್ರಸ್ತಾಪ ಅಲ್ಲಿ ಬಂದಿಲ್ಲ. ಇಲ್ಲಿ ದುರ್ಯೋಧನ ಅದನ್ನು ಒತ್ತಿ ಹೇಳುತ್ತಾನೆ. ರಥಿಕನಿಗಿಂತ ಸಾರಥಿ ಹೆಚ್ಚೇ ಆಗಿರುತ್ತಾನೆ ಎಂದು ಮನದಟ್ಟು ಮಾಡಿಸುತ್ತಾನೆ. ಅದರಿಂದ ಈ ಭಾಗ ಇಲ್ಲಿ ಸಂಗತವೇ ಆಗಿದೆ.
ದೇವಾನಾಮಸುರಾಣಾಂ ಚ ಮಹಾನಾಸೀತ್ ಸಮುಚ್ಛ್ರಯಃ |

ಸೈಂಹಿಕೇಯಾಸ್ತದೋದ್ವ ೃತ್ತಾ ವಿಬುಧಾನವಸೂದಯನ್ ॥4॥
ದೇವತೆಗಳಿಗೂ ಅಸುರರಿಗೂ ದೊಡ್ಡ ಯುದ್ಧ ನಡೆಯಿತು. ಸಿಂಹಿಕೆಯ ಮಕ್ಕಳು ದುರಾಚಾರಿಗಳಾಗಿ ದೇವತೆಗಳನ್ನು ಪೀಡಿಸಿದರು.
ತೇ ನಿರಸ್ತಾಃ ಕೃತಾ ದೇವೈರ್ದಾನವಾ ಬಲಗರ್ವಿತಾಃ ॥5॥
ತತ್ರಾಸೀತ್ ಪ್ರಥಮೋ ರಾಜನ್ ಸಂಗ್ರಾಮಸ್ತಾರಕಾಮಯಃ ॥6॥
ಆಗ ಬಲದರ್ಪದಿಂದ ಕೊಬ್ಬಿದ ದಾನವರನ್ನು ದೇವತೆಗಳು ಹೊಡೆದೋಡಿಸಿದರು. ರಾಜನೆ, `ತಾರಕಾಮಯ' `ತಾರಕ'ಗಳಿಗೆ ಕಣ್ಣಿನ ಗುಡ್ಡೆ ಗಳಿಗೆ `ಆಮಯ' ಆಯುಧ ಝಳಪಿನಿಂದ ನೋಡುವವರಿಗೆ ನೋವನ್ನುಂಟು ಮಾಡುವಂಥ ಮೊದಲನೇ ದೊಡ್ಡಯುದ್ಧ ಉಂಟಾಯಿತು.
ಕಶ್ಚಿತ್ ಪ್ರಜಾಪತಿರ್ಘೋರಸ್ತೇನ ಸಾರ್ಧಂ ದುರಾತ್ಮನಾ |
ಯುದ್ಧಮಾಸೀತ್ ಮಹಾಘೋರಂ ದೇವಾನಾಮಿತಿ ನಃ ಶ್ರುತಮ್ ॥7॥
ಪರಾಬಭೂವುರಸುರಾ ದೈವತೈಃ ಸಹ ಸಂಯುಗೇ |
ದೇವೈರ್ನಿರಸ್ತಾ ಹ್ಯಸುರಾ ನಿಶ್ವಸ್ತಾ ಮರ್ದಿತಾಸ್ತತಃ ॥8॥
ನಿರ್ಜಿತಾಶ್ಚ ತತೋ ದೈತ್ಯಾ ದೈವತೈರಿತಿ ನಃ ಶ್ರುತಿಃ ॥9॥
ಒಬ್ಬ `ಪ್ರಜಾಪತಿ' ದೈತ್ಯಪ್ರಜೆಗಳಿಗೆ ನಾಯಕ ತಾರಕಾಸುರನ ಮಗ ತಾರಾಕ್ಷನೆಂಬುವನು, `ಘೋರ' ಭಯಂಕರನಿದ್ದ. ದುರಾತ್ಮನಾದ ಅವನೊಂದಿಗೆ ದೇವತೆಗಳಿಗೆ ಮಹಾ ಭಯಂಕರವಾದ ಯುದ್ಧ ಉಂಟಾಯಿತು. ಆ ಯುದ್ಧದಲ್ಲಿ ಅಸುರರು ದೇವತೆಗಳೊಂದಿಗೆ ರಣದಲ್ಲಿ ದೇವತೆಗಳಿಂದ ಪರಾಜಿತರಾಗಿ ನಿಟ್ಟುಸಿರಿಟ್ಟರು. ಬಲು ಪೀಡಿತರಾದರು ಎಂದು ನಾವು ಕೇಳಿದ್ದೇವೆ.
ಭಗ್ನದರ್ಪಾ ನಿರುತ್ಸಾಹಾಃ ಪಾತಾಲಂ ವಿವಿಶುಸ್ತದಾ ॥10॥
ದರ್ಪವನ್ನು ಕಳೆದುಕೊಂಡು ನಿರುತ್ಸಾಹಗೊಂಡು ಅಸುರರು ಪಾತಾಳವನ್ನು ಹೊಕ್ಕರು.
ನಿರ್ಜಿತೇಷು ಚ ದೈತ್ಯೇಷು ತಾರಕಸ್ಯ ಸುತಾಸ್ತ್ರಯಃ |
ತಾರಾಕ್ಷಃ ಕಮಾಲಾಕ್ಷಶ್ಚ ವಿದ್ಯುನ್ಮಾಲೀ ಚ ಪಾರ್ಥಿವ ॥11॥
ತಪ ಉಗ್ರಂ ಸಮಾಸ್ಥಾಯ ನಿಯಮೇ ಪರಮೇ ಸ್ಥಿತಾಃ |
ತಪಸಾ ಕರ್ಶಯಾಮಾಸುರ್ದೇಹಾಂಸ್ತಾನ್ ಶತ್ರುಕರ್ಶನಾಃ ॥12॥
ರಾಜನೆ, ಪರಾಜಿತರಾದ ಅಸುರರಲ್ಲಿ ತಾರಾಕ್ಷ ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂರು ಮಂದಿ ತಾರಕಾಸುರನ ಮಕ್ಕಳು ತಾವು ಶತ್ರುನಾಶಕರಾಗಬೇಕೆಂಬ ಉದ್ದೇಶದಿಂದ ಉಗ್ರವಾದ ತಪಸ್ಸಿಗಾಗಿ ತೀವ್ರ ವ್ರತನಿಯಮನಿಷ್ಠರಾಗಿ ತಪಸ್ಸಿನಿಂದ ಅವರ ಆ ದೇಹಗಳನ್ನು ಕೃಶಗೊಳಿಸಿಕೊಂಡರು.
ದಮೇನ ತಪಸಾ ಚೈವ ನಿಯಮೇನ ಸಮಾಧಿನಾ |
ತೇಷಾಂ ಪಿತಾಮಹಃ ಪ್ರೀತೋ ವರದಃ ಪ್ರದದೌ ವರಮ್ ॥13॥
ಇಂದ್ರಿಯನಿಗ್ರಹ ದೇಹದಂಡನೆ ವ್ರತನಿಯಮ ಹಾಗೂ ಯೋಗಸಮಾಧಿಗಳಿಂದ ತಪಗೈದರು. ಅದಕ್ಕೆ ವರದಾಯಕನಾದ ಪಿತಾಮಹ ಬ್ರಹ್ಮದೇವನು ಒಲಿದು ವರ ಕೊಡುವೆನೆಂದ.
ಅವಧ್ಯತ್ವಂ ಚ ತೇ ಸರ್ವೇ ಸರ್ವಭೂತೇಷು ಸರ್ವದಾ |
ಸಹಿತಾ ವರಯಾಮಾಸುಃ ಸರ್ವಲೋಕಪಿತಾಮಹಮ್ ॥14॥
ತಾವು ಎಲ್ಲರೂ ಎಲ್ಲ ಪ್ರಾಣಿಮನುಷ್ಯಾದಿಗಳಿಂದ ಎಲ್ಲ ಕಾಲದಲ್ಲಿಯೂ ಅವಧ್ಯರೆನಿಸಿಕೊಳ್ಳಬೇಕೆಂದು ಎಲ್ಲರೂ ಕೂಡಿ ಎಲ್ಲ ಲೋಕಗಳಿಗೆ ಪಿತಾಮಹ ನಾದ ಬ್ರಹ್ಮದೇವನಲ್ಲಿ ವರವನ್ನು ಬೇಡಿದರು.
ತಾನಬ್ರವೀತ್ ತದಾ ದೇವಃ ಸರ್ವಲೋಕಗುರುಃ ಪ್ರಭುಃ |
ನಾಸ್ತಿ ಸರ್ವಾಮರತ್ವಂ ವೈ ನಿವರ್ತಧ್ವಮಿತೋಽಸುರಾಃ ॥15॥
ಅನ್ಯಂ ವರಂ ವೃಣೀಧ್ವಂ ವೈ ರೋಚತೇ ಯಾದೃಶೋ ಹಿ ವಃ ॥16॥
ಸರ್ವಲೋಕಗಳಿಗೆ ಪೂಜ್ಯನಾದ ಸರ್ವಶಕ್ತನಾದ ಬ್ರಹ್ಮದೇವನು ಹೇಳಿದ. ಅಸುರರೆ, ಹೊರಟು ಹೋಗಿರಿ. ಏಕೆಂದರೆ ಸರ್ವರಿಂದ ಸರ್ವಕಾಲದಲ್ಲಿ ಅವಧ್ಯತ್ವವೆಂಬುದು ಯಾರಿಗೂ ಇಲ್ಲ. ಬೇರೆ ವರವನ್ನು , ನಿಮಗೆ ಅದು ಬೇಕೆನಿಸಿದರೆ, ಯಾವುದು ಬೇಕೊ ಅದನ್ನು ಕೇಳಿರಿ.
ತತಸ್ತೇ ಸಹಿತಾ ರಾಜನ್ ಸಂಪ್ರಧಾರ್ಯಾಸಕೃದ್ ಬಹು |
ಸರ್ವಲೋಕೇಶ್ವರಂ ವಾಕ್ಯಂ ಪ್ರಣಮ್ಯೈನಮಥಾಬ್ರುವನ್ ॥17॥
ರಾಜನೆ, ಆ ಅಸುರರು ಆಗ ಎಲ್ಲರೂ ಸೇರಿ ಬಹಳ ವಿಚಾರಮಾಡಿ ಸರ್ವಲೋಕಪತಿಯಾದ ಬ್ರಹ್ಮದೇವನನ್ನು ನಮಿಸಿ ಈ ಮಾತನ್ನು ನಿವೇದಿಸಿ ಕೊಂಡರು.
ವಸ್ತುಮಿಚ್ಛಾಮ ನಗರಂ ಕರ್ತುಂ ಕಾಮಗಮಂ ಶುಭಮ್ |
ಸರ್ವಕಾಮಸಮೃದ್ಧಾರ್ಥಮವಧ್ಯಂ ದೇವದಾನವೈಃ ॥18॥
ಯಕ್ಷರಕ್ಷೋರಗಗಣೈರ್ನಾನಾಜಾತಿಭಿರೇವ ಚ |
ನ ಕೃತ್ಯಾಭಿರ್ನ ಶಸ್ತ್ರೈಶ್ಚ ನ ಶಾಪೈರ್ಬ್ರಹ್ಮವಾದಿನಾಮ್ ॥19॥
ವಧ್ಯೇತ ತ್ರಿಪುರಂ ದೇವ ಪ್ರಯಚ್ಛೇಮಂ ಪಿತಾಮಹ ॥20॥
ನಾವು ವಾಸಮಾಡಲು ನಗರ ನಿರ್ಮಾಣ ಮಾಡಲು ಬಯಸುತ್ತೇವೆ. ಆ ನಗರವು ಆಕಾಶದಲ್ಲಿ ಎಲ್ಲೆಂದರಲ್ಲಿ ನಮ್ಮ ಇಚ್ಛಾನುಸಾರ ತೇಲುವಂತಿರಬೇಕು. ಸುಖಕರವಾಗಿರಬೇಕು. ಎಲ್ಲ ಭೋಗಪದಾರ್ಥ ಸಮೃದ್ಧಿ ಯಿಂದ ಕೂಡಿರಬೇಕು. ದೇವದಾನವರಿಂದ ನಾಶವಾಗದಂತಿರಬೇಕು. ನಾನಾ ಜಾತಿಗಳ ಯಕ್ಷ ರಾಕ್ಷಸ ನಾಗ ಗಣಗಳಿಂದಾಗಲಿ ಮಾಟ ಕೃತ್ರಿಮದೇವತೆಗಳಿಂದಾಗಲಿ

ಶಸ್ತ್ರಗಳಿಂದಾಗಲಿ ಬ್ರಹ್ಮಜ್ಞಾನಿಗಳ ಶಾಪಗಳಿಂದಾಗಲಿ ನಾಶವಾಗಬಾರದು. ಇಂಥ ಮೂರು ನಗರಗಳ ವರವನ್ನು ಹೇ ದೇವ, ನಮಗೆ ನೀಡು.
ವಯಂ ಪುರಾಣಿ ತ್ರೀಣ್ಯೇವ ಸಮಾಸ್ಥಾಯ ಮಹೀಮಿಮಾಮ್ |
ವಿಚರಿಷ್ಯಾಮ ಲೋಕೇऽಸ್ಮಿನ್ ತ್ವತ್ಪ್ರಸಾದಪುರಸ್ಕೃತಾಃ ॥21॥
ನಾವು ಈ ಮೂರು ಪುರಗಳಲ್ಲಿಯೇ ವಾಸವಾಗಿದ್ದು ಈ ಲೋಕದಲ್ಲಿ ಈ ಭೂಮಿಯಲ್ಲಿ ನಿನ್ನ ಅನುಗ್ರಹದಿಂದ ಸಂಚರಿಸುವೆವು.
ತತೋ ವರ್ಷಸಹಸ್ರೇಷು ಸಮೇಷ್ಯಾಮಃ ಪರಸ್ಪರಮ್ |
ಏಕಭಾವಂ ಗಮಿಷ್ಯಂತಿ ಪುರಾಣ್ಯೇತಾನಿ ಚಾನಘ ॥22॥
ಸಾವಿರ ವರ್ಷಗಳಿಗೊಮ್ಮೆ ನಾವು ಪರಸ್ಪರ ಕೂಡುವೆವು. ನಿರ್ದುಷ್ಟನಾದ ದೇವನೆ, ಈ ಮೂರು ಪುರಗಳು ಆಗ ಒಂದೇ ಪ್ರದೇಶದಲ್ಲಿ ಸೇರಿಕೊಂಡು ಒಂದಾಗುವುವು.
ಸಮಾಗತಾನಿ ಚೈತಾನಿ ಯೋ ಹನ್ಯಾದ್ ಭಗವಾಂಸ್ತದಾ |
ಏಕೇಷುಣಾ ದೇವವರಃ ಸ ನೋ ಮೃತ್ಯುರ್ಭವಿಷ್ಯತಿ ॥23॥
ಹೀಗೆ ಸಮಾಗಮ ಹೊಂದಿದ ಈ ಮೂರು ಪಟ್ಟಣಗಳನ್ನು ಷಡ್ಗುಣ ಪೂರ್ಣನಾದ ದೇವೋತ್ತಮನು ಯಾವನು ಒಂದು ಬಾಣದಿಂದ ನಾಶಗೊಳಿಸು ವನೋ ಅವನು ನಮಗೆ ಮೃತ್ಯುವಾಗಬಲ್ಲನು.
ದುರ್ಯೋಧನಃ
ತೇಷಾಂ ತದ್ವಚನಂ ಶ್ರುತ್ವಾ ದಾನವಾನಾಂ ಪಿತಾಮಹಃ |
ಏವಮಸ್ತ್ವಿತಿ ತಾನ್ ದೇವಃ ಪ್ರತ್ಯುಕ್ತ್ವಾ ಪ್ರಾವಿಶದ್ ದಿವಮ್ ॥24॥
ದುರ್ಯೋಧನ ಶಲ್ಯನಿಗೆ ನುಡಿದ– ಬ್ರಹ್ಮದೇವನು ಆ ಅಸುರರ ಮಾತನ್ನು ಕೇಳಿ `ಹಾಗೆ ಆಗಲಿ' ಎಂದು ಅವರಿಗೆ ವರವಿತ್ತು ತನ್ನ ಲೋಕವನ್ನು ಹೋಗಿ ಸೇರಿದ.
ತೇ ತು ಲಬ್ಧವರಾಃ ಪ್ರೀತಾಃ ಸಂಪ್ರಧಾರ್ಯ ಪರಸ್ಪರಮ್ |
ಪುರತ್ರಯವಿಸೃಷ್ಟ್ಯರ್ಥಂ ಮಯಂ ವವ್ರುರ್ಮಹಾರಥಾಃ ॥25॥
ವಿಶ್ವಕರ್ಮಾಣಮಜರಂ ದೈತ್ಯದಾನವಪೂಜಿತಮ್ ॥26॥
ಮಹಾರಥರಾದ ಆ ಅಸುರರು ಹೀಗೆ ವರಪಡೆದು ಸಂತುಷ್ಟರಾಗಿ ಪರಸ್ಪರ ಸಮಾಲೋಚನೆ ಮಾಡಿ, ತ್ರಿಪುರನಿರ್ಮಾಣಕ್ಕಾಗಿ ಮಯಾಸುರನನ್ನು ಬೇಡಿ ಕೊಂಡರು. ಮಯನು `ವಿಶ್ವಕರ್ಮ' ಎಲ್ಲ ವಾಸ್ತುಶಿಲ್ಪ ನಿರ್ಮಾಣಕರ್ಮಗಳನ್ನು ಮಾಡುವವನು. ಮುಪ್ಪಿಲ್ಲದವನು ದೇವತೆಗಳಿಂದಲೂ ದಾನವರಿಂದಲೂ ಪೂಜಿಸಲ್ಪಡುವವನು.
ತತೋ ಮಯಃ ಸ್ವತಪಸಾ ಚಕ್ರೇ ಧೀಮಾನ್ ಪುರಾಣಿ ಚ |
ತ್ರೀಣಿ ಕಾಂಚನಮೇಕಂ ವೈ ರೌಪ್ಯಂ ಕಾರ್ಷ್ಣಾಯಸಂ ತಥಾ ॥27॥
ಧೀಮಂತನಾದ ಮಯನು ಬಳಿಕ ತನ್ನ ಶಿಲ್ಪನಿರ್ಮಾಣರೂಪವಾದ ತಪಸ್ಸಿನಿಂದ ಮೂರು ಪುರಗಳನ್ನು ನಿರ್ಮಿಸಿದ. ಒಂದು ಚಿನ್ನದ್ದು, ಒಂದು ಬೆಳ್ಳಿಯದ್ದು, ಇನ್ನೊಂದು ಕಬ್ಬಿಣದ್ದು.
ಕಾಂಚನಂ ದಿವಿ ತತ್ರಾಸೀದಂತರಿಕ್ಷೇ ಚ ರಾಜತಮ್ |
ಆಯಸಂ ಚಾಭವದ್ ಭೌಮಂ ತದಾ ತೇಷಾಂ ಪರಂತಪ ॥28॥
ಶತ್ರುನಾಶಕನೆ, ಚಿನ್ನದ ಪುರವು ಸ್ವರ್ಗದಲ್ಲಿ, ಬೆಳ್ಳಿಯ ಪುರವು ಅಂತರಿಕ್ಷದಲ್ಲಿ, ಕಬ್ಬಿಣದ ಪುರವು ಭೂಮಿಯಲ್ಲಿ, ಅಂದರೆ ಭೂಮಿಯ ಸಮೀಪದ ಆಕಾಶದಲ್ಲಿ ಹಾರಾಡುವಂಥದ್ದಾಯಿತು.
ಏಕೈಕಂ ಯೋಜನಶತಂ ವಿಸ್ತೃತಂ ತಾವದಾಯತಮ್ |
ದೃಢಂ ಚಾಟ್ಟಾಲಕಯುತಂ ಬೃಹತ್ಪ್ರಾಕಾರತೋರಣಮ್ ॥29॥
ಪ್ರತಿಯೊಂದು ಪುರವೂ ನೂರು ಯೋಜನಗಳಷ್ಟು ಉದ್ದಗಲವಾಗಿದ್ದು ದೃಢವಾಗಿದ್ದುವು. ದೊಡ್ಡ ಮಾಳಿಗೆ ಮನೆಗಳಿಂದ, ದೊಡ್ಡ ಕೋಟೆ ಮತ್ತು ಹೆಬ್ಬಾಗಿಲು ಗಳಿಂದ ಕೂಡಿದ್ದುವು.
ಗೃಹಪ್ರವರಸಂಬಾಧಮಸಂಬಾಧಮಹಾಪಥಮ್ |
ಪ್ರಾಸಾದೈರ್ವಿವಿಧೈಶ್ಚಾಪಿ ದ್ವಾರೈಶ್ಚೈವೋಪಶೋಭಿತಮ್ ॥30॥
ಭವ್ಯವಾದ ಮನೆಗಳಿಂದ ಪುರವು ನಿಬಿಡವಾದರೂ ರಾಜಮಾರ್ಗಗಳು ವಿಶಾಲವಾಗಿದ್ದು ವಾಹನಗಳ ದಟ್ಟಣೆ ಇರಲಿಲ್ಲ. ನಾನಾಬಗೆಯ ಮನೆಗಳಿಂದಲೂ ದ್ವಾರಗಳಿಂದಲೂ `ತ್ರಿಪುರಂ' ಮೂರು ಪುರಗಳು ಶೋಭಿಸಿದುವು.
ತ್ರಿಪುರಂ ತೇಷು ಚಾಪ್ಯಾಸನ್ ರಾಜಾನೋ ವೈ ಪೃಥಕ್ಪೃಥಕ್ |
ದಿವ್ಯಮಾಲ್ಯಾಂಬರಧರಾ ದೈತೇಯಾ ರಾಜಸತ್ತಮ ॥31॥
ರಾಜನೆ, ಮೂರು ಪಟ್ಟಣಗಳಿಗೂ ಮೂರು ಮಂದಿ ಬೇರೆ ಬೇರೆ ಅಧಿಪತಿಗಳು ದಿವ್ಯ ಮಾಲೆ, ವಸ್ತ್ರಗಳನ್ನು ಧರಿಸಿದ ಅಸುರರೇ ಆಗಿದ್ದರು.
ಕಾಂಚನಂ ತಾರಕಾಕ್ಷಸ್ಯ ದಿವ್ಯಮಾಸೀನ್ಮಹಾತ್ಮನಃ |
ರಾಜತಂ ಕಮಲಾಕ್ಷಸ್ಯ ವಿದ್ಯುನ್ಮಾಲಿನ ಆಯಸಮ್ ॥32॥
ದಿವ್ಯವಾದ ಚಿನ್ನದ ಪಟ್ಟಣಕ್ಕೆ ಮಹಾತ್ಮ ತಾರಕಾಕ್ಷ ಅಧಿಪತಿಯಾಗಿದ್ದ. ಬೆಳ್ಳಿಯ ಪಟ್ಟಣ ಕಮಲಾಕ್ಷನ ವಶದಲ್ಲಿತ್ತು. ಕಬ್ಬಿಣದ ಪಟ್ಟಣ ವಿದ್ಯುನ್ಮಾಲಿಯದಾಗಿತ್ತು.
ತ್ರಯಸ್ತೇ ದೈತ್ಯರಾಜಾನಸ್ತ್ರೀನ್ ಲೋಕಾನಾಶು ತೇಜಸಾ |
ಆಕ್ರಮ್ಯ ತಸ್ಥುರೂಚುಶ್ಚ ಕಶ್ಚ ನಾಮ ಪ್ರಜಾಪತಿಃ ? ॥33॥

ಆ ಮೂರು ಅಸುರರಾಜರು ಮೂರುಲೋಕಗಳನ್ನು ಪರಾಕ್ರಮದಿಂದ ಬೇಗನೆ ಆಕ್ರಮಿಸಿ ನಿಂತರು. `ಆ ಪ್ರಜಾಪತಿ ಬ್ರಹ್ಮ ಎಂಬುವನು ಯಾರು?' ಎಂದು ತಿರಸ್ಕಾರದಿಂದ ಬ್ರಹ್ಮನ ಮುಂದೆಯೆ ಹೇಳತೊಡಗಿದರು.
ತೇಷಾಂ ದಾನವಮುಖ್ಯಾನಾಂ ಪ್ರಯುತಾನ್ಯರ್ಬುದಾನಿ ಚ |
ಕೋಟ್ಯಶ್ಚಾಪ್ರತಿವೀರಾಣಾಂ ಸಮಾಜಗ್ಮುಸ್ತತಸ್ತತಃ ॥34॥
ಆ ದಾನವರಾಜರಿಗೆ ಪರಿವಾರವಾಗಿ ದಶಲಕ್ಷ, ಕೋಟಿ, ದಶಕೋಟಿ ಸಂಖ್ಯೆಗಳಲ್ಲಿ ಅಪ್ರತಿಮರಾದ ದಾನವವೀರರು ಬೇರೆ ಬೇರೆ ಪ್ರದೇಶಗಳಿಂದ ಬಂದು ಸೇರಿದರು.
ಮಾಂಸಾಶಿನಃ ಸುದೃಪ್ತಾಶ್ಚ ಸುರೈರ್ವಿನಿಕೃತಾಃ ಪುರಾ |
ಮಹದೈಶ್ವರ್ಯಮಿಚ್ಛಂತಸ್ತ್ರಿಪುರಂ ದುರ್ಗಮಾಶ್ರಿತಾಃ ॥35॥
ಆ ದಾನವವೀರರು ಮಾಂಸಾಹಾರಿಗಳು. ಮಹಾದರ್ಪಿಷ್ಠರು. ಹಿಂದೆ ದೇವತೆಗಳಿಂದ ಪರಾಭವ ಹೊಂದಿದ್ದವರು. ಈಗ ಮಹಾಐಶ್ವರ್ಯವನ್ನು ಬಯಸಿ ದೇವತೆಗಳಿಗೆ ದುರ್ಗಮವಾಗಿರುವ ಮೂರು ಪುರಗಳನ್ನು ಆಶ್ರಯಿಸಿದರು.
ಸರ್ವೇಷಾಂ ಚ ಪುನಸ್ತೇಷಾಂ ಸರ್ವಯೋಗವಹೋ ಮಯಃ |
ತಮಾಶ್ರಿತ್ಯ ಹಿ ತೇ ಸರ್ವೇऽವರ್ತಯನ್ನಕುತೋಭಯಾಃ ॥36॥
ಇವರೆಲ್ಲರಿಗೂ ಸರ್ವೇಷ್ಟಭೋಗ ನಿರ್ವಾಹಕನು ಮಯನಾಗಿದ್ದ. ಅವನನ್ನು ಆಶ್ರಯಿಸಿ ಅವರೆಲ್ಲರೂ ಯಾವ ಭಯವೂ ಇಲ್ಲದೆ ವಾಸಮಾಡಿದರು.
ಯೋ ಹಿ ಯಂ ಮನಸಾ ಕಾಮಂ ದಧ್ಯೌ ತ್ರಿಪುರಸಂಶ್ರಯಃ |
ತಸ್ಮೈ ತಸ್ಮೈ ಮಯಸ್ತಂ ತಂ ವಿದಧೇ ಮಾಯಯಾ ತದಾ ॥37॥
ತ್ರಿಪುರವನ್ನಾಶ್ರಯಿಸಿದ ದಾನವನು ಯಾರು ಯಾರು ಯಾವ ಇಷ್ಟಭೋಗ ವನ್ನು ಮನಸ್ಸಿನಲ್ಲಿ ಆಲೋಚಿಸುವನೋ ಅವನವನಿಗೆ ಅದನ್ನು ಮಯನು ಮಾಯೆಯಿಂದ ಒದಗಿಸಿಕೊಟ್ಟ.
ತಾರಕಾಕ್ಷಸುತಶ್ಚಾಸೀದ್ಧರಿರ್ನಾಮ ಮಹಾಬಲಃ |
ತಪಸ್ತೇಪೇ ಪರಮಕಂ ಯೇನಾತುಷ್ಯತ್ ಪಿತಾಮಹಃ ॥38॥
ತಾರಕಾಕ್ಷನ ಮಗನಾದ ಹರಿ ಎಂಬುವನು ಮಹಾಬಲಿಷ್ಠ. ಅವನು ದೊಡ್ಡ ತಪಸ್ಸನ್ನು ಮಾಡಿದ. ಅದಕ್ಕೆ ಬ್ರಹ್ಮದೇವ ಸಂತುಷ್ಟನಾದ.
ಸಂತುಷ್ಟಮವೃಣೋದ್ ದೇವಂ ವಾಪೀ ಭವತು ನಃ ಪುರೇ |
ಶಸ್ತ್ರೈರ್ವಿನಿಹತಾ ಯತ್ರ ಕ್ಷಿಪ್ತಾಃ ಸ್ಯುರ್ಬಲವತ್ತರಾಃ ॥39॥
ಸಂತುಷ್ಟನಾದ ಬ್ರಹ್ಮದೇವನನ್ನು ಹರಿ ಕೇಳಿಕೊಂಡ : `ನಮ್ಮ ನಗರದಲ್ಲಿ ರಸಬಾವಿಯ ನಿರ್ಮಾಣವಾಗಬೇಕು. ಶಸ್ತ್ರದಿಂದ ಹತರಾದ ದಾನವರನ್ನು ಆ ಬಾವಿಯಲ್ಲಿ ಹಾಕಿದರೆ ಅವರು ಇನ್ನೂ ಹೆಚ್ಚು ಬಲಿಷ್ಠರಾಗಿ ಹುಟ್ಟಿಕೊಳ್ಳಬೇಕು'.
ಸ ತು ಲಬ್ಧ್ವಾ ವರಂ ವೀರಸ್ತಾರಕಾಕ್ಷಸುತೋ ಹರಿಃ |
ಸಸೃಜೇ ತತ್ರ ವಾಪೀಂ ತಾಂ ಮೃತಸಂಜೀವಿನೀಂ ಪ್ರಭೋ ॥40॥
ತಾರಕಾಕ್ಷಸುತನಾದ ವೀರ ಹರಿ ಎಂಬ ದಾನವನು ಹೀಗೆ ವರಪಡೆದು ಅಲ್ಲಿ ರಸಬಾವಿ ನಿರ್ಮಾಣ ಮಾಡಿಸಿದ. ರಾಜನೆ, ಆ ಬಾವಿ ಮೃತಸಂಜೀವಿನಿಯಾಯಿತು.
ಯೇನ ರೂಪೇಣ ಯೋ ದೈತ್ಯೋ ಯೇನ ವೇಷೇಣ ಚಾಪ್ಯಥ |
ಕ್ಷಿಪ್ಯತೇ ನಿಹತೋ ವಾಪ್ಯಾಂ ತಾದೃಶೇನೈವ ಜಾಯತೇ ॥41॥
ಸಂಪೂರ್ಣಬಲವೀರ್ಯಸ್ತು ರಾಜನ್ ಶೌರ್ಯಸಮನ್ವಿತಃ ॥42॥
ಯಾವುದೇ ರೂಪದ, ಯಾವುದೇ ವೇಷದ ದಾನವ ಹತನಾಗಲಿ, ಬಾವಿ ಯಲ್ಲಿ ಹಾಕಿದಾಗ, ಅದೇ ರೂಪ, ಅದೇ ವೇಷದವನಾಗಿ ಹುಟ್ಟಿ ಬರುತ್ತಾನೆ. ರಾಜನೆ, ಹತನಾದವನು ಶೌರ್ಯಯುಕ್ತನಾಗಿದ್ದರೆ ಪೂರ್ಣ ಬಲವೀರ್ಯ ಶೌರ್ಯ ಯುಕ್ತನಾಗಿಯೆ ಪುನಃ ಬದುಕಿಬರುತ್ತಾನೆ.
ಏವಂ ವೀರ್ಯೇಣ ಸಂಯುಕ್ತಾಃ ಕೃತಾಸ್ತೇನ ಮಹಾತ್ಮನಾ |
ತಾಂ ಪ್ರಾಪ್ಯ ತ್ರೈಪುರಾ ವಾಪೀಂ ಲೋಕಾನ್ ಸರ್ವಾನ್ ಬಬಾಧಿರೇ ॥
ಹೀಗೆ ಮಹಾತ್ಮ ಹರಿದಾನವನು ದಾನವರನ್ನು ವೀರ್ಯಶಾಲಿಗಳನ್ನಾಗಿ ಮಾಡಿದ. ಹೀಗಾಗಿ ಆ ಮೃತಸಂಜೀವಿನೀ ರಸಬಾವಿಯನ್ನು ಹೊಂದಿದ ದಾನವರು ಸರ್ವಲೋಕಗಳನ್ನು ಪೀಡಿಸಿದರು.
ಮಹತಾ ತಪಸಾ ಸಿದ್ಧಾಃ ಸುರಾಣಾಂ ಭಯವರ್ಧನಾಃ |
ಏಕಸ್ಮಿನ್ನಿಹತೇ ದೈತ್ಯೇ ಸೃಜಂತಿ ಸ್ಮ ದಶಾಸುರಾನ್ ॥44॥
ಒಬ್ಬ ದಾನವ ಹತನಾದರೆ ಅವನು ಹತ್ತು ದಾನವರನ್ನು ಉತ್ಪಾದಿಸಿದ. ಅವರು ಮಹತ್ತಾದ ತಪಃಸಿದ್ಧಿಯಿಂದ ದೇವತೆಗಳಿಗೆ ಭಯವನ್ನು ಹೆಚ್ಚಿಸಿದರು.
ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ |
ಪರಸ್ಯೋತ್ಸಾದನಾರ್ಥಂ ವಾ ತತ್ ತಾಮಸಮುದಾಹೃತಮ್ ॥
(ಗೀ.17.16)
ಎಂದು ಗೀತೆಯಲ್ಲಿ ಹೇಳಿದಂತೆ, ಲೋಕನಾಶಕ್ಕಾಗಿ ತಾಮಸಜನರು ತಪಗೈಯು ತ್ತಾರೆ. ಅದರಿಂದ ಲೋಕಪೀಡೆಯಾದಾಗ, ಅಸುರರಿಗೆ ವರಬಲವಿರುವುದ ರಿಂದ, ಲೋಕಪಾಲಕರಾದ ದೇವತೆಗಳು ತಾವು ಅಸಹಾಯಕರಾಗಿ, ಲೋಕ ನಾಶವಾದೀತೆಂದು ಭಯ ಪಡುತ್ತಾರೆ.
ನ ತೇಷಾಂ ವಿದ್ಯತೇ ಯುದ್ಧೇ ಕ್ಷಯೋ ರಾಜನ್ ಕಥಂಚನ ॥45॥
ರಾಜನೆ, ಅಸುರರಿಗೆ ಯಾವ ರೀತಿಯಿಂದೂ ಯುದ್ಧದಲ್ಲಿ ಹಾನಿ

ಸಂಭವಿಸಲಿಲ್ಲ.
ತತಸ್ತೇ ಲೋಭಮೋಹಾಭ್ಯಾಮಭಿಭೂತಾ ವಿಚೇತಸಃ |
ನಿರ್ಭೀಕಾಃ ಸಂಸ್ಥಿತಿಂ ಸರ್ವೇ ಸ್ಥಾಪಿತಾಂ ಸಮಲೂಲುಪನ್ ॥46॥
ಅದರಿಂದ ಅಸುರರು ಲೋಭ ಮೋಹಗಳ ಪ್ರಭಾವಕ್ಕೊಳಗಾಗಿ ಬುದ್ಧಿಶೂನ್ಯರಾಗಿ ಭೀತಿ ಇಲ್ಲದೆ ಎಲ್ಲರೂ ಜೊತೆಸೇರಿ ಲೋಕದಲ್ಲಿ ದೇವತೆಗಳಿಂದ ಸ್ಥಾಪಿತವಾಗಿದ್ದ ಸುಸ್ಥಿತಿಯನ್ನು ನಾಶಗೊಳಿಸಿದರು.
ವಿದ್ರಾವ್ಯ ಸಗಣಾನ್ ದೇವಾಂಸ್ತತ್ರ ತತ್ರ ತದಾ ತದಾ |
ವಿಚೇರುಃ ಸ್ವೇನ ಕಾಮೇನ ವರದಾನೇನ ದರ್ಪಿತಾಃ ॥47॥
ದೇವತೆಗಳನ್ನು ಪರಿವಾರಸಮೇತವಾಗಿ ಸ್ವರ್ಗದಿಂದ ಹೊರಗೆ ಓಡಿಸಿ, ವರಬಲದಿಂದ ದೃಪ್ತರಾದ ಅಸುರರು ತಮಗೆ ಮನಬಂದಂತೆ, ಎಲ್ಲ ಕಡೆ ಎಲ್ಲ ಕಾಲಗಳಲ್ಲಿ ಸಂಚರಿಸಿದರು.
ದೇವೋದ್ಯಾನಾನಿ ಸರ್ವಾಣಿ ಸ್ಥಾನಾನಿ ಚ ದಿವೌಕಸಾಮ್ |
ಋಷೀಣಾಮಾಶ್ರಮಾನ್ ಪುಣ್ಯಾನ್ ರಮ್ಯಾನ್ ಜನಪದಾಂಸ್ತಥಾ ॥48॥
ಉತ್ಸಾದಯಂತ ಮರ್ಯಾದಾಂ ದಾನವಾ ದುಷ್ಟಚಾರಿಣಃ ॥49॥
ಎಲ್ಲ ದೇವೋದ್ಯಾನಗಳನ್ನೂ, ದೇವತೆಗಳ ಸ್ಥಾನಗಳನ್ನೂ ಋಷಿಗಳ ಪುಣ್ಯಾಶ್ರಮಗಳನ್ನೂ, ರಮ್ಯವಾದ ರಾಜ್ಯಗಳನ್ನೂ, ಲೋಕಮರ್ಯಾದೆಯನ್ನೂ ದುಷ್ಟಚಾರಿಗಳಾದ ದಾನವರು ನಾಶಪಡಿಸಿದರು.
ನಿಃಸ್ಥಾನಾಶ್ಚ ಕೃತಾ ದೇವಾ ಋಷಯಃ ಪಿತೃಭಿಃ ಸಹ |
ದೈತ್ಯೈಸ್ತ್ರಿಭಿಸ್ತ್ರಯೋ ಲೋಕಾ ಹ್ಯಾಕ್ರಾಂತಾಸ್ತೈಃ ಸುರೇತರೈಃ ॥50॥
ದೇವತೆಗಳೂ ಋಷಿಗಳೂ ಪಿತೃಗಳೂ ನಿರಾಶ್ರಯರಾದರು. ಹೀಗೆ ಸುರಸ್ವಭಾವದವರಲ್ಲದ ಅಸುರರು ಮೂವರು ಮೂಲೋಕಗಳನ್ನು ಆಕ್ರಮಿಸಿದರು.
ಪೀಡ್ಯಮಾನೇಷು ಲೋಕೇಷು ತತಃ ಶಕ್ರೋ ಮರುದ್ವೃತಃ |
ಪುರಾಣ್ಯಾಯೋಧಯಾಂಚಕ್ರೇ ವಜ್ರಹಸ್ತಃ ಸಮಂತತಃ ॥51॥
ಲೋಕಗಳು ಪೀಡೆಗೊಳಗಾದಾಗ ದೇವೇಂದ್ರನು ವಜ್ರಾಯುಧವನ್ನು ಹಿಡಿದು, ಮರುದ್ಗಣಗಳಿಂದ ಯುಕ್ತನಾಗಿ ತ್ರಿಪುರರ ಮೇಲೆ ಎಲ್ಲಕಡೆಯಿಂದ ದಾಳಿ ನಡೆಸಿದ.
ನಾಶಕತ್ ತಾನ್ಯಭೇದ್ಯಾನಿ ಯದಾ ಭೇತ್ತುಂ ಪುರಂದರಃ |
ಪುರಾಣಿ ವರದತ್ತಾನಿ ಧಾತ್ರಾ ತೇನ ನರಾಧಿಪ ॥52॥
ರಾಜನೆ, ಪುರಗಳನ್ನು ಅಸುರರಿಗೆ ಬ್ರಹ್ಮದೇವ ವರವಾಗಿ ನೀಡಿದ್ದಾದ್ದರಿಂದ ಪುರಂದರನಿಗೂ ಅಭೇದ್ಯವಾದ ಆ ಪುರಗಳನ್ನು ಭೇದಿಸಲು ಶಕ್ಯವಾಗಲಿಲ್ಲ.
ತದಾ ಭೀತಃ ಸುರಪತಿರ್ಮುಕ್ತ್ವಾ ತಾನಿ ಪುರಾಣ್ಯಥ |
ತೈರೇವ ವಿಬುಧೈಃ ಸಾರ್ಧಂ ಪಿತಾಮಹಮರಿಂದಮ ॥53॥
ಜಗಾಮಾಥ ತದಾಖ್ಯಾತುಂ ವಿಪ್ರಕಾರಂ ಸುರೇತರೈಃ ॥54॥
ಆಗ ರಾಜನೆ, ದೇವರಾಜನು ಆ ಪುರಗಳನ್ನು ಹಾಗೇ ಬಿಟ್ಟು, ದೇವತೆ ಗಳೊಂದಿಗೆ ಬ್ರಹ್ಮದೇವನ ಬಳಿಯಲ್ಲಿ ಅಸುರರ ದಬ್ಬಾಳಿಕೆಯನ್ನು ನಿವೇದಿಸಿಕೊಳ್ಳಲು ತೆರಳಿದ.
ತೇ ತತ್ತ್ವಂ ಸರ್ವಮಾಖ್ಯಾಯ ಶಿರೋಭಿಃ ಸಂಪ್ರಣಮ್ಯ ಚ |
ತದ್ವಧೋಪಾಯಮಾಚಕ್ಷ್ವ ಭಗವನ್ನಿತಿ ಚಾಬ್ರುವನ್ ॥55॥
ಬ್ರಹ್ಮದೇವನ ಬಳಿಯಲ್ಲಿ ಅವರು ನಿಜಸಂಗತಿಯನ್ನೆಲ್ಲ ಹೇಳಿ ತಲೆಬಾಗಿ ನಮಿಸಿ ``ಪೂಜ್ಯನೆ, ಅಸುರರ ವಧೆಗೆ ಉಪಾಯವನ್ನು ಹೇಳು' ಎಂದರು.
ಶ್ರುತ್ವಾ ತದ್ ಭಗವಾನ್ ದೇವೋ ದೇವಾನಿದಮುವಾಚ ಹ |
ಶ್ರೂಯತಾಂ ತ್ರಿದಶಾಃ ಸರ್ವೇ ಯಥೇದಂ ವಾಕ್ಯಗೌರವಮ್ ॥56॥
ಪೂಜ್ಯ ಬ್ರಹ್ಮದೇವನು ಎಲ್ಲವನ್ನೂ ಕೇಳಿ ದೇವತೆಗಳಿಗೆ ಹೇಳಿದ, `ದೇವತೆಗಳೆಲ್ಲರೂ ಕೇಳಿ, ಇದು ಎಲ್ಲವೂ ನನ್ನ ವರದಾನ ವಾಕ್ಯದ ಮಹತ್ವ.
ಮಮಾಪಿ ಸೋಽಪರಾಧ್ನೋತಿ ಯೋ ಯುಷ್ಮಾಕಮಸೌಖ್ಯಕೃತ್ |
ಅಸುರಾಶ್ಚ ದುರಾತ್ಮಾನಃ ಸರ್ವ ಏವ ಸುರದ್ವಿಷಃ ॥57॥
ಯಾವನು ನಿಮಗೆ ಅಪರಾಧ ಮಾಡುವನೋ ಅವನು ನನಗೂ ಅಪರಾಧ ಮಾಡಿದಂತೆಯೇ ಆಗುತ್ತದೆ. ದುರಾತ್ಮರಾದ ಅಸುರರೆಲ್ಲರೂ ಸುರದ್ವೇಷಿಗಳು, ಸುರರಲ್ಲಿ ನಿತ್ಯ ಅಪರಾಧ ಮಾಡುತ್ತಾರೆ.
ದುರಾತ್ಮಾನೋಽಸುರಾ ನಿತ್ಯಂ ತೇ ಚಾಪಿ ವಿಬುಧಾ ಮಮ |
ನ ಶಕ್ನುವಂತಿ ತೇ ಸರ್ವೇ ಯುಷ್ಮಾನ್ ವೈ ಪೀಡಯಂತಿ ತೇ ॥58॥
ಏಕೆಂದರೆ, ದೇವತೆಗಳೆ! ದುರಾತ್ಮರಾದ ಅಸುರರು ನಿತ್ಯ ನಮಗೆ ಅಪರಾಧ ಮಾಡಲು ಶಕ್ತರಾಗುವುದಿಲ್ಲ. ಅದಕ್ಕೆ ಸಜ್ಜನರಲ್ಲಿ ಸತತ ಅಪರಾಧ ಮಾಡುವ ಮೂಲಕ ನಿಮ್ಮನ್ನು ಅವರು ಪೀಡಿಸುತ್ತಾರೆ.
ಅಹಂ ಸಮಸ್ತು ಸರ್ವೇಷಾಂ ಭೂತಾನಾಂ ನಾತ್ರ ಸಂಶಯಃ |
ಅವಿನೀತಾ ನಿಹಂತವ್ಯಾ ಇತ್ಯೇವಂ ಪ್ರಬ್ರವೀಮಿ ವಃ ॥59॥
ನಾನು ತಪಸ್ಸು ಮಾಡುವ ಸರ್ವಪ್ರಜೆಗಳಲ್ಲಿಯೂ ಸಮನಾಗಿ ವರ್ತಿಸುತ್ತೇನೆ. ಎಲ್ಲರಿಗೂ ವರ ನೀಡುತ್ತೇನೆ. ಇದರಲ್ಲಿ ಸಂಶಯವಿಲ್ಲ.

ಆದರೂ ಅವಿನೀತರಾಗಿರುವ ಅಸುರರನ್ನು ಕೊಲ್ಲಲೇಬೇಕಾಗಿದೆ. ಅದರಿಂದ ನಿಮಗೆ ತಕ್ಕ ಉಪಾಯವನ್ನು ಹೇಳುತ್ತೇನೆ.
ಏಕೇಷುಣಾ ವಿಭೇದ್ಯಾನಿ ತಾನಿ ದುರ್ಗಾಣಿ ನಾನ್ಯಥಾ |
ಶಕ್ತಸ್ತು ತಾನಿ ಬಾಣೇನ ಭೇತ್ತುಂ ಕಾಮಂ ತ್ರಿಲೋಚನಃ ॥60॥
ಒಂದು ಬಾಣದಿಂದ ದುರ್ಗಮವಾದ ಆ ಪುರಗಳನ್ನು ಭೇದಿಸಬೇಕು. ಅವುಗಳನ್ನು ಬಾಣದಿಂದ ಭೇದಿಸಲು ಬಲು ಸಮರ್ಥನು ಮುಕ್ಕಣ್ಣನಾದ ರುದ್ರದೇವ.
ತೇ ಯೂಯಂ ಸ್ಥಾಣುಮೀಶಾನಂ ಜಿಷ್ಣುಮಕ್ಲಿಷ್ಟಕಾರಿಣಮ್ |
ಯೋದ್ಧಾರಂ ವೃಣುತ ಕ್ಷಿಪ್ರಂ ಸ ತಾನ್ ಹಂತಾ ಸುರೇತರಾನ್ ॥61॥
ಕ್ಲೇಶವಿಲ್ಲದೆ ಕಾರ್ಯವನ್ನು ಪೂರೈಸಬಲ್ಲವನು, ಜಯಶೀಲನಾದ ಸ್ಥಾಣುವಾದ ಈಶ್ವರ. ಅವನನ್ನು ಯೋಧನನ್ನಾಗಿ ವರಿಸಿರಿ. ಅವನು ಬೇಗನೆ ಆ ಅಸುರನನ್ನು ಕೊಲ್ಲುವನು.'
ತೇ ದೇವಾಸ್ತೇನ ವಾಕ್ಯೇನ ಚೋದಿತಾಃ ಪ್ರಣತಾಃ ಸ್ಥಿತಾಃ |
ದಿವ್ಯಂ ವರ್ಷಸಹಸ್ರಂ ವೈ ತಪಸ್ತಪತ್ತ್ವ ಸುರರ್ಷಭಾಃ ॥62॥
ದೇವತೆಗಳು ಬ್ರಹ್ಮದೇವನ ಮಾತಿನಿಂದ ಪ್ರೇರಿತರಾಗಿ ನಮಿಸಿ ಮುಕ್ಕಣ್ಣ ಶಿವನ ಕುರಿತು ದೇವಮಾನದ ಸಾವಿರವರ್ಷಕಾಲ ತಪಸ್ಸು ಮಾಡುತ್ತಲಿದ್ದರು.
ಶುಭಾತ್ಮಾನೋ ಮಹಾತ್ಮಾನೋ ಜಗ್ಮುರ್ವೈ ವೃಷಭಧ್ವಜಮ್ ॥63॥
ಬ್ರಹ್ಮಾಣಮಗ್ರತಃ ಕೃತ್ವಾ ಶರಣ್ಯಂ ಶರಣಾಗತಾಃ |
ತಪಃ ಪರಮಮಾಜಗ್ಮುರ್ಗೃಣಂತೋ ಬ್ರಹ್ಮ ಶಾಶ್ವತಮ್ ॥64॥
ಶುಭಸ್ವರೂಪರಾದ ಮಹಾತ್ಮರಾದ ದೇವತೆಗಳು ಬ್ರಹ್ಮದೇವನನ್ನು ಮುಂದೆ ಮಾಡಿಕೊಂಡು ಶರಣುಹೊಂದಲು ಯೋಗ್ಯನಾದ ವೃಷಭಧ್ವಜನ ಅಂತರ್ಯಾಮಿಯನ್ನು ಶರಣು ಹೊಂದಿದರು. ಮತ್ತು ಅಂತರ್ಯಾಮಿಯಾದ ಶಾಶ್ವತ ಪರಬ್ರಹ್ಮವಿಷ್ಣುವನ್ನು ಸ್ತುತಿಸುತ್ತ ಉತ್ತಮವಾದ ತಪಸ್ಸನ್ನು ಮಾಡಿದರು.
ಇಲ್ಲಿ ಮುಂದೆ 35ನೇ ಅಧ್ಯಾಯದ 39ನೇ ಶ್ಲೋಕ-
`ವಿಷ್ಣುಶ್ಚಾತ್ಮಾ ಭಗವತೋ ಭವಸ್ಯಾಮಿತತೇಜಸಃ'
ಎಂಬಲ್ಲಿ ಶಿವನಲ್ಲಿ ಶಿವರೂಪದಿಂದ ಅಂತರ್ಯಾಮಿಯಾಗಿರುವ ವಿಷ್ಣುವನ್ನೇ `ಭವಸ್ಯ ಆತ್ಮಾ' ಎಂದಿದೆ. ಶಿವನನ್ನು ಸಂತೋಷಪಡಿಸಿದರೆ ಅವನ ಅಂತರ್ಯಾಮಿ ಒಲಿಯುತ್ತಾನೆ. ಅದಕ್ಕೆ ಬ್ರಹ್ಮಾದಿ ದೇವತೆಗಳು ಶಿವನನ್ನು ಶರಣುಹೊಂದಿದರು. ಮತ್ತು ಶಿವನ ಅಂತರ್ಯಾಮಿಯಾದ ಪರಬ್ರಹ್ಮ ನಾರಾಯಣನನ್ನು ಶಿವನ ಹೆಸರುಗಳಿಂದ ಸ್ತುತಿಸಿದರು.
ಭಾಗವತದಲ್ಲಿ (4.3.22) ಶಿವನು ಸತಿಗೆ ಹೇಳುತ್ತಾನೆ
`ಪ್ರತ್ಯುದ್ಗಮ ಪ್ರಶ್ರಯಣಾಭಿವಾದನಂ-
ವಿಧೀಯತೇ ಸಾಧು ಮಿಥಃ ಸುಮಧ್ಯಮೇ |
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ-
ಗುಹಾಶಯಾಯೈವ, ನ ದೇಹಮಾನಿನೇ ॥'
`ಬಂದ ಅತಿಥಿಗಳನ್ನು ಇದಿರುಗೊಂಡು ನಮಿಸುವಾಗ, ತಿಳಿದವರು ಅವರೊಳಗೆ ಅಂತರ್ಯಾಮಿಯಾಗಿರುವ ಪರಮಪುರುಷನನ್ನೇ ನಮಿಸಬೇಕು' ಎಂದು. ಈ ಅಭಿಪ್ರಾಯದಿಂದಲೇ `ಶಾಶ್ವತಂ ಪರಮಂ ಬ್ರಹ್ಮ ಗೃಣಂತಃ' ಎಂದು ಪ್ರಕೃತದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.
ಮುಂದೆ ದೇವತೆಗಳು ರುದ್ರಾಧ್ಯಾಯದಿಂದ ರುದ್ರದೇವನನ್ನು ಸ್ತುತಿಸುವುದು ಮುಖ್ಯವಾಗಿ ರುದ್ರಾಂತರ್ಯಾಮಿಗೇ ಸಲ್ಲುತ್ತದೆ ಎಂದು ತಿಳಿಯಬೇಕು. ಇಲ್ಲದಿದ್ದರೆ `ಬ್ರಹ್ಮಾಣಮಗ್ರತಃ ಕೃತ್ವಾ' ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ದೇವತೆಗಳು ಬ್ರಹ್ಮಪುತ್ರನಾದ ಶಿವನನ್ನು ಶರಣುಹೊಂದುವುದು, ಸ್ತುತಿಸುವುದು ಯುಕ್ತವಾಗಲಾರದು.
`ತ್ರಿಮೂರ್ತಿಗಳು ಪರಬ್ರಹ್ಮಸ್ವರೂಪರು, ಸಮಾನರೆ'ನ್ನುವುದು ಭಾರತಕ್ಕೆ ಸಮ್ಮತವಲ್ಲ. ಈ ತ್ರಿಪುರಾಖ್ಯಾನ ಹೊರಟಿರುವುದೇ ಬ್ರಹ್ಮನು ಶಿವನಿಗಿಂತ ಉತ್ತಮನೆಂದೂ, ಶಿವನಿಗಿಂತ ಉತ್ತಮನಾದ ಬ್ರಹ್ಮ ಶಿವನಿಗೆ ಸಾರಥ್ಯ ಮಾಡಿದನೆಂದೂ ಹೇಳುವ ಉದ್ದೇಶದಿಂದ. ಹಾಗೆ ಹೇಳಿ, ಸೂತಜಾತಿಯ ಕರ್ಣನಿಗೆ ಉತ್ತಮ ಕ್ಷತ್ರಿಯಜಾತಿಯವನಾದ ಶಲ್ಯನು ಸಾರಥ್ಯ ಮಾಡುವುದನ್ನು ಉಚಿತವೆಂದು ಸಮರ್ಥಿಸುತ್ತಾನೆ ದುರ್ಯೋಧನ.
ಅನಂಗಮಥನಂ ಸರ್ವೇ ಭವಂ ಸರ್ವಾತ್ಮನಾ ಗತಾಃ |
ದೇವದೇವಂ ಪರಂ ಸ್ಥಾಣುಂ ವರದಂ ತ್ರ್ಯಂಬಕಂ ಶಿವಮ್ ॥65॥
ಮನ್ಮಥನನ್ನು ಸುಟ್ಟವನು ದೇವದೇವ ಸ್ಥಾಣು ತ್ರಂಬಕ ಪರಶಿವನು ತಮಗೆ ವರದಾಯಕನಾಗಲೆಂದು ಸರ್ವಾತ್ಮನಾ ಶರಣಾಗತರಾದರು ದೇವತೆಗಳು.
ಶರ್ವಮೀಡ್ಯಮಜಂ ರುದ್ರಂ ಶಶಾಂಕಾಂಕಿತಮೂರ್ಧಜಮ್ |
ತುಷ್ಟುವುರ್ವಾಗ್ಭಿರಗ್ರ್ಯಾಭಿರ್ಭಯೇಷ್ವಭಯಮಚ್ಯುತಮ್ ॥66॥
ಶರ್ವ, ಈಡ್ಯ, ಅಜ, ಉಗ್ರ, ಚಂದ್ರಶೇಖರ, ಭಯಬಂದಾಗ ಅಭಯ ನೀಡುವವನು ಸರ್ವಾಂತರ್ಯಾಮಿಯಾಗಿ ಸರ್ವವನ್ನು ವಶದಲ್ಲಿರಿಸಿ ಕೊಂಡವನು ಮಹಾತ್ಮನಾದ ಶಿವನ ಅಂತರ್ಯಾಮಿ ಅಚ್ಯುತ. ಅವನನ್ನು ಉತ್ತಮವಾದ ಶಬ್ದಗಳಿಂದ ದೇವತೆಗಳು ಸ್ತುತಿಸಿದರು.
ಸರ್ವಾತ್ಮಾನಂ ಮಹಾತ್ಮಾನಂ ಯೇನಾಪ್ತಂ ವಿಶ್ವಮಾತ್ಮನಾ ॥67॥
ತಪೋವಿಶೇಷೈರ್ವಿವಿಧೈರ್ಯೋಗಂ ಯೋ ವೇದ ಚಾತ್ಮನಾ |

ಯಃ ಸಾಂಖ್ಯಮಾತ್ಮನಾ ವೇತ್ತಿ ಯಸ್ಯ ಚಾತ್ಮಾ ವಶೇ ಸದಾ ॥68॥
ವಿವಿಧ ಉತ್ತಮ ತಪಗಳಿಂದ ಮೋಕ್ಷೋಪಾಯವಾದ ವಿಷ್ಣುಭಕ್ತಿಯನ್ನು ಮನಸಿನಲ್ಲಿ ಸಂಪಾದಿಸಿದವನು, ಮನಸಿನಿಂದ `ಸಾಂಖ್ಯ'ವನ್ನು ಶುದ್ಧಾತ್ಮತತ್ವಜ್ಞಾನ ವನ್ನು ತಿಳಿದವನು. ಮನಸ್ಸನ್ನು ವಶದಲ್ಲಿರಿಸಿಕೊಂಡವನು ಶಿವ.
ತಂ ತೇ ದದೃಶುರೀಶಾನಂ ತೇಜೋರಾಶಿಮುಮಾಪತಿಮ್ |
ಪರೇಣ ಯತ್ನೇನ ಭವಂ ತ್ರಿದಶಾಃ ಶರ್ವಮೀಶ್ವರಮ್ ॥69॥
ಈಶಾನ ಭವ ಶರ್ವ ಈಶ್ವರನೆಂದು ಮುಂತಾಗಿ ಪ್ರಸಿದ್ಧನಾದ ತೇಜೋರಾಶಿ ಯಾದ ಆ ಉಮಾಪತಿಯನ್ನು ಮಹಾ ಪ್ರಯತ್ನದಿಂದ ದೇವತೆಗಳು ದರ್ಶನ ಮಾಡಿದರು.
ಅನನ್ಯಸದೃಶಂ ಲೋಕೇ ಪ್ರತಪಂತಮಕಲ್ಮಷಮ್ ॥70॥
ಏಕಂ ಚ ಭಗವಂತಂ ತೇ ನಾನಾರೂಪಮಕಲ್ಪಯನ್ |
ಆತ್ಮನಃ ಪ್ರತಿರೂಪಾಣಿ ರೂಪಾಣ್ಯಥ ಮಹಾತ್ಮನಿ ॥71॥
ಪರಸ್ಪರಸ್ಯ ಚಾಪಶ್ಯನ್ ಸರ್ವೇ ಪರಮವಿಸ್ಮಿತಾಃ ॥72॥
ಲೋಕದಲ್ಲಿ ಅಸದೃಶ ತಪೋನಿರತ ಪಾಪರಹಿತಇಂಥ ಶಿವನ ಅಂತರ್ಯಾಮಿಯಾದ ಸರ್ವೋತ್ತಮ ಭಗವಂತನನ್ನು ನಾನಾರೂಪಗಳಲ್ಲಿ ದೇವತೆಗಳು ಕಂಡುಕೊಂಡರು. ಪಶ್ಯಾಮಿ ದೇವಾನ್ ತವ ದೇವ ದೇಹೇ (ಗೀತಾ. 11.15) ಎಂದು ಗೀತೆ ಹೇಳುವಂತೆ ಅರ್ಜುನ ಕೃಷ್ಣನ ವಿಶ್ವರೂಪದಲ್ಲಿ ಎಲ್ಲ ದೇವತೆಗಳನ್ನು ಕಂಡ. ಹಾಗೇ ಮಹಾತ್ಮನಾದ ಶಿವನಲ್ಲಿ ಅವನ ಅಂತರ್ಯಾಮಿಯಲ್ಲಿ ಎಲ್ಲ ದೇವತೆಗಳು ತಮ್ಮನ್ನು, ತಮ್ಮ ಪ್ರತಿರೂಪಗಳಾದ ತಮ್ಮ ರೂಪಗಳನ್ನು ಕಂಡು ವಿಸ್ಮಯಪಟ್ಟರು.
ಸರ್ವಭೂತಮಯಂ ದೃಷ್ಟ್ವಾ ತಮಜಂ ಜಗತಃ ಪತಿಮ್ |
ದೇವಾ ಬ್ರಹ್ಮರ್ಷಯಶ್ಚೈವ ಶಿರೋಭಿರ್ಧರಣೀಂ ಗತಾಃ ॥73॥
ಎಲ್ಲ ಚೇತನ, ಅಚೇತನಗಳಿಗೆ ಆಶ್ರಯನಾಗಿದ್ದು, ಜನ್ಮರಹಿತನಾಗಿದ್ದು , ಜಗನ್ನಾಥನೆನಿಸಿದ ಶಿವಾಂತರ್ಯಾಮಿಯನ್ನು ದೇವತೆಗಳೂ ಬ್ರಹ್ಮರ್ಷಿಗಳೂ ತಲೆಬಾಗಿ ನಮಿಸಿದರು.
ತಾನ್ ಸ್ವಸ್ತಿವಾಚ್ಯ ಚಾಭ್ಯರ್ಚ್ಯ ಸಮುತ್ಥಾಪ್ಯ ಚ ಶಂಕರಃ |
ಬ್ರೂತ ಬ್ರೂತೇತಿ ಭಗವಾನ್ ಸ್ಮಯಮಾನೋಽಭ್ಯಭಾಷತ ॥74॥
ಭಗವಾನ್ ಶಿವನು `ಶುಭವಾಗಲಿ' ಎನ್ನುತ್ತ ಹರಸಿ ಸಂತೋಷಪಡಿಸಿ ಮೇಲೆಬ್ಬಿಸಿ `ನಿಮ್ಮಿಷ್ಟವನ್ನು ಹೇಳಿರಿ, ಹೇಳಿರಿ' ಎಂದು ನಸುನಗುತ್ತ ನುಡಿದ.
ತ್ರ್ಯಂಬಕೇಣಾಭ್ಯನುಜ್ಞಾತಾಸ್ತತಸ್ತೇ ಸ್ವಸ್ಥಚೇತಸಃ |
ನಮೋ ನಮೋ ನಮಸ್ತೇಽಸ್ತು ಪ್ರಭೋ ಇತ್ಯಬ್ರುವನ್ ಭವಮ್ ॥75॥
ಹೇಳಲು ಅನುಜ್ಞೆ ಪಡೆದು ಸ್ವಸ್ಥಚಿತ್ತರಾದ ದೇವತೆಗಳು `ಪ್ರಭುವೆ, ನಿನಗೆ ನಮಸ್ಕಾರ, ನಮಸ್ಕಾರ ನಮಸ್ಕಾರ' ಎಂದರು.
ನಮೋ ದೇವಾಧಿದೇವಾಯ ಧನ್ವಿನೇ ಚಾತಿಮನ್ಯವೇ |
ಪ್ರಜಾಪತಿಮಖಘ್ನಾಯ ಪ್ರಜಾಪತಿಭಿರೀಡ್ಯತೇ ॥76॥
ನಮಃ ಸ್ತುತಾಯ ಸ್ತುತ್ಯಾಯ ಸ್ತೂಯಮಾನಾಯ ಶಂಭವೇ |
ವಿಲೋಹಿತಾಯ ಚೋಗ್ರಾಯ ನೀಲರುದ್ರಾಯ ಶೂಲಿನೇ ॥77॥
ಅಮೋಘಾಯ ಮೃಗಾಕ್ಷಾಯ ಸೂಕ್ಷ್ಮಾಯ ಸುಧನಾಯ ಚ |
ಅರ್ಹಾಯ ಚೈವ ಶುಕ್ಲಾಯ ಕ್ಷಮಾಯ ಕ್ರಥನಾಯ ಚ ॥78॥
ಈಶಾನಾಯಾಪ್ರಮೇಯಾಯ ನಿಹನ್ತ್ರೇ ಚೀರವಾಸಸೇ ॥79॥
ತಪೋರತಾಯ ಪಿಂಗಾಯ ವ್ರತಿನೇ ಕೃತ್ತಿವಾಸಸೇ |
ಕುಮಾರಪಿತ್ರೇ ತ್ರ್ಯಕ್ಷಾಯ ಪ್ರವರಾಯುಧಧಾರಿಣೇ ॥80॥
ಪ್ರಪನ್ನಾರ್ತಿವಿನಾಶಾಯ ಬ್ರಹ್ಮದ್ವಿಟ್ಸಂಘಘಾತಿನೇ |
ವನಸ್ಪತೀನಾಂ ಪತಯೇ ವನಾನಾಂ ಪತಯೇ ನಮಃ ॥81॥
ಗವಾಶ್ಚ ಪತಯೇ ನಿತ್ಯಂ ಯಜ್ವನಾಂ ಪತಯೇ ನಮಃ |
ನಮೋಸ್ತು ತೇ ಸಸೈನ್ಯಾಯ ತ್ರ್ಯಂಬಕಾಯಾಮಿತೌಜಸೇ ॥82॥
ಮನೋವಾಕ್ಕರ್ಮಭಿರ್ದೇವ ತ್ವಾಂ ಪ್ರಪನ್ನಾನ್ ಭಜಸ್ವ ನಃ ॥83॥
ದೇವಾಧಿದೇವನಿಗೆ ನಮನ. ಪಿನಾಕಧನುರ್ಧಾರಿಗೆ ನಮನ. ಅತಿಕ್ರುದ್ಧನಿಗೆ ನಮನ. ದಕ್ಷಯಜ್ಞ ವಿನಾಶಕನಿಗೆ ನಮನ. ಪ್ರಜಾಪತಿಗಳಿಗೆ ಸ್ತುತ್ಯನಾದ ಸರ್ವಸ್ತುತ್ಯ ಸರ್ವಸ್ತುತ ಸರ್ವಸ್ತೂಯಮಾನನಾದ ಶಂಭುವಿಗೆ ನಮನ, ಪಂಚಮುಖಗಳಲ್ಲಿ ಉತ್ತರದ ವಾಮದೇವಮುಖದಲ್ಲಿ ವಿಶೇಷ ರಕ್ತವರ್ಣದವನಿಗೆ ನಮನ, ದಕ್ಷಿಣದ ಅಘೋರಮುಖದಲ್ಲಿ ಕಪ್ಪಾದ ರುದ್ರನಿಗೆ ನಮನ, ತ್ರಿಶೂಲಧಾರಿಗೆ ನಮನ,
ಅಮೋಘ ಫಲದಾಯಿಗೆ ನಮನ, ಜಿಂಕೆ ಕಣ್ಣಿನವನಿಗೆ ನಮನ, ಸೂಕ್ಷ್ಮ ಮನಸ್ಸುಗಳಲ್ಲಿ ನಿಯಾಮಕನಾಗಿರುವ ಸೂಕ್ಷ್ಮರೂಪಿಗೆ ನಮನ, ಬೇಡಿದವರಿಗೆ ಒಳ್ಳೆಯ ಧನಸಂಪತ್ತು ನೀಡುವವಗೆ ನಮನ, ಸರ್ವಪೂಜಾಯೋಗ್ಯನಿಗೆ ನಮನ. ಪಶ್ಚಿಮದ ಸದ್ಯೋಜಾತಮುಖದಲ್ಲಿ ಬಿಳಿಯ ಬಣ್ಣದವನಿಗೆ ನಮನ. ಅಪರಾಧಕ್ಷಮಾಶೀಲನಿಗೆ ನಮನ. ಜಗಲ್ಲಯಕಾರಿಗೆ ನಮನ, ಪಂಚಮುಖಗಳಲ್ಲಿ ನಡುವಿನ ಈಶಾನಮುಖದವನಿಗೆ ನಮನ, ಅಪ್ರಮೇಯನಿಗೆ ನಮನ, ಮೃತ್ಯುವನ್ನು ಕೊಲ್ಲುವವನಿಗೆ ನಮನ, ದುರ್ವಾಸಾದಿ ಯತಿರೂಪದಲ್ಲಿ ಚಿಂದಿ ಬಟ್ಟೆ ಉಡುವವನಿಗೆ ನಮನ,
ತಪೋನಿರತನಿಗೆ ನಮನ, ಪೂರ್ವದ ತತ್ಪುರುಷಮುಖದಲ್ಲಿ ಹಳದಿ ಬಣ್ಣದವನಿಗೆ ನಮನ, ಪಾಶುಪತವ್ರತನಿಷ್ಠನಿಗೆ ನಮನ, ಗಜ

ವ್ಯಾಘ್ರಚರ್ಮ ಉಡುವವನಿಗೆ ನಮನ, ಕುಮಾರನ ಪಿತನಿಗೆ ನಮನ, ಮುಕ್ಕಣ್ಣನಿಗೆ ನಮನ, ಕುಠಾರ ಶೂಲ ಡಮರು ಹರಿಣ ಖಟ್ವಾಂಗ ಪಿನಾಕ ಮುಂತಾದ ಅಸಂಖ್ಯ ಶ್ರೇಷ್ಠ ಆಯುಧಗಳನ್ನು ಹಿಡಿದು ನರ್ತನ ಮಾಡುವವನಿಗೆ ನಮನ.
ಭಕುತರ ಭಯನಾಶಕನಿಗೆ ನಮನ. ಬ್ರಹ್ಮದ್ವೇಷಿ ಸಮೂಹನಾಶಕನಿಗೆ ನಮನ. ವನಸ್ಪತಿಗಳ ಪತಿಗೆ ನಮನ. ಪ್ರೇತವನಗಳ, ಸ್ಮಶಾನಗಳ ಒಡೆಯನಿಗೆ ನಮನ.
ಗೋ ಅಶ್ವಗಳ ಪತಿಗೆ ನಮನ. ಅಷ್ಟಮೂರ್ತಿಗಳಲ್ಲಿ ಸೇರಿದ ಯಜ್ಞಕರ್ತರ ಒಡೆಯನಿಗೆ ನಮನ. ಪ್ರಮಥ ಸೈನ್ಯಗಳಿಂದ ಕೂಡಿದ ಅಮಿತಪರಾಕ್ರಮಿ, ತ್ರಂಬಕನಾದ ನಿನಗೆ ನಮನ.
ಮನಸು ಮಾತು ಕೃತಿಗಳಿಂದ ನಿನ್ನನ್ನೇ ಭಜಿಸುವ ನಮ್ಮನ್ನು ಕಾಪಾಡು' ಎಂದು ದೇವತೆಗಳು ಬೇಡಿದರು.
ತತಃ ಪ್ರಸನ್ನೋ ಭಗವಾನ್ ಸ್ವಾಗತೇನಾಭಿನಂದ್ಯ ಚ |
ಪ್ರೋವಾಚ ವ್ಯೇತು ವಸತತ್ರಸೋ ಬ್ರೂತ ಕಿಂ ಕರವಾಣಿ ವಃ ॥84॥
ಆಗ ಸಂತುಷ್ಟನಾದ ಶಿವ ಸ್ವಾಗತ ನೀಡಿ ಅಭಿನಂದಿಸಿ ನುಡಿದ `ಭಯ ಪಡಬೇಡಿರಿ. ನಾನು ನಿಮಗೆ ಏನು ಕಾರ್ಯ ಮಾಡಿಕೊಡಲಿ?'
ದೇವಾಃ ಶರ್ವಸ್ಯ ವಚನಂ ಶ್ರುತ್ವಾ ಹರ್ಷಮುಪಾಗತಾಃ ॥85॥
ದೇವತೆಗಳು ಶಿವನ ಮಾತನ್ನು ಕೇಳಿ ಹರ್ಷಪಟ್ಟರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥33॥

ಮೂವತ್ತನಾಲ್ಕನೆಯ ಅಧ್ಯಾಯ
ರುದ್ರನು `ಪಶುಪತಿ' ಎನಿಸಿದ, `ಮಹಾದೇವ'ನೆನಿಸಿದ ಬಗೆ.
ದುರ್ಯೋಧನಃ
ಪಿತೃದೇವರ್ಷಿಸಂಘೇಭ್ಯೋ ವರೇ ದತ್ತೇ ಮಹಾತ್ಮನಾ |
ಸತ್ಕೃತ್ಯ ಶಂಕರಂ ಪ್ರಾಹ ಬ್ರಹ್ಮಾ ಲೋಕಪಿತಾಮಹಃ ॥1॥
ದುರ್ಯೋಧನ ಶಲ್ಯನಿಗೆ ನುಡಿದ– ಪಿತೃ ದೇವ ಋಷಿಗಳ ಸಮೂಹಗಳಿಗೆ ಶಿವನು ಸತ್ಕರಿಸಿ ವರ ನೀಡುವೆನೆಂದಾಗ ಲೋಕಪಿತಾಮಹನಾದ ಬ್ರಹ್ಮದೇವ ನುಡಿದ.
ಇಮಾನ್ಯಸುರದುರ್ಗಾಣಿ ಲೋಕಾಂಸ್ತ್ರೀನಾಕ್ರಮಂತಿ ನಃ |
ಕಶ್ಚ ಪ್ರಜಾಪತಿರ್ಘೋರಾಂಸ್ತಾನ್ ಸರ್ವಾನ್ ಜಹಿ ಮಾಚಿರಮ್ ॥2॥
ಈ ಅಸುರದುರ್ಗಗಳು ನಮ್ಮ ಮೂರೂ ಲೋಕಗಳನ್ನು ಆಕ್ರಮಿಸುತ್ತಿವೆ. ಅಸುರರ ಪ್ರಜಾಪತಿಯೂ ಒಬ್ಬನು ಲೋಕಗಳನ್ನು ಆಕ್ರಮಿಸಿದ್ದಾನೆ. ಅವರೆಲ್ಲರನ್ನೂ ಬೇಗನೆ ನಾಶ ಮಾಡು.
ವರಾತಿಸರ್ಗಾದ್ ದೇವೇಶ ಪ್ರಾಜಾಪತ್ಯಮಿದಂ ಪದಮ್ |
ಮಯಾಽಧಿತಿಷ್ಠತಾ ದತ್ತೋ ದಾನವೇಭ್ಯೋ ಮಹಾನ್ ವರಃ ॥3॥
ದೇವೇಶನೆ, ತಪಸ್ಸಿಗೆ ವರನೀಡಲೆಂದೇ ನಾನು ಈ ಬ್ರಹ್ಮಪದವಿಯನ್ನಾಳುವುದ ರಿಂದ ದಾನವರಿಗೆ ಅವರ ತಪಸ್ಸಿಗೆ ದೊಡ್ಡ ವರ ನೀಡಿದ್ದೇನೆ.
ತಾನತಿಕ್ರಾಂತಮರ್ಯಾದಾನ್ನಾನ್ಯಃ ಸಂಹರ್ತುಮರ್ಹತಿ ॥4॥
ತ್ವಾಮೃತೇ ಸರ್ವಭೂತೇಶ ತ್ವಂ ಹ್ಯೇಷಾಂ ಪ್ರತ್ಯರಿರ್ವಧೇ ॥5॥
ಅದರಿಂದ ಸರ್ವಭೂತಪತಿಯೆ, ನೀನೇ ಇವರ ವಧಕಾರ್ಯದಲ್ಲಿ ಇವರಿಗೆ ವಿರೋಧಿ ಶತ್ರುವಾಗಬೇಕು. ನಿನ್ನ ಹೊರತು ಬೇರೆ ಯಾರೂ ಧರ್ಮ ಮರ್ಯಾದೆಯನ್ನು ಉಲ್ಲಂಘಿಸಿರುವ ಅವರನ್ನು ಕೊಲ್ಲಲು ಶಕ್ತರಾಗಲಾರರು.
ಸ ತ್ವಂ ದೇವ ಪ್ರಪನ್ನಾನಾಂ ಯಾಚತಾಂ ಚ ದಿವೌಕಸಾಮ್ |
ಕುರು ಪ್ರಸಾದಂ ವರದ ದಾನವಾನ್ ಜಹಿ ಸಂಯುಗೇ ॥6॥
ಶರಣಾಗತರಾಗಿ ಬೇಡುತ್ತಿರುವ ದೇವತೆಗಳಿಗೆ, ದೇವ! ವರದಾಯಕ! ನೀನೆ ಅನುಗ್ರಹ ಮಾಡು, ರಣದಲ್ಲಿ ದಾನವರನ್ನು ಸಂಹರಿಸು.
ತ್ವತ್ಪ್ರಸಾದಾಜ್ಜಗತ್ಸರ್ವಂ ಸುಖಮೈಧತ ಮಾನದ |
ಶರಣ್ಯಸ್ತ್ವಂ ಹಿ ದೇವಾನಾಂ ವಯಂ ತ್ವಾಂ ಶರಣಂ ಗತಾಃ ॥7॥
ನೀನು ಅನುಗ್ರಹಿಸಿದರೆ ಎಲ್ಲ ಜಗತ್ತೂ ಸುಖಸಮೃದ್ಧಿ ಹೊಂದುವುದು ನಿಶ್ಚಿತ. ದೇವತೆಗಳಿಗೆ ಆಶ್ರಯ ನೀಡಬಲ್ಲವನು ನೀನು. ನಿನ್ನನ್ನೇ ನಾವು ಆಶ್ರಯಿಸಿದ್ದೇವೆ.
ಈಶ್ವರಃ
ಹಂತವ್ಯಾಃ ಶತ್ರವಃ ಸರ್ವೇ ಯುಷ್ಮಾಕಮಿತಿ ಮೇ ಮತಿಃ |
ನ ತ್ವೇಕಶ್ಚೋತ್ಸಹೇ ಹಂತುಂ ಬಲಿನಃ ಸುರವಿದ್ವಿಷಃ ॥8॥
ಈಶ್ವರನು ನುಡಿದ– ನಿಮ್ಮ ಶತ್ರುಗಳನ್ನು ನಾನು ಕೊಲ್ಲಬೇಕು. ಅದಕ್ಕೆ ನನ್ನ ಒಪ್ಪಿಗೆ ಇದೆ. ಆದರೆ ಬ್ರಹ್ಮವರದಿಂದ ಬಲಿಷ್ಠರಾಗಿರುವ ಅಸುರರನ್ನು ನಾನೊಬ್ಬನೆ ಕೊಲ್ಲಲು ಶಕ್ತನಾಗಲಾರೆ.
ತೇ ಯೂಯಂ ಸಹಿತಾಃ ಸರ್ವೇ ಮದೀಯೇನಾಪಿ ತೇಜಸಾ |
ಜಯಧ್ವಂ ಯುಧಿ ತಾನ್ ಸರ್ವಾನ್ ಸಂಘಾತೇನ
ಮಹಾಬಲಾನ್ ॥9॥
ನನ್ನ ತೇಜಸ್ಸಿನಿಂದಲೂ ಕೂಡಿ ನೀವೆಲ್ಲರೂ ಒಟ್ಟಾಗಿ ರಣದಲ್ಲಿ ಮಹಾಬಲಶಾಲಿಗಳಾದ ಅವರೆಲ್ಲರನ್ನೂ ಕೊಲ್ಲಿರಿ.

ದೇವಾಃ
ಅಸ್ಮತ್ತೇಜೋಬಲಂ ಯಾವತ್ ತಾವದ್ ದ್ವಿಗುಣಮೇವ ವಾ |
ತತ್ತೇಷಾಮಿತಿ ಮನ್ಯಾಮೋ ದೃಷ್ಟತೇಜೋಬಲಾ ಹಿ ತೇ ॥10॥
ದೇವತೆಗಳು ನುಡಿದರು– ನಮ್ಮ ತೇಜೋಬಲವೆಲ್ಲವನ್ನು ಕೂಡಿದರೂ ಅದಕ್ಕೆ ಸಮವಾಗಿ ಅಥವಾ ಅದಕ್ಕಿಂತ ಎರಡುಪಟ್ಟು ಹೆಚ್ಚಾಗಿಯೇ ಅವರ ಬಲವಿದೆ ಎಂದು ಭಾವಿಸುತ್ತೇವೆ. ಏಕೆಂದರೆ ಅವರ ತೇಜೋಬಲವನ್ನು ನಾವು ಕಂಡಿದ್ದೇವೆ.
ಈಶ್ವರಃ
ವಧ್ಯಾಸ್ತೇ ಸರ್ವಥಾ ಪಾಪಾ ಯೇ ಯುಷ್ಮಾಸ್ವಪರಾಧಿನಃ |
ಮಮ ತೇಜೋಬಲಾರ್ಧೇನ ಸರ್ವಾನ್ ಮೃದ್ನಥ ಶಾತ್ರವಾನ್ ॥11॥
ಈಶ್ವರನು ನುಡಿದ– ನಿಮ್ಮಲ್ಲಿ ಅಪರಾಧ ಮಾಡಿರುವ ಆ ಪಾಪಿಗಳು ಸರ್ವಥಾ ವಧಾರ್ಹರೆ. ಅದರಿಂದ ನನ್ನ ಅರ್ಧಬಲವನ್ನು ತೆಗೆದುಕೊಂಡು ನೀವು ಎಲ್ಲ ಶತ್ರುಗಳನ್ನು ಸಂಹರಿಸಬೇಕು.
ದೇವಾಃ
ಬಿಭರ್ತುಂ ತವ ತೇಜೋರ್ಧಂ ನ ಶಕ್ಷ್ಯಾಮ ಸುರೇಶ್ವರ |
ಸರ್ವೇಷಾಂ ನೋ ಬಲಾರ್ಧೇನ ತ್ವಮೇವ ಜಹಿ ಶಾತ್ರವಾನ್ ॥12॥
ದೇವತೆಗಳು ನುಡಿದರು– ದೇವೇಶ, ನಿನ್ನ ಅರ್ಧತೇಜಸ್ಸನ್ನು ಧರಿಸಲು ನಮಗೆ ಶಕ್ತಿ ಇಲ್ಲ. ಅದು ನಮ್ಮ ಅಧೀನವಲ್ಲ. ನಮ್ಮೆಲ್ಲರ ಅರ್ಧಬಲದಿಂದ ನೀನೇ ಶತ್ರುಗಳನ್ನು ವಧಿಸು. ಅದು ನಿನ್ನ ಅಧೀನ.
ವಯಂ ಚ ಸರ್ವಥಾ ದೇವ ರಕ್ಷಣೀಯಾಸ್ತಥೈವ ಚ |
ಸ ನೋ ರಕ್ಷ ಮಹಾದೇವ ತ್ವಮೇವ ಜಹಿ ಶಾತ್ರವಾನ್ ॥13॥
ದೇವ, ಎಲ್ಲ ರೀತಿಯಿಂದಲೂ ನೀನು ನಮ್ಮನ್ನು ಕಾಪಾಡಬೇಕು. ಮಹಾದೇವ, ನಮ್ಮನ್ನು ರಕ್ಷಿಸು. ನೀನೇ ಶತ್ರುಗಳನ್ನು ಕೊಲ್ಲು.
ಈಶ್ವರಃ
ಮಮ ತೇಜೋ ನ ಶಕ್ತಾ ಹಿ ಸರ್ವೇ ಧಾರಯಿತುಂ ಯದಿ |
ಅಹಮೇನಾನ್ವಧಿಷ್ಯಾಮಿ ಯುಷ್ಮತ್ತೇಜೋರ್ಧಸಂಯುತಃ ॥14॥
ಈಶ್ವರನು ನುಡಿದ– ನನ್ನ ತೇಜಸ್ಸನ್ನು ಧರಿಸಲು ನೀವು ಶಕ್ತರಾಗದಿದ್ದಲ್ಲಿ ನಿಮ್ಮ ಅರ್ಧಬಲದಿಂದ ಯುಕ್ತನಾಗಿ ನಾನು ಇವರನ್ನು ವಧಿಸುವೆನು.
ಬಲಾರ್ಧಂ ಯದಿ ಮೇ ದೇವಾ ನ ಧಾರಯಿತುಮಾಹವೇ |
ಶಕ್ತಾಃ ಸರ್ವೇ ಹಿ ಸಂಹತ್ಯ ಯೂಯಂ ತತ್ರಬ್ರುವೀಮಿ ವಃ ॥15॥
ದೇವತೆಗಳೆ, ನನ್ನ ಅರ್ಧಬಲವನ್ನು ಧರಿಸಲು ನೀವು ಒಬ್ಬೊಬ್ಬರು ಶಕ್ತರಾಗದಿದ್ದಲ್ಲಿ ಎಲ್ಲರೂ ನನ್ನೊಂದಿಗೆ ಸೇರಿ ಪ್ರಯತ್ನಮಾಡಿರಿ. ಅದು ಹೇಗೆ ಎಂಬುದನ್ನು ನಾನು ನಿಮಗೆ ಹೇಳುತ್ತೇನೆ.
ಸಮಾ ಭವಂತಿ ಮೇ ಸರ್ವೇ ದಾನವಾಶ್ಚಾಮರಾಶ್ಚ ಯೇ |
ಶಿವೋಽಸ್ಮಿ ಸರ್ವಭೂತಾನಾಂ ಶಿವತ್ವಂ ತೇನ ಮೇ ಸುರಾಃ ॥16॥
ಯದ್ಯಪಿ ನನಗೆ ಎಲ್ಲ ದಾನವರೂ ದೇವತೆಗಳೂ ಸಮಾನರು. ಎಲ್ಲ ಜೀವಿಗಳಿಗೂ ನಾನು ಶುಭ ಉಂಟುಮಾಡುವೆನು. ಅದರಿಂದಲೆ ಶಿವನೆನಿಸಿದ್ದೇನೆ.
ಕಿಂತ್ವಧರ್ಮೇಣ ವರ್ತಂತೇ ಯಸ್ಮಾತ್ ತೇ ಸುರಶತ್ರವಃ |
ತಸ್ಮಾದ್ ವಧ್ಯಾ ಮಯಾಪ್ಯೇತೇ ಯುಷ್ಮಾಕಂ ಚ ಹಿತೇಪ್ಸಯಾ ॥16॥
ಆದರೂ ದಾನವರು ಅಧರ್ಮದಿಂದ ವರ್ತಿಸುತ್ತಿದ್ದಾರೆ. ಅದರಿಂದ ನಿಮ್ಮ ಹಿತಕ್ಕಾಗಿ ನಾನು ಕೂಡ ಅವರನ್ನು ವಧಿಸಬೇಕಾಗಿದೆ.
ಶರಣಂ ವಃ ಪ್ರಪನ್ನಾನಾಂ ಧರ್ಮೇಣ ಚ ಜಿಗೀಷತಾಮ್ |
ಸಾಹಾಯ್ಯಂ ವಃ ಕರಿಷ್ಯಾಮಿ ನಿಹನಿಷ್ಯಾಮಿ ವೋ ರಿಪೂನ್ ॥18॥
ಧರ್ಮದಿಂದ ಅಧರ್ಮವನ್ನು ತುಳಿಯಲು ಬಯಸಿ ನೀವು ನನ್ನನ್ನು ಆಶ್ರಯಿಸಿರುವಿರಿ ಎಂದಮೇಲೆ ನಾನು ನಿಮಗೆ ಸಹಾಯ ಮಾಡುತ್ತೇನೆ. ನಿಮ್ಮ ಶತ್ರುಗಳನ್ನು ಕೊಲ್ಲುತ್ತೇನೆ.
ದೀಯತಾಂ ಚ ಬಲಾರ್ಧಂ ಮೇ ಸರ್ವೈರಪಿ ಪೃಥಕ್‌ಪೃಥಕ್ |
ಪಶುತ್ವಂ ಚೈವ ಮೇ ಲೋಕಾಃ ಸರ್ವೇ ಕಲ್ಪಂತು ಪೀಡಿತಾಃ ॥19॥
ನೀವೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಅರ್ಧಬಲವನ್ನು ನನಗೆ ಕೊಡಿರಿ. ಮತ್ತು ಲೋಕಗಳೆಲ್ಲವೂ ಪೀಡಿತವಾಗಿರುವುದರಿಂದ ನೀವು ನನಗೆ ಪಶುಗಳಾಗಿರಿ.
ಪಶೂನಾಂ ತು ಪತಿತ್ವಂ ಮೇ ಭವತ್ವದ್ಯ ದಿವೌಕಸಃ |
ಏವಂ ನ ಪಾಪಂ ಪ್ರಾಪ್ಸ್ಯಾಮಿ ಪಶೂನ್ ಹತ್ವಾ ಸುರದ್ವಿಷಃ ॥20॥
ದೇವತೆಗಳೆ, ಈಗ ನಾನು ಪಶುಗಳಿಗೆ ಪತಿಯಾಗಬೇಕು. ಹಾಗಾದಾಗ ಅಸುರರನ್ನು ಪಶುರೂಪದಿಂದ ನಾನು ಸಂಹರಿಸುವೆನು. ಪಶುವಧೆಯ ಪಾಪ ನನಗೆ ಸುತ್ತಿಕೊಳ್ಳುವುದಿಲ್ಲ.
ರುದ್ರದೇವರು ಲಯಕಾಲದಲ್ಲಿ ಇಡೀ ಸ್ಥಾವರ ಜಂಗಮ ಪ್ರಪಂಚವನ್ನು ವಧಿಸಿದರೂ ಅವರಿಗೆ ಪಾಪ ಏಕೆ ಬರುವುದಿಲ್ಲ? ಎಂದರೆ ಅವರು ಎಲ್ಲ ಜೀವಿ ಗಳನ್ನು ಯಜ್ಞಪಶುವಾಗಿ ಮಾಡಿಕೊಂಡು ಲಯಯಜ್ಞದಲ್ಲಿ ಆಹುತಿ ರೂಪದಿಂದ ಭಗವಂತನಿಗೆ ಅರ್ಪಿಸುತ್ತಾರೆ. ಯಾಗೀಯ ಹಿಂಸೆ ಹಿಂಸೆ ಎನಿಸುವುದಿಲ್ಲ. ಪಾಪಕರವಾಗುವುದಿಲ್ಲ. ಹೀಗೆ ತ್ರಿಪುರಾಸುರರನ್ನು ಯುದ್ಧಯಜ್ಞದಲ್ಲಿ ಪಶುರೂಪವಾಗಿ ಅರ್ಪಿಸಲು ಶಿವನು ಪಶುಗಳಿಗೆ ಪತಿ, ಪಶುಪತಿಯಾಗಬೇಕು. ಪಶು ಶಿವನ ಸೊತ್ತಾಗಬೇಕು. ಇಲ್ಲದಿದ್ದರೆ ತನ್ನದಲ್ಲದ

ಪಶುವನ್ನು ತಾನು ಪಶುವಾಗಿ ಮಾಡಿ ವಧಿಸುವುದು ನಿಷಿದ್ಧ, ಪಾಪಕರ. ಅದಕ್ಕಾಗಿ ಶಿವ ತಾನು ಮೊದಲಿಗೆ ಪಶುಪತಿಯಾಗುವೆನು ಎನ್ನುತ್ತಾನೆ.
ತನಗೆ ದೇವತೆಗಳು ಅರ್ಧಬಲ ಕೊಡಲಿ ಎನ್ನುತ್ತಾನೆ.
ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್ |
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥
(ಗೀತಾ.15.12)
ಎಂದು ಗೀತೆಯಲ್ಲಿ ಹೇಳಿದಂತೆ ದೇವತೆಗಳಲ್ಲಿರುವ ತೇಜಸ್ಸೆಲ್ಲವೂ ಭಗವಂತನದು. ಅವೆಲ್ಲದರ ಅರ್ಧಾಂಶವನ್ನು ಅವರು ಶಿವನಿಗೆ ಸಹಾಯವಾಗಿ ಕೊಟ್ಟರೆ ತಾನು ತನ್ನಲ್ಲಿರುವ ಭಗವತ್ ತೇಜದ ಬಲದಿಂದ ಯುದ್ಧಯಜ್ಞವನ್ನು ಮಾಡುವೆನೆನ್ನುತ್ತಾನೆ, ಶಿವ. ಅದರಂತೆ ರಥ ಧನು ಬಾಣ ಸಾರಥಿ ಮುಂತಾದ ರೂಪಗಳಿಂದ ಬ್ರಹ್ಮಾದಿದೇವತೆಗಳು ಎಲ್ಲರೂ ತಮ್ಮ ತೇಜಸ್ಸಿನ ಅರ್ಧವನ್ನು ಶಿವನಿಗೆ ನೀಡುತ್ತಾರೆ. ಬಾಣರೂಪದಿಂದ ಭಗವಂತನೂ ನೀಡುತ್ತಾನೆ. ಆಗ ಶಿವ `ಮಹಾದೇವ'ನೆನಿಸುತ್ತಾನೆ. `ಬ್ರಹ್ಮಾದಿ ದೇವತೆಗಳೆಲ್ಲರೂ ಶಿವನನ್ನು ಸ್ತುತಿಸುತ್ತಾರೆ' ಎಂದು ಭಾಗವತದಲ್ಲಿಯೂ ಇದನ್ನೇ ಹೇಳಿದೆ. (7.11.19)
ಕಲ್ಪಯಧ್ವಂ ರಥಂ ದಿವ್ಯಂ ರಥಾಶ್ವಾಂಶ್ಚೈವ ಪಾರಗಾನ್ |
ಧನುಃ ಶರಂ ಸಾರಥಿಂ ಚ ತತೋ ಜೇಷ್ಯಾಮಿ ವೋ ರಿಪೂನ್ ॥21॥
ದೇವತೆಗಳೆ, ನನಗೆ ನೀವು ಎಲ್ಲರೂ ಸೇರಿ ಒಂದು ದಿವ್ಯರಥವನ್ನೂ ಅದನ್ನು ಹೊರಲು ಸಮರ್ಥವಾದ ಕುದುರೆಗಳನ್ನೂ ಸಾರಥಿಯನ್ನೂ ಧನುರ್ಬಾಣ ಗಳನ್ನೂ ಸಿದ್ಧಗೊಳಿಸಿರಿ. ಆಗ ಶತ್ರುಗಳನ್ನು ನಾನು ಗೆಲ್ಲುತ್ತೇನೆ.
ಇತಿ ಶ್ರುತ್ವಾ ವಚೋ ದೇವಾ ದೇವದೇವಸ್ಯ ಭೂಪತೇ |
ವಿಷಾದಮಗಮನ್ಸರ್ವೇ ಪಶುತ್ವಂ ಪ್ರತಿ ಶಂಕಿತಾಃ ॥22॥
ದೇವದೇವನಾಡಿದ ಮಾತನ್ನು ಕೇಳಿ, ಶಲ್ಯ ಮಹಾರಾಜ! ದೇವತೆಗಳು ಎಲ್ಲರೂ ಪಶುತ್ವದ ವಿಷಯದಲ್ಲಿ `ತಾವು ಪಶುಗಳಾಗಿ ಸಾಯಬೇಕೆ?' ಎಂದು ಸಂದೇಹ ತಾಳಿ ವಿಷಣ್ಣರಾದರು.
ತೇಷಾಂ ಭಾವಂ ಭವೋ ಜ್ಞಾತ್ವಾ ದೇವಸ್ತಾನಬ್ರವೀದಿದಮ್ |
ಮಾ ವೋಸ್ತು ಪಶುಭಾವೇಽಸ್ಮಿನ್ ಭಯಂ ವಿಬುಧಸತ್ತಮಾಃ ॥23॥
ಶ್ರೂಯತಾಂ ಪಶುಭಾವಸ್ಯ ವಿಮೋಕ್ಷಃ ಕ್ರಿಯತಾಂ ಚ ಸಃ ॥24॥
ಅವರ ಇಂಗಿತವನ್ನು ಅರಿತು ಶಿವನು ನುಡಿದ– ದೇವೋತ್ತಮರೆ, ಈ ಪಶುತ್ವವಿಷಯದಲ್ಲಿ ನಿಮಗೆ ಭಯಬೇಡ. ಪಶುತ್ವದ ವಿಮೋಚನೆ ಮಾಡಿ ಕೊಳ್ಳಲು ಬರುತ್ತದೆ. ಹೇಳುತ್ತೇನೆ, ಕೇಳಿ. ಅದರಂತೆ ಮಾಡಿರಿ.
ಯೋ ವಃ ಪಶುಪತೇಶ್ಚರ್ಯಾಂ ಚರಿಷ್ಯತಿ ಸ ಮೋಕ್ಷ್ಯತೇ |
ಪಶುತ್ವಾದಿತಿ ಸತ್ಯಂ ವಃ ಪ್ರತಿಜಾನೇ ಸಮಾಗಮೇ ॥25॥
ಯೇ ಚಾಪ್ಯನ್ಯೇ ಚರಿಷ್ಯಂತಿ ವ್ರತಂ ಮೋಕ್ಷ್ಯಂತಿ ತೇಽಪಿ ಚ ॥26॥
ರಣಯಜ್ಞದಲ್ಲಿ ಪಶುಪತಿಯ ಚರ್ಯೆಯನ್ನು ನಿಮ್ಮಲ್ಲಿ ಯಾವನು ಮಾಡುವನೋ ಅವನು ಪಶುತ್ವದಿಂದ ವಿಮುಕ್ತನಾಗುತ್ತಾನೆ. ಇದು ಸತ್ಯ. ಶಪಥಪೂರ್ವಕವಾಗಿ ಇದನ್ನು ಹೇಳುತ್ತೇನೆ. ಬೇರೆಯವರೂ ಕೂಡ ಈ ವ್ರತವನ್ನು ಮಾಡಿದರೆ ಅವರೂ ಮುಕ್ತರಾಗುತ್ತಾರೆ.
ನೈಷ್ಠಿಕಂ ದ್ವಾದಶಾಬ್ದಂ ವಾ ಅರ್ಧಮಬ್ದಮೃತುತ್ರಯಮ್ |
ಮಾಸಂ ದ್ವಾದಶರಾತ್ರಂ ವಾ ಸ ಪಶುತ್ವಾದ್ವಿಮೋಕ್ಷ್ಯತೇ ॥27॥
ತಸ್ಮಾತ್ ಪರಮಿದಂ ಗುಹ್ಯಂ ವ್ರತಂ ದಿವ್ಯಂ ಚರಿಷ್ಯಥ ॥28॥
ಬದುಕಿರುವಷ್ಟೂ ಕಾಲವಾಗಲಿ, ಹನ್ನೆರಡು ವರ್ಷಗಳಾಗಲಿ, ಆರು ವರ್ಷ ಅಥವಾ ಆರು ತಿಂಗಳು ಅಥವಾ ಒಂದು ತಿಂಗಳು, ಕನಿಷ್ಠ ಹನ್ನೆರಡು ದಿನ ಗಳಾದರೂ ಈ ಪಾಶುಪತ ವ್ರತ ಮಾಡಿದರೆ ಪಶುತ್ವದಿಂದ ವಿಮುಕ್ತಿ ದೊರೆಯು ವುದು. ಆದ್ದರಿಂದ ಗೋಪ್ಯವಾದ ದಿವ್ಯವಾದ ಈ ಶ್ರೇಷ್ಠವ್ರತವನ್ನು ಮಾಡಿರಿ.
ಇಲ್ಲಿ `ಪಾಶುಪತವ್ರತ'ವೆಂದರೆ ಪಾಶುಪತಾಗಮದಲ್ಲಿ ಹೇಳಿದ ಪಶುಪತಿಯ ಆರಾಧನೆಯಲ್ಲ. ಅದು ವೇದವಿರುದ್ಧವಾದ್ದರಿಂದ ವೈದಿಕರಿಗೆ ನಿಷಿದ್ಧ. ಪಶುಪತಿ ಎನಿಸಿದ ಶಿವನ ಆರಾಧನೆಯನ್ನು ತಂತ್ರಸಾರಾಗಮ ರೀತಿಯಿಂದಲೆ ಶಿವಾಂತರ್ಯಾಮಿಯ ಪ್ರೀತಿಗಾಗಿ ಮಾಡಬೇಕು. ಈ ಪಶುಪತಿಚರ್ಯಾದಿಂದಲೇ ಶಿವನಿಗೆ ಪಶುಪತಿತ್ವಪ್ರಾಪ್ತಿ. ಬೇರೆ ಪಶುಗಳನ್ನು ತಮ್ಮದಾಗಿಸಿಕೊಳ್ಳುವುದು. ಅದರಿಂದ ಪಶುತ್ವನಿವೃತ್ತಿ. ಅಂದರೆ ತಾವು ಪಶು ವಾಗಿ ಮರಣ ಹೊಂದುವುದು ದೇವತೆಗಳಿಗೆ ತಪ್ಪುತ್ತದೆ. ಶಿವನಿಗೂ ತಾನು ಈ ಪಶುಪತಿಚರ್ಯಾ ಮಾಡಿದ್ದರಿಂದಲೇ ಪಶುಪತಿಯಾಗಿ ರಣಯಜ್ಞದಲ್ಲಿ ಶತ್ರುಗಳನ್ನು ಪಶುರೂಪದಿಂದ ವಧಿಸುವುದು, ಜಯಗಳಿಸುವುದು ಶಕ್ಯವಾಗುತ್ತದೆ. ಮುಂದೆ ತ್ರಿಪುರಾಸುರರೇ ಈ ವ್ರತವನ್ನು ಮಾಡದಿದ್ದುದರಿಂದ ಪಶುಗಳಾಗಿ ಹತರಾಗುತ್ತಾರೆ. ದೇವತೆಗಳು ಮಾತ್ರ ಪಶುತ್ವದಿಂದ ಮುಕ್ತರಾಗು ತ್ತಾರೆ, ಜಯವನ್ನೇ ಗಳಿಸುತ್ತಾರೆ. ಹಿಂದೆಯೂ ಯಜ್ಞಭಾವನೆಯ ಬಲದಿಂದಲೇ ಶಿವ ದಕ್ಷವಧ, ದಕ್ಷಯಜ್ಞಧ್ವಂಸ ಮಾಡಲು ಶಕ್ತನಾದ. ಪಾಪವೂ ಬರಲಿಲ್ಲ.
ತಂ ತಥೇತ್ಯಬ್ರುವನ್ ದೇವಾ ದೇವದೇವನಮಸ್ಕೃತಮ್ |
ಊಚುಶ್ಚೇದಂ ಗೃಹಾಣೇದಂ ತೇಜಸೋಽರ್ಧಮಿತಿ ಪ್ರಭುಮ್ ॥29॥
ಶಿವನ ಮಾತಿಗೆ ದೇವತೆಗಳು `ತಥಾಸ್ತು' ಎಂದರು. `ನಮ್ಮ ನಮ್ಮ ತೇಜಸ್ಸುಗಳ ಅರ್ಧವನ್ನು ಸ್ವೀಕರಿಸು' ಎಂದರು.
ಪ್ರತ್ಯುವಾಚ ತಥೇತ್ಯೇವ ಶೂಲಧೃದ್ ರಾಜಸತ್ತಮ |
ತತಸ್ತೇ ಪ್ರದದುಃ ಸರ್ವೇ ತೇಜಸೋಽರ್ಧಂ ಮಹಾತ್ಮನೇ ॥30॥
ಶಲ್ಯ ಮಹಾರಾಜ, ಶಿವನು `ಆಗಲಿ' ಎಂದ. ಒಡನೆ ದೇವತೆಗಳು ತಮ್ಮಲ್ಲಿದ್ದ ಭಗವತ್ತೇಜಗಳಲ್ಲಿ ಅರ್ಧವನ್ನು ಮಹಾತ್ಮನಾದ ಶಿವನಿಗೆ ಕೊಟ್ಟರು.

ಸರ್ವಮಾದಾಯ ಸರ್ವೇಷಾಂ ತೇಜಸೋಽರ್ಧಂ ದಿವೌಕಸಾಮ್ |
ತೇಜಸಾಭ್ಯಧಿಕೋ ಭೂತ್ವಾ ಭೂಯೋಽಪ್ಯತಿಬಲೋಽಭವತ್ ॥31॥
ದೇವತೆಗಳೆಲ್ಲರ ತೇಜಸ್ಸಿನ ಅರ್ಧವನ್ನು ಶಿವನು ಸ್ವೀಕರಿಸಿ, ಅಧಿಕ ತೇಜಸ್ಸುಗಳಿಗೆ ಪಾತ್ರನಾಗಿ, ಹಿಂದಿನಿಂದಲೂ ಅತಿ ಬಲಿಷ್ಠನೇ ಆಗಿದ್ದ ಶಿವನು ಇನ್ನೂ ಅಧಿಕ ಬಲಿಷ್ಠನಾದ.
ಭಾಗವತದಲ್ಲಿ `ಭಗವತ್ತೇಜಸಾ ಗುಪ್ತೋ ದದಾಹ ತ್ರಿಪುರಂ ನೃಪ' (7.11.17) `ಭಗವಂತನ ತೇಜಸ್ಸಿನಿಂದ ಸುರಕ್ಷಿತನಾದ ಶಿವ ತ್ರಿಪುರಗಳನ್ನು ಸುಟ್ಟ' ಎಂದಿದೆ. ಭಗವತ್ತೇಜದ ರಕ್ಷಣೆ ಇಲ್ಲದಿರುತ್ತಿದ್ದರೆ ಬ್ರಹ್ಮನ ವರಬಲ ದಿಂದ ಅತಿ ಬಲಿಷ್ಠರಾದ ತ್ರಿಪುರರನ್ನು ದಹಿಸಲು ಶಿವನಿಂದ ಶಕ್ಯವಾಗುತ್ತಿರಲಿಲ್ಲ.
ತತಃಪ್ರಭೃತಿ ದೇವಾನಾಂ ದೇವದೇವೋಽಭವತ್ ಪತಿಃ |
ಪತಿಶ್ಚ ಸರ್ವಭೂತಾನಾಂ ಪಶೂನಾಂ ಚಾಭವತ್ತದಾ ॥32॥
ಅಂದಿನಿಂದ ದೇವದೇವನಾದ ಶಿವ `ದೇವದೇವ'ನೆನಿಸಿದ. ಸಕಲ ದೇವತೆಗಳಿಗೆ ಪತಿ ಎನಿಸಿದ. ಸರ್ವಭೂತಗಳಿಗೆ ಪತಿಯೆನಿಸಿದ. ಮತ್ತು ಪಶುಗಳಿಗೆ ಪತಿಯೆನಿಸಿದ.
ತಸ್ಮಾತ್ ಪಶುಪತಿಶ್ಚೋಕ್ತೋ ಭವತ್ವಾಚ್ಚ ಭವೇತಿ ವೈ ॥33॥
ಅದರಿಂದ ಶಿವ ಪಶುಪತಿ ಎನಿಸಿದ. ಮತ್ತು ತ್ರಿಪುರದಾಹದಿಂದ ಮೂಲೋಕದ ಒಡೆತನದ ಸಂಪತ್ತನ್ನು ಪುನಃ ದೇವತೆಗಳಿಗೆ ಸಿಗುವಂತೆ ಮಾಡಿ, ಸಂಪತ್ತಿನ ಉತ್ಪಾದಕನಾದ್ದರಿಂದ `ಭವ'ನೆಂದೂ ಪ್ರಸಿದ್ಧನಾದ.
`ಭವ' ಎಂದರೆ ಭಾವಕ, ಉತ್ಪಾದಕ.
ಅರ್ಧಮಾದಾಯ ಸರ್ವೇಷಾಂ ತೇಜಸಾ ಪ್ರಜ್ವಲನ್ನಿವ |
ಭಾಸಯಾಮಾಸ ತಾನ್ ಸರ್ವಾನ್ ದೇವದೇವೋ ಮಹಾದ್ಯುತಿಃ ॥34॥
ಎಲ್ಲರ ತೇಜಸ್ಸುಗಳ ಅರ್ಧವನ್ನು ಸ್ವೀಕರಿಸಿದ್ದರಿಂದ ತೇಜಸ್ಸಿನಿಂದ ಉಜ್ವಲವಾಗಿ ಬೆಳಗಿ ಮಹಾಪ್ರಕಾಶ ಉಳ್ಳವನಾಗಿ ಎಲ್ಲ `ದೇವತೆಗಳನ್ನೂ ಬೆಳಗಿಸಿದ.' `ದೇವದೇವ' ಶಿವ.
ದೇವತೆಗಳ ತೇಜಸ್ಸು ಶಿವನ ಅಧೀನವಾದ್ದರಿಂದ ಅವನೆ ಅವರನ್ನು ತೇಜಸ್ಸಿನಿಂದ ಬೆಳಗಿಸಿದನೆಂದೇ ಹೇಳಿದಂತಾಯಿತು. ಅವರಿಂದ ಶಿವ ತೇಜಸ್ಸನ್ನು ಪಡೆದಾಗ ಅವರಲ್ಲಿ ತೇಜಸ್ಸಿಲ್ಲವೆಂದಾಗುವುದಿಲ್ಲ. ಹೆಚ್ಚೇ ಆಗುತ್ತದೆ.
ತತೋಽಭಿಷಿಷಿಚುಃ ಸರ್ವೇ ಸುರಾ ರುದ್ರಂ ಪುರಾರಿಣಮ್ |
ಮಹಾದೇವ ಇತಿ ಹ್ಯಾಸೀದ್ ದೇವದೇವೋ ಮಹೇಶ್ವರಃ ॥35॥
ಪುರಾರಿಯಾದ ದೇವದೇವನಾದ ರುದ್ರನನ್ನು ಎಲ್ಲ ದೇವತೆಗಳು `ಮಹಾದೇವ'ನೆಂದೇ ಬಿರುದನ್ನಿತ್ತು ಅಭಿಷೇಕ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥34॥

ಮೂವತ್ತೈದನೆಯ ಅಧ್ಯಾಯ
ಸರ್ವದೇವತಾಮಯವಾದ ರಥದ ನಿರ್ಮಾಣ. ಶಿವನಿಗೆ ಬ್ರಹ್ಮ ಸಾರಥಿ. ರಥವನ್ನು ಎತ್ತಿಹಿಡಿಯಲು ಹರಿಯ ವೃಷಭಾವತಾರ. ತ್ರಿಪುರ ದಹನ. ಕರ್ಣನಿಗೆ ಪರಶುರಾಮನಿಂದ ಶಿವಪ್ರೋಕ್ತ ದಿವ್ಯ ಅಸ್ತ್ರಗಳ ಉಪದೇಶ.
ದುರ್ಯೋಧನಃ
ತತಸ್ತಥೇತಿ ದೇವೇಶಸ್ತೈರುಕ್ತೋ ರಾಜಸತ್ತಮ |
ಅರ್ಧಮಾದಾಯ ಸರ್ವೇಭ್ಯಸ್ತೇಜಸಾಭ್ಯಧಿಕೋಽಭವತ್ ॥1॥
ದುರ್ಯೋಧನ ಶಲ್ಯನಿಗೆ ತ್ರಿಪುರಾಖ್ಯಾನವನ್ನು ಹೇಳುತ್ತಿದ್ದಾನೆ– ಶಲ್ಯಮಹಾರಾಜ! ದೇವೇಶ ಶಿವ ದೇವತೆಗಳ ಪ್ರಾರ್ಥನೆಗೆ `ತಥಾಸ್ತು' ಎನ್ನುತ್ತ ಅವರ ತೇಜದ ಅರ್ಧವನ್ನು ಸ್ವೀಕರಿಸಿ ಮಹಾತೇಜನೆನಿಸಿದ.
ಸ ತು ದೇವೋ ಬಲೇನಾಸೀತ್ ಸರ್ವೇಭ್ಯೋ ಬಲವತ್ತರಃ |
ಮಹಾದೇವ ಇತಿ ಖ್ಯಾತಸ್ತದಾಪ್ರಭೃತಿ ಶಂಕರಃ ॥2॥
ರುದ್ರದೇವನು ದೇವತೆಗಳ ಬಲವನ್ನು ಸ್ವೀಕರಿಸಿ ಎಲ್ಲರಿಗಿಂತ ಬಲಿಷ್ಠನೆನಿಸಿದ. ಅಂದಿನಿಂದ ಶಂಕರನು ಮಹಾದೇವನೆಂದು ಪ್ರಸಿದ್ಧನಾದ.
ತತೋಽಬ್ರವೀನ್ಮಹಾದೇವೋ ಧನುರ್ಬಾಣಧರಸ್ತ್ವಹಮ್ |
ಹನಿಷ್ಯಾಮಿ ರಥೇನಾಜೌ ತಾನ್ ರಿಪೂನ್ ವೈ ದಿವೌಕಸಃ ॥3॥
ತೇ ಯೂಯಂ ಮೇ ರಥಂ ಚೈವ ಧನುರ್ಬಾಣಂ ತಥೈವ ಚ |
ಭವಧ್ವಂ ಯಾವದದ್ಯೈತಾನ್ ಪಾತಯಾಮಿ ಮಹೀತಳೇ ॥4॥
ಆಗ ಮಹಾದೇವನೆಂದ, ನಾನು ರಥವನ್ನೇರಿ ಧನುರ್ಬಾಣಧಾರಿಯಾಗಿ ಅಸುರರನ್ನು ಭೂತಳದಲ್ಲಿ ಕೆಡಹುತ್ತೇನೆ. ಅದಕ್ಕೆ ನೀವು ನನಗೆ ರಥವನ್ನೂ ಧನುರ್ಬಾಣಗಳನ್ನೂ ಸಿದ್ಧಗೊಳಿಸಿರಿ.
ದೇವಾಃ
ಮೂರ್ತಿಸರ್ವಸ್ವಮಾದಾಯ ತ್ರೈಲೋಕ್ಯಸ್ಯ ತತಸ್ತತಃ |
ರಥಂ ತೇ ಕಲ್ಪಯಿಷ್ಯಾಮ ದೇವೇಶ್ವರ ಮಹೌಜಸಮ್ ॥5॥
ದೇವತೆಗಳು ನುಡಿದರು. ದೇವೇಶ, ನಾವು ಮೂಲೋಕದಲ್ಲಿರುವ ಎಲ್ಲ ತೇಜಸ್ಸುಗಳ ಮೂರ್ತಸ್ವರೂಪವನ್ನು ಎಲ್ಲ ಕಡೆಗಳಿಂದ ಸಂಗ್ರಹಿಸಿ ಮಹಾಸಾಮರ್ಥ್ಯ ಉಳ್ಳ ರಥವನ್ನು ನಿನಗಾಗಿ ಸಿದ್ಧಪಡಿಸುತ್ತೇವೆ.
ತಥೈವ ಬುದ್ಧ್ಯಾ ವಿಹಿತಂ ವಿಶ್ವಕರ್ಮಕೃತಂ ಶುಭಮ್ ॥6॥

ರಥದ ಮಂಗಳಕರವಾದ ಆಕೃತಿಯನ್ನು ಸ್ವಬುದ್ಧಿಯಿಂದ ವಿಶ್ವಕರ್ಮನು ಆಲೋಚಿಸಿ ಸಿದ್ಧಪಡಿಸುತ್ತಾನೆ.
ತತೋ ವಿಬುಧಶಾರ್ದೂಲಾಸ್ತಂ ರಥಂ ಸಮಕಲ್ಪಯನ್ ॥7॥
ಬಳಿಕ ದೇವತೆಗಳು ಶಿವನಿಗೆ ರಥವನ್ನು ಸಿದ್ಧಗೊಳಿಸಿದರು.
ವಿಷ್ಣುಂ ಸೋಮಂ ಹುತಾಶಂ ಚ ತಸ್ಯೇಷುಂ ಸಮಕಲ್ಪಯನ್ |
ಶೃಂಗಮಗ್ನಿರ್ಬಭೂವಾಸ್ಯ ಭಲ್ಲಃ ಸೋಮೋ ವಿಶಾಂಪತೇ |
ಕುಡ್ಮಲಶ್ಚಾಭವದ್ ವಿಷ್ಣುಸ್ತಸ್ಮಿನ್ನಿಷುವರೇ ತದಾ ॥8॥
ವಿಷ್ಣು ಸೋಮ ಅಗ್ನಿಗಳ ತೇಜಸ್ಸಿನಿಂದ ಬಾಣವನ್ನು ಸಿದ್ಧಗೊಳಿಸಿದರು. ಬಾಣದ ತುದಿಯಲ್ಲಿ ಗಿಣ್ಣು ಅಗ್ನಿ, ಅದರ ಅಲುಗು ಸೋಮ, ನಡುವಿನ ದಂಡದ ತುದಿಯು ವಿಷ್ಣು.
ರಥಂ ವಸುಂಧರಾಂ ದೇವೀಂ ವಿಶಾಲಪುರಮಾಲಿನೀಮ್ |
ಸಪರ್ವತವನದ್ವೀಪಾಂ ಚಕ್ರುರ್ಭೂತಧರಾಂ ತದಾ ॥9॥
ವಿಶಾಲವಾದ ಪಟ್ಟಣಗಳ ಸಮೂಹಗಳಿಂದ ಕೂಡಿದ ಪರ್ವತ ವನ ದ್ವೀಪಯುಕ್ತವಾದ ಭೂಮಿದೇವಿಯನ್ನು ರಥವನ್ನಾಗಿ ಮಾಡಿದರು.
ಮಂದರಂ ಪರ್ವತಂ ಚಾಕ್ಷಂ ಜಂಘಾಸ್ತಸ್ಯ ಮಹಾನದೀಃ |
ದಿಶಶ್ಚ ಪ್ರದಿಶಶ್ಚೈವ ಪರಿವಾರಂ ರಥಸ್ಯ ಹಿ ॥10॥
ಮಂದರಪರ್ವತವು ರಥದ ಅಚ್ಚುಮರ, ಮಹಾನದಿಗಳು ರಥದ ತಳಭಾಗ. ದಿಕ್ಕು ವಿದಿಕ್ಕುಗಳು ಆವರಣ.
ಈಷಾ ನಕ್ಷತ್ರವಂಶಶ್ಚ ಯುಗಃ ಕೃತಯುಗೋಽಭವತ್ |
ಕೂಬರಶ್ಚ ರಥಸ್ಯಾಸೀದ್ ವಾಸುಕಿರ್ಭುಜಗೋತ್ತಮಃ ॥11॥
ನಕ್ಷತ್ರಗಳ ಸಾಲು ಈಷಾದಂಡ. ಕೃತಯುಗವು ನೊಗ. ವಾಸುಕಿಸರ್ಪ ನೊಗವನ್ನಿಡುವ ಮೂಕೀಮರ.
ಅಪಸ್ಕರಮಧಿಷ್ಠಾನೇ ಹಿಮವಾನ್ ವಿಂಧ್ಯಪರ್ವತಃ |
ಉದಯಾಸ್ತಾವಧಿಷ್ಠಾನೇ ಗಿರೀ ಚಕ್ರುಃ ಸುರೋತ್ತಮಾಃ ॥12॥
ಹಿಮಾಲಯವಿಂಧ್ಯಪರ್ವತಗಳು ಉಪಸ್ಕರಚಕ್ರಗಳು. ಉದಯಾಚಲ ಅಸ್ತಾಚಲಗಳು ಅಧಿಷ್ಠಾನಗಳು.
ಸಮುದ್ರಮಕ್ಷಮಸೃಜನ್ ದಾನವಾಲಯಮುತ್ತಮಮ್ |
ಸಪ್ತರ್ಷಿಮಂಡಲಂ ಚೈವ ರಥಸ್ಯಾಸೀತ್ ಪರಿಷ್ಕರಃ ॥13॥
ದಾನವರ ಆವಾಸಸ್ಥಾನವಾದ ಸಮುದ್ರವು ರಥಕ್ಕೆ ಕಟ್ಟುವ ಹಗ್ಗವಾದರೆ ಸಪ್ತರ್ಷಿಮಂಡಲವು ಅಲಂಕಾರ.
ಗಂಗಾ ಸರಸ್ವತೀ ಸಿಂಧುರ್ಧುರಮಾಕಾಶಮೇವ ಚ |
ಉಪಸ್ಕರೋ ರಥಸ್ಯಾಸನ್ನಾಪಃ ಸರ್ವಾಶ್ಚ ನಿಮ್ನಗಾಃ |
ಅಹೋರಾತ್ರಂ ಕಲಾಶ್ಚೈವ ಕಾಷ್ಠಾಶ್ಚ ಋತವಸ್ತಥಾ ॥14॥
ಗಂಗಾ ಸರಸ್ವತೀ ಸಿಂಧೂ ಆಕಾಶಗಳು ನೊಗಗಳು. ಬೇರೆ ಎಲ್ಲ ನದೀ ಸರೋವರಗಳು ಹಗಲುರಾತ್ರಿಗಳು ಕಲಾ ಕಾಷ್ಠಾ ಋತುಗಳು ಉಪಸ್ಕರ ಗಳಾದುವು.
ಓಷಧೀರ್ವಿವಿಧಾಸ್ತತ್ರ ಘಂಟಾಃ ಪುಷ್ಪಫಲೋದ್ಗಮಾಃ |
ಸೂರ್ಯಾಚಂದ್ರಮಸೌ ಕೃತ್ವಾ ಚಕ್ರೇ ರಥವರೋತ್ತಮೇ ॥15॥
ಪುಷ್ಪಫಲಗಳನ್ನು ನೀಡುವ ನಾನಾವಿಧ ಓಷಧಿಗಳು ಘಂಟೆಗಳು. ಸೂರ್ಯಚಂದ್ರರೂ ಇನ್ನೆರಡು ಚಕ್ರಗಳು.
ಅನುಕರ್ಷಂ ಗ್ರಹಾ ದೀಪ್ತಾಃ ವರೂಥಂ ಚಾಪಿ ತಾರಕಾಃ |
ಧರ್ಮಾರ್ಥಕಾಮಸಂಯುಕ್ತಂ ತ್ರಿವೇಣುಂ ಚಾಪಿ ಬಂಧುರಮ್ ॥16॥
ಪ್ರಕಾಶಮಾನವಾದ ಗ್ರಹಗಳು ಅನುಕರ್ಷ. ನಕ್ಷತ್ರ, ತಾರೆಗಳು ವರೂಥ. ಧರ್ಮ ಅರ್ಥ ಕಾಮಗಳನ್ನು ಜೊತೆಗೂಡಿಸಿ ಸುಂದರವಾದ ತ್ರಿವೇಣುವಾಗಿ ಮಾಡಿದರು.
ಪಕ್ಷೌ ಪೂರ್ವಾಪರೌ ತತ್ರ ಕೃತೇ ರಾತ್ರ್ಯಹನೀ ಶುಭೇ |
ದಶ ನಾಗಪತೀನೀಷಾಂ ಧೃತರಾಷ್ಟ್ರಮುಖಾನ್ ದೃಢಾಮ್ |
ಯೋಕ್ತ್ರಾಣಿ ಚಕ್ರುರ್ನಾಗಾಂಶ್ಚ ನಿಃಶ್ವಸಂತೋ ಮಹೋರಗಾನ್ ॥17॥
ಶುಕ್ಲಕೃಷ್ಣಪಕ್ಷಗಳೂ ಹಗಲುರಾತ್ರಿಗಳೂ ಚಕ್ರಗಳು. ಧೃತರಾಷ್ಟ್ರ ಮುಂತಾದ ಹತ್ತು ನಾಗರು ಈಷಾ ಆದರು. ಬೇರೆ ಭುಸುಗುಟ್ಟುವ ಮಹಾನಾಗರು ಕಡಿವಾಣಗಳು.
ದ್ಯಾಂ ಯುಗಂ ಯುಗಚರ್ಮಾಣಿ ಸಂವರ್ತಕಬಲಾಹಕಾನ್ ॥18॥
ಅಂತರಿಕ್ಷವು ನೊಗ. ಸಂವರ್ತಕ ಮೇಘಗಳು ನೊಗದ ಚರ್ಮಗಳು.
ಕಾಲಪೃಷ್ಠೋಽಥ ನಹುಷಃ ಕರ್ಕೋಟಕಧನಂಜಯೌ |
ಇತರೇ ಚಾಭವನ್ನಾಗಾ ಹಯಾನಾಂ ಬಾಲಬಂಧನಾಃ |
ದಿಶಶ್ಚ ಪ್ರದಿಶಶ್ಚೈವ ರಶ್ಮಯೋ ರಥವಾಜಿನಾಮ್ ॥19॥
ಕಾಲಪೃಷ್ಠ ನಹುಷ ಕರ್ಕೋಟಕ ಧನಂಜಯ ಮತ್ತು ಬೇರೆ ನಾಗರು ಕುದುರೆಗಳ ಬಾಲಗಳಿಗೆ ಬಿಗಿಯುವ ಹಗ್ಗಗಳು. ದಿಕ್ಕುವಿದಿಕ್ಕುಗಳು ಕುದುರೆಯ ಹಗ್ಗಗಳು.
ಅಶ್ವಾಶ್ಚ ವೇದಾಶ್ಚತ್ವಾರಃ ಪುರಾಣಾಂಗವಿಭೂಷಿತಾಃ ॥20॥
ನಾಲ್ಕು ವೇದಗಳು ಪುರಾಣ ಮತ್ತು ಅಂಗಯುಕ್ತವಾಗಿ ಕುದುರೆಗಳಾದುವು.

ವಷಟ್ಕಾರಃ ಪ್ರತೋದೋಽಭೂದ್ ಗಾಯತ್ರೀ ಶೀರ್ಷಬಂಧನಾ |
ಯೋ ಯಜ್ಞೋ ವಿಹಿತಃ ಪೂರ್ವಮೀಶಾನಸ್ಯ ಮಹಾತ್ಮನಃ ॥21॥
ಸಂವತ್ಸರೋ ಧನುಸ್ತದ್ವೈ ಸಾವಿತ್ರೀ ಜ್ಯಾ ಮಹಾಸ್ವನಾ |
ದಿವ್ಯಂ ಚ ವರ್ಮ ವಿಹಿತಂ ಮಹಾರ್ಹಂ ರತ್ನಭೂಷಿತಮ್ ॥22॥
ಅಭೇದ್ಯಂ ವಿರಜಸ್ಕಂ ವೈ ಕಾಲಚಕ್ರಂ ಪರಿಷ್ಕೃತಮ್ |
ಧ್ವಜಯಷ್ಟಿರಭೂನ್ಮೇರುಃ ಶ್ರೀಮಾನ್ ಕನಕಪರ್ವತಃ ॥23॥
ಯಜ್ಞದಲ್ಲಿ ವಿಹಿತವಾದ ವಷಟ್ಕಾರವು ಕಡಿವಾಣ. ಗಾಯತ್ರಿಯು ಶೀರ್ಷಬಂಧನ. ಮಹಾತ್ಮನಾದ ಈಶ್ವರನಿಗೆ ಸಂವತ್ಸರನಾಮಕ ಚತುರ್ಮುಖನು ಧನುಸ್. ಮಹಾಶಬ್ದಮಾಡುವ ಸಾವಿತ್ರಿಯೆ ಹೆದೆ. ಬಹುಮೂಲ್ಯವಾದ ರತ್ನಖಚಿತವಾದ, ನಿರ್ಮಲವಾದ ಅಭೇದ್ಯವಾದ ಕವಚವಾಗಿ ಕಾಲಚಕ್ರಾಭಿಮಾನಿ ಚತುರ್ಮುಖನೆ ಪರಿಷ್ಕೃತ ನಾದ. ಹೊಳೆಯುವ ಬಂಗಾರದ ಬೆಟ್ಟವಾದ ಮೇರುವೇ ಧ್ವಜದಂಡ.
ಇಲ್ಲಿ ಸಂವತ್ಸರಾದಿ ಜಡಪದಾರ್ಥಗಳು ಅಲ್ಲ. ಅವು ಧನುರ್ಬಾಣ- ಕವಚರಥಗಳಾಗಲು ಶಕ್ಯವಿಲ್ಲ. ಹಿಂದೆ ಹೇಳಿದಂತೆ ಅವುಗಳಲ್ಲಿರುವ ತೇಜಸ್ಸುಗಳು ಚಿನ್ಮಯ ಕಾಮರೂಪಗಳಾಗಿದ್ದರಿಂದ ಧನುಸ್ ಮುಂತಾದ ರೂಪದಿಂದ ಧನುಸ್ ಮುಂತಾದವುಗಳಲ್ಲಿದ್ದು ಶಿವನಿಗೆ ಸಹಾಯ ಮಾಡಿವೆ. ಸಂವತ್ಸರನಾಮಕನು ಚತುರ್ಮುಖನೆಂದು ಭಾಷ್ಯೋದಾಹೃತ ಮಹಾಕೂರ್ಮ ಪುರಾಣವಚನ ಹೀಗೆ ಹೇಳುತ್ತದೆ–
`ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್ ಪ್ರಭುಃ |'
ಪತಾಕಾಶ್ಚಾಭವನ್ ಮೇಘಾಸ್ತಡಿದ್ಭಿಃ ಸಮಲಂಕೃತಾಃ |
ರೇಜುರಧ್ವರ್ಯುಮಧ್ಯಸ್ಥಾ ಜ್ವಲಂತ ಇವ ಪಾವಕಾಃ ॥24॥
ಮಿಂಚುಗಳಿಂದ ಅಲಂಕೃತವಾದ ಮೇಘಗಳು, ಅಂದರೆ ಅವುಗಳ ಅಭಿಮಾನಿ ತೇಜಸ್ಸುಗಳು ಪತಾಕೆಗಳಾದುವು. ಯಜ್ಞದಲ್ಲಿ ಅಧ್ವರ್ಯು ಮುಂತಾದ ಋತ್ವಿಜರ ನಡುವೆ ಜ್ವಲಿಸುವ ಯಾಗಾಗ್ನಿಗಳಂತೆ ಈ ಪತಾಕೆಗಳು ಹೊಳೆಯುತ್ತವೆ.
ಸಂಧ್ಯಾಂ ಧೃತಿಂ ಚ ಮೇಧಾಂ ಚ ಸ್ಥಿತಿಂ ಸನ್ನತಿಮೇವ ಚ |
ಗ್ರಹನಕ್ಷತ್ರತಾರಾಭಿಶ್ಚರ್ಮ ಚಿತ್ರಂ ನಭಸ್ತಳಮ್ ॥25॥
ಸಂಧ್ಯಾ ಧೃತಿ ಮೇಧಾ ಸ್ಥಿತಿ ಸನ್ನತಿ ದೇವಿಯರನ್ನೂ ಗ್ರಹ ನಕ್ಷತ್ರ ತಾರೆಗಳಿಂದ ಅಲಂಕೃತವಾದ ಆಕಾಶದ ಅಭಿಮಾನಿಯನ್ನೂ ರಥಕ್ಕೆ ಆವಾರಕವಾದ ಸುಂದರವಾದ ಚರ್ಮವಾಗಿ ಮಾಡಿದರು.
ಸುರಾಂಬುಪ್ರೇತವಿತ್ತಾನಾಂ ಪತೀನ್ ಲೋಕೇಶ್ವರಾನ್ ಹಯಾನ್ |
ಸಿನೀವಾಲೀಮನುಮತಿಂ ಕುಹೂಂ ರಾಕಾಂ ಚ ಸುವ್ರತಾಮ್ |
ಯೋಕ್ತ್ರಾಣಿ ಚಕ್ರುರ್ವಾಹಾನಾಂ ಘಂಟಿಕಾಶ್ಚಾಪಿ ಪನ್ನಗಾನ್ ॥26॥
ಸುರಪತಿ, ಅಂಬುಪತಿ, ಪ್ರೇತಪತಿ, ವಿತ್ತಪತಿಗಳೆನಿಸಿದ ಇಂದ್ರ ವರುಣ ಯಮ ಕುಬೇರರೆಂಬ ಲೋಕಪಾಲಕರನ್ನು ಕುದುರೆಗಳನ್ನಾಗಿ ಮಾಡಿದರು. ಕುಹೂ ಸಿನೀವಾಲೀ ರಾಕಾ ಅನುಮತಿಗಳೆಂಬ ಅಮಾವಾಸ್ಯಾ ಪೂರ್ಣಿಮಾಭಿಮಾನಿ ದೇವತೆಗಳನ್ನು ನೊಗಕ್ಕೆ ಕುದುರೆಗಳನ್ನು ಕಟ್ಟುವ ಚರ್ಮದ ಹಗ್ಗಗಳಾಗಿ ಮಾಡಿದರು. ಹಾವುಗಳನ್ನು ಕಿರುಘಂಟೆಗಳಾಗಿಯೂ ಮಾಡಿದರು.
ಹಿಂದೆ ನಾಲ್ಕು ವೇದಗಳನ್ನು ಕುದುರೆಗಳಾಗಿ ಮಾಡಿದ್ದರೆಂದಿದೆ. ಇದೀಗ ಇಂದ್ರಾದಿದೇವತೆಗಳನ್ನು ಕುದುರೆಗಳಾಗಿ ಮಾಡಿದ್ದಾರೆ, ಕುದುರೆಗಳಲ್ಲಿ ವೇದಾಭಿಮಾನಿಗಳಾದ ಇಂದ್ರಾದಿದೇವತೆಗಳ ತೇಜಸ್ಸು ತುಂಬಿತ್ತೆಂದರ್ಥ. ಒಂದು ಚಂದ್ರಕಲೆಯಿಂದ ಯುಕ್ತವಾದ ಅಮಾವಾಸ್ಯೆ ಸಿನೀವಾಲಿ. ಕಲೆ ಇಲ್ಲದ ಅಮಾವಾಸ್ಯೆ ಕುಹೂ. ಎಲ್ಲ ಕಲೆಯಿಂದ ಕೂಡಿದ ಹುಣ್ಣಿಮೆ ರಾಕಾ. ಒಂದು ಕಲೆ ಕಡಿಮೆ ಇದ್ದರೆ ಅನುಮತಿ ಎನಿಸುತ್ತದೆ. ಈ ಹುಣ್ಣಿಮೆಅಮಾವಾಸ್ಯೆಗಳ ಅಭಿಮಾನಿ ದೇವತೆಗಳ ತೇಜಸ್ಸುಗಳು ಕುದುರೆಗಳ ಹಗ್ಗಗಳಲ್ಲಿದ್ದುವು.
ಧರ್ಮಃ ಸತ್ಯಂ ತಪೋಽರ್ಥಶ್ಚ ವಿಹಿತಾಸ್ತತ್ರ ರಶ್ಮಯಃ |
ಅಧಿಷ್ಠಾನಂ ಮನಸ್ತತ್ವಸೀತ್ ಪರಿರಥ್ಯಾ ಸರಸ್ವತೀ ॥27॥
ಧರ್ಮ ಸತ್ಯ ತಪಸ್ಸು ಅರ್ಥಗಳು ಕುದುರೆ ಕಟ್ಟುವ ಹಗ್ಗಗಳಾದುವು. ಮನಸ್ಸು ರಥಕ್ಕೆ ಆಧಾರವಾದ ಸ್ಥಳ. ಮಾತು ರಥವು ಮುಂದೆ ಸರಿಯಲು ಬೇಕಾಗುವ ಮಾರ್ಗ.
ನಾನಾವರ್ಣಾಶ್ಚ ಚಿತ್ರಾಶ್ಚ ಪತಾಕಾಃ ಪವನೇರಿತಾಃ |
ವಿದ್ಯುದಿಂದ್ರಧನುರ್ನದ್ಧಂ ರಥಂ ದೀಪ್ತಂ ವ್ಯದೀಪಯತ್ ॥28॥
ನಾನಾ ವರ್ಣಗಳಿಂದೊಪ್ಪುವ ಸುಂದರ ಪತಾಕೆಗಳು ಗಾಳಿಯಲ್ಲಿ ಚಲಿಸುತ್ತ ಮಿಂಚಿನಿಂದ ಮತ್ತು ಮಳೆಬಿಲ್ಲುಗಳಿಂದ ಅಲಂಕೃತವಾದ ಪ್ರಕಾಶಮಾನವಾದ ರಥವನ್ನು ಇನ್ನೂ ಹೆಚ್ಚು ಬೆಳಗಿಸಿದವು.
ಕ್ಲೃಪ್ತಂ ತು ತಂ ರಥಂ ದೃಷ್ಟ್ವಾ ವಿಸ್ಮಿತಾ ದೇವತಾಭವನ್ |
ಸರ್ವಲೋಕಸ್ಯ ತೇಜಾಂಸಿ ದೃಷ್ಟ್ವೈಕಸ್ಥಾನಿ ಮಾರಿಷ |
ಯುಕ್ತಂ ನಿವೇದಯಾಮಾಸುರ್ದೇವಾಸ್ತಸ್ಮೈ ಮಹಾತ್ಮನೇ ॥29॥
ಸಜ್ಜಾದ ರಥವನ್ನು ಕಂಡು ದೇವತೆಗಳು ವಿಸ್ಮಿತರಾದರು. ಸರ್ವಲೋಕಗಳ ಸರ್ವ ತೇಜಸ್ಸುಗಳು ರಥದಲ್ಲಿ ಒಂದೇ ಕಡೆ ನೆಲೆಸಿದ್ದನ್ನು ಕಂಡು ರಥವು ಸಜ್ಜಾಯಿತೆಂದು ಶಿವನಿಗೆ ನಿವೇದಿಸಿದರು.
ಏವಂ ತಸ್ಮಿನ್ ಮಹಾರಾಜ ಕಲ್ಪಿತೇ ರಥಸತ್ತಮೇ |
ದೇವೈರ್ಮನುಜಶಾರ್ದೂಲ ದ್ವಿಷತಾಮಭಿಮರ್ದನೇ ॥30॥
ಸ್ವಾನ್ಯಾಯುಧಾನಿ ಮುಖ್ಯಾನಿ ನ್ಯದಧಾಚ್ಛಂಕರೋ ರಥೇ |
ಧ್ವಜಯಷ್ಟಿಂ ವಿಯತ್ಕೃತ್ವಾ ಸ್ಥಾಪಯಾಮಾಸ ಗೋವೃಷಮ್ ॥31॥

ಮಹಾರಾಜ, ಹೀಗೆ ಶ್ರೇಷ್ಠವಾದ ರಥವನ್ನು ಶತ್ರುಸಂಹಾರಕ್ಕಾಗಿ ದೇವತೆಗಳು ಸಿದ್ಧಪಡಿಸಿದಾಗ ಶಂಕರನು ತನ್ನ ಮುಖ್ಯ ಆಯುಧಗಳನ್ನು ಆ ರಥದಲ್ಲಿ ಇರಿಸಿದನು. ಆಕಾಶವನ್ನು ಧ್ವಜಸ್ತಂಭವಾಗಿ ಮಾಡಿ ಅದರ ತುದಿಯಲ್ಲಿ ತನ್ನ ವೃಷಭವನ್ನು ಸ್ಥಾಪಿಸಿದ. ಹಿಂದೆ ಹೇಳಿದಂತೆ ಮೇರುಪರ್ವತದ ಅಭಿಮಾನಿಯೂ ಧ್ವಜಸ್ತಂಭದಲ್ಲಿ ನೆಲೆಸಿದ್ದಾನೆ.

``ನಾನಾ ವರ್ಣಾಶ್ಚ ಚಿತ್ರಾಶ್ಚ ಪತಾಕಾಃ ಪವನೇರಿತಾಃ'' ಎಂದು ಹೇಳಿದಂತೆ, ಗಾಳಿಯಲ್ಲಿ ಫಟಫಟನೆ ಹಾರಾಡುವ ಬಣ್ಣಬಣ್ಣದ ಪತಾಕೆಗಳು ಬೇರೆ. ಧ್ವಜವು ಬೇರೆ. ಧ್ವಜರೂಪವಾಗಿ ವೃಷಭವನ್ನು ಧ್ವಜಸ್ತಂಭದ ಮೇಲಿರಿಸಿ ದ್ದಾನೆ, ಶಿವ. ಅವನು ತನ್ನ ಎಲ್ಲ ಆಯುಧಗಳನ್ನು ರಥದಲ್ಲಿ ಇರಿಸಿದ್ದೇಕೆ? ವಿಷ್ಣುರೂಪವಾದ ಬಾಣದಿಂದ ತಾನೆ ಶಿವ ತ್ರಿಪುರಗಳನ್ನು ಸುಡಬೇಕಾಗಿದೆ? ಎಂದರೆ, ತನ್ನ ಎಲ್ಲ ಆಯುಧಗಳ ತೇಜಸ್ಸುಗಳಿಂದ ಸಹಿತವಾದ ವಿಷ್ಣುತೇಜಸ್ಸನ್ನು ಬಾಣದಲ್ಲಿಟ್ಟು ಆ ಬಾಣವನ್ನು ರಥದಲ್ಲಿರಿಸಿದ್ದಾನೆ.

ಬ್ರಹ್ಮದಂಡಃ ಕಾಲದಂಡೋ ರುದ್ರದಂಡಸ್ತಥಾ ಜ್ವರಃ |
ಪರಿಸ್ಕಂದಾ ರಥಸ್ಯಾಸ್ಯ ಸರ್ವತೋದಿಶಮುದ್ಯತಾಃ ॥32॥

ಬ್ರಹ್ಮದಂಡ, ಕಾಲರೂಪಿ ವಿಷ್ಣುದಂಡ, ರುದ್ರದಂಡ ಮತ್ತು ಶೈವ ವೈಷ್ಣವ ಜ್ವರಪುರುಷರು ಈ ರಥದ ಎಲ್ಲ ದಿಕ್ಕುಗಳಲ್ಲಿ ಪಾರ್ಶ್ವರಕ್ಷಕರಾಗಿ ನಿಂತರು.

ಅಥರ್ವಾಂಗಿರಸಾವಾಸ್ತಾಂ ಚಕ್ರರಕ್ಷೌ ಮಹಾತ್ಮನಃ |
ಋಗ್ವೇದಃ ಸಾಮವೇದಶ್ಚ ಪುರಾಣಂ ಚ ಪುರಸ್ಸರಾಃ ॥33॥

ಅಥರ್ವಾಂಗಿರಸ ವೇದಾಭಿಮಾನಿಗಳು ಚಕ್ರರಕ್ಷಕರಾದರು. ರಥಕ್ಕೆ ಮುಂದೆ ಋಗ್ವೇದ ಸಾಮವೇದ ಪುರಾಣಾಭಿಮಾನಿಗಳು, ರಕ್ಷಕರಾಗಿ ನಿಂತರು.

ಇತಿಹಾಸಯಜುರ್ವೇದೌ ಪೃಷ್ಠರಕ್ಷೌ ಬಭೂವತುಃ |
ದಿವ್ಯಾ ವಾಚಶ್ಚ ವಿದ್ಯಾಶ್ಚ ಪರಿಪಾರ್ಶ್ವಚರಾಃ ಕೃತಾಃ ॥34॥

ಇತಿಹಾಸ ಯಜುರ್ವೇದಾಭಿಮಾನಿಗಳು ರಥಕ್ಕೆ ಹಿಂದೆ ರಕ್ಷಕರಾದರು. ದಿವ್ಯ ವಚನಗಳು ಶಾಸ್ತ್ರಗಳು ಪಾರ್ಶ್ವರಕ್ಷಕರಾದರು.

ಸ್ತೋತ್ರಾದಯಶ್ಚ ರಾಜೇಂದ್ರ ವಷಟ್ಕಾರಸ್ತಥೈವ ಚ |
ಓಂಕಾರಶ್ಚ ಮುಖೇ ರಾಜನ್ನತಿಶೋಭಾಕರೋऽಭವತ್ ॥35॥

ಸ್ತೋತ್ರಾದಿಗಳು, ವಷಟ್ಕಾರ ಓಂಕಾರಗಳು ಮುಂದೆ ರಕ್ಷಕರಾಗಿ ನಿಂತು ರಥಕ್ಕೆ ಬಹಳ ಶೋಭೆ ಉಂಟುಮಾಡಿದರು.

ವಿಚಿತ್ರಮೃತುಭಿಃ ಷಡ್ಭಿಃ ಕೃತ್ವಾ ಸಂವತ್ಸರಂ ಧನುಃ |
ಛಾಯಾಮೇವಾತ್ಮನಶ್ಚಕ್ರೇ ಧನುರ್ಜ್ಯಾಮಕ್ಷಯಾಂ ರಣೇ |
ಕಾಲೋ ಹಿ ಭಗವಾನ್ ರುದ್ರಸ್ತಸ್ಯ ಸಂವತ್ಸರೋ ಧನುಃ ॥36॥
ತಸ್ಮಾದ್ ರೌದ್ರೀ ಕಾಲರಾತ್ರಿರ್ಜ್ಯಾ ಕೃತಾ ಧನುಷೋऽಜರಾ ॥37॥

ಆರು ಋತುಗಳಿಂದ ಯುಕ್ತವಾದ ಸಂವತ್ಸರವನ್ನು ಧನುಸ್ಸನ್ನಾಗಿ ಮಾಡಿ ತನ್ನ ಪ್ರತಿಬಿಂಬವನ್ನು ಅಕ್ಷಯವಾದ ಹೆದೆಯನ್ನಾಗಿ ಕಾಲರುದ್ರನು ಮಾಡಿದ. ಕಾಲನೆಂದರೆ ಭಗವಾನ್ ರುದ್ರ. ಸಂವತ್ಸರ ಅವನ ಧನುಸ್ಸು. ಅದರಿಂದ ಅವನು ತನ್ನ ಛಾಯೆಯಾದ ಕಾಲರಾತ್ರಿಯನ್ನು ಧನುಸ್ಸಿನ ಅಕ್ಷಯವಾದ ಹೆದೆಯಾಗಿ ಮಾಡಿಕೊಂಡ.

ಇಲ್ಲಿ `ಕಾಲ'ನೆಂದರೆ, ಗೀತೆಯಲ್ಲಿ `ಕಾಲೋऽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ' (11.31) ಎಂದು ಹೇಳಿದಂತೆ ಕೃಷ್ಣನೆ. ರುದ್ರ ಎಂಬ ರೂಪದಿಂದ ಅವನು ಲೋಕ ಲಯ ಮಾಡುತ್ತಾನೆ. ವಾಮನನು ಬಲಿಯನ್ನು ಬಂಧಿಸಿದಾಗ ಬಲಿ ಇಂದ್ರನಿಗೆ ಹೇಳುತ್ತಾನೆ–

ನಿಯತಂ ಕಾಲಪಾಶೇನ ಬದ್ಧಂ ಶಕ್ರ ವಿಕತ್ಥಸೇ
ಅಯಂ ಸ ಪುರುಷಃ ಶ್ಯಾಮೋ ಲೋಕಸ್ಯ ಹರತಿ ಪ್ರಜಾಃ
ಬಧ್ವಾ ತಿಷ್ಠತಿ ಮಾಂ ರೌದ್ರಃ ಪಶುಂ ರಶನಯಾ ಯಥಾ

`ಈ ವಾಮನ ನನ್ನನ್ನು ಬಂಧಿಸಿದ್ದಾನೆ. ನಾನು ಕಾಲಪಾಶದಿಂದ ಬದ್ಧನಾಗಿದ್ದೇನೆ. ಕಾಲನೆಂದರೆ ಇವನೆ. ಪಶುಗಳನ್ನು ಹಗ್ಗದಿಂದ ಕಟ್ಟುವಂತೆ ನಮ್ಮನ್ನು ಈತ ಬಂಧಿಸುತ್ತಾನೆ. `ರುದ್ರ' ಅತ್ಯುಗ್ರನಾದ್ದರಿಂದ ಈತನೇ `ಕಾಲ' ಎಂದು. ಇದು ಮೋಕ್ಷಧರ್ಮವಚನ. ಹೀಗಾಗಿ ಕಾಲನೆಂದು ಮುಖ್ಯವಾಗಿ ಪ್ರಸಿದ್ಧನಾದವನು ವಿಷ್ಣುವೆ. ಅವನ ಛಾಯೆ, ಮುಖ್ಯಪ್ರತಿಬಿಂಬ ಕಾಲಾಭಿ ಮಾನಿನಿ ದುರ್ಗೆ. ಅವಳನ್ನು ಸಂವತ್ಸರನಾಮಕ ಚತುರ್ಮುಖ ಸ್ವರೂಪವಾದ ಧನುಸ್ಸನ್ನು ಬಗ್ಗಿಸಿ ಕಟ್ಟುವ ಹೆದೆಯನ್ನಾಗಿ ಭಗವಾನ್ ಕಾಲರುದ್ರನಾದ ವಿಷ್ಣುವೇ ಮಾಡಿಕೊಟ್ಟಿದ್ದಾನೆ. ಹಿಂದೆ ಚತುರ್ಮುಖನೆಂಬ ಧನುಸ್ಸಿಗೆ ಸರಸ್ವತಿ ಹೆದೆ ಎಂದಿದೆ. ಅದರಿಂದ ಹೆದೆಯಲ್ಲಿ ಸರಸ್ವತಿಯ ತೇಜಸ್ಸೂ ಕೂಡ ದುರ್ಗಾ ತೇಜಸ್ಸಿನೊಂದಿಗೆ ಇದೆ ಎಂದು ತಿಳಿಯಬೇಕು.

ಇಷುಶ್ಚಾಪ್ಯಭವದ್ ವಿಷ್ಣುರ್ಜ್ವಲನಃ ಸೋಮ ಏವ ಚ |
ಅಗ್ನೀಷೋಮಮಯಂ ಸರ್ವಂ ವೈಷ್ಣವಂ ಚೋಚ್ಯತೇ ಜಗತ್ ॥38॥

ವಿಷ್ಣುವೂ ಅಗ್ನಿಯೂ ಸೋಮನೂ ಬಾಣದಲ್ಲಿ ಸನ್ನಿಹಿತರಾದರು. ಪ್ರಪಂಚವು `ಅಗ್ನಿ ಸೋಮಮಯ' ಅಂದರೆ ರುದ್ರಬ್ರಹ್ಮಮಯವೆಂದೂ, `ವಿಷ್ಣುಮಯ' ವೆಂದೂ ಪ್ರಸಿದ್ಧವಾಗಿದೆ.

ವಿಷ್ಣುಶ್ಚಾತ್ಮಾ ಭಗವತೋ ಭವಸ್ಯಾಮಿತತೇಜಸಃ |
ತಸ್ಮಾದ್ಧನುರ್ಜ್ಯಾಸಂಸ್ಪರ್ಶಂ ನ ವಿಷೇಹುರ್ಹರಸ್ಯ ತೇ ॥39॥

ವಿಷ್ಣುವು ಅಮಿತತೇಜನಾದ ಭಗವಾನ್ ಶಿವನಿಗೆ `ಆತ್ಮ' ಸ್ವಾಮಿಯಾಗಿದ್ದಾನೆ. ಅದರಿಂದ ಶಿವನು ಬಿಲ್ಲಿನ ಹೆದೆಯನ್ನೆಳೆದರೆ ಅಸುರರು ಸಹಿಸಿಕೊಂಡು ಉಳಿಯುವುದಿಲ್ಲ.

ವಿಷ್ಣು ಶಿವನಿಗೆ ಆತ್ಮಸ್ವರೂಪನೆಂದು ಇಲ್ಲಿ ಅರ್ಥವಲ್ಲ.

`ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ'

ಎಂದು ಬ್ರಹ್ಮಸೂತ್ರದಲ್ಲಿ ಆತ್ಮತ್ವೋಪಾಸನೆಯನ್ನು ಹೇಳಿದೆ. ಆತ್ಮತ್ವೋಪಾಸನೆ ಸ್ವರೂಪೋಪಾಸನೆಯಲ್ಲ.

ಸ್ವಾಮಿತ್ವೋಪಾಸನೆಯನ್ನು ಎಲ್ಲರೂ ಮಾಡ ಬೇಕೆಂದು ಅಲ್ಲಿ ನಿರ್ಣಯವಾಗಿದೆ. ಅದರಿಂದ ವಿಷ್ಣು ಶಿವನಿಗೆ ಸ್ವಾಮಿ ಎಂದರ್ಥ.
ಹೀಗಾಗಿ ಶಿವ ಬಿಲ್ಲಿನ ಹೆದೆಯನ್ನೆಳೆದರೆ ಅಸುರರು ಬದುಕಿ ಉಳಿಯುವುದಿಲ್ಲ. ವಿಷ್ಣು ಅವರನ್ನು ಉಳಿಸುವುದಿಲ್ಲ.
ತಸ್ಮಿನ್ ಶರೇ ತಿಗ್ಮಮನ್ಯುರ್ಮುಮೋಚಾವಿಷಹಂ ಪ್ರಭುಃ |
ಭೃಗ್ವಂಗಿರೋಮನ್ಯುಭವಂ ಕ್ರೋಧಾಗ್ನಿಮತಿದುಃಸಹಮ್ ॥40॥
ಶಿವನು ತೀಕ್ಷ್ಣಕೋಪಿಯಾದ್ದರಿಂದ ಭೃಗು ಮತ್ತು ಅಂಗಿರಮುನಿಗಳ ಕೋಪ ದಿಂದ ಉದ್ಭೂತವಾದ ಅತಿ ದುಃಸಹವಾದ
ಕ್ರೋಧಾಗ್ನಿಯನ್ನು ವಿಷ್ಣುಮಯ ವಾದ ಬಾಣದಲ್ಲಿರಿಸಿದನು.
ಕೋಪದಿಂದ ತನ್ನ ಮೂರನೆ ಕಣ್ಣಿನ ಅಗ್ನಿಯನ್ನು ಇರಿಸಲಿಲ್ಲ. ಏಕೆಂದರೆ ಬಾಣದ ತುದಿಯಲ್ಲಿದ್ದ ಅಗ್ನಿ ಶಿವನ ನೇತ್ರಾಗ್ನಿಯಲ್ಲ.
ಸ ನೀಲಲೋಹಿತೋ ಧೂಮ್ರಃ ಕೃತ್ತಿವಾಸಾ ಭಯಂಕರಃ |
ಆದಿತ್ಯಾಯುತಸಂಕಾಶಸ್ತೇಜೋಜ್ವಾಲಾವೃತೋ ಜ್ವಲನ್ ॥41॥
ಕಪ್ಪು ಕೊರಳು, ಕೆಂಜಡೆಯವನು, ಕಂದು ಬಣ್ಣದ ಮೈಯವನು, ತೊಗಲುಡಿಗೆ ಯವನು, ಭಯಂಕರನು, ಸಾವಿರಾರು ಸೂರ್ಯರಂತೆ
ತೇಜೋ ಜ್ವಾಲೆವುಳ್ಳವನು. ಜ್ವಲಿಸುವವನು ಶಿವ.
ದುಶ್ಚ್ಯಾವಶ್ಚ್ಯಾವನೋ ಜೇತಾ ಹಂತಾ ಬ್ರಹ್ಮದ್ವಿಷಾಂ ಹರಃ |
ನಿತ್ಯಂ ತ್ರಾತಾ ಚ ಹಂತಾ ಚ ಧರ್ಮಾಧರ್ಮಾಶ್ರಿತಾನ್ ಜನಾನ್ ॥42॥
ವಿಚಲಿತಗೊಳಿಸಲಾಗದವನು, ವಿಚಲಿತಗೊಳಿಸಬಲ್ಲವನು, ಗೆಲ್ಲುವವನು, ಬ್ರಹ್ಮ ದ್ವೇಷಿಗಳನ್ನು ಕೊಲ್ಲುವವನು, ಧರ್ಮಾಶ್ರಿತರನ್ನು
ರಕ್ಷಿಸುವವನು, ಅಧರ್ಮಾಶ್ರಿತರನ್ನು ಕೊಲ್ಲುವವನು ಹರ.
ಪ್ರಮಾಥಿಭಿರ್ಘೋರರೂಪೈ ರ್ಭೀಮೋದಗ್ರೈರ್ಗಣೈರ್ವೃತಃ |
ವಿಭಾತಿ ಭಗವಾನ್ ಸ್ಥಾಣುಸ್ತೈರೇವಾತ್ಮಗುಣೈರ್ವೃತಃ ॥43॥
ಕೊಲ್ಲುವವ ಘೋರರೂಪಿ ಭೀಕರ ಪ್ರಮಥಗಣಗಳಿಂದ ಪರಿವೃತನಾಗಿ ಅದೇರೀತಿಯ ತನ್ನ ಗುಣಗಳಿಂದ ಕೂಡಿ ಭಗವಾನ್ ಸ್ಥಾಣು
ಬೆಳಗುತ್ತಾನೆ.
ತಸ್ಯಾಂಗಾನಿ ಸಮಾಶ್ರಿತ್ಯ ಸ್ಥಿತಂ ವಿಶ್ವಮಿದಂ ಜಗತ್ |
ಜಂಗಮಾಜಂಗಮಂ ರಾಜನ್ ಶುಶುಭೇಽದ್ಭುತದರ್ಶನಮ್ ॥44॥
ರಾಜನೆ, ಹರನ ಅಂಗಗಳನ್ನು ಆಶ್ರಯಿಸಿ ಅದ್ಭುತವಾಗಿ ಕಾಣುವ ಈ ಎಲ್ಲ ಚರಾಚರ ಪ್ರಪಂಚವು ಶೋಭಿಸುತ್ತದೆ.
ದೃಷ್ಟ್ವಾ ತು ತಂ ರಥಂ ದಿವ್ಯಂ ಕವಚೀ ಸ ಶರಾಸನೀ |
ಬಾಣಮಾದಾಯ ತಂ ದಿವ್ಯಂ ಸೋಮವಿಷ್ಣ್ವಗ್ನಿವಾತಜಮ್ ॥45॥
ದಿವ್ಯವಾದ ಆ ರಥವನ್ನು ಕಂಡು ಹರನು ಕವಚತೊಟ್ಟು ಬಿಲ್ಲನ್ನು ಹಿಡಿದು, ಸೋಮ ವಿಷ್ಣು ಅಗ್ನಿ ವಾಯುಗಳಿಂದ ಉತ್ಪನ್ನವಾದ
ದಿವ್ಯವಾದ ಬಾಣವನ್ನು ಎತ್ತಿಕೊಂಡು ಶೋಭಿಸಿದನು.
ತಸ್ಯ ವಾಜಾಂಸ್ತತೋ ದೇವಾಃ ಕಲ್ಪಯಾಂಚಕ್ರಿರೇ ವಿಭೋಃ |
ಪುಣ್ಯಗಂಧವಹಂ ರಾಜನ್ ಶ್ವಸನಂ ದೇವಸತ್ತಮಮ್ ॥46॥
ಬಾಣವು ವಾಯುವಿನಿಂದಲೂ ಉತ್ಪನ್ನವಾದುದು. ಏಕೆಂದರೆ ದೇವೋತ್ತಮ ನಾದ ಪುಣ್ಯಗಂಧವನ್ನು ಹರಡುವ ವಾಯುವಿನಿಂದ
ಬಾಣದ `ವಾಜ'ಗಳನ್ನು ಅಂದರೆ ಪುಕ್ಕಗಳನ್ನು ದೇವತೆಗಳು ಸಿದ್ಧಪಡಿಸಿದರು.
ಮುಂದೆ (87ಅ. 56ಶ್ಲೋ.) ಅರ್ಜುನನ ಬಾಣವು `ಶೋಣಿತ ದಿಗ್ಧವಾಜ' ವಾಯಿತೆಂದು ವರ್ಣನೆ ಬರುತ್ತದೆ. `ವಾಜ' ಎಂದರೆ ಇಲ್ಲಿ
ಬಾಣದ ಪುಕ್ಕ ಎಂದು ಲಕ್ಷಾಲಂಕಾರದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಪ್ರಕೃತ ಶ್ಲೋಕದಲ್ಲಿ ಬಾಣದ ವಾಜಗಳನ್ನು ದೇವತೆಗಳು
ವಾಯುವಿನಿಂದ ಸಿದ್ಧಪಡಿಸಿದರೆಂದಿರುವು ದರಿಂದ ವಾಯುವಿನಿಂದಲೂ ಬಾಣ ಉತ್ಪನ್ನವಾಗಿದೆ ಎಂದು ಹೇಳಿದಂತಾಗು ತ್ತದೆ.
ಪ್ರಚಲಿತ ಪಾಠದಲ್ಲಿ—
ತಸ್ಯ ರಾಜಂಸ್ತದಾ ದೇವಾಃ ಕಲ್ಪಯಾಂಚಕ್ರಿರೇ ಪ್ರಭೋ |
ಪುಣ್ಯಗಂಧವಹಂ ರಾಜನ್ ಶ್ವಸನಂ ದೇವಸತ್ತಮಮ್ ॥
ಎಂದು ವ್ಯರ್ಥವಾಗಿ ಎರಡು ಬಾರಿ `ರಾಜನ್' ಶಬ್ದ ಬಂದಿದೆ. `ತಸ್ಯಾನುಕೂಲಂ ಜಯಾವಹಂ ಶ್ವಸನಂ ಕಲ್ಪಯಾಂಚಕ್ರಿರೇ' ಎಂದು
ನೀಲಕಂಠಿಯಲ್ಲಿ ಅನ್ವಯವೆ ಇಲ್ಲದ ಅನ್ವಯವನ್ನು ತೋರಿಸಲಾಗಿದೆ! `ತಸ್ಯ ವಾಜಾಂಸ್ತದಾ ದೇವಾಃ' ಎಂಬ ಪಾಠದಲ್ಲಿ ಏನೂ
ಅಧ್ಯಾಹಾರ ಮಾಡದೇ ಸುಂದರವಾದ ಅರ್ಥವತ್ತಾದ ಅನ್ವಯವನ್ನು ಮಾಡಲು ಶಕ್ಯವಿದೆ. ಅದನ್ನು ಬಿಟ್ಟು `ವಾಯುದೇವನನ್ನು
ಶಿವನಿಗೆ ಅನುಕೂಲವಾಗಿ ಗಾಳಿ ಬೀಸುವ ಕಾರ್ಯದಲ್ಲಿ ದೇವತೆಗಳು ನಿಯೋಜಿಸಿದರು' ಎಂದು ಅರ್ಥವಿವರಣೆ ನೀಡುವುದು
ಅನುಚಿತ.
ತಮಾದಾಯ ಮಹಾದೇವಸ್ತ್ರಾಸಯನ್ ಸರ್ವದಾನವಾನ್ |
ಆರುರೋಹ ತದಾ ಯತ್ತಃ ಕಂಪಯನ್ನಿವ ರೋದಸೀ ॥47॥
ಮಹಾದೇವನು ಆ ಬಾಣವನ್ನು ಎತ್ತಿಕೊಂಡು ಸರ್ವದಾನವರನ್ನು ಭಯಪಡಿಸುತ್ತ ಭೂಮ್ಯಂತರಿಕ್ಷಗಳನ್ನು ಕಂಪಿಸುವಂತೆ
ರಥವನ್ನೇರಿದ.
ತಮಾರುರುಕ್ಷುಂ ದೇವೇಶಂ ತುಷ್ಟುವುಃ ಪರಮರ್ಷಯಃ |
ಗಂಧರ್ವಾ ದೇವಸಂಘಾಶ್ಚ ತಥೈವಾಪ್ಸರಸಾಂ ಗಣಾಃ ॥48॥
ಮಹಾದೇವನು ಆ ರಥವನ್ನು ಏರಲು ಹೊರಟಾಗ ಮಹರ್ಷಿಗಳು, ಗಂಧರ್ವರು, ದೇವಸಮೂಹಗಳು, ಅಪ್ಸರೆಯರ ಸಮೂಹಗಳು
ಸ್ತುತಿಸಿದರು.
ಮಹರ್ಷಿಭಿಃ ಸ್ತೂಯಮಾನೋ ವಂದ್ಯಮಾನಶ್ಚ ವಂದಿಭಿಃ |

ಉಪನೃತ್ತಶ್ಚಾಪ್ಸರಸಾಂ ಗಣೈರ್ನೃತ್ತವಿಶಾರದೈಃ ॥49॥
ಸ ಶೋಭಮಾನೋ ವರದಃ ಖಡ್ಗೀ ಬಾಣೀ ಶರಾಸನೀ |
ಹಸನ್ನಿವಾಬ್ರವೀದ್ ದೇವೋ ಸಾರಥಿಃ ಕೋ ಭವಿಷ್ಯತಿ ॥50॥
ಮಹರ್ಷಿಗಳಿಂದ ಸ್ತುತಿಸಿಕೊಂಡು, ಬಂದಿಗಳಿಂದ ವಂದಿಸಿಕೊಂಡು, ನೃತ್ತವಿಶಾರದರಾದ ಅಪ್ಸರೆಯರ ಸಮೂಹಗಳಿಂದ ನೃತ್ಯಸೇವೆ ಕೈಗೊಂಡು ಖಡ್ಗಬಾಣಬಿಲ್ಲುಗಳನ್ನು ಹಿಡಿದು ಶೋಭಿಸುತ್ತ ವರದಾಯಕನಾದ ಮಹಾದೇವ ನಗುತ್ತ ನುಡಿದ, `ಸಾರಥಿ ಯಾರಾಗುವರು?' ಎಂದು.
ತಮಬ್ರುವನ್ ದೇವಗಣಾ ಯಂ ಭವಾನ್ ಸಂನಿಯೋಕ್ಷ್ಯತೇ |
ಸ ಭವಿಷ್ಯತಿ ದೇವೇಶ ಸಾರಥಿಸ್ತೇ ನ ಸಂಶಯಃ ॥51॥
ದೇವತೆಗಳು ಹೇಳಿದರು, ನೀನು ಯಾರನ್ನು ನಿಯೋಜಿಸುವೆಯೋ ಅವನು ಸಾರಥಿಯಾಗುತ್ತಾನೆ, ಸಂಶಯವಿಲ್ಲ.
ತಾನಬ್ರವೀತ್ ಪುನರ್ದೇವೋ ಮತ್ತಃ ಶ್ರೇಷ್ಠತರೋ ಹಿ ಯಃ |
ತಂ ಸಾರಥಿಂ ಕುರುಧ್ವಂ ಮೇ ಸ್ವಯಂ ಸಂಚಿಂತ್ಯ ಮಾ ಚಿರಮ್ ॥52॥
ಮಹಾದೇವ ಪುನಃ ನುಡಿದ, ನನಗಿಂತ ಶ್ರೇಷ್ಠನಾದವನನ್ನು ನೀವೇ ಆಲೋಚಿಸಿ ನನಗೆ ಸಾರಥಿಯನ್ನಾಗಿ ಮಾಡಿರಿ. ತಡ ಮಾಡಬೇಡಿರಿ.
ಏತಚ್ಛ್ರುತ್ವಾ ತತೋ ದೇವಾ ವಾಕ್ಯಮುಕ್ತಂ ಮಹಾತ್ಮನಾ |
ಗತ್ವಾ ಪಿತಾಮಹಂ ದೇವಂ ಪ್ರಸಾದ್ಯೈವಂ ವಚೋಽಬ್ರುವನ್ ॥53॥
ಮಹಾತ್ಮ ಶಿವನಾಡಿದ ಮಾತನ್ನು ಕೇಳಿ ದೇವತೆಗಳು ಬ್ರಹ್ಮದೇವನ ಬಳಿಗೆ ಹೋಗಿ ಒಲಿಸಿಕೊಂಡು ಹೇಳಿದರು.
ದೇವ ತ್ವಯೇದಂ ಕಥಿತಂ ತ್ರಿದಶಾರಿನಿಬರ್ಹಣಮ್ |
ತಥಾ ಚ ಕೃತಮಸ್ಮಾಭಿಃ ಪ್ರಸನ್ನೋ ವೃಷಭಧ್ವಜಃ ॥54॥
ದೇವ, ಅಸುರಸಂಹಾರಕ್ಕೆ ಸಿದ್ಧತೆಯನ್ನು ನೀನು ಹೇಗೆ ಹೇಳಿದೆಯೋ ಹಾಗೆ ನಾವು ಮಾಡಿದ್ದೇವೆ. ಶಿವ ಪ್ರಸನ್ನನಾಗಿದ್ದಾನೆ.
ರಥಶ್ಚ ವಿಹಿತೋಸ್ಮಾಭಿರ್ವಿಚಿತ್ರಾಯುಧಸಂವೃತಃ |
ಸಾರಥಿಂ ತು ನ ಜಾನೀಮಃ ಕಃ ಸ್ಯಾತ್ ತಸ್ಮಿನ್ ರಥೋತ್ತಮೇ ॥55॥
ಶಿವನಿಗೆ ಬೇಕಾಗಿರುವ ನಾನಾ ಆಯುಧಗಳಿಂದ ಸಜ್ಜಾದ ರಥವನ್ನು ಸಿದ್ಧಪಡಿಸಿದ್ದೇವೆ. ಆ ರಥದಲ್ಲಿ ಸಾರಥಿ ಯಾರೆಂಬುದನ್ನು ನಾವು ತಿಳಿಯೆವು.
ತಸ್ಮಾದ್ ವಿಧೀಯತಾಂ ಕಶ್ಚಿತ್ ಸಾರಥಿರ್ದೇವಸತ್ತಮ |
ಸಫಲಾಂ ತಾಂ ಗಿರಂ ದೇವ ಕರ್ತುಮರ್ಹಸಿ ನೋ ವಿಭೋ ॥56॥
ದೇವೋತ್ತಮ, ಒಬ್ಬ ಸಾರಥಿಯನ್ನು ಒದಗಿಸು. ಪ್ರಭು, ನೀನು ಕೊಟ್ಟಿರುವ ಮಾತನ್ನು ಸಫಲವಾಗಿ ನಡೆಸಿಕೊಡು.
ಏವಮಸ್ಮಾಸು ಹಿ ಪುರಾ ಭಗವನ್ನುಕ್ತವಾನಸಿ |
ಹಿತಂ ಕರ್ತಾಸ್ಮಿ ಭವತಾಮಿತಿ ತತ್ಕರ್ತುಮರ್ಹಸಿ ॥57॥
ನಮಗೆ ಹಿಂದೆ ನೀನು `ನಿಮಗೆ ಹಿತ ಉಂಟುಮಾಡುವೆನೆ'ಂದು ಮಾತು ಕೊಟ್ಟಿರುವೆ. ಪೂಜ್ಯನೆ, ಆ ಮಾತನ್ನು ನಡೆಸಿಕೊಡಬೇಕು.
ಸ ದೇವ ಯುಕ್ತೋ ರಥಸತ್ತಮೋ ನೋ
ದುರಾವರೋ ದ್ರಾವಣಃ ಶಾತ್ರವಾಣಾಮ್ |
ಪಿನಾಕಪಾಣಿರ್ವಿಹಿತೋಽತ್ರ ಯೋದ್ಧಾ
ವಿಭೀಷಯನ್ ದಾನವಾನುದ್ಯತೋಽಸೌ ॥58॥
ದೇವ, ಶತ್ರುಗಳಿಗೆ ಅಭೇದ್ಯವಾದ, ಅವರನ್ನು ಓಡಿಸಬಲ್ಲ ಉತ್ತಮವಾದ ರಥ ಸಜ್ಜಾಗಿ ನಿಂತಿದೆ. ಶಿವನು ಅದರಲ್ಲಿ ಯೋಧನಾಗಿ ದಾನವರನ್ನು ಅಂಜಿಸಲು ಉದ್ಯುಕ್ತನಾಗಿದ್ದಾನೆ.
ತಥೈವ ವೇದಾಶ್ಚತುರೋ ಹಯಾಗ್ರ್ಯಾ
ಧರಾ ಸಶೈಲಾ ಚ ರಥೋ ಮಹಾತ್ಮನ್ |
ನಕ್ಷತ್ರವಂಶೋಽನುಗತೋ ವರೂಥೇ
ಯಸ್ಮಿನ್ ಯೋದ್ಧಾ ಸಾರಥಿನಾಭಿರಕ್ಷ್ಯಃ ॥59॥
ನಾಲ್ಕು ವೇದಗಳು ಕುದುರೆಗಳಾಗಿ ನಿಂತಿವೆ. ಪರ್ವತಗಳಿಂದ ಯುಕ್ತವಾದ ಧರೆ ರಥವಾಗಿ ನಿಂತಿದೆ. ನಕ್ಷತ್ರಪುಂಜದಿಂದ ಅಲಂಕೃತವಾದ ಆಕಾಶ ಅದಕ್ಕೆ ಆವರಣವಾಗಿದೆ. ಮಹಾತ್ಮನೆ, ಆ ಯೋಧನನ್ನು ಒಬ್ಬ ಸಾರಥಿ ರಕ್ಷಿಸಬೇಕಾಗಿದೆ.
ತತ್ರ ಸಾರಥಿರೇಷ್ಟವ್ಯಃ ಸರ್ವೈರೇತೈರ್ವಿಶೇಷವಾನ್ |
ತತ್ಪ್ರತಿಷ್ಠೋ ರಥೋ ದೇವ ಹಯಾ ಯೋದ್ಧಾ ತಥೈವ ಚ |
ಕವಚಾನಿ ಚ ಶಸ್ತ್ರಾಣಿ ಕಾರ್ಮುಕಂ ಚ ಪಿತಾಮಹ ॥60॥
ರಥ ಅಶ್ವ ಮತ್ತು ಯೋಧರೆಲ್ಲರಿಗಿಂತ ಶ್ರೇಷ್ಠನಾದವನು ಒಬ್ಬ ಸಾರಥಿ ಬೇಕಾಗಿದ್ದಾನೆ. ಅವನಿಂದಲೆ ರಥ ಅಶ್ವ ಯೋಧರ ಕವಚ ಆಯುಧ ಧನುಸ್ಸುಗಳ ಯೋಗಕ್ಷೇಮ ನಿರ್ವಾಹ ಸಾಧ್ಯವಾಗುತ್ತದೆ.
ತ್ವಾಮೃತೇ ಸಾರಥಿಂ ತತ್ರ ನಾನ್ಯಂ ಪಶ್ಯಾಮಹೇ ವಯಮ್ |
ತ್ವಂ ಹಿ ಸರ್ವೈರ್ಗುಣೈರ್ಯುಕ್ತೋ ದೇವತಾಭ್ಯೋಽಧಿಕಃ ಪ್ರಭೋ |
ಸಾರಥ್ಯೇ ತೂರ್ಣಮಾರೋಹ ಸಂಯಚ್ಛ ಪರಮಾನ್ ಹಯಾನ್ ॥61॥
ಜಯಾಯ ತ್ರಿದಿವೇಶಾನಾಂ ವಧಾಯ ತ್ರಿದಶದ್ವಿಷಾಮ್ ॥62॥
ಅಂಥ ಸಾರಥಿಯಾಗಲು ನಿನ್ನೊಬ್ಬನನ್ನು ಹೊರತು ಇನ್ನೊಬ್ಬನನ್ನು ನಾವು ಕಾಣೆವು. ಪ್ರಭು, ನೀನೇ ಸಕಲಗುಣಸಂಪನ್ನ,

ದೇವತೆಗಳಿಗಿಂತ ಉತ್ತಮ. ದೇವತೆಗಳಿಗೆ ಜಯವಾಗಬೇಕು. ಅಸುರರ ವಿನಾಶವಾಗಬೇಕು. ಅದಕ್ಕೆ ನೀನೇ ಸಾರಥಿಯಾಗಿ ಬೇಗನೆ ರಥವನ್ನೇರು, ಉತ್ತಮವಾದ ಕುದುರೆಗಳನ್ನು ನಿಯಂತ್ರಿಸು.
ದುರ್ಯೋಧನಃ
ಇತಿ ತೇ ಶಿರಸಾ ನತ್ವಾ ತ್ರಿಲೋಕೇಶಂ ಪಿತಾಮಹಮ್ |
ದೇವಾಃ ಪ್ರಸಾದಯಾಮಾಸುಃ ಸಾರಥ್ಯಾಯೇತಿ ನಃ ಶ್ರುತಮ್ ॥63॥
ಹೀಗೆ ದೇವತೆಗಳು ಮೂರ್ಲೋಕದೊಡೆಯನಾದ ಬ್ರಹ್ಮದೇವನನ್ನು ತಲೆಬಾಗಿ ನಮಿಸಿ ಸಾರಥ್ಯಕ್ಕಾಗಿ ಅವನನ್ನು ಒಲಿಸಿಕೊಂಡರು ಎಂದು ಹೇಳುವುದನ್ನೂ ಕೇಳಿದ್ದೇವೆ.
ಬ್ರಹ್ಮಾ
ನಾತ್ರ ಕಿಂಚಿನ್ಮೃಷಾ ವಾಕ್ಯಂ ಯದುಕ್ತಂ ವೋ ದಿವೌಕಸಃ |
ಸಂಯಚ್ಛಾಮಿ ಹಯಾನೇಷ ಯುಧ್ಯತೋ ವೈ ಕಪರ್ದಿನಃ ॥64॥
ಬ್ರಹ್ಮದೇವನು ದೇವತೆಗಳಿಗೆ ನುಡಿದ– ದೇವತೆಗಳೆ, ನಾನೆಂದೂ ಕೊಟ್ಟ ಮಾತಿಗೆ ತಪ್ಪಿದ್ದೇ ಇಲ್ಲ, ಶಿವನು ಯುದ್ಧ ಮಾಡುವಾಗ ನಾನು ಕುದುರೆಗಳನ್ನು ನಿಯಂತ್ರಿಸುತ್ತೇನೆ.
ತತಃ ಸ ಭಗವಾನ್ ದೇವೋ ಲೋಕಸ್ರಷ್ಟಾ ಪಿತಾಮಹಃ |
ಸಾರಥ್ಯೇ ಕಲ್ಪಿತೋ ದೇವೈರೀಶಾನಸ್ಯ ಮಹಾತ್ಮನಃ ॥65॥
ಹೀಗೆ ಲೋಕಗಳ ಸೃಷ್ಟಿಕರ್ತನಾದ ಭಗವಾನ್ ಬ್ರಹ್ಮದೇವನನ್ನು ಶಿವನಿಗೆ ಸಾರಥಿಯಾಗಲು ದೇವತೆಗಳು ಒಪ್ಪಿಸಿದರು.
ಆರುಹ್ಯ ಭಗವಾನ್ ದೇವೋ ದೀಪ್ಯಮಾನಃ ಸ್ವತೇಜಸಾ ॥66॥
ಅಭೀಶೂನ್ ಹಿ ತ್ರಿಲೋಕೇಶಃ ಸಂಗೃಹ್ಯ ಪ್ರಪಿತಾಮಹಃ |
ತಾನಶ್ವಾಂಶ್ಚೋದಯಾಮಾಸ ಮನೋಮಾರುತರಂಹಸಃ ॥67॥
ಭಗವಾನ್ ಬ್ರಹ್ಮದೇವನು ತನ್ನ ತೇಜಸ್ಸಿನಿಂದ ಬೆಳಗುತ್ತ ರಥವನ್ನೇರಿ ಕುದುರೆಗಳ ಹಗ್ಗಗಳನ್ನು ಹಿಡಿದು ಮನೋವೇಗ, ವಾಯುವೇಗಗಳುಳ್ಳ ಆ ಕುದುರೆಗಳನ್ನು ನಡೆಸತೊಡಗಿದ.
ತತೋಽಧಿರೂಢೇ ವರದೇ ಪ್ರಯಾತೇ ಚಾಸುರಾನ್ ಪ್ರತಿ |
ಸಾಧು ಸಾಧ್ವಿತಿ ವಿಶ್ವೇಶಃ ಸ್ಮಯಮಾನೋಽಭ್ಯಭಾಷತ ॥68॥
ಅಸುರರಿಗೆ ವರವಿತ್ತ ಬ್ರಹ್ಮದೇವನೆ ಅಸುರರ ಕಡೆಗೆ ರಥವನ್ನು ನಡೆಸುವಾಗ ವಿಶ್ವೇಶ್ವರನು ನಸುನಗುತ್ತ `ಭಲೇ! ಭೇಷ್!' ಎಂದ.
ಯಾಹಿ ದೇವ ಯತೋ ದೈತ್ಯಾಶ್ಚೋದಯಾಶ್ವಾನತಂದ್ರಿತಃ |
ಪಶ್ಯ ಬಾಹ್ವೋರ್ಬಲಂ ಮೇಽದ್ಯ ನಿಘ್ನತಃ ಶಾತ್ರವಾನ್ ರಣೇ ॥69॥
ದೇವ, ದೈತ್ಯರಿರುವಲ್ಲಿಗೆ ಕುದುರೆಗಳನ್ನು ಎಚ್ಚರಿಕೆಯಿಂದ ನಡೆಸು, ನೋಡು ನನ್ನ ಬಾಹುಬಲವನ್ನು. ರಣದಲ್ಲಿ ಶತ್ರುಗಳನ್ನು ವಧಿಸುತ್ತೇನೆ.
ತತಸ್ತಾಂಶ್ಚೋದಯಾಮಾಸ ವಾಯುವೇಗಸಮಾನ್ ಜವೇ |
ಪುರಾಣ್ಯುದ್ದಿಶ್ಯ ಸ್ವಸ್ಥಾನಿ ದಾನವಾನಾಂ ತರಸ್ವಿನಾಮ್ ॥70॥
ವೇಗದಲ್ಲಿ ವಾಯುವೇಗಕ್ಕೆ ಸಮವಾದ ಕುದುರೆಗಳನ್ನು, ಬಲಿಷ್ಠರಾದ ದಾನವರ ತ್ರಿಪುರಗಳು ಸ್ವಸ್ಥವಾಗಿ ಅಂತರಿಕ್ಷದಲ್ಲಿ ತೇಲುತ್ತಿರುವಲ್ಲಿಗೆ ಬ್ರಹ್ಮದೇವನು ನಡೆಸಿದ.
ಪಿಬದ್ಭಿರಿವ ಚಾಕಾಶಂ ತೈರ್ಹಯೈರ್ಲೋಕ ಪೂಜಿತೈಃ |
ಜಗಾಮ ಭಗವಾನ್ ಕ್ಷಿಪ್ರಂ ಜಯಾಯ ತ್ರಿದಿವೌಕಸಾಮ್ ॥73॥
ಲೋಕಪೂಜಿತವಾದ ಕುದುರೆಗಳು ಕತ್ತನ್ನೆತ್ತಿ ಆಗಸವನ್ನು ಕುಡಿದು ಬಿಡುವಂತೆ ನೋಡುತ್ತ ಹಾರಿದವು. ಭಗವಾನ್ ಶಿವನು ದೇವತೆಗಳಿಗೆ ಜಯ ತಂದುಕೊಡಲು ವೇಗವಾಗಿ ಹೊರಟ.
ಪ್ರಯಾತೇ ರಥಮಾಸ್ಥಾಯ ತ್ರಿಪುರಾಭಿಮುಖೇ ಭವೇ |
ನನಾದ ಸುಮಹಾನಾದಂ ವೃಷಭಃ ಪೂರಯನ್ ದಿಶಃ ॥74॥
ಭವನು ರಥವನ್ನೇರಿ ತ್ರಿಪುರಗಳ ಕಡೆಗೆ ಹೊರಟಾಗ ಧ್ವಜದಲ್ಲಿದ್ದ ನಂದಿಕೇಶ್ವರ ವೃಷಭನು ದಿಕ್ಕುಗಳೆಲ್ಲ ತುಂಬುವಂತೆ ಮಹಾನಾದ ಮಾಡಿದನು.
ವೃಷಭಸ್ಯಾಸ್ಯ ನಿನದಂ ಶ್ರುತ್ವಾ ಭಯಕರಂ ಮಹತ್ |
ವಿನಾಶಮಗಮಂಸ್ತತ್ರ ತಾರಕಾಃ ಸುರಶತ್ರವಃ ॥75॥
ವೃಷಭನ ಭಯಂಕರವಾದ ಆ ಮಹಾಧ್ವನಿಯನ್ನು ಕೇಳಿ ತಾರಕಾಸುರನ ಕಡೆಯ ಅಸುರರು ಹೆಚ್ಚಿನವರು ಹೆದರಿ ಅಲ್ಲಲ್ಲಿ ಅಡಗಿ ಕುಳಿತರು.
ಅಪರೇಽವಸ್ಥಿತಾಸ್ತತ್ರ ಯುದ್ಧಾಯಾಭಿಮುಖಾಸ್ತದಾ |
ತತಃ ಸ್ಥಾಣುರ್ಮಹಾರಾಜ ಶೂಲಧೃಕ್ ಕ್ರೋಧಮೂರ್ಛಿತಃ ॥76॥
ಉಳಿದವರು ಯುದ್ಧಕ್ಕೆ ಇದಿರಾಗಿ ಬಂದು ನಿಂತರು. ಮಹಾರಾಜ ಶಲ್ಯನೆ, ಶೂಲಧಾರಿ ಸ್ಥಾಣುವು ಆಗ ಕ್ರೋಧದಿಂದ ಮೈಮರೆತ.
ತ್ರಸ್ತಾನಿ ಸರ್ವಭೂತಾನಿ ತ್ರೈಲೋಕ್ಯಂ ಭೂಃ ಪ್ರಕಂಪತೇ |
ನಿಮಿತ್ತಾನಿ ಚ ಘೋರಾಣಿ ತತ್ರ ಸಂದಧತಃ ಶರಮ್ ॥77॥
ಎಲ್ಲ ಜೀವಿಗಳೂ ಭಯಗ್ರಸ್ತರಾದರು, ಮೂರ್ಲೋಕ ನಡುಗಿತು, ಭೂಮಿ ಕಂಪಿಸಿತು. ಘೋರವಾದ ಶಕುನಗಳು ತಲೆದೋರಿದುವು. ಶಿವ ಶರಸಂಧಾನ ಮಾಡಿದ.

ತಸ್ಮಿನ್ ಸೋಮಾಗ್ನಿವಿಷ್ಣೂನಾಂ ಕ್ಷೋಭೇಣ ಬ್ರಹ್ಮರುದ್ರಯೋಃ |
ಸ ರಥೋ ಧನುಷಃ ಕ್ಷೋಭಾದತೀವ ಹ್ಯವಸೀದತಿ ॥78॥
ಶರದಲ್ಲಿದ್ದ ಸೋಮ ಅಗ್ನಿ ವಿಷ್ಣುಗಳ ತೇಜಸ್ಸಿನಿಂದಲೂ ಬ್ರಹ್ಮರುದ್ರರ ಕೋಪದಿಂದಲೂ ಧನುಸ್ಸಿನ ಭಾರದಿಂದಲೂ ರಥವು ಕೆಳಗೆ ಕುಸಿಯತೊಡಗಿತು.
ತತೋ ನಾರಾಯಣಸ್ತಸ್ಮಾತ್ ಶರಭಾಗಾದ್ವಿನಿಃಸೃತಃ |
ವೃಷರೂಪಂ ಸಮಾಸ್ಥಾಯ ಉಜ್ಜಹಾರ ಮಹಾರಥಮ್ ॥79॥
ಆಗ ನಾರಾಯಣನು ಶರಭಾಗದಿಂದ ಈಚೆಗೆ ಬಂದು ವೃಷಭರೂಪ ತಾಳಿ ಆ ಮಹಾರಥವನ್ನು ಎತ್ತಿ ಹಿಡಿದ.
ಸೀದಮಾನೇ ರಥೇ ಚೈವ ನರ್ದಮಾನೇಷು ಶತ್ರುಷು |
ಸ ಸಂಭ್ರಮಾತ್ತು ಭಗವಾನ್ನಾದಂ ಚಕ್ರೇ ಮಹಾಬಲಃ ॥80॥
ರಥವು ಕುಸಿಯುತ್ತಿರುವಾಗ, ದೈತ್ಯರು ಉತ್ಸಾಹಗೊಂಡು ಗರ್ಜಿಸುತ್ತಿರುವಾಗ ಮಹಾಬಲಿಷ್ಠನಾದ ಭಗವಾನ್ ವೃಷಭರೂಪಿ ನಾರಾಯಣನು ರಥವನ್ನೆತ್ತಿ ಹಿಡಿದು ಸಂಭ್ರಮದಿಂದ ಮಹಾನಾದವನ್ನು ಮಾಡಿದ.
ವೃಷಭಸ್ಯ ಸ್ಥಿತೋ ಮೂರ್ಧ್ನಿ ಹಯಪೃಷ್ಠೇ ಚ ಮಾನದ |
ತದಾ ಸ ಭಗವಾನ್ ರುದ್ರೋ ನಿರೈಕ್ಷದ್ ದಾನವಂ ಪುರಮ್ ॥81॥
ಆಗ ಭಗವಾನ್ ರುದ್ರನು ವೃಷಭದ ಶಿರಸ್ಸಿನ ಮೇಲ್ಗಡೆ ಮತ್ತು ಕುದುರೆಗಳ ಬೆನ್ನಿನ ಮೇಲ್ಗಡೆ ರಥದಲ್ಲಿ ನಿಂತು ಬಾಣಕ್ಕೆ ಲಕ್ಷ್ಯವಾದ ದಾನವರ ತ್ರಿಪುರವನ್ನು ನೋಡುತ್ತ ನಿಂತ.
ವೃಷಭಸ್ಯಾಸ್ಥಿತೋ ರುದ್ರೋ ಹಯಸ್ಯ ಚ ನರೋತ್ತಮ |
ಸ್ತನಾಂಸ್ತದಾಽಶಾತಯತ ಖುರಾಂಶ್ಚೈವ ದ್ವಿಧಾಽಕರೋತ್ ॥82॥
ರಥದಲ್ಲಿ ಚೆನ್ನಾಗಿ ನಿಂತ ರುದ್ರನು ಮೊದಲಿಗೆ ಕುದುರೆಯ ಸ್ತನಗಳನ್ನು ಕೊಯ್ದ. ವೃಷಭದ ಗೊರಸುಗಳನ್ನು ಎರಡಾಗಿ ಸೀಳಿದ.
ತತಃ ಪ್ರಭೃತಿ ಭದ್ರಂ ತೇ ಗವಾಂ ದ್ವೈಧೀಕೃತಾಃ ಖುರಾಃ |
ಹಯಾನಾಂ ಚ ಸ್ತನಾ ರಾಜಂಸ್ತದಾಪ್ರಭೃತಿ ನಾಭವನ್ |
ಪೀಡಿತಾನಾಂ ಬಲವತಾ ರುದ್ರೇಣಾದ್ಭುತಕರ್ಮಣಾ ॥ 83 ॥
ಅಂದಿನಿಂದ ಪ್ರಪಂಚದಲ್ಲಿ ಗೋವುಗಳ ಗೊರಸುಗಳು ಎರಡಾಗಿ `ಭದ್ರಂ' ಮಂಗಳಕರವಾಗಿ ಸೀಳಿದುವು ಮತ್ತು ಕುದುರೆಗಳಿಗೂ ಅಂದಿನಿಂದ ಮಂಗಳಕರವಾಗಿ ಸ್ತನಗಳಿಲ್ಲವಾದುವು. ಅದ್ಭುತಕರ್ಮವನ್ನು ಮಾಡುವ ಬಲಿಷ್ಠನಾದ ರುದ್ರನು ಪೀಡಿಸಿದ್ದರಿಂದ ಇದು ಹೀಗಾಯಿತು.
ವೃಷಭದ ಶಿರಸ್ಸಿನ ಮೇಲೂ ಕುದುರೆಯ ಬೆನ್ನಿನ ಮೇಲೂ ಕುಳಿತಿದ್ದ ರುದ್ರನು ದಾನವರನ್ನು ನೋಡಿದುದೇಕೆ? ಕುದುರೆಯ ಸ್ತನಗಳನ್ನು ಕಿತ್ತುದುದೇಕೆ? ವೃಷಭದ ಗೊರಸುಗಳನ್ನು ಸೀಳಿದುದೇಕೆ? ರಥದಲ್ಲಿ ಕುಳಿತಿದ್ದವನು ಕುದುರೆಯ ಮೇಲೂ ವೃಷಭದ ಮೇಲೂ ಕಾಲಿಟ್ಟುದುದೇಕೆ?
ತ್ರಿಮೂರ್ತಿಗಳಲ್ಲಿ ಯಾವ ಭೇದವಿರದಿದ್ದರೂ ಶಿವನೆ, ತನಗಿಂತಲೂ ಬ್ರಹ್ಮನು ಅಧಿಕನೆಂದು ಹೇಳಿಕೊಂಡುದುದೂ ಅಚ್ಚರಿಯಾಗಿ ಕಾಣುತ್ತದೆ. ತ್ರಿಪುರಾಸುರರನ್ನು ಸಂಹಾರ ಮಾಡಲು ಶಿವನಿಗೊಬ್ಬನಿಗಲ್ಲದೆ ಮತ್ತಾರಿಂದಲೂ ಸಾಧ್ಯವಾಗುವುದಿಲ್ಲ. ಇದನ್ನು ಬ್ರಹ್ಮನೇ ಹೇಳುತ್ತಾನೆ. `ನ ಚ ಸ್ಥಾಣುಮೃತೇ ಶಕ್ತೋ ಭೇತ್ತುಮೇಕೇಷುಣಾ ಪುರಃ' ಎಂದು. ಮತ್ತು
`ತವಾತಿಸರ್ಗಾತ್ ದೇವೇಶ ಪ್ರಾಜಾಪತ್ಯಮಿದಂ ಪದಮ್ |
ಮಯಾಽಧಿತಿಷ್ಠತಾ ದತ್ತೋ ದಾನವೇಭ್ಯೋ ಮಹಾನ್ ವರಃ ॥'
`ನಿನ್ನ ಆದೇಶಾನುಸಾರ ಪ್ರಜಾಪತಿಯ ಸ್ಥಾನವನ್ನು ವಹಿಸಿಕೊಂಡಿರುವ ನಾನು ದಾನವರಿಗೆ ಮಹತ್ತರವಾದ ವರವೊಂದನ್ನು ದಯಪಾಲಿಸಿದೆನು' ಎಂದೂ ಬ್ರಹ್ಮನೇ ಹೇಳುತ್ತಾನೆ. ಅದರಿಂದ ಯಾರು ಹೆಚ್ಚು, ಯಾರು ಕಡಿಮೆ ಎಂಬ ಜಿಜ್ಞಾಸೆಗೆ ಅವಕಾಶವೇ ಇಲ್ಲ.

ಹೀಗೆ ಈ ಮೂರು ಅಧ್ಯಾಯಗಳೂ ಬಗೆಹರಿಸಲಾಗದ ಹಲವಾರು ವಿರೋಧಾಭಾಸಗಳಿಂದ ಕೂಡಿವೆ. ಈ ಅಧ್ಯಾಯಗಳನ್ನು ಬಿಟ್ಟು ಓದಿದರೂ ಕಥೆಯ ಓಟದಲ್ಲಾಗಲಿ, ವಸ್ತುನಿರೂಪಣೆಯಲ್ಲಾಗಲಿ ಲೋಪವೇನೂ ಉಂಟಾಗುವುದಿಲ್ಲ. ಆದರೆ ಎಲ್ಲ ಪುಸ್ತಕಗಳಲ್ಲಿಯೂ ಈ ಅಧ್ಯಾಯಗಳಿವೆ!
–ಓದುಗರ ಈ ಪ್ರಶ್ನೆಗಳಿಗೆ ಸಮಾಧಾನ ನೀಡುವುದು ಕಷ್ಟಕರವಲ್ಲ. ಮೊದಲಿಗೆ ವೃಷಭದ ಮೇಲೂ ಕುದುರೆಯ ಮೇಲೂ ಕುಳಿತಿದ್ದ ರುದ್ರನು ದಾನವರನ್ನು ನೋಡಿದ್ದು ಏಕೆ ಎನ್ನುವ ಪ್ರಶ್ನೆಯೇ ಅಸಂಗತ. ಬಿಲ್ಲಿಗೆ ಬಾಣವನ್ನು ಹೂಡಿ ಬಿಲ್ಗಾರನು ಲಕ್ಷ್ಯವನ್ನು ಸರಿಯಾಗಿ ನೋಡಿಯೇ ಗುರಿಯಿಟ್ಟು ಬಾಣವನ್ನೆಸೆಯಬೇಕು. ರಥವು ಕುಸಿಯುತ್ತಿದ್ದುದರಿಂದ ಶಿವನಿಗೆ ದಾನವರನ್ನು ಹೀಗೆ ನೋಡಲಾಗುತ್ತಿರಲಿಲ್ಲವೆಂದೇ ವೃಷಭವೂ ಕುದುರೆಗಳೂ ಸೇರಿ ರಥವನ್ನು ಹೊತ್ತಿದ್ದುವು ತಾನೆ?
ರುದ್ರನು ಕುದುರೆಯ ಸ್ತನಗಳನ್ನು ಕಿತ್ತಿದ್ದೇಕೆ? ವೃಷಭದ ಗೊರಸುಗಳನ್ನು ಸೀಳಿದ್ದೇಕೆ? ಎಂಬ ಪ್ರಶ್ನೆಗಳು ಬರುವುದು ಸಹಜ. ರಣರಂಗದಲ್ಲಿ ಯುದ್ಧಕ್ಕೆ ಸನ್ನದ್ಧನಾಗಿ ನಿಂತಿರುವಾಗ ಯೋಧನು ಇಂಥ ಬೇರೆ ಯಾವುದೋ ಕಾರ್ಯಕ್ಕೆ ತೊಡಗುವುದು ಅಸಹಜವಾಗಿ ಕಾಣುತ್ತದೆ.
ವಸ್ತುತಃ ರಣವಾದ್ಯಗಳನ್ನು ಮೊಳಗಿಸುವುದು, ಜಯಘೋಷ, ಗಂಧರ್ವಾಪ್ಸರೆಯರ ಗಾನನೃತ್ಯಗಳು ಮುಂತಾದವು ಮಂಗಳಕರವಾಗಿದ್ದು ಯೋಧನಿಗೆ ಜಯ ತಂದುಕೊಡುವ ಉದ್ದೇಶದವುಗಳಾಗಿರುತ್ತವೆ. ಹಾಗೇ ಕುದುರೆಗಳ ಎದೆಯಲ್ಲಿನ ಸ್ತನಗಳನ್ನು ಕೀಳುವುದೂ ವೃಷಭದ ಗೊರಸುಗಳನ್ನು ಸೀಳುವುದೂ ಮಂಗಳಕಾರ್ಯವೆ. ಏಕೆಂದರೆ ಸ್ತನಗಳು `ಸ್ತನಕೇಶವತೀ ನಾರೀ' ಎಂಬಂತೆ ಸ್ತ್ರೀಲಕ್ಷಣಗಳಾಗಿದ್ದು ಪುರುಷಯೋಧರಲ್ಲಿ ಅವು ಅವಲಕ್ಷಣಗಳಾಗಿರು ತ್ತವೆ.
ಗಂಡುಪ್ರಾಣಿಗಳಲ್ಲಿ ಸ್ತನಗಳು ಸೂಕ್ಷ್ಮವಾಗಿಯಾದರೂ ಇರುವುದು ನಿಜವೆ. ಅವುಗಳಿಗೆ ಅವು ಅಮಂಗಳಕರವಲ್ಲ. ಆದರೆ ಭೀಷ್ಮನು

ಶಿಖಂಡಿಯ ಮುಂದೆ ಯುದ್ಧ ಏಕೆ ಮಾಡಲಿಲ್ಲ ಎಂದರೆ ಭೀಷ್ಮನು ಹೇಳುತ್ತಾನೆ– `ಶಿಖಂಡಿ' ಎಂಬ ನಾಮ ಸ್ತ್ರೀಯಳದು. ಸುಂದರಕೇಶಪಾಶಉಳ್ಳ ಸ್ತ್ರೀ ಎಂದರ್ಥ. ಶಿಖಂಡಿ ಸ್ತ್ರೀಯಾಗಿದ್ದಾಗ ಅವನಿಗಿಟ್ಟಿದ್ದ ಹೆಸರು ಅದು. ಶಿಖಂಡಿ ಈಗ ಪುರುಷನಾಗಿ ಮಹಾರಥನೆನಿಸಿದರೂ ಅದೇ ಸ್ತ್ರೀನಾಮವಿನ್ನೂ ಅವನಿಗೆ ಇದೆ. ಇದು `ಅಮಂಗಳಕರ'ಎಂದು. ಹಾಗೆ ಪ್ರಕೃತದಲ್ಲಿ ಕುದುರೆಗಳು ಗಂಡಾಗಿದ್ದರೂ ಹಿಂದೆ ಅವುಗಳಿಗೆ ಸ್ತ್ರೀಲಕ್ಷಣವಾದ ಸ್ತನಗಳಿದ್ದುವು. ಅವು ಅಲ್ಪವಾಗಿದ್ದರೂ ರುದ್ರನು ಸಹಿಸದೆ ಅವುಗಳನ್ನು ಕಿತ್ತನೆನ್ನಬಹುದು.
ಲಕ್ಷಾಲಂಕಾರದಲ್ಲಿ ``ಸ್ತ್ರೀತ್ವ ಸ್ತ್ರೀನಾಮಧೇಯತ್ವಕ್ಲೀಬತ್ವಾದಿಕಂ ಯೋದ್ಧುಃ ಅಮಾಂಗಲ್ಯಸ್ಯ ಧ್ವಜಃ ಚಿಹ್ನಂ' (ಭೀಷ್ಮ 103) ಎಂದು ವಿವರಣೆ ನೀಡಿದ್ದಾರೆ.
ವೃಷಭಗಳೂ ಕೂಡ, `ಆತಾಮ್ರ ಸಂಹತ ಖುರಾಃ ಶುಭದಾಃ' ಎನ್ನುವಂತೆ ನಿಬಿಡವಾಗಿ ಜೊತೆ ಸೇರಿದ ಎರಡು ಗೊರಸುಗಳಿದ್ದರೇ ಮಂಗಳಕರ. ಯದ್ಯಪಿ ಪ್ರಕೃತದ `ದಿವ್ಯವಾದ' ವೃಷಭ ಮತ್ತು ಅಶ್ವಗಳ ಗೊರಸು, ಸ್ತನಗಳು ಅಮಂಗಳಕರವಾಗಿರಲು ಶಕ್ಯವಿಲ್ಲ. ಆದರೂ ಲೋಕದಲ್ಲಿ ಎಲ್ಲ ಕಡೆ ಎಲ್ಲ ಕಾಲದಲ್ಲಿ ಅವು ಮಂಗಳಕರವಾಗಿರಲೆಂದು, ಮಂಗಳಕರನಾದ್ದರಿಂದಲೇ `ಶಿವ'ನೆನಿಸಿದ ಶಿವನು, ಈ ಮಂಗಳಕಾರ್ಯಗಳನ್ನು ಮಾಡಿದ್ದಾನೆ ಎಂದು ಇಲ್ಲಿಯೇ ಹೇಳಿದೆ–
ತತಃ ಪ್ರಭೃತಿ `ಭದ್ರಂ' ತೇ ಗವಾಂ `ದ್ವೈಧೀ'ಕೃತಾಃ ಖುರಾಃ |
ಹಯಾನಾಂ ಚ ಸ್ತನಾ ರಾಜನ್ ತದಾಪ್ರಭೃತಿ ನಾಭವನ್ ||
`ಭದ್ರಂ' `ಮಂಗಳಕರವಾಗುವಂತೆ' ಎಂದು ಕ್ರಿಯಾವಿಶೇಷಣವು ಇಲ್ಲಿ ಗಮನಾರ್ಹವಿದೆ.
`ರಥದಲ್ಲಿ ಕುಳಿತಿದ್ದವನು ರುದ್ರ ಕುದುರೆಯ ಮೇಲೂ ವೃಷಭದ ಮೇಲೂ ಕಾಲಿಟ್ಟಿದ್ದೇಕೆ?' ಎಂದರೆ, `ಕಾಲಿಟ್ಟಿ'ದ್ದ ಅಂಶವೆ ಶ್ಲೋಕದಲ್ಲಿಲ್ಲ! ವೃಷಭದ ಮೇಲೂ ಕುದುರೆಯ ಮೇಲೂ ರಥವಿದೆ. ರಥದಲ್ಲಿ ರುದ್ರನಿದ್ದಾನೆ, ಎಂದಮೇಲೆ `ಮಂದಿರೇ ಮಣಿಮಾಲಾ' ಎಂಬಂತೆ ರುದ್ರನು ವೃಷಭದ ಮೇಲೂ ಇದ್ದಾನೆ, ಹಯದ ಮೇಲೂ ಇದ್ದಾನೆ.
ಇದರಲ್ಲೇನು ವಿಶೇಷ? ಇಲ್ಲಿ ಇದನ್ನು ಹೇಳಿದ್ದೇಕೆ? ಎಂದರೆ, ವೃಷಭ ಹಯಗಳು ಪ್ರೀತಿಯಿಂದ ರುದ್ರನನ್ನು ಹೊತ್ತಿದ್ದುವು. ಭೂತಾಯಿಯು ಮಕ್ಕಳಾದ ನಮ್ಮನ್ನು ಹೊರುವಂತೆ. ವೃಷಭರೂಪದಲ್ಲಿದ್ದ ನಾರಾಯಣನೂ ಹಯರೂಪದಲ್ಲಿದ್ದ ವೇದಾಭಿಮಾನಿ ಲಕ್ಷ್ಮೀ ಬ್ರಹ್ಮಾದಿ ದೇವತೆಗಳೂ ಪ್ರೀತಿ ಯಿಂದ ತಮ್ಮ ಕಂದನಾದ ರುದ್ರನನ್ನು ಹೊತ್ತು ಅವನಿಂದ ಈ ಮಹಾಕಾರ್ಯ ವನ್ನು ಮಾಡಿಸುತ್ತಿದ್ದಾರೆ ಎಂದು ಇದರಿಂದ ಸೂಚಿತವಾಗುತ್ತದೆ.
ಶ್ಲೋಕದಲ್ಲಿ, `ವೃಷಭಸ್ಯಾಸ್ಥಿತೋ ರುದ್ರಃ ಹಯಸ್ಯ ಚ' ಎಂಬಲ್ಲಿ `ವೃಷಭಸ್ಯ ಹಯಸ್ಯ ಚ' ಎನ್ನುವುದು `ಆಸ್ಥಿತಃ' ಎಂಬಲ್ಲಿ ಅನ್ವಯಿಸುವುದಿಲ್ಲ. ವೃಷಭದ ಮೇಲೂ ಕುದುರೆಯ ಮೇಲೂ ರುದ್ರ ಕಾಲಿಟ್ಟನೆಂದು ಆ ಅನ್ವಯ ಕೂಡುವುದೂ ಇಲ್ಲ. `ವೃಷಭಸ್ಯ ಖುರಾಂಶ್ಚೈವ' `ಹಯಸ್ಯ ಚ ಸ್ತನಾನ್' ಎಂದು ಅನ್ವಯ. `ಆಸ್ಥಿತಃ' ಎಂದರೆ ರಥದಲ್ಲಿ ಚೆನ್ನಾಗಿ ನಿಂತವನೆಂದರ್ಥ. ಹೀಗೇ ಲಕ್ಷಾಲಂಕಾರದಲ್ಲಿ ವ್ಯಾಖ್ಯಾನಿಸಿದ್ದಾರೆ.
`ತ್ರಿಮೂರ್ತಿಗಳಲ್ಲಿ ಯಾವ ಭೇದವಿರುವುದಿಲ್ಲ' ಎನ್ನುವುದು ಅದ್ವೈತಿಗಳಿಗೂ ಸಮ್ಮತವಲ್ಲ.
ಸತ್ವಂ ರಜಸ್ತಮ ಇತೀಶ ತವಾತ್ಮಬಂಧೋ
ಮಾಯಾಮಯಾಃ ಸ್ಥಿತಿ ಲಯೋದಯ ಹೇತವೋऽಸ್ಯ |
ಲೀಲಾ ಧೃತಾ ಯದಪಿ ಸತ್ವಮಯೀ ಪ್ರಶಾಂತ್ಯೈ
ನಾನ್ಯೇ ನೃಣಾಂ ವ್ಯಸನ ಮೋಹ ಭಿಯಶ್ಚ ಯಾಭ್ಯಾಮ್ ||
(ಭಾಗವತ 11.8.45)
ಎಂಬ ಭಾಗವತ ವಚನಕ್ಕೆ ಶ್ರೀಧರಸ್ವಾಮಿ ವ್ಯಾಖ್ಯಾನ ಹೀಗಿದೆ–
`ಯಾ ಸತ್ವಮಯೀ ಸೈವ ಪ್ರಶಾಂತ್ಯೈ ಮೋಕ್ಷಾಯ | ನ ಕೇವಲಂ ಪ್ರಶಾಂತ್ಯಭಾವಮಾತ್ರಂ ಅನ್ಯಭಜನೇ | ಕಿಂತು ಅನಿಷ್ಟಂ ಚ ಭವೇದಿತ್ಯಾಹ ವ್ಯಸನೇತಿ'
`ಸತ್ವ ರಜಸ್ಸು ತಮಸ್ಸುಗಳು ನಿನ್ನ ಇಚ್ಛಾಧೀನವಾಗಿ ಸ್ಥಿತಿ ಲಯ ಸೃಷ್ಟಿಗಳಿಗೆ ಸಾಧನವಾಗಿವೆ. ಆದರೂ ಸಾತ್ವಿಕ ದೇಹ ಮಾತ್ರ ಮೋಕ್ಷಸಾಧನವಾಗುವುದು. ರಜಸ್ಸು ತಮಸ್ಸುಗಳು ಮೋಕ್ಷಾಭಾವಕ್ಕೆ ಕಾರಣವಾಗಿರುವುದು ಮಾತ್ರವಲ್ಲ, ವ್ಯಸನ ಮೋಹ ಭಯರೂಪವಾದ ಅನಿಷ್ಟಗಳಿಗೇ ಕಾರಣವಾಗುವುವು.' ಇದರಿಂದ ಮೋಕ್ಷಬೇಕೆನ್ನುವವರು ಸತ್ವಮೂರ್ತಿಯಾದ ವಿಷ್ಣುವನ್ನೇ ಭಜಿಸಬೇಕೇ ಹೊರತು ತಮೋಮೂರ್ತಿಯಾದ ಹರನನ್ನಲ್ಲ. ರಜೋ ಮೂರ್ತಿಯಾದ ಬ್ರಹ್ಮನನ್ನೂ ಅಲ್ಲ ಎಂದಂತಾಯಿತು.
`ತ್ರಿಪುರಸಂಹಾರ ಶಿವನಿಂದ ಹೊರತು ಬೇರಾರಿಂದಲೂ ಶಕ್ಯವಲ್ಲ' ಎಂದು ಬ್ರಹ್ಮದೇವ ಹೇಳಿದ್ದು ನಿಜವೆ. ಆದರೆ, ಬ್ರಹ್ಮ ತಾನೇ ವರ ಕೊಟ್ಟಿದ್ದರಿಂದ ಅಸುರಸಂಹಾರವನ್ನು ತಾನೆ ಮಾಡಲಾರ. ವಿಷ್ಣುವು ಬ್ರಹ್ಮಾದಿ ದೇವತೆಗಳಲ್ಲಿ ಸೇರಿದವನಲ್ಲ. ಸ್ವತಂತ್ರನಾದ್ದರಿಂದ ಅವನೂ ಮಾಡುತ್ತಿಲ್ಲ. ಯದ್ಯಪಿ ಬ್ರಹ್ಮವರವಿದ್ದದ್ದರಿಂದ ಶಿವನೂ ಅದನ್ನು ಕಡೆಗಣಿಸಲು ಶಕ್ತನಲ್ಲ. ಆದರೆ ಸಾರಥಿಯಾದ ಬ್ರಹ್ಮನ ಮತ್ತು ಬಾಣರೂಪೀ ವೃಷಭರೂಪೀ ವಿಷ್ಣುಗಳ ಸಹಾಯದಿಂದ ಶಿವನು ಅಸುರಸಂಹಾರ ಮಾಡಬಲ್ಲ ಎಂದು ಬ್ರಹ್ಮದೇವನ ಅಭಿಪ್ರಾಯ.
`ವರಾತಿಸರ್ಗಾತ್ ದೇವೇಶ ಪ್ರಾಜಾಪತ್ಯಮಿದಂ ಪದಂ' ಎಂಬ ಪಾಠದಲ್ಲಿ `ನಿನ್ನ ಆದೇಶಾನುಸಾರ' ಎಂದು ಅರ್ಥೈಸಲು `ತವ' ಎಂಬ ಪದವಿಲ್ಲ. `ವರ ಅತಿಸರ್ಗ' ಶ್ರೇಷ್ಠನಾದ ವಿಷ್ಣುವಿನ ಆದೇಶದಿಂದ ಎಂದರ್ಥ ಹೇಳಬೇಕು. ವಸ್ತುತಃ `ವರಾತಿಸರ್ಗಂ ಉದ್ದಿಶ್ಯ' ಎಲ್ಲರಿಗೂ ವರಪ್ರದಾನ ಮಾಡುವ ಸಲುವಾಗಿ ಅದಕ್ಕೆ ಶಕ್ತನಾದ ಬ್ರಹ್ಮನು ಬ್ರಹ್ಮಪದವಿಯಲ್ಲಿದ್ದಾನೆ.
ಹೀಗೆ ಈ ಮೂರು ಅಧ್ಯಾಯಗಳಲ್ಲಿ ಎಲ್ಲಿಯೂ ಬಗೆಹರಿಸಲಾಗದ ವಿರೋಧಾಭಾಸವೇನಿಲ್ಲ. `ಕರ್ಣನಿಗಿಂತ ತಾನು ಮೇಲು, ಕರ್ಣನಿಗೆ ತಾನು ಸಾರಥ್ಯ ಮಾಡುವುದಾಗದು' ಎಂದು ಕೋಪಿಸಿಕೊಂಡಿದ್ದ ಶಲ್ಯನಿಗೆ `ಶಿವನಿಗಿಂತ ಮೇಲಾಗಿರುವ ಬ್ರಹ್ಮನು ಶಿವನಿಗೆ ಸಾರಥ್ಯ ಮಾಡಲಿಲ್ಲವೆ?' ಎಂದು ಮನದಟ್ಟು ಮಾಡಿಸಲು ಈ ಮೂರು ಅಧ್ಯಾಯಗಳು ಬಂದಿವೆ. ಅವಿಲ್ಲದಿದ್ದರೆ ಕಥೆಯ ಓಟದಲ್ಲಿ, ವಸ್ತುನಿರೂಪಣೆಯಲ್ಲಿ ಲೋಪ ಬರುತ್ತದೆ.

ಅಥಾಧಿಜ್ಯಂ ಧನುಃ ಕೃತ್ವಾ ಶರ್ವಃ ಸಂಧಾಯ ತಂ ಶರಮ್ |
ಯುಕತತ್ವ ಪಾಶುಪತಾಸ್ತ್ರೇಣ ತ್ರಿಪುರಂ ಸಮಚಿಂತಯತ್ ॥82॥
ಬಳಿಕ ಶಿವನು ಬಿಲ್ಲಿಗೆ ಹೆದೆಯನ್ನೇರಿಸಿ ಬಾಣವನ್ನು ಹೂಡಿ ಅದಕ್ಕೆ ಪಾಶುಪತಾಸ್ತ್ರ ಮಂತ್ರದಿಂದ ಅಭಿಮಂತ್ರಣ ಮಾಡಿ ತ್ರಿಪುರಗಳು ಏಕತ್ರ ಕೂಡುವುದನ್ನು ನಿರೀಕ್ಷೆ ಮಾಡಿ ನಿಂತ.
ತಸ್ಮಿನ್ ಸ್ಥಿತೇ ತದಾ ರಾಜನ್ ಕ್ರುದ್ಧೇ ವಿಧೃತಕಾರ್ಮುಕೇ |
ಪುರಾಣಿ ತಾನಿ ಕಾಲೇನ ಜಗ್ಮುರೇಕತ್ವಮೇಕತಾಂ ತದಾ ॥83॥
ರಾಜನೆ, ಶಿವ ಹಾಗೆ ಬಿಲ್ಲು ಹಿಡಿದು ಕ್ರುದ್ಧನಾಗಿ ನಿಂತಾಗ ಮೂರು ಪಟ್ಟಣಗಳು ಒಂದೆಡೆ ಸೇರುವ ಕಾಲ ಬಂದಿದ್ದರಿಂದ ಅವು ಏಕತ್ರ ಸೇರಿದುವು.
ಏಕೀಭಾವಂ ಗತೇ ಚೈವ ತ್ರಿಪುರೇ ಸಮುಪಾಗತೇ |
ಬಭೂವ ತುಮಲೋ ಹರ್ಷೋ ದೈವತಾನಾಂ ಮಹಾತ್ಮನಾಮ್ ॥84॥
ಏಕತ್ರ ತ್ರಿಪುರಗಳು ಬಂದು ಸೇರಿ ಗೋಚರವಾದಾಗ ಮಹಾತ್ಮರಾದ ದೇವತೆಗಳಿಗೆ ತಡೆಯಲಾಗದಂಥ ಹರ್ಷ ಉಂಟಾಯಿತು.
ತತೋ ದೇವಗಣಾಃ ಸರ್ವೇ ಸಿದ್ಧಾಶ್ಚ ಪರಮರ್ಷಯಃ |
ಜಯೇತಿ ವಾಚೋ ಮುಮುಚುಃ ಸಂಸ್ತುವಂತೋ ಮುದಾನ್ವಿತಾಃ ॥85॥
ಆಗ ದೇವತೆಗಳು, ಸಿದ್ಧರು, ಮಹರ್ಷಿಗಳು ಎಲ್ಲರೂ ಶಿವನನ್ನು ಕೊಂಡಾಡುತ್ತ ಸಂತೋಷದಿಂದ `ಜಯವಾಗಲಿ' `ಜಯವಾಗಲಿ' ಎನ್ನುವ ಮಾತುಗಳನ್ನಾಡಿದರು.
ತತೋಽಗ್ರತಃ ಪ್ರಾದುರಭೂತ್ ತ್ರಿಪುರಂ ನಿಘ್ನತೋಽಸುರಾನ್ |
ಅನಿರ್ದೇಶ್ಯೋಗ್ರವಪುಷೋ ದೇವಸ್ಯಾಸಹ್ಯತೇಜಸಃ ॥86॥
ಅಷ್ಟರಲ್ಲಿ ಇದಿರಿಸಲಾಗದ ಪರಾಕ್ರಮ, ಹೇಳಲಾಗದ ಉಗ್ರ ಆಕೃತಿಗಳುಳ್ಳ ಅಸುರಸಂಹಾರಿಯಾದ ಮಹಾದೇವನ ಮುಂದೆ ತ್ರಿಪುರವು ಕಾಣಿಸಿಕೊಂಡಿತು.
ಸ ತದ್ವಿಕೃಷ್ಯ ಭಗವಾನ್ ದಿವ್ಯಂ ಲೋಕೇಶ್ವರೋ ಧನುಃ |
ತ್ರೈಲೋಕ್ಯಸಾರಂ ತಮಿಷುಂ ಮುಮೋಚ ತ್ರಿಪುರಂ ಪ್ರತಿ ॥87॥
ಲೋಕೇಶ್ವರನಾದ ಭಗವಾನ್ ಶಿವನು ದಿವ್ಯವಾದ ಧನುಸ್ಸನ್ನು ಸೆಳೆದು ಮೂಲೋಕದ ತೇಜಸ್ಸುಗಳ ಸಾರರೂಪವಾದ ಆ ಬಾಣವನ್ನು ತ್ರಿಪುರದ ಮೇಲೆ ಎಸೆದ.
ಏವಂ ತತ್ ತ್ರಿಪುರಂ ದಗ್ಧಂ ದಾನವಾಶ್ಚಾಪ್ಯಶೇಷತಃ |
ಮಹೇಶ್ವರೇಣ ಕ್ರುದ್ಧೇನ ತ್ರೈಲೋಕ್ಯಸ್ಯ ಹಿತೈಷಿಣಾ ॥88॥
ಹೀಗೆ ಮೂಲೋಕದ ಹಿತೈಷಿಯಾದ ಮಹೇಶ್ವರ ಕ್ರುದ್ಧನಾಗಿ ತ್ರಿಪುರವನ್ನೂ ಅಲ್ಲಿದ್ದ ಸಮಸ್ತ ದಾನವರನ್ನೂ ಸುಟ್ಟು ಭಸ್ಮ ಮಾಡಿದನು.
ಸ ಚಾತ್ಮಕ್ರೋಧಜೋ ವಹ್ನಿರ್ದಹೇತ್ಯುಕ್ತೋ ನಿವಾರಿತಃ |
ಮಾ ಕಾರ್ಷೀರ್ಭಸ್ಮಸಾಲ್ಲೋಕಾನಿತಿ ತ್ರ್ಯಕ್ಷೋಽಬ್ರವೀಚ್ಚ ತಮ್ ॥89॥
ಕ್ರೋಧದಿಂದ `ತ್ರಿಪುರವನ್ನು ದಹಿಸು' ಎನ್ನುತ್ತ ತಾನು ಕಳಿಸಿದ್ದ ಅಗ್ನಿಯನ್ನು ಈಗ ತಡೆದು `ಎಲ್ಲ ಲೋಕಗಳನ್ನು ಭಸ್ಮ ಮಾಡಬೇಡ' ಎಂದು ನುಡಿದ ಶಿವ.
ತತಃ ಪ್ರಕೃತಿಮಾಪನ್ನಾ ದೇವಾ ಲೋಕಾಸ್ತಥರ್ಷಯಃ |
ತುಷ್ಟುವುರ್ವಾಗ್ಭಿರರ್ಥ್ಯಾಭಿಃ ಸ್ಥಾಣುಮಪ್ರತಿಮೌಜಸಮ್ ॥90॥
ಆಗ ದೇವತೆಗಳು ಋಷಿಗಳು ಮುಂತಾದ ಎಲ್ಲ ಜನರೂ ಸ್ವಸ್ಥರಾದರು. ಅಪ್ರತಿಮ ಪರಾಕ್ರಮಿಯಾದ ಶಿವನನ್ನು ಅರ್ಥಗರ್ಭಿತವಾದ ನುಡಿಗಳಿಂದ ಕೊಂಡಾಡಿದರು.
ತೇಽನುಜ್ಞಾತಾ ಭಗವತಾ ಜಗ್ಮುಃ ಸರ್ವೇ ಯಥಾಗತಮ್ |
ಕೃತಕಾಮಾಃ ಪ್ರಸನ್ನೇನ ಪ್ರಜಾಪತಿಮುಖಾಃ ಸುರಾಃ ॥91॥
ಪ್ರಜಾಪತಿ ಮುಂತಾದ ಎಲ್ಲ ದೇವತೆಗಳು ಕೃತಕೃತ್ಯರಾಗಿ ಪ್ರಸನ್ನನಾದ ಭಗವಾನ್ ಶಿವನಿಂದ ಅನುಮತಿ ಪಡೆದು ಹಿಂತಿರುಗಿ ಹೋದರು.
ಯಥೈವ ಭಗವಾನ್ ಬ್ರಹ್ಮಾ ಲೋಕಧಾತಾ ಪಿತಾಮಹಃ |
ಸಂಯಚ್ಛ ತ್ವಂ ಹಯಾನಸ್ಯ ರಾಧೇಯಸ್ಯ ಮಹಾತ್ಮನಃ ॥92॥
ಶಲ್ಯಮಹಾರಾಜ, ಲೋಕಧಾರಕ ಲೋಕಪಿತಾಮಹ ಭಗವಾನ್ ಬ್ರಹ್ಮದೇವ ನಂತೆ ನೀನೂ ಕೂಡ ಮಹಾತ್ಮನಾದ ಕರ್ಣನ ಕುದುರೆಗಳನ್ನು ನಿಯಂತ್ರಿಸು.
ತ್ವಂ ಹಿ ಕೃಷ್ಣಾಚ್ಚ ಕರ್ಣಾಚ್ಚ ಫಲ್ಗುನಾಚ್ಚ ವಿಶೇಷತಃ |
ವಿಶಿಷ್ಟೋ ರಾಜಶಾರ್ದೂಲ ನಾಸ್ತಿ ತತ್ರ ವಿಚಾರಣಾ ॥93॥
ಮಹಾರಾಜ, ನೀನು ಕೃಷ್ಣನಿಗಿಂತಲೂ ಅರ್ಜುನನಿಗಿಂತಲೂ ವಿಶೇಷವಾಗಿ ಕರ್ಣನಿಗಿಂತಲೂ ಶ್ರೇಷ್ಠನಾಗಿರುವಿ. ಇದರಲ್ಲಿ ಸಂಶಯವಿಲ್ಲ.
ಯುದ್ಧೇ ಹ್ಯಯಂ ರುದ್ರಕಲ್ಪಸ್ತ್ವಂ ಚ ಬ್ರಹ್ಮಸಮೋ ನಯೇ |
ತಸ್ಮಾಚ್ಛಕ್ತೌ ಯುವಾಂ ಜೇತುಂ ಮಚ್ಛತ್ರೂಂಸ್ತಾವಿವಾಸುರಾನ್ ॥94॥
ಯುದ್ಧದಲ್ಲಿ ಕರ್ಣನು ರುದ್ರನಂತೆ ಎನ್ನುವುದಾದರೆ ಸಾರಥ್ಯದಲ್ಲಿ ನೀನು ಬ್ರಹ್ಮನಿಗೆ ಸಮನಾಗಿರುವೆ. ಅದರಿಂದ ಅವರು ಅಸುರರನ್ನು

ಗೆಲ್ಲುವಂತೆ ನೀವು ನನ್ನ ಶತ್ರುಗಳನ್ನು ಗೆಲ್ಲಬಲ್ಲಿರಿ.
ಯಥಾ ಶಲ್ಯಾದ್ಯ ಕರ್ಣೋಽಯಂ ಶ್ವೇತಾಶ್ವಂ ಕೃಷ್ಣಸಾರಥಿಮ್ |
ಪ್ರಮಥ್ಯ ಹನ್ಯಾತ್ ಕೌಂತೇಯಂ ತಥಾ ಶೀಘ್ರಂ ವಿಧೀಯತಾಮ್ |
ತ್ವಯಿ ಕರ್ಣಶ್ಚ ರಾಜ್ಯಂ ಚ ವಯಂ ಚೈವ ಪ್ರತಿಷ್ಠಿತಾಃ ॥95॥
ಕೃಷ್ಣನ ಸಾರಥ್ಯವುಳ್ಳ ಅರ್ಜುನನನ್ನು ಕರ್ಣನು ಬೇಗನೆ ಹೊಡೆದು ಕೊಲ್ಲುವಂತೆ ನೀನು ಅವನಿಗೆ ಸಾರಥ್ಯ ಮಾಡು. ಕರ್ಣನೂ ನಮ್ಮ ರಾಜ್ಯವೂ ನಾವೂ ಉಳಿಯವುದು ನಿನ್ನನ್ನೇ ಅವಲಂಬಿಸಿದೆ.
ಇಮಂ ಚಾಪ್ಯಪರಂ ಭೂಯ ಇತಿಹಾಸಂ ನಿಬೋಧ ಮೇ |
ಪಿತುರ್ಮಮ ಸಕಾಶೇ ಯಂ ಬ್ರಾಹ್ಮಣಃ ಪ್ರಾಹ ಧರ್ಮವಿತ್ ॥96॥
ನಾನು ನಿನಗೆ ಇನ್ನೊಂದು ಇತಿಹಾಸವನ್ನೂ ಹೇಳುತ್ತೇನೆ. ನನ್ನ ತಂದೆಯ ಬಳಿ ಧರ್ಮಜ್ಞ ಬ್ರಾಹ್ಮಣನೊಬ್ಬ ಇದನ್ನು ಹೇಳಿದ್ದ.
ಶ್ರುತ್ವಾ ಚೈತದ್ ವಚಶ್ಚಿತ್ರಂ ಹೇತುಕಾರ್ಯಾರ್ಥತತ್ತ್ವವಿತ್ |
ಕುರು ಶಲ್ಯ ವಿನಿಶ್ಚಿತ್ಯ ಮಾ ಭೂದತ್ರ ವಿಚಾರಣಾ ॥97॥
ಕರ್ಣನ ಅಸ್ತ್ರ ವಿದ್ಯಾರ್ಜನ ಬಗ್ಗೆ ನಾವು ಹೇಳುವ ವಿಚಿತ್ರವಾದ ಈ ಮಾತನ್ನು ಕೇಳಿ, `ಅಸ್ತ್ರಜ್ಞಾನ ಮತ್ತು ಅದರಿಂದ ಪಡೆಯುವ ಶತ್ರುಜಯ' ಎಂಬ `ಹೇತು ಮತ್ತು ಕಾರ್ಯಸಾಧನೆ'ಗಳ ತತ್ತ್ವವನ್ನು ತಿಳಿದವನು ನೀನು ಅದನ್ನು ನಿಶ್ಚಯ ಮಾಡಿಕೊಂಡು ಪ್ರವೃತ್ತನಾಗು. ಇದರಲ್ಲಿ ಸಂಶಯಕ್ಕೆ ಆಸ್ಪದವಿಲ್ಲ. ನಿನ್ನ ಸಹಾಯ ಒಂದಿದ್ದರೆ ಕರ್ಣನು ಅಸ್ತ್ರಜ್ಞಾನದಿಂದ ಜಯ ಸಂಪಾದಿಸುವುದರಲ್ಲಿ ಸಂಶಯವಿಲ್ಲ.
ಭಾರ್ಗವಾಣಾಂ ಕುಲೇ ಜಾತೋ ಜಮದಗ್ನಿರ್ಮಹಾತಪಾಃ |
ತಸ್ಯ ರಾಮೇತಿ ವಿಖ್ಯಾತಃ ಪುತ್ರಸ್ತೇಜೋಗುಣಾನ್ವಿತಃ |98॥
ಭಾರ್ಗವರ ಕುಲದಲ್ಲಿ ಮಹಾತಪಸ್ವಿಯಾದ ಜಮದಗ್ನಿ ಋಷಿ ಜನಿಸಿದ. ಅವನ ಪುತ್ರ ರಾಮನೆಂದು ಪ್ರಸಿದ್ಧ, ಪರಾಕ್ರಮ ಮತ್ತು ಸದ್ಗುಣಗಳಿಂದ ಕೂಡಿದವನು.
ಸ ತೀವ್ರಂ ತಪ ಆಸ್ಥಾಯ ಪ್ರಸಾದಯಿತವಾನ್ ಭವಮ್ |
ಅಸ್ತ್ರಹೇತೋಃ ಪ್ರಸನ್ನಾತ್ಮಾ ನಿಯತಃ ಸಂಯತೇಂದ್ರಿಯಃ ॥99॥
ಅವನು ಅಸ್ತ್ರಸಂಪಾದನೆಗಾಗಿ ಇಂದ್ರಿಯನಿಗ್ರಹ ಮಾಡಿಕೊಂಡು ಪ್ರಸನ್ನಚಿತ್ತನಾಗಿ ನಿಯಮಾನುಷ್ಠಾನಮಾಡಿ ತೀವ್ರ ತಪಸಿನಲ್ಲಿ ತೊಡಗಿ ಶಿವನನ್ನು ಒಲಿಸಿಕೊಂಡ.
ತಸ್ಯ ತುಷ್ಟೋ ಮಹಾದೇವೋ ಭಕ್ತ್ಯಾ ಚ ಪ್ರಶಮೇನ ಚ |
ಹೃದ್ಗತಂ ಚಾಸ್ಯ ವಿಜ್ಞಾಯ ದರ್ಶಯಾಮಾಸ ಶಂಕರಃ ॥100॥
ಅವನ ಭಕ್ತಿಗೂ ಮನೋನಿಗ್ರಹಕ್ಕೂ ಮೆಚ್ಚಿದ ಮಹಾದೇವ ಅವನ ಹೃದ್ಗತ ವನ್ನು ತಿಳಿದು ಮೈದೋರಿದ.
ಈಶ್ವರಃ
ರಾಮ ತುಷ್ಟೋಽಸ್ಮಿ ಭದ್ರಂ ತೇ ವಿದಿತಂ ಮೇ ತವೇಪ್ಸಿತಮ್ |
ಕುರುಷ್ವ ಪೂತಮಾತ್ಮಾನಂ ಸರ್ವಮೇತದವಾಪ್ಸ್ಯಸಿ ॥101॥
ಈಶ್ವರನು ನುಡಿದ ರಾಮ, ನಾನು ಮೆಚ್ಚಿದ್ದೇನೆ. ನಿನಗೆ ಒಳ್ಳೆಯದಾಗಲಿ. ನನಗೆ ನಿನ್ನ ಅಭೀಷ್ಟವೇನೆಂದು ತಿಳಿದಿದೆ. ನಿನ್ನನ್ನು ನೀನು ಪವಿತ್ರೀಕರಿಸಿಕೊಳ್ಳು. ನೀನು ಇಷ್ಟಪಡುವುದನ್ನೆಲ್ಲ ಹೊಂದುವೆ.
ದಾಸ್ಯಾಮಿ ತೇ ತದಾಸ್ತ್ರಾಣಿ ಯದಾ ಪೂತೋ ಭವಿಷ್ಯಸಿ |
ಅಪಾತ್ರಮಸಮರ್ಥಂ ಚ ದಹಂತ್ಯಸ್ತ್ರಾಣಿ ಭಾರ್ಗವ ॥102॥
ನೀನು ಪವಿತ್ರನಾದಾಗ ನಿನಗೆ ಅಸ್ತ್ರಗಳನ್ನು ಉಪದೇಶಿಸುತ್ತೇನೆ. ರಾಮ, ಅಪಾತ್ರನೂ ಅಸಮರ್ಥನೂ ಅಸ್ತ್ರೋಪದೇಶ ಪಡೆದರೆ ಆ ಅಸ್ತ್ರಗಳು ಅವನನ್ನೇ ಸುಡುತ್ತವೆ.
ದುರ್ಯೋಧನಃ
ಇತ್ಯುಕ್ತೋ ಜಾಮದಗ್ನ್ಯಸ್ತು ದೇವದೇವೇನ ಶೂಲಿನಾ |
ಪ್ರತ್ಯುವಾಚ ಮಹಾತ್ಮಾನಂ ಶಿರಸಾವನತಃ ಪ್ರಭುಮ್ ॥103॥
ದೇವದೇವನಾದ ಶಿವ ಹೀಗೆ ಹೇಳಿದಾಗ ರಾಮನು ಮಹಾತ್ಮಪ್ರಭುವಿಗೆ ಶಿರಬಾಗಿ ನಮಿಸಿ ಪ್ರತಿಯಾಗಿ ನುಡಿದ.
ಯದಾ ಜಾನಾಸಿ ದೇವೇಶ ಪಾತ್ರಂ ಮಾಮಸ್ತ್ರಧಾರಣೇ |
ತದಾ ಶುಶ್ರೂಷವೇಽಸ್ತ್ರಾಣಿ ಭವಾನ್ ಮೇ ದಾತುಮರ್ಹತಿ ॥104॥
`ದೇವೇಶ, ಅಸ್ತ್ರೋಪದೇಶ ಪಡೆಯಲು ನಾನು ಪಾತ್ರನಾದೆನೆಂದು ಯಾವಾಗ ನೀನು ತಿಳಿಯುವೆಯೋ ಆಗಲೆ ಸೇವಕನಾದ ನನಗೆ ಅಸ್ತ್ರಗಳನ್ನು ಉಪದೇಶಿಸು'.
ತತಃ ಸ ತಪಸಾ ಚೈವ ದಮೇನ ನಿಯಮೇನ ಚ |
ಪೂಜೋಪಹಾರಬಲಿಭಿರ್ಹೋಮಮಂತ್ರಪುರಸ್ಕೃತೈಃ ॥105॥
ಆರಾಧಯಿತವಾನ್ ಶರ್ವಂ ಬಹೂನ್ ವರ್ಷಗಣಾಂಸ್ತದಾ |
ಪ್ರಸನ್ನಶ್ಚ ಮಹಾದೇವೋ ಭಾರ್ಗವಸ್ಯ ಮಹಾತ್ಮನಃ ॥106॥
ಬಳಿಕ ರಾಮನು ತಪಸ್ಸು ದಮ ನಿಯಮ ಹೋಮ ಮಂತ್ರಯುಕ್ತವಾದ ಪೂಜೆ ನಿವೇದನ ಬಲಿಪ್ರದಾನಗಳಿಂದ ಬಹುವರ್ಷಕಾಲ ಶಿವನನ್ನು ಆರಾಧಿಸಿದ. ಮಹಾತ್ಮನಾದ ರಾಮನಿಗೆ ಮಹಾದೇವ ಒಲಿದ.
ಅಬ್ರವೀತ್ ತಸ್ಯ ಬಹುಶೋ ಗುಣಾನ್ ದೇವ್ಯಾಃ ಸಮೀಪತಃ |

ಭಕ್ತಿಮಾನೇಷ ಸತತಂ ಮಯಿ ರಾಮೋ ದೃಢವ್ರತಃ ॥107॥
ರಾಮನ ಗುಣಗಳನ್ನು ಬಹಳವಾಗಿ ದೇವಿ ಪಾರ್ವತಿಯ ಮುಂದೆ ಶಿವನು ಹೊಗಳಿದ ರಾಮನು ನನ್ನಲ್ಲಿ ಸದಾ ಭಕ್ತಿಮಾಡುತ್ತಾನೆ, ದೃಢವಾಗಿ ವ್ರತಾನುಷ್ಠಾನ ಮಾಡುತ್ತಾನೆ ಎಂದು.
ಏವಂ ತಸ್ಯ ಗುಣಾನ್ ಪ್ರೀತೋ ಬಹುಶೋಽಕಥಯತ್ ಪ್ರಭುಃ |
ದೇವತಾನಾಂ ಪಿತೄಣಾಂ ಚ ಸಮಕ್ಷಮರಿಸೂದನಃ ॥108॥
ದೇವತೆಗಳ ಮತ್ತು ಪಿತೃಗಳ ಬಳಿಯಲ್ಲಿಯೂ ಪ್ರೀತನಾದ ಶಿವ ರಾಮನ ಗುಣಗಳನ್ನು ಬಹಳವಾಗಿ ಬಣ್ಣಿಸಿದ.
ಏತಸ್ಮಿನ್ನೇವ ಕಾಲೇ ತು ದೈತ್ಯಾ ಆಸನ್ ಮಹಾಬಲಾಃ |
ತೈಸ್ತದಾ ದರ್ಪಮೋಹಾಂಧೈರಬಾಧ್ಯಂತ ದಿವೌಕಸಃ ॥109॥
ಇದೇ ಸಮಯದಲ್ಲಿ ಮಹಾಬಲಿಷ್ಠರಾದ ದಾನವರಿದ್ದರು. ದರ್ಪ ಮೋಹ ಗಳಿಂದ ಕುರುಡರಾದ ಅವರು ದೇವತೆಗಳನ್ನು ಪೀಡಿಸಿದರು.
ತತಃ ಸಂಭೂಯ ವಿಬುಧಾಸ್ತಾನ್ ಹಂತುಂ ಕೃತನಿಶ್ಚಯಾಃ |
ಚಕ್ರುಃ ಶತ್ರುವಧೇ ಯತ್ನಂ ನ ಶೇಕುರ್ಜೇತುಮೇವ ತೇ ॥110॥
ಆಗ ದೇವತೆಗಳೆಲ್ಲರೂ ಸೇರಿ ದಾನವರನ್ನು ಕೊಲ್ಲಲು ನಿಶ್ಚಯಮಾಡಿ ಶತ್ರುವಧದಲ್ಲಿ ಪ್ರಯತ್ನ ಮಾಡಿದರು. ಆದರೆ ಅವರನ್ನು ಗೆಲ್ಲುವುದಕ್ಕೇ ಅಸಮರ್ಥರಾದರು.
ಅಭಿಗಮ್ಯ ತತೋ ದೇವಾ ಮಹೇಶ್ವರಮಥಾಬ್ರುವನ್ |
ಪ್ರಸಾದಯಂತಸ್ತಂ ಭಕ್ತ್ಯಾ ಜಹಿ ಶತ್ರುಗಣಾನಿತಿ ॥111॥
ಬಳಿಕ ದೇವತೆಗಳು ಮಹೇಶ್ವರನ ಬಳಿಗೆ ಹೋಗಿ ಭಕ್ತಿಯಿಂದ ಒಲಿಸಿಕೊಂಡು ಶತ್ರುಸಮೂಹಗಳನ್ನು ನಾಶಪಡಿಸೆಂದು ಬೇಡಿದರು.
ಪ್ರತಿಜ್ಞಾಯ ತತೋ ದೇವೋ ದೇವತಾನಾಂ ರಿಪುಕ್ಷಯಮ್ |
ರಾಮಂ ಭಾರ್ಗವಮಾಹೂಯ ಸೋಽಭ್ಯಭಾಷತ ಶಂಕರಃ ॥112॥
ಶಿವನು ದೇವತೆಗಳ ಶತ್ರುಗಳನ್ನು ನಾಶಪಡಿಸುವೆನೆಂದು ಮಾತುಕೊಟ್ಟು ಭಾರ್ಗವರಾಮನನ್ನು ಕರೆಸಿ ಹೇಳಿದ.
ರಿಪೂನ್ ಭಾರ್ಗವ ದೇವಾನಾಂ ಜಹಿ ಸರ್ವಾನ್ ಸಮಾಗತಾನ್ |
ಲೋಕಾನಾಂ ಹಿತಕಾಮಾರ್ಥಂ ಮತ್ಪ್ರೀತ್ಯರ್ಥಂ ತಥೈವ ಚ ॥113॥
`ರಾಮ, ಲೋಕಹಿತ ಸಾಧನೆಗಾಗಿ ಮತ್ತು ನನ್ನ ಪ್ರೀತಿಗಾಗಿ ನೀನು ಇದಿರಿಗೆ ಬರುವ ಎಲ್ಲ ದೇವಶತ್ರುಗಳನ್ನು ಕೊಲ್ಲು' ಎಂದು.
ರಾಮಃ
ಅಕೃತಾಸ್ತ್ರಸ್ಯ ದೇವೇಶ ಕಾ ಶಕ್ತಿರ್ಮೇ ಮಹೇಶ್ವರ |
ನಿಹಂತುಂ ದಾನವಾನ್ ಸರ್ವಾನ್ ಕೃತಾಸ್ತ್ರಾನ್ ಯುದ್ಧದುರ್ಮದಾನ್॥
ರಾಮ ನುಡಿದ– ದೇವ ಮಹೇಶ್ವರ, ಅಸ್ತ್ರೋಪದೇಶವಿಲ್ಲದ ನನಗೆ, ಅಸ್ತ್ರೋಪದೇಶಪಡೆದು ಯುದ್ಧಹವ್ಯಾಸಿಗಳಾಗಿರುವ ಎಲ್ಲ ದಾನವರನ್ನು ಕೊಲ್ಲಲು ಏನು ಶಕ್ತಿ ಇದೆ?
ಈಶ್ವರಃ
ಗಚ್ಛ ತ್ವಂ ಮದನುಜ್ಞಾತೋ ನಿಹನಿಷ್ಯಸಿ ದಾನವಾನ್ |
ವಿಜಿತ್ಯ ಚ ರಿಪೂನ್ ಸರ್ವಾನ್ ಗುಣಾನ್ ಪ್ರಾಪ್ಸ್ಯಸಿ ಪುಷ್ಕಲಾನ್ ॥
ಈಶ್ವರ ನುಡಿದ– ನನ್ನ ಅನುಜ್ಞೆ ಇದೆ, ನೀನು ಹೋಗು. ಶತ್ರುಗಳಾದ ದಾನವರೆಲ್ಲರನ್ನೂ ಗೆದ್ದು ಕೊಲ್ಲುವಿ. ಎಲ್ಲ ಸದ್ಗುಣಗಳನ್ನೂ ಪೂರ್ಣವಾಗಿ ಹೊಂದುವಿ.
ದುರ್ಯೋಧನಃ
ಏತಚ್ಛ್ರುತ್ವಾ ಚ ವಚನಂ ಪ್ರತಿಗೃಹ್ಯ ಚ ಸರ್ವಶಃ |
ರಾಮಃ ಕೃತಸ್ವಸ್ತ್ಯಯನಃ ಪ್ರಯಯೌ ದಾನವಾನ್ ಪ್ರತಿ ॥116॥
ದುರ್ಯೋಧನ ನುಡಿದ– ಶಿವನ ಈ ಮಾತನ್ನು ಕೇಳಿ, ಎಲ್ಲ ಆದೇಶವನ್ನೂ ಒಪ್ಪಿಕೊಂಡು ಸ್ವಸ್ತಿವಾಚನ ಮಾಡಿಸಿಕೊಂಡು ರಾಮ ದಾನವರ ಬಳಿಗೆ ನಡೆದ.
ಅವಧೀದ್ ದೇವಶತ್ರೂಂಸ್ತಾನ್ ಮದದರ್ಪಬಲಾನ್ವಿತಾನ್ |
ಶಕ್ರಾಶನಿಸಮಸ್ಪರ್ಶೈಃ ಪ್ರಹಾರೈರೇವ ಭಾರ್ಗವಃ ॥117॥
ಇಂದ್ರನ ವಜ್ರಾಯುಧಕ್ಕೆ ಸಮಸ್ಪರ್ಶವುಳ್ಳ ಹೊಡೆತಗಳಿಂದಲೇ ರಾಮನು ಮದ ದರ್ಪ ಬಲಯುಕ್ತರಾದ ಆ ದೇವಶತ್ರುಗಳನ್ನು ಕೊಂದನು.
ಸ ದಾನವೈಃ ಕ್ಷತತನುರ್ಜಾಮದಗ್ನ್ಯೋ ದ್ವಿಜೋತ್ತಮಃ |
ಸಂಹೃಷ್ಟಃ ಸ್ಥಾಣುಮಾಸಾದ್ಯ ನಿಪುಣಃ ಸಮಜಾಯತ ॥118॥
ರಾಮನು ದಾನವರಿಂದ ಮೈಗೆ ಹೊಡೆಸಿಕೊಂಡರೂ ಬಲು ಹೃಷ್ಟನೇ ಆಗಿದ್ದ. ಬಳಿಕ ಶಿವನ ಬಳಿಗೆ ಬಂದು ಅಸ್ತ್ರೋಪದೇಶದಿಂದ ನಿಪುಣನೆನಿಸಿದ.
ಪ್ರೀತಶ್ಚ ಭಗವಾನ್ ದೇವಃ ಕರ್ಮಣಾ ತೇನ ತಸ್ಯ ವೈ |
ವರಾನ್ ಪ್ರಾದಾದ್ ಬ್ರಹ್ಮವಿದೇ ಭಾರ್ಗವಾಯ ಮಹಾತ್ಮನೇ ॥119॥
ರಾಮನ ಆ ಯುದ್ಧಕರ್ಮದಿಂದ ಭಗವಾನ್ ಮಹಾದೇವ ಪ್ರೀತನಾದ. ಬ್ರಹ್ಮಜ್ಞಾನಿಯಾದ ಮಹಾತ್ಮ ಭಾರ್ಗವನಿಗೆ ಅಸ್ತ್ರೋಪದೇಶ ವರವನ್ನಿತ್ತ.
ಉಕ್ತಶ್ಚ ದೇವದೇವೇನ ಪ್ರೀತಿಯುಕ್ತೇನ ಶೂಲಿನಾ |

ನಿಪಾತಾತ್ ತವ ಶಸ್ತ್ರಾಣಾಂ ಶರೀರೇ ಮಾಭವದ್ ರುಜಾ ॥120॥
ಪ್ರೀತಿಯುಕ್ತನಾದ ದೇವದೇವ ಶೂಲಿಯು ನುಡಿದ– ಶಸ್ತ್ರಗಳ ಹೊಡೆತದಿಂದ ನಿನ್ನ ಶರೀರದಲ್ಲಿ ನೋವು ಉಂಟಾಗಲಿಲ್ಲ.
ತಯಾ ತೇऽಮಾನುಷಂ ಕರ್ಮ ನಾಪೋಹದ್ ಭೃಗುನಂದನ |
ಗೃಹಾಣಾಸ್ತ್ರಾಣಿ ದಿವ್ಯಾನಿ ಮತ್ಸಕಾಶಾದ್ಯಥೇಪ್ಸಿತಮ್ ॥121॥
ನೋವಿನಿಂದ ನಿನ್ನ ಅಮಾನುಷ ಕರ್ಮಕ್ಕೆ ಅಡ್ಡಿಯಾಗಲಿಲ್ಲ. ನಿನ್ನಿಷ್ಟದಂತೆ ದಿವ್ಯಾಸ್ತ್ರ ಮಂತ್ರಗಳ ಉಪದೇಶವನ್ನು ನನ್ನಿಂದ ಸ್ವೀಕರಿಸು.
ಲಬ್ಧ್ವಾ ಬಹುವಿಧಾನ್ ರಾಮಃ ಪ್ರಣಮ್ಯ ಶಿರಸಾ ಶಿವಮ್ |
ಅನುಜ್ಞಾಂ ಪ್ರಾಪ್ಯ ದೇವೇಶಾತ್ ಜಗಾಮ ಸ ಮಹಾತಪಾಃ ॥122॥
ತತೋऽಸ್ತ್ರಾಣಿ ಸಮಸ್ತಾನಿ ವರಾಂಶ್ಚ ಮನಸೇಪ್ಸಿತಾನ್ ॥123॥
ರಾಮನು ಶಿವನಿಗೆ ತಲೆಬಾಗಿ ನಮಿಸಿ, ಅವನಿಂದ ಎಲ್ಲ ಅಸ್ತ್ರಗಳ ಉಪದೇಶವನ್ನೂ ಬಹುವಿಧವಾದ ಅಭೀಷ್ಟವಾದ ಎಲ್ಲ ವರಗಳನ್ನೂ ಪಡೆದು, ಅನುಜ್ಞೆ ಪಡೆದು ಹೊರಟುಹೋದ.
ಏವಮೇತತ್ ಪುರಾವೃತ್ತಂ ತದಾ ಕಥಿತವಾನೃಷಿಃ ॥124॥
ಭಾರ್ಗವೋऽಪ್ಯದದಾತ್ ಸರ್ವಂ ಧನುರ್ವೇದಂ ಮಹಾತ್ಮನೇ |
ಕರ್ಣಾಯ ಪುರುಷವ್ಯಾಘ್ರ ಸುಪ್ರೀತೇನಾಂತರಾತ್ಮನಾ ॥125॥
ಇದು ಹಿಂದೆ ನಡೆದ ವೃತ್ತಾಂತ, ಋಷಿ ಆಗ ಇದನ್ನು ಹೇಳಿದ. ಭಾರ್ಗವ ಎಲ್ಲ ಧನುರ್ವೇದವನ್ನೂ ಸಂತುಷ್ಟವಾದ ಮನಸಿನಿಂದ ಮಹಾತ್ಮನಾದ ಕರ್ಣನಿಗೆ ಉಪದೇಶವಿತ್ತ.
ವೃಜಿನಂ ಹಿ ಭವೇತ್ ಕಿಂಚಿದ್ಯದಿ ಕರ್ಣಸ್ಯ ಪಾರ್ಥಿವ |
ನಾಸ್ಮೈ ಹ್ಯಸ್ತ್ರಾಣಿ ದಿವ್ಯಾಣಿ ಪ್ರಾದಾಸ್ಯದ್ ಭೃಗುನಂದನಃ ॥126॥
ರಾಜನೆ, ಕರ್ಣನಲ್ಲಿ ಏನಾದರೂ ಸ್ವಲ್ಪ ದೋಷವಿರುತ್ತಿದ್ದರೆ ಅವನಿಗೆ ದಿವ್ಯವಾದ ಅಸ್ತ್ರಮಂತ್ರಗಳನ್ನು ಭಾರ್ಗವ ರಾಮ ಉಪದೇಶಿಸುತ್ತಿರಲಿಲ್ಲ.
ನಾಪಿ ಸೂತಕುಲೇ ಜಾತಂ ಕರ್ಣಂ ಮನ್ಯೇ ಕಥಂಚನ |
ದೇವಪುತ್ರಮಹಂ ಮನ್ಯೇ ಕ್ಷತ್ರಿಯಾಣಾಂ ಕುಲೋದ್ಭವಮ್
ವಿಸೃಷ್ಟಂ ನಾವಬೋಧಾರ್ಥಂ ಕುಲಸ್ಯೇತಿ ಮತಿರ್ಮಮ ॥127॥
ಮತ್ತು ಕರ್ಣನು ಸೂತಕುಲದಲ್ಲಿ ಹುಟ್ಟಿದವನೆಂದು ನಾನು ಸರ್ವಥಾ ನಂಬಲಾರೆ. ದೇವಪುತ್ರನೊಬ್ಬ ಕ್ಷತ್ರಿಯ ಕುಲದಲ್ಲಿ ಹುಟ್ಟಿದವನೆಂದೇ ನಂಬುತ್ತೇನೆ. ಕುಲದ ಬಗ್ಗೆ ಯಾರಿಗೂ ತಿಳಿಯದಂತೆ ಪರಿತ್ಯಕ್ತನಾದವನೆಂದೇ ನನ್ನ ಊಹೆ.
ಸಕುಂಡಲಂ ಸಕವಚಂ ದೀರ್ಘಬಾಹುಂ ಮಹಾರಥಮ್ |
ಕಥಮಾದಿತ್ಯಸದೃಶಂ ಮೃಗೀ ವ್ಯಾಘ್ರಂ ಜನಿಷ್ಯತಿ ॥128॥
ಕುಂಡಲ ಕವಚಯುಕ್ತನಾದ ಆದಿತ್ಯನಂತೆ ಹೊಳೆವ ದೀರ್ಘಬಾಹು ಮಹಾರಥಕರ್ಣನನ್ನು ಸೂತಸ್ತ್ರೀಯೊಬ್ಬಳು ಹಡೆದಿರಲಾರಳು. ಜಿಂಕೆಯ ಉದರದಲ್ಲಿ ಹುಲಿ ಹೇಗೆ ಜನಿಸೀತು?
ಪಶ್ಯ ಹ್ಯಸ್ಯ ಭುಜೌ ಪೀನೌ ನಾಗರಾಜಕರೋಪಮೌ |
ವಕ್ಷಃ ಪಶ್ಯ ವಿಶಾಲಂ ಚ ಸರ್ವಶತ್ರುನಿಬರ್ಹಣಮ್ ॥129॥
ನೋಡು, ಅವನ ಪುಷ್ಟವಾದ ತೋಳುಗಳನ್ನು, ಮದ್ದಾನೆಯ ಸೊಂಡಿಲಿನಂತೆ ಇವೆ! ವಿಶಾಲವಾದ ಎದೆಯನ್ನು ನೋಡು, ಸರ್ವಶತ್ರುನಾಶಕನ ಎದೆ ಅದು!
ನ ತ್ವೇಷ ಪ್ರಾಕೃತಃ ಕಶ್ಚಿತ್ ಕರ್ಣೋ ವೈಕರ್ತನೋ ವೃಷಃ |
ಮಹಾತ್ಮಾ ಹ್ಯೇಷ ರಾಜೇಂದ್ರ ರಾಮಶಿಷ್ಯಃ ಪ್ರತಾಪವಾನ್ ॥130॥
ಈ ಕರ್ಣನೊಬ್ಬ ಅಜ್ಞಮಾನವನಲ್ಲ. ಮಹಾರಾಜ, ಈತ ಮಹಾತ್ಮ ಪ್ರತಾಪಶಾಲಿ ರಾಮಶಿಷ್ಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಪಂಚತ್ರಿಂಶೋಧ್ಯಾಯಃ ॥35॥

ಮಹಾಭಾರತತಾತ್ಪರ್ಯನಿರ್ಣಯ
ಬುದ್ಧ್ಯಾ ಬಲೇನ ಜ್ಞಾನೇನ ಧೈರ್ಯಾದ್ಯೈರಪಿ ಯೋಧಿಕಃ |
ರಥಿನಃ ಸಾರಥಿಃ ಸ ಸ್ಯಾದರ್ಜುನಸ್ಯ ಯಥಾ ಹರಿಃ |
ಯಥಾ ಶಿವಸ್ಯ ಬ್ರಹ್ಮಾಭೂದ್ ದಹತಸ್ತ್ರಿಪುರಂ ಪುರಾ ॥ 26 ॥
ಬುದ್ಧಿ ಬಲ ಜ್ಞಾನ ಧೈರ್ಯ ಮುಂತಾದವುಗಳಿಂದ ಯಾವನು ರಥಿಕನಿಗಿಂತ ಶ್ರೇಷ್ಠನಾಗಿರುವನೋ ಅವನೇ ಸಾರಥಿಯಾಗಬೇಕು. ಅರ್ಜುನನಿಗೆ ಕೃಷ್ಣ ಹೇಗೋ ಹಾಗೆ. ಹಿಂದೆ ತ್ರಿಪುರದಹನಕ್ಕೆ ಹೊರಟ ಶಿವನಿಗೆ ಬ್ರಹ್ಮ ಹೇಗೆ ಸಾರಥಿಯಾದನೋ ಹಾಗೆ, ನೀನೂ ಕರ್ಣನಿಗೆ ಸಾರಥಿಯಾಗಬೇಕು.

ಮೂವತ್ತಾರನೆಯ ಅಧ್ಯಾಯ
`ಕರ್ಣನಿಗಿಂತ ಶಲ್ಯ ನೀನು ಹೆಚ್ಚು' ಎಂದಾಗ
ಶಲ್ಯ ಕರ್ಣನಿಗೆ ಸಾರಥಿಯಾಗಲು ಒಪ್ಪಿದ.
ದುರ್ಯೋಧನಃ

ಏವಂ ಸ ಭಗವಾನ್ ದೇವಃ ಸರ್ವಲೋಕಪಿತಾಮಹಃ |
ಸಾರಥ್ಯಮಕರೋತ್ ತತ್ರ ಬ್ರಹ್ಮಾ ರುದ್ರೋಽಭವದ್ ರಥೀ ॥1॥
ದುರ್ಯೋಧನ ಶಲ್ಯನಿಗೆ ನುಡಿದ– ಹೀಗೆ ಸರ್ವಲೋಕ ಪಿತಾಮಹನಾದ ಬ್ರಹ್ಮದೇವ ಸಾರಥ್ಯ ಮಾಡಿದ, ರುದ್ರನು ರಥಿಕನಾದ.
ರಥಿನೋಽಭ್ಯಧಿಕೋ ವೀರಃ ಕರ್ತವ್ಯೋ ರಥಸಾರಥಿಃ |
ತಸ್ಮಾತ್ತ್ವಂ ಪುರುಷವ್ಯಾಘ್ರ ನಿಯಚ್ಛ ತುರಗಾನ್ ಯುಧಿ ॥2॥
ರಥಿಕನಿಗಿಂತಲೂ ಹೆಚ್ಚಿನ ವೀರನನ್ನೇ ರಥಕ್ಕೆ ಸಾರಥಿಯನ್ನಾಗಿ ಮಾಡಬೇಕು. ಅದರಿಂದ ಹೇ ಪುರುಷಶ್ರೇಷ್ಠನೆ, ನೀನು ಯುದ್ಧದಲ್ಲಿ ಕುದುರೆಗಳನ್ನು ನಿಯಂತ್ರಿಸು.
ಯಥಾ ದೇವಗಣೈಸ್ತತ್ರ ವೃತೋ ಯತ್ನಾತ್ಪಿತಾಮಹಃ |
ತಥಾಽಸ್ಮಾಭಿರ್ಭವಾನ್ಯತ್ನಾತ್ ಕರ್ಣಾದಭ್ಯಧಿಕೋ ವೃತಃ ॥3॥
ಆಗ ದೇವತೆಗಳು ಸಾರಥ್ಯಕ್ಕೆ ಪಿತಾಮಹನಾದ ಬ್ರಹ್ಮದೇವನನ್ನು ಪ್ರಯತ್ನದಿಂದ ಕೇಳಿಕೊಂಡಂತೆ ನಾವು ಕರ್ಣನಿಗಿಂತ ಹೆಚ್ಚಿನವನಾದ ನಿನ್ನನ್ನು ಕೇಳಿಕೊಳ್ಳುತ್ತಿದ್ದೇವೆ.
ಯಥಾ ದೇವೈರ್ಮಹಾರಾಜ ಈಶ್ವರಾದಧಿಕೋ ವೃತಃ |
ತಥಾ ಭವಾನಪಿ ಕ್ಷಿಪ್ರಂ ರುದ್ರಸ್ಯೇವ ಪಿತಾಮಹಃ ॥4॥
ನಿಯಚ್ಛ ತುರಗಾನ್ ಯುದ್ಧೇ ರಾಧೇಯಸ್ಯ ಮಹಾದ್ಯುತೇ ॥5॥
ಹೇಗೆ ದೇವತೆಗಳು ಈಶ್ವರನಿಗಿಂತ ಮೇಲಾದ ಬ್ರಹ್ಮದೇವನನ್ನು ಕೇಳಿಕೊಂಡರೋ ಹಾಗೆ ನಾವೂ ನಿನ್ನನ್ನು ಕೇಳಿಕೊಳ್ಳುತ್ತಿದ್ದೇವೆ. ರುದ್ರನಿಗೆ ಬ್ರಹ್ಮದೇವನಂತೆ ನೀನು ಬೇಗನೆ ಕರ್ಣನಿಗೆ ಯುದ್ಧದಲ್ಲಿ ಕುದುರೆಗಳನ್ನು ನಿಯಂತ್ರಿಸು.
ಶಲ್ಯಃ
ಮಮಾಪ್ಯೇತನ್ನರಶ್ರೇಷ್ಠ ಬಹುಶೋ ನರಸಿಂಹಯೋಃ |
ಕಥ್ಯಮಾನಂ ಶ್ರುತಂ ದಿವ್ಯಮಾಖ್ಯಾನಮತಿಮಾನುಷಮ್ ॥6॥
ಶಲ್ಯ ನುಡಿದ– ರಾಜನೆ, ಬ್ರಹ್ಮರುದ್ರರ ಈ ದಿವ್ಯವಾದ ಅತಿಮಾನುಷವಾದ ಈ ಕಥೆಯನ್ನು ಹೇಳುವುದನ್ನು ಬಹುಬಾರಿ ನಾನೂ ಕೇಳಿದ್ದೇನೆ.
ಯಥಾ ಚ ಚಕ್ರೇ ಸಾರಥ್ಯಂ ಭವಸ್ಯ ಪ್ರಪಿತಾಮಹಃ |
ಯಥಾಽಸುರಾಶ್ಚ ನಿಹತಾ ಇಷುಣೈಕೇನ ಭಾರತ ॥7॥
ಕೃಷ್ಣಸ್ಯ ಚಾಪಿ ವಿದಿತಂ ಸರ್ವಮೇತತ್ಪುರಾ ಹ್ಯಭೂತ್ ॥8॥
ಶಿವನಿಗೆ ಬ್ರಹ್ಮನು ಸಾರಥ್ಯ ಮಾಡಿದಾಗ ಶಿವನು ಒಂದೇ ಬಾಣದಿಂದ ಅಸುರರನ್ನು ಕೊಂದನೆಂದು ಕೇಳಿದ್ದೇನೆ. ಕೃಷ್ಣನಿಗೂ ಇದೆಲ್ಲವೂ ಹಿಂದೆಯೆ ಗೊತ್ತಿತ್ತು.
ಯಥಾ ಪಿತಾಮಹೋ ಜಜ್ಞೇ ಭಗವಾನ್ ಸಾರಥಿಸ್ತದಾ |
ಅನಾಗತಮತಿಕ್ರಾಂತಂ ವೇದ ಕೃಷ್ಣೋಽಪಿ ತತ್ತ್ವತಃ ॥9॥
ಭಗವಾನ್ ಪಿತಾಮಹನು ಸಾರಥಿಯಾದುದು ಕೃಷ್ಣನಿಗೆ ಗೊತ್ತಿತ್ತು. ಅವನು ಭವಿಷ್ಯ ಹಾಗೂ ಭೂತಗಳನ್ನು ಸರಿಯಾಗಿ ತಿಳಿಯಬಲ್ಲವನು.
ಏತದರ್ಥಂ ವಿದಿತ್ವಾಽಪಿ ಸಾರಥ್ಯಮುಪಜಗ್ಮಿವಾನ್ |
ಸ್ವಯಂಭೂರಿವ ರುದ್ರಸ್ಯ ಕೃಷ್ಣಃ ಪಾರ್ಥಸ್ಯ ಭಾರತ ॥10॥
ಈ ವಿಷಯವನ್ನು ಕೂಡ ಕೃಷ್ಣ ತಿಳಿದಿದ್ದರಿಂದ ಅರ್ಜುನನಿಗೆ ಸಾರಥ್ಯ ಮಾಡುತ್ತಿದ್ದಾನೆ, ರುದ್ರನಿಗೆ ಬ್ರಹ್ಮನು ಸಾರಥ್ಯ ಮಾಡಿದಂತೆ.
ಯದಿ ಹನ್ಯಾಚ್ಚ ಕೌಂತೇಯಂ ಸೂತಪುತ್ರಃ ಕಥಂಚನ |
ದೃಷ್ಟ್ವಾ ಪಾರ್ಥಂ ಹಿ ನಿಹತಂ ಸ್ವಯಂ ಯೋತ್ಸ್ಯತಿ ಕೇಶವಃ | |11॥
ಶಂಖಚಕ್ರಗದಾಪಾಣಿರ್ಧಕ್ಷ್ಯತೇ ತವ ವಾಹಿನೀಮ್ |
ನ ಚಾಪಿ ತಸ್ಯ ಕ್ರುದ್ಧಸ್ಯ ವಾರ್ಷ್ಣೇಯಸ್ಯ ಮಹಾತ್ಮನಃ ॥12॥
ಸ್ಥಾಸ್ಯತೇ ಪ್ರತ್ಯನೀಕೇಷು ಕ್ವಚಿದತ್ರ ನೃಪಸ್ತವ ॥13॥
ಕೃಷ್ಣನು ಸಾರಥ್ಯವನ್ನು ಮಾಡುವುದು ಮಾತ್ರವಲ್ಲ, ಒಂದುವೇಳೆ ಹೇಗಾದರೂ ಅರ್ಜುನನನ್ನು ಕರ್ಣ ಕೊಂದರೆ ಕೃಷ್ಣ ತಾನೇ ಶಂಖ ಚಕ್ರಗದಾಪಾಣಿಯಾಗಿ ನಿನ್ನ ಸೈನ್ಯವನ್ನು ಇದಿರಿಸಿ ಯುದ್ಧವನ್ನೂ ಮಾಡುತ್ತಾನೆ. ಮಹಾತ್ಮನಾದ ಕೃಷ್ಣನು ಕ್ರುದ್ಧನಾಗಿ ಯುದ್ಧಕ್ಕೆ ನಿಂತರೆ ಈ ಶತ್ರುಸೈನ್ಯದಲ್ಲಿ ಯಾವ ರಾಜನೂ ಅವನಿಗೆ ಇದಿರಾಗಿ ಯುದ್ಧದಲ್ಲಿ ನಿಲ್ಲಲಾರ.
ಸಂಜಯಃ
ತಂ ತಥಾ ಭಾಷಮಾಣಂ ತು ಮದ್ರರಾಜಮರಿಂದಮಃ |
ಪ್ರತ್ಯುವಾಚ ಮಹಾಬಾಹುರದೀನಾತ್ಮಾ ಸುತಸ್ತವ ॥14॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಶಲ್ಯ ಹೀಗೆ ನುಡಿದಾಗ, ಧೃತರಾಷ್ಟ್ರನೆ, ಮಹಾಬಾಹುವಾದ ದೈನ್ಯರಹಿತನಾದ ನಿನ್ನ ಮಗನು ಪ್ರತಿಯಾಗಿ ನುಡಿದ–
ಮಾವಮಂಸ್ಥಾ ಮಹಾಬಾಹೋ ಕರ್ಣಂ ವೈಕರ್ತನಂ ರಣೇ |
ಸರ್ವಶಸ್ತ್ರಭೃತಾಂ ಶ್ರೇಷ್ಠಂ ಸರ್ವಶಾಸ್ತ್ರಾರ್ಥಪಾರಗಮ್ ॥15॥
ಮಹಾಬಾಹುವಾದ ಶಲ್ಯನೆ, ಶಾಸ್ತ್ರವೆಲ್ಲ ತಿಳಿದವನು ಮತ್ತು ಶಸ್ತ್ರಧಾರಿಗಳಲ್ಲೆಲ್ಲ ಶ್ರೇಷ್ಠನೂ ಆದ ಕರ್ಣನನ್ನು ಅವಮಾನಿಸಬೇಡ.
ಶಲ್ಯನು ಸಾರಥ್ಯ ಮಾಡಲು ಒಪ್ಪಿಕೊಂಡ ಬಳಿಕ ಈ ಪ್ರಕರಣ ಇಲ್ಲಿಗೇ ಮುಕ್ತಾಯವಾಗಬೇಕಿತ್ತು. ಆದರೆ ಪುನಃ ಪ್ರಕರಣ

ಪ್ರಾರಂಭವಾದ ರೀತಿಯಲ್ಲಿದೆ, ಎಂದು ಒಂದು ಪ್ರಶ್ನೆ.
ಇನ್ನೊಂದು ಪ್ರಶ್ನೆ– `ಕರ್ಣನು ಅರ್ಜುನನನ್ನು ಸಂಹರಿಸಿದರೆ ಶಂಖ ಚಕ್ರ ಗದಾಪಾಣಿಯಾದ ಶ್ರೀಕೃಷ್ಣ ನಿನ್ನ ಸೈನ್ಯವನ್ನು ದಹಿಸುತ್ತಾನೆ, ಅವನನ್ನೆದುರಿಸಿ ನಿನ್ನ ಸೈನ್ಯದಲ್ಲಿ ಯಾರೂ ನಿಲ್ಲಲಾರರು' ಎಂದು ಶಲ್ಯ ಹೇಳುತ್ತಿದ್ದಾನೆ. ಇದರಲ್ಲಿ ಕರ್ಣನನ್ನು ಅವಮಾನಗೊಳಿಸಿದ ಪ್ರಸಂಗವೇನೂ ಕಾಣುವುದಿಲ್ಲ. ಆದರೂ ಸಹ ದುರ್ಯೋಧನನು ಕರ್ಣನನ್ನು `ಅವಮಾನಿಸಬೇಡ' ಎಂದು ಪ್ರಾರಂಭಿಸಿ ಅವನ ಸಾಹಸಕಾರ್ಯಗಳನ್ನು ಪಟ್ಟಿಮಾಡಿ ಹೇಳುತ್ತಾನೆ. ಭೀಮಸೇನನನ್ನು ಹೊಟ್ಟೆಬಾಕ ಎಂದು ನಿಂದಿಸಿದ ಕರ್ಣನ ಧೀರತ್ವವನ್ನು ಉದಾಹರಿಸುತ್ತಾನೆ.
ಇಲ್ಲಿ ಶಲ್ಯನ ಪ್ರಶ್ನೆ ಕರ್ಣನು ಅರ್ಜುನನನ್ನು ಕೊಂದನಂತರ ಕೃಷ್ಣನು ಯುದ್ಧಕ್ಕೆ ನಿಂತರೆ ಅವನನ್ನು ಯಾವನು ಎದುರಿಸುತ್ತಾನೆ ಎಂಬುದು. ಇದಕ್ಕೆ ದುರ್ಯೋಧನನ ಉತ್ತರ ಕರ್ಣನು ಪಾಂಡವರನ್ನು ಜಯಿಸುತ್ತಾನೆ ಎಂಬುದು. ಇದು ಸ್ವಲ್ಪ ಅಸಂಗತವಾಗಿ ಕಾಣುತ್ತದೆ. ಕರ್ಣನೇ ಶ್ರೀಕೃಷ್ಣನನ್ನು ಎದುರಿಸಬಲ್ಲನು ಎಂದು ಹೇಳಬಹುದಾಗಿತ್ತು! ಎಂದು.
ಹೀಗೆ ಇಲ್ಲಿ ಎರಡು ಪ್ರಶ್ನೆಗಳು.
ಈ ಎರಡೂ ಪ್ರಶ್ನೆಗಳು ಸರಿಯಲ್ಲ. ಶಲ್ಯನು ಸಾರಥ್ಯ ಮಾಡಲು ಒಪ್ಪಿಕೊಂಡ ಬಳಿಕ ಪುನಃ ಈ ಪ್ರಕರಣ ಏಕೆ ಪ್ರಾರಂಭವಾಯಿತೆಂದರೆ ಮುಂದೆ ಕರ್ಣ ದುರ್ಯೋಧನನಿಗೆ ಹೇಳುತ್ತಾನೆ `ನಾತಿಹೃಷ್ಟಮನಾ ಹ್ಯೇಷ ಮದ್ರ ರಾಜೋಽಭಿಭಾಷತೇ' ದುರ್ಯೋಧನ, ಈ ಶಲ್ಯನಿಗೆ ತಾನು ಕರ್ಣಸಾರಥ್ಯ ಮಾಡುವುದರ ಔಚಿತ್ಯವಿನ್ನೂ ಕೂಡ ಮನವರಿಕೆಯಾಗಿಲ್ಲ, ಏನೂ ಸಮಾಧಾನವಾದಂತಿಲ್ಲ. `ನ ಅತಿಹೃಷ್ಟಮನಾಃ' ಸಾರಥ್ಯ ಮಾಡುವುದರಲ್ಲಿ ಪೂರ್ಣವಾಗಿ ಹರ್ಷಉತ್ಸಾಹಗಳು ಅವನಲ್ಲಿ ಕಂಡುಬರುವುದಿಲ್ಲ. ದಾಕ್ಷಿಣ್ಯಕ್ಕಾಗಿ `ಸಾರಥ್ಯ ಮಾಡುತ್ತೇನೆ' ಎಂದು ಬಾಯಲ್ಲಿ ಹೇಳುತ್ತಾನೆ, ಅಷ್ಟೇ. ಅದರಿಂದ ಪ್ರಕರಣ ನಿಂತೇ ಇಲ್ಲ, ಮುಂದುವರಿಯುತ್ತಿದೆ.
`ಕರ್ಣನು ಅರ್ಜುನನನ್ನು ಸಂಹರಿಸಿದ ಬಳಿಕ ಕೃಷ್ಣನನ್ನು ಇದಿರಿಸುವವರು ಯಾರು?' ಎಂದು ಶಲ್ಯನ ಪ್ರಶ್ನೆ ಸರ್ವಥಾ ಇಲ್ಲ. ಅದು ಶಲ್ಯನಿಗೆ ಸಂಬಂಧಪಟ್ಟಿದ್ದೇ ಅಲ್ಲ. ಅದನ್ನು ದುರ್ಯೋಧನ ತಾನೇ ಆಲೋಚಿಸಬೇಕು. ಮತ್ತು ಈ ಪ್ರಶ್ನೆಗೆ ಉತ್ತರವನ್ನು ದುರ್ಯೋಧನ ಹೇಳುವುದೂ ಕಾಣುತ್ತದೆ `ಶ್ರೀಕೃಷ್ಣನು ಪಾಂಡವಬಲದ ನಾಯಕತ್ವ ವಹಿಸಿದರೆ ಶಲ್ಯ! ನೀನೇ ನಮ್ಮ ದಳದ ನಾಯಕತ್ವ ವಹಿಸು' ಎಂದು. ಶಲ್ಯನ ಪ್ರಶ್ನೆ ಇದಲ್ಲ.
`ಯದಿ ಹನ್ಯಾಚ್ಚ ಕೌಂತೇಯಂ ಸೂತಪುತ್ರಃ ಕಥಂಚನ' `ಹೇಗಾದರೂ ಕಷ್ಟದಿಂದ ಅರ್ಜುನನನ್ನು ಕರ್ಣ ಕೊಂದರೆ' ಎಂದು ಶಲ್ಯನು ಹೇಳುವಲ್ಲಿ `ರೆ' ಶಬ್ದದಿಂದಲೆ ಕರ್ಣ ಕೊಲ್ಲಲಾರ ಎಂಬ ಭಾವ ಅವನಿಗಿರುವುದು ಕಾಣುತ್ತದೆ. `ಕಥಂಚನ' `ಹೇಗಾದರೂ ಕಷ್ಟದಿಂದ' ಎಂದು ಸ್ಪಷ್ಟವಾಗಿ ಕರ್ಣನಲ್ಲಿ ಸಾಮರ್ಥ್ಯವಿಲ್ಲ ಎಂದಂತಾಗಿದೆ. ಇದು ಅವಮಾನ. ಅದಕ್ಕೇ ದುರ್ಯೋಧನ ಕರ್ಣನನ್ನು ಅವಮಾನಿಸಬೇಡ ಎನ್ನುತ್ತಾನೆ. ಕರ್ಣನು ಪಾಂಡವರನ್ನು ಅವಶ್ಯ ಜಯಿಸುತ್ತಾನೆ ಎನ್ನುತ್ತಾನೆ. ಅರ್ಥಾತ್ ಪಾಂಡವಪಕ್ಷದವನಾದ ಶ್ರೀಕೃಷ್ಣನನ್ನೂ ಕೂಡ ಕರ್ಣನೆ ಜಯಿಸುತ್ತಾನೆ ಎಂದು ದುರ್ಯೋಧನ ಹೇಳುತ್ತಿದ್ದಾನೆ. ಹೀಗೆ ಈ ಪ್ರಕರಣ ಸುಸಂಗತವೇ ಆಗಿದೆ.
ಯಸ್ಯ ಜ್ಯಾತಲನಿರ್ಘೋಷಂ ಶ್ರುತ್ವಾ ಭಯಕರಂ ಮಹತ್ |
ಪಾಂಡವೇಯಾನಿ ಸೈನ್ಯಾನಿ ವಿದ್ರವಂತಿ ದಿಶೋ ದಶ ॥16॥
ಕರ್ಣನು ಧನುಷ್ಟೇಂಕಾರ ಮಾಡಿದನೆಂದರೆ ಭಯಂಕರವಾದ ಆ ಮಹಾಧ್ವನಿಯನ್ನು ಕೇಳಿ ಪಾಂಡವರ ಸೈನ್ಯಗಳು ಹತ್ತು ದಿಕ್ಕುಗಳಿಗೆ ಪಲಾಯನ ಮಾಡುತ್ತವೆ.
ಪ್ರತ್ಯಕ್ಷಂ ತೇ ಮಹಾಬಾಹೋ ಯಥಾ ರಾತ್ರೌ ಘಟೋತ್ಕಚಃ |
ಮಾಯಾಶತಾನಿ ಕುರ್ವಾಣೋ ಹತೋ ಮಾಯಾಪುರಸ್ಕೃತಃ ॥17॥
ಮಹಾಬಾಹು, ನೀನೆ ಪ್ರತ್ಯಕ್ಷ ಕಂಡಿರುವೆ, ರಾತ್ರಿಯಲ್ಲಿ ಘಟೋತ್ಕಚನು ನೂರಾರು ಮಾಯೆಗಳನ್ನು ಸೃಜಿಸಿ ಮಾಯೆಗಳನ್ನೇ ಮುಂದುಮಾಡಿ ಕರ್ಣನಿಂದ ಹತನಾಗಿದ್ದಾನೆ.
ನ ಚಾತಿಷ್ಠತ ಬೀಭತ್ಸುಃ ಪ್ರತ್ಯನೀಕೇ ಕಥಂಚನ |
ಏತಾಂಶ್ಚ ದಿವಸಾನ್ ಸರ್ವಾನ್ ಭಯೇನ ಮಹತಾ ವೃತಃ ॥18॥
ಅರ್ಜುನನೂ ಕೂಡ ಮಹಾಭಯ ಪೀಡಿತನಾದ್ದರಿಂದ ಈ ಯಾವ ದಿವಸಗಳಲ್ಲಿಯೂ ಕರ್ಣನಿಗೆ ಯಾವ ರೀತಿಯಿಂದಲೂ ಎದುರಾಗಿ ನಿಲ್ಲಲಿಲ್ಲ!
ಭೀಮಸೇನಶ್ಚ ಬಲವಾನ್ ಧನುಷ್ಕೋಟ್ಯಾಭಿಚೋದಿತಃ |
ಉಕ್ತಶ್ಚ ಸಂಜ್ಞಯಾ ರಾಜನ್ ಮೂಢ ಔದರಿಕೋ ಯಥಾ ॥19॥
ಬಲಿಷ್ಠನಾದ ಭೀಮಸೇನನನ್ನು ಕೂಡ ಕರ್ಣನು ಬಿಲ್ಲಿನ ತುದಿಯಿಂದ ಸೆಳೆದು `ಮೂರ್ಖ, ಹೊಟ್ಟೆ ಬಾಕ' ಎಂದು ಹೆಸರಿನಿಂದ ಕರೆದು ನಿಂದಿಸಿದ.
ಮಾದ್ರೀಪುತ್ರೌ ತಥಾ ಶೂರೌ ಯೇನ ಜಿತ್ವಾ ಮಹಾರಣೇ |
ಕಮಪ್ಯರ್ಥಂ ಪುರಸ್ಕೃತ್ಯ ನ ಹತೌ ಯುಧಿ ಮಾರಿಷ ॥20॥
ಶೂರರಾದ ನಕುಲಸಹದೇವರನ್ನೂ ಮಹಾರಣದಲ್ಲಿ ಗೆದ್ದೂಕೂಡ ಏನೋ ಉದ್ದೇಶವನ್ನು ಮುಂದು ಮಾಡಿ ಕೊಲ್ಲದೆ ಬಿಟ್ಟಿದ್ದಾನೆ. `ಏನೋ ಉದ್ದೇಶ' ಎಂದರೆ, ಕರ್ಣನು ಕುಂತಿಗೆ ನಿನ್ನ ಮಕ್ಕಳನ್ನು ಕೊಲ್ಲುವುದಿಲ್ಲವೆಂದು ಮಾತು ಕೊಟ್ಟಿದ್ದಾನೆ. ಅದಕ್ಕೆ ತಪ್ಪದಿರುವ ಉದ್ದೇಶ ವೆಂದು ದುರ್ಯೋಧನ ಹೇಳುತ್ತಿದ್ದಾನೆ. ಹಾಗೇ ಭೀಮನೂ, ಅರ್ಜುನ ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದಾನೆ, ಅದು ಹಾಳಾಗಬಾರದೆಂದು ತಾನು ಸುಮ್ಮನಿದ್ದ. ಅರ್ಜುನನೂ ಕೂಡ ಸಂಶಪ್ತಕರನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದರಿಂದ ಆ ಕಾರ್ಯವನ್ನು ಮಾಡಿ ಮುಗಿಸದೇ ಕರ್ಣನನ್ನು ಕೊಲ್ಲಲು ಹೊರಡುವಂತಿರಲಿಲ್ಲ, ಹೊರತು, ಭಯದಿಂದ ದೂರ ನಿಂತಿರಲಿಲ್ಲ ಅರ್ಜುನ. ದುರ್ಯೋಧನ ಇದನ್ನು ತಿಳಿದೂ ಕೂಡ ಎಲ್ಲವನ್ನೂ ಮರೆಮಾಚಿ ಇವೆಲ್ಲವೂ ಕರ್ಣನ ಸಾಹಸಕಾರ್ಯಗಳೆಂದು ಹೊಗಳುತ್ತಾನೆ. ಇದು ಕೇವಲ ಆತ್ಮವಂಚನೆ.
ಯೇನ ವೃಷ್ಣಿಪ್ರವೀರಸ್ತು ಸಾತ್ಯಕಿಃ ಸಾತ್ವತಾಂ ವರಃ |

ನಿರ್ಜಿತ್ಯ ಸಮರೇ ಶೂರೋ ವಿರಥಶ್ಚ ಬಲಾತ್ಕೃತಃ ॥21॥
ಯಾದವರಲ್ಲಿ ಮುಖ್ಯನಾದ ವೀರ ಸಾತ್ಯಕಿಯನ್ನೂ ಕೂಡ ಯುದ್ಧದಲ್ಲಿ ಪರಾಭವಗೊಳಿಸಿ ಬಲಾತ್ಕಾರವಾಗಿ ಅವನ ರಥವನ್ನು ಮುರಿದಿದ್ದಾನೆ ಕರ್ಣ.
ಸೃಂಜಯಾಶ್ಚೇತರೇ ಸರ್ವೇ ಧೃಷ್ಟದ್ಯುಮ್ನಪುರೋಗಮಾಃ |
ಅಸಕೃನ್ನಿರ್ಜಿತಾಃ ಸಂಖ್ಯೇ ಸ್ಮಯಮಾನೇನ ಸಂಯುಗೇ ॥22॥
ಧೃಷ್ಟದ್ಯುಮ್ನ ಮುಂತಾದ ಬೇರೆ ಎಲ್ಲ ಸೃಂಜಯರನ್ನೂ ಅನೇಕ ಬಾರಿ ನಗುತ್ತಲೆ ಪರಾಭವಗೊಳಿಸಿದ್ದಾನೆ, ಕರ್ಣ.
ತಂ ಕಥಂ ಪಾಂಡವಾ ಯುದ್ಧೇ ವಿಜೇಷ್ಯಂತಿ ಮಹಾರಥಮ್ |
ಯೋ ಹನ್ಯಾತ್ ಸಮರೇ ಕ್ರುದ್ಧೋ ವಜ್ರಹಸ್ತಂ ಪುರಂದರಮ್ ॥23॥
ಅಂಥ ಮಹಾರಥನಾದ ಕರ್ಣನನ್ನು ಪಾಂಡವರು ಯುದ್ಧದಲ್ಲಿ ಹೇಗೆ ಕೊಲ್ಲಬಲ್ಲರು? ಅವನು ರಣರಂಗದಲ್ಲಿ ಕ್ರುದ್ಧನಾದರೆ ವಜ್ರಾಯುಧವನ್ನು ಹಿಡಿದ ದೇವೇಂದ್ರನನ್ನೂ ಕೊಲ್ಲುತ್ತಾನೆ.
ತ್ವಂ ಚ ಸರ್ವಾಸ್ತ್ರವಿದ್ ವೀರಃ ಸರ್ವವಿದ್ಯಾಸ್ತ್ರಪಾರಗಃ |
ಬಾಹುವೀರ್ಯೇಣ ತೇ ತುಲ್ಯಃ ಪೃಥಿವ್ಯಾಂ ನಾಸ್ತಿ ಕಶ್ಚನ ॥24॥
ನೀನೂ ಕೂಡ ಸರ್ವವಿದ್ಯಾಸ್ತ್ರ ಪಾರಂಗತ, ಸರ್ವ ಅಸ್ತ್ರಗಳನ್ನೂ ತಿಳಿದವನು, ಬಾಹುಬಲದಲ್ಲಿಯೂ ನಿನಗೆ ಸಮಾನ ಭೂಮಿಯ ಮೇಲೆ ಯಾವನೂ ಇಲ್ಲ.
ತ್ವಂ ಶಲ್ಯಭೂತಃ ಶತ್ರೂಣಾಮವಿಷಹ್ಯಃ ಪರಾಕ್ರಮೇ |
ತತಸ್ತ್ವಮುಚ್ಯಸೇ ರಾಜನ್ ಶಲ್ಯ ಇತ್ಯರಿಸೂದನ ॥25॥
ಪರಾಕ್ರಮದಲ್ಲಿ ಶತ್ರುಗಳಿಗೆ ಯಾರಿಗೂ ಇದಿರಿಸಲಾಗದವನು. ಅವರಿಗೆ `ಶಲ್ಯ'ದಂತೆ, ಮುಳ್ಳಿನಂತಿರುವುದರಿಂದ ಶಲ್ಯ ಎಂದು ಕರೆಸಿಕೊಳ್ಳುತ್ತಿರುವೆ.
ತವ ಬಾಹುಬಲಂ ಪ್ರಾಪ್ಯ ನ ಶೇಕುಃ ಸರ್ವಸಾತ್ವತಾಃ |
ತವ ಬಾಹುಬಲಾದ್ ರಾಜನ್ ಕಿಂ ನು ಕೃಷ್ಣೋ ಬಲಾಧಿಕಃ ॥26॥
ನಿನ್ನ ಬಾಹುಬಲವನ್ನು ಇದಿರಿಸಲೂ ಯಾವ ಯಾದವರೂ ಶಕ್ತರಲ್ಲ. ನಿನ್ನ ಬಾಹುಬಲಕ್ಕಿಂತ ಕೃಷ್ಣನೇನು ಬಲದಲ್ಲಿ ಹೆಚ್ಚೆ?
ಯಥಾಹಿ ಕೃಷ್ಣೇನ ಬಲಂ ಧಾರ್ಯಂ ವೈ ಫಲ್ಗುನೇ ಹತೇ |
ತಥಾ ಕರ್ಣಾತ್ಯಯೀಭಾವೇ ತ್ವಯಾ ಧಾರ್ಯಂ ಮಹದ್ ಬಲಮ್ ॥
ಅರ್ಜುನ ಹತನಾದಾಗ ಕೃಷ್ಣನೇ ಪಾಂಡವಸೈನ್ಯವನ್ನು ಮುನ್ನಡೆಸುವಂತೆ ಕರ್ಣನ ನಾಶವಾದಾಗ ನೀನೆ ನಮ್ಮ ಮಹಾಸೈನ್ಯವನ್ನು ಮುನ್ನಡೆಸಬೇಕು.
ಕಿಮರ್ಥಂ ಸಮರೇ ಸೈನ್ಯಂ ವಾಸುದೇವೋ ನಿವಾರಯೇತ್ |
ಕಿಮರ್ಥಂ ಚ ಭವಾನ್ ಸೈನ್ಯಂ ನ ಹನಿಷ್ಯತಿ ಮಾರಿಷ ॥28॥
ಕೃಷ್ಣನೇಕೆ ನಮ್ಮ ಸೈನ್ಯವನ್ನು ವಧಿಸಬೇಕು? ನೀನೇಕೆ ಪಾಂಡವಸೈನ್ಯವನ್ನು ವಧಿಸಬಾರದು?
ತ್ವತ್ಕೃತಾಂ ಪದವೀಂ ಪ್ರಾಪ್ತುಮಿಚ್ಛೇಯಂ ಯುಧಿ ಮಾರಿಷ |
ಸೋದರಾಣಾಂ ಚ ವೀರಾಣಾಂ ಸರ್ವೇಷಾಂ ಚ ಮಹೀಕ್ಷಿತಾಮ್ ॥
ರಾಜನೆ, ಯುದ್ಧದಲ್ಲಿ ನೀನು ಸೇನಾನಾಯಕನಾಗಿ ವೀರರಾದ ನನ್ನ ಸೋದರರಿಗೂ ಎಲ್ಲ ರಾಜರಿಗೂ ತೋರುವ ಮಾರ್ಗವನ್ನು ನಾನೂ ಹೊಂದಲು ಬಯಸುತ್ತೇನೆ.
ಶಲ್ಯಃ
ಯನ್ಮಾಂ ಬ್ರವೀಷಿ ಗಾಂಧಾರೇ ಅಗ್ರೇ ಸೈನ್ಯಸ್ಯ ಮಾನದ |
ವಿಶಿಷ್ಟಂ ದೇವಕೀಪುತ್ರಾತ್ ಪ್ರೀತಿಮಾನಸ್ಮ್ಯಹಂ ತ್ವಯಿ ॥30॥
ಶಲ್ಯನು ದುರ್ಯೋಧನನಿಗೆ ಹೇಳುತ್ತಾನೆ ದುರ್ಯೋಧನ, ಎಲ್ಲ ಸೈನ್ಯದ ಮುಂದೆ ನೀನು ನನ್ನನ್ನು ಕೃಷ್ಣನಿಗಿಂತ ಶ್ರೇಷ್ಠನೆನ್ನುತ್ತಿರುವುದರಿಂದ ನನಗೆ ನಿನ್ನಲ್ಲಿ ಪ್ರೀತಿ ಉಂಟಾಗಿದೆ.
ಏಷ ಸಾರಥ್ಯಮಾತಿಷ್ಠೇ ರಾಧೇಯಸ್ಯ ಯಶಸ್ವಿನಃ |
ಯುಧ್ಯತಃ ಪಾಂಡವಾಗ್ರ್ಯೇಣ ಯಥಾ ತ್ವಂ ವೀರ ಮನ್ಯಸೇ ॥31॥
ನೀನು ಬಯಸಿದಂತೆ, ಕೀರ್ತಿಶಾಲಿಯಾದ ಕರ್ಣನು ಅರ್ಜುನನೊಡನೆ ಯುದ್ಧಮಾಡುವಾಗ ನಾನು ಅವನಿಗೆ ಸಾರಥ್ಯ ಮಾಡುತ್ತೇನೆ.
ಸಮಯಶ್ಚ ಹಿ ಮೇ ವೀರ ಕಶ್ಚಿದ್ ವೈಕರ್ತನಂ ಪ್ರತಿ |
ಉತ್ಸ ೃಜೇಯಂ ಯಥಾಶ್ರದ್ಧಮಹಂ ವಾಚೋಽಸ್ಯ ಸನ್ನಿಧೌ ॥32॥
ವೀರನೆ, ನನ್ನದೊಂದು ಶರತ್ತಿದೆ, ಕರ್ಣನಿಗೆ ಅವನ ಮುಂದೆ, ನನಗೆ ಏನು ಅನಿಸಿರುತ್ತದೋ ಅದನ್ನು, ಸ್ಪಷ್ಟಮಾತಿನಿಂದ ಹೇಳಿಬಿಡುತ್ತೇನೆ.
ಸಂಜಯಃ
ತಥೇತಿ ರಾಜನ್ ಪುತ್ರಸ್ತೇ ಸಹ ಕರ್ಣೇನ ಮಾರಿಷ |
ಅಬ್ರುವೀದ್ ಮದ್ರರಾಜಾನಂ ಸರ್ವಕ್ಷತ್ರಸ್ಯ ಸನ್ನಿಧೌ ॥33॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ರಾಜನೆ, ಎಲ್ಲ ಕ್ಷತ್ರಿಯರ ಮುಂದೆ ನಿನ್ನ ಮಗನೂ ಕರ್ಣನೂ, ಶಲ್ಯನಿಗೆ `ಹಾಗೇ ಆಗಲಿ' ಎಂದು ಆಶ್ವಾಸನೆ ನೀಡಿದರು.
ಸಾರಥ್ಯಸ್ಯಾಭ್ಯುಪಗಮಾತ್ ಶಲ್ಯೇನಾಶ್ವಾಸಿತಸ್ತದಾ |

ದುರ್ಯೋಧನಸ್ತದಾ ಹೃಷ್ಟಃ ಕರ್ಣಂ ತಮಭಿಷಸ್ವಜೇ ॥34॥
ಶಲ್ಯನು ಸಾರಥ್ಯಕ್ಕೆ ಒಪ್ಪಿ ಅದನ್ನು ಮಾಡುವೆನೆಂದು ಆಶ್ವಾಸನ ನೀಡಿದಾಗ ದುರ್ಯೋಧನ ಸಂತೋಷದಿಂದ ಕರ್ಣನನ್ನು ತಬ್ಬಿಕೊಂಡ.
ಅಬ್ರುವೀಚ್ಚ ಪುನಃ ಕರ್ಣಂ ಸ್ತೂಯಮಾನಃ ಸುತಸ್ತವ |
ಜಹಿ ಪಾರ್ಥಾನ್ ರಣೇ ಸರ್ವಾನ್ ಮಹೇಂದ್ರೋ ದಾನವಾನಿವ ॥35॥
ಪುನಃ ಕರ್ಣನನ್ನು ಹೊಗಳುತ್ತ, ಮಹೇಂದ್ರನು ದಾನವರನ್ನು ಕೊಂದಂತೆ ನೀನು ರಣದಲ್ಲಿ ಪಾಂಡವರೆಲ್ಲರನ್ನೂ ಕೊಲ್ಲು ಎಂದ, ದುರ್ಯೋಧನ.
ಸ ಶಲ್ಯೇನಾಭ್ಯುಪಗತೇ ಹಯಾನಾಂ ಸನ್ನಿಯಚ್ಛನೇ |
ಕರ್ಣೋ ಹೃಷ್ಟಾತ್ಮನಾ ಭೂಯೋ ದುರ್ಯೋಧನಮಭಾಷತ ॥36॥
ಶಲ್ಯನು ಸಾರಥ್ಯಕ್ಕೆ ಒಪ್ಪಿದಾಗ ಕರ್ಣ ಹರ್ಷಚಿತ್ತನಾದರೂ ಪುನಃ ದುರ್ಯೋಧನನಿಗೆ ಹೇಳಿದ–
ನಾತಿಹೃಷ್ಟಮನಾ ಹ್ಯೇಷ ಮದ್ರರಾಜೋಽಭಿಭಾಷತೇ |
ರಾಜನ್ ಮಧುರಯಾ ವಾಚಾ ಪುನರೇನಂ ಬ್ರುವೀಹಿ ವೈ ॥37॥
`ಪೂರ್ತಿ ಹರ್ಷಚಿತ್ತನಾಗಿ ಶಲ್ಯ ನುಡಿಯುತ್ತಿಲ್ಲ. ರಾಜನೆ, ಸವಿಮಾತಿನಿಂದ ಅವನಿಗೆ ಇನ್ನೂ ಹೇಳು.'
ತತೋ ರಾಜಾ ಮಹಾಪ್ರಾಜ್ಞಃ ಸರ್ವಾಸ್ತ್ರಕುಶಲೋ ಬಲೀ |
ದುರ್ಯೋಧನೋಽಬ್ರವೀಚ್ಛಲ್ಯಂ ಮದ್ರರಾಜಂ ಮಹೀಪತಿಮ್ ॥38॥
ಆಗ ಮಹಾಪ್ರಾಜ್ಞನಾದ ಸರ್ವಾಶ್ತ್ರಕುಶಲನಾದ ಬಲಿಷ್ಠನಾದ ರಾಜಾ ದುರ್ಯೋಧನ ಶಲ್ಯರಾಜನಿಗೆ ಹೇಳಿದ.
ಪೂರಯನ್ನಿವ ಘೋಷೇಣ ಮೇಘಗಂಭೀರಯಾ ಗಿರಾ |
ಶಲ್ಯ ಕರ್ಣೋಽರ್ಜುನೇನಾದ್ಯ ಯೋದ್ಧವ್ಯಮಿತಿ ಮನ್ಯತೇ ॥39॥
ಗುಡುಗಿನಂತೆ ಗಂಭೀರಧ್ವನಿಯಿಂದ ದಿಕ್ಕುಗಳನ್ನು ತುಂಬಿಸುವಂತೆ ದುರ್ಯೋಧನ ನುಡಿದ, ಶಲ್ಯನೆ, ಕರ್ಣನು ಈಗ ಅರ್ಜುನನೊಡನೆ ಯುದ್ಧ ಮಾಡಬೇಕೆಂದಿದ್ದಾನೆ.
ತಸ್ಯ ತ್ವಂ ಪುರುಷವ್ಯಾಘ್ರ ನಿಯಚ್ಛ ತುರಗಾನ್ ಯುಧಿ |
ಕರ್ಣೋ ಹತ್ವೇತರಾನ್ ಸರ್ವಾನ್ ಫಲ್ಗುನಂ ಹಂತುಮಿಚ್ಛತಿ ॥40॥
ತಸ್ಯಾಭೀಷುಗ್ರಹೇ ರಾಜನ್ ಪ್ರಯಾಚೇ ತ್ವಾಂ ಪುನಃ ಪುನಃ ॥41॥
ರಾಜನೆ, ಕರ್ಣನ ಕುದುರೆಗಳನ್ನು ರಣದಲ್ಲಿ ನಿಯಂತ್ರಿಸು, ಅವನು ಇತರ ಎಲ್ಲ ಸೈನಿಕರನ್ನು ಕೊಂದು ಅರ್ಜುನನನ್ನು ಕೊಲ್ಲಲು ಬಯಸುತ್ತಾನೆ. ಅವನ ಸಾರಥ್ಯ ಮಾಡಲು ನಿನ್ನನ್ನು ಪುನಃ ಪುನಃ ಬೇಡಿಕೊಳ್ಳುತ್ತೇನೆ.
ಪಾರ್ಥಸ್ಯ ಸಚಿವಃ ಕೃಷ್ಣೋ ಯಥಾಽಭೀಷುಗ್ರಹೋ ವರಃ |
ತಥಾ ತ್ವಮಪಿ ರಾಧೇಯಂ ಸರ್ವತಃ ಪರಿಪಾಲಯ ॥42॥
ಅರ್ಜುನನಿಗೆ ಕೃಷ್ಣನು ಹೇಗೆ ಸಾರಥಿಯಾಗಿರುವನೋ ಹಾಗೇ ನೀನೂ ಕರ್ಣನಿಗೆ ಸಾರಥಿಯಾಗಿ ಅವನನ್ನು ಎಲ್ಲ ಬಗೆಯಿಂದ ಕಾಪಾಡು.
ಸಂಜಯಃ
ತತಃ ಶಲ್ಯಃ ಪರಿಷ್ವಜ್ಯ ಸುತಂ ತೇ ವಾಕ್ಯಮಬ್ರವೀತ್ |
ದುರ್ಯೋಧನಮಮಿತ್ರಘ್ನಂ ಪ್ರೀತೋ ಮದ್ರಾಧಿಪಸ್ತದಾ ॥43॥
ಸಂಜಯನು ನುಡಿದ– ಆಗ ನಿಜವಾಗಿ ಸಂತುಷ್ಟನಾಗದಿದ್ದರೂ ಸಂತುಷ್ಟ ನಾದಂತೆ ತೋರಿಕೊಳ್ಳುತ್ತ ಶಲ್ಯನು ದುರ್ಯೋಧನನನ್ನು ತಬ್ಬಿಕೊಂಡು ಹೇಳಿದ.
ಶಲ್ಯಃ
ಏವಂ ಚೇನ್ಮನ್ಯಸೇ ರಾಜನ್ ಗಾಂಧಾರೇ ಪ್ರಿಯದರ್ಶನ |
ತಸ್ಮಾತ್ತೇ ಯತ್ಪ್ರಿಯಂ ಕಿಂಚಿತ್ ತತ್ಸರ್ವಂ ಕರವಾಣ್ಯಹಮ್ ॥44॥
`ರಾಜನೆ, ಹೀಗೆ ನೀನು ಬಯಸಿದರೆ ನಾನು ನೀನೇನು ಬಯಸುವೆಯೋ ಅದೆಲ್ಲವನ್ನೂ ಮಾಡುತ್ತೇನೆ.
ಯತ್ರಾಸ್ಮಿ ಭರತಶ್ರೇಷ್ಠ ಯೋಗ್ಯಃ ಕರ್ಮಣಿ ಕರ್ಹಿಚಿತ್ |
ತತ್ರ ಸರ್ವಾತ್ಮನಾ ಯುಕ್ತೋ ವಕ್ಷ್ಯೇ ಕಾರ್ಯಂ ಪರಂತಪ ॥45॥
`ಎಲ್ಲಿ ಯಾವ ಕಾರ್ಯದಲ್ಲಿ ನಾನು ಯೋಗ್ಯನಿರುವೆನೋ ಅಲ್ಲಿ ಆ ಕಾರ್ಯದಲ್ಲಿ ನನ್ನನ್ನು ನಾನು ಪೂರ್ತಿ ತೊಡಗಿಸಿಕೊಂಡು ಆ ಕಾರ್ಯವನ್ನು ನಿರ್ವಹಿಸುವೆನು.
ಯತ್ತು ಕರ್ಣಮಹಂ ಬ್ರೂಯಾಂ ಹಿತಕಾಮಃ ಪ್ರಿಯಾಪ್ರಿಯೇ |
ಮಮ ತತ್ಕ್ಷಮತಾಂ ಸರ್ವಂ ಭವಾನ್ ಕರ್ಣಶ್ಚ ಸರ್ವಶಃ ॥46॥
ಆದರೆ ಹಿತೈಷಿಯಾಗಿ ಕರ್ಣನಿಗೆ ಪ್ರಿಯವಾಗಲಿ, ಅಪ್ರಿಯವಾಗಲಿ ನಾನು ಏನೇ ಹೇಳಿದರೂ ಅದನ್ನು ನೀನೂ ಕರ್ಣನೂ ಪೂರ್ತಿಯಾಗಿ ಸಹಿಸಿಕೊಳ್ಳಬೇಕು.'
ಕರ್ಣಃ
ಈಶಾನಸ್ಯ ಯಥಾ ಬ್ರಹ್ಮಾ ಯಥಾ ಪಾರ್ಥಸ್ಯ ಕೇಶವಃ |
ತಥಾ ನಿತ್ಯಂ ಹಿತೇ ಯುಕ್ತೋ ಮದ್ರರಾಜ ಭವಸ್ವ ನಃ ॥47॥
ಕರ್ಣ ಶಲ್ಯನಿಗೆ ಹೇಳಿದ, `ಶಿವನಿಗೆ ಬ್ರಹ್ಮನಂತೆ, ಅರ್ಜುನನಿಗೆ ಕೃಷ್ಣನಂತೆ ನೀನು ನನಗೆ ಸದಾ ಹಿತಕರನಾಗು.'

ಶಲ್ಯಃ
ಆತ್ಮನಿಂದಾತ್ಮಪೂಜಾ ಚ ಪರನಿಂದಾ ಪರಸ್ತವಃ |
ಅನಾಚರಿತಮಾರ್ಯಾಣಾಂ ವೃತ್ತಮೇತಚ್ಚತುರ್ವಿಧಮ್ ||47||
ಶಲ್ಯನು ಕರ್ಣನಿಗೆ ಹೇಳಿದ– `ತನ್ನ ನಿಂದೆ, ತನ್ನ ಹೊಗಳಿಕೆ, ಪರರ ನಿಂದೆ, ಪರರ ಹೊಗಳಿಕೆ ಈ ನಾಲ್ಕು ಬಗೆಯ ಆಚಾರವನ್ನು ಸತ್ಪುರುಷರು ಮಾಡುವುದಿಲ್ಲ.
ಯತ್ತು ವಿದ್ವನ್ ಪ್ರವಕ್ಷ್ಯಾಮಿ ಪ್ರತ್ಯಯಾರ್ಥಮಹಂ ತವ |
ಆತ್ಮನಃ ಸ್ತವಸಂಯುಕ್ತಂ ತನ್ನಿಬೋಧ ಯಥಾತಥಮ್ ||48||
`ಆದರೂ ನಿನಗೆ ವಿಶ್ವಾಸ ಉಂಟುಮಾಡುವುದಕ್ಕಾಗಿ ನಾನು ನನ್ನ ಬಗ್ಗೆ ಹೊಗಳಿಕೆಯ ಒಂದು ಮಾತನ್ನು ನಿನಗೆ ಹೇಳುತ್ತೇನೆ. ಅದನ್ನು ಸರಿಯಾಗಿ ತಿಳಿದುಕೊಳ್ಳು.
ಅಹಂ ಶಕ್ರಸ್ಯ ಸಾರಥ್ಯೇ ಯೋಗ್ಯೋ ಮಾತಲಿವತ್ಪ್ರಭೋ |
ಅಪ್ರಮಾದಾತ್ ಪ್ರಯೋಗಾಚ್ಚ ಜ್ಞಾನವಿದ್ಯಾಚಿಕಿತ್ಸನೈಃ ||49||
`ಇಂದ್ರನಿಗೆ ಮಾತಲಿಯಂತೆ ನಾನು ನಿನಗೆ ಸಾರಥ್ಯ ಮಾಡಲು ಯೋಗ್ಯನಿದ್ದೇನೆ. ಏಕೆಂದರೆ ನನಗೆ ಪ್ರಮಾದವಿಲ್ಲ. ಅಶ್ವಗಳ ಪರಿಜ್ಞಾನ, ಅಶ್ವಶಾಸ್ತ್ರ, ಅಶ್ವಚಿಕಿತ್ಸೆಗಳರಿವಿರುವುದರಿಂದ ಚೆನ್ನಾಗಿ ಸಾರಥ್ಯ ಮಾಡಬಲ್ಲೆ.
ತತಃ ಪಾರ್ಥೇನ ಸಂಗ್ರಾಮೇ ಯುಧ್ಯಮಾನಸ್ಯ ತೇಽನಘ |
ವಾಹಯಿಷ್ಯಾಮಿ ತುರಗಾನ್ ವಿಜ್ವರೋ ಭವ ಸೂತಜ ||50||
`ಅದರಿಂದ ಸೂತಪುತ್ರನೆ, ನೀನು ಅರ್ಜುನನೊಡನೆ ಯುದ್ಧಮಾಡುವಾಗ ಕುದುರೆಗಳನ್ನು ನಡೆಸುತ್ತೇನೆ. ಸಂದೇಹವನ್ನು ಬಿಟ್ಟುಬಿಡು.'
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಷಟ್‌ತ್ರಿಂಶೋಧ್ಯಾಯಃ ||36||

## ಮೂವತ್ತೇಳನೆಯ ಅಧ್ಯಾಯ
`ಪಾಂಡವರನ್ನು ಅವಮಾನಿಸಬೇಡ' ಎಂದು ಕರ್ಣನಿಗೆ ಶಲ್ಯನ ಬುದ್ಧಿವಾದ.
ದುರ್ಯೋಧನಃ
ಅಯಂ ತೇ ಕರ್ಣ ಸಾರಥ್ಯಂ ಮದ್ರರಾಜಃ ಕರಿಷ್ಯತಿ |
ಕೃಷ್ಣಾದಭ್ಯಧಿಕೋ ಯಂತಾ ದೇವೇಶಸ್ಯೇವ ಮಾತಲಿಃ ||1||
ದುರ್ಯೋಧನ ಕರ್ಣನಿಗೆ ಹೇಳಿದ– ಶಲ್ಯನು ನಿನಗೆ ಸಾರಥ್ಯ ಮಾಡುತ್ತಾನೆ. ಅವನು ಕೃಷ್ಣನಿಗಿಂತ ಶ್ರೇಷ್ಠನಾದ ಸಾರಥಿ, ಇಂದ್ರನಿಗೆ ಮಾತಲಿಯಂತೆ ಇದ್ದಾನೆ.
ಯಥಾ ರಥಂ ಹಯೈರ್ಯುಕ್ತಂ ಸಂಗೃಹ್ಣಾತಿ ಸ ಮಾತಲಿಃ |
ಶಲ್ಯಸ್ತಥಾ ತವಾದ್ಯಾಯಂ ಸಂಯಂತಾ ರಥವಾಜಿನಾಮ್ ||2||
ಮಾತಲಿಯು ಹೇಗೆ ರಥವನ್ನೂ ಕುದುರೆಗಳನ್ನೂ ನಿಯಂತ್ರಿಸುತ್ತಾನೋ ಹಾಗೇ ಶಲ್ಯನೂ ನಿನಗೆ ರಥವನ್ನೂ ಕುದುರೆಗಳನ್ನೂ ನಿಯಂತ್ರಿಸುತ್ತಾನೆ.
ಯೋಧೇ ತ್ವಯಿ ರಥಸ್ಥೇ ಚ ಮದ್ರರಾಜೇ ಚ ಸಾರಥೌ |
ರಥಶ್ರೇಷ್ಠೋ ಧ್ರುವಂ ಸಂಖ್ಯೇ ಪಾರ್ಥಾನಭಿಭವಿಷ್ಯತಿ ||3||
ಯೋಧನಾಗಿ ನೀನು ರಥದಲ್ಲಿದ್ದರೆ, ಸಾರಥಿಯಾಗಿ ಶಲ್ಯನೂ ಇದ್ದರೆ ಶ್ರೇಷ್ಠವಾದ ಈ ರಥ ನಿಶ್ಚಯವಾಗಿ ಯುದ್ಧದಲ್ಲಿ ಪಾಂಡವರನ್ನು ಪರಾಭವ ಗೊಳಿಸುತ್ತದೆ.
ಸಂಜಯಃ
ತತೋ ದುರ್ಯೋಧನೋ ಭೂಯೋ ಮದ್ರರಾಜಂ ತರಸ್ವಿನಮ್ |
ಉವಾಚ ರಾಜನ್ ಸಂಗ್ರಾಮೇಽಧ್ಯುಷಿತೇ ಪರ್ಯುಪಸ್ಥಿತೇ ||4||
ಸಂಜಯ ನುಡಿದ– ರಾಜನೆ, ಬಳಿಕ ಮನಸ್ಸಿನಲ್ಲಿ ಸಂಕಲ್ಪಿಸಿದ್ದ ಯುದ್ಧ ಪ್ರತ್ಯಕ್ಷವಾಗಿ ಸನ್ನಿಹಿತವಾದಾಗ ದುರ್ಯೋಧನನು ಶಲ್ಯನಿಗೆ ಪುನಃ ಹೇಳಿದ.
ಕರ್ಣಸ್ಯ ಯಚ್ಛ ಸಂಗ್ರಾಮೇ ಮದ್ರರಾಜ ಹಯೋತ್ತಮಾನ್ |
ತ್ವಯಾಽಭಿಗುಪ್ತೋ ರಾಧೇಯೋ ವಿಜೇಷ್ಯತಿ ಧನಂಜಯಮ್ ||5||
ಮದ್ರರಾಜ, ಯುದ್ಧದಲ್ಲಿ ಕರ್ಣನ ಕುದುರೆಗಳನ್ನು ನಿಯಂತ್ರಿಸು. ನೀನು ಅವನನ್ನು ಕಾಪಾಡಿದರೆ ಅವನು ಅರ್ಜುನನನ್ನು ಗೆಲ್ಲುತ್ತಾನೆ.
ಇತ್ಯುಕ್ತೋ ರಥಮಾಸ್ಥಾಯ ತಥೇತಿ ಪ್ರಾಹ ಭಾರತ |
ಶಲ್ಯೇಽಭ್ಯುಪಗತೇ ಕರ್ಣಃ ಸಾರಥಿಂ ಸುಮನಾಽಬ್ರವೀತ್ ||6||
ತ್ವಂ ಸೂತ ಸ್ಯಂದನಂ ಮಹ್ಯಂ ಕಲ್ಪಯೇತ್ಯಸಕೃತ್ತ್ವರನ್ ||7||
ದುರ್ಯೋಧನ ಹೀಗೆ ಹೇಳಿದಾಗ ಶಲ್ಯ `ಹಾಗೇ ಆಗಲಿ' ಎನ್ನುತ್ತ ರಥವನ್ನು ತನ್ನ ವಶಕ್ಕೆ ತೆಗೆದುಕೊಂಡ. ರಥವನ್ನು ಶಲ್ಯನು ನಿಯಂತ್ರಣಕ್ಕೆ ತೆಗೆದುಕೊಂಡಾಗ ಕರ್ಣನು ಸಂತುಷ್ಟನಾಗಿ ಸಾರಥಿಗೆ, `ಸಾರಥಿಯೆ, ನನಗೆ ರಥವನ್ನು ಸಜ್ಜುಗೊಳಿಸು, ಸಜ್ಜುಗೊಳಿಸು' ಎಂದು ತ್ವರೆಯಿಂದ ಅನೇಕಬಾರಿ ನುಡಿದ.
ತತೋ ಜೈತ್ರಂ ರಥವರಂ ಗಂಧರ್ವನಗರೋಪಮಮ್ |

ವಿಧಿವತ್ಕಲ್ಪಿತಂ ಭದ್ರಂ ಜಯೇತ್ಯುಕ್ತ್ವಾ ನ್ಯವೇದಯತ್ ॥8॥
ಆಗ ವಿಧ್ಯುಕ್ತವಾಗಿ ಗಂಧರ್ವನಗರದಂತೆ ಸುಂದರವಾದ ಜಯ ತಂದುಕೊಡಬಲ್ಲ ರಥವನ್ನು ಸಜ್ಜುಗೊಳಿಸಿ ಸಾರಥಿಯು `ಜಯಶಾಲಿಯಾಗೆ'ನ್ನುತ್ತ ನಿವೇದಿಸಿದ.
ತಂ ರಥಂ ರಥಿನಾಂ ಶ್ರೇಷ್ಠಃ ಕರ್ಣೋಽಭ್ಯರ್ಚ್ಯ ಯಥಾವಿಧಿ |
ಸಂಪಾದಿತಂ ಬ್ರಹ್ಮವಿದಾ ಪೂರ್ವಮೇವ ಪುರೋಧಸಾ ॥9॥
ಕೃತ್ವಾ ಪ್ರದಕ್ಷಿಣಂ ಯತ್ನಾದುಪಸ್ಥಾಯ ಚ ಭಾಸ್ಕರಮ್ |
ಸಮೀಪಸ್ಥಂ ಮದ್ರರಾಜಮಾರೋಹ ತ್ವಮಥಾಬ್ರವೀತ್ ॥10॥
ರಥಿಕರಲ್ಲಿ ಶ್ರೇಷ್ಠನಾದ ಕರ್ಣ ಮೊದಲೇ ಪುರೋಹಿತನಿಂದ ವಿಧ್ಯುಕ್ತವಾಗಿ ಪೂಜಿಸಿ ಸಿದ್ದಪಡಿಸಿದ್ದ ಆ ರಥಕ್ಕೆ ಪ್ರದಕ್ಷಿಣೆ ಮಾಡಿ ಸೂರ್ಯೋಪಸ್ಥಾನವನ್ನೂ ಮಾಡಿ ಸಮೀಪದಲ್ಲಿ ನಿಂತಿದ್ದ ಶಲ್ಯನಿಗೆ `ರಥವನ್ನೇರು' ಎಂದ.
ತತಃ ಕರ್ಣಸ್ಯ ದುರ್ಧರ್ಷಂ ಸ್ಯಂದನಪ್ರವರಂ ಮಹತ್ |
ಆರುರೋಹ ಮಹಾತೇಜಾಃ ಶಲ್ಯಃ ಸಿಂಹ ಇವಾಚಲಮ್ ॥11॥
ಶತ್ರುಗಳಿಗೆ ಮುರಿಯಲಾಗದ ಆ ಮಹಾರಥವನ್ನು ಸಿಂಹವು ಬೆಟ್ಟವನ್ನೇರುವಂತೆ ಮಹಾಪರಾಕ್ರಮಿ ಶಲ್ಯ ಏರಿದ.
ತತಃ ಶಲ್ಯಾಶ್ರಿತಂ ದೃಷ್ಟ್ವಾ ಕರ್ಣಃ ಸ್ವಂ ರಥಮುತ್ತಮಮ್ |
ಅಧ್ಯತಿಷ್ಠದ್ಯಥಾಽಂಭೋದಂ ವಿದ್ಯುತ್ವಂತಂ ದಿವಾಕರಃ ॥12॥
ಶಲ್ಯನು ತನ್ನ ರಥದಲ್ಲಿ ಕುಳಿತುದನ್ನು ಕಂಡು ಕರ್ಣನು ತಾನೂ ಅದನ್ನೇರಿ ಮಿಂಚಿನಿಂದ ಕೂಡಿದ ಮೋಡವನ್ನು ಸೂರ್ಯನು ಏರುವಂತೆ ಕುಳಿತ.
ತಾವೇಕರಥಮಾರೂಢಾವಾದಿತ್ಯಾಗ್ನಿಸಮತ್ವಿಷೌ |
ವ್ಯಭ್ರಾಜೇತಾಂ ಯಥಾ ಮೇಘಂ ಸೂರ್ಯಾಗ್ನೀ ಸಹಿತೌ ದಿವಿ ॥13॥
ಶಲ್ಯಕರ್ಣರು ಒಂದು ರಥದಲ್ಲಿ ಕುಳಿತಾಗ ಸೂರ್ಯ ಮತ್ತು ಅಗ್ನಿಗಳಂತೆ ಹೊಳೆಯುವ ಅವರು ಅಂತರಿಕ್ಷದಲ್ಲಿ ಮೋಡವನ್ನು ಜೊತೆಯಾಗಿ ಏರಿದ ಸೂರ್ಯಅಗ್ನಿಗಳಂತೆಯೇ ಶೋಭಿಸಿದರು.
ಸಂಸ್ತೂಯಮಾನೌ ತೌ ವೀರೌ ತದಾಸ್ತಾಂ ದ್ಯುತಿಸತ್ತಮೌ |
ಋತ್ವಿಕ್ಸದಸ್ಯೈರಿಂದ್ರಾಗ್ನೀ ಸ್ತೂಯಮಾನಾವಿವಾಧ್ವರೇ ॥14॥
ಯಜ್ಞದಲ್ಲಿ ಋತ್ವಿಜರಿಂದಲೂ ಸದಸ್ಯರಿಂದಲೂ ಇಂದ್ರಅಗ್ನಿಗಳು ಜೊತೆ ಯಾಗಿ ಸ್ತುತಿಸಿಕೊಳ್ಳುತ್ತಾರೆ. ಹಾಗೇ ರಣದಲ್ಲಿ ಬೆಳಗುತ್ತಿದ್ದ ಕರ್ಣಶಲ್ಯರು ಜೊತೆಯಾಗಿ ಸ್ತುತಿಸಿಕೊಂಡರು.
ಸ ಶಲ್ಯಸಂಗೃಹೀತಾಶ್ವೇ ರಥೇ ಕರ್ಣಃ ಸ್ಥಿತೋ ಬಭೌ |
ಧನುರ್ವಿಸ್ಫಾರಯನ್ ಘೋರಂ ಪರಿವೇಷೀವ ಭಾಸ್ಕರಃ ॥15॥
ಕುದುರೆಗಳು ಶಲ್ಯನ ನಿಯಂತ್ರಣದಲ್ಲಿದ್ದಾಗ ರಥದಲ್ಲಿ ನಿಂತ ಕರ್ಣನು ಬಿಲ್ಲಿನ ಹೆದೆಯನ್ನು ಸೆಳೆಯುತ್ತಿದ್ದರೆ ಪರಿವೇಷಗೊಂಡ ಸೂರ್ಯನಂತೆ ಕಂಡುಬಂದ.
ಆಸ್ಥಿತಃ ಸ ರಥಶ್ರೇಷ್ಠಂ ಕರ್ಣಃ ಶರಗಭಸ್ತಿಮಾನ್ |
ಪ್ರಬಭೌ ಪುರುಷವ್ಯಾಘ್ರೋ ಮಂದರಸ್ಥ ಇವಾಂಶುಮಾನ್ ॥16॥
ರಥದಲ್ಲಿ ನಿಂತ ಕರ್ಣನು ಸೂರ್ಯಕಿರಣಗಳಂತೆ ಹೊಳೆಯುವ ಬಾಣಗಳನ್ನು ಎತ್ತಿಕೊಂಡಾಗ ಮಂದರಪರ್ವತವನ್ನೇರಿದ ಬೆಳಗಿನ ಸೂರ್ಯನಂತೆ ಕಂಡುಬಂದ.
ತಂ ರಥಸ್ಥಂ ಮಹಾಬಾಹುಂ ಯುದ್ಧಾಯಾಮಿತತೇಜಸಮ್ |
ದುರ್ಯೋಧನಸ್ತು ರಾಧೇಯಮಿದಂ ವಚನಮಬ್ರವೀತ್ ॥17॥
ಯುದ್ಧಕ್ಕಾಗಿ ರಥವನ್ನೇರಿದ ಅಮಿತತೇಜನಾದ ಕರ್ಣನಿಗೆ ದುರ್ಯೋಧನ ಈ ಮಾತನ್ನು ಹೇಳಿದ.
ಅಕೃತಂ ದ್ರೋಣಭೀಷ್ಮಾಭ್ಯಾಂ ದುಷ್ಕರಂ ಕರ್ಮ ಸಂಯುಗೇ |
ಕುರುಷ್ವಾಧಿರಥೇ ವೀರ ಮಿಷತಾಂ ಸರ್ವಧನ್ವಿನಾಮ್ ॥18॥
ದ್ರೋಣ ಭೀಷ್ಮರಿಂದ ರಣದಲ್ಲಿ ಮಾಡಲಾಗದಿದ್ದ ದುಷ್ಕರಕಾರ್ಯವನ್ನು ಎಲ್ಲ ಬಿಲ್ಗಾರರೂ ನೋಡುತ್ತಿರುವಂತೆ ನೀನು ಸಾಧಿಸಬೇಕು.
ಮನೋಗತಂ ಮಮ ಹ್ಯಾಸೀದ್ ಭೀಷ್ಮದ್ರೌಣೌ ಮಹಾರಥೌ |
ಅರ್ಜುನಂ ಭೀಮಸೇನಂ ಚ ನಿಹಂತಾರಾವಿತಿ ಧ್ರುವಮ್ ॥19॥
ಮಹಾರಥರಾದ ಭೀಷ್ಮ ದ್ರೋಣರು ಅರ್ಜುನನನ್ನೂ ಭೀಮನನ್ನೂ ನಿಶ್ಚಯವಾಗಿ ಕೊಲ್ಲುವರೆಂದು ನನ್ನ ಮನೋಗತವಿತ್ತು.
ತಾಭ್ಯಾಂ ಯದಕೃತಂ ವೀರ ವೀರಕರ್ಮ ಮಹಾಮೃಧೇ |
ತತ್ಕರ್ಮ ಕುರು ರಾಧೇಯ ವಜ್ರಪಾಣಿರಿವಾಪರಃ ॥20॥
ಅವರು ಮಾಡದಿದ್ದ ವೀರಕರ್ಮವನ್ನು ನೀನು ಮಾಡಬೇಕು. ನೀನು ಇನ್ನೊಬ್ಬ ವಜ್ರಾಯುಧಧಾರಿ ಇಂದ್ರನಂತಿರುವೆ.
ಗೃಹಾಣ ಧರ್ಮರಾಜಂ ವಾ ಜಹಿ ವಾ ತ್ವಂ ಧನಂಜಯಮ್ |
ಭೀಮಸೇನಂ ಚ ರಾಧೇಯ ಮಾದ್ರೀಪುತ್ರೌ ಯಮಾವಪಿ ॥21॥
`ನೀನು ಧರ್ಮರಾಜನನ್ನು ಸೆರೆ ಹಿಡಿ ಅಥವಾ ಅರ್ಜುನ ಭೀಮಸೇನ ನಕುಲ ಸಹದೇವರನ್ನು ಕೊಲ್ಲು.
ಜಯಶ್ಚ ತೇಽಸ್ತು ಭದ್ರಂ ತೇ ಪ್ರಯಾಹಿ ಪುರುಷರ್ಷಭ |
ಪಾಂಡುಪುತ್ರಸ್ಯ ಸೈನ್ಯಾನಿ ಕುರು ಸರ್ವಾಣಿ ಭಸ್ಮಸಾತ್ ॥22॥

`ನಿನಗೆ ಜಯವಾಗಲಿ, ಶುಭವಾಗಲಿ, ಯುದ್ಧಕ್ಕೆ ಹೋಗು. ಧರ್ಮರಾಜನ ಸೈನ್ಯವನ್ನೆಲ್ಲ ಭಸ್ಮಮಾಡು.'
ತತಸ್ತೂರ್ಯಸಹಸ್ರಾಣಿ ಭೇರೀಣಾಮಯುತಾನಿ ಚ |
ವಾದ್ಯಮಾನಾನ್ಯರೋಚಂತ ಮೇಘಶಬ್ದೋ ಯಥಾ ದಿವಿ ॥23॥
ಒಡನೆ ಸಾವಿರ ರಣವಾದ್ಯಗಳು, ಹತ್ತುಸಾವಿರ ಭೇರಿಗಳು ಅಂತರಿಕ್ಷದಲ್ಲಿ ಮೋಡಗಳಂತೆ ಮೊಳಗುತ್ತ ಶೋಭಿಸಿದುವು.
ಪ್ರತಿಗೃಹ್ಯ ತು ತದ್ವಾಕ್ಯಂ ರಥಸ್ಥೋ ರಥಸತ್ತಮಃ |
ಅಭ್ಯಭಾಷತ ರಾಧೇಯಃ ಶಲ್ಯಂ ಯುದ್ಧವಿಶಾರದಮ್ ॥24॥
ದುರ್ಯೋಧನನ ಮಾತನ್ನು ಸ್ವೀಕರಿಸಿದ ರಥಸ್ಥನಾದ ರಥಿಕಶ್ರೇಷ್ಠನಾದ ಕರ್ಣ ಯುದ್ಧವಿಶಾರದನಾದ ಶಲ್ಯನಿಗೆ ಹೇಳಿದ.
ಚೋದಯಾಶ್ವಾನ್ ಮಹಾಬಾಹೋ ಯಾವದ್ಧನ್ಮಿ ಧನಂಜಯಮ್ |
ಭೀಮಸೇನಂ ಯಮೌ ಚೋಭೌ ರಾಜಾನಂ ಚ ಯುಧಿಷ್ಠಿರಮ್ ॥25॥
ಮಹಾಬಾಹುವೇ, ಕುದುರೆಗಳನ್ನು ಓಡಿಸು. ನಾನು ಅರ್ಜುನ ಭೀಮಸೇನ ನಕುಲ ಸಹದೇವರನ್ನೂ ರಾಜಾ ಯುಧಿಷ್ಠಿರನನ್ನೂ ಹೊಡೆಯುತ್ತೇನೆ.
ಅದ್ಯ ಪಶ್ಯತು ಮೇ ಶಲ್ಯ ಬಾಹುವೀರ್ಯಂ ಧನಂಜಯಃ |
ಅಸ್ಯತಃ ಕಂಕಪತ್ರಾಣಾಂ ಸಹಸ್ರಾಣಿ ಶತಾನಿ ಚ ॥26॥
ಶಲ್ಯ, ಈಗ ರಣಹದ್ದಿನ ರೆಕ್ಕೆಯುಳ್ಳ ನೂರಾರು ಸಾವಿರಾರು ಬಾಣಗಳನ್ನು ಎಸೆಯುವ ನನ್ನ ಬಾಹುಬಲವನ್ನು ಅರ್ಜುನ ನೋಡಲಿ.
ಅದ್ಯ ಕ್ಷೇಪ್ಸ್ಯಾಮ್ಯಹಂ ಶಲ್ಯ ಶರಾನ್ ಪರಮತೇಜನಾನ್ |
ಪಾಂಡವಾನಾಂ ವಿನಾಶಾಯ ದುರ್ಯೋಧನಜಯಾಯ ಚ ॥27॥
ಶಲ್ಯ, ನಾನು ಈಗ ಪಾಂಡವರ ವಿನಾಶಕ್ಕೆ, ದುರ್ಯೋಧನನ ವಿಜಯಕ್ಕೆ ಬಲು ತೀಕ್ಷ್ಣವಾದ ಬಾಣಗಳನ್ನೆಸೆಯುತ್ತೇನೆ.
ಸಂಜಯಃ
ಏತಚ್ಛ್ರುತ್ವಾ ವಚಸ್ತಸ್ಯ ಶಲ್ಯಃ ಕರ್ಣಂ ವಚೋಽಬ್ರವೀತ್ |
ಕಥಂ ನು ತಾನ್ ಮಹಾವೀರ್ಯಾನ್ ಪಾಂಡವಾನವಮನ್ಯಸೇ ॥28॥
ಸಂಜಯ ನುಡಿದ– ಕರ್ಣನ ಈ ಮಾತನ್ನು ಕೇಳಿ ಶಲ್ಯ ನುಡಿದ. ಮಹಾ ಪರಾಕ್ರಮಿಗಳಾದ ಆ ಪಾಂಡವರನ್ನು ನೀನು ಹೇಗೆ ತಾನೆ ಈರೀತಿ ಅವಮಾನಿಸುವೆ?
ಸರ್ವಾಸ್ತ್ರಜ್ಞಾನ್ ಮಹೇಷ್ವಾಸಾನ್ ಸರ್ವಾನೇವ ಮಹಾಬಲಾನ್ |
ಅನಿವರ್ತಿನೋ ಮಹಾಭಾಗಾನಜಯ್ಯಾನ್ ಸತ್ಯವಿಕ್ರಮಾನ್ ॥29॥
ಅಪಿ ಸಂಜನಯೇಯುರ್ಯೇ ಭಯಂ ಸಾಕ್ಷಾಚ್ಛತಕ್ರತೋಃ ॥30॥
ಪಾಂಡವರು ಎಲ್ಲರೂ ಸರ್ವಾಸ್ತ್ರಗಳನ್ನು ಬಲ್ಲವರು. ಮಹಾಧನುರ್ಧಾರಿಗಳು, ಮಹಾಬಲಿಷ್ಠರು, ಸೋತು ಹಿಂದಿರುಗದವರು, ಮಹಾಭಾಗ್ಯಶಾಲಿಗಳು, ಅಜೇಯರು, ಅಮೋಘ ಪರಾಕ್ರಮಿಗಳು. ಸಾಕ್ಷಾತ್ ದೇವೇಂದ್ರನಿಗೂ ಕೂಡ ಭಯ ಉಂಟುಮಾಡಬಲ್ಲರು.
ಯದಾ ಶ್ರೋಷ್ಯಸಿ ನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ರಾಧೇಯ ಪಾರ್ಥಧನುಷಸ್ತದಾ ನೈವಂ ವದಿಷ್ಯಸಿ ॥31॥
ಕರ್ಣ, ಅರ್ಜುನನ ಧನುಸ್ಸಿನ ಮೇಘಗರ್ಜನದಂಥ ಧ್ವನಿಯನ್ನು ನೀನು ಕೇಳಿದಾಗ ನೀನು ಈ ರೀತಿ ಮಾತನಾಡಲಾರೆ.
ಯದಾ ದ್ರಕ್ಷ್ಯಸಿ ಭೀಮೇನ ಕುಂಜರಾನೀಕಮಾಹವೇ |
ವಿಶೀರ್ಣದಂತಂ ನಿಹತಂ ತದಾ ನೈವಂ ವದಿಷ್ಯಸಿ ॥32॥
ರಣದಲ್ಲಿ ಗಜಸೇನೆಯನ್ನು ಭೀಮಸೇನ ಆಕ್ರಮಿಸಿ ದಂತಗಳನ್ನು ಮುರಿದುಕೊಲ್ಲುವುದನ್ನು ಕಂಡಾಗ ನೀನು ಈರೀತಿ ಮಾತನಾಡಲಾರೆ.
ಯದಾ ದ್ರಕ್ಷ್ಯಸಿ ಸಂಗ್ರಾಮೇ ಧರ್ಮಪುತ್ರಂ ಯಮೌ ತಥಾ |
ಶಿತೈಃ ಪೃಷತ್ಕೈಃ ಕುರ್ವಾಣಾನಭ್ರಚ್ಛಾಯಾಮಿವಾಂಬರೇ ॥33॥
ರಣದಲ್ಲಿ ಧರ್ಮರಾಜನೂ ನಕುಲ ಸಹದೇವರೂ ತೀಕ್ಷ್ಣವಾದ ಬಾಣಗಳಿಂದ ಅಂತರಿಕ್ಷವನ್ನು ಮೋಡಮುಸುಕಿದಾಕಾಶದಂತೆ ಮಾಡುವುದನ್ನು ಕಂಡಾಗ ನೀನು ಈ ರೀತಿ ಮಾತನಾಡಲಾರೆ.
ಅಸ್ಯತಃ ಕ್ಷಿಣ್ವತಶ್ಚಾರೀನ್ ಲಘುಹಸ್ತಾನ್ ದುರಾಸದಾನ್ |
ಪಾರ್ಥಿವಾನಪಿ ಚಾನ್ಯಾಂಸ್ತ್ವಂ ತದಾ ನೈವಂ ವದಿಷ್ಯಸಿ ॥34॥
ಬೇರೆ ರಾಜರೂ ಹಸ್ತವೇಗ ಉಳ್ಳವರು ಶತ್ರುಗಳಿಗೆ ಮಣಿಯದವರು ಶತ್ರುಗಳನ್ನು ಓಡಿಸುತ್ತಾರೆ ನಾಶಮಾಡುತ್ತಾರೆ. ಅದನ್ನು ನೋಡಿದಾಗ ನೀನು ಈರೀತಿ ಮಾತನಾಡಲಾರೆ.
ಸಂಜಯಃ
ಅನಾದೃತ್ಯ ತು ತದ್ವಾಕ್ಯಂ ಮದ್ರರಾಜೇನ ಭಾಷಿತಮ್ |
ದ್ರಕ್ಷ್ಯಸ್ಯದ್ಯೇತ್ಯವೋಚತ್ ತಂ ಶಲ್ಯಂ ಕರ್ಣೋ ಜನೇಶ್ವರ ॥35॥
ಸಂಜಯ ನುಡಿದ– ರಾಜನೆ, ಶಲ್ಯನು ಆಡಿದ ಈ ಮಾತನ್ನು ಕಡೆಗಣಿಸಿ ಕರ್ಣನು `ನೀನೇ ನೋಡುವಿ' ಎಂದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಶಲ್ಯಸಂವಾದೇ ಸಪ್ತತ್ರಿಂಶೋಧ್ಯಾಯಃ ॥37॥
ಮೂವತ್ತೆಂಟನೆಯ ಅಧ್ಯಾಯ
ಕರ್ಣ ಯುದ್ಧಕ್ಕೆ ಹೊರಟಾಗ ಅಪಶಕುನಗಳು. ಅರ್ಜುನನಿಗೆ ತಾನು ಭಯಪಡಲಾರೆ ಎನ್ನುತ್ತಾನೆ ಕರ್ಣ. ಶಲ್ಯ ಅರ್ಜುನನನ್ನೇ

ಹೊಗಳುತ್ತಾನೆ.
ಸಂಜಯಃ
ದೃಷ್ಟ್ವಾ ಕರ್ಣಂ ಮಹಾವೀರ್ಯಂ ಯುಯುತ್ಸುಂ ಸಮವಸ್ಥಿತಮ್ |
ಚುಕ್ರುಶುಃ ಕುರವಃ ಸರ್ವೇ ಹೃಷ್ಟರೂಪಾಃ ಸಮಂತತಃ ||1||
ಸಂಜಯ ಧೃತರಾಷ್ಟ್ರನಿಗೆ ನುಡಿದ– ಮಹಾಪರಾಕ್ರಮಿಯಾದ ಕರ್ಣನು ಯುದ್ಧಕ್ಕೆ ಸನ್ನದ್ಧನಾಗಿ ಬಂದುದನ್ನು ಕಂಡು ಕೌರವರೆಲ್ಲರೂ ಉತ್ಸಾಹಗೊಂಡು ಎಲ್ಲೆಡೆ ಗರ್ಜನೆ ಮಾಡಿದರು.
ತತೋ ದುಂದುಭಿನಿರ್ಘೋಷೈರ್ಭೇರೀಣಾಂ ನಿನದೇನ ಚ |
ಬಾಣಶಬ್ದೈಶ್ಚ ವಿವಿಧೈರ್ಗರ್ಜಿತೈಶ್ಚ ತರಸ್ವಿನಾಮ್ ||2||
ನಿರ್ಯಯುಸ್ತಾವಕಾಃ ಸರ್ವೇ ಮೃತ್ಯುಂ ಕೃತ್ವಾ ನಿವರ್ತನಮ್ ||3||
ದುಂದುಭಿಘೋಷ ಭೇರಿನಿನಾದ ಬಾಣಶಬ್ದ ಆನೆ ಕುದುರೆಗಳ ನಾನಾ ಬಗೆಯ ಸಿಂಹನಾದಗಳೊಂದಿಗೆ ನಿನ್ನ ಸೈನಿಕರೆಲ್ಲರೂ ಮರಣವನ್ನೂ ಲೆಕ್ಕಿಸದೆ ಶಿಬಿರಗಳಿಂದ ಹೊರಗೆ ನಡೆದರು.
ಪ್ರಯಾತೇ ತು ತತಃ ಕರ್ಣೇ ಯೋಧೇಷು ವಿವಿಧೇಷು ಚ |
ಚಚಾಲ ಚ ಮಹೀ ಸರ್ವಾ ರರಾಸ ಚ ಸುವಿಸ್ವರಮ್ ||4||
ನಿಃಸರಂತೋ ವ್ಯದೃಶ್ಯಂತ ಸೂರ್ಯಾತ್ ತಪ್ತಮಹಾಗ್ರಹಾಃ ||5||
ಕರ್ಣನು ಹೊರಟಾಗ ರಥಿಕರು ಅಶ್ವಾರೋಹಿಗಳು ಮುಂತಾದ ವಿವಿಧ ಯೋಧಸಮೂಹಗಳೂ ರಣರಂಗದಲ್ಲಿ ಬಂದು ಕೂಡಿದಾಗ ಇಡೀ ಭೂಮಿ ನಡುಗಿತು. ಅಪಸ್ವರ ಧ್ವನಿ ಉಂಟುಮಾಡಿತು. ಸೂರ್ಯಮಂಡಲದಿಂದ ಉರಿಯುವ ಮಹಾಗ್ರಹಗಳು ಹೊರಟುಬಂದುವು.
ಉಲ್ಕಾಪಾತಾಶ್ಚ ಸಂಜಜ್ಞುರ್ದಿಗ್ದಾಹಾಶ್ಚೈವ ದಾರುಣಾಃ |
ತಥಾಽಶನ್ಯಶ್ಚ ಸಂಪೇತುರ್ವವುರ್ವಾತಾಶ್ಚ ಭೈರವಾಃ ||6||
ಉಲ್ಕಾಪಾತಗಳೂ ದಾರುಣವಾದ ದಿಗ್ದಾಹಗಳೂ ಸಿಡಿಲಿನ ಆಘಾತಗಳೂ ಭೀಕರ ಬಿರುಗಾಳಿಗಳೂ ಉಂಟಾದುವು.
ಮೃಗಪಕ್ಷಿಗಣಾಶ್ಚೈವ ಪೃತನಾಂ ಬಹುಶಸ್ತವ |
ಅಪಸವ್ಯಂ ತದಾ ಚಕ್ರುರ್ವೇದಯಂತೋ ಮಹಾಭಯಮ್ ||7||
ನಿನ್ನ ಸೈನ್ಯಕ್ಕೆ ಬಹುಸಂಖ್ಯೆಯಲ್ಲಿ ಮೃಗಪಕ್ಷಿಗಳು ಅಪ್ರದಕ್ಷಿಣವಾಗಿ ಸಂಚರಿಸಿ ಮಹಾ ಅನಿಷ್ಟವನ್ನು ಸೂಚಿಸಿದುವು.
ಪ್ರಸ್ಥಿತಸ್ಯ ಚ ಕರ್ಣಸ್ಯ ನಿಪೇತುಸ್ತುರಗಾ ಭುವಿ |
ಅಸ್ಥಿವರ್ಷಂ ಚ ಪತಿತಮಂತರಿಕ್ಷಾದ್ ಭಯಾನಕಮ್ ||8||
ಕರ್ಣನು ಹೊರಡುತ್ತಿದ್ದಂತೆ ಅವನ ಕುದುರೆಗಳು ನೆಲದ ಮೇಲೆ ಮುಗ್ಗರಿಸಿದುವು. ಅಂತರಿಕ್ಷದಿಂದ ಭಯಾನಕವಾದ ಮೂಳೆಗಳ ಮಳೆ ಸುರಿಯಿತು.
ಜಜ್ವಲುಶ್ಚೈವ ಶಸ್ತ್ರಾಣಿ ಧ್ವಜಾಶ್ಚೈವ ಚಕಂಪಿರೇ |
ಅಶ್ರೂಣಿ ಚ ವ್ಯಮುಂಚಂತ ವಾಹನಾನಿ ವಿಶಾಂಪತೇ ||9||
ಆಯುಧಗಳು ಉರಿಯತೊಡಗಿದುವು. ಧ್ವಜಗಳು ಕಂಪಿಸಿದುವು. ಆನೆ ಕುದುರೆ ವಾಹನಗಳು ಕಣ್ಣೀರು ಸುರಿಸಿದುವು.
ಏತೇ ಚಾನ್ಯೇ ಚ ಬಹವ ಉತ್ಪಾತಾಸ್ತತ್ರ ಮಾರಿಷ |
ಸಮುತ್ಪೇತುರ್ವಿನಾಶಾಯ ಕೌರವಾಣಾಂ ಸುದಾರುಣಾಃ ||10||
ಇನ್ನೂ ಬೇರೆ ಅನೇಕ ಭೀಕರ ಉತ್ಪಾತಗಳು ತಲೆದೋರಿದುವು. ಕೌರವರ ವಿನಾಶವನ್ನು ಸೂಚಿಸಿದುವು.
ನ ಚ ತಾನ್ ಗಣಯಾಮಾಸುಃ ಸರ್ವೇ ದೈವೇನ ಮೋಹಿತಾಃ |
ಪ್ರಸ್ಥಿತಂ ಸೂತಪುತ್ರಂ ಚ ಜಯೇತ್ಯೂಚುರ್ನರಾಧಿಪಾಃ ||11||
ದೈವದಿಂದ ವಿಮೋಹಗೊಂಡಿದ್ದ ಕೌರವರಿಗೆ ಯಾರಿಗೂ ಈ ಅಪಶಕುನ ಗಳು ಗಮನಕ್ಕೇ ಬರಲಿಲ್ಲ. ಎಲ್ಲ ರಾಜರು ಯುದ್ಧಕ್ಕೆ ಹೊರಟ ಕರ್ಣನಿಗೆ ಜಯಕಾರವನ್ನೇ ಮಾಡಿದರು.
ಶಲ್ಯೇನ ಸಹಿತಂ ದೃಷ್ಟ್ವಾ ಕರ್ಣಮಾಹವಶೋಭಿನಮ್ |
ನಿರ್ಜಿತಾನ್ ಪಾಂಡವಾಂಶ್ಚೈವ ಮೇನಿರೇ ತತ್ರ ಕೌರವಾಃ ||12||
ಯುದ್ಧದಲ್ಲಿ ಶೋಭಿಸುವ ಕರ್ಣನು ಶಲ್ಯನಿಂದೊಡಗೂಡಿದ್ದನ್ನು ಕಂಡು ಪಾಂಡವರು ಪರಾಭವಗೊಳ್ಳುವುದು ಖಚಿತ ಎಂದುಕೊಂಡರು.
ತತೋ ರಥಸ್ಥಃ ಪರವೀರಹಂತಾ
ಭೀಷ್ಮದ್ರೋಣಾವಸ್ತುವೀರ್ಯೌ ನಿರೀಕ್ಷ್ಯ |
ಸಮುಜ್ಜ್ವಲನ್ ಭಾಸ್ಕರಪಾವಕಾಭೋ
ವೈಕರ್ತನೋಽಸೌ ರಥಕುಂಜರೋ ವೃಷಾ ||13||
ಶತ್ರುವೀರನಾಶಕನಾದ ಕರ್ಣನು ರಣರಂಗದಲ್ಲಿ ಭೀಷ್ಮದ್ರೋಣ ಮುಂತಾದವರು ಶತ್ರುನಾಶದಲ್ಲಿ ಅಸಮರ್ಥರಾಗಿ ತಾವೇ ಬಿದ್ದಿರುವುದನ್ನು ಕಂಡು ಸೂರ್ಯಾಗ್ನಿಸಮತೇಜಸ್ವಿಯಾದ ಮಹಾರಥನಾದ ಕರ್ಣನು ರಥದಲ್ಲಿ ಕೋಪ ದಿಂದ ಜ್ವಲಿಸಿದ.
ಸ ಶಲ್ಯಮಾಭಾಷ್ಯ ಜಗಾದ ವಾಕ್ಯಂ
ಪಾರ್ಥಸ್ಯ ದೃಷ್ಟ್ವಾಽಪ್ರತಿಮಂ ಚ ಕರ್ಮ |
ಮಾನೇನ ದರ್ಪೇಣ ವಿದಹ್ಯಮಾನಃ

ಕ್ರೋಧೇನ ದೀಪ್ಯನ್ನಿವ ನಿಃಶ್ವಸಂಶ್ಚ ॥14॥
ಕರ್ಣನು ರಣದಲ್ಲಿ ಅರ್ಜುನನ ಅಪ್ರತಿಮ ಸಾಹಸವನ್ನು ಕಂಡು ಅಭಿಮಾನ ದರ್ಪಗಳಿಂದ ಬೇಯುತ್ತ ಕೋಪದಿಂದ ಉರಿಯುವಂತೆ ನಿಟ್ಟುಸಿರುಬಿಡುತ್ತ ಶಲ್ಯನನ್ನು ಕರೆದು ನುಡಿದ.
ನಾಹಂ ಮಹೇಂದ್ರಾದಪಿ ವಜ್ರಪಾಣೇಃ
ಕ್ರುದ್ಧಾದ್ ಬಿಭೇಮ್ಯಾತ್ತಧನೂ ರಥಸ್ಥಃ ।
ದೃಷ್ಟ್ವಾಽಪಿ ಭೀಷ್ಮಪ್ರಮುಖಾನ್ ಶಯಾನಾ-
ನ್ನತ್ವೇವ ಮಾಂ ಸಾ ಸ್ಥಿರತಾ ಜಹಾತಿ ॥15॥
ನಾನು ಬಿಲ್ಲು ಹಿಡಿದು ರಥದಲ್ಲಿ ನಿಂತನೆಂದರೆ ವಜ್ರಪಾಣಿಯಾದ ಮಹೇಂದ್ರನಿಗೂ ಹೆದರುವುದಿಲ್ಲ. ಭೀಷ್ಮ ಮುಂತಾದವರು ನೆಲದಲ್ಲಿ ಒರಗಿದ್ದನ್ನು ನಾನು ಕಾಣುತ್ತಿದ್ದರೂ ನನ್ನಲ್ಲಿ ಧೈರ್ಯ ಸ್ಥಿರತೆ ಹೊರಟು ಹೋಗುವುದಿಲ್ಲ.
ಮಹೇಂದ್ರವಿಷ್ಣುಪ್ರತಿಮಾವನಿಂದಿತೌ
ರಥಾಶ್ವನಾಗಪ್ರವರಪ್ರಮಾಥಿನೌ ।
ಅವಧ್ಯಕಲ್ಪೌ ನಿಹತೌ ಯದಾ ಪರೈ-
ಸ್ತಥಾಪಿ ಮೇ ನಾಸ್ತಿ ರಣೇಽದ್ಯ ಸಾಧ್ವಸಮ್ ॥16॥
ಭೀಷ್ಮದ್ರೋಣರು ಇಂದ್ರವಿಷ್ಣುಗಳಂಥ ಪರಾಕ್ರಮಿಗಳು, ಶ್ರೇಷ್ಠ ರಥ ಅಶ್ವ ಗಜಗಳನ್ನೂ ಪುಡಿ ಮಾಡಬಲ್ಲವರು. ಅವಧ್ಯರಂತಿದ್ದವರು. ಯಾವುದೇ ದೋಷವಿಲ್ಲದಿದ್ದವರು. ಅವರೂ ಕೂಡ ಶತ್ರುಗಳಿಂದ ಹತರಾದರು. ಆದರೂ ನನಗೆ ರಣರಂಗದಲ್ಲಿ ಭಯವಿಲ್ಲ.
ಸಮೀಕ್ಷ್ಯ ಸಂಖ್ಯೇಽತಿಬಲಾನ್ ನರಾಧಿಪಾನ್
ನರಾಶ್ವಮಾತಂಗರಥಾನ್ ಪರೈರ್ಹತಾನ್ ।
ಕಥಂ ನ ಸರ್ವಾನಹಿತಾನ್ ರಣೇಽವಧೀತ್
ಮಹಾಸ್ತ್ರವಿದ್ ಬ್ರಾಹ್ಮಣಪುಂಗವೋ ಗುರುಃ ॥17॥
ರಣದಲ್ಲಿ ಪದಾತಿ ಅಶ್ವ ಗಜ ರಥ ಸೈನ್ಯ ಸಮೇತರಾದ ಅತಿಬಲಿಷ್ಠರಾದ ರಾಜರು ಶತ್ರುಗಳಿಂದ ಹತರಾಗಿ ಬಿದ್ದುದನ್ನು ಕಂಡೂ ಕೂಡ ಮಹಾ ಅಸ್ತ್ರಜ್ಞಾನಿಯಾದ ಬ್ರಾಹ್ಮಣಶ್ರೇಷ್ಠನಾದ ಗುರು ದ್ರೋಣರು ಏಕೆ ರಣದಲ್ಲಿ ಎಲ್ಲ ಶತ್ರುಗಳನ್ನು ಕೊಲ್ಲಲಿಲ್ಲ?
ಸ ಸಂಸ್ಮರನ್ ದ್ರೋಣಮಹಂ ಮಹಾಹವೇ
ಬ್ರವೀಮಿ ಸತ್ಯಂ ಕುರವೋ ನಿಬೋಧತ ।
ನ ವೋ ಮದನ್ಯಃ ಪ್ರಸಹೇದ್ ರಣೇಽರ್ಜುನಂ
ಸಮಾಗತಂ ಮೃತ್ಯುಮಿವೋಗ್ರರೂಪಿಣಮ್ ॥18॥
ಮಹಾಯುದ್ಧದಲ್ಲಿ ಮಡಿದ ದ್ರೋಣರನ್ನು ನೆನೆದು, ಕೌರವರೆ, ಕೇಳಿರಿ, ನಿಜವನ್ನೇ ಹೇಳುತ್ತೇನೆ, ರಣದಲ್ಲಿ ಮೃತ್ಯುವಿನಂತೆ ಉಗ್ರರೂಪಿಯಾಗಿ ಬರುವ ಅರ್ಜುನನನ್ನು ನನ್ನ ಹೊರತು ಇನ್ನೊಬ್ಬನು ಇದಿರಿಸಲಾರ.
ಶಿಕ್ಷಾ ಪ್ರಸಾದಶ್ಚ ಬಲಂ ಧೃತಿಶ್ಚ
ದ್ರೋಣೇ ಮಹಾಸ್ತ್ರಾಣಿ ಚ ಸಂನತಿಶ್ಚ ।
ಸ ಚೇದಗಾನ್ಮೃತ್ಯುವಶಂ ಮಹಾತ್ಮಾ
ಸರ್ವಾನನ್ಯಾನಾತುರಾನದ್ಯ ಮನ್ಯೇ ॥19॥
ಶಿಕ್ಷಣ ಪ್ರಸನ್ನತೆ ಬಲ ಧೈರ್ಯ ಮಹಾಸ್ತ್ರಗಳು ವಿನಯ ಈ ಎಲ್ಲ ಗುಣಗಳು ದ್ರೋಣರಲ್ಲಿದ್ದುವು. ಅಂಥ ಮಹಾತ್ಮದ್ರೋಣರೂ ಮೃತ್ಯುವಶರಾದರೆಂದ ಮೇಲೆ ಬೇರೆ ಎಲ್ಲರೂ ಸಾವಿಗೆ ಸನಿಹದಲ್ಲಿರುವವರೇ ಎಂದು ಭಾವಿಸುತ್ತೇನೆ.
ನೇಹ ಧ್ರುವಂ ಕಿಂಚಿದಪಿ ಪ್ರಚಿಂತಯನ್
ವದಾಮಿ ಲೋಕೇ ಕರ್ಮಣೋ ದೈವಯೋಗಾತ್ ।
ಸೂರ್ಯೋದಯೇ ಕೋ ಹಿ ವಿಮುಕ್ತಸಂಶಯೋ
ಭಾವಂ ಕುರ್ವೀತಾದ್ಯ ಗುರೌ ನಿಪಾತಿತೇ ॥20॥
ಪೌರುಷದ ಮೇಲೆ ದೈವದ ನಿಯಂತ್ರಣವಿದ್ದೇ ಇರುವುದರಿಂದ ಲೋಕದಲ್ಲಿ ಪೌರುಷ ಯಾವುದೂ ಸ್ಥಿರವಲ್ಲ. ಇದನ್ನು ಚೆನ್ನಾಗಿ ಆಲೋಚಿಸಿ ಹೇಳುತ್ತಿದ್ದೇನೆ. ಇದೀಗ ಉಷಃಕಾಲ. ಮುಂದೆ ಬರಲಿರುವ ಸೂರ್ಯೋದಯ ಕಾಲದಲ್ಲಿ ನಾನಿರುತ್ತೇನೆ ಎಂದು ನಿಃಸಂದಿಗ್ಧವಾಗಿ ಯಾವನು ತಾನೆ ಹೇಳಬಲ್ಲ? ಏಕೆಂದರೆ ಗುರುದ್ರೋಣರು ಹತರಾಗಿ ಬಿದ್ದಿದ್ದಾರೆ!
ನ ನೂನಮಸ್ತ್ರಾಣಿ ಬಲಂ ಪರಾಕ್ರಮಃ
ಕ್ರಿಯಾಃ ಸುನೀತಂ ಪರಮಾಯುಧಾನಿ ವಾ ।
ಅಲಂ ಮನುಷ್ಯಸ್ಯ ಸುಖಾಯ ವರ್ತಿತುಂ
ತಥಾ ಹಿ ಯುದ್ಧೇ ನಿಹತಃ ಪರೈರ್ಗುರುಃ ॥21॥
ಅಸ್ತ್ರಗಳು ಬಲ ಪರಾಕ್ರಮ ಕ್ರಿಯಾಶೀಲತೆ ಸರಿಯಾದ ನೀತಿ ಉತ್ತಮ ಆಯುಧಗಳು ಇವು ಯಾವುವೂ ಮನುಷ್ಯನಿಗೆ ಸುಖವಾಗಿ ಇರಲು ಸಾಲವು. ಏಕೆಂದರೆ ಇವೆಲ್ಲ ಇದ್ದೂ ಕೂಡ ಗುರುದ್ರೋಣರು ಯುದ್ಧದಲ್ಲಿ ಶತ್ರುಗಳಿಂದ ಹತರಾದರು.
ಹುತಾಶನಾದಿತ್ಯಸಮಾನತೇಜಸಂ
ಪರಾಕ್ರಮೇ ವಿಷ್ಣುಪುರಂದರೋಪಮಮ್ ।
ನಯೇ ಬೃಹಸ್ಪತ್ಯುಶನಃಸಮಂ ಸದಾ

ನ ಚೈನಮಸ್ತ್ರಂ ತದುಪಾಸ್ತ ದುಃಸಹಮ್ ॥22॥
ಅಗ್ನಿ ಸೂರ್ಯರ ಸಮಾನತೇಜಸ್ವಿಗಳು, ಪರಾಕ್ರಮದಲ್ಲಿ ವಿಷ್ಣು ಇಂದ್ರ ಸದೃಶರು. ನೀತಿಯಲ್ಲಿಯೂ ಸದಾ ಬೃಹಸ್ಪತಿಗೆ ಶುಕ್ರಾಚಾರ್ಯನಿಗೆ ಸಮಾನರು ಗುರುದ್ರೋಣರಾಗಿದ್ದರು. ಆದರೂ ಶತ್ರುಗಳಿಗೆ ಇದಿರಿಸಲಾಗದ ಅಸ್ತ್ರವೂ ಅವರನ್ನು ಕೊನೆಗಾಲದಲ್ಲಿ ಕಾಪಾಡಲಿಲ್ಲ.
ಪರಾಕೃಷ್ಟೇ ರುದಿತಸ್ತ್ರೀಕುಮಾರೇ
ಪರಾಭೂತೇ ಪೌರುಷೇ ಧಾರ್ತರಾಷ್ಟ್ರೇ |
ಮಯಾ ಕೃತ್ಯಮಿತಿ ಜಾನಾಮಿ ಶಲ್ಯ
ಪ್ರಯಾಹಿ ತಸ್ಮಾದ್ ದ್ವಿಷತಾಮನೀಕಮ್ ॥23॥
ರಣದಲ್ಲಿ ಶತ್ರುಗಳಿಂದ ವೀರಪುತ್ರರು ಹತರಾದಾಗ ಅವರ ತಾಯಂದಿರು ಕಣ್ಣೀರು ಸುರಿಸಿದರು. ಕೌರವರ ಪೌರುಷ ಸೋತಿತು. ಈಗ ನಾನು ಪೌರುಷ ತೋರಬೇಕು ಎಂದು, ಶಲ್ಯ, ನಾನು ತಿಳಿದಿದ್ದೇನೆ. ಅದರಿಂದ ಶತ್ರುಸೈನ್ಯದ ಕಡೆಗೆ ಹೋಗು.
ಸ ಯತ್ರ ರಾಜಾ ಪಾಂಡವಃ ಸತ್ಯಸಂಧೋ
ವ್ಯವಸ್ಥಿತೋ ಭೀಮಸೇನಾರ್ಜುನೌ ಚ |
ಸ ವಾಸುದೇವಃ ಸಾತ್ಯಕಿಃ ಸೃಂಜಯಾಶ್ಚ
ಯಮೌ ಚ ಕಸ್ತಾನ್ ವಿಷಹೇನ್ಮದನ್ಯಃ ॥24॥
ಸತ್ಯಸಂಧನಾದ ರಾಜಾ ಯುಧಿಷ್ಠಿರ, ಭೀಮಸೇನ ಅರ್ಜುನ ಕೃಷ್ಣ ಸಾತ್ಯಕಿ ಧೃಷ್ಟದ್ಯುಮ್ನ ಮುಂತಾದ ಸೃಂಜಯರು ಮತ್ತು ನಕುಲಸಹದೇವರು ಇರುವಲ್ಲಿಗೆ ಹೋಗು, ನನ್ನ ಹೊರತು ಇನ್ನಾವನು ಅವರನ್ನು ಇದಿರಿಸಬಲ್ಲ?
ತಸ್ಮಾತ್ ಕ್ಷಿಪ್ರಂ ಮದ್ರಪತೇ ಪ್ರಯಾಹಿ
ರಣೇ ಪಾಂಚಾಲಾನ್ ಪಾಂಡವಾನ್ ಸೃಂಜಯಾಂಶ್ಚ |
ತಾನ್ ವಾ ಹನಿಷ್ಯಾಮಿ ಸಮೇತ್ಯ ಸಂಖ್ಯೇ
ಯಾಸ್ಯಾಮಿ ವಾ ದ್ರೋಣಮುಖೋ ಯಮಾಯ ॥25॥
ಅದರಿಂದ, ಶಲ್ಯ, ಪಾಂಚಾಲರ ಪಾಂಡವರ ಸೃಂಜಯರ ಇದಿರಾಗಿ ಬೇಗನೆ ಹೋಗು, ನಾನು ಅವರನ್ನು ರಣದಲ್ಲಿ ಇದಿರಿಸಿ ಕೊಲ್ಲುವೆನು ಅಥವಾ ದ್ರೋಣರನ್ನು ಮುಂದೆ ಮಾಡಿಕೊಂಡು ಯಮನ ಬಳಿಗೆ ಹೋಗುವೆನು.
ನ ತ್ವೇವಾಹಂ ನ ಗಮಿಷ್ಯಾಮಿ ಮಧ್ಯೇ
ತೇಷಾಂ ಶೂರಾಣಾಮಿತಿ ಶಲ್ಯಾದ್ಯ ವಿದ್ಧಿ |
ಮಿತ್ರದ್ರೋಹೋ ಮರ್ಷಣೀಯೋ ನ ಮೇಽಯಂ
ತ್ಯಕ್ತ್ವಾ ಪ್ರಾಣಾನನುಯಾಸ್ಯಾಮಿ ದ್ರೋಣಮ್ ॥26॥
ಶಲ್ಯ, ನಾನೀಗ ಆ ಶೂರರ ಮಧ್ಯಕ್ಕೆ ಹೋಗದಿರಲಾರೆ ಎಂದು ತಿಳಿ. ಹೋಗ ದಿದ್ದರೆ ಅದು ಮಿತ್ರದ್ರೋಹವಾಗುವುದು. ಅದನ್ನು ನಾನು ಸಹಿಸುವುದಾಗದು. ಅಸುತೊರೆದು ದ್ರೋಣರನ್ನು ಹಿಂಬಾಲಿಸಿಯಾದರೂ ಹೋದೆನು.
ಪ್ರಾಜ್ಞಸ್ಯ ಮೂಢಸ್ಯ ಚ ಜೀವಿತಾಂತೇ
ನಾಸ್ತಿ ಪ್ರಮೋಕ್ಷೋಽಂತಕಸತ್ಕೃತಸ್ಯ |
ಅತೋ ವಿದ್ವನ್ನಭಿಯೋತ್ಸ್ಯಾಮಿ ಪಾರ್ಥಂ
ದಿಷ್ಟಂ ನ ಶಕ್ಯಂ ವ್ಯತಿವರ್ತಿತುಂ ವೈ ॥27॥
ಪ್ರಾಜ್ಞನಾಗಲಿ ಮೂಢನಾಗಲಿ ಆಯುಷ್ಯದ ಕೊನೆಯಲ್ಲಿ ಅಂತಕನಿಂದ ಅತಿಥಿ ಸತ್ಕಾರವನ್ನು ಹೊಂದಲೇಬೇಕಾಗುತ್ತದೆ. ಅದರಿಂದ ಬಿಡುಗಡೆ ಇರುವುದಿಲ್ಲ. ಅದರಿಂದ ಪ್ರಾಜ್ಞನಾದ ಶಲ್ಯನೆ, ಪಾಂಡವರ ಇದಿರಿಗೆ ನಾನು ಹೋಗುವೆನು. ದೈವವನ್ನು ಅತಿಕ್ರಮಿಸಲು ಯಾರಿಗೂ ಶಕ್ಯವಾಗದು.
ಕಲ್ಯಾಣವೃತ್ತಃ ಸತತಂ ಹಿ ರಾಜಾ
ವೈಚಿತ್ರವೀರ್ಯಸ್ಯ ಸುತೋ ಮಮಾಸೀತ್ |
ತಸ್ಯಾರ್ಥಸಿದ್ಧ್ಯರ್ಥಮಹಂ ತ್ಯಜಾಮಿ
ಪ್ರಿಯಾನ್ ಭೋಗಾನ್ ದುಸ್ತ್ಯಜಂ ಜೀವಿತಂ ಚ ॥28॥
ರಾಜಾ ದುರ್ಯೋಧನ ನನಗೆ ಸದಾ ಒಳ್ಳೆಯದನ್ನೇ ಮಾಡಿದ್ದಾನೆ. ಅವನ ಅಭೀಷ್ಟಸಿದ್ಧಿಗಾಗಿ ನಾನು ಇಷ್ಟವಾದ ಭೋಗವನ್ನೂ ಬಿಡಲಾಗದ ಪ್ರಾಣವನ್ನೂ ಬಿಡಲು ಸಿದ್ಧನಿದ್ದೇನೆ.
ವೈಯಾಘ್ರಚರ್ಮಾಣಮಕೂಜನಾಕ್ಷಂ
ಹೈಮಂ ತ್ರಿಕೋಶಂ ರಜತತ್ರಿವೇಣುಮ್ |
ರಥಪ್ರಬರ್ಹಂ ತುರಗಪ್ರಬರ್ಹೈ-
ರ್ಯುಕ್ತಂ ಪ್ರಾದಾನ್ಮಹ್ಯಮಿಮಂ ಹಿ ರಾಮಃ ॥29॥
ಹುಲಿಚರ್ಮದಿಂದ ಆವೃತವಾದ, ಶಬ್ದಮಾಡದ ಅಕ್ಷ ಉಳ್ಳ, ಬಂಗಾರದ ಮೂರು ಕೋಶ ಮತ್ತು ಬೆಳ್ಳಿಯ ತ್ರಿವೇಣುಗಳಿಂದ ಕೂಡಿದ, ಒಳ್ಳೆಯ ಕುದುರೆಗಳಿಂದ ಯುಕ್ತವಾದ ಶ್ರೇಷ್ಠವಾದ ಈ ರಥವನ್ನು ನನಗೆ ಪರಶುರಾಮ ನೀಡಿದ್ದಾನೆ.
ಧನೂಂಷಿ ಚಿತ್ರಾಣಿ ನಿರೀಕ್ಷ್ಯ ಶಲ್ಯ
ಧ್ವಜಾನ್ ಗದಾಃ ಸಾಯಕಾಂಶ್ಚೋಗ್ರರೂಪಾನ್ |
ಅಸಿಂ ಚ ದೀಪ್ತಂ ಪರಮಾಯುಧಂ ಚ

ಶಂಖಂ ಚ ಶುಭ್ರಂ ಸ್ವನವನ್ತಮುಗ್ರಮ್ ॥30॥
ಶಲ್ಯ, ನನ್ನನ್ನು ಪ್ರೀತಿಯಿಂದ ನೋಡಿ ಪರಶುರಾಮನು ನನಗೆ ಸುಂದರವಾದ ಈ ಧನುಸ್ಸು ಧ್ವಜ ಗದೆ ಉಗ್ರವಾದ ಬಾಣಗಳು ಖಡ್ಗ ಜ್ವಲಿಸುವ ಶ್ರೇಷ್ಠವಾದ ಆಯುಧ ಭಯಂಕರ ಶಬ್ದ ಮಾಡುವ ಬಿಳಿಯಾದ ಶಂಖ ಇವೆಲ್ಲವನ್ನೂ ದಯಪಾಲಿಸಿದ್ದಾನೆ.
ಪತಾಕಿನಂ ವಜ್ರನಿಪಾತನಿಃಸ್ವನಂ
ಸಿತಾಶ್ವಯುಕ್ತಂ ಶುಭತೂಣಶೋಭಿತಮ್ ।
ಇಮಂ ಸಮಾಸ್ಥಾಯ ರಥರ್ಷಭಂ ರಣೇ
ದೃಢಂ ಹನಿಷ್ಯಾಮ್ಯಹಮರ್ಜುನಂ ಬಲಾತ್ ॥31॥
ಪತಾಕೆಗಳಿಂದ ಕೂಡಿರುವ, ಸಿಡಿಲು ಬಡಿದಂಥ ಶಬ್ದಮಾಡುವ, ಬಿಳಿ ಕುದುರೆಗಳನ್ನು ಹೂಡಿರುವ ಸುಂದರ ಬತ್ತಳಿಕೆಗಳಿಂದ ತುಂಬಿರುವ ಈ ಉತ್ತಮವಾದ ರಥವನ್ನೇರಿ ಅರ್ಜುನನನ್ನು ಭುಜಬಲದಿಂದ ದೃಢವಾಗಿ ಹೊಡೆದು ಕೊಲ್ಲುತ್ತೇನೆ.
ನ ಚೇನ್ಮೃತ್ಯುಃ ಸರ್ವಹರೋಽಭಿರಕ್ಷೇತ್
ಸದಾಽಪ್ರಮತ್ತಃ ಸಮರೇ ಪಾಂಡುಪುತ್ರಮ್ ।
ತಂ ವಾ ಹನಿಷ್ಯಾಮಿ ರಣೇ ಸಮೇತ್ಯ
ಯಾಸ್ಯಾಮಿ ವಾ ದ್ರೋಣಮುಖೋ ಯಮಾಯ ॥32॥
ಸರ್ವಸಂಹಾರಕನಾದ ಮೃತ್ಯು ರಣದಲ್ಲಿ ಅರ್ಜುನನನ್ನು ರಕ್ಷಿಸದಿದ್ದರೆ ಎಂದೂ ಪ್ರಮಾದವೇ ಇಲ್ಲದ ನಾನು ರಣದಲ್ಲಿ ಅವನನ್ನು ಇದಿರಿಸಿ ಕೊಲ್ಲುವೆ ಅಥವಾ ನಾನೇ ದ್ರೋಣನನ್ನು ಹಿಂಬಾಲಿಸಿ ಯಮನ ಬಳಿಗೆ ಹೋಗುವೆ.
ಯಮವರುಣಕುಬೇರವಾಸವಾದ್ಯಾ
ಯದಿ ಯುಗಪತ್ಸಗಣಾ ಮಹಾಹವೇ ।
ಜುಗುಪುರಿಹ ಸಮೇತ್ಯ ಫಲ್ಗುನಂ
ಕಿಮು ಬಹುನಾ ಸಹ ತೈರ್ಜಯಾಮಿ ತಮ್ ॥33॥
ಹೆಚ್ಚೇನು ಹೇಳಬೇಕು? ಯಮ ವರುಣ ಕುಬೇರ ಇಂದ್ರ ಮುಂತಾದವರು ಒಟ್ಟಿಗೆ ತಮ್ಮ ಪರಿವಾರದವರೊಂದಿಗೆ ಬಂದು ಅರ್ಜುನನನ್ನು ಕಾಪಾಡಿದರೂ ಅವರೊಂದಿಗೇ ಅವನನ್ನು ನಾನು ಪರಾಭವಗೊಳಿಸುವೆ.
ಸಂಜಯಃ
ಇತಿ ರಣರಭಸಸ್ಯ ಕತ್ಥತ-
ಸ್ತದುಪನಿಶಮ್ಯ ವಚಃ ಸ ಮದ್ರರಾಟ್ ।
ಅವಹಸದವಮನ್ಯ ವೀರ್ಯವಾನ್
ಪ್ರತಿಷಿಷಿಧೇ ಚ ಜಗಾದ ಚೋತ್ತರಮ್ ॥34॥
ಸಂಜಯ ನುಡಿದ– ಹೀಗೆ ರಣದಲ್ಲಿ ಆವೇಶಹೊಂದುವ ಕರ್ಣನು ಬಡಾಯಿ ಕೊಚ್ಚಿಕೊಳ್ಳುವುದನ್ನು ಕೇಳಿ ಪರಾಕ್ರಮಿಯಾದ ಶಲ್ಯನು ಅವಮಾನಿಸುತ್ತ ಜೋರಾಗಿ ನಕ್ಕ. ನಿಷೇಧಿಸಿದ ಮತ್ತು ಅವನ ಮಾತಿಗೆ ಉತ್ತರ ನೀಡಿದ.
ಶಲ್ಯಃ
ವಿರಮ ವಿರಮ ಕರ್ಣ ಕತ್ಥನಾತ್
ಅತಿರಭಸೋಽಪ್ಯತಿವಾಚಮುಕ್ತವಾನ್ ।
ಕ್ವ ಚ ಹಿ ನರವರೋ ಧನಂಜಯಃ
ಕ್ವ ಪುನರಿಹ ತ್ವಮಹೋ ನರಾಧಮಃ ॥35॥
ಶಲ್ಯ ನುಡಿದ– ಸಾಕುಮಾಡು ನಿನ್ನ ಬಡಾಯಿ ಮಾತನ್ನು, ಸಾಕುಮಾಡು. ರಣದಲ್ಲಿ ಆರ್ಭಟ ಮಾಡುವವನೇ ನೀನು, ನಿಜ. ಆದರೂ ಅತಿಯಾಗಿ ಬಡಾಯಿ ಕೊಚ್ಚಿಕೊಳ್ಳುವಿ. ಪುರುಷಶ್ರೇಷ್ಠನಾದ ಅರ್ಜುನನೆಲ್ಲಿ? ಆಹಾ! ಪುರುಷಾಧಮ ನಾದ ನೀನೆಲ್ಲಿ?
ಯದುಸದನಮುಪೇಂದ್ರಪಾಲಿತಂ
ತ್ರಿದಿವಮಿವಾಮರರಾಜರಕ್ಷಿತಮ್ ।
ಪ್ರಸಭಮತಿವಿಲೋಡ್ಯ ಕೋ ಹರೇತ್
ಪುರುಷವರಾವರಜಾಮೃತೇಽರ್ಜುನಾತ್ ॥36॥
ಇಂದ್ರನಿಂದ ರಕ್ಷಿತವಾದ ಸ್ವರ್ಗದಂತೆ ದುರ್ಗಮವಾಗಿರುವ ಕೃಷ್ಣ ರಕ್ಷಿತವಾದ ದ್ವಾರಕೆಯನ್ನು ಬಲಾತ್ಕಾರವಾಗಿ ಪೀಡಿಸಿ ಅಲ್ಲಿಂದ ಸುಭದ್ರೆಯನ್ನು ಅರ್ಜುನನಲ್ಲದೆ ಇನ್ನಾವನು ಅಪಹರಿಸಿ ತರಬಲ್ಲ?
ತ್ರಿಭುವನಸೃಜಮೀಶ್ವರೇಶ್ವರಂ
ಕ ಇಹ ಪುಮಾನ್ ಭವಮಾಹ್ವಯೇದ್ ಯುಧಿ ।
ಮೃಗವಧಕಲಹೇ ಋತೇಽರ್ಜುನಾತ್
ಸುರಪತಿವೀರ್ಯಸಮಪ್ರಭಾವತಃ ॥37॥
ಮೂರ್ಲೋಕವನ್ನು ಸೃಜಿಸುವ ಈಶ್ವರರಿಗೆ ಈಶ್ವರನಾದ ಕಿರಾತರೂಪ ಶಿವನನ್ನು, ಕಾಡುಹಂದಿಯನ್ನು ಕೊಂದವನು ಯಾವನು ಎನ್ನುವ ಬಗ್ಗೆ ಕಲಹವಾದಾಗ, ಯುದ್ಧದಲ್ಲಿ ಇಂದ್ರಸಮಾನ ಪರಾಕ್ರಮದಿಂದ ಅರ್ಜುನನಲ್ಲದೆ ಇನ್ನಾವನು ತಾನೆ ಇದಿರಿಸಬಲ್ಲ?
ಅಸುರಸುರಮಹೋರಗಾನ್ನರಾನ್
ಗರುಡಪಿಶಾಚಸಯಕ್ಷರಾಕ್ಷಸಾನ್ ।
ಇಷುಭಿರಜಯದಗ್ನಿಗೌರವಾತ್

ಸ್ವಭಿಲಷಿತಂ ಚ ಹವಿರ್ದದೌ ಜಯಃ ॥38॥
ಖಾಂಡವದಹನಕಾಲದಲ್ಲಿ ಅಗ್ನಿಯ ಮೇಲಿನ ಗೌರವಭಾವನೆಯಿಂದ ಅರ್ಜುನನು ಇಂದ್ರನ ಕಡೆಯ ಅಸುರ ಸುರ ಮಹಾಸರ್ಪ ನರ ಗರುಡ ಪಿಶಾಚ ಯಕ್ಷರಾಕ್ಷಸರೆಲ್ಲರನ್ನೂ ತೀಕ್ಷ್ಣವಾದ ಬಾಣಗಳಿಂದ ಪರಾಭವಗೊಳಿಸಿದನು ಮತ್ತು ಖಾಂಡವ ವನವನ್ನು ಅಗ್ನಿಗೆ ಆಹುತಿಯಾಗಿ ನೀಡಿದನು.
ಸ್ಮರಸಿ ನನು ಯದಾ ಪರೈರ್ಹೃತಃ
ಸ ಚ ಧೃತರಾಷ್ಟ್ರಸುತೋ ವಿಮೋಕ್ಷಿತಃ |
ಅಧಿರಥಜ ನರೋತ್ತಮೈರ್ಯುತಾನ್
ಕುರುಷು ಬಹೂನ್ ವಿನಿಹತ್ಯ ತಾನರೀನ್ ॥39॥
ಕರ್ಣ, ನಿನಗೆ ನೆನಪಿದೆ ತಾನೆ? ಘೋಷಯಾತ್ರಾ ಕಾಲದಲ್ಲಿ, ಕೌರವರ ವಿಷಯದಲ್ಲಿ ಶತ್ರುಗಳಂತೆ ವರ್ತಿಸಿದ ಬಹುಸಂಖ್ಯೆಯ ಗಂಧರ್ವರನ್ನು ಅರ್ಜುನನೇ ಚೆನ್ನಾಗಿ ಹೊಡೆದೋಡಿಸಿ, ಅವರು ಅಪಹರಿಸಿದ್ದ ದುರ್ಯೋಧನ ನನ್ನು ಅವರ ಬಂಧನದಿಂದ ಬಿಡುಗಡೆ ಮಾಡಿಸಿದ.
ಪ್ರಥಮಮಪಿ ಪಲಾಯಿತೇ ತ್ವಯಿ
ಪ್ರಿಯಕಲಹಾ ಧೃತರಾಷ್ಟ್ರಸೂನವಃ |
ಸ್ಮರಸಿ ನನು ಯದಾ ಪ್ರಮೋಚಿತಾಃ
ಖಚರಗಣಾನವಜಿತ್ಯ ಪಾಂಡವೈಃ ॥40॥
ಮೊದಲೇ ನೀನು ಪಲಾಯನ ಮಾಡಿದ್ದಾಗ, ಪಾಂಡವರು ಗಂಧರ್ವರ ಸಮೂಹಗಳನ್ನು ಗೆದ್ದು ತಮ್ಮೊಡನೆ ಸದಾ ಕಲಹಪ್ರಿಯರಾದ ಕೌರವರನ್ನು ಬಿಡುಗಡೆ ಮಾಡಿಸಿದರು. ಇದು ನಿನಗೆ ನೆನಪಿದೆ ತಾನೆ?
ಸಮುದಿತಬಲವಾಹನಾಃ ಪುನಃ
ಪುರುಷವರೇಣ ಜಿತಾಃ ಸ್ಥ ಗೋಗ್ರಹೇ |
ಸಗುರುಗುರುಸುತಾಃ ಸಭೀಷ್ಮಕಾಃ
ಕಿಮು ನ ಜಿತಃ ಸ ತದಾ ತ್ವಯಾಽರ್ಜುನಃ ॥41॥
ಪುನಃ ಗೋಗ್ರಹಣಕಾಲದಲ್ಲಿ ದ್ರೋಣ ಅಶ್ವತ್ಥಾಮ ಭೀಷ್ಮರಿಂದಲೂ ಸೈನ್ಯ ವಾಹನ ಸಮೂಹಗಳಿಂದಲೂ ಕೂಡಿದ್ದ ನೀವು ಒಬ್ಬ ಅರ್ಜುನನಿಂದ ಪರಾಜಿತ ರಾಗಿರುವಿರಿ. ಆಗ ನೀನು ಅರ್ಜುನನನ್ನು ಏಕೆ ಪರಾಜಯಗೊಳಿಸಲಿಲ್ಲ?
ಇದಮಪರಮುಪಸ್ಥಿತಂ ಪುನ-
ಸ್ತವ ನಿಧನಾಯ ಸುಯುದ್ಧಮದ್ಯ ವೈ |
ಯದಿ ನ ರಿಪುಭಯಾತ್ ಪಲಾಯಸೇ
ಸಮರಗತೋಽದ್ಯ ಹತೋಽಸಿ ಸೂತಜ ॥42॥
ಕರ್ಣ, ಈಗ ಇನ್ನೊಂದು ದೊಡ್ಡ ಯುದ್ಧ ಪುನಃ ನಿನ್ನ ವಧೆಗಾಗಿ ನಡೆಯುತ್ತಿದೆ. ಶತ್ರುಭಯದಿಂದ ನೀನು ಈಗ ಪಲಾಯನ ಮಾಡದಿದ್ದರೆ ಯುದ್ಧದಲ್ಲಿ ನೀನು ಹತನಾಗುವುದು ನಿಶ್ಚಿತ.
ಸಂಜಯಃ
ಇತಿ ಬಹುಪರುಷಂ ಪ್ರಭಾಷತಿ
ಪ್ರಮನಸಿ ಮದ್ರಪತೌ ರಿಪುಸ್ತವಮ್ |
ಭೃಶಮಭಿರುಷಿತಃ ಪರಂತಪಃ
ಕುರುಪೃತನಾಪತಿರಾಹ ಮದ್ರಪಮ್ ॥43॥
ಸಂಜಯ ನುಡಿದ– ಬುದ್ಧಿ ಹೇಳುವ ಒಳ್ಳೆಯ ಮನಸ್ಸುಳ್ಳ ಶಲ್ಯರಾಜನು ಬಹುಕಠೋರವಾಗಿ ಶತ್ರುವಾದ ಅರ್ಜುನನ ಸ್ತುತಿಗೈದಾಗ ಕೌರವಸೇನಾಧಿಪತಿಯಾದ ಶತ್ರುತಾಪಕನಾದ ಕರ್ಣ ಬಲು ಕೋಪಗೊಂಡು ಹೇಳಿದ.
ಕರ್ಣಃ
ಭವತು ಭವತು ಕಿಂ ವಿಕತ್ಥಸೇ
ನನು ಮಮ ತಸ್ಯ ಹಿ ಯುದ್ಧಮುದ್ಯತಮ್ |
ಯದಿ ಸ ಜಯತಿ ಮಾಮಿಹಾಹವೇ
ತತ ಇದಮಸ್ತು ಸುಕತ್ಥಿತಂ ತವ ॥44॥
ಕರ್ಣ ನುಡಿದ– ಆಗಲಿ ಆಗಲಿ, ಏಕೆ ಕೆಟ್ಟದಾಗಿ ಅರ್ಜುನನನ್ನು ಹೊಗಳುವೆ? ನನಗೂ ಅವನಿಗೂ ಯುದ್ಧ ಪ್ರಾರಂಭವಾಗುತ್ತಿದೆ. ಅವನು ಈ ಯುದ್ಧದಲ್ಲಿ ನನ್ನನ್ನು ಗೆದ್ದರೆ ಆಗ ಮಾತ್ರ ಈ ನಿನ್ನ ಹೊಗಳಿಕೆಯ ಮಾತು ಒಳ್ಳೆಯ ಹೊಗಳಿಕೆಯಾದೀತು.
ಸಂಜಯಃ
ಏವಮಸ್ತ್ವಿತಿ ಮದ್ರೇಶ ಉಕ್ತ್ವಾ ನೋತ್ತರಮುಕ್ತವಾನ್ |
ಯಾಹಿ ಶಲ್ಯೇತಿ ಚಾಪ್ಯೇನಂ ಕರ್ಣಃ ಪ್ರಾಹ ಯುಯುತ್ಸಯಾ ॥45॥
ಸಂಜಯ ನುಡಿದ– `ಹಾಗೇ ಆಗಲಿ' ಎಂದು ಶಲ್ಯ ನುಡಿದು, ಸುಮ್ಮನಾದ, ಏನೂ ಉತ್ತರವನ್ನು ನುಡಿಯಲಿಲ್ಲ. `ಹೋಗು ಶಲ್ಯ' ಎಂದು ಕರ್ಣ ಯುದ್ಧೋತ್ಸಾಹದಿಂದ ನುಡಿದ.
ಸ ರಥಃ ಪ್ರಯಯೌ ತೂರ್ಣಂ ಶ್ವೇತಾಶ್ವಃ ಶಲ್ಯಸಾರಥಿಃ |
ನಿಘ್ನನ್ನಮಿತ್ರಾನ್ ಸಮರೇ ತಮೋಘ್ನಃ ಸವಿತಾ ಯಥಾ ॥46॥

ಬಿಳಿಕುದುರೆಗಳನ್ನು ಕಟ್ಟಿದ್ದ ಆ ಕರ್ಣನ ರಥವು ಶಲ್ಯನ ಸಾರಥ್ಯದಲ್ಲಿ ಶತ್ರುಗಳನ್ನು ವಧಿಸುತ್ತ, ತಮಸ್ಸನ್ನು ನಾಶಪಡಿಸುವ ಸೂರ್ಯನಂತೆ ವೇಗವಾಗಿ ರಣರಂಗದಲ್ಲಿ ಸಂಚರಿಸಿತು.
ತತಃ ಪ್ರಾಯಾತ್ ಪ್ರೀತಿಮಾನ್ ವೈ ರಥೇನ
ವೈಯಾಘ್ರೇಣ ಶ್ವೇತಯುಜಾಽಥ ಕರ್ಣಃ |
ಸ ಚಾಲೋಕ್ಯ ಧ್ವಜಿನೀಂ ಪಾಂಡವಾನಾಂ
ಧನಂಜಯಂ ತ್ವರಯಾ ಪರ್ಯಪೃಚ್ಛತ್ ॥46॥
ಆಗ ಸಂತುಷ್ಟನಾದ ಕರ್ಣನು,ಬಿಳಿಕುದುರೆಗಳನ್ನು ಕಟ್ಟಿದ, ಹುಲಿಚರ್ಮವನ್ನು ಹೊದ್ದಿಸಿದ್ದ ಆ ರಥದಿಂದ ಪಾಂಡವಸೈನ್ಯವನ್ನು ಪ್ರವೇಶಿಸಿದ. ಆ ಸೈನ್ಯವನ್ನು ಕಂಡು ತ್ವರೆಯಿಂದ `ಅರ್ಜುನನೆಲ್ಲಿರುವನು? ತೋರಿಸಿರಿ' ಎಂದು ಕೇಳಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಶಲ್ಯಸಂವಾದೇ ಅಷ್ಟತ್ರಿಂಶೋಧ್ಯಾಯಃ ॥38॥

ಮಹಾಭಾರತತಾತ್ಪರ್ಯನಿರ್ಣಯ-ಅಧ್ಯಾಯ 27
ಇತ್ಯಾದಿವಾಕ್ಯೈಃ ಸಂಶಾಂತ ಇವ ಶಲ್ಯೋಽಸ್ಯ ಸಾರಥಿಃ |
ಬಭೂವ ತೇನ ಸಹಿತಃ ಸೇನಾಂ ವ್ಯೂಹ್ಯ ರವೇಃ ಸುತಃ ॥ 27 ॥
ಗಚ್ಛನ್ ಯುದ್ಧಾಯ ದರ್ಪೇಣ ಪ್ರಾಹ ಯೋ ಮೇಽರ್ಜುನಂ ಪುಮಾನ್ |
ದರ್ಶಯೇತ್ ತಸ್ಯ ದಾಸ್ಯಾಮಿ ಪ್ರೀತೋ ವಿತ್ತಮನರ್ಗಲಮ್ ॥ 28 ॥
ಬುದ್ಧಿ ಬಲ ಜ್ಞಾನ ಧೈರ್ಯ ಮುಂತಾದವುಗಳಿಂದ ಯಾವನು ರಥಿಕನಿಗಿಂತ ಶ್ರೇಷ್ಠನಾಗಿರುವನೋ ಅವನೇ ಸಾರಥಿಯಾಗಬೇಕು. ಅರ್ಜುನನಿಗೆ ಕೃಷ್ಣ ಹೇಗೋ ಹಾಗೆ. ಹಿಂದೆ ತ್ರಿಪುರದಹನಕ್ಕೆ ಹೊರಟ ಶಿವನಿಗೆ ಬ್ರಹ್ಮ ಹೇಗೆ ಸಾರಥಿಯಾದನೋ ಹಾಗೆ, ನೀನೂ ಕರ್ಣನಿಗೆ ಸಾರಥಿಯಾಗಬೇಕು, ಎಂಬ ಮುಂತಾದ ಮಾತುಗಳಿಂದ ಸಮಾಧಾನ ಗೊಂಡವನಂತೆ ತೋರಿಕೊಂಡು ಶಲ್ಯ ಕರ್ಣನಿಗೆ ಸಾರಥಿಯಾದ. ಅವನೊಡನೆ ಕೂಡಿ ಕರ್ಣ ಸೈನ್ಯವನ್ನು ವ್ಯೂಹವಾಗಿ ನಿಲ್ಲಿಸಿ ದರ್ಪದಿಂದ ಯುದ್ಧಕ್ಕೆ ಹೊರಟು ಹೇಳಿದ, `ಯಾವ ಮನುಷ್ಯ ನನಗೆ ಅರ್ಜುನನನ್ನು ತೋರಿಸುವನೊ ಅವನಿಗೆ ನಾನು ಸಂತುಷ್ಟನಾಗಿ ಅಮಿತ ಧನಸಂಪತ್ತನ್ನು ನೀಡುವೆನು' ಎಂದ.
ಇತಿ ಬ್ರುವಾಣಂ ಬಹುಶಃ ಪ್ರಾಹ ಶಲ್ಯಃ ಪ್ರಹಸ್ಯ ಚ |
ನಿವಾತಕವಚಾ ಯೇನ ಹತಾ ದಗ್ಧಂ ಹಿ ಖಾಂಡವಮ್ ॥ 29 ॥
ಕೋ ನಾಮ ತಂ ಜಯೇನ್ಮರ್ತ್ಯೋ ದೃಷ್ಟೋ ವೋಽಪಿ ಸ ಗೋಗ್ರಹೇ|
ಕಾಕಗೋಮಾಯುಧರ್ಮಾ ತ್ವಂ ಹಂಸಸಿಂಹೋಪಮಂ ರಣೇ ॥ 30
ಮಾ ಯಾಹಿ ಪಾರ್ಥಂ ಮಾ ಯಾಹಿ ಹತೋನೇನ ಯಮಕ್ಷಯಮ್ |
ಇತ್ಯುಕ್ತೋ ರವಿಜೋ ಮದ್ರಾನ್ ನಿತರಾಂ ಪರ್ಯಕುತ್ಸಯತ್ ॥ 31
ಹೀಗೆ ಮತ್ತೆ ಮತ್ತೆ ಕರ್ಣ ಹೇಳಲು ತೊಡಗಿದಾಗ ಶಲ್ಯ ನಕ್ಕು ಹೇಳಿದ: `ಅರ್ಜುನ ನಿವಾತಕವಚರನ್ನು ಕೊಂದವನು, ಖಾಂಡವವನವನ್ನು ಸುಟ್ಟವನು. ಅವನನ್ನು ಯಾವ ಮಾನವ ಗೆಲ್ಲಬಲ್ಲ? ಗೋಗ್ರಹಣಕಾಲದಲ್ಲಿ ನೀವೂ ಅವನನ್ನು ನೋಡಿರುವಿರಿ ತಾನೆ? ಕಾಗೆನರಿಗಳಂತಿರುವ ನೀನು ಹಂಸಸಿಂಹಗಳಂತಿರುವ ಅರ್ಜುನನನ್ನು ಯುದ್ಧದಲ್ಲಿ ಇದಿರಿಸಲು ಹೋಗಬೇಡ. ಅವನಿಂದ ಹತನಾಗಿ ಯಮಲೋಕಕ್ಕೆ ಹೋಗಬೇಡ'. ಹೀಗೆ ಶಲ್ಯ ಹೇಳಿದಾಗ ಕರ್ಣ ಮದ್ರದೇಶದ ಜನರನ್ನು ಬಹಳ ಹೀನಾಯವಾಗಿ ತೆಗಳಿದ.

ಮೂವತ್ತೊಂಬತ್ತನೆಯ ಅಧ್ಯಾಯ
ಕೃಷ್ಣಾರ್ಜುನರ ರಥವನ್ನು ತೋರಿಸಿದರೆ, ಅವರನ್ನು ವಧಿಸಿ, ಅವರ ಸಂಪತ್ತೆಲ್ಲವನ್ನು ಬಹುಮಾನವಾಗಿ ನೀಡುವೆನು ಎಂದು ಘೋಷಿಸಿದ ಕರ್ಣನಿಗೆ, `ಅರ್ಜುನ ಸಿಂಹ, ನೀನು ಗುಳ್ಳೆನರಿ' ಎಂದು ಶಲ್ಯನ ಉತ್ತರ.
ಸಂಜಯಃ
ಪ್ರಯಾತೇ ಚ ತದಾ ಕರ್ಣೇ ಹರ್ಷಯನ್ ವಾಹಿನೀಂ ತವ |
ಏಕೈಕಂ ಸಮರೇ ದೃಷ್ಟ್ವಾ ಪಾಂಡವಂ ಪರ್ಯಪೃಚ್ಛತ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಕರ್ಣನು ಪಾಂಡವಸೇನೆಯೊಳಗೆ ಹೋಗಿ ನಿನ್ನ ಸೈನ್ಯದಲ್ಲಿ ಉತ್ಸಾಹ ತುಂಬುವುದಕ್ಕಾಗಿ ರಣಾಂಗಣದಲ್ಲಿ ಪ್ರತಿಯೊಬ್ಬ ಯೋಧನನ್ನು ನೋಡಿ ಅರ್ಜುನ ಎಲ್ಲಿರುವನೆಂದು ಕೇಳಿದ.
ಯೋ ಮಮಾದ್ಯ ಮಹಾತ್ಮಾನಂ ದರ್ಶಯೇತ್ ಶ್ವೇತವಾಹನಮ್ |
ತಸ್ಮೈ ದದ್ಯಾಮಭಿಪ್ರೇತಂ ಧನಂ ಯನ್ಮನಸೇಚ್ಛತಿ ॥2॥
ಯಾವನು ನನಗೆ ಈಗ ಮಹಾತ್ಮನಾದ ಶ್ವೇತವಾಹನನಾದ ಅರ್ಜುನನನ್ನು ತೋರಿಸುವನೋ ಅವನಿಗೆ ಅವನ ಇಷ್ಟವಾದ ಬಹುಮಾನವನ್ನು ನೀಡುತ್ತೇನೆ. ಅವನು ಎಷ್ಟು ಧನವನ್ನು ಮನಸಿನಿಂದ ಆಶಿಸುವನೋ ಅಷ್ಟು ಧನವನ್ನು ನೀಡುತ್ತೇನೆ.
ನ ಚೇತ್ತದಭಿಮನ್ಯೇತ ತಸ್ಮೈ ದದ್ಯಾಮಹಂ ಪುನಃ |
ಶಕಟಂ ರತ್ನಸಂಪೂರ್ಣಂ ಯೋ ಮೇ ಬ್ರೂಯಾದ್ ಧನಂಜಯಮ್ ॥
ಅವನಿಗೆ ಅದು ಬೇಡವಾದರೆ ಅರ್ಜುನನನ್ನು ತೋರಿಸಿದ ಆತನಿಗೆ ರತ್ನಗಳಿಂದ ತುಂಬಿದ ಬಂಡಿಯನ್ನೆ ಕೊಡುತ್ತೇನೆ.
ನ ಚೇತ್ತದಭಿಮನ್ಯೇತ ಪುರುಷೋಽರ್ಜುನದರ್ಶಿವಾನ್ |
ಶತಂ ದದ್ಯಾಂ ಗವಾಂ ತಸ್ಮೈ ನೈತ್ಯಕಂ ಕಾಂಸ್ಯದೋಹನಮ್ ॥4॥
ಅದು ಬೇಡವಾದರೆ ಅರ್ಜುನನನ್ನು ತೋರಿಸಿದ ಆತನಿಗೆ ನೂರು ಹಸುಗಳನ್ನೂ ನಿತ್ಯ ಹಾಲು ಕರೆಯಲು ಕಂಚಿನ ಪಾತ್ರೆಗಳನ್ನೂ

ಕೊಡುತ್ತೇನೆ.
ಶತಂ ಗ್ರಾಮವರಾಂಶ್ಚೈವ ದದ್ಯಾಮರ್ಜುನದರ್ಶಿನೇ |
ತಥಾ ತಸ್ಮೈ ಪುನರ್ದದ್ಯಾಂ ಶ್ವೇತಮಶ್ವತರೀರಥಮ್ ॥5॥
ಯುಕ್ತಮಂಜನಕೇಶೀಭಿರ್ಯೋ ಮೇ ಬ್ರೂಯಾದ್ ಧನಂಜಯಮ್ ॥
ಅರ್ಜುನನನ್ನು ತೋರಿಸಿದವನಿಗೆ ಒಳ್ಳೆಯ ನೂರು ಗ್ರಾಮಗಳನ್ನು ಕೊಡುತ್ತೇನೆ. ಹಾಗೇ ಅರ್ಜುನನನ್ನು ತೋರಿಸಿದವನಿಗೆ ಕಾಡಿಗೆಯಂತೆ ಕಪ್ಪಾದ ಕೊರಳ ಕೂದಲುಳ್ಳ ಹೆಣ್ಣು ಹೇಸರಗತ್ತೆಗಳು ಎಳೆಯುವ ಬಿಳಿಯಾದ ರಥವನ್ನೂ ಕೂಡ ಕೊಡುತ್ತೇನೆ.
ನ ಚೇತ್ತದಭಿಮನ್ಯೇತ ಪುರುಷೋಽರ್ಜುನದರ್ಶಿವಾನ್ |
ಅನ್ಯಂ ವಾಽಸ್ಮೈ ಪುನರ್ದದ್ಯಾಂ ಸೌವರ್ಣಂ ಹಸ್ತಿಷಡ್ಗತಮ್ ॥7॥
ಅಥವಾ ಅದು ಬೇಡವಾದರೆ ಅರ್ಜುನನನ್ನು ತೋರಿಸಿದವನಿಗೆ ಬೇರೆ ಆರು ಆನೆಗಳು ಹೊರುವಷ್ಟು ಚಿನ್ನದ ರಾಶಿಯನ್ನು ಕೊಡುತ್ತೇನೆ.
ತಥಾಪ್ಯಸ್ಮೈ ಪುನರ್ದದ್ಯಾಂ ಸ್ತ್ರೀಣಾಂ ಶತಮಲಂಕೃತಮ್ |
ಶ್ಯಾಮಾನಾಂ ನಿಷ್ಕಕಂಠೀನಾಂ ಗೀತವಾದ್ಯವಿಪಶ್ಚಿತಾಮ್ ॥8॥
ಅವನಿಗೆ ಪುನಃ ಹದಿನಾರು ವಯಸ್ಸಿನವರಾದ, ಚಿನ್ನದ ಹಾರ ಧರಿಸಿದ, ಗೀತವಾದ್ಯಗಳಲ್ಲಿ ನಿಷ್ಣಾತರಾದ, ಅಲಂಕೃತರಾದ ನೂರು ಸ್ತ್ರೀಯರನ್ನು ಕೊಡಬಲ್ಲೆ.
ನ ಚೇತ್ತದಭಿಮನ್ಯೇತ ಪುರುಷೋಽರ್ಜುನದರ್ಶಿವಾನ್ |
ತಸ್ಮೈ ದದ್ಯಾಂ  ಶತಂ ನಾಗಾನ್ ಶತಂ ಗ್ರಾಮಾನ್ ಶತಂ ರಥಾನ್ ॥9॥
ಅರ್ಜುನನನ್ನು ತೋರಿಸಿದ ಆ ವ್ಯಕ್ತಿ ಅದನ್ನೂ ಬೇಡವೆಂದರೆ ನೂರು ಆನೆಗಳನ್ನು ನೂರು ಗ್ರಾಮಗಳನ್ನು ನೂರು ರಥಗಳನ್ನೂ ಕೊಡಬಲ್ಲೆ.
ಸುವರ್ಣಸ್ಯ ಚ ಮುಖ್ಯಸ್ಯ ಹಯಾಗ್ರ್ಯಾಣಾಂ ಶತಂ ಶತಾನ್ |
ಋದ್ಧ್ಯಾ ಗುಣೈಃ ಸುದಾಂತಾಂಶ್ಚ ಧುರ್ಯವಾಹಾನ್
ಸುಶಿಕ್ಷಿತಾನ್ ॥10॥
ಉತ್ತಮ ಸುವರ್ಣರಥಕ್ಕೆ ಹೂಡುವಂಥ ಉತ್ತಮವಾದ ಹತ್ತುಸಾವಿರ ಕುದುರೆಗಳನ್ನು ಕೊಡಬಲ್ಲೆ. ಪುಷ್ಟಿಯಿಂದ ಗುಣಗಳಿಂದ ಯುಕ್ತವಾದ ವಿನೀತ ವಾದ, ಭಾರ ಎಳೆಯಬಲ್ಲ ಹತ್ತು ಸಾವಿರ ಬೇರೆ ಕುದುರೆಗಳನ್ನೂ ಕೊಡಬಲ್ಲೆ.
ತಥಾ ಸುವರ್ಣಶೃಂಗೀಣಾಂ ಗೋಧೇನೂನಾಂ ಚತುಃಶತಮ್ |
ದದ್ಯಾಂ ತಸ್ಮೈ ಸವತ್ಸಾನಾಂ ಯೋ ಮೇ ಬ್ರೂಯಾದ್
ಧನಂಜಯಮ್ ॥11॥
ಅರ್ಜುನನೆಲ್ಲಿರುವನೆಂದು ಹೇಳುವವನಿಗೆ ಕರುಗಳಿಂದ ಕೂಡಿದ ಚಿನ್ನದ ಕೊಂಬುಗಳುಳ್ಳ ನಾನೂರು ಹಾಲು ಕೊಡುವ ಹಸುಗಳನ್ನು ಕೊಡಬಲ್ಲೆ.
ನ ಚೇತ್ತದಭಿಮನ್ಯೇತ ಪುರುಷೋರ್ಜುನದರ್ಶಿವಾನ್ |
ಅನ್ಯದಸ್ಮೈ ವರಂ ದದ್ಯಾಂ ಶ್ವೇತಾನ್ ಪಂಚಶತಾನ್ ಹಯಾನ್ ॥12॥
ಅರ್ಜುನನನ್ನು ತೋರಿಸಿದವನು ಅದನ್ನೂ ಸಾಲದೆಂದರೆ ಅವನಿಗೆ ಐದುನೂರು ಬಿಳಿಕುದುರೆಗಳನ್ನೂ ಬೇರೆ ಬಹುಮಾನವಾಗಿ ಕೊಡುತ್ತೇನೆ.
ಹೇಮಭಾಂಡಪರಿಚ್ಛನ್ನಾನ್ ಸುಮೃಷ್ಟಮಣಿಭೂಷಣಾನ್ |
ಸುದಾಂತಾನಪಿ ಚೈವಾಹಂ ದದ್ಯಾಮ್ ಅಷ್ಟಾದಶಾಪರಾನ್ ॥13॥
ಅದೂ ಸಾಲದೆಂದರೆ ಬಂಗಾರದ ಆಭರಣಗಳಿಂದ ಅಲಂಕೃತವಾದ ನಿರ್ಮಲ ರತ್ನಾಲಂಕಾರದಿಂದ ಯುಕ್ತವಾದ ವಿನೀತವಾದ ಬೇರೆ ಹದಿನೆಂಟು ಕುದುರೆಗಳನ್ನು ಕೊಡಬಲ್ಲೆ.
ರಥಂ ಚ ಶುಭ್ರಂ ಸೌವರ್ಣಂ ದದ್ಯಾಂ ತಸ್ಮೈ ಸ್ವಲಂಕೃತಮ್ |
ಯುಕ್ತಂ ಪರಮಕಾಂಭೋಜೈರ್ಯೋ ಮೇ ಬ್ರೂಯಾದ್
ಧನಂಜಯಮ್ ॥14॥
ಅರ್ಜುನನೆಲ್ಲಿರುವನೆಂದು ಹೇಳುವವನಿಗೆ ಶುಭ್ರ ಸುವರ್ಣಮಯ ಮತ್ತು ಅಲಂಕೃತವಾದ ಉತ್ತಮ ಕಾಂಭೋಜ ಕುದುರೆಗಳಿಂದ ಯುಕ್ತವಾದ ರಥವನ್ನು ಕೊಡುತ್ತೇನೆ.
ನ ಚೇತ್ತದಭಿಮನ್ಯೇತ ಪುರುಷೋಽರ್ಜುನದರ್ಶಿವಾನ್ |
ಅನ್ಯದಸ್ಮೈ ವರಂ ದದ್ಯಾಂ ಕುಂಜರಾಣಾಂ ಶತಾನಿ ಷಟ್ ॥15॥
ಕಾಂಚನೈರ್ವಿವಿಧೈರ್ಭಾಂಡೈರಾಚ್ಛನ್ನಾನ್ ಹೇಮಮಾಲಿನಃ |
ಉತ್ಪನ್ನಾನಪರಾನ್ತೇಷು ವಿನೀತಾನ್ ಹಸ್ತಿಶಿಕ್ಷಕೈಃ ॥16॥
ಅರ್ಜುನನನ್ನು ತೋರಿಸಿದವನು ಅದನ್ನೂ ಸಾಲದೆಂದರೆ ಬಂಗಾರದ ವಿವಿಧ ಆಭರಣಗಳಿಂದ ಮುಚ್ಚಿದ ಬಂಗಾರದ ಮಾಲೆ ತೊಡಿಸಿದ ಅಪರಾಂತ ದೇಶದಲ್ಲಿ ಹುಟ್ಟಿದ ಗಜಶಿಕ್ಷಕರಿಂದ ಶಿಕ್ಷಿತವಾದ ಆರುನೂರು ಆನೆಗಳನ್ನು ಬೇರೆ ವರವಾಗಿ ಕೊಡುತ್ತೇನೆ.
ನ ಚೇತ್ತದಭಿಮನ್ಯೇತ ಪುರುಷೋಽರ್ಜುನದರ್ಶಿವಾನ್ |
ಅನ್ಯದಸ್ಮೈ ವರಂ ದದ್ಯಾಂ ವೈಶ್ಯಗ್ರಾಮಾಂಶ್ಚತುರ್ದಶ ॥17॥
ಸುಸ್ಫೀತಾನ್ ಧನಸಂಯುಕ್ತಾನ್ ಪ್ರತ್ಯಾಸನ್ನವನೋದಕಾನ್ |

ಅಕುತೋಭಯಾನ್ ಸುಸಂಪನ್ನಾನ್ ರಾಜಭೋಜ್ಯಾಂಶ್ಚತುರ್ದಶ ॥18॥
ಅರ್ಜುನನನ್ನು ತೋರಿಸಿದವನು ಅದನ್ನೂ ಸಾಲದೆಂದರೆ ಧಾನ್ಯ ಧನ ಸಮೃದ್ಧವೂ ಅರಣ್ಯದ ಬಳಿ ಸರೋವರದ ಬಳಿ ಇರುವುದೂ ನಿರ್ಭಯವೂ ಸಂಪತ್ ಸಮೃದ್ಧವೂ ರಾಜಭೋಗಯುಕ್ತವೂ ಆದ ಹದಿನಾಲ್ಕು ವೈಶ್ಯಗ್ರಾಮಗಳನ್ನು ಕೊಡುವೆನು.
ದಾಸೀನಾಂ ನಿಷ್ಕಕಂಠೀನಾಂ ಮಾಗಧೀನಾಂ ಶತಂ ತಥಾ |
ಪ್ರತ್ಯಗ್ರವಯಸಾಂ ದದ್ಯಾಂ ಯೋ ಮೇ ಬ್ರೂಯಾದ್
ಧನಂಜಯಮ್ ॥19॥
ಬಂಗಾರದ ಹಾರ ತೊಟ್ಟ ನವಯೌವನವತಿಯರಾದ ನೂರು ದಾಸಿಯರನ್ನೂ ಮಾಗಧಿಯರನ್ನೂ ಅರ್ಜುನನೆಲ್ಲಿರುವನೆಂಬುದನ್ನು ಹೇಳುವವನಿಗೆ ಕೊಡುವೆನು.
ನ ಚೇತ್ತದಭಿಮನ್ಯೇತ ಪುರುಷೋಽರ್ಜುನದರ್ಶಿವಾನ್ |
ಅನ್ಯಂ ತಸ್ಮೈ ವರಂ ದದ್ಯಾಂ ಯಮಸೌ ಕಾಮಯೇತ್
ಸ್ವಯಮ್ ॥20॥
ಪುತ್ರದಾರಾನ್ ವಿಹಾಯೈವ ಯದನ್ಯದ್ ವಿತ್ತಮಸ್ತಿ ಮೇ |
ತಚ್ಚ ತಸ್ಮೈ ಪುನರ್ದದ್ಯಾಂ ಯದ್ಯಚ್ಚ ಮನಸೇಚ್ಛತಿ ॥21॥
ಅರ್ಜುನನನ್ನು ತೋರಿಸಿದವನು ಅದನ್ನೂ ಸಾಲದೆಂದರೆ ಅವನೇನು ಬಯಸುವನೋ ಅದನ್ನು ವರವಾಗಿ ಕೊಡುತ್ತೇನೆ. ಹೆಂಡಿರು ಮಕ್ಕಳನ್ನು ಹೊರತುಪಡಿಸಿ ಬೇರೆ ಏನು ನನ್ನ ಸೊತ್ತು ಇರುವುದೋ ಏನನ್ನು ಮನಸಿನಿಂದ ಆತ ಬಯಸುವನೋ ಅದನ್ನು ನಾನು ಕೊಡುತ್ತೇನೆ.
ಹತ್ವಾ ಚ ಸಹಿತೌ ಕೃಷ್ಣೌ ತಯೋರ್ವಿತ್ತಾನಿ ಸರ್ವಶಃ |
ತಸ್ಮೈ ದದ್ಯಾಮಹಂ ಯೋ ಮೇ ಪ್ರಬ್ರೂಯಾತ್
ಕೇಶವಾರ್ಜುನೌ ॥22॥
ಕೃಷ್ಣಾರ್ಜುನರೆಲ್ಲಿರುವರೆಂದು ಹೇಳುವವನಿಗೆ, ಅವರಿಬ್ಬರನ್ನೂ ಕೊಂದು ಅವರ ಎಲ್ಲ ಸಂಪತ್ತನ್ನು ಕೊಡುತ್ತೇನೆ.
ಏತಾ ವಾಚಃ ಸುಬಹುಶಃ ಕರ್ಣ ಉಚ್ಚಾರಯನ್ ಯುಧಿ |
ದಧ್ಮೌ ಸಾಗರಸಂಭೂತಂ ಸುಸ್ವರಂ ಶಂಖಮುತ್ತಮಮ್ ॥23॥
ಇಂಥ ಮಾತುಗಳನ್ನು ಬಹುವಾಗಿ ಉಚ್ಚರಿಸುತ್ತ ಸಾಗರೋತ್ಪನ್ನವಾದ ಸುಸ್ವರವುಳ್ಳ ಉತ್ತಮ ಶಂಖವನ್ನು ರಣರಂಗದಲ್ಲಿ ಕರ್ಣನು ಊದಿದನು.
ತಾ ವಾಚಃ ಸೂತಪುತ್ರಸ್ಯ ತಥಾ ಯುಕ್ತಾ ನಿಶಮ್ಯ ತು |
ದುರ್ಯೋಧನೋ ಮಹಾರಾಜ ಸಂಹೃಷ್ಟಃ ಸಾನುಜೋಽಭವತ್ ॥24॥
ಮಹಾರಾಜ, ದುರ್ಯೋಧನನು ಮತ್ತು ಅವನ ತಮ್ಮಂದಿರು ಕರ್ಣನಾಡಿದ ಆ ಮಾತುಗಳನ್ನು ಕೇಳಿ ಹರ್ಷಿತರಾದರು.
ತತೋ ದುಂದುಭಿನಿರ್ಘೋಷೋ ಮೃದಂಗಾನಾಂ ಚ ಸರ್ವಶಃ |
ಸಿಂಹನಾದಃ ಸವಾದಿತ್ರಃ ಕುಂಜರಾಣಾಂ ಚ ನಿಃಸ್ವನಃ ॥25॥
ಪ್ರಾದುರಾಸೀತ್ ತದಾ ರಾಜಂಸ್ತ್ವತ್ಸೈನ್ಯೇ ಪುರುಷರ್ಷಭ |
ಯೋಧಾನಾಂ ಸಂಪ್ರಹೃಷ್ಟಾನಾಂ ತಥಾ ಸಮಭವತ್ಸ್ವನಃ ॥26॥
ರಾಜನೆ, ಆಗ ದುಂದುಭಿ ಮೃದಂಗ ಧ್ವನಿಗಳು, ಸಿಂಹನಾದ, ವಾದ್ಯಘೋಷ, ಆನೆಗಳ ಧ್ವನಿಗಳು ಎಲ್ಲೆಡೆ ನಿನ್ನ ಸೈನ್ಯದಲ್ಲಿ ಕೇಳಿಬಂದುವು. ಹರ್ಷಿತರಾದ ಯೋಧರ ಗರ್ಜನೆಗಳು ಉಂಟಾದುವು.
ತಥಾ ಪ್ರಹೃಷ್ಟೇ ಸೈನ್ಯೇ ತಂ ಪ್ಲವಮಾನಂ ಮಹಾರಥಮ್ |
ವಿಕತ್ಥಮಾನಂ ಚ ತದಾ ರಾಧೇಯಮರಿಕರ್ಶನಮ್ ॥27॥
ಮದ್ರರಾಜಃ ಪ್ರಸಹ್ಯೇದಂ ವಚನಂ ಪ್ರತ್ಯಭಾಷತ ॥28॥
ಹರ್ಷಗೊಂಡ ಸೈನ್ಯದ ನಡುವೆ ಹೋಗುತ್ತ ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿದ್ದ ಶತ್ರುನಾಶಕ ಮಹಾರಥನಾದ ಕರ್ಣನಿಗೆ ಶಲ್ಯನು ಬಲವಾಗಿ ಪ್ರತ್ಯುತ್ತರ ನೀಡಿದ.
ಶಲ್ಯಃ
ಮಾ ಸೂತಪುತ್ರ ಮಾನ್ಮೈವ ಸೌವರ್ಣಂ ಹಸ್ತಿಷಡ್ಗತಮ್ |
ಪ್ರಯಚ್ಛಸಿ ಮುಧೈವ ತ್ವಂ ದ್ರಕ್ಷ್ಯಸ್ಯದ್ಯ ಧನಂಜಯಮ್ ॥29॥
ಶಲ್ಯ ನುಡಿದ– ಬೇಡ, ಕರ್ಣ ಬೇಡ, ಹೀಗೆ ಮಾಡಬೇಡ. ಅರ್ಜುನನನ್ನು ತೋರಿಸುವವನಿಗೆ ಆರು ಆನೆಗಳು ಹೊರುವಷ್ಟು ಹೊನ್ನು ವ್ಯರ್ಥವಾಗಿ ಕೊಟ್ಟು ಪೋಲು ಮಾಡುತ್ತಿರುವಿ. ನೀನೇ ಅರ್ಜುನನನ್ನು ಈಗ ನೋಡುವಿ.
ಬಲೇನ ಮತ್ತಸ್ತ್ಯಜಸಿ ವಸು ವೈಶ್ರವಣೋ ಯಥಾ |
ಅಯತ್ನೇನೈವ ರಾಧೇಯ ದ್ರಷ್ಟಾಸ್ಯದ್ಯ ಧನಂಜಯಮ್ ॥30॥
ಬಲದಿಂದ ಮತ್ತನಾಗಿ ಕುಬೇರನಂತೆ ಸಂಪತ್ತನ್ನು ಕೊಡುತ್ತಿರುವೆ. ಕರ್ಣ, ಹೀಗೆ ಮಾಡಬೇಡ. ಏನೂ ಪ್ರಯತ್ನವಿಲ್ಲದೆ ನೀನೆ ಈಗ ಅರ್ಜುನನನ್ನು ಕಾಣುವೆ.
ಪುರಾ ಸೃಜಸಿ ಯಚ್ಚಾಪಿ ವಿತ್ತಂ ಬಹು ಚ ಮೂಢವತ್ |
ಅಪಾತ್ರದಾನಾದ್ ಯೇ ದೋಷಾಸ್ತಾನ್ ಮೋಹಾನ್ನಾವಬುಧ್ಯಸೇ ॥31|
ಮೂರ್ಖನಂತೆ ಬಹು ಧನವನ್ನು ಅಪಾತ್ರರಿಗೆ ನೀನು ಕೊಡುತ್ತಿರುವೆ. ಅಪಾತ್ರ ದಾನದಿಂದ ಬರುವ ದೋಷಗಳನ್ನು ಮೋಹದಿಂದ

ನೀನು ತಿಳಿಯಲಾರದವನು ಆಗಿರುವೆ.
ಯತ್ಪ್ರವೇದಯಸೇ ವಿತ್ತಂ ಬಹು ತೇನ ಖಲು ತ್ವಯಾ |
ಶಕ್ಯಂ ಬಹುವಿಧೈರ್ಯಜ್ಞೈರ್ಯಷ್ಟುಂ ಸೂತ ಯಜಸ್ವ ತೈಃ ॥32॥
ಸೂತನೆ, ನೀನು ಕೊಡುವ ಭಾರೀ ಮೊತ್ತದ ಸಂಪತ್ತಿನಿಂದ ನಾನಾ ವಿಧದ ಯಜ್ಞಗಳನ್ನು ನಡೆಸಲು ನಿನಗೆ ಶಕ್ಯವಿದೆ. ಯಜ್ಞವನ್ನೇ ಮಾಡು.
ಯಚ್ಚ ಪ್ರಾರ್ಥಯಸೇ ಹಂತುಂ ಕೃಷ್ಣೌ ಮೋಹಾದ್ ವೃಥೈವ ತತ್ |
ನ ಹಿ ಶುಶ್ರುಮ ಸಮ್ಮರ್ದೇ ಕ್ರೋಷ್ಟ್ರಾ ಸಿಂಹೌ ನಿಪಾತಿತೌ ॥33॥
ಕೃಷ್ಣಾರ್ಜುನರನ್ನು ಕೊಲ್ಲಬೇಕೆಂದು ಮೋಹದಿಂದ ನೀನು ಸಂಕಲ್ಪಿಸುತ್ತಿರುವುದು ಬರಿ ವ್ಯರ್ಥವೆ ಸರಿ. ಒಂದು ಗುಳ್ಳೆ ನರಿ ಹೋರಾಟದಲ್ಲಿ ಎರಡು ಸಿಂಹಗಳನ್ನು ಕೊಂದಿತು ಎಂದರೆ ಅದನ್ನು ನಾವು ಎಂದೂ ಕೇಳಿಲ್ಲ.
ಅಪ್ರಾರ್ಥಿತಂ ಪ್ರಾರ್ಥಯಸೇ ಸುಹೃದೋ ನ ಹಿ ಸಂತಿ ತೇ |
ಯೇ ತ್ವಾಂ ನಿವಾರಯನ್ತ್ಯಾಶು ಪ್ರಪತಂತಂ ಹುತಾಶನೇ ॥34॥
ಹಿತವರು ಬಯಸದಿರುವ ಕಾರ್ಯವನ್ನು ಅವರಿಗಾಗಿ ಮಾಡಲು ಹೊರಟಿರುವೆ. ಏಕೆಂದರೆ ಬೇಗನೆ ಬೆಂಕಿಯಲ್ಲಿ ಬೀಳಲು ಹೊರಟಿರುವ ನಿನ್ನನ್ನು ತಡೆಯುವಂಥ ಹಿತವರೇ ನಿನಗೆ ಇಲ್ಲ.
ಕಾರ್ಯಾಕಾರ್ಯಂ ನ ಜಾನೀಷೇ ಕಾಲಪಕ್ವೋಽಸ್ಯಸಂಶಯಮ್ |
ಬಹ್ವಬದ್ಧಮಕರ್ಣೀಯಂ ಕೋ ಹಿ ಬ್ರೂಯಾಜ್ಜಿಜೀವಿಷುಃ ॥35॥
ಏನು ಮಾಡಬೇಕು, ಏನು ಮಾಡಬಾರದೆಂದು ನೀನು ತಿಳಿಯೆ, ನಿಶ್ಚಯವಾಗಿ ನಿನಗೀಗ ಮರಣಕಾಲ ಪಕ್ವವಾಗಿದೆ. ಬಹು ಅಬದ್ಧವಾಗಿ, ಕೇಳಲು ಸಾಧ್ಯವಲ್ಲದ ಇಂಥ ಮಾತನ್ನು ಬದುಕಿ ಉಳಿಯಲು ಬಯಸುವವನು ಯಾವನು ತಾನೆ ಆಡಿಯಾನು?
ಸಮುದ್ರತರಣಂ ದೋರ್ಭ್ಯಾಂ ಕಂಠೇ ಬದ್ಧ್ವಾ ಯಥಾ ಶಿಲಾಮ್ |
ಗಿರ್ಯಗ್ರಾದ್ವಾ ನಿಪತನಂ ತಾದೃಕ್ ತವ ಚಿಕೀರ್ಷಿತಮ್ ॥36॥
ನೀನು ಮಾಡಲು ಹೊರಟಿರುವ ಕಾರ್ಯ ಕೊರಳಿಗೆ ಕಲ್ಲು ಕಟ್ಟಿಕೊಂಡು ಸಾಗರವನ್ನು ಬಾಹುಗಳಿಂದ ಈಜಿದಾಟಲು ಹೊರಟಂತಿದೆ. ಬೆಟ್ಟದ ತುದಿಯಿಂದ ಬೀಳಲು ಹೊರಟಂತಿದೆ.
ಸಹಿತಃ ಸರ್ವಯೋಧೈಸ್ತ್ವಂ ವ್ಯೂಢಾನೀಕೈಃ ಸುರಕ್ಷಿತಃ |
ಧನಂಜಯೇನ ಯುದ್ಧ್ಯಸ್ವ ಶ್ರೇಯಶ್ಚೇತ್ಪ್ರಾಪ್ತುಮಿಚ್ಛಸಿ ॥37॥
ವ್ಯೂಹದಿಂದ ನಿಂತ ಸೈನ್ಯಗಳಿಂದ ಸುರಕ್ಷಿತವಾಗಿ ಎಲ್ಲ ಯೋಧರಿಂದ ಕೂಡಿಕೊಂಡೇ ಅರ್ಜುನನೊಡನೆ ಯುದ್ಧ ಮಾಡು. ಹೊರತು, ಶ್ರೇಯಸ್ಸನ್ನು ಹೊಂದಲು ಬಯಸುವಿಯಾದರೆ ನೀನು ಅಹಂಕಾರದಿಂದ ಮೂಢತನದಿಂದ ಒಬ್ಬನೇ ಅರ್ಜುನನನ್ನು ಕೊಲ್ಲಲು ಹೋಗಬೇಡ.
ಹಿತಾರ್ಥಂ ಧಾರ್ತರಾಷ್ಟ್ರಸ್ಯ ಬ್ರವೀಮಿ ತ್ವಾಂ ನ ಹಿಂಸಯಾ |
ಶ್ರದ್ಧಸ್ವೇದಂ ಮಯಾ ಪ್ರೋಕ್ತಂ ಯದಿ ತೇಽಸ್ತಿ ಜಿಜೀವಿಷಾ ॥38॥
ದುರ್ಯೋಧನನ ಒಳ್ಳೆಯದಕ್ಕಾಗಿ ನಾನು ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ. ನಿನ್ನ ಮನಸಿಗೆ ಹಿಂಸೆ ಮಾಡುವುದಕ್ಕಾಗಿ ಅಲ್ಲ. ಅದರಿಂದ ನನಗೇನೂ ಪ್ರಯೋಜನವಿಲ್ಲ. ನಿನಗೆ ಬದುಕಿ ಉಳಿವ ಆಸೆ ಇರುವುದಾದರೆ ನನ್ನ ಮಾತಿನಲ್ಲಿ ವಿಶ್ವಾಸವಿಡು.
ಕರ್ಣಃ
ಸ್ವಬಾಹುವೀರ್ಯಮಾಶ್ರಿತ್ಯ ಪ್ರಾರ್ಥಯಾಮ್ಯರ್ಜುನಂ ರಣೇ |
ತ್ವಂ ತು ಮಿತ್ರಮುಖಃ ಶತ್ರುರ್ಮಾಂ ಭೀಷಯಿತುಮಿಚ್ಛಸಿ ॥39॥
ಕರ್ಣ ನುಡಿದ– ನನ್ನ ಬಾಹುಬಲವನ್ನು ಆಶ್ರಯಿಸಿಯೇ ನಾನು ಅರ್ಜುನನನ್ನು ಯುದ್ಧಕ್ಕೆ ಕರೆಯುತ್ತೇನೆ. ನೀನು ಮಿತ್ರನಂತೆ ಕಾಣುವ ಶತ್ರು. ನನ್ನನ್ನು ಭಯಪಡಿಸಲು ಯತ್ನಿಸುತ್ತಿರುವೆ.
ನ ಮಾಮಸ್ಮಾದಭಿಪ್ರಾಯಾತ್ ಕಶ್ಚಿದದ್ಯ ನಿವರ್ತಯೇತ್ |
ಅಪೀಂದ್ರೋ ವಜ್ರಮುದ್ಯಮ್ಯ ಕಿಮು ಮರ್ತ್ಯಃ ಕಥಂಚನ ॥40॥
ನನ್ನ ಈ ನಿರ್ಧಾರದಿಂದ ಈಗ ಯಾರೂ ಯಾವ ರೀತಿಯಿಂದಲೂ ನನ್ನನ್ನು ಹಿಮ್ಮೆಟ್ಟಿಸಲಾರರು. ವಜ್ರಾಯುಧ ಹಿಡಿದು ಇಂದ್ರನೇ ಬಂದರೂ ಸರಿಯೆ. ಇನ್ನು ಮಾನವನ ಬಗ್ಗೆ ಏನು ಹೇಳಬೇಕು?
ಸಂಜಯಃ
ಇತಿ ಕರ್ಣಸ್ಯ ವಾಕ್ಯಾಂತೇ ಶಲ್ಯಃ ಪ್ರಾಹೋತ್ತರಂ ವಚಃ |
ಚುಕೋಪಯಿಷುರತ್ಯರ್ಥಂ ಕರ್ಣಂ ಮದ್ರೇಶ್ವರಃ ಪುನಃ ॥41॥
ಸಂಜಯ ನುಡಿದ– ಹೀಗೆ ಕರ್ಣನು ನುಡಿದಾಗ, ಅವನನ್ನು ಅತ್ಯಂತ ಕೋಪಾವಿಷ್ಟನನ್ನಾಗಿ ಮಾಡುವ ಇಚ್ಛೆಯಿಂದ ಶಲ್ಯ ಪುನಃ ನುಡಿದ.
ಯದಾ ವೈ ತ್ವಾಂ ಫಲ್ಗುನಬಾಹುವೇಗಾತ್
ಜ್ಯಾಚೋದಿತಾ ವೇಗವಂತೋಽಗ್ನಿಕಲ್ಪಾಃ |
ಅನ್ವೇತಾರಃ ಕಂಕಪತ್ರಾಃ ಶಿತಾಗ್ರಾ-
ಸ್ತ್ಯಕ್ಷ ೆಯತ್ಯೇಷಾ ತ್ವಾಂ ತದಾ ಕರ್ಣ ಬುದ್ಧಿಃ ॥42॥
ಕರ್ಣನೆ, ವೇಗಉಳ್ಳ, ಬೆಂಕಿಯಂತಿರುವ, ಹದ್ದಿನ ರೆಕ್ಕೆಯುಳ್ಳ ತೀಕ್ಷ್ಣವಾದ, ಅರ್ಜುನನ ಬಾಹುವೇಗದಿಂದ ಬಿಲ್ಲಿನ ಹೆದೆಯಿಂದ ಎಸೆಯಲ್ಪಡುವ ಬಾಣಗಳು ಪಲಾಯನ ಮಾಡುವ ನಿನ್ನನ್ನು ಬೆನ್ನಟ್ಟಿ ಬರುವಾಗ, ನಿನ್ನ ಈ ಮೂಢಬುದ್ಧಿ ನಿನ್ನಿಂದ ತೊಲಗುತ್ತದೆ.

ಯದಾ ದಿವ್ಯಂ ಧನುರಾದಾಯ ಪಾರ್ಥಃ
ಪ್ರತಾಪಯನ್ ಪೃತನಾಂ ಸವ್ಯಸಾಚೀ |
ತ್ವಾಂ ಮರ್ದಯಿಷ್ಯತ್ಯಸುಖೈಃ ಪೃಷತ್ಕೈ-
ಸ್ತದಾ ಪೃಚ್ಛಾಂ ತ್ಯಕ್ಷ್ಯಸೇ ಪಾಂಡವಸ್ಯ ॥43॥
ಸವ್ಯಸಾಚಿ ಅರ್ಜುನನು ದಿವ್ಯವಾದ ಧನುಸ್ಸನ್ನು ಹಿಡಿದು ನಿನ್ನ ಸೈನ್ಯವನ್ನು ಸುಡುತ್ತ ಸುಖನೀಡದ ಬಾಣಗಳಿಂದ ನಿನ್ನನ್ನು ಕೊಲ್ಲುವಾಗ ಅರ್ಜುನನೆಲ್ಲಿ ಎಂಬ ಪ್ರಶ್ನೆಯನ್ನು ನೀನು ಬಿಟ್ಟು ಬಿಡುವೆ.
ಬಾಲಶ್ಚಂದ್ರಂ ಮಾತುರಂಕೇ ಶಯಾನೋ
ಯಥಾ ಕಶ್ಚಿತ್ಪ್ರಾರ್ಥಯತೇಽಪಹರ್ತುಮ್ |
ತದ್ವನ್ಮೋಹಾದ್ ದ್ಯೋತಮಾನಂ ರಥಸ್ಥಂ
ಜೇತುಂ ಪಾರ್ಥಂ ಕಾಂಕ್ಷಸೇ ಸೂತಪುತ್ರ ॥44॥
ಮಾತೆಯ ಮಡಿಲಲ್ಲಿ ಮಲಗಿದ ಬಾಲಕನೊಬ್ಬ ಚಂದ್ರನನ್ನು ಕಿತ್ತುಕೊಳ್ಳಲು ಬಯಸುವಂತೆ ರಥದಲ್ಲಿ ಬೆಳಗುವ ಪಾರ್ಥನನ್ನು ಗೆಲ್ಲಲು ಮೋಹದಿಂದ ಇಚ್ಛಿಸುವೆ, ಕರ್ಣ!
ತ್ರಿಶೂಲಮಾಶ್ಲಿಷ್ಯ ಸುತೀಕ್ಷ್ಣಧಾರಂ
ಸರ್ವಾಣಿ ಗಾತ್ರಾಣಿ ನಿಕರ್ಷಸಿ ತ್ವಮ್ |
ಸುತೀಕ್ಷ್ಣಶಸ್ತ್ರೋಪಮಕರ್ಮಣೇಹ
ಯುಯುತ್ಸಸೇ ಫಲ್ಗುನೇನಾದ್ಯ ಕರ್ಣ ॥45॥
ಕರ್ಣ, ಬಲುತೀಕ್ಷ್ಣಧಾರೆಯುಳ್ಳ ತ್ರಿಶೂಲವನ್ನು ಆಲಿಂಗಿಸಿ ಮೈಯೆಲ್ಲ ಗಾಯ ಮಾಡಿಕೊಳ್ಳುತ್ತಿರುವೆ ನೀನು. ಏಕೆಂದರೆ, ಬಲು ತೀಕ್ಷ್ಣಶಸ್ತ್ರದಂತೆ ಕಾರ್ಯಮಾಡುವ ಅರ್ಜುನನೊಡನೆ ಯುದ್ಧಮಾಡಲು ಬಯಸುವೆ.
ಹನ್ಯಾದಸಿಂ ತೀಕ್ಷ್ಣಧಾರಂ ಯಥಾಽತಃ
ಸುತೇಜನಂ ನಿಹಿತಂ ವೈ ಪೃಥಿವ್ಯಾಮ್ |
ತಥಾ ಖನಸ್ಯದ್ಯ ಶಿತಾನ್ ಪೃಷತ್ಕಾನ್
ಯಥಾರ್ಥಯಸ್ಯರ್ಜುನೇನೇಹ ಯುದ್ಧಮ್ ॥46॥
ನೆಲದಲ್ಲಿ ಗೂಟದಂತೆ, ಚೂಪಾದ ತೀಕ್ಷ್ಣವಾದ ತುದಿ ಮೇಲೇ ಬರುವಂತೆ, ಅಲುಗುಳ್ಳ ಕತ್ತಿಯನ್ನು ನೆಟ್ಟು ಬರಿಕೈಯಿಂದ ಬಡಿಯುವಂತೆ ಈಗ ನೀನು ಅರ್ಜುನನ ಹರಿತವಾದ ಬಾಣಗಳನ್ನು ನಿನ್ನ ಮೈಯಲ್ಲಿ ನೆಡಿಸಿಕೊಂಡು ಹೊಡೆದು ಅರ್ಜುನನೊಡನೆ ಮಾಡುವ ಯುದ್ಧವನ್ನು ಯಥಾರ್ಥವನ್ನಾಗಿಸುವೆ.
`ಯುಧ ಸಂಪ್ರಹಾರೇ' ಧಾತು ನಿಷ್ಪನ್ನವಾದ್ದರಿಂದ `ಯುದ್ಧ' ಶಬ್ದಕ್ಕೆ ಹೊಡೆಯುವುದೆಂದೇ ನಿಜವಾದ ಅರ್ಥ. ಕರ್ಣ ಈಗ ಅರ್ಜುನನ ಬಾಣಗಳಿಂದ ತನ್ನ ಮೈಯನ್ನು ತಾನೇ ಹೊಡೆಸಿಕೊಳ್ಳುತ್ತಿದ್ದಾನೆ. ಯುದ್ಧ ಶಬ್ದವನ್ನು ಹೀಗೆ ಅನ್ವರ್ಥಗೊಳಿಸುತ್ತಾನೆ.
ಕ್ರುದ್ಧಂ ಸಿಂಹಂ ಕೇಸರಿಣಂ ಬೃಹಂತಂ
ಬಾಲೋ ಮೂಢಃ ಕ್ಷುದ್ರಮೃಗಸ್ತರಸ್ವೀ |
ಸಮಾಹ್ವಯೇದ್ ಧೃಷ್ಟಮುಪೇತ್ಯ ಯೋದ್ಧುಂ
ತಥಾ ತ್ವಮದ್ಯಾಹ್ವಯಸೇ ಹಿ ಪಾರ್ಥಮ್ ॥47॥
ಬುದ್ಧಿ ಇಲ್ಲದ ಆತುರಬುದ್ಧಿಯ ಸಣ್ಣ ಜಿಂಕೆಮರಿ ಕೋಪಗೊಂಡಿರುವ ದೊಡ್ಡ ಸಿಂಹವನ್ನು ಜಗಳಕ್ಕೆ ಕರೆಯುವಂತೆಯೆ, ಸೂತಪುತ್ರನೇ, ನೀನೀಗ ಅರ್ಜುನನನ್ನು ಯುದ್ಧಕ್ಕೆ ಕರೆಯುವುದು ಕೂಡ ಮೂರ್ಖತನ.
ಮಾ ಸೂತಪುತ್ರಾಹ್ವಯ ರಾಜಪುತ್ರಂ
ಮಹಾವೀರ್ಯಂ ಕೇಸರಿಣಂ ಯಥೈವ |
ವನೇ ಶೃಗಾಲಃ ಪಿಶಿತೇನ ದೃಪ್ತಃ
ಪಾರ್ಥಂ ಸಮಾಸಾದ್ಯ ವಿನಂಕ್ಷ್ಯಸಿ ತ್ವಮ್ ॥48॥
ಸೂತಪುತ್ರ, ಮಹಾವೀರನಾದ ರಾಜಪುತ್ರನಾದ ಅರ್ಜುನನನ್ನು ಯುದ್ಧಕ್ಕೆ ಕರೆಯಬೇಡ. ಕಾಡಿನಲ್ಲಿ ಮಾಂಸದಿಂದ ಕೊಬ್ಬಿದ ಗುಳ್ಳೆನರಿ ಸಿಂಹವನ್ನು ಜಗಳಕ್ಕೆ ಕರೆದು ನಾಶವಾಗುವಂತೆ ನೀನು ಅರ್ಜುನನನ್ನು ಯುದ್ಧಕ್ಕೆ ಕರೆದು ನಾಶ ಹೊಂದುವೆ.
ಈಷಾದಂತಂ ಮಹಾನಾಗಂ ಪ್ರಭಿನ್ನಕರಟಾಮುಖಮ್ |
ಶಶಕೋ ಹ್ವಯಸೇ ಯುದ್ಧೇ ಕರ್ಣ ಪಾರ್ಥಂ ಧನಂಜಯಮ್ ॥49॥
ಈಷಾದಂಡದಂಥ ದಂತಗಳುಳ್ಳ ಮದಜಲವನ್ನು ಸುರಿಸುವ ದೊಡ್ಡ ಆನೆಯನ್ನು ಮೊಲದಂತೆ, ಧನಂಜಯನಾದ ಪಾರ್ಥನನ್ನು ನೀನು ಯುದ್ಧಕ್ಕೆ ಆಹ್ವಾನಿಸುತ್ತಿರುವೆ.
ಬಿಲಸ್ಥಂ ಕೃಷ್ಣಸರ್ಪಂ ತ್ವಂ ಬಾಲ್ಯಾತ್ ಕಾಷ್ಠೇನ ವಿಧ್ಯಸಿ |
ಮಹಾವಿಷಂ ಪೂರ್ಣಕೋಪಂ ಯತ್ಪಾರ್ಥಂ ಯೋದ್ಧುಮಿಚ್ಛಸಿ ॥50॥
ಕರ್ಣ, ನೀನು ಬಿಲದಲ್ಲಿರುವ ಮಹಾವಿಷದ ಅತಿಕೋಪಿಯಾದ ಕೃಷ್ಣಸರ್ಪವನ್ನು ಹುಡುಗುತನದ ಬುದ್ಧಿಯಿಂದ ಕೋಲಿಂದ ಚುಚ್ಚುತ್ತಿರುವೆ, ಅರ್ಜುನನೊಡನೆ ಯುದ್ಧಮಾಡಲು ಬಯಸುತ್ತಿರುವೆ.
ಸಿಂಹಂ ಕೇಸರಿಣಂ ಕ್ರುದ್ಧಮಭಿಕ್ರಮ್ಯಾಭಿನರ್ದಸೇ |
ಶೃಗಾಲ ಇವ ಮೂಢಸ್ತ್ವಂ ನೃಸಿಂಹಂ ಕರ್ಣ ಪಾಂಡವಮ್ ॥51॥
ಕೇಸರವುಳ್ಳ ಕ್ರುದ್ಧವಾದ ಸಿಂಹವನ್ನು ಗುಳ್ಳೆನರಿಯಂತೆ ಏರಿಹೋಗಿ ಕೂಗುವೆ. ಮೂಢ ನೀನು, ಕರ್ಣ, ಸಿಂಹದಂಥ ಅರ್ಜುನನನ್ನು

ಇದಿರಿಸುತ್ತಿರುವೆ.
ಸುಪರ್ಣಂ ಪತಗಶ್ರೇಷ್ಠಂ ವೈನತೇಯಂ ತರಸ್ವಿನಮ್ |
ಭೋಗೀವಾಹ್ವಯಸೇ ಪಾರ್ಥಂ ತಥಾ ಕರ್ಣ ಧನಂಜಯಮ್ ॥52॥
ವೇಗವುಳ್ಳ ಪಕ್ಷಿಶ್ರೇಷ್ಠ ವೈನತೇಯ ಗರುಡನನ್ನು ಹಾವಿನಂತೆ, ಧನಂಜಯ ಪಾರ್ಥನನ್ನು ನೀನು ಯುದ್ಧಕ್ಕೆ ಕರೆಯುವೆ.
ಸರ್ವಾಂಭಸಾಂ ನಿಧಿಂ ಭೀಮಮೂರ್ಮಿಮಂತಂ ಝಷಾಕುಲಮ್ |
ಚಂದ್ರೋದಯೇ ವಿವರ್ಧಂತಮಪ್ಲವಸ್ತ್ವಂ ತಿತೀರ್ಷಸಿ ॥53॥
ಭೀಕರವಾದ ಅಲೆಗಳಿಂದ ಕೂಡಿದ, ತಿಮಿಂಗಿಲಮೊಸಳೆಗಳಿಂದ ತುಂಬಿದ, ಚಂದ್ರೋದಯದಲ್ಲಿ ಉಕ್ಕುವ ಸಮುದ್ರವನ್ನು ನೌಕೆ ಇಲ್ಲದೇ ದಾಟಲು ಬಯಸುವೆ.
ಋಷಭಂ ದುಂದುಭಿಗ್ರೀವಂ ತೀಕ್ಷ್ಣಶೃಂಗಂ ಪ್ರಹಾರಿಣಮ್ |
ವತ್ಸ ಆಹ್ವಯಸೇ ಯುದ್ಧೇ ಕರ್ಣ ಪಾರ್ಥಂ ಧನಂಜಯಮ್ ॥54॥
ದುಂದುಭಿಯಂತೆ ಗುಟುರುಹಾಕುವ ತೀಕ್ಷ್ಣ ಕೊಂಬುಗಳಿಂದ ಹಾಯುವ ಎತ್ತನ್ನು ಎಳೆ ಕರುವಿನಂತೆ ನೀನು ಧನಂಜಯ ಪಾರ್ಥನನ್ನು ಯುದ್ಧಕ್ಕೆ ಕರೆಯುವೆ.
ಮಹಾಮೇಘಂ ಮಹಾಘೋಷಂ ದರ್ದುರಃ ಪ್ರತಿನರ್ದಸಿ |
ಬಾಣ ತೋಯಪ್ರದಂ ಲೋಕೇ ನರಪರ್ಜನ್ಯಮರ್ಜುನಮ್ ॥55॥
ಬಾಣಗಳ ಮಳೆಗರೆವ, ಗುಡುಗಿನಂತೆ ಗರ್ಜಿಸುವ, ಧನಂಜಯ ಪಾರ್ಥನೆನಿಸಿದ ಅರ್ಜುನನೆಂಬ ದೊಡ್ಡ ಮೋಡಕ್ಕೆ ಪ್ರತಿಯಾಗಿ ಮಳೆಗಾಲದ ಕಪ್ಪೆಯಂತೆ ನೀನು ವಟಗುಟ್ಟುವಿ.
ಯಥಾ ಚ ಸ್ವಗೃಹಸ್ಥಃ ಶ್ವಾ ವ್ಯಾಘ್ರಂ ವನಗತಂ ಭಷೇತ್ |
ತಥಾ ತ್ವಂ ಭಷಸೇ ಕರ್ಣ ನರವ್ಯಾಘ್ರಂ ಧನಂಜಯಮ್ ॥56॥
ಮನೆಯ ನಾಯಿ ಕಾಡಿನ ಹುಲಿಗೆ ಪ್ರತಿಯಾಗಿ ಬೊಗಳುವಂತೆ, ಕರ್ಣ, ನೀನು ಹುಲಿಯಂಥ ಧನಂಜಯನ ಮುಂದೆ ಬೊಗಳುವೆ.
ಶೃಗಾಲೋ ಹಿ ವನೇ ಕರ್ಣ ಶಶೈಃ ಪರಿವೃತೋ ವಸನ್ |
ಮನ್ಯತೇ ಸಿಂಹಮಾತ್ಮಾನಂ ಯಾವತ್ ಸಿಂಹಂ ನ ಪಶ್ಯತಿ ॥57॥
ಕರ್ಣ, ಗುಳ್ಳೆನರಿ ಮೊಲಗಳ ನಡುವೆ ವಾಸಮಾಡುತ್ತ ತಾನೆ ಸಿಂಹ ಎಂದುಕೊಳ್ಳುತ್ತದೆ. ಇದು ಸಿಂಹವನ್ನು ನರಿ ನೋಡದಿರುವವರೆಗೆ ಮಾತ್ರ.
ತಥಾ ತ್ವಮಪಿ ರಾಧೇಯ ಸಿಂಹಮಾತ್ಮಾನಮಿಚ್ಛಸಿ |
ಅಪಶ್ಯನ್ ಶತ್ರುದಮನಂ ನರಸಿಂಹಂ ರಣೇಽರ್ಜುನಮ್ ॥58॥
ಹಾಗೇ ಕರ್ಣ, ನೀನೂ ಕೂಡ ನಿನ್ನನ್ನು ಸಿಂಹ ಎಂದು ಹೇಳಿಕೊಳ್ಳಲು ಇಚ್ಛಿಸುವಿ. ಇದು ನೀನು ರಣದಲ್ಲಿ ಶತ್ರುದಮನ ಮಾಡುವ ನರಸಿಂಹನಾದ ಅರ್ಜುನನನ್ನು ಇನ್ನೂ ಕಾಣದಿರುವುದರಿಂದ.
ವ್ಯಾಘ್ರಂ ತ್ವಂ ಮನ್ಯಸೇಽಽತ್ಮಾನಂ ಯಾವತ್ ಕೃಷ್ಣೌ ನ ಪಶ್ಯಸಿ |
ಸಮಾಸ್ಥಿತಾವೇಕರಥೇ ಸೂರ್ಯಾಚಂದ್ರಮಸಾವಿವ ॥59॥
ಕೃಷ್ಣಾರ್ಜುನರನ್ನು ಒಂದೇ ರಥದಲ್ಲಿ ಸೂರ್ಯಚಂದ್ರರಂತೆ ಕಾಣದಿರುವವರೆಗೆ ಮಾತ್ರ ನೀನು ನಿನ್ನನ್ನು ಹುಲಿ ಎಂದುಕೊಳ್ಳುವೆ.
ಯಾವದ್ ಗಾಂಡೀವಘೋಷಂ ತ್ವಂ ನ ಶೃಣೋಷಿ ಮಹಾಹವೇ |
ತಾವದೇವ ತ್ವಯಾ ಕರ್ಣ ಶಕ್ಯಂ ವಕ್ತುಂ ಯಥೇಚ್ಛಸಿ ॥60॥
ಮಹಾರಣದಲ್ಲಿ ಗಾಂಡೀವಧ್ವನಿಯನ್ನು ನೀನು ಕೇಳದಿರುವವರೆಗೆ ಮಾತ್ರ ನೀನು ಮನಬಂದಂತೆ ಮಾತನಾಡಲು ಶಕ್ಯವಿದೆ.
ರಥಶಂಖಧನುಃಶಬ್ದೈರ್ನಾದಯಂತಂ ದಿಶೋ ದಶ |
ನರ್ದಂತಮಿವ ಶಾರ್ದೂಲಂ ದೃಷ್ಟ್ವಾ ಕ್ರೋಷ್ಟಾ ಭವಿಷ್ಯಸಿ ॥61॥
ರಥಧ್ವನಿ, ಶಂಖಧ್ವನಿ, ಧನುಃಶಬ್ದಗಳಿಂದ ಅರ್ಜುನನು ಹತ್ತುದಿಕ್ಕುಗಳನ್ನು ತುಂಬಿಸುತ್ತಿದ್ದರೆ, ಹುಲಿಯಂತೆ ಗರ್ಜಿಸುತ್ತಿದ್ದರೆ, ನೋಡಿ ನೀನು ಗುಳ್ಳೆನರಿಯೇ ಆಗುವೆ.
ನಿತ್ಯಮೇವ ಶೃಗಾಲಸ್ತ್ವಂ ನಿತ್ಯಂ ಸಿಂಹೋ ಧನಂಜಯಃ |
ವೀರಪ್ರದ್ವೇಷಣಾನ್ಮೂಢ ತಸ್ಮಾತ್ ಕ್ರೋಷ್ಟೇವ ಲಕ್ಷ್ಯಸೇ ॥62|
ನೀನೆಂದಿಗೂ ಗುಳ್ಳೆ ನರಿಯೆ, ಅರ್ಜುನನೆಂದಿಗೂ ಸಿಂಹವೆ. ಅದರಿಂದ ಮೂರ್ಖನೆ, ನೀನು ವೀರರನ್ನು ದ್ವೇಷಿಸುವುದರಿಂದ ನರಿಯಂತೇ ಕಾಣುವೆ.
ಯಥಾಽಽಖುಃ ಸ್ಯಾದ್ ಬಿಡಾಲಶ್ಚ ಶ್ವಾ ವ್ಯಾಘ್ರಶ್ಚ ಬಲಾಬಲೇ |
ಯಥಾ ಶೃಗಾಲಃ ಸಿಂಹಶ್ಚ ಯಥಾ ಚ ಶಶಕುಂಜರೌ ॥63॥
ಯಥಾಽನೃತಂ ಚ ಸತ್ಯಂ ಚ ಯಥಾ ಚಾಪಿ ವಿಷಾಮೃತೇ |
ತಥಾ ತ್ವಮಪಿ ಪಾರ್ಥಶ್ಚ ಪ್ರಖ್ಯಾತಾವಾತ್ಮಕರ್ಮಭಿಃ ॥64॥
ಬೆಕ್ಕು ಇಲಿಗಳಂತೆ, ಹುಲಿನಾಯಿಗಳಂತೆ, ಸಿಂಹನರಿಗಳಂತೆ, ಆನೆಮೊಲ ಗಳಂತೆ, ಸತ್ಯಅನೃತಗಳಂತೆ, ವಿಷಅಮೃತಗಳಂತೆ ಬಲಾಬಲಗಳ ವಿಷಯದಲ್ಲಿ ತಮ್ಮ ತಮ್ಮ ಸಾಧನೆಗಳಿಂದ ಹೆಸರಾಗಿರುವ ನೀನು ಮತ್ತು ಅರ್ಜುನರಿರುವಿರಿ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಶಲ್ಯಸಂವಾದೇ ಏಕೋನಚತ್ವಾರಿಂಶೋಧ್ಯಾಯಃ ॥39॥
ಮಹಾಭಾರತತಾತ್ಪರ್ಯನಿರ್ಣಯ

ಮಾ ಯಾಹಿ ಪಾರ್ಥಂ ಮಾ ಯಾಹಿ ಹತೋನೇನ ಯಮಕ್ಷಯಮ್ |
ಇತ್ಯುಕ್ತೋ ರವಿಜೋ ಮದ್ರಾನ್ ನಿತರಾಂ ಪರ್ಯಕುತ್ಸಯತ್ ॥ 31
`ಅರ್ಜುನನನ್ನು ಯುದ್ಧದಲ್ಲಿ ಇದಿರಿಸಲು ಹೋಗಬೇಡ. ಅವನಿಂದ ಹತನಾಗಿ ಯಮಲೋಕಕ್ಕೆ ಹೋಗಬೇಡ'. ಹೀಗೆ ಶಲ್ಯ ಹೇಳಿದಾಗ ಕರ್ಣ ಮದ್ರದೇಶದ ಜನರನ್ನು ಬಹಳ ಹೀನಾಯವಾಗಿ ತೆಗಳಿದ.

ನಲವತ್ತನೆಯ ಅಧ್ಯಾಯ
ನನ್ನಲ್ಲಿ ಘೋರವಾದ ಸರ್ಪಾಸ್ತ್ರವಿದೆ. ಅದರಿಂದ ಮೇರುಪರ್ವತವನ್ನು ಭೇದಿಸಬಲ್ಲೆ. ಅರ್ಜುನನನ್ನು ಹೊಗಳಿ ನನ್ನನ್ನು ಭಯಪಡಿಸಲು ಯತ್ನಿಸುವವನು ನೀನು ಮಿತ್ರನಲ್ಲ, ಶತ್ರು. ನಿನ್ನ ದೇಶದವರು ಯಾರೂ ನಂಬಲರ್ಹರಲ್ಲ. ನಿನ್ನದು ಅನಾಚಾರಿಗಳ ದೇಶ ಎನ್ನುತ್ತಾನೆ ಕರ್ಣ.
ಸಂಜಯಃ
ಅಧಿಕ್ಷಿಪ್ತಸ್ತು ರಾಧೇಯಃ ಶಲ್ಯೇನಾಮಿತತೇಜಸಾ |
ಶಲ್ಯಮಾಹ ಸುಸಂಕ್ರುದ್ಧೋ ವಾಕ್ಶಲ್ಯಮವಧಾರಯನ್ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಅಮಿತಪರಾಕ್ರಮಿಯಾದ ಶಲ್ಯನು ಕರ್ಣನನ್ನು ಹಳಿದಾಗ ಕರ್ಣನು ಬಹಳ ಕ್ರುದ್ಧನಾಗಿ, `ಶಲ್ಯ'ವೆಂದರೆ ಮುಳ್ಳು, ಮುಳ್ಳಿನಂತೆ ಚುಚ್ಚುವ ಮಾತುಗಳನ್ನಾಡುವುದರಿಂದಲೇ ಈತ `ಶಲ್ಯ' ಎಂದು ಶ್ರೋತೃಗಳಿಗೆ ನಿಶ್ಚಯವಾಗಿ ತಿಳಿಸುವುದಕ್ಕಾಗಿ ಶಲ್ಯನಿಗೆ ಹೀಗೆ ಹೇಳಿದ–
ಕರ್ಣಃ
ಗುಣಾನ್ ಗುಣವತಾಂ ಶಲ್ಯ ಗುಣವಾನ್ ವೇತ್ತಿ ನಾಗುಣಃ |
ತ್ವಂ ತು ನಿತ್ಯಂ ಗುಣೈರ್ಹೀನಃ ಕಿಂ ಜ್ಞಾಸ್ಯಸಿ ಗುಣಾಗುಣಾನ್ ॥2॥
ಕರ್ಣನು ನುಡಿದ– ಗುಣವುಳ್ಳವರ ಗುಣಗಳನ್ನು ಗುಣವುಳ್ಳವನೇ ತಿಳಿಯುತ್ತಾನೆ. ಗುಣಶೂನ್ಯನು ತಿಳಿಯುವುದಿಲ್ಲ. ನೀನು ಎಂದಿಗೂ ಗುಣಹೀನ. ಗುಣಅಗುಣಗಳನ್ನು ನೀನೇನು ತಿಳಿಯಬಲ್ಲೆ?
ಅರ್ಜುನಸ್ಯ ಮಹಾಸ್ತ್ರಾಣಿ ಕ್ರೋಧಂ ವೀರ್ಯಂ ಧನುಃ ಶರಾನ್ |
ಅಹಂ ಶಲ್ಯಾಭಿಜಾನಾಮಿ ನ ತ್ವಂ ಜಾನಾಸಿ ತತ್ತಥಾ ॥3॥
ಶಲ್ಯ, ಅರ್ಜುನನ ಮಹಾಅಸ್ತ್ರಗಳನ್ನು ಕ್ರೋಧ ವೀರ್ಯ ಧನುರ್ಬಾಣಗಳನ್ನು ನಾನು ಬಲ್ಲೆ, ನಾನು ತಿಳಿದಂತೆ ನೀನು ತಿಳಿದಿಲ್ಲ.
ತಥಾ ಕೃಷ್ಣಸ್ಯ ಮಾಹಾತ್ಮ್ಯಮೃಷಭಸ್ಯ ಮಹೀಕ್ಷಿತಾಮ್ |
ಯಥಾಹಂ ಶಲ್ಯ ಜಾನಾಮಿ ನ ತ್ವಂ ಜಾನಾಸಿ ತತ್ತಥಾ ॥4॥
ಹಾಗೆ ರಾಜರಲ್ಲಿ ಶ್ರೇಷ್ಠನಾದ ಕೃಷ್ಣನ ಮಹಾತ್ಮೆಯನ್ನು ಕೂಡ ನಾನು ತಿಳಿದಂತೆ ನೀನು ತಿಳಿದುಕೊಂಡಿಲ್ಲ.
ಏವಮೇವಾತ್ಮನೋ ವೀರ್ಯಮಹಂ ವೀರ್ಯಂ ಚ ಪಾಂಡವೇ |
ಜಾನಂಸ್ತ್ವಾವಾಹ್ವಯೇ ಯುದ್ಧೇ ಶಲ್ಯ ನಾಗ್ನಿಂ ಪತಂಗವತ್ ॥5॥
ಹೀಗೆಯೇ ನನ್ನ ಬಲವನ್ನೂ ಅರ್ಜುನನ ಬಲವನ್ನೂ ತಿಳಿದೇ ನಾನು ಅವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದೇನೆ. ತಿಳಿಯದೆ, ದೀಪದ ಹುಳು ಬೆಂಕಿಯಲ್ಲಿ ಬೀಳುವಂತೆ ಅಲ್ಲ.
ಅಸ್ತಿ ಚಾಯಮಿಷುಃ ಶಲ್ಯ ಸುಪುಂಖೋ ರಕ್ತಭೋಜನಃ |
ಏಕಸ್ತೂಣೀಶಯಃ ಪತ್ರೀ ಸುಧೌತಃ ಸಮಲಂಕೃತಃ ॥6॥
ಶಲ್ಯ, ನನ್ನಲ್ಲಿ ಇದೊಂದು ಬಾಣ ಬತ್ತಳಿಕೆಯಲ್ಲಿ ಇದೆ. ಒಳ್ಳೆಯ ಪುಕ್ಕ ಉಳ್ಳದ್ದು. ಶತ್ರುಗಳ ಮೈರಕ್ತ ಇದಕ್ಕೆ ಆಹಾರ. ಚೆನ್ನಾಗಿ ಶುದ್ಧಗೊಳಿಸಿ ಅಲಂಕಾರ ಮಾಡಿ ಇಟ್ಟಿರುತ್ತೇನೆ.
ಶೇತೇ ಚಂದನಚೂರ್ಣೇನ ಪೂಜಿತೋ ಬಹುಲಾಃ ಸಮಾಃ |
ಆಹೇಯೋ ವಿಷವಾನುಗ್ರೋ ನರಾಶ್ವದ್ವಿಪಸಂಘಹಾ ॥7॥
ಶ್ರೀಗಂಧದ ಚೂರ್ಣದಲ್ಲಿ ಅದ್ದಿದ್ದು ಇರುತ್ತದೆ. ಬಹಳ ವರ್ಷಗಳಿಂದ ಪೂಜಿತವಾಗಿದೆ. ಸರ್ಪಮಯ, ಅಂದರೆ ನಾಗದೇವತೆ ಹೊರತು ಅಶ್ವಸೇನನಲ್ಲ. ವಿಷಉಳ್ಳದ್ದು, ಉಗ್ರವಾಗಿದೆ. ಎಲ್ಲ ಪದಾತಿ ಅಶ್ವ ಗಜ ಸೈನ್ಯಸಮೂಹಗಳನ್ನು ಇದೊಂದೇ ಬಾಣ ಸಂಹರಿಸಬಲ್ಲುದು.
ಘೋರರೂಪೋ ಮಹಾರೌದ್ರಸ್ತನುತ್ರಾಸ್ಥಿವಿದಾರಣಃ |
ನಿರ್ಭಿಂದ್ಯಾಂ ಯೇನ ರುಷ್ಟೋಽಹಮಪಿ ಮೇರುಂ
ಮಹಾಗಿರಿಮ್ ॥8॥
ಭಯಂಕರ ರೂಪವುಳ್ಳದ್ದು , ಮಹಾಭೀಕರ, ಕವಚವನ್ನು ಮಾತ್ರವಲ್ಲದೆ ಮೂಳೆಗಳನ್ನೂ ಭೇದಿಸುವುದು. ನಾನು ಕುಪಿತನಾದರೆ ಈ ಬಾಣದಿಂದ ಮೇರುಪರ್ವತವನ್ನೂ ಭೇದಿಸಬಲ್ಲೆ.
ತಮಹಂ ಜಾತು ನಾಸ್ಯೇಯಮನ್ಯಸ್ಮಿನ್ ಫಲ್ಗುನಾದೃತೇ |
ಕೃಷ್ಣಾದ್ವಾ ದೇವಕೀಪುತ್ರಾತ್ಸತ್ಯಂ ಚಾಪಿ ಶೃಣುಷ್ವ ಮೇ ॥9॥
ಅದನ್ನು ನಾನು ಅರ್ಜುನನ ಮೇಲೆ ಅಥವಾ ಕೃಷ್ಣನ ಮೇಲೆ ಹೊರತು ಇನ್ನೊಬ್ಬರ ಮೇಲೆ ಎಂದೂ ಪ್ರಯೋಗಿಸುವುದಿಲ್ಲ. ಸತ್ಯವನ್ನೇ ಹೇಳುತ್ತಿದ್ದೇನೆ, ಕೇಳು.
ತೇನಾಹಮಿಷುಣಾ ಶಲ್ಯ ವಾಸುದೇವಧನಂಜಯೌ |
ಯೋತ್ಸ್ಯೇ ಪರಮಸಂರಬ್ಧೌ ತತ್ಕರ್ಮ ಸದೃಶಂ ಮಮ ॥10॥
ಬಹಳ ಕ್ರುದ್ಧರಾದ ಕೃಷ್ಣಾರ್ಜುನರೊಡನೆ ಮಾತ್ರ ಆ ಬಾಣದಿಂದ ಯುದ್ಧ ಮಾಡುತ್ತೇನೆ. ಈ ಕಾರ್ಯ ನನಗೆ ಒಪ್ಪುವಂಥದ್ದು.

ಸರ್ವೇಷಾಂ ವೃಷ್ಣಿವೀರಾಣಾಂ ಕೃಷ್ಣೇ ಲಕ್ಷ್ಮೀರ್ಮೇಃ ಪ್ರತಿಷ್ಠಿತಾ |
ಸರ್ವೇಷಾಂ ಪಾಂಡುಪುತ್ರಾಣಾಂ ಜಯಃ ಪಾರ್ಥೇ ಪ್ರತಿಷ್ಠಿತಃ ॥11॥
ಉಭಯಂ ತು ಸಮಾಸಾದ್ಯ ಕೋ ನಿವರ್ತಿತುಮರ್ಹತಿ ॥12॥
ಎಲ್ಲ ಯಾದವರ ಸಂಪತ್ತು ಕೃಷ್ಣನ ಅಧೀನ. ಎಲ್ಲ ಪಾಂಡವರ ವಿಜಯ ಅರ್ಜುನನ ಅಧೀನ. ಎರಡನ್ನೂ ಏಕಕಾಲದಲ್ಲಿ ವಶಪಡಿಸಿಕೊಳ್ಳುವ ಅವಕಾಶ ಪಡೆದಮೇಲೆ ಯಾವನು ತಾನೆ ಯುದ್ಧ ಬಿಟ್ಟು ಹಿಂತಿರುಗುತ್ತಾನೆ?
ತಾವೇತೌ ಪುರುಷವ್ಯಾಘ್ರೌ ಸಮೇತೌ ಸ್ಯಂದನೇ ಸ್ಥಿತೌ |
ಮಾಮೇಕಮಭಿಸಂಯುದ್ಧೌ ಸುಜಾತಂ ಪಶ್ಯ ಶಲ್ಯ ಮೇ ॥13॥
ಅವರಿಬ್ಬರು ಪುರುಷಶ್ರೇಷ್ಠರು, ಜೊತೆಗೆ ರಥದಲ್ಲಿ ನಿಂತು ನನ್ನೊಬ್ಬನನ್ನೇ ಯುದ್ಧಕ್ಕೆ ಕರೆಯಲು ಬರುತ್ತಾರೆ. ನೋಡು ಶಲ್ಯ, ನನ್ನ ಜನ್ಮ ಎಷ್ಟು ಸಾರ್ಥಕ ವಾಗಿದೆ!
ಪಿತೃಷ್ವಸಾಮಾತುಲಜೌ ಭ್ರಾತರಾವಪರಾಜಿತೌ |
ಮಣೀ ಸೂತ್ರ ಇವ ಪ್ರೋತೌ ದ್ರಷ್ಟಾಸಿ ನಿಹತೌ ಮಯಾ ॥14॥
ಕೃಷ್ಣನಿಗೆ ಅರ್ಜುನ, ಅರ್ಜುನನಿಗೆ ಕೃಷ್ಣ ಸೋದರತ್ತೆ ಸೋದರಮಾವರ ಮಕ್ಕಳು, ಸೋದರರರಂತೇ. ಒಂದು ದಾರದಲ್ಲಿ ಪೋಣಿಸಿದ ಎರಡು ಮಣಿಗಳಂತಿರುವವರು. ಇಬ್ಬರನ್ನೂ ಕೊಲ್ಲುತ್ತೇನೆ, ನೋಡು.
ಅರ್ಜುನೇ ಗಾಂಡಿವಂ ಕೃಷ್ಣೇ ಚಕ್ರಂ ತಾರ್ಕ್ಷ್ಯಕಪಿಧ್ವಜೌ |
ಭೀರೂಣಾಂ ತ್ರಾಸಜನನಂ ಶಲ್ಯ ಹರ್ಷಕರಂ ಮಮ ॥15॥
ಅರ್ಜುನನಲ್ಲಿ ಗಾಂಡಿವ, ಕೃಷ್ಣನಲ್ಲಿ ಚಕ್ರ, ಒಬ್ಬ ಗರುಡಧ್ವಜ, ಇನ್ನೊಬ್ಬ ಕಪಿಧ್ವಜ, ಇದು ಹೇಡಿಗಳಿಗೆ ಭಯ ಉಂಟು ಮಾಡುತ್ತದೆ, ನನಗೆ ಉತ್ಸಾಹವನ್ನೇ ಉಂಟುಮಾಡುತ್ತದೆ.
ತ್ವಂ ತು ದುಷ್ಪ್ರಕೃತಿರ್ಮೂಢೋ ಮಹಾಯುದ್ಧೇಷ್ವಕೋವಿದಃ |
ಭಯಾದುದೀರ್ಣಃ ಸಂತ್ರಾಸಾದಬದ್ಧಂ ಬಹು ಭಾಷಸೇ ॥16॥
ಶಲ್ಯ, ನೀನು ದುಷ್ಟಸ್ವಭಾವದವನು, ಮೂಢ, ಮಹಾಯುದ್ಧಗಳ ವಿಷಯದಲ್ಲಿ ನಿನಗೇನು ತಿಳಿಯದು. ಭಯಕಂಪನಗಳಿಂದ ಪರವಶನಾಗಿ ಬಹು ಅಬದ್ಧ ಮಾತುಗಳನ್ನೇ ಆಡುತ್ತಿರುವೆ.
ಸಂಸ್ತೌಷಿ ತೌ ತು ಕೇನಾಪಿ ಹೇತುನಾ ತ್ವಂ ಕುದೇಶಜಃ |
ತೌ ಹತ್ವಾ ಸಮರೇ ಹಂತಾ ತ್ವಾಮದ್ಯ ಸಹಬಾಂಧವಮ್ ॥17॥
ನೀನು ಹುಟ್ಟಿದ ಮದ್ರದೇಶವೆ ಕೆಟ್ಟದು. ಅದರಿಂದ ಕೃಷ್ಣಾರ್ಜುನರನ್ನು ಯಾವುದೋ ಕಾರಣದಿಂದ ಹೊಗಳುತ್ತಿರುವೆ. ಶಲ್ಯನೆ, ನಾನು ಯುದ್ಧದಲ್ಲಿ ಅವರಿಬ್ಬರನ್ನು ಕೊಂದ ಬಳಿಕ ಇಂದೇ ನಿನ್ನನ್ನೂ ನಿನ್ನ ಬಾಂಧವರೊಂದಿಗೆ ಕೊಲ್ಲುತ್ತೇನೆ.
ಪಾಪದೇಶಜ ದುರ್ಬುದ್ಧೇ ಕ್ಷುದ್ರ ಕ್ಷತ್ರಿಯಪಾಂಸನ |
ಸುಹೃದ್ರೂಪೋ ರಿಪುಃ ಕಿಂ ಮಾಂ ಕೃಷ್ಣಾಭ್ಯಾಂ ಭೀಷಯಿಷ್ಯಸಿ ॥18॥
ಪಾಪದೇಶದಲ್ಲಿ ಹುಟ್ಟಿರುವವನಾದ ದುರ್ಬುದ್ಧಿಯವನಾದ ಕ್ಷುದ್ರನಾದ ಕ್ಷತ್ರಿಯಕುಲಕ್ಕೆ ಕಳಂಕಪ್ರಾಯನಾದ ಶಲ್ಯನೆ, ನೀನು ಮಿತ್ರರಂತೆ ತೋರಿಕೊಳ್ಳುವ ಶತ್ರು. ಇಲ್ಲದಿದ್ದರೆ ಕೃಷ್ಣಾರ್ಜುನರ ಭಯದಿಂದ ನನ್ನನ್ನು ಏಕೆ ಅಂಜಿಸುವೆ?
ತೌ ವಾ ಮಾಮದ್ಯ ಹಂತಾರೌ ಹನಿಷ್ಯೇ ವಾಽಪಿ ತಾವಹಮ್ |
ನಾಹಂ ಬಿಭೇಮಿ ಕೃಷ್ಣಾಭ್ಯಾಂ ವಿಜಾನನ್ನಾತ್ಮನೋ ಬಲಮ್ ॥19॥
ಇಂದು ಅವರು ನನ್ನನ್ನು ಕೊಲ್ಲುತ್ತಾರೆ ಅಥವಾ ನಾನು ಅವರನ್ನು ಕೊಲ್ಲುತ್ತೇನೆ ಹೊರತು, ನಾನು ಅವರಿಗೆ ಅಂಜುವುದಿಲ್ಲ. ನನಗೆ ನನ್ನ ಬಲ ಗೊತ್ತು.
ವಾಸುದೇವಸಹಸ್ರಂ ವಾ ಫಲ್ಗುನಾನಾಂ ಶತಾನಿ ವಾ |
ಅಹಮೇಕೋ ಹನಿಷ್ಯಾಮಿ ಜೋಷಮಾಸ್ಸ್ವ ಕುದೇಶಜ ॥20॥
ಸಾವಿರ ಕೃಷ್ಣರನ್ನಾಗಲಿ, ನೂರು ಅರ್ಜುನರನ್ನಾಗಲಿ ನಾನೊಬ್ಬನೆ ಕೊಲ್ಲುವೆನು. ಪಾಪದೇಶ ಜಾತನಾದ ಶಲ್ಯನೆ, ನೀನು ಸುಮ್ಮನಿರು.
ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಪ್ರಾಯಃ ಕ್ರೀಡಾಗತಾ ಜನಾಃ ॥21॥
ಯಾ ಗಾಥಾಃ ಸಂಪ್ರಗಾಯಂತಿ ಕುರ್ವಂತೋಽಧ್ಯಯನಂ ಯಥಾ |
ತಾ ಗಾಥಾಃ ಶೃಣು ಮೇ ಶಲ್ಯ ಮದ್ರಕೇಷು ದುರಾತ್ಮಸು ॥22॥
ಸ್ತ್ರೀಯರು ಬಾಲರು ವೃದ್ಧರು ಪ್ರಾಯಃ ಕ್ರೀಡಾನಿರತರಾದ ಜನರು, ದ್ವಿಜರು ಅಧ್ಯಯನ ಮಾಡುವಂತೆಯೇ ಕೆಲವು ಗಾಥೆಗಳನ್ನು ಹಾಡುತ್ತಾರೆ. ದುರಾತ್ಮರಾದ ಮದ್ರದೇಶದ ಜನರ ವಿಷಯದಲ್ಲಿ ಅವರು ಹಾಡುವ ಆ ಗಾಥೆಗಳನ್ನು ಹೇಳುತ್ತೇನೆ, ಕೇಳು.
ಬ್ರಾಹ್ಮಣೈಃ ಕಥಿತಾಃ ಪೂರ್ವಂ ಯಥಾವದ್ ರಾಜಸನ್ನಿಧೌ |
ಶ್ರುತ್ವಾ ಚೈಕಮನಾ ಮೂಢ ಕ್ಷಮ ವಾ ಬ್ರೂಹಿ ವೋತ್ತರಮ್ ॥23॥
ಹಿಂದೆ ರಾಜರ ಸನ್ನಿಧಿಯಲ್ಲಿ ಬ್ರಾಹ್ಮಣರು ಯಥಾವತ್ತಾಗಿ ಹೇಳುತ್ತಿದ್ದರು. ಮೂಢನೆ, ಅವುಗಳನ್ನು ಏಕಮನಸ್ಸಿನಿಂದ ಕೇಳು, ಕೇಳಿ ಸಹಿಸಿಕೊಳ್ಳು, ಸಹಿಸಿ ಕೊಳ್ಳಲು ಆಗದಿದ್ದರೆ ಉತ್ತರವನ್ನಾದರೂ ನನಗೆ ಹೇಳು.
ಮಿತ್ರಧ್ರುಙ್ ಮದ್ರಕೋ ನಿತ್ಯಂ ಯೋ ನೋ ದ್ವೇಷ್ಟಿ ಸ ಮದ್ರಕಃ |
ಮದ್ರಕೇ ಸಂಗತಂ ನಾಸ್ತಿ ಕ್ಷುದ್ರವಾಕ್ಯೇ ನರಾಧಮೇ ॥24॥
ಆ ಗಾಥೆಗಳು ಹೀಗಿವೆ– ಮದ್ರದೇಶದವನು ಎಂದೂ ಮಿತ್ರದ್ರೋಹಿಯೆ. ನಮಗೆ ದ್ವೇಷಿ ಯಾವನಿರುತ್ತಾನೋ ಅವನು ಮದ್ರದೇಶದವನೆ ಇರುತ್ತಾನೆ. ಕ್ಷುದ್ರ ಮಾತುಗಳನ್ನಾಡುವ ಆ ನರಾಧಮನೊಂದಿಗೆ ಯಾರಿಗೂ ಸಹವಾಸ ಸೌಹಾರ್ದ ವಿರುವುದಿಲ್ಲ.
ದುರಾತ್ಮಾ ಮದ್ರಕೋ ನಿತ್ಯಂ ನಿತ್ಯಮಾನೃತಿಕೋಽನೃಜುಃ |

ಯಾವದಂತಂ ಹಿ ದೌರಾತ್ಮ್ಯಂ ಮದ್ರಕೇಷ್ವಿತಿ ನಃ ಶ್ರುತಮ್ ॥25॥
ಮದ್ರದೇಶದವನು ಎಂದೂ ದುರ್ಬುದ್ಧಿಯವನು, ಎಂದೂ ಸುಳ್ಳಾಡುವವನು, ಎಂದೂ ವಂಚಕನೇ ಆಗಿರುತ್ತಾನೆ. ಮದ್ರದೇಶದವರ ದುರ್ಬುದ್ಧಿ ಸಾಯುವವರೆಗೂ ಅವರಲ್ಲಿರುತ್ತದೆ ಎಂದು ಕೇಳಿರುವೆವು.
ಪಿತಾ ಪುತ್ರಶ್ಚ ಮಾತಾ ಚ ಶ್ವಶ್ರೂಶ್ವಶುರಮಾತುಲಾಃ |
ಭಗಿನೀ ದುಹಿತಾ ಭ್ರಾತಾ ನಪ್ತಾ ಯೇಽನ್ಯೇ ಚ ಬಾಂಧವಾಃ ॥26॥
ವಯಸ್ಯಾಭ್ಯಾಗತಾಶ್ಚಾನ್ಯೇ ದಾಸದಾಸೀವ ಸಂಗತಾಃ |
ಪುಂಭಿರ್ವಿಮಿಶ್ರಾ ನಾರ್ಯಶ್ಚ ಜ್ಞಾತಾಜ್ಞಾತಾಃ ಸ್ವಯೇಚ್ಛಯಾ ॥27॥
ತಂದೆ ಮಗ ತಾಯಿ ಅತ್ತೆ ಮಾವ ಸೋದರಮಾವ ಅಳಿಯ ಮಗಳು ಅಣ್ಣ ತಮ್ಮಂದಿರು ಮೊಮ್ಮಗ ಮತ್ತು ಇನ್ನಿತರ ಬಾಂಧವರು ಸ್ನೇಹಿತರು ಅತಿಥಿಗಳಾಗಿ ಬಂದವರು ಎಲ್ಲರೂ ಸ್ವೇಚ್ಛಾನುಸಾರ ದಾಸದಾಸಿಯರಂತೆ ಪರಸ್ಪರ ಬೆರೆಯುತ್ತಾರೆ. ಪರಿಚಿತರು ಅಪರಿಚಿತರು ಎನ್ನದೆ ಎಲ್ಲ ಪುರುಷರೊಡನೆ ಸ್ತ್ರೀಯರು ಬೆರೆಯುತ್ತಾರೆ.
ಯೇಷಾಂ ಗೃಹೇಷು ಶಿಷ್ಟಾನಾಂ ಸಕ್ತುಮಂಥಾಶಿನಾಂ ಸದಾ |
ಪೀತ್ವಾ ಸೀಧುಂ ಸಗೋಮಾಂಸಂ ಕ್ರಂದಂತಿ ಚ ಹಸಂತಿ ಚ ॥28॥
ಸದಾ ಸಕ್ತುಮಂಥಗಳೆಂಬ ಶುದ್ಧ ಆಹಾರವನ್ನೇ ಸೇವಿಸುವ ಶಿಷ್ಟರ ಮನೆಯಲ್ಲಿ ಇವರು ಗೋಮಾಂಸ ಮದ್ಯ ಸೇವಿಸಿ ಪರಸ್ಪರ ಜಗಳಾಡುವುದು, ನಗುವುದು ಮಾಡುತ್ತಾರೆ.
ಗಾಯಂತಿ ಚಾಪ್ಯಬದ್ಧಾನಿ ಪ್ರವರ್ತಂತೇ ಚ ಕಾಮತಃ |
ಕಾಮಪ್ರಲಾಪಿನೋಽನ್ಯೋನ್ಯಂ ತೇಷು ಧರ್ಮಃ ಕಥಂ ಭವೇತ್ |29|
ಅಸಂಬದ್ಧವಾಗಿ ಹಾಡುತ್ತಾರೆ, ಸ್ವೇಚ್ಛೆಯಿಂದ ಪ್ರವೃತ್ತಿ ಮಾಡುತ್ತಾರೆ. ಮನ ಬಂದಂತೆ ಅನ್ಯೋನ್ಯವಾಗಿ ಪ್ರಲಾಪ ಮಾಡುತ್ತಾರೆ. ಇಂಥವರಲ್ಲಿ ಧರ್ಮಾಚರಣೆ ಹೇಗೆ ಇದ್ದೀತು?
ಮದ್ರಕೇಷ್ವವಲಿಪ್ತೇಷು ಪ್ರಖ್ಯಾತಾಶುಭಕರ್ಮಸು |
ನಾಪಿ ವೈರಂ ನ ಸೌಹಾರ್ದಂ ಮದ್ರಕೇಣ ಸಮಾಚರೇತ್ ॥30॥
ಮದ್ರದೇಶದವರು ದರ್ಪದಿಂದ ಪಾಪಕರ್ಮವನ್ನು ಮಾಡುವುದರಲ್ಲಿ ಪ್ರಖ್ಯಾತರು. ಅವರಲ್ಲಿ ಧರ್ಮಾಚರಣೆ ಹೇಗೆ ಇದ್ದೀತು? ಮದ್ರದೇಶದವ ನೊಡನೆ ವೈರವನ್ನೂ ಮಾಡಬಾರದು, ಸೌಹಾರ್ದವನ್ನೂ ಮಾಡಬಾರದು.
ಮದ್ರಕೇ ಸಂಗತಂ ನಾಸ್ತಿ ಮದ್ರಕೋ ಹಿ ಸದಾಮಲಃ |
ಮದ್ರಕೇಷು ನ ಸಂಸ್ಪೃಷ್ಟಂ ಶೌಚಂ ಗಾಂಧಾರಕೇಷು ಚ ॥31॥
ಮದ್ರದೇಶದವನೊಡನೆ ಸಹವಾಸ ಕೂಡದು. ಅವನು ಸದಾ ಅಶುಚಿ. ಮದ್ರದೇಶದವರಲ್ಲಿ ಸಂಸ್ಪರ್ಶವಿಲ್ಲ. ಸಂಸ್ಪರ್ಶಕ್ಕೆ ಅವರು ಯೋಗ್ಯರಲ್ಲ. ಗಾಂಧಾರದೇಶದವರಲ್ಲಿಯೂ ಶೌಚವಿಲ್ಲ.
ರಾಜಯಾಜಕಯಾಜ್ಯೇ ಹಿ ಯಥಾ ದತ್ತಂ ಹವಿರ್ನಶೇತ್ |
ಶೂದ್ರಸಂಸ್ಕಾರಕೋ ವಿಪ್ರೋ ಯಥಾ ಯಾತಿ ಪರಾಭವಮ್ ॥32॥
ಯಥಾ ಬ್ರಹ್ಮದ್ವಿಷೋ ನಿತ್ಯಂ ಗಚ್ಛಂತೀಹ ಪರಾಭವಮ್ |
ತಥೈವ ಸಂಗತಂ ಕೃತ್ವಾ ನರಃ ಪತತಿ ಮದ್ರಕೈಃ ॥33॥
ರಾಜನೇ ಪುರೋಹಿತನಾಗಿರುವ ಯಜ್ಞದಲ್ಲಿ ಅಗ್ನಿಗೆ ನೀಡಿದ ಹವಿಸ್ಸು ದೇವತೆಗಳಿಗೆ ತಲುಪದೆ ನಾಶವನ್ನೇ ಹೊಂದುತ್ತದೆ, ಕೇವಲ ಭಸ್ಮವಾಗುತ್ತದೆ. ಶೂದ್ರನಿಗೆ ಉಪನಯನಾದಿ ಸಂಸ್ಕಾರ ಮಾಡುವ ವಿಪ್ರನು ಪರಾಭವ ಹೊಂದುತ್ತಾನೆ, ಶಿಷ್ಟರಿಂದ ಬಹಿಷ್ಕಾರಕ್ಕೊಳಗಾಗುತ್ತಾನೆ. ಬ್ರಹ್ಮದ್ವೇಷಿಗಳು ಎಂದಿಗೂ ಪರಾಭವವನ್ನೇ ಹೊಂದುತ್ತಾರೆ. ಇದೇರೀತಿ ಮದ್ರದೇಶದವರೊಡನೆ ಸಹವಾಸ ಮಾಡಿದರೆ ಮಾನವನು ನರಕಭಾಗಿಯಾಗುತ್ತಾನೆ.
ಮದ್ರಕೇ ಸಂಗತಂ ನಾಸ್ತಿ ಹತಂ ವೃಶ್ಚಿಕ ತೇ ವಿಷಮ್ |
ಆಥರ್ವಣೇನ ಮಂತ್ರೇಣ ಯಥಾ ಶಾಂತಿಃ ಕೃತಾ ಮಯಾ ॥34॥
ಅದರಿಂದ ಮದ್ರದೇಶದವನಲ್ಲಿ ಬೇರೆ ಯಾರೊಡನೆಯೂ ಸಹವಾಸಕ್ಕೆ ಯೋಗ್ಯತ್ವವಿಲ್ಲ. ಅವನು ಅಹಂಕಾರಿ. ಶಲ್ಯನೆ, ನಿನ್ನ ಅಹಂಕಾರವೆಂಬ ವಿಷವನ್ನು ನಿನ್ನ ಜನ್ಮದೇಶದ ದೋಷವನ್ನು ಹೇಳುವ ಮೂಲಕ ನಾನು ನಾಶಪಡಿಸಿದ್ದೇನೆ. `ಹತಂ ವೃಶ್ಚಿಕ ತೇ ವಿಷಂ' `ಎಲೈ ಚೇಳೆ, ನಿನ್ನ ವಿಷವನ್ನು ನಾಶಪಡಿಸಿದ್ದೇನೆ' ಎನ್ನುವ ಅಥರ್ವಣವೇದದ ಮಂತ್ರದಿಂದ ತಜ್ಞವೈದ್ಯರು ಹೇಗೆ ವ್ಯಾಧ್ಯಾದಿಶಾಂತಿ ಮಾಡುವರೋ ಹಾಗೇ ನಾನು ನಿನ್ನ ಅಹಂಕಾರವೆಂಬ ವಿಷಜನ್ಯವ್ಯಾಧಿಯನ್ನು ನಾಶಪಡಿಸಿದ್ದೇನೆ.
ಇತಿ ವೃಶ್ಚಿಕದಷ್ಟಸ್ಯ ವಿಷವೇಗಹತಸ್ಯ ಚ |
ಕುರ್ವಂತಿ ಭೇಷಜಂ ಪ್ರಾಜ್ಞಾಃ ಸತ್ಯಂ ತಚ್ಚಾಪಿ ದೃಶ್ಯತೇ ॥35॥
`ಹತಂ ವೃಶ್ಚಿಕ ತೇ ವಿಷಂ' ಎಂಬ ಆಥರ್ವಣ ಮಂತ್ರದಿಂದ ಚೇಳು ಕಡಿದ ವ್ಯಕ್ತಿಗೆ ವಿಷದ ವೇಗವನ್ನು ಪ್ರಾಜ್ಞರು ಪರಿಹರಿಸುತ್ತಾರೆ. ಅದು ಸತ್ಯವೆ ಆಗುತ್ತದೆ. ಅಂದರೆ ಸಫಲವೇ ಆಗುತ್ತದೆ, ವ್ಯರ್ಥವಾಗುವುದಿಲ್ಲ.
ಏವಂ ವಿದ್ವಾನ್ ಜೋಷಮಾಸ್ಸ್ವ ಶೃಣು ಚಾತ್ರೋತ್ತರಂ ವಚಃ |
ವಾಸಾಂಸ್ಯುತ್ಸೃಜ್ಯ ನೃತ್ಯಂತಿ ಸ್ತ್ರಿಯೋ ಮದ್ಯವಿಮೋಹಿತಾಃ ॥36॥
ಹೀಗೆ ತಿಳಿದು ನೀನು ಈಗ ಸುಮ್ಮನಿರು. ಈ ವಿಷಯದಲ್ಲಿ ನನ್ನ ಮುಂದಿನ ಮಾತನ್ನೂ ಕೇಳು. ಮದ್ರದೇಶದಲ್ಲಿ ಸ್ತ್ರೀಯರು ಮದ್ಯದ ಅಮಲೇರಿ ವಸ್ತ್ರಗಳನ್ನು ಕಳಚಿಕೊಂಡು ನೃತ್ಯ ಮಾಡುತ್ತಾರೆ!
ಮೈಥುನೇಽಸಂಯತಾಶ್ಚಾಪಿ ಯಥಾಕಾಮವರಾಶ್ಚ ತಾಃ |
ತಾಸಾಂ ಪುತ್ರಃ ಕಥಂ ಧರ್ಮಂ ಮದ್ರಕೋ ವಕ್ತುಮರ್ಹತಿ ॥37॥

ಪುರುಷಸಂಗದಲ್ಲಿ ಮದ್ರದೇಶದ ಸ್ತ್ರೀಯರು ಸಂಯಮ, ಮರ್ಯಾದೆ ಏನೂ ಇಲ್ಲದವರು. ಮನಬಂದಂತೆ ಬಯಸಿದ ಪುರುಷರನ್ನು ಕೂಡುತ್ತಾರೆ. ಅಂಥ ಸ್ತ್ರೀಯರ ಹೊಟ್ಟೆಯಲ್ಲಿ ಹುಟ್ಟಿದ ಮದ್ರದೇಶದವನು ಧರ್ಮವನ್ನು ಹೇಳಲು ಹೇಗೆ ಯೋಗ್ಯನೆನಿಸುತ್ತಾನೆ?

ಯಾಸ್ತಿಷ್ಠಂತ್ಯಃ ಪ್ರಮೇಹಂತಿ ಯಥೈವೋಷ್ಟ್ರೀ ದಶೇರಕೀ |
ತಾಸಾಂ ವಿಭ್ರಷ್ಟಧರ್ಮಾಣಾಂ ನಿರ್ಲಜ್ಜಾನಾಂ ತತಸ್ತತಃ ॥38॥
ತ್ವಂ ಪುತ್ರಸ್ತಾದೃಶೀನಾಂ ಹಿ ಧರ್ಮಂ ವಕ್ತುಮಿಹೇಚ್ಛಸಿ ॥39॥

ದಾಶೇರಕ ಎನಿಸುವ ಹೆಣ್ಣು ಒಂಟೆಯಂತೆ ಮದ್ರಸ್ತ್ರೀಯರು ನಿಂತೇ ಮೂತ್ರವಿಸರ್ಜನೆ ಮಾಡುತ್ತಾರೆ. ಧರ್ಮಪ್ರಜ್ಞೆ ಇಲ್ಲದ ನಾಚಿಕೆಯೂ ಇಲ್ಲದ ಅವರು ಮೂತ್ರವಿಸರ್ಜನೆ ಮಾಡುವ ಸಮಯದಲ್ಲಿಯೂ ತಿಂಡಿ ತಿನ್ನುತ್ತ ಹಲ್ಲುದವಡೆಗಳನ್ನು ಆಡಿಸುತ್ತಿರುತ್ತಾರೆ. ಅವರ ಹೊಟ್ಟೆಯಲ್ಲಿ ಹುಟ್ಟಿದವನು ನೀನು ಧರ್ಮವನ್ನು ಹೇಳಲು ಇಚ್ಛಿಸುತ್ತಿರುವೆ.

`ದಾಶೇರಕೀ' ಎಂದರೆ ಹಲ್ಲುದವಡೆಗಳನ್ನು ಆಡಿಸುವ ಹೆಣ್ಣು ಒಂಟೆ. `ದಾಶ', ದಶನ ಎಂದರೆ ಹಲ್ಲು. `ಈರಕೀ' ಈರಪ್ರೇರಣೇ ಧಾತು. ಪ್ರೇರಿಸುವ, ತಿಂಡಿ ತಿನ್ನಲು ಹಲ್ಲುಗಳನ್ನು ಆಡಿಸುವ ಹೆಣ್ಣು ಒಂಟೆ ಎಂದರ್ಥ. ದಾಶೇರಕಿಯ ಉದರದಲ್ಲಿ ಹುಟ್ಟಿದವು ದಾಶೇರಕಗಳು ಒಂಟೆಗಳು, ಮೂತ್ರವಿಸರ್ಜನೆಯ ಕಾಲದಲ್ಲಿಯೂ ತಿಂಡಿ ತಿನ್ನುತ್ತಿರುತ್ತವೆ ಎಂದು ದೋಷವನ್ನು ಹೇಳಲು ಹೆಣ್ಣು ಒಂಟೆಗೆ ದಾಶೇರಕೀ ವಿಶೇಷಣ.

ಇಲ್ಲಿ `ಯಥೈವೋಷ್ಟ್ರಾ ದಶೇರಕಾಃ' ಎಂದು ಪಾಠವಿಟ್ಟುಕೊಂಡು `ದಶೇರಕಾಃ ಗರ್ದಭಾಃ' ಎಂದು ನೀಲಕಂಠಿಯಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಲಕ್ಷಾಲಂಕಾರದಲ್ಲಿ `ಹಲ್ಲುಗಳನ್ನು ಆವರ್ತಿಸುವ ತಿರುಗಿಸುವ ಹೆಣ್ಣುಒಂಟೆಗೆ `ದಾಶೇರಕೀ' ಎಂದು ಅನ್ವರ್ಥಕವಾದ ಹೆಸರು'ಎಂದಿದ್ದಾರೆ. ದಾಶೇರಕಿಯ ಸಂತತಿ ದಾಶೇರಕ ಎನಿಸುತ್ತದೆ ಎಂದು ಹೇಳಿ, ಒಂಟೆಗೆ ದಾಶೇರಕ ಎಂಬ ಹೆಸರಿದೆ ಎನ್ನಲು,

`ದಾಶೇರಕಃ ಕ್ರಮೇಲಕ ಉಷ್ಟ್ರೋ ಮಯ ರವಣ ಕರಭ ಶೃಂಖಲಕಾಃ'

ಎಂದು ಹಲಾಯುಧಕೋಶದ ಆಧಾರವನ್ನು ತೋರಿಸಿದ್ದಾರೆ.

`ಉಷ್ಟ್ರೀ' ಹೆಣ್ಣು ಒಂಟೆ ಎಂದು ಹೇಳಿ ಅದಕ್ಕೆ `ದಾಶೇರಕೀ' ಎಂದು ಅದೇ ಅರ್ಥದ ವಿಶೇಷಣವನ್ನು ಭಾರತದಲ್ಲಿ ಕೊಡಲಾಗಿದೆ. ಇದನ್ನು ವ್ಯರ್ಥ ಪುನರುಕ್ತಿ ಎನ್ನಬಾರದು. ಒಂಟೆ, ಮೂತ್ರ ಸುರಿಸುವಾಗಲೂ ಹಲ್ಲುಗಳನ್ನು ತಿರುಗಿಸುತ್ತದೆ. ಹಾಗೆ ಮದ್ರಕಸ್ತ್ರೀಯೂ ಮೂತ್ರವಿಸರ್ಜನೆ ಮಾಡುವಾಗಲೂ ಬಾಯಲ್ಲಿ ತಿಂಡಿಯನ್ನು ಇಟ್ಟುಕೊಂಡು ಹಲ್ಲುಗಳಿಂದ ಕಡಿಯುತ್ತಾಳೆ ಎಂದು ವಿಶೇಷಾರ್ಥ ಬರುತ್ತದೆ.

ಯದ್ಯಪಿ ಮೂಲದಲ್ಲಿಯೂ ಲಕ್ಷಾಲಂಕಾರದಲ್ಲಿಯೂ `ದಶೇರಕೀ' ಎಂದು ಪಾಠ ಕಾಣುತ್ತದೆ. ಆದರೆ ಹಲಾಯುಧ ಕೋಷದಲ್ಲಿ ಉಷ್ಟ್ರ ಪರ್ಯಾಯವಾಗಿ `ದಾಶೇರಕ' ಶಬ್ದವಿದೆ. ಭಾರತದಲ್ಲಿಯೂ `ಯಥೈವೋಷ್ಟ್ರೀ ದಾಶೇರಕೀ' ಎಂದು ಒಂದು ಪಾಠವಿರುವುದರಿಂದ ಅದನ್ನೇ ಸ್ವೀಕರಿಸಬಹುದು. ಅಥವಾ ಛಂದಸ್ಸಿಗಾಗಿ `ದಾಶೇರಕೀ' `ದಶೇರಕೀ' ಆಗಿದೆ.

ಸೌವೀರಕಂ ಯಾಚ್ಯಮಾನಾ ಮದ್ರಿಕಾ ಪ್ರಾತಿವೇಶ್ಮಿಕೈಃ |
ಅದಾತುಕಾಮಾ ವಚನಮಿದಂ ವದತಿ ದಾರುಣಮ್ ॥40॥

ಭಿಕ್ಷೆ ಬೇಡುತ್ತ ಮನೆಮನೆ ತಿರುಗುವವನು ಗಂಜಿಯನ್ನು ಬೇಡಿದರೆ ಮದ್ರಕ ಸ್ತ್ರೀಯು ಅಂಬಲಿ ಕೊಡಲು ಇಷ್ಟವಿಲ್ಲದೆ ಕರ್ಣಕಠೋರವಾದ ಈ ಮಾತನ್ನು ಆಡುತ್ತಾಳೆ–

ಮಾ ಮಾಂ ಸೌವೀರಕಂ ಕಶ್ಚಿದ್ ಯಾಚತಾಂ ದಯಿತಂ ಮಮ |
ಪುತ್ರಂ ದದ್ಯಾಂ ಪತಿಂ ದದ್ಯಾಂ ನ ತು ಸೌವೀರಕಂ ಕ್ವಚಿತ್ ॥41॥

`ಅಂಬಲಿ ಕೊಡೆಂದು ನನ್ನನ್ನು ಯಾರೂ ಕೇಳಬಾರದು. ಅಂಬಲಿ ನನಗೆ ಇಷ್ಟ. ಬೇಡಿದರೆ ಪುತ್ರನನ್ನು ಕೊಟ್ಟೇನು, ಪತಿಯನ್ನು ಕೊಟ್ಟೇನು. ಅಂಬಲಿಯನ್ನು ಮಾತ್ರ ಕೊಡಲಾರೆ' ಎಂದು.

`ಪ್ರಾತಿವೇಶ್ಮಿಕ' ಎಂದರೆ `ಪ್ರತಿ'ಯೊಂದು `ವೇಶ್ಮ'ವನ್ನೂ ಮನೆಮನೆ ಯನ್ನೂ ತಿರುಗಿ ಬೇಡುವವನು. `ಮದ್ರಿಕಾ ಕಷತಿ ಸ್ಫಿಚೌ' ಎಂದೂ ಇಲ್ಲಿ ಪಾಠವಿದೆ ಎಂದು ಲಕ್ಷಾಲಂಕಾರ ಹೇಳಿ, `ಅದೂ ಸರಿಯೆ. ಬೇಡುವವನಿಗೆ ಅಂಬಲಿಯನ್ನು ಕೊಡಲು ಇಷ್ಟವಿಲ್ಲದೆ ನಿತಂಬಗಳನ್ನು ಕೆರೆದುಕೊಳ್ಳುತ್ತಾಳೆ ಎಂದು ಅರ್ಥ ಕೊಡುತ್ತದೆ' ಎಂದಿದ್ದಾರೆ.

ಗೌರ್ಯೋ ಬೃಹತ್ಯೋ ನಿರ್ಹ್ರೀಕಾ ಮದ್ರಿಕಾಃ ಕಂಬಲಾವೃತಾಃ |
ಘಸ್ಮರಾ ನಷ್ಟಶೌಚಾಶ್ಚ ಪ್ರಾಯ ಇತ್ಯನುಶುಶ್ರುಮ ॥42॥

ಮದ್ರಸ್ತ್ರೀಯರು ಹೆಚ್ಚಾಗಿ ಗೌರವರ್ಣದವರೂ ಸ್ಥೂಲಕಾಯರೂ ಆಗಿದ್ದು ನಿರ್ಲಜ್ಜರಾಗಿರುತ್ತಾರೆ. ಕಂಬಳಿ ಉಡುತ್ತಾರೆ. ಹೊಟ್ಟೆಬಾಕರಾಗಿ ಶೌಚವಿಲ್ಲದವ ರಾಗಿರುತ್ತಾರೆ ಎಂದು ಕೇಳಿದ್ದೇವೆ.

ಪ್ರಮೇಹಿತ್ವಾ ಸ್ಫಿಚಾ ಭೂಮಿಂ ಘರ್ಷಂತ್ಯೋ ಹೀನಶೋಧನಾಃ |
ಶುದ್ಧಾ ನಾದ್ಭಿರ್ನ ಮೃದ್ಭಿಶ್ಚ ನಿತ್ಯೋಚ್ಛಿಷ್ಟಾ ಭವಂತಿ ಹಿ ॥43॥

ಮೂತ್ರವಿಸರ್ಜನೆ ಮಾಡಿದ ಮೇಲೆ ನೆಲವನ್ನು ನಿತಂಬದಿಂದ ಉಜ್ಜುತ್ತಾರೆ ಹೊರತು ನೀರಿನಿಂದ, ಮಣ್ಣಿನಿಂದ ಶೋಧನ ಮಾಡುವುದಿಲ್ಲ. ಹೀಗೆ ಮದ್ರಸ್ತ್ರೀಯರು ಎಂದಿಗೂ ಅಶುದ್ಧರಾಗಿರುತ್ತಾರೆ.

ಏವಮಾದಿ ಮಯಾನ್ಯೈರ್ವಾ ಶಕ್ಯಂ ವಕ್ತುಂ ಭವೇದ್ ಬಹು |
ಆಕೇಶಾಂತಾನ್ನಖಾಗ್ರಾಚ್ಚ ವಕ್ತವ್ಯೇಷು ಕುಕರ್ಮಸು ॥44॥

ಕೇಶದ ತುದಿಯಿಂದ ತೊಡಗಿ ಕಾಲುಗುರಿನ ತುದಿವರೆಗೂ ನಿಂದ್ಯವಾದ ಇಂಥ ಕುಕರ್ಮಗಳ ಬಗ್ಗೆ ನಾನಾಗಲಿ, ಬೇರೆಯವರಾಗಲಿ ಇನ್ನೂ ಬಹಳವಾಗಿ ಹೇಳಲು ಶಕ್ಯವಿದೆ.

ಮದ್ರಕಾಃ ಸಿಂಧುಸೌವೀರಾ ಧರ್ಮಂ ವಿದ್ಯುಃ ಕಥಂ ತ್ವಿಹ |
ಪಾಪದೇಶೋದ್ಭವಾ ಮ್ಲೇಚ್ಛಾಃ ಕರ್ಮಲೋಪವಿಚಕ್ಷಣಾಃ ॥45॥

ಮದ್ರ ಸಿಂಧು ಸೌವೀರ ದೇಶದವರು ಪಾಪದೇಶಗಳಲ್ಲಿ ಹುಟ್ಟಿದವರು ಮ್ಲೇಚ್ಛರು. ಕರ್ಮಲೋಪದಲ್ಲಿ ನಿಪುಣರು. ಧರ್ಮಾಸಕ್ತರು

ಹೇಗಾದಾರು?
ಏಷ ಮುಖ್ಯತಮೋ ಧರ್ಮಃ ಕ್ಷತ್ರಿಯಸ್ಯೇತಿ ನಃ ಶ್ರುತಮ್ |
ಯದಾಜೌ ನಿಹತಃ ಶೇತೇ ಸದ್ಭಿಃ ಸಮಭಿಪೂಜಿತಃ ॥46॥
ಯುದ್ಧದಲ್ಲಿ ಹತನಾಗಿ ಸಜ್ಜನರಿಂದ ಹೊಗಳಿಸಿಕೊಳ್ಳುತ್ತ ನೆಲದ ಮೇಲೆ ಒರಗುವುದು ಕ್ಷತ್ರಿಯನಿಗೆ ಅತಿಮುಖ್ಯವಾದ ಧರ್ಮ ಎಂದು ನಾವು ಕೇಳಿರುವೆವು.
ಆಯುಧಾನಾಂ ಸಾಂಪರಾಯೇ ಯನ್ಮುಂಚೇಯಮಹಂ ತನುಮ್ |
ಮಮೈಷ ಪ್ರಥಮಃ ಕಲ್ಪೋ ನಿಧನೇ ಸ್ವರ್ಗಮಿಚ್ಛತಃ ॥47॥
ಮರಣಾನಂತರದಲ್ಲಿ ಸ್ವರ್ಗವನ್ನು ಹೊಂದಲು ಇಚ್ಛಿಸುವ ನಾನು ಆಯುಧ ಗಳಿಂದ ನಡೆಯುವ ಯುದ್ಧದಲ್ಲಿ ಶರೀರತ್ಯಾಗಮಾಡುವ ವಿಧಾನಕ್ಕೇ ಆದ್ಯತೆ ನೀಡುತ್ತೇನೆ.
ಸೋಽಯಂ ಪ್ರಿಯಸಖಾ ಚಾಸ್ಮಿ ಧಾರ್ತರಾಷ್ಟ್ರಸ್ಯ ಧೀಮತಃ |
ತದರ್ಥೇ ಹಿ ಮಮ ಪ್ರಾಣಾ ಯಚ್ಚ ಮೇ ವಿದ್ಯತೇ ವಸು ॥48॥
ನಾನು ಧೀಮಂತನಾದ ದುರ್ಯೋಧನನಿಗೆ ಪ್ರಿಯಮಿತ್ರ. ನನ್ನ ಪ್ರಾಣಗಳು ಅವನಿಗಾಗಿಯೆ ಇವೆ. ನನ್ನಲ್ಲಿ ಏನು ಸಂಪತ್ತು ಇದೆಯೋ ಅದೂ ಅವನಿಗಾಗಿಯೆ.
ವ್ಯಕ್ತಂ ತ್ವಮಸ್ಯುಪಹಿತಃ ಪಾಂಡವೈಃ ಪಾಪದೇಶಜ |
ಯಥಾ ಚಾಮಿತ್ರವತ್ಸಂಖ್ಯೇ ತ್ವಮಸ್ಮಾಸು ಪ್ರವರ್ತಸೇ ॥49॥
ಪಾಪದೇಶದಲ್ಲಿ ಜನಿಸಿದವನೆ, ನೀನು ಪಾಂಡವರಿಂದ ನಮ್ಮಲ್ಲಿ ಇರಿಸಲ್ಪಟ್ಟವನು ಎನ್ನುವುದು ಖಚಿತವಾಯಿತು. ಏಕೆಂದರೆ ಯುದ್ಧದಲ್ಲಿ ಶತ್ರುಗಳಂತೆ ನಮ್ಮಲ್ಲಿ ಪ್ರವೃತ್ತಿ ಮಾಡುವೆ.
ಕಾಮಂ ನ ಖಲು ಶಕ್ಯೋಽಹಂ ತ್ವದ್ವಿಧಾನಾಂ ಶತೈರಪಿ |
ಸಂಗ್ರಾಮಾದ್ ವಿಮುಖಂ ಕರ್ತುಂ ಧರ್ಮಜ್ಞ ಇವ ನಾಸ್ತಿಕೈಃ ॥50॥
ನಿನ್ನಂಥವರು ನೂರು ಮಂದಿ ಯತ್ನಿಸಿದರೂ ನನ್ನನ್ನು ಯುದ್ಧದಿಂದ ವಿಮುಖ ನನ್ನಾಗಿಸುವುದು ಶಕ್ಯವಿಲ್ಲ. ನೂರುಮಂದಿ ನಾಸ್ತಿಕರಿಂದಲೂ ಧರ್ಮಜ್ಞಾನಿಯನ್ನು ಧರ್ಮವಿಮುಖಗೊಳಿಸಲು ಶಕ್ಯವಾಗಲಾರದು.
ಸಾರಂಗ ಇವ ಘರ್ಮಾಂತೇ ಕಾಮಂ ವಿಲಪ ಶುಷ್ಯ ಚ |
ನಾಹಂ ಭೀಷಯಿತುಂ ಶಕ್ಯಃ ಕ್ಷತ್ರಧರ್ಮೇ ವ್ಯವಸ್ಥಿತಃ ॥51॥
ಬೇಸಿಗೆಯ ಕೊನೆಯಲ್ಲಿ ಚಾತಕಪಕ್ಷಿ ಕೂಗಿ ಗಂಟಲು ಒಣಗಿಸಿಕೊಳ್ಳುತ್ತದೆ. ಹಾಗೇ ನೀನು ಕೂಡ ಎಷ್ಟು ಬೇಕಾದರೂ ಪ್ರಲಾಪ ಮಾಡು, ಗಂಟಲು ಒಣಗಿಸಿ ಕೊಳ್ಳು. ನನ್ನನ್ನು ಭಯಪಡಿಸುವುದು ಶಕ್ಯವಿಲ್ಲ. ಕ್ಷಾತ್ರಧರ್ಮದಲ್ಲಿ ಸ್ಥಿರವಾಗಿ ನಿಂತವನು ನಾನು.
ತನುತ್ಯಜಾಂ ನೃಸಿಂಹಾನಾಮಾಹವೇಷ್ವನಿವರ್ತಿನಾಮ್ |
ಯಾ ಗತಿರ್ಗುರುಣಾ ಪ್ರೋಕ್ತಾ ಪ್ರೇಮ್ಣಾ ರಾಮೇಣ ತಾಂ ಸ್ಮರೇ |52|
ಯುದ್ಧದಿಂದ ಹಿಂಜರಿಯದೆ ಶರೀರತ್ಯಾಗ ಮಾಡುವ ಪುರುಷಶ್ರೇಷ್ಠರಿಗೆ ಯಾವ ಉತ್ತಮ ಗತಿ ಲಭ್ಯವೆಂದು ಪ್ರೀತಿಯಿಂದ ಗುರುವಾದ ಪರಶುರಾಮ ಹೇಳಿರುವನೋ ಅದನ್ನು ಸ್ಮರಿಸುತ್ತೇನೆ.
ಸ್ವೇಷಾಂ ತ್ರಾಣಾರ್ಥಮುದ್ಯಂತಂ ವಧಾರ್ಥಂ ದ್ವಿಷತಾಮಪಿ |
ವಿದ್ಧಿ ಮಾಮಾಸ್ಥಿತಂ ವೃತ್ತಂ ಪೌರೂರವಸಮುತ್ತಮಮ್ ॥53॥
ನಮ್ಮವರ ರಕ್ಷಣೆಗಾಗಿ, ಶತ್ರುಗಳ ವಧೆಗಾಗಿ ನಾನು ಪುರೂರವ ಮಹಾರಾಜನ ಉತ್ತಮ ಆದರ್ಶವನ್ನು ಇಟ್ಟುಕೊಂಡವನು ಎಂದು ತಿಳಿ. ಮಿತ್ರನಾದ ದೇವೇಂದ್ರನ ಪ್ರೀತಿಗಾಗಿ ರಾಜಾ ಪುರೂರವನು ಕೇಶಿ ಮಹಾದಾನವನೊಂದಿಗೆ ಯುದ್ಧದಲ್ಲಿ ಹೋರಾಡಿ, ಅವನನ್ನು ಕೊಂದು, ಅವನು ಅಪಹರಿಸಿದ್ದ ಊರ್ವಶಿಯನ್ನು ದೇವೇಂದ್ರನಿಗಿತ್ತ. ಅವನಿಂದ ಇಂದ್ರನ ಸಿಂಹಾಸನವನ್ನೂ ಕೂಡ ರಕ್ಷಿಸಿದ. `ಜೀವದ ಹಂಗು ತೊರೆದು ಮಿತ್ರನಿಗೆ ಉಪಕಾರ ಮಾಡುವ ಈ ಪುರೂರವನ ವ್ರತವನ್ನು ಕೈಗೊಂಡವನು ನಾನು ನೋಡು' ಎಂದು ಕರ್ಣ ಹೇಳುತ್ತಿದ್ದಾನೆ.
ನ ತದ್ಭೂತಂ ಪ್ರಪಶ್ಯಾಮಿ ತ್ರಿಷು ಲೋಕೇಷು ಮದ್ರಪ |
ಯೋ ಮಾಮಸ್ಮಾದಭಿಪ್ರಾಯಾದ್ ವಾರಯೇದಿತಿ ಮೇ ಮತಿಃ ॥54॥
ಮದ್ರರಾಜ, ಈ ಅಭಿಪ್ರಾಯದಿಂದ ಹೊರಟಿರುವ ನನ್ನನ್ನು ತಡೆಯಬಲ್ಲ ವ್ಯಕ್ತಿಯನ್ನು ಮೂರು ಲೋಕದಲ್ಲಿ ನಾ ಕಾಣೆ.
ಏವಂ ವಿದ್ವನ್ ಜೋಷಮಾಸ್ಸ್ವ ತ್ರಾಸಾತ್ ಕಿಂ ಬಹು ಭಾಷಸೇ |
ನ ತ್ವಾಂ ಹತ್ವಾ ಪ್ರದಾಸ್ಯಾಮಿ ಕ್ರವ್ಯಾದ್ಭ್ಯೋ ಮದ್ರಕಾಧಮ ॥55॥
ಮದ್ರಕರಲ್ಲಿ ಅಧಮನಾಗಿರುವ ಶಲ್ಯನೆ, ಹೀಗೆ ನಾನು ಹೇಳಿದಂತೆ ತಿಳಿದು ಸುಮ್ಮನೆ ಇರು. ಭಯದಿಂದ ಏಕೆ ಹೆಚ್ಚು ಮಾತಾಡುವೆ? ನಾನು ನಿನ್ನನ್ನು ಕೊಂದು ಹಿಂಸ್ರಮೃಗಗಳಿಗೆ ಉಣಲು ಕೊಡುತ್ತಿಲ್ಲ.
ಮಿತ್ರಪ್ರತೀಕ್ಷಯಾ ಶಲ್ಯ ಧಾರ್ತರಾಷ್ಟ್ರಸ್ಯ ಚೋಭಯೋಃ |
ಅಪವಾದತಿತಿಕ್ಷಾಭ್ಯಾಂ ತ್ರಿಭಿರೇತೈರ್ಹಿ ಜೀವಸಿ ॥56॥
ದುರ್ಯೋಧನನಿಗೆ ನಮ್ಮಿಬ್ಬರಲ್ಲಿಯೂ ಮಿತ್ರರೆಂಬ ಭಾವನೆ ಇದೆ. ನನಗೂ ಸಾರಥಿಯನ್ನು ಕೊಂದನೆಂಬ ಅಪವಾದ ಬೇಡವಾಗಿದೆ. ಮತ್ತು ನೀನು ನಿನ್ನಿಚ್ಛೆಯಂತೆ ಏನಾದರೂ ಹೇಳಬಹುದೆಂದು ನಾನು ಒಪ್ಪಿಕೊಂಡಿದ್ದರಿಂದ ನಿನ್ನ ಮಾತನ್ನು ಸಹಿಸಿಕೊಳ್ಳಬೇಕಾಗಿದೆ. ಈ ಮೂರು ಕಾರಣಗಳಿಂದ ನೀನು ಬದುಕಿರುತ್ತಿ.
ಪುನಶ್ಚೇದೀದೃಶಂ ವಾಕ್ಯಂ ಮದ್ರರಾಜ ವದಿಷ್ಯಸಿ |
ಶಿರಸ್ತೇ ಪಾತಯಿಷ್ಯಾಮಿ ಗದಯಾ ವಜ್ರಕಲ್ಪಯಾ ॥57॥

ಇಷ್ಟು ಸಾಕು. ಪುನಃ ಇಂಥ ಮಾತನ್ನು ನೀನು ಆಡಿದರೆ, ಮದ್ರರಾಜ, ವಜ್ರಾಯುಧದಂತಿರುವ ಗದೆಯಿಂದ ನಿನ್ನ ತಲೆಯನ್ನು ಉರುಳಿಸುತ್ತೇನೆ.
ಶ್ರೋತಾರಸಿತ್ವದಮದ್ಯೇಹ ದ್ರಷ್ಟಾರೋ ವಾ ಕುದೇಶಜ |
ಕರ್ಣಂ ವಾ ಜಘ್ನತುಃ ಕೃಷ್ಣೌ ಕರ್ಣೋ ವಾ ನಿಜಘಾನ ತೌ ॥58॥
ಈಗ ಈ ಯುದ್ಧದಲ್ಲಿ ಕರ್ಣನನ್ನು ಕೃಷ್ಣಾರ್ಜುನರು ಕೊಂದರೆ? ಅಥವಾ ಕರ್ಣನೆ ಕೃಷ್ಣಾರ್ಜುನರನ್ನು ಕೊಂದನೆ? ಎಂಬುದನ್ನು ಕೇಳುವವರು ಕೇಳುತ್ತಾರೆ ಅಥವಾ ನೋಡುವವರು ನೋಡುತ್ತಾರೆ.
ಏವಮುಕಕತ್ವ ತು ರಾಧೇಯಃ ಪುನರೇವ ವಿಶಾಂಪತೇ |
ಅಬ್ರುವೀನ್ಮದ್ರರಾಜಾನಂ ಯಾಹಿ ಯಾಹೀತ್ಯಸಂಭ್ರಮಮ್ ॥59॥
ರಾಜನೆ, ಹೀಗೆ ಹೇಳಿ ಕರ್ಣನು ಶಲ್ಯನಿಗೆ `ಹೋಗು, ಮುಂದೆ ಹೋಗು' ಎಂದು ನಿರ್ಭಯವಾಗಿ ನುಡಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಕರ್ಣಶಲ್ಯಸಂವಾದೇ ಚತ್ವಾರಿಂಶೋಽಧ್ಯಾಯಃ ॥40॥
ಮಹಾಭಾರತತಾತ್ಪರ್ಯನಿರ್ಣಯ
ಕೋ ನಾಮ ತಂ ಜಯೇನ್ಮರ್ತ್ಯೋ ದೃಷ್ಟೋ ವೋಽಪಿ ಸ ಗೋಗ್ರಹೇ |
ಕಾಕಗೋಮಾಯುಧರ್ಮಾ ತ್ವಂ ಹಂಸಸಿಂಹೋಪಮಂ ರಣೇ ॥30॥
ಅರ್ಜುನನನ್ನು ಯಾವ ಮಾನವ ಗೆಲ್ಲಬಲ್ಲ? ಗೋಗ್ರಹಣಕಾಲದಲ್ಲಿ ನೀವೂ ಅವನನ್ನು ನೋಡಿರುವಿರಿ ತಾನೆ? ಕಾಗೆ, ನರಿಗಳಂತಿರುವ ನೀನು ಹಂಸ, ಸಿಂಹಗಳಂತಿರುವ ಅರ್ಜುನನನ್ನು ಯುದ್ಧದಲ್ಲಿ ಇದಿರಿಸಲು ಹೋಗಬೇಡ.

ನಲವತ್ತೊಂದನೆಯ ಅಧ್ಯಾಯ
`ಹೀನ ಕುಲದವನು ನೀನು. ದುರಹಂಕಾರಿ, ಹಂಸದೊಡನೆ ಸ್ಪರ್ಧಿಸಿ ಸೋತ ಕಾಗೆಯಂತೆ, ಅರ್ಜುನನೊಡನೆ ಹೋರಾಡಿದರೆ, ಕರ್ಣ, ನೀನು ಬದುಕಿ ಉಳಿಯಲಾರೆ' ಎನ್ನುತ್ತಾನೆ ಶಲ್ಯ.
ಸಂಜಯಃ
ಮಾರಿಷಾಧಿರಥೇಃ ಶ್ರುತ್ವಾ ವಾಚೋ ಯುದ್ಧಾಭಿನಂದಿನಃ |
ಶಲ್ಯೋಽಬ್ರುವೀತ್ ಪುನಃ ಕರ್ಣಂ ನಿದರ್ಶನಮುದಾಹರನ್ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ. ರಾಜನೆ, ಯುದ್ಧವನ್ನು ಬಯಸುವ ಕರ್ಣನ ಮಾತನ್ನು ಕೇಳಿ ಶಲ್ಯನು ಪುನಃ ಕಾಗೆಯ ದೃಷ್ಟಾಂತ ಕೊಟ್ಟು ಹೇಳಲಾರಂಭಿಸಿದ.
ಶಲ್ಯಃ
ಯಥೈವ ಮತ್ತೋ ಮದ್ಯೇನ ತ್ವಂ ತಥಾ ಲಕ್ಷ್ಯಸೇ ವೃಷ ॥2॥
ಜಾತೋಽಹಂ ಯಜ್ವನಾಂ ವಂಶೇ ಸಂಗ್ರಾಮೇಷ್ವನಿವರ್ತಿನಾಮ್ |
ರಾಜ್ಞಾಂ ಮೂರ್ಧಾಭಿಷಿಕ್ತಾನಾಂ ಸ್ವಯಂ ಧರ್ಮಪರಾಯಣಃ ॥3॥
ತಥಾಽದ್ಯ ತ್ವಾಂ ಪ್ರಮಾದ್ಯಂತಂ ಚಿಕಿತ್ಸೇಯಂ ಸುಹೃತ್ತಯಾ ॥4॥
ಶಲ್ಯನು ನುಡಿದ– ಕರ್ಣ, ಮದ್ಯದಿಂದ ಮತ್ತನಾಗಿರುವ ವ್ಯಕ್ತಿಯಂತೇ ನನಗೆ ನೀನು ಕಾಣುತ್ತಿರುವೆ. ನಾನು ಯಜ್ಞಶೀಲರಾದ ಸಂಗ್ರಾಮಗಳಲ್ಲಿ ಹಿಂದೆ ಸರಿಯದವರಾದ ಮೂರ್ಧಾಭಿಷಿಕ್ತರಾದ ರಾಜರ ವಂಶದಲ್ಲಿ ಹುಟ್ಟಿದವನು. ಸ್ವತಃ ಧರ್ಮಪರಾಯಣನೂ ಆಗಿದ್ದೇನೆ. ಇಂದು ತಪ್ಪು ಹೆಜ್ಜೆ ಇಡುತ್ತಿರುವ ನಿನಗೆ ಮಿತ್ರನಾಗಿ ಸರಿಯಾದ ಚಿಕಿತ್ಸೆ ಮಾಡುತ್ತೇನೆ.
ಇಮಾಂ ಕಾಕೋಪಮಾಂ ಕರ್ಣ ಪ್ರೋಚ್ಯಮಾನಾಂ ನಿಬೋಧ ಮೇ |
ಶ್ರುತ್ವಾ ಯಥೇಷ್ಟಂ ಕುರ್ಯಾಸ್ತ್ವಂ ನಿಹೀನ ಕುಲಪಾಂಸನ ॥5॥
ಹೀನ ಕುಲದವನೆ, ಕುಲಕಳಂಕನೆ, ಕರ್ಣ, ನಿನಗೆ ಕಾಗೆಯ ದೃಷ್ಟಾಂತವನ್ನು ಹೇಳುತ್ತೇನೆ, ಕೇಳು, ಕೇಳಿದ ಬಳಿಕ ನಿನ್ನಿಚ್ಛೆಯಂತೆ ಮಾಡು.
ನಾಹಮಾತ್ಮನಿ ಕಿಂಚಿದ್ವೈ ಕಿಲ್ಬಿಷಂ ಕರ್ಮ ಸಂಸ್ಮರೇ |
ಯೇನ ಮಾಂ ತ್ವಂ ಮಹಾಬಾಹೋ ಹಂತುಮಿಚ್ಛಸ್ಯನಾಗಸಮ್ ॥6॥
ನಾನು ನನ್ನಲ್ಲಿ ಏನೂ ಪಾಪಕರ್ಮವನ್ನು ಕಂಡಿಲ್ಲ. ನಿರಪರಾಧಿಯಾದ ನನ್ನನ್ನು ಕೊಲ್ಲಲು ಏಕೆ ಆಶಿಸುವೆ?
ಅವಶ್ಯಂ ತು ಮಯಾ ವಾಚ್ಯಂ ಬುದ್ಧ್ವಾ ತವ ಹಿತಾಹಿತಮ್ |
ವಿಶೇಷತೋ ರಥಸ್ಥೇನ ರಾಜ್ಞಶ್ಚೈವ ಹಿತೈಷಿಣಾ ॥7॥
ನಿನ್ನ ಹಿತಅಹಿತಗಳನ್ನು ತಿಳಿದು ನಾನು ನಿನಗೆ ಅವಶ್ಯ ಹೇಳಬೇಕು. ವಿಶೇಷವಾಗಿ ಸಾರಥಿಯಾಗಿ ನಾನು ರಾಜನಾದ ನಿನ್ನ ಹಿತೈಷಿಯಾಗಿ ನಿನಗೆ ಅವನ್ನು ಹೇಳಲೇಬೇಕು.
ಸಮಂ ಚ ವಿಷಮಂ ಚೈವ ರಥಿನಶ್ಚ ಬಲಾಬಲಮ್ |
ಶ್ರಮಃ ಖೇದಶ್ಚ ಸತತಂ ಹಯಾನಾಂ ರಥಿನಾ ಸಹ ॥8॥
ಸಾರಥಿಯು ರಾಜನಿಗೆ ಅನುಕೂಲಪ್ರತಿಕೂಲ ಪರಿಸ್ಥಿತಿಗಳು ಶಕ್ತಿಅಶಕ್ತಿಗಳು ಯಾವುವೆಂದು ತಿಳಿಯಬೇಕು. ರಾಜನಿಗೂ ಕುದುರೆಗಳಿಗೂ ಆಗುವ ಶ್ರಮ ಖೇದಗಳನ್ನು ಸದಾ ಗಮನಿಸುತ್ತಿರಬೇಕು.
ಆಯುಧಸ್ಯ ಪರಿಜ್ಞಾನಂ ರುತಂ ಚ ಮೃಗಪಕ್ಷಿಣಾಮ್ |
ಸಾರಂ ಚೈವಾಪ್ಯಸಾರಂ ಚ ಶಲ್ಯಾನಾಂ ಚ ಪ್ರತಿಕ್ರಿಯಾ ॥9॥

ಆಯುಧಗಳೆಷ್ಟಿವೆ ಎನ್ನುವುದರ ಪರಿಜ್ಞಾನ. ಜಯಾಪಜಯ ಸೂಚಕವಾದ ಮೃಗಪಕ್ಷಿಗಳ ಧ್ವನಿಜ್ಞಾನ, ಪರಿಸ್ಥಿತಿಯ ನಿರ್ವಾಹ ಸಾಧ್ಯವೆ, ಅಸಾಧ್ಯವೆ ಎಂದು ಊಹಿಸುವುದು, ಗಾಯಗಳಿಗೆ ಚಿಕಿತ್ಸೆ ಮಾಡುವುದು ಇವೆಲ್ಲವನ್ನೂ ಸಾರಥಿ ತಿಳಿದಿರಬೇಕು.
ಅಸ್ತ್ರಯೋಗಂ ಚ ಯುದ್ಧಂ ಚ ನಿಮಿತ್ತಾನಿ ತಥೈವ ಚ |
ಸರ್ವಮೇತನ್ಮಯಾ ಜ್ಞೇಯಂ ರಥಸ್ಯಾಸ್ಯ ಕುಟುಂಬಿನಾ ॥10॥
ಅತಸತ್ತ್ವಂ ಕಥಯೇ ಕರ್ಣ ನಿದರ್ಶನಮಿದಂ ಪುನಃ ॥11॥
ಅಸ್ತ್ರವನ್ನು ಯಾವಾಗ ಯಾರ ಮೇಲೆ ಪ್ರಯೋಗಿಸಬೇಕು? ಯಾವ ಯುದ್ಧ ಮಾಡಬೇಕು? ಶುಭಾಶುಭ ಸೂಚಕ ನಿಮಿತ್ತ ಯಾವುವು? ಎಂದು ಎಲ್ಲವನ್ನೂ ರಥಿಕನಿಗೆ ಬಂಧುವಾಗಿ ತಿಳಿದಿರಬೇಕು. ಅದರಿಂದ ನಿನಗೆ ಒಂದು ನಿದರ್ಶನವನ್ನು ಹೇಳುತ್ತೇನೆ.
ವೈಶ್ಯಃ ಕಿಲ ಸಮುದ್ರಾಂತೇ ಪ್ರಭೂತಧನಧಾನ್ಯವಾನ್ |
ಯಜ್ವಾ ದಾನಪತಿಃ ಕ್ಷಾಂತಃ ಸ್ವಕರ್ಮಸ್ಥೋಽಭವಚ್ಛುಚಿಃ ॥12॥
ಸಮುದ್ರತೀರದಲ್ಲಿ ಒಬ್ಬ ವೈಶ್ಯ ವಾಸವಾಗಿದ್ದ. ಅವನು ಬಹು ಧನಧಾನ್ಯ ಯುಕ್ತನಾಗಿದ್ದ. ಯಜ್ಞಶೀಲ, ದಾನ ಮಾಡುವವ, ಕ್ಷಮಾಶೀಲ, ವಿಹಿತ ಕರ್ಮ ಮಾಡುತ್ತ ಶುಚಿಯಾಗಿದ್ದ.
ಬಹುಪುತ್ರಃ ಪ್ರಿಯಾಪತ್ಯಃ ಸರ್ವಭೂತಾನುಕಂಪಕಃ |
ರಾಜ್ಞೋ ಧರ್ಮಪ್ರಧಾನಸ್ಯ ರಾಷ್ಟ್ರೇ ವಸತಿ ನಿರ್ಭಯಃ ॥13॥
ಬಹುಪುತ್ರರುಳ್ಳವ, ಮಕ್ಕಳನ್ನು ಪ್ರೀತಿಸುವವ. ಸರ್ವಪ್ರಾಣಿಗಳಲ್ಲಿ ದಯೆ ಉಳ್ಳವ, ಧಾರ್ಮಿಕನಾದ ರಾಜನ ರಾಜ್ಯದಲ್ಲಿ ನಿರ್ಭಯವಾಗಿ ವಾಸಮಾಡುತ್ತಿದ್ದ.
ಪುತ್ರಾಣಾಂ ತಸ್ಯ ಬಾಲಾನಾಂ ಕುಮಾರಾಣಾಂ ಚ ಧೀಮತಃ |
ಕಾಕೋ ಬಹೂನಾಮಭವದುಚ್ಛಿಷ್ಟಕೃತಭೋಜನಃ ॥14॥
ಧೀಮಂತನಾದ ಅವನ ಮಕ್ಕಳಲ್ಲಿ ಬಹುಮಂದಿ ಬಾಲಕರು, ಕುಮಾರರು. ಅವರು ತಿಂದು ಉಳಿದುದನ್ನು ಕಾಗೆ ತಿನ್ನುತ್ತಿತ್ತು.
ತಸ್ಮೈ ಸದಾ ಪ್ರಯಚ್ಛಂತಿ ವೈಶ್ಯಪುತ್ರಾಃ ಕುಮಾರಕಾಃ |
ಮಾಂಸೋದನಂ ದಧಿ ಕ್ಷೀರಂ ಪಾಯಸಂ ಮಧುಸರ್ಪಿಷೀ ॥15॥
ಆ ಕಾಗೆಗೆ ವೈಶ್ಯನ ಮಕ್ಕಳು ಮಾಂಸ ಅನ್ನ ಮೊಸರು ಹಾಲು ಪಾಯಸ ಜೇನು, ತುಪ್ಪ ಎಲ್ಲವನ್ನೂ ಸದಾ ಕೊಡುತ್ತಿದ್ದರು.
ಸ ಚೋಚ್ಛಿಷ್ಟಭೃತಃ ಕಾಕೋ ವೈಶ್ಯಪುತ್ರೈಃ ಕುಮಾರಕೈಃ |
ಸದೃಶಾನ್ ಪಕ್ಷಿಣೋ ದೃಪ್ತಃ ಶ್ರೇಯಸಶ್ಚಾವಮನ್ಯತೇ ॥16॥
ವೈಶ್ಯಪುತ್ರರು ಉಂಡ ಎಂಜಲು ಅನ್ನದಿಂದ ಪುಷ್ಟವಾದ ಕಾಗೆ ಅಹಂಕಾರದಿಂದ ತನಗೆ ಸಮಾನವಾದ ತನಗಿಂತ ದೊಡ್ಡದಾದ ಎಲ್ಲ ಪಕ್ಷಿಗಳನ್ನೂ ಅವಮಾನಿಸಲು ತೊಡಗಿತು.
ಅಥ ಹಂಸಾಃ ಸಮುದ್ರಾಂತೇ ಪ್ರಜಗ್ಮುರತಿಪಾತಿನಃ |
ಗರುಡಸ್ಯ ಗತೌ ತುಲ್ಯಾಶ್ಚಕ್ರಾಂಗಾ ಹೃಷ್ಟಚೇತಸಃ ॥17॥
ಒಮ್ಮೆ ಸಮುದ್ರತೀರಕ್ಕೆ ಗರುಡನಿಗೆ ಸಮಾನವಾದ ವೇಗವುಳ್ಳ ಹಂಸಗಳು ಹರ್ಷಚಿತ್ತದಿಂದ ಹಾರಿಬಂದುವು.
ಕುಮಾರಕಾಸ್ತದಾ ಹಂಸಾನ್ ದೃಷ್ಟ್ವಾ ಕಾಕಮಥಾಬ್ರುವನ್ |
ಭವಾನೇವ ವಿಶಿಷ್ಟೋ ಹಿ ಪತತ್ರಿಭ್ಯೋ ವಿಹಂಗಮ ॥18॥
ವೈಶ್ಯನ ಮಕ್ಕಳು ಹಂಸಗಳನ್ನು ನೋಡಿ ಕಾಗೆಗೆ ಹೇಳಿದರು `ಹಕ್ಕಿಯೆ, ನೀನೇ ಎಲ್ಲ ಪಕ್ಷಿಗಳಿಗಿಂತ ಮೇಲು'ಎಂದು.
ಏತೇಽತಿಪಾತಿನಃ ಪಶ್ಯ ವಿಹಂಗಾನ್ ವಿಯದಾಶ್ರಿತಾನ್ |
ಏಹಿ ತ್ವಮಪಿ ಶಕ್ತೋ ಹಿ ಕಸ್ಮಾನ್ನ ಪತಿತಂ ತ್ವಯಾ ॥19॥
ಆಕಾಶದಲ್ಲಿ ಹಾರುವ ಈ ಪಕ್ಷಿಗಳನ್ನು ನೋಡು. ಅತಿಶಯವಾಗಿ ಹಾರುತ್ತವೆ. ಬಾ, ನೀನೂ ಕೂಡ ಶಕ್ತನಾಗಿರುವೆ. ಏಕೆ ನೀನು ಹಾರಲಿಲ್ಲ?
ಪ್ರತಾರ್ಯಮಾಣಸ್ತೈಃ ಸರ್ವೈರಲ್ಪಬುದ್ಧಿಭಿರಂಡಜಃ |
ತದ್ವಚಃ ಸತ್ಯಮಿತ್ಯೇವ ಮೌರ್ಖ್ಯಾದ್ ದರ್ಪಾಚ್ಚ ಜಜ್ಞವಾನ್ ॥20॥
ಅಲ್ಪಬುದ್ಧಿಯ ಆ ಮಕ್ಕಳು ಎಲ್ಲರೂ ಹೀಗೆ ವಂಚಿಸುವುದಕ್ಕಾಗಿ ಹೇಳಿದ ಮಾತನ್ನು ಕಾಗೆ ಮೂರ್ಖತನದಿಂದ ಮತ್ತು ಅಹಂಕಾರದಿಂದ ಸತ್ಯವೆಂದೇ ತಿಳಿಯಿತು.
ತಾನ್ ಸೋಽನುಪತ್ಯ ಜಿಜ್ಞಾಸುಃ ಕ ಏಷಾಂ ಶ್ರೇಷ್ಠಭಾಗಿತಿ |
ಉಚ್ಛಿಷ್ಟದರ್ಪಿತಃ ಕಾಕೋ ಬಹೂನಾಮೇಕಪಾತಿನಾಮ್ ॥21॥
ತೇಷಾಂ ಯಂ ಪ್ರವರಂ ಮೇನೇ ಹಂಸಾನಾಂ ದೂರಪಾತಿನಾಮ್ |
ಸ ತಮಾಹ್ವತ ದುರ್ಬುದ್ಧಿಃ ಪತಾವ ಇತಿ ಪಕ್ಷಿಣಮ್ ॥22॥
ಈ ಹಕ್ಕಿಗಳಲ್ಲಿ ಯಾವುದು ಮೇಲೆಂದು ತಿಳಿಯುವುದಕ್ಕಾಗಿ ಕಾಗೆ ಹಾರಿತು. ಎಂಜಲು ಉಂಡು ಕೊಬ್ಬಿದ ಕಾಗೆ ಜಿಜ್ಞಾಸೆಯಿಂದ ಹಾರಿ, ದೂರಕ್ಕೆ ಹಾರುವ ಪಕ್ಷಿಗಳಲ್ಲಿ ಯಾವುದು ಶ್ರೇಷ್ಠವೆಂದು ತಿಳಿದುಕೊಂಡು ದುರ್ಬುದ್ಧಿಯಾದ ಆ ಕಾಗೆ ಅದರ ಮುಂದೆ `ನಾವು ಹಾರೋಣ' ಎಂದು ಆ ಹಂಸವನ್ನು ಸ್ಪರ್ಧೆಗೆ ಆಹ್ವಾನಿಸಿತು.
ತಚ್ಛ್ರುತ್ವಾ ಪ್ರಾಹಸನ್ ಹಂಸಾ ಯೇ ತತ್ರಾಸನ್ ಸಮಾಗತಾಃ ॥23॥
ಭಾಷತೋ ಬಹು ಕಾಕಸ್ಯ ಬಾಲಿಶ್ಯಾತ್ ಪತತಾಂ ವರಾಃ |
ಇದಮೂಚುಃ ಸ್ಮ ಚಕ್ರಾಂಗಾ ವಚಃ ಕಾಕಂ ವಿಹಂಗಮಾಃ ॥24॥
ಮೂರ್ಖತನದಿಂದ ಬಹುಮಾತುಗಳನ್ನಾಡುತ್ತಿದ್ದ ಆ ಕಾಗೆ ಹೀಗೆ ಹೇಳಿದಾಗ ಅಲ್ಲಿಗೆ ಬಂದಿದ್ದ ಶ್ರೇಷ್ಠವಾದ ಹಂಸಪಕ್ಷಿಗಳು ಕೇಳಿ

ನಕ್ಕುವು. ಅವು ಕಾಗೆಗೆ ಹೀಗೆ ಹೇಳಿದುವು.
ಹಂಸಾಃ
ಕಥಂ ಹಂಸಂ ನು ಬಲಿನಂ ಚಕ್ರಾಂಗಂ ದೂರಪಾತಿನಮ್ |
ಕಾಕೋ ಭೂತ್ವಾ ನಿಪತನೇ ಸಮಾಹ್ವಯಸಿ ದುರ್ಮತೇ ॥25॥
ಕಥಂ ತ್ವಂ ಪತಿತಾ ಕಾಕ ಸಹಾಸ್ಮಾಭಿರ್ಬ್ರವೀಹಿ ತತ್ ॥26॥
ದುರ್ಬುದ್ಧಿಯೆ, ಬಲಿಷ್ಠವಾದ ದೂರಕ್ಕೆ ಹಾರುವ ಹಂಸವನ್ನು, ನೀನು ದುರ್ಬಲ ಕಾಗೆಯಾಗಿದ್ದು ದೂರ ಹಾರುವ ಪಂದ್ಯಕ್ಕೆ ಏಕೆ ಆಹ್ವಾನಿಸುವೆ? ಕಾಗೆಯೆ, ನೀನು ನಮ್ಮೊಂದಿಗೆ ಹೇಗೆ ಹಾರುವೆ, ಹೇಳು.
ಅಥ ಹಂಸವಚೋ ಮೂಢಃ ಕುತ್ಸಯಿತ್ವಾ ಪುನಃ ಪುನಃ |
ಪ್ರಜಗಾದೋತ್ತರಂ ಕಾಕಃ ಕತ್ಥನೋ ಜಾತಿಲಾಘವಾತ್ ॥27॥
ಹಂಸದ ಮಾತನ್ನು ಕೇಳಿ ಬುದ್ಧಿ ಇಲ್ಲದ ಕಾಗೆ ಅದನ್ನು ಪುನಃಪುನಃ ನಿಂದಿಸಿ ಕಾಗೆಯ ಜಾತಿಸ್ವಭಾವವಾದ ಜಂಬದಿಂದ ಹೇಳಿತು.
ಕಾಕಃ
ಶತಮೇಕಂ ಚ ಪಾತಾನಾಂ ಪತಿತಾಽಸ್ಮಿ ನ ಸಂಶಯಃ |
ಶತಯೋಜನಮೇಕೈಕಂ ವಿಚಿತ್ರಂ ವಿವಿಧಂ ತಥಾ ॥28॥
ಕಾಗೆ ಹೇಳಿತು, ನೂರೊಂದು ಬಗೆಯ ವಿಚಿತ್ರ ವಿವಿಧ ಹಾರಾಟಗಳಲ್ಲಿ ನಾನು ಹಾರಾಡಬಲ್ಲೆ, ಸಂಶಯ ಬೇಡ. ಒಂದೊಂದು ಹಾರಾಟವನ್ನು ಕೂಡ ನೂರು ಯೋಜನ ಪರ್ಯಂತ ಹಾರ ಬಲ್ಲೆ.
ಉಡ್ಡೀನಮವಡೀನಂ ಚ ಪ್ರಡೀನಂ ಡೀನಮೇವ ಚ |
ನಿಡೀನಮಥ ಸಂಡೀನಂ ತಿರ್ಯಗ್ ಡೀನಗತಾನಿ ಚ ॥29॥
ಉಡ್ಡೀನ ಅವಡೀನ ಪ್ರಡೀನ ಡೀನ ನಿಡೀನ ಸಂಡೀನ ತಿರ್ಯಕ್‌ಡೀನ.
ವಿಡೀನಂ ಪರಿಡೀನಂ ಚ ಪರಾಡೀನಂ ಸುಡೀನಕಮ್ |
ಅತಿಡೀನಂ ಮಹಾಡೀನಂ ಖಡೀನಂ ವರಡೀನಕಮ್ ॥30॥
ವಿಡೀನ ಪರಿಡೀನ ಪರಾಡೀನ ಸುಡೀನ ಅತಿಡೀನ ಮಹಾಡೀನ ಖಡೀನ ವರಡೀನ.
ಅವಡೀನಂ ಪ್ರಡೀನಂ ಚ ಸಂಡೀನಂ ಡೀನಡೀನಕಮ್ |
ಅವಡೀನಂ ಪ್ರಡೀನಂ ಚ ಪುನರ್ಡೀನವಿಡೀನಕಮ್ ॥31॥
ಅವಡೀನ ಪ್ರಡೀನ ಸಂಡೀನ ಡೀನಡೀನ ಅವಡೀನ ಪ್ರಡೀನ ಡೀನವಿಡೀನ.
ಸಂಪಾತಂ ಸಮಡೀನಂ ಚ ತತೋಽನ್ಯದ್ ವಿತಿರಶ್ಚಕಮ್ |
ಗತಾಗತಪ್ರತಿಗತಾ ಬಹ್ವೀಶ್ಚ ನಿಕನೀನಕಾಃ ॥32॥
ಸಂಪಾತ ಸಮಡೀನ ವಿತಿರಶ್ಚಕ ಗತಆಗತಪ್ರತಿಗತ ಎಂದು ಬಹುವಿಧವಾದ ಅತಿನಿಕೃಷ್ಟಗತಿ.
`ಉಡ್ಡೀನ' `ಡೀಙ್‌ವಿಹಾಯಸಾಗತೌ' ಧಾತುವಿನಿಂದ ಆಕಾಶದಲ್ಲಿ ಮೇಲೆ ಹಾರುವುದು. `ಅವಡೀನ' ಅಧೋಗಮನ. `ಪ್ರಡೀನ' ಶೀಘ್ರಗಮನ. `ಡೀನ' ಸಮವಾಗಿ ಗಮನ. `ನಿಡೀನ' ರೆಕ್ಕೆಗಳನ್ನು ಸ್ವಲ್ಪ ಅಡಗಿಸಿಕೊಂಡು ಗಮನ, `ಸಂಡೀನ' ಚೆನ್ನಾಗಿ ರೆಕ್ಕೆ ಬಿಡಿಸಿ ಗಮನ. `ವಿಡೀನ' ವಿರೋಧವಿದ್ದಾಗ ಮುಖಮೇಲೆತ್ತಿ ಗಮನ. ಪರಿಡೀನ ಸುತ್ತಲೂ ಗಮನ. ಪರಾಡೀನ ಹಿಂತಿರುಗಿ ಗಮನ. `ಸುಡೀನ' ಸುಖವಾಗಿ ಗಮನ. `ಅತಿಡೀನ' ಒಂದಕ್ಕಿಂತ ಇನ್ನೊಂದು ವೇಗದಿಂದ ಗಮನ. `ಮಹಾಡೀನ' ಕ್ಷಣಕ್ಷಣ ರೆಕ್ಕೆ ಬಡಿದು ಗಮನ. `ಖಡೀನ' ಆಕಾಶದ ಕಡೆಗೆ ಗಮನ. `ವರಡೀನ' ಕೊಳ್ಳೆಯನ್ನೆತ್ತಿಕೊಂಡು ಗಮನ. ಇವಿಷ್ಟೂ ಊರ್ಧ್ವಗಮನ ಪ್ರಭೇದಗಳು.
ಇನ್ನು ಮುಂದೆ ಅಧೋಗಮನ ಪ್ರಭೇದಗಳುಅವಡೀನ ಪ್ರಡೀನ ಮುಂತಾದುವು. ಅವುಗಳಲ್ಲಿ `ಡೀನಡೀನಕ' ನಿಧಾನವಾದ ಗಮನ, `ಉಡ್ಡೀನ' ಅಧೋಗಮನದಲ್ಲಿಯೆ ಮಿಡತೆ ಮುಂತಾದವುಗಳನ್ನು ತಿನ್ನಲು ಸ್ವಲ್ಪ ಮೇಲಕ್ಕೆ ಗಮನ. `ಸಂಪಾತ' ಶೀಘ್ರಗಮನ. `ಸಮಡೀನ' ಸಮವಾಗಿ ಗಮನ. `ವಿತಿರಶ್ಚಕ' ವಿಶೇಷವಾಗಿ ತಿರ್ಯಕ್ ಗಮನ ಅಂದರೆ ಅಧೋಗಮನದಲ್ಲಿಯೇ ಕೆಲವೊಮ್ಮೆ ತಿರ್ಯಕ್ ಗಮನ.
ಗತಆಗತಪ್ರತಿಗತನಿಕನೀನಕಗಳು ನೆಲದಲ್ಲಿಯೆ ಎರಡು ಕಾಲುಗಳಿಂದ ಹಾರುತ್ತ ಹಾರುತ್ತ ಹೋಗುವುದು. ಬಲ್ಯಾದಿ ಭಕ್ಷಣಕ್ಕಾಗಿ ಹೆಚ್ಚಾಗಿ ಅಧೋಗಮನವನ್ನೆ ಕಾಗೆ ಮಾಡುವುದರಿಂದ ಅದನ್ನೇ ವಿಶೇಷವಾಗಿ ವರ್ಣಿಸಿದೆ.
ಈ ನಾಲ್ಕು ಶ್ಲೋಕಗಳಲ್ಲಿ ಇಪ್ಪತ್ತಾರು ಗತಿಗಳನ್ನು ಹೇಳಿದೆ. ಇವುಗಳಲ್ಲಿ `ಮಹಾಡೀನ' ಒಂದನ್ನು ಬಿಟ್ಟು ಉಳಿದ ಇಪ್ಪತ್ತೈದು ಗತಿಗಳು ಪ್ರತಿಯೊಂದೂ `ಗತಿ ಆಗತಿ ಪ್ರತಿಗತಿ' ಹೋಗುವುದು ಬರುವುದು ಹಿಂದಿರುಗಿ ಬರುವುದು ಎಂದು ಮೂರು ಬಗೆ ಇರುವುದರಿಂದ ಒಟ್ಟು ಎಪ್ಪತ್ತಾರು ಗತಿಗಳಾದುವು. ಸಂಪಾತಗಳು ಬೇರೆ ಇಪ್ಪತ್ತೈದು ಇವೆ. ಅವೂ ಸೇರಿದರೆ ಒಟ್ಟು ನೂರೊಂದು ಗತಿಗಳಾಗುತ್ತವೆ.
ಕರ್ತಾಽಸ್ಮಿ ಮಿಷತಾಂ ವೋಽದ್ಯ ತತೋ ದ್ರಕ್ಷ್ಯಥ ಮೇ
ಬಲಮ್ ॥33॥
ತೇಷಾಮನ್ಯತಮೇನಾಹಂ ಪತಿಷ್ಯಾಮಿ ವಿಹಾಯಸಮ್ |
ಪ್ರದಿಶಧ್ವಂ ಯಥಾನ್ಯಾಯಂ ಕೇನ ಹಂಸಾಃ ಪತಾಮ್ಯಹಮ್ ॥34॥
ನೀವು ನೋಡುತ್ತಿರುವಂತೆ ನಾನೀಗ ಹಾರುತ್ತೇನೆ. ನನ್ನ ಬಲವನ್ನು ನೋಡಿರಿ. ಈ ನೂರೊಂದು ಗಮನಗಳಲ್ಲಿ ಒಂದನ್ನು ಆಕಾಶದಲ್ಲಿ ಹಾರಿ ತೋರುತ್ತೇನೆ. ಹಂಸಗಳೆ, ಯಾವ ಹಂಸನೊಂದಿಗೆ ಹಾರಬೇಕು? ಹೇಳಿ. ಈ ನೂರೊಂದು ಗಮನಗಳಲ್ಲಿ ಯಾವ ಗಮನವನ್ನು ನೀವು ಹಾರಿ ತೋರಿಸುವಿರಿ? ಹೇಳಿ.
ತೇ ವೈ ಧ್ರುವಂ ವಿನಿಶ್ಚಿತ್ಯ ಸಂಪತಧ್ವಂ ಮಯಾ ಸಹ |
ಪಾತೈರೇಭಿಃ ಖಲು ಖಗಾಃ ಪತಿತುಂ ಖೇ ನಿರಾಶ್ರಯೇ ॥35॥

ಪಕ್ಷಿಗಳೆ, ಆಶ್ರಯವಿಲ್ಲದ ಆಕಾಶದಲ್ಲಿ ಯಾವ ಗಮನವನ್ನು ಹಾರಿ ತೋರಿಸುವಿರೆಂದು ನಿಶ್ಚಯಮಾಡಿ ನನ್ನೊಡನೆ ಹಾರಾಟ ನಡೆಸಿರಿ.
ಶಲ್ಯಃ
ಏವಮುಕ್ತೇ ತು ಕಾಕೇನ ಪ್ರಹಸ್ಯೈಕೋ ವಿಹಂಗಮಃ |
ಉವಾಚ ಕಾಕಂ ರಾಧೇಯ ವಚನಂ ತನ್ನಿಬೋಧ ಮೇ ॥36॥
ಶಲ್ಯ ನುಡಿದ– ಕಾಗೆ ಹೀಗೆ ಹೇಳಿದಾಗ ಒಂದು ಹಂಸ ನಕ್ಕು ಕಾಗೆಗೆ ಹೇಳಿತು, ಕರ್ಣ, ಅದೇನು ಹೇಳಿತೆಂಬುದನ್ನು ಹೇಳುತ್ತೇನೆ, ಕೇಳು.
ಹಂಸಃ
ಶತಮೇಕಂ ಚ ಪಾತಾನಾಂ ತ್ವಂ ಕಾಕ ಪತಿತಾ ಧ್ರುವಮ್ |
ಏಕಮೇವ ತು ಯಂ ಪಾತಂ ವಿದುಃ ಸರ್ವೇ ವಿಹಂಗಮಾಃ ॥37॥
ತಮಹಂ ಪತಿತಾ ಕಾಕ ನಾನ್ಯಂ ಜಾನಾಮಿ ಕಂಚನ ॥38॥
ಹಂಸ ಹೇಳಿತು– ನೂರೊಂದು ಗತಿಗಳನ್ನು ನೀನು ಹಾರಿ ತೋರಿಸಬಲ್ಲೆ, ಕಾಗೆಯೆ, ನಾವೆಲ್ಲರೂ ಪಕ್ಷಿಗಳು ಕೇವಲ ಒಂದೇ ಗತಿಯನ್ನು ಬಲ್ಲೆವು. ನೂರು ಯೋಜನವಿರಬಹುದು. ಸಾವಿರ ಲಕ್ಷ ಯೋಜನಗಳೂ ಇರಬಹುದು. ಅಲ್ಲಿಯವರೆಗೆ ಮಧ್ಯದಲ್ಲಿ ವಿಶ್ರಾಂತಿ ಪಡೆಯದೆ ಒಂದೇ ಗತಿಯನ್ನು ಹಾರಿ ತೋರಿಸುತ್ತೇವೆ. ಬೇರೆ ಗತಿ ಯಾವುದನ್ನೂ ನಾವು ತಿಳಿಯೆವು.
ಕಾಕಃ
ಪತ ತ್ವಮಪಿ ತತ್ರಾಶು ಯೇನ ಪಾತೇನ ಮನ್ಯಸೇ ॥39॥
ಕಾಗೆ ಹೇಳಿತು– ಯಾವ ಗತಿಯಿಂದ ಹಾರಲು ಬಯಸುವಿಯೋ ಆ ಗತಿಯಿಂದ ಬೇಗನೆ ಹಾರು.
ಅಥ ಕಾಕಂ ಪ್ರಜಹಸುರ್ಯೇ ತತ್ರಾಸನ್ ಸಮಾಗತಾಃ |
ಕಥಮೇಕೇನ ಪಾತೇನ ಹಂಸಃ ಪಾತಶತಂ ಜಯೇತ್ ॥40॥
ಆಗ ಅಲ್ಲಿಗೆ ಬಂದಿದ್ದ ಬೇರೆ ಕಾಗೆಗಳು ನಗುತ್ತ ಹೇಳಿದುವು ಹಂಸವು ಒಂದೇ ಗತಿಯನ್ನು ತಿಳಿದಿದೆ. ಆ ಒಂದೇ ಗತಿಯಿಂದ ನೂರೊಂದು ಗತಿಗಳನ್ನು ತಿಳಿದಿರುವ ಕಾಗೆಯನ್ನು ಈ ಹಂಸ ಹೇಗೆ ಗೆದ್ದೀತು?
ಏಕೇನೈವ ಸತಾಪ್ಯೇಷ ಪಾತೇನಾಭಿಪತಿಷ್ಯತಿ |
ಹಂಸಸ್ಯ ಪತಿತಂ ಕಾಕೋ ಬಲವಾನಾಶುವಿಕ್ರಮಃ ॥41॥
ಬಲಿಷ್ಠವಾದ ವೇಗದಿಂದ ಪರಾಕ್ರಮ ತೋರುವ ಕಾಗೆಯೇ ಹಂಸದ ಗತಿಯನ್ನು ಒಂದೇ ಗತಿಯಿಂದಲೂ ಕೂಡ ಪರಾಭವಗೊಳಿಸುತ್ತದೆ.
ಪೂರ್ವಮೇವ ತು ವೈ ಕಾಕಃ ಸ ತಂ ತೂರ್ಣಂ ಪ್ರಚಕ್ರಮೇ ॥42॥
ನಾತ್ಯಹೀಯತ ಕಾಕಶ್ಚ ಮುಹೂರ್ತಮಿವ ಸೂತಜ ॥43॥
ಕಾಗೆ ಮೊದಲಿಗೇ ಬೇಗನೆ ಪಂದ್ಯದ ಹಾರಾಟಕ್ಕೆ ತೊಡಗಿತು. ಆದರೆ ಹಂಸ ಕಾಗೆಯನ್ನು ಹಿಂದೆ ಹಾಕಿ ಹಾರಿದಾಗ, ಕಾಗೆ ಒಂದು ಮುಹೂರ್ತ ಕಾಲ ಹಂಸವನ್ನು ಹಿಂದೆ ಹಾಕಿ ಹಾರಲಿಲ್ಲ.
ಕಾಕೋಽಪಿ ಹಂಸಂ ಚಾಪಲ್ಯಾಚ್ಛೀಘ್ರತಾಂ ಪ್ರತಿದರ್ಶಯನ್ |
ವೇಗೇನಾತೀತ್ಯ ತರಸಾ ಪುನರೇತಿ ಮುಹುರ್ಮುಹುಃ ॥44॥
ಬಳಿಕ ಚಾಪಲ್ಯದಿಂದ ತನ್ನ ವೇಗವನ್ನು ತೋರುವುದಕ್ಕಾಗಿ ಪುನಃ ಪುನಃ ವೇಗದಿಂದ ಹಂಸವನ್ನು ದಾಟಿ, ವೇಗದಿಂದ ಹಿಂತಿರುಗಿ ಬರತೊಡಗಿತು.
ತುಂಡೇನಾಭ್ಯಹನಚ್ಚೈನಂ ಕುರ್ವನ್ನಾಮಾಪಸವ್ಯತಃ |
ರೋರೂಯನ್ನಿತಿ ಚಾಪ್ಯೇನಂ ಸಮಾಹ್ವಯತಿ ವೈ ಮುಹುಃ ॥45॥
ಹಂಸ ಬಲಕ್ಕೆ ಹಾರುತ್ತಿದ್ದರೆ ಎಡಕ್ಕೆ ಮಾಡಿ ಕೊಕ್ಕಿನಿಂದ ಕುಟುಕಿ ಜೋರಾಗಿ ಕೂಗುತ್ತಿತ್ತು. ಹೀಗೆ ಹಂಸವನ್ನು ಮತ್ತೆ ಮತ್ತೆ ಸ್ಪರ್ಧೆಗೆ ಆಹ್ವಾನಿಸುತ್ತಿತ್ತು.
ವಿಶಿಶಿಷ್ಮಯಿಷುಃ ಪಾತೈರ್ದರ್ಶಯನ್ನಾತ್ಮನಃ ಕ್ರಿಯಾಮ್ ॥46॥
ಹಂಸವನ್ನು ಮೀರುವುದಕ್ಕಾಗಿ ಕಾಗೆ ಬಹು ಗತಿಗಳಿಂದ ಹಾರಾಟವನ್ನು ಪ್ರದರ್ಶಿಸಿತು.
ಅಥ ತಾನಿ ವಿಚಿತ್ರಾಣಿ ಪತಿತಾನೀತರಾಣಿ ಚ |
ದೃಷ್ಟ್ವಾ ಪ್ರಮುದಿತಾಃ ಕಾಕಾ ವಿನೇದುರಧಿಕೈಃ ಸ್ವರೈಃ ॥47॥
ಕಾಗೆಯ ವಿಚಿತ್ರ ಹಾರಾಟಗಳನ್ನೂ ಬೇರೆ ಸಾಮಾನ್ಯ ಹಾರಾಟಗಳನ್ನೂ ನೋಡಿ ಕಾಗೆಗಳು ಬಲು ಆನಂದಗೊಂಡು ಉಚ್ಚಸ್ವರಗಳಿಂದ ಕೂಗಿದುವು.
ಹಂಸಾಶ್ಚಾಪಹಸಂತಿ ಸ್ಮ ಪ್ರವದಂತಿ ಪ್ರಿಯಾಣಿ ಚ |
ಕುರ್ವಾಣಾ ವಿವಿಧಾನ್ ರಾವಾನಿಚ್ಛಂತೋ ಜಯಮಾತ್ಮನಃ ॥48॥
ಹಂಸಗಳೂ ಕೂಡ ಕಾಗೆಗಳನ್ನು ಅಪಹಾಸ ಮಾಡಿದುವು. ಹಂಸಕ್ಕೆ ಪ್ರಿಯವಾಗುವ ಹುರಿದುಂಬಿಸುವ ನಾನಾ ಬಗೆಯ ಧ್ವನಿಗಳನ್ನು ಮಾಡಿ ತಮಗೆ ಜಯವನ್ನು ಆಶಿಸಿದುವು.
ಉತ್ಪತ್ಯೋತ್ಪತ್ಯ ಚ ಪ್ರಾಹುರ್ಮುಹೂರ್ತಮಿತಿ ಚೇತಿ ಚ |
ವೃಕ್ಷಾಗ್ರೇಭ್ಯಃ ಸ್ಥಳೇಭ್ಯಶ್ಚ ನಿಪತಂತ್ಯುತ್ಪತಂತಿ ಚ ॥49॥
ಹಂಸಗಳು ಪುನಃ ಪುನಃ ಮೇಲೆ ಹಾರಿ `ಮುಹೂರ್ತ ಕಾಲ ನೋಡಿರಿ, ಹಂಸವೇ ಗೆಲ್ಲುತ್ತದೆ' ಎಂದು ಹೇಳಿದುವು. ಮರದ ತುದಿಯಿಂದ ಕೆಳಗೆ, ಕೆಳಗಿಂದ ಮೇಲೆ ಹಾರಿದುವು.

ಹಂಸಸ್ತ್ವೇಕೇನ ಪಾತೇನ ಕಾಕಃ ಪಾತಶತೇನ ಚ |
ಸ್ಪರ್ಧಿನೌ ಸಹಿತೌ ತೂರ್ಣಂ ಖಮಾಸ್ಥಾಯ ತರಸ್ವಿನೌ ॥50॥
ಹಂಸವು ಒಂದು ಗತಿಯಿಂದ, ಕಾಗೆ ನೂರು ಗತಿಗಳಿಂದ ವೇಗದಿಂದ
ಸ್ಪರ್ಧಿಸುತ್ತ ಬೇಗನೆ ಗಗನಕ್ಕೆ ಏರಿ ಜೊತೆಗೂಡಿದುವು.
ಮೃದುನೈಕೇನ ಹಂಸಸ್ತು ವಿಕ್ರಾಂತಮುಪಚಕ್ರಮೇ |
ಪ್ರತ್ಯಹೀಯತ ಕಾಕಾಚ್ಚ ಮುಹೂರ್ತಮಿವ ಮಾರಿಷ ॥51॥
ಒಂದು ಮಂದಗತಿಯಿಂದಲೇ ಹಂಸವು ಪರಾಕ್ರಮವನ್ನು ತೋರಲು ತೊಡಗಿತು. ಒಂದು ಮುಹೂರ್ತದವರೆಗೆ ಕಾಗೆಗಿಂತ ಹಿಂದೆಯೇ ಉಳಿಯಿತು.
ಅವಮತ್ಯ ಚ ಹಂಸಂ ತಮಿದಂ ಕಾಕೋಽಬ್ರವೀದ್ವಚಃ |
ಯೋಽಸಾವುತ್ಪತಿತೋ ಹಂಸಃ ಸೋಽಸಾವೇವ ಪ್ರಹೀಯತೇ ॥52॥
ಕಾಗೆ ಆ ಹಂಸವನ್ನು ಅವಮಾನಿಸುತ್ತ ಹೇಳಿತು: ``ಈ ಹಂಸ ಈಗ ನನಗಿಂತ ಮೇಲೆ ಹಾರಿದರೂ ಮುಂದೆ ಹೀಗೇ ಹಿಂದೇ ಉಳಿದುಕೊಳ್ಳುತ್ತದೆ.''
ಅಥ ಹಂಸಸ್ತು ತಚ್ಛ್ರುತ್ವಾ ಪ್ರಾಪತತ್ಪಶ್ಚಿಮಾಂ ದಿಶಮ್ ॥53॥
ಹಂಸವು ಈ ಮಾತನ್ನು ಕೇಳಿ ಪಶ್ಚಿಮದಿಕ್ಕಿಗೆ ಹಾರಲು ತೊಡಗಿತು.
ಪಶ್ಚಿಮ ಸಮುದ್ರಮಾರ್ಗವಾಗಿ ಬಲು ದೂರದ ಮಾನಸ ಸರೋವರದ ಕಡೆಗೆ ಹಂಸ ಹಾರಲು ತೊಡಗಿತು.
ಉಪರ್ಯುಪರಿ ವೇಗೇನ ಸಾಗರಂ ಮಕರಾಲಯಮ್ |
ಬಹುಸತ್ವಸಮಾಕೀರ್ಣಂ ವೀಚೀಭಿರ್ಭೀಮದರ್ಶನಮ್ ॥54॥
ಬಹಳ ಜಲಜಂತುಗಳಿಂದ ತುಂಬಿದ, ತೆರೆಗಳಿಂದ ಭಯಂಕರವಾಗಿ ಕಾಣುವ, ಮೊಸಳೆಗಳ ವಾಸಸ್ಥಾನವಾದ ಸಾಗರದ ಮೇಲೆ ಮುಂದೆ ಮುಂದೆ ಹೆಚ್ಚು ವೇಗದಿಂದ ಹಂಸವು ಹಾರಿತು.
ಅಥಾಚಿರೇಣ ರಾಧೇಯ ಕಾಕೋ ವೇಗಾದಹೀಯತ |
ತತೋಽತೀವ ಪರಿಶ್ರಾಂತಃ ಕಥಂಚಿದ್ಧಂಸಮನ್ವಗಾತ್ ॥55॥
ಕರ್ಣ, ಅಲ್ಪಕಾಲದಲ್ಲಿಯೆ ಕಾಗೆ ಬಹಳ ಆಯಾಸಗೊಂಡು ವೇಗವನ್ನು ಕಳೆದುಕೊಂಡಿತು. ಕಷ್ಟದಿಂದ ಹಂಸವನ್ನು ಹಿಂಬಾಲಿಸಿತು.
ಭೀಶ್ಚೈನಮಾವಿಶತ್ ತೀವ್ರಂ ಕಾಕಂ ಕರ್ಣ ವಿಚೇತಸಮ್ |
ದ್ವೀಪಾನ್ ದ್ರುಮಾನಪಶ್ಯಂತಂ ವಿಶ್ರಮಾರ್ಥಂ ಶ್ರಮಾತುರಮ್ ॥56॥
ನಿಪತೇಯಂ ಕ್ವ ನು ಶ್ರಾಂತ ಇತಿ ತಸ್ಮಿನ್ ಮಹಾರ್ಣವೇ ॥57॥
ಕರ್ಣ, ಆ ಸಾಗರದಲ್ಲಿ ಆಯಾಸದಿಂದ ಪೀಡಿತವಾಗಿ ವಿಶ್ರಾಂತಿ ಪಡೆಯಲು ದ್ವೀಪಗಳನ್ನು, ಮರಗಳನ್ನು ಕಾಣದೆ,
`ಆಯಾಸಗೊಂಡಿರುವ ನಾನು ಈ ಮಹಾ ಸಾಗರದಲ್ಲಿ ಎಲ್ಲಿ ಇಳಿಯಲಿ?' ಎಂದು ಗಾಬರಿಗೊಂಡ ಆ ಕಾಗೆಯನ್ನು ಭೀತಿ ಹೊಕ್ಕಿತು.
ಅವಿಷಹ್ಯಃ ಸಮುದ್ರೋಽಪಿ ಬಹುಸತ್ವಗಣಾಲಯಃ |
ಮಹಾನ್ ಭೂತಶತೋದ್ಭಾಸೀ ನಭಸಸ್ತು ವಿಶಿಷ್ಯತೇ ॥58॥
ಕರ್ಣ, ಸಮುದ್ರವನ್ನು ಪ್ರವೇಶಿಸಲು ಯಾರಿಂದಲೂ ಸಾಧ್ಯವಿಲ್ಲ. ಬಹು ಜಲಜಂತುಗಳಿಂದ ತುಂಬಿದೆ. ಬಹಳ ಭೂತಗಣಗಳಿಂದಲೂ ಶೋಭಿಸುತ್ತದೆ. ವಿಶಾಲವಾಗಿದ್ದು ಆಕಾಶಕ್ಕಿಂತಲೂ ಮಹತ್ತಾಗಿದೆ.
ಗಾಂಭೀರ್ಯಾದ್ಧಿ ಸಮುದ್ರಸ್ಯ ನ ವಿಶೇಷಂ ಹಿ ಸೂತಜ |
ದಿಗಂಬರಾಂಭಸಾ ಕರ್ಣ ಸಮುದ್ರಸ್ಥಾ ವಿದುರ್ಜನಾಃ ॥59॥
ವಿದೂರಪಾತಾತ್ ತೋಯಸ್ಯ ಕಿಂ ಪುನಃ ಕರ್ಣ ವಾಯಸಃ ॥60॥
ದಿಕ್ಕನ್ನೇ ಬಟ್ಟೆಯಂತೆ ಹೊದ್ದುಕೊಂಡಿರುವ, ದಿಗಂತದವರೆಗೂ ಹರಡಿದ ಅಪಾರ ಜಲರಾಶಿವುಳ್ಳ ಸಮುದ್ರಜಲವು `ಗಂಭೀರ' ಆಳವಾದ್ದರಿಂದ ಅದರ ವೈಶಿಷ್ಟ್ಯವನ್ನು ಸಮುದ್ರತೀರದ ಜನರೂ ಕೂಡ ತಿಳಿದಿಲ್ಲ. ಎಲ್ಲೋ ದೂರದಲ್ಲಿ ಹಾರಾಡುವ ಕಾಗೆ ಏನು ತಿಳಿದೀತು?
ಅಥ ಹಂಸೋಽಪ್ಯತಿಕ್ರಾಮನ್ ಮುಹೂರ್ತಮಿತಿ ಚೇತಿ ಚ |
ಅವೇಕ್ಷಮಾಣಸ್ತಂ ಕಾಕಂ ನಾಶಕ್ನೋದ್ ವ್ಯಪಸರ್ಪಿತುಮ್ ॥61॥
ಅತಿಕ್ರಮ್ಯ ಚ ಚಕ್ರಾಂಗಃ ಕಾಕಂ ತಂ ಸಮುದೈಕ್ಷತ ॥62॥
ಹಂಸವು ಮುಹೂರ್ತಕಾಲ `ಇದು ಹೀಗೆ, ಇದು ಹೀಗೆ' ಎಂದು ಕಾಗೆಯೊಂದಿಗೆ ಮಾತನಾಡುತ್ತ ಅದನ್ನು ದಾಟಿ ಮುಂದೆ ಹೋಯಿತು. ಬಳಿಕ ಹಿಂದೆ ಬಿದ್ದಿದ್ದ ಕಾಗೆಯನ್ನು ನೋಡಿ, ಅದನ್ನು ಬಿಟ್ಟು ತಾನು ಇನ್ನೂ ಮುಂದೆ ಹೋಗಲಿಲ್ಲ, ಕಾದು ನಿಂತಿತು.
ತಂ ತಥಾ ಪರಿಹೀನಂ ತಂ ಪರಿಶ್ರಾಂತಮಚೇತಸಮ್ |
ಅವೇಕ್ಷಮಾಣಸ್ತಂ ಕಾಕಂ ಪ್ರತ್ಯಾಗತ್ಯ ಹಸನ್ನಿವ ॥63॥
ಬಲು ಆಯಾಸಗೊಂಡು ಗಾಬರಿಯಿಂದ ಉಡುಗಿಹೋಗಿದ್ದ ಆ ಕಾಗೆಯನ್ನು ಹಂಸವು ನೋಡಿ ಹಿಂತಿರುಗಿ ಬಂದು ನಕ್ಕಿತು.
ತಂ ಪ್ರಹಸ್ಯ ಚ ಚಕ್ರಾಂಗಃ ಕಾಕಂ ಮಂದಗತಿಂ ತದಾ |
ಹೀಯಮಾನಮಥೋ ದೃಷ್ಟ್ವಾ ಹಂಸಃ ಪ್ರಾಹ ಯಥಾರ್ಥವತ್ ॥64॥
ಉಜ್ಜಿಹೀರ್ಷುರ್ನಿಮಜ್ಜಂತಂ ಸ್ಮರನ್ ಸತ್ಪುರುಷವ್ರತಮ್ ॥65॥
ಮಂದಗತಿಯಿಂದ ಹಾರುತ್ತಾ ಬಲಗುಂದುತ್ತಿದ್ದ ಕಾಗೆ ನೀರಲ್ಲಿ ಮುಳುಗುತ್ತಿದ್ದು ದನ್ನು ಕಂಡು ಹಂಸವು ಜೋರಾಗಿ ನಕ್ಕು ಸಜ್ಜನರ ನಡತೆಯನ್ನು ಮನಸಿಗೆ ತಂದುಕೊಂಡು ಅದನ್ನು ಮೇಲೆತ್ತಲು ಬಯಸಿ ಯಥಾರ್ಥವಾಗಿ ನುಡಿಯಿತು.

ಹಂಸಃ
ಬಹೂನಿ ಪತಿತಾನಿ ತ್ವಮಾಚಕ್ಷಾಣೋ ಮುಹುರ್ಮುಹುಃ |
ಪತಸ್ಯವ್ಯಾಹರನ್ ಖೇದಂ ತತೋ ಗರ್ಹ್ಯಂ ಪ್ರಭಾಷಸೇ ॥66॥
ಬಹಳ ಗತಿಗಳನ್ನು ಬಲ್ಲೆನೆಂದು ಪುನಃಪುನಃ ಹೇಳುತ್ತಲೇ ಈಗ ಉಂಟಾದ ಆಯಾಸವನ್ನು ಹೇಳದೇ ಕೆಳಗೆ ಬೀಳುತ್ತಿರುವೆ. ಬಳಿಕ ಕೆಟ್ಟ ಮಾತುಗಳನ್ನೇ ಆಡುವೆ.
ಕಿಂ ನಾಮ ಪತಿತಂ ಕಾಕ ಯತ್ತ್ವಂ ಪತಸಿ ಸಾಂಪ್ರತಮ್ |
ಜಲಂ ಸ್ಪ ೃಶಸಿ ಪಕ್ಷಾಭ್ಯಾಂ ತುಂಡೇನ ಚ ಪುನಃ ಪುನಃ ॥67॥
ಕಾಗೆಯೆ, ಈಗ ನೀನು ಬಿದ್ದ ಗತಿಗೆ ಏನು ಹೆಸರು? ಎರಡು ರೆಕ್ಕೆಗಳಿಂದಲೂ ಕೊಕ್ಕಿನಿಂದಲೂ ಪುನಃ ಪುನಃ ನೀರನ್ನು ಸ್ಪರ್ಶಿಸುವೆ!
ಪ್ರಬ್ರೂಹಿ ಕತಮೋಽಯಂ ತೇ ಪಾತೋ ವರ್ತತಿ ವಾಯಸ |
ಏಹ್ಯೇಹಿ ಕಾಕ ಶೀಘ್ರಂ ತ್ವಮೇಷ ತ್ವಾಂ ಪರಿಪಾಲಯೇ ॥68॥
ಹೇಳು ಕಾಗೆಯೇ! ನೂರೊಂದು ಪಾತಗಳಲ್ಲಿ ಇದು ಯಾವ ಪಾತವಾಗಿದೆ? ಕಾಗೆಯ ಬಾ, ಬೇಗನೆ ಬಾ, ನಾನು ನಿನಗಾಗಿ ಕಾಯುತ್ತಿದ್ದೇನೆ.
ಸ ಪಕ್ಷಾಭ್ಯಾಂ ಸ್ಪ ೃಶನ್ನಾರ್ತಸ್ತುಂಡೇನ ಚ ಜಲಂ ತದಾ |
ಕಾಕೋ ದೃಢಂ ಪರಿಶ್ರಾಂತಃ ಸಹಸಾ ನಿಪಪಾತ ಹ ॥69॥
ಕಾಗೆ ಆಯಾಸದಿಂದ ಪೀಡಿತವಾಗಿ ಎರಡು ರೆಕ್ಕೆಗಳಿಂದಲೂ ಕೊಕ್ಕಿನಿಂದಲೂ ನೀರನ್ನು ಬಡಿದು ಒಡನೆ ಧೊಪ್ಪನೆ ನೀರಲ್ಲಿ ಬಿದ್ದಿತು.
ಪಾತವೇಗಪ್ರಮಥಿತೋ ಹಂಸಂ ಕಾಕೋಽಬ್ರವೀದಿದಮ್ |
ವಯಂ ಕಾಕಾಃ ಕುತೋ ನಾಮ ಚರಾಮಃ ಕಾಕವಾಚಕಾಃ |
ಹಂಸ ಪ್ರಾಣೈಃ ಪ್ರಪದ್ಯೇ ತ್ವಾಮುದಕಾಂತಂ ನಯಸ್ವ ಮಾಮ್ ॥70॥
ಹಾರಾಟದ ವೇಗದಿಂದ ಬಲಗುಂದಿದ ಕಾಗೆ ಹಂಸಕ್ಕೆ ಹೇಳಿತು– ಹಂಸ, ನಾವು `ಕಾಕ'ರು ಏಕೆ? ಜೊತೆಗಾರರಾದ ಕಾಗೆಗಳನ್ನೇ `ಕಾಕಾ' ಎಂದು ಕರೆಯುತ್ತ ಅವರೊಂದಿಗೇ ಹಾರಾಡುವೆವು. ನಿಮ್ಮಂಥ ಸಜ್ಜನರೊಂದಿಗೆ ಅಲ್ಲ. ಹಂಸವೆ, ನನ್ನ ಪ್ರಾಣಗಳೊಂದಿಗೆ ನಿನ್ನನ್ನು ಮೊರೆ ಹೋಗುತ್ತೇನೆ. ಆಚೆ ಸಮುದ್ರತೀರಕ್ಕೆ ನನ್ನನ್ನು ಒಯ್ಯು.
ಸಾಗರಾಂಭಸಿ ತಂ ದೃಷ್ಟ್ವಾ ಪತಂತಂ ದೀನಚೇತಸಮ್ |
ಮ್ರಿಯಮಾಣಮಿದಂ ವಾಕ್ಯಂ ಹಂಸಃ ಕಾಕಮುವಾಚ ಹ ॥71॥
ಸಾಗರಜಲದಲ್ಲಿ ಬಿದ್ದು ಸಾಯುತ್ತಿರುವ, ದೈನ್ಯದಿಂದ ಬೇಡಿಕೊಳ್ಳುವ ಕಾಗೆಯನ್ನು ಕಂಡು ಹಂಸ ಹೇಳಿತು.
ಶತಮೇಕಂ ಚ ಪಾತಾನಾಂ ಪತಾಮ್ಯಹಮನುಸ್ಮರ |
ಶ್ಲಾಘನ್ನಾತ್ಮಾನಮದ್ಯ ತ್ವಂ ಕಾಕ ಭಾಷಿತವಾನಸಿ ॥72॥
ನೂರೊಂದು ಗತಿಗಳಿಂದ ಹಾರುವೆನೆಂದು ನೀನು ಹೇಳುತ್ತಿದ್ದುದನ್ನು ನೆನಪಿಸಿ ಕೊಳ್ಳು. ಜಂಬಕೊಚ್ಚಿಕೊಳ್ಳುತ್ತಿದ್ದ ನೀನೀಗ ದೈನ್ಯದ ಮಾತುಗಳನ್ನಾಡುವೆ!
ಸ ತ್ವಮೇಕಶತಂ ಪಾತಂ ಪತನ್ನಭ್ಯಧಿಕೋ ಮಯಾ |
ಕಥಮೇವಂ ಪರಿಶ್ರಾಂತಃ ಪತಿತೋಽಸಿ ಮಹಾರ್ಣವೇ ॥73॥
ನೀನು ನೂರೊಂದು ಗತಿಗಳಿಂದ ಹಾರಬಲ್ಲವನು, ನನಗಿಂತ ಶ್ರೇಷ್ಠ. ಹೀಗೆ ಆಯಾಸಗೊಂಡು ಮಹಾಸಮುದ್ರದಲ್ಲಿ ಹೇಗೆ ಬಿದ್ದೆ?
ಪ್ರತ್ಯುವಾಚ ತತಃ ಕಾಕಃ ಸೀದಮಾನ ಇದಂ ವಚಃ |
ಉಪರಿಸ್ಥಂ ತದಾ ಹಂಸಂ ಪ್ರಸಮೀಕ್ಷ ್ಯ ಪ್ರಸಾದಯನ್ ॥74॥
ಕಾಗೆ ಸಂಕಟಪಡುತ್ತ ಮೇಲೆ ಆಕಾಶದಲ್ಲಿ ನಿಂತಿದ್ದ ಹಂಸವನ್ನು ನೋಡಿ ಅದನ್ನು ಒಲಿಸುತ್ತ ಪ್ರತಿಯಾಗಿ ಹೀಗೆ ಹೇಳಿತು.
ಉಚ್ಛಿಷ್ಟಾನ್ನೇನ ಪುಷ್ಟೋಽಹಂ ದರ್ಪೋತ್ಸಿಕ್ತಃ ಕುಸತ್ವತಃ |
ಸುಪರ್ಣ ಇವ ಚಾತ್ಮಾನಂ ಜ್ಞಾತವಾನ್ ಪುತ್ರಲಾಘವಾತ್ ॥75॥
ಎಂಜಲುಂಡು ಪುಷ್ಟನಾಗಿ ಅಹಂಕಾರದಿಂದ ಕೊಬ್ಬಿ ದುರ್ಬುದ್ಧಿಯಿಂದ ವೈಶ್ಯಪುತ್ರರ ಹೊಗಳಿಕೆಯಿಂದ ನನ್ನನ್ನು ಗರುಡಸಮಾನನೆಂದು ನಾನು ತಿಳಿದುಕೊಂಡಿದ್ದೆ.
ಶರಣಂ ತ್ವಾಂ ಪ್ರಪನ್ನೋಽಹಮುದಕಾಂತಮವಾಪ್ನುಯಾಮ್ |
ಹಂಸೇದಾನೀಂ ಪರಿಶ್ರಾಂತಮಾಪದೋ ಮಾಂ ಸಮುದ್ಧರ ॥76॥
ನಾನು ನಿನ್ನನ್ನು ಮೊರೆ ಹೊಕ್ಕಿದ್ದೇನೆ. ಆಚೆ ತೀರಕ್ಕೆ ನನ್ನನ್ನು ಒಯ್ದು ಬಿಡು. ನಾನೀಗ ಬಹಳ ಆಯಾಸಗೊಂಡಿದ್ದೇನೆ. ಈ ಆಪತ್ತಿನಿಂದ ನನ್ನನ್ನು ಮೇಲೆತ್ತು.
ಯದಿ ನಾಮ ಪುನರ್ಜೀವನ್ ಗಚ್ಛೇಯಂ ಸ್ವಂ ನಿವೇಶನಮ್ |
ನೈನಂ ಪುನರ್ಹೀನಮಪಿ ಕ್ಷೇಪ್ತಾಽಹಂ ಖೇ ವಿಚಾರಿಣಮ್ ॥77॥
ನಾನು ಪುನಃ ಬದುಕಿ ನನ್ನ ಗೂಡಿಗೆ ಹೋಗಿ ಸೇರಿದೆನೆಂದರೆ ಮುಂದೆ ಅಲ್ಪವಾದ ಗಗನನಚಾರಿಯನ್ನು ಕೂಡ ಆಕ್ಷೇಪಿಸಲಾರೆ.
ತಮೇವಂ ಕರುಣಂ ದೀನಂ ವಿಲಪಂತಮಚೇತಸಮ್ |
ಕಾಕಕಾಕೇತಿ ವಾಶಂತಂ ನಿಮಜ್ಜಂತಂ ಮಹಾರ್ಣವೇ ॥78॥
ಕೃಪಯಾಽಭಿಪರೀತೋ ವೈ ಕೃಪಾಂ ಚಕ್ರೇ ದುರಾತ್ಮನಿ ॥79॥
ಬಹಳ ದೈನ್ಯದಿಂದ ಕರುಣಾಜನಕವಾಗಿ ಗೋಳಿಡುತ್ತಿದ್ದ, ಕಾಕಾ ಕಾಕಾ ಎಂದು ಕೂಗುತ್ತ ಮಹಾಸಮುದ್ರದಲ್ಲಿ ಮುಳುಗುತ್ತಿದ್ದ ಬುದ್ಧಿ ಇಲ್ಲದ ಆ ಕಾಗೆಯನ್ನು ನೋಡಿ ಹಂಸವು ದಯಾರ್ದ್ರವಾಗಿ ದುಷ್ಟ ಬುದ್ಧಿಯ ಆ ಹಕ್ಕಿಯಲ್ಲಿ ಕೃಪೆಮಾಡಿತು.
ಅಥ ತಂ ಪತಿತಂ ದೀನಂ ಜಲಕ್ಲಿನ್ನಮಚೇತನಮ್ |

ಪದ್ಭ್ಯಾಮುತ್ಕ್ಷಿಪ್ಯ ವೇಪಂತಂ ಪೃಷ್ಠಮಾರೋಪಯತ್ ತದಾ ॥80॥
ಬಿದ್ದು ನೀರಲ್ಲಿ ತೋಯ್ದು ಬಲಗುಂದಿ ನಡುಗುತ್ತಿದ್ದ ದೀನವಾದ ಆ ಕಾಗೆಯನ್ನು ಆಗ ಹಂಸವು ಕಾಲುಗಳಿಂದೆತ್ತಿ ಬೆನ್ನಮೇಲೆ ಏರಿಸಿಕೊಂಡಿತು.
ಸ ಹಂಸಃ ಪೃಷ್ಠಮಾರೋಪ್ಯ ಕಾಕಂ ಕರ್ಣ ವಿಚೇತಸಮ್ |
ಅವಿಸ್ಮಯಂಸ್ತದಾ ಕರ್ಣ ಪುನರೇವ ಸಮಾನಯತ್ ॥81॥
ತಮೇವ ದೇಶಂ ತರಸಾ ಸ್ಪರ್ಧಯಾ ಪೇತತುರ್ಯತಃ ॥82॥
ಕರ್ಣನೆ, ಆ ಹಂಸವು ಬುದ್ಧಿ ಇಲ್ಲದ ಕಾಗೆಯನ್ನು ಬೆನ್ನಮೇಲೆ ಏರಿಸಿಕೊಂಡು, ಅಹಂಕಾರ ಪಡದೆ, ತಾವು ಎಲ್ಲಿಂದ ಸ್ಪರ್ಧೆಯಲ್ಲಿ ವೇಗದಿಂದ ಹೊರಟಿದ್ದುವೋ ಅಲ್ಲಿಗೇ ಮರದ ತುದಿಯಲ್ಲಿ ಪುನಃ ತಂದುಬಿಟ್ಟಿತು.
ಉತ್ಸೃಜ್ಯ ತ್ವಬ್ರುವೀನ್ಮೈವಂ ಪುನಃ ಕಾರ್ಯಂ ತ್ವಯೇತಿ ಹ |
ಸ್ಥಾಪ್ಯ ಚೈನಂ ಪುನರ್ದ್ವೀಪೇ ಸಮಾಶ್ವಸ್ಯ ಚ ವಿಕ್ಲವಮ್ ॥83॥
ಗತೋ ಯಥೇಪ್ಸಿತಂ ದೇಶಂ ಹಂಸೋ ಮನ ಇವಾಶುಗಃ ॥84॥
ಹಂಸವು ಕಾಗೆಯನ್ನು ದ್ವೀಪಕ್ಕೆ ತಂದಿರಿಸಿ, ಅದರ ಕಳವಳವನ್ನು ಸಮಾಧಾನಮಾಡಿ, ಪುನಃ ಇಂಥ ಕಾರ್ಯವನ್ನು ಮಾಡಬೇಡವೆಂದು ಹೇಳಿತು. ಅದನ್ನು ಅಲ್ಲಿ ಬಿಟ್ಟು ತಾನು ತನಗೆ ಇಷ್ಟ ಬಂದ ಮಾನಸ ಸರೋವರದೆಡೆಗೆ ಮನೋವೇಗದಿಂದ ತೆರಳಿತು.
ಏವಮುಚ್ಛಿಷ್ಟಪುಷ್ಟಃ ಸ ಕಾಕೋ ಹಂಸಪರಾಜಿತಃ |
ಬಲವೀರ್ಯಮದಂ ಕರ್ಣ ತ್ಯಕ್ತ್ವಾ ಕ್ಷಾಂತಿಮುಪಾಗತಃ ॥85॥
ಹೀಗೆ ಎಂಜಲು ತಿಂದು ಪುಷ್ಟವಾದ ಅಹಂಕಾರಿಯಾದ ಕಾಗೆ ನಿರಹಂಕಾರಿ ಯಾದ ಹಂಸದಿಂದ ಪರಾಜಯ ಹೊಂದಿ ಬಲ ವೀರ್ಯಗಳ ಮದವನ್ನು ತ್ಯಜಿಸಿ ತಾಳ್ಮೆಯನ್ನು ಹೊಂದಿತು.
ಉಚ್ಛಿಷ್ಟಭೋಜನಃ ಕಾಕೋ ಯಥಾ ವೈಶ್ಯಕುಲೇ ಪುರಾ |
ಏವಂ ತ್ವಮುಚ್ಛಿಷ್ಟಭೃತೋ ಧಾರ್ತರಾಷ್ಟ್ರೈರ್ನ ಸಂಶಯಃ ॥86॥
ಹಿಂದೆ ವೈಶ್ಯನ ಮನೆಯಲ್ಲಿ ಎಂಜಲುಣ್ಣುತ್ತಿದ್ದ ಕಾಗೆಯಂತೆ ನೀನೂ ಕೂಡ ಕೌರವರ ಎಂಜಲಿಂದ ಕೊಬ್ಬಿರುವೆ, ಸಂಶಯವಿಲ್ಲ.
ಸದೃಶಾನ್ ಶ್ರೇಯಸಶ್ಚಾಪಿ ಸರ್ವಾನ್ ಕರ್ಣಾವಮನ್ಯಸೇ |
ದ್ರೋಣದ್ರೌಣಿಕೃಪೈರ್ಗುಪ್ತೋ ಭೀಷ್ಮೇಣಾನ್ಯೈಶ್ಚ ಕೌರವೈಃ ॥87॥
ದ್ರೋಣ ಅಶ್ವತ್ಥಾಮ ಕೃಪ ಭೀಷ್ಮ ಬೇರೆ ಕೌರವರು ಇವರೆಲ್ಲರ ರಕ್ಷಣೆಯಲ್ಲಿದ್ದು ಕರ್ಣ, ನೀನು ಸಮಾನರನ್ನೂ ಹಿರಿಯರನ್ನೂ ಎಲ್ಲರನ್ನೂ ಅವಮಾನಿಸಿರುವೆ.
ವಿರಾಟನಗರೇ ಪಾರ್ಥಮೇಕಂ ಕಿಂ ನಾವಧೀಸ್ತದಾ |
ಯತ್ರ ವ್ಯಸ್ತಾಃ ಸಮಸ್ತಾಶ್ಚ ನಿರ್ಜಿತಾಃ ಸ್ಥ ಕಿರೀಟಿನಾ ॥88॥
ಸೃಗಾಲಾ ಇವ ಸಿಂಹೇನ ಕ್ವ ತೇ ವೀರ್ಯಂ ತದಾ ಗತಮ್ ॥89॥
ವಿರಾಟನಗರದಲ್ಲಿ ಅರ್ಜುನನೊಬ್ಬನೆ ಯುದ್ಧಕ್ಕೆ ಬಂದಿದ್ದ. ಅವನನ್ನು ನೀನೇಕೆ ಕೊಲ್ಲಲಿಲ್ಲ? ಅಲ್ಲಿ ಅರ್ಜುನ ಒಬ್ಬನೆ ನಿಮ್ಮನ್ನು ಒಬ್ಬೊಬ್ಬರನ್ನಾಗಿಯೂ ಒಟ್ಟಾಗಿಯೂ ಸಿಂಹ ಒಂದು ಅನೇಕ ನರಿಗಳನ್ನು ಹೇಗೋ ಹಾಗೆ ಪರಾಭವಗೊಳಿಸಿದ. ಆಗ ನಿನ್ನ ಪರಾಕ್ರಮವೆಲ್ಲಿಗೆ ಹೋಗಿತ್ತು?
ಭ್ರಾತರಂ ನಿಹತಂ ದೃಷ್ಟ್ವಾ ಸಮರೇ ಸವ್ಯಸಾಚಿನಾ |
ಪಶ್ಯತಾಂ ಕುರುವೀರಾಣಾಂ ಪ್ರಥಮಂ ತ್ವಂ ಪಲಾಯಿತಃ ॥90॥
ಯುದ್ಧದಲ್ಲಿ ಅರ್ಜುನನಿಂದ ನಿನ್ನ ತಮ್ಮ ಹತನಾದುದನ್ನು ನೋಡಿ ಕೌರವ ವೀರರು ನೋಡುತ್ತಿದ್ದಂತೆಯೆ ಮೊದಲಿಗೆ ನೀನೇ ಪಲಾಯನ ಮಾಡಿದೆ.
ತಥಾ ದ್ವೈತವನೇ ಕರ್ಣ ಗಂಧರ್ವೈಃ ಸಮಭಿದ್ರುತಾನ್ |
ಕುರೂನ್ ಸದಾರಾನುತ್ಸ ೃಜ್ಯ ತ್ವಮೇವಾಗ್ರೇ ಪಲಾಯಿತಃ ॥91॥
ದ್ವೈತವನದಲ್ಲಿ ಗಂಧರ್ವರು ಆಕ್ರಮಣ ಮಾಡಿದಾಗ ಎಲ್ಲ ಕೌರವರನ್ನೂ ಅವರ ಪತ್ನಿಯರೊಂದಿಗೆ ಬಿಟ್ಟು ಎಲ್ಲರಿಗಿಂತ ಮೊದಲಿಗೆ ನೀನೇ ಪಲಾಯನ ಮಾಡಿದೆ.
ಹತ್ವಾ ಜಿತ್ವಾ ಚ ಗಂಧರ್ವಾಂಶ್ಚಿತ್ರಸೇನಮುಖಾನ್ ರಣೇ |
ಕರ್ಣ ದುರ್ಯೋಧನಂ ಪಾರ್ಥಃ ಸಭಾರ್ಯಂ
ಸಮಮೋಕ್ಷಯತ್ ॥92॥
ಕರ್ಣ, ಆ ಯುದ್ಧದಲ್ಲಿ ಚಿತ್ರಸೇನನ ನಾಯಕತ್ವದಲ್ಲಿ ಬಂದ ಗಂಧರ್ವರನ್ನು ಹೊಡೆದು ಗೆದ್ದು, ದುರ್ಯೋಧನನನ್ನು ಅವನ ಹೆಂಡತಿಸಮೇತವಾಗಿ ಅರ್ಜುನನು ಬಂಧನದಿಂದ ಬಿಡುಗಡೆ ಮಾಡಿಸಿದ.
ಪುನಃ ಪ್ರಭಾವಃ ಪಾರ್ಥಸ್ಯ ಪುರಾಣಃ ಕೇಶವಸ್ಯ ಚ |
ಕಥಿತಃ ಕರ್ಣ ರಾಮೇಣ ಸಭಾಯಾಂ ಕುರುಸಂಸದಿ ॥93॥
ಸಂಧಾನದ ಸಭೆಯಲ್ಲಿ ಕೌರವರ ಮುಂದೆ ಪರಶುರಾಮ ಕೃಷ್ಣಾರ್ಜುನರು ಹಿಂದೆ ತೋರಿದ್ದ ಪರಾಕ್ರಮವನ್ನು ಹೇಳಿದ್ದ.
ಸತತಂ ಚ ತ್ವಮಶ್ರೌಷೀರ್ವಚನಂ ದ್ರೋಣಭೀಷ್ಮಯೋಃ |
ಅವಧ್ಯೌ ವದತೋಃ ಕೃಷ್ಣೌ ಸನ್ನಿಧೌ ಚ ಮಹೀಕ್ಷಿತಾಮ್ ॥94॥
ದ್ರೋಣ ಭೀಷ್ಮರು ರಾಜರ ಸಂಮುಖದಲ್ಲಿ ಸತತವಾಗಿ ಕೃಷ್ಣಾರ್ಜುನರು ಅವಧ್ಯರೆಂದು ಹೇಳುತ್ತಿದ್ದುದನ್ನು ನೀನು ಕೇಳಿರುವೆ.

ಕಿಯತ್ತವ ಪ್ರವಕ್ಷ್ಯಾಮಿ ಯೇನ ಯೇನ ಧನಂಜಯಃ |
ತ್ವತ್ತೋತಿರಿಕ್ತಃ ಸರ್ವೇಭ್ಯೋ ಭೂತೇಭ್ಯೋ ಬ್ರಾಹ್ಮಣೋ
ಯಥಾ ||95||
ಎಲ್ಲ ಮಾನವರಿಗಿಂತ ಬ್ರಾಹ್ಮಣ ಹೆಚ್ಚೆನ್ನುವಂತೆ, ಅರ್ಜುನನು ಯಾವ ಯಾವ ವಿಷಯದಲ್ಲಿ ನಿನಗಿಂತ ಹೆಚ್ಚು ಎನ್ನುವುದನ್ನು ನಿನಗೆ ನಾನು ಎಷ್ಟು ಹೇಳಲಿ?
ಇದಾನೀಮೇವ ದ್ರಷ್ಟಾಸಿ ಪ್ರಧಾನೇ ಸ್ಯಂದನೇ ಸ್ಥಿತೌ |
ಪುತ್ರಂ ಚ ವಸುದೇವಸ್ಯ ಕುಂತೀಪುತ್ರಂ ಚ ಪಾಂಡವಮ್ ||96||
ಈಗಲೇ ಉತ್ತಮವಾದ ರಥದಲ್ಲಿ ನಿಂತಿರುವ ವಸುದೇವಪುತ್ರನನ್ನೂ ಕುಂತೀಪುತ್ರ ಅರ್ಜುನನನ್ನೂ ನೀನೆ ನೋಡುವಿ.
ಯಥಾಽಶ್ರಯತ ಚಕ್ರಾಂಗಂ ವಾಯಸೋ ಬುದ್ಧಿಮಾಸ್ಥಿತಃ |
ತಥಾಶ್ರಯಸ್ವ ವಾರ್ಷ್ಣೇಯಂ ಪಾಂಡವಂ ಚ ಧನಂಜಯಮ್ ||97||
ಬುದ್ಧಿ ತಿಳಿದ ಕಾಗೆ ಅಹಂಕಾರವನ್ನು ತೊರೆದು ಹಂಸವನ್ನು ಆಶ್ರಯಿಸಿದಂತೆ ನೀನೂ ಅಹಂಕಾರ ಬಿಟ್ಟು ಕೃಷ್ಣಾರ್ಜುನರನ್ನು ಆಶ್ರಯಿಸು.
ಯದಾ ತ್ವಂ ಯುಧಿ ವಿಕ್ರಾಂತೌ ವಾಸುದೇವಧನಂಜಯೌ |
ದ್ರಷ್ಟಾಸ್ಯೇಕರಥೇ ಕರ್ಣ ತದಾ ನೈವಂ ವದಿಷ್ಯಸಿ ||98||
ಯುದ್ಧದಲ್ಲಿ ಪರಾಕ್ರಮವನ್ನು ತೋರುವ ಕೃಷ್ಣಾರ್ಜುನರನ್ನು ಒಂದು ರಥದಲ್ಲಿ ನೀನು ಕಂಡೆಯಾದರೆ ಆಗ ನೀನು ಹೀಗೆ ಮಾತನಾಡಲಾರೆ.
ಯದಾ ಶರಶತೈಃ ಪಾರ್ಥೋ ದರ್ಪಂ ತವ ವಧಿಷ್ಯತಿ |
ತದಾ ತ್ವಮಂತರಂ ದ್ರಷ್ಟಾ ಆತ್ಮನಶ್ಚಾರ್ಜುನಸ್ಯ ಚ ||99||
ಅರ್ಜುನನು ನೂರಾರು ಬಾಣಗಳಿಂದ ನಿನ್ನ ದರ್ಪವನ್ನು ನಾಶಮಾಡಿದಾಗ ನಿನ್ನ ಅರ್ಜುನರ ನಡುವಿನ ಅಂತರವನ್ನು ನೀನು ಕಂಡುಕೊಳ್ಳುವಿ.
ದೇವಾಸುರಮನುಷ್ಯೇಷು ಪ್ರಖ್ಯಾತೌ ಯೌ ನರೋತ್ತಮೌ |
ತೌ ಮಾವಮಂಸ್ಥಾ ಮೌರ್ಖ್ಯಾತ್ ತ್ವಂ ಖದ್ಯೋತ ಇವ
ರೋಚನೌ ||100||
ದೇವಅಸುರಮನುಷ್ಯರಲ್ಲಿ ಪ್ರಖ್ಯಾತರಾದ, ನರೋತ್ತಮರಾದ ಕೃಷ್ಣಾರ್ಜುನರನ್ನು ಮಿಣುಕು ಹುಳುವು ಸೂರ್ಯಚಂದ್ರರನ್ನು ನಿಂದಿಸುವಂತೆ ಮೂರ್ಖತನದಿಂದ ನೀನು ಅವಮಾನಿಸಬೇಡ.
ಸೂರ್ಯಾಚಂದ್ರಮಸೌ ಯದ್ವತ್ ತದ್ವದರ್ಜುನಕೇಶವೌ |
ಪ್ರಾಕಾಶ್ಯೇನಾಭಿವಿಖ್ಯಾತೌ ತ್ವಂ ತು ಖದ್ಯೋತವನ್ನೃಷು ||101||
ಸೂರ್ಯಚಂದ್ರರಂತೆ ಅರ್ಜುನ ಕೇಶವರು ಪ್ರಕಾಶದಿಂದ ಖ್ಯಾತರಾದವರು. ನೀನು ಮನುಷ್ಯರಲ್ಲಿ ಮಿಣುಕು ಹುಳದಂತಿರುವವನು.
ಏವಂ ವಿದ್ವನ್ ಮಾವಮಂಸ್ಥಾಃ ಸೂತಪುತ್ರಾಚ್ಯುತಾರ್ಜುನೌ |
ನರಸಿಂಹೌ ನರಶ್ವಾ ತ್ವಂ ಜೋಷಮಾಸ್ಸ್ವ ವಿಕತ್ಥನ ||102||
ಹೀಗೆ ತಿಳಿದ ಸೂತಪುತ್ರನೆ, ನೀನು ಮಾನವರಲ್ಲಿ ನಾಯಿ, ಕೃಷ್ಣಾರ್ಜುನರು ಸಿಂಹಗಳು, ಅವರನ್ನು ಅವಮಾನಿಸಬೇಡ, ಬಡಾಯಿ ಕೊಚ್ಚಿಕೊಳ್ಳುವವನೆ, ಮಾತನಾಡದೆ ಸುಮ್ಮನಿರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಶಲ್ಯಸಂವಾದೇ ಹಂಸಕಾಕೀಯೋಪಾಖ್ಯಾನಂ ನಾಮ ಏಕಚತ್ವಾರಿಂಶೋಧ್ಯಾಯಃ ||41||

ನಲವತ್ತೆರಡನೆ ಅಧ್ಯಾಯ
`ಮೃತ್ಯುಕಾಲದಲ್ಲಿ ಹೊರತು ಬೇರೆ ಕಾಲದಲ್ಲಿ ಅಸ್ತ್ರಗಳು ನಿನಗೆ ಹೊಳೆಯುವುದಿಲ್ಲ' ಎಂದು ಗುರುಶಾಪ, `ಮೃತ್ಯುಕಾಲದಲ್ಲಿ ಅವು ಮರೆತುಹೋಗುವುವೆಂ'ದು ಬ್ರಾಹ್ಮಣಶಾಪ. ಅರ್ಜುನನೂ ಎಣೆಯಿಲ್ಲದ ಬಿಲ್ಲಾಳು. ಆದರೂ ನನಗೆ ಭಯವಿಲ್ಲವೆನ್ನುತ್ತಾನೆ ಕರ್ಣ.
ಸಂಜಯಃ
ಮದ್ರಾಧಿಪಸ್ಯಾಧಿರಥಿರ್ಮಹಾತ್ಮಾ
ವಚೋ ನಿಶಮ್ಯಾಪ್ರಿಯಮಪ್ರತೀತಃ |
ಉವಾಚ ಶಲ್ಯಂ ವಿದಿತಂ ಮಮೈತದ್
ಯಥಾವಿಧಾವರ್ಜುನವಾಸುದೇವೌ ||1||
ಸಂಜಯ ಧೃತರಾಷ್ಟ್ರನಿಗೆ ನುಡಿದ– ಶಲ್ಯನಾಡಿದ ಅಪ್ರಿಯವಾದ ಮಾತನ್ನು ಕೇಳಿ ಸಮಾಧಾನಪಡದೆ ಕರ್ಣ ಶಲ್ಯನಿಗೆ ನುಡಿದ `ಕೃಷ್ಣಾರ್ಜುನರು ಎಂಥವ ರೆಂಬುದು ನನಗೆ ಗೊತ್ತು.
ಶೌರೇ ರಥಂ ವಾಹಯತೋಽರ್ಜುನಸ್ಯ
ಬಲಂ ಮಹಾಸತ್ರಣಿ ಚ ಪಾಂಡವಸ್ಯ |
ಅಹಂ ವಿಜಾನಾಮಿ ಯಥಾವದದ್ಯ
ಪರೋಕ್ಷಭೂತಂ ತವ ತತ್ತು ಶಲ್ಯ ||2||
ಅರ್ಜುನನ ಸಾರಥಿಯಾದ ಕೃಷ್ಣನ ಬಲವನ್ನೂ ಅರ್ಜುನನ ಮಹಾಸ್ತ್ರವನ್ನೂ ನಾನು ಯಥಾವತ್ತಾಗಿ ತಿಳಿದಿದ್ದೇನೆ. ನಿನಗೇ ಆದು

ಗೊತ್ತಿಲ್ಲ.
ತೌ ಚಾಪ್ಯಹಂ ಶಸ್ತ್ರಭೃತಾಂ ವರಿಷ್ಠೌ
ವ್ಯಪೇತಭೀರ್ಯೋಧಯಿಷ್ಯಾಮಿ ಕೃಷ್ಣೌ ॥3॥
ಆದರೂ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಆ ಕೃಷ್ಣಾರ್ಜುನರನ್ನು ನಿರ್ಭಯವಾಗಿ ಇದಿರಿಸಿ ನಾನು ಹೋರಾಡುತ್ತೇನೆ.
ಪುರಾ ಮಹೇಂದ್ರಾದ್ರಿವರೇ ಸಮೃದ್ಧೇ
ತಪಸ್ವಿನಂ ರಾಮಮುಪೇತ್ಯ ಶಲ್ಯ |
ಶಸಹಿತ್ರರ್ಥಿನಂ ಮಾಽದ್ಯ ಶಿಷ್ಯಂ ಗೃಹಾಣೇ-
ತ್ಯಥಾಬ್ರುವಂ ಬ್ರಾಹ್ಮಣಚ್ಛದ್ಮನಾ ಚ ॥4॥
ಹಿಂದೆ ವನಸಿರಿಯಿಂದ ಸಮೃದ್ಧವಾದ ಮಹೇಂದ್ರಪರ್ವತದಲ್ಲಿ ತಪ ಗೈಯುತ್ತಿದ್ದ ಪರಶುರಾಮನ ಬಳಿಗೆ ಹೋಗಿ `ನಾನು ಶಸಹಿತ್ರರ್ಥಿಯಾಗಿ ಬಂದಿರುವೆನು. ನನ್ನನ್ನು ಶಿಷ್ಯನಾಗಿ ಸ್ವೀಕರಿಸೆಂ'ದು ಕೇಳಿಕೊಂಡೆ. ಅಬ್ರಾಹ್ಮಣನಿಗೆ ಉಪದೇಶ ನೀಡಲಾರನೆಂಬ ಭಯದಿಂದ ಬ್ರಾಹ್ಮಣನ ಮಾರುವೇಷ ಹಾಕಿಕೊಂಡಿದ್ದೆ.
ತತ್ರಾವಸಂ ಬ್ರಾಹ್ಮಣ ಇತ್ಯವಿಪ್ರೋ
ಬ್ರಹ್ಮಾಸ್ತ್ರಲೋಭಾದನೃತೇನ ಚಾಹಮ್ |
ತಜ್ಜಾಮದಗ್ನ್ಯೇನ ಪರಂ ಮಹಾಸ್ತ್ರಂ
ಸುಮಂತ್ರಯುಕ್ತಂ ವಿಹಿತಂ ಮಮಾಸೀತ್ ॥5॥
ಅಲ್ಲಿ ನಾನು, ಬ್ರಾಹ್ಮಣನಲ್ಲದಿದ್ದರೂ ಬ್ರಹ್ಮಾಸ್ತ್ರ ಪಡೆಯುವಾಸೆಯಿಂದ `ಬ್ರಾಹ್ಮಣನಾಗಿದ್ದೇನೆ' ಎಂದು ಸುಳ್ಳು ಹೇಳಿ ಶಿಷ್ಯನಾಗಿ ವಾಸಮಾಡಿದೆ. ಅದರಿಂದ ಬ್ರಹ್ಮಾಸ್ತ್ರವೆಂಬ ಉತ್ತಮವಾದ ಮಹಾಸ್ತ್ರವು ಉತ್ತಮ ಮಂತ್ರಯುಕ್ತವಾಗಿ ಜಮದಗ್ನಿ ಪುತ್ರನಾದ ಪರಶುರಾಮನಿಂದ ನನಗೆ ದೊರೆಯಿತು.
ಅಸ್ತ್ರಂ ಯದಾ ತದ್ವಿದಿತಂ ಮಮಾಸೀತ್
ತದಾಽಬ್ರವೀದ್ ಬ್ರಾಹ್ಮಣೋ ಮಾಂ ಮಹರ್ಷಿಃ |
ಆಪದ್ಗತೇನಾಸ್ತ್ರಮಿದಂ ಪ್ರಯೋಜ್ಯಂ
ತ್ವಯಾ ರಣೇ ನಾನ್ಯಥೈವಂ ಕದಾಚಿತ್ ॥6॥
ನನಗೆ ಆ ಅಸ್ತ್ರಮಂತ್ರ ತಿಳಿದಾಗ ಬ್ರಾಹ್ಮಣನಾದ ಮಹರ್ಷಿ ಪರಶುರಾಮನು ನನಗೆ ಆಜ್ಞೆ ಮಾಡಿದ: `ಆಪತ್ತಿನಲ್ಲಿ ಮಾತ್ರ ಈ ಅಸ್ತ್ರಮಂತ್ರವನ್ನು ಪ್ರಯೋಗ ಮಾಡು. ಬೇರೆ ಸಮಯದಲ್ಲಿ ಎಂದೂ ನೀನು ರಣದಲ್ಲಿ ಅದನ್ನು ಪ್ರಯೋಗ ಮಾಡಕೂಡದು' ಎಂದು.
ಅವಾತ್ಸಂ ವೈ ಬ್ರಾಹ್ಮಣಚ್ಛದ್ಮನಾಹಂ
ರಾಮೇ ಪುರಾ ದಿವ್ಯಮಸ್ತ್ರಂ ಚಿಕೀರ್ಷುಃ ॥7॥
ಹೀಗೆ ಹಿಂದೆ ದಿವ್ಯವಾದ ಅಸ್ತ್ರವನ್ನು ಪಡೆಯಲು ಬಯಸಿ ಬ್ರಾಹ್ಮಣವೇಷದಿಂದ ಪರಶುರಾಮನ ಬಳಿ ವಾಸಮಾಡಿದ್ದೆ.
ಸಂತಾಪಯತ್ಯಭ್ಯಧಿಕಂ ಹಿ ರಾಮಾತ್
ಶಾಪೋಽದ್ಯ ಮಾಂ ಬ್ರಾಹ್ಮಣಸತ್ತಮಾಚ್ಚ ॥8॥
ಬ್ರಾಹ್ಮಣಶ್ರೇಷ್ಠನಾದ ಪರಶುರಾಮನಿಂದ ನನಗೆ ಬಂದ ಶಾಪ ಅಧಿಕವಾಗಿ ನನಗೆ ಈಗ ಸಂತಾಪ ನೀಡಿದೆ.
ತತ್ರಾಪಿ ಮೇ ದೇವರಾಜೇನ ವಿಘ್ನೋ
ಹಿತಾರ್ಥಿನಾ ಫಲ್ಗುನಸ್ಯೈವ ಶಲ್ಯ |
ಕೃತೋ ವಿಭೇದೇನ ಮಮೋರುಮೇತ್ಯ
ಪ್ರವಿಶ್ಯ ಕೀಟಸ್ಯ ತನುಂ ವಿರೂಪಾಮ್ ॥9॥
ಶಲ್ಯ, ನಾನು ಪರಶುರಾಮನಲ್ಲಿ ಶಿಷ್ಯನಾಗಿ ವಾಸಿಸುತ್ತಿದ್ದಾಗ ಅರ್ಜುನನಿಗೆ ಹಿತ ಉಂಟು ಮಾಡುವ ಬಯಕೆಯಿಂದ ದೇವರಾಜ ಇಂದ್ರ ಕುರೂಪವಾದ ಕೀಟದ ಶರೀರವನ್ನು ಪ್ರವೇಶಿಸಿ, ನನ್ನ ತೊಡೆಯನ್ನು ಕಡಿದು ಗಾಯ ಉಂಟುಮಾಡುವ ಮೂಲಕ ವಿಘ್ನ ಮಾಡಿದ.
ಮಮೋರುಮೇತ್ಯ ಪ್ರವಿಭೇದ ಕೀಟಃ
ಸುಪ್ತೇ ಗುರೌ ತತ್ರ ಶಿರೋ ನಿಧಾಯ |
ಊರುಪ್ರಭೇದಾಚ್ಚ ಮಹಾನ್ ಬಭೂವ
ಶರೀರತೋ ಮೇ ಘನಶೋಣಿತೌಘಃ ॥10॥
ಕೀಟವು ನನ್ನ ತೊಡೆಯನ್ನು ಕಡಿದು ಗಾಯಮಾಡಿತು. ಆಗ ತೊಡೆಯ ಮೇಲೆ ತಲೆಯನ್ನಿಟ್ಟು ಗುರು ನಿದ್ರೆಮಾಡುತ್ತಿದ್ದ. ತೊಡೆಯ ಗಾಯದಿಂದ ನನ್ನ ಮೈಯಿಂದ ರಕ್ತದ ಮಹಾಪ್ರವಾಹ ಹರಿಯಿತು.
ಗುರೋರ್ಭಯಾಚ್ಚಾಪಿ ನ ಚೇಲಿವಾನಹಂ
ತತೋ ವಿಬುದ್ಧೋ ದದೃಶೇ ಸ ವಿಪ್ರಃ |
ಸ ಧೈರ್ಯಯುಕ್ತಂ ಪ್ರಸಮೀಕ್ಷ್ಯ ಮಾಂ ವೈ
ನ ತ್ವಂ ವಿಪ್ರಃ ಕೋಽಸಿ ಸತ್ಯಂ ವದೇತಿ ॥11॥
ಗುರುವಿನ ಭಯದಿಂದ ನಾನು ಚಲಿಸಲಿಲ್ಲ. ಆಗ ಎಚ್ಚೆತ್ತು ಆ ಬ್ರಾಹ್ಮಣ ನೋಡಿದ. ಚಲಿಸದೆ ಧೈರ್ಯದಿಂದ ಸಹನೆ ಮಾಡಿದ ನನ್ನನ್ನು ನೋಡಿ ನೀನು ಬ್ರಾಹ್ಮಣನಲ್ಲ, ಯಾರು ನೀನು? ಸತ್ಯವಾಗಿ ಹೇಳು ಎಂದು ಕೇಳಿದನು.
ತಸ್ಮೈ ತದಾತ್ಮಾನಮಹಂ ಯಥಾವದ್
ಆಖ್ಯಾತವಾನ್ ಸೂತ ಇತ್ಯೇವ ಶಲ್ಯ |

ಸ ಮಾಂ ನಿಶಮ್ಯಾಥ ಮಹಾತಪಸ್ವೀ
ಸಂಶಪ್ತವಾನ್ ರೋಷಪರೀತಚೇತಾಃ ॥12॥
ಶಲ್ಯ, ನಾನು ಆಗ ನನ್ನ ಬಗ್ಗೆ ಯಥಾವತ್ತಾಗಿ ಸೂತನೆಂದೇ ಹೇಳಿಕೊಂಡೆ. ಮಹಾತಪಸ್ವಿಯಾದ ಗುರು ನನ್ನ ಮಾತನ್ನು ಕೇಳಿ ರೋಷಾವಿಷ್ಟಚಿತ್ತನಾಗಿ ಶಾಪವಿತ್ತ.
ಸೂತ ತ್ವಯಾ ಹ್ಯಾಪ್ತಮಿದಂ ತವಾಸ್ತ್ರಂ
ನ ಕರ್ಮಕಾಲೇ ಪ್ರತಿಭಾಸ್ಯತೀತಿ |
ಅನ್ಯತ್ರ ತಸ್ಮಾತ್ತವ ಮೃತ್ಯುಕಾಲಾದ್
ಅಬ್ರಾಹ್ಮಣೇ ಬ್ರಹ್ಮ ನ ಹಿ ಧ್ರುವಂ ಸ್ಯಾತ್ ॥13॥
ಸೂತನೆ, ನೀನು ನನ್ನಿಂದ ಕಲಿತ ಈ ಬ್ರಹ್ಮಾಸ್ತ್ರವಿದ್ಯೆ ನಿನ್ನ ಮೃತ್ಯುಕಾಲದ ಹೊರತು ಬೇರೆ ಕರ್ಮಕಾಲದಲ್ಲಿ ಮನಸಿಗೆ ಹೊಳೆಯುವುದಿಲ್ಲ. ಅಬ್ರಾಹ್ಮಣನಲ್ಲಿ ಬ್ರಹ್ಮವಿದ್ಯೆ ಸ್ಥಿರವಾಗಿರುವುದಿಲ್ಲ ತಾನೆ?
ತದದ್ಯ ಪರ್ಯಾಪ್ತಮತೀವ ಮೇಽಸ್ತ್ರ-
ಮುಪಸ್ಥಿತೇಽಸ್ಮಿಂಸ್ತುಮುಲೇ ವಿಮರ್ದೇ ॥14॥
ಅದರಿಂದ ಗೊಂದಲಮಯವಾದ ಈ ಯುದ್ಧ ಈಗ ಪ್ರಾಪ್ತವಾಗಿರುವಾಗ ನನ್ನ ಅಸ್ತ್ರವಿದ್ಯೆ ಕರ್ಮಕಾಲದಲ್ಲಿ ಅತ್ಯಂತ ಸಮರ್ಥವೇ ಇರುತ್ತದೆ.
ಕ್ಷತ್ರಿಯನಾದ ಭೀಷ್ಮನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದ್ದ ಪರಶುರಾಮ `ಅಬ್ರಾಹ್ಮಣನಿಗೆ ತಾನು ಉಪದೇಶಿಸುವುದಿಲ್ಲ. ಬ್ರಹ್ಮವಿದ್ಯೆ ಅವನಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲ' ಎಂದು ಹೇಳಿದ್ದು ಹೇಗೆ ಎಂದರೆ ಲಕ್ಷಾಲಂಕಾರ ಹೇಳುತ್ತದೆ: `ಬ್ರಾಹ್ಮಣ' ಎಂದರೆ ಇಲ್ಲಿ ಬ್ರಹ್ಮವಿದ್ಯೆಗೆ ಅರ್ಹನಾದವನು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂದು ತ್ರೈವರ್ಣಿಕರಲ್ಲಿ ಸೇರಿದವನೆಂದರ್ಥ. ಸೂತನು ಇವರಲ್ಲಿ ಸೇರದಿರುವುದರಿಂದ ಬ್ರಹ್ಮವಿದ್ಯೆಗೆ ಅರ್ಹನಲ್ಲ ಎಂದು. ಯದ್ಯಪಿ ಕುಂತಿಯ ಗರ್ಭಜಾತನಾದ ಕರ್ಣ ಕ್ಷತ್ರಿಯ. ಆದರೆ ಕ್ಷತ್ರಿಯಸಂಸ್ಕಾರವಿರಲಿಲ್ಲ.
ಯದ್ಯಪಿ ಕರ್ಣನಿಗೆ ಬ್ರಹ್ಮವಿದ್ಯೆ ಗುರುಶಾಪದಿಂದ ಕರ್ಮಕಾಲದಲ್ಲಿ ಹೊಳೆಯದಿದ್ದರೆ ಅದು ಕರ್ಮಕಾಲದಲ್ಲಿ ಸಮರ್ಥವಾಗಿರುವುದು ಹೇಗೆ ಎಂಬ ಪ್ರಶ್ನೆ ಬರುತ್ತದೆ. ಮತ್ತು ಶಲ್ಯನ ಚುಚ್ಚು ಮಾತುಗಳಿಗೆ ಉತ್ತರವಾಗಿ ಕರ್ಣ ತಾನು ಅರ್ಜುನನಿಗಿಂತ ಕಡಿಮೆಯವನೇನಲ್ಲ ಎನ್ನಲು ಹೊರಟಿದ್ದಾನೆ. ಈ ಸಂದರ್ಭದಲ್ಲಿ ತನಗೆ ಗುರುಶಾಪದಿಂದ ಅಸ್ತ್ರವಿದ್ಯೆ ಕರ್ಮಕಾಲದಲ್ಲಿ ವ್ಯರ್ಥವಾಗುತ್ತದೆ ಎಂದು ಹೇಳುವುದು ಅಸಂಗತವಾಗುತ್ತದೆ. ಆದರೆ ವಸ್ತುತಃ ತಾನು ಅರ್ಜುನನಿಗಿಂತ ಹೆಚ್ಚೇ. ಕಡಿಮೆಯವನೇ ಆದರೂ ಅವನಿಗೆ ನಾನು ಹೆದರುವುದಿಲ್ಲ ಎಂದು ಅಭಿಪ್ರಾಯ. ಇದು ಮುಂದೆ (ಶ್ಲೋ.32) ಸ್ಪಷ್ಟವಿದೆ.
ಅಥವಾ ಬ್ರಹ್ಮಾಸ್ತ್ರ ಮಾತ್ರ ಉಪದೇಶವಿಲ್ಲದ್ದರಿಂದ ವ್ಯರ್ಥವಾಗುತ್ತದೆ ಹೊರತು ಬೇರೆ ದಿವ್ಯಾಸ್ತ್ರಗಳು ನನ್ನಲ್ಲಿ ಇದ್ದೇ ಇವೆ. ಬ್ರಹ್ಮಾಸ್ತ್ರವನ್ನು, ಪರಶು ರಾಮ ಹೇಳಿದಂತೆ, ಅರ್ಜುನನೂ ಕೂಡ ಆಪತ್ತಿನಲ್ಲಿ ಹೊರತು ಬೇರೆ ಕರ್ಮ ಕಾಲದಲ್ಲಿ ಪ್ರಯೋಗಿಸುವುದಿಲ್ಲ. ಇಡೀ ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನು ಬ್ರಹ್ಮಶಿರೋಸ್ತ್ರರೂಪವಾದ ಬ್ರಹ್ಮಾಸ್ತ್ರ ಪ್ರಯೋಗ ಮಾಡಲಿಲ್ಲ. ಹೀಗಾಗಿ ತಾನು ಅರ್ಜುನನಿಗೆ ಸಮಾನನೆ ಎನ್ನುತ್ತಿದ್ದಾನೆ ಕರ್ಣ. ಸಮಾನ ಏಕೆಂದರೆ ಕರ್ಮಕಾಲದಲ್ಲಿ ಕರ್ಣನಿಗೆ ಬ್ರಹ್ಮಾಸ್ತ್ರ ಒಂದು ಮಾತ್ರ ಹೊಳೆಯುವುದಿಲ್ಲ. ಅರ್ಜುನನಿಗೆ ಹೊಳೆದರೂ ಅದನ್ನು ಪ್ರಯೋಗಿಸುವುದಿಲ್ಲ ಎಂದು. ಹೀಗಾಗಿ ಕರ್ಣ ಆತ್ಮಪ್ರಶಂಸೆ ಮಾಡುವ ಸಂದರ್ಭದಲ್ಲಿ ಈ ಶಾಪವೃತ್ತಾಂತವನ್ನು ಹೇಳುವುದು ಅಪ್ರಸ್ತುತ ಎನ್ನುವಂತಿಲ್ಲ.
ಮೂಲಶ್ಲೋಕದಲ್ಲಿ `ನ ಕರ್ಮಕಾಲೇ' ಎಂಬಲ್ಲಿ `ಸ್ವಕರ್ಮಕಾಲೇ' ಎಂದು ಪಾಠಾಂತರವಿದೆ. ಇದರ ಪ್ರಕಾರ `ಮೃತ್ಯುಕಾಲದಲ್ಲಿ ಅಂದರೆ ಸ್ಪರ್ಧೆಯಿಂದ ಯಾವನಾದರೂ ಒಬ್ಬನನ್ನು ಕೊಲ್ಲಲು ಹೊರಟಿರುವ ಕಾಲದಲ್ಲಿ ಅಸ್ತ್ರಗಳು ಹೊಳೆಯುವುದಿಲ್ಲ' ಎಂದರ್ಥ. ನಿರ್ಣಯದಲ್ಲಿಯೂ ಭೂಮಿ ರಥಚಕ್ರವನ್ನು ಗ್ರಾಸ ಮಾಡುವ ಕಾಲದಲ್ಲಿ ದಿವ್ಯಾಸ್ತ್ರ ಹೊಳೆಯುವುದಿಲ್ಲ ಎಂದಿದ್ದಾರೆ. ಇದರಿಂದ ವಿರೋಧವಿಲ್ಲ. ಚಕ್ರಗ್ರಾಸಕಾಲವು ಮೃತ್ಯುಕಾಲ, ಆಗ ದಿವ್ಯಾಸ್ತ್ರ ಹೊಳೆಯುವುದಿಲ್ಲ ಎಂದಂತಾಯಿತು.
ಲಕ್ಷಾಲಂಕಾರದಲ್ಲಿ ಮಾತ್ರ ಮೃತ್ಯುಕಾಲದಲ್ಲಿ ಹೊಳೆಯುತ್ತದೆ ಎಂದಿದ್ದಾರೆ.
ಈ ವಿರೋಧವನ್ನು ಹೀಗೆ ಪರಿಹರಿಸಬಹುದು `ಮೃತ್ಯುಕಾಲ'ವೆಂದರೆ ಲಕ್ಷಾಲಂಕಾರ ಪ್ರಕಾರ ಕರ್ಣಾರ್ಜುನರ ದ್ವೈರಥಯುದ್ಧ ಕಾಲ ಅಪರಾಹ್ಣಕಾಲ ಎಂದಿಟ್ಟುಕೊಳ್ಳಬೇಕು. `ಅಪರಾಹ್ಣೇಽಪರಾಹ್ಣಸ್ಯ...ಸೋತ್ತೇಧಮಪತಚ್ಛಿರಃ' ಎಂದು `ಅಪರಾಹ್ಣ'ವನ್ನು ಮೃತ್ಯುಕಾಲವೆಂದು ಭಾರತ ಹೇಳಿದೆ. ಈ ಮೃತ್ಯುಕಾಲದಲ್ಲಿ ಕರ್ಣನಿಗೆ ಅಸ್ತ್ರಗಳೆಲ್ಲ ಹೊಳೆಯುವುದರಿಂದ ತನಗೆ ಭಯವಿಲ್ಲ ಎನ್ನುತ್ತಾನೆ ಕರ್ಣ. ಅಸ್ತ್ರಗಳು ಹೊಳೆಯುತ್ತಿದ್ದುದರಿಂದಲೇ ಅಸ್ತ್ರಗಳಿಂದ ಯುದ್ಧ ಮಾಡಿದ್ದಾನೆ. ಹೀಗಾಗಿ ಈ ಮೃತ್ಯುಕಾಲದಲ್ಲಿ, ಚಕ್ರಗ್ರಾಸದ ಪೂರ್ವದಲ್ಲಿ ಆಗ್ನೇಯಾದಿ ದಿವ್ಯಾಸ್ತ್ರ ಹೊಳೆಯುತ್ತದೆ. ಚಕ್ರಗ್ರಾಸಾನಂತರ ಮೃತ್ಯುಕಾಲದಲ್ಲಿ ಹೊಳೆಯುವುದಿಲ್ಲ. ಬ್ರಾಹ್ಮಣಶಾಪ ಹಾಗೇ ಇದೆ. ನಿರ್ಣಯದಲ್ಲಿ ಹೇಳಿದ್ದು ಕೂಡ `ರಥಚಕ್ರವನ್ನು ನೆಲ ನುಂಗಿತು, ದಿವ್ಯಾಸ್ತ್ರಗಳು ಮರೆತು ಹೋದವು' ಎಂದು.
ಯೋಽಯಂ ಶಲ್ಯ ಭರತೇಷೂಪಪನ್ನಃ
ಪ್ರಕರ್ಷಪಃ ಸರ್ವಹರೋಽತಿಭೀಮಃ |
ಸೋಽಯಂ ಮನ್ಯೇ ಕ್ಷತ್ರಿಯಾಣಾಂ ಪ್ರವೀರಾನ್
ಪ್ರತಾಪಿತಾ ಬಲವಾನ್ ವೈ ವಿಮರ್ದಃ ॥15॥
ಗೊಂದಲಮಯವಾದ ಮಹಾಯುದ್ಧ ಕೌರವರಲ್ಲಿ ಈಗ ಪ್ರಾಪ್ತವಾಗಿದೆ. ಅದು ಮಹಾವಿನಾಶಕಾರಿ. ಸರ್ವಕ್ಷತ್ರಿಯರನ್ನೂ ನಾಶ ಮಾಡುತ್ತದೆ. ಭೀಕರವಾಗಿದೆ. ಅದು ಕ್ಷತ್ರಿಯವೀರರೆಲ್ಲರನ್ನೂ ಕೊಲ್ಲುತ್ತದೆ ಎಂದೂ ನನಗೆ ಅನಿಸಿದೆ. ಅದು ಬಲಿಷ್ಠವಾದ ಯುದ್ಧ.
ಶಲ್ಯೋಗ್ರಧನ್ವಾನಮಹಂ ವರಿಷ್ಠಂ
ತರಸ್ವಿನಂ ಭೀಮಮಸಹ್ಯವೀರ್ಯಮ್ |

ಸತ್ಯಪ್ರತಿಜ್ಞಂ ಯುಧಿ ಪಾಂಡವೇಯಂ
ಧನಂಜಯಂ ಮೃತ್ಯುಮುಖಂ ನಯಿಷ್ಯೇ ॥16॥
ಶಲ್ಯನೆ, ಧನಂಜಯನು ಯದ್ಯಪಿ ಭಯಂಕರ ಧನುರ್ಧಾರಿ. ಧನುರ್ಧಾರಿ ಗಳಲ್ಲಿ ಶ್ರೇಷ್ಠ. ವೇಗ ಉಳ್ಳವನು, ಶತ್ರುಗಳಿಗೆ ಭಯಂಕರ. ಅವನ ಪರಾಕ್ರಮ ಇದಿರಿಸಲಾಗದುದು. ಅವನ ಪ್ರತಿಜ್ಞೆ ಸತ್ಯವೇ ಆಗುವುದು. ಆದರೆ ಅಂಥ ಪಾಂಡವೇಯ ಧನಂಜಯನನ್ನು ನಾನು ಈ ಯುದ್ಧದಲ್ಲಿ ಮೃತ್ಯುವಿನ ಬಾಯಿಗೆ ತಳ್ಳಲಿದ್ದೇನೆ.
ಅಸ್ತ್ರಂ ತತೋಽನ್ಯತ್ ಪ್ರತಿಪನ್ನಮದ್ಯ
ಯೇನ ಕ್ಷೇಪ್ಸ್ಯೇ ಸಮರೇ ಶತ್ರುಪೂಗಾನ್ |
ಪ್ರತಾಪಿನಂ ಬಲವಂತಂ ಕೃತಾಸ್ತ್ರಂ
ತಮುಗ್ರಧನ್ವಾನಮಮಿತೌಜಸಂ ಚ ॥17॥
ಬ್ರಹ್ಮಾಸ್ತ್ರ ಒಂದು ಹೊರತು ಬೇರೆ ಎಲ್ಲ ಅಸ್ತ್ರ ನನಗೆ ಹೊಳೆಯುತ್ತಿದೆ. ಅದರಿಂದಲೆ ನಾನು ಯುದ್ಧದಲ್ಲಿ ಎಲ್ಲ ಶತ್ರುಸಮೂಹಗಳನ್ನು ದೂರಮಾಡುತ್ತೇನೆ. ಹಾಗೇ ಪ್ರತಾಪಶಾಲಿ ಬಲಿಷ್ಠ ಅಸ್ತ್ರವೇತ್ತ ಉಗ್ರಧನುರ್ಧಾರಿಯಾದ ಅಮಿತ ಪರಾಕ್ರಮಿಯಾದ ಅರ್ಜುನನನ್ನು ಪರಾಭವಗೊಳಿಸುವೆ.
ಕ್ರೂರಂ ಶೂರಂ ರೌದ್ರಮಮಿತ್ರಸಾಹಂ
ಧನಂಜಯಂ ಸಂಯುಗೇಽಹಂ ಹನಿಷ್ಯೇ ॥18॥
ಆತ ಕ್ರೂರ, ಶೂರ, ರೌದ್ರ, ಶತ್ರುನಾಶಕ, ಇಂಥ ಧನಂಜಯನನ್ನು ಸಮರದಲ್ಲಿ ನಾನು ಕೊಲ್ಲುವೆ.
ಅಪಾಂಪತಿರ್ವೇಗವಾನಪ್ರಮೇಯೋ
ನಿಮಜ್ಜಯಿಷ್ಯನ್ ಬಹುಲಾಃ ಪ್ರಜಾ ಇವ |
ಮಹಾರವಂ ಯಃ ಕುರುತೇ ಸಮುದ್ರೋ
ವೇಲೇವ ತಂ ವಾರಯಾಮ್ಯಪ್ರಮೇಯಮ್ ॥19॥
ಸಮುದ್ರರಾಜ ವೇಗವುಳ್ಳವನು, ಅವನಾಚೆ ದಡವನ್ನು ತಿಳಿಯಲಾಗದು. ಬಹಳ ಜೀವಿಗಳನ್ನು ಮುಳುಗಿಸುತ್ತಾನೆ. ಮಹಾಗರ್ಜನ ಮಾಡುತ್ತಾನೆ. ಅರ್ಜುನ ಅಂಥವನೆ. ಆ ಸಮುದ್ರವನ್ನು ಕೂಡ ಈಚೆ ದಡ ನಿಯಂತ್ರಿಸುತ್ತದೆ. ಹಾಗೇ ಅಪ್ರಮೇಯನಾದ ಅರ್ಜುನನನ್ನು ನಾನು ತಡೆಯುತ್ತೇನೆ.
ಪ್ರಮುಂಚಂತಂ ಬಾಣಸಂಘಾನಮೇಯಾನ್
ಮರ್ಮಚ್ಛಿದೋ ವೀರಹಣಃ ಸಪತ್ರಾನ್ |
ಕುಂತೀಪುತ್ರಂ ಪ್ರತಿಯೋತ್ಸ್ಯಾಮಿ ಯುದ್ಧೇ
ಜ್ಯಾಂ ಕರ್ಷತಾಮುತ್ತಮಂ ಮರ್ತ್ಯಲೋಕೇ ॥20॥
ಬಿಲ್ಲಿನ ಹೆದೆಯನ್ನು ಸೆಳೆಯುವವರಲ್ಲಿ ಮನುಷ್ಯಲೋಕದಲ್ಲಿ ಅರ್ಜುನನೇ ಉತ್ತಮ. ಮರ್ಮಭೇದಕವಾದ ಪುಕ್ಕಗಳಿಂದ ಯುಕ್ತವಾಗಿದ್ದು ವೀರಯೋಧರನ್ನು ನಾಶಪಡಿಸುವ ಬಾಣಸಮೂಹಗಳನ್ನು ಲೆಕ್ಕವಿಲ್ಲದಷ್ಟು ಎಸೆಯುವವನು ಅರ್ಜುನನೆ. ಅವನನ್ನು ನಾನು ಯುದ್ಧದಲ್ಲಿ ಇಂದು ಇದಿರಿಸುವೆ.
ಏವಂ ಬಲೇನಾತಿಬಲಂ ಮಹಾಸ್ತ್ರಂ
ಸಮುದ್ರಕಲ್ಪಂ ಸುದುರಾಪಮುಗ್ರಮ್ |
ಶರೌಘಿಣಂ ಪಾರ್ಥಿವಾನ್ ಮಜ್ಜಯಂತಂ
ವೇಲೇವ ಪಾರ್ಥಮಿಷುಭಿರ್ವಾರಯಿಷ್ಯೇ ॥21॥
ಬಲದಿಂದ ಸಮುದ್ರದಂತೆ ಅರ್ಜುನ. ಅತಿ ಬಲಶಾಲಿ. ಮಹಾಅಸ್ತ್ರಉಳ್ಳವನು. ಅವನ ಬಳಿಗೆ ಹೋಗುವುದು ಬಲುಕಷ್ಟ. ಭಯಂಕರ ಆತ. ಬಾಣಗಳ ಪ್ರವಾಹದಲ್ಲಿ ಕ್ಷತ್ರಿಯಯೋಧರನ್ನು ಮುಳುಗಿಸಿ ಬಿಡುತ್ತಾನೆ. ಆದರದೇ ಸಮುದ್ರವನ್ನು ತೀರವು ತಡೆದು ನಿಲ್ಲಿಸುವಂತೆ ನಾನೂ ಬಾಣಗಳಿಂದ ಅರ್ಜುನನನ್ನು ತಡೆದುಬಿಡುತ್ತೇನೆ.
ಅದ್ಯಾಹವೇ ಯಸ್ಯ ನ ತುಲ್ಯಮನ್ಯಂ
ಮನ್ಯೇ ಮನುಷ್ಯಂ ಧನುರಾದದಾನಮ್ |
ಸರ್ವಾಮಿಮಾಂ ಯಃ ಪೃಥಿವೀಂ ಸಹೇತ
ತಥಾಪಿ ತೇನಾದ್ಯ ರಣೇ ಸಮೇಷ್ಯೇ ॥22॥
ಯುದ್ಧದಲ್ಲಿ ಅರ್ಜುನನಿಗೆ ಸಮನಾಗಿ ಧನುಸ್ಸನ್ನು ಎತ್ತುವ ಇನ್ನೊಬ್ಬ ಮನುಷ್ಯನನ್ನು ನಾ ಕಾಣೆ. ಈ ಇಡೀ ಪೃಥಿವಿಯೆ ಇದಿರಿಸಿ ನಿಂತರೂ ಅವನು ಸಹಿಸಿಕೊಳ್ಳಬಲ್ಲ. ಆದರೂ ನಾನು ರಣದಲ್ಲಿ ಅವನನ್ನು ಇದಿರಿಸಬಲ್ಲೆ.
ಕೃತೀ ಕೃತಾಸೊತ್ರೀ ದೃಢಹಸ್ತಯೋಧೀ
ದಿವ್ಯಾಸ್ತ್ರವಿತ್ ಶ್ವೇತಹಯಃ ಪ್ರಮಾಥೀ |
ಸುರಾಸುರಾನ್ ಯುಧಿ ವೈ ಯೋ ಜಯೇತ
ತೇನಾದ್ಯ ಮೇ ಪಶ್ಯ ಯುದ್ಧಂ ಸುಘೋರಮ್ ॥23॥
ಅವನು ಯುದ್ಧವಿದ್ಯೆಯಲ್ಲಿ ನುರಿತವ. ಅಸ್ತ್ರಗಳೆಲ್ಲ ಅವನಿಗೆ ಗೊತ್ತು. ಅವನು ದೃಢವಾದ ಹಸ್ತಗಳಿಂದ ಯುದ್ಧ ಮಾಡುವವನು. ದಿವ್ಯಾಸ್ತ್ರಜ್ಞಾನಿ. ಬಿಳಿಕುದುರೆ ಗಳುಳ್ಳವನು. ಶತ್ರುನಾಶ ಮಾಡುತ್ತಾನೆ. ಸುರಅಸುರರನ್ನೂ ಕೂಡ ಯುದ್ಧದಲ್ಲಿ ಗೆಲ್ಲುತ್ತಾನೆ. ಶಲ್ಯ ನೋಡು, ಅವನೊಂದಿಗೆ ನಾನು ಮಾಡುವ ಬಲುಘೋರವಾದ ಯುದ್ಧವನ್ನು.
ಅಭೀಮಾನೀ ಪಾಂಡವೋ ಯುದ್ಧಕಾಮೋ

ಹ್ಯಮಾನುಷೈರಸ್ಯತಿ ಮಾಂ ಮಹಾಸ್ತ್ರೈಃ |
ತಸ್ಯಾಸ್ತ್ರಮಸ್ತ್ರೈರಭಿಭೂಯ ಸಂಖ್ಯೇ
ಬಾಣೋತ್ತಮೈಃ ಪಾತಯಿಷ್ಯಾಮಿ ಪಾರ್ಥಮ್ ॥24॥
ಭಯವಿಲ್ಲದವನು ಪಾರ್ಥ ಅಭಿಮಾನಿ, ಯುದ್ಧವನ್ನು ಮಾಡುವ ಚಟ ಉಳ್ಳವನು. ಅಮಾನುಷವಾದ ದಿವ್ಯ ಅಸ್ತ್ರಗಳಿಂದ ನನ್ನನ್ನು ಹೊಡೆಯುತ್ತಾನೆ. ನಾನು ಯುದ್ಧದಲ್ಲಿ ಅವನ ಅಸ್ತ್ರಗಳನ್ನು ಅಸ್ತ್ರಗಳಿಂದ ಪರಾಭವಗೊಳಿಸಿ ಉತ್ತಮ ಬಾಣಗಳಿಂದ ಅವನನ್ನು ಕೆಡಹುತ್ತೇನೆ.
ಸಹಸ್ರರಶ್ಮಿಪ್ರತಿಮಂ ಜ್ವಲಂತಂ
ದಿಶಶ್ಚ ಸರ್ವಾಃ ಪ್ರತಪಂತಮುಗ್ರಮ್ |
ತಮೋನುದಂ ಮೇಘ ಇವಾತಿಮಾತ್ರಂ
ಧನಂಜಯಂ ಛಾದಯಿಷ್ಯಾಮಿ ಬಾಣೈಃ ॥25॥
ಧನಂಜಯ ಸೂರ್ಯನಂತೆ ಜ್ವಲಿಸುತ್ತಾನೆ. ಎಲ್ಲ ದಿಕ್ಕುಗಳನ್ನೂ ಭೀಕರವಾಗಿ ಸುಡುತ್ತಾನೆ. ತಮಸ್ಸನ್ನು ಓಡಿಸುತ್ತಾನೆ. ಆದರೂ ಸೂರ್ಯನನ್ನು ಮೋಡವು ಮರೆಮಾಡುವಂತೆ ನಾನು ಧನಂಜಯನನ್ನು ಬಾಣಗಳಿಂದ ಮರೆಮಾಡುತ್ತೇನೆ.
ವೈಶ್ವಾನರಂ ಧೂಮಕೇತುಂ ಜ್ವಲಂತಂ
ತೇಜಸ್ವಿನಂ ನರವೀರಾನ್ ದಹಂತಮ್ |
ಪರ್ಜನ್ಯಭೂತಃ ಶರವರ್ಷೈರ್ಯಥಾಽಗ್ನಿಂ
ತಥಾ ಪಾರ್ಥಂ ಶಮಯಿಷ್ಯಾಮಿ ಯುದ್ಧೇ ॥26॥
ಪಾರ್ಥ ಹೊಗೆ ಉಗುಳುವ ಬೆಂಕಿಯಂತೆ ಜ್ವಲಿಸುತ್ತಾನೆ. ತೇಜಸ್ವಿ, ಪದಾತಿ ವೀರರನ್ನು ಸುಡುತ್ತಾನೆ. ಆದರೂ ನಾನು ಯುದ್ಧದಲ್ಲಿ ಮೋಡದಂತೆ ಬಾಣಗಳ ಮಳೆಗರೆದು ಅಗ್ನಿಯಂಥ ಪಾರ್ಥನ ಪರಾಕ್ರಮವನ್ನು ಆರಿಸುತ್ತೇನೆ.
ಆಶೀವಿಷಂ ದೃಷ್ಟಿಹಣಂ ಸುಘೋರಂ
ಸುತೀಕ್ಷ್ಣದಂಷ್ಟ್ರಂ ಜ್ವಲನಪ್ರಭಾವಮ್ |
ಕ್ರೋಧಾತ್ ಪ್ರದೀಪ್ತಾನಲವದ್ ದಹಂತಂ
ಕುಂತೀಪುತ್ರಂ ಶಮಯಿಷ್ಯಾಮಿ ಭಲ್ಲೈಃ ॥27॥
ದೃಷ್ಟಿಯಿಂದಲೆ ಕೊಲ್ಲುವ ಮಹಾ ವಿಷಸರ್ಪ ಬಲು ಘೋರ. ತೀಕ್ಷ್ಣವಾದ ಕೋರೆದಾಡೆ ಉಳ್ಳದ್ದು. ಬೆಂಕಿಯಂತೆ ಸುಡುವ ಶಕ್ತಿಯುಳ್ಳದ್ದು. ಕ್ರೋಧದಿಂದ ಉರಿವ ಬೆಂಕಿಯಂತೆ ಸುಡುವುದು. ಹಾಗೇ ಇರುವ ಅರ್ಜುನನನ್ನು ಬಾಣಗಳಿಂದ ತಣ್ಣಗಾಗಿಸುತ್ತೇನೆ.
ಪ್ರವಾಹಿಣಂ ಬಲವಂತಂ ಮಹೌಜಸಂ
ಪ್ರಭಂಜನಂ ಮಾತರಿಶ್ವಾನಮುಗ್ರಮ್ |
ಯುದ್ಧೇ ಸಹಿಷ್ಯೇ ಹಿಮವಾನಿವಾಚಲೋ
ಧನಂಜಯಂ ಕ್ರುದ್ಧಮಮೃಷ್ಯಮಾಣಮ್ ॥28॥
ಬಲವಾಗಿ ಗಾಳಿಯ ಪ್ರವಾಹ ಹರಿಸುವವನು ಮಹಾಪರಾಕ್ರಮಿ. ಎಲ್ಲವನ್ನೂ ಮುರಿಯುವವನು ಭಯಂಕರ ಚಂಡಮಾರುತ. ಹಾಗೇ ಕ್ರುದ್ಧನಾದರೆ ತಡೆಯಲಾಗದವನಾಗಿರುವ ಧನಂಜಯನನ್ನು ನಾನು ಹಿಮಾಲಯ ಬೆಟ್ಟದಂತೆ ಸಹಿಸಿಕೊಳ್ಳಬಲ್ಲೆ.
ವಿಶಾರದಂ ರಥಮಾರ್ಗೇಷು ಶಕ್ತಂ
ಧುರ್ಯಂ ನಿತ್ಯಂ ಸಮರೇಷು ಪ್ರವೀರಮ್ |
ಲೋಕೇ ವರಂ ಸರ್ವಧನುರ್ಧರಾಣಾಂ
ಧನಂಜಯಂ ಸಂಯುಗೇಽಹಂ ಹನಿಷ್ಯೇ ॥29॥
ರಣರಂಗದಲ್ಲಿ ರಥಮಾರ್ಗಗಳನ್ನು ಬಲ್ಲವನು ಸಮರ್ಥ. ಯುದ್ಧಗಳಲ್ಲಿ ಸದಾ ಮುಂಚೂಣಿಯಲ್ಲಿರುವ ಮಹಾನ್ ವೀರ. ಲೋಕದಲ್ಲಿ ಎಲ್ಲ ಧನುರ್ಧಾರಿಗಳಲ್ಲಿ ಉತ್ತಮನೆನಿಸಿದವನು ಧನಂಜಯ. ಅವನನ್ನು ನಾನು ರಣದಲ್ಲಿ ವಧಿಸುತ್ತೇನೆ.
ಯಃ ಸರ್ವಭೂತಾನಿ ಸದೈವತಾನಿ
ಪ್ರಸ್ಥೇಽಜಯತ್ ಖಾಂಡವೇ ಸವ್ಯಸಾಚೀ |
ಕೋ ಜೀವಿತಂ ರಕ್ಷಮಾಣೋ ಹಿ ತೇನ
ಯುಯುತ್ಸತೇಽಸ್ತ್ರೈರ್ಮಾನುಷೋ ಮಾಮೃತೇಽನ್ಯಃ ॥30॥
ಎಲ್ಲ ಭೂತರಾಕ್ಷಸರನ್ನೂ ದೇವತೆಗಳನ್ನೂ ಸವ್ಯಸಾಚಿ ಖಾಂಡವಪ್ರಸ್ಥದಲ್ಲಿ ಗೆದ್ದಿದ್ದಾನೆ. ತನ್ನ ಪ್ರಾಣರಕ್ಷಣೆ ಮಾಡಿಕೊಳ್ಳುವ ಮಾನವನು ಯಾವನು ತಾನೆ ನನ್ನ ಹೊರತು ಬೇರೆಯವನು ಅವನೊಂದಿಗೆ ಅಸ್ತ್ರಗಳಿಂದ ಯುದ್ಧ ಮಾಡಲು ಬಯಸುತ್ತಾನೆ?
ಮಾನೀ ಕೃತಾಸ್ತ್ರಃ ಕೃತಹಸ್ತಯೋಧೀ
ದಿವ್ಯಾಸ್ತ್ರವಿಚ್ಛ್ವೇತಹಯಃ ಪ್ರಮಾಥೀ |
ತಸ್ಯಾಹಮದ್ಯಾತಿರಥಸ್ಯ ಕಾಯಾತ್
ಶಿರೋ ಹರಿಷ್ಯಾಮಿ ಶಿತೈಃ ಪೃಷತ್ಕೈಃ ॥31॥
ಯುದ್ಧವಿದ್ಯೆಯಲ್ಲಿ ನುರಿತವನು. ಅಸ್ತ್ರಗಳನ್ನೆಲ್ಲ ತಿಳಿದವನು. ದೃಢಹಸ್ತಗಳಿಂದ ಯುದ್ಧಮಾಡುವವನು. ದಿವ್ಯಾಸ್ತ್ರಗಳನ್ನು ಬಲ್ಲವನು, ಬಿಳಿ ಕುದುರೆಗಳುಳ್ಳವನು ಶತ್ರುನಾಶಕ ಅರ್ಜುನ. ಅತಿರಥನಾದ ಅವನ ಮೈಯಿಂದ ತೀಕ್ಷ್ಣಬಾಣಗಳಿಂದ ತಲೆಯನ್ನೆ ಹಾರಿಸುತ್ತೇನೆ.
ಯೋತ್ಸ್ಯಾಮ್ಯೇನಂ ಶಲ್ಯ ಧನಂಜಯಂ ವೈ

ಮೃತ್ಯುಂ ಪುರಸ್ಕೃತ್ಯ ರಣೇ ಜಯಂ ವಾ |
ಅನ್ಯೋ ಹಿ ನ ಹ್ಯೇಕರಥೇನ ಮರ್ತ್ಯೋ
ಯುದ್ಧ್ಯೇತ ಯಃ ಪಾಂಡವಂ ಮೃತ್ಯುಕಲ್ಪಮ್ ॥32॥
ಮಾಡು ಇಲ್ಲವೆ ಮಡಿ ಎಂಬ ಧ್ಯೇಯವನ್ನು ಮುಂದಿಟ್ಟುಕೊಂಡು ರಣದಲ್ಲಿ ಈ ಧನಂಜಯನೊಡನೆ ಹೋರಾಡುವೆನು. ಶಲ್ಯ, ನನ್ನೊಬ್ಬನ ಹೊರತು ಇನ್ನೊಬ್ಬ ಮನುಷ್ಯ ಯಾವ ಮೃತ್ಯುವಿನಂತೆ ಕಾಣುವ ಅರ್ಜುನನೊಡನೆ ಒಂದೇ ರಥದಿಂದ ಯುದ್ಧ ಮಾಡಬಲ್ಲ?
ತಸ್ಯಾಹವೇ ಪೌರುಷಂ ಪಾಂಡವಸ್ಯ
ಬ್ರೂಯಾಂ ಪೃಷ್ಟಃ ಸಮಿತೌ ಕ್ಷತ್ರಿಯಾಣಾಮ್ |
ಕಿಂ ತ್ವಂ ಮೂರ್ಖಃ ಪ್ರಭಷನ್ ಮೂಢಚೇತಾ
ಆಖ್ಯಾಸಿ ಮೇ ಪೌರುಷಂ ಫಲ್ಗುನಸ್ಯ ॥33॥
ಆ ಅರ್ಜುನನು ಯುದ್ಧದಲ್ಲಿ ತೋರುವ ಪೌರುಷವನ್ನು, ನನ್ನಲ್ಲಿ ಕೇಳಿದರೆ ಕ್ಷತ್ರಿಯರ ಸಮಾವೇಶದ ಮಧ್ಯದಲ್ಲಿ ನಾನು ಹೇಳಬಲ್ಲೆ. ಮೂಢಬುದ್ಧಿಯವನು ಏನೇನೋ ಬೊಗಳುವವನು ಮೂರ್ಖ, ನೀನು ಅರ್ಜುನನ ಪೌರುಷವನ್ನು ನನಗೆ ಏನು ಹೇಳಬಲ್ಲೆ?
ಅತ್ಯಪ್ರಿಯೋ ಯಃ ಪುರುಷೋ ನಿಷ್ಠುರೋ ಹಿ
ಕ್ಷುದ್ರಃ ಕ್ಷೇಪ್ತಾ ಕ್ಷಮಿಣಶ್ಚಾಕ್ಷಮಾವಾನ್ |
ಹನ್ಯಾಮಹಂ ತಾದೃಶಾನಾಂ ಶತಾನಿ
ಕ್ಷಮಾಮ್ಯಹಂ ಕ್ಷಮಿಣಾಂ ಕಾಲ ಏಷಃ ॥34॥
ಅತಿ ಅಪ್ರಿಯನಾದ ಜನ ನಿಷ್ಠುರ ಕ್ಷುದ್ರನಿರುತ್ತಾನೆ. ಕ್ಷಮಾರಹಿತನಾದ ಅವನು ಕ್ಷಮಾಶೀಲರನ್ನು ಆಕ್ಷೇಪಿಸುತ್ತಾನೆ. ಅಂಥ ನಿನ್ನಂಥ ನೂರು ಜನರನ್ನು ನಾನು
ವಧಿಸಬಲ್ಲೆ. ಆದರೂ ನಾನು ಕ್ಷಮಿಸುತ್ತಿದ್ದೇನೆ, ಏಕೆಂದರೆ ಇದು ಕ್ಷಮಾಶೀಲರ ಕಾಲ.
ಅವೋಚಸ್ತ್ವಂ ಪಾಂಡವಾರ್ಥೇಽ ಪ್ರಿಯಾಣಿ
ಪ್ರಧರ್ಷಯನ್ಮಾಂ ಮೂಢವತ್ಪಾಪಕರ್ಮನ್ |
ಮಯ್ಯಾರ್ಜವೇ ಜಿಹ್ಮಗತಿರ್ಹತಸ್ತ್ವಂ
ಮಿತ್ರದ್ರೋಹೀ ಸಾಪ್ತಪದಂ ಹಿ ಮಿತ್ರಮ್ ॥35॥
ಪಾಪಕರ್ಮ ಮಾಡುವವನೇ, ನೀನು ಪಾಂಡವರಿಗಾಗಿ ಮೂಢನಂತೆ ನನ್ನನ್ನು ಕೆಣಕುತ್ತ ನನಗೆ ಅಪ್ರಿಯವಾದ ಮಾತುಗಳನ್ನಾಡಿರುವೆ. ನನ್ನಲ್ಲಿ ನಿಷ್ಕಪಟ ವರ್ತನೆ ಮಾಡಬೇಕಾಗಿರುವಾಗ ಕಪಟವರ್ತನೆ ತೋರುವುದರಿಂದ ನೀನು ಮಿತ್ರದ್ರೋಹಿ. ಏಳು ಹೆಜ್ಜೆ ಜೊತೆಗೆ ನಡೆದರೆ ಸಾಕು, ಅವನು ಮಿತ್ರನಾಗುತ್ತಾನೆ. ಮೈತ್ರಿ ಬೆಳೆಯುತ್ತದೆ ಎನ್ನುವುದು ಪ್ರಸಿದ್ಧ. ನೀನು ಅದಕ್ಕೆ ವ್ಯತಿರಿಕ್ತವಾಗಿ ನಡೆಯುತ್ತಿರುವೆ.
ಕಾಲಸ್ತ್ವಯಂ ಪ್ರತ್ಯುಪಯಾತಿ ದಾರುಣೋ
ದುರ್ಯೋಧನೋ ಯುದ್ಧಮುಪಾಗಮದ್ಯತ್ |
ತಸ್ಯಾರ್ಥಸಿದ್ಧಿಂ ತ್ವಭಿಕಾಂಕ್ಷಮಾಣ-
ಸ್ತ್ವಂ ಮನ್ಯಸೇ ಯತ್ರ ನೈಕಾಂತ್ಯಮಸ್ತಿ ॥36॥
ದಾರುಣವಾದ ಕಾಲ ಬರುತ್ತಿದೆ. ಏಕೆಂದರೆ ದುರ್ಯೋಧನ ಯುದ್ಧವನ್ನು ಕೈಗೊಂಡಿದ್ದಾನೆ. ಅವನ ಮನೋರಥ ಪೂರೈಸುವುದನ್ನು ನಾನು ಬಯಸಿದ್ದೇನೆ. ನೀನೂ ಬಯಸಿರುವಿ. ಆದರೆ ಅದರಲ್ಲಿ ನನಗೆ ದೃಢತೆ ಇಲ್ಲದಂತಾಗಿಸಲು  ಹೊರಟು, ನೀನು ಇಂಥ ಮಾತುಗಳನ್ನಾಡುತ್ತಿರುವೆ.
ತಥಾಪ್ಯಹಂ ಪಾಂಡವವಾಸುದೇವೌ
ಯೋತ್ಸ್ಯೇ ರಣೇ ಮದ್ವಿಧಸ್ಯೈಷ ಧರ್ಮಃ |
ನ ಪ್ರಾಕೃತಂ ಸಚತೇ ವೈ ಕದಾಚಿತ್
ಯಃ ಪ್ರತ್ಯುದೀಯಾತ್ ಕೃಷ್ಣಧನಂಜಯೌ ತೌ ॥37॥
ದಾರ್ಢ್ಯವಿಲ್ಲದಂತೆ ಮಾಡಲು ನೀನು ಯತ್ನಿಸಿದರೂ ನಾನು ಮಾತ್ರ ಕೃಷ್ಣಾರ್ಜುನರೊಡನೆ ಯುದ್ಧವನ್ನೇ ಮಾಡುವೆ. ನನ್ನಂಥವನಿಗೆ ಇದು ಧರ್ಮ. ಯಾವನು ಕೃಷ್ಣಾರ್ಜುನರನ್ನು ಇದಿರಿಸಲು ಹೊರಟಿರುವನೋ ಅವನು ಇಂಥ ಅಲ್ಪತ್ವವನ್ನು ಎಂದೂ ಪುರಸ್ಕರಿಸಬಾರದು.
ಮಿತ್ರಂ  ಮಿತ್ರೇ  ವೈ  ನಂದತೇಃ ಪ್ರೀಯತೇರ್ವಾ
ಸಂಹ್ಲಾದತೇರ್ಮಾನದ  ಮೋದತೇರ್ವಾ |
ದುರ್ಯೋಧನೇ ಸರ್ವಮಿದಂ ಮಮಾಸ್ತಿ
ತಚ್ಚಾಪಿ ಸರ್ವಂ ಮಮ ವೇತ್ತಿ ರಾಜಾ ॥38॥
`ಮಿದಿ ಸ್ನೇಹನೇ' ಧಾತುವಿಗೆ `ಅಮಿ ಚಿ ಮಿದಿ ಶಸಿಭ್ಯಃ ಕ್ತ್ರಃ' ಎಂದು ಉಣಾದಿ ಕ್ತ್ರಪ್ರತ್ಯಯ ಬಂದು `ಮಿತ್ರ' ಎಂದಾಗಿದೆ. ಧಾತ್ವರ್ಥವಾದ ಸ್ನೇಹವು ಮಿತ್ರನಲ್ಲಿ ಮಿತ್ರನಿಗೆ ನಾಲ್ಕು ಬಗೆ ಇರಬಹುದು. ಮಿತ್ರನ ಧರ್ಮಸಾಧನೆಯ ಕಾರ್ಯವನ್ನು ಕಂಡಾಗ ಮಿತ್ರನು `ಆನಂದ'ಪಡುತ್ತಾನೆ. ಅರ್ಥಸಾಧನಕಾರ್ಯವನ್ನು ಕಂಡಾಗ `ಪ್ರೀತಿ'ಪಡುತ್ತಾನೆ. ಕಾಮಭೋಗಕಾರ್ಯವನ್ನು ಕಂಡಾಗ `ಆಹ್ಲಾದ' ಪಡುತ್ತಾನೆ. ಮೋಕ್ಷಸಾಧನ ಕರ್ಮವನ್ನು ಕಂಡಾಗ `ಮುದ'ಪಡುತ್ತಾನೆ. ಇಂಥ ಸ್ನೇಹಿತನನ್ನೇ ನಿಜವಾಗಿ `ಮಿತ್ರ' ಎನ್ನಬೇಕು. ಮಾನದ, ನನ್ನ ಮಾನ ಕಳೆಯುತ್ತಿರುವ ಶಲ್ಯನೆ, ದುರ್ಯೋಧನನ ವಿಷಯದಲ್ಲಿ ನನಗೆ ನಾಲ್ಕು ಬಗೆಯ ಈ ಮೈತ್ರಿಗಳು ಇವೆ. ನನಗೆ ಅದೆಲ್ಲ

ಇರುವುದನ್ನು ರಾಜಾ ದುರ್ಯೋಧನ ತಿಳಿದುಕೊಂಡಿದ್ದಾನೆ.
ಇಲ್ಲಿ `ಸಂಹ್ಲಾದತೇರ್ಮಾನದ' ಎಂಬಲ್ಲಿ ಮೂಲಶ್ಲೋಕದಲ್ಲಿ `ಸಂತ್ರಾ- ಯತೇರ್ಮಿನುತೇಃ' ಎಂದು ಪ್ರಚಲಿತ ಪಾಠವಿದೆ. ಈ ಪಾಠ ಸ್ವರಸವಲ್ಲ. ಲಕ್ಷಾಲಂಕಾರದಲ್ಲಿ `ನಂದ ಪ್ರೀತಿ ಹ್ಲಾದ ಮೋದ ಶಬ್ದೈಃ' ಎಂದು `ಹ್ಲಾದ' ಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. `ಸಂಹ್ಲಾದತೇಃ' ಎಂದು ಮೂಲದಲ್ಲಿ ಪಾಠವಿದ್ದರೆ ಈ ವ್ಯಾಖ್ಯಾನ ಕೂಡುತ್ತದೆ. `ಮಿನುತೇಃ' ಎಂಬ ಪಾಠ ಪ್ರಕೃತಕ್ಕೆ ಬೇಕಾಗಿಲ್ಲ. `ಮಾನದ' ಎಂದು ಪಾಠಾಂತರವಿದೆ. ಅದನ್ನೂ ಸೇರಿಸಿ ಪಾಠಪರಿಷ್ಕಾರ ಮಾಡಿದ್ದೇವೆ.
ಶತ್ರುಃ ಸದಾ ಶಾತತೇ ಶಾಸತೇ ಚ
ಶೃಣಾತಿ ವಾ ಶಂಸತೇ ವಾಽಪಿ ಶಲ್ಯ |
ಉಪಸರ್ಗಾದ್ ಬಹುಧಾ ಸೀದತೇ ಚ
ಪ್ರಾಯೇಣ ಸರ್ವಂ ತ್ವಯಿ ತಚ್ಚ ಮಹ್ಯಮ್ ॥39॥
`ಶತ್ರು'ಎಂದರೆ ಹೀಗಿರುತ್ತಾನೆ, `ಶಾತತೇ' ಶಸ್ತ್ರದಿಂದ ಕೊಲ್ಲುತ್ತಾನೆ. `ಶಾಸತೇ' ನಿರಪರಾಧಿಗೆ ಶಿಕ್ಷೆ ಕೊಡುತ್ತಾನೆ. `ಶೃಣಾತಿ' ಬೆಂಕಿಯಲ್ಲಿ ಸುಡಿಸುತ್ತಾನೆ, `ಶಂಸತೇ' ಶತ್ರುಗಳನ್ನು ಸದಾ ಹೊಗಳುತ್ತಾನೆ. `ಉಪಸರ್ಗ'ದಿಂದ ಅಂದರೆ ಉಪದ್ರವದಿಂದ `ಶೀದತೇ' ವ್ಯಥೆ ಉಂಟುಮಾಡುತ್ತಾನೆ. ಶಲ್ಯ, ಪ್ರಾಯಃ ಈ ಎಲ್ಲ ರೀತಿಯ ಶತ್ರುತ್ವ ನನ್ನ ವಿಷಯದಲ್ಲಿ ನಿನಗೆ ಇದೆ.
ಸಕಾರ ಶಕಾರಗಳಿಗೆ ಐಕ್ಯವಿಟ್ಟುಕೊಂಡು `ಸೀದತೇ' ಎಂಬುದನ್ನು `ಶೀದತೇ' ಎಂದು ಇಟ್ಟುಕೊಳ್ಳಬೇಕು. `ಶೀದತೇ ಅನೇನ' ಶತ್ರುವಿನಿಂದಾಗಿ ವ್ಯಥೆಪಡುತ್ತಾನೆ ಎಂದರ್ಥ.
ದುರ್ಯೋಧನಾರ್ಥಂ ತವ ಚ ಪ್ರಿಯಾರ್ಥಂ
ಯಶೋರ್ಥಮಾತ್ಮಾರ್ಥಮಪೀಶ್ವರಾರ್ಥಮ್ |
ತಸ್ಮಾದಹಂ ಪಾಂಡವವಾಸುದೇವೌ
ಯೋತ್ಸ್ಯೇ ಯತ್ನಾತ್ ಕರ್ಮ ಚ ಪಶ್ಯ ಮೇಽದ್ಯ ॥40॥
ಅದರಿಂದ ನಾನು ದುರ್ಯೋಧನನಿಗಾಗಿ ನಿನ್ನ ಪ್ರೀತಿಗಾಗಿ ಕೀರ್ತಿಗಾಗಿ ಆತ್ಮಪ್ರೀತಿಗಾಗಿ ಈಶ್ವರಪ್ರೀತಿಗಾಗಿ ಕೃಷ್ಣಾರ್ಜುನರೊಡನೆ ಯುದ್ಧ ಮಾಡುವೆನು. ನನ್ನ ಯುದ್ಧವನ್ನು ಈಗ ನೀನು ನೋಡು.
ಶಲ್ಯಾದ್ಯಾಹಂ ಸಂಗತಃ ಪಾಂಡವೇನ
ಮುಚ್ಯೇಯಂ ಚೇಜ್ಜೀವಮಾನಃ ಕಥಂಚಿತ್ |
ಶಶ್ವನ್ಮೃತ್ಯೋಃ ಸ್ಯಾಮನಾಧೃಷ್ಯರೂಪೋ
ವ್ಯಕ್ತಂ ತಸ್ಮಾತ್ ಸಂಯುಗಾದ್ ವಿಪ್ರಮುಕ್ತಃ ॥41॥
ಶಲ್ಯ, ಇದಂತೂ ಸ್ಪಷ್ಟವಿದೆ. ಇಂದು ನಾನು ಅರ್ಜುನನೊಡನೆ ಯುದ್ಧಮಾಡಿ ಹೇಗಾದರೂ ಜೀವಂತವಾಗಿ ಮುಕ್ತನಾದೆನೆಂದರೆ ಯುದ್ಧದಿಂದ ಮುಕ್ತನಾದ್ದರಿಂದ ಎಂದಿಗೂ ಮೃತ್ಯುವಿಗೆ ನಾನು ಮಣಿಯದವನೇ ಆಗುವೆನು.
ಅಸ್ತ್ರಂ ಬ್ರಾಹ್ಮಂ ಮನಸಾ ಸಂಜಪನ್ ವೈ
ಯದಾಽಸ್ಯತೇ ಕ್ರೋಧಿತಃ ಸವ್ಯಸಾಚೀ |
ತದಾಪಿ ಮೇ ನೈವ ಮುಚ್ಯೇತ ಪಾರ್ಥೋ
ನ ಚೇತ್ಪತೇದ್ ವಿಷಮೇ ಮೇಽದ್ಯ ಚಕ್ರಮ್ ॥42॥
ಕೋಪಗೊಂಡ ಸವ್ಯಸಾಚಿ ಬ್ರಹ್ಮಾಸ್ತ್ರವನ್ನು ಮನಸಿನಿಂದ ಜಪಿಸಿ ನನ್ನ ಮೇಲೆ ಎಸೆದಾಗಲೂ ನನ್ನಿಂದ ಅರ್ಜುನ ಮುಕ್ತನಾಗಲಾರ, ಇದು, ಇಂದು ಈ ವಿಷಮ ಪರಿಸ್ಥಿತಿಯಲ್ಲಿ ನನ್ನ ರಥಚಕ್ರವು ಮುರಿದು ಬೀಳದಿದ್ದ ಪಕ್ಷದಲ್ಲಿ.
ಅಸಾತ್ತ್ರಾಣಿ ವಿದ್ಧ್ವಾ ಸಮರೇ ಗತಾನಿ
ಬ್ರಾಹ್ಮಾಣಿ ದಿವ್ಯಾನ್ಯಥ ಮಾನುಷಾಣಿ |
ಆಸಾದಯಿಷ್ಯಾಮ್ಯಹಮುಗ್ರವೀರ್ಯಂ
ನಾಗೋತ್ತಮಂ ನಾಗ ಇವ ಪ್ರಭಿನ್ನಃ ॥43॥
ಯುದ್ಧದಲ್ಲಿ ಬ್ರಹ್ಮಾಸ್ತ್ರ ದಿವ್ಯಾಸ್ತ್ರ ಮಾನುಷಾಸ್ತ್ರ ಮುಂತಾದ ಅಸ್ತ್ರಗಳನ್ನು ಉಗ್ರಪರಾಕ್ರಮಿಯಾದ ಅರ್ಜುನನ ಮೇಲೆ ಎಸೆದು, ಮದ್ದಾನೆಯನ್ನು ಮದ ಸುರಿಸುವ ಆನೆ ಪೀಡಿಸುವಂತೆ ಪೀಡಿಸುತ್ತೇನೆ.
ವೈವಸ್ವತಾದ್ ದಂಡಹಸ್ತಾದ್ ವರುಣಾದ್ ವಾಪಿ ಪಾಶಿನಃ |
ಸಗದಾದ್ ವಾ ಧನಪತೇಃ ಸವಜ್ರಾದ್ ವಾ ಸುರಾಧಿಪಾತ್ ॥44॥
ಅಥಾನ್ಯಸ್ಮಾದಪಿ ಸುರಾದಮಿತ್ರಾದಾತತಾಯಿನಃ |
ಇತಿ ಶಲ್ಯ ವಿಜಾನೀಹಿ ಯಥಾ ನಾಹಂ ಬಿಭೇಮ್ಯುತ ॥45॥
ದಂಡಪಾಣಿಯಾದ ಯಮನಿಂದ, ಪಾಶಹಸ್ತನಾದ ವರುಣನಿಂದ, ಗದೆ ಹಿಡಿದ ಕುಬೇರನಿಂದ, ವಜ್ರಪಾಣಿಯಾದ ಇಂದ್ರನಿಂದ ಮತ್ತು ಬೇರೆ ದೇವತೆಯಿಂದ ಅವನು ಶತ್ರುವಾಗಿ ಆಯುಧ ಹಿಡಿದುನಿಂತರೆ ನಾನು ಹೆದರುವುದಿಲ್ಲ ಎಂದು, ಶಲ್ಯ, ನೀನು ತಿಳಿದುಕೊ.
ತಸ್ಮಾನ್ನ ಮೇ ಭಯಂ ಪಾರ್ಥಾನ್ನಾಪಿ ಚೈವ ಜನಾರ್ದನಾತ್ |
ಸಹ ಯುದ್ಧಂ ಹಿ ಮೇ ತಾಭ್ಯಾಂ ಸಾಂಪರಾಯೇ ಭವಿಷ್ಯತಿ ॥46॥
ಅದರಿಂದ ನನಗೆ ಅರ್ಜುನನಿಂದಲೂ ಭಯವಿಲ್ಲ, ಕೃಷ್ಣನಿಂದಲೂ ಭಯವಿಲ್ಲ. ಅವರಿಬ್ಬರೊಡನೆ ನನಗೆ ರಣರಂಗದಲ್ಲಿ ಯುದ್ಧ ಅವಶ್ಯ ಉಂಟಾಗುವುದು.
ಕದಾಚಿದ್ ಬ್ರಾಹ್ಮಣಸ್ಯಾಥ ಹೋಮಧೇನೋರಹಂ ನೃಪ |
ಅಜಾನನ್ನಕ್ಷಿಪಂ ಬಾಣಂ ಘೋರರೂಪಂ ಭಯಾವಹಮ್ ॥47॥

ಒಮ್ಮೆ ನಾನು ಒಬ್ಬ ಬ್ರಾಹ್ಮಣನ ಹೋಮಧೇನುವಿನ ಮೇಲೆ ತಿಳಿಯದೆ ಘೋರವಾದ ಭಯಂಕರವಾದ ಬಾಣವನ್ನು ಎಸೆದೆ.
ಹೋಮಧೇನ್ವಾ ವತ್ಸಮಸ್ಯ ಪ್ರಮತ್ತ ಇಷುಣಾಽಹನಮ್ |
ಚರನ್ ವೈ ವಿಜನೇ ಶಲ್ಯ ತತೋಽನು ವ್ಯಾಜಹಾರ ಸಃ ॥48॥
ನಿರ್ಜನ ಪ್ರದೇಶದಲ್ಲಿ ಶಸಶತ್ರಭ್ಯಾಸ ಮಾಡುತ್ತ ನಾನು ತಿಳಿಯದೆ ಹೋಮ ಧೇನುವಿನ ಕರುವನ್ನು ಕೊಂದಾಗ ಬ್ರಾಹ್ಮಣ ನುಡಿದ.
ಯಸ್ಮಾದ್ ವತ್ಸಸ್ತ್ವಯಾ ಚಾತ್ರ ಹೋಮಧೇನ್ವಾ ಹತೋ ನೃಪ |
ತಸ್ಮಾತ್ ತ್ವಮಪಿ ರಾಧೇಯ ವಾಕ್ಶಲ್ಯಂ ಮಹದಾಪ್ನುಹಿ ॥49॥
ರಾಜನೆ, ನೀನು ಹೋಮಧೇನುವಿನ ಕರುವನ್ನು ಬಾಣದಿಂದ ಕೊಂದಿದ್ದರಿಂದ ಶಾಪರೂಪ ವಾಗ್ಬಾಣವನ್ನು ನೀನೂ ಹೊಂದು.
ಶ್ವಭ್ರೇ ತೇ ಪತತಾಂ ಚಕ್ರಮಿತಿ ಮಾಂ ಬ್ರಾಹ್ಮಣೋಽಬ್ರವೀತ್ |
ಯುಧ್ಯಮಾನಸ್ಯ ಸಂಗ್ರಾಮೇ ಪ್ರಾಪ್ತಸ್ಯೈಕಾಯನಂ ಭಯಮ್ ॥50॥
ರಣದಲ್ಲಿ ಯುದ್ಧ ಮಾಡುತ್ತಿರುವಾಗ, ಪರಿಹರಿಸಲಾಗದ ಆಪತ್ತು ಬಂದಿರು ವಾಗ `ನಿನ್ನ ರಥಚಕ್ರವು ಹಳ್ಳದಲ್ಲಿ ಹೂತುಹೋಗಲಿ' ಎಂದು ಬ್ರಾಹ್ಮಣ ಶಪಿಸಿದ.
ತಸ್ಮಾದ್ ಬಿಭೇಮಿ ಬಲವದ್ ಬ್ರಾಹ್ಮಣವ್ಯಾಹೃತಾದಹಮ್ |
ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ॥51॥
ಅದರಿಂದ ಬ್ರಾಹ್ಮಣಶಾಪಕ್ಕೆ ನಾನು ಬಹಳ ಭಯಪಡುತ್ತೇನೆ. ಈ ಬ್ರಾಹ್ಮಣರು ಸೋಮರಾಜನ ಪ್ರಜೆಗಳು, ಸುಖವನ್ನಾಗಲಿ ದುಃಖವನ್ನಾಗಲಿ ಕೊಡಲು ಶಕ್ತರು, ಶಾಪಾನುಗ್ರಹಶಕ್ತರು.
ಶ್ವಭ್ರೇ ತೇ ಪತಿತಾ ಚಕ್ರಂ ಯುಧ್ಯಮಾನಸ್ಯ ಶತ್ರುಣಾ |
ಪ್ರಾಪ್ತ ಏಕಾಯನೇ ಕಾಲೇ ಮೃತ್ಯುಸಾಧಾರಣೇ ತ್ವಯಿ ॥52॥
ನೀನು ಶತ್ರುವಿನೊಡನೆ ಯುದ್ಧಮಾಡುವಾಗ ಪರಿಹರಿಸಲಾಗದ ಆಪತ್ತಿನ ಕಾಲದಲ್ಲಿ, ಮೃತ್ಯುವೂ ಬರಬಹುದಾದ ಕಾಲದಲ್ಲಿ ನಿನ್ನ ರಥಚಕ್ರ ಹಳ್ಳದಲ್ಲಿ ಬೀಳುತ್ತದೆ.
ಸ್ಪರ್ಧಸೇ ಯೇನ ಸಂಗ್ರಾಮೇ ಯದರ್ಥಂ ಘಟಸೇಽನಿಶಮ್ |
ತತ ಏವ ಧ್ರುವಂ ಮೃತ್ಯುಂ ಸೂತ ಪ್ರಾಪ್ಸ್ಯಸಿ ಸಂಯುಗೇ ॥53॥
ನೀನು ಯಾವನೊಡನೆ ಯುದ್ಧದಲ್ಲಿ ಸ್ಪರ್ಧಿಸುವೆಯೋ ಯಾವನಿಗೆ ನೀನು ನಿತ್ಯ ನಿಂದೆ ಮಾಡುತ್ತಿರುವಿಯೋ ಅವನಿಂದಲೇ ನೀನು ನಿಶ್ಚಯವಾಗಿ ಮರಣ ಹೊಂದುವೆ' ಎಂದು ಬ್ರಾಹ್ಮಣ ನನಗೆ ಶಪಿಸಿದ.
ಅಹಂ ಪ್ರಸಾದಯಾಂಚಕ್ರೇ ಬ್ರಾಹ್ಮಣಂ ಶಂಸಿತವ್ರತಮ್ ॥54॥
ನಾನು ಒಳ್ಳೆಯ ವ್ರತನಿಷ್ಠನಾದ ಆ ಬ್ರಾಹ್ಮಣನನ್ನು ಒಲಿಸಿಕೊಳ್ಳಲು ಯತ್ನಿಸಿದೆ.
ಗವಾಂ ದಶಶತಂ ವಿತ್ತಂ ಬಲೀವರ್ದಾಂಶ್ಚ ಷಟ್‌ಶತಮ್ |
ಪ್ರಚ್ಛನ್ನಂ ಕಾಂಚನೈಃ ಕಾಮಂ ಬ್ರಾಹ್ಮಣಾರ್ಥಮಹಂ ತದಾ ॥55॥
ಬಂಗಾರದಿಂದ ಮುಚ್ಚಿದ ಸಾವಿರ ಗೋಧನವನ್ನು, ಆರುನೂರು ಎತ್ತುಗಳನ್ನು ಬ್ರಾಹ್ಮಣನಿಗೆ ಕೊಡುವೆನೆಂದೆ.
ದಾಸೀಶತಂ ನಿಷ್ಕಕಂಠಂ ಶತಮಶ್ವತರೀರಥಾನ್ |
ಕನ್ಯಾನಾಂ ನಿಷ್ಕಕಂಠೀನಾಂ ಸಹಸ್ರಂ ಸಮಲಂಕೃತಮ್ ॥56॥
ಬಂಗಾರದ ಸರವನ್ನೂ ಧರಿಸಿದ ನೂರು ದಾಸಿಯರನ್ನು, ನೂರು ಹೇಸರಗತ್ತೆಗಳ ರಥಗಳನ್ನು, ಬಂಗಾರದ ಸರಗಳನ್ನು ಧರಿಸಿದ ಅಲಂಕೃತರಾದ ಸಾವಿರ ಕನ್ಯೆಯರನ್ನು ಕೊಡುವೆನೆಂದೆ.
ಈಷಾದಂತಾನ್ ನಾಗಶತಾನ್ ದಾಸೀದಾಸಶತಾನಿ ಚ |
ದದ್ಮಿ ತೈರ್ದ್ವಿಜಮುಖ್ಯೋ ಮೇ ಪ್ರಸಾದಂ ನ ಚಕಾರ ಸಃ ॥57॥
ಈಷಾದಂಡದಂಥ ದಾಡೆಗಳುಳ್ಳ ನೂರು ಆನೆಗಳನ್ನು, ನೂರು ದಾಸ ದಾಸಿಯರನ್ನು ಕೊಡುವೆನೆಂದೆ. ಆದರೂ ಬ್ರಾಹ್ಮಣೋತ್ತಮನು ನನಗೆ ಅನುಗ್ರಹ ಮಾಡಲಿಲ್ಲ.
ಕೃಷ್ಣಾನಾಂ ಶ್ವೇತವತ್ಸಾನಾಂ ಗೋಶತಾನಿ ಚತುರ್ದಶ |
ದದನ್ ಹಿ ನ ಲಭೇ ತಸ್ಮಾತ್ಪ್ರಸಾದಂ ದ್ವಿಜಸತ್ತಮಾತ್ ॥58॥
ಬಿಳಿಕರುಗಳುಳ್ಳ ಹದಿನಾಲ್ಕು ನೂರು ಗೋವುಗಳನ್ನು ಕೊಡುವೆನೆಂದರೂ ಬ್ರಾಹ್ಮಣೋತ್ತಮನಿಂದ ಅನುಗ್ರಹ ಪಡೆಯಲಾಗಲಿಲ್ಲ.
ಯತ್ಕಿಂಚಿನ್ಮಾಮಕಂ ವಿತ್ತಂ ತ್ವದಧೀನಂ ಕರೋಮಿ ತತ್ ॥59॥
ಋದ್ಧಂ ಗೇಹಂ ಸರ್ವಕಾಮೈರ್ಯಚ್ಚ ಮೇ ವಸು ಕಿಂಚನ |
ತತ್ಸರ್ವಮಸ್ಮೈ ಸತ್ಕೃತ್ಯ ಪ್ರಯಚ್ಛಾಮಿ ನ ಚೇಚ್ಛತಿ ॥60॥
ನನ್ನಲ್ಲಿ ನನ್ನದೆಂದು ಏನು ಧನವಿದೆಯೋ ಅದನ್ನು ನಿನ್ನ ವಶಕ್ಕೆ ಕೊಡುವೆ, ಎಲ್ಲ ಭೋಗಪದಾರ್ಥಗಳಿಂದ, ನನ್ನದಾದ ಎಲ್ಲ ಧನದಿಂದ, ಸಮೃದ್ಧವಾದ ಮನೆ ಎಲ್ಲವನ್ನೂ ಬ್ರಾಹ್ಮಣನಿಗೆ ಸತ್ಕಾರಪೂರ್ವಕ ಕೊಡುವೆನೆಂದರೂ ಅವನಿಗೆ ಯಾವುದೂ ಇಷ್ಟವಾಗಲಿಲ್ಲ.
ತತೋಽಬ್ರವೀನ್ಮಾಂ ಯಾಚಂತಮಪರಾದ್ಧಂ ಪ್ರಯತ್ನತಃ ॥61॥
ಇತಿ ಮಾಂ ಯಾಚಮಾನಂ ವೈ ಬ್ರಾಹ್ಮಣಃ ಪ್ರತ್ಯವಾರಯತ್ |
ಕ್ರೋಧದೀಪ್ತೇಕ್ಷಣಃ ಶಲ್ಯ ನಿರ್ದಹನ್ನಿವ ಚಕ್ಷುಷಾ ॥62॥
ಶಲ್ಯ, ಬ್ರಾಹ್ಮಣನು ಕೋಪದಿಂದ ಜ್ವಲಿಸುವ ಕಣ್ಣುಳ್ಳವನಾಗಿ ಕಣ್ಣಿಂದಲೇ ಸುಡುವಂತೆ ನೋಡುತ್ತ, ಅಪರಾಧಮಾಡಿ ಪ್ರಯತ್ನಪೂರ್ವಕ ಕ್ಷಮಾಯಾಚನೆ ಮಾಡುತ್ತಿದ್ದ ನನ್ನನ್ನು ತಡೆದು, ಹೇಳಿದ,

ವ್ಯಾಹೃತಂ ಯನ್ಮಯಾ ಸೂತ ತತ್ತಥಾ ನ ತದನ್ಯಥಾ |
ಅನೃತೋಕ್ತಂ ಪ್ರಜಾಂ ಹನ್ಯಾತ್ ತತಃ ಪಾಪಮವಾಪ್ನುಯಾಮ್ ||63||
ಸೂತನೆ, ನಾನೇನು ಶಾಪವಿತ್ತೆನೋ ಅದು ಹಾಗೇ ಆಗುವುದು. ಅನ್ಯಥಾ ಆಗದು. ಏಕೆಂದರೆ ಸುಳ್ಳು ಹೇಳಿದರೆ ಅದು ಪ್ರಜೆಗಳನ್ನು ಕೊಂದೀತು. ಅದರಿಂದ ನಾನು ಪಾಪವನ್ನು ಹೊಂದುವೆನು.
ತಸ್ಮಾದ್ಧರ್ಮಾಭಿರಕ್ಷಾರ್ಥಂ ನಾನೃತಂ ವಕ್ತುಮುತ್ಸಹೇ |
ಮಾ ತ್ವಂ ಬ್ರಹ್ಮಗತಿಂ ಹಿಂಸ್ಯಾಃ ಪ್ರಾಯಶ್ಚಿತ್ತಂ ಕೃತಂ ತ್ವಯಾ ||64||
ಅದರಿಂದ ಸತ್ಯಧರ್ಮರಕ್ಷಣೆಗಾಗಿ ನಾನು ಶಾಪವನ್ನು ಸುಳ್ಳಾಗಿಸಲಾರೆ. ನೀನು ಗೋದಾನ ಮುಂತಾದ ಪ್ರಾಯಶ್ಚಿತ್ತಮಾಡಿ ಅದರಿಂದ ಬ್ರಾಹ್ಮಣನ ಸತ್ಯವಚನವನ್ನು ಸುಳ್ಳಾಗಿಸಿ ಹಿಂಸಿಸಬೇಡ.
ಮದ್ವಾಕ್ಯಂ ನಾನೃತಂ ಲೋಕೇ ಕಶ್ಚಿತ್ ಕುರ್ಯಾತ್ ಸಮಾಪ್ನುಹಿ |
ಯನ್ಮಯೋಕ್ತಂ ಸರೋಷೇಣ ಗಚ್ಛ ಸೂತಜ ಮಾಚಿರಮ್ ||65||
ನನ್ನ ಮಾತನ್ನು ಲೋಕದಲ್ಲಿ ಯಾರೇ ಆಗಲಿ ಸುಳ್ಳು ಮಾಡಬಾರದು. ಕೋಪದಿಂದ ನಾನು ನೀಡಿದ ಶಾಪವನ್ನು ನೀನು ಸ್ವೀಕರಿಸು. ಸೂತನೆ, ಹೋಗು, ಬೇಗನೆ ಹೊರಟುಹೋಗು.
ಇತಿ ಮಾಮಸಕೃತ್ ಕ್ರುದ್ಧಃ ಸ ಉವಾಚ ದ್ವಿಜೋತ್ತಮಃ |
ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ||66||
ಹೀಗೆ ಆ ದ್ವಿಜೋತ್ತಮನು ಕ್ರುದ್ಧನಾಗಿ ಪುನಃಪುನಃ ಹೇಳಿದ. ಈ ಬ್ರಾಹ್ಮಣರು ಸೋಮರಾಜನ ಪ್ರಜೆಗಳು, ಶಾಪಾನುಗ್ರಹಗಳಿಂದ ಸುಖದುಃಖ ನೀಡಬಲ್ಲವರು.
ನಾಹಂ ಬಿಭೇಮಿ ಬೀಭತ್ಸೋರ್ನ ಶಲ್ಯ ಮಧುಸೂದನಾತ್ |
ತಸ್ಮಾದ್ ಬಿಭೇಮ್ಯಹಂ ಶಾಪಾತ್ ತೇನ ಸತ್ಯೇನ ತೇ ಶಪೇ ||67||
ನಾನು ಅರ್ಜುನನಿಗೆ ಹೆದರುವುದಿಲ್ಲ. ಕೃಷ್ಣನಿಗೂ ಹೆದರುವುದಿಲ್ಲ. ಆ ಬ್ರಾಹ್ಮಣ ಶಾಪಕ್ಕೆ ಹೆದರುತ್ತೇನೆ. ಶಲ್ಯ, ಇದನ್ನು ಶಪಥ ಮಾಡಿ ಹೇಳುತ್ತೇನೆ.
ಸಹ ಯುದ್ಧಂ ಸಮೇತಾಭ್ಯಾಮದ್ಯೇದಂ ಸಮುಪಸ್ಥಿತಮ್ |
ಯುದ್ಧೇಽಸ್ಮಿನ್ ಜೀವಿತಂ ಮೇಽದ್ಯ ಶಲ್ಯ ಸಂಶಯಮಾಗತಮ್ ||68||
ಶಲ್ಯ, ಕೃಷ್ಣಾರ್ಜುನರೊಂದಿಗೆ ನನಗಿಂದು ಯುದ್ಧದ ಅವಕಾಶ ಲಭಿಸಿದೆ. ಈ ಯುದ್ಧದಲ್ಲಿ ನಾನು ಬದುಕಿ ಉಳಿಯುವುದು ಸಂಶಯಾಸ್ಪದವೆ.
ಶಕ್ರೋಽಪ್ಯಮರರಾಟ್ ತಾಭ್ಯಾಮುಪಗಮ್ಯಾಹವಂ ಸಹ |
ಸಂಶಯಂ ಪರಮಂ ಗಚ್ಛೇತ್ ಕಥಂ ವಾ ಮನ್ಯತೇ ಭವಾನ್ || 69||
ದೇವರಾಜ ಇಂದ್ರನಾದರೂ ಅವರನ್ನು ಇದಿರಿಸಿ ಯುದ್ಧ ಮಾಡಿದರೆ ಜಯವು ಅವನಿಗೆ ಸರ್ವಥಾ ಸಂಶಯವೆ. ಇದಕ್ಕೆ ನೀನೇನು ಅಭಿಪ್ರಾಯಪಡುವೆ?
ಇತ್ಯೇವಂ ತೇ ಮಯಾಽಽಖ್ಯಾತಂ ಕ್ಷಿಪ್ತೇನಾಪಿ ಸುಹೃತ್ತಯಾ |
ಜಾನಾಮಿ ತ್ವಾಽಧಿಕ್ಷಿಪಂತಂ ದೋಷಮಾತ್ಮಗತಂ ಶೃಣು ||70||
ನೀನು ನನ್ನನ್ನು ಆಕ್ಷೇಪಿಸಿದರೂ ನಾನು ಸೌಹಾರ್ದದಿಂದಲೆ ನಿನಗೆ ಇಷ್ಟು ಹೇಳಿದ್ದೇನೆ. ಇದಕ್ಕೂ ನೀನು ಹಳಿಯುವಿ ಎಂದು ನನಗೆ ಗೊತ್ತು. ಅದರಿಂದ ನಿನ್ನ ದೋಷವನ್ನು ಹೇಳುತ್ತೇನೆ, ಕೇಳು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಶಾಪಕಥನಂ ನಾಮ ದ್ವಿಚತ್ವಾರಿಂಶೋಧ್ಯಾಯಃ ||42||

ಮಹಾಭಾರತತಾತ್ಪರ್ಯನಿರ್ಣಯ
ಶಲ್ಯೋಽಪಿ ಸರ್ವದೇಶೇಷು ನೀಚಮಧ್ಯೋತ್ತಮಾ ನರಾಃ |
ಸಂತೀತ್ಯುಕ್ತತ್ವಸ್ಯ ಸಾರಥ್ಯಂ ಚಕ್ರೇ ಪಾರ್ಥಹಿತೇಪ್ಸಯಾ || 32 ||
ಶಲ್ಯ `ಎಲ್ಲ ದೇಶಗಳಲ್ಲಿಯೂ ನೀಚರು ಮಧ್ಯಮರು ಉತ್ತಮರೆಂದು ಎಲ್ಲ ಬಗೆಯ ಜನರಿರುತ್ತಾರೆ' ಎಂದು ಹೇಳಿ ಪಾಂಡವರ ಹಿತದ ಬಯಕೆಯಿಂದ ಕರ್ಣನಿಗೆ ಸಾರಥ್ಯವನ್ನು ಮಾಡಿದ.

ನಲವತ್ತಮೂರನೆಯ ಅಧ್ಯಾಯ
ಕರ್ಣನು ಪುನಃ ಬಾಹ್ಲೀಕ, ಮದ್ರದೇಶಗಳನ್ನು ನಿಂದಿಸಿದ. ನಿನ್ನ ಅಂಗದೇಶದಲ್ಲಿಯೂ ಅನಾಚಾರಗಳಿವೆ. ಎಲ್ಲ ದೇಶಗಳಲ್ಲಿಯೂ ಅನಾಚಾರಿಗಳಿದ್ದಾರೆ. ಸದಾಚಾರಿಗಳೂ ಇರುತ್ತಾರೆ ಎಂದು ಶಲ್ಯ ಉತ್ತರಿಸಿದ.
ಸಂಜಯಃ
ತತಃ ಪುನರ್ಮಹಾರಾಜ ಮದ್ರರಾಜಮರಿಂದಮಃ |
ಅಭ್ಯಭಾಷತ ರಾಧೇಯಃ ಸನ್ನಿವಾರ್ಯೋತ್ತರಂ ವಚಃ ||1||
ಸಂಜಯ ಧೃತರಾಷ್ಟ್ರನಿಗೆ ನುಡಿದ– ಬಳಿಕ ಪುನಃ, ಮಹಾರಾಜ! ಶತ್ರುನಾಶಕನಾದ ಕರ್ಣ ಶಲ್ಯನ ಉತ್ತರವನ್ನು ತಡೆದು ಹೇಳಿದ.
ನಿರ್ಭರ್ತ್ಸನಾರ್ಥಂ ಶಲ್ಯ ತ್ವಂ ಯತ್ತು ಜಲ್ಪಿತವಾನಸಿ |
ನಾಹಂ ಶಕ್ಯಸ್ತ್ವಯಾ ವಾಚಾ ವಿಭೀಷಯಿತುಮಾಹವೇ ||2||

ಶಲ್ಯ, ನೀನು ನನ್ನನ್ನು ಹಳಿಯುವುದಕ್ಕೇ ಏನು ಹೇಳಿರುವೆಯೋ ಅದರಿಂದ ನಿನಗೆ ಮಾತಿನಿಂದ ನನ್ನಲ್ಲಿ ಯುದ್ಧ ಭಯವನ್ನು ಉಂಟುಮಾಡಲು ಶಕ್ಯವಾಗದು.
ಯದಿ ಮಾಂ ದೇವತಾಃ ಸರ್ವಾ ಯೋಧಯೇಯುಃ ಸವಾಸವಾಃ |
ತಥಾಪಿ ಮೇ ಭಯಂ ನ ಸ್ಯಾತ್ ಕಿಮು ಪಾರ್ಥಾತ್ ಸಕೇಶವಾತ್ ॥3॥
ಇಂದ್ರಾದಿ ಸಮಸ್ತ ದೇವತೆಗಳೂ ನನ್ನೊಡನೆ ಹೋರಾಡಲು ಬಂದರೂ ನನಗೆ ಭಯವಾಗದು. ಇನ್ನು ಕೃಷ್ಣಾರ್ಜುನರಿಗೆ ನಾನು ಅಂಜುವೆನೆ?
ನಾಹಂ ಭೀಷಯಿತುಂ ಶಕ್ಯಃ ಶುದ್ಧಕರ್ಮಾ ಮಹಾಹವೇ |
ಅಭಿಜಾನೀಹಿ ಶಕ್ತಸ್ತ್ವಮನ್ಯಂ ಭೀಷಯಿತುಂ ರಣೇ ॥4॥
ಮಹಾಯುದ್ಧದಲ್ಲಿ ಶುದ್ಧಕರ್ಮವನ್ನೇ ಮಾಡುವ ನನ್ನನ್ನು ಹೆದರಿಸಲು ನಿನಗೆ ಶಕ್ಯವಾಗದು. ಬೇರೆಯವರನ್ನು ನೀನು ಹೆದರಿಸಬಲ್ಲೆ. ಇದನ್ನು ತಿಳಿದುಕೊಳ್ಳು.
ನೀಚಸ್ಯ ಬಲಮೇತಾವತ್ ಪಾರುಷ್ಯಂ ಯತ್ತ್ವಮಾತ್ಥ ಮಾಮ್ |
ಅಶಕ್ತೋ ಹಿ ಗುಣಾನ್ ವಕ್ತುಂ ವಲ್ಗಸೇ ಬಹು ದುರ್ಮತೇ ॥5॥
ನೀಚನ ಬಲವಿದು, ನೀನು ನನಗೆ ಹೇಳುವ ಮಾತಿನಲ್ಲಿರುವ ಈ ಕಠೋರತೆ, ಗುಣವನ್ನು ಹೇಳಲು ಅಶಕ್ತನಾದ ನೀನು ದುರ್ಬುದ್ಧಿಯವನು, ಬಹು ಪ್ರಲಾಪ ಗೈವೆ.
ನ ಹಿ ಕರ್ಣಃ ಸಮುದ್ಭೂತೋ ಭಯಾರ್ಥಮಿಹ ಮಾರಿಷ |
ವಿಕ್ರಮಾರ್ಥಮಹಂ ಜಾತೋ ಯಶೋರ್ಥಂ ಚ ತಥಾಽಽತ್ಮನಃ ॥6॥
ರಾಜನೆ, ಕರ್ಣನು ಜನ್ಮತಳೆದುದು ಭಯಹೊಂದಲು ಅಲ್ಲ. ಪರಾಕ್ರಮ ತೋರಲು, ತನಗಾಗಿ ಕೀರ್ತಿಗಳಿಸಲು ನಾನು ಜನಿಸಿದ್ದೇನೆ.
ಸಹಿಷ್ಣುತ್ವೇನ ಸೌಹಾರ್ದಾತ್ ಮಿತ್ರಕಾರ್ಯವ್ಯಪೇಕ್ಷಯಾ |
ಕಾರಣೈಸ್ತ್ರಿಭಿರೇತೈಸ್ತ್ವಂ ಶಲ್ಯ ಜೀವಸಿ ಸಾಂಪ್ರತಮ್ ॥7॥
ನಿನ್ನ ಮಾತನ್ನು ಸಹಿಸಿಕೊಂಡಿದ್ದೇನೆ. ನಿನ್ನಲ್ಲಿ ನನಗೆ ಸೌಹಾರ್ದವಿದೆ. ನನಗೆ ನಿನ್ನಿಂದ ಮಿತ್ರನಾದ ದುರ್ಯೋಧನನ ಕಾರ್ಯವಾಗಬೇಕಿದೆ, ಈ ಮೂರು ಕಾರಣಗಳಿಂದ ಶಲ್ಯ, ನೀನು ಬದುಕಿರುವೆ.
ರಾಜ್ಞಶ್ಚ ಧಾರ್ತರಾಷ್ಟ್ರಸ್ಯ ಕಾರ್ಯಂ ಸುಮಹದುದ್ಯತಮ್ |
ಮಯಿ ತಚ್ಚಾಹಿತಂ ಶಲ್ಯ ತೇನ ಜೀವಸಿ ಮೇ ಕ್ಷಣಮ್ ॥8॥
ರಾಜಾ ದುರ್ಯೋಧನನ ಮಹತ್ತಾದ ಕಾರ್ಯ ಈಗ ಆಗಬೇಕಾಗಿದೆ. ಅದರ ಭಾರ ನನ್ನ ಮೇಲಿದೆ. ಅದರಿಂದ ನೀನು ಕ್ಷಣಕಾಲ ಬದುಕಿರುತ್ತಿ.
ಕೃತಶ್ಚ ಸಮಯಃ ಪೂರ್ವಂ ಕ್ಷಂತವ್ಯಂ ವಿಪ್ರಿಯಂ ತವ |
ಸಮಯಃ ಪರಿಪಾಲ್ಯೋ ಮೇ ತೇನ ಜೀವಸಿ ಮದ್ರಕ ॥9॥
ನಿನ್ನ ಅಪ್ರಿಯವಾದ ಮಾತನ್ನು ಸಹಿಸಿಕೊಳ್ಳುವೆನೆಂದು ಮಾತು ಕೊಟ್ಟಿದ್ದೇನೆ. ಆ ಮಾತನ್ನು ನಾನು ನಡೆಸಬೇಕಿದೆ. ಅದರಿಂದ ಶಲ್ಯ ನೀನು ಬದುಕಿರುವೆ.
ಋತೇ ಶಲ್ಯಸಹಸ್ರೇಣ ವಿಜಯೇಯಮಹಂ ಪರಾನ್ |
ಮಿತ್ರದ್ರೋಹಸ್ತು ಪಾಪೀಯಾನಿತಿ ಜೀವಸಿ ಸಾಂಪ್ರತಮ್ ॥10॥
ಸಾವಿರ ಶಲ್ಯರನ್ನು ಕೂಡ ಬಿಟ್ಟು ನಾನು ಶತ್ರುಗಳನ್ನು ಗೆಲ್ಲಬಲ್ಲೆ. ಮಿತ್ರನಾದ ದುರ್ಯೋಧನನಿಗೆ ದ್ರೋಹ ಬಗೆಯುವುದು ಪಾಪಕರವೆಂದು ಸುಮ್ಮನಿದ್ದೇನೆ. ಅದರಿಂದ ನೀನೀಗ ಬದುಕಿರುವೆ.
ಶಲ್ಯಃ
ನನು ಪ್ರಲಾಪಾಃ ಕರ್ಣೈತೇ ಯಾನ್ ಬ್ರವೀಷಿ ಪರಾನ್ ಪ್ರತಿ |
ಋತೇ ಕರ್ಣಸಹಸ್ರೇಣ ಶಕ್ಯಾ ಜೇತುಂ ಪರಾ ಯುಧಿ ॥11॥
ಶಲ್ಯ ನುಡಿದ– ಕರ್ಣ, ಶತ್ರುಗಳ ಕುರಿತು ಆಡುವ ನಿನ್ನ ಮಾತುಗಳೆಲ್ಲ ಅರ್ಥವಿಲ್ಲದವು. ವಸ್ತುತಃ ಸಾವಿರ ಕರ್ಣರನ್ನೂ ಬಿಟ್ಟು ಶತ್ರುಗಳನ್ನು ನಾವು ಕೂಡ ಗೆಲ್ಲಬಲ್ಲೆವು.
ಸಂಜಯಃ
ತಥಾ ಬ್ರುವಂತಂ ಪರುಷಂ ಕರ್ಣೋ ಮದ್ರಾಧಿಪಂ ತದಾ |
ಪರುಷಂ ದ್ವಿಗುಣಂ ಭೂಯಃ ಪ್ರೋವಾಚಾಪ್ರಿಯದರ್ಶನಮ್ ॥12॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಹೀಗೆ ಕಠೋರವಾಗಿ ಶಲ್ಯ ನುಡಿದರೆ ಇನ್ನೂ ಎರಡು ಪಟ್ಟು ಕಠೋರವಾಗಿ ಕರ್ಣ ತನಗೆ ಅಪ್ರಿಯನಾಗಿ ಕಾಣುವ ಶಲ್ಯನಿಗೆ ನುಡಿದ.
ಇದಂ ತ್ವಮೇಕಾಗ್ರಮನಾಃ ಶೃಣು ಮದ್ರಜನಾಧಿಪ |
ಸನ್ನಿಧೌ ಧೃತರಾಷ್ಟ್ರಸ್ಯ ಪ್ರೋಚ್ಯಮಾನಂ ಮಯಾ ಶ್ರುತಮ್ ॥13॥
ಶಲ್ಯ, ಇದನ್ನು ಏಕಾಗ್ರಮನಸಿನಿಂದ ಕೇಳು. ಇದು ಧೃತರಾಷ್ಟ್ರನ ಸನ್ನಿಧಿಯಲ್ಲಿ ಬ್ರಾಹ್ಮಣರು ಹೇಳಿದ್ದನ್ನು ನಾನು ಕೇಳಿದ್ದಾಗಿದೆ.
ದೇಶಾಂಶ್ಚ ವಿವಿಧಾಂಶ್ಚಿತ್ರಾನ್ ಪೂರ್ವವೃತ್ತಾಂಶ್ಚ ಪಾರ್ಥಿವಾನ್ |
ಬ್ರಾಹ್ಮಣಾಃ ಕಥಯಂತಿ ಸ್ಮ ಧೃತರಾಷ್ಟ್ರನಿವೇಶನೇ ॥14॥
ಆಶ್ಚರ್ಯಕರವಾದ ನಾನಾ ದೇಶಗಳನ್ನೂ ಹಿಂದೆ ಆಗಿಹೋದ ರಾಜರನ್ನೂ ಧೃತರಾಷ್ಟ್ರನ ಅರಮನೆಯಲ್ಲಿ ಬ್ರಾಹ್ಮಣರು ಬಣ್ಣಿಸುತ್ತಿದ್ದರು.

ತತ್ರ ವೃದ್ಧಃ ಪುರಾವೃತ್ತಾಃ ಕಥಾಃ ಕಶ್ಚಿದ್ ದ್ವಿಜೋತ್ತಮಃ |
ಬಾಹ್ಲೀಕದೇಶಂ ಮದ್ರಾಂಶ್ಚ ಕುತ್ಸಯನ್ ವಾಕ್ಯಮಬ್ರವೀತ್ ॥15॥
ಆಗ ವೃದ್ಧನಾದ ಒಬ್ಬ ಬ್ರಾಹ್ಮಣೋತ್ತಮನು ಹಿಂದೆ ನಡೆದ ಸಂಗತಿಗಳ ಕುರಿತು ಬಾಹ್ಲೀಕದೇಶವನ್ನೂ ಮದ್ರದೇಶವನ್ನೂ ನಿಂದಿಸುತ್ತ ಈ ಮಾತನ್ನಾಡಿದ.
ಬಹಿಷ್ಕೃತಾ ಹಿಮವತಾ ಗಂಗಯಾ ಚ ತಿರಸ್ಕೃತಾಃ |
ಸರಸ್ವತ್ಯಾ ಯಮುನಯಾ ಕುರುಕ್ಷೇತ್ರೇಣ ಚಾಪಿ ಯೇ ॥16॥
ಪಂಚಾನಾಂ ಸಿಂಧುಷಷ್ಠಾನಾಂ ನದೀನಾಂ ಯೇಽಂತರಾಶ್ರಿತಾಃ |
ತಾನ್ ಧರ್ಮಬಾಹ್ಯಾನ್ ಅಶುಚೀನ್ ಬಾಹ್ಲೀಕಾನಪಿ
ವರ್ಜಯೇತ್ ॥17॥
ಹಿಮಾಲಯದಿಂದೀಚೆ ಗಂಗಾ ಸರಸ್ವತೀ ಯಮುನಾ ಕುರುಕ್ಷೇತ್ರಗಳಿಂದಾಚೆ, ಐದು ನದಿಗಳು ಮತ್ತು ಆರನೆಯದಾದ ಸಿಂಧೂನದಿ ಇವುಗಳ ನಡುವೆ ಇರುವ, ಧರ್ಮಬಾಹಿರವಾಗಿದ್ದು ಅಶುಚಿಯಾಗಿರುವ ಬಾಹ್ಲೀಕದೇಶವನ್ನು ವರ್ಜಿಸಬೇಕು.
ಗೋವರ್ಧನೋ ನಾಮ ವಟಃ ಸುಭಾಂಡಂ ನಾಮ ಪತ್ತನಮ್ |
ಏತದ್ ರಾಜನ್ ಕಲಿದ್ವಾರಮಾಕುಮಾರಾತ್ ಸ್ಮರಾಮ್ಯಹಮ್ ॥18॥
ಗೋವರ್ಧನ ಎಂಬ ಗೋಹತ್ಯಸ್ಥಳ ಮತ್ತು ಸುಭಾಂಡವೆಂಬ ಮದ್ಯಪಾತ್ರೆಗಳ ಸ್ಥಳ ಇವು, ರಾಜನೆ, ಕಲಿಗೆ ದ್ವಾರವೆಂದು ನಾನು ಬಾಲ್ಯದಿಂದಲೂ ನೆನಪಿನಲ್ಲಿಟ್ಟು ಕೊಂಡಿದ್ದೇನೆ.
ಕಾರ್ಯೇಣಾತ್ಯರ್ಥಗೂಢೇನ ಬಾಹ್ಲೀಕೇಷೂಷಿತಂ ಮಯಾ |
ತತ ಏಷಾಂ ಸಮಾಚಾರಃ ಸಂವಾಸಾದ್ ವಿದಿತೋ ಮಯಾ ॥19॥
ಬಲುರಹಸ್ಯವಾದ ಕಾರ್ಯಕ್ಕಾಗಿ ಬಾಹ್ಲೀಕದೇಶದಲ್ಲಿ ನಾನು ವಾಸಮಾಡ ಬೇಕಾಯಿತು. ಅಲ್ಲಿ ವಾಸಮಾಡಿದ್ದರಿಂದ ಇವರ ಸಮಾಚಾರ ನನಗೆ ತಿಳಿಯಿತು.
ಶಾಕಲಂ ನಾಮ ನಗರಮಾಪಗಾ ನಾಮ ನಿಮ್ನಗಾ |
ಚಂಡಾಲಾ ನಾಮ ಬಾಹ್ಲೀಕಾಸ್ತೇಷಾಂ ವೃತ್ತಂ ಸುನಿಂದಿತಮ್ ॥20॥
ಶಾಕಲವೆಂಬ ನಗರ, ಆಪಗಾ ಎಂಬ ನದಿ. ಇಲ್ಲಿ ಚಂಡಾಲರೆಂಬ ಬಾಹ್ಲೀಕರು ಇರುತ್ತಾರೆ. ಅವರ ಆಚರಣೆ ಬಹಳ ನಿಂದಿತವಾಗಿದೆ.
ಪಾನಂ ಗುಡಾಸವಂ ಪೀತ್ವಾ ಗೋಮಾಂಸಂ ಲಶುನೈಃ ಸಹ |
ಅಪೂಪಸಕ್ತುವಾಟ್ಯಾನಾಮಾಶಿತಾಃ ಶೀಲವರ್ಜಿತಾಃ ॥21॥
ಬೆಲ್ಲದಿಂದ ಮಾಡಿದ ಮದ್ಯವನ್ನು ಕುಡಿದು ಬೆಳ್ಳುಳ್ಳಿಗಳೊಂದಿಗೆ ಗೋಮಾಂಸ ವನ್ನೂ ಅಪೂಪ ಸಕ್ತು ಯವಾನ್ನಗಳನ್ನೂ ಉಣ್ಣುವವರು, ಶೀಲವಿಲ್ಲದವರು.
ಗಾಯಂತ್ಯಥ ಚ ನೃತ್ಯಂತಿ ಸ್ತ್ರಿಯೋ ಮತ್ತಾ ವಿವಾಸಸಃ |
ನಗರಾಪಣವೇಶೇಷು ಬಹಿರ್ಮಾಲ್ಯಾನುಲೇಪನಾಃ ॥22॥
ಸ್ತ್ರೀಯರು ನಗರದ ಅಂಗಡಿ ಸೂಳೆಗೇರಿಗಳಲ್ಲಿ ಹೊರಗೆ ಗಂಧಮಾಲೆಗಳನ್ನು ಧರಿಸಿ ಪಾನಮತ್ತರಾಗಿ ವಿವಸ್ತ್ರರಾಗಿ ಹಾಡುತ್ತಾರೆ, ಕುಣಿಯುತ್ತಾರೆ.
ಮತ್ತಾಃ ಪ್ರಗೀತವಿರುತೈಃ ಖರೋಷ್ಟ್ರನಿನದೋಪಮೈಃ |
ಅನಾವೃತಾ ಮೈಥುನೇ ತಾಃ ಕಾಮಾಚಾರಾಶ್ಚ ಸರ್ವಶಃ ॥23॥
ಮತ್ತರಾಗಿ ಆ ಸ್ತ್ರೀಯರು ಕತ್ತೆ, ಒಂಟೆಗಳ ಧ್ವನಿಯಂತೆ ಹಾಡುಗಳನ್ನು ಕಿರುಚುತ್ತಾರೆ. ಮೈಥುನದಲ್ಲಿ ಅವರು ಮುಚ್ಚುಮರೆ ಇಲ್ಲದೆ ಪೂರ್ತಿ ಸ್ವೇಚ್ಛಾಚಾರಿ ಗಳಾಗಿರುತ್ತಾರೆ.
ಆಹುರನ್ಯೋನ್ಯಶುಕ್ತಾನಿ ಪ್ರಬ್ರುವಾಣಾ ಮದೋತ್ಕಟಾಃ |
ಹೇ ಹತೇ ಹೇ ಹತೇತ್ಯೇವಂ ಸ್ವಾಮಿಭರ್ತೃಹತೇತಿ ಚ ॥24॥
ಈ ಸ್ತ್ರೀಯರು ಮತ್ತೇರಿ ಪರಸ್ಪರ ಬೈಗುಳ ಮಾತುಗಳನ್ನು ದೊಡ್ಡಧ್ವನಿಯಿಂದ ಹೇಳುತ್ತಾರೆ. ಒಬ್ಬಳು ಮಿಂಡಿ ಇನ್ನೊಬ್ಬಳು ಮಿಂಡಿಯನ್ನು ನಿನ್ನನ್ನು ಮಿಂಡ ಹೊಡೆದನಲ್ಲೆ? ಎನ್ನುತ್ತಾಳೆ. ನೀನೂ ಕೂಡ ಮಿಂಡನಿಂದ ಹೊಡೆಸಿಕೊಂಡಿಲ್ಲವೆ ಎನ್ನುತ್ತಾಳೆ ಇನ್ನೊಬ್ಬಳು. ಅತ್ತೆಯನ್ನೂ ಗಂಡನನ್ನೂ ಹೊಡೆದವಳು ನೀನೆಂದು ಮತ್ತೊಬ್ಬಳು ಬಯ್ಯುತ್ತಾಳೆ.
ಆಕ್ರೋಶಂತ್ಯಃ ಪ್ರನೃತ್ಯಂತಿ ವ್ರಾತ್ಯಾಃ ಪರ್ವಸ್ವಸಂಯತಾಃ |
ತಾಸಾಂ ಕಿಲಾವಲಿಪ್ತಾನಾಂ ನಿವಸನ್ ಕುರುಜಾಂಗಲೇ ॥25॥
ಕಶ್ಚಿದ್ ಬಾಹ್ಲೀಕದುಷ್ಟಾನಾಂ ನಾತಿಹೃಷ್ಟಮನಾ ಜಗೌ |
ಸಾ ನೂನಂ ಬೃಹತೀ ಗೌರೀ ಸೂಕ್ಷ ್ಮಕಂಬಲವಾಸಿನೀ ॥26॥
ಮಾಮನುಸ್ಮರತೀ ಶೇತೇ ಬಾಹ್ಲೀಕಂ ಕುರುವಾಸಿನಮ್ |
ಶತದ್ರುಂ ನು ಕದಾ ತೀರ್ತ್ವಾ ತಾಂ ಚ ರಮ್ಯಾಮಿರಾವತೀಮ್ ॥27॥
ಗತ್ವಾ ಸ್ವದೇಶಂ ದ್ರಕ್ಷ್ಯಾಮಿ ಸ್ಥೂಲಶಂಖಾಃ ಶುಭಾಃ ಸ್ತ್ರಿಯಃ ॥28॥
ಆ ಸ್ತ್ರೀಯರು `ವ್ರಾತ್ಯ'ರು, ವಿವಾಹಸಂಸ್ಕಾರವನ್ನೆ ಒಲ್ಲದವರು. ಹಬ್ಬಗಳಲ್ಲಿ ಪಾನಮತ್ತರಾಗಿ ಸ್ವಚ್ಛಂದವಾಗಿ ಪರಸ್ಪರ ಕೂಗಾಡುತ್ತ ಕುಣಿಯುತ್ತಾರೆ. ದರ್ಪದಿಂದ ಬೀಗಿರುತ್ತಾರೆ. ಅಂಥ ಬಾಹ್ಲೀಕದೇಶದ ದುಷ್ಟರಲ್ಲಿ ಒಬ್ಬನು ಕುರುಜಾಂಗಲದಲ್ಲಿ ವಾಸಮಾಡುತ್ತ ಮನಸಿನಲ್ಲಿ ಬೇಸರಗೊಂಡು ಹಾಡಿದನಂತೆ `ಬೆಳ್ಳಗಿರುವ ಸ್ಥೂಲಕಾಯದ ಆ ನನ್ನ ಪ್ರೇಯಸಿ ಸಣ್ಣಕಂಬಳಿಯುಡುವಳು, ನಿಶ್ಚಿತವಾಗಿ, ಬಾಹ್ಲೀಕ ದೇಶದವನಾಗಿದ್ದೂ ಕುರುದೇಶದಲ್ಲಿ ವಾಸಿಸುತ್ತಿರುವ ನನ್ನನ್ನೇ ನೆನೆಯುತ್ತ ಮಲಗು ತ್ತಾಳೆ. ನಾನೆಂದು ರಮ್ಯವಾದ ಶತದ್ರು

ನದಿಯನ್ನೂ ಇರಾವತೀನದಿಯನ್ನೂ ದಾಟಿ ನನ್ನ ದೇಶವನ್ನು ಹೋಗಿ ಸೇರಿ, ಕಿವಿಗಳಿಗೆ ಶಂಖದ ದೊಡ್ಡ ಜುಮುಕಿ ಹಾಕಿಕೊಂಡಿರುವ ಆ ನಮ್ಮ ದೇಶದ ಸುಂದರ ಸ್ತ್ರೀಯರನ್ನು ನೋಡುವೆನೊ!' ಎಂದು.
ಮನಃಶಿಲೋಜ್ವಲಾಪಾಂಗ್ಯೋ ಗೌರ್ಯಸ್ತ್ರಿಕಕುದಾಂಜನಾಃ |
ಕಂಬಲಾಜಿನಸಂವೀತಾಃ ಕ್ರೀಡಂತ್ಯಃ ಪ್ರಿಯದರ್ಶನಾಃ ॥29॥
`ಮಣಿಶಿಲೆಯಿಂದ ಕಡೆಗಣ್ಣಿಗೆ ಬಣ್ಣ ಬಳಿದು, ಮೂರು ಶ್ರೇಷ್ಠದ್ರವ್ಯಗಳಿಂದ ಕಣ್ಣುಗಳಿಗೆ ಕಾಡಿಗೆ ಹಾಕಿಕೊಂಡಿರುವ, ಕಂಬಳಿ ಚರ್ಮಗಳ ಉಡುಗೆ ತೊಟ್ಟು ವಿಲಾಸ ತೋರುವ, ನೋಡುವ ಕಣ್ಣುಗಳಿಗೆ ಹಬ್ಬ ಉಂಟುಮಾಡುವ ಗೌರವರ್ಣದ ಆ ಸ್ತ್ರೀಯರನ್ನು ಎಂದು ನೋಡುವೆನೊ!' ಎಂದು.
ಶಮೀಪೀಲುಕರೀರಾಣಾಂ ವನೇಷು ಸುಖವರ್ತ್ಮಸು |
ಅಪೂಪಾನ್ ಸಕ್ತುಪಿಂಡಾಂಶ್ಚ ಪ್ರಾಶ್ನಂತೋ ಮದಿರಾನ್ವಿತಾನ್ ॥31॥
ಮೃದಂಗಾನಕಶಂಖಾನಾಂ ಮರ್ದಲಾನಾಂ ಚ ನಿಸ್ವನೈಃ |
ಖರೋಷ್ಟ್ರಾಶ್ವತರೈಶ್ಚೈವ ಮತ್ತಾ ಯಾಸ್ಯಾಮಹೇ ಸುಖಮ್ ॥30॥
`ಬನ್ನಿಗೋನುಬಿದಿರ ಕಾಡುಗಳ ಮಧ್ಯದಲ್ಲಿ ಸುಖಕರವಾದ ಮಾರ್ಗಗಳಲ್ಲಿ ಅಪೂಪ ಸಕ್ತು ಉಂಡೆಗಳನ್ನು ತಿನ್ನುತ್ತ, ಮದ್ಯಪಾನ ಮಾಡುತ್ತ, `ಮೃದಂಗ ಆನಕ ಶಂಖ ಮದ್ದಳೆಗಳ ಧ್ವನಿಮಾಡುತ್ತ ಕತ್ತೆ ಒಂಟೆ ಹೇಸರಗತ್ತೆಗಳ ಮೇಲೇರಿ ಪಾನಮತ್ತರಾಗಿ ಸುಖವಾಗಿ ನಾವು ಎಂದು ವಿಹಾರ ಮಾಡುವೆವೋ!' ಎಂದು
ಪಥಿಷು ಪ್ರಬಲಾ ಭೂತ್ವಾ ಮೈಥುನಂ ಕುರ್ವತೇಽಧಿಕಮ್ |
ಚೇಲಾಪಹಾರಂ ಕುರ್ವಾಣಾಃ ಸಂಭವಿಷ್ಯಾಮ ಭೂರಿಶಃ ॥32॥
ಮಾರ್ಗಮಧ್ಯದಲ್ಲಿ ಯಾರು ಅಬಲೆಯರು ಪ್ರಬಲೆಯರಾಗಿ ಬಟ್ಟೆ ಸೆಳೆದು ಅಧಿಕವಾಗಿ ಮೈಥುನ ಮಾಡುವರೋ ಆ ಸ್ತ್ರೀಯರನ್ನು ನಾವೆಂದು ಬಹಳವಾಗಿ ಕೂಡುವೆವೋ!' ಎಂದು.
ಏವಂಶೀಲೇಷು ವ್ರಾತ್ಯೇಷು ಬಾಹ್ಲೀಕೇಷು ದುರಾತ್ಮಸು |
ಕಶ್ಚೇತಯಾನೋ ನಿವಸೇನ್ಮುಹೂರ್ತಮಪಿ ಮಾನವಃ ॥33॥
ಇಂಥ ಶೀಲಉಳ್ಳ, ಸಂಸ್ಕಾರಹೀನರಾದ, ದುರ್ಬುದ್ಧಿಉಳ್ಳ ಬಾಹ್ಲೀಕರ ನಡುವೆ ಬುದ್ಧಿ ಇರುವ ಯಾವ ಮಾನವನು ಮುಹೂರ್ತಕಾಲವಾದರೂ ವಾಸಮಾಡಬಲ್ಲ?
ಕರ್ಣಃ
ಈದೃಶಾ ಬ್ರಾಹ್ಮಣೇನೋಕ್ತಾ ಬಾಹ್ಲೀಕಾ ಮೋಘಚಾರಿಣಃ |
ಯೇಷಾಂ ಷಡ್ಭಾಗಹರ್ತಾ ತ್ವಮುಭಯೋಃ ಪುಣ್ಯಪಾಪಯೋಃ ॥34॥
ಕರ್ಣನು ನುಡಿದ– ಬ್ರಾಹ್ಮಣನು ಹೇಳಿದಂತೆ ಈ ರೀತಿಯ ನಿಷ್ಫಲಕರ್ಮ ಮಾಡುವವರು ಬಾಹ್ಲೀಕರು. ಅವರು ಮಾಡುವ ಪುಣ್ಯಪಾಪಗಳೆರಡರಲ್ಲಿಯೂ ಆರನೆ ಒಂದು ಭಾಗವನ್ನು ರಾಜನಾಗಿ ನೀನು ವಸೂಲಿ ಮಾಡುವೆ ತಾನೆ?
ಇತ್ಯುಕ್ತ್ವಾತ್ವ ಬ್ರಾಹ್ಮಣಃ ಸಾಧುರುತ್ತರಂ ಪುನರುಕ್ತವಾನ್ |
ಬಾಹ್ಲೀಕೇಷ್ವವಿನೀತೇಷು ಪ್ರೋಚ್ಯಮಾನಂ ನಿಬೋಧ ತತ್ ॥35॥
ಶಲ್ಯ, ಆ ಸಾಧು ಬ್ರಾಹ್ಮಣನು ಇಷ್ಟು ಹೇಳಿ ಪುನಃ ಮುಂದುವರಿದು ಅವಿನೀತರಾದ ಬಾಹ್ಲೀಕರ ವಿಷಯದಲ್ಲಿ ಹೇಳಿದ, ಅದನ್ನೂ ಹೇಳುತ್ತೇನೆ, ಕೇಳು.
ತತ್ರ ಸ್ಮ ರಾಕ್ಷಸಾ ಗಾಂತಿ ಸದಾ ಕೃಷ್ಣಚತುರ್ದಶೀಮ್ |
ನಗರೇ ಶಾಕಲೇ ಸ್ಫೀತೇ ಆಹತ್ಯ ನಿಶಿ ದುಂದುಭಿಮ್ ॥36॥
`ಬಾಹ್ಲೀಕದೇಶದಲ್ಲಿರುವ ರಾಕ್ಷಸರು ಸಮೃದ್ಧವಾದ ಶಾಕಲನಗರದಲ್ಲಿ ಕೃಷ್ಣಪಕ್ಷ ಚತುರ್ದಶಿಯ ರಾತ್ರಿಯಲ್ಲಿ ದುಂದುಭಿಯನ್ನು ಬಾರಿಸಿ ಸದಾ ಹಾಡುತ್ತಾರೆ.
ಕದಾ ಚ ಹೈಲಿಕಾ ಗಾಥಾ ಪುನರ್ಗಾಸ್ಯಾಮಿ ಶಾಕಲೇ |
ಗವ್ಯಸ್ಯ ತೃಪ್ತಾ ಮಾಂಸಸ್ಯ ಪೀತ್ವಾ ಗೌಡಂ ಸುರಾಸವಮ್ ॥37॥
ಶಾಕಲನಗರದಲ್ಲಿ ಗೋಮಾಂಸವನ್ನು ತೃಪ್ತಿಯಾಗುವಷ್ಟು ತಿಂದು, ಬೆಲ್ಲದಿಂದ ತಯಾರಾದ ಮದ್ಯವನ್ನು ಕುಡಿದು ಲೀಲೆಯ ಕುಣಿತದ ಹಾಡುಗಳನ್ನು ಪುನಃ ಪುನಃ ಎಂದು ಹಾಡುವೆನೋ!
ಗೌರೀಭಿಃ ಸಹ ನಾರೀಭಿರ್ಬೃಹತೀಭಿಃ ಸ್ವಲಂಕೃತಾಃ |
ಪಲಾಂಡುಗಂಡೂಷಯುತಾಃ ಖಾದಂತಶ್ಚೈಡಕಾನ್ ಬಹೂನ್ ॥38॥
ಬಾಯಿತುಂಬ ಈರುಳ್ಳಿ ತಿಂದು, ಬಹಳ ಕುರಿಮಾಂಸ ಉಂಡು, ಚೆನ್ನಾಗಿ ಅಲಂಕೃತರಾಗಿ ಗೌರವರ್ಣದ ಸ್ಥೂಲಕಾಯದ ನಾರಿಯರೊಂದಿಗೆ ರಾಕ್ಷಸರು ಹಾಡುತ್ತಾರೆ.
ವಾರಾಹಂ ಕೌಕ್ಕುಟಂ ಮಾಂಸಂ ಗವ್ಯಂ ಗಾರ್ದಭಮೌಷ್ಟ್ರಕಮ್ |
ಧಾನಾಶ್ಚ ಯೇ ನ ಖಾದಂತಿ ತೇಷಾಂ ಜನ್ಮ ನಿರರ್ಥಕಮ್ ॥39॥
`ಹಂದಿ ಕೋಳಿ ಹಸು ಕತ್ತೆ ಒಂಟೆ ಕುರಿಗಳ ಮಾಂಸವನ್ನು ಯಾರು ತಿನ್ನುವುದಿಲ್ಲವೋ ಅವರ ಜನ್ಮ ನಿರರ್ಥಕ.'
ಏವಂ ಗಾಯಂತಿ ತೇ ಮತ್ತಾಃ ಶೀಧುನಾ ಪೀಲುಕಾವನೇ |
ಸಬಾಲವೃದ್ಧಾಃ ಕ್ರುಂದಂತಿ ತೇಷಾಂ ಧರ್ಮಃ ಕಥಂ ಭವೇತ್ ॥40॥
ಹೀಗೆ ಅಲ್ಲಿ ಆಬಾಲವೃದ್ಧರು ಮದ್ಯದಿಂದ ಅಮಲೇರಿ ಗೋನುಮರದ ಕಾಡುಗಳಲ್ಲಿ ಕೂಗಾಡುತ್ತಾರೆ, ಹಾಡುತ್ತಾರೆ, ಅವರಲ್ಲಿ ಧರ್ಮ ಹೇಗೆ ಇದ್ದೀತು?

ಯತ್ರ ಲೋಕೇಶ್ವರಃ ಕೃಷ್ಣೋ ದೇವದೇವೋ ಜನಾರ್ದನಃ |
ವಿಸ್ಮೃತಃ ಪುರುಷೈರುಗ್ರೈಸ್ತೇಷಾಂ ಧರ್ಮಃ ಕಥಂ ಭವೇತ್ ॥41॥
ಲೋಕೇಶ್ವರನಾದ ಜನಾರ್ದನ ದೇವದೇವ ಶ್ರೀಕೃಷ್ಣನನ್ನು ನೆನೆಯದ ಉಗ್ರರಾದ ಬಾಹ್ಲೀಕ ಪುರುಷರಲ್ಲಿ ಧರ್ಮ ಹೇಗೆ ಇರಬಲ್ಲುದು?
ಇತಿ ಶಲ್ಯ ವಿಜಾನೀಹಿ ಹಂತ ಭೂಯೋ ಬ್ರವೀಮಿ ತೇ |
ಯದನ್ಯೋಪ್ಯುಕ್ತವಾನಸ್ಮಾನ್ ಬ್ರಾಹ್ಮಣಃ ಕುರುಸಂಸದಿ ॥42॥
ಶಲ್ಯ, ಇದನ್ನು ತಿಳಿದುಕೊಳ್ಳು. ಅಯ್ಯೋ ಇನ್ನೂ ಹೇಳುತ್ತೇನೆ, ಕೇಳು. ಇನ್ನೊಬ್ಬ ಬ್ರಾಹ್ಮಣನೂ ಕೂಡ ಕೌರವರ ಸಮಾವೇಶದಲ್ಲಿ ನಮಗೆ ಹೇಳಿದ್ದಾನೆ.
ಪಂಚನದ್ಯೋ ವಹನ್ತ್ಯೇತಾ ಯತ್ರ ಪೀಲುವನಾನ್ಯುತ |
ಶತದ್ರುಶ್ಚ ವಿಪಾಶಾ ಚ ತೃತೀಯೈರಾವತೀ ತಥಾ ॥43॥
ಚಂದ್ರಭಾಗಾ ವಿತಸ್ತಾ ಚ ಸಿಂಧುಷಷ್ಠಾ ಮಹಾನದೀ ॥44॥
ಮದ್ಯತೆಗೆಯುವ ಗೋಣಿಮರಗಳ ಕಾಡುಗಳ ಬಳಿಯಲ್ಲಿ `ಶತದ್ರುವಿಪಾಶಾ ಐರಾವತೀಚಂದ್ರಭಾಗಾವಿತಸ್ತಾ' (ಸಟ್ಲೆಜ್ ಬೀಯಾಸ್ ರಾವೀ ಚೀನಾಬ್ ಝೀಲಂ) ಎಂದು ಐದು ನದಿಗಳು ಹರಿಯುತ್ತವೆ. ಆರನೆಯದಾಗಿ ಸಿಂಧೂ ಮಹಾನದಿಯೂ ಹರಿಯುತ್ತದೆ.
ಆರಟ್ಟಾ ನಾಮ ಬಾಹ್ಲೀಕಾ ಏತೇಷ್ವಾರ್ಯೋ ಹಿ ನೋ ವಸೇತ್ ॥45॥
ಇಲ್ಲಿ ಆರಟ್ಟ ಎಂಬ ಬಾಹ್ಲೀಕದೇಶಗಳಿವೆ. ಆರ್ಯಪುರುಷನು ಇಲ್ಲಿ ವಾಸ ಮಾಡಬಾರದು.
ವ್ರಾತ್ಯಾನಾಂ ದಾಸಮೀಯಾನಾಂ ವೈದೇಹಾನಾಮಯಜ್ವನಾಮ್ |
ನ ದೇವಾಃ ಪ್ರತಿಗೃಹ್ಣಂತಿ ಪಿತರೋ ಬ್ರಾಹ್ಮಣಾಸ್ತಥಾ ॥46॥
ತೇಷಾಂ ಪ್ರನಷ್ಟಧರ್ಮಾಣಾಂ ಬಾಹ್ಲೀಕಾನಾಮಿತಿ ಶ್ರುತಿಃ |
ಬ್ರಾಹ್ಮಣೇನ ಯಥಾ ಪ್ರೋಕ್ತಂ ವಿದುಷಾ ಸಾಧುಸಂಸದಿ ॥47॥
`ದಾಸರಿಂದ ಶೂದ್ರರಿಂದ ಬ್ರಾಹ್ಮಣಿಯಲ್ಲಿ ಹುಟ್ಟಿದ ಸಂತಾನ ದಾಸಮೀಯರು. ವೈಶ್ಯರಿಂದ ಬ್ರಾಹ್ಮಣಿಯಲ್ಲಿ ಜನಿಸಿದವರು ವೈದೇಹಕರು. ಇಬ್ಬರೂ ಸಂಸ್ಕಾರಹೀನರು ಯಜ್ಞಮಾಡದವರು ಧರ್ಮಬಾಹಿರರು ಬಾಹ್ಲೀಕರು. ಇವರು ಕೊಡುವ ಹವ್ಯಕವ್ಯಗಳನ್ನು ದೇವತೆಗಳೂ ಪಿತೃಗಳೂ ಬ್ರಾಹ್ಮಣರೂ ಸ್ವೀಕರಿಸುವುದಿಲ್ಲ ಎಂದು ನಾವು ಕೇಳಿದ್ದೇವೆ.' ಇದು ಧರ್ಮವೆತ್ತನಾದ ಬ್ರಾಹ್ಮಣನು ಸಜ್ಜನರ ಸಮಾವೇಶದಲ್ಲಿ ಹೇಳಿದ ಮಾತು.
ಕಾಷ್ಠಕುಂಡೇಷು ಬಾಹ್ಲೀಕಾ ಮೃಣ್ಮಯೇಷು ಚ ಭುಂಜತೇ |
ಸಕ್ತುಮದ್ಯಾವಲಿಪ್ತೇಷು ಶ್ವಾವಲೀಢೇಷು ನಿರ್ಘೃಣಾಃ ॥48॥
ಆವಿಕಂ ಚೌಷ್ಟ್ರಿಕಂ ಚೈವ ಕ್ಷೀರಂ ಗಾರ್ದಭಮೇವ ಚ |
ತದ್ವಿಕಾರಾಂಶ್ಚ ಬಾಹ್ಲೀಕಾಃ ಖಾದಂತಿ ಚ ಪಿಬಂತಿ ಚ ॥49॥
ಕರುಣೆ ಇಲ್ಲದ ವಾಹೀಕರು ಸಕ್ತು ಮದ್ಯ ಲೇಪಯುಕ್ತವಾದ, ನಾಯಿ ನೆಕ್ಕಿರುವ ಮರದ ಮರಿಗೆ, ಮಣ್ಣಿನ ಶರಾವೆಗಳಲ್ಲಿ ಕುರಿ ಒಂಟೆ ಕತ್ತೆಗಳ ಮಾಂಸ ತಿನ್ನುತ್ತಾರೆ, ಅವುಗಳ ಹಾಲು ಕುಡಿಯುತ್ತಾರೆ, ಅವುಗಳಿಂದಾಗುವ ಬೆಣ್ಣೆ ತುಪ್ಪ ಉಣ್ಣುತ್ತಾರೆ.
ಪಾತ್ರಸಂಕರಿಣೋ ಜಾಲ್ಮಾಃ ಸರ್ವಾನ್ನಕ್ಷೀರಭೋಜನಾಃ |
ಆರಟ್ಟಾ ನಾಮ ಬಾಹ್ಲೀಕಾ ವರ್ಜನೀಯಾ ವಿಪಶ್ಚಿತಾ ॥50॥
ಆರಟ್ಟರೆಂಬ ಬಾಹ್ಲೀಕರು ನೀಚರು. ಒಂದೇ ಪಾತ್ರೆಯಲ್ಲಿ ಎಲ್ಲರೂ ಅನ್ನ ಹಾಲು ಉಣ್ಣುತ್ತಾರೆ. ತಿಳಿದವರು ಇವರ ಸಹವಾಸದಿಂದ ದೂರವಿರಬೇಕು.
ಇತಿ ಶಲ್ಯ ವಿಜಾನೀಹಿ ಹಂತ ಭೂಯೋ ಬ್ರವೀಮಿ ತೇ |
ಯದನ್ಯೋಽಪ್ಯುಕ್ತವಾನ್ ಮಹ್ಯಂ ಬ್ರಾಹ್ಮಣಃ ಕುರುಸಂಸದಿ ॥51॥
ಶಲ್ಯ, ಇದನ್ನು ನೀನು ತಿಳಿದುಕೊಳ್ಳು, ಅಯ್ಯೋ! ಇನ್ನೂ ಹೇಳುತ್ತೇನೆ, ಕೇಳು. ಇನ್ನೊಬ್ಬ ಬ್ರಾಹ್ಮಣನೂ ಕೌರವರ ಸಮಾವೇಶದಲ್ಲಿ ನನಗೆ ಇದನ್ನು ಹೇಳಿದ್ದಾನೆ.
ಯುಗಂಧರೇ ಪಯಃ ಪೀತ್ವಾ ಪ್ರೋಷ್ಯ ಚಾಪ್ಯಚ್ಯುತಸ್ಥಲೇ |
ತದ್ವದ್ಭೂತಿಲಯೇ ಸ್ನಾತ್ವಾ ಕಥಂ ಸ್ವರ್ಗಂ ಗಮಿಷ್ಯತಿ ॥52॥
ಪೇಯ ನಿಯಮವಿಲ್ಲದ ಯುಗಂಧರ ನಗರದಲ್ಲಿ ಒಂಟೆಯ ಹಾಲು ಕುಡಿದರೆ, ಸುರತ ನಿಯಮವಿಲ್ಲದ ಅಚ್ಯುತಸ್ಥಳ ನಗರದಲ್ಲಿ ವಾಸ ಕೈಗೊಂಡರೆ ಹೊಲಗೇರಿ ಮಯವಾದ ಭೂತಿಲಯನಗರದಲ್ಲಿ ಹೊಲೆಯರೊಂದಿಗೆ ಸ್ನಾನಮಾಡಿದರೆ ಸ್ವರ್ಗಕ್ಕೆ ಹೇಗೆ ಹೋಗಲು ಸಾಧ್ಯ?
ಪಂಚನದ್ಯೋ ವಹಂತ್ಯೇತಾ ಯತ್ರ ನಿಃಸೃತ್ಯ ಪರ್ವತಾತ್ |
ಆರಟ್ಟಾ ನಾಮ ಬಾಹ್ಲೀಕಾ ನ ತೇಷ್ವಾರ್ಯೋ ದ್ವ್ಯಹಂ ವಸೇತ್ ॥53॥
ಪಂಚನದಿಗಳು ಪರ್ವತದಿಂದ ಇಳಿದು ಹರಿವ ಪ್ರದೇಶಗಳು ಆರಟ್ಟವೆನಿಸುವ ಬಾಹ್ಲೀಕ ದೇಶಗಳು. ಅಲ್ಲಿ ಆರ್ಯನು ಎರಡು ದಿನವೂ ವಾಸಮಾಡಬಾರದು.
ಬಹ್ಲೀ ನಾಮ ಬಲೀ ಕಶ್ಚ ವಿಪಾಶಾಯಾಂ ಪಿಶಾಚಕೌ |
ತಯೋರಪತ್ಯಂ ಬಾಹ್ಲೀಕಾ ನೈಷಾ ಸೃಷ್ಟಿಃ ಪ್ರಜಾಪತೇಃ ॥54॥
`ಬಹ್ಲೀ' ಎಂದು ಒಬ್ಬಳು ಪಿಶಾಚಿ ಮತ್ತು `ಕ' ಎಂದು ಒಬ್ಬ ಬಲಿಷ್ಠನಾದ ಪಿಶಾಚ. ಇವರಿಬ್ಬರ ಸಂತಾನವೇ ಬಾಹ್ಲೀಕರು. ಇದು ಬ್ರಹ್ಮನ ಸೃಷ್ಟಿಯಲ್ಲ.
ತೇ ಕಥಂ ವಿವಿಧಾನ್ ಧರ್ಮಾನ್ ಜ್ಞಾಸ್ಯಂತೇ ಹೀನಯೋನಯಃ ॥55॥

ಈ ಬಾಹ್ಲೀಕರು ಹೀನಯೋನಿ ಜಾತರು. ನಾನಾವಿಧವಾದ ಧರ್ಮವನ್ನು ಹೇಗೆ ತಿಳಿಯಬಲ್ಲರು?
ಕಾರಸ್ಕರಾನ್ ಮಾಹಿಷಕಾನ್ ಕರಂಭಾನ್ ಕಟಕಾಲಿಕಾನ್ |
ಕರ್ಕೋಟವೀರಕಾಂಬಷ್ಠಾನ್ ಉನ್ಮಾರ್ಗಾಂಶ್ಚ ವಿವರ್ಜಯೇತ್ ॥56॥
ಕಾರಸ್ಕರಮಾಹಿಷಕಕರಂಭಕಟಕಾಲಿಕಕರ್ಕೋಟವೀರಕಅಂಬಷ್ಠರು ಎಲ್ಲರೂ ದಾರಿತಪ್ಪಿದವರು. ಇವರ ಸಹವಾಸವನ್ನು ಬಿಟ್ಟುಬಿಡಬೇಕು.
ಇತಿ ತೀರ್ಥಾನುಸರ್ತಾರಂ ರಾಕ್ಷಸೀ ಕಾಚಿದಬ್ರುವೀತ್ |
ಏಕರಾತ್ರಮುಷಿತ್ವೇಹ ಮಹೋಲೂಖಲಮೇಖಲಾ ॥57॥
ಹೀಗೆ ತೀರ್ಥಾಟನದಲ್ಲಿದ್ದ ಸಜ್ಜನನಿಗೆ ಅವನ ಬಳಿ ಒಂದು ರಾತ್ರಿ ಉಳಿದುಕೊಂಡಿದ್ದ, ದೊಡ್ಡ ಪೀಪಾಯನ್ನೆ ನಡುಕಟ್ಟಾಗಿ ಮಾಡಿಕೊಂಡಿದ್ದ, ಒಬ್ಬಳು ರಾಕ್ಷಸಿ ಕೂಡ ಹೇಳಿದಳಂತೆ.
ಆರಟ್ಟಾ ನಾಮ ತೇ ದೇಶಾ ಬಾಹ್ಲೀಕಂ ನಾಮ ತದ್ವನಮ್ ॥58॥
ಬ್ರಾಹ್ಮಣಾಪಸದಾ ಯತ್ರ ಜಾಯಂತೇ ಚಾಧಮಾತ್ ಕುಲಾತ್ |
ವೇದಾ ನ ತೇಷಾಂ ವೇದ್ಯಂ ಚ ಯಜ್ಞಾ ಯಾಜನಮೇವ ಚ ॥59॥
ಆರಟ್ಟ ಎಂಬ ದೇಶಗಳಲ್ಲಿ ಬಾಹ್ಲೀಕವೆಂಬ ಕಾಡು. ಅಲ್ಲಿ ಹೆಸರಿಗೆ ಮಾತ್ರ ಬ್ರಾಹ್ಮಣರೆನಿಸಿದವರು ಅಧರ್ಮಕುಲದಿಂದ ಜನಿಸಿ ಬರುತ್ತಾರೆ. ಅವರಲ್ಲಿ ವೇದಗಳಿಲ್ಲ, ವೇದಗಳಿಂದ ವೇದ್ಯವಾದ ಧರ್ಮವಿಲ್ಲ. ಯಜ್ಞಗಳಿಲ್ಲ, ಯಜ್ಞ ಮಾಡಿಸುವವರಿಲ್ಲ.
ವ್ರಾತ್ಯಾನ್ನಂ ದಾಸಮೀಯಾನಾಮನ್ನಂ ದೇವಾ ನ ಭುಂಜತೇ |
ಪ್ರಸ್ಥಲಾ ಮದ್ರಗಾಂಧಾರಾ ಆರಟ್ಟಾ ನಾಮತಃ ಶಕಾಃ ॥60॥
ವಸಾತಿಸಿಂಧುಸೌವೀರಾ ಇತಿ ಪ್ರಾಯೋಽತಿಕುತ್ಸಿತಾಃ ॥61॥
ನೀಚರ ಅನ್ನವನ್ನೂ ದಾಸಮೀಯರ ಅನ್ನವನ್ನೂ ದೇವತೆಗಳು ಸ್ವೀಕರಿಸುವುದಿಲ್ಲ. ಅವರ ದೇಶಗಳು ಪ್ರಸ್ಥಲ ಮದ್ರ ಗಾಂಧಾರ ಆರಟ್ಟ ಶಕ ವಸಾತಿ ಸಿಂಧು ಸೌವೀರಗಳು ಹೆಚ್ಚಿನಮಟ್ಟಿಗೆ ಅತ್ಯಂತ ನಿಂದಿತವಾಗಿವೆ.'
ಕರ್ಣಃ
ಇತಿ ಶಲ್ಯ ವಿಜಾನೀಹಿ ಹಂತ ಭೂಯೋ ಬ್ರವೀಮಿ ತೇ |
ಉಚ್ಯಮಾನಂ ಮಯಾ ಸಮ್ಯಕ್ತ್ವಮೇಕಾಗ್ರಮನಾಃ ಶೃಣು ॥62॥
ಕರ್ಣ ನುಡಿದ– ಶಲ್ಯ, ಇದನ್ನು ನೀನು ತಿಳಿದುಕೊಳ್ಳು, ಅಯ್ಯೋ ಇನ್ನೂ ಹೇಳುತ್ತೇನೆ, ಕೇಳು. ನಾನು ಹೇಳುವುದನ್ನು ಚೆನ್ನಾಗಿ ಏಕಾಗ್ರಚಿತ್ತದಿಂದ ಕೇಳು.
ಬ್ರಾಹ್ಮಣಃ ಕಿಲ ನೋ ಗೇಹಮಧ್ಯಗಚ್ಛತ್ಪುರಾಽತಿಥಿಃ |
ಆಚಾರಂ ತತ್ರ ಸಂಪ್ರೇಕ್ಷ್ಯ ಪ್ರೀತೋ ವಚನಮಬ್ರವೀತ್ ॥63॥
ನಮ್ಮ ಮನೆಗೆ ಹಿಂದೆ ಬ್ರಾಹ್ಮಣನೊಬ್ಬ ಅತಿಥಿಯಾಗಿ ಬಂದ. ಮನೆಯಲ್ಲಿ ಆಚಾರವಿರುವುದನ್ನು ಕಂಡು ಸಂತುಷ್ಟನಾಗಿ ಹೇಳಿದ
ಮಯಾ ಹಿಮವತಃ ಶೃಂಗಮೇಕೇನಾಧ್ಯುಷಿತಂ ಚಿರಮ್ |
ದೃಷ್ಟಾಶ್ಚ ಬಹವೋ ದೇಶಾ ನಾನಾಧರ್ಮಸಮಾವೃತಾಃ ॥64॥
ನಾನು ಹಿಮಾಲಯದ ತುದಿಯಲ್ಲಿ ಏಕಾಕಿಯಾಗಿ ಚಿರಕಾಲ ವಾಸ ಮಾಡಿದೆ. ಮತ್ತು ನಾನಾ ಧರ್ಮಗಳನ್ನು ಅನುಸರಿಸುವ ಬಹಳ ದೇಶಗಳನ್ನು ಕಂಡೆ.
ನ ಚ ಕೇನ ಚ ಧರ್ಮೇಣ ವಿರುದ್ಧ್ಯಂತೇ ಪ್ರಜಾ ಇಮಾಃ |
ಸರ್ವಾಶ್ಚಾಪ್ಯಾಚರನ್ ಧರ್ಮಂ ಯದುಕ್ತಂ ವೇದಪಾರಗೈಃ ॥65॥
ಅಲ್ಲಿರುವ ಪ್ರಜೆಗಳು ಯಾವ ಕಾರಣಕ್ಕೂ ಧರ್ಮವಿರುದ್ಧವಾಗಿ ನಡೆಯುತ್ತಿರ ಲಿಲ್ಲ. ಎಲ್ಲರೂ ಕೂಡ ವೇದಪಾರಂಗತರು ಹೇಳಿದ ಧರ್ಮವನ್ನೇ ಆಚರಿಸು ತ್ತಿದ್ದರು.
ಅಟತಾ ತು ಮಯಾ ದೇಶಾನ್ನಾನಾಧರ್ಮಸಮಾಕುಲಾನ್ |
ಆಗಚ್ಛತಾ ಮಹಾರಾಜ ಬಾಹ್ಲೀಕೇಷು ನಿಶಾಮಿತಮ್ ॥66॥
ನಾನಾಧರ್ಮಗಳನ್ನಾಚರಿಸುತ್ತಿದ್ದ ದೇಶಗಳನ್ನು ಸುತ್ತಿ ಬರುವಾಗ, ಮಹಾರಾಜ, ನಾನು ಬಾಹ್ಲೀಕದೇಶದಲ್ಲಿ ಧರ್ಮಾಚರಣೆಯ ವಿಚಿತ್ರ ವೈಖರಿಯನ್ನು ಕಂಡೆ.
ತತ್ರ ವೈ ಬ್ರಾಹ್ಮಣೋ ಭೂತ್ವಾ ಪುನರ್ಭವತಿ ಕ್ಷತ್ರಿಯಃ |
ವೈಶ್ಯಃ ಶೂದ್ರಶ್ಚ ಬಾಹ್ಲೀಕಸ್ತತೋ ಭವತಿ ನಾಪಿತಃ ॥67॥
ಅಲ್ಲಿ ಬಾಹ್ಲೀಕನು ಬ್ರಾಹ್ಮಣನಾಗಿ ಹುಟ್ಟಿ ಕ್ಷತ್ರಿಯನಾಗುತ್ತಾನೆ. ವೈಶ್ಯನಾಗುತ್ತಾನೆ, ಶೂದ್ರನೂ ಆಗುತ್ತಾನೆ. ಕೊನೆಗೆ ಕ್ಷೌರಿಕನೂ ಆಗುತ್ತಾನೆ. ಯಾರಿಗೆ ಯಾವುದು ಧರ್ಮ ಎಂದು ನಿಯಮವೇ ಇಲ್ಲ.
ನಾಪಿತಶ್ಚ ತತೋ ಭೂತ್ವಾ ಪುನರ್ಭವತಿ ಬ್ರಾಹ್ಮಣಃ |
ದ್ವಿಜೋ ಭೂತ್ವಾ ಚ ತತ್ರೈವ ಪುನರ್ದಾಸೋಽಭಿಜಾಯತೇ ॥68॥
ಕ್ಷೌರಿಕನಾಗಿ ಬಳಿಕ ಪುನಃ ಬ್ರಾಹ್ಮಣನಾಗುತ್ತಾನೆ. ಬ್ರಾಹ್ಮಣನಾಗಿ ಅಲ್ಲಿಯೇ ಪುನಃ ಶೂದ್ರನೂ ಆಗುತ್ತಾನೆ.
ಭವಂತ್ಯೇಕಕುಲೇ ವಿಪ್ರಾಃ ಶಿಷ್ಟಾ ಯೇ ಕಾಮಚಾರಿಣಃ |
ಗಾಂಧಾರಾ ಮದ್ರಕಾಶ್ಚೈವ ಬಾಹ್ಲೀಕಾಃ ಕೇಪ್ಯಚೇತನಾಃ ॥69॥
ಒಂದೇ ಮನೆಯಲ್ಲಿ ಕೆಲಕಾಲ ಶಿಷ್ಟರಾದ ಬ್ರಾಹ್ಮಣರು, ಕೆಲಕಾಲ ಅವರೇ ಸ್ವೇಚ್ಛಾಚಾರಿಗಳು, ಬುದ್ಧಿ ಇಲ್ಲದವರು. ಗಾಂಧಾರ ಮದ್ರಕ ಬಾಹ್ಲೀಕರೆಲ್ಲರೂ ಹೀಗೇ.

ಏತನ್ಮಯಾ ಶ್ರುತಂ ತತ್ರ ಧರ್ಮಸಂಕರಕಾರಕಮ್ |
ಕೃತ್ಸ್ನಾಮಟಿತ್ವಾ ಪೃಥಿವೀಂ ಬಾಹ್ಲೀಕೇಷು ವಿಪರ್ಯಯಃ ॥70॥
ಬಾಹ್ಲೀಕರಲ್ಲಿ ಧರ್ಮಸಂಕರ ಕಾರಕವಾದ ಈ ನಡತೆ ಇರುವುದನ್ನು ಮೊದಲೇ ಕೇಳಿದ್ದೆ. ಇಡೀ ಭೂಮಿಯನ್ನು ಸುತ್ತಿ ಬಂದಾಗ ಬಾಹ್ಲೀಕರಲ್ಲಿ ಈ ವಿಪರ್ಯಾಸ ಕಂಡುಬಂದಿತು.'
ಇತಿ ಶಲ್ಯ ವಿಜಾನೀಹಿ ಹಂತ ಭೂಯೋ ಬ್ರವೀಮಿ ತೇ |
ಯದಪ್ಯನ್ಯೋಽಬ್ರವೀದ್ ವಾಕ್ಯಂ ಬಾಹ್ಲೀಕಾನಾಂ ವಿಕುತ್ಸಿತಮ್ ॥71॥
ಹೀಗೆ ಶಲ್ಯ, ಬ್ರಾಹ್ಮಣನು ಹೇಳಿದ್ದನ್ನು ಅರಿತುಕೊಳ್ಳು. ಅಯ್ಯೋ ಇನ್ನೂ ಹೇಳುತ್ತೇನೆ, ಕೇಳು. ಇನ್ನೊಬ್ಬ ಬ್ರಾಹ್ಮಣನೂ ಕೂಡ ಬಾಹ್ಲೀಕರ ದುರಾಚಾರದ ಬಗ್ಗೆ ನನಗೆ ಹೇಳಿದ.
ಆನೀಯೇಹಾಕ್ಷತಾ ಕಾಚಿದಾರಟ್ಟೈಃ ಕಿಲ ದಸ್ಯುಭಿಃ |
ಅಧರ್ಮತಶ್ಚೋಪಯಾತಾ ಸಾ ತಾನಭ್ಯಶಪತ್ ತತಃ ॥72॥
ಇನ್ನೂ ಮೈನರೆಯದಿದ್ದ ಬಾಲಕಿಯೊಬ್ಬಳನ್ನು ಬಾಹ್ಲೀಕರ ದರೋಡೆಕೋರರು ಅಪಹರಿಸಿ ಈ ದೇಶಕ್ಕೆ ತಂದು ಅವಳನ್ನು ಕೂಡಿದರು. ಅವಳು ಅವರನ್ನು ಶಪಿಸಿದಳು.
ಬಾಲಾಂ ಬಂಧುಮತೀಂ ಯನ್ಮಾಮಧರ್ಮೇಣೋಪಗಚ್ಛಥ |
ತಸ್ಮಾನ್ನಾರ್ಯೋ ಭವಿಷ್ಯಂತಿ ಬಂಧಕ್ಯೋ ವೈ ಕುಲೇಷು ವಃ ॥73॥
ನಾನಿನ್ನೂ ಬಾಲಕಿಯಾಗಿರುವಾಗಲೇ, ಬಂಧುಬಾಂಧವರಿಂದ ಕೂಡಿದ್ದ ನನ್ನನ್ನು ಅಧರ್ಮದಿಂದ ಕೂಡಿರುವಿರಿ. ಅದರಿಂದ ನಿಮ್ಮ ಮನೆಗಳಲ್ಲಿ ನಾರಿಯರು ವ್ಯಭಿಚಾರಿಣಿಯರಾಗುವರು.
ನ ಚೈವಾಸ್ಮಾತ್ ಪ್ರಮೋಕ್ಷ್ಯಧ್ವಂ ಘೋರಾಚ್ಛಾಪಾನ್ನರಾಧಮಾಃ |
ತಸ್ಮಾತ್ ತೇಷಾಂ ಭಾಗಹರಃ ಕಥಂ ಧರ್ಮಾನ್ ವದಿಷ್ಯಸಿ ॥74॥
`ನರಾಧಮರೆ, ನನ್ನ ಈ ಘೋರವಾದ ಶಾಪದಿಂದ ನಿಮಗೆ ಮುಕ್ತಿ ಇಲ್ಲ' ಎಂದು. ಅದರಿಂದ, ಶಲ್ಯ, ಆ ಬಾಹ್ಲೀಕರ ಸಂಪತ್ತಿನಲ್ಲಿಯೇ ಆರನೆ ಒಂದು ಭಾಗವನ್ನು ಕರವಾಗಿ ವಸೂಲಿ ಮಾಡುವ ನೀನು ಧರ್ಮವನ್ನು ಹೇಗೆ ಹೇಳುವೆ?
ಕುರವಃ ಸಹಪಾಂಚಾಲಾಃ ಸಾಲ್ವಾ ಮಾತ್ಸ್ಯಾಃ ಸನೈಮಿಶಾಃ |
ಕೋಸಲಾಃ ಕಾಶಿಪೌಂಡ್ರಾಶ್ಚ ಕಾಲಿಂಗಾ ಮಾಗಧಾಸ್ತಥಾ ॥75॥
ಚೇದಯಶ್ಚ ಮಹಾಭಾಗಾ ಧರ್ಮಂ ಜಾನಂತಿ ಶಾಶ್ವತಮ್ |
ನಾನಾದೇಶೇಷು ಸಂತಶ್ಚ ಪ್ರಾಯೋ ಬಾಹ್ಯಾಲಯಾದೃತೇ ॥76॥
ಕುರು ಪಾಂಚಾಲ ಸಾಲ್ವ ಮತ್ಸ್ಯ ನೈಮಿಶ ಕೋಸಲ ಕಾಶಿ ಪೌಂಡ್ರ ಕಲಿಂಗ ಮಾಗಧ ಚೇದಿಗಳೆಂದು ನಾನಾ ದೇಶವಾಸಿಗಳಾದ ಮಹಾತ್ಮರು, ಬಾಹ್ಲೀಕ ದೇಶದವರು ಹೊರತಾಗಿ ಪ್ರಾಯಃ ಎಲ್ಲರೂ, ಸನಾತನ ವೇದಧರ್ಮವನ್ನು ತಿಳಿದಿದ್ದಾರೆ.
ಆಮತ್ಸ್ಯೇಭ್ಯಃ ಕುರುಪಾಂಚಾಲಸಾಲ್ವಾ
ಆನೈಮಿಶಾಚ್ಚೇದಯೋ ಯೇ ವಿಶಿಷ್ಟಾಃ |
ಧರ್ಮಂ ಪುರಾಣಮುಪಜೀವಂತಿ ಸಂತೋ
ಮದ್ರಾನೃತೇ ಪಾಂಚನದಾಂಶ್ಚ ಜಿಹ್ಮಾನ್ ॥77॥
ಮತ್ಸ್ಯರಿಂದ ತೊಡಗಿ ನೈಮಿಶರಿಂದಲೂ ತೊಡಗಿ ಕುರುಪಾಂಚಾಲ ಸಾಲ್ವ ಚೇದಿಗಳೆಂದು ಉತ್ತಮರಾದ ಎಲ್ಲ ಸಜ್ಜನರೂ ಕೂಡ, ಕಪಟಿಗಳಾದ ಮದ್ರ ಮತ್ತು ಪಂಚನದೀ ತೀರವಾಸಿಗಳು ಮಾತ್ರ ಹೊರತಾಗಿ, ಸನಾತನ ಧರ್ಮವನ್ನು ಆಶ್ರಯಿಸಿಯೇ ಇರುತ್ತಾರೆ.
ಏವಂ ವಿದ್ವಾನ್ ಧರ್ಮಕಥಾಸು ರಾಜನ್
ತೂಷ್ಣೀಮ್ಭೂತೋ ಜಡವಚ್ಛಲ್ಯ ಭೂಯಾಃ |
ತ್ವಂ ತಸ್ಯ ಗೋಪ್ತಾ ಚ ಜನಸ್ಯ ರಾಜಾ
ಷಡ್ಭಾಗಹರ್ತಾ ಶುಭದುಷ್ಕೃತಸ್ಯ ॥78॥
ಶಲ್ಯರಾಜನೆ, ಹೀಗೆ ತಿಳಿದು ನೀನು, ಧರ್ಮವಿಷಯದಲ್ಲಿ ಮಾತುಕತೆ ಬಂದಾಗ ಜಡಪದಾರ್ಥದಂತೆ ಸುಮ್ಮನೇ ಇರಬೇಕು. ಏಕೆಂದರೆ ನೀನು ಆ ಬಾಹ್ಲೀಕ ಜನರಿಗೆ ರಾಜ. ಅವರ ಪುಣ್ಯಾಪಾಪಗಳೆರಡರಲ್ಲಿಯೂ ಆರನೆ ಒಂದು ಭಾಗವನ್ನು ನೀನು ತೆಗೆದುಕೊಳ್ಳುವವನು.
ಅಥವಾ ದುಷ್ಕೃತಸ್ಯ ತ್ವಂ ಹರ್ತಾ ತೇಷಾಮರಕ್ಷಿತಾ |
ರಕ್ಷಿತಾ ಪುಣ್ಯಭಾಗ್ ರಾಜಾ ಪ್ರಜಾನಾಂ ತ್ವಂ ಹ್ಯಪುಣ್ಯಭಾಕ್ ॥79॥
ಅಥವಾ ನೀನು ಅವರ ಧರ್ಮರಕ್ಷಣೆ ಮಾಡದಿರುವುದರಿಂದ ಅವರ ಪಾಪಕ್ಕೇ ನೀನು ಭಾಗಿ. ಧರ್ಮರಕ್ಷಣೆಮಾಡುವ ರಾಜನೇ ಪ್ರಜೆಗಳ ಪುಣ್ಯಕ್ಕೆ ಭಾಗಿಯಾಗುತ್ತಾನೆ. ಅದರಿಂದ ನೀನು ಪುಣ್ಯಭಾಗಿಯಾಗುವುದಿಲ್ಲ.
ಪೂಜ್ಯಮಾನೇ ಪುರಾ ಧರ್ಮೇ ಸರ್ವದೇಶೇಷು ಶಾಶ್ವತೇ |
ವ್ರಾತ್ಯಾನಾಂ ದಾಶಮೀಯಾನಾಂ ಕೃತೇಽಪ್ಯಶುಭಕಾರಿಣಾಮ್ ॥80॥
ಧರ್ಮಂ ಪಾಂಚನದಂ ದೃಷ್ಟ್ವಾ ಧಿಗಿತ್ಯಾಹ ಪಿತಾಮಹಃ |
ಬ್ರಹ್ಮಣಾ ನಿಂದಿತೇ ಧರ್ಮೇ ಸ ತಂ ಲೋಕೇ ಕಿಮಬ್ರವೀಃ ॥81॥
ಹಿಂದೆ ಎಲ್ಲ ದೇಶಗಳಲ್ಲಿ ಧರ್ಮವು ಆದರಿಸಲ್ಪಡುತ್ತಿದ್ದಾಗ ಪಂಚನದೀ ರಾಜ್ಯಗಳ ಧರ್ಮವನ್ನು ನೋಡಿ ಪಿತಾಮಹನು ಅದನ್ನು ಧಿಕ್ಕರಿಸಿದ. ಕೃತಯುಗದಲ್ಲಿ ಕೂಡ ಅಶುಭಕರ್ಮಕಾರಿಗಳಾದ ಈ ಬಾಹ್ಲೀಕರು ವ್ಯಭಿಚಾರಿಗಳ ಸಂತಾನವಾಗಿದ್ದು ಸಂಸ್ಕಾರರಹಿತರಾಗಿರುವುದರಿಂದ ಬ್ರಹ್ಮನೇ ಅವರ ಧರ್ಮವನ್ನು ನಿಂದಿಸಿರುವನೆಂದ ಮೇಲೆ, ಶಲ್ಯ, ಆ ಧರ್ಮವನ್ನು ನೀನೇಕೆ ಹೇಳಿದೆ?

ಇಮಂ ಪಾಂಚನದಂ ಧರ್ಮಮವಮೇನೇ ಪಿತಾಮಹಃ |
ಸ್ವಧರ್ಮಸ್ಥೇಷು ವರ್ಣೇಷು ಸೋಽಪ್ಯೇತಾನ್ನಾಭ್ಯಪೂಜಯತ್ ॥82॥
ಈ ಪಂಚನದೀ ದೇಶದವರ ಆಚಾರವನ್ನು ಕಂಡು ಧರ್ಮಪುರುಷನನ್ನು ಪಿತಾಮಹನು ಧಿಕ್ಕರಿಸಿದ. `ಇಲ್ಲಿ ನಿನ್ನ ಪ್ರಚಾರಶಕ್ತಿ ಕುಂಠಿತವಾಯಿತು!' ಎಂದು ಧರ್ಮಪುರುಷನನ್ನು ನಿಂದಿಸಿದ. ಬೇರೆ ಎಲ್ಲ ಕಡೆ ಎಲ್ಲ ವರ್ಣಗಳೂ ಸ್ವಧರ್ಮ ನಿಷ್ಠವಾಗಿರುವಾಗ ಇಲ್ಲಿ ಅವು ಹಾಗೆ ಇಲ್ಲ ಎಂದು ಅತೃಪ್ತಿಯಿಂದ ಆತ ಧರ್ಮವನ್ನು ಅಭಿನಂದಿಸಲಿಲ್ಲ.
ಇತಿ ಶಲ್ಯ ವಿಜಾನೀಹಿ ಹಂತ ಭೂಯೋ ಬ್ರವೀಮಿ ತೇ |
ಕಲ್ಮಾಷಪಾದಃ ಸರಸಿ ನಿಮಜ್ಜನ್ ರಾಕ್ಷಸೋಽಬ್ರವೀತ್ ॥83॥
ಹೀಗೆ, ಶಲ್ಯ, ತಿಳಿದುಕೊಳ್ಳು, ಅಯ್ಯೋ! ಇನ್ನೂ ಹೇಳುತ್ತೇನೆ, ಕೇಳು. ಕಲ್ಮಾಷಪಾದ ರಾಕ್ಷಸನು ಕೊಳದಲ್ಲಿ ಮುಳುಗುವಾಗ ಹೀಗೆ ಹೇಳಿದ–
ಕ್ಷತ್ರಿಯಸ್ಯ ಮಲಂ ಭೈಕ್ಷ ್ಯಂ ಬ್ರಾಹ್ಮಣಸ್ಯಾಶ್ರುತಂ ಮಲಮ್ |
ಮಲಂ ಪೃಥಿವ್ಯಾ ಬಾಹ್ಲೀಕಾಃ ಸ್ತ್ರೀಣಾಂ ಮದ್ರಸ್ತ್ರಿಯೋ ಮಲಮ್ |84|
`ಕ್ಷತ್ರಿಯನಲ್ಲಿ ಕಶ್ಮಲವೆಂದರೆ ಭಿಕ್ಷಾವೃತ್ತಿ. ಬ್ರಾಹ್ಮಣನಲ್ಲಿ ಕಶ್ಮಲವೆಂದರೆ ವೇದ ಓದದಿರುವುದು. ಭೂಮಿಯ ಮೇಲೆ ಕಶ್ಮಲವೆಂದರೆ ಬಾಹ್ಲೀಕ ದೇಶ. ಸ್ತ್ರೀಯರ ಮಧ್ಯದಲ್ಲಿ ಮದ್ರಸ್ತ್ರೀಯರೆ ಕಶ್ಮಲ.'
ನಿಮಜ್ಯಮಾನಮುದ್ಧೃತ್ಯ ಕಶ್ಚಿದ್ ರಾಜಾ ನಿಶಾಚರಮ್ |
ಅಪೃಚ್ಛತ್ ತೇನ ಚಾಖ್ಯಾತಂ ತಚ್ಛೃಣುಷ್ವ ನರಾಧಿಪ ॥85॥
ಒಬ್ಬ ರಾಜನು ಕಲ್ಮಾಷಪಾದ ರಾಕ್ಷಸನನ್ನು ಅವನು ರಾಕ್ಷಸನೆಂದು ಕೊಲ್ಲಲು ಕೊಳದಲ್ಲಿ ಮುಳುಗಿಸುತ್ತಿದ್ದ. ರಾಕ್ಷಸ ಮುಳುಗುತ್ತಿದ್ದಾಗ ಆತ ಹೇಳಿದ ಈ ಸುಂದರ ಶ್ಲೋಕವನ್ನು ಕೇಳಿ ಆತನನ್ನು ನೀರಿನಿಂದ ಮೇಲೆತ್ತಿ `ಇನ್ನೂ ಎಲ್ಲೆಲ್ಲಿ ಯಾವುದು ಮಲ, ಕಶ್ಮಲ?' ಎಂದು ಕೇಳಿದ. ಅದನ್ನು ರಾಕ್ಷಸ ಹೇಳಿದ. ಶಲ್ಯರಾಜನೆ, ಆ ರಾಜನಂತೆ ನೀನೂ ಅದನ್ನು ಕೇಳು ಎನ್ನುತ್ತಾನೆ ಕರ್ಣ.
ಮಾನುಷಾಣಾಂ ಮಲಂ ಮ್ಲೇಚ್ಛಾ ಮ್ಲೇಚ್ಛಾನಾಮೌಷ್ಟ್ರಿಕಾ ಮಲಮ್ |
ಮುಷ್ಟಿಕಾನಾಂ ಮಲಂ ಷಂಢಾಃ ಷಂಢಾನಾಂ ರಾಜಯಾಜಕಾಃ ॥86॥
ರಾಕ್ಷಸ ಹೇಳಿದ, `ಮನುಷ್ಯರ ಮಧ್ಯದಲ್ಲಿ ಮ್ಲೇಚ್ಛರೆ ಕಶ್ಮಲ. ಮ್ಲೇಚ್ಛರಲ್ಲಿ `ಉಷ್ಟ್ರ' ಒಂಟೆಯ ಮಾಂಸ ತಿನ್ನುವವರು ಕಶ್ಮಲ. ಉಷ್ಟ್ರ ಮಾಂಸವನ್ನು ತಿನ್ನುವವರಲ್ಲಿ ನಪುಂಸಕರು ಕಶ್ಮಲ. ನಪುಂಸಕರಲ್ಲಿ ಪೌರೋಹಿತ್ಯವೃತ್ತಿಯನ್ನು ಮಾಡುವ ರಾಜರು ಕಶ್ಮಲ. ಅಂದರೆ, ಕ್ಷಾತ್ರವೃತ್ತಿ ಬಿಟ್ಟು ಪೌರೋಹಿತ್ಯವೃತ್ತಿ ಮಾಡುವ ರಾಜನು ನಪುಂಸಕರಿಗಿಂತ ಕಡೆ.
`ಔಷ್ಟ್ರಿಕಾಃ' `ಮೌಷ್ಟಿಕಾಃ' ಎಂದು ಎರಡು ಪಾಠಗಳಿವೆ, ಎರಡೂ ಸರಿ ಎಂದು ಲಕ್ಷಾಲಂಕಾರದಲ್ಲಿ ಹೇಳಿದೆ. ಔಷ್ಟ್ರಿಕರೆಂದರೆ ಉಷ್ಟ್ರಮಾಂಸ ತಿನ್ನುವವರು. ಮೌಷ್ಟಿಕರೆಂದರೆ ಮುಷ್ಟಿಕ ಎಂಬ ಕುಲದಲ್ಲಿ ಹುಟ್ಟಿದವರು ಎಂದರ್ಥ. ನೀಚರಾದ ಮ್ಲೇಚ್ಛರ ಮಧ್ಯದಲ್ಲಿ ಔಷ್ಟ್ರಿಕರು ಮತ್ತು ಮುಷ್ಟಿಕರು ಇಬ್ಬರೂ ಕಶ್ಮಲರು, ಹೆಚ್ಚು ನೀಚರು.
ಸೂರ್ಯವಂಶದ ಋತುಪರ್ಣಮಹಾರಾಜನ ಮಗನಾದ ಸುದಾಸರಾಜನ ಮಗನು ರಾಜಾ ಮಿತ್ರಸಹ. ಇವನು ಬೇಟೆಯಲ್ಲಿ ಇಬ್ಬರು ರಾಕ್ಷಸರನ್ನು ಹೊಡೆದು ಒಬ್ಬನನ್ನು ಕೊಂದ. ಇನ್ನೊಬ್ಬ ರಾಕ್ಷಸ ತಪ್ಪಿಸಿಕೊಂಡು ಹೋಗಿ ಸೇಡು ತೀರಿಸಬೇಕೆಂದು, ರಾಜ ಯಜ್ಞದೀಕ್ಷಿತನಾಗಿದ್ದಾಗ ಅವನ ಬಳಿ ಅಡಿಗೆಯವನ ವೇಷದಿಂದ ಸೇರಿಕೊಂಡು ನರಮಾಂಸದಡುಗೆ ಮಾಡಿಕೊಟ್ಟ. ರಾಜ ತಿಳಿಯದೆ ಅದನ್ನು ವಸಿಷ್ಠರಿಗೆ ಉಣಬಡಿಸಿದಾಗ ಅವರು ಕುಪಿತರಾಗಿ ನೀನು ನರಭಕ್ಷಕ ರಾಕ್ಷಸನಾಗೆಂದು ಶಪಿಸಿದರು. ನಿರಪರಾಧಿಯಾದ ತನಗೆ ಮುನಿಯು ಶಾಪಕೊಡುತ್ತಿದ್ದಾರೆಂದು ರಾಜನೂ ಕೋಪಗೊಂಡು ಅವರಿಗೆ ಪ್ರತಿಶಾಪ ಕೊಡಲು ಉದ್ಯುಕ್ತನಾದ. ಪತ್ನಿ ಮದಯಂತಿ ತಡೆದುದರಿಂದ ಕೈಗೆತ್ತಿಕೊಂಡಿದ್ದ ಶಾಪೋದಕವನ್ನು ತನ್ನ ಪಾದಗಳ ಮೇಲೆಯೆ ಬಿಟ್ಟುಕೊಂಡ. ಪಾದಗಳು ಕಪ್ಪಾದುವು. ರಾಜ ಕಲ್ಮಾಷಪಾದನೆನಿಸಿದ. ಈ ಕಲ್ಮಾಷಪಾದ ರಾಕ್ಷಸ ನರಭಕ್ಷಕನಾಗಿ ತಿರುಗುತ್ತಿದ್ದಾಗ ಪ್ರಕೃತ ಇಲ್ಲಿ ಹೇಳಿದ ಒಬ್ಬ ರಾಜ ಅವನನ್ನು ಹಿಡಿದು ಕೊಳದ ನೀರಲ್ಲಿ ಮುಳುಗಿಸುತ್ತಿದ್ದಾಗ `ರಾಜನೆ, ನಾನೂ ನಿಜವಾಗಿ ಒಬ್ಬ ರಾಜನೆ, ಶಾಪದಿಂದ ರಾಕ್ಷಸನಂತಾಗಿದ್ದೇನೆ. ನನ್ನನ್ನು ಕೊಲ್ಲಬೇಡ. ಆದರೂ ನಾನು ನಿನ್ನಲ್ಲಿ ಪ್ರಾಣಭಿಕ್ಷೆ ಬೇಡಲಾರೆ. ಬೇಡಿದರೆ, ಕ್ಷತ್ರಿಯನಲ್ಲಿ ಭಿಕ್ಷಾಟನವು ಕಲ್ಮಶವೆನಿಸುತ್ತದೆ. ಇದಕ್ಕೆ ಉದಾಹರಣೆ ವೇದ ಓದದಿರುವುದು ಬ್ರಾಹ್ಮಣನಲ್ಲಿ ಕಶ್ಮಲ. ಭೂಮಿಯಲ್ಲಿ ಬಾಹ್ಲೀಕದೇಶವು ಕಶ್ಮಲ. ಸ್ತ್ರೀಯರ ಮಧ್ಯದಲ್ಲಿ ಮದ್ರ ಸ್ತ್ರೀಯರು ಕಶ್ಮಲ' ಎಂದು ಹೇಳಿದ. ರಾಜ ಅಚ್ಚರಿಗೊಂಡು, ಮುಳುಗಿಹೋಗು ತ್ತಿದ್ದ ಕಲ್ಮಾಷಪಾದನನ್ನು ಮೇಲೆತ್ತಿದ. ಅವನಿಂದ ಇನ್ನೂ ಉಪದೇಶವನ್ನು ಕೇಳಿದ.
ರಾಜಯಾಜಕಯಾಜ್ಯಾನಾಂ ಮದ್ರಕಾಣಾಂ ಚ ಯನ್ಮಲಮ್ |
ತದ್ಭವೇದ್ ವೈ ತವ ಮಲಂ ಯದ್ಯಸ್ಮಾನ್ನ ವಿಮುಂಚಸಿ ॥87॥
`ರಾಜನೆ, ನೀನು ನನ್ನನ್ನು ರಾಕ್ಷಸನೆಂದು ಬಗೆದು ನನ್ನನ್ನು ಕೊಲ್ಲದೆ ಬಿಡುತ್ತಿಲ್ಲ. ಹಾಗೆ ಮಾಡಬೇಡ, ಬಿಟ್ಟುಬಿಡು. ಇಲ್ಲದಿದ್ದರೆ, ಯುದ್ಧವಲ್ಲದ ಬೇರೆ ಪ್ರಸಂಗದಲ್ಲಿ ಒಬ್ಬ ಮೂರ್ಧಾಭಿಷಿಕ್ತನಾದ ನನ್ನಂಥ ರಾಜನನ್ನು ಕೊಲ್ಲುವುದು ನಿನಗೆ ಬ್ರಹ್ಮಹತ್ಯೆಗಿಂತಲೂ ಹೆಚ್ಚಿನ ಪಾಪವಾಗುವುದು. ಅದರಿಂದ ಪೌರೋಹಿತ್ಯ ಮಾಡುವ ರಾಜರ ಮತ್ತು ಮದ್ರಕ ದೇಶದ ಪ್ರಜೆಗಳ ಮಹಾಪಾಪಕ್ಕೆ ನೀನೂ ಭಾಗಿಯಾಗುವೆ' ಎಂದ, ರಾಕ್ಷಸ.
ಇತಿ ರಕ್ಷೋವಿಸೃಷ್ಟೇಷು ವಿಷವೀರ್ಯಹತೇಷು ಚ |
ರಕ್ಷಸಾ ಭೈಷಜಂ ಪ್ರೋಕ್ತಂ ಸಂಸಿದ್ಧಂ ಚ ನ ಚೋತ್ತರಮ್ ॥88॥
`ರಕ್ಷೋ ವಿಸೃಷ್ಟೇಷು' ಅಂದರೆ ರಾಕ್ಷಸರು ಲೋಕಕ್ಕೆ ನಾನಾವಿಧವಾಗಿ ದುರ್ಗುಣಗಳನ್ನು ಸೃಷ್ಟಿ ಮಾಡಿಕೊಟ್ಟಿರುವಾಗ ದುರ್ಗುಣಗಳಲ್ಲಿಯೂ ಹೆಚ್ಚು ವಿಷ ದಂತಿರುವ ದ್ವೇಷಾಸೂಯೆಗಳಿಂದ ನಮ್ಮಂಥವರನ್ನು ಹತರನ್ನಾಗಿ ಮಾಡುವವರು ನಿಮ್ಮಂಥವರು `ವಿಷವೀರ್ಯಹತ'ರು. ಅವರಲ್ಲಿ ಮಾಡಬಹುದಾದ ಚಿಕಿತ್ಸೆ ಎಂದರೆ ರಾಕ್ಷಸನು ಬೋಧಿಸಿದ ನೀತಿಯೆ. `ರಕ್ಷಸಾ ಪ್ರೋಕ್ತ'ವಾದ ಭೇಷಜ. ಇಷ್ಟು ಹೇಳಿದ ಮೇಲೆ, ಶಲ್ಯನೇ! ಇದಕ್ಕೆ ನಿನ್ನಲ್ಲಿ ಉತ್ತರ ಸಿದ್ಧವಿರುವುದಿಲ್ಲ `ಸಂಸಿದ್ಧಂ ಚ ನ ಚೋತ್ತರಂ'

ಬ್ರಾಹ್ಮಂ ಪಾಂಚಾಲಾಃ ಕೌರವೇಯಾಸ್ತು ಧರ್ಮ್ಯಂ
ಸತ್ಯಂ ಮತ್ಸ್ಯಾಃ ಶೂರಸೇನಾಶ್ಚ ಯಜ್ಞಂ |
ಪ್ರಾಚ್ಯಾ ದಾಸಾ ವೃಷಲಾ ದಾಕ್ಷಿಣಾತ್ಯಾಃ
ಸ್ತೇನಾ ಬಾಹ್ಲೀಕಾಃ ಸಂಕರಾ ವೈ ಸುರಾಷ್ಟ್ರಾಃ ॥89॥
ಬ್ರಾಹ್ಮಣರ ಪೂಜನವನ್ನು ಪಾಂಚಾಲರೂ, ಧರ್ಮಕಾರ್ಯವನ್ನು ಕೌರವ ವಂಶದವರೂ, ಸತ್ಯವ್ರತವನ್ನು ಮತ್ಸ್ಯದೇಶದವರೂ, ಯಜ್ಞಾನುಷ್ಠಾನವನ್ನು ಶೂರ ಸೇನ ದೇಶದವರೂ ಮಾಡುತ್ತಾರೆ. ಪೂರ್ವದೇಶದವರು ದಾಸರು, ದಾಕ್ಷಿಣಾತ್ಯರು ವೃಷಲರು, ಬಾಹ್ಲೀಕರು ದರೋಡೆಕೋರರು, ಸೌರಾಷ್ಟ್ರರು ಸಾಂಕರ್ಯ ಮಾಡು ವವರು.
ಕೃತಘ್ನತಾ ಪರವಿತ್ತಾಪಹಾರೋ
ಮದ್ಯಪಾನಂ ಗುರುದಾರಾವಮರ್ದಃ |
ವಾಕ್ಪಾರುಷ್ಯಂ ಗೋವಧೋ ರಾತ್ರಿಚರ್ಯಾ
ಬಹಿರ್ಗೇಹಂ ಪರವಸೊತ್ರೇಪಭೋಗಃ ॥90॥
ಯೇಷಾಂ ಧರ್ಮಸ್ತಾನ್ ಪ್ರತಿ ನಾಸ್ತ್ಯಧರ್ಮ
ಆರದೇಜಾನ್ ಪಾಂಚನದಾನ್ ಧಿಗಸ್ತು |
ಆಪಾಂಚಾಲಾಃ ಕುರವೋ ನೈಮಿಶಾಶ್ಚ
ಶಿಷ್ಟಾನ್ ಧರ್ಮಾನುಪಜೀವಂತಿ ವೃದ್ಧಾಃ ॥91॥
ಕೃತಘ್ನತೆ, ಪರರ ಸೊತ್ತನ್ನು ಅಪಹರಿಸುವುದು. ಮದ್ಯಪಾನ, ಗುರುಪತ್ನಿಯನ್ನು ಬಲಾತ್ಕರಿಸುವುದು, ಕಟುನುಡಿ, ಗೋವಧೆ, ಮನೆಯಿಂದ ಹೊರಗೆ ರಾತ್ರಿಯಲ್ಲಿ ಸಂಚರಿಸುವುದು, ಇತರರ ಬಟ್ಟೆಗಳನ್ನು ಉಟ್ಟುಕೊಳ್ಳುವುದು ಇಂಥ ಮಹಾ ಅಧರ್ಮ ಯಾರಿಗೆ ಧರ್ಮವೆನಿಸುವುವೋ ಅಂಥ ಆರದೇಯರಿಗೆ ಪಂಚನದೀ ಪ್ರದೇಶವಾಸಿಗಳಿಗೆ ಅಧರ್ಮವೆಂಬುದು ಏನೂ ಇಲ್ಲ. ಅಂಥವರಿಗೆ ಧಿಕ್ಕಾರ. ಪಾಂಚಾಲರಿಂದ ತೊಡಗಿ ಕುರುಗಳು ನೈಮಿಶರು ಮುಂತಾದವರು ವೃದ್ಧರು ಶಾಸೊತ್ರೇಕ್ತವಾದ ಧರ್ಮಗಳನ್ನೇ ಆಶ್ರಯಿಸುತ್ತಾರೆ.
ಪ್ರಾಚೀಂ ದಿಶಂ ಸ್ಥಿತಾ ದೇವಾ ಜಾತವೇದಃಪುರೋಗಮಾಃ |
ದಕ್ಷಿಣಾ ಪಿತೃಭಿರ್ಗುಪ್ತಾ ಯಮೇನ ಶುಭಕರ್ಮಣಾ ॥92॥
ಪೂರ್ವದಿಕ್ಕಿನ ಜನರನ್ನು ಅಗ್ನಿ ಮುಂತಾದ ದೇವತೆಗಳು ಕಾಪಾಡುತ್ತಾರೆ. ದಕ್ಷಿಣ ದಿಕ್ಕಿನವರನ್ನು ಶುಭಕರ್ಮಕಾರಿಯಾದ ಯಮನೂ ಪಿತೃದೇವತೆಗಳೂ ಕಾಪಾಡುತ್ತಾರೆ.
ಪ್ರತೀಚೀಂ ವರುಣಃ ಪಾತಿ ಪಾಲಯನ್ನಸುರಾನ್ ಬಹೂನ್ |
ಉದೀಚೀಂ ಭಗವಾನ್ ಸೋಮೋ ಬ್ರಹ್ಮಾ ಚ ಬ್ರಾಹ್ಮಣೈಃ ಸಹ ॥93॥
ಪಶ್ಚಿಮದಿಕ್ಕಿನವರನ್ನು ಬಹುಮಂದಿ ಅಸುರ ಪರಿವಾರವನ್ನು ನೋಡಿಕೊಳ್ಳುವ ವರುಣನು ಪಾಲಿಸುತ್ತಾನೆ. ಉತ್ತರದಿಕ್ಕಿನವರನ್ನು ಬ್ರಾಹ್ಮಣರೊಂದಿಗೆ ರಾಜಾ ಸೋಮನೂ ಬ್ರಹ್ಮನೂ ರಕ್ಷಿಸುತ್ತಾರೆ.
ರಕ್ಷಃಪಿಶಾಚಾನ್ ಹಿಮವಾನ್ ಗುಹ್ಯಕಾನ್ ಗಂಧಮಾದನಃ |
ಧ್ರುವಂ ಸರ್ವಾಣಿ ಭೂತಾನಿ ವಿಷ್ಣುಃ ಪಾತಿ ಸುರೋತ್ತಮಃ ॥94॥
ರಾಕ್ಷಸಪಿಶಾಚರನ್ನು ಹಿಮಾಲಯ ಪರ್ವತರಾಜ ಕಾಪಾಡುತ್ತಾನೆ. ಗುಹ್ಯಕರನ್ನು ಗಂಧಮಾದನ ಗಿರಿರಾಜ ಕಾಪಾಡುತ್ತಾನೆ. ಎಲ್ಲ ಜೀವಿಗಳನ್ನು ನಿಶ್ಚಯವಾಗಿ ದೇವೋತ್ತಮ ವಿಷ್ಣು ಕಾಪಾಡುತ್ತಾನೆ. ಹೀಗಾಗಿ ಬಾಹ್ಲೀಕರ ಅಧರ್ಮದ ಪ್ರಭಾವವು ಪಾಂಚಾಲ ಕುರು ಮುಂತಾದ ದೇಶದ ಜನರ ಮೇಲೆ ದುಷ್ಪರಿಣಾಮ ಬೀರಲು ಶಕ್ತವಾಗುತ್ತಿಲ್ಲ. ಬಾಹ್ಲೀಕರನ್ನು ಯಾರೂ ಕಾಪಾಡುವುದಿಲ್ಲ.
ಇಂಗಿತಜ್ಞಾಶ್ಚ ಮಗಧಾಃ ಪ್ರೇಕ್ಷಿತಜ್ಞಾಶ್ಚ ಕೋಸಲಾಃ |
ಅರ್ಧೋಕ್ತಾಃ ಕುರುಪಾಂಚಾಲಾಃ ಸರ್ವೋಕ್ತಾ ದಾಕ್ಷಿಣಾಪಥಾಃ ॥95॥
ಧಾರ್ಮಿಕರಲ್ಲಿ ಅಧರ್ಮಪ್ರಭಾವ ಏಕಾಗುವುದಿಲ್ಲ ಎಂದರೆ ಅಗ್ನಿಮುಂತಾದ ದೇವತೆಗಳ ಅನುಗ್ರಹದಿಂದ ಮಗಧದೇಶದ ಪ್ರಜೆಗಳು ಮುಖಭಾವದಿಂದಲೆ ಧರ್ಮವನ್ನು ತಿಳಿಯುತ್ತಾರೆ. ಕೋಸಲದೇಶದವರು ನೋಡಿ ಕಲಿಯುತ್ತಾರೆ. ಕುರು ಪಾಂಚಾಲರು ಸ್ವಲ್ಪ ಹೇಳಿದರೂ ಎಲ್ಲ ತಿಳಿಯುತ್ತಾರೆ. ದಕ್ಷಿಣಾಪಥದವರು ಎಲ್ಲ ಹೇಳಿದಾಗ ತಿಳಿದುಕೊಳ್ಳುತ್ತಾರೆ.
ಪಾರ್ವತೀಯಾಶ್ಚ ವಿಷಮಾಸ್ತಥೈವ ಶಿಬಯಸ್ತಥಾ |
ಸರ್ವಜ್ಞಾ ಯವನಾ ರಾಜನ್ ಶೂರಾಶ್ಚೈವ ವಿಶೇಷತಃ ॥96॥
ಪರ್ವತಪ್ರದೇಶದ ಜನರೂ ಶಿಬಿಗಳೂ ಹೇಳಿದ್ದನ್ನು ವಿಪರೀತವಾಗಿ ತಿಳಿಯು ವವರು. ರಾಜನೆ, ಯವನರು ಎಲ್ಲ ತಿಳಿಯುವವರು. ವಿಶೇಷವಾಗಿ ಶೂರರು.
ಮ್ಲೇಚ್ಛಾಃ ಸ್ವಸಂಜ್ಞಾನಿಯತಾ ನಾನುಕ್ತಮಿತರೇ ಜನಾಃ ॥97॥
ಮ್ಲೇಚ್ಛರು ತಮ್ಮ ಭಾಷೆಯಿಂದ ಹೇಳಿದರೆ ಮಾತ್ರ ತಿಳಿಯುತ್ತಾರೆ. ಇತರ ಪಾಮರ ಜನರು, ಹೇಳದಿರುವುದನ್ನು ತಿಳಿಯುವುದಿಲ್ಲ.
ಪ್ರತಿರಬ್ಧಾಸ್ತು ಬಾಹ್ಲೀಕಾ ನ ಚ ಕೇಚನ ಮದ್ರಕಾಃ |
ಸ ತ್ವಮೇತಾದೃಶಃ ಶಲ್ಯ ನೋತ್ತರಂ ವಕ್ತುಮರ್ಹಸಿ ॥98॥
ಬಾಹ್ಲೀಕರು ಮಾತ್ರ ಹೇಳಿದರೆ ಕೋಪಿಸಿಕೊಳ್ಳುವವರು. ಮದ್ರಕರಲ್ಲಿ ಕೆಲವರು ಮಾತ್ರ ಕೋಪಿಸಿಕೊಳ್ಳುವುದಲ್ಲ. ಹೆಚ್ಚಾಗಿ ಎಲ್ಲರೂ ಕೋಪಿಸಿ ಕೊಳ್ಳುವವರೆ. ಶಲ್ಯ, ನೀನೂ ಇಂಥವನೆ. ಇದಕ್ಕೆ ನೀನು ಉತ್ತರ ಕೊಡಲಾರೆ.
ಏವಂ ಜ್ಞಾತ್ವಾ ಜೋಷಮಾಸ್ಸ್ವ ಪ್ರತೀಪಂ
ಮಾ ಸ್ಮ ಕ್ರುಧ್ಯಃ ಪಾಪಭೃತಾಂ ವರಿಷ್ಠ |
ಪೂರ್ವಂ ಹತ್ವಾ ತ್ವಾಂ ಸಪುತ್ರಂ ಬಲೈಶ್ಚ

ಪಶ್ಚಾದ್ಧ್ವಂಸ್ಯೇ ವಾಸುದೇವಾರ್ಜುನೌ ಚ ॥99॥
ಹೀಗೆ ತಿಳಿದು ಸುಮ್ಮನೇ ಇರು. ಪಾಪಿಗಳಲ್ಲಿ ಶ್ರೇಷ್ಠನಾದ ನೀನು ಕೋಪಿಸಿಕೊಳ್ಳಬೇಡ. ಕೋಪಿಸಿಕೊಂಡರೆ ನಿನ್ನನ್ನೂ ನಿನ್ನ ಪುತ್ರರನ್ನೂ ಸೈನ್ಯಗಳನ್ನೂ ಮೊದಲಿಗೇ ಕೊಂದು ಬಳಿಕ ಕೃಷ್ಣಾರ್ಜುನರನ್ನು ಸಂಹರಿಸುತ್ತೇನೆ.
ಶಲ್ಯಃ
ಆತುರಾಣಾಂ ಪರಿತ್ಯಾಗಃ ಸ್ವದಾರಸುತವಿಕ್ರಯಃ।
ಅಂಗೇ ಪ್ರವರ್ತತೇ ಕರ್ಣ ಯೇಷಾಮಧಿಪತಿರ್ಭವಾನ್ ॥100॥
ಶಲ್ಯ ನುಡಿದ– ಕರ್ಣ, ನಿನ್ನ ಅಂಗದೇಶದಲ್ಲಿಯೂ ಅಧಮರಿರುತ್ತಾರೆ. ರೋಗದಿಂದ ಬಳಲುವವರನ್ನು ಚಿಕಿತ್ಸೆ ಮಾಡಿಸದೆ ಬಿಟ್ಟುಬಿಡುತ್ತಾರೆ. ತಮ್ಮ ಪತ್ನೀಪುತ್ರರನ್ನು ಮಾರಿಬಿಡುತ್ತಾರೆ.
ರಥಾತಿರಥಸಂಖ್ಯಾಯಾಂ ಯತ್ತತ್ತ್ವಂ ಭೀಷ್ಮಸ್ತದಾಬ್ರವೀತ್।
ತಾನ್ ವಿದಿತ್ವಾಽಽತ್ಮನೋ ದೋಷಾನ್ನಿರ್ಮನ್ಯುರ್ಭವ ಮಾ ಕ್ರುಧಃ 101
ರಥ ಅತಿರಥರ ಗಣನೆ ಮಾಡುವ ಕಾಲದಲ್ಲಿ ಭೀಷ್ಮನೇನು ನಿನ್ನ ದೋಷಗಳನ್ನು ಹೇಳಿದನೋ ಅವುಗಳನ್ನು ತಿಳಿದು ಶಾಂತನಾಗು. ಕೋಪ ಮಾಡಬೇಡ.
ಸರ್ವತ್ರ ಬ್ರಾಹ್ಮಣಾಃ ಸಂತಿ ಸಂತಿ ಸರ್ವತ್ರ ಕ್ಷತ್ರಿಯಾಃ।
ವೈಶ್ಯಾಃ ಶೂದ್ರಾಸ್ತಥಾ ಕರ್ಣ ಸ್ತ್ರಿಯಃ ಸಾಧ್ವ್ಯಶ್ಚ ಸುವ್ರತಾಃ ॥102॥
ಎಲ್ಲ ದೇಶಗಳಲ್ಲಿಯೂ ಉತ್ತಮರಾದ ಬ್ರಾಹ್ಮಣರಿದ್ದಾರೆ. ಎಲ್ಲ ದೇಶ ಗಳಲ್ಲಿಯೂ ಉತ್ತಮ ಕ್ಷತ್ರಿಯರು ವೈಶ್ಯರು ಶೂದ್ರರು ಇರುತ್ತಾರೆ. ಸ್ತ್ರೀಯರೂ ಒಳ್ಳೆಯ ವ್ರತನಿಷ್ಠರಾದ ಪತಿವ್ರತೆಯರಿರುತ್ತಾರೆ.
ರಮಂತೇ ಚೋಪಹಾಸೇನ ಪುರುಷಾಃ ಪುರುಷೈಃ ಸಹ।
ಅನ್ಯೋನ್ಯೇನ ರತಾಃ ಕ್ಷೀಬಾ ದೇಶೇ ದೇಶೇ ಸಮೈಥುನಾಃ ॥103॥
ಎಲ್ಲ ದೇಶಗಳಲ್ಲಿ ಮಧ್ಯಮಸ್ವಭಾವದ ಪುರುಷರು ಪುರುಷರೊಂದಿಗೆ ಉಪಹಾಸದಿಂದ ಸಂತೋಷ ಪಡುತ್ತಾರೆ. ಸ್ತ್ರೀಪುರುಷರು ಪರಸ್ಪರ ಅನುರಾಗ ಹೊಂದಿ ಪಾನಮತ್ತರಾಗಿ ಮೈಥುನ ಮಾಡುತ್ತಾರೆ.
ಪರವಾಚ್ಯೇಷು ನಿಪುಣಃ ಸರ್ವೋ ಭವತಿ ಸರ್ವದಾ।
ಆತ್ಮವಾಚ್ಯಂ ನ ಜಾನೀತೇ ಜಾನನ್ನಪಿ ಚ ಮುಹ್ಯತಿ ॥104॥
ಇನ್ನೊಬ್ಬರ ದೋಷಗಳನ್ನು ಕಂಡು ಹೇಳುವಲ್ಲಿ ಎಲ್ಲರೂ ಸದಾ ನಿಪುಣರೇ ಇರುತ್ತಾರೆ. ತಮ್ಮ ದೋಷಗಳನ್ನು ತಿಳಿಯುವುದಿಲ್ಲ. ತಿಳಿದರೂ ತಿಳಿಯದವರಂತೆ ಇರುತ್ತಾರೆ.
ಸಂಜಯಃ
ಕರ್ಣೋಽಪಿ ನೋತ್ತರಂ ಪ್ರಾಹ ಶಲ್ಯೋಽಪ್ಯಭಿಮುಖಃ ಪರಾನ್ ॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಕರ್ಣನು ಇದಕ್ಕೆ ಉತ್ತರವನ್ನು ಹೇಳಲಿಲ್ಲ. ಶಲ್ಯನೂ ಶತ್ರುಗಳ ಕಡೆಗೆ ತಿರುಗಿದ.
ಸರ್ವತ್ರ ಸಂತಿ ರಾಜಾನಃ ಸ್ವಂ ಸ್ವಂ ಧರ್ಮಮನುವ್ರತಾಃ।
ದುರ್ಮನುಷ್ಯಾನ್ನಿಗೃಹ್ಣಂತಿ ಸಂತಿ ಸರ್ವತ್ರ ಧಾರ್ಮಿಕಾಃ ॥106॥
ಎಲ್ಲೆಡೆ ತಮ್ಮ ತಮ್ಮ ಧರ್ಮದಲ್ಲಿ ನಿರತರಾದ ರಾಜರಿರುತ್ತಾರೆ. ದುಷ್ಟಮಾನವರನ್ನು ನಿಗ್ರಹಿಸುತ್ತಾರೆ. ಸರ್ವತ್ರ ಧಾರ್ಮಿಕರು ಇರುತ್ತಾರೆ.
ನ ಕರ್ಣ ದೇಶಸಾಮಾನ್ಯಾತ್ ಸರ್ವಃ ಪಾಪಂ ನಿಷೇವತೇ।
ಯಾದೃಶಾಃ ಸ್ವಸ್ವಭಾವೇನ ದೇಶಾ ಅಪಿ ನ ತಾದೃಶಾಃ ॥107॥
ದೇಶ ಒಂದೇ ಆದ ಮಾತ್ರಕ್ಕೆ ಅಲ್ಲಿಯ ಎಲ್ಲ ಜನರೂ ಪಾಪ ಮಾಡುವುದಿಲ್ಲ. ಜನರು ತಮ್ಮ ತಮ್ಮ ಸ್ವಭಾವದಿಂದ ಎಂಥವರೋ ದೇಶಗಳೂ ಅಂಥವೇ ಆಗಿರುತ್ತವೆ ಎಂದೂ ಇಲ್ಲ.
ಸಂಜಯಃ
ತತೋ ದುರ್ಯೋಧನೋ ರಾಜಾ ಕರ್ಣಶಲ್ಯಾವವಾರಯತ್।
ಸಖಿಭಾವೇನ ರಾಧೇಯಂ ಶಲ್ಯಂ ಸೌಜನ್ಯಕೇನ ಚ ॥108॥
ಸಂಜಯ ನುಡಿದ– ಆಗ ರಾಜಾ ದುರ್ಯೋಧನನು ಮೈತ್ರಿಯಿಂದ ಕರ್ಣನನ್ನು , ಸೌಜನ್ಯದಿಂದ ಶಲ್ಯನನ್ನು ಹೀಗೆ ಕರ್ಣಶಲ್ಯರಿಬ್ಬರನ್ನೂ ತಡೆದ.
ತತೋ ನಿವಾರಿತಃ ಕರ್ಣೋ ಧಾರ್ತರಾಷ್ಟ್ರೇಣ ಮಾರಿಷ।
ಪುನಃ ಪ್ರಹಸ್ಯ ರಾಧೇಯಃ ಪುನರ್ಯಾಹೀತ್ಯಚೋದಯತ್ ॥109॥
ರಾಜನೆ, ದುರ್ಯೋಧನನು ಕಲಹವನ್ನು ತಡೆದುದರಿಂದ ಕರ್ಣನು ನಕ್ಕು ಶಲ್ಯನಿಗೆ ಪುನಃಪುನಃ `ಮುಂದೆ ನಡೆ' ಎಂದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಶಲ್ಯಸಂವಾದೇ ತ್ರಿಚತ್ವಾರಿಂಶೋಧ್ಯಾಯಃ ॥43॥

ನಲವತ್ತನಾಲ್ಕನೆ ಅಧ್ಯಾಯ
ಎರಡು ಸೈನ್ಯಗಳ ವ್ಯೂಹರಚನೆ. ಆಗ ತಲೆದೋರಿದ ಉತ್ಪಾತಗಳನ್ನು ಶಲ್ಯ ಕರ್ಣನಿಗೆ ತೋರಿಸುತ್ತಾನೆ. ಅರ್ಜುನನ ರಥ, ಶಲ್ಯಕರ್ಣರು ನೋಡುತ್ತಿದ್ದಂತೆಯೆ, ಸಂಶಪ್ತಕರ ಸೈನ್ಯದೊಳಗೆ ನುಗ್ಗಿತು.
ಸಂಜಯಃ

ತತಃ ಪರಾನೀಕಮಿದಂ ವ್ಯೂಢಮಪ್ರತಿಮಂ ಸಹ |
ಸಮೀಕ್ಷ್ಯ ಕರ್ಣಃ ಪಾರ್ಥಾನಾಂ ಧೃಷ್ಟದ್ಯುಮ್ನಾಭಿರಕ್ಷಿತಮ್ ॥1॥
ಪ್ರಯಯೌ ರಥಘೋಷೇಣ ಸಿಂಹನಾದರವೇಣ ಚ |
ವಾದಿತ್ರಾಣಾಂ ಚ ನಿನದೈಃ ಕಂಪಯನ್ನಿವ ಮೇದಿನೀಮ್ ॥2॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಆಗ ಕರ್ಣನು ಧೃಷ್ಟದ್ಯುಮ್ನನಿಂದ ರಕ್ಷಿತವಾದ ಶತ್ರುಸೈನ್ಯವು ಅಪ್ರತಿಮವಾಗಿ ವ್ಯೂಹಮಾಡಿ ನಿಂತಿದ್ದುದನ್ನು ಕಂಡು ರಥಘೋಷ ಸಿಂಹನಾದ ಧ್ವನಿ ವಾದ್ಯಘೋಷಗಳಿಂದ ಭೂಮಿಯನ್ನು ನಡುಗುವಂತೆ ಮಾಡುತ್ತ ಮುಂದೆ ನಡೆದ.
ವೇಪಮಾನ ಇವ ಕ್ರೋಧಾದ್ ಯುದ್ಧಶೌಂಡಃ ಪರಂತಪಃ |
ಪ್ರತಿವ್ಯೂಹ್ಯ ಮಹಾತೇಜಾ ಯಥಾವದ್ ಭರತರ್ಷಭ ॥3॥
ವ್ಯಧಮತ್ ಪಾಂಡವೀಂ ಸೇನಾಮಾಸುರೀಂ ಮಘವಾನಿವ |
ಯುಧಿಷ್ಠಿರಂ ಚಾಭಿಭವನ್ನಪಸವ್ಯಂ ಚಕಾರ ಹ ॥4॥
ಶತ್ರುನಾಶಕನಾದ ಯುದ್ಧನಿಪುಣನಾದ ಮಹಾಪರಾಕ್ರಮಿ ಕರ್ಣ ಕೋಪದಿಂದ ನಡುಗುತ್ತ ಶತ್ರುಸೈನ್ಯವ್ಯೂಹಕ್ಕೆ ಪ್ರತಿಯಾಗಿ ತನ್ನ ಸೈನ್ಯವನ್ನು ಯಥಾವತ್ ವ್ಯೂಹಮಾಡಿ, ಅಸುರಸೈನ್ಯವನ್ನು ಇಂದ್ರನಂತೆ, ಪಾಂಡವಸೈನ್ಯವನ್ನು ನಾಶಮಾಡಲು ತೊಡಗಿದ. ಯುಧಿಷ್ಠಿರನನ್ನು ಪರಾಭವಗೊಳಿಸುತ್ತ, ಪ್ರದಕ್ಷಿಣವಾಗಿ ಸುತ್ತಿದ.
ಧೃತರಾಷ್ಟ್ರಃ
ಕಥಂ ಸಂಜಯ ರಾಧೇಯಃ ಪ್ರತ್ಯವ್ಯೂಹತ ಪಾಂಡವಾನ್ |
ಧೃಷ್ಟದ್ಯುಮ್ನಮುಖಾನ್ ವೀರಾನ್ ಭೀಮಸೇನಾಭಿರಕ್ಷಿತಾನ್ ॥5॥
ಸರ್ವಾನೇವ ಮಹೇಷ್ವಾಸಾನಜಯ್ಯಾನಮರೈರಪಿ ॥6॥
ಧೃತರಾಷ್ಟ್ರ ನುಡಿದ– ಸಂಜಯ, ದೇವತೆಗಳಿಂದಲೂ ಗೆಲ್ಲಲಾಗದ, ಭೀಮಸೇನನಿಂದ ರಕ್ಷಿತರಾದ, ಮಹಾಬಿಲ್ಲಾರನಾದ ಧೃಷ್ಟದ್ಯುಮ್ನನನ್ನು ಮುಂದೆ ಮಾಡಿಕೊಂಡ, ವೀರರಾದ ಪಾಂಡವರೆಲ್ಲರಿಗೂ ಪ್ರತಿಯಾಗಿ ಸೈನ್ಯವನ್ನು ಕರ್ಣ ಹೇಗೆ ವ್ಯೂಹಮಾಡಿ ನಿಲ್ಲಿಸಿದ?
ಕೇ ಚ ಪ್ರಪಕ್ಷೌ ಪಕ್ಷೌ ವಾ ಮಮ ಸೈನ್ಯಸ್ಯ ಸಂಜಯ |
ಪ್ರವಿಭಜ್ಯ ಯಥಾನ್ಯಾಯಂ ಕಥಂ ವಾ ಸಮವಸ್ಥಿತಾಃ ॥7॥
ನನ್ನ ಸೈನ್ಯದಲ್ಲಿ ಬಲ ಎಡ ಭಾಗಗಳಲ್ಲಿ ಯಾರಿದ್ದರು? ನಿಯಮಾನುಸಾರ ವಿಭಾಗ ಮಾಡಿಕೊಂಡು ಹೇಗೆ ನಿಂತರು?
ಕಥಂ ಪಾಂಡುಸುತಾಶ್ಚಾಪಿ ಪ್ರತ್ಯವ್ಯೂಹಂತ ಮಾಮಕಾನ್ |
ಕಥಂ ಚೈತನ್ಮಹಾಯುದ್ಧಂ ಪ್ರಾವರ್ತತ ಸುದಾರುಣಮ್ ॥8॥
ಪಾಂಡವರು ನನ್ನ ಸೈನ್ಯಕ್ಕೆ ಪ್ರತಿಯಾಗಿ ಹೇಗೆ ವ್ಯೂಹ ಮಾಡಿಕೊಂಡರು? ಬಲು ಭೀಕರವಾದ ಈ ಮಹಾಯುದ್ಧ ಹೇಗೆ ನಡೆಯಿತು?
ಕ್ವ ಚ ಬೀಭತ್ಸುರಭವದ್ ಯತ್ಕರ್ಣೋಽಯಾದ್ ಯುಧಿಷ್ಠಿರಮ್ |
ಕೋ ಹ್ಯರ್ಜುನಸ್ಯ ಸಾನ್ನಿಧ್ಯೇ ಶಕ್ತೋಽಭ್ಯೇತುಂ ಯುಧಿಷ್ಠಿರಮ್ ॥9॥
ಕರ್ಣನು ಯುಧಿಷ್ಠಿರನನ್ನು ಆಕ್ರಮಿಸಿದಾಗ ಅರ್ಜುನನೆಲ್ಲಿದ್ದ? ಅರ್ಜುನ ಜೊತೆಗಿರುವಾಗ ಯುಧಿಷ್ಠಿರನನ್ನು ಯಾವನು ತಾನೆ ಆಕ್ರಮಿಸಲು ಶಕ್ತ?
ಸರ್ವಭೂತಾನಿ ಯೋ ಹ್ಯೇಕಃ ಖಾಂಡವೇ ಜಿತವಾನ್ ಪುರಾ |
ಕಸ್ತಮನ್ಯತ್ರ ರಾಧೇಯಾತ್ ಪ್ರತಿಯುದ್ಧ್ಯೇಜ್ಜಿಜೀವಿಷುಃ ॥10॥
ಅರ್ಜುನ ಹಿಂದೆ ಖಾಂಡವದಲ್ಲಿ ಒಬ್ಬನೆ ಎಲ್ಲ ಯೋಧರನ್ನೂ ಗೆದ್ದವನು. ಬದುಕುವಾಸೆ ಉಳ್ಳವನು ಕರ್ಣನ ಹೊರತು ಇನ್ನಾವನು ಅರ್ಜುನನೊಡನೆ ಯುದ್ಧ ಮಾಡಿಯಾನು?
ಸಂಜಯಃ
ಶೃಣು ವ್ಯೂಹಸ್ಯ ರಚನಾಮರ್ಜುನಶ್ಚ ಯಥಾ ಗತಃ |
ಪರಿವಾರ್ಯ ನೃಪಂ ಸ್ವಂ ಸ್ವಂ ಸಂಗ್ರಾಮಶ್ಚಾಭವದ್ ಯಥಾ ॥11॥
ಸಂಜಯ ನುಡಿದ– ರಾಜನೆ, ನಮ್ಮ ವ್ಯೂಹರಚನೆ ಹೇಗಿತ್ತು? ಅರ್ಜುನ ಎಲ್ಲಿದ್ದ? ಯೋಧರು ತಮ್ಮ ತಮ್ಮ ರಾಜರನ್ನು ಸುತ್ತುವರಿದು ನಿಂತುಕೊಂಡಾಗ ಯುದ್ಧ ಹೇಗೆ ನಡೆಯಿತು? ಇವೆಲ್ಲವನ್ನೂ ಹೇಳುತ್ತೇನೆ, ಕೇಳು.
ಕೃಪಃ ಶಾರದ್ವತೋ ರಾಜನ್ ಮಾಗಧಾಶ್ಚ ತರಸ್ವಿನಃ |
ಸಾತ್ವತಃ ಕೃತವರ್ಮಾ ಚ ದಕ್ಷಿಣಂ ಪಕ್ಷಮಾಶ್ರಿತಾಃ ॥12॥
ಸೈನ್ಯದ ಬಲಭಾಗದಲ್ಲಿ ಶಾರದ್ವತಕೃಪನೂ ವೇಗಶಾಲಿಗಳಾದ ಮಾಗಧರೂ, ಸಾತ್ವತನಾದ ಕೃತವರ್ಮನೂ ನಿಂತರು.
ತೇಷಾಂ ಪ್ರಪಕ್ಷೇ ಶಕುನಿರುಲೂಕಶ್ಚ ಮಹಾರಥಃ |
ಸಾದಿಭಿರ್ವಿಮಲಪ್ರಾಸೈಸ್ತವಾನೀಕಮರಕ್ಷತಾಮ್ ॥13॥
ಅವರಿಗೆ ಎಡಭಾಗದಲ್ಲಿ ಮಹಾರಥನಾದ ಶಕುನಿ ಮತ್ತು ಉಲೂಕರು, ನಿರ್ಮಲ ಪ್ರಾಸಾಯುಧ ಹಿಡಿದ ಅಶ್ವಾರೋಹಿಗಳೊಂದಿಗೆ ನಿಂತರು.
ಗಾಂಧಾರಿಭಿರಸಂಭ್ರಾಂತೈಃ ಪಾರ್ವತೀಯೈಶ್ಚ ದುರ್ಜಯೈಃ |
ಶಲಭಾನಾಮಿವ ವ್ರಾತೈಃ ಪಿಶಾಚೈರಿವ ದುರ್ದೃಶೈಃ ॥14॥
ಚತುರ್ವಿಂಶತ್ಸಹಸ್ರಾಣಿ ರಥಾನಾಮನಿವರ್ತಿನಾಮ್ |

ಸಂಶಪ್ತಕಾ ಯುದ್ಧಶೌಂಡಾ ವಾಮಂ ಪಾರ್ಶ್ವಮಪಾಲಯನ್ ॥15॥
ಎಡಭಾಗವನ್ನು ಯುದ್ಧನಿಪುಣರಾದ ಸಂಶಪ್ತಕರು ರಕ್ಷಣೆ ಮಾಡಿದರು. ಮಿಡತೆಗಳಂತೆ ಗುಂಪಾಗಿ ಬರುವ, ಪಿಶಾಚಗಳಂತೆ ಕಾಣಲು ಭೀಕರರಾದ, ಭಯ ವಿಲ್ಲದ, ಗಾಂಧಾರರಿಂದಲೂ ಗೆಲ್ಲಲಾಗದ ಪರ್ವತವಾಸಿಯೋಧರಿಂದಲೂ ಕೂಡಿರುವವರು, ಸೋತು ಹಿಮ್ಮೆಟ್ಟದಂಥ ಇಪ್ಪತ್ತನಾಲ್ಕು ಸಾವಿರ ರಥಿಕರು, ಸಂಶಪ್ತಕರು.
ಸಮುಚ್ಛ್ರಿತಾಸ್ತವ ಸುತೈಃ ಕೃಷ್ಣಾರ್ಜುನಜಿಘಾಂಸವಃ |
ತೇಷಾಂ ಪ್ರಪಕ್ಷಃ ಕಾಂಬೋಜಾಃ ಶಕಾಶ್ಚ ಯವನೈಃ ಸಹ ॥16॥
ಕಾಂಬೋಜ ಶಕ ಯವನರು ನಿನ್ನ ಮಕ್ಕಳೊಂದಿಗೆ ಕೂಡಿ ಕೃಷ್ಣಾರ್ಜುನರನ್ನು ಕೊಲ್ಲಲು ಬಯಸಿ ಸಂಶಪ್ತಕರಿಗೆ ಎಡಭಾಗದಲ್ಲಿ ನಿಂತರು.
ನಿದೇಶಾತ್ ಸೂತಪುತ್ರಸ್ಯ ಸರಥಾಃ ಸಾಶ್ವಪತ್ತಯಃ |
ಆಹ್ವಯಂತೋರ್ಜುನಂ ತಸ್ಥುಃ ಕೇಶವಂ ಚ ಮಹಾಬಲಮ್ ॥17॥
ಕರ್ಣನ ಆದೇಶದಂತೆ ರಥ ಅಶ್ವ ಪದಾತಿಗಳೊಂದಿಗೆ ಅವರು ಮಹಾಬಲ ಶಾಲಿಯಾದ ಕೃಷ್ಣನನ್ನೂ ಅರ್ಜುನನನ್ನೂ ಆಹ್ವಾನಿಸುತ್ತ ನಿಂತರು.
ಮಧ್ಯೇಸೇನಾಮುಖಂ ಕರ್ಣೋ ವ್ಯವಾತಿಷ್ಠತ ದಂಸಿತಃ |
ಚಿತ್ರವರ್ಮಾಂಗದಸ್ರಗ್ವೀ ಪಾಲಯನ್ ವಾಹಿನೀಮುಖಮ್ ॥18॥
ಸೇನಾಮುಖದ ಮದ್ಯದಲ್ಲಿ, ಚಿತ್ರವರ್ಣದ ಕವಚ ಅಂಗದ ಹಾರಗಳನ್ನು ಧರಿಸಿ ಸನ್ನದ್ಧನಾಗಿ ಕರ್ಣನು ವ್ಯೂಹದ ಮುಖಭಾಗವನ್ನು ರಕ್ಷಿಸುತ್ತ ನಿಂತ.
ರಕ್ಷ ್ಯಮಾಣಃ ಸುಸಂರಬ್ಧೈ ್ಃ ಪುತ್ರೈಃ ಶಸ್ತ್ರಭೃತಾಂ ವರಃ |
ವಾಹಿನೀಪ್ರಮುಖಂ ವೀರಃ ಸಂಪ್ರಕರ್ಷನ್ನಶೋಭತ ॥19॥
ಕುಪಿತರಾದ ಪುತ್ರರಿಂದ ರಕ್ಷಿತನಾಗಿ ಸೈನ್ಯವನ್ನು ನಡೆಸುತ್ತ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ವೀರಕರ್ಣ ಶೋಭಿಸಿದ.
ಅಯೋರತ್ನಿರ್ಮಹಾಸತ್ವೋ ವೈಶ್ವಾನರಸಮದ್ಯುತಿಃ |
ಮಹಾದ್ವಿಪಸ್ಕಂಧಗತಃ ಪಿಂಗಾಕ್ಷಃ ಪ್ರಿಯದರ್ಶನಃ ॥20॥
ದುಃಶಾಸನೋ ವೃತಃ ಸೈನ್ಯೈಃ ಸ್ಥಿತೋ ವ್ಯೂಹಸ್ಯ ಪೃಷ್ಠತಃ ॥21॥
ಉಕ್ಕಿನಂಥ ತೋಳು, ಮಹಾಶಕ್ತಿ, ಬೆಂಕಿಯಂಥ ವರ್ಚಸ್ಸುಳ್ಳವನು, ಕಂದು ಹಳದಿ ಕಣ್ಣುಳ್ಳವನು, ನೋಡಲು ಆಕರ್ಷಕ. ಮಹಾಗಜಸ್ಕಂಧದಲ್ಲಿ ಕುಳಿತಿದ್ದಾನೆ, ಇಂಥ ದುಃಶಾಸನ, ಸೈನ್ಯದಿಂದ ಸುತ್ತುವರಿದವನು, ವ್ಯೂಹದ ಹಿಂಭಾಗದಲ್ಲಿದ್ದ.
ತಮನ್ವಯಾನ್ಮಹಾರಾಜ ಸ್ವಯಂ ದುರ್ಯೋಧನೋ ನೃಪಃ |
ಚಿತ್ರಾಶ್ವೈ ್ಶ್ಚಿತ್ರಸನ್ನಾಹೈಃ ಸೋದರ್ಯೈರಭಿರಕ್ಷಿತಃ ॥22॥
ದುಃಶಾಸನನನ್ನು ಹಿಂಬಾಲಿಸಿ,ಮಹಾರಾಜ, ಸ್ವಯಂ ರಾಜಾ ದುರ್ಯೋಧನನು ಚಿತ್ರವರ್ಣದ ಅಶ್ವಗಳಿಂದ ಚಿತ್ರಸನ್ನಾಹಗಳಿಂದ ಯುಕ್ತರಾದ ಸೋದರರಿಂದ ರಕ್ಷಿತನಾಗಿ ಶೋಭಿಸಿದ.
ರಕ್ಷ ್ಯಮಾಣೋ ಮಹಾವೀರ್ಯೈಃ ಸಹಿತೈರ್ಮದ್ರಕೇಕಯೈಃ |
ಅಶೋಭತ ಮಹಾರಾಜ ದೇವೈರಿವ ಶತಕ್ರತುಃ ॥23॥
ಜೊತೆಗೂಡಿದ ಮಹಾವೀರ್ಯರಾದ ಮದ್ರಕೇಕಯರಿಂದ ದುರ್ಯೋ- ಧನನು ರಕ್ಷಿತನಾಗಿ ದೇವತೆಗಳಿಂದ ರಕ್ಷಿತನಾದ ಇಂದ್ರನಂತೆ ಶೋಭಿಸಿದ.
ಅಶ್ವತ್ಥಾಮಾ ಕುರೂಣಾಂ ಚ ಯೇ ಪ್ರವೀರಾ ಮಹಾರಥಾಃ |
ನಿತ್ಯಮತ್ತಾಶ್ಚ ಮಾತಂಗಾಃ ಶೂರೈರ್ಮ್ಲೇಚ್ಛೈರಧಿಷ್ಠಿತಾಃ ॥24॥
ಅನ್ವಯುಸ್ತದ್ ರಥಾನೀಕಂ ಕ್ಷರಂತ ಇವ ತೋಯದಾಃ ॥25॥
ಅಶ್ವತ್ಥಾಮನೂ ಮಹಾರಥರಾದ ಕೌರವರ ವೀರರೂ ದುರ್ಯೋಧನನನ್ನು ಹಿಂಬಾಲಿಸಿದರು. ಶೂರರಾದ ಮ್ಲೇಚ್ಛ ಯೋಧರೊಂದಿಗೆ, ಮಳೆಗರೆವ ಮೋಡ ಗಳಂತೆ ಸದಾ ಮದಜಲ ಸುರಿಸುವ ಆನೆಗಳೂ ರಥಸೈನ್ಯವನ್ನು ಹಿಂಬಾಲಿಸಿದುವು.
ತೇ ಧ್ವಜೈರ್ವೈಜಯಂತೀಭಿರ್ಜ್ವಲದ್ಭಿಃ ಪರಮಾಯುಧೈಃ |
ಸಾದಿಭಿಶ್ಚಾಸ್ಥಿತಾ ರೇಜುರ್ದ್ರುಮವಂತ ಇವಾಚಲಾಃ ॥26॥
ಆ ಗಜಸೈನ್ಯಗಳು ಧ್ವಜಗಳಿಂದಲೂ, ಪತಾಕೆಗಳಿಂದಲೂ, ಜ್ವಲಿಸುವ ಶ್ರೇಷ್ಠ ಆಯುಧಗಳಿಂದಲೂ, ಗಜಾರೋಹಿಗಳಿಂದಲೂ ಯುಕ್ತವಾಗಿ, ಮರಗಿಡಗಳಿಂದ ಕೂಡಿದ ಬೆಟ್ಟಗಳಂತೆ ಶೋಭಿಸಿದುವು.
ತೇಷಾಂ ಪದಾತಿನಾಗಾನಾಂ ಪಾದರಕ್ಷಾಃ ಸಹಸ್ರಶಃ |
ಪಟ್ಟಿಶಾಸಿಧರಾಃ ಶೂರಾ ಬಭೂವುರನಿವರ್ತಿನಃ ॥27॥
ಯುದ್ಧದಲ್ಲಿ ಹಿಮ್ಮೆಟ್ಟದ, ಪಟ್ಟಿಶ ಖಡ್ಗಧಾರಿಗಳಾದ ಶೂರರು ಸಾವಿರಾರು ಮಂದಿ, ಆ ಪದಾತಿ ಗಜಸೈನ್ಯಗಳಿಗೆ ಪಾದರಕ್ಷಕರಾದರು.
ಸಾದಿಭಿಃ ಸ್ಯಂದನೈರ್ನಾಗೈರಧಿಕಂ ಸಮಲಂಕೃತೈಃ |
ಸ ವ್ಯೂಹರಾಜೋ ವಿಬಭೌ ದೇವಾಸುರಚಮೂಪಮಃ ॥28॥
ಚೆನ್ನಾಗಿ ಅಲಂಕೃತವಾದ ಅಶ್ವರಥಗಜಗಳಿಂದ ಆ ಶ್ರೇಷ್ಠವಾದ ವ್ಯೂಹವು ದೇವಾಸುರ ಸೇನಾವ್ಯೂಹದಂತೆ ಶೋಭಿಸಿತು.
ಬಾರ್ಹಸ್ಪತ್ಯಃ ಸುವಿಹಿತೋ ನಾಯಕೇನ ವಿಪಶ್ಚಿತಾ |
ನೃತ್ಯತೀವ ಮಹಾವ್ಯೂಹಃ ಪರೇಷಾಮಾದಧದ್ಭಯಮ್ ॥29॥
ತಜ್ಞನಾದ ನಾಯಕನಿಂದ ಚೆನ್ನಾಗಿ ರಚಿತವಾದ ಆ ಬಾರ್ಹಸ್ಪತ್ಯವೆಂಬ ಮಹಾವ್ಯೂಹವು ನೃತ್ಯಮಾಡುವಂತಿದ್ದು ಶತ್ರುಗಳಿಗೆ ಭಯ

ಉಂಟುಮಾಡಿತು.
ತಸ್ಯ ಪಕ್ಷಪ್ರಪಕ್ಷೇಭ್ಯೋ ನಿಷ್ಪತಂತಿ ಯುಯುತ್ಸವಃ |
ಪತ್ತ್ಯಶ್ವರಥಮಾತಂಗಾಃ ಪ್ರಾವೃಷೀವ ಬಲಾಹಕಾಃ ||30||
ಆ ವ್ಯೂಹದ ಬಲಎಡಪಾರ್ಶ್ವಗಳಿಂದ ಯುದ್ದೋಚ್ಛುಗಳಾಗಿ ಪದಾತಿ ಅಶ್ವರಥಗಜಗಳು ಮಳೆಗಾಲದಲ್ಲಿ ಮೋಡಗಳಂತೆ ಹೊರಟು ಬರುತ್ತಿದ್ದುವು.
ತತಃ ಸೇನಾಮುಖೇ ಕರ್ಣಂ ದೃಷ್ಟ್ವಾ ರಾಜಾ ಯುಧಿಷ್ಠಿರಃ |
ಧನಂಜಯಮಮಿತ್ರಘ್ನಮೇಕವೀರಮುವಾಚ ಹ ||31||
ಸೇನಾಮುಖದಲ್ಲಿ ಕರ್ಣನನ್ನು ನೋಡಿ ರಾಜಾ ಯುಧಿಷ್ಠಿರನು ಶತ್ರುನಾಶಕ ನಾದ ಮಹಾವೀರನಾದ ಅರ್ಜುನನಿಗೆ ಹೇಳಿದ.
ಪಶ್ಯಾರ್ಜುನ ಮಹಾವ್ಯೂಹಂ ಕರ್ಣೇನ ವಿಹಿತಂ ರಣೇ |
ಯುಕ್ತಂ ಪಕ್ಷೈಃ ಪ್ರಪಕ್ಷೈಶ್ಚ ಪರಾನೀಕಂ ಪ್ರಕಾಶತೇ ||32||
ರಣದಲ್ಲಿ ಕರ್ಣನು ರಚಿಸಿದ ಮಹಾವ್ಯೂಹವನ್ನು, ಅರ್ಜುನ, ನೋಡು. ಬಲಎಡಪಾರ್ಶ್ವಗಳಿಂದ ಕೂಡಿದ ಶತ್ರುಸೈನ್ಯವು ವ್ಯೂಹದಿಂದ ಶೋಭಿಸುತ್ತಿದೆ.
ತದೇತದ್ವೈ ಸಮಾಲೋಕ್ಯ ಪ್ರತ್ಯನೀಕಂ ಮಹಾಬಲಮ್ |
ಯಥಾ ನಾಭಿಭವತ್ಯಸ್ಮಾಂಸ್ತಥಾ ನೀತಿರ್ವಿಧೀಯತಾಮ್ ||33||
ಮಹಾಬಲಶಾಲಿಯಾದ ಈ ಶತ್ರುಸೈನ್ಯವನ್ನು ಚೆನ್ನಾಗಿ ಪರಿಶೀಲಿಸಿ ಅದು ನಮ್ಮನ್ನು ಪರಾಭವಗೊಳಿಸದಂಥ ಯುದ್ಧನೀತಿಯನ್ನು ಕಾರ್ಯಗತಗೊಳಿಸು.
ಏವಮುಕ್ತೋಽರ್ಜುನೋ ರಾಜ್ಞಾ ಪ್ರಾಂಜಲಿರ್ನೃಪಮಬ್ರವೀತ್ |
ಯಥಾ ಭವಾನಾಹ ತಥಾ ತತ್ಸರ್ವಂ ನ ತದನ್ಯಥಾ ||34||
ರಾಜಾಯುಧಿಷ್ಠಿರ ಹೀಗೆ ಹೇಳಿದಾಗ ಅರ್ಜುನನು ಕೈಮುಗಿದು ರಾಜನಿಗೆ ಹೇಳಿದ– `ಅದೆಲ್ಲವೂ ನೀನು ಹೇಳಿದಂತೆಯೆ ಆಗುವುದು. ಅನ್ಯಥಾ ಆಗಲಾರದು.'
ಯಸ್ತ್ವಸ್ಯ ವಿಹಿತೋ ಘಾತಸ್ತಂ ಕರಿಷ್ಯಾಮಿ ಭಾರತ |
ಪ್ರಧಾನವಧ ಏವಾಸ್ಯ ವಿನಾಶಸ್ತಂ ಕರೋಮ್ಯಹಮ್ ||35||
ರಾಜನೇ, ಈ ಶತ್ರುಸೇನಾವ್ಯೂಹಕ್ಕೆ ಯಾವ ವಿನಾಶವು ಶಾಸ್ತ್ರದಲ್ಲಿ ವಿಹಿತವಾಗಿದೆಯೋ ಅದನ್ನು ಮಾಡುತ್ತೇನೆ. ಪ್ರಧಾನ ಯೋಧರ ವಧವೇ ಇದಕ್ಕೆ ವಿಹಿತವಾದ ವಿನಾಶ. ಅದನ್ನು ನಾನು ಮಾಡುತ್ತೇನೆ.
ಯುಧಿಷ್ಠಿರಃ
ತಸ್ಮಾತ್ತ್ವಮೇವ ರಾಧೇಯಂ ಭೀಮಸೇನಃ ಸುಯೋಧನಮ್ |
ವೃಷಸೇನಂ ಚ ನಕುಲಃ ಸಹದೇವೋಽಪಿ ಸೌಬಲಮ್ ||36||
ದುಃಶಾಸನಂ ಶತಾನೀಕೋ ಹಾರ್ದಿಕ್ಯಂ ಶಿನಿಪುಂಗವಃ |
ಧೃಷ್ಟದ್ಯುಮ್ನಸ್ತಥಾ ದ್ರೌಣಿಂ ಸ್ವಯಂ ಯಾಸ್ಯಾಮ್ಯಹಂ ಕೃಪಮ್ ||37||
ದ್ರೌಪದೇಯಾ ಧಾರ್ತರಾಷ್ಟ್ರಾನ್ ಶಿಷ್ಟಾನ್ ಸಹ ಶಿಖಂಡಿನಾ |
ತೇ ತೇ ಚ ತಾಸ್ತಾನಹಿತಾನಸ್ಮಾಕಂ ಘ್ನಂತು ಸೋಮಕಾಃ ||38||
ಯುಧಿಷ್ಠಿರ ನುಡಿದ– ಪ್ರಧಾನರ ವಧ ಆವಶ್ಯಕವಾದ್ದರಿಂದ ನೀನು ಕರ್ಣನನ್ನು ಇದಿರಿಸು. ಭೀಮನು ದುರ್ಯೋಧನನನ್ನು ಇದಿರಿಸಲಿ. ವೃಷಸೇನನನ್ನು ನಕುಲ, ಶಕುನಿಯನ್ನು ಸಹದೇವ, ದುಃಶಾಸನನನ್ನು ಶತಾನೀಕ, ಕೃತವರ್ಮನನ್ನು ಸಾತ್ಯಕಿ, ಅಶ್ವತ್ಥಾಮನನ್ನು ಧೃಷ್ಟದ್ಯುಮ್ನ ಇದಿರಿಸಲಿ. ನಾನು ಸ್ವಯಂ ಕೃಪಾಚಾರ್ಯರನ್ನು ಇದಿರಿಸುತ್ತೇನೆ. ದ್ರೌಪದೀಪುತ್ರರು ಶಿಖಂಡಿಯೊಡಗೂಡಿ ಉಳಿದಿರುವ ಧೃತರಾಷ್ಟ್ರ ಪುತ್ರರನ್ನು ಇದಿರಿಸಲಿ. ಹೀಗೇ ಸೋಮಕರು ಅವರವರು ಆಯಾ ಪ್ರಧಾನ ಶತ್ರುಗಳೊಡನೆ ಹೋರಾಡಲಿ.
ಸಂಜಯಃ
ಇತ್ಯುಕ್ತೋ ಧರ್ಮರಾಜೇನ ತಥೇತ್ಯುಕ್ತ್ವಾ ಧನಂಜಯಃ |
ವ್ಯಾದಿದೇಶ ಸ್ವಸೈನ್ಯಾನಿ ಸ್ವಯಂ ಚಾಗಾಚ್ಚಮೂಮುಖಮ್ ||39||
ಧರ್ಮರಾಜ ಹೀಗೆ ಹೇಳಿದಾಗ ಅರ್ಜುನ ಹಾಗೇ ಆಗಲೆಂದು ಹೇಳಿ ತನ್ನ ಸೈನಿಕರನ್ನು ಆಯಾ ಸೈನಿಕರೊಡನೆ ಹೋರಾಡಲು ಆದೇಶ ನೀಡಿದ. ತಾನು ಸೇನಾಮುಖದ ಕಡೆಗೆ ಹೊರಟ. (ಅದರ ವಿವರಣೆ ಮುಂದೆ ಬರುತ್ತದೆ.)
ಅಗ್ನಿರ್ವೈಶ್ವಾನರಃ ಪೂರ್ವಂ ಬ್ರಹ್ಮೇಂದುಃ ಸಪ್ತಿತಾಂ ಗತಃ |
ತಸ್ಮಾದ್ಯಃ ಪ್ರಥಮೋ ಜಾತಸ್ತಂ ದೇವಾ ಬ್ರಾಹ್ಮಣಾ ವಿದುಃ ||40||
ಮೊದಲಿಗೆ ವೈಶ್ವಾನರನೆಂಬ ಅಗ್ನಿಯೂ ಬ್ರಹ್ಮನೂ ಚಂದ್ರನೂ ಅರ್ಜುನನ ರಥದ ಕುದುರೆಗಳಾದರು. ಅಂದರೆ ನಾಲ್ಕೂ ಕುದುರೆಗಳಲ್ಲಿ ಅವರ ಸನ್ನಿಧಾನ ಉಂಟಾಯಿತು. ಆಕಾರಣದಿಂದ ಅರ್ಜುನನ ರಥ `ಪ್ರಥಮ' ಶ್ರೇಷ್ಠವೆನಿಸಿತು. ಇದನ್ನು ದೇವತೆಗಳು ಋಷಿಗಳು ಮಾತ್ರ ಅರಿತುಕೊಂಡರು.
ಅಥ ತಂ ರಥಮಾಯಾಂತಂ ದೃಷ್ಟ್ವಾತ್ಯದ್ಭುತದರ್ಶನಮ್ |
ಉವಾಚಾಧಿರಥಿಂ ಶಲ್ಯಃ ಪುನಸ್ತಂ ಯುದ್ಧದುರ್ಮದಮ್ ||41||
ಬಳಿಕ ಅಂಥ ಅತಿಅದ್ಭುತವಾಗಿ ಕಾಣುವ ಅರ್ಜುನನ ರಥ ಬರುತ್ತಿರುವುದನ್ನು ಕಂಡು ಶಲ್ಯನು ಯುದ್ಧದ ಚಟಉಳ್ಳ ಕರ್ಣನಿಗೆ ಪುನಃ ನುಡಿದ.

ಅಯಂ ಸ ರಥ ಆಯಾತಿ ಶ್ವೇತಾಶ್ವಃ ಕೃಷ್ಣಸಾರಥಿಃ |
ನಿಘ್ನನ್ನಮಿತ್ರಾನ್ ಕೌಂತೇಯೋ ಯಂ ಕರ್ಣ ಪರಿಪೃಚ್ಛಸಿ ॥42॥
ಕರ್ಣ, ನೀನು `ರಥವೆಲ್ಲಿ, ಅರ್ಜುನನೆಲ್ಲಿ' ಎಂದು ಕೇಳುತ್ತಿರುವೆ ತಾನೆ? ಆ ರಥವು ಇದೇ. ಶ್ವೇತಾಶ್ವಯುಕ್ತವಾಗಿ ಕೃಷ್ಣನ ಸಾರಥ್ಯದಲ್ಲಿ ಬರುತ್ತಿದೆ. ಆ ಅರ್ಜುನನೆ ಈತ, ಶತ್ರುಗಳನ್ನು ಕೊಲ್ಲುತ್ತ ಬರುತ್ತಿದ್ದಾನೆ.
ಶ್ರೂಯತೇ ತುಮುಲಃ ಶಬ್ದೋ ರಥನೇಮಿಸ್ವನೋ ಮಹಾನ್ |
ಧ್ರುವಮೇತೌ ಮಹಾತ್ಮಾನೌ ವಾಸುದೇವಧನಂಜಯೌ ॥43॥
ದೊಂಬಿ ಶಬ್ದವೂ ಕೇಳಿಬರುತ್ತಿದೆ. ರಥಚಕ್ರದ ದೊಡ್ಡ ಧ್ವನಿ ಕೇಳಿ ಬರುತ್ತಿದೆ. ನಿಶ್ಚಯವಾಗಿಯೂ ಮಹಾತ್ಮರಾದ ಕೃಷ್ಣಾರ್ಜುನರು ಇವರೇ.
ಏಷ ರೇಣುಃ ಸಮುದ್ಭೂತೋ ದಿವಮಾವೃತ್ಯ ತಿಷ್ಠತಿ ॥44॥
ಚಕ್ರನೇಮಿಪ್ರಣುನ್ನಾ ಚ ಕಂಪತೇ ಕರ್ಣ ಮೇದಿನೀ |
ಪ್ರವಾತ್ಯೇಷ ಮಹಾವಾಯುರಭಿತಸ್ತವ ವಾಹಿನೀಮ್ ॥45॥
ಈ ಧೂಳು ಎದ್ದು ಅಂತರಿಕ್ಷವನ್ನು ಆವರಿಸಿ ನಿಲ್ಲುತ್ತಿದೆ, ಕರ್ಣ, ಚಕ್ರ ಘರ್ಷಣೆಯಿಂದ ಭೂಮಿ ಕಂಪಿಸುತ್ತಿದೆ. ಚಂಡಮಾರುತ ನಿನ್ನ ಸೈನ್ಯದ ಮೇಲೆ ಬೀಸುತ್ತಿದೆ.
ಕ್ರವ್ಯಾದಾ ವ್ಯಾಹರಂತ್ಯೇತೇ ವೇದಯನ್ತೋ ಮಹದ್ ಭಯಮ್॥46॥
ಮಾಂಸಾಶಿ ಮೃಗಗಳು ಮಹತ್ತಾದ ಭಯ ಬರಲಿದೆ ಎಂದು ಹೇಳುತ್ತಿವೆ.
ಪಶ್ಯ ಕರ್ಣ ಮಹಾಘೋರಂ ಭಯದಂ ಲೋಮಹರ್ಷಣಮ್ |
ಕಬಂಧಂ ಮೇಘಸಂಕಾಶಂ ಭಾನುಮಾವೃತ್ಯ ತಿಷ್ಠತಿ ॥47॥
ಕರ್ಣ, ನೋಡು, ಮಹಾ ಘೋರ ಭಯದಾಯಕ ರೋಮಾಂಚಕರವಾದ `ಕಬಂಧ' ಧೂಮಕೇತು ಸೂರ್ಯನನ್ನು ಆವರಿಸಿ ನಿಂತಿದೆ.
ಪಶ್ಯ ಯೂಥೈರ್ಬಹುವಿಧೈರ್ಮೃಗಾಣಾಂ ಸರ್ವತೋದಿಶಮ್ |
ಬಲಿಭಿರ್ದೃಪ್ತಶಾರ್ದೂಲೈರಾದಿತ್ಯೋಽಭಿನಿರೀಕ್ಷ ್ಯತೇ ॥48॥
ನಾನಾ ವಿಧವಾದ ಮೃಗಗಳ ಗುಂಪುಗಳೂ ಬಲಿಷ್ಠವಾದ ದೃಪ್ತವಾದ ಹುಲಿಗಳೂ ಎಲ್ಲ ದಿಕ್ಕುಗಳಲ್ಲಿಯೂ ಸೂರ್ಯನನ್ನು ದಿಟ್ಟಿಸಿ ನೋಡುತ್ತಿವೆ.
ಪಶ್ಯ ಕಂಕಾಂಶ್ಚ ಗೃಧ್ರಾಂಶ್ಚ ಸಮವೇತಾನ್ ಸಹಸ್ರಶಃ |
ಸ್ಥಿತಾನಭಿಮುಖಾನ್ ಘೋರಾನನ್ಯೋನ್ಯಮಭಿಭಾಷತಃ ॥49॥
ನೋಡು ಕರ್ಣ, ಸಹಸ್ರಾರು ಸಂಖ್ಯೆಯಲ್ಲಿ ಭಯಂಕರವಾದ ಹದ್ದು ರಣಹದ್ದುಗಳು ಗುಂಪಾಗಿ ಸೇರಿ ಪರಸ್ಪರ ಇದಿರಾಗಿ ನಿಂತು ಮಾತನಾಡಿಕೊಳ್ಳುತ್ತಿವೆ.
ರಂಜಿತಾಶ್ಚಾಮರಾ ಯುಕ್ತಾ ಸ್ತವ ಕರ್ಣ ಮಹಾರಥೇ |
ಪ್ರವರಾಃ ಪ್ರಸ್ಫಲಂತ್ಯೇತೇ ಧ್ವಜಶ್ಚೈವ ಪ್ರಕಂಪತೇ ॥50॥
ಕರ್ಣ, ನಿನ್ನ ರಥದಲ್ಲಿ ಸಂಯೋಜಿತವಾದ ಈ ಚಾಮರಗಳು ಚಕ್ರಸಂಘರ್ಷ ದಿಂದೆದ್ದ ಕಿಡಿಗಳಿಂದ ಹೊತ್ತಿ ಉರಿಯುತ್ತಿವೆ. ಧ್ವಜವು ಕಂಪಿಸುತ್ತಿದೆ.
ಸವೇಪಥೂನ್ ಹಯಾನ್ ಪಶ್ಯ ಮಹಾಕಾಯಾನ್ ಮಹಾಜವಾನ್ |
ಪ್ಲವಮಾನಾನ್ ದರ್ಶನೀಯಾನಾಕಾಶೇ ಗರುಡಾನಿವ ॥51॥
ಆಕಾಶದಲ್ಲಿ ಗರುಡಪಕ್ಷಿಗಳಂತೆ, ಮಹಾವೇಗದಿಂದ ಓಡುವ ಮಹಾಕಾಯದ ಸುಂದರ ಅಶ್ವಗಳು ನಡುಗುತ್ತಿರುವುದನ್ನು ನೋಡು.
ಧ್ರುವಮೇಷು ನಿಮಿತ್ತೇಷು ಭೂಮಿಮಾವೃತ್ಯ ಪಾರ್ಥಿವಾಃ |
ಸ್ವಪ್ಸ್ಯಂತಿ ನಿಹತಾಃ ಕರ್ಣ ಶತಶೋಽಥ ಸಹಸ್ರಶಃ ॥52॥
ಕರ್ಣ, ಈ ಶಕುನಗಳು ಕಾಣಿಸಿಕೊಳ್ಳುವಾಗ ನಿಶ್ಚಿತವಾಗಿ ನೂರಾರು ಸಾವಿರಾರು ರಾಜರು ಹತರಾಗಿ ನೆಲವನ್ನು ಆವರಿಸಿ ಒರಗುತ್ತಾರೆ.
ಶಂಖಾನಾಂ ತುಮುಲಃ ಶಬ್ದಃ ಶ್ರೂಯತೇ ಲೋಮಹರ್ಷಣಃ |
ಆನಕಾನಾಂ ಚ ರಾಧೇಯ ಮೃದಂಗಾನಾಂ ಚ ಸರ್ವಶಃ ॥53॥
ಕರ್ಣ, ಶಂಖ ಆನಕ ಮೃದಂಗಗಳ ದೊಂಬಿ ಶಬ್ದ ರೋಮಾಂಚಕರವಾಗಿ ಕೇಳಿಬರುತ್ತಿದೆ.
ಬಾಣಶಬ್ದಾನ್ ಬಹುವಿಧಾನ್ ನರಾಶ್ವರಥನಿಸ್ವನಾನ್ |
ಜ್ಯಾತಳತ್ರೇಷುಶಬ್ದಾಂಶ್ಚ ಶೃಣು ಕರ್ಮ ಮಹಾತ್ಮನಾಮ್ ॥54॥
ಬಾಣಶಬ್ದಗಳನ್ನು ನಾನಾವಿಧ ಪದಾತಿ ಅಶ್ವ ರಥಧ್ವನಿಗಳನ್ನು ಮಹಾತ್ಮರು ಮಾಡುವ ಹೆದೆಕೈಚೀಲ ಬಾಣಶಬ್ದಗಳನ್ನೂ ಕೇಳು.
ಹೇಮರೂಪ್ಯಪ್ರಮೃಷ್ಟಾನಾಂ ವಾಸಸಾಂ ಶಿಲ್ಪಿನಿರ್ಮಿತಾಃ |
ನಾನಾವರ್ಣಾ ರಥೇ ಭಾಂತಿ ಶ್ವಸನೇನ ಪ್ರಕಂಪಿತಾಃ ॥55॥
ಚಿನ್ನ ಬೆಳ್ಳಿಗಳಿಂದ ಅಲಂಕೃತವಾದ ಕರಕುಶಲಗಾರರು ನಿರ್ಮಿಸಿದ ನಾನಾವರ್ಣಗಳ ಪತಾಕೆಗಳು ಗಾಳಿಗೆ ಜೋರಾಗಿ ಚಲಿಸುತ್ತ ಪಾಂಡವರ ರಥದಲ್ಲಿ ಕಂಗೊಳಿಸುತ್ತಿವೆ.
ಸಹೇಮಚಂದ್ರತಾರಾರ್ಕಾಃ ಪತಾಕಾಃ ಕಿಂಕಿಣೀಯುತಾಃ |
ಪಶ್ಯ ಕರ್ಣಾರ್ಜುನಸ್ಯೈತಾಃ ಸೌದಾಮಿನ್ಯ ಇವಾಂಬರೇ |
ವಿಭ್ರಾಜಂತಿ ರಣೇ ಕರ್ಣ ವಿಮಾನೇ ದೇವತಾ ಯಥಾ ॥56॥
ಅರ್ಜುನನ ರಥ ಪತಾಕೆಗಳಲ್ಲಿ ಬಂಗಾರದ ಚಂದ್ರ ನಕ್ಷತ್ರ ಸೂರ್ಯಚಿಹ್ನೆಗಳು ಕಿರುಗಂಟೆಗಳು ಇದ್ದು, ವಿಮಾನದಲ್ಲಿ ದೇವತೆಗಳಂತೆ

ಆಕಾಶದಲ್ಲಿ ಮಿಂಚುಗಳಂತೆ ಈ ಪತಾಕೆಗಳು ಅರ್ಜುನ ರಥದಲ್ಲಿ ಕಂಗೊಳಿಸುತ್ತಿವೆ.
ಧ್ವಜಾಃ ಕಣಕಣಾಯಂತೇ ವಾತೇನಾಭಿಸಮೀರಿತಾಃ |
ಸಪತಾಕಾ ರಥಾಶ್ಚಾಪಿ ಪಾಂಚಾಲಾನಾಂ ಮಹಾತ್ಮನಾಮ್ ॥57॥
ಮಹಾತ್ಮರಾದ ಪಾಂಚಾಲರ ರಥಗಳೂ ಧ್ವಜಗಳೂ ಪತಾಕೆಗಳಿಂದ ಕೂಡಿ ಗಾಳಿಯ ಹೊಡೆತದಿಂದ ಕಣಕಣ ಧ್ವನಿಗಳನ್ನುಂಟು ಮಾಡುತ್ತಿವೆ.
ಏಷ ಧ್ವಜಾಗ್ರೇ ಪಾರ್ಥಸ್ಯ ಪ್ರೇಕ್ಷಮಾಣಃ ಸಮಂತತಃ |
ದೃಶ್ಯತೇ ವಾನರೋ ಭೀಮೋ ದ್ವಿಷತಾಮಘವರ್ಧನಃ ॥58॥
ಅರ್ಜುನನ ರಥಧ್ವಜದ ಮೇಲೆ ಕುಳಿತು ಎಲ್ಲ ಕಡೆ ನೋಡುತ್ತ ಶತ್ರುಗಳ ದುಃಖವನ್ನು ಹೆಚ್ಚಿಸುತ್ತ ಭಯಂಕರನಾಗಿ ಇದೊ, ವಾನರ ಕಾಣಿಸುತ್ತಾನೆ.
ಏತಚ್ಚಕ್ರಂ ಗದಾ ಶಾಂರ್ಗಂ ಶಂಖಃ ಕೃಷ್ಣಸ್ಯ ಧೀಮತಃ |
ಅತ್ಯರ್ಥಂ ಭ್ರಾಜತೇ ಕೃಷ್ಣೇ ಕೌಸ್ತುಭಸ್ತು ಮಣಿಸ್ತತಃ ॥59॥
ಧೀಮಂತನಾದ ಕೃಷ್ಣನ ಚಕ್ರ ಗದೆ ಶಾಂರ್ಗ ಶಂಖ ಮತ್ತು ಕೌಸ್ತುಭರತ್ನ ಎಲ್ಲವೂ ಕೃಷ್ಣನಲ್ಲಿ ಬಹಳ ಕಂಗೊಳಿಸುತ್ತದೆ. ರಣದಲ್ಲಿ ಕೃಷ್ಣನು ತನ್ನ ಪ್ರತಿಜ್ಞೆಯಂತೆ ಚಕ್ರ ಹಿಡಿಯದಿದ್ದರೂ ಕೂಡ ತಾನು ಪರಮಪುರುಷನೆಂದು ತಿಳಿಸುವುದಕ್ಕಾಗಿ ರಣಭೂಮಿಗೆ ಬರುವ ಸಮಯದಲ್ಲಿ  ಮಾತ್ರ ಚಕ್ರಶಂಖಾದಿ ಆಯುಧ ಕೌಸ್ತುಭಮಣಿಗಳನ್ನು ಧರಿಸಿ ಮೈದೋರು ತ್ತಾನೆ.
ಏಷ ಶಾಂರ್ಗಗದಾಪಾಣಿರ್ವಾಸುದೇವೋಽತಿವೀರ್ಯವಾನ್ |
ವಾಹಯನ್ನೇತಿ ತುರಗಾನ್ ಪಾಂಡುರಾನ್ ವಾತರಂಹಸಃ ॥60॥
ಶಾಂರ್ಗ ಗದಾಪಾಣಿಯಾದ ಅತಿವೀರ್ಯಶಾಲಿಯಾದ ಈತ ಕೃಷ್ಣ ವಾಯುವೇಗದ ಬಿಳಿಕುದುರೆಗಳನ್ನು ನಡೆಸುತ್ತ ಬರುತ್ತಿದ್ದಾನೆ.
ಏತತ್ ಕೂಜತಿ ಗಾಂಡೀವಂ ವಿಕೃಷ್ಟಂ ಸವ್ಯಸಾಚಿನಾ |
ಏತೇ ಹಸ್ತವತಾ ಮುಕ್ತಾ ಘ್ನಂತ್ಯಮಿತ್ರಾನ್ ಶಿತಾಃ ಶರಾಃ ॥61॥
ಇದು ಗಾಂಡೀವಧನುಸ್ಸು, ಸವ್ಯಸಾಚಿ ಅದನ್ನು ಎಳೆದರೆ ಶಬ್ದ ಮಾಡುತ್ತದೆ. ಇವು ಸಿದ್ಧಹಸ್ತನಾದ ಸವ್ಯಸಾಚಿ ಬಿಟ್ಟ ತೀಕ್ಷ್ಣವಾದ ಬಾಣಗಳು. ಶತ್ರುಗಳನ್ನು ಸಂಹರಿಸುತ್ತಿವೆ.
ವಿಶಾಲಾಯತತಾಮ್ರಾಕ್ಷೈಃ ಪೂರ್ಣಚಂದ್ರನಿಭಾನನೈಃ |
ಏಷಾ ಭೂಃ ಕೀರ್ಯತೇ ರಾಜ್ಞಾಂ ಶಿರೋಭಿರಪಲಾಯಿನಾಮ್ ॥62॥
ಇದು ರಣಭೂಮಿ. ವಿಶಾಲ ಉದ್ದ ಕೆಂಪುಕಣ್ಣುಗಳುಳ್ಳ, ಪೂರ್ಣಚಂದ್ರನಂಥ ಮುಖಉಳ್ಳ ಯುದ್ಧದಲ್ಲಿ ಪಲಾಯನಮಾಡದ ರಾಜರ ರುಂಡಗಳಿಂದ ತುಂಬಿದೆ.
ಏತೇ ಸುಪರಿಘಾಕಾರಾಃ ಪುಣ್ಯಗಂಧಾನುಲೇಪನಾಃ |
ಉದ್ಯತಾಯುಧಶೌಂಡನಾಂ ಪಾತ್ಯಂತೇ ಸಾಯುಧಾ ಭುಜಾಃ ॥63॥
ಇವು ಆಯುಧ ಎತ್ತುವಲ್ಲಿ ನಿಪುಣರಾದ ಯೋಧರ ಆಯುಧ ಹಿಡಿದುಕೊಂಡಿರುವ ತೋಳುಗಳು. ಒಳ್ಳೆಯ ಪರಿಘಾಯುಧದ ಆಕಾರದವುಗಳು ಸುಗಂಧಲೇಪದಿಂದ ಒಪ್ಪುವವುಗಳು ಆಯುಧ ಹಿಡಿದಿದ್ದಂತೆಯೇ ಅರ್ಜುನನಿಂದ ಕಡಿದುಬೀಳುತ್ತಿವೆ.
ನಿರಸ್ತನೇತ್ರಜಿಹ್ವಾಂತಾ ವಾಜಿನಃ ಸಹ ಸಾದಿಭಿಃ |
ಪತಿತಾಃ ಪಾತ್ಯಮಾನಾಶ್ಚ ಕ್ಷಿತೌ ಕ್ಷೀಣಾಶ್ಚ ಶೇರತೇ ॥64॥
ಅರ್ಜುನನ ಬಾಣಗಳಿಗೆ ತುತ್ತಾಗಿ ಬಿದ್ದ, ಬೀಳುತ್ತಿರುವ, ಬಲಗುಂದಿದ ಅಶ್ವಗಳು ಕಣ್ಣು ನಾಲಿಗೆ ಕರುಳುಗಳನ್ನು ಹೊರ ಚಾಚಿಕೊಂಡು ಅಶ್ವಾರೋಹಿಗಳೊಂದಿಗೇ ನೆಲದಲ್ಲಿ ಒರಗುತ್ತಿವೆ.
ಏತೇ ಪರ್ವತಶೃಂಗಾಣಾಂ ತುಲ್ಯರೂಪಾ ಹತಾ ದ್ವಿಪಾಃ |
ಸಂಛಿನ್ನಭಿನ್ನಾಃ ಪಾರ್ಥೇನ ಪ್ರಪತಂತ್ಯದ್ರಯೋ ಯಥಾ ॥65॥
ಗಿರಿಶಿಖರ ಸಮಾನಾಕಾರದ ಆನೆಗಳೂ ಅರ್ಜುನನಿಂದ ಛಿನ್ನಭಿನ್ನವಾಗಿ ಬೆಟ್ಟಗಳಂತೆ ಬೀಳುತ್ತಿವೆ.
ಗಂಧರ್ವನಗರಾಕಾರಾ ರಥಾ ಹತನರೇಶ್ವರಾಃ |
ವಿಮಾನಾನೀವ ಪುಣ್ಯಾನಿ ಸ್ವರ್ಗಿಣಾಂ ನಿಪತಂತ್ಯಮೀ ॥66॥
ಗಂಧರ್ವನಗರಾಕಾರದ ಶತ್ರುರಥಗಳಲ್ಲಿ ರಥಿಕರಾದ ರಾಜರು ಪಾರ್ಥನ ಬಾಣಗಳಿಂದ ಹತರಾಗುವುದರಿಂದ, ಕ್ಷೀಣಪುಣ್ಯರಾದ ಸ್ವರ್ಗವಾಸಿಗಳೊಂದಿಗೇ ಪುಣ್ಯಮಯವಾದ ಅವರ ವಿಮಾನಗಳು ಕೆಳಗೆ ಬೀಳುವಂತೆ, ಈ ಶತ್ರುರಥಗಳು ನೆಲದಲ್ಲಿ ಮುರಿದು ಬೀಳುತ್ತಿವೆ.
ವ್ಯಾಕುಲೀಕೃತಮತ್ಯರ್ಥಂ ಪಶ್ಯ ಸೈನ್ಯಂ ಕಿರೀಟಿನಾ |
ನಾನಾಮೃಗಸಹಸ್ರಾಣಾಂ ಯೂಥಂ ಕೇಸರಿಣಾ ಯಥಾ ॥67॥
ಹೀಗೆ ಪಾರ್ಥನಿಂದ ಶತ್ರುಸೈನ್ಯ ಬಹಳ ವ್ಯಾಕುಲಗೊಂಡಿರುವುದನ್ನು ನೋಡು. ಸಿಂಹದಿಂದ ವ್ಯಾಕುಲಗೊಂಡ ಸಾವಿರಾರು ನಾನಾಮೃಗ ಸಮೂಹಗಳಂತೆ.
ಘ್ನಂತ್ಯೇತೇ ಪಾರ್ಥಿವಾನ್ ವೀರಾಃ ಪಾಂಡವಾಃ
ಸಮಭಿದ್ರುತಾನ್ ॥68॥
ಈ ವೀರ ಪಾಂಡವರು ಇದಿರಿಗೆ ಆಕ್ರಮಿಸಿ ಬರುವ ರಾಜರನ್ನು ವಧಿಸುತ್ತಿದ್ದಾರೆ.
ಪಶ್ಯ ಕುಂತೀಸುತಂ ವೀರಂ ಬೀಭತ್ಸುಮಪರಾಜಿತಮ್ |
ಪ್ರಧರ್ಷಯಿತುಮಾಯಾಂತಂ ಕಪಿಪ್ರವರಕೇತನಮ್ ॥69॥

ನೋಡು, ಸೋಲಿಲ್ಲದ ಕುಂತೀಸುತ ವೀರ ಅರ್ಜುನನನ್ನು. ವಾನರೋತ್ತಮ ಧ್ವಜಯುಕ್ತನಾಗಿ ನಿನ್ನವರನ್ನು ನಾಶಪಡಿಸಲು ಬರುತ್ತಿದ್ದಾನೆ.
ನಾಗಾಶ್ವರಥಪತ್ತ್ಯೌಘಾನ್ ತಾವಕಾನ್ ಸಮಭಿಘ್ನತಃ |
ಧ್ವಜಾಗ್ರಂ ದೃಶ್ಯತೇ ತ್ವಸ್ಯ ಜ್ಯಾಶಬ್ದಶ್ಚಾಪಿ ಶ್ರೂಯತೇ ॥70॥
ನಿನ್ನವರಾದ ಗಜ ಅಶ್ವ ರಥ ಪದಾತಿ ಸಮೂಹಗಳನ್ನು ವಧಿಸುತ್ತಿರುವ ಅರ್ಜುನನ ಧ್ವಜದ ತುದಿ ಕಾಣುತ್ತಿದೆ. ಅವನ ಬಿಲ್ಲಿನ ಹೆದೆಯ ಧ್ವನಿಯೂ ಕೇಳಿಬರುತ್ತಿದೆ.
ಅದ್ಯ ದ್ರಷ್ಟಾಸಿ ತಂ ವೀರಂ ಶ್ವೇತಾಶ್ವಂ ಕೃಷ್ಣಸಾರಥಿಮ್ |
ನಿಘ್ನಂತಂ ಶಾತ್ರವಾನ್ ಸಂಖ್ಯೇ ಯಂ ಕರ್ಣ ಪರಿಪೃಚ್ಛಸಿ ॥71॥
ಕರ್ಣ, ಎಲ್ಲಿ ಎಲ್ಲಿ ಎಂದು ನೀನು ಕೇಳುತ್ತಿರುವ ಬಿಳಿಕುದುರೆಯವನಾದ ಆ ವೀರ ಅರ್ಜುನನೇ ರಣದಲ್ಲಿ ಕೃಷ್ಣನ ಸಾರಥ್ಯದಲ್ಲಿ ಶತ್ರುನಾಶಗೈಯುತ್ತಿರುವುದನ್ನು ನೀನು ನೋಡುವೆ.
ಅದ್ಯ ತೌ ಪುರುಷವ್ಯಾಘ್ರೌ ಲೋಹಿತಾಕ್ಷೌ ಪರಂತಪೌ |
ವಾಸುದೇವಾರ್ಜುನೌ ಕರ್ಣ ದ್ರಷ್ಟಾಸ್ಯೇಕರಥಸ್ಥಿತೌ ॥72॥
ಕರ್ಣ, ನೀನಿಂದು ಕೆಂಪುಕಣ್ಣಿನ ಶತ್ರುನಾಶಕ ಪುರುಷೋತ್ತಮರಾದ ಕೃಷ್ಣಾರ್ಜುನರು ಒಂದು ರಥದಲ್ಲಿ ನಿಂತಿರುವುದನ್ನು ನೋಡುವೆ.
ಸಾರಥಿರ್ಯಸ್ಯ ವಾರ್ಷ್ಣೇಯೋ ಗಾಂಡೀವಂ ಯಸ್ಯ ಕಾರ್ಮುಕಮ್ |
ತಂ ಚೇದ್ಧಂತಾಸಿ ರಾಧೇಯ ತ್ವಂ ನೋ ರಾಜಾ ಭವಿಷ್ಯಸಿ ॥73॥
ಯಾವನ ಸಾರಥಿ ಕೃಷ್ಣನೋ, ಯಾವನ ಧನುಸ್ಸು ಗಾಂಡೀವವೋ, ಆ ಅರ್ಜುನನನ್ನು, ಕರ್ಣ, ನೀನು ಕೊಲ್ಲುವಿಯಾದರೆ ನೀನು ನಮಗೆ ರಾಜನಾಗುವಿ.
ಏಷ ಸಂಶಪ್ತಕಾಹೂತಸ್ತಾನೇವಾಭಿಮುಖೋ ಗತಃ |
ಕರೋತಿ ಕದನಂ ಚೈಷಾಂ ಸಂಗ್ರಾಮೇ ದ್ವಿಷತಾಂ ಬಲೀ ॥74॥
ಬಲಿಷ್ಠನಾದ ಅರ್ಜುನ ಸಂಶಪ್ತಕರ ಆಹ್ವಾನವನ್ನು ಸ್ವೀಕರಿಸಿ ಅವರಿಗೆ ಇದಿರಾಗಿ ಹೋಗಿ ಶತ್ರುಗಳಾದ ಅವರೊಡನೆ ರಣದಲ್ಲಿ ಹೋರಾಟ ಮಾಡುತ್ತಿದ್ದಾನೆ.
ಇತಿ ಬ್ರುವಾಣಂ ಮದ್ರೇಶಂ ಕರ್ಣಃ ಪ್ರಾಹಾತಿಮನ್ಯುಮಾನ್ ॥75॥
ಪಶ್ಯ ಸಂಶಪ್ತಕೈಃ ಕ್ರುದ್ಧೈಃ ಸರ್ವತಃ ಸಮಭಿದ್ರುತಃ |
ಏಷ ಸೂರ್ಯ ಇವಾಂಭೋದೈಶ್ಛನ್ನಃ ಪಾರ್ಥೋ ನ ದೃಶ್ಯತೇ ॥76॥
ಹೀಗೆ ಶಲ್ಯ ಹೇಳುತ್ತಿದ್ದಂತೆ ಕರ್ಣ ಬಲು ಕುಪಿತನಾಗಿ ಹೇಳಿದ: `ನೋಡು, ಕುಪಿತರಾದ ಸಂಶಪ್ತಕರಿಂದ ಎಲ್ಲೆಡೆ ಆಕ್ರಮಣಕ್ಕೊಳಗಾಗಿ, ಮೋಡ ಮುಸುಕಿದ ಸೂರ್ಯನಂತೆ, ಮುಚ್ಚಿಹೋಗಿ ಅರ್ಜುನ ಕಾಣದಾಗಿದ್ದಾನೆ.
ಏತದಂತೋಽರ್ಜುನಃ ಶಲ್ಯ ನಿಮಗ್ನಃ ಶೋಕಸಾಗರಮ್ ॥77॥
ಶಲ್ಯ, ಇದೀಗ ಅರ್ಜುನನ ಅಂತ್ಯ. ಸೈನ್ಯಸಾಗರದಲ್ಲಿ ಮುಳುಗಿಹೋಗಿದ್ದಾನೆ.
ಶಲ್ಯಃ
ವರುಣಂ ಕೋಽಂಭಸಾ ಹನ್ಯಾದಿಂಧನೇನ ಚ ಪಾವಕಮ್ |
ಕೋ ವಾನಿಲಂ ನಿಗೃಹ್ಣೀಯಾತ್ ಪಿಬೇದ್ವಾ ಕೋ ಮಹಾರ್ಣವಮ್ ॥78॥
ಶಲ್ಯ ನುಡಿದ– ವರುಣನನ್ನು ನೀರಿನಿಂದ, ಬೆಂಕಿಯನ್ನು ಕಟ್ಟಿಗೆಯಿಂದ ಯಾವನು ನಾಶಮಾಡುತ್ತಾನೆ? ಗಾಳಿಯನ್ನು ಯಾವನು ಹಿಡಿದಿಟ್ಟುಕೊಳ್ಳುತ್ತಾನೆ? ಮಹಾಸಾಗರವನ್ನು ಯಾವನು ಕುಡಿಯುತ್ತಾನೆ?
ಈದೃಗ್ರೂಪಮಹಂ ಮನ್ಯೇ ಪಾರ್ಥಸ್ಯ ಯುಧಿ ನಿಗ್ರಹಮ್ |
ನ ಹಿ ಶಕ್ಯೋಽರ್ಜುನೋ ಜೇತುಂ ಸೇಂದ್ರೈಃ ಸರ್ವೈಃ ಸುರಾಸುರೈಃ ॥79॥
ಪಾರ್ಥನನ್ನು ಯುದ್ಧದಲ್ಲಿ ನಿಗ್ರಹಿಸುವುದೆಂದರೂ ಹೀಗೇ ಎಂದು ನನಗೆ ಗೊತ್ತು. ಇಂದ್ರಾದಿ ಸಮಸ್ತ ದೇವತೆಗಳಿಂದಲೂ ಅಸುರರಿಂದಲೂ ಅರ್ಜುನನನ್ನು ಪರಾಭವಗೊಳಿಸುವುದು ಶಕ್ಯವಲ್ಲ.
ಅಥೈವಂ ಪರಿತೋಷಸ್ತೇ ವಾಚೋಕ್ತತ್ವ ಸುಮನಾ ಭವ |
ನ ಸ ಶಕ್ಯೋ ಯುಧಾ ಜೇತುಮನ್ಯಂ ಕುರು ಮನೋರಥಮ್ ॥80॥
ಶಕ್ಯವೆಂದು ಹೇಳುವುದರಿಂದಲೇ ನಿನಗೆ ಸಂತೋಷವೆನ್ನುವುದಾದರೆ ಹಾಗೇ ಹೇಳಿ ಸಂತುಷ್ಟಚಿತ್ತನಾಗು. ಯುದ್ಧದಿಂದ ಅವನನ್ನು ಗೆಲ್ಲಲಾಗದು. ಬೇರೇನನ್ನಾದರೂ ಆಸೆ ಪಡು.
ಬಾಹುಭ್ಯಾಮುದ್ಧರೇದ್ಭೂಮಿಂ ದಹೇತ್ ಕ್ರುದ್ಧ ಇಮಾಃ ಪ್ರಜಾಃ |
ಪಾತಯೇತ್ ತ್ರಿದಿವಾದ್ ದೇವಾನ್ ಯೋಽರ್ಜುನಂ ಸಮರೇ ಜಯೇತ್ ॥81॥
ಅರ್ಜುನನನ್ನು ಯುದ್ಧದಲ್ಲಿ ಯಾವನು ಗೆಲ್ಲುವನೋ ಅವನು ತೋಳುಗಳಿಂದ ಭೂಮಿಯನ್ನೂ ಎತ್ತಬಲ್ಲ. ಕ್ರುದ್ಧನಾಗಿ ಎಲ್ಲ ಜೀವಿಗಳನ್ನು ಸುಡಬಲ್ಲ. ಸ್ವರ್ಗದಿಂದ ದೇವತೆಗಳನ್ನು ಬೀಳಿಸಬಲ್ಲ.
ಪಶ್ಯ ಕುಂತೀಸುತಂ ವೀರಂ ಭೀಮಮಕ್ಲಿಷ್ಟಕಾರಿಣಮ್ |
ಪ್ರಭಾಸಂತಂ ಮಹಾಬಾಹುಮೇನಂ ಮೇರುಮಿವಾಚಲಮ್ ॥82॥

ವೀರನಾದ, ಎಂಥ ಕಾರ್ಯವನ್ನೂ ಕ್ಲೇಶವಿಲ್ಲದೆ ಮಾಡಬಲ್ಲ ಭೀಮನನ್ನು ನೋಡು, ಮಹಾಬಾಹುವಾದ ಇವನು ಮೇರುಪರ್ವತದಂತೆ ಅಚಲನಾಗಿ ಶೋಭಿಸುತ್ತಾನೆ.
ಅಮರ್ಷೀ ನಿತ್ಯಸಂರಬ್ಧಶ್ಚಿರಂ ವೈರಮನುಸ್ಮರನ್ |
ಏಷ ಭೀಮೋ ಜಯಪ್ರೇಪ್ಸುರ್ಯುಧಿ ತಿಷ್ಠತಿ ವೀರ್ಯವಾನ್ ॥83॥
ಈ ಭೀಮನು ಸಹನೆ ಮಾಡದವನು, ಸದಾ ವೈರವನ್ನು ನೆನಪಿಸಿಕೊಂಡು ಕ್ರುದ್ಧನಾಗುವವನು, ವೀರ್ಯಶಾಲಿ, ಯುದ್ಧದಲ್ಲಿ ಜಯಪಡೆಯಲು ಉತ್ಸುಕನಾಗಿ ನಿಂತಿದ್ದಾನೆ.
ಏಷ ಧರ್ಮಭೃತಾಂ ಶ್ರೇಷ್ಠೋ ಧರ್ಮರಾಜೋ ಯುಧಿಷ್ಠಿರಃ |
ತಿಷ್ಠತ್ಯಸುಕರಃ ಸಂಖ್ಯೇ ಪರೈಃ ಪರಪುರಂಜಯಃ ॥84॥
ಈತ ಧರ್ಮಪೋಷಕರಲ್ಲಿ ಶ್ರೇಷ್ಠನಾದ ಧರ್ಮರಾಜ ಯುಧಿಷ್ಠಿರ. ಶತ್ರುಪಟ್ಟಣವನ್ನು ಗೆಲ್ಲುವ ಈತ ರಣದಲ್ಲಿ ಶತ್ರುಗಳಿಂದ ಗೆಲ್ಲಲಾಗದವನು. ಯುದ್ಧದಲ್ಲಿ ನಿಂತಿದ್ದಾನೆ.
ಏತೌ ಚ ಪುರುಷವ್ಯಾಘ್ರಾವಶ್ವಿನಾವಿವ ಸೋದರೌ |
ನಕುಲಃ ಸಹದೇವಶ್ಚ ತಿಷ್ಠತೋ ಯುಧಿ ದುರ್ಜಯೌ ॥85॥
ಇವರು ನಕುಲಸಹದೇವರು ಸೋದರರು, ಅಶ್ವಿನಿದೇವತೆಗಳಂತೆ, ಪುರುಷೋತ್ತಮರು, ಯುದ್ಧದಲ್ಲಿ ಗೆಲ್ಲಲಾಗದವರು ನಿಂತಿದ್ದಾರೆ.
ದೃಶ್ಯಂತ ಏತೇ ಕಾರ್ಷ್ಣೇಯಾಃ ಪಂಚ ಪಂಚಾಚಲಾ ಇವ |
ವ್ಯವಸ್ಥಿತಾ ಯೋತ್ಸ್ಯಮಾನಾಃ ಸರ್ವೇಽರ್ಜುನಸಮಾ ಯುಧಿ ॥86॥
ಐದುಮಂದಿ ದ್ರೌಪದೀಪುತ್ರರು ಐದು ಬೆಟ್ಟಗಳಂತೆ ಅಚಲರಾಗಿ ನಿಂತಿದ್ದಾರೆ. ಯುದ್ಧಮಾಡುತ್ತಿದ್ದರೆ ರಣದಲ್ಲಿ ಎಲ್ಲರೂ ಅರ್ಜುನನಿಗೆ ಸಮಾನರು.
ಏತೇ ದ್ರುಪದಪುತ್ರಾಶ್ಚ ಧೃಷ್ಟದ್ಯುಮ್ನಪುರೋಗಮಾಃ |
ದೀಪ್ತಾಃ ಸತ್ಯಜಿತಾ ವೀರಾಸ್ತಿಷ್ಠಂತಿ ಪರಮೌಜಸಃ ॥87॥
ಇವರು ದ್ರುಪದಪುತ್ರರಾದ ಧೃಷ್ಟದ್ಯುಮ್ನ ಮುಂತಾದವರು, ಪರಮ ಪರಾಕ್ರಮಿಗಳು. ಸತ್ಯದಿಂದ ಗೆಲ್ಲುವ, ಜ್ವಲಿಸುವ ವೀರರು.
ಅಸಾವಿಂದ್ರ ಇವಾಸಹ್ಯಃ ಸಾತ್ಯಕಿಃ ಸಾತ್ವತಾಂ ವರಃ |
ಯುಯುತ್ಸುರುಪಯಾತ್ಯಸ್ಮಾನ್ ಕಾಲಾಂತಕಯಮೋಪಮಃ ॥88॥
ಈತನು ಸಾತ್ಯಕಿ, ಯಾದವಶ್ರೇಷ್ಠ. ಇಂದ್ರನಂತೆ ಶತ್ರುಗಳಿಂದ ಇದಿರಿಸಲಾಗ ದವನು. ಪ್ರಲಯಕಾಲದ ಅಂತಕಯಮನಂತಿರುವವನು. ನಮ್ಮೊಡನೆ ಯುದ್ಧ ಮಾಡಲು ಬಯಸಿ ಬರುತ್ತಿದ್ದಾನೆ.
ಇತಿ ಸಂವದತೋರೇವ ತಯೋಃ ಪುರುಷಸಿಂಹಯೋಃ |
ತೇ ಸೇನೇ ಸಮಸಜ್ಜೇತಾಂ ಗಂಗಾಯಮುನವದ್ ಭೃಶಮ್ ॥89॥
ಹೀಗೆ ಪುರುಷಶ್ರೇಷ್ಠರಾದ ಕರ್ಣಶಲ್ಯರು ಇಬ್ಬರು ಮಾತನಾಡಿಕೊಳ್ಳು ತ್ತಿದ್ದಂತೆಯೆ ಗಂಗೆಯಮುನೆಯರಂತೆ ಎರಡು ಸೇನೆಗಳು ವೇಗದಿಂದ ಪರಸ್ಪರ
ಸಂಧಿಸಿದುವು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣ ಶಲ್ಯಸಂವಾದೇ ಚತುಶ್ಚತ್ವಾರಿಂಶೋಧ್ಯಾಯಃ ॥44॥

ಮಹಾಭಾರತತಾತ್ಪರ್ಯನಿರ್ಣಯ
ನಿವಾರ್ಯ ಕರ್ಣಂ ಚ ಶರೈರಮುಷ್ಯ
ಸೂನೋಃ ಸುಷೇಣಸ್ಯ ಶಿರಶ್ಚಕರ್ತ |
ಪಪಾತ ಭೂಮೌ ಸ ಪಿತುಃ ಸಮೀಪೇ
ಯಥಾ ಹತಃ ಸತ್ಯಸೇನೋಮುನೈವ |
ಯಥೈವ ಕರ್ಣಾವರಜೌ ಪುರೈವ
ನಿಶಾಯುದ್ಧೇ ಕರ್ಣಪುರಃ ಪ್ರಪಾತಿತೌ ॥ 80 ॥
ಭೀಮ ಕರ್ಣನನ್ನು ಬಾಣಗಳಿಂದ ತಡೆದು ಅವನ ಮಗನಾದ ಸುಷೇಣನ ಶಿರವನ್ನು ಕತ್ತರಿಸಿದ. ಹಿಂದೆ ಭೀಮನಿಂದಲೆ ಹತನಾದ ಸತ್ಯಸೇನ ಹೇಗೆ ಕರ್ಣನ ಬಳಿಯಲ್ಲಿಯೆ ಬಿದ್ದನೋ, ಹಿಂದೆ ರಾತ್ರಿಯುದ್ಧದಲ್ಲಿ ಭೀಮನಿಂದಲೆ ಕರ್ಣನ ಇಬ್ಬರು ತಮ್ಮಂದಿರು ಕರ್ಣನ ಎದುರಿಗೇ ನೆಲದಲ್ಲಿ ಹೇಗೆ ಬೀಳಿಸಲ್ಪಟ್ಟರೋ ಹಾಗೇ ಈ ಸುಷೇಣನೂ ತಂದೆಯ ಬಳಿಯಲ್ಲಿಯೆ ನೆಲದಲ್ಲಿ ಬಿದ್ದ.

ನಲವತ್ತೈದನೆಯ ಅಧ್ಯಾಯ
ಕರ್ಣನು ಪಾಂಚಾಲಸೈನ್ಯವನ್ನು ಆಕ್ರಮಿಸಿದ. ಭೀಮ ಕರ್ಣಪುತ್ರ
ಸತ್ಯಸೇನನನ್ನು ವಧಿಸಿದ. ಕರ್ಣ ತನಗೆ ಇದಿರಾದವರನ್ನೆಲ್ಲ
ನಿಗ್ರಹಿಸಿ ಯುಧಿಷ್ಠಿರನ ಕಡೆಗೆ ನುಗ್ಗಿದ.
ಧೃತರಾಷ್ಟ್ರಃ
ತಥಾ ವ್ಯೂಢೇಷ್ವನೀಕೇಷು ಸಂಸಕ್ತೇಷು ಚ ಸಂಜಯ |
ಸಂಶಪ್ತಕಾನ್ ಕಥಂ ಪಾರ್ಥೋ ಗತಃ ಕರ್ಣಶ್ಚ ಪಾಂಡವಾನ್ ॥1॥

ಧೃತರಾಷ್ಟ್ರ ನುಡಿದ– ಸಂಜಯ, ಸೈನ್ಯಗಳು ವ್ಯೂಹ ರಚಿಸಿ ಯುದ್ಧಕ್ಕೆ ತೊಡಗಿದಾಗ ಅರ್ಜುನನು ಸಂಶಪ್ತಕರನ್ನು, ಕರ್ಣನು ಪಾಂಡವರನ್ನು ಹೇಗೆ ಇದಿರಿಸಿದರು?
ಏತದ್ ವಿಸ್ತರತೋ ಯುದ್ಧಂ ಪ್ರಬ್ರೂಹಿ ಕುಶಲೋ ಹ್ಯಸಿ |
ನ ಹಿ ತೃಪ್ಯಾಮಿ ವೀರಾಣಾಂ ಶೃಣ್ವಾನೋ ವಿಕ್ರಮಾನ್ ರಣೇ ॥2॥
ಈ ಯುದ್ಧವನ್ನು ವಿಸ್ತಾರವಾಗಿ ಹೇಳು. ನೀನು ಕುಶಲನಾಗಿರುವೆ. ರಣದಲ್ಲಿ ವೀರರು ತೋರಿದ ಪರಾಕ್ರಮವನ್ನು ಎಷ್ಟು ಕೇಳಿದರೂ ನನಗೆ ತೃಪ್ತಿ ಇಲ್ಲ.
ಸಂಜಯಃ
ತದಾಸ್ಥಿತಮವಜ್ಞಾಯ ಪ್ರತ್ಯಮಿತ್ರಬಲಂ ಮಹತ್ |
ಅವ್ಯೂಹತಾರ್ಜುನೋ ವ್ಯೂಹಂ ಪುತ್ರಸ್ಯ ತವ ದುರ್ನಯೇ ॥3॥
ಸಂಜಯ ನುಡಿದ– ಮಹತ್ತಾದ ಶತ್ರುಸೈನ್ಯ ಆಗ ನಿನ್ನ ಮಗನ ದುರ್ನೀತಿಯಿಂದ ಯುದ್ಧಕ್ಕೆ ನಿಂತಾಗ ಅದನ್ನು ಕಂಡು ಅರ್ಜುನ ತನ್ನ ಸೈನ್ಯವನ್ನೂ ವ್ಯೂಹವಾಗಿ ನಿಲ್ಲಿಸಿದ.
ತತ್ಸಾದಿನಾಗಕಲಿಲಂ ಪದಾತಿರಥಸಂಕುಲಮ್ |
ಧೃಷ್ಟದ್ಯುಮ್ನಮುಖೈರ್ವ್ಯೂಢಮಶೋಭತ ಮಹದ್ ಬಲಮ್ ॥4॥
ಅರ್ಜುನನ ಮಹತ್ತಾದ ಸೈನ್ಯವು ಅಶ್ವಗಜಸೈನ್ಯಗಳಿಂದಲೂ ಪದಾತಿ ರಥಸೈನ್ಯಗಳಿಂದಲೂ ತುಂಬಿದ್ದು ಧೃಷ್ಟದ್ಯುಮ್ನ ಮುಂತಾದವರಿಂದ ವ್ಯೂಹಗೊಂಡು ಶೋಭಿಸಿತು.
ಪಾರಾವತಸವರ್ಣಾಶ್ವಶ್ಚಂದ್ರಾದಿತ್ಯಸಮದ್ಯುತಿಃ |
ಪಾರ್ಷತಃ ಪ್ರಬಭೌ ಧನ್ವೀ ಕಾಲೋ ವಿಗ್ರಹವಾನಿವ ॥5॥
ಪಾರಿವಾಳವರ್ಣದ ಕುದುರೆಗಳುಳ್ಳವನು, ಚಂದ್ರಸೂರ್ಯಸಮಾನ ಪ್ರಕಾಶ ಉಳ್ಳವನಾದ ಧೃಷ್ಟದ್ಯುಮ್ನ ಬಿಲ್ಲುಹಿಡಿದು ಯಮನೇ ಮೈತಳೆದು ಬಂದಂತೆ ಶೋಭಿಸಿದ.
ಪಾರ್ಷತಂ ತ್ವಭಿ ಸಂತಸ್ಥುರ್ದ್ರೌಪದೇಯಾ ಯುಯುತ್ಸವಃ |
ದಿವ್ಯವರ್ಮಾಯುಧಭೃತಃ ಶಾರ್ದೂಲಸಮವಿಕ್ರಮಾಃ ॥6॥
ಸಾನುಗಾ ಭೀಮವಪುಷಶ್ಚಂದ್ರಂ ತಾರಾಗಣಾ ಇವ ॥7॥
ದಿವ್ಯ ಕವಚ, ಆಯುಧಗಳನ್ನು ಧರಿಸಿದ, ಹುಲಿಯಂತೆ ಪರಾಕ್ರಮತೋರುವ, ಶತ್ರುಭೀಕರ ಶರೀರವುಳ್ಳ ದ್ರೌಪದೀಪುತ್ರರು ಯುದ್ಧೋತ್ಸುಕರಾಗಿ ತಮಗೆ ವಿಧೇಯರಾದ ಸೈನಿಕರೊಂದಿಗೆ ನಕ್ಷತ್ರಸಮೂಹಗಳು ಚಂದ್ರನನ್ನು ಸುತ್ತುವರಿಯು ವಂತೆ, ಧೃಷ್ಟದ್ಯುಮ್ನನನ್ನು ಸುತ್ತುವರಿದು ನಿಂತರು.
ಅಥ ವ್ಯೂಢೇಷ್ವನೀಕೇಷು ಪ್ರೇಕ್ಷ್ಯ ಯ ಸಂಶಪ್ತಕಾನ್ ರಣೇ |
ಕ್ರುದ್ಧೋಽರ್ಜುನೋಽಭಿದುದ್ರಾವ ವ್ಯಾಕ್ಷಿಪನ್ ಗಾಂಡಿವಂ ಧನುಃ ॥8॥
ಸೈನ್ಯಗಳು ರಣರಂಗದಲ್ಲಿ ವ್ಯೂಹಗೊಂಡು ನಿಂತಾಗ ಅರ್ಜುನ ಕರ್ಣನ ಕಡೆಗೇ ಹೊರಟಿದ್ದ. ಆದರೂ ಸಂಶಪ್ತಕರನ್ನು ಕಂಡು ಕ್ರುದ್ಧನಾದ. ಅವರ ಆಹ್ವಾನವನ್ನು ಸ್ವೀಕರಿಸಿ ಗಾಂಡಿವ ಧನುಸ್ಸನ್ನು ಸೆಳೆಯುತ್ತ ಅವರ ಕಡೆಗೆ ಧಾವಿಸಿದ.
ಅಥ ಸಂಶಪ್ತಕಾಃ ಪಾರ್ಥಮಭ್ಯಧಾವನ್ ವಧೈಷಿಣಃ |
ವಿಜಯೇ ಕೃತಸಂಕಲ್ಪಾ ಮೃತ್ಯುಂ ಕೃತ್ವಾ ನಿವರ್ತನಮ್ ॥9॥
ಸಂಶಪ್ತಕರು ಅರ್ಜುನನ ವಧವನ್ನು ಬಯಸಿದವರು. ವಿಜಯವನ್ನು ಗಳಿಸುವ ಸಂಕಲ್ಪವನ್ನು ಮಾಡಿ, ಮರಣ ಬಂದರೆ ಮಾತ್ರ ಯುದ್ಧದಿಂದ ನಿವೃತ್ತರಾಗುವೆವು ಎಂದುಕೊಂಡು, ಅರ್ಜುನನನ್ನು ಆಕ್ರಮಿಸಿದರು.
ತದಶ್ವಸಂಘಬಹುಲಂ ಮತ್ತನಾಗರಥಾಕುಲಮ್ |
ಪತ್ತಿಮಚ್ಛೂರವೀರೌಘೈರ್ದ್ರುತಮರ್ಜುನಮಾದ್ರವತ್ ॥10॥
ಅಶ್ವಸೈನ್ಯದ ಸಮೂಹಗಳಿಂದಲೂ ಮದಿಸಿದ ಗಜಸೈನ್ಯಗಳಿಂದಲೂ ಪದಾತಿಯುಕ್ತ ಶೂರವೀರರ ಸಮೂಹಗಳಿಂದಲೂ ತುಂಬಿದ ಸಂಶಪ್ತಕ ಸೈನ್ಯ ಬೇಗನೆ ಅರ್ಜುನನ ಕಡೆಗೆ ಧಾವಿಸಿತು.
ಸ ಸಂಪ್ರಹಾರಸ್ತುಮುಲಸ್ತೇಷಾಮಾಸೀತ್ ಕಿರೀಟಿನಾ |
ತಸ್ಯೈವ ನಃ ಶ್ರುತೋ ಯಾದೃಙ್ನಿವಾತಕವಚೈಃ ಸಹ ॥11॥
ಅರ್ಜುನನೊಡನೆ ಸಂಶಪ್ತಕರ ತುಮುಲ ಯುದ್ಧವು, ಹಿಂದೆ ನಾವು ಕೇಳಿದಂತೆ ಅರ್ಜುನನಿಗೇ, ನಿವಾತಕವಚರೊಡನೆ ಯಾವ ರೀತಿಯ ತುಮುಲ ಯುದ್ಧ ನಡೆಯಿತೋ ಅದೇ ರೀತಿಯದಾಯಿತು.
ರಥಾನಶ್ವಾನ್ ಧ್ವಜಾನ್ ನಾಗಾನ್ ಪತ್ತೀನ್ ರಥಪತೀನಪಿ |
ಇಷೂನ್ ಧನೂಂಷಿ ಖಡ್ಗಾಂಶ್ಚ ಚಕ್ರಾಣಿ ಚ ಪರಶ್ವಧಾನ್ ॥12॥
ಸಾಯುಧಾನುದ್ಯತಾನ್ ಬಾಹೂನುದ್ಯತಾನ್ಯಾಯುಧಾನಿ ಚ |
ಚಿಚ್ಛೇದ ದ್ವಿಷತಾಂ ಪಾರ್ಥಃ ಶಿರಾಂಸಿ ಚ ಸಹಸ್ರಶಃ ॥13॥
ಶತ್ರುಗಳ ಸಾವಿರಾರು ರಥಗಳನ್ನು ಕುದುರೆಗಳನ್ನು ಧ್ವಜಗಳನ್ನು ಗಜಗಳನ್ನು ಪದಾತಿಗಳನ್ನು ರಥಿಕರನ್ನು ಬಾಣಗಳನ್ನು ಧನುಸ್ಸುಗಳನ್ನು ಖಡ್ಗಗಳನ್ನು ಚಕ್ರಗಳನ್ನು ಪರಶುಗಳನ್ನು, ಆಯುಧ ಹಿಡಿದು ಎತ್ತಿದ ಬಾಹುಗಳನ್ನು , ಎತ್ತಿದ ಆಯುಧಗಳನ್ನು ಮತ್ತು ಶಿರಸ್ಸುಗಳನ್ನು ಅರ್ಜುನ ಕತ್ತರಿಸಿದ.
ತಸ್ಮಿನ್ ಸೈನ್ಯೇ ಮಹಾವರ್ತೇ ಪಾತಾಲಾವರ್ತಸನ್ನಿಭೇ |
ನಿಮಗ್ನಂ ತಂ ರಥಂ ಮತ್ವಾ ನೇದುಃ ಸಂಶಪ್ತಕಾ ಮುದಾ ॥14॥

ಸಂಶಪ್ತಕ ಸೈನ್ಯವು ಪಾತಾಳದಷ್ಟು ಆಳದ ಸುಳಿಯಿಂದ ಕೂಡಿದ ಮಡುವಿನಂತಿತ್ತು. ಆ ಸುಳಿಯಲ್ಲಿ ಅರ್ಜುನ ರಥ ಮುಳುಗಿಯೇ ಹೋಯಿತೆಂದು ತಿಳಿದು ಸಂಶಪ್ತಕರು ಹರ್ಷದಿಂದ ಗರ್ಜಿಸಿದರು.
ಸ ಪುರಸ್ತಾದರೀನ್ ಹತ್ವಾ ಪುನರುತ್ತರತೋವಧೀತ್ |
ಪಶ್ಚಾದ್ ದಕ್ಷಿಣತಶ್ಚೈವ ಕ್ರುದ್ಧೋ ರುದ್ರಃ ಪಶೂನಿವ ॥15॥
ಅರ್ಜುನನು ಪೂರ್ವದಿಕ್ಕಿನಲ್ಲಿ ಶತ್ರುಗಳನ್ನು ಕೊಂದು, ಪುನಃ ಉತ್ತರ ದಲ್ಲಿಯೂ ಪಶ್ಚಿಮದಲ್ಲಿಯೂ ದಕ್ಷಿಣದಲ್ಲಿಯೂ ಕೊಂದ, ಕ್ರುದ್ಧನಾದ ರುದ್ರನು ಪಶುಗಳನ್ನು ಸಂಹರಿಸುವಂತೆ.
ಅಥ ಪಾಂಚಾಲಚೇದೀನಾಂ ಸೃಂಜಯಾನಾಂ ಚ ಮಾರಿಷ |
ತ್ವದೀಯೈಃ ಸಹ ಸಂಗ್ರಾಮ ಆಸೀತ್ಪರಮದಾರುಣಃ ॥16॥
ರಾಜನೆ, ಪಾಂಚಾಲ ಚೇದಿ ಸೃಂಜಯರಿಗೆ ನಿನ್ನವರೊಡನೆ ಪರಮ ದಾರುಣವಾದ ಯುದ್ಧ ನಡೆಯಿತು.
ಕೃಪಶ್ಚ ಕೃತವರ್ಮಾ ಚ ಶಕುನಿಶ್ಚಾಪಿ ಸೌಬಲಃ |
ಹೃಷ್ಟಸೇನಾಃ ಸುಸಂರಬ್ಧಾ ರಥಾನೀಕ ಪ್ರಹಾರಿಣಃ ॥17॥
ಕೋಸಲೈಃ ಕಾಶಿಮತ್ಸ್ಯೈಶ್ಚ ಕಾರೂಷೈಃ ಕೇಕಯೈರಪಿ |
ಶೂರಸೇನೈಃ ಶೂರವೀರೈರ್ಯುಯುಧುರ್ಯುದ್ಧದುರ್ಮದಾಃ ॥18॥
ರಥಸೈನ್ಯವನ್ನು ನಾಶಪಡಿಸುವ, ಯುದ್ಧದಲ್ಲಿ ಸುಖ ಕಾಣುವ ಕೃಪಕೃತವರ್ಮಸೌಬಲರು ಯುದ್ಧೋತ್ಸಾಹಯುಕ್ತರಾದ ಸೈನಿಕರಿಂದ ಕೂಡಿ, ಕ್ರುದ್ಧರಾಗಿ, ಕೋಸಲ ಕಾಶಿ ಮತ್ಸ್ಯ ಕರೂಷ ಕೇಕಯ ಶೂರಸೇನ ದೇಶಗಳ ಶೂರವೀರರಾದ ಯೋಧರೊಡನೆ ಯುದ್ಧ ಮಾಡಿದರು.
ತೇಷಾಂ ತದಭವದ್ ಯುದ್ಧಂ ದೇಹಪಾಪ್ಮಾಸುನಾಶನಮ್ |
ಶೂದ್ರವಿಟ್ಕ್ಷತ್ರವಿಪ್ರಾಣಾಂ ಧರ್ಮ್ಯಂ ಸ್ವರ್ಗ್ಯಂ ಯಶಸ್ಕರಮ್ ॥19॥
ಶೂದ್ರ ವೈಶ್ಯ ಕ್ಷತ್ರಿಯ ವಿಪ್ರರಿಗೆಲ್ಲರಿಗೂ ಶರೀರ, ಪ್ರಾಣಗಳನ್ನು ಕಳೆವಂಥ ಧರ್ಮಸಮ್ಮತವಾದ ಸ್ವರ್ಗಕರವಾದ ಯಶಸ್ಕರವಾದ ಯುದ್ಧ ನಡೆಯಿತು.
ಹಿಂದೆ ಸೈನ್ಯಕ್ಕೆ ಕ್ಷತ್ರಿಯರಂತೆ ವಿಪ್ರರೂ ವೈಶ್ಯ ಶೂದ್ರರೂ ಸೇರುತ್ತಿದ್ದರು. ಯುದ್ಧವಿದ್ಯೆಯನ್ನು ನಾಲ್ಕೂ ವರ್ಣದವರು ಕಲಿಯುತ್ತಿದ್ದರು. ಬೇಡರ ಜಾತಿಯ ಏಕಲವ್ಯನಿಗೂ ದ್ರೋಣ ಅಸ್ತ್ರವಿದ್ಯೆ ಹೇಳಿಕೊಟ್ಟ. ವೇದಮಂತ್ರಗಳನ್ನು ಮಾತ್ರ ಶೂದ್ರರಿಗೆ ಹೇಳಿಕೊಡುತ್ತಿರಲಿಲ್ಲ. ಮತ್ತು ಯುದ್ಧವೃತ್ತಿಯು ಕ್ಷತ್ರಿಯರಿಗೆ ಮಾತ್ರ ಸೀಮಿತವಾಗಿದ್ದರೂ ವಿಶೇಷ ಸಂದರ್ಭಗಳಲ್ಲಿ ನಾಲ್ಕೂ ವರ್ಣದವರೂ ಯುದ್ಧದಲ್ಲಿ ಭಾಗವಹಿಸುತ್ತಿದ್ದರು. ಅದರಿಂದ ಬ್ರಾಹ್ಮಣರಾದ ದ್ರೋಣ, ಅಶ್ವತ್ಥಾಮರು ಯುದ್ಧಮಾಡಿ ಜಾತಿಭ್ರಷ್ಟರಾದರೆಂದು ತಿಳಿಯಲು ಕಾರಣವಿಲ್ಲ. ಗೀತಾತಾತ್ಪರ್ಯ ನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ– `ನಾರಾಯಣನ ದ್ವೇಷಿಗಳನ್ನೂ ಅವರ ಕಡೆಯವರನ್ನೂ ನಿಗ್ರಹಿಸುವುದು ಸಕಲ ಭಾಗವತರಿಗೂ ಪರಮಧರ್ಮವಾಗಿದೆ. ಕ್ಷತ್ರಿಯರಿಗೆ ಇದು ವಿಶೇಷವಾಗಿಯೂ ಪರಮಧರ್ಮ ವಾಗಿದೆ' ಎಂದು. ಹೀಗಾಗಿ ನಾರಾಯಣದ್ವೇಷಿಯಾದ ದುರ್ಯೋಧನನನ್ನು ನಿಗ್ರಹಿಸಲೆಂದೇ ಅವನ ಕಡೆಗೇ ನಿಂತು, ಯುದ್ಧ ನಡೆಯುವಂತೆ ಮಾಡಿ, ಭೀಷ್ಮ ದ್ರೋಣಾದಿಗಳು ಅವನ ವಿನಾಶಕ್ಕೆ ಕಾರಣರಾದರು. ತಾವು ಸ್ವಾಮಿದ್ರೋಹಿಗಳೆಂಬ ಭಾವನೆ ಲೋಕಕ್ಕೆ ಬರುವಂತೆ ನಡೆದುಕೊಂಡರು.
ಅಶ್ವತ್ಥಾಮನು ಅರ್ಜುನನಿಗೆ ಸೋತು ವಿಷಾದದಿಂದ ಶಸ್ತ್ರತ್ಯಾಗ ಮಾಡಿದಾಗ ವ್ಯಾಸರೇ ಬಂದು ಬುದ್ಧಿಹೇಳಿ ಶಸ್ತ್ರಗ್ರಹಣ ಮಾಡಿಸಿದುದು ಭಾರತದಲ್ಲಿ ಪ್ರಸಿದ್ಧವೇ ಇದೆ. ಅದರಿಂದ ದ್ರೋಣ, ಅಶ್ವತ್ಥಾಮರನ್ನು ಭೀಮ `ಬ್ರಹ್ಮಬಂಧು' ಎನ್ನುವುದು ಅವರು ವೈಷ್ಣವರನ್ನು ಕೂಡ ವಧಿಸುತ್ತಾರೆ ಎಂಬ ಅಭಿಪ್ರಾಯದಿಂದ ಎನ್ನಬೇಕಾಗುತ್ತದೆ.
ದುರ್ಯೋಧನೋಽಪಿ ಸಹಿತೋ ಭ್ರಾತೃಭಿರ್ಭರತರ್ಷಭ |
ಗುಪ್ತಃ ಕುರುಪ್ರವೀರೈಶ್ಚ ಮದ್ರಾಣಾಂ ಚ ಮಹಾರಥೈಃ ॥20॥
ಪಾಂಡವೈಃ ಸಹಪಾಂಚಾಲೈಶ್ಚೇದಿಭಿಃ ಸಾತ್ಯಕೇನ ಚ |
ಯುಧ್ಯಮಾನಂ ರಣೇ ಕರ್ಣಂ ಕುರುವೀರೋಽಭ್ಯಪಾಲಯತ್ ॥21॥
ರಾಜನೆ, ಕುರುವೀರನಾದ ದುರ್ಯೋಧನನು ತಮ್ಮಂದಿರೊಡನೆ ಕೂಡಿ ಕುರುಪ್ರವೀರರಿಂದಲೂ ಮದ್ರಮಹಾರಥರಿಂದಲೂ ರಕ್ಷಿತನಾಗಿದ್ದು, ಪಾಂಡವ ಪಾಂಚಾಲಚೇದಿವೀರರೊಡನೆ ಮತ್ತು ಸಾತ್ಯಕಿಯೊಡನೆ ಯುದ್ಧಮಾಡುತ್ತಿದ್ದ ಕರ್ಣನನ್ನು ರಣದಲ್ಲಿ ರಕ್ಷಿಸಿದ.
ಕರ್ಣೋಽಪಿ ನಿಶಿತೈರ್ಬಾಣೈರ್ವಿನಿಹತ್ಯ ಮಹಾಚಮೂಮ್ |
ಪ್ರಮೃದ್ಯ ಚ ರಥಶ್ರೇಷ್ಠಾನ್ ಯುಧಿಷ್ಠಿರಮಪೀಡಯತ್ ॥22॥
ಕರ್ಣನು ತೀಕ್ಷ್ಣವಾದ ಬಾಣಗಳಿಂದ ಪಾಂಡವರ ಮಹಾಸೈನ್ಯವನ್ನು ವಧಿಸಿ ಶ್ರೇಷ್ಠ ರಥಿಕರನ್ನೂ ನಾಶಮಾಡಿ ಯುಧಿಷ್ಠಿರನನ್ನು ಪೀಡಿಸಿದ.
ವಿಪತ್ರಾಯುಧದೇಹಾಸೂನ್ ಕೃತ್ವಾ ಶತ್ರೂನ್ ಸಹಸ್ರಶಃ |
ಯುಕ್ತಸ್ತ್ವ ಸ್ವರ್ಗಯಶೋಭ್ಯಾಂ ಚ ಸ್ವೇಭ್ಯೋ
ಮುದಮುದಾವಹತ್ ॥23॥
ಸಾವಿರಾರು ಶತ್ರುಗಳನ್ನು ರಥ ಆಯುಧ ಶರೀರ ಪ್ರಾಣರಹಿತರನ್ನಾಗಿ ಮಾಡಿ ಅವರಿಗೆ ಸ್ವರ್ಗ ಹಾಗೂ ಕೀರ್ತಿ ದೊರಕುವಂತೆ ಮಾಡಿ ತನ್ನವರಿಗೆ ಮುದ ನೀಡಿದ ಕರ್ಣ.
ಏವಂ ಮಾರಿಷ ಸಂಗ್ರಾಮೋ ನರವಾಜಿಗಜಕ್ಷಯಃ |
ಕುರೂಣಾಂ ಸೃಂಜಯಾನಾಂ ಚ ದೇವಾಸುರಸಮೋಽಭವತ್ ॥24॥

ರಾಜನೆ, ಹೀಗೆ ಕುರುಸೃಂಜಯರ ಸಂಗ್ರಾಮ ಪದಾತಿ ಅಶ್ವ ಗಜ ಕ್ಷಯಕಾರಿಯಾಗಿ ದೇವಾಸುರರ ಸಂಗ್ರಾಮಕ್ಕೆ ಸಮವೆನಿಸಿತು.
ಧೃತರಾಷ್ಟ್ರಃ
ಯತ್ತತ್ಪ್ರವಿಶ್ಯ ಪಾರ್ಥಾನಾಂ ಸೇನಾಂ ಕುರ್ವನ್ ಜನಕ್ಷಯಮ್ |
ಕರ್ಣೋ ರಾಜಾನಮಭ್ಯರ್ಚ್ಛತ್ತನ್ಮಮಾಚಕ್ಷ್ವ ಸಂಜಯ ॥25॥
ಧೃತರಾಷ್ಟ್ರ ನುಡಿದ– ಸಂಜಯ, ಕರ್ಣನು ಪಾಂಡವಸೇನೆಯನ್ನು ಪ್ರವೇಶಿಸಿ ಜನಕ್ಷಯ ಮಾಡುತ್ತ ರಾಜಾಯುಧಿಷ್ಠಿರನನ್ನು ಪೀಡಿಸಿದನೆಂಬುದನ್ನು ನನಗೆ ಹೇಳು.
ಕೇ ಚ ಪ್ರವೀರಾಃ ಪಾರ್ಥಾನಾಂ ಯುಧಿ ಕರ್ಣಮವಾರಯನ್ |
ಕಾಂಶ್ಚ ಪ್ರಮಥ್ಯಾಧಿರಥಿರ್ಯುಧಿಷ್ಠಿರಮಪೀಡಯತ್ ॥26॥
ಪಾಂಡವರ ಕಡೆಯ ಯಾವ ಪ್ರಧಾನವೀರರು ರಣರಂಗದಲ್ಲಿ ಕರ್ಣನನ್ನು ಇದಿರಿಸಿದರು? ಯಾರನ್ನು ನಾಶಮಾಡಿ ಯುಧಿಷ್ಠಿರನನ್ನು ಕರ್ಣನು ಪೀಡಿಸಿದ?
ಸಂಜಯಃ
ಧೃಷ್ಟದ್ಯುಮ್ನಮುಖಾನ್ ಪಾರ್ಥಾನ್ ದೃಷ್ಟ್ವಾ ಕರ್ಣೋ ವ್ಯವಸ್ಥಿತಾನ್ |
ಸಮಭ್ಯಧಾವತ್ ತ್ವರಿತಃ ಪಾಂಚಾಲಾನ್ ಶತ್ರುಕರ್ಶನಃ ॥27॥
ಸಂಜಯ ನುಡಿದ– ಧೃಷ್ಟದ್ಯುಮ್ನ ಮುಂತಾದ ಪಾಂಡವರ ವೀರರು ಯುದ್ಧ ಸನ್ನದ್ಧರಾಗಿ ನಿಂತಿದ್ದನ್ನು ಕಂಡು ಶತ್ರುನಾಶಕನಾದ ಕರ್ಣನು ಬೇಗನೆ ಪಾಂಚಾಲ ಯೋಧರ ಕಡೆಗೆ ಧಾವಿಸಿದ.
ತಂ ತೂರ್ಣಮಭಿಧಾವಂತಂ ಪಾಂಚಾಲಾ ಜಿತಕಾಶಿನಃ |
ಪ್ರತ್ಯುದ್ಯಯುರ್ಮಹಾರಾಜ ಹಂಸಾ ಇವ ಮಹಾರ್ಣವಮ್ ॥28॥
ವೇಗವಾಗಿ ತಮ್ಮೆಡೆಗೆ ಬರುತ್ತಿದ್ದ ಕರ್ಣನನ್ನು, ಮಹಾರಾಜ, ಜಯಶಾಲಿಗಳಾದ ಪಾಂಚಾಲರು ಮಹಾಸಮುದ್ರವನ್ನು ಹಂಸಗಳು ಹೇಗೋ ಹಾಗೆ ಇದಿರು ಬಂದು ಸ್ವಾಗತಿಸಿದರು.
ತತಃ ಶಂಖಸಹಸ್ರಾಣಾಂ ನಿಸ್ವನೋ ಹೃದಯಂಗಮಃ |
ಪ್ರಾದುರಾಸೀದುಭಯತೋ ಭೇರೀಶಬ್ದಶ್ಚ ದಾರುಣಃ ॥29॥
ಆಗ ಸಾವಿರಾರು ಶಂಖಗಳ ಹೃದಯಂಗಮವಾದ ಧ್ವನಿಯೂ ದಾರುಣವಾದ ಭೇರಿ ಶಬ್ದವೂ ಎರಡೂ ಸೈನ್ಯಗಳಲ್ಲಿ ಉಂಟಾದುವು.
ನಾನಾವಾದಿತ್ರನಾದಶ್ಚ ದ್ವಿಪಾಶ್ವರಥನಿಸ್ವನಃ |
ಸಿಂಹನಾದಶ್ಚ ವೀರಾಣಾಮಭವದ್ ದಾರುಣಸ್ತದಾ ॥30॥
ನಾನಾ ವಾದ್ಯಘೋಷ, ಆನೆ ಕುದುರೆ ರಥಗಳ ಧ್ವನಿ ಮತ್ತು ವೀರರ ಸಿಂಹನಾದಗಳು ದಾರುಣವಾಗಿ ಉಂಟಾದುವು.
ಸಾದ್ರಿದ್ರುಮಾರ್ಣವಾ ಭೂಮಿಃ ಸವಾತಾಂಬುದಮಂಬರಮ್ |
ಸಾರ್ಕೇಂದುಗ್ರಹನಕ್ಷತ್ರಾ ದ್ಯೌಶ್ಚ ವ್ಯಕ್ತಂ ವ್ಯಘೂರ್ಣತ ॥31॥
ಪರ್ವತ ವೃಕ್ಷ ಸಮುದ್ರಸಹಿತವಾದ ಭೂಮಿ ಗಾಳಿ ಮೋಡಗಳಿಂದ ಕೂಡಿದ ಆಕಾಶ, ಸೂರ್ಯ ಚಂದ್ರ ಗ್ರಹ ನಕ್ಷತ್ರ ಸಹಿತವಾದ ಅಂತರಿಕ್ಷವೆಲ್ಲವೂ ಸ್ಪಷ್ಟವಾಗಿ ಕಂಪಿಸುವಂತೆ ಕಂಡುಬಂದುವು.
ಅತಿ ಭೂತಾನಿ ತಂ ಶಬ್ದಂ ಮೇನಿರೇಽತಿ ಚ ವಿವ್ಯಥುಃ |
ಯಾನಿ ಚಾಪ್ಯಲ್ಪಸತ್ತ್ವಾನಿ ಪ್ರಾಯಸ್ತಾನಿ ಮೃತಾನಿ ಚ ॥32॥
ಜೀವಿಗಳು ಆ ಶಬ್ದವನ್ನು ಅತಿಯಾಯಿತೆಂದುಕೊಂಡುವು ಮತ್ತು ಅತಿಯಾಗಿ ವ್ಯಥೆಗೊಂಡುವು. ಅಲ್ಪಬಲ ಉಳ್ಳ ಪ್ರಾಣಿಗಳು ಪ್ರಾಯಃ ಸತ್ತೇಹೋದುವು.
ಅಥ ಕರ್ಣೋ ಭೃಶಂ ಕ್ರುದ್ಧಃ ಶೀಘ್ರಮಸ್ತ್ರಮುದೀರಯನ್ |
ಜಘಾನ ಪಾಂಡವೀಂ ಸೇನಾಮಾಸುರೀಂ ಮಘವಾನಿವ ॥33॥
ಕರ್ಣನು ಬಹಳ ಕ್ರುದ್ಧನಾಗಿ ವೇಗದಿಂದ ಅಸ್ತ್ರಗಳನ್ನು ಪ್ರಯೋಗಿಸಿ, ಇಂದ್ರನು ಅಸುರ ಸೇನೆಯನ್ನು ವಧಿಸಿದಂತೆ, ಪಾಂಡವಸೇನೆಯನ್ನು ವಧಿಸಿದ.
ಸ ಪಾಂಡವಚಮೂಂ ಕರ್ಣಃ ಪ್ರವಿಶ್ಯ ವಿಸೃಜನ್ ಶರಾನ್ |
ಪ್ರಭದ್ರಕಾಣಾಂ ಪ್ರವರಾನಹನತ್ ಸಪ್ತವಿಂಶತಿಮ್ ॥34॥
ಕರ್ಣನು ಪಾಂಡವ ಸೇನೆಯನ್ನು ಪ್ರವೇಶಿಸಿ ಬಾಣಗಳನ್ನು ಎಸೆದು ಪ್ರಭದ್ರಕರ ಇಪ್ಪತ್ತೇಳು ಪ್ರಧಾನವೀರರನ್ನು ಸಂಹರಿಸಿದ.
ತತಃ ಸುಪುಂಖೈರ್ನಿಶಿತೈ ರಥಶ್ರೇಷ್ಠೋಽಪ್ಯಥೇಷುಭಿಃ |
ಅವಧೀತ್ ಪಂಚವಿಂಶತ್ಯಾ ಪಾಂಚಾಲಾನ್ ಪಂಚವಿಂಶತಿಮ್ ॥35॥
ಮಹಾರಥನಾದ ಕರ್ಣನು ಒಳ್ಳೆಯ ಪುಕ್ಕಉಳ್ಳ ಹರಿತವಾದ ಇಪ್ಪತ್ತೈದು ಬಾಣಗಳಿಂದ ಇಪ್ಪತ್ತೈದು ಪಾಂಚಾಲರನ್ನು ಸಂಹರಿಸಿದ.
ಸುವರ್ಣಪುಂಖೈರ್ನಾರಾಚೈಃ ಪರಕಾಯವಿದಾರಣೈಃ |
ಚೇದಿಕಾನವಧೀದ್ ವೀರಃ ಶತಶೋಽಥ ಸಹಸ್ರಶಃ ॥36॥
ಪರಕಾಯ ಭೇದನ ಮಾಡುವ ಬಂಗಾರದ ಪುಕ್ಕಉಳ್ಳ ಬಾಣಗಳಿಂದ ವೀರಕರ್ಣನು ನೂರಾರು ಸಾವಿರಾರು ಚೇದಿಗಳನ್ನು ಸಂಹರಿಸಿದ.
ತಂ ತಥಾ ಸಮರೇ ಕರ್ಮ ಕುರ್ವಾಣಮತಿಮಾನುಷಮ್ |
ಪರಿವವ್ರುರ್ಮಹಾರಾಜ ಪಾಂಚಾಲಾನಾಂ ರಥವ್ರಜಾಃ ॥37॥
ಮಹಾರಾಜ, ಕರ್ಣನು ರಣದಲ್ಲಿ ಹಾಗೆ ಅತಿಮಾನುಷ ಕರ್ಮ ಮಾಡುವಾಗ ಪಾಂಚಾಲರ ರಥಸಮೂಹಗಳು ಅವನನ್ನು ಸುತ್ತುವರಿದುವು.

ತತಃ ಸಂಧಾಯ ವಿಶಿಖಾನ್ ಪಂಚ ಭಾರತ ದುಃಸಹಾನ್ |
ಪಾಂಚಾಲಾನವಧೀತ್ ಪಂಚ ಕರ್ಣೋ ವೈಕರ್ತನೋ ವೃಷಾ ॥38॥
ಆಗ, ರಾಜನೆ, ಕರ್ಣನು ಸಹಿಸಲಾಗದ ಐದು ಬಾಣಗಳನ್ನು ಹೂಡಿ ಐದು ಪಾಂಚಾಲವೀರರನ್ನು ಸಂಹರಿಸಿದ.
ಭಾನುದೇವಂ ಚಿತ್ರಸೇನಂ ಸೇನಾಬಿಂದುಂ ಚ ಭಾರತ |
ತಪನಂ ಶೂರಸೇನಂ ಚ ಪಾಂಚಾಲಾನಹನತ್ ರಣೇ ॥39॥
ರಾಜನೆ, ಕರ್ಣನು ಭಾನುದೇವ ಚಿತ್ರಸೇನ ಸೇನಾಬಿಂದು ತಪನ ಶೂರಸೇನರೆಂಬ ಪಾಂಚಾಲರನ್ನು ರಣದಲ್ಲಿ ಸಂಹರಿಸಿದ.
ಪಾಂಚಾಲೇಷು ಚ ಶೂರೇಷು ವಧ್ಯಮಾನೇಷು ಸಾಯಕೈಃ |
ಹಾಹಾಕಾರೋ ಮಹಾನಾಸೀತ್ ಪಾಂಚಾಲಾನಾಂ ಮಹಾಹವೇ ॥40॥
ಪಾಂಚಾಲರ ಮಹಾರಣದಲ್ಲಿ ಕರ್ಣನ ಬಾಣಗಳಿಂದ ಪಾಂಚಾಲ ವೀರರು ಹತರಾಗುವಾಗ ಮಹಾ ಹಾಹಾಕಾರ ಉಂಟಾಯಿತು.
ತೇಷಾಂ ಸಂಕೀರ್ಯಮಾಣಾನಾಂ ಪರಿವವ್ರೂ ರಥಾ ದಶ |
ಪುನರೇವ ಚ ತಾನ್ ಕರ್ಣೋ ಜಘಾನಾಶು ಪತತ್ರಿಭಿಃ ॥41॥
ಪಾಂಚಾಲರು ಮುತ್ತಿಗೆ ಹಾಕುವಾಗ ಹತ್ತು ರಥಗಳು ಕರ್ಣನನ್ನು ಸುತ್ತು ವರಿದುವು. ಪುನಃ ಆ ಹತ್ತು ರಥಗಳನ್ನೂ ಕರ್ಣನು ಬಾಣಗಳಿಂದ ನಾಶಮಾಡಿದ.
ಚಕ್ರರಕ್ಷೌ ತು ಕರ್ಣಸ್ಯ ಪುತ್ರೌ ಮಾರಿಷ ದುರ್ಜಯೌ |
ಸುಷೇಣಃ ಸತ್ಯಸೇನಶ್ಚ ತ್ಯಕತ್ವ ಪ್ರಾಣಾನಯುಧ್ಯತಾಮ್ ॥42॥
ಸುಷೇಣ ಮತ್ತು ಸತ್ಯಸೇನರು ಕರ್ಣನ ಪುತ್ರರು, ಕರ್ಣನ ಚಕ್ರರಕ್ಷಕರು. ದುರ್ಜಯರಾಗಿದ್ದು ಪ್ರಾಣಗಳನ್ನೆ ಒತ್ತೆಇಟ್ಟು ಯುದ್ಧಮಾಡಿದರು.
ಪೃಷ್ಠಗೋಪಸ್ತು ಕರ್ಣಸ್ಯ ಜ್ಯೇಷ್ಠಃ ಪುತ್ರೋ ಮಹಾರಥಃ |
ವೃಷಸೇನಃ ಸ್ವಯಂ ಕರ್ಣಂ ಪೃಷ್ಠತಃ ಪರ್ಯಪಾಲಯತ್ ॥43॥
ಕರ್ಣನ ಜ್ಯೇಷ್ಠಪುತ್ರ ವೃಷಸೇನ ಮಹಾರಥ, ಪೃಷ್ಠಗೋಪ, ಕರ್ಣನನ್ನು ಹಿಂಭಾಗದಲ್ಲಿದ್ದು ರಕ್ಷಿಸಿದ.
ಧೃಷ್ಟದ್ಯುಮ್ನಃ ಸಾತ್ಯಕಿಶ್ಚ ದ್ರೌಪದೇಯಾ ವೃಕೋದರಃ |
ಜನಮೇಜಯಃ ಶಿಖಂಡೀ ಚ ಪ್ರವೀರಾಶ್ಚ ಪ್ರಭದ್ರಕಾಃ ॥44॥
ಚೇದಿಕೇಕಯಪಾಂಚಾಲಾ ಯಮೌ ಮತ್ಸ್ಯಾಶ್ಚ ದಂಸಿತಾಃ |
ಸಮಭ್ಯಧಾವನ್ ರಾಧೇಯಂ ಜಿಘಾಂಸಂತಃ ಪ್ರಹಾರಿಣಃ ॥45॥
ಧೃಷ್ಟದ್ಯುಮ್ನ ಸಾತ್ಯಕಿ ದ್ರೌಪದೀಪುತ್ರರು ಭೀಮಸೇನ ಜನಮೇಜಯ ಶಿಖಂಡಿ ಪ್ರಭದ್ರಕರ ವೀರರು, ಚೇದಿ ಕೇಕಯ ಪಾಂಚಾಲರು ನಕುಲಸಹದೇವರು ಮತ್ಸ್ಯರು ಇವರೆಲ್ಲರೂ ಸನ್ನದ್ಧರಾಗಿ ಕರ್ಣನನ್ನು ಕೊಲ್ಲಲು ಬಯಸಿ ಹೊಡೆಯುತ್ತ ದಾಳಿಮಾಡಿದರು.
ತ ಏನಂ ವಿವಿಧೈಃ ಶಸ್ತ್ರೈಃ ಶರಧಾರಾಭಿರೇವ ಚ |
ಅಭ್ಯವರ್ಷನ್ ವಿಮೃದ್ನಂತಃ ಪ್ರಾವೃಷೀವಾಂಬುದಾ ಗಿರಿಮ್ ॥46॥
ಮಳೆಗಾಲದಲ್ಲಿ ಮೋಡಗಳು ಬೆಟ್ಟದ ಮೇಲೆ ಮಳೆ ಸುರಿಸುವಂತೆ ಅವರು ಕರ್ಣನ ಮೇಲೆ ನಾನಾಬಗೆಯ ಶಸ್ತ್ರಗಳಿಂದಲೂ ಬಾಣಪ್ರವಾಹಗಳಿಂದಲೂ ಮಳೆಗರೆದರು.
ಪಿತರಂ ತು ಪರೀಪ್ಸಂತಃ ಕರ್ಣಪುತ್ರಾಃ ಪ್ರಹಾರಿಣಃ |
ತ್ವದೀಯಾಶ್ಚಾಪರೇ ರಾಜನ್ ವೀರಾ ವೀರಾನವಾರಯನ್ ॥47॥
ರಾಜನೆ, ತಂದೆಯನ್ನು ರಕ್ಷಿಸುವ ಇಚ್ಛೆಯಿಂದ ಪ್ರಹಾರಸಮರ್ಥರಾದ ಕರ್ಣಪುತ್ರರು ಮತ್ತು ನಿನ್ನವರಾದ ಬೇರೆ ವೀರರು ವೀರರನ್ನು ತಡೆದರು.
ಸುಷೇಣೋ ಭೀಮಸೇನಸ್ಯ ಛಿತ್ವತ್ವ ಭಲ್ಲೇನ ಕಾರ್ಮುಕಮ್ |
ನಾರಾಚೈಃ ಸಪ್ತಭಿರ್ವಿದ್ಧ್ವಾ ಹೃದಿ ಭೀಮಂ ನನಾದ ಹ ॥48॥
ಕರ್ಣಪುತ್ರ ಸುಷೇಣನು ಭೀಮಸೇನನ ಧನುಸ್ಸನ್ನು ಬಾಣದಿಂದ ಕತ್ತರಿಸಿ ಏಳು ಬಾಣಗಳಿಂದ ಭೀಮನೆದೆಗೆ ಹೊಡೆದು ಗರ್ಜಿಸಿದ.
ಅಥಾನ್ಯದ್ಧನುರಾದಾಯ ಸುದೃಢಂ ಭೀಮವಿಕ್ರಮಃ |
ಸಜ್ಯಂ ವೃಕೋದರಃ ಕೃತ್ವಾ ಸುಷೇಣಸ್ಯಾಚ್ಛಿನದ್ಧನುಃ ॥49॥
ಬಳಿಕ ಪರಾಕ್ರಮಿ ಭೀಮನು ಬಲು ದೃಢವಾದ ಇನ್ನೊಂದು ಬಿಲ್ಲನ್ನೆತ್ತಿಕೊಂಡು ಹೆದೆ ಏರಿಸಿ ಸುಷೇಣನ ಧನುಸ್ಸನ್ನು ಕತ್ತರಿಸಿದ.
ವಿವ್ಯಾಧ ಚೈನಂ ನವಭಿಃ ಕ್ರುದ್ಧೋ ನೃತ್ಯನ್ನಿವೇಷುಭಿಃ |
ಕರ್ಣಂ ಚ ತೂರ್ಣಂ ವಿವ್ಯಾಧ ತ್ರಿಸಪ್ತತ್ಯಾ ಶಿತೈಃ ಶರೈಃ ॥50॥
ಭೀಮನು ಕ್ರುದ್ಧನಾಗಿ ಕುಣಿವಂತೆ ತೋರಿಕೊಂಡು ಒಂಬತ್ತು ಬಾಣಗಳಿಂದ ಸುಷೇಣನನ್ನು ಹೊಡೆದ. ಕರ್ಣನನ್ನೂ ಬೇಗನೆ ಎಪ್ಪತ್ತಮೂರು ಹರಿತವಾದ ಬಾಣ ಗಳಿಂದ ಹೊಡೆದ.
ಸತ್ಯಸೇನಂ ಚ ದಶಭಿಃ ಸಾಶ್ವಸೂತಾಯುಧಧ್ವಜಮ್ |
ಪಶ್ಯತಾಂ ಸುಹೃದಾಂ ಮಧ್ಯೇ ಕರ್ಣಪುತ್ರಮಪಾತಯತ್ ॥51॥
ಕರ್ಣಪುತ್ರನಾದ ಸತ್ಯಸೇನನನ್ನು ಭೀಮಸೇನ ಹತ್ತು ಬಾಣಗಳಿಂದ, ಅವನ ಬಂಧುಗಳು ನೋಡುತ್ತಿದ್ದಂತೆಯೆ ಅವರ ಮಧ್ಯದಲ್ಲಿ, ಅಶ್ವ ಸೂತ ಆಯುಧ ಧ್ವಜ ಸಮೇತವಾಗಿ ಸಂಹರಿಸಿದ.
ಕ್ಷುರಪ್ರಣುನ್ನಂ ತತ್ತಸ್ಯ ಶಿರಶ್ಚಂದ್ರನಿಭಾನನಮ್ |
ಶುಭದರ್ಶನಮೇವಾಸೀನ್ನಾಲಭ್ರಷ್ಟಮಿವಾಂಬುಜಮ್ ॥52॥

ಸತ್ಯಸೇನನ ಶಿರಸ್ಸು ಬಾಣದಿಂದ ಕತ್ತರಿಸಿ ಬಿದ್ದಾಗ, ಚಂದ್ರನಂಥ ಮುಖಯುಕ್ತವಾಗಿ ನಾಳ ಕಡಿದ ಕಮಲದಂತೆ ನೋಡಲು ಸುಂದರವಾಗಿತ್ತು.
ಹತ್ವಾ ಕರ್ಣಸುತಂ ಭೀಮಸ್ತಾವಕಾನ್ ಪುನರಾರ್ದಯತ್ |
ಕೃಪಹಾರ್ದಿಕ್ಯಯೋಶ್ಚಿತ್ತತ್ವ ಚಾಪೇ ತಾವಪ್ಯಥಾರ್ದಯತ್ ॥53॥
ಭೀಮನು ಕರ್ಣಪುತ್ರನನ್ನು ಸಂಹರಿಸಿ ನಿನ್ನ ಸೈನಿಕರನ್ನೂ ನಾಶಪಡಿಸಿದ. ಕೃಪ ಕೃತವರ್ಮರ ಧನುಸ್ಸುಗಳನ್ನೂ ಕಡಿದು ಅವರನ್ನೂ ಪೀಡಿಸಿದ.
ದುಃಶಾಸನಂ ತ್ರಿಭಿರ್ವಿದ್ಧ್ವಾ ಶಕುನಿಂ ಷಡ್ಭಿರಾಯಸೈಃ |
ಉಲೂಕಂ ಚ ಪತತ್ರಿಂ ಚ ಚಕಾರ ವಿರಥಾವುಭೌ ॥54॥
ಭೀಮಸೇನ ದುಃಶಾಸನನನ್ನು ಮೂರುಬಾಣಗಳಿಂದ, ಶಕುನಿಯನ್ನು ಆರು ಬಾಣಗಳಿಂದ ಹೊಡೆದು ಉಲೂಕ ಮತ್ತು ಪತತ್ರಿ ಇವರಿಬ್ಬರನ್ನೂ ವಿರಥರನ್ನಾಗಿ ಮಾಡಿದ.
ಹೇ ಸುಷೇಣ ಹತೋಽಸೀತಿ ಬ್ರುವನ್ನಾದತ್ತ ಸಾಯಕಮ್ |
ತಮಸ್ಯ ಕರ್ಣಶ್ಚಿಚ್ಛೇದ ತ್ರಿಭಿಶ್ಚೈನಮತಾಡಯತ್ ॥55॥
`ಸುಷೇಣ, ನೀನೀಗ ಹತನಾದೆ!' ಎನ್ನುತ್ತ ಭೀಮಸೇನ ಬಾಣವನ್ನು ಹೂಡಿ ಎಸೆದ. ಆದರೆ ಆ ಬಾಣವನ್ನು ಕರ್ಣನು ಕಡಿದು ಮೂರು ಬಾಣಗಳಿಂದ ಭೀಮನಿಗೆ ಹೊಡೆದ.
ಅಥಾನ್ಯಮಪಿ ಜಗ್ರಾಹ ಸುಪರ್ವಾಣಂ ಸುತೇಜನಮ್ |
ಸುಷೇಣಾಯಾಸೃಜದ್ಭೀಮಸ್ತಮಪ್ಯಸ್ಯಾಚ್ಛಿನದ್ ವೃಷಃ ॥56॥
ಒಳ್ಳೆಯ ಗಿಣ್ಣಿನ ಒಳ್ಳೆಯ ಹರಿತವಾದ ಇನ್ನೊಂದು ಬಾಣವನ್ನು ಭೀಮ ಸುಷೇಣನಿಗೆಸೆದ. ಅದನ್ನೂ ಕರ್ಣ ಕತ್ತರಿಸಿದ.
ಪುನಃ ಕರ್ಣಸ್ತ್ರಿಸಪ್ತತ್ಯಾ ಭೀಮಸೇನಂ ರಥೇಷುಭಿಃ |
ಪುತ್ರಂ ಪರೀಪ್ಸನ್ ವಿವ್ಯಾಧ ಕ್ರೂರಂ ಕ್ರೂರೈರ್ಜಿಘಾಂಸಯಾ ॥57॥
ಕರ್ಣನು ಮಗನನ್ನು ರಕ್ಷಿಸುವುದಕ್ಕಾಗಿ ಕ್ರೂರನಾದ ಭೀಮನ ವಧೆಗೆ ಕ್ರೂರವಾದ ಎಪ್ಪತ್ತಮೂರು ರಥೇಷು ಎಂಬ ಬಾಣಗಳನ್ನು ಎಸೆದ.
ಸುಷೇಣಸ್ತು ಧನುರ್ಗೃಹ್ಯ ಭಾರಸಾಧನಮುತ್ತಮಮ್ |
ನಕುಲಂ ಪಂಚಭಿರ್ಬಾಣೈರ್ಬಾಹ್ವೋರುರಸಿ ಚಾರ್ದಯತ್ ॥58॥
ಸುಷೇಣನು ಸಮರ್ಥವಾದ ಉತ್ತಮವಾದ ಬಿಲ್ಲನ್ನೆತ್ತಿಕೊಂಡು ಐದು ಬಾಣಗಳಿಂದ ನಕುಲನನ್ನು ಬಾಹುಗಳಲ್ಲಿಯೂ ಎದೆಯಲ್ಲಿಯೂ ಪ್ರಹರಿಸಿದ.
ನಕುಲಸ್ತಂ ತು ವಿಂಶತ್ಯಾ ವಿದ್ಧ್ವಾ ಭಾರಸಹೈರ್ದೃಢೈಃ |
ನನಾದ ಬಲವನ್ನಾದಂ ಕರ್ಣಸ್ಯ ಭಯಮಾದಧತ್ ॥59॥
ನಕುಲನು ಸುಷೇಣನನ್ನು ಸಮರ್ಥವಾದ ದೃಢವಾದ ಇಪ್ಪತ್ತು ಬಾಣಗಳಿಂದ ಹೊಡೆದು ಕರ್ಣನಿಗೆ ಭಯ ಉಂಟಾಗುವಂತೆ ಬಲವಾಗಿ ಗರ್ಜಿಸಿದ.
ತಂ ಸುಷೇಣೋ ಮಹಾರಾಜ ವಿದ್ಧ್ವಾ ದಶಭಿರಾಶುಗೈಃ |
ಚಿಚ್ಛೇದ ಚ ಧನುಃ ಶೀಘ್ರಂ ಕ್ಷುರಪ್ರೇಣ ಮಹಾರಥಃ ॥60॥
ಮಹಾರಾಜ, ಮಹಾರಥನಾದ ಸುಷೇಣನು ನಕುಲನನ್ನು ಹತ್ತು ಬಾಣಗಳಿಂದ ಹೊಡೆದು ಬೇಗನೆ ಅವನ ಧನುಸ್ಸನ್ನೂ ಬಾಣದಿಂದ ಕತ್ತರಿಸಿದ.
ಅಥಾನ್ಯದ್ಧನುರಾದಾಯ ನಕುಲಃ ಕ್ರೋಧಮೂರ್ಚ್ಛಿತಃ |
ಸುಷೇಣಂ ಬಹುಭಿರ್ಬಾಣೈರ್ವಾರಯಾಮಾಸ ಸಂಯುಗೇ ॥61॥
ನಕುಲನು ಕ್ರೋಧದಿಂದ ಮೈಮರೆತು ಇನ್ನೊಂದು ಬಿಲ್ಲನ್ನೆತ್ತಿಕೊಂಡು ಸುಷೇಣನನ್ನು ರಣದಲ್ಲಿ ಬಹುಬಾಣಗಳಿಂದ ಆವರಿಸಿದ.
ಸ ತು ಬಾಣೈರ್ದಿಶೋ ರಾಜನ್ನಾಚ್ಛಾದ್ಯ ಪರವೀರಹಾ |
ಆಜಘ್ನೇ ಸಾರಥಿಂ ಚಾಸ್ಯ ಸುಷೇಣಂ ಚ ತತಸ್ತ್ರಿಭಿಃ ॥62॥
ಚಿಚ್ಛೇದ ಚಾಸ್ಯ ಸುದೃಢಂ ಧನುರ್ಭಲ್ಲೈಸ್ತ್ರಿಭಿಸ್ತ್ರಿಧಾ ॥63॥
ರಾಜನೆ, ಪರವೀರನಾಶಕನಾದ ನಕುಲನು ಬಾಣಗಳಿಂದ ದಿಕ್ಕುಗಳನ್ನು ಆವರಿಸಿ ಸುಷೇಣನನ್ನೂ ಅವನ ಸಾರಥಿಯನ್ನೂ ಮೂರು ಬಾಣಗಳಿಂದ ಹೊಡೆದ. ದೃಢವಾಗಿರುವ ಅವನ ಧನುಸ್ಸನ್ನು ಮೂರು ಬಾಣಗಳಿಂದ ಮೂರಾಗಿ ಕತ್ತರಿಸಿದ.
ಅಥಾನ್ಯದ್ಧನುರಾದಾಯ ಸುಷೇಣಃ ಕ್ರೋಧಮೂರ್ಚ್ಛಿತಃ |
ಅವಿಧ್ಯನ್ನಕುಲಂ ಷಷ್ಟ್ಯಾ ಸಹದೇವಂ ಚ ಸಪ್ತಭಿಃ ॥64॥
ಸುಷೇಣನು ಕ್ರೋಧದಿಂದ ಮೈಮರೆತು ಇನ್ನೊಂದು ಬಿಲ್ಲನ್ನೆತ್ತಿಕೊಂಡು ಅರವತ್ತು ಬಾಣಗಳಿಂದ ನಕುಲನನ್ನು, ಏಳು ಬಾಣಗಳಿಂದ ಸಹದೇವನನ್ನೂ ಹೊಡೆದ.
ತದ್ಯುದ್ಧಂ ಸುಮಹದ್ ಘೋರಮಾಸೀದ್ ದೇವಾಸುರೋಪಮಮ್ |
ನಿಘ್ನತಾಂ ಸಾಯಕೈಸ್ತೂರ್ಣಮನ್ಯೋನ್ಯಸ್ಯ ವಧಂ ಪ್ರತಿ ॥65॥
ಪರಸ್ಪರ ವಧೆಗೆ ಬಾಣಗಳಿಂದ ವೇಗವಾಗಿ ಹೊಡೆಯುತ್ತಿದ್ದ ಅವರ ಆ ಯುದ್ಧ ಘೋರವಾಗಿತ್ತು. ದೇವಾಸುರ ಯುದ್ಧದಂತೆ ಮಹಾಯುದ್ಧವಾಗಿತ್ತು.
ಸಾತ್ಯಕಿರ್ವೃಷಸೇನಸ್ಯ ಹತ್ವಾ ಸೂತಂ ತ್ರಿಭಿಃ ಶರೈಃ |

ಧನುಶ್ಚಿಚ್ಛೇದ ಭಲ್ಲೇನ ಜಘಾನಾಶ್ವಾಂಶ್ಚ ಸಪ್ತಭಿಃ ॥66॥
ಧ್ವಜಮೇಕೇಷುಣೋನ್ಮಥ್ಯ ತ್ರಿಭಿಸ್ತಂ ಹೃದ್ಯತಾಡಯತ್ ॥67॥
ಸಾತ್ಯಕಿಯೂ ವೃಷಸೇನನೆಂಬ ಕರ್ಣಪುತ್ರನ ಸಾರಥಿಯನ್ನು ಮೂರು ಬಾಣಗಳಿಂದ ಕೊಂದು ಒಂದು ಬಾಣದಿಂದ ಧನುಸ್ಸನ್ನು ಕಡಿದ, ಏಳು ಬಾಣಗಳಿಂದ ಕುದುರೆಗಳನ್ನು ಕೊಂದ. ಒಂದು ಬಾಣದಿಂದ ಧ್ವಜವನ್ನು ಕಡಿದು ಮೂರು ಬಾಣಗಳಿಂದ ಅವನ ಎದೆಗೂ ಹೊಡೆದ.
ಅಥಾವಸನ್ನಃ ಸ್ವರಥೇ ಮುಹೂರ್ತಾತ್ಪುನರುತ್ಥಿತಃ |
ಸ ರಣೇ ಯುಯುಧಾನೇನ ವಿಸೂತಾಶ್ವರಥಧ್ವಜಃ ॥68॥
ಅಥೋ ಜಿಘಾಂಸುಃ ಶೈನೇಯಂ ಖಡ್ಗಚರ್ಮಭೃದಭ್ಯಯಾತ್ ॥69॥
ಸಾತ್ಯಕಿಯಿಂದ ಸಾರಥಿ ಕುದುರೆ ರಥಧ್ವಜವೆಲ್ಲವನ್ನೂ ಕಳೆದುಕೊಂಡು ತನ್ನ ರಥದಲ್ಲಿ ಕುಸಿದುಬಿದ್ದ ವೃಷಸೇನ ಒಂದು ಮುಹೂರ್ತದ ಬಳಿಕ ಎದ್ದು ಖಡ್ಗ ಗುರಾಣಿಗಳನ್ನು ಹಿಡಿದು ಸಾತ್ಯಕಿಯನ್ನು ಕೊಲ್ಲಲೆಂದು ಆಕ್ರಮಿಸಿ ಬಂದ.
ತಸ್ಯ ಚಾಪ್ಲವತಃ ಶೀಘ್ರಂ ವೃಷಸೇನಸ್ಯ ಸಾತ್ಯಕಿಃ |
ವರಾಹಕರ್ಣೈರ್ದಶಭಿರವಿಧ್ಯದಸಿಚರ್ಮಣೀ ॥70॥
ವೃಷಸೇನ ವೇಗದಿಂದ ತನ್ನ ಬಳಿಗೆ ಧಾವಿಸಿ ಬರುತ್ತಿದ್ದಂತೆ ಸಾತ್ಯಕಿಯು ವರಾಹಕರ್ಣ ಎಂಬ ಹತ್ತು ಬಾಣಗಳಿಂದ ಅವನ ಕತ್ತಿ ಗುರಾಣಿಗಳನ್ನು ಕತ್ತರಿಸಿದ.
ದುಃಶಾಸನಸ್ತು ತಂ ದೃಷ್ಟ್ವಾ ವಿರಥಂ ವ್ಯಾಯುಧಂ ಕೃತಮ್ |
ಆರೋಪ್ಯ ಸ್ವರಥೇ ತೂರ್ಣಮಪೋವಾಹ ರಣಾತುರಮ್ ॥71॥
ದುಃಶಾಸನನು, ಸಾತ್ಯಕಿಯಿಂದ ರಣದಲ್ಲಿ ಗಾಯಗೊಂಡು ರಥ ಆಯುಧ ರಹಿತನೂ ಆಗಿದ್ದ ವೃಷಸೇನನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಬೇಗನೆ ದೂರಕ್ಕೊಯ್ದ.
ಅಥಾನ್ಯಂ ರಥಮಾಸ್ಥಾಯ ವೃಷಸೇನೋ ಮಹಾರಥಃ ॥72॥
ದ್ರೌಪದೇಯಾಂಸ್ತ್ರಿಸಪ್ತತ್ಯಾ ಯುಯುಧಾನಂ ಚ ಪಂಚಭಿಃ |
ಭೀಮಸೇನಂ ಚತುಃಷಷ್ಟ್ಯಾ ಸಹದೇವಂ ಚ ಪಂಚಭಿಃ ॥73॥
ನಕುಲಂ ತ್ರಿಂಶತಾ ಬಾಣೈಃ ಶತಾನೀಕಂ ಚ ಸಪ್ತಭಿಃ |
ಶಿಖಂಡಿನಂ ಚ ದಶಭಿರ್ಧರ್ಮರಾಜಂ ಶತೇನ ಚ ॥74॥
ಮಹಾರಥನಾದ ವೃಷಸೇನ ಇನ್ನೊಂದು ರಥವನ್ನೇರಿ ರಣಭೂಮಿಗೆ ಬಂದು ದ್ರೌಪದೀಪುತ್ರರನ್ನು ಎಪ್ಪತ್ತಮೂರು ಬಾಣಗಳಿಂದ, ಸಾತ್ಯಕಿಯನ್ನು ಐದು ಬಾಣಗಳಿಂದ, ಭೀಮಸೇನನನ್ನು ಅರವತ್ತನಾಲ್ಕು ಬಾಣಗಳಿಂದ, ಸಹದೇವನನ್ನು ಐದು ಬಾಣಗಳಿಂದ, ನಕುಲನನ್ನು ಮೂವತ್ತು ಬಾಣಗಳಿಂದ, ಶತಾನೀಕನನ್ನು ಏಳು ಬಾಣಗಳಿಂದ, ಶಿಖಂಡಿಯನ್ನು ಹತ್ತು ಬಾಣಗಳಿಂದ, ಧರ್ಮರಾಜನನ್ನು ನೂರು ಬಾಣಗಳಿಂದ ಹೊಡೆದನು.
ಏತಾಂಶ್ಚಾನ್ಯಾಂಶ್ಚ ರಾಜೇಂದ್ರ ಪ್ರವೀರಾನ್ ಜಯಗೃದ್ಧಿನಃ |
ಅಭ್ಯರ್ದಯನ್ ಮಹೇಷ್ವಾಸಃ ಕರ್ಣಪುತ್ರೋ ವಿಶಾಂಪತೇ ॥75॥
ಕರ್ಣಸ್ಯ ಯುಧಿ ದುರ್ಧರ್ಷಃ ಪುನಃ ಪೃಷ್ಠಮಪಾಲಯತ್ ॥76॥
ಮಹಾರಾಜ, ಮಹಾಬಿಲ್ಗಾರನಾದ ದುರ್ಧರ್ಷನಾದ ಕರ್ಣಪುತ್ರ ವೃಷಸೇನನು ಜಯಾಕಾಂಕ್ಷಿಗಳಾದ ಈ ವೀರರನ್ನೂ ಬೇರೆ ವೀರರನ್ನೂ ಪೀಡಿಸಿದ ಮತ್ತು ಪುನಃ ಕರ್ಣನಿಗೆ ಹಿಂಭಾಗದಲ್ಲಿ ರಕ್ಷಕನಾಗಿಯೂ ನಿಂತ.
ದುಃಶಾಸನಂ ತು ಶೈನೇಯೋ ನವೈರ್ನವಭಿರಾಯಸೈಃ |
ವಿಸೂತಾಶ್ವರಥಂ ಕೃತ್ವಾ ಲಲಾಟೇ ತ್ರಿಭಿರಾರ್ಪಯತ್ ॥77॥
ಸಾತ್ಯಕಿಯು ದುಃಶಾಸನನನ್ನು ಹೊಸದಾದ ಕಬ್ಬಿಣದ ಒಂಬತ್ತು ಬಾಣಗಳಿಂದ ಸಾರಥಿ ಅಶ್ವ ರಥರಹಿತನನ್ನಾಗಿ ಮಾಡಿ, ಹಣೆಯಲ್ಲಿ ಮೂರು ಬಾಣಗಳಿಂದ ಪ್ರಹರಿಸಿದ.
ಸ ತ್ವನ್ಯಂ ರಥಮಾಸ್ಥಾಯ ವಿಧಿವತ್ಕಲ್ಪಿತಂ ಪುನಃ |
ಯುಯುಧೇ ಪಾಂಡುಭಿಃ ಸಾರ್ಧಂ ಕರ್ಣಸ್ಯಾಪ್ಯಾಯಯನ್
ಬಲಮ್ ॥78॥
ದುಃಶಾಸನನು ವಿಧ್ಯುಕ್ತವಾಗಿ ಸಜ್ಜುಗೊಳಿಸಲ್ಪಟ್ಟ ಇನ್ನೊಂದು ರಥವನ್ನು ಏರಿ, ಕರ್ಣನ ಸೈನ್ಯಕ್ಕೆ ಬಲನೀಡುತ್ತ ಪಾಂಡವರೊಡನೆ ಪುನಃ ಯುದ್ಧ ನಡೆಸಿದ.
ಧೃಷ್ಟದ್ಯುಮ್ನಸ್ತತಃ ಕರ್ಣಮವಿಧ್ಯದ್ ದಶಭಿಃ ಶರೈಃ |
ದ್ರೌಪದೇಯಾಸ್ತ್ರಿಸಪ್ತತ್ಯಾ ಯುಯುಧಾನಸ್ತು ಪಂಚಭಿಃ ॥79॥
ಭೀಮಸೇನಶ್ಚತುಃಷಷ್ಟ್ಯಾ ಸಹದೇವಶ್ಚ ಪಂಚಭಿಃ |
ನಕುಲಸ್ತ್ರಿಂಶತಾ ಬಾಣೈಃ ಶತಾನೀಕಶ್ಚ ಸಪ್ತಭಿಃ ॥80॥
ಶಿಖಂಡೀ ದಶಭಿರ್ವೀರೋ ಧರ್ಮರಾಜಃ ಶತೇನ ತು ॥81॥
ಧೃಷ್ಟದ್ಯುಮ್ನನು ಹತ್ತು ಬಾಣಗಳಿಂದಲೂ ದ್ರೌಪದೀಪುತ್ರರು ಎಪ್ಪತ್ತಮೂರು ಬಾಣಗಳಿಂದಲೂ, ಸಾತ್ಯಕಿಯು ಐದು ಬಾಣಗಳಿಂದಲೂ, ಭೀಮಸೇನನು ಅರವತ್ತನಾಲ್ಕು ಬಾಣಗಳಿಂದಲೂ, ಸಹದೇವನು ಐದು ಬಾಣಗಳಿಂದಲೂ ನಕುಲನು ಮೂವತ್ತು ಬಾಣಗಳಿಂದಲೂ ಶತಾನೀಕನು ಏಳು ಬಾಣಗಳಿಂದಲೂ, ಶಿಖಂಡಿಯು ಹತ್ತು ಬಾಣಗಳಿಂದಲೂ ಧರ್ಮರಾಜನು ನೂರು ಬಾಣಗಳಿಂದಲೂ ಕರ್ಣನನ್ನು ಹೊಡೆದರು.

ಏತೇ ಚಾನ್ಯೇ ಚ ರಾಜೇಂದ್ರ ಪ್ರವೀರಾ ಜಯಗೃದ್ಧಿನಃ |
ಅಭ್ಯರ್ದಯನ್ ಮಹೇಷ್ವಾಸಂ ಸೂತಪುತ್ರಂ ಮಹಾಮೃಧೇ ॥82॥
ಮಹಾರಾಜ, ಯುದ್ಧ ಜಯಾಕಾಂಕ್ಷಿಗಳಾದ ಈ ರಾಜರೂ ಬೇರೆ ವೀರರೂ ಮಹಾರಣದಲ್ಲಿ ಮಹಾಬಿಲ್ಗಾರನಾದ ಸೂತಪುತ್ರನನ್ನು ಹೊಡೆದರು.
ತಾನ್ ಸೂತಪುತ್ರೋ ವಿಶಿಖೈರ್ದಶಭಿರ್ದಶಭಿಃ ಶಿತೈಃ |
ರಥೇ ಚಾರು ಚರನ್ ವೀರಃ ಪ್ರತ್ಯವಿಧ್ಯದರಿಂದಮಃ ॥83॥
ವೀರ ಶತ್ರುನಾಶಕನಾದ ಕರ್ಣನು ಸುಂದರವಾಗಿ ರಥ ನಡೆಸುತ್ತ ಅವರನ್ನು ಹರಿತವಾದ ಹತ್ತು ಹತ್ತು ಬಾಣಗಳಿಂದ ಪ್ರತಿಯಾಗಿ ಹೊಡೆದ.
ತತ್ರಾಸ್ತ್ರವೀರ್ಯಂ ಕರ್ಣಸ್ಯ ಲಾಘವಂ ಚ ಮಹಾತ್ಮನಃ |
ಅಪಶ್ಯಾಮ ಮಹಾರಾಜ ತದದ್ಭುತಮಿವಾಭವತ್ ॥84॥
ಮಹಾರಾಜ, ಆಗ ಮಹಾತ್ಮನಾದ ಕರ್ಣನ ಅಸ್ತ್ರಬಲವನ್ನೂ ವೇಗವನ್ನೂ ನಾವು ನೋಡಿದೆವು. ಅದು ಅದ್ಭುತವಾಗಿತ್ತು.
ನ ಹ್ಯಾದದಾನಂ ದದೃಶುಃ ಸಂದಧಾನಂ ಚ ಸಾಯಕಾನ್ |
ವಿಮುಂಚಂತಂ ಚ ಸಂರಂಭಾದ್ ದದೃಶುಸ್ತೇ ಮಹಾರಥಮ್ ॥85॥
ಮಹಾರಥನಾದ ಕರ್ಣ ಬಾಣಗಳನ್ನು ಎತ್ತಿಕೊಳ್ಳುವುದನ್ನಾಗಲಿ ಬಿಲ್ಲಿಗೆ ಹೂಡುವುದನ್ನಾಗಲಿ ಬಾಣಗಳನ್ನು ಎಸೆಯುವುದನ್ನಾಗಲಿ ಯಾರೂ ನೋಡಲಿಲ್ಲ. ಶತ್ರುಗಳು ಹತರಾದುದನ್ನು ಮಾತ್ರ ಕಂಡರು.
ದ್ಯೌರ್ವಿಯದ್ಭೂರ್ದಿಶಶ್ಚಾಶು ಪ್ರಪೂರ್ಣಾ ನಿಶಿತೈಃ ಶರೈಃ |
ಅರುಣಾಭ್ರಾವೃತಾಕಾರಂ ತಸ್ಮಿನ್ ದೇಶೇಽಭವದ್ವಿಯತ್ ॥86॥
ಅಂತರಿಕ್ಷ ಆಕಾಶ ಭೂಮಿ ದಿಕ್ಕುಗಳು ಬೇಗನೆ ತೀಕ್ಷ್ಣವಾದ ಬಾಣಗಳಿಂದ ತುಂಬಿದುವು. ಆ ಪ್ರದೇಶದಲ್ಲಿ ಆಕಾಶ ಕೆಂಪುಮೋಡಗಳಿಂದ ಆವೃತವಾದಂತೆ ಕಂಗೊಳಿಸಿತು.
ನೃತ್ಯನ್ನಿವ ಹಿ ರಾಧೇಯಶ್ಚಾಪಹಸ್ತಃ ಪ್ರತಾಪವಾನ್ |
ಯೈರ್ವಿದ್ಧಃ ಪ್ರತ್ಯವಿಧ್ಯತ್ ತಾನೇಕೈಕಂ ತ್ರಿಗುಣೈಃ ಶರೈಃ ॥87॥
ಬಿಲ್ಲು ಹಿಡಿದು ನಾಟ್ಯವಾಡುವವನಂತೆ ಪ್ರತಾಪಶಾಲಿ ಕರ್ಣ ಕಂಡು ಬಂದ. ಶತ್ರುಗಳ ಯಾವ ಬಾಣಗಳಿಂದ ಅವನು ಹೊಡೆಸಿಕೊಂಡನೋ ಅವುಗಳಿಗೆ ಒಂದೊಂದಕ್ಕೂ ಮೂರು ಪಟ್ಟು ಹೆಚ್ಚು ಬಾಣಗಳಿಂದ ಅವರನ್ನು ಪ್ರತಿಯಾಗಿ ಹೊಡೆದ.
ದಶಭಿರ್ದಶಭಿಶ್ಚೈನಾನ್ ಪುನರ್ವಿದ್ಧ್ವಾ ನನಾದ ಹ |
ಸಾಶ್ವಸೂತಧ್ವಜಚ್ಛತ್ರಾಂಸ್ತತಸ್ತೇ ವಿವರಂ ದದುಃ ॥88॥
ಅವರನ್ನು ಅಶ್ವಸಾರಥಿ ಧ್ವಜಛತ್ರಗಳ ಸಮೇತವಾಗಿ ಹತ್ತು ಹತ್ತು ಬಾಣಗಳಿಂದ ಹೊಡೆದು ಗರ್ಜಿಸಿದ. ಆಗಲೆ ಅವರು ಅವನಿಗೆ ಮುಂದೆ ಹೋಗಲು ಅವಕಾಶ ಕೊಟ್ಟರು.
ತಾನ್ ಪ್ರಮೃದ್ನನ್ ಮಹೇಷ್ವಾಸಾನ್ ರಾಧೇಯಃ ಶರವೃಷ್ಟಿಭಿಃ |
ರಾಜಾನೀಕಮಸಂಬಾಧಂ ಪ್ರಾವಿಶಚ್ಛತ್ರುಕರ್ಶನಃ ॥89॥
ಮಹಾಬಿಲ್ಗಾರರಾದ ಪಾಂಡವವೀರರನ್ನು ಬಾಣಗಳ ಮಳೆಗಳಿಂದ ಧ್ವಂಸ ಮಾಡುತ್ತ ಶತ್ರುನಾಶಕನಾದ ಕರ್ಣ ಹೆಚ್ಚು ನಿಬಿಡವಲ್ಲದಿದ್ದ ರಾಜಾ ಯುಧಿಷ್ಠಿರನ ಸೈನ್ಯವನ್ನು ಪ್ರವೇಶಿಸಿದ.
ಸ ರಥಾನ್ ತ್ರಿಶತಾನ್ ಹತ್ವಾ ಚೇದೀನಾಮನಿವರ್ತಿನಾಮ್ |
ರಾಧೇಯೋ ನಿಶಿತೈರ್ಬಾಣೈಸ್ತತೋಽಭ್ಯಾರ್ಚ್ಛದ್
ಯುಧಿಷ್ಠಿರಮ್ ॥90॥
ಯುದ್ಧದಿಂದ ಹಿಮ್ಮೆಟ್ಟದ ಚೇದಿಗಳ ಮೂರುನೂರು ರಥಿಕರನ್ನು ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿ ಬಳಿಕ ಯುಧಿಷ್ಠಿರನನ್ನು ಆಕ್ರಮಿಸಿದ.
ತತಸ್ತೇ ಪಾಂಡವಾ ರಾಜನ್ ಶಿಖಂಡೀ ಚ ಸಸಾತ್ಯಕಿಃ |
ರಾಧೇಯಾತ್ ಪರಿರಕ್ಷಂತೋ ರಾಜಾನಂ ಪರ್ಯವಾರಯನ್ ॥91॥
ಆಗ, ರಾಜನೆ, ಪಾಂಡವರೂ ಶಿಖಂಡಿಯೂ ಸಾತ್ಯಕಿಯೂ ಯುಧಿಷ್ಠಿರನನ್ನು ಕರ್ಣನಿಂದ ರಕ್ಷಿಸಲು ಸುತ್ತುವರಿದರು.
ತಥೈವ ತಾವಕಾಃ ಸರ್ವೇ ಕರ್ಣಂ ದುರ್ವಾರಣಂ ರಣೇ |
ಯತ್ತಾಃ ಶೂರಾ ಮಹೇಷ್ವಾಸಾಃ ಪರ್ಯರಕ್ಷಂತ ಸರ್ವಶಃ ॥92॥
ಹಾಗೆ ರಣದಲ್ಲಿ ತಡೆಯಲಾಗದ ಕರ್ಣನನ್ನು ನಿನ್ನ ಕಡೆಯ ಶೂರರಾದ ಎಲ್ಲ ಬಿಲ್ಗಾರರೂ ಎಲ್ಲ ಕಡೆಯಿಂದ ಯತ್ನಪೂರ್ವಕವಾಗಿ ರಕ್ಷಿಸತೊಡಗಿದರು.
ನಾನಾವಾದಿತ್ರಘೋಷಾಶ್ಚ ಪ್ರಾದುರಾಸನ್ವಿಶಾಂಪತೇ |
ಸಿಂಹನಾದಶ್ಚ ಸಂಜಜ್ಞೇ ಶೂರಾಣಾಮನಿವರ್ತಿನಾಮ್ ॥93॥
ರಾಜನೆ, ಆಗ ನಾನಾವಾದ್ಯಘೋಷಗಳು ಕೇಳಿಸಿದುವು. ಯುದ್ಧದಿಂದ ಹಿಮ್ಮೆಟ್ಟದ ಶೂರರ ಸಿಂಹನಾದವೂ ಉಂಟಾಯಿತು.
ತತಃ ಪುನಃ ಸಮಾಜಗ್ಮುರಭೀತಾಃ ಕುರುಪಾಂಡವಾಃ |
ಯುಧಿಷ್ಠಿರಮುಖಾಃ ಪಾರ್ಥಾಃ ಸೂತಪುತ್ರಮುಖಾ ವಯಮ್ ॥94॥
ಯುಧಿಷ್ಠಿರನನ್ನು ಮುಂದೆ ಮಾಡಿಕೊಂಡು ಪಾಂಡವರು, ಕರ್ಣನನ್ನು ಮುಂದೆ ಮಾಡಿಕೊಂಡು ನಾವು, ಹೀಗೆ ಕೌರವಪಾಂಡವರು ನಿರ್ಭೀತಿಯಿಂದ ಪುನಃ ಕಲೆತೆವು.

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥45॥

ಮಹಾಭಾರತತಾತ್ಪರ್ಯನಿರ್ಣಯ
ಕರ್ಣೋಽಥ ಶಲ್ಯನಿಯತೇನ ರಥೇನ ಪಾರ್ಥ
ಸೇನಾಮವಾಪ್ಯ ವಿದುಧಾವ ಶರೈಃ ಸಮಂತಾತ್ |
ಸಂರಕ್ಷಿತೋ ಯುಧಿ ಸುಯೋಧನಗೌತಮಾದ್ಯೈ-
ರಾಚಾರ್ಯಜೇನ ಚ ಮಹಾಸ್ತ್ರವಿದಾಂ ವರೇಣ ॥33॥
ದುರ್ಯೋಧನ ಕೃಪ ಮುಂತಾದವರಿಂದಲೂ ಮಹಾ ಅಸ್ತ್ರವೇತ್ತರಲ್ಲಿಯೆ ಅಗ್ರಗಣ್ಯನಾದ ಅಶ್ವತ್ಥಾಮನಿಂದಲೂ ಯುದ್ಧದಲ್ಲಿ ರಕ್ಷಿತನಾದ ಕರ್ಣನು ಶಲ್ಯ ನಡೆಸುತ್ತಿದ್ದ ರಥದಿಂದ ಪಾಂಡವರ ಸೈನ್ಯವನ್ನು ಹೊಕ್ಕು ಎಲ್ಲೆಡೆ ಬಾಣಗಳಿಂದ ಮರ್ದಿಸಿದ.
ತಂ ಭೀಮಪಾರ್ಷತಶಿನಿಪ್ರವರಾಭಿಗುಪ್ತಾ
ಸಾ ಪಾಂಡವೇಯಪೃತನಾಭಿವವರ್ಷ ಬಾಣೈಃ |
ತಾಂ ಸೂರ್ಯಸೂನುರಥ ಬಾಣವರೈರ್ವಿದಾರ್ಯ
ಸಂಪ್ರಾರ್ದಯಚ್ಛಿತಶರೈರಪಿ ಧರ್ಮಸೂನುಮ್ ॥34॥
ಭೀಮ ಧೃಷ್ಟದ್ಯುಮ್ನ ಸಾತ್ಯಕಿಯರಿಂದ ರಕ್ಷಿತವಾದ ಪಾಂಡವರ ಸೈನ್ಯ ಕರ್ಣನ ಮೇಲೆ ಬಾಣಗಳ ಮಳೆಗರೆಯಿತು. ಆ ಸೈನ್ಯವನ್ನು ಕರ್ಣ ಉತ್ತಮ ಬಾಣಗಳಿಂದ ಕಂಗೆಡಿಸಿ ಧರ್ಮರಾಜನನ್ನು ಹರಿತವಾದ ಬಾಣಗಳಿಂದ ಚೆನ್ನಾಗಿ ಪೀಡಿಸಿದ.
ಕೃತ್ವಾ ತಮಾಶು ವಿರಥಂ ಧನುರಸ್ಯ ಕಂಠೇ
ಸಜ್ಯಂ ನಿಧಾಯ ಪರುಷಾ ಗಿರ ಆಹ ಚೋಚ್ಚೈ ೃಃ |
ದೃಷ್ಟ್ವೈ ೃವ ಮಾರುತಿರಮುಂ ಭೃಶಮಾತುತೋದ
ದುರ್ಯೋಧನಂ ವಿರಥಕಾರ್ಮುಕಮತ್ರ ಕೃತ್ವಾ ॥35॥
ಕರ್ಣ ಧರ್ಮರಾಜನನ್ನು ಬೇಗನೆ ವಿರಥನನ್ನಾಗಿ ಮಾಡಿ ಹೆದೆಯೇರಿಸಿದ ಬಿಲ್ಲನ್ನು ಅವನ ಕುತ್ತಿಗೆಗೆ ಹಾಕಿ ಗಟ್ಟಿಯಾಗಿ ಕಟುವಾದ ಮಾತುಗಳನ್ನಾಡಿದ. ಅವನನ್ನು ಕಂಡು ಭೀಮ ಬೇಗನೆ ದುರ್ಯೋಧನನನ್ನು ವಿರಥನನ್ನಾಗಿ ಮಾಡಿ ಅವನ ಬಿಲ್ಲನ್ನು ಮುರಿದು ಬಹಳವಾಗಿ ಪೀಡಿಸಿದ.
ತಂ ಪ್ರಾಣಸಂಶಯಗತಂ ನೃಪತಿಂ ನಿರೀಕ್ಷ್ಯ
ಕರ್ಣಂ ಜಗಾದ ಯುಧಿ ಮದ್ರಪತಿಃ ಪ್ರದರ್ಶ್ಯ |
ಯಸ್ಯಾರ್ಥ ಏವ ಸಮರಸ್ತ್ವಮಿಯಂ ಚ ಸೇನಾ
ತಂ ತ್ವಂ ಯಮಸ್ಯ ಸದನಂ ಪ್ರಯಿಯಾಸುಮದ್ಯ ॥36॥
ಭೀಮೇನ ಪೀಡಿತಮಮುಂ ಪರಿಪಾಹಿ ಶೀಘ್ರಂ
ಕಿಂ ತೇ ಯುಧಿಷ್ಠಿರಮಿಮಂ ಹಿ ಮುಧಾಽಭಿಪೀಡ್ಯ |
ಶ್ರುತ್ವಾಽಸ್ಯ ವಾಕ್ಯಮತಿಹಾಯ ಯುಧಿಷ್ಠಿರಂ ತಂ
ಕರ್ಣೋ ಯಯೌ ನೃಪತಿರಕ್ಷಣತತ್ಪರೋಽಲಮ್ ॥37॥
ಯುದ್ಧದಲ್ಲಿ ದುರ್ಯೋಧನ ಪ್ರಾಣಸಂಕಟದಲ್ಲಿ ಬಿದ್ದುದನ್ನು ಕಂಡು ಶಲ್ಯ ಕರ್ಣನಿಗೆ ಅವನನ್ನು ತೋರಿಸಿ ಹೇಳಿದ `ಈ ಯುದ್ಧವನ್ನು ನೀನು ಯಾರಿಗಾಗಿ ಮಾಡುತ್ತಿರುವೆಯೋ, ನೀನೂ ಈ ಸೇನೆಯೂ ಯಾರಿಗಾಗಿ ಇವೆಯೊ ಆ ದುರ್ಯೋಧನ ಭೀಮನಿಂದ ಪೀಡಿತನಾಗಿ ಈಗ ಯಮಲೋಕಕ್ಕೆ ಹೋಗಲು ಸಿದ್ಧನಾಗಿದ್ದಾನೆ. ಅವನನ್ನು ಬೇಗನೆ ಕಾಪಾಡು. ಈ ಧರ್ಮರಾಜನನ್ನು ವ್ಯರ್ಥವಾಗಿ ಪೀಡಿಸಿ ನಿನಗೇನು ಲಾಭ?' ಎಂದು. ಶಲ್ಯನ ಮಾತನ್ನು ಕೇಳಿ ಕರ್ಣ ಧರ್ಮರಾಜನನ್ನು ಬಿಟ್ಟು ದುರ್ಯೋಧನನ ರಕ್ಷಣೆಯಲ್ಲಿ ತತ್ಪರನಾಗಿ ಧಾವಿಸಿದ.

ನಲವತ್ತಾರನೆಯ ಅಧ್ಯಾಯ
ಯುಧಿಷ್ಠಿರನ ಒಂದು ಬಾಣದಿಂದ ಕರ್ಣ ಮೂರ್ಛಿತನಾಗಿ ಶವದಂತೆ ಬಿದ್ದ. ಬಳಿಕ ಎಚ್ಚೆತ್ತು ಯುಧಿಷ್ಠಿರನ ಕವಚ, ರಥ ಮುಂತಾದುವನ್ನೆಲ್ಲ ಪುಡಿ ಮಾಡಿದ. ಹೆಗಲಮೇಲೆ ಕೈಹಾಕಿ ಕ್ಷಾತ್ರಧರ್ಮಕ್ಕೆ ನೀನು ಯೋಗ್ಯನಲ್ಲವೆಂದು ಅಪಹಾಸ ಮಾಡಿದ.
ಸಂಜಯಃ
ವಿದಾರ್ಯ ಕರ್ಣಸ್ತಾಂ ಸೇನಾಂ ಯುಧಿಷ್ಠಿರಮುಪಾದ್ರವತ್ |
ರಥಹಸ್ತ್ಯಶ್ವಪತ್ತೀನಾಂ ಸಹಸ್ರೈಃ ಪರಿವಾರಿತಃ ॥1॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ಸಾವಿರಾರು ರಥ ಗಜ ಅಶ್ವ ಪದಾತಿಗಳಿಂದ ಕೂಡಿದ ಕರ್ಣನು ಪಾಂಡವಸೇನೆಯನ್ನು ಭೇದಿಸಿ ಯುಧಿಷ್ಠಿರನ ಕಡೆಗೆ ಧಾವಿಸಿದ.
ನಾನಾಯುಧಸಹಸ್ರಾಣಿ ಪ್ರೇಷಿತಾನ್ಯರಿಭಿರ್ವೃಷಃ |
ಛಿತ್ತ್ವಾ ಬಾಣಶತೈರುಗ್ರೈಸ್ತಾನವಿದ್ಧ್ಯದಸಂಭ್ರಮಃ ॥2॥
ಶತ್ರುಗಳು ಎಸೆದ ನಾನಾಬಗೆಯ ಸಾವಿರಾರು ಆಯುಧಗಳನ್ನು ಕತ್ತರಿಸಿ, ಕರ್ಣನು ನಿರ್ಭಯವಾಗಿ ಅವರನ್ನು ಉಗ್ರವಾದ ನೂರು ಬಾಣಗಳಿಂದ ಹೊಡೆದ.

ನಿಚಕರ್ತ ಶಿರಾಂಸ್ಯೇಷಾಂ ಬಾಹೂನೂರೂಂಶ್ಚ  ಸೂತಜಃ |
ತೇ ಹತಾ ವಸುಧಾಂ ಪೇತುರ್ಭಗ್ನಾಶ್ಚಾನ್ಯೇ ವಿದುದ್ರುವುಃ ॥3॥
ಶತ್ರುಗಳ ತಲೆ ತೋಳು ತೊಡೆಗಳನ್ನು ಕರ್ಣ ಕತ್ತರಿಸಿದ. ಆಗ ಕೆಲವರು ಹತ ರಾಗಿ ನೆಲದ ಮೇಲೆ ಬಿದ್ದರು. ಕೆಲವರು ಗಾಯಗೊಂಡು ಪಲಾಯನಗೈದರು.
ದ್ರವಿಡಾಂಧ್ರನಿಷಾದಾಸ್ತು ಪುನಃ ಸಾತ್ಯಕಿಚೋದಿತಾಃ |
ಅಭ್ಯರ್ದಯನ್ ಜಿಘಾಂಸಂತಃ ಪತ್ತಯಃ ಕರ್ಣಮಾಹವೇ ॥4॥
ದ್ರವಿಡ ಆಂಧ್ರ ನಿಷಾದ ದೇಶದ ಪದಾತಿಗಳು ಪುನಃ ಸಾತ್ಯಕಿಯ ಆದೇಶದಿಂದ ಕರ್ಣನನ್ನು ರಣದಲ್ಲಿ ಕೊಲ್ಲುವ ಇಚ್ಛೆಯಿಂದ ಆಕ್ರಮಿಸಿದರು.
ತೇ ವಿಬಾಹುವಿಶಿಸತ್ರಶ್ಚ ಪ್ರಹತಾಃ ಕರ್ಣಸಾಯಕೈಃ |
ಪೇತುಃ ಪೃಥಿವ್ಯಾಂ ಯುಗಪಚ್ಛಿನ್ನಂ ಶಾಲವನಂ ಯಥಾ ॥5॥
ಕಡಿದ ಮತ್ತಿಮರಗಳ ಕಾಡಿನಂತೆ ಅವರೆಲ್ಲರೂ ಒಮ್ಮೆಲೆ ಕರ್ಣನ ಬಾಣಗಳಿಂದ ತೋಳು ಶಸ್ತ್ರಗಳಿಲ್ಲದವರಾಗಿ ಹೊಡೆಸಿಕೊಂಡು ನೆಲದ ಮೇಲೊರಗಿದರು.
ಏವಂ ಯೋಧಶತಾನ್ಯಾಜೌ ಸಹಸ್ರಾಣ್ಯಯುತಾನಿ ಚ |
ಹತಾನೀಯುರ್ಮಹೀಂ ದೇಹೈರ್ಯಶಸಾಪೂರಯನ್ ದಿಶಃ ॥6॥
ಯೋಧರು ಹೀಗೆ ನೂರಾರು ಸಾವಿರಾರು ಹತ್ತುಸಾವಿರ ಸಂಖ್ಯೆಯಲ್ಲಿ ಸತ್ತು , ಶರೀರದಿಂದ ನೆಲವನ್ನೂ, ಕೀರ್ತಿಯಿಂದ ದಿಕ್ಕುಗಳನ್ನೂ ತುಂಬಿಸಿದರು.
ಅಥ ವೈಕರ್ತನಂ ಕರ್ಣಂ ರಣೇ ಕ್ರುದ್ಧಮಿವಾಂತಕಮ್ |
ರುರುಧುಃ ಪಾಂಡುಪಾಂಚಾಲಾ ವ್ಯಾಧಿಂ ಮಂತ್ರೌಷಧೈರಿವ ॥7॥
ವ್ಯಾಧಿಯನ್ನು ಮಂತ್ರ ಔಷಧಿಗಳಿಂದ ತಡೆಯುವಂತೆ ಪಾಂಡವ ಪಾಂಚಾಲ ಸೈನಿಕರು ರಣದಲ್ಲಿ ಅಂತಕನಂತೆ ಕುಪಿತನಾದ ಕರ್ಣನನ್ನು ತಡೆದರು.
ಸ ತಾನ್ ಪ್ರಮೃದ್ಯಾಭ್ಯಪತತ್ ಪುನರೇವ ಯುಧಿಷ್ಠಿರಮ್ |
ಮಂತ್ರೌಷಧಕ್ರಿಯಾತೀತೋ ವ್ಯಾಧಿರತ್ಯುಲ್ಬಣೋ ಯಥಾ ॥8॥
ಅತಿಉಲ್ಬಣವಾದ ವ್ಯಾಧಿಯು ಮಂತ್ರ ಔಷಧಿ ಚಿಕಿತ್ಸೆಗೆ ಶಮನವಾಗದಿರುವಂತೆ ಕರ್ಣನು ಆ ಪಾಂಡುಪಾಂಚಾಲಯೋಧರನ್ನು ಸಂಹರಿಸಿ ಪುನಃ ಯುಧಿಷ್ಠಿರನ ಬಳಿಗೆ ಧಾವಿಸಿದ.
ಸ ರಾಜಗೃದ್ಧಿಭೀ ರುದ್ಧಃ ಪಾಂಡುಪಾಂಚಾಲಕೇಕಯೈಃ |
ನಾಶಕತ್ ತಾನತಿಕ್ರಾಂತುಂ ಮೃತ್ಯುರ್ಬ್ರಹ್ಮವಿದೋ ಯಥಾ ॥9॥
ಮೃತ್ಯುವು ಬ್ರಹ್ಮಜ್ಞಾನಿಗಳನ್ನು ಅತಿಕ್ರಮಿಸಲು ಶಕ್ತವಾಗದಿರುವಂತೆ ಕರ್ಣನೂ ರಾಜನ ರಕ್ಷಣಾಕಾಂಕ್ಷಿಗಳಾದ ಪಾಂಡು ಪಾಂಚಾಲ ಕೇಕಯ ಯೋಧರಿಂದ ತಡೆಯಲ್ಪಟ್ಟು ಅವರನ್ನು ಅತಿಕ್ರಮಿಸಿ ರಾಜನ ಬಳಿಗೆ ಹೋಗಲು ಶಕ್ತನಾಗಲಿಲ್ಲ.
ತತೋ ಯುಧಿಷ್ಠಿರಃ ಕರ್ಣಮದೂರಸ್ಥಂ ನಿವಾರಿತಮ್ |
ಅಬ್ರವೀತ್ ಪರವೀರಘ್ನಃ ಕ್ರೋಧಸಂರಕ್ತಲೋಚನಃ ॥10॥
ಹೀಗೆ ಪಾಂಡವಯೋಧರಿಂದ ತಡೆಯಲ್ಪಟ್ಟು ಸಮೀಪದಲ್ಲಿ ಸಿಕ್ಕಿದ ಕರ್ಣನಿಗೆ ಶತ್ರುವೀರ ನಾಶಕನಾದ ಯುಧಿಷ್ಠಿರನು ಕೋಪದಿಂದ ಕಣ್ಣು ಕೆಂಪು ಮಾಡಿಕೊಂಡು ನುಡಿದ.
ಕರ್ಣ ಕರ್ಣ ವೃಥಾ ದುಷ್ಟ ಸೂತಪುತ್ರ ವಚಃ ಶೃಣು |
ಸದಾ ಸ್ಪರ್ಧಸಿ ಸಂಗ್ರಾಮೇ ಫಲ್ಗುನೇನ ತರಸ್ವಿನಾ ॥11॥
ತಥಾಸ್ಮಾನ್ ಬಾಧಸೇ ನಿತ್ಯಂ ಧಾರ್ತರಾಷ್ಟ್ರಮತೇ ಸ್ಥಿತಃ ॥12॥
ಕರ್ಣ ಕರ್ಣ ದುಷ್ಟ, ಸೂತಪುತ್ರ, ನನ್ನ ಮಾತನ್ನು ಕೇಳು, ನೀನು ವ್ಯರ್ಥವಾಗಿ ರಣದಲ್ಲಿ ವೇಗಶಾಲಿಯಾದ ಅರ್ಜುನನೊಡನೆ ಸದಾ ಸ್ಪರ್ಧಿಸುತ್ತಿರುವೆ. ಮತ್ತು ದುರ್ಯೋಧನನ ಇಚ್ಛೆಯಂತೆ ನಡೆಯುತ್ತ ನಮ್ಮನ್ನು ನಿತ್ಯವೂ ಪೀಡಿಸುತ್ತಿರುವೆ.
ಯದ್ಬಲಂ ಯಚ್ಚ ತೇ ವೀರ್ಯಂ ಪ್ರದ್ವೇಷೋ ಯಶ್ಚ ಪಾಂಡುಷು |
ತತ್ಸರ್ವಂ ದರ್ಶಯಸ್ವಾದ್ಯ ಪೌರುಷಂ ಮಹದಾಸ್ಥಿತಃ ॥13॥
ಯುದ್ಧಶ್ರದ್ಧಾಂ ಸ ತೇಽದ್ಯಾಹಂ ವಿನೇಷ್ಯಾಮಿ ಮಹಾಹವೇ ॥14॥
ನಿನ್ನಲ್ಲಿ ಏನು ಬಲವಿದೆಯೋ ಏನು ಪರಾಕ್ರಮವಿದೆಯೋ ಪಾಂಡವರಲ್ಲಿ ನಿನಗೇನು ಗಾಢವಾದ ದ್ವೇಷವಿದೆಯೋ ಅದೆಲ್ಲವನ್ನು ಈಗ ನೀನು ತೋರು. ನಿನ್ನ ಮಹಾಪೌರುಷವನ್ನು ಉಪಯೋಗಿಸಿಕೊಳ್ಳು.
ಏವಮುಕತ್ವ ಮಹಾರಾಜ ಕರ್ಣಂ ಪಾಂಡುಸುತಸ್ತದಾ |
ಸುವರ್ಣಪುಂಖೈರ್ದಶಭಿರ್ವಿವ್ಯಾಧಾಯಸ್ಮಯೈಃ ಶರೈಃ ॥15॥
ಮಹಾರಾಜ, ಯುಧಿಷ್ಠಿರನು ಹೀಗೆ ಹೇಳಿ ಬಂಗಾರದ ಪುಕ್ಕಉಳ್ಳ ಕಬ್ಬಿಣದ ಹತ್ತು ಬಾಣಗಳಿಂದ ಕರ್ಣನನ್ನು ಹೊಡೆದ.
ತಂ ಸೂತಪುತ್ರೋ ನವಭಿಃ ಪ್ರತ್ಯವಿಧ್ಯದರಿಂದಮಃ |
ವತ್ಸದಂತೈರ್ಮಹೇಷ್ವಾಸಃ ಪ್ರಹಸನ್ನಿವ ಭಾರತ ॥16॥
ರಾಜನೆ, ಶತ್ರುನಾಶಕನಾದ ಮಹಾಬಿಲ್ಗಾರ ಕರ್ಣನು ನಗುತ್ತ ಒಂಬತ್ತು ವತ್ಸದಂತ ಎಂಬ ಬಾಣಗಳಿಂದ ಯುಧಿಷ್ಠಿರನಿಗೆ ಪ್ರತಿಯಾಗಿ ಹೊಡೆದ.
ಸೋಽವಜ್ಞಾಯ ತು ನಿರ್ವಿದ್ಧಃ ಸೂತಪುತ್ರೇಣ ಮಾರಿಷ |

ಪ್ರಜಜ್ವಾಲ ತತಃ ಕ್ರೋಧಾದ್ಧವಿಷೇವ ಹುತಾಶನಃ ॥17॥
ರಾಜನೆ, ಯುಧಿಷ್ಠಿರನು ಚೆನ್ನಾಗಿ ಹೊಡೆಸಿಕೊಂಡರೂ ಅದನ್ನು ನಿರ್ಲಕ್ಷಿಸಿ ಹವಿಸ್ಸಿನಿಂದ ಯಾಗಾಗ್ನಿ ಜ್ವಲಿಸುವಂತೆ ಕೋಪದಿಂದ ಉರಿದ.
ತತೋ ವಿಸ್ಫಾರ್ಯ ಸುಮಹಚ್ಚಾಪಂ ಹೇಮಪರಿಷ್ಕೃತಮ್ |
ಸಮಾಧತ್ತ ಶಿತಂ ಬಾಣಂ ಗಿರೀಣಾಮಪಿ ದಾರಣಮ್ ॥18॥
ಬಂಗಾರದಿಂದ ಅಲಂಕೃತವಾದ ದೊಡ್ಡಬಿಲ್ಲನ್ನು ಸೆಳೆದು ಬೆಟ್ಟಗಳನ್ನೂ ಸೀಳಬಲ್ಲ ತೀಕ್ಷ್ಣವಾದ ಬಾಣವನ್ನು ಹೂಡಿದ, ಯುಧಿಷ್ಠಿರ.
ತತಃ ಪೂರ್ಣಾಯತಂ ತೀಕ್ಷ್ಣಂ ಯಮದಂಡನಿಭಂ ಶರಮ್ |
ಮುಮೋಚ ತ್ವರಿತೋ ರಾಜಾ ಸೂತಪುತ್ರಜಿಘಾಂಸಯಾ ॥19॥
ರಾಜಾ ಯುಧಿಷ್ಠಿರನು ಕರ್ಣನನ್ನು ಹಿಂಸಿಸುವ ಇಚ್ಛೆಯಿಂದ ಬೇಗನೆ ಯಮದಂಡದಂಥ ತೀಕ್ಷ್ಣವಾದ ಆ ಬಾಣವನ್ನು ಪೂರ್ಣವಾಗಿ ಸೆಳೆದು ಕರ್ಣನ ಮೇಲೆ ಎಸೆದ.
ಸ ತು ವೇಗವತಾ ಮುಕ್ತೋ ಬಾಣೋ ವಜ್ರಾಶನಿಸ್ವನಃ |
ವಿವೇಶ ಸಹಸಾ ಕರ್ಣಂ ಸವ್ಯೇ ಪಾರ್ಶ್ವೇ ಮಹಾರಥಮ್ ॥20॥
ವೇಗವುಳ್ಳ ಯುಧಿಷ್ಠಿರನು ಎಸೆದ ವಜ್ರಾಯುಧಸಮಾನವಾದ ಆ ಬಾಣವು ಒಡನೆ ಮಹಾರಥನಾದ ಕರ್ಣನ ಎಡಪಾರ್ಶ್ವದಲ್ಲಿ ನೆಟ್ಟಿತು.
ಸ ತು ತೇನ ಪ್ರಹಾರೇಣ ಪೀಡಿತಃ ಪ್ರಮುಮೋಹ ವೈ |
ಸ್ರಸ್ತಗಾತ್ರೋ ಮಹಾಬಾಹುರ್ಧನುರುತ್ಸೃಜ್ಯ ತತ್‍ಕ್ಷಣಾತ್ ॥21॥
ಮಹಾಬಾಹುವಾದ ಕರ್ಣನು ತಕ್ಷಣ ಆ ಆಘಾತದಿಂದ ಪೀಡಿತನಾಗಿ ಮೈಯೆಲ್ಲ ಜರ್ಝರಿತನಾಗಿ ಬಿಲ್ಲನ್ನು ಕೆಳಗೆ ಬಿಟ್ಟು ಮೈಮರೆತ
ಗತಾಸುರಿವ ನಿಶ್ಚೇತಾಃ ಶಲ್ಯಸ್ಯಾಭಿಮುಖೋಽಪತತ್ |
ಫಲ್ಗುನಸ್ಯಾದಧತ್ ಕೀರ್ತಿಂ ಕರ್ಣೇ ನಾಸ್ತ್ರಮಮುಂಚತ ॥22॥
ರಾಜಾಪಿ ಭೂಯೋ ನಾಜಘ್ನೇ ಕರ್ಣಂ ಪಾರ್ಥಹಿತೇಪ್ಸಯಾ ॥23॥
ಅಸುನೀಗಿದವನಂತೆ ಪ್ರಜ್ಞೆ ಕಳೆದುಕೊಂಡು ಕರ್ಣನು ಶಲ್ಯನ ಮುಂದೆ ಬಿದ್ದುಬಿಟ್ಟ. ಸಾಯಲಿಲ್ಲ. ಏಕೆಂದರೆ ಯುಧಿಷ್ಠಿರ ಆಗ ಅಸ್ತ್ರಪ್ರಯೋಗ ಮಾಡಿರಲಿಲ್ಲ, ವಧಿಸಿರಲಿಲ್ಲ. ಯುಧಿಷ್ಠಿರನಿಗೆ ಅವನನ್ನು ಕೊಲ್ಲುವ ಇಚ್ಛೆ ಇರಲಿಲ್ಲ. ಇದು ಅರ್ಜುನನಿಗೆ ಹಿತಕರವಾದ ಕರ್ಣವಧಪ್ರತಿಜ್ಞಾಪೂರ್ತಿಯ ಸಿದ್ಧಿಗಾಗಿ.
ಪ್ರತಿಜ್ಞಾಪೂರ್ತಿ ಮಾಡಿದನೆಂಬ ಕೀರ್ತಿಗೆ ಅರ್ಜುನನನ್ನು ಭಾಗಿಯಾಗಿ ಮಾಡುವ ಉದ್ದೇಶವಿದ್ದಿದ್ದರಿಂದ, ಕರ್ಣನ ಮೇಲೆ ಹೆಚ್ಚು ಶಕ್ತಿಯ ಅಸ್ತ್ರವನ್ನು ಯುಧಿಷ್ಠಿರ ಪ್ರಯೋಗಿಸಿರಲಿಲ್ಲ ಎಂದರ್ಥ. ಅದರಿಂದ `ಮೂರ್ಛಿತನಾಗಿ ಬಿದ್ದವನ ಮೇಲೆ ತಿರುಗಿ ಬಾಣ ಎಸೆಯುವುದು ಅನುಚಿತವಾಗಿರುವಾಗ `ತಿರುಗಿ ಬಾಣ ಎಸೆಯಲಿಲ್ಲ' ಎಂದು ಯುಧಿಷ್ಠಿರನನ್ನು ಪ್ರಶಂಸೆ ಮಾಡಲಾಗದೆ'ಂಬ ಆಕ್ಷೇಪಕ್ಕೆ ಇಲ್ಲಿ ಎಡೆ ಇಲ್ಲ.
ತತೋ ಹಾಹಾಕೃತಂ ಸರ್ವಂ ಧಾರ್ತರಾಷ್ಟ್ರಬಲಂ ಮಹತ್ |
ವಿವರ್ಣಮುಖಭೂಯಿಷ್ಠಂ ಕರ್ಣಂ ದೃಷ್ಟ್ವಾ ತಥಾಗತಮ್ ॥24॥
ಆಗ ಕೌರವಸೈನ್ಯವೆಲ್ಲವೂ ಮೂರ್ಛಿತನಾದ ಕರ್ಣನ ಮುಖ ಬಹಳ ವಿವರ್ಣವಾದುದನ್ನು ಕಂಡು ಬಹಳ ಹಾಹಾಕಾರ ಮಾಡಿತು.
ಸಿಂಹನಾದಶ್ಚ ಸಂಜಜ್ಞೇ ಕ್ಷ್ವೇಡಾಃ ಕಿಲಕಿಲಾಸ್ತಥಾ |
ಪಾಂಡವಾನಾಂ ಮಹಾರಾಜ ದೃಷ್ಟ್ವಾ ರಾಜ್ಞಃ ಪರಾಕ್ರಮಮ್ ॥25॥
ಮಹಾರಾಜ, ಪಾಂಡವಸೈನ್ಯದಲ್ಲಿ ರಾಜಾ ಯುಧಿಷ್ಠಿರನ ಪರಾಕ್ರಮವನ್ನು ಕಂಡು ಸಿಂಹನಾದ, ಕುಣಿತ, ಕಿಲಕಿಲ ನಗೆಗಳುಂಟಾದುವು.
ಪ್ರತಿಲಭ್ಯ ತು ರಾಧೇಯಃ ಸಂಜ್ಞಾಂ ನಾತಿಚಿರಾದಿವ |
ದಧ್ರೇ ರಾಜವಿನಾಶಾಯ ಮನಃ ಕ್ರೂರಪರಾಕ್ರಮಃ ॥26॥
ಕ್ರೂರ ಪರಾಕ್ರಮಉಳ್ಳ ಕರ್ಣನು ಬೇಗನೆ ಎಚ್ಚೆತ್ತು ರಾಜಾಯುಧಿಷ್ಠಿರನ ವಿನಾಶಕ್ಕೆ ಸಂಕಲ್ಪಿಸಿದ.
ಸ ಹೇಮವಿಕೃತಂ ಚಾಪಂ ವಿಸ್ಫಾರ್ಯ ವಿಜಯಂ ಮಹತ್ |
ಅವಾಕಿರದಮೇಯಾತ್ಮಾ ಪಾಂಡವಂ ನಿಶಿತೈಃ ಶರೈಃ ॥27॥
ಬಂಗಾರದಿಂದಾದ ವಿಜಯ ಎಂಬ ಮಹತ್ತಾದ ಬಿಲ್ಲನ್ನು ಸೆಳೆದು ಅಮೇಯಾತ್ಮ ಕರ್ಣ ತೀಕ್ಷ್ಣವಾದ ಬಾಣಗಳಿಂದ ಯುಧಿಷ್ಠಿರನ ಮೇಲೆ ಮಳೆಗರೆದ.
ತತಃ ಕ್ಷುರಾಭ್ಯಾಂ ಪಾಂಚಾಲ್ಯೌ ಚಕ್ರರಕ್ಷೌ ಮಹಾತ್ಮನಃ |
ಜಘಾನ ಚಂದ್ರದೇವಂ ಚ ದಂಡಧಾರಂ ಚ ಸಂಯುಗೇ ॥28॥
ತಾವುಭೌ ಧರ್ಮರಾಜಸ್ಯ ಪ್ರವೀರೌ ಪರಿಪಾರ್ಶ್ವತಃ |
ರಥಾಭ್ಯಾಶೇ ಚಕಾಶೇತೇ ಚಂದ್ರಸ್ಯೇವ ಪುನರ್ವಸೂ ॥29॥
ಮಹಾತ್ಮ ಯುಧಿಷ್ಠಿರನ ಚಕ್ರರಕ್ಷಕರಾದ ಚಂದ್ರದೇವ, ದಂಡಧಾರರೆಂಬ ಪಾಂಚಾಲಯೋಧರನ್ನು ಯುದ್ಧದಲ್ಲಿ ಕರ್ಣನು ವಧಿಸಿದ. ಅವರಿಬ್ಬರೂ ಮಹಾವೀರರು, ಧರ್ಮರಾಜನ ರಥದ ಸಮೀಪದಲ್ಲಿ ಚಂದ್ರನಿಗೆ ಎರಡು ಪುನರ್ವಸು ನಕ್ಷತ್ರಗಳಂತೆ ಎರಡು ಪಾರ್ಶ್ವಗಳಲ್ಲಿ ಶೋಭಿಸುತ್ತಿದ್ದರು.
ಯುಧಿಷ್ಠಿರಃ ಪುನಃ ಕರ್ಣಮವಿಧ್ಯತ್ ತ್ರಿಂಶತಾ ಶರೈಃ |
ಸುಷೇಣಂ ಸತ್ಯಸೇನಂ ಚ ತ್ರಿಭಿಸ್ತ್ರಿಭಿರತಾಡಯತ್ ॥30॥
ಶಲ್ಯಂ ನವತ್ಯಾ ವಿವ್ಯಾಧ ತ್ರಿಸಪ್ತತ್ಯಾ ಚ ಸೂತಜಮ್ |

ತಾಂಶ್ಚಾಸ್ಯ ಗೋಪ್ತೄನ್ ವಿವ್ಯಾಧ ತ್ರಿಭಿಸ್ತ್ರಿಭಿರಜಿಹ್ಮಗೈಃ ॥31॥
ಯುಧಿಷ್ಠಿರನು ಕರ್ಣನನ್ನು ಪುನಃ ಮೂವತ್ತು ಬಾಣಗಳಿಂದ ಹೊಡೆದನು. ಸುಷೇಣ ಸತ್ಯಸೇನರನ್ನೂ ಮೂರುಮೂರು ಬಾಣಗಳಿಂದ ಹೊಡೆದನು. ಶಲ್ಯನನ್ನು ತೊಂಬತ್ತು ಬಾಣಗಳಿಂದ ಕರ್ಣನನ್ನು ಎಪ್ಪತ್ತಮೂರು ಬಾಣಗಳಿಂದ, ಅವನ ರಕ್ಷಕರನ್ನೂ ಕೂಡ ಮೂರು ಮೂರು ಸರಳವಾಗಿ ಹಾರುವ ಬಾಣಗಳಿಂದ ಹೊಡೆದನು.
ತತಃ ಪ್ರಹಸ್ಯಾಧಿರಥಿರ್ವಿಧುನ್ವಾನಃ ಸ ಕಾರ್ಮುಕಮ್ |
ಛಿತ್ತ್ವ ಭಲ್ಲೇನ ರಾಜಾನಂ ವಿದ್ಧ್ವಾ ಷಷ್ಟ್ಯಾನದನ್ ಮುದಾ ॥32॥
ಆಗ ಕರ್ಣನು ನಕ್ಕು ಬಿಲ್ಲನ್ನು ಆಡಿಸುತ್ತ ಯುಧಿಷ್ಠಿರನ ಬಿಲ್ಲನ್ನು ಕತ್ತರಿಸಿ ಅವನನ್ನೂ ಅರವತ್ತು ಬಾಣಗಳಿಂದ ಹೊಡೆದ.
ತತಃ ಪ್ರವೀರಾಃ ಪಾಂಡೂನಾಮಭ್ಯಧಾವನ್ಯುಧಿಷ್ಠಿರಮ್ |
ಸೂತಪುತ್ರಾತ್ ಪರೀಪ್ಸಂತಃ ಕರ್ಣಮಭ್ಯರ್ದಯನ್ ಶರೈಃ ॥33॥
ಆಗ ಪಾಂಡವವೀರರು ಯುಧಿಷ್ಠಿರನನ್ನು ಕರ್ಣನಿಂದ ರಕ್ಷಿಸುವುದಕ್ಕೆ ಧಾವಿಸಿದರು. ಕರ್ಣನನ್ನು ಬಾಣಗಳಿಂದ ಹೊಡೆದರು.
ಸಾತ್ಯಕಿಶ್ಚೇಕಿತಾನಶ್ಚ ಯುಯುತ್ಸುಃ ಪಾಂಡ್ಯ ಏವ ಚ |
ಧೃಷ್ಟದ್ಯುಮ್ನಃ ಶಿಖಂಡೀ ಚ ದ್ರೌಪದೇಯಾಃ ಪ್ರಭದ್ರಕಾಃ ॥34॥
ಯಮೌ ಚ ಭೀಮಸೇನಶ್ಚ ಶಿಶುಪಾಲಸ್ಯ ಚಾತ್ಮಜಃ |
ಕಾರೂಷಾ ಮತ್ಸ್ಯಶೂರಾಶ್ಚ ಕೇಕಯಾಃ ಕಾಶಿಕೋಸಲಾಃ ॥35॥
ಏತೇ ಚ ತ್ವರಿತಾ ವೀರಾ ವಸುಷೇಣಮತಾಡಯನ್ ॥36॥
ಸಾತ್ಯಕಿ ಚೇಕಿತಾನ ಯುಯುತ್ಸು ಪಾಂಡ್ಯ ಧೃಷ್ಟದ್ಯುಮ್ನ ಶಿಖಂಡಿ ದ್ರೌಪದೀ ಪುತ್ರರು ಪ್ರಭದ್ರಕರು ನಕುಲಸಹದೇವರು ಭೀಮಸೇನ ಶಿಶುಪಾಲಪುತ್ರ, ಕಾರೂಷರು ಮತ್ಸ್ಯವೀರರು ಕೇಕಯರು ಕಾಶಿಕೋಸಲರು ಇವರೆಲ್ಲರೂ ಬೇಗನೆ ಬಾಣಗಳಿಂದ ಕರ್ಣನನ್ನು ಹೊಡೆದರು.
ಜನಮೇಜಯಶ್ಚ ಪಾಂಚಾಲ್ಯಃ ಕರ್ಣಂ ವಿವ್ಯಾಧ ಸಾಯಕೈಃ |
ವರಾಹಕರ್ಣೈರ್ನಾರಾಚೈರ್ನಾಲೀಕೈರ್ನಿಶಿತೈಃ ಶರೈಃ ॥37॥
ವತ್ಸದಂತೈರ್ವಿಪಾಠೈಶ್ಚ ಕ್ಷುರಪ್ರೈಶ್ಚಟಕಾಮುಖೈಃ ॥38॥
ಪಾಂಚಾಲ್ಯವೀರನಾದ ಜನಮೇಜಯನು ವರಾಹಕರ್ಣ ನಾರಾಚ ನಾಲೀಕ ವತ್ಸದಂತ ವಿಪಾಠ ಕ್ಷುರಪ್ರ ಚಟಕಾಮುಖ ಮುಂತಾದ ತೀಕ್ಷ್ಣಬಾಣಗಳಿಂದ ಕರ್ಣನನ್ನು ಹೊಡೆದನು.
ನಾನಾಪ್ರಹರಣೈಶ್ಚೋಗ್ರೈ ರಥಹಸ್ತ್ಯಶ್ವಸಾದಿನಃ |
ಸರ್ವತೋಽಭ್ಯದ್ರುವನ್ ಕರ್ಣಂ ಪರಿವಾರ್ಯ ಜಿಘಾಂಸಯಾ ॥39॥
ರಥ ಗಜ ಅಶ್ವ ಪದಾತಿಗಳೂ ಉಗ್ರವಾದ ನಾನಾ ಆಯುಧಗಳಿಂದ ಕರ್ಣನನ್ನು ಕೊಲ್ಲುವ ಇಚ್ಛೆಯಿಂದ ಸುತ್ತುವರಿದು ಆಕ್ರಮಿಸಿದರು.
ಸ ಪಾಂಡವಾನಾಂ ಪ್ರವರೈಃ ಸರ್ವತಃ ಸಮಭಿದ್ರುತಃ |
ಉದೈರಯದ್ ಬ್ರಾಹ್ಮಮಸ್ತ್ರಂ ಶರೈರಾಪೂರಯನ್ ದಿಶಃ ॥40॥
ಎಲ್ಲ ಕಡೆಗಳಿಂದ ಪಾಂಡವವೀರರು ಕರ್ಣನನ್ನು ಮುತ್ತಿದಾಗ ಕರ್ಣನು ದಿಕ್ಕುಗಳನ್ನು ಬಾಣಗಳಿಂದ ತುಂಬುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ.
ಅಪರಾಹ್ಣೇಽಪರಾಹ್ಣಸ್ಯ ಸೂತಪುತ್ರಸ್ಯ ಮಾರಿಷ |
ಛಿನ್ನಮಂಜಲಿಕೇನಾಜೌ ಸೋತ್ಸೇಧಮಪತಚ್ಛಿರಃ ॥
ಎಂದು ಮುಂದೆ ಹೇಳುವಂತೆ ಕರ್ಣಸೇನಾಧಿಪತ್ಯದ ಎರಡನೆ ದಿನ ತತ್ರಾಪಿ, ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ, ಸಾಯಾಹ್ನ ಎಂದು ಹಗಲಿನ ಐದು ಭಾಗಗಳಲ್ಲಿ ನಾಲ್ಕನೆಯದಾದ ಅಪರಾಹ್ಣವು ಕರ್ಣನಿಗೆ ಮೃತ್ಯುಕಾಲ.
ಹಿಂದೆ (42.13) `ಅನ್ಯತ್ರ ತಸ್ಮಾತ್ ತವ ಮೃತ್ಯುಕಾಲಾತ್' `ಮರಣ ಕಾಲದಲ್ಲಿ ಹೊರತು ಬೇರೆಕಾಲದಲ್ಲಿ ಬ್ರಹ್ಮಾಸ್ತ್ರವು ನಿನಗೆ ಹೊಳೆಯುವುದಿಲ್ಲ' ಎಂದು ಹೇಳಿದಂತೆ ಗುರು ಪರಶುರಾಮ ಶಾಪ ಕೊಟ್ಟಿರುವುದರಿಂದ, ಇದೀಗ ಕರ್ಣನಿಗೆ ಮರಣಕಾಲವಾದ್ದರಿಂದ, ಬ್ರಹ್ಮಾಸ್ತ್ರ ಹೊಳೆಯಿತೆಂದು ತಿಳಿಯಬೇಕು. ಮತ್ತು ಇದು ಪ್ರಸಿದ್ಧವಾದ ಬ್ರಹ್ಮಶಿರೋಸ್ತ್ರರೂಪವಾದ ಬ್ರಹ್ಮಾಸ್ತ್ರವಲ್ಲ. ಬ್ರಹ್ಮಶಿರೋಸ್ತ್ರ ಕರ್ಣನಿಗೆ ಉಪದೇಶವಿಲ್ಲ ಎಂದೂ ತಿಳಿಯಬೇಕು.
ತತಃ ಶರಮಹಾಜ್ವಾಲೋ ವೀರ್ಯೋಷ್ಮಾ ಕರ್ಣಪಾವಕಃ |
ನಿರ್ದಹನ್ ಪಾಂಡವವನಂ ಚಾರು ಪರ್ಯಚರದ್ ರಣೇ ॥41॥
ಆಗ ಬಾಣಸಮೂಹಮಯವಾದ ಆ ಬ್ರಹ್ಮಾಸ್ತ್ರದಿಂದ ಕರ್ಣನೆಂಬ ಕಾಳ್ಗಿಚ್ಚು ಬಾಣಗಳೆಂಬ ಜ್ವಾಲೆಗಳಿಂದ ಪರಾಕ್ರಮವೆಂಬ ತಾಪದಿಂದ ಪಾಂಡವಸೈನ್ಯವೆಂಬ ಕಾಡನ್ನು ಚೆನ್ನಾಗಿ ಸುಡುತ್ತ ರಣದಲ್ಲಿ ಸಂಚರಿಸಿತು.
ಸ ಸಂವಾರ್ಯ ಮಹಾಸ್ತ್ರಾಣಿ ಮಹೇಷ್ವಾಸೋ ಮಹಾತ್ಮನಾಮ್ |
ಪ್ರಹಸ್ಯ ಪುರುಷೇಂದ್ರಸ್ಯ ಶರೈಶ್ಚಿಚ್ಛೇದ ಕಾರ್ಮುಕಮ್ ॥42॥
ಮಹಾಬಿಲ್ಗಾರ ಕರ್ಣ ಮಹಾತ್ಮರಾದ ಪಾಂಡವವೀರರ ಮಹಾ ಅಸ್ತ್ರಗಳನ್ನು ತಡೆದು ಯುಧಿಷ್ಠಿರನ ಬಿಲ್ಲನ್ನು ಬಾಣಗಳಿಂದ ಕತ್ತರಿಸಿದ.
ತತಃ ಸಂಧಾಯ ನವತಿಂ ನಿಮೇಷಾನ್ನತಪರ್ವಣಾಮ್ |
ಬಿಭೇದ ಕವಚಂ ರಾಜ್ಞೋ ರಣೇ ಕರ್ಣಃ ಶಿತೈಃ ಶರೈಃ ॥43॥
ಡೊಂಕುಗಿಣ್ಣಿನ ತೊಂಬತ್ತು ಬಾಣಗಳನ್ನು ಹೂಡಿ ತೀಕ್ಷ್ಣವಾದ ಆ ಬಾಣಗಳಿಂದ ರಣದಲ್ಲಿ ಕರ್ಣನು ಯುಧಿಷ್ಠಿರನ ಕವಚವನ್ನು ಸೀಳಿದ.

ತದ್ವರ್ಮ ಹೇಮವಿಕೃತಂ ರತ್ನಚಿತ್ರಂ ಬಭೌ ಪತತ್ |
ಸವಿದ್ಯುದಭ್ರಂ ಸವಿತುಃ ಶ್ಲಿಷ್ಟಂ ವಾತಹತಂ ಯಥಾ ॥44॥
ಸ್ವರ್ಣಮಯವಾದ ಯುಧಿಷ್ಠಿರನ ಕವಚವು ಬೀಳುವಾಗ ಸೂರ್ಯನನ್ನು ಆವರಿಸಿದ್ದ ಮಿಂಚಿನಿಂದ ಕೂಡಿದ ಮೋಡವು ಚಂಡಮಾರುತದ ಆಘಾತದಿಂದ ಬೀಳುವಂತೆ ಶೋಭಿಸಿತು.
ತದಂಗಂ ಪುರುಷೇಂದ್ರಸ್ಯ ಭ್ರಷ್ಟವರ್ಮ ವ್ಯರೋಚತ |
ರತ್ನೈರಲಂಕೃತಂ ದಿವ್ಯೈರ್ವ್ಯಭ್ರಂ ನಿಶಿ ಯಥಾಂಬರಮ್ ॥45॥
ದಿವ್ಯರತ್ನಾಲಂಕೃತವಾದ ಯುಧಿಷ್ಠಿರನ ಶರೀರವು, ಕವಚವು ಕಳಚಿಬಿದ್ದಾಗ, ಮೋಡವಿಲ್ಲದ ರಾತ್ರಿಯ ಆಕಾಶದಂತೆ ಶೋಭಿಸಿತು.
ಛಿನ್ನವರ್ಮಾ ಶರೈಃ ಪಾರ್ಥೋ ರುಧಿರೇಣ ಸಮುಕ್ಷಿತಃ |
ಕ್ರುದ್ಧಃ ಸರ್ವಾಯಸೀಂ ಶಕ್ತಿಂ ಚಿಕ್ಷೇಪಾಧಿರಥಿಂ ಪ್ರತಿ ॥46॥
ಬಾಣಗಳಿಂದ ಕವಚ ಸೀಳಿ ಬಿದ್ದಾಗ ಯುಧಿಷ್ಠಿರ ನೆತ್ತರಿಂದ ತೊಯ್ದು ಕ್ರುದ್ಧನಾಗಿ ಕರ್ಣನ ಮೇಲೆ ಶಕ್ತ್ಯಾಯುಧವನ್ನು ಎಸೆದ.
ತಾಂ ಜ್ವಲಂತೀಮಿವಾಕಾಶೇ ಶರೈಶ್ಚಿಚ್ಛೇದ ಸಪ್ತಭಿಃ |
ಸಾ ಛಿನ್ನಾ ಭೂಮಿಮಪತನ್ಮಹೇಷ್ವಾಸಸ್ಯ ಸಾಯಕೈಃ ॥47॥
ಆಕಾಶದಲ್ಲಿ ಹೊಳೆಯುತ್ತ ಬರುತ್ತಿದ್ದ ಆ ಶಕ್ತ್ಯಾಯುಧವನ್ನು ಕರ್ಣನು ಏಳು ಬಾಣಗಳಿಂದ ಕತ್ತರಿಸಿದ. ಮಹಾಬಿಲ್ಲಾರನ ಬಾಣಗಳಿಂದ ಅದು ಮುರಿದು ನೆಲದಲ್ಲಿ ಬಿದ್ದಿತು.
ತತೋ ಬಾಹ್ವೋರ್ಲಲಾಟೇ ಚ ಹೃದಿ ಚೈವ ಯುಧಿಷ್ಠಿರಃ |
ಚತುರ್ಭಿಸ್ತೋಮರೈಃ ಕರ್ಣಂ ತಾಡಯಿತ್ವಾSನದನ್ಮುದಾ ॥48॥
ಆಗ ಯುಧಿಷ್ಠಿರ ಕರ್ಣನನ್ನು ನಾಲ್ಕು ತೋಮರಗಳಿಂದ ಎರಡು ತೋಳು ಗಳಲ್ಲಿ ಹಣೆಯಲ್ಲಿ ಎದೆಯಲ್ಲಿ ಹೊಡೆದು ಆನಂದದಿಂದ ಗರ್ಜಿಸಿದ.
ಉದ್ಭಿನ್ನರುಧಿರಃ ಕರ್ಣಃ ಕ್ರುದ್ಧಃ ಸರ್ಪ ಇವ ಶ್ವಸನ್ |
ಧ್ವಜಂ ಚಿಚ್ಛೇದ ಭಲ್ಲೇನ ತ್ರಿಭಿರ್ವಿವ್ಯಾಧ ತಂ ಶರೈಃ ॥49॥
ಪುಟಿದೆದ್ದ ರಕ್ತದಿಂದ ತೋಯ್ದ ಕರ್ಣನು ಕುಪಿತವಾದ ಸರ್ಪದಂತೆ ಬುಸುಗುಟ್ಟುತ್ತ ಭುಲ್ಲೆಯಿಂದ ಧ್ವಜವನ್ನು ಕತ್ತರಿಸಿದ. ಮೂರು ಬಾಣಗಳಿಂದ
ಯುಧಿಷ್ಠಿರನನ್ನು ಹೊಡೆದ.
ಹತ್ವಾ ಸೂತಂ ಚ ಪಾರ್ಥಸ್ಯ ಪೃಷ್ಠಗೋಪಂ ಚ ಸಾಯಕೈಃ ॥50॥
ಇಷುಧೀ ಚಾಸ್ಯ ಚಿಚ್ಛೇದ ರಥಂ ಚ ತಿಲಶೋSಚ್ಛಿನತ್ ॥51॥
ಯುಧಿಷ್ಠಿರನ ಸಾರಥಿಯನ್ನೂ ಹಿಂಭಾಗದ ರಕ್ಷಕನನ್ನೂ ಬಾಣಗಳಿಂದ ಕೊಂದು ಬತ್ತಳಿಕೆಗಳನ್ನೂ ಕತ್ತರಿಸಿದ, ರಥವನ್ನೂ ಎಳ್ಳುಕಾಳಿನಂತೆ ಚೂರು ಮಾಡಿದ.
ಕಾಲವಾಲಾಸ್ತು ಯೇ ಪಾರ್ಥಂ ದಂತವರ್ಣಾವಹನ್ಹಯಾಃ |
ತೈರ್ಯುಕ್ತಂ ರಥಮಾಸ್ಥಾಯ ಪ್ರಾಯಾದ್ ರಾಜಾ ಪರಾಙ್ಮುಖಃ ॥52॥
ದಂತದಂತೆ ಬಿಳಿಯಾದ ಕಪ್ಪುಬಾಲದ ಕುದುರೆಗಳು ಪಾರ್ಥನ ರಥವನ್ನು ಎಳೆಯುತ್ತಿದ್ದವು. ಅವುಗಳಂತೇ ಇರುವ ಬಿಳಿ ಮೈ, ಕಪ್ಪು ಬಾಲದ ಕುದುರೆಗಳಿಂದ ಯುಕ್ತವಾದ ರಥವನ್ನೇರಿ ಯುಧಿಷ್ಠಿರ ಯುದ್ಧದಿಂದ ಪರಾಙ್ಮುಖನಾಗಿ ತೆರಳಿದ.
ಇಲ್ಲಿ ಪ್ರಶ್ನೆ ಬರುತ್ತದೆ– ರಥವು ಚೂರ್ಣೀಕೃತವಾದ ನಂತರ `ಅವೇ ಕುದುರೆಗಳಿಂದ' ಯುಕ್ತವಾಗಿದ್ದ ಬೇರೊಂದು ರಥದಲ್ಲಿ ಕುಳಿತು ಯುಧಿಷ್ಠಿರ ಶಿಬಿರಕ್ಕೆ ಹೊರಟುಹೋದನೆಂದು ಈ ಶ್ಲೋಕ ಹೇಳುತ್ತಿದೆ. ಇದು ಹೇಗೆ ಸಾಧ್ಯ? ಕರ್ಣನು ರಥವನ್ನು ಧ್ವಂಸಮಾಡಿದ ನಂತರ ಕುದುರೆಗಳು ಉಳಿದುಕೊಳ್ಳುವ ಸಾಧ್ಯತೆ ಇಲ್ಲ. ಕುದುರೆಗಳಿಲ್ಲದ ರಥವನ್ನು ತಂದು ನಿಲ್ಲಿಸಿರುವ ಪ್ರಕರಣವು ಇದುವರೆಗೂ ಬಂದಿರುವುದಿಲ್ಲ. ಈ ಪ್ರಶ್ನೆಗೆ ಸಮಾಧಾನ ಹೀಗೆ– `ರಥವು ಚೂರ್ಣೀಕೃತವಾದ ನಂತರ `ಅವೇ ಕುದುರೆ'ಗಳಿಂದ ಯುಕ್ತವಾದ ಬೇರೊಂದು ರಥದಲ್ಲಿ ಯುಧಿಷ್ಠಿರ ಕುಳಿತನು' ಎಂದು ಶ್ಲೋಕವು ಹೇಳುತ್ತಿಲ್ಲ. `ತೈರ್ಯುಕ್ತಂ' ಎಂದರೆ `ಅವೇ ಕುದುರೆ'ಗಳಿಂದ ಯುಕ್ತವಾದ, ಇನ್ನೊಂದು ರಥ' ಎಂದು ಅರ್ಥವಲ್ಲ. `ಅಂಥವೇ ಕುದುರೆಗಳಿಂದ ಯುಕ್ತವಾದ ಬೇರೊಂದು ರಥ' ಎಂದರ್ಥ. `ಕುದುರೆಗಳಿಲ್ಲದ ರಥವನ್ನು ತಂದು ನಿಲ್ಲಿಸುವ' ಪ್ರಕರಣವೇ ಅಪ್ರಸಕ್ತ. `ಅಂಥವೇ ಕುದುರೆಗಳಿಂದ ಯುಕ್ತವಾದ ಇನ್ನೊಂದು ರಥ' ಎಂದರೆ ಸಹದೇವನ ರಥ. ಇದು ಮುಂದೆ `ಅಪಾಯಾಜ್ಜವನೈರಶ್ವೈಃ ಸಹದೇವಸ್ಯ ಮಾರಿಷ'(60.33) ಎಂಬ ಶ್ಲೋಕದಲ್ಲಿ ಸ್ಪಷ್ಟವಿದೆ. ಇದು ಈ ಯುಧಿಷ್ಠಿರ ಪರಾಜಯ ಪ್ರಕರಣದಲ್ಲಿ ಕೊನೆಗೆ ನಡೆಯುವ ಸಂಗತಿ, ಮೊದಲೇ ಭಾರತ ಹೇಳುತ್ತಿದೆ.
ಏವಂ ಪಾರ್ಥೋ ವ್ಯಪಾಯಾತ್ ಸ ನಿಹತಪ್ರಾರ್ಷ್ಣಿಸಾರಥಿಃ |
ಅಶಕ್ನುವನ್ ಪ್ರಮುಖತಃ ಸ್ಥಾತುಂ ಕರ್ಣಸ್ಯ ದುರ್ಮನಾಃ ॥53॥
ಹಿಂದೆಯೇ ಯುಧಿಷ್ಠಿರನ ಚಂದ್ರದೇವ, ದಂಡಧಾರರೆಂಬ ಇಬ್ಬರು ಪಾರ್ಶ್ವರಕ್ಷಕರನ್ನು ಕರ್ಣ ಸಂಹರಿಸಿದ್ದ. ಅದರಿಂದ ಕರ್ಣನ ಮುಂದೆ ನಿಲ್ಲಲಾಗದೆ ಖಿನ್ನನಾಗಿ ಯುಧಿಷ್ಠಿರ ರಣರಂಗದಿಂದ ಹೊರಟುಹೋದ.
ತಮಭಿದ್ರುತ್ಯ ರಾಧೇಯಃ ಸ್ಕಂಧಂ ಸಂಸ್ಪ ೃಶ್ಯ ಪಾಣಿನಾ |
ಗೃಹೀತುಮಿಚ್ಛನ್ ಸ ಬಲಾತ್ ಕುಂತೀವಾಕ್ಯಂ ಚ ಸೋSಸ್ಮರತ್ ॥54॥
ತಂ ಶಲ್ಯಃ ಪ್ರಾಹ ಮಾ ಕರ್ಣಃ ಗೃಹ್ಣೀಥಾಃ ಪಾರ್ಥಿವೋತ್ತಮಂ |
ಅಬ್ರುವೀತ್ಪ್ರಹಸನ್ ಕರ್ಣ ಕುತ್ಸಯನ್ನಿವ ಪಾಂಡವಮ್ ॥55॥
ಕರ್ಣನು ಯುಧಿಷ್ಠಿರನನ್ನು ಅಪಹಾಸ್ಯ ಮಾಡುತ್ತ ನುಡಿದ. ಧರ್ಮಜನನ್ನು ಹಿಂಬಾಲಿಸಿ ಬಲಾತ್ಕಾರವಾಗಿ ಸೆರೆಹಿಡಿಯಲು ಬಯಸಿದಾಗ ತಾನು ಕುಂತಿಗೆ ಕೊಟ್ಟ ಮಾತನ್ನು ಕರ್ಣ ನೆನೆದ. ಮತ್ತು ಶಲ್ಯನೂ ಹೇಳಿದ, `ಸೆರೆ ಹಿಡಿಯಬೇಡ. ಸೆರೆಹಿಡಿದೊಡನೆ ಈತ

ನಿನ್ನನ್ನು ಕೊಂದು ಭಸ್ಮ ಮಾಡಬಲ್ಲ. ಹಾಗೆ ಮಾಡದಿರಲಿ' ಎಂದು.
ಕಥಂ ನಾಮ ಕುಲೇ ಜಾತಃ ಕ್ಷತ್ರಧರ್ಮೇ ವ್ಯವಸ್ಥಿತಃ |
ಪ್ರಜಹ್ಯಾತ್ ಸಮರೇ ಶತ್ರೂನ್ ಪ್ರಾಣಾನ್ ರಕ್ಷನ್ ಮಹಾಹವೇ ॥56॥
ಕ್ಷತ್ರಿಯ ಕುಲದಲ್ಲಿ ಹುಟ್ಟಿ ಕ್ಷತ್ರಿಯ ಧರ್ಮದಲ್ಲಿರುವ ನೀನು ಮಹಾಯುದ್ಧದಲ್ಲಿ ಪ್ರಾಣರಕ್ಷಣೆಗಾಗಿ ಶತ್ರುಗಳನ್ನು ಹೇಗೆ ಬಿಟ್ಟುಬಿಡುವೆ?
ನ ಭವಾನ್ ಕ್ಷತ್ರಧರ್ಮೇಷು ಕುಶಲೋಽಸೀತಿ ಮೇ ಮತಿಃ |
ಬ್ರಾಹ್ಮೇ ಬಲೇ ಭವಾನ್ ಯುಕ್ತಃ ಸ್ವಾಧ್ಯಾಯೇ ಯಜ್ಞಕರ್ಮಣಿ ॥57॥
ಮಾ ಸ್ಮ ಯುಧ್ಯಸ್ವ ಕೌಂತೇಯ ಮಾ ಚ ವೀರಾನ್ ಸಮಾಸದಃ |
ಮಾ ಚೈನಾನಪ್ರಿಯಂ ಬ್ರೂಹಿ ಮಾ ಚ ವ್ರಜ ಮಹಾರಣಮ್ ॥58॥
ನೀನು ಕ್ಷಾತ್ರಬಲದಿಂದ ಕ್ಷತ್ರಧರ್ಮದ ಅನುಷ್ಠಾನದಲ್ಲಿ ಸಮರ್ಥನಲ್ಲ ಎಂದು ನನಗೆ ತಿಳಿಯಿತು. ಬ್ರಾಹ್ಮಬಲಕ್ಕಾಗಿ ವೇದಾಧ್ಯಯನ ಯಜ್ಞಕರ್ಮಗಳನ್ನು ನಡೆಸುವ ಬ್ರಾಹ್ಮಣಧರ್ಮಕ್ಕೇ ನೀನು ಯೋಗ್ಯ. ಯುಧಿಷ್ಠಿರ! ನೀನು ಯುದ್ಧ ಮಾಡಬೇಡ. ವೀರರೊಂದಿಗೆ ಸೆಣೆಸಬೇಡ. ನನ್ನಂಥ ವೀರರಿಗೆ ಅಪ್ರಿಯವಾಗಿ ನುಡಿಯಲೂ ಬೇಡ. ಮಹಾರಣರಂಗಕ್ಕೆ ಹೋಗಲೇಬೇಡ.
ಇಲ್ಲಿ ಪುನಃ ಪ್ರಶ್ನೆಗಳು ಬರುತ್ತವೆ– `ಸ್ವಲ್ಪ ಹಿಂದೆ ಈ ಕರ್ಣನೇ
ಯುಧಿಷ್ಠಿರನ ಬಾಣಗಳಿಂದ ಮೂರ್ಛಿತನಾಗಿ ಬಿದ್ದಿದ್ದ. ಬಲವಾಗಿ ಪೆಟ್ಟು ತಿಂದ ಅನುಭವಿರುವವನು ಅಷ್ಟು ಕುತ್ಸಿತವಾಗಿ ಮಾತನಾಡಲು ಶಕ್ಯವೆ? ಅದರಲ್ಲಿಯೂ ಕರ್ಣನು ಹಾಗೆ ಮಾತನಾಡುವನೆ? ಅದರಿಂದ ಈ ಪ್ರಕರಣ `ಪ್ರಕ್ಷಿಪ್ತ' ಈ ಪ್ರಶ್ನೆಗೆ ಸಮಾಧಾನ ಮ.ಭಾ.ತಾ.ನಿರ್ಣಯ (27.35)ದಲ್ಲಿ ಸೂಚಿತವಾಗಿದೆ. ವಾದಿರಾಜರು ಅದನ್ನು ಸ್ಪಷ್ಟಪಡಿಸಿದ್ದಾರೆ– `ಕರ್ಣನು ಈ ಕಟುನುಡಿಗಳನ್ನು ಹತ್ತಿರದಲ್ಲಿಯೇ ಹೋರಾಡುತ್ತಿದ್ದ ಭೀಮ ದುರ್ಯೋಧನರು ಕೇಳಲಿ ಎಂದೇ ಗಟ್ಟಿಯಾಗಿ ಹೇಳಿದ್ದ. ಆಗ, ತಕ್ಕಡಿಯಲ್ಲಿ ಒಂದು ಪಾರ್ಶ್ವ ಮೇಲೆ ಹೋದರೆ ಇನ್ನೊಂದು ಕೆಳಗೆ ಬರಲೇಬೇಕು. ದುರ್ಯೋಧನನಿಗೆ ಪ್ರಾಣಸಂಕಟ ಮಾಡುತ್ತೇನೆ. ಆಗ ಕರ್ಣ ತಾನಾಗಿಯೇ ಧರ್ಮರಾಜನನ್ನು ಹೆಚ್ಚು ಪೀಡಿಸದೆ ಬಿಟ್ಟುಬಿಡುತ್ತಾನೆ' ಎನ್ನುವ ಅಭಿಪ್ರಾಯದಿಂದ ದುರ್ಯೋಧನನಿಗೆ ಪ್ರಾಣಸಂಕಟ ಉಂಟು ಮಾಡಿದ ಭೀಮ'ಎಂದು. ಇದರಿಂದ ಕರ್ಣ ಯುಧಿಷ್ಠಿರನನ್ನು ಅನ್ಯಾಯವಾಗಿ ಪೀಡಿಸುವುದು, ಹೆಗಲಿಗೆ ಕೈಹಾಕಿ, ಕಟುನುಡಿಗಳಾಡಿ ಅಪಮಾನಿಸುವುದೆಲ್ಲವೂ ದುರ್ಯೋಧನನನ್ನು ಮೆಚ್ಚಿಸುವುದಕ್ಕಾಗಿ. ಅದಕ್ಕಾಗಿ ಅವನಿಗೆ ಕೇಳಿಸುವಂತೆ ಗಟ್ಟಿಯಾಗಿ ನುಡಿದ. ಕರ್ಣ ಸ್ವತಃ ಇಂಥ ನೀಚಕಾರ್ಯಕ್ಕೆ ಇಳಿಯಲಾರ. ಆದರೆ ದುರ್ಯೋಧನನಿ ಗಾಗಿ ಎಂಥ ನೀಚಕಾರ್ಯಕ್ಕೂ ಸಿದ್ಧನಿರುತ್ತಾನೆ. ದ್ಯೂತ ಸಭೆಯಲ್ಲಿ ದ್ರೌಪದಿಯ ಮಾನಕಳೆಯಲು ತಾನು ಕೌರವರಿಗೆ ಪ್ರೋತ್ಸಾಹ ಕೊಟ್ಟು, ಕೊಟ್ಟಿದ್ದಕ್ಕೆ ಪಶ್ಚಾತ್ತಾಪ ಪಡುತ್ತಿದ್ದೇನೆ ಎಂದು ಮುಂದೆ ಶ್ರೀಕೃಷ್ಣನ ಬಳಿ ತಾನೇ ಹೇಳಿಕೊಂಡಿದ್ದಾನೆ.
ಇಲ್ಲಿ ಇನ್ನೊಂದು ಪ್ರಶ್ನೆ ಕರ್ಣನು ಯುಧಿಷ್ಠಿರನನ್ನು ಹಿಂಬಾಲಿಸಿ ಕೈಯಿಂದ ಹೆಗಲು ಮುಟ್ಟಿ ಅಪಹಾಸ್ಯ ಮಾಡುತ್ತಾನೆ. (ಶ್ಲೋ.54) ಆದರೆ ನಡೆದು ಹೋಗುತ್ತಿರುವ ಯುಧಿಷ್ಠಿರನನ್ನು ಕರ್ಣನು ರಥದ ಮೇಲೆ ಹಿಂಬಾಲಿಸಿ ಹೋಗಿ ಮುಟ್ಟಲು ಹೇಗೆ ಸಾಧ್ಯ? ಎಂದು. ಈ ಪ್ರಶ್ನೆಗೆ ಅವಕಾಶವೇ ಇಲ್ಲ. ಕರ್ಣ ರಥದಿಂದ ಇಳಿದು ಯುಧಿಷ್ಠಿರನನ್ನು ಮುಟ್ಟುತ್ತಿದ್ದಾನೆ. ಇದು ಅವನನ್ನು ಜೀವಂತ ಸೆರೆ ಹಿಡಿದು ತನ್ನ ರಥದಲ್ಲಿರಿಸಿಕೊಂಡು ಹೋಗುವುದಕ್ಕಾಗಿ ಹೊರತು ಅಪಹಾಸ್ಯ ಮಾಡುವುದಕ್ಕಾಗಿ ಅಲ್ಲ. ಅಪಹಾಸ್ಯದ ಉದ್ದೇಶವೇ ಇರುತ್ತಿದ್ದರೆ ರಥದಲ್ಲಿದ್ದೇ ಅಪಹಾಸ್ಯ ಮಾಡಬಹುದಿತ್ತು. ಸೆರೆಹಿಡಿಯಲು ಹೆಗಲ ಮೇಲೆ ಕೈಇಟ್ಟಾಗ ಶಲ್ಯ ಎಚ್ಚರಿಸುತ್ತಾನೆ: `ಯುಧಿಷ್ಠಿರನಲ್ಲಿ ಬ್ರಾಹ್ಮಬಲವಿದೆ. ಅವನು ನಿನ್ನನ್ನು ಸುಟ್ಟುಬೂದಿ ಮಾಡುತ್ತಾನೆ' ಎಂದು.
ಯದ್ಯಪಿ ಕರ್ಣನಿಗೆ ಜೀವದ ಹಂಗು ಇಲ್ಲ. ಸಾಯಲು ಸಿದ್ಧನಾಗಿಯೇ ಬಂದಿದ್ದ. ಇದು ಉದ್ಯೋಗಪರ್ವದಲ್ಲಿ ಕೃಷ್ಣನ ಮುಂದೆ ಕರ್ಣ ಹೇಳುವ ಮಾತುಗಳಲ್ಲಿಯೇ ಸ್ಪಷ್ಟವಿದೆ. `ರಣಯಜ್ಞದಲ್ಲಿ ಪಶುವಾಗಿ ಸತ್ತು ಸ್ವರ್ಗ ಸೇರುತ್ತೇನೆ' ಎಂದೇ ಕರ್ಣ ಆಗ ಹೇಳಿದ್ದ. ಆದರೆ ರಣಯಜ್ಞದಲ್ಲಿ ಶಸ್ತ್ರದಿಂದ ಸತ್ತರೇ ಸ್ವರ್ಗ ಲಭ್ಯ. ಯುಧಿಷ್ಠಿರನ ಬ್ರಾಹ್ಮಬಲದಿಂದ ಸುಟ್ಟುಹೋದರೆ ಸ್ವರ್ಗ ಸಿಗಲಾರದು. ಅದರಿಂದ ಯುಧಿಷ್ಠಿರನನ್ನು ಸೆರೆಹಿಡಿಯುವ ಯತ್ನವನ್ನು ಕೈಬಿಟ್ಟು ಅಪಹಾಸ್ಯ ಮಾಡುವುದಕ್ಕೆ ತೊಡಗುತ್ತಾನೆ.
ಸೆರೆಹಿಡಿಯುವುದೇ ದುರ್ಯೋಧನನಿಗೆ ಇಷ್ಟವಾಗಿತ್ತು. ಸೆರೆಹಿಡಿದು ಇನ್ನೊಮ್ಮೆ ಜೂಜಿನಲ್ಲಿ ಸೋಲಿಸಿ ಕಾಡಿಗೆ ಅಟ್ಟುವ ಸಂಕಲ್ಪ ಅವನದಾಗಿತ್ತು. ಕರ್ಣ ಯುಧಿಷ್ಠಿರನನ್ನು ಸೆರೆಹಿಡಿಯದೇ ಸುಮ್ಮನೆ ಬಿಡುವುದನ್ನು ದುರ್ಯೋಧನ ಸರ್ವಥಾ ಒಪ್ಪಲಾರ. ಕೋಪಿಸಿಕೊಳ್ಳುತ್ತಾನೆ. ಅದಕ್ಕೆ ಅವನನ್ನು ಸಮಾಧಾನ ಪಡಿಸಲು ಅಪಹಾಸ್ಯ ಮಾಡುತ್ತಾನೆ.
ಮಹಾತ್ಮರಿಗೆ ಅಪಹಾಸ್ಯ ಮರಣಕ್ಕಿಂತ ಹೆಚ್ಚು. ಅದರಿಂದ ಯುಧಿಷ್ಠಿರ ಕರ್ಣನನ್ನು ಆಗಲೇ ದೃಷ್ಟಿಯಿಂದ ಸುಟ್ಟುಬಿಡಬಹುದಿತ್ತು. ಅಥವಾ ಕ್ಷತ್ರಿಯ ರಾಜನಾಗಿದ್ದರಿಂದ ತನ್ನ ಕಡೆಯವರಿಂದ ಆಗಲೆ ಕೊಲ್ಲಿಸಬಹುದಿತ್ತು. ಭೀಮ ತಾನೆ ಅದಕ್ಕೆ ಸಿದ್ಧನಿದ್ದ. ಆದರೂ ಅರ್ಜುನ ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದರಿಂದ ಅದಕ್ಕಾಗಿ ಯುಧಿಷ್ಠಿರ ರಣರಂಗದಿಂದ ಹೊರಗೆ ಹೊರಟ.
ಆಗ ಇದು ಯುದ್ಧವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸುವ ಅಭಿಪ್ರಾಯ ವೆಂದು ಬಗೆದು ಪಾಂಡವಸೈನ್ಯ ಯುಧಿಷ್ಠಿರನನ್ನು ಹಿಂಬಾಲಿಸಿತು. `ಇದು ಪಲಾಯನ' ಎಂದು ದುರ್ಯೋಧನನಿಗೆ ಸಂತೋಷವಾಗಲಿ ಎನ್ನುವ ಉದ್ದೇಶ ದಿಂದ ಕರ್ಣ ಬೆನ್ನಟ್ಟುತ್ತಿದ್ದಾನೆ. ಆಗ ಯುಧಿಷ್ಠಿರ ಬೇಗನೆ ಶ್ರುತಕೀರ್ತಿಯೆಂಬ ದ್ರೌಪದೀಪುತ್ರನ ರಥವೇರಿ ಹಿಂತಿರುಗಿ ಕರ್ಣನನ್ನು, ಅವನ ಸೈನ್ಯವನ್ನು ದಿಟ್ಟಿಸಿ ನೋಡುತ್ತಾನೆ.
ಯತ್ರ ಯತ್ರ ಸ ಧರ್ಮಾತ್ಮಾ ದೃಷ್ಟ್ವಾ ದೃಷ್ಟಿಂ ವ್ಯಸರ್ಜಯತ್
ತತ್ರ ತತ್ರ ವ್ಯಶೀರ್ಯಂತ ತಾವಕಾ ಭರತರ್ಷಭ ॥ (59.27)
ದೃಷ್ಟಿಯಿಂದ ಸುಡಬಹುದಿತ್ತು. ಆದರೆ ಸುಡುವ ಅಭಿಪ್ರಾಯವಿರಲಿಲ್ಲ. ಸುಟ್ಟರೆ ಅವರಿಗೆ ಸ್ವರ್ಗ ಸಿಗದಂತಾಗುತ್ತಿತ್ತು ಎಂದು ಯುಧಿಷ್ಠಿರನಿಗೇ ಆತಂಕ ವಿದೆ. ಆದರೂ ದೃಷ್ಟಿಯ ಪ್ರಭಾವದಿಂದ ಸೈನ್ಯದ ಅದಮ್ಯಶಕ್ತಿ ಬಹುತೇಕ ಉಡುಗಿತಷ್ಟೆ.
ಮುಂದೆ ಭೀಮ ನಕುಲ ಸಹದೇವರು ಕೌರವಸೈನ್ಯವನ್ನು ನಾಶ ಮಾಡಲು ತೊಡಗುತ್ತಾರೆ. ಆಗಲೂ ಕರ್ಣ ಯುಧಿಷ್ಠಿರನನ್ನು ವಿರಥನನ್ನಾಗಿ ಮಾಡಿದಾಗ ಯುಧಿಷ್ಠಿರ ಸಹದೇವನ ರಥವೇರಿ ಶಿಬಿರಕ್ಕೆ ಹೋಗುತ್ತಾನೆ.
ಸ್ವಗೃಹಂ ಗಚ್ಛ ಕೌಂತೇಯ ಯತ್ರ ತೌ ಕೇಶವಾರ್ಜುನೌ |

ನಹಿ ತ್ವಾಂ ಸಮರೇ ರಾಜನ್ ಹನ್ಯಾತ್ ಕರ್ಣಃ ಕಥಂಚನ ॥59॥
ನೀನು ನಿನ್ನ ಮನೆಗೇ ಹೋಗು, ಕೃಷ್ಣಾರ್ಜುನರ ಬಳಿಗಾದರೂ ಹೋಗು. ನಿನ್ನನ್ನು ಕರ್ಣ ರಣದಲ್ಲಿ ಸರ್ವಥಾ ಕೊಲ್ಲುವುದಿಲ್ಲ.
ಏವಮುಕತ್ವ ತತಃ ಪಾರ್ಥಂ ವಿಸೃಜ್ಯ ಚ ಮಹಾಬಲಃ |
ನ್ಯಹನತ್ ಪಾಂಡವೀಂ ಸೇನಾಂ ವಜ್ರಹಸ್ತ ಇವಾಸುರೀಮ್ ॥60॥
ಹೀಗೆ ಹೇಳಿ ಮಹಾಬಲಿ ಕರ್ಣನು ಯುಧಿಷ್ಠಿರನನ್ನು ಸೆರೆಹಿಡಿಯದೆ ಹಾಗೇ ಬಿಟ್ಟು, ಇಂದ್ರನು ಅಸುರಸೇನೆಯನ್ನು ಹೊಡೆಯುವಂತೆ, ಪಾಂಡವ ಸೇನೆಯನ್ನು ಹೊಡೆಯಲು ತೊಡಗಿದ.
ಮುಂದೆ 67ನೇ ಶ್ಲೋಕದಲ್ಲಿ `ಭೀಮಸೇನ ಮುಂತಾದವರು ದುರ್ಯೋಧನಾದಿ ಗಳನ್ನು ಆಕ್ರಮಿಸಿದರು' ಎಂದಿರುವುದರಿಂದ, `ದುರ್ಯೋಧನನನ್ನು ಭೀಮ ಪೀಡಿಸಿದ. ಅದನ್ನು ತೋರಿಸಿ ಶಲ್ಯ ಕರ್ಣನನ್ನು ಅತ್ತ ಒಯ್ದನೆಂ'ದಿಟ್ಟು ಕೊಳ್ಳಬೇಕು.
ತತಃ ಪ್ರಾಯಾದ್ ದ್ರುತಂ ರಾಜನ್ ವ್ರೀಡನ್ನಿವ ಜನೇಶ್ವರಃ |
ಅಥ ಪ್ರಯಾಂತಂ ರಾಜಾನಮನ್ವಯುಸ್ತೇ ತದಾಚ್ಯುತಮ್ ॥61|
ಚೇದಿಪಾಂಡವಪಾಂಚಾಲಾಃ ಸಾತ್ಯಕಿಶ್ಚ ಮಹಾರಥಃ |
ದ್ರೌಪದೇಯಾಸ್ತಥಾ ಶೂರಾ ಮಾದ್ರೀಪುತ್ರೌ ಚ ಪಾಂಡವೌ ॥62॥
ರಾಜನೆ, ಆಗ ಯುಧಿಷ್ಠಿರ ನಾಚಿದವನಂತೆ ಮುಂದೆ ನಡೆದ. `ಅಚ್ಯುತ'ನಾದ ಯುಧಿಷ್ಠಿರ ರಣಾಂಗಣವನ್ನು ಬಿಟ್ಟುಹೋಗುವುದನ್ನು ಕಂಡು ಚೇದಿಪಾಂಡವ ಪಾಂಚಾಲರೂ ಮಹಾರಥನಾದ ಸಾತ್ಯಕಿ, ಶೂರರಾದ ದ್ರೌಪದೀಪುತ್ರರು, ನಕುಲ ಸಹದೇವರು ಹಿಂಬಾಲಿಸಿದರು.
`ಅಚ್ಯುತ' ಎಂದರೆ ಚ್ಯುತಿ ಇಲ್ಲದವನು ಯುಧಿಷ್ಠಿರ. ಕರ್ಣನು ಮಾಡಿದ ಅಪಹಾಸ ಅಪಹಾಸವಾಗಿರಲಿಲ್ಲ. ಅಪಹಾಸದ ಪ್ರದರ್ಶನ, ಕೇವಲ ದುರ್ಯೋಧನನನ್ನು ಮೆಚ್ಚಿಸುವುದಕ್ಕಾಗಿ ಎಂದು ಯುಧಿಷ್ಠಿರ ತಿಳಿದುದರಿಂದ ಅವನಿಗೆ ಅದರಿಂದೇನೂ ಚ್ಯುತಿ ಇರಲಿಲ್ಲ. `ವ್ರೀಡನ್ನಿವ' ನಾಚಿದವನಂತೆ ಹೊರತು ನಾಚುವ ಪ್ರಸಂಗವೂ ಇದಾಗಿರಲಿಲ್ಲ. ಕ್ಷಾತ್ರ ಧರ್ಮಕ್ಕೆ ಚ್ಯುತಿಯನ್ನೂ ತಂದುಕೊಳ್ಳಲಿಲ್ಲ.
ತತೋ ಯುಧಿಷ್ಠಿರಾನೀಕಂ ದೃಷ್ಟ್ವಾ ಕರ್ಣಃ ಪರಾಙ್ಮುಖಮ್ |
ಕುರುಭಿಃ ಸಹಿತೋ ವೀರೈಃ ಪ್ರಹೃಷ್ಟಃ ಪೃಷ್ಠತೋಽನ್ವಗಾತ್ ॥63॥
ಯುಧಿಷ್ಠಿರನ ಸೈನ್ಯವು ಸಮರಕ್ಕೆ ವಿಮುಖವಾಗಿ ಹೋಗುತ್ತಿದ್ದುದನ್ನು ಕಂಡು ಕರ್ಣನು ಪ್ರಹೃಷ್ಟನಾಗಿ ಕುರುಗಳೊಂದಿಗೆ ಪಾಂಡವರನ್ನು ಹಿಂಬಾಲಿಸಿ ನಡೆದ.
ಶಂಖಭೇರೀನಿನಾದೈಶ್ಚ ಕಾರ್ಮುಕಾಣಾಂ ಚ ನಿಸ್ವನೈಃ |
ಬಭೂವ ಧಾರ್ತರಾಷ್ಟ್ರಾಣಾಂ ಸಿಂಹನಾದರವಸ್ತದಾ ॥64॥
ಕೌರವಸೈನ್ಯದಲ್ಲಿ ಭೇರೀ ಶಂಖ ಮೃದಂಗ ಧನುಸ್ಸುಗಳ ಮಹಾಧ್ವನಿಯು ಉಂಟಾಯಿತು. ಅದರೊಂದಿಗೆ ಸಿಂಹನಾದವೂ ಉಂಟಾಯಿತು.
ಯುಧಿಷ್ಠಿರಸ್ತು ಕೌರವ್ಯ ರಥಮಾರುಹ್ಯ ಸತ್ವರಃ |
ಶ್ರುತಕೀರ್ತೇರ್ಮಹಾರಾಜ ದೃಷ್ಟವಾನ್ ಕರ್ಣವಿಕ್ರಮಮ್ ॥65॥
ರಾಜನೆ, ಯುಧಿಷ್ಠಿರನು ಬೇಗನೆ ಶ್ರುತಕೀರ್ತಿಯ ರಥವನ್ನೇ ಏರಿ ಕರ್ಣನ ಪರಾಕ್ರಮವನ್ನು ದಿಟ್ಟಿಸಿ ನೋಡಿದ.
ಕಾಲ್ಯಮಾನಂ ಬಲಂ ದೃಷ್ಟ್ವಾ ಧರ್ಮರಾಜೋ ಯುಧಿಷ್ಠಿರಃ |
ತಾನ್ಯೋಧಾನಬ್ರವೀತ್ ಕ್ರುದ್ಧೋ ನಿಘ್ನತೈತಾನ್ ಕಿಯಾನಸೌ ॥66॥
ಯುಧಿಷ್ಠಿರನು ತನ್ನ ಸೈನ್ಯವನ್ನು ಕರ್ಣನು ಇನ್ನೂ ಪೀಡಿಸುವುದನ್ನು ಕಂಡು ಕ್ರುದ್ಧನಾಗಿ `ಈ ಸೈನಿಕರನ್ನು ಹೊಡೆಯಿರಿ. ಈ ಕರ್ಣನು ಎಷ್ಟರವನು?' ಎಂದು ತನ್ನ ಯೋಧರಿಗೆ ಆಜ್ಞೆ ಮಾಡಿದ.
ತತೋ ರಾಜ್ಞಾಭ್ಯನುಜ್ಞಾತಾಃ ಪಾಂಡವಾನಾಂ ಮಹಾರಥಾಃ |
ಭೀಮಸೇನಮುಖಾಃ ಸರ್ವೇ ಪುತ್ರಾಂಸ್ತೇ ಪ್ರತ್ಯುಪಾದ್ರವನ್ ॥67॥
ರಾಜಾಜ್ಞೆ ಪಡೆದ ಪಾಂಡವಮಹಾರಥರು ಭೀಮಸೇನ ಮುಂತಾದವರು ಎಲ್ಲರೂ ನಿನ್ನ ಮಕ್ಕಳನ್ನು ಆಕ್ರಮಿಸಿದರು.
ಅಭವತ್ತುಮುಲಃ ಶಬ್ದೋ ಯೋಧಾನಾಂ ತತ್ರ ಭಾರತ |
ಹಸ್ತ್ಯಶ್ವರಥಪತ್ತೀನಾಂ ಶಸ್ತ್ರಾಣಾಂ ಚ ತತಸ್ತತಃ ॥68॥
ಆಗ, ರಾಜನೆ, ಗಜ ಅಶ್ವ ರಥ ಪದಾತಿ ಯೋಧರ ಮತ್ತು ಆಯುಧಗಳ ದೊಡ್ಡ ಶಬ್ದ ಅಲ್ಲಲ್ಲಿ ಕೇಳಿಬಂದಿತು.
ಉತ್ತಿಷ್ಠತ ಪ್ರಹರತ ಪ್ರೈತಾಭಿಪತತೇತಿ ಚ |
ಇತಿ ಬ್ರುವಾಣಾ ಅನ್ಯೋನ್ಯಂ ಜಘ್ನುರ್ಯೋಧಾ ರಣಾಜಿರೇ ॥69॥
`ಎದ್ದೇಳಿ, ಹೊಡೆಯಿರಿ, ಚೆನ್ನಾಗಿ ದಾಳಿ ಮಾಡಿರಿ, ಶತ್ರುಗಳ ಮೇಲೆ ಎರಗಿರಿ' ಹೀಗೆ ಪರಸ್ಪರ ಹೇಳುತ್ತ ರಣಾಂಗಣದಲ್ಲಿ ಪ್ರಹರಿಸಿದರು.
ಅಭ್ರಚ್ಛಾಯೇವ ತತ್ರಾಸೀಚ್ಛರವೃಷ್ಟಿಭಿರಂಬರೇ |
ಸಮಾವೃತ್ತೈರ್ನರವರೈರ್ನಿಘ್ನದ್ಭಿರಿತರೇತರಮ್ ॥70॥
ಯೋಧಶ್ರೇಷ್ಠರು ಪರಸ್ಪರ ಇದಿರಿಸಿ ಪ್ರಹರಿಸುವಾಗ ಬಾಣಗಳ ಮಳೆಗಳಿಂದ ಆಗಸದಲ್ಲಿ ಮೋಡ ಕವಿದಂತಾಯಿತು.
ವಿಪತಾಕಾಧ್ವಜಚ್ಛತ್ರಾ ವ್ಯಶ್ವಸೂತಾಯುಧಾ ರಣೇ |
ವಿಶೀರ್ಣಾವಯವಾಃ ಪೇತುಃ ಕ್ಷಿತೌ ಕ್ಷೀಣಾ ಹತೇಶ್ವರಾಃ ॥71॥
ಹತರಾದ ರಾಜರು ಪತಾಕೆ ಧ್ವಜ ಛತ್ರರಹಿತರಾಗಿ ಕುದುರೆ ಸಾರಥಿ ಆಯುಧ ಗಳಿಲ್ಲದವರಾಗಿ ಮೈಯೆಲ್ಲ ಗಾಯಗೊಂಡು ಬಲಗುಂದಿ ನೆಲದಲ್ಲಿ ಬಿದ್ದರು.
ಪ್ರವಣಾದಿವ ಶೈಲಾನಾಂ ಶಿಖರಾಣಿ ದ್ವಿಪೋತ್ತಮಾಃ |

ಸಾರೋಹಾ ನಿಹತಾಃ ಪೇತುರ್ವಜ್ರಭಿನ್ನಾ ಇವಾದ್ರಯಃ ॥72॥
ಪರ್ವತಶಿಖರಗಳು ಇಳಿಜಾರಾದ ಸ್ಥಳದಿಂದ ಜಾರಿ ಕೆಳಗೆ ಬಂದು ಬೀಳುವಂತೆ ದೊಡ್ಡ ಆನೆಗಳು ಗಜಾರೋಹಿಗಳೊಂದಿಗೇ ವಜ್ರದಿಂದ ಸೀಳಿಹೋದ ಬೆಟ್ಟದಂತೆ ಹತವಾಗಿ ಬಿದ್ದುವು.
ಛಿನ್ನಭಿನ್ನವಿಪರ್ಯಸ್ತೈರ್ವರ್ಮಾಲಂಕಾರವಿಗ್ರಹೈಃ |
ಸಾರೋಹಾಸ್ತುರಗಾಃ ಪೇತುರ್ಹತವೀರಾಃ ಸಹಸ್ರಶಃ ॥73॥
ಛಿನ್ನಭಿನ್ನವಾಗಿ ಅಸ್ತವ್ಯಸ್ತಗೊಂಡ ಕವಚ ಆಭರಣಯುಕ್ತವಾದ ಶರೀರ ಉಳ್ಳವರಾಗಿ ಹತರಾದ ವೀರರ ಅಶ್ವಗಳು ಅಶ್ವಾರೋಹಿಗಳೊಂದಿಗೇ ಸಾವಿರಾರು ಸಂಖ್ಯೆಯಲ್ಲಿ ಬಿದ್ದುವು.
ವಿಪ್ರವಿದ್ಧಾಯುಧಾಂಗಾಶ್ಚ ದ್ವಿರದಾಶ್ವರಥೈರ್ಹತಾಃ |
ಪ್ರತಿವೀರೈಶ್ಚ ಸಮ್ಮರ್ದೇ ಪತ್ತಿಸಂಘಾಃ ಸಹಸ್ರಶಃ ॥74॥
ಪದಾತಿಸಮೂಹಗಳು ಗಜ ಅಶ್ವ ರಥಗಳಿಂದಲೂ ಪ್ರತಿವೀರರಿಂದಲೂ ಆಯುಧ, ಶರೀರಗಳನ್ನು ನಾಶಪಡಿಸಿಕೊಂಡು ಸಾವಿರಾರು ಸಂಖ್ಯೆಯಲ್ಲಿ ಹತರಾಗಿ ಬಿದ್ದವು.
ವಿಶಾಲಾಯತತಾಮ್ರಾಕ್ಷೈಃ ಪದ್ಮೇಂದುಸದೃಶಾನನೈಃ |
ಶಿರೋಭಿರ್ಯುದ್ಧಶೌಂಡಾನಾಂ ಸರ್ವತಃ ಸಂವೃತಾ ಮಹೀ ॥75॥
ವಿಶಾಲವಾದ ಉದ್ದವಾದ ಕೆಂಪುಕಣ್ಣುಗಳಿಂದಲೂ ಕಮಲದಂಥ ಚಂದ್ರನಂಥ ಮುಖಗಳಿಂದಲೂ ಕೂಡಿದ ಯುದ್ಧಕುಶಲರಾದ ಯೋಧರ ಶಿರಸ್ಸುಗಳಿಂದ ಯುದ್ಧಭೂಮಿ ಎಲ್ಲೆಡೆ ತುಂಬಿಹೋಯಿತು.
ಯಥಾ ಭುವಿ ತಥಾ ವ್ಯೋಮ್ನಿ ನಿಸ್ವನಂ ಶುಶ್ರುವುರ್ಜನಾಃ |
ವಿಮಾನೈರಪ್ಸರಃಸ್ಸಂಗೀತವಾದಿತ್ರನಿಸ್ವನೈಃ ॥76॥
ಭೂಮಿಯಲ್ಲಿ ಹೇಗೋ ಹಾಗೇ ಅಂತರಿಕ್ಷದಲ್ಲಿಯೂ ವಿಮಾನಗಳಿಂದ, ಅಪ್ಸರೆಯರ ಸಮೂಹಗಳಿಂದ, ಅವರ ಗೀತವಾದ್ಯಧ್ವನಿಗಳಿಂದ ಉಂಟಾದ ಪ್ರತಿಧ್ವನಿಯನ್ನು ಜನರು ಕೇಳಿದರು.
ಹತಾನ್ ಅಭಿಮುಖಾನ್ ವೀರಾನ್ ವೀರೈಃ ಶತಸಹಸ್ರಶಃ |
ಆರೋಪ್ಯಾರೋಪ್ಯ ಗಚ್ಛಂತಿ ವಿಮಾನೇಷ್ವಪ್ಸರೋಗಣಾಃ ॥77॥
ಅಪ್ಸರೆಯರ ಸಮೂಹಗಳು, ರಣದಲ್ಲಿ ಇದಿರಿಸಿ ಹೋರಾಡುತ್ತ ವೀರರಿಂದ ಹತರಾದ ವೀರರನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ವಿಮಾನಗಳಲ್ಲಿ ಮತ್ತೆಮತ್ತೆ ಏರಿಸಿಕೊಂಡು ಮೇಲೆ ಹೋದರು.
ತದ್ ದೃಷ್ಟ್ವಾ ಮಹದಾಶ್ಚರ್ಯಂ ಪ್ರತ್ಯಕ್ಷಂ ಸ್ವರ್ಗಲಿಪ್ಸಯಾ |
ಪ್ರಹೃಷ್ಟಮನಸಃ ಶೂರಾಃ ಕ್ಷಿಪ್ರಂ ಜಗ್ಮುಃ ಪರಸ್ಪರಮ್ ॥78॥
ಆ ಮಹಾ ಆಶ್ಚರ್ಯವನ್ನು ಪ್ರತ್ಯಕ್ಷ ಕಂಡು ಸ್ವರ್ಗಪಡೆಯುವ ಉತ್ಸುಕತೆಯಿಂದ ಶೂರರು ಪ್ರಹೃಷ್ಟಚಿತ್ತರಾಗಿ ಬೇಗನೆ ಪರಸ್ಪರ ಕಾದಿದರು.
ರಥಿನೋ ರಥಿಭಿಃ ಸಾರ್ಧಂ ಚಿತ್ರಂ ಯುಯುಧುರಾಹವೇ |
ಪತ್ತಯಃ ಪತ್ತಿಭಿರ್ನಾಗಾ ನಾಗೈಃ ಸಹ ಹಯೈರ್ಹಯಾಃ ॥79॥
ರಥಿಕರು ರಥಿಗಳೊಂದಿಗೆ ಪದಾತಿಗಳು ಪದಾತಿಗಳೊಂದಿಗೆ ಗಜಗಳು ಗಜಗಳೊಂದಿಗೆ ಅಶ್ವಗಳು ಅಶ್ವಗಳೊಂದಿಗೆ ರಣರಂಗದಲ್ಲಿ ಆಶ್ಚರ್ಯಕರವಾಗಿ ಹೋರಾಡಿದರು.
ಏವಂ ಪ್ರವೃತ್ತೇ ಸಂಗ್ರಾಮೇ ಗಜವಾಜಿಜನಕ್ಷಯೇ |
ಸೈನ್ಯೇ ಚ ರಜಸಾ ವ್ಯಾಪ್ತೇ ಸ್ವೇ ಸ್ವಾನ್ ಜಘ್ನುಃ ಪರೇ ಪರಾನ್ ॥80॥
ಗಜ ಅಶ್ವ ಜನನಾಶಕವಾದ ಸಂಗ್ರಾಮ ಹೀಗೆ ನಡೆದಾಗ ಎದ್ದ ಧೂಳಿನಿಂದ ಸೈನ್ಯವು ವ್ಯಾಪ್ತವಾದ್ದರಿಂದ ತಮ್ಮನ್ನು ತಾವೇ, ಶತ್ರುಗಳನ್ನು ಶತ್ರುಗಳೇ ಹೊಡೆದು ಕೊಂದರು.
ಕಚಾಕಚಿ ಬಭೌ ಯುದ್ಧಂ ದಂತಾದಂತಿ ನಖಾನಖಿ |
ಮುಷ್ಟಿಯುದ್ಧಂ ನಿಯುದ್ಧಂ ಚ ದೇಹಪಾಪ್ಮವಿನಾಶನಮ್ ॥81॥
ಕೂದಲುಕೂದಲುಗಳ, ದಂತದಂತಗಳ, ನಖನಖಗಳ ಯುದ್ಧಗಳೂ, ಮುಷ್ಟಿಯುದ್ಧಗಳೂ ಬಾಹುಯುದ್ಧಗಳೂ ದೇಹನಾಶಪಾಪನಾಶಪ್ರಾಣಗಳ ನಾಶಕವಾಗುವಂತೆ ನಡೆದುವು.
ತಥಾ ವರ್ತತಿ ಸಂಗ್ರಾಮೇ ಗಜವಾಜಿಜನಕ್ಷಯೇ |
ನರಾಶ್ವಗಜದೇಹೇಭ್ಯಃ ಪ್ರಸೃತಾ ಲೋಹಿತಾಪಗಾ ॥82॥
ಗಜಾಶ್ವನರದೇಹಾನ್ ಸಾ ವ್ಯುವಾಹ ಪತಿತಾನ್ ಬಹೂನ್ ॥83॥
ಗಜ ಅಶ್ವ ಜನ ಕ್ಷಯಕಾರಕವಾದ ಸಂಗ್ರಾಮ ಹಾಗೆ ನಡೆಯುವಾಗ ಜನರ ಅಶ್ವ ಗಜಗಳ ದೇಹಗಳಿಂದ ನೆತ್ತರಿನ ಹೊಳೆ ಹರಿದು, ಆಗಲೆ ಪತಿತರಾದ ಗಜ ಅಶ್ವ ನರರ ದೇಹಗಳನ್ನು ಪ್ರವಾಹದಲ್ಲಿ ತೇಲಿಸಿದುವು.
ನರಾಶ್ವಗಜಸಂಬಾಧೇ ನರಾಶ್ವಗಜಸಾದಿನಾಮ್ |
ಲೋಹಿತೋದಾ ಮಹಾಘೋರಾ ನದೀ ಲೋಹಿತಕರ್ದಮಾ ॥84॥
ನರಾಶ್ವಗಜದೇಹಾನ್ ಸಾ ವಹಂತೀ ಭೀರುಭೀಷಣೀ ॥85॥
ತಸ್ಯಾಃ ಪರಮಪಾರಂ ಚ ವ್ರಜಂತಿ ವಿಜಯೈಷಿಣಃ |
ಗಾಧೇನ ಚ ಪ್ಲವಂತಶ್ಚ ನಿಮಜ್ಯೋನ್ಮಜ್ಯ ಚಾಪರೇ ॥86॥
ಸ್ವರ್ಗವನ್ನು ಗೆದ್ದುಕೊಳ್ಳಲು ಬಯಸಿದ ಯೋಧರು ರಕ್ತದ ಪ್ರವಾಹದಲ್ಲಿ ಕೆಲವರು ಆಳವಿಲ್ಲದ ಕಡೆ ಈಜುತ್ತ, ಇನ್ನು ಕೆಲವರು

ಆಳವಿರುವ ಕಡೆ ಮುಳುಗೇಳುತ್ತ ಆಚೆದಡಕ್ಕೆ ಹೋಗುತ್ತಿದ್ದರು.
ತೇ ತು ಲೋಹಿತದಿಗ್ಧಾಂಗಾ ರಕ್ತವರ್ಮಾಯುಧಾಂಬರಾಃ |
ಸಸ್ನುಸ್ತಸ್ಯಾಂ ಪಪುಶ್ಚಾಸೃಜ್ ಮಮ್ಲುಶ್ಚ ಭರತರ್ಷಭ ॥87॥
ಆ ಯೋಧರು ಮೈಯೆಲ್ಲ ನೆತ್ತರಿನಿಂದ ತೋಯ್ದುಕೊಂಡು, ರಕ್ತಮಯವಾದ ಕವಚ ಆಯುಧ ವಸ್ತ್ರಧಾರಿಗಳಾಗಿ ಆ ರಕ್ತಪ್ರವಾಹದಲ್ಲಿ ಮಿಂದರು, ನೆತ್ತರನ್ನು ಪಾನ ಮಾಡಿದರು, ರಕ್ತಸೋರಿಕೆಯಿಂದ ತಮ್ಮನ್ನು ಒಣಗಿಸಿಕೊಂಡರು.
ರಥಾನಶ್ವಾನ್ನರಾನ್ನಾಗಾನಾಯುಧಾಭರಣಾನಿ ಚ |
ವಸನಾನ್ಯಥ ವರ್ಮಾಣಿ ವಧ್ಯಮಾನಾನ್ ಹತಾನಪಿ ॥88॥
ಭೂಮಿಂ ಖಂ ದ್ಯಾ ದಿಶಶ್ಚೈವ ಪ್ರಾಯಃ ಪಶ್ಯಾಮ ಲೋಹಿತಮ್ |89|
ರಥ ಅಶ್ವ ಪದಾತಿ ಗಜ ಆಯುಧ ಆಭರಣ ವಸ್ತ್ರಕವಚಗಳು, ಹತರಾಗುತ್ತಿದ್ದ ಯೋಧರು, ಹತರಾದ ಯೋಧರು, ಎಲ್ಲೆಡೆ ತುಂಬಿ ಭೂಮಿ ಅಂತರಿಕ್ಷ ದಿಕ್ಕುಗಳು ಎಲ್ಲವೂ ಪ್ರಾಯಃ ಕೆಂಪಾಗಿಯೇ ಕಂಡುಬಂದುವು.
ಲೋಹಿತಸ್ಯ ತು ಗಂಧೇನ ಸ್ಪರ್ಶೇನ ಚ ರಸೇನ ಚ |
ರೂಪೇಣ ಚಾತಿರಿಕ್ತೇನ ಶಬ್ದೇನ ಚ ವಿಸರ್ಪತಾ ॥90॥
ವಿಷಾದಃ ಸುಮಹಾನಾಸೀತ್ಪ್ರಾಯಃ ಸೈನ್ಯಸ್ಯ ಭಾರತ ॥91॥
ನೆತ್ತರಿನ ಗಂಧ ಸ್ಪರ್ಶ ರಸ ರೂಪ ಶಬ್ದಗಳೆಲ್ಲ ವಿಲಕ್ಷಣವೇ ಆಗಿದ್ದುವು. ಎಲ್ಲೆಡೆ ಅವು ಹರಡಿದ್ದರಿಂದ ಸೈನ್ಯಕ್ಕೆ ಬಲು ಮಹಾವಿಷಾದ ಉಂಟಾಯಿತು.
ತತ್ತು ವಿಪ್ರಹತಂ ಸೈನ್ಯಂ ಭೀಮಸೇನಮುಖಾಸ್ತವ |
ಭೂಯಃ ಸಮಾದ್ರವನ್ವೀರಾಃ ಸಾತ್ಯಕಿಪ್ರಮುಖಾ ರಥಾಃ ॥92॥
ಆಗಲೆ ಬಹಳ ನಾಶವಾಗಿದ್ದ ಕುರುಸೈನ್ಯವನ್ನು ಭೀಮಸೇನ ಮುಂತಾದವರೂ ಸಾತ್ಯಕಿ ಮುಂತಾದವರೂ ವೀರ ರಥಿಕರು ಪುನಃ ನಾಶಪಡಿಸಿದರು.
ತೇಷಾಮಾಪತತಾಂ ವೇಗಮವಿಷಹ್ಯ ಮಹಾತ್ಮನಾಮ್ |
ಪುತ್ರಾಣಾಂ ತೇ ಮಹತ್ಸೈನ್ಯಮಾಸೀದ್ ರಾಜನ್
ಪರಾಙ್ಮುಖಮ್ ॥93॥
ರಾಜನೆ, ಮಹಾತ್ಮರಾದ ಅವರು ಆಕ್ರಮಣ ಮಾಡಿದಾಗ ಅವರ ವೇಗವನ್ನು ತಡೆಯಲಾರದೆ ನಿನ್ನ ಪುತ್ರರ ಸೈನ್ಯ ಹಿಮ್ಮೆಟ್ಟಿತು.
ತತ್ಪ್ರಕೀರ್ಣರಥಾಶ್ವೇಭಂ ನರವಾಜಿಸಮಾಕುಲಮ್ |
ವಿಧ್ವಸ್ತಚರ್ಮಕವಚಂ ಪ್ರವಿದ್ಧಾಯುಧಕಾರ್ಮುಕಮ್ ॥94॥
ವ್ಯದ್ರವತ್ ತಾವಕಂ ಸೈನ್ಯಂ ಲೋಡ್ಯಮಾನಂ ಸಮಂತತಃ |
ಸಿಂಹಾರ್ದಿತಂ ಮಹಾರಣ್ಯೇ ಯಥಾ ಗಜಕುಲಂ ತಥಾ ॥95॥
ಚದುರಿದ ರಥ ಅಶ್ವ ಗಜ ಪದಾತಿಗಳಿಂದ ಯುಕ್ತವಾಗಿ ಚರ್ಮ ಕವಚ ಆಯುಧ ಧನುಸ್ಸುಗಳನ್ನು ಕಳೆದುಕೊಂಡ ನಿನ್ನ ಸೈನ್ಯ ಎಲ್ಲೆಡೆ ಮಹಾರಣ್ಯದಲ್ಲಿ ಸಿಂಹದಿಂದ ಹತವಾಗುವ ಆನೆಗಳ ಹಿಂಡಿನಂತೆ ಶತ್ರುಗಳಿಂದ ಹೊಡೆಸಿಕೊಂಡು ಪಲಾಯನ ಮಾಡಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ॥46॥

ಮಹಾಭಾರತತಾತ್ಪರ್ಯನಿರ್ಣಯ
ದೃಷ್ಟ್ವೈವ ತಂ ಪವನಸೂನುರಭಿ ತ್ವಿಯಾಯ
ಕ್ರೋಧಾದ್ ದಿಧಕ್ಷುರಿವ ಕರ್ಣಮಮೇಯಧಾಮಾ |
ರಾಜಾವನಾಯ ಶಿನಿಪುಂಗವಪಾರ್ಷತೌ ಚ
ಸಂದಿಶ್ಯ ಕರ್ಣಮಭಿಗಚ್ಛತ ಆಸ ರೂಪಮ್ ॥38॥
ಅಂತೇ ಕೃತಾಂತನರಸಿಂಹತನೋರ್ಯಥೈವ
ವಿಷ್ಣೋರ್ಹರಂ ಗ್ರಸತ ಆತ್ತಸಮಸ್ತವಿಶ್ವಮ್ |
ತದ್ವೇಗತಃ ಪ್ರತಿಚಚಾಲ ಧರಾ ಸಮಸ್ತಾ
ವಿದ್ರಾವಿತಾ ಚ ಸಕಲಾ ಪ್ರತಿವೀರಸೇನಾ ॥39॥
ಅಪರಿಮಿತ ಪರಾಕ್ರಮಿಯಾದ ಭೀಮ ಕರ್ಣನನ್ನು ನೋಡಿದೊಡನೆ ಕೋಪದಿಂದ ಸುಡಲು ಬಯಸಿದಂತೆ ಮೇಲೇರಿ ಹೋದ. ಧರ್ಮರಾಜನ ರಕ್ಷಣೆಗೆ ಸಾತ್ಯಕಿ ಧೃಷ್ಟದ್ಯುಮ್ನರನ್ನು ಕಳಿಸಿ ಕರ್ಣನ ಮೇಲೆರಗಿದ ಆ ಭೀಮನ ರೂಪ ಪ್ರಲಯಕಾಲದಲ್ಲಿ ಸಮಸ್ತಪ್ರಪಂಚಲಯಗೈದ ಹರನನ್ನು ನುಂಗಲು ಬರುವ ಲಯಮೂರ್ತಿ ನರಸಿಂಹರೂಪನಾದ ಹರಿಯ ರೂಪದಂತಿತ್ತು. ಅವನ ವೇಗದಿಂದ ಇಡಿ ಭೂಮಿಯೆ ಕಂಪಿಸಿತು. ಶತ್ರುಸೇನೆ ಎಲ್ಲವೂ ಪಲಾಯನ ಗೈದಿತು.
ವೈಕರ್ತನೇನ ಶರಸಂಚಯತಾಡಿತಃ ಸ
ಬಾಣಂ ಚ ವಜ್ರಸದೃಶಂ ಪ್ರಮುಮೋಚ ತಸ್ಮಿನ್ |
ತೇನಾಹತೋ ಮೃತಕವತ್ ಸ ಪಪಾತ ಕರ್ಣೋ
ಭೀಮಃ ಕ್ಷುರಂ ಚ ಜಗೃಹೇಭಿಯಯೌ ಚ ಪದ್ಭ್ಯಾಮ್ ॥40॥
ಕರ್ಣ ಭೀಮನನ್ನು ಬಾಣಸಮೂಹಗಳಿಂದ ಹೊಡೆದಾಗ ಭೀಮ ಅವನ ಮೇಲೆ ವಜ್ರಸಮಾನವಾದ ಬಾಣವನ್ನು ಎಸೆದ. ಅದರ

ಆಘಾತದಿಂದ ಕರ್ಣ ಶವದಂತೆ ಬಿದ್ದ. ಭೀಮ ಕತ್ತಿಯನ್ನು ಎತ್ತಿಕೊಂಡ. ಕಾಲುನಡಿಗೆಯಿಂದ ಕರ್ಣನ ಬಳಿಗೆ ನಡೆದ.
ನಿಂದಾಂ ಹರೇಸ್ತು ವಿದಧಾತಿ ಪರೋಕ್ಷಗೋಽಪಿ
ಯಸ್ತಂ ಪ್ರಗೃಹ್ಯ ಕರವಾಣಿ ವಿಜಿಹ್ವಮೇವ |
ಏವಂ ಹಿ ವಾಯುತನಯಸ್ಯ ಸದಾಪ್ರತಿಜ್ಞಾ
ಛೇತ್ತುಂ ಸ ತೇನ ರವಿಜಸ್ಯ ಸಸಾರ ಜಿಹ್ವಾಮ್ ॥41॥
ಹಿಂದಿನಿಂದಾಗಲಿ ಹರಿಯ ಬಗ್ಗೆ ಹೀನಾಯವಾಗಿ ಆಡಿಕೊಳ್ಳುವವನನ್ನು ಹಿಡಿದು ಅವನ ನಾಲಿಗೆ ಕೊಯ್ಯುತ್ತೇನೆ ಎಂಬುದು ಭೀಮನ ಸಾರ್ವಕಾಲಿಕ ಪ್ರತಿಜ್ಞೆಯಾಗಿತ್ತು. ಅದರಿಂದ ಕರ್ಣನ ನಾಲಿಗೆ ಕೊಯ್ಯಲು ಭೀಮ ಅವನ ಬಳಿಗೆ ನಡೆದ.
ಆಯಾಂತಮಂತಿಕಮಮುಂ ಪ್ರಸಮೀಕ್ಷ್ಯ ಶಲ್ಯೋ
ನೇತ್ಯಾಹ ಹೇತುಭಿರಹೋ ನ ಮೃಷಾ ಪ್ರತಿಜ್ಞಾ |
ಕಾರ್ಯಾ ತ್ವಯೈವ ಪುರೂಹೂತಸುತಸ್ಯ ಜಿಹ್ವಾಂ
ಮಾ ತೇನ ಪಾತಯ ಮರುತ್ಸುತ ಸೂತಸೂನೋಃ ॥42॥
ಭೀಮಸೇನ ಸಮೀಪಕ್ಕೆ ಬರುತ್ತಿದ್ದುದನ್ನು ಕಂಡು ಶಲ್ಯ ಯುಕ್ತಿಯುಕ್ತವಾಗಿ ನುಡಿದ: `ಬೇಡ ಭೀಮ, ನೀನೆ ಅರ್ಜುನನ ಪ್ರತಿಜ್ಞೆಯನ್ನು ಸುಳ್ಳು ಮಾಡುವುದು ಯುಕ್ತವಲ್ಲ. ಅದರಿಂದ ಕರ್ಣನ ನಾಲಿಗೆಯನ್ನು ಕತ್ತರಿಸಬೇಡ.'
ಇತ್ಯುಕ್ತಸ್ತ್ವ ಪ್ರಮುಖಾತ್ ತಸ್ಯ ರಥೇನೈವ ತು ಮದ್ರರಾಟ್ |
ವೈಕರ್ತನಮಪೋವಾಹ ಸರ್ವಲೋಕಸ್ಯ ಪಶ್ಯತಃ ॥43॥
ಹೀಗೆ ಹೇಳಿ ಶಲ್ಯ ಎಲ್ಲ ಜನರು ನೋಡುತ್ತಿದ್ದಂತೆಯೆ ಕರ್ಣನನ್ನು ರಥದಿಂದ ಭೀಮನ ಇದಿರಿನಿಂದ ಆಚೆಗೆ ಒಯ್ದ.

ನಲವತ್ತೇಳನೆಯ ಅಧ್ಯಾಯ
ಭೀಮನ ಬಾಣದಿಂದಲೂ ಕರ್ಣ ಪ್ರಜ್ಞೆ ತಪ್ಪಿ ಬೀಳುತ್ತಾನೆ. ಯುಧಿಷ್ಠಿರನಿಗೆ ಅಪಹಾಸಗೈದ ಕರ್ಣನ ನಾಲಿಗೆಯನ್ನು ಕೊಯ್ಯಲು ಭೀಮ ಹೊರಟಾಗ ಶಲ್ಯ ತಡೆದು ಬುದ್ಧಿವಾದ ಹೇಳಿ ಕರ್ಣನನ್ನು ದೂರಕ್ಕೊಯ್ಯುತ್ತಾನೆ.
ಸಂಜಯಃ
ತಾನಭಿದ್ರವತೋ ದೃಷ್ಟ್ವಾ ಪಾಂಡವಾಂಸ್ತಾವಕಂ ಬಲಮ್ ॥1॥
ದುರ್ಯೋಧನೋ ಮಹಾರಾಜ ವಾರಯಾಮಾಸ ಸರ್ವಶಃ |
ಯೋಧಾಂಶ್ಚ ಸ್ವಬಲಂ ಚೈವ ಸಮಂತಾದ್ ಭರತರ್ಷಭ ॥2॥
ಕ್ರೋಶತಸ್ತವ ಪುತ್ರಸ್ಯ ನ ಸ್ಮ ರಾಜನ್ನ್ಯವರ್ತತ ॥3॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಮಹಾರಾಜನೆ, ನಿನ್ನ ಸೈನ್ಯದ ಮೇಲೆ ಪಾಂಡವರು ಆಕ್ರಮಣ ಮಾಡುವುದನ್ನು ಕಂಡು ದುರ್ಯೋಧನ ತನ್ನ ಸೈನ್ಯವನ್ನೂ ಯೋಧರನ್ನೂ ಪಲಾಯನ ಮಾಡದಂತೆ ಎಲ್ಲ ಕಡೆಗಳಲ್ಲಿಯೂ ತಡೆದ. ಆದರೆ ಅವನ ಕೂಗಿಗೆ ಸೈನ್ಯ ಹಿಂತಿರುಗಲಿಲ್ಲ.
ತತಃ ಪಕ್ಷಾತ್ ಪ್ರಪಕ್ಷಾಚ್ಚ ಶಕುನಿಶ್ಚಾಪಿ ಸೌಬಲಃ |
ತದಾತ್ತಶಸ್ತ್ರಃ ಕುರವೋ ಭೀಮಮಭ್ಯದ್ರವನ್ ರುಷಾ ॥4॥
ಬಳಿಕ ದುರ್ಯೋಧನನ ಎಡ ಬಲ ಪಾರ್ಶ್ವಗಳ ಕುರುಯೋಧರೂ ಶಕುನಿಯೂ ಆಯುಧಗಳೆತ್ತಿಕೊಂಡು ಭೀಮನನ್ನು ಕೋಪದಿಂದ ಆಕ್ರಮಿಸಿದರು.
ಕರ್ಣೋಽಪಿ ದೃಷ್ಟ್ವಾ ದ್ರವತೋ ಧಾರ್ತರಾಷ್ಟ್ರಾನ್
ಪರಾಙ್ಮುಖಾನ್ ॥5॥
ಮದ್ರರಾಜಮುವಾಚೇದಂ ಯಾಹಿ ಭೀಮರಥಂ ಪ್ರತಿ |
ಏವಮುಕ್ತಶ್ಚ ಕರ್ಣೇನ ಶಲ್ಯೋ ಮದ್ರಾಧಿಪಸ್ತದಾ ॥6॥
ಹಂಸವರ್ಣಾನ್ ಹಯಾಗ್ರ್ಯಾಂಸ್ತಾನ್ ಪ್ರೈಷೀದ್ ಯತ್ರ
ವೃಕೋದರಃ ॥7॥
ಕರ್ಣನೂ ಕೌರವ ಸೈನಿಕರು ಪಲಾಯನ ಮಾಡುವುದನ್ನು ಕಂಡು ಶಲ್ಯನಿಗೆ ಹೇಳಿದ, `ಭೀಮನ ರಥದ ಕಡೆಗೆ ನಡೆ' ಎಂದು. ಕರ್ಣ ಹೀಗೆ ಹೇಳಿದಾಗ ಶಲ್ಯನು ಹಂಸವರ್ಣದ ಶ್ರೇಷ್ಠ ಕುದುರೆಗಳನ್ನು ಭೀಮನಿರುವ ಕಡೆಗೆ ನಡೆಸಿದ.
ತೇ ಪ್ರೇಷಿತಾ ಮಹಾರಾಜ ಶಲ್ಯೇನಾಹವಶೋಭಿನಾ |
ಭೀಮಸೇನರಥಂ ಪ್ರಾಪ್ಯ ಸಮಸಜ್ಜಂತ ವಾಜಿನಃ ॥8॥
ಮಹಾರಾಜ, ಯುದ್ಧದಲ್ಲಿ ಶೋಭಿಸುವ ಶಲ್ಯನು ಕುದುರೆಗಳನ್ನು ನಡೆಸಿದಾಗ ಅವುಗಳು ಭೀಮಸೇನನ ರಥವನ್ನು ಇದಿರಿಸಿ ನಿಂತುವು.
ದೃಷ್ಟ್ವಾ ಕರ್ಣಂ ಸಮಾಯಾಂತಂ ಭೀಮಃ ಕ್ರೋಧಸಮನ್ವಿತಃ |
ಮತಿಂ ದಧ್ರೇ ವಿನಾಶಾಯ ಕರ್ಣಸ್ಯ ಭರತರ್ಷಭ ॥9॥
ಕರ್ಣ ಬಂದುದನ್ನು ನೋಡಿ ಭೀಮ ಕುಪಿತನಾಗಿ ಅವನ ವಧ ಮಾಡಲು ಸಂಕಲ್ಪಿಸಿದ.
ಸೋಽಬ್ರವೀತ್ ಸಾತ್ಯಕಿಂ ವೀರಂ ಧೃಷ್ಟದ್ಯುಮ್ನಂ ಚ ಪಾರ್ಷತಮ್ |
ಏನಂ ರಕ್ಷತ ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ ॥10॥
ಸಂಶಯಾನ್ಮಹತೋ ಮುಕ್ತಂ ಕಥಂಚಿತ್ ಪ್ರೇಕ್ಷತೋ ಮಮ ॥11॥
ಭೀಮಸೇನನು ವೀರನಾದ ಸಾತ್ಯಕಿಯನ್ನೂ ಧೃಷ್ಟದ್ಯುಮ್ನನನ್ನೂ ಕುರಿತು ಹೇಳಿದ `ಧರ್ಮಾತ್ಮನಾದ ರಾಜಾ ಯುಧಿಷ್ಠಿರನನ್ನು ನೀವು

ರಕ್ಷಿಸಿರಿ. ನನ್ನ ಕಣ್ಣೆದುರಿನಲ್ಲಿ ಕಥಂಚಿತ್ ಮಹಾಸಂಕಟದಿಂದ ಈತ ಪಾರಾಗಿದ್ದಾನೆ'.
ಅಗ್ರತೋ ಮೇ ಕೃತೋ ರಾಜಾ ಛಿನ್ನಸರ್ವಪರಿಚ್ಛದಃ |
ದುರ್ಯೋಧನಸ್ಯ ಪ್ರೀತ್ಯರ್ಥಂ ರಾಧೇಯೇನ ದುರಾತ್ಮನಾ ॥12॥
ದುರಾತ್ಮನಾದ ಕರ್ಣನು ದುರ್ಯೋಧನನನ್ನು ಮೆಚ್ಚಿಸುವುದಕ್ಕಾಗಿ ನನ್ನೆದುರಿನಲ್ಲಿ ಯುಧಿಷ್ಠಿರನ ಎಲ್ಲ ಯುದ್ಧ ಸಾಮಗ್ರಿಗಳನ್ನೂ ನಾಶಗೊಳಿಸಿದ್ದಾನೆ.
ಅಂತಮದ್ಯ ಕರಿಷ್ಯಾಮಿ ತಸ್ಯ ದುಃಖಸ್ಯ ಪಾರ್ಷತ |
ಹಂತಾ ವಾಸ್ಮಿ ರಣೇ ಕರ್ಣಂ ಸ ವಾ ಮಾಂ ನಿಹನಿಷ್ಯತಿ ॥13॥
ಸಂಗ್ರಾಮೇಣ ಸುಘೋರೇಣ ಸತ್ಯಮೇತದ್ ಬ್ರವೀಮಿ ವಃ ॥14॥
ಈಗ ಈ ದುಃಖಕ್ಕೆ ಪ್ರತೀಕಾರ ಮಾಡುತ್ತೇನೆ. ರಣದಲ್ಲಿ ಭೀಕರವಾದ ಹೋರಾಟದಿಂದ ನಾನು ಕರ್ಣನನ್ನು ಕೊಲ್ಲುತ್ತೇನೆ. ಅಥವಾ ಅವನು ನನ್ನನ್ನು ಕೊಲ್ಲುತ್ತಾನೆ. ನಾನು ನಿಮಗೆ ಸತ್ಯವನ್ನೇ ಹೇಳುತ್ತಿದ್ದೇನೆ.
ಭೀಮನು ಕರ್ಣನನ್ನು ಕೊಲ್ಲುವ ಸಂಕಲ್ಪ ಮಾಡುವುದಿಲ್ಲ, ಕೊಲ್ಲುವುದೂ ಇಲ್ಲ. ಅರ್ಜುನನಿಂದ ಕೊಲ್ಲಿಸುತ್ತಾನೆ. ಅರ್ಜುನನಿಂದ ಕೊಲ್ಲಿಸಿದರೆ ತಾನೇ ಕೊಂದಂತೆ. ಅದರಿಂದ `ಕೊಲ್ಲುತ್ತೇನೆ' ಎನ್ನುತ್ತಾನೆ. ಮತ್ತು `ಕೊಲ್ಲುತ್ತೇನೆ' ಎಂದರೆ, ತಾನು ಕರ್ಣನನ್ನು ಕೊಂದಂತೆ ಮಾಡುತ್ತೇನೆ, ಶವದಂತೆ ಬೀಳಿಸುತ್ತೇನೆ ಎಂದರ್ಥ. ಮುಂದೆ ಹಾಗೇ ಕರ್ಣನು ಪ್ರಜ್ಞೆತಪ್ಪಿ ಶವದಂತೇ ಬೀಳುತ್ತಾನೆ. ಅದರಿಂದ ಭೀಮ `ಸತ್ಯವನ್ನೇ ಹೇಳುತ್ತೇನೆ' ಎಂದುದು ಸುಳ್ಳಾಗುವುದಿಲ್ಲ. `ಅಥವಾ ಅವನು ನನ್ನನ್ನು ಕೊಲ್ಲುತ್ತಾನೆ' ಎಂಬಲ್ಲಿ `ಅಥವಾ' ಶಬ್ದವೂ ಅನಾಸ್ಥೆಯ ದ್ಯೋತಕವೆ ಹೊರತು ಸಂದೇಹದ್ಯೋತಕವಲ್ಲ. ಭೀಮನಿಗೆ ಸಂದೇಹ ಭ್ರಾಂತಿಗಳಿಲ್ಲ.
ರಾಜಾನಮದ್ಯ ಭವತಾಂ ನ್ಯಾಸಭೂತಂ ದದಾಮಿ ವೈ |
ಅಸ್ಯ ಸಂರಕ್ಷಣೇ ಸರ್ವೇ ಯತಧ್ವಂ ವಿಗತಜ್ವರಾಃ ॥15॥
ರಾಜಾ ಯುಧಿಷ್ಠಿರನನ್ನು ನಿಮ್ಮಲ್ಲಿ ನ್ಯಾಸವಾಗಿ ಒಪ್ಪಿಸುತ್ತೇನೆ. ಭಯವಿಲ್ಲದೆ ಈತನ ಸಂರಕ್ಷಣೆಯಲ್ಲಿ ನೀವು ಯತ್ನಿಸಿರಿ'.
ಏವಮುಕತ್ವ ಮಹಾಬಾಹುಃ ಪ್ರಾಯಾದಾಧಿರಥಿಂ ಪ್ರತಿ |
ಸಿಂಹನಾದೇನ ಮಹತಾ ಸರ್ವಾಃ ಸನ್ನಾದಯನ್ ದಿಶಃ ॥16॥
ಹೀಗೆ ಹೇಳಿ ಮಹಾಬಾಹು ಭೀಮನು ಮಹಾ ಸಿಂಹನಾದದಿಂದ ಎಲ್ಲ ದಿಕ್ಕುಗಳನ್ನೂ ಪ್ರತಿಧ್ವನಿಸುವಂತೆ ಮಾಡಿ ಕರ್ಣನನ್ನು ಆಕ್ರಮಿಸಿದ.
ದೃಷ್ಟ್ವಾ ತ್ವರಿತಮಾಯಾಂತಂ ಭೀಮಂ ಯುದ್ಧಾಭಿನಂದಿನಮ್ |
ಸೂತಪುತ್ರಮಥೋವಾಚ ಮದ್ರಾಣಾಮೀಶ್ವರೋ ವಿಭುಃ ॥17॥
ಯುದ್ಧವನ್ನು ಸ್ವಾಗತಿಸುತ್ತ ಭೀಮ ವೇಗವಾಗಿ ಬರುತ್ತಿದ್ದುದನ್ನು ಕಂಡು ವಿಭು ಮದ್ರರಾಜ ಕರ್ಣನಿಗೆ ಹೇಳಿದ.
ಶಲ್ಯಃ
ಪಶ್ಯ ಕರ್ಣ ಮಹಾಬಾಹುಂ ಕ್ರುದ್ಧಂ ಪಾಂಡವನಂದನಮ್ |
ದೀರ್ಘಕಾಲಾರ್ಜಿತಂ ಕ್ರೋಧಂ ಮೋಕ್ತುಕಾಮಂ ತ್ವಯಿ
ಧ್ರುವಮ್ ॥18॥
ಶಲ್ಯ ನುಡಿದ– ನೋಡು, ಕರ್ಣ! ಮಹಾಬಾಹುವಾದ ಕ್ರುದ್ಧನಾದ ಭೀಮಸೇನನನ್ನು. ದೀರ್ಘಕಾಲದಿಂದ ತನ್ನೊಳಗೇ ಹುದುಗಿಸಿಕೊಂಡಿದ್ದ ಕೋಪವನ್ನೆಲ್ಲ ನಿನ್ನ ಮೇಲೆ ಪ್ರಯೋಗಿಸಲು ಅವನು ಬಯಸುತ್ತಿರುವುದು ನಿಶ್ಚಿತ.
ಈದೃಶಂ ನಾಸ್ಯ ರೂಪಂ ಮೇ ದೃಷ್ಟಪೂರ್ವಂ ಕದಾಚನ |
ಅಭಿಮನ್ಯೌ ಹತೇ ಕರ್ಣ ರಾಕ್ಷಸೇ ವಾ ಘಟೋತ್ಕಚೇ ॥19॥
ಇವನ ಇಂಥ ರೂಪವನ್ನು ಹಿಂದೆ ಅಭಿಮನ್ಯು ಹತನಾದಾಗ ಆಗಲಿ, ಘಟೋತ್ಕಚ ರಾಕ್ಷಸ ಹತನಾಗುವಾಗ ಆಗಲಿ, ನಾನೆಂದೂ ಕಂಡೇ ಇಲ್ಲ.
ತ್ರೈಲೋಕ್ಯಸ್ಯ ಸಮಸ್ತಸ್ಯ ಶಕ್ತಃ ಕ್ರುದ್ಧೋ ನಿವಾರಣೇ |
ಬಿಭರ್ತಿ ತಾದೃಶಂ ರೂಪಂ ಕಾಲಾಗ್ನಿಸದೃಶಂ ಶುಭಮ್ ॥20॥
ಮೂರುಲೋಕವೆಲ್ಲವನ್ನೂ ಕೂಡ, ಕ್ರುದ್ಧನಾದರೆ, ತಡೆಯಲು ಈತ ಶಕ್ತ. ಅಂಥ ಕಾಲಾಗ್ನಿಸದೃಶವಾದ ಮಂಗಳಕರ ರೂಪವನ್ನು ಧರಿಸಿದ್ದಾನೆ.
ಸಂಜಯಃ
ಇತಿ ಬ್ರುವತಿ ರಾಧೇಯಂ ಮದ್ರಾಣಾಮೀಶ್ವರೇ ನೃಪ |
ಅಭ್ಯವರ್ತತ ವೈ ಕರ್ಣಂ ಕ್ರೋಧದೀಪ್ತೋ ವೃಕೋದರಃ ॥21॥
ಸಂಜಯ ನುಡಿದ– ರಾಜನೆ, ಹೀಗೆ ಶಲ್ಯನು ಕರ್ಣನಿಗೆ ಹೇಳುತ್ತಿದ್ದಾಗ ಕ್ರೋಧದಿಂದ ಉರಿಯುತ್ತಿದ್ದ ಭೀಮ ಕರ್ಣನೆದುರಿಗೆ ಬಂದ.
ತಥಾಗತಂ ತು ಸಂಪ್ರೇಕ್ಷ್ಯ ಭೀಮಂ ಯುದ್ಧಾಭಿನಂದಿನಮ್ |
ಅಬ್ರವೀದ್ ವಚನಂ ಶಲ್ಯಂ ರಾಧೇಯಃ ಪ್ರಹಸನ್ನಿವ ॥22॥
ಯುದ್ಧಲೋಲನಾದ ಭೀಮ ಹಾಗೆ ಬಂದುದನ್ನು ಕಂಡು ಕರ್ಣನು ನಗುತ್ತ ಶಲ್ಯನಿಗೆ ಈ ಮಾತನ್ನು ನುಡಿದ.
ಯದುಕ್ತಂ ವಚನಂ ಮೇಽದ್ಯ ತ್ವಯಾ ಮದ್ರಜನೇಶ್ವರ |
ಭೀಮಸೇನಂ ಪ್ರತಿ ವಿಭೋ ತತ್ಸತ್ಯಂ ನಾತ್ರ ಸಂಶಯಃ ॥23॥
ಶಲ್ಯ, ಭೀಮಸೇನನ ಕುರಿತು ನೀನೇನು ಮಾತನ್ನಾಡಿದೆಯೋ ಅದು ನಿಜ. ಅದರಲ್ಲಿ ಸಂಶಯವಿಲ್ಲ.
ಏಷ ಶೂರಶ್ಚ ವೀರಶ್ಚ ಕ್ರೋಧನಶ್ಚ ವೃಕೋದರಃ |

ನಿರಪೇಕ್ಷಃ ಶರೀರೇ ಚ ಪ್ರಾಣತಶ್ಚ ಬಲಾಧಿಕಃ ॥24॥
ಇವನು ಶೂರ, ವೀರ, ಕ್ರೋಧ ಮಾಡುವವ. ಶರೀರದ ರಕ್ಷಣೆಗೆ ಯಾರ ಅಪೇಕ್ಷೆಯೂ ಇಲ್ಲದವನು. ಪ್ರಾಣಶಕ್ತಿಯಲ್ಲಿ ಬಲಿಷ್ಠ.
ಅಜ್ಞಾತವಾಸಂ ವಸತಾ ವಿರಾಟನಗರೇ ತದಾ |
ದ್ರೌಪದ್ಯಾಃ ಪ್ರಿಯಕಾಮೇನ ಕೇವಲಂ ಬಾಹುಸಂಶ್ರಯಾತ್ ॥25॥
ಗೂಢಭಾವಂ ಸಮಾಶ್ರಿತ್ಯ ಕೀಚಕಃ ಸಗಣೋ ಹತಃ ॥26॥
ವಿರಾಟನಗರದಲ್ಲಿ ವಾಸಮಾಡುವಾಗ ದ್ರೌಪದಿಗೆ ಪ್ರಿಯವನ್ನುಂಟು ಮಾಡಲು ಬಯಸಿ ಮಾರುವೇಷ ಧರಿಸಿ ಕೇವಲ ಬಾಹುಬಲದಿಂದ ಕೀಚಕನನ್ನು ಪರಿವಾರ ಸಮೇತವಾಗಿ ಸಂಹರಿಸಿದ.
ಸೋಽದ್ಯ ಸಂಗ್ರಾಮಶಿರಸಿ ಸನ್ನದ್ಧಃ ಕ್ರೋಧಮೂರ್ಚ್ಛಿತಃ |
ಕಿಂ ನ ನೋದ್ಯತದಂಡೇನ ಮೃತ್ಯುನಾಪಿ ವ್ರಜೇದ್ ರಣಮ್ ॥27॥
ಅವನು ಈಗ ರಣರಂಗದ ಮುಂಭಾಗದಲ್ಲಿ ಸನ್ನದ್ಧನಾಗಿ ಕ್ರೋಧದಿಂದ ಮೈಮರೆತರೆ ದಂಡವನ್ನೆತ್ತಿಕೊಂಡಿರುವ ಯಮನೊಡನೆಯೂ ಯುದ್ಧ ಮಾಡದಿರುವನೆ?
ಚಿರಕಾಲಾಭಿಲಷಿತೋ ಮಮಾಯಂ ತು ಮನೋರಥಃ |
ಅರ್ಜುನಂ ಸಮರೇ ಹನ್ಯಾಂ ಮಾಂ ವಾ ಹನ್ಯಾದ್ ಧನಂಜಯಃ ॥28॥
ಬಹುಕಾಲದಿಂದ ನನಗೆ ಇದೊಂದು ಆಸೆ ಇದೆ. ಅರ್ಜುನನನ್ನು ಯುದ್ಧದಲ್ಲಿ ನಾನು ಕೊಲ್ಲಬೇಕು ಅಥವಾ ಅರ್ಜುನನು ನನ್ನನ್ನು ಕೊಲ್ಲಬೇಕು' ಎಂದು.
ಕರ್ಣನ ಈ ಮಾತಿನಲ್ಲಿಯೂ `ಅಥವಾ' ಎಂದು ಅರ್ಜುನನನ್ನು ಯುದ್ಧದಲ್ಲಿ ತಾನು ಕೊಲ್ಲುವುದರಲ್ಲಿಯೆ ಅನಾಸ್ಥೆ ಕಾಣುತ್ತದೆ. ಉದ್ಯೋಗ ಪರ್ವದಲ್ಲಿ ತಾನು ರಣಯಜ್ಞದಲ್ಲಿ ಪಶುವಾಗಬೇಕೆಂಬ ಇಚ್ಛೆಯನ್ನೇ ಕೃಷ್ಣನ ಮುಂದೆ ಹೇಳಿದ್ದಾನೆ.
ಸ ಮೇ ಕದಾಚಿದದ್ಯೈವ ಭವೇದ್ ಭೀಮಸಮಾಗಮಾತ್ ॥29॥
ನಿಹತೇ ಭೀಮಸೇನೇ ತು ಯದಿ ವಾ ವಿರಥೀಕೃತೇ |
ಅಭಿಯಾಸ್ಯತಿ ಮಾಂ ಪಾರ್ಥಸ್ತನ್ಮೇ ಸಾಧು ಭವಿಷ್ಯತಿ ॥30॥
ಅತ್ರ ಯನ್ಮನ್ಯಸೇ ಪ್ರಾಪ್ತಂ ತಚ್ಛೀಘ್ರಂ ಸಂಪ್ರಧಾರಯ ॥31॥
ನನ್ನ ಈ ಆಸೆ, ಒಂದುವೇಳೆ ಇಂದೇ ಭೀಮನೊಡನೆ ಮಾಡುವ ಯುದ್ಧದ ಮೂಲಕ ಈಡೇರಬಹುದು. ಏಕೆಂದರೆ ಭೀಮನನ್ನು ನಾನು ಕೊಂದರೆ ಅಥವಾ ವಿರಥನನ್ನಾಗಿ ಮಾಡಿದರೆ ಅರ್ಜುನ ನನ್ನ ಕಡೆಗೆ ಮುನ್ನುಗ್ಗಿ ಬರುತ್ತಾನೆ. ಅದು ನನಗೆ ಒಳ್ಳೆಯದೇ ಆಗುತ್ತದೆ. ನಿನ್ನ ಅಭಿಪ್ರಾಯದಲ್ಲಿ ಈಗ ನಾನೇನು ಮಾಡುವುದು ಯೋಗ್ಯವೆಂಬುದನ್ನು ಬೇಗನೆ ಹೇಳು.
ಏತಚ್ಛ್ರುತ್ವಾ ತು ವಚನಂ ರಾಧೇಯಸ್ಯ ಮಹಾತ್ಮನಃ |
ಉವಾಚ ವಚನಂ ಶಲ್ಯಃ ಸೂತಪುತ್ರಂ ತಥಾಗತಮ್ ॥32॥
ಮಹಾತ್ಮಕರ್ಣನ ಈ ಮಾತನ್ನು ಕೇಳಿ ಶಲ್ಯನು, ಹಾಗೆ ಇದ್ದುದನ್ನೆ , ಅಂದರೆ ತನ್ನ ಅಭಿಪ್ರಾಯದಲ್ಲಿದ್ದುದನ್ನೇ ಹೇಳಿದ.
ಅಭಿಯಾಸಿ ಮಹಾಬಾಹೋ ಭೀಮಸೇನಂ ಮಹಾಬಲಮ್ |
ನಿರಸ್ಯ ಭೀಮಸೇನಂ ತು ತತಃ ಪ್ರಾಪ್ಸ್ಯಸಿ ಫಲ್ಗುನಮ್ ॥33॥
ಮಹಾಬಾಹುವೆ, ನೀನು ಮಹಾಬಲಿಯಾದ ಭೀಮಸೇನನನ್ನು ಆಕ್ರಮಿಸು. ಅವನನ್ನು ಒರೆಸಿ ಬಳಿಕ ಅರ್ಜುನನನ್ನು ಹೊಂದುವೆ.
ಯಸ್ತೇ ಕಾಮೋಽಭಿಲಷಿತಶ್ಚಿರಾತ್ ಪ್ರಭೃತಿ ಹೃದ್ಗತಃ |
ಸ ವೈ ಸಂಪತ್ಸ್ಯತೇ ಕರ್ಣ ಸತ್ಯಮೇತದ್ ಬ್ರವೀಮಿ ತೇ ॥34॥
ಬಹು ಹಿಂದಿನಿಂದಲೂ ನಿನ್ನ ಎದೆಯಲ್ಲಿದ್ದ ಅಭೀಷ್ಟಕಾಮನೆ ನಿಶ್ಚಯವಾಗಿ ಪೂರೈಸುತ್ತದೆ. ಕರ್ಣ, ಇದು ಸತ್ಯ, ನಿನಗೆ ಹೇಳುತ್ತಿದ್ದೇನೆ.
ಏವಮುಕ್ತೇ ತತಃ ಕರ್ಣಃ ಶಲ್ಯಂ ಪುನರಭಾಷತ |
ಹಂತಾಹಮರ್ಜುನಂ ಸಂಖೇ ಮಾಂ ವಾ ಹಂತಾ ಧನಂಜಯಃ ॥35॥
ಯುದ್ಧೇ ಮನಃ ಸಮಾಧಾಯ ಯಾಹಿ ಯತ್ರ ವೃಕೋದರಃ ॥36॥
ಶಲ್ಯ ಹೀಗೆ ಹೇಳಿದಾಗ ಕರ್ಣ ಪುನಃ ಹೇಳಿದ: ಯುದ್ಧದಲ್ಲಿ ನಾನಾದರೂ ಅರ್ಜುನನನ್ನು ಕೊಲ್ಲುವೆ ಅಥವಾ ಅವನಾದರೂ ನನ್ನನ್ನು ಕೊಲ್ಲುವನು, ಯುದ್ಧದಲ್ಲಿ ಮನಸಿಟ್ಟು ಭೀಮನಿದ್ದಲ್ಲಿಗೆ ನಡೆ, ಹೋಗೋಣ.
ಸಂಜಯಃ
ತತಃ ಪ್ರಾಯಾದ್ ರಥೇನಾಶು ಶಲ್ಯಸ್ತತ್ರ ವಿಶಾಂಪತೇ |
ಯತ್ರ ಭೀಮೋ ಮಹೇಷ್ವಾಸೋ ವ್ಯದ್ರಾವಯತ ವಾಹಿನೀಮ್ ॥37॥
ಸಂಜಯ ನುಡಿದ– ರಾಜನೆ, ಆಗ ಶಲ್ಯನು ರಥದಿಂದ ಮಹಾಬಿಲ್ಲಾರ ಭೀಮನು ಎಲ್ಲಿ ಕುರುಸೇನೆಯನ್ನು ಓಡಿಸುತ್ತಿದ್ದನೋ ಅಲ್ಲಿಗೇ ಬೇಗನೆ ನಡೆದ.
ತತಸ್ತೂರ್ಯನಿನಾದಶ್ಚ ಭೇರೀಣಾಂ ಚ ಮಹಾಸ್ವನಃ |
ಉದತಿಷ್ಠತ ರಾಜೇಂದ್ರ ಕರ್ಣಭೀಮಸಮಾಗಮೇ ॥38॥
ಮಹಾರಾಜ, ಬಳಿಕ ಕರ್ಣಭೀಮಸೇನರು ಯುದ್ಧಕ್ಕೆ ಕಲೆತಾಗ ವಾದ್ಯ ಘೋಷವೂ ಭೇರಿಯ ಮಹಾಧ್ವನಿಯೂ ಎದ್ದಿತು.
ಭೀಮಸೇನೋಽಥ ಸಂಕ್ರುದ್ಧಸ್ತವ ಸೈನ್ಯಂ ದುರಾಸದಮ್ |
ನಾರಾಚೈರ್ವಿಮಲೈಸ್ತೀಕ್ಷ್ಣೈ ರ್ಣ ್ಯರ್ದಿಶಃ ಪ್ರಾದ್ರಾವಯದ್ ಬಲೀ ॥39॥
ಬಲಿಷ್ಠನಾದ ಭೀಮಸೇನನು ಕ್ರುದ್ಧನಾಗಿ ನಿನ್ನ ಎದುರಿಸಲಾಗದ ಸೈನ್ಯವನ್ನು ನಿರ್ಮಲವಾದ ತೀಕ್ಷ್ಣವಾದ ಬಾಣಗಳಿಂದ ದಿಕ್ಕುಗಳಿಗೆ ಓಡಿಸಿದ.

ಸ ಸನ್ನಿಪಾತಸ್ತುಮುಲೋ ಭೀಮರೂಪೋ ವಿಶಾಂಪತೇ |
ಆಸೀದ್ ರೌದ್ರೋ ಮಹಾರಾಜ ಕರ್ಣಪಾಂಡವಯೋರ್ಮೃಧೇ ||40||
ರಾಜನ್, ಕರ್ಣಭೀಮರ ಆ ಮಹಾಯುದ್ಧದಲ್ಲಿ ಭೀಕರ ಸ್ವರೂಪದ ಘೋರ ಮಹಾಸಮರ ನಡೆಯಿತು.
ತತೋ ಮುಹೂರ್ತಾದ್ ರಾಜೇಂದ್ರ ಪಾಂಡವಃ ಕರ್ಣಮಾದ್ರವತ್ |
ತಮಾಪತಂತಂ ಸಂಪ್ರೇಕ್ಷ್ಯ ಕರ್ಣೋ ವೈಕರ್ತನೋ ವೃಷಃ ||41||
ಆಜಘಾನೋರಸಿ ಕ್ರುದ್ಧೋ ನಾರಾಚೇನ ಸ್ತನಾಂತರೇ |
ಪುನಶ್ಚೈನಮಮೇಯಾತ್ಮಾ ಶರವರ್ಷೈರವಾಕಿರತ್ ||42||
ಮುಹೂರ್ತ ಕಾಲ ಕಳೆದಾಗ, ರಾಜನೆ, ಭೀಮನು ಕರ್ಣನ ಎದುರಿಗೆ ನುಗ್ಗಿಬಂದ. ಅವನು ಬರುವುದನ್ನು ಕಂಡು ಕರ್ಣನು ಕ್ರುದ್ಧನಾಗಿ ಬಾಣದಿಂದ ಎದೆಯಲ್ಲಿ ಪ್ರಹಾರ ಮಾಡಿದ. ಪುನಃ ಬಾಣಗಳ ಮಳೆಯಿಂದ ಅವನನ್ನು ಅಮೇಯನಾದ ಕರ್ಣ ಮುಚ್ಚಿದ.
ಸ ವಿದ್ಧಃ ಸೂತಪುತ್ರೇಣ ಛಾದಯಾಮಾಸ ಪತ್ರಿಭಿಃ |
ವಿವ್ಯಾಧ ನಿಶಿತೈಃ ಕರ್ಣಂ ನವಭಿರ್ನತಪರ್ವಭಿಃ ||43||
ಕರ್ಣ ತನ್ನನ್ನು ಹೀಗೆ ಹೊಡೆದಾಗ ಭೀಮ ಅವನನ್ನು ಬಾಣಗಳಿಂದ ಮುಚ್ಚಿ ಡೊಂಕುಗಿಣ್ಣಿನ ಒಂಬತ್ತು ತೀಕ್ಷ್ಣ ಬಾಣಗಳಿಂದ ಹೊಡೆದ.
ತಸ್ಯ ಕರ್ಣೋ ಧನುರ್ಮಧ್ಯೇ ದ್ವಿಧಾ ಚಿಚ್ಛೇದ ಪತ್ರಿಣಾ |
ಅಥ ತಂ ಛಿನ್ನಧನ್ವಾನಮಭ್ಯವಿಧ್ಯತ್ ಸ್ತನಾಂತರೇ ||44||
ನಾರಾಚೇನ ಸುತೀಕ್ಷ್ಣೇನ ಸರ್ವಾವರಣಭೇದಿನಾ |
ಸೋಽನ್ಯತ್ ಕಾರ್ಮುಕಮಾದಾಯ ಸೂತಪುತ್ರಂ ವೃಕೋದರಃ |
ರಾಜನ್ ಮರ್ಮಸು ಮರ್ಮಜ್ಞೋ ವಿದ್ಧ್ವಾ ಸುನಿಶಿತೈಃ ಶರೈಃ ||45||
ನನಾದ ಬಲವನ್ನಾದಂ ಕಂಪಯನ್ನಿವ ಮೇದಿನೀಮ್ ||46||
ಕರ್ಣನು ಭೀಮನ ಧನುಸ್ಸನ್ನು ಬಾಣದಿಂದ ಮಧ್ಯದಲ್ಲಿ ಎರಡಾಗಿ ಕತ್ತರಿಸಿದ. ಹೀಗೆ ಬಿಲ್ಲು ಕಡಿದುಕೊಂಡ ಭೀಮನ ಎದೆಗೆ ಬಲು ತೀಕ್ಷ್ಣವಾದ ಎಲ್ಲ ಆವರಣಗಳನ್ನು ಕಡಿಯಬಲ್ಲ ಬಾಣದಿಂದ ಹೊಡೆದ. ಭೀಮನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಮರ್ಮಜ್ಞನಾದ್ದರಿಂದ ಕರ್ಣನನ್ನು ಮರ್ಮಸ್ಥಳಗಳಲ್ಲಿ ಬಲು ತೀಕ್ಷ್ಣವಾದ ಬಾಣಗಳಿಂದ ಹೊಡೆದು ಭೂಮಿ ನಡುಗುವಂತೆ ಬಲವಾಗಿ ಗರ್ಜನೆ ಮಾಡಿದ.
ತಂ ಕರ್ಣಃ ಪಂಚವಿಂಶತ್ಯಾ ನಾರಾಚಾನಾಂ ಸಮಾರ್ದಯತ್ |
ಮದೋತ್ಕಟಂ ವನೇ ದೃಪ್ತಮುಲ್ಕಾಭಿರಿವ ಕುಂಜರಮ್ ||47||
ಮತ್ತೇರಿದ ದೃಪ್ತವಾದ ಆನೆಯನ್ನು ಕಾಡಿನಲ್ಲಿ ಪಂಜುಗಳಿಂದ ಹೊಡೆಯುವಂತೆ ಇಪ್ಪತ್ತೈದು ಬಾಣಗಳಿಂದ ಭೀಮನನ್ನು ಕರ್ಣ ಪ್ರಹರಿಸಿದ.
ತತಃ ಸಾಯಕಭಿನ್ನಾಂಗಃ ಪಾಂಡವಃ ಕ್ರೋಧಮೂರ್ಚ್ಛಿತಃ |
ಸಂರಂಭಾಮರ್ಷತಾಮ್ರಾಕ್ಷಃ ಸೂತಪುತ್ರವಧೇಚ್ಛಯಾ ||48||
ಸ ಕಾರ್ಮುಕೇ ಮಹಾವೇಗಂ ಭಾರಸಾಧನಮುತ್ತಮಮ್ |
ಗಿರೀಣಾಮಪಿ ಭೇತ್ತಾರಂ ಸಾಯಕಂ ಸಮಯೋಜಯತ್ ||49||
ಬಾಣಗಳಿಂದ ಮೈಗಾಯಗೊಂಡ ಭೀಮ ಕ್ರೋಧದಿಂದ ಮೈಮರೆತು ಕೋಪ ಅಸಹನೆಗಳಿಂದ ಕಣ್ಣುಕೆಂಪು ಮಾಡಿಕೊಂಡು ಕರ್ಣನ ವಧೆ ಮಾಡಲು ಬಯಸಿ ಮಹಾವೇಗವುಳ್ಳ ಮಹಾಸಾಮರ್ಥ್ಯವುಳ್ಳ ಪರ್ವತಗಳನ್ನೂ ಸೀಳಬಲ್ಲ ಉತ್ತಮ ಬಾಣವನ್ನು ಬಿಲ್ಲಿಗೆ ಹೂಡಿದ.
ವಿಕೃಷ್ಯ ಬಲವಚ್ಚಾಪಮಾಕರ್ಣಾದತಿ ಮಾರುತಿಃ |
ತಂ ಮುಮೋಚ ಮಹೇಷ್ವಾಸಃ ಕ್ರುದ್ಧಃ ಕರ್ಣಜಿಘಾಂಸಯಾ ||50||
ಮಹಾಬಿಲ್ಗಾರ ಭೀಮನು ಕ್ರುದ್ಧನಾಗಿ ಬಿಲ್ಲನ್ನು ಅತ್ಯಂತ ಬಲವಾಗಿ ಕಿವಿಯವರೆಗೆ ಸೆಳೆದು ಕರ್ಣನ ಹಿಂಸೆಯ ಇಚ್ಛೆಯಿಂದ ಆ ಬಾಣವನ್ನು ಎಸೆದ.
ಸ ವಿಸೃಷ್ಟೋ ಬಲವತಾ ಬಾಣೋ ವಜ್ರಾಶನಿಸ್ವನಃ |
ಅದಾರಯದ್ ರಣೇ ಕರ್ಣಂ ವಜ್ರವೇಗ ಇವಾಚಲಮ್ ||51||
ಬಲಿಷ್ಠನಾದ ಭೀಮನು ಎಸೆದ ಆ ಬಾಣವು ಸಿಡಿಲಿನಂತೆ ಅಬ್ಬರಿಸುತ್ತ, ವಜ್ರವೇಗವು ಬೆಟ್ಟವನ್ನು ಸೀಳುವಂತೆ, ರಣದಲ್ಲಿ ಕರ್ಣನನ್ನು ಸೀಳಿತು.
ಸ ಭೀಮಸೇನಾಭಿಹತೋ ಸೂತಪುತ್ರಃ ಕುರೂದ್ವಹ |
ನಿಷಸಾದ ರಥೋಪಸ್ಥೇ ವಿಸಂಜ್ಞಃ ಪೃತನಾಪತಿಃ ||52||
ರಾಜನೆ, ಭೀಮಸೇನನು ಹೊಡೆದಾಗ ಸೇನಾಧಿಪತಿಯಾದ ಕರ್ಣನು ಪ್ರಜ್ಞೆ ತಪ್ಪಿ ರಥದ ಹಿಂಭಾಗದಲ್ಲಿ ಕುಸಿದುಬಿದ್ದ.
ಏತಸ್ಮಿನ್ನಂತರೇ ದೃಷ್ಟ್ವಾ ಮದ್ರರಾಜೋ ವೃಕೋದರಮ್ |
ಜಿಹ್ವಾಂ ಛೇತ್ತುಂ ಸಮಾಯಾಂತಂ ಸಾಂತ್ವಯನ್ನಿದಮಬ್ರವೀತ್ ||53||
ಈ ಸಮಯದಲ್ಲಿ ಭೀಮನು ಕರ್ಣನ ನಾಲಿಗೆ ಕೊಯ್ಯಲು ಬರುತ್ತಿರುವುದನ್ನು ಕಂಡು ಶಲ್ಯನು ಸಮಾಧಾನಪಡಿಸುತ್ತ ನುಡಿದ.
ಭೀಮಸೇನ ಮಹಾಬಾಹೋ ಯತ್ ತ್ವಾ ವಕ್ಷ್ಯಾಮಿ ತಚ್ಛೃಣು |
ವಚನಂ ಹೇತುಸಂಪನ್ನಂ ಶ್ರುತ್ವಾ ಚೈತತ್ ತಥಾ ಕುರು ||54||

ಭೀಮಸೇನ, ಮಹಾಬಾಹು, ನಿನಗೆ ನಾನು ಹೇತುಸಂಪನ್ನವಾದ ಯುಕ್ತಿಯುಕ್ತ ವಾದ ಮಾತನ್ನು ಹೇಳುತ್ತೇನೆ, ಕೇಳು, ಇದನ್ನು ಕೇಳಿ ಹಾಗೇ ಮಾಡು.
ಅರ್ಜುನೇನ ಪ್ರತಿಜ್ಞಾತೋ ವಧಃ ಕರ್ಣಸ್ಯ ಶುಷ್ಮಿಣಃ
ತಾಂ ತಥಾ ಕುರು ಭದ್ರಂ ತೇ ಪ್ರತಿಜ್ಞಾಂ ಸವ್ಯಸಾಚಿನಃ ॥55॥
ಅರ್ಜುನನು ಬಲಿಷ್ಠನಾದ ಕರ್ಣನ ವಧೆ ಮಾಡುವುದಾಗಿ ಪ್ರತಿಜ್ಞೆ ಮಾಡಿದ್ದಾನೆ. ಅವನ ಆ ಪ್ರತಿಜ್ಞೆಯನ್ನು ಸತ್ಯವಾಗುವಂತೆ ಮಾಡು. ದುರ್ಯೋಧನನನ್ನು ಮೆಚ್ಚಿಸುವುದಕ್ಕಾಗಿ ಪಾಂಡವರನ್ನು, ಕೃಷ್ಣನನ್ನು ಹಳಿಯುತ್ತಿರುವ `ಕರ್ಣನ ನಾಲಿಗೆಯನ್ನು ನೀನೀಗ ಕತ್ತರಿಸಿದರೆ ಅಭಿಮಾನಿ ಯಾದ ಕರ್ಣ ಬದುಕಿರಲಾರ. ಬದುಕಿದರೂ ಅಂಗವಿಕಲನಾದ ಆತನನ್ನು ಅರ್ಜುನನು ಕೊಂದರೆ ಅದು ವೀರರಿಗೆ ಶೋಭೆ ತರುವುದಿಲ್ಲ. ತಮ್ಮ ಅರ್ಜುನನ ಪ್ರತಿಜ್ಞೆ ಚೆನ್ನಾಗಿ ಈಡೇರಬೇಕು. ಈಡೇರುವಂತೆ ಮಾಡಬೇಕಾದವನು ಅಣ್ಣನಾದ ನೀನು. ನೀನೆ ಕರ್ಣನ ನಾಲಿಗೆ ಕತ್ತರಿಸಿ ಅರ್ಜುನನ ಪ್ರತಿಜ್ಞೆಯನ್ನು ಹಾಳಾಗುವಂತೆ ಮಾಡಬೇಡ' ಇದು ಶಲ್ಯನ ಯುಕ್ತಿಯುಕ್ತವಾದ ಮಾತು.
ಭೀಮಃ
ದೃಢವ್ರತತ್ವಂ ಪಾರ್ಥಸ್ಯ ಜಾನಾಮಿ ನೃಪಸತ್ತಮ |
ರಾಜ್ಞಸ್ತು ಧರ್ಷಣಂ ಪಾಪಃ ಕೃತವಾನ್ ಮಮ ಸನ್ನಿಧೌ ॥56॥
ಮಹಾರಾಜ, ಅರ್ಜುನನು ಮಾತಿಗೆ ತಪ್ಪದಿರುವ ವ್ರತವನ್ನು ದೃಢವಾಗಿ ಪಾಲಿಸುವವನು ಎಂದು ನನಗೆ ತಿಳಿದಿದೆ. ಆದರೇನು ಮಾಡಲಿ? ನನ್ನ ಕಣ್ಣೆದುರೇ ಪಾಪಿಕರ್ಣ ರಾಜಾ ಯುಧಿಷ್ಠಿರನಿಗೆ ಅಪಮಾನ ಮಾಡಿದ್ದಾನೆ.
ತತಃ ಕ್ರೋಧಾಭಿಭೂತೇನ ಶೇಷಂ ನ ಗಣಿತಂ ಮಯಾ |
ಪತಿತೇ ಚಾಪಿ ರಾಧೇಯೇ ನ ಮೇ ಮನ್ಯುಃ ಶಮಂ ಗತಃ ॥57॥
ಅದರಿಂದ ಕೋಪಪರವಶನಾಗಿ ನಾನು ಬೇರೆ ಏನನ್ನು , ಅರ್ಜುನ ಪ್ರತಿಜ್ಞೆ ಯನ್ನು ಆಲೋಚಿಸಲಿಲ್ಲ. ಕರ್ಣ ಪ್ರಜ್ಞೆತಪ್ಪಿ ಬಿದ್ದರೂ ನನ್ನ ಕೋಪ ಶಾಂತವಾಗಲಿಲ್ಲ.
ಜಿಹ್ವೋದ್ಧರಣಮೇವಾಸ್ಯ ಪ್ರಾಪ್ತಕಾಲಂ ಮತಂ ಮಮ ॥58॥
ಇವನ ನಾಲಿಗೆ ಕೊಯ್ಯುವುದೇ ಕಾಲೋಚಿತವೆಂದು ನನ್ನ ಅಭಿಪ್ರಾಯ ಇದ್ದಿತು.
ಅನೇನ ತು ನೃಶಂಸೇನ ಸಮವೇತೇಷು ರಾಜಸು |
ಅಸ್ಮಾಕಂ ಶೃಣ್ವತಾಂ ಕೃಷ್ಣಾ ಯಾನಿ ವಾಕ್ಯಾನಿ ಮಾತುಲ ॥59॥
ಅಸಹ್ಯಾನಿ ಚ ನೀಚೇನ ಬಹೂನಿ ಶ್ರಾವಿತಾನಿ ಭೋಃ |
ನೂನಂ ತೇ ತತ್ ಪರಿಜ್ಞಾತಂ ದೂರಸ್ಥಸ್ಯಾಪಿ ಪಾರ್ಥಿವ ॥60॥
ರಾಜರೆಲ್ಲರೂ ಸೇರಿದಾಗ ಕ್ರೂರನಾದ ನೀಚನಾದ ಈತ ನಾವು ಕೇಳುತ್ತಿದ್ದಂತೆಯೇ ಏನು ಬಹಳ ಅಸಹ್ಯವಾದ ಮಾತುಗಳನ್ನು ಆಡಿದ್ದನೋ ಅದು ನಿನಗೆ, ಮಾವ, ನೀನು ಆಗ ದೂರದಲ್ಲಿ ಇದ್ದರೂ ನಿಶ್ಚಯವಾಗಿ ತಿಳಿದಿರುತ್ತದೆ.
ಛೇದನಂ ಚಾಸ್ಯ ಜಿಹ್ವಾಯಾಸ್ತದೈವಾಕಾಂಕ್ಷಿತಂ ಮಯಾ |
ರಾಜ್ಞಸ್ತು ಪ್ರಿಯಕಾಮೇನ ಕಾಲೋಽಯಂ ಪರಿಪಾಲಿತಃ ॥61|
ಇವನ ನಾಲಿಗೆ ಕೊಯ್ಯಲು ನಾನು ಆಗಲೆ ಬಯಸಿದ್ದೆ. ಆದರೆ ರಾಜಾ
ಯುಧಿಷ್ಠಿರನ ಪ್ರಿಯವನ್ನು ಬಯಸುವ ನಾನು ಅದಕ್ಕೆ ಈ ಕಾಲವನ್ನು ನಿರೀಕ್ಷಿಸಿದೆ.
ಯುಧಿಷ್ಠಿರಾವಮಾನ ಮಾಡುವಾಗ ಕರ್ಣ ಹೀಗೂ ಹೇಳಿದ್ದಾನೆ–
ಸ್ವಗೃಹಂ ಗಚ್ಛ ಕೌಂತೇಯ ಯತ್ರ ವಾ ಕೇಶವಾರ್ಜುನೌ |
ನಹಿ ತ್ವಾಂ ಸಮರೇ ರಾಜನ್ ಹನ್ಯಾತ್ ಕರ್ಣಃ ಕಥಂಚನ ॥
`ನೀನು ನಿನ್ನ ಮನೆಗೆ ಹೊರಟುಹೋಗು, ಇಲ್ಲವೆ ಕೇಶವ ಅರ್ಜುನರ ರಕ್ಷಣೆಯಲ್ಲಿರು. ನಾನು ಸಮರದಲ್ಲಿ ನಿನ್ನನ್ನು ಸರ್ವಥಾ ಕೊಲ್ಲುವುದಿಲ್ಲ.' `ಈಗ ನಿನ್ನ ರಕ್ಷಕರಾದ ಕೃಷ್ಣಾರ್ಜುನರಿಲ್ಲ' ಎಂದು ವಿಷ್ಣುವೈಷ್ಣವ ನಿಂದೆಯನ್ನು ಕರ್ಣ ಭೀಮನ ಸಮೀಪದಲ್ಲಿಯೆ ಅವನಿಗೆ ಕೇಳಿಸುವಂತೆ ನುಡಿದಿದ್ದಾನೆ. ಪರಮವೈಷ್ಣವನಾದ ಅಣ್ಣ ಧರ್ಮರಾಜನ ನಿಂದೆ ಮಾಡಿದ್ದೂ ವಿಷ್ಣುನಿಂದೆಯೆ. ಪರೋಕ್ಷವಾಗಿಯೂ ಕೂಡ ಹರಿನಿಂದೆ ಮಾಡುವವನ ನಾಲಿಗೆ ಕೊಯ್ಯುವೆ ನೆಂದು ಭೀಮನ ಸಾರ್ವಕಾಲಿಕ ಪ್ರತಿಜ್ಞೆಯಾಗಿತ್ತು. ಕರ್ಣನ ಪಾಪದ ಕೊಡ ತುಂಬಲಿ ಎಂಬುದು ಧರ್ಮರಾಜನ ಅಭಿಪ್ರಾಯವಾಗಿದ್ದರಿಂದ, ಅಂದು ದ್ಯೂತಸಭೆಯಲ್ಲಿ ಮಾಡಿದ್ದ ದ್ರೌಪದೀನಿಂದೆಯನ್ನೂ ಕೂಡ ತತ್ಕಾಲದಲ್ಲಿ ಸಹಿಸಿಕೊಂಡಿದ್ದ, ಭೀಮ. ಈಗ ಯೋಗ್ಯಕಾಲ ಬಂದಿದ್ದರಿಂದ ಕರ್ಣನ ನಾಲಿಗೆ ಕೊಯ್ಯಲು ಭೀಮ ಹೊರಡುತ್ತಾನೆ. ಶಲ್ಯ ಯುಕ್ತಿಯುಕ್ತವಾದ ಮಾತಿನಿಂದ ತಡೆಯುತ್ತಾನೆ.
ಭವತಾ ತು ಯದುಕ್ತೋಽಸ್ಮಿ ವಾಕ್ಯಂ ಹೇತ್ವರ್ಥಸಂಯುತಮ್ |
ತದ್ ಗೃಹೀತಂ ಮಹಾರಾಜ ಕಟು ತಿಕ್ತಮಿವೌಷಧಮ್ ॥62॥
ನೀನು ಹೇಳಿದ ಯುಕ್ತಿಯುಕ್ತವಾದ ಮಾತನ್ನು ನಾನು ಒಪ್ಪಿಕೊಂಡಿದ್ದೇನೆ, ತೀಕ್ಷ್ಣವಾದ ಕಹಿಯಾದ ಔಷಧವನ್ನು ಸೇವಿಸುವಂತೆ.
ಹೀನಪ್ರತಿಜ್ಞೋ ಬೀಭತ್ಸುರ್ನಹಿ ಜೀವೇತ ಕರ್ಹಿಚಿತ್ |
ಅಸ್ಮಿನ್ ವಿನಷ್ಟೇ ನಷ್ಟಾಃ ಸ್ಮಃ ಸರ್ವ ಏವ ಸಕೇಶವಾಃ ॥63॥
ಅರ್ಜುನನ ಪ್ರತಿಜ್ಞೆ ಈಡೇರದೆ ಹೋದರೆ ಅವನೆಂದೂ ಬದುಕಿರಲಾರ. ಅವನು ಇಲ್ಲವಾದರೆ ನಾವೂ ಕೂಡ ಕೃಷ್ಣನೂ ಸೇರಿದಂತೆ ಎಲ್ಲರೂ ಇಲ್ಲವಾಗುತ್ತೇವೆ.
ಅದ್ಯ ಚೈವ ನೃಶಂಸಾತ್ಮಾ ಪಾಪಃ ಪಾಪಕೃತಾಂ ವರಃ |
ಗಮಿಷ್ಯತಿ ಪರಾಭಾವಂ ದೃಷ್ಟಮಾತ್ರಃ ಕಿರೀಟಿನಾ ॥64॥

ಪಾಪಕಾರಿಗಳಲ್ಲಿ ಮೊದಲಿಗನಾದ ಕ್ರೂರಸ್ವಭಾವದವನಾದ ಪಾಪಿ ಕರ್ಣ, ಇಂದೇ ಅರ್ಜುನನ ದೃಷ್ಟಿ ಅವನ ಮೇಲೆ ಬಿತ್ತೆಂದರೆ ಪರಾಭವ ಹೊಂದುತ್ತಾನೆ.
ಯುಧಿಷ್ಠಿರಸ್ಯ ಕೋಪೇನ ಪೂರ್ವಂ ದಗ್ಧೋ ನೃಶಂಸಕೃತ್ |
ತ್ವಯಾ ಸಂರಕ್ಷಿತಸ್ತ್ವದ್ಯ ಮತ್ಸಮೀಪಾದುಪಾಯತಃ ॥65॥
ಕ್ರೂರಕರ್ಮ ಮಾಡಿರುವ ಕರ್ಣನು ಈಗ ಮೊದಲೇ ಯುಧಿಷ್ಠಿರನ ಕೋಪ ದಿಂದ ದಗ್ಧನಾಗಿದ್ದ. ಆದರೆ ಇದೀಗ ನೀನು ನನ್ನ ಕೈಯಿಂದ ಈತನನ್ನು ಉಪಾಯವಾಗಿ ರಕ್ಷಿಸಿರುವೆ.
ತತೋ ಮದ್ರಾಧಿಪೋ ದೃಷ್ಟ್ವಾ ವಿಸಂಜ್ಞಂ ಸೂತನಂದನಮ್ |
ಅಪೋವಾಹ ರಥೇನಾಜೌ ಕರ್ಣಮಾಹವಶೋಭಿನಮ್ ॥66॥
ಬಳಿಕ ಶಲ್ಯನು, ಯುದ್ಧದಲ್ಲಿ ಮೆರೆಯುವ ಕರ್ಣನು ರಣರಂಗದಲ್ಲಿ ಪ್ರಜ್ಞೆತಪ್ಪಿ ಬಿದ್ದಿರುವುದನ್ನು ಕಂಡು, ರಥದಿಂದ ದೂರಕ್ಕೆ ಒಯ್ದ.
ತತಃ ಪರಾಜಿತೇ ಕರ್ಣೇ ಧಾರ್ತರಾಷ್ಟ್ರೀಂ ಮಹಾಚಮೂಮ್ |
ವ್ಯದ್ರಾವಯದ್ ಭೀಮಸೇನೋ ಯಥೇಂದ್ರೋ ದಾನವೀಂ
ಚಮೂಮ್ ॥67॥
ಕರ್ಣನು ಹೀಗೆ ಪರಾಜಿತನಾದಾಗ ಇಂದ್ರನು ಅಸುರಸೇನೆಯನ್ನು ಓಡಿಸು ವಂತೆ ಭೀಮಸೇನನು ಕೌರವಸೈನ್ಯವನ್ನು ಹೊಡೆದೋಡಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಸಪ್ತಚತ್ವಾರಿಂಶೋಧ್ಯಾಯಃ ॥47॥

ಮಹಾಭಾರತತಾತ್ಪರ್ಯನಿರ್ಣಯ
ಜಿತ್ವಾ ಸೂರ್ಯಸುತಂ ಭೀಮಃ ಕೌರವಾಣಾಮನೀಕಿನೀಮ್ |
ಸರ್ವಾಂ ವಿದ್ರಾವಯಾಮಾಸ ದ್ರೌಣಿದುರ್ಯೋಧನಾವೃತಾಮ್ ॥44॥
ಅಕ್ಷೋಹಿಣೀತ್ರಯಂ ತೇನ ತದಾ ವಿಲುಲಿತಂ ಕ್ಷಣಾತ್ |
ಭೀಮನು ಹೀಗೆ ಕರ್ಣನನ್ನು ಗೆದ್ದು, ಅಶ್ವತ್ಥಾಮದುರ್ಯೋಧನರಿಂದ ಯುಕ್ತವಾದ ಕೌರವರ ಮೂರು ಅಕ್ಷೋಹಿಣಿ ಸೈನ್ಯವೆಲ್ಲವನ್ನೂ ಓಡಿಸಿದನು.

ನಲವತ್ತೆಂಟನೆಯ ಅಧ್ಯಾಯ
ಭೀಮನಿಂದ ಧೃತರಾಷ್ಟ್ರನ ಆರು ಮಕ್ಕಳ ಸಂಹಾರ. ಕರ್ಣ ಭೀಮನ ರಥವನ್ನು ಮುರಿದ. ಭೀಮ ಗದೆ ಎತ್ತಿಕೊಂಡು ಕರ್ಣಶಲ್ಯರಿಬ್ಬರನ್ನೂ ರಥದಲ್ಲಿ ಬೀಳಿಸಿ, ಕುರುಸೈನ್ಯ ಧ್ವಂಸಮಾಡಿದ. ಬೇರೆ ರಥವೇರಿದ ಯುಧಿಷ್ಠಿರನನ್ನು ಬೆನ್ನಟ್ಟುತ್ತಿದ್ದ ಕರ್ಣನನ್ನು ತಡೆದ.
ಧೃತರಾಷ್ಟ್ರಃ
ಸುದುಷ್ಕರಮಿದಂ ಕರ್ಮ ಕೃತಂ ಭೀಮೇನ ಸಂಜಯ |
ಯೇನ ಕರ್ಣೋ ಮಹಾಬಾಹೂ ರಥೋಪಸ್ಥೇ ನಿಪಾತಿತಃ ॥1॥
ಧೃತರಾಷ್ಟ್ರ ನುಡಿದ– ಸಂಜಯ, ಭೀಮನು ಬಲು ಕಷ್ಟಸಾಧ್ಯವಾದ ಕಾರ್ಯವನ್ನು ಮಾಡಿಬಿಟ್ಟ. ಮಹಾಬಾಹುವಾದ ಕರ್ಣನನ್ನು ರಥದ ಹಿಂಭಾಗದಲ್ಲಿ ಬೀಳಿಸಿದ.
ಕರ್ಣೋ ಹ್ಯೇಕೋ ರಣೇ ಹಂತಾ ಸೃಂಜಯಾನ್ ಪಾಂಡವೈಃ ಸಹ |
ಇತಿ ದುರ್ಯೋಧನಃ ಸೂತ ಪ್ರಾಬ್ರವೀನ್ಮಾಂ ಮುಹುರ್ಮುಹುಃ ॥2॥
ಸಂಜಯ, `ಕರ್ಣನೊಬ್ಬನೇ ರಣದಲ್ಲಿ ಪಾಂಡವರೊಂದಿಗೆ ಸೃಂಜಯರನ್ನು ಕೊಲ್ಲುತ್ತಾನೆ' ಎಂದು ದುರ್ಯೋಧನನು ನನ್ನ ಮುಂದೆ ಪುನಃಪುನಃ ಹೇಳುತ್ತಿದ್ದ.
ಪರಾಜಿತಂ ತು ರಾಧೇಯಂ ದೃಷ್ಟ್ವಾ ಭೀಮೇನ ಸಂಯುಗೇ |
ತತಃ ಪರಂ ಕಿಮಕರೋತ್ಪುತ್ರೋ ದುರ್ಯೋಧನೋ ಮಮ ॥3॥
ರಣದಲ್ಲಿ ಕರ್ಣನು ಭೀಮನಿಂದ ಪರಾಜಿತನಾದುದನ್ನು ಕಂಡು ನನ್ನ ಪುತ್ರ ದುರ್ಯೋಧನನೇನು ಮಾಡಿದ?
ಸಂಜಯಃ
ವಿಮುಖಂ ಪ್ರೇಕ್ಷ ್ಯ ರಾಧೇಯಂ ಸೂತಪುತ್ರಂ ಮಹಾಹವೇ |
ಪುತ್ರಸ್ತವ ಮಹಾರಾಜ ಸೋದರ್ಯಾನ್ ಸಮಭಾಷತ ॥4॥
ಸಂಜಯ ನುಡಿದ– ಮಹಾರಾಜ, ಮಹಾಯುದ್ಧದಲ್ಲಿ ಕರ್ಣನು ಸೋತು ಪಲಾಯನ ಮಾಡಿದ್ದನ್ನು ಕಂಡು ನಿನ್ನ ಪುತ್ರನು ಸೋದರರಿಗೆ ಹೇಳಿದ.
ಶೀಘ್ರಂ ಗಚ್ಛತ ಭದ್ರಂ ವೋ ರಾಧೇಯಂ ಪರಿರಕ್ಷತ |
ಭೀಮಸೇನಭಯಾಗಾಧೇ ಮಜ್ಜಂತಂ ವ್ಯಸನಾರ್ಣವೇ ॥5॥
`ಬೇಗನೆ ನಡೆಯಿರಿ. ನಿಮಗೆ ಶುಭವಾಗಲಿ, ಕರ್ಣನನ್ನು ರಕ್ಷಿಸಿರಿ. ಅವನು ಈಗ ಭೀಮಸೇನನ ಭಯವೆಂಬ ಅಗಾಧವಾದ ವ್ಯಸನಸಮುದ್ರದಲ್ಲಿ ಮುಳುಗುತ್ತಿದ್ದಾನೆ' ಎಂದು.
ತೇ ತು ರಾಜ್ಞಾ ಸಮಾದಿಷ್ಟಾ ಭೀಮಸೇನಜಿಘಾಂಸವಃ |

ಅಭ್ಯವರ್ತಂತ ಸಂಕ್ರುದ್ಧಾಃ ಪತಂಗಾ ಇವ ಪಾವಕಮ್ ॥6॥
ಅವರು ರಾಜಾ ದುರ್ಯೋಧನನಿಂದ ಆಜ್ಞಪ್ತರಾಗಿ ಕೋಪಗೊಂಡು ಭೀಮಸೇನನನ್ನು ಕೊಲ್ಲಲು ಬಯಸಿ ದೀಪದ ಹುಳುಗಳು ಬೆಂಕಿಗೆ ಬೀಳುವಂತೆ ಭೀಮನೆದುರಿಗೆ ನುಗ್ಗಿದರು.
ಶ್ರುತಾಯುರ್ದುರ್ಧರಃ ಕ್ರಾಥೋ ವಿವಿತ್ಸುರ್ವಿಕಟಃ ಸಮಃ|
ನಿಷಂಗೀ ಕವಚೀ ಪಾಶೀ ತಥಾ ನಂದೋಪನಂದಕೌ ॥7॥
ದುಷ್ಪ್ರಧರ್ಷಃ ಸುಬಾಹುಶ್ಚ ವಾತವೇಗಸುವರ್ಚಸೌ|
ಧನುರ್ಗ್ರಾಹೋ ದುರ್ದಮಶ್ಚ ತಥಾ ಸತ್ತ್ವಸಮಃ ಸಹಃ ॥8॥
ಏತೇ ರಥೈಃ ಪರಿವೃತಾ ವೀರ್ಯವಂತೋ ಮಹಾಬಲಾಃ|
ಭೀಮಸೇನಂ ಸಮಾಸಾದ್ಯ ಸಮಂತಾತ್ಪರ್ಯವಾರಯನ್ ॥9॥
ಶ್ರುತಾಯು ದುರ್ಧರ ಕ್ರಾಥ ವಿವಿತ್ಸು ವಿಕಟ ಸಮ ನಿಷಂಗಿ ಕವಚಿ ಪಾಶಿ ನಂದ ಉಪನಂದ ದುಷ್ಪ್ರಧರ್ಷ ಸುಬಾಹು ವಾತವೇಗ ಸುವರ್ಚಸ ಧನುರ್ಗ್ರಾಹ ದುರ್ದಮ ಸತ್ವಸಮ ಮತ್ತು ಸಹ ಎಂಬ ವೀರ್ಯಶಾಲಿ ಮಹಾಬಲಿಗಳಾದ ಇವರು ರಥಿಕರಿಂದ ಪರಿವೃತರಾಗಿ ಭೀಮಸೇನನನ್ನು ಇದಿರಿಸಿ ಸುತ್ತಲೂ ಮುತ್ತಿದರು.
ತೇ ವ್ಯಮುಂಚನ್ ಶರವ್ರಾತಾನ್ ನಾನಾಲಿಂಗಾನ್ ಸಮಂತತಃ ॥10
ಸ ತೈರಭ್ಯರ್ದ್ಯಮಾನಸ್ತು ಭೀಮಸೇನೋ ಮಹಾಬಲಃ|
ತೇಷಾಮಾಪತತಾಂ ಕ್ಷಿಪ್ರಂ ಸುತಾನಾಂ ತೇ ನರಾಧಿಪ ॥11॥
ರಥೈಃ ಪಂಚಾಶತಾ ಸಾರ್ಧಂ ಪಂಚಾಶನ್ನ್ಯಹನದ್ ರಥಾನ್|
ವಿವಿತ್ಸೋಸ್ತು ತತಃ ಕ್ರುದ್ಧೋ ಭಲ್ಲೇನಾಪಾಹರಚ್ಛಿರಃ ॥12॥
ಅವರು ಭೀಮನ ಮೇಲೆ ನಾನಾ ಬಗೆಯ ಬಾಣಸಮೂಹಗಳನ್ನು ಎಲ್ಲಕಡೆಗಳಿಂದ ಎಸೆದರು. ಅವುಗಳಿಂದ ಮಹಾಬಲಶಾಲಿ ಭೀಮಸೇನ ಪೀಡಿತ ನಾಗುವಾಗ, ಅವನು ತನ್ನ ಮೇಲೇರಿ ಬರುತ್ತಿದ್ದ ನಿನ್ನ ಮಕ್ಕಳ ಕಡೆಯ ಐವತ್ತು ರಥಿಕರನ್ನು ಐವತ್ತು ರಥಗಳ ಸಮೇತವಾಗಿ ಪುಡಿಗೈದ. ವಿವಿತ್ಸುವಿನ ಶಿರಸ್ಸನ್ನು ಕೋಪದಿಂದ ಭಲ್ಲೆಯಿಂದ ತರಿದ.
ಭೀಮೇನ ಚ ಮಹಾರಾಜ ಸ ಪಪಾತ ಹತೋ ಭುವಿ ॥13॥
ಸಕುಂಡಲಶಿರಸ್ತ್ರಾಣಂ ಪೂರ್ಣಚಂದ್ರೋಪಮಂ ತದಾ ॥14॥
ಮಹಾರಾಜ, ಪೂರ್ಣಚಂದ್ರ ಸದೃಶವಾದ ಆ ಶಿರಸ್ಸನ್ನು ಕುಂಡಲ ಶಿರಸ್ತ್ರಾಣ ಸಹಿತವಾಗಿಯೇ ಭೀಮ ಕತ್ತರಿಸಿದ. ಹೀಗೆ ವಿವಿತ್ಸು ಭೀಮನಿಂದ ಹತನಾಗಿ ನೆಲದ ಮೇಲೊರಗಿದ.
ತಂ ದೃಷ್ಟ್ವಾ ನಿಹತಂ ಶೂರಂ ಭ್ರಾತರಃ ಸರ್ವತಃ ಪ್ರಭೋ|
ಅಭ್ಯದ್ರವಂತ ಸಮರೇ ಭೀಮಂ ಭೀಮಪರಾಕ್ರಮಮ್ ॥15॥
ಶೂರನಾದ ವಿವಿತ್ಸು ಹತನಾದುದನ್ನು ಕಂಡು ಸೋದರರೆಲ್ಲರೂ ಭಯಂಕರ ಪರಾಕ್ರಮಿಯಾದ ಭೀಮನನ್ನು ಸಮರದಲ್ಲಿ ಆಕ್ರಮಿಸಿದರು.
ತತೋಽಪರಾಭ್ಯಾಂ ಭಲ್ಲಾಭ್ಯಾಂ ಪುತ್ರಯೋಸ್ತೇ ಮಹಾಹವೇ|
ಜಹಾರ ಸಮರೇ ಪ್ರಾಣಾನ್ ಭೀಮೋ ಭೀಮಪರಾಕ್ರಮಃ ॥16॥
ಆಗ ಮಹಾರಣದಲ್ಲಿ ಭಯಂಕರ ಪರಾಕ್ರಮಿ ಭೀಮನು ಇನ್ನೆರಡು ಭಲ್ಲೆಗಳಿಂದ ನಿನ್ನ ಇನ್ನಿಬ್ಬರು ಪುತ್ರರ ಪ್ರಾಣಗಳನ್ನು ಅಪಹರಿಸಿದ.
ತೌ ಧರಾಮನ್ವಪದ್ಯೇತಾಂ ವಾತರುಗ್ಣಾವಿವ ದ್ರುಮೌ|
ವಿಕಟಶ್ಚ ಸಮಶ್ಚೋಭೌ ದೇವಗರ್ಭಸಮೌ ನೃಪ ॥17॥
ರಾಜನೆ, ದೇವಪುತ್ರರಂತಿದ್ದ ವಿಕಟ ಮತ್ತು ಸಮ ಎಂಬ ಇನ್ನಿಬ್ಬರು ನಿನ್ನ ಪುತ್ರರೂ ಕೂಡ ಹತರಾಗಿ ಬಿರುಗಾಳಿಗೆ ಮುರಿದ ಎರಡು ಮರಗಳಂತೆ ನೆಲದಲ್ಲಿ ಒರಗಿದರು.
ತತಸ್ತು ತ್ವರಿತೋ ಭೀಮಃ ಕ್ರಾಥಂ ನಿನ್ಯೇ ಯಮಕ್ಷಯಮ್|
ನಾರಾಚೇನ ಸುತೀಕ್ಷ್ಣೇನ ಸ ಹತೋ ನ್ಯಪತದ್ ಭುವಿ ॥18॥
ಬಳಿಕ ಭೀಮನು ಬೇಗನೆ ಬಲು ತೀಕ್ಷ್ಣವಾದ ಬಾಣದಿಂದ ಕ್ರಾಥನೆಂಬ ನಿನ್ನ ಪುತ್ರನನ್ನು ಕೂಡ ಯಮಲೋಕಕ್ಕೆ ಕಳಿಸಿದ
ಹಾಹಾಕಾರಸ್ತತಸ್ತೀವ್ರಃ ಸಂಬಭೂವ ಜನೇಶ್ವರ|
ವಧ್ಯಮಾನೇಷು ತೇ ರಾಜಂಸ್ತದಾ ಪುತ್ರೇಷು ಧನ್ವಿಷು ॥19॥
ರಾಜನೆ, ಬಿಲ್ಲಾಳುಗಳಾದ ನಿನ್ನ ಪುತ್ರರು ಹೀಗೆ ಹತರಾಗುವಾಗ ತೀವ್ರವಾದ ಹಾಹಾಕಾರ ಉಂಟಾಯಿತು.
ತೇಷಾಂ ಸಂಲುಲಿತೇ ಸೈನ್ಯೇ ಭೀಮಸೇನೋ ಮಹಾಬಲಃ|
ನಂದೋಪನಂದೌ ಸಮರೇ ಪ್ರಾಪಯದ್ ಯಮಸಾದನಮ್ ॥20॥
ನಿನ್ನ ಪುತ್ರರ ಸೈನ್ಯವು ಕ್ಷೋಭೆಗೊಳಗಾದಾಗ ಮಹಾಬಲಿ ಭೀಮಸೇನನು ರಣದಲ್ಲಿ ನಿನ್ನ ಪುತ್ರರಾದ ನಂದಉಪನಂದರನ್ನೂ ಕೂಡ ಯಮಪಟ್ಟಣಕ್ಕೆ ಕಳಿಸಿದ.
ತತಸ್ತೇ ಪ್ರಾದ್ರವನ್ ಭೀತಾಃ ಪುತ್ರಾಸ್ತೇ ವಿಹ್ವಲೀಕೃತಾಃ|
ಭೀಮಸೇನಂ ರಣೇ ದೃಷ್ಟ್ವಾ ಕಾಲಾಂತಕಯಮೋಪಮಮ್ ॥21॥
ಆಗ ನಿನ್ನ ಪುತ್ರರು ರಣದಲ್ಲಿ ಕಾಲಾಂತಕ ಯಮನಂತಿದ್ದ ಭೀಮನನ್ನು ಕಂಡು ಭಯವಿಹ್ವಲತೆಯಿಂದ ಪಲಾಯನ ಮಾಡಿದರು.
ಪುತ್ರಾಂಸ್ತೇ ನಿಹತಾನ್ ದೃಷ್ಟ್ವಾ ಸೂತಪುತ್ರೋ ಸುದುರ್ಮನಾಃ|

ಹಂಸವರ್ಣಾನ್ ಹಯಾನ್ ಭೂಯಃ ಪ್ರಾಹಿಣೋದ್
ಯತ್ರ ಪಾಂಡವಃ ॥22॥
ನಿನ್ನ ಪುತ್ರರು ಹತರಾದುದನ್ನು ಕಂಡು ಕರ್ಣನು ದುಃಖಿತನಾಗಿ ಹಂಸವರ್ಣದ ತನ್ನ ಕುದುರೆಗಳನ್ನು ಪುನಃ ಭೀಮನಿದ್ದಲ್ಲಿಗೆ ನಡೆಸಿದನು.
ತೇ ಪ್ರೇಷಿತಾ ಮಹಾರಾಜ ಮದ್ರರಾಜೇನ ವಾಜಿನಃ |
ಭೀಮಸೇನರಥಂ ಪ್ರಾಪ್ಯ ಸಮಸಜ್ಜಂತ ವೇಗಿತಾಃ ॥23॥
ಮಹಾರಾಜ, ಶಲ್ಯನು ನಡೆಸಿದ ಆ ಕುದುರೆಗಳು ವೇಗದಿಂದ ಭೀಮಸೇನನ ರಥ ಸಮೀಪಕ್ಕೆ ಹೋಗಿ ಇದಿರಿಸಿ ನಿಂತುವು.
ಸ ಸನ್ನಿಪಾತಸ್ತುಮುಲೋ ಘೋರರೂಪೋ ವಿಶಾಂಪತೇ |
ಆಸೀದ್ ರೌದ್ರೋ ಮಹಾರಾಜ ಕರ್ಣಪಾಂಡವಯೋರ್ಮೃಧೇ ॥24॥
ಕರ್ಣನಿಗೂ ಭೀಮನಿಗೂ ನಡೆದ ತುಮುಲ ಯುದ್ಧವು ಘೋರಸ್ವರೂಪ ಹೊಂದಿ ಭೀಕರವಾಗಿತ್ತು.
ದೃಷ್ಟ್ವಾ ಮಮ ಮಹಾರಾಜ ತೌ ಸಮೇತೌ ಮಹಾರಥೌ |
ಆಸೀದ್ ಬುದ್ಧಿಃ ಕಥಂ ನೂನಮೇತದದ್ಯ ಭವಿಷ್ಯತಿ ॥25॥
ಮಹಾರಾಜ, ಅವರಿಬ್ಬರು ಮಹಾರಥರು ಹೋರಾಡುವುದನ್ನು ಕಂಡು ನನಗೆ ಇದರ ಪರ್ಯವಸಾನ ಹೇಗಾದೀತೆಂದು ಚಿಂತೆ ಉಂಟಾಯಿತು
ತತೋ ಭೀಮೋ ರಣಶ್ಲಾಘೀ ಛಾದಯಾಮಾಸ ಪತ್ರಿಭಿಃ |
ಕರ್ಣಂ ರಣೇ ಮಹಾರಾಜ ಪುತ್ರಾಣಾಂ ತವ ಪಶ್ಯತಾಮ್ ॥26॥
ಆಗ ರಣವನ್ನು ಶ್ಲಾಘಿಸುವ ಭೀಮನು ನಿನ್ನ ಪುತ್ರರು ನೋಡುತ್ತಿದ್ದಂತೆಯೇ ಕರ್ಣನನ್ನು ಬಾಣಗಳಿಂದ ಮುಚ್ಚಿಬಿಟ್ಟ.
ತತಃ ಕರ್ಣೋ ಭೃಶಂ ಕ್ರುದ್ಧೋ ಭೀಮಂ ನವಭಿರಾಯಸೈಃ |
ವಿವ್ಯಾಧ ಪರಮಾಸ್ತ್ರಜ್ಞೋ ಭಲ್ಲೈಃ ಸನ್ನತಪರ್ವಭಿಃ ॥27॥
ಮಹಾಪ್ರಾಜ್ಞನಾದ ಕರ್ಣನು ಆಗ ಬಲು ಕುಪಿತನಾಗಿ ಭೀಮನನ್ನು ಡೊಂಕುಗಿಣ್ಣಿನ ಒಂಬತ್ತು ಉಕ್ಕಿನ ಭಲ್ಲೆಗಳಿಂದ ಹೊಡೆದ.
ಆಹತಃ ಸ ಮಹಾಬಾಹುರ್ಭೀಮೋ ಭೀಮಪರಾಕ್ರಮಃ |
ಆಕರ್ಣಪೂರ್ಣೈರ್ವಿಶಿಖೈಃ ಕರ್ಣಂ ವಿವ್ಯಾಧ ಸಪ್ತಭಿಃ ॥28॥
ಹೊಡೆಸಿಕೊಂಡ ಮಹಾಬಾಹು ಭಯಂಕರ ಪರಾಕ್ರಮಿಯಾದ ಭೀಮನು ಕಿವಿಯವರೆಗೆ ಸೆಳೆದು ಏಳು ಬಾಣಗಳಿಂದ ಕರ್ಣನನ್ನು ಪ್ರಹರಿಸಿದ.
ತತಃ ಕರ್ಣೋ ಮಹಾರಾಜ ಆಶೀವಿಷ ಇವ ಶ್ವಸನ್ |
ಶರವರ್ಷೇಣ ಮಹತಾ ಛಾದಯಾಮಾಸ ಪಾಂಡವಮ್ ॥29॥
ಆಗ ಮಹಾರಾಜ, ಕರ್ಣನು ವಿಷಸರ್ಪದಂತೆ ಭುಸುಗುಟ್ಟುತ್ತ ದೊಡ್ಡ ಬಾಣಗಳ ಮಳೆಯಿಂದ ಭೀಮನನ್ನು ಮುಚ್ಚಿದ.
ಭೀಮೋಽಪಿ ತಂ ಶರವ್ರಾತೈಶ್ಛಾದಯಿತ್ವಾ ಮಹಾರಥಮ್ |
ಪಶ್ಯತಾಂ ಕೌರವೇಯಾಣಾಂ ವಿನನರ್ದ ಮಹಾಬಲಃ ॥30॥
ಭೀಮನೂ ಕೂಡ ಮಹಾರಥನಾದ ಕರ್ಣನನ್ನು ಬಾಣಸಮೂಹಗಳಿಂದ ಮುಚ್ಚಿ ಕೌರವಯೋಧರು ನೋಡುತ್ತಿದ್ದಂತೆಯೇ ಗರ್ಜನೆ ಮಾಡಿದ.
ತತಃ ಕರ್ಣೋ ಭೃಶಂ ಕ್ರುದ್ಧೋ ದೃಢಮಾದಾಯ ಕಾರ್ಮುಕಮ್ |
ಭೀಮಂ ವಿವ್ಯಾಧ ದಶಭಿಃ ಕಂಕಪತ್ರೈಃ ಶಿಲಾಶಿತೈಃ ॥31॥
ಆಗ ಕರ್ಣನು ಬಹಳ ಕ್ರುದ್ಧನಾಗಿ ದೃಢವಾದ ಧನುಸ್ಸನ್ನು ಹಿಡಿದು ಸಾಣೆಗಲ್ಲಿನಿಂದ ಹರಿತಮಾಡಿರುವ ಹತ್ತು ಬಾಣಗಳಿಂದ ಭೀಮನನ್ನು ಹೊಡೆದ.
ಕಾರ್ಮುಕಂ ಚಾಸ್ಯ ಚಿಚ್ಛೇದ ಭಲ್ಲೇನ ನಿಶಿತೇನ ಚ |
ತತೋ ಭೀಮೋ ಮಹಾಬಾಹುರ್ಹೇಮಪಟ್ಟವಿಭೂಷಿತಮ್ ॥32॥
ಪರಿಘಂ ಘೋರಮಾದಾಯ ಮೃತ್ಯುದಂಡಮಿವಾಪರಮ್ |
ಕರ್ಣಸ್ಯ ನಿಧನಾಕಾಂಕ್ಷೀ ಚಿಕ್ಷೇಪಾತಿಬಲೋ ನದನ್ ॥33॥
ಮತ್ತು ಭೀಮನ ಬಿಲ್ಲನ್ನೂ ತೀಕ್ಷ್ಣವಾದ ಭಲ್ಲೆಯಿಂದ ಕಡಿದ. ಆಗ ಮಹಾಬಾಹುವಾದ ಭೀಮನು ಬಂಗಾರದ ಪಟ್ಟಿಯಿಂದ ಅಲಂಕೃತವಾದ ಇನ್ನೊಂದು ಯಮದಂಡದಂತಿರುವ ಘೋರವಾದ ಪರಿಘಾಯುಧವನ್ನು ಕರ್ಣನ ನಿಧನಾಕಾಂಕ್ಷಿಯಾಗಿ ಅತಿಬಲವಾಗಿ ಗರ್ಜಿಸುತ್ತ ಎಸೆದ.
ತಮಾಪತಂತಂ ಪರಿಘಂ ವಜ್ರಾಶನಿಸಮಸ್ವನಮ್ |
ಚಿಚ್ಛೇದ ಬಹುಧಾ ಕರ್ಣಃ ಶರೈರಾಶೀವಿಷೋಪಮೈಃ ॥34॥
ವಜ್ರಾಯುಧದಂತೆ ಧ್ವನಿ ಮಾಡುತ್ತ ತನ್ನ ಮೇಲೆ ಬೀಳುತ್ತಿದ್ದ ಆ ಪರಿಘವನ್ನು ಕರ್ಣನು ಹಾವಿನಂಥ ಬಾಣಗಳಿಂದ ಬಹುವಾಗಿ ಕತ್ತರಿಸಿದ.
ತತಃ ಕಾರ್ಮುಕಮಾದಾಯ ಭೀಮೋ ದೃಢತರಂ ತದಾ |
ಛಾದಯಾಮಾಸ ವಿಶಿಖೈಃ ಕರ್ಣಂ ಪರಬಲಾರ್ದನಮ್ ॥35॥
ಚುಕ್ರೋಧ ಪರಮಾಯಸ್ತೋ ದಂಡಾಹತ ಇವೋರಗಃ ॥36॥
ಬಳಿಕ ಭೀಮನು ಹೆಚ್ಚು ದೃಢವಾದ ಬಿಲ್ಲನ್ನೆತ್ತಿಕೊಂಡು ಶತ್ರುಸೈನ್ಯ ನಾಶಕನಾದ ಕರ್ಣನನ್ನು ಬಾಣಗಳಿಂದ ಮುಚ್ಚಿದ. ಕೋಲಿನಿಂದ

ಹೊಡೆಸಿಕೊಂಡು ಬಹಳ ಆಯಾಸಗೊಂಡ ಹಾವಿನಂತೆ ಕೋಪಗೊಂಡ.
ತತೋ ಯುದ್ಧಮಭೂದ್ ಘೋರಂ ಕರ್ಣಪಾಂಡವಯೋರ್ಮೃಧೇ |
ಹರೀಂದ್ರಯೋರಿವ ಮುಹುಃ ಪರಸ್ಪರವಧೈಷಿಣೋಃ ॥37॥
ಆಗ ಕರ್ಣಭೀಮಸೇನರಿಗೆ, ಪರಸ್ಪರ ವಧವನ್ನು ಬಯಸಿದ ಎರಡು ಸಿಂಹಗಳಂತೆ, ಘೋರವಾದ ಯುದ್ಧ ನಡೆಯಿತು.
ತತಃ ಕರ್ಣೋ ಮಹಾರಾಜ ಭೀಮಸೇನಂ ತ್ರಿಭಿಃ ಶರೈಃ |
ಆಕರ್ಣಮೂಲಂ ವಿವ್ಯಾಧ ದೃಢಮಾಯಮ್ಯ ಕಾರ್ಮುಕಮ್ ॥38॥
ಮಹಾರಾಜ, ಕರ್ಣನು ಬಿಲ್ಲನ್ನು ದೃಢವಾಗಿ ಕಿವಿಯ ಬುಡದವರೆಗೆ ಸೆಳೆದು ಮೂರು ಬಾಣಗಳಿಂದ ಭೀಮಸೇನನನ್ನು ಹೊಡೆದ.
ಸೋಽತಿವಿದ್ಧೋ ಮಹೇಷ್ವಾಸಃ ಕರ್ಣೇನ ಬಲಿನಾಂ ವರಃ |
ಘೋರಮಾದತ್ತ ವಿಶಿಖಂ ಕರ್ಣಕಾಯಾವದಾರಣಮ್ ॥39॥
ಮಹಾಬಿಲ್ಗಾರನಾದ ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮಸೇನನು ಕರ್ಣನಿಂದ ಬಹಳ ಹೊಡೆಸಿಕೊಂಡು ಕರ್ಣನ ಶರೀರವನ್ನು ಸೀಳಬಲ್ಲ ಘೋರವಾದ ಬಾಣವನ್ನು ಎತ್ತಿಕೊಂಡ.
ತಸ್ಯ ಭಿತ್ತ್ವಾ ತನುತ್ರಾಣಂ ಭಿತ್ತ್ವಾ ಕಾಯಂ ಚ ಸಾಯಕಃ |
ಪ್ರಾವಿಶದ್ ಧರಣೀಂ ರಾಜನ್ ವಲ್ಮೀಕಮಿವ ಪನ್ನಗಃ ॥40॥
ಆ ಬಾಣವು ಕರ್ಣನ ಕವಚವನ್ನೂ ಶರೀರವನ್ನೂ ಭೇದಿಸಿ ಹಾವು ಹುತ್ತವನ್ನು ಪ್ರವೇಶಿಸುವಂತೆ ನೆಲವನ್ನು ಪ್ರವೇಶಿಸಿತು.
ಸ ತೇನಾತಿಪ್ರಹಾರೇಣ ವ್ಯಥಿತೋ ವಿಹ್ವಲನ್ನಿವ |
ಸಂಚಚಾಲ ರಥೇ ಕರ್ಣಃ ಕ್ಷಿತಿಕಂಪೇ ಯಥಾಚಲಃ ॥41॥
ಆ ಬಾಣದಿಂದ ಅತಿ ಪ್ರಹಾರದಿಂದ ವ್ಯಥಿತನಾಗಿ ವಿಹ್ವಲಗೊಂಡು ಭೂಮಿ ಕಂಪಿಸುವಾಗ ಬೆಟ್ಟ ಅದುರುವಂತೆ ರಥದಲ್ಲಿ ಕರ್ಣ ನಡುಗಿದ.
ತತಃ ಕರ್ಣೋ ಮಹಾರಾಜ ರೋಷಾಮರ್ಷಸಮನ್ವಿತಃ |
ಪಾಂಡವಂ ಪಂಚವಿಂಶತ್ಯಾ ನಾರಾಚಾನಾಂ ಸಮಾರ್ಪಯತ್ ॥42॥
ಬಳಿಕ, ಮಹಾರಾಜ! ಕರ್ಣನು ರೋಷ, ಅಸಹನೆಗಳಿಂದ ಯುಕ್ತನಾಗಿ ಭೀಮನನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದ.
ತತೋ ಮುಹೂರ್ತಾದ್ ರಾಜೇಂದ್ರ ನಾತಿಕೃಚ್ಛ್ರಾದ್ಧಸನ್ನಿವ |
ವಿರಥಂ ಭೀಮಕರ್ಮಾಣಂ ಭೀಮಂ ಕರ್ಣಶ್ಚಕಾರ ಹ ॥43॥
ಮಹಾರಾಜ, ಮುಹೂರ್ತಕಾಲದ ಅನಂತರ ಕರ್ಣನು ನಗುತ್ತ ಅನಾಯಾಸ ವಾಗಿ ಭೀಕರಕಾರ್ಯಕಾರಿಯಾದ ಭೀಮನನ್ನು ವಿರಥನನ್ನಾಗಿ ಮಾಡಿದ.
ವಿರಥೋ ಭರತಶ್ರೇಷ್ಠಃ ಪ್ರಹಸನ್ನನಿಲೋಪಮಃ |
ಗದಾಹಸ್ತೋ ಮಹಾಬಾಹುರಪತತ್ಸ್ಯಂದನೋತ್ತಮಾತ್ ॥44॥
ವಿರಥನಾದ ಮಹಾಬಾಹು ಭೀಮನು ನಗುತ್ತ ಗದೆಯನ್ನು ಹಿಡಿದು ಉತ್ತಮವಾದ ರಥದಿಂದ ಗಾಳಿಯಂತೆ ಕೆಳಗೆ ಧುಮುಕಿದ.
ಕರ್ಣಂ ಶಲ್ಯಂ ಚ ಯುಗಪದ್ ಗದಯಾ ಪ್ರಹಸನ್ನಿವ |
ಅಪಾತಯದ್ ರಥೋಪಸ್ಥೇ ನಿಹತ್ಯ ವಿನನಾದ ಹ ॥45॥
ನಗುತ್ತ ಭೀಮಸೇನನು ಕರ್ಣಶಲ್ಯರಿಬ್ಬರನ್ನೂ ಜೊತೆಯಾಗಿ ಗದೆಯಿಂದ ಹೊಡೆದು ರಥದ ಹಿಂಭಾಗದಲ್ಲಿ ಬೀಳಿಸಿ ಗರ್ಜಿಸಿದ.
ಗದಯಾ ಚ ಮಹಾರಾಜ ಕರ್ಣಸ್ಯ ರಥಕೂಬರಮ್ |
ಪೋಥಯಾಮಾಸ ಸಂಕ್ರುದ್ಧಃ ಸಮರೇ ಶತ್ರುತಾಪನಃ ॥46॥
ಗದೆಯಿಂದ ಕರ್ಣನ ರಥದ ಕೂಬರವನ್ನು ಶತ್ರುತಾಪಕನಾದ ಭೀಮ ರಣದಲ್ಲಿ ಕೋಪದಿಂದ ಪುಡಿಮಾಡಿದ.
ನಾಗಾನ್ ಸಪ್ತಶತಾನ್ ರಾಜನ್ನೀಷಾದಂತಾನ್ ಪ್ರಹಾರಿಣಃ |
ವ್ಯಧಮತ್ ಸಹಸಾ ಭೀಮಃ ಕ್ರುದ್ಧರೂಪಃ ಪರಂತಪಃ ॥47॥
ರಾಜನೆ, ಶತ್ರುತಾಪಕನಾದ ಭೀಮ ಕ್ರುದ್ಧನಾಗಿ ಪ್ರಹಾರ ಸಮರ್ಥವಾದ ಈಷಾ ದಂಡದಂಥ ದಾಡೆಗಳುಳ್ಳ ಏಳುನೂರು ಆನೆಗಳನ್ನು ವೇಗದಿಂದ ಸಂಹರಿಸಿದ.
ದಂತವೇಷ್ಟೇಷು ನೇತ್ರೇಷು ಕುಂಭೇಷು ಸ ಕಟೇಷು ಚ |
ಮರ್ಮಸ್ವಪಿ ಚ ಮರ್ಮಜ್ಞೋ ತಾನ್ನಾಗಾನವಧೀದ್ ಬಲೀ ॥48॥
ಆನೆಗಳ ತುಟಿ ಕಣ್ಣು ಕುಂಭಸ್ಥಳ ಕಪೋಲಗಳಲ್ಲಿಯೂ ಮರ್ಮಸ್ಥಳ ಗಳಲ್ಲಿಯೂ ಬಲಿಷ್ಠನಾದ ಮರ್ಮಜ್ಞನಾದ ಭೀಮನು ಹೊಡೆದು ಸಂಹರಿಸಲು ತೊಡಗಿದ.
ತತಸ್ತೇ ಪ್ರಾದ್ರವನ್ ಭೀತಾಃ ಪ್ರತೀಪಂ ಪ್ರಹಿತಾಃ ಪುನಃ |
ಮಹಾಮಾತ್ರೈಸ್ತಮಾವವ್ರುರ್ಮೇಘಾ ಇವ ದಿವಾಕರಮ್ ॥49॥
ಆನೆಗಳು ಭಯದಿಂದ ಓಡಿದುವು. ಆದರೆ ಮಾವಟಿಗರು ಪುನಃ ಅವುಗಳನ್ನು ಹಿಂತಿರುಗಿಸಿದಾಗ ಮೋಡಗಳು ಸೂರ್ಯನನ್ನು ಆವರಿಸುವಂತೆ ಅವು ಭೀಮನನ್ನು ಸುತ್ತಲೂ ಆವರಿಸಿದುವು.
ತಾನ್ ಸ ಸಪ್ತಶತಾನ್ ನಾಗಾನ್ ಸಾರೋಹಾಯುಧಕೇತನಾನ್ |
ಭೂಮಿಷ್ಠೋ ಗದಯಾ ಜಘ್ನೇ ಶರನ್ಮೇಘಾನಿವಾನಿಲಃ ॥50॥
ಆ ಏಳುನೂರು ಆನೆಗಳನ್ನು ಗಜಾರೋಹಿಗಳ ಆಯುಧಗಳ ಧ್ವಜಗಳ ಸಮೇತವಾಗಿ ಭೀಮನು ನೆಲದಲ್ಲಿದ್ದೇ ಗದೆಯಿಂದ ಹೊಡೆದು ಶರತ್ಕಾಲದ ಮೋಡಗಳನ್ನು ಗಾಳಿ ನಾಶಮಾಡುವಂತೆ ಸಂಹರಿಸಿದ.

ತತಃ ಸುಬಲಪುತ್ರಸ್ಯ ನಾಗಾನತಿಬಲಾನ್ ಪುನಃ |
ಪೋಥಯಾಮಾಸ ಕೌಂತೇಯೋ ದ್ವಿಪಂಚಾಶದರಿಂದಮಃ ||51||
ಶತ್ರುನಾಶಕನಾದ ಭೀಮನು ಪುನಃ ಅತಿ ಬಲಿಷ್ಠವಾದ ಶಕುನಿಯ ಐವತ್ತೆರಡು ಆನೆಗಳನ್ನೂ ಸಂಹರಿಸಿದ.
ತಥಾ ರಥಶತಂ ಸಾಗ್ರಂ ಪತ್ತೀಂಶ್ಚ ಶತಶೋಽಪರಾನ್ |
ನ್ಯಹನತ್ ಪಾಂಡವೋ ಯುದ್ಧೇ ತಾಪಯಂಸ್ತವ ವಾಹಿನೀಮ್ ||52||
ಹಾಗೆ ನೂರಕ್ಕಿಂತಲೂ ಹೆಚ್ಚು ರಥಗಳನ್ನೂ ನೂರಾರು ಬೇರೆ ಪದಾತಿಗಳನ್ನೂ ಭೀಮ ಯುದ್ಧದಲ್ಲಿ ನಾಶಪಡಿಸಿದ, ನಿನ್ನ ಸೈನ್ಯಕ್ಕೆ ಸಂತಾಪ ಉಂಟುಮಾಡಿದ.
ಪ್ರತಾಪ್ಯಮಾನಂ ಸೂರ್ಯೇಣ ಭೀಮೇನ ಚ ಮಹಾತ್ಮನಾ |
ತವ ಸೈನ್ಯಂ ಸಂಚುಕೋಚ ಚರ್ಮಾಗ್ನಾವಾಹಿತಂ ಯಥಾ ||53||
ಸೂರ್ಯನಿಂದಲೂ ಮಹಾತ್ಮನಾದ ಭೀಮನಿಂದಲೂ ಸಂತಾಪಗೊಳಿಸಲ್ಪಟ್ಟ ನಿನ್ನ ಸೈನ್ಯ ಬೆಂಕಿಯಲ್ಲಿ ಹಾಕಿದ ಚರ್ಮದಂತೆ ಮುದುಡಿತು.
ತೇ ಭೀಮಭಯಸನ್ತ್ರಸ್ತಾಸ್ತಾವಕಾ ಭರತರ್ಷಭ |
ವಿಹಾಯ ಸಮರೇ ಕರ್ಣಂ ದುದ್ರುವುರ್ವೈ ದಿಶೋ ದಶ ||54||
ರಾಜನೆ, ಭೀಮನ ಭಯದಿಂದ ವಿಹ್ವಲರಾದ ನಿನ್ನ ಸೈನಿಕರು ರಣದಲ್ಲಿ ಕರ್ಣನನ್ನು ಬಿಟ್ಟು ಹತ್ತು ದಿಕ್ಕುಗಳಿಗೆ ಓಡಿದರು.
ರಥಾಃ ಪಂಚಶತಾಶ್ಚಾನ್ಯೇ ಹ್ರಾದಿನಶ್ಚರ್ಮವರ್ಮಿಣಃ |
ಭೀಮಮಭ್ಯದ್ರವಂಸ್ತೂರ್ಣಂ ಶರಪೂಗೈಃ ಸಮಂತತಃ ||55||
ಐದುನೂರು ರಥಿಕರು ಚರ್ಮದ ಆವರಣಯುಕ್ತವಾದ ಗಂಭೀರ ಶಬ್ದ ಮಾಡುವ ರಥಗಳನ್ನೇರಿ ಎಲ್ಲೆಡೆಗಳಿಂದ ಭೀಮನನ್ನು ಬಾಣಸಮೂಹಗಳಿಂದ ಆಕ್ರಮಿಸಿದರು.
ತಾನ್ ಸಸೂತರಥಾನ್ ಸರ್ವಾನ್ ಸಪತಾಕಾಧ್ವಜಾಯುಧಾನ್ |
ಪೋಥಯಾಮಾಸ ಗದಯಾ ಭೀಮೋ ವಿಷ್ಣುರಿವಾಸುರಾನ್ ||56||
ಅವರನ್ನು ಎಲ್ಲರನ್ನೂ ಸಾರಥಿ ರಥ ಧ್ವಜ ಪತಾಕೆ ಆಯುಧಗಳೊಂದಿಗೇ ಭೀಮನು ಗದೆಯಿಂದ ವಿಷ್ಣು ಅಸುರರನ್ನು ಹೇಗೋ ಹಾಗೆ ನಾಶಪಡಿಸಿದ.
ತತಃ ಶಕುನಿನಿರ್ದಿಷ್ಟಾಃ ಸಾದಿನಃ ಶೂರಸಮ್ಮತಾಃ |
ತ್ರಿಸಾಹಸ್ರಾ ಯಯುರ್ಭೀಮಂ ಶಕ್ತ್ಯ ೃಷ್ಟಿಪ್ರಾಸಪಾಣಯಃ ||57||
ಬಳಿಕ ಶಕುನಿಯ ನಿರ್ದೇಶನದಲ್ಲಿ ಶೂರರೆಂದು ಪ್ರಸಿದ್ಧರಾದ ಮೂರುಸಾವಿರ ಅಶ್ವಾರೋಹಿಗಳು ಶಕ್ತಿ ಋಷ್ಟಿ ಪ್ರಾಸಗಳನ್ನು ಹಿಡಿದು ಭೀಮನನ್ನು ಆಕ್ರಮಿಸಿದರು.
ತಾನ್ ಪ್ರತ್ಯುದ್ಗಮ್ಯ ಯವನಾನಶ್ವಾರೋಹಾನ್ ವರಾರಿಹಾ |
ವಿಚರನ್ ವಿವಿಧಾನ್ ಮಾರ್ಗಾನ್ ಘಾತಯಾಮಾಸ
ಯೋಧಯನ್ ||58||
ಶತ್ರುನಾಶಕನಾದ ಭೀಮನು ಆ ಅಶ್ವಾರೋಹಿ ಯವನರನ್ನು ನಾನಾ ಬಗೆಯ ಮಾರ್ಗಗಳಲ್ಲಿ ಸಂಚರಿಸುತ್ತ ಗದೆಯಿಂದ ಹೊಡೆದು ಸಂಹರಿಸಿದ.
ತೇಷಾಮಾಸೀನ್ಮಹಾನ್ ಶಬ್ದಸ್ತಾಡಿತಾನಾಂ ಚ ಸರ್ವಶಃ |
ಅಶ್ಮಭಿಶ್ಛಿದ್ಯಮಾನಾನಾಂ ತಾಲಾನಾಮಿವ ಭಾರತ ||59||
ಭೀಮನು ಅವರನ್ನು ಹೊಡೆಯುವಾಗ ತಾಲವೃಕ್ಷಗಳಿಗೆ ಸಿಡಿಲು ಬಡಿವಂಥ ಮಹಾಶಬ್ದಗಳೇ ಎಲ್ಲೆಡೆ ಕೇಳಿಬರುತ್ತಿತ್ತು.
ಏವಂ ಸುಬಲಪುತ್ರಸ್ಯ ತ್ರಿಸಾಹಸ್ರಾನ್ ಹಯೋತ್ತಮಾನ್ |
ಹತ್ವಾನ್ಯಂ ರಥಮಾಸ್ಥಾಯ ಕ್ರುದ್ಧೋ ರಾಧೇಯಮಭ್ಯಯಾತ್ ||60||
ಹೀಗೆ ಶಕುನಿಯ ಮೂರುಸಾವಿರ ಅಶ್ವಸೈನ್ಯಗಳನ್ನು ಕೊಂದು ಇನ್ನೊಂದು ರಥವನ್ನೇರಿ ಕ್ರುದ್ಧನಾಗಿ ಕರ್ಣನ ಕಡೆಗೇ ಧಾವಿಸಿದ ಭೀಮಸೇನ.
ಕರ್ಣೋಽಪಿ ಸಮರೇ ರಾಜನ್ ಧರ್ಮಪುತ್ರಮರಿಂದಮಮ್ |
ಶರೈಃ ಪ್ರಚ್ಛಾದಯಾಮಾಸ ಸಾರಥಿಂ ಚಾಪ್ಯಪಾತಯತ್ ||61||
ಭೀಮನು ಕರ್ಣನ ಕಡೆಗೆ ಏಕೆ ಧಾವಿಸಿದನೆಂದರೆ ಕರ್ಣನು ಆಗ ರಣದಲ್ಲಿ ಶತ್ರುನಾಶಕನಾದ ಯುಧಿಷ್ಠಿರನನ್ನು ಬಾಣಗಳಿಂದ ಆಚ್ಛಾದಿಸುತ್ತಿದ್ದ, ಅವನ ಸಾರಥಿಯನ್ನೂ ಸಂಹರಿಸುತ್ತಿದ್ದ.
ತತಃ ಸಂಪ್ರದ್ರುತಂ ಸಂಖ್ಯೇ ರಥಂ ದೃಷ್ಟ್ವಾ ಮಹಾರಥಃ |
ಅನ್ವಧಾವತ್ ಕಿರನ್ ಬಾಣೈಃ ಕಂಕಪತ್ರೈರಜಿಹ್ಮಗೈಃ |62||
ಮತ್ತು ಮಹಾರಥನಾದ ಕರ್ಣನು ರಣದಲ್ಲಿ ಪಲಾಯನ ಮಾಡುತ್ತಿದ್ದ
ಯುಧಿಷ್ಠಿರನ ರಥವನ್ನು ಬೆನ್ನಟ್ಟುತ್ತಿದ್ದ. ಅಜಿಹ್ಮಗ ಎಂಬ ಬಾಣಗಳಿಂದ ಆವರಿಸುತ್ತಿದ್ದ.
ರಾಜಾನಮಭಿಧಾವಂತಂ ಶರೈರಾವೃತ್ಯ ರೋದಸೀ |
ಕ್ರುದ್ಧಃ ಪ್ರಚ್ಛಾದಯಾಮಾಸ ಶರಜಾಲೇನ ಮಾರುತಿಃ ||53||
ಅದಕ್ಕೆ ಯುಧಿಷ್ಠಿರನನ್ನು ಬೆನ್ನಟ್ಟಿ ಹೋಗುತ್ತಿದ್ದ ಕರ್ಣನನ್ನು ಭೀಮನು ಬಾಣಗಳಿಂದ ತಡೆದು ಭೂಮ್ಯಂತರಿಕ್ಷಗಳನ್ನು ಬಾಣಸಮೂಹದಿಂದ ಆಚ್ಛಾದಿಸಿದ.

ಸನ್ನಿವೃತ್ತಸ್ತತಸ್ತೂರ್ಣಂ ರಾಧೇಯಃ ಶತ್ರುಕರ್ಶನಃ |
ಭೀಮಂ ಪ್ರಚ್ಛಾದಯಾಮಾಸ ಸಮಂತಾತ್ ನಿಶಿತೈಃ ಶರೈಃ ॥64॥
ಶತ್ರುನಾಶಕನಾದ ಕರ್ಣನು ಬೇಗನೆ ಹಿಂತಿರುಗಿ ಭೀಮನನ್ನು ಎಲ್ಲೆಡೆ ತೀಕ್ಷ್ಣವಾದ ಬಾಣಗಳಿಂದ ಆಚ್ಛಾದಿಸಿದ.
ಭೀಮಸೇನರಥವ್ಯಗ್ರಂ ಕರ್ಣಂ ಭಾರತ ಸಾತ್ಯಕಿಃ |
ಅಭ್ಯರ್ದಯದಮೇಯಾತ್ಮಾ ಪಾರ್ಷ್ಣಿಗ್ರಹಣಕಾರಣಾತ್ ॥65॥
ಕರ್ಣನು ಭೀಮಸೇನನ ರಥನಾಶಕ್ಕೇ ಹೆಚ್ಚು ಯತ್ನಿಸುವುದನ್ನು ಕಂಡು ಸಾತ್ಯಕಿ ಅವನನ್ನು ಆಕ್ರಮಿಸಲು ತೊಡಗಿದ. ಏಕೆಂದರೆ ಭೀಮರಥದ ಹಿಂಭಾಗದ ರಕ್ಷಕನು ಸಾತ್ಯಕಿಯಾಗಿದ್ದ.
ಅಭ್ಯವರ್ತತ ಕರ್ಣಸ್ತಮರ್ದಿತೋಽಪಿ ಶರೈರ್ಭೃಶಮ್ ॥66॥
ಸಾತ್ಯಕಿಯಿಂದ ಕರ್ಣನು ಬಹಳ ಪೀಡಿತನಾದರೂ ಕರ್ಣನು ಅವನನ್ನು ಕೂಡ ಆಕ್ರಮಿಸಿದ.
ತಾವನ್ಯೋನ್ಯಂ ಸಮಾಸಾದ್ಯ ವೃಷಭೌ ಸರ್ವಧನ್ವಿನಾಮ್ |
ವಿಸೃಜಂತೌ ಶರಾಂಶ್ಚಿತ್ರಾನ್ ವಿಭ್ರಾಜೇತಾಂ ಮನಸ್ವಿನೌ ॥67॥
ಎಲ್ಲ ಬಿಲ್ಲಾಳುಗಳಲ್ಲಿ ಶ್ರೇಷ್ಠರಾದ ಆ ಸಾತ್ಯಕಿ, ಕರ್ಣರು ಪರಸ್ಪರ ಆಕ್ರಮಣ ಮಾಡಿ ಬಾಣಪ್ರಯೋಗದಲ್ಲಿ ಕುಶಲರಾದ ಅವರು ನಾನಾಬಗೆಯ ಬಾಣಗಳನ್ನು ಪ್ರಯೋಗಿಸುತ್ತ ಶೋಭಿಸಿದರು.
ತಾಭ್ಯಾಂ ವಿಯತಿ ರಾಜೇಂದ್ರ ವಿತತಂ ಭೀಮದರ್ಶನಮ್ |
ಕ್ರೌಂಚಪೃಷ್ಠಾರುಣಂ ರೌದ್ರಂ ಬಾಣಜಾಲಂ ವ್ಯದೃಶ್ಯತ ॥68॥
ಕ್ರೌಂಚದ ಪೃಷ್ಠದಂತೆ ಕೆಂಪಾದ ಭಯಂಕರ ಬಾಣಸಮೂಹವನ್ನು ಅವರಿಬ್ಬರು ಆಕಾಶದಲ್ಲಿ ಹರಡಿದಾಗ ನೋಡಲು ಭೀಕರವಾಗಿ ಕಂಡುಬಂದಿತು.
ನೈವ ಸೂರ್ಯಪ್ರಭಾಂ ಖಂ ವಾ ನ ದಿಶಃ ಪ್ರದಿಶಃ ಕುತಃ |
ಪ್ರಾಜ್ಞಾಸಿಷ್ಮ ವಯಂ ತಾಭ್ಯಾಂ ಶರೈರ್ಮುಕ್ತೈಃ ಸಹಸ್ರಶಃ ॥69॥
ಸಾವಿರಾರು ಬಾಣಗಳನ್ನು ಅವರು ಇಬ್ಬರೂ ಎಸೆದುದರಿಂದ ನಾವು ಸೂರ್ಯಪ್ರಭೆಯನ್ನಾಗಲಿ ಆಕಾಶವನ್ನಾಗಲಿ ಕಾಣಲಿಲ್ಲ. ಇನ್ನು ದಿಕ್ಕು ವಿದಿಕ್ಕುಗಳನ್ನು ಕಾಣುವುದೆಂತು?
ಮಧ್ಯಾಹ್ನೇ ತಪತೋ ರಾಜನ್ ಭಾಸ್ಕರಸ್ಯ ಮಹಾಪ್ರಭಾಃ |
ಹತಾಃ ಸರ್ವಾಃ ಶರೌಘೈಸ್ತೈಃ ಕರ್ಣಮಾಧವಯೋಸ್ತದಾ ॥70॥
ರಾಜನೆ, ಸಾತ್ಯಕಿ ಮತ್ತು ಕರ್ಣರ ಬಾಣಪ್ರವಾಹಗಳಿಂದ ಮಧ್ಯಾಹ್ನದಲ್ಲಿ ಉರಿಯುವ ಸೂರ್ಯನ ಪ್ರಭೆಯೆಲ್ಲವೂ ಮಂಕಾಗಿ ಹೋಯಿತು.
ಸೌಬಲಂ ಕೃತವರ್ಮಾಣಂ ದ್ರೌಣಿಮಾಧಿರಥಿಂ ಕೃಪಮ್ |
ಸಂಸಕ್ತಾನ್ ಪಾಂಡವೈರ್ದೃಷ್ಟ್ವಾ ನಿವೃತ್ತಾಃ ಕುರವಃ ಪುನಃ ॥71॥
ಶಕುನಿ ಕೃತವರ್ಮ ಅಶ್ವತ್ಥಾಮ ಕರ್ಣ ಮತ್ತು ಕೃಪರೂ ಪಾಂಡವರೊಡನೆ ಯುದ್ಧಕ್ಕೆ ತೊಡಗಿದ್ದನ್ನು ಕಂಡು ಕುರುಸೈನಿಕರು ಓಡಿ ಹೋಗಿದ್ದವರು ಹಿಂತಿರುಗಿದರು.
ತೇಷಾಮಾಪತತಾಂ ಶಬ್ದಸ್ತೀವ್ರ ಆಸೀದ್ ವಿಶಾಂಪತೇ |
ಉದ್ಧೂತಾನಾಂ ಯಥಾ ವೃಷ್ಟ್ಯಾ ಸಾಗರಾಣಾಂ ಭಯಾವಹಃ ॥72॥
ರಾಜನೆ, ಮಳೆಯಿಂದ ಉಕ್ಕಿದ ಸಾಗರಗಳ ಶಬ್ದದಂತೆ ಕುರುಸೈನಿಕರ ಆಗಮನದಿಂದ ತೀವ್ರವಾದ ಶಬ್ದ ಉಂಟಾಯಿತು.
ತೇ ಸೇನೇ ಭೃಶಸಂವಿಗ್ನೇ ದೃಷ್ಟ್ವಾನ್ಯೋನ್ಯಂ ಮಹಾರಣೇ |
ಹರ್ಷೇಣ ಮಹತಾ ಯುಕ್ತೇ ಪರಿಗೃಹ್ಯ ಪರಸ್ಪರಮ್ ॥73॥
ಕೌರವಪಾಂಡವರ ಸೈನ್ಯಗಳು ಮಹಾರಣದಲ್ಲಿ ಪರಸ್ಪರ ನೋಡಿ ಮಹಾ ಹರ್ಷಯುಕ್ತವಾಗಿ ಪರಸ್ಪರ ಆಕ್ರಮಣ ಮಾಡುತ್ತ ಬಹಳ ಉದ್ವೇಗಗೊಂಡುವು.
ತತಃ ಪ್ರವವೃತೇ ಯುದ್ಧಂ ಮಧ್ಯಂ ಪ್ರಾಪ್ತೇ ದಿವಾಕರೇ |
ಯಾದೃಶಂ ನ ಕದಾಚಿದ್ಧಿ ದೃಷ್ಟಪೂರ್ವಂ ನ ಚ ಶ್ರುತಮ್ ॥74॥
ಸೂರ್ಯನು ಆಕಾಶದಲ್ಲಿ ಮಧ್ಯಕ್ಕೆ ಬಂದಾಗ, ಹಿಂದೆ ಎಂದೂ ಕಂಡರಿಯದಿದ್ದ ಕೇಳರಿಯದಿದ್ದ ಯುದ್ಧ ನಡೆಯಿತು.
ಬಲೌಘಸ್ತು ಸಮಾಸಾದ್ಯ ಬಲೌಘಂ ಸಹಸಾ ರಣೇ |
ಉಪಾಸರ್ಪತ ವೇಗೇನ ಜಲೌಘ ಇವ ಸಾಗರಮ್ ॥75॥
ನೀರಿನ ಪ್ರವಾಹ ವೇಗದಿಂದ ಸಾಗರವನ್ನು ಸೇರುವಂತೆ ರಣದಲ್ಲಿ ಸೇನಾಪ್ರವಾಹವು ಸೇನಾಪ್ರವಾಹವನ್ನು ಆಕ್ರಮಿಸಿ ವೇಗದಿಂದ ಘಟ್ಟಿಸಿತು.
ಆಸೀನ್ನಿನಾದಃ ಸುಮಹಾನ್ ಬಲೌಘಾನಾಂ ಪರಸ್ಪರಮ್ |
ಗರ್ಜತಾಂ ಸಾಗರೌಘಾಣಾಂ ಯಥಾ ಸ್ಯಾನ್ನಿಸ್ವನೋ ಮಹಾನ್ ॥76॥
ಸೇನಾಪ್ರವಾಹಗಳು ಪರಸ್ಪರ ಗರ್ಜಿಸಿದ್ದರಿಂದ, ಸಾಗರಪ್ರವಾಹಗಳು ಪರಸ್ಪರ ಸೇರಿದಾಗ ಮಹಾಶಬ್ದ ಉಂಟಾಗುವಂತೆ, ಬಲುದೊಡ್ಡ ಶಬ್ದವೇ ಉಂಟಾಯಿತು.
ತೇ ತು ಸೇನೇ ಸಮಾಸಾದ್ಯ ವೇಗವತ್ಯೌ ಪರಸ್ಪರಮ್ |
ಏಕಭಾವಮನುಪ್ರಾಪ್ತೇ ನದ್ಯಾವಿವ ಸಮಾಗಮೇ ॥77॥
ವೇಗವುಳ್ಳ ಎರಡು ನದಿಗಳು ಸೇರಿದಾಗ ಅವು ಒಂದಾಗುವಂತೆ ವೇಗವುಳ್ಳ ಆ ಎರಡು ಸೇನೆಗಳು ಪರಸ್ಪರ ಸೇರಿದಾಗ ಅವು

ಒಂದಾದುವು.
ತತಃ ಪ್ರವವೃತೇ ಯುದ್ಧಂ ಘೋರರರೂಪಂ ವಿಶಾಂಪತೇ |
ಕುರೂಣಾಂ ಪಾಂಡವಾನಾಂ ಚ ಲಿಪ್ಸತಾಂ ಸುಮಹದ್ಯಶಃ ||78||
ರಾಜನೆ, ಆಗ ಬಲುದೊಡ್ಡ ಯಶಸ್ಸನ್ನು ಪಡೆಯುವಾಸೆ ಮಾಡಿದ ಕುರು ಪಾಂಡವ ಸೇನೆಗಳಿಗೆ ಪರಸ್ಪರ ಭೀಕರ ಸ್ವರೂಪದ ಯುದ್ಧ ನಡೆಯಿತು.
ಶೂರಾಣಾಂ ಗರ್ಜತಾಂ ತತ್ರ ಸಾಧಿಕ್ಷೇಪಕೃತಾ ಗಿರಃ |
ಶ್ರೂಯಂತೇ ವಿವಿಧಾ ರಾಜನ್ನಾಮಾನ್ಯುದ್ದಿಶ್ಯ ಸರ್ವತಃ ||79||
ರಾಜನೆ, ಶೂರರು ಒಬ್ಬರು ಇನ್ನೊಬ್ಬರ ಹೆಸರುಹೇಳಿ ಗರ್ಜಿಸುತ್ತ ಆಕ್ಷೇಪ ಯುಕ್ತವಾದ ನಾನಾ ಬಗೆಯ ಮಾತುಗಳನ್ನಾಡುವುದು ಎಲ್ಲೆಡೆ ಕೇಳಿಬಂದಿತು.
ಯಸ್ಯ ಯದ್ಧಿ ರಣೇ ವ್ಯಂಗಂ ಪಿತೃತೋ ಮಾತೃತೋಽಪಿ ವಾ |
ಕರ್ಮತಃ ಶೀಲತೋ ವಾಪಿ ಸ ತಚ್ಛ್ರಾವಯತೇ ಯುಧಿ ||80||
ರಣದಲ್ಲಿ ಒಬ್ಬನು ಇನ್ನೊಬ್ಬನಲ್ಲಿ ತಂದೆತಾಯಿಗಳ ಅಥವಾ ಕರ್ಮಶೀಲಗಳ ಸಂಬಂಧದಿಂದ ಯಾವುದು ಕುಂದು ಇರುವುದೋ ಅದನ್ನೆತ್ತಿ ಹೇಳಿದ.
ತಾನ್ ದೃಷ್ಟ್ವಾ ಸಮರೇ ಶೂರಾಂಸ್ತರ್ಜಯಾನಾನ್ ಪರಸ್ಪರಮ್ |
ಅಭವನ್ಮೇ ಮತೀ ರಾಜನ್ನೈಷಾಮಸ್ತೀತಿ ಜೀವಿತಮ್ ||81||
ಸಮರದಲ್ಲಿ ಶೂರರು ಪರಸ್ಪರ ನಿಂದಿಸುವುದನ್ನು ಕಂಡಾಗ ಇವರಿಗೆ ಇನ್ನು ಉಳಿಗಾಲವಿಲ್ಲವೆಂದೇ ನನಗೆ ಅನ್ನಿಸಿತು.
ತೇಷಾಂ ದೃಷ್ಟ್ವಾ ತು ಕ್ರುದ್ಧಾನಾಂ ವಪೂಂಷ್ಯಮಿತತೇಜಸಾಮ್ |
ಅಭವನ್ಮೇ ಭಯಂ ತೀವ್ರಂ ಕಥಮೇತದ್ ಭವಿಷ್ಯತಿ ||82||
ಮಹಾ ಅಮಿತ ಪರಾಕ್ರಮಿಗಳಾದ ಕ್ರುದ್ಧರಾದ ಆ ಶೂರರ ಶರೀರಗಳನ್ನು ನೋಡಿ ನನಗೆ ತೀವ್ರ ಭಯವುಂಟಾಯಿತು. ಇನ್ನು ಮುಂದೆ ಇದು ಹೇಗಾದೀತೆಂದು.
ತತಸ್ತೇ ಪಾಂಡವಾ ರಾಜನ್ ಕೌರವಾಶ್ಚ ಮಹಾರಥಾಃ |
ತತಕ್ಷುಃ ಸಾಯಕೈಸ್ತೀಕ್ಷ್ಣೈರ್ನಿಘ್ನಂತೋ ಹಿ ಪರಸ್ಪರಮ್ ||83||
ಆಗ ರಾಜನೆ, ಮಹಾರಥರಾದ ಪಾಂಡವರೂ ಕೌರವರೂ ತೀಕ್ಷ್ಣವಾದ ಬಾಣಗಳಿಂದ ಪರಸ್ಪರ ಹೊಡೆದು ಕತ್ತರಿಸಿದರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ||48||

ನಲವತ್ತೊಂಬತ್ತನೆಯ ಅಧ್ಯಾಯ
ಘೋರವಾದ ಯುದ್ಧದಲ್ಲಿ ಕೌರವಸೈನ್ಯವು ಸಾಗರದಲ್ಲಿ ಒಡೆದ ನೌಕೆಯಂತಾಯಿತು.
ಸಂಜಯಃ
ಕ್ಷತ್ರಿಯಾಸ್ತೇ ಮಹಾರಾಜ ಪರಸ್ಪರವಧೈಷಿಣಃ |
ಅನ್ಯೋನ್ಯಂ ಸಮರೇ ಜಘ್ನುಃ ಕೃತವೈರಾಃ ಪರಸ್ಪರಮ್ ||1||
ಸಂಜಯ ನುಡಿದ– ಮಹಾರಾಜ, ಪರಸ್ಪರ ವೈರಮಾಡಿದ್ದರಿಂದ ಪರಸ್ಪರ ವಧೇಚ್ಛುಗಳಾಗಿ ಆ ಕ್ಷತ್ರಿಯರು ರಣದಲ್ಲಿ ಪರಸ್ಪರ ಹೊಡೆದುಕೊಂಡರು.
ರಥೌಘಾಶ್ಚ ಹಯೌಘಾಶ್ಚ ನರೌಘಾಶ್ಚ ಸಮಂತತಃ |
ಗಜೌಘಾಶ್ಚ ಮಹಾರಾಜ ಸಂಸಕ್ತಾಃ ಸ್ಮ ಪರಸ್ಪರಮ್ ||2||
ಮಹಾರಾಜ, ರಥಸಮೂಹ, ಅಶ್ವಸಮೂಹ, ಪದಾತಿಸಮೂಹ, ಗಜಸಮೂಹಗಳು ಎಲ್ಲ ಕಡೆ ಪರಸ್ಪರವಾಗಿ ಇದಿರಿಸಿದುವು.
ಗದಾನಾಂ ಪರಿಘಾಣಾಂ ಚ ಕಣಪಾನಾಂ ಚ ಸರ್ಪತಾಮ್ |
ಪ್ರಾಸಾನಾಂ ಭಿಂಡಿಪಾಲಾನಾಂ ಮುಸಲಾನಾಂ ಚ ಸರ್ವಶಃ ||3||
ಸಂಪಾತಂ ಚಾನ್ವಪಶ್ಯಾಮ ಸಂಗ್ರಾಮೇ ಭೃಶದಾರುಣೇ |
ಶಲಭಾ ಇವ ಸಂಪೇತುಃ ಸಮಂತಾತ್ ಶರವೃಷ್ಟಯಃ ||4||
ಗದೆ, ಪರಿಘ, ಕಣಪ, ಪ್ರಾಸ, ಭಿಂಡಿಪಾಲ, ಮುಸಲಗಳು ಅತ್ಯಂತ ದಾರುಣವಾದ ಸಂಗ್ರಾಮದಲ್ಲಿ ಸರ್ವತ್ರ ಮೈಮೇಲೆ ಹಾರಿ ಬೀಳುವುದನ್ನು ನಾವು ಕಂಡೆವು. ಬಾಣಗಳ ಮಳೆಗಳು ಎಲ್ಲೆಡೆ ಮಿಡತೆಗಳಂತೆ ಹಾರಿಬಿದ್ದವು.
ನಾಗಾ ನಾಗಾನ್ ಸಮಾಸಾದ್ಯ ವ್ಯಧಮಂತ ಪರಸ್ಪರಮ್ |
ಹಯಾ ಹಯಾಂಶ್ಚ ಸಮರೇ ರಥಿನೋ ರಥಿನಸ್ತಥಾ ||5||
ಪತ್ತಯಃ ಪತ್ತಿಸ್ಸೈಂಶ್ಚ ಸಮಾಸಾದ್ಯ ಪರಸ್ಪರಮ್ ||6||
ಸಮರದಲ್ಲಿ ಗಜಗಳು ಗಜಗಳನ್ನು, ಅಶ್ವಗಳು ಅಶ್ವಗಳನ್ನು, ರಥಿಕರು ರಥಿಕರನ್ನು, ಪದಾತಿಗಳು ಪದಾತಿಗಳನ್ನು ಪರಸ್ಪರ ಆಕ್ರಮಿಸಿ ಸಂಹರಿಸಿದರು.
ಪತ್ತಯೋ ರಥಮಾತಂಗಾನ್ ರಥಾ ಹಸ್ತ್ಯಶ್ವಮೇವ ಚ |
ನಾಗಾಶ್ಚ ಸಮರೇ ತ್ರ್ಯಂಗಂ ಮಮೃದುಃ ಶೀಘ್ರಗಾ ನೃಪ ||7||
ಶೀಘ್ರಗಾಮಿಗಳಾದ ಪದಾತಿಗಳು ರಥಗಜಗಳನ್ನು, ರಥಗಳು ಗಜ ಅಶ್ವಗಳನ್ನು, ಗಜಗಳು ಅಶ್ವರಥಪದಾತಿಗಳೆಂಬ ಮೂರು

ಸೇನಾಂಗಗಳನ್ನು ಮರ್ದನ ಮಾಡಿದುವು.
ವಧ್ಯತಾಂ ತತ್ರ ಶೂರಾಣಾಂ ಕ್ರೋಶತಾಂ ಚ ಪರಸ್ಪರಮ್ |
ಘೋರಮಾಯೋಧನಂ ಜಜ್ಞೇ ಪಶೂನಾಂ ವೈಶಸಂ ಯಥಾ ॥8॥
ಶೂರರು ಪರಸ್ಪರ ಹತರಾಗಿ ಕೂಗಿಕೊಳ್ಳುವ ಆ ಘೋರವಾದ ರಣರಂಗವು ಪಶುಗಳ ವಧೆ ಮಾಡುವ ಕಸಾಯಿಖಾನೆಯಂತಾಯಿತು.
ರುಧಿರೇಣ ಸಮಾಸ್ತೀರ್ಣಾ ಭಾತಿ ಭಾರತ ಮೇದಿನೀ |
ಶಕ್ರಗೋಪಗಣಾಕೀರ್ಣಾ ಪ್ರಾವೃಷೀವ ಯಥಾ ಧರಾ ॥9॥
ರಾಜನೆ, ನೆತ್ತರಿಂದ ಒದ್ದೆಯಾದ ಆ ರಣಭೂಮಿ ಮಳೆಗಾಲದಲ್ಲಿ ಶಕ್ರಗೋಪ (ಒನಕೆ ಬಂಡೆಹುಳು)ಗಳಿಂದ ವ್ಯಾಪ್ತವಾದ ನೆಲದಂತೇ ಕಂಡಿತು.
ಯಥಾ ವಾ ವಾಸಸೀ ಶುಕ್ಲೇ ಮಹಾರಜನರಂಜಿತೇ |
ಬಿಭೃಯಾದ್ ಯುವತಿಃ ಶ್ಯಾಮಾ ತದ್ವದಾಸೀದ್ ವಸುಂಧರಾ ॥10॥
ಮಾಂಸಶೋಣಿತಚಿತ್ರೇವ ಶಾತಕೌಂಭಮಯೀವ ಚ ॥11॥
ಕುಸುಬೆ ಹೂವಿನ ರಂಗು ಹಾಕಿದ ಬಿಳಿ ಬಟ್ಟೆಗಳನ್ನುಟ್ಟ ಶ್ಯಾಮಲವರ್ಣದ ಯುವತಿಯಂತೆ, ಮಾಂಸರಕ್ತಗಳಿಂದ ಚಿತ್ರ ಬರೆದಂತೆ ಸುವರ್ಣಮಯವಾದಂತೆ ರಣಭೂಮಿ ಕಂಡುಬಂದಿತು.
ಛಿನ್ನಾನಾಂ ಚೋತ್ತಮಾಂಗಾನಾಂ ಬಾಹೂನಾಂ ಚೋರುಭಿಃ ಸಹ |
ಕುಂಡಲಾನಾಂ ಪ್ರವಿದ್ಧಾನಾಂ ಭೂಷಣಾನಾಂ ಚ ಭಾರತ ॥12॥
ನಿಷ್ಕಾಣಾಮಧಿಸೂತ್ರಾಣಾಂ ಶರೀರಾಣಾಂ ಚ ಧನ್ವಿನಾಮ್ |
ವರ್ಮಣಾಂ ಸಪತಾಕಾನಾಂ ಸಂಘಾಸ್ತತ್ರಾಪತನ್ ಭುವಿ ॥13॥
ಬಿಲ್ಲಾಳುಗಳ ಕಡಿದ ತಲೆ ತೋಳು ತೊಡೆಗಳು ಕುಂಡಲ ಭೂಷಣ ಹಾರಗಳು, ಶರೀರಗಳು ಕವಚಗಳು ಪತಾಕೆಗಳು ಇವು ರಾಶಿರಾಶಿಯಾಗಿ ಆ ರಣಭೂಮಿಯಲ್ಲಿ ಬಿದ್ದುವು.
ಗಜಾನ್ ಗಜಾಃ ಸಮಾಸಾದ್ಯ ವಿಷಾಣಾಗ್ರೈರದಾರಯನ್ |
ವಿಷಾಣಾಭಿಹತಾಸ್ತೇ ಚ ಭ್ರಾಜಂತೇ ದ್ವಿರದಾ ಯಥಾ ॥14॥
ರುಧಿರೇಣಾವಸಿಕ್ತಾಂಗಾ ಗೈರಿಕಪ್ರಭವಾ ಇವ |
ಯಥಾ ಭ್ರಾಜಂತಿ ಸ್ಯಂದಂತಃ ಪರ್ವತಾ ಧಾತುಮಂಡಿತಾಃ ॥15॥
ಗಜಗಳು ಗಜಗಳನ್ನು ಇದಿರಿಸಿ ದಾಡೆಗಳ ತುದಿಗಳಿಂದ ಸೀಳಿದುವು. ದಾಡೆಗಳ ಇರಿತದಿಂದ ಮೈಯೆಲ್ಲ ರಕ್ತದಿಂದ ತೊಯ್ದು, ಗೈರಿಕಗಳ ಉತ್ಪತ್ತಿಸ್ಥಾನವಾಗಿದ್ದು ಗೈರಿಕಧಾತುಗಳಿಂದ ಅಲಂಕೃತವಾದ ಬೆಟ್ಟಗಳು ಗೈರಿಕಪ್ರವಾಹವನ್ನು ಹರಿಸುತ್ತ ಹೇಗೆ ಕಾಣುವುವೋ ಹಾಗೇ ಈ ಗಜಗಳೂ ಕಂಗೊಳಿಸಿದುವು.
ತೋಮರಾನ್ ಗಜಿಭಿರ್ಮುಕ್ತಾನ್ ಪ್ರತೀಪಾನಾಸ್ಥಿತಾನ್ ಬಹೂನ್ |
ಹಸ್ತೈರ್ವಿಚಿಕ್ಷಿಪುರ್ನಾಗಾ ಬಭಂಜುಶ್ಚಾಪರೇ ತಥಾ ॥16॥
ಗಜಾರೋಹಿಗಳು ಎಸೆದ ಬಹಳ ತೋಮರಗಳನ್ನು ಗಜಗಳು ಎದುರಿಗೇ ಹಿಡಿದು ಕೆಲವು ಸೊಂಡಿಲಿನಿಂದ ತಿರುಗಿ ಅವರಿಗೇ ಎಸೆದುವು, ಬೇರೆ ಕೆಲವು ಮುರಿದುವು.
ನಾರಾಚೈಶ್ಛಿನ್ನವರ್ಮಾಣೋ ಭ್ರಾಜಂತೇ ಸ್ಮ ಗಜೋತ್ತಮಾಃ |
ಹಿಮಾಗಮೇ ಮಹಾರಾಜ ವ್ಯಭ್ರಾ ಇವ ಮಹೀಧರಾಃ ॥17॥
ಮಹಾರಾಜನೆ, ಬಾಣಗಳಿಂದ ಕವಚಗಳನ್ನು ಕಳೆದುಕೊಂಡ ಮಹಾಗಜಗಳು ಹೇಮಂತದಲ್ಲಿ ಮೋಡಗಳನ್ನು ಕಳೆದುಕೊಂಡ ಬೆಟ್ಟಗಳಂತೆ ಕಂಗೊಳಿಸಿದುವು.
ಶರೈಃ ಕನಕಪುಂಖೈಸ್ತು ಚಿತಾ ರೇಜುರ್ಗಜೋತ್ತಮಾಃ |
ಉಲ್ಕಾಭಿಃ ಸಂಪ್ರದೀಪ್ತಾಗ್ರಾಃ ಪರ್ವತಾ ಇವ ಮಾರಿಷ ॥18॥
ರಾಜನೆ, ಬಂಗಾರದ ಪುಕ್ಕವುಳ್ಳ ಬಾಣಗಳಿಂದ ಆವೃತವಾದ ಗಜಗಳು ಉಲ್ಕೆಗಳಿಂದ ಅಗ್ರಭಾಗದಲ್ಲಿ ಬೆಳಗುವ ಬೆಟ್ಟಗಳಂತೆ ಶೋಭಿಸಿದುವು.
ಕೇಚಿದಭ್ಯಾಹತಾ ನಾಗಾ ನಾಗೈರ್ನಗನಿಭಾ ಭುವಿ |
ನಿಪೇತುಃ ಸಮರೇ ತಸ್ಮಿನ್ ಛಿನ್ನಪಕ್ಷಾ ಇವಾದ್ರಯಃ ॥19॥
ಬೆಟ್ಟದಂಥ ಗಜಗಳು ಕೆಲವು ಗಜಗಳಿಂದ ಹೊಡೆಯಲ್ಪಟ್ಟು, ರೆಕ್ಕೆ ಕಡಿದುಕೊಂಡ ಬೆಟ್ಟಗಳಂತೆ, ಆ ಯುದ್ಧದಲ್ಲಿ ನೆಲದಲ್ಲಿ ಒರಗಿದುವು.
ಅಪರೇ ಪ್ರಾದ್ರವನ್ನಾಗಾಃ ಶಲ್ಯಾರ್ತಾ ವ್ರಣಪೀಡಿತಾಃ |
ಪ್ರತಿಮಾನೈಶ್ಚ ಕುಂಭೈಶ್ಚ ಪೇತುರುರ್ವ್ಯಾಂ ಮಹಾಹವೇ ॥20॥
ಬೇರೆ ಗಜಗಳು ಓಡಿಹೋದುವು. ಬಾಣಗಳ ಇರಿತದಿಂದ ಸಂಕಟಪಡುತ್ತ, ಗಾಯಗಳಿಂದ ನರಳುತ್ತ ಕುಂಭಸ್ಥಳಗಳನ್ನು ಮತ್ತು ಅವುಗಳ ಕೆಳಭಾಗಗಳನ್ನು ಆಧರಿಸಿ ನೆಲದಲ್ಲಿ ಒರಗಿದುವು.
ವಿನೇದುಃ ಸಂಹತಾಶ್ಚಾನ್ಯೇ ನದಂತೋ ಭೈರವಾನ್ ರವಾನ್ |
ಬಭ್ರಮುರ್ಬಹವೋ ರಾಜಂಶ್ಚುಕ್ರುಶುಶ್ಚ ತಥಾಪರೇ ॥21॥
ಕೆಲವು ಗಜಗಳು ಚೆನ್ನಾಗಿ ಹೊಡೆಯಲ್ಪಟ್ಟು ಭೀಕರ ಶಬ್ದವಾಗುವಂತೆ ಘೀಳಿಟ್ಟವು. ಬಹಳ ಆನೆಗಳು ಸುತ್ತು ಸುತ್ತಿದುವು. ಕೆಲವು ನೋವಿನಿಂದ ಕೂಗಿದವು.

ಹಯಾಶ್ಚ ನಿಹತಾ ಬಾಣೈಃ ಸ್ವರ್ಣಭಾಂಡಪರಿಚ್ಛದಾಃ |
ವಿನೇದುಶ್ಚೈವ ಪೇತುಶ್ಚ ಬಭ್ರಮುಶ್ಚ ದಿಶೋ ದಶ ॥22॥
ಕುದುರೆಗಳೂ ಬಾಣಗಳಿಂದ ಬಹಳ ಹೊಡೆಯಲ್ಪಟ್ಟು ಬಂಗಾರದ ಆಭರಣ ಸಲಕರಣೆಗಳುಳ್ಳವು ಕೆಲವು ಜೋರಾಗಿ ಕೆನೆದುವು, ಬಿದ್ದುವು. ಕೆಲವು ಹತ್ತು ದಿಕ್ಕುಗಳಲ್ಲಿ ಸುತ್ತಿದುವು.
ಅಪರೇ ಕ್ಲಿಶ್ಯಮಾನಾಶ್ಚ ವಿವೇಷ್ಟಂತೋ ಮಹೀತಳೇ |
ಭಾವಾನ್ ಬಹುವಿಧಾಂಶ್ಚಕ್ರುಸ್ತಾಡಿತಾಃ ಶರತೋಮರೈಃ ॥23॥
ಕೆಲವು ಅಶ್ವಗಳು ವೇದನೆಪಡುತ್ತ ನೆಲದಲ್ಲಿ ಹೊರಳಿದುವು. ಶರ ತೋಮರ ಗಳಿಂದ ಹೊಡೆಯಲ್ಪಟ್ಟು ಬಹುವಿಧವಾದ ಭಾವಗಳನ್ನು ವ್ಯಕ್ತಪಡಿಸಿದುವು.
ನರಾಸ್ತು ನಿಹತಾ ಭೂಮೌ ಕೂಜಂತಸ್ತತ್ರ ಮಾರಿಷ |
ದೃಷ್ಟ್ವಾ ಚ ಬಾಂಧವಾನನ್ಯೇ ಪಿತೄನನ್ಯೇ ಪಿತಾಮಹಾನ್ ॥24॥
ಕಾಲಾಳುಗಳು ಚೆನ್ನಾಗಿ ಹೊಡೆಯಲ್ಪಟ್ಟು ನೆಲದಲ್ಲಿ ಕೆಲವರು ಬಾಂಧವರನ್ನು, ಕೆಲವರು ಪಿತೃಗಳನ್ನು, ಕೆಲವರು ಪಿತಾಮಹರನ್ನು ಕಂಡು ಕೂಗಿದರು.
ಧಾವಮಾನಾನ್ ಪರಾಂಶ್ಚೈವ ದೃಷ್ಟ್ವಾನ್ಯೇ ತತ್ರ ಭಾರತ |
ಗೋತ್ರನಾಮಾನಿ ಖ್ಯಾತಾನಿ ಶಶಂಸುರಿತರೇತರಮ್ ॥25॥
ಕಾಲಾಳುಗಳು ಕೆಲವರು ತಾವು ಹತರಾದರೂ, ಶತ್ರುಗಳೂ ಕೂಡ ಪಲಾಯನ ಮಾಡುತ್ತಿರುವುದನ್ನು ಕಂಡು ಹೆಮ್ಮೆಯಿಂದ ತಮಗೆ ತಾವೇ ಪರಸ್ಪರವಾಗಿ ತಮ್ಮ ಪ್ರಸಿದ್ಧ ನಾಮಗೋತ್ರಗಳನ್ನು ಹೇಳಿಕೊಳ್ಳುತ್ತಿದ್ದರು.
ತೇಷಾಂ ಛಿನ್ನಾ ಮಹಾರಾಜ ಭುಜಾಃ ಕನಕಭೂಷಣಾಃ |
ಉದ್ವೇಷ್ಟಂತೇ ವಿವೇಷ್ಟಂತೇ ಪತಂತೇ ಚೋತ್ಪತಂತಿ ಚ ॥26॥
ನಿಪತಂತಿ ತಥಾ ಭೂಮೌ ಸ್ಫುರಂತಿ ಚ ಸಹಸ್ರಶಃ |
ವೇಗಾಂಶ್ಚಾನ್ಯೇ ರಣೇ ಚಕ್ರುಃ ಸ್ಫುರಂತ ಇವ ಪನ್ನಗಾಃ ॥27॥
ಅವರ ಚಿನ್ನಾಭರಣ ಭೂಷಿತವಾದ ಬಾಹುಗಳು ಕಡಿದುಬಿದ್ದು ಸುತ್ತುತ್ತವೆ, ಹೊರಳುತ್ತವೆ, ಬೀಳುತ್ತವೆ, ಏಳುತ್ತವೆ, ಪುನಃ ನೆಲದಲ್ಲಿ ಬೀಳುತ್ತವೆ, ನಡುಗುತ್ತವೆ, ಹಾಗೇ ಸಾವಿರಾರು ಬಾಹುಗಳು ನಡುಗುತ್ತಲೇ, ನಡುಗುವ ಹಾವುಗಳಂತೆ, ರಣದಲ್ಲಿ ವೇಗವನ್ನು ತೋರಿದುವು.
ತೇ ಭುಜಾ ಭೋಗಿಭೋಗಾಭಾಶ್ಚಂದನಾಕ್ತಾ ವಿಶಾಂಪತೇ |
ಲೋಹಿತಾರ್ದ್ರಾ ಭೃಶಂ ರೇಜುಸ್ತಪನೀಯಧ್ವಜಾ ಇವ ॥28॥
ರಾಜನೆ, ಆ ಬಾಹುಗಳು ಹಾವಿನ ಶರೀರದಂತೆ ನೀಳವಾಗಿದ್ದು ಚಂದನ ಲಿಪ್ತವಾಗಿದ್ದು ಈಗ ನೆತ್ತರಿಂದ ತೊಯ್ದು ಬಂಗಾರದ ಧ್ವಜಸ್ತಂಭಗಳಂತೆ ಬಹಳ ಶೋಭಿಸಿದುವು.
ವರ್ತಮಾನೇ ತಥಾ ಘೋರೇ ಸಂಕುಲೇ ಸರ್ವತೋದಿಶಮ್ |
ಅವಿಜ್ಞಾತಾಃ ಸ್ಮ ಯುಧ್ಯಂತೇ ವಿನಿಘ್ನಂತಃ ಪರಸ್ಪರಮ್ ॥29॥
ಎಲ್ಲ ದಿಕ್ಕುಗಳಲ್ಲಿ ಹೀಗೆ ಭಯಂಕರ ಯುದ್ಧ ನಡೆಯುತ್ತಿದ್ದಾಗ ಯೋಧರು ತಮ್ಮವರನ್ನೂ ಶತ್ರುಗಳನ್ನೂ ಗುರುತು ಹಿಡಿಯಲಾರದೆ ಹೊಡೆಯುತ್ತ ಕಾದಿದರು.
ಭೌಮೇನ ರಜಸಾ ಕೀರ್ಣೇ ಶಸ್ತ್ರಸಂಪಾತಸಂಕುಲೇ |
ನೈವ ಸ್ವೇ ನ ಪರೇ ರಾಜನ್ ವ್ಯಜ್ಞಾಯಂತ ತಮೋವೃತೇ ॥30॥
ಘೋರವಾದ ಶಸ್ತ್ರಪ್ರಹಾರಯುದ್ಧದಲ್ಲಿ ನೆಲದ ಧೂಳು ಎಲ್ಲೆಡೆ ತುಂಬಿದ್ದರಿಂದ, ರಾಜನೆ, ಕತ್ತಲು ತುಂಬಿದ ರಣಾಂಗಣದಲ್ಲಿ ತಮ್ಮವರೂ ಕಾಣಲಿಲ್ಲ, ಪರರೂ ಕಾಣಲಿಲ್ಲ.
ತಥಾ ತದಭವದ್ಯುದ್ಧಂ ಘೋರರೂಪಂ ಭಯಾನಕಮ್ |
ಶೋಣಿತೋದಾ ಮಹಾನದ್ಯಃ ಪ್ರಸಸ್ರುಸ್ತತ್ರ ಚಾಸಕೃತ್ ॥31॥
ಹಾಗೆ ಘೋರಸ್ವರೂಪದ ಭಯಾನಕವಾದ ಯುದ್ಧ ಅದಾಗಿತ್ತು. ರಕ್ತಜಲದ ಮಹಾನದಿಗಳು ಮತ್ತೆ ಮತ್ತೆ ಅಲ್ಲಿ ಹರಿದುವು.
ಶೀರ್ಷಪಾಷಾಣಸಂಛನ್ನಾಃ ಕೇಶಶೈವಲಶಾದ್ವಲಾಃ |
ಅಸ್ಥಿಮೀನಸಮಾಕೀರ್ಣಾ ಧನುಶ್ಶರಗದೋಡುಪಾಃ ॥32॥
ಆ ರಕ್ತನದಿಗಳಲ್ಲಿ ಯೋಧರ ತಲೆಗಳೇ ಬಂಡೆಕಲ್ಲುಗಳು. ತಲೆಕೂದಲುಗಳೇ ಪಾಚಿ ಹಸಿರು ಹುಲ್ಲುಗಳು. ಎಲುಬುಗಳೇ ಮೀನುಗಳು. ಧನುರ್ಬಾಣಗದೆಗಳೇ ದಾಟಿಸುವ ದೋಣಿಗಳು.
ಮಾಂಸಶೋಣಿತಪಂಕಿನ್ಯೋ ಶೋಣಿತೌಘಾಃ ಸುದಾರುಣಾಃ |
ನದೀಃ ಪ್ರವರ್ತಯಾಮಾಸುರ್ಯಮರಾಷ್ಟ್ರವಿವರ್ಧನೀಃ ॥33॥
ಭೀರುವಿತ್ರಾಸಕಾರಿಣ್ಯಃ ಶೂರಾಣಾಂ ಹರ್ಷವರ್ಧನಾಃ ॥34॥
ಮಾಂಸರಕ್ತಮಯವಾದ ಕೆಸರು ನೆತ್ತರಿನ ಪ್ರವಾಹಗಳುಳ್ಳ ಬಲುದಾರುಣ ವಾದ ಯಮರಾಜ್ಯದ ವೃದ್ಧಿಗೆ ಕಾರಣವಾದ ನದಿಗಳನ್ನು ಯೋಧರು ಉಂಟು ಮಾಡಿದರು. ಅವು ಹೇಡಿಗಳಿಗೆ ಭಯ ಹುಟ್ಟಿಸಿದರೂ ಶೂರರಿಗೆ ಉತ್ಸಾಹವನ್ನೇ ಹೆಚ್ಚಿಸುತ್ತಿದ್ದುವು
ತಾ ನದ್ಯೋ ಘೋರರೂಪಾಶ್ಚ ನಯಂತ್ಯೋ ಯಮಸಾದನಮ್ |
ಅವಗಾಢಾ ಮಜ್ಜಯಂತ್ಯಃ ಕ್ಷತ್ರಸ್ಯಾಜನಯನ್ ಭಯಮ್ ॥35॥
ಆ ನದಿಗಳು ಘೋರ ಸ್ವರೂಪದವುಗಳು, ಯಮಲೋಕಕ್ಕೆ ದಾರಿಯಾದುವು. ಅಲ್ಲಿ ಮುಳುಗು ಹಾಕುವವರನ್ನು ಅವು ಮುಳುಗಿಸಿಯೇ

ಬಿಟ್ಟುವು. ಕ್ಷತ್ರಿಯ ಜಾತಿಗೇ ಭಯ ಉಂಟುಮಾಡಿದುವು.
ಕ್ರವ್ಯಾದಾನಾಂ ನರವ್ಯಾಘ್ರ ನರ್ದತಾಂ ತತ್ರ ತತ್ರ ಹ |
ಘೋರಮಾಯೋಧನಂ ಜಜ್ಞೇ ಪ್ರೇತರಾಜಪುರೋಪಮಮ್ ॥36॥
ರಾಜನೆ, ಮಾಂಸಾಹಾರಿಪ್ರಾಣಿಗಳು ಅಲ್ಲಲ್ಲಿ ಕೂಗುತ್ತಿದ್ದುದರಿಂದ ಘೋರವಾದ ಆ ರಣಭೂಮಿ ಸ್ಮಶಾನದಂತಾಯಿತು.
ಉತ್ಥಿತಾನ್ಯಗಣೇಯಾನಿ ಕಬಂಧಾನಿ ಸಮಂತತಃ |
ನೃತ್ಯಂತಿ ವೈ ಭೂತಗಣಾಃ ಸಂತೃಪ್ತಾ ಮಾಂಸಶೋಣಿತೈಃ ॥37॥
ಎಲ್ಲೆಡೆ ಲೆಕ್ಕವಿಲ್ಲದಷ್ಟು ಮುಂಡಗಳು ಎದ್ದುನಿಂತವು. ಭೂತಗಣಗಳು ಮಾಂಸರಕ್ತಗಳಿಂದ ಸಂತೃಪ್ತವಾಗಿ ಕುಣಿದವು.
ಪೀತ್ವಾ ಚ ಶೋಣಿತಂ ತತ್ರ ವಸಾಂ ಪೀತ್ವಾ ಚ ಭಾರತ |
ಮೇದೋಮಜ್ಜಾವಸಾತೃಪ್ತಾಸ್ತೃಪ್ತಾ ಮಾಂಸಸ್ಯ ಚೈವ ಹಿ ॥38॥
ಧಾವಮಾನಾಶ್ಚ ದೃಶ್ಯಂತೇ ಕಾಕಗೃಧ್ರಬಕಾಸ್ತಥಾ ॥39॥
ರಕ್ತವನ್ನು ಕುಡಿದು, ಕೊಬ್ಬನ್ನೂ ಉಂಡು, ಮೇದ ಮಜ್ಜೆ ವಸಾ ಮಾಂಸಗಳಿಂದ ತೃಪ್ತವಾದ ಕಾಗೆ ಹದ್ದು ಬಕಗಳು ಅಲ್ಲಿ ಹಾರಾಡುವುದು ಕಂಡು ಬಂದಿತು.
ಶೂರಾಸ್ತು ಸಮರೇ ರಾಜನ್ ಭಯಂ ತ್ಯಕ್ತ್ವಾ ಸುದುಸ್ತ್ಯಜಮ್ |
ಯೋಧವ್ರತಂ ಸಮಾಸ್ಥಾಯ ಚಕ್ರುಃ ಕರ್ಮಾಣ್ಯಭೀತವತ್ ॥40॥
ಆದರೂ, ರಾಜನೆ, ಶೂರರು ರಣದಲ್ಲಿ ಬಿಡಲಾಗದ ಭಯವನ್ನೂ ಬಿಟ್ಟು ಯೋಧರ ವ್ರತವನ್ನು ಕೈಗೊಂಡು ನಿರ್ಭಯರಾಗಿ ಯುದ್ಧಕರ್ಮಗಳನ್ನು ನಡೆಸಿದರು.
ಶರಶಕ್ತಿಸಮಾಕೀರ್ಣೇ ಕ್ರವ್ಯಾದಗಣಸಂಕುಲೇ |
ವ್ಯಚರಂತ ರಣೇ ಶೂರಾಃ ಖ್ಯಾಪಯಂತಃ ಸ್ವಪೌರುಷಮ್ ॥41॥
ಶರ ಶಕ್ತಿಗಳಿಂದ ತುಂಬಿದ, ಮಾಂಸಾಶಿ ಪ್ರಾಣಿ ಸಮೂಹಗಳಿಂದಲೂ ತುಂಬಿದ ರಣಭೂಮಿಯಲ್ಲಿ ಶೂರರು ತಮ್ಮ ಪೌರುಷವನ್ನು ಪ್ರದರ್ಶಿಸುತ್ತ ಸಂಚರಿಸಿದರು.
ಅನ್ಯೋನ್ಯಂ ಶ್ರಾವಯಂತಿ ಸ್ಮ ನಾಮಗೋತ್ರಾಣಿ ಭಾರತ |
ಪಿತೃನಾಮಾನಿ ಚ ರಣೇ ಗೋತ್ರನಾಮಾನಿ ಚಾಭಿತಃ ॥42॥
ಶ್ರಾವಯಂತೋ ಹಿ ಬಹವಸ್ತತ್ರ ಯೋಧಾ ವಿಶಾಂಪತೇ |
ಅನ್ಯೋನ್ಯಂ ಸಮರೇ ಘ್ನಂತಿ ಶಕ್ತಿತೋಮರಪಟ್ಟಿಶೈಃ ॥43॥
ಶೂರರು ರಣಭೂಮಿಯಲ್ಲಿ ಪರಸ್ಪರ ನಾಮ, ಗೋತ್ರಗಳನ್ನು ಹೇಳಿಕೊಳ್ಳುತ್ತಾರೆ, ಪಿತೃನಾಮಗಳನ್ನೂ ಗೋತ್ರ ನಾಮಗಳನ್ನೂ ಎಲ್ಲರಿಗೂ ಕೇಳಿಸುವಂತೆ ಹೇಳುತ್ತ ರಾಜನೆ, ಸಮರಾಂಗಣದಲ್ಲಿ ಬಹಳ ಯೋಧರು ಶಕ್ತಿ ತೋಮರ ಪಟ್ಟಿಶಗಳಿಂದ ಪರಸ್ಪರ ವಧಿಸುತ್ತಾರೆ.
ವರ್ತಮಾನೇ ತದಾ ಯುದ್ಧೇ ಘೋರರೂಪೇ ಸುದಾರುಣೇ |
ವ್ಯಷೀದತ್ ಕೌರವೀ ಸೇನಾ ಭಿನ್ನಾ ನೌರಿವ ಸಾಗರೇ ॥44॥
ಹೀಗೆ ಘೋರ ಸ್ವರೂಪದ ಅತಿದಾರುಣವಾದ ಯುದ್ಧ ನಡೆಯುತ್ತಿದ್ದಾಗ, ಕೌರವಸೇನೆಯು ಸಾಗರದಲ್ಲಿ ಮುರಿದ ನೌಕೆಯಂತೆ ವ್ಯಾಕುಲಗೊಂಡಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಸಂಕುಲಯುದ್ಧೇ ಏಕೋನಪಂಚಾಶೋಽಧ್ಯಾಯಃ ॥49॥

ಐವತ್ತನೆಯ ಅಧ್ಯಾಯ
ಹತ್ತುಸಾವಿರ ಸಂಶಪ್ತಕ ಯೋಧರನ್ನು ಅರ್ಜುನ ಸಂಹರಿಸುತ್ತಾನೆ.
ಸಂಜಯಃ
ವರ್ತಮಾನೇ ತದಾ ಯುದ್ಧೇ ಕ್ಷತ್ರಿಯಾಣಾಂ ನಿಮಜ್ಜನೇ |
ಗಾಂಡೀವಸ್ಯ ಮಹಾನ್ ಘೋಷಃ ಶುಶ್ರುವೇ ಯುಧಿ ಮಾರಿಷ ॥1॥
ಸಂಜಯ ನುಡಿದ– ರಾಜನೆ, ಕ್ಷತ್ರಿಯರೆಲ್ಲರನ್ನೂ ತನ್ನಲ್ಲಿ ಮುಳುಗಿಸಿ ಬಿಡುವಂಥ ಯುದ್ಧ ನಡೆಯುತ್ತಿದ್ದಾಗ ರಣದಲ್ಲಿ ಗಾಂಡೀವದ ಮಹಾಘೋಷ ಕೇಳಿಸಿತು.
ಸಂಶಪ್ತಕಾನಾಂ ಕದನಮಕರೋದ್ ಯತ್ರ ಪಾಂಡವಃ |
ಕೋಸಲಾನಾಂ ತಥಾ ರಾಜನ್ ನಾರಾಯಣಬಲಸ್ಯ ಚ ॥2॥
ರಾಜನೇ! ಆ ಯುದ್ಧದಲ್ಲಿ ಅರ್ಜುನನು ಸಂಶಪ್ತಕರ ಕೋಸಲರ ಮತ್ತು ನಾರಾಯಣ ಸೈನ್ಯದ ಸಂಹಾರ ಮಾಡುತ್ತಿದ್ದ.
ಸಂಶಪ್ತಕಾಸ್ತು ಸಮರೇ ಶರವೃಷ್ಟಿಂ ಸಮಂತತಃ |
ಅಪಾತಯನ್ ಪಾರ್ಥಮೂರ್ಧ್ನಿ ಜಯಗೃದ್ಧಾಃ ಪ್ರಮನ್ಯವಃ ॥3॥
ಸಂಶಪ್ತಕರು ರಣದಲ್ಲಿ ಪಾರ್ಥನ ತಲೆಯ ಮೇಲೆ ಎಲ್ಲ ಕಡೆಗಳಿಂದ ಬಾಣಗಳ ಮಳೆಯನ್ನು ಬೀಳಿಸಿದರು. ಅವರು ಜಯಾಕಾಂಕ್ಷಿಗಳು ಬಹಳ ಕೋಪಿಗಳು.
ತಾಂ ವೃಷ್ಟಿಂ ಸಹಸಾ ರಾಜನ್ ತರಸಾ ಧಾರಯನ್ ಪ್ರಭುಃ |
ವ್ಯಗಾಹತ ರಣೇ ಪಾರ್ಥೋ ವಿನಿಘ್ನನ್ ರಥಿನಾಂ ವರಃ ॥4॥

ರಾಜನೆ, ರಥಿಕರಲ್ಲಿ ಶ್ರೇಷ್ಠನಾದ ಸಮರ್ಥನಾದ ಅರ್ಜುನನು ಒಡನೆ ಆ ಬಾಣಗಳ ಮಳೆಯನ್ನು ಸಹನಶಕ್ತಿಯಿಂದ ಧಾರಣ ಮಾಡುತ್ತ ವೇಗದಿಂದ ನಾಶಮಾಡುತ್ತ ರಣದಲ್ಲಿ ಮುಳುಗುಹಾಕಿದ.
ನಿಗೃಹ್ಯ ತು ರಥಾನೀಕಂ ಕಂಕಪತ್ರೈಃ ಶಿಲಾಶಿತೈಃ |
ಆಸಸಾದ ರಣೇ ಪಾರ್ಥಃ ಸುಶರ್ಮಾಣಂ ಮಹಾರಥಮ್ ॥5॥
ಸಾಣೆ ಹಿಡಿದು ತೀಕ್ಷ್ಣವಾಗಿರುವ ಬಾಣಗಳಿಂದ ರಥಸೈನ್ಯವನ್ನು ನಿಗ್ರಹಿಸಿ ಅರ್ಜುನನು ಮಹಾರಥನಾದ ಸುಶರ್ಮನನ್ನು ರಣದಲ್ಲಿ ಆಕ್ರಮಿಸಿದ.
ಸ ತಸ್ಯ ಶರವರ್ಷಾಣಿ ವವರ್ಷ ರಥಿನಾಂ ವರಃ |
ತಥಾ ಸಂಶಪ್ತಕಾಶ್ಚೈವ ಪಾರ್ಥಂ ಬಾಣೈ ಸಮಾರ್ಪಯನ್ ॥6॥
ರಥಿಕರಲ್ಲಿ ಶ್ರೇಷ್ಠನಾದ ಅರ್ಜುನನು ಸುಶರ್ಮನ ಮೇಲೆ ಬಾಣಗಳ ಮಳೆಗಳನ್ನು ಸುರಿಸಿದ. ಹಾಗೇ ಸಂಶಪ್ತಕರೂ ಬಾಣಗಳಿಂದ ಅರ್ಜುನನನ್ನು ಇದಿರಿಸಿ ನಿಂತರು.
ಸುಶರ್ಮಾ ತು ತತಃ ಪಾರ್ಥಂ ವಿದ್ಧ್ವಾ ನವಭಿರಾಶುಗೈಃ |
ಜನಾರ್ದನಂ ತ್ರಿಭಿರ್ಬಾಣೈರಭ್ಯಹನ್ ದಕ್ಷಿಣೇ ಭುಜೇ ॥7॥
ಸುಶರ್ಮನು ಅರ್ಜುನನನ್ನು ಒಂಬತ್ತು ಬಾಣಗಳಿಂದ ಹೊಡೆದು ಕೃಷ್ಣನನ್ನೂ ಬಲಭುಜದಲ್ಲಿ ಬಾಣಗಳಿಂದ ಹೊಡೆದ.
ತತೋಽಪರೇಣ ಭಲ್ಲೇನ ಕೇತುಂ ವಿವ್ಯಾಧ ಮಾರಿಷ ॥8॥
ಸ ವಾನರವರೋ ರಾಜನ್ ವಿಶ್ವಕರ್ಮಕೃತೋ ಮಹಾನ್ |
ನನಾದ ಸುಮಹನ್ನಾದಂ ಭೀಷಯನ್ ವೈ ನನರ್ತ ಚ ॥9॥
ಸುಶರ್ಮನು ಅರ್ಜುನನ ಧ್ವಜವನ್ನು ಇನ್ನೊಂದು ಭಲ್ಲೆಯಿಂದ ಹೊಡೆದ. ರಾಜನೆ, ವಿಶ್ವಕರ್ಮಕೃತವಾದ ಧ್ವಜದಲ್ಲಿ ಸನ್ನಿಹಿತನಾದ ಮಹಾ ವಾನರೋತ್ತಮನು ಎಲ್ಲರನ್ನೂ ಅತಿಯಾಗಿ ಭಯಪಡಿಸುತ್ತಾ ದೊಡ್ಡ ಗರ್ಜನೆ ಮಾಡಿ ಕುಣಿದ.
ಕಪೇಸ್ತು ನಿನದಂ ಶ್ರುತ್ವಾ ಸಂತ್ರಸ್ತಾ ತವ ವಾಹಿನೀ |
ಭಯಂ ವಿಪುಲಮಾದಾಯ ನಿಶ್ಚೇಷ್ಟಾ ಸಮಪದ್ಯತ ॥10॥
ಕಪಿಯ ಗರ್ಜನೆಯನ್ನು ಕೇಳಿ ನಿನ್ನ ಸೈನ್ಯ ನಡುಗಿತು. ಅತ್ಯಂತ ಭಯಾವಿಷ್ಟವಾಗಿ ನಿಶ್ಚೇಷ್ಟವಾಯಿತು.
ತತಃ ಸಾ ಶುಶುಭೇ ಸೇನಾ ನಿಶ್ಚೇಷ್ಟಾವಸ್ಥಿತಾ ನೃಪ |
ನಾನಾಪುಷ್ಪಸಮಾಕೀರ್ಣಂ ಯಥಾ ಚೈತ್ರರಥಂ ವನಮ್ ॥11॥
ರಾಜನೆ, ನಿಶ್ಚೇಷ್ಟವಾಗಿ ನಿಂತ ಸೈನ್ಯ ನಾನಾ ಪುಷ್ಪಗಳಿಂದ ತುಂಬಿದ ಚೈತ್ರರಥವೆಂಬ ವನದಂತೆ ಶೋಭಿಸಿತು.
ಪ್ರತಿಲಭ್ಯ ತತಃ ಸಂಜ್ಞಾಂ ಯೋಧಾಸ್ತೇ ಕುರುಸತ್ತಮ |
ಅರ್ಜುನಂ ಸಿಷಿಚುರ್ಬಾಣೈಃ ಪರ್ವತಂ ಜಲದಾ ಇವ ॥122॥
ಬಳಿಕ, ರಾಜನೆ, ಎಚ್ಚರಗೊಂಡ ಯೋಧರು, ಪರ್ವತದ ಮೇಲೆ ಮೋಡಗಳು ಮಳೆಗರೆಯುವಂತೆ ಅರ್ಜುನನ ಮೇಲೆ ಬಾಣಗಳ ಮಳೆಗಳನ್ನು ಸಿಂಪಡಿಸಿದರು.
ಪರಿವವ್ರುಸ್ತದಾ ಸರ್ವೇ ಪಾಂಡವಸ್ಯ ಮಹಾರಥಮ್ ॥13॥
ತೇ ಹಯಾನ್ ರಥಚಕ್ರೇ ಚ ರಥೇಷಾಶ್ಚಾಪಿ ಭಾರತ |
ನಿಗೃಹ್ಯ ಬಲವತ್ತೂರ್ಣಂ ಸಿಂಹನಾದಮಥಾನದನ್ ॥14॥
ಸಂಶಪ್ತಕ ಯೋಧರೆಲ್ಲರೂ ಅರ್ಜುನನ ಮಹಾರಥವನ್ನು ಸುತ್ತುವರಿದರು. ಅವರು ಕೆಲವರು ಕುದುರೆಗಳನ್ನೂ ರಥಚಕ್ರಗಳನ್ನೂ ರಥದ ಈಷಾದಂಡಗಳನ್ನೂ ಬಲವಂತವಾಗಿ ತಡೆಹಿಡಿದು ಬೇಗನೆ ಸಿಂಹಗರ್ಜನೆ ಮಾಡಿದರು.
ಅಪರೇ ಜಗೃಹುಶ್ಚೈವ ಕೇಶವಸ್ಯ ಮಹಾಭುಜೌ |
ಪಾರ್ಥಮನ್ಯೇ ಮಹಾರಾಜ ರಥಸ್ಥಂ ಜಗೃಹುರ್ಮುದಾ ॥15॥
ಇನ್ನು ಕೆಲವರು ಕೃಷ್ಣನ ಎರಡೂ ಮಹಾಬಾಹುಗಳನ್ನು ಹಿಡಿದುಕೊಂಡರು. ಇನ್ನು ಕೆಲವರು, ಮಹಾರಾಜ, ರಥದಲ್ಲಿದ್ದ ಅರ್ಜುನನು ಸಿಕ್ಕಿದನೆಂದು ಸಂತೋಷದಿಂದ ಹಿಡಿದುಕೊಂಡರು.
ಕೇಶವಸ್ತು ತದಾ ಬಾಹೂ ವಿಧುನ್ವನ್ ರಣಮೂರ್ಧನಿ |
ಪಾತಯಾಮಾಸ ತಾನ್ ಸರ್ವಾನ್ ದುಷ್ಟಹಸ್ತೀವ ಹಸ್ತಿಪಾನ್ ॥16॥
ಶ್ರೀಕೃಷ್ಣ ಆಗ ರಣರಂಗದ ಮುಂಭಾಗದಲ್ಲಿ, ದುಷ್ಟಗಜವು ಮಾವುತರನ್ನು ಕೆಡೆಯುವಂತೆ, ಅವರೆಲ್ಲರನ್ನೂ ಕೂಡ ತೋಳುಗಳನ್ನು ಕೊಡಹುವುದರ ಮೂಲಕ ಕೆಳಗೆ ಉದುರಿಸಿದ.
ತತಃ ಕ್ರುದ್ಧೋ ರಣೇ ಪಾರ್ಥಃ ಸಂವೃತಸ್ತೈರ್ಮಹಾರಥೈಃ |
ನಿಗೃಹೀತಂ ರಥಂ ದೃಷ್ಟ್ವಾ ಕೇಶವಂ ಚಾಪ್ಯಭಿದ್ರುತಮ್ ॥17॥
ರಥಾರೂಢಾಂಶ್ಚ ಸುಬಹೂನ್ ಪದಾತೀಂಶ್ಚಾಪ್ಯಪಾತಯತ್ ॥18॥
ಅರ್ಜುನ ಆ ಮಹಾರಥರಿಂದ ಆವೃತನಾಗಿ, ಅವರು ತನ್ನ ರಥವನ್ನು ತಡೆಹಿಡಿದಿದ್ದು ಮಾತ್ರವಲ್ಲದೆ ಕೃಷ್ಣನನ್ನೂ ಆಕ್ರಮಿಸಿರುವುದನ್ನು ಕಂಡು ಕ್ರುದ್ಧನಾಗಿ, ತನ್ನ ರಥದ ಮೇಲೆ ಹತ್ತಿದ್ದ ಬಹುಮಂದಿ ಶತ್ರುಗಳನ್ನು ಎತ್ತಿ ದೂರಕ್ಕೆ ಎಸೆದ.
ಆಸನ್ನಾಂಶ್ಚ ತತೋ ಯೋಧಾನ್ ಶರೈರಾಸನ್ನಯೋಧಿಭಿಃ |
ದ್ರಾವಯಾಮಾಸ ಸಮರೇ ಕೇಶವಂ ಚೇದಮಬ್ರವೀತ್ ॥19॥
ಹತ್ತಿರದಿಂದಲೆ ಪ್ರಹರಿಸಬಹುದಾದ ಬಾಣಗಳಿಂದ ಅರ್ಜುನನು ರಣದಲ್ಲಿ ಹತ್ತಿರವಿದ್ದ ಯೋಧರನ್ನು ಓಡಿಸಿದ. ಕೃಷ್ಣನಿಗೆ ಹೇಳಿದ.
ಪಶ್ಯ ಕೃಷ್ಣ ಮಹಾಬಾಹೋ ಸಂಶಪ್ತಕಗಣಾನ್ ಬಹೂನ್ |

ಕುರ್ವಾಣಾನ್ ದಾರುಣಂ ಕರ್ಮ ವಧ್ಯಮಾನಾನ್ ಸಹಸ್ರಶಃ ॥20॥
ದಾರುಣವಾದ ಕೃತ್ಯವೆಸಗುತ್ತಿರುವ ಸಾವಿರಾರು ಸಂಶಪ್ತಕಗಣಗಳನ್ನು ನಾನು ಈಗ ವಧಿಸುತ್ತೇನೆ. ಮಹಾಬಾಹು ಕೃಷ್ಣ, ನೋಡು.
ರಥಬಂಧಮಿಮಂ ಘೋರಂ ಪೃಥಿವ್ಯಾಂ ನಾಸ್ತಿ ಕಶ್ಚನ |
ಯಃ ಸಹೇತ ಪುಮಾನ್ ಲೋಕೇ ಮದನ್ಯೋ ಯದುಪುಂಗವ ॥21॥
ಯದುಶ್ರೇಷ್ಠನೆ, ಸಂಶಪಕ್ತರು ಮಾಡಿದ ಈ ಘೋರವಾದ ರಥಬಂಧಕೃತ್ಯವನ್ನು ನಾನಲ್ಲದೆ ಇನ್ನೊಬ್ಬನು ಸಹಿಸಬಲ್ಲವನು ಪೃಥಿವಿಯಲ್ಲಿ ಯಾವನೂ ಇಲ್ಲ.
ಇತ್ಯೇವಮುಕತ್ವ ಬೀಭತ್ಸುರ್ದೇವದತ್ತಮಥಾಧಮತ್ |
ಪಾಂಚಜನ್ಯಂ ಚ ಕೃಷ್ಣೋಽಪಿ ಪೂರಯನ್ನಿವ ರೋದಸೀ ॥22॥
ಹೀಗೆ ಹೇಳಿ ಅರ್ಜುನನು ದೇವದತ್ತಶಂಖವನ್ನೂ ಕೃಷ್ಣನು ಪಾಂಚಜನ್ಯ ಶಂಖವನ್ನೂ, ಶಬ್ದದಿಂದ ಭೂಮಿಅಂತರಿಕ್ಷಗಳು ತುಂಬುವಂತೆ ಊದಿದರು.
ತಂ ತು ಶಂಖಸ್ವನಂ ಶ್ರುತ್ವಾ ಸಂಶಪ್ತಕವರೂಥಿನೀ |
ಸಂಚಚಾಲ ಮಹಾರಾಜ ವಿತ್ರಸ್ತಾ ಚಾಭವದ್ ಭೃಶಮ್ ॥23॥
ಮಹಾರಾಜ, ಆ ಶಂಖಧ್ವನಿಯನ್ನು ಕೇಳಿ ಸಂಶಪ್ತಕ ಸೈನ್ಯ ವಿಚಲಿತವಾಯಿತು. ಬಹಳವಾಗಿ ನಡುಗಿತು.
ಪಾದಬಂಧಂ ತತಶ್ಚಕ್ರೇ ಪಾಂಡವಃ ಪರವೀರಹಾ |
ನಾಗಮಸ್ತ್ರಂ ಮಹಾರಾಜ ಸಂಪ್ರೋದೀರ್ಯ ಮುಹುರ್ಮುಹುಃ ॥24॥
ಶತ್ರುವೀರರನ್ನು ನಾಶಪಡಿಸುವ ಅರ್ಜುನನು ಮತ್ತೆಮತ್ತೆ ನಾಗಾಸ್ತ್ರಮಂತ್ರವನ್ನು ಉಚ್ಚರಿಸಿ ಶತ್ರುಯೋಧರ ಪಾದಗಳನ್ನು ಹಾವುಗಳಿಂದ ಬಂಧಿಸಿದ.
ಯಾನುದ್ದಿಶ್ಯ ರಣೇ ಪಾರ್ಥಃ ಪಾದಬಂಧಂ ಚಕಾರ ಹ |
ತೇ ಬದ್ಧಾಃ ಪಾದಬಂಧೇನ ಪಾಂಡವೇನ ಮಹಾತ್ಮನಾ ॥25॥
ನಿಶ್ಚೇಷ್ಟಾ ಅಭವನ್ ರಾಜನ್ ಅಶ್ಮಸಾರಮಯಾ ಇವ ॥26॥
ರಣದಲ್ಲಿ ಯಾರನ್ನು ಉದ್ದೇಶಿಸಿ ಅಸ್ತ್ರದಿಂದ ಪಾದಬಂಧ ಉಂಟು ಮಾಡಿದನೋ ಅವರು ಪಾದಬಂಧದಿಂದ ಬದ್ಧರಾದರು. ರಾಜನೆ, ಅವರು ನಿಶ್ಚೇಷ್ಟರಾಗಿ ಲೋಹಮೂರ್ತಿಗಳಂತಾದರು.
ನಿಶ್ಚೇಷ್ಟಾಂಸ್ತು ತತೋ ಯೋಧಾನವಧೀತ್ ಪಾಂಡುನಂದನಃ |
ಯಥೇಂದ್ರಃ ಸಮರೇ ದೈತ್ಯಾಂಸ್ತಾರಕಸ್ಯ ವಧೇ ಪುರಾ ॥27॥
ನಿಶ್ಚೇಷ್ಟರಾದ ಅವರು ರಥಕ್ಕೆ ಮುತ್ತಿಗೆ ಹಾಕದಿದ್ದುದರಿಂದ ಸುಲಭವಾಗಿ ಅವರನ್ನು ಅರ್ಜುನನು ಸಂಹರಿಸಿದ.
ತಾರಕಾಸುರವಧದಲ್ಲಿ ಹಿಂದೆ ರಣದಲ್ಲಿ ಇಂದ್ರನು ದೈತ್ಯರನ್ನು ಹೀಗೇ ಸಂಹರಿಸಿದ್ದ.
ತೇ ವಧ್ಯಮಾನಾಃ ಸಮರೇ ಮುಮುಚುಸ್ತಂ ರಥೋತ್ತಮಮ್ |
ಆಯುಧಾನಿ ಚ ಸರ್ವಾಣಿ ವಿಸ್ರಷ್ಟುಮುಪಚಕ್ರಮುಃ ॥28॥
ಅವರು ರಣದಲ್ಲಿ ಹೀಗೆ ಸಂಹೃತರಾಗಲು ತೊಡಗಿದಾಗ ಅರ್ಜುನನ ಉತ್ತಮವಾದ ರಥಕ್ಕೆ ಮುತ್ತಿಗೆ ಹಾಕುವುದನ್ನು ಬಿಟ್ಟರು. ಎಲ್ಲ ಆಯುಧಗಳನ್ನು ಸುರಿಯಲು ತೊಡಗಿದರು.
ತತಃ ಸುಶರ್ಮಾ ರಾಜೇಂದ್ರ ಗೃಹೀತಾಂ ವೀಕ್ಷ ್ಯ ವಾಹಿನೀಮ್ |
ಸೌಪರ್ಣಮಸ್ತ್ರಂ ತ್ವರಿತಃ ಪ್ರಾದುಶ್ಚಕ್ರೇ ಮಹಾರಥಃ ॥29॥
ರಾಜನೆ, ತನ್ನ ಸೈನ್ಯವನ್ನು ಅರ್ಜುನನು ಆಕ್ರಮಿಸಿದ್ದನ್ನು ನೋಡಿ ಮಹಾರಥ ನಾದ ಸುಶರ್ಮನು ಗರುಡಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದ.
ತತಃ ಸುಪರ್ಣಾಃ ಸಂಪೇತುರ್ಭಕ್ಷಯಂತೋ ಭುಜಂಗಮಾನ್ |
ತೇ ವೈ ವಿದುದ್ರುವುರ್ನಾಗಾ ದೃಷ್ಟ್ವಾ ತಾನ್ ಖಚರಾನ್ ನೃಪ ॥30॥
ಆಗ ಗರುಡಪಕ್ಷಿಗಳು ಹಾವುಗಳನ್ನು ತಿನ್ನಲು ಕೆಳಗೆ ಇಳಿದುವು. ರಾಜನೆ, ಆ ಹಕ್ಕಿಗಳನ್ನು ನೋಡಿ ಯೋಧರ ಕಾಲು ಕಟ್ಟಿದ ಹಾವುಗಳು ಪಲಾಯನ ಮಾಡಿದುವು.
ಬಭೌ ಬಲಂ ತದ್ವಿಮುಕ್ತಂ ಪಾದಬಂಧಾದ್ ವಿಶಾಂಪತೇ |
ಮೇಘವೃಂದಾದ್ ಯಥಾ ಮುಕ್ತೋ ಭಾಸ್ಕರಸ್ತಾಪಯನ್
ಪ್ರಜಾಃ ॥31॥
ರಾಜನೆ, ಪ್ರಾಣಿಗಳಿಗೆ ತಾಪ ಉಂಟುಮಾಡುವ ಸೂರ್ಯನು ಮೋಡ ಸಮೂಹಗಳಿಂದ ಮುಕ್ತನಾಗಿ ಹೊಳೆಯುವಂತೆ ಪಾದಬಂಧಗಳಿಂದ ಮುಕ್ತವಾದ ಆ ಸಂಶಪ್ತಕ ಸೈನ್ಯವು ಶೋಭಿಸಿತು.
ವಿಪ್ರಮುಕ್ತಾಸ್ತು ತೇ ಯೋಧಾಃ ಫಲ್ಗುನಸ್ಯ ರಥಂ ಪ್ರತಿ |
ಸಸೃಜುರ್ಬಾಣಸಂಘಾಂಶ್ಚ ಶಸ್ತ್ರಸಂಘಾಂಶ್ಚ ಮಾರಿಷ ॥32॥
ರಾಜನೆ, ಪಾದಬಂಧದಿಂದ ಮುಕ್ತರಾದ ಯೋಧರು ಅರ್ಜುನನ ರಥದ ಮೇಲೆ ಬಾಣಸಮೂಹಗಳನ್ನೂ ಆಯುಧಸಮೂಹಗಳನ್ನೂ ಎಸೆದರು.
ತಾಂ ಮಹಾಸ್ತ್ರಮಯೀಂ ವೃಷ್ಟಿಂ ಸಂಛಾದ್ಯ ಶರವೃಷ್ಟಿಭಿಃ |
ನ್ಯವಧೀಚ್ಚ ತತೋ ಯೋಧಾನ್ ವಾಸವಿಃ ಪರವೀರಹಾ ॥33॥
ಶತ್ರುವೀರನಾಶಕನಾದ ಅರ್ಜುನನು ಆ ಮಹಾ ಅಸ್ತ್ರಮಯ ಮಳೆಯನ್ನು ಬಾಣಗಳ ಮಳೆಯಿಂದ ಕತ್ತರಿಸಿ ಯೋಧರನ್ನು

ಸಂಹರಿಸಿದ.
ಸುಶರ್ಮಾ ತು ತತೋ ರಾಜನ್ ಬಾಣೇನಾನತಪರ್ವಣಾ |
ಅರ್ಜುನಂ ಹೃದಯೇ ವಿದ್ಧ್ವಾ ವಿವ್ಯಾಧಾನ್ಯೈಸ್ತ್ರಿಭಿಃ ಶರೈಃ ॥34॥
ರಾಜನೆ, ಸುಶರ್ಮನು ಡೊಂಕುಗಿಣ್ಣಿನ ಒಂದು ಬಾಣದಿಂದ ಅರ್ಜುನನ ಎದೆಯ ಮೇಲೆ ಹೊಡೆದು ಬೇರೆ ಮೂರು ಬಾಣಗಳಿಂದಲೂ ಹೊಡೆದ.
ಸ ಗಾಢವಿದ್ಧೋ ವ್ಯಥಿತೋ ರಥೋಪಸ್ಥ ಉಪಾವಿಶತ್ ॥35॥
ಪ್ರತಿಲಭ್ಯ ತತಃ ಸಂಜ್ಞಾಂ ಶ್ವೇತಾಶ್ವಃ ಕೃಷ್ಣಸಾರಥಿಃ |
ಐಂದ್ರಮಸ್ತ್ರಮಮೇಯಾತ್ಮಾ ಪ್ರಾದುಶ್ಚಕ್ರೇ ತ್ವರಾನ್ವಿತಃ ॥36॥
ಅರ್ಜುನನು ಗಾಢವಾಗಿ ತಾಡಿತನಾಗಿ ನೋವಿನಿಂದ ರಥದ ಹಿಂಭಾಗದಲ್ಲಿ ಕುಳಿತ. ಬಿಳಿ ಕುದುರೆಗಳುಳ್ಳ ಅಮೇಯಾತ್ಮನಾದ ಅರ್ಜುನನು ಎಚ್ಚೆತ್ತುಕೊಂಡು ತ್ವರೆಗೊಂಡು ಕೃಷ್ಣನ ಸಾರಥ್ಯದಲ್ಲಿ ಇಂದ್ರಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದ.
ತತೋ ಬಾಣಸಹಸ್ರಾಣಿ ಸಮುತ್ಪನ್ನಾನಿ ಮಾರಿಷ ॥37॥
ಸರ್ವದಿಕ್ಷು ವ್ಯದೃಶ್ಯಂತ ಸೂದಯಂತೋ ನೃಪ ದ್ವಿಪಾನ್ |
ಹಯಾನ್ ರಥಾಂಶ್ಚ ಸಮರೇ ಶಸ್ತ್ರೈಃ ಶತಸಹಸ್ರಶಃ ॥38॥
ರಾಜನೆ, ಒಡನೆ ಎಲ್ಲ ದಿಕ್ಕುಗಳಲ್ಲಿ ಸಾವಿರಾರು ಬಾಣಗಳು ಪ್ರಾದುರ್ಭವಿಸಿ, ಆನೆ ಕುದುರೆ ರಥ ಸೈನ್ಯಗಳನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ಶಸ್ತ್ರಗಳಿಂದ ರಣದಲ್ಲಿ ಸಂಹರಿಸುವುದು ಕಂಡುಬಂದಿತು.
ವಧ್ಯಮಾನೇ ತತಃ ಸೈನ್ಯೇ  ವಿಪುಲಾ ಭೀಃ ಸಮಾವಿಶತ್ |
ಸಂಶಪ್ತಕಗಣಾನಾಂ ಚ ಗೋಪಾಲಾನಾಂ ಚ ಭಾರತ ॥39॥
ಸೈನ್ಯ ಹೀಗೆ ಹತವಾಗುವಾಗ ಸಂಶಪ್ತಕ ಗಣಗಳಿಗೂ ನಾರಾಯಣಸೈನ್ಯಗಳಿಗೂ ಬಹಳ ಭೀತಿ ಉಂಟಾಯಿತು.
ನ ಹಿ ಕಶ್ಚಿತ್ಪುಮಾಂಸ್ತತ್ರ ಯೋಽರ್ಜುನಂ ಪ್ರತ್ಯಯುಧ್ಯತ ॥40॥
ಪಶ್ಯತಾಂ ತತ್ರ ವೀರಾಣಾಮಹನ್ಯತ ಮಹದ್‌ಬಲಮ್ |
ಹನ್ಯಮಾನಮಪಶ್ಯಂಶ್ಚ ನಿಶ್ಚೇಷ್ಟಾಃ ಸ್ಮ ಪರಾಕ್ರಮೇ ॥41॥
ಅರ್ಜುನನಿಗೆ ಎದುರಾಗಿ ಯುದ್ಧಮಾಡುವವನು ಯಾವ ಒಬ್ಬ ಪುರುಷನು ಅಲ್ಲಿರಲಿಲ್ಲ. ಅಲ್ಲಿ ವೀರರು ನೋಡುತ್ತಿದ್ದಂತೆಯೇ ದೊಡ್ಡ ಸೈನ್ಯ ಹತವಾಯಿತು. ಪರಾಕ್ರಮ ತೋರುವಲ್ಲಿ ಏನೂ ಸಾಮರ್ಥ್ಯವಿಲ್ಲದೆ ಅವರು ಕೇವಲ ಸೈನ್ಯ ನಾಶವಾಗುತ್ತಿದ್ದುದನ್ನು ನೋಡಿದರು.
ಅಯುತಂ ತತ್ರ ಯೋಧಾನಾಂ ಹತ್ವಾ ಪಾಂಡುಸುತೋ ರಣೇ |
ವ್ಯಭ್ರಾಜತ ರಣೇ ರಾಜನ್ ವಿಧೂಮೋಽಗ್ನಿರಿವ ಜ್ವಲನ್ ॥42॥
ರಾಜನೆ, ರಣದಲ್ಲಿ ಆಗ ಅರ್ಜುನನು ಹತ್ತು ಸಾವಿರ ಯೋಧರನ್ನು ಕೊಂದು ಹೊಗೆ ಇಲ್ಲದ ಬೆಂಕಿಯಂತೆ ಜ್ವಲಿಸುತ್ತ ಬೆಳಗಿದ.
ಚತುರ್ದಶ ಸಹಸ್ರಾಣಿ ಯಾನಿ ಶಿಷ್ಟಾನಿ ಭಾರತ |
ರಥಾನಾಮಯುತಂ ಚೈವ ತ್ರಿಸಾಹಸ್ರಾಶ್ಚ ದಂತಿನಃ ॥43॥
ರಾಜನೆ, ಹದಿನಾಲ್ಕು ಸಾವಿರ ಪದಾತಿಗಳೂ ಹತ್ತು ಸಾವಿರ ರಥಗಳು ಮತ್ತು ಮೂರು ಸಾವಿರ ಗಜಸೈನ್ಯಗಳು ಉಳಿದುವು.
ತತಃ ಸಂಶಪ್ತಕಾ ಭೂಯಃ ಪರಿವವ್ರುರ್ಧನಂಜಯಮ್ |
ಮರ್ತವ್ಯಮಿತಿ ನಿಶ್ಚಿತ್ಯ ಜಯಂ ವಾಪ್ಯನಿವರ್ತನಮ್ ॥44॥
ಆಗ ಸಂಶಪ್ತಕರು `ಸಾಯಬೇಕು ಇಲ್ಲವೆ ಗೆಲ್ಲಬೇಕು, ಹೊರತು ಹಿಂದಿರುಗ ಬಾರದು' ಎಂದು ನಿರ್ಧರಿಸಿ ಪುನಃ ಅರ್ಜುನನನ್ನು ಸುತ್ತುವರಿದರು.
ಆಸೀತ್ ತತ್ರ ಮಹದ್ ಯುದ್ಧಂ ತಾವಕಾನಾಂ ವಿಶಾಂಪತೇ |
ಶೂರೇಣ ಬಲಿನಾ ಸಾರ್ಧಂ ಪಾಂಡವೇನ ಕಿರೀಟಿನಾ ॥45॥
ಆಗ ರಾಜನೆ, ಶೂರನಾದ ಬಲಿಷ್ಠನಾದ ಅರ್ಜುನನೊಂದಿಗೆ ನಿನ್ನವರಿಗೆ ದೊಡ್ಡ ಯುದ್ಧವಾಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಸಂಕುಲಯುದ್ಧೇ ಪಂಚಾಶೋಧ್ಯಾಯಃ ॥50॥

ಮಹಾಭಾರತತಾತ್ಪರ್ಯನಿರ್ಣಯ
ಸ ತಾಭ್ಯಾಂ ವಜ್ರಸದೃಶೈಃ ಶರೈರಭಿಹತೋ ಭೃಶಮ್ |
ವಿಸೃಜ್ಯ ಪಾರ್ಷತಂ ಸ್ವೀಯಮಾರುರೋಹ ರಥಂ ಪುನಃ ॥ 73 ॥
ಜಗಾಮ ಚ ತತೋನ್ಯತ್ರ ಪಾಂಚಾಲ್ಯೋಪಿ ರಥಂ ಪುನಃ |
ಆರುಹ್ಯಾನ್ಯಂ ಸ್ವಾತ್ತಧನ್ವಾ ಕೃತವರ್ಮಾಣಮಭ್ಯಯಾತ್ ॥ 74 ॥
ಭೀಮಾರ್ಜುನರಿಂದ ವಜ್ರಸದೃಶವಾದ ಬಾಣಗಳಿಂದ ಚೆನ್ನಾಗಿ ಹೊಡೆಸಿ ಕೊಂಡ ಅಶ್ವತ್ಥಾಮ ಧೃಷ್ಟದ್ಯುಮ್ನನನ್ನು ಬಿಟ್ಟು ಪುನಃ ತನ್ನ ರಥವನ್ನೇರಿದ. ಮತ್ತು ಅಲ್ಲಿಂದ ಬೇರೆ ಕಡೆಗೆ ಹೊರಟುಹೋದ. ಧೃಷ್ಟದ್ಯುಮ್ನನೂ ಪುನಃ ಬೇರೆ ರಥವನ್ನೇರಿ ಬಿಲ್ಲನ್ನೆತ್ತಿಕೊಂಡು ಕೃತವರ್ಮನನ್ನು ಇದಿರಿಸಿದ.
ತಯೋರಾಸೀತ್ ಸುತುಮುಲಂ ಯುದ್ಧಮದ್ಭುತದರ್ಶನಮ್ |
ತತ್ರ ನಾತಿಪ್ರಯತ್ನೇನ ಪಾಂಚಾಲ್ಯೋ ವಿರಥಾಯುಧಮ್ ॥ 75 ॥

ಚಕಾರ ಕೃತವರ್ಮಾಣಂ ತಮಪೋವಾಹ ಗೌತಮಃ |
ಅಥ ದುರ್ಯೋಧನೋ ರಾಜಾ ಮಾದ್ರೇಯಾವಭ್ಯಯಾದ್ ರಣೇ ॥
ಧೃಷ್ಟದ್ಯುಮ್ನ ಕೃತವರ್ಮರಿಗೆ ಅತಿ ತೀಕ್ಷ್ಣವಾದ, ನೋಡಲು ಆಶ್ಚರ್ಯಕರ ವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿ ಧೃಷ್ಟದ್ಯುಮ್ನ ಹೆಚ್ಚಿನ ಪ್ರಯತ್ನವಿಲ್ಲದೆಯೆ ಕೃತವರ್ಮನನ್ನು ವಿರಥನನ್ನಾಗಿಯೂ ಆಯುಧರಹಿತನನ್ನಾಗಿಯೂ ಮಾಡಿದ. ಆಗ ಕೃಪ ಅವನನ್ನು ಬೇರೆ ಕಡೆಗೆ ಒಯ್ದ. ಅತ್ತ ರಾಜಾ ದುರ್ಯೋಧನನು ನಕುಲ ಸಹದೇವರನ್ನು ಯುದ್ಧದಲ್ಲಿ ಇದಿರಿಸಿದ.

ಐವತ್ತೊಂದನೆಯ ಅಧ್ಯಾಯ
ಕೃಪನಿಂದ ಶಿಖಂಡಿಯ ಪರಾಭವ, ಸುಕೇತುವಿನ ವಧ.
ಧೃಷ್ಟದ್ಯುಮ್ನನಿಂದ ಕೃತವರ್ಮನ ಪರಾಭವ.
ಸಂಜಯಃ
ಕೃತವರ್ಮಾ ಕೃಪೋ ದ್ರೌಣಿಃ ಸೂತಪುತ್ರಶ್ಚ ಮಾರಿಷ |
ಉಲೂಕಃ ಸೌಬಲಶ್ಚೈವ ರಾಜಾ ಚ ಸಹ ಸೋದರ್ಯೈಃ ॥1॥
ಸೀದಮಾನಾಂ ಚಮೂಂ ದೃಷ್ಟ್ವಾ ಪಾಂಡುಪುತ್ರಭಯಾರ್ದಿತಾಮ್ |
ಅಭಿಸಸ್ರುಃ ಸ್ಮ ವೇಗೇನ ಭಿನ್ನಾಂ ನಾವಮಿವಾರ್ಣವೇ ॥2॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ರಾಜನೆ, ಕೃತವರ್ಮ ಕೃಪ ಅಶ್ವತ್ಥಾಮ ಕರ್ಣ ಉಲೂಕ ಶಕುನಿ ದುರ್ಯೋಧನ ಮತ್ತು ಸೋದರರು, ಸಮುದ್ರದಲ್ಲಿ ಒಡೆದ ನೌಕೆಯಂತೆ ಕೌರವಸೇನೆ ಅರ್ಜುನನ ಭಯದಿಂದ ವಿಹ್ವಲಗೊಂಡು ನಾಶಹೊಂದುತ್ತಿರುವುದನ್ನು ಕಂಡು ಬೇಗನೆ ಇದಿರಿಗೆ ಧಾವಿಸಿ ಬಂದರು.
ತತೋ ಯುದ್ಧಮತೀವಾಸೀನ್ಮುಹೂರ್ತಮಿವ ಭಾರತ |
ಭೀರೂಣಾಂ ತ್ರಾಸಜನನಂ ಶೂರಾಣಾಂ ಹರ್ಷವರ್ಧನಮ್ ॥3॥
ರಾಜನೆ, ಮುಹೂರ್ತಕಾಲ ಹೇಡಿಗಳಿಗೆ ಮೈನಡುಕ ಹುಟ್ಟಿಸುವ, ವೀರರಿಗೆ ಉತ್ಸಾಹ ತರುವ ಯುದ್ಧ ಅತಿಯಾಗಿ ಸಂಭವಿಸಿತು.
ಕೃಪೇಣ ಶರವರ್ಷಾಣಿ ವಿಪ್ರಮುಕ್ತಾನಿ ಸಂಯುಗೇ |
ಸೃಂಜಯಾಂಶ್ಚಾದಯಾಮಾಸುಃ ಶಲಭಾನಾಂ ವ್ರಜಾ ಇವ ॥4॥
ಕೃಪಾಚಾರ್ಯರು ರಣದಲ್ಲಿ ಎಸೆದ ಬಾಣಗಳ ಮಳೆಗಳು ಮಿಡತೆಗಳ ಸಮೂಹಗಳಂತೆ ಪಾಂಡವಸೈನಿಕರನ್ನು ಆವರಿಸಿದುವು.
ಶಿಖಂಡೀ ತು ತತಃ ಕ್ರುದ್ಧೋ ಗೌತಮಂ ತ್ವರಿತೋ ಯಯೌ |
ವವರ್ಷ ಶರವರ್ಷಾಣಿ ಸಮಂತಾದೇವ ಬ್ರಾಹ್ಮಣೇ ॥5॥
ಶಿಖಂಡಿ ಆಗ ಕ್ರುದ್ಧನಾಗಿ ಕೃಪನನ್ನು ವೇಗದಿಂದ ಇದಿರಿಸಿದ. ಕೃಪನ ಮೇಲೆ ಎಲ್ಲೆಡೆ ಬಾಣಗಳ ಮಳೆ ಸುರಿದ.
ಕೃಪಸ್ತು ಶರವರ್ಷಂ ತದ್ ವಿನಿಹತ್ಯ ಮಹಾಸ್ತ್ರವಿತ್ |
ಶಿಖಂಡಿನಂ ರಣೇ ಕ್ರುದ್ಧೋ ವಿವ್ಯಾಧ ದಶಭಿಃ ಶರೈಃ ॥6॥
ಮಹಾ ಅಸ್ತ್ರಜ್ಞನಾದ ಕೃಪನು ಆ ಬಾಣಗಳ ಮಳೆಯನ್ನು ನಾಶಮಾಡಿ ಕೋಪದಿಂದ ರಣದಲ್ಲಿ ಶಿಖಂಡಿಯನ್ನು ಹತ್ತು ಬಾಣಗಳಿಂದ ಹೊಡೆದ.
ತತಃ ಶಿಖಂಡೀ ಕುಪಿತಃ ಶರೈಃ ಸಪ್ತಭಿರಾಹವೇ |
ಕೃಪಂ ವಿವ್ಯಾಧ ಸುಭೃಶಂ ಕಂಕಪತ್ರೈರಜಿಹ್ಮಗೈಃ ॥7॥
ಆಗ ಶಿಖಂಡಿ ಕುಪಿತನಾಗಿ ರಣದಲ್ಲಿ ಅಜಿಹ್ಮಗ ಕಂಕಪತ್ರಯುತವಾದ ಏಳು ಬಾಣಗಳಿಂದ ಕೃಪನನ್ನು ಹೊಡೆದ.
ತತಃ ಕೃಪಃ ಶರೈಸ್ತೀಕ್ಷ್ಣೈಃ ಸೋಽತಿವಿದ್ಧೋ ಮಹಾರಥಃ |
ವ್ಯಶ್ವಸೂತರಥಂ ಚಕ್ರೇ ಶಿಖಂಡಿನಮಥೋ ದ್ವಿಜಃ ॥8॥
ಮಹಾರಥನಾದ ಕೃಪನು ತೀಕ್ಷ್ಣವಾದ ಬಾಣಗಳಿಂದ ಅತಿಯಾಗಿ ಹೊಡೆಸಿಕೊಂಡು ಶಿಖಂಡಿಯನ್ನು ಅಶ್ವಸಾರಥಿರಥರಹಿತನನ್ನಾಗಿ ಮಾಡಿದ.
ಹತಾಶ್ವಾತ್ತು ತತೋ ಯಾನಾದವಪ್ಲುತ್ಯ ಮಹಾರಥಃ |
ಖಡ್ಗಂ ಚರ್ಮ ತಥಾ ಗೃಹ್ಯ ಸತ್ವರಂ ಬ್ರಾಹ್ಮಣಂ ಯಯೌ ॥9॥
ಕುದುರೆಗಳು ಹತವಾದಾಗ ರಥದಿಂದ ಮಹಾರಥನಾದ ಶಿಖಂಡಿ ಕೆಳಗೆ ಹಾರಿ ಕತ್ತಿ ಗುರಾಣಿಗಳನ್ನು ಹಿಡಿದು ವೇಗದಿಂದ ಕೃಪನಿದಿರಿಗೆ ಬಂದ.
ತಮಾಪತಂತಂ ಸಹಸಾ ಶರೈಃ ಸನ್ನತಪರ್ವಭಿಃ |
ಛಾದಯಾಮಾಸ ಸಮರೇ ತದದ್ಭುತಮಿವಾಭವತ್ ॥10॥
ಶಿಖಂಡಿ ಸಮೀಪ ಬರುತ್ತಿದ್ದಂತೆ ಕೃಪನು ಡೊಂಕುಗಿಣ್ಣಿನ ಬಾಣಗಳಿಂದ ರಣದಲ್ಲಿ ಅವನನ್ನು ಮುಚ್ಚಿದ. ಅದು ಅದ್ಭುತವಾಗಿತ್ತು.
ತತ್ರಾದ್ಭುತಮಪಶ್ಯಾಮ ಶಿಲಾನಾಂ ಪ್ಲವನಂ ಯಥಾ |
ನಿಶ್ಚೇಷ್ಟೋ ಯದ್ ರಣೇ ರಾಜನ್ ಶಿಖಂಡೀ ಸಮತಿಷ್ಠತ ॥11॥
ಕಲ್ಲುಗಳು ನೀರಿನಲ್ಲಿ ತೇಲುವಂಥ ಅದ್ಭುತವನ್ನು ನಾವು ಆಗ ಕಂಡೆವು. ಏಕೆಂದರೆ ರಾಜನೆ, ಶಿಖಂಡಿಯು ರಣರಂಗದಲ್ಲಿ ನಿಶ್ಚೇಷ್ಟನಾಗಿ ನಿಂತುಬಿಟ್ಟ!
ಕೃಪೇಣ ಛಾದಿತಂ ದೃಷ್ಟ್ವಾ ನೃಪೋತ್ತಮ ಶಿಖಂಡಿನಮ್ |
ಪ್ರತ್ಯುದ್ಯಯೌ ಕೃಪಂ ತೂರ್ಣಂ ಧೃಷ್ಟದ್ಯುಮ್ನೋ ಮಹಾರಥಃ ॥12॥

ರಾಜನೆ, ಶಿಖಂಡಿಯನ್ನು ಕೃಪನು ಆಚ್ಛಾದಿಸಿದ್ದನ್ನು ಕಂಡು ಮಹಾರಥನಾದ ಧೃಷ್ಟದ್ಯುಮ್ನನು ಬೇಗನೆ ಕೃಪನನ್ನು ಇದಿರಿಸಿದ.
ಧೃಷ್ಟದ್ಯುಮ್ನಂ ತತೋ ಯಾಂತಂ ಶಾರದ್ವತರಥಂ ಪ್ರತಿ |
ಪ್ರತಿಜಗ್ರಾಹ ವೇಗೇನ ಕೃತವರ್ಮಾ ಮಹಾರಥಃ ॥13॥
ಧೃಷ್ಟದ್ಯುಮ್ನನು ಕೃಪರ ರಥದ ಕಡೆಗೆ ಹೋಗುವುದನ್ನು ಕಂಡು ಮಹಾರಥನಾದ ಕೃತವರ್ಮ ವೇಗದಿಂದ ಅವನನ್ನು ಇದಿರಿಸಿದ.
ಯುಧಿಷ್ಠಿರಮಥಾಯಾಂತಂ ಶಾರದ್ವತರಥಂ ಪ್ರತಿ |
ಸಪುತ್ರಂ ಸಹಸೇನಂ ಚ ದ್ರೋಣಪುತ್ರೋ ನ್ಯವಾರಯತ್ ॥14॥
ಕೃಪರ ರಥದ ಕಡೆಗೆ ಯುಧಿಷ್ಠರನು ಪುತ್ರರೊಂದಿಗೆ ಸೈನ್ಯಗಳೊಂದಿಗೆ ಬರುವಾಗ ಅಶ್ವತ್ಥಾಮನು ಅವನನ್ನು ತಡೆದ.
ನಕುಲಂ ಸಹದೇವಂ ಚ ತ್ವರಮಾಣೌ ಮಹಾರಥೌ |
ಪ್ರತಿಜಗ್ರಾಹ ತೇ ಪುತ್ರಃ ಶರವರ್ಷೇಣ ವಾರಯನ್ ॥15॥
ಮಹಾರಥರಾದ ನಕುಲಸಹದೇವರೂ ವೇಗದಿಂದ ಬರುವಾಗ ನಿನ್ನ ಮಗ ದುರ್ಯೋಧನನು ಅವರನ್ನು ತಡೆದು ಇದಿರಿಸಿದ.
ಭೀಮಸೇನಂ ಕರೂಷಾಂಶ್ಚ ಕೇಕಯಾನ್ ಸಹಸೃಂಜಯಾನ್ |
ಕರ್ಣೋ ವೈಕರ್ತನೋ ಯುದ್ಧೇ ವಾರಯಾಮಾಸ ಭಾರತ ॥16॥
ರಾಜನೆ, ಭೀಮಸೇನನನ್ನೂ ಕರೂಷ ಕೇಕಯ ಸೃಂಜಯರನ್ನೂ ಕರ್ಣನು ರಣದಲ್ಲಿ ತಡೆದ.
ಶಿಖಂಡಿನೇ ತತೋ ಬಾಣಾನ್ ಕೃಪಃ ಶಾರದ್ವತೋ ಯುಧಿ |
ಪ್ರಾಹಿಣೋತ್ ತ್ವರಯಾ ಯುಕ್ತೋ ದಿಧಕ್ಷುರಿವ ಮಾರಿಷ ॥17॥
ರಾಜನೆ, ದಹಿಸುವಂತೆ ಕಾಣುತ್ತಿದ್ದ ಕೃಪರು ವೇಗದಿಂದ ರಣದಲ್ಲಿ ಶಿಖಂಡಿಯ ಮೇಲೆ ಬಾಣಗಳನ್ನೆಸೆದರು.
ತಾನ್ ಶರಾನ್ ಪ್ರೇಷಿತಾಂಸ್ತೇನ ಸಮಂತಾದ್ ಸ್ವರ್ಣಭೂಷಿತಾನ್ |
ಚಿಚ್ಛೇದ ಖಡ್ಗಮಾವಿಧ್ಯ ಭ್ರಾಮಯಂಶ್ಚ ಪುನಃ ಪುನಃ ॥18॥
ಕೃಪರು ಎಲ್ಲೆಡೆ ಎಸೆದ ಸ್ವರ್ಣಾಲಂಕೃತವಾದ ಆ ಬಾಣಗಳನ್ನು ಶಿಖಂಡಿಯು ಖಡ್ಗವನ್ನು ಪುನಃ ಪುನಃ ತಿರುಗಿಸುತ್ತ ಹೊಡೆದು ಕತ್ತರಿಸಿದ.
ಶತಚಂದ್ರಂ ತತಶ್ಚರ್ಮ ಗೌತಮಃ ಪಾರ್ಷತಸ್ಯ ಹ |
ವ್ಯಧಮತ್ ಸಾಯಕೈಸ್ತೂರ್ಣಂ ತತ ಉಚ್ಚುಕ್ರುಶುರ್ಜನಾಃ ॥19॥
ನೂರು ಚಂದ್ರಚಿಹ್ನಯುಕ್ತವಾದ ಶಿಖಂಡಿಯ ಗುರಾಣಿಯನ್ನು ಕೃಪರು ಬಾಣ ಗಳಿಂದ ಬೇಗನೆ ನಾಶಮಾಡಿದರು. ಆಗ ಜನರು ಗಟ್ಟಿಯಾಗಿ ಕೂಗಿಕೊಂಡರು.
ಸ ವಿಚರ್ಮಾ ಮಹಾರಾಜ ಖಡ್ಗಪಾಣಿರುಪಾದ್ರವತ್ |
ಕೃಪಸ್ಯ ವಶಮಾಪನ್ನೋ ಮೃತ್ಯೋರಾಸ್ಯಮಿವಾತುರಃ ॥20॥
ಮಹಾರಾಜ, ರೋಗಿಯು ಮೃತ್ಯುವಿನ ಬಾಯಿಗೆ ಬೀಳುವಂತೆ, ಗುರಾಣಿ ಇಲ್ಲದೆ ಕೃಪರ ವಶಕ್ಕೆ ಬಂದಿದ್ದ ಶಿಖಂಡಿ ಅವರ ಕಡೆಗೆ ಕೇವಲ ಖಡ್ಗಹಿಡಿದೇ ಧಾವಿಸಿದ.
ಶಾರದ್ವತಶರೈರ್ಗ್ರಸ್ತಂ ಕ್ಲಿಶ್ಯಮಾನಂ ಮಹಾಬಲಮ್ |
ಚಿತ್ರಕೇತುಸುತೋ ದೃಷ್ಟ್ವಾ ಸುಕೇತುಸ್ತ್ವರಿತೋ ಯಯೌ ॥21॥
ವಿಕಿರನ್ ಬ್ರಾಹ್ಮಣಂ ಯುದ್ಧೇ ಬಹುಭಿರ್ನಿಶಿತೈಃ ಶರೈಃ |
ಅಭ್ಯಾಪತದಮೇಯಾತ್ಮಾ ಗೌತಮಸ್ಯ ರಥಂ ಪ್ರತಿ ॥22॥
ರಾಜನೆ, ಕೃಪರ ಬಾಣಗಳಿಗೀಡಾಗಿ ಕ್ಲೇಶಪಡುತ್ತಿದ್ದ ಮಹಾಬಲಿಷ್ಠನಾದ ಶಿಖಂಡಿಯನ್ನು ಕಂಡು ಚಿತ್ರಕೇತುವಿನ ಸುತನಾದ ಅಮೇಯಾತ್ಮನಾದ ಸುಕೇತುವು ಬೇಗನೆ ಕೃಪರನ್ನು ರಣದಲ್ಲಿ ತೀಕ್ಷ್ಣವಾದ ಬಹುಬಾಣಗಳಿಂದ ಮುಚ್ಚುತ್ತ ಕೃಪರ ರಥದ ಕಡೆಗೆ ಇದಿರಾಗಿ ಧಾವಿಸಿ ಬಂದ.
ದೃಷ್ಟ್ವಾಽವಿಷಹ್ಯಂ ತಂ ಯುದ್ಧೇ ಬ್ರಾಹ್ಮಣಂ ಚರಿತವ್ರತಮ್ |
ಅಪಯಾತಸ್ತತಸ್ತೂರ್ಣಂ ಶಿಖಂಡೀ ರಾಜಸತ್ತಮ ॥23॥
ರಾಜನೆ, ವ್ರತಾನುಷ್ಠಾನಪರರಾದ ಕೃಪರು ಯುದ್ಧದಲ್ಲಿ ಇದಿರಿಸಲಾಗದವ ರಾಗಿದ್ದುದನ್ನು ಕಂಡು ಶಿಖಂಡಿ ಅಲ್ಲಿಂದ ಬೇಗನೆ ಹೊರಟುಹೋದ.
ಸುಕೇತುಸ್ತು ತತೋ ರಾಜನ್ ಗೌತಮಂ ನವಭಿಃ ಶರೈಃ |
ವಿದ್ಧ್ವಾ ವಿವ್ಯಾಧ ಸಪ್ತತ್ಯಾ ಪುನಶ್ಚೈನಂ ತ್ರಿಭಿಃ ಶರೈಃ ॥24॥
ರಾಜನೆ, ಸುಕೇತುವು ಕೃಪರನ್ನು ಒಂಬತ್ತು ಬಾಣಗಳಿಂದ ಹೊಡೆದು ಪುನಃ ಎಪ್ಪತ್ತಮೂರು ಬಾಣಗಳಿಂದಲೂ ಹೊಡೆದ.
ಅಥಾಸ್ಯ ಸಶರಂ ಚಾಪಂ ಪುನಶ್ಚಿಚ್ಛೇದ ಮಾರಿಷ |
ಸಾರಥಿಂ ಚ ಶರೇಣಾಸ್ಯ ಭೃಶಂ ಮರ್ಮಣ್ಯತಾಡಯತ್ ॥25॥
ರಾಜನೆ, ಸುಕೇತುವು ಪುನಃ ಕೃಪರ ಧನುರ್ಬಾಣಗಳೆರಡನ್ನೂ ಕತ್ತರಿಸಿದ, ಅವರ ಸಾರಥಿಯನ್ನೂ ಬಾಣದಿಂದ ಮರ್ಮಸ್ಥಳದಲ್ಲಿ ಚೆನ್ನಾಗಿ ಹೊಡೆದ.
ಗೌತಮಸ್ತು ತತಃ ಕ್ರುದ್ಧೋ ಧನುರ್ಗೃಹ್ಯ ನವಂ ದೃಢಮ್ |
ಸುಕೇತುಂ ತ್ರಿಂಶತಾ ಬಾಣೈಃ ಸರ್ವಮರ್ಮಸ್ವತಾಡಯತ್ ॥26॥
ಕೃಪರು ಆಗ ಕುಪಿತರಾಗಿ ದೃಢವಾದ ಹೊಸ ಧನುಸ್ಸನ್ನು ಎತ್ತಿಕೊಂಡು ಸುಕೇತುವನ್ನು ಮೂವತ್ತು ಬಾಣಗಳಿಂದ ಎಲ್ಲ ಮರ್ಮಸ್ಥಳಗಳಲ್ಲಿ ಹೊಡೆದರು.

ಸ ವಿಹ್ವಲಿತಸರ್ವಾಂಗಃ ಪ್ರಚಚಾಲ ರಥೋತ್ತಮೇ |
ಭೂಮಿಚಾಲೇ ಯಥಾ ವೃಕ್ಷಃ ಕಂಪತೇ ವೈ ಸಮಂತತಃ ॥27॥
ಸುಕೇತು ಸರ್ವಾಂಗಗಳಲ್ಲಿ ವಿಹ್ವಲಗೊಂಡು ಭೂಕಂಪವಾದಾಗ ಎಲ್ಲೆಡೆ ಮರಗಳು ಕಂಪಿಸುವಂತೆ ಮಹಾರಥದಲ್ಲಿದ್ದೇ ಬಹಳವಾಗಿ ನಡುಗಿದ.
ಚಲತಸ್ತಸ್ಯ ಕಾಯಾತ್ತು ಶಿರೋ ಜ್ವಲಿತಕುಂಡಲಮ್ |
ಸೋಷ್ಣೀಷಂ ಸಶಿರಸತ್ರಾಣಂ ಕ್ಷುರಪ್ರೇಣಾನ್ವಪಾತಯತ್ ॥28॥
ನಡುಗುತ್ತಿದ್ದ ಸುಕೇತುವಿನ ಶರೀರದಿಂದ, ಹೊಳೆಯುವ ಕುಂಡಲ ಕಿರೀಟ ಶಿರಸತ್ರಾಣಗಳಿಂದ ಯುಕ್ತವಾದ ಅವನ ಶಿರವನ್ನು ಕೃಪರು ಬಾಣದಿಂದ ಕೆಡಹಿದರು.
ತಚ್ಛಿರಃ ಪ್ರಾಪತದ್ ಭೂಮೌ ಶ್ಯೇನಾಹೃತಮಿವಾಮಿಷಮ್ |
ತತೋಽಸ್ಯ ಕಾಯೋ ವಸುಧಾಂ ಪಶ್ಚಾತ್ ಪ್ರಾಪ ತದಾ ಚ್ಯುತಃ ॥29॥
ಗಿಡುಗಪಕ್ಷಿ ತರುವ ಮಾಂಸದ ತುಂಡಿನಂತೆ ಸುಕೇತುವಿನ ಶಿರಸ್ಸು ನೆಲದಲ್ಲಿ ಬಿದ್ದಿತು. ಬಳಿಕ ಅವನ ಶರೀರವೂ ಆಯತಪ್ಪಿ ನೆಲಕ್ಕೆ ಬಿದ್ದಿತು.
ತಸ್ಮಿನ್ ಹತೇ ಮಹಾರಾಜ ತ್ರಸ್ತಾಸ್ತಸ್ಯ ಪದಾನುಗಾಃ |
ಗೌತಮಂ ಸಮರೇ ತ್ಯಕತ್ವಾ ದುದ್ರುವುಸ್ತೇ ದಿಶೋ ದಶ ॥30॥
ಮಹಾರಾಜ, ಸುಕೇತು ಹೀಗೆ ಹತನಾದಾಗ ಅವನ ಕಡೆಯ ಸೈನಿಕರು ಭಯಗೊಂಡು ರಣದಲ್ಲಿ ಕೃಪರನ್ನು ಬಿಟ್ಟು ಹತ್ತು ದಿಕ್ಕುಗಳಿಗೆ ಓಡಿಹೋದರು.
ಧೃಷ್ಟದ್ಯುಮ್ನಂ ತು ಸಮರೇ ಸನ್ನಿವಾರ್ಯ ಮಹಾಬಲಃ |
ಕೃತವರ್ಮಾಬ್ರವೀದ್ಧೃಷ್ಟಸ್ತಿಷ್ಠ ತಿಷ್ಠೇತಿ ಪಾರ್ಷತಮ್ ॥31॥
ಧೃಷ್ಟದ್ಯುಮ್ನನನ್ನು ರಣದಲ್ಲಿ ಮಹಾಬಲನಾದ ಕೃತವರ್ಮನು ತಡೆದು ಉತ್ಸಾಹದಿಂದ `ನಿಲ್ಲು ನಿಲ್ಲು' ಎಂದ
ತದಭೂತ್ ತುಮುಲಂ ಯುದ್ಧಂ ವೃಷ್ಣಿಪಾರ್ಷತಯೋ ರಣೇ |
ಆಮಿಷಾರ್ಥೇ ಯಥಾ ಯುದ್ಧಂ ಕ್ರುದ್ಧಯೋರ್ಗೃಧ್ರಯೋರ್ಯಥಾ
॥32॥
ಮಾಂಸದಾಸೆಯಿಂದ ಎರಡು ಗಿಡುಗಗಳು ಹೋರಾಡುವಂತೆ ಕೃತವರ್ಮ ಧೃಷ್ಟದ್ಯುಮ್ನರೊಳಗೆ ರಣರಂಗದಲ್ಲಿ ತುಮುಲ ಯುದ್ಧವಾಯಿತು.
ಧೃಷ್ಟದ್ಯುಮ್ನಸ್ತು ಸಮರೇ ಹಾರ್ದಿಕ್ಯಂ ನವಭಿಃ ಶರೈಃ |
ಆಜಘಾನೋರಸಿ ಕ್ರುದ್ಧಃ ಪೀಡಯನ್ ಹೃದಿಕಾತ್ಮಜಮ್ ॥33॥
ಕ್ರುದ್ಧನಾದ ಧೃಷ್ಟದ್ಯುಮ್ನನು ಕೃತವರ್ಮನನ್ನು ಒಂಬತ್ತು ಬಾಣಗಳಿಂದ ಎದೆಯಲ್ಲಿ ಹೊಡೆದು ಅವನನ್ನು ಬಹುವಾಗಿ ಪೀಡಿಸಿದ.
ಕೃತವರ್ಮಾ ತು ಸಮರೇ ಪಾರ್ಷತೇನ ದೃಢಾಹತಃ |
ಪಾರ್ಷತಂ ಸರಥಂ ಸಾಶ್ವಂ ಛಾದಯಾಮಾಸ ಸಾಯಕೈಃ ॥34॥
ಕೃತವರ್ಮನು ರಣದಲ್ಲಿ ಧೃಷ್ಟದ್ಯುಮ್ನನಿಂದ ದೃಢವಾಗಿ ಹೊಡೆಯಲ್ಪಟ್ಟು ಧೃಷ್ಟದ್ಯುಮ್ನನನ್ನು ರಥ ಅಶ್ವಗಳೊಂದಿಗೇ ಬಾಣಗಳಿಂದ ಮುಚ್ಚಿದ.
ಸರಥಶ್ಛಾದಿತೋ ರಾಜನ್ ಧೃಷ್ಟದ್ಯುಮ್ನೋ ನ ದೃಶ್ಯತೇ |
ಮೇಘೈರಿವ ಪರಿಚ್ಛನ್ನೋ ಭಾಸ್ಕರೋ ಜಲಧಾರಿಭಿಃ ॥35॥
ರಾಜನೆ, ಧೃಷ್ಟದ್ಯುಮ್ನನು ರಥದೊಂದಿಗೇ ಬಾಣಗಳಿಂದ ಮುಚ್ಚಿಹೋದಾಗ ಜಲಧಾರೆ ಸುರಿಸುವ ಮೋಡಗಳಿಂದ ಮುಚ್ಚಿಹೋಗುವ ಸೂರ್ಯನಂತೆ ಕಾಣದಾದ.
ವಿಧೂಯ ತಂ ಬಾಣಗಣಂ ಶರೈಃ ಕನಕಭೂಷಣೈಃ |
ವ್ಯರೋಚತ ರಣೇ ರಾಜನ್ ಧೃಷ್ಟದ್ಯುಮ್ನಃ ಕೃತವ್ರಣಃ ॥36॥
ರಾಜನೆ, ಧೃಷ್ಟದ್ಯುಮ್ನನು ಮೈಗಾಯ ಹೊಂದಿದರೂ ಕೃತವರ್ಮನ ಬಾಣಸಮೂಹಗಳನ್ನು ರಣದಲ್ಲಿ ಬಂಗಾರದಿಂದ ಅಲಂಕೃತವಾದ ಬಾಣಗಳಿಂದ ದೂರಮಾಡಿ ಶೋಭಿಸಿದ.
ತತಸ್ತು ಪಾರ್ಷತಃ ಕ್ರುದ್ಧಃ ಶಸ್ತ್ರವೃಷ್ಟಿಂ ಸುದಾರುಣಾಮ್ |
ಕೃತವರ್ಮಾಣಮಾಸಾದ್ಯ ವ್ಯಸೃಜತ್ ಪೃತನಾಪತಿಃ ॥37॥
ಬಳಿಕ ಸೇನಾಧಿಪತಿ ಧೃಷ್ಟದ್ಯುಮ್ನನು ಕ್ರುದ್ಧನಾಗಿ ಕೃತವರ್ಮನನ್ನು ಆಕ್ರಮಿಸಿ ಬಲುದಾರುಣವಾದ ಶಸ್ತ್ರಗಳ ಮಳೆಯನ್ನು ಅವನ ಮೇಲೆ ಸುರಿಸಿದ.
ತಾಮಾಪತಂತಿಂ ಸಹಸಾ ಶಸ್ತ್ರವೃಷ್ಟಿಂ ಸುದಾರುಣಾಮ್ |
ಶರೈರನೇಕಸಾಹಸ್ರೈರ್ಹಾರ್ದಿಕ್ಯೋ ವ್ಯಧಮದ್ ಯುಧಿ ॥38॥
ಬಲುದಾರುಣವಾಗಿ ಬರುತ್ತಿದ್ದ ಆಯುಧಗಳ ಆ ಮಳೆಯನ್ನು ಒಡನೆ ಅನೇಕ ಸಾವಿರ ಬಾಣಗಳಿಂದ ರಣದಲ್ಲಿ ಕೃತವರ್ಮ ನಾಶಗೊಳಿಸಿದ.
ದೃಷ್ಟ್ವಾ ತು ದಾರಿತಾಂ ಯುದ್ಧೇ ಶರವೃಷ್ಟಿಂ ಸುದಾರುಣಾಮ್ |
ಕೃತವರ್ಮಾಣಮಭ್ಯೇತ್ಯ ವಾರಯಾಮಾಸ ಪಾರ್ಷತಃ ॥39॥
ಬಲುದಾರುಣವಾದ ಬಾಣಗಳ ಮಳೆಯನ್ನು ಕೃತವರ್ಮ ತಡೆದುದನ್ನು ಕಂಡು ಧೃಷ್ಟದ್ಯುಮ್ನ ಅವನನ್ನು ಆಕ್ರಮಿಸಿ ಇದಿರಿಸಿದ.

ಸಾರಥಿಂ ಚಾಸ್ಯ ತರಸಾ ಪ್ರಾಹಿಣೋದ್ ಯಮಸಾದನಮ್ |
ಭಲ್ಲೇನ ಶಿತಧಾರೇಣ ಸ ಹತಃ ಪ್ರಾಪತದ್ ರಥಾತ್ ॥40॥
ಕೃತವರ್ಮನ ಸಾರಥಿಯನ್ನು ಧೃಷ್ಟದ್ಯುಮ್ನ ತೀಕ್ಷ್ಣ ಅಲುಗಿನ ಭಲ್ಲೆಯಿಂದ ಬೇಗನೆ ಯಮಸದನಕ್ಕೆ ಅಟ್ಟಿದ. ಅವನು ಹತನಾಗಿ ರಥದಿಂದ ಕೆಳಗೆ ಉರುಳಿದ.
ಗದಾಂ ಗೃಹ್ಯ ಪುನರ್ವೇಗಾತ್ ಕೃತವರ್ಮಾಣಮಾಹನತ್ |
ಸೋಽತಿವಿದ್ಧೋ ಬಲವತಾ ನ್ಯಪತನ್ಮೂರ್ಛಯಾ ಹತಃ ॥41॥
ಧೃಷ್ಟದ್ಯುಮ್ನ ಪುನಃ ಗದೆ ಎತ್ತಿಕೊಂಡು ವೇಗದಿಂದ ಕೃತವರ್ಮನನ್ನು ಹೊಡೆದ. ಕೃತವರ್ಮನು ಅತಿಯಾಗಿ ಹೊಡೆಸಿಕೊಂಡು ಮೂರ್ಛಿತನಾಗಿ ಬಿದ್ದ.
ತತೋ ರಾಜನ್ ಮಹೇಷ್ವಾಸಂ ಕೃತವರ್ಮಾಣಮಾಶು ವೈ |
ಸುಪರ್ವಾ ರಥಮಾರೋಪ್ಯ ಅಪೋವಾಹ ರಣಾಜಿರಾತ್ ॥42॥
ರಾಜನೆ, ಆಮೇಲೆ ಸುಪರ್ವನು ಕೃತವರ್ಮನನ್ನು ರಥದಲ್ಲಿ ಏರಿಸಿಕೊಂಡು ದೂರಕ್ಕೆ ಒಯ್ದ.
ಧೃಷ್ಟದ್ಯುಮ್ನಸ್ತು ಬಲವಾನ್ ಜಿತ್ವಾ ಶತ್ರುಂ ಮಹಾರಥಮ್ |
ಕೌರವಾನ್ ಸಮರೇ ತೂರ್ಣಂ ವಾರಯಾಮಾಸ ಪತ್ರಿಭಿಃ ॥43॥
ಬಲಿಷ್ಠನಾದ ಧೃಷ್ಟದ್ಯುಮ್ನನು ಹೀಗೆ ಶತ್ರುವಾದ ಮಹಾರಥನಾದ ಕೃತವರ್ಮನನ್ನೂ ರಣದಲ್ಲಿ ಕೌರವರನ್ನೂ ಬಾಣಗಳಿಂದ ಬೇಗನೆ ತಡೆದ.
ತತಸ್ತೇ ತಾವಕಾ ಯೋಧಾ ಧೃಷ್ಟದ್ಯುಮ್ನಮುಪಾದ್ರವನ್ |
ಸಿಂಹನಾದರವಂ ಕೃತ್ವಾ ತತೋ ಯುದ್ಧಮವರ್ತತ ॥44॥
ಬಳಿಕ ನಿನ್ನ ಕಡೆಯ ಯೋಧರು ಸಿಂಹನಾದದಂತೆ ಧ್ವನಿಯನ್ನು ಮಾಡಿ ಧೃಷ್ಟದ್ಯುಮ್ನನನ್ನು ಇದಿರಿಸಿದರು. ಆಗ ಯುದ್ಧ ನಡೆಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಕೃತವರ್ಮಪರಾಜಯೋ ನಾಮ ಏಕಪಂಚಾಶೋಽಧ್ಯಾಯಃ ॥51॥

ಮಹಾಭಾರತತಾತ್ಪರ್ಯನಿರ್ಣಯ
ತದೈವ ಗುರುಪುತ್ರೋಽಯಾತ್ ಪಾಂಡವಾನಾಮನೀಕಿನೀಮ್ |
ವಿಮೃದ್ಯ ಸಕಲಾಂ ಸೇನಾಂ ಕೃತ್ವಾ ಚ ವಿರಥಂ ನೃಪಮ್ ॥ 45 ॥
ಧೃಷ್ಟದ್ಯುಮ್ನಂ ಯಮೌ ಚೈವ ಸಾತ್ಯಕಿಂ ದ್ರೌಪದೀಸುತಾನ್ |
ಕ್ಷಣೇನ ವಿರಥೀಕೃತ್ಯ ಸರ್ವಾಂಶ್ಚಕ್ರೇ ನಿರಾಯುಧಾನ್ ॥ 46 ॥
ಅಶ್ವತ್ಥಾಮ ಎಲ್ಲ ಸೈನ್ಯವನ್ನೂ ಮರ್ದಿಸಿ ಯುಧಿಷ್ಠಿರನನ್ನು ವಿರಥನನ್ನಾಗಿ ಮಾಡಿ ಧೃಷ್ಟದ್ಯುಮ್ನ ನಕುಲಸಹದೇವ ಸಾತ್ಯಕಿ ದ್ರೌಪದೀಪುತ್ರರೆಲ್ಲರನ್ನೂ ಕ್ಷಣದಲ್ಲಿ ವಿರಥರನ್ನಾಗಿ ಮಾಡಿ ನಿರಾಯುಧರನ್ನಾಗಿಯೂ ಮಾಡಿದ.
ತಾನ್ ಭಗ್ನದರ್ಪಾನ್ ರಣತೋಪಯಾತಾ-
ನನ್ವೇವ ಬಾಣಾವೃತಮಂತರಿಕ್ಷಮ್ |
ಕುರ್ವನ್ ಯಯೌ ಧರ್ಮರಾಜಸ್ತಮಾಹ
ಕಿಂ ನಃ ಸ್ವಧರ್ಮೇ ನಿರತಾನ್ ವಿಹಂಸಿ ॥ 47 ॥
ದರ್ಪವನ್ನು ಕಳೆದುಕೊಂಡು ಪಲಾಯನ ಮಾಡುತ್ತಿದ್ದ ಧೃಷ್ಟದ್ಯುಮ್ನಾದಿಗಳನ್ನು ಅಶ್ವತ್ಥಾಮ ಬೆನ್ನಟ್ಟಿ ಅಂತರಿಕ್ಷವನ್ನು ಬಾಣಗಳಿಂದ ಮುಚ್ಚುತ್ತ ನಡೆದ. ಆಗ ಧರ್ಮರಾಜ ಅವನಿಗೆ ಹೇಳಿದ. `ಸ್ವಧರ್ಮನಿರತರಾದ ನಮ್ಮನ್ನು ಏಕೆ ಹಿಂಸಿಸುವಿ?'
ಕ್ಷತ್ರಿಯಾನ್ ಪರಧರ್ಮಸ್ಥೋ ಮಾ ಹಿಂಸೀರಿತಿ ಚೋದಿತಃ |
ಪ್ರಹಸ್ಯ ತಾನ್ ವಿಹಾಯೈವ ಯಯೌ ಯತ್ರಾಚ್ಯುತಾರ್ಜುನೌ ॥48॥
`ಪರಧರ್ಮದಲ್ಲಿದ್ದು ಕ್ಷತ್ರಿಯರನ್ನು ಹಿಂಸಿಸಬೇಡ' ಎಂದು ಧರ್ಮರಾಜ ಹೇಳಿದಾಗ ಅಶ್ವತ್ಥಾಮ ನಕ್ಕು ಅವರನ್ನು ಬಿಟ್ಟು ಕೃಷ್ಣಾರ್ಜುನರಿದ್ದಲ್ಲಿಗೆ ನಡೆದ.

ಐವತ್ತೆರಡನೆಯ ಅಧ್ಯಾಯ
ಅಶ್ವತ್ಥಾಮನಿಂದ ಯುಧಿಷ್ಠಿರನ ಪರಾಭವ, ಯುದ್ಧ ಬ್ರಾಹ್ಮಣನಿಗೆ ವಿಹಿತವಲ್ಲವೆನ್ನುತ್ತ ಯುಧಿಷ್ಠಿರ ದೂರ ಸರಿಯುತ್ತಾನೆ. ಅಶ್ವತ್ಥಾಮನು ಹೊರಟು ಹೋಗುತ್ತಾನೆ.
ಸಂಜಯಃ
ದ್ರೌಣಿರ್ಯುಧಿಷ್ಠಿರಂ ದೃಷ್ಟ್ವಾ ಶೈನೇಯೇನಾಭಿರಕ್ಷಿತಮ್ |
ದ್ರೌಪದೇಯೈಸ್ತಥಾ ಶೂರೈರಭ್ಯವರ್ತತ ಹೃಷ್ಟವತ್ ॥1॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಅಶ್ವತ್ಥಾಮನು ಯುಧಿಷ್ಠಿರನನ್ನು ಸಾತ್ಯಕಿಯ ಮತ್ತು ಶೂರರಾದ ದ್ರೌಪದೀಪುತ್ರರ ರಕ್ಷಣೆಯಲ್ಲಿರುವುದನ್ನು ಕಂಡು ಉತ್ಸಾಹದಿಂದ ಅವನ ಕಡೆಗೆ ಬಂದ.
ಕಿರನ್ನಿಷುಗಣಾನ್ ಘೋರಾನ್ ಸ್ವರ್ಣಪುಂಖಾನ್ ಶಿಲಾಶಿತಾನ್ |
ದರ್ಶಯನ್ ವಿವಿಧಾನ್ ಮಾರ್ಗಾನ್ ಶಿಕ್ಷಾಶ್ಚ ಲಘುಹಸ್ತವತ್ ॥2॥

ಬಂಗಾರದ ಪುಕ್ಕಉಳ್ಳ ಸಾಣೆ ಹಿಡಿದು ತೀಕ್ಷ್ಣಗೊಳಿಸಿದ ಘೋರವಾದ ಬಾಣ ಸಮೂಹಗಳನ್ನು ಎಸೆಯುತ್ತ, ಕೈಚಳಕದಿಂದ ಶಸ್ತ್ರಪಾಂಡಿತ್ಯವನ್ನೂ ನಾನಾ ಬಗೆಯ ವರಸೆಗಳನ್ನೂ ಪ್ರದರ್ಶನ ಮಾಡುತ್ತ ಅಶ್ವತ್ಥಾಮ ಬಂದ.
ತತಃ ಖಂ ಪೂರಯಾಮಾಸ ಶರೈರ್ದಿವ್ಯಾಸ್ತ್ರಮಂತ್ರಿತೈಃ |
ಯುಧಿಷ್ಠಿರಂ ಚ ಸಮರೇ ಪರ್ಯವಾರಯದಸ್ತ್ರವಿತ್ ||3||
ಅಸ್ತ್ರಜ್ಞನಾದ ಅಶ್ವತ್ಥಾಮ ದಿವ್ಯಾಸ್ತ್ರಮಂತ್ರಪೂರ್ವಕವಾಗಿ ಬಾಣಗಳಿಂದ ಆಕಾಶವನ್ನು ತುಂಬಿಸಿದ ಮತ್ತು ರಣದಲ್ಲಿ ಯುಧಿಷ್ಠಿರನನ್ನು ತಡೆದ.
ದ್ರೌಣಾಯನಿಶರಚ್ಛನ್ನಂ ನ ಪ್ರಾಜ್ಞಾಯತ ಕಿಂಚನ |
ಬಾಣಭೂತಮಭೂತ್ಸರ್ವಮಾಯೋಧನಶಿರೋ ಮಹತ್ ||4||
ಅಶ್ವತ್ಥಾಮನ ಬಾಣಗಳಿಂದ ಆಚ್ಛಾದಿತವಾಗಿ ಏನೂ ಕಾಣದಂತಾಯಿತು. ಮಹತ್ತಾದ ರಣರಂಗದ ಮುಂಭಾಗವೆಲ್ಲವೂ ಬಾಣಮಯವಾಯಿತು.
ತದ್ಬಾಣಜಾಲಂ ವಿವಿಧಂ ಸ್ವರ್ಣಜಾಲವಿಭೂಷಿತಮ್ |
ಶುಶುಭೇ ಭರತಶ್ರೇಷ್ಠ ವಿತಾನಮಿವ ವಿಷ್ಠಿತಮ್ ||5||
ರಾಜನೆ, ಬಂಗಾರದ ಅಲಂಕಾರದಿಂದ ಭೂಷಿತವಾದ ನಾನಾ ಬಗೆಯ ಆ ಬಾಣಸಮೂಹವು ಮೇಲ್ಕಟ್ಟಿನಂತೆ ವ್ಯಾಪಿಸಿ ಶೋಭಿಸಿತು.
ತೇನ ಚ್ಛನ್ನೇ ರಣೇ ರಾಜನ್ ಬಾಣಜಾಲೇನ ಭಾಸ್ವತಾ |
ಅಭ್ರಚ್ಛಾಯೇವ ಸಂಜಜ್ಞೇ ಬಾಣರುದ್ಧೇ ನಭಸ್ಥಲೇ ||6||
ರಾಜನೆ, ಹೊಳೆಯುವ ಆ ಬಾಣಸಮೂಹದಿಂದ ರಣರಂಗ ಆಚ್ಛಾದಿತ ವಾದಾಗ ಅಲ್ಲಿ ಆಕಾಶಪ್ರದೇಶವು ಬಾಣದಿಂದ ತಡೆಯಲ್ಪಟ್ಟಿದ್ದರಿಂದ ಮೋಡ ಕವಿದಂತಾಯಿತು.
ತತ್ರಾಶ್ಚರ್ಯಮಪಶ್ಯಾಮ ಬಾಣಭೂತೇ ತಥಾವಿಧೇ |
ನ ಸ್ಮ ಸಂಪತತೇ ಭೂತಂ ಕಿಂಚಿದೇವಾಂತರಿಕ್ಷಗಮ್ ||7||
ಬಾಣಸಮೂಹದಿಂದ ಆಕಾಶ ಆಚ್ಛಾದಿತವಾದಾಗ ಒಂದು ಆಶ್ಚರ್ಯವನ್ನು ಕಂಡೆವು. ಆ ಪ್ರದೇಶದಲ್ಲಿ ಅಂತರಿಕ್ಷಚಾರಿ ಪಕ್ಷಿಗಳು ಯಾವುವೂ ಕೆಳಗೆ ಬಾರದಂತಾಯಿತು.
ಸಾತ್ಯಕಿರ್ಯತಮಾನಸ್ತು ಧರ್ಮರಾಜಶ್ಚ ಪಾಂಡವಃ |
ತಥೇತರಾಣಿ ಸೈನ್ಯಾನಿ ನ ಸ್ಮ ಚಕ್ರುಃ ಪರಾಕ್ರಮಮ್ ||8||
ಪ್ರಯತ್ನಪಡುತ್ತಿದ್ದ ಸಾತ್ಯಕಿಗಾಗಲಿ, ಯುಧಿಷ್ಠಿರನಿಗಾಗಲಿ, ಬೇರೆ ಸೈನ್ಯಗಳಿ ಗಾಗಲಿ ಏನೂ ಪರಾಕ್ರಮವನ್ನು ತೋರಿಸಲಾಗದಂತಾಯಿತು.
ಲಾಘವಂ ದ್ರೋಣಪುತ್ರಸ್ಯ ದೃಷ್ಟ್ವಾ ತತ್ರ ಮಹಾರಥಾಃ |
ವ್ಯಸ್ಮಯಂತ ಮಹಾರಾಜ ನ ಚೈನಂ ಪ್ರತಿವೀಕ್ಷಿತುಮ್ ||9||
ಶೇಕುಸ್ತೇ ಸರ್ವರಾಜಾನಸ್ತಪಂತಮಿವ ಭಾಸ್ಕರಮ್ ||10||
ಅಶ್ವತ್ಥಾಮನ ಕೈಚಳಕವನ್ನು ಕಂಡು ಮಹಾರಥರು ಆಶ್ಚರ್ಯಪಟ್ಟರು. ಮಹಾರಾಜ, ಉರಿವ ಸೂರ್ಯನಂತಿದ್ದ ಆ ಅಶ್ವತ್ಥಾಮನನ್ನು ದಿಟ್ಟಿಸಿ ನೋಡಲು ಕೂಡ ಯಾವ ರಾಜರೂ ಶಕ್ತರಾಗಲಿಲ್ಲ.
ವಧ್ಯಮಾನೇ ತತಃ ಸೈನ್ಯೇ ದ್ರೌಪದೇಯಾ ಮಹಾರಥಾಃ |
ಸಾತ್ಯಕಿರ್ಧರ್ಮರಾಜಶ್ಚ ಪಾಂಚಾಲಾಶ್ಚಾಪಿ ಸಂಗತಾಃ ||11||
ತ್ಯಕ್ತ್ವಾ ಮೃತ್ಯುಭಯಂ ಘೋರಂ ದ್ರೌಣಾಯನಿಮುಪಾದ್ರವನ್ ||12||
ಅಶ್ವತ್ಥಾಮನಿಂದ ಪಾಂಡವಸೈನ್ಯ ಹೊಡೆಸಿಕೊಳ್ಳುವಾಗ ಮಹಾರಥರಾದ ದ್ರೌಪದೀಪುತ್ರರೂ ಸಾತ್ಯಕಿಯೂ ಧರ್ಮರಾಜನೂ ಪಾಂಚಾಲರೂ ಮೃತ್ಯುಭಯ ವನ್ನು ತೊರೆದು ಎಲ್ಲರೂ ಒಂದಾಗಿ ಸೇರಿ ಘೋರಸ್ವರೂಪನಾದ ಅಶ್ವತ್ಥಾಮನನ್ನು ಇದಿರಿಸಿದರು.
ಸಾತ್ಯಕಿಃ ಪಂಚವಿಂಶತ್ಯಾ ದ್ರೌಣಿಂ ವಿದ್ಧ್ವಾ ಶಿಲೀಮುಖೈಃ |
ಪುನರ್ವಿವ್ಯಾಧ ನಾರಾಚೈಃ ಸಪ್ತಭಿಃ ಸ್ವರ್ಣಭೂಷಿತೈಃ ||13||
ಸಾತ್ಯಕಿಯು ಇಪ್ಪತ್ತೈದು ಬಾಣಗಳಿಂದ ಅಶ್ವತ್ಥಾಮನನ್ನು ಹೊಡೆದು ಪುನಃ ಬಂಗಾರದಿಂದ ಅಲಂಕೃತವಾದ ಏಳು ಬಾಣಗಳಿಂದ ಹೊಡೆದ.
ಯುಧಿಷ್ಠಿರಸ್ತ್ರಿಸಪ್ತತ್ಯಾ ಪ್ರತಿವಿಂಧ್ಯಶ್ಚ ಸಪ್ತಭಿಃ |
ಶ್ರುತಕರ್ಮಾ ತ್ರಿಭಿರ್ಬಾಣೈಃ ಶ್ರುತಕೀರ್ತಿಸ್ತು ಸಪ್ತಭಿಃ ||14||
ಸುತಸೋಮಶ್ಚ ನವಭಿಃ ಶತಾನೀಕಶ್ಚ ಸಪ್ತಭಿಃ |
ಅನ್ಯೇ ಚ ಬಹವಃ ಶೂರಾಃ ವಿವ್ಯಧುಸ್ತಂ ಸಮಂತತಃ ||15||
ಯುಧಿಷ್ಠಿರನು ಎಪ್ಪತ್ತಮೂರು ಬಾಣಗಳಿಂದ, ಪ್ರತಿವಿಂಧ್ಯನು ಏಳು ಬಾಣಗಳಿಂದ, ಶ್ರುತಕರ್ಮನು ಮೂರು ಬಾಣಗಳಿಂದ, ಶ್ರುತಕೀರ್ತಿ ಏಳು ಬಾಣಗಳಿಂದ, ಸುತಸೋಮನು ಒಂಬತ್ತು ಬಾಣಗಳಿಂದ, ಶತಾನೀಕನು ಏಳು ಬಾಣಗಳಿಂದ ಅಶ್ವತ್ಥಾಮನನ್ನು ಹೊಡೆದರು. ಬೇರೆ ಬಹುಶೂರರೂ ಎಲ್ಲ ಕಡೆಗಳಿಂದ ಅವನನ್ನು ಹೊಡೆದರು.
ಸ ತು ಕ್ರುದ್ಧಸ್ತತೋ ರಾಜನ್ನಾಶೀವಿಷ ಇವ ಶ್ವಸನ್ |
ಸಾತ್ಯಕಿಂ ಪಂಚವಿಂಶತ್ಯಾ ಪ್ರಾವಿಧ್ಯತ ಶಿಲಾಶಿತೈಃ ||16||
ಶ್ರುತಕೀರ್ತಿಂ ಚ ನವಭಿಃ ಸುತಸೋಮಂ ಚ ಪಂಚಭಿಃ |
ಸಪ್ತಭಿಃ ಶ್ರುತಕರ್ಮಾಣಂ ಪ್ರತಿವಿಂಧ್ಯಂ ತ್ರಿಭಿಃ ಶರೈಃ ||17||

ಶತಾನೀಕಂ ಚ ನವಭಿರ್ಧರ್ಮಪುತ್ರಂ ಚ ಸಪ್ತಭಿಃ ॥18॥
ಆಗ, ರಾಜನೆ, ಕ್ರುದ್ಧನಾದ ಅಶ್ವತ್ಥಾಮನು ಸರ್ಪದಂತೆ ಭುಸುಗುಟ್ಟುತ್ತ ಸಾತ್ಯಕಿಯನ್ನು ಸಾಣೆಹಿಡಿದ ಇಪ್ಪತ್ತೈದು ಬಾಣಗಳಿಂದ, ಶ್ರುತಕೀರ್ತಿಯನ್ನು ಒಂಬತ್ತು ಬಾಣಗಳಿಂದ, ಸುತಸೋಮನನ್ನು ಐದು ಬಾಣಗಳಿಂದ, ಶ್ರುತಕರ್ಮನನ್ನು ಏಳು ಬಾಣಗಳಿಂದ, ಪ್ರತಿವಿಂಧ್ಯನನ್ನು ಮೂರು ಬಾಣಗಳಿಂದ, ಶತಾನೀಕನನ್ನು ಒಂಬತ್ತು ಬಾಣಗಳಿಂದ, ಯುಧಿಷ್ಠಿರನನ್ನು ಐದು ಬಾಣಗಳಿಂದ ಹೊಡೆದ.
ಅಥೇತರಾಂಸ್ತತಃ ಶೂರಾನ್ ದ್ವಾಭ್ಯಾಂ ದ್ವಾಭ್ಯಾಮತಾಡಯತ್ |
ಶ್ರುತಕೀರ್ತೇಸ್ತಥಾ ಚಾಪಂ ಚಿಚ್ಛೇದ ನಿಶಿತೈಃ ಶರೈಃ ॥19॥
ಬೇರೆ ಶೂರರನ್ನು ಅಶ್ವತ್ಥಾಮನು ಎರಡೆರಡು ಬಾಣಗಳಿಂದ ಹೊಡೆದ. ಶ್ರುತಕೀರ್ತಿಯ ಬಿಲ್ಲನ್ನೂ ಹರಿತವಾದ ಬಾಣಗಳಿಂದ ಕತ್ತರಿಸಿದ.
ಅಥಾನ್ಯದ್ಧನುರಾದಾಯ ಶ್ರುತಕೀರ್ತಿರ್ಮಹಾರಥಃ |
ದ್ರೌಣಾಯನಿಂ ತ್ರಿಭಿರ್ವಿದ್ಧ್ವಾ ವಿವ್ಯಾಧಾನ್ಯೈಃ ಶಿತೈಃ ಶರೈಃ ॥20॥
ಮಹಾರಥನಾದ ಶ್ರುತಕೀರ್ತಿ, ಇನ್ನೊಂದು ಬಿಲ್ಲನ್ನೆತ್ತಿಕೊಂಡು ಮೂರು ಹರಿತವಾದ ಬಾಣಗಳಿಂದ ಅಶ್ವತ್ಥಾಮನನ್ನು ಹೊಡೆದು, ಬೇರೆ ಬಾಣಗಳಿಂದಲೂ ಹೊಡೆದ.
ತತೋ ದ್ರೌಣಿರ್ಮಹಾರಾಜ ಶರವರ್ಷೇಣ ಮಾರಿಷ |
ಛಾದಯಾಮಾಸ ತತ್ ಸೈನ್ಯಂ ಸಮಂತಾತ್ ಭರತರ್ಷಭ ॥21॥
ರಾಜನೆ, ಆಗ ಅಶ್ವತ್ಥಾಮನು ಆ ಪಾಂಡವಸೈನ್ಯವನ್ನು ಬಾಣಗಳ ಸುರಿಮಳೆ ಯಿಂದ ಎಲ್ಲಕಡೆ ಆಚ್ಛಾದಿಸಿದ.
ತತಃ ಪುನರಮೇಯಾತ್ಮಾ ಧರ್ಮರಾಜಸ್ಯ ಕಾರ್ಮುಕಮ್ |
ದ್ರೌಣಿಶ್ಚಿಚ್ಛೇದ ವಿಹಸನ್ ವಿವ್ಯಾಧ ಚ ಶರೈಸ್ತ್ರಿಭಿಃ ॥22॥
ಪುನಃ ಅಮೇಯಾತ್ಮನಾದ ಅಶ್ವತ್ಥಾಮನು ಯುಧಿಷ್ಠಿರನ ಬಿಲ್ಲನ್ನು ಕಡಿದ. ನಗುತ್ತ ಮೂರು ಬಾಣಗಳಿಂದ ಹೊಡೆದ.
ತತೋ ಧರ್ಮಸುತೋ ರಾಜನ್ ಪ್ರಗೃಹ್ಯಾನ್ಯನ್ಮಹದ್ಧನುಃ |
ದ್ರೌಣಿಂ ವಿವ್ಯಾಧ ಸಪ್ತತ್ಯಾ ಬಾಹ್ವೋರುರಸಿ ಚಾರ್ದಯತ್ ॥23॥
ರಾಜನೆ, ಯುಧಿಷ್ಠಿರನು ಇನ್ನೊಂದು ದೊಡ್ಡ ಧನುಸ್ಸನ್ನೆತ್ತಿಕೊಂಡು ಅಶ್ವತ್ಥಾಮ ನನ್ನು ಎಪ್ಪತ್ತು ಬಾಣಗಳಿಂದ ಹೊಡೆದ. ಎರಡು ತೋಳುಗಳಲ್ಲಿಯೂ ಎದೆ ಯಲ್ಲಿಯೂ ಪೀಡಿಸಿದ.
ಸಾತ್ಯಕಿಸ್ತು ತತಃ ಕ್ರುದ್ಧೋ ದ್ರೌಣೇಃ ಪ್ರಹರತೋ ರಣೇ |
ಅರ್ಧಚಂದ್ರೇಣ ತೀಕ್ಷ್ಣೇನ ಧನುಶ್ಛಿತ್ತ್ವಾನದದ್ ಭೃಶಮ್ ॥24॥
ಸಾತ್ಯಕಿಯು ಕ್ರುದ್ಧನಾಗಿ, ರಣದಲ್ಲಿ ಅಶ್ವತ್ಥಾಮನು ಹೊಡೆಯುವಾಗ, ತೀಕ್ಷ್ಣವಾದ ಅರ್ಧಚಂದ್ರ ಬಾಣದಿಂದ ಅವನ ಬಿಲ್ಲನ್ನು ಕಡಿದು ಚೆನ್ನಾಗಿ ಗರ್ಜಿಸಿದ.
ಛಿನ್ನಧನ್ವಾ ತತೋ ದ್ರೌಣಿಃ ಶಕ್ತ್ಯಾ ಶಕ್ತಿಮತಾಂ ವರಃ |
ಸಾರಥಿಂ ಪಾತಯಾಮಾಸ ಶೈನೇಯಸ್ಯ ರಥಾದ್ ದ್ರುತಮ್ ॥25॥
ಬಿಲ್ಲು ಕಡಿದುಕೊಂಡಾಗ ಶಕ್ತಿವಂತರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಶಕ್ತ್ಯಾಯುಧದಿಂದ ಸಾತ್ಯಕಿಯ ಸಾರಥಿಯನ್ನು ಬೇಗನೆ ರಥದಿಂದ ಕೆಡವಿದ.
ಅಥಾನ್ಯದ್ಧನುರಾದಾಯ ದ್ರೋಣಪುತ್ರಃ ಪ್ರತಾಪವಾನ್ |
ಶೈನೇಯಂ ಶರವರ್ಷೇಣ ಛಾದಯಾಮಾಸ ಭಾರತ ॥26॥
ಪ್ರತಾಪಶಾಲಿ ಅಶ್ವತ್ಥಾಮನು ಇನ್ನೊಂದು ಬಿಲ್ಲನ್ನೆತ್ತಿಕೊಂಡು ಸಾತ್ಯಕಿಯನ್ನು ಬಾಣಗಳ ಮಳೆಯಿಂದ ಆಚ್ಛಾದಿಸಿದ.
ತಸ್ಯಾಶ್ವಾಃ ಪ್ರದ್ರುತಾಃ ಸಂಖ್ಯೇ ಪತಿತೇ ರಥಸಾರಥೌ |
ತತ್ರ ತತ್ರೈವ ಧಾವಂತಃ ಸಮದೃಶ್ಯಂತ ಭಾರತ ॥27॥
ರಾಜನೆ, ಸಾತ್ಯಕಿಯ ಕುದುರೆಗಳು, ರಥಸಾರಥಿ ಹತನಾದಾಗ, ಓಡಿಹೋಗಿ ಅಲ್ಲಲ್ಲಿ ವೇಗವಾಗಿ ಓಡುತ್ತಿರುವುದು ಕಂಡುಬಂದಿತು.
ಯುಧಿಷ್ಠಿರಪುರೋಗಾಸ್ತೇ ದ್ರೌಣಿಂ ಶಸ್ತ್ರಭೃತಾಂ ವರಮ್ |
ಅಭ್ಯವರ್ಷಂತ ವೇಗೇನ ವಿಸೃಜಂತಃ ಶಿತಾನ್ ಶರಾನ್ ॥28॥
ಯುಧಿಷ್ಠಿರ ಮುಂತಾದವರು ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನ ಮೇಲೆ ವೇಗದಿಂದ ಹರಿತವಾದ ಬಾಣಗಳನ್ನೆಸೆಯುತ್ತ ಬಾಣಗಳ ಮಳೆಗರೆದರು.
ಆಗಚ್ಛಮಾನಾಂಸ್ತಾನ್ ದೃಷ್ಟ್ವಾ ಕ್ರುದ್ಧರೂಪಾನ್ ಪರಂತಪಃ |
ಪ್ರಹಸನ್ ಪ್ರತಿಜಗ್ರಾಹ ದ್ರೋಣಪುತ್ರೋ ಮಹಾರಣೇ ॥29॥
ಶತ್ರುನಾಶಕನಾದ ಅಶ್ವತ್ಥಾಮನು ಮಹಾರಣದಲ್ಲಿ ತನ್ನ ಕಡೆಗೆ ಕ್ರುದ್ಧರಾಗಿ ಬರುತ್ತಿದ್ದ ಯುಧಿಷ್ಠಿರ ಮುಂತಾದವರನ್ನು ಕಂಡು ನಗುತ್ತ ಇದಿರಿಸಿದ.
ತತಃ ಶರಶತಜ್ವಾಲಃ ಸೇನಾಕಕ್ಷಂ ಮಹಾರಥಃ |
ದ್ರೌಣಿರ್ದದಾಹ ಸಮರೇ ಕಕ್ಷಮಗ್ನಿರ್ಯಥಾ ವನೇ ॥30॥
ಆಗ ಕಾಡಿನಲ್ಲಿ ಕಾಳ್ಗಿಚ್ಚು ಕಾಡನ್ನು ಸುಡುವಂತೆ, ನೂರಾರು ಬಾಣ ಜ್ವಾಲೆಗಳಿಂದ ಯುಕ್ತನಾದ ಮಹಾರಥ ಅಶ್ವತ್ಥಾಮನು ಸೇನೆ ಎಂಬ ಕಾಡನ್ನು ರಣದಲ್ಲಿ ಸುಟ್ಟುಬಿಟ್ಟ.
ತದ್ಬಲಂ ಪಾಂಡುಪುತ್ರಸ್ಯ ದ್ರೋಣಪುತ್ರಪ್ರತಾಪಿತಮ್ |

ಚುಕ್ಷುಭೇ ಭರತಶ್ರೇಷ್ಠ ತಿಮಿನೇವ ನದೀಮುಖಮ್ ॥31॥
ರಾಜನೆ, ಅಶ್ವತ್ಥಾಮನಿಂದ ಸಂತಾಪಕ್ಕೊಳಗಾದ ಆ ಪಾಂಡವಸೈನ್ಯವು ತಿಮಿಂಗಿಲಗಳಿಂದ ಕ್ಷೋಭೆಗೊಳ್ಳುವ ನದೀ ಸಾಗರಸಂಗಮ ಪ್ರದೇಶದಂತೆ ಕ್ಷೋಭೆಗೊಂಡಿತು.
ದೃಷ್ಟ್ವಾ ತೇ ಚ ಮಹಾರಾಜ ದ್ರೋಣಪುತ್ರಪರಾಕ್ರಮಮ್ |
ನಿಹತಾನ್ ಮೇನಿರೇ ಸರ್ವಾನ್ ಪಾಂಡೂನ್ ದ್ರೋಣಸುತೇನ
ವೈ ॥32॥
ಮಹಾರಾಜ, ಅಶ್ವತ್ಥಾಮನ ಪರಾಕ್ರಮವನ್ನು ಕಂಡು ಪಾಂಡವಯೋಧರು ಅಶ್ವತ್ಥಾಮನಿಂದ ಪಾಂಡವರೆಲ್ಲರೂ ಹತರಾದರೆಂದೇ ತಿಳಿದರು.
ಯುಧಿಷ್ಠಿರಸ್ತು ತ್ವರಿತೋ ದ್ರೋಣಶಿಷ್ಯೋ ಮಹಾರಥಃ |
ಅಬ್ರವೀದ್ ದ್ರೋಣಪುತ್ರಂ ತು ರೋಷಾಮರ್ಷಸಮನ್ವಿತಃ ॥33॥
ದ್ರೋಣಶಿಷ್ಯ ಮಹಾರಥನಾದ ಯುಧಿಷ್ಠಿರನು ರೋಷ, ಅಸಹನೆಗಳಿಂದ ಯುಕ್ತನಾಗಿ ಬೇಗನೆ ಅಶ್ವತ್ಥಾಮನಿಗೆ ನುಡಿದ.
ನೈವ ನಾಮ ತವ ಪ್ರೀತಿರ್ನೈವ ನಾಮ ಕೃತಜ್ಞತಾ |
ಯತಸ್ತ್ವಂ ಪುರುಷವ್ಯಾಘ್ರ ಮಾಮೇವಾದ್ಯ ಜಿಘಾಂಸಸಿ ॥34॥
ನಿನಗೆ ನಮ್ಮಲ್ಲಿ ಪ್ರೀತಿ ಇಲ್ಲ, ಕೃತಜ್ಞತಾ ಭಾವವಿಲ್ಲ. ಏಕೆಂದರೆ, ಪುರುಷ ಶ್ರೇಷ್ಠನೇ! ನೀನು ನನ್ನನ್ನೇ ಕೊಲ್ಲಲು ಬಯಸುವೆ.
ಬ್ರಾಹ್ಮಣೇನ ತಪಃ ಕಾರ್ಯಂ ದಾನಮಧ್ಯಯನಂ ತಥಾ |
ಕ್ಷತ್ರಿಯೇಣ ಧನುರ್ನಾಮ್ಯಂ ಸ ಭವಾನ್ ಬ್ರಾಹ್ಮಣಬ್ರುವಃ ॥35॥
ಬ್ರಾಹ್ಮಣನು ತಪಸ್ಸು ದಾನ ಅಧ್ಯಯನಗಳನ್ನು ನಡೆಸಬೇಕು. ಕ್ಷತ್ರಿಯನು ಬಿಲ್ಲನ್ನು ಬಗ್ಗಿಸಬೇಕು. ಬ್ರಾಹ್ಮಣಕರ್ಮವನ್ನು ಬಿಟ್ಟು ಕ್ಷತ್ರಿಯಕರ್ಮವನ್ನು ಮಾಡುವುದರಿಂದ ನೀನು ಹೆಸರಿಗೆ ಮಾತ್ರ ಬ್ರಾಹ್ಮಣ.
ಮಿಷತಸ್ತೇ ಮಹಾಬಾಹೋ ಜೇಷ್ಯಾಮಿ ಯುಧಿ ಕೌರವಾನ್ |
ಕುರುಷ್ವ ಸಮರೇ ಕರ್ಮ ಬ್ರಹ್ಮಬಂಧುರಸಿ ಧ್ರುವಮ್ ॥36॥
ಮಹಾಬಾಹುವೆ, ನೀನು ನೋಡುತ್ತಿರುವಂತೆಯೆ ನಾನು ರಣದಲ್ಲಿ ಕೌರವರನ್ನು ಗೆಲ್ಲುತ್ತೇನೆ. ರಣದಲ್ಲಿ ನೀನು ಕ್ಷಾತ್ರಕರ್ಮವನ್ನು ಮಾಡುತ್ತಿರು. ನಿಶ್ಚಯವಾಗಿ ನೀನು ಹೆಸರಿಗೆ ಮಾತ್ರ ಬ್ರಾಹ್ಮಣ.
ಏವಮುಕ್ತೋ ಮಹಾರಾಜ ದ್ರೋಣಪುತ್ರಃ ಸ್ಮಯನ್ನಿವ |
ಯುಕ್ತತ್ವಂ ತಚ್ಚ ಸಂಚಿಂತ್ಯ ನೋತ್ತರಂ ಕಿಂಚಿದಬ್ರವೀತ್ ॥37॥
ಮಹಾರಾಜ, ಯುಧಿಷ್ಠಿರ ಹೀಗೆ ಹೇಳಿದಾಗ ಅಶ್ವತ್ಥಾಮ ನಸುನಕ್ಕು,
ಯುಧಿಷ್ಠಿರ ಹೇಳಿದ್ದು ಯುಕ್ತವೇ ಎಂದು ಆಲೋಚಿಸಿ ಏನೂ ಉತ್ತರ ನೀಡಲಿಲ್ಲ.
ಅನುಕ್ತ್ವಾ ಚ ತತಃ ಕಿಂಚಿಚ್ಛರವರ್ಷೇಣ ಪಾಂಡವಾನ್ |
ಛಾದಯಾಮಾಸ ಸಮರೇ ಕ್ರುದ್ಧೋಽಂತಕ ಇವ ಪ್ರಜಾಃ ॥38॥
ಏನೂ ಉತ್ತರಿಸದೆ ಬಾಣಗಳ ಮಳೆಯಿಂದ ಪಾಂಡವರನ್ನು ರಣದಲ್ಲಿ ಆಚ್ಛಾದಿಸಿದ, ಕ್ರುದ್ಧನಾದ ಯಮನು ಪ್ರಾಣಿಗಳನ್ನು ಕೊಲ್ಲುವಂತೆ.
ಸಂಛಾದ್ಯಮಾನಸ್ತು ತದಾ ದ್ರೋಣಪುತ್ರೇಣ ಮಾರಿಷ |
ಪಾರ್ಥೋಽಪಯಾತಃ ಶೀಘ್ರಂ ವೈ ವಿಹಾಯ ಮಹತೀಂ
ಚಮೂಮ್ ॥39॥
ಅಶ್ವತ್ಥಾಮನು ತನ್ನನ್ನು ಬಾಣಗಳಿಂದ ಆಚ್ಛಾದಿಸಿದಾಗ ಯುಧಿಷ್ಠಿರನು ಬೇಗನೆ ಮಹಾಸೈನ್ಯವನ್ನು ಬಿಟ್ಟು ದೂರ ನಡೆದ.
ಅಪಯಾತೇ ತತಸ್ತಸ್ಮಿನ್ ಧರ್ಮಪುತ್ರೇ ಯುಧಿಷ್ಠಿರೇ |
ದ್ರೋಣಪುತ್ರಸ್ತತೋ ರಾಜನ್ ಪ್ರತ್ಯಾಗಾತ್ ಸ ಮಹಾಮನಾಃ ॥40॥
ಯುಧಿಷ್ಠಿರ ಹೊರಟುಹೋದಾಗ, ರಾಜನೇ! ಮಹಾಬುದ್ಧಿಶಾಲಿ ಅಶ್ವತ್ಥಾಮನೂ ಕೂಡ ಹೊರಟುಹೋದ.
ತತೋ ಯುಧಿಷ್ಠಿರೋ ರಾಜಾ ತ್ಯಕ್ತ್ವಾ ದ್ರೌಣಿಂ ಮಹಾಹವೇ |
ಪ್ರಯಯೌ ತಾವಕಂ ಸೈನ್ಯಂ ಯುಕ್ತಃ ಕ್ರೂರಾಯ ಕರ್ಮಣೇ ॥41॥
ಬಳಿಕ ರಾಜಾ ಯುಧಿಷ್ಠಿರನು ಮಹಾರಣದಲ್ಲಿ ಅಶ್ವತ್ಥಾಮನನ್ನು ಬಿಟ್ಟು ನಿನ್ನ ಸೈನ್ಯದ ಕಡೆಗೆ ಕ್ರೂರಸಂಹಾರ ಕರ್ಮಾಸಕ್ತನಾಗಿ ನಡೆದ.
ಸಾಮಾನ್ಯವಾಗಿ ನೋಡಿದರೆ ಧರ್ಮಶಾಸ್ತ್ರ ಹೇಳುವಂತೆ ಅಶ್ವತ್ಥಾಮನು ಬ್ರಾಹ್ಮಣ. ಧರ್ಮಭ್ರಷ್ಟನಾದ ಬ್ರಾಹ್ಮಣ ಎನ್ನುವುದು ಅಯುಕ್ತವಲ್ಲ, ಯುಕ್ತವೆ. ಆದರೆ ವಿಶೇಷಸಂದರ್ಭದಲ್ಲಿ ಬ್ರಾಹ್ಮಣನು ಮಾತ್ರವಲ್ಲದೆ ಎಲ್ಲ ವರ್ಣದವರೂ ಕ್ಷಾತ್ರಧರ್ಮವನ್ನು ಅನುಷ್ಠಾನ ಮಾಡುವುದು ತಪ್ಪಾಗುವುದಿಲ್ಲ. ಸಾತ್ವಿಕರಾದ ಪಾಂಡವರ ಮೇಲೆ ಕೈಮಾಡುವುದು ಮಾತ್ರ ತಪ್ಪೇ. ಅದರಿಂದ, ಅಶ್ವತ್ಥಾಮ ನಸುನಕ್ಕು ಸುಮ್ಮನಾದ, ಉತ್ತರ ಕೊಡಲಿಲ್ಲ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ದ್ವಿಪಂಚಾಶೋಽಧ್ಯಾಯಃ ॥52॥

ಮಹಾಭಾರತತಾತ್ಪರ್ಯನಿರ್ಣಯ
ಸಂಶಪ್ತಕೈಸ್ತತ್ರ ಸಂಯುದ್ಧ್ಯಮಾನಂ

ಸಮಾಹ್ವಯಾಮಾಸ ಸುರೇಶಸೂನುಮ್ |
ಸ ಬಾಣಯುಕ್ತಂ ಭುಜಗೇಂದ್ರಕಲ್ಪ
ಮುನ್ನಮ್ಯ ಬಾಹುಂ ಯುಧಯೇ ಸುಶೂರಮ್ ॥49॥
ಬಾಣಯುಕ್ತವಾದ, ದೊಡ್ಡ ಹಾವಿನಂಥ ತೋಳನ್ನೆತ್ತಿಕೊಂಡು ಅಶ್ವತ್ಥಾಮ ಸಂಶಪ್ತಕರೊಡನೆ ಯುದ್ದ ಮಾಡುತ್ತಿದ್ದ ಮಹಾಶೂರ ಅರ್ಜುನನನ್ನು ಯುದ್ಧಕ್ಕೆ ಕರೆದ.
ಪಾರ್ಥಃ ಸಂಶಪ್ತಕಗಣೈಃ ಸಂಸೃಷ್ಟಃ ಸಮರಾರ್ಥಿಭಿಃ |
ಆಹೂತೋ ದ್ರೌಣಿನಾ ಚೈವ ಕಾರ್ಯಂ ಕೃಷ್ಣಮಪೃಚ್ಛತ |
ಚೋದಯಾಮಾಸ ಚ ಹಯಾನ್ ಕೃಷ್ಣೋ ದ್ರೌಣಿರಥಂ ಪ್ರತಿ ॥50॥
ಯುದ್ಧಾರ್ಥಿಗಳಾದ ಸಂಶಪ್ತಕರೊಡನೆ ಅರ್ಜುನ ಯುದ್ದ ನಿರತನಾಗಿದ್ದ. ಅಶ್ವತ್ಥಾಮನಿಂದಲೂ ಕರೆಬಂದಾಗ ಕೃಷ್ಣನನ್ನು ಕೇಳಿದ: `ಈಗ ನಾನೇನು ಮಾಡಲಿ?' ಎಂದು. ಶ್ರೀಕೃಷ್ಣ ಅಶ್ವತ್ಥಾಮನ ರಥದ ಕಡೆಗೆ ರಥವನ್ನು ನಡೆಸಿದ.
ಉಭೌ ಚ ತಾವಸ್ತ್ರವಿದಾಂ ಪ್ರಧಾನೌ
ಮಹಾಬಲೌ ಸಂಯತಿ ಜಾತದರ್ಪೌ |
ಶರೈಃ ಸಮಸ್ತಾಃ ಪ್ರದಿಶೋ ದಿಶಶ್ಚ
ದ್ರೌಣೀಂದ್ರಸೂನೂ ತಿಮಿರಾಃ ಪ್ರಚಕ್ರತುಃ ॥51॥
ಅಶ್ವತ್ಥಾಮ ಅರ್ಜುನರು ಇಬ್ಬರೂ ಅಸ್ತ್ರವೇತ್ತರಲ್ಲಿ ಅಗ್ರಗಣ್ಯರು. ಮಹಾಬಲಿಷ್ಠರು. ಯುದ್ಧದಲ್ಲಿ ದರ್ಪಹೊಂದಿದವರು. ಬಾಣಗಳಿಂದ ಎಲ್ಲ ದಿಕ್ಕು ವಿದಿಕ್ಕುಗಳನ್ನೂ ಕತ್ತಲು ಕವಿಸಿದರು.
ದ್ರೌಣಿಸ್ತದಾ ಸ್ಯಂದನವಾಜಿರೋಮ
ಸ್ವರೋಮಕೂಪಧ್ವಜಕಾರ್ಮುಕೇಭ್ಯಃ |
ಶರಾನಮೋಘಾನ್ ಸತತಂ ಸೃಜಾನೋ
ಬಬಂಧ ಪಾರ್ಥಂ ಶರಪಂಜರೇಣ ॥52॥
ಅಶ್ವತ್ಥಾಮ ತನ್ನ ರಥ, ಕುದುರೆಗಳ ರೋಮಕೂಪ ತನ್ನ ರೋಮಕೂಪ ಧ್ವಜ ಬಿಲ್ಲು ಈ ಎಲ್ಲೆಡೆಗಳಿಂದಲೂ ಅಮೋಘವಾದ ಬಾಣಗಳನ್ನು ಸತತವಾಗಿ ಪ್ರಯೋಗಿಸುತ್ತ ಅರ್ಜುನನನ್ನು ಬಾಣಗಳ ಪಂಜರದಲ್ಲಿ ಬಂಧಿಸಿದ.
ತಸ್ಮಿನ್ ನಿಬದ್ಧೇ ಹರಿರಪ್ರಮೇಯೋ
ವಿಬೋಧಯಾಮಾಸ ಸುರೇಂದ್ರಸೂನುಮ್ |
ಆಲಿಂಗನೇನಾಸ್ಯ ದದೌ ಬಲಂ ಚ
ಸ ಉತ್ಥಿತೋಽಸ್ತ್ರಾಣ್ಯಮುಚನ್ಮಹಾಂತಿ ॥53॥
ಅರ್ಜುನ ಹೀಗೆ ಬಾಣಗಳ ಪಂಜರದಲ್ಲಿ ಬದ್ಧನಾದಾಗ ಅಪ್ರಮೇಯನಾದ ಶ್ರೀಕೃಷ್ಣ ಅವನನ್ನು ಎಚ್ಚರಿಸಿದ. ಆಲಿಂಗನದಿಂದ ಅವನಿಗೆ ಬಲವನ್ನಿತ್ತ. ಅವನು ಎದ್ದು ಮಹಾ ಅಸ್ತ್ರಗಳನ್ನು ಪ್ರಯೋಗಿಸಿದ.
ನಿವಾರ್ಯ ತಾನ್ಯಸ್ತ್ರವರೈರ್ಗುರೋಃ ಸುತ-
ಶ್ಚಿಚ್ಛೇದ ಚ ಜ್ಯಾಂ ಯುಧಿ ಗಾಂಡಿವಸ್ಯ |
ವವರ್ಷ ಪಾರ್ಥಂ ಚ ಶರೈರಥಾನ್ಯಾ
ಜ್ಯಾಽಽಸೀತ್ ತಯಾ ಗಾಂಡಿವಂ ಸೋಪ್ಯಯುಂಕ್ತ ॥54॥
ಅಶ್ವತ್ಥಾಮ ಆ ಅಸ್ತ್ರಗಳನ್ನು ಉತ್ತಮ ಅಸ್ತ್ರಗಳಿಂದ ತಡೆದು ಗಾಂಡೀವದ ಹೆದೆಯನ್ನು ಕತ್ತರಿಸಿದ ಮತ್ತು ಅರ್ಜುನನ ಮೇಲೆ ಬಾಣಗಳ ಮಳೆಯನ್ನೂ ಸುರಿಸಿದ. ಆಗ ಕಡಿದ ಹೆದೆ ಮೊದಲಿನಂತೆಯೇ ಆಯಿತು. ಅರ್ಜುನ ಹೆದೆಯನ್ನು ತಿರುಗಿ ಗಾಂಡೀವಕ್ಕೆ ಏರಿಸಿದ.
ತತಃ ಶರೇಣ ಕುಪಿತಃ ಶಿತೇನ ದ್ರೌಣಿಸಾರಥೇಃ |
ಶಿರೋ ಜಹಾರ ಕೌಂತೇಯಃ ಸಾರಥ್ಯಂ ಸೋಽಕರೋತ್ ಸ್ವಯಮ್55
ಬಳಿಕ ಕುಪಿತನಾದ ಅರ್ಜುನ ಹರಿತವಾದ ಬಾಣದಿಂದ ಅಶ್ವತ್ಥಾಮನ ಸಾರಥಿಯ ತಲೆಯನ್ನು ಕತ್ತರಿಸಿದ. ಅಶ್ವತ್ಥಾಮ ತಾನೇ ಸಾರಥ್ಯವನ್ನೂ ಮಾಡ ತೊಡಗಿದ.
ಶರಾನ್ ವಿಸೃಜತಾ ತೇನ ಸಾರಥ್ಯಮಪಿ ಕುರ್ವತಾ |
ಶರಕೂಟೇನ ಪಾರ್ಥಃ ಸ ಪುನರ್ಬದ್ಧೋ ದ್ವಿಜನ್ಮನಾ ॥56॥
ಅಶ್ವತ್ಥಾಮನು ಬಾಣಪ್ರಯೋಗವನ್ನೂ ಮಾಡುತ್ತ ತಾನೇ ಸಾರಥ್ಯವನ್ನೂ ಮಾಡುತ್ತ ಬಾಣಸಮೂಹದಿಂದ ಅರ್ಜುನನನ್ನು ಇನ್ನೊಮ್ಮೆ ಬಂಧಿಸಿದನು.
ಪುನರಾಲಿಂಗ್ಯ ಕೃಷ್ಣಸ್ತಮಧಾಚ್ಛತ್ರುವಿಘಾತಕಮ್ |
ಬಲಮಸ್ಮಿಂಸ್ತತಃ ಪಾರ್ಥ ಉತ್ತಸ್ಥೌ ಶರಚಾಪಭೃತ್ ॥57॥
ವವರ್ಷ ಚ ಶರಾನ್ ಭೂಯೋ ದ್ರೋಣಪುತ್ರೇಽರಿಮರ್ದನಃ |
ಪುನಸ್ತಸ್ಯ ನುನೋದ ಜ್ಯಾಂ ದ್ರೌಣಿಃ ಸಂಧಾಯ ತಾಂ ಪುನಃ ॥58॥
ಪಾರ್ಥೋ ದ್ರೋಣಸುತಸ್ಯಾಶ್ವರಶ್ಮೀಂಶ್ಚಿಚ್ಛೇದ ಸಾಯಕೈಃ |
ವಿರಶ್ಮಯೋ ಹಯಾ ದ್ರೌಣೇಃ ಪುನಃ ಪಾರ್ಥಶರಾಹತಾಃ ॥59॥
ಅಪೋಹುರ್ದೂರಮೇತಸ್ಮಾತ್ ಸೋಪಿ ಸಂಸ್ಥಾಪ್ಯ ತಾನ್ ಪುನಃ |
ಚಿಂತಯಾಮಾಸ ನೈತಸ್ಮಾದಧಿಕಂ ಶಕ್ಯತೇಽರ್ಜುನೇ ॥60॥

ಸಾರಥಿತ್ವಾತ್ ಕೇಶವಸ್ಯ ಧ್ವಜಸ್ತ್ವಾದ್ಧನೂಮತಃ |
ಗಾಂಡಿವತ್ವಾತ್ ಕಾರ್ಮುಕಸ್ಯ ಚೇಷುಧ್ಯೋರಕ್ಷಯತ್ವತಃ ||61||
ಅವಧ್ಯತ್ವಾತ್ ತಥಾಶ್ವಾನಾಮಭೇದ್ಯತ್ವಾದ್ ರಥಸ್ಯ ಚ |
ಅತೋ ಯೋದ್ಧುಂ ಸಮರ್ಥೋಽಪಿ ನಾದ್ಯ ಯಾಮಿ ಧನಂಜಯಮ್ ||62||
ಶ್ರೀಕೃಷ್ಣ ಪುನಃ ಅರ್ಜುನನನ್ನು ಆಲಿಂಗಿಸಿ ಅವನಲ್ಲಿ ಶತ್ರುಘಾತಕವಾದ ಬಲವನ್ನು ತುಂಬಿಸಿದ. ಆಗ ಶತ್ರುಮರ್ದನನಾದ ಅರ್ಜುನ ಎದ್ದು ಬಾಣಬಿಲ್ಲುಗಳನ್ನು ಧರಿಸಿ ಪುನಃ ಅಶ್ವತ್ಥಾಮನ ಮೇಲೆ ಬಾಣಗಳ ಮಳೆಗರೆದ. ಅಶ್ವತ್ಥಾಮ ಪುನಃ ಗಾಂಡೀವದ ಹೆದೆಯನ್ನು ಕತ್ತರಿಸಿದ. ಅದು ಮತ್ತೆ ಬೆಳೆಯಿತು. ಅರ್ಜುನ ಪುನಃ ಅದನ್ನು ಕಟ್ಟಿ ಅಶ್ವತ್ಥಾಮನ ಕುದುರೆಗಳ ಹಗ್ಗಗಳನ್ನು ಬಾಣಗಳಿಂದ ಕತ್ತರಿಸಿದ. ಹಗ್ಗವಿಲ್ಲದ ಆ ಕುದುರೆಗಳನ್ನು ಬಾಣಗಳಿಂದ ಹೊಡೆದ. ಅವುಗಳು ಅರ್ಜುನನ ಇದಿರಿನಿಂದ ದೂರಕ್ಕೆ ಓಡಿದವು. ಅವುಗಳನ್ನು ಅಶ್ವತ್ಥಾಮ ಹಿಡಿದು ತಂದು ತಿರುಗಿ ರಥಕ್ಕೆ ಹೂಡಿ ಆಲೋಚಿಸಿದ. ಅರ್ಜುನನಿಗೆ ಶ್ರೀಕೃಷ್ಣ ಸಾರಥಿಯಾದ್ದರಿಂದ, ಧ್ವಜದಲ್ಲಿ ಹನುಮಂತನಿರುವುದರಿಂದ, ಬಿಲ್ಲು ಗಾಂಡೀವ ವಾದ್ದರಿಂದ, ಬತ್ತಳಿಕೆಗಳು ಅಕ್ಷಯವಾದ್ದರಿಂದ, ಕುದುರೆಗಳು ಅವಧ್ಯವಾದ್ದರಿಂದ, ರಥವೂ ಅಭೇದ್ಯವಾದ್ದರಿಂದ, ನಾನು ಅವನಿಗೆ ಹೆಚ್ಚಿಗೆ ಇನ್ನೇನೂ ಮಾಡಲಾರೆ, ಅದರಿಂದ ಅವನೊಡನೆ ಯುದ್ಧಮಾಡಲು ನಾನು ಸಮರ್ಥನಾದರೂ ಈಗ ಅವನನ್ನು ಇದಿರಿಸುವುದಿಲ್ಲ ಎಂದು.

ಐವತ್ತಮೂರನೆಯ ಅಧ್ಯಾಯ
ಧೃಷ್ಟದ್ಯುಮ್ನನಿಂದ ದುರ್ಯೋಧನನ ಪರಾಭವ.
ಅರ್ಜುನನಿಂದ ಅಶ್ವತ್ಥಾಮನ ಪರಾಭವ.
ಸಂಜಯಃ
ಭೀಮಸೇನಂ ಸಪಾಂಚಾಲ್ಯಂ ಚೇದಿಕೇಕಯಸಂವೃತಮ್ |
ವೈಕರ್ತನಃ ಸ್ವಯಂ ರುದ್ಧ್ವಾ ವಾರಯಾಮಾಸ ಸಾಯಕೈಃ ||1||
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಧೃಷ್ಟದ್ಯುಮ್ನಚೇದಿಕೇಕಯ ಯೋಧರಿಂದ ಯುಕ್ತನಾದ ಭೀಮಸೇನನನ್ನು ಕರ್ಣನು ತಾನೇ ಬಾಣಗಳಿಂದ ವಿರೋಧಿಸಿ ತಡೆದ.
ತತಸ್ತು ಚೇದಿಕಾರೂಷಾನ್ ಸೃಂಜಯಾಂಶ್ಚ ಮಹಾರಥಾನ್ |
ಕರ್ಣೋ ಜಘಾನ ಸಂಕ್ರುದ್ಧೋ ಭೀಮಸೇನಸ್ಯ ಪಶ್ಯತಃ ||2||
ಭೀಮಸೇನನು ನೋಡುತ್ತಿದ್ದಂತೆಯೇ ಕ್ರುದ್ಧನಾದ ಕರ್ಣನು ಮಹಾರಥರಾದ ಚೇದಿ ಕಾರೂಷ ಸೃಂಜಯರನ್ನು ಸಂಹರಿಸಲು ತೊಡಗಿದ.
ಭೀಮಸೇನಸ್ತತಃ ಕರ್ಣಂ ವಿಹಾಯ ರಥಸತ್ತಮಮ್ |
ಪ್ರಯಯೌ ಕೌರವಂ ಸೈನ್ಯಂ ಕಕ್ಷಮಗ್ನಿರಿವ ಜ್ವಲನ್ ||3||
ಅದಕ್ಕೆ ಪ್ರತಿಯಾಗಿ ಭೀಮಸೇನ ಕರ್ಣನನ್ನು ಬಿಟ್ಟು, ಜ್ವಲಿಸುವ ಕಾಳ್ಗಿಚ್ಚು ಹುಲ್ಲಿನ ಮೆದೆಯನ್ನು ಪ್ರವೇಶಿಸುವಂತೆ, ಕೌರವರ ಸೈನ್ಯವನ್ನು ಪ್ರವೇಶಿಸಿದ.
ಸೂತಪುತ್ರೋಽಪಿ ಸಮರೇ ಪಾಂಚಾಲಾನ್ ಕೇಕಯಾಂಸ್ತಥಾ |
ಸೃಂಜಯಾಂಶ್ಚ ಮಹೇಷ್ವಾಸಾನ್ ನಿಜಘಾನ ಸಹಸ್ರಶಃ ||4||
ಕರ್ಣನು ರಣದಲ್ಲಿ ಪಾಂಚಾಲ ಕೇಕಯ ಸೃಂಜಯ ಬಿಲ್ಗಾರರನ್ನು ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದ.
ಸಂಶಪ್ತಕೇಷು ಪಾರ್ಥಶ್ಚ ಕೌರವೇಷು ವೃಕೋದರಃ |
ಪಾಂಚಾಲೇಷು ತಥಾ ಕರ್ಣಃ ಕ್ಷಯಂ ಚಕ್ರುರ್ಮಹಾರಥಾಃ ||5||
ಸಂಶಪ್ತಕರಲ್ಲಿ ಅರ್ಜುನ, ಕೌರವರಲ್ಲಿ ಭೀಮಸೇನ, ಪಾಂಚಾಲರಲ್ಲಿ ಕರ್ಣ ಹೀಗೆ ಮಹಾರಥರು ಸಂಹಾರಕಾರ್ಯವನ್ನು ನಡೆಸಿದರು.
ತೇ ಕ್ಷತ್ರಿಯಾ ದಹ್ಯಮಾನಾಸ್ತ್ರಿಭಿಸ್ತೈಃ ಪಾವಕೋಪಮೈಃ |
ಜಗ್ಮುರ್ವಿನಾಶಂ ಸಮರೇ ರಾಜನ್ ದುರ್ಮಂತ್ರಿತೇ ತವ ||6||
ರಾಜನೆ, ನಿನ್ನ ದುಷ್ಟ ಆಲೋಚನೆಯ ಪರಿಣಾಮವಾಗಿ ಮೂರು ಯಾಗಾಗ್ನಿಗಳಂಥ ಆ ಅರ್ಜುನ ಭೀಮ ಕರ್ಣರಿಂದ ರಣದಲ್ಲಿ ಕ್ಷತ್ರಿಯರು ದಹಿಸಲ್ಪಟ್ಟು ವಿನಾಶ ಹೊಂದಿದರು.
ತತೋ ದುರ್ಯೋಧನಃ ಕ್ರುದ್ಧೋ ನಕುಲಂ ನವಭಿಃ ಶರೈಃ |
ವಿವ್ಯಾಧ ಭರತಶ್ರೇಷ್ಠ ಚತುರಶ್ವಾಸ್ಯ ವಾಜಿನಃ ||7||
ರಾಜನೆ, ದುರ್ಯೋಧನನು ಕುಪಿತನಾಗಿ ಒಂಬತ್ತು ಬಾಣಗಳಿಂದ ನಕುಲನನ್ನೂ ಅವನ ನಾಲ್ಕು ಕುದುರೆಗಳನ್ನೂ ಹೊಡೆದ.
ತತಃ ಪುನರಮೇಯಾತ್ಮಾ ತವ ಪುತ್ರೋ ಜನಾಧಿಪಃ |
ಕ್ಷುರೇಣ ಸಹದೇವಸ್ಯ ಧ್ವಜಂ ಚಿಚ್ಛೇದ ಕಾಂಚನಮ್ ||8||
ಪುನಃ ಅಮೇಯಾತ್ಮನಾದ ನಿನ್ನ ಮಗ ರಾಜಾ ಸುಯೋಧನನು ಬಾಣದಿಂದ ಸಹದೇವನ ಬಂಗಾರದ ಧ್ವಜವನ್ನು ಕತ್ತರಿಸಿದ.
ನಕುಲಸ್ತು ತತಃ ಕ್ರುದ್ಧಸ್ತವ ಪುತ್ರಂ ತ್ರಿಸಪ್ತಭಿಃ |
ಜಘಾನ ಸಮರೇ ರಾಜನ್ ಸಹದೇವಶ್ಚ ಪಂಚಭಿಃ ||9||
ರಾಜನೆ, ನಕುಲನು ಕ್ರುದ್ಧನಾಗಿ ರಣದಲ್ಲಿ ನಿನ್ನ ಮಗನನ್ನು ಇಪ್ಪತ್ತೊಂದು ಬಾಣಗಳಿಂದ ಹೊಡೆದ. ಸಹದೇವನು ಐದು ಬಾಣಗಳಿಂದ ಹೊಡೆದ.
ತಾವುಭೌ ಭರತಶ್ರೇಷ್ಠಃ ಶ್ರೇಷ್ಠೌ ಸರ್ವಧನುಷ್ಮತಾಮ್ |

ವಿವ್ಯಾಧೋರಸಿ ಸಂಕ್ರುದ್ಧಃ ಪಂಚಭಿಃ ಪಂಚಭಿಃ ಶರೈಃ ॥10॥
ಎಲ್ಲ ಬಿಲ್ಗಾರರಲ್ಲಿ ಶ್ರೇಷ್ಠರಾದ ನಕುಲಸಹದೇವರನ್ನು ಕ್ರುದ್ಧನಾದ ದುರ್ಯೋಧನ ಐದೈದು ಬಾಣಗಳಿಂದ ಎದೆಯಲ್ಲಿ ಹೊಡೆದ.
ತತೋಽಪರಾಭ್ಯಾಂ ಭಲ್ಲಾಭ್ಯಾಂ ಧನುಷೀ ಸಮಕೃಂತತ |
ಯಮಯೋಃ ಪ್ರಹಸನ್ ರಾಜನ್ ವಿವ್ಯಾಧೈವ ತ್ರಿಭಿಸ್ತ್ರಿಭಿಃ ॥11॥
ರಾಜನೆ, ಬಳಿಕ ದುರ್ಯೋಧನ ನಗುತ್ತ ಬೇರೆ ಎರಡು ಭಲ್ಲೆಗಳಿಂದ ಯಮಳರ ಬಿಲ್ಲುಗಳನ್ನು ಕತ್ತರಿಸಿದ. ಮೂರು ಮೂರು ಬಾಣಗಳಿಂದ ಇಬ್ಬರನ್ನೂ ಹೊಡೆದ.
ತಾವನ್ಯೇ ಧನುಷೀ ಶ್ರೇಷ್ಠೇ ಶಕ್ರಚಾಪನಿಭೇ ಶುಭೇ |
ಪ್ರಗೃಹ್ಯ ರೇಜತುಃ ಶೂರೌ ದೇವಪುತ್ರಸಮೌ ಯುಧಿ ॥12॥
ಶೂರರಾದ ಅವರು ಬೇರೆ ಶ್ರೇಷ್ಠವಾದ ಮಳೆಬಿಲ್ಲಿನಂತೆ ಸುಂದರವಾದ ಬಿಲ್ಲುಗಳನ್ನು ಎತ್ತಿಕೊಂಡು ರಣದಲ್ಲಿ ದೇವಪುತ್ರಸಮಾನರಾಗಿ ಬೆಳಗಿದರು.
ತತಸ್ತೌ ರಭಸೌ ಯುದ್ಧೇ ಭ್ರಾತರೌ ಭ್ರಾತರಂ ನೃಪ |
ಶರೈರ್ವವರ್ಷತುರ್ಘೋರೈರ್ಮಹಾಮೇಘೌ ಯಥಾಚಲಮ್ ॥13॥
ರಾಜನೆ, ರಣದಲ್ಲಿ ವೇಗವುಳ್ಳ ಆ ಇಬ್ಬರು ಸೋದರರು ಅಣ್ಣ ದುರ್ಯೋಧನನಿಗೆ, ಬೆಟ್ಟಕ್ಕೆ ಎರಡು ಮಹಾಮೇಘಗಳಂತೆ, ಘೋರವಾದ ಬಾಣಗಳ ಮಳೆಗರೆದರು.
ತತಃ ಕ್ರುದ್ಧೋ ಮಹಾರಾಜ ತವ ಪುತ್ರೋ ಮಹಾರಥಃ |
ಪಾಂಡುಪುತ್ರೌ ಮಹೇಷ್ವಾಸೌ ವಾರಯಾಮಾಸ ಪತ್ರಿಭಿಃ ॥14॥
ಮಹಾರಾಜ, ಮಹಾರಥನಾದ ನಿನ್ನ ಪುತ್ರನು ಕುಪಿತನಾಗಿ ಮಹಾಬಿಲ್ಗಾರರಾದ ನಕುಲಸಹದೇವರನ್ನು ಬಾಣಗಳಿಂದ ತಡೆದ.
ಧನುರ್ಮಂಡಲಮೇವಾಸ್ಯ ದೃಶ್ಯತೇ ಯುಧಿ ಭಾರತ |
ಸಾಯಕಾಶ್ಚೈವ ದೃಶ್ಯಂತೇ ನಿಶ್ಚರಂತಃ ಸಮಂತತಃ ॥15॥
ರಾಜನೆ, ರಣದಲ್ಲಿ ದುರ್ಯೋಧನನ ಬಾಗಿದ ಬಿಲ್ಲೇ ಕಾಣಿಸಿತು. ಮತ್ತು ಅದರಿಂದ ಎಲ್ಲೆಡೆಗೆ ಹಾರುವ ಬಾಣಗಳು ಮಾತ್ರವೇ ಕಂಡುಬಂದುವು.
ತಸ್ಯ ಸಾಯಕಸಂಛನ್ನೌ ಚಕಾಶೇತಾಂ ಚ ಪಾಂಡವೌ |
ಮೇಘಚ್ಛನ್ನೌ ಯಥಾ ವ್ಯೋಮ್ನಿ ಚಂದ್ರಸೂರ್ಯೌ ಹತಪ್ರಭೌ ॥16॥
ಆಕಾಶದಲ್ಲಿ ಮೋಡಗಳಿಂದ ಮರೆಯಾಗಿ ಕಾಂತಿಗುಂದಿದ ಚಂದ್ರಸೂರ್ಯ ರಂತೆ, ದುರ್ಯೋಧನನ ಬಾಣಗಳಿಂದ ಮರೆಯಾಗಿ ನಕುಲಸಹದೇವರು ಕಂಡುಬಂದರು.
ತೇ ತು ಬಾಣಾ ಮಹಾರಾಜ ಹೇಮಪುಂಖಾಃ ಶಿಲಾಶಿತಾಃ |
ಆಚ್ಛಾದಯನ್ ದಿಶಃ ಸರ್ವಾಃ ಸೂರ್ಯಸ್ಯೇವಾಂಶವಸ್ತದಾ ॥17॥
ಮಹಾರಾಜ, ಬಂಗಾರದ ಪುಕ್ಕ ಉಳ್ಳ ಸಾಣೆಹಿಡಿದ ಆ ಬಾಣಗಳು ಸೂರ್ಯನ ಕಿರಣಗಳಂತೆ ಎಲ್ಲ ದಿಕ್ಕುಗಳನ್ನು ಆಚ್ಛಾದಿಸಿದುವು.
ಬಾಣಭೂತೇ ತತಸ್ತಸ್ಮಿನ್ ಸಂಛನ್ನೇ ಚ ನಭಸ್ತಲೇ |
ಯಮಾಭ್ಯಾಂ ದದೃಶೇ ರೂಪಂ ಕಾಲಾಂತಕಯಮೋಪಮಮ್ ॥18॥
ಆ ಆಕಾಶಪ್ರದೇಶವು ಬಾಣಗಳಿಂದ ತುಂಬಿ ಮುಚ್ಚಿಹೋದಾಗ ನಕುಲ ಸಹದೇವರಿಗೆ ದುರ್ಯೋಧನನ ರೂಪವು ಕಾಲಾಂತಕಯಮನಿಗೆ ಸದೃಶವಾಗಿ ಕಂಡುಬಂದಿತು.
ಪರಾಕ್ರಮಂ ತು ತಂ ದೃಷ್ಟ್ವಾ ತವ ಸೂನೋರ್ಮಹಾರಥಾಃ |
ಮೃತ್ಯೋರಿವಾಂತಿಕಂ ಪ್ರಾಪ್ತೌ ಮಾದ್ರೀಪುತ್ರೌ ಸ್ಮ ಮೇನಿರೇ ॥19॥
ನಿನ್ನ ಪುತ್ರನ ಆ ಪರಾಕ್ರಮವನ್ನು ಕಂಡು, ಮಹಾರಥರು, ಮೃತ್ಯುವಿನ ಸಮೀಪಕ್ಕೇ ನಕುಲಸಹದೇವರು ಹೋಗಿದ್ದಾರೆ ಎಂದು ಭಾವಿಸಿದರು.
ತತಃ ಸೇನಾಪತೀ ರಾಜನ್ ಪಾಂಡವಸ್ಯ ಮಹಾತ್ಮನಃ |
ಪಾರ್ಷತಃ ಪ್ರಯಯೌ ತತ್ರ ಯತ್ರ ರಾಜಾ ಸುಯೋಧನಃ ॥20॥
ರಾಜನೆ, ಆಗ ಮಹಾತ್ಮಾ ಯುಧಿಷ್ಠಿರನ ಸೇನಾಪತಿಯಾದ ಧೃಷ್ಟದ್ಯುಮ್ನನು ರಾಜಾ ಸುಯೋಧನನಿದ್ದಲ್ಲಿಗೆ ಧಾವಿಸಿದ.
ಮಾದ್ರೀಪುತ್ರೌ ತತಃ ಶೂರೌ ವ್ಯತಿಕ್ರಮ್ಯ ಮಹಾರಥೌ |
ಧೃಷ್ಟದ್ಯುಮ್ನಸ್ತವ ಸುತಂ ತಾಡಯಾಮಾಸ ಸಾಯಕೈಃ ॥21॥
ಧೃಷ್ಟದ್ಯುಮ್ನನು ಶೂರ ಮಹಾರಥರಾದ ನಕುಲಸಹದೇವರನ್ನು ದಾಟಿ ಮುಂದೆ ಹೋಗಿ ನಿನ್ನ ಮಗನನ್ನು ಬಾಣಗಳಿಂದ ಹೊಡೆದ.
ತಮವಿಧ್ಯದಮೇಯಾತ್ಮಾ ತವ ಪುತ್ರೋಽತ್ಯಮರ್ಷಣಃ |
ಪಾಂಚಾಲ್ಯಂ ಪಂಚವಿಂಶತ್ಯಾ ಪ್ರಹಸ್ಯ ಪುರುಷರ್ಷಭ ॥22॥
ರಾಜನೆ, ಅತಿ ಅಸಹನೆಯವನಾದ ಅಮೇಯಾತ್ಮನಾದ ನಿನ್ನ ಪುತ್ರನು ನಕ್ಕು ಧೃಷ್ಟದ್ಯುಮ್ನನನ್ನು ಇಪ್ಪತ್ತೈದು ಬಾಣಗಳಿಂದ ಹೊಡೆದ.
ತತಃ ಪುನರಮೇಯಾತ್ಮಾ ತವ ಪುತ್ರೋ ಹ್ಯಮರ್ಷಣಃ |
ವಿದ್ಧ್ವಾ ನನಾದ ಪಾಂಚಾಲ್ಯಂ ಷಷ್ಟ್ಯಾ ಪಂಚಭಿರೇವ ಚ ॥23॥
ಆಗ ಪುನಃ ಅಮೇಯಾತ್ಮನಾದ ಅಸಹನೆಯವನಾದ ನಿನ್ನ ಪುತ್ರನು ಧೃಷ್ಟದ್ಯುಮ್ನನನ್ನು ಅರವತ್ತೈದು ಬಾಣಗಳಿಂದ ಹೊಡೆದು ಗರ್ಜನೆ ಮಾಡಿದ.

ಅಥಾಸ್ಯ ಸಶರಂ ಚಾಪಂ ಹಸ್ತಾವಾಪಂ ಚ ಮಾರಿಷ |
ಕ್ಷುರಪ್ರೇಣ ಸುತೀಕ್ಷ್ಣೇನ ರಾಜಾ ಚಿಚ್ಛೇದ ಸಂಯುಗೇ ||24||
ರಾಜನ್, ಬಳಿಕ ಧೃಷ್ಟದ್ಯುಮ್ನನ ಧನುರ್ಬಾಣಗಳನ್ನೂ ಕೈಚೀಲವನ್ನೂ ರಾಜಾ ದುರ್ಯೋಧನನು ರಣದಲ್ಲಿ ಬಲುತೀಕ್ಷ್ಣವಾದ ಬಾಣದಿಂದ ಕತ್ತರಿಸಿದ.
ತದಪಾಸ್ಯ ಧನುಶ್ಛಿನ್ನಂ ಪಾಂಚಾಲ್ಯಃ ಶತ್ರುಕರ್ಶನಃ |
ಅನ್ಯದಾದತ್ತ ವೇಗೇನ ಧನುರ್ಭಾರಸಹಂ ನವಮ್ ||25||
ಶತ್ರುನಾಶಕನಾದ ಧೃಷ್ಟದ್ಯುಮ್ನನು ಕಡಿದುಹೋದ ಬಿಲ್ಲನ್ನು ದೂರ ಎಸೆದು ಇನ್ನೊಂದು ಹೊಸದಾದ ಶಕ್ತಿಶಾಲಿಯಾದ ಧನುಸ್ಸನ್ನು ಬೇಗನೆ ಎತ್ತಿಕೊಂಡ.
ಪ್ರಜ್ವಲನ್ನಿವ ವೇಗೇನ ಸಂರಂಭಾದ್ರುಧಿರೇಕ್ಷಣಃ |
ಅಶೋಭತ ಮಹೇಷ್ವಾಸೋ ಧೃಷ್ಟದ್ಯುಮ್ನಃ ಕೃತವ್ರಣಃ ||26||
ಮಹಾಬಿಲ್ಗಾರ ಧೃಷ್ಟದ್ಯುಮ್ನನು ಗಾಯಗೊಂಡು ಕೋಪದಿಂದ ಕೆಂಪುಕಣ್ಣು ಮಾಡಿಕೊಂಡು ವೇಗದಿಂದ ಜ್ವಲಿಸುತ್ತಿರುವಂತೆ ಶೋಭಿಸಿದ.
ಸ ಪಂಚದಶ ನಾರಾಚಾನ್ ಶ್ವಸತಃ ಪನ್ನಗಾನಿವ |
ಜಿಘಾಂಸುರ್ಭರತಶ್ರೇಷ್ಠಂ ಧೃಷ್ಟದ್ಯುಮ್ನೋ ವ್ಯವಾಸೃಜತ್ ||27||
ಧೃಷ್ಟದ್ಯುಮ್ನನು ಭುಸುಗುಟ್ಟುವ ಹಾವುಗಳಂಥ ಹದಿನೈದು ಬಾಣಗಳನ್ನು ದುರ್ಯೋಧನನನ್ನು ಕೊಲ್ಲಲೆಂದು ಪ್ರಯೋಗಿಸಿದ.
ತೇ ವರ್ಮ ಹೇಮವಿಕೃತಂ ಭಿತ್ತ್ವಾ ರಾಜ್ಞಃ ಶಿಲಾಶಿತಾಃ |
ವಿವಿಶುರ್ವಸುಧಾಂ ವೇಗಾತ್ ಕಂಕಬರ್ಹಿಣವಾಸಸಃ ||28||
ಸಾಣೆಹಿಡಿದ ಹದ್ದಿನ ರೆಕ್ಕೆಗಳನ್ನುಳ್ಳ ಆ ಬಾಣಗಳು ದುರ್ಯೋಧನನ ಬಂಗಾರದ ಕವಚವನ್ನು ಭೇದಿಸಿ ವೇಗದಿಂದ ನೆಲದೊಳಗೆ ಹೊಕ್ಕವು.
ಸೋಽತಿವಿದ್ಧೋ ಮಹಾರಾಜ ಪುತ್ರಸ್ತೇಽತಿವ್ಯರಾಜತ |
ವಸನ್ತೇ ಪುಷ್ಪಬಹುಲಃ ಪ್ರಫುಲ್ಲ ಇವ ಕಿಂಶುಕಃ ||29||
ಮಹಾರಾಜ, ನಿನ್ನ ಪುತ್ರನು ಅತಿಯಾಗಿ ಹೊಡೆಸಿಕೊಂಡು ವಸಂತದಲ್ಲಿ ಅರಳಿದ ಬಹುಪುಷ್ಪಯುಕ್ತವಾದ ಮುತ್ತುಗದ ಗಿಡದಂತೆ ಅತಿಯಾಗಿ ಶೋಭಿಸಿದ.
ಸ ಚ್ಛಿನ್ನವರ್ಮಾ ನಾರಾಚಪ್ರಹಾರೈಃ ಜರ್ಜರೀಕೃತಃ |
ಧೃಷ್ಟದ್ಯುಮ್ನಸ್ಯ ಭಲ್ಲೇನ ಕ್ರುದ್ಧಶ್ಚಿಚ್ಛೇದ ಕಾರ್ಮುಕಮ್ ||30||
ಕವಚ ಒಡೆದಾಗ ಬಾಣಪ್ರಹಾರಗಳಿಂದ ಜರ್ಝರಿತನಾದ ದುರ್ಯೋಧನನು ಕ್ರುದ್ಧನಾಗಿ ಧೃಷ್ಟದ್ಯುಮ್ನನ ಬಿಲ್ಲನ್ನು ಭಲ್ಲೆಯಿಂದ ಕತ್ತರಿಸಿದ.
ಅಥೈನಂ ಛಿನ್ನಧನ್ವಾನಂ ತ್ವರಮಾಣೋ ಮಹೀಪತಿಃ |
ಸಾಯಕೈರ್ದಶಭೀ ರಾಜನ್ ಭ್ರುವೋರ್ಮಧ್ಯೇ ಸಮಾರ್ದಯತ್ ||31||
ರಾಜನೆ, ಬಿಲ್ಲು ಕಡಿದುಕೊಂಡ ಧೃಷ್ಟದ್ಯುಮ್ನನನ್ನು ದುರ್ಯೋಧನನು ಬೇಗನೆ ಹತ್ತುಬಾಣಗಳಿಂದ ಹುಬ್ಬುಗಳ ನಡುವೆ ಹೊಡೆದ.
ತಸ್ಯ ತೇಽಶೋಭಯನ್ ವಕ್ತ್ರಂ ಕರ್ಮಾರಪರಿಮಾರ್ಜಿತಾಃ |
ಪ್ರಫುಲ್ಲಂ ಚಂಪಕಂ ಯದ್ವದ್ ಭ್ರಮರಾ ಮಧುಲಿಪ್ಸವಃ ||32||
ಕಮ್ಮಾರನಿಂದ ಹದಗೊಂಡ ಆ ಬಾಣಗಳು ಧೃಷ್ಟದ್ಯುಮ್ನನ ಮುಖವನ್ನು, ಅರಳಿದ ಸಂಪಿಗೆಯನ್ನು ಹೂವಿನ ರಸ ಬಯಸುವ ದುಂಬಿಗಳಂತೆ, ಅಂದ ಗೊಳಿಸಿದುವು.
ತದಪಾಸ್ಯ ಧನುಶ್ಛಿನ್ನಂ ಧೃಷ್ಟದ್ಯುಮ್ನೋ ಮಹಾಮನಾಃ |
ಅನ್ಯದಾದತ್ತ ವೇಗೇನ ಧನುರ್ಭಲ್ಲಾಂಶ್ಚ ಷೋಡಶ ||33||
ಕಡಿದ ಆ ಬಿಲ್ಲನ್ನು ದೂರಕ್ಕೆಸೆದು ಮಹಾ ಬುದ್ಧಿಶಾಲಿ ಧೃಷ್ಟದ್ಯುಮ್ನನು ಬೇಗನೆ ಇನ್ನೊಂದು ಬಿಲ್ಲನ್ನೂ ಹದಿನಾರು ಭಲ್ಲೆಗಳನ್ನೂ ಎತ್ತಿಕೊಂಡ.
ತತೋ ದುರ್ಯೋಧನಸ್ಯಾಶ್ವಾನ್ ಹತ್ವಾ ಸೂತಂ ಚ ಪಂಚಭಿಃ |
ಧನುಶ್ಚಿಚ್ಛೇದ ಭಲ್ಲೇನ ಜಾತರೂಪಪರಿಷ್ಕೃತಮ್ ||34||
ಐದು ಭಲ್ಲೆಗಳಿಂದ ಧೃಷ್ಟದ್ಯುಮ್ನನು ದುರ್ಯೋಧನನ ಅಶ್ವಗಳನ್ನೂ ಸಾರಥಿಯನ್ನೂ ಕೊಂದು ಒಂದು ಭಲ್ಲೆಯಿಂದ ಬಂಗಾರದಿಂದ ಅಲಂಕೃತವಾದ ಬಿಲ್ಲನ್ನೂ ಕಡಿದ.
ರಥಂ ಸೋಪಸ್ಕರಂ ಛತ್ರಂ ಶಕ್ತಿಂ ಖಡ್ಗಂ ಗದಾಂ ಧ್ವಜಮ್ |
ಭಲ್ಲೈಶ್ಚಿಚ್ಛೇದ ದಶಭಿಃ ಪುತ್ರಸ್ಯ ತವ ಪಾರ್ಷತಃ ||35||
ಉಳಿದ ಹತ್ತು ಭಲ್ಲೆಗಳಿಂದ ಅವನ ಸಜ್ಜಾದ ರಥವನ್ನೂ ಛತ್ರ ಶಕ್ತಿ ಖಡ್ಗ ಗದೆ ಧ್ವಜಗಳನ್ನೂ ಕತ್ತರಿಸಿದ.
ತಪನೀಯಾಂಗದಂ ಚಿತ್ರಂ ನಾಗಂ ಮಣಿಮಯಂ ಭುವಮ್ |
ಧ್ವಜಂ ಕುರುಪತೇಶ್ಛಿನ್ನಂ ದದೃಶುಃ ಸರ್ವಪಾರ್ಥಿವಾಃ ||36||
ಬಂಗಾರದ ಅಂಗದದಂಥ ಸುಂದರವಾದ ನಾಗ ಮತ್ತು ಮಣಿಮಯವಾದ ಭೂಮಿ ಇವುಗಳಾಕಾರದ ಕುರುಪತಿಯ ಧ್ವಜವು ಕಡಿದು ಬಿದ್ದುದನ್ನು ಎಲ್ಲ ಕ್ಷತ್ರಿಯರೂ ಕಂಡರು.
ದುರ್ಯೋಧನಂ ತು ವಿರಥಂ ಛಿನ್ನಸರ್ವಾಯುಧಂ ರಣೇ |

ಭ್ರಾತರಂ ಪರ್ಯರಕ್ಷಂತ ಸೋದರಾ ಭರತರ್ಷಭ ॥37॥
ರಾಜನೆ, ರಣದಲ್ಲಿ ದುರ್ಯೋಧನನು ಹೀಗೆ ರಥವನ್ನೂ ಎಲ್ಲ ಆಯುಧ ಗಳನ್ನು ಕಳೆದುಕೊಂಡಾಗ ಅಣ್ಣನಾದ ಆತನನ್ನು ತಮ್ಮಂದಿರು ರಕ್ಷಣೆ ಮಾಡಿದರು.
ತಮಾರೋಪ್ಯ ರಥೇ ರಾಜನ್ ದಂಡಧಾರೋ ಜನಾಧಿಪಮ್ |
ಅಪೋವಾಹ ಚ ಸಂಭ್ರಾಂತೋ ಧೃಷ್ಟದ್ಯುಮ್ನಸ್ಯ ಪಶ್ಯತಃ ॥38॥
ರಾಜನೆ, ಧೃಷ್ಟದ್ಯುಮ್ನನು ನೋಡುತ್ತಿದ್ದಂತೇ ಗಾಬರಿಗೊಂಡ ದಂಡಧಾರನು ದುರ್ಯೋಧನನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ದೂರಕ್ಕೆ ಒಯ್ದ.
ಕರ್ಣಸ್ತು ಸಾತ್ಯಕಿಂ ಜಿತ್ವಾ ರಾಜಗೃದ್ಧೀ ಮಹಾಬಲಃ |
ದ್ರೋಣಹಂತಾರಮುಗ್ರೇಷುಂ ಸಸಾರಾಭಿಮುಖೇ ರಣೇ ॥39॥
ರಾಜನ ಜಯಾಕಾಂಕ್ಷಿ ಮಹಾಬಲಿಯಾದ ಕರ್ಣನು ಸಾತ್ಯಕಿಯನ್ನು ಗೆದ್ದು ಉಗ್ರ ಬಾಣವುಳ್ಳ ಧೃಷ್ಟದ್ಯುಮ್ನನನ್ನು ರಣದಲ್ಲಿ ಇದಿರಿಸಿದ.
ತಂ ಪೃಷ್ಠತೋಭ್ಯಯಾತ್ ತೂರ್ಣಂ ಶೈನೇಯೋ ವಿತುದನ್ ಶರೈಃ |
ವಾರಣಂ ಜಘನೋಪಾಂತೇ ವಿಷಾಣಾಭ್ಯಾಮಿವ ದ್ವಿಪಃ ॥40॥
ಸಾತ್ಯಕಿ ಬೇಗನೆ ಹಿಂದಿನಿಂದ ಕರ್ಣನನ್ನು ಬಾಣಗಳಿಂದ ಪೀಡಿಸುತ್ತ ಬಂದ, ಒಂದು ಆನೆ ಇನ್ನೊಂದು ಆನೆಯನ್ನು ಹಿಂಬದಿಯಲ್ಲಿ ದಂತಗಳಿಂದ ತಿವಿಯುತ್ತ ಬರುವಂತೆ!
ಸ ಭಾರತ ಮಹಾನಾಸೀದ್ ಯೋಧಾನಾಂ ಸುಮಹಾತ್ಮನಾಮ್ |
ಕರ್ಣಪಾರ್ಷತಯೋರ್ಯುದ್ಧೇ ಸಂಕ್ರುದ್ಧಾನಾಂ ಮಹಾರಣಃ ॥41॥
ರಾಜನೆ, ಕರ್ಣ ಮತ್ತು ಧೃಷ್ಟದ್ಯುಮ್ನರ ಯುದ್ಧದಲ್ಲಿ ಮಹಾತ್ಮರಾದ ಕ್ರುದ್ಧರಾದ ಯೋಧರಿಗೆ ಬಲು ದೊಡ್ಡ ಹೋರಾಟ ನಡೆಯಿತು.
ನ ಪಾಂಡವಾನಾಂ ನಾಸ್ಮಾಕಂ ಯೋಧಃ ಕಶ್ಚಿತ್ ಪರಾಙ್ಮುಖಃ |
ಪ್ರತ್ಯದೃಶ್ಯತ ಯತ್ಕರ್ಣಃ ಪಾಂಚಾಲಾಂಸ್ತ್ವರಿತೋ ಯಯೌ ॥42॥
ಕರ್ಣನು ಪಾಂಚಾಲರನ್ನು ವೇಗದಿಂದ ಆಕ್ರಮಿಸಿದಾಗ, ಪಾಂಡವರಲ್ಲಿಯೂ ಯಾವ ಯೋಧನೂ ಹಿಮ್ಮೆಟ್ಟಲಿಲ್ಲ. ನಮ್ಮವರಲ್ಲಿಯೂ ಯಾವ ಯೋಧನೂ ಹಿಮ್ಮೆಟ್ಟಲಿಲ್ಲ.
ತಸ್ಮಿನ್ ರಣೇ ನರಶ್ರೇಷ್ಠ ಗಜವಾಜಿನರಕ್ಷಯಃ |
ಪ್ರಾದುರಾಸೀದುಭಯತೋ ರಾಜನ್ ಮಧ್ಯಂಗತೇಽಹನಿ ॥43॥
ರಾಜನೆ, ಮಧ್ಯಾಹ್ನದ ಕಾಲದಲ್ಲಿ ಆ ರಣದಲ್ಲಿ ಎರಡೂ ಕಡೆ ಗಜ ಅಶ್ವ ಪದಾತಿಗಳ ನಾಶ ಉಂಟಾಯಿತು.
ಪಾಂಚಾಲಾಸ್ತು ಮಹಾರಾಜ ತ್ವರಿತಾ ವಿಜಿಗೀಷವಃ |
ಸರ್ವತೋಽಭ್ಯದ್ರವನ್ ಕರ್ಣಂ ಪತತ್ರಿಣ ಇವ ದ್ರುಮಮ್ ॥44॥
ಮಹಾರಾಜ, ಪಾಂಚಾಲರು ವೇಗದಿಂದ ಜಯಾಕಾಂಕ್ಷಿಗಳಾಗಿ, ಹಕ್ಕಿಗಳು ವೃಕ್ಷಕ್ಕೆ ಹಾರಿ ಬರುವಂತೆ, ಎಲ್ಲ ಕಡೆಯಿಂದ ಕರ್ಣನ ಕಡೆಗೇ ಧಾವಿಸಿದರು.
ತಾಂಸ್ತಥಾಧಿರಥಿಃ ಕ್ರುದ್ಧೋ ಯತಮಾನಾನ್ ಮನಸ್ವಿನಃ |
ವಿಚಿನ್ವನ್ನಿವ ಬಾಣಾಗ್ರೈಃ ಸಮಾಸಾದಯದಗ್ರತಃ ॥45॥
ಬೆರಳ ತುದಿಯಿಂದ ಹೂಗಳನ್ನು ಆಯ್ದುಕೊಳ್ಳುವಂತೆ, ಕ್ರುದ್ಧನಾದ ಕರ್ಣನು ಜಯಕ್ಕೆ ಯತ್ನಿಸುವ ಜಾಣರಾದ ಪಾಂಡವಯೋಧರನ್ನು ಬಾಣದ ತುದಿಗಳಿಂದ ಆಯ್ದು ತೆಗೆದುಕೊಂಡ.
ವ್ಯಾಘ್ರಕೇತುಂ ಸುಶರ್ಮಾಣಂ ಶಂಕುಂ ಚೋಗ್ರಾಯುಧಂ ಜಯಮ್ |
ಶುಕ್ಲಂ ಚ ರೋಚಮಾನಂ ಚ ಸಿಂಹಸೇನಂ ಚ ದುರ್ಜಯಮ್ ॥46॥
ವ್ಯಾಘ್ರಕೇತು, ಸುಶರ್ಮ, ಶಂಕು, ಉಗ್ರಾಯುಧ, ಜಯ, ಶುಕ್ಲ, ರೋಚಮಾನ, ದುರ್ಜಯನಾದ ಸಿಂಹಸೇನರನ್ನು ಕರ್ಣನು ಪಾಂಡವಸೈನ್ಯದಲ್ಲಿ ಯುದ್ಧಕ್ಕೆ ಆರಿಸಿಕೊಂಡ.
ತೇ ವೀರಾ ರಥಮಾರ್ಗೇಣ ಪರಿವವ್ರುರ್ನರೋತ್ತಮಮ್ |
ಸೃಜಂತಂ ಸಾಯಕಾನ್ ಕ್ರುದ್ಧಂ ಕರ್ಣಮಾಹವಶೋಭಿನಮ್ ॥47॥
ಆ ವೀರರು, ಯುದ್ಧದಲ್ಲಿ ಶೋಭಿಸುತ್ತ ಕ್ರುದ್ಧನಾಗಿ ಬಾಣಗಳನ್ನು ಎಸೆಯುತ್ತಿದ್ದ ನರೋತ್ತಮ ಕರ್ಣನನ್ನು ರಥಮಾರ್ಗದಿಂದ ಬಂದು ಸುತ್ತುವರಿದರು.
ಯುಧ್ಯಮಾನಾಂಸ್ತು ತಾನ್ ಶೂರಾನ್ ಮನುಜೇಂದ್ರ ಪ್ರತಾಪವಾನ್ |
ಅಷ್ಟಾಭಿರಷ್ಟೌ ರಾಧೇಯೋ ನ್ಯಹನನ್ನಿಶಿತೈಃ ಶರೈಃ ॥48॥
ರಾಜನೆ, ಯುದ್ಧಮಾಡುತ್ತಿದ್ದ ಆ ಎಂಟುಮಂದಿ ಶೂರರನ್ನು ಪ್ರತಾಪಶಾಲಿ ಯಾದ ಕರ್ಣನು ತೀಕ್ಷ್ಣವಾದ ಎಂಟು ಬಾಣಗಳಿಂದ ಸಂಹರಿಸಿದ.
ಅಥಾಪರಾನ್ ಮಹಾರಾಜ ಸೂತಪುತ್ರಃ ಪ್ರತಾಪವಾನ್ |
ಜಘಾನ ಬಹುಸಾಹಸ್ರಾನ್ ಯೋಧಾನ್ ಯುದ್ಧವಿಶಾರದಃ ॥49॥
ಮಹಾರಾಜ! ಪ್ರತಾಪಶಾಲಿಯಾದ ಯುದ್ಧವಿಶಾರದನಾದ ಕರ್ಣನು ಅನೇಕ ಸಾವಿರ ಸಂಖ್ಯೆಯ ಬೇರೆ ಯೋಧರನ್ನೂ ಕೂಡ ಸಂಹರಿಸಿದ.
ವಿಷ್ಣುಂ ಚ ವಿಷ್ಣುಕರ್ಮಾಣಂ ದೇವಾಪಿಂ ಭದ್ರಮೇವ ಚ |

ದಂಡಂ ಚ ಸಮರೇ ರಾಜಂಶ್ಚಿತ್ರಂ ಚಿತ್ರಾಯುಧಂ ಹರಿಮ್ ॥50॥
ಸಿಂಹಕೇತುಂ ರೋಚಮಾನಂ ಶಲಭಂ ಚ ಮಹಾರಥಮ್ |
ನಿಜಘಾನ ಸುಸಂಕ್ರುದ್ಧಶ್ಚೇದೀನಾಂ ಚ ಮಹಾರಥಾನ್ ॥51॥
ರಾಜನೆ, ವಿಷ್ಣು ವಿಷ್ಣುಕರ್ಮ ದೇವಾಪಿ ಭದ್ರ ದಂಡ ಚಿತ್ರ ಚಿತ್ರಾಯುಧ ಹರಿ ಸಿಂಹಕೇತು ರೋಚಮಾನ ಮಹಾರಥನಾದ ಶಲಭ ಇವರನ್ನೂ ಚೇದಿಗಳ ಮಹಾರಥರನ್ನೂ ಕರ್ಣನು ರಣದಲ್ಲಿ ಸಂಹರಿಸಿದ.
ತೇಷಾಮಾದದತಃ ಪ್ರಾಣಾನಾಸೀದಾಧಿರಥೇರ್ವಪುಃ |
ಶೋಣಿತಾಭ್ಯುಕ್ಷಿತಾಂಗಸ್ಯ ರುದ್ರಸ್ಯೇವೋರ್ಜಿತಂ ಮಹತ್ ॥52॥
ಅವರ ಪ್ರಾಣಗಳನ್ನು ತೆಗೆಯುವಾಗ ನೆತ್ತರಿಂದ ಮೈತೊಯ್ಸಿಕೊಂಡ ಕರ್ಣನ ಬಲಿಷ್ಠವಾದ ಆ ಮಹಾ ಶರೀರವು ರುದ್ರನ ಶರೀರದಂತಿತ್ತು.
ತತ್ರ ಭಾರತ ಕರ್ಣೇನ ಮಾತಂಗಾಸ್ತಾಡಿತಾಃ ಶರೈಃ |
ಸರ್ವತೋಽಭ್ಯದ್ರುವನ್ ಭೀತಾಃ ಕುರ್ವಂತೋ
ಮಹದಾಕುಲಮ್ ॥53॥
ರಾಜನೆ, ಕರ್ಣನು ಬಾಣಗಳಿಂದ ಹೊಡೆದ ಆನೆಗಳು ಭಯಗೊಂಡು ದೊಡ್ಡ ಗೊಂದಲ ಉಂಟುಮಾಡುತ್ತ ಎಲ್ಲ ಕಡೆ ಓಡಿದುವು.
ನಿಪೇತುರುರ್ವ್ಯಾಂ ಸಮರೇ ಕರ್ಣಸಾಯಕಪೀಡಿತಾಃ |
ಕುರ್ವಂತೋ ವಿವಿಧಾನ್ನಾದಾನ್ ವಜ್ರನುನ್ನಾ ಇವಾಚಲಾಃ ॥54॥
ರಣದಲ್ಲಿ ಕರ್ಣನ ಬಾಣಗಳಿಂದ ಪೀಡಿತವಾದ ಆನೆಗಳು ನಾನಾವಿಧ ಧ್ವನಿಗಳನ್ನು ಉಂಟುಮಾಡುತ್ತ ವಜ್ರದಿಂದ ಹೊಡೆಸಿಕೊಂಡ ಬೆಟ್ಟಗಳಂತೆ ನೆಲದಲ್ಲಿ ಉರುಳಿದುವು.
ಗಜವಾಜಿಮನುಷ್ಯೈಶ್ಚ ನಿಪತದ್ಭಿಃ ಸಮಂತತಃ |
ರಥೈಶ್ಚಾಧಿರಥೇರ್ಮಾರ್ಗೇ ಸಮಾಸ್ತೀರ್ಯತ ಮೇದಿನೀ ॥55॥
ಗಜ ಅಶ್ವ ಪದಾತಿ ರಥಗಳು ಎಲ್ಲೆಡೆ ಬೀಳುತ್ತಿದ್ದುದರಿಂದ ಕರ್ಣನ ಮಾರ್ಗದಲ್ಲಿ ರಣಭೂಮಿ ಅವುಗಳಿಂದ ಆಚ್ಛಾದಿತವಾಯಿತು.
ನೈವ ಭೀಷ್ಮೋ ನ ಚ ದ್ರೋಣೋ ನಾಪ್ಯನ್ಯೇ ಯುಧಿ ತಾವಕಾಃ |
ಚಕ್ರುಃ ಸ್ಮ ತಾದೃಶಂ ಕರ್ಮ ಯಾದೃಶಂ ವೈ ಕೃತಂ ರಣೇ ॥56॥
ಕರ್ಣನು ರಣದಲ್ಲಿ ಎಂಥ ಕಾರ್ಯವನ್ನು ಮಾಡಿದನೋ ಅಂಥ ಕಾರ್ಯವನ್ನು ಭೀಷ್ಮ ಮಾಡಲಿಲ್ಲ, ದ್ರೋಣ ಮಾಡಲಿಲ್ಲ, ಬೇರೆ ನಿನ್ನವರೂ ಮಾಡಲಿಲ್ಲ.
ಸೂತಪುತ್ರೇಣ ನಾಗೇಷು ರಥೇಷು ಚ ಹಯೇಷು ಚ |
ನರೇಷು ಚ ನರವ್ಯಾಘ್ರ ಕೃತಂ ಸ್ಮ ಕದನಂ ಮಹತ್ ॥57॥
ರಾಜನೆ, ಕರ್ಣನು ಗಜ ರಥ ಅಶ್ವ ಪದಾತಿ ಸೈನ್ಯಗಳಲ್ಲಿ ದೊಡ್ಡ ಕಾಳಗವನ್ನೇ ಮಾಡಿದ.
ಮೃಗಮಧ್ಯೇ ಯಥಾ ಸಿಂಹೋ ದೃಶ್ಯತೇ ನಿರ್ಭಯಶ್ಚರನ್ |
ಪಾಂಚಾಲಾನಾಂ ತಥಾ ಮಧ್ಯೇ ಕರ್ಣೋಽಚರದಭೀತವತ್ ॥58॥
ಮೃಗಗಳ ನಡುವೆ ಸಿಂಹ ಹೇಗೆ ನಿರ್ಭಯವಾಗಿ ಸಂಚರಿಸುವುದೋ ಹಾಗೆಯೇ ಪಾಂಚಾಲರ ನಡುವೆ ಕರ್ಣನು ನಿರ್ಭಯವಾಗಿ ಸಂಚರಿಸಿದ.
ಯಥಾ ಮೃಗಗಣಾಂಸ್ತ್ರಸ್ತಾನ್ ಸಿಂಹೋ ದ್ರಾವಯತೇ ದಿಶಃ |
ಪಾಂಚಾಲಾನಾಂ ರಥವ್ರಾತಾನ್ ಕರ್ಣೋ ದ್ರಾವಯತೇ ತಥಾ ॥59॥
ಸಿಂಹವು ಹೇಗೆ ಮೃಗಸಮೂಹಗಳನ್ನು ದಿಕ್ಕುಗಳಿಗೆ ಓಡಿಸುವುದೋ ಹಾಗೇ ಕರ್ಣನು ಪಾಂಚಾಲರ ರಥಸಮೂಹಗಳನ್ನು ದಿಕ್ಕುಗಳಿಗೆ ಓಡಿಸಿದ.
ಸಿಂಹಾಸ್ಯಂ ಚ ಯಥಾ ಪ್ರಾಪ್ಯ ನ ಜೀವಂತಿ ಮೃಗಾಃ ಕ್ವಚಿತ್ |
ತಥಾ ಕರ್ಣಮನುಪ್ರಾಪ್ಯ ನ ಜೀವಂತಿ ಮಹಾರಥಾಃ ॥60॥
ಸಿಂಹದ ಬಾಯಿಗೆ ಬಿದ್ದ ಬಳಿಕ ಮೃಗಗಳು ಎಂದೂ ಬದುಕಿ ಉಳಿಯುವುದಿಲ್ಲ. ಹೇಗೋ ಹಾಗೆ ಕರ್ಣನ ದೃಷ್ಟಿಗೆ ಬಿದ್ದ ಮಹಾರಥರು ಬದುಕಿ ಉಳಿಯಲಿಲ್ಲ.
ವೈಶ್ವಾನರಂ ಯಥಾ ದೀಪ್ತಂ ದಹ್ಯಂತೇ ಪ್ರಾಪ್ಯ ವೈ ಜನಾಃ |
ಕರ್ಣಾಗ್ನಿನಾ ರಣೇ ತದ್ವದ್ದಗ್ಧಾ ಭಾರತ ಸೃಂಜಯಾಃ ॥61॥
ರಾಜನೆ, ಉರಿಯುವ ಬೆಂಕಿಯಲ್ಲಿ ಸಿಕ್ಕಿಕೊಂಡ ಜನರು ಹೇಗೆ ಸುಟ್ಟು ಹೋಗುವರೋ ಹಾಗೇ ಕರ್ಣನೆಂಬ ಬೆಂಕಿಯಿಂದ ರಣದಲ್ಲಿ ಸೃಂಜಯರು ಸುಟ್ಟು ಹೋದರು.
ಕರ್ಣೇನ ಚೇದಿಷ್ವೇಕೇನ ಪಾಂಚಾಲೇಷು ಚ ಭಾರತ |
ವಿಶ್ರಾವ್ಯ ನಾಮ ನಿಹತಾ ಬಹವಃ ಶೂರಸಮ್ಮತಾಃ ॥62॥
ರಾಜನೆ, ಕರ್ಣನೊಬ್ಬನೇ ತನ್ನ ಹೆಸರನ್ನು ಘೋಷಿಸಿ ಚೇದಿಗಳಲ್ಲಿ ಪಾಂಚಾಲರಲ್ಲಿ ಶೂರರೆಂದು ಪ್ರಸಿದ್ಧರಾದ ಬಹುಮಂದಿ ಯೋಧರನ್ನು ಕೊಂದ.
ಮಮ ಚಾಸೀನ್ ಮನುಷ್ಯೇಂದ್ರ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ |
ನೈಕೋಽಪ್ಯಾಧಿರಥೇರ್ಜೀವನ್ ಪಾಂಚಾಲ್ಯೋ ಮೋಕ್ಷ್ಯತೇ
ಯುಧಿ ॥63॥

ಪಾಂಚಾಲಾನಥ ನಿಘ್ನಂತಂ ಕರ್ಣಂ ದೃಷ್ಟ್ವಾ ಮಹಾರಣೇ ॥64॥
ಪಾಂಚಾಲರನ್ನು ಮಹಾರಣದಲ್ಲಿ ಸಂಹರಿಸುತ್ತಿದ್ದ ಕರ್ಣನನ್ನು ನೋಡಿದಾಗ ಕರ್ಣನ ಪರಾಕ್ರಮವನ್ನು ಕಂಡು, ಕರ್ಣನಿಂದ ಒಬ್ಬನು ಪಾಂಚಾಲನೂ ಕೂಡ ರಣದಲ್ಲಿ ಜೀವಂತವಾಗಿ ಉಳಿಯುವುದಿಲ್ಲವೆಂದು ನನಗೆ ಅನ್ನಿಸಿತು.
ಪಾಂಚಾಲಾನ್ ವಿಧಮನ್ ಸಂಖ್ಯೇ ಸೂತಪುತ್ರಃ ಪ್ರತಾಪವಾನ್ |
ಅಭ್ಯಧಾವತ ಸಂಕ್ರುದ್ಧೋ ಧರ್ಮಪುತ್ರಂ ಯುಧಿಷ್ಠಿರಮ್ ॥65॥
ಪಾಂಚಾಲರನ್ನು ಸಂಹರಿಸುತ್ತ ಪ್ರತಾಪಶಾಲಿಯಾದ ಕರ್ಣನು ರಣದಲ್ಲಿ ಕ್ರುದ್ಧನಾಗಿ ಧರ್ಮಪುತ್ರ ಯುಧಿಷ್ಠಿರನನ್ನೂ ಆಕ್ರಮಿಸಿದ.
ಧೃಷ್ಟದ್ಯುಮ್ನಶ್ಚ ರಾಧೇಯಂ ದ್ರೌಪದೇಯಾಶ್ಚ ಮಾರಿಷ |
ಪರಿವವ್ರುರಮಿತ್ರಘ್ನಂ ಶತಶಶ್ಚಾಪರೇ ಜನಾಃ ॥66॥
ರಾಜನೆ, ಆಗ ಶತ್ರುನಾಶಕನಾದ ಕರ್ಣನನ್ನು ಧೃಷ್ಟದ್ಯುಮ್ನನೂ ದ್ರೌಪದೀ ಪುತ್ರರೂ ನೂರಾರು ಬೇರೆ ಯೋಧರೂ ಸುತ್ತುವರಿದರು.
ಶಿಖಂಡೀ ಸಹದೇವಶ್ಚ ನಕುಲೋ ನಾಕುಲಿಸ್ತಥಾ |
ಜನಮೇಜಯಃ ಶಿನೇರ್ನಪ್ತಾ ಬಹವಶ್ಚ ಪ್ರಭದ್ರಕಾಃ ॥67॥
ಏತೇ ಪುರೋಗಮಾ ಭೂತ್ವಾ ಧೃಷ್ಟದ್ಯುಮ್ನಶ್ಚ ಸಂಯುಗೇ |
ಕರ್ಣಮಸ್ಯಂತಮಿಷ್ವಸ್ತ್ರೈರ್ವಿಚೇರುರಮಿತೌಜಸಃ ॥68॥
ಅಮಿತ ಪರಾಕ್ರಮಿಗಳಾದ ಶಿಖಂಡಿ, ಸಹದೇವ, ನಕುಲ, ಶತಾನೀಕ, ಜನಮೇಜಯ, ಸಾತ್ಯಕಿ ಅನೇಕ ಪ್ರಭದ್ರಕ ಯೋಧರು ಮತ್ತು ಧೃಷ್ಟದ್ಯುಮ್ನ ಇವರು ಮುಂದೆ ಹೋಗಿ, ಅವ್ಯಾಹತವಾಗಿ ಬಾಣಗಳನ್ನೆಸೆಯುತ್ತಿದ್ದ ಕರ್ಣನನ್ನು ರಣದಲ್ಲಿ ಆಕ್ರಮಿಸಿದರು.
ತಾಂಸ್ತತ್ರಾಧಿರಥಿಃ ಸಂಖ್ಯೇ ಚೇದಿಪಾಂಚಾಲಪಾಂಡವಾನ್ |
ಏಕೋ ಬಹೂನಭ್ಯಪತದ್ ಗರುತ್ಮಾನ್ ಪನ್ನಗಾನಿವ ॥69॥
ಅಲ್ಲಿ ಒಬ್ಬನೇ ಕರ್ಣ ಬಹುಮಂದಿ ಚೇದಿ ಪಾಂಚಾಲ ಪಾಂಡವರನ್ನು ರಣದಲ್ಲಿ ಒಬ್ಬನೇ ಗರುಡ ಬಹು ಸರ್ಪಗಳನ್ನು ಇದಿರಿಸುವಂತೆ ಇದಿರಿಸಿದ.
ತೈಃ ಕರ್ಣಸ್ಯಾಭವದ್ ಯುದ್ಧಂ ಘೋರರೂಪಂ ವಿಶಾಂಪತೇ |
ತಾದೃಗ್ಯಾದೃಕ್ಪುರಾ ವೃತ್ತಂ ದೇವಾನಾಂ ದಾನವೈಃ ಸಹ ॥70॥
ರಾಜನೆ, ಹಿಂದೆ ದೇವತೆಗಳಿಗೆ ದಾನವರೊಂದಿಗೆ ಯಾವ ರೀತಿಯ ಯುದ್ಧ ನಡೆಯಿತೋ ಅದೇ ರೀತಿಯ ಘೋರವಾದ ಯುದ್ಧ ಕರ್ಣನಿಗೆ ಅವರೊಂದಿಗೆ ನಡೆಯಿತು.
ತಾನ್ ಸಮೇತಾನ್ ಮಹೇಷ್ವಾಸಾನ್ ಶರವರ್ಷೌಘವರ್ಷಿಣಃ |
ಏಕೋಽಭ್ಯಭವದವ್ಯಗ್ರಸ್ತಮಾಂಸೀವ ದಿವಾಕರಃ ॥71॥
ಎಲ್ಲರೂ ಸೇರಿ ಬಾಣಗಳ ಮಳೆಧಾರೆಗಳನ್ನು ಸುರಿಸುವ ಆ ಎಲ್ಲ ಮಹಾ ಬಿಲ್ಗಾರರನ್ನೂ, ಎಲ್ಲ ಕತ್ತಲೆಗಳನ್ನೂ ಒಬ್ಬನೇ ಸೂರ್ಯನಂತೆ, ಒಬ್ಬನೇ ಕರ್ಣ ಆಕ್ರಮಿಸಿದ.
ಭೀಮಸೇನಸ್ತು ಸಂಕ್ರುದ್ಧೋ ರಾಧೇಯಂ ಪಾಂಡವೈಃ ಸಹ ॥72॥
ಕುರೂಶಾಂಶ್ಚಾಭ್ಯಹನತ್ ಕ್ರುದ್ಧಾನ್ ಯಮದಂಡನಿಭೈಃ ಶರೈಃ |
ಭೀಮಸೇನನು ಪಾಂಡವಯೋಧರೊಂದಿಗೆ ಸೇರಿ ಕರ್ಣನನ್ನೂ ಕ್ರುದ್ಧರಾದ ಕುರುಯೋಧರನ್ನೂ ಯಮದಂಡದಂಥ ಬಾಣಗಳಿಂದ ಹೊಡೆದ.
ಬಾಹ್ಲೀಕಾನ್ ಕೇಕಯಾನ್ ಮತ್ಸ್ಯಾನ್ ವಾಸಾತ್ಯಾನ್
ಮದ್ರಾಸ್ಸೈಂಧವಾನ್ ॥73॥
ಏಕಃ ಸಂಖ್ಯೇ ಮಹೇಷ್ವಾಸಾನ್ ಯೋಧಯನ್ ಬಹ್ವಶೋಭತ ॥74॥
ಬಾಹ್ಲೀಕಕೇಕಯಮತ್ಸ್ಯವಸಾತಿಮದ್ರಸೈಂಧವ ಮುಂತಾದ ಮಹಾ ಬಿಲ್ಗಾರರನ್ನೂ ಭೀಮ ಏಕಾಕಿಯಾಗಿ ರಣದಲ್ಲಿ ಹೊಡೆಯುತ್ತ ಬಹಳ ಶೋಭಿಸಿದ.
ತತ್ರ ಮರ್ಮಸು ಭೀಮೇನ ನಾರಾಚೈಸ್ತಾಡಿತಾ ಗಜಾಃ |
ಪ್ರಪತಂತೋ ಹತಾರೋಹಾಃ ಕಂಪಯಂತಿ ಸ್ಮ ಮೇದಿನೀಮ್ ॥75॥
ಭೀಮನಿಂದ ಮರ್ಮಸ್ಥಳಗಳಲ್ಲಿ ಬಾಣಗಳಿಂದ ತಾಡಿತವಾದ ಗಜಗಳು ಮತ್ತು ಹತರಾದ ಆರೋಹಿಗಳು ಬೀಳುವಾಗ ನೆಲವನ್ನು ಅದಿರುವಂತೆ ಮಾಡಿದರು.
ವಾಜಿನಶ್ಚ ಹತಾರೋಹಾಃ ಪತ್ತಯಶ್ಚ ಗತಾಸವಃ |
ಅಶೇರತ ಮಹಾರಾಜ ವಮಂತೋ ರುಧಿರಂ ಬಹು ॥76॥
ಮಹಾರಾಜ, ಹತರಾದ ಆರೋಹಿಗಳೊಂದಿಗೆ ಅಶ್ವಗಳೂ, ಅಸುತೊರೆದ ಪದಾತಿಗಳೂ ಬಹು ನೆತ್ತರನ್ನು ವಮನ ಮಾಡುತ್ತ ನೆಲದಲ್ಲಿ ಒರಗಿದರು.
ಸಹಸ್ರಶಶ್ಚ ರಥಿನಃ ಪತಿತಾಃ ಪತಿತಾಯುಧಾಃ |
ಅಕ್ಷತಾಃ ಸಮದೃಶ್ಯಂತ ಭೀಮಾದ್ ಭೀತಾ ಗತಾಸವಃ ॥77॥
ಸಾವಿರಗಟ್ಟಲೆ ರಥಿಕರು ಬಿದ್ದರು, ಅವರ ಆಯುಧಗಳು ಬಿದ್ದುವು, ಕೆಲವರು ಏನೂ ಗಾಯ ಹೊಂದದೆ, ಭೀಮನಿಗೆ ಭಯಪಟ್ಟೇ ಅಸು ನೀಗಿದುದು ಕಂಡುಬಂದಿತು.
ರಥಿಭಿರ್ವಾಜಿಭಿಃ ಸೂತೈಃ ಪತ್ತಿಭಿಶ್ಚ ತಥಾ ಗಜೈಃ |
ಭೀಮಸೇನಶರಚ್ಛಿನ್ನೈರಾಸ್ತೀರ್ಣಾ ವಸುಧಾಽಭವತ್ ॥78॥

ರಥಿಕರು ಅಶ್ವಗಳು ಸಾರಥಿಗಳು ಪದಾತಿಗಳು ಗಜಗಳು ಭೀಮಸೇನನ ಬಾಣಗಳಿಂದ ಕತ್ತರಿಸಲ್ಪಟ್ಟು ನೆಲದಲ್ಲಿ ಒರಗಿ ರಣಭೂಮಿಯನ್ನು ಪೂರ್ತಿ ಆವರಿಸಿದರು.
ತತ್ಸ್ತಂಭಿತಮಿವಾತಿಷ್ಠದ್ ಭೀಮಸೇನಬಲಾರ್ದಿತಮ್ |
ದುರ್ಯೋಧನಬಲಂ ರಾಜನ್ನಿರುತ್ಸಾಹಂ ಕೃತವ್ರಣಮ್ ॥79॥
ರಾಜನೆ, ಭೀಮಸೇನನ ಬಲದಿಂದ ಪೀಡಿತವಾದ ದುರ್ಯೋಧನನ ಸೈನ್ಯವು ಗಾಯ ಹೊಂದಿ ನಿರುತ್ಸಾಹಗೊಂಡಿತು. ನಿಶ್ಚೇಷ್ಟವಾದಂತೆ ತೋರಿತು.
ನಿಶ್ಚೇಷ್ಟಂ ತುಮುಲೇ ದೀನಂ ಬಭೌ ತಸ್ಮಿನ್ ಮಹಾರಣೇ |
ಪ್ರಸನ್ನಸಲಿಲಃ ಕಾಲೇ ಯಥಾ ಸ್ಯಾತ್ ಸಾಗರೋ ನೃಪ ॥80॥
ತದ್ವತ್ತವ ಬಲಂ ತದ್ವೈ ನಿಶ್ಚಲಂ ಸಮವಸ್ಥಿತಮ್ ॥81॥
ಕ್ಷೋಭೆಗೊಂಡ ಮಹಾರಣದಲ್ಲಿ ದುರ್ಯೋಧನನ ಸೈನ್ಯವು ನಿಶ್ಚೇಷ್ಟವಾಗಿ ದೀನವಾಗಿ ಕಂಡಿತು. ಏರಿಳಿತವಿಲ್ಲದ ಕಾಲದಲ್ಲಿ ಸಮುದ್ರ ಶಾಂತವಾಗಿರುವಂತೆ ನಿನ್ನ ಸೈನ್ಯವು ಸ್ತಬ್ಧವಾಯಿತು.
ಮನ್ಯುವೀರ್ಯಬಲೋಪೇತಂ ದರ್ಪಾತ್ ಪ್ರತ್ಯವರೋಪಿತಮ್ |
ಅಭವತ್ ತವ ಪುತ್ರಸ್ಯ ತತ್ಸೈನ್ಯಂ ನಿಷ್ಪ್ರಭಂ ತದಾ ॥82॥
ರುಧಿರೌಘಪರಿಕ್ಲಿನ್ನಂ ರುಧಿರಾರ್ದ್ರಂ ಬಭೂವ ಹ ॥83॥
ಕೋಪ ಪರಾಕ್ರಮ ಬಲಗಳಿಂದ ಕೂಡಿದ್ದ ನಿನ್ನ ಮಗನ ಸೈನ್ಯವು ದರ್ಪವನ್ನು ಪೂರ್ತಿ ಕಳೆದುಕೊಂಡಿತು. ಕಳೆಗುಂದಿತು. ರಕ್ತಪ್ರವಾಹದಿಂದ ತೊಯ್ದು ಒದ್ದೆಯಾಯಿತು.
ಸೂತಪುತ್ರೋ ರಣೇ ಕ್ರುದ್ಧಃ ಪಾಂಡವಾನಾಮನೀಕಿನೀಮ್ |
ಭೀಮಸೇನಃ ಕುರೂಂಶ್ಚಾಪಿ ದ್ರಾವಯಂತೌ ವಿರೇಜತುಃ ॥84॥
ಕರ್ಣನು ಕ್ರುದ್ಧನಾಗಿ ಪಾಂಡವರ ಸೈನ್ಯವನ್ನು, ಭೀಮಸೇನನು ಕ್ರುದ್ಧನಾಗಿ ಕೌರವರ ಸೈನ್ಯವನ್ನು ಹೊಡೆದೋಡಿಸುತ್ತ ಇಬ್ಬರೂ ವಿರಾಜಮಾನರಾದರು.
ವರ್ತಮಾನೇ ತಥಾ ರೌದ್ರೇ ಸಂಗ್ರಾಮೇಽದ್ಭುತದರ್ಶನೇ |
ನಿಹತ್ಯ ಪೃತನಾಮಧ್ಯೇ ಸಂಶಪ್ತಕಗಣಾನ್ ಬಹೂನ್ ॥85॥
ಅರ್ಜುನೋ ಜಯತಾಂ ಶ್ರೇಷ್ಠೋ ವಾಸುದೇವಮಥಾಬ್ರವೀತ್ |
ಪ್ರಭಗ್ನಂ ಬಲಮೇತದ್ಧಿ ಯೋತ್ಸ್ಯಮಾನಂ ಜನಾರ್ದನ ॥86॥
ಅದ್ಭುತವಾಗಿ ಕಾಣುವ ಭೀಕರವಾದ ಯುದ್ಧ ನಡೆಯುವಾಗ, ಸೈನ್ಯಮಧ್ಯದಲ್ಲಿ ಬಹು ಸಂಶಪ್ತಕಗಣಗಳನ್ನು ಸಂಹರಿಸಿ, ಜಯ ಗಳಿಸುವವರಲ್ಲಿ ಶ್ರೇಷ್ಠನಾದ ಅರ್ಜುನನು ಶ್ರೀಕೃಷ್ಣನಿಗೆ ನುಡಿದ, `ಕೃಷ್ಣ, ಹೋರಾಡಬೇಕಿದ್ದ ಈ ಸಂಶಪ್ತಕ ಸೈನ್ಯವೀಗ ಭಗ್ನವಾಗಿದೆ.
ಏತೇ ಧಾವಂತಿ ಸಗಣಾಃ ಸಂಶಪ್ತಕಮಹಾರಥಾಃ |
ಅಪಾರಯಂತೋ ಮದ್‌ಬಾಣಾನ್ ಸಿಂಹಶಬ್ದಾನ್ ಮೃಗಾ ಇವ ॥87॥
`ಸಿಂಹಗರ್ಜನೆಯನ್ನು ಮೃಗಗಳಂತೆ, ನನ್ನ ಬಾಣಗಳನ್ನು ಈ ಸಂಶಪ್ತಕ ಮಹಾರಥರು ಮತ್ತು ಅವರ ಗಣಗಳು ಇದಿರಿಸಲಾಗದೆ ಓಡಿ ಹೋಗುತ್ತಿದ್ದಾರೆ.
ದೀರ್ಯತೇ ಚ ಮಹತ್ಸೈನ್ಯಂ ಸೃಂಜಯಾನಾಂ ಮಹಾರಣೇ |
ಹಸ್ತಿಕಕ್ಷ್ಯೋ ಹ್ಯಸೌ ಕೃಷ್ಣ ಕೇತುಃ ಕರ್ಣಸ್ಯ ಧೀಮತಃ ॥88॥
ದೃಶ್ಯತೇ ಗಜಸೈನ್ಯಸ್ಯ ಮಧ್ಯೇ ವಿಚರತೋ ಮುಹುಃ ॥89॥
`ಆದರೆ ಸೃಂಜಯರ ಮಹಾಸೈನ್ಯವು ಮಹಾರಣದಲ್ಲಿ ಭಗ್ನವಾಗುತ್ತಿದೆ. ಕೃಷ್ಣ, ಗಜಸೈನ್ಯದ ನಡುವೆ ಸಂಚರಿಸುತ್ತಿರುವ ಧೀಮಂತನಾದ ಕರ್ಣನ ಹಸ್ತಿಕಕ್ಷ್ಯಧ್ವಜವೇ ಮತ್ತೆ ಮತ್ತೆ ದೃಷ್ಟಿಗೋಚರವಾಗುತ್ತಿದೆ.
ನ ಚ ಕರ್ಣಂ ರಣೇ ಶಕ್ತಾ ಜೇತುಮನ್ಯೇ ಮಹಾರಥಾಃ |
ಜಾನೀತೇ ಹಿ ಭವಾನ್ ಕರ್ಣಂ ವೀರ್ಯವಂತಂ ಪರಾಕ್ರಮೇ ॥90॥
ತತ್ರ ಯಾಹಿ ಯತಃ ಕರ್ಣೋ ದ್ರಾವಯತ್ಯೇಷ ನೋ ಬಲಮ್ ॥91॥
`ಕರ್ಣನನ್ನು ರಣದಲ್ಲಿ ಗೆಲ್ಲಲು ಬೇರೆ ಮಹಾರಥರು ಯಾರೂ ಶಕ್ತರಲ್ಲ. ಪರಾಕ್ರಮದಲ್ಲಿ ಮಹಾಬಲ ಉಳ್ಳವನು ಕರ್ಣನೆಂದು ನಿನಗೇ ಗೊತ್ತು. ಎಲ್ಲಿ ಕರ್ಣನು ನಮ್ಮ ಸೈನ್ಯವನ್ನು ಹೊಡೆದೋಡಿಸುತ್ತಿರುವನೋ ಅಲ್ಲಿಗೆ ನಡೆ.
ತ್ವರಯನ್ ವೈ ರಣೇ ಯಾಹಿ ಸೂತಪುತ್ರಂ ಮಹಾರಥಮ್ |
ಏವಂ ಮೇ ರೋಚತೇ ಕೃಷ್ಣ ಯಥಾ ವಾ ತವ ರೋಚತೇ ॥92॥
`ಮಹಾರಾಥನಾದ ಕರ್ಣನಿರುವಲ್ಲಿಗೇ ಬೇಗನೆ ಹೋಗು. ಹೀಗೆ ಮಾಡುವುದೇ ನನಗೆ ಸರಿಕಾಣುತ್ತದೆ. ನಿನಗೆ, ಹೇಗೆ ಮಾಡಿದರೆ ಸರಿ ಎನಿಸುತ್ತದೆ?'
ಏತಚ್ಛ್ರುತ್ವಾ ಮಹಾರಾಜ ಗೋವಿಂದಃ ಪ್ರಹಸನ್ನಿವ |
ಅಬ್ರವೀದರ್ಜುನಂ ತೂರ್ಣಂ ಕೌರವಾನ್ ಜಹಿ ಪಾಂಡವ ॥93॥
ಮಹಾರಾಜ, ಶ್ರೀಕೃಷ್ಣ ಇದನ್ನು ಕೇಳಿ ನಕ್ಕು ಅರ್ಜುನನಿಗೆ, `ಅರ್ಜುನ, ಬೇಗನೆ ಕೌರವರನ್ನು ಗೆಲ್ಲು' ಎಂದ.
ತತಸ್ತವ ಮಹತ್ಸೈನ್ಯಂ ಗೋವಿಂದಪ್ರೇರಿತಾ ಹಯಾಃ |
ಹಂಸವರ್ಣಾಃ ಪ್ರವಿವಿಶುರ್ವಹಂತಃ ಕೃಷ್ಣಪಾಂಡವೌ ॥94॥
ಶ್ರೀಕೃಷ್ಣನು ನಡೆಸುವ ಹಂಸವರ್ಣದ ಅಶ್ವಗಳು ಕೃಷ್ಣಅರ್ಜುನರನ್ನು ಹೊತ್ತು ನಿನ್ನ ಮಹಾಸೈನ್ಯವನ್ನು ಪ್ರವೇಶಿಸಿದುವು.

ಕೇಶವಪ್ರಹಿತೈರಶ್ವೈ ೃಃ ಶ್ವೇತೈಃ ಕಾಂಚನಭೂಷಣೈಃ |
ಪ್ರವಿಶದ್ಭಿಸ್ತವ ಬಲಂ ಚತುರ್ದಿಶಮಭಿದ್ಯತ ||95||
ಕೃಷ್ಣನು ನಡೆಸಿದ ಬಂಗಾರದಿಂದ ಅಲಂಕೃತವಾದ ಶ್ವೇತವರ್ಣದ ಅಶ್ವಗಳು ಪ್ರವೇಶಿಸಿದೊಡನೆ ನಿನ್ನ ಸೈನ್ಯವು ಭಯದಿಂದ ನಾಲ್ಕು ದಿಕ್ಕುಗಳಿಗೆ ಚದುರಿತು.
ಮೇಘಸ್ತನಿತನಿರ್ಹ್ರಾದಃ ಸ ರಥೋ ವಾನರಧ್ವಜಃ |
ಚಲತ್ಪತಾಕಸ್ತಾಂ ಸೇನಾಂ ವಿಮಾನಂ ದ್ಯಾಮಿವಾವಿಶತ್ ||96||
ಸಿಡಿಲುಮೊಳಗುವಂಥ ಧ್ವನಿಯುಳ್ಳ, ವಾನರಧ್ವಜಯುಕ್ತವಾದ, ಹಾರಾಡುವ ಪತಾಕೆಗಳುಳ್ಳ ಆ ರಥವು, ಆ ನಿನ್ನ ಸೈನ್ಯವನ್ನು ಅಂತರಿಕ್ಷವನ್ನು ವಿಮಾನವು ಪ್ರವೇಶಿಸುವಂತೆ ಪ್ರವೇಶಿಸಿತು.
ತೌ ವಿದಾರ್ಯ ಮಹಾಸೇನಾಂ ಪ್ರವಿಷ್ಟೌ ಕೇಶವಾರ್ಜುನೌ |
ಕ್ರುದ್ಧೌ ಸಂರಂಭರಕ್ತಾಕ್ಷೌ ವ್ಯಭ್ರಾಜೇತಾಂ ಮಹಾದ್ಯುತೀ ||97||
ಮಹಾಸೈನ್ಯವನ್ನು ಭೇದಿಸಿ ಪ್ರವೇಶಿಸಿದ ಆ ಕೃಷ್ಣಾರ್ಜುನರು ಕ್ರುದ್ಧರಾಗಿ ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ ಮಹಾತೇಜೋಯುಕ್ತರಾಗಿ ಬೆಳಗಿದರು.
ಯುದ್ಧಶೌಂಡೌ ಸಮಾಹೂತಾವರಿಭಿಸ್ತೌ ರಣಾಧ್ವರಮ್ |
ಯಜ್ವಭಿರ್ವಿಧಿನಾಹೂತೌ ಮಖೇ ದೇವಾವಿವಾಶ್ವಿನೌ ||98||
ಯಜ್ಞದಲ್ಲಿ ಋತ್ವಿಜರು ವಿಧ್ಯುಕ್ತವಾಗಿ ಆಹ್ವಾನಿಸಿದಾಗ ಬರುವ ಇಬ್ಬರು ಅಶ್ವಿನೀದೇವತೆಗಳಂತೆ, ಶತ್ರುಗಳು ರಣಯಜ್ಞದಲ್ಲಿ ಆಹ್ವಾನಿಸಿದ, ಯುದ್ಧದಲ್ಲಿ ನಿಪುಣರಾದ, ಆ ಇಬ್ಬರು ಕೃಷ್ಣಅರ್ಜುನರು ಬಂದರು.
ಕ್ರುದ್ಧೌ ತೌ ತು ನರವ್ಯಾಘ್ರೌ ವೇಗವಂತೌ ಬಭೂವತುಃ |
ತಲಶಬ್ದೇನ ರುಷಿತೌ ಯಥಾ ನಾಗೌ ಮಹಾಹವೇ ||99||
ಆನೆಗಳು ಚಪ್ಪಾಳೆಯ ಶಬ್ದ ಕೇಳಿ ಕೋಪಗೊಳ್ಳುವಂತೆ ಮಹಾರಣದಲ್ಲಿ ವೇಗಶಾಲಿಗಳಾದ ಆ ಪುರುಷಶ್ರೇಷ್ಠರು ಕ್ರುದ್ಧರಾದರು.
ವಿಗಾಹನ್ ಸ ರಥಾನೀಕಮಶ್ವಸಂಘಾಂಶ್ಚ ಫಲ್ಗುನಃ |
ವ್ಯಚರತ್ ಪೃತನಾಮಧ್ಯೇ ಪಾಶಹಸ್ತ ಇವಾಂತಕಃ ||100||
ಅರ್ಜುನನು ಸೈನ್ಯದ ನಡುವೆ ರಥಸಮೂಹಗಳನ್ನೂ ಅಶ್ವಸಮೂಹಗಳನ್ನೂ ಪ್ರವೇಶಿಸಿ ಪಾಶವನ್ನು ಹಿಡಿದ ಯಮನಂತೆ ಸಂಚರಿಸಿದ.
ತಂ ದೃಷ್ಟ್ವಾ ಯುಧಿ ವಿಕ್ರಾಂತಂ ಸೇನಾಯಾಂ ತವ ಭಾರತ |
ಸಂಶಪ್ತಕಗಣಾನ್ ಭೂಯಃ ಪುತ್ರಸ್ತೇ ಸಮಚೋದಯತ್ ||101||
ರಾಜನೆ, ಅರ್ಜುನನು ನಿನ್ನ ಸೈನ್ಯದಲ್ಲಿ ಪ್ರವೇಶಿಸಿ ರಣದಲ್ಲಿ ಪರಾಕ್ರಮ ತೋರಲು ತೊಡಗಿದ್ದನ್ನು ಕಂಡು ನಿನ್ನ ಮಗನು ಪುನಃ ಸಂಶಪ್ತಕಗಣಗಳನ್ನು ಪ್ರಚೋದಿಸಿದ.
ತತೋ ರಥಸಹಸ್ರೇಣ ದ್ವಿರದಾನಾಂ ತ್ರಿಭಿಃ ಶತೈಃ |
ಚತುರ್ದಶಸಹಸ್ರೈಶ್ಚ ತುರಗಾಣಾಂ ಮಹಾಹವೇ ||102||
ದ್ವಾಭ್ಯಾಂ ಶತಸಹಸ್ರಾಭ್ಯಾಂ ಪದಾತೀನಾಂ ಚ ಧನ್ವಿನಾಮ್ |
ಶೂರಾಣಾಂ ಲಬ್ಧಲಕ್ಷ್ಯಾಣಾಂ ವಿದಿತಾನಾಂ ಸಮಂತತಃ ||103||
ಅಭ್ಯವರ್ತಂತ ತೌ ವೀರೌ ಛಾದಯಂತೋ ಮಹಾರಥಾಃ |
ಶರವರ್ಷೈರ್ಮಹಾರಾಜ ಸರ್ವತಃ ಪಾಂಡುನಂದನಮ್ ||104||
ಸಂಶಪ್ತಕ ಮಹಾರಥರು ಒಂದು ಸಾವಿರ ರಥಗಳು, ಮೂರು ನೂರು ಆನೆಗಳು, ಹದಿನಾಲ್ಕು ಸಾವಿರ ಕುದುರೆಗಳು ಮತ್ತು ಲಕ್ಷ್ಯಭೇದದಲ್ಲಿ ನಿಪುಣರಾದ ಸುಪ್ರಸಿದ್ಧ ಮಹಾಶೂರ ಬಿಲ್ಲಾಳುಗಳಾದ ಎರಡುಲಕ್ಷ ಪದಾತಿಗಳೊಂದಿಗೆ ಯುಕ್ತರಾಗಿ ಮಹಾರಣದಲ್ಲಿ ಕೃಷ್ಣಾರ್ಜುನರನ್ನು ಬಾಣಗಳ ಮಳೆಗಳಿಂದ ಆಚ್ಛಾದಿಸುತ್ತ ಅರ್ಜುನನನ್ನು ಎಲ್ಲ ಕಡೆಗಳಿಂದ ಆಕ್ರಮಿಸಿದರು.
ಸ ಚ್ಛಾದ್ಯಮಾನಃ ಸಮರೇ ಶರೈಃ ಪರಬಲಾರ್ದನಃ |
ದರ್ಶಯನ್ ರೌದ್ರಮಾತ್ಮಾನಂ ಪಾಶಹಸ್ತ ಇವಾಂತಕಃ ||105||
ನಿಘ್ನನ್ ಸಂಶಪ್ತಕಾನ್ ಪಾರ್ಥಃ ಪ್ರೇಕ್ಷಣೀಯತರೋಽಭವತ್ ||106||
ಪರಸೇನಾನಾಶಕನಾದ ಅರ್ಜುನನು, ಬಾಣಗಳಿಂದ ಆಚ್ಛಾದಿತನಾಗುವಾಗ ಪಾಶವನ್ನು ಹಿಡಿದ ಯಮನಂತೆ ತನ್ನ ಭೀಕರ ಸ್ವರೂಪವನ್ನು ತೋರುತ್ತ ಸಂಶಪ್ತಕರನ್ನು ಸಂಹರಿಸುತ್ತ ಅತ್ಯಂತ ಪ್ರೇಕ್ಷಣೀಯನಾದ.
ತತೋ ವಿದ್ಯುತ್ಪ್ರಭೈರ್ಬಾಣೈಃ ಕಾರ್ತಸ್ವರವಿಭೂಷಿತೈಃ |
ನಿರಂತರಮಿವಾಕಾಶಮಾಸೀನ್ನುನ್ನೈಃ ಕಿರೀಟಿನಾ ||107||
ಬಂಗಾರದಿಂದ ಅಲಂಕೃತವಾದ, ಮಿಂಚಿನಂತೆ ಹೊಳೆವ ಬಾಣಗಳನ್ನು ಎಸೆದು ಆಗಸವನ್ನು ನಡುವೆ ಒಂದಿಷ್ಟು ಎಡೆ ಇಲ್ಲದಂತೆ ಮಾಡಿದ, ಅರ್ಜುನ.
ಕಿರೀಟಿಭುಜನಿರ್ಮುಕ್ತೈಃ ಸಂಪತದ್ಭಿರ್ಮಹಾಶರೈಃ |
ಸಮಾಚ್ಛನ್ನಂ ಬಭೌ ಸರ್ವಂ ಕಾದ್ರವೇಯೈರಿವ ಪ್ರಭೋ ||108||
ಅರ್ಜುನನ ಭುಜಗಳಿಂದ ಹೊರಟು ಬೀಳುವ ಮಹಾಬಾಣಗಳಿಂದ ಎಲ್ಲ ಪ್ರದೇಶವು ಹಾವುಗಳಿಂದ ಆಚ್ಛಾದಿತವಾದಂತೆ ಕಂಡುಬಂದಿತು.
ರುಗ್ಮಪುಂಖಾನ್ ಪ್ರಸನ್ನಾಗ್ರಾನ್ ಶರಾನ್ ಸನ್ನತಪರ್ವಣಃ |

ಅವಾಸೃಜದಮೇಯಾತ್ಮಾ ದಿಕ್ಷು ಸರ್ವಾಸು ಪಾಂಡವಃ ॥109॥
ಅಮೇಯಾತ್ಮನಾದ ಅರ್ಜುನನು ಬಂಗಾರದ ಪುಕ್ಕ, ನಿರ್ಮಲವಾದ ತುದಿ, ಡೊಂಕು ಗಿಣ್ಣುಗಳಿಂದ ಯುಕ್ತವಾದ ಬಾಣಗಳನ್ನು ಎಲ್ಲ ದಿಕ್ಕುಗಳಲ್ಲಿ ಎಸೆದ.
ಮಹೀ ವಿಯದ್ದಿಶಃ ಸರ್ವಾಃ ಸಮುದ್ರಾ ಗಿರಯೋಽಪಿ ವಾ |
ಸ್ಫುಟಂತೀತಿ ಜನಾ ಜಜ್ಞುಃ ಪಾರ್ಥಸ್ಯ ತಳನಿಸ್ವನಾತ್ ॥110॥
ಅರ್ಜುನನ ಅಂಗೈಶಬ್ದದಿಂದ ಭೂಮಿ ಅಂತರಿಕ್ಷ ಎಲ್ಲದಿಕ್ಕುಗಳು ಸಮುದ್ರಗಳು ಹಾಗೂ ಪರ್ವತಗಳು ಸೀಳಿ ಹೋಗಬಹುದೆಂದು ಜನರು ಭಾವಿಸಿದರು.
ಹತ್ವಾ ದಶ ಸಹಸ್ರಾಣಿ ಪಾರ್ಥಿವಾನಾಂ ಮಹಾರಥಃ |
ಸಂಶಪ್ತಕಾನಾಂ ಕೌಂತೇಯಃ ಪ್ರಪಕ್ಷಂ ತ್ವರಿತೋಽಭ್ಯಯಾತ್ ॥111॥
ಮಹಾರಥನಾದ ಅರ್ಜುನನು ಸಂಶಪ್ತಕರ ಹತ್ತು ಸಾವಿರ ಕ್ಷತ್ರಿಯರನ್ನು ಕೊಂದು ಬೇಗನೆ ಆ ಸೈನ್ಯದ ಅಂತಿಮಭಾಗವನ್ನು ಆಕ್ರಮಿಸಿದ.
ಪ್ರಪಕ್ಷಂ ಸ ಸಮಾಸಾದ್ಯ ಪಾರ್ಥಃ ಕಾಂಬೋಜರಕ್ಷಿತಮ್ |
ಪ್ರಮಮಾಥ ಬಲಾದ್ ಬಾಣೈರ್ದಾನವಾನಿವ ವಾಸವಃ ॥112॥
ಕಾಂಬೋಜಯೋಧರಿಂದ ರಕ್ಷಿತವಾಗಿದ್ದ ಆ ಅಂತಿಮಭಾಗವನ್ನು ಆಕ್ರಮಿಸಿ ಅರ್ಜುನನು ಇಂದ್ರನು ದಾನವರನ್ನು ಸಂಹರಿಸುವಂತೆ ಬಾಣಗಳಿಂದ ಬಲವಾಗಿ ಧ್ವಂಸಗೈದ.
ಪ್ರಚಿಚ್ಛೇದಾಶು ಭಲ್ಲೈಶ್ಚ ದ್ವಿಷತಾಮಾತತಾಯಿನಾಮ್ |
ಶಸ್ತ್ರಪಾಣೀಂಸ್ತಥಾ ಬಾಹೂಂಸ್ತಥಾಪಿ ಚ ಶಿರಾಂಸ್ಯುತ ॥113॥
ಅರ್ಜನನು ಆಯುಧಧಾರಿಗಳಾಗಿ ತನ್ನನ್ನು ಕೊಲ್ಲಲು ಬಂದಿದ್ದ ಶತ್ರುಗಳ ಶಸ್ತ್ರಯುಕ್ತವಾದ ಕೈ, ತೋಳುಗಳನ್ನೂ ಶಿರಸ್ಸುಗಳನ್ನೂ ಭಲ್ಲಗಳಿಂದ ಕತ್ತರಿಸಿದ.
ಅಂಗಾಂಗಾವಯವೈಶ್ಛಿನ್ನೈರ್ವ್ಯಾಯುಧಾಸ್ತೇಽಪತನ್ ಕ್ಷಿತೌ |
ವಿಷ್ವಗ್ವಾತಾಭಿಸಂಭಗ್ನಾ ಬಹುಶಾಖಾ ಇವ ದ್ರುಮಾಃ ॥114॥
ಬಹುಶಾಖೋಪಶಾಖೆಗಳಿಂದ ಕೂಡಿದ ಮರಗಳು ಎಲ್ಲೆಡೆ ಬಿರುಗಾಳಿಯ ಆಘಾತಗಳಿಂದ ಮುರಿದು ಬೀಳುವಂತೆ ಆ ಕಾಂಬೋಜರು ನಿರಾಯುಧರಾಗಿ ಅಂಗೋಪಾಂಗಗಳನ್ನೆಲ್ಲ ಕಡಿದುಕೊಂಡು ನೆಲದಲ್ಲಿ ಒರಗಿದರು.
ಹಸ್ತ್ಯಶ್ವರಥಪತ್ತೀನಾಂ ವ್ರಾತಾನ್ ನಿಘ್ನಂತಮರ್ಜುನಮ್ |
ಸುದಕ್ಷಿಣಾದವರಜಃ ಶರವೃಷ್ಟ್ಯಾಭ್ಯವೀವೃಷತ್ ॥115॥
ಗಜ ಅಶ್ವ ರಥ ಪದಾತಿಗಳ ಸಮೂಹಗಳನ್ನು ಸಂಹರಿಸುತ್ತಿದ್ದ ಅರ್ಜುನನ ಮೇಲೆ ಸುದಕ್ಷಿಣನ ತಮ್ಮನು ಬಾಣಗಳ ಮಳೆಗರೆದ. ಕಾಂಬೋಜರಾಜನಾದ ಸುದಕ್ಷಿಣನನ್ನು ಹಿಂದೆ (ದ್ರೋಣ. 92.71) ಅರ್ಜುನನೇ ಸಂಹರಿಸಿದ್ದ. ಇದೀಗ ಅವನ ತಮ್ಮನು ಅರ್ಜುನನ ಬಾಣಗಳಿಗೆ ಆಹುತಿಯಾಗುತ್ತಿದ್ದಾನೆ.
ಅಸ್ಯಾಸ್ಯತೋಽರ್ಧಚಂದ್ರಾಭ್ಯಾಂ ಸ ಬಾಹೂ ಪರಿಘೋಪಮೌ |
ಪೂರ್ಣಚಂದ್ರಾಭವಕ್ತ್ರಂ ಚ ಕ್ಷುರೇಣಾಭ್ಯಹನಚ್ಛಿರಃ ॥116॥
ಅವನು ಬಾಣಗಳನ್ನೆಸೆಯುತ್ತಿದ್ದಂತೆಯೆ, ಅರ್ಜುನನು ಎರಡು ಅರ್ಧಚಂದ್ರ ಬಾಣಗಳಿಂದ ಅವನ ಪರಿಘದಂಥ ಎರಡು ಬಾಹುಗಳನ್ನೂ, ಕ್ಷುರವೆಂಬ ಬಾಣದಿಂದ ಪೂರ್ಣಚಂದ್ರನಂಥ ಮುಖದಿಂದ ಕೂಡಿದ ಅವನ ಶಿರಸ್ಸನ್ನೂ ತರಿದ.
ಸ ಪಪಾತ ತತೋ ವಾಹಾತ್ ಸ್ವಲೋಹಿತಪರಿಸ್ರವಃ |
ಮನಃಶಿಲಾಗಿರೇಃ ಶೃಙ್ಗಂ ವಜ್ರೇಣೇವಾವದಾರಿತಮ್ ॥117॥
ಮನಃಶಿಲೆ ಎಂಬ ಕೆಂಪುಧಾತುಗಳ ಬೆಟ್ಟದ ಶಿಖರವು ವಜ್ರದಿಂದ ಕಡಿದು ಬಿದ್ದಂತೆ, ಸುದಕ್ಷಿಣನ ತಮ್ಮನು ರಕ್ತಸ್ರಾವಗೊಂಡು ವಾಹನದಿಂದ ಕೆಳಗೆ ಉರುಳಿದ.
ಸುದಕ್ಷಿಣಾದವರಜಂ ಕಾಂಬೋಜಂ ದದೃಶುರ್ಹತಮ್ |
ಪ್ರಾಂಶುಂ ಕಮಲಪತ್ರಾಕ್ಷಮತ್ಯರ್ಥಂ ಪ್ರಿಯದರ್ಶನಮ್ ॥118॥
ಕಾಂಚನಸ್ತಂಭಸಂಕಾಶಂ ಭಿನ್ನಂ ಹೇಮಗಿರಿಂ ಯಥಾ ॥119॥
ಕಾಂಬೋಜ ದೇಶಾಧಿಪತಿಯಾದ ಸುದಕ್ಷಿಣನ ತಮ್ಮನು, ಈತನು ಉನ್ನತ ಶರೀರದವನು, ತಾವರೆ ಎಸಳಿನಂಥ ಕಣ್ಣುಳ್ಳವನಾಗಿ ನೋಡಲು ಪ್ರಿಯನಾಗಿದ್ದ. ಬಂಗಾರದ ಕಂಬದಂತಿದ್ದ ಈತ ಹತನಾಗಿ ಕಡಿದು ಬಿದ್ದುದನ್ನು ಜನರು ಕಂಡರು.
ತತೋಽಭವತ್ ಪುನರ್ಯುದ್ಧಂ ಘೋರಮದ್ಭುತದರ್ಶನಮ್ |
ನಾನಾವಸ್ಥಾಶ್ಚ ಯೋಧಾನಾಂ ಬಭೂವುಸ್ತತ್ರ ಯುಧ್ಯತಾಮ್ ॥120॥
ಬಳಿಕ ಪುನಃ ನೋಡಲು ಅದ್ಭುತವಾದ ಘೋರವಾದ ಯುದ್ಧ ನಡೆಯಿತು. ಆಗ ಅದರಲ್ಲಿ ಹೋರಾಡಿದ ಯೋಧರ ಅವಸ್ಥೆಗಳು ನಾನಾ ಬಗೆಯವು ಆಗಿದ್ದುವು.
ಏತೇಷ್ವಾವರ್ಜಿತೈರಶ್ವೈ ್ಯಃ ಕಾಂಬೋಜೈರ್ಯವನೈಃ ಶಕೈಃ |
ಶೋಣಿತಾಕ್ತೈಸ್ತದಾ ರಕ್ತಂ ಸರ್ವಮಾಸೀದ್ ವಿಶಾಂಪತೇ ॥121॥
ಕಾಂಬೋಜ ಯವನ ಶಕ ಮುಂತಾದ ಅಶ್ವಸೈನ್ಯಗಳು ನೆತ್ತರಿನಿಂದ ತೊಯ್ದು ಕಡಿದು ಬಿದ್ದಾಗ, ರಾಜನೆ, ಇಡಿ ರಣರಂಗ ಕೆಂಪಾಗಿ ಕಂಡುಬಂದಿತು.
ನರೈರ್ಹತಾಶ್ವಸೂತೈಶ್ಚ ಹತಾರೋಹೈಶ್ಚ ವಾಜಿಭಿಃ |

ದ್ವಿರದೈಶ್ಚ ಹತಾರೋಹೈರ್ಮಹಾಮಾತ್ರೈರ್ಹತದ್ವಿಪೈಃ ॥122॥
ಅನ್ಯೋನ್ಯೇನ ಮಹಾರಾಜ ಕೃತೋ ಘೋರೋ ಜನಕ್ಷಯಃ ॥123॥
ಪದಾತಿಗಳು ಅಶ್ವ ಮತ್ತು ಸಾರಥಿಗಳನ್ನೂ, ಅಶ್ವಾರೋಹಿಗಳು ಅಶ್ವಾರೋಹಿ ಗಳನ್ನು, ಗಜಾರೋಹಿಗಳು ಗಜಾರೋಹಿಗಳನ್ನು, ಮಾವಟಿಗರು ಆನೆಗಳನ್ನು– ಹೀಗೆ ಪರಸ್ಪರವಾಗಿ ಸಂಹರಿಸಿದ್ದರಿಂದ ಘೋರವಾದ ಜನಕ್ಷಯ ಉಂಟಾಯಿತು.
ತಸ್ಮಿನ್ ಪ್ರಪಕ್ಷೇ ಪಕ್ಷೇ ಚ ನಿಹತೇ ಸವ್ಯಸಾಚಿನಾ
ಅರ್ಜುನಂ ಜಯತಾಂ ಶ್ರೇಷ್ಠಂ ತ್ವರಿತೋ ದ್ರೌಣಿರಾಯಯೌ ॥124॥
ಎಡ ಬಲಗಳಲ್ಲಿ ಎಲ್ಲ ಸೈನ್ಯಗಳನ್ನು ಅರ್ಜುನನು ಕೊಲ್ಲುತ್ತಿದ್ದಾಗ ಜಯಶಾಲಿಗಳಲ್ಲಿ ಶ್ರೇಷ್ಠನಾದ ಆತನನ್ನು ವೇಗದಿಂದ ಅಶ್ವತ್ಥಾಮನು ಇದಿರಿಸಿದ.
ವಿಧುನ್ವಾನೋ ಮಹಚ್ಚಾಪಂ ಕಾರ್ತಸ್ವರವಿಭೂಷಿತಮ್ |
ಆದದಾನಃ ಶರಾನ್ ಘೋರಾನ್ ಸ್ವರಶ್ಮೀನಿವ ಭಾಸ್ಕರಃ ॥125॥
ಕ್ರೋಧಾಮರ್ಷವಿವೃತ್ತಾಕ್ಷೋ ಲೋಹಿತಾಕ್ಷೋ ಬಭೌ ಬಲೀ |
ಅಂತಕಾಲೇ ಯಥಾ ಕ್ರುದ್ಧೋ ಮೃತ್ಯುಃ ಕಿಂಕರದಂಡಭೃತ್ ॥126॥
ಬಂಗಾರದಿಂದ ಅಲಂಕೃತವಾದ ದೊಡ್ಡ ಕೋದಂಡವನ್ನು ಒಲಾಡಿಸುತ್ತ, ಸೂರ್ಯನು ತನ್ನ ಕಿರಣಗಳನ್ನು ಎತ್ತಿಕೊಳ್ಳುವಂತೆ, ಘೋರವಾದ ಬಾಣಗಳನ್ನು ಕೈಗೆತ್ತಿಕೊಳ್ಳುತ್ತ, ಕೋಪ ಅಸಹನೆಗಳಿಂದ ಅಗಲವಾಗಿ ಕಣ್ಣು ತೆರೆದು, ಪ್ರಳಯಕಾಲದಲ್ಲಿ ಕಿಂಕರ ಎಂಬ ದಂಡವನ್ನು ಹಿಡಿಯುವ ಮೃತ್ಯುವಿನಂತೆ ಕ್ರುದ್ಧನಾಗಿ ಬಲಿಷ್ಠನಾದ ಅಶ್ವತ್ಥಾಮ ಬೆಳಗಿದ.
ತತಃ ಪ್ರಾಸೃಜದುಗ್ರಾಣಿ ಶರವರ್ಷಾಣಿ ಸರ್ವಶಃ |
ತೈರ್ವಿಸೃಷ್ಟೈರ್ಮಹಾರಾಜ ವ್ಯದ್ರವತ್ ಪಾಂಡವೀ ಚಮೂಃ ॥127॥
ಅಶ್ವತ್ಥಾಮನು ಉಗ್ರವಾದ ಬಾಣಗಳ ಮಳೆಗಳನ್ನು ಎಲ್ಲೆಡೆ ಸುರಿಸಿದ. ಮಹಾರಾಜ, ಬಾಣಗಳ ಆ ಮಳೆಯಿಂದ ಪಾಂಡವಸೈನ್ಯ ಪಲಾಯನ ಮಾಡಲು ತೊಡಗಿತು.
ಸ ದೃಷ್ಟ್ವೈವ ತು ದಾಶಾರ್ಹಂ ಸ್ಯಂದನಸ್ಥಂ ವಿಶಾಂಪತೇ |
ಪುನಃ ಪ್ರಾಸೃಜದುಗ್ರಾಣಿ ಶರವರ್ಷಾಣಿ ಮಾರಿಷ ॥128॥
ರಾಜನೆ, ರಥದಲ್ಲಿ ಕುಳಿತಿದ್ದ ಕೃಷ್ಣನನ್ನು ಕಂಡು ಅಶ್ವತ್ಥಾಮನು ಪುನಃ ಉಗ್ರವಾದ ಬಾಣಗಳ ಮಳೆಗಳನ್ನು ಸುರಿಸಿದ.
ತೈಃ ಪತದ್ಭಿರ್ಮಹಾರಾಜ ದ್ರೌಣಿಮುಕ್ತೈಃ ಸಮಂತತಃ |
ಸಂಛಾದಿತೌ ರಥಸ್ಥೌ ತಾವುಭೌ ಕೃಷ್ಣಧನಂಜಯೌ ॥129॥
ಮಹಾರಾಜ, ಅಶ್ವತ್ಥಾಮನು ಎಲ್ಲೆಡೆ ಸುರಿಸಿದ ಬಾಣಗಳ ಮಳೆ ಬಿದ್ದಾಗ ಅದರಿಂದ ರಥದಲ್ಲಿ ಕುಳಿತಿದ್ದ ಕೃಷ್ಣಾರ್ಜುನರಿಬ್ಬರೂ ಆಚ್ಛಾದಿತರಾದರು.
ತತಃ ಶರಶತೈಸ್ತೀಕ್ಷ್ಣೈ ರ್ಣ ್ಯ ಭಾರದ್ವಾಜಾತ್ಮಜಾತ್ಮಜಃ |
ನಿಶ್ಚೇಷ್ಟೌ ತಾವುಭೌ ಚಕ್ರೇ ಯುದ್ಧೇ ಮಾಧವಪಾಂಡವೌ ॥130॥
ತೀಕ್ಷ್ಣವಾದ ನೂರಾರು ಬಾಣಗಳಿಂದ ಅಶ್ವತ್ಥಾಮನು ಕೃಷ್ಣಾರ್ಜುನರಿಬ್ಬರನ್ನೂ ರಣದಲ್ಲಿ ನಿಶ್ಚೇಷ್ಟರನ್ನಾಗಿ ಮಾಡಿದ.
ಹಾಹಾಕೃತಮಭೂತ್ ಸರ್ವಂ ಜಂಗಮಂ ಸ್ಥಾವರಂ ತಥಾ |
ಚರಾಚರಸ್ಯ ಗೋಪ್ತಾರೌ ದೃಷ್ಟ್ವಾ ಸಂಛಾದಿತೌ ಶರೈಃ ॥131॥
ಚರಾಚರ ಪ್ರಪಂಚದ ರಕ್ಷಕರಾದ ಕೃಷ್ಣಾರ್ಜುನರು ಹೀಗೆ ಬಾಣಗಳಿಂದ ಮುಚ್ಚಿಹೋದಾಗ ಚರಾಚರವೆಲ್ಲವೂ ಹಾಹಾಕಾರ ಮಾಡಿತು.
ಸಿದ್ಧಚಾರಣಸಂಘಾಶ್ಚ ಸಂಪೇತುರ್ವೈ ಸಮಂತತಃ |
ಅಪಿ ಸ್ವಸ್ತಿ ಭವೇದದ್ಯ ಲೋಕಾನಾಮಿತಿ ಚಾಬ್ರುವನ್ ॥132॥
ಸಿದ್ಧಚಾರಣಸಮೂಹಗಳು ಎಲ್ಲೆಡೆ ಇಳಿದು ಬಂದವು. `ಲೋಕಗಳಿಗೆ ಈಗ ಕ್ಷೇಮ ಉಂಟಾಗುವುದೆ?' ಎಂದರು.
ನ ಮಯಾ ತಾದೃಶೋ ರಾಜನ್ ದೃಷ್ಟಪೂರ್ವಃ ಪರಾಕ್ರಮಃ |
ಸಂಜಜ್ಞೇ ಯಾದೃಶೋ ದ್ರೌಣೇಃ ಕೃಷ್ಣೌ ಸಂಛಾದಯಿಷ್ಯತಃ ॥133॥
ರಾಜನೆ, ಕೃಷ್ಣಾರ್ಜುನರನ್ನು ಕೂಡ ಬಾಣಗಳಿಂದ ಮುಚ್ಚುವಾಗ ಅಶ್ವತ್ಥಾಮನಲ್ಲಿ ಕಂಡು ಬಂದ ಪರಾಕ್ರಮ ಅದ್ಭುತವಾಗಿತ್ತು. ಅಂಥ ಪರಾಕ್ರಮವನ್ನು ನಾನು ಹಿಂದೆ ನೋಡೇ ಇರಲಿಲ್ಲ.
ದ್ರೌಣೇಸ್ತು ಧನುಷಃ ಶಬ್ದಮಹಿತತ್ರಾಸನಂ ರಣೇ |
ಅಶ್ರೌಷಂ ಬಹುಶೋ ರಾಜನ್ ಸಿಂಹಸ್ಯ ನದತೋ ಯಥಾ ॥134॥
ಅಶ್ವತ್ಥಾಮನ ಧನುಸ್ಸಿನಿಂದ ಹೊರಟ, ಶತ್ರುಗಳನ್ನು ರಣದಲ್ಲಿ ನಡುಗಿಸು ವಂಥ ಶಬ್ದ ಸಿಂಹಗರ್ಜನೆಯಂತಿತ್ತು. ಬಹುಬಾರಿ ನಾನು ಅದನ್ನು ಕೇಳಿದೆ.
ಜ್ಯಾ ಚಾಸ್ಯ ಚರತೋ ಯುದ್ಧೇ ಸವ್ಯದಕ್ಷಿಣಮಸ್ಯತಃ |
ವಿದ್ಯುದಂಬುದಮಧ್ಯಸ್ಥಾ ಭ್ರಾಜಮಾನೇವ ಸಾಽಭವತ್ ॥135॥
ಯುದ್ಧದಲ್ಲಿ ಸಂಚರಿಸುತ್ತ ಎಡಕ್ಕೂ ಬಲಕ್ಕೂ ಬಾಣಗಳನ್ನೆಸೆಯುವಾಗ ಅವನ ಬಿಲ್ಲಿನ ಹೆದೆ ಮೋಡಗಳ ನಡುವೆ ಹೊಳೆಯುವ ಮಿಂಚಿನಂತೆ ಕಾಣುತ್ತಿತ್ತು.
ಸ ತಥಾ ಕ್ಷಿಪ್ರಕಾರೀ ಚ ದೃಢಹಸ್ತಶ್ಚ ಪಾಂಡವಃ |
ಸಮ್ಮೋಹಂ ಪರಮಂ ಗತ್ವಾ ಪ್ರೈಕ್ಷತ ದ್ರೋಣಜಂ ತತಃ ॥136॥

ಅರ್ಜುನನೂ ಹಾಗೇ ದೃಢಹಸ್ತನಾಗಿದ್ದು ವೇಗವಾಗಿ ಬಾಣಪ್ರಯೋಗ ಮಾಡುವವನೆ. ಆದರೂ ಅವನು ಬಹಳ ಮೈಮರೆತು ಅಶ್ವತ್ಥಾಮನನ್ನು ನೋಡುತ್ತಿದ್ದ.
ಸ ವಿಕ್ರಮಂ ಹೃತಂ ಮೇನೇ ಆತ್ಮನಃ ಸುಮಹಾತ್ಮನಾ |
ತಥಾಸ್ಯ ಸಮರೇ ರಾಜನ್ ವಪುರಾಸೀತ್ ಸುದುರ್ದೃಶಮ್ ॥137॥
ರಾಜನೆ, ಅಶ್ವತ್ಥಾಮನ ಶರೀರ ರಣದಲ್ಲಿ ನೋಡಲು ಎಷ್ಟು ಅಸಾಧ್ಯ ವಾಗಿತ್ತೆಂದರೆ, ಮಹಾತ್ಮ ಅಶ್ವತ್ಥಾಮನು ತನ್ನ ಪರಾಕ್ರಮವನ್ನು ಅಪಹರಿಸಿದನೆಂದೇ ಅರ್ಜುನ ಭಾವಿಸಿದ.
ದ್ರೌಣಿಪಾಂಡವಯೋರೇವಂ ವರ್ತಮಾನೇ ಮಹಾರಣೇ |
ವರ್ಧಮಾನೇ ಚ ರಾಜೇಂದ್ರ ದ್ರೋಣಪುತ್ರೇ ಮಹಾಬಲೇ
ಹೀಯಮಾನೇ ಚ ಕೌಂತೇಯೇ ಕೃಷ್ಣಂ ರೋಷಃ ಸಮಾವಿಶತ್ ॥138॥
ಅಶ್ವತ್ಥಾಮ ಅರ್ಜುನರ ಮಹಾಯುದ್ಧ ಹೀಗೆ ನಡೆಯುತ್ತಿದ್ದಾಗ, ಮಹಾಬಲಿ ಯಾದ ಅಶ್ವತ್ಥಾಮನು ಪರಾಕ್ರಮದಲ್ಲಿ ಹೆಚ್ಚಾದಾಗ, ಅರ್ಜುನ ಕಡಿಮೆಯಾದಾಗ, ಕೃಷ್ಣನಲ್ಲಿ ಕೋಪಾವೇಶ ಉಂಟಾಯಿತು.
ಸ ರೋಷಾನ್ನಿಃಶ್ವಸನ್ ರಾಜನ್ ನಿರ್ದಹನ್ನಿವ ಚಕ್ಷುಷಾ |
ದ್ರೌಣಿಂ ಹ್ಯಪಶ್ಯತ್ ಸಂಗ್ರಾಮೇ ಫಲ್ಗುನಂ ಚ
ಮುಹುರ್ಮುಹುಃ ॥139॥
ರಾಜನೆ, ಕೃಷ್ಣನು ರಣದಲ್ಲಿ ಕೋಪದಿಂದ ಭುಸುಗುಟ್ಟುತ್ತ ಕಣ್ಣಿನಿಂದ ಸುಡುವಂತೆ ಅಶ್ವತ್ಥಾಮನನ್ನೂ ಅರ್ಜುನನನ್ನೂ ಪುನಃ ಪುನಃ ದಿಟ್ಟಿಸಿದ.
ತತಃ ಕ್ರುದ್ಧೋಽಬ್ರವೀತ್ ಕೃಷ್ಣಃ ಪಾರ್ಥಂ ಸಪ್ರಣಯಂ ತದಾ |
ಅತ್ಯದ್ಭುತಮಿದಂ ಪಾರ್ಥ ತವ ಪಶ್ಯಾಮಿ ಸಂಯುಗೇ ॥140॥
ಅತಿಶೇತೇ ಹಿ ಯತ್ರ ತ್ವಾ ದ್ರೋಣಪುತ್ರೋಽದ್ಯ ಭಾರತ ॥141॥
ಬಳಿಕ ಕ್ರುದ್ಧನಾದ ಕೃಷ್ಣ ಅರ್ಜುನನನ್ನು ಕುರಿತು ಪ್ರೀತಿಯಿಂದ ನುಡಿದ– ರಣದಲ್ಲಿ ಅತ್ಯದ್ಭುತವಾದ ನಿನ್ನ ಈ ವರ್ತನೆಯನ್ನು ನಾನು ನೋಡುತ್ತಿದ್ದೇನೆ. ಏಕೆಂದರೆ, ಅರ್ಜುನ, ಅಶ್ವತ್ಥಾಮನು ಈಗ ರಣದಲ್ಲಿ ನಿನ್ನನ್ನು ಮೀರಿಸುತ್ತಿದ್ದಾನೆ!
ಕಚ್ಚಿದ್ವೀರ್ಯಂ ಯಥಾಪೂರ್ವಂ ಭುಜಯೋರ್ವಾ ಬಲಂ ತವ |
ಕಚ್ಚಿತ್ತೇ ಗಾಂಡಿವಂ ಹಸ್ತೇ ರಥೇ ತಿಷ್ಠಸಿ ಚಾರ್ಜುನ |
ಕಚ್ಚಿತ್ ಕುಶಲಿನೌ ಬಾಹೂ ಮುಷ್ಟಿರ್ವಾ ನ ವಿಶೀರ್ಯತೇ ॥142॥
ನಿನ್ನ ಬಾಹುಗಳಲ್ಲಿ ಬಲವೀರ್ಯಗಳು ಹಿಂದಿನಂತೇ ಇವೆ ತಾನೆ? ನಿನ್ನ ಕೈಯಲ್ಲಿ ಗಾಂಡಿವವಿದೆ ತಾನೆ? ನೀನೂ ರಥದಲ್ಲಿ ನಿಂತಿರುವೆ ತಾನೆ? ನಿನ್ನ ಬಾಹುಗಳು ಕ್ಷೇಮವಾಗಿವೆ ತಾನೆ? ಮುಷ್ಟಿ ಶಿಥಿಲವಾಗಿಲ್ಲ ತಾನೆ?
ಉದೀರ್ಯಮಾಣಂ ಹಿ ರಣೇ ಪಶ್ಯಾಮಿ ದ್ರೌಣಿಮಾಹವೇ |
ಗುರುಪುತ್ರ ಇತಿ ಹ್ಯೇನಂ ಮಾನಯನ್ ಭರತರ್ಷಭ ॥143॥
ಉಪೇಕ್ಷಾಂ ಕುರು ಮಾ ಪಾರ್ಥ ನಾಯಂ ಕಾಲ
ಉಪೇಕ್ಷಿತುಮ್ ॥144॥
ರಣರಂಗದಲ್ಲಿ ಯುದ್ಧದಲ್ಲಿ ಅಶ್ವತ್ಥಾಮ ನಿನ್ನನ್ನು ಮೀರಿಸುತ್ತಿದ್ದಾನೆ! ಅರ್ಜುನ, ಗುರುಪುತ್ರನೆಂದು ಈತನನ್ನು ಗೌರವಿಸಿ ಉಪೇಕ್ಷೆ ಮಾಡಬೇಡ. ಉಪೇಕ್ಷಿಸಲು ಇದು ಕಾಲವಲ್ಲ.
ಏವಮುಕ್ತಸ್ತು ಕೃಷ್ಣೇನ ಗೃಹ್ಯ ಭಲ್ಲಾಂಶ್ಚತುರ್ದಶ |
ತ್ವರಮಾಣಸ್ತ್ವರಾಕಾಲೇ ದ್ರೌಣೇರ್ಧನುರಥಾಚ್ಛಿನತ್ ॥145॥
ಧ್ವಜಂ ಛತ್ರಂ ಪತಾಕಾಂ ಚ ಖಡ್ಗಂ ಶಕ್ತಿಂ ಗದಾಂ ತಥಾ ॥146॥
ಹೀಗೆ ಕೃಷ್ಣನು ನುಡಿದಾಗ ಅರ್ಜುನನು ಹದಿನಾಲ್ಕು ಭಲ್ಲೆಗಳನ್ನು ಎತ್ತಿಕೊಂಡು ತ್ವರೆಯ ಕಾಲದಲ್ಲಿ ತ್ವರೆಮಾಡಿ, ಅಶ್ವತ್ಥಾಮನ ಧನುಸ್ಸನ್ನು ಕಡಿದ, ಅವನ ಧ್ವಜ, ಛತ್ರ ಪತಾಕೆ ಖಡ್ಗ, ಶಕ್ತಿ, ಗದೆಗಳನ್ನೂ ಕತ್ತರಿಸಿದ.
ಜತ್ರುದೇಶೇ ಚ ಸುಭೃಶಂ ವತ್ಸದಂತೈರತಾಡಯತ್ |
ಸ ಮೂರ್ಚ್ಛಾಂ ಪರಮಾಂ ಗತ್ವಾ ಧ್ವಜಯಷ್ಟಿಂ ಸಮಾಶ್ರಿತಃ ॥147॥
ಅಶ್ವತ್ಥಾಮನ ಕೊರಳಿನ ಎಲುಬಿಗೆ ವತ್ಸದಂತಬಾಣಗಳಿಂದ ಬಲವಾಗಿ ಹೊಡೆದ. ಅಶ್ವತ್ಥಾಮ ಬಹಳ ಮೈಮರೆತು ಧ್ವಜದ ದಂಡವನ್ನು ಹಿಡಿದುಕೊಂಡ.
ತಂ ವಿಸಂಜ್ಞಂ ಮಹಾರಾಜ ಪಾರ್ಥೇನ ಭೃಶತಾಡಿತಮ್ |
ಅಪೋವಾಹ ರಣಾತ್ ಸೂತೋ ರಕ್ಷಮಾಣೋ
ಧನಂಜಯಾತ್ ॥148॥
ಮಹಾರಾಜ, ಅರ್ಜುನನಿಂದ ಬಹಳ ಹೊಡೆಸಿಕೊಂಡು ಮೈಮರೆತಿದ್ದ ಅಶ್ವತ್ಥಾಮನನ್ನು ಅರ್ಜುನನಿಂದ ರಕ್ಷಿಸಿಕೊಳ್ಳಲು ಸಾರಥಿಯು ರಣರಂಗದಿಂದ ದೂರಕ್ಕೆ ಒಯ್ದ.
ಏತಸ್ಮಿನ್ನೇವ ಕಾಲೇ ತು ವಿಜಯಃ ಶತ್ರುತಾಪನಃ |
ನ್ಯವಧೀತ್ ತಾವಕಂ ಸೈನ್ಯಂ ಶತಶೋಽಥ ಸಹಸ್ರಶಃ ॥149॥
ಪಶ್ಯತಸ್ತವ ಪುತ್ರಸ್ಯ ತಸ್ಯ ವೀರಸ್ಯ ಭಾರತ ॥150॥
ಇದೇ ಸಮಯದಲ್ಲಿ ಶತ್ರುತಾಪಕನಾದ ಅರ್ಜುನನು ವೀರನಾದ ನಿನ್ನ ಪುತ್ರನು ನೋಡುತ್ತಿದ್ದಂತೆಯೇ ನಿನ್ನ ಸೈನ್ಯವನ್ನು ನೂರಾರು

ಸಾವಿರಾರು ಸಂಖ್ಯೆಯಲ್ಲಿ ನಾಶಗೈದ.
ಏವಮೇಷ ಕ್ಷಯೋ ವೃತ್ತಸ್ತಾವಕಾನಾಂ ಪರೈಃ ಸಹ |
ಕ್ರೂರೋ ವಿಶಸನೋ ಘೋರೋ ರಾಜನ್ ದುರ್ಮಂತ್ರಿತೇ ತವ ॥151
ರಾಜನೆ, ಹೀಗೇ ಶತ್ರುಗಳೊಂದಿಗೆ ನಿನ್ನವರಿಗೆ ಕ್ರೂರವಾದ ವಿನಾಶಕಾರಿಯಾದ ಯುದ್ಧ ನಡೆಯಿತು. ನಿನ್ನವರ ವಿನಾಶವಾಯಿತು. ಇದು ನಿನ್ನ ದುಷ್ಟವಾದ ಆಲೋಚನೆಯ ಫಲ.
ಸಂಶಪ್ತಕಾಂಶ್ಚ ಕೌಂತೇಯಃ ಕುರೂಂಶ್ಚಾಪಿ ವೃಕೋದರಃ |
ವಸುಷೇಣಶ್ಚ ಪಾಂಚಾಲಾನ್ ಕ್ಷಣೇನ ವ್ಯಧಮದ್ ರಣೇ ॥152॥
ರಣದಲ್ಲಿ ಸಂಶಪ್ತಕರನ್ನು ಅರ್ಜುನ, ಕೌರವರನ್ನು ಭೀಮ, ಪಾಂಚಾಲರನ್ನು ಕರ್ಣ, ಕ್ಷಣದಲ್ಲಿ ನಾಶಗೈದರು.
ವರ್ತಮಾನೇ ತಥಾ ರೌದ್ರೇ ರಾಜನ್ ವೀರವರಕ್ಷಯೇ |
ಉತ್ಥಿತಾನ್ಯಗಣೇಯಾನಿ ಕಬಂಧಾನಿ ಸಮಂತತಃ ॥153॥
ರಾಜನೆ, ಶ್ರೇಷ್ಠವೀರರ ವಿನಾಶ ನಡೆಯುವಾಗ ಎಲ್ಲ ಕಡೆ ಲೆಕ್ಕವಿಲ್ಲದಷ್ಟು ಮುಂಡಗಳು ಎದ್ದುವು.
ಯುಧಿಷ್ಠಿರೋಪಿ ಸಂಗ್ರಾಮೇ ಪ್ರಹಾರೈರ್ಗಾಢವೇದನಃ |
ಕ್ರೋಶಮಾತ್ರಮಪಕ್ರಮ್ಯ ತಸ್ಥೌ ಭರತಸತ್ತಮ ॥154॥
ಯುಧಿಷ್ಠಿರನೂ ರಣದಲ್ಲಿ ಪ್ರಹಾರಗಳಿಂದ ಬಲುವೇದನೆ ಪಟ್ಟು ಕ್ರೋಶದಷ್ಟು ಮಾತ್ರ ದೂರಕ್ಕೆ ಹೋಗಿ ನಿಂತನು.
ಯುಧಿಷ್ಠಿರನು ಕ್ರೋಶದಷ್ಟು ದೂರಕ್ಕೆ ಹೋಗಿ ನಿಲ್ಲಲು ಕಾರಣ ಮುಂದೆ `ಉಪವಾಸಕೃಶೋ ರಾಜಾ'(57.17) ಇತ್ಯಾದಿ ಶ್ರೀಕೃಷ್ಣನ ಮಾತಿನಿಂದ ಸ್ಪಷ್ಟವಾಗುತ್ತದೆ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ತ್ರಿಪಂಚಾಶೋಽಧ್ಯಾಯಃ ॥53॥

ಐವತ್ತನಾಲ್ಕನೆಯ ಅಧ್ಯಾಯ
ದುರ್ಯೋಧನಅಶ್ವತ್ಥಾಮರು ಕುರುಸೈನ್ಯವನ್ನು ಹುರಿದುಂಬಿಸುತ್ತಾರೆ.
ಸಂಜಯಃ
ದುರ್ಯೋಧನಸ್ತತಃ ಕರ್ಣಮುಪೇತ್ಯ ಭರತರ್ಷಭ |
ಅಬ್ರವೀದ್ ಮದ್ರರಾಜಂ ಚ ತಥೈವಾನ್ಯಾನ್ ಮಹಾರಥಾನ್ | |1॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ರಾಜನೆ, ದುರ್ಯೋಧನನು ಕರ್ಣನ ಬಳಿಗೆ ಹೋಗಿ ಅವನಿಗೂ ಶಲ್ಯನಿಗೂ ಹಾಗೇ ಬೇರೆ ಮಹಾರಥರಿಗೂ ನುಡಿದ
ಯದೃಚ್ಛಯೋಪಸಂಪ್ರಾಪ್ತಂ ಸ್ವರ್ಗದ್ವಾರಮಪಾವೃತಮ್ |
ಸುಖಿನಃ ಕ್ಷತ್ರಿಯಾಃ ಕರ್ಣ ಲಭಂತೇ ಯುದ್ಧಮೀದೃಶಮ್ ॥2॥
ಕರ್ಣ, ಈ ಯುದ್ಧ ಯದೃಚ್ಛೆಯಿಂದ ಬಂದೊದಗಿದೆ. ಸ್ವರ್ಗಕ್ಕೆ ತೆರೆದಿಟ್ಟ ಬಾಗಿಲಿನಂತಿದೆ. ಇಂಥ ಯುದ್ಧವನ್ನು ಪುಣ್ಯವಂತರಾದ ಕ್ಷತ್ರಿಯರೇ ಪಡೆಯ ಬಲ್ಲರು. ಅವರೇ ಸುಖಿಗಳು.
ಸದೃಶೈಃ ಕ್ಷತ್ರಿಯೈಃ ಶೂರೈಃ ಶೂರಾಣಾಂ ಯುಧ್ಯತಾಂ ಯುಧಿ |
ಇಷ್ಟಂ ಭವತಿ ರಾಧೇಯ ತದಿದಂ ಸಮುಪಸ್ಥಿತಮ್ ॥3॥
ಸದೃಶರಾದ ಶೂರ ಕ್ಷತ್ರಿಯರೊಂದಿಗೆ ರಣದಲ್ಲಿ ಹೋರಾಡುವ ಶೂರರಿಗೆ ಅದೊಂದು ಯಜ್ಞವಾಗುತ್ತದೆ. ಅಂಥ ಯುದ್ಧವು ಇದೀಗ ಬಂದೊದಗಿದೆ.
ಹತ್ವಾ ವಾ ಪಾಂಡವಾನ್ ಯುದ್ಧೇ ಸ್ಫೀತಾಮುರ್ವೀಮವಾಪ್ಸ್ಯಥ |
ನಿಹತಾ ವಾ ಪರೈರ್ಯುದ್ಧೇ ವೀರಲೋಕಮವಾಪ್ಸ್ಯಥ ॥4॥
ಪಾಂಡವರನ್ನು ಯುದ್ಧದಲ್ಲಿ ಕೊಂದರೆ ಸಮೃದ್ಧವಾದ ರಾಜ್ಯವನ್ನು ಹೊಂದುವಿರಿ ಅಥವಾ ಶತ್ರುಗಳಿಂದ ಯುದ್ಧದಲ್ಲಿ ಹತರಾದರೂ ವೀರಸ್ವರ್ಗವನ್ನು ಪಡೆಯುವಿರಿ.
ದುರ್ಯೋಧನಸ್ಯ ತಚ್ಛ್ರುತ್ವಾ ವಚನಂ ಕ್ಷತ್ರಿಯರ್ಷಭಾಃ |
ಹೃಷ್ಟಾ ನಾದಾನುದಕ್ರೋಶನ್ ವಾದಿತ್ರಾಣಿ ಚ ಜಘ್ನಿರೇ ॥5॥
ದುರ್ಯೋಧನನ ಈ ಮಾತನ್ನು ಕೇಳಿ ಕ್ಷತ್ರಿಯಶ್ರೇಷ್ಠರು ಹೃಷ್ಟರಾಗಿ ಸಿಂಹನಾದ ಮಾಡಿದರು. ವಾದ್ಯಗಳನ್ನು ಮೊಳಗಿಸಿದರು.
ತತಃ ಪ್ರಮುದಿತೇ ತಸ್ಮಿನ್ ದುರ್ಯೋಧನಬಲೇ ತದಾ |
ಹರ್ಷಯಂಸ್ತಾವಕಾನ್ ಯೋಧಾನ್ ದ್ರೌಣಿರ್ವಚನಮಬ್ರವೀತ್ ॥6॥
ದುರ್ಯೋಧನನ ಸೈನ್ಯ ಹೀಗೆ ಹರ್ಷಗೊಂಡಾಗ ನಿನ್ನ ಕಡೆಯ ಯೋಧರನ್ನು ಹುರಿದುಂಬಿಸುತ್ತ ಅಶ್ವತ್ಥಾಮನು ಹೀಗೆ ನುಡಿದ.
ಪ್ರತ್ಯಕ್ಷಂ ಸರ್ವಸೈನ್ಯಾನಾಂ ಭವತಾಂ ಚಾಪಿ ಪಶ್ಯತಾಮ್ |
ನ್ಯಸ್ತಶಸ್ತ್ರೋ ಮಮ ಪಿತಾ ಧೃಷ್ಟದ್ಯುಮ್ನೇನ ಪಾತಿತಃ ॥7॥
ಎಲ್ಲ ಸೈನ್ಯಗಳ ಕಣ್ಣೆದುರಿಗೇ, ನೀವೂ ನೋಡುತ್ತಿದ್ದಂತೆಯೇ ಶಸ್ತ್ರಸನ್ಯಾಸ ಮಾಡಿದ್ದ ನನ್ನ ತಂದೆ ಧೃಷ್ಟದ್ಯುಮ್ನನಿಂದ ಹತನಾಗಿದ್ದಾನೆ.
ಸ ತೇನಾಹಮಮರ್ಷೇಣ ಮಿತ್ರಾರ್ಥೇ ಚಾಪಿ ಪಾರ್ಥಿವಾಃ |
ಸತ್ಯಂ ವಃ ಪ್ರತಿಜಾನಾಮಿ ತದ್ವಾಕ್ಯಂ ಮೇ ನಿಬೋಧತ ॥8॥

ಈ ಅಸಹನೆಯಿಂದ ಮಾತ್ರವಲ್ಲದೆ ಮಿತ್ರನಾದ ದುರ್ಯೋಧನನಿಗಾಗಿಯೂ, ಕ್ಷತ್ರಿಯರೆ, ಸತ್ಯವಾಗಿ ನಿಮಗೆ ಪ್ರತಿಜ್ಞೆ ಮಾಡಿ ಹೇಳುತ್ತೇನೆ. ಅದನ್ನು ಕೇಳಿರಿ.

ಧೃಷ್ಟದ್ಯುಮ್ನಮಹತ್ವಾಹಂ ನ ವಿಮೋಕ್ಷ್ಯಾಮಿ ದಂಶನಮ್ |
ಅನೃತಾಯಾಂ ಪ್ರತಿಜ್ಞಾಯಾಂ ನಾಹಂ ಸ್ವರ್ಗಮವಾಪ್ನುಯಾಮ್ ॥9॥

ಧೃಷ್ಟದ್ಯುಮ್ನನನ್ನು ಕೊಲ್ಲದೆ ನಾನು ಕವಚವನ್ನು ಬಿಚ್ಚುವುದಿಲ್ಲ. ನನ್ನ ಈ ಪ್ರತಿಜ್ಞೆ ಸುಳ್ಳಾದರೆ ನಾನು ಸ್ವರ್ಗ ಪಡೆಯಲಾರೆ.

ಅರ್ಜುನೋ ಭೀಮಸೇನಶ್ಚ ಯಶ್ಚ ಮಾಂ ಪ್ರತ್ಯುದೇಷ್ಯತಿ |
ಸರ್ವಾನ್ ತಾನ್ ಪ್ರಮಥಿಷ್ಯೇಽಹಮಿತಿ ಮೇ ನಿಶ್ಚಿತಾ ಮತಿಃ ॥10॥

`ಅರ್ಜುನನಾಗಲಿ ಭೀಮಸೇನನಾಗಲಿ ಯಾರೇ ನನ್ನನ್ನು ತಡೆದರೂ ಅವರೆಲ್ಲರನ್ನೂ ನಾನು ವಧಿಸುತ್ತೇನೆ. ಇದು ನನ್ನ ದೃಢವಾದ ನಿರ್ಧಾರ.'

ಏವಮುಕ್ತೇ ತತಃ ಸರ್ವಾ ಸಹಿತಾ ಭಾರತೀ ಚಮೂಃ |
ಅಭ್ಯದ್ರವತ ಕೌಂತೇಯಾಂಸ್ತಥಾ ತೇ ಚಾಪಿ ಪಾಂಡವಾಃ ॥11॥

ಅಶ್ವತ್ಥಾಮನು ಹೀಗೆ ಹೇಳಿದಾಗ ಎಲ್ಲ ಕೌರವಸೈನ್ಯವೂ ಒಂದಾಗಿ ಪಾಂಡವರನ್ನೂ ಪಾಂಡವರೆಲ್ಲ ಒಂದಾಗಿ ಕೌರವರನ್ನೂ ಆಕ್ರಮಿಸಿದರು.

ಸ ಸನ್ನಿಪಾತೋ ರಥಯೂಥಪಾನಾಂ
ಮಹಾನಭೂತ್ ಭಾರತ ಮೋಹರೂಪಃ |
ಜನಕ್ಷಯಃ ಕಾಲಯುಗಾಂತಕಲ್ಪಃ
ಪ್ರಾವರ್ತತಾಗ್ರೇ ಕುರುಸೃಂಜಯಾನಾಮ್ ॥12॥

ರಾಜನೆ, ಕೌರವಪಾಂಡವರ ರಥ ಗಜ ಸೈನ್ಯಗಳಿಗೆ ಮೈಮರೆಸುವಂಥ ಮಹಾಯುದ್ಧ ನಡೆಯಿತು. ಅದು ಯುಗಾಂತಕಾಲದ ಪ್ರಳಯದಂತಿದ್ದು ಜನಕ್ಷಯಕ್ಕೆ ಕಾರಣವಾಯಿತು.

ತತಃ ಪ್ರವೃತ್ತೇ ಯುಧಿ ಸಂಪ್ರಹಾರೇ
ಭೂತಾನಿ ಸರ್ವಾಣಿ ಸದೈವತಾನಿ |
ಆಸನ್ ಸಮೇತಾನಿ ಸಹಾಪ್ಸರೋಭಿ-
ರ್ದಿದೃಕ್ಷಮಾಣಾನಿ ನರಪ್ರವೀರಾನ್ ॥13॥

ರಣದಲ್ಲಿ ಹೋರಾಟ ನಡೆದಾಗ ಶ್ರೇಷ್ಠ ಯೋಧರನ್ನು ನೋಡಲು ಎಲ್ಲ ಜನರೂ ದೇವತೆಗಳೂ ಅಪ್ಸರೆಯರೊಂದಿಗೆ ಬಂದು ಸೇರಿದರು.

ದಿವ್ಯೈಶ್ಚ ಮಾಲ್ಯೈರ್ವಿವಿಧೈಶ್ಚ ಗಂಧೈ-
ರ್ದಿವ್ಯೈಶ್ಚ ರತ್ನೈರ್ವಿವಿಧೈರ್ನರಾಗ್ರ್ಯಾನ್ |
ರಣೇ ಸ್ವಕರ್ಮೋದ್ವಹತಃ ಪ್ರವೀರಾನ್
ಅವಾಕಿರನ್ನಪ್ಸರಸಃ ಪ್ರಹೃಷ್ಟಾಃ ॥14॥

ನಾನಾ ಬಗೆಯ ದಿವ್ಯಮಾಲೆ ದಿವ್ಯಗಂಧ ದಿವ್ಯರತ್ನಗಳನ್ನು ಸ್ವಕರ್ಮ ನಿರತರಾದ ವೀರರಾದ ಶ್ರೇಷ್ಠ ಯೋಧರ ಮೇಲೆ ಪ್ರಹೃಷ್ಟರಾದ ಅಪ್ಸರೆಯರು ಸುರಿದರು.

ಸಮೀರಣಸ್ತಾಂಶ್ಚ ನಿಷೇವ್ಯ ಗಂಧಾನ್
ಸಿಷೇವ ಸರ್ವಾನಪಿ ಯೋಧಮುಖ್ಯಾನ್ |
ನಿಷೇವ್ಯಮಾಣಾಸ್ತ್ವನಿಲೇನ ಯೋಧಾಃ
ಪರಸ್ಪರಘ್ನಾ ಧರಣೀಂ ನಿಪೇತುಃ ॥15॥

ಗಾಳಿಯು ಗಂಧಮಾಲ್ಯಾದಿಗಳ ಸುವಾಸನೆಯನ್ನು ಹೊತ್ತು ಎಲ್ಲ ಯೋಧ ಶ್ರೇಷ್ಠರನ್ನು ಉಪಚರಿಸಿತು. ಅವರು ಗಾಳಿಯಿಂದ ಉಪಚಾರವನ್ನು ಕೈಗೊಳ್ಳುತ್ತಾ ಪರಸ್ಪರ ವಧೆಮಾಡಿ ನೆಲದಲ್ಲಿ ಬಿದ್ದರು.

ಸಾ ದಿವ್ಯಪುಷ್ಪೈರವಕೀರ್ಯಮಾಣಾ
ಸುವರ್ಣಪುಂಖೈಶ್ಚ ಶರೈರ್ವಿಚಿತ್ರೈಃ |
ನಕ್ಷತ್ರಸ್ೃಿಂರಿವ ಚಿತ್ರಿತಾ ದ್ಯೌಃ
ಕ್ಷಿತಿರ್ಬಭೌ ಯೋಧವರೈರ್ವಿಚಿತ್ರಾ ॥16॥

ಆ ರಣಭೂಮಿಯು ದಿವ್ಯಪುಷ್ಪಗಳಿಂದಲೂ ಬಂಗಾರದ ಪುಕ್ಕವುಳ್ಳ ನಾನಾ ಬಗೆಯ ಬಾಣಗಳಿಂದಲೂ ಯೋಧಶ್ರೇಷ್ಠರಿಂದಲೂ ತುಂಬಿ, ನಕ್ಷತ್ರ ಸಮೂಹಗಳಿಂದ ಚಿತ್ರಿತವಾದ ಅಂತರಿಕ್ಷದಂತೆ ಕಂಡುಬಂದಿತು.

ತತೋಽಂತರಿಕ್ಷಾದಪಿ ಸಾಧುವಾದೈ-
ರ್ವಾದಿತ್ರಘೋಷೈಃ ಸಮುದೀರ್ಯಮಾಣಃ |
ಜ್ಯಾಘೋಷನೇಮಿಸ್ವನನಾದಚಿತ್ರಃ
ಸಮಾಕುಲೋಽಶೋಭತ ಸಂಪ್ರಹಾರಃ ॥17॥

ಅಂತರಿಕ್ಷದಿಂದಲೂ `ಭೇಷ್ ಭೇಷ್' ಎನ್ನುವ ಮಾತುಗಳೊಂದಿಗೆ ವಾದ್ಯಘೋಷ ಕೇಳಿ ಬಂದಿತು. ರಣಭೂಮಿಯಲ್ಲಿಯೂ ಧನುಷ್ಟಂಕಾರ ರಥ ಚಕ್ರಧ್ವನಿಗಳಿಂದ ಕೂಡಿ ಗದ್ದಲದ ಆ ಯುದ್ಧವು ಬಹಳ ಶೋಭಿಸಿತು.

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಕರ್ಣಪರ್ವಣಿ ಚತುಃಪಂಚಾಶೋಽಧ್ಯಾಯಃ ॥54॥

ಐವತ್ನಾಲ್ಕನೆಯ ಅಧ್ಯಾಯ
ಭೀಮಸೇನನಿಂದ ಕೌರವಸೈನ್ಯ ನಾಶ.
ಸಂಜಯಃ
ಏವಮೇಷ ಮಹಾನಾಸೀತ್ ಸಂಗ್ರಾಮಃ ಪೃಥಿವೀಕ್ಷಿತಾಮ್ |
ಕ್ರುದ್ಧೇಽರ್ಜುನೇ ತಥಾ ಕರ್ಣೇ ಭೀಮಸೇನೇ ಚ ಪಾಂಡವೇ ॥1॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಹೀಗೇ ಅರ್ಜುನನೂ ಭೀಮನೂ ಕರ್ಣನೂ ಕ್ರುದ್ಧರಾದಾಗ ರಾಜರಲ್ಲಿ ಮಹಾಸಂಗ್ರಾಮ ನಡೆಯಿತು.
ದ್ರೋಣಪುತ್ರಂ ಪರಾಜಿತ್ಯ ಜಿತ್ವಾ ಚಾನ್ಯಾನ್ ಮಹಾರಥಾನ್ |
ಅಬ್ರವೀದರ್ಜುನೋ ರಾಜನ್ ವಾಸುದೇವಮಿದಂ ವಚಃ ॥2॥
ರಾಜನೆ, ಅರ್ಜುನನು ಅಶ್ವತ್ಥಾಮನನ್ನು ಪರಾಭವಗೊಳಿಸಿ ಬೇರೆ ಮಹಾ ರಥರನ್ನೂ ಗೆದ್ದು ಕೃಷ್ಣನಿಗೆ ಈ ಮಾತನ್ನು ನುಡಿದ.
ಪಶ್ಯ ಕೃಷ್ಣ ಮಹಾಬಾಹೋ ದ್ರವಂತೀಂ ಪಾಂಡವೀಂ ಚಮೂಮ್ |
ಕರ್ಣಂ ಪಶ್ಯ ಚ ಸಂಗ್ರಾಮೇ ಕಾಲಯಂತಂ ಮಹಾರಥಾನ್ ॥3॥
ನೋಡು, ಮಹಾಬಾಹುವಾದ ಕೃಷ್ಣನೆ, ಪಾಂಡವಸೇನೆ ಪಲಾಯನ ಮಾಡು ತ್ತಿರುವುದನ್ನು, ಸಂಗ್ರಾಮದಲ್ಲಿ ಮಹಾರಥರನ್ನು ನಾಶಪಡಿಸುತ್ತಿರುವ ಕರ್ಣನನ್ನು ನೋಡು.
ನ ಚ ಪಶ್ಯಾಮಿ ದಾಶಾರ್ಹ ಧರ್ಮರಾಜಂ ಯುಧಿಷ್ಠಿರಮ್ |
ನಾಪಿ ಕೇತುರ್ಯುಧಾಂಶ್ರೇಷ್ಠ ಧರ್ಮರಾಜಸ್ಯ ದೃಶ್ಯತೇ ॥4॥
ಯೋಧರಲ್ಲಿ ಶ್ರೇಷ್ಠನಾದ ಕೃಷ್ಣನೆ, ನಾನು ಧರ್ಮರಾಜ ಯುಧಿಷ್ಠಿರನನ್ನು ನೋಡುತ್ತಿಲ್ಲ. ಧರ್ಮರಾಜನ ಧ್ವಜವೂ ನನಗೆ ಗೋಚರಿಸುತ್ತಿಲ್ಲ.
ತ್ರಿಭಾಗಶ್ಚಾವಶಿಷ್ಟೋಽಯಂ ದಿವಸಸ್ಯ ಜನಾರ್ದನ |
ನ ಚ ಮಾಂ ಧಾರ್ತರಾಷ್ಟ್ರೇಷು ಕಶ್ಚಿದ್ ಯುಧ್ಯತಿ ಸಂಯುಗೇ ॥5॥
ಜನಾರ್ದನ, ಹಗಲಿನ ಮೂರನೆ ಒಂದು ಭಾಗದಷ್ಟು ಮಾತ್ರ ಉಳಿದಿದೆ. ದುರ್ಯೋಧನನ ಸೈನ್ಯದಲ್ಲಿ ಯಾರೂ ನನ್ನೊಡನೆ ರಣದಲ್ಲಿ ಯುದ್ಧ ಮಾಡುತ್ತಿಲ್ಲ.
ತಸ್ಮಾತ್ ತ್ವಂ ಮತ್ಪ್ರಿಯಂ ಕುರ್ವನ್ ಯಾಹಿ ಯತ್ರ ಯುಧಿಷ್ಠಿರಃ |
ದೃಷ್ಟ್ವಾ ಕುಶಲಿನಂ ಯುದ್ಧೇ ಧರ್ಮಪುತ್ರಂ ಸಹಾನುಜಮ್ ॥6॥
ಪುನರ್ಯೋದ್ಧಾಸ್ಮಿ ವಾರ್ಷ್ಣೇಯ ಶತ್ರುಭಿಃ ಸಹ ಸಂಯುಗೇ ॥7॥
ಅದರಿಂದ, ನನಗೆ ಪ್ರಿಯ ಉಂಟುಮಾಡಲು ಯುಧಿಷ್ಠಿರನಿರುವಲ್ಲಿಗೆ ಹೋಗು. ಯುಧಿಷ್ಠಿರನು ತಮ್ಮಂದಿರೊಂದಿಗೆ ರಣದಲ್ಲಿ ಕ್ಷೇಮವಾಗಿರುವುದನ್ನು ಕಂಡು ಬಳಿಕ ಶತ್ರುಗಳೊಂದಿಗೆ ರಣದಲ್ಲಿ ಪುನಃ ಯುದ್ಧ ಮಾಡುವೆನು.
ತತಃ ಪ್ರಾಯಾದ್ ರಥೇನಾಶು ಬೀಭತ್ಸೋರ್ವಚನಾದ್ಧರಿಃ |
ಯತೋ ಯುಧಿಷ್ಠಿರೋ ರಾಜಾ ಸೃಂಜಯಾಶ್ಚ ಮಹಾರಥಾಃ |
ಅಯುಧ್ಯಂಸ್ತಾವಕೈಃ ಸಾರ್ಧಂ ಮೃತ್ಯುಂ ಕೃತ್ವಾ ನಿವರ್ತನಮ್ ॥8॥
ಅರ್ಜುನ ಹೇಳಿದಂತೆ ಕೃಷ್ಣನು, ರಾಜಾಯುಧಿಷ್ಠಿರನೂ ಸೃಂಜಯ ಮಹಾರಥರೂ ಮರಣದಿಂದಲೇ ಯುದ್ಧದಿಂದ ನಿವೃತ್ತಿ ಎಂದು ನಿಶ್ಚಯ ಮಾಡಿಕೊಂಡು ನಿನ್ನ ಕಡೆಯವರೊಡನೆ ಎಲ್ಲಿ ಯುದ್ಧಮಾಡುತ್ತಿದ್ದರೋ ಅಲ್ಲಿಗೇ ರಥದಿಂದ ವೇಗವಾಗಿ ಹೊರಟ.
ತ್ವರಮಾಣಃ ಪುನಃ ಕೃಷ್ಣಃ ಪಾರ್ಥಮಾಹ ಶನೈರಿದಮ್ |
ಪಶ್ಯ ಕೌರವ್ಯ ರಾಜಾನಮುಪಾಯಾತಾಂಶ್ಚ ಪಾರ್ಥಿವಾನ್ ॥9॥
ವೇಗವಾಗಿ ಹೋಗುತ್ತಲೇ ಕೃಷ್ಣನು ಅರ್ಜುನನಿಗೆ ನಿಧಾನವಾಗಿ ಹೀಗೆ ನುಡಿದ– ಅರ್ಜುನ ನೋಡು, ರಾಜಾ ಯುಧಿಷ್ಠಿರನನ್ನು ನೋಡು. ಅವನ ಬಳಿಗೆ ಬಂದ ರಾಜರನ್ನೂ ನೋಡು.
ಕರ್ಣಂ ಪಶ್ಯ ಮಹಾರಂಗೇ ಜ್ವಲಂತಮಿವ ಪಾವಕಮ್ |
ಅಸೌ ಭೀಮೋ ಮಹೇಷ್ವಾಸಃ ಸನ್ನಿವೃತ್ತೋ ರಣಂ ಪ್ರತಿ ॥10॥
ಮಹಾರಣರಂಗದಲ್ಲಿ ಜ್ವಲಿಸುವ ಬೆಂಕಿಯಂತಿರುವ ಕರ್ಣನನ್ನು ನೋಡು. ಈತ ಮಹಾಬಿಲ್ಗಾರ ಭೀಮನು ರಣಕ್ಕೆ ಹಿಂತಿರುಗಿ ಬಂದಿದ್ದಾನೆ.
ತಮೇತೇಽನು ನಿವರ್ತಂತೇ ಧೃಷ್ಟದ್ಯುಮ್ನಪುರೋಗಮಾಃ |
ಪಾಂಚಾಲಾನಾಂ ಸೃಂಜಯಾನಾಂ ಪಾಂಡವಾನಾಂ ಚ
ಯನ್ಮುಖಮ್ ॥111॥
ಭೀಮನನ್ನು ಹಿಂಬಾಲಿಸಿ ಧೃಷ್ಟದ್ಯುಮ್ನ ಮುಂತಾದವರೂ ಬರುತ್ತಿದ್ದಾರೆ. ಪಾಂಚಾಲರಿಗೂ ಸೃಂಜಯರಿಗೂ ಪಾಂಡವರಿಗೂ ಧೃಷ್ಟದ್ಯುಮ್ನ ನಾಯಕನು ಆಗಿದ್ದಾನೆ.
ನಿವೃತ್ತೈಶ್ಚ ತಥಾ ಪಾರ್ಥೈರ್ಭಗ್ನಂ ಶತ್ರುಬಲಂ ಮಹತ್ ॥12॥
ಹೀಗೆ ಹಿಂತಿರುಗಿ ಬಂದ ಪಾಂಡವರಿಂದ ಮಹತ್ತಾದ ಶತ್ರುಸೈನ್ಯವು ಭಗ್ನವಾಗಿದೆ.
ಕೌರವಾನ್ ದ್ರವತೋ ಹ್ಯೇಷ ಕರ್ಣೋ ಧಾರಯತೇಽರ್ಜುನ |

ಅಂತಕಪ್ರತಿಮೋ ವೇಗೇ ಶಕ್ರತುಲ್ಯಪರಾಕ್ರಮಃ ॥13॥
ಕೌರವರು ಪಲಾಯನ ಮಾಡುವಾಗ ಕರ್ಣ ಅವರನ್ನು ತಡೆದು ನಿಲ್ಲಿಸ್ತುತಾನೆ. ವೇಗದಲ್ಲಿ ಯಮನಿಗೆ ಸಮಾನ. ಇಂದ್ರಸದೃಶ ಪರಾಕ್ರಮಿಯಾಗಿದ್ದಾನೆ.
ಅಸೌ ಗಚ್ಛತಿ ಕೌರವ್ಯ ದ್ರೌಣಿರಸ್ತ್ರಭೃತಾಂ ವರಃ ।
ತಮೇಷ ಪ್ರದ್ರುತಃ ಸಂಖ್ಯೇ ಧೃಷ್ಟದ್ಯುಮ್ನೋ ಮಹಾರಥಃ ॥14॥
ಅನುಪ್ರಯಾತಾನ್ ಸಂಗ್ರಾಮೇ ಹತಾನ್ ಪಶ್ಯ ಚ
ಸೃಂಜಯಾನ್ ॥15॥।
ಅರ್ಜುನ, ಇವನು ಅಶ್ವತ್ಥಾಮ, ಅಸ್ತ್ರಧಾರಿಗಳಲ್ಲಿ ಶ್ರೇಷ್ಠ. ಅವನನ್ನು ಬೆನ್ನಟ್ಟಿ ರಣದಲ್ಲಿ ಮಹಾರಥನಾದ ಧೃಷ್ಟದ್ಯುಮ್ನ ಧಾವಿಸುತ್ತಿದ್ದಾನೆ. ಹಿಂಬಾಲಿಸಿ ಹೋದ ಸೃಂಜಯರು ರಣದಲ್ಲಿ ಹತರಾದುದನ್ನು ನೋಡು.
ಸರ್ವಂ ವ್ಯಾಚಷ್ಟ ದುರ್ಧರ್ಷೋ ವಾಸುದೇವಃ ಕಿರೀಟಿನೇ ।
ತತೋ ರಾಜನ್ ಪ್ರಾದುರಾಸೀನ್ಮಹಾಘೋರೋ ಮಹಾರಣಃ ॥16॥
ಹೀಗೆ ಯಾರಿಗೂ ಎದುರಿಸಲಾಗದ ಕೃಷ್ಣನು ಅರ್ಜುನನಿಗೆ ಎಲ್ಲವನ್ನೂ ಹೇಳಿದ. ಬಳಿಕ ರಾಜನೆ, ಮಹಾಘೋರವಾದ ಮಹಾರಣವು ಉಂಟಾಯಿತು.
ಸಿಂಹನಾದರವಾಶ್ಚಾತ್ರ ಪ್ರಾದುರಾಸನ್ ಸಮಾಗಮೇ ।
ಉಭಯೋಃ ಸೇನಯೋ ರಾಜನ್ ಮೃತ್ಯುಂ ಕೃತ್ವಾ ನಿವರ್ತನಮ್ ॥17।
ರಾಜನೆ, ಎರಡು ಸೈನ್ಯಗಳು ಮುಖಾಮುಖಿಯಾದಾಗ `ಮರಣದಿಂದಲೆ ಯುದ್ಧದಿಂದ ನಿವೃತ್ತಿ' ಎಂದು ನಿರ್ಧಾರ ಮಾಡಿ ಸಿಂಹನಾದ ಗೈದುವು. ಹೀಗೆ ಸಿಂಹನಾದ ಧ್ವನಿ ಪ್ರಾದುರ್ಭವಿಸಿತು.
ಏವಮೇಷ ಕ್ಷಯೋ ವೃತ್ತಃ ಪೃಥಿವ್ಯಾಂ ಪೃಥಿವೀಪತೇ ।
ತಾವಕಾನಾಂ ಪರೇಷಾಂ ಚ ರಾಜನ್ ದುರ್ಮಂತ್ರಿತೇ ತವ ॥18॥
ರಾಜನೆ, ಹೀಗೆ ಪೃಥಿವಿಯಲ್ಲಿ ನಿನ್ನವರ ಮತ್ತು ಪಾಂಡವರ ವಿನಾಶವು ನಿನ್ನ ದುಷ್ಟ ಆಲೋಚನೆಯ ಫಲವಾಗಿ ನಡೆದುಹೋಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಪಂಚಪಂಚಾಶೋಽಧ್ಯಾಯಃ ॥55॥
ಮಹಾಭಾರತತಾತ್ಪರ್ಯನಿರ್ಣಯ
ವಿದ್ರಾವ್ಯಮಾಣಾಂ ಪೃತನಾಂ ನಿರೀಕ್ಷ್ಯ
ಗುರೋಃ ಸುತೇನಾಭ್ಯಗಮತ್ ತ್ವರಾವಾನ್ ।
ಧೃಷ್ಟದ್ಯುಮ್ನಸ್ತಂ ಸ ಊಚೇ ಸುಪಾಪಂ
ಹನಿಷ್ಯೇ ತ್ವಾಮದ್ಯ ಯುದ್ಧೇ ಗುರುಘ್ನಮ್ ॥67॥
ಧೃಷ್ಟದ್ಯುಮ್ನ ತನ್ನ ಸೇನೆಯನ್ನು ಅಶ್ವತ್ಥಾಮ ಓಡಿಸುತ್ತಿರುವುದನ್ನು ಕಂಡು ತ್ವರೆಯಿಂದ ಅವನೆದುರಿಗೆ ಬಂದ. `ಗುರುವನ್ನು ಕೊಂದ ಮಹಾಪಾಪಿಯಾದ ನಿನ್ನನ್ನು ಯುದ್ಧದಲ್ಲಿ ಈಗಲೆ ಸಂಹರಿಸುವೆನು' ಎಂದ, ಅಶ್ವತ್ಥಾಮ.
ಇತ್ಯುಕ್ತೋ ದರ್ಶಯಾಮಾಸ ಪಾರ್ಷತಃ ಖಡ್ಗಮುತ್ತಮಮ್ ।
ಅಯಂ ತವ ಪಿತುರ್ಹಂತಾ ವದಿಷ್ಯತಿ ತವೋತ್ತರಮ್ ॥68॥
ಅಶ್ವತ್ಥಾಮ ಹೀಗೆ ಹೇಳಿದಾಗ ಧೃಷ್ಟದ್ಯುಮ್ನ ತನ್ನ ಉತ್ತಮವಾದ ಖಡ್ಗವನ್ನು ಎತ್ತಿತೋರಿದ: `ಇದು ನಿನ್ನ ತಂದೆಯನ್ನು ಕೊಂದ ಖಡ್ಗ. ಇದೇ ನಿನಗೆ ಉತ್ತರ ಹೇಳುವುದು' ಎಂದ.
ಇತ್ಯುಕತ್ವ ಧನುರಾದಾಯ ವವರ್ಷ ಚ ಶರಾನ್ ಬಹೂನ್ ।
ತಯೋಃ ಸಮಭವದ್ ಯುದ್ಧಂ ತುಮುಲಂ ರೋಮಹರ್ಷಣಮ್
॥69॥
ಧೃಷ್ಟದ್ಯುಮ್ನ ಹೀಗೆ ಹೇಳಿ ಬಿಲ್ಲನ್ನೆತ್ತಿಕೊಂಡು ಬಹಳ ಬಾಣಗಳ ಮಳೆಗರೆದ. ಅವರಿಬ್ಬರೊಳಗೆ ರೋಮಾಂಚಕರವಾದ ತುಮುಲ ಯುದ್ಧ ನಡೆಯಿತು.
ತತ್ರ ತಂ ಪಾರ್ಷತಂ ದ್ರೌಣಿಃ ಕ್ಷಣೇನ ವಿರಥಾಯುಧಮ್ ।
ಕೃತ್ವಾಽಂತಾಯ ಶರಾಂಸ್ತೀಕ್ಷ್ಣಾನ್ ಮುಮೋಚ ನ ಚ ತಸ್ಯ ತೇ ॥70॥
ತ್ವಚಂ ಚ ಚಿಚ್ಛಿದುರ್ದ್ರೌಣಿಃ ಖಡ್ಗಹಸ್ತೋಽಭಿಜಗ್ಮಿವಾನ್ ।
ಖಡ್ಗೇನ ಸಾಸ್ತ್ರೈಃ ಶಸ್ತ್ರೈರಪ್ಯನಿರ್ಭಿಣ್ಣತ್ವಚಂ ತದಾ ॥71॥
ಮೌರ್ವ್ಯಾ ಮಮಂಥ ಧನುಷಃ ಪಾತಯಿತ್ವಾ ಧರಾತಲೇ ।
ಆಕೃಷ್ಯಮಾಣಂ ಪಾರ್ಷತಂ ದೃಷ್ಟ್ವಾ ಕೃಷ್ಣಪ್ರಚೋದಿತಃ ।
ಪಾರ್ಥೋ ಭೀಮಶ್ಚೋಭಯತಃ ಶರೈರಭಿನಿಜಘ್ನತುಃ ॥72॥
ಆ ಯುದ್ಧದಲ್ಲಿ ಅಶ್ವತ್ಥಾಮ ಧೃಷ್ಟದ್ಯುಮ್ನನನ್ನು ಕ್ಷಣದಲ್ಲಿ ವಿರಥನನ್ನಾಗಿಯೂ ನಿರಾಯುಧನನ್ನಾಗಿಯೂ ಮಾಡಿ ಅವನ ನಾಶಕ್ಕಾಗಿ ತೀಕ್ಷ್ಣವಾದ ಬಾಣಗಳನ್ನೆಸೆದ. ಆದರೆ ಅವು ಅವನ ಚರ್ಮವನ್ನೂ ಗಾಯಗೊಳಿಸಲಿಲ್ಲ. ಬಳಿಕ ಅಶ್ವತ್ಥಾಮ ಖಡ್ಗ ಹಿರಿದು ಅವನ ಮೇಲೇರಿ ಹೋದ. ಆದರೆ ಖಡ್ಗದಿಂದಾಗಲಿ ಅಸ್ತ್ರಶಸ್ತ್ರಗಳಿಂದಾಗಲಿ ಅವನ ಚರ್ಮದಲ್ಲಿಯೂ ಒಂದಿಷ್ಟೂ ಗಾಯವಾಗದಿದ್ದಾಗ ಬಿಲ್ಲಿನ ಹೆದೆಯಿಂದ ಸೆಳೆದು ನೆಲದಲ್ಲಿ ಕೆಡವಿ ಹಿಂಸಿಸಿದ. ಧೃಷ್ಟದ್ಯುಮ್ನನನ್ನು ಅಶ್ವತ್ಥಾಮ ಸೆಳೆಯುತ್ತಿದ್ದುದನ್ನು ನೋಡಿ ಭೀಮಾರ್ಜುನರು ಕೃಷ್ಣನಿಂದ ಪ್ರೇರಿತರಾಗಿ ಅಶ್ವತ್ಥಾಮನನ್ನು ಎರಡೂ ಪಾರ್ಶ್ವಗಳಲ್ಲಿ ಬಾಣಗಳಿಂದ

ಹೊಡೆದರು.
ಸ ತಾಭ್ಯಾಂ ವಜ್ರಸದೃಶೈಃ ಶರೈರಭಿಹತೋ ಭೃಶಮ್ |
ವಿಸೃಜ್ಯ ಪಾರ್ಷತಂ ಸ್ವೀಯಮಾರುರೋಹ ರಥಂ ಪುನಃ ||73||
ಭೀಮಾರ್ಜುನರಿಂದ ವಜ್ರಸದೃಶವಾದ ಬಾಣಗಳಿಂದ ಚೆನ್ನಾಗಿ ಹೊಡೆಸಿ ಕೊಂಡ ಅಶ್ವತ್ಥಾಮ ಧೃಷ್ಟದ್ಯುಮ್ನನನ್ನು ಬಿಟ್ಟು ಪುನಃ ತನ್ನ ರಥವನ್ನೇರಿದ.

ಐವತ್ತಾರನೆಯ ಅಧ್ಯಾಯ
ಕರ್ಣಧೃಷ್ಟದ್ಯುಮ್ನರ ಯುದ್ಧ. ಕರ್ಣಸಾತ್ಯಕಿ ಯುದ್ಧ. ಅಶ್ವತ್ಥಾಮ ಧೃಷ್ಟದ್ಯುಮ್ನನ ವಧೆಗೆ ಯತ್ನಿಸಿದಾಗ ಅರ್ಜುನನಿಂದ ಅವನಿಗೆ ರಕ್ಷಣೆ.
ಸಂಜಯಃ
ತತಃ ಪುನಃ ಸಮಾಜಗ್ಮುರಭೀತಾಃ ಕುರುಸೃಂಜಯಾಃ |
ಧೃಷ್ಟದ್ಯುಮ್ನಮುಖಾಃ ಪಾರ್ಥಾ ವೈಕರ್ತನಮುಖಾ ವಯಮ್ ||1||
ಸಂಜಯನು ಧೃತರಾಷ್ಟ್ರನಿಗೆ ನುಡಿದ–ಬಳಿಕ ಪುನಃ ಕೌರವರು, ಪಾಂಡವರು ಮರಣ ಭೀತಿ ಇಲ್ಲದೆ ಪರಸ್ಪರ ಯುದ್ಧಕ್ಕೆ ಸೇರಿದರು, ಪಾಂಡವರು ಧೃಷ್ಟದ್ಯುಮ್ನನ ನಾಯಕತ್ವದಲ್ಲಿ ಮತ್ತು ನಾವು ಕರ್ಣನ ನಾಯಕತ್ವದಲ್ಲಿ.
ತತಃ ಪ್ರವವೃತೇ ಭೀಮಃ ಸಂಗ್ರಾಮೋ ಲೋಮಹರ್ಷಣಃ |
ಕರ್ಣಸ್ಯ ಪಾಂಡವಾನಾಂ ಚ ಯಮರಾಷ್ಟ್ರವಿವರ್ಧನಃ ||2||
ಆಗ ಕರ್ಣನಿಗೂ ಪಾಂಡವರಿಗೂ ಯಮರಾಜ್ಯದಲ್ಲಿ ಸಮೃದ್ಧಿ ಉಂಟು ಮಾಡುವಂಥ ಭೀಕರವಾದ ಸಂಗ್ರಾಮ ನಡೆಯಿತು.
ತಸ್ಮಿನ್ ಪ್ರವೃತ್ತೇ ಸಂಗ್ರಾಮೇ ತುಮುಲೇ ಶೋಣಿತೋದಕೇ |
ಸಂಶಪ್ತಕೇಷು ಶೂರೇಷು ಕಿಂಚಿಚ್ಛಿಷ್ಟೇಷು ಭಾರತ ||3||
ಧೃಷ್ಟದ್ಯುಮ್ನೋ ಮಹಾರಾಜ ಸಹಿತಃ ಸರ್ವರಾಜಭಿಃ |
ಕರ್ಣಮೇವಾಭಿದುದ್ರಾವ ಪಾಂಡವಾಶ್ಚ ಮಹಾರಥಾಃ ||4||
ನೀರಿನಂತೆ ನೆತ್ತರು ಹರಿಸುವಂಥ ತುಮುಲಯುದ್ಧ ನಡೆದಾಗ, ಅಳಿದುಳಿದ ಸ್ವಲ್ಪ ಸಂಶಪ್ತಕ ವೀರರು ಇನ್ನೂ ಇರುವಾಗ, ಮಹಾರಾಜ, ಧೃಷ್ಟದ್ಯುಮ್ನನು ಎಲ್ಲ ರಾಜರೊಂದಿಗೆ ಕೂಡಿಕೊಂಡು ಕರ್ಣನನ್ನು ಇದಿರಿಸಿದ. ಮಹಾರಥರಾದ ಪಾಂಡವರೂ ಅವನನ್ನು ಇದಿರಿಸಿದರು.
ಆಗಚ್ಛಮಾನಾಂಸ್ತಾನ್ ಸಂಖೇ ಪ್ರಹೃಷ್ಟಾನ್ ವಿಜಯೈಷಿಣಃ |
ದಧಾರೈಕೋ ರಣೇ ಕ್ರುದ್ಧೋ ಜಲೌಘಾನಿವ ಪರ್ವತಃ ||5||
ರಣದಲ್ಲಿ ಜಯಾಕಾಂಕ್ಷಿಗಳಾಗಿ ಉತ್ಸಾಹದಿಂದ ಬರುತ್ತಿದ್ದ ಅವರೆಲ್ಲರನ್ನೂ ಕ್ರುದ್ಧನಾದ ಕರ್ಣನೊಬ್ಬನೆ ಜಲಧಾರೆಗಳನ್ನು ಪರ್ವತದಂತೆ ಇದಿರಿಸಿದ.
ತಮಾಸಾದ್ಯ ತು ತೇ ಕರ್ಣಂ ವ್ಯಶೀರ್ಯಂತ ಮಹಾರಥಾಃ |
ಯಥಾಚಲಂ ಸಮಾಸಾದ್ಯ ಜಲೌಘಾಃ ಸರ್ವತೋದಿಶಮ್ ||6||
ತಯೋರಾಸೀನ್ಮಹಾರಾಜ ಸಂಗ್ರಾಮೋ ಲೋಮಹರ್ಷಣಃ ||7||
ಆ ಮಹಾರಥರು ಎಲ್ಲ ದಿಕ್ಕುಗಳಲ್ಲಿ ಕರ್ಣನನ್ನು ಇದಿರಿಸಿ, ಪರ್ವತವನ್ನು ತೋಯಿಸಿ ಜಲಧಾರೆಗಳು ತಾವೇ ಕ್ಷೀಣವಾಗುವಂತೆ, ತಾವೇ ಕ್ಷಯಿಸಿದರು. ಅವರಿಗೆ ಕರ್ಣನೊಡನೆ ರೋಮಾಂಚಕರವಾದ ಯುದ್ಧ ನಡೆಯಿತು.
ಧೃಷ್ಟದ್ಯುಮ್ನಸ್ತು ರಾಧೇಯಂ ಶರೇಣ ನತಪರ್ವಣಾ |
ತಾಡಯಾಮಾಸ ಸಂಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ||8||
ಧೃಷ್ಟದ್ಯುಮ್ನನು ಬಲುಕ್ರುದ್ಧನಾಗಿ ಡೊಂಕುಗಿಣ್ಣಿನ ಬಾಣದಿಂದ ಕರ್ಣನನ್ನು ಹೊಡೆದ ಮತ್ತು ``ನಿಲ್ಲು, ನಿಲ್ಲು' ಎಂದ.
ವಿಜಯಂ ತು ಧನುಃಶ್ರೇಷ್ಠಂ ವಿಧುನ್ವಾನೋ ಮಹಾರಥಃ |
ಪಾರ್ಷತಸ್ಯ ಧನುಶ್ಛಿತ್ತ್ವಾ ಶರಾನಾಶೀವಿಷೋಪಮಾನ್ ||9||
ತಾಡಯಾಮಾಸ ಸಂಕ್ರುದ್ಧಃ ಪಾರ್ಷತಂ ನವಭಿಃ ಶರೈಃ ||10||
ಮಹಾರಥನಾದ ಕರ್ಣನು ವಿಜಯ ಎಂಬ ಶ್ರೇಷ್ಠವಾದ ಧನುಸ್ಸನ್ನು ಓಲಾಡಿಸುತ್ತ ಒಂಬತ್ತು ಬಾಣಗಳಿಂದ ಧೃಷ್ಟದ್ಯುಮ್ನನ ಧನುಸ್ಸನ್ನೂ ಅವನ ಹಾವಿನಂಥ ಬಾಣಗಳನ್ನೂ ಕಡಿದು, ಅವನನ್ನೂ ಹೊಡೆದ.
ತೇ ವರ್ಮ ಹೇಮವಿಕೃತಂ ಭಿತ್ತ್ವಾ ತಸ್ಯ ಮಹಾತ್ಮನಃ |
ಶೋಣಿತಾಕ್ತಾ ವ್ಯರಾಜಂತ ಶಕ್ರಗೋಪಾ ಇವಾನಘ ||11||
ರಾಜನೆ, ಆ ಬಾಣಗಳು ಧೃಷ್ಟದ್ಯುಮ್ನನ ಬಂಗಾರದ ಕವಚವನ್ನು ಸೀಳಿ ನೆತ್ತರಿನಿಂದ ತೊಯ್ದು ಇಂದ್ರಗೋಪ ಹುಳುಗಳಂತೆ ಶೋಭಿಸಿದುವು.
ತದಪಾಸ್ಯ ಧನುಶ್ಛಿನ್ನಂ ಧೃಷ್ಟದ್ಯುಮ್ನೋ ಮಹಾರಥಃ |
ಅನ್ಯದ್ಧನುರುಪಾದಾಯ ಶರಾಂಶ್ಚಾಶೀವಿಷೋಪಮಾನ್ ||12||
ಕರ್ಣಂ ವಿವ್ಯಾಧ ಸಪ್ತತ್ಯಾ ಶರೈಃ ಸನ್ನತಪರ್ವಭಿಃ ||13||
ಮಹಾರಥನಾದ ಧೃಷ್ಟದ್ಯುಮ್ನನು ಕಡಿದುಹೋದ ಬಿಲ್ಲನ್ನೆಸೆದು ಇನ್ನೊಂದು ಬಿಲ್ಲನ್ನೂ ಹಾವಿನಂಥ ಬಾಣಗಳನ್ನೂ ಎತ್ತಿಕೊಂಡು ಡೊಂಕುಗಿಣ್ಣಿನ ಎಪ್ಪತ್ತು ಬಾಣಗಳಿಂದ ಕರ್ಣನನ್ನು ಹೊಡೆದ.

ತಥೈವ ರಾಜನ್ ಕರ್ಣೋಽಪಿ ಪಾರ್ಷತಂ ಶತ್ರುತಾಪನಮ್ |
ಛಾದಯಾಮಾಸ ಸಮರೇ ಶರೈರಾಶೀವಿಷೋಪಮೈಃ |
ದ್ರೋಣಶತ್ರುಂ ಮಹೇಷ್ವಾಸೋ ವಿವ್ಯಾಧ ನವಭಿಃ ಶರೈಃ ||14
ರಾಜನೆ, ಹಾಗೇ ಮಹಾಬಿಲ್ಗಾರನಾದ ಕರ್ಣನೂ ಕೂಡ ದ್ರೋಣ ಹಂತಕನಾದ ಶತ್ರುನಾಶಕನಾದ ಧೃಷ್ಟದ್ಯುಮ್ನನನ್ನು ರಣದಲ್ಲಿ ತೀಕ್ಷ್ಣವಾದ ಒಂಬತ್ತು ಹಾವುಗಳಂಥ ಬಾಣಗಳಿಂದ ಹೊಡೆದ ಮತ್ತು ಬಾಣಗಳಿಂದ ಅವನನ್ನು ಆಚ್ಛಾದಿಸಿದ.
ತಸ್ಯ ಕರ್ಣೋ ಮಹಾರಾಜ ಶರಂ ಕನಕಭೂಷಣಮ್ |
ಪ್ರೇಷಯಾಮಾಸ ಸಂಕ್ರುದ್ಧೋ ಮೃತ್ಯುದಂಡಮಿವಾಪರಮ್ ||15||
ಮಹಾರಾಜ, ಕರ್ಣನು ಕ್ರುದ್ಧನಾಗಿ ಧೃಷ್ಟದ್ಯುಮ್ನನ ಮೇಲೆ ಬಂಗಾರದಿಂದ ಅಲಂಕೃತವಾದ ಇನ್ನೊಂದು ಮೃತ್ಯುದಂಡದಂತೇ ಕಾಣುವ ಬಾಣವನ್ನೂ ಎಸೆದ.
ತಮಾಪತಂತಂ ಸಹಸಾ ಘೋರರೂಪಂ ವಿಶಾಂಪತೇ |
ಚಿಚ್ಛೇದ ಸಪ್ತಧಾ ರಾಜನ್ ಶೈನೇಯಃ ಕೃತಹಸ್ತವತ್ ||16||
ರಾಜನೆ, ಘೋರಸ್ವರೂಪದ ಆ ಬಾಣವು ವೇಗವಾಗಿ ಧೃಷ್ಟದ್ಯುಮ್ನನ ಕಡೆಗೆ ಬರುತ್ತಿದ್ದಂತೆ ಸಾತ್ಯಕಿಯು ನೋಡಿ ಕೈಚಳಕದಿಂದ ಅದನ್ನು ಏಳು ಭಾಗವಾಗಿ ಕತ್ತರಿಸಿದ.
ದೃಷ್ಟ್ವಾ ವಿನಿಹತಂ ಬಾಣಂ ಶರೈಃ ಕರ್ಣೋ ವಿಶಾಂಪತೇ |
ಸಾತ್ಯಕಿಂ ಶರವರ್ಷೇಣ ಸಮಂತಾತ್ ಪರ್ಯವಾರಯತ್ ||17||
ರಾಜನೆ, ತನ್ನ ಬಾಣವು ಸಾತ್ಯಕಿಯ ಬಾಣಗಳಿಂದ ಕಡಿದು ಬಿದ್ದುದನ್ನು ಕಂಡ ಕರ್ಣನು ಅವನನ್ನು ಬಾಣಗಳ ಮಳೆಯಿಂದ ಎಲ್ಲಕಡೆ ಮುಚ್ಚಿದ.
ವಿವ್ಯಾಧ ಚೈನಂ ಸಮರೇ ನಾರಾಚೈಸ್ತತ್ರ ಸಪ್ತಭಿಃ |
ತಂ ಪ್ರತ್ಯವಿಧ್ಯಚ್ಛೈನೇಯಃ ಶರೈರ್ಹೇಮವಿಭೂಷಿತೈಃ ||18||
ಏಳುಬಾಣಗಳಿಂದ ರಣದಲ್ಲಿ ಸಾತ್ಯಕಿಯನ್ನು ಕರ್ಣನು ಹೊಡೆದ. ಸಾತ್ಯಕಿಯೂ ಕರ್ಣನನ್ನು ಬಂಗಾರದಿಂದ ಅಲಂಕೃತವಾದ ಬಾಣಗಳಿಂದ ಹೊಡೆದ.
ತತೋ ಯುದ್ಧಮತೀವಾಸೀಚ್ಚಕ್ಷುಃಶ್ರೋತ್ರಭಯಾವಹಮ್ |
ಆಸೀದ್ ಘೋರಂ ಚ ಚಿತ್ರಂ ಚ ಪ್ರೇಕ್ಷಣೀಯಂ ಸಮಂತತಃ ||19||
ಆಗ ಆ ಯುದ್ಧವು ಕಣ್ಣು, ಕಿವಿಗಳಿಗೆ ಬಹಳ ಭಯ ಉಂಟು ಮಾಡುತ್ತ ಘೋರವೂ ಸುಂದರವೂ ಆಗಿದ್ದು ಎಲ್ಲೆಡೆ ಪ್ರೇಕ್ಷಣೀಯವೂ ಆಗಿತ್ತು.
ಸರ್ವೇಷಾಂ ತತ್ರ ಭೂತಾನಾಂ ಲೋಮಹರ್ಷೋ ವ್ಯಜಾಯತ |
ತದ್ ದೃಷ್ಟ್ವಾ ಸಮರೇ ಕರ್ಮ ಕರ್ಣಶೈನೇಯಯೋರ್ನೃಪ ||20||
ರಾಜನೆ, ಕರ್ಣ, ಸಾತ್ಯಕಿಯರು ರಣದಲ್ಲಿ ಮಾಡಿದ ಆ ಸಾಹಸಕೃತ್ಯವನ್ನು ಕಂಡು ಎಲ್ಲ ಜನರಿಗೂ ಆಗ ರೋಮಾಂಚ ಉಂಟಾಯಿತು.
ಏತಸ್ಮಿನ್ನಂತರೇ ದ್ರೌಣಿರಭ್ಯಯಾತ್ ಸುಮಹಾಬಲಮ್ |
ಪಾರ್ಷತಂ ಶತ್ರುದಮನಂ ಶತ್ರುವೀರ್ಯಾಸುನಾಶನಮ್ ||21||
ಈ ಸಮಯದಲ್ಲಿ ಮಹಾಬಲಿಯಾದ ಶತ್ರುನಾಶಕನಾದ ಶತ್ರುಗಳ ಶಕ್ತಿ, ಪ್ರಾಣಗಳನ್ನು ಹೀರುವ ಧೃಷ್ಟದ್ಯುಮ್ನನನ್ನು ಅಶ್ವತ್ಥಾಮನು ಇದಿಸಿರಿದ.
ಅಭ್ಯಭಾಷತ ಸಂಕ್ರುದ್ಧೋ ದ್ರೌಣಿಃ ಪರಪುರಂಜಯಃ |
ತಿಷ್ಠ ತಿಷ್ಠಾದ್ಯ ಬ್ರಹ್ಮಘ್ನ ನ ಮೇ ಜೀವನ್ ವಿಮೋಕ್ಷ್ಯಸೇ ||22||
ಶತ್ರುಪಟ್ಟಣಗಳನ್ನು ಗೆಲ್ಲುವ ಅಶ್ವತ್ಥಾಮನು ಕ್ರುದ್ಧನಾಗಿ ನುಡಿದ, ``ನಿಲ್ಲು ನಿಲ್ಲು, ಬ್ರಹ್ಮಹತ್ಯೆ ಮಾಡುವವನೆ, ಜೀವಂತನಾಗಿ ನೀನು ನನ್ನಿಂದ ಮುಕ್ತನಾಗಲಾರೆ'.
ಇತ್ಯುಕ್ತ್ವೈನಂ ಸುಭೃಶಂ ವೀರಃ ಶೀಘ್ರಕೃನ್ನಿಶಿತೈಃ ಶರೈಃ |
ಪಾರ್ಷತಂ ಛಾದಯಾಮಾಸ ಘೋರರೂಪೈಃ ಸುತೇಜನೈಃ ||23||
ಯತಮಾನಂ ಪರಂ ಶಕ್ತ್ಯಾ ಯತಮಾನೋ ಮಹಾರಥಃ ||24||
ಶೀಘ್ರಕಾರಿಯಾದ ಯತ್ನಶೀಲನಾದ ಮಹಾರಥನಾದ ವೀರ ಅಶ್ವತ್ಥಾಮನು ಹೀಗೆ ಹೇಳಿ ಬಹಳ ಶಕ್ತಿಯಿಂದ ಯತ್ನಶೀಲನಾದ ಧೃಷ್ಟದ್ಯುಮ್ನನನ್ನು ಘೋರಸ್ವರೂಪದ ಬಲು ತೀಕ್ಷ್ಣವಾದ ಹರಿತವಾದ ಬಾಣಗಳಿಂದ ಆಚ್ಛಾದಿಸಿದ.
ಯಥಾ ಹಿ ಸಮರೇ ದ್ರೌಣಿಃ ಪಾರ್ಷತಂ ವೀಕ್ಷ್ಯ ಮಾರಿಷ |
ತಥಾ ದ್ರೌಣಿಂ ರಣೇ ದೃಷ್ಟ್ವಾ ಪಾರ್ಷತಃ ಪರವೀರಹಾ ||25||
ನಾತಿಹೃಷ್ಟಮನಾ ಭೂತ್ವಾ ಮನ್ಯತೇ ಮೃತ್ಯುಮಾತ್ಮನಃ ||26||
ರಾಜನೆ, ರಣದಲ್ಲಿ ಧೃಷ್ಟದ್ಯುಮ್ನನನ್ನು ನೋಡಿದರೆ ಅಶ್ವತ್ಥಾಮನು ಮನಸಿನಲ್ಲಿ ಕುಗ್ಗಿಹೋಗಿ ಅವನನ್ನು ತನಗೆ ಮೃತ್ಯುವೆಂದು ಭಾವಿಸುತ್ತಾನೆ. ಹಾಗೇ ರಣದಲ್ಲಿ ಅಶ್ವತ್ಥಾಮನನ್ನು ನೋಡಿದರೂ ಮನದಲ್ಲಿ ಕುಗ್ಗಿ ಧೃಷ್ಟದ್ಯುಮ್ನ ಅವನನ್ನು ತನಗೆ ಮೃತ್ಯುವಾಗಲಿದ್ದಾನೆ ಎಂದುಕೊಳ್ಳುತ್ತಾನೆ.
ಸ ಜ್ಞಾತ್ವಾ ಸಮರೇಽಽತ್ಮಾನಂ ಶಸ್ತ್ರೇಣಾವಧ್ಯಮೇವ ತು |
ಜವೇನಾಭಿಯಯೌ ದ್ರೌಣಿಂ ಕಾಲಃ ಕಾಲಮಿವ ಕ್ಷಯೇ ||27||
ರಣದಲ್ಲಿ ತಾನು ಶಸ್ತ್ರದಿಂದ ಅವಧ್ಯನೆಂದು ತಿಳಿದು ಧೃಷ್ಟದ್ಯುಮ್ನನು, ಲಯಕಾಲದಲ್ಲಿ ಅಂತಕನನ್ನು ಅಂತಕನು ಆಕ್ರಮಿಸುವಂತೆ,

ಅಶ್ವತ್ಥಾಮನನ್ನು ವೇಗದಿಂದ ಆಕ್ರಮಿಸಿದ.
ದ್ರೌಣಿಸ್ತು ದೃಷ್ಟ್ವಾ ರಾಜೇಂದ್ರ ಧೃಷ್ಟದ್ಯುಮ್ನಂ ರಥೇ ಸ್ಥಿತಮ್ |
ಕ್ರೋಧೇನ ನಿಃಶ್ವಸನ್ ವೀರಃ ಪಾರ್ಷತಂ ಸಮುಪಾದ್ರವತ್ ||28||
ತಾವನ್ಯೋನ್ಯಂ ತು ದೃಷ್ಟ್ವೈವ ಸಂರಂಭಂ ಜಗ್ಮತುಃ ಪರಮ್ ||29||
ರಾಜನೆ, ವೀರನಾದ ಅಶ್ವತ್ಥಾಮನು ರಥದಲ್ಲಿ ಧೃಷ್ಟದ್ಯುಮ್ನನನ್ನು ಕಂಡು ಕ್ರೋಧದಿಂದ ಭುಸುಗುಟ್ಟುತ್ತ ಅವನ ಕಡೆಗೆ ನುಗ್ಗಿದ. ಅವರಿಬ್ಬರೂ ಪರಸ್ಪರ ನೋಡಿದ ಮಾತ್ರಕ್ಕೆ ಮಹಾಕೋಪ ಪರವಶರಾದರು.
ಅಥಾಬ್ರವೀನ್ಮಹಾರಾಜ ದ್ರೋಣಪುತ್ರಃ ಪ್ರತಾಪವಾನ್ |
ಧೃಷ್ಟದ್ಯುಮ್ನಂ ಸಮೀಪಸ್ಥಂ ತ್ವರಮಾಣೋ ವಿಶಾಂಪತೇ ||30||
ಪಾಂಚಾಲಾಪಸದಾದ್ಯ ತ್ವಾಂ ಪ್ರೇಷಯಿಷ್ಯಾಮಿ ಮೃತ್ಯವೇ ||31||
ಮಹಾರಾಜ, ವೇಗದಿಂದ ನುಗ್ಗುವ ಪ್ರತಾಪಶಾಲಿಯಾದ ಅಶ್ವತ್ಥಾಮನು ಸಮೀಪಕ್ಕೆ ಬಂದಿದ್ದ ಧೃಷ್ಟದ್ಯುಮ್ನನನ್ನು ಕುರಿತು ನುಡಿದ, `ದುಷ್ಟಪಾಂಚಾಲನೆ, ಈಗ ನಾನು ನಿನ್ನನ್ನು ಮೃತ್ಯುವಿನ ಬಳಿಗೆ ಕಳಿಸುವೆನು' ಎಂದು.
ಪಾಪಂ ಹಿ ಯತ್ತ್ವಯಾ ಕರ್ಮ ಘ್ನತಾ ದ್ರೋಣಂ ಪುರಾ ಕೃತಮ್ |
ಅದ್ಯ ತ್ವಾ ಪತ್ಸ್ಯತೇ ತದ್ವೈ ೃ ಯಥಾ ಹ್ಯಕುಶಲಂ ತಥಾ ||32||
`ಹಿಂದೆ ದ್ರೋಣನನ್ನು ಕೊಂದು ನೀನು ಪಾಪಕರ್ಮ ಮಾಡಿರುವೆ. ಅದರಿಂದ ಇಂದು ಅದು ಅಜ್ಞಾನ ಪಾಪಕರ್ಮ ತನ್ನನ್ನೆ ತಾಪಗೊಳಿಸುವಂತೆ ನಿನ್ನನ್ನು ತಾಪಗೊಳಿಸುತ್ತದೆ.
ಅರಕ್ಷ ್ಯಮಾಣಃ ಪಾರ್ಥೇನ ಯದಿ ತಿಷ್ಠಸಿ ಸಂಯುಗೇ |
ನಾಪಕ್ರಾಮಸಿ ವಾ ಮೂಢ ಸತ್ಯಮೇತದ್ ಬ್ರವೀಮಿ ತೇ ||33||
ಪಾರ್ಥನ ರಕ್ಷಣೆ ಇಲ್ಲದೆ ಯುದ್ಧದಲ್ಲಿ ನೀನು ನಿಂತರೆ ಅಥವಾ ಯುದ್ಧದಿಂದ ನೀನು ಪಲಾಯನ ಮಾಡದಿದ್ದರೆ ಇದು ಸತ್ಯವಾಗುವುದೆಂದು ನಿನಗೆ ನಾನು ಹೇಳುತ್ತಿದ್ದೇನೆ.'
ಏವಮುಕ್ತಃ ಪ್ರತ್ಯುವಾಚ ಧೃಷ್ಟದ್ಯುಮ್ನಃ ಪ್ರತಾಪವಾನ್ ||34||
ಅಶ್ವತ್ಥಾಮನು ಹೀಗೆ ನುಡಿದಾಗ ಪ್ರತಿಯಾಗಿ ಧೃಷ್ಟದ್ಯುಮ್ನ ನುಡಿದ.
ಧೃಷ್ಟದ್ಯುಮ್ನಃ
ಪ್ರತಿವಾಕ್ಯಂ ಸ ಏವಾಸಿರ್ಮಾಮಕೋ ದಾಸ್ಯತೇ ತವ |
ಯೇನೈವ ತೇ ಪಿತುರ್ದತ್ತಂ ಯತಮಾನಸ್ಯ ಸಂಯುಗೇ ||35||
ರಣದಲ್ಲಿ ಯತ್ನಶೀಲನಾದ ನಿನ್ನ ತಂದೆಗೆ ಉತ್ತರ ಕೊಟ್ಟಿರುವ ನನ್ನ ಈ ಖಡ್ಗವೇ ನಿನ್ನ ಮಾತಿಗೂ ಉತ್ತರ ನೀಡುತ್ತದೆ.
ಯದಿ ತಾವನ್ಮಯಾ ದ್ರೋಣೋ ನಿಹತೋ ಬ್ರಾಹ್ಮಣಬ್ರುವಃ |
ತ್ವಾಮಿದಾನೀಂ ಕಥಂ ಯುದ್ಧೇ ನ ಹನಿಷ್ಯಾಮಿ ವಿಕ್ರಮಾತ್ ||36||
ಹೆಸರಿಗೆ ಮಾತ್ರ ಬ್ರಾಹ್ಮಣನಾಗಿದ್ದ ದ್ರೋಣನನ್ನು ನಾನು ಕೊಂದಿದ್ದೇನೆ ಎಂದಮೇಲೆ ಈಗ ಪರಾಕ್ರಮದಿಂದ ನಾನು ನಿನ್ನನ್ನು ಹೇಗೆ ಕೊಲ್ಲದಿರುವೆ?
ಏವಮುಕತ್ವ ಮಹಾರಾಜ ಸೇನಾಪತಿರಮರ್ಷಣಃ |
ನಿಶಿತೇನಾಥ ಬಾಣೇನ ದ್ರೌಣಿಂ ವಿವ್ಯಾಧ ಪಾರ್ಷತಃ ||37||
ಮಹಾರಾಜ, ಸೇನಾಪತಿ ಧೃಷ್ಟದ್ಯುಮ್ನನು ಹೀಗೆ ಹೇಳಿ ತೀಕ್ಷ್ಣವಾದ ಬಾಣದಿಂದ ಅಶ್ವತ್ಥಾಮನನ್ನು ಹೊಡೆದ.
ತತೋ ದ್ರೌಣಿಃ ಸುಸಂಕ್ರುದ್ಧಃ ಶರೈಃ ಸನ್ನತಪರ್ವಭಿಃ |
ಪ್ರಾಚ್ಛಾದಯದ್ ದಿಶೋ ರಾಜನ್ ಧೃಷ್ಟದ್ಯುಮ್ನಸ್ಯ ಸಂಯುಗೇ ||38||
ಆಗ ರಾಜನೆ, ಅಶ್ವತ್ಥಾಮನು ಕುಪಿತನಾಗಿ ಡೊಂಕುಗಿಣ್ಣಿನ ಬಾಣಗಳಿಂದ ರಣದಲ್ಲಿ ಧೃಷ್ಟದ್ಯುಮ್ನನ ಎಲ್ಲ ದಿಕ್ಕುಗಳನ್ನೂ ಆಚ್ಛಾದಿಸಿದ.
ನೈವಾಂತರಿಕ್ಷಂ ನ ದಿಶೋ ನೈವ ಯೋಧಾಃ ಸಮಂತತಃ |
ದೃಶ್ಯಂತೇ ವೈ ಮಹಾರಾಜ ಶರೈಶ್ಛನ್ನಾಃ ಸಹಸ್ರಶಃ ||39||
ಮಹಾರಾಜ, ಬಾಣಗಳಿಂದ ಎಲ್ಲೆಡೆ ಮುಚ್ಚಿ ಹೋದುದರಿಂದ ಅಂತರಿಕ್ಷ ಕಾಣಲಿಲ್ಲ. ದಿಕ್ಕುಗಳು ಕಾಣಲಿಲ್ಲ. ಸಾವಿರಾರು ಯೋಧರೂ ಬಾಣಗಳಿಂದ ಮುಚ್ಚಿ ಹೋದುದರಿಂದ ಕಾಣಲಿಲ್ಲ.
ತಥೈವ ಪಾರ್ಷತೋ ರಾಜನ್ ದ್ರೌಣಿಮಾಹವಶೋಭಿನಮ್ |
ಶರೈಃ ಸಂಛಾದಯಮಾಸ ಸೂತಪುತ್ರಸ್ಯ ಪಶ್ಯತಃ ||40||
ರಾಜನೆ, ಧೃಷ್ಟದ್ಯುಮ್ನನೂ ಹಾಗೇ, ಕರ್ಣನು ನೋಡುತ್ತಿದ್ದಂತೆಯೇ ಯುದ್ಧದಲ್ಲಿ ಶೋಭಿಸುವ ಅಶ್ವತ್ಥಾಮನನ್ನು ಬಾಣಗಳಿಂದ ಮುಚ್ಚಿದ.
ರಾಧೇಯೋಽಪಿ ಮಹಾರಾಜ ಪಾಂಚಾಲಾನ್ ಸಹ ಪಾಂಡವೈಃ |
ದ್ರೌಪದೇಯಾನ್ ಯುಧಾಮನ್ಯುಂ ಸಾತ್ಯಕಿಂ ಚ
ಮಹಾರಥಮ್ ||41||
ಏಕಃ ಸ ವಾರಯಾಮಾಸ ಪ್ರೇಕ್ಷಣೀಯಃ ಸಮಂತತಃ ||42||
ಮಹಾರಾಜ, ಕರ್ಣನೂ ಕೂಡ ಏಕಾಕಿಯಾಗಿ, ಪಾಂಚಾಲರನ್ನು ಪಾಂಡವರನ್ನು ದ್ರೌಪದೀಪುತ್ರರನ್ನು ಯುಧಾಮನ್ಯುವನ್ನು ಮತ್ತು ಮಹಾರಥನಾದ ಸಾತ್ಯಕಿಯನ್ನು ಇದಿರಿಸಿದ. ಎಲ್ಲ ಕಡೆಗಳಿಂದಲೂ ಪ್ರೇಕ್ಷಣೀಯನಾದ.

ದೃಷ್ಟದ್ಯುಮ್ನೋಽಪಿ ಸಮರೇ ದ್ರೌಣೇಶ್ಚಿಚ್ಛೇದ ಕಾರ್ಮುಕಮ್ |
ತದಪಾಸ್ಯ ಧನುರ್ದ್ರೌಣಿರನ್ಯದಾದತ್ತ ಕಾರ್ಮುಕಮ್ ||43||
ವೇಗವತ್ ಸಮರೇ ಘೋರಂ ಶರಾಂಶ್ಚಾಶೀವಿಷೋಪಮಾನ್ ||44||
ಧೃಷ್ಟದ್ಯುಮ್ನನು ರಣದಲ್ಲಿ ಅಶ್ವತ್ಥಾಮನ ಬಿಲ್ಲನ್ನು ಕಡಿದ. ಆ ಬಿಲ್ಲನ್ನೆಸೆದು ಅಶ್ವತ್ಥಾಮನು ರಣದಲ್ಲಿ ವೇಗವುಳ್ಳ ಘೋರವಾದ ಇನ್ನೊಂದು ಬಿಲ್ಲನ್ನೂ ಹಾವಿನಂತಿರುವ ಬಾಣಗಳನ್ನೂ ಎತ್ತಿಕೊಂಡ.
ಸ ಪಾರ್ಷತಸ್ಯ ರಾಜೇಂದ್ರ ಧನುಃ ಶಕ್ತಿಂ ಗದಾಂ ಧ್ವಜಮ್ |
ಹಯಾನ್ ಸೂತಂ ರಥಂ ಚೈವ ನಿಮೇಷಾದ್ ವ್ಯಧಮಚ್ಚರೈಃ ||45||
ಮಹಾರಾಜ, ಅಶ್ವತ್ಥಾಮನು ಧೃಷ್ಟದ್ಯುಮ್ನನ ಧನು ಶಕ್ತಿ ಗದೆ ಧ್ವಜ ಕುದುರೆಗಳು ಸಾರಥಿ ರಥವೆಲ್ಲವನ್ನೂ ನಿಮಿಷದಲ್ಲಿ ಬಾಣಗಳಿಂದ ನಾಶಪಡಿಸಿದ.
ಸ ಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ |
ಖಡ್ಗಮಾದತ್ತ ವಿಪುಲಂ ಶತಚಂದ್ರಂ ಚ ಭಾನುಮತ್ ||46||
ಧೃಷ್ಟದ್ಯುಮ್ನನ ಧನುಸ್ಸು ಕಡಿದಿದೆ. ರಥ ಮುರಿದಿದೆ. ಕುದುರೆಗಳು ಸತ್ತಿವೆ. ಸಾರಥಿ ಮಡಿದಿದ್ದಾನೆ. ಹೀಗಾಗಿ ಅವನು ಹೊಳೆವ ಖಡ್ಗವನ್ನೆತ್ತಿಕೊಂಡ, ದೊಡ್ಡ ಶತಚಂದ್ರ ಗುರಾಣಿಯನ್ನು ಹಿಡಿದ.
ದ್ರೌಣಿಸ್ತದಪಿ ರಾಜೇಂದ್ರ ಭಲ್ಲೈಃ ಕ್ಷಿಪ್ರಂ ಮಹಾರಥಃ |
ಚಿಚ್ಛೇದ ಸಮರೇ ವೀರಃ ಕ್ಷಿಪ್ರಹಸ್ತೋ ದೃಢಾಯುಧಃ ||47||
ರಥಾದನವರೂಢಸ್ಯ ತದದ್ಭುತಮಿವಾಭವತ್ ||48||
ಅಶ್ವತ್ಥಾಮನು ರಣದಲ್ಲಿ ವೀರ, ವೇಗದ ಹಸ್ತ ಮತ್ತು ದೃಢವಾದ ಆಯುಧ ಉಳ್ಳವನು, ಮಹಾರಥ. ಅವನು, ಮಹಾರಾಜ! ಧೃಷ್ಟದ್ಯುಮ್ನನು ಇನ್ನೂ ರಥದಿಂದ ಕೆಳಗಿಳಿಯುವ ಮೊದಲೇ ಭಲ್ಲೆಗಳಿಂದ ಬೇಗನೆ ಖಡ್ಗವನ್ನೂ ಗುರಾಣಿಯನ್ನೂ ಕತ್ತರಿಸಿದ. ಅದು ಅದ್ಭುತವಾಗಿತ್ತು.
ಧೃಷ್ಟದ್ಯುಮ್ನಂ ತು ವಿರಥಂ ಹತಾಶ್ವಂ ಛಿನ್ನಕಾರ್ಮುಕಮ್ |
ಶರೈಶ್ಚ ಬಹುಧಾ ವಿದ್ಧಂ ಮರ್ಮಸ್ವೇವ ಸುತಾಡಿತಮ್ ||49||
ನಾತರದ್ ಭರತಶ್ರೇಷ್ಠ ಯತಮಾನೋ ಮಹಾರಥಃ ||50||
ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ವಿರಥನನ್ನಾಗಿ ಮಾಡಿದ. ಅಶ್ವಗಳನ್ನು ಕೊಂದ. ಬಿಲ್ಲನ್ನು ಕಡಿದ. ಬಾಣಗಳಿಂದ ಬಹಳವಾಗಿ ಹೊಡೆದ. ಮರ್ಮಸ್ಥಾನಗಳಲ್ಲಿ ತಿವಿದ. ಆದರೂ, ಮಹಾರಾಜ, ಮಹಾರಥನಾದ ಅಶ್ವತ್ಥಾಮ ಎಷ್ಟು ಯತ್ನಿಸಿದರೂ ದೃಷ್ಟದ್ಯುಮ್ನನನ್ನು ಕೊಲ್ಲಲು ಶಕ್ತನಾಗಲಿಲ್ಲ.
ತಸ್ಯಾಂತಮಿಷುಭೀ ರಾಜನ್ ಯದಾ ದ್ರೌಣಿರ್ನ ಜಗ್ಮಿವಾನ್ |
ಅಥ ತ್ಯಕ್ತ್ವಾ ಧನುರ್ವೀರಃ ಪಾರ್ಷತಂ ತ್ವರಿತೋಽಭ್ಯಗಾತ್ ||51||
ರಾಜನ್, ವೀರ ಅಶ್ವತ್ಥಾಮನು ಬಾಣಗಳಿಂದ ಧೃಷ್ಟದ್ಯುಮ್ನನ ವಧೆಯನ್ನು ಮಾಡಲು ಶಕ್ತನಾಗದಿದ್ದಾಗ ಧನುಸ್ಸನ್ನು ಬಿಟ್ಟು ವೇಗವಾಗಿ ಅವನ ಕಡೆಗೆ ನುಗ್ಗಿದ.
ಆಸೀದಾದ್ರವತೋ ರಾಜನ್ ವೇಗಸ್ತಸ್ಯ ಮಹಾತ್ಮನಃ |
ಗರುಡಸ್ಯೇವ ಪತತೋ ಜಿಘೃಕ್ಷೋಃ ಪನ್ನಗೋತ್ತಮಮ್ ||52||
ರಾಜನೆ, ಮಹಾತ್ಮನಾದ ಅಶ್ವತ್ಥಾಮನು ನುಗ್ಗುವಾಗ ಅವನ ವೇಗವು ದೊಡ್ಡ ಹಾವನ್ನು ಹಿಡಿಯಲು ಹಾರಿ ಬರುವ ಗರುಡನ ವೇಗದಂತಿತ್ತು.
ಏತಸ್ಮಿನ್ನೇವ ಕಾಲೇ ತು ಮಾಧವೋಽರ್ಜುನಮಬ್ರವೀತ್ |
ಪಶ್ಯ ಪಾರ್ಥ ಯಥಾ ದ್ರೌಣಿಃ ಪಾರ್ಷತಸ್ಯ ವಧಂ ಪ್ರತಿ ||53||
ಯತ್ನಂ ಕರೋತಿ ವಿಪುಲಂ ಹನ್ಯಾಚ್ಚೈನಮಸಂಶಯಮ್ ||54||
ಇದೇ ಸಮಯದಲ್ಲಿ ಕೃಷ್ಣ, ಅರ್ಜುನನಿಗೆ ನುಡಿದ– ನೋಡು, ಅರ್ಜುನ, ಅಶ್ವತ್ಥಾಮನು ಧೃಷ್ಟದ್ಯುಮ್ನನ ವಧೆಗೆ ಹೇಗೆ ಯತ್ನ ಮಾಡುತ್ತಿದ್ದಾನೆ! ಅವನು ಕೊಲ್ಲುವನು, ಸಂಶಯವಿಲ್ಲ.
ತಂ ಮೋಚಯ ಮಹಾಬಾಹೋ ಪಾರ್ಷತಂ ಶತ್ರುತಾಪನಮ್ |
ದ್ರೌಣೇರಾಸ್ಯಮನುಪ್ರಾಪ್ತಂ ಮೃತ್ಯೋರಾಸ್ಯಗತಂ ಯಥಾ ||55||
ಮಹಾಬಾಹುವೆ, ಶತ್ರುತಾಪಕನಾದ ಧೃಷ್ಟದ್ಯುಮ್ನ ಮೃತ್ಯುವಿನ ದವಡೆಗೆ ಸಿಲುಕಿದಂತೆ ಅಶ್ವತ್ಥಾಮನ ದವಡೆಗೆ ಸಿಕ್ಕಿದ್ದಾನೆ. ಅವನನ್ನು ಬಿಡಿಸು.
ಏವಮುಕ್ತ್ವಾ ಮಹಾರಾಜ ವಾಸುದೇವಃ ಪ್ರತಾಪವಾನ್ |
ಪ್ರೈಷಯತ್ತತ್ರ ತುರಗಾನ್ ಯತ್ರ ದ್ರೌಣಿರ್ವ್ಯವಸ್ಥಿತಃ ||56||
ಮಹಾರಾಜ, ಪ್ರತಾಪಶಾಲಿಯಾದ ಕೃಷ್ಣನು ಹೀಗೆ ಹೇಳಿ ಅಶ್ವತ್ಥಾಮನು ಇರುವಲ್ಲಿಗೆ ಕುದುರೆಗಳನ್ನು ನಡೆಸಿದ.
ತೇ ಹಯಾಶ್ಚಂದ್ರಸಂಕಾಶಾಃ ಕೇಶವೇನ ಪ್ರಚೋದಿತಾಃ |
ಪಿಬಂತ ಇವ ಚಾಕಾಶಂ ಜಗ್ಮುರ್ದ್ರೌಣಿರಥಂ ಪ್ರತಿ ||57||
ಚಂದ್ರನಂತೆ ಹೊಳೆಯುವ ಆ ಕುದುರೆಗಳನ್ನು ಕೃಷ್ಣನು ಪ್ರಚೋದಿಸಿದಾಗ ಅವು ಆಕಾಶವನ್ನು ಕುಡಿಯುವಂತೆ ತಲೆಯೆತ್ತಿ ಅಶ್ವತ್ಥಾಮನ ರಥದ ಕಡೆಗೆ ಧಾವಿಸಿದುವು.
ದೃಷ್ಟ್ವಾಽಽಯಾಂತೌ ಮಹಾವೀರ್ಯಾವುಭೌ ಕೃಷ್ಣಧನಂಜಯೌ |

ಧೃಷ್ಟದ್ಯುಮ್ನವಧೇ ರಾಜಂಶ್ಚಕ್ರೇ ಯತ್ನಂ ಮಹಾಬಲಃ ॥58॥
ರಾಜನೆ, ಮಹಾವೀರ್ಯಶಾಲಿಗಳಾದ ಕೃಷ್ಣಾರ್ಜುನರು ಬರುತ್ತಿರುವುದನ್ನು ಕಂಡು ಮಹಾಬಲ ಅಶ್ವತ್ಥಾಮನು ಧೃಷ್ಟದ್ಯುಮ್ನನ ವಧೆಗೆ ಯತ್ನ ಮಾಡಿದ.
ವಿಕೃಷ್ಯಮಾಣಂ ದೃಷ್ಟ್ವೈವ ಧೃಷ್ಟದ್ಯುಮ್ನಂ ಜನೇಶ್ವರ |
ಶರಾಂಶ್ಚಿಕ್ಷೇಪ ವೈ ಪಾರ್ಥೋ ದ್ರೌಣಿಂ ಪ್ರತಿ ಮಹಾಬಲಃ ॥59॥
ರಾಜನೆ, ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಸೆಳೆಯುತ್ತಿದ್ದುದನ್ನು ನೋಡಿ ಮಹಾಬಲಿ ಅರ್ಜುನನು ಅವನ ಮೇಲೆ ಬಾಣಗಳನ್ನು ಎಸೆದ.
ತೇ ಶರಾ ಹೇಮವಿಕೃತಾ ಗಾಂಡೀವಪ್ರೇಷಿತಾ ಭೃಶಮ್ |
ದ್ರೌಣಿಮಾಸಾದ್ಯ ವಿವಿಶುರ್ವಲ್ಮೀಕಮಿವ ಪನ್ನಗಾಃ ॥60॥
ಬಂಗಾರದಿಂದ ಮಾಡಿದ ಆ ಬಾಣಗಳು ಚೆನ್ನಾಗಿ ಗಾಂಡೀವದಿಂದ ಮುಕ್ತವಾಗಿ ಅಶ್ವತ್ಥಾಮನನ್ನು ಸೇರಿ, ಹಾವುಗಳು ಹುತ್ತವನ್ನು ಪ್ರವೇಶಿಸುವಂತೆ ಅವನ ಮೈಯೊಳಗೆ ಹೊಕ್ಕವು.
ಸ ವಿದ್ಧಸ್ತೈಃ ಶರೈರ್ಘೋರೈರ್ದ್ರೋಣಪುತ್ರಃ ಪ್ರತಾಪವಾನ್ ॥61॥
ಉತ್ಸೃಜ್ಯ ಸಮರೇ ರಾಜನ್ ಪಾಂಚಾಲ್ಯಮಮಿತೌಜಸಮ್ ॥62॥
ರಥಮಾರುರುಹೇ ವೀರೋ ಧನಂಜಯಶರಾರ್ದಿತಃ |
ಪ್ರಗೃಹ್ಯ ಚ ಧನುಃ ಶ್ರೇಷ್ಠಂ ಪಾರ್ಥಂ ವಿವ್ಯಾಧ ಸಾಯಕೈಃ ॥63॥
ಪ್ರತಾಪಶಾಲಿ ಅಶ್ವತ್ಥಾಮನು ಅರ್ಜುನನ ಬಾಣಗಳಿಂದ ಹೊಡೆಸಿಕೊಂಡು, ರಣದಲ್ಲಿ ಅಮಿತ ಪರಾಕ್ರಮಿಯಾದ ಧೃಷ್ಟದ್ಯುಮ್ನನನ್ನು ಬಿಟ್ಟು ರಥವನ್ನೇರಿದ. ಅರ್ಜುನನ ಬಾಣಗಳಿಂದ ಪೀಡಿತನಾದ ವೀರನಾದ ಅವನು ಶ್ರೇಷ್ಠವಾದ ಧನುಸ್ಸನ್ನು ಎತ್ತಿಕೊಂಡು ಅರ್ಜುನನನ್ನು ಬಾಣಗಳಿಂದ ಹೊಡೆಯಲು ತೊಡಗಿದ.
ಏತಸ್ಮಿನ್ನಂತರೇ ವೀರಃ ಸಹದೇವೋ ಜನಾಧಿಪ |
ಅಪೋವಾಹ ರಥೇನಾಜೌ ಪಾರ್ಷತಂ ಶತ್ರುತಾಪನಮ್ ॥64॥
ರಾಜನೆ, ಆ ಸಮಯದಲ್ಲಿ ವೀರನಾದ ಸಹದೇವನು ರಣದಲ್ಲಿ ಶತ್ರುತಾಪಕನಾದ ಧೃಷ್ಟದ್ಯುಮ್ನನನ್ನು ರಥದಿಂದ ದೂರಕ್ಕೆ ಒಯ್ದ.
ಅರ್ಜುನೋಽಪಿ ಮಹಾರಾಜ ದ್ರೌಣಿಂ ವಿವ್ಯಾಧ ಪತ್ರಿಭಿಃ |
ತಂ ದ್ರೋಣಪುತ್ರಃ ಸಂಕ್ರುದ್ಧೋ ಬಾಹ್ವೋರುರಸಿ ಚಾರ್ದಯತ್ ॥65|
ಮಹಾರಾಜ, ಅರ್ಜುನನು ಅಶ್ವತ್ಥಾಮನನ್ನು ಬಾಣಗಳಿಂದ ಹೊಡೆದ. ಅವನನ್ನು ಅಶ್ವತ್ಥಾಮನು ಕುಪಿತನಾಗಿ ತೋಳುಗಳಲ್ಲಿಯೂ ಎದೆಯಲ್ಲಿಯೂ ಹೊಡೆದ.
ಕ್ರೋಧಿತಸ್ತು ರಣೇ ಪಾರ್ಥೋ ನಾರಾಚಂ ಕಾಲಸಮ್ಮಿತಮ್ |
ದ್ರೋಣಪುತ್ರಾಯ ಚಿಕ್ಷೇಪ ಕಾಲದಂಡಮಿವಾಪರಮ್ ॥66॥
ಸ ಬ್ರಾಹ್ಮಣಸ್ಯಾಂಸದೇಶೇ ನಿಪಪಾತ ಮಹಾದ್ಯುತಿಃ ॥67॥
ರಣದಲ್ಲಿ ಕೋಪಗೊಳಿಸಲ್ಪಟ್ಟ ಅರ್ಜುನನು ಮೃತ್ಯುವಿನಂತಿದ್ದ ಇನ್ನೊಂದು ಯಮದಂಡದಂಥ ಬಾಣವನ್ನು ಅಶ್ವತ್ಥಾಮನ ಮೇಲೆ ಎಸೆದ. ಮಹಾಪ್ರಕಾಶವುಳ್ಳ ಅದು ಅವನ ಹೆಗಲಿನಲ್ಲಿ ಬಿದ್ದಿತು.
ಸ ವಿಹ್ವಲೋ ಮಹಾರಾಜ ಶರವೇಗೇನ ಸಂಯುಗೇ |
ನಿಷಸಾದ ರಥೋಪಸ್ಥೇ ವೈಕ್ಲವ್ಯಂ ಚ ಪರಂ ಯಯೌ ॥68॥
ಅಶ್ವತ್ಥಾಮನು ರಣದಲ್ಲಿ ಬಾಣವೇಗದಿಂದ ವಿಹ್ವಲಗೊಂಡು ರಥದೊಳಗಿನ ಹಿಂಬಾಗದಲ್ಲಿ ಕುಳಿತುಕೊಂಡು ಬಹಳ ವೇದನೆಯನ್ನು ಹೊಂದಿದ.
ತತಃ ಕರ್ಣೋ ಮಹಾರಾಜ ವ್ಯಾಕ್ಷಿಪದ್ ವಿಜಯಂ ಧನುಃ |
ಅರ್ಜುನಂ ಸಮರೇ ಕ್ರುದ್ಧಃ ಪ್ರೇಕ್ಷಮಾಣೋ ಮುಹುರ್ಮುಹುಃ ॥69॥
ದ್ವೈರಥಂ ಚಾಪಿ ಪಾರ್ಥೇನ ಕಾಮಯಾನೋ ಮಹಾರಣೇ ॥70॥
ಮಹಾರಾಜ, ಆಗ ಕರ್ಣನು ರಣದಲ್ಲಿ ಕ್ರುದ್ಧನಾಗಿ ಮಹಾರಣದಲ್ಲಿ ಅರ್ಜುನನೊಂದಿಗೆ ದ್ವೈರಥಯುದ್ಧ ಮಾಡಲು ಬಯಸಿ ಅವನನ್ನು ಪುನಃ ಪುನಃ ನೋಡುತ್ತ ತನ್ನ ವಿಜಯಧನುಸ್ಸನ್ನು ಠೇಂಕರಿಸಿದ.
ವಿಹ್ವಲಂ ತಂ ತು ವೀಕ್ಷ್ಯಾಥ ದ್ರೋಣಪುತ್ರಂ ಚ ಸಾರಥಿಃ |
ಅಪೋವಾಹ ರಥೇನಾಜೌ ತ್ವರಮಾಣೋ ರಣಾಜಿರಾತ್ ॥71॥
ಅಶ್ವತ್ಥಾಮನು ರಣದಲ್ಲಿ ವಿಹ್ವಲಗೊಂಡಿದ್ದನ್ನು ನೋಡಿ ಸಾರಥಿಯು ಅವನನ್ನು ರಥದಿಂದ ಬೇಗನೆ ರಣರಂಗದಿಂದಾಚೆಗೆ ಒಯ್ದ.
ಅಥೋತ್ಕ್ರುಷ್ಟಂ ಮಹಾರಾಜ ಪಾಂಚಾಲೈರ್ಜಿತಕಾಶಿಭಿಃ |
ಮೋಕ್ಷಿತಂ ಪಾರ್ಷತಂ ದೃಷ್ಟ್ವಾ ದ್ರೋಣಪುತ್ರಂ ಚ ಪೀಡಿತಮ್ ॥72॥
ಮಹಾರಾಜ, ಜಯದಿಂದ ಶೋಭಿಸುವ ಪಾಂಚಾಲರು ಧೃಷ್ಟದ್ಯುಮ್ನನು ಅಶ್ವತ್ಥಾಮನಿಂದ ಬಿಡುಗಡೆ ಹೊಂದಿದ್ದನ್ನೂ ಅಶ್ವತ್ಥಾಮ ಪೀಡಿತನಾದುದನ್ನೂ ಕಂಡು ದೊಡ್ಡ ಗರ್ಜನೆ ಮಾಡಿದರು.
ವಾದಿತ್ರಾಣಿ ಚ ದಿವ್ಯಾನಿ ಪ್ರಾವಾದ್ಯಂತ ಸಹಸ್ರಶಃ |
ಸಿಂಹನಾದಶ್ಚ ಸಂಜಜ್ಞೇ ದೃಷ್ಟ್ವಾ ಘೋರಂ ಮಹಾದ್ಭುತಮ್ ॥73॥
ಪಾಂಚಾಲರು ಸಾವಿರಾರು ದಿವ್ಯವಾದ್ಯಗಳನ್ನು ಮೊಳಗಿಸಿದರು. ಮಹಾದ್ಭುತವಾದ ಭಯಂಕರ ಯುದ್ಧವನ್ನು ಕಂಡು ಸಿಂಹನಾದ ಮಾಡಿದರು.

ಏವಂ ಕೃತ್ವಾಬ್ರವೀತ್ ಪಾರ್ಥೋ ವಾಸುದೇವಂ ಧನಂಜಯಃ |
ಯಾಹಿ ಸಂಶಪ್ತಕಾನ್ ಕೃಷ್ಣ ಕಾರ್ಯಮೇತತ್ಪರಂ ಮಮ ||74||
ಅರ್ಜುನನು ಹೀಗೆ ಅಶ್ವತ್ಥಾಮನ ನಿಗ್ರಹವನ್ನು ಮಾಡಿ ಕೃಷ್ಣನಿಗೆ ಹೇಳಿದ `ಕೃಷ್ಣ, ಸಂಶಪ್ತಕರ ಬಳಿಗೆ ಹೋಗು. ಇದು ನನಗೆ ಮುಖ್ಯವಾದ ಕಾರ್ಯ' ಎಂದು.
ತತಃ ಪ್ರಯಾತೋ ದಾಶಾರ್ಹಃ ಶ್ರುತ್ವಾ ಪಾಂಡವಭಾಷಿತಮ್ |
ರಥೇನಾತಿಪತಾಕೇನ ಮನೋಮಾರುತರಂಹಸಾ ||75||
ಆಗ ಕೃಷ್ಣನು ಅರ್ಜುನನ ಮಾತನ್ನು ಕೇಳಿ ಬಹುಪತಾಕೆಗಳುಳ್ಳ ಮನೋವೇಗ ಹಾಗೂ ವಾಯುವೇಗಗಳುಳ್ಳ ರಥದಿಂದ ಹೊರಟ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಧೃಷ್ಟದ್ಯುಮ್ನಪರಾಜಯೋ ನಾಮ ಷಟ್‌ಪಂಚಾಶೋಽಧ್ಯಾಯಃ ||56||

ಐವತ್ತೇಳನೆಯ ಅಧ್ಯಾಯ
ಯುಧಿಷ್ಠಿರನನ್ನು ಸೆರೆಹಿಡಿಯುವ ಯತ್ನ.
ಅದು ಭೀಮನಿಂದ ವಿಫಲವಾಗುತ್ತದೆ.
ಸಂಜಯಃ
ಏತಸ್ಮಿನ್ನಂತರೇ ಕೃಷ್ಣಃ ಪಾರ್ಥಂ ವಚನಮಬ್ರವೀತ್ |
ದರ್ಶಯನ್ನಿವ ಕೌಂತೇಯಂ ಧರ್ಮರಾಜಂ ಯುಧಿಷ್ಠಿರಮ್ ||1||
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಈ ಸಮಯದಲ್ಲಿ ಕೃಷ್ಣನು ಅರ್ಜುನನಿಗೆ ಕುಂತೀಪುತ್ರ ಧರ್ಮರಾಜ ಯುಧಿಷ್ಠಿರನನ್ನು ತೋರಿಸುತ್ತ ನುಡಿದ.
ಏಷ ಪಾಂಡವ ತೇ ಭ್ರಾತಾ ಧಾರ್ತರಾಷ್ಟ್ರೈರ್ಮಹಾಬಲೈಃ |
ಜಿಘಾಂಸುಭಿರ್ಮಹೇಷ್ವಾಸೈರ್ದ್ರುತಂ ಪಾರ್ಥಾನುಸಾರ್ಯತೇ ||2||
`ಅರ್ಜುನ, ನಿನ್ನ ಸೋದರನನ್ನು ಮಹಾಬಲಿಗಳಾದ ಮಹಾಬಿಲ್ಲಾರರಾದ ವಧೇಚ್ಛುಗಳಾದ ಕೌರವರು ವೇಗವಾಗಿ ಬೆನ್ನಟ್ಟುತ್ತಿದ್ದಾರೆ.
ತಥಾನುಯಾಂತಿ ಸಂರಬ್ಧಾಃ ಪಾಂಚಾಲಾ ಯುದ್ಧದುರ್ಮದಾಃ |
ಯುಧಿಷ್ಠಿರಂ ಮಹಾತ್ಮಾನಂ ಪರೀಪ್ಸಂತೋ ಮಹಾಜವಾಃ ||3||
ಹಾಗೇ ಯುದ್ಧದಲ್ಲಿ ಮದಿಸುವ ಮಹಾವೇಗಶಾಲಿಗಳಾದ ಪಾಂಚಾಲರೂ ಕೂಡ ಕುಪಿತರಾಗಿ ಮಹಾತ್ಮ ಯುಧಿಷ್ಠಿರನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಹಿಂದಿನಿಂದ ಬರುತ್ತಿದ್ದಾರೆ.
ಏಷ ದುರ್ಯೋಧನಃ ಪಾರ್ಥ ರಥಾನೀಕೇನ ದಂಸಿತಃ |
ರಾಜಾ ಸರ್ವಸ್ಯ ಲೋಕಸ್ಯ ರಾಜಾನಮನುಧಾವತಿ ||4||
ಅರ್ಜುನ, ಈ ರಾಜಾ ದುರ್ಯೋಧನನು ಸರ್ವಲೋಕದ ರಾಜನಾದ ಯುಧಿಷ್ಠಿರನನ್ನು ರಥಸೈನ್ಯಸನ್ನದ್ಧನಾಗಿ ಬೆನ್ನಟ್ಟುತ್ತಿದ್ದಾನೆ.
ಜಿಘಾಂಸುಃ ಪುರುಷವ್ಯಾಘ್ರಂ ಭ್ರಾತೃಭಿಃ ಸಹಿತೋ ಬಲೀ |
ಆಶೀವಿಷಸಮಸ್ಪರ್ಶೈಃ ಸರ್ವಯುದ್ಧವಿಶಾರದೈಃ ||5||
ದುರ್ಯೋಧನನು ವಿಷಸರ್ಪ ಸಮಾನ ಸ್ಪರ್ಶವುಳ್ಳ ಸರ್ವಯುದ್ಧ ವಿಶಾರದರಾದ ಸೋದರರಿಂದ ಸಹಿತನಾಗಿ ಬಲಿಷ್ಠನಾಗಿದ್ದು ಯುಧಿಷ್ಠಿರನನ್ನು ಸಂಹರಿಸುವ ಬಯಕೆ ಉಳ್ಳವನಾಗಿದ್ದಾನೆ.
ಏತೇ ಜಿಘೃಕ್ಷವೋ ಯಾಂತಿ ದ್ವಿಪಾಶ್ವರಥಪತ್ತಯಃ |
ಯುಧಿಷ್ಠಿರಂ ಧಾರ್ತರಾಷ್ಟ್ರಾ ರತ್ನೋತ್ತಮಮಿವಾರ್ಥಿನಃ ||6||
ಅರ್ಥಿಗಳು ಉತ್ತಮವಾದ ರತ್ನವನ್ನು ಪಡೆಯಲು ಬಯಸುವಂತೆ ದುರ್ಯೋಧನನ ಕಡೆಯ ಗಜ ಅಶ್ವ ರಥ ಪದಾತಿಗಳು ಯುಧಿಷ್ಠಿರನನ್ನು ಸೆರೆಹಿಡಿಯಲು ಬಯಸಿ ಹೋಗುತ್ತಿದ್ದಾರೆ.
ಪಶ್ಯ ಸಾತ್ವತಭೀಮಾಭ್ಯಾಂ ನಿರುದ್ಧಾಧಿಷ್ಠಿತಾಃ ಪುನಃ |
ಜಿಹೀರ್ಷವೋಽಮೃತಂ ದೈತ್ಯಾಃ ಶಕ್ರಾಗ್ನಿಭ್ಯಾಮಿವಾವಶಾಃ ||7||
ಅಮೃತವನ್ನು ಅಪಹರಿಸಲು ಬಯಸುವ ದೈತ್ಯರು ಇಂದ್ರಾಗ್ನಿಗಳಿಂದ ನಿರುದ್ಧರಾದರೂ ಕೂಡ ಅಮೃತದ ಮೇಲಿನ ಆಗ್ರಹವನ್ನು ಬಿಡುವುದಿಲ್ಲ. ಪುನಃ ಅದರಲ್ಲಿ ಅಧಿಷ್ಠಿತರೇ ಆಗಿರುತ್ತಾರೆ. ಹಾಗೇ ಕೌರವಸೈನಿಕರು ಯುಧಿಷ್ಠಿರನನ್ನು ಹಿಡಿಯಲು ಬಯಸಿ ಸಾತ್ಯಕಿ, ಭೀಮಸೇನರಿಂದ ನಿರುದ್ಧರಾದರೂ ಪರವಶತೆ ಯಿಂದ ಅವರು ಪುನಃ ಯುಧಿಷ್ಠಿರ ಗ್ರಹಣಕಾರ್ಯದಲ್ಲಿ ಅಧಿಷ್ಠಿತರೇ ಆಗ್ದಿದಾರೆ.
ಏತೇ ಬಹುತ್ವಾತ್ ತ್ವರಿತಾಃ ಪುನರ್ಗಚ್ಛಂತಿ ಪಾಂಡವಮ್ |
ಸಮುದ್ರಮಿವ ವಾರ್ಯೋಘಾಃ ಪ್ರಾವೃಟ್‌ಕಾಲೇ ಮಹಾರಥಾಃ ||8||
ಮಹಾರಥರಾದ ಇವರು ಬಹುಸಂಖ್ಯೆಯಲ್ಲಿರುವುದರಿಂದ ಬೇಗನೆ ಪುನಃ ಯುಧಿಷ್ಠಿರನನ್ನು ನೀರಿನ ಪ್ರವಾಹಗಳು ಮಳೆಗಾಲದಲ್ಲಿ ಬಹುಸಂಖ್ಯೆಯಲ್ಲಿರುವುದ ರಿಂದ ಸಮುದ್ರವನ್ನು ಸೇರುವಂತೆ ಆಕ್ರಮಿಸುತ್ತಾರೆ.
ನದಂತಃ ಸಿಂಹನಾದಾಂಶ್ಚ ಧಮಂತಶ್ಚಾಪಿ ವಾರಿಜಾನ್ |
ಬಲವಂತೋ ಮಹೇಷ್ವಾಸಾ ವಿಧೂನ್ವಂತೋ ಧನೂಂಷಿ ಚ ||9||
ಸಿಂಹನಾದಗೈಯುತ್ತ ಶಂಖಗಳನ್ನು ಊದುತ್ತ ಧನುಸ್ಸುಗಳನ್ನು ಓಲಾಡಿಸುತ್ತ ಮಹಾಬಿಲ್ಲಾರರಾದ ಬಲಿಷ್ಠರಾದ ಕೌರವಸೈನಿಕರು ಬರುತ್ತಿದ್ದಾರೆ.
ಮೃತ್ಯೋರ್ಮುಖಗತಂ ಮನ್ಯೇ ಕುಂತೀಪುತ್ರಂ ಯುಧಿಷ್ಠಿರಮ್ |

ಹುತಮಗ್ನೌ ಚ ಮನ್ಯೇಽಹಂ ದುರ್ಯೋಧನವಶಂ ಗತಮ್ ॥10॥
ಕುಂತೀಪುತ್ರ ಯುಧಿಷ್ಠಿರನು ದುರ್ಯೋಧನನ ವಶನಾದರೆ ಮೃತ್ಯುವಿನ ದವಡೆಯನ್ನು ಸೇರಿದಂತೇ ಅಗ್ನಿಯಲ್ಲಿ ಆಹುತಿಯಾದಂತೆಯೇ ಎಂದು ಭಾವಿಸುತ್ತೇನೆ.
ಯಥಾಯುಕ್ತಮನೀಕಂ ಹಿ ಧಾರ್ತರಾಷ್ಟ್ರಸ್ಯ ಪಾಂಡವ |
ನಾಸ್ಯ ಶಕ್ರೋಽಪಿ ಮುಚ್ಯೇತ ಸಂಪ್ರಾಪ್ತೋ ಬಾಣಗೋಚರಮ್ ॥11॥
ಅರ್ಜುನ, ಕೌರವನ ಸೈನ್ಯ ಸರಿಯಾಗಿ ವ್ಯೂಹಗೊಂಡಿದೆ. ಅದರ ಬಾಣಗಳಿಗೆ ಗೋಚರನಾದರೆ ಇಂದ್ರನೂ ಬಿಡುಗಡೆ ಹೊಂದಲಾರ.
ದುರ್ಯೋಧನಸ್ಯ ಶೂರಸ್ಯ ದ್ರೌಣೇಃ ಶಾರದ್ವತಸ್ಯ ಚ |
ಕರ್ಣಸ್ಯ ಚೇಷುವೇಗೋ ವೈ ಪರ್ವತಾನಪಿ ದಾರಯೇತ್ ॥12॥
ಶೂರನಾದ ದುರ್ಯೋಧನನ, ಅಶ್ವತ್ಥಾಮನ, ಕೃಪನ ಮತ್ತು ಕರ್ಣನ ಬಾಣಗಳ ವೇಗವು ಬೆಟ್ಟಗಳನ್ನೇ ಸೀಳೀತು.
ದುರ್ಯೋಧನಸ್ಯ ಶೂರಸ್ಯ ಶರೌಘಾನ್ ಶೀಘ್ರಮಸ್ಯತಃ |
ಸಂಕ್ರುದ್ಧಸ್ಯಾಂತಕಸ್ಯೇವ ಕೋ ವೇಗಂ ಸಂಸಹೇದ್ ರಣೇ ॥13॥
ಶೂರ ದುರ್ಯೋಧನನು ಶೀಘ್ರವಾಗಿ ಬಾಣಸಮೂಹಗಳನ್ನು ಎಸೆಯು ವವನು. ಕುಪಿತನಾದರೆ ಅಂತಕನಂತಾಗುವನು. ರಣದಲ್ಲಿ ಅವನ ಬಾಣವೇಗವನ್ನು ಯಾವು ಸಹಿಸಬಲ್ಲ?
ಕರ್ಣೇನ ಚ ಕೃತೋ ರಾಜಾ ವಿಮುಖಃ ಶತ್ರುತಾಪನಃ |
ಬಲವಾಂಲ್ಲಘುಹಸ್ತಶ್ಚ ಕೃತೀ ಯುದ್ಧವಿಶಾರದಃ ॥14॥
ರಾಧೇಯಃ ಪಾಂಡವಶ್ರೇಷ್ಠಂ ಶಕ್ತಃ ಪೀಡಯಿತುಂ ರಣೇ |
ಸಹಿತೋ ಧೃತರಾಷ್ಟ್ರಸ್ಯ ಪುತ್ರೈಃ ಶೂರೋ ಮಹಾತ್ಮಭಿಃ ॥15॥
ಶತ್ರುತಾಪಕನಾದ ರಾಜಾ ಯುಧಿಷ್ಠಿರನು ಕರ್ಣನಿಗೆ ಸೋತು ಪಲಾಯನ ಮಾಡುವಂತಾಯಿತು. ಆ ಕರ್ಣನು ಕೈಚಳಕ ಉಳ್ಳವನು, ಕುಶಲ, ಯುದ್ಧವಿಶಾರದ, ಶೂರ. ಮಹಾತ್ಮರಾದ ಧೃತರಾಷ್ಟ್ರಪುತ್ರರಿಂದ ಕೂಡಿ ಅವನು ರಣದಲ್ಲಿ ಯುಧಿಷ್ಠಿರ ನನ್ನು ಪೀಡಿಸಲು ಶಕ್ತನಾಗಿದ್ದಾನೆ.
ತಸ್ಯೈವಂ ಯುಧ್ಯಮಾನಸ್ಯ ಸಂಗ್ರಾಮೇ ಸಂಯತಾತ್ಮನಃ |
ಅನ್ಯೈರಪಿ ಚ ಪಾರ್ಥಸ್ಯ ಹೃತಂ ವರ್ಮ ಮಹಾರಥೈಃ ॥16॥
ಜಿತೇಂದ್ರಿಯನಾದ ಯುಧಿಷ್ಠಿರನು ಸಂಗ್ರಾಮದಲ್ಲಿ ಯುದ್ಧಮಾಡುವಾಗ ಅನ್ಯ ಮಹಾರಥರು ಕೂಡ ಅವನ ಕವಚವನ್ನು ಸೀಳಿದ್ದಾರೆ.
ಉಪವಾಸಕೃಶೋ ರಾಜಾ ಭೃಶಂ ಭರತಸತ್ತಮ |
ಬ್ರಾಹ್ಮೇ ಬಲೇ ಸ್ಥಿತೋ ಹ್ಯೇಷ ನ ಕ್ಷತ್ರೇಽತಿಬಲೇ ವಿಭೋ ॥17॥
ಅರ್ಜುನ, ರಾಜಾ ಯುಧಿಷ್ಠಿರನು ಉಪವಾಸವ್ರತಗಳಿಂದ ಕೃಶನಾಗಿದ್ದಾನೆ. ಬ್ರಾಹ್ಮಬಲದಲ್ಲಿಯೇ ಅವನಿಗೆ ನಿಷ್ಠೆ, ಕ್ಷಾತ್ರಬಲದಲ್ಲಿ ಅಷ್ಟು ನಿಷ್ಠೆ ಇಲ್ಲ.
ಯತ್ರ ಯತ್ರ ಸ ಧರ್ಮಾತ್ಮಾ ದೃಷ್ಟ್ವಾ ದೃಷ್ಟಿಂ ವ್ಯಸರ್ಜಯತ್|
ತತ್ರ ತತ್ರ ವ್ಯಶೀರ್ಯಂತ ತಾವಕಾ ಭರತರ್ಷಭ (ಅ.59.ಶ್ಲೋ.27)
ಎಂದು ಮುಂದೆ ಹೇಳುವಂತೆ ಧರ್ಮರಾಜ ದೃಷ್ಟಿಯಿಂದಲೇ ಶತ್ರುನಾಶ ಮಾಡಬಲ್ಲ ಬ್ರಾಹ್ಮಬಲ ಉಳ್ಳವನು.
ನ ಜೀವತಿ ಮಹಾರಾಜೋ ಮನ್ಯೇ ಪಾರ್ಥ ಯುಧಿಷ್ಠಿರಃ |
ಯದ್ ಭೀಮಸೇನಃ ಸಹತೇ ಸಿಂಹನಾದಮಮರ್ಷಣಃ ॥18॥
ಅರ್ಜುನ, ಮಹಾರಾಜ ಯುಧಿಷ್ಠಿರನು ಇಂದು ಬದುಕಿ ಉಳಿಯಲಾರ ಎಂದೇ ಭಾವಿಸುತ್ತೇನೆ. ಏಕೆಂದರೆ ಸಹನೆ ಇಲ್ಲದ ಭೀಮಸೇನ, ಕೌರವರ ಸಿಂಹನಾದವನ್ನು ಸಹಿಸುತ್ತಿದ್ದಾನೆ.
ನರ್ದತಾಂ ಧಾರ್ತರಾಷ್ಟ್ರಾಣಾಂ ಪುನಃ ಪುನರರಿಂದಮ |
ಧಮತಾಂ ಚ ಮಹಾಶಂಖಾನ್ ಸಂಗ್ರಾಮೇ ಜಿತಕಾಶಿನಾಮ್ ॥19॥
ಅರ್ಜುನ, ಕೌರವರು ಪುನಃ ಪುನಃ ಗರ್ಜಿಸುತ್ತಿದ್ದಾರೆ. ಮಹಾಶಂಖಗಳನ್ನು ಮೊಳಗಿಸುತ್ತಿದ್ದಾರೆ. ಸಂಗ್ರಾಮದಲ್ಲಿ ಜಯದಿಂದ ಮೆರೆಯುತ್ತಿದ್ದಾರೆ. ಅವರ ಸಿಂಹನಾದವನ್ನು ಭೀಮಸೇನ ಸಹಿಸಿಕೊಳ್ಳುತ್ತಿದ್ದಾನೆ.
ಯುಧಿಷ್ಠಿರಂ ಪಾಂಡವೇಯಂ ಹತೇತಿ ಭರತರ್ಷಭ |
ಸಂಚೋದಯತ್ಯಸೌ ಕರ್ಣೋ ಧಾರ್ತರಾಷ್ಟ್ರಾನ್ ಮಹಾಬಲಾನ್ ॥20|
ಅರ್ಜುನ, `ಪಾಂಡುಪುತ್ರ ಯುಧಿಷ್ಠಿರನನ್ನು ವಧಿಸಿರಿ' ಎಂದು ಈ ಕರ್ಣನು ಮಹಾಬಲಿಗಳಾದ ಕೌರವರನ್ನು ಹುರಿದುಂಬಿಸುತ್ತಿದ್ದಾನೆ.
ಸ್ಥೂಣಾಕರ್ಣೇಂದ್ರಜಾಲೇನ ಪಾರ್ಥ ಪಾಶುಪತೇನ ಚ |
ಪ್ರಚ್ಛಾದಯಂತೋ ರಾಜಾನಮನುಯಾಂತಿ ಮಹಾರಥಾಃ ॥21॥
ಸ್ಥೂಣಾಕರ್ಣವೆಂಬ ಇಂದ್ರಜಾಲದಿಂದಲೂ ಪಾಶುಪತದಿಂದಲೂ ಯುಧಿಷ್ಠಿರ ನನ್ನು ಆಚ್ಛಾದಿಸುತ್ತ ಮಹಾರಥರು ಅವನನ್ನು ಬೆನ್ನಟ್ಟುತ್ತಿದ್ದಾರೆ.
ಆತುರೋ ಮೇ ಮತೋ ರಾಜಾ ಸನ್ನಿಷೇವ್ಯಶ್ಚ ಭಾರತ ॥22॥
ಅರ್ಜುನ, ಯುಧಿಷ್ಠಿರನು ಈಗ ಕಷ್ಟದಲ್ಲಿದ್ದಾನೆ. ಅವನನ್ನು ನಾವು ರಕ್ಷಿಸ ಬೇಕಿದೆ ಎಂದು ನನಗೆ ಅನಿಸುತ್ತಿದೆ.
ಯಥೈನಮನುವರ್ತಂತೇ ಪಾಂಚಾಲಾಃ ಸಹ ಪಾಂಡವೈಃ |
ತ್ವರಮಾಣಾಸ್ತ್ವರಾಕಾಲೇ ಸರ್ವಶಸ್ತ್ರಭೃತಾಂ ವರಾಃ ॥23॥
ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಪಾಂಚಾಲರೂ ಪಾಂಡವರೂ ತ್ವರೆ ಮಾಡಬೇಕಾದ ಈ ಕಾಲದಲ್ಲಿ ತ್ವರೆ ಮಾಡುತ್ತ

ಯುಧಿಷ್ಠಿರನನ್ನು ಹಿಂಬಾಲಿಸಿ ಹೋಗುತ್ತಿದ್ದಾರೆ.
ಮಜ್ಜಂತಮಿವ ಪಾತಾಳೇ ಬಲಿನೋಽಪ್ಯುಜ್ಜಿಹೀರ್ಷವಃ ॥24॥
ಪಾತಾಳದಲ್ಲಿ ಮುಳುಗುವವನನ್ನೂ ಎತ್ತಲು ಬಯಸುವವರು, ಬಲಿಷ್ಠರು ಈ ಪಾಂಚಾಲ ಪಾಂಡವಯೋಧರು.
ನ ಕೇತುರ್ದೃಶ್ಯತೇ ರಾಜ್ಞಃ ಕರ್ಣೇನ ನಿಹತಃ ಶರೈಃ ।
ಪಶ್ಯತೋರ್ಯಮಯೋಃ ಪಾರ್ಥ ಸಾತ್ಯಕೇಶ್ಚ ಶಿಖಂಡಿನಃ ॥25॥
ಧೃಷ್ಟದ್ಯುಮ್ನಸ್ಯ ಭೀಮಸ್ಯ ಶತಾನೀಕಸ್ಯ ವಾ ವಿಭೋ ।
ಪಾಂಚಾಲಾನಾಂ ಚ ಸರ್ವೇಷಾಂ ಚೇದೀನಾಂ ಚೈವ ಭಾರತ ॥26॥
ಯುಧಿಷ್ಠಿರನ ಧ್ವಜ ಕಾಣಿಸುತ್ತಿಲ್ಲ. ನಕುಲಸಹದೇವರು ಸಾತ್ಯಕಿ ಶಿಖಂಡಿ ಧೃಷ್ಟದ್ಯುಮ್ನ ಭೀಮ ಶತಾನೀಕ ಮತ್ತು ಎಲ್ಲ ಪಾಂಚಾಲರು ಚೇದಿಗಳು ನೋಡುತ್ತಿರುವಂತೆಯೆ ಕರ್ಣನು ಯುಧಿಷ್ಠಿರನ ಧ್ವಜವನ್ನು ಕತ್ತರಿಸಿದ್ದಾನೆ.
ಏಷ ಕರ್ಣೋ ರಣೇ ಪಾರ್ಥ ಪಾಂಡವಾನಾಮನೀಕಿನೀಮ್ ।
ಶರೈರ್ವಿಧ್ವಂಸಯತಿ ವೈ ನಲಿನೀಮಿವ ಕುಂಜರಃ ॥27॥
ಅರ್ಜುನ, ಈ ಕರ್ಣನು ಕೊಳವನ್ನು ಮದ್ದಾನೆ ಕದಡುವಂತೆ ಪಾಂಡವ ಸೇನೆಯನ್ನು ಬಾಣಗಳಿಂದ ನಾಶಮಾಡುತ್ತಿದ್ದಾನೆ.
ಏತೇ ದ್ರವಂತಿ ರಥಿನಸ್ತ್ವದೀಯಾಃ ಪಾಂಡುನಂದನ ।
ಪಶ್ಯ ಪಶ್ಯ ಯಥಾ ಪಾರ್ಥ ಗಚ್ಛಂತ್ಯೇತೇ ಮಹಾರಥಾಃ ॥28॥
ಅರ್ಜುನ, ನಿನ್ನ ಕಡೆಯ ರಥಿಕರು ಪಲಾಯನ ಮಾಡುತ್ತಿದ್ದಾರೆ. ನೋಡು ನೋಡು, ಹೇಗೆ ಈ ಮಹಾರಥರು ಹೋಗುತ್ತಿದ್ದಾರೆ!
ಏತೇ ಭಾರತ ಮಾತಂಗಾಃ ಕರ್ಣೇನಾಭಿಹತಾ ರಣೇ ।
ಆರ್ತನಾದಾನ್ ವಿಕುರ್ವಾಣಾ ವಿದ್ರವಂತಿ ದಿಶೋ ದಶ ॥29॥
ಅರ್ಜುನ, ಈ ಆನೆಗಳು ರಣದಲ್ಲಿ ಕರ್ಣನಿಂದ ಹೊಡೆಸಿಕೊಂಡು ಆರ್ತನಾದ ಮಾಡುತ್ತ ಹತ್ತು ದಿಕ್ಕುಗಳಿಗೆ ಓಡುತ್ತಿವೆ.
ರಥಾನಾಂ ದ್ರವತಾಂ ವೃಂದಂ ಪಶ್ಯ ಪಾರ್ಥ ಸಮಂತತಃ ।
ದ್ರಾವ್ಯಮಾಣಂ ರಣೇ ಚೈವ ಕರ್ಣೇನಾಮಿತ್ರಕರ್ಶಿನಾ ॥30॥
ಅರ್ಜುನ, ನೋಡು, ಶತ್ರುನಾಶಕನಾದ ಕರ್ಣನು ರಣದಲ್ಲಿ ರಥಿಕರನ್ನು ಓಡಿಸುತ್ತಿದ್ದಾನೆ. ಎಲ್ಲ ಕಡೆ ಓಡುವ ರಥಿಕರ ಸಮೂಹವನ್ನು ನೋಡು.
ಹಸ್ತಿಕಕ್ಷ್ಯಂ ರಣೇ ಪಶ್ಯ ಚರಂತಿಂ ತತ್ರ ತತ್ರ ಹ ।
ರಥಸ್ಥಂ ಸೂತಪುತ್ರಸ್ಯ ಕೇತುಂ ಕೇತುಮತಾಂ ವರ ॥31॥
ಧ್ವಜ ಉಳ್ಳವರಲ್ಲಿ ಶ್ರೇಷ್ಠನಾದ ಅರ್ಜುನನೆ, ಕರ್ಣನ ರಥದಲ್ಲಿರುವ ಕಾಕಧ್ವಜ ವನ್ನು ನೋಡು. ಅಲ್ಲಲ್ಲಿ ಅದು ಸಂಚರಿಸುತ್ತಿದೆ.
ಅಸೌ ಧಾವತಿ ರಾಧೇಯೋ ಭೀಮಸೇನರಥಂ ಪ್ರತಿ ।
ಕಿರನ್ ಶರಶತಾನೀವ ವಿನಿಘ್ನಂಸ್ತವ ವಾಹಿನೀಮ್ ॥32॥
ಈ ಕರ್ಣನು ಈಗ ನೂರಾರು ಬಾಣಗಳನ್ನು ಎಸೆಯುತ್ತ, ನಿನ್ನ ಸೈನ್ಯವನ್ನು
ವಧಿಸುತ್ತ ಭೀಮಸೇನನ ರಥದ ಕಡೆಗೆ ಧಾವಿಸುತ್ತಿದ್ದಾನೆ.
ಏತಾನ್ ಪಶ್ಯ ಚ ಪಾಂಚಾಲಾನ್ ದ್ರಾವ್ಯಮಾಣಾನ್ ಸಮಂತತಃ ।
ಶಕ್ರೇಣೇವ ಯಥಾ ದೈತ್ಯಾನ್ ಹನ್ಯಮಾನಾನ್ ಮಹಾಹವೇ ॥33॥
ಪಾಂಚಾಲರನ್ನು ಕರ್ಣ ಓಡಿಸುತ್ತಿದ್ದಾನೆ. ಅವರು ಓಡುವುದನ್ನು ನೋಡು. ಇಂದ್ರನು ಮಹಾರಣದಲ್ಲಿ ಹೊಡೆದಾಗ ದೈತ್ಯರು ಓಡುವಂತೆ ಹೇಗೆ ಓಡುತ್ತಾರೆ ನೋಡು.
ಏಷ ಕರ್ಣೋ ರಣೇ ಜಿತ್ವಾ ಪಾಂಚಾಲಾನ್ ಪಾಂಡುಸೃಂಜಯಾನ್ ।
ದಿಶೋ ವಿಪ್ರೇಕ್ಷತೇ ಸರ್ವಾಸ್ತ್ವದರ್ಥಮಿತಿ ಮೇ ಮತಿಃ ॥34॥
ಕರ್ಣನು ಪಾಂಚಾಲರನ್ನು ಪಾಂಡವರನ್ನು ಸೃಂಜಯರನ್ನು ರಣದಲ್ಲಿ ಪರಾಭವಗೊಳಿಸಿ ಈಗ ನಿನಗಾಗಿ ಎಲ್ಲ ದಿಕ್ಕುಗಳನ್ನು ನೋಡುತ್ತಿದ್ದಾನೆ ಎಂದು ನನಗೆ ಅನಿಸುತ್ತಿದೆ.
ಪಶ್ಯ ಪಾರ್ಥ ಧನುಃ ಶ್ರೇಷ್ಠಂ ವಿಕರ್ಷನ್ ಸಾಧು ಶೋಭತೇ ।
ಶತ್ರೂನ್ ಜಿತ್ವಾ ಯಥಾ ಶಕ್ರೋ ದೇವಸಙ್ಘೈಃ ಸಮಾವೃತಃ ॥35॥
ನೋಡು ಅರ್ಜುನ, ಕರ್ಣನು ದೇವಸಮೂಹದಿಂದ ಸುತ್ತುವರಿಯಲ್ಪಟ್ಟ ಇಂದ್ರನಂತೆ ಶತ್ರುಗಳನ್ನು ಗೆದ್ದು ಶ್ರೇಷ್ಠವಾದ ಧನುಸ್ಸನ್ನು ಸೆಳೆದು ಚೆನ್ನಾಗಿ ಶೋಭಿಸುತ್ತಿದ್ದಾನೆ.
ಏತೇ ನದಂತಿ ಕೌರವ್ಯಾ ದೃಷ್ಟ್ವಾ ಕರ್ಣಸ್ಯ ವಿಕ್ರಮಮ್ ।
ತ್ರಾಸಯಂತೋ ರಣೇ ಪಾರ್ಥಾನ್ ಸೃಂಜಯಾಂಶ್ಚ ಸಹಸ್ರಶಃ ॥36॥
ಕರ್ಣನ ಪರಾಕ್ರಮವನ್ನು ಕಂಡು ಈ ಕೌರವಸೈನಿಕರು ರಣದಲ್ಲಿ ಸಾವಿರಾರು ಪಾಂಡವ, ಸೃಂಜಯರನ್ನು ಭೀತಿಗೊಳಿಸುತ್ತ ಗರ್ಜಿಸುತ್ತಿದ್ದಾರೆ.
ಏಷ ಸರ್ವಾತ್ಮನಾ ಪಾಂಡೂನ್ ತ್ರಾಸಯಿತ್ವಾ ಮಹಾರಣೇ ।
ಅಭಿಭಾಷತಿ ರಾಧೇಯಃ ಸರ್ವಸೈನ್ಯಾನಿ ಮಾನದಃ ॥37॥
ಶತ್ರುಗಳ ಮಾನ ಕಳೆವ ಈ ಕರ್ಣನು ಮಹಾರಣದಲ್ಲಿ ಪಾಂಡವ ಯೋಧರನ್ನು ಸರ್ವಾತ್ಮನಾ ಭೀತಿಗೊಳಿಸುತ್ತ ತನ್ನ ಎಲ್ಲ ಸೈನ್ಯಗಳಿಗೆ ಹೇಳುತ್ತಿದ್ದಾನೆ.
ಅಭಿದ್ರವತ ಭದ್ರಂ ವೋ ದ್ರುತಂ ದ್ರವತ ಕೌರವಾಃ ।

ಯಥಾ ಜೀವನ್ನ ವಃ ಕಶ್ಚಿನ್ಮುಚ್ಯತೇ ಯುಧಿ ಸೃಂಜಯಃ ॥38॥
ತಥಾ ಕುರುತ ಸಂಯತ್ತಾ ವಯಂ ಯಾಸ್ಯಾಮ ಪೃಷ್ಠತಃ |
ಏವಮುಕತ್ವಾಽನುಯಾತ್ಯೇವ ಪೃಷ್ಠತೋ ವಿಕಿರನ್ ಶರೈಃ ॥39॥
`ಕೌರವರೆ, ಸೃಂಜಯರನ್ನು ಬೆನ್ನಟ್ಟಿ ಧಾವಿಸಿರಿ. ನಿಮಗೆ ಶುಭವಾಗಲಿ. ಬೇಗನೆ ಧಾವಿಸಿರಿ. ಒಬ್ಬ ಸೃಂಜಯನೂ ಕೂಡ ರಣದಲ್ಲಿ ಜೀವಂತನಾಗಿ ನಿಮ್ಮಿಂದ ತಪ್ಪಿಸಿಕೊಳ್ಳದಂತೆ ಮಾಡಿರಿ. ಯತ್ನಶೀಲರಾಗಿರಿ. ನಾವು ನಿಮ್ಮ ಹಿಂದಿನಿಂದಲೆ ಬರುತ್ತೇವೆ' ಹೀಗೆ ಹೇಳುತ್ತ ಕರ್ಣನು ಸೃಂಜಯರ ಮೇಲೆ ಬಾಣಗಳನ್ನೆಸೆಯುತ್ತ ಹಿಂದಿನಿಂದ ಹಿಂಬಾಲಿಸಿ ಹೋಗುತ್ತಿದ್ದಾನೆ.
ಪಶ್ಯ ಕರ್ಣಂ ರಣೇ ಪಾರ್ಥ ಶ್ವೇತಚ್ಛತ್ರವಿರಾಜಿತಮ್ |
ಉದಯಂ ಪರ್ವತಂ ಯದ್ವತ್ ಶಶಾಂಕೇನೋಪಶೋಭಿತಮ್ ॥40॥
ಅರ್ಜುನ, ಕರ್ಣನನ್ನು ನೋಡು. ರಣದಲ್ಲಿ ಶ್ವೇತಛತ್ರದಿಂದ ವಿರಾಜಿತನಾಗಿ ಚಂದ್ರನಿಂದ ವಿರಾಜಿತವಾಗುವ ಉದಯಪರ್ವತದಂತೆ ಕಾಣಿಸುತ್ತಾನೆ.
ಪೂರ್ಣಚಂದ್ರನಿಕಾಶೇನ ಮೂರ್ಧ್ನಿ ಚ್ಛತ್ರೇಣ ಭಾರತ |
ಧ್ರಿಯಮಾಣೇನ ಸಮರೇ ತಥಾ ಶತಶಲಾಕಿನಾ ॥41॥
ಅರ್ಜುನ, ತಲೆಯ ಮೇಲೆ ಹಿಡಿದ ನೂರು ಸಲಾಕೆಗಳಿಂದ ಕೂಡಿದ ಪೂರ್ಣ ಚಂದ್ರನಂತೆ ಬೆಳಗುವ ಛತ್ರದಿಂದ ರಣದಲ್ಲಿ ಕರ್ಣನು ವಿರಾಜಿತನಾಗಿದ್ದಾನೆ.
ಏಷ ತ್ವಾಂ ಪ್ರೇಕ್ಷತೇ ಕರ್ಣಃ ಸಕಟಾಕ್ಷಂ ವಿಶಾಂಪತೇ |
ಉತ್ತಮಂ ರಥಮಾಸ್ಥಾಯ ಧ್ರುವಮೇಷ್ಯತಿ ಸಂಯುಗೇ ॥42॥
ಈ ಕರ್ಣನು ಓರೆಗಣ್ಣಿಂದ ನಿನ್ನನ್ನೇ ನೋಡುತ್ತಿದ್ದಾನೆ. ಉತ್ತಮವಾದ ರಥವನ್ನೇರಿ ನಿನ್ನ ಬಳಿಗೆ ರಣಕ್ಕೆ ನಿಶ್ಚಿತವಾಗಿ ಬರುತ್ತಾನೆ.
ಪಶ್ಯ ಹ್ಯೇನಂ ಮಹಾಬಾಹೋ ವಿಧುನ್ವಾನಂ ಮಹದ್ಧನುಃ |
ಶರಾಂಶ್ಚಾಶೀವಿಷಾಕಾರಾನ್ ವಿಸೃಜಂತಂ ಮಹಾಬಲಮ್ ॥43॥
ಅರ್ಜುನ, ಮಹಾಬಲಿಯಾದ ಕರ್ಣನನ್ನು ನೋಡು, ದೊಡ್ಡ ಧನುಸ್ಸನ್ನು ಒಲಾಡಿಸುತ್ತಿದ್ದಾನೆ. ಹಾವಿನಾಕಾರದ ಬಾಣಗಳನ್ನು ಎಸೆಯುತ್ತಾನೆ.
ಅಸೌ ನಿವೃತ್ತೋ ರಾಧೇಯೋ ದೃಶ್ಯತೇ ವಾನರಧ್ವಜ |
ಪ್ರಾರ್ಥಯನ್ ಸಮರಂ ಪಾರ್ಥ ತ್ವಯಾ ಸಹ ಪರಂತಪ |
ವಧಾಯ ಚಾತ್ಮನೋಽಭ್ಯೇತಿ ಪ್ರದೀಪಂ ಶಲಭೋ ಯಥಾ ॥44॥
ಕರ್ಣನು ಈಗ ಈ ಕಡೆಗೆ ತಿರುಗಿರುವುದು ಕಂಡುಬರುತ್ತಿದೆ. ಅವನು ನಿನ್ನೊಡನೆ ಯುದ್ಧವನ್ನು ಅಪೇಕ್ಷಿಸಿ, ದೀಪವನ್ನು ದೀಪದ ಹುಳುವಿನಂತೆ ತನ್ನ ವಧೆಗಾಗಿಯೆ ಸಮೀಪಿಸುತ್ತಿದ್ದಾನೆ.
ಕರ್ಣಮೇಕಾಕಿನಂ ದೃಷ್ಟ್ವಾ ರಥಾನೀಕೇನ ಭಾರತ |
ರಿರಕ್ಷಿಷುಃ ಸುಸಂಯತ್ತೋ ಧಾರ್ತರಾಷ್ಟ್ರೋಽಭಿವರ್ತತೇ ॥45॥
ಕರ್ಣ ಏಕಾಕಿಯಾಗಿರುವುದನ್ನು ಕಂಡು ಅವನನ್ನು ರಕ್ಷಿಸುವ ಇಚ್ಛೆಯಿಂದ ಬಹು ಯತ್ನಶೀಲನಾಗಿ ದುರ್ಯೋಧನನು ರಥಸೈನ್ಯದೊಂದಿಗೆ ಬರುತ್ತಿದ್ದಾನೆ.
ಸರ್ವೈಃ ಸಹೈಭಿರ್ದುಷ್ಟಾತ್ಮಾ ವಧ್ಯ ಏಷ ಪ್ರಯತ್ನತಃ |
ತ್ವಯಾ ಯಶಶ್ಚ ರಾಜ್ಯಂ ಚ ಸುಖಂ ಚೋತ್ತಮಮಿಚ್ಛತಾ ॥46॥
ಯಶಸ್ಸು, ರಾಜ್ಯ, ಉತ್ತಮಸುಖ ನಿನಗೆ ಬೇಕೆಂದರೆ ಈ ಎಲ್ಲರೊಂದಿಗೆ ಈ ದುಷ್ಟಾತ್ಮನಾದ ಕರ್ಣನನ್ನು ಯತ್ನಪೂರ್ವಕವಾಗಿ ಕೊಲ್ಲಬೇಕು.
ಅದೀನಯೋರ್ವಿಶ್ರುತಯೋರ್ಯುವಯೋರ್ಯೋತ್ಸ್ಯಮಾನಯೋಃ |
ದೇವಾಸುರೇ ಪಾರ್ಥ ಮೃಧೇ ದೇವದಾನವಯೋರಿವ ॥47॥
ತ್ವಾಂ ಚ ದೃಷ್ಟ್ವಾತಿಸಂರಬ್ಧಂ ಕರ್ಣಂ ಚ ಭರತರ್ಷಭ |
ಅಸೌ ದುರ್ಯೋಧನಃ ಕ್ರುದ್ಧೋ ನೋತ್ತರಂ ಪ್ರತಿಪದ್ಯತೇ ॥48॥
ದೇವಾಸುರರ ಯುದ್ಧದಲ್ಲಿ ದೇವದಾನವರಂತೆ ಧೈರ್ಯಶಾಲಿಗಳಾದ ಪ್ರಸಿದ್ಧರಾದ ನೀವಿಬ್ಬರು ಯುದ್ಧಮಾಡಿದರೆ, ಅದರಲ್ಲಿ ಅತಿಕೋಪ ಮಾಡುವ ನಿನ್ನನ್ನೂ ಕರ್ಣನನ್ನೂ ದುರ್ಯೋಧನನು ಕಂಡು, ಕ್ರುದ್ಧನಾದ ಆತ ನಿರುತ್ತರನಾಗುತ್ತಾನೆ. ನೀನು ಹತನಾಗುವಿ ಎಂದು ಆತ ಹೇಳಲಾರ.
ಆತ್ಮಾನಂ ಚ ಕೃತಾತ್ಮಾನಂ ಸಮೀಕ್ಷ ್ಯ ಭರತರ್ಷಭ |
ಕೃತಾಗಸಂ ಚ ರಾಧೇಯಂ ಧರ್ಮಾತ್ಮನಿ ಯುಧಿಷ್ಠಿರೇ ॥49॥
ಪ್ರತಿಪದ್ಯಸ್ವ ರಾಧೇಯಂ ಪ್ರಾಪ್ತಕಾಲಮನಂತರಮ್ |
ಆರ್ಯಾಂ ಯುದ್ಧೇ ಮತಿಂ ಕೃತ್ವಾ ಪ್ರತ್ಯೇಹಿ ರಥಯೂಥಪಮ್ ॥50|
ನೀನು ಪುಣ್ಯಾತ್ಮ, ಕರ್ಣನು ಪುಣ್ಯಾತ್ಮನಾದ ಯುಧಿಷ್ಠಿರನಲ್ಲಿ ಪಾಪ ಮಾಡಿದ್ದಾನೆ. ಇದನ್ನು ಆಲೋಚಿಸಿ ವಿಲಂಬ ಮಾಡದೆ ಕಾಲೋಚಿತವಾದ ಕರ್ಮ ಮಾಡು. ಅರ್ಜುನ, ಯುದ್ಧದಲ್ಲಿ ಒಳ್ಳೆಯ ಸಂಕಲ್ಪ ಮಾಡಿ ರಥಸೇನಾಪತಿ ಯಾದ ಕರ್ಣನನ್ನು ಆಕ್ರಮಿಸು.
ಪಂಚ ಹ್ಯೇತಾನಿ ಮುಖ್ಯಾನಾಂ ರಥಾನಾಂ ರಥಸತ್ತಮ |
ಶತಾನ್ಯಾಯಾಂತಿ ವೇಗೇನ ಬಲಿನಾಂ ಭೀಮತೇಜಸಾಮ್ ॥51॥

ಪಂಚ ನಾಗಸಹಸ್ರಾಣಿ ದ್ವಿಗುಣಾ ವಾಜಿನಸ್ತಥಾ |
ಅಭಿಸಂಹತ್ಯ ಕೌಂತೇಯ ಪದಾತಿಪ್ರಯುತಾನಿ ಚ ॥52॥
ಅನ್ಯೋನ್ಯರಕ್ಷಿತಂ ವೀರ ಬಲಂ ತ್ವಾಮಭಿವರ್ತತೇ
ದ್ರೋಣಪುತ್ರಂ ಪುರಸ್ಕೃತ್ಯ ತಚ್ಛೀಘ್ರಂ ಸಂನಿಷೂದಯ ॥53॥
ಅರ್ಜುನ, ಮಹಾಬಲಿಷ್ಠರಾದ ಐದುನೂರು ಮುಖ್ಯ ರಥಿಕರು, ಅವರನ್ನು ಅನುಸರಿಸಿ ಐದುಸಾವಿರ ಆನೆಗಳು, ಹತ್ತುಸಾವಿರ ಕುದುರೆಗಳು, ಹತ್ತು ಲಕ್ಷ ಪದಾತಿಗಳೂ ಅಶ್ವತ್ಥಾಮನನ್ನು ಮುಂದೆ ಮಾಡಿಕೊಂಡು ಪರಸ್ಪರ ರಕ್ಷಣೆ ಮಾಡಿಕೊಳ್ಳುತ್ತ ವೇಗದಿಂದ ನಿನ್ನ ಮೇಲೆ ಆಕ್ರಮಣ ಮಾಡಲು ಬರುತ್ತಿದ್ದಾರೆ. ಅವರನ್ನು ಬೇಗನೆ ಸಂಹರಿಸು.
ಸೂತಪುತ್ರೇ ಮಹೇಷ್ವಾಸೇ ದರ್ಶಯಾತ್ಮಾನಮಾತ್ಮನಾ |
ಉತ್ತಮಂ ಯತ್ನಮಾಸ್ಥಾಯ ಪ್ರತ್ಯೇಹಿ ಭರತರ್ಷಭ ॥54॥
ಮಹಾಬಿಲ್ಗಾರನಾದ ಕರ್ಣನಲ್ಲಿ ನೀನು ನಿನ್ನ ಪರಾಕ್ರಮವನ್ನು ಉತ್ತಮವಾಗಿ ಯತ್ನಪೂರ್ವಕವಾಗಿ ತೋರಿಸು, ಅವನನ್ನು ಆಕ್ರಮಿಸು.
ಅಸೌ ಕರ್ಣಃ ಸುಸಂರಬ್ಧಃ ಪಾಂಚಾಲಾನಭಿಧಾವತಿ |
ಕೇತುಮಸ್ಯ ಹಿ ಪಶ್ಯಾಮಿ ಧೃಷ್ಟದ್ಯುಮ್ನರಥಂ ಪ್ರತಿ ॥55॥
ಸಮುಚ್ಛೇತ್ಸ್ಯತಿ ಪಾಂಚಾಲಾನಿತಿ ಮನ್ಯೇ ಪರಂತಪ ॥56॥
ಕ್ರುದ್ಧನಾದ ಕರ್ಣನು ಪಾಂಚಾಲರ ಕಡೆಗೆ ಹೋಗುತ್ತಾನೆ. ಅವನ ರಥಧ್ವಜವು ಧೃಷ್ಟದ್ಯುಮ್ನನ ರಥದ ಕಡೆಗೆ ಹೋಗುತ್ತಿರುವುದನ್ನು ಕಾಣುತ್ತಿದ್ದೇನೆ. ಅವನು ಪಾಂಚಾಲರನ್ನು ನಾಶಪಡಿಸುವನೆಂದು ನಾನು ಭಾವಿಸುತ್ತೇನೆ.
ಆಚಕ್ಷೇ ತು ಪ್ರಿಯಂ ಪಾರ್ಥ ತವೇದಂ ಭರತರ್ಷಭ |
ರಾಜಾ ಜೀವತಿ ಕೌರವ್ಯೋ ಧರ್ಮಪುತ್ರೋ ಯುಧಿಷ್ಠಿರಃ ॥57॥
ಅರ್ಜುನ, ನಿನಗೆ ಈಗ ಪ್ರಿಯವಾದ ಮಾತನ್ನು ಹೇಳುತ್ತೇನೆ, ಧರ್ಮಪುತ್ರ ರಾಜಾ ಯುಧಿಷ್ಠಿರ ಬದುಕಿದ್ದಾನೆ.
ಅಸೌ ಭೀಮೋ ಮಹಾಬಾಹುಃ ಸನ್ನಿವೃತ್ತಶ್ಚಮೂಮುಖೇ |
ವೃತಃ ಸೃಂಜಯಸೈನ್ಯೇನ ಸಾತ್ವತೇನ ಚ ಭಾರತ ॥58॥
ಮಹಾಬಾಹುವಾದ ಈ ಭೀಮನು ಸೈನ್ಯದ ಮುಂಭಾಗಕ್ಕೆ ಹಿಂದಿರುಗಿದ್ದಾನೆ. ಸೃಂಜಯ ಸೈನ್ಯದಿಂದಲೂ ಸಾತ್ಯಕಿಯಿಂದಲೂ ಯುಕ್ತನಾಗಿದ್ದಾನೆ.
ವಧ್ಯಂತ ಏತೇ ಸಮರೇ ಕೌರವಾ ನಿಶಿತೈಃ ಶರೈಃ |
ಭೀಮಸೇನೇನ ಕೌಂತೇಯ ಪಾಂಚಾಲ್ಯೈಶ್ಚ ಮಹಾತ್ಮಭಿಃ ॥59॥
ಈ ಕೌರವಯೋಧರು ರಣದಲ್ಲಿ ತೀಕ್ಷ್ಣವಾದ ಬಾಣಗಳಿಂದ ಭೀಮಸೇನ ನಿಂದಲೂ ಮಹಾತ್ಮರಾದ ಪಾಂಚಾಲರಿಂದಲೂ ಹತರಾಗುತ್ತಿದ್ದಾರೆ.
ಸೇನಾ ಹಿ ಧಾರ್ತರಾಷ್ಟ್ರಸ್ಯ ವಿಮುಖಾ ಚಾಭವದ್ ರಣಾತ್ |
ವಿಪ್ರಧಾವತಿ ವೇಗೇನ ಭೀಮಸ್ಯ ನಿಹತಾ ಶರೈಃ ॥60॥
ದುರ್ಯೋಧನನ ಸೈನ್ಯ ರಣದಿಂದ ವಿಮುಖವಾಯಿತು. ಭೀಮನ ಬಾಣ ಗಳಿಂದ ಹೊಡೆಸಿಕೊಂಡು ವೇಗದಿಂದ ಪಲಾಯನ ಮಾಡುತ್ತಿದೆ.
ವಿಪನ್ನಸಸ್ಯೇವ ಮಹೀ ರುಧಿರೇಣ ಸಮುಕ್ಷಿತಾ |
ಕೌರವೀ ಭರತಶ್ರೇಷ್ಠ ಸೇನಾ ಕೃಪಣದರ್ಶನಾ ॥61॥
ರಕ್ತದಿಂದ ತೊಯ್ದ ಕೌರವಸೇವೆ ಸಸ್ಯನಾಶದಿಂದ ನೋಡಲು ದಯನೀಯ ವಾಗಿ ಕಾಣುವ ಹೊಲಗದ್ದೆಯಂತೇ ಕಂಡುಬಂದಿತು.
ನಿವೃತ್ತಂ ಪಶ್ಯ ಕೌಂತೇಯ ಭೀಮಸೇನಂ ಯುಧಾಂಪತಿಮ್ |
ಆಶೀವಿಷಮಿವ ಕ್ರುದ್ಧಂ ದ್ರಾವಯಂತಂ ವರೂಥಿನೀಮ್ ॥62॥
ಅರ್ಜುನ, ನೋಡು, ಯೋಧರಲ್ಲಿ ಶ್ರೇಷ್ಠನಾದ ಭೀಮಸೇನನನ್ನು, ಅವನು ಯುದ್ಧಕ್ಕೆ ಹಿಂದಿರುಗಿ, ವಿಷಸರ್ಪದಂತೆ ಕುಪಿತನಾಗಿ ಶತ್ರುಸೈನ್ಯವನ್ನು ಹೊಡೆದೋಡಿಸುತ್ತಿದ್ದಾನೆ.
ಪೀತರಕ್ತಾಸಿತಸಿತಾಸ್ತಾರಾಚಂದ್ರಾರ್ಕಮಂಡಿತಾಃ |
ಪತಾಕಾ ವಿಪ್ರಕೀರ್ಯಂತೇ ಛತ್ರಾಣ್ಯೇತಾನಿ ಚಾರ್ಜುನ ॥63॥
ಅರ್ಜುನ, ಸೂರ್ಯಚಂದ್ರನಕ್ಷತ್ರಗಳ ಚಿಹ್ನೆಗಳಿಂದ ಅಲಂಕೃತವಾದ ಹಳದಿ ಕೆಂಪು ಕಪ್ಪು ಬಿಳಿ ಬಣ್ಣದ ಪತಾಕೆಗಳೂ ಛತ್ರಗಳೂ ರಣಭೂಮಿಯಲ್ಲಿ ಹರಡಿವೆ.
ಸೌವರ್ಣಾ ರಾಜತಾಶ್ಚೈವ ತೈಜಸಾಶ್ಚ ಪೃಥಗ್ವಿಧಾಃ |
ಕೇತವೋ ವಿನಿಪಾತ್ಯಂತೇ ಹಸ್ತ್ಯಶ್ವಂ ಚ ವಿಶೀರ್ಯತೇ ॥64॥
ಬಂಗಾರ ಬೆಳ್ಳಿ ಮುಂತಾದ ಲೋಹಗಳಿಂದಾಗುವ ನಾನಾ ವಿಧವಾದ ಧ್ವಜಗಳು ಬೀಳಿಸಲ್ಪಡುತ್ತಿವೆ. ಆನೆ ಕುದುರೆಗಳು ಹತವಾಗುತ್ತಿವೆ.
ರಥೇಭ್ಯಃ ಪ್ರಪತಂತ್ಯೇತೇ ರಥಿನೋ ವಿಗತಾಸವಃ |
ನಾನಾವರ್ಣೈರ್ಹತಾ ಬಾಣೈಃ ಪಾಂಚಾಲ್ಯೈರಪಲಾಯಿಭಿಃ ॥65॥
ಈ ರಥಿಕರು ಅಸುನೀಗಿ ರಥಗಳಿಂದ ಬೀಳುತ್ತಿದ್ದಾರೆ. ಅವರು ಪಲಾಯನ ಮಾಡದ ಪಾಂಚಾಲರ ನಾನಾ ವರ್ಣದ ಬಾಣಗಳಿಂದ ಹತರಾದವರು.
ಸಮನುಷ್ಯಾನ್ ಗಜಾನಶ್ವಾನ್ ರಥಾಂಶ್ಚೈವ ಧನಂಜಯ |

ಸಮಾದ್ರವಂತಿ ಪಾಂಚಾಲಾ ಧಾರ್ತರಾಷ್ಟ್ರಾಂಸ್ತರಸ್ವಿನಃ ॥66॥
ಕೌರವರ ಆರೋಹಿಗಳುಳ್ಳ ಗಜ ಅಶ್ವ ರಥಗಳನ್ನು ಶಕ್ತಿಶಾಲಿಗಳಾದ ಪಾಂಚಾಲರು ಬೆನ್ನಟ್ಟುತ್ತಿದ್ದಾರೆ.
ಮೃದ್ನಂತಿ ಚ ನರವ್ಯಾಘ್ರಾ ಭೀಮಸೇನವ್ಯಪಾಶ್ರಯಾತ್ ।
ಬಲಂ ಪರೇಷಾಂ ದುರ್ಧರ್ಷಂ ತ್ಯಕ್ತ್ವಾ ಪ್ರಾಣಾನರಿಂದಮ ॥67॥
ಆ ಯೋಧಶ್ರೇಷ್ಠರು ಭೀಮಸೇನನ ಆಸರೆಯಿಂದ ಪ್ರಾಣದ ಹಂಗುತೊರೆದು ಶತ್ರುಗಳ ಇದಿರಿಸಲಾಗದ ಸೈನ್ಯವನ್ನು ಪುಡಿಗೈಯ್ಯುತ್ತಾರೆ.
ಏತೇ ನದಂತಿ ಪಾಂಚಾಲಾ ಧಮಂತ್ಯಪಿ ಚ ವಾರಿಜಾನ್ ।
ಅಭಿದ್ರವಂತಿ ಚ ರಣೇ ನಿಘ್ನಂತಃ ಸಾಯಕೈಃ ಪರಾನ್ ॥68॥
ಈ ಪಾಂಚಾಲರು ಗರ್ಜಿಸುತ್ತಿದ್ದಾರೆ. ಶಂಖಗಳನ್ನು ಊದುತ್ತಿದ್ದಾರೆ. ಶತ್ರುಗಳನ್ನು ಬಾಣಗಳಿಂದ ಹೊಡೆಯುತ್ತ ರಣದಲ್ಲಿ ನುಗ್ಗಿ ಬರುತ್ತಾರೆ.
ಪಶ್ಯೈಷಾಂ ಚ ಮಾಹಾತ್ಮ್ಯಂ ಪಾಂಚಾಲಾ ಹಿ ಪರಂತಪ ।
ಧಾರ್ತರಾಷ್ಟ್ರಾನ್ ವಿನಿಘ್ನಂತಿ ಕ್ರುದ್ಧಾಃ ಸಿಂಹಾ ಇವ ದ್ವಿಪಾನ್ ॥69॥
ಈ ಪಾಂಚಾಲಯೋಧರ ಮಾಹಾತ್ಮ್ಯವನ್ನು ನೋಡು. ಕೋಪಗೊಂಡ ಸಿಂಹಗಳು ಆನೆಗಳನ್ನು ಕೊಲ್ಲುವಂತೆ ಪಾಂಚಾಲರು ಕೋಪಗೊಂಡು ಕೌರವರನ್ನು ಕೊಲ್ಲುತ್ತಿದ್ದಾರೆ.
ಶಸ್ತ್ರಮಾಚ್ಛಿದ್ಯ ಶತ್ರೂಣಾಂ ಸಾಯುಧಾನಾಂ ನಿರಾಯುಧಾಃ ।
ತೇನೈವೈತಾನಮೋಘಾಸ್ತ್ರಾ ನಿಘ್ನಂತಿ ಚ ನದಂತಿ ಚ ॥70॥
ನಿರಾಯುಧರಾದ ಪಾಂಚಾಲರು ಸಾಯುಧರಾದ ಶತ್ರುಗಳ ಆಯುಧವನ್ನು ಕಿತ್ತುಕೊಂಡು ಅದರಿಂದಲೆ ಶತ್ರುಗಳನ್ನು ವಧಿಸುತ್ತಾರೆ, ಗರ್ಜಿಸುತ್ತಾರೆ.
ಶಿರಾಂಸ್ಯೇತಾನಿ ಪಾತ್ಯನ್ತೇ ಶತ್ರೂಣಾಂ ಬಾಹವೋಽಪಿ ಚ ।
ರಥನಾಗಹಯಾ ವೀರಾ ಯಶಸ್ಯಾಃ ಸರ್ವ ಏವ ಚ ॥71॥
ಪಾಂಚಾಲಯೋಧರು ಶತ್ರುಗಳ ಶಿರಸ್ಸುಗಳನ್ನು ತೋಳುಗಳನ್ನು ಬೀಳಿಸುತ್ತಾರೆ. ರಥ ಗಜ ಅಶ್ವ ಪದಾತಿಗಳನ್ನು ಎಲ್ಲರನ್ನೂ ಕೆಡಹುತ್ತಾರೆ. ಎಲ್ಲರೂ ಯಶಸ್ಸನ್ನು ಗಳಿಸುತ್ತಾರೆ.
ಸರ್ವತಶ್ಚಾಭಿಪನ್ನೈಷಾ ಧಾರ್ತರಾಷ್ಟ್ರೀ ಮಹಾಚಮೂಃ ।
ಪಾಂಚಾಲೈರ್ಮಾನಸಾದೇತ್ಯ ಹಂಸೈರ್ಗಂಗೇವ ವೇಗಿತೈಃ ॥72॥
ಮಾನಸ ಸರೋವರದಿಂದ ಹಂಸಗಳು ವೇಗದಿಂದ ಬಂದು ಗಂಗೆಯನ್ನು ಆಶ್ರಯಿಸುವಂತೆ, ಎಲ್ಲ ಕಡೆಗಳಿಂದ ಬಂದ ಪಾಂಚಾಲರೂ ವೇಗದಿಂದ ಕೌರವರ ಮಹಾ ಸೈನ್ಯವನ್ನು ಆಕ್ರಮಿಸಿದ್ದಾರೆ.
ಸುಭೃಶಂ ಚ ಪರಾಕ್ರಾಂತಾಃ ಪಾಂಚಾಲಾನಾಂ ನಿವಾರಣೇ ।
ಕೃಪಕರ್ಣಾದಯೋ ವೀರಾ ಋಷಭಾಣಾಮಿವರ್ಷಭಾಃ ॥73॥
ಗೂಳಿಗಳು ಗೂಳಿಗಳ ಮುಂದೆ ಪರಾಕ್ರಮ ತೋರುವಂತೆ ಕೃಪ ಕರ್ಣ ಮುಂತಾದ ವೀರರು ಪಾಂಚಾಲರನ್ನು ತಡೆಯಲು ಬಹಳ ಪರಾಕ್ರಮ ತೋರಬೇಕಾಯಿತು.
ಸುನಿರ್ಭಗ್ನಾಂಶ್ಚ ಭೀಮಾಸ್ತ್ರೈರ್ಧಾರ್ತರಾಷ್ಟ್ರಾನ್ ಮಹಾರಥಾನ್ ।
ಧೃಷ್ಟದ್ಯುಮ್ನಮುಖಾ ವೀರಾ ಘ್ನಂತಿ ಶತ್ರೂನ್ ಸಹಸ್ರಶಃ ॥74॥
ಭೀಮಸೇನನ ಅಸ್ತ್ರಗಳಿಂದ ಚೆನ್ನಾಗಿ ಭಗ್ನರಾದ ಕೌರವಮಹಾರಥರನ್ನು ಧೃಷ್ಟದ್ಯುಮ್ನ ಮುಂತಾದ ವೀರರು ಸಾವಿರಾರು ಸಂಖ್ಯೆಯಲ್ಲಿ ಸಂಹರಿಸುತ್ತಾರೆ.
ಪಾಂಚಾಲೇಷ್ವಭಿಭೂತೇಷು ದ್ವಿಷದ್ಭಿರಪಭೀರ್ನದನ್ ।
ಶತ್ರುಪಕ್ಷಮವಸ್ಕಂದ್ಯ ಶರಾನಸ್ಯತಿ ಮಾರುತಿಃ ॥75॥
ಪಾಂಚಾಲರು ಶತ್ರುಗಳಿಂದ ಪರಾಜಿತರಾದಾಗ ಭಯವಿಲ್ಲದ ಭೀಮ ಗರ್ಜಿಸುತ್ತ ಶತ್ರುಪಕ್ಷವನ್ನು ಆಕ್ರಮಿಸಿ ಬಾಣಗಳನ್ನೆಸೆಯುತ್ತಾನೆ.
ವಿಷಣ್ಣಭೂಯಿಷ್ಠರಥಾ ಧಾರ್ತರಾಷ್ಟ್ರೀ ಮಹಾಚಮೂಃ ॥76॥
ರಥಾಶ್ಚೈತೇ ಸುವಿತ್ರಸ್ತಾ ಭೀಮಸೇನಭಯಾರ್ದಿತಾಃ ॥77॥
ಹೀಗೆ ಹೆಚ್ಚಿನ ರಥಿಕರೆಲ್ಲರೂ ಕೌರವಸೇನೆಯಲ್ಲಿ ಹತರಾದರು. ಎಲ್ಲ ರಥಿಕರೂ ಭೀಮಸೇನನ ಭಯದಿಂದ ಪೀಡಿತರಾಗಿ ನಡುಗಿದರು.
ಪಶ್ಯ ಭೀಮೇನ ನಾರಾಚೈಶ್ಛಿನ್ನಾ ನಾಗಾಃ ಪತನ್ತ್ಯಮೀ ।
ವಜ್ರವಜ್ರಾಹತಾನೀವ ಶಿಖರಾಣಿ ಮಹೀಭೃತಾಮ್ ॥78॥
ಅರ್ಜುನ, ನೋಡು, ಇಂದ್ರನ ವಜ್ರಾಯುಧದಿಂದ ಕಡಿದ ಪರ್ವತಗಳ ಶಿಖರಗಳಂತೆ ಭೀಮನ ಬಾಣಗಳಿಂದ ಕಡಿದ ಆನೆಗಳು ಬೀಳುತ್ತಿವೆ.
ಭೀಮಸೇನಸ್ಯ ನಿರ್ವಿದ್ಧಾ ಬಾಣೈಃ ಸನ್ನತಪರ್ವಭಿಃ ।
ಸ್ವಾನ್ಯನೀಕಾನಿ ಮೃದ್ನಂತೋ ದ್ರವನ್ತ್ಯೇತೇ ಮಹಾಗಜಾಃ ॥79॥
ಭೀಮಸೇನನ ಡೊಂಕುಗಿಣ್ಣಿನ ಬಾಣಗಳಿಂದ ಹೊಡೆಸಿಕೊಂಡ ಮಹಾಗಜಗಳು ತಮ್ಮ ಕಡೆಯ ಸೈನಿಕರನ್ನೇ ತುಳಿದು ಮರ್ದಿಸಿ ಓಡಿಹೋಗುತ್ತಿವೆ.
ಅಭಿಜಾನೀಹಿ ಭೀಮಸ್ಯ ಸಿಂಹನಾದಂ ದುರುತ್ಸಹಮ್ ।
ನದತೋಽರ್ಜುನ ಸಂಗ್ರಾಮೇ ವೀರಸ್ಯ ಜಿತಕಾಶಿನಃ ॥80॥

ರಣದಲ್ಲಿ ಜಯದಿಂದ ಶೋಭಿಸುವ ಗರ್ಜಿಸುವ ವೀರ ಭೀಮನ, ಶತ್ರುಗಳಿಗೆ ಸಹಿಸಲಾಗದ ಸಿಂಹಗರ್ಜನೆ ಎಂದರೆ ಇದು ಎಂದು, ಅರ್ಜುನ, ನೀನು ಸರಿಯಾಗಿ ತಿಳಿದುಕೊಳ್ಳು.
ಏಷ ನೈಷಾದಿರಭ್ಯೇತಿ ದ್ವಿಪಮುಖ್ಯೇನ ಪಾಂಡವಮ್ |
ಜಿಘಾಂಸುಸ್ತೋಮರೈಃ ಕ್ರುದ್ಧೋ ದಂಡಪಾಣಿರಿವಾಂತಕಃ ॥81॥
ಈತ ನಿಷಾದರಾಜ ಪುತ್ರ,ಗಜೋತ್ತಮವನ್ನೇರಿ ಭೀಮನನ್ನು ತೋಮರಗಳಿಂದ ಕೊಲ್ಲಲು ಬಯಸಿ ಕ್ರುದ್ಧನಾಗಿ ದಂಡಪಾಣಿಯಾದ ಯಮನಂತೆ ಆಕ್ರಮಿಸಿದ.
ಸತೋಮರಾವಸ್ಯ ಭುಜೌ ಛಿನ್ನೌ ಭೀಮೇನ ಗರ್ಜತಃ |
ತೀಕ್ಷ್ಣೈರಗ್ನಿಶಿಖಾಪ್ರಖ್ಯೈರ್ನಾರಾಚೈರ್ದಶಭಿರ್ಹತಃ ॥82॥
ಆದರೆ ಈಗ ಭೀಮನು ಗರ್ಜಿಸುತ್ತ ತೀಕ್ಷ್ಣವಾದ ಅಗ್ನಿಜ್ವಾಲೆಯಂಥ ಹತ್ತು ಬಾಣಗಳಿಂದ ಅವನನ್ನು ಹೊಡೆದಿದ್ದಾನೆ.
ತೋಮರಗಳನ್ನು ಹಿಡಿದ ಎರಡೂ ತೋಳುಗಳನ್ನೂ ಕತ್ತರಿಸಿದ್ದಾನೆ.
ಹತ್ವೈನಂ ಪುನರಾಯಾತಿ ನಾಗಾನನ್ಯಾನ್ ಪ್ರಹಾರಿಣಃ |
ಪಶ್ಯ ನೀಲಾಂಬುದನಿಭಾನ್ ಮಹಾಮಾತ್ರೈರಧಿಷ್ಠಿತಾನ್ ॥83॥
ಶಕ್ತಿತೋಮರನಾರಾಚೈರ್ವಿನಿಘ್ನಂತಂ ವೃಕೋದರಮ್ ॥84॥
ಹೀಗೆ ನಿಷಾದರಾಜ ಪುತ್ರನನ್ನು ಕೊಂದ ಬಳಿಕ ತನ್ನ ಮೇಲೆ ಪ್ರಹಾರ ಮಾಡಿದ ಬೇರೆ ಗಜಯೋಧರನ್ನೂ ಭೀಮ ಇದಿರಿಸುತ್ತಾನೆ.
ಮಾವಟಿಗರಿಂದ ಯುಕ್ತವಾದ ಕರಿಮೋಡಗಳಂಥ ಗಜಗಳನ್ನು ಶಕ್ತಿ ತೋಮರ ನಾರಾಚಗಳಿಂದ ಕೊಲ್ಲುತ್ತಾನೆ. ನೋಡು.
ಸಪ್ತ ಸಪ್ತ ಚ ನಾಗಾಂಸ್ತಾನ್ ವೈಜಯಂತೀಶ್ಚ ಸಧ್ವಜಾಃ |
ನಿಹತ್ಯ ನಿಶಿತೈರ್ಬಾಣೈಶ್ಛಿನ್ನಾಃ ಪಾರ್ಥಾಗ್ರಜೇನ ತೇ ॥85॥
ದಶಭಿರ್ದಶಭಿಶ್ಚೈಕೇ ನಾರಾಚೈರ್ನಿಹತಾ ಗಜಾಃ ॥86॥
ನಿಮ್ಮಣ್ಣ ಭೀಮಸೇನನು ನಲವತ್ತೊಂಬತ್ತು ಆನೆಗಳನ್ನೂ ಕೊಂದು ಧ್ವಜಗಳನ್ನೂ ವೈಜಯಂತೀ ಪತಾಕೆಗಳನ್ನೂ ಕತ್ತರಿಸಿದ್ದಾನೆ.
ಹತ್ತು ಹತ್ತು ಬಾಣಗಳಿಂದ ಒಂದೊಂದಾಗಿ ಆನೆಗಳನ್ನು ಕೊಂದಿದ್ದಾನೆ.
ನ ಚಾಸೌ ಧಾರ್ತರಾಷ್ಟ್ರಾಣಾಂ ಶ್ರೂಯತೇ ನಿನದಸ್ತಥಾ |
ಪುರಂದರಸಮೇ ಕ್ರುದ್ಧೇ ನಿವೃತ್ತೇ ಭರತರ್ಷಭೇ ॥87॥
ಇಂದ್ರನಿಗೆ ಸಮನಾದ ಭೀಮನೇ ಕ್ರುದ್ಧನಾಗಿ ಯುದ್ಧಕ್ಕೆ ಹಿಂತಿರುಗಿ ಬಂದಾಗ ಕೌರವಸೈನಿಕರ ಆ ಗರ್ಜನೆ ಈಗ ಕೇಳಿಬರುತ್ತಿಲ್ಲ.
ಅಕ್ಷೋಹಿಣ್ಯಸ್ತಥಾ ತಿಸ್ರೋ ಧಾರ್ತರಾಷ್ಟ್ರಸ್ಯ ಸಂಹತಾಃ |
ಕ್ರುದ್ಧೇನ ನರಸಿಂಹೇನ ಭೀಮಸೇನೇನ ಪಾತಿತಾಃ ॥88॥
ಕ್ರುದ್ಧನಾದರೆ ನರಸಿಂಹನಂತಾಗುವ ಭೀಮಸೇನ ಸುಸಂಘಟಿತವಾದ ಮೂರು ಅಕ್ಷೋಹಿಣಿ ಕೌರವಸೈನ್ಯವನ್ನು ಒಬ್ಬನೇ ಸಂಹರಿಸಿದ್ದಾನೆ.
ಸಂಜಯಃ
ಭೀಮಸೇನೇನ ತತ್ಕರ್ಮ ಕೃತಂ ದೃಷ್ಟ್ವಾ ಸುದುಷ್ಕರಮ್ |
ಅರ್ಜುನೋ ವ್ಯಧಮತ್ ಶಿಷ್ಟಾನಹಿತಾನ್ನಿಶಿತೈಃ ಶರೈಃ ॥89|
ಸಂಜಯನು ನುಡಿದ– ಭೀಮಸೇನನು ಬಲುದುಷ್ಕರವಾದ ಸೈನ್ಯಸಂಹಾರ ಕಾರ್ಯವನ್ನು ಮಾಡಿದ್ದನ್ನು ನೋಡಿದ ಅರ್ಜುನನು ಸಂಶಪ್ತಕರಲ್ಲಿ ಉಳಿದ ಶತ್ರುಸೈನ್ಯಗಳನ್ನು ತೀಕ್ಷ್ಣವಾದ ಬಾಣಗಳಿಂದ ನಾಶಮಾಡಿದ.
ತೇ ವಧ್ಯಮಾನಾಃ ಸಮರೇ ಸಂಶಪ್ತಕಗಣಾಃ ಪ್ರಭೋ |
ಶಕ್ರಸ್ಯಾತಿಥಿತಾಂ ಗತ್ವಾ ವಿಶೋಕಾ ಹ್ಯಭವನ್ ಮುದಾ ॥90॥
ಸಂಶಪ್ತಕ ಗಣಗಳು ರಣದಲ್ಲಿ ಹತರಾಗಿ, ಮುದದಿಂದ ಇಂದ್ರನ ಅತಿಥಿಗಳಾಗಿ, ಶೋಕರಹಿತರಾದರು.
ಪಾರ್ಥಶ್ಚ ಪುರುಷವ್ಯಾಘ್ರಃ ಶರೈಃ ಸನ್ನತಪರ್ವಭಿಃ |
ಜಘಾನ ಧಾರ್ತರಾಷ್ಟ್ರಸ್ಯ ಚತುರ್ವಿಧಬಲಾಂ ಚಮೂಮ್ ॥91॥
ಪುರುಷೋತ್ತಮ ಅರ್ಜುನ ಡೊಂಕುಗಿಣ್ಣಿನ ಬಾಣಗಳಿಂದ ದುರ್ಯೋಧನನ ಚತುರಂಗ ಸೈನ್ಯವನ್ನು ಸಂಹರಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಕೃಷ್ಣವಾಕ್ಯಂ ನಾಮ ಸಪ್ತಪಂಚಾಶೋऽಧ್ಯಾಯಃ ॥57॥

ಮಹಾಭಾರತತಾತ್ಪರ್ಯನಿರ್ಣಯ
ಅಥಾತ್ರ ರಾಜಾನಮಚಕ್ಷಮಾಣೋ
ಧನಂಜಯೋ ವಾಸುದೇವಪ್ರಣುನ್ನಃ |
ಅಭ್ಯಾಯಯೌ ಪಾರ್ಷತಃ ಸ್ವಾಂ ತು ಸೇನಾಂ
ಕರ್ಣಾಹತಾಂ ವೀಕ್ಷ್ಯ ಕುರೂನಪೀಡಯತ್ ॥88॥
ರಣರಂಗದಲ್ಲಿ ಯುಧಿಷ್ಠಿರನನ್ನು ಕಾಣದೆ ಅರ್ಜುನ ಶ್ರೀಕೃಷ್ಣನಿಂದ ಪ್ರೇರಿತ ನಾಗಿ ಶಿಬಿರದ ಕಡೆಗೆ ಹೊರಟ. ಧೃಷ್ಟದ್ಯುಮ್ನ ತನ್ನ ಸೇನೆಯನ್ನು ಕರ್ಣನು ನಾಶ ಮಾಡುವುದನ್ನು ಕಂಡು ಕೌರವರನ್ನು ಪೀಡಿಸಿದ.
ನ್ಯವಾರಯತ್ ಸಮಾಯಾಂತಂ ಕಪಿಪ್ರವರಕೇತನಮ್ |
ದ್ರೌಣಿರ್ದುಃಶಾಸನಶ್ಚೈವ ಧೃಷ್ಟದ್ಯುಮ್ನಮವಾರಯತ್ ॥89॥

ಅಶ್ವತ್ಥಾಮ ತನಗೆ ಎದುರಾಗಿ ಬರುತ್ತಿದ್ದ ಅರ್ಜುನನನ್ನು ತಡೆದ. ದುಃಶಾಸನ ಧೃಷ್ಟದ್ಯುಮ್ನನನ್ನು ತಡೆದ.
ಉಭಾವತಿರಥೌ ತೌ ತು ಶಸ್ತ್ರೌಘೈರಭ್ಯವರ್ಷತಾಮ್ |
ದುಃಶಾಸನಃ ಪಾರ್ಷತಶ್ಚ ಕುರ್ವಂತೌ ಬಾಣಜಂ ತಮಃ ||90||
ದುಃಶಾಸನ ಧೃಷ್ಟದ್ಯುಮ್ನರಿಬ್ಬರೂ ಅತಿರಥರು. ಅವರು ಪರಸ್ಪರ ಶಸ್ತ್ರಗಳ ಮಳೆಗರೆದುಕೊಂಡರು. ಬಾಣಗಳಿಂದ ಕತ್ತಲನ್ನು ಉಂಟುಮಾಡಿದರು.
ತತ್ರ ದುಃಶಾಸನೇನಾಜೌ ಸ್ತಂಭಿತೋ ದ್ರುಪದಾತ್ಮಜಃ |
ಯತಮಾನೋಽಪಿ ನಿರ್ಯತ್ನಃ ಕೃತೋ ಯುದ್ಧೇ ನಿರಾಯುಧಃ ||91||
ಆ ಯುದ್ಧದಲ್ಲಿ ಧೃಷ್ಟದ್ಯುಮ್ನ ದುಃಶಾಸನನಿಂದ ಸ್ತಂಭೀಭೂತನಾಗಿ ಮಾಡ ಲ್ಪಟ್ಟ. ಯತ್ನ ಮಾಡಿದರೂ ಯತ್ನವಿಲ್ಲದವನಾಗಿ ನಿರಾಯುಧನಾಗಿ ಮಾಡಲ್ಪಟ್ಟ.

ಐವತ್ತೆಂಟನೆಯ ಅಧ್ಯಾಯ
ಕರ್ಣಶಿಖಂಡಿ, ದುಃಶಾಸನಧೃಷ್ಟದ್ಯುಮ್ನ, ನಕುಲವೃಷಸೇನ,
ಸಹದೇವಉಲೂಕ, ಶಕುನಿಸಾತ್ಯಕಿ, ಭೀಮದುರ್ಯೋಧನ,
ಕೃತವರ್ಮಉತ್ತಮೌಜರ ಯುದ್ಧಗಳು. ಭೀಮನಿಂದ ಗಜಸೈನ್ಯದ ವಿನಾಶ.
ಧೃತರಾಷ್ಟ್ರಃ
ನಿವೃತ್ತೇ ಭೀಮಸೇನೇ ಚ ಪಾಂಡವೇ ಚ ಯುಧಿಷ್ಠಿರೇ |
ವಧ್ಯಮಾನೇ ಬಲೇ ಚಾಪಿ ಮಾಮಕೇ ಪಾಂಡುಸೃಂಜಯೈಃ ||1||
ದ್ರುವಮಾಣೇ ಬಲೌಘೇ ಚ ನಿರಾನಂದೇ ಮುಹುರ್ಮುಹುಃ |
ಕಿಮಕುರ್ವಂತ ಕುರವಸ್ತನ್ಮಮಾಚಕ್ಷ್ವ ಸಂಜಯ ||2||
ಧೃತರಾಷ್ಟ್ರ ನುಡಿದ– ಭೀಮಸೇನ ಯುಧಿಷ್ಠಿರರು ಯುದ್ಧಕ್ಕೆ ಹಿಂದಿರುಗಿ ಬಂದಾಗ, ನನ್ನ ಸೈನ್ಯ ಸೃಂಜಯರಿಂದ ಹತವಾಗುವಾಗ, ನಿರುತ್ಸಾಹಗೊಂಡು ಪುನಃ ಪುನಃ ಪಲಾಯನ ಮಾಡುವಾಗ ಕುರುಗಳೇನು ಮಾಡಿದರು? ಅದನ್ನು ನನಗೆ ಹೇಳು.
ಸಂಜಯಃ
ದೃಷ್ಟ್ವಾ ಭೀಮಂ ಮಹಾಬಾಹುಂ ಸೂತಪುತ್ರಃ ಪ್ರತಾಪವಾನ್ |
ಕ್ರೋಧರಕ್ತೇಕ್ಷಣೋ ರಾಜನ್ ಭೀಮಸೇನಮುಪಾದ್ರವತ್ ||3||
ಸಂಜಯ ನುಡಿದ– ರಾಜನೆ, ಪ್ರತಾಪಶಾಲಿಯಾದ ಕರ್ಣನು ಮಹಾಬಾಹು ವಾದ ಭೀಮನನ್ನು ನೋಡಿ ಕ್ರೋಧದಿಂದ ಕಣ್ಣು ಕೆಂಪು ಮಾಡಿಕೊಂಡು ಭೀಮಸೇನನ ಕಡೆಗೆ ಧಾವಿಸಿದ.
ತಾವಕಂ ಚ ಬಲಂ ದೃಷ್ಟ್ವಾ ಭೀಮಸೇನಾತ್ ಪರಾಙ್ಮುಖಮ್ |
ಯತ್ನೇನ ಮಹತಾ ರಾಜನ್ ಪರ್ಯವಸ್ಥಾಪಯದ್ ಬಲೀ ||4||
ರಾಜನೆ, ಭೀಮಸೇನನ ದೆಸೆಯಿಂದ ಪಲಾಯನ ಮಾಡುತ್ತಿದ್ದ ನಿನ್ನ ಸೈನ್ಯವನ್ನು ಬಲಿಷ್ಠನಾದ ಕರ್ಣನು ಮಹಾಪ್ರಯತ್ನದಿಂದ ತಡೆದು ನಿಲ್ಲಿಸಿದ.
ವ್ಯವಸ್ಥಾಪ್ಯ ಮಹಾಬಾಹುಸ್ತವ ಪುತ್ರಸ್ಯ ವಾಹಿನೀಮ್ |
ಪ್ರತ್ಯುದ್ಯಯೌ ತದಾ ಕರ್ಣಃ ಪಾಂಡವಾನ್ ಯುದ್ಧದುರ್ಮದಾನ್ ||5||
ಮಹಾಬಾಹು ಕರ್ಣನು ನಿನ್ನ ಮಗನ ಸೈನ್ಯವನ್ನು ಸರಿಯಾಗಿ ನಿಲ್ಲಿಸಿ ಯುದ್ಧದಲ್ಲಿ ಮದಿಸಿರುವ ಪಾಂಡವರ ಕಡೆಗೆ ಮುನ್ನುಗ್ಗಿ ಹೋದ.
ಪ್ರತ್ಯುದ್ಯಯುಸ್ತು ರಾಧೇಯಂ ಪಾಂಡವಾನಾಂ ಮಹಾರಥಾಃ |
ಧುನ್ವಾನಾಃ ಕಾರ್ಮುಕಾಣ್ಯಾಜೌ ವಿಕ್ಷಿಪಂತಶ್ಚ ಸಾಯಕಾನ್ ||6||
ಪಾಂಡವರ ಮಹಾರಥರೂ ರಣದಲ್ಲಿ ಬಿಲ್ಲುಗಳನ್ನು ತೂಗಾಡಿಸುತ್ತ ಬಾಣಗಳನ್ನೆಸೆಯುತ್ತ ಕರ್ಣನ ಮುಂದೆ ನುಗ್ಗಿ ಬಂದರು.
ಭೀಮಸೇನಃ ಶಿನೇರ್ನಪ್ತಾ ಶಿಖಂಡೀ ಜನಮೇಜಯಃ |
ಧೃಷ್ಟದ್ಯುಮ್ನಶ್ಚ ಬಲವಾನ್ ಸರ್ವೇ ಚಾಪಿ ಪ್ರಭದ್ರಕಾಃ ||7||
ಜಿಘಾಂಸಂತೋ ನರವ್ಯಾಘ್ರಾಃ ಸಮಂತಾತ್ ತವ ವಾಹಿನೀಮ್ |
ಅಭ್ಯದ್ರವಂತ ಸಂಕ್ರುದ್ಧಾಃ ಸಮರೇ ಜಿತಕಾಶಿನಃ ||8||
ಭೀಮಸೇನ ಸಾತ್ಯಕಿ ಶಿಖಂಡಿ ಜನಮೇಜಯ ಬಲಿಷ್ಠನಾದ ಧೃಷ್ಟದ್ಯುಮ್ನ ಮತ್ತು ಎಲ್ಲ ಪ್ರಭದ್ರಕರು ರಣದಲ್ಲಿ ಜಯಶಾಲಿಗಳಾಗಿ ಮೆರೆಯುವವರು ಪುರುಷೋತ್ತಮರು ಬಹಳ ಕ್ರುದ್ಧರಾಗಿ ಎಲ್ಲ ಕಡೆ ನಿನ್ನ ಸೈನ್ಯವನ್ನು ವಧಿಸಲು ಬಯಸಿ ನುಗ್ಗಿ ಬಂದರು.
ತಥೈವ ತಾವಕಾ ರಾಜನ್ ಪಾಂಡವಾನಾಮನೀಕಿನೀಮ್ |
ಅಭ್ಯದ್ರವಂತ ತ್ವರಿತಾ ಜಿಘಾಂಸಂತೋ ಮಹಾರಥಾಃ ||9||
ಹಾಗೇ, ರಾಜನೆ, ನಿನ್ನ ಕಡೆಯ ಮಹಾರಥರೂ ವೇಗವಾಗಿ ಪಾಂಡವರ ಸೈನ್ಯವನ್ನು ಕೊಲ್ಲಲು ಬಯಸಿ ಮುನ್ನುಗ್ಗಿ ಹೋದರು.
ರಥನಾಗಾಶ್ವಕಲಿಲಂ ಪತ್ತಿಧ್ವಜಸಮಾಕುಲಮ್ |
ಬಭೂವ ಪುರುಷವ್ಯಾಘ್ರ ಸೈನ್ಯಮದ್ಭುತದರ್ಶನಮ್ ||10||
ಪುರುಷಶ್ರೇಷ್ಠನೆ, ಸೈನ್ಯವು ರಥ ಗಜ ಅಶ್ವ ಪದಾತಿ ಧ್ವಜಗಳಿಂದ ತುಂಬಿದ್ದು ನೋಡಲು ಅದ್ಭುತವಾಯಿತು.
ಶಿಖಂಡೀ ಚ ಯಯೌ ಕರ್ಣಂ ಧೃಷ್ಟದ್ಯುಮ್ನಃ ಸುತಂ ತವ |

ದುಃಶಾಸನಂ ಮಹಾರಾಜ ಮಹತ್ಯಾ ಸೇನಯಾ ವೃತಮ್ ॥11॥
ಮಹಾರಾಜ, ಶಿಖಂಡಿಯು ದೊಡ್ಡ ಸೈನ್ಯದಿಂದ ಯುಕ್ತನಾದ ಕರ್ಣನನ್ನು ಇದಿರಿಸಿದ. ಧೃಷ್ಟದ್ಯುಮ್ನನು ನಿನ್ನ ಮಗನಾದ ದುಃಶಾಸನನನ್ನು ಇದಿರಿಸಿದ.
ನಕುಲೋ ವೃಷಸೇನಂ ಚ ಚಿತ್ರಸೇನಂ ಯುಧಿಷ್ಠಿರಃ |
ಉಲೂಕಂ ಸಮರೇ ರಾಜನ್ ಸಹದೇವಃ ಸಮಭ್ಯಯಾತ್ ॥12॥
ರಾಜನೆ, ರಣದಲ್ಲಿ ನಕುಲನು ವೃಷಸೇನನನ್ನು, ಯುಧಿಷ್ಠಿರನು ಚಿತ್ರಸೇನನನ್ನು, ಸಹದೇವನು ಉಲೂಕನನ್ನು ಇದಿರಿಸಿದ.
ಸಾತ್ಯಕಿಃ ಶಕುನಿಂ ಚಾಪಿ ಭೀಮಸೇನಶ್ಚ ಕೌರವಾನ್ |
ಅರ್ಜುನಂ ಚ ರಣೇ ಯತ್ತಂ ದ್ರೋಣಪುತ್ರೋ ಮಹಾರಥಃ ॥13॥
ಮಹಾರಥನಾದ ಸಾತ್ಯಕಿಯು ಶಕುನಿಯನ್ನು, ಭೀಮಸೇನನು ಕೌರವರನ್ನು, ಅಶ್ವತ್ಥಾಮನು ರಣದಲ್ಲಿ ಯತ್ನಮಾಡುವ ಅರ್ಜುನನನ್ನು ಇದಿರಿಸಿದ.
ಯುಧಾಮನ್ಯುಂ ಮಹೇಷ್ವಾಸಂ ಗೌತಮೋಭ್ಯಪತದ್ ರಣೇ |
ಕೃತವರ್ಮಾ ಚ ಬಲವಾನುತ್ತಮೌಜಸಮಾದ್ರವತ್ ॥14॥
ಕೃಪನು ರಣದಲ್ಲಿ ಮಹಾಬಿಲ್ಗಾರನಾದ ಯುಧಾಮನ್ಯುವನ್ನು ಇದಿರಿಸಿದ. ಬಲಿಷ್ಠನಾದ ಕೃತವರ್ಮನು ಉತ್ತಮೌಜನನ್ನು ಇದಿರಿಸಿದ.
ಭೀಮಸೇನಃ ಕುರೂನ್ ಸರ್ವಾನ್ ಪುತ್ರಾಂಶ್ಚ ತವ ಮಾರಿಷ |
ಸಹಾನೀಕಾನ್ ಮಹಾಬಾಹುರೇಕ ಏವಾಭ್ಯವಾರಯತ್ ॥15॥
ರಾಜನೆ, ಕುರುಗಳನ್ನೂ, ನಿನ್ನ ಎಲ್ಲ ಪುತ್ರರನ್ನೂ ಅವರ ಸೈನ್ಯಗಳೊಂದಿಗೆ ಮಹಾಬಾಹು ಭೀಮಸೇನನೊಬ್ಬನೆ ಆಕ್ರಮಿಸಿ ನಡೆದ.
ಶಿಖಂಡೀ ಚ ತತಃ ಕರ್ಣಂ ವಿಚರಂತಮಭೀತವತ್ |
ಭೀಷ್ಮಹಂತಾ ಮಹಾರಾಜ ವಾರಯಾಮಾಸ ಪತ್ರಿಭಿಃ ॥16॥
ಮಹಾರಾಜ, ನಿರ್ಭೀತಿಯಿಂದ ಸಂಚರಿಸುವ ಕರ್ಣನನ್ನು ಭೀಷ್ಮಮರಣಕ್ಕೆ ಕಾರಣನಾದ ಶಿಖಂಡಿಯು ಬಾಣಗಳಿಂದ ತಡೆದ.
ಪ್ರತಿರುದ್ಧಸ್ತತಃ ಕರ್ಣೋ ರೋಷಾತ್ ಪ್ರಸ್ಫುರಿತಾಧರಃ |
ಶಿಖಂಡಿನಂ ತ್ರಿಭಿರ್ಬಾಣೈರ್ಭ್ರುವೋರ್ಮಧ್ಯೇ ವ್ಯತಾಡಯತ್ ॥17॥
ಕರ್ಣನು ಶಿಖಂಡಿಯಿಂದ ತಡೆಯಲ್ಪಟ್ಟಾಗ ರೋಷದಿಂದ ತುಟಿ ಅದುರಿಸುತ್ತ ಶಿಖಂಡಿಯನ್ನು ಮೂರು ಬಾಣಗಳಿಂದ ಹುಬ್ಬುಗಳ ನಡುವೆ ಹೊಡೆದ.
ಧಾರಯಂಸ್ತು ಸ ತಾನ್ ಬಾಣಾನ್ ಶಿಖಂಡೀ ಬಹ್ವಶೋಭತ |
ರಾಜತಃ ಪರ್ವತೋ ಯದ್ವತ್ತ್ರಿಭಿಃ ಶೃಂಗೈಃ ಸಮುಚ್ಛ್ರಿತೈಃ ॥18॥
ಆ ಬಾಣಗಳನ್ನು ಧರಿಸಿ ಶಿಖಂಡಿಯು ಉನ್ನತವಾದ ಮೂರು ಶಿಖರಗಳಿಂದ ಶೋಭಿಸುವ ಬೆಳ್ಳಿಯ ಬೆಟ್ಟದಂತೆ ಶೋಭಿಸಿದ.
ಸೋಽತಿವಿದ್ಧೋ ಮಹೇಷ್ವಾಸಃ ಸೂತಪುತ್ರೇಣ ಸಂಯುಗೇ |
ಕರ್ಣಂ ವಿವ್ಯಾಧ ಸಮರೇ ನವತ್ಯಾ ನಿಶಿತೈಃ ಶರೈಃ ॥19॥
ಮಹಾಬಿಲ್ಗಾರ ಶಿಖಂಡಿಯು ಕರ್ಣನಿಂದ ರಣದಲ್ಲಿ ತಾಡಿತನಾಗಿ ತೀಕ್ಷ್ಣವಾದ ತೊಂಬತ್ತು ಬಾಣಗಳಿಂದ ರಣದಲ್ಲಿ ಕರ್ಣನನ್ನು ಹೊಡೆದ.
ತಸ್ಯ ಕರ್ಣೋ ಹಯಾನ್ ಹತ್ವಾ ಸಾರಥಿಂ ಚ ತ್ರಿಭಿಃ ಶರೈಃ |
ಉನ್ಮಮಾಥ ಧ್ವಜಂ ಚಾಸ್ಯ ಕ್ಷುರಪ್ರೇಣ ಮಹಾರಥಃ ॥20॥
ಮಹಾರಥನಾದ ಕರ್ಣನು ಶಿಖಂಡಿಯ ಕುದುರೆಗಳನ್ನೂ ಸಾರಥಿಯನ್ನೂ ಮೂರು ಬಾಣಗಳಿಂದ ಸಂಹರಿಸಿ ಒಂದು ಬಾಣದಿಂದ ಅವನ ಧ್ವಜವನ್ನು ಕಡಿದ.
ಹತಾಶ್ವಾತ್ತು ತತೋ ಯಾನಾದವಪ್ಲುತ್ಯ ಮಹಾರಥಃ |
ಶಕ್ತಿಂ ಚಿಕ್ಷೇಪ ಕರ್ಣಾಯ ಸಂಕ್ರುದ್ಧಃ ಶತ್ರುತಾಪನಃ ॥21॥
ಕುದುರೆಗಳು ಹತವಾದಾಗ ಶತ್ರುತಾಪಕನಾದ ಮಹಾರಥನಾದ ಶಿಖಂಡಿಯು ಬಲುಕ್ರುದ್ಧನಾಗಿ ರಥದಿಂದ ಕೆಳಗೆ ಹಾರಿ ಕರ್ಣನ ಮೇಲೆ ಶಕ್ತಿಯನ್ನು ಎಸೆದ.
ತಾಂ ಛಿತ್ತ್ವಾ ಸಮರೇ ಕರ್ಣಸ್ತ್ರಿಭಿರ್ಭಾರತ ಸಾಯಕೈಃ |
ಶಿಖಂಡಿನಮಥಾವಿಧ್ಯನ್ನವಭಿರ್ನಿಶಿತೈಃ ಶರೈಃ ॥22॥
ರಾಜನೆ, ಕರ್ಣನು ರಣದಲ್ಲಿ ಆ ಶಕ್ತಿಯನ್ನು ಮೂರು ಬಾಣಗಳಿಂದ ಕತ್ತರಿಸಿ, ತೀಕ್ಷ್ಣವಾದ ಒಂಬತ್ತು ಬಾಣಗಳಿಂದ ಶಿಖಂಡಿಯನ್ನು ಹೊಡೆದ.
ಕರ್ಣಚಾಪಚ್ಯುತಾನ್ ಬಾಣಾನ್ ವರ್ಜಯಂಸ್ತು ನರೋತ್ತಮಃ |
ಅಪಯಾತಸ್ತತಸ್ತೂರ್ಣಂ ಶಿಖಂಡೀ ಜಯತಾಂ ವರಃ ॥23॥
ಜಯಶಾಲಿಗಳಲ್ಲಿ ಶ್ರೇಷ್ಠನಾದ ಪುರುಷೋತ್ತಮನಾದ ಶಿಖಂಡಿ ಕರ್ಣನ ಬಿಲ್ಲಿನಿಂದ ಹೊರಡುವ ಬಾಣಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಬೇಗನೆ ಅಲ್ಲಿಂದ ದೂರ ಸರಿದ.
ತತಃ ಕರ್ಣೋ ಮಹಾರಾಜ ಪಾಂಡುಸೈನ್ಯಮಶಾತಯತ್ |
ತೂಲರಾಶಿಂ ಸಮಾಸಾದ್ಯ ಯಥಾ ವಾಯುರ್ಮಹಾಜವಃ ॥24॥
ಮಹಾರಾಜ, ಬಳಿಕ ಕರ್ಣನು, ಮಹಾವೇಗದಿಂದ ಬೀಸುವ ಗಾಳಿ ತನಗೆ ಸಿಕ್ಕಿದ ಹತ್ತಿಯ ರಾಶಿಯನ್ನು ಹಾರಿಸುವಂತೆ, ಪಾಂಡವಸೈನ್ಯವನ್ನು ಹೊಡೆದು ಓಡಿಸಿದ.

ಧೃಷ್ಟದ್ಯುಮ್ನೋ ಮಹಾರಾಜ ತವ ಪುತ್ರೇಣ ಪೀಡಿತಃ |
ದುಃಶಾಸನಂ ತ್ರಿಭಿರ್ಬಾಣೈರಭ್ಯವಿಧ್ಯತ್ ಸ್ತನಾಂತರೇ ||25||
ಮಹಾರಾಜ, ಧೃಷ್ಟದ್ಯುಮ್ನನು ನಿನ್ನ ಮಗ ದುಃಶಾಸನನಿಂದ ಪೀಡಿತನಾಗಿ ಅವನನ್ನು ಮೂರು ಬಾಣಗಳಿಂದ ಸ್ತನಗಳ ನಡುವೆ ಹೊಡೆದ.
ತಸ್ಯ ದುಃಶಾಸನೋ ಬಾಹುಂ ಸವ್ಯಂ ವಿವ್ಯಾಧ ಮಾರಿಷ |
ಶಿತೇನ ರುಗ್ಮಪುಂಖೇನ ಭಲ್ಲೇನ ನತಪರ್ವಣಾ ||26||
ರಾಜನೆ, ದುಃಶಾಸನನು ಡೊಂಕುಗಿಣ್ಣಿನ ಬಂಗಾರದ ಪುಕ್ಕವುಳ್ಳ ತೀಕ್ಷ್ಣವಾದ ಭಲ್ಲೆಯಿಂದ ಧೃಷ್ಟದ್ಯುಮ್ನನ ಎಡ ತೋಳಿಗೆ ಹೊಡೆದ.
ಧೃಷ್ಟದ್ಯುಮ್ನಸ್ತು ನಿರ್ವಿದ್ಧಃ ಶರಂ ಘೋರಮಮರ್ಷಣಃ |
ದುಃಶಾಸನಾಯ ಸಂಕ್ರುದ್ಧಃ ಪ್ರೇಷಯಾಮಾಸ ಭಾರತ ||27||
ರಾಜನೆ, ಸಹನೆ ಇಲ್ಲದ ಧೃಷ್ಟದ್ಯುಮ್ನ ಚೆನ್ನಾಗಿ ಹೊಡೆಸಿಕೊಂಡು ಬಹಳ ಕುಪಿತನಾಗಿ ದುಃಶಾಸನನ ಮೇಲೆ ಭಯಂಕರ ಬಾಣವನ್ನು ಎಸೆದ.
ಆಪತಂತಂ ಮಹಾವೇಗಂ ಧೃಷ್ಟದ್ಯುಮ್ನಸಮೀರಿತಮ್ |
ಶರೈಶ್ಚಿಚ್ಛೇದ ಪುತ್ರಸ್ತೇ ತ್ರಿಭಿರೇವ ವಿಶಾಂಪತೇ ||28||
ರಾಜನೆ, ಧೃಷ್ಟದ್ಯುಮ್ನನು ಎಸೆದ ಬಾಣವು ಮಹಾವೇಗದಿಂದ ತನ್ನ ಮೇಲೆ ಬೀಳುತ್ತಿದ್ದಂತೆ ನಿನ್ನ ಮಗನು ಮೂರು ಬಾಣಗಳಿಂದ ಕತ್ತರಿಸಿದ.
ಅಥಾಪರೈಃ ಸಪ್ತದಶೈರ್ಭಲ್ಲೈಃ ಕನಕಭೂಷಣೈಃ |
ಧೃಷ್ಟದ್ಯುಮ್ನಂ ಸಮಾಸಾದ್ಯ ಬಾಹ್ವೋರುರಸಿ ಚಾರ್ದಯತ್ ||29||
ಬಳಿಕ ಬಂಗಾರದಿಂದ ಅಲಂಕೃತವಾದ ಬೇರೆ ಹದಿನೇಳು ಭಲ್ಲೆಗಳಿಂದ ದುಃಶಾಸನನು ಧೃಷ್ಟದ್ಯುಮ್ನನನ್ನು ಆಕ್ರಮಿಸಿ ಎರಡು ತೋಳುಗಳಲ್ಲಿಯೂ ಎದೆಯಲ್ಲಿಯೂ ಪ್ರಹರಿಸಿದ.
ತತಃ ಸ ಪಾರ್ಷತಃ ಕ್ರುದ್ಧೋ ಧನುಶ್ಚಿಚ್ಛೇದ ಮಾರಿಷ |
ಕ್ಷುರಪ್ರೇಣ ಸುತೀಕ್ಷ್ಣೇನ ತತ ಉಚ್ಚುಕ್ರುಶುರ್ಜನಾಃ ||30||
ಅದರಿಂದ ರಾಜನೆ, ಕ್ರುದ್ಧನಾದ ಧೃಷ್ಟದ್ಯುಮ್ನನು ಬಲು ತೀಕ್ಷ್ಣವಾದ ಬಾಣ ದಿಂದ ದುಃಶಾಸನನ ಧನುಸ್ಸನ್ನು ಕಡಿದ. ಆಗ ಜನರು ಗಟ್ಟಿಯಾಗಿ ಕೂಗಿದರು.
ಅಥಾನ್ಯದ್ಧನುರಾದಾಯ ಪುತ್ರಸ್ತೇ ಭರತರ್ಷಭ |
ಧೃಷ್ಟದ್ಯುಮ್ನಂ ಶರವ್ರಾತೈಃ ಸಮಂತಾತ್ ಪರ್ಯವಾರಯತ್ ||31||
ರಾಜನೆ, ನಿನ್ನ ಮಗನು ಬೇರೆ ಧನುಸ್ಸನ್ನು ಎತ್ತಿಕೊಂಡು ಬಾಣಸಮೂಹ ಗಳಿಂದ ಧೃಷ್ಟದ್ಯುಮ್ನನನ್ನು ಎಲ್ಲ ಕಡೆಗಳಿಂದಲೂ ಆಚ್ಛಾದಿಸಿದ.
ತವ ಪುತ್ರಸ್ಯ ತೇ ದೃಷ್ಟ್ವಾ ವಿಕ್ರಮಂ ತಂ ಮಹಾತ್ಮನಃ |
ವಿಸ್ಮಯಂತ ರಣೇ ಯೋಧಾಃ ಸಿದ್ಧಾಶ್ಚಾಪ್ಸರಸಾಂ ಗಣಾಃ ||32||
ಮಹಾತ್ಮನಾದ ನಿನ್ನ ಮಗನ ಆ ಪರಾಕ್ರಮವನ್ನು ರಣದಲ್ಲಿ ಕಂಡು ಯೋಧರೂ ಸಿದ್ಧರೂ ಅಪ್ಸರೆಯರ ಸಮೂಹಗಳೂ ಅಚ್ಚರಿಗೊಂಡರು.
ತತಃ ಪ್ರವವೃತೇ ಯುದ್ಧಂ ತಾವಕಾನಾಂ ಪರೈಃ ಸಹ |
ಘೋರೇ ಪ್ರಾಣಭೃತಾಂ ಕಾಲೇ ಘೋರರೂಪಂ ಪರಂತಪ ||33||
ರಾಜನೆ, ಬಳಿಕ ನಿನ್ನವರಿಗೆ ಪರರೊಡನೆ, ಜೀವಿಗಳ ಘೋರ ವಿನಾಶಕಾಲದ ಘೋರರೂಪದ ಯುದ್ಧ ನಡೆಯಿತು.
ನಕುಲಂ ವೃಷಸೇನಸ್ತು ವಿದ್ಧ್ವಾ ಪಂಚಭಿರಾಯಸೈಃ |
ಪಿತುಃ ಸಮೀಪೇ ತಿಷ್ಠಂತಂ ತ್ರಿಭಿರ್ಭೂಯೋಽಭ್ಯವಿಧ್ಯತ ||34||
ವೃಷಸೇನನು ತಂದೆಯಾದ ಕರ್ಣನ ಸಮೀಪದಲ್ಲಿ ನಿಂತ ನಕುಲನನ್ನು ಐದು ಕಬ್ಬಿಣದ ಬಾಣಗಳಿಂದ ಹೊಡೆದು ಮತ್ತೂ ಮೂರು ಬಾಣಗಳಿಂದ ಹೊಡೆದ.
ನಕುಲಸ್ತು ತತಃ ಕ್ರುದ್ಧೋ ವೃಷಸೇನಂ ಸ್ಮಯನ್ನಿವ |
ನಾರಾಚೇನ ಸುತೀಕ್ಷ್ಣೇನ ವಿವ್ಯಾಧ ಹೃದಯೇ ದೃಢಮ್ ||35||
ನಕುಲನು ಅದಕ್ಕೆ ಕುಪಿತನಾಗಿ ನಗುತ್ತ ವೃಷಸೇನನನ್ನು ಎದೆಯಲ್ಲಿ ತೀಕ್ಷ್ಣವಾದ ಬಾಣದಿಂದ ದೃಢವಾಗಿ ಪ್ರಹರಿಸಿದ.
ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುಕರ್ಶನಃ |
ಶತ್ರುಂ ವಿವ್ಯಾಧ ವಿಂಶತ್ಯಾ ಸ ಚ ತಂ ಪಂಚಭಿಃ ಶರೈಃ ||36||
ಶತ್ರುನಾಶಕನಾದ ವೃಷಸೇನನು ಬಲಿಷ್ಠನಾದ ಶತ್ರುವಿನಿಂದ ಅತಿಯಾಗಿ ತಾಡಿತನಾಗಿ ಶತ್ರುವನ್ನು ಇಪ್ಪತ್ತು ಬಾಣಗಳಿಂದ ಹೊಡೆದ. ಅವನೂ ಐದು ಬಾಣಗಳಿಂದ ವೃಷಸೇನನನ್ನು ಹೊಡೆದ.
ತತಃ ಶರಸಹಸ್ರೇಣ ತಾವುಭೌ ಪುರುಷರ್ಷಭೌ |
ಅನ್ಯೋನ್ಯಮಾಚ್ಛಾದಯತಾಮಥಾಭಜ್ಯತ ಭಾರತೀ ||37||
ಆ ಪುರುಷಶ್ರೇಷ್ಠರಿಬ್ಬರು ಸಾವಿರಾರು ಬಾಣಗಳಿಂದ ಪರಸ್ಪರ ಆಚ್ಛಾದನ ಮಾಡಿದರು. ಆಗ ಕೌರವಸೈನ್ಯವು ವೃಷಸೇನನನ್ನು ಕಾಣದಿದ್ದರಿಂದ ಭಗ್ನವಾಯಿತು. ಪಲಾಯನ ಮಾಡಿತು.
ದೃಷ್ಟ್ವಾ ತು ಪ್ರದ್ರುತಾಂ ಸೇನಾಂ ಧಾರ್ತರಾಷ್ಟ್ರಸ್ಯ ಸೂತಜಃ |

ನಿವಾರಯಾಮಾಸ ಬಲಾದನುಸೃತ್ಯ ವಿಶಾಂಪತೇ ॥38॥
ರಾಜನೆ, ಕೌರವಸೈನ್ಯವು ಪಲಾಯನ ಮಾಡುವುದನ್ನು ಕಂಡು ಕರ್ಣನು ಅದರ ಹಿಂದೆ ಹೋಗಿ ಬಲಾತ್ಕಾರದಿಂದ ಅದನ್ನು ತಡೆದು ನಿಲ್ಲಿಸಿದ.
ನಿವೃತ್ತೇ ತು ತತಃ ಕರ್ಣೇ ನಕುಲಃ ಕೌರವಾನ್ ಯಯೌ ॥39॥
ಹೀಗೆ ಕರ್ಣನು ಪಾಂಡವಸೈನ್ಯದಿಂದ ಆಚೆಗೆ ಹೊರಟುಹೋದಾಗ ನಕುಲನು ಕೌರವಸೈನ್ಯದ ಕಡೆಗೆ ನುಗ್ಗಿದ.
ಕರ್ಣಪುತ್ರಸ್ತು ಸಮರೇ ಹಿತ್ವಾ ನಕುಲಮೇವ ತು |
ಜುಗೋಪ ಚಕ್ರಂ ತ್ವರಿತಂ ರಾಧೇಯಸ್ಯೈವ ಮಾರಿಷ ॥40॥
ಕರ್ಣಪುತ್ರ ವೃಷಸೇನನು ರಣದಲ್ಲಿ ನಕುಲನನ್ನು ಬಿಟ್ಟು ಬೇಗನೆ ಕರ್ಣನ ರಥಚಕ್ರದ ರಕ್ಷಣೆಯಲ್ಲಿಯೆ ತೊಡಗಿದ.
ಉಲೂಕಸ್ತು ರಣೇ ಕ್ರುದ್ಧಃ ಸಹದೇವೇನ ವಾರಿತಃ |
ತಸ್ಯಾಶ್ವಾಂಶ್ಚತುರೋ ಹತ್ವಾ ಸಹದೇವಃ ಪ್ರತಾಪವಾನ್ ॥41॥
ಸಾರಥಿಂ ಪ್ರೇಷಯಾಮಾಸ ಯಮಸ್ಯ ಸದನಂ ಪ್ರತಿ ॥42॥
ಉಲೂಕನು ರಣದಲ್ಲಿ ಕ್ರುದ್ಧನಾಗಿ ಸಹದೇವನನ್ನು ಇದಿರಿಸಿ ಅವನಿಂದ ತಡೆಯಲ್ಪಟ್ಟ. ಪ್ರತಾಪಶಾಲಿಯಾದ ಸಹದೇವನು ಉಲೂಕನ ನಾಲ್ಕು ಕುದುರೆಗಳನ್ನು ಕೊಂದು ಸಾರಥಿಯನ್ನೂ ಯಮಸದನಕ್ಕೆ ಅಟ್ಟಿದ.
ಉಲೂಕಸ್ತು ತತೋ ಯಾನಾದವಪ್ಲುತ್ಯ ವಿಶಾಂಪತೇ |
ತ್ರಿಗರ್ತಾನಾಂ ಬಲಂ ಪೂರ್ಣಂ ಜಗಾಮ ಪಿತೃನಂದನಃ ॥43॥
ರಾಜನೆ, ತಂದೆಗೆ ಆನಂದನೀಡುವ ಉಲೂಕನು ಆಗ ರಥದಿಂದ ಕೆಳಗೆ ಹಾರಿ ತ್ರಿಗರ್ತರ ತುಂಬಿದ ಸೈನ್ಯದೊಳಗೆ ಸೇರಿಕೊಂಡ.
ಸಾತ್ಯಕಿಃ ಶಕುನಿಂ ವಿದ್ಧ್ವಾ ವಿಂಶತ್ಯಾ ನಿಶಿತೈಃ ಶರೈಃ |
ಧ್ವಜಂ ಚಿಚ್ಛೇದ ಭಲ್ಲೇನ ಸೌಬಲಸ್ಯ ಹಸನ್ನಿವ ॥44॥
ಸಾತ್ಯಕಿಯು ಶಕುನಿಯನ್ನು ತೀಕ್ಷ್ಣವಾದ ಇಪ್ಪತ್ತು ಬಾಣಗಳಿಂದ ಹೊಡೆದು ನಗುತ್ತ ಅವನ ಧ್ವಜವನ್ನು ಭಲ್ಲೆಯಿಂದ ಕಡಿದ.
ಸೌಬಲಸ್ತಸ್ಯ ಸಮರೇ ಕ್ರುದ್ಧೋ ರಾಜನ್ ಪ್ರತಾಪವಾನ್ |
ವಿದಾರ್ಯ ಕವಚಂ ಭೂಯೋ ಧ್ವಜಂ ಚಿಚ್ಛೇದ ಕಾಂಚನಮ್ ॥45॥
ರಾಜನೆ, ಪ್ರತಾಪಶಾಲಿಯಾದ ಶಕುನಿ ರಣದಲ್ಲಿ ಕ್ರುದ್ಧನಾಗಿ ಸಾತ್ಯಕಿಯ ಕವಚವನ್ನು ಸೀಳಿ ಪುನಃ ಅವನ ಬಂಗಾರದ ಧ್ವಜವನ್ನೂ ಕತ್ತರಿಸಿದ.
ಅಥೈನಂ ನಿಶಿತೈರ್ಬಾಣೈಃ ಸಾತ್ಯಕಿಃ ಪ್ರತ್ಯವಿಧ್ಯತ |
ಸಾರಥಿಂ ಚ ಮಹಾರಾಜ ತ್ರಿಭಿರೇವ ಸಮಾರ್ದಯತ್ ॥46॥
ಅಥಾಸ್ಯ ವಾಹಾಂಸ್ತ್ವರಿತಃ ಶರೈರ್ನಿನ್ಯೇ ಯಮಕ್ಷಯಮ್ ॥47॥
ಮಹಾರಾಜ, ಸಾತ್ಯಕಿಯೂ ಹರಿತವಾದ ಬಾಣಗಳಿಂದ ಶಕುನಿಯನ್ನು ಪ್ರತಿಯಾಗಿ ಹೊಡೆದ. ಸಾರಥಿಯನ್ನೂ ಮೂರುಬಾಣಗಳಿಂದ ಗಾಯಗೊಳಿಸಿದ. ಬೇಗನೆ ಅವನ ಕುದುರೆಗಳನ್ನು ಸಂಹರಿಸಿದ.
ತತೋಽವಪ್ಲುತ್ಯ ಸಹಸಾ ಶಕುನಿರ್ಭರತರ್ಷಭ |
ಆರುರೋಹ ರಥಂ ತೂರ್ಣಮುಲೂಕಸ್ಯ ಮಹಾರಥಃ ॥48॥
ರಾಜನೆ, ಆಗ ಮಹಾರಥನಾದ ಶಕುನಿ ರಥದಿಂದ ಕೆಳಗೆ ಹಾರಿ ಬೇಗನೆ ಉಲೂಕನ ರಥವನ್ನು ಏರಿದ.
ಅಪೋವಾಹಾಥ ಶೀಘ್ರಂ ಸ ಶೈನೇಯಾದ್ ಯುದ್ಧಶಾಲಿನಃ ॥49॥
ಯುದ್ಧದಲ್ಲಿ ಶೋಭಿಸುವ ಸಾತ್ಯಕಿಯ ಇದಿರಿನಿಂದ ಉಲೂಕನು ಆಚೆಗೆ ಹೊರಟುಹೋದ.
ಸಾತ್ಯಕಿಸ್ತು ರಣೇ ರಾಜನ್ ತಾವಕಾನಾಮನೀಕಿನೀಮ್ |
ಅಭಿದುದ್ರಾವ ವೇಗೇನ ತತೋಽನೀಕಮಭಿದ್ಯತ ॥50॥
ರಾಜನೆ, ಸಾತ್ಯಕಿಯು ನಿನ್ನವರ ಸೈನ್ಯವನ್ನು ವೇಗದಿಂದ ನುಗ್ಗಿದ. ಆಗ ಸೈನ್ಯವು ಭಗ್ನವಾಗಿ ಪಲಾಯನ ಮಾಡಿತು.
ಶೈನೇಯಶರನುನ್ನಂ ತು ತತಃ ಸೈನ್ಯಂ ವಿಶಾಂಪತೇ |
ಭೇಜೇ ದಶ ದಿಶಸ್ತೂರ್ಣಂ ನ್ಯಪತಚ್ಚ ಗತಾಸುವತ್ ॥51॥
ರಾಜನೆ, ಸಾತ್ಯಕಿಯ ಬಾಣಗಳಿಂದ ಪೀಡಿತವಾದ ನಿನ್ನ ಸೈನ್ಯವು ಬೇಗನೆ ಹತ್ತು ದಿಕ್ಕುಗಳಿಗೆ ಹೋಯಿತು. ನಿರ್ಜೀವವಾದಂತೆ ನೆಲದ ಮೇಲೆ ಬಿದ್ದಿತು.
ಭೀಮಸೇನಂ ತವ ಸುತೋ ವಾರಯಾಮಾಸ ಸಂಯುಗೇ |
ತಂ ತು ಭೀಮೋ ಮುಹೂರ್ತೇನ ವ್ಯಶ್ವಸೂತರಥಧ್ವಜಮ್ ॥52॥
ಚಕ್ರೇ ಲೋಕೇಶ್ವರಂ ತತ್ರ ತೇನಾತುಷ್ಯಂತ ಚಾರಣಾಃ ॥53॥
ಭೀಮಸೇನನನ್ನು ನಿನ್ನ ಮಗ ದುರ್ಯೋಧನನು ರಣದಲ್ಲಿ ತಡೆದ. ಆದರೆ ಮುಹೂರ್ತಮಾತ್ರದಲ್ಲಿ ಭೀಮನು ಲೋಕೇಶ್ವರನಾದ ಅವನನ್ನು ಅಶ್ವ ಸೂತ ಛತ್ರ ಧ್ವಜ ರಹಿತನನ್ನಾಗಿ ಮಾಡಿದ. ಅದರಿಂದ ಚಾರಣರು ನೋಡಿ ಸಂತೋಷ ಪಟ್ಟರು.
ತತೋಽಪಾಯಾನ್ನ ೃಪಸ್ತತ್ರ ಭೀಮಸೇನಸ್ಯ ಗೋಚರಾತ್ |
ಕುರುಸೈನ್ಯಂ ತತಃ ಸರ್ವಂ ಭೀಮಸೇನಮುಪಾದ್ರವತ್ ॥54॥
ತತ್ರ ರಾವೋ ಮಹಾನಾಸೀದ್ ಭೀಮಮೇಕಂ ಜಿಘಾಂಸತಾಮ್ ॥55॥
ದುರ್ಯೋಧನನು ಆಗ ಭೀಮಸೇನನ ಸಮ್ಮುಖದಿಂದ ಪಲಾಯನ ಮಾಡಿದ. ಬಳಿಕ ಕೌರವಸೈನ್ಯವಿಡೀ ಭೀಮಸೇನನನ್ನು ಆಕ್ರಮಿಸಿತು. ಏಕಾಕಿಯಾದ ಭೀಮನನ್ನು ಕೊಲ್ಲಲು ಬಯಸಿದ ಯೋಧರು ದೊಡ್ಡ ಗರ್ಜನೆ ಮಾಡಿದರು.

ಯುಧಾಮನ್ಯುಃ ಕೃಪಂ ವಿದ್ಧ್ವಾ ಧನುರಸ್ಯಾಶು ಚಿಚ್ಛಿದೇ |
ಅಥಾನ್ಯದ್ಧನುರಾದಾಯ ಕೃಪಃ ಶಸ್ತ್ರಭೃತಾಂ ವರಃ ||56||
ಯುಧಾಮನ್ಯೋರ್ಧ್ವಜಂ ಸೂತಂ ಛತ್ರಂ ಚಾಪಾತಯತ್ ಕ್ಷಿತೌ |
ತತೋಽಪಾಯಾದ್ ರಥೇನೈವ ಯುಧಾಮನ್ಯುರ್ಮಹಾರಥಃ ||57||
ಯುಧಾಮನ್ಯುವು ಕೃಪನನ್ನು ಬಾಣದಿಂದ ಹೊಡೆದು ಬೇಗನೆ ಅವನ ಬಿಲ್ಲನ್ನೂ ಕಡಿದ. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಕೃಪನು ಬೇರೆ ಬಿಲ್ಲನ್ನೆತ್ತಿಕೊಂಡು ಯುಧಾಮನ್ಯುವಿನ ಧ್ವಜ ಸಾರಥಿ ಛತ್ರಗಳನ್ನು ನೆಲದಲ್ಲಿ ಕೆಡವಿದ. ಆಗ ಮಹಾರಥನಾದ ಯುಧಾಮನ್ಯು ರಥದಿಂದಲೆ ಪಲಾಯನಗೈದ.
ಉತ್ತಮೌಜಾಸ್ತು ಹಾರ್ದಿಕ್ಯಂ ಶರೈರ್ಭೀಮಪರಾಕ್ರಮಮ್ |
ಛಾದಯಾಮಾಸ ಸಹಸಾ ಮೇಘೋ ವೃಷ್ಟ್ಯೇವ ಪರ್ವತಮ್ ||58||
ಉತ್ತಮೌಜನು ಭಯಂಕರ ಪರಾಕ್ರಮಿಯಾದ ಕೃತವರ್ಮನನ್ನು ಮೋಡವು ಮಳೆಯಿಂದ ಬೆಟ್ಟವನ್ನು ಮುಚ್ಚುವಂತೆ, ಬೇಗನೆ ಬಾಣಗಳಿಂದ ಮುಚ್ಚಿದ.
ತದ್ಯುದ್ಧಂ ಸುಮಹಚ್ಚಾಸೀದ್ ಘೋರರೂಪಂ ಪರಂತಪ |
ಯಾದೃಶಂ ನ ಮಯಾ ಯುದ್ಧಂ ದೃಷ್ಟಪೂರ್ವಂ ವಿಶಾಂಪತೇ ||59||
ರಾಜನೆ, ಅವರ ಆ ಯುದ್ಧವು ದೊಡ್ಡದಾಗಿತ್ತು. ಭಯಂಕರಸ್ವರೂಪದ್ದಾಗಿತ್ತು. ಅಂಥ ಯುದ್ಧವನ್ನು ನಾನು ಹಿಂದೆ ಕಂಡೇ ಇರಲಿಲ್ಲ.
ಕೃತವರ್ಮಾ ತತೋ ರಾಜನ್ನುತ್ತಮೌಜಸಮಾಹವೇ |
ಹೃದಿ ವಿವ್ಯಾಧ ಸ ತದಾ ರಥೋಪಸ್ಥ ಉಪಾವಿಶತ್ ||60||
ರಾಜನೆ, ಕೃತವರ್ಮನು ರಣದಲ್ಲಿ ಉತ್ತಮೌಜನನ್ನು ಎದೆಯಲ್ಲಿ ಹೊಡೆದ. ಆಗ ಆತನು ರಥದ ಹಿಂಬಾಗದಲ್ಲಿ ಕುಳಿತುಕೊಂಡ.
ಸಾರಥಿಸ್ತಮಪೋವಾಹ ರಥೇನ ರಥಿನಾಂ ವರಮ್ |
ತತಸ್ತು ಸತ್ವರೋ ರಾಜನ್ ಪಾಂಡುಸೈನ್ಯಮುಪಾದ್ರವತ್ ||61||
ರಥಿಕರಲ್ಲಿ ಶ್ರೇಷ್ಠನಾದ ಉತ್ತಮೌಜನನ್ನು ಸಾರಥಿಯು ರಥದಿಂದ ದೂರಕ್ಕೆ ಒಯ್ದ. ಬಳಿಕ, ರಾಜನೆ, ಕೃತವರ್ಮನು ಪಾಂಡವಸೈನ್ಯವನ್ನು ಆಕ್ರಮಿಸಿದ.
ದುಃಶಾಸನಃ ಸೌಬಲಶ್ಚ ಗಜಾನೀಕೇನ ಪಾಂಡವಮ್ |
ಮಹತಾ ಪರಿವಾರ್ಯೈವ ಕ್ಷುರಪ್ರೈರಭ್ಯತಾಡಯತ್ ||62||
ದುಃಶಾಸನ ಮತ್ತು ಶಕುನಿಗಳು ದೊಡ್ಡ ಗಜಸೈನ್ಯದಿಂದೊಡಗೂಡಿ ಭೀಮನನ್ನು ಬಾಣಗಳಿಂದ ಹೊಡೆದರು.
ತತೋ ಭೀಮಃ ಶರಶತೈರ್ದುರ್ಯೋಧನಮಮರ್ಷಣಮ್ |
ವಿಮುಖೀಕೃತ್ಯ ತರಸಾ ಗಜಾನೀಕಮುಪಾದ್ರವತ್ ||63||
ನೂರಾರು ಬಾಣಗಳಿಂದ ಅಸಹನೆವುಳ್ಳ ದುರ್ಯೋಧನನನ್ನು ಪಲಾಯನ ಗೈಯುವಂತೆ ಮಾಡಿದ್ದ ಭೀಮನು, ಬಳಿಕ ವೇಗದಿಂದ ಗಜಸೈನ್ಯವನ್ನೇ ಆಕ್ರಮಿಸಿದ.
ತಮಾಪತನ್ತಂ ಸಂಪ್ರೇಕ್ಷ್ಯ ಗಜಾನೀಕಂ ವೃಕೋದರಃ ||64||
ಗಜೈರ್ಗಜಾನಭ್ಯಹನದ್ ವಜ್ರೇಣೇಂದ್ರ ಇವಾಸುರಾನ್ |
ಶಲಭಾನಿವ ನಾಗಾಂಸ್ತಾನ್ ಅರ್ದಯಾಮಾಸ ಪಾಂಡವಃ ||65||
ತನ್ನ ಮೇಲೆ ಎರಗುತ್ತಿರುವ ಗಜಸೈನ್ಯವನ್ನು ನೋಡಿದಮಾತ್ರಕ್ಕೆ ವಜ್ರಾಯುಧ ದಿಂದ ಇಂದ್ರನು ಅಸುರರನ್ನು ಸಂಹರಿಸುವಂತೆ ಗಜಗಳಿಂದಲೆ ಗಜಗಳನ್ನು ಭೀಮನು ಸಂಹರಿಸಿದ. ತನ್ನ ಬಲದ ಮುಂದೆ ಮಿಡತೆಗಳಂತಿದ್ದ ಆನೆಗಳನ್ನು ಹೀಗೆ ಭೀಮನು ಸಂಹರಿಸಿದ.
ತತೋಽಂತರಿಕ್ಷಂ ಬಾಣೌಘೈಃ ಶಲಭೈರಿವ ಪಾದಪಂ |
ಛಾದಯಾಮಾಸ ಸಮರೇ ಗಜಾನ್ನಿಘ್ನನ್ ವೃಕೋದರಃ ||66||
ಮಿಡತೆಗಳು ಮರವನ್ನು ಮುಚ್ಚುವಂತೆ ಆಕಾಶವನ್ನು ಮುಚ್ಚುವ ಬಾಣಸಮೂಹಗಳಿಂದಲೂ ಆನೆಗಳನ್ನು ಭೀಮನು ಸಂಹರಿಸಿದ.
ತತಃ ಕುಂಜರಯೂಥಾನಿ ಸಮೇತಾನಿ ಸಹಸ್ರಶಃ |
ವ್ಯಧಮತ್ ತರಸಾ ಭೀಮೋ ಮೇಘಸಂಘಾನಿವಾನಿಲಃ ||67||
ಸಾವಿರಾರು ಸಂಖ್ಯೆಯಲ್ಲಿ ಒಂದುಗೂಡಿದ ಗಜಸಮೂಹಗಳನ್ನು, ಭೀಮ ವೇಗದಿಂದ ಬಿರುಗಾಳಿಯು ಮೋಡಸಮೂಹಗಳನ್ನು ನಾಶಮಾಡುವಂತೆ, ನಾಶಪಡಿಸಿದ.
ಸುವರ್ಣಜಾಲಾಪಿಹಿತಾ ಮಣಿಜಾಲೈಶ್ಚ ಕುಂಜರಾಃ |
ರೇಜುರಭ್ಯಧಿಕಂ ಸಂಖ್ಯೇ ವಿದ್ಯುತ್ವಂತ ಇವಾಂಬುದಾಃ ||68||
ಸುವರ್ಣಹಾರ, ಮಣಿಹಾರಗಳಿಂದ ಅಲಂಕೃತವಾದ ಆನೆಗಳು ಮಿಂಚು ಗಳಿಂದ ಯುಕ್ತವಾದ ಮೋಡಗಳಂತೆ ರಣರಂಗದಲ್ಲಿ ಬಹಳವಾಗಿ ಕಂಗೊಳಿಸು ತ್ತಿದ್ದವು.
ತೇ ವಧ್ಯಮಾನಾ ಭೀಮೇನ ಗಜಾ ರಾಜನ್ ವಿದುದ್ರುವುಃ |
ಕೇಚಿದ್ ವಿಭಿನ್ನಹೃದಯಾಃ ಕುಂಜರಾ ನ್ಯಪತನ್ ಭುವಿ ||69||
ರಾಜನೆ, ಆ ಗಜಗಳನ್ನು ಭೀಮನು ಹೊಡೆದಾಗ ಅವು ಓಡಿಹೋದುವು. ಕೆಲವು ಆನೆಗಳು ಭಯದಿಂದ ಎದೆ ಒಡೆದು ನೆಲದ ಮೇಲೆ ಒರಗಿದುವು.
ಪತಿತೈರ್ನಿಪತದ್ಭಿಶ್ಚ ಗಜೈರ್ಹೇಮವಿಭೂಷಿತೈಃ |

ಅಶೋಭತ ಮಹೀ ತತ್ರ ವಿಶೀರ್ಣೈರಿವ ಪರ್ವತೈಃ ॥70॥
ಬಂಗಾರದಿಂದ ಅಲಂಕೃತವಾದ ಆನೆಗಳು ಬಿದ್ದಾಗಲೂ ಬೀಳುವಾಗಲೂ ರಣಭೂಮಿ ಜರಿದು ಬೀಳುವ ಪರ್ವತ ಶಿಖರಗಳಿಂದ ಭೂಮಿ ಶೋಭಿಸುವಂತೆ ಶೋಭಿಸಿತು.
ದೀಪ್ತಾಭರಣವದ್ಭಿಶ್ಚ ಪತಿತೈರ್ಗಜಯೋಧಿಭಿಃ ।
ರರಾಜ ಭೂಮಿಃ ಪತಿತೈಃ ಕ್ಷೀಣಪುಣ್ಯೈರಿವಾಮರೈಃ ॥71॥
ಹೊಳೆಯುವ ಆಭರಣಗಳಿಂದ ಅಲಂಕೃತರಾದ ಗಜಯೋಧರು ಹತರಾಗಿ ಬಿದ್ದಾಗ, ಪುಣ್ಯಕ್ಷಯದಿಂದ ಸ್ವರ್ಗವಾಸಿಗಳು ಬಿದ್ದಂತೇ ಭೂಮಿ ಶೋಭಿಸಿತು.
ತತೋ ಭಿನ್ನಕಟಾ ನಾಗಾ ಭಿನ್ನಕುಮ್ಭಕರಾಸ್ತಥಾ ।
ದುದ್ರುವುಃ ಶತಶಃ ಸಂಖ್ಯೇ ಭೀಮಸೇನಶರಾಹತಾಃ ॥72॥
ಭೀಮನ ಬಾಣಗಳಿಂದ ಸೀಳಿದ ಕಪೋಲ ಗಂಡಸ್ಥಳ ಸೊಂಡಿಲುಗಳುಳ್ಳ ನೂರಾರು ಗಜಗಳು ರಣರಂಗದಲ್ಲಿ ಧಾವಿಸಿದುವು.
ಕೇಚಿದ್ ವಮಂತೋ ರುದಿರಂ ಭಯಾರ್ತಾಃ ಪರ್ವತೋಪಮಾಃ ।
ವ್ಯದ್ರವನ್ ಶರವಿದ್ಧಾಂಗಾ ಧಾತುಚಿತ್ರಾ ಇವಾಚಲಾಃ ॥73॥
ಬೆಟ್ಟದ ಗಾತ್ರದ ಆನೆಗಳು ಬಾಣಗಳ ಹೊಡೆತದಿಂದ ಭಯವಿಹ್ವಲವಾಗಿ ಓಡಿದುವು. ರಕ್ತ ಕಾರುತ್ತ ಕೆಲವು ಧಾತುಗಳಿಂದ ಚಿತ್ರಿತವಾದ ಬೆಟ್ಟಗಳಂತೆ ಕಂಡುಬಂದುವು.
ಮಹಾಭುಜಗಸಂಕಾಶೌ ಚಂದನಾಗರುರೂಷಿತೌ ।
ಅಪಶ್ಯಂ ಭೀಮಸೇನಸ್ಯ ಧನುರ್ವಿಕ್ಷಿಪತೋ ಭುಜೌ ॥74॥
ಭೀಮನ ಬಾಹುಗಳು ಹೆಬ್ಬಾವುಗಳಂತೆ ನೀಳವಾಗಿದ್ದು ಚಂದನ ಅಗರುಗಳಿಂದ ಲೇಪಿತವಾಗಿದ್ದು ಅವು ಧನುಸ್ಸನ್ನು ಸೆಳೆಯುತ್ತಿದ್ದುದನ್ನು ನಾನು ಕಂಡಿದ್ದೇನೆ.
ತಸ್ಯ ಜ್ಯಾತಲನಿರ್ಘೋಷಂ ಶ್ರುತ್ವಾಶನಿಸಮಸ್ವನಮ್ ।
ವಿಮುಂಚಂತಃ ಶಕೃನ್ಮೂತ್ರಂ ಗಜಾಃ ಪ್ರಾದುದ್ರುವುರ್ಭೃಶಮ್ ॥75॥
ಗುಡುಗಿನಂತಿರುವ ಭೀಮನ ಧನುಷ್ಟಂಕಾರವನ್ನು ಕೇಳಿಯೇ ಗಜಗಳು ಬಹಳ ವಾಗಿ ಮಲಮೂತ್ರಗಳನ್ನು ಸುರಿಸುತ್ತ ಓಡಿಹೋದುವು.
ಭೀಮಸೇನಸ್ಯ ತತ್ಕರ್ಮ ರಾಜನ್ನೇಕಸ್ಯ ನಿರ್ಬಭೌ ।
ನಿಘ್ನತಃ ಸರ್ವಭೂತಾನಿ ರುದ್ರಸ್ಯೇವ ಚ ನಿರ್ಬಭೌ ॥76॥
ರಾಜನೆ, ಭೀಮಸೇನನು ಒಬ್ಬನೇ ಮಾಡಬಲ್ಲ ಆ ಯುದ್ಧ ಅವನಿಗೇ ಒಪ್ಪುವಂತಿತ್ತು. ಆ ಕರ್ಮ ಸರ್ವಪ್ರಾಣಿಗಳನ್ನು ಸಂಹರಿಸುವ ರುದ್ರನ ಲಯಕರ್ಮ ದಂತೇ ಶೋಭಿಸಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಅಷ್ಟಪಂಚಾಶೋಽಧ್ಯಾಯಃ ॥58॥

ಐವತ್ತೊಂಬತ್ತನೆಯ ಅಧ್ಯಾಯ
ಸಹದೇವ ದುರ್ಯೋಧನರ ಯುದ್ಧ.
ಪುನಃ ಯುಧಿಷ್ಠಿರನನ್ನು ಸೆರೆಹಿಡಿವ ಯತ್ನ ವಿಫಲವಾಯಿತು
ಸಂಜಯಃ
ತತಃ ಶ್ವೇತಾಶ್ವಸಂಯುಕ್ತೇ ನಾರಾಯಣಸಮಾಹಿತೇ ।
ತಿಷ್ಠನ್ ರಥವರೇ ಶ್ರೀಮಾನರ್ಜುನಃ ಸಮಪದ್ಯತ ॥1॥
ಸಂಜಯನು ನುಡಿದ– ಬಿಳಿಕುದುರೆಗಳನ್ನು ಹೂಡಿರುವ, ಶ್ರೀಕೃಷ್ಣನು ನಡೆಸುತ್ತಿರುವ, ಶ್ರೇಷ್ಠರಥದಲ್ಲಿ ನಿಂತು ಶ್ರೀಮಾನ್ ಅರ್ಜುನ ರಣಭೂಮಿಗೆ ಆಗಮಿಸಿದ.
ತದ್ಬಲಂ ನೃಪತಿಶ್ರೇಷ್ಠ ತಾವಕಂ ವಿಜಯೋ ರಣೇ ।
ವ್ಯಕ್ಷೋಭಯದುದೀರ್ಣಾಶ್ವಂ ಮಹೋದಧಿಮಿವಾನಿಲಃ ॥2॥
ರಾಜನೆ, ಮಹಾಸಾಗರವನ್ನು ಚಂಡಮಾರುತ ಕ್ಷೋಭೆಗೊಳಿಸುವಂತೆ ದೊಡ್ಡ ಅಶ್ವಸೈನ್ಯಯುಕ್ತವಾದ ನಿನ್ನ ಕುರುಸೈನ್ಯವನ್ನು ಅರ್ಜುನನು ರಣದಲ್ಲಿ ಕ್ಷೋಭೆ ಗೊಳಿಸಿದ.
ದುರ್ಯೋಧನಸ್ತವ ಸುತಃ ಪ್ರಮಥನ್ ವೈರಿವಾಹಿನೀಮ್ ।
ಅಭ್ಯಯಾತ್ ಸಹಸಾ ಕ್ರುದ್ಧಃ ಸೈನ್ಯಾರ್ಧೇನಾಪಿ ಸಂವೃತಃ ॥3॥
ನಿನ್ನ ಮಗ ದುರ್ಯೋಧನ ಅರ್ಧಸೈನ್ಯಯುಕ್ತನಾಗಿದ್ದರೂ ಕ್ರುದ್ಧನಾಗಿ ವೇಗದಿಂದ ಶತ್ರುಸೈನ್ಯವನ್ನು ಮರ್ದಿಸುತ್ತ ಆಕ್ರಮಿಸಿದ.
ಪರ್ಯವಾರಯದಾಯಾಂತಂ ಯುಧಿಷ್ಠಿರಮಮರ್ಷಣಃ ।
ಕ್ಷುರಪ್ರಾಣಾಂ ತ್ರಿಸಪ್ತತ್ಯಾ ತತೋಽವಿಧ್ಯತ ಪಾಂಡವಮ್ ॥4॥
ಸಹನೆ ಇಲ್ಲದ ದುರ್ಯೋಧನನು ತನ್ನ ಕಡೆಗೆ ಬರುತ್ತಿದ್ದ ಯುಧಿಷ್ಠಿರನನ್ನು ಸುತ್ತಲೂ ಆಕ್ರಮಿಸಿದ. ಎಪ್ಪತ್ತಮೂರು ಬಾಣಗಳಿಂದ ಅವನನ್ನು ಹೊಡೆದ.
ಅಕ್ರುಧ್ಯತ ಭೃಶಂ ತತ್ರ ಕುಂತೀಪುತ್ರೋ ಯುಧಿಷ್ಠಿರಃ ।
ಸ ಭಲ್ಲಾಂಸ್ತ್ರಿಂಶತಸ್ತೂರ್ಣಂ ತವ ಪುತ್ರೇ ನ್ಯವೇಶಯತ್ ॥5॥
ಕುಂತೀಪುತ್ರ ಯುಧಿಷ್ಠಿರನು ಬಲುಕುಪಿತನಾದ. ಮೂವತ್ತು ಭಲ್ಲೆಗಳನ್ನು ನಿನ್ನ ಮಗನ ಮೇಲೆ ಎಸೆದ.

ತತೋಽಧಾವಂತ ಕೌರವ್ಯಾ ಜಿಘೃಕ್ಷಂತೋ ಯುಧಿಷ್ಠಿರಮ್ |
ದುಷ್ಟಭಾವಾನ್ ಪರಾನ್ ಜ್ಞಾತ್ವಾ ಸಮವೇತಾ ಮಹಾರಥಾಃ ॥6॥
ಆಜಗ್ಮುಸ್ತಂ ಪರೀಪ್ಸಂತಃ ಕುಂತೀಪುತ್ರಂ ಯುಧಿಷ್ಠಿರಮ್ |
ನಕುಲಃ ಸಹದೇವಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥7॥
ಅಕ್ಷೋಹಿಣ್ಯಾ ಪರಿವೃತಾಸ್ತೇಽಭ್ಯಧಾವನ್ ಯುಧಿಷ್ಠಿರಮ್ ॥8॥
ಆಗ ಕೌರವಸೈನಿಕರು ಯುಧಿಷ್ಠಿರನನ್ನು ಸೆರೆಹಿಡಿಯಲೆಂದು ಧಾವಿಸಿ ಬಂದರು. ಶತ್ರುಗಳ ಈ ದುರುದ್ದೇಶವನ್ನು ತಿಳಿದು ಪಾಂಡವರ ಮಹಾರಥರು ಕುಂತೀಪುತ್ರ ಯುಧಿಷ್ಠಿರನನ್ನು ರಕ್ಷಿಸಲು ಬಯಸುತ್ತ ಎಲ್ಲರೂ ಒಂದಾಗಿ ಸೇರಿಬಂದರು. ನಕುಲಸಹದೇವ ಧೃಷ್ಟದ್ಯುಮ್ನರು ಒಂದು ಅಕ್ಷೋಹಿಣಿ ಸೈನ್ಯಸಮೇತರಾಗಿ
ಯುಧಿಷ್ಠಿರನ ಬಳಿಗೆ ಧಾವಿಸಿ ಬಂದರು.
ಭೀಮಸೇನಶ್ಚ ಸಮರೇ ಮೃದ್ನಂಸ್ತವ ಮಹಾರಥಾನ್ |
ಅಭ್ಯಧಾವದಭಿಪ್ರೇಪ್ಸೂ ರಾಜಾನಂ ಶತ್ರುಭಿರ್ವೃತಮ್ ॥9॥
ಭೀಮಸೇನನೂ ರಣದಲ್ಲಿ ನಿನ್ನಕಡೆಯ ಮಹಾರಥರನ್ನು ಮರ್ದಿಸುತ್ತ, ರಾಜಾ ಯುಧಿಷ್ಠಿರನು ಶತ್ರುಗಳಿಂದ ಸುತ್ತುವರಿಯಲ್ಪಟ್ಟನೆಂದು ತಿಳಿದು, ಅವನನ್ನು ರಕ್ಷಿಸಲು ಧಾವಿಸಿಬಂದ.
ತಾಂಸ್ತು ಸರ್ವಾನ್ ಮಹೇಷ್ವಾಸಾನ್ ಕರ್ಣೋ ವೈಕರ್ತನೋ ನೃಪ |
ಶರವರ್ಷೇಣ ಮಹತಾ ಪ್ರತ್ಯವಾರಯದಾಗತಾನ್ ॥10॥
ರಾಜನೆ, ಬಂದ ಎಲ್ಲ ಮಹಾರಥರನ್ನು ಕರ್ಣನು ದೊಡ್ಡ ಬಾಣಗಳ ಮಳೆಯಿಂದ ತಡೆದ.
ಶರೌಘಾನ್ ವಿಸೃಜಂತಸ್ತೇ ಪ್ರೇರಯಂತಶ್ಚ ತೋಮರಾನ್ |
ನ ಶೇಕುರ್ಯತ್ನವಂತೋಽಪಿ ರಾಧೇಯಂ ಪ್ರತಿವೀಕ್ಷಿತುಮ್ ॥11॥
ಆ ಮಹಾರಥರು ಬಾಣಸಮೂಹಗಳನ್ನು ಎಸೆದರೂ ತೋಮರಗಳನ್ನು ಎಸೆದರೂ ಎಷ್ಟು ಪ್ರಯತ್ನಮಾಡಿದರೂ ಕರ್ಣನನ್ನು ಪ್ರತಿಯಾಗಿ ದಿಟ್ಟಿಸಿನೋಡಲು ಶಕ್ತರಾಗಲಿಲ್ಲ.
ತಾಂಶ್ಚ ಸರ್ವಾನ್ ಮಹೇಷ್ವಾಸಾನ್ ಸರ್ವಶಸ್ತ್ರಾಸ್ತ್ರಪಾರಗಃ |
ಮಹತಾ ಶರವರ್ಷೇಣ ರಾಧೇಯಃ ಪ್ರತ್ಯವಾರಯತ್ ॥12॥
ಸರ್ವಶಸ್ತ್ರಅಸ್ತ್ರಗಳಲ್ಲಿ ಪಾರಂಗತನಾದ ಕರ್ಣನು ಆ ಎಲ್ಲ ಮಹಾ ಬಿಲ್ಲಾಳು ಗಳನ್ನು ದೊಡ್ಡ ಬಾಣವೃಷ್ಟಿಯಿಂದ ತಡೆದು ನಿಲ್ಲಿಸಿದ.
ದುರ್ಯೋಧನಂ ತು ವಿಂಶತ್ಯಾ ನಾರಾಚಾನಾಂ ಕೃತೀ ಬಲೀ |
ಅವಿಧ್ಯತ್ತೂರ್ಣಮಭ್ಯೇತ್ಯ ಸಹದೇವೋ ಮಹಾರಥಃ ॥13॥
ಯತ್ನಶೀಲ ಬಲಿಷ್ಠ ಮಹಾರಥನಾದ ಸಹದೇವನು ದುರ್ಯೋಧನನನ್ನು ಬೇಗನೆ ಆಕ್ರಮಿಸಿ, ಇಪ್ಪತ್ತು ಬಾಣಗಳಿಂದ ಹೊಡೆದ.
ಸೋಽತಿವಿದ್ಧೋ ಬಲವತಾ ರಾಜಾ ಬಲಸಮನ್ವಿತಃ |
ಪ್ರಭಿನ್ನ ಇವ ಮಾತಂಗೋ ರುಧಿರೇಣ ಪರಿಪ್ಲುತಃ ॥14॥
ಸೈನ್ಯಸಹಿತನಾದ ರಾಜಾದುರ್ಯೋಧನನು ಬಲಿಷ್ಠನಾದ ಸಹದೇವನಿಂದ ಬಹಳ ಹೊಡೆಸಿಕೊಂಡು ಬಹಳ ಸೀಳಿಹೋದ ಆನೆಯಂತೆ ರಕ್ತದಿಂದ ತೊಯ್ದ.
ದೃಷ್ಟ್ವಾ ಸುತಂ ತವ ಶರೈರ್ಗಾಢವಿದ್ಧಂ ಸುತೇಜನೈಃ |
ಅಭ್ಯಧಾವದ್ ಭೃಶಂ ಕ್ರುದ್ಧೋ ರಾಧೇಯೋ ರಥಿನಾಂ ವರಃ ॥15॥
ನಿನ್ನ ಮಗನು ತೀಕ್ಷ್ಣವಾದ ಬಾಣಗಳಿಂದ ಗಾಢವಾಗಿ ಹೊಡೆಸಿಕೊಂಡಿದ್ದನ್ನು ನೋಡಿ ರಥಿಕರಲ್ಲಿ ಶ್ರೇಷ್ಠನಾದ ಕರ್ಣನು ಬಲುಕುಪಿತನಾಗಿ ಧಾವಿಸಿಬಂದ.
ದುರ್ಯೋಧನಂ ತಥಾ ದೃಷ್ಟ್ವಾ ಶೀಘ್ರಮಸ್ತ್ರಮುದೀರ್ಯ ಸಃ |
ತೇನ ಯೌಧಿಷ್ಠಿರಂ ಸೈನ್ಯಮವಧೀತ್ ಪಾರ್ಷತಂ ತಥಾ ॥16॥
ದುರ್ಯೋಧನನನ್ನು ಆ ಅವಸ್ಥೆಯಲ್ಲಿ ಕಂಡು ಕರ್ಣನು ಬೇಗನೆ ಅಸ್ತ್ರವನ್ನು ಪ್ರಯೋಗಿಸಿ ಅದರಿಂದ ಯುಧಿಷ್ಠಿರನ ಸೈನ್ಯವನ್ನೂ ಧೃಷ್ಟದ್ಯುಮ್ನನನ್ನೂ ಹೊಡೆದ.
ತತೋ ಯೌಧಿಷ್ಠಿರಂ ಸೈನ್ಯಂ ವಧ್ಯಮಾನಂ ಮಹಾತ್ಮನಾ |
ಸಹಸಾ ಪ್ರಾದ್ರುವದ್ ರಾಜನ್ ಸೂತಪುತ್ರಭಯಾರ್ದಿತಮ್ ॥17॥
ರಾಜನೆ, ಮಹಾತ್ಮ ಕರ್ಣನಿಂದ ಹೊಡೆಸಿಕೊಂಡ ಯುಧಿಷ್ಠಿರಸೇನೆ ಕರ್ಣನ ಭಯದಿಂದ ವ್ಯಾಕುಲಗೊಂಡು ವೇಗವಾಗಿ ಓಡಲು ತೊಡಗಿತು.
ವಿವಿಧಾ ವಿಶಿಖಾಸ್ತತ್ರ ಸಂಪತಂತಃ ಪರಸ್ಪರಮ್ |
ಪುಂಖೈಃ ಪುಂಖಾನ್ ಸಮಾಜಘ್ನುಃ ಸೂತಪುತ್ರಧನುಶ್ಚ್ಯುತಾಃ ॥18॥
ಕರ್ಣನ ಧನುಸ್ಸಿನಿಂದ ಹೊರಟ ನಾನಾ ಬಗೆಯ ಬಾಣಗಳು ಪರಸ್ಪರ ಪುಂಖಾನುಪುಂಖವಾಗಿ ಸಾಲಾಗಿ ಹಾರುತ್ತ ಪುಕ್ಕಗಳನ್ನು ಪುಕ್ಕಗಳಿಂದ ಕೂಡಿ ಕೊಂಡವು.
ಅಂತರಿಕ್ಷೇ ಶರೌಘಾಣಾಂ ಪತತಾಂ ಚ ಪರಸ್ಪರಮ್ |
ಸಂಘರ್ಷೇಣ ಮಹಾರಾಜ ಪಾವಕಃ ಸಮಜಾಯತ ॥19॥
ಮಹಾರಾಜ, ಅಂತರಿಕ್ಷದಲ್ಲಿ ಹಾರುವ ಬಾಣಸಮೂಹಗಳಿಗೆ ಪರಸ್ಪರ ಸಂಘರ್ಷ ಉಂಟಾದ್ದರಿಂದ ಬೆಂಕಿ ಎದ್ದಿತು.
ತತೋ ದಶ ದಿಶಃ ಶೀಘ್ರೈಃ ಶಲಭೈರಿವ ಯಾಯಿಭಿಃ |

ಅಭ್ಯಹಂಸ್ತರಸಾ ಕರ್ಣಃ ಶರೈಃ ಪರಶರೀರಗೈಃ ॥20॥
ದಶ ದಿಕ್ಕುಗಳಿಗೆ ಮಿಡತೆಗಳಂತೆ ವೇಗವಾಗಿ ಹೋಗುವ, ಶತ್ರುಶರೀರಗಳಲ್ಲಿ ಚುಚ್ಚಿಕೊಳ್ಳುವ ಬಾಣಗಳಿಂದ ಕರ್ಣನು ವೇಗದಿಂದ ಹೊಡೆದ.
ರಕ್ತಚಂದನಸಂದಿಗ್ಧೌ ಮಣಿಹೇಮವಿಭೂಷಿತೌ।
ಬಾಹೂ ವ್ಯತ್ಯಕ್ಷಿಪತ್ ಕರ್ಣಃ ಪರಮಾಸ್ತ್ರಂ ವಿದರ್ಶಯನ್ ॥21॥
ಕೆಂಪುಗಂಧ ಪೂಸಿದ, ರತ್ನಬಂಗಾರಗಳಿಂದ ಅಲಂಕೃತವಾದ ಬಾಹುಗಳನ್ನು ಕರ್ಣನು ಉತ್ತಮ ಅಸ್ತ್ರಪ್ರದರ್ಶನದ ಈ ಕಾಲದಲ್ಲಿ ಓಲಾಡಿಸಿದ.
ತತಃ ಸರ್ವಾ ದಿಶೋ ರಾಜನ್ ಸಾಯಕೈರ್ವಿಪ್ರಮೋಹಯನ್।
ಅಪೀಡಯದ್ ಭೃಶಂ ಕರ್ಣೋ ಧರ್ಮಪುತ್ರಂ ಯುಧಿಷ್ಠಿರಮ್ ॥22॥
ರಾಜನೆ, ಕರ್ಣನು ಎಲ್ಲ ದಿಕ್ಕುಗಳನ್ನು ಬಾಣಗಳಿಂದ ಭ್ರಾಂತಿಗೊಳಿಸುತ್ತ ಧರ್ಮಪುತ್ರ ಯುಧಿಷ್ಠಿರನನ್ನು ಬಹುವಾಗಿ ಪೀಡಿಸಿದ.
ತತಃ ಕ್ರುದ್ಧೋ ಮಹಾರಾಜ ಧರ್ಮಪುತ್ರೋ ಯುಧಿಷ್ಠಿರಃ।
ನಿಶಿತೈರಿಷುಭಿಃ ಕರ್ಣಂ ಪಂಚಾಶದ್ಭಿಃ ಸಮಾರ್ಪಯತ್ ॥23॥
ಮಹಾರಾಜ, ಆಗ ಕ್ರುದ್ಧನಾದ ಧರ್ಮಪುತ್ರ ಯುಧಿಷ್ಠಿರನು ತೀಕ್ಷ್ಣವಾದ ಐವತ್ತು ಬಾಣಗಳಿಂದ ಕರ್ಣನನ್ನು ಹೊಡೆದ.
ಬಾಣಾಂಧಕಾರಮಭವತ್ ತದ್ಯುದ್ಧಂ ಘೋರದರ್ಶನಮ್।
ಹಾಹಾಕಾರೋ ಮಹಾನಾಸೀತ್ ತಾವಕಾನಾಂ ವಿಶಾಂಪತೇ ॥24॥
ವಧ್ಯಮಾನೇ ತದಾ ಸೈನ್ಯೇ ಧರ್ಮಪುತ್ರೇಣ ಮಾರಿಷ ॥25॥
ರಾಜನೆ, ನೋಡಲು ಘೋರವಾದ ಆ ಯುದ್ಧವು ಬಾಣಗಳಿಂದ ಅಂಧಕಾರ ಉಂಟುಮಾಡಿತು. ನಿನ್ನ ಸೈನ್ಯವನ್ನು ಧರ್ಮಪುತ್ರನು ವಧಿಸುವಾಗ ನಿನ್ನ ಕಡೆಯಲ್ಲಿ ಮಹಾ ಹಾಹಾಕಾರ ಎದ್ದಿತು.
ಸಾಯಕೈರ್ವಿವಿಧೈಸ್ತೀಕ್ಷ್ಣೈಃ ಕಂಕಪತ್ರೈಃ ಶಿಲಾಶಿತೈಃ।
ಭಲ್ಲೈರನೇಕೈರ್ವಿವಿಧೈಃ ಶಕ್ತ್ಯ ೃಷ್ಟಿಮುಸಲೈರಪಿ ॥26॥
ಸಾಣೆ ಹಿಡಿದು ಹರಿತಗೊಳಿಸಿದ ಹದ್ದಿನ ರೆಕ್ಕೆಯುಳ್ಳ ನಾನಾ ಬಗೆಯ ಬಾಣಗಳಿಂದ, ಅನೇಕ ವಿಧದ ಅನೇಕ ಭಲ್ಲೆಗಳಿಂದ, ಶಕ್ತಿಋಷ್ಟಿ ಮುಸಲಗಳಿಂದ ಧರ್ಮಪುತ್ರನು ನಿನ್ನ ಸೈನ್ಯವನ್ನು ವಧಿಸಿದ.
ಯತ್ರ ಯತ್ರ ಸ ಧರ್ಮಾತ್ಮಾ ದೃಷ್ಟ್ವಾ ದೃಷ್ಟಿಂ ವ್ಯಸರ್ಜಯತ್।
ತತ್ರ ತತ್ರ ವ್ಯಶೀರ್ಯಂತ ತಾವಕಾ ಭರತರ್ಷಭ ॥27॥
ಧರ್ಮಾತ್ಮನಾದ ಯುಧಿಷ್ಠಿರನು ಎಲ್ಲೆಲ್ಲಿ ನೋಡಿ ದಿಟ್ಟಿಸಿದನೋ ಅಲ್ಲಲ್ಲಿ ನಿನ್ನ ಕಡೆಯವರು ಬಲಗುಂದಿದರು. ನಾಶ ಹೊಂದಿದರು.
ಕರ್ಣೋಽಪಿ ಭೃಶಸಂಕ್ರುದ್ಧೋ ಧರ್ಮರಾಜಂ ಯುಧಿಷ್ಠಿರಮ್।
ನಾರಾಚೈರರ್ಧಚಂದ್ರೈಶ್ಚ ವತ್ಸದಂತೈಶ್ಚ ಸಂಯುಗೇ ॥28॥
ಅಮರ್ಷೀ ಕ್ರೋಧನಶ್ಚೈವ ರೋಷಪ್ರಸ್ಫುರಿತಾಧರಃ।
ಸಾಯಕೈರಪ್ರಮೇಯಾತ್ಮಾ ಯುಧಿಷ್ಠಿರಮುಪಾದ್ರವತ್ ॥29॥
ಅಪ್ರಮೇಯಾತ್ಮನಾದ ಕರ್ಣನೂ ಕೂಡ ಬಲುಕ್ರುದ್ಧನಾಗಿ ಅಸಹನೆಯಿಂದ ರೋಷದಿಂದ ತುಟಿ ಅದುರಿಸುತ್ತ
ಧರ್ಮರಾಜಯುಧಿಷ್ಠಿರನನ್ನು ನಾರಾಚ ಅರ್ಧಚಂದ್ರ ವತ್ಸದಂತ ಸಾಯಕಗಳಿಂದ ಪೀಡಿಸಿದ.
ಯುಧಿಷ್ಠಿರಶ್ಚಾಪಿ ಸ ತಂ ಸ್ವರ್ಣಪುಂಖೈಃ ಶಿತೈಃ ಶರೈಃ।
ಪ್ರಹಸನ್ನಿವ ತಂ ಕರ್ಣಃ ಕಂಕಪತ್ರೈಃ ಶಿಲಾಶಿತೈಃ ॥30॥
ಉರಸ್ಯವಿಧ್ಯದ್ ರಾಜಾನಂ ತ್ರಿಭಿರ್ಭಲ್ಲೈಶ್ಚ ಪಾಂಡವಮ್ ॥31॥
ಯುಧಿಷ್ಠಿರನೂ ಕೂಡ ಬಂಗಾರದ ಪುಕ್ಕವುಳ್ಳ ತೀಕ್ಷ್ಣವಾದ ಬಾಣಗಳಿಂದ ಕರ್ಣನನ್ನು ಪೀಡಿಸಿದ. ಕರ್ಣನು ನಗುತ್ತ ರಾಜಾ ಯುಧಿಷ್ಠಿರನನ್ನು ಹದ್ದಿನ ರೆಕ್ಕೆಯುಳ್ಳ ಸಾಣೆ ಹಿಡಿದು ಹರಿತಗೊಂಡ ಬಾಣಗಳಿಂದ ಎದೆಯಲ್ಲಿ ಹೊಡೆದ. ಮೂರು ಭಲ್ಲೆಗಳಿಂದಲೂ ಹೊಡೆದ.
ಸ ಪೀಡಿತೋ ಭೃಶಂ ತೇನ ಧರ್ಮರಾಜೋ ಯುಧಿಷ್ಠಿರಃ।
ಉಪವಿಶ್ಯ ರಥೋಪಸ್ಥೇ ಸೂತಂ ಯಾಹೀತ್ಯಚೋದಯತ್ ॥32॥
ಯುಧಿಷ್ಠಿರನು ಅದರಿಂದ ಬಹಳ ಪೀಡಿತನಾಗಿ ರಥದ ಒಳಭಾಗದಲ್ಲಿ ಕುಳಿತು ಸೂತನಿಗೆ ``ಶಿಬಿರದ ಕಡೆಗೆ ಹೋಗು'' ಎಂದ.
ಪ್ರಾಕ್ರೋಶಂತ ತತಃ ಸರ್ವೇ ಧಾರ್ತರಾಷ್ಟ್ರಾಃ ಸರಾಜಕಾಃ।
ಗೃಹೀಧ್ವಮಿತಿ ರಾಜಾನಮಭ್ಯಧಾವಂತ ಸರ್ವಶಃ ॥33॥
ಎಲ್ಲ ಕೌರವರೂ ರಾಜರೂ `ಯುಧಿಷ್ಠಿರನನ್ನು ಸೆರೆ ಹಿಡಿಯಿರಿ' ಎಂದು ಕೂಗುತ್ತ ಎಲ್ಲೆಡೆಯಿಂದ ಧಾವಿಸಿಬಂದರು.
ತತಃ ಶರಶತೈ ರಾಜನ್ನೈಕೈಕಾನಾಂ ಪ್ರಹಾರಿಣಾಮ್।
ಪಾಂಚಾಲಸಹಿತಾ ರಾಜನ್ ಧಾರ್ತರಾಷ್ಟ್ರಾನ್ ನ್ಯವಾರಯನ್ ॥34॥
ಆಗ, ರಾಜನೆ, ಧೃಷ್ಟದ್ಯುಮ್ನ ಸಹಿತರಾದ ರಾಜರು ಪ್ರತಿಯೊಬ್ಬ ಯೋಧರಿಗೆ ನೂರು ನೂರು ಬಾಣಗಳನ್ನು ಎಸೆಯುತ್ತ ಕೌರವರನ್ನು ತಡೆದರು.
ತಸ್ಮಿನ್ ಸುತುಮುಲೇ ಯುದ್ಧೇ ವರ್ತಮಾನೇ ಜನಕ್ಷಯೇ।
ದುರ್ಯೋಧನಶ್ಚ ಭೀಮಶ್ಚ ಸಮೇಯಾತಾಂ ಮಹಾಬಲೌ ॥35॥
ಆ ತುಮುಲ ಯುದ್ಧವು ಜನಕ್ಷಯಕಾರಿಯಾಗಿ ನಡೆಯುತ್ತಿದ್ದಂತೆ ಮಹಾಬಲಿ ಗಳಾದ ದುರ್ಯೋಧನ ಮತ್ತು ಭೀಮಸೇನರು ಪರಸ್ಪರ

ಆಕ್ರಮಣ ಮಾಡಿದರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಏಕೋನಷಷ್ಟಿತಮೋಽಧ್ಯಾಯಃ ॥59॥

ಮಹಾಭಾರತತಾತ್ಪರ್ಯನಿರ್ಣಯ
ಹತಂ ತಮೀಕ್ಷ್ಯೈವ ವಿಕರ್ತನಾತ್ಮಜಃ
ಕ್ರೋಧಾನ್ವಿತೋ ಭೀಮಸೇನಂ ವಿಹಾಯ |
ಯಯೌ ಪ್ರಮೃದ್ಯೈವ ಚಮೂಂ ಯುಧಿಷ್ಠಿರಂ
ರಥೇಽಪರೇ ಸ್ವಶ್ವಯುತೇ ವ್ಯವಸ್ಥಿತಮ್ ॥81॥
ಸುಷೇಣ ಹತನಾದುದನ್ನು ಕಂಡು ಕರ್ಣ ಕುಪಿತನಾಗಿ ಭೀಮನನ್ನು ಬಿಟ್ಟು ಸೈನ್ಯವನ್ನು ಮರ್ದಿಸಿ ಒಳ್ಳೆಯ ಕುದುರೆಗಳಿಂದ ಯುಕ್ತವಾದ ಇನ್ನೊಂದು ರಥದಲ್ಲಿ ಕುಳಿತಿದ್ದ ಯುಧಿಷ್ಠಿರನನ್ನು ಇದಿರಿಸಿದ.
ನ್ಯವಾರಯೇತಾಂ ಶಿನಿಪೌತ್ರಪಾರ್ಷತೌ
ಕೃಷ್ಣಾಸುತಾಃ ಸೋಮಕಸಂಘಯುಕ್ತಾಃ |
ಸ ತಾನ್ ಸಮಸ್ತಾನ್ ವಿರಥಾನ್ ವಿಧಾಯ
ಯುಧಿಷ್ಠಿರಂ ಪ್ರಾಪ ಯುತಂ ಯಮಾಭ್ಯಾಮ್ ॥82॥
ಆಗ ಕರ್ಣನನ್ನು ಸಾತ್ಯಕಿ ಧೃಷ್ಟದ್ಯುಮ್ನರು ತಡೆದರು. ಪಾಂಚಾಲಸೇನೆಯಿಂದ ಯುಕ್ತರಾದ ದ್ರೌಪದೀಪುತ್ರರೂ ತಡೆದರು. ಕರ್ಣ ಅವರೆಲ್ಲರನ್ನೂ ವಿರಥರನ್ನಾಗಿ ಮಾಡಿ ನಕುಲಸಹದೇವರಿಂದ ಕೂಡಿದ ಯುಧಿಷ್ಠಿರನನ್ನೆ ಆಕ್ರಮಿಸಿದ.
ನಿಹತ್ಯ ಸೋಽಶ್ವಾನ್ ಯುಧಿ ಧರ್ಮಸೂನೋ-
ರ್ನಿರಾಯುಧೌ ತೌ ಚ ಯಮೌ ಚಕಾರ |
ತಾನೇಕಯಾನೋಪಗತಾನ್ ಪುನಶ್ಚ
ಮಮರ್ದ ಬಾಣೈಶ್ಚ ವಚೋಭಿರುಗ್ರೈಃ ॥83॥
ಕರ್ಣ ಯುದ್ಧದಲ್ಲಿ ಯುಧಿಷ್ಠಿರನ ಕುದುರೆಗಳನ್ನು ಕೊಂದು, ನಕುಲ ಸಹದೇವರನ್ನೂ ನಿರಾಯುಧರನ್ನಾಗಿ ಮಾಡಿದ. ಒಂದೇ ರಥವನ್ನೇರಿ ನಿಂತ ಆ ಮೂವರನ್ನೂ ಕ್ರೂರವಾದ ಬಾಣಗಳಿಂದಲೂ ಮಾತುಗಳಿಂದಲೂ ಪೀಡಿಸಿದ.
ತದೈವ ಮೋಕ್ಷಾಯ ನೃಪಸ್ಯ ಭೀಮೋ
ದುರ್ಯೋಧನಂ ವಿರಥಂ ಸಂವಿಧಾಯ |
ವಿವ್ಯಾಧ ಮರ್ಮಸ್ವತಿತೀಕ್ಷ್ಣಸಾಯಕೈ-
ಸ್ತಂ ದರ್ಶಯಾಮಾಸ ರವೇಃ ಸುತಾಯ ॥84॥
ಶಲ್ಯಸ್ತದಾ ಧರ್ಮಸುತಂ ವಿಹಾಯ
ಕರ್ಣೋ ಯಯೌ ತತ್ರ ಯುಧಿಷ್ಠಿರೋಽಪಿ |
ಗತ್ವಾ ಶನೈಃ ಶಿಬಿರಂ ತತ್ರ ಶಿಶ್ಯೇ
ಕರ್ಣೋ ಯದಾ ರಾಜಗೃಧ್ನೀ ಜಗಾಮ ॥85॥
ಆಗಲೆ ಯುಧಿಷ್ಠಿರನ ಬಿಡುಗಡೆಗಾಗಿ ಭೀಮ, ದುರ್ಯೋಧನನನ್ನು ವಿರಥನನ್ನಾಗಿ ಮಾಡಿ ಅತ್ಯಂತ ತೀಕ್ಷ್ಣವಾದ ಬಾಣಗಳಿಂದ ಮರ್ಮಗಳಲ್ಲಿ ಹೊಡೆದ. ಶಲ್ಯ ಅವನನ್ನು ಕರ್ಣನಿಗೆ ತೋರಿಸಿದ. ಆಗ ಕರ್ಣ ಯುಧಿಷ್ಠಿರನನ್ನು ಬಿಟ್ಟು ಹೊರಟುಹೋದ. ಅವನು ದುರ್ಯೋಧನನ ರಕ್ಷಣೆ ಮಾಡಲು ಬಯಸಿ ಅತ್ತ ಹೋದಾಗ ಯುಧಿಷ್ಠಿರ ಮೆಲ್ಲನೆ ಶಿಬಿರಕ್ಕೆ ಹೋಗಿ ಅಲ್ಲಿ ಮಲಗಿದ.

ಅರವತ್ತನೆಯ ಅಧ್ಯಾಯ
ತನ್ನ ಶಿಬಿರಕ್ಕೆ ಹೊರಟಿದ್ದ ಯುಧಿಷ್ಠಿರನನ್ನು ಕರ್ಣ ಪೀಡಿಸಿದ. ಅದಕ್ಕೆ ಭೀಮ ದುರ್ಯೋಧನನನ್ನು ಪೀಡಿಸಿದ್ದರಿಂದ ಕರ್ಣ ಯುಧಿಷ್ಠಿರನನ್ನು ಬಿಟ್ಟ.
ಯುಧಿಷ್ಠಿರ ತನ್ನ ಶಿಬಿರಕ್ಕೆ ಹೋಗಿ ಮಲಗಿದ.
ಸಂಜಯಃ
ಕರ್ಣೋಽಥ ಶರಜಾಲೇನ ಕೇಕಯಾನಾಂ ಮಹಾರಥಾನ್ |
ವ್ಯಧಮತ್ ಪರಮೇಷ್ವಾಸಾನಗ್ರತಃ ಪರ್ಯವಸ್ಥಿತಾನ್ ॥1॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಕರ್ಣನು ತನ್ನ ಮುಂದೆ ಬಂದು ನಿಂತ ಕೇಕಯರ ಮಹಾಬಿಲ್ಗಾರರಾದ ಮಹಾರಥರನ್ನು ಬಾಣಸಮೂಹದಿಂದ ಸಂಹರಿಸಿದ.
ತೇಷಾಂ ಪ್ರಯತಮಾನಾನಾಂ ರಾಧೇಯಸ್ಯ ನಿವಾರಣೇ |
ರಥಾನ್ ಪಂಚಶತಾನ್ ಕರ್ಣಃ ಪ್ರಾಹಿಣೋದ್ ಯಮಸಾದನಮ್ |2|
ಅವರು ಕರ್ಣನನ್ನು ತಡೆಯುವಾಗ ಅವನು ಅವರಲ್ಲಿ ಐದುನೂರು ರಥಿಕರನ್ನು ಯಮಲೋಕಕ್ಕೆ ಕಳಿಸಿದ.
ಅವಿಷಹ್ಯಂ ತತೋ ದೃಷ್ಟ್ವಾ ರಾಧೇಯಂ ಯುಧಿ ಯೋಧಿನಃ |
ಭೀಮಸೇನಮುಪಾಗಚ್ಛನ್ ಕರ್ಣಬಾಣಪ್ರಪೀಡಿತಾಃ ॥3॥
ಕರ್ಣನನ್ನು ರಣದಲ್ಲಿ ಇದಿರಿಸಲಾಗದವನೆಂದು ತಿಳಿದು ಕರ್ಣಬಾಣಗಳಿಂದ ಪೀಡಿತರಾದ ಕೇಕಯಯೋಧರು ಭೀಮಸೇನನ ಬಳಿಗೆ

ಬಂದರು.
ರಥಾನೀಕಂ ವಿದಾರ್ಯೈವ ಶರಜಾಲೈರನೇಕಧಾ |
ಕರ್ಣಸ್ತ್ವೇಕೋ ರಥೇನೈವ ಪುನರಾಯಾದ್ ಯುಧಿಷ್ಠಿರಮ್ ॥4॥
ಹೀಗೆ ರಥಸೈನ್ಯವನ್ನು ಬಾಣಸಮೂಹಗಳಿಂದ ನಾನಾವಿಧವಾಗಿ ಪೀಡಿಸಿದ ಕರ್ಣನು ಒಬ್ಬನೇ ರಥದಿಂದ ಪುನಃ ಯುಧಿಷ್ಠಿರನನ್ನು ಆಕ್ರಮಿಸಿದ.
ಸೇನಾನಿವೇಶಮಾರ್ಚ್ಛಂತಂ ಮಾರ್ಗಣೈಃ ಕ್ಷತವಿಕ್ಷತಮ್ |
ಯಮಯೋರ್ಮಧ್ಯಗಂ ವೀರಂ ಶನೈರ್ಯಾನ್ತಂ ವಿಚೇತಸಮ್ ॥5॥
ಸಮಾಸಾದ್ಯ ತು ರಾಜಾನಂ ದುರ್ಯೋಧನಹಿತೇಪ್ಸಯಾ |
ಸೂತಪುತ್ರಸ್ತ್ರಿಭಿಸ್ತೀಕ್ಷ್ಣೈರ್ವಿವ್ಯಾಧ ಪರಮೇಷುಭಿಃ ॥6॥
ಸೇನಾಶಿಬಿರಕ್ಕೆ ಹೊರಟಿದ್ದ ಯುಧಿಷ್ಠಿರ ಬಾಣಗಳಿಂದ ಕ್ಷತವಿಕ್ಷತನಾಗಿದ್ದ. ನಕುಲಸಹದೇವರ ನಡುವೆ ವ್ಯಗ್ರಚಿತ್ತನಾಗಿ ನಿಧಾನವಾಗಿ ಶಿಬಿರದ ಕಡೆಗೆ ಹೋಗುತ್ತಿದ್ದ ಆ ವೀರ ಯುಧಿಷ್ಠಿರನನ್ನು ದುರ್ಯೋಧನನ ಹಿತದ ಬಯಕೆಯಿಂದ ತೀಕ್ಷ್ಣವಾದ ಮೂರು ದೊಡ್ಡ ಬಾಣಗಳಿಂದ ಹೊಡೆದ.
ತಥೈವ ರಾಜಾ ರಾಧೇಯಂ ಪ್ರತ್ಯವಿಧ್ಯತ್ಸ್ತನಾಂತರೇ |
ಶರೈಸ್ತ್ರಿಭಿಶ್ಚ ಯಂತಾರಂ ಚತುರ್ಭಿಶ್ಚತುರೋ ಹಯಾನ್ ॥7॥
ಹಾಗೇ ಯುಧಿಷ್ಠಿರನೂ ಪ್ರತಿಯಾಗಿ ಕರ್ಣನನ್ನು ಮೂರುಬಾಣಗಳಿಂದ ಎದೆಯಲ್ಲಿ ಪ್ರಹರಿಸಿದ. ಮೂರು ಬಾಣಗಳಿಂದ ಸಾರಥಿಯನ್ನೂ ನಾಲ್ಕು ಬಾಣಗಳಿಂದ ನಾಲ್ಕು ಅಶ್ವಗಳನ್ನೂ ಹೊಡೆದ.
ಚಕ್ರರಕ್ಷೌ ತು ಪಾರ್ಥಸ್ಯ ಮಾದ್ರೀಪುತ್ರೌ ಪರಂತಪೌ |
ತಾವಪ್ಯಧಾವತಾಂ ಕರ್ಣಂ ರಾಜಾನಂ ಮಾ ವಧೀರಿತಿ ॥8॥
ಯುಧಿಷ್ಠಿರನಿಗೆ ಚಕ್ರರಕ್ಷಕರಾದ ಶತ್ರುತಾಪಕರಾದ ನಕುಲಸಹದೇವರು ``ರಾಜನನ್ನು ಕೊಲ್ಲಬೇಡ'' ಎನ್ನುತ್ತ ಕರ್ಣನ ಕಡೆಗೆ ಧಾವಿಸಿದರು.
ಆವಾಂ ರಣೇ ವಿನಿರ್ಜಿತ್ಯ ಪಾತಯಾದ್ಯ ಮಹಾಭುಜ |
ತ್ವಂ ಧರ್ಮಶಾಸ್ತ್ರವಿದ್ ವೀರ ಬ್ರಹ್ಮಣ್ಯಸ್ತ್ವಮನುತ್ತಮಃ ॥9॥
``ನಮ್ಮಿಬ್ಬರನ್ನು ರಣದಲ್ಲಿ ಈಗ ಪರಾಭವಗೊಳಿಸಿ ಕೊಲ್ಲು. ಮಹಾಬಾಹುವೆ, ವೀರನೆ, ನೀನು ಧರ್ಮಶಾಸ್ತ್ರವನ್ನು ತಿಳಿದವನು. ವೇದದಲ್ಲಿ ಶ್ರದ್ಧೆ ಉಳ್ಳವನು. ಅತ್ಯುತ್ತಮನು.
ಯುದ್ಧವಿಮುಖನಾಗಿ ವಿಶ್ರಾಂತಿಗಾಗಿ ಹಿಂತಿರುಗುತ್ತಿರುವ ಯೋಧನನ್ನು, ತತ್ರಾಪಿ ಪಟ್ಟಾಭಿಷಿಕ್ತನಾದ ರಾಜನನ್ನು ಕೊಲ್ಲುವುದು ಬ್ರಹ್ಮಹತ್ಯೆಗಿಂತಲೂ ಹೆಚ್ಚಿನ ಪಾಪ ಎಂದು ಧರ್ಮಶಾಸ್ತ್ರವಿದೆ.
ತ್ವಂ ದಾನಶೂರೋ ವಿಕ್ರಾಂತಸ್ತ್ವಂ ಧನುರ್ವೇದವಿದ್‌ವರಃ |
ಮಾವಧೀರ್ಧರ್ಮರಾಜಾನಮಿತಿ ಚಾಕುಲತಾಂ ಗತೌ ॥10॥
``ನೀನು ದಾನಶೂರ, ಪರಾಕ್ರಮಿ, ಧನುರ್ವೇದಜ್ಞರಲ್ಲಿ ಶ್ರೇಷ್ಠ. ಧರ್ಮರಾಜನನ್ನು ವಧಿಸಬೇಡ'' ಎಂದು ಕಳವಳಗೊಂಡು ಹೇಳಿದರು.
ತೌ ಪೃಥಕ್‌ಶರವರ್ಷಾಭ್ಯಾಂ ರಾಧೇಯಮಭ್ಯವರ್ಷತಾಮ್ |
ನಕುಲಃ ಸಹದೇವಶ್ಚ ಪರಮಂ ಯತ್ನಮಾಸ್ಥಿತೌ ॥11॥
ನಕುಲಸಹದೇವರು ಬೇರೆಬೇರೆಯಾಗಿ ಬಹಳ ಯತ್ನಮಾಡುತ್ತ ಬಾಣವೃಷ್ಟಿ ಗಳಿಂದ ಕರ್ಣನನ್ನು ಆಚ್ಛಾದಿಸಿದರು.
ತಥೈವ ತೌ ಪ್ರತ್ಯವಿಧ್ಯತ್ ಸೂತಪುತ್ರಃ ಪ್ರತಾಪವಾನ್ |
ಭಲ್ಲಾಭ್ಯಾಂ ಶಿತಧಾರಾಭ್ಯಾಂ ಮಹಾತ್ಮಾನಾವರಿಂದಮೌ ॥12॥
ಹಾಗೇ ಪ್ರತಾಪಶಾಲಿಯಾದ ಕರ್ಣನೂ ಕೂಡ ಶತ್ರುನಾಶಕರಾದ ನಕುಲ ಸಹದೇವರನ್ನು ತೀಕ್ಷ್ಣ ಅಲುಗುಗಳುಳ್ಳ ಭಲ್ಲೆಗಳಿಂದ ಪ್ರತಿಯಾಗಿ ಇರಿದ.
ದಂತವರ್ಣಾಂಸ್ತು ರಾಧೇಯೋ ನಿಜಘಾನ ಮನೋಜವಾನ್ |
ಯುಧಿಷ್ಠಿರಸ್ಯ ಸಂಗ್ರಾಮೇ ಕಾಲವಾಲಾನ್ ಹಯೋತ್ತಮಾನ್ ॥13॥
ಹಲ್ಲಿನಂತೆ ಬಿಳಿಯಾದ ಕಪ್ಪು ಬಾಲವುಳ್ಳ ಮನೋವೇಗದ ಉತ್ತಮವಾದ ಯುಧಿಷ್ಠಿರನ ಅಶ್ವಗಳನ್ನು ರಣದಲ್ಲಿ ಕರ್ಣ ಸಂಹರಿಸಿದ.
ತತೋಽಪರೇಣ ಭಲ್ಲೇನ ಶಿರಸತ್ರಣಮಪಾತಯತ್ |
ಕೌಂತೇಯಸ್ಯ ಮಹೇಷ್ವಾಸಃ ಪ್ರಹಸನ್ನಿವ ಸೂತಜಃ ॥14॥
ಬಳಿಕ ಇನ್ನೊಂದು ಭಲ್ಲೆಯಿಂದ ಮಹಾಬಿಲ್ಲಾರ ಕರ್ಣ ನಗುತ್ತ ಯುಧಿಷ್ಠಿರನ ಶಿರಸತ್ರಣವನ್ನು ಕೆಡವಿದ.
ತಥೈವ ನಕುಲಸ್ಯಾಪಿ ಹಯಾನ್ ಹತ್ವಾ ಪ್ರತಾಪವಾನ್ |
ಈಷಾಂ ಧನುಶ್ಚ ಚಿಚ್ಛೇದ ಮಾದ್ರೀಪುತ್ರಸ್ಯ ಧೀಮತಃ ॥15॥
ಹಾಗೆಯೇ ಪ್ರತಾಪಶಾಲಿ ಕರ್ಣನು ಧೀಮಂತನಾದ ನಕುಲನ ಅಶ್ವಗಳನ್ನು ಸಂಹರಿಸಿ ಈಷಾದಂಡವನ್ನು ಧನುಸ್ಸನ್ನೂ ಕತ್ತರಿಸಿದ.
ತೌ ಹತಾಶ್ವೌ ಹತರಥೌ ಪಾಂಡವೌ ಭೃಶವಿಕ್ಷತೌ |
ಭ್ರಾತರಾವಾರುರುಹತುಃ ಸಹದೇವರಥಂ ತದಾ ॥16॥
ಯುಧಿಷ್ಠಿರನಕುಲರಿಬ್ಬರೂ ಸೋದರರು ಹೀಗೆ ಅಶ್ವ, ರಥಗಳನ್ನು ಕಳೆದುಕೊಂಡು ಬಹಳ ಗಾಯಗೊಂಡು ಸಹದೇವನ ರಥವನ್ನು ಏರಿದರು.
ತೌ ದೃಷ್ಟ್ವಾ ಮಾತುಲಸ್ತತ್ರ ವಿರಥೌ ಪರವೀರಹಾ |

ಅಭ್ಯಭಾಷತ ರಾಧೇಯಂ ಮದ್ರರಾಜೋಽನುಕಮ್ಪಯಾ ॥17॥
ರಥರಹಿತರಾದ ಅವರನ್ನು ಶತ್ರುವೀರ ನಾಶಕನಾದ ಸೋದರಮಾವ ಶಲ್ಯನು ನೋಡಿ ಅನುಕಂಪೆಯಿಂದ ಕರ್ಣನಿಗೆ ಹೇಳಿದ.
ಯೋದ್ಧವ್ಯಮದ್ಯ ಪಾರ್ಥೇನ ಫಲ್ಗುನೇನ ತ್ವಯಾ ಸಹ |
ಕಿಮರ್ಥಂ ಧರ್ಮರಾಜೇನ ಯುಧ್ಯಸೇ ಭೃಶರೋಷಿತಃ ॥18॥
ಈಗ ನಿನ್ನೊಂದಿಗೆ ಯುದ್ಧ ಮಾಡಬೇಕಾಗಿರುವುದು ಅರ್ಜುನ. ಬಲು ರೋಷದಿಂದ ಧರ್ಮರಾಜನೊಂದಿಗೆ ನೀನು ಏಕೆ ಯುದ್ಧ ಮಾಡುತ್ತಿರುವೆ?
ಕ್ಷೀಣಶಸ್ತ್ರಾಸ್ತ್ರಕವಚಃ ಕ್ಷೀಣಬಾಣೋ ವಿಬಾಣಧಿಃ |
ಶ್ರಾಂತಸಾರಥಿವಾಹಶ್ಚ ಚ್ಛನ್ನೋಽಸ್ತ್ರೈರರಿಭಿಸ್ತಥಾ ॥19॥
ಪಾರ್ಥಮಾಸಾದ್ಯ ರಾಧೇಯ ಉಪಹಾಸ್ಯೋ ಭವಿಷ್ಯಸಿ ॥20॥
ಧರ್ಮರಾಜನು ಈಗ ಶಸ್ತ್ರ, ಅಸ್ತ್ರ, ಕವಚ ಬಾಣ ಬತ್ತಳಿಕೆಗಳೆಲ್ಲವನ್ನು ಕಳೆದು ಕೊಂಡು, ಆಯಾಸಗೊಂಡ ಸಾರಥಿ ಅಶ್ವಗಳುಳ್ಳವನಾಗಿ, ಶತ್ರುಗಳೆಸೆದ ಅಸ್ತ್ರಗಳಿಂದ ಆಚ್ಛಾದಿತನಾಗಿದ್ದಾನೆ. ಕರ್ಣ! ನೀನು ಈ ಅವಸ್ಥೆಯಲ್ಲಿರುವ ಯುಧಿಷ್ಠಿರನನ್ನು ವಧಿಸಿದರೆ ನೀನೆ ಉಪಹಾಸಕ್ಕೊಳಗಾಗುವೆ.
ಏವಮುಕ್ತೋಽಪಿ ಕರ್ಣಸ್ತು ಮದ್ರರಾಜೇನ ಸಂಯುಗೇ |
ತಥೈವ ಕರ್ಣಃ ಸಂರಬ್ಧೋ ಯುಧಿಷ್ಠಿರಮತಾಡಯತ್ ॥21|
ಶಲ್ಯನು ಹೀಗೆ ಹೇಳಿದರೂ ಕೂಡ ಕರ್ಣನು ಮತ್ತೂ ಕುಪಿತನಾಗಿ
ಯುಧಿಷ್ಠಿರನನ್ನು ಹೊಡೆದ.
ಶರೈಸ್ತೀಕ್ಷ್ಣೈಃ ಪರಾವಿಧ್ಯ ಮಾದ್ರೀಪುತ್ರೌ ಚ ಪಾಂಡವೌ |
ಪ್ರಹಸ್ಯ ಸಮರೇ ಕರ್ಣಶ್ಚಕಾರ ವಿಮುಖೌ ಶರೈಃ ॥22॥
ತೀಕ್ಷ್ಣವಾದ ಬಾಣಗಳಿಂದ ನಕುಲಸಹದೇವರನ್ನೂ ಹೊಡೆದು ಕರ್ಣನು ರಣದಲ್ಲಿ ಅಟ್ಟಹಾಸ ಮಾಡಿ ಬಾಣಗಳಿಂದ ಇಬ್ಬರನ್ನೂ ಯುದ್ಧವಿಮುಖರನ್ನಾಗಿ ಮಾಡಿದ.
ತತಃ ಶಲ್ಯಃ ಪ್ರಹಸ್ಯೇದಂ ಕರ್ಣಂ ಪುನರುವಾಚ ಹ |
ರಥಸ್ಥಮತಿಸಂರಬ್ಧಂ ಯುಧಿಷ್ಠಿರವಧೇ ಧೃತಮ್ ॥23॥
ಅತಿ ಕುಪಿತನಾಗಿ ಯುಧಿಷ್ಠಿರನ ವಧೆಗೆ ಮೊಂಡುತನ ಮಾಡುತ್ತ ರಥದಲ್ಲಿ ನಿಂತಿದ್ದ ಕರ್ಣನಿಗೆ ಶಲ್ಯ ಗಹಗಹಿಸಿ ನಗುತ್ತ ಪುನಃ ನುಡಿದ.
ಯದರ್ಥಂ ಧಾರ್ತರಾಷ್ಟ್ರೇಣ ಸತತಂ ಮಾನಿತೋ ಭವಾನ್ |
ತಂ ಪಾರ್ಥಂ ಜಹಿ ರಾಧೇಯ ಕಿಂ ತೇ ಹತ್ವಾ ಯುಧಿಷ್ಠಿರಮ್ ॥24॥
ಅರ್ಜುನ ವಧಕ್ಕಾಗಿಯೇ ದುರ್ಯೋಧನನು ಸದಾ ನಿನ್ನನ್ನು ಸಮ್ಮಾನಿಸುತ್ತಾನೆ ಎಂದಮೇಲೆ ಆ ಅರ್ಜುನನನ್ನೇ, ಕರ್ಣ, ನೀನು ವಧಿಸು, ಯುಧಿಷ್ಠಿರನನ್ನು ವಧಿಸಿ ನೀನಗೇನು ಲಾಭವಿದೆ?
ಶಂಖಯೋರ್ಧ್ಮಾಯತೋಃ ಶಬ್ದಃ ಸುಮಹಾನೇಷ ಕೃಷ್ಣಯೋಃ |
ಶ್ರೂಯತೇ ಚಾಪಘೋಷೋಽಯಂ ಪ್ರಾವೃಷೀವಾಮ್ಬುದಸ್ಯ ಹ॥25॥
ಕೃಷ್ಣಾರ್ಜುನರು ಶಂಖ ಊದುವುದರ ಮಹಾಶಬ್ದವಿದೊ ಕೇಳಿ ಬರುತ್ತಿದೆ. ಮಳೆಗಾಲದ ಮೋಡಗಳ ಧ್ವನಿಯಂಥ ಧನುಃಶಬ್ದವೂ ಕೇಳಿಬರುತ್ತಿದೆ.
ಅಸೌ ನಿಘ್ನನ್ ರಥೋದಾರಾನರ್ಜುನಃ ಶರವೃಷ್ಟಿಭಿಃ |
ಸರ್ವಾಂ ಗ್ರಸತಿ ನಃ ಸೇನಾಂ ಕರ್ಣ ಪಶ್ಯೈನಮಾಹವೇ ॥26॥
ಬಾಣವೃಷ್ಟಿಗಳಿಂದ ಶ್ರೇಷ್ಠರಥಿಕರನ್ನು ಸಂಹರಿಸುತ್ತ ಅರ್ಜುನನು ರಣದಲ್ಲಿ ನಮ್ಮ ಎಲ್ಲ ಸೈನ್ಯವನ್ನೂ ಆಹುತಿ ತೆಗೆದುಕೊಳ್ಳುತ್ತಾನೆ. ಕರ್ಣ, ಆತನನ್ನು ನೋಡು!
ಪೃಷ್ಠರಕ್ಷೌ ಚ ಶೂರಸ್ಯ ಯುಧಾಮನ್ಯೂತ್ತಮೌಜಸೌ |
ಉತ್ತರಂ ಚಾಸ್ಯ ವೈ ಶೂರಶ್ಚಕ್ರಂ ರಕ್ಷತಿ ಸಾತ್ಯಕಿಃ ॥27॥
ಧೃಷ್ಟದ್ಯುಮ್ನಸ್ತಥಾ ಚಾಸ್ಯ ಚಕ್ರಂ ರಕ್ಷತಿ ದಕ್ಷಿಣಮ್ ॥28॥
ಶೂರ ಅರ್ಜುನನಿಗೆ ಯುಧಾಮನ್ಯು ಉತ್ತಮೌಜರು ಹಿಂಭಾಗದಲ್ಲಿ ರಕ್ಷಕರು. ಎಡದಲ್ಲಿ ಶೂರನಾದ ಸಾತ್ಯಕಿ ಚಕ್ರರಕ್ಷಕ. ಬಲದಲ್ಲಿ ಧೃಷ್ಟದ್ಯುಮ್ನನು ಚಕ್ರರಕ್ಷಕ.
ಭೀಮಸೇನಶ್ಚ ವೈ ರಾಜ್ಞಾ ಧಾರ್ತರಾಷ್ಟ್ರೇಣ ಯುಧ್ಯತೇ |
ಯಥಾ ನ ಹನ್ಯಾತ್ತಂ ಭೀಮಃ ಸರ್ವೇಷಾಂ ನೋಽದ್ಯ ಪಶ್ಯತಾಮ್ |
ತಥಾ ರಾಧೇಯ ಕ್ರಿಯತಾಂ ರಾಜಾ ಮುಚ್ಯೇತ ನೋ ಯಥಾ ॥29॥
ಭೀಮಸೇನನು ರಾಜಾ ದುರ್ಯೋಧನನೊಂದಿಗೆ ಯುದ್ಧ ಮಾಡುತ್ತಿದ್ದಾನೆ. ನಾವೆಲ್ಲ ನೋಡುತ್ತಿರುವಂತೆ ಭೀಮನು ಅವನನ್ನು ಕೊಲ್ಲಬಾರದು, ಕರ್ಣ, ನಮ್ಮ ದುರ್ಯೋಧನನನ್ನು ಭೀಮ ಬಿಟ್ಟುಬಿಡುವಂತೆ ಮಾಡು.
ಪಶ್ಯೈನಂ ಭೀಮಸೇನೇನ ಗ್ರಸ್ತಮಾಹವಶೋಭಿನಾ |
ಯದಿ ತ್ವಾಸಾದ್ಯ ಮುಚ್ಯೇತ ವಿಸ್ಮಯಃ ಸುಮಹಾನ್ ಭವೇತ್ ॥30॥
ದುರ್ಯೋಧನನು ಈಗ ಯುದ್ಧದಲ್ಲಿ ಶೋಭಿಸುವ ಭೀಮನ ಕೈಯಲ್ಲಿ ಸಿಕ್ಕಿಕೊಂಡಿರುವುದನ್ನು ನೋಡು. ಅವನು ಭೀಮನನ್ನು ನಿಗ್ರಹಿಸಿ ಬಿಡುಗಡೆ ಹೊಂದಿದರೆ ಅದೊಂದು ದೊಡ್ಡ ಅಚ್ಚರಿಯೇ ಆದೀತು.
ಪರಿತ್ರಾಹ್ಯೇನಮಭ್ಯೇತ್ಯ ಸಂಶಯಂ ಪರಮಂ ಗತಮ್ |

ಕಿಂ ನು ಮಾದ್ರೀಸುತೌ ಹತ್ವಾ ರಾಜಾನಂ ವಾ ಯುಧಿಷ್ಠಿರಮ್ ॥31॥
ಸಾವುಬದುಕಿನ ದೊಡ್ಡ ಸಂಶಯಕ್ಕೆ ಈಡಾಗಿರುವ ದುರ್ಯೋಧನನನ್ನು ಮೊದಲಿಗೆ ಕಾಪಾಡಿಕೊಳ್ಳು. ಭೀಮನನ್ನು ಆಕ್ರಮಿಸು. ನಕುಲಸಹದೇವರನ್ನು ಯುಧಿಷ್ಠಿರನನ್ನು ಕೊಂದು ನಿನಗೆ ಏನು ಫಲ?
ಇತಿ ಶಲ್ಯವಚಃ ಶ್ರುತ್ವಾ ರಾಧೇಯಃ ಪೃಥಿವೀಪತೇ |
ದೃಷ್ಟ್ವಾ ದುರ್ಯೋಧನಂ ಚೈವ ಭೀಮಗ್ರಸ್ತಂ ಮಹಾಹವೇ ॥32॥
ರಾಜಗೃದ್ಧೀ ಭೃಶಂ ಚೈವ ಶಲ್ಯವಾಕ್ಯಪ್ರಚೋದಿತಃ |
ಅಜಾತಶತ್ರುಮುತ್ಸೃಜ್ಯ ಮಾದ್ರೀಪುತ್ರೌ ಚ ಪಾಂಡವೌ ॥33॥
ತವ ಪುತ್ರಂ ಪರಿತ್ರಾತುಮಭ್ಯಧಾವತ ವೀರ್ಯವಾನ್ |
ಮದ್ರರಾಜಪ್ರಣುದಿತೈರಶ್ವೈರಾಕಾಶಗೈರಿವ ॥34॥
ರಾಜನೆ, ಹೀಗೆ ಶಲ್ಯ ಹೇಳಿದ್ದನ್ನು ಕೇಳಿ, ದುರ್ಯೋಧನನು ರಣದಲ್ಲಿ ಭೀಮನ ವಶಕ್ಕೆ ಸಿಲುಕಿರುವುದನ್ನೂ ನೋಡಿ, ರಾಜನ ಸ್ನೇಹಾಕಾಂಕ್ಷಿಯಾದ ವೀರ್ಯಶಾಲಿ ಕರ್ಣನು ಶಲ್ಯನ ಮಾತಿನಿಂದ ಬಹಳ ಪ್ರಚೋದಿತನಾಗಿ, ಯುಧಿಷ್ಠಿರನನ್ನೂ ಬಿಟ್ಟು, ನಕುಲಸಹದೇವರನ್ನೂ ಬಿಟ್ಟು, ನಿನ್ನ ಮಗನನ್ನು ರಕ್ಷಿಸುವುದಕ್ಕಾಗಿ ಶಲ್ಯನ ಸಾರಥ್ಯದಲ್ಲಿ ಆಕಾಶದಲ್ಲೇ ಹಾರುವಂತಿದ್ದ ಕುದುರೆಗಳಿಂದ ಧಾವಿಸಿದ.
ಗತೇ ಕರ್ಣೇ ತು ಕೌಂತೇಯಃ ಪಾಂಡುಪುತ್ರೋ ಯುಧಿಷ್ಠಿರಃ |
ಅಪಾಯಾಜ್ಜವನೈರಶ್ವೈಃ ಸಹದೇವಸ್ಯ ಮಾರಿಷ ॥35॥
ಕರ್ಣನು ಅತ್ತಹೋದಾಗ ಯುಧಿಷ್ಠಿರನು ಸಹದೇವನ ವೇಗವಾದ ಕುದುರೆಗಳಿಂದ ದೂರಕ್ಕೆ ಹೊರಟುಹೋದ.
ತಾಭ್ಯಾಂ ಸ ಸಹಿತಸ್ತೂರ್ಣಂ ವ್ರೀಡನ್ನಿವ ನರೇಶ್ವರಃ |
ಪ್ರಾಪ್ಯ ಸೇನಾನಿವೇಶಂ ಚ ಮಾರ್ಗಣೈಃ ಕ್ಷತವಿಕ್ಷತಃ ॥36॥
ಅವತೀರ್ಣೋ ರಥಾತ್ ತೂರ್ಣಮಾವಿಶಚ್ಛಯನಂ ಶುಭಮ್ |
ಅಪೇತಶಲ್ಯಃ ಸುಭೃಶಂ ಹೃಚ್ಛಲ್ಯಾಭಿನಿಪೀಡಿತಃ ॥37॥
ನಕುಲಸಹದೇವರೊಂದಿಗೆ ರಾಜಾ ಯುಧಿಷ್ಠಿರ ನಾಚಿದವನಂತೆ ಬೇಗನೆ ಸೇನಾಶಿಬಿರಕ್ಕೆ ಹೋಗಿ, ಬಾಣಗಳಿಂದ ಬಲುಗಾಯಗೊಂಡಿದ್ದರಿಂದ ಬೇಗನೆ ರಥದಿಂದ ಇಳಿದು ಸುಖಕರವಾದ ಶಯ್ಯೆಯಲ್ಲಿ ಒರಗಿದ. ಮೈಯ ಶಲ್ಯವನ್ನು ತೆಗೆದರೂ ಮನಸಿನ ಶಲ್ಯದಿಂದ ಬಲು ಪೀಡಿತನೇ ಆದ.
ಸೋಽಬ್ರವೀದ್ ಭ್ರಾತರೌ ರಾಜಾ ಮಾದ್ರೀಪುತ್ರೌ ಮಹಾರಥೌ |
ಅನೀಕಂ ಭೀಮಸೇನಸ್ಯ ಪಾಂಡವಾವಾಶು ಗಚ್ಛತಾಮ್ ॥38॥
ಜೀಮೂತ ಇವ ನರ್ದಂಸ್ತು ಯುಧ್ಯತೇ ಸ ವೃಕೋದರಃ ॥39॥
ಭೀಮಸೇನನ ಸೈನ್ಯವನ್ನು ಬೇಗನೆ ಹೋಗಿ ಸೇರಿಕೊಳ್ಳಿರಿ, ಮೇಘದಂತೆ ಗರ್ಜಿಸುತ್ತ ಅವನು ಇನ್ನೂ ಯುದ್ಧ ಮಾಡುತ್ತಿದ್ದಾನೆ ಎಂದು ರಾಜಾ
ಯುಧಿಷ್ಠಿರ ನಕುಲಸಹದೇವರಿಗೆ ಹೇಳಿದ.
ತತೋಽನ್ಯಂ ರಥಮಾಸ್ಥಾಯ ನಕುಲೋ ರಥಪುಂಗವಃ |
ಸಹದೇವಶ್ಚ ತೇಜಸ್ವೀ ಭ್ರಾತರೌ ಶತ್ರುಕರ್ಶನೌ ॥40॥
ತುರಗೈರಗ್ರ್ಯರಂಹೋಭಿರ್ಯಾತ್ವಾ ಭೀಮಸ್ಯ ಶುಷ್ಮಿಣೌ |
ಅನೀಕಂ ಸಹಿತೌ ತತ್ರ ಭ್ರಾತರೌ ಪರ್ಯವಸ್ಥಿತೌ ॥41॥
ರಥಿಕರಲ್ಲಿ ಶ್ರೇಷ್ಠನಾದ ನಕುಲನೂ ಪರಾಕ್ರಮಿಯಾದ ಸಹದೇವನೂ ಇಬ್ಬರು ಸೋದರರರು ಶತ್ರುನಾಶಕರು ಬಲಿಷ್ಠರು ಬೇರೆ ರಥಗಳನ್ನೇರಿ ಬಲುವೇಗದ ಕುದುರೆಗಳಿಂದ ಭೀಮನ ಸೈನ್ಯಕ್ಕೆ ಹೋಗಿ ಸೇರಿಕೊಂಡು, ಇಬ್ಬರು ಸೋದರರೂ ಜೊತೆಯಾಗಿ ನಿಂತರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಷಷ್ಟಿತಮೋಧ್ಯಾಯಃ ॥60॥

ಮಹಾಭಾರತತಾತ್ಪರ್ಯನಿರ್ಣಯ
ಅಥಾತ್ರ ರಾಜಾನಮಚಕ್ಷಮಾಣೋ
ಧನಂಜಯೋ ವಾಸುದೇವಪ್ರಣುನ್ನಃ |
ಅಭ್ಯಾಯಯೌ ಪಾರ್ಷತಃ ಸ್ವಾಂ ತು ಸೇನಾಂ
ಕರ್ಣಾಹತಾಂ ವೀಕ್ಷ್ಯ ಕುರೂನಪೀಡಯತ್ ॥88॥
ರಣರಂಗದಲ್ಲಿ ಯುಧಿಷ್ಠಿರನನ್ನು ಕಾಣದೆ ಅರ್ಜುನ ಶ್ರೀಕೃಷ್ಣನಿಂದ ಪ್ರೇರಿತ ನಾಗಿ ಶಿಬಿರದ ಕಡೆಗೆ ಹೊರಟ. ಧೃಷ್ಟದ್ಯುಮ್ನ ತನ್ನ ಸೇನೆಯನ್ನು ಕರ್ಣ ನಾಶ ಮಾಡುವುದನ್ನು ಕಂಡು ಕೌರವರನ್ನು ಪೀಡಿಸಿದ.
ನ್ಯವಾರಯತ್ ಸಮಾಯಾತಂ ಕಪಿಪ್ರವರಕೇತನಮ್ |
ದ್ರೌಣಿರ್ದುಃಶಾಸನಶ್ಚೈವ ಧೃಷ್ಟದ್ಯುಮ್ನಮವಾರಯತ್ ॥89॥
ಅಶ್ವತ್ಥಾಮ ತನಗೆ ಎದುರಾಗಿ ಬರುತ್ತಿದ್ದ ಅರ್ಜುನನನ್ನು ತಡೆದ. ದುಃಶಾಸನ ಧೃಷ್ಟದ್ಯುಮ್ನನನ್ನು ತಡೆದ.
ಉಭಾವತಿರಥೌ ತೌ ತು ಶಸತ್ರಸ್ತ್ರೈ ್ರೈರಭ್ಯವರ್ಷತಾಮ್ |
ದುಃಶಾಸನಃ ಪಾರ್ಷತಶ್ಚ ಕುರ್ವಂತೌ ಬಾಣಜಂ ತಮಃ ॥ 90 ॥
ದುಃಶಾಸನ ಧೃಷ್ಟದ್ಯುಮ್ನರಿಬ್ಬರೂ ಅತಿರಥರು. ಅವರು ಪರಸ್ಪರ ಶಸತ್ರಸ್ತ್ರಗಳ ಮಳೆಗರೆದುಕೊಂಡರು. ಬಾಣಗಳಿಂದ ಕತ್ತಲನ್ನು

ಉಂಟುಮಾಡಿದರು.
ತತ್ರ ದುಃಶಾಸನೇನಾಜೌ ಸ್ತಂಭಿತೋ ದ್ರುಪದಾತ್ಮಜಃ |
ಯತಮಾನೋಽಪಿ ನಿರ್ಯತ್ನಃ ಕೃತೋ ಯುದ್ಧೇ ನಿರಾಯುಧಃ ॥91॥
ಆ ಯುದ್ಧದಲ್ಲಿ ಧೃಷ್ಟದ್ಯುಮ್ನ ದುಃಶಾಸನನಿಂದ ಸ್ತಂಭೀಭೂತನಾಗಿ ಮಾಡ ಲ್ಪಟ್ಟ. ಯತ್ನ ಮಾಡಿದರೂ ಯತ್ನವಿಲ್ಲದವನಾಗಿ ನಿರಾಯುಧನಾಗಿ ಮಾಡಲ್ಪಟ್ಟ.
ತದಾಽಭವದ್ ಯುದ್ಧಮತೀವ ದಾರುಣಂ
ದ್ರೌಣೇಸ್ತನೂಜೇನ ತು ವಜ್ರಪಾಣೇಃ |
ತತ್ರಾಪಿ ಬದ್ಧಃ ಶರಪಂಜರೇಣ
ಪಾರ್ಥೋಽಪನುತ್ತ್ವಾಽಪಿ ಚ ಗಾಂಡಿವಜ್ಯಾ ॥ 92 ॥
ಆಗ ಅಶ್ವತ್ಥಾಮ ಅರ್ಜುನರಿಗೆ ಅತ್ಯಂತ ದಾರುಣವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿಯೂ ಅರ್ಜುನ ಶರಪಂಜರದಲ್ಲಿ ಬದ್ಧನಾದ ಮತ್ತು ಗಾಂಡೀವದ ಹೆದೆಯೂ ಕಡಿಯಲ್ಪಟ್ಟಿತು.
ಪಾರ್ಥೋಽಥ ಕೃಷ್ಣೇ ್ಯಧಿತಬಾಹುವೀರ್ಯೋ
ನಿಹತ್ಯ ಸೂತಂ ಗುರುಪುತ್ರಕಸ್ಯ |
ಛಿತ್ವಾ ಚ ರಶ್ಮೀಂಸ್ತುರಗಾನಮುಷ್ಯ
ವಿದ್ರಾವಯಾಮಾಸ ಶರೈಃ ಸುದೂರಮ್ ॥ 93 ॥
ಬಳಿಕ ಅರ್ಜುನನ ಬಾಹುಪರಾಕ್ರಮವನ್ನು ಶ್ರೀಕೃಷ್ಣ ಹೆಚ್ಚಿಸಿದ. ಅರ್ಜುನ ಅಶ್ವತ್ಥಾಮನ ಸಾರಥಿಯನ್ನು ಕೊಂದು, ಅವನ ಕುದುರೆಗಳ ಹಗ್ಗಗಳನ್ನೂ ಕತ್ತರಿಸಿ ಕುದುರೆಗಳನ್ನು ಬಾಣಗಳಿಂದ ಬಲು ದೂರಕ್ಕೆ ಓಡಿಸಿದ.
ಅತೀತ್ಯ ಪುತ್ರಂ ತು ಗುರೋಃ ಸಮಾಗತೇ
ಪಾರ್ಥೇ ಕರ್ಣೋ ದ್ರಾವಯಾಮಾಸ ಸೇನಾಮ್ |
ಪಾಂಡೋಃ ಸುತಾನಾಂ ಶರವರ್ಷಧಾರೋ
ದುರ್ಯೋಧನಶ್ಚಾನು ಯಯೌ ತಮೇವ ॥ 94 ॥
ಅಶ್ವತ್ಥಾಮನನ್ನು ದಾಟಿ ಅರ್ಜುನ ಬಂದಾಗ ಅತ್ತ ಕರ್ಣ ಬಾಣಗಳ ಮಳೆ ಸುರಿಸುತ್ತ ಪಾಂಡವಸೇನೆಯನ್ನು ಓಡಿಸಿದ. ದುರ್ಯೋಧನ ಅವನನ್ನೇ ಹಿಂಬಾಲಿಸಿದ.
ಕರ್ಣಮಾಯಾಂತಮಾಲೋಕ್ಯ ದ್ರಾವಯಂತಂ ನಿಜಾಂ ಚಮೂಮ್ |
ಧನುರನ್ಯತ್ ಸಮಾದಾಯ ಧೃಷ್ಟದ್ಯುಮ್ನೋ ನ್ಯವಾರಯತ್ ॥ 95 ॥
ಕರ್ಣ ತನ್ನ ಸೈನ್ಯವನ್ನು ಓಡಿಸುತ್ತ ತನ್ನ ಕಡೆಗೇ ಬರುತ್ತಿದ್ದುದನ್ನು ಕಂಡು ಧೃಷ್ಟದ್ಯುಮ್ನ ಇನ್ನೊಂದು ಬಿಲ್ಲನ್ನೆತ್ತಿಕೊಂಡು ಅವನನ್ನು ತಡೆದ.
ತಯೋರಾಸೀನ್ಮಹದ್ ಯುದ್ಧಂ ಚಿರಂ ಸಮಮವಿಶ್ರಮಮ್ |
ತದೈವ ಸಾತ್ಯಕಿರ್ವೀರೋ ದುರ್ಯೋಧನಮವಾರಯತ್ ॥ 96 ॥
ಅವರಿಬ್ಬರಿಗೆ ದೀರ್ಘಕಾಲ ವಿಶ್ರಾಂತಿ ಇಲ್ಲದ ದೊಡ್ಡ ಯುದ್ಧ ನಡೆಯಿತು. ಅದು ಸಮವೇ ಆಗಿತ್ತು. ಆಗಲೆ ವೀರ ಸಾತ್ಯಕಿ ದುರ್ಯೋಧನನನ್ನು ತಡೆದ.
ನಿವಾರಿತಃ ಸಾತ್ಯಕಿನಾ ರಣೇ ದುರ್ಯೋಧನೋ ನೃಪಃ |
ನಿಹತ್ಯ ಸಾತ್ಯಕೇರಶ್ವಾನ್ ದ್ರೌಪದೇಶ್ಚಾಪಮಚ್ಛಿನತ್ ॥ 97 ॥
ಸಾತ್ಯಕಿ ತಡೆದಾಗ ರಾಜಾ ದುರ್ಯೋಧನ ಯುದ್ಧದಲ್ಲಿ ಸಾತ್ಯಕಿಯ ಕುದುರೆಗಳನ್ನು ಕೊಂದು ಧೃಷ್ಟದ್ಯುಮ್ನನ ಧನುಸ್ಸನ್ನು ಕಡಿದ.
ತದಂತರ್ಯೆವ ಕರ್ಣೋಽಪಿ ಪಾರ್ಷತಾಶ್ವಾನಪಾತಯತ್ |
ತಯೋರ್ವಿರಥಯೋರೇವ ಭಗ್ನಂ ತತ್ ಪಾಂಡವಂ ಬಲಮ್ ॥98॥
ಈ ನಡುವೆ ಕರ್ಣನೂ ಧೃಷ್ಟದ್ಯುಮ್ನನ ಕುದುರೆಗಳನ್ನು ಕೊಂದ. ಸಾತ್ಯಕಿ ಧೃಷ್ಟದ್ಯುಮ್ನರು ವಿರಥರಾದೊಡನೆ ಪಾಂಡವಸೈನ್ಯ ಸೋತಿತು.
ಬಲಂ ಸ್ವಕೀಯಂ ಬಹುಧಾ ವಿಭಿನ್ನಂ
ಸಮೀಕ್ಷ್ಯ ಭೀಮೋ ಮೃಗರಾಜಕೇತುಃ |
ಕೃತ್ವಾ ಧರಾಕಮ್ಪಕಮುಗ್ರನಾದಂ
ರಣೇಽಭ್ಯಯಾತ್ ಕೌರವರಾಜಸೈನ್ಯಮ್ ॥ 99 ॥
ತನ್ನ ಸೇನೆ ಬಹಳ ಸೋತಾಗ ಅದನ್ನು ಕಂಡ ಸಿಂಹಧ್ವಜನಾದ ಭೀಮ ಭೂಮಿಯನ್ನು ನಡುಗಿಸುವಂಥ ಭಯಂಕರ ಸಿಂಹನಾದ ಮಾಡಿ ಯುದ್ಧದಲ್ಲಿ ಕೌರವರಾಜನ ಸೈನ್ಯವನ್ನು ಆಕ್ರಮಿಸಿದ.
ನಾದೇನ ಬಾಣೈಶ್ಚ ವೃಕೋದರೇಣ
ಭಗ್ನಂ ತದಾ ಕೌರವಸೈನ್ಯಮಾಶು |
ದಿಶೋ ವಿದುದ್ರಾವ ಸುಯೋಧನೋಽಪಿ
ಕೃತೋ ರಣೇ ತೇನ ವಿವಾಹನಾಯುಧಃ ॥ 100 ॥
ಸಿಂಹನಾದದಿಂದಲೂ ಬಾಣಗಳಿಂದಲೂ ಭೀಮ ಕೌರವಸೈನ್ಯವನ್ನು ಬೇಗನೆ ಪರಾಜಯಗೊಳಿಸಿದಾಗ ಅದು ಎಲ್ಲ ದಿಕ್ಕಿಗೆ ಪಲಾಯನ ಮಾಡಿತು. ದುರ್ಯೋಧನನೂ ಭೀಮನಿಂದ ಯುದ್ಧದಲ್ಲಿ ರಥ ಆಯುಧರಹಿತನಾಗಿ ಮಾಡಲ್ಪಟ್ಟ.

ದೃಷ್ಟ್ವೈವ ತತ್ ಪಾಂಡವಾನಾಂ ಚ ಸೇನಾ
ಸಮಾವೃತ್ತಾ ಕ್ಷಿಪ್ರಮವಾರ್ಯವೇಗಾ |
ತಯಾ ಪುನಃ ಕೌರವಾಣಾಂ ಬಲಂ ತದ್
ಭಗ್ನಂ ದೂರಾದ್ ದೂರತರಂ ಪ್ರದುದ್ರುವೇ ॥ 101 ॥
ಅದನ್ನು ನೋಡಿದೊಡನೆ ಶತ್ರುಗಳಿಗೆ ತಡೆಯಲಾಗದ ವೇಗವುಳ್ಳ ಪಾಂಡವಸೇನೆ ಬೇಗನೆ ಹಿಂತಿರುಗಿ ಬಂದಿತು. ಅದರಿಂದಲೂ ಪುನಃ ಕೌರವಸೈನ್ಯ ಸೋತು ದೂರದಿಂದ ದೂರಕ್ಕೇ ಓಡಿತು.
ಹನ್ಯಮಾನಂ ದಿಶೋ ಯಾತಂ ಪಾಂಚಾಲೈರ್ಭೀಮಸಂಶ್ರಯಾತ್ |
ದುರ್ಯೋಧನಬಲಂ ದೃಷ್ಟ್ವಾ ಜಜ್ವಾಲಾಧಿರಥಿಃ ಕ್ರುಧಾ ॥ 102 ॥
ದುರ್ಯೋಧನನ ಸೈನ್ಯ ಭೀಮನ ಆಸರೆಯಲ್ಲಿದ್ದ ಪಾಂಚಾಲಸೈನಿಕರಿಂದ ಹೊಡೆಸಿಕೊಂಡು ದಿಕ್ಕುಗಳಿಗೆ ಓಡುತ್ತಿದ್ದುದನ್ನು ಕಂಡು ಕರ್ಣ ಕೋಪದಿಂದ ಉರಿಯತೊಡಗಿದ.
ಸೋಽಮೋಘಂ ರಾಮದೈವತ್ಯಮಸ್ತ್ರಂ ಭಾರ್ಗವಸಂಜ್ಞಿತಮ್ |
ಸರ್ವಾಸ್ತ್ರನಾಶಕಂ ದಿವ್ಯಮಪ್ರತಿದ್ವಂದ್ವಮಾದದೇ ॥ 103 ॥
ಕರ್ಣ ಪರಶುರಾಮದೇವತಾಕವಾದ ಭಾರ್ಗವ ಎಂಬ ಹೆಸರಿನ ಅಮೋಘ ದಿವ್ಯಾಸ್ತ್ರವನ್ನು ಎತ್ತಿಕೊಂಡ. ಅದು ಎಲ್ಲ ಅಸ್ತ್ರಗಳನ್ನೂ ನಾಶಮಾಡಬಲ್ಲ ಪ್ರತ್ಯಸ್ತ್ರ ರಹಿತವಾದ ಅಸ್ತ್ರ.
ತಚ್ಚ ಭೀಮಪುರೋಗೇಷು ಸೈನ್ಯೇಷ್ವಮುಚದುಲ್ಬಣಮ್ |
ತದಸ್ತ್ರಂ ವರ್ಜಯಾಮಾಸ ಭೀಮಂ ರಾಮಪ್ರಸಾದತಃ ॥ 104 ॥
ಕ್ರೂರವಾದ ಆ ಅಸ್ತ್ರವನ್ನು ಕರ್ಣ ಭೀಮನ ನಾಯಕತ್ವದಲ್ಲಿದ್ದ ಸೈನ್ಯಗಳ ಮೇಲೆ ಪ್ರಯೋಗಿಸಿದ. ಆದರೆ ಆ ಅಸ್ತ್ರ ಪರಶುರಾಮನ ಅನುಗ್ರಹದಿಂದ ಭೀಮನನ್ನು ಬಿಟ್ಟಿತು.
ಅನ್ಯೇ ತು ದುದ್ರುವುಃ ಕೇಚಿಚ್ಛಿಷ್ಟಾಃ ಪ್ರಾಪುರ್ಯಮಕ್ಷಯಮ್ |
ನ ಹ್ಯಸ್ತ್ರಂ ದ್ರವಮಾಣಾಂಸ್ತದ್ಘ್ನಂತಿ ತೇನ ಸಪಾರ್ಷತಾಃ ॥105॥
ಪಾಂಚಾಲಾ ದ್ರೌಪದೇಯಾಶ್ಚ ಶೈನೇಯಾದ್ಯಾಶ್ಚ ಸರ್ವಶಃ |
ಪಲಾಯನೇನೋರ್ವರಿತಾ ಅರ್ಜುನೋಪ್ಯಸ್ತ್ರಮುದ್ಯತಮ್ ॥106॥
ವೀಕ್ಷ್ಯ ಪ್ರತ್ಯಸ್ತ್ರಹೀನಂ ತದಪ್ರಾಪ್ಯೈವ ರವೇಃ ಸುತಮ್ |
ವಾಸುದೇವಮಿದಂ ಪ್ರಾಹ ವರ್ಜಯಿತ್ವೈವ ಸೂತಜಮ್ ॥107॥
ಅನ್ಯತ್ರ ಯಾಮಿ ನೈವಾಸ್ಮಾದಸ್ತ್ರಾಜ್ಜೀವನಮನ್ಯಥಾ |
ಇತ್ಯೂಚಿವಾಂಸಂ ಪಾರ್ಥಂ ತಂ ಕೃಷ್ಣೋಽಪ್ರಾಪ್ಯೈವ ಸೂತಜಮ್
॥108॥
ಇತರರು ಪಲಾಯನ ಮಾಡಿದರು. ಉಳಿದವರು ಕೆಲವರು ಯಮಲೋಕ ವನ್ನು ಸೇರಿದರು. ಪಲಾಯನ ಮಾಡುವವರನ್ನು ಆ ಅಸ್ತ್ರ ಕೊಲ್ಲುವುದಿಲ್ಲ. ಅದರಿಂದ ಧೃಷ್ಟದ್ಯುಮ್ನ ಸಮೇತರಾದ ಪಾಂಚಾಲರೂ ದ್ರೌಪದೀ ಪುತ್ರರೂ ಸಾತ್ಯಕಿ ಮುಂತಾದವರೂ ಎಲ್ಲರೂ ಪಲಾಯನ ಮಾಡಿದ್ದರಿಂದ ಉಳಿದರು. ಅರ್ಜುನ ಆಗ ಬೇರೆಯವರೊಡನೆ ಯುದ್ಧ ಮಾಡುತ್ತ ಪ್ರತ್ಯಸ್ತ್ರವಿಲ್ಲದ ಆ ಅಸ್ತ್ರ ಹೊರಟುದನ್ನು ಕಂಡು ಕರ್ಣನ ಇದಿರಿಗೆ ಹೋಗದೆ ಕೃಷ್ಣನಿಗೆ ಹೇಳಿದ `ಕರ್ಣನನ್ನು ಬಿಟ್ಟೇ ನಾನು ಬೇರೆ ದಾರಿಯಿಂದ ಹೋಗುವೆನು. ಹಾಗೆ ಮಾಡದಿದ್ದರೆ ಈ ಅಸ್ತ್ರದಿಂದ ನನಗೆ ಉಳಿವಿಲ್ಲ.' ಅರ್ಜುನ ಹೀಗೆ ಹೇಳಿದಾಗ ಸರ್ವಕರ್ತನಾದ ಕೃಷ್ಣ ಅವನನ್ನು ಕರ್ಣನ ಬಳಿಗೆ ಒಯ್ಯದೆಯೆ ಬೇರೆ ಮಾರ್ಗದಿಂದಲೆ ಭೀಮನ ಬಳಿಗೆ ಒಯ್ದ. ಅಲ್ಲಿ ಅರ್ಜುನ ಭೀಮನಿಗೆ ಹೇಳಿದ, `ಯುಧಿಷ್ಠಿರನನ್ನು ಕಾಣಲು ಹೋಗು. ಅವನ ಸಮಾಚಾರವನ್ನು ತಿಳಿದುಕೊಳ್ಳು. ನನ್ನನ್ನು ಅಳಿದುಳಿದ ಸಂಶಪ್ತಕರು ಯುದ್ಧಕ್ಕೆ ಕರೆಯುತ್ತಿದ್ದಾರೆ. ಅದರಿಂದ ನಾನು ಅವರೊಡನೆ ಯುದ್ಧಕ್ಕೆ ಹೋಗುವೆನು.'

## ಅರವತ್ತೊಂದನೆಯ ಅಧ್ಯಾಯ

ಅರ್ಜುನ ಅಶ್ವತ್ಥಾಮನನ್ನು ಓಡಿಸಿದ. ಆದರೆ, ಕರ್ಣ ಭಾರ್ಗವಾಸ್ತ್ರವನ್ನು ಪ್ರಯೋಗಿಸಿದ್ದರಿಂದ, ಅವನ ಬಳಿಗೆ ಹೋಗಲಿಲ್ಲ.
ಸಂಜಯಃ
ದ್ರೌಣಿಸ್ತು ರಥವಂಶೇನ ಮಹತಾ ಪರಿವಾರಿತಃ |
ಆಪತತ್ಸಹಸಾ ರಾಜನ್ ಯತ್ರ ಪಾರ್ಥೋ ವ್ಯವಸ್ಥಿತಃ ॥1॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ರಾಜನೆ, ಅಶ್ವತ್ಥಾಮನು ದೊಡ್ಡರಥ ಸೈನ್ಯ ಸಮೂಹದಿಂದೊಡಗೂಡಿ ವೇಗದಿಂದ ಅರ್ಜುನನಿದ್ದಲ್ಲಿಗೆ ನುಗ್ಗಿಬಂದ.
ತಮಾಪತಂತಂ ಸಹಸಾ ಶೂರಃ ಶೌರಿಸಹಾಯವಾನ್ |
ದಧಾರ ಸಹಸಾ ಪಾರ್ಥೋ ವೇಲೇವ ಮಕರಾಲಯಮ್ ॥2॥
ವೇಗದಿಂದ ಬರುತ್ತಿದ್ದ ಅಶ್ವತ್ಥಾಮನನ್ನು , ತೀರವು ಸಮುದ್ರವನ್ನು ತಡೆದು ನಿಲ್ಲಿಸುವಂತೆ, ಕೃಷ್ಣನ ಸಹಾಯಯುಕ್ತನಾದ ಶೂರ ಅರ್ಜುನ ಬಲವಾಗಿ ತಡೆದು ನಿಲ್ಲಿಸಿಕೊಂಡ.
ತತಃ ಕ್ರುದ್ಧೋ ಮಹಾರಾಜ ದ್ರೋಣಪುತ್ರಃ ಪ್ರತಾಪವಾನ್ |
ಅರ್ಜುನಂ ವಾಸುದೇವಂ ಚ ಛಾದಯಾಮಾಸ ಸಾಯಕೈಃ ॥3॥
ಮಹಾರಾಜ, ಆಗ ಪ್ರತಾಪಶಾಲಿಯಾದ ಅಶ್ವತ್ಥಾಮನು ಕ್ರುದ್ಧನಾಗಿ ಅರ್ಜುನ ನನ್ನೂ ಕೃಷ್ಣನನ್ನೂ ಬಾಣಗಳಿಂದ ಮುಚ್ಚಿದ.

ಅವಚ್ಛನ್ನೌ ತತಃ ಕೃಷ್ಣೌ ದೃಷ್ಟ್ವಾ ತತ್ರ ಮಹಾರಥಾಃ |
ವಿಸ್ಮಯಂ ಪರಮಂ ಗತ್ವಾ ಪ್ರೈಕ್ಷಂತ ಕುರವಸ್ತದಾ ॥4॥
ಕೃಷ್ಣಾರ್ಜುನರು ಬಾಣಗಳಲ್ಲಿ ಮುಚ್ಚಿಹೋದುದನ್ನು ಕಂಡು ಕೌರವರು ಮಹಾರಥರು ಪರಮ ವಿಸ್ಮಯ ಹೊಂದಿ ವೀಕ್ಷಿಸಿದರು.
ಅರ್ಜುನಸ್ತು ತತೋ ದಿವ್ಯಮಸ್ತ್ರಂ ಚಕ್ರೇ ಹಸನ್ನಿವ |
ತದಸ್ತ್ರಂ ಬ್ರಾಹ್ಮಣೋ ಯುದ್ಧೇ ವಾರಯಾಮಾಸ ಭಾರತ ॥5॥
ಅರ್ಜುನನು ನಗುತ್ತ ದಿವ್ಯ ಅಸ್ತ್ರವನ್ನು ಪ್ರಯೋಗಿಸಿದ. ರಾಜನೆ, ಆ ಅಸ್ತ್ರವನ್ನು ಅಶ್ವತ್ಥಾಮನು ರಣದಲ್ಲಿ ತಡೆದ.
ಯದ್ಯದ್ಧಿ ವ್ಯಾಕ್ಷಿಪದ್ ಯುದ್ಧೇ ಪಾಂಡವೋಽಸ್ತ್ರಂ ಜಿಘಾಂಸಯಾ |
ತತ್ತದಸ್ತ್ರಂ ಮಹೇಷ್ವಾಸೋ ದ್ರೋಣಪುತ್ರೋ ವ್ಯಶಾತಯತ್ ॥6॥
ಅರ್ಜುನನು ಏನೇನು ಅಸ್ತ್ರವನ್ನು ಅಶ್ವತ್ಥಾಮನಿಗೆ ಹೊಡೆಯಲು ಎಸೆದನೋ ಅದೆಲ್ಲವನ್ನೂ ಮಹಾಬಿಲ್ಲಾಳು ಅಶ್ವತ್ಥಾಮ ನಾಶಪಡಿಸಿದ.
ಅಸ್ತ್ರಯುದ್ಧೇ ತತೋ ರಾಜನ್ ವರ್ತಮಾನೇ ಭಯಾವಹೇ |
ಅಪಶ್ಯಾಮ ರಥೇ ದ್ರೌಣಿಂ ವ್ಯಾತ್ತಾನನಮಿವಾಂತಕಮ್ ॥7॥
ರಾಜನೆ, ಭಯಂಕರ ಅಸ್ತ್ರಯುದ್ಧ ನಡೆಯುವಾಗ ರಥದಲ್ಲಿ ಅಶ್ವತ್ಥಾಮನು ಬಾಯಿ ತೆರೆದ ಅಂತಕನಂತೆ ನಿಂತಿದ್ದನ್ನು ನಾವು ಕಂಡೆವು.
ಸ ದಿಶೋ ವಿದಿಶಶ್ಚೈವ ಛಾದಯಿತ್ವಾ ವಿಜಿಹ್ಮಗೈಃ |
ವಾಸುದೇವಂ ತ್ರಿಭಿರ್ಬಾಣೈರವಿಧ್ಯದ್ ದಕ್ಷಿಣೇ ಭುಜೇ ॥8॥
ಅಶ್ವತ್ಥಾಮನು ದಿಕ್ಕು ವಿದಿಕ್ಕುಗಳನ್ನು ಬಾಣಗಳಿಂದ ಮುಚ್ಚಿ ಕೃಷ್ಣನ ಬಲಭುಜಕ್ಕೆ ಮೂರು ಬಾಣಗಳಿಂದ ಹೊಡೆದ.
ತತೋಽರ್ಜುನೋ ಹಯಾನ್ ಹತ್ವಾ ಸರ್ವಾಂಸ್ತಸ್ಯ ಮಹಾತ್ಮನಃ |
ಚಕಾರ ಸಮರೇ ಭೂಮಿಂ ಶೋಣಿತೌಘತರಂಗಿಣೀಮ್ ॥9॥
ಆಗ ಅರ್ಜುನ ಮಹಾತ್ಮನಾದ ಅಶ್ವತ್ಥಾಮನ ಎಲ್ಲ ಅಶ್ವ ಸೈನಿಕರನ್ನು ಸಂಹರಿಸಿ ರಣದಲ್ಲಿ ನೆಲವೆಲ್ಲ ರಕ್ತಪ್ರವಾಹ ತರಂಗಗಳಿಂದ ಯುಕ್ತವಾಗುವಂತೆ ಮಾಡಿದ.
ನಿಹತಾ ರಥಿನಃ ಪೇತುಃ ಪಾರ್ಥಚಾಪಚ್ಯುತೈಃ ಶರೈಃ |
ಹಯಾಶ್ಚ ಪರ್ಯಧಾವಂತ ಮುಕ್ತಯೋಕ್ತ್ರಾಸ್ತತಸ್ತತಃ ॥10॥
ಅರ್ಜುನನ ಧನುಸ್ಸಿನಿಂದ ಹೊರಟ ಬಾಣಗಳಿಂದ ಹತರಾದ ರಥಿಕರು ಬಿದ್ದರು. ಕುದುರೆಗಳು ಲಗಾಮಿಲ್ಲದೆ ಅಲ್ಲಲ್ಲಿ ಸುತ್ತಲೂ ಧಾವಿಸಿದುವು.
ತದ್ ದೃಷ್ಟ್ವಾ ಕರ್ಮ ಪಾರ್ಥಸ್ಯ ದ್ರೌಣಿರಾಹವಶೋಭಿನಃ |
ಅವಾಕಿರದ್ ರಣೇ ಕೃಷ್ಣೌ ಸಮಂತಾನ್ನಿಶಿತೈಃ ಶರೈಃ ॥11॥
ಯುದ್ಧದಲ್ಲಿ ಶೋಭಿಸುವ ಅರ್ಜುನನ ಈ ಸಾಹಸವನ್ನು ಕಂಡು ಅಶ್ವತ್ಥಾಮನು ರಣದಲ್ಲಿ ಕೃಷ್ಣಾರ್ಜುನರನ್ನು ಹರಿತವಾದ ಬಾಣಗಳಿಂದ ಎಲ್ಲೆಡೆ ಮುಚ್ಚಿದ.
ಗಾಂಡೀವಧನ್ವಾ ಪ್ರಸಭಂ ಶರವರ್ಷೈರುದಾರಧೀಃ |
ಸಂಛಾದ್ಯ ಸಮರೇ ದ್ರೌಣಿಂ ಚಿಚ್ಛೇದಾಸ್ಯ ಚ ಕಾರ್ಮುಕಂ ॥12॥
ಗಾಂಡೀವಧನುಸ್ಸನ್ನು ಧರಿಸಿದ ಉತ್ತಮ ಬುದ್ಧಿಶಾಲಿಯಾದ ಅರ್ಜುನನು ಅಶ್ವತ್ಥಾಮನನ್ನು ಬಾಣಗಳ ಮಳೆಗಳಿಂದ ಆಚ್ಛಾದಿಸಿ ಅವನ ಬಿಲ್ಲನ್ನೂ ಕತ್ತರಿಸಿದ.
ಸ ಚ್ಛಿನ್ನಧನ್ವಾ ಪರಿಘಂ ವಜ್ರಸ್ಪರ್ಶಸಮಂ ಯುಧಿ |
ಆದಾಯ ಚಿಕ್ಷೇಪ ತದಾ ದ್ರೋಣಪುತ್ರಃ ಕಿರೀಟಿನೇ ॥13॥
ಬಿಲ್ಲು ಕಡಿದು ಹೋದಾಗ ಅಶ್ವತ್ಥಾಮನು ರಣದಲ್ಲಿ ವಜ್ರಾಯುಧದಂಥ ಸ್ಪರ್ಶವುಳ್ಳ ಪರಿಘಾಯುಧವನ್ನು ಎತ್ತಿಕೊಂಡು ಅರ್ಜುನನ ಮೇಲೆ ಎಸೆದ.
ತಮಾಪತಂತಂ ಪರಿಘಂ ಕಾರ್ತಸ್ವರವಿಭೂಷಿತಮ್ |
ಪಾರ್ಥಶ್ಚಿಚ್ಛೇದ ಸಹಸಾ ತತ ಉಚ್ಚುಕ್ರುಶುರ್ಜನಾಃ ॥14॥
ತನ್ನ ಮೇಲೆ ಬಂಗಾರದಿಂದ ಅಲಂಕೃತವಾದ ಪರಿಘ ಬೀಳುತ್ತಿದ್ದಂತೇ ಒಡನೆ ಅದನ್ನು ಅರ್ಜುನನು ಕತ್ತರಿಸಿದ.
ಸೋಽನೇಕಧಾಪತದ್ ಭೂಮೌ ರಣೇ ಪಾರ್ಥಸ್ಯ ಸಾಯಕೈಃ |
ವಿಶೀರ್ಣಃ ಪರ್ವತೋ ರಾಜನ್ ಯಥಾ ವಜ್ರೇಣ ತಾಡಿತಃ ॥15॥
ರಾಜನೆ, ಪರಿಘವು ರಣದಲ್ಲಿ ಪಾರ್ಥನ ಬಾಣಗಳಿಂದ ಅನೇಕ ಚೂರಾಗಿ ನಾಶವಾಗಿ, ವಜ್ರದ ಆಘಾತದಿಂದ ನಾಶವಾಗಿ ಬೀಳುವ ಪರ್ವತದಂತೆ, ನೆಲದಲ್ಲಿ ಬಿದ್ದಿತು.
ತತೋರ್ಜುನೋ ರಣೇ ದ್ರೌಣಿಂ ವಿವ್ಯಾಧ ದಶಭಿಃ ಶರೈಃ |
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾಹರತ್ ॥16॥
ಬಳಿಕ ಅರ್ಜುನನು ರಣದಲ್ಲಿ ಅಶ್ವತ್ಥಾಮನನ್ನು ಹತ್ತು ಬಾಣಗಳಿಂದ ಹೊಡೆದ. ಮತ್ತು ಭಲ್ಲೆಯಿಂದ ಅವನ ಸಾರಥಿಯನ್ನು ಅವನ ಆಸನದಿಂದ ಕೆಡವಿದ.
ಸ ಸಂಗೃಹ್ಯ ಸ್ವಯಂ ವಾಹಾನ್ ಕೃಷ್ಣೌ ಪ್ರಾಚ್ಛಾದಯಚ್ಛರೈಃ |
ತತ್ರಾದ್ಭುತಮಪಶ್ಯಾಮ ದ್ರೌಣೇರಾಶು ಪರಾಕ್ರಮಮ್ ॥17॥

ಅಶ್ವತ್ಥಾಮನು ತಾನೆ ಕುದುರೆಗಳ ಲಗಾಮು ಹಿಡಿದು ಕೃಷ್ಣ ಅರ್ಜುನರನ್ನು ಬಾಣಗಳಿಂದ ಮುಚ್ಚಿದ. ಆಗ ಅಶ್ವತ್ಥಾಮನ ಅದ್ಭುತವಾದ ವೇಗದ ಪರಾಕ್ರಮ ವನ್ನು ನಾವು ಕಂಡೆವು.
ಅಯಚ್ಛತ್ತುರಗಾನ್ ಯಚ್ಚ ಫಲ್ಗುನಂ ಚಾಪ್ಯಯೋಧಯತ್ |
ತದಸ್ಯ ಸಮರೇ ರಾಜನ್ ಸರ್ವೇ ಯೋಧಾ ಅಪೂಜಯನ್ ॥18॥
ಏಕಕಾಲದಲ್ಲಿ ರಣದಲ್ಲಿ ಕುದುರೆಗಳನ್ನೂ ನಿಯಂತ್ರಿಸಿದ, ಅರ್ಜುನನನ್ನೂ ಬಾಣಗಳಿಂದ ಹೊಡೆದ, ಅಶ್ವತ್ಥಾಮ. ಇದು ಅದ್ಭುತವಾಗಿತ್ತು. ರಾಜನೆ, ಇದನ್ನು ಎಲ್ಲ ಯೋಧರೂ ಪ್ರಶಂಸೆ ಮಾಡಿದರು.
ಯದಾ ತ್ವಗ್ರಸ್ಯತ ರಣೇ ದ್ರೋಣಪುತ್ರೇಣ ಫಲ್ಗುನಃ |
ತತೋ ರಶ್ಮೀನ್ ರಥಾಶ್ವಾನಾಂ ಕ್ಷುರಪ್ರೈಶ್ಚಿಚ್ಛಿದೇ ಜಯಃ ॥19॥
ಯಾವಾಗ ಅಶ್ವತ್ಥಾಮನು ರಣದಲ್ಲಿ ಫಲ್ಗುನನನ್ನು ಆಕ್ರಮಿಸಿದನೋ ಆಗ ಫಲ್ಗುನನು ಅವನ ರಥದ ಕುದುರೆಗಳ ಲಗಾಮುಗಳನ್ನು ಬಾಣಗಳಿಂದ ಕಡಿದ.
ಪ್ರಾದ್ರವಂಸ್ತುರಗಾಸ್ತೇ ತು ಶರವೇಗಪ್ರಪೀಡಿತಾಃ |
ತತೋಭೂನ್ನಿನದೋ ಭೂಯಸ್ತವ ಸೈನ್ಯಸ್ಯ ಭಾರತ ॥20॥
ರಾಜನೆ, ಆಗ ಬಾಣದ ವೇಗದಿಂದ ಪೀಡಿತವಾದ ಅಶ್ವತ್ಥಾಮನ ಕುದುರೆಗಳು ಓಡಿಹೋದುವು. ಆಗ ನಿನ್ನ ಸೈನ್ಯದಲ್ಲಿ ದೊಡ್ಡ ಸದ್ದುಗದ್ದಲ ಉಂಟಾಯಿತು.
ಪಾಂಡವಾಸ್ತು ಜಯಂ ಲಬ್ಧ್ವಾ ತವ ಸೈನ್ಯಮುಪಾದ್ರವನ್ |
ಸಮನ್ತಾನ್ನಿಶಿತಾನ್ ಬಾಣಾನ್ ವಿಮುಂಚಂತೋ ಜಯೈಷಿಣಃ ॥21॥
ಜಯಾಕಾಂಕ್ಷಿಗಳಾದ ಪಾಂಡವರು ಜಯವನ್ನು ಪಡೆದು ನಿನ್ನ ಸೈನ್ಯವನ್ನು ಎಲ್ಲೆಡೆ ತೀಕ್ಷ್ಣವಾದ ಬಾಣಗಳನ್ನು ಎಸೆದು ಹೊಡೆದೋಡಿಸಿದರು.
ಪಾಂಡವೈಸ್ತು ಮಹಾರಾಜ ಧಾರ್ತರಾಷ್ಟ್ರೀ ಮಹಾಚಮೂಃ |
ಪುನಃ ಪುನರಥೋ ವೀರೈರಭಂಜಿ ಜಿತಕಾಶಿಭಿಃ ॥22॥
ಮಹಾರಾಜ, ಕೌರವರ ದೊಡ್ಡಸೈನ್ಯವು ಜಯದಿಂದ ಶೋಭಿಸುವ ವೀರ ಪಾಂಡವರಿಂದ ಪುನಃಪುನಃ ಭಗ್ನವಾಯಿತು.
ಪಶ್ಯತಾಂ ತೇ ಮಹಾರಾಜ ಪುತ್ರಾಣಾಂ ಚಿತ್ರಯೋಧಿನಾಮ್ |
ಶಕುನೇಃ ಸೌಬಲೇಯಸ್ಯ ಕರ್ಣಸ್ಯ ಚ ವಿಶಾಂಪತೇ ॥23॥
ವಾರ್ಯಮಾಣಾ ಮಹಾಸೇನಾ ಪುತ್ರೈಸ್ತವ ಜನೇಶ್ವರ |
ನಾವತಿಷ್ಠತ ಸಂಗ್ರಾಮೇ ತಾಡ್ಯಮಾನಾ ಸಮಂತತಃ ॥24॥
ಮಹಾರಾಜ, ಸುಂದರವಾಗಿ ಯುದ್ಧಮಾಡುವವರು ನಿನ್ನ ಪುತ್ರರು. ಆದರೂ ಶಕುನಿಕರ್ಣರು ನೋಡುತ್ತಿದ್ದಂತೇ, ನಿನ್ನ ಪುತ್ರರು ತಡೆಯುತ್ತಿದ್ದರೂ, ಎಲ್ಲೆಡೆ ಹೊಡೆತ ಬೀಳುತ್ತಿದ್ದುದರಿಂದ, ನಿನ್ನ ಸೈನ್ಯ ಸ್ಥಿರವಾಗಿ ರಣದಲ್ಲಿ ನಿಂತುಕೊಳ್ಳಲಿಲ್ಲ.
ತತೋ ಯೋಧೈರ್ಮಹಾರಾಜ ಪಲಾಯದ್ಭಿಸ್ತತಸ್ತತಃ |
ಅಭವದ್ ವ್ಯಾಕುಲಂ ಭೀತೈಃ ಪುತ್ರಾಣಾಂ ತೇ ಮಹದ್
ಬಲಮ್ ॥25॥
ಮಹಾರಾಜ, ಭೀತರಾದ ನಿನ್ನ ಯೋಧರು ದಿಕ್ಕಾಪಾಲಾಗಿ ಓಡುತ್ತಿದ್ದುದರಿಂದ ನಿನ್ನ ಮಕ್ಕಳ ದೊಡ್ಡಸೈನ್ಯ ವ್ಯಾಕುಲಗೊಂಡಿತು.
ತಿಷ್ಠ ತಿಷ್ಠೇತಿ ಸತತಂ ಸೂತಪುತ್ರಸ್ಯ ಜಲ್ಪತಃ |
ನಾವತಿಷ್ಠತ ಸಾ ಸೇನಾ ವಧ್ಯಮಾನಾ ಮಹಾತ್ಮಭಿಃ ॥26॥
ಕರ್ಣನು ಸತತವಾಗಿ ನಿಲ್ಲು ನಿಲ್ಲೆಂದು ಹೇಳುತ್ತಿದ್ದರೂ ಮಹಾತ್ಮರಾದ ಪಾಂಡವರಿಂದ ಹೊಡೆಸಿಕೊಳ್ಳುತ್ತಿದ್ದುದರಿಂದ ಸೈನ್ಯ ನಿಲ್ಲಲಿಲ್ಲ.
ಅಥೋತ್ಕುಷ್ಟಂ ಮಹಾರಾಜ ಪಾಂಡವೈರ್ಜಿತಕಾಶಿಭಿಃ |
ಧಾರ್ತರಾಷ್ಟ್ರಬಲಂ ದೃಷ್ಟ್ವಾ ದ್ರವಮಾಣಂ ಸಮಂತತಃ ॥27॥
ಮಹಾರಾಜ, ಜಯದಿಂದ ಶೋಭಿಸುವ ಪಾಂಡವರು ಎಲ್ಲಕಡೆಗೆ ಪಲಾಯನ ಮಾಡುತ್ತಿದ್ದ ಕೌರವಸೈನ್ಯವನ್ನು ಕಂಡು ಗಟ್ಟಿಯಾಗಿ ಗರ್ಜಿಸಿದರು.
ತತೋ ದುರ್ಯೋಧನಃ ಕರ್ಣಮಬ್ರವೀತ್ ಪ್ರಣಯಾದಿವ |
ಪಶ್ಯ ಕರ್ಣ ಯಥಾ ಸೇನಾ ಪಾಂಡವೈರರ್ದಿತಾ ಭೃಶಮ್ ॥28॥
ತ್ವಯಿ ತಿಷ್ಠತಿ ಸಂತ್ರಾಸಾತ್ ಪಲಾಯನಪರಾಯಣಾ |
ಏತಜ್ಜ್ಞಾತ್ವಾ ಮಹಾಬಾಹೋ ಕುರು ಪ್ರಾಪ್ತಮರಿಂದಮ ॥29॥
ಆಗ ದುರ್ಯೋಧನನು ಕರ್ಣನಿಗೆ ಪ್ರೀತಿಯಿಂದ ನುಡಿದ, `ನೋಡು, ಕರ್ಣ, ಪಾಂಡವರಿಂದ ಬಹಳ ಪೀಡಿತವಾದ ನಮ್ಮ ಸೈನ್ಯ ನೀನಿರುವಾಗಲೆ ಭಯದಿಂದ ಪಲಾಯನ ಮಾಡುತ್ತಿದೆ. ಇದನ್ನು ಅರಿತು ತಕ್ಕ ಉಪಾಯವೇನಾದರೂ ಮಾಡು.'
ಸಹಸ್ರಾಣಿ ಚ ಯೋಧಾನಾಂ ತ್ವಾಮೇವ ಪುರುಷರ್ಷಭ |
ಕ್ರೋಶಂತಿ ಸಮರೇ ವೀರ ದ್ರಾವ್ಯಮಾಣಾನಿ ಪಾಂಡವೈಃ ॥30॥
`ವೀರ ಕರ್ಣನೆ, ಸಾವಿರಗಟ್ಟಲೆ ಯೋಧರು ಪಾಂಡವರಿಂದ ಅಟ್ಟಿಸಿಕೊಂಡು ರಣದಲ್ಲಿ ನಿನ್ನನ್ನೇ ಸಹಾಯಕ್ಕಾಗಿ ಕೂಗುತ್ತಿದ್ದಾರೆ.'
ಏತಚ್ಛ್ರುತ್ವಾ ತು ರಾಧೇಯೋ ದುರ್ಯೋಧನವಚೋ ಮಹಾನ್ |
ಮದ್ರರಾಜಮಿದಂ ವಾಕ್ಯಮಬ್ರವೀತ್ ಸೂತನಂದನಃ | |31॥

ದುರ್ಯೋಧನನ ಈ ಮಾತನ್ನು ಕೇಳಿ ಮಹಾತ್ಮ ಕರ್ಣನು ಶಲ್ಯನಿಗೆ ಹೀಗೆ ಹೇಳಿದ.
ಪಶ್ಯ ಮೇ ಭುಜಯೋರ್ವೀರ್ಯಮಸತ್ರಾಣಾಂ ಚ ಜನೇಶ್ವರ |
ಅದ್ಯ ಹನ್ಮಿ ರಣೇ ಸರ್ವಾನ್ ಪಾಂಚಾಲಾನ್ ಪಾಂಡುಭಿಃ ಸಹ ||32||
ವಾಹಯಾಶ್ವಾನ್ನರವ್ಯಾಘ್ರ ಭದ್ರಾಯೈವ ನ ಸಂಶಯಃ ||33||
`ರಾಜನೆ, ನನ್ನ ಬಾಹುಬಲ ಅಸ್ತ್ರ ಬಲಗಳನ್ನು ನೋಡು, ಈಗ ರಣದಲ್ಲಿ ನಾನು ಎಲ್ಲ ಪಾಂಚಾಲರನ್ನೂ ಪಾಂಡವರೊಂದಿಗೆ ಸಂಹರಿಸುತ್ತೇನೆ. ಅಶ್ವಗಳನ್ನು ನಡೆಸು. ಶುಭವಾಗುತ್ತದೆ, ಸಂಶಯ ಬೇಡ.'
ಏವಮುಕತ್ವ ಮಹಾರಾಜ ಸೂತಪುತ್ರಃ ಪ್ರತಾಪವಾನ್ |
ಪ್ರಗೃಹ್ಯ ವಿಜಯಂ ವೀರೋ ಧನುಃಶ್ರೇಷ್ಠಂ ಪುರಾತನಮ್ ||34||
ಸಜ್ಯಂ ಕೃತ್ವಾ ಮಹಾರಾಜ ಸಮ್ಮೃಜ್ಯ ಚ ಪುನಃ ಪುನಃ ||35||
ಸನ್ನಿವಾರ್ಯ ಚ ಯೋಧಾನ್ ಸ್ವಾನ್ ಸತ್ಯೇನ ಶಪಥೇನ ಚ |
ಪ್ರಾಯೋಜಯದಮೇಯಾತ್ಮಾ ಭಾರ್ಗವಾಸ್ತ್ರಂ ಮಹಾಬಲಃ ||36||
ಮಹಾರಾಜ, ಪ್ರತಾಪಶಾಲಿ ಅಮೇಯಾತ್ಮ ಮಹಾಬಲಿ ಕರ್ಣನು ವಿಜಯವೆಂಬ ಪುರಾತನವಾದ ಉತ್ತಮ ಧನುಸ್ಸನ್ನು ಎತ್ತಿಕೊಂಡು, ಹೆದೆಏರಿಸಿ, ಪುನಃ ಪುನಃ ಸವರಿ, ತನ್ನ ಯೋಧರನ್ನು ಓಡಿಹೋಗದಂತೆ ತಡೆದು, ಸತ್ಯದ ಮೇಲಾಣೆ ಇಟ್ಟು ಭಾರ್ಗವಾಸ್ತ್ರವನ್ನು ಪ್ರಯೋಗಿಸಿದ.
ತತೋ ರಾಜನ್ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಕೋಟಿಶಶ್ಚ ಶರಾಸ್ತೀಕ್ಷ್ಣಾಃ ನಿರಗಚ್ಛನ್ ಮಹಾಮೃಧೇ ||37||
ಆಗ ರಾಜನೆ, ಸಾವಿರಸಾವಿರ ಲಕ್ಷಲಕ್ಷ ಕೋಟಿ ಕೋಟಿ ಸಂಖ್ಯೆಯಲ್ಲಿ ಬಲುತೀಕ್ಷ್ಣವಾದ ಬಾಣಗಳು ಮಹಾರಣದಲ್ಲಿ ಧನುಸ್ಸಿನಿಂದ ಹೊರಗೆ ಹೊರಟವು.
ಜ್ವಲಿತೈಸ್ತೈರ್ಮಹಾಘೋರೈಃ ಕಂಕಬರ್ಹಿಣವಾಜಿತೈಃ |
ಸಂಛನ್ನಾ ಪಾಂಡವೀ ಸೇನಾ ನ ಪ್ರಾಜ್ಞಾಯತ ಕಿಂಚನ ||38||
ಹದ್ದಿನ ರೆಕ್ಕೆಗಳ ಪಕ್ಕವುಳ್ಳ ಮಹಾಘೋರವಾಗಿ ಉರಿವ ಆ ಬಾಣಗಳಿಂದ ಪಾಂಡವಸೈನ್ಯ ಮುಚ್ಚಿಹೋಯಿತು, ಏನೂ ಕಾಣಿಸುತ್ತಿರಲಿಲ್ಲ.
ಭಾರ್ಗವಂ ಭಾರ್ಗವಶ್ರೇಷ್ಠಾದವಾಪ್ತಮತಿ ತೇಜಸಂ |
ಯೇನ ಪ್ರಯುಜ್ಯಮಾನೇನ ಸ ದೇವಾಸುರ ಮಾನವಂ ||39||
ಸಪಾತಾಲಾರ್ಣವಜಲಂ ಸಂಪ್ರಾಪ್ತಂ ಪ್ರಲಯೋತ್ತಮಂ |
ಸಶೈಲಕಾನನವನಂ ತ್ರೈಲೋಕ್ಯಮಶಿವಂ ಬಭೌ ||40||
ಭೃಗುಕುಲತಿಲಕನಾದ ಪರಶುರಾಮ ಉಪದೇಶಿಸಿದ ಭಾರ್ಗವಾಸ್ತ್ರವು ಅತಿ ತೇಜಸ್ವಿ. ದೇವ ಅಸುರ ಮಾನವಸಹಿತವಾದ ಪಾತಾಲ ಸಮುದ್ರಜಲ ಪರ್ವತ ಅರಣ್ಯಸಮೇತವಾದ ಮೂಲರ್ೋಕಕ್ಕೂ ಕ್ಷೇಮವಿಲ್ಲದಂತೆ ಮಾಡುತ್ತ ಜ್ವಲಿಸಿತು. ಪ್ರಲಯ ಮಾಡಲು ತೊಡಗಿತು.
ಹಾಹಾಕಾರೋ ಮಹಾನಾಸೀತ್ ಪಾಂಚಾಲಾನಾಂ ವಿಶಾಂಪತೇ |
ಪೀಡಿತಾನಾಂ ಬಲವತಾ ಭಾರ್ಗವಾಸ್ತ್ರೇಣ ಸಂಯುಗೇ ||41||
ಮಹಾರಾಜ, ಪ್ರಬಲವಾದ ಭಾರ್ಗವಾಸ್ತ್ರದಿಂದ ರಣದಲ್ಲಿ ಪೀಡಿತರಾದ ಪಾಂಚಾಲರಲ್ಲಿ ದೊಡ್ಡ ಹಾಹಾಕಾರ ಉಂಟಾಯಿತು.
ನಿಪತದ್ಭಿರ್ಗಜೈ ರಾಜನ್ನರೈಶ್ಚಾಪಿ ಸಹಸ್ರಶಃ |
ರಥೈಶ್ಚಾಪಿ ನರವ್ಯಾಘ್ರ ಹಯೈಶ್ಚಾಪಿ ಸಮಂತತಃ ||42||
ಪ್ರಾಕಮ್ಪತ ಮಹೀ ರಾಜನ್ನಿಹತೈಸ್ತೈಸ್ತತಸ್ತತಃ |
ವ್ಯಾಕುಲಂ ಸರ್ವಮಭವತ್ ಪಾಂಡವಾನಾಂ ಮಹದ್ಬಲಮ್ ||43||
ರಾಜನೆ, ಸಾವಿರಾರು ಸಂಖ್ಯೆಯಲ್ಲಿ ಎಲ್ಲೆಡೆ ಹತವಾಗಿ ಬಿದ್ದ ಗಜ ಪದಾತಿ ರಥ ಅಶ್ವಗಳಿಂದ ಭೂಮಿ ನಡುಗಿತು. ಪಾಂಡವರ ಮಹಾಸೈನ್ಯವೆಲ್ಲವೂ ವ್ಯಾಕುಲ ಗೊಂಡಿತು.
ಕರ್ಣಸ್ತ್ವೇಕೋ ಯುಧಾಂ ಶ್ರೇಷ್ಠೋ ವಿಧೂಮ ಇವ ಪಾವಕಃ |
ದಹನ್ ಶತ್ರೂನ್ನರವ್ಯಾಘ್ರ ಶುಶುಭೇ ಸ ಪರಂತಪಃ ||44||
ರಾಜನೆ, ಯೋಧರಲ್ಲಿ ಶ್ರೇಷ್ಠನಾದ ಶತ್ರುನಾಶಕನಾದ ಕರ್ಣನೊಬ್ಬನೆ ಹೊಗೆಯಿಲ್ಲದ ಬೆಂಕಿಯಂತೆ ಶತ್ರುಗಳನ್ನು ಸುಡುತ್ತ ಶೋಭಿಸಿದ.
ತೇ ವಧ್ಯಮಾನಾಃ ಕರ್ಣೇನ ಪಾಂಚಾಲಾಶ್ಚೇದಿಭಿಃ ಸಹ |
ತತ್ರ ತತ್ರ ವ್ಯಮುಹ್ಯಂತ ವನದಾಹೇ ಯಥಾ ದ್ವಿಪಾಃ ||45||
ಚುಕ್ರುಶುಸ್ತೇ ನರವ್ಯಾಘ್ರ ಯಥಾಪ್ರಾಣಂ ನರೋತ್ತಮಾಃ ||46||
ಕಾಳ್ಗಿಚ್ಚಿನಲ್ಲಿ ಆನೆಗಳಂತೆ ನರೋತ್ತಮರಾದ ಪಾಂಚಾಲ ಚೇದಿಯೋಧರು ಕರ್ಣನಿಂದ ಹೊಡೆಸಿಕೊಳ್ಳುತ್ತ ಅಲ್ಲಲ್ಲಿ ಮೈಮರೆತು ಅಲ್ಲಲ್ಲಿ ಬಿದ್ದರು. ಶಕ್ತಿ ಇದ್ದಷ್ಟು ಕೂಗಿಕೊಂಡರು.
ತೇಷಾಂ ತು ಕ್ರೋಶತಾಂ ದೀನಂ ಭೀತಾನಾಂ ರಣಮೂರ್ಧನಿ |
ಧಾವತಾಂ ಚ ದಿಶೋ ರಾಜನ್ ವಿತ್ರಸ್ತಾನಾಂ ಸಮಂತತಃ ||47||
ಆರ್ತನಾದೋ ಮಹಾನಾಸೀತ್ ಪ್ರೇತಾನಾಮಿವ ಸಂಪ್ಲವೇ ||48||

ರಣಾಗ್ರದಲ್ಲಿ ಭಯದಿಂದ ನಡುಗಿ ಎಲ್ಲ ದಿಕ್ಕುಗಳಿಗೆ ಓಡುವ, ದೈನ್ಯದಿಂದ ಕೂಗುವ ಸೈನಿಕರ ದೊಡ್ಡ ಆರ್ತನಾದವು ಪ್ರಳಯದಲ್ಲಿ ಸಾಯುವ ಪ್ರಾಣಿಗಳ ಕೂಗಿನಂತೇ ಇತ್ತು.
ವಧ್ಯಮಾನಾಂಸ್ತು ತಾನ್ ದೃಷ್ಟ್ವಾ ಸೂತಪುತ್ರೇಣ ಮಾರಿಷ |
ವಿತ್ರೇಸುಃ ಸರ್ವಭೂತಾನಿ ತಿರ್ಯಗ್ಯೋನಿಗತಾನ್ಯಪಿ ॥49॥
ರಾಜನೆ, ಕರ್ಣನು ಅವರನ್ನು ವಧಿಸುತ್ತಿರುವುದನ್ನು ಕಂಡು ಪ್ರಾಣಿವರ್ಗಕ್ಕೆ ಸೇರಿದ ಎಲ್ಲ ಜೀವಿಗಳೂ ಕೂಡ ನಡುಗಿದುವು.
ತೇ ವಧ್ಯಮಾನಾಃ ಸಮರೇ ಸೂತಪುತ್ರೇಣ ಸೃಂಜಯಾಃ |
ಅರ್ಜುನಂ ವಾಸುದೇವಂ ಚ ವ್ಯಾಕ್ರೋಶಂತ ಮುಹುರ್ಮುಹುಃ ॥50॥
ಪ್ರೇತರಾಜಪುರೇ ಯದ್ವತ್ ಪ್ರೇತರಾಜಂ ವಿಚೇತಸಃ ॥51॥
ರಣದಲ್ಲಿ ಕರ್ಣನಿಂದ ಹತರಾಗುತ್ತಿದ್ದ ಸೃಂಜಯರು ವ್ಯಗ್ರಚಿತ್ತರಾಗಿ, ಯಮರಾಜಪಟ್ಟಣದಲ್ಲಿ ಯಮನನ್ನು ಕೂಗುವಂತೆ, ಅರ್ಜುನನನ್ನೂ ಕೃಷ್ಣನನ್ನೂ ಕೂಗಿದರು.
ಶ್ರುತ್ವಾ ತು ನಿನದಂ ತೇಷಾಂ ವಧ್ಯತಾಂ ಕರ್ಣಸಾಯಕೈಃ ॥52॥
ಅಥಾಬ್ರವೀದ್ ವಾಸುದೇವಂ ಕುಂತೀಪುತ್ರೋ ಧನಂಜಯಃ |
ಭಾರ್ಗವಾಸ್ತ್ರಂ ಮಹಾಘೋರಂ ದೃಷ್ಟ್ವಾ ತತ್ರ ಸಮೀರಿತಮ್ ॥53॥
ಕರ್ಣನ ಬಾಣಗಳಿಂದ ಹತರಾಗುತ್ತಿದ್ದ ಸೃಂಜಯರ ಕೂಗನ್ನು ಕೇಳಿ ಅರ್ಜುನನು, ಕರ್ಣನು ಪ್ರಯೋಗಿಸಿದ ಮಹಾ ಘೋರವಾದ ಭಾರ್ಗವಾಸ್ತ್ರವನ್ನು ನೋಡಿ ಕೃಷ್ಣನಿಗೆ ನುಡಿದ.
ಪಶ್ಯ ಕೃಷ್ಣ ಮಹಾಬಾಹೋ ಭಾರ್ಗವಾಸ್ತ್ರಸ್ಯ ವಿಕ್ರಮಮ್ |
ನೈತದಸ್ತ್ರಂ ಹಿ ಸಮರೇ ಶಕ್ಯಂ ಹಂತುಂ ಕಥಂಚನ ॥54॥
ನೋಡು, ಭಾರ್ಗವಾಸ್ತ್ರದ ಪರಾಕ್ರಮವನ್ನು, ಮಹಾಬಾಹುವಾದ ಕೃಷ್ಣನೆ! ಈ ಅಸ್ತ್ರವನ್ನು ರಣದಲ್ಲಿ ನಿಷ್ಕ್ರಿಯಗೊಳಿಸಲು ಯಾವ ರೀತಿಯಿಂದಲೂ ಶಕ್ಯವಿಲ್ಲ.
ಸೂತಪುತ್ರಂ ಚ ಸಂರಬ್ಧಂ ಪಶ್ಯ ಕೃಷ್ಣ ಮಹಾರಣೇ |
ಅಂತಕಪ್ರತಿಮಂ ವೀರಂ ಕುರ್ವಾಣಂ ಕರ್ಮ ದಾರುಣಮ್ ॥55॥
ಮಹಾರಣದಲ್ಲಿ ಕುಪಿತನಾದ ವೀರ ಕರ್ಣನನ್ನು ನೋಡು, ಕೃಷ್ಣ! ಅಂತಕನಂತೆ ದಾರುಣವಾದ ಯುದ್ಧಕರ್ಮವನ್ನು ಮಾಡುತ್ತಿದ್ದಾನೆ.
ಅಭೀಕ್ಷ ್ಣಂ ಚೋದಯನ್ನಶ್ವಾನ್ ಪ್ರೇಕ್ಷತೇ ಮಾಂ ಮುಹುರ್ಮುಹುಃ |
ನ ಚ ಪಶ್ಯಾಮಿ ಸಮರೇ ಕರ್ಣಂ ಪ್ರತಿ ಪಲಾಯಿತುಮ್ ॥56॥
ಕುದುರೆಗಳನ್ನು ನಡೆಸುತ್ತ ಪುನಃಪುನಃ ನನ್ನನ್ನೆ ನೋಡುತ್ತಿದ್ದಾನೆ. ಕರ್ಣನ ಕಡೆಗೆ ಪಲಾಯನ ಮಾಡಲು ನನ್ನನ್ನು ಬಿಟ್ಟು ಇನ್ನೊಬ್ಬ ಶಕ್ತನಾದವನನ್ನು ನಾ ಕಾಣೆ.
ಜೀವನ್ ಪ್ರಾಪ್ನೋತಿ ಪುರುಷಃ ಸಂಖ್ಯೇ ಜಯಪರಾಜಯೌ |
ಮೃತಸ್ಯ ತು ಹೃಷೀಕೇಶ ವಧ ಏವ ಕುತೋ ಜಯಃ ॥57॥
ಕೃಷ್ಣ, ಬದುಕಿ ಉಳಿದಿದ್ದರೆ ರಣದಲ್ಲಿ ಪುರುಷನು ಜಯವನ್ನಾಗಲಿ, ಪರಾಜಯ ವನ್ನಾಗಲಿ ಹೊಂದಬಲ್ಲ. ಸತ್ತರೆ ಸಾವೇ ಲಭಿಸಿದಂತಾಯಿತು, ಜಯದಾಸೆ ಎಲ್ಲಿ?
ಇಲ್ಲಿ ಲಕ್ಷಾಲಂಕಾರ ಹೇಳುವಂತೆ `ಪಲಾಯನ'ವೆಂದರೆ `ಪರಾ' ಆಚೆಗೆ `ಅಯನ' `ಹೋಗುವುದು' ಎಂದಿಷ್ಟೇ ಅರ್ಥ. ಹೆದರಿ ಒಂದು ಪ್ರದೇಶದಿಂದ ಬೇರೆ ಪ್ರದೇಶಕ್ಕೆ ಹೋಗುವುದು ಎಂಬ ವಿಶೇಷಾರ್ಥ `ಪಲಾಯನ' ಶಬ್ದಕ್ಕೆ ಸ್ವತಃ ಇಲ್ಲ. ಈ ವಿಶೇಷಾರ್ಥಕ್ಕಾಗಿ `ಕರ್ಣಾತ್ ಪಲಾಯತೇ' `ಕರ್ಣನಿಗೆ ಹೆದರಿ ಅವನಿಂದ ಬೇರೆಯೇ ಆದ ಪ್ರದೇಶಕ್ಕೆ ಹೋಗುತ್ತಾನೆ' ಎಂದು ಪಂಚಮೀವಿಭಕ್ತಿ ಇರಬೇಕಾಗುತ್ತದೆ. ಪಂಚಮೀ ಅಪಾದಾನಾರ್ಥದಲ್ಲಿರುವುದರಿಂದ ಈ ಅರ್ಥ ಪಂಚಮೀಪ್ರಯೋಗದಿಂದಲೆ ಬರುತ್ತದೆ. ಪ್ರಕೃತ `ಕರ್ಣಂ ಪ್ರತಿ ಪಲಾಯಿತುಂ' ಎಂದು ದ್ವಿತೀಯಾವಿಭಕ್ತಿಯ ಪಾಠವಿದೆ. ಆಚೆಗೆ ಕರ್ಣನ ಕಡೆಗೆ ಹೋಗುವುದೆಂದೇ ಅರ್ಥ. ರಣರಂಗದಲ್ಲಿ ಇಲ್ಲಿಂದಾಚೆಗೆ ಕರ್ಣನ ಕಡೆಗೆ ಹೋಗುವ ಸಾಮರ್ಥ್ಯವಿರುವುದು ತನಗೆ, ಒಬ್ಬ ಅರ್ಜುನನಿಗೆ ಮಾತ್ರ. ಆದರೆ ಭಾರ್ಗವಾಸ್ತ್ರ, ಬ್ರಹ್ಮಾಸ್ತ್ರಕ್ಕಿಂತ ಮಿಗಿಲು. ಅದಕ್ಕೆ ಪ್ರತ್ಯಸ್ತ್ರವೇ ಇಲ್ಲ. ನಾರಾಯಣಾಸ್ತ್ರದಂತೇ ಅದು. ಅದಕ್ಕೆ ಹೆದರಿ ಕರ್ಣನಿಂದಾಚೆಗೆ ಪಲಾಯನ ಮಾಡಿದರೆ ಮಾತ್ರ ಬದುಕಿ ಉಳಿಯಲು ಸಾಧ್ಯ. ಅರ್ಜುನ ವೀರಕ್ಷತ್ರಿಯ. ಪಲಾಯನ ಮಾಡಿ ತನ್ನ ಜೀವ ಉಳಿಸಿಕೊಳ್ಳುವವನಲ್ಲ. ಪಲಾಯನ ಮಾಡದೆ ಎದುರಿಗೆ ನಿಂತರೆ ಸಾವು ನಿಶ್ಚಿತ. ಧೃಷ್ಟದ್ಯುಮ್ನ ಮುಂತಾದವರು `ಧಾವತಾಂ ಚ ದಿಶೋ ರಾಜನ್ ವಿತ್ರಸ್ತಾನಾಂ ಸಮಂತತಃ' (ಶ್ಲೋಕ.47) ಎಂದು ಹೇಳಿದಂತೆ ಪಲಾಯನ ಮಾಡಿ ಜೀವಉಳಿಸಿಕೊಂಡರು. ಅವರಿಗೆ ಬೇರೆ ಉಪಾಯವಿರಲಿಲ್ಲ. ಅದರಿಂದ ಅರ್ಜುನ ತಾನು ಇಲ್ಲಿಂದಾಚೆಗೆ ಕರ್ಣನ ಕಡೆಗೆ ಹೋಗದೇ ಈಚೆಗೇ ಬೇರೆ ದಾರಿಯಿಂದಲೇ ಶಿಬಿರದಲ್ಲಿರುವ ಧರ್ಮರಾಜನನ್ನು ಕಾಣಲು ಹೋಗುವೆನು ಎನ್ನುತ್ತಿದ್ದಾನೆ. ನಿರ್ಣಯದಲ್ಲಿ ಹೀಗೇ ಹೇಳಿದ್ದಾರೆ.
ಏವಮುಕ್ತಸ್ತು ಪಾರ್ಥೇನ ಕೃಷ್ಣೋ ಮತಿಮತಾಂ ವರಮ್ |
ಧನಂಜಯಮುವಾಚೇದಂ ಪ್ರಾಪ್ತಕಾಲಮರಿಂದಮಮ್ ॥58॥
ಹೀಗೆ ಪಾರ್ಥ ಹೇಳಿದಾಗ ಕೃಷ್ಣನು ಬುದ್ಧಿವಂತರಲ್ಲಿ ಶ್ರೇಷ್ಠನಾದ ಶತ್ರುನಾಶಕನಾದ ಅರ್ಜುನನಿಗೆ ಕಾಲೋಚಿತವಾದ ಈ ಮಾತನ್ನು ಹೇಳಿದ.
ಕರ್ಣೇನ ಹಿ ದೃಢಂ ರಾಜಾ ಕುಂತೀಪುತ್ರಃ ಪರಿಕ್ಷತಃ |
ತಂ ದೃಷ್ಟ್ವಾಽಽಶ್ವಾಸ್ಯ ಚ ಪುನಃ ಕರ್ಣಂ ಪಾರ್ಥ ವಧಿಷ್ಯಸಿ ॥59॥
`ಕರ್ಣನು ರಾಜಾ ಯುಧಿಷ್ಠಿರನಿಗೆ ಬಹಳ ಗಾಯ ಉಂಟು ಮಾಡಿದ್ದಾನೆ. ನೀನು ಈಗ ಯುಧಿಷ್ಠಿರನನ್ನು ಸಂತೈಸಿ ಬಳಿಕ, ಅರ್ಜುನ,

ನೀನು ಕರ್ಣನನ್ನು
ವಧಿಸು' ಎಂದು.
ತತೋ ಜನಾರ್ದನಃ ಪ್ರಾಯಾದ್ ದ್ರಷ್ಟುಮಿಚ್ಛನ್ಯುಧಿಷ್ಠಿರಮ್ ।
ಶ್ರಮೇಣ ಗ್ರಾಹಯಿಷ್ಯಂಶ್ಚ ಕರ್ಣಂ ಯುದ್ಧೇನ ಮಾರಿಷ ॥60॥
ವಿಶ್ರಮಾರ್ಥಂ ಚ ಕೌರವ್ಯ ಪಾಂಡವಸ್ಯ ಮಹಾತ್ಮನಃ
ಅಪಯಾತೋ ರಣಾದ್ ವೀರೋ ರಾಜಾನಂ ದ್ರಷ್ಟುಮೇವ ಚ ॥61॥
ಪ್ರತ್ಯನೀಕಮವಸ್ಥಾಪ್ಯ ಭೀಮಂ ಭೀಮಪರಾಕ್ರಮಮ್ ।
ಅಲಂ ವಿಷಹಿತುಂ ಹ್ಯೇಷ ಕುರೂಣಾಂ ಸಂಪ್ರಪದ್ಯತಾಮ್ ॥62॥
ತತೋ ಧನಂಜಯೋ ದ್ರಷ್ಟುಂ ರಾಜಾನಂ ಬಾಣಪೀಡಿತಮ್ ।
ರಥೇನ ಪ್ರಯಯೌ ಕ್ಷಿಪ್ರಂ ಸಂಗ್ರಾಮೇ ಕೇಶವಾಜ್ಞಯಾ ॥63|
ಬಳಿಕ ಶ್ರೀಕೃಷ್ಣ ಯುಧಿಷ್ಠಿರನನ್ನು ನೋಡಲು ಹೊರಟನು. ಕರ್ಣನನ್ನು ಶ್ರಮಕರವಾದ ಯುದ್ಧದಲ್ಲಿ ಸಿಕ್ಕಿಹಾಕಿಕೊಳ್ಳುವಂತೆ ಮಾಡಲು ಮತ್ತು ಮಹಾತ್ಮ ಅರ್ಜುನನಿಗೆ ವಿಶ್ರಾಂತಿ ಸಿಗುವಂತೆ ಮಾಡಲು ಶ್ರೀಕೃಷ್ಣ ಹೀಗೆ ಮಾಡಿದ. ಕೌರವಸೈನಿಕರು ಆಕ್ರಮಿಸಲು ಬಂದಾಗ ಅವರಿಗೆ ಇದಿರಾಗಿ ಭೀಮಪರಾಕ್ರಮಿ ಭೀಮನನ್ನು `ಅವರನ್ನು ಇದಿರಿಸಲು ಈತನೆ ಸಮರ್ಥ' ಎಂಬ ಅಭಿಪ್ರಾಯದಿಂದ ನಿಲ್ಲಿಸಿ, ರಣರಂಗದಿಂದಾಚೆ ಶಿಬಿರದ ಕಡೆಗೆ, ಬಾಣಗಳಿಂದ ಪೀಡಿತನಾಗಿದ್ದ
ಯುಧಿಷ್ಠಿರನನ್ನು ಕಾಣಲು, ಅರ್ಜುನನು ಕೃಷ್ಣಾಜ್ಞೆಯಿಂದ ರಥದಿಂದ ಬೇಗನೆ ಹೋದನು.
ಗಚ್ಛನ್ನೇವ ತು ಕೌಂತೇಯೋ ಧರ್ಮರಾಜದಿದೃಕ್ಷಯಾ ।
ಸೈನ್ಯಮಾಲೋಕಯಾಮಾಸ ನಾಪಶ್ಯತ್ ತತ್ರ ಚಾಗ್ರಜಮ್ ॥64॥
ಧರ್ಮರಾಜನನ್ನು ನೋಡಲೆಂದು ಹೋಗುವಾಗ ಅರ್ಜುನನು ಸೈನ್ಯವನ್ನು ನೋಡಿದ. ಅಲ್ಲಿ ಅಣ್ಣ ಕಾಣಿಸಲಿಲ್ಲ.
ಯುದ್ಧಂ ಕೃತ್ವಾ ತು ಕೌಂತೇಯೋ ದ್ರೋಣಪುತ್ರೇಣ ಭಾರತ ।
ದುಃಸಹಂ ವಜ್ರಿಣಾ ಸಂಖ್ಯೇ ಪರಾಜಿಗ್ಯೇ ಗುರೋಃ ಸುತಮ್ ॥65॥
ರಾಜನೆ, ಅರ್ಜುನನು ಅಶ್ವತ್ಥಾಮನೊಡನೆ ಯುದ್ಧ ಮಾಡಿ, ಇಂದ್ರನಿಗೂ ಯುದ್ಧದಲ್ಲಿ ಇದಿರಿಸಲಾಗದಂಥ ಆ ಅಶ್ವತ್ಥಾಮನನ್ನು, ಗುರುಸುತನನ್ನು ಪರಾಭವಗೊಳಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಏಕಷಷ್ಟಿತಮೋಧ್ಯಾಯಃ ॥61॥

ಮಹಾಭಾರತತಾತ್ಪರ್ಯನಿರ್ಣಯ
ಅನ್ಯೇನೈವ ಪಥಾ ಭೀಮಂ ಪ್ರಾಪಯಾಮಾಸ ವಿಶ್ವಕೃತ್ ।
ತತ್ರಾರ್ಜುನೋಽವದದ್ ಭೀಮಂ ಯಾಹಿ ದ್ರಷ್ಟುಂ ಯುಧಿಷ್ಠಿರಮ್
॥ 109 ॥
ಪ್ರವೃತ್ತಿಂ ವಿದ್ಧಿ ಭೂಪಸ್ಯ ಮಾಂ ತು ಸಂಶಪ್ತಕಾ ಯುಧೇ ।
ಆಹ್ವಯಂತಿ ಹತೋಚ್ಛೇಷಾಸ್ತಾನಹಂ ಯಾಮಿ ತದ್ ಯುಧೇ
॥ 110 ॥
ಅರ್ಜುನ ಭೀಮನಿಗೆ ಹೇಳಿದ, `ಯುಧಿಷ್ಠಿರನನ್ನು ಕಾಣಲು ಹೋಗು. ಅವನ ಸಮಾಚಾರವನ್ನು ತಿಳಿದುಕೊಳ್ಳು. ನನ್ನನ್ನು ಅಳಿದುಳಿದ ಸಂಶಪ್ತಕರು ಯುದ್ಧಕ್ಕೆ ಕರೆಯುತ್ತಿದ್ದಾರೆ. ಅದರಿಂದ ನಾನು ಅವರೊಡನೆ ಯುದ್ಧಕ್ಕೆ ಹೋಗುವೆನು.'
ಇತ್ಯೂಚಿವಾಂಸಂ ತಮುವಾಚ ಭೀಮೋ
ಜಾನನ್ ಸ್ವಬಾಹ್ವೋರ್ಬಲಮಪ್ರಮೇಯಮ್ ।
ಸಂಶಪ್ತಕಾನ್ ಸೂತಜಂ ಕೌರವಾಂಶ್ಚ
ಯೋತ್ಸ್ಯೇಹಮೇಕಸ್ತ್ವಮುಪೈಹಿ ಭೂಪಮ್ ॥ 111 ॥
ಅರ್ಜುನ ಹೀಗೆ ಹೇಳಿದಾಗ ತನ್ನ ಬಾಹುಗಳ ಅಪರಿಮಿತವಾದ ಬಲವನ್ನು ತಿಳಿದಿದ್ದ ಭೀಮ ಅವನಿಗೆ ಹೇಳಿದ, `ಸಂಶಪ್ತಕರನ್ನೂ ಕರ್ಣನನ್ನೂ ಕೌರವರನ್ನೂ ನಾನೊಬ್ಬನೆ ಇದಿರಿಸುವೆನು. ನೀನು ಯುಧಿಷ್ಠಿರನ ಬಳಿಗೆ ಹೋಗು.'
ತ್ಯಕ್ತ್ವಾತ್ರ ರಣಂ ನಾಹಮಿತೋ ವ್ರಜೇಯಂ
ನ ಮಾಂ ವದೇತ್ ಕಶ್ಚನ ಯುದ್ಧಭೀತಮ್ ।
ಇತಿ ಬ್ರುವಾಣಂ ತಮನಂತಶಕ್ತಿಃ
ಪ್ರೀತಃ ಕೃಷ್ಣಃ ಪ್ರಶಶಂಸಾಧಿಕೇಷ್ಟಮ್ ॥ 112 ॥
`ಯುದ್ಧವನ್ನು ಬಿಟ್ಟು ನಾನು ಇಲ್ಲಿಂದ ಹೋಗಲಾರೆ. ಏಕೆಂದರೆ ಯುದ್ಧಕ್ಕೆ ಹೆದರಿದೆನೆಂದು ಯಾರೂ ನನ್ನ ಬಗ್ಗೆ ಆಡಿಕೊಳ್ಳಬಾರದು.' ಹೀಗೆ ಭೀಮ ಹೇಳಿದಾಗ ಸರ್ವಶಕ್ತನಾದ ಶ್ರೀಕೃಷ್ಣ ಸಂತುಷ್ಟನಾಗಿ ತನಗೆ ಅತ್ಯಂತ ಪ್ರಿಯನಾದ ಭೀಮನನ್ನು ಕೊಂಡಾಡಿದ.
ಯಯೌ ಯುಧಿಷ್ಠಿರಂ ದ್ರಷ್ಟುಂ ಶಿಬಿರಂ ಸಾರ್ಜುನೋ ಹರಿಃ ।
ದೃಷ್ಟ್ವಾ ತೌ ನೃಪತಿಃ ಕರ್ಣಂ ಹತಂ ಮತ್ವಾ ಶಶಂಸ ಹ ॥ 113 ॥
ಅರ್ಜುನ ಸಮೇತನಾದ ಶ್ರೀಕೃಷ್ಣ ಯುಧಿಷ್ಠಿರನನ್ನು ಕಾಣಲು ಶಿಬಿರಕ್ಕೆ ಹೋದ. ಅವರನ್ನು ಕಂಡು ಯುಧಿಷ್ಠಿರ ಕರ್ಣ ಹತನಾದನೆಂದು ಬಗೆದು ಹೊಗಳಿದ.

ಅರವತ್ತೆರಡನೆಯ ಅಧ್ಯಾಯ
ಯುಧಿಷ್ಠಿರ ಶಿಬಿರಕ್ಕೆ ಹೋಗಿರುವುದನ್ನು ಅರ್ಜುನ ಭೀಮನಿಂದ ತಿಳಿದು ಅವನನ್ನು ಕಾಣಲು ಶಿಬಿರಕ್ಕೆ ಹೋಗುತ್ತಾನೆ.
ಸಂಜಯಃ
ದ್ರೌಣಿಂ ಪರಾಜಿತ್ಯ ತತೋಽಗ್ರಧನ್ವಾ
ಕೃತ್ವಾ ಮಹದ್ ದುಷ್ಕರಮಾರ್ಯಕರ್ಮ |
ಆಲೋಕಯಾಮಾಸ ತತಃ ಸ್ವಸೈನ್ಯಂ
ಧನಂಜಯಃ ಶತ್ರುಭಿರಪ್ರಧೃಷ್ಯಃ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಉತ್ತಮ ಧನುಸ್ಸನ್ನು ಧರಿಸಿ ಶತ್ರುಗಳಿಗೆ ಇದಿರಿಸಲಾಗದಿರುವವನಾದ ಅರ್ಜುನನು ಅಶ್ವತ್ಥಾಮನೊಂದಿಗೆ ಯುದ್ಧದಲ್ಲಿ ಮಹಾ ದುಷ್ಕರವಾದ ಪೂಜಾರ್ಹವಾದ ಅಸ್ತ್ರಪ್ರಯೋಗರೂಪವಾದ ಕರ್ಮಮಾಡಿ ಅಶ್ವತ್ಥಾಮನನ್ನು ಪರಾಭವಗೊಳಿಸಿ ತನ್ನ ಸೈನ್ಯವನ್ನು ವೀಕ್ಷಿಸಿದ.
ಸ ಯುಧ್ಯಮಾನಃ ಪೃತನಾಮುಖಸ್ಥಾನ್
ಶೂರಾನ್ ಶೂರೋ ಹರ್ಷಯನ್ ಸವ್ಯಸಾಚೀ |
ಪೂರ್ವಾಪದಾನೈಃ ಪ್ರಥಿತಃ ಪ್ರಶಂಸನ್
ಸ್ಥಿರಾಂಶ್ಚಕಾರಾತ್ಮರಥಾನನೀಕೇ ॥2॥
ರಣರಂಗದ ಅಗ್ರಭಾಗದಲ್ಲಿ ನಿಲ್ಲುವ ಶೂರರನ್ನು ಹುರಿದುಂಬಿಸುತ್ತ ಪ್ರಶಂಸಿಸುತ್ತ ತಾನೂ ಯುದ್ಧ ಮಾಡುತ್ತ ಹಿಂದಿನ ಮಹಾಕಾರ್ಯಗಳಿಂದ ಪ್ರಸಿದ್ಧನಾದ ಶೂರನಾದ ಅರ್ಜುನನು ತನ್ನ ರಥಸೈನಿಕರನ್ನು ಸೈನ್ಯದಲ್ಲಿ ಸ್ಥಿರವಾಗಿ ನಿಲ್ಲಿಸಿದ.
ಅಪಶ್ಯಮಾನಸ್ತು ಕಿರೀಟಮಾಲೀ
ಯುಧಿ ಜ್ಯೇಷ್ಠಂ ಭ್ರಾತರಮಾಜಮೀಢಮ್ |
ಉವಾಚ ಭೀಮಂ ತರಸಾಭ್ಯುಪೇತ್ಯ
ರಾಜ್ಞಃ ಪ್ರವೃತ್ತಿಸ್ತ್ವಿಹ ಕೇತಿ ರಾಜನ್ ॥3॥
ರಾಜನೆ, ರಣದಲ್ಲಿ ಅಣ್ಣ ಯುಧಿಷ್ಠಿರನನ್ನು ಕಾಣದೆ ಬೇಗನೆ ಭೀಮನ ಬಳಿಗೆ ಬಂದು ಅರ್ಜುನನು `ರಾಜಾಯುಧಿಷ್ಠಿರನ ಪ್ರವೃತ್ತಿ ರಣರಂಗದಲ್ಲಿ ಏನು?' ಎಂದು ಕೇಳಿದ.
ಭೀಮಃ
ಅಪಯಾತ ಇತೋ ರಾಜಾ ಧರ್ಮಪುತ್ರೋ ಯುಧಿಷ್ಠಿರಃ |
ಕರ್ಣಬಾಣಾಭಿತಪ್ತಾಂಗೋ ಯದಿ ಜೀವೇತ್ ಕಥಂಚನ ॥4॥
ಭೀಮ ನುಡಿದ– ರಾಜಾಧರ್ಮಪುತ್ರ ಯುಧಿಷ್ಠಿರನು ಕರ್ಣನ ಬಾಣಗಳಿಂದ ಮೈಯೆಲ್ಲ ಸುಟ್ಟುಕೊಂಡು ಇಲ್ಲಿಂದ ಹೊರಟು ಹೋಗಿದ್ದಾನೆ. ಅವನು ಈಗ ಕಷ್ಟದಿಂದ ಬದುಕಿ ಉಳಿದಿರುವನೆ ಎಂಬುದು ಸಂದಿಗ್ಧವಾಗಿದೆ.
ಅರ್ಜುನಃ
ತಸ್ಮಾದ್ ಭವಾನ್ ಶೀಘ್ರಮಿತಃ ಪ್ರಯಾತು
ರಾಜ್ಞಃ ಪ್ರವೃತ್ತ್ಯೈ ಕುರುಸತ್ತಮಸ್ಯ |
ನೂನಂ ಹಿ ವಿದ್ಧೋಽತಿಭೃಶಂ ಪೃಷತ್ಕೈಃ
ಕರ್ಣೇನ ರಾಜಾ ಶಿಬಿರಂ ಗತೋಽಸೌ ॥5॥
ಅರ್ಜುನ ನುಡಿದ– ಅದರಿಂದ ರಾಜನ ವೃತ್ತಾಂತವನ್ನು ನೋಡಿಕೊಳ್ಳಲು ನೀನು ಬೇಗನೆ ಇಲ್ಲಿಂದ ಹೊರಡು. ಕರ್ಣನ ಬಾಣಗಳಿಂದ ಬಹಳ ಹೊಡೆಸಿ ಕೊಂಡು ರಾಜಾ ಯುಧಿಷ್ಠಿರನು ಈಗ ಪ್ರಾಯಶಃ ಶಿಬಿರಕ್ಕೇ ಹೋಗಿರುತ್ತಾನೆ.
ಯಃ ಸಂಪ್ರಹಾರೇ ನಿಶಿ ಸಂಪ್ರವೃತ್ತೇ
ದ್ರೋಣೇನ ವಿದ್ಧೋಽತಿಭೃಶಂ ತರಸ್ವೀ |
ತಸ್ಥೌ ಚ ತತ್ರಾಪಿ ಜಯಪ್ರತೀಕ್ಷೋ
ದ್ರೋಣೋಽಪಿ ಯಾವನ್ನ ಹತಃ ಕಿಲಾಸೀತ್ ॥6॥
ರಾತ್ರಿ ನಡೆದ ಯುದ್ಧದಲ್ಲಿ ದ್ರೋಣನಿಂದ ಬಹಳ ಹೊಡೆಸಿಕೊಂಡರೂ ರಣರಂಗದಿಂದ ಹೋಗದೆ, ಜಯವನ್ನು ನಿರೀಕ್ಷಿಸಿ ರಣರಂಗದಲ್ಲಿಯೇ ದ್ರೋಣನು ಹತನಾಗದಿರುವವರೆಗೂ ನಿಂತಿದ್ದ.
ಸ ಸಂಶಯಂ ಗಮಿತಃ ಪಾಂಡವಾಗ್ರ್ಯಃ
ಸಂಖ್ಯೇಽದ್ಯ ಕರ್ಣೇನ ಮಹಾನುಭಾವಃ |
ಜ್ಞಾತುಂ ಪ್ರಯಾಹ್ಯಾಶು ತಮದ್ಯ ಭೀಮ
ಸ್ಥಾಸ್ಯಾಮ್ಯಹಂ ಶತ್ರುಗಣಾನ್ನಿರುಧ್ಯ ॥7॥
ಅದರಿಂದ ಇಂದು ಮೊದಲೇ ಆಯಾಸಗೊಂಡಿದ್ದ ಮಹಾನುಭಾವ
ಯುಧಿಷ್ಠಿರನು ಕರ್ಣನಿಂದ ರಣದಲ್ಲಿ ಹೊಡೆಸಿಕೊಂಡು ಜೀವನಮರಣಗಳ ಸಂಶಯಕ್ಕೆ ಈಡಾಗಿದ್ದಾನೆ. ಭೀಮ, ಅವನ ಸ್ಥಿತಿಯನ್ನು ತಿಳಿಯಲು ನೀನು ಬೇಗನೆ ಹೋಗು. ಶತ್ರುಸಮೂಹವನ್ನು ತಡೆಯುತ್ತ ನಾನು ಇಲ್ಲಿ ಇರುತ್ತೇನೆ.
ಭೀಮಃ
ತ್ವಮೇವ ಜಾನೀಹಿ ಮಹಾನುಭಾವ
ರಾಜ್ಞಃ ಪ್ರವೃತ್ತಿಂ ಭರತರ್ಷಭಸ್ಯ |

ಅಹಂ ಹಿ ಯದ್ಯರ್ಜುನ ಯಾಮಿ ತತ್ರ
ವಕ್ಷ್ಯಂತಿ ಮಾಂ ಭೀತ ಇತಿ ಪ್ರವೀರಾಃ ॥8॥
ಭೀಮ ನುಡಿದ– `ಮಹಾನುಭಾವ, ನೀನೇ ರಾಜಾ ಯುಧಿಷ್ಠಿರನ ವೃತ್ತಾಂತವನ್ನು ತಿಳಿದುಕೊಳ್ಳು. ಅರ್ಜುನ, ನಾನು ಅಲ್ಲಿಗೆ ಹೋದೆನೆಂದರೆ, ವೀರರು ನನ್ನನ್ನು ಭೀತನಾದನೆಂದು ಹೇಳಬಹುದು.'
ಭಾರ್ಗವಾಸ್ತ್ರಕ್ಕೆ ಪ್ರತ್ಯಸ್ತ್ರವಿಲ್ಲದ್ದರಿಂದ ಧೃಷ್ಟದ್ಯುಮ್ನ ಮುಂತಾದವರು ಪಲಾಯನ ಮಾಡಿದರು. ಭೀಮ ಪಲಾಯನ ಮಾಡಲಿಲ್ಲ. ಅಸ್ತ್ರಕ್ಕೆ ಆಹುತಿಯೂ ಆಗಲಿಲ್ಲ. ಈಗ ಧರ್ಮರಾಜನನ್ನು ಕಾಣಲೆಂದು ಭೀಮ ಹೊರಟು ಹೋದರೆ, ಅವನೂ ಧೃಷ್ಟದ್ಯುಮ್ನ ಮುಂತಾದವರಂತೆಯೇ ಪಲಾಯನ ಮಾಡಿದನೆಂದೇ ಎಲ್ಲರೂ ತಿಳಿಯುತ್ತಾರೆ. ಅದರಿಂದ `ಅರ್ಜುನನೇ ಹೋಗಲಿ' ಎನ್ನುತ್ತಾನೆ, ಭೀಮ.
ತತೋಽಬ್ರವೀದರ್ಜುನೋ ಭೀಮಸೇನಂ
ಸಂಶಪ್ತಕಾಃ ಪ್ರತ್ಯನೀಕಂ ಸ್ಥಿತಾ ಮೇ ।
ಏತಾನಹತ್ವಾ ನ ಮಯಾ ತು ಶಕ್ಯಂ
ಇತೋಽಪಯಾತುಂ ರಿಪುಸಂಘಗೋಷ್ಠಾತ್ ॥9॥
ಆಗ ಅರ್ಜುನನು ಭೀಮನಿಗೆ ನುಡಿದ– ನನಗೆ ವಿರೋಧವಾಗಿ ಸಂಶಪ್ತಕರು ನಿಂತಿದ್ದಾರೆ. ಅವರನ್ನು ಕೊಲ್ಲದೆ ಶತ್ರುಸಮೂಹಗೋಷ್ಠಿಯನ್ನು ಬಿಟ್ಟು ಇಲ್ಲಿಂದ ಹೋಗುವುದು ನನಗೆ ಶಕ್ಯವಲ್ಲ.
ಅಥಾಬ್ರವೀದರ್ಜುನಂ ಭೀಮಸೇನಃ
ಸ್ವವೀರ್ಯಮಾಶ್ರಿತ್ಯ ಕುರುಪ್ರವೀರ ।
ಸಂಶಪ್ತಕಾನ್ ಪ್ರತಿಯೋತ್ಸ್ಯಾಮಿ ಸಂಖ್ಯೇ
ಸರ್ವಾನಹಂ ಯಾಹಿ ಧನಂಜಯೇತಿ ॥10॥
ಅರ್ಜುನನಿಗೆ ಭೀಮಸೇನ ನುಡಿದ– ಅರ್ಜುನ, ನಾನೇ ನನ್ನ ಬಲವನ್ನು ಅವಲಂಬಿಸಿ ಸಂಶಪ್ತಕರೆಲ್ಲರನ್ನೂ ರಣದಲ್ಲಿ ಇದಿರಿಸುತ್ತೇನೆ, ಅರ್ಜುನ, ನೀನೆ ಹೋಗು.
ತದ್ಭೀಮಸೇನಸ್ಯ ವಚೋ ನಿಶಮ್ಯ
ಧನಂಜಯೋ ಭ್ರಾತುರಮಿತ್ರಮಧ್ಯೇ ॥11॥
ಸಂಶಪ್ತಕಾನೀಕಮಸಹ್ಯಮೇಕಃ
ಸುದುಷ್ಕರಂ ಧಾರಯಾಮೀತಿ ಪಾರ್ಥಃ ॥12॥
ದ್ರಷ್ಟುಂ ಕುರುಶ್ರೇಷ್ಠಮಭಿಪ್ರಯಾಸ್ಯನ್
ಪ್ರೋವಾಚ ವೃಷ್ಣಿಪ್ರವರಂ ತದಾನೀಮ್ ॥13॥
`ಶತ್ರುಗಳ ಮಧ್ಯದಲ್ಲಿ ಅಸಹನೀಯವಾದ ಬಹು ದುಷ್ಕರವಾದ ಸಂಶಪ್ತಕ ಸೈನ್ಯವನ್ನು ನಾನೊಬ್ಬನೆ ಇದಿರಿಸುತ್ತೇನೆ' ಎಂದು ಹೇಳಿದ ಸೋದರ ಭೀಮಸೇನನ ಮಾತನ್ನು ಕೇಳಿ ಅರ್ಜುನನು ಯುಧಿಷ್ಠಿರನ ಬಳಿಗೆ ಹೋಗಬಯಸಿ ಕೃಷ್ಣನಿಗೆ ನುಡಿದ.
ಚೋದಯಾಶ್ವಾನ್ ಹೃಷೀಕೇಶ ವಿಗಾಹ್ಯೈತಂ ರಥಾರ್ಣವಮ್ ।
ಅಜಾತಶತ್ರುಂ ರಾಜಾನಂ ದ್ರಷ್ಟುಮಿಚ್ಛಾಮಿ ಕೇಶವ ॥14॥
ಹೃಷೀಕೇಶ, ನಾನು ಈ ರಥ ಸೈನ್ಯಸಾಗರವನ್ನು ಚೆನ್ನಾಗಿ ಮಥನಮಾಡಿದ ಬಳಿಕ ಈಗ ರಾಜಾ ಯುಧಿಷ್ಠಿರನನ್ನು ಕಾಣಲು ಬಯಸುತ್ತಿದ್ದೇನೆ. ಕುದುರೆಗಳನ್ನು ನಡೆಸು.
ತತೋ ಹಯಾನ್ ಸರ್ವದಾಶಾರ್ಹಮುಖ್ಯಃ
ಪ್ರಾಚೋದಯದ್ ಭೀಮಮುವಾಚ ಚೇದಮ್ ।
ನೈತಚ್ಚಿತ್ರಂ ತವ ಕರ್ಮಾದ್ಯ ವೀರ
ಯಾಸ್ಯಾಮಹೇ ಜಹಿ ಭೀಮಾರಿಸಂಘಾನ್ ॥15॥
ಸರ್ವ ಯಾದವ ಶ್ರೇಷ್ಠನಾದ ಕೃಷ್ಣನು ಕುದುರೆಗಳನ್ನು ನಡೆಸತೊಡಗಿದ ಮತ್ತು ಭೀಮನಿಗೆ ಹೇಳಿದ, `ವೀರನೆ, ಈಗ ನೀನು ಮಾಡುವ ಕಾರ್ಯ ನಿನಗೇನೂ ಆಶ್ಚರ್ಯಕರವಲ್ಲ. ನಾವು ಹೋಗುವೆವು, ಭೀಮ! ನೀನೇ ಶತ್ರುಸಮೂಹಗಳನ್ನು ಸಂಹರಿಸು' ಎಂದು.
ತತೋ ಯಯೌ ಹೃಷೀಕೇಶೋ ಯತ್ರ ರಾಜಾ ಯುಧಿಷ್ಠಿರಃ ।
ಶೀಘ್ರಾತ್ ಶೀಘ್ರತರಂ ರಾಜನ್ ವಾಜಿಭಿರ್ಗರುಡೋಪಮೈಃ ॥16॥
ರಾಜನೆ, ವೇಗದಲ್ಲಿ ಗರುಡನಂತಿರುವ ಕುದುರೆಗಳಿಂದ ಶೀಘ್ರಾತಿಶೀಘ್ರವಾಗಿ ರಾಜಾ ಯುಧಿಷ್ಠಿರನಿರುವಲ್ಲಿ ಶ್ರೀಕೃಷ್ಣ ಹೋದ.
ಪ್ರತ್ಯನೀಕೇ ವ್ಯವಸ್ಥಾಪ್ಯ ಭೀಮಸೇನಮರಿಂದಮಮ್ ।
ಸಂದಿಶ್ಯ ಚೈವ ರಾಜೇಂದ್ರ ಯುದ್ಧಂ ಪ್ರತಿ ವೃಕೋದರಮ್ ॥17॥
ಶತ್ರುಗಳಿಗೆ ಇದಿರಾಗಿ ಶತ್ರುನಾಶಕನಾದ ಭೀಮನನ್ನು ನಿಲ್ಲಿಸಿ, ನೀನೇ ಯುದ್ಧ ಮಾಡೆಂದು ಹೇಳಿ ಶ್ರೀಕೃಷ್ಣ ರಾಜಾ ಯುಧಿಷ್ಠಿರನಿರುವಲ್ಲಿಗೆ ಹೋದ.
ತತಸ್ತು ಗತ್ವಾ ಪುರುಷಪ್ರವೀರೌ
ರಾಜಾನಮಾಸಾದ್ಯ ಶಯಾನಮೇಕಮ್ ।
ರಥಾದುಭೌ ಪ್ರತ್ಯವರುಹ್ಯ ತಸ್ಮಾದ್
ವವಂದತುರ್ಧರ್ಮರಾಜಸ್ಯ ಪಾದೌ ॥18॥
ಪುರುಷೋತ್ತಮರಾದ ಕೃಷ್ಣಾರ್ಜುನರಿಬ್ಬರು ಶಯ್ಯೆಯ ಮೇಲೆ ಒಬ್ಬನೇ ಒರಗಿದ್ದ ರಾಜಾ ಯುಧಿಷ್ಠಿರನ ಬಳಿಗೆ ಹೋಗಿ ರಥದಿಂದ

ಇಳಿದು ಅವನ ಪಾದಗಳನ್ನು ವಂದಿಸಿದರು.
ತೌ ದೃಷ್ಟ್ವಾ ಪುರುಷವ್ಯಾಘ್ರೌ ಕ್ಷೇಮಿಣೌ ಪುರುಷರ್ಷಭ |
ಮುದಾಭ್ಯುಪಗತೌ ಕೃಷ್ಣಾವಶ್ವಿನಾವಿವ ವಾಸವಮ್ ॥19॥
ತಾವಭ್ಯನಂದದ್ರಾಜಾ ಹಿ ವಿವಸ್ವಾನಶ್ವಿನಾವಿವ |
ಹತೇ ಮಹಾಸುರೇ ಜಂಭೇ ಶಕ್ರವಿಷ್ಣೂ ಯಥಾ ಗುರುಃ ॥20॥
ರಾಜನ್, ಕ್ಷೇಮವಾಗಿ ಬಂದಿರುವ ಆ ಪುರುಷೋತ್ತಮರಾದ ಕೃಷ್ಣಾರ್ಜುನರು, ಇಂದ್ರನ ಬಳಿಗೆ ಅಶ್ವಿನೀದೇವತೆಗಳು ಬಂದಂತೆ, ರಾಜನ ಬಳಿಗೆ ಬಂದರು. ಅವರನ್ನು, ಅಶ್ವಿನೀದೇವತೆಗಳನ್ನು ಸೂರ್ಯನಂತೆ, ಜಂಭಮಹಾಸುರನು ಹತನಾದಾಗ ಇಂದ್ರವಿಷ್ಣುಗಳನ್ನು ಬೃಹಸ್ಪತಿಯಂತೆ, ರಾಜಾ ಯುಧಿಷ್ಠಿರನು ಅಭಿನಂದಿಸಿದ.
ಮನ್ಯಮಾನೋ ಹತಂ ಕರ್ಣಂ ಧರ್ಮರಾಜೋ ಯುಧಿಷ್ಠಿರಃ |
ಹರ್ಷಗದ್ಗದಯಾ ವಾಚಾ ಪ್ರೀತಃ ಪ್ರಾಹ ಪರಂತಪೌ ॥21॥
ಕರ್ಣನು ಹತನಾದನೆಂದೇ ನಂಬಿದ ಧರ್ಮರಾಜ ಯುಧಿಷ್ಠಿರನು ಹರ್ಷದಿಂದ ಗದ್ಗದವಾದ ಧ್ವನಿಯಿಂದ ಶತ್ರುತಾಪಕರಾದ ಕೃಷ್ಣಾರ್ಜುನರಿಗೆ ನುಡಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಧರ್ಮರಾಜದರ್ಶನಂ ನಾಮ ದ್ವಿಷಷ್ಟಿತಮೋಽಧ್ಯಾಯಃ ॥62॥

ಅರವತ್ತಮೂರನೆಯ ಅಧ್ಯಾಯ
ಅರ್ಜುನ ಕರ್ಣವಧ ಮಾಡಿಯೇ ಬಂದಿರುವನೆಂದು ಬಗೆದು
ಯುಧಿಷ್ಠಿರ ಅಭಿನಂದಿಸುತ್ತಾನೆ.
ಸಂಜಯಃ
ಅಥೋಪಯಾತೌ ಪೃಥುಲೋಹಿತಾಕ್ಷೌ
ಶರಾಚಿತಾಂಗೌ ರುಧಿರಪ್ರದಿಗ್ಧೌ |
ಸಮೀಕ್ಷ್ಯ ಸೇನಾಗ್ರನರಪ್ರವೀರೌ
ಯುಧಿಷ್ಠಿರೋ ವಾಕ್ಯಮಿದಂ ಬಭಾಷೇ ॥1॥
ಮಹಾಸತ್ತ್ವೌ ತು ತೌ ದೃಷ್ಟ್ವಾ ಸಹಿತೌ ಕೇಶವಾರ್ಜುನೌ |
ಹತಮಾಧಿರಥಿಂ ಮೇನೇ ಸಂಖ್ಯೇ ಗಾಂಡೀವಧನ್ವನಾ ॥2॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ವಿಸ್ತಾರವಾದ ಕೆಂಪುಕಣ್ಣಿನವರು ಬಾಣಗಳಿಂದ ಗಾಯಹೊಂದಿದ ಮೈಉಳ್ಳವರು ನೆತ್ತರಿಂದ ತೊಯ್ದವರು ಸೈನ್ಯದ ಅಗ್ರ ಭಾಗದಲ್ಲಿ ನಿಲ್ಲುವ ಯೋಧರಲ್ಲಿ ಶ್ರೇಷ್ಠರು ಕೃಷ್ಣ ಮತ್ತು ಅರ್ಜುನರು ಬಳಿಗೆ ಬಂದಾಗ ನೋಡಿ ಯುಧಿಷ್ಠಿರನು ಈ ಮಾತನ್ನು ನುಡಿದ. ಮಹಾಬಲಿಷ್ಠರಾದ ಕೃಷ್ಣ ಅರ್ಜುನರು ಜೊತೆಯಾಗಿ ಬಂದುದನ್ನು ಕಂಡು ಕರ್ಣನು ರಣದಲ್ಲಿ ಅರ್ಜುನನಿಂದ ಹತನಾದನೆಂದೇ ನಂಬಿದ.
ತಾವಭ್ಯನಂದತ್ಕೌಂತೇಯಃ ಸಾಮ್ನಾ ಪರಮವಲ್ಗುನಾ |
ಸ್ಮಿತಪೂರ್ವಮಮಿತ್ರಘ್ನಃ ಪೂಜಯನ್ ಭರತರ್ಷಭ ॥3॥
ರಾಜನ್, ಶತ್ರುಸಂಹಾಕರನಾದ ಯುಧಿಷ್ಠಿರನು ಅವರಿಬ್ಬರನ್ನು ಬಲು ಸುಂದರವಾದ ನಯವಾದ ಮಾತಿನಿಂದ ನಗುತ್ತ ಹೊಗಳುತ್ತ ಅಭಿನಂದಿಸಿದ.
ಯುಧಿಷ್ಠಿರಃ
ಸ್ವಾಗತಂ ದೇವಕೀಮಾತಃ ಸ್ವಾಗತಂ ತೇ ಧನಂಜಯ |
ಪ್ರಿಯಂ ಮೇ ದರ್ಶನಂ ಬಾಢಂ ಯುವಯೋರಚ್ಯುತಾರ್ಜುನೌ ॥4॥
ಯುಧಿಷ್ಠಿರನು ನುಡಿದ. ದೇವಕೀಸುತನೆ, ನಿನಗೆ ಸ್ವಾಗತ, ಅರ್ಜುನನೆ, ನಿನಗೆ ಸ್ವಾಗತ. ಕೃಷ್ಣಾರ್ಜುನರೆ, ನಿಮ್ಮ ದರ್ಶನ ನನಗೆ ಬಲು ಸಂತೋಷದಾಯಕವಾಗಿದೆ.
ಅಕ್ಷತಾಭ್ಯಾಮರಿಷ್ಟಾಭ್ಯಾಂ ಹತಃ ಕರ್ಣೋ ಮಹಾರಥಃ |
ಆಶೀವಿಷಸಮಂ ಯುದ್ಧೇ ಸರ್ವಶಸ್ತ್ರವಿಶಾರದಮ್ ॥5॥
ಗಾಯ ಮಾಡಿಕೊಳ್ಳದೆ, ಕೇಡು ತಂದುಕೊಳ್ಳದೆ ನೀವು ಮಹಾರಥನಾದ ಕರ್ಣನನ್ನು ಕೊಂದು ಬಂದಿರುವಿರಿ. ಕರ್ಣನೆಂದರೆ ವಿಷಸರ್ಪದಂಥವನು, ಯುದ್ಧದಲ್ಲಿ ಸರ್ವಶಸ್ತ್ರಗಳಲ್ಲಿ ಪಾರಂಗತ. ಅವನನ್ನು ಕೊಂದು ಬಂದಿರಿ.
ಅಗ್ರಗಂ ಧಾರ್ತರಾಷ್ಟ್ರಾಣಾಂ ಸರ್ವೇಷಾಂ ಶರ್ಮ ವರ್ಮ ಚ |
ರಕ್ಷಿತಂ ವೃಷಸೇನೇನ ಸುಷೇಣೇನ ಚ ಧನ್ವಿನಾ ॥6॥
ಧೃತರಾಷ್ಟ್ರಪುತ್ರರಿಗೆಲ್ಲರಿಗೂ ಇವನು ಮುಂದೆ ಇರುವವನು. ಅವರಿಗೆ ಸುಖದಾಯಕನೂ ರಕ್ಷಕನೂ ಆಗಿದ್ದಾನೆ. ವೃಷಸೇನ ಸುಷೇಣರು ಬಿಲ್ಗಾರರು ಇವನಿಗೆ ರಕ್ಷಣೆ ನೀಡುವವರು. ಅವನನ್ನು ಕೊಂದು ಬಂದಿರಿ.
ಅನುಜ್ಞಾತಂ ಮಹಾವೀರ್ಯಂ ರಾಮೇಣಾಸ್ತ್ರೇಷು ದುರ್ಜಯಮ್ |
ರಾಮೇಣ ಜಾಮದಗ್ನ್ಯೇನ ಅನುಜ್ಞಾತಂ ಯಶಸ್ವಿನಾ |
ತ್ರಾತಾರಂ ಧಾರ್ತರಾಷ್ಟ್ರಾಣಾಂ ಗಂತಾರಂ ವಾಹಿನೀಮುಖೇ ॥7॥
ಕೀರ್ತಿಶಾಲಿಯಾದ ಪರಶುರಾಮನಿಂದ ಶಸ್ತ್ರಜ್ಞನೆಂದು ಸಮ್ಮತನಾದವನು. ಮಹಾವೀರ್ಯಶಾಲಿ, ಅಸ್ತ್ರಗಳಲ್ಲಿ ಯಾರಿಗೂ

ಸೋಲದವನು. ಕೌರವರ ರಕ್ಷಕನು, ಸೈನ್ಯದ ಮುಂಭಾಗದಲ್ಲಿ ನಿಲ್ಲುವವನು. ಅವನನ್ನು ಕೊಂದು ಬಂದಿರಿ.
ಹಂತಾರಮರಿಸೈನ್ಯಾನಾಮಮಿತ್ರಗಣಮರ್ದನಮ್ |
ದುರ್ಯೋಧನಹಿತೇ ಯುಕ್ತಮಸ್ಮದ್ದುಃಖಾಯ ಚೋದ್ಯತಮ್ ॥8॥
ಶತ್ರುಸೈನ್ಯನಾಶಕ, ಶತ್ರುಗಳಿಗೆ ನಾಶಕ, ದುರ್ಯೋಧನನ ಹಿತದಲ್ಲಿ ಉದ್ಯುಕ್ತ. ನಮ್ಮ ಪೀಡೆಗೆ ಉದ್ಯುಕ್ತ. ಅವನನ್ನು ಕೊಂದು ಬಂದಿರಿ.
ಅಪ್ರಧೃಷ್ಯಂ ಮಹಾಯುದ್ಧೇ ದೇವೈರಪಿ ಸವಾಸವೈಃ |
ಅನಲಾನಿಲಯೋಸ್ತುಲ್ಯಂ ತೇಜಸಾ ಚ ಬಲೇನ ಚ ॥9॥
ಮಹಾಯುದ್ಧದಲ್ಲಿ ಇಂದ್ರಾದಿದೇವತೆಗಳಿಗೂ ಇದಿರಿಸಲಾಗದವನು, ಪರಾಕ್ರಮದಲ್ಲಿ ಬಲದಲ್ಲಿ ಅಗ್ನಿವಾಯುಗಳಿಗೆ ಸಮನು. ಅವನನ್ನು ಕೊಂದು ಬಂದಿರಿ.
ಪಾತಾಲಮಿವ ಗಂಭೀರಂ ಸುಹೃದಾನಂದವರ್ಧನಮ್ |
ಅಂತಕಾಭಮಮಿತ್ರಾಣಾಂ ಕರ್ಣಂ ಹತ್ವಾ ಮಹಾಹವೇ |
ದಿಷ್ಟ್ಯಾ ಯುವಾಮನುಪ್ರಾಪ್ತೌ ಜಿತ್ವಾಸುರಮಿವಾಮರೌ ॥10॥
ಪಾತಾಲದಂತೆ ಗಂಭೀರ, ಮಿತ್ರರಿಗೆ ಆನಂದವರ್ಧನ. ಶತ್ರುಗಳಿಗೆ ಯಮ. ಅದೃಷ್ಟವಶದಿಂದ ಇಂಥ ಕರ್ಣನನ್ನು ಮಹಾಯುದ್ಧದಲ್ಲಿ ಕೊಂದು ಅಸುರನನ್ನು ಕೊಂದು ಬರುವ ದೇವತೆಗಳಂತೆ ನೀವು ಬಂದಿರುವಿರಿ.
ಘೋರಂ ಯುದ್ಧಮದೀನೇನ ಮಯಾ ಹ್ಯದ್ಯಾಚ್ಯುತಾರ್ಜುನೌ |
ಕೃತಂ ತೇನಾಂತಕೇನೇವ ಪ್ರಜಾಃ ಸರ್ವಾ ಜಿಘಾಂಸತಾ ॥11॥
ಕೃಷ್ಣಾರ್ಜುನರೇ, ನಾನು ಇಂದು ಎಲ್ಲ ಜನರ ಸಂಹಾರ ಮಾಡಲು ಹೊರಟ ಯಮನಂತಿದ್ದ ಕರ್ಣನೊಡನೆ ಧೈರ್ಯಗೆಡದೆ ಘೋರ ಯುದ್ಧವನ್ನೇ ಮಾಡಿದ್ದೇನೆ.
ತೇನ ಕೇತುಶ್ಚ ಮೇ ಛಿನ್ನೋ ಹತೌ ಚ ಪಾರ್ಷ್ಣಿಸಾರಥೀ |
ಹತವಾಹಃ ಕೃತಶ್ಚಾಸ್ಮಿ ಯುಯುಧಾನಸ್ಯ ಪಶ್ಯತಃ ॥12॥
ಧೃಷ್ಟದ್ಯುಮ್ನಸ್ಯ ಯಮಯೋರ್ವೀರಸ್ಯ ಚ ಶಿಖಂಡಿನಃ |
ಪಶ್ಯತಾಂ ದ್ರೌಪದೇಯಾನಾಂ ಪಾಂಚಾಲಾನಾಂ ಚ ಸರ್ವಶಃ ॥13॥
ಆದರೆ, ಯುಯುಧಾನನು ನೋಡುತ್ತಿದ್ದಂತೆಯೆ, ಧೃಷ್ಟದ್ಯುಮ್ನ, ನಕುಲ ಸಹದೇವರು, ವೀರಶಿಖಂಡಿ, ದ್ರೌಪದೀಪುತ್ರರು ಪಾಂಚಾಲರು ಎಲ್ಲರೂ ನೋಡುತ್ತಿದ್ದಂತೆಯೇ ಕರ್ಣನು ನನ್ನ ಧ್ವಜವನ್ನು ಕತ್ತರಿಸಿದ. ಹಿಂಭಾಗದ ರಕ್ಷಕರನ್ನು ಸಂಹರಿಸಿದ. ನನ್ನ ಕುದುರೆಗಳನ್ನೂ ಕೊಂದ.
ಏತಾನ್ ಜಿತ್ವಾ ಮಹಾವೀರ್ಯಾನ್ ಕರ್ಣಃ ಶತ್ರುಗಣಾನ್ ಬಹೂನ್ |
ಜಿತವಾನ್ ಮಾಂ ಮಹಾಬಾಹೋ ಯತಮಾನಂ ಮಹಾರಣೇ ॥14॥
ಮಹಾಬಾಹು ಕೃಷ್ಣ, ಈ ಮಹಾವೀರ್ಯಶಾಲಿಗಳಾದ ಬಹು ಶತ್ರುಸಮೂಹ ಗಳನ್ನು ಕರ್ಣನು ಗೆದ್ದು, ಮಹಾರಣದಲ್ಲಿ ಯತ್ನ ಮಾಡುತ್ತಿದ್ದ ನನ್ನನ್ನೂ ಪರಾಭವಗೊಳಿಸಿದ.
ಅನುಸೃತ್ಯ ಚ ಮಾಂ ಯುದ್ಧೇ ಪರುಷಾಣ್ಯುಕ್ತವಾನ್ ಬಹು |
ತತ್ರ ಕರ್ಣೋ ಯುಧಾಂ ಶ್ರೇಷ್ಠಃ ಪರಿಭೂಯ ಧನಂಜಯ ॥15॥
ಅರ್ಜುನ, ಯೋಧರಲ್ಲಿ ಶ್ರೇಷ್ಠನಾದ ಕರ್ಣನು ಯುದ್ಧದಲ್ಲಿ ನನ್ನನ್ನು ಪರಾಭವಗೊಳಿಸಿ ಹಿಂಬಾಲಿಸಿ ಬಂದು ಬಹಳ ಕಟುನುಡಿಗಳನ್ನು ಆಡಿದ.
ಭೀಮಸೇನಪ್ರಭಾವಾತ್ ತು ಯಜ್ಜೀವಾಮಿ ಧನಂಜಯ |
ಬಹುನಾತ್ರ ಕಿಮುಕ್ತೇನ ನಾಹಂ ತತ್ಸೋಢುಮುತ್ಸಹೇ ॥16॥
ಅರ್ಜುನ, ಭೀಮಸೇನನ ಪ್ರಭಾವದಿಂದ ನಾನು ಬದುಕಿದ್ದೇನೆ; ಹೆಚ್ಚು ಹೇಳುವುದರಿಂದೇನು? ನಾನು ಅದನ್ನು ಸಹಿಸಲಾರೆ.
ತ್ರಯೋದಶಾಹಂ ವರ್ಷಾಣಿ ಯಸ್ಮಾದ್ ಭೀತೋ ಧನಂಜಯ |
ನ ಸ್ಮ ನಿದ್ರಾಂ ಲಭೇ ರಾತ್ರೌ ನ ಚಾಹನಿ ಸುಖಂ ಕ್ವಚಿತ್ ॥17॥
ಅರ್ಜುನ, ಹದಿಮೂರು ವರ್ಷಗಳ ಕಾಲ ಕರ್ಣನ ಭೀತಿಯಿಂದ ನಾನು ಎಂದೂ ರಾತ್ರಿ ನಿದ್ರೆ ಹೊಂದಲಿಲ್ಲ. ಹಗಲು ನೆಮ್ಮದಿ ಹೊಂದಲಿಲ್ಲ.
ತಸ್ಯ ದ್ವೇಷೇಣ ಸಂಯುಕ್ತಃ ಪರಿದಹ್ಯೇ ಧನಂಜಯ |
ಆತ್ಮನೋ ಮರಣಂ ಜಾನನ್ ವಾಧ್ರಾನಸ ಇವ ದ್ವಿಪಾತ್ | |18॥
ಅರ್ಜುನ, ಕರ್ಣನ ಮೇಲಿನ ದ್ವೇಷದಿಂದ ಯುಕ್ತನಾಗಿ ಕರ್ಣನು ನನಗೆ ಮಾಡಿದ ಪರಾಭವವನ್ನೇ ಮರಣವೆಂದು ತಿಳಿದು ನಾನು, ಕಾಡುಕೋಣವು ಆನೆಯಿಂದ ಪರಾಭವಗೊಳ್ಳುವಂತೆ ನಾನೂ ಕರ್ಣನಿಂದ ಪರಾಭವ ಗೊಂಡೆನೆಂದು ಮನಸಿನೊಳಗೇ ಬೆಂದುಹೋಗುತ್ತಿದ್ದೇನೆ.
ಇಲ್ಲಿ ವಾಧ್ರಾಣಿಸ, ವಾರ್ಧ್ರೀಣಸ, ವಾಧ್ರೀಣಸ, ವಾರ್ಧ್ರೀನಸ ಎಂದು ಕೋಶಗಳಲ್ಲಿ ಅನೇಕ ಬಗೆ ಶಬ್ದೋಚ್ಚಾರಣ ಕಾಣುತ್ತದೆ. ನೀಲಕಂಠೀಯದಲ್ಲಿ `ವಾಧ್ರೀಣಸ' ಎಂಬ ಶಬ್ದವಿಟ್ಟುಕೊಂಡು ನಾಸಿಕೆಯಲ್ಲಿ `ವಾಧ್ರೀ'ಸದೃಶವಾದ ತೊಗಲಿನ ಬಾರಿನಂಥ ಚರ್ಮ ಉಳ್ಳ ಟಗರಿನ ಒಂದು ವಿಶೇಷ ಜಾತಿ ಎಂದು ಅರ್ಥ ಹೇಳಿದ್ದಾರೆ. ಮತ್ತು `ದ್ವಿಪಾತ್' `ಆನೆಯಿಂದ' ಎಂಬಲ್ಲಿ `ದ್ವಿಪಃ' ಎಂದು ಪಾಠ ವಿಟ್ಟುಕೊಂಡು `ಟಗರು ಮುಖ ಮತ್ತು ಕಿವಿಗಳಿಂದ ನೀರು ಕುಡಿಯುತ್ತದೆ' ಎಂದೂ ಅರ್ಥ ಮಾಡಿದ್ದಾರೆ. ಇದಕ್ಕೆ ಪ್ರಮಾಣದ ಆಧಾರವೇನಿಲ್ಲ. ಮತ್ತು ಯುಧಿಷ್ಠಿರನು ತಾನು ಯುದ್ಧದಲ್ಲಿ ಟಗರಿನಂತೆ ಪರಾಭವಗೊಂಡೆನೆನ್ನುವುದರಲ್ಲಿ ಏನು ಸ್ವಾರಸ್ಯವೂ ಇಲ್ಲ. ಕಪ್ಪುಕೊರಳು ಕೆಂಪುತಲೆ ಬಿಳಿರೆಕ್ಕೆಉಳ್ಳ ಪಕ್ಷಿಯೊಂದು `ವಾಧ್ರೀಣಸ' ಎನಿಸುತ್ತದೆ. `ದ್ವಿಜಃ' ಎಂದು ಪಾಠದಲ್ಲಿ ಈ ಪಕ್ಷಿಯನ್ನು

ಶ್ಲೋಕದಲ್ಲಿ ಗ್ರಹಿಸಬಹುದೆಂದೂ ನೀಲಕಂಠೀಯದಲ್ಲಿದೆ. ಈ ಅರ್ಥದಲ್ಲಿಯೂ ಸ್ವಾರಸ್ಯವಿಲ್ಲ. ಅಮರಕೋಶವು ವಾಧ್ರೀಣಸಶಬ್ದವನ್ನೇ ಹೇಳಿಲ್ಲ. ಹಲಾಯುಧ ಕೋಶದಲ್ಲಿ,
`ಮಹಿಷಃ ಸೈರಭ ಉಕ್ಷೋ ರಕ್ತಾಕ್ಷಃ ಕಾಸರೋ ಲುಲಾಯಶ್ಚ |
ವಾಧ್ರಾನಸಶ್ಚ ಖಡ್ಗೀ ಗಂಡಕ ಇತಿ ಕಥ್ಯತೇ ಸದ್ಭಿಃ |'
ಎಂಬ ವಚನವಿದೆ. ಅದನ್ನು ಉದಾಹರಿಸಿ ಲಕ್ಷಾಲಂಕಾರದಲ್ಲಿ ವಾಧ್ರಾನಸ ಎಂದರೆ ಕಾಡುಕೋಣ ಎಂದೂ `ದ್ವಿಪಾತ್' ಆನೆಯಿಂದ ಅದು ಪರಾಭವಗೊಂಡು ಪರಿತಪಿಸುತ್ತದೆ ಎಂದೂ ಹೇಳಿದ್ದಾರೆ. ಇಲ್ಲಿ `ಖಡ್ಗೀ ಗಂಡಕ ಇತಿ ಕಥ್ಯತೇ ಸದ್ಭಿಃ' ಎಂದರೆ `ಖಡ್ಗಮೃಗವು, ಘೇಂಡಾಮೃಗವು `ಗಂಡಕ' ಎನಿಸುತ್ತದೆ' ಎಂದು ಅನ್ವಯವಿಟ್ಟುಕೊಂಡರೆ `ವಾಧ್ರಾನಸಶ್ಚ' `ವಾಧ್ರಾನಸವೆಂದೂ ಕೂಡ ಮಹಿಷಃ' ಕಾಡುಕೋಣ ಕರೆಸಿಕೊಳ್ಳುತ್ತದೆ' ಎಂದು ಹೇಳಿದಂತಾಗುತ್ತದೆ. ನಿಘಂಟುಕಾರರು ಎಲ್ಲರೂ `ವಾಧ್ರಾನಸಶ್ಚ ಖಡ್ಗೀ ಗಂಡಕ ಇತಿ ಕಥ್ಯತೇ ಸದ್ಭಿಃ' ಎಂದು ಅನ್ವಯಮಾಡಿ `ವಾಧ್ರಾನಸವೆಂದರೆ ಖಡ್ಗಮೃಗ' ಎನ್ನುತ್ತಾರೆ. ಆದರೆ ಖಡ್ಗಮೃಗ ಆನೆಗೆ ಹೆದರುವ ಮೃಗವಲ್ಲ. ಅದರಿಂದ ವಾಧ್ರಾನಸವೆಂದರೆ ಮಹಿಷವೆಂದೇ ಹಲಾಯುಧಕೋಶದ ಅಭಿಪ್ರಾಯವಿಟ್ಟುಕೊಳ್ಳುವುದು ಪ್ರಕೃತದಲ್ಲಿ ಹೆಚ್ಚು ಯುಕ್ತವಾಗಿ ಕಾಣುತ್ತದೆ. ಲಕ್ಷಾಲಂಕಾರದಲ್ಲಿ ಹಾಗೇ ಹೇಳಿದ್ದಾರೆ.
ಯಸ್ಯಾಯಮಗಮತ್ ಕಾಲಶ್ಚಿಂತಯಾನಸ್ಯ ಮೇ ವಿಭೋ |
ಕಥಂ ಶಕ್ಯೋ ಮಯಾ ಕರ್ಣೋ ಯುದ್ಧೇ ಕ್ಷಪಯಿತುಂ ಭವೇತ್|19॥
ಅರ್ಜುನ, ರಣದಲ್ಲಿ ಕರ್ಣನನ್ನು ನಾಶಪಡಿಸಲು ನನ್ನಿಂದ ಹೇಗೆ ಸಾಧ್ಯವಾದೀತೆಂದು ಚಿಂತಿಸುತ್ತಿದ್ದಂತೆಯೇ ನನಗೆ ಇಷ್ಟುಕಾಲ ಕಳೆದುಹೋಯಿತು.
ಜಾಗ್ರತ್ಸ್ವಪಂಶ್ಚ ಕೌಂತೇಯ ಕರ್ಣಮೇವ ಸದಾ ಹ್ಯಹಮ್ |
ಪಶ್ಯಾಮಿ ತತ್ರ ತತ್ರೈವ ಕರ್ಣಭೂತಮಿದಂ ಜಗತ್ ॥20॥
ಅರ್ಜುನ, ಎಚ್ಚರದಲ್ಲಿಯೂ ನಿದ್ರೆಯಲ್ಲಿಯೂ ಅಲ್ಲಲ್ಲಿ ಎಲ್ಲಕಡೆ ನಾನು ಕರ್ಣನನ್ನೇ ಸದಾ ಕಾಣುತ್ತಿದ್ದೆ. ನನಗೆ ಜಗತ್ತೇ ಕರ್ಣಮಯವಾಗಿತ್ತು.
ಯತ್ರ ಯತ್ರ ಹಿ ಗಚ್ಛಾಮಿ ಕರ್ಣಾದ್ ಭೀತೋ ಧನಂಜಯ |
ತತ್ರ ತತ್ರ ಹಿ ಪಶ್ಯಾಮಿ ಕರ್ಣಮೇವಾಗ್ರತಃ ಸ್ಥಿತಮ್ ॥21॥
ಅರ್ಜುನ, ಎಲ್ಲೆಲ್ಲಿ ನಾನು ಹೋಗುವೆನೋ ಅಲ್ಲಿ ಮುಂದೆ ಕರ್ಣನನ್ನು ನಿಂತಿರುವಂತೇ ಕಾಣುತ್ತಿದ್ದೆ.
ಸೋಽಹಂ ತೇನೈವ ವೀರೇಣ ಸಮರೇಷ್ವಪಲಾಯಿನಾ |
ಸಹಯಃ ಸರಥಃ ಪಾರ್ಥ ಜಿತ್ವಾ ಜೀವನ್ ವಿಸರ್ಜಿತಃ ॥22॥
ಅರ್ಜುನ, ರಣಗಳಲ್ಲಿ ಪಲಾಯನ ಮಾಡದ ಆ ವೀರ ಕರ್ಣನಿಂದು ನನ್ನನ್ನು ಕುದುರೆಗಳ ರಥಗಳ ಸಹಿತವಾಗಿ ಪರಾಭವಗೊಳಿಸಿ, ಜೀವಸಹಿತ ಬಿಟ್ಟಿದ್ದಾನೆ.
ಕೋ ನು ಮೇ ಜೀವಿತೇನಾರ್ಥೋ ರಾಜ್ಯೇನಾರ್ಥೋಽಥ ವಾ ಪುನಃ |
ಮಮೈವ ಧಿಕ್ಕೃತಸ್ಯೇಹ ಕರ್ಣೇನಾಹವಶೋಭಿನಾ ॥23॥
ರಣದಲ್ಲಿ ಶೋಭಿಸಿದ ಕರ್ಣನಿಂದ ಧಿಕ್ಕಾರಕ್ಕೊಳಗಾದ ನಾನು ಇನ್ನು ಬದುಕಿದ್ದೇನು ಫಲ? ಅಥವಾ ರಾಜ್ಯ ಸಂಪಾದಿಸಿ ಏನು ಫಲ?
ನ ಪ್ರಾಪ್ತಪೂರ್ವಂ ಯದ್ಭೀಷ್ಮಾತ್ ಕೃಪಾದ್ ದ್ರೋಣಾಚ್ಚ
ಸಂಯುಗೇ |
ತತ್ಪ್ರಾಪ್ತಮದ್ಯ ಮೇ ಯುದ್ಧೇ ಸೂತಪುತ್ರಾನ್ಮಹಾರಥಾತ್ ॥24॥
ರಣದಲ್ಲಿ ಭೀಷ್ಮನಿಂದ ಕೃಪನಿಂದ ದ್ರೋಣನಿಂದಲೂ ನನಗೆ ಆಗದಿದ್ದ ಅವಮಾನ ಇಂದು ರಣದಲ್ಲಿ ಮಹಾರಥ ಸೂತಪುತ್ರನಿಂದ ನನಗಾಯಿತು!
ತತಶ್ತ್ವ ಪೃಚ್ಛಾಮಿ ಕೌಂತೇಯ ಯಥಾ ನಃ ಕುಶಲಂ ತಥಾ |
ತನ್ಮಮಾಚಕ್ಷ ೆವ ಕಾತ್ಸ ರ್ೆನ್ಯೇನ ಯಥಾ ಕರ್ಣಸ್ತ್ವಯಾ ಹತಃ ॥25॥
ಅದರಿಂದ ಅರ್ಜುನ, ನಾನು ಈಗ ನಿನ್ನನ್ನು ಕೇಳುತ್ತೇನೆ, ನಮಗೆ ಕ್ಷೇಮ ಹೇಗೆ ಉಂಟಾಯಿತು? ನೀನು ಕರ್ಣನನ್ನು ಹೇಗೆ ವಧಿಸಿದೆ? ಅದನ್ನು ಪೂರ್ತಿಯಾಗಿ ನನಗೆ ಹೇಳು.
ಶಕ್ರವೀರ್ಯಸಮೋ ಯುದ್ಧೇ ಯಮತುಲ್ಯಪರಾಕ್ರಮಃ |
ರಾಮತುಲ್ಯಸ್ತಥಾಸ್ತ್ರೇ ಯಃ ಸ ಕಥಂ ವೈ ನಿಷೂದಿತಃ ॥26॥
ಯುದ್ಧದಲ್ಲಿ ಇಂದ್ರನಿಗೆ ಸಮಾನ ಬಲವುಳ್ಳವನು, ಯಮನಿಗೆ ಸಮಾನ ಪರಾಕ್ರಮವುಳ್ಳವನು ಅಸ್ತ್ರದಲ್ಲಿ ಪರಶುರಾಮನಿಗೆ ಸಮಾನನಾಗಿರುವ ಕರ್ಣನು ನಿನ್ನಿಂದ ಹೇಗೆ ಹತನಾದ?
ಮಹಾರಥಃ ಸಮಾಖ್ಯಾತಃ ಸರ್ವಯುದ್ಧವಿಶಾರದಃ |
ಧನುರ್ಧರಾಣಾಂ ಪ್ರವರಃ ಸರ್ವೇಷಾಮೇಕಪೌರುಷಃ ॥27॥
ಪೂಜಿತೋ ಧೃತರಾಷ್ಟ್ರೇಣ ಸಪುತ್ರೇಣ ಮಹಾರಥಃ |
ಸದಾ ತ್ವದರ್ಥಂ ರಾಧೇಯಃ ಸ ಕಥಂ ನಿಹತಸ್ತ್ವಯಾ ॥28॥
ಮಹಾರಥನೆಂದು ಪ್ರಸಿದ್ಧ, ಸರ್ವಯುದ್ಧಗಳಲ್ಲಿ ಪಾರಂಗತ, ಧನುರ್ಧಾರಿ ಗಳಲ್ಲಿ ಶ್ರೇಷ್ಠ. ಎಲ್ಲರಿಗಿಂತ ಶ್ರೇಷ್ಠ ಪೌರುಷವುಳ್ಳವನು. ನಿನ್ನ ವಧೆಯ ಸಲುವಾಗಿಯೇ ಧೃತರಾಷ್ಟ್ರನೂ ಅವನ ಮಕ್ಕಳೂ ಸದಾ ಅವನನ್ನು ಆದರಿಸುತ್ತಿದ್ದರು. ಮಹಾರಥನಾದ ಅಂಥ ಕರ್ಣ ನಿನ್ನಿಂದ ಹೇಗೆ ಹತನಾದ?
ಧೃತರಾಷ್ಟ್ರೋ ಹಿ ಯೋಧೇಷು ಸರ್ವೇಷ್ವೇವ ಸದಾರ್ಜುನ |

ತವ ಮೃತ್ಯುಂ ರಣೇ ಕರ್ಣಂ ಮನ್ಯತೇ ಪುರುಷರ್ಷಭಮ್ ॥29॥
ಅರ್ಜುನ, ರಣದಲ್ಲಿ ಎಲ್ಲ ಯೋಧರಲ್ಲಿಯೂ ಪುರುಷಶ್ರೇಷ್ಠನಾದ ಕರ್ಣನನ್ನೇ ನಿನಗೆ ಮೃತ್ಯು ಎಂದು ಧೃತರಾಷ್ಟ್ರ ಸದಾ ತಿಳಿದಿದ್ದ.
ಸ ತ್ವಯಾ ಪುರುಷವ್ಯಾಘ್ರ ಕಥಂ ಯುದ್ಧೇ ನಿಷೂದಿತಃ |
ತನ್ಮಮಾಚಕ್ಷ್ವ ಬೀಭತ್ಸೋ ಯಥಾ ಕರ್ಣೋ ಹತಸ್ತ್ವಯಾ ॥30॥
ಪುರುಷಶ್ರೇಷ್ಠ ಅರ್ಜುನನೆ, ಅಂಥ ಕರ್ಣನು ರಣದಲ್ಲಿ ನಿನ್ನಿಂದ ಹೇಗೆ ಹತನಾದ? ಹೇಗೆ ಹತನಾದ? ಅದನ್ನು ನನಗೆ ಹೇಳು.
ಸೋಽತ್ಸ್ಯೇಧಮಸ್ಯ ಚ ಶಿರಃ ಪಶ್ಯತಾಂ ಸುಹೃದಾಂ ಹೃತಮ್ |
ತ್ವಯಾ ಪುರುಷಶಾರ್ದೂಲ ಶಾರ್ದೂಲೇನ ಯಥಾ ರುರೋಃ ॥31॥
ಪುರುಷಶ್ರೇಷ್ಠನಾದ ಅರ್ಜುನನೆ, ಹುಲಿಯು ಜಿಂಕೆಯ ತಲೆಯನ್ನು ತೆಗೆಯುವಂತೆ ನೀನು ಪ್ರಾಯಃ ಕರ್ಣನ ತಲೆಯನ್ನು ಅವನ ಮಿತ್ರರು ನೋಡುತ್ತಿದ್ದಂತೆಯೇ ಕತ್ತರಿಸಿ ಚೆಂಡಿನಂತೆ ಮೇಲೆ ಹಾರಿಸಿ ಕೆಡವಿರುವೆ. ಹೌದು ತಾನೆ?
ಯಃ ಪರ್ಯುಪಾಸೀತ್ ಪ್ರದಿಶೋ ದಿಶಶ್ಚ
ತ್ವಾಂ ಸೂತಪುತ್ರಃ ಸಮರೇ ಪರೀಪ್ಸನ್ |
ದಿತ್ಸುಃ ಕರ್ಣಃ ಸಮರೇ ಹಸ್ತಿಪೂಗಂ
ಸ ಹೇದಾನೀಂ ಕಂಕಪತ್ರೈಃ ಸುತೀಕ್ಷ್ಣೈಃ ॥32॥
ತ್ವಯಾ ರಣೇ ನಿಹತಃ ಸೂತಪುತ್ರಃ
ಕಚ್ಚಿಚ್ಛೇತೇ ಭೂಮಿತಳೇ ದುರಾತ್ಮಾ |
ಕಚ್ಚಿತ್ಪ್ರಿಯಂ ಮೇ ಪರಮಂ ತ್ವಯಾದ್ಯ
ಕೃತಂ ರಣೇ ಸೂತಪುತ್ರಂ ನಿಹತ್ಯ ॥33॥
ಕರ್ಣನು ರಣದಲ್ಲಿ ನಿನ್ನನ್ನು ಹೊಂದಲು ಬಯಸಿ ದಿಕ್ಕು ವಿದಿಕ್ಕುಗಳಲ್ಲಿ ಸುತ್ತಿದ. ಅವನನ್ನು ರಣದಲ್ಲಿ ತೋರಿಸಿದವರಿಗೆ ಆನೆಗಳ ಸಮೂಹವನ್ನೇ ಕೊಡಲು ಬಯಸಿದ್ದ. ದುರಾತ್ಮನಾದ ಅವನೇ ಈಗ ನಿನ್ನಿಂದ ಬಲುತೀಕ್ಷ್ಣವಾದ, ಹದ್ದಿನ ರೆಕ್ಕೆವುಳ್ಳ ಬಾಣಗಳಿಂದ ಹತನಾಗಿ ಭೂತಲದಲ್ಲಿ ಒರಗಿದ್ದಾನೆ ತಾನೆ! ನೀನು ಈಗ ರಣದಲ್ಲಿ ಕರ್ಣನನ್ನು ವಧಿಸಿ ನನಗೆ ಅತ್ಯಂತ ಪ್ರಿಯವಾದ ಕಾರ್ಯವನ್ನು ಮಾಡಿರುವೆ ತಾನೆ !
ಯಃ ಸರ್ವತಃ ಪರ್ಯಪತತ್ ತ್ವದರ್ಥೇ
ಮದಾನ್ವಿತೋ ಗರ್ವಿತಃ ಸೂತಪುತ್ರಃ |
ಸ ಶೂರಮಾನೀ ಸಮರೇ ಸಮೇತ್ಯ
ಕಚ್ಚಿತ್ತ್ವಯಾ ನಿಹತಃ ಪಾಪಬುದ್ಧಿಃ ॥34॥
ಕರ್ಣ ನಿನಗಾಗಿ ಎಲ್ಲಕಡೆ ಸುತ್ತಿದ, ಮದಗರ್ವಗಳಿಂದ ಕೂಡಿದವನು, ತಾನೇ ಶೂರನೆಂದು ತಿಳಿದವನು, ಆ ಪಾಪಬುದ್ಧಿಯವನಾದ ಸೂತಪುತ್ರ ಇಂದು ರಣದಲ್ಲಿ ನಿನ್ನನ್ನು ಇದಿರಿಸಿ ಹತನಾಗಿದ್ದಾನೆ ತಾನೆ !
ರೌಗ್ಮಂ ರಥಂ ಹಸ್ತಿವರ್ಯೈಶ್ಚ ಯುಕ್ತಂ
ವರಂ ದಿತ್ಸುರ್ಯಃ ಪರೇಭ್ಯಸ್ತ್ವದರ್ಥೇ |
ಸದಾ ರಣೇ ಸ್ಪರ್ಧತೇ ಯಃ ಸ ಪಾಪಃ
ಕಚ್ಚಿತ್ ತ್ವಯಾ ನಿಹತಃ ಸೂತಪುತ್ರಃ ॥35॥
ಬಂಗಾರದ ಉತ್ತಮ ರಥವನ್ನು, ಜೊತೆಗೆ ಉತ್ತಮ ಆನೆಗಳನ್ನು ನಿನ್ನ ಸಲುವಾಗಿ ಪರರಿಗೆ ಕೊಡಲು ಬಯಸಿದವನು, ಸದಾ ರಣದಲ್ಲಿ ನಿನ್ನೊಡನೆ
ಸ್ಪರ್ಧಿಸುತ್ತಿದ್ದವನು ಪಾಪಿ ಸೂತಪುತ್ರನು ನಿನ್ನಿಂದ ಹತನಾಗಿದ್ದಾನೆ ತಾನೆ !
ಯೋಽಸೌ ನಿತ್ಯಂ ಶೌರ್ಯಮದೇನ ಮತ್ತೋ
ವಿಕತ್ಥತೇ ಸಂಸದಿ ಕೌರವಾಣಾಮ್ |
ಪ್ರಿಯೋಽತ್ಯರ್ಥಂ ತಸ್ಯ ಸುಯೋಧನಸ್ಯ
ಕಚ್ಚಿತ್ ಸ ಪಾಪೋ ನಿಹತಸ್ತ್ವಯಾದ್ಯ ॥36॥
ಸದಾ ಶೌರ್ಯಮದದಿಂದ ಮತ್ತನಾಗಿ ಕೌರವರ ಕೂಟದಲ್ಲಿ ಜಂಬ ಕೊಚ್ಚಿಕೊಳ್ಳುತ್ತಿದ್ದವನು. ಆ ಸುಯೋಧನನಿಗೆ ಅತ್ಯಂತ ಪ್ರಿಯ, ಪಾಪಿ ಕರ್ಣ ಇಂದು ನಿನ್ನಿಂದ ಹತನಾಗಿದ್ದಾನೆ ತಾನೆ !
ಕಚ್ಚಿತ್ ಸಮಾಗಮ್ಯ ಧನುಃಪ್ರಮುಕ್ತೈ
ಸ್ತ್ವತ್ಪ್ರೇಷಿತೈರ್ಲೋಹಿತಾರ್ಥೈರ್ವಿಹಂಗೈಃ |
ಶೇತೇಽದ್ಯ ಪಾಪಃ ಸ ವಿಭಿನ್ನಗಾತ್ರಃ
ಕಚ್ಚಿದ್ ಭಗ್ನೋ ಧಾರ್ತರಾಷ್ಟ್ರಸ್ಯ ಬಾಹುಃ ॥37॥
ನಿನ್ನನ್ನಿದಿರಿಸಿ, ನಿನ್ನ ಧನುಸ್ಸಿನಿಂದ ಹೊರಟ, ನೀನು ಎಸೆದ, ರಕ್ತಪಿಪಾಸುವಾಗಿ ಆಕಾಶದಲ್ಲಿ ಹಾರಿ ಬರುವ ಬಾಣಗಳಿಂದ ಆ ಪಾಪಿ ಮೈಸೀಳಿಸಿಕೊಂಡು ನೆಲದಲ್ಲಿ ಒರಗಿದ್ದಾನೆ ತಾನೆ? ದುರ್ಯೋಧನನ ಒಂದು ತೋಳೇ ಕಡಿದು ಬಿದ್ದಂತಾಗಿದೆ ತಾನೆ?
ಯೋಽಸೌ ಸದಾ ಶ್ಲಾಘತೇ ರಾಜಮಧ್ಯೇ
ದುರ್ಯೋಧನಂ ಹರ್ಷಯನ್ ದರ್ಪಪೂರ್ಣಃ |
ಅಹಂ ಹಂತಾ ಫಲ್ಗುನಸ್ಯೇತಿ ಮೋಹಾತ್
ಕಚ್ಚಿದ್ವಚಸ್ತಸ್ಯ ನ ವೈ ತಥಾ ತತ್ ॥38॥

ರಾಜರ ಮಧ್ಯದಲ್ಲಿ ಕರ್ಣನು ದರ್ಪದಿಂದ ತುಂಬಿ ದುರ್ಯೋಧನನನ್ನು ಮೆಚ್ಚಿಸುವುದಕ್ಕಾಗಿ ಮೋಹದಿಂದ ತನ್ನನ್ನು ಹೊಗಳಿಕೊಳ್ಳುತ್ತಿದ್ದ, `ನಾನು ಅರ್ಜುನನನ್ನು ಕೊಲ್ಲುವವನು' ಎಂದು, ಅವನ ಆ ಮಾತು ಹಾಗೆ ಆಗಲಿಲ್ಲ ತಾನೆ?
ನಾಹಂ ಪಾದೌ ಧಾವಯಿಷ್ಯೇ ಕದಾಚಿದ್
ಯಾವತ್ಸ್ಥಿತಃ ಪಾರ್ಥ ಇತ್ಯಲ್ಪಬುದ್ಧೇಃ |
ವ್ರತಂ ತಸ್ಯೈತತ್ಸರ್ವದಾ ಶಕ್ರಸೂನೋ
ಕಚ್ಚಿತ್ ತ್ವಯಾ ನಿಹತಃ ಸೋಽದ್ಯ ಕರ್ಣಃ ॥39॥
ಅರ್ಜುನ, `ಅರ್ಜುನ ಜೀವಂತನಿರುವಷ್ಟು ಕಾಲ ನಾನು ಇತರರಿಂದ ಕಾಲು ತೊಳೆಸಿಕೊಳ್ಳುವುದಿಲ್ಲ' ಎಂದು ಅಲ್ಪಬುದ್ಧಿಯಾದ ಕರ್ಣನ ಸದಾವ್ರತವಿದ್ದಿತು. ಅಂಥ ಕರ್ಣನನ್ನು ನೀನು ಕೊಂದಿರುವೆ ತಾನೆ?
ಯೋಽಸೌ ಕೃಷ್ಣಾಮಬ್ರವೀದ್ ದುಷ್ಟಬುದ್ಧಿಃ
ಕರ್ಣಃ ಸಭಾಯಾಂ ಕುರುವೀರಮಧ್ಯೇ |
ಕಿಂ ಪಾಂಡವಾಂಸ್ತ್ವಂ ನ ಜಹಾಸಿ ಕೃಷ್ಣೇ
ಸುದುರ್ಬಲಾನ್ ಪತಿತಾನ್ ಹೀನಸತ್ತ್ವಾನ್ ॥40॥
ಆ ದುಷ್ಟಬುದ್ಧಿ ದ್ರೌಪದಿಗೆ ಸಭೆಯಲ್ಲಿ ಕೌರವವೀರರ ಮಧ್ಯದಲ್ಲಿ ಹೇಳಿದ್ದ– `ದ್ರೌಪದಿ, ದುರ್ಬಲರಾದ ಪತಿತರಾದ ಹೀನಸತ್ವರಾದ ಪಾಂಡವರನ್ನು ನೀನು ಏಕೆ ಬಿಡಲೊಲ್ಲೆ?' ಎಂದು.
ಯತ್ತತ್ಕರ್ಣಃ ಪ್ರತ್ಯಜಾನಾತ್ ತ್ವದರ್ಥೇ
ನಾಹತ್ವಾಹಂ ಸಹ ಕೃಷ್ಣೇನ ಪಾರ್ಥಮ್ |
ಇಹೋಪಯಾತೇತಿ ಸ ಪಾಪಬುದ್ಧಿಃ
ಕಚ್ಚಿಚ್ಛೇತೇ ಶರಸಮ್ಭಿನ್ನಗಾತ್ರಃ ॥41॥
ಪಾಪಬುದ್ಧಿಯಾದ ಕರ್ಣನು ನಿನ್ನ ಸಲುವಾಗಿ ಪ್ರತಿಜ್ಞೆಮಾಡಿದ್ದ. ಕೃಷ್ಣನೊಂದಿಗೆ ಅರ್ಜುನನನ್ನು ಕೊಲ್ಲದೆ ನಾನು ಇಲ್ಲಿಗೆ ಹಿಂತಿರುಗಲಾರೆ ಎಂದು. ಅವನು ಬಾಣದಿಂದ ಚೂರು ಚೂರಾಗಿ ಒರಗಿದ್ದಾನೆ ತಾನೆ?
ಕಚ್ಚಿತ್ ಸಂಗ್ರಾಮೋ ವಿದಿತೋ ವೈ ತವಾಯಂ
ಸಮಾಗಮೇ ಸೃಂಜಯಕೌರವಾಣಾಮ್ |
ಯತ್ರಾವಸ್ಥಾಮೀದೃಶೀಂ ಪ್ರಾಪಿತೋಽಹಂ
ಕಚ್ಚಿತ್ ತ್ವಯಾ ಸೋಽದ್ಯ ಹತಃ ಸಮೇತ್ಯ ॥42॥
ಕರ್ಣನು ನನ್ನನ್ನು ಈ ಅವಸ್ಥೆಗೆ ಈಡಾಗುವಂತೆ ಮಾಡಿದ ಸೃಂಜಯಕೌರವ ಸಂಘರ್ಷದ ಈ ಸಂಗ್ರಾಮ ನಿನಗೆ ತಿಳಿದಿದೆ ತಾನೆ? ಅವನನ್ನು ಇದಿರಿಸಿ ನೀನೀಗ ಕೊಂದಿರುವೆ ತಾನೆ?
ಕಚ್ಚಿತ್ ತ್ವಯಾ ತಸ್ಯ ಸುಮಂದಬುದ್ಧೇ-
ರ್ಗಾಂಡೀವಮುಕ್ತೈರ್ವಿಶಿಖೈರ್ಜ್ವಲದ್ಭಿಃ |
ಸಕುಂಡಲಂ ಭಾನುಮದುತ್ತಮಾಂಗಂ
ಕಾಯಾತ್ ಪ್ರಕೃತ್ತಂ ಯುಧಿ ಸವ್ಯಸಾಚಿನ್ ॥43॥
ಅರ್ಜುನ, ಅತಿಮಂದಬುದ್ಧಿಯವನಾದ ಅವನ ಕುಂಡಲಯುಕ್ತವಾಗಿ ಹೊಳೆಯುತ್ತಿದ್ದ ತಲೆಯನ್ನು ರಣದಲ್ಲಿ ಅವನ ಶರೀರದಿಂದ, ಗಾಂಡೀವದಿಂದ ಹೊರಡುವ ಜ್ವಲಿಸುವ ಬಾಣಗಳಿಂದ ಚೆನ್ನಾಗಿ ಕತ್ತರಿಸಿ ತೆಗೆದೆಯಲ್ಲವೆ?
ಯತ್ತನ್ಮಯಾ ಬಾಣಸಮರ್ಪಿತೇನ
ಧ್ಯಾತೋಽಸಿ ಕರ್ಣಸ್ಯ ವಧಾಯ ವೀರ |
ತನ್ಮೇ ತ್ವಯಾ ಕಚ್ಚಿದಮೋಘಮದ್ಯ
ಧ್ಯಾತಂ ಕೃತಂ ಕರ್ಣನಿಪಾತನೇನ ॥44॥
ವೀರ ಅರ್ಜುನ, ಕರ್ಣನ ಬಾಣಗಳಿಂದ ಗಾಯಗೊಂಡಾಗ ಅವನ ವಧೆಯ ಸಲುವಾಗಿ ನಾನು ನಿನ್ನನ್ನು ಏನು ನೆನೆಸಿಕೊಂಡೆನೋ ಅದನ್ನು ನೀನೀಗ ಕರ್ಣವಧೆಯಿಂದ ಸಫಲಗೊಳಿಸಿಬಿಟ್ಟೆ ತಾನೆ?
ಯದ್ದರ್ಪಪೂರ್ಣಃ ಸ ಸುಯೋಧನೋಽಸ್ಮಾನ್
ಅವೇಕ್ಷತೇ ಕರ್ಣಸಮಾಶ್ರಯೇಣ |
ಕಚ್ಚಿತ್ ತ್ವಯಾ ಸೋಽದ್ಯ ಸಮಾಶ್ರಯೋಽಸ್ಯ
ಭಗ್ನಃ ಪರಾಕ್ರಮ್ಯ ಸುಯೋಧನಸ್ಯ ॥45॥
ಯಾವ ಕರ್ಣನ ಆಶ್ರಯಬಲದಿಂದ ದುರ್ಯೋಧನನು ದರ್ಪಪೂರ್ಣನಾಗಿ ನಮ್ಮನ್ನು ನೋಡುತ್ತಿದ್ದನೋ ಸುಯೋಧನನ ಆ ಆಶ್ರಯವನ್ನು ನೀನೀಗ ಪರಾಕ್ರಮದಿಂದ ಭಗ್ನಗೊಳಿಸಿರುವೆ ತಾನೆ?
ಯೋ ನಃ ಪುರಾ ಷಂಢತಿಲಾನವೋಚತ್
ಸಭಾಮಧ್ಯೇ ಕೌರವಾಣಾಂ ಸಮಕ್ಷಮ್ |
ಸ ದುರ್ಮತಿಃ ಕಚ್ಚಿದುಪೇತ್ಯ ಸಂಖ್ಯೇ
ತ್ವಯಾ ಹತಃ ಸೂತಪುತ್ರೋಽತ್ಯಮರ್ಷೀ ॥46॥
ಅಂದು ಸಭೆಯ ನಡುವೆ ಕೌರವರ ಸಮಕ್ಷದಲ್ಲಿ ನಮ್ಮನ್ನು ಜೊಳ್ಳಾದ ಎಳ್ಳಿನ ಕಾಳುಗಳೆಂದು ಯಾವನು ಹಳಿದಿದ್ದನೋ, ಅತ್ಯಂತ ಅಸಹನೆಯ ದುಷ್ಟಬುದ್ಧಿಯ ಆ ಕರ್ಣನನ್ನು ಈಗ ರಣದಲ್ಲಿ ಇದಿರಿಸಿ ಕೊಂದಿರುವೆ ತಾನೆ?

ಯಃ ಸೂತಪುತ್ರಃ ಪ್ರಹಸನ್ ದುರಾತ್ಮಾ
ಪುರಾಬ್ರುವೀನ್ನಿರ್ಜಿತಾಂ ಸೌಬಲೇನ |
ಸ್ವಯಂ ಪ್ರಗೃಹ್ಯಾನಯ ಯಾಜ್ಞಸೇನೀ-
ಮಪೀಹ ಕಚ್ಚಿತ್ ಸ ಹತಸ್ತ್ವಯಾದ್ಯ ॥47॥
ದುರಾತ್ಮನಾದ ಸೂತಪುತ್ರ ಅಂದು `ದ್ರೌಪದಿಯನ್ನು, ಶಕುನಿ ಜೂಜಿನಲ್ಲಿ ಗೆದ್ದಿದ್ದಾನೆ, ದುಃಶಾಸನ, ನೀನೆ ಅವಳನ್ನು ಹಿಡಿದು ಎಳೆದು ತಾ' ಎಂದು ಗಹಗಹಿಸಿ ನಗುತ್ತ ಹೇಳಿದ್ದ. ಅಂಥ ಕರ್ಣನನ್ನು ನೀನಿಂದು ಕೊಂದೆ ತಾನೆ?
ಕಚ್ಚಿತ್ ಪಾಪಂ ವಚನಂ ದ್ಯೂತಕಾಲೇ
ಯಚ್ಚಾಪ್ಯಸೌ ಸಮಿತೌ ವಾಸುದೇವೇ |
ತದೋಕ್ತವಾನ್ ಪರುಷಂ ಸೋಽತಿಕಾಮಂ
ಹಿತಂ ಹತ್ವಾ ಹ್ಯಾಹಿತಂ ವೈ ಕುರೂಣಾಂ ॥48॥
``ನಿಮಗೆ ಜೂಜಿನಲ್ಲಿ ಪಣವಾಗಿಡಲು ಇನ್ನೇನೂ ಸಂಪತ್ತು ಉಳಿದಿಲ್ಲ. ಕೃಷ್ಣನನ್ನು ಪಣವಾಗಿಟ್ಟು ಆಡಿರಿ'' ಎಂದು ದುರ್ಯೋಧನನಿಂದ ಕಠೋರವಾದ ಪಾಪಕರವಾದ ಮಾತನ್ನು ಜೂಜಿನ ಕಾಲದಲ್ಲಿ ಕೃಷ್ಣನ ವಿಷಯದಲ್ಲಿ ತುಂಬಿದ ಸಭೆಯಲ್ಲಿ ಅತಿಸ್ವಚ್ಛಂದವಾಗಿ ನುಡಿಸಿದವನು ಕರ್ಣ. ಅವನನ್ನು, ಅರ್ಜುನ, ನೀನು ಕೊಂದು ಕುರುಕುಲಕ್ಕೇ ಹಿತವನ್ನು ಉಂಟು ಮಾಡಿದೆ ತಾನೆ?
ಯಃ ಶಸ್ತ್ರಭೃಚ್ಛ್ರೇಷ್ಠತಮಂ ಪೃಥಿವ್ಯಾಂ
ಪಿತಾಮಹಂ ವ್ಯಾಕ್ಷಿಪದಲ್ಪಚೇತಾಃ |
ಸಂಖ್ಯಾಯಮಾನೋಽರ್ಧರಥಃ ಸ ಕಚ್ಚಿತ್
ತ್ವಯಾ ಹತೋಽದ್ಯಾಧಿರಥಿರ್ದುರಾತ್ಮಾ ॥49॥
ತಾನು ಅರ್ಧರಥನೆಂದು ಗಣಿಸಲ್ಪಟ್ಟಾಗ ಪೃಥಿವಿಯಲ್ಲಿ ಶಸ್ತ್ರಧಾರಿಗಳಲ್ಲೆಲ್ಲ ಅತ್ಯಂತ ಶ್ರೇಷ್ಠನಾದ ಭೀಷ್ಮಪಿತಾಮಹನನ್ನು ಅಲ್ಪಬುದ್ಧಿಯ ದುರಾತ್ಮ ಸೂತಪುತ್ರ ಬಹಳ ಆಕ್ಷೇಪಿಸಿದ್ದ. ಅವನನ್ನು ನೀನೀಗ ಕೊಂದಿರುವೆ ತಾನೆ?
ಅಮರ್ಷಣಂ ನಿಕೃತಿಸಮೀರಣೇರಿತಂ
ಹೃದಿ ಶ್ರಿತಂ ಜ್ವಲನಮಿಮಂ ಸದಾ ಮಮ |
ಹತೋ ಮಯಾ ಸೋಽದ್ಯ ಸಮೇತ್ಯ ಪಾಪಧೀ-
ರಿತಿ ಬ್ರುವನ್ ಪ್ರಶಮಯ ಮೇಽದ್ಯಫಲ್ಗುನ ॥50॥
ಬೆಂಕಿಗೆ ಗಾಳಿ ಹಾಕಿದಂತೆ, ನನ್ನೆದೆಯಲ್ಲಿದ್ದ ಅಸಹನೀಯವಾದ ಕೋಪಾಗ್ನಿ ಈ ಪಾಪವಚನದಿಂದ ಸದಾ ಉರಿಯುತ್ತಿತ್ತು. ಅದನ್ನು `ನಾನು ಈಗ ಪಾಪಬುದ್ಧಿಯ ಕರ್ಣನನ್ನು ಕೊಂದು ಬಂದಿರುವೆನು' ಎಂದು ಹೇಳಿ, ಅರ್ಜುನ, ನನ್ನ ಈ ಕೋಪಾಗ್ನಿಯನ್ನು ಈಗ ಆರಿಸು.
ಬ್ರುವೀಹಿ ಮೇ ದುರ್ಲಭಮೇತದದ್ಯ
ಕಥಂ ತ್ವಯಾ ನಿಹತಃ ಸೂತಪುತ್ರಃ ?
ಅನುಧ್ಯಾಯೇ ತ್ವಾಂ ಸತತಂ ಪ್ರವೀರ
ವೃತ್ರೇ ಹತೇ ದೇವಗುರುರ್ಯಥೇಂದ್ರಂ ॥51॥
ದುರ್ಲಭವಾದ ಈ ಮಾತನ್ನು ಈಗ ನನಗೆ ಹೇಳು. ಹೇಗೆ ನೀನು ಕರ್ಣನನ್ನು ಕೊಂದೆ? ವೀರ ಅರ್ಜುನನೆ, ವೃತ್ರವಧಗೈದ ಇಂದ್ರನನ್ನು ದೇವಗುರು ಬೃಹಸ್ಪತಿ ಸದಾ ನೆನಪಿಸಿಕೊಳ್ಳುವಂತೆ, ಕರ್ಣವಧ ಮಾಡಿದ ನಿನ್ನನ್ನು ನಾನು ಸದಾ ನೆನಪಿಸಿಕೊಳ್ಳುತ್ತೇನೆ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಧರ್ಮರಾಜಾರ್ಜುನಸಂವಾದೇ ತ್ರಿಷಷ್ಟಿತಮೋಧ್ಯಾಯಃ ॥63॥

ಅರವತ್ತನಾಲ್ಕನೆಯ ಅಧ್ಯಾಯ
`ಕರ್ಣವಧವನ್ನು ಇನ್ನು ಮಾಡಬೇಕಷ್ಟೆ' ಎಂದು ಅರ್ಜುನ ಹೇಳುತ್ತಾನೆ.
`ಅನುಜ್ಞೆ ಕೊಡು' ಎನ್ನುತ್ತಾನೆ.
ಸಂಜಯಃ
ತದ್ಧರ್ಮಶೀಲಸ್ಯ ವಚೋ ನಿಶಮ್ಯ
ರಾಜ್ಞಃ ಕ್ರುದ್ಧಸ್ಯಾಧಿರಥೌ ಮಹಾತ್ಮಾ |
ಉವಾಚ ದುರ್ಧರ್ಷಮದೀನಸತ್ತ್ವಂ
ಯುಧಿಷ್ಠಿರಂ ಜಿಷ್ಣುರನಂತವೀರ್ಯಃ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಕರ್ಣನ ವಿಷಯದಲ್ಲಿ ಕುಪಿತನಾದ ಧರ್ಮಶೀಲನಾದ ರಾಜಾ ಯುಧಿಷ್ಠಿರ ನುಡಿದ ಆ ಮಾತನ್ನು ಕೇಳಿ ಅನಂತಪರಾಕ್ರಮಿ ಮಹಾತ್ಮ ಅರ್ಜುನನು, ದೈನ್ಯವಿಲ್ಲದ ಬಲಶಾಲಿಯೂ ಶತ್ರುಗಳಿಗೆ ಇದಿರಿಸಲಾಗದವನೂ ಆದ ಯುಧಿಷ್ಠಿರನಿಗೆ ಹೇಳಿದ.
ಅರ್ಜುನಃ
ಸಂಶಪ್ತಕೈರ್ಯುಧ್ಯಮಾನಸ್ಯ ಮೇಽದ್ಯ
ಸೇನಾಗ್ರಯಾಯೀ ಕುರುಸೈನ್ಯಸ್ಯ ರಾಜನ್ |
ಆಶೀವಿಷಾಭಾನ್ ಖಗಮಾನ್ ಪ್ರಮುಂಚನ್

ದ್ರೌಣಿಃ ಪುರಸ್ತಾತ್ ಸಹಸಾ ವ್ಯತಿಷ್ಠತ್ ॥2॥
ಅರ್ಜುನನು ನುಡಿದ– ಇಂದು, ರಾಜನೆ, ಸಂಶಪ್ತಕರೊಡನೆ ಯುದ್ಧ ಮಾಡುತ್ತಿದ್ದ ನನ್ನ ಮೇಲೆ ಕುರುಸೈನ್ಯದಲ್ಲಿ ಸೇನೆಯ ಮುಂಭಾಗಕ್ಕೆ ಹೋಗುವ ಅಶ್ವತ್ಥಾಮನು ವಿಷಸರ್ಪದಂಥ ಬಾಣಗಳನ್ನು ಎಸೆಯುತ್ತ ವೇಗವಾಗಿ ನನ್ನ ಮುಂದೆ ಬಂದು ನಿಂತ.
ದೃಷ್ಟ್ವಾ ರಥಂ ಮೇಘಸಮಾನನಾದಂ
ಸಮಸ್ತಸೇನಾ ಚ ರಣೇ ವ್ಯತಿಷ್ಠತ |
ತೇಷಾಮಹಂ ಪಂಚ ಶತಾನಿ ಹತ್ವಾ
ತತೋ ದ್ರೌಣಿಮಗಮಂ ಪಾರ್ಥಿವಾಗ್ರ್ಯ ॥3॥
ರಾಜನೆ, ಮೋಡದಂತೆ ಗುಡುಗುವ ನನ್ನ ರಥವನ್ನು ನೋಡಿ ಎಲ್ಲ ಕೌರವ ಸೈನ್ಯ ರಣದಲ್ಲಿ ಆಕ್ರಮಿಸಿತು. ನಾನು ಅವರಲ್ಲಿ ಐದುನೂರು ರಥಿಕರನ್ನು ಸಂಹರಿಸಿ ಬಳಿಕ ಅಶ್ವತ್ಥಾಮನನ್ನು ಇದಿರಿಸಿದೆ.
ಸ ಮಾಂ ಸಮಾಸಾದ್ಯ ನರೇಂದ್ರ ಯತ್ತಃ
ಸಮಭ್ಯುಪೇತಃ ಸಮರೇ ದ್ವಿಜೇಂದ್ರಃ |
ಅಕಾರ್ಷೀಚ್ಚ ರಥಿನಾಮುಜ್ಜಿಹೀರ್ಷಾಂ
ಮಹಾರಾಜ ವಧ್ಯತಾಂ ಕೌರವಾಣಾಮ್ ॥4॥
ರಾಜನೆ, ಅಶ್ವತ್ಥಾಮನು ರಣದಲ್ಲಿ ಯತ್ನಪೂರ್ವಕವಾಗಿ ನನ್ನನ್ನು ಇದಿರಿಸಿದ. ಹತರಾಗುತ್ತಿದ್ದ ಕೌರವರ ರಥಿಕರ ರಕ್ಷಣೆಯಲ್ಲಿ ಪ್ರಯತ್ನಮಾಡಿದ.
ತತೋ ರಣೇ ಭಾರತ ದುಷ್ಪ್ರಕಮ್ಪ್ಯ
ಆಚಾರ್ಯಪುತ್ರಃ ಪ್ರವರಃ ಕುರೂಣಾಮ್ |
ಮಾಮರ್ದಯಾಮಾಸ ಶಿತೈಃ ಪೃಷತ್ಕೈ-
ರ್ಜನಾರ್ದನಂ ಚೈವ ವಿಷಾಗ್ನಿಕಲ್ಪೈ ್ಯಃ ॥5॥
ರಾಜನೆ, ರಣದಲ್ಲಿ ನಡುಗಿಸಲಾಗದವನೂ ಕುರುಸೈನ್ಯದಲ್ಲಿ ಪ್ರಮುಖನೂ ಆದ ಅಶ್ವತ್ಥಾಮನು ವಿಷ ಮತ್ತು ಅಗ್ನಿಗಳಂಥ ಹರಿತವಾದ ಬಾಣಗಳಿಂದ ನನ್ನನ್ನು ಮತ್ತು ಕೃಷ್ಣನನ್ನು ಪೀಡಿಸಿದ.
ಅಷ್ಟೌ ರಥಾನ್ಯಷ್ಟಗವಾನಿ ಬಾಣಾನ್
ಮಯಾ ಪ್ರಯುದ್ಧಸ್ಯ ವಹಂತಿ ತಸ್ಯ |
ತಾಂಸ್ತೇನ ಮುಕ್ತಾನಹಮಸ್ಯ ಬಾಣೈ-
ರ್ವ್ಯನಾಶಯಂ ವಾಯುರಿವಾಭ್ರಜಾಲಮ್ ॥6॥
ನನ್ನೊಂದಿಗೆ ಯುದ್ಧಮಾಡುತ್ತಿದ್ದಾಗ ಅವನ ಎಂಟುಬಂಡಿ ಬಾಣಗಳನ್ನು ಎಂಟು ಎತ್ತುಗಳು ಹೊತ್ತಿದ್ದುವು. ಅವನು ಅವುಗಳನ್ನು ಎಸೆಯುತ್ತಿದ್ದಂತೇ ಗಾಳಿ ಮೋಡ ಸಮೂಹಗಳನ್ನು ನಾಶ ಮಾಡುವಂತೆ, ನಾನು ಬಾಣಗಳಿಂದ ಅವುಗಳನ್ನು ನಾಶ ಮಾಡಿದೆ.
ತತೋಽಪರಾನ್ ಬಾಣಸಂಘಾನನೇಕಾನ್
ಆಕರ್ಣಪೂರ್ಣಾಯತವಿಪ್ರಮುಕ್ತಾನ್ |
ಸಸರ್ಜ ಶಿಕ್ಷಾಸ್ತ್ರಬಲಪ್ರಯತ್ನೈ ್ಯ-
ಸ್ತಥಾ ಯಥಾ ಪ್ರಾವೃಷಿ ಕಾಲಮೇಘಃ ॥7॥
ಶಿಕ್ಷಣ ಅಸ್ತ್ರಬಲ ಪ್ರಯತ್ನಗಳಿಂದ, ಮಳೆಗಾಲದ ಕರಿಮೋಡ ಮಳೆಗರೆಯು ವಂತೆ ಅವನು ಕಿವಿಯವರೆಗೆ ಪೂರ್ತಿ ಸೆಳೆದು ಎಸೆದ ಬೇರೆ ಅನೇಕ ಬಾಣಸಮೂಹಗಳ ಮಳೆಯನ್ನೆ ಉಂಟುಮಾಡಿದ.
ನೈವಾದದಾನಂ ನ ಚ ಸಂದಧಾನಂ
ಜಾನೀಮಹೇ ಕತರೇಣಾಸ್ಯತೀತಿ |
ವಾಮೇನ ವಾ ಯದಿ ವಾ ದಕ್ಷಿಣೇನ
ಸ ದ್ರೋಣಪುತ್ರಃ ಸಮರೇ ಪರ್ಯವರ್ತತ್ ॥8॥
ಅಶ್ವತ್ಥಾಮನು ಬಾಣಗಳನ್ನು ಯಾವಾಗ ಎತ್ತಿಕೊಳ್ಳುತ್ತಾನೆ, ಯಾವಾಗ ಬಿಲ್ಲಿನಲ್ಲಿ ಹೂಡುತ್ತಾನೆ, ಎಡಗೈಯಿಂದಲೊ ಅಥವಾ ಬಲಗೈಯಿಂದಲೊ, ಯಾವ ಕೈಯಿಂದ ಎಸೆಯುತ್ತಾನೆ– ಒಂದೂ ನಮಗೆ ತಿಳಿಯದಾಯಿತು. ಹೀಗೆ ರಣದಲ್ಲಿ ಕೈಗಳನ್ನು ಬದಲಿಸುತ್ತಿದ್ದ.
ತಸ್ಯಾತತಂ ಮಂಡಲಮೇವ ಸಜ್ಯಂ
ಪ್ರದೃಶ್ಯತೇ ಕಾರ್ಮುಕಂ ದ್ರೋಣಸೂನೋಃ ॥9॥
ಹದೆಯೇರಿಸಿದ ಅಶ್ವತ್ಥಾಮನ ಬಿಲ್ಲು ಸದಾ ಮಂಡಲಾಕಾರವಾಗಿಯೆ ಕಾಣಿಸಿ ಕೊಂಡಿತು.
ಅವಿಧ್ಯನ್ ಮಾಂ ಪಂಚಭಿರ್ದ್ರೋಣಪುತ್ರಃ
ಶಿತೈಃ ಶರೈಃ ಪಂಚಭಿರ್ವಾಸುದೇವಮ್ |
ಅಹಂ ತು ತಂ ತ್ರಿಂಶತಾ ವಜ್ರಕಲ್ಪೈ ್ಯಃ
ಸಮಾರ್ದಯಂ ನಿಮಿಷಸ್ಯಾಂತರೇಣ ॥10॥
ಅಶ್ವತ್ಥಾಮನು ನನ್ನನ್ನು ಐದು ಬಾಣಗಳಿಂದಲೂ ಕೃಷ್ಣನನ್ನು ಹರಿತವಾದ ಐದು ಬಾಣ ಗಳಿಂದಲೂ ಹೊಡೆದಾಗ ನಾನು ನಿಮಿಷಮಾತ್ರದಲ್ಲಿ ಪ್ರತಿಯಾಗಿ ಅವನನ್ನು ವಜ್ರ ಸದೃಶವಾದ ಮೂವತ್ತು ಬಾಣಗಳಿಂದ ಹೊಡೆದ.
ಕ್ಷಣಾಸ್ತ್ವಾವಿತ್ಸಮರೂಪೋ ಬಭೂವ

ಸಮಾರ್ದಿತೋ ಮದ್ವಿಸೃಷ್ಟೈ ೃಃ ಪೃಷತ್ಕೈಃ ॥11॥
ಅಶ್ವತ್ಥಾಮ ಆಗ ನಾನೆಸೆದ ಬಾಣಗಳಿಂದ ಬಹಳಪೀಡಿತನಾಗಿ ಒಂದು ಕ್ಷಣಕಾಲ ಅಧೀರನಾದಂತೆ ಕಂಡುಬಂದ.
`ಆಸ್ಥಾ ಅವಿತ್' ಧೈರ್ಯದಿಂದ ಸ್ಥಿರವಾಗಿ ನಿಲ್ಲುವುದನ್ನು ಮರೆತವನು,
ಅಧೀರನಾದವನು. `ಆಸ್ಥಾವಿತ್ ಸಮರೂಪ' ಅಧೀರನಂತೆ ಆದವನು ಅಶ್ವತ್ಥಾಮ ಎಂದರ್ಥ. -ಲಕ್ಷಾಲಂಕಾರ.
ಸ ವಿಕ್ಷರನ್ ರುಧಿರಂ ಸರ್ವಗಾತ್ರೈ
ರಥಾನೀಕಂ ಸೂತಸೂನೋರ್ವಿವೇಶ |
ಮಯಾಭಿಭೂತಃ ಸೈನಿಕಾನಾಂ ಪ್ರಬರ್ಹಾನ್
ಅಸಾವಪಶ್ಯದ್ ರುಧಿರೇಣ ಪ್ರದಿಗ್ಧಾನ್ ॥12॥
ಅಶ್ವತ್ಥಾಮನು ನನ್ನಿಂದ ಪರಾಜಿತನಾಗಿ, ತನ್ನ ಸೈನಿಕರಲ್ಲಿ ಪ್ರಮುಖರು ಎಲ್ಲರೂ ನೆತ್ತರಿನಲ್ಲಿ ತೊಯ್ದಿರುವುದನ್ನೂ ಕಂಡ. ಅದರಿಂದ ಮೈಯೆಲ್ಲ ರಕ್ತವನ್ನು ಸುರಿಸುತ್ತ ಕರ್ಣನ ರಥಸೈನ್ಯವನ್ನು ಸೇರಿಕೊಂಡ.
ತತೋಽಭಿಭೂತಂ ಯುಧಿ ವೀಕ್ಷ ್ಯ ಸೈನ್ಯಂ
ವಿಧ್ವಸ್ತಯೋಧಂ ದ್ರುತವಾಜಿನಾಗಮ್ |
ಪಂಚಾಶತಾ ರಥಮುಖ್ಯೈಃ ಸಮೇತಃ
ಕರ್ಣಸ್ತ್ವರನ್ ಮಾಮುಪಾಯಾತ್ ಪ್ರಮಾಥೀ ॥13॥
ರಣದಲ್ಲಿ ಪದಾತಿಗಳು ನಾಶವಾದರು, ಅಶ್ವಗಜಸೈನ್ಯಗಳು ಪಲಾಯನ ಮಾಡಿದುವು. ಹೀಗೆ ಸೈನ್ಯವು ನನ್ನಿಂದ ಪರಾಜಯ ಹೊಂದಿದ್ದನ್ನು ನೋಡಿ ಕರ್ಣನು ಐದುನೂರು ಶ್ರೇಷ್ಠರಥಿಕರೊಂದಿಗೆ ಶತ್ರುಗಳನ್ನು ಮಥಿಸುತ್ತ ನನ್ನ ಬಳಿಗೆ ವೇಗವಾಗಿ ಬಂದ.
ತಾನ್ ಸೂದಯಿತ್ವಾಹಮಪಾಸ್ಯ ಕರ್ಣಂ
ದ್ರಷ್ಟುಂ ಭವಂತಂ ತ್ವರಯಾಭಿಯಾತಃ |
ಸರ್ವೇ ಪಾಂಚಾಲಾ ಹ್ಯುದ್ವಿಜಂತೇ ಸ್ಮ ಕರ್ಣಾದ್
ಗಂಧಾದ್ಗಾವಃ ಕೇಸರಿಣೋ ಯಥೈವ ॥14॥
ಆ ಐದುನೂರು ರಥಿಕರನ್ನು ನಾನು ನಾಶಮಾಡಿ ಕರ್ಣನನ್ನು ದೂರಮಾಡಿ ತ್ವರೆಯಿಂದ ನಿನ್ನನ್ನು ಕಾಣಲೆಂದು ಬಂದೆ. ಅತ್ತ ಎಲ್ಲ ಪಾಂಚಾಲರೂ, ಸಿಂಹದ ವಾಸನೆಗೆ ಗೋವುಗಳು ಭಯಪಡುವಂತೆ, ಕರ್ಣನಿಗೆ ಭಯಪಟ್ಟರು.
ಮಹಾಝುಷಸ್ಯೇವ ಮುಖಂ ಪ್ರಪನ್ನಾಃ
ಪ್ರಭದ್ರಕಾಃ ಕರ್ಣಮಭಿದ್ರವಂತಿ |
ಮೃತ್ಯೋರಾಸ್ಯಂ ವ್ಯಾತ್ತಮಿವಾನ್ವಪದ್ಯನ್
ಪ್ರಭದ್ರಕಾಃ ಕರ್ಣಮಾಸಾದ್ಯ ರಾಜನ್ ॥15॥
ತಿಮಿಂಗಿಲದ ಬಾಯೊಳಗೆ ಪ್ರವೇಶಿಸಿದಂತೆ ಪ್ರಭದ್ರಕರು ಕರ್ಣನ ಇದಿರಿಗೆ ನುಗ್ಗುತ್ತಿದ್ದಾರೆ. ಮೃತ್ಯುವಿನ ತೆರೆದ ಬಾಯೊಳಗೆ ಹೊಕ್ಕಂತೆ ಅವರು ಕರ್ಣನನ್ನಿದಿರಿಸಿ ಸಂಕಟಪಡುವುದು ನಿಶ್ಚಿತ.
ರಥಾಂಸ್ತು ತಾನ್ ಸಪ್ತಶತಾನ್ನಿಮಗ್ನಾಂ-
ಸ್ತದಾ ಕರ್ಣಃ ಪ್ರಾಹಿಣೋನ್ ಮೃತ್ಯುಸದ್ಮ |
ಏವಂ ಪ್ರಸಕ್ತೋಽನ್ಯದವಾಪ್ಯ ಸೈನ್ಯಂ
ನ ಮಾಂ ಪ್ರಾಪ್ತಃ ಸಂಯುಗೇ ಸೂತಪುತ್ರಃ ॥16॥
ಈಗಾಗಲೆ ಯುದ್ಧದಲ್ಲಿ ಮಗ್ನರಾಗಿದ್ದ ಏಳುನೂರು ಸುಭದ್ರಕ ರಥಿಕರನ್ನು ಕರ್ಣನು ಯಮಲೋಕಕ್ಕೆ ಕಳಿಸಿದ್ದಾನೆ. ಹೀಗೆ ಯುದ್ಧದಲ್ಲಿ ನಿರತನಾದ ಕರ್ಣ ಪುನಃ ಬೇರೆ ಸೈನ್ಯವನ್ನು ತಂದು ನನ್ನ ಇದಿರು ರಣದಲ್ಲಿ ನಿಲ್ಲಲಿಲ್ಲ.
ಶ್ರುತ್ವಾ ತು ತ್ವಾಂ ತೇನ ದೃಷ್ಟಂ ಸಮೇತ-
ಮಶ್ವತ್ಥಾಮ್ನಾ ಪೂರ್ವತರಂ ಕ್ಷತಂ ಚ |
ಮನ್ಯೇ ಕಾಲಮಪಯಾನಸ್ಯ ರಾಜನ್
ಕ್ರೂರಾತ್ ಕರ್ಣಾತ್ ತೇಽಹಮಚಿಂತ್ಯಕರ್ಮನ್ ॥17॥
ಕರ್ಣನು ನಿನ್ನನ್ನು ಕಂಡು ಆಕ್ರಮಿಸಿದ್ದನ್ನು, ಅದಕ್ಕೂ ಮೊದಲು ಅಶ್ವತ್ಥಾಮನು ನಿನ್ನನ್ನು ಆಕ್ರಮಿಸಿ ಮೈಗಾಯಗೊಳಿಸಿದ್ದನ್ನು ನಾನು ಕೇಳಿ, ಅಚಿಂತ್ಯಕರ್ಮ ಮಾಡುವ ರಾಜನೆ, ನಿನಗೆ ಆಯಾಸವಾಗಿದ್ದರಿಂದ, ಕ್ರೂರನಾದ ಕರ್ಣನೊಡನೆ ಯುದ್ಧವನ್ನು ಬಿಟ್ಟು ಈಚೆಗೆ ಬರಲು ಯೋಗ್ಯಕಾಲವಿದು ಎಂದು ಭಾವಿಸುತ್ತೇನೆ.
ನ ಮೇ ಕರ್ಣಸ್ಯಾಸ್ತ್ರಮಿದಂ ಪುರಸ್ತಾದ್
ಯುದ್ಧೇ ದೃಷ್ಟಂ ಪಾಂಡವ ಚಿತ್ರರೂಪಮ್ |
ನ ಹ್ಯನ್ಯಯೋದ್ಧಾ ವಿದ್ಯತೇ ಸೃಂಜಯಾನಾಂ
ಮಹಾರಥಂ ಯೋಽದ್ಯ ಸಹೇತ ಕರ್ಣಮ್ ॥18॥
ಕರ್ಣನಲ್ಲಿ ಆಶ್ಚರ್ಯಕರವಾದ ಈ ಭಾರ್ಗವಾಸ್ತ್ರ, ಇದ್ದುದನ್ನು ನಾನು ಹಿಂದೆ ರಣದಲ್ಲಿ ಕಣ್ಣಾರೆ ಕಂಡಿಲ್ಲ. ಮತ್ತು ಕರ್ಣನನ್ನು ಇದಿರಿಸಬಲ್ಲವನು ನನ್ನನ್ನು ಬಿಟ್ಟರೆ ಸೃಂಜಯರಲ್ಲಿ ಇನ್ನೊಬ್ಬನಿಲ್ಲ.
ಶೈನೇಯೋ ಮೇ ಸಾತ್ಯಕಿಶ್ಚಕ್ರರಕ್ಷೌ
ಧೃಷ್ಟದ್ಯುಮ್ನಶ್ಚಾಪಿ ತಥೈವ ರಾಜನ್ |
ಯುಧಾಮನ್ಯುಶ್ಚೋತ್ತಮೌಜಾಶ್ಚ ಶೂರೌ

ಪೃಷ್ಠತೋ ಮಾಂ ರಕ್ಷತಾಂ ರಾಜಪುತ್ರೌ ॥19॥
ರಾಜನೆ, ಸಾತ್ಯಕಿ ಮತ್ತು ಧೃಷ್ಟದ್ಯುಮ್ನರು ನನಗೆ ಚಕ್ರರಕ್ಷಕರಾಗಿರಲಿ. ಶೂರ ರಾಜಪುತ್ರರು ಯುಧಾಮನ್ಯು ಉತ್ತಮೌಜರು ಹಿಂಭಾಗದಲ್ಲಿ ನನಗೆ ರಕ್ಷಕರಾಗಿರಲಿ.
ರಥಪ್ರವೀರೇಣ ಮಹಾನುಭಾವ
ದ್ವಿಷತ್ಸೈನ್ಯೇ ವರ್ತತಾ ದುಸ್ತರೇಣ ॥20॥
ಸಮೇತ್ಯಾಹಂ ಸೂತಪುತ್ರೇಣ ಸಂಖ್ಯೇ
ವೃತ್ರೇಣ ವಜ್ರೀವ ನರೇಂದ್ರಮುಖ್ಯ |
ಯೋತ್ಸ್ಯೇ ಭೃಶಂ ಭಾರತ ಸೂತಪುತ್ರಮ್
ಅಸ್ಮಿನ್ ಸಂಗ್ರಾಮೇ ಯದಿ ವೈ ದೃಶ್ಯತೇಽದ್ಯ ॥21॥
ರಾಜನೆ, ಆಗ ಶತ್ರುಸೈನ್ಯದಲ್ಲಿರುವ ರಥಿಕಶ್ರೇಷ್ಠನಾದ ದುರ್ಜಯನಾದ ಕರ್ಣನು ಈ ಯುದ್ಧದಲ್ಲಿ ಇಂದು ನನಗೆ ಕಾಣಿಸಿದ್ದೇ ಆದರೆ, ವೃತ್ರಾಸುರನೊಡನೆ ಇಂದ್ರನಂತೆ ನಾನು ಕರ್ಣನನ್ನು ಇದಿರಿಸಿ ಅವನೊಡನೆ ಚೆನ್ನಾಗಿ ಯುದ್ಧ ಮಾಡುವೆನು.
ಆಯಾಹಿ ಪಶ್ಯಾದ್ಯ ಯುಯುತ್ಸಮಾನಂ
ಮಾಂ ಸೂತಪುತ್ರಂ ಚ ವೃತೌ ಜಯಾಯ |
ಷಟ್ಸಾಹಸ್ರಾ ಭಾರತ ರಾಜಪುತ್ರಾಃ
ಸ್ವರ್ಗಾಯ ಲೋಕಾಯ ರಥಾ ನಿಮಗ್ನಾಃ ॥22॥
ರಾಜನೆ, ನೀನು ಬಾ, ನೋಡು, ನಾನೂ ಕರ್ಣನೂ ಯುದ್ಧ ಮಾಡುವೆವು, ಇಬ್ಬರೂ ಎರಡು ಪಕ್ಷಗಳಿಂದ ಜಯಕ್ಕಾಗಿ ಸ್ಪರ್ಧಿಸಲು ಆರಿಸಿ ಬಂದಿದ್ದೇವೆ. ಜೊತೆಗೆ ಆರು ಸಾವಿರ ರಾಜಕುಮಾರರು ಸ್ವರ್ಗಲೋಕಪ್ರಾಪ್ತಿಯ ಸಲುವಾಗಿ ಯುದ್ಧದಲ್ಲಿ ನಿಮಗ್ನರಾಗಿದ್ದಾರೆ.
ಕರ್ಣಂ ನ ಚೇದದ್ಯ ನಿಹನ್ಮಿ ರಾಜನ್
ಸಬಾಂಧವಂ ಯುಧ್ಯಮಾನಂ ಪ್ರಸಹ್ಯ |
ಪ್ರತಿಶ್ರುತ್ಯಾಕುರ್ವತಾಂ ವೈ ಗತಿರ್ಯಾ
ಕಷ್ಟಾಂ ಗಚ್ಛೇಯಂ ತಾಮಹಂ ರಾಜಸಿಂಹ | |23॥
ರಾಜನೆ, ನಾನಿಂದು ಯುದ್ಧಮಾಡುವ ಕರ್ಣನನ್ನು ಬಂಧುಸಮೇತವಾಗಿ ಬಲಾತ್ಕಾರದಿಂದ ಸಂಹರಿಸದೇ ಹೋದರೆ ಪ್ರತಿಜ್ಞೆ ಮಾಡಿ, ಅದನ್ನು ನಡೆಸದಿರುವವನಿಗೆ ಯಾವ ದುರ್ಗತಿ ಬರುವುದೋ ಅದನ್ನು ನಾನು ಹೊಂದುತ್ತೇನೆ.
ಆಮಂತ್ರಯೇ ತ್ವಾಂ ಬ್ರೂಹಿ ಜಯಂ ರಣೇ ಮೇ
ಪುರಾ ಭೀಮಂ ಧಾರ್ತರಾಷ್ಟ್ರಾ ಗ್ರಸಂತೇ |
ಸೌತಿಂ ಹನಿಷ್ಯಾಮಿ ನರೇಂದ್ರಸಿಂಹ
ಸೈನ್ಯಂ ತಥಾ ಶತ್ರುಗಣಾಂಶ್ಚ ಸರ್ವಾನ್ ॥24॥
ರಾಜನೆ, ಯುದ್ಧಕ್ಕೆ ಹೋಗಲು ನಿನ್ನ ಅನುಮತಿಯನ್ನು ಬೇಡುತ್ತೇನೆ. ರಣದಲ್ಲಿ ಜಯವಾಗಲೆಂದು ಆಶೀರ್ವದಿಸು. ಧೃತರಾಷ್ಟ್ರನ ಮಕ್ಕಳು ಭೀಮನನ್ನು ಆಕ್ರಮಿಸ ಲಿದ್ದಾರೆ. ಅದಕ್ಕೆ ಮೊದಲೇ ನಾನು ಕರ್ಣನನ್ನು ಕೊಲ್ಲುತ್ತೇನೆ. ಅವನ ಸೈನ್ಯವನ್ನೂ ಎಲ್ಲ ಶತ್ರುಸಮೂಹಗಳನ್ನೂ ಸಂಹರಿಸುತ್ತೇನೆ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಧರ್ಮರಾಜಾರ್ಜುನಸಂವಾದೇ ಚತುಷ್ಷಷ್ಟಿತಮೋಽಧ್ಯಾಯಃ ॥64॥

ಮಹಾಭಾರತತಾತ್ಪರ್ಯನಿರ್ಣಯ
ಅಭಿವಾದ್ಯ ಹನಿಷ್ಯಾಮೀತ್ಯುಕ್ತಃ ಪಾರ್ಥೇನ ಸ ಕ್ರುಧಾ |
ಭೃಶಂ ವಿನಿಂದ್ಯ ಬೀಭತ್ಸುಮಾಹ ಕೃಷ್ಣಾಯ ಗಾಂಡಿವಮ್ |
ದೇಹಿ ಪುತ್ರಂ ಸ ರಾಧಾಯಾ ಹನಿಷ್ಯತಿ ನ ಸಂಶಯಃ ॥114॥
ಅರ್ಜುನ ಸಮೇತನಾದ ಶ್ರೀಕೃಷ್ಣ ಯುಧಿಷ್ಠಿರನನ್ನು ಕಾಣಲು ಶಿಬಿರಕ್ಕೆ ಹೋದ. ಅವರನ್ನು ಕಂಡು ಯುಧಿಷ್ಠಿರ ಕರ್ಣ ಹತನಾದನೆಂದು ಬಗೆದು ಹೊಗಳಿದ. ಅರ್ಜುನ ಅಭಿವಾದನ ಮಾಡಿ ಇನ್ನು ಮೇಲೆ ಕೊಲ್ಲುವೆನೆಂದಾಗ ಯುಧಿಷ್ಠಿರ ಕೋಪದಿಂದ ಚೆನ್ನಾಗಿ ನಿಂದಿಸಿ ನುಡಿದ `ಗಾಂಡೀವವನ್ನು ಕೃಷ್ಣನಿಗೆ ಕೊಡು. ಅವನು ಕರ್ಣನನ್ನು ಇನ್ನು ಮೇಲೆ ಕೊಲ್ಲುತ್ತಾನೆ, ಇದರಲ್ಲಿ ಸಂಶಯವಿಲ್ಲ.
ಅಥವಾ ಭೀಮ ಏವೈನಂ ನಿವೃತ್ತೇ ತ್ವಯಿ ಪಾತಯೇತ್ |
ತ್ವಂ ತು ಕುಂತ್ಯಾ ವೃಥಾ ಸೂತಃ ಕ್ಲೀಬೋ ಮಿಥ್ಯಾಪ್ರತಿಶ್ರವಃ ॥115॥
ಅಥವಾ ನೀನು ಯುದ್ಧ ಮಾಡುವುದನ್ನು ಕೈಬಿಟ್ಟಾಗ ಭೀಮನೆ ಕರ್ಣನನ್ನು ಕೊಲ್ಲುತ್ತಾನೆ. ನೀನು ಕುಂತಿಯಿಂದ ವ್ಯರ್ಥವಾಗಿ ಜನಿಸಿರುವಿ. ನೀನು ಷಂಢ. ನಿನ್ನ ಪ್ರತಿಜ್ಞೆ ಸುಳ್ಳು.'

ಅರವತ್ತೈದನೆಯ ಅಧ್ಯಾಯ
`ನಿನಗೆ ಕರ್ಣನೆಂದರೆ ಭಯ! ನಿನಗೇಕೆ ಗಾಂಡೀವ?' ಎನ್ನುತ್ತಾನೆ ಯುಧಿಷ್ಠಿರ.
ಸಂಜಯಃ
ಶ್ರುತ್ವಾ ಕರ್ಣಂ ಕಲ್ಯಮುದಾರವೀರ್ಯಂ

ಕ್ರುದ್ಧಃ ಪಾರ್ಥಃ ಫಲ್ಗುನಸ್ಯಾಮಿತೌಜಾಃ |
ಧನಂಜಯಂ ವಾಕ್ಯಮುವಾಚ ಚೇದಂ
ಯುಧಿಷ್ಠಿರಃ ಕರ್ಣಶರಾಭಿತಪ್ತಃ ||1||
ಸಂಜಯ ಧೃತರಾಷ್ಟ್ರನಿಗೆ ನುಡಿದ– ಮಹಾಬಲಿಷ್ಠನಾದ ಕರ್ಣ ಕ್ಷೇಮದಿಂದಿರುವುದನ್ನು ಕೇಳಿ ಕರ್ಣನ ಬಾಣಗಳಿಂದ ವೇದನೆ ಅನುಭವಿಸುತ್ತಿದ್ದ ಅಮಿತ ಪರಾಕ್ರಮಿ ಯುಧಿಷ್ಠಿರನು ಅರ್ಜುನನ ಮೇಲೆ ಕೋಪಿಸಿಕೊಂಡು ಅವನಿಗೆ ಈ ಮಾತನ್ನು ಹೇಳಿದ.
ವಿಪ್ರದ್ರುತಾ ತಾತ ಚಮೂಸ್ತ್ವದೀಯಾ
ತಿರಸ್ಕೃತಾ ಚಾದ್ಯ ಯಥಾ ನ ಸಾಧು |
ತ್ಯಕ್ತ್ವಾ ರಣೇ ಯದಪಾಯಾಃ ಸ ಭೀಮಂ
ಯನ್ನಾಶಕಃ ಸೂತಪುತ್ರಂ ನಿಹಂತುಮ್ ||2||
ಅರ್ಜುನ, ನಿನ್ನ ಸೈನ್ಯ ಪಲಾಯನ ಮಾಡುತ್ತಿತ್ತೆಂದು ನೀನೇ ಹೇಳಿರುವೆ. ಅದನ್ನು ನೀನು ಅಲಕ್ಷ್ಯಮಾಡಿದೆ. ಅದು ಸರಿಯಲ್ಲ. ಮತ್ತು ರಣದಲ್ಲಿ ಭೀಮನೊಬ್ಬನನ್ನೇ ಬಿಟ್ಟು, ನೀನು ಹೊರಟು ಬಂದಿರುವೆ, ಅದೂ ಸರಿಯಲ್ಲ. ಇದಕ್ಕೆ ಕಾರಣ ನೀನು ಕರ್ಣನನ್ನು ಕೊಲ್ಲಲು ಶಕ್ತನಾಗಲಿಲ್ಲ ತಾನೆ?
ಭೀತೋ ಭೀಮಂ ತ್ಯಜ್ಯ ಚಾಯಾಸ್ತಥಾ ತ್ವಂ
ಯನ್ನಾಶಕಃ ಕರ್ಣಮಥೋ ನಿಹನ್ತುಮ್ ||3||
ಕರ್ಣನನ್ನು ಕೊಲ್ಲಲು ನೀನು ಶಕ್ತನಾಗಲಿಲ್ಲವಾದ್ದರಿಂದ ಅವನಿಗೆ ಭಯಪಟ್ಟು ಭೀಮನನೊಬ್ಬನನ್ನು ಬಿಟ್ಟು ಹೊರಟು ಬಂದಿರುವೆ.
ಸ್ನೇಹಸ್ತ್ವಯಾ ಪಾರ್ಥ ಕೃತಃ ಪೃಥಾಯಾ
ಗರ್ಭಂ ಸಮಾವಿಶ್ಯ ಯಥಾ ನ ಸಾಧು ||4||
ಪಾರ್ಥ, ನೀನು ಪೃಥೆಯ ಗರ್ಭವನ್ನು ಪ್ರವೇಶಿಸಿ ಸೋದರರಲ್ಲಿ ಸ್ನೇಹವನ್ನು ಮಾಡಿರುವೆ; ಆದರೆ ರಣದಲ್ಲಿ ಭೀಮನೊಬ್ಬನನ್ನೇ ಬಿಟ್ಟು ಅಲ್ಲಿಂದ ಹೊರಟು ಬಂದೆ. ಕರ್ಣನನ್ನು ವಧಿಸಲು ಶಕ್ತನಾಗಲಿಲ್ಲ. ಇದು ಸರಿಯಲ್ಲ.
ಯತ್ತದ್ವಾಕ್ಯಂ ದ್ವೈತವನೇ ತ್ವಯೋಕ್ತಂ
ಹಂತಾ ಕರ್ಣಮೇಕರಥೇನ ಸತ್ಯಮ್ |
ತ್ಯಕ್ತ್ವಾ ತಂ ವೈ ಕಥಮದ್ಯಾಪಯಾತಃ
ಕರ್ಣಾದ್ ಭೀತೋ ಭೀಮಸೇನಂ ವಿಹಾಯ ||5||
ದ್ವೈತವನದಲ್ಲಿ ನೀನು ಹೇಳಿದೆ, `ಒಂದೇ ರಥದಿಂದ ಕರ್ಣನನ್ನು ಕೊಲ್ಲುವೆ, ಇದು ಸತ್ಯ' ಎಂದು. ಈಗ ಕರ್ಣನನ್ನು ಕೊಲ್ಲದೆ ಬಿಟ್ಟು ಹೇಗೆ ಹೊರಟುಬಂದೆ? ಕರ್ಣನಿಗೆ ಹೆದರಿ ಭೀಮಸೇನನನ್ನು ಬಿಟ್ಟು ಹೇಗೆ ಬಂದೆ?
ಇದಂ ಯದಿ ದ್ವೈ ೃತವನೇ ಹ್ಯವಕ್ಷ ್ಯಃ
ಕರ್ಣಂ ಯೋದ್ಧುಂ ನ ಪ್ರಶಕ್ಷ್ಯೇ ನೃಪೇತಿ |
ವಯಂ ತದಾ ಪ್ರಾಪ್ತಕಾಲಾನಿ ಸರ್ವೇ
ವೃತ್ತಾನ್ಯುಪೈಷ್ಯಾಮ ತದೈವ ಪಾರ್ಥ ||6||
`ಪಾರ್ಥನೆ, ಕರ್ಣನೊಡನೆ ಯುದ್ಧಮಾಡಲು ನಾನು ಶಕ್ತನಲ್ಲ' ಎಂದು ದ್ವೈತ ವನದಲ್ಲಿಯೇ ನೀನು ಹೇಳಿದ್ದರೆ ಆಗಲೇ ನಾವೆಲ್ಲರೂ ಸೇರಿ ಕಾಲೋಚಿತವಾದ ಕರ್ತವ್ಯವನ್ನು ಕೈಗೊಳ್ಳುತ್ತಿದ್ದೆವು.
ಧಿಗಸ್ತು ಮಜ್ಜೀವಿತಮದ್ಯ ಕೃಷ್ಣ
ಯೋಽಹಂ ವಶಂ ಸೂತಪುತ್ರಸ್ಯ ಯಾತಃ
ಮಧ್ಯೇ ಕುರೂಣಾಂ ಸಸುಯೋಧನಾನಾಂ
ಯೇ ಚಾಪ್ಯನ್ಯೇ ಯೋದ್ಧುಕಾಮಾಃ ಸಮೇತಾಃ || ||7||
ಕೃಷ್ಣ, ನನ್ನ ಬದುಕಿಗೇ ಧಿಕ್ಕಾರವಿರಲಿ. ದುರ್ಯೋಧನ ಮುಂತಾದ ಕುರುಯೋಧರ ನಡುವೆ, ಯುದ್ಧೇಚ್ಛೆಯಿಂದ ಸೇರಿದ ಬೇರೆ ಯೋಧರ ನಡುವೆ ನಾನು ಸೂತಪುತ್ರನ ವಶನಾದೆ.
ಏಕಸ್ತು ಮೇ ಭೀಮಸೇನೋಽದ್ಯ ನಾಥೋ
ಯೇನಾಭಿಪನ್ನೋಽಸ್ಮಿ ರಣೇ ಮಹಾಭಯೇ |
ವಿಮೋಚ್ಯ ಮಾಂ ಚಾಪಿ ರುಷಾನ್ವಿತಸ್ತತಃ
ಶರೇಣ ತೀಕ್ಷ್ಣೇನ ಬಿಭೇದ ಕರ್ಣಮ್ ||8||
ಭೀಮಸೇನನೊಬ್ಬನೆ ನನಗೆ ಆಗ ರಕ್ಷಕನಾಗಿ ಬಂದ. ಮಹಾಭಯಂಕರವಾದ ರಣದಲ್ಲಿ ಅವನು ನನ್ನ ರಕ್ಷಣೆಗೆ ಬಂದ. ನನ್ನನ್ನು ಬಿಡಿಸಿಕೊಂಡು ಕೋಪದಿಂದ ತೀಕ್ಷ್ಣಬಾಣದಿಂದ ಕರ್ಣನನ್ನು ಸೀಳಿದ.
ಮಯಿ ಪ್ರತಿಶ್ರುತ್ಯ ವಧಂ ಹಿ ತಸ್ಯ
ನ ವೈ ಕೃತಂ ತಚ್ಚ ತಥೈವ ವೀರ |
ಆನೀಯ ನಃ ಶತ್ರುಮಧ್ಯಂ ಚ ಕಸ್ಮಾತ್
ಸಮುತ್ಕ್ಷಿಪ್ಯ ಸ್ಥಂಡಿಲೇ ಪ್ರತ್ಯಪಿಂಷ್ಠಾಃ ||9||
ನನ್ನ ಮುಂದೆ ಕರ್ಣನನ್ನು ವಧಿಸುವುದಾಗಿ ನೀನು ಪ್ರತಿಜ್ಞೆಮಾಡಿ, ಅದನ್ನು ಹಾಗೆ ನಡೆಸಲಿಲ್ಲ. ನಮ್ಮನ್ನು ಶತ್ರುಗಳ ಮಧ್ಯದಲ್ಲಿ ತಂದುಹಾಕಿ ಎತ್ತಿ ನೆಲದಲ್ಲಿ ಏಕೆ ಪುಡಿ ಮಾಡಿದೆ?
ಅನ್ವಾಶಿಷ್ಮ ಯದ್ ವಯಮರ್ಜುನ ತ್ವಯಿ

ಯಿಯಾಸವೋ ಬಹು ಕಲ್ಯಾಣಮಿಷ್ಟಮ್ |
ತನ್ನಃ ಸರ್ವಂ ವಿಫಲಂ ರಾಜಪುತ್ರ
ಫಲಾರ್ಥಿನಾಂ ನಿಚುಲ ಇವಾತಿಪುಷ್ಪಃ ॥10॥
ಅರ್ಜುನ! ಇಷ್ಟವಾದ ಬಹು ಶ್ರೇಯಸ್ಸನ್ನು ಪಡೆಯಲು ಬಯಸಿ ನಾವು ನಿನ್ನಲ್ಲಿ ಏನು ಆಸೆ ಇರಿಸಿಕೊಂಡಿದ್ದೆವು, ಅದೆಲ್ಲ ನಮಗೆ ನಿಷ್ಫಲವಾಯಿತು, ನೀರುಹಲಸಿನ ಗಿಡ ಅತಿಯಾಗಿ ಹೂ ಬಿಟ್ಟರೂ ಫಲ ನೀಡುವುದಿಲ್ಲ, ಹಾಗೆ.
ಪ್ರಚ್ಛಾದಿತಂ ಬಡಿಶಮಿವಾಮಿಷೇಣ
ಸಂಛಾದಿತಂ ಗರಲಮಿವಾಶನೇನ |
ಅನರ್ಥಕಂ ಮೇ ದರ್ಶಿತವಾನಸಿ ತ್ವಂ
ರಾಜ್ಯಾರ್ಥಿನೋ ರಾಜ್ಯರೂಪಂ ವಿನಾಶಮ್ ॥11॥
ಗಾಳವನ್ನು ಮಾಂಸದಿಂದ ಮುಚ್ಚುವಂತೆ, ವಿಷವನ್ನು ಅನ್ನದಿಂದ ಮುಚ್ಚುವಂತೆ ರಾಜ್ಯಾರ್ಥಿಗಳಾದ ನಮಗೆ ಅನರ್ಥಕರವಾದ ವಿನಾಶವನ್ನೇ ರಾಜ್ಯಪ್ರಾಪ್ತಿರೂಪ ದಿಂದ ತೋರಿಸಿ ವಂಚಿಸುತ್ತಿರುವೆ.
ತ್ರಯೋದಶೇಮಾ ಹಿ ಸಮಾಃ ಸದಾ ವಯಂ
ತ್ವಾಮನ್ವಜೀವಿಷ್ಮ ಧನಂಜಯಾಶಯಾ |
ಕಾಲೇ ವರ್ಷಂ ದೇವಮಿವೋಪ್ತಬೀಜಂ
ತನ್ನಃ ಸರ್ವಾನ್ನರಕೇ ತ್ವಂ ನ್ಯಮಜ್ಜಯಃ ॥12॥
ಈ ಹದಿಮೂರು ವರ್ಷಗಳ ಕಾಲ ಸದಾ ನಾವು ನಿನ್ನನ್ನೇ ಆಸೆಯಿಂದ ಆಶ್ರಯಿಸಿ ಬದುಕಿದೆವು. ನೆಟ್ಟಬೀಜ ಮೊಳೆಯಲು ಸಕಾಲಿಕವಾದ ಮಳೆಯಲ್ಲಿ ಆಸೆ ಇಡುವಂತೆ. ಆದರೆ ನೀನು ನಮ್ಮೆಲ್ಲರನ್ನೂ ನರಕದಲ್ಲಿ ಮುಳುಗಿಸಿಬಿಟ್ಟೆ.
ಯತ್ತತ್ ಪೃಥಾಂ ವಾಗುವಾಚಾನ್ತರಿಕ್ಷೇ
ಸಪ್ತಾಹಜಾತೇ ತ್ವಯಿ ಮಂದಬುದ್ಧೌ |
ಜಾತಃ ಪುತ್ರೋ ವಾಸವವಿಕ್ರಮೋಽಯಂ
ಸರ್ವಾನ್ ಶೂರಾನ್ ಶಾತ್ರವಾನ್ ಜೇಷ್ಯತೀತಿ ॥13॥
ಮಂದಬುದ್ಧಿಯಾದ ನೀನು ಹುಟ್ಟಿ ಏಳುದಿವಸವಾದಾಗ ಪೃಥೆಗೆ ಆಕಾಶದಲ್ಲಿ ಮಾತು ಹೇಳಿತು `ಹುಟ್ಟಿದ ಈ ಪುತ್ರನು ಇಂದ್ರನಂತೆ ಪರಾಕ್ರಮಿ. ಶೂರರಾದ ಎಲ್ಲ ಶತ್ರುಗಳನ್ನು ಜಯಿಸುತ್ತಾನೆ' ಎಂದು.
ಅಯಂ ಜೇತಾ ಖಾಂಡವೇ ದೇವಸಂಘಾನ್
ಸರ್ವಾಣಿ ಭೂತಾನ್ಯಪಿ ಚೋತ್ತಮೌಜಾಃ ॥
ಅಯಂ ಜೇತಾ ಮದ್ರಕಲಿಂಗಕೇಕಯಾನ್
ಅಯಂ ಕುರೂನ್ ಹಂತಿ ಚ ರಾಜಮಧ್ಯೇ ॥14॥
`ಮಹಾಶಕ್ತಿಶಾಲಿಯಾದ ಈತ ದೇವಸಮೂಹಗಳನ್ನೂ ಎಲ್ಲ ಪ್ರಾಣಿಗಳನ್ನೂ ಖಾಂಡವ ದಹನಕಾಲದಲ್ಲಿ ಗೆಲ್ಲುತ್ತಾನೆ. ಮದ್ರ ಕಲಿಂಗ ಕೇಕಯರನ್ನೂ ಗೆಲ್ಲುತ್ತಾನೆ. ರಾಜರ ಮಧ್ಯದಲ್ಲಿ ಕೌರವಸೈನಿಕರನ್ನು ಕೊಲ್ಲುತ್ತಾನೆ' ಎಂದು.
ಅಸ್ಮಾತ್ಪರೋ ನ ಭವಿತಾ ಧನುರ್ಧರೋ
ನ ವೈ ಭೂತಃ ಕಶ್ಚನ ಜಾತು ಜೇತಾ |
ಇಚ್ಛನ್ನಯಂ ಸರ್ವಭೂತಾನಿ ಕುರ್ಯಾದ್
ವಶೇ ವಶೀ ಸರ್ವಸಮಾಪ್ತವಿದ್ಯಃ ॥15॥
ಇವನಿಗಿಂತ ಮೇಲಾದ ಧನುರ್ಧರನೊಬ್ಬನು ಮುಂದೆ ಹುಟ್ಟುವುದಿಲ್ಲ. ಹಿಂದೆ ಹುಟ್ಟಿಲ್ಲ. ಯಾರೂ ಎಂದೂ ಇವನನ್ನು ಗೆಲ್ಲುವುದಿಲ್ಲ. ಇವನು ಎಲ್ಲ ವಿದ್ಯೆಗಳನ್ನೂ ಹೊಂದಿ, ಜಿತೇಂದ್ರಿಯನಾಗಿ, ಮನಸು ಮಾಡಿದರೆ ಸಕಲ ಪ್ರಾಣಿಗಳನ್ನು ವಶಕ್ಕೆ ತಂದುಕೊಳ್ಳಬಲ್ಲ.
ಕಾಂತ್ಯಾ ಶಶಾಂಕಸ್ಯ ಜವೇನ ವಾಯೋಃ
ಸ್ಥೈರ್ಯೇಣ ಮೇರೋಃ ಕ್ಷಮಯಾ ಪೃಥಿವ್ಯಾಃ |
ಸೂರ್ಯಸ್ಯ ಭಾಸಾ ಧನದಸ್ಯ ಲಕ್ಷ್ಮ್ಯಾ
ಶೌರ್ಯೇಣ ಶಕ್ರಸ್ಯ ಬಲೇನ ವಿಷ್ಣೋಃ ॥16॥
ತುಲ್ಯೋ ಮಹಾತ್ಮಾ ತವ ಕುಂತಿ ಪುತ್ರೋ
ಜಾತೋಽದಿತೇರ್ವಿಷ್ಣುರಿವಾರಿಹಂತಾ |
ಸ್ವೇಷಾಂ ಜಯಾಯ ದ್ವಿಷತಾಂ ವಧಾಯ
ಖ್ಯಾತೋಽಮಿತೌಜಾಃ ಕುಲತಂತುಕರ್ತಾ ॥17॥
ಕಾಂತಿಯಿಂದ ಚಂದ್ರನಿಗೆ, ವೇಗದಿಂದ ವಾಯುವಿಗೆ, ಸ್ಥೈರ್ಯದಿಂದ ಮೇರುವಿಗೆ, ಕ್ಷಮೆಯಿಂದ ಪೃಥಿವಿಗೆ, ಪ್ರಭೆಯಿಂದ ಸೂರ್ಯನಿಗೆ, ಐಶ್ವರ್ಯದಿಂದ ಕುಬೇರನಿಗೆ, ಶೌರ್ಯದಿಂದ ಇಂದ್ರನಿಗೆ, ಬಲದಿಂದ ವಿಷ್ಣುವಿಗೆ, ತುಲ್ಯನಾಗುವ ಮಹಾತ್ಮನು ನಿನ್ನ ಈ ಪುತ್ರ. ಕುಂತಿ, ಅದಿತಿಗೆ ವಿಷ್ಣುವಿನಂತೆ ನಿನಗೆ ಈತ ಮಗನಾಗಿ ಜನಿಸಿದ್ದಾನೆ. ಶತ್ರುನಾಶಕ, ಅಮಿತ ಪರಾಕ್ರಮಿ, ವಂಶೋದ್ಧಾರಕನಾದ ಪುತ್ರನನ್ನು ಪಡೆಯುತ್ತಾನೆ. ತನ್ನವರಿಗೆ ಸರ್ವತ್ರವಿಜಯವನ್ನು, ಶತ್ರುಗಳಿಗೆ ವಧವನ್ನು ಉಂಟು ಮಾಡಲೆಂದೇ ಜನಿಸಿದ ಈತ ಹಾಗೇ ವಿಜಯನೆಂದೇ ಪ್ರಸಿದ್ಧನಾಗುತ್ತಾನೆ.
ಇತ್ಯಂತರಿಕ್ಷೇ ಶತಶೃಂಗಮೂರ್ಧ್ನಿ

ತಪಸ್ವಿನಾಂ ಶೃಣ್ವತಾಂ ವಾಗುವಾಚ |
ಏವಂವಿಧಂ ತ್ವಾಂ ತಚ್ಚ ನಾಭೂತ್ ತವಾದ್ಯ
ದೇವಾ ಹಿ ನೂನಮನೃತಂ ವದಂತಿ ॥18॥
ಶತಶೃಂಗ ಬೆಟ್ಟದ ಮೇಲೆ ಅಂತರಿಕ್ಷದಲ್ಲಿ ತಪಸ್ವಿಗಳು ಕೇಳುತ್ತಿದ್ದಂತೆಯೇ ಅಶರೀರವಾಣಿ ಹೇಳಿತು– `ನೀನು ಹೀಗೇ ಆಗುವಿ' ಎಂದು. ಆದರೆ ಅದು ನಿನ್ನ ವಿಷಯದಲ್ಲಿ ನಿಜವಾಗಲಿಲ್ಲ. ದೇವತೆಗಳು ಕೂಡ ನಿಶ್ಚಯವಾಗಿಯೂ ಸುಳ್ಳು ಹೇಳುತ್ತಾರೆ.
ತಥಾಪರೇಷಾಮೃಷಿಸತ್ತಮಾನಾಂ
ಶ್ರುತ್ವಾ ಗಿರಂ ಪೂಜಯತಾಂ ಸದೈವ |
ನ ಸನ್ನತಿಂ ಪ್ರೈಮಿ ಸುಯೋಧನಸ್ಯ
ನ ತ್ವಾ ಜಾನಾಮ್ಯಾಧಿರಥೇರ್ಭಯಾರ್ತಮ್ ॥19॥
ಸದಾ ನಿನ್ನನ್ನು ಹೊಗಳುವ ಶ್ರೇಷ್ಠ ಋಷಿಗಳೂ ಕೂಡ ಅಶರೀರವಾಣಿಯಂತೇ ಹೇಳುತ್ತಿದ್ದುದನ್ನು ಕೇಳಿ ನಾನು ಸುಯೋಧನನಿಗೆ ಶರಣಾಗಲಿಲ್ಲ. ನೀನು ಕರ್ಣನ ಭಯದಿಂದ ಆರ್ತನಾಗುವಿ ಎಂದೂ ತಿಳಿಯಲಿಲ್ಲ.
ತ್ವಷ್ಟ್ರಾ ಕೃತಂ ವಾಹಮಕೂಜನಾಕ್ಷಂ
ಶುಭಂ ಸಮಾಸ್ಥಾಯ ಕಪಿಧ್ವಜಂ ತ್ವಮ್ |
ಖಡ್ಗಂ ಗೃಹೀತ್ವಾ ಹೇಮಚಿತ್ರಂ ಸಮಿದ್ಧಂ
ಧನುಶ್ಚೇದಂ ಗಾಂಡಿವಂ ತಾಲಮಾತ್ರಮ್ ॥20॥
ಸ ಕೇಶವೇನೋಹ್ಯಮಾನಃ ಕಥಂ ನು
ಕರ್ಣಾದ್ ಭೀತೋ ವ್ಯಪಯಾತೋಸಿ ಪಾರ್ಥ ॥21॥
ಪಾರ್ಥ, ನಿನ್ನ ರಥವು ವಿಶ್ವಕರ್ಮ ನಿರ್ಮಿತ. ಅದರ ಅಕ್ಷ ಶಬ್ದ ಉಂಟು ಮಾಡದುದು. ಕಪಿಯು ಧ್ವಜವಾಗಿ ಕುಳಿತಿರುತ್ತಾನೆ. ಅಂಥ ರಥವನ್ನೇರಿ ಬಂಗಾರ ದಿಂದ ಅಲಂಕೃತವಾದ ಹೊಳೆಯುವ ಖಡ್ಗವನ್ನೂ ನಾಲ್ಕು ಮೊಳದ ಈ ಗಾಂಡಿವ ಧನುಸ್ಸನ್ನೂ ಹಿಡಿದು ಕೃಷ್ಣನ ಸಾರಥ್ಯದಲ್ಲಿ ರಣರಂಗಕ್ಕೆ ಹೋಗುವ ನೀನು, ಕರ್ಣನಿಗೆ ಭಯಪಟ್ಟು ಹೇಗೆ ಅಲ್ಲಿಂದ ಪಲಾಯನ ಮಾಡಿ ಬಂದೆ?
ಧನುಶ್ಚೈತತ್ ಕೇಶವಾಯ ಪ್ರದಾಯ
ಯಂತಾऽಭವಿಷ್ಯಸ್ತ್ವಂ ರಣೇ ಚೇದ್ ದುರಾತ್ಮನ್ |
ತತೋऽಹನಿಷ್ಯತ್ಕೇಶವಃ ಕರ್ಣಮುಗ್ರಂ
ಮರುತ್ಪತಿರ್ವೃತ್ರಮಿವಾತ್ತವಜ್ರಃ ॥22॥
ದುರಾತ್ಮನೆ, ನೀನು ಈ ಧನುಸ್ಸನ್ನು ಕೃಷ್ಣನಿಗೆ ಕೊಟ್ಟು ಅವನಿಗೆ ನೀನು ಸಾರಥಿಯಾಗಿದ್ದರೆ, ವಜ್ರಾಯುಧವನ್ನು ಹಿಡಿದ ಇಂದ್ರನು ವೃತ್ರಾಸುರನನ್ನು ಕೊಂದಂತೆ ಕೃಷ್ಣನೆ ಉಗ್ರನಾದ ಕರ್ಣನನ್ನು ಕೊಲ್ಲುತ್ತಿದ್ದ.
ರಾಧೇಯಮೇವಂ ಯದಿ ಚಾಪ್ಯಶಕ್ತ-
ಶ್ಚರಂತಮುಗ್ರಂ ಪ್ರತಿ ಯೋಧನಾಯ |
ಪ್ರಯಚ್ಛಾನ್ಯಸ್ಮೈ ಗಾಂಡಿವಮೇತದದ್ಯ
ತ್ವತ್ತೋ ಯೋऽಸ್ತ್ರೈರಭ್ಯಧಿಕೋ ನರೇಷು ॥23॥
ಅಥವಾ ರಣದಲ್ಲಿ ಸಂಚರಿಸುವ ಕರ್ಣನನ್ನು ಇದಿರಿಸಲು ನಿನ್ನಿಂದ ಶಕ್ಯವಾಗ ದಿದ್ದರೆ, ಅಸ್ತ್ರಗಳಲ್ಲಿ ನಿನಗಿಂತ ಶ್ರೇಷ್ಠನಾದ ಯೋಧನಿಗಾದರೂ ಈ ಗಾಂಡೀವವನ್ನು ಕೊಡು.
ಇಲ್ಲಿ ಯಾರು ಅರ್ಜುನನಿಗಿಂತಲೂ ಅಸ್ತ್ರಗಳಲ್ಲಿ ಶ್ರೇಷ್ಠ? ಭೀಮನೆ.
`ಏಕಸ್ತು ಮೇ ಭೀಮಸೇನೋऽದ್ಯ ನಾಥಃ (ಶ್ಲೋ.8)
ತಸ್ಮಾನ್ನೈವಂ ಪುತ್ರದಾರೈರ್ವಿಹೀನಾನ್
ಸುಖಾದ್ ಭ್ರಷ್ಟಾನ್ ರಾಜ್ಯನಾಶಾಚ್ಚ ಭೂಯಃ |
ದೃಷ್ಟ್ವಾ ಲೋಕಃ ಪತಿತಾನಪ್ಯಗಾಧೇ
ಪಾಪೈರ್ಜುಷ್ಟೇ ನರಕೇ ಪಾಂಡವೇಯ ॥24॥
ಹೀಗೆ ಮಾಡಿದರೆ, ಪುತ್ರಪತ್ನೀಹೀನರಾಗಿ ಸುಖದಿಂದ ಭ್ರಷ್ಟರಾಗಿ ರಾಜ್ಯನಾಶ ದಿಂದ, ಪಾಪಿಗಳಿರುವ ಅಗಾಧವಾದ ನರಕದಲ್ಲಿ ನಾವು ಬೀಳುವುದನ್ನು ಲೋಕ ನೋಡದಂತಾದೀತು.
ಮಾಸೇऽಪತಿಷ್ಯಃ ಪಂಚಮೇ ತ್ವಂ ಪ್ರಕೃಚ್ಛ್ರೇ
ನ ವಾ ಗರ್ಭೋऽಪ್ಯಭವಿಷ್ಯಃ ಪೃಥಾಯಾಃ |
ತತ್ತೇ ಶ್ರಮೋ ರಾಜಪುತ್ರಾಭವಿಷ್ಯ-
ನ್ನ ಸಂಗ್ರಾಮಾದಪಯಾತುಂ ದುರಾತ್ಮನ್ ॥25॥
ದುರಾತ್ಮನೇ, ಕುಂತಿಯ ಗರ್ಭದಿಂದ ಐದನೇ ತಿಂಗಳಲ್ಲಿಯಾದರೂ ನೀನು ಗರ್ಭಪಾತ ಹೊಂದಬಹುದಿತ್ತು. ಗರ್ಭದಲ್ಲಿ ಇಲ್ಲದೆಯೂ ಇರಬಹುದಿತ್ತು. ಆಗ ರಣರಂಗದಿಂದ ಪಲಾಯನ ಮಾಡುವ ಶ್ರಮ ನಿನಗೆ ಇರುತ್ತಿರಲಿಲ್ಲ.
(ಗರ್ಭಿಣಿಯರಲ್ಲಿ ಗರ್ಭಪಾತ ಹೆಚ್ಚಾಗಿ ಐದನೇ ತಿಂಗಳಲ್ಲಿ ಸಂಭವಿಸುತ್ತದೆ)
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಧರ್ಮರಾಜಾರ್ಜುನಸಂವಾದೇ ಪಂಚಷಷ್ಟಿತಮೋऽಧ್ಯಾಯಃ ॥65॥

ಅಹಂ ಹಿ ಸೂತಪುತ್ರೇಣ ಕ್ಲಿಷ್ಟೋ ಮಾರುತಿತೇಜಸಾ |
ಜೀವಾಮೀತ್ಯಗ್ರಜೇನೋಕ್ತ ಉದ್ವಬರ್ಹಾಸಿಮುತ್ತಮಮ್ ॥116॥
ವಾಸುದೇವಸ್ತಮಾಹೇದಂ ಕಿಮೇತದಿತಿ ಸರ್ವವಿತ್ ॥117॥

`ನಾನು ಕರ್ಣನಿಂದ ಹಿಂಸೆಪಟ್ಟು ಭೀಮನ ಪರಾಕ್ರಮದಿಂದಾಗಿ ಬದುಕಿ ಉಳಿದಿದ್ದೇನೆ.' ಯುಧಿಷ್ಠಿರ ಹೀಗೆ ಹೇಳಿದಾಗ ಅರ್ಜುನ ಅವನ ಮೇಲೆ ಉತ್ತಮವಾದ ಖಡ್ಗವನ್ನೆತ್ತಿದ. ಸರ್ವಜ್ಞನಾದ ಶ್ರೀಕೃಷ್ಣ ಅವನನ್ನು ಕೇಳಿದ, `ಇದೇನು ಮಾಡುತ್ತಿರುವೆ? ಏಕೆ?'

ತಮಾಹ ಗಾಂಡಿವಂ ದಾತುಂ ಯೋ ವದೇತ್ ತದ್ವಧೋ ಮಯಾ |
ಪ್ರತಿಜ್ಞಾತಸ್ತತೋ ಹನ್ಮಿ ನೃಪಮಿತ್ಯಾಹ ತಂ ಹರಿಃ ॥118॥

ಅರ್ಜುನ ಕೃಷ್ಣನಿಗೆ ಹೇಳಿದ `ಗಾಂಡೀವವನ್ನು ಇನ್ನೊಬ್ಬರಿಗೆ ಕೊಡಲು ಯಾವನು ಹೇಳುವನೊ ಅವನ ವಧೆ ಮಾಡುವುದಾಗಿ ನಾನು ಪ್ರತಿಜ್ಞೆ ಮಾಡಿರುವೆನು' ಎಂದು.

ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಮ್ |
ಯತ್ ಸತಾಂ ಹಿತಮತ್ಯಂತಂ ತತ್ ಸತ್ಯಮಿತಿ ನಿಶ್ಚಯಃ ॥119॥
ಧರ್ಮಸ್ಯ ಚರಣಂ ಶ್ರೇಯೋ ಧರ್ಮಜ್ಞಾನಂ ತು ದುಷ್ಕರಮ್ |
ಯಃ ಸತಾಂ ಧಾರಕೋ ನಿತ್ಯಂ ಸ ಧರ್ಮ ಇತಿ ನಿಶ್ಚಯಃ ॥120॥

ಶ್ರೀಕೃಷ್ಣ ನುಡಿದ, `ಸತ್ಯವನ್ನು ನುಡಿಯುವುದು ಶ್ರೇಯಸ್ಕರವೆ. ಆದರೆ ಸತ್ಯವನ್ನು ತಿಳಿಯುವುದು ದುಷ್ಕರ. ಸಜ್ಜನರಿಗೆ ಅತ್ಯಂತ ಹಿತಕರವಾದುದೆ ಸತ್ಯವೆನ್ನುವುದು ಶಾಸ್ತ್ರಗಳ ನಿಶ್ಚಯ. ಧರ್ಮದ ಆಚರಣೆ ಶ್ರೇಯಸ್ಕರ. ಆದರೆ ಧರ್ಮವನ್ನು ತಿಳಿಯುವುದು ದುಷ್ಕರ. ಸಜ್ಜನರನ್ನು ಸದಾ ಪೋಷಿಸುವುದೇ ಧರ್ಮವೆಂದು ಶಾಸ್ತ್ರಗಳ ನಿಶ್ಚಯ.

ಕೌಶಿಕಾಖ್ಯೋ ಬ್ರಾಹ್ಮಣೋ ಹಿ ಲೀನಂ ಗ್ರಾಮಜನಂ ಕ್ವಚಿತ್ |
ತಸ್ಕರೇಷ್ವಭಿಧಾಯೈವ ನಿರಯಂ ಪ್ರತ್ಯಪದ್ಯತ ॥121॥

ಕೌಶಿಕನೆಂಬ ಮುನಿ ಸತ್ಯವಾದಿ ಎಂದು ಪ್ರಸಿದ್ಧನಾಗಿದ್ದ. ಅವನು ಒಂದೆಡೆ ಅಡಗಿ ಕುಳಿತಿದ್ದ ಗ್ರಾಮದ ಜನರನ್ನು ದರೋಡೆಕೋರರಿಗೆ ತಿಳಿಸಿಯೆ ನರಕವನ್ನು ಹೊಂದಿದ.

ಕಶ್ಚಿದ್ ವ್ಯಾಧೋ ಮೃಗಂ ಹತ್ವಾ ಮಾತಾಪಿತೃನಿಮಿತ್ತತಃ |
ಭಕ್ಷಾರ್ಥಮಭ್ಯಗಾತ್ ಸ್ವರ್ಗಮಸುರೋಸೌ ಮೃಗೋ ಯತಃ ॥122॥
ಉಪದ್ರವಾಯ ಲೋಕಸ್ಯ ತಪಶ್ಚರತಿ ದುರ್ಮತಿಃ

ಬಲಾಕನೆಂಬ ಒಬ್ಬ ಬೇಡ ಮಾತಾಪಿತೃಗಳ ಸಲುವಾಗಿ ಆಹಾರಕ್ಕಾಗಿ ಮೃಗವನ್ನು ಕೊಂದು ಸ್ವರ್ಗವನ್ನು ಹೊಂದಿದ. ಏಕೆಂದರೆ ಆ ಮೃಗರೂಪದಿಂದ ಬಂದವನು ಒಬ್ಬ ಅಸುರನಾಗಿದ್ದ. ಲೋಕನಾಶಕ್ಕಾಗಿಯೆ ದುರ್ಬುದ್ಧಿಯವನಾದ ಆತ ಬ್ರಹ್ಮನ ಕುರಿತು ತಪಸ್ಸು ಮಾಡುತ್ತಿದ್ದ.

ತಸ್ಮಾತ್ ಸದ್ಧಾರಕೋ ಧರ್ಮ ಇತಿ ಕೃತ್ವಾ ವಿನಿಶ್ಚಯಮ್ |
ಮಾ ನೃಪಂ ಜಹಿ ಸತ್ಯಾಂ ತ್ವಂ ಕುರು ವಾಚಂ ತಿರಸ್ಕುರು ॥ 123 ॥

ಅದರಿಂದ ಸಜ್ಜನರಿಗೆ ಪೋಷಕವಾದುದೇ ಧರ್ಮ ಎಂದು ನಿಶ್ಚಯ ಮಾಡಿಕೊಂಡು ಯುಧಿಷ್ಠಿರನನ್ನು ಕೊಲ್ಲದಿರು. ಆದರೆ ಅವನನ್ನು `ನೀನು' ಎನ್ನುತ್ತ ಅವಮಾನಿಸು. ಆ ಮೂಲಕ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡು.'

## ಅರವತ್ತಾರನೆಯ ಅಧ್ಯಾಯ

ಯುಧಿಷ್ಠಿರನ ವಧೆಗೆ ಕತ್ತಿ ಹಿರಿಯುತ್ತಾನೆ ಅರ್ಜುನ.
ಹಿರಿಯರನ್ನು ಕೊಲ್ಲಬೇಕೆಂದರೆ ಅದು ಕತ್ತಿಯಿಂದಲ್ಲ, ಮಾತಿನಿಂದ
ಎನ್ನುತ್ತಾ ಶ್ರೀಕೃಷ್ಣ ಸತ್ಯ ಸುಳ್ಳುಗಳ ವಿವೇಚನೆಯನ್ನು ಉಪದೇಶಿಸುತ್ತಾನೆ.

ಸಂಜಯಃ
ಯುಧಿಷ್ಠಿರೇಣೈವಮುಕ್ತಃ ಕೌಂತೇಯಃ ಶ್ವೇತವಾಹನಃ |
ಅಸಿಂ ಜಗ್ರಾಹ ಸಂಕ್ರುದ್ಧೋ ಜಿಘಾಂಸುರ್ಭರತರ್ಷಭಮ್ ॥1॥

ಸಂಜಯನು ಧೃತರಾಷ್ಟ್ರನಿಗೆ ನುಡಿದ– ಯುಧಿಷ್ಠಿರ ಹೀಗೆ ಹೇಳಿದೊಡನೆ ಅವನನ್ನು ಕೊಲ್ಲಲು ಬಯಸಿ ಅರ್ಜುನನು ಕ್ರುದ್ಧನಾಗಿ ಖಡ್ಗವನ್ನೆತ್ತಿದ.

ತಸ್ಯ ಕೋಪಂ ಸಮುದ್ವೀಕ್ಷ್ಯ ಚಿತ್ತಜ್ಞಃ ಕೇಶವಸ್ತದಾ |
ಉವಾಚ ಕಿಮಿದಂ ಪಾರ್ಥ ಗೃಹೀತಃ ಖಡ್ಗ ಇತ್ಯುತ ॥2॥

ಅವನ ಕೋಪವನ್ನು ನೋಡಿ ಚಿತ್ತಜ್ಞನಾದ ಕೃಷ್ಣ ನುಡಿದ, `ಪಾರ್ಥ, ಇದೇನು ಖಡ್ಗವನ್ನೆತ್ತಿಕೊಂಡಿರುವೆ?' ಎಂದು.

ನೇಹ ಪಶ್ಯಾಮಿ ಯೋದ್ಧವ್ಯಂ ತವ ಕಿಂಚಿದ್ ಧನಂಜಯ |
ನೇಹಾಗತಾ ಧಾರ್ತರಾಷ್ಟ್ರಾಃ ಸರ್ವೇ ಭೀಮೇನ ವಾರಿತಾಃ ॥3॥

`ಅರ್ಜುನ, ನಿನಗೆ ಇಲ್ಲಿ ಯುದ್ಧ ಮಾಡಬೇಕಾಗಿರುವ ಕಾರಣವೇನೂ ನನಗೆ ಕಾಣುವುದಿಲ್ಲ. ಧೃತರಾಷ್ಟ್ರನ ಮಕ್ಕಳು ಇಲ್ಲಿಗೆ ಬಂದಿಲ್ಲ. ಎಲ್ಲರನ್ನೂ ಭೀಮ ತಡೆದಿದ್ದಾನೆ.

ಉಪಾಗತೋಽಸಿ ಕೌಂತೇಯ ರಾಜಾ ದ್ರಷ್ಟವ್ಯ ಇತ್ಯಪಿ |
ಸ ರಾಜಾ ಭವತಾ ದೃಷ್ಟಃ ಕುಶಲೀ ಚ ಯುಧಿಷ್ಠಿರಃ ॥4॥

ಅರ್ಜುನ, ನೀನು ರಾಜನನ್ನು ನೋಡಬೇಕೆಂದು ಬಂದಿರುವಿ. ಅವನನ್ನು ನೀನು ನೋಡಿದ್ದಾಯಿತು. ಅವನು ಕ್ಷೇಮವಾಗಿದ್ದಾನೆ.
ತಂ ದೃಷ್ಟ್ವಾ ನೃಪಶಾರ್ದೂಲಂ ಶಾರ್ದೂಲಸಮವಿಕ್ರಮಮ್ |
ಹರ್ಷಕಾಲೇ ತು ಸಂಪ್ರಾಪ್ತೇ ಕಿಮಿದಂ ಮೋಹಕಾರಿತಮ್ ॥5॥
ಹುಲಿಯಂಥ ಪರಾಕ್ರಮವುಳ್ಳ ರಾಜನನ್ನು ನೋಡಿ ಹರ್ಷಪಡುವ ಕಾಲ ಪ್ರಾಪ್ತವಾಗಿರುವಾಗ ಇದೇನು ಮೋಹದಿಂದ ಏನೋ ಮಾಡುತ್ತಿರುವೆ?
ನ ತಂ ಪಶ್ಯಾಮಿ ಕೌಂತೇಯ ಯಸ್ತೇ ವಧ್ಯೋ ಭವಿಷ್ಯತಿ |
ಪ್ರಹರ್ತುಮಿಚ್ಛಸೇ ಕಸ್ಮಾತ್ ಕಿಂ ವಾ ತೇ ಚಿತ್ತವಿಭ್ರಮಃ ॥6॥
ಅರ್ಜುನ, ನೀನು ಕೊಲ್ಲಬೇಕಾಗಿರುವ ವ್ಯಕ್ತಿ ಯಾರೂ ನನಗೆ ಕಾಣುತ್ತಿಲ್ಲ. ಯಾವ ಕಾರಣದಿಂದ ಪ್ರಹಾರ ಮಾಡಲು ಬಯಸುವೆ? ಇದೇನು ಮತಿಭ್ರಮೆ ನಿನಗೆ ಉಂಟಾಗಿದೆ?
ಕಸ್ಮಾದ್ಭವಾನ್ ಮಹಾಖಡ್ಗಂ ಪರಿಗೃಹ್ಣಾತಿ ಸತ್ವರಮ್ ॥7॥
ಯಾವ ಕಾರಣದಿಂದ ನೀನು ವೇಗದಿಂದ ಮಹಾಖಡ್ಗವನ್ನು ಎತ್ತಿಕೊಳ್ಳುತ್ತ ಇರುವೆ?
ತತಃತ್ವ ಪೃಚ್ಛಾಮಿ ಕೌಂತೇಯ ಕಿಮಿದಂ ತೇ ಚಿಕೀರ್ಷಿತಮ್ |
ಪರಾಮೃಶಸಿ ಯತ್ಕ್ರುದ್ಧಃ ಖಡ್ಗಮದ್ಭುತವಿಕ್ರಮ ॥8॥
ನಾನು ನಿನ್ನನ್ನು ಕೇಳುತ್ತಿದ್ದೇನೆ, ಅರ್ಜುನ, ನೀನೇನು ಮಾಡಲು ಹೊರಟಿರುವೆ? ಕೋಪದಿಂದ ಖಡ್ಗವನ್ನು ಏಕೆ ಎತ್ತಿಕೊಳ್ಳುತ್ತಿರುವೆ?'
ಏವಮುಕ್ತಸ್ತು ಕೃಷ್ಣೇನ ಪ್ರೇಕ್ಷಮಾಣೋ ಯುಧಿಷ್ಠಿರಮ್ |
ಅರ್ಜುನಃ ಪ್ರಾಹ ಗೋವಿಂದಂ ಕ್ರುದ್ಧಃ ಸರ್ಪ ಇವ ಶ್ವಸನ್ ॥9॥
ಕೃಷ್ಣನು ಹೀಗೆ ಹೇಳಿದಾಗ ಅರ್ಜುನನು ಯುಧಿಷ್ಠಿರನನ್ನು ನೋಡುತ್ತ ಕುಪಿತವಾದ ಸರ್ಪದಂತೆ ಭುಸುಗುಟ್ಟುತ್ತ ಕೃಷ್ಣನಿಗೆ ಹೇಳಿದ.
ದದ ಗಾಂಡೀವಮನ್ಯಸ್ಮಾ ಇತಿ ಮಾಂ ಯೋಽಭಿಚೋದಯೇತ್ |
ಛಿಂದ್ಯಾಮಹಂ ಶಿರಸ್ತಸ್ಯ ಇತ್ಯುಪಾಂಶುವ್ರತಂ ಮಮ ॥10॥
`ಗಾಂಡೀವವನ್ನು ಇನ್ನೊಬ್ಬನಿಗೆ ಕೊಡು' ಎಂದು ನನಗೆ ಯಾವನು ಹೇಳುವನೋ ಅವನ ಶಿರಸ್ಸನ್ನು ಕತ್ತರಿಸುವೆನೆಂದು ನನ್ನದೊಂದು ಉಪಾಂಶು ವ್ರತವಿದೆ. ಯಾರೊಡನೆಯೂ ಹೇಳದೆ ಗುರುದ್ರೋಣರ ಮುಂದೆ ರಹಸ್ಯವಾಗಿ ಮಾಡಿಕೊಂಡಿರುವ ಪ್ರತಿಜ್ಞೆ ಇದೆ.
ಇದು ರಹಸ್ಯಪ್ರತಿಜ್ಞೆಯಾಗಿದ್ದರಿಂದ ಧರ್ಮರಾಜನಿಗೆ ತಿಳಿದಿರಲಿಲ್ಲ. ಅದರಿಂದ ಆತ ಗಾಂಡೀವದ ನಿಂದೆ ಮಾಡಿದ್ದಾನೆ. (ನೋಡಿ:67.5)

ತದುಕ್ತೋಹಮದೀನಾತ್ಮನ್ ರಾಜ್ಞಾಮಿತಪರಾಕ್ರಮ |
ಸಮಕ್ಷಂ ತವ ಗೋವಿಂದ ನ ತತ್ ಕ್ಷಂತುಮಿಹೋತ್ಸಹೇ ॥11॥
ಮಹಾತ್ಮ, ಅಮಿತ ಪರಾಕ್ರಮ, ಗೋವಿಂದ, ರಾಜನು ಅಂಥ ಮಾತನ್ನು ನನಗೆ ನಿನ್ನ ಸಮ್ಮುಖದಲ್ಲಿಯೇ ಹೇಳಿದ್ದಾನೆ. ಅದನ್ನು ನಾನು ಕ್ಷಮಿಸಲಾರೆ.
ತಸ್ಮಾದೇನಂ ವಧಿಷ್ಯಾಮಿ ರಾಜಾನಂ ಧರ್ಮಭೀರುಕಃ |
ಪ್ರತಿಜ್ಞಾಂ ಪಾಲಯಿಷ್ಯಾಮಿ ಹತ್ವೇಮಂ ಯದುಸತ್ತಮ ॥12॥
ಏತದರ್ಥಂ ಮಯಾ ಖಡ್ಗೋ ಗೃಹೀತೋ ಯದುನಂದನ ॥13॥
ಅದರಿಂದ ಯದುಶ್ರೇಷ್ಠನೆ, ಧರ್ಮಭೀರುವಾದ ನಾನು ಪ್ರತಿಜ್ಞೆಯನ್ನು ಪಾಲಿಸಲೆಬೇಕಾದ್ದರಿಂದ ರಾಜನನ್ನು ವಧಿಸುತ್ತೇನೆ. ಈತನನ್ನು ಕೊಂದು, ನನ್ನ ಪ್ರತಿಜ್ಞೆಯನ್ನು ಪಾಲಿಸುತ್ತೇನೆ, ಅದಕ್ಕಾಗಿ ನಾನು ಖಡ್ಗವನ್ನು ಎತ್ತಿಕೊಂಡಿದ್ದೇನೆ.
ಸೋಽಹಂ ಯುಧಿಷ್ಠಿರಂ ಹತ್ವಾ ಸತ್ಯಸ್ಯಾನೃಣ್ಯತಾಂ ಗತಃ |
ವಿಶೋಕೋ ವಿಜ್ವರಶ್ಚಾಪಿ ಭವಿಷ್ಯಾಮಿ ಜನಾರ್ದನ ॥14॥
ಜನಾರ್ದನ, ಯುಧಿಷ್ಠಿರನನ್ನು ಕೊಂದು, ಸತ್ಯದ ಋಣಪರಿಹಾರ ಮಾಡಿಕೊಂಡು ಶೋಕಭಯವಿಲ್ಲದವನಾಗುತ್ತೇನೆ.
ಕಿಂ ವಾ ತ್ವಂ ಮನ್ಯಸೇ ಪ್ರಾಪ್ತಮಸ್ಮಿನ್ ಕಾಲೇ ಸಮುತ್ಥಿತೇ |
ತ್ವಮಸ್ಯ ಜಗತಸ್ತಾತ ವೇತ್ಥ ಸರ್ವಂ ಗತಾಗತಮ್ ॥15॥
ತತ್ತಥಾ ಪ್ರಕರಿಷ್ಯಾಮಿ ಯಥಾ ಮಾಂ ವಕ್ಷ ್ಯತೇ ಭವಾನ್ ॥16॥
ಆದರೆ ಇಂಥ ಸಂದರ್ಭ ಬಂದಾಗ ನಾನೇನು ಮಾಡುವುದು ಯುಕ್ತವೆಂದು ನಿನ್ನ ಅಭಿಪ್ರಾಯ? ನೀನು ಈ ಜಗತ್ತಿನ ಎಲ್ಲ ಆಗುಹೋಗುಗಳನ್ನು ತಿಳಿದಿರುವೆ. ನೀನು ಹೇಗೆ ಹೇಳುವೆಯೋ ಹಾಗೆ ನಾನು ಮಾಡುವೆನು.
ಸಂಜಯಃ
ಧಿಗ್ ಧಿಗಿತ್ಯೇವ ಗೋವಿಂದಃ ಪಾರ್ಥಮುಕ್ತ್ವಾಬ್ರವೀತ್ ಪುನಃ ॥17॥
ಸಂಜಯನು ನುಡಿದ `ಧಿಕ್ಕಾರ! ಧಿಕ್ಕಾರ!' ಎಂದು ಕೃಷ್ಣ ಅರ್ಜುನನಿಗೆ ಹೇಳಿ ಪುನಃ ಹೇಳಿದ.
ಶ್ರೀಭಗವಾನ್
ಇದಾನೀಂ ಪಾರ್ಥ ಜಾನಾಮಿ ನ ವೃದ್ಧಾಃ ಸೇವಿತಾಸ್ತ್ವಯಾ |
ಅಕಾಲೇ ಪುರುಷವ್ಯಾಘ್ರ ಸಂರಂಭಕ್ರಿಯಯಾನಯಾ ॥18॥
ನ ಹಿ ಧರ್ಮವಿಭಾಗಜ್ಞಃ ಕುರ್ಯಾದೇವಂ ಧನಂಜಯ ॥19॥
ಕೃಷ್ಣ ಹೇಳಿದ– ಈಗ ನನಗೆ ತಿಳಿಯಿತು, ಅರ್ಜುನ, ನೀನು ಹಿರಿಯರ ಸೇವೆ ಮಾಡಲಿಲ್ಲ. ಅಕಾಲದಲ್ಲಿ ನೀನು ಮಾಡುತ್ತಿರುವ ಈ ಕೋಪಕಾರ್ಯವನ್ನು ನೋಡಿದಾಗ ನನಗಿದು ತಿಳಿಯಿತು. ಧರ್ಮದಲ್ಲಿ ಸಾಮಾನ್ಯ ವಿಶೇಷ ವಿಭಾಗ, ಮುಖ್ಯಅಮುಖ್ಯವಿಭಾಗ,

ದೇಶಕಾಲಾದಿ ವಿಭಾಗಗಳನ್ನು ಬಲ್ಲವನು ಹೀಗೆ ಮಾಡಲಾರ.
ಅಕಾರ್ಯಾಣಾಂ ಚ ಕಾರ್ಯಾಣಾಂ ಸಂಯೋಗಂ ಯಃ ಕರೋತಿ ವೈ |
ಕಾರ್ಯಾಣಾಮಕ್ರಿಯಾಣಾಂ ಚ ಸ ಪಾರ್ಥ ಪುರುಷಾಧಮಃ ॥20॥
ಅಣ್ಣನ ವಧೆಯಂಥ ಅಕಾರ್ಯವನ್ನು ಪ್ರತಿಜ್ಞಾಪಾಲನರೂಪ ಕಾರ್ಯ ದೊಂದಿಗೆ ಜತೆಗೂಡಿಸುವುದನ್ನೂ ಮತ್ತು ಹಾಗೇ ಕಾರ್ಯವನ್ನು ಅಕಾರ್ಯ ದೊಂದಿಗೆ ಜೊತೆಗೂಡಿಸುವುದನ್ನೂ ಯಾವನು ಮಾಡುವನೋ ಅವನು ಪುರುಷಾಧಮ.
ಯಥಾ ತ್ವಂ ಪಾಂಡವಾದ್ಯೇಹ ಧರ್ಮಭೀರುರಪಂಡಿತಃ ॥21॥
ಇದಕ್ಕೆ ಉದಾಹರಣೆ, ಅರ್ಜುನ, ಈಗ ನೀನೆ, ಧರ್ಮಭೀರುವಾಗಿದ್ದು ಜ್ಞಾನವಿಲ್ಲದವನು. ಅಣ್ಣನ ವಧೆ ಮಾಡಬಾರದೆಂಬ ಜ್ಞಾನವಿಲ್ಲ, ಆದರೆ ಪ್ರತಿಜ್ಞಾ ಪಾಲನೆ ಮಾಡದಿದ್ದರೆ ಪಾಪವೆಂದು ಧರ್ಮವಿಷಯದಲ್ಲಿ ಭೀರುವಾಗಿರುವೆ.
ಅನುಸೃತ್ಯ ತು ಯೇ ಧರ್ಮಂ ಕವಯಃ ಸಮುಪಾಸತೇ |
ಸಮಾಸವಿಸ್ತರವಿದಾಂ ನ ತೇಷಾಂ ವೇತ್ಥ ನಿಶ್ಚಯಮ್ ॥22॥
ಧರ್ಮವನ್ನು ಅನುಸರಿಸಿ ಯಾವ ಜ್ಞಾನಿಗಳು ಅನುಷ್ಠಾನ ಮಾಡುವರೋ ಅವರು ಸಾಮಾನ್ಯ ಧರ್ಮ, ವಿಶೇಷ ಧರ್ಮಗಳೆಂದು ಧರ್ಮದಲ್ಲಿ ವಿಭಾಗ ನಿರ್ಣಯ ಮಾಡಿದ್ದಾರೆ. ನೀನು ಈ ನಿರ್ಣಯವನ್ನು ತಿಳಿದಿಲ್ಲ.
ಅನಿಶ್ಚಯಜ್ಞೋ ಹಿ ನರಃ ಕಾರ್ಯಾಕಾರ್ಯವಿನಿಶ್ಚಯೇ |
ಅವಶೋ ಮುಹ್ಯತೇ ಪಾರ್ಥ ಯಥಾ ತ್ವಂ ಮೂಢ ಏವ ತು ॥23॥
ನಿರ್ಣಯವನ್ನು ತಿಳಿಯದ ಮಾನವನು ಕಾರ್ಯಅಕಾರ್ಯಗಳ ನಿಶ್ಚಯ ಮಾಡುವಲ್ಲಿ ಪರವಶನಾಗಿ ದಾರಿತಪ್ಪುತ್ತಾನೆ. ಇದಕ್ಕೆ ಉದಾಹರಣೆ ಮೂಢನಾದ ನೀನೆ.
ನ ಹಿ ಕಾರ್ಯಮಕಾರ್ಯಂ ವಾ ಸುಖಂ ಜ್ಞಾತುಂ ಕಥಂಚನ |
ಶ್ರುತೇನ ಜ್ಞಾಯತೇ ಸರ್ವಂ ತಚ್ಚ ತ್ವಂ ನಾವಬುಧ್ಯಸೇ ॥24॥
ಧರ್ಮಸಮ್ಮತರೀತಿಯಲ್ಲಿ ಕಾರ್ಯವನ್ನಾಗಲಿ, ಅಕಾರ್ಯವನ್ನಾಗಲಿ ತಿಳಿಯುವುದು ಸರ್ವಥಾ ಸುಲಭವಲ್ಲ. ಅಧ್ಯಯನದಿಂದಲೆ ಅದೆಲ್ಲವೂ ತಿಳಿಯುತ್ತದೆ. ಅದು ನಿನಗೆ ತಿಳಿದಿಲ್ಲ.
ಅವಿಜ್ಞಾನಾದ್ ಭವಾನ್ ಯಚ್ಚ ಧರ್ಮಂ ರಕ್ಷಿತುಮಿಚ್ಛತಿ |
ಪ್ರಾಣಿನಾಂ ಹಿ ವಧಂ ಪಾರ್ಥ ಧಾರ್ಮಿಕೋ ನಾವಬುಧ್ಯತೇ ॥25॥
ತಿಳಿಯದೇ ಪ್ರತಿಜ್ಞಾಪಾಲನ ಧರ್ಮವನ್ನು ರಕ್ಷಿಸಲು ನೀನು ಬಯಸುವಿ. ಪ್ರಾಣಿಗಳ ವಧವನ್ನು ಅಧರ್ಮವೆಂದು ಧಾರ್ಮಿಕನಾದ ನೀನು ತಿಳಿದಿಲ್ಲ.
ಪ್ರಾಣಿನಾಮವಧಸ್ತಾತ ಸರ್ವಜ್ಯಾಯಾನ್ ಮತೋ ಮಮ |
ಅನೃತಂ ತು ಭವೇದ್ ವಾಚ್ಯಂ ನ ಚ ಹಿಂಸ್ಯಾತ್ ಕಥಂಚನ ॥26॥
ಪ್ರಾಣಿವಧ ಮಾಡದಿರುವುದು ಎಲ್ಲಕ್ಕಿಂತ ದೊಡ್ಡ ಧರ್ಮ ಎನ್ನುವುದು ನನ್ನ ಅಭಿಪ್ರಾಯ. ಗುರುಹಿರಿಯರ, ಬಂಧುಗಳ ವಧ ಮಾಡಲೇಬೇಕಾದ ಸಂದರ್ಭ ಒದಗಿಬಂದಾಗ ಸುಳ್ಳು ಹೇಳಿಯಾದರೂ ಅದನ್ನು ತಪ್ಪಿಸಿಕೊಳ್ಳಬೇಕು. ಹೇಗಾದರೂ ಪ್ರಯತ್ನಮಾಡಿ ಹಿಂಸೆ ಮಾಡದಿರಬೇಕು.
ಸ ಕಥಂ ಭ್ರಾತರಂ ಜ್ಯೇಷ್ಠಂ ರಾಜಾನಂ ಧರ್ಮಕೋವಿದಮ್ |
ಹನ್ಯಾದ್ ಭವಾನ್ ನರಶ್ರೇಷ್ಠ ಪ್ರಾಕೃತೋಽನ್ಯಃ ಪುಮಾನಿವ ॥27॥
ಹೀಗಿರುವಾಗ ಯುಧಿಷ್ಠಿರ ನಿನಗೆ ಸೋದರ, ಜ್ಯೇಷ್ಠ, ರಾಜ ಮತ್ತು ಧರ್ಮಜ್ಞನಾಗಿದ್ದಾನೆ. ಇಂಥ ಯುಧಿಷ್ಠಿರನನ್ನು, ಅಜ್ಞನಾದ ಬೇರೆ ಮನುಷ್ಯನಂತೆ, ನೀನು ಹೇಗೆ ವಧಿಸುವೆ?
ಅಯುಧ್ಯಮಾನಸ್ಯ ವಧಸ್ತಥಾಶಸ್ತ್ರಸ್ಯ ಭಾರತ |
ಪರಾಙ್ಮುಖಸ್ಯ ದ್ರವತಃ ಶರಣಂ ವಾಭಿಗಚ್ಛತಃ ॥28॥
ಕೃತಾಂಜಲೇಃ ಪ್ರಪನ್ನಸ್ಯ ಪ್ರಮತ್ತಸ್ಯ ತಥೈವ ಚ |
ನ ವಧಃ ಪೂಜ್ಯತೇ ಸದ್ಭಿಸ್ತಚ್ಚ ಸರ್ವಂ ಗುರೌ ತವ ॥29॥
ಶತ್ರುವೂ ಕೂಡ, ಅವನು ಯುದ್ಧ ಮಾಡದಿರುವಾಗ, ಅವನಲ್ಲಿ ಶಸ್ತ್ರವಿಲ್ಲದಿರುವಾಗ, ಅವನು ಹೆದರಿ ಪಲಾಯನ ಮಾಡುವಾಗ, ಶರಣು ಹೊಂದಿರುವಾಗ, ಕೈಮುಗಿದು ಆಸರೆಯನ್ನು ಬೇಡುತ್ತಿರುವಾಗ, ಕುಡಿದು ಅಮಲೇರಿರುವಾಗ ವಧಮಾಡುವುದನ್ನು ಸಜ್ಜನರು ಮೆಚ್ಚುವುದಿಲ್ಲ. ಈ ಎಲ್ಲ ಕಾರಣಗಳೂ ನಿನ್ನ ಪೂಜ್ಯ ಅಣ್ಣನಲ್ಲಿರುವಾಗ ಅವನನ್ನು ಕೊಲ್ಲುವುದು ತಪ್ಪು.
ತ್ವಯಾ ಚೈವ ವ್ರತಂ ಪಾರ್ಥ ಬಾಲೇನೈವ ಕೃತಂ ಪುರಾ |
ತಸ್ಮಾದಧರ್ಮಸಂಯುಕ್ತಂ ಮೌಢ್ಯಾತ್ ಕರ್ಮ ವ್ಯವಸ್ಯಸಿ ॥30॥
ನೀನು ಹಿಂದೆ ಪ್ರತಿಜ್ಞೆ ಮಾಡಿರಬಹುದು, ಆದರೆ ಅದು ನೀನು ಧರ್ಮದ ಅಜ್ಞಾನದಿಂದಲೆ ಮಾಡಿದ್ದಾಗಿದೆ. ಅದರಿಂದ ಅಧರ್ಮಯುಕ್ತವಾಗಿ ಅದರ ಪಾಲನ ಕರ್ಮವನ್ನು ಮೂಢತನದಿಂದ ಮಾಡಲು ಹೊರಟಿರುವೆ.
ಸ ಗುರುಂ ಪಾರ್ಥ ಕಸ್ಮಾತ್ತ್ವಂ ಹನ್ಯಾ ಧರ್ಮಮನುಸ್ಮರನ್ |
ಅಸಂಪ್ರಧಾರ್ಯ ಧರ್ಮಾಣಾಂ ಗತಿಂ ಸೂಕ್ಷ್ಮಾಂ
ದುರನ್ವಯಾಮ್ ॥31॥
ಕೇವಲ ಒಂದು ಧರ್ಮವನ್ನು ಆಲೋಚಿಸಿ, ಎಲ್ಲ ಧರ್ಮಗಳ ಸೂಕ್ಷ್ಮವಾದ ಅತಿಗಹನವಾದ ಅನುಷ್ಠಾನಕ್ರಮವನ್ನು ನಿರ್ಧಾರ ಮಾಡದೆ, ಹಿರಿಯನಾದ ರಾಜನನ್ನು ನೀನು ಹೇಗೆ ವಧಿಸುತ್ತಿರುವೆ?
ಇದಂ ಧರ್ಮರಹಸ್ಯಂ ಚ ವಕ್ಷ್ಯಾಮಿ ಭರತರ್ಷಭ |

ಯದ್ ಬ್ರೂಯಾತ್ ತವ ಭೀಷ್ಮೋ ವಾ ಧರ್ಮಜ್ಞೋ
ವಾ ಯುಧಿಷ್ಠಿರಃ ॥32॥
ವಿದುರೋ ವಾ ತಥಾ ಕ್ಷತ್ತಾ ಕುಂತೀ ವಾಪಿ ಯಶಸ್ವಿನೀ |
ತತ್ತೇ ವಕ್ಷ್ಯಾಮಿ ತತ್ತ್ವೇನ ತನ್ನಿಬೋಧ ಧನಂಜಯ ॥33॥
ಧರ್ಮದ ಈ ಸೂಕ್ಷ್ಮರಹಸ್ಯವನ್ನು ನಿನಗೆ ಭೀಷ್ಮನಾಗಲಿ, ಧರ್ಮಜ್ಞನಾದ ಯುಧಿಷ್ಠಿರನಾಗಲಿ ವಿದುರನಾಗಲಿ ಯಶಸ್ವಿನಿಯಾದ ಕುಂತಿಯಾಗಲಿ ಹೇಳಬಲ್ಲರು. ಅದನ್ನು ಈಗ ನಾನು ನಿನಗೆ ಸರಿಯಾಗಿ ಹೇಳುತ್ತೇನೆ, ಕೇಳು, ಅರ್ಜುನ!
ಸತ್ಯಸ್ಯ ವಚನಂ ಸಾಧು ನ ಸತ್ಯಾದ್ ವಿದ್ಯತೇ ಪರಮ್ |
ಸುದುರ್ವಿದಂ ಹಿ ತತ್ತ್ವೇನ ತತ್ ಸತ್ಯಮಿತಿ ಮೇ ಮತಿಃ ॥34॥
ಸತ್ಯ ಹೇಳುವುದು ಪುಣ್ಯಕರ. ಸತ್ಯ ಹೇಳುವುದಕ್ಕಿಂತ ಹೆಚ್ಚಿನ ಪುಣ್ಯಕಾರ್ಯ ಬೇರೆ ಇಲ್ಲ. ಆದರೆ ಸತ್ಯವ್ರತ ಅನುಷ್ಠಾನ ಮಾಡುವವನಿಗೆ ಅದನ್ನು ಸರಿಯಾಗಿ ತಿಳಿಯುವುದು ಬಲು ಕಷ್ಟ.
ಭವೇತ್ ಸತ್ಯಮವಕ್ತವ್ಯಂ ವಕ್ತವ್ಯಮನೃತಂ ಭವೇತ್ |
ಯತ್ರಾನೃತಂ ಭವೇತ್ ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್ ॥35॥
ಕೆಲವು ಕಡೆ ಸತ್ಯವನ್ನು ಹೇಳದೆಯೇ ಇರಬೇಕು ಮತ್ತು ಸುಳ್ಳನ್ನೇ ಹೇಳಬೇಕು. ಎಲ್ಲಿ ಎಂದರೆ, ಎಲ್ಲಿ ಸುಳ್ಳೇ ಸತ್ಯವಾಗುವುದೊ, ಸತ್ಯವೇ ಸುಳ್ಳಾಗುವುದೋ ಅಲ್ಲಿ.
ವಿವಾಹಕಾಲೇ ರತಿಸಂಪ್ರಯೋಗೇ
ಪ್ರಾಣಾತ್ಯಯೇ ಸರ್ವಧನಾಪಹಾರೇ |
ವಿಪ್ರಸ್ಯ ಚಾರ್ಥೇ ಹ್ಯನೃತಂ ವದೇತ
ಪಂಚಾನೃತಾನ್ಯಾಹುರಪಾತಕಾನಿ ॥36॥
ಸುಳ್ಳು ಸತ್ಯವಾಗುವದಕ್ಕೆ ಉದಾಹರಣೆಗಳು– ಶುಭಕಾರ್ಯಗಳು ನಿಂತು ಹೋಗುವ ಸಂದರ್ಭದಲ್ಲಿ, ಶತ್ರುಸಂಬಂಧಿಸ್ತ್ರೀಯರೊಡನೆ ರಮಿಸುವ ಕಾಲದಲ್ಲಿ, ಸತ್ಯ ಹೇಳಿದಾಗ ಪ್ರಾಣಾಪಾಯವಿರುವಲ್ಲಿ, ಮತ್ತು ಸರ್ವಸ್ವ ಅಪಹಾರವಾಗುವ ಭಯವಿರುವಲ್ಲಿ ಮತ್ತು ವಿಪ್ರನಿಗೆ ಹಿಂಸೆ ಆಗುವಲ್ಲಿ, ಹೀಗೆ ಐದುಕಡೆ ಸುಳ್ಳು ಹೇಳಿದರೆ ಪಾಪವಿರುವುದಿಲ್ಲ.
ಸರ್ವಸ್ವಸ್ಯಾಪಹಾರೇ ತು ವಕ್ತವ್ಯಮನೃತಂ ಭವೇತ್ ॥37॥
ಸರ್ವಸ್ವ ಅಪಹಾರವಾಗುವ ಸಂದರ್ಭದಲ್ಲಿ ಸುಳ್ಳು ಹೇಳುವುದು ಆವಶ್ಯಕ.
ಪ್ರಾಣಾತ್ಯಯೇ ವಿವಾಹೇ ಚ ವಕ್ತವ್ಯಮನೃತಂ ಭವೇತ್ |
ತತ್ರಾನೃತಂ ಭವೇತ್ ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್ ॥38॥
ಪ್ರಾಣಾಪಾಯ, ವಿವಾಹಕಾರ್ಯಗಳಲ್ಲಿ ಸುಳ್ಳು ಹೇಳಬೇಕು. ಏಕೆಂದರೆ ಅಲ್ಲಿ ಸುಳ್ಳು ಸತ್ಯವಾಗುವುದು. ಸತ್ಯ ಸುಳ್ಳಾಗುವುದು.
ತಾದೃಶಂ ಮನ್ಯತೇಽಬಾಲೋ ಯತ್ರ ಸತ್ಯಮನಿಶ್ಚಿತಮ್ ॥39॥
ಎಲ್ಲಿ ಸತ್ಯವು ನಿಶ್ಚಿತವಾಗಿರುವುದಿಲ್ಲವೋ ಅಲ್ಲಿಯೂ ಸುಳ್ಳು ಹೇಳಿದರೆ ದೋಷವಿರುವುದಿಲ್ಲ ಎಂದು `ಅಬಾಲ'ನು, ಅಂದರೆ ಪ್ರೌಢನು ತಿಳಿಯುತ್ತಾನೆ.
ಸತ್ಯಾನೃತೇ ವಿನಿಶ್ಚಿತ್ಯ ತತೋ ಭವತಿ ಧರ್ಮವಿತ್ ॥40॥
ಅದರಿಂದ ಸತ್ಯ, ಸುಳ್ಳುಗಳನ್ನು ನಿಶ್ಚಯಿಸಿ ಪ್ರೌಢನು ಧರ್ಮವನ್ನು ತಿಳಿಯುತ್ತಾನೆ.
ಕಿಮಾಶ್ಚರ್ಯಂ ಕೃತಪ್ರಜ್ಞಃ ಪುರುಷೋಽಪಿ ಸುದಾರುಣಃ |
ಸುಮಹತ್ಪ್ರಾಪ್ನುಯಾತ್ ಪುಣ್ಯಂ ಬಲಾಕೋಽಂಧವಧಾದಿವ ॥41॥
ಏನು ಆಶ್ಚರ್ಯ! ಧರ್ಮವನ್ನು ಚೆನ್ನಾಗಿ ತಿಳಿದವನು ಮಾತ್ರವಲ್ಲದೆ, ಬಲುಕ್ರೂರಿಯಾದ ಪುರುಷನು ಕೂಡ ಕೆಲವೊಮ್ಮೆ ಮಹತ್ತಾದ ಪುಣ್ಯವನ್ನು ಸಂಪಾದಿಸಬಹುದು. ಇದಕ್ಕೆ ಉದಾಹರಣೆ ಬಲಾಕ ಎಂಬ ಬೇಡನು ಕಣ್ಣುಕಾಣದ ಒಂದು ಮೃಗವನ್ನು ಕೊಂದು ಮಹಾಪುಣ್ಯಕ್ಕೆ ಭಾಗಿಯಾಗಿದ್ದಾನೆ.
ಪ್ರಭವಾರ್ಥಾಯ ಭೂತಾನಾಂ ಧರ್ಮಪ್ರವಚನಂ ಸ್ಮೃತಮ್ |
ಯತ್ಸ್ಯಾದಹಿಂಸಾಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥42॥
ಸಜ್ಜನರ ಅಭ್ಯುದಯಕ್ಕಾಗಿ ಶಾಸ್ತ್ರದಲ್ಲಿ ಧರ್ಮೋಪದೇಶವಿರುತ್ತದೆ. ಯಾವ ಕಾರ್ಯದಲ್ಲಿ ಸಜ್ಜನರ ಅಹಿಂಸೆ ತಳುಕು ಹಾಕಿಕೊಂಡಿರುತ್ತದೋ ಅದು ಧರ್ಮಕಾರ್ಯವೆನಿಸುತ್ತದೆ.
ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಂ |
ಯಶ್ಸ್ಯಾತ್ರಾಧಾರಸಂಯುಕ್ತಃ ಸ ಧರ್ಮ ಇತಿ ನಿಶ್ಚಿತಃ ॥43॥
ಸಜ್ಜನರ ಅಹಿಂಸೆಗಾಗಿ ಶಾಸ್ತ್ರದಲ್ಲಿ ಧರ್ಮೋಪದೇಶವಿರುತ್ತದೆ. ಹೀಗಾಗಿ ಒಂದು ಕಾರ್ಯದಿಂದ ಸಜ್ಜನರಿಗೆ ಆಧಾರವಾಗಬಲ್ಲ ಅಭ್ಯುದಯ ಒಂದು ಕಡೆ, ಹಾಗೇ ಸಜ್ಜನರಿಗೆ ಆಧಾರವಾಗಬಲ್ಲ ಅಹಿಂಸೆ ಇನ್ನೊಂದು ಕಡೆ ಇರುವುದಾದಲ್ಲಿ ಅದು ಧರ್ಮವೆ ಎಂದು ನಿಶ್ಚಯ.
ಧರ್ಮರಾಜನ ನಿಂದೆಯ ಮೂಲಕ ಅರ್ಜುನ ತನ್ನ ಪ್ರತಿಜ್ಞಾಪಾಲನೆ ಮಾಡಿದರೆ ಅದರಿಂದ ಅರ್ಜುನನಿಗೆ ಅಭ್ಯುದಯ, ಧರ್ಮರಾಜನಿಗೆ ಅಹಿಂಸೆ ಇವೆರಡೂ ಸಾಧ್ಯವಾಗುವುವು.
ಕಿಮಾಶ್ಚರ್ಯಂ ಪುನರ್ಮೂಢೋ ಧರ್ಮಕಾಮೋಽಪ್ಯಪಂಡಿತಃ |
ಸುಮಹತ್ಪ್ರಾಪ್ನುಯಾತ್ ಪಾಪಮಾಪಗಾಸ್ವಿವ ಕೌಶಿಕಃ ॥44॥
ಏನು ಆಶ್ಚರ್ಯ! ಮೂರ್ಖನು ಮಾತ್ರವಲ್ಲದೆ ಧಾರ್ಮಿಕನಾದ ಅಜ್ಞನೂ ಕೂಡ ನದಿಗಳ ಸಂಗಮಕ್ಷೇತ್ರದಲ್ಲಿದ್ದ ಕೌಶಿಕನೆಂಬ

ವಿಪ್ರನಂತೆ ಮಹಾಪಾಪಕ್ಕೆ ಭಾಗಿಯಾಗುವನು.
ಅರ್ಜುನಃ
ಆಚಕ್ಷ್ವ ಭಗವನ್ನೇತದ್ ಯಥಾ ವಿದ್ಯಾಮಹಂ ತಥಾ |
ಬಲಾಕಾಂಧಾಭಿಸಂಬದ್ಧಂ ನದೀನಾಂ ಕೌಶಿಕಸ್ಯ ಚ ||45||
ಅರ್ಜುನನು ನುಡಿದ– ಭಗವಂತನೆ, ಬಲಾಕಅಂಧಮೃಗಗಳ ಮತ್ತು ನದೀಸಂಗಮಕೌಶಿಕವಿಪ್ರರ ಸಂಬಂಧವಾಗಿ ಪುಣ್ಯಾಪಾಪಪ್ರಾಪ್ತಿಯ ವೃತ್ತಾಂತವನ್ನು ನಾನು ತಿಳಿಯುವಂತೆ ನನಗೆ ಉಪದೇಶಿಸು.
ಕೃಷ್ಣಃ
ಮೃಗವ್ಯಾಧೋಽಭವತ್ ಕಶ್ಚಿದ್ ಬಲಾಕೋ ನಾಮ ಭಾರತ |
ಯಾತ್ರಾರ್ಥಂ ಪುತ್ರದಾರಸ್ಯ ಮೃಗಾನ್ ಹಂತಿ ನ ಕಾಮತಃ ||46||
ಶ್ರೀಕೃಷ್ಣ ನುಡಿದ ಅರ್ಜುನ, ಬಲಾಕನೆಂಬ ಒಬ್ಬ ಬೇಟೆಗಾರನಿದ್ದ. ಅವನು ಪುತ್ರಪತ್ನಿಯರ ಬದುಕಿಗಾಗಿ ಮೃಗಗಳನ್ನು ಕೊಲ್ಲುತ್ತಿದ್ದ. ಹಿಂಸಾಕಾಮನೆಯಿಂದಲ್ಲ.
ವೃದ್ಧೌ ಚ ಮಾತಾಪಿತರೌ ಬಿಭರ್ತ್ಯನ್ಯಾಂಶ್ಚ ಸಂಶ್ರಿತಾನ್ |
ಸ್ವಧರ್ಮನಿರತೋ ನಿತ್ಯಂ ಸತ್ಯವಾಗನಸೂಯಕಃ ||47||
ಅವನು ವೃದ್ಧರಾದ ಮಾತಾಪಿತರನ್ನೂ ತನ್ನನ್ನು ಆಶ್ರಯಿಸಿರುವ ಬೇರೆ ಹೆಂಡತಿ ಮಕ್ಕಳನ್ನೂ ನಿತ್ಯ ಸ್ವಧರ್ಮನಿರತನಾಗಿ, ಸತ್ಯವಾದಿಯಾಗಿ ಪರದ್ವೇಷಮಾಡದೇ ಸಾಕುತ್ತಿದ್ದ.
ಸ ಕದಾಚಿನ್ಮೃಗಂ ಲಿಪ್ಸುರ್ನಾನ್ವವಿಂದತ್ ಪ್ರಯತ್ನವಾನ್ |
ಅಪಃ ಪಿಬಂತಂ ದದೃಶೇ ಶ್ವಾಪದಂ ಘ್ರಾಣಚಕ್ಷುಷಮ್ ||48||
ಒಮ್ಮೆ ಅವನು ಒಂದು ಮೃಗವನ್ನು ಸಂಪಾದಿಸಲು ಬಯಸಿ ಯತ್ನಮಾಡಿದರೂ ಅದು ಅವನಿಗೆ ಸಿಗಲಿಲ್ಲ. ಕೊನೆಗೆ ಮೂಗೇ ಕಣ್ಣಾಗಿ ಉಳ್ಳ ಅಂದರೆ ಕಣ್ಣಿಲ್ಲದ್ದರಿಂದ ವಾಸನೆಯಿಂದಲೆ ಎಲ್ಲವನ್ನೂ ತಿಳಿಯುತ್ತಿದ್ದ ಒಂದು ಹಿಂಸ್ರಮೃಗ ತೋಳವು ನೀರು ಕುಡಿಯುತ್ತಿದ್ದನ್ನು ಕಂಡ.
ಅದೃಷ್ಟಪೂರ್ವಮಪಿ ತತ್ಸತ್ತ್ವಂ ತೇನ ಹತಂ ತದಾ |
ಅಂಧೇ ಹತೇ ತತೋ ವ್ಯೋಮ್ನಃ ಪುಷ್ಪವರ್ಷಮವಾಪತತ್ ||49||
ಅಂಥ ಒಂದು ತೋಳವನ್ನು ಅವನು ಹಿಂದೆ ಎಂದೂ ಕಂಡಿರಲಿಲ್ಲ. ಆದರೂ ಅದನ್ನು ಅವನು ಕೊಂದ. ಅಂಧವಾದ ಮೃಗ ಹೀಗೆ ಹತವಾದಾಗ ಆಕಾಶದಿಂದ ಹೂಮಳೆ ಸುರಿಯಿತು.
ಅಪ್ಸರೋಗೀತವಾದಿತ್ರೈರ್ನಾದಿತಂ ಚ ಮನೋರಮಮ್ |
ವಿಮಾನಮಾಗಮತ್ ಸ್ವರ್ಗಾನ್ ಮೃಗವ್ಯಾಧನಿನೀಷಯಾ ||50||
ಅಪ್ಸರೆಯರ ಗೀತವಾದ್ಯಧ್ವನಿಯಿಂದ ತುಂಬಿದ ಮನೋಹರವಾದ ವಿಮಾನವು ಬೇಡನನ್ನು ಒಯ್ಯುವುದಕ್ಕಾಗಿ ಸ್ವರ್ಗದಿಂದ ಇಳಿದು ಬಂದಿತು.
ತದ್ಭೂತಂ ಸರ್ವಭೂತಾನಾಮಭಾವಾಯ ಕಿಲಾರ್ಜುನ |
ತಪಸ್ತಪ್ತ್ವಾ ವರಂ ಪ್ರಾಪ್ತಂ ಕೃತಮಂಧಂ ಸ್ವಯಂಭುವಾ ||51||
ಏಕೆಂದರೆ ಆ ಅಂಧಮೃಗ ತೋಳವು ಎಲ್ಲ ಪ್ರಾಣಿಗಳ ನಾಶಕ್ಕಾಗಿ ತಪಸ್ಸು ಮಾಡಿ ಬ್ರಹ್ಮನಿಂದ ವರ ಪಡೆದಿತ್ತು. ಬ್ರಹ್ಮ ಅದನ್ನು ಕುರುಡಾಗಿ ಮಾಡಿದ್ದ.
ತದ್ದೃತ್ವಾ ಸರ್ವಭೂತಾನಾಮಭಾವಕೃತನಿಶ್ಚಯಮ್ |
ತತೋ ಬಲಾಕಃ ಸ್ವರಗಾದೇವಂ ಧರ್ಮಃ ಸುದುರ್ವಿದಃ ||52||
ಎಲ್ಲ ಪ್ರಾಣಿಗಳ ನಾಶಮಾಡಲು ನಿಶ್ಚಯ ಮಾಡಿದ ಆ ರಾಕ್ಷಸ ಪ್ರಾಣಿಯನ್ನು ಕೊಂದು ಬಲಾಕನು ಸ್ವರ್ಗವನ್ನು ಪಡೆದ. ಏಕೆಂದರೆ ಅದು ಧರ್ಮವಾಯಿತು. ಅದು ಹಿಂಸೆಯಾದರೂ ಅದರಿಂದ ಲೋಕಕ್ಕೆ ಅಭ್ಯುದಯರೂಪವಾದ ಆಧಾರದ ಸಂಪಾದನೆಯಾಗಿತ್ತು. ಹೀಗೆ ಧರ್ಮ ಹೇಗೆ ಆಧಾರ ಸಂಪಾದನೆಯಿಂದ ಧರ್ಮವಾಗುತ್ತದೆ ಎಂಬುದು `ಸುದುರ್ವಿದ' ತಿಳಿಯಲು ಬಲುಕಷ್ಟವಿದೆ.
ಕೌಶಿಕೋಽಪ್ಯಭವದ್ ವಿಪ್ರಸ್ತಪಸ್ವೀ ನ ಬಹುಶ್ರುತಃ |
ನದೀನಾಂ ಸಂಗಮೇ ಗ್ರಾಮಾದದೂರೇ ಸ ಕಿಲಾವಸತ್ ||53||
ಕೌಶಿಕವಿಪ್ರನು ತಪಸ್ವಿಯೇ ಆಗಿದ್ದರೂ ಧರ್ಮದ ಬಗ್ಗೆ ಹೆಚ್ಚು ತಿಳಿದಿರಲಿಲ್ಲ. ಗ್ರಾಮದಿಂದ ಹೆಚ್ಚು ದೂರವಲ್ಲದ ನದೀ ಸಂಗಮ ಪ್ರದೇಶದಲ್ಲಿ ವಾಸಮಾಡಿದ್ದ.
ಸತ್ಯಂ ಮಯಾ ಸದಾ ವಾಚ್ಯಮಿತಿ ತಸ್ಯಾಭವದ್ ವ್ರತಮ್ |
ಸತ್ಯವಾದೀತಿ ವಿಖ್ಯಾತಃ ಸ ತದಾಸೀದ್ಧನಂಜಯ ||54||
`ನಾನು ಸದಾ ಸತ್ಯವನ್ನೇ ಹೇಳಬೇಕು' ಎಂದು ಅವನ ವ್ರತವಿದ್ದಿತು. ಅದರಿಂದ, ಅರ್ಜುನ, ಅವನು `ಸತ್ಯವಾದಿ' ಎಂದು ವಿಖ್ಯಾತನಾಗಿದ್ದ.
ಅಥ ದಸ್ಯುಭಯಾತ್ ಕೇಚಿತ್ತದಾ ತದ್ವನಮಾವಿಶನ್ |
ತತ್ರಾಪಿ ದಸ್ಯವಃ ಕ್ರೂರಾ ವ್ಯಮಾರ್ಗಂತ ಪ್ರಯತ್ನತಃ ||55||
ದರೋಡೆಕೋರರ ಭಯದಿಂದ ಕೆಲವರು ಅವನ ತಪೋವನವನ್ನು ಹೊಕ್ಕು ಅಡಗಿ ಕುಳಿತರು. ಕ್ರೂರರಾದ ದರೋಡೆಕೋರರು ಅಲ್ಲಿಯೂ ಬಂದು ಅವರನ್ನು ಪ್ರಯತ್ನಪೂರ್ವಕವಾಗಿ ಹುಡುಕಿದರು.
ಅಥ ಕೌಶಿಕಮಭ್ಯೇತ್ಯ ಪ್ರಾಹುಸ್ತಂ ಸತ್ಯವಾದಿನಮ್ |

ಕತರೇಣ ಪಥಾ ಯಾತಾ ಭಗವನ್ ಬಹವೋ ಜನಾಃ |
ಸತ್ಯೇನ ಪೃಷ್ಟಃ ಪ್ರಬ್ರೂಹಿ ಯದಿ ತಾನ್ವೇತ್ಥ ಶಂಸ ನಃ ॥56॥
ಕೊನೆಗೆ ಸತ್ಯವಾದಿಯಾದ ಕೌಶಿಕನ ಇದಿರಿಗೆ ಬಂದು ಕೇಳಿದರು, `ಪೂಜ್ಯನೆ, ಬಹುಜನರು ಇಲ್ಲಿಗೆ ಬಂದು ಯಾವ ದಾರಿಯಿಂದ ಹೋದರು? ನಾವು ಕೇಳುತ್ತೇವೆ, ನೀನು ತಿಳಿದಿದ್ದರೆ ಸತ್ಯವಾಗಿ ಹೇಳು.'
ಸ ಪೃಷ್ಟಃ ಕೌಶಿಕಃ ಸತ್ಯಂ ವಚನಂ ತಾನುವಾಚ ಹ |
ಬಹುವೃಕ್ಷಲತಾಗುಲ್ಮಮೇತದ್ ವನಮುಪಾಶ್ರಿತಾಃ ॥57॥
ಹೀಗೆ ಕೇಳಿದಾಗ ಆ ಕೌಶಿಕನು ಅವರಿಗೆ ಸತ್ಯವನ್ನೇ ನುಡಿದ: `ಬಹುವೃಕ್ಷ ಲತೆ ಪೊದೆಗಳುಳ್ಳ ಈ ವನದ ದಾರಿಯನ್ನು ಹಿಡಿದು ಹೋದರು' ಎಂದು.
ಇತಿ ತಾನ್ ಖ್ಯಾಪಯಾಮಾಸ ಸ ತೇಭ್ಯಃ ಪಾರ್ಥ ಕೌಶಿಕಃ |
ತತಸ್ತೇ ತಾನ್ ಸಮಾಸಾದ್ಯ ಕ್ರೂರಾ ಜಘ್ನುರಿತಿ ಶ್ರುತಿಃ ॥58॥
ಅರ್ಜುನ, ಆ ಕೌಶಿಕನು ಅವರಿಗೆ ಹೀಗೇ ತಿಳಿಸಿದ. ಅದರಿಂದ ಕ್ರೂರರಾದ ಆ ದರೋಡೆಕೋರರು ಅವರನ್ನು ಕಂಡು ಹಿಡಿದು ಕೊಂದರು ಎಂದು ಕೇಳಿದ್ದೇವೆ.
ತೇನಾಧರ್ಮೇಣ ಮಹತಾ ಸುದುರುಕ್ತೇನ ಕೌಶಿಕಃ |
ಗತಃ ಸ ಕಷ್ಟಂ ನರಕಂ ಸೂಕ್ಷ್ಮಮಧರ್ಮೇಷ್ವಕೋವಿದಃ ॥59॥
ಬಲು ಕೆಟ್ಟದಾದ ಈ ಸತ್ಯವಚನದ ಪಾಪದಿಂದ ಸೂಕ್ಷ್ಮಧರ್ಮದ ಸ್ವರೂಪ ದಲ್ಲಿ ಹೆಚ್ಚು ತಿಳಿಯದಿದ್ದ ಆ ಕೌಶಿಕನು ದುಃಖಕರವಾದ ನರಕವನ್ನು ಹೊಂದಿದ.
ಅಪ್ರಭೂತಶ್ರುತೋ ಮೂಢೋ ಧರ್ಮಾಣಾಮವಿಭಾಗವಿತ್ ॥60॥
ಆ ಕೌಶಿಕನು ಹೆಚ್ಚಿನ ಉಪದೇಶಗಳನ್ನು ಶ್ರವಣ ಮಾಡಿಲ್ಲದ್ದರಿಂದ ಧರ್ಮಗಳ ಸೂಕ್ಷ್ಮವಿಭಾಗಗಳನ್ನು ತಿಳಿಯದ ಮೂಢನಾಗಿದ್ದ.
ವೃದ್ಧಾನಪೃಷ್ಟ್ವಾ ಸಂದೇಹಂ ಅಂಧಃ ಶ್ವಭ್ರಮಿವರ್ಚ್ಛತಿ |
ತತ್ರ ತಲ್ಲಕ್ಷಣಾದೇಶಃ ಕಶ್ಚಿದೇವ ಭವಿಷ್ಯತಿ ॥61॥
ಜ್ಞಾನಿಗಳಲ್ಲಿ ಸಂದೇಹವನ್ನು ಕೇಳದಿದ್ದರೆ ಹೀಗೇ, ಅಂಧನು ಹಾಳು ಬಾವಿಗೆ ಬೀಳುವಂತೇ, ನರಕಗಾಮಿಯಾಗುತ್ತಾನೆ. ಈ ಸಂದೇಹ ಪರಿಹಾರಕ್ಕೆ ಸೂಕ್ಷ್ಮಧರ್ಮ ಗಳ ಲಕ್ಷಣಗಳನ್ನು ಉಪದೇಶಿಸುವವನು ವಿರಳ. ಯಾವನೋ ಒಬ್ಬನು ಮಾತ್ರ ಸಿಗುತ್ತಾನೆ.
ದುಷ್ಕರಂ ಪರಮಜ್ಞಾನಂ ತರ್ಕೇಣಾತ್ರ ವ್ಯವಸ್ಯತಿ |
ಶ್ರುತಿರ್ಧರ್ಮ ಇತಿ ಹ್ಯೇಕೇ ವದಂತಿ ಬಹವೋ ಜನಾಃ ॥62॥
ಉತ್ತಮಜ್ಞಾನ ದುಷ್ಕರ. ಅದನ್ನು ಶ್ರುತಿವಿಚಾರದಿಂದ ತಿಳಿಯಬೇಕು. ಶ್ರುತಿಯು ಹೇಳಿದ್ದೇ ಧರ್ಮ ಎಂದು ಲೋಕದಲ್ಲಿ ಬಹುಜನರು ಹೇಳುತ್ತಾರೆ.
ಧಾರಣಾದ್ಧರ್ಮಮಿತ್ಯಾಹುಃ ಧರ್ಮೋ ಧಾರಯತೇ ಪ್ರಜಾಃ |
ಯಃ ಸ್ಯಾದ್ಧಾರಣಸಂಯುಕ್ತಃ ಸ ಧರ್ಮ ಇತಿ ನಿಶ್ಚಯಃ |
ತತ್ತ್ವೇನ ತತ್ ಪ್ರಸೂಯಾಮಿ ನಹಿ ಸರ್ವಂ ವಿಧೀಯತೇ ॥63॥
ಆದರೆ ನಿನಗೆ ನಿಜವಾದ ಧರ್ಮಸ್ವರೂಪದ ರಹಸ್ಯಜ್ಞಾನವನ್ನು `ಪ್ರಸೂಯಾಮಿ' ನಾನು ಸರಿಯಾಗಿ ಉಂಟುಮಾಡಿಕೊಡುತ್ತೇನೆ. ಒಂದು ವಿಧಿವಾಕ್ಯ ದಲ್ಲಿಯೆ ಧರ್ಮದ ಎಲ್ಲ ಸೂಕ್ಷ್ಮರಹಸ್ಯವು ವಿಹಿತವಾಗುವುದಿಲ್ಲ. ವೇದವಿಚಾರ ನಿಪುಣರು ಅದನ್ನು ಹೇಳಬೇಕಾಗುತ್ತದೆ. ಧರ್ಮ ಎಂದರೆ ಲೋಕವನ್ನು ಧಾರಣಮಾಡುವ ಕರ್ಮ. ಧರ್ಮವು ಪ್ರಾಣಿಗಳಿಗೆ ಸ್ವರ್ಗಾದಿ ವಿಷಯಸುಖ, ಮೋಕ್ಷಸುಖಗಳನ್ನು ಕೊಟ್ಟು ಧಾರಣ ಮಾಡುತ್ತದೆ. ಅದರಿಂದ ಸಜ್ಜನರ ಧಾರಣರೂಪ ಪ್ರಯೋಜನಕ್ಕಾಗಿ, ಅದರಿಂದ ಯುಕ್ತವಾದುದೇ ಧರ್ಮ ಎಂದು ನಿಶ್ಚಯವಾಗಿ ಹೇಳಬಹುದು. ದುರ್ಜನರ ಪ್ರಯೋಜನಕ್ಕಲ್ಲ.
ಯೇಽನ್ಯಾಯೇನ ಜಿಹೀರ್ಷಂತೋ ಧನಮಿಚ್ಛಂತಿ ಕಸ್ಯಚಿತ್ |
ಅಕೂಜನೇನ ಚೇನ್ಮೋಕ್ಷೋ ನಾತ್ರ ಕೂಜೇತ್ ಕಥಂಚನ ॥64॥
ಅನ್ಯಾಯದಿಂದ ದುರ್ಜನರು ಕೆಲವೊಮ್ಮೆ ಹಣವನ್ನು ಬಯಸಿ, `ನಿನ್ನಲ್ಲಿ ಹಣವಿದ್ದರೆ ಹೇಳು' ಎಂದು ಹೇಳಬಹುದು. ಆಗ ಸುಮ್ಮನಿದ್ದು `ಇದೆ' ಎಂದು ಹೇಳದಿದ್ದರೆ ಆಪತ್ತಿನಿಂದ ಬಿಡುಗಡೆ ಸಾಧ್ಯ ಎನ್ನುವುದಾದರೆ ಆಗ `ಇದೆ' ಎಂದು ಸರ್ವಥಾ ಹೇಳಬಾರದು.
ಅವಶ್ಯಂ ಕೂಜಿತವ್ಯಂ ವಾ ಶಂಕೇರನ್ ವಾಪ್ಯಕೂಜತಃ |
ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ವಿನಿಶ್ಚಿತಮ್ ॥65॥
ಇಲ್ಲವೆಂದಾಗಲಿ, ಇದೆ ಎಂದಾಗಲಿ ಏನೂ ಹೇಳದಿರಲಾಗದು ಅಥವಾ ಹೇಳದಿದ್ದರೆ ಅವರು ನಮ್ಮ ಮೇಲೆ ಅನುಮಾನಪಡಬಹುದು. ಅದರಿಂದ ಅವಶ್ಯ ಏನಾದರೂ ಹೇಳಬೇಕಾಗುತ್ತದೆ ಎಂದರೆ, ಆಗ ಸತ್ಯವನ್ನು ಹೇಳುವುದಕ್ಕಿಂತ ಸುಳ್ಳನ್ನು ಹೇಳುವುದೇ ಶ್ರೇಯಸ್ಕರ.
ಯಃ ಕಾರ್ಯೇಭ್ಯೋ ವ್ರತಂ ಕೃತ್ವಾ ಕರ್ಮಣಾ ನೋಪಪಾದಯೇತ್ |
ನ ತತ್ಫಲವಾಪ್ನೋತಿ ಏವಮಾಹುರ್ಮನೀಷಿಣಃ ॥66॥
ಫಲಗಳಿಗಾಗಿ ವ್ರತಸಂಕಲ್ಪ ಕೈಕೊಂಡವನು ಅದನ್ನು ಕಾರ್ಯರೂಪಕ್ಕೆ ತಾರದಿದ್ದರೆ ಅದರ ಫಲವನ್ನು ಅವನು ಹೊಂದಲಾರ. ಹೀಗೆ ಹೇಳುತ್ತಾರೆ, ಬಲ್ಲವರು. ಹೀಗಾಗಿ, ಸತ್ಯದಿಂದ ನಿನ್ನ ಪ್ರತಿಜ್ಞಾಪಾಲನ ವ್ರತ ಪೂರ್ತಿಯಾಗದಿದ್ದಲ್ಲಿ ಸುಳ್ಳಿನಿಂದಲೇ ಪೂರ್ತಿ ಮಾಡಬೇಕಾಗುತ್ತದೆ. ಅದರಿಂದ ದೋಷವಿಲ್ಲ. ನೀನು ಸುಳ್ಳನೆನಿಸುವುದಿಲ್ಲ.
ಪ್ರಾಣಾತ್ಯಯೇ ವಿವಾಹೇ ವಾ ಸರ್ವಜ್ಞಾತಿಧನಕ್ಷಯೇ |
ನರ್ಮಣ್ಯಭಿಪ್ರವೃತ್ತೇ ವಾ ಪ್ರವಕ್ತವ್ಯಂ ಮೃಷಾ ಭವೇತ್ ॥67॥
ಅಧರ್ಮಂ ನಾತ್ರ ಪಶ್ಯಂತಿ ಧರ್ಮತತತ್ತ್ವಾರ್ಥದರ್ಶಿನಃ ॥68॥

ಪ್ರಾಣಾಪಾಯ, ವಿವಾಹ, ಸರ್ವ ಬಂಧುಧನವಿನಾಶಗಳು ಉಂಟಾಗುವ ಪರಿಸ್ಥಿತಿಗಳಲ್ಲಿಯಾಗಲಿ, ವಿನೋದ ಪ್ರಸಂಗದಲ್ಲಾಗಲಿ ಸುಳ್ಳು ಹೇಳಬಹುದು. ಅದರಲ್ಲಿ `ಪಾಪ ಇದೆ' ಎಂದು ಧರ್ಮದ ಯಥಾರ್ಥಸ್ವರೂಪ ಬಲ್ಲವರು ತಿಳಿಯುವುದಿಲ್ಲ.
ಯತ್ ಸ್ತೇನೈಃ ಸಹ ಸಂಬಂಧಾನ್ಮುಚ್ಯತೇ ಶಪಥೈರಪಿ |
ಶ್ರೇಯಸ್ತತ್ರಾನೃತಂ ವಕ್ತುಂ ತತ್ಸತ್ಯಮವಿಚಾರಿತಮ್ ॥69॥
ದರೋಡೆಕೋರರೊಡನೆ ವ್ಯವಹರಿಸುವಾಗ ಶಪಥ ಮಾಡಿ ಹೇಳಿದರೇ ಆಪತ್ತಿನಿಂದ ಬಿಡುಗಡೆ ಎನ್ನುವ ಪ್ರಸಂಗ ಬಂದರೆ ಅಥವಾ ಸುಳ್ಳು ಶಪಥಗಳಿಂದಲೂ ಬಿಡುಗಡೆ ಶಕ್ಯವಿರುವುದಾದರೆ ಆಗ ಸುಳ್ಳು ಹೇಳುವುದೇ ಶ್ರೇಯಸ್ಕರ. ಆ ಸುಳ್ಳೇ ಸತ್ಯವಾಗುವುದು, ಸಂಶಯವಿಲ್ಲ.
ನ ಚ ತೇಭ್ಯೋ ಧನಂ ದೇಯಂ ಶಕ್ಯೇ ಸತಿ ಕಥಂಚನ |
ಪಾಪೇಭ್ಯೋ ಹಿ ಧನಂ ದತ್ತಂ ದಾತಾರಮಪಿ ಪೀಡಯೇತ್ ॥70॥
ತಸ್ಮಾದ್ಧರ್ಮಾರ್ಥಮನೃತಮುಕ್ತ್ವಾ ನಾನೃತವಾಗ್ಭವೇತ್ ॥71॥
ಸತ್ಯ ಹೇಳಿ ನಮ್ಮಲ್ಲಿರುವ ಹಣವನ್ನೆಲ್ಲ ಅವರಿಗೆ ದಾನ ಮಾಡಬಾರದು. ಶಕ್ಯವಿದ್ದರೆ ಸರ್ವಥಾ ಕೊಡದೇ ಇರಬೇಕು. ಪಾಪಿಗಳಿಗೆ ಧನದಾನ ಮಾಡಿದರೆ ಆ ಧನವು ದಾತೃವಿಗೇ ಅನಿಷ್ಟ ಪೀಡೆ ಉಂಟುಮಾಡುತ್ತದೆ. ಅದರಿಂದ ಪುಣ್ಯಕ್ಕಾಗಿ ಸುಳ್ಳು ಹೇಳಿದರೆ ಅವನು ಸುಳ್ಳನೆನಿಸುವುದಿಲ್ಲ.
ಏಷ ತೇ ಲಕ್ಷಣೋದ್ದೇಶಃ ಸಮುದ್ದಿಷ್ಟೋ ಯಥಾವಿಧಿ ॥72॥
ಯಥಾಧರ್ಮಂ ಯಥಾಬುದ್ಧಿ ಮಯಾ ಪಾರ್ಥ ಹಿತಾರ್ಥಿನಾ |
ಏತಚ್ಛ್ರುತ್ವಾ ಬ್ರೂಹಿ ಪಾರ್ಥ ಯದಿ ವಧ್ಯೋ ಯುಧಿಷ್ಠಿರಃ ॥73॥
ಇದು ಸತ್ಯಲಕ್ಷಣದ ಉಪದೇಶ. ವಿಧ್ಯನುಸಾರವಾಗಿ ಇದನ್ನು ನಿನಗೆ ಹೇಳಿದ್ದೇನೆ. ಸತ್ಯವು ಧರ್ಮವಾಗುವಂತೆ ಹೇಳಿದ್ದೇನೆ. ಅದು ನಿನ್ನ ಬುದ್ಧಿಗೆ ತಿಳಿಯುವಂತೆ ನಿನ್ನ ಹಿತಾರ್ಥಿಯಾಗಿ ನಿನಗೆ ಹೇಳಿದ್ದೇನೆ. ಇದನ್ನು ಕೇಳಿದ ಮೇಲೂ, ಅರ್ಜುನ, ಹೇಳು, ಯುಧಿಷ್ಠಿರನು ಈಗ ನಿನಗೆ ವಧ್ಯನೆ?
ಅರ್ಜುನಃ
ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾನ್ಮಹಾಮತಿಃ |
ಹಿತಂ ಚೈವ ಯಥಾಸ್ಮಾಕಂ ತಥೈತದ್ವಚನಂ ತವ ॥74॥
ಅರ್ಜುನ ನುಡಿದ– ಮಹಾಪ್ರಾಜ್ಞನು ನುಡಿಯುವಂತೆ, ಒಳ್ಳೆ ಬುದ್ಧಿವಂತನು ಆಡುವಂತೆ ನಮಗೆ ಹಿತಕರವಾಗುವಂತೇ ಇದೆ ಈಗ ನೀನು ಹೇಳಿದ ಮಾತು.
ಭವಾನ್ಮಾತೃಸಮೋಽಸ್ಮಾಕಂ ತಥಾ ಪಿತೃಸಮೋಽಪಿ ಚ |
ಗತಿಶ್ಚ ಪರಮಾ ಕೃಷ್ಣ ತ್ವಮೇವ ಚ ಪರಾಯಣಮ್ ॥75॥
ನೀನು ನಮಗೆ ತಾಯಿಗೆ ಸಮಾನ, ತಂದೆಗೆ ಸಮಾನ, ನೀನೆ ನಮಗೆ ಪರಗತಿ ತೋರುವವನು. ನೀನೇ ನಮಗೆ ಕೊನೆಯ ಆಶ್ರಯ.
ನ ಹಿ ತೇ ತ್ರಿಷು ಲೋಕೇಷು ವಿದ್ಯತೇಽವಿದಿತಂ ಕ್ವಚಿತ್ |
ತಸ್ಮಾದ್ಭವಾನ್ ಪರಂ ಧರ್ಮಂ ವೇದ ಸರ್ವಂ ಯಥಾತಥಮ್ ॥76॥
ನಿನಗೆ ತಿಳಿಯದಿರುವುದು ಮೂಲೋಕದಲ್ಲಿ ಎಲ್ಲಿಯೂ ಇಲ್ಲ. ಪರಧರ್ಮ ಎಲ್ಲವನ್ನೂ ನೀನು ಯಥಾವತ್ತಾಗಿ ತಿಳಿದಿರುವೆ.
ಅವಧ್ಯಂ ಪಾಂಡವಂ ಮನ್ಯೇ ಧರ್ಮರಾಜಂ ಯುಧಿಷ್ಠಿರಮ್ |
ತಸ್ಮಿನ್ ಸಮಯಸಂಯೋಗೇ ಬ್ರೂಹಿ ಕಿಂಚಿದನುಗ್ರಹಮ್ ॥77॥
ಧರ್ಮರಾಜಯುಧಿಷ್ಠಿರನನ್ನು ಅವಧ್ಯನೆಂದೇ ನಾನೀಗ ತಿಳಿದೆ. ಆದರೆ ಈ ಅಹಿಂಸೆಯಲ್ಲಿ ನನ್ನ ಪ್ರತಿಜ್ಞಾಪಾಲನೆ ತಳಕು ಹಾಕಿಕೊಂಡಿದೆ. ಅದರ ವಿಷಯದಲ್ಲಿ ನೀನು ಸ್ವಲ್ಪ ಅನುಗ್ರಹ ಮಾಡಿ ಹೇಳು.
ಇದಂ ಚಾಪರಮತ್ರೈವ ಶೃಣು ಕೃತ್ಸ್ನಂ ವಿವಕ್ಷಿತಮ್ ॥78॥
ಈ ಪ್ರತಿಜ್ಞೆಯ ವಿಷಯದಲ್ಲಿ ನಾನು ನಿನಗೆ ಹೇಳಬೇಕಾಗಿರುವುದನ್ನು ಪೂರ್ತಿ ಹೇಳುತ್ತೇನೆ, ಕೇಳು.
ಜಾನಾಸಿ ದಾಶಾರ್ಹ ಮಮ ವ್ರತಂ ತ್ವಂ
ಯೋ ಮಾಂ ಬ್ರೂಯಾತ್ಕಶ್ಚನ ಮಾನುಷೇಷು |
ಅನ್ಯಸ್ಮೈ ತ್ವಂ ಗಾಂಡಿವಂ ದೇಹಿ ಪಾರ್ಥ
ಯಸ್ತ್ವತ್ತೋಽಸ್ತ್ರೈರ್ವೀರ್ಯತೋ ವಾ ವಿಶಿಷ್ಟಃ ॥79॥
ಹನ್ಯಾಮಹಂ ಕೇಶವ ತಂ ಪ್ರಸಹ್ಯ
ಭೀಮೋ ಹನ್ಯಾತ್ ತೂಬರಕೇತಿ ಚೋಕ್ತಃ |
ತನ್ಮೇ ರಾಜಾ ಪ್ರೋಕ್ತವಾಂಸ್ತೇ ಸಮಕ್ಷಂ
ಧನುರ್ದೇಹೀತ್ಯಸಕೃದ್ ವೃಷ್ಣಿಸಿಂಹ ॥80॥
ಕೃಷ್ಣ, ನನ್ನ ವ್ರತ ಏನೆಂಬುದು ನಿನಗೆ ತಿಳಿದೇ ಇದೆ. ಮಾನವರಲ್ಲಿ ಯಾರೇ ಆಗಲಿ, `ಅರ್ಜುನ, ನಿನಗಿಂತ ಬೇರೆಯಾಗಿ ಅಸ್ತ್ರವಿದ್ಯೆಯಲ್ಲಾಗಲಿ ಪರಾಕ್ರಮ ದಲ್ಲಾಗಲಿ ಯಾವನು ಹೆಚ್ಚೋ ಅವನಿಗೇ ನಿನ್ನ ಈ ಗಾಂಡೀವವನ್ನು ಕೊಡು' ಎಂದು ಹೇಳಿದರೆ, ಕೃಷ್ಣ, ನಾನು ಬಲಾತ್ಕಾರವಾಗಿ ಅವನನ್ನು ಕೊಲ್ಲುವೆನು ಎಂದು ಗುರು ದ್ರೋಣರ ಮುಂದೆ ರಹಸ್ಯವಾಗಿ ವ್ರತಸ್ವೀಕಾರ ಮಾಡಿದ್ದೆ ಮತ್ತು ಭೀಮನೂ ಕೂಡ, ಅವನನ್ನು ಕುರುಚಲು ಗಡ್ಡದವನೆಂದು ಯಾರಾದರೂ ಹೇಳಿದರೆ, ಅವನನ್ನು ಕೊಲ್ಲುವ ವ್ರತ ಸ್ವೀಕರಿಸಿದ್ದಾನೆ. ರಾಜಾಯುಧಿಷ್ಠಿರನು ನಿನ್ನ ಸಮಕ್ಷಮ ದಲ್ಲಿಯೇ ನನಗೆ `ಧನುಸ್ಸನ್ನು ಬೇರೆಯವರಿಗೆ ಕೊಡೆಂದು' ಅನೇಕ ಬಾರಿ ಹೇಳಿದ್ದಾನೆ.

ಧನುರ್ವಿದ್ಯೆಯ ಪ್ರಥಮ ಆಚಾರ್ಯನಾದ ಪರಶುರಾಮ, ಶಿಷ್ಯರಿಗೆ ಆದೇಶ ನೀಡಿದ್ದ: `ನೀವು ನಿಮ್ಮ ಶಿಷ್ಯರಿಗೆ ಅಭ್ಯಾಸ ಮಾಡಿಸುವಾಗ ಅವರಿಂದ ಒಂದು ರಹಸ್ಯವಾದ ವ್ರತಸ್ವೀಕಾರ ಮಾಡಿಸಬೇಕು. ಆ ವ್ರತ ಶತ್ರುವಧ ರೂಪವಾಗಿರಬೇಕು, ಲೋಕೋಪದ್ರವಕಾರಿಯಾಗದಿರಬೇಕು' ಎಂದು. ಅದರಿಂದ ಭೀಮ ದ್ರೋಣರ ಮುಂದೆ ತಾನು ಒಳ್ಳೆಯ ಗಡ್ಡ ಉಳ್ಳವನೇ ಒಳ್ಳೆಯ ಪೌರುಷ ಉಳ್ಳವನೇ ಆದರೂ `ಹರಕುಗಡ್ಡದವನು' `ತೂಬರ' ಷಂಡ ಎಂದು ತನ್ನನ್ನು ಶತ್ರು ಕರೆದರೆ ಅವನನ್ನು ತಾನು ಕೊಲ್ಲುವೆನೆಂದು, ಅರ್ಜುನ ತನ್ನ ಗಾಂಡೀವವನ್ನು `ಅದು ನಿನಗೆ ಯೋಗ್ಯವಲ್ಲ, ಅನ್ಯರಿಗೆ ಕೊಡೆ'ಂದರೆ ಕೊಲ್ಲುವೆನೆಂದು ವ್ರತಸ್ವೀಕಾರ ಮಾಡಿದ್ದ.

ತಂ ಚೇದ್ಧನ್ಯಾಂ ಕೇಶವ ಜೀವಲೋಕೇ
ಸ್ಥಾತಾ ಕಾಲಂ ನಾಹಮಪ್ಯಲ್ಪಮಾತ್ರಮ್ |
ಧ್ಯಾತ್ವಾ ನೂನಂ ಹ್ಯೇನಸಾ ಚಾಪಿ ಯುಕ್ತೋ
ವಧಂ ರಾಜ್ಞೋ ಭೃಷ್ಟವೀರ್ಯೋ ವಿಚೇತಾಃ ॥81॥

ಆದರೆ ಕೃಷ್ಣ, ನಾನು ಯುಧಿಷ್ಠಿರನನ್ನು ಕೊಂದರೆ, ಜೀವಲೋಕದಲ್ಲಿ ಅಲ್ಪಕಾಲ ಮಾತ್ರವೂ ಕೂಡ ಬದುಕಿರಲಾರೆ. ರಾಜವಧೆಯನ್ನು ಮಾಡಿದೆನೆಂದು ಸದಾ ನೆನೆದು ಮತ್ತು ಪಾಪದಿಂದಲೂ ಯುಕ್ತನಾಗಿ ಶಕ್ತಿಯುಡುಗಿ ಬುದ್ಧಿವಿಕಲನೂ ಆಗುತ್ತೇನೆ.

ಸಾ ಚ ಪ್ರತಿಜ್ಞಾ ಮಮ ಲೋಕಸಿದ್ಧ್ಯೈ
ಭವೇತ್ಸತ್ಯಾ ಧರ್ಮಭೃತಾಂ ವರಿಷ್ಠ |
ಯಥಾ ಜೀವೇತ್ ಪಾಂಡವೋಽಹಂ ಚ ಕೃಷ್ಣ
ತಥಾ ಬುದ್ಧಿಂ ದಾತುಮದ್ಯಾರ್ಹಸಿ ತ್ವಮ್ ॥82॥

ಧರ್ಮಧಾರಕರಲ್ಲಿ ಶ್ರೇಷ್ಠನಾದ ಕೃಷ್ಣನೆ, ಪರಲೋಕದ ಸಿದ್ಧಿಗಾಗಿ ನನ್ನ ಆ ಪ್ರತಿಜ್ಞೆಯೂ ಸತ್ಯವಾಗಿ ಈಡೇರಬೇಕು ಮತ್ತು ಯುಧಿಷ್ಠಿರನೂ ನಾನೂ ಇಬ್ಬರೂ ಬದುಕಿರಬೇಕು, ಅಂಥ ಒಂದು ಉಪಾಯವನ್ನು ನೀನು ನನಗೆ ಉಪದೇಶಿಸಬೇಕು.

ವಾಸುದೇವಃ
ರಾಜಾ ಶ್ರಾಂತೋ ಜಗತೋ ವಿಕ್ಷತಶ್ಚ
ಕರ್ಣೇನ ಸಂಖ್ಯೇ ನಿಶಿತೈರ್ಬಾಣಸಂಘೈಃ ॥83॥

ಕೃಷ್ಣ ನುಡಿದ– ಜಗತ್ತಿನ ರಾಜ ಯುಧಿಷ್ಠಿರ ಮೊದಲೇ ಆಯಾಸಗೊಂಡಿದ್ದ, ಆದರೂ ಕರ್ಣನೊಡನೆ ರಣದಲ್ಲಿ ತೀಕ್ಷ್ಣವಾದ ಬಾಣಸಮೂಹಗಳಿಂದ ಮೈಯೆಲ್ಲ ಬಹಳ ಗಾಯ ಮಾಡಿಕೊಂಡ.

ಯಶ್ಚಾನಿಶಂ ಸೂತಪುತ್ರೇಣ ವೀರ
ಶರೈರ್ಭೃಶಂ ತಾಡಿತೋ ಯುಧ್ಯಮಾನಃ |
ಅತಸ್ತ್ವಮೇತೇನ ಸರೋಷಮುಕ್ತೋ
ದುಃಖಾನ್ವಿತೇ ನೇದಮಯುಕ್ತರೂಪಮ್ ॥84॥

ವೀರನೆ, ಎಡೆಬಿಡದೆ ಕರ್ಣನೊಂದಿಗೆ ಯುದ್ಧಮಾಡಿ ಬಾಣಗಳಿಂದ ಬಹಳ ಹೊಡೆಸಿಕೊಂಡ. ಅದರಿಂದ ದುಃಖಯುಕ್ತನಾದ ಅವನು ಕೋಪದಿಂದ ನಿನಗೆ ಅಯುಕ್ತವಾದ ಈ ಮಾತನ್ನಾಡಿದ್ದಾನೆ. ದುಃಖಯುಕ್ತನಾದ ವ್ಯಕ್ತಿಯಲ್ಲಿ ಇದೇನೂ ಅಯುಕ್ತವಲ್ಲ.

ಅಕೋಪಿತೋ ಹ್ಯೇಷ ಯದಿ ಸ್ಮ ಸಂಖ್ಯೇ
ಕರ್ಣಂ ನ ಹನ್ಯಾದಿತಿ ಚಾಬ್ರುವೀಚ್ಚ |
ಜಾನಾತಿ ತಂ ಪಾಂಡವ ಏಷ ಚಾಪಿ
ಪಾಪಂ ಲೋಕೇ ಕರ್ಣಮಸಹ್ಯಮನ್ಯೈಃ ॥85॥

ಮತ್ತು `ಈ ಅರ್ಜುನನನ್ನು ನಾನು ಕೋಪಗೊಳಿಸದಿದ್ದರೆ ಈತ ಕರ್ಣನನ್ನು ಕೊಲ್ಲದಿರಬಹುದು' ಎಂಬ ಅಭಿಪ್ರಾಯದಿಂದಲೂ ನಿನ್ನ ಮುಂದೆ ಈ ಮಾತನ್ನಾಡಿದ್ದಾನೆ. ಮತ್ತು ಯುಧಿಷ್ಠಿರನು, ಪಾಪಿ ಕರ್ಣನು ಲೋಕದಲ್ಲಿ ಅನ್ಯರಿಂದ ಮಣಿಸಲಾಗದವನೆಂದೂ ತಿಳಿದಿದ್ದಾನೆ.

ತತಸ್ತ್ವಮುಕ್ತೋ ಭೃಶರೋಷಿತೇನ
ರಾಜ್ಞಾ ಸಮಕ್ಷಂ ಪರುಷಾಣಿ ಪಾರ್ಥ ॥86॥
ತಸ್ಮಾತ್ ಪಾರ್ಥ ತ್ವಾಂ ಪರುಷಾಣ್ಯವೋಚತ್
ಕರ್ಣೋಽಬ್ರವೀದ್ ಯತ್ ಪುರಾ ದ್ಯೂತಕಾಲೇ ॥87॥

ಅದರಿಂದಲೆ ಬಹಳ ಕೋಪಗೊಂಡ ಯುಧಿಷ್ಠಿರನು ನನ್ನೆದುರಿನಲ್ಲಿಯೆ ನಿನಗೆ ಕಟುನುಡಿಗಳನ್ನು ಆಡಿದ್ದಾನೆ. ಅದರಿಂದಲೇ ಕರ್ಣನೂ ಕೂಡ ಹಿಂದೆ ದ್ಯೂತಕಾಲದಲ್ಲಿ ನಿನಗೆ `ಬಸವ ಬಸವ' `ಏನೂ ಕೆಲಸಕ್ಕೆ ಬಾರದವ' ಎಂದು ಮುಂತಾಗಿ ಯಾವ ಕಟುನುಡಿಗಳನ್ನು ಆಡಿದ್ದನೋ ಅವುಗಳನ್ನೇ ಈಗ
ಯುಧಿಷ್ಠಿರನೂ ನಿನಗೆ ಆಡಿದ್ದಾನೆ. `ನಿನಗೇಕೆ ಈ ಗಾಂಡೀವ?' ಎಂದು.

ತಸ್ಮಿನ್ ಹತೇ ಕುರವೋ ನಿರ್ಜಿತಾಃ ಸ್ಯುಃ
ಏವಂಬುದ್ಧಿಃ ಪಾರ್ಥಿವೋ ಧರ್ಮಪುತ್ರಃ ॥88॥

ಕರ್ಣನನ್ನು ನೀನು ಕೊಂದೆಯಾದರೆ ಕೌರವರನ್ನು ಸುಲಭವಾಗಿ ನಾವು ಗೆಲ್ಲಲು ಸಾಧ್ಯವಾಗುತ್ತದೆ, ಇದು ಧರ್ಮರಾಜನ ಅಭಿಪ್ರಾಯ.

ತತೋ ವಧಂ ನಾರ್ಹತಿ ಧರ್ಮಪುತ್ರ-
ಸ್ತ್ವಯಾ ಪ್ರತಿಜ್ಞಾರ್ಜುನ ಪಾಲನೀಯಾ |
ಜೀವನ್ನಯಂ ಯೇನ ಮೃತೋ ಭವೇದ್ಧಿ

ತನ್ಮೇ ನಿಬೋಧೇಹ ತವಾನುರೂಪಮ್ ॥89॥
ಅದರಿಂದ ಧರ್ಮರಾಜ ನಿನಗೆ ವಧಾರ್ಹನಲ್ಲ. ಅರ್ಜುನ, ನೀನೀಗ ನಿನ್ನ ಪ್ರತಿಜ್ಞೆಯನ್ನು ಪಾಲನೆ ಮಾಡಬೇಕಾಗಿದೆ. ಹೇಗೆ ಎಂದರೆ ಧರ್ಮರಾಜ ಜೀವಂತನಿದ್ದೇ ಮೃತನೆನಿಸಬೇಕು. ಹಾಗೆ ಮಾಡು, ಹಾಗೆ ಮಾಡಿದರೆ ಅದು ನಿನಗೆ ಅನುರೂಪವೆನಿಸುವುದು. ಅದಾದರೂ ಹೇಗೆ ಸಾಧ್ಯ ಎಂದರೆ ಅದನ್ನು ನಾನು ಹೇಳುತ್ತೇನೆ, ಕೇಳು.
ಯದಾ ಮಾನಂ ಲಭತೇ ಮಾನನಾರ್ಹ-
ಸ್ತದಾ ಸ ವೈ ಜೀವತಿ ಜೀವಲೋಕೇ ॥90॥
ಯದಾವಮಾನಂ ಲಭತೇ ಮಹಾಂತಂ
ತದಾ ಜೀವನ್ಮೃತ ಇತ್ಯುಚ್ಯತೇ ಸಃ ॥91॥
ಸಮ್ಮಾನಕ್ಕೆ ಅರ್ಹನಾದವನು ಸಮ್ಮಾನ ಪಡೆಯುತ್ತಿದ್ದರೆ ಆಗ ಅವನು ಜೀವಲೋಕದಲ್ಲಿ ಜೀವಂತನೆನಿಸುತ್ತಾನೆ. ಮಹಾ ಅವಮಾನವನ್ನು ಪಡೆದರೆ ಅವನು ಜೀವಂತನಿದ್ದೂ ಮೃತ ಎಂದೇ ಎನಿಸುತ್ತಾನೆ.
ಸಮ್ಮಾನಿತಃ ಪಾರ್ಥಿವೋಽಯಂ ಸದೈವ
ತ್ವಯಾ ಸಭೀಮೇನ ತಥಾ ಯಮಾಭ್ಯಾಮ್ |
ವೃದ್ಧೈಶ್ಚ ಲೋಕೇ ಪುರುಷಪ್ರವೀರೈ-
ಸ್ತಸ್ಯಾವಮಾನಂ ಕಲಯಾ ತ್ವಂ ಪ್ರಯುಂಕ್ಷ್ವ ॥92॥
ಈ ಯುಧಿಷ್ಠಿರನು ನಿನ್ನಿಂದ, ಭೀಮನಿಂದ, ನಕುಲಸಹದೇವರಿಂದ, ಲೋಕದಲ್ಲಿ ಗುರುಹಿರಿಯರಿಂದ ಮತ್ತು ಮಹಾವೀರಪುರುಷರಿಂದಲೂ ಸದಾ ಸಮ್ಮಾನಿತನಾಗಿರುವನು. ಅವನಿಗೆ ನೀನು ಈಗ `ಕಲಯಾ' ಸ್ವಲ್ಪ ಅವಮಾನ ಮಾಡು. ಹೆಚ್ಚು ಬೇಡ. ದೊಡ್ಡ ಧ್ವನಿಯಿಂದ ಎಲ್ಲರ ಎದುರಿಗೆ ಅವಮಾನ ಮಾಡಬೇಡ. ನಮ್ಮೊಳಗೇ ಏಕಾಂತದಲ್ಲಿ ಸಣ್ಣಧ್ವನಿಯಿಂದ ಅವಮಾನ ಮಾಡು.
ತ್ವಮಿತ್ಯತ್ರಭವಂತಂ ಹಿ ಬ್ರೂಹಿ ಪಾರ್ಥ ಯುಧಿಷ್ಠಿರಮ್ |
ತ್ವಮಿತ್ಯುಕ್ತೋ ಹಿ ನಿಹತೋ ಗುರುರ್ಭವತಿ ಭಾರತ ॥93॥
ಹೇಗೆ ಅವಮಾನ ಮಾಡಬೇಕೆಂದರೆ, ಯುಧಿಷ್ಠಿರನನ್ನು ಗೌರವದಿಂದ `ಅತ್ರಭವಾನ್' ಪೂಜ್ಯರಾದ `ತಾವು' ಎನ್ನದೆ, ತಿರಸ್ಕಾರದಿಂದ `ತ್ವಂ' `ನೀನು' ಎಂದು ಸಂಬೋಧಿಸಿ ನಿಂದೆ ಮಾಡು. ಕಿರಿಯನು `ನೀನು' ಎಂದು ಸಂಬೋಧಿಸಿದರೆ ಹಿರಿಯನಿಗೆ ಅದೇ ವಧೆ ಎನಿಸುತ್ತದೆ.
ಏವಮಾಚರ ಕೌಂತೇಯ ಧರ್ಮರಾಜೇ ಯುಧಿಷ್ಠಿರೇ |
ಅಧರ್ಮಯುಕ್ತಂ ತ್ವಂಯೋಗಂ ಕುರುಷ್ವೈವಂ ಕುರೂದ್ವಹ ॥94॥
ಧರ್ಮರಾಜನಾದ ಯುಧಿಷ್ಠಿರನಲ್ಲಿ, ಅರ್ಜುನ, ನೀನು ಹೀಗೇ ಮಾಡು. ಹೀಗೆ ಪಾಪಯುಕ್ತವಾದ `ನೀನು' ಎಂಬ ಸಂಬೋಧನವನ್ನು ಮಾಡು.
ಆಥರ್ವಾಂಗಿರಸೀ ಹ್ಯೇಷಾ ಶ್ರುತೀನಾಮುತ್ತಮಾ ಶ್ರುತಿಃ |
ಅವಿಚಾರ್ಯೈವ ಕಾರ್ಯೈಷಾ ಶ್ರೇಯಃಕಾಮೈರ್ನರೈಃ ಸದಾ ॥95॥
ಅವಧೇನ ವಧಃ ಪ್ರೋಕ್ತೋ ಯದ್ಗುರುಸ್ತ್ವಮಿತಿ ಪ್ರಭುಃ |
ತದ್ ಬ್ರೂಹಿ ತ್ವಂ ಯನ್ಮಯೋಕ್ತಂ ಧರ್ಮರಾಜಸ್ಯ ಧರ್ಮವಿತ್ ॥96॥
`ಪ್ರಭುಃ ಗುರುಃ' ಪ್ರಭುವೆನಿಸಿರುವ ಹಿರಿಯನು `ತ್ವಮಿತಿ ಪ್ರೋಕ್ತಃ' ನೀನೆಂದು ಸಂಬೋಧಿಸಲ್ಪಡುವುದೇನಿದೆಯೋ ಅದು `ಅವಧೇನ ವಧಃ' ಪ್ರತ್ಯಕ್ಷ ವಧೆಯಿಲ್ಲದೇ ಮಾಡುವ ಒಂದು ಬಗೆಯ ವಧೆಯೆ'ಈ ವಚನವು ಅಥರ್ವವೇದದಲ್ಲಿ ಬರುವ, ಶ್ರುತಿಗಳಲ್ಲಿ ಶ್ರೇಷ್ಠವಾದ ಶ್ರುತಿ. ಈ ಶ್ರುತಿ ಹೇಳಿದಂತೆ ಮಾಡುವುದು ಶ್ರೇಯಸ್ಕರ. ಶ್ರೇಯಸ್ಸನ್ನು ಬಯಸುವವರು ಏನೂ ಅನುಮಾನ ಮಾಡದೆ ಈ ಶ್ರುತಿಯನ್ನು ಸದಾ ಆಚರಣೆಯಲ್ಲಿ ತರಬೇಕು. ಅದರಿಂದ ಧರ್ಮಜ್ಞನಾದ ನೀನು ಧರ್ಮರಾಜನಿಗೆ ನಾನು ಹೇಳಿದ `ತ್ವಂ' ಶಬ್ದ ಸಂಬೋಧನವನ್ನು ಉಚ್ಚರಿಸು.
ವಧೋ ಹ್ಯಯಂ ಪಾಂಡವ ಧರ್ಮರಾಜ್ಞ-
ಸ್ತ್ವತ್ತೋ ಯುಕ್ತೋ ವೇತ್ಸ್ಯತೇ ಚೈವಮೇಷಃ |
ತತೋಽಸ್ಯ ಪಾದಾವಭಿವಾದ್ಯ ಪಶ್ಚಾತ್
ಸಮಂ ಬ್ರೂಯಾಃ ಸಾಂತ್ವಪೂರ್ವಂ ಚ ಪಾರ್ಥಮ್ ॥97॥
ನಿನ್ನಿಂದ ಈ ಬಗೆಯ ಧರ್ಮರಾಜವಧವೇ ಯುಕ್ತವಾಗುತ್ತದೆ. ಧರ್ಮರಾಜನೂ ಅದನ್ನು ಹಾಗೇ ತಿಳಿಯುತ್ತಾನೆ. ಬಳಿಕ ಅವನ ಪಾದಗಳಿಗೆ ಎರಗಿ ಸಮಾಧಾನಪೂರ್ವಕವಾಗಿ ಸರಿಯಾದ ಸಂಬೋಧನವನ್ನೇ ಮಾಡು.
ಭ್ರಾತಾ ಪ್ರಾಜ್ಞಸ್ತವ ಕೋಪಂ ನ ಜಾತು
ಕುರ್ಯಾದ್ ರಾಜಾ ಕಂಚನ ಪಾಂಡವೇಯಃ |
ಮುಕ್ತೋಽನೃತಾದ್ ಭ್ರಾತೃವಧಾಚ್ಚ ಪಾರ್ಥ
ಹೃಷ್ಟಃ ಕರ್ಣಂ ತ್ವಂ ಜಹಿ ಸೂತಪುತ್ರಮ್ ॥98॥
ನಿನ್ನ ಸೋದರ ಇದೆಲ್ಲವನ್ನೂ ಚೆನ್ನಾಗಿ ತಿಳಿದವನು. ನಿನ್ನ ವಿಷಯದಲ್ಲಿ ಎಂದೂ ಏನೂ ಕೋಪ ಮಾಡಲಾರ. ಅದರಿಂದ ಸುಳ್ಳಿನಿಂದಲೂ ಸೋದರ ವಧೆ ಯಿಂದಲೂ ಮುಕ್ತನಾಗಿ ಉತ್ಸಾಹಗೊಂಡು ಸೂತಪುತ್ರನಾದ ಕರ್ಣನನ್ನು ನೀನು ವಧಿಸು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಧರ್ಮರಾಜಾರ್ಜುನಸಂವಾದೇ ಕೃಷ್ಣವಾಕ್ಯಂ ನಾಮ ಷಟ್‌ಷಷ್ಟಿತಮೋಽಧ್ಯಾಯಃ ॥66॥

ಇತ್ಯುಕ್ತೋ ಬಹುಧಾಽನಿಂದತ್ ಕ್ರೋಧಾದೇವಾರ್ಜುನೋ ನೃಪಮ್ ।
ತ್ವಂ ನೃಶಂಸಃ ಕೃತಘ್ನಶ್ಚ ನಿರ್ವೀರ್ಯಃ ಪರುಷಂವದಃ ॥ 124 ॥
ತ್ವತ್ತಃ ಸುಖಂ ನಾಸ್ತಿ ಕಿಂಚಿನ್ನ ಮಾಂ ಗರ್ಹಿತುಮರ್ಹಸಿ ।
ಭೀಮೋ ಮಾಂ ಗರ್ಹಿತುಂ ಯೋಗ್ಯೋ ಯೋ ಹ್ಯಸ್ಮಾಕಂ ಸದಾ ಗತಿಃ ॥ 125 ॥
ಯೋ ಯುದ್ಧ್ಯತೇ ಸರ್ವವೀರೈರದ್ಯಾಪಿ ತ್ವಂ ತು ನಿಂದಕಃ ।
ಇತ್ಯಾದ್ಯುಕ್ತ್ವಾತ್ಮನಾಶಾಯ ವಿಕೋಶಂ ಕೃತವಾನಸಿಮ್ ॥ 126 ॥
ಕೃಷ್ಣ, ಹೀಗೆ ಹೇಳಿದಾಗ ಅರ್ಜುನ ಧರ್ಮರಾಜನನ್ನು ಸಿಟ್ಟಿನಿಂದಲೆ ಬಹುವಾಗಿ ನಿಂದಿಸಿದ. `ನೀನು ಕ್ರೂರ, ಕೃತಘ್ನ, ನಿರ್ವೀರ್ಯ. ಸದಾ ಕಟುನುಡಿಗಳನ್ನಾಡುವವ, ನಿನ್ನಿಂದ ನಮಗೆ ಏನೂ ಸುಖವಿಲ್ಲ. ನಿನಗೆ ನನ್ನನ್ನು ನಿಂದಿಸಲು ಅರ್ಹತೆ ಇಲ್ಲ. ಭೀಮನಾದರೋ ನನ್ನನ್ನು ನಿಂದಿಸಲು ಯೋಗ್ಯ. ಏಕೆಂದರೆ ನಾವು ಸದಾ ಅವನ ರಕ್ಷಣೆಯಲ್ಲಿರುತ್ತೇವೆ. ಭೀಮನು ಈಗಲೂ ಎಲ್ಲ ವೀರರೊಡನೆ ಯುದ್ಧ ಮಾಡುತ್ತಿದ್ದಾನೆ. ನೀನು ಮಾತ್ರ ಎಲ್ಲರನ್ನೂ ನಿಂದಿಸುವವ.' ಎಂದು ಮುಂತಾಗಿ ಹೇಳಿ ಅರ್ಜುನ ಆತ್ಮಹತ್ಯೆಗಾಗಿ ಖಡ್ಗವನ್ನು ಒರೆಯಿಂದ ತೆಗೆದ.
ಪುನಃ ಕೃಷ್ಣೇನ ಪೃಷ್ಟಃ ಸ ಸ್ವಾಭಿಪ್ರಾಯಮುವಾಚ ತಮ್ ।
ತಚ್ಛ್ರುತ್ವಾ ಗರ್ಹಯಿತ್ವೈನಂ ಪುನರಾಹ ಜನಾರ್ದನಃ ॥127॥
ಇದೇನು, ಏಕೆ ಎಂದು ಪುನಃ ಶ್ರೀಕೃಷ್ಣ ಕೇಳಿದಾಗ, ಅರ್ಜುನ ತನ್ನ ಅಭಿಪ್ರಾಯವನ್ನು ಹೇಳಿದ. ಅದನ್ನು ಕೇಳಿ ಶ್ರೀಕೃಷ್ಣ ಅವನನ್ನು ಬೈದು ಪುನಃ ಹೇಳಿದ.
ಮತಿಪೂರ್ವಂ ದೇಹಹಾನಾತ್(ನಾಶಾತ್) ಪಾಪಂ ಮಹದವಾಪ್ಯತೇ ।
ಧರ್ಮಾರ್ಥಕಾಮಮೋಕ್ಷಾಣಾಂ ಸಾಧನಂ ದೇಹತೋಽಸ್ತಿ ಯತ್ ॥
ತಿಳಿದು ತಿಳಿದು ದೇಹನಾಶ ಮಾಡಿಕೊಳ್ಳುವುದರಿಂದ ಮಹಾಪಾಪ ಬರುತ್ತದೆ. ಏಕೆಂದರೆ ಧರ್ಮ ಅರ್ಥ ಕಾಮ ಮೋಕ್ಷಗಳ ಸಾಧನೆ ದೇಹದಿಂದಲೆ ಸಾಧ್ಯವಿರುತ್ತದೆ.
ಅತೋ ಮಾ ತ್ಯಜ ದೇಹಂ ತು ಕುರು ಚಾತ್ಮಪ್ರಶಂಸನಮ್ ।
ವಧೋ ಗುರೂಣಾಂ ತ್ವಂಕಾರಃ ಸ್ವಪ್ರಶಂಸೈವ ಚಾತ್ಮನಃ ॥129॥
ಅದರಿಂದ ದೇಹವನ್ನು ಪರಿತ್ಯಜಿಸಬೇಡ. ದೇಹತ್ಯಾಗಕ್ಕೆ ಸಮವಾದ ಆತ್ಮಪ್ರಶಂಸೆ ಮಾಡಿಕೊಳ್ಳು. ಏಕೆಂದರೆ ನೀನು ಎನ್ನುತ್ತ ಅವಮಾನಿಸುವುದು ಹಿರಿಯರಿಗೆ ವಧೆ. ಆತ್ಮಪ್ರಶಂಸೆಯೇ ತನಗೆ ವಧೆ.
ಇತ್ಯುಕ್ತಃ ಸ ತ್ವಹಂಕಾರಾಚ್ಛಶಂಸ ಸ್ವಗುಣಾನಲಮ್ ॥130॥
ಶ್ರೀಕೃಷ್ಣ ಹೀಗೆ ಹೇಳಿದಾಗ ಅರ್ಜುನ ಅಹಂಕಾರದಿಂದ ತನ್ನ ಗುಣಗಳನ್ನು ಬಹಳ ಹೊಗಳಿಕೊಂಡ.
ಗುರುನಿಂದಾಽಽತ್ಮಪೂಜಾ ಚ ನ ಧರ್ಮಾಯ ಭವೇತ್ ಕ್ವಚಿತ್ ।
ತಥಾಪ್ಯರ್ಜುನಹಾರ್ದಂ ತತ್ ಸಂಪ್ರಕಾಶ್ಯ ಜನಾರ್ದನಃ ॥131॥
ತಸ್ಯ ಲಜ್ಜಾಂ ಸಮುತ್ಪಾದ್ಯ ನಾಶಯಿತ್ವಾ ಚ ತಂ ಮದಮ್ ।
ನಾಹಂ ವೇದ ಪರಂ ಧರ್ಮಂ ಕೃಷ್ಣ ಏವ ಗತಿರ್ಮಮ ॥132॥
ಇತಿ ಭಾವಂ ಸಮುತ್ಪಾದ್ಯ ದೋಷಾನ್ ನಾಶಯಿತುಂ ಹರಿಃ ।
ಕಾರಯಾಮಾಸ ತತ್ ಸರ್ವಮರ್ಜುನೇನ ಜಗತ್ಪತಿಃ ॥133॥
ಹಿರಿಯರ ನಿಂದೆಯಾಗಲಿ ಆತ್ಮಪ್ರಶಂಸೆಯಾಗಲಿ ಎಂದೂ ಧರ್ಮಕ್ಕೆ ಅನುಕೂಲವಲ್ಲ. ಆದರೂ ಅರ್ಜುನನ ಹೃದ್ಗತ ಪ್ರಕಟವಾಗುವಂತೆ ಮಾಡಿ ತನಗೆ ಧರ್ಮರಹಸ್ಯ ತಿಳಿದಿಲ್ಲವೆಂದು ಅವನಿಗೆ ಲಜ್ಜೆ ಉಂಟುಮಾಡುವ ಮೂಲಕ ತಾನು ಎಲ್ಲ ಧರ್ಮತಿಳಿದವನೆಂಬ ಅಹಂಕಾರವನ್ನು ಕಳೆದು `ಮುಖ್ಯ ಧರ್ಮವನ್ನು ನಾನು ತಿಳಿದಿಲ್ಲ. ನನಗೆ ಕೃಷ್ಣನೆ ಮಾರ್ಗದರ್ಶಕ' ಎಂಬ ಭಾವವನ್ನು ಹುಟ್ಟಿಸಿ ದೋಷ ಗಳನ್ನು ಕಳೆಯಲು ಜಗದೊಡೆಯ ಜನಾರ್ದನ ಹರಿ ಎಲ್ಲವನ್ನೂ ಅರ್ಜುನನಿಂದ ಮಾಡಿಸಿದ.
ತತ ಏತದವಿಜ್ಞಾನಾತ್ ಕುಪಿತೋ ನೃಪತಿರ್ಭೃಶಮ್ ।
ಆಹಾಸ್ತು ರಾಜಾ ಭೀಮಸ್ತ್ವಂ ಯುವಾ ಮಾಂ ಜಹಿ ಚ ಸ್ವಯಮ್ ।
ವನಂ ವಾ ವಿಫಲೋ ಯಾಮೀತ್ಯುಕ್ತ್ವೋತ್ತಸ್ಥೌ ಸ್ವತಲ್ಪತಃ ॥134॥
ಇದೆಲ್ಲದರ ಅರಿವೇ ಇಲ್ಲದೆ ಧರ್ಮರಾಜ ಬಹಳ ಕುಪಿತನಾದ. ಹೇಳಿದ, `ಭೀಮನೆ ರಾಜನಾಗಲಿ, ನೀನು ಯುವರಾಜನಾಗು, ನನ್ನನ್ನು ನೀನು ಕೊಂದು ಬಿಡು ಅಥವಾ ಅಪ್ರಯೋಜಕನಾದ ನಾನು ಕಾಡಿಗೆ ಹೋಗುತ್ತೇನೆ.' ಹೀಗೆ ಹೇಳಿ ತನ್ನ ಹಾಸಿಗೆಯಿಂದ ಎದ್ದ.
ತಂ ವಾಸುದೇವಃ ಪ್ರತಿಗೃಹ್ಯ ಹೇತು-
ಮುಕ್ತ್ವಾ ಸರ್ವಂ ಶಮಯಾಮಾಸ ನೇತಾ ।
ಪಾರ್ಥಶ್ಚ ಭೂಪಸ್ಯ ಪಪಾತ ಪಾದಯೋಃ
ಕ್ಷಮಾಪಯನ್ ಸೋಽಪಿ ಸುಪ್ರೀತಿಮಾಪ ॥135॥
ಶ್ರೀಕೃಷ್ಣ ಧರ್ಮರಾಜನನ್ನು ಹಿಡಿದು ಎಲ್ಲ ಕಾರಣವನ್ನೂ ತಿಳಿಸಿ ಸಮಾಧಾನಪಡಿಸಿದ. ಅರ್ಜುನನೂ ಧರ್ಮರಾಜನ ಕ್ಷಮೆ ಬೇಡುತ್ತ ಕಾಲುಗಳಿಗೆ ಬಿದ್ದ. ಧರ್ಮರಾಜ ಬಲು ಸಂತೋಷಗೊಂಡ.
ತೌ ಭ್ರಾತರೌ ವಾಸುದೇವಪ್ರಸಾದಾ-
ನ್ಮಹಾಪದೋ ಮುಕ್ತಿಮಾಪ್ಯಾತಿಹೃಷ್ಟೌ ।

ಭಕ್ತ್ಯಾ ಸಮಸ್ತಾಧಿಪತಿಂ ಶಶಂಸತು-
ಸ್ತ್ವಯಾ ಸಮಃ ಕೋ ನು ಹರೇ ಹಿತೋ ನಃ ॥136॥
ಆ ಇಬ್ಬರೂ ಸೋದರರೂ ಕೃಷ್ಣನ ಅನುಗ್ರಹದಿಂದ ದೊಡ್ಡ ಆಪತ್ತಿನಿಂದ ಬಿಡುಗಡೆ ಹೊಂದಿ ಬಹಳ ಸಂತುಷ್ಟರಾದರು. ಭಕ್ತಿಯಿಂದ ಸರ್ವೇಶ್ವರನನ್ನು ಕೊಂಡಾಡಿದರು, `ಹರಿ! ನಮಗೆ ನಿನ್ನಂಥ ಹಿತಕಾರಿ ಇನ್ನು ಯಾವನಿದ್ದಾನೆ?' ಎಂದು.

ಅರವತ್ತೇಳನೆಯ ಅಧ್ಯಾಯ
ಯುಧಿಷ್ಠಿರನನ್ನು ಮಾತಿನಿಂದ ಕೊಲ್ಲುತ್ತಾನೆ, ಅರ್ಜುನ. ಅದಕ್ಕೆ ಪ್ರಾಯಶ್ಚಿತ್ತವಾಗಿ ಆತ್ಮಶ್ಲಾಘನೆಯಿಂದ ತನ್ನನ್ನು ಕೊಂದುಕೊಳ್ಳುತ್ತಾನೆ.
ಬೇಸತ್ತ ಯುಧಿಷ್ಠಿರನಲ್ಲಿ ಎಲ್ಲಕ್ಕೂ ಕ್ಷಮೆ ಬೇಡುತ್ತಾನೆ.
ಸಂಜಯಃ
ಇತ್ಯೇವಮುಕ್ತಸ್ತು ಜನಾರ್ದನೇನ
ಪಾರ್ಥಃ ಪ್ರಶಸ್ಯಾಥ ಸುಹೃದ್ವಧಂ ತಮ್ ।
ತತೋಽಬ್ರವೀದರ್ಜುನೋ ಧರ್ಮರಾಜ-
ಮನುಕ್ತಪೂರ್ವಂ ಪರುಷಂ ಪ್ರಸಹ್ಯ ॥1॥
ಸಂಜಯ ಧೃತರಾಷ್ಟ್ರನಿಗೆ ನುಡಿದ– ಶ್ರೀಕೃಷ್ಣನು ಹೀಗೆ ಹೇಳಿದಾಗ ಅರ್ಜುನ ಈ ಬಗೆಯ ಬಂಧುವಧವನ್ನು ಪ್ರಶಂಸೆ ಮಾಡಿ ಧರ್ಮರಾಜನಿಗೆ ಹಿಂದೆ ಎಂದೂ ಹೇಳದಿದ್ದ ಅವಹೇಳನಕಾರಿಯಾದ ಮಾತನ್ನು ಬಲವಾಗಿ ಆಡಿದ.
ಅರ್ಜುನಃ
ಮಾ ತ್ವಂ ರಾಜನ್ ವ್ಯಾಹರಸ್ವಾದ್ಯ ಪಾಪಂ
ಯಸ್ತಿಷ್ಠಸೇ ಕ್ರೋಶಮಾತ್ರೇ ರಣಾದ್ ವೈ ।
ಭೀಮಸ್ತು ಮಾಮರ್ಹತಿ ಗರ್ಹಣಾಯ
ಯೋ ಯುಧ್ಯತೇ ಸರ್ವಯೋಧಪ್ರವೀರೈಃ ॥2॥
ಕಾಲೇ ಹಿ ಶತ್ರೂನ್ ಪರಿಪೀಡ್ಯ ಸಂಖ್ಯೇ
ಹತ್ವಾ ಚ ಶೂರಾನ್ ಪೃಥಿವೀಪತೀಂಸ್ತಾನ್ ॥3॥
ಅರ್ಜುನ ನುಡಿದ– `ರಾಜನೆ, ನೀನು ಹೀಗೆ ಕೆಟ್ಟಮಾತುಗಳಿಂದ ನನ್ನನ್ನು ನಿಂದಿಸಬೇಡ. ರಣದಿಂದ ಕ್ರೋಶದಷ್ಟು ದೂರ ಸರಿದು ನಿಲ್ಲುವ ನಿನಗೆ ನನ್ನನ್ನು ಅವಹೇಳನ ಮಾಡಲು ಅರ್ಹತೆ ಇಲ್ಲ. ಭೀಮನು ಎಲ್ಲ ವೀರಯೋಧರೊಡನೆ ಯುದ್ಧಮಾಡುವವನು. ಅವನಿಗೆ ನನ್ನನ್ನು ಅವಹೇಳನ ಮಾಡಲು ಅರ್ಹತೆ ಇದೆ.
ರಥಪ್ರಧಾನೋತ್ತಮನಾಗಮುಖ್ಯಾನ್
ಸಾದಿಪ್ರವೇಕಾನಮಿತಾಂಶ್ಚ ಶೂರಾನ್ ॥4॥
ಯಃ ಕುಂಜರಾಣಾಮಧಿಕಂ ಸಹಸ್ರಂ
ಹತ್ವಾನದತ್ ತುಮುಲಂ ಸಿಂಹನಾದಮ್ ॥5॥
ಕಾಮ್ಬೋಜಾನಾಮಯುತಂ ಪಾರ್ವತೀಯಾನ್
ಮೃಗಾನ್ ಸಿಂಹೋ ವಿನಿಹತ್ಯೇವ ಚಾಜೌ ॥6॥
`ಭೀಮನು ಸರಿಯಾದ ಕಾಲದಲ್ಲಿ ರಣದಲ್ಲಿ ಶತ್ರುಗಳನ್ನು ಚೆನ್ನಾಗಿ ಪೀಡಿಸಿ, ಶೂರರಾದ ಆ ರಾಜರನ್ನೂ ಕೊಂದು, ಮಹಾರಥರನ್ನೂ ಉತ್ತಮ ಗಜಯೋಧರನ್ನೂ ಮುಖ್ಯ ಅಶ್ವಯೋಧರನ್ನೂ ಅಸಂಖ್ಯ ಶತ್ರುಗಳನ್ನೂ ಸಾವಿರಾರು ಆನೆಗಳನ್ನೂ ಕೊಂದು ದೊಡ್ಡ ಸಿಂಹನಾದವನ್ನು ಮಾಡುತ್ತಾನೆ. ಸಿಂಹವು ಮೃಗಗಳನ್ನು ಕೊಂದು ಗರ್ಜಿಸುವಂತೆ. ಹತ್ತಾರು ಸಾವಿರ ಕಾಂಬೋಜ ಪಾರ್ವತೀಯ ಯೋಧರನ್ನು ಕೊಲ್ಲುತ್ತಾನೆ.
ಸುದುಷ್ಕರಂ ಕರ್ಮ ಕರೋತಿ ಭೀಮಃ
ಕರ್ತುಂ ಯಥಾ ನಾರ್ಹಸಿ ತ್ವಂ ಕದಾಚಿತ್ ।
ರಥಾದವಪ್ಲುತ್ಯ ಗದಾಂ ಪರಾಮೃಶಂ-
ಸ್ತಯಾ ನಿಹಂತ್ಯಶ್ವನರದ್ವಿಪಾನ್ ರಣೇ ॥7॥
`ನಿನಗೆ ಎಂದೂ ಸಾಧ್ಯವಾಗದಂಥ ಅಸಾಧ್ಯವಾದ ಯುದ್ಧಕರ್ಮವನ್ನು ಭೀಮ ಮಾಡುತ್ತಾನೆ. ರಥದಿಂದ ಕೆಳಗೆ ಹಾರಿ ಗದೆಯನ್ನೆತ್ತಿಕೊಂಡು ಅಶ್ವಪದಾತಿ ಗಜಯೋಧರನ್ನು ರಣದಲ್ಲಿ ಸಂಹರಿಸುತ್ತಾನೆ.
ವರಾಸಿನಾ ವಾಪಿ ರಥಾಶ್ವಕುಂಜರಾನ್
ತಥಾ ರಥಾಂಗೈರ್ಧನುಷಾ ಚ ಹನ್ತ್ಯರೀನ್ ।
ಪ್ರಮೃದ್ಯ ಪದ್ಭ್ಯಾಮಹಿತಾನ್ ನಿಹನ್ತಿ ಯಃ
ಪುನಶ್ಚ ದೋರ್ಭ್ಯಾಂ ಶತಮನ್ಯುವಿಕ್ರಮಃ ॥8॥
`ದೊಡ್ಡ ಖಡ್ಗದಿಂದಲೂ ರಥ ಅಶ್ವ ಗಜಗಳನ್ನು ಸಂಹರಿಸುತ್ತಾನೆ. ಚಕ್ರ ಧನುಸ್ಸುಗಳಿಂದಲೂ ಶತ್ರುಗಳನ್ನು ಕೊಲ್ಲುತ್ತಾನೆ. ಪುನಃ ಶತ್ರುಗಳನ್ನು ಕಾಲಿಂದ ತುಳಿದು ತೋಳುಗಳಿಂದಲೂ ಇಂದ್ರನಂತೆ ಪರಾಕ್ರಮ ತೋರುತ್ತ ಸಂಹರಿಸುತ್ತಾನೆ.
ಮಹಾಬಲೋ ವೈಶ್ರವಣಾಂತಕೋಪಮಃ
ಪ್ರಸಹ್ಯ ಹಂತಾ ದ್ವಿಷತಾಮ್ ಅನೀಕಿನೀಮ್ ।

ಸ ಭೀಮಸೇನೋಽರ್ಹತಿ ಗರ್ಹಣಾಂ ಮೇ
ನ ತ್ವಂ ನಿತ್ಯಂ ರಕ್ಷ್ಯಸೇ ಯಃ ಸುಹೃದ್ಭಿಃ ॥9॥
`ಕುಬೇರನಂತೆ ಯಮನಂತೆ ಮಹಾಬಲನಾದ ಭೀಮ ಶತ್ರುಸೈನ್ಯವನ್ನು ಆಕ್ರಮಿಸಿ ನಾಶಪಡಿಸುತ್ತಾನೆ. ಆ ಭೀಮಸೇನನು ನನ್ನನ್ನು ಅವಹೇಳನ ಮಾಡಿದರೆ ಅದು ಅವನಿಗೆ ಒಪ್ಪುತ್ತದೆ. ನಿನಗೆ ಒಪ್ಪಲಾರದು. ನೀನು ಸದಾ ಬಂಧುಗಳಿಂದ ರಕ್ಷಣೆ ಪಡೆಯುತ್ತಿರುವೆ.
ಮಹಾರಥಾನ್ ನಾಗವರಾನ್ ಹಯಾಂಶ್ಚ
ಪದಾತಿಮುಖ್ಯಾನಪಿ ಚ ಪ್ರಮಥ್ಯ ।
ಏಕೋ ಭೀಮೋ ಧಾರ್ತರಾಷ್ಟ್ರೇಷು ಮಗ್ನಃ
ಸ ಮಾಮುಪಾಲಬ್ಧುಮರಿಂದಮೋಽರ್ಹತಿ ॥10॥
`ಮಹಾರಥರನ್ನು ಮಹಾಗಜಯೋಧರನ್ನು ಅಶ್ವಯೋಧರನ್ನು ಪ್ರಧಾನ ಪದಾತಿಗಳನ್ನು ನಾಶಮಾಡುತ್ತ ಭೀಮನೊಬ್ಬನು ಕೌರವಸೈನ್ಯದಲ್ಲಿ ಮುಳುಗಿರುತ್ತಾನೆ. ಶತ್ರುನಾಶಕನಾದ ಅವನು ನನ್ನನ್ನು ನಿಂದಿಸಲು ಅರ್ಹನಾಗಿರುತ್ತಾನೆ.
ಕಲಿಂಗವಂಗಾಂಗನಿಷಾದಮಾಗಧಾನ್
ಸದಾ ಮದಾನ್ನೀಲಬಲಾಹಕೋಪಮಾನ್ ।
ನಿಹಂತಿ ಯಃ ಶತ್ರುಗಣಾನನೇಕಶಃ
ಸ ಮಾಭಿವಕ್ತುಂ ಪ್ರಭವತ್ಯನಾಗಸಮ್ ॥11॥
ಸದಾ ದರ್ಪದಿಂದ ಬೀಗುವ, ಕರಿಮೋಡಗಳಂತಿರುವ ಕಲಿಂಗ ವಂಗ ಅಂಗ ನಿಷಾದ ಮಗಧ ದೇಶಗಳ ಅನೇಕ ಶತ್ರುಸಮೂಹಗಳನ್ನು ಭೀಮ ಸಂಹರಿಸುತ್ತಾನೆ. ಏನೂ ತಪ್ಪು ಮಾಡದಿರುವ ನನ್ನನ್ನು ಕೂಡ ನಿಂದಿಸಲು ಅವನು ಅರ್ಹನೆ ಆಗಿರುತ್ತಾನೆ.
ಸುಯುಕ್ತಮಾಸ್ಥಾಯ ರಥಂ ಹಿ ಕಾಲೇ
ಧನುರ್ವಿಧುನ್ವನ್ ಶರಪೂರ್ಣಮುಷ್ಟಿಃ ।
ಸೃಜತ್ಯಸೌ ಶರವರ್ಷಾಣಿ ವೀರೋ
ಮಹಾಹವೇ ಮೇಘ ಇವಾಂಬುಧಾರಾಃ ॥12॥
ಚೆನ್ನಾಗಿ ಸಜ್ಜಾದ ರಥವನ್ನೇರಿ ಯೋಗ್ಯಕಾಲದಲ್ಲಿ ಬಿಲ್ಲನ್ನು ತೂಗುತ್ತ ಮುಷ್ಠಿ ತುಂಬ ಬಾಣಗಳನ್ನು ಹಿಡಿದು, ಮೋಡವು ನೀರಿನ ಧಾರಾಕಾರವಾದ ಮಳೆ ಸುರಿಸುವಂತೆ, ವೀರ ಭೀಮಸೇನನು ಮಹಾಸಮರದಲ್ಲಿ ಬಾಣಗಳ ಮಳೆಯನ್ನೇ ಸುರಿಸುತ್ತಾನೆ.
ಶತಾನ್ಯಷ್ಟೌ ವಾರಣಾನಾಮಪಶ್ಯಂ
ವಿಶಾತಿತೈಃ ಕುಂಭಕಟಾಗ್ರಹಸ್ತೈಃ ।
ಭೀಮೇನಾಜೌ ನಿಹತಾನ್ಯದ್ಯ ಬಾಣೈಃ
ಸ ಮಾಂ ಕ್ರೂರಂ ವಕ್ತುಮರ್ಹತ್ಯರಿಘ್ನಃ ॥13॥
ಕತ್ತರಿಸಿ ತೆಗೆದ ಆನೆಗಳ ಕುಂಭಸ್ಥಳ ಕಪೋಲ ಸೊಂಡಿಲುಗಳ ತುದಿಗಳಿಂದಲೆ ಹೊಡೆದು ಬಾಣಗಳಿಂದಲೂ ಹೊಡೆದು ಭೀಮನು ರಣದಲ್ಲಿ ಇಂದು ಎಂಟು ನೂರು ಗಜಯೋಧರನ್ನು ಕೊಂದಿದ್ದನ್ನು ನಾನು ಕಂಡಿದ್ದೇನೆ. ಶತ್ರುಸಂಹಾರಕ ನಾದ ಅವನೇ ನನಗೆ ಕ್ರೂರನುಡಿ ನುಡಿಯಲು ಅರ್ಹನಾಗಿದ್ದಾನೆ.
ತೇನಾಸ್ಮಿ ವಾಚ್ಯೋ ನ ತ್ವಯಾಹಂ ಕದಾಚಿನ್
ಮಾ ಮಾ ವೋಚಃ ಕ್ರೂರಮಿಹಾದ್ಯ ಪಾರ್ಥ ।
ನಾಸ್ಮದ್‌ವಿಧೋ ವೈ ಭವತಾ ತು ವಾಚ್ಯೋ
ಯಥಾ ಭವಾನ್ ಮರ್ತ್ಯಲೋಕಸ್ಯ ವಾಚ್ಯಃ ॥14॥
ಯುಧಿಷ್ಠಿರ, ನಾನು ನಿನ್ನಿಂದ ಎಂದೂ ಅವಹೇಳನ ಮಾಡಿಸಿಕೊಳ್ಳಲಾರೆ. ನನಗೆ ಕ್ರೂರನುಡಿ ನುಡಿಯಬೇಡ. ನೀನು ಮನುಷ್ಯಲೋಕದಲ್ಲಿ ನಿಂದಾರ್ಹನಾಗಿರು ವಂತೆ, ನಮ್ಮಂಥವರು ನಿನ್ನಿಂದ ನಿಂದ್ಯರಾಗಿರುವುದಿಲ್ಲ.
ತ್ವನ್ಮೂಲಮಸ್ಮಾಭಿರಿದಂ ಹಿ ವೈರಂ
ಪ್ರಾಪ್ತಂ ತಥಾ ವ್ಯಸನಂ ಚಾತಿಘೋರಮ್ ।
ದ್ಯೂತಪ್ರಮತ್ತೇನ ಕೃತಂ ತ್ವಯಾಽಸಕೃತ್
ಕಸ್ಮಾದುಪಾಲಬ್ಧುಮಿಹಾರ್ಹಸಿ ತ್ವಮ್ ॥15॥
ನಾವು ಬಂಧುಗಳೊಡನೆ ಈ ವೈರವನ್ನೂ ಅತಿಘೋರವಾದ ದುಃಖವನ್ನೂ ಹೊಂದಲು ಮೂಲಕಾರಣನು ನೀನು. ಜೂಜಿನ ಅಮಲೇರಿ ನೀನು ಮತ್ತೆಮತ್ತೆ ವೈರ, ದುಃಖಗಳನ್ನು ತಂದುಕೊಂಡೆ. ನಮ್ಮನ್ನು ಹಳಿಯಲು ನೀನು ಹೇಗೆ ಅರ್ಹನಾಗುವೆ?
ತ್ವಮೇವ ರಾಜನ್ ಸತತಂ ಪ್ರಮತ್ತ-
ಸ್ತ್ವಮೇವ ಮೂಢೋ ಭರತಾನಾಮಸಾಧುಃ ।
ತ್ವಾಂ ಪ್ರಾಪ್ಯ ರಾಜ್ಯಂ ಚ ವಿನಷ್ಟಮೇತತ್
ಪ್ರಾಪ್ತಾ ಮಹತ್ ಪಾಂಡವಾಶ್ಚಾಪಿ ದಾಸ್ಯಮ್ ॥16॥
ರಾಜನೇ, ನೀನೇ ಸದಾ ತಪ್ಪು ಮಾಡುವವನು. ನೀನೇ ಮೂರ್ಖ. ಕುರುವಂಶದವರಲ್ಲಿ ನೀನೇ ಏನೂ ಸರಿಯಿಲ್ಲದವನು. ನಿನ್ನ ಸಂಬಂಧದಿಂದ ನಮಗೆ ಈ ರಾಜ್ಯನಾಶ ಬಂದೊದಗಿತು. ಪಾಂಡವರಾದ ನಾವೆಲ್ಲರೂ ದೊಡ್ಡ ದಾಸ್ಯಕ್ಕೆ ಭಾಗಿಯಾದೆವು.
ತ್ವತ್ತಃ ಕೃತೋಽಸ್ಮದ್ವನವಾಸದುಃಖಂ
ರಾಜ್ಯಸ್ಯ ನಾಶೋ ಹ್ಯಭಿಮನ್ಯೋಶ್ಚ ಘೋರಃ ॥17॥
ನಮಗೆ ನಿನ್ನಿಂದ ವನವಾಸ ದುಃಖ ಉಂಟಾಯಿತು. ರಾಜ್ಯನಾಶ ಉಂಟಾಯಿತು. ಘೋರವಾದ ಅಭಿಮನ್ಯುಮರಣವೂ

ಉಂಟಾಯಿತು.
ಆತ್ಮಾನಮೇವ ಸುನೃಶಂಸರೂಪಂ
ಜ್ಞಾತ್ವಾ ಕಿಮರ್ಥಂ ಗರ್ಹಸೇ ಮಾಽದ್ಯ ವೀರ |
ಲಜ್ಜಸ್ವ ರಾಜನ್ ಯದಿ ತೇಽಸ್ತಿ ಲಜ್ಜಾ
ತೂಷ್ಣೀಂಭೂತಃ ಪಶ್ಯ ಸರ್ವಂ ಕೃತಘ್ನಃ ॥18॥
ತನ್ನನ್ನು ಹೀಗೆ ಬಲುಕ್ರೂರ ಸ್ವಭಾವದವನೆಂದು ತಿಳಿದುಕೂಡ ನೀನು ನನ್ನನ್ನು ಏಕೆ ನಿಂದಿಸುವೆ? ರಾಜನೆ, ನಿನಗೆ ಲಜ್ಜೆ ಎಂಬುದಿದೆಯಾದರೆ ಇದಕ್ಕೆ ಲಜ್ಜೆ ಪಡು, ಕೃತಘ್ನ ನೀನು, ಏನೂ ಮಾತನಾಡದೆ ಸುಮ್ಮನೆ ಎಲ್ಲವನ್ನೂ ನೋಡುತ್ತಿರು.
ಬಲಂ ತು ವಾಚಿ ದ್ವಿಜಸತ್ತಮಾನಾಂ
ಕ್ಷಾತ್ರಂ ಬುಧಾ ಬಾಹುಬಲಂ ವದಂತಿ |
ತ್ವಂ ವಾಗ್ಬಲೋ ಭಾರತ ನಿಷ್ಠುರೋಽಸಿ
ತ್ವಮೇವ ಮಾಂ ವೇತ್ಸಿ ಯಥಾವಿಧೋಽಹಮ್ ॥19॥
ಉತ್ತಮಬ್ರಾಹ್ಮಣರಿಗೆ ಮಾತಿನಲ್ಲಿ ಬಲ. ಕ್ಷತ್ರಿಯರಿಗೆ ಬಾಹುವಿನಲ್ಲಿ ಬಲ ಎಂದು ಹೇಳುತ್ತಾರೆ. ನೀನು, ರಾಜನೆ, ಕೇವಲ ಮಾತಿನಲ್ಲಿ ಬಲ ಉಳ್ಳವನು. ನಿಷ್ಠುರವಾಗಿ ಮಾತನ್ನಾಡುವವನು ನೀನೆ. ನಾನು ಎಂಥವನೆಂದು ನಿನಗೇ ಗೊತ್ತಿದೆ.
ಯತೇ ಹಿ ನಿತ್ಯಂ ತವ ಕರ್ತುಮಿಷ್ಟಂ
ದಾರೈಃ ಸುತೈರ್ಜೀವಿತೇನಾತ್ಮನಾ ಚ |
ಏವಂ ಚ ಮಾಂ ವಾಗ್ವಿಶಿಖೈರ್ನಿಹಂಸಿ
ತ್ವತ್ತಃ ಸುಖಂ ನ ವಯಂ ವಿದ್ಮ ಕಿಂಚಿತ್ ॥20॥
ನಾನು ಹೆಂಡತಿಮಕ್ಕಳಿಂದ ಬದುಕಿನಿಂದ ಮತ್ತು ಶರೀರದಿಂದ ನಿನ್ನ ಇಷ್ಟವನ್ನೇ ಸಾಧಿಸಲು ಸದಾ ಯತ್ನಿಸುತ್ತಿದ್ದೇನೆ. ಹೀಗಿದ್ದರೂ ನನ್ನನ್ನು ಮಾತಿನ ಬಾಣಗಳಿಂದ ಕೊಲ್ಲುತ್ತಿರುವೆ. ನಿನ್ನಿಂದ ನಮಗೆ ಏನಾದರೂ ಸುಖವಿದ್ದೀತೆಂದು ನಾನು ಭಾವಿಸುವುದಿಲ್ಲ.
ಮಾಂ ಮಾವಮಂಸ್ಥಾ ದ್ರೌಪದೀತಲ್ಪಸಂಸ್ಥೋ
ಮಹಾರಥಾನ್ ಪ್ರತಿಹನ್ಮಿ ತ್ವದರ್ಥೇ |
ತೇನಾತಿಶಂಕೀ ಭಾರತ ನಿಷ್ಠುರೋಽಸಿ
ತ್ವತ್ತಃ ಸುಖಂ ನಾಭಿಜಾನಾಮಿ ಕಿಂಚಿತ್ ॥21॥
ದ್ರೌಪದಿಯ ಜೊತೆಗೆ ಸುಖವಾಗಿ ಶಯನದಲ್ಲಿರುವ ನೀನು ನನ್ನನ್ನು ಅವಮಾನಿಸಬೇಡ. ನಾನು ನಿನಗಾಗಿ ಮಹಾರಥರನ್ನು ಸಂಹರಿಸುತ್ತಿದ್ದೇನೆ. ನನ್ನ ಬಗ್ಗೆ ಅತಿಯಾಗಿ ಶಂಕಿಸಿ ನಿಷ್ಠುರವಾಗಿ ನುಡಿಯುವೆ, ರಾಜನೆ, ನಿನ್ನಿಂದ ಸುಖವೇನನ್ನೂ ನಾ ಕಾಣೆ.
ಪ್ರೋಕ್ತಃ ಸ್ವಯಂ ಸತ್ಯಸಂಧೇನ ಮೃತ್ಯು-
ಸ್ತವ ಪ್ರಿಯಾರ್ಥಂ ನರದೇವ ಯುದ್ಧೇ |
ವೀರಃ ಶಿಖಂಡೀ ದ್ರೌಪದೋಽಸೌ ಮಹಾತ್ಮಾ
ಮಯಾಭಿಗುಪ್ತೇನ ಹತಶ್ಚ ತೇನ ॥22॥
ಸತ್ಯಸಂಧನಾದ ಭೀಷ್ಮನು ಸ್ವತಃ ತನಗೆ ಶಿಖಂಡಿಯೇ ಮರಣಕಾರಣ ಎಂದು ಹೇಳಿದ್ದರಿಂದ ನಾನು ಶಿಖಂಡಿಯನ್ನು ರಕ್ಷಿಸಿ ಅವನ ಮೂಲಕ ಭೀಷ್ಮನನ್ನು ಕೊಲ್ಲಿಸಿದ್ದೇನೆ.
ನ ಚಾಭಿನಂದಾಮಿ ತವಾಧಿರಾಜ್ಯಂ
ಯತಸ್ತ್ವಮಕ್ಷೇಷ್ವಹಿತಾಯ ಸಕ್ತಃ |
ಸ್ವಯಂ ಕೃತ್ವಾ ಪಾಪಮನಾರ್ಯಜುಷ್ಟ-
ಮಸ್ಮಾಭಿರ್ವಾ ತರ್ತುಮಿಚ್ಛಸ್ಯರೀಂಸ್ತ್ವಮ್ ॥23॥
ನಿನ್ನ ಈ ರಾಜ್ಯದ ಒಡೆತನವನ್ನು ನಾನು ಪ್ರಶಂಸೆಮಾಡುವುದಿಲ್ಲ. ಏಕೆಂದರೆ ನೀನು ಅನಿಷ್ಟಕಾರಣವಾದ ಜೂಜಿನಲ್ಲಿ ಆಸಕ್ತನಾಗಿರುವೆ. ಹೀನ ಜನರು ಮಾಡುವ ಪಾಪಕೃತ್ಯವನ್ನು ನೀನು ಸ್ವತಃ ಮಾಡಿ ನಮ್ಮ ಸಹಾಯದಿಂದ ಈಗ ಶತ್ರು ಭಯದಿಂದ ಪಾರಾಗಲು ಬಯಸುತ್ತಿರುವೆ.
ಅಕ್ಷೇಷು ದೋಷಾ ಬಹವೋ ವಿಧರ್ಮಾಃ
ಶ್ರುತಾಸ್ತ್ವಯಾ ಸಹದೇವೋಽಬ್ರವೀದ್ ಯಾನ್ |
ತಾನ್ನೈಷಿ ತ್ವಂ ತ್ಯಕ್ತುಮಸಾಧುಜುಷ್ಟಾಂ-
ಸ್ತೇನ ಸ್ಮ ಸರ್ವೇ ನಿರಯೇ ತ್ವಯಾಸ್ತಾಃ ॥24॥
ಜೂಜಿನಲ್ಲಿ ಬಹಳ ದೋಷಗಳಿವೆ, ಪಾಪಕರ್ಮಗಳಿವೆ ಎಂದು ನೀನು ಕೇಳಿರುವೆ. ಸಹದೇವನೂ ಅವನ್ನು ಹೇಳಿದ್ದಾನೆ. ಹೀನಜನರು ಮಾಡುವ ಆ ಪಾಪಕರ್ಮಗಳನ್ನು ಬಿಡಲು ನಿನಗೆ ಮನಸ್ಸಿಲ್ಲ. ಅದರಿಂದ ನಮ್ಮನ್ನೆಲ್ಲರನ್ನೂ ನರಕದಲ್ಲಿ ಹಾಕಿರುವೆ.
ಸುಖಂ ತ್ವತ್ತೋ ನಾಭಿಜಾನೀಮ ಕಿಂಚಿದ್
ಯತಸ್ತ್ವಮಕ್ಷೈರ್ದೇವಿತುಂ ಸಂಪ್ರವೃತ್ತಃ |
ಸ್ವಯಂ ಕೃತ್ವಾ ಪರುಷಂ ಪಾಂಡವ ತ್ವಂ
ಭೂಯಸ್ತೀಕ್ಷ್ಣಾಃ ಶ್ರಾವಯಸ್ಯದ್ಯ ವಾಚಃ ॥25॥
ನಿನ್ನಿಂದ ಒಂದಿಷ್ಟೂ ಸುಖ ನಮಗಾಗುವುದನ್ನು ನಾವು ಕಂಡಿಲ್ಲ. ಏಕೆಂದರೆ ಜೂಜಾಡುವುದರಲ್ಲೇ ನೀನು ನಿರತನಾಗಿರುವೆ. ಸ್ವತಃ ನೀನು ಕ್ರೂರಕರ್ಮವನ್ನು ಮಾಡಿ ಪುನಃ ನಮಗೆ ತೀಕ್ಷ್ಣವಾದ ಮಾತುಗಳನ್ನು ನಮ್ಮ ಮುಂದೆ ನುಡಿಯುವೆ.

ಶೇತೇಸ್ಮಾಭಿರ್ನಿಹತಾ ಶತ್ರುಸೇನಾ
ಛಿನ್ನೈರ್ಗಾತ್ರೈರ್ಭೂಮಿತಳೇ ನದಂತೀ |
ತ್ವಯಾ ಹಿ ತತ್ಕರ್ಮ ಕೃತಂ ನೃಶಂಸಂ
ಯಸ್ಮಾದ್ದೋಷಃ ಕೌರವಾಣಾಂ ವಧಶ್ಚ ॥26॥
ಶತ್ರುಸೈನ್ಯವು ಈಗ ನಮ್ಮಿಂದ ಹೊಡೆಸಿಕೊಂಡು ಅಂಗಾಂಗಗಳನ್ನು ಕಡಿದುಕೊಂಡು ಅಳುತ್ತ ನೆಲದ ಮೇಲೊರಗುತ್ತಿದೆ. ಆ ಕ್ರೂರಕರ್ಮವನ್ನು ಮಾಡಿದ್ದು ನೀನು. ಅದರ ಫಲವೇ ಈ ದೋಷ ಮತ್ತು ಕುರುವಂಶದವರ ವಿನಾಶ.
ಹತಾ ಉದೀಚ್ಯಾ ನಿಹತಾಃ ಪ್ರತೀಚ್ಯಾ
ನಷ್ಟಾಃ ಪ್ರಾಚ್ಯಾ ದಾಕ್ಷಿಣಾತ್ಯಾ ವಿಶಸ್ತಾಃ |
ಕೃತಂ ಕರ್ಮಾಪ್ರತಿರೂಪಂ ಮಹದ್ಭಿಃ
ತೇಷಾಂ ಯೋಧೈರಸ್ಮದೀಯೈಶ್ಚ ಯುದ್ಧೇ ॥27॥
ಉತ್ತರ ಪಶ್ಚಿಮ ಪೂರ್ವ ದಕ್ಷಿಣದೇಶಗಳ ಎಲ್ಲ ಕ್ಷತ್ರಿಯರು ಹತರಾದರು. ಅವರ ಕಡೆಯ ಹಿರಿಯರೂ ನಮ್ಮವರೂ ಎಲ್ಲರೂ ಯುದ್ಧದಲ್ಲಿ ಅನುಪಮವಾದ ಕಾರ್ಯವನ್ನು ಮಾಡಿದರು.
ತ್ವಂ ದೇವಿತಾ ತ್ವತ್ಕೃತೇ ರಾಜ್ಯನಾಶಃ
ತ್ವತ್ಸಂಭವಂ ವ್ಯಸನಂ ನೋ ನರೇಂದ್ರ |
ಮಾಸ್ಮಾನ್ ಕ್ರೂರೈರ್ವಾಕ್‌ಪ್ರತೋದೈಸ್ತುದ ತ್ವಂ
ಭೂಯೋ ರಾಜನ್ ಕೋಪಯನ್ನಲ್ಪಬುದ್ಧ್ಯಾ ॥28॥
ನೀನು ಜೂಜಾಡಿದವನು, ನಿನಗಾಗಿ ರಾಜ್ಯನಾಶವಾಯಿತು. ನಮ್ಮ ವ್ಯಸನ ನಿನ್ನಿಂದ ಉಂಟಾಯಿತು. ಅದರಿಂದ ಕ್ರೂರವಾದ ಮಾತಿನ ಚಾಟಿಯಿಂದ ನಮ್ಮನ್ನು ಹೊಡೆಯಬೇಡ. ಅಲ್ಪಬುದ್ಧಿಯಿಂದ, ರಾಜನೆ, ನೀನು ನಮಗೆ ಮತ್ತೆ ಮತ್ತೆ ಕೋಪ ಬರಿಸಬೇಡ.
ಸಂಜಯಃ
ಏತಾ ವಾಚಃ ಪರುಷಾಃ ಸವ್ಯಸಾಚೀ
ಸ್ಥಿರಪ್ರಜ್ಞಃ ಶ್ರಾವಯಿತ್ವಾ ತತಕ್ಷ |
ಬಭೂವಾಸೌ ವಿಮನಾ ಧರ್ಮಭೀರುಃ
ಕೃತ್ವಾ ಪ್ರಾಜ್ಞಃ ಪಾತಕಂ ಕಿಂಚಿದೇವಮ್ ॥29॥
ಸಂಜಯ ನುಡಿದ– ಸ್ಥಿರಪ್ರಜ್ಞ ಅರ್ಜುನನು ಹೀಗೆ ಯುಧಿಷ್ಠಿರನಿಗೆ ಕಟುನುಡಿಗಳನ್ನಾಡಿ ನೋಯಿಸಿದ. ಅವನು ಧರ್ಮವಿಷಯದಲ್ಲಿ ಭಯಪಡುವವ ನಾದ್ದರಿಂದ ತಾನು ಸ್ವಲ್ಪ ಪಾಪ ಮಾಡಿಬಿಟ್ಟೆನೆಂದು ಮನಸಿನೊಳಗೆ ನೊಂದು ಕೊಂಡ.
ಭೃತ್ಯರಿಂದಾಗುವ ಕೆಲಸವನ್ನು ರಾಜನಿಂದ ನಿರೀಕ್ಷಿಸಲಾಗದು. ಮತ್ತು ಧರ್ಮರಾಜ ಶಕುನಿಯೊಂದಿಗೆ ಅನ್ಯಾಯದ ಜೂಜಾಡಿದ್ದು ಜೂಜಿನ ಚಟ ದಿಂದಲ್ಲ. ದೇವಕಾರ್ಯಸಿದ್ಧಿಗಾಗಿ, ಮುಹೂರ್ತಕಾಲ ಕಲ್ಯಾವೇಶಕ್ಕೊಳಗಾಗಿ, ಧೃತರಾಷ್ಟ್ರನ ಪ್ರೀತಿಗಾಗಿ ಆಡಿದ. ಧೃತರಾಷ್ಟ್ರನ ಪ್ರೀತಿಗಾಗಿಯೆ, ವನವಾಸಾದಿ ಕಷ್ಟನಷ್ಟಗಳನ್ನು ತನಗೆ ತಂದುಕೊಂಡ. ಇದು ಸ್ಪಷ್ಟವೇ ಇದ್ದರೂ ಅರ್ಜುನನು ಕೃಷ್ಣ ಹೇಳಿದಂತೆ `ವಧವಿಲ್ಲದ ವಧ' ಮಾಡುವುದಕ್ಕಾಗಿ ಪೂಜ್ಯನಾದ ಅಣ್ಣನನ್ನು ತಾನು ಹೇಗಾದರೂ ಅವಮಾನಿಸಬೇಕಾಯಿತು ಎಂದು ನೊಂದುಕೊಂಡ.
ತದಾನುತೇಪೇ ಸುರರಾಜಪುತ್ರೋ
ವಿನಿಃಶ್ವಸಂಶ್ಚಾಪ್ಯಸಿಮುದ್ಬಬರ್ಹ ॥30॥
ಅರ್ಜುನನು ಆಗ ಪಶ್ಚಾತ್ತಾಪಪಟ್ಟ. ನಿಟ್ಟುಸಿರಿಡುತ್ತ ಖಡ್ಗವನ್ನೆತ್ತಿಕೊಂಡ.
ತಮಾಹ ಕೃಷ್ಣಃ ಕಿಮಿದಂ ಪುನರ್ಭವಾನ್
ವಿಕೋಶಮಾಕಾಶನಿಭಂ ಕರೋತ್ಯಸಿಮ್ |
ಪ್ರಬ್ರೂಹಿ ಸತ್ಯಂ ಪುನರುತ್ತರಂ ವಚ-
ಸ್ತಥಾ ಪ್ರವಕ್ಷ್ಯಾಮ್ಯಹಮರ್ಥಸಿದ್ಧಯೇ ॥31॥
ಶ್ರೀಕೃಷ್ಣ ಆಗ ಅರ್ಜುನನನ್ನು ತಡೆದು ಕೇಳಿದ, `ಇದೇನು? ಪುನಃ ನೀನು ಆಕಾಶದಂತೆ ನೀಲವಾದ ಖಡ್ಗವನ್ನು ಒರೆಯಿಂದ ಹೊರಗೆ ತೆಗೆಯುತ್ತಿರುವೆ? ಸತ್ಯವನ್ನು ಹೇಳು. ನಿನ್ನ ಸಮಸ್ಯೆಗೆ ಪರಿಹಾರದ ಮಾತನ್ನು ನಿನ್ನ ಇಷ್ಟಸಿದ್ಧಿಗಾಗಿ ಪುನಃ ಹೇಳುತ್ತೇನೆ.'
ಇತ್ಯೇವ ಪೃಷ್ಟಃ ಪುರುಷೋತ್ತಮೇನ
ಸುದುಃಖಿತಃ ಕೇಶವಮಾಹ ವಾಕ್ಯಮ್ |
ಅಹಂ ಹನಿಷ್ಯೇ ಸ್ವಶರೀರಮೇವ
ಪ್ರಸಹ್ಯ ಯೇನಾಹಿತಮಾಚರಂ ವೈ ॥32॥
ಪುರುಷೋತ್ತಮ ಶ್ರೀಕೃಷ್ಣ ಹೀಗೆ ಕೇಳಿದಾಗ ಅರ್ಜುನ ಬಲು ದುಃಖಿತನಾಗಿ ಹೇಳಿದ. `ಅಣ್ಣನನ್ನು ಅಪಮಾನಿಸುವ ಮೂಲಕ ಬಹಳ ಅಹಿತವನ್ನಾಚರಿಸಿದ ನನ್ನ ಈ ಶರೀರವನ್ನು ನಾನು ನಾಶಮಾಡಿಕೊಳ್ಳುವೆನು' ಎಂದು.
ನಿಶಮ್ಯ ತತ್ಪಾರ್ಥವಚೋಽಬ್ರವೀದಿದಂ
ಧನಂಜಯಂ ಧರ್ಮಭೃತಾಂ ವರಿಷ್ಠಃ ॥33॥
ಅರ್ಜುನನ ಆ ಮಾತನ್ನು ಕೇಳಿ ಧರ್ಮರಕ್ಷಕರಲ್ಲಿ ಶ್ರೇಷ್ಠನಾದ ಶ್ರೀಕೃಷ್ಣ ಈ ಮಾತನ್ನಾಡಿದ.
ರಾಜಾನಮೇನಂ ತ್ವಮಿತೀದಮುಕ್ತ್ವಾ
ಕಿಂ ಕಶ್ಮಲಂ ಪ್ರಾವಿಶಃ ಪಾರ್ಥ ಘೋರಮ್ |

ತ್ವಂ ಚಾತ್ಮಾನಂ ಹಂತುಮಿಚ್ಛಸ್ಯರಿಘ್ನ
ನೇದಂ ಸದ್ಭಿಃ ಸೇವಿತಂ ವೈ ಕಿರೀಟಿನ್ ॥34॥
ಈ ರಾಜನನ್ನು `ನೀನು' ಎಂದು ಸಂಬೋಧಿಸಿದ ಮಾತ್ರಕ್ಕೇ ನೀನು ಏಕೆ ಘೋರವಾದ ಮೋಹದಲ್ಲಿ ಮುಳುಗಿದೆ? ಶತ್ರುನಾಶಕನೆ, ನೀನು ನಿನ್ನನ್ನೇ ನಾಶಪಡಿಸಿಕೊಳ್ಳಲು ಬಯಸುತ್ತಿರುವೆ. ಅರ್ಜುನ, ಸಜ್ಜನರು ಇಂಥ ಕೆಲಸವನ್ನು ಮಾಡುವುದಿಲ್ಲ.
ಧರ್ಮಾತ್ಮಾನಂ ಭ್ರಾತರಂ ಜ್ಯೇಷ್ಠಮದ್ಯ
ಖಡ್ಗೇನ ಚೈನಂ ಯದಿ ಹನ್ಯಾ ನೃವೀರ |
ಧರ್ಮಾದ್ಭೀತಸ್ತ್ವಂ ಕಥಂ ನಾಮ ತಸ್ಮಾತ್
ಕಿಂಚೋತ್ತರಂ ವಾऽಕರಿಷ್ಯಸ್ತ್ವಮೇವ ॥35॥
`ಧರ್ಮಾತ್ಮನಾದ ಈ ಅಣ್ಣನನ್ನು ಖಡ್ಗದಿಂದ ಕೊಂದರೆ ಅದು ಒಂದು ಧರ್ಮದ ಕೊಲೆಯಾಗುವುದೆಂದು ಭೀತನಾಗುವವನು ನೀನು, ಧರ್ಮದ ಇನ್ನೊಂದು ಕೊಲೆಯಿಂದಲೇ ಆತ್ಮಹತ್ಯಾರೂಪವಾದ `ಉತ್ತರಕರ್ಮ'ವನ್ನು ಪ್ರಾಯಶ್ಚಿತ್ತವನ್ನು ಏಕೆ, ಹೇಗೆ ಮಾಡಿಕೊಳ್ಳುವೆ?
ಒಂದು ಧರ್ಮನಾಶಕ್ಕೆ ಪ್ರಾಯಶ್ಚಿತ್ತವೆಂದು ಇನ್ನೊಂದು ಧರ್ಮನಾಶ ಮಾಡುವುದು ಯುಕ್ತವಾಗುವುದೆ?
ಸೂಕ್ಷ್ಮೋ ಧರ್ಮೋ ದುರ್ವಿದಶ್ಚಾಪಿ ಪಾರ್ಥ
ವಿಶೇಷತೋऽಜ್ಞೈಃ ಪ್ರೋಚ್ಯಮಾನಂ ನಿಬೋಧ |
ಹತ್ವಾತ್ಮಾನಮಾತ್ಮನಾ ಪ್ರಾಪ್ನುಯಾಸ್ತ್ವಂ
ವಧಾದ್ ಭ್ರಾತುರ್ನರಕಂ ಚಾತಿಘೋರಮ್ ॥36॥
`ಸೂಕ್ಷ್ಮವಾದ ಧರ್ಮವನ್ನು ತಿಳಿಯುವುದು ವಿಶೇಷವಾಗಿ ಅಜ್ಞಾನಿಗಳಿಗೆ ಬಲು ಕಷ್ಟ. ನಾನು ಹೇಳುವುದನ್ನು ಕೇಳು. ಆತ್ಮಹತ್ಯೆ ಮಾಡಿಕೊಳ್ಳುವುದರಿಂದ ಅಣ್ಣನ ಹತ್ಯೆಗಿಂತಲೂ ಹೆಚ್ಚು ಅತಿಘೋರ ನರಕಕ್ಕೇ ನೀನು ಭಾಗಿಯಾಗುವೆ.
ಪ್ರಬ್ರೂಹಿ ಪಾರ್ಥ ಸ್ವಗುಣಾನಿಹಾತ್ಮನ-
ಸ್ತತೋ ಹತಾತ್ಮಾ ಭವಿತಾಸಿ ಪಾರ್ಥ ॥37॥
`ಅದಕ್ಕೆ, ಅರ್ಜುನ, ನೀನು ನಿನ್ನ ಗುಣಗಳ ಪ್ರಶಂಸೆ ಮಾಡಿಕೊಳ್ಳು. ಆತ್ಮಪ್ರಶಂಸೆ ಆತ್ಮಹತ್ಯೆಗೆ ಸಮಾನವಾಗಿರುವುದರಿಂದ ನಿನ್ನನ್ನು ನೀನು ಕೊಂದಂತೇ ಆಗುವುದು.'
ತಥಾಸ್ತು ಕೃಷ್ಣೇತ್ಯಭಿನಂದ್ಯ ವಾಕ್ಯಂ
ಧನಂಜಯಃ ಪ್ರಾಹ ಧನುರ್ವಿನಾಮ್ಯ |
ಯುಧಿಷ್ಠಿರಂ ಧರ್ಮಭೃತಾಂ ವರಿಷ್ಠಂ
ಶೃಣುಷ್ವ ರಾಜನ್ನಿತಿ ಶಕ್ರಸೂನುಃ ॥38॥
ಅರ್ಜುನನು `ಹಾಗೇ ಆಗಲಿ ಕೃಷ್ಣ!' ಎನ್ನುತ್ತ ಕೃಷ್ಣನ ಮಾತನ್ನು ಅಭಿನಂದಿಸಿ ಬಿಲ್ಲನ್ನು ಬಾಗಿಸಿ, ಧರ್ಮರಕ್ಷಕರಲ್ಲಿ ಶ್ರೇಷ್ಠನಾದ ಯುಧಿಷ್ಠಿರನ ಮುಂದೆ `ರಾಜನೆ ಕೇಳು' ಎಂದು ಹೇಳಲುತೊಡಗಿದ.
ನ ಮಾದೃಶೋऽನ್ಯೋ ನರದೇವ ವಿದ್ಯತೇ
ಧನುರ್ಧರೋ ದೇವಮೃತೇ ಪಿನಾಕಿನಮ್ |
ಅಹಂ ಹಿ ತೇನಾನುಮತೋ ಮಹಾತ್ಮನಾ
ಕ್ಷಣೇನ ಹನ್ಯಾಂ ಸಚರಾಚರಂ ಜಗತ್ ॥39॥
ರಾಜನೆ, ನನ್ನಂಥ ಧನುರ್ಧಾರಿಯು ರುದ್ರದೇವನನ್ನು ಬಿಟ್ಟರೆ ಇನ್ನೊಬ್ಬನಿಲ್ಲ. ಮಹಾತ್ಮನಾದ ರುದ್ರನು ಅನುಮತಿ ಕೊಟ್ಟರೆ ಕ್ಷಣದಲ್ಲಿ ಈ ಚರಾಚರ ಪ್ರಪಂಚವನ್ನೇ ನಾನು ನಾಶಮಾಡಬಲ್ಲೆ.
ಮಯಾ ಹಿ ರಾಜನ್ ಸದಿಗೀಶ್ವರಾ ದಿಶೋ
ವಿಜಿತ್ಯ ಸರ್ವಾ ಭವತಃ ಕೃತಾ ವಶೇ |
ಸ ರಾಜಸೂಯಶ್ಚ ಸಮಾಪ್ತದಕ್ಷಿಣಃ
ಸಭಾ ಚ ದಿವ್ಯಾ ಭವತೋ ಮಮೌಜಸಾ ॥40॥
ರಾಜನೆ, ನಾನು ದಿಕ್ಪಾಲಕರೊಂದಿಗೆ ದಿಕ್ಕುಗಳೆಲ್ಲವನ್ನೂ ಗೆದ್ದು ನಿನ್ನ ವಶ ಮಾಡಿದ್ದೇನೆ. ನನ್ನ ಪರಾಕ್ರಮದಿಂದಲೆ ನಿನ್ನ ರಾಜಸೂಯದಲ್ಲಿ ದಕ್ಷಿಣೆ ನೀಡುವುದು ನಿನಗೆ ಸಾಧ್ಯವಾಯಿತು. ದಿವ್ಯವಾದ ಸುಧರ್ಮಸಭೆಯೂ ನಿನಗೆ ನನ್ನ ಪರಾಕ್ರಮದಿಂದ ದೊರಕಿತು.
ಪಾಣೌ ಪೃಷತ್ಕಾ ಲಿಖಿತಾ ಮಮೇಮೇ
ಧನುಶ್ಚ ಸಜ್ಯಂ ವಿತತಂ ಸಬಾಣಮ್ |
ಪಾದೌ ಚ ಮೇ ಸಶರೌ ಸಹಧ್ವಜೌ
ನ ಮಾದೃಶಂ ಯುದ್ಧಗತಂ ಜಯಂತಿ ॥41॥
ನನ್ನ ಎಡ ಹಾಗೂ ಬಲ ಅಂಗೈಗಳಲ್ಲಿ ಬಾಣಗಳ ಮತ್ತು ಹೆದೆಯೇರಿಸಿ ಬಾಗಿಸಿದ ಬಿಲ್ಲಿನ ಬಾಣಚಿಹ್ನೆಗಳಿವೆ. ನನ್ನ ಪಾದಗಳಲ್ಲಿಯೂ ರಥ ಮತ್ತು ಧ್ವಜ ಚಿಹ್ನೆಗಳಿವೆ. ನನ್ನಂಥ ವೀರನು ಯುದ್ಧದಲ್ಲಿ ನಿಂತರೆ ಅವನನ್ನು ಯಾರೂ ಗೆಲ್ಲಲಾರರು.
ಹತಾ ಉದೀಚ್ಯಾ ನಿಹತಾಃ ಪ್ರತೀಚ್ಯಾಃ
ಪ್ರಾಚ್ಯಾ ನಿರಸ್ತಾ ದಾಕ್ಷಿಣಾತ್ಯಾ ವಿಶಸ್ತಾಃ |
ಸಂಶಪ್ತಕಾನಾಂ ಕಿಂಚಿದೇವಾವಶಿಷ್ಟಂ

ಸರ್ವಸ್ಯ ಸೈನ್ಯಸ್ಯ ಹತಂ ಮಯಾರ್ಧಮ್ ॥42॥
ಉತ್ತರ ಪಶ್ಚಿಮ ಪೂರ್ವ ದಕ್ಷಿಣದೇಶಗಳ ಯೋಧರನ್ನೆಲ್ಲ ನಾನು ನಾಶಪಡಿಸಿದ್ದೇನೆ. ಸಂಶಪ್ತಕರಲ್ಲಿ ಸ್ವಲ್ಪ ಅಂಶ ಉಳಿದಿದೆ. ಇಡೀ ಕುರುಸೈನ್ಯದ ಅರ್ಧಾಂಶವನ್ನು ನಾನು ನಾಶಪಡಿಸಿದ್ದೇನೆ.
ಹಸ್ತಪಾದಗಳಲ್ಲಿ ತೋರುವ ಧನುರ್ಬಾಣಚಿಹ್ನೆಗಳಿಗೆ ಅನುಗುಣ ವಾಗಿಯೇ ನನ್ನಲ್ಲಿ ಯುದ್ಧಕೌಶಲವಿದೆ.
ಶೇತೇ ಮಯಾ ನಿಹತಾ ಭಾರತೀಯಂ
ಚಮೂ ರಾಜನ್ ದೇವಚಮೂಪ್ರಕಾಶಾ |
ಯೇ ನಾಸ್ತ್ರಜ್ಞಾಸ್ತಾನಹಂ ಹನ್ಮಿ ಶಸ್ತ್ರೈ-
ಸ್ತಸ್ಮಾಲ್ಲೋಕಂ ನೇಹ ಕರೋಮಿ ಭಸ್ಮಸಾತ್ ॥43॥
ರಾಜನೆ, ದೇವಸೈನ್ಯದಂಥ ಕೌರವಸೈನ್ಯ ನನ್ನಿಂದ ಹತವಾಗಿ ನೆಲದ ಮೇಲೆ ಒರಗಿದೆ. ಅಸ್ತ್ರಬಲ್ಲದವರನ್ನು ಶಸ್ತ್ರಗಳಿಂದಲೆ ಕೊಲ್ಲುತ್ತೇನೆ. ಅದರಿಂದ ನಾನು ಅಸ್ತ್ರದಿಂದ ಲೋಕವನ್ನು ಭಸ್ಮ ಮಾಡುವುದಿಲ್ಲ.
ಜೈತ್ರಂ ರಥಂ ಭೀಮಮಾಸ್ಥಾಯ ಕೃಷ್ಣ
ಪ್ರಯಾವ ಶೀಘ್ರಂ ಸೂತಪುತ್ರಂ ನಿಹಂತುಮ್ |
ರಾಜಾ ಭವತ್ವದ್ಯ ಸುನಿರ್ವೃತೋಽಯಂ
ಕರ್ಣಂ ರಣೇ ನಾಶಯಿತಾಸ್ಮಿ ಬಾಣೈಃ ॥44॥
ಕೃಷ್ಣ, ಸದಾ ಜಯವನ್ನೇ ತಂದುಕೊಡುವ ಶತ್ರುಭಯಂಕರವಾದ ನಮ್ಮ ರಥವನ್ನೇರಿ ನಾವು ಬೇಗನೆ ಕರ್ಣನನ್ನು ವಧಿಸಲು ಹೋಗೋಣ. ರಾಜಾ
ಯುಧಿಷ್ಠಿರನು ಇಲ್ಲಿಯೆ ಸುಖವಾಗಿರಲಿ. ಕರ್ಣನನ್ನು ರಣದಲ್ಲಿ ಬಾಣಗಳಿಂದ ನಾನೇ ವಧಿಸುತ್ತೇನೆ.
ಅದ್ಯಾಪುತ್ರಾ ತೇನ ರಾಧಾ ಭವಿತ್ರೀ
ಕುಂತೀ ಮಯಾ ವಾ ತದೃತಂ ವಿದ್ಧಿ ಕೃಷ್ಣ |
ಸತ್ಯಂ ವದಾಮ್ಯದ್ಯ ನ ಕರ್ಣಮಾಜೌ
ಶರೈರಹತ್ವಾ ಕವಚಂ ವಿಮೋಕ್ಷ್ಯೇ ಯೇ ॥45॥
ಕೃಷ್ಣ, ಇಂದು ಕರ್ಣನು ಹತನಾಗುವುದರಿಂದ ರಾಧೆ ಅಪುತ್ರಳೆನಿಸುತ್ತಾಳೆ, ಇಲ್ಲವೆ, ನಾನು ಹತನಾಗುವುದರಿಂದ ಕುಂತಿ ಅಪುತ್ರಳಾಗುತ್ತಾಳೆ, ಇದು ಸತ್ಯ. ನಾನು ಇನ್ನೂ ಒಂದು ಸತ್ಯವನ್ನು ಹೇಳುತ್ತೇನೆ ರಣದಲ್ಲಿ ಕರ್ಣನನ್ನು ಕೊಲ್ಲದೆ ನಾನು ನನ್ನ ಕವಚವನ್ನು ಬಿಚ್ಚುವುದಿಲ್ಲ.
ಸಂಜಯಃ
ಇತ್ಯೇವಮುಕತ್ವ ಪುನರಾಹ ಪಾರ್ಥೋ
ಯುಧಿಷ್ಠಿರಂ ಧರ್ಮಭೃತಾಂ ವರಿಷ್ಠಮ್ ॥46॥
ಸಂಜಯ ನುಡಿದ– ಅರ್ಜುನ ಹೀಗೆ ಹೇಳಿ ಪುನಃ ಯುಧಿಷ್ಠಿರನಿಗೆ ಹೇಳಿದ.
ವಿಮುಕ್ತಶಸತ್ರುಸ್ತ್ರಧನುರ್ವಿಸೃಜ್ಯ
ಕೋಶೇ ಚ ಖಡ್ಗಂ ವಿನಿಧಾಯ ತೂರ್ಣಮ್ |
ಸ ವ್ರೀಡಯಾ ನಮ್ರಶಿರಾಃ ಕಿರೀಟೀ
ಯುಧಿಷ್ಠಿರಂ ಪ್ರಾಂಜಲಿರಭ್ಯುವಾಚ ॥47॥
ಶಸತ್ರುಸ್ತ್ರಗಳನ್ನು ಬಿಲ್ಲನ್ನು ಕೆಳಗಿಟ್ಟು, ಖಡ್ಗವನ್ನು ಒರೆಯಲ್ಲಿ ಸೇರಿಸಿ, ಲಜ್ಜೆಯಿಂದ ತಲೆತಗ್ಗಿಸಿಕೊಂಡು ಯುಧಿಷ್ಠಿರನಿಗೆ ಅರ್ಜುನ ಬೇಗನೆ ಕೈಮುಗಿದು ಹೇಳಿದ.
ಪ್ರಸೀದ ರಾಜನ್ ಕ್ಷಮ ಯನ್ಮಯೋಕ್ತಂ
ಕಾಲೇ ಭವಾನ್ ವೇತ್ಸ್ಯತಿ ತನ್ನಮಸ್ತೇ ॥48॥
`ರಾಜನೆ, ನಾನು ಹೇಳಿದ್ದನ್ನು ಕ್ಷಮಿಸು, ಪ್ರಸನ್ನನಾಗು. ನಾನೀಗ ಹೇಳಿದ್ದು ಸೋದರಹತ್ಯೆ ಮತ್ತು ಆತ್ಮಹತ್ಯೆಗಳಿಗೆ ಪರ್ಯಾಯವಾಗಿ ಕಾಲಾನುಸಾರ ಹೇಳಿದ್ದಾದ್ದರಿಂದ ಅದನ್ನು ಹಾಗೇ ತಿಳಿಯುವಿ ಎಂದು ನಂಬುತ್ತೇನೆ. ನಿನಗೆ ನಮಿಸುತ್ತೇನೆ.'
ಪ್ರಸಾದ್ಯ ರಾಜಾನಮಮಿತ್ರಸಾಹಂ
ಸ್ಥಿತೋಽಬ್ರವೀಚ್ಚೈನಮಭಿಪ್ರಪನ್ನಃ |
ನೈವಂ ಚಿರಾತ್ ಕ್ಷಿಪ್ರಮಿದಂ ಭವಿಷ್ಯತ್
ಕೃಷ್ಣಪ್ರಸಾದಾತ್ ತವ ಚೈವ ರಾಜನ್ ॥49॥
ಶತ್ರುಗಳನ್ನು ಇದಿರಿಸಬಲ್ಲ ರಾಜಾ ಯುಧಿಷ್ಠಿರನನ್ನು ಅರ್ಜುನ ಸಮಾಧಾನ ಪಡಿಸಿ ಭಕ್ತಿಯಿಂದ ನಮಿಸಿ ಹೇಳಿದ `ರಾಜನೆ, ಇಂಥ ಕಹಿಪ್ರಸಂಗ ಕೃಷ್ಣಾನುಗ್ರಹ ದಿಂದ ನಿನಗೆ ಇಂದೂ ಮುಂದೂ ಎಂದೆಂದಿಗೂ ಮರುಕಳಿಸದು.
ಯಾಮ್ಯೇಷ ಭೀಮಂ ಸಮರಾತ್ ಪ್ರಮೋಕ್ತುಂ
ಸರ್ವಾತ್ಮನಾ ಸೂತಪುತ್ರಂ ಚ ಹಂತುಮ್ ॥50॥
ತವ ಪ್ರಿಯಾರ್ಥಂ ಮಮ ಜೀವಿತಂ ಹಿ
ಬ್ರವೀಮಿ ಸತ್ಯಂ ತದವೇಹಿ ರಾಜನ್ |
ಇತಿ ಪ್ರಯಾಸ್ಯನ್ನುಪಸಂಗೃಹ್ಯ ಪಾದೌ
ಸಮುತ್ಥಿತೋ ದೀಪ್ತತೇಜಾಃ ಕಿರೀಟೀ ॥51॥

`ಸಮರದಿಂದ ಭೀಮನಿಗೆ ವಿರಾಮ ನೀಡುವುದಕ್ಕೂ ಸರ್ವಾತ್ಮನಾ ಕರ್ಣನನ್ನು ವಧಿಸುವುದಕ್ಕೂ ನಾನು ತೆರಳುತ್ತೇನೆ. ನಿನ್ನ ಪ್ರಿಯ ಹಿತಕ್ಕಾಗಿ ನನ್ನ ಬಾಳು ಮುಡಿಪಾಗಿದೆ. ನಿಜವನ್ನೇ ಹೇಳುತ್ತಿದ್ದೇನೆ, ತಿಳಿದುಕೊ ರಾಜನೆ' ಎಂದು ರಣಕ್ಕೆ ಹೋಗುವ ಮುನ್ನ ಅಣ್ಣನ ಕಾಲುಗಳನ್ನು ಮುಟ್ಟಿ, ಹೊಳೆಯುವ ತೇಜಸ್ಸುಳ್ಳ ಅರ್ಜುನ ಎದ್ದುನಿಂತ.
ಏತಚ್ಛ್ರುತ್ವಾ ಪಾಂಡವೋ ಧರ್ಮರಾಜೋ
ಭ್ರಾತುರ್ವಾಕ್ಯಂ ಪರುಷಂ ಫಲ್ಗುನಸ್ಯ |
ಉತ್ಥಾಯ ತಸ್ಮಾಚ್ಛಯನಾದುವಾಚ
ಪಾರ್ಥಂ ತತೋ ದುಃಖಪರೀತಚೇತಾಃ ॥52॥
ಆದರೆ ಧರ್ಮರಾಜ ಅರ್ಜುನನ ಕಟುನುಡಿಗಳನ್ನು ಕೇಳಿ ಮನದಲ್ಲಿ ದುಃಖ ತುಂಬಿಕೊಂಡು ಶಯ್ಯೆಯಿಂದ ಎದ್ದು ಅರ್ಜುನನಿಗೆ ನುಡಿದ.
ಕೃತಂ ಮಯಾ ಪಾರ್ಥ ಯಥಾ ನ ಸಾಧು
ಯೇನ ಪ್ರಾಪ್ತಂ ವ್ಯಸನಂ ವಃ ಸುಘೋರಮ್ |
ತಸ್ಮಾಚ್ಛಿರಶ್ಛಿಂಧಿ ಮಮೇದಮದ್ಯ
ಕುಲಾಂತಕಸ್ಯಾಧಮಪೂರುಷಸ್ಯ ॥53॥
ಅರ್ಜುನ, ನಾನು ಮಾಡಿದ್ದು ಸರಿಯಲ್ಲ. ನಿಮಗೆ ಘೋರವಾದ ವ್ಯಸನ ಉಂಟಾಗುವಂತೆ ಮಾಡಿದ್ದೇನೆ. ಅದರಿಂದ ನನ್ನ ತಲೆಯನ್ನು ಈಗಲೆ ಕತ್ತರಿಸು. ನಾನು ಕುಲಕ್ಕೆ ಮೃತ್ಯು, ಅಧಮ ಪುರುಷ.
ಪಾಪಸ್ಯ ಪಾಪವ್ಯಸನಾನ್ವಿತಸ್ಯ
ವಿಮೂಢಬುದ್ಧೇರಲಸಸ್ಯ ಭೀರೋಃ |
ವೃದ್ಧಾವಮಂತುಃ ಪರುಷಸ್ಯ ಚೈವ
ಕಿಂ ತೇ ಚಿರಂ ಮಾಮನುವೃತ್ಯ ರೂಕ್ಷಮ್ ॥54॥
ಪಾಪಿ ನಾನು, ಪಾಪಕರವಾದ ಜೂಜಿನ ಚಟ ಉಳ್ಳವನು. ಮಂಕು ಬುದ್ಧಿಯವನು. ಸೋಮಾರಿ, ಹೇಡಿ, ಹಿರಿಯರನ್ನು ಅವಮಾನಿಸುವವನು, ಕಠಿನ ಸ್ವಭಾವದವನು. ಒರಟು ಸ್ವಭಾವದವನು. ಸದಾ ನನ್ನ ಸೇವೆ ಮಾಡಿದರೆ ನಿನಗೇನು ಫಲ?
ಗಚ್ಛಾಮ್ಯಹಂ ವನಮೇವಾದ್ಯ ಪಾಪಃ
ಸುಖಂ ಭವಾನ್ ವರ್ತತಾಂ ಮದ್ವಿಹೀನಃ |
ಯೋಗ್ಯೋ ರಾಜಾ ಭೀಮಸೇನೋ ಮಹಾತ್ಮಾ
ಕ್ಲೀಬಸ್ಯ ವಾ ಮಮ ಕಿಂ ರಾಜ್ಯಕೃತ್ಯಮ್ ॥55॥
ನಾನು ಇಂದೇ ವನವಾಸಕ್ಕೆ ಹೋಗುವೆನು, ಪಾಪಿ, ನಾನಿಲ್ಲದಿರುವುದರಿಂದ ನೀನು ಸುಖವಾಗಿರು. ಮಹಾತ್ಮ ಭೀಮನೆ ಯೋಗ್ಯರಾಜನಾಗಬಲ್ಲ. ನಾನು ನಪುಂಸಕ. ನನ್ನಿಂದ ರಾಜಕಾರ್ಯ ಏನು ನಡೆದೀತು?
ನ ಚಾಸ್ಮಿ ಶಕ್ತಃ ಪರುಷಾಣಿ ಸೋಢುಂ
ಪುನಸ್ತವೇಮಾನಿ ರುಷಾನ್ವಿತಸ್ಯ |
ಭೀಮೋಽಸ್ತು ರಾಜಾ ಮಮ ಜೀವಿತೇನ
ಕಿಂ ಕಾರ್ಯಮದ್ಯಾವಮತಸ್ಯ ವೀರ ॥56॥
ಕೋಪದಿಂದ ನೀನಾಡುವ ಈ ಕಟುನುಡಿಗಳನ್ನು ಪುನಃ ಸಹಿಸಿಕೊಳ್ಳಲು ನನಗೆ ಶಕ್ತಿ ಇಲ್ಲ. ಭೀಮ ರಾಜನಾಗಲಿ. ಅವಮಾನಿತನಾದ ನಾನು ಈಗ ಬದುಕಿದ್ದು ಏನು ಫಲ?
ಇತ್ಯೇವಮುಕತ್ವ ಸಹಸೋತ್ಪಪಾತ
ರಾಜಾ ತತಸ್ತಚ್ಛಯನಂ ವಿಹಾಯ |
ಇಯೇಷ ನಿರ್ಗಂತುಮಥೋ ವನಾಯ
ತಂ ವಾಸುದೇವಃ ಪ್ರಣತೋಽಭ್ಯುವಾಚ ॥57॥
ಹೀಗೆ ಹೇಳಿ ಧರ್ಮರಾಜ ಹಾಸಿಗೆಬಿಟ್ಟು ಥಟ್ಟನೆ ಎದ್ದುನಿಂತ. ಕಾಡಿಗೆ ಹೋಗಲು ಬಯಸಿದ. ಅವನಿಗೆ ಕೃಷ್ಣ ನಮಸ್ಕರಿಸಿ ನುಡಿದ.
ರಾಜನ್ ನ ವಿದಿತಂ ತತ್ತೇ ಯಥಾ ಗಾಂಡೀವಧನ್ವನಃ |
ಪ್ರತಿಜ್ಞಾ ಸತ್ಯಸಂಧಸ್ಯ ಗಾಂಡೀವಂ ಪ್ರತಿ ವೈ ಶ್ರುತಾ ॥58॥
ರಾಜನೆ, ಸತ್ಯಸಂಧ ಗಾಂಡೀವಧನುರ್ಧಾರಿ ಅರ್ಜುನನು ಗಾಂಡೀವದ ವಿಷಯದಲ್ಲಿ ಮಾಡಿದ ಪ್ರತಿಜ್ಞೆಯನ್ನು ನೀನೀಗಲೇ ಕೇಳಿರುವೆ. ಇದು ನಿನಗೆ ಗೊತ್ತಿರಲಿಲ್ಲ.
ಬ್ರೂಯಾದ್ಯ ಏವಂ ಗಾಂಡೀವಂ ದೇಹ್ಯನ್ಯಸ್ಮೈ ತ್ವಮಿತ್ಯುತ |
ಸ ವಧ್ಯೋಽಸ್ಯ ಪುಮಾಂಲ್ಲೋಕೇ ತ್ವಯಾ ಚೋಕ್ತೋಽಯಮೀದೃಶಮ್
॥59॥
ಗಾಂಡೀವವನ್ನು ಇನ್ನೊಬ್ಬನಿಗೆ ಕೊಡು ಎಂದು ಲೋಕದಲ್ಲಿ ಯಾವನಾದರೂ ಹೇಳಿದರೆ ಅವನು ಅರ್ಜುನನ ಕೈಯಲ್ಲಿ ವಧ್ಯನಾಗುವನು. ನೀನೀಗ ಇಂಥ ಮಾತನ್ನು ಆಡಿರುವೆ.
ಅತಃ ಸತ್ಯಾಂ ಪ್ರತಿಜ್ಞಾಂ ತಾಂ ಪಾರ್ಥೇನ ಪರಿರಕ್ಷತಾ |
ಮಚ್ಛಂದಾದವಮಾನೋಽಯಂ ಕೃತಸ್ತವ ಮಹೀಪತೇ ॥60॥
ತಾನು ಮಾಡಿದ್ದ ಪ್ರತಿಜ್ಞೆಯನ್ನು ಸತ್ಯವಾಗಿಸಿ ರಕ್ಷಣೆ ಮಾಡುವುದಕ್ಕಾಗಿ ಅರ್ಜುನನು ನನ್ನ ಇಚ್ಛೆಯಂತೆಯೆ ನಿನಗೆ ಅವಮಾನ

ಮಾಡಿದ್ದಾನೆ.
ಗುರೂಣಾಮವಮಾನೋ ಹಿ ವಧ ಇತ್ಯಭಿಧೀಯತೇ ॥61॥
ಹಿರಿಯರಿಗೆ ಅವಮಾನ ಮಾಡಿದರೆ ಅವರಿಗೆ ಅದು ವಧವೆನಿಸುತ್ತದೆ.
ತಸ್ಮಾತ್ತ್ವಂ ವೈ ಮಹಾಬಾಹೋ ಮಮ ಪಾರ್ಥಸ್ಯ ಚೋಭಯೋಃ |
ವ್ಯತಿಕ್ರಮಮಿಮಂ ರಾಜನ್ ಸಂಕ್ಷಮಸ್ವಾರ್ಜುನಂ ಪ್ರತಿ ॥62॥
ಅದರಿಂದ, ರಾಜನೆ, ನನ್ನ ಮತ್ತು ಅರ್ಜುನ ಇಬ್ಬರ ಈ ಅಪಚಾರವನ್ನು ನೀನು ಅರ್ಜುನನಿಗಾಗಿ ಕ್ಷಮಿಸು.
ಶರಣಂ ತ್ವಾಂ ಮಹಾರಾಜ ಪ್ರಪನ್ನೌ ಸ್ವ ಉಭಾವಪಿ |
ಕ್ಷನ್ತುಮರ್ಹಸಿ ಮೇ ರಾಜನ್ ಪ್ರಣತಸ್ಯಾಭಿಯಾಚತಃ ॥63॥
ಮಹಾರಾಜ, ನಾವಿಬ್ಬರೂ ನಿನ್ನನ್ನು ಶರಣು ಹೊಂದಿದ್ದೇವೆ. ನಾನು ನಮಿಸಿ ಬೇಡಿಕೊಳ್ಳುತ್ತೇನೆ, ಕ್ಷಮಿಸು.
ರಾಧೇಯಸ್ಯಾದ್ಯ ಪಾಪಸ್ಯ ಭೂಮಿಃ ಪಾಸ್ಯತಿ ಶೋಣಿತಮ್ |
ಸತ್ಯಂ ತೇ ಪ್ರತಿಜಾನಾಮಿ ಹತಂ ವಿದ್ಧ್ಯದ್ಯ ಸೂತಜಮ್ ॥64॥
ಪಾಪಿ ಕರ್ಣನ ನೆತ್ತರನ್ನು ಧರೆ ಪಾನ ಮಾಡುತ್ತದೆ, ಇದು ಸತ್ಯ, ಶಪಥ ಮಾಡಿ ನಿನಗೆ ಹೇಳುತ್ತೇನೆ. ಕರ್ಣನು ಇಂದು ಸತ್ತನೆಂದೇ ತಿಳಿ.
ಯಸ್ಯೇಚ್ಛಸಿ ವಧಂ ತಸ್ಯ ಗತಮೇವಾದ್ಯ ಜೀವಿತಮ್ ॥65॥
ನೀನು ಅವನ ವಧವನ್ನು ಬಯುಸುವಿ ಎಂದಮೇಲೆ ಅವನ ಆಯುಸ್ಸು ಇಂದೇ ತೀರಿತು.
ಇತಿ ಕೃಷ್ಣವಚಃ ಶ್ರುತ್ವಾ ಧರ್ಮರಾಜೋ ಯುಧಿಷ್ಠಿರಃ |
ಸಸಂಭ್ರಮಂ ಹೃಷೀಕೇಶಮುತ್ಥಾಪ್ಯ ಪ್ರಣತಂ ತದಾ ॥66॥
ಕೃತಾಂಜಲಿಮಿದಂ ವಾಕ್ಯಮುವಾಚಾನಂತರಂ ವಚಃ ॥67॥
ಹೀಗೆ ಕೃಷ್ಣನ ಮಾತನ್ನು ಕೇಳಿ ಧರ್ಮರಾಜ ಸಡಗರದಿಂದ ನಮಿಸಿದ್ದ ಕೃಷ್ಣನನ್ನು ಎಬ್ಬಿಸಿ, ಕೈಮುಗಿದು ಅವನಿಗೆ ಒಡನೆ ಈ ಮಾತನ್ನು ನುಡಿದ.
ಏವಮೇತದ್ಯಥಾತ್ಥ ತ್ವಮಸ್ತ್ಯೇಷೋಽತಿಕ್ರಮೋ ಮಮ |
ಅನುನೀತೋಽಸ್ಮಿ ಗೋವಿಂದ ತಾರಿತಶ್ಚಾದ್ಯ ಮಾಧವ ॥68॥
ಕೃಷ್ಣ, ನೀನು ಹೇಳಿದ್ದು ಸರಿಯೆ. ನನ್ನಿಂದ ಈ ಒಂದು ಅತಿಕ್ರಮ ನಡೆದಿದೆ. ಅದರಿಂದ ನನ್ನನ್ನು ಮುನ್ನಡೆಸಿ ಪಾರುಮಾಡಿರುವೆ.
ಮೋಕ್ಷಿತಾ ವ್ಯಸನಾದ್ ಘೋರಾದ್ ವಯಮದ್ಯ ತ್ವಯಾಚ್ಯುತ ॥69॥
ಘೋರ ಆಪತ್ತಿನಿಂದ ನೀನು ನಮ್ಮನ್ನು ಬಿಡುಗಡೆ ಮಾಡಿರುವೆ.
ಭವಂತಂ ನಾವಮಾಸಾದ್ಯ ಹ್ಯಾವಾಂ ವ್ಯಸನಸಾಗರಾತ್ |
ಘೋರಾದದ್ಯ ಸಮುತ್ತೀರ್ಣಾವುಭಾವಜ್ಞಾನಮೋಹಿತೌ ॥70॥
ಘೋರವಾದ ದುಃಖಸಾಗರದಿಂದ ಇಂದು ಅಜ್ಞಾನಮೋಹಿತರಾದವರು ಇಬ್ಬರೂ ನಾವು ನಿನ್ನನ್ನು ನೌಕೆಯಾಗಿ ಮಾಡಿಕೊಂಡು ದಾಟಿಬಿಟ್ಟೆವು.
ತ್ವದ್ಬುದ್ಧಿಪ್ಲವಮಾಸಾದ್ಯ ದುಃಖಶೋಕಾರ್ಣವಾದ್ ವಯಮ್ |
ಸಮುತ್ತೀರ್ಣಾಃ ಸಹಾಮಾತ್ಯಾಃ ಸನಾಥಾಃ ಸ್ಮ ತ್ವಯಾಚ್ಯುತ ॥71॥
ನಿನ್ನ ಬುದ್ಧಿಯನ್ನು ನೌಕೆಯಾಗಿ ಆಶ್ರಯಿಸಿಕೊಂಡು ದುಃಖಶೋಕ ಸಾಗರದಿಂದ ನಾವು ನಮ್ಮ ಪರಿವಾರದೊಂದಿಗೆ ಪಾರಾದೆವು, ನೀನೇ ನಮಗೆ ರಕ್ಷಕನಾಗಿರುವೆ, ಕೃಷ್ಣ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಧರ್ಮರಾಜಾರ್ಜುನಸಂವಾದೇ ಸಪ್ತಷಷ್ಟಿತಮೋಽಧ್ಯಾಯಃ ॥67॥

ಮಹಾಭಾರತತಾತ್ಪರ್ಯನಿರ್ಣಯ
ತತಃ ಪ್ರಣಮ್ಯ ಬೀಭತ್ಸುರಗ್ರಜಂ ಪರಿರಂಭಿತಃ |
ತೇನಾಭಿನಂದಿತಃ ಪ್ರೀತ್ಯಾ ಚಾಶೀರ್ಭಿಃ ಪ್ರಯಯೌ ಯುಧೇ ॥137॥
ಬಳಿಕ ಅರ್ಜುನ ಅಣ್ಣನನ್ನು ನಮಿಸಿ ಅವನ ಆಲಿಂಗನ ಪಡೆದು ಅವನಿಂದ ಪ್ರೀತಿಯ ಅಶೀರ್ವಾದಗಳಿಂದ ಅಭಿನಂದಿತನೂ ಆಗಿ ಯುದ್ಧಕ್ಕೆ ಹೊರಟ.

ಅರವತ್ತೆಂಟನೆಯ ಅಧ್ಯಾಯ
ಯುಧಿಷ್ಠಿರ ಕ್ಷಮಿಸಿ ಕರ್ಣವಧೆಗೆ ಅನುಜ್ಞೆಯನ್ನು,
ಜಯಾಶೀರ್ವಾದಗಳನ್ನು ಅರ್ಜುನನಿಗೆ ನೀಡುತ್ತಾನೆ.
ಸಂಜಯಃ
ಇತಿ ಸ್ಮ ಕೃಷ್ಣವಚನಾತ್ಪ್ರತ್ಯುಚ್ಯಾರ್ಯ ಯುಧಿಷ್ಠಿರಮ್ |
ಬಭೂವ ವಿಮನಾಃ ಪಾರ್ಥ ಕಿಂಚಿತ್ ಕೃತ್ವೇವ ಪಾತಕಮ್ ॥1॥
ಸಂಜಯ ನುಡಿದ– ಹೀಗೆ ಕೃಷ್ಣನ ಆದೇಶದಂತೆ ಅರ್ಜುನನು ಯುಧಿಷ್ಠಿರನಲ್ಲಿ ಕ್ಷಮಾಯಾಚನೆ ಮಾಡಿಯೂ ಕೂಡ ತಾನು ಪಾಪ ಮಾಡಿದ್ದಂತೂ ನಿಜವೆ ಎಂದು ಮನಸ್ಸಿನಲ್ಲಿ ಸ್ವಲ್ಪ ದುಃಖಿತನಾದ.
ತತೋಽಬ್ರವೀದ್ ವಾಸುದೇವಃ ಪ್ರಹಸನ್ನಿವ ಪಾಂಡವಮ್ |

ಕಥಂ ನಾಮ ಭವೇದೇತದ್ ಯದಿ ತ್ವಂ ಪಾರ್ಥ ಧರ್ಮಜಮ್ |
ಅಸಿನಾ ತೀಕ್ಷ್ಣಧಾರೇಣ ಹನ್ಯಾ ಧರ್ಮೇ ವ್ಯವಸ್ಥಿತಮ್ ||2||
ಆಗ ಕೃಷ್ಣ ನಕ್ಕು ಹೇಳಿದ ಅರ್ಜುನ, ಒಂದುವೇಳೆ ಧರ್ಮದಲ್ಲಿ ಸ್ಥಿರನಾಗಿದ್ದ ಧರ್ಮರಾಜನನ್ನು ನೀನು ಹರಿತವಾದ ಅಲುಗಿನ ಖಡ್ಗದಿಂದ ಸಂಹರಿಸಿದ್ದರೆ ಅದರ ಪರಿಣಾಮ ಹೇಗಿರುತ್ತಿತ್ತು?
ತ್ವಮಿತ್ಯುಕ್ತ್ವೈವ ರಾಜಾನಮೇವಂ ಕಶ್ಮಲಮಾವಿಶಃ |
ಹತ್ವಾ ತು ನೃಪತಿಂ ಪಾರ್ಥ ಅಕರಿಷ್ಯಃ ಕಿಮುತ್ತರಮ್ |
ಏವಂ ಸುದುರ್ವಿದೋ ಧರ್ಮೋ ಮಂದಪ್ರಜ್ಞೈರ್ವಿಶೇಷತಃ ||3||
ಕೇವಲ `ನೀನು' ಎಂಬ ಸಂಬೋಧನೆ ಮಾಡಿಯೇ ಹೀಗೆ ನೀನು ದುಃಖಿತನಾಗಿರುವೆ. ಇನ್ನು, ರಾಜನನ್ನು ಖಡ್ಗದಿಂದ ಸಂಹರಿಸಿದ್ದರೆ ಅದಕ್ಕೆ ಏನು ಪರಿಹಾರ ಮಾಡುತ್ತಿದ್ದೆ? ಹೀಗೆ ಧರ್ಮವು ವಿಶೇಷವಾಗಿ ಮಂದಬುದ್ಧಿಯವರಿಗೆ ತಿಳಿಯಲು ಅಶಕ್ಯ.
ಹಿಂದೆ (ಅ.67-ಶ್ಲೋ.34, 35) ಹೇಳಿದ್ದೇ ಇಲ್ಲಿ ಪುನರುಕ್ತವಾಗಿದೆ, ಏಕೆಂದರೆ ಅರ್ಜುನ ಈಗ ಹಿಂದಿನಂತೇ ಪುನಃ ದುಃಖಿತನಾಗಿದ್ದಾನೆ. ಅದರಿಂದ ಪುನರುಕ್ತಿ ದೋಷವಲ್ಲ. ಪ್ರಕ್ಷಿಪ್ತವೂ ಅಲ್ಲ.
ಸ ಭವಾನ್ ಧರ್ಮಭೀರುತ್ವಾದ್ ಧ್ರುವಮೈಷ್ಯನ್ಮಹತ್ತಮಃ |
ನರಕಂ ಘೋರರರೂಪಂ ಚ ಭ್ರಾತುರ್ಜ್ಯೇಷ್ಠಸ್ಯ ವೈ ವಧಾತ್ ||4||
ಧರ್ಮವಿಷಯದಲ್ಲಿ ಭಯಪಡುವವನಾದ್ದರಿಂದ ನೀನು ಈ ಅಣ್ಣನ ವಧಕ್ಕಿಂತಲೂ ನಿಶ್ಚಯವಾಗಿ ಘೋರಸ್ವರೂಪದ ನರಕವನ್ನೂ ಮಹಾ ದುಃಖವನ್ನೂ ನಿಶ್ಚಯವಾಗಿ ಹೊಂದುತ್ತಿದ್ದೆ.
ಸ ತ್ವಂ ಧರ್ಮಭೃತಾಂ ಶ್ರೇಷ್ಠಂ ರಾಜಾನಂ ಧರ್ಮಸಂಹಿತಮ್ |
ಪ್ರಸಾದಯ ಕುರುಶ್ರೇಷ್ಠಮೇತದತ್ರ ಮತಂ ಮಮ ||5||
ಈಗ ನೀನು ಧರ್ಮರಕ್ಷಕರಲ್ಲಿ ಶ್ರೇಷ್ಠನಾದ ಧರ್ಮಾಸಕ್ತನಾದ ರಾಜನನ್ನು ಒಲಿಸಿಕೊಳ್ಳು. ಈ ವಿಷಯದಲ್ಲಿ ನನ್ನ ಅಭಿಪ್ರಾಯ ಇದು.
ಪ್ರಸಾದ್ಯ ಭಕ್ತ್ಯಾ ರಾಜಾನಂ ಪ್ರೀತಂ ಚೈವ ಯುಧಿಷ್ಠಿರಮ್ |
ಪ್ರಯಾಮಸ್ತ್ವರಿತಾ ಯೋದ್ಧುಂ ಸೂತಪುತ್ರರಥಂ ಪ್ರತಿ ||6||
ಭಕ್ತಿಯಿಂದ ಸಂತುಷ್ಟನಾಗುವ ಯುಧಿಷ್ಠಿರನನ್ನು ಒಲಿಸಿಕೊಂಡು ನಾವು ಬೇಗನೆ ಯುದ್ಧ ಮಾಡಲು ಕರ್ಣನ ರಥದ ಕಡೆಗೆ ಹೋಗೋಣ.
ಹತ್ವಾ ಸುದುರ್ಜಯಂ ಕರ್ಣಂ ತ್ವಮದ್ಯ ನಿಶಿತೈಃ ಶರೈಃ |
ವಿಪುಲಂ ಪ್ರೀತಿಮಾಧತ್ಸ್ವ ಧರ್ಮಪುತ್ರಸ್ಯ ಮಾನದ ||7||
ಜಯಿಸಲಾಗದ ಕರ್ಣನನ್ನು ನೀನು ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿ ಧರ್ಮರಾಜನಿಗೆ ಬಹಳ ಸಂತೋಷವನ್ನುಂಟು ಮಾಡು.
ಏತದತ್ರ ಮಹಾಬಾಹೋ ಪ್ರಾಪ್ತಕಾಲಂ ಮತಂ ಮಮ |
ಏವಂ ಕೃತೇ ಕೃತಂ ಚೈವ ತವ ಕಾರ್ಯಂ ಭವಿಷ್ಯತಿ ||8||
ಅರ್ಜುನ, ಇದು ನೀನು ಈಗ ಮಾಡಬೇಕಾಗಿರುವ ಕೆಲಸವೆಂದು ನನ್ನ ಅಭಿಪ್ರಾಯ. ಹೀಗೆ ಮಾಡಿದಾಗಲೆ ನಿನ್ನ ಕರ್ಣವಧ ಕಾರ್ಯ ಕೈಗೂಡುವುದು.
ತತೋಽರ್ಜುನೋ ಮಹಾರಾಜ ಲಜ್ಜಯಾ ವೈ ಸಮನ್ವಿತಃ |
ಧರ್ಮರಾಜಸ್ಯ ಚರಣೌ ಪ್ರಪೇದೇ ಶಿರಸಾಽನಘ ||9||
ಆಗ, ಮಹಾರಾಜ, ಅರ್ಜುನನು ಲಜ್ಜಾಯುಕ್ತನಾಗಿ ಧರ್ಮರಾಜನ ಕಾಲುಗಳ ಮೇಲೆ ತಲೆ ಇಟ್ಟು ನಮಿಸಿದ.
ಉವಾಚ ಭರತಶ್ರೇಷ್ಠ ಪ್ರಸೀದೇತಿ ಪುನಃ ಪುನಃ |
ಕ್ಷಮಸ್ವ ರಾಜನ್ ಯತ್ಪ್ರೋಕ್ತಂ ಧರ್ಮಕಾಮೇನ ಭೀರುಣಾ ||10||
ಪ್ರಸನ್ನನಾಗೆಂದು ಪುನಃ ಪುನಃ ನುಡಿದ. `ಪ್ರತಿಜ್ಞಾಪಾಲನರೂಪವಾದ ಧರ್ಮದ ಬಯಕೆಯಿಂದ ಭೀತನಾಗಿ ನಿನ್ನ ಮುಂದೆ ನಾನೇನು ನಿಷ್ಠುರವಾಗಿ ಮಾತನಾಡಿದೆನೊ ಅದನ್ನು ಕ್ಷಮಿಸು' ಎಂದ.
ಪಾದಯೋಃ ಪತಿತಂ ದೃಷ್ಟ್ವಾ ಧರ್ಮರಾಜೋ ಯುಧಿಷ್ಠಿರಃ |
ಧನಂಜಯಮಮಿತ್ರಘ್ನಂ ರುದಂತಂ ಭರತರ್ಷಭ ||11||
ಉತ್ಥಾಪ್ಯ ಭ್ರಾತರಂ ರಾಜಾ ಧರ್ಮರಾಜೋ ಧನಂಜಯಮ್ |
ಸಮಾಶ್ಲಿಷ್ಯ ಚ ಸಸ್ನೇಹಂ ಪ್ರರುರೋದ ಮಹೀಪತಿಃ ||12||
ಕಣ್ಣೀರು ಸುರಿಸುತ್ತ ಕಾಲಿಗೆ ಬಿದ್ದ ಶತ್ರುನಾಶಕನಾದ ಅರ್ಜುನನನ್ನು ನೋಡಿ ರಾಜಾ ಯುಧಿಷ್ಠಿರನು ಅವನನ್ನು ಎಬ್ಬಿಸಿ, ಪ್ರೀತಿಯಿಂದ ಆಲಿಂಗಿಸಿ ಕಣ್ಣೀರು ಸುರಿಸಿದ.
ರುದಿತ್ವಾ ತು ಚಿರಂ ಕಾಲಂ ಭ್ರಾತರೌ ಸುಮಹಾದ್ಯುತೀ |
ಕೃತಶೌಚೌ ನರವ್ಯಾಘ್ರೌ ಪ್ರೀತಿಮಂತೌ ಬಭೂವತುಃ ||13||
ಮಹಾಪ್ರಕಾಶವುಳ್ಳ ಸೋದರರು ಇಬ್ಬರೂ ಬಹಳ ಹೊತ್ತು ಕಣ್ಣೀರು ಸುರಿಸಿ ಅದಕ್ಕೆ ಶುದ್ಧಿ ಮಾಡಿಕೊಂಡು ಪ್ರಸನ್ನರಾದರು.
ತತ ಆಶ್ಲಿಷ್ಯ ಸ ಪ್ರೇಮ್ಣಾ ಮೂರ್ಧ್ನಿ ಚಾಘ್ರಾಯ ಪಾಂಡವಮ್ |
ಪ್ರೀತ್ಯಾ ಪರಮಯಾ ಯುಕ್ತಃ ಪ್ರಸ್ಮಯಂಶ್ಚಾಬ್ರವೀಜ್ಜಯಮ್ ||14||
ಬಳಿಕ ಯುಧಿಷ್ಠಿರನು ಅರ್ಜುನನನ್ನು ಪ್ರೇಮದಿಂದ ತಬ್ಬಿಕೊಂಡು ನೆತ್ತಿಯಲ್ಲಿ ಆಘ್ರಾಣಿಸಿ ಪರಮ ಸಂತುಷ್ಟನಾಗಿ ಮಂದಹಾಸಪೂರ್ವಕವಾಗಿ ನುಡಿದ.
ಕರ್ಣೇನ ಮೇ ಮಹಾಬಾಹೋ ಸರ್ವಸೈನ್ಯಸ್ಯ ಪಶ್ಯತಃ |

ಕವಚಂ ಚ ಧ್ವಜಶ್ಚೈವ ಧನುಃ ಶಕ್ತಿರ್ಹಯಾ ಗದಾ |
ಶರೈಃ ಕೃತ್ತಾ ಮಹೇಷ್ವಾಸ ಯತಮಾನಸ್ಯ ಸಂಯುಗೇ ||15||
ಅರ್ಜುನ, ಎಲ್ಲ ಸೈನ್ಯವು ನೋಡುತ್ತಿದ್ದಂತೇ ಕರ್ಣನು, ರಣದಲ್ಲಿ ಯತ್ನ ಮಾಡುತ್ತಿದ್ದ ನನ್ನ ಕವಚ ಧ್ವಜ ಧನುಸ್ಸು ಶಕ್ತಿ ಅಶ್ವಗಳು ಗದೆ ಇವೆಲ್ಲವನ್ನೂ ಬಾಣಗಳಿಂದ ಕತ್ತರಿಸಿದ.
ಸೋಽಹಂ ಜ್ಞಾತ್ವಾ ರಣೇ ತಸ್ಯ ಕರ್ಮ ಕರ್ಣಸ್ಯ ಫಲ್ಗುನ |
ವ್ಯವಸೀದಾಮಿ ದುಃಖೇನ ನ ಚ ಮೇ ಜೀವಿತಂ ಪ್ರಿಯಮ್ ||16||
ಅರ್ಜುನ, ರಣದಲ್ಲಿ ಅವನು ಮಾಡಿದ ಈ ಅವಮಾನವನ್ನು ಕಂಡು ನಾನು ದುಃಖದಿಂದ ಬೇಯಲು ತೊಡಗಿದೆ. ನನಗೆ ಬದುಕೇ ಬೇಡವಾಯಿತು.
ತಮದ್ಯ ಯದಿ ವೈ ವೀರ ನ ಹನಿಷ್ಯಸಿ ಸೂತಜಮ್ |
ಪ್ರಾಣಾನೇವ ಪರಿತ್ಯಕ್ಷ್ಯೇ ಜೀವಿತಾರ್ಥೋ ಹಿ ಕೋ ಮಮ ||17||
ಅವನನ್ನು ನೀನು ಕೊಲ್ಲದಿದ್ದರೆ ನಾನು ಪ್ರಾಣಗಳನ್ನೇ ಬಿಡುತ್ತೇನೆ. ಬದುಕಿರುವುದರಿಂದ ನನಗೆ ಏನು ಫಲ?
ಏವಮುಕ್ತಃ ಪ್ರತ್ಯುವಾಚ ವಿಜಯೋ ಭರತರ್ಷಭ |
ಸತ್ಯೇನ ತೇ ಶಪೇ ರಾಜನ್ ಪ್ರಸಾದೇನ ತವೈವ ಚ ||18||
ಭೀಮೇನ ಚ ನರಶ್ರೇಷ್ಠ ಯಮಾಭ್ಯಾಂ ಚ ಮಹೀಪತೇ ||19||
ಮಹಾರಾಜ, ಯುಧಿಷ್ಠಿರನು ಹೀಗೆ ಹೇಳಿದಾಗ ಅರ್ಜುನ ನುಡಿದ `ರಾಜನೆ, ನಾನು ಸತ್ಯದ ಮೇಲೆ ನಿನ್ನೊಲುಮೆಯ ಮೇಲೆ, ಭೀಮನ ಮೇಲೆ, ನಕುಲ ಸಹದೇವರ ಮೇಲೆ ಆಣೆಯಿಟ್ಟು ಹೇಳುತ್ತೇನೆ.
ಯಥಾದ್ಯ ಸಮರೇ ಕರ್ಣಂ ಹನಿಷ್ಯಾಮಿ ಹತೋಽಥ ವಾ |
ಮಹೀತಳೇ ಪತಿಷ್ಯಾಮಿ ಸತ್ಯೇನಾಯುಧಮಾಲಭೇ ||20||
`ಇಂದು ಸಮರದಲ್ಲಿ ಕರ್ಣನನ್ನು ಕೊಲ್ಲುತ್ತೇನೆ, ಇಲ್ಲವೆ ನಾನೇ ಹತನಾಗುತ್ತೇನೆ. ನೆಲದಲ್ಲಿ ಬೀಳುತ್ತೇನೆ. ಸತ್ಯದ ಮೇಲೆ ಆಣೆಯಿಟ್ಟು ಆಯುಧವನ್ನು ಸ್ಪರ್ಶಿಸುತ್ತೇನೆ'.
ಏವಮಾಭಾಷ್ಯ ರಾಜಾನಮಬ್ರವೀನ್ಮಾಧವಂ ವಚಃ |
ಅದ್ಯ ಕರ್ಣಂ ರಣೇ ಕೃಷ್ಣ ಸೂದಯಿಷ್ಯೇ ನ ಸಂಶಯಃ |
ತದನುಧ್ಯಾಹಿ ಭದ್ರಂ ತೇ ವಧಂ ತಸ್ಯ ದುರಾತ್ಮನಃ ||21||
ಹೀಗೆ ಅರ್ಜುನನು ರಾಜನಿಗೆ ಹೇಳಿ, ಕೃಷ್ಣನಿಗೂ ಹೇಳಿದ `ಇಂದು, ಕೃಷ್ಣ, ನಾನು ರಣದಲ್ಲಿ ಕರ್ಣನನ್ನು ಸಂಹರಿಸುವೆ, ಸಂಶಯವಿಲ್ಲ. ದುರಾತ್ಮನಾದ ಅವನ ವಧವನ್ನು ಹಾರೈಸು. ನಿನಗೆ ಒಳ್ಳೆಯದಾಗಲಿ.'
ಏವಮುಕ್ತೋಽಬ್ರವೀತ್ ಪಾರ್ಥಂ ಕೇಶವೋ ರಾಜಸತ್ತಮ |
ಶಕ್ತೋಽಸಿ ಭರತಶ್ರೇಷ್ಠ ಹಂತುಂ ಕರ್ಣಂ ಮಹಾಬಲಮ್ ||22||
ಅರ್ಜುನ ಹೀಗೆ ಹೇಳಿದಾಗ ಕೃಷ್ಣ ಹೇಳಿದ `ಅರ್ಜುನ, ಮಹಾಬಲ ಕರ್ಣನನ್ನು ಕೊಲ್ಲಲು ನೀನು ಶಕ್ತನಾಗಿರುವೆ.
ಏವಂ ಚಾಪಿ ಹಿ ಮೇ ಕಾಮೋ ನಿತ್ಯಮೇವ ಮಹಾರಥ |
ಕಥಂ ಭವಾನ್ ರಣೇ ಕರ್ಣಂ ನಿಹನ್ಯಾದಿತಿ ಮೇ ಮತಿಃ ||23||
ನನ್ನ ಅಭಿಲಾಷೆಯೂ ಸದಾ ಹೀಗೇ ಇದೆ. `ನೀನು ಹೇಗೆ ಕರ್ಣನನ್ನು ಕೊಲ್ಲುವಿಯೊ!' ಎಂದು ಚಿಂತಿಸುತ್ತಿದ್ದೇನೆ.'
ಭೂಯಶ್ಚೋವಾಚ ಮತಿಮಾನ್ ಮಾಧವೋ ಧರ್ಮನಂದನಮ್ |
ಯುಧಿಷ್ಠಿರೇಮಂ ಬೀಭತ್ಸುಂ ತ್ವಂ ಸಾಂತ್ವಯಿತುಮರ್ಹಸಿ |
ಅನುಜ್ಞಾತುಂ ಚ ಕರ್ಣಸ್ಯ ವಧಾಯಾದ್ಯ ದುರಾತ್ಮನಃ ||24||
ಕೃಷ್ಣ ಧರ್ಮರಾಜನಿಗೆ ಪುನಃ ನುಡಿದ `ಯುಧಿಷ್ಠಿರ, ಅರ್ಜುನನನ್ನು ನೀನು ಸಂತಯಿಸು. ದುರಾತ್ಮಕರ್ಣನ ವಧೆಗೈಯಲು ಅನುಜ್ಞೆ ನೀಡು.
ಶ್ರುತ್ವಾ ಹ್ಯಯಮಹಂ ಚೈವ ತ್ವಾಂ ಕರ್ಣಶರಪೀಡಿತಮ್ |
ಪ್ರವೃತ್ತಿಂ ಜ್ಞಾತುಮಾಯಾತಾವಿಹ ಪಾಂಡವನಂದನ ||25||
ನೀನು ಕರ್ಣನ ಬಾಣಗಳಿಂದ ಪೀಡಿತನಾಗಿರುವೆ ಎಂದು ಕೇಳಿ ನಾನೂ ಅರ್ಜುನನೂ ನಿನ್ನ ವೃತ್ತಾಂತವನ್ನು ತಿಳಿಯಲು ಬಂದಿದ್ದೆವು.
ದಿಷ್ಟ್ಯಾಸಿ ರಾಜನ್ ನಿರುಜೋ ದಿಷ್ಟ್ಯಾ ನ ಗ್ರಹಣಂ ಗತಃ |
ಪರಿಸಾಂತ್ವಯ ಬೀಭತ್ಸುಂ ಜಯಮಾಶಾಧಿ ಚಾನಘ ||26||
ಅದೃಷ್ಟವಶಾತ್ ನೀನು ಅಪಾಯ ಹೊಂದಲಿಲ್ಲ. ಬಂಧನದಲ್ಲಿಯೂ ಸಿಲುಕಿ ಕೊಳ್ಳಲಿಲ್ಲ. ಅದರಿಂದ ಅರ್ಜುನನನ್ನು ಸಂತಯಿಸು. ಅವನಿಗೆ ಜಯವಾಗಲಿ ಎಂದು ಹರಸು.'
ಯುಧಿಷ್ಠಿರಃ
ಏಹ್ಯೇಹಿ ಪಾರ್ಥ ಬೀಭತ್ಸೋ ಮಾಂ ಪರಿಷ್ವಜ್ಯ ಪಾಂಡವ |
ವಕ್ತವ್ಯಮುಕ್ತೋಽಸ್ಮ್ಯಹಿತಂ ತ್ವಯಾ ಕ್ಷಾಂತಂ ಚ ತನ್ಮಯಾ ||27||
ಯುಧಿಷ್ಠಿರ ನುಡಿದ– ಬಾ, ಬಾ, ಅರ್ಜುನ, ನನ್ನನ್ನು ಆಲಿಂಗಿಸು. ನೀನು ನನಗೆ ಹೇಳಬೇಕಾಗಿದ್ದ ಕಟುನುಡಿಯನ್ನೇ ನೀನು ಹೇಳಿರುವೆ. ನಾನೂ ಅದನ್ನು ಕ್ಷಮಿಸಿದ್ದೇನೆ.
ಅಹಂ ತ್ವಾಮನುಜಾನಾಮಿ ಜಹಿ ಕರ್ಣಂ ಧನಂಜಯ |
ಮನ್ಯುಂ ಚ ಮಾ ಕೃಥಾಃ ಪಾರ್ಥ ಯನ್ಮಯೋಕ್ತೋಽಸಿ

ದಾರುಣಮ್ ॥28॥
ನಾನು ನಿನಗೆ ಅನುಜ್ಞೆ ನೀಡುತ್ತಿದ್ದೇನೆ. ಅರ್ಜುನ, ಕರ್ಣನನ್ನು ವಧಿಸು. ನಾನು ನಿನಗೆ ಕಟುನುಡಿಗಳನ್ನಾಡಿದ್ದನ್ನು ಮರೆತುಬಿಡು, ಕೋಪಿಸಿಕೊಳ್ಳಬೇಡ.
ಸಂಜಯಃ
ತತೋ ಧನಂಜಯೋ ರಾಜನ್ ಶಿರಸಾ ಪ್ರಣತಸ್ತದಾ |
ಪಾದೌ ಜಗ್ರಾಹ ಪಾಣಿಭ್ಯಾಂ ಭ್ರಾತುರ್ಜ್ಯೇಷ್ಠಸ್ಯ ಮಾರಿಷ ॥29॥
ಸಂಜಯನು ನುಡಿದ– ರಾಜನೆ, ಬಳಿಕ ಅರ್ಜುನನು ಯುಧಿಷ್ಠಿರನಿಗೆ ತಲೆಬಾಗಿ ನಮಿಸುತ್ತ ಎರಡೂ ಕೈಗಳಿಂದ ಅಣ್ಣನ ಪಾದಗಳನ್ನು ಹಿಡಿದುಕೊಂಡ.
ಸಮುತ್ಥಾಪ್ಯ ತತೋ ರಾಜಾ ಪರಿಷ್ವಜ್ಯ ಚ ಪೀಡಿತಮ್ |
ಮೂರ್ಧ್ನ್ಯುಪಾಘ್ರಾಯ ಚೈವೈನಮಿದಂ ಪುನರುವಾಚ ಹ ॥30॥
ರಾಜಾ ಯುಧಿಷ್ಠಿರನು ದುಃಖಪೀಡಿತನಾಗಿದ್ದ ಅರ್ಜುನನನ್ನು ಮೇಲೆಬ್ಬಿಸಿ ಆಲಿಂಗಿಸಿ ನೆತ್ತಿಯಲ್ಲಿ ಆಘ್ರಾಣಿಸಿ ಅವನಿಗೆ ಪುನಃ ಹೇಳಿದ.
ಧನಂಜಯ ಮಹಾಬಾಹೋ ಮಾನಿತೋಽಸ್ಮಿ ದೃಢಂ ತ್ವಯಾ |
ಮಾಹಾತ್ಮ್ಯಂ ವಿಜಯಂ ಚೈವ ಭೂಯಃ ಪ್ರಾಪ್ನುಹಿ ಶಾಶ್ವತಮ್ ॥31॥
ಅರ್ಜುನ, ನೀನು ದೃಢವಾಗಿ ನನ್ನನ್ನು ಓಲೈಸಿರುವೆ. ಅದರಿಂದ ನೀನು ಇನ್ನೂ ಹೆಚ್ಚಿನ ಮಹಿಮೆಯನ್ನೂ ವಿಜಯವನ್ನೂ ಶಾಶ್ವತವಾಗಿ ಪಡೆ.
ಅರ್ಜುನಃ
ಅದ್ಯ ತಂ ಪಾಪಕರ್ಮಾಣಂ ಸಾನುಬಂಧಂ ರಣೇ ಶರೈಃ |
ನಯಾಮ್ಯಂತಂ ಸಮಾಸಾದ್ಯ ರಾಧೇಯಂ ಬಲಗರ್ವಿತಮ್ ॥32॥
ಅರ್ಜುನ ನುಡಿದ– ಪಾಪಕರ್ಮ ಮಾಡಿರುವ ಮತ್ತು ಬಲದಿಂದ ದರ್ಪಿತನಾಗಿರುವ ಕರ್ಣನನ್ನೂ ಅವನ ಪರಿವಾರವನ್ನೂ ನಾನು ಇಂದು ರಣದಲ್ಲಿ ಬಾಣಗಳಿಂದ ಇದಿರಿಸಿ ಕೊನೆಗಾಣಿಸುತ್ತೇನೆ.
ಯೇನ ತ್ವಂ ಪೀಡಿತೋ ಬಾಣೈರ್ದೃಢಮಾಯಮ್ಯ ಕಾರ್ಮುಕಮ್ |
ತಸ್ಯಾದ್ಯ ಕರ್ಮಣಃ ಕರ್ಣಃ ಫಲಂ ಪ್ರಾಪ್ಸ್ಯತಿ ದಾರುಣಮ್ ॥33॥
ಬಿಲ್ಲನ್ನು ಬಲವಾಗಿ ಬಾಗಿಸಿ ಬಾಣಗಳಿಂದ ನಿನ್ನನ್ನು ಕರ್ಣನು ಏನು ಪೀಡಿಸಿರುವನೋ ಆ ಕರ್ಮದ ದಾರುಣವಾದ ಫಲವನ್ನು ಅವನು ಇಂದು ಪಡೆಯುತ್ತಾನೆ.
ಅದ್ಯ ತ್ವಾಮಹಮೇಷ್ಯಾಮಿ ಕರ್ಣಂ ಹತ್ವಾ ಮಹೀಪತೇ |
ಸಭಾಜಯಿತುಮಾಕ್ರಂದಾದಿತಿ ಸತ್ಯಂ ಬ್ರವೀಮಿ ತೇ ॥34॥
ರಾಜನೆ, ನಾನಿಂದು ಕರ್ಣನನ್ನು ಕೊಂದು ನಿನ್ನ ವ್ಯಥೆಯನ್ನು ಕಳೆದು ಸಂತೈಸಲು ನಿನ್ನ ಬಳಿಗೆ ಬರುವೆನು. ಸತ್ಯವನ್ನೇ ಹೇಳುತ್ತಿದ್ದೇನೆ.
ನಾಹತ್ವಾ ವಿನಿವರ್ತೇಽಹಂ ಕರ್ಣಮದ್ಯ ರಣಾಜಿರಾತ್ |
ಇತಿ ಸತ್ಯೇನ ತೇ ಪಾದೌ ಸ್ಪೃಶಾಮಿ ಜಗತೀಪತೇ ॥35॥
ರಾಜನೆ, ಇಂದು ಕರ್ಣನನ್ನು ಕೊಲ್ಲದೆ ನಾನು ರಣಾಂಗಣದಿಂದ ಹಿಂತಿರುಗಿ ಬರಲಾರೆ ಎಂದು ಸತ್ಯದ ಮೇಲೆ ಆಣೆಯಿಟ್ಟು ನಿನ್ನ ಪಾದಗಳನ್ನು ಸ್ಪರ್ಶಿಸುತ್ತಿದ್ದೇನೆ.
ಸಂಜಯಃ
ಇತಿ ಬ್ರುವಾಣಂ ಸುಮನಾಃ ಕಿರೀಟಿನಂ
ಯುಧಿಷ್ಠಿರಃ ಪ್ರಾಹ ವಚೋ ಬೃಹತ್ತರಮ್ |
ಯಶೋಽಕ್ಷಯಂ ಜೀವಿತಮೀಪ್ಸಿತಂ ತೇ
ಜಯಂ ಸದಾ ವೀರ್ಯಮರಿಕ್ಷಯಂ ತದಾ ॥36॥
ಪ್ರಯಾಹಿ ವೃದ್ಧಿಂ ಚ ದಿಶಂತು ದೇವತಾ
ಯಥಾಹಮಿಚ್ಛಾಮಿ ತವಾಸ್ತು ತತ್ತಥಾ |
ಪ್ರಯಾಹಿ ಶೀಘ್ರಂ ಜಹಿ ಕರ್ಣಮಾಹವೇ
ಪುರಂದರೋ ವೃತ್ರಮಿವಾತ್ಮವೃದ್ಧಯೇ ॥37॥
ಸಂಜಯನು ನುಡಿದ– ಅರ್ಜುನ ಹೀಗೆ ನುಡಿದಾಗ ಯುಧಿಷ್ಠಿರನು ಪ್ರಸನ್ನ ಮನಸಿನಿಂದ ಬಲು ದೊಡ್ಡ ಹಾರೈಕೆಯನ್ನು ನುಡಿದ: `ಅಕ್ಷಯವಾದ ಯಶಸ್ಸು, ಇಷ್ಟವಾದ ಬದುಕು, ಸದಾ ವಿಜಯ ವೀರ್ಯ ಶತ್ರುಕ್ಷಯ ಎಲ್ಲವೂ ನಿನ್ನವೇ ಆಗಲಿ. ದೇವತೆಗಳು ನಿನಗೆ ಸುಖಸಮೃದ್ಧಿ ಉಂಟುಮಾಡಲಿ, ಎಂದು ನಾನು ಬಯಸುತ್ತೇನೆ. ನಾನು ಬಯಸಿದಂತೆಯೇ ಎಲ್ಲವೂ ನಿನಗೆ ಲಭಿಸಲಿ. ಬೇಗನೆ ಹೋಗು. ಇಂದ್ರನು ವೃತ್ರನನ್ನು ಸಂಹರಿಸಿದಂತೆ ನೀನು ಕರ್ಣನನ್ನು ವಧಿಸು. ನಿನ್ನ ಅಭೀಷ್ಟಗಳು
ವರ್ಧಿಸಲಿ.'
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಧರ್ಮರಾಜಾರ್ಜುನಸಂವಾದೇ ಅರ್ಜುನಸಾಂತ್ವನವಚನಂ ನಾಮ ಅಷ್ಟಷಷ್ಟಿತಮೋಽಧ್ಯಾಯಃ ॥68॥

ಮಹಾಭಾರತತಾತ್ಪರ್ಯನಿರ್ಣಯ

ತಂ ಶಂಕಿತಂ ಕರ್ಣಜಯೇ ಸ್ವಿನ್ನಗಾತ್ರಂ ಹರಿಸ್ತದಾ |
ಸಂಕೀರ್ತ್ಯ ಪೂರ್ವಕರ್ಮಾಣಿ ನರಾವೇಶಂ ವಿಶೇಷತಃ |
ವ್ಯಂಜಯಾಮಾಸ ಧೈರ್ಯಂ ಚ ತಸ್ಯಾಽಸೀತ್ ತೇನ ಸುಸ್ಥಿರವ್ ||138||
ಅರ್ಜುನ ಕರ್ಣನನ್ನು ಗೆಲ್ಲುವ ವಿಷಯದಲ್ಲಿ ಸಂದೇಹಪಟ್ಟು ಮೈಬೆವೆತು ಕೊಂಡಾಗ ಕೃಷ್ಣ ಅವನ ಹಿಂದಿನ ನಿವಾತಕವಚ ಸಂಹಾರಾದಿ ಸಾಧನೆಗಳನ್ನು ಹೇಳಿ ಅವನಲ್ಲಿ ವಿಶೇಷವಾಗಿ ನರಾವೇಶವನ್ನು ಪ್ರಕಟಗೊಳಿಸಿದ. ಅದರಿಂದ ಅವನಲ್ಲಿ ಸ್ಥಿರವಾದ ಧೈರ್ಯ ಉಂಟಾಯಿತು.

ಅರವತ್ತೊಂಬತ್ತನೆಯ ಅಧ್ಯಾಯ
`ಕರ್ಣವಧೆ ಸಾಧ್ಯವೆ?' ಎಂದು ಚಿಂತೆಯಿಂದ ಮೈಬೆವರಿದ
ಅರ್ಜುನನಿಗೆ ಶ್ರೀಕೃಷ್ಣ ಹುರಿದುಂಬಿಸುತ್ತಾನೆ.
ಸಂಜಯಃ
ಪ್ರಸಾದ್ಯ ಧರ್ಮರಾಜಾನಂ ಪ್ರಹೃಷ್ಟೇನಾಂತರಾತ್ಮನಾ |
ಪಾರ್ಥಃ ಪ್ರೋವಾಚ ಗೋವಿಂದಂ ಸೂತಪುತ್ರವಧೋದ್ಯತಃ ||1||
ಸಂಜಯನು ನುಡಿದ– ಯುಧಿಷ್ಠಿರನ ಮನಒಲಿಸಿಕೊಂಡು ಅಂತರಾತ್ಮದಲ್ಲಿ ಒಳ್ಳೆಯ ಉತ್ಸಾಹಗೊಂಡು ಕರ್ಣವಧದಲ್ಲಿ ಉದ್ಯುಕ್ತನಾಗಿ ಅರ್ಜುನ ಕೃಷ್ಣನಿಗೆ ನುಡಿದ.
ಕಲ್ಪ್ಯತಾಂ ಚ ರಥೋ ಭೂಯೋ ಯುಜ್ಯತಾಂ ಚ ಹಯೋತ್ತಮಾಃ |
ಆಯುಧಾನಿ ಸಮಸ್ತಾನಿ ಸಜ್ಜ್ಯಂತಾಂ ವೈ ಮಹಾರಥೇ ||2||
ಪುನಃ ರಥವನ್ನು ಪ್ರಯಾಣಕ್ಕೆ ಸಜ್ಜುಗೊಳಿಸು. ಒಳ್ಳೆಯ ಕುದುರೆಗಳನ್ನು ಹೂಡು. ಮಹಾರಥದಲ್ಲಿ ಎಲ್ಲ ಆಯುಧಗಳನ್ನು ಸಜ್ಜಾಗಿರಿಸು.
ಉಪಾವೃತ್ತಾಶ್ಚ ತುರಗಾಃ ಶಿಕ್ಷಿತಾಶ್ಚಾಶ್ವಸಾದಿನಃ |
ರಥೋಪಕರಣೈಃ ಸರ್ವೈರುಪಾಯಾನ್ತು ತ್ವರಾನ್ವಿತಾಃ ||3||
ಪ್ರಯಾಹಿ ಶೀಘ್ರಂ ಗೋವಿಂದ ಸೂತಪುತ್ರಜಿಘಾಂಸಯಾ ||4||
ವಿಶ್ರಾಂತಿ ಪಡೆದು ಹಿಂತಿರುಗಿ ಬಂದಿರುವ ಅಶ್ವಾರೋಹಿಗಳಿಂದ ತರಬೇತುಗೊಳಿಸಲ್ಪಟ್ಟ ಕುದುರೆಗಳು ಎಲ್ಲ ರಥೋಪಕರಣಗಳೊಂದಿಗೆ ಬೇಗನೆ ಬರಲಿ ಕೃಷ್ಣ, ಕರ್ಣವಧೆಯ ಉದ್ದೇಶದಿಂದ ಬೇಗನೆ ನಡೆ.
ಏವಮುಕ್ತೇ ಮಹಾರಾಜ ಫಲ್ಗುನೇನ ಮಹಾತ್ಮನಾ |
ಉವಾಚ ದಾರುಕಂ ಕೃಷ್ಣಃ ಕುರು ಸರ್ವಂ ಯಥಾಬ್ರವೀತ್ |
ಅರ್ಜುನೋ ಭರತಶ್ರೇಷ್ಠಃ ಶ್ರೇಷ್ಠಃ ಸರ್ವಧನುಷ್ಮತಾಮ್ ||5||
ಮಹಾರಾಜ, ಮಹಾತ್ಮ ಅರ್ಜುನನು ಹೀಗೆ ಹೇಳಿದಾಗ ಕೃಷ್ಣನು ದಾರುಕನಿಗೆ ಹೇಳಿದ ಸರ್ವ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನ ಹೇಗೆ ಹೇಳಿದನೋ ಹಾಗೇ ಮಾಡು.
ಆಜ್ಞಪ್ತಸ್ತ್ವಥ ಕೃಷ್ಣೇನ ದಾರುಕೋ ರಾಜಸತ್ತಮ |
ಯೋಜಯಾಮಾಸ ಸ ರಥಂ ವೈಯಾಘ್ರಂ ಶತ್ರುತಾಪನಮ್ ||6||
ರಾಜನೆ, ಕೃಷ್ಣನಾಜ್ಞೆಯಂತೆ ದಾರುಕನು ಶತ್ರುತಾಪಕವಾದ ವ್ಯಾಘ್ರಚರ್ಮ ಹೊದ್ದಿಸಿದ ರಥವನ್ನು ಸಜ್ಜುಗೊಳಿಸಿದ.
ಯುಕ್ತಂ ತು ರಥಮಾಸ್ಥಾಯ ದಾರುಕೇಣ ಮಹಾತ್ಮನಾ |
ಆಪೃಚ್ಛ್ಯ ಧರ್ಮರಾಜಾನಂ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಚ |
ಸಮಂಗಲಸ್ವಸ್ತ್ಯಯನಮಾರುರೋಹ ರಥೋತ್ತಮಮ್ ||7||
ದಾರುಕನು ಸಜ್ಜುಗೊಳಿಸಿದ ರಥವನ್ನೇರಿ, ಅರ್ಜುನನು ಧರ್ಮರಾಜನ ಅನುಜ್ಞೆಯನ್ನು ಪಡೆದು, ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿಕೊಂಡು, ಮಂಗಲಕ್ಷೇಮಯುಕ್ತವಾದ ಆ ರಥವನ್ನೇರಿದ.
ತಸ್ಯ ರಾಜಾ ಮಹಾಪ್ರಾಜ್ಞೋ ಧರ್ಮರಾಜೋ ಯುಧಿಷ್ಠಿರಃ |
ಆಶಿಷೋಽಯುಂಕ್ತ ಪರಮಾ ಯುಕ್ತಾಃ ಕರ್ಣವಧಂ ಪ್ರತಿ ||8||
ಮಹಾಪ್ರಾಜ್ಞನಾದ ಧರ್ಮರಾಜನು ಅರ್ಜುನನಿಗೆ ಕರ್ಣವಧ ವಿಷಯದಲ್ಲಿ ಉತ್ತಮವಾದ ಆಶೀರ್ವಾದವನ್ನು ಮಾಡಿದ.
ತಂ ಪ್ರಯಾಂತಂ ಮಹೇಷ್ವಾಸಂ ದೃಷ್ಟ್ವಾ ಭೂತಾನಿ ಭಾರತ |
ನಿಹತಂ ಮೇನಿರೇ ಕರ್ಣಂ ಪಾಂಡವೇನ ಮಹಾತ್ಮನಾ ||9||
ಮಹಾಬಿಲ್ಗಾರ ಅರ್ಜುನನು ಪ್ರಯಾಣಕ್ಕೆ ಹೊರಟಾಗ ಅದನ್ನು ನೋಡಿ ಎಲ್ಲ ಜನರೂ ಮಹಾತ್ಮ ಅರ್ಜುನನಿಂದ ಕರ್ಣನು ಇನ್ನು ಹತನಾದನೆಂದೇ ಭಾವಿಸಿದರು.
ಬಭೂವುರ್ವಿಮಲಾಃ ಸರ್ವಾ ದಿಶೋ ರಾಜನ್ ಸಮಂತತಃ |
ಚಾಷಾಶ್ಚ ಶತಪತ್ರಾಶ್ಚ ಕ್ರೌಂಚಾಶ್ಚೈವ ಜನೇಶ್ವರ |
ಪ್ರದಕ್ಷಿಣಮಕುರ್ವಂತ ತದಾ ವೈ ಪಾಂಡುನಂದನಮ್ ||10||
ರಾಜನೆ, ಎಲ್ಲಕಡೆ ಎಲ್ಲ ದಿಕ್ಕುಗಳೂ ನಿರ್ಮಲವಾದುವು. ಶಕುನದ ಹಕ್ಕಿ ಮರಕುಟಿಗನ ಹಕ್ಕಿ ನೀರುಕೊಕ್ಕರೆ ಹಕ್ಕಿಗಳು ಅರ್ಜುನನಿಗೆ ಪ್ರದಕ್ಷಿಣವಾಗಿ ಹಾರಿದುವು.
ಬಹವಃ ಪಕ್ಷಿಣೋ ರಾಜನ್ ಪುಂನಾಮಾನಃ ಶುಭಾಃ ಶಿವಾಃ |

ತ್ವರಯಂತೋಽರ್ಜುನಂ ಯುದ್ಧೇ ಹೃಷ್ಟರೂಪಾ ವವಾಶಿರೇ ॥11॥
ಮಂಗಳಕರವಾದ ಕ್ಷೇಮ ಉಂಟುಮಾಡುವ ಪುಲ್ಲಿಂಗ ಶಬ್ದಗಳಿಂದ ಕರೆಸಿಕೊಳ್ಳುವ ಬಹಳ ಪಕ್ಷಿಗಳು ಉತ್ಸಾಹಗೊಂಡು ಅರ್ಜುನನನ್ನು ಯುದ್ಧಕ್ಕೆ ತ್ವರೆಪಡಿಸುತ್ತ ಕೂಗಿದುವು.
ಕಂಕಾ ಗೃಧ್ರಾ ವಟಾಶ್ಚೈವ ವಾಯಸಾಶ್ಚ ವಿಶಾಂಪತೇ |
ಆಗಚ್ಛನ್ನಗ್ರತಸ್ತಸ್ಯ ಮಾಂಸಹೇತೋರ್ಭಯಾನಕಾಃ ॥12॥
ಭಯಾನಕವಾದ ಹದ್ದು, ರಣಹದ್ದು , ವಟವೆಂಬ ಪಕ್ಷಿ, ಕಾಗೆಗಳು ಮಾಂಸಕ್ಕಾಗಿ ಮುಂದೆ ಹಾರಿದುವು.
ನಿಮಿತ್ತಾನಿ ಚ ಧನ್ಯಾನಿ ಪಾರ್ಥಸ್ಯ ಪ್ರಶಶಂಸಿರೇ |
ವಿನಾಶಮರಿಸೈನ್ಯಾನಾಂ ಕರ್ಣಸ್ಯ ಚ ವಧಂ ತಥಾ ॥13॥
ಶುಭ ಶಕುನಗಳು ಅರ್ಜುನನಿಗೆ ಶುಭವನ್ನೂ, ಶತ್ರುಗಳಿಗೆ ವಿನಾಶವನ್ನೂ ಕರ್ಣನಿಗೆ ವಧವನ್ನೂ ತಿಳಿಸಿದುವು.
ಪ್ರಯಾತಸ್ಯಾಥ ಪಾರ್ಥಸ್ಯ ಮಹಾನ್ ಸ್ವೇದೋ ವ್ಯಜಾಯತ |
ಚಿಂತಾ ಚ ವಿಪುಲಾ ಜಜ್ಞೇ ಕಥಂ ನ್ವೇತದ್ ಭವಿಷ್ಯತಿ ॥14॥
ಪ್ರಯಾಣ ಮಾಡುವಾಗ ಅರ್ಜುನನಿಗೆ ಬಹಳ ಬೆವರುಂಟಾಯಿತು. ಹೇಗೆ ಏನಾಗುವುದೋ! ಎಂದು ಬಹಳ ದುಗುಡ ಉಂಟಾಯಿತು.
ತತೋ ಗಾಂಡೀವಧನ್ವಾನಮಬ್ರವೀನ್ಮಧುಸೂದನಃ |
ದೃಷ್ಟ್ವಾ ಪಾರ್ಥಂ ತಥಾವಸ್ಥಂ ಚಿಂತಾಪರಿಗತಂ ತದಾ ॥15॥
ಅರ್ಜುನ ಈ ಅವಸ್ಥೆಯಲ್ಲಿರುವುದನ್ನು ಚಿಂತೆಮಾಡುವುದನ್ನು ಕಂಡು ಕೃಷ್ಣ ನುಡಿದ.
ಶ್ರೀವಾಸುದೇವಃ
ಗಾಂಡೀವಧನ್ವನ್ ಸಂಗ್ರಾಮೇ ಯೇ ತ್ವಯಾ ಧನುಷಾ ಜಿತಾಃ |
ನ ತೇಷಾಂ ಮಾನುಷೋ ಜೇತಾ ತ್ವದನ್ಯ ಇಹ ವಿದ್ಯತೇ ॥16॥
ಶ್ರೀಕೃಷ್ಣ ನುಡಿದ ಅರ್ಜುನ, ರಣದಲ್ಲಿ ನೀನು ಧನುಸ್ಸಿನಿಂದ ಯಾರನ್ನು ಗೆದ್ದಿರುವೆಯೋ ಅವರನ್ನು ಗೆಲ್ಲುವವನು ನಿನ್ನ ಹೊರತಾಗಿ ಅನ್ಯ ಮಾನವನು ಇಲ್ಲ.
ದೃಷ್ಟಾ ಹಿ ಬಹವಃ ಶೂರಾಃ ಶಕ್ರತುಲ್ಯಪರಾಕ್ರಮಾಃ |
ತ್ವಾಂ ಪ್ರಾಪ್ಯ ಸಮರೇ ವೀರಂ ಯೇ ಗತಾಃ ಪರಮಾಂ ಗತಿಮ್ ॥17॥
ಇಂದ್ರಸಮ ಪರಾಕ್ರಮಿಗಳಾದ ಶೂರರನ್ನು ಬಹಳ ಕಂಡಿದ್ದೇನೆ. ಅವರು ವೀರನಾದ ನಿನ್ನನ್ನು ಇದಿರಿಸಿ ಪರಗತಿಯನ್ನೇ ಪಡೆದರು.
ಕೋ ಹಿ ದ್ರೋಣಂ ಚ ಭೀಷ್ಮಂ ಚ ಭಗದತ್ತಂ ಚ ಭಾರತ |
ವಿಂದಾನುವಿಂದಾವಾವಂತ್ಯೌ ಕಾಂಬೋಜಂ ಚ ಸುದಕ್ಷಿಣಮ್ ॥18॥
ಶ್ರುತಾಯುಷಂ ಮಹಾವೀರ್ಯಮಚ್ಯುತಾಯುಷಮೇವ ಚ |
ಪ್ರತ್ಯುದ್ಗಮ್ಯ ಭವೇತ್ಕ್ಷೇಮೀ ಯೋ ನ ಸ್ಯಾತ್ತ್ವಮಿವ ಪ್ರಭೋ ॥19॥
ದ್ರೋಣ, ಭೀಷ್ಮ, ಭಗದತ್ತ, ಅವಂತಿಯ ವಿಂದಅನುವಿಂದರು, ಕಾಂಬೋಜದ ಸುದಕ್ಷಿಣ, ಶ್ರುತಾಯು, ಅಚ್ಯುತಾಯು ಇವರನ್ನು ಇದಿರಿಸಿ, ನಿನ್ನಂಥವನಲ್ಲದವನು ಯಾವನು ತಾನೆ ಕ್ಷೇಮವಾಗಿರಬಲ್ಲ?
ತವ ಹ್ಯಸತ್ರಣಿ ದಿವ್ಯಾನಿ ಲಾಘವಂ ಬಲಮೇವ ಚ ॥20॥
ವೇಧಃ ಪಾತಶ್ಚ ಲಕ್ಷಶ್ಚ ಯೋಗಶ್ಚೈವ ತವಾರ್ಜುನ |
ಅಸಮ್ಮೋಹಶ್ಚ ಯುದ್ಧೇಷು ವಿಜ್ಞಾನಸ್ಯ ಚ ಸನ್ನತಿಃ ॥21॥
ನಿನಗೆ ದಿವ್ಯ ಅಸ್ತ್ರಗಳಿವೆ. ಅಸ್ತ್ರ ಎಸೆಯುವುದರಲ್ಲಿ ವೇಗವಿದೆ, ಬಲವಿದೆ. ಲಕ್ಷ್ಯವನ್ನು ಬಾಣದಿಂದ ಹೊಡೆಯುವುದು, ಬೀಳಿಸುವುದು, ಗುರಿಯಿಡುವುದು, ಬಾಣವನ್ನು ಬಿಲ್ಲಿಗೆ ಹೂಡುವುದು ನಿನಗೆ ಗೊತ್ತಿದೆ. ಯುದ್ಧಗಳಲ್ಲಿ ಪ್ರಮಾದವೆಸಗದಿರುವುದು, ನಿನ್ನಲ್ಲಿದೆ. ಧರ್ನುವಿದ್ಯೆಯ ಮೇಲಿನ ಹಿಡಿತ ನಿನ್ನಲ್ಲಿದೆ.
ಭವಾನ್ ದೇವಾಸುರಾನ್ ಸರ್ವಾನ್ ಹನ್ಯಾತ್ ಸಹಚರಾಚರಾನ್ |
ಪೃಥಿವ್ಯಾಂ ಹಿ ರಣೇ ಪಾರ್ಥ ನ ಯೋದ್ಧಾ ತ್ವತ್ಸಮಃ ಪುಮಾನ್ ॥22॥
ನೀನು ಚರಾಚರಗಳ ಸಮೇತವಾಗಿ ದೇವಅಸುರರನ್ನು ಸಂಹರಿಸಬಲ್ಲೆ. ಭೂಮಿಯಲ್ಲಿ ನಿನಗೆ ಸಮನಾಗಿ ರಣರಂಗದಲ್ಲಿ ಯುದ್ಧಮಾಡಬಲ್ಲ ವ್ಯಕ್ತಿ ಇಲ್ಲ.
ಧನುರ್ಗ್ರಹಾ ಹಿ ಯೇ ಕೇಚಿತ್ ಕ್ಷತ್ರಿಯಾ ಯುದ್ಧದುರ್ಮದಾಃ |
ಆ ದೇವಾತ್ತ್ವತ್ಸಮಂ ತೇಷಾಂ ನ ಪಶ್ಯಾಮಿ ಶೃಣೋಮಿ ವಾ ॥23॥
ಬಿಲ್ಲು ಹಿಡಿದು ಯುದ್ಧಮಾಡುವ ಹವ್ಯಾಸ ಉಳ್ಳ ಕ್ಷತ್ರಿಯರಲ್ಲಿ ನಿನಗೆ ಸಮನಾದವನನ್ನು ದೇವತೆಗಳು ಮುಂತಾದವರಲ್ಲಿ ನಾನು ಕಂಡಿಲ್ಲ, ಕೇಳಿಲ್ಲ.
ಬ್ರಹ್ಮಣಾ ಚ ಪ್ರಜಾಃ ಸೃಷ್ಟಾ ಗಾಂಡೀವಂ ಚ ಮಹಾದ್ಭುತಮ್ |
ಯೇನ ತ್ವಂ ಯುಧ್ಯಸೇ ಪಾರ್ಥ ತಸ್ಮಾನ್ನಾಸ್ತಿ ತ್ವಯಾ ಸಮಃ ॥24॥
ಬ್ರಹ್ಮನು ಎಲ್ಲವನ್ನು ಸೃಜಿಸಿದರೂ ಅವನು ಸೃಜಿಸಿರುವ ಗಾಂಡೀವ ಮಾತ್ರ ಮಹಾ ಅದ್ಭುತ. ನೀನು ಆ ಗಾಂಡೀವದಿಂದ ಯುದ್ಧಮಾಡುವೆ ಎಂದಮೇಲೆ, ನಿನಗೆ ಸಮಾನನಿಲ್ಲ.
ಅವಶ್ಯಂ ತು ಮಯಾ ವಾಚ್ಯಂ ಯತ್ಪಥ್ಯಂ ತವ ಪಾಂಡವ |
ಮಾವಮಂಸ್ಥಾ ಮಹಾಬಾಹೋ ಕರ್ಣಮಾಹವಶೋಭಿನಮ್ ॥25॥
ಆದರೂ ನಿನಗೊಂದು ಹಿತವಚನವನ್ನು ನಾನು ಅವಶ್ಯ ಹೇಳಬೇಕು. ಮಹಾಬಾಹುವೆ, ಯುದ್ಧದಲ್ಲಿ ಶೋಭಿಸುವ ಕರ್ಣನನ್ನು ನೀನು

ಅವಮಾನಿಸಬೇಡ.
ಶ್ರೀಕೃಷ್ಣ ಅರ್ಜುನನಿಗೆ ಅವಶ್ಯ ಹೇಳಬೇಕಾಗಿದ್ದ ಹಿತವಚನ–`ಕರ್ಣನನ್ನು ಅವಮಾನಿಸಬೇಡ. ಆತ ನಿನಗೆ ಸಮಾನ ಅಥವಾ ಹೆಚ್ಚೇ ಎನ್ನಬಹುದು' ಎಂದು. ಸುಗ್ರೀವಾವಾತಾರದಲ್ಲಿ ಶ್ರೀರಾಮನಿಗೆ ಬಹಳ ಸೇವೆ ಮಾಡಿದ ಭಕ್ತ, ಆತ. ಹರಿಯ ವಿಶೇಷ ಸನ್ನಿಧಾನ ಪಾತ್ರ. ಅವನು ಯುಧಿಷ್ಠಿರನಿಗೆ ಅವಮಾನ ಮಾಡಿದ್ದು ದುರ್ಯೋಧನನ ಪ್ರೀತಿಗಾಗಿ. `ಸಂಘರ್ಷಜನನ' ಕನ್ಯಾಪುತ್ರನಾಗಿ ಜನಿಸಿದ್ದರಿಂದಲೆ ಅವನು ಕೌರವನಿಗೆ ಮೆಚ್ಚಿಗೆಯಾಗುವಂತೇ ಪಾಂಡವರಲ್ಲಿ ಸದಾ ದ್ವೇಷಮಾಡಿದ್ದಂತೆ ತೋರಿಕೊಂಡ. ಅರ್ಜುನನಿಂದ ತಾನು ಪವಿತ್ರ ರಣಯಜ್ಞದಲ್ಲಿ ಆತ್ಮಾಹುತಿ ಮಾಡಿಕೊಳ್ಳಲು ಬಯಸಿದ್ದೂ ಈ ದ್ವೇಷ ಪ್ರದರ್ಶನಕ್ಕೆ ಮೂಲವಾಗಿತ್ತು. ಅಸುರಾವೇಶದಿಂದ ಈ ದ್ವೇಷಪ್ರದರ್ಶನ ಸಾಧ್ಯವಾಯಿತಷ್ಟೇ. ಅದಕ್ಕೆ ಅವನು ಪಶ್ಚಾತ್ತಾಪಪಡುತ್ತಾನೆ.
ಕರ್ಣೋ ಹಿ ಬಲವಾನ್ ಧೃಷ್ಟಃ ಕೃತಾಸ್ತ್ರಶ್ಚ ಮಹಾರಥಃ |
ಕೃತೀ ಚ ಚಿತ್ರಯೋಧೀ ಚ ದೇಶೇ ಕಾಲೇ ಚ ಕೋವಿದಃ ॥26॥
ಕರ್ಣನು ಬಲಶಾಲಿ, ಧೈರ್ಯಶಾಲಿ, ಅಸ್ತ್ರವಿದ್ಯಾಪಾರಂಗತ, ಮಹಾರಥ, ಪ್ರಯತ್ನಶಾಲಿ, ಆಶ್ಚರ್ಯಕರವಾಗಿ ಯುದ್ಧ ಮಾಡುವವನು. ದೇಶಕಾಲಗಳ ವಿಷಯದಲ್ಲಿ ಜಾಣ.
ಬಹುನಾತ್ರ ಕಿಮುಕ್ತೇನ ಸಂಕ್ಷೇಪಾಚ್ಛೃಣು ಪಾಂಡವ |
ತ್ವತ್ಸಮಂ ತ್ವದ್ವಿಶಿಷ್ಟಂ ವಾ ಕರ್ಣಂ ಮನ್ಯೇ ಮಹಾರಥಮ್ |
ಪರಮಂ ಯತ್ನಮಾಸ್ಥಾಯ ತ್ವಯಾ ವಧ್ಯೋ ಮಹಾಹವೇ ॥27॥
ಹೆಚ್ಚೇನು ಹೇಳಬೇಕು? ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು. ಮಹಾರಥನಾದ ಕರ್ಣನನ್ನು ನಿನಗೆ ಸಮಾನ ಅಥವಾ ಹೆಚ್ಚೇ ಎಂದು ನಾನು ಭಾವಿಸುತ್ತೇನೆ. ಮಹಾರಣದಲ್ಲಿ ಮಹಾಪ್ರಯತ್ನ ಮಾಡಿಯೇ ನೀನು ಅವನನ್ನು ಕೊಲ್ಲ ಬೇಕಾಗುತ್ತದೆ.
ತೇಜಸಾ ವಹ್ನಿಸದೃಶೋ ವಾಯುವೇಗಸಮೋ ಜವೇ |
ಅಂತಕಪ್ರತಿಮಃ ಕ್ರೋಧೇ ಸಿಂಹಸಂಹನನೋ ಬಲೀ ॥28॥
ಶತ್ರುವಿಗೆ ತಾಪ ನೀಡುವಲ್ಲಿ ಕರ್ಣನು ಅಗ್ನಿಸಮಾನ. ವೇಗದಲ್ಲಿ ವಾಯು ಸಮಾನ. ಕ್ರೋಧದಲ್ಲಿ ಅಂತಕನಿಗೆ ಸಮಾನ. ಸಿಂಹದಂಥ ದೃಢಶರೀರಿ, ಬಲಿಷ್ಠ.
ಅಷ್ಟರತ್ನಿರ್ಮಹಾಬಾಹುರ್ವ್ಯೂಢೋರಸ್ಕಃ ಸುದುರ್ಜಯಃ |
ಅತಿಮಾನೀ ಚ ಶೂರಶ್ಚ ಪ್ರವೀರಃ ಪ್ರಿಯದರ್ಶನಃ ॥29॥
ಕರ್ಣನು ಎಂಟು ರತ್ನಿಯಷ್ಟು, ಅಂದರೆ ನೂರ ಅರವತ್ತೆಂಟು ಅಂಗುಲಗಳಷ್ಟು ಎತ್ತರದ ಆಜಾನುಬಾಹುವಾದ ಶರೀರಉಳ್ಳವನು. (ಒಂದು ರತ್ನಿ ಅಂದರೆ  ಮೊಳಕೈ ಯಿಂದ ಮುಚ್ಚಿದ ಅಂಗೈವರೆಗಿನ ಅಳತೆಯಷ್ಟು ಇಪ್ಪತ್ತೊಂದು ಅಂಗುಲಗಳು.)
ಮಹಾಬಾಹುಉಳ್ಳವನು, ವಿಶಾಲವಾದ ಎದೆ ಉಳ್ಳವನು. ಯಾರಿಗೂ ಗೆಲ್ಲಲು ಅಸಾಧ್ಯ. ಅತಿಯಾದ ದರ್ಪ ಉಳ್ಳವನು, ಶೂರ, ವೀರ, ನೋಡಲೂ ಸುಂದರ.
ಸರ್ವೈರ್ಯೋಧಗುಣೈರ್ಯುಕ್ತೋ ಮಿತ್ರಾಣಾಮಭಯಂಕರಃ |
ಸತತಂ ಪಾಂಡವದ್ವೇಷೀ ಧಾರ್ತರಾಷ್ಟ್ರಹಿತೇ ರತಃ ॥30॥
ಯೋಧರಿಗಿರಬೇಕಾದ ಎಲ್ಲ ಗುಣಗಳಿಂದ ಕೂಡಿದವನು. ಮಿತ್ರರಿಗೆ ಅಭಯ ನೀಡುವವನು, ಅಸುರಾವೇಶದಿಂದ ಸತತವಾಗಿ ಪಾಂಡವರನ್ನು ದ್ವೇಷಿಸುತ್ತಾನೆ. ಕೌರವರಿಗೆ ಹಿತ ಮಾಡುವುದರಲ್ಲಿ ಆಸಕ್ತನಾಗಿದ್ದಾನೆ.
ಸರ್ವೈರವಧ್ಯೋ ರಾಧೇಯೋ ದೇವೈರಪಿ ಸವಾಸವೈಃ |
ಋತೇ ತ್ವಾಮಿತಿ ಮೇ ಬುದ್ಧಿಸ್ತ್ವಮದ್ಯ ಜಹಿ ಸೂತಜಮ್ ॥31॥
ಕರ್ಣನು ನಿನ್ನೊಬ್ಬನನ್ನು ಬಿಟ್ಟರೆ ಇಂದ್ರಾದಿ ದೇವತೆಗಳಿಂದಲೂ ಯಾರಿಂದಲೂ ಕೊಲ್ಲಲಾಗದವನು ಎಂದು ನಾನು ಭಾವಿಸುತ್ತೇನೆ. ಅವನನ್ನು ನೀನು ಈಗ ಕೊಲ್ಲು.
ದೇವೈರಪಿ ಹಿ ಸಂಯತ್ತೈರ್ಬಿಭ್ರದ್ಭಿರ್ಮಾಂಸಶೋಣಿತಮ್ |
ಅಶಕ್ಯಃ ಸಮರೇ ಜೇತುಂ ಸರ್ವೈರಪಿ ಯುಯುತ್ಸುಭಿಃ ॥32॥
ಮಾಂಸರಕ್ತಮಯ ಶರೀರದವರಾದ ದೇವತೆಗಳಿಂದಲೂ ಯತ್ನಪೂರ್ವಕ ವಾಗಿ ಯುದ್ಧಮಾಡಲು ಬಯಸುವ ಯಾರಿಂದಲೂ ಕೂಡ ರಣದಲ್ಲಿ ಅವನನ್ನು ಗೆಲ್ಲುವುದು ಶಕ್ಯವಿಲ್ಲ.
ದುರಾತ್ಮಾನಂ ಪಾಪಮತಿಂ ನೃಶಂಸಂ
ದುಷ್ಟಪ್ರಜ್ಞಂ ಪಾಂಡವೇಯೇಷು ನಿತ್ಯಮ್ |
ಹೀನಸ್ವಾರ್ಥಂ ಪಾಂಡವೇಯೈರ್ವಿರೋಧೇ
ಹತ್ವಾ ಕರ್ಣಂ ಧಿಷ್ಠಿತಾರ್ಥೋ ಭವಾದ್ಯ ॥33॥
ದುರಾತ್ಮ, ಪಾಪಬುದ್ಧಿಯವನು, ಕ್ರೂರಿ, ಪಾಂಡವರನ್ನು ವಿರೋಧಿಸುವಲ್ಲಿ ಸ್ವಪ್ರಯೋಜನವಿಲ್ಲದಿದ್ದರೂ ಪಾಂಡವರ ವಿಷಯದಲ್ಲಿ ಸದಾ ದುರ್ಭಾವನೆ ತಳೆದವನು. ಇಂಥ ಕರ್ಣನನ್ನು ಕೊಂದು ನೀನು ಕೃತಾರ್ಥನಾಗು.
ತಂ ಸೂತಪುತ್ರಂ ರಥಿನಾಂ ವರಿಷ್ಠಂ
ನಿಷ್ಕಾಲಿಕಂ ಕಾಲವಶಂ ನಯಾದ್ಯ |
ಸದಾವಜಾನಾತಿ ಹಿ ಪಾಂಡುಪುತ್ರಾ-
ನಸೌ ದರ್ಪಾತ್ ಸೂತಪುತ್ರೋ ದುರಾತ್ಮಾ ॥34॥
ರಥಿಕರಲ್ಲಿ ಶ್ರೇಷ್ಠ, ಈ ಸೂತಪುತ್ರ ಆಯುಷ್ಯ ತೀರಿದವನು. ಅವನನ್ನು ಈಗಲೇ ಮೃತ್ಯುವಿನ ವಶಕ್ಕೇ ಒಯ್ಯು. ದುರಾತ್ಮನಾದ ಈ ಕರ್ಣ ದರ್ಪದಿಂದ ಸದಾ ಪಾಂಡವರನ್ನು ಅಪಮಾನಿಸುತ್ತಾನೆ.

ವೀರವನ್ಮನ್ಯತೇತ್ಮಾನಂ ಯೇನ ಪಾಪಃ ಸುಯೋಧನಃ |
ತಮದ್ಯ ಮೂಲಂ ಪಾಪಾನಾಂ ಜಯ ಸೌತಿಂ ಧನಂಜಯ ॥35॥
ಕರ್ಣನು ಜೊತೆಗೆ ಇರುವುದರಿಂದಲೇ ದುರ್ಯೋಧನ ತನ್ನನ್ನು ವೀರನಂತೆ ತಿಳಿದಿದ್ದಾನೆ. ಅವನ ಪಾಪಕರ್ಮಗಳಿಗೆ ಮೂಲ ಪ್ರೇರಕನಾದ ತೃಪ್ತನಾದ ಕರ್ಣನನ್ನು, ಅರ್ಜುನ, ನೀನು ಇಂದು ಗೆಲ್ಲು.
ಖಡ್ಗಜಿಹ್ವಂ ಧನುರಾಸ್ಯಂ ಶರದಂಷ್ಟ್ರಂ ತರಸ್ವಿನಮ್ |
ದೃಪ್ತಂ ಪುರುಷಶಾರ್ದೂಲಂ ಜಹಿ ಕರ್ಣಂ ಧನಂಜಯ ॥36॥
ಪುರುಷರಲ್ಲಿ ಕರ್ಣನೆಂದರೆ, ಖಡ್ಗವೇ ನಾಲಿಗೆ, ಧನುಸ್ಸೇ ಮುಖ, ಬಾಣಗಳೇ ಹಲ್ಲುಗಳು. ಇಂಥ ಮಹಾವೇಗವುಳ್ಳ ದರ್ಪದಿಂದ ಕೊಬ್ಬಿದ ಹೆಬ್ಬುಲಿಯಾಗಿದ್ದಾನೆ. ಅವನನ್ನು ಕೊಲ್ಲು.
ಅಹಂ ತ್ವಾಮನುಜಾನಾಮಿ ವೀರ್ಯೇಣ ಚ ಬಲೇನ ಚ |
ಜಹಿ ಕರ್ಣಂ ರಣೇ ಶೂರಂ ಮಾತಂಗಮಿವ ಕೇಸರೀ ॥37॥
ನಾನು ನಿನಗೆ ಅನುಜ್ಞೆ ನೀಡುತ್ತೇನೆ. ವೀರ್ಯದಿಂದಲೂ ಬಲದಿಂದಲೂ, ಸಿಂಹವು ಆನೆಯನ್ನು ಕೊಲ್ಲುವಂತೆ, ನೀನು ರಣದಲ್ಲಿ ಶೂರಕರ್ಣನನ್ನು ಕೊಲ್ಲು.
ಯಸ್ಯ ವೀರ್ಯೇಣ ವೀರ್ಯಂ ತೇ ಧಾರ್ತರಾಷ್ಟ್ರೋಽವಮನ್ಯತೇ |
ತಮದ್ಯ ಪಾರ್ಥ ಸಂಗ್ರಾಮೇ ಕರ್ಣಂ ವೈಕರ್ತನಂ ಜಹಿ ॥38॥
ಕರ್ಣನ ವೀರ್ಯದ ಬಲದಿಂದ ದುರ್ಯೋಧನನು ನಿನ್ನನ್ನು ಅವಮಾನಿಸು ತ್ತಿದ್ದಾನೆ. ಅಂಥ ಕರ್ಣನನ್ನು ಇಂದು ರಣದಲ್ಲಿ ಕೊಲ್ಲು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಕೃಷ್ಣವಾಕ್ಯೇ ಕರ್ಣಗುಣವರ್ಣನಂ ನಾಮ ಏಕೋನಸಪ್ತತಿತಮೋಧ್ಯಾಯಃ ॥69॥

ಎಪ್ಪತ್ತನೆಯ ಅಧ್ಯಾಯ
ದುರ್ಯೋಧನನ ಎಲ್ಲ ಅಕೃತ್ಯಗಳಿಗೂ ಪ್ರೇರಣೆ ನೀಡಿದವನೇ ಕರ್ಣ.
ಅವನ ವಧೆ ಅತ್ಯಂತ ಆವಶ್ಯಕ ಎಂದು ಶ್ರೀಕೃಷ್ಣನ ಉಪದೇಶ.
ಸಂಜಯಃ
ತತಃ ಪುನರಮೇಯಾತ್ಮಾ ಕೇಶವೋಽರ್ಜುನಮಬ್ರವೀತ್ |
ಕೃತಸಂಕಲ್ಪಮಾಯಾಂತಂ ವಧೇ ಕರ್ಣಸ್ಯ ಭಾರತ ॥1॥
ಸಂಜಯನು ನುಡಿದ– ಅಮೇಯಾತ್ಮನಾದ ಶ್ರೀಕೃಷ್ಣನು ಪುನಃ, ಕರ್ಣವಧಕ್ಕೆ ಸಂಕಲ್ಪಮಾಡಿ ರಣರಂಗಕ್ಕೆ ಬರುತ್ತಿರುವಾಗ, ಅರ್ಜುನನಿಗೆ ನುಡಿದ.
ಅದ್ಯ ಸಪ್ತದಶಾಹಾನಿ ವರ್ತಮಾನಸ್ಯ ನಿತ್ಯಶಃ |
ವಿನಾಶಸ್ಯಾತಿಘೋರಸ್ಯ ನರವಾರಣವಾಜಿನಾಮ್ ॥2॥
ಪದಾತಿ ಗಜ ಅಶ್ವ ಸೈನಿಕರ ಅತಿಘೋರವಾದ ವಿನಾಶ ನಿತ್ಯ ನಡೆಯುತ್ತಿದ್ದಂತೆ ಅದು ಪ್ರಾರಂಭವಾಗಿ ಇಂದಿಗೆ ಹದಿನೇಳು ದಿನಗಳಾಗುತ್ತಿವೆ.
ಭೂತ್ವಾ ಚ ವಿಪುಲಾ ಸೇನಾ ತಾವಕಾನಾಂ ಪರೈಃ ಸಹ |
ಅನ್ಯೋನ್ಯಂ ಸಮರೇ ಪ್ರಾಪ್ಯ ಕಿಂಚಿಚ್ಛೇಷಾ ಮಹಾಭಯೇ ॥3॥
ಪ್ರಾರಂಭದಲ್ಲಿ ಅಪಾರವಾಗಿದ್ದ ಸೈನ್ಯವು, ನಿಮ್ಮವರಿಗೆ ಪರರೊಂದಿಗೆ ಉಂಟಾದ ಮಹಾಭಯಂಕರವಾದ ಸಮರದಲ್ಲಿ ಸೇರಿಕೊಂಡು ಬಳಿಕ, ಈಗ ಸ್ವಲ್ಪ ಭಾಗ ಮಾತ್ರವಾಗಿ ಉಳಿದಿದೆ.
ಭೂತ್ವಾ ವೈ ಕೌರವಾಃ ಪಾರ್ಥ ಪ್ರಭೂತಗಜವಾಜಿನಃ |
ತ್ವಾಂ ಹಿ ಶತ್ರುಂ ಸಮಾಸಾದ್ಯ ವಿನಷ್ಟಾ ರಣಮೂರ್ಧನಿ ॥4॥
ಅರ್ಜುನ, ಕೌರವರಲ್ಲಿ ಬಹಳ ಗಜ ಅಶ್ವ ಸೈನಿಕರಿದ್ದರೂ ಅವರೆಲ್ಲರೂ ರಣಾಂಗಣದ ಮುಂಭಾಗದಲ್ಲಿ ಶತ್ರುವಾಗಿ ನಿಂತ ನಿನ್ನನ್ನು ಇದಿರಿಸಿ ವಿನಾಶ ಹೊಂದಿದರು.
ಏತೇ ಚ ಸರ್ವೇ ಪಾಂಚಾಲಾಃ ಸೃಂಜಯಾಶ್ಚ ಸಹಾನ್ವಯಾಃ |
ತ್ವಾಂ ಸಮಾಶ್ರಿತ್ಯ ವರ್ಧಂತೇ ಪಾಂಡವಾಶ್ಚ ವ್ಯವಸ್ಥಿತಾಃ ॥5॥
ಈ ಎಲ್ಲ ಪಾಂಚಾಲರೂ ಸೃಂಜಯರೂ ಪಾಂಡವರೂ ತಮ್ಮ ಕಡೆಯವ ರೊಂದಿಗೆ ಯುದ್ಧ ಸನ್ನದ್ಧರಾಗಿ ನಿಂತು ನಿನ್ನನ್ನು ಆಶ್ರಯಿಸಿ ಜಯಹೊಂದುತ್ತಿದ್ದಾರೆ.
ಪಾಂಚಾಲೈಃ ಪಾಂಡವೈರ್ಮತ್ಸ್ಯೈಃ ಕಾರೂಷೈಶ್ಚೇದಿಕೇಕಯೈಃ |
ತ್ವಯಾ ಗುಪ್ತೈರಮಿತ್ರಘ್ನ ಕೃತಃ ಶತ್ರುಗಣಕ್ಷಯಃ ॥6॥
ಶತ್ರುನಾಶಕನೆ, ಪಾಂಚಾಲ ಪಾಂಡವ ಮತ್ಸ್ಯ ಕಾರೂಷ ಚೇದಿ ಕೇಕಯರು ನಿನ್ನ ರಕ್ಷಣೆಯಲ್ಲಿದ್ದು ಶತ್ರುಸಮೂಹಗಳನ್ನು ನಾಶಮಾಡಿದ್ದಾರೆ.
ಕೋ ಹಿ ಶಕ್ತೋ ರಣೇ ಜೇತುಂ ಕೌರವಾಂಸ್ತಾತ ಸಂಗತಾನ್ |
ಅನ್ಯತ್ರ ಪಾಂಡವಾದ್ ಯುದ್ಧೇ ಶ್ವೇತಾಶ್ವಾದ್ ವಾನರಧ್ವಜಾತ್ ॥7॥
ಶ್ವೇತ ಅಶ್ವಗಳಿಂದ ವಾನರಧ್ವಜದಿಂದ ಯುಕ್ತನಾದ ನಿನ್ನ ಹೊರತು ಇನ್ನು ಯಾವನು ಯುದ್ಧದಲ್ಲಿ ಎಲ್ಲರೂ ಒಟ್ಟಾಗಿ ಬಂದ ಕೌರವರನ್ನು ಗೆಲ್ಲಲು ಶಕ್ತನಾಗುತ್ತಾನೆ?

ತ್ವಂ ಹಿ ಶಕ್ತೋ ರಣೇ ಜೇತುಂ ಸಸುರಾಸುರಮಾನುಷಾನ್ |
ತ್ರೀನ್ ಲೋಕಾನ್ ಸಮಮುದ್ಯುಕ್ತಾನ್ ಕಿಂ ಪುನಃ ಕೌರವಂ
ಬಲಮ್ ||8||
ಸುರ ಅಸುರ ಮಾನವರಿಂದ ಯುಕ್ತವಾದ ಮೂರು ಲೋಕಗಳು ಒಟ್ಟಾಗಿ ಉದ್ಯುಕ್ತವಾದರೂ ನೀನು ರಣದಲ್ಲಿ ಗೆಲ್ಲಬಲ್ಲೆ.
ಭಗದತ್ತಂ ಹಿ ರಾಜಾನಂ ಕೋಽನ್ಯಃ ಶಕ್ತಸ್ತ್ವಯಾ ವಿನಾ |
ಜೇತುಂ ಪುರುಷಶಾರ್ದೂಲ ಯೋಽಪಿ ಸ್ಯಾದ್ ವಾಸವೋಪಮಃ ||9||
ಪುರುಷಶ್ರೇಷ್ಠನೆ, ಇಂದ್ರನಂಥ ರಾಜಾ ಭಗದತ್ತನನ್ನು ನಿನ್ನ ಹೊರತು ಇನ್ನಾವನು ಗೆಲ್ಲಬಲ್ಲ?
ತಥೇಮಾಂ ವಿಪುಲಾಂ ಸೇನಾಂ ಗುಪ್ತಾಂ ಪಾರ್ಥ ತ್ವಯಾನಘ |
ನ ಶೇಕುಃ ಪಾರ್ಥಿವಾಃ ಸರ್ವೇ ಚಕ್ಷುರ್ಭಿರಭಿವೀಕ್ಷಿತುಮ್ ||10||
ಅರ್ಜುನ, ನಮ್ಮ ಈ ಅಪಾರಸೈನ್ಯ ನಿನ್ನಿಂದ ರಕ್ಷಿತವಾದ್ದರಿಂದ ರಾಜರು ಯಾರೂ ಅದನ್ನು ಕಣ್ಣುಗಳಿಂದ ದಿಟ್ಟಿಸಲೂ ಸಮರ್ಥರಾಗಲಿಲ್ಲ.
ತಥೈವ ಸತತಂ ಪಾರ್ಥ ರಕ್ಷಿತಾಭ್ಯಾಂ ತ್ವಯಾ ರಣೇ |
ಧೃಷ್ಟದ್ಯುಮ್ನಶಿಖಂಡಿಭ್ಯಾಂ ಭೀಷ್ಮದ್ರೋಣೌ ನಿಪಾತಿತೌ ||11||
ಹಾಗೇ ರಣದಲ್ಲಿ ಸತತವಾಗಿ ನಿನ್ನ ರಕ್ಷಣೆಯಲ್ಲಿದ್ದ ದೃಷ್ಟದ್ಯುಮ್ನ, ಶಿಖಂಡಿಗಳಿಂದ ಭೀಷ್ಮ, ದ್ರೋಣರು ಹತರಾದರು.
ಕೋ ಹಿ ಶಕ್ತೋ ರಣೇ ಪಾರ್ಥ ಪಾಂಚಾಲಾನಾಂ ಮಹಾರಥೌ |
ಭೀಷ್ಮದ್ರೋಣೌ ಯುಧಾ ಜೇತುಂ ಶಕ್ರತುಲ್ಯಪರಾಕ್ರಮೌ ||12||
ಇಂದ್ರಸಮಾನ ಪರಾಕ್ರಮಿಗಳಾದ ಮಹಾರಥರಾದ ಭೀಷ್ಮ, ದ್ರೋಣರನ್ನು ರಣದಲ್ಲಿ ಹೋರಾಟದಿಂದ ಗೆಲ್ಲಲು ಪಾಂಚಾಲರಲ್ಲಿ ಯಾವನು ಶಕ್ತನಿದ್ದಾನೆ?
ಕೋ ಹಿ ಶಾಂತನವಂ ಸಂಖೇ ದ್ರೋಣಂ ವೈಕರ್ತನಂ ಕೃಪಮ್ |
ದ್ರೌಣಿಂ ಚ ಸೌಮದತ್ತಿಂ ಚ ಕೃತವರ್ಮಾಣಮೇವ ಚ |
ಸೈಂಧವಂ ಮದ್ರರಾಜಂ ಚ ರಾಜಾನಂ ಚ ಸುಯೋಧನಮ್ ||13||
ವೀರಾನ್ ಕೃತಾಸ್ತ್ರಾನ್ ಸಮರೇ ಸರ್ವಾನೇವಾನಿವರ್ತಿನಃ |
ಅಕ್ಷೋಹಿಣೀಪತೀನುಗ್ರಾನ್ ಸಂರಬ್ಧಾನ್ ಯುದ್ಧದುರ್ಮದಾನ್ |
ತ್ವಾಮೃತೇ ಪುರುಷವ್ಯಾಘ್ರ ಜೇತುಂ ಶಕ್ತಃ ಪುಮಾನಿಹ ||14||
ಭೀಷ್ಮ ದ್ರೋಣ ಕರ್ಣ ಕೃಪ ಅಶ್ವತ್ಥಾಮ ಸೌಮದತ್ತಿ ಕೃತವರ್ಮ ಜಯದ್ರಥ ಶಲ್ಯ ರಾಜಾ ಸುಯೋಧನ ಇವರೆಲ್ಲರೂ ವೀರರು, ಅಸ್ತ್ರವಿದ್ಯಾಪಾರಂಗತರು. ರಣದಲ್ಲಿ ಹಿಮ್ಮೆಟ್ಟದವರು. ಅಕ್ಷೋಹಿಣಿಸೇನಾಧಿಪತಿಗಳು ಉಗ್ರರು ಕುಪಿತರು ಯುದ್ಧದಲ್ಲಿ ಹವ್ಯಾಸಿಗಳು, ಇವರನ್ನು, ಅರ್ಜುನ, ನೀನಲ್ಲದೆ ಇನ್ನಾವ ಪುರುಷನು ಗೆಲ್ಲಲು ಶಕ್ತ?
ಸೇನಾಶ್ಚ ಬಹುಲಾಃ ಕ್ಷೀಣಾಃ ಪ್ರದೀರ್ಣಾಶ್ವರಥದ್ವಿಪಾಃ |
ನಾನಾಜನಪದಾಶ್ಚೋಗ್ರಾಃ ಕ್ಷತ್ರಿಯಾಣಾಮಮರ್ಷಿಣಾಮ್ ||15||
ನಾನಾ ದೇಶಗಳಿಂದ ಬಂದ ಅಸಹನಶೀಲರಾದ ಕ್ಷತ್ರಿಯರ ಅಪಾರವಾದ ಉಗ್ರವಾದ ಸೈನ್ಯಗಳು ಅಶ್ವರಥಗಜ ನಾಶದಿಂದ ಈಗ ಕ್ಷೀಣವಾಗಿವೆ.
ಗೋವಾಸದಾಸಮೀಯಾನಾಂ ವಸಾತೀನಾಂ ಚ ಭಾರತ |
ವ್ರಾತ್ಯಾನಾಂ ವಾಟಧಾನಾನಾಂ ಭೋಜಾನಾಂ ಚಾಪಿ
ಮಾನಿನಾಮ್ ||16||
ಉದೀರ್ಣಾಶ್ಚ ಮಹಾಸೇನಾ ಬ್ರಹ್ಮಕ್ಷತ್ರಸ್ಯ ಭಾರತ |
ತ್ವಾಂ ಸಮಾಸಾದ್ಯ ನಿಧನಂ ಗತಾ ಭೀಮಂ ಚ ಭಾರತ ||17||
ಗೋವಾಸರು ದಾಸಮೀಯರು ವಸಾತಿಗಳು ವ್ರಾತ್ಯರು ವಾಟಧಾನರು, ಭೋಜರು ಇವರೆಲ್ಲರು ದರ್ಪಿಷ್ಠರು. ಇವರ ಬ್ರಾಹ್ಮಣ ಕ್ಷತ್ರಿಯಯೋಧರಿಂದ ಯುಕ್ತವಾದ ಶ್ರೇಷ್ಠವಾದ ಮಹಾಸೈನ್ಯಗಳು ನಿನ್ನನ್ನೂ ಭೀಮನನ್ನೂ ಇದಿರಿಸಿ ನಾಶವಾದುವು.
ಉಗ್ರಾಶ್ಚ ಕ್ರೂರಕರ್ಮಾಣಸ್ತುಷಾರಾ ಯವನಾಃ ಖಶಾಃ |
ದಾರ್ವಾಭಿಸಾರಾ ದರದಾಃ ಶಾಕಾ ಮಾಠರತಂಗಣಾಃ ||18||
ಆಂಧ್ರಕಾಶ್ಚ ಪುಲಿಂದಾಶ್ಚ ಕಿರಾತಾಶ್ಚೋಗ್ರವಿಕ್ರಮಾಃ |
ಮ್ಲೇಚ್ಛಾಶ್ಚ ಪಾರ್ವತೀಯಾಶ್ಚ ಸಾಗರಾನೂಪವಾಸಿನಃ |
ಸಂರಮ್ಭಿಣೋ ಯುದ್ಧಶೌಂಡಾ ಬಲಿನೋ ದಂಡಪಾಣಯಃ ||19||
ಏತೇ ಸುಯೋಧನಸ್ಯಾರ್ಥೇ ಸಂರಬ್ಧಾಃ ಕುರುಭಿಃ ಸಹ |
ನ ಶಕ್ಯಾ ಯುಧಿ ನಿರ್ಜೇತುಂ ತ್ವದನ್ಯೇನ ಪರಂತಪ ||20||
ತುಷಾರ ಯವನ ಖಶ ದಾರ್ವಾಭಿಸಾರ ದರದ ಶಾಕ ಮಾಠರ ತಂಗಣ ಆಂಧ್ರ ಪುಲಿಂದ ಕಿರಾತ ಮ್ಲೇಚ್ಛ ಪಾರ್ವತೀಯ ಸಮುದ್ರತೀರವಾಸಿಗಳು ಇವರೆಲ್ಲರೂ ಉಗ್ರರು ಕ್ರೂರಕರ್ಮಿಗಳು ಉಗ್ರಪರಾಕ್ರಮಿಗಳು ಕೋಪಿಷ್ಠರು ಯುದ್ಧನಿಪುಣರು, ಬಲಿಷ್ಠರು ದಂಡಪಾಣಿಗಳು, ಇವರು ಕುಪಿತರಾಗಿ ಕೌರವರೊಂದಿಗೆ ಸೇರಿ ಯುದ್ಧ ಮಾಡುವವರು. ಶತ್ರುನಾಶಕನೆ, ಇವರನ್ನು ರಣದಲ್ಲಿ ಗೆಲ್ಲಲು ನಿನ್ನ ಹೊರತು ಅನ್ಯನಿಂದ ಶಕ್ಯವಿಲ್ಲ.
ಧಾರ್ತರಾಷ್ಟ್ರಮುದಗ್ರಂ ಹಿ ವ್ಯೂಢಂ ದೃಷ್ಟ್ವಾ ಮಹಾಬಲಮ್ |

ಯದಿ ತ್ವಂ ನ ಭವೇಸ್ತತ್ರ ತ್ರಾತಾ ಪ್ರತೀಯಾತ್ ಕೋ ನು ಮಾನವಃ ||21||
ವ್ಯೂಹವಾಗಿ ನಿಂತ ಶ್ರೇಷ್ಠವಾದ ದುರ್ಯೋಧನನ ಮಹಾ ಸೈನ್ಯವನ್ನು, ನೀನು ರಕ್ಷಕನಾಗಿ ನಿಲ್ಲದಿದ್ದರೆ, ಯಾವ ಮಾನವನು ತಾನೆ ಇದಿರಿಸಿಯಾನು?
ತತ್ ಸಾಗರಮಿವೋದ್ಧೂತಂ ರಜಸಾ ಸಂವೃತಂ ಬಲಮ್ |
ವಿದಾರ್ಯ ಪಾಂಡವೈಃ ಕ್ರುದ್ಧೈಸ್ತ್ವಯಾ ಗುಪ್ತೈರ್ಹತಂ ವಿಭೋ ||22||
ಧೂಳಿನಿಂದ ಮುಚ್ಚಿಕೊಂಡು ಸಮುದ್ರದಂತೆ ಉಕ್ಕಿಬರುವ ಕೌರವಸೈನ್ಯವನ್ನು ನಿನ್ನ ರಕ್ಷಣೆಯಲ್ಲಿರುವ ಪಾಂಡವ ಸೈನಿಕರು ಭೇದಿಸಿ ನಾಶಮಾಡಿದ್ದಾರೆ.
ಮಾಗಧಾನಾಮಧಿಪತಿರ್ಜಯತ್ಸೇನೋ ಮಹಾಬಲಃ |
ಅದ್ಯ ಸಪ್ತೈವ ಚಾಹಾನಿ ಹತಃ ಸಂಖ್ಯೇಽಭಿಮನ್ಯುನಾ ||23||
ಮಗಧದೇಶಾಧಿಪತಿ ಮಹಾಬಲಿಷ್ಠ ಜಯತ್ಸೇನ ಇಂದಿಗೆ ಏಳೇ ದಿನಗಳ ಹಿಂದೆ ರಣದಲ್ಲಿ ಅಭಿಮನ್ಯುವಿನಿಂದ ಹತನಾಗಿದ್ದಾನೆ.
ತತೋ ದಶಸಹಸ್ರಾಣಿ ಗಜಾನಾಂ ಭೀಮಕರ್ಮಣಾಮ್ |
ಜಘಾನ ಗದಯಾ ಭೀಮಸ್ತಸ್ಯ ರಾಜ್ಞಃ ಪರಿಚ್ಛದಮ್ |
ತತೋಽನ್ಯೇಽಪಿ ಹತಾ ನಾಗಾ ರಥಾಶ್ಚ ಶತಶೋ ಬಲಾತ್ ||24||
ಬಳಿಕ ಆ ರಾಜನ ಕಡೆಯಲ್ಲಿದ್ದ ಭಯಂಕರ ಕರ್ಮಗಳನ್ನು ಮಾಡುವ ಹತ್ತು ಸಾವಿರ ಗಜಯೋಧರನ್ನು ಭೀಮನು ಗದೆಯಿಂದ ಕೊಂದಿದ್ದಾನೆ. ಬೇರೆ ನೂರಾರು ಗಜ ರಥ ಯೋಧರನ್ನೂ ಬಲಾತ್ಕಾರದಿಂದ ಭೀಮನು ಕೊಂದಿದ್ದಾನೆ.
ತದೇವಂ ಸಮರೇ ತಾತ ವರ್ತಮಾನೇ ಮಹಾಭಯೇ |
ಭೀಮಸೇನಂ ಸಮಾಸಾದ್ಯ ತ್ವಾಂ ಚ ಪಾಂಡವ ಕೌರವಾಃ |
ಸವಾಜಿರಥನಾಗಾಶ್ಚ ಮೃತ್ಯುಲೋಕಮಿತೋ ಗತಾಃ ||25||
ಹೀಗೆ ಮಹಾಭಯಂಕರವಾದ ಯುದ್ಧ ನಡೆಯುತ್ತಿದ್ದಾಗ ನಿನ್ನನ್ನೂ ಭೀಮನನ್ನೂ ಇದಿರಿಸಿ, ಕೌರವರು ಅಶ್ವರಥಗಜ ಸಮೇತರಾಗಿ ಇಹವನ್ನು ತೊರೆದು ಯಮಲೋಕಕ್ಕೆ ಹೋಗಿದ್ದಾರೆ.
ತಥಾ ಸೇನಾಮುಖೇ ತತ್ರ ನಿಹತೇ ಪಾರ್ಥ ಪಾಂಡವೈಃ |
ಭೀಷ್ಮಃ ಪ್ರಾಸೃಜದುಗ್ರಾಣಿ ಶರವರ್ಷಾಣಿ ಸಂಘಶಃ ||26||
ಕೌರವಸೇನೆಯ ಪ್ರಧಾನಯೋಧರನ್ನು ಪಾಂಡವರು ವಧಿಸುತ್ತಿದ್ದಂತೆಯೇ ಅತ್ತ ಭೀಷ್ಮನು ಉಗ್ರಬಾಣಗಳ ಮಳೆಸಮೂಹಗಳನ್ನೇ ಉಂಟುಮಾಡಿದ.
ಸ ಚೇದಿಕಾಶಿಪಾಂಚಾಲಾನ್ ಕರೂಷಾನ್ ಮತ್ಸ್ಯಕೇಕಯಾನ್ |
ಶರೈಃ ಪ್ರಚ್ಛಾದ್ಯ ನಿಧನಮನಯತ್ ಪರಮಾಸ್ತ್ರವಿತ್ ||27||
ಭೀಷ್ಮನು ಶ್ರೇಷ್ಠ ಅಸ್ತ್ರಜ್ಞಾನಿ. ಅವನು ಚೇದಿ ಕಾಶಿ ಪಾಂಚಾಲ ಕರೂಷ ಮತ್ಸ್ಯ ಕೇಕಯ ಯೋಧರನ್ನು ಬಾಣಗಳಿಂದ ಮುಚ್ಚಿ ಸಂಹರಿಸಿದ.
ತಸ್ಯ ಚಾಪಚ್ಯುತೈರ್ಬಾಣೈಃ ಪರದೇಹವಿದಾರಣೈಃ |
ಪೂರ್ಣಮಾಕಾಶಮಭವದ್ ರುಗ್ಮಪುಂಖೈರಜಿಹ್ಮಗೈಃ ||28||
ಬಂಗಾರದ ಬುಡದಿಂದ ಯುಕ್ತವಾಗಿ ನೇರವಾಗಿ ಹೋಗುತ್ತ ಶತ್ರುಗಳ ಶರೀರ ನಾಶಮಾಡುವ ಭೀಷ್ಮನ ಬಾಣಗಳು ಅವನ ಧನುಸ್ಸಿನಿಂದ ಹೊರಟು ಆಕಾಶವನ್ನು ಪೂರ್ತಿಯಾಗಿ ತುಂಬಿದುವು.
ಗತ್ವಾ ದಶಮ್ಯಾ ತೇ ಗತ್ವಾ ಜಘ್ನುರ್ವಾಜಿರಥದ್ವಿಪಾನ್ |
ಹಿತ್ವಾ ನವ ಗತೀರ್ಜುಷ್ಟಾಃ ಸ್ವಬಾಣಾನಾಹವೇಽಮುಚನ್ ||29||
ಹತ್ತು ಹೆಜ್ಜೆ ಮುಂದಿಟ್ಟು ಅಶ್ವರಥಗಜಗಳನ್ನು ಸಂಹರಿಸುತ್ತಿದ್ದ ಪಾಂಡವ ಸೈನಿಕರು, ಭೀಷ್ಮನ ಬಾಣಗಳನ್ನು ಇದಿರಿಸಲಾಗದೆ, ಒಂಬತ್ತು ಹೆಜ್ಜೆ ಹಿಂದಿಟ್ಟು ತಮ್ಮ ಬಾಣಗಳನ್ನು ರಣದಲ್ಲಿ ಪ್ರಯೋಗಿಸಬೇಕಾಯಿತು.
ದಿನಾನಿ ದಶ ಭೀಷ್ಮೇಣ ನಿಘ್ನತಾ ತಾವಕಂ ಬಲಮ್ |
ಶೂನ್ಯಾಃ ಕೃತಾ ರಥೋಪಸ್ಥಾ ಹತಾಶ್ಚ ಗಜವಾಜಿನಃ ||30||
ಹತ್ತು ದಿನಗಳ ಕಾಲ ನಿನ್ನ ಸೈನ್ಯವನ್ನು ಸಂಹರಿಸುತ್ತಿದ್ದ ಭೀಷ್ಮ ರಥಗಳಲ್ಲಿ ರಥಿಕರಿಲ್ಲದಂತೆ ಮಾಡಿದ. ಗಜ ಅಶ್ವಯೋಧರನ್ನೂ ನಾಶಪಡಿಸಿದ.
ದರ್ಶಯಿತ್ವಾತ್ಮನೋ ರೂಪಂ ರುದ್ರೋಪೇಂದ್ರಸಮಂ ಯುಧಿ |
ಪಾಂಡವಾನಾಮನೀಕಾನಿ ಪ್ರವಿಗಾಹ್ಯ ವ್ಯಶಾತಯತ್ ||31||
ಭೀಷ್ಮನು ರಣದಲ್ಲಿ ರುದ್ರಉಪೇಂದ್ರರಂಥ ತನ್ನ ರೂಪವನ್ನು ತೋರಿ ಪಾಂಡವ ಸೈನಿಕರ ನಡುವೆ ಹೊಕ್ಕು ನಾಶಪಡಿಸಿದ.
ವಿನಿಘ್ನನ್ ಪೃಥಿವೀಪಾಲಾಂಶ್ಚೇದಿಪಾಂಚಾಲಕೇಕಯಾನ್ |
ವ್ಯದಹತ್ ಪಾಂಡವೀಂ ಸೇನಾಂ ನರಾಶ್ವಗಜಸಂಕುಲಾಮ್ ||32||
ಭೀಷ್ಮನು ಚೇದಿ ಪಾಂಚಾಲ ಕೇಕಯ ರಾಜರನ್ನು ಸಂಹರಿಸುತ್ತ ಪದಾತಿ ಅಶ್ವಗಜ ಸೈನಿಕರಿಂದ ತುಂಬಿದ ಪಾಂಡವ ಸೈನ್ಯವನ್ನು ಅಸ್ತ್ರಗಳಿಂದ ಸುಟ್ಟುಬಿಟ್ಟ.
ಮಜ್ಜಂತಮಪ್ಲವೇ ಮಂದಮುಜ್ಜಿಹೀರ್ಷುಂ ಸುಯೋಧನಮ್ |
ತಥಾ ಚರಂತಂ ಸಮರೇ ತಪಂತಮಿವ ಭಾಸ್ಕರಮ್ ||33||
ಪದಾತಿಕೋಟಿಸಾಹಸ್ರಾಃ ಪ್ರವರಾಯುಧಪಾಣಯಃ |

ನ ಶೇಕುಃ ಸೃಂಜಯಾ ದ್ರಷ್ಟುಂ ತಥೈವಾನ್ಯೇ ಮಹೀಕ್ಷಿತಃ ॥34॥
ಮಂದ ಬುದ್ಧಿಯ ದುರ್ಯೋಧನನು ದ್ರೋಣಿ ಇಲ್ಲದೆ ಮುಳುಗುವುದರಲ್ಲಿ ಇದ್ದಾಗ ಭೀಷ್ಮ ಅವನನ್ನು ಎತ್ತಿಹಾಕಲು ಬಯಸಿ ರಣದಲ್ಲಿ ಸೂರ್ಯನಂತೆ ಪ್ರಕಾಶಿಸುತ್ತ ಸಂಚರಿಸಿದ. ಆಗ ಅವನನ್ನು ದಿಟ್ಟಿಸಿ ನೋಡುವುದಕ್ಕೂ ಶ್ರೇಷ್ಠ ಆಯುಧ ಧರಿಸಿದ ಸಾವಿರಕೋಟಿ ಪದಾತಿಯುಕ್ತರಾದ ಸೃಂಜಯರು ಮತ್ತು ಬೇರೆ ರಾಜರು ಶಕ್ತರಾಗಲಿಲ್ಲ.
ವಿಚರಂತಂ ತಥಾ ತಂ ತು ಸಂಗ್ರಾಮೇ ಜಿತಕಾಶಿನಮ್ |
ಸರ್ವೋದ್ಯಮೇನ ಮಹತಾ ಪಾಂಡವಾಃ ಸಮುಪಾದ್ರವನ್ ॥35॥
ಭೀಷ್ಮನು ರಣದಲ್ಲಿ ಜಯದಿಂದ ಮೆರೆಯುತ್ತ ಸಂಚರಿಸುವಾಗ ಪಾಂಡವರು ತಮ್ಮ ಎಲ್ಲ ಮಹಾಪ್ರಯತ್ನಗಳನ್ನು ಮಾಡಿ ಅವನನ್ನು ಆಕ್ರಮಿಸಿದರು.
ಸ ತು ವಿದ್ರಾವ್ಯ ಸಮರೇ ಪಾಂಡವಾನ್ ಸೃಂಜಯಾನಪಿ |
ಏಕ ಏವ ರಣೇ ಭೀಷ್ಮ ಏಕವೀರತ್ವಮಾಗತಃ ॥36॥
ಭೀಷ್ಮನು ಸಮರದಲ್ಲಿ ಪಾಂಡವರನ್ನೂ ಸೃಂಜಯರನ್ನೂ ದೂರಕ್ಕೆ ಅಟ್ಟಿ ಒಬ್ಬನೇ ನಿಂತು ಅದ್ವಿತೀಯ ವೀರನೆನಿಸಿದ.
ತಂ ಶಿಖಂಡೀ ಸಮಾಸಾದ್ಯ ತ್ವಯಾ ಗುಪ್ತೋ ಮಹಾರಥಮ್ |
ಜಘಾನ ಪುರುಷವ್ಯಾಘ್ರಂ ಶರೈಃ ಸನ್ನತಪರ್ವಭಿಃ ॥37॥
ಮಹಾರಥನಾದ, ಪುರುಷೋತ್ತಮನಾದ ಭೀಷ್ಮನನ್ನು ನಿನ್ನ ರಕ್ಷಣೆಯಲ್ಲಿದ್ದ ಶಿಖಂಡಿ ಇದಿರಿಸಿ ಡೊಂಕುಗಿಣ್ಣಿನ ಬಾಣಗಳಿಂದ ಹೊಡೆದ.
ಸ ಏಷ ಪತಿತಃ ಶೇತೇ ಶರತಲ್ಪೇ ಪಿತಾಮಹಃ |
ತ್ವಾಂ ಪ್ರಾಪ್ಯ ಪುರುಷವ್ಯಾಘ್ರ ವೃತ್ರಃ ಪ್ರಾಪ್ಯೇವ ವಾಸವಮ್ ॥38॥
ಪುರುಷಶ್ರೇಷ್ಠನೇ, ವೃತ್ರನು ಇಂದ್ರನನ್ನು ಇದಿರಿಸಿದಂತೆ ಈ ಪಿತಾಮಹ ಭೀಷ್ಮನು ನಿನ್ನನ್ನು ಇದಿರಿಸಿ ಬಿದ್ದು ಶರತಲ್ಪದಲ್ಲಿ ಒರಗಿದ.
ದ್ರೋಣಃ ಪಂಚ ದಿನಾನ್ಯುಗ್ರೋ ವಿಧಮ್ಯ ರಿಪುವಾಹಿನೀಃ |
ಕೃತ್ವಾ ವ್ಯೂಹಂ ಮಹಾಯುದ್ಧೇ ಪಾತಯಿತ್ವಾ ಮಹಾರಥಾನ್ ॥39॥
ಜಯದ್ರಥಸ್ಯ ಸಮರೇ ಕೃತ್ವಾ ರಕ್ಷಾಂ ಮಹಾರಥಃ |
ಅಂತಕಪ್ರತಿಮೋ ಘೋರೋ ರಾತ್ರಿಯುದ್ಧೇಽದಹತ್ಪ್ರಜಾಃ ॥40॥
ಮಹಾರಥನಾದ ದ್ರೋಣನು ಐದು ದಿನಗಳ ಕಾಲ ಉಗ್ರನಾಗಿ ವ್ಯೂಹವನ್ನು ರಚಿಸಿ ಶತ್ರುಸೈನ್ಯಗಳನ್ನು ನಾಶಮಾಡಿ ಮಹಾಯುದ್ಧದಲ್ಲಿ ಮಹಾರಥರನ್ನು ಬೀಳಿಸಿ, ರಣದಲ್ಲಿ ಜಯದ್ರಥನಿಗೆ ರಕ್ಷಣೆ ನೀಡಿ, ಮೃತ್ಯುಸಮ ಘೋರರೂಪವಾಗಿ ರಾತ್ರಿಯುದ್ಧದಲ್ಲಿ ಯೋಧರನ್ನು ದಹಿಸಿದ.
ದಗ್ಧ್ವಾ ಯೋಧಾನ್ ಶರೈರ್ವೀರೋ ಭಾರದ್ವಾಜಃ ಪ್ರತಾಪವಾನ್ |
ಧೃಷ್ಟದ್ಯುಮ್ನಂ ಸಮಾಸಾದ್ಯ ಸ ಗತಃ ಪರಮಾಂ ಗತಿಮ್ ॥41॥
ದ್ರೋಣನು ಪ್ರತಾಪಶಾಲಿ, ವೀರ, ಯೋಧರನ್ನು ಬಾಣಗಳಿಂದ ಸುಟ್ಟು ಧೃಷ್ಟದ್ಯುಮ್ನನನ್ನು ಇದಿರಿಸಿ ಪರಮಗತಿಯನ್ನು ಹೊಂದಿದ.
ಯದಿ ಚೈವ ಪರಾನ್ ಯುದ್ಧೇ ಸೂತಪುತ್ರಮುಖಾನ್ ರಥಾನ್ |
ನಾವಾರಯಿಷ್ಯಃ ಸಂಗ್ರಾಮೇ ನ ಸ್ಮ ದ್ರೋಣೋ ವ್ಯನಂಕ್ಷ್ಯತ ॥42॥
ಆದರೆ ಆಗ ಕರ್ಣ ಮುಂತಾದ ಮಹಾರಥರಾದ ಶತ್ರುಗಳನ್ನು ನೀನು ರಣದಲ್ಲಿ ತಡೆಯದಿರುತ್ತಿದ್ದರೆ, ದ್ರೋಣನು ರಣದಲ್ಲಿ ಧೃಷ್ಟದ್ಯುಮ್ನನಿಂದ ನಾಶ ಹೊಂದುತ್ತಿರಲಿಲ್ಲ.
ಭವತಾ ತು ಬಲಂ ಸರ್ವಂ ಧಾರ್ತರಾಷ್ಟ್ರಸ್ಯ ವಾರಿತಮ್ |
ತತೋ ದ್ರೋಣೋ ಹತೋ ಯುದ್ಧೇ ಪಾರ್ಷತೇನ ಧನಂಜಯ |43|
ಅರ್ಜುನ, ನೀನು ಕೌರವನ ಸಮಸ್ತ ಸೈನ್ಯವನ್ನು ದ್ರೋಣನ ರಕ್ಷಣೆಗೆ ಬಾರದಂತೆ ತಡೆದೆ. ಅದರಿಂದ ದ್ರೋಣನು ರಣದಲ್ಲಿ ದೃಷ್ಟದ್ಯುಮ್ನನಿಂದ ಹತನಾದ.
ಏವಂ ವಾ ಕೋ ರಣೇ ಕುರ್ಯಾತ್ ತ್ವದನ್ಯಃ ಕ್ಷತ್ರಿಯೋ ಭುವಿ |
ಯಾದೃಶಂ ತೇ ಕೃತಂ ಪಾರ್ಥ ಜಯದ್ರಥವಧಂ ಪ್ರತಿ ॥44॥
ನೀನು ಜಯದ್ರಥವಧಕ್ಕೆ ರಣದಲ್ಲಿ ಎಂಥ ಯುದ್ಧ ಮಾಡಿದೆಯೋ ಅಂಥ ಯುದ್ಧವನ್ನು ಭೂಮಿಯಲ್ಲಿ ನಿನ್ನ ಹೊರತು ಅನ್ಯಕ್ಷತ್ರಿಯನು ಯಾವನು ತಾನೆ ಮಾಡಿಯಾನು?
ನಿವಾರ್ಯ ಸೇನಾಂ ಮಹತೀಂ ಹತ್ವಾ ಶೂರಾಂಶ್ಚ ಪಾರ್ಥಿವಾನ್ |
ನಿಹತಃ ಸೈಂಧವೋ ರಾಜಾ ತ್ವಯಾಸ್ತ್ರಬಲತೇಜಸಾ ॥45॥
ಮಹಾಸೈನ್ಯವನ್ನು ತಡೆದು, ಶೂರ ರಾಜರನ್ನು ಕೊಂದ ನೀನು ಅಸ್ತ್ರಬಲ ಪರಾಕ್ರಮದಿಂದ ರಾಜಾ ಜಯದ್ರಥನನ್ನು ಕೊಂದಿರುವೆ.
ಆಶ್ಚರ್ಯಂ ಸಿಂಧುರಾಜಸ್ಯ ವಧಂ ಜಾನಂತಿ ಪಾರ್ಥಿವಾಃ |
ಅನಾಶ್ಚರ್ಯಂ ಹಿ ತತ್ ತ್ವತ್ತಸ್ತ್ವಂ ಹಿ ಪಾರ್ಥ ಮಹಾರಥಃ ॥46॥
ಜಯದ್ರಥವಧವನ್ನು ರಾಜರು ಆಶ್ಚರ್ಯವೆಂದುಕೊಳ್ಳುತ್ತಾರೆ. ಆದರೆ ನಿನ್ನಿಂದ ಆ ಕಾರ್ಯ ನಡೆದುದು ಆಶ್ಚರ್ಯವಲ್ಲ. ಏಕೆಂದರೆ ಅರ್ಜುನ, ನೀನು ಮಹಾರಥ.
ತ್ವಾಂ ಹಿ ಪ್ರಾಪ್ಯ ರಣೇ ಕ್ಷತ್ರಮೇಕಾಹಾದಿಹ ಭಾರತ |
ತಪ್ಯಮಾನಮಹಂಯುಕ್ತಂ ನ ಭವೇದಿತಿ ಮೇ ಮತಿಃ ॥47॥
ಅರ್ಜುನ, ನಿನ್ನನ್ನಿದಿರಿಸಿದರೆ ಅಹಂಕಾರಯುಕ್ತವಾದ ಇಡೀ ಕ್ಷತ್ರಿಯ ಸಮೂಹವು ಒಂದೇ ದಿನದಲ್ಲಿ ಹೊಡೆಸಿಕೊಂಡು,

ಇನ್ನಿಲ್ಲವಾದೀತೆಂದು ನನಗೆ ಅನಿಸುತ್ತದೆ.
ಸೇಯಂ ಪಾರ್ಥ ಚಮೂರ್ಘೋರಾ ಧಾರ್ತರಾಷ್ಟ್ರಸ್ಯ ಸಂಯುಗೇ |
ಹತಾ ಸಸರ್ವವೀರಾ ಹಿ ಭೀಷ್ಮದ್ರೋಣೌ ಯದಾ ಹತೌ ॥48॥
ಭೀಷ್ಮದ್ರೋಣರು ರಣದಲ್ಲಿ ಹತರಾದಾಗಲೇ, ದುರ್ಯೋಧನನ ಭಯಂಕರವಾದ ಸೈನ್ಯವು ಎಲ್ಲ ವೀರರೊಂದಿಗೆ ಹತವಾದಂತೇ.
ಶೀರ್ಣಪ್ರವರಯೋಧಾದ್ಯ ಹತವಾಜಿನರದ್ವಿಪಾ |
ಹೀನಾ ಸೂರ್ಯೇಂದುನಕ್ಷತ್ರೈರ್ದ್ಯೌರಿವಾಭಾತಿ ಭಾರತೀ ॥49॥
ಪ್ರಮುಖ ಯೋಧರು ಹತರಾದ್ದರಿಂದ, ಅಶ್ವಪದಾತಿಗಜಸೈನ್ಯಗಳೂ ಹತವಾದ್ದರಿಂದ ಕೌರವರ ಸೈನ್ಯವು ಸೂರ್ಯ ಚಂದ್ರ ನಕ್ಷತ್ರಗಳಿಲ್ಲದ ಆಕಾಶದಂತೆ ಶೂನ್ಯವಾಗಿ ಕಾಣುತ್ತಿದೆ.
ವಿಧ್ವಸ್ತಾ ಹಿ ರಣೇ ಪಾರ್ಥ ಸೇನೇಯಂ ಭೀಮವಿಕ್ರಮಾತ್ |
ಆಸುರೀವ ಪುರಾ ಸೇನಾ ಶಕ್ರಸ್ಯೇವ ಪರಾಕ್ರಮೈಃ ॥50॥
ಅರ್ಜುನ, ರಣದಲ್ಲಿ ಭೀಮನ ಪರಾಕ್ರಮದಿಂದ ಈ ಕೌರವಸೈನ್ಯ ಹಿಂದೆ ದೇವೇಂದ್ರನ ಪರಾಕ್ರಮದಿಂದ ಅಸುರಸೈನ್ಯ ನಾಶವಾದಂತೆ ನಾಶವಾಗಿದೆ.
ತೇಷಾಂ ಹತಾವಶಿಷ್ಟಾಸ್ತು ಪಂಚ ಸಂತಿ ಮಹಾರಥಾಃ |
ಅಶ್ವತ್ಥಾಮಾ ಕೃತವರ್ಮಾ ಕರ್ಣೋ ಮದ್ರಾಧಿಪಃ ಕೃಪಃ ॥51॥
ಅವರಲ್ಲಿ ಅಳಿದುಳಿದ ಮಹಾರಥರು ಐವರಿದ್ದಾರೆ. ಅಶ್ವತ್ಥಾಮ, ಕೃತವರ್ಮ ಕರ್ಣ ಶಲ್ಯ ಮತ್ತು ಕೃಪ ಎಂದು.
ತಾಂಸ್ತ್ವಮದ್ಯ ನರವ್ಯಾಘ್ರ ಹತ್ವಾ ಪಂಚ ಮಹಾರಥಾನ್ |
ಹತಾಮಿತ್ರಾಂ ಪ್ರಯಚ್ಛೋರ್ವೀಂ ರಾಜ್ಞೇ ಸದ್ವೀಪಪತ್ತನಾಮ್ ॥52॥
ಅರ್ಜುನ, ಆ ಐವರು ಮಹಾರಥರನ್ನು ನೀನು ಕೊಂದರೆ, ಶತ್ರುಗಳೇ ಇಲ್ಲದ ದ್ವೀಪಪಟ್ಟಣಯುಕ್ತವಾದ ಭೂಮಿಯನ್ನು ಯುಧಿಷ್ಠಿರನಿಗೆ ಒಪ್ಪಿಸಬಲ್ಲೆ.
ಸಾಕಾಶಜಲಪಾತಾಲಾಂ ಸಪರ್ವತಮಹಾವನಾಮ್ |
ಪ್ರಾಪ್ನೋತ್ವಮಿತವೀರ್ಯಶ್ರೀರದ್ಯ ಪಾರ್ಥೋ ವಸುಂಧರಾಮ್ ॥53॥
ಆಕಾಶ ಸಮುದ್ರ ಪಾತಾಳಗಳಿಂದ ಯುಕ್ತವಾದ, ಪರ್ವತ ಮಹಾರಣ್ಯ ಯುಕ್ತವಾದ ಭೂಮಿಯನ್ನು ಅಪರಿಮಿತ ಪರಾಕ್ರಮ ಸಂಪತ್ತುಳ್ಳ ಯುಧಿಷ್ಠಿರನು ಇಂದು ಪಡೆದುಕೊಳ್ಳಲಿ.
ಏತಾನ್ ಪುರಾ ವಿಷ್ಣುರಿವ ಹತ್ವಾ ದೈತೇಯದಾನವಾನ್ |
ಪ್ರಯಚ್ಛ ಮೇದಿನೀಂ ರಾಜ್ಞೇ ಶಕ್ರಾಯೈವ ಯಥಾ ಹರಿಃ ॥54॥
ಹಿಂದೆ ದೈತ್ಯದಾನವರನ್ನು ವಿಷ್ಣುವಿನಂತೆ, ಇವರನ್ನು ನೀನು ಸಂಹರಿಸಿ, ಇಂದ್ರನಿಗೇ ಉಪೇಂದ್ರನಂತೆ, ಯುಧಿಷ್ಠಿರನಿಗೇ ನೀನು ಭೂಮಿಯನ್ನು ನೀಡು.
ಅದ್ಯ ಮೋದಂತು ಪಾಂಚಾಲಾ ನಿಹತೇಷ್ವರಿಷು ತ್ವಯಾ |
ವಿಷ್ಣುನಾ ನಿಹತೇಷ್ವೇವ ದಾನವೇಷ್ವಿವ ದೇವತಾಃ ॥55॥
ಹಿಂದೆ ವಿಷ್ಣುವಿನಿಂದ ದಾನವರು ಹತರಾದಾಗ ದೇವತೆಗಳಂತೆ, ಇಂದು ನಿನ್ನಿಂದ ಶತ್ರುಗಳು ಹತರಾದಾಗ ಪಾಂಚಾಲರು ಸಂತೋಷಪಡಲಿ.
ಯದಿ ವಾ ದ್ವಿಪದಾಂ ಶ್ರೇಷ್ಠ ದ್ರೋಣಂ ಮಾನಯತೋ ಗುರುಮ್ |
ಅಶ್ವತ್ಥಾಮ್ನಿ ಕೃಪಾ ತೇಽಸ್ತಿ ಕೃಪೇ ಚಾಚಾರ್ಯಗೌರವಾತ್ ॥56॥
ಅತ್ಯಂತಸಂಮತಾನ್ ಬಂಧೂನ್ ಮಾನಯನ್ ಮಾತೃಗೌರವಾತ್ |
ಕೃತವರ್ಮಾಣಮಾಸಾದ್ಯ ನ ನೇಷ್ಯಸಿ ಯಮಕ್ಷಯಮ್ ॥57॥
ಭ್ರಾತರಂ ಮಾತುರಾಸಾದ್ಯ ಶಲ್ಯಂ ಮದ್ರಜನಾಧಿಪಮ್ |
ಯದಿ ತ್ವಮರವಿಂದಾಕ್ಷ ದಯಾವಾನ್ನ ಜಿಘಾಂಸಸಿ ॥58॥
ಇಮಂ ಪಾಪಮತಿಂ ಕ್ಷುದ್ರಮತ್ಯಂತಂ ಪಾಂಡವಾನ್ ಪ್ರತಿ |
ಕರ್ಣಮದ್ಯ ನರಶ್ರೇಷ್ಠ ಜಹ್ಯಾಶು ನಿಶಿತೈಃ ಶರೈಃ ॥59॥
ಪುರುಷಶ್ರೇಷ್ಠನಾದ ಅರ್ಜುನನೆ, ದ್ರೋಣನನ್ನು ಗುರುವೆಂದು ಪೂಜಿಸುವ ನಿನಗೆ ಅಶ್ವತ್ಥಾಮನಲ್ಲಿ ಕೃಪೆ ಇರುವುದಾದರೆ, ಕೃಪನಲ್ಲಿಯೂ ಆಚಾರ್ಯನೆಂದು ಗೌರವದಿಂದ ಪೂಜಿಸುವ ನಿನಗೆ ಕೃಪೆ ಇರುವುದಾದರೆ, ಅತ್ಯಂತ ಪ್ರೀತಿಯ ಬಂಧುಗಳಾದ ಯಾದವರನ್ನು ಮಾತೆ ಕುಂತಿಯ ಮೇಲಿನ ಗೌರವದಿಂದ ಪೂಜಿಸುವ ನೀನು ಕೃತವರ್ಮನನ್ನು ಇದಿರಿಸಿ ಅವನನ್ನೂ ಯಮಸದನಕ್ಕೆ ಕಳಿಸಲಾರೆಯಾದರೆ, ತಾಯಿ ಮಾದ್ರಿಯ ಸೋದರನಾದ ಶಲ್ಯರಾಜನನ್ನು ಇದಿರಿಸಿ ದಯೆಯುಳ್ಳ ನೀನು ಅವನನ್ನು ಕೊಲ್ಲಲು ಬಯಸದಿರುವೆಯಾದರೆ, ಅದು ಸರಿಯೆ. ಆದರೆ ಅರ್ಜುನ, ಪಾಂಡವರ ವಿಷಯದಲ್ಲಿ ಅತ್ಯಂತ ಪಾಪಬುದ್ಧಿಯವನಾದ ಕರ್ಣನನ್ನು ಮಾತ್ರ ಹರಿತವಾದ ಬಾಣಗಳಿಂದ ಬೇಗನೆ ಕೊಲ್ಲು.
ಏತತ್ತೇ ಸುಕೃತಂ ಕರ್ಮ ನಾತ್ರ ಕಿಂಚನ ಯುಜ್ಯತೇ |
ವಯಮಪ್ಯನುಜಾನೀಮೋ ನಾತ್ರ ದೋಷೋಽಸ್ತಿ ಕಶ್ಚನ ॥60॥
ಇದು ನಿನಗೆ ಪುಣ್ಯಕಾರ್ಯ. ಕರ್ಣನ ವಧೆ ಮಾಡದಿರಲು, ಮೇಲೆ ಹೇಳಿದಂಥ ಯಾವ ಕಾರಣವೂ ಯುಕ್ತವಾಗುವುದಿಲ್ಲ. ಕರ್ಣವಧೆಗೆ ನಾನೂ ಅನುಜ್ಞೆ ನೀಡುತ್ತಿದ್ದೇನೆ. ಇದರಲ್ಲಿ ಯಾವ ದೋಷವೂ ಇರುವುದಿಲ್ಲ.
ದಹತೇ ಯತ್ಸಪುತ್ರಾಯಾ ನಿಶಿ ಮಾತುಸ್ತವಾನಘ |

ದ್ಯೂತಂ ಯಚ್ಚೈವ ಯುಷ್ಮಾಕಂ ಪ್ರಾವರ್ತತ ಸುಯೋಧನಾತ್ |
ತತ್ರ ಸರ್ವತ್ರ ದುಷ್ಟಾತ್ಮಾ ಕರ್ಣೋ ಮೂಲಮಿಹಾರ್ಜುನ ॥61॥
ರಾತ್ರಿ ನಿದ್ರೆಯಲ್ಲಿಯೂ ಕೂಡ ಮಕ್ಕಳ ಜೊತೆಯಲ್ಲಿ ನಿಮ್ಮ ತಾಯಿಯ ಹೃದಯ ದುಃಖದಿಂದ ಬೇಯುತ್ತಿದೆ. ಮತ್ತು ನಿಮಗೆ ಆ ಜೂಜು ದುರ್ಯೋಧನನಿಂದಾಯಿತು. ಆ ಎಲ್ಲಕಡೆ ದುಷ್ಟಬುದ್ಧಿಯ ಕರ್ಣನು ಮೂಲವಾಗಿದ್ದಾನೆ.
ಕರ್ಣಾದ್ಧಿ ಮನ್ಯತೇ ತ್ರಾಣಂ ನಿತ್ಯಮೇವ ಸುಯೋಧನಃ |
ತತೋ ಮಾಮಪಿ ಸಂರಬ್ಧೋ ನಿಗ್ರಹೀತುಂ ಪ್ರಚಕ್ರಮೇ ॥62॥
ಸುಯೋಧನನು ಸದಾ ತನ್ನ ರಕ್ಷಣೆ ಕರ್ಣನಿಂದಲೇ ಆಗುತ್ತದೆ ಎಂದು ತಿಳಿದಿದ್ದಾನೆ. ಅವನ ರಕ್ಷಣೆ ಇದೆ ಎಂದೇ ಧೈರ್ಯದಿಂದ ಸುಯೋಧನ ಕುಪಿತನಾಗಿ ನನ್ನನ್ನು ಕೂಡ ಬಂಧಿಸಲು ತೊಡಗಿದ.
ಸ್ಥಿರಾ ಬುದ್ಧಿರ್ನರೇಂದ್ರಸ್ಯ ಧಾರ್ತರಾಷ್ಟ್ರಸ್ಯ ಮಾನದ |
ಕರ್ಣಃ ಪಾರ್ಥಾನ್ ರಣೇ ಸರ್ವಾನ್ ವಿಜೇಷ್ಯತಿ ನ ಸಂಶಯಃ ॥63॥
`ಕರ್ಣನು ಪಾಂಡವರೆಲ್ಲರನ್ನೂ ರಣದಲ್ಲಿ ಗೆಲ್ಲುತ್ತಾನೆ, ಸಂಶಯವಿಲ್ಲ' ಎಂದು ರಾಜಾ ದುರ್ಯೋಧನನಿಗೆ ದೃಢವಾದ ನಂಬಿಕೆ ಇದೆ.
ಕರ್ಣಮಾಶ್ರಿತ್ಯ ಕೌಂತೇಯ ಧಾರ್ತರಾಷ್ಟ್ರೇಣ ವಿಗ್ರಹಃ |
ರೋಚಿತೋ ಭವತಾ ಸಾರ್ಧಂ ಜಾನತಾಪಿ ಬಲಂ ತವ ॥64॥
ದುರ್ಯೋಧನನಿಗೆ ನಿನ್ನ ಬಲ ಗೊತ್ತಿದ್ದರೂ ಕರ್ಣನ ಮೇಲೆ ಭರವಸೆ ಇಟ್ಟು ನಿನ್ನೊಡನೆ ಯುದ್ಧ ಮಾಡಲು ಅವನು ಬಯಸಿದ.
ಕರ್ಣೋ ಹಿ ಭಾಷತೇ ನಿತ್ಯಮಹಂ ಪಾರ್ಥಾನ್ ಸಮಾಗತಾನ್ |
ವಾಸುದೇವಂ ಸರಾಜಾನಂ ವಿಜೇಷ್ಯಾಮಿ ಮಹಾರಣೇ ॥65॥
ಕರ್ಣ ಸದಾ ಹೇಳುತ್ತಾನೆ– `ಮಹಾರಣದಲ್ಲಿ ಎದುರಿಗೆ ಬಂದರೆ, ಪಾಂಡವರನ್ನೂ ಕೃಷ್ಣನನ್ನೂ ಯುಧಿಷ್ಠಿರನನ್ನೂ ನಾನು ಗೆಲ್ಲುವೆ' ಎಂದು.
ಪ್ರೋತ್ಸಾಹಯನ್ ದುರಾತ್ಮಾನಂ ಧಾರ್ತರಾಷ್ಟ್ರಂ ಸುದುರ್ಮತಿಃ |
ಸಮಿತೌ ಗರ್ಜತೇ ಕರ್ಣಸ್ತಮದ್ಯ ಜಹಿ ಭಾರತ ॥66॥
ದುರಾತ್ಮನಾದ ದುರ್ಯೋಧನನನ್ನು ಹುರಿದುಂಬಿಸುವುದಕ್ಕಾಗಿ ಕರ್ಣನು ರಾಜರ ಸಭೆಯಲ್ಲಿಯೂ ರಣದಲ್ಲಿಯೂ ಗರ್ಜನೆ ಮಾಡುತ್ತಾನೆ. ಅವನನ್ನು ಈಗ ಕೊಲ್ಲು, ಅರ್ಜುನ.
ಯಚ್ಚ ಯುಷ್ಮಾಸು ಪಾಪಂ ವೈ ಧಾರ್ತರಾಷ್ಟ್ರಃ ಪ್ರಯುಕ್ತವಾನ್ |
ತತ್ರ ಸರ್ವತ್ರ ದುಷ್ಟಾತ್ಮಾ ಕರ್ಣಃ ಪಾಪಮತಿರ್ಮುಖಮ್ ॥67॥
ದುರ್ಯೋಧನನು ನಿಮ್ಮಲ್ಲಿ ಏನು ದುರ್ವ್ಯವಹಾರ ಮಾಡುತ್ತಲೇ ಬಂದಿದ್ದಾನೊ ಅವೆಲ್ಲವುಗಳಲ್ಲಿ ಪಾಪಬುದ್ಧಿ ದುಷ್ಟಬುದ್ಧಿಯವನಾದ ಕರ್ಣನದೇ ಪ್ರಮುಖಪಾತ್ರ.
ಯಚ್ಚ ತದ್ಧಾರ್ತರಾಷ್ಟ್ರಾಣಾಂ ಕ್ರೂರೈಃ ಷಡ್ಭಿರ್ಮಹಾರಥೈಃ |
ಅಪಶ್ಯಂ ನಿಹತಂ ವೀರಂ ಸೌಭದ್ರಮೃಷಭೇಕ್ಷಣಮ್ ॥68॥
ದ್ರೋಣದ್ರೌಣಿಕೃಪಾನ್ ವೀರಾನ್ ಕಂಪಯಂತಂ ಮಹಾರಥಾನ್ |
ನಿರ್ಮನುಷ್ಯಾಂಶ್ಚ ಮಾತಂಗಾನ್ ವಿರಥಾಂಶ್ಚ ಮಹಾರಥಾನ್ ॥69॥
ವ್ಯಶ್ವಾರೋಹಾಂಶ್ಚ ತುರಗಾನ್ ಪತ್ತೀನ್ ವ್ಯಾಯುಧಜೀವಿತಾನ್ |
ಕುರ್ವಂತಮೃಷಭಸ್ಕಂಧಂ ಕುರುವೃಷ್ಣಿಯಶಸ್ಕರಮ್ ॥70॥
ವಿಧಮಂತಮನೀಕಾನಿ ವ್ಯಥಯಂತಂ ಮಹಾರಥಾನ್ |
ಮನುಷ್ಯವಾಜಿಮಾತಂಗಾನ್ ಪ್ರಹಿಣ್ವಂತಂ ಯಮಕ್ಷಯಮ್ ॥71॥
ಶರೈಃ ಸೌಭದ್ರಮಾಯಸ್ತಂ ದಹಂತಮಿವ ವಾಹಿನೀಮ್ |
ತನ್ಮೇ ದಹತಿ ಗಾತ್ರಾಣಿ ಸಖೇ ಸತ್ಯೇನ ತೇ ಶಪೇ ॥72॥
ಸುಭದ್ರಾತನಯ ಅಭಿಮನ್ಯು ವೀರ, ಗೂಳಿಯಂಥ ವಿಶಾಲಕಣ್ಣುಳ್ಳವ. ದ್ರೋಣ, ಅಶ್ವತ್ಥಾಮ, ಕೃಪರಂಥ ವೀರ ಮಹಾರಥರನ್ನು ನಡುಗಿಸುವವನು. ಗಜಗಳಲ್ಲಿ ಗಜಾರೋಹಿಗಳಿಲ್ಲದಂತೆ ಮಹಾರಥಿಕರಿಗೆ ರಥವಿಲ್ಲದಂತೆ ಅಶ್ವಗಳಲ್ಲಿ ಅಶ್ವಾರೋಹಿಗಳಿಲ್ಲದಂತೆ, ಪದಾತಿಗಳನ್ನು ಆಯುಧಗಳೊಂದಿಗೆ ಪ್ರಾಣಗಳನ್ನೂ ಕಳೆದುಕೊಳ್ಳುವಂತೆ ಮಾಡುವವನು, ಗೂಳಿಯಂತೆ ಉನ್ನತ ಭುಜವುಳ್ಳವನು, ಕುರುಕುಲ ಯಾದವಕುಲಗಳಿಗೆ ಕೀರ್ತಿ ತರುವವನು, ಶತ್ರುಸೈನ್ಯಗಳನ್ನು ನಾಶ ಮಾಡುವವನು, ಮಹಾರಥರಿಗೆ ವ್ಯಥೆ ಉಂಟುಮಾಡುವವನು. ಪದಾತಿ ಅಶ್ವಗಜ ಸೈನಿಕರನ್ನು ಯಮಸದನಕ್ಕೆ ಅಟ್ಟುವವನು, ಬಾಣಗಳಿಂದ ಶತ್ರುಸೈನ್ಯವನ್ನು ಸುಡುವ ಪ್ರಯತ್ನ ಮಾಡುವವನು. ಇಂಥ ಅಭಿಮನ್ಯುವನ್ನು ಕೌರವರ ಆರುಮಂದಿ ಕ್ರೂರ ಮಹಾರಥರು ದ್ರೋಣ, ಅಶ್ವತ್ಥಾಮ, ಶಲ್ಯ, ಕರ್ಣ, ಕೃಪ ಮತ್ತು ಕೃತವರ್ಮರು ಒಟ್ಟು ಸೇರಿ ಸಂಹರಿಸಿದರು. ಇದನ್ನು ತಿಳಿದ ಮೇಲೆ ಅದು ನನ್ನ ಮೈಯೆಲ್ಲವನ್ನು ಈಗಲೂ ಸುಡುತ್ತಿದೆ. ಮಿತ್ರ, ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಯತ್ತತ್ರಾಪಿ ಚ ದುಷ್ಟಾತ್ಮಾ ಕರ್ಣೋಽಭ್ಯದ್ರುಹ್ಯತ ಪ್ರಭೋ |
ಅಶಕ್ನುವಂಶ್ಚಾಭಿಮನ್ಯೋಃ ಕರ್ಣಃ ಸ್ಥಾತುಂ ರಣೇಽಗ್ರತಃ ॥73॥
ಆ ಯುದ್ಧದಲ್ಲಿಯೂ ಕೂಡ ದುಷ್ಟಬುದ್ಧಿಯಾದ ಕರ್ಣನು ದ್ರೋಹ ಮಾಡಿ ದ್ದಾನೆ. ಏಕೆಂದರೆ ರಣದಲ್ಲಿ ಅಭಿಮನ್ಯುವಿನ ಮುಂದೆ ನಿಲ್ಲಲು ಆತ ಅಶಕ್ತನಾಗಿದ್ದ.
ಸೌಭದ್ರಶರನಿರ್ಭಿನ್ನೋ ವಿಸಂಜ್ಞಃ ಶೋಣಿತೋಕ್ಷಿತಃ |
ನಿಃಶ್ವಸನ್ ಕ್ರೋಧಸಂದೀಪ್ತೋ ವಿಮುಖಃ ಸಾಯಕಾರ್ದಿತಃ ॥74॥

ಕರ್ಣನು ಅಭಿಮನ್ಯುವಿನ ಬಾಣದಿಂದ ಗಾಯಗೊಂಡು ಮೂರ್ಛೆಹೊಂದಿ ಮೈಯೆಲ್ಲ ನೆತ್ತರಿನಿಂದ ತೊಯ್ದು ನಿಟ್ಟುಸಿರಿಡುತ್ತ ಕೋಪದಿಂದ ಉರಿಯುತ್ತ ಬಾಣಗಳಿಂದ ಪೀಡಿತನಾಗಿ ರಣದಿಂದ ಹಿಮ್ಮೆಟ್ಟಿದ.
ಅಪಯಾನಕೃತೋತ್ಸಾಹೋ ನಿರಾಶಶ್ಚಾಪಿ ಜೀವಿತೇ |
ತಸ್ಥೌ ಸುವಿಹ್ವಲಃ ಸಂಖ್ಯೇ ಪ್ರಹಾರಜನಿತಶ್ರಮಃ ॥75॥
ಕರ್ಣನು ಯುದ್ಧದಿಂದ ಪಲಾಯನ ಮಾಡುವಲ್ಲಿ ಉತ್ಸಾಹಗೊಂಡ, ಬದುಕಿನಲ್ಲೇ ಆಸೆಯನ್ನು ತೊರೆದ. ರಣದಲ್ಲಿ ಶಸ್ತ್ರಪ್ರಹಾರದಿಂದ ಉಂಟಾದ ಶ್ರಮದಿಂದ ಬಹಳ ಕಳವಳಗೊಂಡು ನಿಂತ.
ಅಥ ದ್ರೋಣಸ್ಯ ಸಮರೇ ತತ್ಕಾಲಸದೃಶಂ ತದಾ |
ಶ್ರುತ್ವಾ ಕರ್ಣೋ ವಚಃ ಕ್ರೂರಂ ತತಶ್ಚಿಚ್ಛೇದ ಕಾರ್ಮುಕಮ್ ॥76॥
ಬಳಿಕ ರಣದಲ್ಲಿ ದ್ರೋಣನು ಆ ಕಾಲಕ್ಕೆ ಉಚಿತವಾಗಿ ನುಡಿದ ಕ್ರೂರವಾದ ಮಾತನ್ನು ಕೇಳಿ ಅದರಂತೆ ಕರ್ಣನು ಅಭಿಮನ್ಯುವಿನ ಕೈಯಲ್ಲಿದ್ದ ಬಿಲ್ಲನ್ನು ಕಡಿದ.
ತತಶ್ಛಿನ್ನಾಯುಧಂ ತೇನ ರಣೇ ಪಂಚ ಮಹಾರಥಾಃ |
ಸ ಚೈವ ನಿಕೃತಿಪ್ರಜ್ಞಃ ಪ್ರಾವರ್ಷಂಚ್ಛರವೃಷ್ಟಿಭಿಃ ॥77॥
ಹೀಗೆ ನಿರಾಯುಧನಾದ ಅಭಿಮನ್ಯುವಿನ ಮೇಲೆ ಐದು ಮಂದಿ ಮಹಾರಥರೂ ಕಪಟ ಬುದ್ಧಿಯ ಕರ್ಣನೂ ಸೇರಿ ಬಾಣಗಳ ಮಳೆಗರೆದರು.
ತಸ್ಮಿನ್ ವಿನಿಹತೇ ವೀರೇ ಸರ್ವೇಷಾಂ ದುಃಖಮಾವಿಶತ್ |
ಪ್ರಾಹಸತ್ ಸ ತು ದುಷ್ಟಾತ್ಮಾ ಕರ್ಣಃ ಸ ಚ ಸುಯೋಧನಃ ॥78॥
ವೀರ ಅಭಿಮನ್ಯು ಹತನಾಗಿ ಬಿದ್ದಾಗ ಎಲ್ಲರಿಗೂ ದುಃಖ ಉಂಟಾಯಿತು. ಆದರೆ ದುಷ್ಟಬುದ್ಧಿಯ ಕರ್ಣನೂ ಸುಯೋಧನನೂ ಜೋರಾಗಿ ನಕ್ಕರು.
ಯಚ್ಚ ಕರ್ಣೋಽಬ್ರವೀತ್ ಕೃಷ್ಣಾಂ ಸಭಾಯಾಂ ಪರುಷಂ ವಚಃ |
ಪ್ರಮುಖೇ ಪಾಂಡವೇಯಾನಾಂ ಕುರೂಣಾಂ ಚ ನೃಶಂಸವತ್ ॥79॥
ಕರ್ಣನು ದ್ಯೂತಸಭೆಯಲ್ಲಿ ದ್ರೌಪದಿಗೆ ಪಾಂಡವರ ಕೌರವರ ಸಮ್ಮುಖದಲ್ಲಿ ನಿರ್ದಯಿಯಂತೆ ಕಠಿನವಾದ ಮಾತನ್ನಾಡಿದ್ದ.
ವಿನಷ್ಟಾಃ ಪಾಂಡವಾಃ ಕೃಷ್ಣೇ ಶಾಶ್ವತಂ ನರಕಂ ಗತಾಃ |
ಪತಿಮನ್ಯಂ ಪೃಥುಶ್ರೋಣಿ ವೃಣೀಷ್ವ ಮಿತಭಾಷಿಣಿ ॥80॥
ದ್ರೌಪದಿ, ಪಾಂಡವರು ನಾಶವಾದರು. ಶಾಶ್ವತವಾದ ನರಕಕ್ಕೇ ಹೋದರು. ಪೃಥುಶ್ರೋಣಿ ಮಿತಭಾಷಿಣಿ, ನೀನೀಗ ಬೇರೊಬ್ಬ ಪತಿಯನ್ನು ವರಿಸು.
ಏಷಾ ತ್ವಂ ಧಾರ್ತರಾಷ್ಟ್ರಸ್ಯ ದಾಸೀ ಭೂತ್ವಾ ನಿವೇಶನಮ್ |
ಪ್ರವಿಶಾರಾಲಪಕ್ಷ್ಮಾಕ್ಷಿ ನ ಸಂತಿ ಪತಯಸ್ತವ ॥81॥
ನೀನೀಗ ದುರ್ಯೋಧನನಿಗೆ ದಾಸಿಯಾಗಿ ಅವನ ಅರಮನೆಯನ್ನು ಪ್ರವೇಶಿಸು. ಬಾಗಿದ ರೆಪ್ಪೆಯುಳ್ಳ ಕಣ್ಣಿನವಳೆ, ನಿನಗೆ ಇನ್ನು ಪತಿಗಳಿಲ್ಲ.'
ಇತ್ಯುಕ್ತವಾನಧರ್ಮಜ್ಞಸ್ತದಾ ಪರಮದುರ್ಮತಿಃ |
ಪಾಪಃ ಪಾಪಂ ವಚಃ ಕರ್ಣಃ ಶೃಣ್ವತಸ್ತವ ಭಾರತ ॥82॥
ಧರ್ಮವನ್ನು ತಿಳಿಯದ ಪರಮ ದುಷ್ಟಬುದ್ಧಿಯವನಾದ ಪಾಪಿ ಕರ್ಣನು ನೀನು ಕೇಳುತ್ತಿದ್ದಂತೆಯೇ ಪಾಪದ ಮಾತನ್ನು ಹೇಳಿದ್ದಾನೆ.
ತಸ್ಯ ಪಾಪಸ್ಯ ತದ್ವಾಕ್ಯಂ ಸುವರ್ಣವಿಕೃತಾಃ ಶರಾಃ |
ಶಮಯಂತು ಶಿಲಾಧೌತಾಸ್ತ್ವಯಾಸ್ತಾ ಜೀವಿತಚ್ಛಿದಃ ॥83॥
ಪಾಪಿಯಾದ ಆ ಕರ್ಣನ ಆ ಮಾತನ್ನು , ನೀನು ಎಸೆಯುವ, ಬಂಗಾರದಿಂದ ಮಾಡಿದ, ಸಾಣೆಹಿಡಿದ, ಶತ್ರುವಿನ ಪ್ರಾಣ ತೆಗೆಯುವಂಥ ಬಾಣಗಳು ಶಮನಮಾಡಲಿ.
ಯಾನಿ ಚಾನ್ಯಾನಿ ದುಷ್ಟಾತ್ಮಾ ಪಾಪಾನಿ ಕೃತವಾಂಸ್ತ್ವಯಿ |
ತಾನ್ಯದ್ಯ ಜೀವಿತಂ ಚಾಸ್ಯ ಶಮಯಂತು ಶರಾಸ್ತವ ॥84॥
ದುಷ್ಟಬುದ್ಧಿಯ ಕರ್ಣನು ಇನ್ನೂ ಏನೇನು ಬೇರೆ ಅಪರಾಧಗಳನ್ನು ನಿನ್ನಲ್ಲಿ ಎಸಗಿರುವನೋ ಅವುಗಳನ್ನೂ ಜೊತೆಗೆ ಅವನ ಪ್ರಾಣವನ್ನೂ ಈಗ ನಿನ್ನ ಬಾಣಗಳು ಶಮನಗೊಳಿಸಲಿ.
ಗಾಂಡೀವಪ್ರಹಿತಾನ್ ಘೋರಾನದ್ಯ ಗಾತ್ರೈಃ ಸ್ಪೃಶನ್ ಶರಾನ್ |
ಕರ್ಣಃ ಸ್ಮರತು ದುಷ್ಟಾತ್ಮಾ ವಚನಂ ದ್ರೋಣಭೀಷ್ಮಯೋಃ ॥85॥
ಗಾಂಡೀವದಿಂದ ಹೊರಡುವ ಘೋರವಾದ ಬಾಣಗಳನ್ನು ಕರ್ಣನು ಸರ್ವಾಂಗಗಳಿಂದ ಸ್ಪರ್ಶಿಸುವಾಗ ದುಷ್ಟಬುದ್ಧಿಯ ಆತನು ದ್ರೋಣ, ಭೀಷ್ಮರ ಮಾತುಗಳನ್ನೂ ಸ್ಮರಣೆಗೆ ತಂದುಕೊಳ್ಳಲಿ.
ಸುವರ್ಣಪುಂಖಾ ನಾರಾಚಾಃ ಶತ್ರುಘ್ನಾ ವೈದ್ಯುತಪ್ರಭಾಃ |
ತ್ವಯಾಸ್ತಾಸ್ತಸ್ಯ ಮರ್ಮಾಣಿ ಭಿತ್ತ್ವಾ ಪಾಸ್ಯಂತಿ ಶೋಣಿತಮ್ ॥86॥
ಬಂಗಾರದ ಪುಕ್ಕಗಳುಳ್ಳ ಮಿಂಚಿನಂತೆ ಹೊಳೆವ ಶತ್ರುನಾಶಕವಾದ ಬಾಣಗಳನ್ನು ನೀನು ಎಸೆದಾಗ ಅವು ಅವನ ಮರ್ಮಗಳನ್ನು ಭೇದಿಸಿ ರಕ್ತವನ್ನು ಕುಡಿಯುತ್ತವೆ.
ಉಗ್ರಾಸ್ತ್ವದ್ಭುಜನಿರ್ಮುಕ್ತಾ ಮರ್ಮ ಭಿತ್ತ್ವಾ ಶಿತಾಃ ಶರಾಃ |
ಅದ್ಯ ಕರ್ಣಂ ಮಹಾವೇಗಾಃ ಪ್ರೇಷಯಂತು ಯಮಕ್ಷಯಮ್ ॥87॥

ಉಗ್ರವಾದ ಹರಿತವಾದ ಮಹಾವೇಗದ ಬಾಣಗಳು ನಿನ್ನ ಬಾಹುಗಳಿಂದ ಹೊರಟು ಮರ್ಮಗಳನ್ನು ಭೇದಿಸಿ ಕರ್ಣನನ್ನು ಯಮಸದನಕ್ಕೆ ಅಟ್ಟಲಿ.
ಅದ್ಯ ಹಾಹಾಕೃತಾ ದೀನಾ ವಿಷಣ್ಣಾಸ್ತ್ವಚ್ಛರಾರ್ದಿತಾಃ |
ಪ್ರಪತಂತಂ ರಥಾತ್ಕರ್ಣಂ ಪಶ್ಯಂತು ವಸುಧಾಧಿಪಾಃ ॥88॥
ಈಗ ನಿನ್ನ ಬಾಣಗಳಿಂದ ಪೀಡಿತರಾಗುತ್ತಿರುವ ರಾಜರು ವಿಷಣ್ಣರಾಗಿ ದೀನರಾಗಿ ಹಾಹಾಕಾರ ಮಾಡುತ್ತ , ರಥದಿಂದ ಕರ್ಣನು ಬೀಳುವುದನ್ನೂ ನೋಡಲಿ.
ಅದ್ಯ ಸ್ವಶೋಣಿತೇ ಮಗ್ನಂ ಶಯಾನಂ ಪತಿತಂ ಭುವಿ |
ಅಪವಿದ್ಧಾಯುಧಂ ಕರ್ಣಂ ಪಶ್ಯಂತು ಸುಹೃದೋ ನಿಜಾಃ ॥89॥
ಈಗ ತನ್ನ ರಕ್ತದ ಮಡುವಿನಲ್ಲಿ ತಾನು ಮುಳುಗಿ, ನೆಲದ ಮೇಲೊರಗಿದ, ಆಯುಧವನ್ನು ಚೆಲ್ಲಿರುವ ಕರ್ಣನನ್ನು ಅವನ ಸ್ವಂತ ಸಂಬಂಧಿಗಳು ನೋಡಲಿ.
ಹಸ್ತಿಕಕ್ಷ್ಯೋ ಮಹಾನಸ್ಯ ಭಲ್ಲೇನೋನ್ಮಥಿತಸ್ತ್ವಯಾ |
ಪ್ರಕಮ್ಪಮಾನಃ ಪತತು ಭೂಮಾವಾಧಿರಥೇರ್ಧ್ವಜಃ ॥90॥
ಹಸ್ತಪ್ರಮಾಣದ ಕಾಕಪ್ರತಿಮಾಯುಕ್ತವಾದ ಕರ್ಣನ ಮಹಾಧ್ವಜವನ್ನು ನೀನು ಭಲ್ಲೆಯಿಂದ ಕಡಿದಾಗ ಅದು ಕಂಪಿಸುತ್ತ ನೆಲದ ಮೇಲೆ ಬೀಳಲಿ.
ತ್ವಯಾ ಶರಶತೈಶ್ಛಿನ್ನಂ ರಥಂ ಹೇಮವಿಭೂಷಿತಮ್ |
ಹತಯೋಧಂ ಸಮುತ್ಸ ೃಜ್ಯ ಭೀತಃ ಶಲ್ಯಃ ಪಲಾಯತಾಮ್ ॥91॥
ಬಂಗಾರದಿಂದ ಅಲಂಕೃತವಾದ ಕರ್ಣನ ರಥವನ್ನು ನೀನು ನೂರಾರು ಬಾಣಗಳಿಂದ ಕಡಿದಾಗ, ಯೋಧನು ಇಲ್ಲದ ಆ ರಥವನ್ನು ಬಿಟ್ಟು ಭಯದಿಂದ ಶಲ್ಯನೂ ಪಲಾಯನ ಮಾಡಲಿ.
ತತಃ ಸುಯೋಧನೋ ದೃಷ್ಟ್ವಾ ಹತಮಾಧಿರಥಿಂ ತ್ವಯಾ |
ನಿರಾಶೋ ಜೀವಿತೇ ತ್ವದ್ಯ ರಾಜ್ಯೇ ಚೈವ ಭವಿಷ್ಯತಿ ॥92॥
ಅರ್ಜುನ, ನಿನ್ನಿಂದ ಕರ್ಣನು ಹತನಾದಾಗ ಅದನ್ನು ದುರ್ಯೋಧನನು ನೋಡಿ ತನ್ನ ಬದುಕಿನಲ್ಲಿಯೂ ರಾಜ್ಯದಲ್ಲಿಯೂ ನಿರಾಸೆ ಹೊಂದುವನು.
ಏತೇ ದ್ರವಂತಿ ಪಾಂಚಾಲಾ ವಧ್ಯಮಾನಾಃ ಶಿತೈಃ ಶರೈಃ |
ಕರ್ಣೇನ ಭರತಶ್ರೇಷ್ಠ ತಾನ್ ಸಮುದ್ಧರ ಪಾಂಡವ ॥93॥
ಈ ಪಾಂಚಾಲರು ಕರ್ಣನ ಹರಿತವಾದ ಬಾಣಗಳಿಂದ ಹೊಡೆಸಿಕೊಂಡು ಪಲಾಯನ ಮಾಡುತ್ತಿದ್ದಾರೆ. ಅವರನ್ನು ರಕ್ಷಿಸು, ಅರ್ಜುನ.
ಪಾಂಚಾಲಾನ್ ದ್ರೌಪದೇಯಾಂಶ್ಚ ಧೃಷ್ಟದ್ಯುಮ್ನಶಿಖಂಡಿನೌ |
ಧೃಷ್ಟದ್ಯುಮ್ನತನೂಜಾಂಶ್ಚ ಶತಾನೀಕಂ ಚ ನಾಕುಲಿಮ್ ॥94॥
ನಕುಲಂ ಸಹದೇವಂ ಚ ದುರ್ಮುಖಂ ಜನಮೇಜಯಮ್ |
ಸುವರ್ಮಾಣಂ ಸಾತ್ಯಕಿಂ ಚ ವಿದ್ಧಿ ಕರ್ಣವಶಂ ಗತಾನ್ ॥95॥
ಪಾಂಚಾಲರು ದ್ರೌಪದೀಪುತ್ರರು, ಧೃಷ್ಟದ್ಯುಮ್ನ ಶಿಖಂಡಿಗಳು, ಧೃಷ್ಟದ್ಯುಮ್ನನ ಪುತ್ರರು, ನಕುಲ ಪುತ್ರ ಶತಾನೀಕ, ನಕುಲ ಸಹದೇವ ದುರ್ಮುಖ ಜನಮೇಜಯ, ಒಳ್ಳೆಯ ಕವಚವುಳ್ಳ ಸಾತ್ಯಕಿ ಇವರೆಲ್ಲರೂ ಕರ್ಣನ ವಶಕ್ಕೆ ಬಂದಿದ್ದಾರೆ.
ಅಭ್ಯಾಹತಾನಾಂ ಕರ್ಣೇನ ಪಾಂಚಾಲಾನಾಂ ಮಹಾರಣೇ |
ಶ್ರೂಯತೇ ನಿನದೋ ಘೋರಸ್ತ್ವದ್ಬಂಧೂನಾಂ ಪರಂತಪ ॥96॥
ಮಹಾರಣದಲ್ಲಿ ಕರ್ಣನಿಂದ ಹೊಡೆಸಿಕೊಂಡ ನಿನ್ನ ಬಂಧುಗಳಾದ ಪಾಂಚಾಲರ ಘೋರವಾದ ಆರ್ತನಾದ ಕೇಳಿ ಬರುತ್ತಿದೆ; ಅರ್ಜುನ!
ನ ತ್ವೇವ ಭೀತಾಃ ಪಾಂಚಾಲಾಃ ಕಥಂಚಿತ್ ಸ್ಯುಃ ಪರಾಙ್ಮುಖಾಃ |
ನ ಹಿ ಮೃತ್ಯುಂ ಮಹೇಷ್ವಾಸಾ ಗಣಯನ್ತಿ ಮಹಾರಥಾಃ ॥97॥
ಪಾಂಚಾಲರು ಎಷ್ಟುಮಾತ್ರಕ್ಕೂ ಭೀತರಾಗಿ ಪಲಾಯನ ಮಾಡುವವರಲ್ಲ. ಮಹಾಬಿಲ್ಲಾಳುಗಳಾದ ಮಹಾರಥರಾದ ಅವರು ಮೃತ್ಯುವನ್ನು ಪರಿಗಣಿಸುವುದಿಲ್ಲ.
ಯ ಏಕಃ ಪಾಂಡವೀಂ ಸೇನಾಂ ಶರೌಘೈಃ ಸಮವೇಷ್ಟಯತ್ |
ತಂ ಸಮಾಸಾದ್ಯ ಪಾಂಚಾಲಾ ಭೀಷ್ಮಂ ನಾಸನ್ ಪರಾಙ್ಮುಖಾಃ ॥98॥
ಭೀಷ್ಮ ಏಕಾಂಗಿಯಾಗಿ ಪಾಂಡವಸೈನ್ಯವನ್ನು ಬಾಣಪ್ರವಾಹಗಳಿಂದ ಮುಚ್ಚಿದ್ದ. ಅಂಥ ಭೀಷ್ಮನನ್ನು ಇದಿರಿಸಿಯೂ ಕೂಡ ಪಾಂಚಾಲರು ಪರಾಙ್ಮುಖರಾಗಲಿಲ್ಲ!
ತಥಾ ಜ್ವಲಂತಮಸಅತ್ರಗ್ನಿಂ ಗುರುಂ ಸರ್ವಧನುಷ್ಮತಾಮ್ |
ನಿರ್ದಹಂತಂ ಸಮಾರೋಹನ್ ದುರ್ಧರ್ಷಂ ದ್ರೋಣಮೋಜಸಾ ॥99॥
ಹಾಗೇ ಎಲ್ಲ ಬಿಲ್ಲಾಳುಗಳಿಗೂ ಆಚಾರ್ಯರಾದ, ಜ್ವಲಿಸುವ ಅಸಅತ್ರಗ್ನಿ ಸ್ವರೂಪರಂತಿದ್ದು ಶತ್ರುಗಳನ್ನು ದಹಿಸುತ್ತಿದ್ದ , ಯಾರಿಗೂ ಮಣಿಯದ ದ್ರೋಣನನ್ನೂ ಇದಿರಿಸಿದ್ದರು ಪಾಂಚಾಲರು.
ತೇ ನಿತ್ಯಮುದಿತಾ ಜೇತುಂ ಯುದ್ಧೇ ಶತ್ರೂನರಿಂದಮಾಃ |
ನ ಜಾತ್ವಾಧಿರಥೇರ್ಭೀತಾಃ ಪಾಂಚಾಲಾಃ ಸ್ಯುಃ ಪರಾಙ್ಮುಖಾಃ ॥100॥
ಶತ್ರುನಾಶಕರಾದ ಆ ಪಾಂಚಾಲರು ನಿತ್ಯವೂ ರಣದಲ್ಲಿ ಶತ್ರುಗಳನ್ನು ಜಯಿಸಲು ಉದ್ಯುಕ್ತರಾಗಿರುವರು. ಕರ್ಣನಿಗೆ ಹೆದರಿ ಎಂದೂ

ಪರಾಙ್ಮುಖರಾಗಲಾರರು.
ತೇಷಾಮಾಪತತಾಂ ಶೂರಃ ಪಾಂಚಾಲಾನಾಂ ತರಸ್ವಿನಾಮ್ |
ಆದತ್ತೇಽಸೂನ್ ಶರೈಃ ಕರ್ಣಃ ಪತಂಗಾನಾಮಿವಾನಲಃ ||101||
ಪಾಂಚಾಲರು ವೇಗದಿಂದ ತನ್ನಿದಿರಿಗೆ ಬರುತ್ತಿದ್ದಂತೆ, ದೀಪದ ಹುಳುಗಳ ಪ್ರಾಣಗಳನ್ನು ಬೆಂಕಿ ಆಹುತಿ ತೆಗೆದುಕೊಳ್ಳುವಂತೆ, ಕರ್ಣನು ಪಾಂಚಾಲರ ಪ್ರಾಣಗಳನ್ನು ಬಾಣಗಳಿಂದ ಆಹುತಿ ತೆಗೆದುಕೊಳ್ಳುತ್ತಾನೆ.
ತಾಂಸ್ತಥಾಭಿಮುಖಾನ್ ವೀರಾನ್ ಮಿತ್ರಾರ್ಥೇ ತ್ಯಕ್ತಜೀವಿತಾನ್ |
ಕ್ಷಯಂ ನಯತಿ ರಾಧೇಯಃ ಪಾಂಚಾಲಾನ್ ಶತಶೋ ರಣೇ ||102||
ಹಾಗೆ ಮಿತ್ರರಾದ ಪಾಂಡವರ ಸಲುವಾಗಿ ಪ್ರಾಣದ ಹಂಗು ತೊರೆದು ಕರ್ಣನ ಇದಿರಿಗೆ ಬರುವ ನೂರಾರು ಪಾಂಚಾಲ ವೀರರನ್ನು ಕರ್ಣನು ನಾಶಮಾಡುತ್ತಿದ್ದಾನೆ.
ತದ್ಭಾರತ ಮಹೇಷ್ವಾಸಾನಗಾಧೇ ಮಜ್ಜತೋಽಪ್ಲವೇ |
ಕರ್ಣಾರ್ಣವೇ ಪ್ಲವೋ ಭೂತ್ವಾ ಪಾಂಚಾಲಾನ್ ತ್ರಾತುಮರ್ಹಸಿ 103
ಅಗಾಧವಾದ, ನಾವೆಯೂ ಇಲ್ಲದಿರುವ ಕರ್ಣಸಮುದ್ರದಲ್ಲಿ ಮುಳುಗಿ ಹೋಗುತ್ತಿರುವ ಪಾಂಚಾಲರಿಗೆ ಅರ್ಜುನ, ನೀನು ನಾವೆಯಾಗಿ ಅವರನ್ನು ಪಾರುಮಾಡು.
ಅಸ್ತ್ರಂ ಹಿ ರಾಮಾತ್ ಕರ್ಣೇನ ಭಾರ್ಗವಾದೃಷಿಸತ್ತಮಾತ್ |
ಯದುಪಾತ್ತಂ ಪುರಾ ಘೋರಂ ತಸ್ಯ ರೂಪಮುದೀರ್ಯತೇ ||104||
ಕರ್ಣನು ಈಗ ಪ್ರಯೋಗಿಸಿರುವ ಅಸ್ತ್ರವು ಹಿಂದೆ ಕರ್ಣನು ಋಷಿ ಶ್ರೇಷ್ಠನಾದ ಪರಶುರಾಮನಿಂದ ಸ್ವೀಕರಿಸಿದ್ದು. ಅದರ ಸ್ವರೂಪ ಘೋರವೆನಿಸಿದೆ.
ತಾಪನಂ ಸರ್ವಸೈನ್ಯಾನಾಂ ಘೋರರೂಪಂ ಸುದಾರುಣಮ್ |
ಸಮಾವೃತ್ಯ ಮಹಾಸೇನಾಂ ಜ್ವಲತಿ ಸ್ವೇನ ತೇಜಸಾ ||105||
ಎಲ್ಲ ಸೈನ್ಯಗಳನ್ನೂ ಸುಡುವ ಈ ಅಸ್ತ್ರವು ಘೋರಸ್ವರೂಪದ್ದು, ಬಲುದಾರುಣ. ಮಹಾಸೈನ್ಯವನ್ನು ಆವರಿಸಿ ತನ್ನ ತೇಜಸ್ಸಿನಿಂದ ಜ್ವಲಿಸುತ್ತಿದೆ.
ಏತೇ ಚರಂತಿ ಸಂಗ್ರಾಮೇ ಕರ್ಣಚಾಪಚ್ಯುತಾಃ ಶರಾಃ |
ಭ್ರಮರಾಣಾಮಿವ ವ್ರಾತಾಸ್ತಾಪಯಂತಃ ಸ್ಮ ತಾವಕಾನ್ ||106||
ಕರ್ಣನ ಧನುಸ್ಸಿನಿಂದ ಹೊರಟ ಈ ಬಾಣಗಳು ದುಂಬಿಗಳ ಸಾಲುಗಳಂತೆ ಬಂದು ನಿನ್ನವರನ್ನು ಸುಡುತ್ತ ರಣದಲ್ಲಿ ಸಂಚರಿಸುತ್ತಿವೆ.
ಏತೇ ಚರಂತಿ ಪಾಂಚಾಲಾ ದಿಕ್ಷು ಸರ್ವಾಸು ಭಾರತ |
ಕರ್ಣಾಸ್ತ್ರಂ ಸಮರೇ ಪ್ರಾಪ್ಯ ದುರ್ನಿವಾರಮನಾತ್ಮಭಿಃ ||107||
ಈ ಪಾಂಚಾಲರು ಇಂದ್ರಿಯಜಯವಿಲ್ಲದವರಿಗೆ ನಿವಾರಿಸಲಾಗದ ಕರ್ಣಾಸ್ತ್ರಕ್ಕೆ ಬಲಿಯಾಗಿ ರಣದಲ್ಲಿ ಎಲ್ಲ ದಿಕ್ಕುಗಳಿಗೆ ಪಲಾಯನ ಮಾಡುತ್ತಿದ್ದಾರೆ.
ಏಷ ಭೀಮೋ ದೃಢಕ್ರೋಧೋ ವೃತಃ ಪಾರ್ಥ ಸಮಂತತಃ |
ಸೃಂಜಯೈರ್ಯೋಧಯನ್ ಕರ್ಣಂ ಪೀಡ್ಯತೇ ಸ್ಮ ಶಿತೈಃ ಶರೈಃ ||108||
ಅರ್ಜುನ, ಈ ಭೀಮನು ಮಾತ್ರ ದೃಢ ಕ್ರೋಧದಿಂದ ಸುತ್ತಲೂ ಸೃಂಜಯರಿಂದ ಪರಿವೃತನಾಗಿ ಕರ್ಣನೊಡನೆ ಹೋರಾಡುತ್ತ ಅವನ ಹರಿತವಾದ ಬಾಣಗಳಿಂದ ಪೀಡಿತನಾಗುತ್ತಿದ್ದಾನೆ.
ಪಾಂಡವಾನ್ ಸೃಂಜಯಾಂಶ್ಚೈವ ಪಾಂಚಾಲಾಂಶ್ಚೈವ ಭಾರತ |
ಹನ್ಯಾದುಪೇಕ್ಷಿತಃ ಕರ್ಣೋ ರೋಗೋ ದೇಹಮಿವಾತತಃ ||109||
ರೋಗವು ಉಪೇಕ್ಷೆ ಮಾಡಿದರೆ ದೇಹವನ್ನು ವ್ಯಾಪಿಸಿ ನಾಶಗೊಳಿಸುವಂತೆ ಕರ್ಣನನ್ನು ಉಪೇಕ್ಷಿಸಿದರೆ ಅವನು ಪಾಂಡವ ಸೃಂಜಯ ಪಾಂಚಾಲರೆಲ್ಲರನ್ನೂ ಸಂಹರಿಸುತ್ತಾನೆ.
ನಾನ್ಯಂ ತ್ವತ್ತೋಽಭಿಪಶ್ಯಾಮಿ ಯೋಧಂ ಯೌಧಿಷ್ಠಿರೇ ಬಲೇ |
ಯಃ ಸಮಾಸಾದ್ಯ ರಾಧೇಯಂ ಸ್ವಸ್ತಿಮಾನಾವ್ರಜೇದ್ ಗೃಹಮ್ ||110||
ಯುಧಿಷ್ಠಿರನ ಸೈನ್ಯದಲ್ಲಿ ಕರ್ಣನನ್ನು ಇದಿರಿಸಿ ಕ್ಷೇಮದಿಂದ ಮನೆಗೆ ಹಿಂತಿರುಗಬಲ್ಲ ಯೋಧನನ್ನು ನಿನ್ನ ಹೊರತು ಇನ್ನೊಬ್ಬನನ್ನು ನಾನು ಕಾಣೆ.
ತಮದ್ಯ ನಿಶಿತೈರ್ಬಾಣೈರ್ನಿಹತ್ಯ ಭರತರ್ಷಭ |
ಯಥಾಪ್ರತಿಜ್ಞಂ ಪಾರ್ಥ ತ್ವಂ ಕೃತ್ವಾ ಕೀರ್ತಿಮವಾಪ್ನುಹಿ ||111||
ಅವನನ್ನು ಈಗ ಹರಿತವಾದ ಬಾಣಗಳಿಂದ ಕೊಂದು ಪ್ರತಿಜ್ಞಾನುಸಾರವಾಗಿ ಅನುಷ್ಠಾನ ಮಾಡಿ ಕೀರ್ತಿಯನ್ನು ಪಡೆದುಕೊ.
ತ್ವಂ ಹಿ ಶಕ್ತೋ ರಣೇ ಜೇತುಂ ಸಕರ್ಣಾನಪಿ ಕೌರವಾನ್ |
ನಾನ್ಯೋ ಯುಧಿ ಯುಧಾಂ ಶ್ರೇಷ್ಠ ಸತ್ಯಮೇತದ್
ಬ್ರವೀಮಿ ತೇ ||112||
ಯೋಧಶ್ರೇಷ್ಠನೆ, ನೀನು ಕರ್ಣಸಮೇತರಾದ ಕೌರವರನ್ನು ರಣದಲ್ಲಿ ಗೆಲ್ಲಲು ಶಕ್ತ. ಇನ್ನೊಬ್ಬನಿಂದ ಇದು ಶಕ್ಯವಿಲ್ಲ. ಇದು ಸತ್ಯವೆಂದು ನಿನಗೆ ಹೇಳುತ್ತಿದ್ದೇನೆ.
ಏತತ್ಕೃತ್ವಾ ಮಹತ್ಕರ್ಮ ಹತ್ವಾ ಕರ್ಣಂ ಮಹಾರಥಮ್ |
ಕೃತಾರ್ಥಃ ಸಫಲಃ ಪಾರ್ಥ ಸುಖೀ ಭವ ನರೋತ್ತಮ | |113||

ನರೋತ್ತಮನಾದ ಅರ್ಜುನ, ನೀನು ಮಹಾರಥನಾದ ಕರ್ಣನನ್ನು ಕೊಂದು, ಆ ಮೂಲಕ ಮಹತ್ತಾದ ಕಾರ್ಯ ಒಂದನ್ನು ಮಾಡಿ ಕೃತಾರ್ಥನಾಗು, ಸಫಲನಾಗು, ಸುಖಿಯಾಗು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕೃಷ್ಣಾರ್ಜುನಸಂವಾದೇ ಅರ್ಜುನಾಶೀರ್ವಚನಂ ನಾಮ ಸಪ್ತತಿತಮೋಽಧ್ಯಾಯಃ ||70||

ಎಪ್ಪತ್ತೊಂದನೆಯ ಅಧ್ಯಾಯ
ಅರ್ಜುನನು ಮಾಡುವ ಕರ್ಣವಧೆಯ ವೀರಸಂಕಲ್ಪ.
ಸಂಜಯಃ
ಸ ಕೇಶವಸ್ಯ ಬೀಭತ್ಸುಃ ಶ್ರುತ್ವಾ ಭಾರತ ಭಾಷಿತಮ್ |
ವಿಶೋಕಃ ಸಂಪ್ರಹೃಷ್ಟಶ್ಚ ಕ್ಷಣೇನ ಸಮಪದ್ಯತ ||1||
ಸಂಜಯ ನುಡಿದ– ಅರ್ಜುನನು ಕೃಷ್ಣನ ಮಾತನ್ನು ಕೇಳಿ, ಕ್ಷಣದಲ್ಲಿ ಅಣ್ಣನನ್ನು ಹಳಿದೆನೆಂಬ ದುಗುಡವನ್ನು ಕಳೆದುಕೊಂಡು ಕರ್ಣವಧೆಯಲ್ಲಿ ಉತ್ಸಾಹಭರಿತನಾದ.
ತತೋ ಜ್ಯಾಮನುಮೃಜ್ಯಾಶು ವ್ಯಾಕ್ಷಿಪದ್ ಗಾಂಡಿವಂ ಧನುಃ |
ದಧ್ರೇ ಕರ್ಣವಿನಾಶಾಯ ಕೇಶವಂ ಚಾಭ್ಯಭಾಷತ ||2||
ಬಳಿಕ ಹೆದೆಯನ್ನು ಸವರಿ, ಬಿಲ್ಲಿಗೆ ಏರಿಸಿದ. ಗಾಂಡೀವಧನುಸ್ಸನ್ನು ಕರ್ಣವಿನಾಶಕ್ಕಾಗಿ ಧರಿಸಿದ. ಕೃಷ್ಣನಿಗೆ ನುಡಿದ.
ತ್ವಯಾ ನಾಥೇನ ಗೋವಿಂದ ಧ್ರುವ ಏಷ ಜಯೋ ಮಮ |
ಪ್ರಸನ್ನೋ ಯಸ್ಯ ಮೇಽದ್ಯ ತ್ವಂ ಭೂತಭವ್ಯಭವತ್ಪ್ರಭುಃ ||3||
`ಗೋವಿಂದ, ನೀನು ರಕ್ಷಕನಾಗಿ ಇರುವುದರಿಂದ ನನಗೆ ಕರ್ಣನೊಂದಿಗೆ ಸಮರದಲ್ಲಿ ಜಯ ನಿಶ್ಚಿತ. ಹಿಂದೆ ಮುಂದೆ ಈಗಿರುವ ಎಲ್ಲಕ್ಕೂ ಪ್ರಭು ನೀನು, ಈಗ ನನ್ನಲ್ಲಿ ವಿಶೇಷವಾಗಿ ಪ್ರಸನ್ನನಾಗಿರುವೆ.
ತ್ವತ್ಸಹಾಯೋ ಹ್ಯಹಂ ಕೃಷ್ಣ ತ್ರೀನ್ ಲೋಕಾನ್ ವೈ ಸಮಾಗತಾನ್ |
ಪ್ರಾಪಯೇಯಂ ಪರಂ ಲೋಕಂ ಕಿಮು ಕರ್ಣಂ ಮಹಾರಣೇ ||4||
ನಿನ್ನ ಸಹಾಯದ ಬಲದಿಂದ ಕೃಷ್ಣ, ನಾನು ಮೂರು ಲೋಕಗಳು ಇದಿರಿಗೆ ಬಂದರೂ ಪರಲೋಕಕ್ಕೆ ಕಳಿಸಬಲ್ಲೆ. ಇನ್ನು ಮಹಾರಣದಲ್ಲಿ ಕರ್ಣನನ್ನು ಪರಲೋಕಕ್ಕೆ ಅಟ್ಟುವೆನೆಂದು ಬೇರೆ ಏನು ಹೇಳಬೇಕು?
ಪಶ್ಯಾಮಿ ದ್ರವತೀಂ ಸೇನಾಂ ಪಾಂಚಾಲಾನಾಂ ಜನಾರ್ದನ |
ಪಶ್ಯಾಮಿ ಕರ್ಣಂ ಸಮರೇ ವಿಚರಂತಮಭೀತವತ್ ||5||
ಈಗ ಕೃಷ್ಣ, ನಾನು ಪಾಂಚಾಲ ಸೈನ್ಯ ರಣದಲ್ಲಿ ಹಿಮ್ಮೆಟ್ಟುವುದನ್ನು ಕಾಣುತ್ತಿದ್ದೇನೆ. ಕರ್ಣನು ಭೀತಿ ಇಲ್ಲದೆ ಓಡಾಡುವುದನ್ನು ಕಾಣುತ್ತಿದ್ದೇನೆ.
ಭಾರ್ಗವಾಸ್ತ್ರಂ ಚ ಪಶ್ಯಾಮಿ ವಿಚರನ್ತಂ ಸಮಂತತಃ |
ಸೃಷ್ಟಂ ಕರ್ಣೇನ ವಾರ್ಷ್ಣೇಯ ಶಕ್ರೇಣೇವ ಮಹಾಶನಿಮ್ ||6||
ಭಾರ್ಗವಾಸ್ತ್ರವು ಎಲ್ಲೆಡೆ ಸಂಚರಿಸುವುದನ್ನು ನೋಡುತ್ತಿದ್ದೇನೆ. ಇಂದ್ರನು ಎಸೆದ ವಜ್ರಾಯುಧದಂತಿದೆ, ಕರ್ಣನು ಎಸೆದ ಭಾರ್ಗವಾಸ್ತ್ರ.
ಅಯಂ ಖಲು ಸ ಸಂಗ್ರಾಮೋ ಯತ್ರ ಕೃಷ್ಣ ಮಯಾ ಕೃತಮ್ |
ಕಥಯಿಷ್ಯಂತಿ ಭೂತಾನಿ ಯಾವದ್ ಭೂಮಿರ್ಧರಿಷ್ಯತಿ ||7||
ಕೃಷ್ಣ, ಈಗ ನಾನು ಮಾಡುತ್ತಿರುವ ಯುದ್ಧ ಎಂಥ ಯುದ್ಧವೆಂದರೆ ಅದರಲ್ಲಿ ನಾನು ತೋರುವ ಪರಾಕ್ರಮವನ್ನು ಎಷ್ಟುಕಾಲ ಈ ಭೂಮಿ ಇರುವುದೋ ಅಷ್ಟುಕಾಲ ಎಲ್ಲರೂ ಮುಂದೆ ಹೊಗಳುತ್ತಾರೆ.
ಅದ್ಯ ಕೃಷ್ಣ ವಿಕರ್ಣಾ ಮೇ ಕರ್ಣಂ ನೇಷ್ಯಂತಿ ಮೃತ್ಯವೇ |
ಗಾಂಡೀವಮುಕ್ತಾಃ ಕ್ಷಿಣ್ವಂತೋ ಮಮ ಹಸ್ತಪ್ರಚೋದಿತಾಃ ||8||
ಈಗ ಹಂದಿಕಿವಿಯಾಕಾರದ ಉತ್ತಮವಾದ ನನ್ನ ಬಾಣಗಳು (`ವಿಕರ್ಣ' ವಿಶಿಷ್ಟವಾದ ವರಾಹಕರ್ಣದ ಆಕಾರ ಉಳ್ಳ ಬಾಣ. ಕರ್ಣನನ್ನು `ವಿ' ಇನ್ನಿಲ್ಲದಂತೆ ಮಾಡುವ ಬಾಣ.) ಗಾಂಡೀವದಲ್ಲಿ ಹೂಡಿ ಕೈಯಿಂದ ಬಲವಾಗಿ ಸೆಳೆದುಬಿಟ್ಟಾಗ ಕರ್ಣನನ್ನು ಕ್ಷತ ವಿಕ್ಷತನನ್ನಾಗಿ ಮಾಡಿ ಮೃತ್ಯುವಿನ ಬಳಿಗೆ ಒಯ್ಯುತ್ತವೆ.
ಅದ್ಯ ರಾಜಾ ಧೃತರಾಷ್ಟ್ರಃ ಸ್ವಾಂ ಬುದ್ಧಿಮವಮಂಸ್ಯತೇ |
ದುರ್ಯೋಧನಮರಾಜ್ಯಾರ್ಹಂ ಯಯಾ ರಾಜ್ಯೇಽಭ್ಯಷೇಚಯತ್ |9|
ಇಂದು ರಾಜಾ ಧೃತರಾಷ್ಟ್ರ ತನ್ನ ಬುದ್ಧಿಕೌಶಲವನ್ನು ಹಳಿಯುತ್ತಾನೆ. ರಾಜ್ಯಾರ್ಹನಲ್ಲದ ದುರ್ಯೋಧನನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದೆನಲ್ಲ! ಎಂದುಕೊಳ್ಳುತ್ತಾನೆ.
ಅದ್ಯ ರಾಜ್ಯಾತ್ ಸುಖಾಚ್ಚೈವ ಶ್ರಿಯೋ ರಾಷ್ಟ್ರಾತ್ ತಥಾ ಪುರಾತ್ |
ಪುತ್ರೇಭ್ಯಶ್ಚ ಮಹಾಬಾಹೋ ಧೃತರಾಷ್ಟ್ರೋ ವಿಯೋಕ್ಷ್ಯತೇ ||10||
ಇಂದು ಧೃತರಾಷ್ಟ್ರನು ರಾಜ್ಯ ಸುಖ ಸಂಪತ್ತು ರಾಷ್ಟ್ರ ಪಟ್ಟಣಗಳಿಂದ ಮಾತ್ರವಲ್ಲದೆ ತನ್ನೆಲ್ಲ ಮಕ್ಕಳಿಂದಲೂ ವಿಯೋಗ ಹೊಂದುತ್ತಾನೆ.
ಅದ್ಯ ದುರ್ಯೋಧನೋ ರಾಜಾ ಜೀವಿತಾಚ್ಚ ನಿರಾಶಕಃ |
ಭವಿಷ್ಯತಿ ಹತೇ ಕರ್ಣೇ ಕೃಷ್ಣ ಸತ್ಯಂ ಬ್ರವೀಮಿ ತೇ ||11||

ಇಂದು ರಾಜಾ ದುರ್ಯೋಧನನು, ಕರ್ಣ ಹತನಾದಾಗ ತನ್ನ ಬದುಕಿನಲ್ಲಿಯೇ ಆಸೆಯನ್ನು ಬಿಡುತ್ತಾನೆ. ಕೃಷ್ಣ, ನಾನು ನಿನಗೆ ಸತ್ಯವನ್ನೇ ಹೇಳುತ್ತಿದ್ದೇನೆ.
ಅದ್ಯ ದೃಷ್ಟ್ವಾ ಮಯಾ ಕರ್ಣಂ ಶರೈರ್ವಿಶಕಲೀಕೃತಮ್ |
ಪುರಾ ದೇವಾಸುರೇ ಯುದ್ಧೇ ವೃತ್ರಂ ಬಲಭಿದಾ ಯಥಾ ||12||
ಸ್ಮರತಾಂ ತವ ವಾಕ್ಯಾನಿ ಶಮಂ ಪ್ರತಿ ಜನೇಶ್ವರಃ ||13||
ಹಿಂದೆ ದೇವಾಸುರಯುದ್ಧದಲ್ಲಿ ವೃತ್ರನನ್ನು ಇಂದ್ರನು ಕ್ಷತವಿಕ್ಷತಗೊಳಿಸಿದಂತೆ ನಾನು ಇಂದು ಕರ್ಣನನ್ನು ಬಾಣಗಳಿಂದ ಚೂರುಚೂರಾಗಿ ಮಾಡುವುದನ್ನು ಕಂಡು, ಅಂದು ಸಂಧಾನಕ್ಕಾಗಿ ನೀನು ನುಡಿದುದೆಲ್ಲವನ್ನೂ ರಾಜಾ ದುರ್ಯೋಧನನು ಸ್ಮರಿಸಿಕೊಳ್ಳಲಿ.
ಅದ್ಯಾಸೌ ಸೌಬಲಃ ಕೃಷ್ಣ ಗ್ಲಹಂ ಜಾನಾತು ವೈ ಶರಾನ್ |
ದುರೋದರಂ ಚ ಗಾಂಡೀವಂ ಮಂಡಲಂ ಚ ರಥಂ ಮಮ ||14||
ಕೃಷ್ಣ, ಇಂದು ಶಕುನಿಯು, ನನ್ನ ದ್ಯೂತದಲ್ಲಿ ನನ್ನ ಗಾಂಡೀವವೇ ಜೂಜಾಡುತ್ತದೆ. ಅದಕ್ಕೆ ನನ್ನ ಬಾಣಗಳೇ ಪಣಗಳು. ನನ್ನ ರಥವೇ ಜೂಜಿನ ಕಟ್ಟೆ ಎಂಬುದನ್ನು ತಿಳಿದುಕೊಳ್ಳಲಿ.
ಯೋಽಸೌ ರಣೇ ನರಂ ನಾನ್ಯಂ ಪೃಥಿವ್ಯಾಮಭಿಮನ್ಯತೇ |
ತಸ್ಯಾದ್ಯ ಸೂತಪುತ್ರಸ್ಯ ಭೂಮಿಃ ಪಾಸ್ಯತಿ ಶೋಣಿತಮ್ ||15||
ಕರ್ಣನು ಭೂಮಿಯಲ್ಲಿ ತನಗಿಂತ ಬೇರೊಬ್ಬ ಯೋಧನೇ ಇಲ್ಲ ಎಂದು ದುರಹಂಕಾರ ತಾಳಿದ್ದಾನೆ. ಅಂಥ ಕರ್ಣನ ಮೈಯ ರಕ್ತವನ್ನು ಭೂಮಿ ಪಾನ ಮಾಡಲಿದೆ.
ಮಯಾ ಹಸ್ತವತಾ ಮುಕ್ತಾ ನಾರಾಚಾ ವೈದ್ಯುತತ್ವಿಷಃ |
ಗಾಂಡೀವಸೃಷ್ಟಾ ದಾಸ್ಯಂತಿ ಕರ್ಣಸ್ಯ ಪರಮಾಂ ಗತಿಮ್ ||16||
ನನ್ನ ಹಸ್ತಬಲದಿಂದ ಗಾಂಡೀವದಿಂದ ಹೊರಟ ಮಿಂಚಿನಂತೆ ಹೊಳೆವ ನನ್ನ ಬಾಣಗಳು ಕರ್ಣನಿಗೆ ಪರಲೋಕಗತಿಯನ್ನು ನೀಡುತ್ತವೆ.
ಅದ್ಯ ತಪ್ಸ್ಯತಿ ರಾಧೇಯಃ ಪಾಂಚಾಲೀಂ ಯತ್ತದಾಬ್ರುವೀತ್ |
ಸಭಾಮಧ್ಯೇ ವಚಃ ಕ್ರೂರಂ ಕುತ್ಸಯನ್ ಪಾಂಡವಾನ್ ಪ್ರತಿ ||17||
ಅಂದು ದ್ಯೂತಸಭೆಯಲ್ಲಿ ಪಾಂಡವರನ್ನು ಹಳಿಯುತ್ತ ಕರ್ಣನು ದ್ರೌಪದಿಗೆ ಏನು ಕ್ರೂರವಾದ ಮಾತನ್ನು ಆಡಿದನೋ ಅದಕ್ಕೆ ಇಂದು ಅವನು ಪಶ್ಚಾತ್ತಾಪಪಡುವಂತಾಗುವುದು.
ಯೇ ವೈ ಷಂಢತಿಲಾಸ್ತತ್ರ ಭವಿತಾರೋಽದ್ಯ ತೇ ತಿಲಾಃ |
ಹತೇ ವೈಕರ್ತನೇ ಕರ್ಣೇ ಸೂತಪುತ್ರೇ ದುರಾತ್ಮನಿ ||18||
ಆ ಸಭೆಯಲ್ಲಿ ಜೊಳ್ಳು ಎಳ್ಳಿನ ಕಾಳುಗಳೆಂದೆನಿಸಿದವರೇ ಇಂದು ಎಣ್ಣೆ ತುಂಬಿದ ಎಳ್ಳಿನ ಕಾಳುಗಳೆನಿಸುವರು. ಏಕೆಂದರೆ ದುರಾತ್ಮಕರ್ಣನು ಇಂದು ಹತನಾಗುತ್ತಾನೆ.
ಅಹಂ ವಃ ಪಾಂಡುಪುತ್ರೇಭ್ಯಸ್ತ್ರಾಸ್ಯಾಮೀತಿ ಯದಬ್ರುವೀತ್ |
ಧೃತರಾಷ್ಟ್ರಸುತಾನ್ ಕರ್ಣಃ ಶ್ಲಾಘಮಾನೋಽಽತ್ಮನೋ ಗುಣಾನ್ |
ಅನೃತಂ ತತ್ಕರಿಷ್ಯಂತಿ ಮಾಮಕಾ ನಿಶಿತಾಃ ಶರಾಃ ||19||
ನಾನು ನಿಮ್ಮನ್ನು ಪಾಂಡವರಿಂದ ಕಾಪಾಡುವೆನೆಂದು ತನ್ನ ಗುಣಗಳನ್ನು ಹೊಗಳಿಕೊಳ್ಳುತ್ತ ಕರ್ಣನು ಅಂದು ಧೃತರಾಷ್ಟ್ರನ ಮಕ್ಕಳಿಗೆ ಏನು ಭರವಸೆ ಇತ್ತನೋ ಅದನ್ನು ಇಂದು ನನ್ನ ಹರಿತವಾದ ಬಾಣಗಳು ಸುಳ್ಳಾಗಿಸುತ್ತವೆ.
ಹಂತಾಹಂ ಪಾಂಡವಾನ್ ಸರ್ವಾನ್ ಸಪುತ್ರಾನಿತಿ ಯೋಽಬ್ರುವೀತ್ |
ತಮದ್ಯ ಕರ್ಣಂ ಹಂತಾಸ್ಮಿ ಮಿಷತಾಂ ಸರ್ವಧನ್ವಿನಾಮ್ ||20||
ಪಾಂಡವರನ್ನು ಅವರ ಮಕ್ಕಳೊಂದಿಗೆ ಎಲ್ಲರನ್ನೂ ನಾನು ಕೊಲ್ಲುವೆನೆಂದು ಯಾವ ಕರ್ಣನು ಅಂದು ಹೇಳಿದ್ದನೋ ಅವನನ್ನು ಇಂದು ನಾನು ಎಲ್ಲ ಬಿಲ್ಲಾಳುಗಳು ನೋಡುತ್ತಿದ್ದಂತೆಯೆ ಕೊಲ್ಲುವೆನು.
ಯಸ್ಯ ವೀರ್ಯೇ ಸಮಾಶ್ವಾಸ್ಯ ಧಾರ್ತರಾಷ್ಟ್ರೋಽಭ್ಯಮರ್ಷಣಃ |
ಅವಾಮನ್ಯತ ದುರ್ಬುದ್ಧಿರ್ನಿತ್ಯಮಸ್ಮಾನ್ ದುರಾತ್ಮವಾನ್ |
ತಮದ್ಯ ಕರ್ಣಂ ರಾಧೇಯಂ ಹಂತಾಸ್ಮಿ ಮಧುಸೂದನ ||21||
ಕೃಷ್ಣ, ಯಾವ ಕರ್ಣನ ಪರಾಕ್ರಮದಲ್ಲಿ ಭರವಸೆ ಇಟ್ಟುಕೊಂಡು ಸಹನೆ ಇಲ್ಲದವ, ದುರ್ಬುದ್ಧಿ, ದುರಾತ್ಮನಾದ ದುರ್ಯೋಧನನು ಸದಾ ನಮ್ಮನ್ನು ಅವಮಾನಿಸುತ್ತಲೇ ಬಂದಿರುವನೋ ಆ ಕರ್ಣನನ್ನು ನಾನು ಇಂದು ಕೊಲ್ಲುವೆನು.
ಅದ್ಯ ಕರ್ಣೇ ಹತೇ ಕೃಷ್ಣ ಧಾರ್ತರಾಷ್ಟ್ರಾಃ ಸರಾಜಕಾಃ |
ವಿದ್ರವಂತು ದಿಶೋ ಭೀತಾಃ ಸಿಂಹತ್ರಸ್ತಾ ಮೃಗಾ ಇವ ||22||
ಕೃಷ್ಣ, ಇಂದು ನಾನು ಕರ್ಣನನ್ನು ವಧಿಸಿದಾಗ ಧೃತರಾಷ್ಟ್ರನ ಮಕ್ಕಳು ಭಯಭೀತರಾಗಿ ಸಿಂಹಕ್ಕೆ ಹೆದರಿ ಜಿಂಕೆಗಳು ಓಡುವಂತೆ, ಎಲ್ಲ ರಾಜರೊಂದಿಗೆ ಎಲ್ಲ ದಿಕ್ಕುಗಳಿಗೆ ಓಡಲಿ.
ಅದ್ಯ ದುರ್ಯೋಧನೋ ರಾಜಾ ಆತ್ಮಾನಂ ಚಾನುಶೋಚತಾಮ್ |
ಹತೇ ಕರ್ಣೇ ಮಯಾ ಸಂಖ್ಯೇ ಸಪುತ್ರೇ ಸಸುಹೃಜ್ಜನೇ ||23||
ಇಂದು ನಾನು ರಣರಂಗದಲ್ಲಿ ಕರ್ಣನನ್ನು ಅವನ ಪುತ್ರರೊಂದಿಗೆ ಬಂಧುಗಳೊಂದಿಗೆ ಕೊಂದಾಗ ರಾಜಾ ದುರ್ಯೋಧನನು ತನ್ನ ಬಗ್ಗೆಯೇ ತಾನು ಪರಿತಪಿಸಲಿ.

ಅದ್ಯ ಕರ್ಣಂ ಹತಂ ದೃಷ್ಟ್ವಾ ಧಾರ್ತರಾಷ್ಟ್ರೋತ್ಯಮರ್ಷಣಃ |
ಜಾನಾತು ಮಾಂ ರಣೇ ಕೃಷ್ಣ ಪ್ರವರಂ ಸರ್ವಧನ್ವಿನಾಮ್ ॥24॥
ಅತಿ ಅಸಹನೆಯಿಂದ ಕೂಡಿರುವ ದುರ್ಯೋಧನನು, ಇಂದು ನಾನು ಕರ್ಣನನ್ನು ಕೊಂದಾಗ, ನಾನು ಎಲ್ಲ ಬಿಲ್ಗಾರರಿಗಿಂತ ಹೇಗೆ ಶ್ರೇಷ್ಠನೆಂಬುದನ್ನು ತಿಳಿದುಕೊಳ್ಳಲಿ.
ಅದ್ಯ ರಾಜ್ಯೇ ಕರಿಷ್ಯಾಮಿ ಧೃತರಾಷ್ಟ್ರಂ ಜನೇಶ್ವರಮ್ |
ಸಪುತ್ರಪೌತ್ರಂ ಸಾಮಾತ್ಯಂ ಸಭೃತ್ಯಂ ಚ ನಿರಾಶಿಷಮ್ ॥25॥
ನಾನು ಇಂದು ಪುತ್ರ ಪೌತ್ರ ಮಿತ್ರ ಭೃತ್ಯರಿಂದ ಯುಕ್ತನಾದ ರಾಜಾ ಧೃತರಾಷ್ಟ್ರನನ್ನು ರಾಜ್ಯದಲ್ಲಿ ನಿರಾಶೆ ಹೊಂದುವಂತೆ ಮಾಡುವೆನು.
ಅದ್ಯಾಹಮನೃಣಃ ಕೃಷ್ಣ ಭವಿಷ್ಯಾಮಿ ಧನುರ್ಭೃತಾಮ್ |
ಕ್ರೋಧಸ್ಯ ಚ ಕುರೂಣಾಂ ಚ ಶರಾಣಾಂ ಗಾಂಡಿವಸ್ಯ ಚ ॥26॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಕರ್ಣನನ್ನು ಪರಲೋಕಕ್ಕೆ ಕಳಿಸುವುದರಿಂದ ಧನುರ್ಧಾರಿಗಳ ಋಣದಿಂದ ಮುಕ್ತನಾಗುತ್ತೇನೆ. ನನ್ನಲ್ಲಿ ಕ್ರೋಧ ಉಂಟುಮಾಡಿದ ಕೌರವರನ್ನು ಕ್ರೋಧದಿಂದ ಯಮಸದನಕ್ಕೆ ಕಳಿಸುವುದರಿಂದ ಅವರ ಋಣವೂ ಕ್ರೋಧದ ಋಣವೂ ಪರಿಹಾರವಾಗುತ್ತದೆ. ಬಾಣಪ್ರಯೋಗದಲ್ಲಿ ಬಲುಉಪಕಾರ ಮಾಡಿದ ಗಾಂಡೀವದಿಂದಲೆ ಕರ್ಣನಾಶಕವಾದ ಬಾಣವನ್ನೆಸೆಯುವುದರಿಂದ ಗಾಂಡೀವದ ಮತ್ತು ಬಾಣಗಳ ಋಣಪರಿಹಾರ. ಹೀಗೆ ನಾನು, ಕೃಷ್ಣ, ನಿನ್ನ ಅನುಗ್ರಹದಿಂದ ಅನೃಣನೆನಿಸುತ್ತೇನೆ.
ಅದ್ಯ ದುಃಖಮಹಂ ಮೋಕ್ಷ್ಯೇ ತ್ರಯೋದಶಸಮಾರ್ಜಿತಮ್ |
ಹತ್ವಾ ಕರ್ಣಂ ರಣೇ ಕೃಷ್ಣ ಶಂಬರಂ ಮಘವಾನಿವ ॥27॥
ಹದಿಮೂರು ವರ್ಷಕಾಲ ನಮ್ಮೊಳಗೇ ನಾವು ಕೂಡಿಟ್ಟಿರುವ ಎಲ್ಲ ದುಃಖವನ್ನು ಹಿಂದೆ ಶಂಬರಾಸುರನನ್ನು ದೇವೇಂದ್ರ ಕೊಂದಂತೆ, ಇಂದು ಕರ್ಣನನ್ನು ನಾನು ಕೊಲ್ಲುವುದರ ಮೂಲಕ, ಬಿಡುಗಡೆಗೊಳಿಸುತ್ತೇನೆ.
ಅದ್ಯ ಕರ್ಣೇ ಹತೇ ಯುದ್ಧೇ ಸೋಮಕಾನಾಂ ಮಹಾರಥಾಃ |
ಕೃತಂ ಕಾರ್ಯಂ ಚ ಮನ್ಯಂತಾಂ ಮಿತ್ರಕಾರ್ಯೇಪ್ಸವೋ ಯುಧಿ |28|
ಇಂದು ರಣದಲ್ಲಿ ಕರ್ಣ ಹತನಾದಾಗ, ಮಿತ್ರಕಾರ್ಯವನ್ನು ಬಯಸಿ ಬಂದ ಪಾಂಚಾಲಮಹಾರಥರು ಆ ಕಾರ್ಯ ಕೈಗೂಡಿತೆಂದೇ ತಿಳಿಯಲಿ.
ನ ಜಾನೇ ಚ ಕಥಂ ಪ್ರೀತಿಃ ಶೈನೇಯಸ್ಯಾದ್ಯ ಮಾಧವ |
ಭವಿಷ್ಯತಿ ಹತೇ ಕರ್ಣೇ ಮಯಿ ಚಾಪಿ ಜಯಾಧಿಕೇ ॥29॥
ಕೃಷ್ಣ, ನಾನಿಂದು ಕರ್ಣನನ್ನು ಕೊಂದು ವಿಜಯದಿಂದ ಅಧಿಕಕೀರ್ತಿಯನ್ನು ಪಡೆದುಕೊಂಡಾಗ ಸಾತ್ಯಕಿಗೆ ಎಂಥ ಸಂತೋಷವಾದೀತೆಂಬುದನ್ನು ನಾನು ಊಹಿಸಲಾರೆ.
ಅಹಂ ಹತ್ವಾ ರಣೇ ಕರ್ಣಂ ಪುತ್ರಂ ಚಾಸ್ಯ ಮಹಾರಥಮ್ |
ಪ್ರೀತಿಂ ದಾಸ್ಯಾಮಿ ಭೀಮಸ್ಯ ಯಮಯೋಃ ಸಾತ್ಯಕೇರಪಿ ॥30॥
ನಾನು ರಣದಲ್ಲಿ ಕರ್ಣನನ್ನು ಕೊಂದು ಅವನ ಪುತ್ರನಾದ ಮಹಾರಥ ವೃಷಸೇನನನ್ನೂ ಕೊಂದು ಭೀಮನಿಗೂ ನಕುಲಸಹದೇವರಿಗೂ ಸಾತ್ಯಕಿಗೂ ಸಂತೋಷವನ್ನು ನೀಡುತ್ತೇನೆ.
ಧೃಷ್ಟದ್ಯುಮ್ನಶಿಖಂಡಿಭ್ಯಾಂ ಪಾಂಚಾಲಾನಾಂ ಚ ಮಾಧವ |
ಅದ್ಯಾನೃಣ್ಯಂ ಗಮಿಷ್ಯಾಮಿ ಹತ್ವಾ ಕರ್ಣಂ ಮಹಾರಣೇ ॥31॥
ದೃಷ್ಟದ್ಯುಮ್ನ ಮತ್ತು ಶಿಖಂಡಿಗಳಿಗೂ ಪಾಂಚಾಲವೀರರಿಗೂ ಇಂದು ನಾನು ಕರ್ಣನನ್ನು ಮಹಾರಣದಲ್ಲಿ ಕೊಂದು ಋಣ ಪರಿಹಾರ ಮಾಡಿಕೊಳ್ಳುತ್ತೇನೆ.
ಅದ್ಯ ಪಶ್ಯಂತು ಸಂಗ್ರಾಮೇ ಧನಂಜಯಮಮರ್ಷಣಮ್ |
ಯುಧ್ಯಂತಂ ಕೌರವಾನ್ ಸಂಖ್ಯೇ ಪಾತಯಂತಂ ಚ ಸೂತಜಮ್ |
ಭವತ್ಸಕಾಶೇ ವಕ್ಷ್ಯೇ ಚ ಪುನರೇವಾತ್ಮಸಂಸ್ತವಮ್ ॥32॥
ನೀವೆಲ್ಲರೂ ಸಂಗ್ರಾಮದಲ್ಲಿ ಸಹನೆ ಇಲ್ಲದ ಈ ಅರ್ಜುನ, ಕೌರವರೊಡನೆ ಯುದ್ಧ ಮಾಡುವುದನ್ನೂ ಕರ್ಣನನ್ನು ವಧಿಸುವುದನ್ನೂ ಪ್ರತ್ಯಕ್ಷ ನೋಡಿರಿ. ಬಳಿಕ ನಿಮ್ಮ ಮುಂದೆ ಪುನಃ ನನ್ನ ಆತ್ಮಸ್ತುತಿ ಮಾಡಿಕೊಳ್ಳುವೆನು.
ಧನುರ್ವೇದೇ ಮತ್ಸಮೋ ನಾಸ್ತಿ ಲೋಕೇ
ಪರಾಕ್ರಮೇ ವಾ ಮಮ ಕೋಽಸ್ತಿ ತುಲ್ಯಃ |
ಕೋ ವಾಪ್ಯನ್ಯೋ ಮತ್ಸಮೋಽಸ್ತಿ ಕ್ಷಮಾಯಾಂ
ತಥಾ ಕ್ರೋಧೇ ಸದೃಶೋಽನ್ಯೋ ನ ಮೇಽಸ್ತಿ ॥33॥
ಧನುರ್ವಿದ್ಯೆಯಲ್ಲಿ ಲೋಕದಲ್ಲಿ ನನಗೆ ಸಮಾನನಿಲ್ಲ. ಪರಾಕ್ರಮದಲ್ಲಾಗಲಿ ನನಗೆ ಯಾರು ತುಲ್ಯ? ಕ್ಷಮೆಯಲ್ಲಿ ನನಗೆ ಸಮನು ಬೇರೆ ಯಾರು? ಹಾಗೇ ಕ್ರೋಧದಲ್ಲಿಯೂ ಸದೃಶನು ನನಗಿಂತ ಬೇರೆ ಇಲ್ಲ.
ಅಹಂ ಧನುಷ್ಮಾನಸುರಾನ್ ಸುರಾಂಶ್ಚ
ಸರ್ವಾಣಿ ಭೂತಾನಿ ಚ ಸಂಗತಾನಿ |
ಸ್ವಬಾಹುವೀರ್ಯಾದ್ ಗಮಯೇ ಪರಾಭವಂ
ಮತ್ಪೌರುಷಂ ವಿದ್ಧಿ ಪರಂ ಪರೇಭ್ಯಃ ॥34॥

ಬಿಲ್ಗಾರನಾದ ನಾನು ಅಸುರರನ್ನು ಸುರರನ್ನು ಎಲ್ಲ ಯೋಧರನ್ನೂ ಒಟ್ಟಾಗಿ ಬಂದರೂ ನನ್ನ ಬಾಹುಬಲದಿಂದ ಪರಾಭವಗೊಳಿಸಬಲ್ಲೆ. ಪರರ ಎಲ್ಲ ಪೌರುಷಗಳಿಗಿಂತಲೂ ಮೇಲು ನನ್ನ ಪೌರುಷ.

ಶರಾರ್ಚಿಷಾ ಗಾಂಡಿವೇನಾಹಮೇಕಃ
ಸರ್ವಾನ್ ಕುರೂನ್ ಬಾಹ್ಲಿಕಾಂಶ್ಚಾಭಿಪತ್ಯ |
ಹಿಮಾತ್ಯಯೇ ಕಕ್ಷಗತೋ ಯಥಾಗ್ನಿ-
ಸ್ತಥಾ ದಹೇಯಂ ಸಗಣಾನ್ ಪ್ರಸಹ್ಯ ॥35॥

ಬಾಣದ ಜ್ವಾಲೆಯಿಂದ ಕೂಡಿದ ಗಾಂಡೀವ ಒಂದರಿಂದಲೆ ನಾನೊಬ್ಬನೇ ಕುರುಗಳನ್ನೂ ಬಾಹ್ಲಿಕರನ್ನೂ ಆಕ್ರಮಿಸಿ, ಬೇಸಿಗೆಯಲ್ಲಿ ಹುಲ್ಲಿನ ಪೊದೆಯಲ್ಲಿ ಬಿದ್ದ ಬೆಂಕಿಯಂತೆ ಪರಿವಾರ ಸಮೇತವಾಗಿ ಎಲ್ಲರನ್ನೂ ಬಲಾತ್ಕಾರವಾಗಿ ಸುಡಬಲ್ಲೆ.

ಪಾಣೌ ಪೃಷತ್ಕಾ ಲಿಖಿತಾ ಮಮೈತೇ
ಧನುಶ್ಚ ಸವ್ಯೇ ನಿಹಿತಂ ಸಬಾಣಮ್ |
ಪಾದೌ ಚ ಮೇ ಸರಥೌ ಸಧ್ವಜೌ ಚ
ನ ಮಾದೃಶಂ ಯುದ್ಧಗತಂ ಜಯಂತಿ ॥36॥

ನನ್ನ ಬಲ ಅಂಗೈಯಲ್ಲಿ ಬಾಣದ ಚಿಹ್ನೆಗಳು ಲಿಖಿತವಾಗಿವೆ. ಎಡ ಅಂಗೈಯಲ್ಲಿಯೂ ಧನುರ್ಬಾಣಗಳ ಚಿಹ್ನೆ ಇದೆ. ಎರಡೂ ಪಾದಗಳಲ್ಲಿ ರಥ ಮತ್ತು ಧ್ವಜಗಳ ಚಿಹ್ನೆಗಳಿವೆ. ನನ್ನಂಥವನು ಯುದ್ಧಕ್ಕೆ ನಿಂತರೆ ಅವನನ್ನು ಯಾರೂ ಗೆಲ್ಲಲಾರರು.'

ಇತ್ಯೇವಮುಕತ್ವಾಽಚ್ಯುತಮೇಕವೀರಃ
ಕ್ಷಿಪ್ರಂ ರಿಪುಕ್ಷಿತ್ ಕ್ಷತಜೋಪಮಾಕ್ಷಃ |
ಭೀಮಂ ಮುಮುಕ್ಷುಃ ಸಮರೇ ಪ್ರಯಾತಃ
ಕರ್ಣಸ್ಯ ಕಾಯಾಚ್ಚ ಶಿರೋ ಜಿಹೀರ್ಷುಃ ॥37॥

ಹೀಗೆ ಕೃಷ್ಣನಿಗೆ ಹೇಳಿ ಅಸದೃಶವೀರನಾದ ಶತ್ರುನಾಶಕನಾದ ರಕ್ತದಂತೆ ಕೆಂಪಾದ ಕಣ್ಣುಳ್ಳ ಅರ್ಜುನನು ಭೀಮನಿಗೆ ಯುದ್ಧದಿಂದ ಸ್ವಲ್ಪ ಬಿಡುವು ನೀಡುವುದಕ್ಕೂ ಕರ್ಣನ ಮೈಯಿಂದ ತಲೆಯನ್ನು ತೆಗೆಯುವುದಕ್ಕೂ ಬಯಸಿ ಸಮರಕ್ಕೆ ತೆರಳಿದ.

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕೃಷ್ಣಾರ್ಜುನಸಂವಾದೇ ಅರ್ಜುನಸತ್ವವಚನಂ ನಾಮ ಏಕಸಪ್ತತಿತಮೋಽಧ್ಯಾಯಃ ॥71॥

ಮಹಾಭಾರತತಾತ್ಪರ್ಯನಿರ್ಣಯ
ನಿವಾರ್ಯ ಕರ್ಣಂ ಚ ಶರೈರಮುಷ್ಯ
ಸೂನೋಃ ಸುಷೇಣಸ್ಯ ಶಿರಶ್ಚಕರ್ತ |
ಪಪಾತ ಭೂಮೌ ಸ ಪಿತುಃ ಸಮೀಪೇ
ಯಥಾ ಹತಃ ಸತ್ಯಸೇನೋಮುನ್ಯೆವ |
ಯಥೈವ ಕರ್ಣಾವರಜೌ ಪುರೈವ
ನಿಶಾಯುದ್ಧೇ ಕರ್ಣಪುರಃ ಪ್ರಪಾತಿತೌ ॥ 80 ॥

ಭೀಮ, ಕರ್ಣನನ್ನು ಬಾಣಗಳಿಂದ ತಡೆದು ಅವನ ಮಗನಾದ ಸುಷೇಣನ ಶಿರವನ್ನು ಕತ್ತರಿಸಿದ. ಹಿಂದೆ ಭೀಮನಿಂದಲೆ ಹತನಾದ ಸತ್ಯಸೇನ ಹೇಗೆ ಕರ್ಣನ ಬಳಿಯಲ್ಲಿಯೆ ಬಿದ್ದನೋ ಹಿಂದೆ ರಾತ್ರಿ ಯುದ್ಧದಲ್ಲಿ ಭೀಮನಿಂದಲೆ ಕರ್ಣನ ಇಬ್ಬರು ತಮ್ಮಂದಿರು ಕರ್ಣನ ಎದುರಿಗೇ ನೆಲದಲ್ಲಿ ಹೇಗೆ ಬೀಳಿಸಲ್ಪಟ್ಟರೋ ಹಾಗೇ ಈ ಸುಷೇಣನೂ ತಂದೆಯ ಬಳಿಯಲ್ಲಿಯೆ ನೆಲದಲ್ಲಿ ಬಿದ್ದ.

ಎಪ್ಪತ್ತೆರಡನೆಯ ಅಧ್ಯಾಯ

ಭೀಮನಿಂದ ಕರ್ಣಪುತ್ರ ಸುಷೇಣನ ವಧ. ಉತ್ತಮೌಜ ಕೃಪನನ್ನು ವಿರಥನನ್ನಾಗಿ ಮಾಡಿದ. ಅಶ್ವತ್ಥಾಮ ಕೃಪನನ್ನು ಕಾಪಾಡಿದ.

ಧೃತರಾಷ್ಟ್ರಃ
ಸಮಾಗಮೇ ಪಾಂಡವಸೃಂಜಯಾನಾಂ
ಮಹಾಭಯೇ ಮಾಮಕಾನಾಮಗಾಧೇ |
ಧನಂಜಯೇ ತಾತ ರಣಾಯ ಯಾತೇ
ಬಭೂವ ತದ್ ಯುದ್ಧಮಥೋ ನು ಕೀದೃಕ್ ॥1॥

ಧೃತರಾಷ್ಟ್ರ ನುಡಿದ– ಸಂಜಯ, ಪಾಂಡವ ಸೃಂಜಯರಿಗೂ ನಮ್ಮವರಿಗೂ ಅಗಾಧವಾದ ಮಹಾಭಯಂಕರ ಯುದ್ಧ ನಡೆಯುತ್ತಿದ್ದಾಗ ಧನಂಜಯನು ರಣಕ್ಕೆ ಬಂದಿದ್ದಾನೆ, ಆಗ ಆ ಯುದ್ಧ ಯಾವ ರೀತಿ ನಡೆಯಿತು?

ಸಂಜಯಃ
ತೇಷಾಮನೀಕಾನಿ ಬೃಹದ್‌ಧ್ವಜಾನಿ
ರಣೇ ಸಮೃದ್ಧಾನಿ ಸಮಾಗತಾನಿ |
ಭೇರೀನಿನಾದೈರ್ಮುಖರಾಣ್ಯಗರ್ಜನ್
ಮೇಘಾ ಯಥಾ ಪ್ರಾವೃಷಿ ತೋಯಪೂರ್ಣಾಃ ॥2॥

ಸಂಜಯನು ನುಡಿದ– ದೊಡ್ಡ ಧ್ವಜಯುಕ್ತವಾದ ಬಲಸಮೃದ್ಧವಾದ ಅವರ ಸೈನ್ಯಗಳು ರಣದಲ್ಲಿ ಪರಸ್ಪರ ಇದಿರಾದಾಗ ಭೇರೀನಾದದಿಂದ ಶಬ್ದಮಾಡುತ್ತ ಮಳೆಗಾಲದಲ್ಲಿ ನೀರು ತುಂಬಿದ ಮೋಡಗಳಂತೆ ಗರ್ಜಿಸಿದುವು.

ಮಹಾಗಜಾಭ್ರಸ್ರುತಶೋಣಿತೌಘಂ
ವಾದಿತ್ರನೇಮೀತಳಶಬ್ದವಚ್ಚ |
ಹಿರಣ್ಯಚಿತ್ರಾಯುಧವೈದ್ಯುತಂ ಚ
ಶರಾಸಿನಾರಾಚಮಹಾಸ್ತ್ರಧಾರಮ್ ॥3॥
ಆ ಯುದ್ಧ ಹೇಗಿತ್ತೆಂದರೆ, ಮಹಾಗಜಗಳೆಂಬ ಮೋಡಗಳಿಂದ ನೆತ್ತರಿನ ಮಳೆ ಸುರಿದಂತಿತ್ತು. ರಣವಾದ್ಯ ರಥಚಕ್ರ ಧನುಷ್ಟಂಕಾರಗಳೆಂಬ ಗುಡುಗುಗಳು ಕೇಳಿಬರುತ್ತಿದ್ದುವು. ಬಂಗಾರದ ಸುಂದರ ಆಯುಧಗಳ ಮಿಂಚು ಹೊಳೆಯುತ್ತಿತ್ತು. ಶರ ಅಸಿ ನಾರಾಚ ಮುಂತಾದ ಮಹಾ ಅಸ್ತ್ರಗಳ ಜಲಧಾರೆ ಸುರಿಯುತ್ತಿತ್ತು.
ತದ್ಭೀಮವೇಗಂ ರುಧಿರೌಘವಾಹಿ
ಖಡ್ಗಾಕುಲಂ ಕ್ಷತ್ರಿಯಜೀವವಾಹಿ |
ಅನಾರ್ತವಂ ಕ್ರೂರಮನಿಷ್ಟವರ್ಷಂ
ಬಭೂವ ತತ್ಸಂಹರಣಂ ಪ್ರಜಾನಾಮ್ ॥4॥
ಅಕಾಲಿಕವಾದ ಕ್ರೂರವಾದ ಅನಿಷ್ಟವಾದ ಮಳೆ ಇದು ಭಯಂಕರವೇಗ ಉಳ್ಳದ್ದು, ನೆತ್ತರಿನ ಹೊಳೆಯನ್ನು ಹರಿಸಿತು. ಖಡ್ಗಗಳಿಂದ ತುಂಬಿದ್ದು ಕ್ಷತ್ರಿಯ ವೀರರ ಜೀವಗಳನ್ನು ಕೊಚ್ಚಿಕೊಂಡು ಹೋಯಿತು. ಕ್ಷತ್ರಿಯವೀರರೆಲ್ಲರ ಹತ್ಯಾಕಾಂಡ ರೂಪವಾಯಿತು.
ಏಕಂ ರಥಂ ಸಂಪರಿವಾರ್ಯ ಮೃತ್ಯುಂ
ನಯನ್ತ್ಯನೇಕೇ ಚ ರಥಾಃ ಸಮೇತಾಃ |
ಏಕಸ್ತಥೈಕಂ ರಥಿನಂ ರಥಾಗ್ರ್ಯಂ-
ಸ್ತಥಾ ರಥಶ್ಚಾಪಿ ರಥಾನನೇಕಾನ್ ॥5॥
ಒಬ್ಬ ರಥಿಕನನ್ನು ಅನೇಕ ರಥಿಕರು ಸುತ್ತುವರಿದು ಅವನನ್ನು ಮೃತ್ಯುವಿನ ಬಳಿಗೆ ಒಯ್ದರು. ಒಬ್ಬ ರಥಿಕನು ಒಬ್ಬ ರಥಿಕನನ್ನು, ಹಾಗೇ ಒಬ್ಬ ರಥಿಕನು ಅನೇಕ ಶ್ರೇಷ್ಠರಥಿಕರನ್ನು, ಯಮಾಲಯಕ್ಕೆ ಕಳಿಸಿದರು.
ರಥಂ ಸಸೂತಂ ಸಹಯಂ ಚ ಕಂಚಿತ್
ಕಶ್ಚಿದ್ ರಥೀ ಮೃತ್ಯುವಶಂ ನಿನಾಯ |
ನಿನಾಯ ಚಾಪ್ಯೇಕಗಜೇನ ಕಶ್ಚಿದ್
ರಥಾನ್ ಬಹೂನ್ ಮೃತ್ಯುವಶೇ ತಥಾಶ್ವಾನ್ ॥6॥
ರಥಾನ್ ಸೂತಾನ್ ಸಹಯಾನ್ ಗಜಾಂಶ್ಚ
ಸರ್ವಾನರೀನ್ ಮೃತ್ಯುವಶಂ ಶರೌಘೈಃ |
ನಿನ್ಯೇ ಹಯಾಂಶ್ಚೈವ ತಥಾ ಸಸಾದೀನ್
ಪದಾತಿಸಂಘಾಂಶ್ಚ ತಥೈವ ಪಾರ್ಥಃ ॥7॥
ಒಬ್ಬ ರಥಿಕನು ಇನ್ನೊಬ್ಬ ರಥಿಕನನ್ನು ಸಾರಥಿ ಅಶ್ವಗಳ ಸಮೇತವಾಗಿ ಮೃತ್ಯುವಶಕ್ಕೆ ಕಳಿಸಿದ. ಒಬ್ಬ ಗಜಾರೋಹಿಯು ಒಂದು ಗಜದಿಂದ ಬಹು ಸಾರಥಿಗಳನ್ನು ಅಶ್ವಗಳನ್ನು, ಮೃತ್ಯುವಶಕ್ಕೆ ಕಳಿಸಿದ. ಆದರೆ ಪಾರ್ಥನೊಬ್ಬನೇ ರಥ ಸಾರಥಿ ಅಶ್ವ ಗಜ ಗಜಸೈನಿಕರನ್ನು ಅಶ್ವಾರೋಹಿಸಮೇತ ಅಶ್ವಗಳನ್ನು, ಪದಾತಿ ಸಮೂಹಗಳನ್ನು ಎಲ್ಲ ಶತ್ರುಗಳನ್ನೂ ಬಾಣಪ್ರವಾಹಗಳಿಂದ ಮೃತ್ಯುವಶಕ್ಕೆ ಕಳಿಸಿದ.
ಕೃಪಃ ಶಿಖಂಡೀ ಚ ರಣೇ ಸಮೇತೌ
ದುರ್ಯೋಧನಂ ಸಾತ್ಯಕಿರಭ್ಯಗಚ್ಛತ್ |
ಶ್ರುತಶ್ರವಾ ದ್ರೋಣಸುತೇನ ಸಾರ್ಧಂ
ಯುಧಾಮನ್ಯುಶ್ಚಿತ್ರಸೇನೇನ ಚಾಪಿ ॥8॥
ಕೃಪನೂ ಶಿಖಂಡಿಯೂ ರಣದಲ್ಲಿ ಇದಿರಾದರು. ದುರ್ಯೋಧನನನ್ನು ಸಾತ್ಯಕಿ ಇದಿರಿಸಿದ. ಶ್ರುತಶ್ರವನು ಅಶ್ವತ್ಥಾಮನೊಡನೆ ಮತ್ತು ಯುಧಾಮನ್ಯು ಚಿತ್ರಸೇನನೊಡನೆ ರಣಕ್ಕೆ ನಿಂತರು.
ಕರ್ಣಸ್ಯ ಪುತ್ರಂ ತು ರಥೀ ಸುಷೇಣಂ
ಸಮಾಗತಃ ಸೃಂಜಯಶ್ಚೋತ್ತಮೌಜಾಃ |
ಗಾಂಧಾರರಾಜಂ ಸಹದೇವಃ ಕ್ಷುಧಾರ್ತೋ
ಮಹರ್ಷಭಂ ಸಿಂಹ ಇವಾಭ್ಯಧಾವತ್ ॥9॥
ಕರ್ಣಪುತ್ರನಾದ ಸುಷೇಣನನ್ನು ಸೃಂಜಯರ ಕಡೆಯ ಉತ್ತಮೌಜನು ರಣದಲ್ಲಿ ಇದಿರಿಸಿದನು. ಹಸಿದ ಸಿಂಹವು ದೊಡ್ಡ ಎತ್ತನ್ನು ಆಕ್ರಮಿಸುವಂತೆ ಸಹದೇವನು ಶಕುನಿಯನ್ನು ಆಕ್ರಮಿಸಿದ.
ಶತಾನೀಕೋ ನಾಕುಲಿಃ ಕರ್ಣಪುತ್ರಂ
ಯುವಾ ಯುವಾನಂ ವೃಷಸೇನಂ ಶರೌಘೈಃ |
ಸಮಾರ್ದಯತ್ ಕರ್ಣಸುತಶ್ಚ ವೀರಃ
ಪಾಂಚಾಲೇಯಂ ಶರವರ್ಷೈರನೇಕೈಃ ॥10॥
ಯುವಕನಾದ ನಕುಲಪುತ್ರ ಶತಾನೀಕನು ಯುವಕನಾದ ಕರ್ಣಪುತ್ರ ವೃಷಸೇನ ನನ್ನು ಬಾಣಪ್ರವಾಹಗಳಿಂದ ಪೀಡಿಸಿದ. ವೀರ ಕರ್ಣಪುತ್ರನೂ ಪಾಂಚಾಲೀ ನಕುಲರ ಪುತ್ರನಾದ ಆ ಶತಾನೀಕನನ್ನು ಅನೇಕ ಬಾಣವೃಷ್ಟಿಗಳಿಂದ ಪೀಡಿಸಿದ.
ರಥರ್ಷಭಃ ಕೃತವರ್ಮಾಣಮಾರ್ಚ್ಛ-

ನ್ಮಾದ್ರೀಪುತ್ರೋ ನಕುಲಶ್ಚಿತ್ರಯೋಧೀ |
ಪಾಂಚಾಲಾನಾಮಧಿಪೋ ಯಾಜ್ಞಸೇನಿಃ
ಸೇನಾಪತಿಂ ಕರ್ಣಮಾರ್ಚ್ಛರ್ತ್ ಸಸೈನ್ಯಮ್ ॥11॥
ಸುಂದರವಾಗಿ ಯುದ್ಧಮಾಡುವ ಶ್ರೇಷ್ಠರಥಿಕನಾದ ಮಾದ್ರೀಪುತ್ರ ನಕುಲನು ಕೃತವರ್ಮನನ್ನು ಇದಿರಿಸಿದ. ಪಾಂಚಾಲ ಸೇನಾಧಿಪತಿಯಾದ ಧೃಷ್ಟದ್ಯುಮ್ನನು ಕೌರವಸೇನಾಧಿಪತಿಯಾದ ಕರ್ಣನನ್ನೂ ಅವನ ಸೈನ್ಯವನ್ನೂ ಇದಿರಿಸಿದ.
ದುಃಶಾಸನೋ ಭಾರತ ಭಾರತೀ ಚ
ಸಂಶಪ್ತಕಾನಾಂ ಪೃತನಾ ಸಮೃದ್ಧಾ |
ಭೀಮಂ ರಣೇ ಶಸ್ತ್ರಭೃತಾಂ ವರಿಷ್ಠಂ
ತದಾ ಸಮಾರ್ಚ್ಛರ್ತ್ತಮಸಹ್ಯವೇಗಮ್ ॥12॥
ರಾಜನೆ, ದುಃಶಾಸನನೂ ಸಮೃದ್ಧವಾದ ಕೌರವಸೈನ್ಯವೂ ಸಂಶಪ್ತಕ ಸೈನ್ಯವೂ ಸೇರಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಸಹಿಸಲಾಗದ ವೇಗದವನಾದ ಒಬ್ಬ ಭೀಮನನ್ನು ಆಗ ರಣದಲ್ಲಿ ಇದಿರಿಸಿದರು.
ಕರ್ಣಾತ್ಮಜಂ ತತ್ರ ಜಘಾನ ಶೂರ-
ಸ್ತನುಚ್ಛಿದಾ ಸೋತ್ತಮೌಜಾಃ ಪ್ರಸಹ್ಯ |
ತಸ್ಯೋತ್ತಮಾಂಗಂ ನಿಪಪಾತ ಭೂಮೌ
ನಿನಾದಯದ್ ಗಾಂ ನಿನದೇನ ಖಂ ಚ ॥13॥
ಉತ್ತಮೌಜನಿಂದ ಯುಕ್ತನಾದ ಆ ಶೂರ ಭೀಮನು ಕರ್ಣಪುತ್ರನಾದ ಸುಷೇಣನನ್ನು ಶರೀರನಾಶಕವಾದ ಬಾಣದಿಂದ ಬಲವಾಗಿ ಹೊಡೆದ. ಅವನ ಶಿರವು ಆರ್ತನಾದದಿಂದ ಭೂಮ್ಯಂತರಿಕ್ಷಗಳಲ್ಲಿ ಪ್ರತಿಧ್ವನಿ ಉಂಟುಮಾಡುತ್ತ ಭೂಮಿಯಲ್ಲಿ ಬಿದ್ದಿತು. ನಿರ್ಣಯದಲ್ಲಿ ಹೇಳಿದಂತೆ ಸುಷೇಣನನ್ನು ಕೊಂದವನು, ಹಿಂದಿನ ಶ್ಲೋಕದಲ್ಲಿ ಉಕ್ತನಾದ, ಭೀಮ. ಉತ್ತಮೌಜ ಅವನಿಗೆ ಚಕ್ರರಕ್ಷಕನಾಗಿದ್ದ. ಮುದೆ 17ನೇ ಶ್ಲೋಕದಲ್ಲಿ ಇದು ಸ್ಪಷ್ಟವಾಗುತ್ತದೆ.
ಸುಷೇಣಶೀರ್ಷಂ ಪತಿತಂ ಪೃಥಿವ್ಯಾಂ
ವಿಲೋಕ್ಯ ಕರ್ಣೋಽಥ ತದಾರ್ತರೂಪಃ |
ಕ್ರೋಧಾದ್ಧಯಾಂಸ್ತಸ್ಯ ರಥಂ ಧ್ವಜಂ ಚ
ಬಾಣೈಃ ಸುಘೋರೈರ್ನಿಶಿತೈರ್ನ್ಯಕೃಂತತ್ ॥14॥
ತನ್ನ ಮಗ ಸುಷೇಣನ ತಲೆ ನೆಲದಲ್ಲಿ ಬಿದ್ದಿದ್ದನ್ನು ಕಂಡು ಕರ್ಣನು ದುಃಖಾರ್ತನಾಗಿ ಕ್ರೋಧದಿಂದ ಉತ್ತಮೌಜಸನ ಕುದುರೆಗಳನ್ನೂ ರಥವನ್ನೂ ಧ್ವಜವನ್ನೂ ಹರಿತವಾದ ಘೋರವಾದ ಬಾಣಗಳಿಂದ ಕತ್ತರಿಸಿದ.
ಸ ತೂತ್ತಮೌಜಾ ನಿಶಿತೈಃ ಪೃಷತ್ಕೈ-
ರ್ವ್ಯಾಧ ಖಡ್ಗೇನ ಚ ಭಾಸ್ವರೇಣ |
ಪಾರ್ಷ್ಣಿಂ ಹಯಾಂಶ್ಚೈವ ಕೃಪಸ್ಯ ಹತ್ವಾ
ಶಿಖಂಡಿವಾಹಂ ಸ ತತೋಽಭ್ಯರೋಹತ್ ॥15॥
ಉತ್ತಮೌಜನು ಕರ್ಣನನ್ನು ಹರಿತವಾದ ಬಾಣಗಳಿಂದ ಹೊಡೆದ ಮತ್ತು ಹೊಳೆಯುವ ಖಡ್ಗದಿಂದ ಕೃಪನ ಪೃಷ್ಠರಕ್ಷಕನನ್ನೂ ಅಶ್ವಗಳನ್ನೂ ವಧಿಸಿ ಶಿಖಂಡಿಯ ರಥವನ್ನೇರಿದ.
ಕೃಪಂ ತು ದೃಷ್ಟ್ವಾ ವಿರಥಂ ರಥಸ್ಥೋ
ನೈಚ್ಛಚ್ಛರೈಸ್ತಾಡಯಿತುಂ ಶಿಖಂಡೀ |
ತಂ ದ್ರೌಣಿರಾವಾರ್ಯ ರಥಂ ಕೃಪಂ ಸ್ಮ
ಸಮುಜ್ಜಹ್ರೇ ಪಂಕಗತಾಂ ಯಥಾ ಗಾಮ್ ॥16॥
ಕೃಪನು ರಥರಹಿತನಾಗಿದ್ದನ್ನು ಕಂಡು ರಥದಲ್ಲಿದ್ದ ಶಿಖಂಡಿ ಬಾಣಗಳಿಂದ ಹೊಡೆಯಲು ಇಚ್ಛಿಸಲಿಲ್ಲ. ಅವನನ್ನು ಅಶ್ವತ್ಥಾಮನು ತಡೆದು ನಿಲ್ಲಿಸಿ, ಕೆಸರಲ್ಲಿ ಸಿಕ್ಕಿಕೊಂಡ ಹಸುವನ್ನೆತ್ತುವಂತೆ ರಥಿಕನಾದ ಕೃಪನನ್ನು ಕಾಪಾಡಿದನು.
ಹಿರಣ್ಯವರ್ಮಾ ನಿಶಿತೈಃ ಪೃಷತ್ಕೈ-
ಸ್ತವಾತ್ಮಜಾನಾಮನಿಲಾತ್ಮಜೋ ವೈ |
ಅತಾಪಯತ್ ಸೈನ್ಯಮತೀವ ಭೀಮಃ
ಕಾಲೇ ಶುಚೌ ಮಧ್ಯಗತೋ ಯಥಾರ್ಕಃ ॥17॥
ಬಂಗಾರದ ಕವಚಧರಿಸಿದ ಭೀಮನು ಹರಿತವಾದ ಬಾಣಗಳಿಂದ ನಿನ್ನ ಮಕ್ಕಳ ಸೈನ್ಯವನ್ನು ಆಷಾಢಮಾಸದ ಆಗಸದಲ್ಲಿ ನಡುನೆತ್ತಿಗೆ ಬಂದ ಸೂರ್ಯನಂತೆ ಅತೀವ ತಾಪಗೊಳಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಸಂಕುಲಯುದ್ಧಂ ನಾಮ ದ್ವಿಸಪ್ತತಿತಮೋಽಧ್ಯಾಯಃ ॥72॥

ಮಹಾಭಾರತತಾತ್ಪರ್ಯನಿರ್ಣಯ
ಭೀಮಸ್ತದಾ ಶತ್ರುಬಲಂ ಸಮಸ್ತಂ
ವಿದ್ರಾವಯಾಮಾಸ ಜಘಾನ ಚಾಜೌ |
ವೀರಾನ್ ರಣಾಯಾಭಿಮುಖಾನ್ ಸ್ವಯಂತ್ರಾ

ಕುರ್ವಂಶ್ಚ ವಾರ್ತಾ ರಮಮಾಣ ಏವ ॥ 139॥
ಭೀಮ ಆಗ ಸಾರಥಿ ವಿಶೋಕನೊಡನೆ ವಿನೋದವಾಗಿ ಮಾತನಾಡುತ್ತ ಆನಂದಿಸುತ್ತಲೆ ಸಮಸ್ತ ಶತ್ರುಸೇನೆಯನ್ನು ಓಡಿಸಿದ. ಯುದ್ಧಕ್ಕೆ ಎದುರಾದ ವೀರರನ್ನು ಕೊಂದ.

ಎಪ್ಪತ್ತಮೂರನೆಯ ಅಧ್ಯಾಯ
ಸಾರಥಿ ವಿಶೋಕನೊಡನೆ ವಿನೋದದ ಮಾತುಗಳನ್ನಾಡುತ್ತ
ಭೀಮನು ಶತ್ರುಸೈನ್ಯವನ್ನು ಓಡಿಸುತ್ತಾನೆ.
ಸಂಜಯಃ
ಅಥ ತ್ವಿದಾನೀಂ ತುಮುಲೇ ವಿಮರ್ದೇ
ದ್ವಿಷದ್ಭಿರೇಕೋ ಬಹುಭಿಃ ಸಮಾವೃತಃ ।
ಮಹಾಭಯೇ ಸಾರಥಿಮಿತ್ಯುವಾಚ
ಭೀಮಶ್ಚಮೂಂ ವಾರಯನ್ ಧಾರ್ತರಾಷ್ಟ್ರೀಮ್ ॥1॥
ಸಂಜಯ ನುಡಿದ– ಈಗ ಮಹಾಭಯಂಕರವಾಗಿ ಈ ತುಮುಲ ಸಂಗ್ರಾಮ ದಲ್ಲಿ ಬಹುಶತ್ರುಗಳಿಂದ ಸುತ್ತುವರಿಯಲ್ಪಟ್ಟ ಒಬ್ಬ ಭೀಮನು ಕೌರವಸೈನ್ಯವನ್ನು ತಡೆಯುತ್ತ ಸಾರಥಿಯಾದ ಅಶೋಕನಿಗೆ ನುಡಿದ.
ತ್ವಂ ಸಾರಥೇ ಯಾಹಿ ಜವೇನ ವಾಹೈ-
ರ್ನಯಾಮ್ಯೇತಾನ್ ಧಾರ್ತರಾಷ್ಟ್ರಾನ್ ಯಮಾಯ ॥2॥
ಸಾರಥಿಯೆ, ನೀನು ಅಶ್ವಗಳಿಂದ ವೇಗವಾಗಿ ರಥವನ್ನು ನಡೆಸು. ಈ ಕೌರವರನ್ನು ಯಮನಿಗೆ ಕಳಿಸುತ್ತೇನೆ.
ಸಂಚೋದಿತೋ ಭೀಮಸೇನೇನ ಚೈವಂ
ಸ ಸಾರಥಿಃ ಪುತ್ರಬಲಂ ತ್ವದೀಯಮ್ ।
ಪ್ರಾಯಾತ್ ತತಃ ಸತ್ವರಮುಗ್ರವೇಗೋ
ಯತೋ ಯತೋ ಭೀಮಸೇನೋಽಭ್ಯಗರ್ಜತ್ ॥3॥
ಭೀಮಸೇನ ಹೀಗೆ ಹೇಳಿದಾಗ ಉಗ್ರವೇಗವುಳ್ಳ ಸಾರಥಿಯು ಭೀಮನು ಯಾವ ಯಾವ ಕಡೆಗೆ ಗರ್ಜನೆ ಮಾಡಿದನೋ ಆ ಕಡೆಗೆ ನಿನ್ನ ಮಕ್ಕಳ ಸೈನ್ಯದೊಳಕ್ಕೆ ರಥವನ್ನು ವೇಗವಾಗಿ ನಡೆಸಿದ.
ತತೋಽಪರೇ ನಾಗರಥಾಶ್ವಪತ್ತಿಭಿಃ
ಪ್ರತ್ಯುದ್ಯಯುಃ ಕುರವಸ್ತಂ ಸಮಂತಾತ್ ।
ಭೀಮಸ್ಯ ವಾಹಾಗ್ರ್ಯಮುದಾರವೇಗಂ
ಸಮಂತತೋ ಬಾಣಗಣೈರ್ನಿಜಘ್ನುಃ ॥4॥
ಆಗ ಶತ್ರುಗಳಾದ ಕೌರವರು ಭೀಮನನ್ನು ಎಲ್ಲೆಡೆ ಗಜ ರಥ ಅಶ್ವ ಪದಾತಿ ಸೈನ್ಯಗಳಿಂದ ಇದಿರಿಸಿದರು. ಬಹಳ ವೇಗವುಳ್ಳ ಭೀಮನ ಶ್ರೇಷ್ಠವಾದ ಕುದುರೆಯನ್ನು ಎಲ್ಲೆಡೆ ಬಾಣಸಮೂಹಗಳಿಂದ ಹೊಡೆದರು.
ತತಃ ಶರಾನಾಪತತೋ ಮಹಾತ್ಮಾ
ಚಿಚ್ಛೇದ ಬಾಣೈಸ್ತಪನೀಯಪುಂಖೈಃ ।
ತೇ ವೈ ನಿಪೇತುಸ್ತಪನೀಯಪುಂಖಾ
ದ್ವಿಧಾ ತ್ರಿಧಾ ಭೀಮಶರೈರ್ನಿಕೃತ್ತಾಃ ॥5॥
ಆಗ ಮಹಾತ್ಮ ಭೀಮಸೇನನು, ಶತ್ರುಗಳ ಬಾಣಗಳು ಬರುತ್ತಿದ್ದಂತೆಯೆ, ಬಂಗಾರದ ಪುಕ್ಕಉಳ್ಳ ಬಾಣಗಳಿಂದ ಕತ್ತರಿಸಿದ. ಬಂಗಾರದ ಪುಕ್ಕಉಳ್ಳ ಆ ಶತ್ರು ಗಳ ಬಾಣಗಳು ಭೀಮನ ಬಾಣಗಳಿಂದ ಎರಡಾಗಿ ಮೂರಾಗಿ ಕಡಿದುಬಿದ್ದುವು.
ತತೋ ರಾಜನ್ನಾಗರಥಾಶ್ವಯೂನಾಂ
ಭೀಮಾಹತಾನಾಂ ತವ ರಾಜಮಧ್ಯೇ ।
ಘೋರೋ ನಿನಾದಃ ಪ್ರಬಭೌ ನರೇಂದ್ರ
ವಜ್ರಾಹತಾನಾಮಿವ ಪರ್ವತಾನಾಮ್ ॥6॥
ರಾಜನೆ, ಆಗ, ನಿನ್ನ ಕಡೆಯ ರಾಜರ ನಡುವೆ ಗಜ ರಥ ಅಶ್ವಾರೋಹಿ ಯುವಕರು ಭೀಮನಿಂದ ಹೊಡೆಸಿಕೊಂಡಾಗ, ವಜ್ರದ ಆಘಾತಕ್ಕೊಳಗಾದ ಪರ್ವತಗಳ ಧ್ವನಿಯಂತೆ ಘೋರವಾದ ಆರ್ತನಾದ ಕೇಳಿಬಂದಿತು.
ತೇ ವಧ್ಯಮಾನಾಶ್ಚ ನರೇಂದ್ರಮುಖ್ಯಾ
ನಿರ್ಭಿನ್ನಾ ವೈ ಭೀಮಸೇನಪ್ರವೇಕೈಃ ।
ಭೀಮಂ ಸಮಂತಾತ್ ಸಮರೇಽಧ್ಯರೋಹನ್
ವೃಕ್ಷಂ ಶಕುಂತಾ ಇವ ಜಾತಪಕ್ಷಾಃ ॥7॥
ಆ ರಾಜರು ಭೀಮಸೇನನ ಬಾಣಗಳಿಂದ ಹೊಡೆಸಿಕೊಳ್ಳುತ್ತ ಬಹಳ ಗಾಯಗೊಂಡು, ರೆಕ್ಕೆ ಬಲಿತ ಹಕ್ಕಿಗಳು ಮರವನ್ನು ಮುತ್ತುವಂತೆ, ಭೀಮಸೇನನನ್ನು ರಣದಲ್ಲಿ ಎಲ್ಲ ಕಡೆ ಮುತ್ತಿದರು.
ತತೋಽಭಿಯಾತೇ ತವ ಸೈನ್ಯೇ ಸ ಭೀಮಃ
ಪ್ರಾದುಶ್ಚಕ್ರೇ ವೇಗಮನಂತವೇಗಃ ।
ಯಥಾನ್ತಕಾಲೇ ಕ್ಷಪಯನ್ ದಿಧಕ್ಷು-

ಭೂರ್ತಾಂತಕೃತ್ ಕಾಲ ಇವಾತ್ತದಂಡಃ ॥8॥
ನಿನ್ನ ಸೈನ್ಯ ಹೀಗೆ ಮುತ್ತಿಗೆ ಹಾಕಿದಾಗ ಅನಂತ ವೇಗಶಾಲಿಯಾದ ಭೀಮನು, ಪ್ರಳಯಕಾಲದಲ್ಲಿ ನಾಶಮಾಡಲು ಸುಡಲು ಬಯಸುವ ಕಾಲಯಮನು ದಂಡವನ್ನು ಹಿಡಿಯುವಂತೆ, ತನ್ನ ವೇಗವನ್ನು ವ್ಯಕ್ತಗೊಳಿಸಿದ, ಕೈಗೆ ಎತ್ತಿಕೊಂಡ.
ತಸ್ಯಾತಿವೇಗಸ್ಯ ರಣೇಽತಿವೇಗಂ
ನಾಶಕ್ನುವನ್ ಧಾರಯಿತುಂ ತ್ವದೀಯಾಃ |
ವ್ಯಾತ್ತಾನನಸ್ಯಾಪತತೋ ಯಥೈವ
ಕಾಲಸ್ಯ ಕಾಲೇ ಹರತಃ ಪ್ರಜಾ ವೈ ॥9॥
ಅತಿವೇಗಶಾಲಿಯಾದ ಆ ಭೀಮನ ವೇಗವನ್ನು ರಣದಲ್ಲಿ ತಡೆದುಕೊಳ್ಳಲು ನಿನ್ನ ಕಡೆಯವರು ಶಕ್ತರಾಗಲಿಲ್ಲ. ಪ್ರಳಯಕಾಲದಲ್ಲಿ ಎಲ್ಲರನ್ನೂ ಸಂಹರಿಸುವ ಮೃತ್ಯು ಬಾಯ್ತೆರೆದು ವೇಗವಾಗಿ ಬಂದಾಗ ಪ್ರಾಣಿಗಳು ಅದನ್ನು ತಡೆದುಕೊಳ್ಳಲಾರವು ಹೇಗೋ ಹಾಗೆ.
ತತೋ ಬಲಂ ಭಾರತ ಭಾರತಾನಾಂ
ಪ್ರದಹ್ಯಮಾನಂ ಸಮರೇ ಮಹಾತ್ಮನಾ |
ಭೀತಂ ದಿಶೋಽಕೀರ್ಯತ ಭೀಮನುನ್ನಂ
ಮಹಾನಿಲೇನಾಭ್ರಗಣೋ ಯಥೈವ ॥10॥
ರಾಜನೆ, ಕೌರವರ ಸೈನ್ಯವು ಸಮರದಲ್ಲಿ ಮಹಾತ್ಮಭೀಮನಿಂದ ದಗ್ಧವಾಗುತ್ತ, ಮಹಾಬಿರುಗಾಳಿಯಿಂದ ಭಯಂಕರವಾಗಿ ಹೊಡೆಸಿಕೊಂಡ ಮೋಡಸಮೂಹ ಚದುರಿಹೋಗುವಂತೆ, ಭಯಭೀತವಾಗಿ ಎಲ್ಲ ದಿಕ್ಕುಗಳಲ್ಲಿ ಚದುರಿತು.
ತತೋ ಧೀಮಾನ್ ಸಾರಥಿಮಬ್ರವೀದ್ ಬಲೀ
ಸ ಭೀಮಸೇನಃ ಪುನರೇವ ಹೃಷ್ಟಃ |
ಸೂತಾಭಿಜಾನೀಹಿ ಪರಾನ್ ಸ್ವಕಾನ್ ವಾ
ರಥಾನ್ ಧ್ವಜಾಂಶ್ಚಾಪತತಃ ಸಮೇತಾನ್ |
ಯುಧ್ಯನ್ನಹಂ ನಾಭಿಜಾನಾಮಿ ಕಿಂಚಿ-
ನ್ಮಾ ಸೈನ್ಯಂ ಸ್ವಂ ಛಾದಯಿಷ್ಯೇ ಪೃಷತ್ಕೈಃ ॥11॥
ಆಗ ಧೀಮಂತ ಬಲಿಷ್ಠ ಹೃಷ್ಟನಾದ ಭೀಮಸೇನನು ಪುನಃ ಸಾರಥಿಗೆ ವಿನೋದಕ್ಕಾಗಿ ನುಡಿದ, ಸಾರಥಿಯೆ, ನನ್ನ ಕಡೆಗೆ ಧಾವಿಸಿ ಬರುವ ರಥಗಳನ್ನೂ ಧ್ವಜಗಳನ್ನೂ ಅವು ಪರಕೀಯವೆ ಸ್ವಕೀಯವೆ ನೋಡು. ಏಕೆಂದರೆ ಯುದ್ಧಮಾಡುವಾಗ ಅದು ಏನೂ ನನ್ನ ಗಮನಕ್ಕೇ ಬರುವುದಿಲ್ಲ. ನಮ್ಮ ಸೈನ್ಯವನ್ನು ನಾನು ಬಾಣಗಳಿಂದ ಮುಚ್ಚುವಂತಾಗಬಾರದು ತಾನೆ?
ಅರೀನ್ ವಿಶೋಕಾಭಿನಿರೀಕ್ಷ ್ಯ ಸರ್ವತೋ
ಮನಸ್ತು ಚಿಂತಾ ಪ್ರದುನೋತಿ ಮೇ ಭೃಶಮ್ |
ರಾಜಾಽಽತುರೋ ನಾಗಮದ್ ಯತ್ಕಿರೀಟೀ
ಬಹೂನಿ ದುಃಖಾನ್ಯಭಿಜಾತೋಸ್ಮಿ ಸೂತ ॥12॥
ವಿಶೋಕ! ಎಲ್ಲ ಕಡೆ ಶತ್ರುಗಳನ್ನು ನೋಡಿ ನನ್ನ ಮನಸ್ಸನ್ನು ಚಿಂತೆಯು ಪೀಡಿಸುತ್ತಿದೆ. ರಾಜಾಯುಧಿಷ್ಠಿರನು ದುಃಖಿತನಾಗಿದ್ದಾನೆ. ಅವನನ್ನು ಕಾಣಲು ಹೋಗಿರುವ ಅರ್ಜುನನು ಇನ್ನೂ ಹಿಂತಿರುಗಿ ಬಂದಿಲ್ಲ. ನನಗೆ ಬಹಳ ದುಃಖಗಳುಂಟಾಗಿವೆ, ಸಾರಥಿಯೆ!
ಏತದ್ ದುಃಖಂ ಸಾರಥೇ ಧರ್ಮರಾಜೋ
ಯನ್ಮಾಂ ಹಿತ್ವಾ ಯಾತವಾನ್ ಶತ್ರುಮಧ್ಯೇ |
ನೈನಂ ಜೀವನ್ನಾಪಿ ಜಾನಾಮ್ಯಜೀವನ್
ಬೀಭತ್ಸುಂ ವಾ ತನ್ಮಮಾದ್ಯಾತಿದುಃಖಮ್ ॥13॥
ಸಾರಥಿ, ಧರ್ಮರಾಜನು ನನ್ನನ್ನು ಶತ್ರುಗಳ ಮಧ್ಯದಲ್ಲಿ ಬಿಟ್ಟು ಹೋಗಿದ್ದಾನೆ ಎಂದಮೇಲೆ ಅವನು ಬದುಕಿರುವನೆ ಇಲ್ಲವೆ, ಒಂದನ್ನೂ ನಾನು ಅರಿಯೆ. ಅರ್ಜುನನನ್ನೂ ನಾನು ಕಾಣುತ್ತಿಲ್ಲ. ಅದರಿಂದ ನನಗೆ ಈಗ ಬಹಳ ದುಃಖ ಉಂಟಾಗಿದೆ.
ಸೋಽಹಂ ದ್ವಿಷತ್ಸೈನ್ಯಮುದಗ್ರಕಲ್ಪಂ
ವಿನಾಶಯಿಷ್ಯೇ ಪರಮಪ್ರತೀತಃ |
ಏತಾನ್ನಿಹತ್ಯಾಜಿಮಧ್ಯೇ ಸಮೇತಾನ್
ಪ್ರೀತೋ ಭವಿಷ್ಯಾಮಿ ಸಹ ತ್ವಯಾದ್ಯ ॥14॥
ಆದರೂ ಯುಧಿಷ್ಠಿರನ ಕ್ಷೇಮವಿಷಯದಲ್ಲಿ ಬಹಳ ವಿಶ್ವಾಸವಿಟ್ಟುಕೊಂಡು ನಾನು ಬಲಿಷ್ಠವಾಗಿರುವಂತೆ ಕಾಣುವ ಈ ಶತ್ರುಸೈನ್ಯವನ್ನು ನಾಶಗೊಳಿಸುತ್ತೇನೆ. ರಣರಂಗದ ನಡುವೆ ಇದಿರಿಸಿ ಬರುವ ಇವರನ್ನು ಸಂಹರಿಸಿ ಈಗಲೆ ನಿನ್ನೊಡನೆ ನಾನು ಸಂತೋಷಪಡುತ್ತೇನೆ.
ಅವೇಕ್ಷಸ್ವ ಮೇ ಇಷುಧೀ ವಿಶೋಕ
ಕಿಯಂತೋ ವಾ ಇಷವೋ ಮೇಽವಶಿಷ್ಟಾಃ |
ಕೇ ವಾ ಜಿತಾಃ ಕಿಂ ಪ್ರಮಾಣಂ ಚ ತೇಷಾಂ
ಜ್ಞಾತ್ವಾ ವ್ಯಕ್ತಂ ತನ್ಮಮಾಚಕ್ಷ ್ವ ಸೂತ ॥15॥
ಕತಿ ವಾ ಸಹಸ್ರಾಣಿ ಕತಿ ವಾ ಶತಾನಿ
ಹ್ಯಾಚಕ್ಷ ್ವ ಮೇ ಸಾರಥೇ ಕ್ಷಿಪ್ರಮೇವ ॥16॥
ವಿಶೋಕ, ನನ್ನ ಎರಡೂ ಬತ್ತಳಿಕೆಗಳನ್ನು ನೋಡು. ನನ್ನ ಬಾಣಗಳು ಈಗ ಎಷ್ಟು ಉಳಿದಿವೆ? ಯಾವ ಯಾವ ರಾಜರು

ಪರಾಜಿತರಾಗಿದ್ದಾರೆ? ಅವರ ಸೈನ್ಯ ಪ್ರಮಾಣವೆಷ್ಟು? ಚೆನ್ನಾಗಿ ತಿಳಿದು ನನಗೆ ಹೇಳು. ಎಷ್ಟು ಸಾವಿರ ಅಥವಾ ಎಷ್ಟು ನೂರು ಎಂದು ಬೇಗನೆ ಹೇಳು.
ವಿಶೋಕಃ
ಸರ್ವಂ ವಿದಿತ್ವೈವಮಹಂ ವದಾಮಿ
ತವಾರ್ಥಸಿದ್ಧಿಪ್ರದಮದ್ಯ ವೀರ |
ಕೈಕೇಯಕಾಮ್ಭೋಜಸುರಾಷ್ಟ್ರಬಾಹ್ಲಿಕಾ
ಮ್ಲೇಚ್ಛಾಶ್ಚ ಸುಹ್ಮಾಃ ಪರತಂಕಣಾಶ್ಚ ॥17॥
ಮದ್ರಾಶ್ಚ ವಂಗಾ ಮಗಧಾಃ ಕುಣಿಂದಾ
ಆನರ್ತಕಾವರ್ತಕಾಃ ಪಾರ್ವತೀಯಾಃ |
ಸರ್ವೇ ಗೃಹೀತಪ್ರವರಾಯುಧಾಸ್ತ್ವಾಂ
ಸಂವೇಷ್ಟ್ಯ ಸಂವೇಷ್ಟ್ಯ ತತೋ ವಿನೇದುಃ ॥18॥
ವಿಶೋಕನು ನುಡಿದ– ವೀರನೆ, ಹೀಗೇ ಎಲ್ಲವನ್ನೂ ತಿಳಿದು ನಾನು ನಿನಗೆ ಕಾರ್ಯಸಿದ್ಧಿಪ್ರದವಾದ ಮಾತನ್ನು ಈಗಲೆ ಹೇಳುತ್ತೇನೆ. ಇಷ್ಟರವರೆಗೆ ಕೈಕೇಯ ಕಾಂಬೋಜ ಸುರಾಷ್ಟ್ರ, ಬಾಹ್ಲಿಕ ಮ್ಲೇಚ್ಛ ಸುಹ್ಮ ಪರತಂಕಣ ಮದ್ರ ವಂಗ ಮಗಧ ಕುಣಿಂದ, ಆನರ್ತಕ ಆವರ್ತಕ ಪಾರ್ವತೀಯ ದೇಶಗಳ ರಾಜರು, ಎಲ್ಲರೂ ಉತ್ತಮವಾದ ಆಯುಧಗಳನ್ನು ಹಿಡಿದವರು, ನಿನ್ನನ್ನು ಸುತ್ತುವರಿದು ಸುತ್ತುವರಿದು ಗರ್ಜಿಸಿದ್ದರು.
ಜಾನಾಮಿ ಕಾಲಂ ಚ ದಶಾಂ ಗತಿಂ ಚ
ಪಕ್ಷದ್ವಯೋಶ್ಚಾಪಿ ಬಲಾಬಲಂ ಚ |
ಅಶ್ವಾಂಶ್ಚ ಯೋದ್ಧಾರಮಥಾಯುಧಂ ಚ
ಕ್ಷಿಪ್ರಂ ನಯೇಯಂ ರಥಮೇವ ವೀರ ॥19॥
ಅವರ ಕಾಲ, ಅವಸ್ಥೆ, ಗತಿಗಳನ್ನು ನಮ್ಮ ಎರಡೂ ಪಕ್ಷಗಳ ಬಲ ಅಬಲಗಳನ್ನು ಅಶ್ವಗಳನ್ನೂ ಯೋಧರನ್ನೂ ಆಯುಧವನ್ನೂ ನಾನು ತಿಳಿದಿರುವೆನು. ವೀರನೆ, ಬೇಗನೆ ರಥವನ್ನು ನಡೆಸುವೆನು.
ಷಣ್ಮಾರ್ಗಣಾನಾಮಯುತಾನಿ ವೀರ
ಕ್ಷುರಾಶ್ಚ ಭಲ್ಲಾಶ್ಚ ತಥಾಯುತಾಖ್ಯಾಃ |
ನಾರಾಚಾನಾಂ ದ್ವೇ ಸಹಸ್ರೇ ತು ವೀರ
ತ್ರೀಣ್ಯೇವ ಚ ಪ್ರದರಾಣಾಂ ಚ ಪಾರ್ಥ ॥20॥
ಮಾರ್ಗಣಗಳು ಈಗ ನಿನ್ನ ಬಳಿ ಅರವತ್ತು ಸಾವಿರ ಇವೆ. ಅರವತ್ತು ಸಾವಿರ ಕ್ಷುರಗಳೂ ಇವೆ. ಹತ್ತು ಸಾವಿರ ಭಲ್ಲೆಗಳಿವೆ. ಎರಡು ಸಾವಿರ ನಾರಾಚಗಳಿವೆ. ಮೂರು ಸಾವಿರ ಪ್ರದರಗಳೂ ಇವೆ.
(ಇವೆಲ್ಲವೂ ಬೇರೆ ಬೇರೆ ಬಗೆಯ ಬಾಣಗಳು.)
ಅಸ್ತ್ಯಾಯುಧಂ ಪಾಂಡವೇಯಾವಶಿಷ್ಟಂ
ನ ಯದ್ವಹೇಚ್ಛಕಟಂ ಷಡ್ಗವೀಯಮ್ |
ಏತದ್ ವಿದ್ವನ್ ಮುಂಚ ಸಹಸ್ರಶೋಽಪಿ
ಗದಾಸಿಬಾಹುದ್ರವಿಣಂ ಚ ತೇಽಸ್ತಿ ॥21॥
ಪ್ರಾಸಾಶ್ಚ ಖಡ್ಗಾಃ ಶಕ್ತಯಸ್ತೋಮರಾಶ್ಚ
ಮಾ ಭೈಷೀಸ್ತ್ವಂ ಸಂಕ್ಷಯಾದಾಯುಧಾನಾಮ್ ॥
ಭೀಮಸೇನ, ನಿನ್ನ ಬಳಿ ಉಳಿದಿರುವ ಆಯುಧಗಳು ಎಷ್ಟೆಂದರೆ ಅವುಗಳನ್ನು ಆರು ಎತ್ತುಗಳು ಎಳೆಯಬಲ್ಲ ಬಂಡಿ ಕೂಡ ಹೊರಲಾರದು. ಅವುಗಳನ್ನು ಸಾವಿರಸಾವಿರಗಟ್ಟಲೆ ನೀನು ಎಸೆಯಬಹುದು. ಮತ್ತು ಜೊತೆಗೆ ಗದೆ ಕತ್ತಿಗಳೂ ನಿನ್ನ ಬಾಹುಬಲ ಸಂಪತ್ತುಗಳೂ ನಿನ್ನಲ್ಲಿ ಇವೆ. ಪ್ರಾಸ ಖಡ್ಗ ಶಕ್ತಿ ತೋಮರಗಳೂ ಇವೆ. ಆಯುಧಗಳು ಮುಗಿದು ಹೋಗುವುದೆಂದು ಭಯ ಪಡಬೇಡ.
ಶ್ರೀಭೀಮಸೇನಃ
ಅದ್ಯೈವ ನೂನಂ ಕಥಯಂತಿ ಸಿದ್ಧಾಂ
ಮಮ ಪ್ರತಿಜ್ಞಾಂ ಸರ್ವಲೋಕೇ ವಿಶೋಕ |
ನ ಮೋಕ್ಷ ೆಯಂತೇ ವಾ ಸಮರೇ ಭೀಮಸೇನ
ಏಕಃ ಕುರೂನ್ ವಃ ಸಮರೇ ವ್ಯಜೈಷೀತ್ ॥22॥
ಆಶಂಸಿತಾನಾಮಿದಮೇಕಮಸ್ತು
ತನ್ಮೇ ದೇವಾಃ ಸಫಲಂ ಸಾಧಯಂತು ॥23॥
ಭೀಮಸೇನ ನುಡಿದ– ವಿಶೋಕ, ಎಲ್ಲ ಲೋಕಗಳಲ್ಲಿ ನಾನು ನನ್ನ ಪ್ರತಿಜ್ಞೆ ಪೂರೈಸಿದ್ದನ್ನು ಜನರು ಈಗಲೇ ಹೇಳುತ್ತಾರೆ. `ಭೀಮಸೇನನ ಸಮರದಲ್ಲಿ ಶತ್ರುಗಳು ನೀವು ಮುಕ್ತರಾಗುವುದಿಲ್ಲ. ಭೀಮಸೇನನೊಬ್ಬನೇ ಕೌರವರನ್ನು ಸಮರದಲ್ಲಿ ಪರಾಭವಗೊಳಿಸುತ್ತಾನೆ' ಎನ್ನುತ್ತಾರೆ. ನಾನು ಅಪೇಕ್ಷಿಸಿದ ಕಾರ್ಯಗಳಲ್ಲಿ ಇದೊಂದೇ ಮುಖ್ಯವಾಗಿ ಕೈಗೂಡಲಿ. ಅದನ್ನು ದೇವತೆಗಳು ಸಫಲವಾಗಿ ನಡೆಸಿಕೊಡಲಿ.
ದುಃಶಾಸನನ ಎದೆಬಗಿಯುವುದು ಮತ್ತು ದುರ್ಯೋಧನನ ತೊಡೆ ಮುರಿದು ತಲೆಯನ್ನು ಕಾಲಿಂದ ತುಳಿಯುವುದು ಈ ಎರಡು ಪ್ರತಿಜ್ಞೆಗಳ ಪಾಲನೆಯೊಂದೇ ನನಗೆ ಮುಖ್ಯವಾದ ಕಾರ್ಯ. ಅದನ್ನು `ದೇವತೆಗಳು' ಶ್ರೀಕೃಷ್ಣ ವ್ಯಾಸ ಪರಶುರಾಮರು ಸಫಲವಾಗಿ

ನಡೆಸಿಕೊಡಲಿ' ಎಂದು ಅವರಲ್ಲಿ ಭೀಮನು `ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಂ' ಎಂದು ಪ್ರಾರ್ಥಿಸುತ್ತಾನೆ.
ಸೂತಾದ್ಯ ಮೇ ಬಾಹುವಿಮುಕ್ತಶಸ್ತ್ರೈಃ
ಸಂಭಿನ್ನಗಾತ್ರಾಃ ಪಾರ್ಥಿವಾ ನಾಶಮೀಯುಃ |
ಕಳಿಂಗವಂಗಾಂಗ ಕರೂಶತಂಕಣಾಃ
ಸೌವೀರಸೌರಾಷ್ಟ್ರಕುಣಿಂದಮಾಗಧಾಃ ॥24॥
ಕೈಕೇಯಕಾಂಬೋಜವಿದೇಹಚೇದಿಕಾ
ಗಾಂಧಾರಕಾಶೀಪ್ರಮುಖಾಶ್ಚ ಸೂತ ॥25॥
ಸಾರಥಿ, ನನ್ನ ಬಾಹುವಿನಿಂದ ಹೊರಟ ಶಸ್ತ್ರಗಳಿಂದ ಕಳಿಂಗ ವಂಗ ಅಂಗ ಕರೂಷ ತಂಕಣ ಸೌವೀರ ಸೌರಾಷ್ಟ್ರ ಕುಣಿಂದ ಮಾಗಧ ಕೈಕೇಯ ಕಾಂಬೋಜ ವಿದೇಹ ಚೇದಿ ಗಾಂಧಾರ ಕಾಶಿ ಮುಂತಾದ ರಾಜರು ಮೈಯೆಲ್ಲ ಗಾಯಗೊಂಡು ನಾಶ ಹೊಂದಿದರು.
ಸೂತಾದ್ಯೇಮಂ ಪಶ್ಯ ಭೀಮಪ್ರಮುಕ್ತೈಃ
ಸಂಭಿಂದದ್ಭಿಃ ಪಾರ್ಥಿವಾನಾಶುವೇಗೈಃ |
ಉಗ್ರೈರ್ಬಾಣೈರಾಹವಂ ಘೋರರೂಪಂ
ನಷ್ಟಾದಿತ್ಯಂ ಮೃತ್ಯುಲೋಕೇನ ತುಲ್ಯಮ್ ॥26॥
ಸಾರಥಿ, ಈಗ ನೋಡು, ಭೀಮನು ಎಸೆವ ಬಲುವೇಗವುಳ್ಳ ಉಗ್ರವಾದ ಬಾಣಗಳು ರಾಜರನ್ನು ಸೀಳುತ್ತ ಈ ರಣರಂಗವನ್ನು ಸೂರ್ಯದರ್ಶನವಿಲ್ಲದಂತೆ ಮೃತ್ಯುಲೋಕಕ್ಕೆ ತುಲ್ಯವಾಗುವಂತೆ ಘೋರಸ್ವರೂಪವನ್ನಾಗಿ ಮಾಡುತ್ತವೆ.
ಅದ್ಯೈವ ತದ್ವಿದಿತಂ ಪಾರ್ಥಿವಾನಾಂ
ಭವಿಷ್ಯತಿ ಹ್ಯಾಕುಮಾರಂ ಚ ಸೂತ |
ನಿಮಗ್ನೋ ವಾ ಸಮರೇ ಭೀಮಸೇನ
ಏಕಃ ಕುರೂನ್ ವಾ ಸಮರೇ ವಿಜೇತಾ ॥27॥
ಸಾರಥಿ, ಭೀಮಸೇನನು ರಣದಲ್ಲಿ ಮುಳುಗಿಹೋಗುವನೆ ಅಥವಾ ಒಬ್ಬನೆ ರಣದಲ್ಲಿ ಕೌರವರನ್ನು ಗೆಲ್ಲುವನೆ ಎಂಬುದು ರಾಜರಿಗೆ, ಮಕ್ಕಳವರೆಗಿನ ಅವರ ಎಲ್ಲ ಬಂಧುಗಳಿಗೆ ಇಂದೇ ತಿಳಿಯುತ್ತದೆ.
ಸರ್ವೇ ಸಂಖೇ ಕುರವೋ ನಿಷ್ಪತಂತು
ಮಾಂ ವಾ ಲೋಕಾಃ ಕೀರ್ತಯಂತ್ವಾಕುಮಾರಮ್ |
ಸರ್ವಾನೇಕಸ್ತಾನಹಂ ಪಾತಯಿಷ್ಯೇ
ತೇ ವಾ ಸರ್ವೇ ಭೀಮಸೇನಂ ತುದಂತು ॥28॥
ಎಲ್ಲ ಕೌರವರೂ ರಣದಲ್ಲಿ ಕರ್ಣನ ನಾಯಕತ್ವದಲ್ಲಿ ನನ್ನ ಮೇಲೇ ಎರಗುವರೊ ಅಥವಾ ಚಿಕ್ಕಮಕ್ಕಳವರೆಗೂ ಎಲ್ಲ ಜನರೂ ಅಜೇಯರಾಗಿ ನಿಲ್ಲುವ ನನ್ನನ್ನು ಹೊಗಳುವರೊ, ಎಲ್ಲರನ್ನೂ ಈಗ ನಾನೊಬ್ಬನೇ ನೆಲದ ಮೇಲೆ ಒರಗಿಸುವೆನೊ ಇಲ್ಲವೆ, ಅವರೆಲ್ಲರೂ ಭೀಮಸೇನನನ್ನೊಬ್ಬನನ್ನು ಒರೆಸುವರೊ, ಎಂಬುದು ಇಂದೇ ತಿಳಿಯುತ್ತದೆ.
ಆಶಾಸ್ತಾರಃ ಕರ್ಮ ಚಾತ್ಯದ್ಭುತಂ ಮೇ
ತೇ ವೈ ದೇವಾಃ ಸಫಲಂ ಸಾಧಯಂತು |
ಆಯಾತ್ವಿಹಾದ್ಯಾರ್ಜುನಃ ಶತ್ರುಘಾತೀ
ಶಕ್ರಸ್ತೂರ್ಣಂ ಯಜ್ಞ ಇವೋಪಹೂತಃ ॥29॥
ನನ್ನಿಂದ ನಡೆಯುವ ಅತ್ಯದ್ಭುತವಾದ ಕರ್ಮವನ್ನು ಬಯಸುವ ದೇವತೆಗಳು ತಮ್ಮ ಆ ಬಯಕೆಯನ್ನು ಸಫಲಗೊಳಿಸಿಕೊಳ್ಳಲಿ. ಯಜ್ಞದಲ್ಲಿ ಆಹುತಿ ಸ್ವೀಕರಿಸಲು ಆಹ್ವಾನ ನೀಡಿದಾಗ ಇಂದ್ರನು ಬೇಗ ಬರುವಂತೆ ಶತ್ರುನಾಶಕನಾದ ಅರ್ಜುನನು ಇಲ್ಲಿಗೆ ಬರಲಿ, ಕರ್ಣಸಂಹಾರವನ್ನು ಮಾಡಲಿ.
ಈಕ್ಷಸ್ವೈತಾಂ ಭಾರತೀಂ ದೀರ್ಯಮಾಣಾ-
ಮೇತೇ ಕಸ್ಮಾದ್ ವಿದ್ರವಂತೇ ನರೇಂದ್ರಾಃ |
ವ್ಯಕ್ತಂ ಧೀಮಾನ್ ಸವ್ಯಸಾಚೀ ನರಾಗ್ರ್ಯಃ
ಸೈನ್ಯಂ ಹ್ಯೇತಚ್ಛಾದಯತ್ಯಾಶು ಬಾಣೈಃ ॥30॥
ಈ ಕೌರವಸೈನ್ಯವು ನಾಶವಾಗುತ್ತಿರುವುದನ್ನು ನೋಡು. ಈ ರಾಜರು ಏಕೆ ಪಲಾಯನಗೈಯುತ್ತಿದ್ದಾರೆ? ಧೀಮಂತ ನರೋತ್ತಮ ಸವ್ಯಸಾಚಿಯೆ ಈ ಸೈನ್ಯವನ್ನು ವೇಗವಾಗಿ ಬಾಣಗಳಿಂದ ಮುಚ್ಚುತ್ತಿದ್ದಾನೆ, ಇದು ನಿಶ್ಚಯ.
ಪಶ್ಯ ಧ್ವಜಾಂಶ್ಚ ದ್ರವತೋ ವಿಶೋಕ
ನಾಗಾನ್ ಹಯಾನ್ ಪತ್ತಿಸಂಘಾಂಶ್ಚ ಸಂಖೇ |
ರಥಾನ್ ವಿಶೀರ್ಣಾನ್ ಶರಶಕ್ತಿತಾಡಿತಾನ್
ಪಶ್ಯಸ್ವೈತಾನ್ ರಥಿನಶ್ಚೈವ ಸೂತ ॥31॥
ವಿಶೋಕ, ನೋಡು, ರಣದಲ್ಲಿ ಧಾವಿಸುತ್ತಿರುವ ಧ್ವಜ ಗಜ ಅಶ್ವ ಪದಾತಿ ಸಮೂಹಗಳನ್ನು , ಪುಡಿಯಾದ ರಥಗಳನ್ನು, ಬಾಣ ಶಕ್ತ್ಯಾಯುಧಗಳಿಂದ ಹೊಡೆಸಿಕೊಂಡ ಈ ರಥಿಕರನ್ನು ನೋಡು.
ಆದೀರ್ಯತೇ ಕೌರವೀ ಚಾಪ್ಯಭೀಕ್ಷ್ಣಂ
ಸೇನಾ ಹ್ಯಸೌ ಸುಭೃಶಂ ಹನ್ಯಮಾನಾ |
ಧನಂಜಯಸ್ಯಾಶನಿತುಲ್ಯವೇಗೈ-

ಗ್ರಸ್ತಾ ಶರೈರ್ಬರ್ಹಿಸುವರ್ಣವಾಜೈಃ ॥32॥
ಈ ಕೌರವಸೈನ್ಯವು ಸುವರ್ಣಮಯವಾದ ನವಿಲಿನ ಪುಕ್ಕದಿಂದ ಕೂಡಿದ ಮಿಂಚಿನಂತೆ ವೇಗವುಳ್ಳ ಅರ್ಜುನನ ಬಾಣಗಳಿಗೆ ತುತ್ತಾಗಿ ಪುನಃಪುನಃ ಬಹಳವಾಗಿ ಹೊಡೆಸಿಕೊಂಡು ನಾಶವಾಗುತ್ತಿವೆ.
ಏತೇ ದ್ರವಂತಿ ಸ್ಮ ರಥಾಶ್ವನಾಗಾಃ
ಪದಾತಿಸಂಘಾನವಮರ್ದಯಂತಃ |
ಸಮ್ಮುಹ್ಯಮಾನಾಃ ಕೌರವಾಃ ಸರ್ವ ಏವ
ದ್ರವಂತಿ ನಾಗಾ ಇವ ದಾವಭೀತಾಃ |
ಹಾಹಾಕೃತಾಶ್ಚೈವ ರಣೇ ವಿಶೋಕ
ಮುಂಚಂತಿ ನಾದಾನ್ ವಿಪುಲಾನ್ ಗಜೇಂದ್ರಾಃ ॥33॥
ಈ ರಥ ಅಶ್ವ ಗಜಸೈನ್ಯಗಳು ಪದಾತಿಸಮೂಹಗಳನ್ನು ಹೊಸಕುತ್ತ ಧಾವಿಸುತ್ತಿವೆ. ಕೌರವರೆಲ್ಲರೂ ದಿಗ್ಭ್ರಮೆಗೊಂಡು ಕಾಳ್ಗಿಚ್ಚಿಗೆ ಹೆದರಿದ ಆನೆಗಳಂತೆ ರಣದಲ್ಲಿ ಹಾಹಾಕಾರ ಮಾಡುತ್ತ ಧಾವಿಸುತ್ತಿದ್ದಾರೆ. ಮದ್ದಾನೆಗಳು ಕೂಡ ಬಹಳ ಆರ್ತನಾದ ಮಾಡುತ್ತಿವೆ.
ವಿಶೋಕಃ
ಕಿಂ ಭೀಮ ನೈನಂ ತ್ವಮಿಹಾಶೃಣೋಷಿ
ವಿಸ್ಫಾರಿತಂ ಗಾಂಡಿವಸ್ಯಾತಿಘೋರಮ್ |
ಕ್ರುದ್ಧೇನ ಪಾರ್ಥೇನ ವಿಕೃಷ್ಯತೋಽದ್ಯ
ಕಚ್ಚಿನ್ನೇಮೌ ತವ ಕರ್ಣೌ ವಿನಷ್ಟೌ ॥34॥
ವಿಶೋಕನು ನುಡಿದ– ಭೀಮ, ನೀನು ಈಗ ಕ್ರುದ್ಧನಾದ ಅರ್ಜುನನು ಸೆಳೆಯುವ ಗಾಂಡೀವದ ಅತಿಘೋರವಾದ ಠೇಂಕಾರವನ್ನು ಕೇಳುತ್ತಿಲ್ಲವೇನು? ನಿನ್ನ ಈ ಕಿವಿಗಳು ಕಿವುಡಾಗಿಲ್ಲ ತಾನೆ?
ಸರ್ವೇ ಕಾಮಾಃ ಪಾಂಡವ ತೇ ಸಮೃದ್ಧಾಃ
ಕಪಿಧ್ವಜೋ ದೃಶ್ಯತೇ ಹಸ್ತಿಸೈನ್ಯೇ |
ನೀಲಾದ್‌ಘನಾದ್ ಉತ್ಪತಂತೀವ ವಿದ್ಯುತ್
ತಥಾ ಪಶ್ಯ ವಿಸ್ಫುರದ್ ವೈ ಧನುಸ್ತತ್ ॥35॥
ಭೀಮ, ನಿನ್ನ ಕಾಮನೆಗಳು ಸಮೃದ್ಧವಾಗಿ ಕೈಗೂಡಿವೆ. ಗಜಸೈನ್ಯದಲ್ಲಿ ಅರ್ಜುನನ ಕಪಿಧ್ವಜ ಕಾಣಿಸುತ್ತಿದೆ. ಕಾರ್ಮೋಡದಿಂದ ಒಗೆಯುವ ಮಿಂಚಿನಂತೆ ಅವನ ಆ ಧನುಸ್ಸು ಕೂಡ ಹೊಳೆಯುತ್ತಿದೆ, ನೋಡು.
ಕಪಿರ್ಹ್ಯಸೌ ವೀಕ್ಷತೇ ಸರ್ವತೋ ವೈ
ಧ್ವಜಾಗ್ರಮಾರುಹ್ಯ ಧನಂಜಯಸ್ಯ |
ವಿತ್ರಾಸಯನ್ ದ್ವಿಪಸಂಘಾನ್ ವಿಮರ್ದೇ
ಬಿಭೇಮ್ಯಸ್ಮಾದಾತ್ಮನೈವಾಭಿವೀಕ್ಷ್ಯ ॥36॥
ಅರ್ಜುನನ ಧ್ವಜಾಗ್ರದಲ್ಲಿ ವಾನರ ಕುಳಿತು, ಎಲ್ಲ ಕಡೆಗೆ ದಿಟ್ಟಿಸುತ್ತಿದ್ದಾನೆ, ಯುದ್ಧದಲ್ಲಿ ಆನೆಸೈನ್ಯಗಳ ಸಮೂಹಗಳನ್ನು ಭಯಪಡಿಸುತ್ತಿದ್ದಾನೆ. ಅವನನ್ನು ನೋಡಿ ಸ್ವತಃ ನಾನೂ ಭಯಪಡುತ್ತೇನೆ.
ವಿಭ್ರಾಜತೇ ಚಾತಿಮಾತ್ರಂ ಕಿರೀಟಂ
ವಿಚಿತ್ರಮೇತಚ್ಚ ಧನಂಜಯಸ್ಯ |
ದಿವಾಕರಾಭೋ ಮಣಿರೇಷ ದಿವ್ಯೋ
ವಿಭ್ರಾಜತೇ ಚೈವ ಕಿರೀಟಸಂಸ್ಥಃ ॥37॥
ಅರ್ಜುನನ ಈ ಕಿರೀಟ ವಿಚಿತ್ರವಾಗಿದೆ. ಎಲ್ಲಕ್ಕಿಂತ ಅತಿಯಾಗಿ ಪ್ರಕಾಶಿಸುತ್ತಿದೆ. ಕಿರೀಟದಲ್ಲಿರುವ ಈ ದಿವ್ಯ ಮಣಿಯೂ ಸಹ ಸೂರ್ಯನಂತೆ ಹೊಳೆಯುತ್ತಿದೆ.
ಪಾರ್ಶ್ವೇ ಭೀಮಂ ಪಾಂಡುರಾಭ್ರಪ್ರಕಾಶಂ
ಪಶ್ಯೇಮಂ ತ್ವಂ ದೇವದತ್ತಂ ಸುಘೋಷಮ್ |
ಅಭೀಶುಹಸ್ತಸ್ಯ ರಥಾಂಗಪಾಣೇ-
ರ್ವಿಗಾಹಮಾನಸ್ಯ ಚಮೂಂ ಪರೇಷಾಮ್ ॥38॥
ರವಿಪ್ರಭಂ ವಜ್ರನಾಭಂ ಕ್ಷುರಾಂತಂ
ಪಾರ್ಶ್ವೇ ಸ್ಥಿತಂ ಪಶ್ಯ ಜನಾರ್ದನಸ್ಯ |
ಚಕ್ರಂ ಯಶೋ ವರ್ಧಯದೇತದಸ್ಯ
ಸದಾರ್ಚಿತಂ ಯದುಭಿಃ ಪಶ್ಯ ವೀರ ॥39॥
ವೀರಭೀಮನೆ, ಬಿಳಿಮೋಡದಂತೆ ಹೊಳೆವ ಮಂಗಳಕರ ಧ್ವನಿವುಳ್ಳ ಶತ್ರು ಭಯಂಕರವಾದ ಈ ದೇವದತ್ತ ಶಂಖವನ್ನು ಅರ್ಜುನನ ಬಳಿಯಲ್ಲಿ ನೋಡು. ಕುದುರೆಯ ಲಗಾಮು ಹಿಡಿದು ಶತ್ರುಸೈನ್ಯವನ್ನು ಪ್ರವೇಶಿಸುವ ಚಕ್ರಪಾಣಿಯಾದ ಶ್ರೀಕೃಷ್ಣನ ಪಾರ್ಶ್ವದಲ್ಲಿ ಮಧ್ಯಭಾಗ ವಜ್ರದಂತೆಯೂ ಅಲುಗು ಕತ್ತಿಯಂತೆಯೂ ಇರುವ ಸೂರ್ಯನಂತೆ ಹೊಳೆವ ಚಕ್ರವಿರುವುದನ್ನೂ ನೋಡು. ಅದು ಕೃಷ್ಣನ ಕೀರ್ತಿಯನ್ನು ಹೆಚ್ಚಿಸುವಂಥದ್ದು. ಯಾದವರು ಸದಾ ಪೂಜಿಸುವಂಥದ್ದು.
ಮಹಾದ್ವಿಪಾನಾಂ ಸರಳದ್ರುಮೋಪಮಾಃ
ಕರಾ ನಿಕೃತ್ತಾಃ ಪ್ರಪತನ್ತ್ಯಮೀ ಕ್ಷುರೈಃ |

ಕಿರೀಟಿನಾನೇನ ಪುನಃ ಸಸಾದಿನಃ
ಶರೈರ್ನಿಕೃತ್ತಾಃ ಕುಲಿಶೈರಿವಾದ್ರಯಃ ॥40॥
ಮಹಾಗಜಗಳ ದೇವದಾರು ವೃಕ್ಷಸಮಾನವಾದ ಸೊಂಡಿಲುಗಳು ಅರ್ಜುನನ ಬಾಣಗಳಿಂದ ಕಡಿದು ಬೀಳುತ್ತಿವೆ. ಆ ಗಜಗಳೂ ಕೂಡ ಆರೋಹಿಗಳ ಸಮೇತವಾಗಿ, ವಜ್ರಾಘಾತಗಳಿಂದ ಮುರಿದು ಬೀಳುವ ಬೆಟ್ಟಗಳಂತೆ, ಅರ್ಜುನನ ಬಾಣಗಳಿಂದ ಕಡಿದು ಬೀಳುತ್ತಿವೆ.
ತಥೈವ ಕೃಷ್ಣಸ್ಯ ಚ ಪಾಂಚಜನ್ಯಂ
ಮಹಾರ್ಹಮೇತದ್ ದ್ವಿಜರಾಜವರ್ಣಮ್ ।
ಕೌಂತೇಯ ಪಶ್ಯೋರಸಿ ಕೌಸ್ತುಭಂ ಚ
ಜಾಜ್ವಲ್ಯಮಾನಾಂ ವಿಜಯಸ್ರಜಂ ಚ ॥41॥
ಭೀಮಸೇನ, ಶ್ರೀಕೃಷ್ಣನ ಪಾಂಚಜನ್ಯ ಶಂಖವನ್ನೂ ನೋಡು. ನಕ್ಷತ್ರರಾಜನಾದ ಚಂದ್ರನ ಬಣ್ಣದಿಂದೊಪ್ಪುವ ಬಹುಮೂಲ್ಯವಾದ ಶಂಖ ಅದು. ಹಾಗೇ ಕೃಷ್ಣನ ಎದೆಯಲ್ಲಿ ಕೌಸ್ತುಭಮಣಿಯನ್ನೂ ಜಾಜ್ವಲ್ಯಮಾನವಾದ ವೈಜಯಂತೀಮಾಲೆ ಯನ್ನೂ ನೋಡು. ಶ್ರೀಕೃಷ್ಣ ತನ್ನ ಪ್ರತಿಜ್ಞೆಯಂತೆ ಚಕ್ರದಿಂದ ಯುದ್ಧ ಮಾಡದಿದ್ದರೂ ತನ್ನ ಲಕ್ಷಣವಾದ ಆಯುಧ, ಆಭರಣಗಳನ್ನು ಪರಿತ್ಯಾಗ ಮಾಡಿರಲಿಲ್ಲ. ಪರಿತ್ಯಾಗ ಮಾಡುವುದಾಗಿ ಏನೂ ಪ್ರತಿಜ್ಞೆ ಮಾಡಿರಲಿಲ್ಲ.
ಧ್ರುವಂ ರಥಾಗ್ರ್ಯಃ ಸಮುಪೈತಿ ಪಾರ್ಥೋ
ವಿದ್ರಾವಯನ್ ಸೈನ್ಯಮಿದಂ ಪರೇಷಾಮ್ ।
ಸಿತಾಭ್ರವರ್ಣೈ ರಜತಪ್ರಕಾಶೈ-
ರ್ಭಲ್ಲೈರ್ಮಹಾರ್ಹೈ ರಥಿನಾಂ ವರಿಷ್ಠಃ ॥42॥
ನಿಶ್ಚಯವಾಗಿ ಮಹಾರಥನಾದ ಪಾರ್ಥನೆ ಬರುತ್ತಿದ್ದಾನೆ. ಈ ಶತ್ರುಸೈನ್ಯವನ್ನು ಹಿಮ್ಮೆಟ್ಟಿಸುತ್ತ ಬಿಳಿ ಮೋಡಗಳ ಬಣ್ಣದ, ಬೆಳ್ಳಿಯಂತೆ ಬೆಳಗುವ, ಬಹುಮೂಲ್ಯದ ಭಲ್ಲೆಗಳೊಂದಿಗೆ ರಥಿಕರಲ್ಲಿ ಶ್ರೇಷ್ಠನಾದ ಅರ್ಜುನ ಬರುತ್ತಿದ್ದಾನೆ.
ತಥಾ ಹಯಾಃ ಪತ್ತಿಗಣಾಶ್ಚ ಸಾಯಕೈ-
ರ್ವಿದಾರಿತಾಃ ಪಶ್ಯ ಪತಂತ್ಯಮೀ ಯಥಾ ।
ತವಾನುಜೇನಾಮರರಾಜತೇಜಸಾ
ಮಹಾವನಾನೀವ ಸುಪರ್ಣವಾಯುನಾ ॥43॥
ಈ ಅಶ್ವಸೈನ್ಯ ಪದಾತಿಸೈನ್ಯಸಮೂಹಗಳೂ ಕೂಡ ಇಂದ್ರಸಮಾನ ಪರಾಕ್ರಮಿಯಾದ ನಿನ್ನ ತಮ್ಮನ ಬಾಣಗಳಿಂದ ಛಿನ್ನಭಿನ್ನವಾಗಿ ಗರುಡನ ರೆಕ್ಕೆಯ ಗಾಳಿಯಿಂದ ಮಹಾವನಗಳು ನೆಲಸಮವಾಗುವಂತೆ ರಣರಂಗದಲ್ಲಿ ಬೀಳುತ್ತಿವೆ, ನೋಡು.
ಚತುಃಶತಾನ್ ಪಶ್ಯ ರಥಾನಿಮಾನ್ ಹತಾನ್
ಸವಾಜಿಸೂತಾನ್ ಸಮರೇ ಕಿರೀಟಿನಾ ।
ಮಹೇಷುಭಿಃ ಸಪ್ತಶತಾನಿ ದಂತಿನಾಂ
ಪದಾತಿಸಾದೀಂಶ್ಚ ಹತಾನನೇಕಶಃ ॥44॥
ಈ ನಾನ್ನೂರು ರಥಗಳು ಕುದುರೆ, ಸಾರಥಿಗಳೊಂದಿಗೆ ರಣದಲ್ಲಿ ಅರ್ಜುನನಿಂದ ಹತರಾಗಿರುವುದನ್ನು ನೋಡು, ಭೀಮ. ದೊಡ್ಡ ಬಾಣಗಳಿಂದ ಏಳುನೂರು ಗಜಸೈನಿಕರನ್ನೂ ಅನೇಕ ಪದಾತಿ ಅಶ್ವಸೈನಿಕರನ್ನೂ ಅರ್ಜುನ ಸಂಹರಿಸಿದ್ದಾನೆ.
ಅಯಂ ಸಮಭ್ಯೇತಿ ತವಾಂತಿಕಂ ಬಲೀ
ನಿಘ್ನನ್ ಕುರೂನ್ ಕೇತುರಿವೊತ್ಥಿತೋಽರ್ಜುನಃ ।
ಸಮೃದ್ಧಕಾಮೋಸಿ ಹತಾಸ್ತವಾರಯೋಃ
ಬಲಂ ತವಾಯುಶ್ಚ ಚಿರಾಯ ವರ್ಧತಾಮ್ ॥45॥
ಕೌರವರಿಗೆ ಧೂಮಕೇತುವಿನಂತೆ ಉದಿಸಿದ ಬಲಿಷ್ಠನಾದ ಅರ್ಜುನನು ಕೌರವರನ್ನು ಸಂಹರಿಸುತ್ತ ನಿನ್ನ ಬಳಿಗೆ ಬರುತ್ತಿದ್ದಾನೆ. ನಿನ್ನ ಅಭಿಲಾಷೆಗಳು ಸಮೃದ್ಧವಾಗಿಯೆ ಪೂರೈಸಿವೆ. ನಿನ್ನ ಶತ್ರುಗಳು ಹತರಾಗಿದ್ದಾರೆ. ನಿನ್ನ ಬಲ, ಆಯುಷ್ಯಗಳು ಬಹುಕಾಲ ವರ್ಧಿಸುತ್ತಿರಲಿ.
ಭೀಮಃ
ದದಾಮಿ ತೇ ಗ್ರಾಮವರಾಂಶ್ಚತುರ್ದಶ
ಪ್ರಿಯಾಖ್ಯಾನೇ ಸಾರಥೇ ಸುಪ್ರಸನ್ನಃ ।
ದಾಸೀಶತಂ ಚಾಪಿ ರಥಾಂಶ್ಚ ವಿಂಶತಿಂ
ಯದರ್ಜುನಂ ವೇದಯಸೇ ವಿಶೋಕ ॥46॥
ಭೀಮಸೇನ ನುಡಿದ– ಸಾರಥಿಯೆ, ನಿನಗೆ ನಾನು ಹದಿನಾಲ್ಕು ಗ್ರಾಮಗಳನ್ನು ಬಹುಮಾನವಾಗಿ ನೀಡುತ್ತೇನೆ. ನನಗೆ ಪ್ರಿಯವಾದುದನ್ನೇ ನೀನು ಹೇಳಿರುವೆ. ನಾನು ಪ್ರಸನ್ನನಾಗಿದ್ದೇನೆ. ವಿಶೋಕ, ಅರ್ಜುನ ಬರುತ್ತಿರುವುದನ್ನು ನನಗೆ ತಿಳಿಸಿದೆಯಾದ್ದರಿಂದ ನಿನಗೆ ನೂರು ದಾಸಿಯರನ್ನೂ ಇಪ್ಪತ್ತು ರಥಗಳನ್ನೂ ನೀಡುತ್ತೇನೆ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಭೀಮವಿಶೋಕಸಂವಾದೇ ಅರ್ಜುನಾಗಮನಪ್ರಶಂಸನಂ ನಾಮ ತ್ರಿಸಪ್ತತಿತಮೋಧ್ಯಾಯಃ ॥73॥

ಮಹಾಭಾರತತಾತ್ಪರ್ಯನಿರ್ಣಯ
ತದಾಸದತ್ ತಂ ಶಕುನಿಃ ಸಸೈನ್ಯೋ

ದುರ್ಯೋಧನಸ್ಯಾವರಜೈರುಪೇತಃ |
ತಂ ಭೀಮಸೇನೋ ವಿರಥಂ ನಿರಾಯುಧಂ
ವಿಧಾಯ ಬಾಣೈರ್ಭುವಿ ಚ ನ್ಯಪಾತಯತ್ ॥ 140 ॥
ಆಗ ಶಕುನಿ ದುರ್ಯೋಧನನ ತಮ್ಮಂದಿರೊಡಗೂಡಿ ಸೈನ್ಯಸಮೇತನಾಗಿ ಭೀಮನಿಗೆ ಎದುರಾದ. ಭೀಮ ಅವನನ್ನು ಬಾಣಗಳಿಂದ ವಿರಥನನ್ನಾಗಿ ನಿರಾಯುಧನನ್ನಾಗಿ ಮಾಡಿ ನೆಲದ ಮೇಲೆ ಕೆಡವಿದ.
ನ ಜಘ್ನಿವಾಂಸ್ತಂ ಸಹದೇವಭಾಗಂ
ಪ್ರಕಲ್ಪಿತಂ ಸ್ವೇನ ತದಾಕ್ಷಗೋಷ್ಠ್ಯಾಮ್ |
ತಂ ಮೂರ್ಚ್ಛಿತಂ ಶ್ವಾಸಮಾತ್ರಾವಶೇಷಂ
ದುರ್ಯೋಧನಃ ಸ್ವರಥೇನಾಪನಿನ್ಯೇ ॥ 141 ॥
ಭೀಮ ಶಕುನಿಯನ್ನು ಕೊಲ್ಲಲಿಲ್ಲ. ಏಕೆಂದರೆ ದ್ಯೂತಸಭೆಯಲ್ಲಿ ಶಕುನಿಯ ವಧೆ ಸಹದೇವನ ಪಾಲಿಗೆ ಎಂದು ತಾನೆ ವ್ಯವಸ್ಥೆ ಮಾಡಿದ್ದ. ಅದರಿಂದ ಮೂರ್ಛಿತನಾಗಿ ಶ್ವಾಸ ಮಾತ್ರ ಉಳಿದಿದ್ದ ಶಕುನಿಯನ್ನು ದುರ್ಯೋಧನ ಎತ್ತಿಕೊಂಡು ತನ್ನ ರಥದಿಂದ ದೂರಕ್ಕೊಯ್ದ.
ದುರ್ಯೋಧನಸ್ಯಾವರಜಾ ದಶಾತ್ರ
ಪ್ರದುದ್ರುವುರ್ಭೀಮಸೇನಂ ವಿಹಾಯ |
ತದಾರ್ಜುನಂ ವಾಸುದೇವಂ ಚ ದೃಷ್ಟ್ವಾ
ಪ್ರೀತಃ ಶ್ರುತ್ವಾ ಧರ್ಮರಾಜಪ್ರವೃತ್ತಿಮ್ ॥ 142 ॥
ದುರ್ಯೋಧನನ ಹತ್ತು ಮಂದಿ ತಮ್ಮಂದಿರು ಭೀಮಸೇನನನ್ನು ಬಿಟ್ಟು ದೂರ ಓಡಿದರು. ಆಗ ಭೀಮ ಅರ್ಜುನನನ್ನೂ ಕೃಷ್ಣನನ್ನೂ ಕಂಡು ಧರ್ಮರಾಜನ ಕ್ಷೇಮಸಮಾಚಾರವನ್ನೂ ಕೇಳಿ ಸಂತುಷ್ಟನಾದ.

## ಎಪ್ಪತ್ತನಾಲ್ಕನೆಯ ಅಧ್ಯಾಯ

ಭೀಮ ಶಕುನಿಯನ್ನು ಮೂರ್ಛೆಗೊಳಿಸಿ, ಅವನ ವಧೆಯನ್ನು ಸಹದೇವನ ಪಾಲಿಗೆ ಬಿಟ್ಟ. ದುರ್ಯೋಧನ ಶಕುನಿಯನ್ನು ದೂರಕ್ಕೆ ಒಯ್ದ.
ಸಂಜಯಃ
ಶ್ರುತ್ವಾ ಚ ರಥನಿರ್ಘೋಷಂ ಸಿಂಹನಾದಂ ಚ ಸಂಯುಗೇ |
ಅರ್ಜುನಃ ಪ್ರಾಹ ಗೋವಿಂದಂ ಶೀಘ್ರಂ ಚೋದಯ ವಾಜಿನಃ ॥1॥
ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ– ರಣದಲ್ಲಿ ರಥಧ್ವನಿಯನ್ನೂ ಭೀಮನ ಸಿಂಹನಾದಗಳನ್ನೂ ಕೇಳಿ ಅರ್ಜುನನು ಕೃಷ್ಣನಿಗೆ ಹೇಳಿದ, `ಕುದುರೆಗಳನ್ನು ವೇಗವಾಗಿ ನಡೆಸು' ಎಂದು.
ಅರ್ಜುನಸ್ಯ ವಚಃ ಶ್ರುತ್ವಾ ಗೋವಿಂದೋಽರ್ಜುನಮಬ್ರವೀತ್ |
ಏಷ ಗಚ್ಛಾಮಿ ಸುಕ್ಷಿಪ್ರಂ ಯತ್ರ ಭೀಮೋ ವ್ಯವಸ್ಥಿತಃ ॥2॥
ಅರ್ಜುನನ ಮಾತನ್ನು ಕೇಳಿ ಗೋವಿಂದನು ಅರ್ಜುನನಿಗೆ ನುಡಿದ– `ಕರ್ಣನೊಡನೆ ಹೋರಾಡುತ್ತಿರುವ ಭೀಮನಿರುವಲ್ಲಿಗೇ ನಾನೀಗ ಬಲು ಬೇಗನೆ ಹೋಗುತ್ತಿದ್ದೇನೆ' ಎಂದು.
ಆಯಾಂತಮಶ್ವೈರ್ಹಿಮಶಂಖವರ್ಣೈಃ
ಸುವರ್ಣಮುಕ್ತಾಮಣಿಜಾಲನದ್ಧೈಃ |
ಜಂಭಂ ಜಿಘಾಂಸುಂ ಪ್ರಗೃಹೀತವಜ್ರಂ
ಜಯಾಯ ದೇವೇಂದ್ರಮಿವೋಗ್ರಮನ್ಯುಮ್ ॥3॥
ರಥಾಶ್ವಮಾತಂಗಪದಾತಿಸಂಘಾ
ಬಾಣಸ್ವನೈರ್ನೇಮಿಖುರಸ್ವನೈಶ್ಚ |
ಸನ್ನಾದಯಂತೋ ವಸುಧಾಂ ದಿಶಶ್ಚ
ಕ್ರುದ್ಧಾ ನೃಸಿಂಹಾ ಜಯಮಭ್ಯುದೀಯುಃ ॥4॥
ಹಿಮದಂತೆ ಶಂಖದಂತೆ ಬಿಳುಪಾದ ಬಂಗಾರ ಮುತ್ತು ಮಣಿಮಾಲೆಗಳಿಂದ ಅಲಂಕೃತವಾದ ಕುದುರೆಗಳಿಂದ, ಜಂಭಾಸುರನ ಸಂಹಾರಕ್ಕೆ ಬಯಸಿ ವಜ್ರಾಯುಧ ಧರಿಸಿದ ದೇವೇಂದ್ರನಂತೆ, ಉಗ್ರಕೋಪದಿಂದ ಜಯಕ್ಕಾಗಿ ಅರ್ಜುನನು ಬರುತ್ತಿದ್ದಂತೇ, ನಡುವೆ ರಥ ಅಶ್ವ ಗಜ ಪದಾತಿಸಮೂಹಗಳ ಶ್ರೇಷ್ಠ ಯೋಧರು ಬಾಣಧ್ವನಿ ರಥಚಕ್ರಧ್ವನಿ ಅಶ್ವಗಳ ಗೊರಸುಗಳ ಧ್ವನಿಗಳಿಂದ ಯುಕ್ತವಾಗಿ ಭೂಮಿ ಅಂತರಿಕ್ಷಗಳಲ್ಲಿ ಪ್ರತಿಧ್ವನಿ ಉಂಟಾಗುವಂತೆ ಮಾಡುತ್ತ ಕ್ರುದ್ಧರಾಗಿ ಆ ಅರ್ಜುನನನ್ನು ಇದಿರಿಸಿದರು.
ತೇಷಾಂ ಚ ಪಾರ್ಥಸ್ಯ ಮಹತ್ತದಾಸೀದ್
ದೇಹಾಸುಪಾಪ್ಮಕ್ಷಪಣಂ ಸುಯುದ್ಧಮ್ |
ತ್ರೈಲೋಕ್ಯಹೇತೋರಸುರೈರ್ಯಥಾಸೀದ್
ದೇವಸ್ಯ ವಿಷ್ಣೋರ್ಜಯತಾಂ ವರಸ್ಯ ॥5॥
ಮೂರ್ಲೋಕಗಳ ಪ್ರಾಪ್ತಿಗಾಗಿ ಜಯಗಳಿಸುವವರಲ್ಲಿ ಶ್ರೇಷ್ಠನಾದ ವಿಷ್ಣುದೇವನಿಗೂ ಅಸುರರಿಗೂ ನಡೆದ ಯುದ್ಧದಂತೆ, ದೇಹ ಪ್ರಾಣ ಪಾಪ ಕ್ಷಯಕಾರಿಯಾದ ಒಳ್ಳೆಯ ಮಹಾಯುದ್ಧವು ಪಾರ್ಥನಿಗೂ ಕೌರವ ಯೋಧರಿಗೂ ನಡೆಯಿತು.
ತೈರಸ್ತಮುಚ್ಚಾವಚಮಾಯುಧೌಘ-

ಮೇಕಃ ಪ್ರಚಿಚ್ಛೇದ ಕಿರೀಟಮಾಲೀ |
ಕ್ಷುರಾರ್ಧಚಂದ್ರೈರ್ನಿಶಿತೈಶ್ಚ ಬಾಣೈಃ
ಶಿರಾಂಸಿ ತೇಷಾಂ ಬಹುಧಾ ಚ ಬಾಹೂನ್ ॥6॥
ಅವರು ಎಸೆದ ದೊಡ್ಡ ಸಣ್ಣ ಆಯುಧಗಳ ಪ್ರವಾಹವನ್ನು ಅರ್ಜುನನು ಒಬ್ಬನೆ ಕ್ಷುರ, ಅರ್ಧಚಂದ್ರಗಳೆಂಬ ಹರಿತವಾದ ಬಾಣಗಳಿಂದ ಕಡಿದ. ಅವರ ಶಿರಸ್ಸು, ಬಾಹುಗಳನ್ನೂ ಬಹುವಾಗಿ ಕತ್ತರಿಸಿದ.
ಛತ್ರಾಣಿ ವಾಲವ್ಯಜನಾನಿ ಕೇತೂ-
ನಶ್ವಾನ್ ರಥಾನ್ ಪತ್ತಿಗಣಾನ್ ದ್ವಿಪಾಂಶ್ಚ |
ತೇ ಪೇತುರುರ್ವ್ಯಾಂ ಬಹುಧಾ ವಿರೂಪಾ
ವಾತಪ್ರಭಗ್ನಾನಿ ಯಥಾ ವನಾನಿ ॥7॥
ಛತ್ರಚಾಮರ ಬಾಲವ್ಯಜನಗಳನ್ನೂ ಧ್ವಜ ಅಶ್ವ ರಥಗಳನ್ನೂ ಪದಾತಿ ಸಮೂಹಗಳನ್ನೂ ಗಜಸೈನ್ಯಗಳನ್ನೂ ಅರ್ಜುನನು ಬಾಣಗಳಿಂದ ಕತ್ತರಿಸಿದ. ಬಿರುಗಾಳಿಯಿಂದ ಮುರಿದು ಬೀಳುವ ವನಗಳಂತೆ ಅವರೆಲ್ಲರೂ ಬಹುವಾಗಿ ವಿರೂಪಗೊಂಡು ರಣಭೂಮಿಯಲ್ಲಿ ಒರಗಿದರು.
ಸುವರ್ಣಜಾಲಾವಿತತಾ ಮಹಾಗಜಾಃ
ಸವೈಜಯಂತೀಧ್ವಜಯೋಧಕಲ್ಪಿತಾಃ |
ಸುವರ್ಣಪುಂಖೈರಿಷುಭಿಃ ಸಮಾಚಿತಾ-
ಶ್ಚಕಾಶಿರೇ ಪ್ರಜ್ವಲಿತಾ ಯಥಾಚಲಾಃ ॥8॥
ಬಂಗಾರದ ಮಾಲೆಗಳಿಂದ ತುಂಬಿದ, ವೈಜಯಂತೀ ಧ್ವಜ ಯೋಧರಿಂದ ಶೋಭಿತವಾದ ಮಹಾಗಜಗಳು, ಬಂಗಾರದ ಪುಕ್ಕಉಳ್ಳ ಅರ್ಜುನನ ಬಾಣಗಳು ಮೈಯೆಲ್ಲ ನಾಟಿದಾಗ, ಕಾಳ್ಗಿಚ್ಚಿನಿಂದ ಉರಿವ ಬೆಟ್ಟಗಳಂತೆ ಕಂಡುಬಂದುವು.
ವಿದಾರ್ಯ ನಾಗಾಂಶ್ಚ ರಥಾಂಶ್ಚ ವಾಜಿನಃ
ಶರೋತ್ತಮೈರ್ವಾಸವವಜ್ರಸನ್ನಿಭೈಃ |
ದ್ರುತಂ ಯಯೌ ಕರ್ಣಜಿಘಾಂಸಯಾ ತಥಾ
ಯಥಾ ಮರುತ್ವಾನ್ ಬಲಭೇದನೇ ಪುರಾ ॥9॥
ಗಜ ರಥ ಅಶ್ವ ಸೈನಿಕರನ್ನು ಇಂದ್ರನ ವಜ್ರಾಯುಧಕ್ಕೆ ಸಮವಾದ ಉತ್ತಮ ಬಾಣಗಳಿಂದ ಭೇದಿಸಿ, ಹಿಂದೆ ಬಲಾಸುರನನ್ನು ಭೇದಿಸಲು ಹೊರಟ ಇಂದ್ರನಂತೆ, ಅರ್ಜುನನು ಕರ್ಣನನ್ನು ವಧಿಸಲು ವೇಗವಾಗಿ ಮುಂದೆ ನಡೆದ.
ತತಃ ಸ ಪುರುಷವ್ಯಾಘ್ರಃ ಸೂತಸೈನ್ಯಮರಿಂದಮಃ |
ಪ್ರವಿವೇಶ ಮಹಾಬಾಹುರ್ಮಕರಃ ಸಾಗರಂ ಯಥಾ ॥10॥
ಶತ್ರುನಾಶಕನಾದ ಮಹಾಬಾಹು ಪುರುಷಶ್ರೇಷ್ಠನಾದ ಅರ್ಜುನನು ಕರ್ಣನ ಸೈನ್ಯವನ್ನು, ಸಾಗರವನ್ನು ಮೊಸಳೆಯಂತೆ, ಪ್ರವೇಶಿಸಿದ.
ತಂ ದೃಷ್ಟ್ವಾ ತಾವಕಾ ರಾಜನ್ ರಥಪತ್ತಿಸಮನ್ವಿತಾಃ |
ಗಜಾಶ್ವಸಾದಿಬಹುಲಾಃ ಪಾಂಡವಂ ಸಮುಪಾದ್ರವನ್ ॥11॥
ರಾಜನೆ, ಅರ್ಜುನನನ್ನು ನೋಡಿ ರಥಪದಾತಿಯುಕ್ತವಾದ ಗಜ ಅಶ್ವಯೋಧರಿಂದ ತುಂಬಿದ್ದ ನಿನ್ನ ಸೈನಿಕರು ಅವನನ್ನು ಆಕ್ರಮಿಸಿದರು.
ತತ್ರಾಭಿದ್ರವತಾಂ ಪಾರ್ಥಮಾರಾವಃ ಸುಮಹಾನಭೂತ್ |
ಸಾಗರಸ್ಯೇವ ಮತ್ತಸ್ಯ ಯಥಾ ಸ್ಯಾತ್ ಸಲಿಲಸ್ವನಃ ॥12॥
ಅರ್ಜುನನನ್ನು ಆಕ್ರಮಿಸುವಾಗ ನಿನ್ನ ಸೈನಿಕರ ಗರ್ಜನೆ ಕ್ಷುಬ್ಧವಾದ ಸಾಗರ ಜಲದ ಭೋರ್ಗರೆವ ಶಬ್ದದಂತೆ ಬಲು ದೊಡ್ಡದಾಗಿತ್ತು.
ತೇ ತು ತಂ ಪುರುಷವ್ಯಾಘ್ರಂ ವ್ಯಾಘ್ರಾ ಇವ ಮಹಾರಥಾಃ |
ಅಭ್ಯದ್ರವಂತ ಸಂಗ್ರಾಮೇ ತ್ಯಕ್ತ್ವಾ ಪ್ರಾಣಕೃತಂ ಭಯಮ್ ॥13॥
ಪುರುಷಶ್ರೇಷ್ಠನಾದ ಅರ್ಜುನನ ಬಳಿಗೆ ಮಹಾರಥರು ಪ್ರಾಣಭಯವನ್ನು ಬಿಟ್ಟು ಹುಲಿಗಳಂತೆ ಮೇಲೇರಿ ಬಂದರು.
ತೇಷಾಮಾಪತತಾಂ ತತ್ರ ಶರವರ್ಷಾಣಿ ಮುಂಚತಾಮ್ |
ಅರ್ಜುನೋ ವ್ಯಧಮತ್ ಸೈನ್ಯಂ ಮಹಾವಾತೋ ಘನಾನಿವ ॥14॥
ಬಾಣಗಳ ಮಳೆ ಸುರಿಸುತ್ತ ತನ್ನ ಮೇಲೇರಿ ಬರುತ್ತಿದ್ದ ಆ ಶತ್ರುಗಳ ಸೈನ್ಯವನ್ನು ಮೋಡಗಳನ್ನು ಬಿರುಗಾಳಿಯಂತೆ ಅರ್ಜುನನು ಚದುರಿಸಿದ.
ತೇಽರ್ಜುನಂ ಸಹಿತಾ ಭೂತ್ವಾ ರಥವಂಶೈಃ ಪ್ರಹಾರಿಣಃ |
ಅಭಿಯಾಯ ಮಹೇಷ್ವಾಸಾ ವಿವ್ಯಧುರ್ನಿಶಿತೈಃ ಶರೈಃ ॥15॥
ಮಹಾಬಿಲ್ಲಾಳುಗಳಾದ ಅವರೆಲ್ಲರೂ ಪುನಃ ಒಟ್ಟಾಗಿ ರಥಸಮೂಹಗಳಿಂದ ಬಾಣಪ್ರಹಾರ ಮಾಡುತ್ತ ಇದಿರಿಗೆ ಬಂದು ಹರಿತವಾದ ಬಾಣಗಳಿಂದ ಅರ್ಜುನನನ್ನು ಹೊಡೆದರು.
ತತೋಽರ್ಜುನಃ ಸಹಸ್ರಾಣಿ ರಥವಾರಣವಾಜಿನಾಮ್ |
ಪ್ರೇಷಯಾಮಾಸ ವಿಶಿಖೈರ್ಯಮಸ್ಯ ಸದನಂ ಪ್ರತಿ ॥16॥
ಆಗ ಅರ್ಜುನನು ಸಾವಿರಾರು ರಥ ಗಜ ಅಶ್ವಗಳನ್ನು ಬಾಣಗಳಿಂದ ಯಮಸದನಕ್ಕೆ ಅಟ್ಟಿದ.
ತೇ ವಧ್ಯಮಾನಾಃ ಸಮರೇ ಪಾರ್ಥಚಾಪಚ್ಯುತೈಃ ಶರೈಃ |
ತತ್ರ ತತ್ರ ಸ್ಮ ಲೀಯಂತೇ ಭಯೇ ಜಾತೇ ಮಹಾರಥಾಃ ॥17॥

ಮಹಾರಥಿಕರಿಗೆ ಈಗ ಭಯಉಂಟಾದ್ದರಿಂದ ರಣದಲ್ಲಿ ಪಾರ್ಥನ ಧನುಸ್ಸಿ ನಿಂದ ಹೊರಟ ಬಾಣಗಳಿಂದ ಹೊಡೆಸಿಕೊಳ್ಳುತ್ತಿದ್ದಂತೇ ಅಲ್ಲಲ್ಲಿ ಅಡಗಿದರು.
ತೇಷಾಂ ಚತುಃಶತಾನ್ ವೀರಾನ್ ಯತಮಾನಾನ್ ಮಹಾರಥಾನ್ |
ಅರ್ಜುನೋ ನಿಶಿತೈರ್ಬಾಣೈರನಯದ್ ಯಮಸಾದನಮ್ ||18||
ಅವರಲ್ಲಿ ಇನ್ನೂ ನಿಂತು ಯುದ್ದ ಮಾಡುತ್ತಿದ್ದ ನಾನ್ನೂರು ಮಹಾರಥರನ್ನು ಅರ್ಜುನನು ಹರಿತವಾದ ಬಾಣಗಳಿಂದ ಯಮಸದನಕ್ಕೆ ಕಳಿಸಿದ.
ತೇ ವಧ್ಯಮಾನಾಃ ಸಮರೇ ನಾನಾಲಿಂಗೈಃ ಶಿತೈಃ ಶರೈಃ |
ಅರ್ಜುನಂ ಸಮಭಿತ್ಯಜ್ಯ ದುದ್ರುವುರ್ವೈ ದಿಶೋ ಭಯಾತ್ ||19||
ಅರ್ಜುನನು ಬೇರೆಬೇರೆ ಬಗೆಯ ಹರಿತವಾದ ಬಾಣಗಳಿಂದ ಹೊಡೆಯು ವಾಗ ಅವರು ಭಯದಿಂದ ಅವನನ್ನು ಬಿಟ್ಟು ದಿಕ್ಕುಗಳಿಗೆ ಓಡಿದರು.
ತೇಷಾಂ ಶಬ್ದೋ ಮಹಾನಾಸೀದ್ ದ್ರವತಾಂ ವಾಹಿನೀಮುಖೇ |
ಮಹೌಘಸ್ಯೇವ ಭದ್ರಸ್ಯ ಗಿರಿಮಾಸಾದ್ಯ ದೀರ್ಯತಃ ||20||
ಅವರು ಓಡುವಾಗ ಸೈನ್ಯದ ಮುಂಭಾಗದಲ್ಲಿ; ಬೆಟ್ಟದ ಬುಡಕ್ಕೆ ವೇಗವಾಗಿ ಬಂದು ಒಡೆಯುವ ದೊಡ್ಡಜಲಪ್ರವಾಹದಂತೆ ದೊಡ್ಡಶಬ್ದ ಉಂಟಾಯಿತು.
ತಾಂ ತು ಸೇನಾಂ ಭೃಶಂ ವಿದ್ಧ್ವಾ ದ್ರಾವಯಿತ್ವಾರ್ಜುನಃ ಶರೈಃ |
ಪ್ರಾಯಾದಭಿಮುಖಃ ಪಾರ್ಥಃ ಸೂತಾನೀಕಾನಿ ಮಾರಿಷ ||21||
ಆ ಸೈನ್ಯವನ್ನು ಬಾಣಗಳಿಂದ ಚೆನ್ನಾಗಿ ಹೊಡೆದು ಅಟ್ಟಿಸಿಕೊಂಡು ಹೋಗಿ, ತಿರುಗಿ ಕರ್ಣನ ಸೈನ್ಯದ ಕಡೆಗೇ ಅರ್ಜುನನು ಬಂದ.
ತಸ್ಯ ಶಬ್ದೋ ಮಹಾನಾಸೀತ್ ಪರಾನಭಿಮುಖಸ್ಯ ವೈ |
ಗರುಡಸ್ಯೇವ ಪತತಃ ಪನ್ನಗಾರ್ಥೇ ಯಥಾ ಪುರಾ ||22||
ಶತ್ರುಗಳ ಕಡೆಗೆ ಅಭಿಮುಖವಾಗಿ ಅರ್ಜುನನು ಹಿಂತಿರುಗಿ ಬರುವಾಗ, ಹಿಂದೆ ಹಾವುಗಳನ್ನೆತ್ತಿಕೊಳ್ಳಲು ಗರುಡನು ಆಗಮಿಸಿದಾಗ ಹೇಗೋ ಹಾಗೇ, ದೊಡ್ಡ ಶಬ್ದ ಉಂಟಾಯಿತು.
ತಂ ತು ಶಬ್ದಮಭಿಶ್ರುತ್ಯ ಭೀಮಸೇನೋ ಮಹಾಬಲಃ |
ಬಭೂವ ಪರಮಪ್ರೀತಃ ಪಾರ್ಥದರ್ಶನಲಾಲಸಃ ||23||
ಆ ಶಬ್ದವನ್ನು ಕೇಳಿ ಮಹಾಬಲಿ ಭೀಮಸೇನನು ಅರ್ಜುನನ ದರ್ಶನ ಲಾಲಸೆಯಿಂದ ಬಹಳ ಸಂತುಷ್ಟನಾದ.
ಶ್ರುತ್ವೈವ ಪಾರ್ಥಮಾಯಾಂತಂ ಭೀಮಸೇನಃ ಪ್ರತಾಪವಾನ್ |
ತ್ಯಕ್ತ್ವಾ ಪ್ರಾಣಾನ್ ಮಹಾರಾಜ ಸೇನಾಂ ತವ ಮಮರ್ದ ಹ ||24||
ಅರ್ಜುನನು ತನ್ನ ಬಳಿಗೆ ಬರುವ ಶಬ್ದವನ್ನು ಕೇಳಿದ ಮಾತ್ರಕ್ಕೇ ಪ್ರತಾಪಶಾಲಿ ಭೀಮಸೇನನು, ಮಹಾರಾಜ, ಪ್ರಾಣಭಯವನ್ನು ತೊರೆದು ನಿನ್ನ ಸೈನ್ಯವನ್ನು ಪುಡಿಗೈದ.
ಸ ವಾಯುವೀರ್ಯಪ್ರತಿಮೋ ವಾಯುವೇಗಸಮೋ ಜವೇ |
ವಾಯುವದ್ ವ್ಯಚರದ್ ಭೀಮೋ ವಾಯುಪುತ್ರಃ
ಪ್ರತಾಪವಾನ್ ||25||
ವೀರ್ಯದಲ್ಲಿ ವಾಯುಸಮ, ವೇಗದಲ್ಲಿಯೂ ವಾಯುವೇಗಸಮ, ಪ್ರತಾಪಶಾಲಿ ವಾಯುಪುತ್ರ ಭೀಮನು ವಾಯುವಿನಂತೆ, ರಣದಲ್ಲಿ ಸಂಚರಿಸಿದ.
ತೇನಾರ್ದ್ಯಮಾನಾ ರಾಜೇಂದ್ರ ಸೇನಾ ತವ ವಿಶಾಂಪತೇ |
ವ್ಯಭ್ರಾಮ್ಯತ ಮಹಾರಾಜ ಭಿನ್ನಾ ನೌರಿವ ಸಾಗರೇ ||26||
ರಾಜನೆ, ಭೀಮನಿಂದ ಪೀಡಿತವಾಗುವಾಗ ನಿನ್ನ ಸೈನ್ಯವು ಸಾಗರದಲ್ಲಿ ಒಡೆದ ನೌಕೆಯಂತೆ ದಿಗ್ಭ್ರಮೆ ಹೊಂದಿತು.
ತಾಂ ತು ಸೇನಾಂ ತದಾ ಭೀಮೋ ದರ್ಶಯನ್ ಪಾಣಿಲಾಘವಮ್ |
ಶರೈರವಚಕರ್ತೋಗ್ರೈಃ ಪ್ರೇಷಯಿಷ್ಯನ್ ಯಮಕ್ಷಯಮ್ ||27||
ಆಗ ಭೀಮನು ತನ್ನ ಕೈಚಳಕವನ್ನು ತೋರುತ್ತ ಆ ಸೈನ್ಯವನ್ನು ಯಮಸದನಕ್ಕೆ ಅಟ್ಟುವುದಕ್ಕಾಗಿ ಉಗ್ರಬಾಣಗಳಿಂದ ಚೂರುಚೂರು ಮಾಡಿದ.
ತತ್ರ ಭಾರತ ಭೀಮಸ್ಯ ಬಲಂ ದೃಷ್ಟ್ವಾತಿಮಾನುಷಮ್ |
ವ್ಯತ್ರಸ್ಯಂತ ರಣೇ ಯೋಧಾಃ ಕಾಲಸ್ಯೇವ ಯುಗಕ್ಷಯೇ ||28||
ರಾಜನೆ, ಭೀಮನ ಅತಿಮಾನುಷವಾದ ಬಲವನ್ನು ಕಂಡು ಪ್ರಾಣಿಗಳು ಯುಗಪ್ರಳಯದಲ್ಲಿ ಕಾಲಯಮನಿಗೆ ಹೆದರುವಂತೆ ರಣದಲ್ಲಿ ಯೋಧರು ಭೀಮನಿಗೆ ಹೆದರಿದರು.
ತಥಾರ್ದಿತಾನ್ ಭೀಮಬಲಾನ್ ಭೀಮಸೇನೇನ ಭಾರತ |
ದೃಷ್ಟ್ವಾ ದುರ್ಯೋಧನೋ ರಾಜಾ ಇದಂ ವಚನಮಬ್ರವೀತ್ ||29||
ಭಯಂಕರ ಬಲಉಳ್ಳ ಕೌರವಯೋಧರು ಭೀಮಸೇನನಿಂದ ಹೊಡೆಸಿ ಕೊಳ್ಳುತ್ತಿರುವುದನ್ನು ಕಂಡು ರಾಜಾ ದುರ್ಯೋಧನನು ನುಡಿದ.
ಸೈನಿಕಾನ್ ಸ ಮಹೇಷ್ವಾಸೋ ಯೋಧಾಂಶ್ಚ ಭರತರ್ಷಭ |
ಸಮಾದಿಶದ್ ರಣೇ ಸರ್ವಾನ್ ಹತ ಭೀಮಮಿತಿ ಸ್ಮ ಹ |

ತಸ್ಮಿನ್ ಹತೇ ಹತಂ ಮನ್ಯೇ ಸರ್ವಸೈನ್ಯಮಶೇಷತಃ ||30||
ರಾಜನೆ, ಮಹಾ ಬಿಲ್ಗಾಳುವಾದ ದುರ್ಯೋಧನನು ಎಲ್ಲ ಸೈನಿಕ ಯೋಧರನ್ನು ರಣದಲ್ಲಿ ಆದೇಶಿಸಿದ: `ಭೀಮನನ್ನು ಸಂಹರಿಸಿರಿ. ಅವನು ಹತನಾದರೆ ಪಾಂಡವರ ಎಲ್ಲ ಸೈನ್ಯವು ಹತವಾಯಿತೆಂದೇ ತಿಳಿಯುತ್ತೇನೆ' ಎಂದು.
ಪ್ರತಿಗೃಹ್ಯ ಚ ತಾಮಾಜ್ಞಾಂ ತವ ಪುತ್ರಸ್ಯ ಪಾರ್ಥಿವಾಃ |
ಭೀಮಂ ಪ್ರಚ್ಛಾದಯಾಮಾಸುಃ ಶರವರ್ಷೈಃ ಸಮಂತತಃ ||31||
ನಿನ್ನ ಮಗನಾದ ದುರ್ಯೋಧನನ ಆಜ್ಞೆಯನ್ನು ಶಿರಸಾವಹಿಸಿ ರಾಜರು ಎಲ್ಲ ಕಡೆಯಿಂದ ಭೀಮನನ್ನು ಬಾಣಗಳ ಮಳೆಯಿಂದ ಮುಚ್ಚಿದರು.
ಗಜಾಶ್ಚ ಬಹುಲಾ ರಾಜನ್ನರಾಶ್ಚ ಜಯಗೃದ್ಧಿನಃ |
ರಥಾ ಹಯಾಶ್ಚ ರಾಜೇಂದ್ರ ಪರಿವವ್ರುರ್ವೃಕೋದರಮ್ ||32||
ರಾಜನೆ, ಜಯಾಕಾಂಕ್ಷಿಗಳಾದ ಬಹುಮಂದಿ ಗಜ ಪದಾತಿ ರಥಅಶ್ವಯೋಧರು ಭೀಮನನ್ನು ಸುತ್ತುವರಿದರು.
ಸ ತೈಃ ಪರಿವೃತಃ ಶೂರೈಃ ಶೂರೋ ರಾಜನ್ ಸಮಂತತಃ |
ಶುಶುಭೇ ಭರತಶ್ರೇಷ್ಠ ನಕ್ಷತ್ರೈರಿವ ಚಂದ್ರಮಾಃ ||33||
ರಾಜನೆ, ಶೂರರಾದ ಆ ರಾಜರೆಲ್ಲರಿಂದ ಎಲ್ಲೆಡೆ ಸುತ್ತುವರಿದ ಶೂರ ಭೀಮನು ನಕ್ಷತ್ರಗಳಿಂದ ಸುತ್ತುವರಿದ ಚಂದ್ರನಂತೆ ಶೋಭಿಸಿದ.
ಸ ರರಾಜ ತಥಾ ಸಂಖ್ಯೇ ದರ್ಶನೀಯೋ ನರೋತ್ತಮಃ |
ನಿರ್ವಿಶೇಷಂ ಮಹಾರಾಜ ಯಥಾ ಹಿ ವಿಜಯಸ್ತಥಾ ||34||
ಮಹಾರಾಜ, ಅರ್ಜುನನಂತೆಯೇ ನರೋತ್ತಮನಾದ ಭೀಮನೂ ಕೂಡ ಏನೂ ವ್ಯತ್ಯಾಸವಿಲ್ಲದೆ ರಣದಲ್ಲಿ ಪ್ರೇಕ್ಷಣೀಯನಾಗಿ ಕಂಗೊಳಿಸಿದ.
ತತ್ರ ತೇ ಪಾರ್ಥಿವಾಃ ಸರ್ವೇ ಶರವೃಷ್ಟೀಃ ಸಮಾಸೃಜನ್ |
ಕ್ರೋಧರಕ್ತೇಕ್ಷಣಾಃ ಕ್ರೂರಾ ಹಂತುಕಾಮಾ ವೃಕೋದರಮ್ ||35||
ಆಗ ಕ್ರೂರರಾದ ಆ ಎಲ್ಲ ರಾಜರೂ ಭೀಮನನ್ನು ಕೊಲ್ಲಲು ಬಯಸಿ ಕ್ರೋಧದಿಂದ ಕೆಂಪುಕಣ್ಣಿನವರಾಗಿ ಬಾಣಗಳ ಮಳೆಗರೆದರು.
ಸ ವಿದಾರ್ಯ ಮಹಾಸೇನಾಂ ಶರೈಃ ಸನ್ನತಪರ್ವಭಿಃ |
ನಿಶ್ಚಕ್ರಾಮ ರಣಾದ್ ಭೀಮೋ ಮತ್ಸ್ಯೋ ಜಾಲಾದಿವಾಂಭಸಿ ||36||
ಭೀಮಸೇನನು ಡೊಂಕುಗಿಣ್ಣಿನ ಬಾಣಗಳಿಂದ ಮಹಾಸೈನ್ಯವನ್ನು ಭೇದಿಸಿ ನೀರಿನಲ್ಲಿ ಮೀನು ಬಲೆಯಿಂದ ಹೊರಗೆ ಬರುವಂತೆ ರಣದಿಂದ ಮುಕ್ತನಾಗಿ ಹೊರಬಂದ.
ಹತ್ವಾ ದಶ ಸಹಸ್ರಾಣಿ ಗಜಾನಾಮನಿವರ್ತಿನಾಮ್ |
ನೃಣಾಂ ಶತಸಹಸ್ರೇ ದ್ವೇ ದ್ವೇ ಶತೇ ಚೈವ ಭಾರತ ||37||
ಪಂಚ ಚಾಶ್ವಸಹಸ್ರಾಣಿ ರಥಾನಾಂ ಶತಮೇವ ಚ |
ಹತ್ವಾ ಪ್ರಾಸ್ಯಂದಯದ್ ಭೀಮೋ ನದೀಂ
ಶೋಣಿತಕರ್ದಮಾಮ್ ||38||
ಯುದ್ಧದಿಂದ ಹಿಮ್ಮೆಟ್ಟದಿರುವ ಹತ್ತು ಸಾವಿರ ಗಜಯೋಧರನ್ನೂ ಎರಡು ಲಕ್ಷದ ಇನ್ನೂರು ಪದಾತಿಗಳನ್ನೂ ಐದುಸಾವಿರ ಅಶ್ವಯೋಧರನ್ನೂ ನೂರು ರಥಿಕರನ್ನೂ ಕೊಂದು ಭೀಮನು ರಕ್ತದ ಕೆಸರಿನ ಹೊಳೆಯನ್ನೇ ಹರಿಸಿದ.
ಶೋಣಿತೋದಾಂ ರಥಾವರ್ತಾಂ ಹಸ್ತಿಗ್ರಾಹಸಮಾಕುಲಾಮ್ |
ನರಮೀನಾಮಶ್ವನಕ್ರಾಂ ಕೇಶಶೈವಲಶಾದ್ವಲಾಮ್ ||39||
ಅಲ್ಲಿ ರಕ್ತವೆ ನೀರು. ರಥವೆ ಸುಳಿ. ಗಜಗಳೆಂಬ ಮೊಸಳೆಗಳಿಂದ ತುಂಬಿದೆ. ಪದಾತಿಗಳು ಮೀನುಗಳು, ಅಶ್ವಗಳು ಮೊಸಳೆಗಳು. ಕೇಶಗಳು ಪಾಚಿಗಳು.
ಸಂಛನ್ನಭುಜನಾಗೇಂದ್ರಾಂ ಬಹುರತ್ನಾಪಹಾರಿಣೀಮ್ |
ಊರುಗ್ರಾಹಾಂ ಮಜ್ಜಪಂಕಾಂ ಶೀರ್ಷೋಪಲಸಮಾಕುಲಾಮ್ ||40||
ಆ ನದಿಯಲ್ಲಿ ಕತ್ತರಿಸಿಬಿದ್ದ ಬಾಹುಗಳೇ ದೊಡ್ಡಹಾವುಗಳು. ಯೋಧರ ಬಹುರತ್ನಗಳನ್ನು ಆ ಪ್ರವಾಹ ಕೊಚ್ಚಿಕೊಂಡು ಹೋಗುತ್ತಿತ್ತು. ತೊಡೆಗಳು ಮೊಸಳೆಗಳಂತೆ, ಮಜ್ಜೆ ಕೆಸರಿನಂತೆ, ಶಿರಸ್ಸುಗಳು ಕಲ್ಲುಗಳಂತೆ ತುಂಬಿದ್ದುವು.
ಧನುಷ್ಕಾಶಾಂ ಶರಾವಾಪಾಂ ಗದಾಪರಿಘಪನ್ನಗಾಮ್ |
ಹಂಸಚ್ಛತ್ರಧ್ವಜೋಪೇತಾಮುಷ್ಣೀಷವರಫೇನಿಲಾಮ್ ||41||
ಆ ನದಿಯಲ್ಲಿ ಧನುಸ್ಸುಗಳು ಜೊಂಡುಹುಲ್ಲುಗಳು ಬಾಣಗಳು ತರಂಗಗಳು. ಗದೆಪರಿಘಗಳು ಹಾವುಗಳು, ಛತ್ರ ಧ್ವಜಗಳೇ ಹಂಸಗಳು. ಶಿರಸ್‌ತ್ರಣಗಳೇ ನೊರೆಗಳು.
ಹಾರಪದ್ಮಾಕರಾಂ ಚೈವ ಭೂಮಿರೇಣೂರ್ಮಿಮಾಲಿನೀಮ್ |
ಇತ್ಥಂವೃತ್ತವತೀಂ ಸಂಖ್ಯೇ ಸುತರಾಂ ಭೀರುದುಸ್ತರಾಮ್ |
ಯೋಧವ್ರಾತವತೀಂ ಸಂಖ್ಯೇ ವಹಂತೀಂ ಯಮಸಾದನಮ್ ||42||
ಆ ರಕ್ತನದಿಯಲ್ಲಿ ಹಾರಗಳೇ ಕಮಲಸಮೂಹ. ರಣಭೂಮಿಯಲ್ಲಿ ಏಳುವ ಧೂಳು ಅಲೆಗಳ ಸಾಲುಗಳು. ಇಂಥ ಹರಿವು ಉಳ್ಳ ರಕ್ತನದಿ ರಣದಲ್ಲಿ ಸುತರಾಂ ಹೇಡಿಗಳಿಗೆ ದುಸ್ತರವಾದುದು. ಯೋಧಸಮೂಹಗಳನ್ನು ತನ್ನಲ್ಲಿ ತುಂಬಿಕೊಂಡು ಯಮಸದನಕ್ಕೇ ಹರಿಯುತ್ತಿದೆ.
ಕ್ಷಣೇನ ಪುರುಷವ್ಯಾಘ್ರಃ ಪ್ರಾವರ್ತಯತ ನಿಮ್ನಗಾಮ್ |

ಯಥಾ ವೈತರಣೀಮುಗ್ರಾಂ ದುಸ್ತರಾಮಕೃತಾತ್ಮಭಿಃ ॥43॥
ಪುರುಷಶ್ರೇಷ್ಠನಾದ ಭೀಮಸೇನನು ಒಂದು ಕ್ಷಣದಲ್ಲಿ ವೈತರಣೀ ನದಿಯಂತೆ ಉಗ್ರವಾದ ಮನೋನಿಗ್ರಹವಿಲ್ಲದವರಿಗೆ ದುಸ್ತರವಾದ ರಕ್ತದ ನದಿಯನ್ನೇ ಹರಿಸಿದ.
ಯತೋ ಯತಃ ಪಾಂಡವೇಯಃ ಪ್ರವೃತ್ತೋ ರಥಸತ್ತಮಃ |
ತತಸ್ತತೋಽಪಾತಯತ ಯೋಧಾನ್ ಶತಸಹಸ್ರಶಃ ॥44॥
ಶ್ರೇಷ್ಠರಥಿಕನಾದ ಭೀಮಸೇನನು ರಣರಂಗದಲ್ಲಿ ಎಲ್ಲೆಲ್ಲಿ ನಡೆದಾಡುವನೋ ಅಲ್ಲಲ್ಲಿ ನೂರಾರು ಸಾವಿರಾರು ಯೋಧರನ್ನು ನೆಲದಲ್ಲಿ ಕೆಡವಿದ.
ಏವಂ ದೃಷ್ಟ್ವಾ ಕೃತಂ ಕರ್ಮ ಭೀಮಸೇನೇನ ಸಂಯುಗೇ |
ದುರ್ಯೋಧನೋ ಮಹಾರಾಜ ಶಕುನಿಂ ವಾಕ್ಯಮಬ್ರವೀತ್ ॥45॥
ಹೀಗೆ ಭೀಮಸೇನನು ರಣದಲ್ಲಿ ಮಾಡಿದ ಕರ್ಮವನ್ನು ನೋಡಿ, ಮಹಾರಾಜ, ದುರ್ಯೋಧನನು ಶಕುನಿಗೆ ಈ ಮಾತನ್ನು ನುಡಿದ.
ಜಹಿ ಮಾತುಲ ಸಂಗ್ರಾಮೇ ಭೀಮಂ ಭೀಮಂ ಮಹಾಬಲಮ್ |
ಅಸ್ಮಿನ್ ಜಿತೇ ಜಿತಂ ಸರ್ವಂ ಪಾಂಡವೇಯಂ ಮಹದ್‌ಬಲಮ್ ॥46॥
ಮಾವ, ಭಯಂಕರ ಮಹಾಬಲಶಾಲಿಯಾದ ಭೀಮನನ್ನು ಸಂಗ್ರಾಮದಲ್ಲಿ ಸಂಹರಿಸು. ಈತನೊಬ್ಬ ಜಿತನಾದರೆ ಪಾಂಡವರ ಇಡಿ ಮಹತ್ತಾದ ಸೈನ್ಯವೇ ಜಿತವಾಗುವುದು.
ತತಃ ಪ್ರಾಯಾನ್ಮಹಾರಾಜ ಸೌಬಲೇಯಃ ಪ್ರತಾಪವಾನ್ |
ರಣಾಯ ಮಹತೇ ಯುಕ್ತೋ ಭ್ರಾತೃಭಿಃ ಪರಿವಾರಿತಃ ॥47॥
ಮಹಾರಾಜ, ಒಡನೆ ಪ್ರತಾಪಶಾಲಿಯಾದ ಶಕುನಿಯು ಸೋದರರಿಂದ ಪರಿವೃತನಾಗಿ ದೊಡ್ಡ ರಣಕ್ಕೆ ಸನ್ನದ್ಧನಾಗಿ ಹೊರಟ.
ಸ ಸಮಾಸಾದ್ಯ ಸಂಗ್ರಾಮೇ ಭೀಮಂ ಭೀಮಪರಾಕ್ರಮಮ್ |
ವಾರಯಾಮಾಸ ತಂ ವೀರೋ ವೇಲೇವ ಮಕರಾಲಯಮ್ ॥48॥
ಅಭ್ಯವರ್ತತ ತಂ ಭೀಮೋ ವಾರ್ಯಮಾಣಃ ಶಿತೈಃ ಶರೈಃ ॥49॥
ಶಕುನಿಯು ರಣದಲ್ಲಿ ಭಯಂಕರ ಪರಾಕ್ರಮಿಯಾದ ಭೀಮನನ್ನು ಇದಿರಿಸಿ ಅವನನ್ನು ಸಾಗರವನ್ನು ತೀರವು ತಡೆಯುವಂತೆ ತಡೆದ. ಆದರೆ ಶಕುನಿ ತಡೆಯುತ್ತಿದ್ದಂತೆಯೇ ಭೀಮನು ಅವನನ್ನು ಆಕ್ರಮಿಸಿದ.
ಶಕುನಿಸ್ತಸ್ಯ ರಾಜೇಂದ್ರ ವಾಮೇ ಪಾರ್ಶ್ವೇ ಸ್ತನಾಂತರೇ |
ಪ್ರೇಷಯಾಮಾಸ ನಾರಾಚಾನ್ ರುಗ್ಮಪುಂಖಾನ್ ಶಿಲಾಶಿತಾನ್ ॥50॥
ಶಕುನಿಯು ಭೀಮನೆದೆಯ ಎಡಭಾಗಕ್ಕೆ ಬಂಗಾರದ ಪುಕ್ಕವುಳ್ಳ ಸಾಣೆಹಿಡಿದ ಬಾಣಗಳನ್ನು ಎಸೆದ.
ವರ್ಮ ಭಿತ್ತ್ವಾ ತು ಸೌವರ್ಣಂ ಬಾಣಾಸ್ತಸ್ಯ ಮಹಾತ್ಮನಃ |
ನ್ಯಮಜ್ಜಂತ ಮಹಾರಾಜ ಕಂಕಬರ್ಹಿಣವಾಸಸಃ ॥51॥
ಮಹಾರಾಜ, ಹದ್ದಿನ ನವಿಲಿನ ರೆಕ್ಕೆಗಳುಳ್ಳ ಆ ಬಾಣಗಳು ಮಹಾತ್ಮನಾದ ಭೀಮನ ಕವಚವನ್ನು ಭೇದಿಸಿ ಒಳಗೆ ಪ್ರವೇಶಿಸಿದವು.
ಸೋಽತಿವಿದ್ಧೋ ರಣೇ ಭೀಮಃ ಶರಂ ಹೇಮವಿಭೂಷಿತಮ್ |
ಪ್ರೇಷಯಾಮಾಸ ಸಹಸಾ ಸೌಬಲಂ ಪ್ರತಿ ಭಾರತ ॥52॥
ರಾಜನೆ, ರಣದಲ್ಲಿ ಅತಿಯಾಗಿ ಹೊಡೆಸಿಕೊಂಡ ಭೀಮನು ಒಡನೆ ಶಕುನಿಗೆ ಬಂಗಾರದಿಂದ ಅಲಂಕೃತವಾದ ಬಾಣವನ್ನು ಎಸೆದ.
ತಮಾಯಾಂತಂ ಶರಂ ಘೋರಂ ಶಕುನಿಃ ಶತ್ರುತಾಪನಃ |
ಚಿಚ್ಛೇದ ಶತಧಾ ರಾಜನ್ ಕೃತಹಸ್ತೋ ಮಹಾಬಲಃ ॥53॥
ರಾಜನೆ, ಘೋರವಾದ ಆ ಬಾಣ ಬರುತ್ತಿದ್ದಂತೆ, ಕೈಚಳಕವುಳ್ಳ ಶತ್ರುನಾಶಕ ಮಹಾಬಲಿ ಶಕುನಿಯು ನೂರುಚೂರುಗಳಾಗಿ ಕತ್ತರಿಸಿದ.
ತಸ್ಮಿನ್ನಿಪತಿತೇ ಭೂಮೌ ಭೀಮಃ ಕ್ರುದ್ಧೋ ವಿಶಾಂಪತೇ |
ಧನುಶ್ಚಿಚ್ಛೇದ ಭಲ್ಲೇನ ಸೌಬಲಸ್ಯ ಹಸನ್ನಿವ ॥54॥
ರಾಜನೆ, ಆ ಬಾಣವು ನೆಲದಲ್ಲಿ ಬಿದ್ದಾಗ ಭೀಮನು ಕ್ರುದ್ಧನಾಗಿ ನಗುತ್ತ ಭಲ್ಲೆಯಿಂದ ಶಕುನಿಯ ಧನುಸ್ಸನ್ನು ಕತ್ತರಿಸಿದ.
ತದಪಾಸ್ಯ ಧನುಶ್ಛಿನ್ನಂ ಸೌಬಲೇಯಃ ಪ್ರತಾಪವಾನ್ |
ಅನ್ಯದಾದತ್ತ ವೇಗೇನ ಧನುರ್ಭಲ್ಲಾಂಶ್ಚ ಷೋಡಶ ॥55॥
ಮುರಿದ ಆ ಧನುಸ್ಸನ್ನು ದೂರಕ್ಕೆ ಎಸೆದು ಪ್ರತಾಪಶಾಲಿಯಾದ ಶಕುನಿಯು ಬೇಗನೆ ಇನ್ನೊಂದು ಧನುಸ್ಸನ್ನೂ ಹದಿನಾರು ಭಲ್ಲೆಗಳನ್ನೂ ಎತ್ತಿಕೊಂಡ.
ತೈಸ್ತಸ್ಯ ತು ಮಹಾರಾಜ ಭಲ್ಲೈಃ ಸನ್ನತಪರ್ವಭಿಃ |
ಚತುರ್ಭಿಃ ಸಾರಥಿಂ ಹ್ಯಾರ್ಚ್ಛದ್ ಭೀಮಂ ಪಂಚಭಿರೇವ ಚ ॥56॥
ಮಹಾರಾಜ, ಡೊಂಕುಗಿಣ್ಣಿನ ಆ ನಾಲ್ಕು ಭಲ್ಲೆಗಳಿಂದ ಭೀಮನ ಸಾರಥಿ ಯನ್ನೂ ಐದು ಭಲ್ಲೆಗಳಿಂದ ಭೀಮನನ್ನೂ ಹೊಡೆದ.
ಧ್ವಜಮೇಕೇನ ಚಿಚ್ಛೇದ ಛತ್ರಂ ದ್ವಾಭ್ಯಾಂ ವಿಶಾಂಪತೇ |
ಚತುರ್ಭಿಶ್ಚತುರೋ ವಾಹಾನ್ ವಿವ್ಯಾಧ ಸುಬಲಾತ್ಮಜಃ ॥57॥
ಮತ್ತು, ರಾಜನೆ, ಶಕುನಿಯು ಒಂದು ಭಲ್ಲೆಯಿಂದ ಭೀಮನ ಧ್ವಜವನ್ನೂ, ಎರಡು ಭಲ್ಲೆಗಳಿಂದ ಛತ್ರವನ್ನೂ ನಾಲ್ಕು ಭಲ್ಲೆಗಳಿಂದ ನಾಲ್ಕು ಅಶ್ವಗಳನ್ನೂ ಹೊಡೆದ.
ತತಃ ಕ್ರುದ್ಧೋ ಮಹಾರಾಜ ಭೀಮಸೇನಃ ಪ್ರತಾಪವಾನ್ |
ಶಕ್ತಿಂ ಚಿಕ್ಷೇಪ ಸಮರೇ ರುಗ್ಮದಂಡಾಮಯಸ್ಮಯೀಮ್ ॥58॥

ಆಗ, ಮಹಾರಾಜ, ಪ್ರತಾಪಶಾಲಿ ಭೀಮಸೇನನು ಕ್ರುದ್ಧನಾಗಿ ರಣದಲ್ಲಿ ಬಂಗಾರದ ದಂಡಉಳ್ಳ ಕಬ್ಬಿಣದಿಂದಾದ ಶಕ್ತ್ಯಾಯುಧವನ್ನು ಎಸೆದ.
ಸಾ ಭೀಮಭುಜನಿರ್ಮುಕ್ತಾ ನಾಗಜಿಹ್ವೇವ ಚಂಚಲಾ |
ನಿಪಪಾತ ರಥೇ ತೂರ್ಣಂ ಸೌಬಲಸ್ಯ ಮಹಾತ್ಮನಃ ||59||
ಆ ಶಕ್ತ್ಯಾಯುಧವು ಭೀಮನ ಭುಜದಿಂದ ಹೊರಟು ಹಾವಿನ ನಾಲಿಗೆಯಂತೆ ಚಂಚಲವಾಗಿ ವೇಗವಾಗಿ ಮಹಾತ್ಮ ಶಕುನಿಯ ರಥದ ಮೇಲೆ ಬಿದ್ದಿತು.
ತತಸ್ತಾಮೇವ ಸಂಗೃಹ್ಯ ಶಕ್ತಿಂ ಕನಕಭೂಷಣಾಮ್ |
ಭೀಮಸೇನಾಯ ಚಿಕ್ಷೇಪ ಕ್ರುದ್ಧರೂಪೋ ವಿಶಾಂಪತೇ ||60||
ರಾಜನೆ, ಆಗ ಕ್ರುದ್ಧನಾದ ಶಕುನಿಯು ಬಂಗಾರದಿಂದ ಅಲಂಕೃತವಾದ ಅದೇ ಶಕ್ತ್ಯಾಯುಧವನ್ನು ಹಿಡಿದು ತಿರುಗಿ ಭೀಮಸೇನನ ಮೇಲೆ ಎಸೆದ.
ಸಾ ನಿರ್ಭಿದ್ಯ ಭುಜಂ ಸವ್ಯಂ ಪಾಂಡವಸ್ಯ ಮಹಾತ್ಮನಃ |
ಪಪಾತ ಚ ತತೋ ಭೂಮೌ ಯಥಾ ವಿದ್ಯುನ್ನಭಶ್ಚ್ಯುತಾ ||61||
ಆ ಶಕ್ತಿಯು ಮಹಾತ್ಮನಾದ ಭೀಮನ ಎಡ ತೋಳನ್ನು ಭೇದಿಸಿ, ಆಗಸದಿಂದ ಬೀಳುವ ಮಿಂಚಿನಂತೆ ನೆಲದಲ್ಲಿ ಬಿದ್ದಿತು.
ಅಥೋತ್ಕ್ರುಷ್ಟಂ ಮಹಾರಾಜ ಧಾರ್ತರಾಷ್ಟ್ರೈಃ ಸಮಂತತಃ |
ನ ತು ತಂ ಮಮೃಷೇ ಭೀಮಃ ಸಿಂಹನಾದಂ ತರಸ್ವಿನಾಮ್ ||62||
ಮಹಾರಾಜ, ಆಗ ಕೌರವರು ಎಲ್ಲೆಡೆ ಜೋರಾಗಿ ಗರ್ಜಿಸಿದರು. ವೇಗಶಾಲಿ ಗಳಾದ ಕೌರವರ ಆ ಸಿಂಹನಾದವನ್ನು ಭೀಮನು ಸಹಿಸಲಿಲ್ಲ.
ಸ ಸಂಗೃಹ್ಯ ಧನುಃ ಸಜ್ಯಂ ತ್ವರಮಾಣೋ ಮಹಾರಥಃ |
ಮುಹೂರ್ತಾದಿವ ರಾಜೇಂದ್ರ ಛಾದಯಾಮಾಸ ಸಾಯಕೈಃ |
ಸೌಬಲಸ್ಯ ಬಲಂ ಸಂಖೇ ತ್ಯಕ್ತ್ವಾತ್ಮಾನಂ ಮಹಾಬಲಃ ||63||
ರಾಜನೆ, ಮಹಾರಥನಾದ ಮಹಾಬಲಿಯಾದ ಭೀಮನು ಪ್ರಾಣದ ಹಂಗುತೊರೆದು ಬೇಗನೆ ಹೆದೆಏರಿಸಿದ್ದ ಬಿಲ್ಲನ್ನೆತ್ತಿಕೊಂಡು ಒಂದು ಮುಹೂರ್ತ ದೊಳಗೇ ಶಕುನಿಯ ಸೈನ್ಯವನ್ನು ರಣದಲ್ಲಿ ಬಾಣಗಳಿಂದ ಮುಚ್ಚಿದ.
ತಸ್ಯಾಶ್ವಾಂಶ್ಚತುರೋ ಹತ್ವಾ ಸೂತಂ ಚೈವ ವಿಶಾಂಪತೇ |
ಧ್ವಜಂ ಚಿಚ್ಛೇದ ಭಲ್ಲೇನ ತ್ವರಮಾಣಃ ಪರಾಕ್ರಮೀ ||64||
ರಾಜನೆ, ಶಕುನಿಯ ನಾಲ್ಕೂ ಕುದುರೆಗಳನ್ನು ಕೊಂದು, ಸಾರಥಿಯನ್ನೂ ಕೊಂದು, ಪರಾಕ್ರಮಿ ಭೀಮನು ಬೇಗನೆ ಶಕುನಿಯ ಧ್ವಜವನ್ನೂ ಕಡಿದ.
ಹತಾಶ್ವಂ ರಥಮುತ್ಸೃಜ್ಯ ತ್ವರಮಾಣೋ ನರೋತ್ತಮಃ |
ತಸ್ಥೌ ವಿಸ್ಫಾರಯನ್ ಚಾಪಂ ಕ್ರೋಧರಕ್ತೇಕ್ಷಣಃ ಶ್ವಸನ್ ||65||
ಶರೈಶ್ಚ ಬಹುಧಾ ರಾಜನ್ ಭೀಮಮಾರ್ಚ್ಛತ್ ಸಮಂತತಃ ||66||
ನರೋತ್ತಮ ಶಕುನಿಯು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಭುಸುಗುಟ್ಟುತ್ತ ಕುದುರೆ ಇಲ್ಲದ ಆ ರಥವನ್ನು ತೊರೆದು ಬಿಲ್ಲನ್ನು ಸೆಳೆದುನಿಂತ. ರಾಜನೆ, ಬಾಣಗಳಿಂದ ಬಹುವಾಗಿ ಎಲ್ಲೆಡೆ ಭೀಮನನ್ನು ಪೀಡಿಸಿದ.
ಪ್ರತಿಹತ್ಯ ತು ವೇಗೇನ ಭೀಮಸೇನಃ ಪ್ರತಾಪವಾನ್ |
ಧನುಶ್ಚಿಚ್ಛೇದ ಸಂಕ್ರುದ್ಧೋ ವಿವ್ಯಾಧ ಚ ಶಿತೈಃ ಶರೈಃ ||67||
ಆದರೆ ಪ್ರತಾಪಶಾಲಿಯಾದ ಭೀಮನು ಕ್ರುದ್ಧನಾಗಿ ಹರಿತವಾದ ಬಾಣಗಳಿಂದ ಹೊಡೆದು ವೇಗದಿಂದ ಶಕುನಿಯ ಧನುಸ್ಸನ್ನೂ ಕಡಿದ.
ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುಕರ್ಶನಃ |
ನಿಪಪಾತ ತತೋ ಭೂಮೌ ಕಿಂಚಿತ್ಪ್ರಾಣೋ ನರಾಧಿಪ ||68||
ರಾಜನೆ, ಶತ್ರುನಾಶಕನಾದ ಶಕುನಿಯು ಬಲಿಷ್ಠನಾದ ಶತ್ರುವಿನಿಂದ ಅತಿಯಾಗಿ ಹೊಡೆಸಿಕೊಂಡು ಸ್ವಲ್ಪವೆ ಉಸಿರಾಡುತ್ತ ನೆಲದಲ್ಲಿ ಬಿದ್ದ.
ತತಸ್ತಂ ವಿಹ್ವಲಂ ಜ್ಞಾತ್ವಾ ಪುತ್ರಸ್ತವ ವಿಶಾಂಪತೇ |
ಅಪೋವಾಹ ರಥೇನಾಜೌ ಭೀಮಸೇನಸ್ಯ ಪಶ್ಯತಃ ||69||
ರಾಜನೆ, ಶಕುನಿಯು ವಿಹ್ವಲನಾಗಿರುವುದನ್ನು ಕಂಡು ನಿನ್ನ ಮಗನು ಅವನನ್ನು ಭೀಮನು ನೋಡುತ್ತಿದ್ದಂತೆಯೇ ರಣದಲ್ಲಿ ರಥದಿಂದ ದೂರಕ್ಕೆ ಒಯ್ದ.
ಶಕುನಿಂ ವಿಹ್ವಲಂ ದೃಷ್ಟ್ವಾ ಧಾರ್ತರಾಷ್ಟ್ರಾಃ ಪರಾಙ್ಮುಖಾಃ |
ಪ್ರದುದ್ರುವುರ್ದಿಶೋ ಭೀತಾ ಭೀಮಸೇನಭಯಾತ್ ಪ್ರಭೋ ||70||
ರಾಜನೆ, ಶಕುನಿಯು ವಿಹ್ವಲನಾಗಿರುವುದನ್ನು ಕಂಡು ಭೀಮನ ಭಯದಿಂದ ಭೀತರಾದ ಹತ್ತುಮಂದಿ ದುರ್ಯೋಧನನ ತಮ್ಮಂದಿರು ಬೆನ್ನು ತಿರುಗಿಸಿ ದಿಕ್ಕುಗಳಿಗೆ ಧಾವಿಸಿದರು.
ಸೌಬಲೇ ನಿರ್ಜಿತೇ ರಾಜನ್ ಭೀಮಸೇನೇನ ಧನ್ವಿನಾ |
ಭಯೇನ ಮಹತಾವಿಷ್ಟಃ ಪುತ್ರೋ ದುರ್ಯೋಧನಸ್ತವ |
ಅಪಾಯಾಜ್ಜವನೈರಶ್ವೈಃ ಸಾಕ್ಷೇಪೋ ಮಾತುಲಂ ಪ್ರತಿ ||71||
ಬಿಲ್ಗಾರನಾದ ಭೀಮನಿಂದ ಶಕುನಿ ಪರಾಜಿತನಾದಾಗ ನಿನ್ನ ಪುತ್ರ ದುರ್ಯೋಧನನು ಮಹಾಭಯದಿಂದ ಆವಿಷ್ಟನಾಗಿ ಮಾವನನ್ನು

ಆಕ್ಷೇಪಿಸುತ್ತ ವೇಗದ ಕುದುರೆಗಳಿಂದ ದೂರಕ್ಕೆ ಹೊರಟುಹೋದ.
ಪರಾಙ್ಮುಖಂ ತು ರಾಜಾನಂ ದೃಷ್ಟ್ವಾ ಸೈನ್ಯಾನಿ ಭಾರತ |
ವಿಪ್ರಜಗ್ಮುಃ ಸಮುತ್ಸೃಜ್ಯ ದ್ವೈರಥಾನಿ ಸಮಂತತಃ ॥72॥
ರಾಜನೆ, ರಾಜಾ ದುರ್ಯೋಧನನು ಯುದ್ಧದಿಂದ ವಿಮುಖನಾಗಿ ಹೋದುದನ್ನು ಕಂಡು ಸೈನ್ಯಗಳು ಎಲ್ಲೆಡೆ ದ್ವೈರಥ ಯುದ್ಧಗಳನ್ನು ತೊರೆದು ಹೊರಟುಹೋದವು.
ತಾನ್ ದೃಷ್ಟ್ವಾತಿರಥಾನ್ ಸರ್ವಾನ್ ಧಾರ್ತರಾಷ್ಟ್ರಾನ್
ಪರಾಙ್ಮುಖಾನ್ |
ಜವೇನಾಭ್ಯಪತದ್ ಭೀಮಃ ಕಿರನ್ ಶರಶತಾನ್ ಬಹೂನ್ ॥73॥
ಅತಿರಥರಾದ ಕೌರವರೆಲ್ಲರೂ ಪಲಾಯನ ಮಾಡುವುದನ್ನು ಕಂಡು ಭೀಮನು ವೇಗದಿಂದ ನೂರಾರು ಬಾಣಗಳನ್ನು ಎಸೆಯುತ್ತ ಅವರನ್ನು ಆಕ್ರಮಿಸಿದ.
ತೇ ವಧ್ಯಮಾನಾ ಭೀಮೇನ ಧಾರ್ತರಾಷ್ಟ್ರಾಃ ಪರಾಙ್ಮುಖಾಃ |
ಕರ್ಣಮಾಸಾದ್ಯ ಸಮರೇ ಸ್ಥಿತಾ ರಾಜನ್ ಸಮಂತತಃ |
ಸ ಹಿ ತೇಷಾಂ ಮಹಾವೀರ್ಯೋ ದ್ವೀಪೋಽಭೂತ್ಸುಮಹಾಬಲಃ ॥74॥
ಪಲಾಯನ ಮಾಡಲು ತೊಡಗಿದ ಕೌರವರು ಭೀಮನಿಂದ ಹೊಡೆಸಿಕೊಳ್ಳುತ್ತ ಕರ್ಣನ ಬಳಿಗೆ ಧಾವಿಸಿ ಬಂದು ಅವನನ್ನು ಸುತ್ತುವರಿದು ನಿಂತರು. ಅವರಿಗೆ ಮಹಾವೀರ್ಯ ಮಹಾಬಲಿಯಾದ ಕರ್ಣನೇ ಈಗ ಆಶ್ರಯದಾತನಾದ.
ಭಿನ್ನನೌಕಾ ಯಥಾ ರಾಜನ್ ದ್ವೀಪಮಾಸಾದ್ಯ ನಿರ್ವೃತಾಃ |
ಭವಂತಿ ಪುರುಷವ್ಯಾಘ್ರ ನಾವಿಕಾಃ ಕಾಲಪರ್ಯಯೇ ॥75॥
ನೌಕೆ ಒಡೆದಾಗ ನಾವಿಕರು ಸಮುದ್ರದಲ್ಲಿ ಕಾಲಾಂತರದಲ್ಲಿ ಒಂದು ದ್ವೀಪವನ್ನು ಹೊಂದಿ ನೆಮ್ಮದಿ ಪಡೆಯುತ್ತಾರೆ.
ತಥಾ ಕರ್ಣಂ ಸಮಾಸಾದ್ಯ ತಾವಕಾ ಭರತರ್ಷಭ |
ಸಮಾಶ್ವಸ್ತಾಃ ಸ್ಥಿತಾ ರಾಜನ್ ಸಂಪ್ರಹೃಷ್ಟಾಃ ಪರಸ್ಪರಮ್ |
ಸಮಾಜಗ್ಮುಶ್ಚ ಯುದ್ಧಾಯ ಮೃತ್ಯುಂ ಕೃತ್ವಾ ನಿವರ್ತನಮ್ ॥76॥
ಹಾಗೇ, ರಾಜನೆ, ನಿನ್ನ ಸೈನಿಕರು ಕರ್ಣನನ್ನು ಹೊಂದಿ ನೆಮ್ಮದಿ ಪಡೆದರು. ಬಳಿಕ ಯುದ್ಧೋತ್ಸಾಹದಿಂದ ಮರಣದಿಂದಲೇ ತಮಗೆ ಯುದ್ಧನಿವೃತ್ತಿ ಎಂದು ನಿಶ್ಚಯ ಮಾಡಿಕೊಂಡು ಪರಸ್ಪರ ಇದಿರಿಸಿ ನಿಂತರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಶಕುನಿಪರಾಜಯೋ ನಾಮ ಚತುಃಸಪ್ತತಿತಮೋಽಧ್ಯಾಯಃ ॥74॥

ಎಪ್ಪತ್ತೈದನೆಯ ಅಧ್ಯಾಯ
ಕರ್ಣನ ಪ್ರತಾಪ, ಪಾಂಡವಸೈನ್ಯಕ್ಕೆ ಪರಾಜಯ
ಧೃತರಾಷ್ಟ್ರಃ
ತತೋ ಭಗ್ನೇಷು ಸೈನ್ಯೇಷು ಭೀಮಸೇನೇನ ಸಂಯುಗೇ |
ದುರ್ಯೋಧನೋಽಬ್ರವೀತ್ ಕಿಂ ನು ಸೌಬಲೋ ವಾಪಿ ಸಂಜಯ |1|
ಕರ್ಣೋ ವಾ ಜಯತಾಂ ಶ್ರೇಷ್ಠೋ ಯೋಧಾ ವಾ ಮಾಮಕಾ ಯುಧಿ|
ಕೃಪೋ ವಾ ಕೃತವರ್ಮಾ ವಾ ದ್ರೌಣಿರ್ದುಃಶಾಸನೋಽಪಿ ವಾ ॥2॥
ಧೃತರಾಷ್ಟ್ರನು ನುಡಿದ– ಸಂಜಯ, ಕೌರವಸೈನ್ಯಗಳು ರಣದಲ್ಲಿ ಭೀಮಸೇನನಿಂದ ಪರಾಜಿತವಾದಾಗ ದುರ್ಯೋಧನನು ಏನು ಹೇಳಿದ? ಶಕುನಿಯಾದರೂ ಏನು ಹೇಳಿದ? ಜಯಶಾಲಿಗಳಲ್ಲಿ ಶ್ರೇಷ್ಠನಾದ ಕರ್ಣನಾಗಲಿ, ನನ್ನ ಕಡೆಯ ಯೋಧರಾಗಲಿ ಕೃಪನಾಗಲಿ ಕೃತವರ್ಮನಾಗಲಿ ಅಶ್ವತ್ಥಾಮ ದುಃಶಾಸನರಾಗಲಿ ಏನು ಹೇಳಿದರು?
ಅತ್ಯದ್ಭುತಮಹಂ ಮನ್ಯೇ ಪಾಂಡವೇಯಸ್ಯ ವಿಕ್ರಮಮ್ |
ಯದೇಕಃ ಸಮರೇ ಸರ್ವಾನ್ ಯೋಧಯಾಮಾಸ ಮಾಮಕಾನ್ |
ಯಥಾಪ್ರತಿಜ್ಞಂ ಯೋಧಾನಾಂ ರಾಧೇಯಃ ಕೃತವಾನಪಿ ॥3॥
ಭೀಮನ ಪರಾಕ್ರಮ ಅತ್ಯದ್ಭುತವೆಂದು ನಾನು ಭಾವಿಸುತ್ತೇನೆ. ಏಕೆಂದರೆ ನಮ್ಮವರನ್ನು ಎಲ್ಲರನ್ನೂ ಅವನು ಒಬ್ಬನೆ ರಣದಲ್ಲಿ ಇದಿರಿಸಿದ್ದಾನೆ!
ಯೋಧರು ಮಾಡಿದ್ದ ಪ್ರತಿಜ್ಞೆಯಂತೇ ಕರ್ಣನೇನೋ ಯುದ್ಧ ಮಾಡಿದ್ದಾನೆ.
ಕುರೂಣಾಮಪಿ ಸರ್ವೇಷಾಂ ಕರ್ಣಃ ಶತ್ರುನಿಷೂದನಃ |
ಶರ್ಮ ವರ್ಮ ಪ್ರತಿಷ್ಠಾ ಚ ಜೀವಿತಾಶಾ ಚ ಸಂಜಯ ॥4॥
ಸಂಜಯ, ಕರ್ಣನೊಬ್ಬನೆ ಕೌರವರಿಗೆಲ್ಲರಿಗೂ ಶತ್ರುನಾಶಕ; ಸುಖದಾಯಕ, ರಕ್ಷಕ, ಆಶ್ರಯದಾತ. ಬದುಕಿಗೆ ಆಸರೆಯೂ ಆಗಿದ್ದಾನೆ.
ತತ್ಪ್ರಭಗ್ನಂ ಬಲಂ ದೃಷ್ಟ್ವಾ ಕೌಂತೇಯೇನಾಮಿತೌಜಸಾ |
ರಾಧೇಯೋ ವಾಪ್ಯಾಧಿರಥಿಃ ಕರ್ಣಃ ಕಿಮಕರೋದ್ ಯುಧಿ ॥5॥
ಅಮಿತ ಪರಾಕ್ರಮಿಯಾದ ಭೀಮನು ನಮ್ಮ ಸೈನ್ಯವನ್ನು ಪುಡಿಗೈಯುವುದನ್ನು ನೋಡಿ ರಣದಲ್ಲಿ ಕರ್ಣನೇನು ಮಾಡಿದ?
ಪುತ್ರಾ ವಾ ಮಮ ದುರ್ಧರ್ಷಾ ರಾಜಾನೋ ವಾ ಮಹಾರಥಾಃ |
ಏತನ್ಮೇ ಸರ್ವಮಾಚಕ್ಷ್ವ ಕುಶಲೋ ಹ್ಯಸಿ ಸಂಜಯ ॥6॥

ನನ್ನ ಪುತ್ರರಾಗಲಿ, ಮಣಿಸಲಾಗದ ಮಹಾರಥರಾದ ರಾಜರಾಗಲಿ ಏನು ಮಾಡಿದರು? ಇದೆಲ್ಲವನ್ನೂ ನನಗೆ ಹೇಳು, ಸಂಜಯ, ನೀನು ನಿಪುಣನಾಗಿರುವೆ.
ಸಂಜಯಃ
ಅಪರಾಹ್ಣೇ ಮಹಾರಾಜ ಸೂತಪುತ್ರಃ ಪ್ರತಾಪವಾನ್ ।
ಜಘಾನ ಸೋಮಕಾನ್ ಸರ್ವಾನ್ ಭೀಮಸೇನಸ್ಯ ಪಶ್ಯತಃ ॥7॥
ಭೀಮೋಽಪ್ಯತಿಬಲಃ ಸೈನ್ಯಂ ಧಾರ್ತರಾಷ್ಟ್ರಂ ವ್ಯಪೋಥಯತ್ ॥8॥
ಸಂಜಯ ನುಡಿದ– ಪ್ರತಾಪಶಾಲಿಯಾದ ಕರ್ಣನು ಅಪರಾಹ್ಣಕಾಲದಲ್ಲಿ ಭೀಮಸೇನನು ನೋಡುತ್ತಿದ್ದಂತೆಯೆ ಎಲ್ಲ ಸೋಮಕರನ್ನು ಸಂಹರಿಸಿದ, ಅತಿಬಲಿಷ್ಠನಾದ ಭೀಮನೂ ಕೂಡ ಕೌರವಸೈನ್ಯವನ್ನು ಧ್ವಂಸಮಾಡಿದ.
ದ್ರಾವ್ಯಮಾಣಂ ಬಲಂ ದೃಷ್ಟ್ವಾ ಭೀಮಸೇನೇನ ಧೀಮತಾ ।
ಯಂತಾರಮಬ್ರವೀತ್ ಕರ್ಣಃ ಪಾಂಚಾಲಾನೇವ ಮಾ ವಹ ॥9॥
ಧೀಮಂತನಾದ ಭೀಮಸೇನನು ಕೌರವಸೈನ್ಯವನ್ನು ಹೊಡೆದೋಡಿಸು ತ್ತಿದ್ದುದನ್ನು ಕಂಡು ಕರ್ಣನು ತನ್ನ ಸಾರಥಿಗೆ ನುಡಿದ, `ನನ್ನನ್ನು ಪಾಂಚಾಲರ ಕಡೆಗೇ ಒಯ್ಯು' ಎಂದು.
ಮದ್ರರಾಜಸ್ತತಃ ಶಲ್ಯಃ ಶ್ವೇತಾನಶ್ವಾನ್ ಮಹಾಜವಾನ್ ।
ಪ್ರಾಹಿಣೋಚ್ಚೇದಿಪಾಂಚಾಲಾನ್ ಕರೂಷಾಂಶ್ಚ ಮಹಾಬಲಃ ॥10॥
ಮಹಾಬಲಿ ಮದ್ರರಾಜ ಶಲ್ಯನು ಮಹಾವೇಗಉಳ್ಳ ಬಿಳಿಕುದುರೆಗಳನ್ನು ಚೇದಿ ಪಾಂಚಾಲ ಕರೂಷರ ಬಳಿಗೆ ನಡೆಸಿದ.
ಪ್ರವಿಶ್ಯ ಚ ಸ ತಾಂ ಸೇನಾಂ ಶಲ್ಯಃ ಪರಬಲಾರ್ದನಃ ।
ನ್ಯಯಚ್ಛತ್ ತುರಗಾನ್ ಹೃಷ್ಟೋ ಯತ್ರ ಯತ್ರೈಚ್ಛದಗ್ರಣೀಃ ॥11॥
ಶತ್ರುಸೈನ್ಯನಾಶಕನಾದ ಶಲ್ಯನು ಆ ಸೈನ್ಯವನ್ನು ಪ್ರವೇಶಿಸಿ, ನಾಯಕನಾದ ಕರ್ಣನು ಎಲ್ಲೆಲ್ಲಿಗೆ ಹೋಗಲು ಬಯಸಿದನೋ ಅಲ್ಲಿಗೆ ಉತ್ಸಾಹಿತನಾಗಿ ಕುದುರೆಗಳನ್ನು ನಡೆಸಿದ.
ತಂ ರಥಂ ಮೇಘಸಂಕಾಶಂ ವೈಯಾಘ್ರಪರಿವಾರಣಮ್ ।
ಸಂದೃಶ್ಯ ಪಾಂಡುಪಾಂಚಾಲಾಸ್ತ್ರಸ್ತಾ ಆಸನ್ ವಿಶಾಂಪತೇ ॥12॥
ಮೋಡದಂತೆ ಕಾಣುವ ಹುಲಿತೊಗಲಿನಿಂದ ಮುಚ್ಚಿದ ಕರ್ಣನ ರಥವನ್ನು ಕಂಡು, ರಾಜನೆ, ಪಾಂಡವ ಪಾಂಚಾಲ ಸೈನಿಕರು ಭಯಪಟ್ಟರು.
ತತೋ ರಥಸ್ಯ ನಿನದಃ ಪ್ರಾದುರಾಸೀನ್ಮಹಾರಣೇ ।
ಪರ್ಜನ್ಯಸಮನಿರ್ಘೋಷಃ ಪರ್ವತಸ್ಯೇವ ದೀರ್ಯತಃ ॥13॥
ಮೋಡಗಳ ಗುಡುಗಿನಂಥ ಪರ್ವತವೇ ಸೀಳಿಹೋಗುವಂಥ ಕರ್ಣರಥದ ಧ್ವನಿ ಮಹಾರಣದಲ್ಲಿ ಪ್ರಾದುರ್ಭವಿಸಿತು.
ತತಃ ಶರಶತೈಸ್ತೀಕ್ಷ್ಣೈ ೯ಣ ್ಯಃ ಕರ್ಣೋಽಪ್ಯಾಕರ್ಣನಿಃಸೃತೈಃ ।
ಜಘಾನ ಪಾಂಡವಬಲಂ ಶತಶೋಽಥ ಸಹಸ್ರಶಃ ॥14॥
ಕರ್ಣನು ಕಿವಿವರೆಗೆ ಸೆಳೆದು ಎಸೆದ ತೀಕ್ಷ್ಣವಾದ ನೂರಾರು ಬಾಣಗಳಿಂದ ಪಾಂಡವಸೈನ್ಯದಲ್ಲಿ ನೂರಾರು ಸಾವಿರಾರು ಸೈನಿಕರನ್ನು ಸಂಹರಿಸಿದ.
ತಂ ತಥಾ ಸಮರೇ ಕರ್ಮ ಕುರ್ವಾಣಮತಿಮಾನುಷಮ್ ।
ಪರಿವವ್ರುರ್ಮಹೇಷ್ವಾಸಾಃ ಪಾಂಡವಾನಾಂ ಮಹಾರಥಾಃ ॥15॥
ಕರ್ಣನು ರಣದಲ್ಲಿ ಹಾಗೆ ಅಮಾನುಷವಾಗಿ ವಧೆಮಾಡುವಾಗ ಪಾಂಡವಪಕ್ಷದ ಮಹಾಬಿಲ್ಗಾರರಾದ ಮಹಾರಥರು ಅವನನ್ನು ಸುತ್ತುವರಿದರು.
ತಂ ಶಿಖಂಡೀ ಚ ಭೀಮಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ।
ನಕುಲಃ ಸಹದೇವಶ್ಚ ದ್ರೌಪದೇಯಾಃ ಸಸಾತ್ಯಕಾಃ ।
ಪರಿವವ್ರುರ್ಜಿಘಾಂಸಂತೋ ರಾಧೇಯಂ ಶರವೃಷ್ಟಿಭಿಃ ॥16॥
ಶಿಖಂಡಿ ಭೀಮ ಧೃಷ್ಟದ್ಯುಮ್ನ ನಕುಲಸಹದೇವ ದ್ರೌಪದೀಪುತ್ರರು ಸಾತ್ಯಕಿ ಇವರೆಲ್ಲರೂ ಕರ್ಣನನ್ನು ಬಾಣಗಳ ಮಳೆಗರೆದು ಕೊಲ್ಲಲು ಬಯಸಿ ಸುತ್ತುವರಿದರು.
ಸಾತ್ಯಕಿಸ್ತು ತತಃ ಕರ್ಣಂ ವಿಂಶತ್ಯಾ ನಿಶಿತೈಃ ಶರೈಃ ।
ಅತಾಡಯದ್ ರಣೇ ಶೂರೋ ಜತ್ರುದೇಶೇ ನರೋತ್ತಮಃ ॥17॥
ಪುರುಷಶ್ರೇಷ್ಠನಾದ ಶೂರ ಸಾತ್ಯಕಿಯು ರಣದಲ್ಲಿ ಇಪ್ಪತ್ತು ತೀಕ್ಷ್ಣಬಾಣಗಳಿಂದ ಕರ್ಣನ ಕೊರಳಿನ ಎಲುಬಿಗೆ ಹೊಡೆದ.
ಶಿಖಂಡೀ ಪಂಚವಿಂಶತ್ಯಾ ಧೃಷ್ಟದ್ಯುಮ್ನಶ್ಚ ಸಪ್ತಭಿಃ ।
ದ್ರೌಪದೇಯಾಶ್ಚತುಃಷಷ್ಟ್ಯಾ ಸಹದೇವಶ್ಚ ಸಪ್ತಭಿಃ ।
ನಕುಲಶ್ಚ ಶತೇನಾಜೌ ಕರ್ಣಂ ವಿವ್ಯಾಧ ಸಾಯಕೈಃ ॥18॥
ಶಿಖಂಡಿಯು ಇಪ್ಪತ್ತೈದು, ಧೃಷ್ಟದ್ಯುಮ್ನನು ಏಳು, ದ್ರೌಪದೀಪುತ್ರರು ಅರವತ್ತನಾಲ್ಕು, ಸಹದೇವನು ಏಳು, ನಕುಲನು ನೂರು, ಈ ಕ್ರಮದಿಂದ ಬಾಣಗಳನ್ನೆಸೆದು ಕರ್ಣನನ್ನು ಹೊಡೆದರು.
ಭೀಮಸೇನಸ್ತು ರಾಧೇಯಂ ನವತ್ಯಾ ನತಪರ್ವಣಾಮ್ ।
ವಿವ್ಯಾಧ ಸಮರೇ ಕ್ರುದ್ಧೋ ಜತ್ರುದೇಶೇ ಮಹಾಬಲಃ ॥19॥
ಮಹಾಬಲಿ ಭೀಮಸೇನನು ಕ್ರುದ್ಧನಾಗಿ ಡೊಂಕುಗಿಣ್ಣಿನ ತೊಂಬತ್ತು ಬಾಣಗಳಿಂದ ರಣದಲ್ಲಿ ಕರ್ಣನ ಕೊರಳಿನೆಲುಬಿಗೆ ಹೊಡೆದ.

ತತಃ ಪ್ರಹಸ್ಯಾಧಿರಥಿರ್ವಿಕ್ಷಿಪನ್ ಧನುರುತ್ತಮಮ್ |
ಮುಮೋಚ ನಿಶಿತಾನ್ ಬಾಣಾನ್ ಪೀಡಯನ್ ಸುಮಹಾಬಲಃ |
ತಾನ್ ಪ್ರತ್ಯವಿಧ್ಯದ್ ರಾಧೇಯಃ ಪಂಚಭಿಃ ಪಂಚಭಿಃ ಶರೈಃ ||20||
ಆಗ ಮಹಾಬಲಿ ರಾಧೇಯ ಆಧಿರಥಿ ಕರ್ಣನು ನಕ್ಕು ಉತ್ತಮವಾದ ಧನುಸ್ಸನ್ನು ಸೆಳೆದು ತೀಕ್ಷ್ಣವಾದ ಬಾಣಗಳನ್ನು ಪಾಂಡವಮಹಾರಥರ ಮೇಲೆ ಎಸೆದ. ಅವರಲ್ಲಿ ಪ್ರತಿಯೊಬ್ಬರನ್ನೂ ಐದೈದು ಬಾಣಗಳಿಂದ ಪೀಡಿಸುತ್ತ ಹೊಡೆದ.
ಸಾತ್ಯಕೇಸ್ತು ಧನುಶ್ಛಿತ್ತ್ವಾ ಧ್ವಜಂ ಚ ಪುರುಷರ್ಷಭಃ |
ಅಥೈನಂ ನವಭಿರ್ಬಾಣೈರಾಜಘಾನ ಸ್ತನಾಂತರೇ ||21||
ಸಾತ್ಯಕಿಯ ಧನುಸ್ಸನ್ನೂ ಧ್ವಜವನ್ನೂ ಕಡಿದು ಒಂಬತ್ತು ಬಾಣಗಳಿಂದ ಅವನ ಎದೆಗೆ ಹೊಡೆದ.
ಭೀಮಸೇನಸ್ತು ತಂ ಕ್ರುದ್ಧೋ ವಿವ್ಯಾಧ ತ್ರಿಂಶತಾ ಶರೈಃ |
ಸಾರಥಿಂ ಚ ತ್ರಿಭಿರ್ಬಾಣೈರಾಜಘಾನ ಪರಂತಪಃ ||22||
ಶತ್ರುನಾಶಕನಾದ ಭೀಮಸೇನನು ಕ್ರುದ್ಧನಾಗಿ ಕರ್ಣನನ್ನು ಮೂವತ್ತು ಬಾಣಗಳಿಂದ ಹೊಡೆದ, ಮೂರು ಬಾಣಗಳಿಂದ ಸಾರಥಿಯನ್ನೂ ಹೊಡೆದ.
ವಿರಥಾನ್ ದ್ರೌಪದೇಯಾಂಶ್ಚ ಚಕಾರ ಪುರುಷರ್ಷಭಃ |
ಅಕ್ಷ್ಣೋರ್ನಿಮೇಷಮಾತ್ರೇಣ ತದದ್ಭುತಮಿವಾಭವತ್ ||23||
ಕರ್ಣನು ದ್ರೌಪದೀಪುತ್ರರನ್ನು ಕಣ್ಣುರೆಪ್ಪೆ ಹೊಡೆಯುವುದರೊಳಗೇ ವಿರಥರನ್ನಾಗಿ ಮಾಡಿದ. ಇದು ಅದ್ಭುತವಾಗಿತ್ತು.
ವಿಮುಖೀಕೃತ್ಯ ತಾನ್ ಸರ್ವಾನ್ ಶರೈಃ ಸನ್ನತಪರ್ವಭಿಃ |
ಪಾಂಚಾಲಾನಹನತ್ ಶೂರಶ್ಚೇದೀನಾಂ ಚ ಮಹಾರಥಾನ್ ||24||
ಅವರೆಲ್ಲರನ್ನೂ ಡೊಂಕುಗೆಣ್ಣಿನ ಬಾಣಗಳಿಂದ ಹಿಮ್ಮೆಟ್ಟಿಸಿ, ಶೂರ ಕರ್ಣನು ಪಾಂಚಾಲ ಮತ್ತು ಚೇದಿ ಮಹಾರಥರನ್ನು ಸಂಹರಿಸಿದ.
ತೇ ವಧ್ಯಮಾನಾಃ ಸಮರೇ ಚೇದಿಮತ್ಸ್ಯಾ ವಿಶಾಂಪತೇ |
ಕರ್ಣಮೇಕಮಭಿದ್ರುತ್ಯ ಶರಸಂಘೈಃ ಸಮಾರ್ದಯನ್ |
ತಾನ್ ಜಘಾನ ಶಿತೈರ್ಬಾಣೈಃ ಸೂತಪುತ್ರೋ ಮಹಾರಥಃ ||25||
ರಾಜನೆ, ರಣದಲ್ಲಿ ಚೇದಿಮತ್ಸ್ಯರು ಕರ್ಣನಿಂದ ಹೊಡೆಸಿಕೊಳ್ಳುತ್ತ ಕರ್ಣನೊಬ್ಬನನ್ನು ಆಕ್ರಮಿಸಿ ಬಾಣಸಮೂಹಗಳಿಂದ ಪೀಡಿಸಿದರು. ಅವರನ್ನು ಮಹಾರಥನಾದ ಕರ್ಣನು ಹರಿತವಾದ ಬಾಣಗಳಿಂದ ಹೊಡೆದ.
ಏತದತ್ಯದ್ಭುತಂ ಕರ್ಣೇ ದೃಷ್ಟವಾನಸ್ಮಿ ಭಾರತ |
ಯದೇಕಃ ಸಮರೇ ಶೂರಾನ್ ಸೂತಪುತ್ರಃ ಪ್ರತಾಪವಾನ್ ||26||
ಯತಮಾನಾನ್ ಪರಂ ಶಕ್ತ್ಯಾಯೋಧಯತ್ ತಾಂಶ್ಚ ಧನ್ವಿನಃ |
ಪಾಂಡವೇಯಾನ್ ಮಹಾರಾಜ ಶರೈರ್ವಾರಿತವಾನ್ ರಣೇ ||27||
ರಾಜನೆ, ಕರ್ಣನಲ್ಲಿ ನಾನೊಂದು ಅತಿ ಅದ್ಭುತವನ್ನು ಕಂಡೆ. ಅದೇನೆಂದರೆ ಪ್ರತಾಪಶಾಲಿಯಾದ ಅವನು ಒಬ್ಬನೆ ಸಮರದಲ್ಲಿ ಪಾಂಡವಪಕ್ಷದ ಅನೇಕ ಬಿಲ್ಲಾಳುಗಳಾದ ಶೂರರನ್ನು ಅವರು ಜಯಕ್ಕೆ ಬಹಳ ಯತ್ನಿಸುತ್ತಿರುವಾಗಲೆ ಸ್ವಶಕ್ತಿಯಿಂದ ಇದಿರಿಸಿದ ಮತ್ತು ರಣದಲ್ಲಿ ಬಾಣಗಳಿಂದ ತಡೆದ.
ತತ್ರ ಭಾರತ ಕರ್ಣಸ್ಯ ಲಾಘವೇನ ಮಹಾತ್ಮನಃ |
ತುತುಷುರ್ದೇವತಾಃ ಸರ್ವಾಃ ಸಿದ್ಧಾಶ್ಚ ಪರಮರ್ಷಯಃ ||28||
ರಾಜನೆ, ಆಗ ಮಹಾತ್ಮನಾದ ಕರ್ಣನ ವೇಗದಿಂದ ಎಲ್ಲ ದೇವತೆಗಳೂ ಸಿದ್ಧರೂ ಮಹರ್ಷಿಗಳೂ ಸಂತೋಷಪಟ್ಟರು.
ಅಪೂಜಯನ್ ಮಹೇಷ್ವಾಸಾ ಧಾರ್ತರಾಷ್ಟ್ರಾ ನರೋತ್ತಮಮ್ |
ಕರ್ಣಂ ರಥವರಶ್ರೇಷ್ಠಂ ಶ್ರೇಷ್ಠಂ ಸರ್ವಧನುಷ್ಮತಾಮ್ ||29||
ಕರ್ಣನು ಶ್ರೇಷ್ಠ ರಥಿಕರಲ್ಲಿ ಶ್ರೇಷ್ಠ , ಎಲ್ಲ ಬಿಲ್ಲಾಳುಗಳಿಗಿಂತ ಶ್ರೇಷ್ಠ, ಪುರುಷಶ್ರೇಷ್ಠನೆಂದು ಮಹಾಬಿಲ್ಲಾಳುಗಳಾದ ಕೌರವರು ಅಭಿನಂದಿಸಿದರು.
ತತಃ ಕರ್ಣೋ ಮಹಾರಾಜ ದದಾಹ ರಿಪುವಾಹಿನೀಮ್ |
ಕಕ್ಷಮಿದ್ಧೋ ಯಥಾ ವಹ್ನಿರ್ನಿದಾಘೇ ಜ್ವಲಿತೋ ಮಹಾನ್ ||30||
ಮಹಾರಾಜ, ಬೇಸಿಗೆಯಲ್ಲಿ ಹುಲ್ಲಿನ ಪೊದೆಯಲ್ಲಿ ಬಿದ್ದ ಬೆಂಕಿ ದೊಡ್ಡದಾಗಿ ಜ್ವಲಿಸಿ ಪೊದೆಯನ್ನು ಸುಡುವಂತೆ ಕರ್ಣನು ಶತ್ರುಸೈನ್ಯವನ್ನು ದಹಿಸಿದ.
ತೇ ವಧ್ಯಮಾನಾಃ ಕರ್ಣೇನ ಪಾಂಡವೇಯಾಸ್ತತಸ್ತತಃ |
ಪ್ರಾದ್ರವಂತ ರಣೇ ಭೀತಾಃ ಕರ್ಣಂ ದೃಷ್ಟ್ವಾ ಮಹಾಬಲಮ್ ||31||
ಪಾಂಡವರ ಸೈನಿಕರು ಕರ್ಣನಿಂದ ಪೀಡಿತರಾಗುವಾಗ ಮಹಾಬಲಿಯಾದ ಕರ್ಣನನ್ನು ರಣದಲ್ಲಿ ಕಂಡು ಭೀತರಾಗಿ ಎಲ್ಲೆಡೆ ಪಲಾಯನಗೈದರು.
ತತ್ರಾಕ್ರಂದೋ ಮಹಾನಾಸೀತ್ ಪಾಂಚಾಲಾನಾಂ ಮಹಾರಣೇ |
ವಧ್ಯತಾಂ ಸಾಯಕೈಸ್ತೀಕ್ಷ್ಣೈಃ ಕರ್ಣಚಾಪವರಚ್ಯುತೈಃ ||32||
ಮಹಾರಣದಲ್ಲಿ ಕರ್ಣನ ಉತ್ತಮ ಧನುಸ್ಸಿನಿಂದ ಹೊರಟ ತೀಕ್ಷ್ಣವಾದ ಬಾಣಗಳಿಂದ ಹತರಾಗುವ ಪಾಂಚಾಲರ ಆರ್ತನಾದ ಬಹಳ ದೊಡ್ಡದಾಗಿತ್ತು.
ತೇನ ಶಬ್ದೇನ ವಿತ್ರಸ್ತಾ ಪಾಂಡವಾನಾಂ ಮಹಾಚಮೂಃ |

ಕರ್ಣಮೇಕಂ ರಣೇ ಯೋಧಂ ಮೇನಿರೇ ತತ್ರ ಶಾತ್ರವಾಃ ॥33॥
ಆ ಶಬ್ದದಿಂದಲೆ ಪಾಂಡವರ ಮಹಾಸ್ಯೆನ್ಯ ಭಯಗ್ರಸ್ತವಾಯಿತು. ಆಗ ಶತ್ರುಗಳು ಕರ್ಣನೊಬ್ಬನೆ ರಣದಲ್ಲಿ ಯೋಧನೆಂದು ತಿಳಿದರು.
ತತ್ರಾದ್ಭುತಂ ಪರಂ ಚಕ್ರೇ ರಾಧೇಯಃ ಶತ್ರುಕರ್ಶನಃ |
ಯದೇಕಂ ಪಾಂಡವಾಃ ಸರ್ವೇ ನ ಶೇಕುರಭಿವೀಕ್ಷಿತುಮ್ ॥34॥
ಆಗ ಶತ್ರುನಾಶಕನಾದ ಕರ್ಣನು ಒಂದು ಅದ್ಭುತವನ್ನೇ ಮಾಡಿದ್ದ. ಅದೇನೆಂದರೆ ಅವನೊಬ್ಬನನ್ನು ಪಾಂಡವಯೋಧರು ಯಾರೂ ದಿಟ್ಟಿಸಿ ನೋಡುವುದಕ್ಕೂ ಶಕ್ತರಾಗಲಿಲ್ಲ.
ಯಥೌಘಃ ಪರ್ವತಶ್ರೇಷ್ಠಮಾಸಾದ್ಯಾಭಿಪ್ರದೀರ್ಯತೇ |
ತಥಾ ತತ್ಪಾಂಡವಂ ಸೈನ್ಯಂ ಕರ್ಣಮಾಸಾದ್ಯ ದೀರ್ಯತೇ ॥35॥
ದೊಡ್ಡ ನೀರಿನ ಪ್ರವಾಹವು ಬಂದು ಬೆಟ್ಟದ ಬುಡದಲ್ಲಿ ಒಡೆದು ಭಾಗವಾಗುವಂತೆ ಪಾಂಡವಸ್ಯೆನ್ಯವು ಕರ್ಣನ ಇದಿರಿಗೆ ನಿಂತರೆ ಒಡನೆ ಚದುರಿತು.
ಕರ್ಣೋಽಪಿ ಸಮರೇ ರಾಜನ್ ವಿಧೂಮೋಽಗ್ನಿರಿವ ಜ್ವಲನ್ |
ದಹಂಸ್ತಸ್ಥೌ ಮಹಾಬಾಹುಃ ಪಾಂಡವಾನಾಂ ಮಹಾಚಮೂಮ್ ॥36॥
ಮಹಾಬಾಹು ಕರ್ಣನು ಸಮರದಲ್ಲಿ ಹೊಗೆಯಿಲ್ಲದ ಬೆಂಕಿಯಂತೆ ಜ್ವಲಿಸುತ್ತ ಪಾಂಡವರ ಮಹಾಸ್ಯೆನ್ಯವನ್ನು ಸುಡುತ್ತ ನಿಂತ.
ಶಿರಾಂಸಿ ಚ ಮಹಾರಾಜ ಕರ್ಣಾಂಶ್ಚೈವ ಸಕುಂಡಲಾನ್ |
ಬಾಹೂಂಶ್ಚ ವೀರೋ ವೀರಾಣಾಂ ಚಿಚ್ಛೇದ ಲಘು ಚೇಷುಭಿಃ ॥37॥
ಮಹಾರಾಜ, ವೀರಕರ್ಣನು ವೀರರ ಶಿರಸ್ಸುಗಳನ್ನೂ ಕುಂಡಲಸಹಿತವಾದ ಕಿವಿಗಳನ್ನೂ ಬಾಹುಗಳನ್ನೂ ಬೇಗನೆ ಬಾಣಗಳಿಂದ ಕತ್ತರಿಸಿದ.
ಹಸ್ತಿದಂತಾನ್ತ್ಸರೂನ್ ಖಡ್ಗಾನ್ ಧ್ವಜಾನ್ ಶಕ್ತೀರ್ಹಯಾನ್ ಗಜಾನ್ |
ರಥಾಂಶ್ಚ ವಿವಿಧಾನ್ ರಾಜನ್ ಪತಾಕಾ ವ್ಯಜನಾನಿ ಚ ॥38॥
ಅಕ್ಷೇಷಾಯುಗಯೋಕ್ತ್ರಾಣಿ ಚಕ್ರಾಣಿ ವಿವಿಧಾನಿ ಚ |
ಚಿಚ್ಛೇದ ಶತಧಾ ಕರ್ಣೋ ಯೋಧವ್ರತಮನುಷ್ಠಿತಃ ॥39॥
ಯೋಧರ ವ್ರತವನ್ನು ನಡೆಸುವ ಕರ್ಣನು ಶತ್ರುಗಳ ಹಸ್ತಿದಂತನಿರ್ಮಿತ ಖಡ್ಗದ ಹಿಡಿಗಳನ್ನೂ ಖಡ್ಗಗಳನ್ನೂ ಧ್ವಜಗಳನ್ನೂ ಶಕ್ತಿಗಳನ್ನೂ ನಾನಾವಿಧ ಅಶ್ವ ಗಜ ರಥಗಳನ್ನೂ ಪತಾಕೆಗಳನ್ನೂ ವ್ಯಜನಗಳನ್ನೂ ಅಕ್ಷ ಈಷಾ ಯುಗ ಯೋಕ್ತ್ರ ಗಳನ್ನೂ ನಾನಾ ವಿಧವಾದ ಚಕ್ರಗಳನ್ನೂ ನೂರು ಚೂರುಗಳಾಗಿ ಕತ್ತರಿಸಿದ.
ತತ್ರ ಭಾರತ ಕರ್ಣೇನ ನಿಹತೈರ್ಗಜವಾಜಿಭಿಃ |
ಅಗಮ್ಯರೂಪಾ ಪೃಥಿವೀ ಮಾಂಸಶೋಣಿತಕರ್ದಮಾ ॥40॥
ರಾಜನೆ, ಕರ್ಣನು ವಧಿಸಿದ ಗಜ ಅಶ್ವಗಳಿಂದ ರಣಭೂಮಿ ಮಾಂಸ ರಕ್ತಗಳಿಂದ ತುಂಬಿ ದುರ್ಗಮವಾಯಿತು.
ವಿಷಮಂ ಚ ಸಮಂ ಚೈವ ಹತೈರಶ್ವಪದಾತಿಭಿಃ |
ರಥೈಶ್ಚ ಕುಂಜರೈಶ್ಚೈವ ನ ಪ್ರಾಜ್ಞಾಯತ ಕಿಂಚನ ॥41॥
ಕುದುರೆ ಪದಾತಿಗಳು ರಥ ಗಜಗಳು ಹತವಾಗಿ ಎಲ್ಲೆಡೆ ಹರಡಿದ್ದರಿಂದ ರಣಭೂಮಿಯಲ್ಲಿ ಹಳ್ಳತಿಟ್ಟುಗಳೊಂದೂ ತಿಳಿಯದಾಯಿತು.
ನಾಪಿ ಸ್ವೇ ನ ಪರೇ ಯೋಧಾಃ ಪ್ರಾಜ್ಞಾಯಂತ ಪರಸ್ಪರಮ್ |
ಘೋರೇ ಶರಾಂಧಕಾರೇ ತು ಕರ್ಣಾಸ್ತ್ರೇ ಚ ವಿಜೃಂಭಿತೇ ॥42॥
ಯೋಧರಲ್ಲಿ ತಮ್ಮವರು ಪರಕೀಯರು ಎಂದು ಪರಸ್ಪರ ಭೇದವೂ ತಿಳಿಯದಾಯಿತು. ಘೋರವಾದ ಬಾಣಗಳ ಅಂಧಕಾರದಲ್ಲಿ ಕರ್ಣನ ಅಸ್ತ್ರ ಒಂದೇ ಎಲ್ಲೆಡೆ ಕಾಣುತ್ತಿತ್ತು.
ರಾಧೇಯಚಾಪನಿರ್ಮುಕ್ತೈಃ ಶರೈಃ ಕಾಂಚನಭೂಷಿತೈಃ |
ಸಂಛಾದಿತಾ ಮಹಾರಾಜ ಯತಮಾನಾ ಮಹಾರಥಾಃ ॥43॥
ತೇ ಪಾಂಡವೇಯಾಃ ಸಮರೇ ಕರ್ಣೇನ ಸ್ಮ ಪುನಃ ಪುನಃ |
ಅಭಜ್ಯಂತ ಮಹಾರಾಜ ಯತಮಾನಾ ಮಹಾರಥಾಃ ॥44॥
ಮಹಾರಾಜ, ಕರ್ಣನ ಧನುಸ್ಸಿನಿಂದ ಹೊರಟ ಬಂಗಾರದಿಂದ ಅಲಂಕೃತವಾದ ಬಾಣಗಳಿಂದ, ಪಾಂಡವಪಕ್ಷದ ಮಹಾರಥರು ಎಷ್ಟು ಯತ್ನಿಸಿದರೂ ಮುಚ್ಚಿ ಹೋದರು. ರಣದಲ್ಲಿ ಕರ್ಣನಿಂದ ಪುನಃಪುನಃ ಪರಾಜಿತರಾದರು.
ಮೃಗಸಂಘಾನ್ಯಥಾ ಕ್ರುದ್ಧಃ ಸಿಂಹೋ ದ್ರಾವಯತೇ ವನೇ |
ಕರ್ಣಸ್ತು ಸಮರೇ ಯೋಧಾನ್ ತತ್ರ ತತ್ರ ಮಹಾಯಶಾಃ |
ಕಾಲಯಾಮಾಸ ತತ್ಸೈನ್ಯಂ ಯಥಾ ಪಶುಗಣಾನ್ ವೃಕಃ ॥45॥
ಕಾಡಿನಲ್ಲಿ ಕ್ರುದ್ಧವಾದ ಸಿಂಹವು ಮೃಗಸಮೂಹಗಳನ್ನು ಬೆನ್ನಟ್ಟುವಂತೆ, ತೋಳವು ಪಶುಸಮೂಹಗಳನ್ನು ಸಂಹರಿಸುವಂತೆ, ರಣದಲ್ಲಿ ಮಹಾ ಯಶಸ್ವಿಯಾದ ಕರ್ಣನು ಪಾಂಡವರ ಸ್ಯೆನ್ಯವನ್ನು, ಅವರ ಯೋಧರನ್ನು ಎಲ್ಲೆಡೆ ನಾಶಮಾಡುತ್ತ ನಡೆದ.
ದೃಷ್ಟ್ವಾ ತು ಪಾಂಡವೀಂ ಸೇನಾಂ ಧಾರ್ತರಾಷ್ಟ್ರಾಃ ಪರಾಙ್ಮುಖೀಮ್ |
ಅಭಿಜಗ್ಮುರ್ಮಹೇಷ್ವಾಸಾ ರುವಂತೋ ಭೈರವಾನ್ ರವಾನ್ ॥46॥
ಪಾಂಡವರ ಸೈನ್ಯ ಹಿಮ್ಮೆಟ್ಟುತ್ತಿರುವುದನ್ನು ಕಂಡು ಕೌರವರು ಭಯಂಕರ ಧ್ವನಿಯಿಂದ ಗರ್ಜನೆ ಮಾಡುತ್ತ ಅವರನ್ನು ಆಕ್ರಮಿಸಿದರು.
ದುರ್ಯೋಧನೋ ಹಿ ರಾಜೇಂದ್ರ ಮುದಾ ಪರಮಯಾ ಯುತಃ |

ವಾದಯಾಮಾಸ ಸಂಹೃಷ್ಟೋ ನಾನಾವಾದ್ಯಾನಿ ಸರ್ವಶಃ ॥47॥
ಮಹಾರಾಜ, ದುರ್ಯೋಧನನು ಪರಮ ಸಂತೋಷಯುಕ್ತನಾಗಿ, ಬಲು ಉತ್ಸಾಹಿತನಾಗಿ ಎಲ್ಲೆಡೆ ನಾನಾ ವಾದ್ಯಗಳನ್ನು ಮೊಳಗಿಸಿದ.
ಪಾಂಚಾಲಾಶ್ಚ ಮಹೇಷ್ವಾಸಾ ಭಗ್ನಾಸ್ತತ್ರ ಮಹಾರಣೇ |
ನ್ಯವರ್ತಂತ ತಥಾ ಶೂರಾ ಮೃತ್ಯುಂ ಕೃತ್ವಾ ನಿವರ್ತನಮ್ ॥48॥
ಆದರೆ ಆ ಮಹಾರಣದಲ್ಲಿ ಪರಾಭವಗೊಳ್ಳುತ್ತಿದ್ದ ಪಾಂಚಾಲ ಬಿಲ್ಗಾರರು ಮಾತ್ರ ಧೃತಿಗೆಡದೆ, `ಮರಣ ಬಂದರೇ ಯುದ್ಧದಿಂದ ನಿವೃತ್ತಿ' ಎಂದು ನಿಶ್ಚಯ ಮಾಡಿಕೊಂಡು, ಪಲಾಯನ ಮಾಡುತ್ತಿದ್ದವರು ಹಿಂತಿರುಗಿದರು.
ತಾನ್ನಿವೃತ್ತಾನ್ ರಣೇ ಶೂರಾನ್ ರಾಧೇಯಃ ಶತ್ರುತಾಪನಃ |
ಅನೇಕಶೋ ಮಹಾರಾಜ ಬಭಂಜ ಪುರುಷರ್ಷಭಃ ॥49॥
ಮಹಾರಾಜ, ರಣದಲ್ಲಿ ಹಿಂತಿರುಗಿ ಬಂದ ಶೂರರಾದ ಅನೇಕ ಪಾಂಚಾಲರನ್ನು ಪುರುಷಶ್ರೇಷ್ಠ ಶತ್ರುನಾಶಕ ಕರ್ಣನು ಪರಾಭವಗೊಳಿಸಿದ.
ತತ್ರ ಭಾರತ ಕರ್ಣೇನ ಪಾಂಚಾಲಾ ವಿಂಶತೀ ರಥಾಃ |
ನಿಹತಾಃ ಸಾದಯಃ ಕ್ರೋಧಾಚ್ಚೇದಯಶ್ಚ ಪರಃಶತಾಃ ॥50॥
ರಾಜನೆ, ಆಗ ಕರ್ಣನಿಂದ ಇಪ್ಪತ್ತು ಪಾಂಚಾಲ ರಥಿಕರೂ ನೂರಕ್ಕೂ ಹೆಚ್ಚು ಚೇದಿ ಅಶ್ವಯೋಧರೂ ಕೋಪದಿಂದ ಹತರಾದರು.
ಕೃತ್ವಾ ಶೂನ್ಯಾನ್ ರಥೋಪಸ್ಥಾನ್ ವಾಜಿಪೃಷ್ಠಾಂಶ್ಚ ಭಾರತ |
ನಿರ್ಮನುಷ್ಯಾನ್ ಗಜಸ್ಕಂಧಾನ್ ಪಾದಾತಾಂಶ್ಚೈವ ವಿದ್ರುತಾನ್ ॥51॥
ಆದಿತ್ಯ ಇವ ಮಧ್ಯಾಹ್ನೇ ದುರ್ನಿರೀಕ್ಷ್ಯಃ ಪರಂತಪಃ |
ಕಾಲಾಂತಕವಪುಃ ಕ್ರೂರಃ ಸೂತಪುತ್ರಶ್ಚಚಾರ ಹ ॥52॥
ರಾಜನೆ, ರಥದೊಳಗಿನ ಆಸನಗಳನ್ನೂ ಅಶ್ವಗಳ ಬೆನ್ನು ಮತ್ತು ಗಜಗಳ ಹೆಗಲುಗಳನ್ನೂ ಮನುಷ್ಯರಿಲ್ಲದೆ ಶೂನ್ಯವಾಗುವಂತೆ ಮಾಡಿ ಪದಾತಿಗಳನ್ನು ಪಲಾಯನ ಗೈಸಿ ಕಾಲಯಮನಂಥ ರೂಪದ ಕ್ರೂರನಾದ ಶತ್ರುತಾಪಕನಾದ ಕರ್ಣನು ಮಧ್ಯಾಹ್ನದ ಸೂರ್ಯನಂತೆ ದಿಟ್ಟಿಸಿ ನೋಡಲೂ ಅಶಕ್ಯನಾದ.
ಏವಮೇತಾನ್ ಮಹಾರಾಜ ನರವಾಜಿರಥದ್ವಿಪಾನ್ |
ಹತ್ವಾ ತಸ್ಥೌ ಮಹೇಷ್ವಾಸಃ ಕರ್ಣೋಽರಿಗಣಸೂದನಃ ॥53॥
ಮಹಾರಾಜ, ಹೀಗೆ ಮಹಾಬಿಲ್ಗಾರನಾದ ಶತ್ರುಸಮೂಹನಾಶಕನಾದ ಕರ್ಣನು ಈ ಪದಾತಿ ಅಶ್ವ ರಥ ಗಜ ಯೋಧರನ್ನು ಸಂಹರಿಸಿ ಅಜೇಯನಾಗಿ ನಿಂತ.
ಯಥಾ ಭೂತಗಣಾನ್ ಹತ್ವಾ ಕಾಲಸ್ತಿಷ್ಠೇನ್ಮಹಾಬಲಃ |
ತಥಾ ಸ ಸೋಮಕಾನ್ ಹತ್ವಾ ತಸ್ಥಾವೇಕೋ ಮಹಾರಥಃ ॥54॥
ಪ್ರಾಣಿಸಮೂಹಗಳನ್ನು ಸಂಹರಿಸಿ ಮಹಾಬಲಿ ಕಾಲಯಮನು ನಿಲ್ಲುವಂತೆ ಮಹಾರಥನಾದ ಕರ್ಣನು ಸೋಮಕರನ್ನು ಸಂಹರಿಸಿ ಒಬ್ಬನೇ ನಿಂತ.
ತತ್ರಾದ್ಭುತಮಪಶ್ಯಾಮ ಪಾಂಚಾಲಾನಾಂ ಪರಾಕ್ರಮಮ್ |
ವಧ್ಯಮಾನಾಶ್ಚ ಯೇ ಕರ್ಣಂ ನ ಜಹೂ ರಣಮೂರ್ಧನಿ ॥55॥
ಆಗ ಪಾಂಚಾಲರ ಪರಾಕ್ರಮ ಅದ್ಭುತವಾಗಿದ್ದುದನ್ನು ನಾವು ಕಂಡೆವು. ಅವರು ಕರ್ಣನಿಂದ ಹೊಡೆಸಿಕೊಳ್ಳುತ್ತಿದ್ದರೂ ರಣರಂಗದ ಮುಂಭಾಗದಲ್ಲಿ ಕರ್ಣನನ್ನು ಬಿಡಲಿಲ್ಲ.
ರಾಜಾ ದುಃಶಾಸನಶ್ಚೈವ ಕೃಪಃ ಶಾರದ್ವತಸ್ತಥಾ |
ಅಶ್ವತ್ಥಾಮಾ ಕೃತವರ್ಮಾ ಶಕುನಿಶ್ಚಾಪಿ ಸೌಬಲಃ |
ನ್ಯಹನನ್ ಪಾಂಡವೀಂ ಸೇನಾಂ ಶತಶೋಽಥ ಸಹಸ್ರಶಃ ॥56॥
ದುರ್ಯೋಧನ ದುಃಶಾಸನ ಕೃಪ ಅಶ್ವತ್ಥಾಮ ಕೃತವರ್ಮ ಶಕುನಿ ಇವರೆಲ್ಲರೂ ಪಾಂಡವ ಸೈನ್ಯವನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದರು.
ಕರ್ಣಪುತ್ರೌ ಚ ರಾಜೇಂದ್ರ ಭ್ರಾತರೌ ಸತ್ಯವಿಕ್ರಮೌ |
ಅನಾಶಯೇತಾಂ ಬಲಿನಃ ಪಾಂಚಾಲಾನ್ ವೈ ತತಸ್ತತಃ |
ತತ್ರ ಯುದ್ಧಂ ತದಾ ಹ್ಯಾಸೀತ್ಕ್ರೂರಂ ವಿಶಸನಂ ಮಹತ್ ॥57॥
ರಾಜನೆ, ಕರ್ಣನ ಇಬ್ಬರು ಪುತ್ರರು ನಿಜವಾದ ಪರಾಕ್ರಮವನ್ನು ತೋರುವ ಸೋದರರು ಬಲಿಷ್ಠರಾದ ಪಾಂಚಾಲರನ್ನು ಎಲ್ಲೆಡೆ ನಾಶಗೊಳಿಸಿದರು. ಆಗ ನಡೆದ ಯುದ್ಧ ಕ್ರೂರವಾಗಿತ್ತು. ಮಹಾವಿನಾಶಕಾರಿಯಾಗಿತ್ತು.
ತಥೈವ ಪಾಂಡವಾಃ ಶೂರಾ ಧೃಷ್ಟದ್ಯುಮ್ನಶಿಖಂಡಿನೌ |
ದ್ರೌಪದೇಯಾಶ್ಚ ಸಂಕ್ರುದ್ಧಾ ಅಭ್ಯಘ್ನನ್ ತಾವಕಂ ಬಲಮ್ ॥58॥
ಹಾಗೆಯೇ ಶೂರರಾದ ಪಾಂಡವರೂ ಧೃಷ್ಟದ್ಯುಮ್ನ ಶಿಖಂಡಿಗಳೂ ದ್ರೌಪದೀಪುತ್ರರೂ ಬಲುಕುಪಿತರಾಗಿ ನಿನ್ನ ಸೈನ್ಯವನ್ನು ಆಕ್ರಮಿಸಿ ಹೊಡೆದರು.
ಏವಮೇವ ಕ್ಷಯೋ ವೃತ್ತಃ ಪಾಂಡವಾನಾಂ ತತಸ್ತತಃ |
ತಾವಕಾನಾಮಪಿ ರಣೇ ಭೀಮಂ ಪ್ರಾಪ್ಯ ಮಹಾಬಲಮ್ ॥59॥
ಹೀಗೇ ಎಲ್ಲೆಡೆ ಪಾಂಡವಯೋಧರ ವಿನಾಶವೂ ಆಯಿತು. ಮಹಾಬಲಿ ಭೀಮನನ್ನು ಇದಿರಿಸಿ ನಿನ್ನ ಕಡೆ ಯೋಧರ ವಿನಾಶವೂ ಉಂಟಾಯಿತು.

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಕರ್ಣಜಯೋ ನಾಮ ಪಂಚಸಪ್ತತಿತಮೋಽಧ್ಯಾಯಃ ॥75॥

ಎಪ್ಪತ್ತಾರನೆಯ ಅಧ್ಯಾಯ
ತೇಜೋವಧೆ ಮಾಡುತ್ತಿದ್ದ ಶಲ್ಯ ಕರ್ಣನನ್ನು ಈಗ ಹುರಿದುಂಬಿಸುತ್ತಾನೆ.
ಸಂಜಯಃ
ಅರ್ಜುನಸ್ತು ಮಹಾರಾಜ ಹತ್ವಾ ಸೈನ್ಯಂ ಚತುರ್ವಿಧಮ್ ।
ಸೂತಪುತ್ರಂ ಸುಸಂರಬ್ಧಂ ದೃಷ್ಟ್ವಾ ಚೈವ ಮಹಾರಣೇ ॥1॥
ಶೋಣಿತೋದಾಂ ಮಹೀಂ ಕೃತ್ವಾ ಮಾಂಸಮಜ್ಜಾಸ್ಥಿವಾಹಿನೀಮ್ ।
ಮನುಷ್ಯಶೀರ್ಷಪಾಷಾಣಾಂ ಹಸ್ತ್ಯಶ್ವಕೃತರೋಧಸಮ್ ॥2॥
ಶೂರಾಸ್ಥಿಚಯಸಂಕೀರ್ಣಾಂ ಕಾಕಗೃಧ್ರಾನುನಾದಿತಾಮ್ ।
ಛತ್ರಹಂಸಪ್ಲವೋಪೇತಾಂ ವೀರವೃಕ್ಷಾಪಹಾರಿಣೀಮ್ ॥3॥
ಹಾರಪದ್ಮಾಕರವತೀಮುಷ್ಣೀಷವರಫೇನಿಲಾಮ್ ।
ಧನುಃಶರಧ್ವಜೋಪೇತಾಂ ನರಕ್ಷುದ್ರಕಪಾಲಿನೀಮ್ ॥4॥
ಚರ್ಮವರ್ಮಭ್ರಮೋಪೇತಾಂ ರಥೋಡುಪಸಮಾಕುಲಾಮ್ ।
ಜಯೈಷಿಣಾಂ ಚ ಸುತರಾಂ ಭೀರೂಣಾಂ ಚ ಸುದುಸ್ತರಾಮ್ ।
ತಾಂ ನದೀಂ ಪ್ರಾಪಯಿತ್ವಾ ತು ಬೀಭತ್ಸುಃ ಪರವಾಹಿನೀಮ್ ॥5॥
ವಾಸುದೇವಮಿದಂ ವಾಕ್ಯಮಬ್ರವೀತ್ ಪುರುಷರ್ಷಭ ॥6॥
(ಅರ್ಜುನನು 74ನೆಯ ಅಧ್ಯಾಯದಲ್ಲಿ ಹೊರಟು, ಮಾರ್ಗದಲ್ಲಿ ಇದಿರಾದ ವೀರಯೋಧರನ್ನು ಸಂಹರಿಸಿ, ರಕ್ತದ ಹೊಳೆಗಳನ್ನು ಹರಿಸಿ, ಇದೀಗ ಈ ಅಧ್ಯಾಯದಲ್ಲಿ ಕರ್ಣನ ಬಳಿಗೆ ಬರುತ್ತಿದ್ದಾನೆ.)
ಸಂಜಯ ನುಡಿದ– ಮಹಾರಾಜ, ಅರ್ಜುನನು ಹರಿಸಿದ ರಕ್ತನದಿಯಲ್ಲಿ ರಕ್ತವೇ ನೀರು. ಮಾಂಸ ಮಜ್ಜ ಅಸ್ಥಿಗಳನ್ನು ಪ್ರವಾಹದಲ್ಲಿ ಒಯ್ಯುತ್ತಿದೆ. ತಲೆಬುರುಡೆಗಳೇ ಕಲ್ಲುಗಳು. ಆನೆ ಕುದುರೆಗಳ ಶವಗಳೆ ನದೀತೀರಗಳು. ಶೂರರ ಅಸ್ಥಿರಾಶಿಗಳಿಂದ ತುಂಬಿದೆ. ಕಾಗೆ ಹದ್ದುಗಳ ಧ್ವನಿ ಕೇಳಿಬರುತ್ತಿವೆ. ಛತ್ರಗಳೇ ಹಂಸಗಳಂಥ ದೋಣಿಗಳು. ವೀರರನ್ನು ವೃಕ್ಷಗಳಂತೆ ಪ್ರವಾಹವು ಕೊಚ್ಚಿ ಒಯ್ಯುತ್ತಿದೆ. ಹಾರಗಳಿಂದ ಕಮಲಾಕರವೆನಿಸಿದೆ. ಒಳ್ಳೆಯ ರುಮಾಲುಗಳೆ ನೊರೆಗಳು. ಧನುಸ್ಸು ಬಾಣ ಧ್ವಜಗಳು ತುಂಬಿವೆ. ಪದಾತಿಗಳ ಒಡೆದ ಕಪಾಲಗಳು ತುಂಬಿವೆ. ಗುರಾಣಿ ಕವಚಗಳು ನದಿಯಲ್ಲಿ ಸುಳಿಗಳಂತಿವೆ. ರಥಗಳೇ ದೋಣಿಗಳಂತಿವೆ. ಈ ನದಿಯು ಜಯೇಚ್ಛುಗಳಿಗೂ ದಾಟಲು ಅಶಕ್ಯ. ಹೇಡಿಗಳಿಗೆ ಸುತರಾಂ ದಾಟಲಸಾಧ್ಯ. ಅರ್ಜುನನು ಇಂಥ ನದಿಯನ್ನು ಶತ್ರುಸೇನೆಗೆ ಒದಗಿಸಿಕೊಟ್ಟು ಕೃಷ್ಣನಿಗೆ ನುಡಿದ.
ಅರ್ಜುನಃ
ಏಷ ಕೇತೂ ರಣೇ ಕೃಷ್ಣ ಸೂತಪುತ್ರಸ್ಯ ದೃಶ್ಯತೇ ।
ಭೀಮಸೇನಾದಯಶ್ಚೈತೇ ಯೋಧಯಂತಿ ಮಹಾರಥಾನ್ ।
ಏತೇ ದ್ರವಂತಿ ಪಾಂಚಾಲಾಃ ಕರ್ಣತ್ರಸ್ತಾ ಜನಾರ್ದನ ॥7॥
ಅರ್ಜುನನು ನುಡಿದ– ಕೃಷ್ಣ, ಕರ್ಣನ ಧ್ವಜವಿದು ಕಾಣಿಸುತ್ತಿದೆ. ಭೀಮಸೇನ ಮುಂತಾದವರು ಇಲ್ಲಿ ಮಹಾರಥರೊಂದಿಗೆ ಹೋರಾಡುತ್ತಿದ್ದಾರೆ. ಪಾಂಚಾಲರು ಕರ್ಣನಿಗೆ ಹೆದರಿ ಹಿಮ್ಮೆಟ್ಟುತ್ತಿದ್ದಾರೆ.
ಏಷ ದುರ್ಯೋಧನೋ ರಾಜಾ ಶ್ವೇತಚ್ಛತ್ರೇಣ ಭಾಸ್ವತಾ ।
ಕರ್ಣೇನ ಭಗ್ನಾನ್ ಪಾಂಚಾಲಾನ್ ದ್ರಾವಯನ್ ಬಹು
ಶೋಭತೇ ॥8॥
ಹೊಳೆಯುವ ಶ್ವೇತಚ್ಛತ್ರದಿಂದ ಯುಕ್ತನಾದ ಈ ದುರ್ಯೋಧನನು ಕರ್ಣನಿಂದ ಪರಾಭವಗೊಂಡ ಪಾಂಚಾಲರನ್ನು ಬೆನ್ನಟ್ಟುತ್ತ ಬಹಳ ಶೋಭಿಸುತ್ತಿದ್ದಾನೆ.
ಕೃಪಶ್ಚ ಕೃತವರ್ಮಾ ಚ ದ್ರೌಣಿಶ್ಚೈವ ಮಹಾಬಲಃ ।
ಏತೇ ರಕ್ಷಂತಿ ರಾಜಾನಂ ಸೂತಪುತ್ರೇಣ ರಕ್ಷಿತಾಃ ।
ಅವಧ್ಯಮಾನಾಸ್ತೇಽಸ್ಮಾಭಿರ್ಘಾತಯಿಷ್ಯಂತಿ ಸೋಮಕಾನ್ ॥9॥
ಕೃಪ ಕೃತವರ್ಮ ಹಾಗೂ ಮಹಾಬಲಿ ಅಶ್ವತ್ಥಾಮರು ಸೂತಪುತ್ರ ಕರ್ಣನ ರಕ್ಷಣೆಯಲ್ಲಿ ರಾಜಾ ದುರ್ಯೋಧನನನ್ನು ರಕ್ಷಿಸುತ್ತಿದ್ದಾರೆ. ನಾವು ಅವರನ್ನು ಈಗ ವಧಿಸುತ್ತಿಲ್ಲವಾದ್ದರಿಂದ ಅವರು ಸೋಮಕರನ್ನು ಸಂಹರಿಸಲಿದ್ದಾರೆ.
ಏಷ ಶಲ್ಯೋ ರಥೋಪಸ್ಥೇ ರಶ್ಮಿಸಂಚಾರಕೋವಿದಃ ।
ಸೂತಪುತ್ರರಥಂ ಕೃಷ್ಣ ವಾಹಯನ್ ಬಹು ಶೋಭತೇ ॥10॥
ಈತ ಶಲ್ಯ, ರಥದ ಆಸನದಲ್ಲಿ ಲಗಾಮನ್ನು ತಿರುಗಿಸುವಲ್ಲಿ ಕೋವಿದನಾಗಿ ಕುಳಿತು ಕರ್ಣನ ರಥವನ್ನು ನಡೆಸುತ್ತ ಬಹಳ ಶೋಭಿಸುತ್ತಿದ್ದಾನೆ.
ತತ್ರ ಮೇ ಬುದ್ಧಿರುತ್ಪನ್ನಾ ವಾಹಯಾತ್ರ ಮಹಾರಥಮ್ ।
ನಾಹತ್ವಾ ಸಮರೇ ಕರ್ಣಂ ನಿವರ್ತಿಷ್ಯೇ ಕಥಂಚನ ॥11॥
ಅಲ್ಲಿಗೆ ನಮ್ಮ ಮಹಾರಥವನ್ನು ನಡೆಸು. ಸಮರದಲ್ಲಿ ಕರ್ಣನನ್ನು ಕೊಲ್ಲದೆ ನಾನು ಸರ್ವಥಾ ಹಿಂತಿರುಗುವುದಿಲ್ಲ,

ಹಿಂತಿರುಗಬಾರದು ಎಂದು ನನಗೆ ದೃಢ ಬುದ್ಧಿ ಉಂಟಾಗಿದೆ.
ರಾಧೇಯೋಽಪ್ಯನ್ಯಥಾ ಪಾರ್ಥಾನ್ ಸೃಂಜಯಾಂಶ್ಚ ಮಹಾರಥಾನ್ |
ನಿಃಶೇಷಾನ್ ಸಮರೇ ಕುರ್ಯಾತ್ ಪಶ್ಯತೋರ್ನೌ ಜನಾರ್ದನ ॥12॥
ಕರ್ಣನನ್ನು ನಾನೀಗ ಕೊಲ್ಲದೆ ಬಿಟ್ಟರೆ ಅವನು, ನಾವು ನೋಡುತ್ತಿದ್ದಂತೆಯೇ, ಮಹಾರಥರಾದ ಪಾಂಡವರನ್ನೂ ಸೃಂಜಯರನ್ನೂ ರಣದಲ್ಲಿ ನಿಃಶೇಷಗೊಳಿಸು ತ್ತಾನೆ ಕೃಷ್ಣ !
ಸಂಜಯಃ
ತತಃ ಪ್ರಾಯಾದ್ ರಥೇನಾಶು ಕೇಶವಸ್ತವ ವಾಹಿನೀಮ್ |
ಕರ್ಣಂ ಪ್ರತಿ ಮಹೇಷ್ವಾಸಂ ದ್ವೈರಥೇ ಸವ್ಯಸಾಚಿನಾ ॥13॥
ಸಂಜಯ ನುಡಿದ– ಆಗ ಕೃಷ್ಣನು ರಥದಿಂದ ನಿನ್ನ ಸೈನ್ಯದ ಕಡೆಗೆ, ಮಹಾಬಿಲ್ಗಾರನಾದ ಕರ್ಣನ ಬಳಿಗೆ, ಅರ್ಜುನನೊಡನೆ ದ್ವೈರಥಯುದ್ಧದ ಸಲುವಾಗಿ ಬೇಗನೆ ನಡೆದ.
ಪ್ರಯಾತಶ್ಚ ಮಹಾಬಾಹುಃ ಪಾಂಡವಾನುಜ್ಞಯಾ ಹರಿಃ |
ಆಶ್ವಾಸಯನ್ ರಥೇನೈವ ಪಾಂಡುಸೈನ್ಯಾನಿ ಸರ್ವಶಃ ॥14॥
ಅರ್ಜುನನ ಅಪೇಕ್ಷೆಯಂತೆ ಮಹಾಬಾಹುವಾದ ಕೃಷ್ಣನು ರಥದಿಂದಲೇ ಎಲ್ಲ ಪಾಂಡುಸೈನ್ಯಗಳಿಗೆ ಆಶ್ವಾಸನೆ ಉಂಟುಮಾಡುತ್ತ ನಡೆದ.
ರಥಘೋಷಃ ಸ ಸಂಗ್ರಾಮೇ ಪಾಂಡವೇಯಸ್ಯ ಸಂಬಭೌ |
ವಾಸವಾಶನಿತುಲ್ಯಸ್ಯ ಮೇಘೌಘಸ್ಯೇವ ಮಾರಿಷ ॥15॥
ರಾಜನೆ, ಇಂದ್ರನ ವಜ್ರಾಯುಧದಂಥ, ಮೋಡಸಮೂಹದ ಧ್ವನಿಯಂಥ ಅರ್ಜುನನ ರಥಘೋಷವು ಸಂಗ್ರಾಮದಲ್ಲಿ ಬಹಳ ಶೋಭಿಸಿತು.
ಮಹತಾ ರಥಘೋಷೇಣ ಪಾಂಡವಃ ಸತ್ಯವಿಕ್ರಮಃ |
ಅಭ್ಯಯಾದಪ್ರಮೇಯಾತ್ಮಾ ವಿಜಯಸ್ತವ ವಾಹಿನೀಮ್ ॥16॥
ನಿಜವಾದ ಪರಾಕ್ರಮವುಳ್ಳ ಅಮೇಯಾತ್ಮನಾದ `ವಿಜಯ' ಎಂಬ ಹೆಸರಿ ನಿಂದಲೆ ಪ್ರಸಿದ್ಧನಾದ ಪಾಂಡುಪುತ್ರ ಅರ್ಜುನನು ಮಹಾರಥ ಘೋಷದೊಂದಿಗೆ ನಿನ್ನ ಸೈನ್ಯಕ್ಕೆ ಇದಿರಾಗಿ ನಡೆದ.
ತಮಾಯಾಂತಂ ಸಮೀಕ್ಷ್ಯೈವ ಶ್ವೇತಾಶ್ವಂ ಕೃಷ್ಣಸಾರಥಿಮ್ |
ಮದ್ರರಾಜೋಽಬ್ರವೀತ್ ಕರ್ಣಂ ಕೇತುಂ ದೃಷ್ಟ್ವಾ ಮಹಾತ್ಮನಃ ॥17॥
ಬಿಳಿ ಅಶ್ವಗಳುಳ್ಳ, ಕೃಷ್ಣನೇ ಸಾರಥಿಯಾಗಿರುವ ಆ ರಥ ಬರುತ್ತಿರುವುದನ್ನು ಕಂಡು, ಅದರಲ್ಲಿ ಮಹಾತ್ಮನಾದ ಅರ್ಜುನನ ಕಪಿಧ್ವಜವಿರುವುದನ್ನು ಕಂಡು, ಶಲ್ಯನು ನುಡಿದ.
ಅಯಂ ಸ ರಥ ಆಯಾತಿ ಶ್ವೇತಾಶ್ವಃ ಕೃಷ್ಣಸಾರಥಿಃ |
ನಿಘ್ನನ್ನಮಿತ್ರಾನ್ ಸಮರೇ ಯಂ ಕರ್ಣ ಪರಿಪೃಚ್ಛಸಿ ॥18॥
ಕರ್ಣನೆ, ನೀನು ಯಾವ ರಥವನ್ನು ಎಲ್ಲಿ ಎಲ್ಲಿ ಎಂದು ಕೇಳುತ್ತಿರುವೆಯೋ ಅದೇ ಈ ರಥ ಬಿಳಿ ಅಶ್ವಗಳುಳ್ಳದ್ದು, ಕೃಷ್ಣನೆ ಸಾರಥಿಯಾಗಿರುವುದು, ರಣದಲ್ಲಿ ಶತ್ರುಗಳನ್ನು ಸಂಹರಿಸುತ್ತ ಬರುತ್ತಿದೆ.
ಏಷ ತಿಷ್ಠತಿ ಕೌಂತೇಯಃ ಸಂಸ್ಪೃಶನ್ ಗಾಂಡಿವಂ ಧನುಃ |
ತಂ ಹನಿಷ್ಯಸಿ ಚೇದದ್ಯ ತನ್ನಃ ಶ್ರೇಯೋ ಭವಿಷ್ಯತಿ ॥19॥
ಈ ಅರ್ಜುನನು ಗಾಂಡೀವ ಧನುಸ್ಸನ್ನು ಹಿಡಿದು ನಿಂತಿದ್ದಾನೆ. ಅವನನ್ನು ನೀನು ಈಗ ಸಂಹರಿಸುವೆಯಾದರೆ ನಮಗೆ ಶ್ರೇಯಸ್ಸು ಉಂಟಾಗುವುದು.
ಏಷಾ ವಿದೀರ್ಯತೇ ಸೇನಾ ಧಾರ್ತರಾಷ್ಟ್ರೀ ಸಮಂತತಃ |
ಅರ್ಜುನಸ್ಯ ಭಯಾತ್ ತೂರ್ಣಂ ನಿಘ್ನತಃ ಶಾತ್ರವಾನ್
ಬಹೂನ್ ॥20॥
ಈ ಕೌರವಸೈನ್ಯವು ಬಹಳ ಶತ್ರುಗಳನ್ನು ಕೊಲ್ಲುವ ಅರ್ಜುನನ ಭಯದಿಂದ ಬೇಗನೆ ಎಲ್ಲೆಡೆ ನಶಿಸುತ್ತಿರುವುದು.
ವರ್ಜಯನ್ ಸರ್ವಸೈನ್ಯಾನಿ ತ್ವರತೇ ಹಿ ಧನಂಜಯಃ |
ತ್ವದರ್ಥಮಿತಿ ಮನ್ಯೇಽಹಂ ಯಥಾಸ್ಯೋದೀರ್ಯತೇ ವಪುಃ ॥21॥
ನ ಹ್ಯವಸ್ಥಾಪ್ಯತೇ ಪಾರ್ಥೋ ಯುಯುತ್ಸುಃ ಕೇನಚಿತ್ ಸಹ |
ತ್ವಾಮೃತೇ ಕ್ರೋಧದೀಪ್ತೋ ಹಿ ಪೀಡ್ಯಮಾನೇ ವೃಕೋದರೇ ॥22॥
ಬೇರೆ ಎಲ್ಲ ಸೈನ್ಯಗಳನ್ನು ಬಿಟ್ಟು ನಿನ್ನ ಬಳಿಗೇ ಬರಲು ಅರ್ಜುನನು ಅವಸರ ಪಡುತ್ತಿದ್ದಾನೆ, ಅವನ ಮೈ ಉತ್ಸಾಹದಿಂದ ಉಬ್ಬಿದ್ದನ್ನು ಕಂಡರೆ ನನಗೆ ಹಾಗೇ ಎನಿಸುತ್ತಿದೆ. ನಿನ್ನ ಹೊರತು ಬೇರೆ ಯಾರ ಜೊತೆಗೂ ಯುದ್ಧದಲ್ಲಿ ಅರ್ಜುನನನ್ನು ತಡೆದು ನಿಲ್ಲಿಸಲಾಗದು. ಭೀಮನು ಪೀಡಿತನಾಗುತ್ತಿರುವುದರಿಂದ ಅರ್ಜುನನು ಕೋಪದಿಂದ ಉರಿಯುತ್ತ ನಿನ್ನೊಡನೇ ಯುದ್ಧವನ್ನು ಬಯಸುತ್ತಿದ್ದಾನೆ.
ವಿರಥಂ ಧರ್ಮರಾಜಂ ಚ ದೃಷ್ಟ್ವಾ ಸುದೃಢವಿಕ್ಷತಮ್ |
ಶಿಖಂಡಿನಂ ಸಾತ್ಯಕಿಂ ಚ ಧೃಷ್ಟದ್ಯುಮ್ನಂ ಚ ಪಾರ್ಷತಮ್ ॥23॥
ದ್ರೌಪದೇಯಾನ್ ಯುಧಾಮನ್ಯುಮುತ್ತಮೌಜಸಮೇವ ಚ |
ನಕುಲಂ ಸಹದೇವಂ ಚ ಭ್ರಾತರೌ ದ್ವೌ ಸಮೀಕ್ಷ್ಯ ಚ ॥24॥

ಸಹಸ್ರೈಕರಥಃ ಪಾರ್ಥಸ್ತತ್ವಮಭ್ಯೇತಿ ಪರಂತಪ |
ಕ್ರೋಧರಕ್ತೇಕ್ಷಣಃ ಕ್ರುದ್ಧೋ ಜಿಘಾಂಸುಃ ಸರ್ವಪಾರ್ಥಿವಾನ್ ॥25॥
ಧರ್ಮರಾಜನು ವಿರಥನಾಗಿ ಬಲುಗಾಢವಾಗಿ ಗಾಯಗೊಂಡಿದ್ದನ್ನು ಕಂಡು, ಮತ್ತು ಶಿಖಂಡಿ ಸಾತ್ಯಕಿ ಧೃಷ್ಟದ್ಯುಮ್ನ ದ್ರೌಪದೀಪುತ್ರರು ಯುಧಾಮನ್ಯು ಉತ್ತಮೌಜರು ನಕುಲಸಹದೇವ ಸೋದರರರು ಇವರೆಲ್ಲರನ್ನೂ ಕಂಡು ಕ್ರುದ್ಧನಾಗಿ ಕೋಪದಿಂದ ಕೆಂಪಾದ ಕಣ್ಣಿನವನಾಗಿ, ಎಲ್ಲ ರಾಜರನ್ನು ಕೊಲ್ಲಲು ಬಯಸಿರುವ ಏಕರಥನಾದ ಪಾರ್ಥನು, ಶತ್ರುತಾಪಕನೆ, ನಿನ್ನ ಬಳಿಗೆ ಬರುತ್ತಿದ್ದಾನೆ.
ತ್ವರಿತೋಽಭಿಪತತ್ಯಸ್ಮಾಂಸ್ತ್ಯಕ್ತ್ವಾ ಸೈನ್ಯಾನ್ಯಸಂಶಯಮ್ |
ತ್ವಂ ಕರ್ಣ ಪ್ರತಿಯಾಹ್ಯೇನಂ ನಾಸ್ತ್ಯನ್ಯೋ ಹಿ ಧನುರ್ಧರಃ ॥26॥
ಅರ್ಜುನನು ಬೇರೆ ಎಲ್ಲ ಸೈನ್ಯಗಳನ್ನು ಬಿಟ್ಟು ತ್ವರೆಯಿಂದ ನಮ್ಮ ಮೇಲೇ ಏರಿ ಬರುತ್ತಾನೆ, ಸಂಶಯವಿಲ್ಲ. ಅವನನ್ನು ಕರ್ಣ! ನೀನು ಇದಿರಿಸು. ನಿನ್ನ ಹೊರತು ಅನ್ಯ ಧನುರ್ಧರನಿಲ್ಲ.
ನ ತಂ ಪಶ್ಯಾಮಿ ಲೋಕೇಽಸ್ಮಿನ್ ತ್ವತ್ತೋಽಪ್ಯನ್ಯಂ ಧನುರ್ಧರಮ್ |
ಅರ್ಜುನಂ ಸಮರೇ ಕ್ರುದ್ಧಂ ಯೋ ವೇಲಾಮಿವ ಧಾರಯೇತ್ ॥27॥
ಸಮರದಲ್ಲಿ ಕ್ರುದ್ಧನಾದ ಅರ್ಜುನನನ್ನು ತಡೆಯಬಲ್ಲ, ಸಮುದ್ರಕ್ಕೆ ತೀರದಂತಿರುವ, ಧನುರ್ಧರನನ್ನು, ನಿನ್ನ ಹೊರತು ಅನ್ಯನನ್ನು ಈ ಲೋಕದಲ್ಲಿ ನಾನು ಕಾಣುತ್ತಿಲ್ಲ.
ನ ಚಾಸ್ಯ ರಕ್ಷಾಂ ಪಶ್ಯಾಮಿ ಪೃಷ್ಠತೋ ನ ಚ ಪಾರ್ಶ್ವತಃ |
ಏಕ ಏವಾಭಿಯಾತಿ ತ್ವಾಂ ಪಶ್ಯ ಸಾಕಲ್ಯಮಾತ್ಮನಃ ॥28॥
ಅವನ ರಕ್ಷಣೆಗೆ ಹಿಂದೆಯೂ ಯಾರೂ ಕಾಣಿಸುತ್ತಿಲ್ಲ. ಪಾರ್ಶ್ವಗಳಲ್ಲಿಯೂ ಯಾರೂ ಕಾಣಿಸುತ್ತಿಲ್ಲ. ಏಕಾಂಗಿಯಾಗಿ ಅವನು ನಿನ್ನ ಮೇಲೇರಿ ಬರುತ್ತಿದ್ದಾನೆ. ನೀನು ನಿನ್ನಿಂದಾಗಬಹುದಾದ ಎಲ್ಲ ಪ್ರಯತ್ನಸಮೂಹವನ್ನು ಈಗ ಆಲೋಚಿಸು.
ತ್ವಂ ಹಿ ಕೃಷ್ಣೌ ರಣೇ ಶಕ್ತಃ ಸಂಸಾಧಯಿತುಮಾಹವೇ |
ತವೈಷ ಭಾರೋ ರಾಧೇಯ ಪ್ರತ್ಯುದ್ಯಾಹಿ ಧನಂಜಯಮ್ ॥29॥
ನೀನೇ ರಣದಲ್ಲಿ ಕೃಷ್ಣಾರ್ಜುನರನ್ನು ಇದಿರಿಸಲು ಸಮರ್ಥ. ಕರ್ಣ, ಇದರ ಭಾರ ನಿನ್ನ ಮೇಲೇ ಬಿದ್ದಿದೆ. ಅರ್ಜುನನನ್ನು ಇದಿರಿಸು.
ತ್ವಂ ಕೃತೋ ಹ್ಯೇವ ಭೀಷ್ಮೇಣ ದ್ರೋಣದ್ರೌಣಿಕೃಪೈರಪಿ |
ಸವ್ಯಸಾಚಿಪ್ರತಿರಥಸ್ತಂ ನಿವರ್ತಯ ಪಾಂಡವಮ್ ॥30॥
ಭೀಷ್ಮ ದ್ರೋಣ ಅಶ್ವತ್ಥಾಮ ಕೃಪರು ಎಲ್ಲರೂ ತಾವು ವಿಫಲರಾಗಿ ನಿನ್ನನ್ನೇ ಅರ್ಜುನನಿಗೆ ಸರಿಯಾದ ಪ್ರತಿರಥನನ್ನಾಗಿ ಮಾಡಿದ್ದಾರೆ. ನೀನೇ ಅರ್ಜುನನನ್ನು ಹಿಮ್ಮೆಟ್ಟಿಸಬೇಕು.
ಲೇಲಿಹಾನಂ ಯಥಾ ಸರ್ಪಂ ಗರ್ಜಂತಮೃಷಭಂ ಯಥಾ |
ವನಸ್ಥಿತಂ ಯಥಾ ವ್ಯಾಘ್ರಂ ಜಹಿ ಕರ್ಣ ಧನಂಜಯಮ್ ॥31॥
ಕಟವಾಯಿಗಳನ್ನು ನೆಕ್ಕಿಕೊಳ್ಳುವ ಸರ್ಪದಂತೆ, ಗರ್ಜಿಸುವ ವೃಷಭದಂತೆ, ಕಾಡಿನಲ್ಲಿರುವ ಹುಲಿಯಂತೆ ಈ ಅರ್ಜುನ, ಕರ್ಣ! ನೀನು ಅವನನ್ನು ಕೊಲ್ಲು.
ಏತೇ ದ್ರವಂತಿ ಸಮರೇ ಧಾರ್ತರಾಷ್ಟ್ರಾ ಮಹಾರಥಾಃ |
ಅರ್ಜುನಸ್ಯ ಭಯಾತ್ ತೂರ್ಣಂ ನಿರಪೇಕ್ಷಾ ಜನಾಧಿಪಾಃ ॥32॥
ಅರ್ಜುನನ ಭಯದಿಂದ ರಣದಲ್ಲಿ ಜಯಾಪೇಕ್ಷೆಯನ್ನು ತೊರೆದು, ಕೌರವ ಪಕ್ಷದ ಮಹಾರಥರಾದ ರಾಜರು ಬೇಗಬೇಗನೆ ಪಲಾಯನ ಮಾಡುತ್ತಿದ್ದಾರೆ.
ದ್ರವತಾಮಥ ತೇಷಾಂ ತು ಯುಧಿ ನಾನ್ಯೋಽಸ್ತಿ ಮಾನವಃ |
ಭಯಹಾ ಯೋ ಭವೇದ್ ವೀರ ತ್ವಾಮೃತೇ ಸೂತನಂದನ ॥33॥
ವೀರ ಕರ್ಣನೆ, ರಣದಲ್ಲಿ ಪಲಾಯನ ಮಾಡುತ್ತಿರುವ ಅವರಿಗೆ ಅಭಯ ನೀಡಬಲ್ಲವನು ನಿನ್ನ ಹೊರತು ಅನ್ಯಮಾನವನಿಲ್ಲ.
ಏತೇ ತ್ವಾಂ ಕುರವಃ ಸರ್ವೇ ದ್ವೀಪಮಾಸಾದ್ಯ ಸಂಯುಗೇ |
ವಿಷ್ಠಿತಾಃ ಪುರುಷವ್ಯಾಘ್ರ ತ್ವತ್ತಃ ಶರಣಕಾಂಕ್ಷಿಣಃ ॥34॥
ಈ ಕುರುಯೋಧರೆಲ್ಲರೂ ನಿನ್ನಿಂದಲೆ ರಕ್ಷಣೆಯನ್ನು ಬಯಸಿ, ಸಮುದ್ರದಲ್ಲಿ ಮುಳುಗುವವರಿಗೆ ದ್ವೀಪದಂತೆ, ರಣದಲ್ಲಿ ಹಿಮ್ಮೆಟ್ಟುವವರಿಗೆ ನೀನೇ ಆಶ್ರಯದಾತ ಎಂದು ನಂಬಿದ್ದಾರೆ.
ವೈದೇಹಾಂಬಷ್ಠಕಾಂಬೋಜಾಸ್ತಥಾ ನಗ್ನಜಿತಸ್ತ್ವಯಾ |
ಗಾಂಧಾರಾಶ್ಚ ಯಯಾ ಧೃತ್ಯಾ ಜಿತಾಃ ಸಂಖ್ಯೇ ಸುದುರ್ಜಯಾಃ ॥35॥
ತಾಂ ಧೃತಿಂ ಕುರು ರಾಧೇಯ ತತಃ ಪ್ರತ್ಯೇಹಿ ಪಾಂಡವಮ್ |
ವಾಸುದೇವಂ ಚ ವಾರ್ಷ್ಣೇಯಂ ಪ್ರೀಯಮಾಣಂ ಕಿರೀಟಿನಾ ॥36॥
ವಿದೇಹ ಅಂಬಷ್ಠ ಕಾಂಬೋಜ ನಗ್ನಜಿತ ಗಾಂಧಾರರು ರಣದಲ್ಲಿ ಅತ್ಯಂತ ದುರ್ಜಯರು. ಅವರನ್ನು ನೀನು ಯಾವ ಧೈರ್ಯದ ಬಲದಿಂದ ಗೆದ್ದಿರುವೆಯೋ ಆ ಧೈರ್ಯವನ್ನು ಈಗ ನಿನ್ನಲ್ಲಿ ತಂದುಕೊಳ್ಳು. ಅರ್ಜುನನ್ನು ಇದಿರಿಸು. ಅರ್ಜುನನ ಜೊತೆಯಲ್ಲಿ ಸಂತುಷ್ಟನಾಗುವ ಕೃಷ್ಣನನ್ನೂ ಇದಿರಿಸು.
ಕರ್ಣಃ
ಪ್ರಕೃತಿಸ್ಥೋ ಹಿ ಮೇ ಶಲ್ಯ ಇದಾನೀಂ ಸಮ್ಮತಸ್ತಥಾ |
ಪ್ರತಿಭಾಸಿ ಮಹಾಬಾಹೋ ವಿಭೀಶ್ಚೈವ ಧನಂಜಯಾತ್ ॥37॥
ಕರ್ಣನು ನುಡಿದ– ಮಹಾಬಾಹು ಶಲ್ಯನೆ, ನೀನು ಈಗ ನಿನ್ನ ಸಹಜಸ್ಥಿತಿಯಲ್ಲಿರುವೆ. ನನಗೆ ಈಗ ನಂಬಿಗಸ್ಥನೂ ಆಗಿರುವೆ ಎಂದು

ನನಗೆ ಎನಿಸುತ್ತಿದೆ. ಅರ್ಜುನನ ಭಯ ನಿನಗಿಲ್ಲ ಎಂದೂ ಎನಿಸುತ್ತಿದೆ.
ಪಶ್ಯ ಬಾಹ್ವೋರ್ಬಲಂ ಮೇಽದ್ಯ ಶಿಕ್ಷಿತಸ್ಯ ಚ ಪಶ್ಯ ಮೇ |
ಏಕೋಽದ್ಯ ನಿಹನಿಷ್ಯಾಮಿ ಪಾಂಡವಾನಾಂ ಮಹಾಚಮೂಮ್ ॥38॥
ಈಗ ನೀನು ನನ್ನ ಬಾಹುಬಲವನ್ನು ನೋಡು. ಧನುರ್ವೇದ ಶಿಕ್ಷಣದ ಬಲವನ್ನೂ ನೋಡು, ಪಾಂಡವರ ಮಹಾಸೈನ್ಯವನ್ನು ನಾನೊಬ್ಬನೆ ಸಂಹರಿಸುವೆನು.
ಕೃಷ್ಣೌ ಚ ಪುರುಷವ್ಯಾಘ್ರೌ ತಚ್ಚ ಸತ್ಯಂ ಬ್ರವೀಮಿ ತೇ |
ನಾಹತ್ವಾ ಯುಧಿ ತೌ ವೀರಾವಪಯಾಸ್ಯೇ ಕಥಂಚನ ॥39॥
ಕೃಷ್ಣಾರ್ಜುನರೂ ಕೂಡ ಪುರುಷರಲ್ಲಿ ಶ್ರೇಷ್ಠರೆ, ಅದು ಸತ್ಯವೆಂದು ನಿನಗೆ ಹೇಳುತ್ತಿದ್ದೇನೆ. ಆದರೆ ರಣದಲ್ಲಿ ಆ ಇಬ್ಬರು ವೀರರನ್ನು ಕೊಲ್ಲದೆ ನಾನು ಸರ್ವಥಾ ಹಿಂತಿರುಗಲಾರೆ.
ಸ್ವಪ್ಸ್ಯೇ ವಾ ನಿಹತಸ್ತಾಭ್ಯಾಮನಿತ್ಯೋ ಹಿ ರಣೇ ಜಯಃ |
ಕೃತಾರ್ಥೋ ವಾ ಭವಿಷ್ಯಾಮಿ ಹತ್ವಾ ವಾಪ್ಯಥವಾ ಹತಃ ॥40॥
ನಾನು ಒಂದುವೇಳೆ ಅವರಿಂದ ಹತನಾಗಿ ನೆಲದ ಮೇಲೊರಗಿಯೇನು, ರಣದಲ್ಲಿ ಯಾರಿಗೂ ಜಯ ನಿಶ್ಚಿತವಲ್ಲವಾದ್ದರಿಂದ, ನಾನು ಅವರ ಹನನ ಮಾಡಿಯಾಗಲಿ, ನಾನೇ ಹತನಾಗಿಯಾಗಲಿ, ಕೃತಾರ್ಥನಂತೂ ಆದೇನು.
ನೈತಾದೃಶೋ ಜಾತು ಬಭೂವ ಲೋಕೇ
ರಥೋತ್ತಮೋ ಯಾವದನುಶ್ರುತಂ ನಃ |
ತಮೀದೃಶಂ ಪ್ರತಿಯೋತ್ಸ್ಯಾಮಿ ಪಾರ್ಥಂ
ಮಹಾಹವೇ ಪಶ್ಯ ಚ ಪೌರುಷಂ ಮೇ ॥41॥
ನಾವು ಕೇಳಿ ತಿಳಿದಮಟ್ಟಿಗೆ, ಇಂಥ ಒಬ್ಬ ಶ್ರೇಷ್ಠ ರಥಿಕನು ಲೋಕದಲ್ಲಿ ಎಂದೂ ಹುಟ್ಟಿಲ್ಲ. ಇಂಥ ಪಾರ್ಥನನ್ನು ನಾನು ರಣದಲ್ಲಿ ಇದಿರಿಸುತ್ತೇನೆ. ನೋಡು ನನ್ನ ಪೌರುಷವನ್ನು.
ರಥಾನ್ ವರಾನೇತಿ ರಥಪ್ರವೀರಃ
ಶೀಘ್ರೈರ್ಹಯೈಃ ಕೌರವರಾಜಪುತ್ರಃ |
ಸ ಚಾದ್ಯ ಮಾಂ ನೇಷ್ಯತಿ ಕ್ಷಿಪ್ರಮಂತಂ
ಕರ್ಣೋಽಸ್ಯಾಂತೇಽಪ್ಯತ್ರ ಭವೇತ್ ಸಮರ್ಥಃ ॥42॥
ರಥಿಕರಲ್ಲಿ ಶ್ರೇಷ್ಠವೀರನೆನಿಸಿದ ಕುರುವಂಶದ ರಾಜಕುಮಾರ ಅರ್ಜುನನು ವೇಗದ ಕುದುರೆಗಳಿಂದ ರಥಿಕರನ್ನು ಆಕ್ರಮಿಸುತ್ತಿದ್ದಾನೆ. ಅವನೂ ನನ್ನನ್ನು ಶೀಘ್ರವಾಗಿ ಕೊಲ್ಲಬಲ್ಲ. ಈ ಕರ್ಣನೂ ಅವನ ವಧೆಗೆ ಸಮರ್ಥನಾಗಬಲ್ಲ.
ಅಸ್ವೇದಿನೌ ರಾಜಪುತ್ರಸ್ಯ ಹಸ್ತಾ-
ವವೇಪಿನೌ ಜಾತಕಿಣೌ ಬೃಹಂತೌ |
ದೃಢಾಯುಧಃ ಕೃತಿಮಾನ್ ಕ್ಷಿಪ್ರಹಸ್ತೋ
ನ ಪಾಂಡವೇಯೇನ ಸಮೋಽಸ್ತಿ ಯೋಧಃ ॥43॥
ರಾಜಪುತ್ರನಾದ ಅರ್ಜುನನ ಕೈಗಳು ಬೆವರುವುದಿಲ್ಲ. ನಡುಗುವುದಿಲ್ಲ. ಸಡ್ಡು ಗಟ್ಟಿವೆ. ನೀಳವಾಗಿವೆ. ದೃಢವಾಗಿ ಆಯುಧವನ್ನು ಹಿಡಿಯಬಲ್ಲನು, ಪ್ರಯತ್ನಶೀಲ, ಕೈಚಳಕ ಉಳ್ಳವನು. ಇಂಥ ಅರ್ಜುನನಿಗೆ ಸಮನಾದ ಯೋಧನಿಲ್ಲ.
ಗೃಹ್ಣಾತ್ಯನೇಕಾನಪಿ ಕಂಕಪತ್ರಾ-
ನೇಕಂ ಯಥಾ ತಾನ್ ಪ್ರಹಿಣೋತಿ ಚಾಶು |
ತೇ ಕ್ರೋಶಮಾತ್ರಂ ನಿಪತಂತ್ಯಮೋಘಾಃ
ಕಸ್ತೇನ ಯೋಧೋಽಸ್ತಿ ಸಮಃ ಪೃಥಿವ್ಯಾಮ್ ॥44॥
ಒಮ್ಮೆಲೆ ಅನೇಕ ಬಾಣಗಳನ್ನು ಎತ್ತಿಕೊಳ್ಳುತ್ತಾನೆ. ಒಮ್ಮೆಲೆ ಎಲ್ಲವನ್ನೂ ಬೇಗನೆ ಒಂದಾಗಿ ಕಾಣುವಂತೆ ಎಸೆಯುತ್ತಾನೆ. ಅಮೋಘವಾದ ಆ ಬಾಣಗಳು ಕ್ರೋಶದಷ್ಟು ದೂರದವರೆಗೂ ಹಾರುತ್ತವೆ. ಅವನಿಗೆ ಸಮನಾದ ಯೋಧನು ಭೂಮಿಯಲ್ಲಿ ಯಾವನಿದ್ದಾನೆ? (ಕ್ರೋಶ ಎಂದರೆ ಸುಮಾರು ಐದಾರು ಕಿ.ಮೀ.)
ಅತೋಷಯತ್ ಪಾಂಡವೇಯೋ ಹುತಾಶಂ
ಕೃಷ್ಣದ್ವಿತೀಯೋಽತಿರಥಸ್ತರಸ್ವೀ |
ಲೇಭೇ ಚಕ್ರಂ ಯತ್ರ ಕೃಷ್ಣೋ ಮಹಾತ್ಮಾ
ಧನುರ್ಗಾಂಡೀವಂ ಪಾಂಡವಃ ಸವ್ಯಸಾಚೀ ॥45॥
ಅರ್ಜುನನು ಅಗ್ನಿಯನ್ನು ಖಾಂಡವವನದಲ್ಲಿ ಸಂತೋಷಪಡಿಸಿದ. ಅವನಿಗೆ ಕೃಷ್ಣನ ಸಹಾಯವಿದೆ. ವೇಗಉಳ್ಳ ಅತಿರಥನು ಆತ. ಖಾಂಡವವನದಲ್ಲಿ ಮಹಾತ್ಮಕೃಷ್ಣನು ಚಕ್ರವನ್ನೂ ಸವ್ಯಸಾಚಿ ಅರ್ಜುನನು ಗಾಂಡೀವವನ್ನೂ ಪಡೆದ.
ಶ್ವೇತಾಶ್ವಯುಕ್ತಂ ಚ ಸುಘೋಷಮಗ್ರ್ಯಂ
ರಥಂ ಮಹಾಬಾಹುರದೀನಸತ್ತ್ವಃ |
ಮಹೇಷುಧೀ ಚಾಕ್ಷಯೌ ದಿವ್ಯರೂಪೌ
ಶಸ್ತ್ರಾಣಿ ದಿವ್ಯಾನಿ ಚ ಹವ್ಯವಾಹಾತ್ ॥46॥
ಅರ್ಜುನನು ಆಗ ಗಾಂಡೀವವನ್ನು ಮಾತ್ರವಲ್ಲದೆ ಬಿಳಿಕುದುರೆಯುಳ್ಳ ಒಳ್ಳೆ ಧ್ವನಿ ಮಾಡುವ ಉತ್ತಮವಾದ ರಥವನ್ನೂ ಅಗ್ನಿಯಿಂದ ಪಡೆದ. ಮಹಾಬಾಹು ಹಾಗೂ ಮಹಾಸತ್ವಶಾಲಿಯಾದ ಆತ ದಿವ್ಯವಾದ ದೊಡ್ಡ ಎರಡು ಅಕ್ಷಯ ಬತ್ತಳಿಕೆಗಳನ್ನೂ ದಿವ್ಯ

ಆಯುಧಗಳನ್ನೂ ಅಗ್ನಿದೇವನಿಂದ ಪಡೆದ.
ತಥೇಂದ್ರಲೋಕೇ ನಿಜಘಾನ ದೈತ್ಯಾ-
ನಸಂಖ್ಯೇಯಾನ್ ಕಾಲಕೇಯಾಂಶ್ಚ ಸರ್ವಾನ್ |
ಲೇಭೇ ಶಂಖಂ ದೇವದತ್ತಂ ಸ್ಮ ತತ್ರ
ಕೋ ನಾಮ ತೇನಾಭ್ಯಧಿಕಃ ಪೃಥಿವ್ಯಾಮ್ ॥47॥
ಇಂದ್ರಲೋಕಕ್ಕೆ ಹೋಗಿ ಲೆಕ್ಕವಿಲ್ಲದಷ್ಟು ಕಾಲಕೇಯ ದೈತ್ಯರೆಲ್ಲರನ್ನೂ ಸಂಹರಿಸಿದ. ಆಗ ದೇವದತ್ತ ಎಂಬ ಶಂಖವನ್ನು ಪಡೆದ. ಅವನಿಗಿಂತ ಶ್ರೇಷ್ಠನು ಭೂಮಿಯಲ್ಲಿ ಯಾವನು ತಾನೆ ಇರಬಲ್ಲ?
ಮಹಾದೇವಂ ತೋಷಯಾಮಾಸ ಚೈವ
ಸಾಕ್ಷಾತ್ಸುಯುದ್ಧೇನ ಮಹಾನುಭಾವಃ |
ಲೇಭೇ ತತಃ ಪಾಶುಪತಂ ಸುಘೋರಂ
ತ್ರೈಲೋಕ್ಯಸಂಹಾರಕರಂ ಮಹಾಸ್ತ್ರಮ್ ॥48॥
ಮಹಾನುಭಾವ ಅರ್ಜುನನು ಒಳ್ಳೆಯ ಯುದ್ಧದಿಂದ ಸಾಕ್ಷಾತ್ ಮಹಾದೇವ ನನ್ನು ಸಂತೋಷಪಡಿಸಿದ. ಮಹಾದೇವನಿಂದ ಬಲುಘೋರವಾದ ಪಾಶುಪತಾಸ್ತ್ರ ವೆಂಬ ಮೂರ್ಲೋಕ ಸಂಹಾರಮಾಡಬಲ್ಲ ಮಹಾ ಅಸ್ತ್ರವನ್ನೂ ಪಡೆದುಕೊಂಡ.
ಪೃಥಕ್ ಪೃಥಗ್ಲೋಕಪಾಲಾಃ ಸಮೇತಾ
ದದುರ್ಹ್ಯಸ್ತ್ರಾಣ್ಯಪ್ರಮೇಯಾಣಿ ಯಸ್ಯ |
ಯೈಸ್ತಾನ್ ಜಘಾನಾಶು ರಣೇ ನೃಸಿಂಹಾನ್
ಸ ಕಾಲಖಂಜಾನಸುರಾನ್ ಸಮೇತಾನ್ ॥49॥
ಬೇರೆಬೇರೆ ಲೋಕಪಾಲರೂ ಕೂಡಿ ಅಪ್ರಮೇಯವಾದ ಅಸ್ತ್ರಗಳನ್ನು ಅವನಿಗೆ ನೀಡಿದರು. ಆ ಅಸ್ತ್ರಗಳಿಂದ, ಪುರುಷಶ್ರೇಷ್ಠರಾದ ಕಾಲಖಂಜರೆಂಬ ಅಸುರರೆಲ್ಲ ಸಾವಿರಾರು ಮಂದಿ ಒಟ್ಟಾಗಿ ಬಂದರೂ, ಅವರೆಲ್ಲರನ್ನೂ ಅರ್ಜುನನು ಸಂಹಾರ ಮಾಡಿದ.
ತಥಾ ವಿರಾಟಸ್ಯ ಪುರೇ ಸಮೇತಾನ್
ಸರ್ವಾನಸ್ಮಾನೇಕರಥೇನ ಜಿತ್ವಾ |
ಜಹಾರ ತದ್ಗೋಧನಮಾಜಿಮಧ್ಯೇ
ವಸ್ತ್ರಾಣಿ ಚಾದತ್ತ ಮಹಾರಥೇಭ್ಯಃ ॥50॥
ವಿರಾಟನಗರದಲ್ಲಿ ನಾವೆಲ್ಲರೂ ಒಟ್ಟಾಗಿ ಗೋಗ್ರಹಣಕ್ಕೆ ಬಂದಾಗ ಅವನು ಒಂದು ರಥದಿಂದ ರಣದಲ್ಲಿ ನಮ್ಮನ್ನು ಗೆದ್ದು ಗೋಧನವನ್ನು ಒಯ್ದ ಮತ್ತು ಮಹಾರಥರಿಂದ ವಸ್ತ್ರಗಳನ್ನು ಅಪಹರಿಸಿದ.
ತಮೀದೃಶಂ ವೀರ್ಯಗುಣೋಪಪನ್ನಂ
ಕೃಷ್ಣದ್ವಿತೀಯಂ ವರಯೇ ರಣಾಯ |
ಅನಂತವೀರ್ಯೇಣ ಚ ಕೇಶವೇನ
ನಾರಾಯಣೇನಾಪ್ರತಿಮೇನ ಗುಪ್ತಮ್ ॥51॥
ಇಂಥ ವೀರ್ಯಗುಣಸಂಪನ್ನನಾದ ಅರ್ಜುನನು ಕೃಷ್ಣನ ಸಹಾಯವನ್ನು ಹೊಂದಿದ್ದಾನೆ. ಅನಂತವೀರ್ಯವುಳ್ಳ ಅಪ್ರತಿಮನಾದ ನಾರಾಯಣಾವತಾರನಾದ ಕೃಷ್ಣನಿಂದ ರಕ್ಷಿತನೂ ಆಗಿದ್ದಾನೆ. ಇಂಥ ಅರ್ಜುನನನ್ನು ನಾನು ಯುದ್ಧಕ್ಕೆ ವರಿಸುತ್ತಿದ್ದೇನೆ.
ವಪುರ್ಯುತ್ಯೈರ್ಯಸ್ಯ ಗುಣಾ ನ ಶಕ್ಯಾ
ವಕ್ತುಂ ಸಮೇತೈರಪಿ ಸರ್ವಲೋಕೈಃ |
ಮಹಾತ್ಮನಃ ಶಂಖಚಕ್ರಾಸಿಪಾಣೇ-
ರ್ವಿಷ್ಣೋರ್ಜಿಷ್ಣೋರ್ವಸುದೇವಾತ್ಮಜಸ್ಯ ॥52
ವಸುದೇವಪುತ್ರನಾದ ಕೃಷ್ಣನ ಗುಣಗಳನ್ನು ಪ್ರಾಕೃತಶರೀರಿಗಳಾದ ಸರ್ವಲೋಕದ ಜನರು ಎಲ್ಲರೂ ಜೊತೆಗೆ ಸೇರಿದರೂ, ಹೇಳಲು ಶಕ್ತರಾಗಲಾರರು. ಅವನು ಮಹಾತ್ಮ. ಶಂಖ ಚಕ್ರ ಖಡ್ಗಪಾಣಿಯಾದ ಜಯಶೀಲನಾದ ವಿಷ್ಣುವಿನ ಅವತಾರ.
ಭಯಂ ಮೇ ವೈ ಜಾಯತೇ ಸಾಧ್ವಸಂ ಚ
ದೃಷ್ಟ್ವಾ ಕೃಷ್ಣಾವೇಕರಥೇ ಸಮೇತೌ ॥53
ನನಗೆ ನಿಜವಾಗಿ ಮನಸ್ಸಿನಲ್ಲಿ ಭಯ, ಮೈಯಲ್ಲಿ ನಡುಕ ಉಂಟಾಗುತ್ತಿದೆ, ಒಂದು ರಥದಲ್ಲಿ ಕೃಷ್ಣಾರ್ಜುನರು ಜೊತೆಗಿರುವುದನ್ನು ಕಂಡಾಗ.
ಅತೀವ ಪಾರ್ಥೋ ಯುಧಿ ಕಾರ್ಮುಕಿಭ್ಯೋ
ನಾರಾಯಣಶ್ಚಾಪ್ರತಿಮಶ್ಚ ಯುದ್ಧೇ |
ಏವಂವಿಧೌ ಪಾಂಡವವಾಸುದೇವೌ
ಚಲೇತ್ಸ್ವದೇಶಾದ್ಧಿಮವಾನ್ನ ಕೃಷ್ಣೌ ॥54॥
ರಣದಲ್ಲಿ ಬಿಲ್ಲಾಳುಗಳೆಲ್ಲರಿಗಿಂತ ಅತಿಶ್ರೇಷ್ಠನು ಅರ್ಜುನ. ಚಕ್ರಯುದ್ಧದಲ್ಲಿ ಅಪ್ರತಿಮನು ನಾರಾಯಣ. ಇಂಥವರು ಕೃಷ್ಣಾರ್ಜುನರು. ಒಂದುವೇಳೆ ಹಿಮಾಲಯ ಪರ್ವತವಾದರೂ ತನ್ನ ಸ್ಥಾನದಿಂದ ಚಲಿಸಬಹುದು. ಕೃಷ್ಣಾರ್ಜುನರು ಮಾತ್ರ ವಿಚಲಿತರಾಗಲಾರರು.
ಉಭೌ ಹಿ ಶೂರೌ ಕೃತಿನೌ ದೃಢಾಸ್ತ್ರೌ
ಮಹಾರಥೌ ಸಂಹನನೋಪಪನ್ನೌ |

ಏತಾದೃಶೌ ಫಲ್ಗುನವಾಸುದೇವೌ
ಕೋಽನ್ಯಃ ಪ್ರತೀಯಾನ್ ಮದೃತೇ ನು ಶಲ್ಯ ॥55॥
ಕೃಷ್ಣಾರ್ಜುನರಿಬ್ಬರೂ ಪ್ರಯತ್ನಶೀಲರು, ದೃಢವಾದ ಅಸ್ತ್ರವುಳ್ಳವರು, ಮಹಾರಥರು, ಒಳ್ಳೆಯ ಮೈಕಟ್ಟುಳ್ಳವರು. ಇಂಥ ಕೃಷ್ಣಾರ್ಜುನರನ್ನು, ಶಲ್ಯ! ನನ್ನ ಹೊರತು ಇನ್ನಾವನು ಯುದ್ಧದಲ್ಲಿ ಇದಿರಿಸಿಯಾನು?
ಮನೋರಥೋ ಯಸ್ತು ಮಮಾದ್ಯ ಶಲ್ಯ
ಮದ್ರೇಶ ಯುದ್ಧಂ ಪ್ರತಿ ಪಾಂಡವಸ್ಯ |
ನೇದಂ ಚಿರಾದಾಶು ಭವಿಷ್ಯತೀದ-
ಮತ್ಯದ್ಭುತಂ ಚಿತ್ರಮತುಲ್ಯರೂಪಮ್ ॥56॥
ಶಲ್ಯ, ಅರ್ಜುನನ ಇದಿರಿನಲ್ಲಿ ಯುದ್ಧ ಮಾಡುವ ನನ್ನ ಈ ಮನೋರಥವು ಫಲಿಸಲು ತಡವಿಲ್ಲ, ಬೇಗನೇ ಫಲಿಸುವುದು. ಅದು ಅತ್ಯದ್ಭುತ, ಸುಂದರ, ಅನುಪಮವಾಗಿರುತ್ತದೆ.
ಏತಾವಹಂ ಯುಧಿ ವಾ ಪಾತಯಿಷ್ಯೇ
ಮಾಂ ವಾ ಕೃಷ್ಣೌ ನಿಹನಿಷ್ಯತೋಽದ್ಯ ॥57॥
ಇವರಿಬ್ಬರನ್ನು ನಾನು ಈಗ ಬೀಳಿಸುವೆ ಅಥವಾ ಅವರು ನನ್ನನ್ನು ಸಂಹರಿಸುವರು.
ಸಂಜಯಃ
ಇತಿ ಬ್ರುವನ್ ಶಲ್ಯಮಮಿತ್ರಹಂತಾ
ಕರ್ಣೋ ರಣೇ ಮೇಘ ಇವೋನ್ನನಾದ ॥58॥
ಸಂಜಯನು ನುಡಿದ– ಶತ್ರುನಾಶಕನಾದ ಕರ್ಣನು ಶಲ್ಯನಿಗೆ ಹೀಗೆ ಹೇಳುತ್ತ ಮೇಘದಂತೆ ಗರ್ಜನೆ ಮಾಡಿದ.
ಅಭ್ಯೇತ್ಯ ಪುತ್ರೇಣ ತವಾಭಿನಂದಿತಃ |
ಸಮೇತ್ಯ ಚೋವಾಚ ಕುರುಪ್ರವೀರಾನ್ |
ಕೃಪಂ ಚ ಭೋಜಂ ಚ ಮಹಾಭುಜಾವುಭೌ
ತಥೈವ ಗಾಂಧಾರನೃಪಂ ಸಹಾನುಜಮ್ |
ಗುರೋಃ ಸುತಂ ಚಾವರಜಂ ತಥಾತ್ಮನಃ
ಪದಾತಿನೋಽಥ ದ್ವಿಪಸಾದಿನೋಽನ್ಯಾನ್ ॥59॥
ನಿನ್ನ ಮಗ ದುರ್ಯೋಧನನು ಬಂದು ಕರ್ಣನನ್ನು ಅಭಿನಂದಿಸಿದ. ಅವನೊಂದಿಗೆ ಕರ್ಣನು ನಿಂತು ಮಹಾಬಾಹುಗಳಾದ ಕೃಪ ಕೃತವರ್ಮರನ್ನೂ ಸೋದರರೊಂದಿಗೆ ಯುಕ್ತನಾದ ಶಕುನಿಯನ್ನೂ ಅಶ್ವತ್ಥಾಮನನ್ನೂ ತನ್ನ ತಮ್ಮನನ್ನೂ ಪದಾತಿ ಗಜ ಅಶ್ವ ಸೈನಿಕರನ್ನೂ ಕುರಿತು ನುಡಿದ.
ಕರ್ಣಃ
ನಿರುಂಧತಾಭಿದ್ರವತಾಚ್ಯುತಾರ್ಜುನೌ
ಶ್ರಮೇಣ ಸಂಯೋಜಯತಾಶು ಸರ್ವಶಃ |
ಯಥಾ ಭವದ್ಭಿರ್ಭೃಶವಿಕ್ಷತಾವುಭೌ
ಸುಖೇನ ಹನ್ಯಾಮಹಮದ್ಯ ಭೂಮಿಪಾಃ ॥60॥
ಕರ್ಣನು ನುಡಿದ– ರಾಜರೆ, ಕೃಷ್ಣಾರ್ಜುನರನ್ನು ತಡೆಯಿರಿ, ಆಕ್ರಮಿಸಿರಿ, ಎಲ್ಲ ಕಡೆಯಿಂದ ಅವರಿಗೆ ಶ್ರಮವಾಗುವಂತೆ ದಾಳಿ ಮಾಡಿರಿ. ನೀವು ಅವರನ್ನು ಬಹಳ ಗಾಯಗೊಳಿಸಿದಾಗ ನಾನು ಅವರನ್ನು ನಿರಾಯಾಸವಾಗಿ ಕೊಲ್ಲಬಲ್ಲೆ.
ಸಂಜಯಃ
ತಥೇತಿ ಚೋಕ್ತತ್ವ ತ್ವರಿತಾಃ ಸ್ಮ ತೇಽರ್ಜುನಂ
ಜಿಘಾಂಸವೋ ವೀರತಮಾಃ ಸಮಭ್ಯಯುಃ |
ಶರೈಶ್ಚ ಜಘ್ನುರ್ಯುಧಿ ತಂ ಮಹಾರಥಾ
ಧನಂಜಯಂ ಕರ್ಣನಿದೇಶಕಾರಿಣಃ ॥61॥
ನದೀನದಾನ್ ಭೂರಿಜಲೋ ಮಹಾರ್ಣವೋ
ಯಥಾ ತಥಾ ತಾನ್ ಸಮರೇಽರ್ಜುನೋಽಗ್ರಸತ್ ॥62॥
ಸಂಜಯನು ನುಡಿದ– ಮಹಾವೀರರಾದ ಆ ರಾಜರು `ಹಾಗೇ ಆಗಲಿ' ಎಂದು ಹೇಳಿ ಬೇಗನೆ ಅರ್ಜುನನನ್ನು ಇದಿರಿಸಿದರು. ಆ ಮಹಾರಥರು ಸೇನಾಧಿಪತಿಯಾದ ಕರ್ಣನ ಆದೇಶದಂತೆ ರಣದಲ್ಲಿ ಅರ್ಜುನನನ್ನು ಬಾಣಗಳಿಂದ ಹೊಡೆದರು. ಅಪಾರ ಜಲ ಉಳ್ಳ ಮಹಾಸಮುದ್ರವು ಎಲ್ಲ ನದೀ ನದಜಲಗಳನ್ನು ಅನಾಯಾಸವಾಗಿ ಕಬಳಿಸುವಂತೆ ಅರ್ಜುನನು ಅವರೆಲ್ಲರ ಬಾಣಗಳನ್ನು ಅನಾಯಾಸವಾಗಿ ನಾಶಪಡಿಸಿದ.
ನ ಸಂದಧಾನೋ ನ ತಥಾ ಶರೋತ್ತಮಾನ್
ಪ್ರಮುಂಚಮಾನೋ ರಿಪುಭಿಃ ಪ್ರದೃಶ್ಯತೇ |
ಧನಂಜಯಸ್ತಸ್ಯ ಶರೈಶ್ಚ ದಾರಿತಾ
ಹತಾಶ್ಚ ಪೇತುರ್ನರವಾಜಿಕುಂಜರಾಃ ॥63॥
ಅರ್ಜುನನು ಉತ್ತಮವಾಗಿ ಬಾಣಗಳನ್ನು ಯಾವಾಗ ಬಿಲ್ಲಿಗೆ ಹೂಡುತ್ತಾನೆ, ಯಾವಾಗ ಬಿಡುತ್ತಾನೆ ಎಂಬುದು ಶತ್ರುಗಳಿಗೆ ಕಾಣಿಸುವುದಿಲ್ಲ. ಅವನ ಬಾಣಗಳಿಂದ ಹೊಡೆಸಿಕೊಂಡು ಪದಾತಿ ಅಶ್ವಗಜಯೋಧರು ಸತ್ತುಬಿದ್ದರು. ಇದು ಮಾತ್ರ ಎಲ್ಲರಿಗೂ

ಕಾಣಿಸಿಕೊಂಡಿತು.
ಶರಾರ್ಚಿಷಂ ಗಾಂಡಿವಚಾರುಮಂಡಲಂ
ಯುಗಾಂತಸೂರ್ಯಪ್ರತಿಮಾನತೇಜಸಮ್ |
ನ ಕೌರವಾಃ ಶೇಕುರುದೀಕ್ಷಿತುಂ ಜಯಂ
ಯಥಾ ರವಿಂ ವ್ಯಾಧಿತಚಕ್ಷುಷೋ ಜನಾಃ ॥64॥
ಪ್ರಳಯಕಾಲದ ಸೂರ್ಯನ ತೇಜಸ್ಸು ಅರ್ಜುನನದು. ಬಾಣಗಳು ಈ ಸೂರ್ಯನ ಕಿರಣಗಳು. ವೃತ್ತಾಕಾರವಾಗಿ ಬಾಗಿದ ಬಿಲ್ಲು ಅವನ ಸೂರ್ಯ ಮಂಡಲ. ಕಣ್ಣುಬೇನೆಯವರು ಸೂರ್ಯದರ್ಶನ ಮಾಡಲು ಶಕ್ತರಾಗುವುದಿಲ್ಲ. ಹಾಗೇ ಅರ್ಜುನನನ್ನು ದಿಟ್ಟಿಸಿ ನೋಡಲು ಕೌರವರು ಶಕ್ತರಾಗಲಿಲ್ಲ.
ಶರೋತ್ತಮಾನ್ ಸ ಪ್ರಹಿತಾನ್ ಮಹಾರಥೈ-
ಶ್ಚಿಚ್ಛೇದ ಪಾರ್ಥಃ ಪ್ರಹಸನ್ ಶರೌಘೈಃ |
ಭೂಯಶ್ಚ ತಾನಹನದ್ ಬಾಣಸ್ಯಂ-
ರ್ಗಾಂಡೀವಧನ್ವಾऽऽಯತಪೂರ್ಣಮಂಡಲಃ ॥65॥
ಸೆಳೆದು ಪೂರ್ಣಮಂಡಲಾಕಾರವಾಗಿಸಿದ ಗಾಂಡೀವಬಿಲ್ಲನ್ನು ಧರಿಸಿದ ಅರ್ಜುನನು ನಗುತ್ತ ಮಹಾರಥರು ಎಸೆದ ಉತ್ತಮವಾದ ಬಾಣಗಳನ್ನು ಬಾಣಸಮೂಹಗಳಿಂದ ಕತ್ತರಿಸಿದ. ಪುನಃ ಬಾಣಸಮೂಹಗಳಿಂದ ಅವರನ್ನು ಹೊಡೆದ.
ಯಥೋಗ್ರರಶ್ಮಿಃ ಶುಚಿಶುಕ್ಲಮಧ್ಯಗಃ
ಸುಖಂ ವಿವಸ್ವಾನ್ ಹರತೇ ಜಲೌಘಾನ್ |
ತಥಾರ್ಜುನೋ ಬಾಣಗಣಾನ್ ನಿರಸ್ಯ
ದದಾಹ ಸೇನಾಂ ತವ ಪಾರ್ಥಿವೇಂದ್ರ ॥66॥
ಮಹಾರಾಜ, ಜ್ಯೇಷ್ಠಆಷಾಢ ಮಾಸ ಮಧ್ಯದ ಸೂರ್ಯನು ಪ್ರಖರ ರಶ್ಮಿ ಉಳ್ಳವನಾಗಿದ್ದು ಕಿರಣಗಳಿಂದ ಎಲ್ಲ ನೀರಿನ ಪ್ರವಾಹಗಳನ್ನು ಸುಖವಾಗಿ ಹೀರಿಕೊಳ್ಳುವಂತೆ ಅರ್ಜುನನು ಬಾಣಸಮೂಹಗಳನ್ನು ಎಸೆದು ನಿನ್ನ ಸೈನ್ಯವನ್ನು ಅನಾಯಾಸವಾಗಿ ಸುಟ್ಟುಬಿಟ್ಟ.
ತಮಭ್ಯಧಾವದ್ ವಿಸೃಜನ್ ಶರಾನ್ ಕೃಪ-
ಸ್ತಥೈವ ಭೋಜಸ್ತವ ಚಾತ್ಮಜಃ ಸ್ವಯಮ್ |
ಮಹಾರಥೋ ದ್ರೋಣಸುತಶ್ಚ ಸಾಯಕೈ-
ರವಾಕಿರಂಸ್ತೋಯಧರಾ ಯಥಾಚಲಮ್ |
ಜಿಘಾಂಸುಭಿಸ್ತಾನ್ ಕುಶಲೈಃ ಶರೋತ್ತಮಾನ್
ಮಹಾಹವೇ ಸಂಜವಿತಾನ್ ಪ್ರಯತ್ನತಃ ॥67॥
ಶರೈಃ ಪ್ರಚಿಚ್ಛೇದ ಸ ಪಾಂಡವಸ್ತ್ವರನ್
ಪರಾಭಿನದ್ ವಕ್ಷಸಿ ಚ ತ್ರಿಭಿಸ್ತ್ರಿಭಿಃ ॥68॥
ಅರ್ಜುನನನ್ನು ಕೃಪ ಕೃತವರ್ಮ ಸ್ವಯಂ ನಿನ್ನ ಮಗ ದುರ್ಯೋಧನ ಮತ್ತು ಮಹಾರಥನಾದ ಅಶ್ವತ್ಥಾಮ ಇವರೆಲ್ಲರೂ, ಮೋಡಗಳು ಬೆಟ್ಟವನ್ನು ಮಳೆಯಿಂದ ತೋಯಿಸುವಂತೆ, ಬಾಣಗಳಿಂದ ಮುಚ್ಚಿದರು. ಅರ್ಜುನನನ್ನು ಕೊಲ್ಲುವ ಇಚ್ಛೆಯಿಂದ ಅಸ್ತ್ರಕುಶಲರು ಎಸೆದ ಆ ಉತ್ತಮವಾದ ಬಾಣಗಳನ್ನು, ಮಹಾರಣದಲ್ಲಿ ಅವರು ಪ್ರಯತ್ನದಿಂದ ವೇಗಯುಕ್ತವಾಗಿ ಎಸೆದಿದ್ದರೂ, ಅವುಗಳನ್ನು ಅರ್ಜುನನು ವೇಗದಿಂದಲೆ ಬಾಣಗಳಿಂದ ಕತ್ತರಿಸಿದ. ಎಲ್ಲರಿಗೂ ಮೂರು ಮೂರು ಬಾಣಗಳಿಂದ ಎದೆಯಲ್ಲಿ ಹೊಡೆದ.
ಸ ಗಾಂಡಿವಾಭ್ಯಾಯತಪೂರ್ಣಮಂಡಲ-
ಸ್ತಪನ್ ರಿಪೂನರ್ಜುನಭಾಸ್ಕರೋ ಬಭೌ |
ಶರೋಗ್ರರಶ್ಮಿಃ ಶುಚಿಶುಕ್ಲಮಧ್ಯಗೋ
ಯಥೈವ ಸೂರ್ಯಃ ಪರಿವೇಷಗಸ್ತಥಾ ॥69॥
ಅರ್ಜುನನು ಚೆನ್ನಾಗಿ ಸೆಳೆದು ಮಂಡಲಾಕಾರವಾಗಿ ಬಾಗಿಸಿದ ಗಾಂಡೀವಧಾರಿ ಯಾದ್ದರಿಂದ, ಬಾಣಗಳೆಂಬ ಉಗ್ರರಶ್ಮಿಯುಕ್ತನಾದ ಆ ಅರ್ಜುನ ಭಾಸ್ಕರನು ಶತ್ರು ಗಳನ್ನು ಸುಡುತ್ತ, ಜ್ಯೇಷ್ಠ ಆಷಾಢಮಧ್ಯಗತನಾದ ಸೂರ್ಯನು ಮಂಡಲಾಕಾರ ದಲ್ಲಿ ಪರಿವೇಷಗೊಂಡರೆ ಹೇಗೆ ಕಾಣುವನೋ ಹಾಗೆ ಕಾಣಿಸಿಕೊಂಡ.
ಅಥಾಗ್ರ್ಯಬಾಣೈರ್ದಶಭಿರ್ಧನಂಜಯಂ
ಪರಾಭಿನದ್ ದ್ರೋಣಸುತೋಽಚ್ಯುತಂ ತ್ರಿಭಿಃ |
ಚತುರ್ಭಿರಶ್ವಾಂಶ್ಚತುರಃ ಕಪಿಂ ತಥಾ
ಶರೈಃ ಸ ನಾರಾಚವರೈರವಾಕಿರತ್ ॥70॥
ಅಶ್ವತ್ಥಾಮನು ಹತ್ತು ಉತ್ತಮಬಾಣಗಳಿಂದ ಅರ್ಜುನನನ್ನೂ ಮೂರು ಬಾಣಗಳಿಂದ ಕೃಷ್ಣನನ್ನೂ ಹೊಡೆದ. ನಾಲ್ಕು ಬಾಣಗಳಿಂದ ನಾಲ್ಕು ಅಶ್ವಗಳನ್ನೂ ಉತ್ತಮ ನಾರಾಚಗಳಿಂದ ಕಪಿಧ್ವಜವನ್ನೂ ಹೊಡೆದ.
ತಥಾ ತು ತತ್ತತ್ಸ್ಫುರದಾತ್ತಕಾರ್ಮುಕಂ
ತ್ರಿಭಿಃ ಶರೈರ್ಯಂತೃಶಿರಃ ಕ್ಷುರೇಣ |
ಹಯಾಂಶ್ಚತುರ್ಭಿಶ್ಚತುರಸ್ತ್ರಿಭಿರ್ಧ್ವಜಂ
ಧನಂಜಯೋ ದ್ರೌಣಿರಥಾನ್ನ್ಯಪಾತಯತ್ ॥71॥

ಅರ್ಜುನನು ಅಶ್ವತ್ಥಾಮನ ಹೊಳೆಯುವ ಆ ಧನುಸ್ಸನ್ನು ಮೂರು ಬಾಣಗಳಿಂದ; ಅವನ ಸಾರಥಿಯ ಶಿರಸ್ಸನ್ನು ಒಂದು ಕ್ಷುರದಿಂದ, ನಾಲ್ಕು ಅಶ್ವಗಳನ್ನು ನಾಲ್ಕು ಕ್ಷುರಗಳಿಂದ ಕತ್ತರಿಸಿದ. ಧ್ವಜವನ್ನು ಮೂರು ಕ್ಷುರಗಳಿಂದ ಕಡಿದು ಅಶ್ವತ್ಥಾಮನ ರಥದಿಂದ ಬೀಳಿಸಿದ.

ಸ ರೋಷಪೂರ್ಣೋ ಮಣಿವಜ್ರಹಾಟಕೈ-
ರಲಂಕೃತಂ ತಕ್ಷಕಭೋಗವರ್ಚಸಮ್ |
ಮಹಾಧನಂ ಕಾರ್ಮುಕಮನ್ಯದಾದದೇ
ಯಥಾ ಮಹಾಹಿಪ್ರವರಂ ಗಿರಿಸ್ತಥಾ ॥72॥

ಅಶ್ವತ್ಥಾಮನು ರೋಷಪೂರ್ಣನಾಗಿ ಮಣಿ ವಜ್ರ ಬಂಗಾರಗಳಿಂದ ಅಲಂಕೃತವಾದ ತಕ್ಷಕನ ಶರೀರದಂತಿರುವ ಬಹುಮೂಲ್ಯವಾದ ಇನ್ನೊಂದು ಬಿಲ್ಲನ್ನು ಮಂದರಪರ್ವತವು ವಾಸುಕಿಯೆಂಬ ಮಹಾ ಸರ್ಪಶ್ರೇಷ್ಠವನ್ನು ಸ್ವೀಕರಿಸಿದಂತೆ ಸ್ವೀಕರಿಸಿದ.

ಸ್ವಮಾಯುಧಂ ಚಾಪಿ ವಿಕೃಷ್ಯ ಭೂತಳೇ
ಧನುಶ್ಚ ಕೃತ್ವಾ ಸಗುಣಂ ಗುಣಾಧಿಕಃ |
ಸಮಾನಯಾನಾವಜಿತೌ ನರೋತ್ತಮೌ
ಶರೋತ್ತಮೈರ್ದ್ರೌಣಿರವಿಧ್ಯದಂತಿಕಾತ್ ॥73॥

ಅಶ್ವತ್ಥಾಮನ ರಥದೊಳಗಿನ ಆಸನವು ಭೂತಲದಂತಾಗಿತ್ತು. ಏಕೆಂದರೆ ಸಾರಥಿ ಅಶ್ವಧ್ವಜಗಳೆಲ್ಲ ನಾಶವಾಗಿದ್ದುವು. ಅಂಥ ಭೂತಲತುಲ್ಯವಾದ ರಥದ ಆಸನದ ಮೇಲೆ ಅಶ್ವತ್ಥಾಮನು ಕೋಶದಿಂದ ತನ್ನ ಆಯುಧಗಳನ್ನು ತಾನೇ ಹೊರಗೆ ಸೆಳೆದು ಹಾಕಿ, ಬಿಲ್ಲಿಗೆ ಹೆದೆಯೇರಿಸಿ, ಒಂದೇ ರಥದಲ್ಲಿ ಜೊತೆಯಾಗಿ ನಿಂತ ಕೃಷ್ಣಾರ್ಜುನರನ್ನು ಉತ್ತಮವಾದ ಬಾಣಗಳಿಂದ ಸಮೀಪದಿಂದಲೆ ಹೊಡೆದ.

ಕೃಪಶ್ಚ ಭೋಜಶ್ಚ ತಥಾತ್ಮಜಶ್ಚ ತೇ
ಶರೈರನೇಕೈರ್ಯುಧಿ ಪಾಂಡವರ್ಷಭಮ್ |
ಮಹಾರಥಾಃ ಸಂಯುಗಮೂರ್ಧನಿ ಸ್ಥಿತಾ
ಸ್ತಮೋನುದಂ ವಾರಿಧರಾ ಇವಾಪತನ್ ॥74॥

ರಣರಂಗದಲ್ಲಿ ಅಗ್ರಭಾಗದಲ್ಲಿ ನಿಂತ ಮಹಾರಥರಾದ ಕೃಪ ಕೃತವರ್ಮ ದುರ್ಯೋಧನರು ಅರ್ಜುನನನ್ನು ಅನೇಕ ಬಾಣಗಳಿಂದ, ಸೂರ್ಯನನ್ನು ಮೋಡಗಳಂತೆ, ಆಕ್ರಮಿಸಿದರು.

ಕೃಪಸ್ಯ ಪಾರ್ಥಃ ಸಶರಂ ಶರಾಸನಂ
ಹಯಾನ್ ಧ್ವಜಂ ಸಾರಥಿಮೇವ ಪತ್ರಿಭಿಃ |
ನ್ಯಪಾತಯದ್ ಬಾಹುಸಹಸ್ರವಿಕ್ರಮ-
ಸ್ತಥಾ ಯಥಾ ವಜ್ರಧರಃ ಪುರಾ ಬಲೇಃ ॥75॥

ಸಾವಿರ ತೋಳುಗಳುಳ್ಳ ಕಾರ್ತವೀರ್ಯಾರ್ಜುನನಂಥ ಪರಾಕ್ರಮಿಯಾದ ಅರ್ಜುನನು ಕೃಪನ ಧನುರ್ಬಾಣಗಳನ್ನೂ ಅಶ್ವ ಧ್ವಜ ಸಾರಥಿಗಳನ್ನೂ ಬಾಣಗಳಿಂದ ಹಿಂದೆ ದೇವೇಂದ್ರನು ಬಲಿಚಕ್ರವರ್ತಿಯ ಧನುರ್ಬಾಣ ಮುಂತಾದುವನ್ನು ಬೀಳಿಸಿದಂತೆ ಬೀಳಿಸಿದ.

ಸ ಪಾರ್ಥಬಾಣೈರ್ವಿನಿಪಾತಿತಾಯುಧೋ
ಧ್ವಜಾವಮರ್ದೇ ಚ ಕೃತೇ ಮಹಾಹವೇ |
ಕೃತಃ ಕೃಪೋ ಬಾಣಸಹಸ್ರಯಂತ್ರಿತೋ
ಯಥಾಪಗೇಯಃ ಪ್ರಥಮಂ ಕಿರೀಟಿನಾ ॥76॥

ಅರ್ಜುನನ ಬಾಣಗಳಿಂದ ಕೃಪನ ಆಯುಧ ಧ್ವಜಗಳು ಬಿದ್ದ ಬಳಿಕ, ಹಿಂದೆ ಅರ್ಜುನನು ಸಾವಿರಾರು ಬಾಣಗಳಿಂದ ಭೀಷ್ಮನನ್ನು ಮುಚ್ಚಿದಂತೆ ಈಗ ಕೃಪನನ್ನೂ ಹಾಗೇ ಮುಚ್ಚಿದ.

ಶರೈಃ ಪ್ರಚಿಚ್ಛೇದ ತವಾತ್ಮಜಸ್ಯ
ಧ್ವಜಂ ಧನುಶ್ಚ ಪ್ರಚಕರ್ತ ನರ್ದತಃ |
ಜಘಾನ ಚಾಶ್ವಾನ್ ಕೃತವರ್ಮಣಃ ಶುಭಾನ್
ಧ್ವಜಂ ಚ ಚಿಚ್ಛೇದ ತತಃ ಪ್ರತಾಪವಾನ್ ॥77॥

ಪ್ರತಾಪಶಾಲಿ ಅರ್ಜುನನು ಗರ್ಜನೆ ಮಾಡುತ್ತಿದ್ದ ದುರ್ಯೋಧನನ ಧ್ವಜವನ್ನೂ ಧನುಸ್ಸನ್ನೂ ಬಾಣಗಳಿಂದ ಚೆನ್ನಾಗಿ ಕತ್ತರಿಸಿದ. ಕೃತವರ್ಮನ ಸುಂದರವಾದ ಅಶ್ವಗಳನ್ನು ಕೊಂದ. ಧ್ವಜವನ್ನೂ ಕಡಿದ.

ಸವಾಜಿಸೂತೇಷ್ವಸನಾನ್ ಸಕೇತನಾನ್
ಜಘಾನ ನಾಗಾಶ್ವರಥಾಂಸ್ತ್ವರಂಶ್ಚ ಸಃ |
ತತಃ ಪ್ರಕೀರ್ಣಂ ಸುಮಹದ್ಬಲಂ ತವ
ಪ್ರದಾರಿತಂ ಸೇತುರಿವಾಂಭಸಾ ಯಥಾ |
ತತೋಽರ್ಜುನಸ್ಯಾಶು ರಥೇನ ಕೇಶವ-
ಶ್ಚಕಾರ ಶತ್ರೂನಪಸವ್ಯಮಾತುರಾನ್ ॥78॥

ಅರ್ಜುನನು ಬೇಗನೆ ಗಜ ಅಶ್ವ ರಥಯೋಧರನ್ನು ಅಶ್ವಸಾರಥಿ ಧನುಸ್ ಧ್ವಜಸಮೇತವಾಗಿ ಸಂಹರಿಸಿದ. ಆಗ, ಪ್ರವಾಹದಿಂದ ಅಣೆಕಟ್ಟು ಒಡೆಯುವಂತೆ ಸಂಘಟಿತವಾಗಿದ್ದ ನಿನ್ನ ಮಹಾಸೈನ್ಯವೀಗ ಚದುರಿ ನಾಶವಾಯಿತು. ಅರ್ಜುನನ ರಥದಿಂದ ಕೃಷ್ಣನು ಪೀಡಿತರಾಗಿದ್ದ ಶತ್ರುಗಳನ್ನು ಬಲಕ್ಕೆ ಬಿಟ್ಟು ನಡೆದ.

ತತಃ ಪ್ರಯಾಂತಂ ತ್ವರಿತಂ ಧನಂಜಯಂ

ಶತಕ್ರತುಂ ವೃತ್ರನಿಜಘ್ನುಷಂ ಯಥಾ |
ಸಮನ್ವಧಾವನ್ ಪುನರುಚ್ಛ್ರಿತೈರ್ಧ್ವಜೈ
ರಥೈಃ ಸುಯುಕ್ತೈರಪರೇ ಯುಯುತ್ಸವಃ ॥79॥
ವೃತ್ರಾಸುರನನ್ನು ಕೊಲ್ಲಲು ಬಯಸಿ ವೇಗವಾಗಿ ಹೋಗುತ್ತಿದ್ದ ದೇವೇಂದ್ರನನ್ನು ಅಸುರರು ಹಿಂಬಾಲಿಸಿದಂತೆ ಕರ್ಣನ ವಧೆಗಾಗಿ ಹೋಗುತ್ತಿದ್ದ ಅರ್ಜುನನನ್ನು ಎತ್ತರವಾದ ಧ್ವಜಗಳಿಂದ ಯುಕ್ತವಾದ ಸಜ್ಜಾದ ರಥಗಳಿಂದ ಬೇರೆ ಯುದ್ಧಾಕಾಂಕ್ಷಿಗಳಾದ ಶತ್ರುಗಳು ಹಿಂಬಾಲಿಸಿದರು.
ಅಥಾಭಿಸೃತ್ಯ ಪ್ರತಿವಾರ್ಯ ತಾನರೀನ್
ಧನಂಜಯಸ್ಯಾಭಿ ರಥಂ ಮಹಾರಥಾಃ |
ಶಿಖಂಡಿಶೈನೇಯಯಮಾಃ ಶಿತೈಃ ಶರೈಃ
ವಿದಾರಯಂತೋ ವ್ಯನದನ್ಸುಭೈರವಮ್ ॥80॥
ಅರ್ಜುನನ ರಥವನ್ನು ಹಿಂಬಾಲಿಸಿದ ಆ ಶತ್ರುಗಳನ್ನು ಇದಿರಿಸಿ ತಡೆದು ಮಹಾರಥರಾದ ಶಿಖಂಡಿ ಸಾತ್ಯಕಿ ನಕುಲಸಹದೇವರು ಹರಿತವಾದ ಬಾಣಗಳಿಂದ ನಾಶಪಡಿಸುತ್ತ ಭಯಂಕರವಾಗಿ ಗರ್ಜಿಸಿದರು.
ತತೋಽಭಿಜಗ್ಮುಃ ಕುಪಿತಾಃ ಪರಸ್ಪರಂ
ಶರೈಸ್ತದಾಂಜೋಗತಿಭಿಃ ಸುತೇಜನೈಃ |
ಕುರುಪ್ರವೀರಾಃ ಸಹ ಸೃಂಜಯೈರ್ಯಥಾ-
ಸುರಾಃ ಪುರಾ ದೇವವರೈರಯೋಧಯನ್ ॥81॥
ಆಗ ಕೌರವರ ವೀರರು ಕುಪಿತರಾಗಿ ಸೃಂಜಯಯೋಧರೊಡನೆ ಹರಿತವಾದ ವೇಗದ ಗತಿಯುಳ್ಳ ಬಾಣಗಳಿಂದ ಪರಸ್ಪರವಾಗಿ ಇದಿರಿಸಿ ಹಿಂದೆ ಅಸುರರು ದೇವೋತ್ತಮರೊಂದಿಗೆ ಯುದ್ಧ ಮಾಡಿದಂತೆ ಹೋರಾಡಿದರು.
ಜಯೇಪ್ಸವಃ ಸ್ವರ್ಗಮನಾಯ ಚೋತ್ಸುಕಾಃ
ಪತಂತಿ ನಾಗಾಶ್ವರಥಾಃ ಪರಂತಪ |
ಜಗರ್ಜುರುಚ್ಚೈರ್ಬಲವಚ್ಚ ವಿವ್ಯಧುಃ
ಶರೈಃ ಸುಮುಕ್ತೈರಿತರೇತರಂ ಪೃಥಕ್ ॥82॥
ರಾಜನೆ, ವಿಜಯೇಚ್ಛುಗಳಾಗಿ ಅಥವಾ ಸತ್ತು ಸ್ವರ್ಗಕ್ಕೆ ಗಮನೋತ್ಸುಕರಾಗಿ ಗಜ ಅಶ್ವ ರಥಯೋಧರು ಪರಸ್ಪರವಾಗಿ ಪ್ರತ್ಯೇಕವಾಗಿ ಆಕ್ರಮಿಸಿದರು. ಗಟ್ಟಿಯಾಗಿ ಪರಸ್ಪರ ಚೆನ್ನಾಗಿ ಎಸೆದ ಬಾಣಗಳಿಂದ ಬಲವಾಗಿ ಹೊಡೆದರು.
ಶರಾಂಧಕಾರೇ ತು ಮಹಾತ್ಮಭಿಃ ಕೃತೇ
ಮಹಾಮೃಧೇ ಯೋಧವರೈಃ ಪರಸ್ಪರಮ್ |
ಚತುರ್ದಿಶೋ ವೈ ವಿದಿಶಶ್ಚ ಪಾರ್ಥಿವ
ಪ್ರಭಾ ಚ ಸೂರ್ಯಸ್ಯ ತಮೋವೃತಾಭವತ್ ॥83॥
ಮಹಾತ್ಮರಾದ ಶ್ರೇಷ್ಠ ಯೋಧರು ಮಹಾರಣದಲ್ಲಿ ಪರಸ್ಪರವಾಗಿ ಬಾಣಗಳಿಂದ ಅಂಧಕಾರವನ್ನು ಉಂಟುಮಾಡಿದಾಗ ನಾಲ್ಕು ದಿಕ್ಕುಗಳೂ ವಿದಿಕ್ಕುಗಳೂ ಸೂರ್ಯನ ಪ್ರಭೆಯೂ ಕತ್ತಲಿಂದ ಆಚ್ಛಾದಿತವಾದುವು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಷಟ್‌ಸಪ್ತತಿತಮೋಽಧ್ಯಾಯಃ ॥76॥

ಎಪ್ಪತ್ತೇಳನೆಯ ಅಧ್ಯಾಯ
ಅರ್ಜುನನಿಂದ ಕುರುಸೈನ್ಯದ ವಿನಾಶ.
ಸಂಜಯಃ
ರಾಜನ್ ಕುರೂಣಾಂ ಪ್ರವರೈರ್ಬಲೈರ್ಭೀಮಮಭಿದ್ರುತಮ್ |
ಮಜ್ಜಂತಮಿವ ಕೌಂತೇಯಮುಜ್ಜಿಹೀರ್ಷುರ್ಧನಂಜಯಃ ॥1॥
ವಿಮೃದ್ಯ ಸೂತಪುತ್ರಸ್ಯ ಸೇನಾಂ ಭಾರತ ಸಾಯಕೈಃ |
ಪ್ರಾಹಿಣೋತ್ ಮೃತ್ಯುಲೋಕಾಯ ಪರವೀರಾನ್ ಧನಂಜಯಃ ॥2॥
ಸಂಜಯ ನುಡಿದ– ರಾಜನೆ, ಕೌರವರ ಶ್ರೇಷ್ಠ ಸೈನ್ಯಗಳಿಂದ ಆಕ್ರಮಿಸಲ್ಪಟ್ಟು ಮುಳುಗುತ್ತಿದ್ದಂತೆ ಕಂಡ ಭೀಮನನ್ನು ಪಾರುಮಾಡಲು ಬಯಸಿ ಅರ್ಜುನನು ಕರ್ಣನ ಸೈನ್ಯವನ್ನು ಬಾಣಗಳಿಂದ ಮರ್ದಿಸಿ ಶತ್ರುವೀರರನ್ನು ಯಮಲೋಕಕ್ಕೆ ಕಳಿಸಿದನು.
ತತೋಽಸ್ಯಾಂಬರಮಾವೃತ್ಯ ಶರಜಾಲಾನಿ ಭಾರತ |
ಅದೃಶ್ಯಂತ ತಥಾನ್ಯೇ ಚ ನಿಜಘ್ನುಸ್ತವ ವಾಹಿನೀಮ್ ॥3॥
ರಾಜನೆ, ಅರ್ಜುನನ ಬಾಣಸಮೂಹಗಳು ಆಕಾಶವನ್ನು ಆವರಿಸಿ ಕಂಗೊಳಿಸಿ ದುವು. ಹಾಗೇ ಬೇರೆ ಪಾಂಡವಯೋಧರೂ ನಿನ್ನ ಸೈನ್ಯವನ್ನು ನಾಶಮಾಡಿದರು.
ಸ ಪಕ್ಷಿಸಂಘಾಚರಿತಮಾಕಾಶಂ ಪೂರಯನ್ ಶರೈಃ |
ಧನಂಜಯೋ ಮಹಾರಾಜ ಕುರೂಣಾಮಂತಕೋಽಭವತ್ ॥4॥
ಮಹಾರಾಜ, ಅರ್ಜುನನು, ಪಕ್ಷಿಸಮೂಹಗಳು ಹೇಗೆ ಗುಂಪಾಗಿ ಹಾರಾಡುವುವೋ, ಆಕಾಶದಲ್ಲಿ ಬಾಣಗಳನ್ನೂ ಹಾಗೇ ತುಂಬಿಸುತ್ತ ಕೌರವರಿಗೆ ಅಂತಕನಂತಾದ.

ತತೋ ಭಲ್ಲೈಃ ಕ್ಷುರಪ್ರೈಶ್ಚ ನಾರಾಚೈರ್ನಿರ್ಮಲೈರಪಿ |
ಗಾತ್ರಾಣಿ ಪ್ರಾಕ್ಕಿಣೋತ್ ಪಾರ್ಥಃ ಶಿರಾಂಸಿ ಚ ಚಕರ್ತ ಹ ॥5॥
ನಿರ್ಮಲವಾದ ಭಲ್ಲ ಕ್ಷುರಪ್ರ ನಾರಾಚ ಬಾಣಗಳಿಂದ ಕುರುಯೋಧರ ಶರೀರಗಳನ್ನು ಸೀಳುತ್ತ ಅರ್ಜುನನು ಅವರ ಶಿರಸ್ಸುಗಳನ್ನು ಕತ್ತರಿಸಿದ.
ಛಿನ್ನಗಾತ್ರೈರ್ವಿಕವಚೈರ್ವಿಶಿರಸ್ಕೈಃ ಸಮಂತತಃ |
ಪತಿತೈಶ್ಚ ಪತದ್ಭಿಶ್ಚ ಯೋಧೈರಾಸೀತ್ ಸಮಾವೃತಮ್ ॥6॥
ಶತ್ರುಯೋಧರು ಮೈಗಾಯಗೊಂಡು ಕವಚರಹಿತರಾಗಿ ತಲೆ ಇಲ್ಲದವರೂ ಆಗಿ ಎಲ್ಲೆಡೆ ಬಿದ್ದಿದ್ದಾರೆ. ಬೀಳುತ್ತಿದ್ದಾರೆ. ಅವರಿಂದ ರಣಭೂಮಿ ತುಂಬಿ ಹೋಯಿತು.
ಧನಂಜಯಶರಧ್ವಸ್ತೈಃ ಸ್ಯಂದನಾಶ್ವನರದ್ವಿಪೈಃ |
ಸಂಛಿನ್ನಭಿನ್ನವಿಧ್ವಸ್ತೈರ್ವ್ಯಂಗಾಂಗಾವಯವೈಃ ಸ್ತೃತಾ ॥7॥
ಸುದುರ್ಗಮಾ ಸುವಿಷಮಾ ಘೋರಾತ್ಯರ್ಥಂ ಸುದುರ್ದೃಶಾ |
ರಣಭೂಮಿರಭೂದ್ ರಾಜನ್ ಮಹಾವೈತರಣೀ ಯಥಾ ॥8॥
ಅರ್ಜುನನ ಬಾಣಗಳಿಂದ ಪುಡಿಯಾದ ರಥ ಅಶ್ವ ಪದಾತಿ ಗಜಗಳು ಅಂಗಾಂಗಗಳಲ್ಲಿ ಛಿನ್ನಭಿನ್ನಗೊಂಡು ಧ್ವಸ್ತವಾಗಿ ಎಲ್ಲೆಡೆ ಹರಡಿದುವು. ಅದರಿಂದ ರಣಭೂಮಿ ಬಲು ದುರ್ಗಮ ವಿಷಮ ಘೋರವಾಗಿ ನೋಡಲು ಅತ್ಯಂತ ಅಶಕ್ಯವಾಯಿತು. ಯಮಲೋಕದ ಮಹಾವೈತರಣೀ ನದಿಯಂತೆ ಕಂಡುಬಂದಿತು.
ಈಷಾಚಕ್ರಾಕ್ಷಭಂಗೈಶ್ಚ ವ್ಯಶ್ವೈಃ ಸಾಶ್ವೈಶ್ಚ ಯುಧ್ಯತಾಮ್ |
ಸಸೂತೈರ್ಹತಸೂತೈಶ್ಚ ರಥೈಃ ಸ್ತೀರ್ಣಾಭವನ್ಮಹೀ ॥9॥
ರಥಗಳ ಈಷಾ ಚಕ್ರ ಅಕ್ಷಗಳು ಮುರಿದುವು. ಅವುಗಳಿಗೆ ಕೆಲವಕ್ಕೆ ಅಶ್ವಗಳಿವೆ ಕೆಲವಕ್ಕೆ ಇಲ್ಲ, ಕೆಲವಕ್ಕೆ ಸಾರಥಿಗಳಿದ್ದಾರೆ, ಕೆಲವಕ್ಕೆ ಸತ್ತಿದ್ದಾರೆ, ಶತ್ರುಯೋಧರ ಇಂಥ ರಥಗಳಿಂದ ರಣಭೂಮಿ ವ್ಯಾಪ್ತವಾಯಿತು.
ಸುವರ್ಣವರ್ಮಸನ್ನಾಹೈರ್ಯೋಧೈಃ ಕನಕಭೂಷಣೈಃ |
ಆಸ್ಥಿತಾಃ ಕೃತವರ್ಮಾಣೋ ಭದ್ರಾ ನಿತ್ಯಮದಾ ದ್ವಿಪಾಃ |
ಕ್ರುದ್ಧಾಃ ಕ್ರುದ್ಧೈರ್ಮಹಾಮಾತ್ರೈಃ ಪಾರ್ಷ್ಣ್ಯಂಗುಷ್ಠಪ್ರಚೋದಿತಾಃ
॥10॥
ಚತುಃಶತಾಃ ಶರವರ್ಷೈರ್ಹತಾಃ ಪೇತುಃ ಕಿರೀಟಿನಾ |
ಪರ್ಯಸ್ತಾನೀವ ಶೃಂಗಾಣಿ ಸಸತ್ತ್ವಾನಿ ಮಹಾಗಿರೇಃ ॥11॥
ಬಂಗಾರದ ಕವಚ ಮುಂತಾದುವನ್ನು ಧರಿಸಿದ, ಬಂಗಾರದಿಂದ ಅಲಂಕೃತ ರಾದ ಗಜಯೋಧರು, ಕವಚವನ್ನು ಹೊತ್ತ ಮಂಗಳಕರವಾದ ನಿತ್ಯಮದಿಸಿದ ಗಜಗಳನ್ನು ಏರಿದ್ದಾರೆ. ಆ ಗಜಗಳು ಕೋಪಗೊಳ್ಳುತ್ತವೆ. ಕೋಪಗೊಂಡ ಮಾವುತರು ಹಿಮ್ಮಡಿ, ಅಂಗುಷ್ಠಗಳಿಂದ ಅವುಗಳನ್ನು ತಿವಿಯುತ್ತಾರೆ. ಇಂಥ ನಾನ್ನೂರು ಗಜಗಳು ಅರ್ಜುನನ ಬಾಣಗಳ ಮಳೆಗಳಿಂದ, ದೊಡ್ಡಬೆಟ್ಟಗಳ ಶಿಖರಗಳು ಜೀವಜಂತುಗಳೊಂದಿಗೇ ಉರುಳಿ ಬೀಳುವಂತೆ ಸತ್ತುಬಿದ್ದುವು.
ಧನಂಜಯಶರಧ್ವಸ್ತೈಃ ಸ್ತೀರ್ಣಾ ಭೂರ್ವರವಾರಣೈಃ |
ಧನಂಜಯನ ಬಾಣಗಳಿಂದ ಧ್ವಸ್ತವಾದ ಶ್ರೇಷ್ಠ ಗಜಗಳಿಂದ ರಣಭೂಮಿ ಎಲ್ಲೆಡೆ ತುಂಬಿಹೋಯಿತು.
ಸಮಂತಾದ್ ಜಲದಪ್ರಖ್ಯಾನ್ ವಾರಣಾನ್ ಮದವರ್ಷಿಣಃ |
ಅಭಿಪೇದೇಽರ್ಜುನರಥೋ ಘನಾನ್ ಭಿಂದನ್ನಿವಾಂಶುಮಾನ್ ॥12॥
ಎಲ್ಲೆಡೆ ಮದಜಲವನ್ನು ಸುರಿಸುವ ಮೋಡಗಳಂತೇ ಕಾಣುವ ಗಜಗಳು ಸತ್ತುಬಿದ್ದಲ್ಲಿ ಅವುಗಳನ್ನು ಅರ್ಜುನ ರಥವು, ಮೋಡಗಳ ನಡುವೆ ಸೂರ್ಯನಂತೆ, ಸೀಳಿಕೊಂಡು ಮುಂದೆ ನಡೆಯಿತು.
ಹತೈರ್ಗಜಮನುಷ್ಯಾಶ್ವೈರ್ಭಗ್ನೈಶ್ಚ ಬಹುಧಾ ರಥೈಃ |
ವಿಶಸ್ತ್ರಚರ್ಮಕವಚೈರ್ಯುದ್ಧಶೌಂಡೈರ್ಗತಾಸುಭಿಃ |
ಅಪವಿದ್ಧಾಯುಧೈರ್ಮಾರ್ಗಸ್ತೀರ್ಣೋಽಭೂತ್ ಫಲ್ಗುನೇನ ವೈ |13|
ಗಜ ಪದಾತಿ ಅಶ್ವಗಳು ಎಲ್ಲೆಡೆ ಸತ್ತುಬಿದ್ದಿವೆ, ರಥಗಳು ಬಹಳ ಚೂರಾಗಿವೆ. ಯುದ್ಧನಿಪುಣರು ಶಸ್ತ್ರ, ಗುರಾಣಿ ಕವಚರಹಿತರಾಗಿ ಆಯುಧಗಳನ್ನು ಚೆಲ್ಲಿ ಸತ್ತು ಬಿದ್ದಿದ್ದಾರೆ. ಇಂಥ ಮಾರ್ಗವನ್ನು ಅರ್ಜುನ ಕ್ರಮಿಸಬೇಕಾಯಿತು.
ವ್ಯಸ್ಫೂರ್ಜಯಚ್ಚ ಗಾಂಡೀವಂ ಸುಮಹದ್ ಭೈರವಸ್ವನಮ್ |
ಘೋರಂ ವಜ್ರವಿನಿಷ್ಪೇಷಂ ಸ್ತನಯಿತ್ನುರಿವಾಂಬರೇ ॥14॥
ಆಕಾಶದಲ್ಲಿ ಮೋಡವು ಘೋರವಾದ ಗುಡುಗಿನ ಧ್ವನಿ ಮಾಡುವಂತೆ ಅರ್ಜುನನು ಭೀಕರ ಧ್ವನಿಯುಳ್ಳ ಮಹತ್ತಾದ ಗಾಂಡೀವಧನುಸ್ಸನ್ನು ಠೇಂಕರಿಸಿದ.
ತತಃ ಪ್ರಾದೀರ್ಯತ ಚಮೂರ್ಧನಂಜಯಶರಾಹತಾ |
ಮಹಾವಾತಸಮಾವಿದ್ಧಾ ಮಹಾನೌರಿವ ಸಾಗರೇ ॥15॥
ಬಳಿಕ ಧನಂಜಯನ ಬಾಣಗಳಿಂದ ಹೊಡೆಸಿಕೊಂಡು ಶತ್ರುಸೈನ್ಯವು ಸಾಗರದಲ್ಲಿ ಬಿರುಗಾಳಿಗೆ ಸಿಲುಕಿದ ನೌಕೆಯಂತೆ ವಿಚಲಿತವಾಯಿತು.
ನಾನಾರೂಪಾಃ ಪ್ರಹರಣಾಃ ಶರಾ ಗಾಂಡೀವಚೋದಿತಾಃ |
ಅಲಾತೋಲ್ಕಾಶನಿಪ್ರಖ್ಯಾಸ್ತವ ಸೈನ್ಯಂ ವಿನಿರ್ದಹನ್ ॥16॥

ಗಾಂಡೀವದಿಂದ ಹೊರಟ ನಾನಾ ಬಗೆಯ ಬಾಣಗಳು ಆಯುಧಗಳು ಕೊಳ್ಳಿ ಉಲ್ಕೆ ಮಿಂಚುಗಳಂತೇ ಇದ್ದು ನಿನ್ನ ದೊಡ್ಡ ಸೈನ್ಯವನ್ನು ಸುಟ್ಟವು.
ಮಹಾಗಿರೌ ವೇಣುವನಂ ನಿಶಿ ಪ್ರಜ್ವಲಿತಂ ಯಥಾ |
ತಥಾ ತವ ಮಹತ್ಸೈನ್ಯಂ ಪ್ರಾಸ್ಫುರಚ್ಛರಪೀಡಿತಮ್ ॥17॥
ದೊಡ್ಡಬೆಟ್ಟದಲ್ಲಿ ಬಿದಿರುಮೆಳೆ ರಾತ್ರಿ ಹೊತ್ತು ಹೊತ್ತಿಉರಿವಂತೆ ನಿನ್ನ ದೊಡ್ಡ ಸೈನ್ಯವು ಅರ್ಜುನನ ಬಾಣಗಳಿಂದ ಉರಿದು ಹೋಯಿತು.
ಸಂಪಿಷ್ಟದಗ್ಧವಿಧ್ವಸ್ತಂ ತವ ಸೈನ್ಯಂ ಕಿರೀಟಿನಾ |
ಹತಂ ಪ್ರವಿಹತಂ ಬಾಣೈಃ ಸರ್ವತಃ ಪ್ರದ್ರುತಂ ದಿಶಃ ॥18॥
ನಿನ್ನ ಸೈನ್ಯವು ಅರ್ಜುನನ ಬಾಣಗಳಿಂದ ಮತ್ತೂ ಮತ್ತೂ ಹೊಡೆಸಿಕೊಂಡು ಪುಡಿಯಾಗಿ ಸುಟ್ಟು ನಾಶ ಹೊಂದಿತು ಅಥವಾ ಎಲ್ಲ ದಿಕ್ಕುಗಳಿಗೆ ಪಲಾಯನ ಮಾಡಿತು.
ಮಹಾವನೇ ಮೃಗಗಣಾ ದಾವಾಗ್ನಿಗ್ರಸಿತಾ ಯಥಾ |
ಕುರವಃ ಪರ್ಯವರ್ತಂತ ನಿರ್ದಗ್ಧಾಃ ಸವ್ಯಸಾಚಿನಾ ॥19॥
ಮಹಾಅರಣ್ಯದಲ್ಲಿ ಮೃಗಸಮೂಹಗಳು ಕಾಳ್ಗಿಚ್ಚಿನಲ್ಲಿ ಸಿಲುಕಿದಂತೆ ಕೌರವರ ಸೈನ್ಯಗಳು ಅರ್ಜುನನ ಬಾಣಗಳಿಂದ ಸುಟ್ಟು ಅತ್ತಿತ್ತ ಪಲಾಯನಗೈದುವು.
ಉತ್ಸೃಜ್ಯ ಹಿ ಮಹಾಬಾಹುಂ ಭೀಮಸೇನಂ ತದಾ ರಣೇ |
ಬಲಂ ಕುರೂಣಾಮುದ್ವಿಗ್ನಂ ಸರ್ವಮಾಸೀತ್ ಪರಾಙ್ಮುಖಮ್ ॥20॥
ಕೌರವಸೈನ್ಯವೆಲ್ಲವೂ ಭಯಗೊಂಡು ರಣದಲ್ಲಿ ಮಹಾಬಾಹುವಾದ ಭೀಮಸೇನನನ್ನು ಬಿಟ್ಟು ಪಲಾಯನಗೈದಿತು.
ತತಃ ಕುರುಷು ಭಗ್ನೇಷು ಬೀಭತ್ಸುರಪರಾಜಿತಃ |
ಭೀಮಸೇನಂ ಸಮಾಸಾದ್ಯ ಮುಹೂರ್ತಂ ಸೋಽಭ್ಯವರ್ತತ ॥21॥
ಕೌರವರು ಚದುರಿಹೋದಾಗ ಅಪರಾಜಿತನಾದ ಅರ್ಜುನನು ಭೀಮಸೇನನ ಬಳಿಸಾರಿ ಮುಹೂರ್ತಕಾಲ ಅಲ್ಲಿಯೇ ನಿಂತ.
ಸಮಾಗಮ್ಯ ಸ ಭೀಮೇನ ಮಂತ್ರಯಿತ್ವಾ ಚ ಫಲ್ಗುನಃ |
ವಿಶಲ್ಯಮರುಜಂ ಚಾಸ್ಮೈ ಕಥಯಿತ್ವಾ ಯುಧಿಷ್ಠಿರಮ್ ॥22॥
ಭೀಮಸೇನಾಭ್ಯನುಜ್ಞಾತಸ್ತತಃ ಪ್ರಾಯಾದ್ ಧನಂಜಯಃ |
ನಾದಯನ್ ರಥಘೋಷೇಣ ಪೃಥಿವೀಂ ದ್ಯಾಂ ಚ ಭಾರತ ॥23॥
ಭೀಮನನ್ನು ಸಂಧಿಸಿ ಮಂತ್ರಾಲೋಚನೆಗೈದು ಅರ್ಜುನನು ಯುಧಿಷ್ಠಿರನ ಬಗ್ಗೆ ಅವನಿಗೆ ಶಲ್ಯಚಿಕಿತ್ಸೆ ಮಾಡಿಸಿ, ನೋವನ್ನು ಕಳೆದ ವಿಷಯವನ್ನು ಹೇಳಿ, ಭೀಮನ ಅನುಜ್ಞೆ ಪಡೆದು, ರಥಘೋಷದಿಂದ ಪೃಥಿವಿಯನ್ನೂ ಅಂತರಿಕ್ಷವನ್ನೂ ತುಂಬಿಸುತ್ತ ಕರ್ಣನ ಕಡೆಗೆ ಹೊರಟ.
ತತಃ ಪರಿವೃತೋ ವೀರೈರ್ದಶಭಿಃ ಶತ್ರುಪುಂಗವೈಃ |
ದುಃಶಾಸನಾದವರಜೈಸ್ತವ ಪುತ್ರೈರ್ಧನಂಜಯಃ ॥24॥
ಆಗ ಶತ್ರುಗಳಲ್ಲಿ ಮುಖ್ಯರಾದ ವೀರರಾದ ದುಃಶಾಸನನ ತಮ್ಮಂದಿರಾದ ಹತ್ತುಮಂದಿ ನಿನ್ನ ಪುತ್ರರಿಂದ ಅರ್ಜುನನು ಸುತ್ತುವರಿಯಲ್ಪಟ್ಟ.
ತೇ ತಮಭ್ಯರ್ದಯನ್ ಬಾಣೈರುಲ್ಕಾಭಿರಿವ ಕುಂಜರಮ್ |
ಆತತೇಷ್ವಸನಾಃ ಕ್ರೂರಾ ನೃತ್ಯಂತ ಇವ ಭಾರತ ॥25॥
ಅವರು ಅವನನ್ನು, ಆನೆಯನ್ನು ಪಂಜುಗಳಿಂದ ಪೀಡಿಸುವಂತೆ, ಬಾಣಗಳಿಂದ ಪೀಡಿಸಿದರು. ಅವರು ಕ್ರೂರರು, ಬಿಲ್ಲನ್ನು ಸೆಳೆದು ನೃತ್ಯಮಾಡುವಂತೆ ಕಂಡು ಬಂದರು.
ಅಪಸವ್ಯಾಂಸ್ತು ತಾಂಶ್ಚಕ್ರೇ ರಥೇನ ಮಧುಸೂದನಃ |
ತತಸ್ತೇ ಪ್ರಾದ್ರವನ್ ಶೂರಾಃ ಪರಾಙ್ಮುಖರಥೇಽರ್ಜುನೇ ॥26॥
ಅವರನ್ನು ಬಲಕ್ಕೆ ಬಿಟ್ಟು ಕೃಷ್ಣನು ರಥದಿಂದ ಮುಂದೆ ನಡೆದ. ಅರ್ಜುನನ ರಥವು ಹೀಗೆ ಪರಾಙ್ಮುಖವಾದಾಗ ಶೂರರಾದ ಅವರು ಬೆನ್ನಟ್ಟಿ ಧಾವಿಸಿಬಂದರು.
ತೇಷಾಮಾಪತತಾಂ ಕೇತೂನ್ ರಥಾಂಶ್ಚಾಪಾನಿ ಸಾಯಕಾನ್ |
ನಾರಾಚೈರರ್ಧಚಂದ್ರೈಶ್ಚ ಕ್ಷಿಪ್ರಂ ಪಾರ್ಥೋ ನ್ಯಪಾತಯತ್ ॥27॥
ಅವರು ಆಕ್ರಮಣ ಮಾಡಿದಾಗ ಪಾರ್ಥನು ಬೇಗನೆ ಅವರ ರಥ ಧ್ವಜ ಬಿಲ್ಲು ಬಾಣಗಳನ್ನು ನಾರಾಚಗಳಿಂದ ಮತ್ತು ಅರ್ಧಚಂದ್ರಗಳಿಂದ ಕಡಿದು ಬೀಳಿಸಿದ.
ಅಥಾನ್ಯೈರ್ದಶಭಿರ್ಭಲ್ಲೈಃ ಶಿರಾಂಸ್ಯೇಷಾಂ ನ್ಯಪಾತಯತ್ |
ರೋಷಸಂರಕ್ತನೇತ್ರಾಣಿ ಸಂದಷ್ಟೌಷ್ಠಾನಿ ಭೂತಳೇ |
ತಾನಿ ವಕತ್ರಣಿ ವಿಬಭುರ್ವ್ಯೋಮ್ನಿ ತಾರಾಗಣಾ ಇವ ॥28॥
ಇನ್ನೂ ಬೇರೆ ಹತ್ತು ಭಲ್ಲಗಳಿಂದ ಅವರ ಶಿರಸ್ಸುಗಳನ್ನೂ ಬೀಳಿಸಿದ.ಆಗ ಅವರ ಕಣ್ಣುಗಳು ಕೋಪದಿಂದ ಕೆಂಪಾಗಿದ್ದುವು. ಅವುಡು ಕಚ್ಚಿದ್ದರು. ಭೂಮಿಯಲ್ಲಿ ಅವರ ಶಿರಸ್ಸುಗಳು ಆಕಾಶದಲ್ಲಿನ ನಕ್ಷತ್ರಗಳಂತೆ ಕಂಡುಬಂದುವು.
ತಾಂಸ್ತು ಭಲ್ಲೈರ್ಮಹಾವೇಗೈರ್ದಶಭಿರ್ದಶ ಕೌರವಾನ್ |
ರುಗ್ಮಾಂಗದಾನ್ ರುಗ್ಮಪುಂಖೈರ್ವಿದ್ಧ್ವಾ ಪ್ರಾಯಾದಮಿತ್ರಹಾ ॥29॥

ಬಂಗಾರದ ತೋಳ್ಬಳೆಗಳನ್ನು ಧರಿಸಿದ್ದ ಆ ಹತ್ತುಮಂದಿ ಕೌರವರನ್ನು ಪಾರ್ಥನು ಬಂಗಾರದ ಪುಕ್ಕಉಳ್ಳ ಬಲುವೇಗದ ಹತ್ತು ಭಲ್ಲಗಳಿಂದ ಕೊಂದು ಹೊರಟುಹೋದ.
ಇಲ್ಲಿ `ಪಾರ್ಥ'ನೆಂದರೆ ಅರ್ಜುನನಲ್ಲ, ಭೀಮನೆಂದಿಟ್ಟುಕೊಳ್ಳಬೇಕು. ಏಕೆಂದರೆ ನೂರುಮಂದಿ ಧೃತರಾಷ್ಟ್ರ ಪುತ್ರರನ್ನೂ ಕೊಂದವನು ಭೀಮನೆ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಸಪ್ತಸಪ್ತತಿತಮೋಽಧ್ಯಾಯಃ ॥77॥

ಎಪ್ಪತ್ತೆಂಟನೆಯ ಅಧ್ಯಾಯ
ಭೀಮಾರ್ಜುನರಿಂದ ಕುರುಸೈನ್ಯದ ನಾಶ.
ಸಂಜಯಃ
ತಂ ತು ಯಾನ್ತಂ ಮಹಾವೇಗೈರಶ್ವೈಃ ಕಪಿವರಧ್ವಜಮ್ ।
ಯುದ್ಧಾಯಾಭ್ಯದ್ರವನ್ವೀರಾಃ ಕುರೂಣಾಂ ನವತೀ ರಥಾಃ ।
ಪರಿವವ್ರುರ್ನರವ್ಯಾಘ್ರಾ ನರವ್ಯಾಘ್ರಂ ರಣೇಽರ್ಜುನಮ್ ॥1॥
ಸಂಜಯ ನುಡಿದ– ಮಹಾವೇಗವುಳ್ಳ ಅಶ್ವಗಳಿಂದ ಮುನ್ನಡೆಯುತ್ತಿದ್ದ ಕಪಿವರವೆ ಧ್ವಜವಾಗಿ ಉಳ್ಳ ಅರ್ಜುನನನ್ನು ಕೌರವರ ತೊಂಬತ್ತು ರಥಿಕರು ಸಂಶಪ್ತಕರು ಯುದ್ಧಕ್ಕಾಗಿ ಇದಿರಿಸಿದರು. ಪುರುಷಶ್ರೇಷ್ಠನಾದ ಅರ್ಜುನನನ್ನು ಪುರುಷಶ್ರೇಷ್ಠರಾದ ಆ ರಥಿಕರು ರಣದಲ್ಲಿ ಸುತ್ತುವರಿದರು.
ಕೃಷ್ಣಃ ಶ್ವೇತಾನ್ ಮಹಾವೇಗಾನಶ್ವಾನ್ ಕನಕಭೂಷಣಾನ್ ।
ಮುಕ್ತಾಜಾಲಪ್ರತಿಚ್ಛನ್ನಾನ್ ಪ್ರೈಷೀತ್ ಕರ್ಣರಥಂ ಪ್ರತಿ ॥2॥
ಕೃಷ್ಣನು ಬಂಗಾರದ ಭೂಷಣಉಳ್ಳ, ಮಹಾವೇಗವುಳ್ಳ, ಮುತ್ತಿನ ಮಾಲೆಗಳಿಂದ ಮುಚ್ಚಿಹೋದ ಆ ಬಿಳಿಯಾದ ಕುದುರೆಗಳನ್ನು ಕರ್ಣರಥದ ಕಡೆಗೇ ನಡೆಸಿದ.
ತತಃ ಕರ್ಣರಥಂ ಯಾಂತಮರೀನ್ ಘ್ನಂತಂ ಧನಂಜಯಮ್ ।
ಬಾಣವರ್ಷೈರಭಿಘ್ನಂತಃ ಸಂಶಪ್ತಕರಥಾ ಯಯುಃ ॥3॥
ಕರ್ಣರಥದ ಕಡೆಗೆ ಹೋಗುತ್ತ ದಾರಿಯಲ್ಲಿ ತಡೆಯುವ ಶತ್ರುಗಳನ್ನು ನಾಶಪಡಿಸುತ್ತಲೇ ಇದ್ದ ಅರ್ಜುನನನ್ನು ಬಾಣಗಳ ಮಳೆಯಿಂದ ಹೊಡೆಯುತ್ತ (ತೊಂಬತ್ತು ) ಸಂಶಪ್ತಕ ರಥಿಕರು ಬೆನ್ನಟ್ಟಿ ಬಂದರು.
ತ್ವರಮಾಣಾಂಸ್ತು ತಾನ್ ಸರ್ವಾನ್ ಸಸೂತೇಷ್ವಸನಧ್ವಜಾನ್ ।
ಜಘಾನ ನವತಿಂ ವೀರಾನರ್ಜುನೋ ನಿಶಿತೈಃ ಶರೈಃ ॥4॥
ತ್ವರೆಮಾಡುತ್ತಿದ್ದ ಆ ತೊಂಬತ್ತು ವೀರರಥಿಕರೆಲ್ಲರನ್ನೂ ಅರ್ಜುನನು ಹರಿತವಾದ ಬಾಣಗಳಿಂದ ಸಾರಥಿ ಧನುಸ್ ಧ್ವಜಗಳೊಂದಿಗೇ ಸಂಹರಿಸಿದ.
ತೇಽಪತಂತ ಹತಾ ಬಾಣೈರ್ನಾನಾರೂಪೈಃ ಕಿರೀಟಿನಾ ।
ಸವಿಮಾನಾ ಯಥಾ ಸಿದ್ಧಾಃ ಸ್ವರ್ಗಾತ್ ಪುಣ್ಯಕ್ಷಯೇ ತಥಾ ॥5॥
ಅರ್ಜುನನಿಂದ ನಾನಾರೂಪದ ಬಾಣಗಳಿಂದ ಹತರಾಗಿ ಅವರು, ಪುಣ್ಯಕ್ಷಯವಾದಾಗ ಸ್ವರ್ಗದಿಂದ ವಿಮಾನಸಹಿತವಾಗಿ ಭೂಮಿಗೆ ಬೀಳುವ ಸಿದ್ಧರಂತೆ, ಬಿದ್ದರು.
ತತಃ ಸರಥನಾಗಾಶ್ವಾಃ ಕುರವಃ ಕುರುಸತ್ತಮ ।
ನಿರ್ಭಯಾ ಭರತಶ್ರೇಷ್ಠಮಭ್ಯವರ್ತಂತ ಫಲ್ಗುನಮ್ ॥6॥
ಬಳಿಕ, ರಾಜನೆ, ರಥ ಗಜ ಅಶ್ವ ಸೈನ್ಯಸಹಿತರಾದ ಕೌರವರು ಕುರುಶ್ರೇಷ್ಠನಾದ ಅರ್ಜುನನನ್ನು ನಿರ್ಭಯರಾಗಿ ಆಕ್ರಮಿಸಿದರು.
ತದಾಯತ್ತಮನುಷ್ಯಾಶ್ವಮುದೀರ್ಣರಥವಾರಣಮ್ ।
ಪುತ್ರಾಣಾಂ ತೇ ಮಹತ್ಸೈನ್ಯಂ ಸಮರೌತ್ಸೀದ್ಧನಂಜಯಃ ॥7॥
ಆಗ ಯತ್ನಶೀಲವಾದ ಪದಾತಿ ಅಶ್ವಗಳುಳ್ಳ ಶ್ರೇಷ್ಠವಾದ ರಥಗಜಗಳುಳ್ಳ ನಿನ್ನ ಮಕ್ಕಳ ಮಹಾಸೈನ್ಯವನ್ನು ಧನಂಜಯನು ತಡೆದ.
ಶಕ್ತ್ಯ ೃಷ್ಟಿತೋಮರಪ್ರಾಸೈರ್ಗದಾನಿಸ್ತ್ರಿಂಶಸಾಯಕೈಃ ।
ಪ್ರಾಚ್ಛಾದಯನ್ಮಹೇಷ್ವಾಸಾಃ ಕುರವಃ ಕುರುನಂದನಮ್ ॥8॥
ಶಕ್ತಿ–ಋಷ್ಟಿತೋಮರಪ್ರಾಸಗದಾಖಡ್ಗಬಾಣಗಳಿಂದ ಮಹಾ ಬಿಲ್ಗಾರ ರಾದ ಕೌರವರು ಕುರುನಂದನನಾದ ಅರ್ಜುನನನ್ನು ಆಚ್ಛಾದಿಸಿದರು.
ತಾಂ ಕುರೂಣಾಂ ಪ್ರವಿತತಾಂ ಶಸ್ತ್ರವೃಷ್ಟಿಂ ಸಮುದ್ಯತಾಮ್ ।
ವ್ಯಧಮತ್ ಪಾಂಡವೋ ಬಾಣೈಸ್ತಮಃ ಸೂರ್ಯ ಇವಾಂಶುಭಿಃ ॥9॥
ವ್ಯಾಪಕವಾಗಿ ಉದ್ಭವಿಸಿದ ಕೌರವರ ಬಾಣಗಳ ಮಳೆಯನ್ನು, ಸೂರ್ಯನು ಕತ್ತಲನ್ನು ಸ್ವಕಿರಣಗಳಿಂದ ನಾಶಗೊಳಿಸುವಂತೆ, ಅರ್ಜುನನು ಬಾಣಗಳಿಂದ ನಾಶಪಡಿಸಿದ.
ತತೋ ಮ್ಲೇಚ್ಛಾಃ ಸ್ಥಿತಾ ಮತ್ತೈಃ ತ್ರಯೋದಶಶತೈರ್ಗಜೈಃ ।
ಪಾರ್ಶ್ವತೋಽಭ್ಯಹನನ್ಪಾರ್ಥಂ ತವ ಪುತ್ರಸ್ಯ ಶಾಸನಾತ್ ॥10॥
ಬಳಿಕ ಪಾರ್ಶ್ವದಲ್ಲಿ ನಿಂತಿದ್ದ ಮ್ಲೇಚ್ಛರು ಒಂದು ಸಾವಿರ ಮುನ್ನೂರು ಮದವೇರಿದ ಗಜಗಳಿಂದ ನಿನ್ನ ಮಗನಾದ ದುರ್ಯೋಧನನ ಆದೇಶಾನುಸಾರ ವಾಗಿ ಪಾರ್ಥನನ್ನು ಹೊಡೆದರು.

ಕರ್ಣಿನಾಲೀಕನಾರಾಚೈಸ್ತೋಮರೈಃ ಪ್ರಾಸಶಕ್ತಿಭಿಃ |
ಮುಸಲೈರ್ಭಿಂಡಿಪಾಲೈಶ್ಚ ರಥಸ್ಥಂ ಪಾರ್ಥಮಾರ್ದಯನ್ ॥11॥
ಮ್ಲೇಚ್ಛರು ಕರ್ಣಿ ನಾಲೀಕ ನಾರಾಚ ತೋಮರ ಪ್ರಾಸ ಶಕ್ತಿ ಮುಸಲ ಭಿಂಡಿಪಾಲಗಳಿಂದ ರಥದಲ್ಲಿದ್ದ ಅರ್ಜುನನನ್ನು ಹೊಡೆದರು.
ತಾಮಸ್ತ್ರವೃಷ್ಟಿಂ ಪ್ರಹಿತಾಂ ದ್ವಿಪಸ್ಥೈರ್ಯವನೈಃ ಸ್ಮಯನ್ |
ಚಿಚ್ಛೇದ ನಿಶಿತೈರ್ಭಲ್ಲೈರರ್ಧಚಂದ್ರೈಶ್ಚ ಫಲ್ಗುನಃ ॥12॥
ಆನೆಗಳಲ್ಲಿದ್ದ ಮ್ಲೇಚ್ಛರು ಎಸೆದ ಅಸ್ತ್ರವೃಷ್ಟಿಯನ್ನು ಅರ್ಜುನನು ನಗುತ್ತ ಹರಿತವಾದ ಭಲ್ಲೆಗಳಿಂದಲೂ ಅರ್ಧಚಂದ್ರಗಳಿಂದಲೂ ಕತ್ತರಿಸಿದ.
ಅಥ ತಾನ್ ದ್ವಿರದಾನ್ ಸರ್ವಾನ್ನಾನಾಲಿಂಗೈರ್ಮಹಾಶರೈಃ |
ಸಪತಾಕಾನ್ ಸಹಾರೋಹಾನ್ ಗಿರೀನ್ ವಜ್ರೈರಿವಾಭಿನತ್ ॥13॥
ಬಳಿಕ ಅರ್ಜುನನು ಆ ಎಲ್ಲ ಗಜಗಳನ್ನೂ ನಾನಾಬಗೆಯ ಮಹಾಶರಗಳಿಂದ ಆರೋಹಿಗಳೊಂದಿಗೆ ಪತಾಕೆಗಳೊಂದಿಗೆ ಬೆಟ್ಟಗಳನ್ನು ವಜ್ರಾಯುಧದಿಂದ ಭೇದಿಸುವಂತೆ ಭೇದಿಸಿದ.
ತೇ ಹೇಮಪುಂಖೈರಿಷುಭಿರಾಚಿತಾ ಹೇಮಮಾಲಿನಃ |
ಹತಾಃ ಪೇತುರ್ಮಹಾನಾಗಾಃ ಸಾಗ್ನಿಜ್ವಾಲಾ ಇವಾದ್ರಯಃ ॥14॥
ಅಗ್ನಿಜ್ವಾಲೆಗಳೊಂದಿಗೆ ಪರ್ವತಗಳಂತೆ, ಬಂಗಾರದ ಮಾಲೆಗಳಿಂದ ಆವೃತವಾದ ಆ ಮಹಾಗಜಗಳು ಬಂಗಾರದ ಪುಕ್ಕಉಳ್ಳ ಅರ್ಜುನನ ಬಾಣಗಳಿಂದ ಹತವಾಗಿ ನೆಲದಲ್ಲಿ ಒರಗಿದುವು.
ತತೋ ಗಾಂಡೀವನಿರ್ಘೋಷೋ ಮಹಾನಾಸೀದ್ ವಿಶಾಂಪತೇ |
ಸ್ತನತಾಂ ಕೂಜತಾಂ ಚೈವ ಮನುಷ್ಯಗಜವಾಜಿನಾಮ್ ॥15॥
ರಾಜನೆ, ಆಗ ಗಾಂಡೀವದ ಘೋಷವೂ ದೊಡ್ಡದಾಗಿತ್ತು. ಪದಾತಿ ಗಜ ಅಶ್ವಸೈನಿಕರ ಆಕ್ರಂದನದ ಆರ್ತಧ್ವನಿಯೂ ದೊಡ್ಡದಾಗಿತ್ತು.
ಕುಂಜರಾಶ್ಚ ಹತಾ ರಾಜನ್ ಪ್ರಾದ್ರವಂಸ್ತೇ ಸಮಂತತಃ |
ಅಶ್ವಾಶ್ಚ ಪರ್ಯಧಾವಂತ ಹತಾರೋಹಾ ದಿಶೋ ದಶ ॥16॥
ರಾಜನೆ, ಆನೆಗಳು ಹೊಡೆಸಿಕೊಂಡು ಆರೋಹಿಗಳೊಂದಿಗೆ ಎಲ್ಲೆಡೆ ಧಾವಿಸಿದುವು. ಅಶ್ವಗಳೂ ಆರೋಹಿಗಳು ಹತರಾದಾಗ ಹತ್ತು ದಿಕ್ಕಿಗಳಿಗೆ ಓಡಿದುವು.
ರಥಾ ಹೀನಾ ಮಹಾರಾಜ ರಥಿಭಿರ್ವಾಜಿಭಿಸ್ತಥಾ |
ಗಂಧರ್ವನಗರಾಕಾರಾ ದೃಶ್ಯಂತೇ ಸ್ಮ ಸಹಸ್ರಶಃ ॥17॥
ಮಹಾರಾಜ, ಸಾವಿರಾರು ರಥಗಳೂ ಕೂಡ ರಥಿಕರಿಲ್ಲದೆ ಕುದುರೆಗಳಿಲ್ಲದೆ ಗಂಧರ್ವನಗರಾಕಾರವಾಗಿ ರಣದಲ್ಲಿ ಎಲ್ಲೆಡೆ ಹರಡಿದುವು.
ಅಶ್ವಾರೋಹಾ ಮಹಾರಾಜ ಧಾವಮಾನಾಸ್ತತಸ್ತತಃ |
ತತ್ರ ತತ್ರೈವ ದೃಶ್ಯಂತೇ ಪತಿತಾಃ ಪಾರ್ಥಸಾಯಕೈಃ ॥18॥
ಆಶ್ವಾರೋಹಿಗಳು ಕೂಡ, ಮಹಾರಾಜ, ಪಾರ್ಥನ ಬಾಣಗಳಿಂದ ಎಲ್ಲೆಡೆ ಧಾವಿಸುತ್ತ ಅಲ್ಲಲ್ಲಿ ಬೀಳುವುದು ಕಂಡುಬಂದಿತು.
ತಸ್ಮಿನ್ ಕ್ಷಣೇ ಪಾಂಡವಸ್ಯ ಬಾಹ್ವೋರ್ಬಲಮದೃಶ್ಯತ |
ಯತ್ಸಾದಿನೋ ವಾರಣಾಂಶ್ಚ ರಥಾಂಶ್ಚೈಕೋಽಜಯದ್ ಯುಧಿ ॥19॥
ಆ ಕ್ಷಣದಲ್ಲಿ ಅರ್ಜುನನು ಅಶ್ವಗಜರಥಾರೋಹಿಗಳೆಲ್ಲರನ್ನೂ ಒಬ್ಬನೆ ರಣ ದಲ್ಲಿ ಪರಾಭವಗೊಳಿಸಿದ್ದರಿಂದ ಅವನ ಬಾಹುಬಲ ಚೆನ್ನಾಗಿ ಗೋಚರವಾಯಿತು.
ತತಸ್ತ್ರ್ಯಂಗೇಣ ಮಹತಾ ಬಲೇನ ಭರತರ್ಷಭ |
ದೃಷ್ಟ್ವಾ ಪರಿವೃತಂ ರಾಜನ್ ಭೀಮಸೇನಃ ಕಿರೀಟಿನಮ್ ॥20॥
ಹತಾವಶೇಷಾನುತ್ಸೃಜ್ಯ ತ್ವದೀಯಾನ್ ಕತಿಚಿದ್ ರಥಾನ್ |
ಜವೇನಾಭ್ಯದ್ರವದ್ ರಾಜನ್ ಧನಂಜಯರಥಂ ಪ್ರತಿ ॥21॥
ರಾಜನೆ, ಅಶ್ವಗಜಪದಾತಿಗಳೆಂಬ ಮೂರು ಅಂಗಗಳಿಂದ ಕೂಡಿದ ದೊಡ್ಡ ಸೈನ್ಯವು ಅರ್ಜುನನನ್ನು ಸುತ್ತುವರಿದಿದ್ದುದನ್ನು ಕಂಡು ಭೀಮನು ಅಳಿದುಳಿದಿದ್ದ ನಿನ್ನ ಪಕ್ಷದ ಕೆಲವು ರಥಿಕರನ್ನು ಬಿಟ್ಟು ವೇಗದಿಂದ ಅರ್ಜುನನ ರಥದ ಕಡೆಗೆ ಧಾವಿಸಿ ಬಂದ.
ತತಸ್ತತ್ಪ್ರಾದ್ರವತ್ ಸೈನ್ಯಂ ಹತಭೂಯಿಷ್ಠಮಾತುರಮ್ |
ದೃಷ್ಟ್ವಾ ಯದರ್ಜುನಂ ಭೀಮೋ ಜಗಾಮ ಭ್ರಾತರಂ ಪ್ರತಿ ॥22॥
ಅದರಿಂದ ಹೆಚ್ಚಿನ ಮಟ್ಟಿಗೆ ನಾಶ ಹೊಂದಿದ್ದ ಆ ಸೈನ್ಯವು ಆಗಲೆ ಪೀಡಿತವಾಗಿದ್ದು , ತಮ್ಮನಾದ ಅರ್ಜುನನ ಬಳಿಗೆ ಅಣ್ಣ ಭೀಮ ಬಂದುದನ್ನು ಕಂಡೊಡನೆ, ಪಲಾಯನ ಮಾಡಿತು.
ಹತಾವಶಿಷ್ಟಾಂಸ್ತುರಗಾನರ್ಜುನೇನ ಮಹಾಜವಾನ್ |
ಭೀಮೋ ವ್ಯಧಮದಶ್ರಾಂತೋ ಗದಾಪಾಣಿರ್ಮಹಾಹವೇ ॥23॥
ಅರ್ಜುನನಿಂದ ಹತವಾಗಿ ಉಳಿದುಕೊಂಡಿದ್ದ ಮಹಾವೇಗದ ಅಶ್ವಗಳನ್ನು ಮಹಾರಣದಲ್ಲಿ ಶ್ರಮವನ್ನೆ ಕಂಡರಿಯದ ಭೀಮನು ಗದಾಪಾಣಿಯಾಗಿ ಧ್ವಂಸಗೈದ.
ಕಾಲರಾತ್ರಿಮಿವಾತ್ಯುಗ್ರಾಂ ನರನಾಗಾಶ್ವಭೋಜನಾಮ್ |
ಪ್ರಾಕಾರಾಟ್ಟಪುರದ್ವಾರದಾರಣೀಮತಿದಾರುಣಾಮ್ ॥24॥
ತತೋ ಗದಾಂ ನೃನಾಗಾಶ್ವೇಷ್ವಾಶು ಭೀಮೋ ವ್ಯವಾಸೃಜತ್ |
ಸಾ ಜಘಾನ ಬಹೂನಶ್ವಾನಶ್ವಾರೋಹಾಂಶ್ಚ ಮಾರಿಷ ॥25॥

ರಾಜನೆ, ಭೀಮನ ಗದೆ ಎಂದರೆ ಶತ್ರುಗಳಿಗೆ ಕಾಲರಾತ್ರಿಯಂತೆ ಅತಿ ಉಗ್ರ. ಪದಾತಿ ಗಜ ಅಶ್ವಸೈನ್ಯಗಳೆ ಅದಕ್ಕೆ ಆಹಾರ. ಪ್ರಾಕಾರ ಉಪ್ಪರಿಗೆ ಪುರದ್ವಾರಗಳನ್ನು ಒಡೆಯುವಂಥ ದಾರುಣವಾದ ಆಯುಧ. ಅಂಥ ಗದೆಯನ್ನು ಭೀಮನು ಪದಾತಿ ಗಜ ಅಶ್ವಗಳ ಮೇಲೆ ಬೀಸಿದ. ಅದು ಬಹು ಅಶ್ವ ಅಶ್ವಾರೋಹಿಗಳನ್ನು ವಧಿಸಿತು.
ಕಾಂಸ್ಯಾಯಸತನುತ್ರಾಂಸ್ತಾನ್ನರಾನಶ್ವಾಂಶ್ಚ ಪಾಂಡವಃ |
ಪೋಥಯಾಮಾಸ ಗದಯಾ ಸಶಬ್ದಂ ತೇಽಪತನ್ ಹತಾಃ ॥26॥
ಕಂಚು ಕಬ್ಬಿಣಗಳ ಕವಚಗಳನ್ನು ತೊಟ್ಟ ಪದಾತಿ ಅಶ್ವಾರೋಹಿಗಳನ್ನು ಭೀಮನು ಗದೆಯಿಂದ ಹೊಡೆದ. ಅವರು ಹತರಾಗಿ ಕೂಗಿಕೊಳ್ಳುತ್ತ ನೆಲದಲ್ಲಿ ಒರಗಿದರು.
ದಂತೈರ್ದಶಂತೋ ವಸುಧಾಂ ಶೇರತೇ ಕ್ಷತಜೋಕ್ಷಿತಾಃ |
ಭಗ್ನಮೂರ್ಧಾಸ್ಥಿಚರಣಾಃ ಕ್ರವ್ಯಾದಗಣಭೋಜನಾಃ ॥27॥
ಆ ಪದಾತಿ ಅಶ್ವಾರೋಹಿಗಳು ನೆತ್ತರಿನಿಂದ ತೊಯ್ದು ಹಲ್ಲುಗಳಿಂದ ನೆಲವನ್ನು ಕಚ್ಚಿಕೊಂಡೇ ಬಿದ್ದರು. ತಲೆಬುರುಡೆ ಕಾಲು ಮುರಿದುಕೊಂಡು ಮಾಂಸಾಶಿ ಜಂತುಗಳಿಗೆ ಆಹಾರವಾದರು.
ಅಸೃಙ್ಮಾಂಸವಸಾಭಿಶ್ಚ ತೃಪ್ತಿಮಾಪ್ಯಾಯಸೀ ಗದಾ |
ಅಸ್ಥೀನ್ಯಪ್ಯಶ್ನತೀ ತಸ್ಥೌ ಕಾಲರಾತ್ರೀವ ದುರ್ದೃಶಾ ॥28॥
ಭೀಮನ ಆ ಕಬ್ಬಿಣದ ಗದೆ ರಕ್ತ ಮಾಂಸ ವಸಾಗಳಿಂದ ತೃಪ್ತಿಗೊಂಡೂ ಕೂಡ ಅಸ್ಥಿಗಳನ್ನೂ ಬಿಡದೆ ಉಂಡು ಕಾಲರಾತ್ರಿಯಂತೆ ನೋಡಲು ಶಕ್ಯವಾಗದಂತಿತ್ತು.
ಸಹಸ್ರಾಣಿ ದಶಾಶ್ವಾನಾಂ ಹತ್ವಾ ಪತ್ತೀಂಶ್ಚ ಭೂಯಸಾ |
ಭೀಮೋಽಭ್ಯಧಾವತ್ ಸಂಕ್ರುದ್ಧೋ ಗದಾಪಾಣಿರಿತಸ್ತತಃ ॥29॥
ಭೀಮನು ಬಲುಕ್ರುದ್ಧನಾಗಿ ಗದೆಯನ್ನು ಹಿಡಿದು ಹತ್ತುಸಾವಿರ ಅಶ್ವಸೈನಿಕರನ್ನೂ ಲೆಕ್ಕವಿಲ್ಲದಷ್ಟು ಕಾಲಾಳುಗಳನ್ನೂ ಸಂಹರಿಸುತ್ತ ರಣದಲ್ಲಿ ಎಲ್ಲೆಡೆ ಸಂಚರಿಸಿದ.
ಗದಾಪಾಣಿಂ ತತೋ ಭೀಮಂ ದೃಷ್ಟ್ವಾ ಭಾರತ ತಾವಕಾಃ |
ಮೇನಿರೇ ಸಮನುಪ್ರಾಪ್ತಂ ಕಾಲಂ ದಂಡೋದ್ಯತಂ ಯಥಾ ॥30॥
ರಾಜನೆ, ಗದಾಪಾಣಿಯಾದ ಭೀಮನನ್ನು ಕಂಡೊಡನೆ ನಿನ್ನವರು ಕಾಲಯಮನೇ ದಂಡಪಾಣಿಯಾಗಿ ಬಂದಂತೆ ತಿಳಿದರು.
ಸ ಮತ್ತ ಇವ ಮಾತಂಗಃ ಸಂಕ್ರುದ್ಧಃ ಪಾಂಡುನಂದನಃ |
ಪ್ರವಿವೇಶ ಗಜಾನೀಕಂ ಮಕರಃ ಸಾಗರಂ ಯಥಾ ॥31॥
ಮದಿಸಿದ ಮದ್ದಾನೆಯಂತೆ ಕ್ರುದ್ಧನಾದ ಭೀಮ ಗಜಸೈನ್ಯವನ್ನು ಮೊಸಳೆ ಸಾಗರವನ್ನು ಪ್ರವೇಶಿಸುವಂತೆ ಪ್ರವೇಶಿಸಿದ.
ವಿಗಾಹ್ಯ ಚ ಗಜಾನೀಕಂ ಪ್ರಗೃಹ್ಯ ಮಹತೀಂ ಗದಾಮ್ |
ಕ್ಷಣೇನ ಭೀಮಃ ಸಂಕ್ರುದ್ಧಸ್ತಾನ್ನಿನ್ಯೇ ಯಮಸಾದನಮ್ ॥32॥
ದೊಡ್ಡಗದೆಯನ್ನು ಹಿಡಿದು ಗಜಸೈನ್ಯವನ್ನು ಹೊಕ್ಕು ಕ್ರುದ್ಧನಾಗಿ ಕ್ಷಣದಲ್ಲಿ ಅವರನ್ನು ಯಮಸದನಕ್ಕೆ ಅಟ್ಟಿದ, ಭೀಮ.
ಗಜಾನ್ ಸಕಂಕಟಾನ್ ಮತ್ತಾನ್ ಸಾರೋಹಾನ್ ಸಪತಾಕಿನಃ |
ಪತತಃ ಸಮಪಶ್ಯಾಮ ಸಪಕ್ಷಾನ್ ಪರ್ವತಾನಿವ ॥33॥
ಕವಚಯುಕ್ತವಾದ ಮದಿಸಿದ ಗಜಗಳು ಆರೋಹಿಗಳೊಂದಿಗೆ, ಪತಾಕೆ ಗಳೊಂದಿಗೆ, ರೆಕ್ಕೆಗಳೊಂದಿಗೆ ಪರ್ವತಗಳು ಬೀಳುವಂತೆ, ಬೀಳುವುದನ್ನು ಕಂಡೆವು.
ಹತ್ವಾ ತು ತದ್ಗಜಾನೀಕಂ ಭೀಮಸೇನೋ ಮಹಾಬಲಃ |
ಪುನಃ ಸ್ವರಥಮಾಸ್ಥಾಯ ಪೃಷ್ಠತೋಽರ್ಜುನಮನ್ವಗಾತ್ ॥34॥
ಹೀಗೆ ಗಜಸೈನ್ಯವನ್ನು ಕೂಡ ಸಂಹರಿಸಿ ಮಹಾಬಲನಾದ ಭೀಮಸೇನನು ಪುನಃ ತನ್ನ ರಥವನ್ನೇರಿ ಅರ್ಜುನನಿಗೆ ಪೃಷ್ಠರಕ್ಷಕನಾಗಿ ನಡೆದ.
ಹತಂ ಪರಾಙ್ಮುಖಪ್ರಾಯಂ ನಿರುತ್ಸಾಹಂ ಬಲಂ ತವ |
ವ್ಯಲಂಬತ ಮಹಾರಾಜ ಪ್ರಾಯಶಃ ಶಸ್ತ್ರಪೀಡಿತಮ್(ವೇಷ್ಟಿತಮ್)|35|
ಮಹಾರಾಜ, ನಿನ್ನ ಸೈನ್ಯವು ಹೊಡೆಸಿಕೊಂಡು, ಶಸ್ತ್ರಗಳಿಂದ ಪೀಡಿತವಾಗಿ, ಉತ್ಸಾಹ ಕಳೆದುಕೊಂಡು ಪ್ರಾಯಶಃ ಹಿಮ್ಮೆಟ್ಟಿದಂತೇ ಇದ್ದು ಜಡವಾಯಿತು.
ವಿಲಂಬಮಾನಂ ತತ್ ಸೈನ್ಯಮಪ್ರಗಲ್ಭಮವಸ್ಥಿತಮ್ |
ದೃಷ್ಟ್ವಾ ಪ್ರಾಚ್ಛಾದಯದ್ ಬಾಣೈರರ್ಜುನಃ ಪ್ರಾಣತಾಪನೈಃ ॥36॥
ಆ ಸೈನ್ಯವು ಜಡವಾಗಿ ಅಸಮರ್ಥವಾಗಿದ್ದುದನ್ನು ಕಂಡು ಅರ್ಜುನನು ಪ್ರಾಣನಾಶಕವಾದ ಬಾಣಗಳಿಂದ ಅದನ್ನು ಚೆನ್ನಾಗಿ ಆಚ್ಛಾದಿಸಿದ.
ನರಾಶ್ವರಥಮಾತಂಗಾ ಯುಧಿ ಗಾಂಡೀವಧನ್ವನಾ |
ಶರವ್ರಾತೈಶ್ಚಿತಾ ರೇಜುಃ ಕದಂಬಾಃ ಇವ ಕೇಸರೈಃ ॥37॥
ಪದಾತಿ ಅಶ್ವ ರಥ ಗಜಗಳು ರಣದಲ್ಲಿ ಅರ್ಜುನನ ಬಾಣಸಮೂಹಗಳಿಂದ ಆಚ್ಛಾದಿತವಾದಾಗ ಕೇಸರಯುಕ್ತವಾದ ಕಡಹದ ಹೂಗಳಂತೆ ಕಂಡುಬಂದರು.
ತತಃ ಕುರೂಣಾಮಭವದಾರ್ತನಾದೋ ಮಹಾಮೃಧೇ |
ರಥಾಶ್ವನಾಗಾಸುಹರೈರ್ವಧ್ಯತಾಮರ್ಜುನೇಷುಭಿಃ ॥38॥

ಆಗ ರಥ ಅಶ್ವ ಗಜಗಳ ಪ್ರಾಣವನ್ನು ತೆಗೆವ ಅರ್ಜುನನ ಬಾಣಗಳಿಂದ ಹೊಡೆಸಿಕೊಂಡ ಕುರುಯೋಧರ ಆರ್ತನಾದ ಮಹಾರಣದಲ್ಲಿ ಕೇಳಿಬಂದಿತು.
ಹಾಹಾಕೃತಂ ಭೃಶತ್ರಸ್ತಂ ಲೀಯಮಾನಂ ಪರಸ್ಪರಮ್ |
ಕುಲಾಲಚಕ್ರವತ್ ಸೈನ್ಯಂ ತದಾಭ್ರಮತ ತಾವಕಮ್ ॥39॥
ನಿನ್ನ ಸೈನ್ಯವು ಜೋರಾಗಿ ಹಾಹಾಕಾರ ಮಾಡುತ್ತ ಬಲುಭೀತಿಗೊಂಡು ಪರಸ್ಪರ ತಮ್ಮತಮ್ಮಲ್ಲಿಯೇ ಅಡಗಿಕೊಳ್ಳುತ್ತ ಕುಂಬಾರನ ಚಕ್ರದಂತೆ ರಣರಂಗದಲ್ಲಿ ಸುತ್ತಿತು.
ತತಸ್ತದ್ ಧ್ವಸ್ತಮಭವತ್ ಕುರೂಣಾಂ ಸುಮಹದ್ ಬಲಮ್ |
ನ ಹ್ಯತ್ರಾಸೀದನಿರ್ಭಿನ್ನೋ ರಥಃ ಸಾದೀ ಹಯೋ ಗಜಃ ॥40॥
ಅದರಿಂದ ಕೌರವರ ಮಹಾಸೈನ್ಯವು ಧ್ವಸ್ತವಾಯಿತು. ರಥ ಪದಾತಿ ಅಶ್ವಗಜ ಯಾವುದೂ ಅದರಲ್ಲಿ ಗಾಯಗೊಳ್ಳದಿರಲಿಲ್ಲ.
ಆದೀಪ್ತಮಿವ ತತ್ ಸೈನ್ಯಂ ಶರೈಶ್ಛಿನ್ನತನುಚ್ಛದಮ್ |
ಆಸೀತ್ಸ್ವಶೋಣಿತಕ್ಲಿನ್ನಂ ಫುಲ್ಲಾಶೋಕವನಂ ಯಥಾ ॥41॥
ಆ ಸೈನ್ಯವು, ಬಾಣಗಳಿಂದ ಕವಚಗಳು ಒಡೆದುದರಿಂದ ನೆತ್ತರಿನಿಂದ ತೊಯ್ದು ಅರಳಿದ ಅಶೋಕವನದಂತಾಗಿ ಹೊತ್ತಿ ಉರಿಯುವಂತೆ ಕಂಡುಬಂದಿತು.
ತದ್ ದೃಷ್ಟ್ವಾ ಕುರವಸ್ತತ್ರ ವಿಕ್ರಾಂತಂ ಸವ್ಯಸಾಚಿನಃ |
ನಿರಾಶಾಃ ಸಮಪದ್ಯಂತ ಸರ್ವೇ ಕರ್ಣಸ್ಯ ಜೀವಿತೇ ॥42॥
ಆ ರೀತಿಯ ಅರ್ಜುನನ ಪರಾಕ್ರಮವನ್ನು ಕಂಡು ಕೌರವರು ಎಲ್ಲರೂ ಕರ್ಣನು ಬದುಕಿ ಉಳಿಯುವ ವಿಷಯದಲ್ಲಿ ನಿರಾಶೆ ಹೊಂದಿದರು.
ಅವಿಷಹ್ಯಂ ತು ಪಾರ್ಥಸ್ಯ ಶರಸಂಪಾತಮಾಹವೇ |
ಮತ್ವಾ ನ್ಯವರ್ತನ್ ಕುರವೋ ಜಿತಾ ಗಾಂಡೀವಧನ್ವನಾ ॥43॥
ರಣದಲ್ಲಿ ಅರ್ಜುನನ ಬಾಣಗಳ ಆಘಾತವು ಸಹಿಸಲಾಗದುದೆಂದು ತಿಳಿದು ಕೌರವಯೋಧರು ಅರ್ಜುನನಿಗೆ ಸೋತು ಹಿಮ್ಮೆಟ್ಟಿದರು.
ತೇ ಹಿತ್ವಾ ಸಮರೇ ಪಾರ್ಥಂ ವಧ್ಯಮಾನಾಶ್ಚ ಸಾಯಕೈಃ |
ಪ್ರದುದ್ರುವುರ್ದಿಶೋ ಭೀತಾಶ್ಚುಕ್ರುಶುಶ್ಚಾಪಿ ಸೂತಜಮ್ ॥44॥
ಅವರು ಬಾಣಗಳಿಂದ ಹೊಡೆಸಿಕೊಳ್ಳುತ್ತ ರಣದಲ್ಲಿ ಅರ್ಜುನನನ್ನು ಬಿಟ್ಟು ಭಯದಿಂದ ದಿಕ್ಕುಗಳಿಗೆ ಪಲಾಯನ ಮಾಡಿದರು. ಮತ್ತು ಕರ್ಣನನ್ನು ರಕ್ಷಣೆಗಾಗಿ ಕೂಗಿದರು.
ಅಭ್ಯದ್ರವತ ತಾನ್ ಪಾರ್ಥಃ ಕಿರನ್ ಶರಶತಾನ್ ಶಿತಾನ್ |
ಹರ್ಷಯನ್ ಪಾಂಡವಾನ್ ಯೋಧಾನ್
ಭೀಮಸೇನಪುರೋಗಮಾನ್ ॥45॥
ಅರ್ಜುನನು ಹರಿತವಾದ ನೂರಾರು ಬಾಣಗಳನ್ನು ಎಸೆಯುತ್ತ ಕೌರವ ಸೈನಿಕರನ್ನು ಬೆನ್ನಟ್ಟಿದ. ಭೀಮಸೇನ ಮುಂತಾದ ಪಾಂಡವಯೋಧರಿಗೆ ಉತ್ಸಾಹ ಉಂಟು ಮಾಡಿದ.
ಪುತ್ರಾಸ್ತು ತೇ ಮಹಾರಾಜ ಜಗ್ಮುಃ ಕರ್ಣರಥಂ ಪ್ರತಿ |
ಅಗಾಧೇ ಮಜ್ಜತಾಂ ತೇಷಾಂ ದ್ವೀಪಃ ಕರ್ಣೋಽಭವತ್ ತದಾ ॥46॥
ಮಹಾರಾಜ, ನಿನ್ನ ಮಕ್ಕಳು ಕರ್ಣನ ರಥದ ಕಡೆಗೆ ರಕ್ಷಣೆಗಾಗಿ ಧಾವಿಸಿದರು. ಅಗಾಧವಾದ ಆಪತ್ತಿನಲ್ಲಿ ಮುಳುಗುತ್ತಿದ್ದ ಅವರಿಗೆ ಆಗ ಕರ್ಣನೇ ಆಶ್ರಯದಾತನಾದ.
ಕುರವೋ ಹಿ ಮಹಾರಾಜ ನಿರ್ವಿಷಾಃ ಪನ್ನಗಾ ಇವ |
ಕರ್ಣಮೇವೋಪಲೀಯಂತ ಭಯಾದ್ ಗಾಂಡೀವಧನ್ವನಃ ॥47॥
ಮಹಾರಾಜ, ಕೌರವರ ಯೋಧರು ವಿಷವಿಲ್ಲದ ಹಾವುಗಳಂತಾಗಿ ಅರ್ಜುನನ ಭಯದಿಂದ ಕರ್ಣನ ಬಳಿಯಲ್ಲೇ ಅಡಗಿಕೊಂಡರು.
ಯಥಾ ಸರ್ವಾಣಿ ಭೂತಾನಿ ಮೃತ್ಯೋರ್ಭೀತಾನಿ ಭಾರತ |
ಧರ್ಮಮೇವೋಪಲೀಯಂತೇ ಧರ್ಮಂ ಲೋಕಪರಾಯಣಮ್ ॥48॥
ತಥಾ ಕರ್ಣಂ ಮಹೇಷ್ವಾಸಂ ಪುತ್ರಾಸ್ತವ ನರಾಧಿಪ |
ಉಪಾಲೀಯಂತ ಸಂತ್ರಾಸಾತ್ ಪಾಂಡವಸ್ಯ ಮಹಾತ್ಮನಃ ॥49॥
ರಾಜನೆ, ಮೃತ್ಯುಭಯಭೀತರಾದ ಎಲ್ಲರೂ ಧರ್ಮವನ್ನೇ ಆಶ್ರಯಿಸುತ್ತಾರೆ. ಧರ್ಮವೇ ಲೋಕಕ್ಕೆ ದೊಡ್ಡ ಆಶ್ರಯ. ಹಾಗೇ, ರಾಜನೆ, ಮಹಾತ್ಮನಾದ ಅರ್ಜುನನ ಭಯದಿಂದ ನಿನ್ನ ಮಕ್ಕಳು ಮಹಾಬಿಲ್ಲಾಳುವಾದ ಕರ್ಣನ ಬಳಿ ಹೋಗಿ ಅಡಗಿಕೊಂಡರು.
ತಾನ್ ಶೋಣಿತಪರಿಕ್ಲಿನ್ನಾನ್ ವಿಷಮಸ್ಥಾನ್ ಶರಾತುರಾನ್ |
ಮಾ ಭೈಷ್ಟೇತ್ಯಬ್ರವೀತ್ ಕರ್ಣೋ ಹ್ಯಭಿತೋ ಮಾಮಿತೇತಿ ಚ ॥50॥
ರಕ್ತದಿಂದ ತೊಯ್ದು ಬಾಣದಿಂದ ವೇದನೆಪಡುತ್ತ ಆಪತ್ತಿನಲ್ಲಿದ್ದ ಅವರಿಗೆ ಕರ್ಣನು, `ಹೆದರಬೇಡಿರಿ, ನನ್ನ ಕಡೆಗೇ ಬನ್ನಿರಿ' ಎಂದ.
ಸಂಭಗ್ನಂ ಹಿ ಬಲಂ ದೃಷ್ಟ್ವಾ ಬಲಾತ್ಪಾರ್ಥೇನ ತಾವಕಮ್ |
ಧನುರ್ವಿಸ್ಫಾರಯನ್ ಕರ್ಣಸ್ತಸ್ಥೌ ಶತ್ರುಜಿಘಾಂಸಯಾ ॥51॥
ಅರ್ಜುನನಿಂದ ಬಲಾತ್ಕಾರವಾಗಿ ನಿನ್ನ ಸೈನ್ಯ ಭಂಗಗೊಂಡಿರುವುದನ್ನು ನೋಡಿ ಕರ್ಣನು ಧನುಷ್ಟಂಕಾರಮಾಡಿ ಶತ್ರುವಧೇಚ್ಛೆಯಿಂದ ಸನ್ನದ್ಧನಾಗಿ ನಿಂತ.
ಪಾಂಚಾಲಾನ್ ಪುನರಾಧಾವತ್ ಪಶ್ಯತಃ ಸವ್ಯಸಾಚಿನಃ |

ತತಃ ಕ್ಷಣೇನ ಕ್ಷಿತಿಪಾಃ ಕ್ಷತಜಪ್ರತಿಮೇಕ್ಷಣಾಃ ॥52॥
ಕರ್ಣಂ ವವರ್ಷುರ್ಬಾಣೌಘೈರ್ಯಥಾ ಮೇಘಾ ಮಹೀಧರಮ್ |
ಅರ್ಜುನನು ನೋಡುತ್ತಿದ್ದಂತೆಯೇ ಕರ್ಣನು ಪುನಃ ಪಾಂಚಾಲರನ್ನು ಆಕ್ರಮಿಸಿದ. ರಕ್ತದಂತೆ ಕೆಂಪಾದ ಕಣ್ಣುಳ್ಳ ಪಾಂಚಾಲರಾಜರು ಕ್ಷಣದಲ್ಲಿ ಕರ್ಣನ ಮೇಲೆ, ಬೆಟ್ಟದ ಮೇಲೆ ಮೋಡಗಳು ಮಳೆಗರೆವಂತೆ, ಬಾಣಗಳ ಮಳೆಗರೆದರು.
ತತಃ ಶರಸಹಸ್ರಾಣಿ ಕರ್ಣಮುಕ್ತಾನಿ ಮಾರಿಷ |
ವ್ಯಯೋಜಯಂತ ಪಾಂಚಾಲಾನ್ ಪ್ರಾಣೈಃ ಪ್ರಾಣಭೃತಾಂ ವರ ॥53॥
ಆಗ ರಾಜನೆ, ಕರ್ಣನು ಎಸೆದ ಸಾವಿರಾರು ಬಾಣಗಳು ಪಾಂಚಾಲ ಯೋಧರಿಗೆ ಪ್ರಾಣವಿಯೋಗವನ್ನುಂಟು ಮಾಡಿದುವು.
ತತೋ ರಣೋ ಮಹಾನಾಸೀತ್ ಪಾಂಚಾಲಾನಾಂ ವಿಶಾಂಪತೇ |
ವಧ್ಯತಾಂ ಸೂತಪುತ್ರೇಣ ಮಿತ್ರಾರ್ಥೇ ಮಿತ್ರಗೃದ್ಧಿನಾ ॥54॥
ಮಿತ್ರಕೌರವನ ಜಯವನ್ನು ಬಯಸುವ ಕರ್ಣನಿಂದ ಮಿತ್ರಪಾಂಡವರಿಗಾಗಿ ಹೊಡೆಸಿಕೊಳ್ಳುತ್ತಿದ್ದ ಪಾಂಚಾಲಯೋಧರಿಗೆ ಕರ್ಣನೊಡನೆ ಮಹಾಯುದ್ಧ ನಡೆಯಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಅಷ್ಟಸಪ್ತತಿತಮೋಽಧ್ಯಾಯಃ ॥78॥

ಮಹಾಭಾರತತಾತ್ಪರ್ಯನಿರ್ಣಯ
ಪುನಶ್ಚ ನಿಘ್ನಂತಮರಿಪ್ರವೀರಾನ್
ವಿದ್ರಾವಯಂತಂ ಚ ನಿಜಾಂ ವರೂಥಿನೀಮ್ |
ಸಸಾರ ದುಃಶಾಸನ ಆತ್ತಧನ್ವಾ
ಭೀಮೋಽಪಿ ತಂ ಸಿಂಹ ಇವಾಭಿಪೇದಿವಾನ್ ॥ 143 ॥
ಪುನಃ ಶತ್ರುವೀರರನ್ನು ಕೊಲ್ಲುತ್ತ ತನ್ನ ಸೇನೆಯನ್ನು ಓಡಿಸುತ್ತಿದ್ದ ಭೀಮನನ್ನು ಧನುರ್ಧಾರಿ ದುಃಶಾಸನ ಸಮೀಪಿಸಿದ. ಭೀಮ ಅವನನ್ನು ಸಿಂಹದಂತೆ ಆಕ್ರಮಿಸಿದ.

ಎಪ್ಪತ್ತೊಂಬತ್ತನೆಯ ಅಧ್ಯಾಯ
ಸಾತ್ಯಕಿಯಿಂದ ಕರ್ಣಪುತ್ರ ಪ್ರಸೇನನ ವಧ. ಕರ್ಣನಿಂದ ಐದು ಮಂದಿ ದ್ರುಪದಪುತ್ರರ ಪರಾಭವ. ಭೀಮದುಃಶಾಸನರ ಯುದ್ಧ.
ಸಂಜಯಃ
ತತಃ ಕರ್ಣಃ ಕುರುಷು ಪ್ರದ್ರುತೇಷು
ಸೇನಾಪತಿಃ ಶ್ವೇತಹಯೇನ ರಾಜನ್ |
ಪಾಂಚಾಲಪುತ್ರಾನ್ ವ್ಯಧಮತ್ ಸೂತಪುತ್ರೋ
ಮಹೇಷುಭಿರ್ವಾತ ಇವಾಭ್ರಸಂಘಾನ್ ॥1॥
ಸಂಜಯನು ನುಡಿದ– ರಾಜನೆ, ಕೌರವಯೋಧರು ಪಲಾಯನಗೈದಾಗ ಸೇನಾಪತಿ ಸೂತಪುತ್ರ ಕರ್ಣನು ಬಿಳಿಕುದುರೆಯ ರಥದಿಂದ, ಗಾಳಿಯು ಮೋಡಸಮೂಹಗಳನ್ನು ಚದುರಿಸುವಂತೆ, ದೊಡ್ಡ ಬಾಣಗಳಿಂದ ಜನಮೇಜಯ ಧೃಷ್ಟದ್ಯುಮ್ನ ಮುಂತಾದ ಪಾಂಚಾಲಯೋಧರನ್ನು ಪರಾಭವಗೊಳಿಸಿದ.
ಸೂತಂ ರಥಾದಂಜಲಿಕೇನ ಪಾತ್ಯ
ಜಘಾನ ಚಾಶ್ವಾನ್ ಜನಮೇಜಯಸ್ಯ |
ಶತಾನೀಕಂ ಸುತಸೋಮಂ ಚ ಭಲ್ಲೈ-
ರವಾಕಿರದ್ಧನುಷೀ ಚಾಪ್ಯಕೃಂತತ್ ॥2॥
ಅಂಜಲಿಕ ಬಾಣದಿಂದ ಜನಮೇಜಯನ ಸಾರಥಿಯನ್ನು ಕೆಡವಿ ಅಶ್ವಗಳನ್ನು ಕೊಂದ. ಶತಾನೀಕನನ್ನು ಸುತಸೋಮನನ್ನು ಭಲ್ಲೆಗಳಿಂದ ಮುಚ್ಚಿದ, ಇಬ್ಬರ ಧನುಸ್ಸುಗಳನ್ನೂ ಕತ್ತರಿಸಿದ.
ಧೃಷ್ಟದ್ಯುಮ್ನಂ ನಿರ್ಬಿಭೇದಾಥ ಷಡ್ಭಿ-
ರ್ಜಘಾನ ಚಾಶ್ವಾಂಸ್ತರಸಾ ತಸ್ಯ ಸಂಖ್ಯೇ |
ಹತ್ವಾ ಚಾಶ್ವಾನ್ ಸಾತ್ಯಕೇಃ ಸೂತಪುತ್ರಃ
ಕೈಕೇಯಪುತ್ರಂ ನ್ಯವಧೀದ್ ವಿಶೋಕಮ್ ॥3॥
ಬಳಿಕ ಧೃಷ್ಟದ್ಯುಮ್ನನನ್ನು ರಣದಲ್ಲಿ ಆರು ಭಲ್ಲೆಗಳಿಂದ ಹೊಡೆದ. ಅವನ ಕುದುರೆಗಳನ್ನೂ ಬೇಗನೆ ಕೊಂದ. ಸಾತ್ಯಕಿಯ ಕುದುರೆಗಳನ್ನು ಕೊಂದು ಕೈಕೇಯ ರಾಜನ ಪುತ್ರ ವಿಶೋಕನನ್ನೂ ಕೊಂದ.
ತಮಭ್ಯಧಾವನ್ನಿಹತೇ ಕುಮಾರೇ
ಕೈಕೇಯಸೇನಾಪತಿರುಗ್ರಧನ್ವಾ |
ಶರೈರ್ವಿಭಿನ್ನಂ ಭೃಶಮುಗ್ರವೇಗೈಃ
ಕರ್ಣಾತ್ಮಜಂ ಸೋಽಭ್ಯಹನದ್ ಪ್ರಸೇನಮ್ ॥4॥
ಮಗನು ಹತನಾದಾಗ ಉಗ್ರ ಧನುಸ್ಸುಳ್ಳ ಕೈಕೇಯದ ಸೇನಾಪತಿಯು ಉಗ್ರವೇಗವುಳ್ಳ ಬಾಣಗಳಿಂದ ಬಲುಗಾಯಗೊಂಡಿದ್ದ ಕರ್ಣಪುತ್ರನಾದ ಪ್ರಸೇನನನ್ನು ಹೊಡೆದ.

ತಸ್ಯಾರ್ಧಚಂದ್ರೈಸ್ತ್ರಿಭಿರುಚ್ಚಕರ್ತ
ಪ್ರಸಹ್ಯ ಬಾಹೂ ಚ ಶಿರಶ್ಚ ಕರ್ಣಃ |
ಸ ಸ್ಯಂದನಾದ್ ಗಾಮಪತದ್ ಗತಾಸುಃ
ಪರಶ್ವಧೈಃ ಶಾಲ ಇವಾವರುಗ್ಣಃ ॥5॥
ಅವನ ಬಾಹುಗಳನ್ನೂ ಶಿರಸ್ಸನ್ನೂ ಕರ್ಣನು ಮೂರು ಅರ್ಧಚಂದ್ರಬಾಣ ಗಳಿಂದ ಬಲಾತ್ಕಾರವಾಗಿ ಕತ್ತರಿಸಿದ. ಕೊಡಲಿಯಿಂದ ಕಡಿದ ಸಾಲವೃಕ್ಷದಂತೆ ಅವನು ಸತ್ತು ರಥದಿಂದ ನೆಲಕ್ಕೆ ಬಿದ್ದ.
ಹತಾಶ್ವಮಂಜೋಗತಿಭಿಃ ಪ್ರಸೇನಃ
ಶಿನಿಪ್ರವೀರಂ ನಿಶಿತೈಃ ಪೃಷತ್ಕೈಃ |
ಪ್ರಚ್ಛಾದ್ಯ ನೃತ್ಯನ್ನಿವ ಸೂತಪುತ್ರಃ
ಶೈನೇಯಬಾಣಾಭಿಹತಃ ಪಪಾತ ॥6॥
ಅಶ್ವರಹಿತನಾಗಿದ್ದ ಸಾತ್ಯಕಿಯನ್ನು ಕರ್ಣಪುತ್ರ ಪ್ರಸೇನನು ಬಲುವೇಗವುಳ್ಳ ಹರಿತವಾದ ಬಾಣಗಳಿಂದ ಮುಚ್ಚಿ ಕುಣಿದಾಡುತ್ತ , ಸಾತ್ಯಕಿಯ ಬಾಣಕ್ಕೆ ತುತ್ತಾಗಿ ಸತ್ತುಬಿದ್ದ.
ಪುತ್ರೇ ಹತೇ ಕ್ರೋಧಪರೀತಚೇತಾಃ
ಕರ್ಣಃ ಶಿನೀನಾಮೃಷಭಂ ಜಿಘಾಂಸುಃ |
ಹತೋಽಸಿ ಶೈನೇಯ ಇತಿ ಬ್ರುವನ್ ಸ
ವ್ಯವಾಸೃಜದ್ ಬಾಣಮಮಿತ್ರಸಾಹಮ್ ॥7॥
ಪುತ್ರನು ಹತನಾದ ಕೋಪ ತುಂಬಿದ ಮನಸ್ಸಿನ ಕರ್ಣನು ಸಾತ್ಯಕಿಯನ್ನು ಕೊಲ್ಲಲು ಬಯಸಿ `ಸಾತ್ಯಕಿ! ನೀನೀಗ ಹತನಾದೆ!' ಎನ್ನುತ್ತ ಶತ್ರುನಾಶಕವಾದ ಬಾಣವನ್ನು ಎಸೆದ.
ಸ ತಸ್ಯ ಚಿಚ್ಛೇದ ಶರಂ ಶಿಖಂಡೀ
ತ್ರಿಭಿಸ್ತ್ರಿಭಿಶ್ಚ ಪ್ರತುತೋದ ಕರ್ಣಮ್ |
ಶಿಖಂಡಿನಃ ಕಾರ್ಮುಕಂ ಸ ಧ್ವಜಂ ಚ
ಚ್ಛಿತ್ತಾತ್ವ ಶರಾಭ್ಯಾಮಹನಚ್ಚ ಸೂತಮ್ ॥8॥
ಆದರೆ ಆ ಬಾಣವನ್ನು ಮೂರು ಬಾಣಗಳಿಂದ ಶಿಖಂಡಿ ಕತ್ತರಿಸಿದ. ಮೂರು ಬಾಣಗಳಿಂದ ಕರ್ಣನನ್ನೂ ಅವನು ಹೊಡೆದ. ಕರ್ಣನು ಎರಡು ಬಾಣಗಳಿಂದ ಶಿಖಂಡಿಯ ಬಿಲ್ಲನ್ನೂ ಧ್ವಜವನ್ನೂ ಕತ್ತರಿಸಿ ಸಾರಥಿಯನ್ನೂ ಕೊಂದ.
ಶಿಖಂಡಿನಂ ಷಡ್ಭಿರವಿಧ್ಯದುಗ್ರೋ
ದಾಂತೋ ಧಾರ್ಷ್ಟದ್ಯುಮ್ನಶ್ಶಿರಶ್ಚಕರ್ತ |
ಅಥಾಭಿನತ್ ಸುತಸೋಮಂ ಶರೇಣ
ಸ ಸಂಶಿತೇನಾಧಿರಥಿರ್ಮಹಾತ್ಮಾ ॥9॥
ಉಗ್ರನಾದ ಮಹಾತ್ಮ ಕರ್ಣನು ಆರು ಬಾಣಗಳಿಂದ ಶಿಖಂಡಿಯನ್ನು ಹೊಡೆದ. ದಮಗುಣಉಳ್ಳ ಅವನು ಧೃಷ್ಟದ್ಯುಮ್ನಸುತನ ಶಿರವನ್ನೂ ಕತ್ತರಿಸಿದ. ಸುತಸೋಮನನ್ನೂ ಬಲುತೀಕ್ಷ್ಣವಾದ ಬಾಣದಿಂದ ಪೀಡಿಸಿದ.
ಜನಾಕ್ರಂದೇ ತುಮುಲೇ ವರ್ತಮಾನೇ
ಧಾರ್ಷ್ಟದ್ಯುಮ್ನೇ ನಿಹತೇ ತತ್ರ ಕೃಷ್ಣಃ |
ಅಪಾಂಚಾಲ್ಯಂ ಕ್ರಿಯತೇ ಯಾಹಿ ಪಾರ್ಥ
ಕರ್ಣಂ ಜಹೀತ್ಯಬ್ರವೀದ್ ರಾಜಸಿಂಹ ॥10॥
ರಾಜನೆ, ಜನರ ಆರ್ತಧ್ವನಿಯುಕ್ತವಾದ ಭಯಂಕರ ಯುದ್ಧ ನಡೆಯುವಾಗ, ಧೃಷ್ಟದ್ಯುಮ್ನನ ಪುತ್ರನೂ ಹತನಾದಾಗ ಕೃಷ್ಣನು `ಪಾರ್ಥ, ಕರ್ಣನು ಪಾಂಚಾಲರನ್ನು ನಾಶಮಾಡುತ್ತಿದ್ದಾನೆ, ಅವನನ್ನು ಕೊಲ್ಲು, ಹೋಗು' ಎಂದ.
ತತಃ ಪ್ರಹಸ್ಯಾಶು ನರಪ್ರವೀರೋ
ರಥಂ ರಥೇನಾಧಿರಥೇರ್ಜಗಾಮ |
ಭಯೇ ತೇಷಾಂ ತ್ರಾಣಮಿಚ್ಛನ್ ಸುಬಾಹು-
ರಭ್ಯಾಹತಾನಾಂ ರಥಯೂಥಪಾನಾಮ್ ॥11॥
ಆಗ ಬಾಹುಶಾಲಿ ಅರ್ಜುನನು ನಕ್ಕು, ಕರ್ಣನಿಂದ ಹೊಡೆಸಿಕೊಂಡ ರಥಿಕರಿಗೆ ನಾಯಕರಾದ ಆ ಪಾಂಚಾಲರಿಗೆ ಆಪತ್ತಿನಲ್ಲಿ ರಕ್ಷಣೆ ನೀಡುವುದಕ್ಕಾಗಿ ರಥದಿಂದ ಕರ್ಣನ ರಥವನ್ನು ಇದಿರಿಸಿದ.
ವಿಸ್ಫಾರ್ಯ ಗಾಂಡೀವಮಥೋಗ್ರಘೋಷಂ
ಜ್ಯಯಾ ಸಮಾಹತ್ಯ ತಳೇ ಭೃಶಂ ಚ |
ಬಾಣಾಂಧಕಾರಂ ಸಹಸೈವ ಕೃತ್ವಾ
ಜಘಾನ ನಾಗಾಶ್ವರಥಾನ್ ನರಾಂಶ್ಚ ॥12॥
ಅರ್ಜುನನು ಉಗ್ರಶಬ್ದಮಾಡುವ ಗಾಂಡೀವವನ್ನು ಠೇಂಕರಿಸಿ ಹೆದೆಯಿಂದ ಹಸ್ತತಲಕ್ಕೆ ಚೆನ್ನಾಗಿ ಹೊಡೆದುಕೊಂಡು ಬಲುಬೇಗನೆ ಬಾಣಗಳಿಂದ ಅಂಧಕಾರವನ್ನು ಉಂಟುಮಾಡಿ ಗಜ ಅಶ್ವ ರಥಗಳನ್ನೂ ಕಾಲಾಳುಗಳನ್ನೂ ಸಂಹರಿಸಿದ.
ಪ್ರತಿಶ್ರುತಿಃ ಪ್ರಾಚರದಂತರಿಕ್ಷೇ
ಗುಹಾ ಗಿರೀಣಾಮಪತನ್ ವಯಾಂಸಿ |

ಯನ್ಮಂಡಲಜ್ಯೇನ ವಿಜೃಂಭಮಾಣೋ
ರೌದ್ರೇ ಮುಹೂರ್ತೇಭ್ಯಪತತ್ ಕಿರೀಟೀ ॥13॥
ಅಂತರಿಕ್ಷದಲ್ಲಿ ಪ್ರತಿಧ್ವನಿ ಉಂಟಾಯಿತು. ಅಲ್ಲಿ ಹಾರುವ ಪಕ್ಷಿಗಳು ಪರ್ವತಗುಹೆಗಳನ್ನು ಸೇರಿಕೊಂಡುವು. ಏಕೆಂದರೆ ಬಿಲ್ಲಿನ ಹಗ್ಗವನ್ನು ಮಂಡಲಾಕಾರವಾಗಿ ಸೆಳೆದು ಭಯಂಕರವಾದ ಆ ಮುಹೂರ್ತದಲ್ಲಿ ಅರ್ಜುನನು ಚೆನ್ನಾಗಿ ಶೋಭಿಸಿದ.
ತಂ ಭೀಮಸೇನೋನು ಯಯೌ ರಥೇನ
ಪೃಷ್ಠೇ ರಕ್ಷನ್ ಪಾಂಡವಮೇಕವೀರಮ್ ।
ತೌ ರಾಜಪುತ್ರೌ ತ್ವರಿತೌ ರಥಾಭ್ಯಾಂ
ಕರ್ಣಾಯ ಯಾತಾವರಿಭಿರ್ವಿಮುಕ್ತೌ ॥14॥
ಏಕವೀರನಾದ ಅವನನ್ನು ಹಿಂದಿನಿಂದ ರಕ್ಷಿಸುತ್ತ ಭೀಮಸೇನನು ಹಿಂಬಾಲಿಸಿದ. ಶತ್ರುಗಳಿಂದ ಮುಕ್ತರಾಗಿದ್ದ ರಾಜಕುಮಾರರಾದ ಭೀಮ ಮತ್ತು ಅರ್ಜುನರು ರಥಗಳಿಂದ ಕರ್ಣನ ಕಡೆಗೆ ಹೋದರು.
ಅತ್ರಾಂತರೇ ಸುಮಹತ್ ಸೂತಪುತ್ರ-
ಶ್ಚಕ್ರೇ ಯುದ್ಧಂ ಸೋಮಕಾನ್ ಸಂಪ್ರಮೃದ್ನನ್ ।
ರಥಾಶ್ವಮಾತಂಗಗಣಾನ್ ಜಘಾನ
ಪ್ರಚ್ಛಾದಯಾಮಾಸ ದಿಶಃ ಶರೈಶ್ಚ ॥15॥
ಈ ನಡುವೆ ಕರ್ಣನು ಸೋಮಕರನ್ನು ಸಂಹರಿಸುತ್ತ ದೊಡ್ಡ ಯುದ್ಧವನ್ನು ನಡೆಸಿದ. ರಥ ಅಶ್ವ ಗಜಸಮೂಹಗಳನ್ನು ಸಂಹರಿಸಿದ. ದಿಕ್ಕುಗಳನ್ನು ಬಾಣಗಳಿಂದ ಮುಚ್ಚಿದ.
ತಮುತ್ತಮೌಜಾ ಜನಮೇಜಯಶ್ಚ
ಕ್ರುದ್ಧೌ ಯುಧಾಮನ್ಯುಶಿಖಂಡಿನೌ ಚ ।
ಕರ್ಣಂ ವಿನೇದುಃ ಸಹಿತಾಃ ಪೃಷತ್ಕೈಃ
ಸಮ್ಮರ್ದಮಾನಾಃ ಸಹ ಪಾರ್ಷತೇನ ॥16॥
ಉತ್ತಮೌಜ, ಜನಮೇಜಯ, ಕ್ರುದ್ಧರಾದ ಯುಧಾಮನ್ಯು ಮತ್ತು ಶಿಖಂಡಿಗಳು ಧೃಷ್ಟದ್ಯುಮ್ನನೊಂದಿಗೆ ಕೂಡಿ ಬಾಣಗಳಿಂದ ಕರ್ಣನನ್ನು ಪೀಡಿಸುತ್ತ ಗರ್ಜಿಸಿದರು.
ತೇ ಪಂಚ ಪಾಂಚಾಲರಥಪ್ರವೀರಾ
ವೈಕರ್ತನಂ ಕರ್ಣಮಭಿದ್ರವಂತಃ ।
ತಸ್ಮಾದ್ ರಥಾಚ್ಚ್ಯಾವಯಿತುಂ ನ ಶೇಕು-
ರ್ಧೈರ್ಯಾರ್ತ್ ಕೃತಾತ್ಮಾನಮಿವೇಂದ್ರಿಯಾಣಿ ॥17॥
ಆ ಐದುಮಂದಿ ಮಹಾವೀರರಾದ ಪಾಂಚಾಲರಥಿಕರು ಕರ್ಣನನ್ನು ಇದಿರಿಸುತ್ತ ಅವನನ್ನು ವಿರಥನನ್ನಾಗಿಸಲು ಶಕ್ತರಾಗಲಿಲ್ಲ. ಧೈರ್ಯದಿಂದ ಮನೋನಿಗ್ರಹ ಮಾಡಿಕೊಂಡವನನ್ನು ವಿಚಲಿತಗೊಳಿಸಲು ಇಂದ್ರಿಯಗಳು ಶಕ್ತವಾಗುವುದಿಲ್ಲ.
ತೇಷಾಂ ಧ್ವಜಾನ್ ವಾಜಿಸೂತಾನ್ ಪತಾಕಾ
ಸ್ತೂಣೀರ್ಧನೂಂಷಿ ಪ್ರಚಕರ್ತ ಬಾಣೈಃ ।
ತಾನ್ ಪಂಚಭಿಃ ಸ ತ್ವಹನತ್ ಪೃಷತ್ಕೈಃ
ಕರ್ಣಸ್ತತಃ ಸಿಂಹ ಇವೋನ್ನನಾದ ॥18॥
ಕರ್ಣನು ಅವರ ಧ್ವಜ ಅಶ್ವ ಸಾರಥಿ ಪತಾಕೆ ಬತ್ತಳಿಕೆ ಬಿಲ್ಲುಗಳನ್ನು ಬಾಣಗಳಿಂದ ಕತ್ತರಿಸಿದ. ಅವರನ್ನೂ ಐದು ಬಾಣಗಳಿಂದ ಹೊಡೆದ. ಸಿಂಹದಂತೆ ಗರ್ಜಿಸಿದ.
ತಸ್ಯಾಸ್ಯತಸ್ತಾನಭಿನಿಘ್ನತಶ್ಚ
ಜ್ಯಾಬಾಣಹಸ್ತಸ್ಯ ಧನುಃಸ್ವನೇನ ।
ಸಾದ್ರಿದ್ರುಮಾ ಸ್ಯಾತ್ ಪೃಥಿವೀ ವಿಶೀರ್ಣೇ-
ತ್ಯತೀವ ಮತ್ವಾ ಜನತಾ ವ್ಯಷೀದತ್ ॥19॥
ಕರ್ಣನು ಕೈಯನ್ನು ಹೆದೆ ಮತ್ತು ಬಾಣಗಳಲ್ಲಿಟ್ಟು ಬಾಣಗಳನ್ನೆಸೆದು ಹೊಡೆಯುವಾಗ ಧನುಸ್ಸಿನ ಶಬ್ದದಿಂದ ಪರ್ವತ ವೃಕ್ಷ ಸಹಿತವಾದ ಭೂಮಿಯೇ ಬಿರಿಯಬಹುದೆಂದು ಜನಸಮೂಹವು ಅತೀವ ವಿಷಾದಕ್ಕೊಳಗಾಯಿತು.
ಸ ಶಕ್ರಚಾಪಪ್ರತಿಮೇನ ಧನ್ವನಾ
ಭೃಶಾತತೇನಾಧಿರಥಿಃ ಶರಾನ್ ಸೃಜನ್ ।
ಬಭೌ ರಣೇ ದೀಪ್ತಮರೀಚಿಮಂಡಲೋ
ಯಥಾಂಶುಮಾಲೀ ಪರಿವೇಷವಾಂಸ್ತಥಾ ॥20॥
ಬಿಲ್ಲನ್ನು ಚೆನ್ನಾಗಿ ಬಾಗಿಸಿ ಬಾಣಬಿಡುವಾಗ ಕರ್ಣನು ಇಂದ್ರಚಾಪದಂಥ ಬಿಲ್ಲಿನಿಂದ ಯುಕ್ತನಾಗಿ ರಣದಲ್ಲಿ , ಹೊಳೆಯುವ ತೇಜೋ ಮಂಡಲವುಳ್ಳ ಸೂರ್ಯನು ಪರಿವೇಷಗೊಂಡಂತೆ, ಶೋಭಿಸಿದ.
ಶಿಖಂಡಿನಂ ದ್ವಾದಶಭಿಃ ಪರಾಭಿನ-
ಚ್ಛಿತೈಃ ಶರೈಃ ಷಡ್ಭಿರಥೋತ್ತಮೌಜಸಮ್ ।
ತ್ರಿಭಿರ್ಯುಧಾಮನ್ಯುಮವಿಧ್ಯದಾಶುಗೈ-
ಸ್ತ್ರಿಭಿಸ್ತ್ರಿಭಿಃ ಸೋಮಕಪಾರ್ಷತಾತ್ಮಜೌ ॥21॥

ಕರ್ಣನು ಶಿಖಂಡಿಯನ್ನು ಹನ್ನೆರಡು ಬಾಣಗಳಿಂದ ಹೊಡೆದ. ತೀಕ್ಷ್ಣವಾದ ಆರು ಬಾಣಗಳಿಂದ ಉತ್ತಮೌಜನನ್ನು ಹೊಡೆದ. ಮೂರು ಬಾಣಗಳಿಂದ ಯುಧಾಮನ್ಯುವನ್ನೂ ಮೂರು ಮೂರು ಬಾಣಗಳಿಂದ ಜನಮೇಜಯ ಧೃಷ್ಟದ್ಯುಮ್ನರನ್ನೂ ಹೊಡೆದ.

ಪರಾಜಿತಾಃ ಪಂಚಮಹಾರಥಾಸ್ತು ತೇ
ಮಹಾಹವೇ ಸೂತಸುತೇನ ಮಾರಿಷ |
ನಿರುದ್ಯಮಾಸ್ತಸ್ಥುರಮಿತ್ರಮರ್ದನಾ
ಯಥೇಂದ್ರಿಯಾರ್ಥಾ ವಶಿನಾ ಪರಾಜಿತಾಃ ॥22॥

ರಾಜನೆ, ಶತ್ರುನಾಶಕರಾದ ಐದು ಮಹಾರಥರೂ ರಣದಲ್ಲಿ ಕರ್ಣನಿಂದ ಪರಾಜಿತರಾಗಿ ಇಂದ್ರಿಯನಿಗ್ರಹ ಮಾಡಿಕೊಂಡಿರುವವನಿಂದ ಪರಾಜಿತವಾದ ಐದು ಇಂದ್ರಿಯವಿಷಯಪದಾರ್ಥಗಳಂತೆ ನಿಷ್ಕ್ರಿಯರಾದರು.

ನಿಮಜ್ಜತಸ್ತಾನಥ ಕರ್ಣಸಾಗರೇ
ವಿಪನ್ನನಾವೋ ವಣಿಜೋ ಯಥಾರ್ಣವೇ |
ಉದ್ದಧ್ರಿರೇ ನೌಭಿರಿವಾರ್ಣವಾದ್ ರಥೈಃ
ಸುಕಲ್ಪಿತೈರ್ದ್ರೌಪದಿಜಾಃ ಸ್ವಮಾತುಲಾನ್ ॥23॥

ಕರ್ಣಸಾಗರದಲ್ಲಿ ಮುಳುಗುತ್ತಿದ್ದ ತಮ್ಮ ಸೋದರಮಾವಂದಿರನ್ನು ದ್ರೌಪದೀಪುತ್ರರು ತಮ್ಮ ಸಜ್ಜಾದ ರಥಗಳಿಂದ ಸಾಗರದಲ್ಲಿ ನೌಕೆ ಒಡೆದಾಗ ಮುಳುಗುವ ವರ್ತಕರನ್ನು ಬೇರೆ ನೌಕೆಗಳಿಂದ ಒಯ್ಯುವಂತೆ ದೂರಕ್ಕೆ ಒಯ್ದರು.

ತತಃ ಶಿನೀನಾಮೃಷಭಃ ಶಿತೈಃ ಶರೈ-
ರ್ನಿಕೃತ್ಯ ಕರ್ಣಪ್ರಹಿತಾನಿಷೂನ್ ಬಹೂನ್ |
ವಿದಾರ್ಯ ಕರ್ಣಂ ನಿಶಿತೈರಯಸ್ಮಯೈ-
ಸ್ತವಾತ್ಮಜಂ ಜ್ಯೇಷ್ಠಮವಿಧ್ಯದಷ್ಟಭಿಃ ॥24॥

ಬಳಿಕ ಸಾತ್ಯಕಿಯು ತೀಕ್ಷ್ಣವಾದ ಬಾಣಗಳಿಂದ ಕರ್ಣನೆಸೆದ ಬಹುಬಾಣಗಳನ್ನು ಕತ್ತರಿಸಿ ತೀಕ್ಷ್ಣವಾದ ಕಬ್ಬಿಣದ ಬಾಣಗಳಿಂದ ಕರ್ಣನನ್ನು ಹೊಡೆದು ನಿನ್ನ ಹಿರಿಮಗನನ್ನೂ ಎಂಟು ಬಾಣಗಳಿಂದ ಹೊಡೆದ.

ಕೃಪೋಽಥ ಭೋಜಶ್ಚ ತವಾತ್ಮಜಸ್ತಥಾ
ಸ್ವಯಂ ಚ ಕರ್ಣೋ ನಿಶಿತೈರತಾಡಯತ್ |
ಸ ತೈಶ್ಚತುರ್ಭಿರ್ಯುಯುಧೇ ಯದೂತ್ತಮೋ
ದಿಗೀಶ್ವರೈರ್ದೈತ್ಯಪತಿರ್ಯಥಾ ತಥಾ ॥25॥

ಕೃಪ ಕೃತವರ್ಮ ದುರ್ಯೋಧನ ಮತ್ತು ಸ್ವತಃಕರ್ಣನೂ ತೀಕ್ಷ್ಣವಾದ ಬಾಣಗಳಿಂದ ಸಾತ್ಯಕಿಯನ್ನು ಹೊಡೆದ. ದೈತ್ಯರಾಜ ಹಿರಣ್ಯಕಶಿಪು ನಾಲ್ವರು ದಿಕ್ಪಾಲರೊಡನೆ ಹೋರಾಡಿದಂತೆ ಯದುಶ್ರೇಷ್ಠನಾದ ಸಾತ್ಯಕಿಯೂ ಆ ನಾಲ್ಕು ಯೋಧರೊಂದಿಗೆ ಹೋರಾಡಿದ.

ಸಮಾಯತೇನೇಷ್ವಸನೇನ ಕೂಜತಾ
ಮಹಾಸ್ವನೇನಾಮಿತಬಾಣವರ್ಷಿಣಾ |
ಬಭೂವ ದುರ್ಧರ್ಷತರಃ ಸ ಸಾತ್ಯಕಿಃ
ಶರನ್ನಭೋಮಧ್ಯಗತೋ ಯಥಾ ರವಿಃ ॥26॥

ಚೆನ್ನಾಗಿ ಸೆಳೆದ, ಬಹುಬಾಣಗಳ ಮಳೆಗರೆವ, ಶಬ್ದಮಾಡುವ ಬಿಲ್ಲಿನಿಂದ ಯುಕ್ತನಾಗಿ, ಮಹಾಗರ್ಜನ ಮಾಡುತ್ತಿದ್ದ ಸಾತ್ಯಕಿಯು, ಶರತ್ಕಾಲದ ಆಕಾಶ ಮಧ್ಯದಲ್ಲಿರುವ ಸೂರ್ಯನಂತೆ ಯಾರಿಗೂ ಮಣಿಸಲಾಗದವನಾದ.

ಪುನಃ ಸಮಾಸಾದ್ಯ ರಥಾನ್ ಸುದಂಸಿತಾಃ
ಶಿನಿಪ್ರವೀರಂ ಜುಗುಪುಃ ಪರಂತಪಾಃ |
ಸಮೇತ್ಯ ಪಾಂಚಲರಥಾ ಮಹಾರಣೇ
ಮರುದ್ಗಣಾಃ ಶಕ್ರಮಿವಾರಿನಿಗ್ರಹೇ ॥27॥

ಶತ್ರುನಾಶಕರಾದ ಪಾಂಚಾಲರಥಯೋಧರು ಪುನಃ ಸುಸಜ್ಜಿತರಾಗಿ ರಥಗಳನ್ನು ಏರಿಬಂದು ಒಟ್ಟಿಗೆ ಸೇರಿ ಮಹಾರಣದಲ್ಲಿ ಸಾತ್ಯಕಿಯನ್ನು ಶತ್ರುನಿಗ್ರಹದಲ್ಲಿ ಇಂದ್ರನನ್ನು ಮರುದ್ಗಣಗಳು ರಕ್ಷಿಸಿದಂತೆ ರಕ್ಷಿಸಿದರು.

ತತೋಽಭವದ್ ಯುದ್ಧಮತೀವ ದಾರುಣಂ
ತವಾಹಿತಾನಾಂ ತವ ಸೈನಿಕೈಃ ಸಹ |
ರಥಾಶ್ವಮಾತಂಗವಿನಾಶನಂ ತಥಾ
ಯಥಾ ಸುರಾಣಾಮಸುರೈಃ ಪುರಾಭವತ್ ॥28॥

ಆಗ ನಿನ್ನ ಶತ್ರುಗಳಿಗೆ ನಿನ್ನ ಸೈನಿಕರೊಂದಿಗೆ ರಥ ಅಶ್ವ ಗಜನಾಶಕವಾದ ಅತ್ಯಂತ ದಾರುಣವಾದ ಯುದ್ಧ ಹಿಂದೆ ಸುರರಿಗೆ ಅಸುರರೊಂದಿಗೆ ಯುದ್ಧ ನಡೆದಂತೆ ನಡೆಯಿತು.

ರಥದ್ವಿಪಾ ವಾಜಿಪದಾತಯೋಽಪಿ ವಾ
ಭ್ರಮಂತಿ ನಾನಾವಿಧಶಸ್ತ್ರವೇಷ್ಟಿತಾಃ |
ಪರಸ್ಪರೇಣಾಭಿಹತಾಶ್ಚ ಚಸ್ಖಲು-
ರ್ವಿನೇದುರಾರ್ತಾ ವ್ಯಸವೋಪತಂತ ಚ ॥29॥

ರಥ ಗಜ ಅಶ್ವ ಪದಾತಿಗಳು ನಾನಾವಿಧವಾದ ಶಸ್ತ್ರಗಳಿಂದ ಮುಚ್ಚಿದ್ದು ಪಲಾಯನದ ಅವಸರದಲ್ಲಿ ಪರಸ್ಪರ ತಗುಲಿಕೊಂಡು ಎಡವಿ

ಬೀಳುತ್ತ ಆರ್ತರಾಗಿ ಕೂಗುತ್ತ ಅಲ್ಲಲ್ಲೆ ಸುತ್ತಿದರು. ಅಸುನೀಗಿ ಬಿದ್ದರು.
ತಥಾ ಗತೇ ಭೀಮಮಭೀಸ್ತವಾತ್ಮಜಃ
ಸಸಾರ ರಾಜಾವರಜಃ ಕಿರನ್ ಶರೈಃ |
ತಮಭ್ಯಧಾವತ್ ತ್ವರಿತೋ ವೃಕೋದರೋ
ಮಹಾರುರುಂ ಸಿಂಹ ಇವಾಭಿಪೇತಿವಾನ್ ॥30॥
ಯುದ್ಧ ಹಾಗೇ ನಡೆಯುತ್ತಿರಲು ನಿನ್ನ ಮಗ ದುಃಶಾಸನನು ನಿರ್ಭೀತಿಯಿಂದ ಭೀಮನನ್ನು ಬಾಣಗಳಿಂದ ಮುಚ್ಚುತ್ತ ಸಮೀಪಿಸಿದ. ದೊಡ್ಡ ಜಿಂಕೆಯನ್ನು ಸಿಂಹವು ಆಕ್ರಮಿಸುವಂತೆ ಭೀಮನು ವೇಗವಾಗಿ ದುಃಶಾಸನನನ್ನು ಆಕ್ರಮಿಸಿದ.
ತತಸ್ತಯೋರ್ಯುದ್ಧಮತೀತಮಾನುಷಂ
ಪ್ರದೀವ್ಯತೋಃ ಪ್ರಾಣದುರೋದರೇಽಭವತ್ |
ಪರಸ್ಪರೇಣಾಭಿನಿವಿಷ್ಟರೋಷಯೋ-
ರುದಗ್ರಯೋಃ ಶಂಬರಶಕ್ರಯೋರ್ಯಥಾ ॥31॥
ಪ್ರಚಂಡರಾದ ಭೀಮದುಃಶಾಸನರು ಪರಸ್ಪರ ಆಗ್ರಹಯುಕ್ತವಾದ ರೋಷದಿಂದ ಕೂಡಿದ್ದರು. ಪ್ರಾಣವನ್ನು ಪಣಕ್ಕಿಟ್ಟು ಯುದ್ಧದ ಜೂಜಾಡುತ್ತಿದ್ದರು. ಶಂಬರಾಸುರ ಮತ್ತು ದೇವೇಂದ್ರರಿಗೆ ನಡೆದಂತಹ ಅತಿಮಾನುಷವಾದ ಯುದ್ಧ ಅವರೊಳಗೆ ನಡೆಯಿತು.
ಶರೈಃ ಶರೀರಾಂತಕರೈಃ ಸುತೇಜನೈ-
ರ್ನಿಜಘ್ನತುಸ್ತಾವಿತರೇತರಂ ಭೃಶಮ್ |
ಸಕೃತ್ಪ್ರಭಿನ್ನಾವಿವ ವಾಶಿತಾಂತರೇ
ಮಹಾಗಜೌ ಮನ್ಮಥಸಕ್ತಚೇತಸೌ ॥32॥
ಬೆದೆಗೆ ಬಂದ ಹೆಣ್ಣಾನೆಯ ಬಳಿಯಲ್ಲಿ ಕಾಮಾಸಕ್ತಮನಸಿನ ಆಗತಾನೆ ಮದಿಸಿದ ಎರಡು ಮದ್ದಾನೆಗಳಂತೆ, ಭೀಮದುಃಶಾಸನರು ಶರೀರನಾಶಕವಾದ ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಬಲು ಜೋರಾಗಿ ಹೊಡೆದರು.
ತವಾತ್ಮಜಸ್ಯಾಥ ವೃಕೋದರಸ್ತ್ವರನ್
ಧನುಃ ಕ್ಷುರಾಭ್ಯಾಂ ಧ್ವಜಮೇವ ಚಾಚ್ಛಿನತ್ |
ಲಲಾಟಮಪ್ಯಸ್ಯ ಬಿಭೇದ ಪತ್ರಿಣಾ
ಶಿರಶ್ಚ ಕಾಯಾತ್ ಪ್ರಜಹಾರ ಸಾರಥೇಃ ॥33॥
ಭೀಮನು ಬೇಗನೆ ನಿನ್ನ ಮಗನ ಧನುಸ್ಸನ್ನೂ ಧ್ವಜವನ್ನೂ ಎರಡು ಕ್ಷುರಗಳಿಂದ ಬೇಗನೆ ಕತ್ತರಿಸಿದ. ಅವನ ಹಣೆಗೂ ಬಾಣದಿಂದ ಹೊಡೆದ. ಸಾರಥಿಯ ಶರೀರದಿಂದ ತಲೆಯನ್ನು ಉರುಳಿಸಿದ.
ಸ ರಾಜಪುತ್ರೋಽನ್ಯದವಾಪ್ಯ ಕಾರ್ಮುಕಂ
ವೃಕೋದರಂ ದ್ವಾದಶಭಿಃ ಪರಾಭಿನತ್ |
ಸ್ವಯಂ ನಿಯಚ್ಛಂಸ್ತುರಗಾನಜಿಹ್ಮಗೈಃ
ಶರೈಶ್ಚ ಭೀಮಂ ಪುನರಭ್ಯವೀವೃಷತ್ ॥34॥
ದುಃಶಾಸನನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಹನ್ನೆರಡು ಬಾಣಗಳಿಂದ ಭೀಮನನ್ನು ಹೊಡೆದ. ತಾನೇ ಕುದುರೆಗಳನ್ನು ನಡೆಸುತ್ತ ನೇರವಾಗಿ ಹೋಗುವ ಬಾಣಗಳಿಂದ ಪುನಃ ಭೀಮನ ಮೇಲೆ ಮಳೆಗರೆದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಭೀಮದುಃಶಾಸನಯುದ್ಧೇ ಏಕೋನಾಶೀತಿತಮೋಧ್ಯಾಯಃ ॥79॥

ಮಹಾಭಾರತತಾತ್ಪರ್ಯನಿರ್ಣಯ
ಪುನಶ್ಚ ನಿಘ್ನಂತಮರಿಪ್ರವೀರಾನ್
ವಿದ್ರಾವಯಂತಂ ಚ ನಿಜಾಂ ವರೂಥಿನೀಮ್ |
ಸಸಾರ ದುಃಶಾಸನ ಆತ್ತಧನ್ವಾ
ಭೀಮೋಪಿ ತಂ ಸಿಂಹ ಇವಾಭಿಪೇದಿವಾನ್ ॥ 143 ॥
ಪುನಃ ಶತ್ರುವೀರರನ್ನು ಕೊಲ್ಲುತ್ತ ತನ್ನ ಸೇನೆಯನ್ನು ಓಡಿಸುತ್ತಿದ್ದ ಭೀಮನನ್ನು ಧನುರ್ಧಾರಿ ದುಃಶಾಸನ ಸಮೀಪಿಸಿದ. ಭೀಮ ಅವನನ್ನು ಸಿಂಹದಂತೆ ಆಕ್ರಮಿಸಿದ.
ತಂ ರೂಕ್ಷವಾಚೋ ಮುಹುರರ್ಪಯಂತಂ
ವಿಧಾಯ ಭೀಮೋ ವಿರಥಂ ಕ್ಷಣೇನ |
ಪ್ರಗೃಹ್ಯ ಭೂಮೌ ವಿನಿಪಾತ್ಯ ವಕ್ಷೋ
ವಿದಾರಯಾಮಾಸ ಗದಾಪ್ರಹಾರತಃ ॥ 144 |
ಪುನಃ ಪುನಃ ಕೆಟ್ಟ ಮಾತುಗಳನ್ನಾಡುತ್ತಿದ್ದ ದುಃಶಾಸನನನ್ನು ಭೀಮ ಕ್ಷಣದಲ್ಲಿ ವಿರಥನನ್ನಾಗಿ ಮಾಡಿ ಹಿಡಿದು ನೆಲದಲ್ಲಿ ಕೆಡವಿ ಗದಾಪ್ರಹಾರದಿಂದ ಎದೆಯನ್ನು ಸೀಳಿದ.
ಆಕ್ರಮ್ಯ ಕಂಠಂ ಚ ಪದೋದರೇಽಸ್ಯ
ನಿವಿಶ್ಯ ಪಶ್ಯನ್ ಮುಖಮಾತ್ತರೋಷಃ |
ವಿಕೋಶಮಾಕಾಶನಿಭಂ ವಿಧಾಯ

ಮಹಾಸಿಮಸ್ಯೋರಸಿ ಸಂಚಖಾನ ॥145॥
ಭೀಮ ದುಃಶಾಸನನ ಗಂಟಲನ್ನು ಕಾಲುಗಳಿಂದ ಒತ್ತಿ ಹೊಟ್ಟೆಯ ಮೇಲೆ ಕುಳಿತು ಕೋಪಾವಿಷ್ಟನಾಗಿ ಮುಖವನ್ನೆ ನೋಡುತ್ತ ಆಕಾಶದಂತೆ ನೀಲವಾಗಿರುವ ದೊಡ್ಡ ಖಡ್ಗವನ್ನು ಒರೆಯಿಂದ ತೆಗೆದು ಅವನೆದೆಯಲ್ಲಿ ತಿವಿದ.
ಕೃತ್ವಾಽಸ್ಯ ವಕ್ಷಸ್ಯುರುಸತ್ತಟಾಕಂ
ಪಪೌ ನಿಕಾಮಂ ತೃಷಿತೋಽಮೃತೋಪಮಮ್ |
ತಚ್ಛೋಣಿತಾಂಭೋ ಭ್ರುಮದಕ್ಷಮೇನಂ
ಸಂಸ್ಮಾರಯಾಮಾಸ ಪುರಾಕೃತಾನಿ ॥146॥
ಭೀಮ ದುಃಶಾಸನನ ಎದೆಯಲ್ಲಿ ದೊಡ್ಡ ನೆತ್ತರ ಮಡುವನ್ನು ನಿರ್ಮಿಸಿ ಬಾಯಾರಿದವ ಅಮೃತವನ್ನೆಂಬಂತೆ ನೆತ್ತರನ್ನು ಯಥೇಚ್ಛ ಪಾನ ಮಾಡಿದ. ದುಃಶಾಸನನ ಕಣ್ಣು ತಿರುಗುತ್ತಿದ್ದಂತೆಯೆ ಅವನು ಹಿಂದೆ ಮಾಡಿದ್ದ ದುಷ್ಟಕರ್ಮ ಗಳನ್ನು ನೆನಪಿಸಿದ.
ವಾಕ್ಸಾಯಕಾಂಶ್ಚಾಸ್ಯ ಪುರಾ ಸಮರ್ಪಿತಾನ್
ಸಂಸ್ಮಾರಯಾಮಾಸ ಪುನಃಪುನರ್ಭೃಶಮ್ |
ದಂತಾಂತರಂ ನ ಪ್ರವಿವೇಶ ತಸ್ಯ
ರಕ್ತಂ ಹ್ಯಪೇಯಂ ಪುರುಷಸ್ಯ ಜಾನತಃ ॥147॥
ಭೀಮ ಹಿಂದೆ ದುಃಶಾಸನನಾಡಿದ್ದ ಬಾಣಗಳಂಥ ಚುಚ್ಚು ಮಾತುಗಳನ್ನು ಪುನಃ ಪುನಃ ಚೆನ್ನಾಗಿ ನೆನಪಿಸಿದ. ಮಾನವನ ರಕ್ತ ಪಾನಯೋಗ್ಯವಲ್ಲವೆಂದು ಭೀಮ ತಿಳಿದಿದ್ದುದರಿಂದ ಅವನ ಹಲ್ಲಿನ ಒಳಗೆ ದುಃಶಾಸನನ ರಕ್ತ ಪ್ರವೇಶಿಸಿರಲಿಲ್ಲ.
ತಥಾಪಿ ಶತ್ರುಪ್ರತಿಭೀಷಣಾಯ
ಪಪಾವಿವಾಽಽಸ್ವಾದ್ಯ ಪುನಃಪುನರ್ಭೃಶಮ್ |
ಸ್ಮರನ್ ನೃಸಿಂಹಂ ಭಗವಂತಮೀಶ್ವರಂ
ಸ ಮನ್ಯುಸೂಕ್ತಂ ಚ ದದರ್ಶ ಭಕ್ತ್ಯಾ ॥148॥
ಆದರೂ ಶತ್ರುಗಳಿಗೆ ಭಯ ಉಂಟುಮಾಡುವುದಕ್ಕಾಗಿ ಭೀಮ ದುಃಶಾಸನನ ರಕ್ತವನ್ನು ಪುನಃ ಪುನಃ ಆಸ್ವಾದಿಸಿ ಯಥೇಚ್ಛ ಕುಡಿದಂತೆ ತೋರಿಕೊಂಡ. ಜಗದೊಡೆಯನಾದ ಭಗವಾನ್ ನೃಸಿಂಹನನ್ನು ಭಕ್ತಿಯಿಂದ ನೆನೆಯುತ್ತ ಮನ್ಯುಸೂಕ್ತವನ್ನು ಕಂಡುಕೊಂಡ.
ಯಸ್ತೇ ಮನ್ಯೋ ಇತ್ಯತೋ ನಾರಸಿಂಹಂ
ಸೋಮಂ ತಸ್ಮೆ ೖ ಚಾರ್ಪಯಚ್ಛೋಣಿತಾಖ್ಯಮ್ |
ಯುದ್ಧಾಖ್ಯಯಜ್ಞೇ ಸೋಮಬುದ್ಧ್ಯಾರಿವಕ್ಷ
ಇಹೇತಿ ಸಾಮ್ನಾ ಗದಯಾ ವಿಭಿಂದನ್ ॥149॥
ಮನ್ಯುನಾಮಕ ನೃಸಿಂಹ ದೇವತಾಕವಾದ `ಯಸ್ತೇ ಮನ್ಯೋ' ಎಂಬ ಮನ್ಯು ಸೂಕ್ತವನ್ನು ಕಂಡು ನೆತ್ತರೆಂಬ ಸೋಮರಸವನ್ನು ಯುದ್ಧಯಜ್ಞದಲ್ಲಿ ಅವನಿಗೆ ಭೀಮ ಅರ್ಪಿಸಿದ. ಆಗ ಶತ್ರುವಿನ ಎದೆಯನ್ನೆ ಸೋಮಲತೆಯೆಂದು ತಿಳಿದು `ಇಹ' ಎಂಬ ಸ್ತೋಭಾಕ್ಷರಯುಕ್ತವಾದ ಸಾಮಮಂತ್ರದಿಂದ ಗದೆಯಿಂದ ಜಜ್ಜಿದ.
ಉವಾಚ ವಾಚಂ ಪುರುಷಪ್ರವೀರಃ
ಸತ್ಯಾಂ ಪ್ರತಿಜ್ಞಾಂ ಲೋಕಮಧ್ಯೇ ವಿಧಾಯ |
ಯಾಃ ಸಪತಯಸ್ತಾ ಅಪತಯೋ ಹಿ ಜಾತಾ
ಯಾ ಸಾಽಪತಿಃ ಸಾ ಸಪತಿಶ್ಚ ಜಾತಾ ॥150॥
ಜೀವೋತ್ತಮನಾದ ಭೀಮಸೇನ ತನ್ನ ಪ್ರತಿಜ್ಞೆಯನ್ನು ಲೋಕದ ಮಧ್ಯದಲ್ಲಿ ಸತ್ಯವಾಗಿಸಿ ಈ ಮಾತನ್ನು ಆಡಿದ: `ಯಾವ ಸ್ತ್ರೀಯರು ಹಿಂದೆ ಪತಿಯುಕ್ತ ರು ಆಗಿದ್ದರೋ ಅವರಿಂದು ಪತಿರಹಿತರಾದರು. ಯಾವಳು ಹಿಂದೆ ಪತಿರಹಿತಳೆನಿಸಿ ದ್ದಳೋ ಅವಳು ಇಂದು ಪತಿಯುಕ್ತಳೆನಿಸಿಕೊಂಡಳು'
ಪಶ್ಯಂತು ಚಿತ್ರಾಂ ಪರಮಸ್ಯ ಶಕ್ತಿಂ
ಯೇ ವೈ ತಿಲಾಃ ಷಂಢತಿಲಾ ಬಭೂವುಃ |
ಏನಂ ಗೃಹೀತಂ ಚ ಮಯಾ ಯದೀಹ
ಕಶ್ಚಿತ್ ಪುಮಾನ್ ಮೋಚಯತು ಸ್ವವೀರ್ಯಾತ್ ॥151॥
ಸರ್ವೋತ್ತಮನ ವಿಚಿತ್ರ ಶಕ್ತಿಯನ್ನು ಕಾಣಿರಿ. ಯಾರು ಹಿಂದೆ ಗಟ್ಟಿ ಎಳ್ಳು ಕಾಳೆನಿಸಿದ್ದರೋ ಅವರು ಈಗ ಜೊಳ್ಳುಕಾಳು ಎನಿಸಿದ್ದಾರೆ. ಯಾರು ಹಿಂದೆ ಜೊಳ್ಳುಕಾಳು ಎನಿಸಿದ್ದರೋ ಅವರು ಈಗ ಗಟ್ಟಿ ಕಾಳುಗಳೆನಿಸಿದ್ದಾರೆ. ಜೊಳ್ಳು ಎಳ್ಳೆನಿಸಿದ್ದ ನಾನೀಗ ದುಃಶಾಸನನನ್ನು ಹಿಡಿದುಕೊಂಡಿದ್ದೇನೆ. ಗಟ್ಟಿ ಎಳ್ಳು, ಗಂಡು ಮನುಷ್ಯ ಯಾರಾದರೂ ಇರುವುದಾದರೆ ತನ್ನ ಪರಾಕ್ರಮದಿಂದ ಈತನನ್ನು ಬಿಡಿಸಿಕೊಳ್ಳಲಿ.
ಇತಿ ಬ್ರುವಾಣಃ ಪುನರೇವ ರಕ್ತಂ
ಪಪೌ ಸುಧಾಂ ದೇವವರೋ ಯಥಾ ದಿವಿ |
ಪುನಶ್ಚ ಸಪ್ರಾಣಮಮುಂ ವಿಸೃಜ್ಯ
ನದನ್ ನನರ್ತಾರಿಬಲೇ ನಿರಾಯುಧಃ ॥152॥
ಹೀಗೆ ಹೇಳುತ್ತ ಸ್ವರ್ಗಲೋಕದಲ್ಲಿ ದೇವೇಂದ್ರ ಅಮೃತಪಾನ ಮಾಡುವಂತೆ ಭೀಮ ಪುನಃ ಪುನಃ ರಕ್ತಪಾನ ಮಾಡಿದ. ಇನ್ನೂ ಉಸಿರಾಡುತ್ತಲೆ ಇದ್ದ ದುಃಶಾಸನನನ್ನು ಬಿಟ್ಟು ನಿರಾಯುಧನಾಗಿ ಸಿಂಹನಾದ ಮಾಡುತ್ತ ಶತ್ರುಸೈನ್ಯದ ನಡುವೆ ಕುಣಿದಾಡಿದ.
ಪ್ರತ್ಯನೃತ್ಯನ್ ಪುರಾ ಯೇಽಸ್ಮಾನ್ ಪುನರ್ಗೌರಿತಿ ಗೌರಿತಿ |

ತಾನ್ ವಯಂ ಪ್ರತಿನೃತ್ಯಾಮಃ ಪುನರ್ಗೌರಿತಿ ಗೌರಿತಿ ॥153॥
ಹಿಂದೆ ಯಾರು ನಮ್ಮನ್ನು ಗೂಳಿ ಗೂಳಿ ಎಂದು ಮತ್ತೆ ಮತ್ತೆ ಅಣಕಿಸಿ ಕುಣಿದರೋ ಅವರನ್ನು ಈಗ ನಾವು ಗೂಳಿ ಗೂಳಿ ಎಂದು ಮತ್ತೆ ಮತ್ತೆ ಅಣಕಿಸಿ ಕುಣಿದಾಡುವೆವು.
ಇತಿ ಬ್ರುವನ್ ನೃತ್ಯಮಾನೋಽರಿಮಧ್ಯ
ಆಸ್ಫೋಟಯನ್ ಶತ್ರುಗಣಾನಜೋಹವೀತ್ ।
ಶಶಾಕ ಚ ದ್ರಷ್ಟುಮಮುಂ ನ ಕಶ್ಚಿದ್
ವೈಕರ್ತನದ್ರೌಣಿಸುಯೋಧನಾದಿಷು ॥154॥
ಹೀಗೆ ಹೇಳುತ್ತ ಶತ್ರುಗಳ ನಡುವೆ ಕುಣಿದಾಡುತ್ತ ತೊಡೆ ತಟ್ಟಿಕೊಳ್ಳುತ್ತ ಭೀಮಸೇನ ಶತ್ರುಸಮೂಹಗಳನ್ನು ಯುದ್ಧಕ್ಕೆ ಕರೆದ. ಕರ್ಣ ಅಶ್ವತ್ಥಾಮ ದುರ್ಯೋಧನ ಮುಂತಾದವರಲ್ಲಿ ಯಾವನೊಬ್ಬನೂ ಭೀಮನನ್ನು ನೋಡಲೂ ಶಕ್ತನಾಗಲಿಲ್ಲ.
ಭಯಾಚ್ಚ ಕರ್ಣಸ್ಯ ಪಪಾತ ಕಾರ್ಮುಕಂ
ನಿಮೀಲಯಾಮಾಸ ತದಾಽಕ್ಷಿಣೀ ಚ ।
ಸಂಬೋಧಿತೋ ಮದ್ರರಾಜೇನ ಯುದ್ಧೇ
ಸ್ಥಿತಃ ಕಥಂಚಿತ್ ಸ ತು ಪಾರ್ಥಭಾಗಃ ॥155॥
ಆಗ ಭಯದಿಂದ ಕರ್ಣನ ಬಿಲ್ಲು ಬಿದ್ದಿತು. ಆತ ಕಣ್ಣುಗಳನ್ನು ಮುಚ್ಚಿಕೊಂಡ. ಶಲ್ಯ ಎಚ್ಚರಿಸಿದಾಗ ಅರ್ಜುನನ ಪಾಲಿಗೆ ಎಂದೇ ಮೀಸಲಾಗಿದ್ದ ಕರ್ಣ ಬಲು ಕಷ್ಟದಿಂದ ಯುದ್ಧದಲ್ಲಿ ಸ್ಥಿರನಾಗಿ ನಿಂತ.
ದ್ರೌಣಿರ್ವಿಹಾಯೈನಮಪಾಜಗಾಮ
ದೂರಂ ತದಾ ಭೀಮಸೇನೋ ಜಗಾದ ।
ಪೀತಃ ಸೋಮೋ ಯುದ್ಧಯಜ್ಞೇ ಮಯಾಽದ್ಯ
ವಧ್ಯಃ ಪಶುರ್ಮೇ ಹರಯೇ ಸುಯೋಧನಃ ॥156॥
ಅಶ್ವತ್ಥಾಮ ಭೀಮನನ್ನು ಬಿಟ್ಟೇ ದೂರ ನಡೆದ. ಆಗ ಭೀಮ ನುಡಿದ, `ಯುದ್ಧ ಯಜ್ಞದಲ್ಲಿ ಸೋಮಪಾನ ಮಾಡಿದ್ದೇನೆ. ಇನ್ನು ಶ್ರೀಹರಿಗಾಗಿ ದುರ್ಯೋಧನನೆಂಬ ಪಶುವನ್ನು ನಾನು ಕೊಲ್ಲಬೇಕು.'
ಇತಿ ಬ್ರುವನ್ ಮೃತಮುತ್ಸೃಜ್ಯ ಶತ್ರುಂ
ದುರ್ಯೋಧನಂ ಚಾಶು ರುಷಾಽಭಿದುದ್ರುವೇ ।
ಆಯಾಂತಮೀಕ್ಷ್ಯೈವ ತಮುಗ್ರಪೌರುಷಂ
ದುದ್ರಾವ ಭೀತಃ ಸ ಸುಯೋಧನೋ ಭೃಶಮ್ ॥157॥
ಹೀಗೆ ಹೇಳುತ್ತ ಭೀಮ ಮೃತನಾದ ದುಃಶಾಸನನನ್ನು ಬಿಟ್ಟು ದುರ್ಯೋಧನ ನನ್ನು ಬೇಗನೆ ಕೋಪದಿಂದ ಬೆನ್ನಟ್ಟಿದ. ಭಯಂಕರ ಪೌರುಷಶಾಲಿಯಾದ ಆ ಭೀಮ ಬರುವುದನ್ನು ಕಂಡೇ ದುರ್ಯೋಧನ ಬಲುಭೀತನಾಗಿ ಪಲಾಯನ ಮಾಡಿದ.
ಬಲದ್ವಯಂ ಚಾಪಯಯೌ ವಿಹಾಯ
ಭಯಾದ್ ಭೀಮಂ ಕೃಷ್ಣಪಾರ್ಥೌ ವಿನೈವ ।
ಆಯೋಧನಂ ಶೂನ್ಯಮಭೂನ್ಮುಹೂರ್ತಂ
ನನರ್ತ ಭೀಮೋ ವ್ಯಾಘ್ರಪದೇನ ಹರ್ಷಾತ್ ॥158॥
ಕೃಷ್ಣಾರ್ಜುನರ ಹೊರತು ಎರಡೂ ಸೈನ್ಯ ಭಯದಿಂದ ಭೀಮನನ್ನು ಬಿಟ್ಟು ಪಲಾಯನ ಮಾಡಿತು. ಒಂದು ಮುಹೂರ್ತಕಾಲ ರಣರಂಗ ಶೂನ್ಯವಾಯಿತು. ಭೀಮ ಆನಂದದಿಂದ ಎರಡೂ ಕೈಗಳನ್ನು ನೆಲಕ್ಕೆ ಊರಿ ಹುಲಿಯಂತೆ ಹೆಜ್ಜೆ ಹಾಕುತ್ತ ಕುಣಿದ.
ಸಂಕಲ್ಪ್ಯ ಶತ್ರೂನ್ ಗೋವದೇವಾಜಿಮಧ್ಯೇ
ಶಾರ್ದೂಲವತ್ ತಚ್ಚರಿತಂ ನಿಶಾಮ್ಯ ।
ಜಹಾಸ ಕೃಷ್ಣಶ್ಚ ಧನಂಜಯಶ್ಚ
ಶಶಂಸತುಶ್ಚೈನಮತಿಪ್ರಹೃಷ್ಟೌ ॥159॥
ಭೀಮ ರಣರಂಗದ ನಡುವೆ ಶತ್ರುಗಳನ್ನು ಪಶುಗಳಂತೆ ಭಾವಿಸಿ ಹುಲಿಯಂತೆ ಕುಣಿದುದನ್ನು ಕಂಡು ಕೃಷ್ಣ ನಕ್ಕ. ಅರ್ಜುನನೂ ನಕ್ಕ. ಇಬ್ಬರೂ ಬಹಳ ಸಂತುಷ್ಟರಾಗಿ ಭೀಮನನ್ನು ಹೊಗಳಿದರು.

## ಎಂಬತ್ತನೆಯ ಅಧ್ಯಾಯ

ಭೀಮನಿಂದ ದುಃಶಾಸನನ ರಕ್ತಪಾನ. ಯುಧಾಮನ್ಯು ಚಿತ್ರಸೇನನನ್ನು ವಧಿಸಿದ.
ಸಂಜಯಃ
ತತ್ರಾಕರೋದ್ ದುಷ್ಕರಂ ರಾಜಪುತ್ರೋ
ದುಃಶಾಸನಸ್ತುಮುಲೇ ಯುಧ್ಯಮಾನಃ ।
ಚಿಚ್ಛೇದ ಭೀಮಸ್ಯ ಧನುಃ ಕ್ಷುರೇಣ
ಷಡ್ಭಿಃ ಶರೈಃ ಸಾರಥಿಮಪ್ಯವಿಧ್ಯತ್ ॥1॥
ಸಂಜಯ ನುಡಿದ– ರಾಜಕುಮಾರ ದುಃಶಾಸನನು ದೊಡ್ಡ ಯುದ್ಧದಲ್ಲಿ ಹೋರಾಡುತ್ತ ದುಷ್ಕರವಾದ ಕರ್ಮವನ್ನು ಮಾಡಿದ. ಭೀಮನ ಧನುಸ್ಸನ್ನು ಕ್ಷುರದಿಂದ ಕಡಿದ. ಆರು ಬಾಣಗಳಿಂದ ಸಾರಥಿಯನ್ನು ಹೊಡೆದ.
ತತಃ ಕ್ರುದ್ಧೋ ಭೀಮಸೇನಸ್ತರಸ್ವೀ

ಶಕ್ತಿಂ ಚೋಗ್ರಾಂ ಪ್ರಾಹಿಣೋತ್ ತೇ ಸುತಾಯ |
ತಾಮಾಪತಂತೀಂ ಸಹಸಾತಿಘೋರಾಂ
ದೃಷ್ಟ್ವಾ ಸುತಸ್ತೇ ಜ್ವಲಿತಾಮಿವೋಲ್ಕಾಂ ॥2॥
ಆಕರ್ಣಪೂರ್ಣೈರಿಷುಭಿರ್ಮಹಾತ್ಮಾ
ಚಿಚ್ಛೇದ ಪುತ್ರೋ ದಶಭಿಃ ಪೃಷತ್ಕೈಃ |
ದೃಷ್ಟ್ವಾ ತು ತತ್ಕರ್ಮ ಕೃತಂ ಸುದುಷ್ಕರಂ
ಪ್ರಾಪೂಜಯನ್ ಸರ್ವಯೋಧಾಃ ಪ್ರಹೃಷ್ಟಾಃ ॥3॥
ಕ್ರುದ್ಧನಾದ ಭೀಮಸೇನ ಭಯಂಕರ ಶಕ್ತ್ಯಾಯುಧವನ್ನು ದುಃಶಾಸನನಿಗೆ ಎಸೆದ. ಉಲ್ಕೆಯಂತೆ ಜ್ವಲಿಸುತ್ತ ಅತಿಘೋರವಾದ ಆ ಶಕ್ತಿ ಬರುತ್ತಿದ್ದುದನ್ನು ಕಂಡು ದುಃಶಾಸನನು ಕಿವಿವರೆಗೆ ಹೆದೆಯನ್ನೆಳೆದು ಎಸೆದ ಹತ್ತು ಬಾಣಗಳಿಂದ ಪುಡಿಗೈದ. ಆ ದುಷ್ಕರವಾದ ಕರ್ಮವನ್ನು ಕಂಡು ಎಲ್ಲ ಯೋಧರೂ ಬಲು ಹರ್ಷಗೊಂಡು ಪ್ರಶಂಸೆ ಮಾಡಿದರು.
ಅಥಾಶು ಭೀಮಂ ಚ ಶರೇಣ ಭೂಯೋ
ಗಾಢಂ ಸ ವಿವ್ಯಾಧ ಸುತಸ್ತ್ವದೀಯಃ |
ಚುಕ್ರೋಧ ಭೀಮಃ ಪುನರಾಶು ತಸ್ಮೈ
ಭೃಶಂ ಪ್ರಜಜ್ವಾಲ ರುಷಾಭಿವೀಕ್ಷ್ಯ ॥4॥
ಬಳಿಕ ದುಃಶಾಸನನು ಪುನಃ ಬಾಣದಿಂದ ಭೀಮನನ್ನು ಚೆನ್ನಾಗಿ ಹೊಡೆದ. ಭೀಮ ಅದಕ್ಕೆ ಪುನಃ ಕ್ರುದ್ಧನಾದ. ಕೋಪದಿಂದ ದಿಟ್ಟಿಸಿ ನೋಡಿ ಬಹಳವಾಗಿ ಜ್ವಲಿಸಿದ.
ವಿದ್ಧೋಽಸ್ಮಿ ವೀರಾಶು ಭೃಶಂ ತ್ವಯಾದ್ಯ
ಸಹಸ್ವ ಭೂಯೋಽಪಿ ಗದಾಪ್ರಹಾರಂ |
ಉಕ್ತ್ವೈವಮುಚ್ಚೈಃ ಕುಪಿತೋಽಥ ಭೀಮೋ
ಜಗ್ರಾಹ ತಾಂ ಭೀಮಗದಾಂ ವಧಾಯ ॥5॥
ನೀನೀಗ ನನ್ನನ್ನು ಚೆನ್ನಾಗಿ ಹೊಡೆದಿರುವೆ. ಅದಕ್ಕೆ ನನ್ನ ಗದಾಪ್ರಹಾರವನ್ನು ಸಹಿಸಿಕೊ. ಹೀಗೆ ಹೇಳಿ ಭೀಮಸೇನ ಬಲುಕುಪಿತನಾಗಿ ದುಃಶಾಸನನ ವಧೆಗಾಗಿ ಭಯಂಕರವಾದ ಗದೆಯನ್ನು ಎತ್ತಿಕೊಂಡ.
ಉವಾಚ ಚಾದ್ಯಾಹಮಹೋ ದುರಾತ್ಮನ್
ಪಾಸ್ಯಾಮಿ ತೇ ಶೋಣಿತಮಾಜಿಮಧ್ಯೇ |
ಅಥೈವಮುಕ್ತಸ್ತನಯಸ್ತವೋಗ್ರಾಂ
ಶಕ್ತಿಂ ವೇಗಾತ್ ಪ್ರಾಹಿಣೋನ್ಮೃತ್ಯುರೂಪಾಮ್ ॥6॥
`ದುರಾತ್ಮನೆ, ರಣರಂಗಮಧ್ಯದಲ್ಲಿ ನಾನೀಗ ನಿನ್ನ ನೆತ್ತರನ್ನು ಕುಡಿವೆ' ಎಂದು ಭೀಮ ನುಡಿದ. ದುಃಶಾಸನನು ಮೃತ್ಯುವಿನಂತಿರುವ ಘೋರವಾದ ಶಕ್ತಿಯನ್ನು ಭೀಮನಿಗೆ ವೇಗದಿಂದ ಎಸೆದ.
ಆವಿಧ್ಯ ಭೀಮೋಽಪಿ ಗದಾಂ ಸುಘೋರಾಂ
ವಿಚಿಕ್ಷಿಪೇ ರೋಷಪರೀತಮೂರ್ತಿಃ |
ಸಾ ತಸ್ಯ ಶಕ್ತಿಂ ಸಹಸಾ ವಿರುಜ್ಯ
ಪುತ್ರಂ ತವಾಜೌ ತಾಡಯಾಮಾಸ ಮೂರ್ಧ್ನಿ ॥7॥
ಭೀಮನು ಘೋರವಾದ ಗದೆಯನ್ನು ತಿರುಗಿಸಿ, ಮೈಯೆಲ್ಲ ರೋಷದಿಂದ ತುಂಬಿಕೊಂಡು, ದುಃಶಾಸನನ ಮೇಲೆ ಗದೆಯನ್ನು ಎಸೆದ. ಅದು ಒಡನೆ ಆ ಶಕ್ತಿಯನ್ನು ಮುರಿದು, ದುಃಶಾಸನನ ತಲೆಯ ಮೇಲೆ ಹೊಡೆಯಿತು.
ನಿಪಾತಯಿತ್ವಾ ಪೃಥಿವೀತಲೇ ಭೃಶಂ
ಸಂತಾಡಯಾಮಾಸ ಬಲೀ ವೃಕೋದರಃ |
ಅತೀವ ಸಂತಾಡಿತಭಿನ್ನಗಾತ್ರೋ
ದುಃಶಾಸನೋ ವೈ ನಿಪಪಾತ ಭೂಮೌ ॥8॥
ದುಃಶಾಸನನನ್ನು ನೆಲದ ಮೇಲೆ ಕೆಡಹಿ ಚೆನ್ನಾಗಿ ಗದೆಯಿಂದ ಹೊಡೆದ, ಬಲಿಷ್ಠನಾದ ಭೀಮ. ದುಃಶಾಸನನು ಹೀಗೆ ಮೈಯೆಲ್ಲ ಅತಿಯಾಗಿ ಹೊಡೆಸಿಕೊಂಡು ನೆಲದಲ್ಲಿ ಬಿದ್ದ.
ಆಕ್ರಮ್ಯ ಕಂಠೇ ಯುಧಿ ರಾಜಪುತ್ರಂ
ಸಂರಕ್ತನೇತ್ರೋ ಹ್ಯಬ್ರುವೀದ್ ಧಾರ್ತರಾಷ್ಟ್ರಮ್ |
ತದ್ ಬ್ರೂಹಿ ಕಿಂ ತ್ವಂ ಪರಿಮಾರ್ಗಮಾಣೋ
ಹ್ಯಸ್ಮಾನ್ ಪರಾಭೂಯ ಇಹಾಗತಃ ಪುನಃ ॥9॥
ಭೀಮಸೇನ ರಣರಂಗದಲ್ಲಿ ದುಃಶಾಸನನ ಗಂಟಲನ್ನು ಕಾಲುಗಳಿಂದ ಒತ್ತಿಹಿಡಿದು, ಕಣ್ಣು ಕೆಂಪು ಮಾಡಿಕೊಂಡು, ಅವನನ್ನು ಕೇಳಿದ, `ಹೇಳು, ನಮ್ಮನ್ನು ಇಂದಿನವರೆಗೆ ಬಹುಕಾಲ ಪೀಡಿಸಿ, ಇದೀಗ ನಮ್ಮನ್ನು ಹುಡುಕುತ್ತ ಪುನಃ ಇಲ್ಲಿಗೆ ಬಂದಿರುವೆ ಏನು?'
ತದಿದಮದ್ಯ ಭೃಶಸಂಭೃತಂ ಮೇ
ಚಿರಾರ್ಜಿತಂ ರೋಷಮಾದೀಪಯತ್ತತ್ |
ಮಧು ಪ್ರಪಾಸ್ಯೇ ತವ ಕೋಷ್ಠಭಾಜನಾದ್
ಇತ್ಯಬ್ರುವೀದ್ ಭೀಮಸೇನಸ್ತರಸ್ವೀ ॥10॥

`ಈಗ ನಮ್ಮ ಬಳಿಗೆ ನೀನು ಬಂದುದು, ಬಹುಕಾಲದಿಂದ ನಾವು ನಮ್ಮೊಳಗೆ ಸಂಗ್ರಹಿಸಿ, ಬೆಳೆಸಿ, ಇಟ್ಟುಕೊಂಡಿದ್ದ ರೋಷವನ್ನು ಭುಗಿಲೆಬ್ಬಿಸಿದೆ. ಅದರಿಂದ ಮಧುಪಾತ್ರೆಯಂತಿರುವ ನಿನ್ನೆದೆಯಿಂದ ಮಧುವಿನಂತೆ ಸವಿಯಾದ, ನೆತ್ತರನ್ನು ನಾನೀಗ ಪಾನ ಮಾಡುವೆನು' ಎಂದ ಬಲಭೀಮ.
ತಂ ಪಾತಯಿತ್ವಾಥ ವೃಕೋದರೋಽಯಂ
ಜಗರ್ಜ ಹರ್ಷೇಣ ವಿನಾದಯನ್ ದಿಶಃ |
ನಾದೇನ ತೇನಾಖಿಲ ಪಾರ್ಶ್ವವರ್ತಿನೋ
ಮೂರ್ಛಾಕುಲಾಃ ಪತಿತಾಸ್ತತ್ರಜಮೀಢ ॥11॥
ವೃಕೋದರನು ದುಃಶಾಸನನನ್ನು ಕೆಡಹಿ ಹರ್ಷದಿಂದ ದಿಕ್ಕುಗಳು ಪ್ರತಿ ಧ್ವನಿಸುವಂತೆ ಸಿಂಹನಾದ ಗೈದ. ರಾಜನೆ, ಆ ಧ್ವನಿಯಿಂದ ಪಾರ್ಶ್ವಗಳಲ್ಲಿದ್ದವ ರೆಲ್ಲರೂ ಮೂರ್ಛೆಗೊಂಡು ಬಿದ್ದರು.
ದಿಷ್ಟ್ಯಾಸಿ ದುಃಶಾಸನ ಅದ್ಯದೃಷ್ಟ
ಋಣಂ ಪ್ರತೀಚ್ಛೇಃ ಸಹವೃದ್ಧಿಮೂಲಮ್ |
ಚಿರೋದ್ಯತಂ ತಂ ಯನ್ಮಯಾ ತೇ ಸಭಾಯಾಂ
ಕೃಷ್ಣಾಭಿಮರ್ಶೇನ ಗೃಹಾಣ ಮತ್ತಃ ॥12॥
`ದುಃಶಾಸನ, ನೀನೀಗ ಅದೃಷ್ಟವಶದಿಂದ ನನ್ನ ಕಣ್ಣಿಗೆ ಬಿದ್ದಿರುವೆ. ನಾನು ನಿಮ್ಮ ಋಣವನ್ನು ತೀರಿಸುತ್ತೇನೆ. ಬಡ್ಡಿಸಮೇತ ಅಸಲನ್ನು ಕೊಡುತ್ತಿದ್ದೇನೆ. ಬಹು ಹಿಂದೆ ಸಭೆಯಲ್ಲಿ ದ್ರೌಪದಿಯನ್ನು ಎಳೆದುತಂದುದರ ಋಣವನ್ನು ನಾನು ನಿನ್ನಿಂದ ಪಡೆದಿದ್ದೆ. ಈಗ ನನ್ನಿಂದ ಸ್ವೀಕರಿಸು.'
ಸ ಏವಮುಕ್ತಸ್ತು ತತೋ ಮಹಾತ್ಮಾ
ದುಃಶಾಸನೋ ವಾಕ್ಯಮುವಾಚ ವೀರಃ |
ಸರ್ವಂ ಸ್ಮರೇ ನೈವ ಚ ವಿಸ್ಮರಾಮಿ
ಉದೀರ್ಯಮಾಣಂ ಶೃಣು ಭೀಮಸೇನ ॥13॥
ಭೀಮ ಹೀಗೆ ಹೇಳಿದಾಗ ಮಹಾತ್ಮ ವೀರ ದುಃಶಾಸನನು ನುಡಿದ, `ಎಲ್ಲವನ್ನೂ ಸ್ಮರಿಸುವೆನು, ಸರ್ವಥಾ ಮರೆಯಲಾರೆ. ಅದನ್ನು ನಾನು ಹೇಳುತ್ತೇನೆ, ಕೇಳು ಭೀಮಸೇನ !
ಸ್ಮರಾಮಿ ಚಾತ್ಮಪ್ರಭವಂ ಚಿರಾಯ
ಯಜ್ಜಾತುಷೇ ವೇಶ್ಮನಿ ರಾತ್ರಹಾನಿ |
ವಿಶ್ವಾಸಹೀನಾ ಮೃಗಯಾಂ ಚರಂತೋ
ವಸಂತಿ ಸರ್ವತ್ರ ನಿರಾಕೃತಾಸ್ತು ॥14॥
`ಅರಗಿನ ಮನೆಯಲ್ಲಿ ನಾವು ನಿಮ್ಮನ್ನು ಸುಡಿಸಿದ್ದನ್ನು ನಮ್ಮಿಂದಾದ ಕೃತ್ಯವೆಂದೇ ನಾನು ಸ್ಮರಿಸುತ್ತೇನೆ. ಬಳಿಕ ನೀವು ರಾತ್ರಿಹಗಲು ರಾಜ್ಯ ಸಂಪಾದನೆಯಲ್ಲಿ ವಿಶ್ವಾಸ ಕಳೆದುಕೊಂಡು ಬೇಟೆಯಾಡುತ್ತ ವನವಾಸ ಮಾಡಿದಿರಿ. ಎಲ್ಲಿಯೂ ನಿಮಗೆ ಆಶ್ರಯ ನೀಡಲು ಜನರು ನಿರಾಕರಿಸಿದರು.
ಮಹಾಭಯಂ ರಾತ್ರಹನೀ ಸ್ಮರಂತ-
ಸ್ತಥೋಪಭೋಗಾಚ್ಚ ಸುಖಾಚ್ಚ ಹೀನಾಃ |
ವನೇಷ್ವಟಂತೋ ಗಿರಿಗಹ್ವರಾಣಿ
ಪಾಂಚಾಲರಾಜಸ್ಯ ಪುರಂ ಪ್ರವಿಷ್ಟಾಃ ॥15॥
`ರಾತ್ರಿಹಗಲು ಮಹಾಭಯವನ್ನೇ ಚಿಂತಿಸುತ್ತ ಎಲ್ಲ ಸುಖಭೋಗಗಳಿಂದ ವಂಚಿತರಾಗಿ ಕಾಡಿನಲ್ಲಿ, ಬೆಟ್ಟಗವಿಗಳಲ್ಲಿ, ಸಂಚರಿಸುತ್ತ ಪಾಂಚಾಲರಾಜನ ಪಟ್ಟಣವನ್ನು ನೀವು ಹೊಕ್ಕಿದಿರಿ.
ಮಾಯಾಂ ಯೂಯಂ ಕಾಮಪಿ ಸಂಪ್ರವಿಷ್ಟಾ
ಯತೋ ವೃತಃ ಕೃಷ್ಣಯಾ ಫಲ್ಗುನೋ ವಃ |
ಸಂಭೂಯ ಪಾಪೈಸ್ತದನಾರ್ಯವೃತ್ತಂ
ಕೃತಂ ತದಾ ಮಾತೃಕೃತಾನುರೂಪಮ್ ॥16॥
`ನೀವು ಯಾವುದೋ ಒಂದು ವ್ಯಾಮೋಹದಲ್ಲಿ ಸಿಲುಕಿದಿರಿ. ಏಕೆಂದರೆ ನಿಮ್ಮಲ್ಲಿ ಅರ್ಜುನನನ್ನೊಬ್ಬನನ್ನು ದ್ರೌಪದಿ ವರಿಸಿದರೆ ನೀವೆಲ್ಲರೂ ಪಾಪಿಗಳು ಅವಳೊಡನೆ ಕೂಡಿದಿರಿ. ನಿಮ್ಮ ತಾಯಿ ಏನು ಮಾಡಿದ್ದಳೊ ಅದಕ್ಕೆ ಅನುರೂಪವಾಗಿ ಮಕ್ಕಳು ನೀವು ಅದೇ ದುರಾಚಾರವನ್ನೇ ಮಾಡಿದಿರಿ.
ನಿಮ್ಮ ತಾಯಿಯನ್ನು ಯಮ ವಾಯು ಮುಂತಾದವರು ಅನೇಕರು ಕೂಡಿದರು. ದ್ರೌಪದಿಯನ್ನು ನೀವೂ ಅನೇಕರು ಕೂಡಿರುವಿರಿ.
ಏಕಾ ವೃತಾ ಪಂಚಭಿಃ ಸಾಭಿಪನ್ನಾ
ಹ್ಯಲಜ್ಜಮಾನೈಶ್ಚ ಪರಸ್ಪರಸ್ಯ
ಸ್ಮರೇ ಸಭಾಯಾಂ ಸುಬಲಾತ್ಮಜೇನ
ದಾಸೀಕೃತಾಃ ಸ್ಥ ಸಹ ಕೃಷ್ಣಯಾ ತು ॥17॥
`ದ್ರೌಪದಿಯು ಒಬ್ಬನನ್ನು ವರಿಸಿದರೆ ನೀವು ಐವರು ಅವಳನ್ನು ಕೂಡಿದಿರಿ. ಪರಸ್ಪರ ಲಜ್ಜೆಯ ಭಾವನೆಯನ್ನೇ ಬಿಟ್ಟಿರಿ. ದ್ಯೂತಸಭೆಯಲ್ಲಿ ಶಕುನಿ ದ್ರೌಪದೀಸಮೇತ ನಿಮ್ಮೆಲ್ಲರನ್ನೂ ದಾಸರನ್ನಾಗಿ ಮಾಡಿದ್ದನ್ನೂ ನೆನಪಿಸಿ ಕೊಳ್ಳುತ್ತೇನೆ.'
ತೇನೈವಮುಕ್ತಸ್ತು ತವಾತ್ಮಜೇನ

ಸುಬಾಲಚಿತ್ತೇನ ವೃಕೋದರೋಽಪಿ |
ಪ್ರಗೃಹ್ಯ ಚಾಪಂ ಭ್ರುಕುಟಿಂ ಲಲಾಟೇ
ಪಾಂಡೋಃ ಸುತಃ ಕೋಪವಶಂ ಜಗಾಮ ॥18॥
ನಿನ್ನ ಮಗ ದುಃಶಾಸನನು ಅಜ್ಞಬಾಲಕನ ಬುದ್ಧಿಯಿಂದ ಹೀಗೆ ಹೇಳಿದಾಗ ವೃಕೋದರನು ಹಣೆಯಲ್ಲಿ ಹುಬ್ಬನ್ನು ಬಿಲ್ಲಿನಂತೆ ಬಾಗಿಸಿಕೊಂಡು ಕೋಪಾವಿಷ್ಟನಾದ.
ತಸ್ಮಿನ್ ಸುಘೋರೇ ತುಮುಲೇ ವರ್ತಮಾನೇ
ಪ್ರಧಾನಭೂಯಿಷ್ಠತರೈಃ ಸಮಂತಾತ್ |
ದುಃಶಾಸನಂ ತತ್ರ ಸಮೀಕ್ಷ ್ಯ ರಾಜನ್
ಭೀಮೋ ಮಹಾಬಾಹುರಚಿಂತ್ಯಕರ್ಮಾ ॥19॥
ಸ್ಮ ೃತ್ವಾಥ ಕೇಶಗ್ರಹಣಂ ಚ ದೇವ್ಯಾ
ವಸ್ತ್ರಾಪಹಾರಂ ಚ ರಜಸ್ವಲಾಯಾಃ |
ಅನಾಗಸೋ ಭರ್ತೃಪರಾಙ್ಮುಖಾಯಾ
ದುಃಖಾನಿ ದತ್ತಾನ್ಯಪಿ ವಿಪ್ರಚಿಂತ್ಯ ॥20॥
ಜಜ್ವಾಲ ಕ್ರೋಧಾದಥ ಭೀಮಸೇನ
ಆಜ್ಯಪ್ರಸಿಕ್ತೋ ಹಿ ಯಥಾ ಹುತಾಶಃ |
ತತ್ರಾಹ ಕರ್ಣಂ ಚ ಸುಯೋಧನಂ ಚ
ಕೃಪಂ ದ್ರೌಣಿಂ ಕೃತವರ್ಮಾಣಮೇವ ॥21॥
ರಾಜನೆ, ಹೆಚ್ಚಾಗಿ ಪ್ರಧಾನವೀರರಿಂದಲೇ ಎಲ್ಲೆಡೆ ನಡೆದ ಭೀಕರವಾದ ಕದನದಲ್ಲಿ ಅಚಿಂತ್ಯಕರ್ಮವನ್ನೇ ಮಾಡುವ ಮಹಾಬಾಹುವಾದ ಭೀಮನು ದುಃಶಾಸನನನ್ನು ದಿಟ್ಟಿಸಿ ನೋಡಿ, ರಜಸ್ವಲೆಯಾಗಿದ್ದ ದೇವಿಯ ಕೇಶಗ್ರಹಣ, ವಸ್ತ್ರಾಪಹಾರ, ಆ ಸಮಯದಲ್ಲಿ ಅಸಹಾಯಕತೆಯಿಂದ ಪತಿಗಳೈವರೂ ಅವಳಿಂದ ಪರಾಙ್ಮುಖರಾಗಿ ಕುಳಿತಿರುವಂತೆ ಮಾಡಿದ್ದು, ನಾನಾ ದುಃಖಗಳನ್ನು ಕೊಟ್ಟಿದ್ದು ಇವೆಲ್ಲವನ್ನೂ ನೆನೆದು, ಆಜ್ಯಾಹುತಿಗೊಂಡ ಅಗ್ನಿಯಂತೆ ಜ್ವಲಿಸಿದ. ಕರ್ಣ ದುರ್ಯೋಧನ ಕೃಪ ಅಶ್ವತ್ಥಾಮ ಕೃತವರ್ಮರನ್ನು ಕುರಿತು ನುಡಿದ.
ನಿಹನ್ಮಿ ದುಃಶಾಸನಮದ್ಯ ಪಾಪಂ
ಸಂರಕ್ಷ ್ಯತಾಮದ್ಯ ಸಮಸ್ತಯೋಧಾಃ |
ಇತ್ಯೇವಮುಕ್ತ್ವಾ ಸಹಸಾಭ್ಯಧಾವತ್
ನಿಹಂತುಕಾಮೋಽತಿಬಲಸ್ತರಸ್ವೀ ॥22॥
`ಪಾಪಿ ದುಃಶಾಸನನನ್ನು ಈಗ ಕೊಲ್ಲುತ್ತಿದ್ದೇನೆ. ಎಲ್ಲ ಯೋಧರೂ ಈಗ ನಿಮ್ಮಲ್ಲಿ ಶಕ್ತಿ ಇರುವುದಾದರೆ ಅವನನ್ನು ರಕ್ಷಿಸಿಕೊಳ್ಳಿ' ಎಂದು ನುಡಿದು ಅತಿ ಬಲವೇಗವುಳ್ಳ ಭೀಮನು ವೇಗದಿಂದ ದುಃಶಾಸನನನ್ನು ಆಕ್ರಮಿಸಿದ.
ತಥಾ ತು ವಿಕ್ರಮ್ಯ ರಣೇ ವೃಕೋದರೋ
ಮಹಾಗಜಂ ಕೇಸರಿಕೋ ಯಥೈವ |
ನಿಗೃಹ್ಯ ದುಃಶಾಸನಮೇಕವೀರಃ
ಸುಯೋಧನಸ್ಯಾಧಿರಥೇಃ ಸಮಕ್ಷಮ್ ॥23॥
ಏಕವೀರನಾದ ಭೀಮನು ಉಗ್ರವೇಗದಿಂದ ರಣದಲ್ಲಿ, ಕಾಡಿನಲ್ಲಿ ಮದ್ದಾನೆ ಯನ್ನು ಸಿಂಹವು ಹಿಡಿದುಕೊಳ್ಳುವಂತೆ, ದುಃಶಾಸನನನ್ನು ದುರ್ಯೋಧನನ, ಕರ್ಣನ ಸಮಕ್ಷಮದಲ್ಲಿಯೇ ಹಿಡಿದುಕೊಂಡ.
ವದಾಸು ಯದ್ ಗೌರಿತಿ ತದ್‌ಬ್ರುವಾಣೋ
ಹೃಷ್ಟಃ ಸಮಂ ಕರ್ಣಸುಯೋಧನಾಭ್ಯಾಮ್ |
ಯೇ ರಾಜಸೂಯಾವಭೃಥೇ ಪವಿತ್ರಾ
ಜಾತಾಃ ಕಚಾ ಯಾಜ್ಞಸೇನ್ಯಾ ದುರಾತ್ಮನ್ ॥
ತೇ ಪಾಣಿನಾ ಕತರೇಣಾವಕೃಷ್ಟಾ-
ಸ್ತದ್ ಬ್ರೂಹಿ ತ್ವಾಂ ಪೃಚ್ಛತಿ ಭೀಮಸೇನಃ ॥24॥
ಭೀಮಸೇನನು ನುಡಿದ– `ದುರಾತ್ಮನೆ, ಹೇಳು, ನೀನು ಅಂದು ಕರ್ಣ ದುರ್ಯೋಧನರೊಂದಿಗೆ ಸೇರಿಕೊಂಡು ಹೃಷ್ಟನಾಗಿ, `ಪಾಂಡವರು ಇನ್ನು ಯಾವ ಕೆಲಸಕ್ಕೂ ಬಾರದವರಾಗಿ ಬೀದಿಬಸವನಂತೆ ಅಲೆಯುತ್ತಾರೆ' ಎಂದು ಹೇಳಿದವನು, ರಾಜಸೂಯಯಾಗದ ಅವಭೃಥಸ್ನಾನದಿಂದ ಪವಿತ್ರವಾಗಿರುವ ದ್ರೌಪದಿಯ ಕೇಶಗಳನ್ನು ನೀನು ಅಂದು ಯಾವ ಕೈಯಿಂದ ಹಿಡಿದೆಳೆದೆ? ಹೇಳು', ಭೀಮಸೇನನು ಪ್ರಶ್ನಿಸುತ್ತಿದ್ದಾನೆ.
ಉಕ್ತಸ್ತಥಾಜೌ ಸ ತದಾ ಸರೋಷಂ
ಜಗಾದ ಭೀಮಂ ಪರಿವೃತ್ಯ ನೇತ್ರೇ ॥
ಅಯಂ ಕರಿಕರಾಕಾರಃ ಪೀನಸ್ತನವಿಮರ್ದನಃ |
ಗೋಸಹಸ್ರಪ್ರದಾತಾ ಚ ಕ್ಷತ್ರಿಯಾಂತಕರಃ ಕರಃ ॥
ಅನೇನ ಯಾಜ್ಞಸೇನ್ಯಾ ಮೇ ಭೀಮ ಕೇಶಾ ವಿಕರ್ಷಿತಾಃ |
ಪಶ್ಯತಾಂ ಕುರುಮುಖ್ಯಾನಾಂ ಯುಷ್ಮಾಕಂ ಚ ಸಭಾಸದಾಮ್ ॥25॥

ಭೀಮಸೇನನು ರಣದಲ್ಲಿ ಹೀಗೆ ಹೇಳಿದಾಗ ದುಃಶಾಸನನು ಕಣ್ಣು ತಿರುಗಿಸುತ್ತ ನುಡಿದ– `ಆನೆಯ ಸೊಂಡಿಲಿನಂಥ ಈ ನನ್ನ ಕೈ ಪೀನಸ್ತನಗಳನ್ನು ಮರ್ದಿಸು ವಂಥದ್ದು. ಸಾವಿರ ಗೋದಾನ ಮಾಡುವಂಥದ್ದು. ಕ್ಷತ್ರಿಯರ ನಾಶ ಮಾಡುವಂಥದ್ದು. ಈ ನನ್ನ ಕೈಯಿಂದ, ಭೀಮನೆ! ನಾನು, ಅಂದು ಕುರುಶ್ರೇಷ್ಠರು ನೀವು ಮತ್ತು ಎಲ್ಲ ಸಭಾಸದರೂ ನೋಡುತ್ತಿದ್ದಂತೆಯೇ ದ್ರೌಪದಿಯ ಕೇಶಗಳನ್ನು ಹಿಡಿದೆಳೆದಿದ್ದೇನೆ.

ಮಮೇಪ್ಸಿತಂ ಚೈವಮನೇನ ಸರ್ವಂ
ಕೃತಂ ಮಯಾ ಯತ್ ಸ್ವಯಮೇವ ಕೃತ್ಯಮ್ |
ಸತ್ಯಾಂ ಪ್ರತಿಜ್ಞಾಂ ಕುರು ಮಾ ನಿರರ್ಥಾಂ
ಸುಜಾತಿಜಾತಾ ನ ವೃಥಾ ವದಂತಿ ॥26॥

ನಾನು ಬಯಸಿದ್ದ ಇದೆಲ್ಲ ಕೃತ್ಯವನ್ನೂ ಸ್ವಯಂ ನಾನೇ ನನ್ನ ಈ ಕೈಯಿಂದಲೇ ಮಾಡಿದ್ದೇನೆ. ನೀನು ನಿನ್ನ ಪ್ರತಿಜ್ಞೆಯನ್ನು ಸತ್ಯವಾಗಿಸು. ನಿರರ್ಥಕಗೊಳಿಸಬೇಡ. ಒಳ್ಳೆಯ ಜನ್ಮದಲ್ಲಿ ಹುಟ್ಟಿದವರು ವ್ಯರ್ಥಪ್ರತಿಜ್ಞೆ ಮಾಡುವುದಿಲ್ಲ.

ಅನ್ಯತ್ ತ್ವಯೋಕ್ತಂ ರುಧಿರಂ ಪಿಬಾಮಿ
ಪಿಬಂತು ಮೇ ಶ್ವಾದಿ ಖಗಾಃ ಸೃಗಾಲಾಃ
ತ್ವಂ ಚೈವಮೇಷಾಂ ತು ಸಮಾನಭೂತೋ
ಮನ್ಯುರ್ನ ಮೇ ತ್ವಸ್ತಿ ಕೃತಾಕೃತಸ್ಯ ॥27॥

ಇನ್ನೊಂದು ಮಾತನ್ನು ನೀನು ನನಗೆ ಹೇಳುತ್ತಿರುವೆ. `ನಿನ್ನ ರಕ್ತವನ್ನು ಪಾನ ಮಾಡುತ್ತೇನೆ' ಎಂದು. ಆದರೆ ನಾಯಿನರಿಹದ್ದುಗಳು ಕೂಡ ನನ್ನ ರಕ್ತವನ್ನು ಪಾನ ಮಾಡುತ್ತವೆ. ಮಾಡಲಿ. ಜೊತೆಗೆ ನೀನು ಕೂಡ ಪಾನ ಮಾಡುವಿಯಾದರೆ ಮಾಡು, ಈ ನಾಯಿನರಿಗಳಿಗೇ ನೀನು ಸಮಾನ. ಅದರಿಂದ, ನೀನು ಪಾನ ಮಾಡು ಇಲ್ಲವೆ ಬಿಡು, ನನಗೇನೂ ಅದರಿಂದ ದುಃಖವಿಲ್ಲ!
ತಾನೇ ನಾಯಿನರಿಗಳಿಗಿಂತ ನೀಚ ! ಮಂತ್ರಪೂರ್ವಕ ಭಕ್ತಿಯಿಂದ ವಿಧ್ಯುಕ್ತವಾದ ರೀತಿಯಿಂದ ಸೋಮಪಾನ ಮಾಡುವ ಜೀವೋತ್ತಮ ಮುಖ್ಯಪ್ರಾಣನನ್ನು ನಾಯಿಗೆ ಸಮನೆನ್ನುತ್ತಾನೆ !

ಏವಂ ಬ್ರುವಾಣಸ್ಯ ತು ಭೀಮಸೇನ
ಉತ್ಪಾಟಯಾಮಾಸ ಭುಜಂ ಮಹಾತ್ಮಾ
ತತಃ ಸ ರಾವಂತಮತೀವ ರುಷ್ಟಃ
ಸಂತಾಡಯಾಮಾಸ ಭುಜೇನ ತೇನ ॥28॥

ದುಃಶಾಸನನು ಹೀಗೆ ಹೇಳುತ್ತಿದ್ದಂತೇ ಭೀಮಸೇನನು ಅವನ ಬಾಹುವನ್ನು ಕಿತ್ತು, ಕೆಟ್ಟ ಮಾತುಗಳನ್ನು ಮತ್ತೆ ಮತ್ತೆ ಆಡುತ್ತಿದ್ದ ಆತನನ್ನು ಅವನ ಆ ಬಾಹುವಿನಿಂದಲೇ ಹೊಡೆದ.

ನಿಗೃಹ್ಯ ಚೈನಂ ಪರಮೇಣ ಕರ್ಮಣಾ
ಉತ್ಕ್ಷಿಪ್ಯ ಚೋತ್ಕ್ಷಿಪ್ಯ ಚ ತೂರ್ಣಮೇನಮ್ |
ಭೂಮೌ ತದಾ ನಿಷ್ಪಿಪೇಷಾಥ ವೀರಃ
ಅಸಿಂ ವಿಕೋಶಂ ವಿಮಲಂ ಚಕಾರ ॥29॥

ನಿನ್ನ ಮಗನಾದ ದುಃಶಾಸನನನ್ನು ಹಿಡಿದು ಎತ್ತಿ ಎತ್ತಿ ನೆಲದ ಮೇಲೆ ಕೆಡವಿ, ತನ್ನ ಪ್ರತಿಜ್ಞೆಯನ್ನು ಸತ್ಯ ಪ್ರತಿಜ್ಞೆಯನ್ನಾಗಿ ಮಾಡಲು ಬಯಸಿದ ಬುದ್ಧಿಶಾಲಿಯಾದ ಭೀಮನು ಕತ್ತಿಯನ್ನು ಒರೆಯಿಂದ ಹೊರಗೆ ತೆಗೆದ.

ಅಸಿಂ ಸಮುದ್ವೃತ್ಯ ಶಿತಂ ಸುಧಾರಂ
ಕಂಠೇ ಸಮಾಕ್ರಮ್ಯ ಚ ವೇಪಮಾನಮ್ |
ಉತ್ಕೃತ್ಯ ವಕ್ಷಃ ಪತಿತಸ್ಯ ಭೂಮಾ-
ವಥಾಪಿಬಚ್ಛೋಣಿತಮಸ್ಯ ಕೋಷ್ಣಮ್ ॥30॥

ಭೀಮನು ಹರಿತವಾದ ಕತ್ತಿಯನ್ನೆತ್ತಿಕೊಂಡು ಕಾಲುಗಳಿಂದ ದುಃಶಾಸನನ ಗಂಟಲನ್ನು ಒತ್ತಿಹಿಡಿದು, ಹೊಟ್ಟೆಯ ಮೇಲೆ ಕುಳಿತು, ಅವನು ನೆಲದಲ್ಲಿ ಒರಗಿ ನಡುಗುತ್ತಿದ್ದಂತೆಯೇ ಎದೆಯನ್ನು ಕತ್ತಿಯಿಂದ ತಿವಿದು ಸೀಳಿ ಬಿಸಿನೆತ್ತರನ್ನು ಪಾನ ಮಾಡಿದ.

ಆಸ್ವಾದ್ಯ ಚಾಸ್ವಾದ್ಯ ಚ ವೀಕ್ಷಮಾಣಃ
ಕ್ರುದ್ಧೋಽತಿವೇಲಂ ಪ್ರಜಗಾದ ವಾಕ್ಯಮ್ ॥31॥

ರಕ್ತವನ್ನು ಪುನಃ ಪುನಃ ಆಸ್ವಾದಿಸಿ ನೋಡುತ್ತ ಅತ್ಯಂತ ಕ್ರುದ್ಧನಾಗಿ ನುಡಿದ.
ಇದು ತೋರಿಕೆಗೆ. ವಸ್ತುತಃ ಭೀಮ ರಕ್ತವನ್ನು ತುಟಿಯಿಂದ ಸ್ಪರ್ಶಿಸಿದನೆ ಹೊರತು ಕುಡಿಯಲಿಲ್ಲ. ಇದನ್ನು ಭೀಮನೆ ಮುಂದೆ, ಗಾಂಧಾರಿಯ ಮುಂದೆ ಹೇಳುತ್ತಾನೆ.

ಸ್ತನ್ಯಸ್ಯ ಮಾತುರ್ಮಧುಸರ್ಪಿಷೋ ವಾ
ಮಾಧ್ವೀಕಪಾನಸ್ಯ ಚ ಸತ್ಕೃತಸ್ಯ |
ದಿವ್ಯಸ್ಯ ವಾ ತೋಯರಸಸ್ಯ ಪಾನಾತ್
ಪಯೋದಧಿಭ್ಯಾಂ ಮಥಿತಾಚ್ಚ ಮುಖ್ಯಾತ್ ॥32॥
ಅನ್ಯಾನಿ ಪಾನಾನಿ ಚ ಯಾನಿ ಲೋಕೇ
ಸುಧಾಮೃತಸ್ವಾದುರಸಾನಿ ತೇಭ್ಯಃ |
ಸರ್ವೇಭ್ಯ ಏವಾಭ್ಯಧಿಕೋ ರಸೋಽಯಂ
ಮತೋ ಮಮಾದ್ಯಾಹಿತಲೋಹಿತಸ್ಯ ॥33॥

ತಾಯಿಯ ಮೊಲೆಹಾಲಿಗಿಂತಲೂ, ಜೇನುತುಪ್ಪಆಕಳತುಪ್ಪಗಳಿಗಿಂತಲೂ ಚೆನ್ನಾಗಿ ದ್ರಾಕ್ಷಾರಸ ಸಿದ್ಧವಾದ ಪಾನೀಯಕ್ಕಿಂತಲೂ ಹಾಲುಮೊಸರು ಕಡೆದುಬರುವ ಮಜ್ಜಿಗೆಗಿಂತಲೂ ಲೋಕದಲ್ಲಿ ಲಭ್ಯವಿರುವ ಸುಧಾಮೃತದಂತೆ ಸ್ವಾದುವಾದ ಪಾನಗಳೆಲ್ಲಕ್ಕಿಂತ ನನಗೆ ಈ ಶತ್ರುರಕ್ತದ ರಸವೆ ಹೆಚ್ಚು ಸವಿಯಾಗಿದೆ.
ಭಕ್ತಿಯಿಂದ ನರಸಿಂಹನನ್ನು `ಯಸ್ತೇ ಮನ್ಯೋ' ಎಂಬ ಮನ್ಯುಸೂಕ್ತದಿಂದ ಸ್ತುತಿಸುತ್ತ `ಇಹ' ಎಂಬ ಸ್ತೋಭಾಕ್ಷರ ಯುಕ್ತವಾದ ಸಾಮಗಾನ ಪೂರ್ವಕವಾಗಿ ಸೋಮಾಹುತಿರೂಪದಿಂದ ಬಿಸಿನೆತ್ತರನ್ನು ಅವನಿಗೆ ಅರ್ಪಿಸಿದ ಭೀಮಸೇನ. ಮಹಾಭಾರತದಲ್ಲಿ ಈ ಅಂಶ ಇದೀಗ ಲುಪ್ತವಾಗಿದೆ.
ಯಾ ಸಾಽಪತಿಃ ಸಾ ಸಪತಿರ್ಹಿ ಜಾತಾ
ಯಾಸ್ತಾಃ ಸಪತ್ನ್ಯೋಽಪತಯಸ್ತು ಜಾತಾಃ |
ಪಶ್ಯಂತು ಚಿತ್ರಂ ವಿವಿಧಂ ಹಿ ಲೋಕೇ
ಯೇ ವೈ ತಿಲಾಃ ಷಂಢತಿಲಾ ಬಭೂವುಃ ॥34॥
ದುಃಶಾಸನನು ಹಿಂದೆ ದ್ಯೂತಸಭೆಯಲ್ಲಿ ``ಸುಂದರಿ, ನೀನಿನ್ನು ಕೌರವನ ಬಳಿಗೆ ಹೋಗು, ನಿನಗಿನ್ನು ಪತಿಗಳಿಲ್ಲ, ಇವರು ಎಣ್ಣೆ ಇಲ್ಲದ ಜೊಳ್ಳು ಎಳ್ಳುಕಾಳುಗಳು, ನಪುಂಸಕರು'' ಎಂದಿದ್ದ. ಯಾರು ಹಿಂದೆ ಅಪತಿ `ಪತಿ ಇಲ್ಲದವಳ'ನಿಸಿದ್ದಳೋ ಅವಳು, ದ್ರೌಪದಿ, ಇಂದು `ಸಪತಿ' ಪತಿಯುಕ್ತಳೆನಿಸಿದ್ದಾಳೆ. ಯಾರು ಹಿಂದೆ ಪತಿಯುಕ್ತರಾಗಿದ್ದರೋ ಅವರು, ಶತ್ರುಸ್ತ್ರೀಯರು ಇಂದು, ನಾವು ಶತ್ರುವಧ ಮಾಡಿದ್ದರಿಂದ, `ಅಪತಿ'ಗಳಾದರು, ವಿಧವೆಯಾದರು. ಎಲ್ಲರೂ ನೋಡಿರಿ. ಲೋಕದಲ್ಲಿ ಅನೇಕ ಬಗೆಯ ವೈಚಿತ್ರಗಳು ಸಂಭವಿಸುತ್ತವೆ. ಶತ್ರುಗಳು ತಾವೇ ಗಟ್ಟಿ ಎಳ್ಳುಕಾಳುಗಳೆಂದುಕೊಂಡಿದ್ದರು. ತಾವೇ ಪೌರುಷ ಉಳ್ಳವರೆಂದುಕೊಂಡಿದ್ದರು. ಈಗ ಅವರೇ ಜೊಳ್ಳು ಕಾಳೆನಿಸಿದ್ದಾರೆ. ನಪುಂಸಕರೆನಿಸಿದ್ದಾರೆ!
ಭೀಮೋಽಪಿ ಹತ್ವಾ ತತ್ರೈವ ದುಃಶಾಸನಮಮರ್ಷಣಮ್ |
ಪೂರಯಿತ್ವಾಂಜಲಿಂ ಭೂಯೋ ರುಧಿರಸ್ಯೋಗ್ರನಿಸ್ವನಃ ॥35॥
ಶೃಣ್ವತಾಂ ಲೋಕವೀರಾಣಾಮಿದಂ ವಚನಮಬ್ರವೀತ್ |
ಏಷ ತೇ ರುಧಿರಂ ಸ್ವಾದು ಪಿಬಾಮಿ ಪುರುಷಾಧಮ |
ಬ್ರೂಹೀದಾನೀಂ ಸುಸಂರಬ್ಧಃ ಪುನರ್ಗೌರಿತಿ ಗೌರಿತಿ ॥36॥
ಇತ್ತ ಭೀಮನು ಸಹನೆ ಇಲ್ಲದ ದುಃಶಾಸನನನ್ನು ಹೊಡೆದು ಕೊಂದಿಲ್ಲ, ಅವನು ಇನ್ನೂ ಉಸಿರೆಳೆಯುತ್ತಿದ್ದಂತೆಯೆ ಉಗ್ರವಾದ ಸಿಂಹನಾದಮಾಡುತ್ತ ಪುನಃ ಬೊಗಸೆಯನ್ನು ರಕ್ತದಿಂದ ತುಂಬಿಸಿ, ಅವನು ಮತ್ತು ಎಲ್ಲ ಲೋಕಪ್ರಸಿದ್ಧರಾದ ವೀರರು ಕೇಳುತ್ತಿರುವಂತೆ, ಈ ಮಾತನ್ನು ನುಡಿದ: `ದುಃಶಾಸನ, ಪುರುಷಾಧಮ, ಈ ಭೀಮಸೇನನು ನಾನು ಸವಿಯಾದ ನಿನ್ನ ಬಿಸಿನೆತ್ತರನ್ನು ಕುಡಿಯುತ್ತಿದ್ದೇನೆ. ನೀನು ಈಗ ಕ್ರುದ್ಧನಾಗಿ ಪುನಃ ನಮ್ಮನ್ನು ಬೀದಿಬಸವಗಳು, ಬೀದಿಬಸವಗಳೆಂದು ಗೇಲಿ ಮಾಡುತ್ತ ನುಡಿ!
ಯೇ ತದಾಸ್ಮಾನ್ ಪ್ರುನೃತ್ಯಂತಿ ಪುನರ್ಗೌರಿತಿ ಗೌರಿತಿ |
ತಾನ್ ಸಂಪ್ರತಿ ಪ್ರನೃತ್ಯಾಮಃ ಪುನರ್ಗೌರಿತಿ ಗೌರಿತಿ ॥37॥
ಹಿಂದೆ ದ್ಯೂತಕಾಲದಲ್ಲಿ ನಮ್ಮನ್ನು `ಬೀದಿಬಸವ ಬೀದಿಬಸವ' ಎಂದು ಪುನಃ ಪುನಃ ಗೇಲಿಮಾಡಿ ಯಾರು ಕುಣಿದರೋ ಅವರನ್ನು ನಾವು ಇಂದು `ಬೀದಿಬಸವ ಬೀದಿ ಬಸವ' ಎಂದು ಪುನಃ ಪುನಃ ಗೇಲಿಮಾಡಿ ಕುಣಿಯುವೆವು.
ಬಂದ ಅತಿಥಿಗಳಿಗೆ ಮಧುಪರ್ಕದಲ್ಲಿ ಗೌಃ ಗೌಃ ಗೌಃ ಎಂದು ಮೂರು ಬಾರಿ ಹೇಳಿ ಒಂದು ಗೂಳಿಯನ್ನು ಉತ್ಸರ್ಜನ ಮಾಡುವುದು ರೂಢಿಯಲ್ಲಿತ್ತು. ಆ ಗೂಳಿ `ದೇವರಿಗೆ ಬಿಟ್ಟಿದ್ದು' ಎಂದುಕೊಂಡು ಯಾರೂ ನೋಡಿಕೊಳ್ಳುತ್ತಿರಲಿಲ್ಲ. `ಬೀದಿಬಸವ'ನಾಗಿ ಸಂಚರಿಸುತ್ತಿತ್ತು. ಹಾಗೇ ಪಾಂಡವರು ಇನ್ನು ಬೀದಿಬಸವ ನಂತೆ ಅಲೆಯುತ್ತಾರೆ ಯಾವ ಕೆಲಸಕ್ಕೂ ಬಾರದವರಾಗುತ್ತಾರೆ ಎಂದು ದುಃಶಾಸನನೇ ಅಂದು ಗೇಲಿ ಮಾಡಿ ಪಾಂಡವರನ್ನು ಕಾಡಿಗೆ ಕಳಿಸಿದ್ದ. ಪಾಂಡವರ ಆ ಸ್ಥಿತಿ ಈಗ ಕೌರವರಿಗೆ ಬಂದಿದೆ, ನಾವೇಕೆ ಅವರನ್ನು ಹಾಗೆ ಹಾಸ್ಯ ಮಾಡಬಾರದು ಎನ್ನುತ್ತಿದ್ದಾನೆ ಭೀಮ.
ಪ್ರಮಾಣಕೋಟ್ಯಾಂ ಶಯನಂ ಕಾಲಕೂಟಸ್ಯ ಭೋಜನಮ್ |
ದಶನಂ ಚಾಹಿಭಿಃ ಕೃಷ್ಣೈರ್ದಾಹಂ ಚ ಜತುವೇಶ್ಮನಿ ॥38॥
ದ್ಯೂತೇನ ರಾಜ್ಯಹರಣಮರಣ್ಯೇ ವಸತಿಶ್ಚ ಯಾ |
ದ್ರೌಪದ್ಯಾಃ ಕೇಶಪಕ್ಷಸ್ಯ ಗ್ರಹಣಂ ಚ ಸುದಾರುಣಮ್ |
ಇಷ್ವಸ್ತ್ರಾಣಿ ಚ ಸಂಗ್ರಾಮೇಷ್ವಸುಖಾನಿ ಚ ವೇಶ್ಮಸು ॥39॥
ವಿರಾಟಭವನೇ ಯಶ್ಚ ಕ್ಲೇಶೋಸ್ಮಾಕಂ ಪೃಥಗ್ವಿಧಃ ॥40॥
ದುಃಖಾನ್ಯೇತಾನಿ ಜಾನೀಮೋ ನ ಸುಖಾನಿ ಕದಾಚನ |
ಧೃತರಾಷ್ಟ್ರಸ್ಯ ದೌರಾತ್ಮ್ಯಾತ್ ಸಪುತ್ರಸ್ಯ ಸದಾ ವಯಮ್ ॥41॥
ಗಂಗಾನದಿಯ ಪ್ರಮಾಣಕೋಟಿ ಎಂಬ ಮಡುವಿನಲ್ಲಿ ನನ್ನನ್ನು ತಳ್ಳಿದ್ದು. ಕಾಲಕೂಟ ವಿಷದ ಲಡ್ಡುಗೆ ತಿನ್ನಿಸಿದ್ದು, ಕೃಷ್ಣಸರ್ಪಗಳಿಂದ ಕಚ್ಚಿಸಿದ್ದು, ಅರಗಿನ ಮನೆಯಲ್ಲಿ ಸುಡಿಸಿದ್ದು, ಜೂಜಿನಿಂದ ರಾಜ್ಯವನ್ನು ಅಪಹರಿಸಿದ್ದು, ಅರಣ್ಯವಾಸ ಮಾಡಿಸಿದ್ದು, ದ್ರೌಪದಿಯ ಕೇಶಪಾಶವನ್ನು ಹಿಡಿದು ಎಳೆದದ್ದು, ಬಲು ದಾರುಣವಾದ ಆಯುಧಗಳನ್ನು ಯುದ್ಧಗಳಲ್ಲಿ ಪ್ರಯೋಗಿಸಿದ್ದು, ಮನೆಗಳಲ್ಲಿಯೂ ಅಜ್ಞಾತವಾಸದಲ್ಲಿ ಸುಖವಾಗಿರದಂತೆ ಮಾಡಿದ್ದು, ವಿರಾಟನಗರದಲ್ಲಿ ಗೋಗ್ರಹಣದಿಂದ ನಮಗೆ ಬೇರೆ ರೀತಿಯಿಂದ ಕ್ಲೇಶ ಕೊಟ್ಟಿದ್ದು, ಧೃತರಾಷ್ಟ್ರನ ಮತ್ತು ಅವನ ಮಕ್ಕಳ ದೌರ್ಜನ್ಯದ ಕಾರಣದಿಂದಾಗಿ ನಾವು ಇಂಥ ದುಃಖಗಳನ್ನೇ ಇಂದಿನವರೆಗೆ ಸದಾ ಉಂಡು ಬಲ್ಲೆವು, ಹೊರತು ಸುಖಗಳನ್ನು ನಾವು ಕಂಡೇ ಇಲ್ಲ.
ಇತ್ಯುಕತ್ವ ವಚನಂ ರಾಜನ್ ಜಯಂ ಪ್ರಾಪ್ಯ ವೃಕೋದರಃ |
ಪುನರಾಹ ಮಹಾರಾಜ ಸ್ಮಯಂಸ್ತೌ ಕೇಶವಾರ್ಜುನೌ ॥42॥

ರಾಜನೆ, ಭೀಮಸೇನನು ಹೀಗೆ ಹೇಳಿ ಜಯಶಾಲಿಯಾಗಿ ನಗುತ್ತ ಕೃಷ್ಣಾರ್ಜುನರಿಗೆ ಹೇಳಿದ.
ಇದು ಭೀಮಸೇನನು ನಡೆಸಿದ ಸೋಮಯಾಗದ ಕೃಷ್ಣಾರ್ಪಣ ರೂಪವಾಗಿದೆ.
ದುಃಶಾಸನೇ ಯದ್ ರಣೇ ಸಂಶ್ರುತಂ ಮೇ
ತದ್ವೈ ಸರ್ವಂ ಕೃತಮದ್ಯೇಹ ವೀರೌ |
ಅತ್ರೈವ ದಾಸ್ಯಾಮ್ಯಪರಂ ದ್ವಿತೀಯಂ
ದುರ್ಯೋಧನಂ ಯಜ್ಞಪಶುಂ ನಿಹತ್ಯ ॥43॥
`ವೀರರೆ, ದುಃಶಾಸನನ ವಿಷಯದಲ್ಲಿ ನಾನು ಏನು ಪ್ರತಿಜ್ಞೆ ಮಾಡಿದ್ದೆನೋ ರಣದಲ್ಲಿ ಈಗ ನಾನು ಅದೆಲ್ಲವನ್ನು ಅಂದರೆ ಪ್ರಧಾನ ಸೋಮಯಾಗವನ್ನು ಮಾಡಿ ಮುಗಿಸಿದ್ದೇನೆ. ಸೋಮಯಾಗಾಂಗ ಸವನೀಯ ಯಜ್ಞಪಶುವಾಗಿರುವ ದುರ್ಯೋಧನನನ್ನು ಮುಂದೆ ಇಲ್ಲಿಯೇ ವಧಿಸಿ ಬಲಿಕೊಡುತ್ತೇನೆ. ಇದು ಸಂಕಲ್ಪ.
ಶಿರೋ ಮೃದಿತ್ವಾ ಚ ಪದಾ ದುರಾತ್ಮನಃ
ಶಾಂತಿಂ ಲಪ್ಸ್ಯೇ ಕೌರವಾಣಾಂ ಸಮಕ್ಷಮ್ ॥44|
ಕೌರವಯೋಧರ ಸಮಕ್ಷಮದಲ್ಲಿಯೇ ದುರಾತ್ಮನಾದ ದುರ್ಯೋಧನನ ತಲೆಯನ್ನು ಕಾಲಿನಿಂದ ಮೆಟ್ಟಿ ನೆಮ್ಮದಿ ಪಡೆಯುವೆನು.
ಏತಾವದುಕತ್ತ್ವ ವಚನಂ ಪ್ರಹೃಷ್ಟೋ
ನನಾದ ಚೋಚ್ಚೈ ರುಧಿರಾರ್ದ್ರಗಾತ್ರಃ |
ನನರ್ತ ಚೈವಾತಿಬಲೋ ಮಹಾತ್ಮಾ
ವೃತ್ರಂ ನಿಹತ್ಯೇವ ಸಹಸ್ರನೇತ್ರಃ ॥45|
ಮೈಯೆಲ್ಲ ರಕ್ತದಿಂದ ತೊಯ್ದ ಅತಿಬಲಿಷ್ಠನಾದ ಮಹಾತ್ಮ ಭೀಮಸೇನನು ಪ್ರಹೃಷ್ಟನಾಗಿ ವೃತ್ರಾಸುರನನ್ನು ಕೊಂದ ದೇವೇಂದ್ರನಂತೆ ಸಿಂಹನಾದ ಗೈದ, ಹುಲಿಯಂತೆ ವೀರನೃತ್ಯ ಮಾಡಿದ.
ಮುಂದೆ (ಅ.84.34)ರಲ್ಲಿ ದುರ್ಯೋಧನ `ಶಾರ್ದೂಲವದೇವ ಪ್ರಸಹ್ಯ' ಎಂದು ಹುಲಿಕುಣಿತವನ್ನು ಹೇಳುತ್ತಾನೆ. ಭೀಮನ ಈ ಹುಲಿವೇಷದ ಕುಣಿತ ಕೃಷ್ಣನಿಗೆ ಇಷ್ಟವಾಯಿತು.
ಉದ್ಯೋಗಪರ್ವದಲ್ಲಿ ಕರ್ಣನು ಕೃಷ್ಣನ ಮುಂದೆ ಈ ಕುರುಕ್ಷೇತ್ರ ಯುದ್ಧವನ್ನು ಯಜ್ಞವೆಂದು ಬಣ್ಣಿಸುತ್ತ ಭೀಮನು ಪ್ರಸ್ತೋತೃವಾಗಿ ಸಾಮಗಾನ ಮಾಡಿ ಸೋಮಪಾನ ಮಾಡುವನೆಂದೂ ದುರ್ಯೋಧನನ ವಧದಿಂದ ಅವನೇ ಯಜ್ಞಸಮಾಪ್ತಿ ಮಾಡುವನೆಂದೂ ಹೇಳಿದ್ದ–
ಸ ಏವ ರಾಜಾ ಧರ್ಮಾತ್ಮಾ ಶಾಶ್ವತೋಽಸ್ತು ಯುಧಿಷ್ಠಿರಃ |
ದುಃಶಾಸನಸ್ಯ ರುಧಿರಂ ಯದಾ ಪಾಸ್ಯತಿ ಪಾಂಡವಃ |
ಆನರ್ದಂ ನರ್ದತಃ ಸಮ್ಯಕ್ ತದಾ ಸ್ತುತ್ಯಂ ಭವಿಷ್ಯತಿ |
ದುರ್ಯೋಧನಂ ಯದಾ ಹಂತಾ ಭೀಮಸೇನೋ ಮಹಾಬಲಃ |
ತದಾ ಸಮಾಪ್ಸ್ಯತೇ ಯಜ್ಞೋ ಧಾರ್ತರಾಷ್ಟ್ರಸ್ಯ ಮಾಧವ ॥
ಗೀತಂ ಸ್ತೋತ್ರಂ ಸ ಸೌಭದ್ರಃ ಸಮ್ಯಕ್ ತತ್ರ ಭವಿಷ್ಯತಿ |
ಉದ್ಗಾತಾತ್ರ ಪುನರ್ಭೀಮಃ ಪ್ರಸ್ತೋತಾ ಸುಮಹಾಬಲಃ |
ವಿನದನ್ ಸ ನರವ್ಯಾಘ್ರೋ ನಾಗಾನೀಕಾಂತಕೃದ್ ರಣೇ ॥
ಕರ್ಣ ತಾನೂ ಅರ್ಜುನನಿಂದ ಹತನಾಗಿ ಈ ಯಜ್ಞದಲ್ಲಿ ಪಶುಯಾಗಕ್ಕೆ ಕುಂಡವಾಗುವೆನು ಎಂದು ಇಲ್ಲಿ ಉತ್ಸಾಹದಿಂದ ಹೇಳಿದ್ದನ್ನೂ ಗಮನಿಸಬೇಕು
ಯದಾ ದ್ರಕ್ಷ್ಯಸಿ ಮಾಂ ಕೃಷ್ಣ ನಿಹತಂ ಸವ್ಯಸಾಚಿನಾ
ಪುನಶ್ಚಿತಿಸ್ತದಾ ಚಾಸ್ಯ ಯಜ್ಞಸ್ಯಾಥ ಭವಿಷ್ಯತಿ |
ಯದ್ಯಪಿ ಈ ಯಜ್ಞದಲ್ಲಿ ದುರ್ಯೋಧನ `ದೀಕ್ಷಿತ ಅಂದರೆ ಯಜಮಾನ' ನಾದಂತೆ ಮೇಲುನೋಟಕ್ಕೆ ಕಾಣುತ್ತದೆ. ಆದರೆ ಲಕ್ಷಾಲಂಕಾರದಲ್ಲಿ–
ದೀಕ್ಷಿತೋ ಧಾರ್ತರಾಷ್ಟ್ರೋಽತ್ರ ಪತ್ನೀ ಚಾಸ್ಯ ಮಹಾಚಮೂಃ'
ಎಂಬುದಕ್ಕೆ `ದೀಕ್ಷಿತಃ ದೀಕ್ಷಾಂ ಪ್ರಾಪಿತಃ ಪಶುಃ |' ಎಂದು ದೀಕ್ಷಿತ ಶಬ್ದಕ್ಕೆ ಪಶು ಎಂದು ವ್ಯಾಖ್ಯಾನಿಸಿದ್ದಾರೆ.
`ಧಾರ್ತರಾಷ್ಟ್ರಸ್ಯ ವಾರ್ಷ್ಣೇಯ ಶಸ್ತ್ರಯಜ್ಞೋ ಭವಿಷ್ಯತಿ' ಎಂಬಲ್ಲಿ `ದುರ್ಯೋಧನನನ್ನೇ ಮುಖ್ಯವಾಗಿ ಪಶುವಾಗಿ ಆಹುತಿಗೊಳ್ಳುವ ಯಜ್ಞ ಇದು' ಎಂದೇ ಕರ್ಣ ಹೇಳುತ್ತಾನೆ.
ಅಥಾಹ ಭೀಮಃ ಪುನರುಗ್ರಕರ್ಮಾ
ದುಃಶಾಸನಂ ಕ್ರೋಧಪರೀತಚೇತಾಃ |
ಗತಾಸುಮಾಲೋಕ್ಯ ವಿಹಸ್ಯ ಸುಸ್ವರಂ
ಕಿಂ ವಾ ಕುರ್ಯಾಂ ಮೃತ್ಯುನಾ ರಕ್ಷಿತೋಽಸಿ ॥46॥
ಬಳಿಕ ಉಗ್ರಕರ್ಮಗಳನ್ನು ಮಾಡುವ ಭೀಮನು, ಅಷ್ಟರಲ್ಲಿ ದುಃಶಾಸನನು ಸತ್ತಿದ್ದನ್ನು ಕಂಡು, ಇನ್ನೂ ಹೆಚ್ಚು ಕ್ರೋಧದಿಂದ ಕೂಡಿದ ಚಿತ್ತದಿಂದ ಅಟ್ಟಹಾಸಪೂರ್ವಕ ದೊಡ್ಡ ಧ್ವನಿಯಿಂದ ``ಈಗ ನಾನೇನು ಮಾಡಲಿ? ಮೃತ್ಯು ನಿನ್ನನ್ನು ಕಾಪಾಡಿತು. ನೀನು ಬದುಕಿದ್ದರೆ ಇನ್ನೂ ಚಿತ್ರಹಿಂಸೆ ಮಾಡಿ ನನ್ನ ಕ್ರೋಧವನ್ನು ಶಮನಗೊಳಿಸಿಕೊಳ್ಳುತ್ತಿದ್ದೆ !'' ಎಂದ.
ಏವಂ ಬ್ರುವಾಣಂ ಪುನರುತ್ಪಿತಂ ತ-
ಮಾಸ್ಫೋಟ್ಯ ವಲ್ಗಂತಮತಿಪ್ರಹೃಷ್ಟಮ್ |

ಯೇ ಭೀಮಸೇನಂ ದದೃಶುಸ್ತದಾನೀಂ
ಭಯೇನ ತೇಪಿ ವ್ಯಥಿತಾ ನಿಪೇತುಃ ॥47॥
ಹೀಗೆ ಹೇಳುತ್ತ ಪುನಃ ದುಃಶಾಸನನನ್ನು ಆಕ್ರಮಿಸಿ ಅತಿಹೃಷ್ಟನಾಗಿ ಕುಣಿಯುವ ಭೀಮನನ್ನು ಯಾರು ಕಂಡರೋ ಅವರು ಭಯಾರ್ತರಾಗಿ ಬಿದ್ದರು.
ದೃಷ್ಟ್ವಾತು ನೃತ್ಯಂತಮುದಗ್ರರೂಪಂ
ಕಾಲಂ ಯಥಾ ತ್ವಂತಕಾಲೇ ಪ್ರಜಾನಾಮ್ |
ಮಹದ್ ಭಯಂ ಚಾಧಿರಥಿಂ ವಿವೇಶ
ಜಯೇ ನಿರಾಶಾಶ್ಚ ಸುತಾಸ್ತ್ವದೀಯಾಃ ॥48॥
ವೀರನೃತ್ಯ ಮಾಡುವ ಭೀಮನನ್ನು ಕಂಡಾಗ ಜನರಿಗೆ ಪ್ರಳಯಕಾಲದ ಕಾಲಯಮನ ದರ್ಶನವಾದಂತಾಯಿತು. ಕರ್ಣನನ್ನೂ ಮಹಾಭಯ ಪ್ರವೇಶಿಸಿತು. ರಾಜನೆ, ನಿನ್ನ ಮಕ್ಕಳು ಯುದ್ಧಜಯದಲ್ಲಿ ನಿರಾಸೆ ಹೊಂದಿದರು.
ಯೇ ಚಾಪಿ ತತ್ರಾಪತಿತಾ ಮನುಷ್ಯಾ-
ಸ್ತೇಷಾಂ ಕರೇಭ್ಯಃ ಪತಿತಂ ತು ಶಸ್ತ್ರಮ್ |
ಭಯಾಚ್ಚ ಸಂಚುಕ್ರುಶುರುಚ್ಚಕೈಸ್ತೇ
ನಿಮೀಲಿತಾಕ್ಷಾ ಮುಮುಹುಶ್ಚ ತತ್ರ ॥49॥
ಯಾರು ಮನುಷ್ಯರು ಬೀಳಲಿಲ್ಲವೋ, ಅವರ ಕೈಯಿಂದ ಅಸ್ತ್ರಗಳಂತೂ ಬಿದ್ದೇ ಹೋದುವು. ಎಲ್ಲರೂ ಭಯದಿಂದ ಜೋರಾಗಿ ಕೂಗಿಕೊಂಡರು. ಕಣ್ಣುಮುಚ್ಚಿ ದರು. ಮೂರ್ಛೆ ಹೊಂದಿದರು.
ಯೇ ತತ್ರ ಭೀಮಂ ದದೃಶುಃ ಸಮಂತಾದ್
ದೌಃಶಾಸನಂ ತದ್ರುಧಿರಂ ಪಿಬಂತಮ್ |
ಸರ್ವೇ ಪಲಾಯಂತ ಭಯಾಭಿಪನ್ನಾ
ನಾಯಂ ಮನುಷ್ಯ ಇತಿ ಭಾಷಮಾಣಾಃ ॥50॥
ದುಃಶಾಸನನ ರಕ್ತವನ್ನು ಭೀಮ ಕುಡಿಯುತ್ತಿದ್ದುದನ್ನು ಸುತ್ತಲೂ ಯಾರು ನೋಡಿದರೋ ದುರ್ಯೋಧನನೂ ಸೇರಿದಂತೆ ಅವರೆಲ್ಲರೂ ಭಯಾವಿಷ್ಟರಾಗಿ `ಈತ ಮನುಷ್ಯನಲ್ಲ' ಎನ್ನುತ್ತ ಪಲಾಯನ ಗೈದರು.
ರಕ್ತಾರ್ದ್ರಗಾತ್ರಸ್ತು ತತೋ ಮಹಾತ್ಮಾ
ಗದಾಪಾಣಿಃ ಕಾಲ ಇವಾಂತಕಾಲೇ |
ವಿಭೀಷಯಾನಸ್ತವ ಪುತ್ರಸೈನ್ಯಂ
ಇತಸ್ತತೋ ಧಾವತಿ ವಾಹಿನೀಂ ತೇ ॥51॥
ನೆತ್ತರಿಂದ ಮೈ ತೊಯಿಸಿಕೊಂಡು ಗದಾಪಾಣಿಯಾಗಿ ಅಂತ್ಯಕಾಲದ ಕಾಲಯಮನಂತೆ ನಿನ್ನ ಮಕ್ಕಳ ಸೈನ್ಯವನ್ನು ಭೀತಿಗೊಳಿಸುತ್ತ ವೇಗವಾಗಿ ಎಲ್ಲ ಕಡೆ ಭೀಮಸೇನ ಸಂಚರಿಸಿದ.
ತತಃ ಕ್ಷಣಾದ್ ಭಾರತ ಶೂನ್ಯಮಾಸೀದ್
ಆಯೋಧನಂ ಘೋರತರಂ ಕುರೂಣಾಮ್ |
ಯತ್ರಾಜಿಮಧ್ಯೇ ಪ್ರಾಪಿಬದ್ ಭೀಮಸೇನೋ
ದುಃಶಾಸನಸ್ಯ ರುಧಿರಂ ಕ್ರೋಧದೀಪ್ತಃ ॥52॥
ರಾಜನೆ, ಬಳಿಕ ಕ್ಷಣದಲ್ಲಿ ಅತಿಘೋರವಾದ ಕುರುಕ್ಷೇತ್ರದ ರಣರಂಗ ಶೂನ್ಯವಾಯಿತು. ಏಕೆಂದರೆ ರಣರಂಗದ ಮಧ್ಯದಲ್ಲಿ ಕ್ರೋಧದಿಂದ ಉರಿಯುತ್ತ ಭೀಮಸೇನನು ದುಃಶಾಸನನ ರಕ್ತವನ್ನು ಪಾನಮಾಡಿದ.
ತಸ್ಮಿನ್ ಕೃತೇ ಭೀಮಸೇನೇನ ರೂಪೇ
ದೃಷ್ಟ್ವಾ ಸೇನಾಃ ಶೋಣಿತಂ ಪೀಯಮಾನಮ್ |
ಸಂಪ್ರಾದ್ರವಂಶ್ಚಿತ್ರಸೇನೇನ ಸಾರ್ಧಂ
ಭೀಮಂ ರಕ್ಷೋ ಭಾಷಮಾಣಾ ಭಯಾರ್ತಾಃ ॥53॥
ಭೀಮಸೇನ ಭಯಂಕರ ರೂಪು ತಳೆದು ರಕ್ತಪಾನ ಮಾಡುವುದನ್ನು ಕಂಡು `ಇವನು ರಾಕ್ಷಸನೆ' ಎನ್ನುತ್ತ ಭಯಾರ್ತರಾಗಿ ಯೋಧರು ಕರ್ಣನ ತಮ್ಮನಾದ ಚಿತ್ರಸೇನನೊಂದಿಗೆ ಪಲಾಯನ ಮಾಡತೊಡಗಿದರು.
ಯುಧಾಮನ್ಯುಃ ಪ್ರದ್ರುತಂ ಚಿತ್ರಸೇನಂ
ಸಹಾನೀಕಂ ಸ್ವಾಭ್ಯಯಾದ್ ರಾಜಪುತ್ರಃ |
ವಿವ್ಯಾಧ ಚೈನಂ ನಿಶಿತೈಃ ಪೃಷತ್ಕೈ-
ರ್ವ್ಯಪೇತಭೀಃ ಸಪ್ತಭಿರಾಶುಮುಕ್ತೈಃ ॥54॥
ಚಿತ್ರಸೇನನು ಸೈನ್ಯದೊಂದಿಗೆ ಪಲಾಯನ ಮಾಡುತ್ತಿರುವುದನ್ನು ಕಂಡು ಭಯರಹಿತನಾದ ಯುಧಾಮನ್ಯು ತಡೆದು ಆಕ್ರಮಿಸಿದ. ತೀಕ್ಷ್ಣವಾದ ಏಳು ಬಾಣಗಳನ್ನು ವೇಗವಾಗಿ ಎಸೆದು ಅವನನ್ನು ಹೊಡೆದ.
ಪದಾಕ್ರಾಂತಃ ಸರ್ಪವಲ್ಲೇಲಿಹಾನೋ
ಮಹೋರಗಃ ಕ್ರೋಧವಿಷಂ ಸಿಸೃಕ್ಷುಃ |
ನಿವೃತ್ತ್ಯ ಪಾಂಚಾಲಜಮಭ್ಯವಿಧ್ಯತ್
ತ್ರಿಭಿಃ ಶರೈಃ ಸಾರಥಿಂ ಚಾಪ್ಯವಿಧ್ಯತ್ ॥55॥

ಚಿತ್ರಸೇನನಿಗೆ ಇದರಿಂದ ಕಾಲಿಂದ ತುಳಿದಷ್ಟು ಅವಮಾನವಾಯಿತು. ನಾಲಿಗೆ ಹೊರಚಾಚಿದ ಕ್ರೋಧವಿಷವನ್ನು ಕಾರುವ ದೊಡ್ಡ ಹಾವಿನಂತಾಗಿ ಅವನು ಹಿಂತಿರುಗಿ ಯುಧಾಮನ್ಯುವನ್ನು, ಅವನ ಸಾರಥಿಯನ್ನು ಮೂರು ಬಾಣಗಳಿಂದ ಹೊಡೆದ.
ತತಃ ಸುಪುಂಖೇನ ಸುಪತ್ರಿತೇನ
ಸುಸಂಶಿತಾಗ್ರೇಣ ಶರೇಣ ಶೂರಃ |
ಆಕರ್ಣಮುಕ್ತೇನ ಸಮಾಹಿತೇನ
ಯುಧಾಮನ್ಯುಸ್ತಸ್ಯ ಶಿರೋ ಜಹಾರ ॥56॥
ಆಗ ಶೂರನಾದ ಯುಧಾಮನ್ಯು ಒಳ್ಳೆಯ ಪುಕ್ಕರೆಕ್ಕೆ, ಹರಿತವಾದ ತುದಿಗಳುಳ್ಳ ಬಾಣವನ್ನು ಕಿವಿವರೆಗೆ ಸೆಳೆದು ಏಕಾಗ್ರತೆಯಿಂದ ಎಸೆದು ಚಿತ್ರಸೇನನ ತಲೆಯನ್ನು ಕೆಡವಿದ.
ತಸ್ಮಿನ್ ಹತೇ ಭ್ರಾತರಿ ಚಿತ್ರಸೇನೇ
ಕ್ರುದ್ಧಃ ಕರ್ಣಃ ಪೌರುಷಂ ದರ್ಶಯಾನಃ |
ದುದ್ರಾವ ತತ್ಪಾಂಡವಾನಾಮನೀಕಂ
ಪ್ರತ್ಯುದ್ಯಾತೋ ನಕುಲೇನಾಮಿತೌಜಾಃ ॥57॥
ಸೋದರ ಚಿತ್ರಸೇನನು ಹತನಾದಾಗ ಕ್ರುದ್ಧನಾದ ಕರ್ಣನು ಪೌರುಷ ತೋರುತ್ತ ಪಾಂಡವಸೈನ್ಯದ ಕಡೆಗೆ ಧಾವಿಸಿದ.
ಅಮಿತಪರಾಕ್ರಮಿಯಾದ ಆತನನ್ನು ನಕುಲ ಇದಿರಿಸಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ದುಃಶಾಸನವಧೋ ನಾಮ ಅಶೀತಿತಮೋಽಧ್ಯಾಯಃ ॥80॥

ಮಹಾಭಾರತತಾತ್ಪರ್ಯನಿರ್ಣಯ
ಯದಾ ಸ ರಂಗಃ ಪವಮಾನಸೂನುನಾ
ಶೂನ್ಯಃ ಕೃತಸ್ತತ್ರ ಮುಹೂರ್ತಮಾತ್ರಾತ್ |
ದುರ್ಯೋಧನಸ್ಯಾವರಜಾಃ ಶರೌಘೈ-
ರವೀವೃಷನ್ ಭೀಮಮುದಾರಸತ್ತ್ವಮ್ ॥160॥
ಹೀಗೆ ರಣರಂಗ ಭೀಮನಿಂದ ಶೂನ್ಯವಾಗಿ ಮಾಡಲ್ಪಟ್ಟಾಗ ಒಂದು ಮುಹೂರ್ತ ಮಾತ್ರ ಕಳೆದೊಡನೆ ದುರ್ಯೋಧನನ ತಮ್ಮಂದಿರು ಮಹಾಬಲಿಷ್ಠ ನಾದ ಭೀಮನ ಮೇಲೆ ಬಾಣಗಳ ಮಳೆಗರೆದರು.
ತಾನ್ ಮಾರುತಿರ್ಬಾಣವರೈರ್ನಿಕೃತ್ತ-
ಶೀರ್ಷಾನ್ ಯಮಾಯಾನಯದಾಶು ವೀರಃ |
ತಸ್ಮಿನ್ ದಿನೇ ವಿಂಶತಿರ್ಧಾರ್ತರಾಷ್ಟ್ರಾ
ಹತಾಸ್ತದನ್ಯೇ ಸಮರಾತ್ ಪ್ರದುದ್ರುವುಃ ॥ 161 ॥
ಅವರನ್ನು ವೀರನಾದ ಭೀಮ ಬೇಗನೆ ಉತ್ತಮ ಬಾಣಗಳಿಂದ ಶಿರಶ್ಛೇದಗೈದು ಯಮನ ಬಳಿಗೆ ಅಟ್ಟಿದ. ಆ ದಿನದಲ್ಲಿ ಇಪ್ಪತ್ತು ಮಂದಿ ಧೃತರಾಷ್ಟ್ರಪುತ್ರರು ಹತರಾದರು. ಉಳಿದವರು ರಣರಂಗದಿಂದ ಪಲಾಯನ ಮಾಡಿದರು.
ಕರ್ಮಾಣ್ಯನನ್ಯೌಪಯಿಕಾನಿ ಭೀಮೇ
ಕುರ್ವತ್ಯೇವಂ ಭೀತಭೀತೇರಿಸಂಘೇ |
ನಿಮೀಲಿತಾಕ್ಷೇ ಚ ಭಯೇನ ಕರ್ಣೇ
ಕರ್ಣಾತ್ಮಜೋ ನಕುಲಂ ಪ್ರತ್ಯಧಾವತ್ ॥ 162 ॥
ಹೀಗೆ ಭೀಮ ಇತರರಿಗೆ ಅಸಾಧ್ಯವಾದ ಕರ್ಮಗಳನ್ನು ಮಾಡುತ್ತಿದ್ದಾಗ, ಶತ್ರು ಸಮೂಹ ಬಹಳ ಭಯಗ್ರಸ್ತವಾದಾಗ, ಕರ್ಣನೂ ಕೂಡ ಭಯದಿಂದ ಕಣ್ಣುಮುಚ್ಚಿಕೊಂಡಿದ್ದಾಗ ಕರ್ಣನ ಮಗ ವೃಷಸೇನ ನಕುಲನ ಮುಂದೆ ಯುದ್ಧಕ್ಕೆ ಧಾವಿಸಿ ಬಂದ.
ಮಾದ್ರೀಸುತೋ ವೃಷಸೇನಂ ಶರೌಘೈ-
ರವಾರಯತ್ ತಂ ವಿರಥಂ ಚಕಾರ |
ಕರ್ಣಾತ್ಮಜಃ ಸೋಽಪ್ಯಸಿಚರ್ಮಪಾಣಿ-
ಸ್ತಸ್ಯಾನುಗಾಂಸ್ತ್ರಿಸಹಸ್ರಂ ಜಘಾನ ॥163॥
ನಕುಲ ವೃಷಸೇನನನ್ನು ಬಾಣಸಮೂಹಗಳಿಂದ ತಡೆದ. ವೃಷಸೇನ ಅವನನ್ನು ವಿರಥನನ್ನಾಗಿ ಮಾಡಿದ. ಆದರೆ ನಕುಲ ಕತ್ತಿಗುರಾಣಿಗಳನ್ನು ಹಿಡಿದು ಅವನ ಮೂರು ಸಾವಿರ ಸೈನಿಕರನ್ನು ಕೊಂದ.
ಕರ್ಣಾತ್ಮಜಸ್ತಸ್ಯ ಸಂಛಿದ್ಯ ಚರ್ಮ
ಭೀಮಾರ್ಜುನಾದೀನಪಿ ಬಾಣಸಂಘೈಃ |
ಅವೀವೃಷತ್ ತಸ್ಯ ಪಾರ್ಥಃ ಶರೇಣ
ಗ್ರೀವಾಬಾಹೂರೂನ್ ಯುಗಪಚ್ಚಕರ್ತ ॥164॥
ವೃಷಸೇನ ನಕುಲನ ಗುರಾಣಿಯನ್ನು ಕತ್ತರಿಸಿ ಭೀಮಾರ್ಜುನಾದಿಗಳ ಮೇಲೂ ಬಾಣಸಮೂಹಗಳ ಮಳೆಗರೆದ. ಅರ್ಜುನ ಒಂದೇ ಬಾಣದಿಂದ ಒಮ್ಮೆಲೆ ವೃಷಸೇನನ ಕುತ್ತಿಗೆ ಭುಜ ತೊಡೆಗಳನ್ನು ಕತ್ತರಿಸಿದ.

ಎಂಬತ್ತೊಂದನೆಯ ಅಧ್ಯಾಯ

ಧೃತರಾಷ್ಟ್ರನ ಒಂಬತ್ತು ಪುತ್ರರ ವಧ.
ಅರ್ಜುನನಿಂದ ಕರ್ಣಪುತ್ರ ವೃಷಸೇನನ ವಧ.
ಸಂಜಯಃ
ದುಃಶಾಸನೇ ತು ನಿಹತೇ ಪುತ್ರಾಸ್ತವ ಮಹಾರಥಾಃ |
ಮಹಾಕ್ರೋಧವಿಷಾ ವೀರಾಃ ಸಮರೇಷ್ವಪಲಾಯಿನಃ ॥1॥
ತೇ ತು ರಾಜನ್ ಮಹಾವೀರ್ಯಾ ಭೀಮಂ ಪ್ರಾಚ್ಛಾದಯನ್ ಶರೈಃ 2|
ನಿಷಂಗೀ ಕವಚೀ ಖಡ್ಗೀ ದಂಡಧಾರೋ ಧನುರ್ಧರಃ |
ಅಲಂಬುರ್ಜಲಸಂಧಶ್ಚ ವಾತವೇಗಸುವರ್ಚಸೌ ॥3॥
ಸಂಜಯ ನುಡಿದ– ರಾಜನೆ, ನಿನ್ನ ಪುತ್ರರು ಮಹಾಬಲಿಷ್ಠರು, ಸಮರದಲ್ಲಿ ಪಲಾಯನ ಮಾಡದ ಮಹಾರಥರು, ವೀರರು. ದುಃಶಾಸನನು ಹತನಾದಾಗ ಅವರು ಒಂಬತ್ತು ಮಂದಿ ಮಹಾಕ್ರೋಧದ ವಿಷವನ್ನು ಕಾರುತ್ತ ಭೀಮನನ್ನು ಬಾಣಗಳಿಂದ ಮುಚ್ಚಿದರು. ಅವರು ನಿಷಂಗಿಕವಚಿಖಡ್ಗಿದಂಡಧಾರ ಧನುರ್ಧರ ಅಲಂಬುಜಲಸಂಧವಾತವೇಗ ಮತ್ತು ಸುವರ್ಚರು.
ಏತೇ ಸಮೇತ್ಯ ಸಹಿತಾ ಭ್ರಾತೃವ್ಯಸನಕರ್ಶಿತಾಃ |
ಭೀಮಸೇನಂ ಮಹಾಬಾಹುಂ ಮಾರ್ಗಣೈಃ ಸಮವಾರಯನ್ ॥4॥
ಇವರು ಒಂಬತ್ತುಮಂದಿ ಜೊತೆಗೆ ಸೇರಿ, ತೊಂಬತ್ತು ಮಂದಿ ಸೋದರರು ಆಗಲೆ ಭೀಮನಿಂದ ಹತರಾಗಿರುವುದರಿಂದ ವ್ಯಸನದಿಂದ ಕುಗ್ಗಿ ಹೋಗಿದ್ದರೂ ಕೂಡ, ಮಹಾಬಾಹುವಾದ ಭೀಮಸೇನನನ್ನು ಬಾಣಗಳಿಂದ ಮುಚ್ಚಿದರು.
ಸ ವಾರ್ಯಮಾಣೋ ವಿಶಿಖೈಃ ಸಮಂತಾತ್ ತೈರ್ಮಹಾರಥೈಃ |
ಭೀಮಃ ಕ್ರೋಧಾಭಿರಕ್ತಾಕ್ಷಃ ಕ್ರುದ್ಧಃ ಕಾಲ ಇವಾಬಭೌ ॥5॥
ಭೀಮನನ್ನು ಆ ಮಹಾರಥರು ಸುತ್ತಲೂ ಬಾಣಗಳಿಂದ ತಡೆದಾಗ ಕೋಪದಿಂದ ಕಣ್ಣು ಕೆಂಪು ಮಾಡಿಕೊಂಡು ಕ್ರುದ್ಧನಾದ ಕಾಲಯಮನಂತೆ ಕಂಡುಬಂದ.
ತಾಂಸ್ತು ಭಲ್ಲೈರ್ಮಹಾವೇಗೈರ್ದಶಭಿರ್ದಶಭಿಃ ಶಿತೈಃ |
ರುಗ್ಮಾಂಗದೋ ರುಗ್ಮಪುಂಖೈಃ ಪಾರ್ಥೋ ನಿನ್ಯೇ ಯಮಕ್ಷಯಮ್ ॥6॥
ಅವರೆಲ್ಲರನ್ನೂ ಬಂಗಾರದ ತೋಳ್ಬಳೆ ಉಳ್ಳ ಭೀಮನು ಬಂಗಾರದ ಪುಕ್ಕಉಳ್ಳ ಮಹಾವೇಗದ ಹರಿತವಾದ ಹತ್ತು ಹತ್ತು ಭಲ್ಲೆಗಳಿಂದ ಯಮಸನದಕ್ಕೆ ಅಟ್ಟಿದ.
ಇಲ್ಲಿಗೆ ತೊಂಬತ್ತೊಂಬತ್ತು ಕೌರವರು ಹತರಾದರು. ಇನ್ನು ಉಳಿದವನು ದುರ್ಯೋಧನನು ಒಬ್ಬನೆ.
ಹತೇಷು ತೇಷು ವೀರೇಷು ಪ್ರದುದ್ರಾವ ಬಲಂ ತವ |
ಪಶ್ಯತಃ ಸೂತಪುತ್ರಸ್ಯ ಪಾಂಡವಸ್ಯ ಭಯಾರ್ದಿತಮ್ ॥7॥
ಕರ್ಣನು ನೋಡುತ್ತಿದ್ದಂತೆಯೇ ಆ ವೀರರು ಹತರಾದಾಗ ಭೀಮನ ಭಯದಿಂದ ನಿನ್ನ ಸೈನ್ಯವು ಪಲಾಯನ ಮಾಡಿತು.
ತತಃ ಕರ್ಣೋ ಮಹಾರಾಜ ಪ್ರವಿವೇಶ ಮಹಾರಣಮ್ |
ದೃಷ್ಟ್ವಾ ಭೀಮಸ್ಯ ವಿಕ್ರಾಂತಮಂತಕಸ್ಯ ಪ್ರಜಾಸ್ವಿವ ॥8॥
ಮಹಾರಾಜ, ಜಂತುಗಳಲ್ಲಿ ಅಂತಕನ ಪರಾಕ್ರಮದಂತೆ ಶತ್ರುಗಳಲ್ಲಿ ಭೀಮನ ಪರಾಕ್ರಮ ಮೆರೆಯುತ್ತಿರುವುದನ್ನು ಕಂಡು ಕರ್ಣನು ಮಹಾರಣವನ್ನು ಪ್ರವೇಶಿಸಿದ.
ಒಂದು ಮುಹೂರ್ತಕಾಲ ಭೀಮನ ಭಯದಿಂದ ಎಲ್ಲ ಕೌರವಸೈನಿಕರೂ ಪಲಾಯನ ಮಾಡಿ ರಣರಂಗವನ್ನು ಶೂನ್ಯವಾಗಿ ಮಾಡಿದ್ದರು. ಬಳಿಕ ಬಂದ ಒಂಬತ್ತು ಮಂದಿ ಕೌರವರೂ ಸತ್ತುದರಿಂದ ರಣರಂಗ ಶೂನ್ಯವೇ ಆಯಿತು. ಆಗ ಕರ್ಣನು ರಂಗವನ್ನು ಪ್ರವೇಶಿಸಿದ.
ತಸ್ಯ ತ್ವಾಕಾರಭಾವಜ್ಞಃ ಶಲ್ಯಃ ಸಮಿತಿಶೋಭನಃ |
ಉವಾಚ ವಚನಂ ಕರ್ಣಂ ಪ್ರಾಪ್ತಕಾಲಮರಿಂದಮ ॥9॥
ರಾಜನೆ, ಕರ್ಣನ ಮುಖಚರ್ಯೆಯಿಂದ ಅವನ ಮನದೊಳಗಿನ ಭಾವವನ್ನು ಅರಿತುಕೊಳ್ಳಬಲ್ಲ, ಯುದ್ಧದಲ್ಲಿ ಶೋಭಿಸುವ ಸಾರಥಿಯಾದ ಶಲ್ಯರಾಜನು ತತ್ಕಾಲಕ್ಕೆ ಉಚಿತವಾದ ಮಾತನ್ನು ಕರ್ಣನಿಗೆ ಹೇಳಿದ.
ಶಲ್ಯಃ
ಮಾ ವ್ಯಥಾಂ ಕುರು ರಾಧೇಯ ನೈತತ್ತ್ವಯ್ಯುಪಪದ್ಯತೇ ॥10॥
ಶಲ್ಯ ನುಡಿದ ಕರ್ಣ, ವ್ಯಥೆ ಮಾಡಬೇಡ. ಇದು ನಿನಗೆ ಶೋಭಿಸುವುದಿಲ್ಲ.
ಏತೇ ದ್ರವಂತಿ ರಾಜಾನೋ ಭೀಮಸೇನಭಯಾರ್ದಿತಾಃ |
ದುರ್ಯೋಧನಶ್ಚ ಸಂಮೂಢೋ ಭ್ರಾತೃವ್ಯಸನದುಃಖಿತಃ ॥11॥
ಭೀಮಸೇನನ ಭಯದಿಂದ ಆರ್ತರಾದ ಈ ರಾಜರು ಪಲಾಯನ ಮಾಡುತ್ತಿದ್ದಾರೆ. ದುರ್ಯೋಧನನೂ ಕೂಡ ಸೋದರರ ಮರಣದುಃಖದಿಂದ ಮಂಕಾಗಿ ಕುಳಿತಿದ್ದಾನೆ.
ದುಃಶಾಸನಸ್ಯ ರುಧಿರೇ ಪೀಯಮಾನೇ ಮಹಾತ್ಮನಾ |
ವ್ಯಾಪನ್ನಚೇತಸಶ್ಚೈವ ಶೋಕೋಪಹತಮನ್ಯವಃ ॥12॥
ಉಪಾಸತೇ ತ್ವಾಮೇತೇ ಹಿ ಪರಿವಾರ್ಯ ಮಹಾರಥಾಃ |
ಕೃಪಪ್ರಭೃತಯಃ ಕರ್ಣ ಹತಶೇಷಾಶ್ಚ ಬಾಂಧವಾಃ ॥13॥
ಮಹಾತ್ಮ ಭೀಮನು ದುಃಶಾಸನನ ರಕ್ತವನ್ನು ಪಾನಮಾಡುವಾಗ ಕೃಪ ಮುಂತಾದ ಮಹಾರಥರೂ ಅಳಿದುಳಿದ ಬಂಧುಗಳೂ

ಶೋಕದಿಂದ ಕೋಪವನ್ನು ಮರೆತು ಬುದ್ದಿಗೆಟ್ಟವರಾಗಿ ನಿನ್ನನ್ನೇ ನಂಬಿ ಕುಳಿತಿದ್ದಾರೆ.
ಪಾಂಡವಾ ಲಬ್ದಲಕ್ಷ್ಯಾಶ್ಚ ಧನಂಜಯಪುರೋಗಮಾಃ |
ತ್ವಾಮೇವಾಭಿಮುಖಾಃ ಶೂರಾ ಯುದ್ಧಾಯ ಸಮುಪಸ್ಥಿತಾಃ ॥14॥
ಅರ್ಜುನನೇ ಮುಂತಾದ ಶೂರಪಾಂಡವರು ಗುರಿಮುಟ್ಟಿ ಈಗ ನಿನ್ನನ್ನೇ ನಿರೀಕ್ಷಿಸುತ್ತ ಯುದ್ಧಕ್ಕೆ ಸನ್ನದ್ಧರಾಗಿದ್ದಾರೆ.
ಸ ತ್ವಂ ಪುರುಷಶಾರ್ದೂಲ ಪೌರುಷೇ ಮಹತಿ ಸ್ಥಿತಃ |
ಕ್ಷತ್ರಧರ್ಮಂ ಪುರಸ್ಕೃತ್ಯ ಪ್ರತ್ಯುದ್ಯಾಹಿ ಧನಂಜಯಮ್ ॥15॥
ಪುರುಷಶ್ರೇಷ್ಠನೆ, ನೀನೀಗ ಕ್ಷಾತ್ರಧರ್ಮವನ್ನು ಪುರಸ್ಕರಿಸಿ ಒಳ್ಳೆಯ ಪೌರುಷ ವನ್ನು ತೋರುತ್ತ ಅರ್ಜುನನನ್ನು ಇದಿರಿಸು.
ಭಾರೋ ಹಿ ಧಾರ್ತರಾಷ್ಟ್ರೇಣ ತ್ವಯಿ ಸರ್ವಃ ಸಮರ್ಪಿತಃ |
ತಮುದ್ವಹ ಮಹಾಬಾಹೋ ಯಥಾಶಕ್ತಿ ಯಥಾಬಲಮ್ |
ಜಯೇ ಸ್ಯಾದ್ ವಿಪುಲಾ ಕೀರ್ತಿರ್ಧ್ರುವಃ ಸ್ವರ್ಗಃ ಪರಾಜಯೇ ॥16॥
ಮಹಾಬಾಹುವೆ, ಈ ಯುದ್ಧದ ಎಲ್ಲ ಭಾರವನ್ನು ದುರ್ಯೋಧನನು ನಿನ್ನಲ್ಲಿ ಇರಿಸಿದ್ದಾನೆ. ಅದನ್ನು ನೀನು ನಿನ್ನ ಶಕ್ತಿಗೆ, ಬಲಕ್ಕೆ ಅನುಸಾರವಾಗಿ ನಿರ್ವಹಿಸು.
ವೃಷಸೇನಶ್ಚ ರಾಧೇಯ ಸಂಕ್ರುದ್ಧಸ್ತನಯಸ್ತವ |
ತ್ವಯಿ ಮೋಹಸಮಾಪನ್ನೇ ಪಾಂಡವಾನಭಿಧಾವತಿ ॥17॥
ನೀನು ಮಂಕಾಗಿ ಕುಳಿತಿರುವುದನ್ನು ಕಂಡು ನಿನ್ನ ಮಗ ವೃಷಸೇನ ಕ್ರುದ್ಧನಾಗಿ ಪಾಂಡವರನ್ನು ಇದಿರಿಸಲು ಹೊರಟಿದ್ದಾನೆ.
ಸಂಜಯಃ
ಏತಚ್ಛ್ರುತ್ವಾ ತು ವಚನಂ ಶಲ್ಯಸ್ಯಾಮಿತತೇಜಸಃ |
ಹೃದಿ ಧೈರ್ಯಯುತಂ ಭಾವಂ ಕೃತ್ವಾ ಯುದ್ಧಾಯ ಸೋದ್ರವತ್ |18|
ಸಂಜಯ ನುಡಿದ– ಅಮಿತ ಪರಾಕ್ರಮಿಯಾದ ಶಲ್ಯನ ಈ ಮಾತನ್ನು ಕೇಳಿ ಕರ್ಣನು ಹೃದಯದಲ್ಲಿ ಧೈರ್ಯಯುಕ್ತವಾದ ಭಾವವನ್ನು ಮಾಡಿಕೊಂಡು ಯುದ್ಧಕ್ಕೆ ಹೊರಟ.
ತತಃ ಕ್ರುದ್ಧೋ ವೃಷಸೇನೋಽಭ್ಯಧಾವ-
ದಾತಸ್ಥಿವಾಂಸಂ ಸ್ವರಥಂ ಹತಾರಿಮ್ |
ವೃಕೋದರಂ ಕಾಲಮಿವಾತ್ತದಂಡಂ
ಗದಾಹಸ್ತಂ ಪೋಥಮಾನಂ ತ್ವದೀಯಾನ್ ॥19॥
ಆಗ ಶತ್ರುಸಂಹಾರ ಮಾಡಿ ತನ್ನ ರಥವನ್ನೇರಿದ್ದ, ಗದೆಯನ್ನು ಹಿಡಿದು ದಂಡಧಾರಿಯಮನಂತೆ ನಿನ್ನವರನ್ನು ನಾಶಮಾಡುತ್ತಿದ್ದ ಭೀಮನನ್ನು ಕರ್ಣಪುತ್ರ ವೃಷಸೇನ ಇದಿರಿಸಿದ.
ತಮಭ್ಯಧಾವನ್ನಕುಲಃ ಪ್ರವೀರೋ
ರೋಷಾದಮಿತ್ರಂ ಪ್ರತುದನ್ ಪೃಷತ್ಕೈಃ |
ಕರ್ಣಸ್ಯ ಪುತ್ರಂ ಸಮರೇ ಪ್ರಹೃಷ್ಟಂ
ಜಿಷ್ಣುರ್ಜಿಘಾಂಸುರ್ಮಘವೇವ ಜಂಭಮ್ ॥20॥
ಆಗ ಒಳ್ಳೆಯ ವೀರನಾದ, ಜಯಶೀಲನಾದ, ರೋಷಗೊಂಡು ಶತ್ರುವನ್ನು ಬಾಣಗಳಿಂದ ಹೊಡೆಯುವ ನಕುಲನು ಬಹಳ ಉತ್ಸಾಹಗೊಂಡಿದ್ದ ಆ ಕರ್ಣ ಪುತ್ರನನ್ನು, ಜಂಭಾಸುರನನ್ನು ಇಂದ್ರನಂತೆ ರಣದಲ್ಲಿ ಆಕ್ರಮಿಸಿದ.
ತತೋ ಧ್ವಜಂ ಸ್ಫಾಟಿಕಚಿತ್ರಕಂಬುಂ
ಚಿಚ್ಛೇದ ವೀರೋ ನಕುಲಃ ಕ್ಷುರೇಣ |
ಕರ್ಣಾತ್ಮಜಸ್ಯೇಷ್ವಸನಂ ಚ ಚಿತ್ರಂ
ಭಲ್ಲೇನ ಜಾಂಬೂನದಪಟ್ಟನದ್ಧಮ್ ॥21॥
ವೃಷಸೇನನ ಸ್ಫಟಿಕಮಯ ಸುಂದರ ಶಂಖರೂಪವಾದ ಧ್ವಜವನ್ನೂ ಕ್ಷುರದಿಂದ ಕತ್ತರಿಸಿದ. ಬಂಗಾರದ ಪಟ್ಟಿಯಿಂದ ಖಚಿತವಾದ ಸುಂದರವಾದ ಧನುಸ್ಸನ್ನೂ ಭಲ್ಲೆಯಿಂದ ಕಡಿದ.
ಅಥಾನ್ಯದಾದಾಯ ಧನುಃ ಸುಶೀಘ್ರಂ
ಕರ್ಣಾತ್ಮಜಃ ಪಾಂಡವಮಭ್ಯವಿಧ್ಯತ್ |
ದಿವ್ಯೈರ್ಮಹಾಸ್ತ್ರೈರ್ನಕುಲಂ ಮಹಾಸ್ತ್ರೋ
ದುಃಶಾಸನಸ್ಯಾಪಚಿತಿಂ ಯಿಯಾಸುಃ ॥22॥
ದುಃಶಾಸನನ ಸಮಾರಾಧನೆ ಮಾಡಲು ಬಯಸಿದ್ದ ಮಹಾಸ್ತ್ರಶಾಲಿ ವೃಷಸೇನನು ಬೇಗನೆ ಇನ್ನೊಂದು ಬಿಲ್ಲನ್ನೆತ್ತಿಕೊಂಡು ದಿವ್ಯವಾದ ಮಹಾ ಅಸ್ತ್ರಗಳಿಂದ ನಕುಲನನ್ನು ಹೊಡೆದ.
ತತಃ ಕ್ರುದ್ಧೋ ನಕುಲಸ್ತಂ ಮಹಾತ್ಮಾ
ಶರೈರ್ಮಹೋಲ್ಕಾಪ್ರತಿಮೈರವಿಧ್ಯತ್ |
ದಿವ್ಯೈರಸ್ತ್ರೈರಭ್ಯವಿಧ್ಯಚ್ಚ ಸೋಽಪಿ
ಕರ್ಣಸ್ಯ ಪುತ್ರೋ ನಕುಲಂ ಕೃತಾಸ್ತ್ರಃ ॥23॥
ಮಹಾತ್ಮ ನಕುಲನು ಕ್ರುದ್ಧನಾಗಿ ದೊಡ್ಡ ಕೊಳ್ಳಿಯಂಥ ಬಾಣಗಳಿಂದ ವೃಷಸೇನನನ್ನು ಹೊಡೆದ. ವೃಷಸೇನನೂ ನಕುಲನನ್ನು ದಿವ್ಯಾಸ್ತ್ರಗಳಿಂದ ಹೊಡೆದ.

ಶರಾಭಿಘಾತಾಚ್ಚ ರುಷಾ ಚ ರಾಜನ್
ಸ್ವಯಂ ಚ ಭಾಸಾಸ್ತ್ರಸಮೀರಣಾಚ್ಚ |
ಜಜ್ವಾಲ ಕರ್ಣಸ್ಯ ಸುತೋಽತಿಮಾತ್ರ-
ಮಿದ್ಧೋ ಯಥಾಜ್ಯಾಹುತಿಭಿರ್ಹುತಾಶಃ ॥24॥
ರಾಜನೆ, ಬಾಣಗಳ ಹೊಡೆತದಿಂದಲೂ ಕೋಪದಿಂದಲೂ ತನ್ನ ಸ್ವಾಭಾವಿಕ ಕಾಂತಿಯಿಂದಲೂ ಅಸ್ತ್ರಪ್ರಯೋಗದಿಂದಲೂ, ಆಜ್ಯಾಹುತಿಗಳಿಂದ ಬೆಳಗುವ ಯಾಗಾಗ್ನಿಯಂತೆ, ಬಹಳವಾಗಿ ವೃಷಸೇನನು ಬೆಳಗಿದ.
ಕರ್ಣಸ್ಯ ಪುತ್ರೋ ನಕುಲಸ್ಯ ರಾಜನ್
ಸರ್ವಾನಶ್ವಾನಕ್ಷಿಣೋದುತ್ತಮಾಸ್ತ್ರೈಃ |
ವನಾಯುಜಾನ್ ಸುಕುಮಾರಸ್ಯ ಶುಭ್ರಾ-
ನಲಂಕೃತಾನ್ ಜಾತರೂಪೇಣ ಶೀಘ್ರಾನ್ ॥25॥
ವೃಷಸೇನನು, ರಾಜನೆ, ವನಾಯುದೇಶದಲ್ಲಿ ಹುಟ್ಟಿದ ಶುಭ್ರವಾದ, ಬಂಗಾರದಿಂದ ಅಲಂಕೃತವಾದ, ವೇಗಉಳ್ಳ, ಕೋಮಲನಾದ ನಕುಲನ ಎಲ್ಲ ಕುದುರೆಗಳನ್ನೂ ಉತ್ತಮ ಅಸ್ತ್ರಗಳಿಂದ ನಾಶಪಡಿಸಿದ.
ತತೋ ಹತಾಶ್ವಾದವರುಹ್ಯ ಯಾನಾ-
ದಾದಾಯ ಚರ್ಮ ರುಚಿರಂ ಚಾಷ್ಟಚಂದ್ರಮ್ |
ಆಕಾಶಸಂಕಾಶಮಸಿಂ ಗೃಹೀತ್ವಾ
ಪೋಪ್ಲೂಯಮಾನಃ ಖಗವಚ್ಚಚಾರ ॥26॥
ಬಳಿಕ ನಕುಲನು ಅಶ್ವಗಳಿಲ್ಲದ ರಥದಿಂದ ಇಳಿದು ಅಷ್ಟಚಂದ್ರ ಚಿಹ್ನೆ ಉಳ್ಳ ಸುಂದರವಾದ ಗುರಾಣಿಯನ್ನೂ ಆಕಾಶದಂತೆ ನೀಲವಾದ ಖಡ್ಗವನ್ನೂ ಹಿಡಿದು ಹಕ್ಕಿಯಂತೆ ಹಾರುತ್ತ ರಣದಲ್ಲಿ ಸಂಚರಿಸಿದ.
ತತೋಽಂತರಿಕ್ಷೇ ನೃವರಾಶ್ವನಾಗಾನ್
ಚಿಚ್ಛೇದ ಮಾರ್ಗಾನ್ ವಿಚರನ್ ವಿಚಿತ್ರಾನ್ |
ತತೋಽಸ್ಯ ಪಕ್ಷಾನನಯದ್ ಯಮಾಯ
ದ್ವಿಸಾಹಸ್ರಾನ್ನಕುಲಃ ಕ್ಷಿಪ್ರಕಾರೀ ॥27॥
ವೇಗವುಳ್ಳ ನಕುಲನು ಅಂತರಿಕ್ಷದಲ್ಲಿ ವಿಚಿತ್ರ ವರಸೆಗಳನ್ನು ತೋರುತ್ತ ವೃಷಸೇನನ ಕಡೆಯ ಎರಡುಸಾವಿರ ಪದಾತಿ ಅಶ್ವ ಗಜಯೋಧರನ್ನು ಕತ್ತರಿಸಿದ. ಯಮನಿಗೆ ಕಳಿಸಿಕೊಟ್ಟ.
ತೇ ಪ್ರಾಪತನ್ನಸಿನಾ ಗಾಂ ವಿಶಸ್ತಾ
ಯಥಾಶ್ವಮೇಧೇ ಪಶವಃ ಶಮಿತ್ರಾ ॥28॥
ಅಶ್ವಮೇಧದಲ್ಲಿ ಪಶುವಧೆ ಮಾಡುವ ಶಮಿತ್ರನಿಂದ ಪಶುಗಳು ಸತ್ತು ಬೀಳುವಂತೆ ನಕುಲನ ಖಡ್ಗದಿಂದ ಕಡಿದು ಅವರು ನೆಲದ ಮೇಲೊರಗಿದರು.
ದ್ವಿಸಾಹಸ್ರಾ ವಿದಿತಾ ಯುದ್ಧಶೌಂಡಾ
ನಾನಾದೇಶ್ಯಾಃ ಸುಭೃತಾಃ ಸತ್ಯಸಂಧಾಃ |
ಏಕೇನ ಶೀಘ್ರಂ ನಕುಲೇನ ಕೃತ್ತಾಃ
ಸಾರೇಪ್ಸುನೇವೋತ್ತಮಚಂದನಾಸ್ತೇ ॥29॥
ಯುದ್ಧನಿಪುಣರಾದ ಚೆನ್ನಾಗಿ ಪೋಷಿತರಾದ ಸತ್ಯಸಂಧರಾದ ಪ್ರಸಿದ್ಧರಾದ ನಾನಾದೇಶದವರಾದ ಎರಡು ಸಾವಿರಯೋಧರು ಒಬ್ಬ ನಕುಲನಿಂದ ಬೇಗನೆ ಸಾರಾಪೇಕ್ಷಿಯಿಂದ ಉತ್ತಮವಾದ ಚಂದನಗಳು ಕಡಿದು ಹೋಗುವಂತೆ ಹತರಾದರು.
ತಮಾಪತಂತಂ ನಕುಲಂ ಸೋಽಭಿಪತ್ಯ
ಸಮಂತತಃ ಸಾಯಕೈರಭ್ಯವಿಧ್ಯತ್ |
ಸ ತುದ್ಯಮಾನೋ ನಕುಲಃ ಪೃಷತ್ಕೈ-
ರ್ವಿವ್ಯಾಧ ವೀರಂ ಸ ಚುಕೋಪ ವಿದ್ಧಃ ॥30॥
ಆಕ್ರಮಿಸುತ್ತಿದ್ದ ನಕುಲನನ್ನು ವೃಷಸೇನನು ತಡೆದು ಎಲ್ಲೆಡೆ ಬಾಣಗಳಿಂದ ಹೊಡೆದ. ಹೊಡೆಸಿಕೊಂಡ ನಕುಲನು ಆ ವೀರನನ್ನು ಬಾಣಗಳಿಂದ ಹೊಡೆದ. ಹೊಡೆಸಿಕೊಂಡ ವೃಷಸೇನ ಕೋಪಿಸಿಕೊಂಡ.
ತತೋಽಭ್ಯಧಾವತ್ಸಮರೇ ಜಿಘಾಂಸುಃ
ಕರ್ಣಾತ್ಮಜಂ ಪಾಂಡುಸುತೋ ನೃವೀರಃ |
ತಸ್ಯೇಷುಭಿರ್ವ್ಯಧಮತ್ ಕರ್ಣಪುತ್ರೋ
ಮಹಾರಣೇ ಚರ್ಮ ಸಹಸ್ರತಾರಮ್ ॥31॥
ವೃಷಸೇನನನ್ನು ರಣದಲ್ಲಿ ಕೊಲ್ಲಲು ಬಯಸಿ ವೀರಪುರುಷನಾದ ನಕುಲನು ವೃಷಸೇನನ ಮುಂದೆ ಧಾವಿಸಿಬಂದ. ಆಗ ವೃಷಸೇನನು ನಕುಲನ ಸಹಸ್ರ ನಕ್ಷತ್ರ ಚಿಹ್ನೆಯುಳ್ಳ ಗುರಾಣಿಯನ್ನು ಮಹಾರಣದಲ್ಲಿ ಬಾಣಗಳಿಂದ ಕತ್ತರಿಸಿದ.
ತಸ್ಯಾಯಸಂ ನಿಶಿತಂ ತೀಕ್ಷ್ಣಧಾರ-
ಮಸಿಂ ವಿಕೋಶಂ ಗುರುಭಾರಸಾಹಮ್ |
ದ್ವಿಷಚ್ಛರೀರಾಪಹರಂ ಸುಘೋರ-
ಮಾಧುನ್ವತಃ ಸರ್ಪಮಿವೋಗ್ರರೂಪಮ್ ॥32॥

ಕ್ಷಿಪ್ರಂ ಶರೈಃ ಷಡ್ಭಿರಮಿತ್ರಸಾಹ್ಯೈ-
ಶ್ಚಕರ್ತ ಖಡ್ಗಂ ನಿಶಿತೈಃ ಸುಧಾರೈಃ |
ಪುನಶ್ಚ ದೀಪ್ತೈರ್ನಿಶಿತೈಃ ಪೃಷತ್ಕೈಃ
ಸ್ತನಾಂತರೇ ಗಾಢಮಥಾಭ್ಯವಿಧ್ಯತ್ ॥33॥
ನಕುಲನು, ಹರಿತವಾದ ತೀಕ್ಷ್ಣಧಾರೆ ಉಳ್ಳ ಮಹಾಕಾರ್ಯಸಾಧನವಾಗಬಲ್ಲ ಶತ್ರುಶರೀರನಾಶಕವಾದ ಬಲುಘೋರವಾದ, ಹಾವಿನಂತೆ ಉಗ್ರರೂಪವಾದ ಕಬ್ಬಿಣದ ಖಡ್ಗವನ್ನು ಒರೆಯಿಂದ ತೆಗೆದು ಝಳಪಿಸುವಾಗ, ಶತ್ರುನಾಶಕನಾದ ವೃಷಸೇನನು ಬೇಗನೆ ಹರಿತವಾದ ಒಳ್ಳೆಯ ಅಲುಗುಳ್ಳ ಆರು ಬಾಣಗಳಿಂದ ಆ ಖಡ್ಗವನ್ನು ಕತ್ತರಿಸಿದ. ಪುನಃ ಪ್ರಕಾಶಮಾನವಾದ ಬಾಣಗಳಿಂದ ನಕುಲನ ಎದೆಯನ್ನು ಗಾಢವಾಗಿ ಹೊಡೆದ.
ಕೃತ್ವಾ ತು ತದ್ ದುಷ್ಕರಮಾರ್ಯಜುಷ್ಟಂ
ನರೈರನ್ಯೈಃ ಕರ್ಮ ರಣೇ ಮಹಾತ್ಮಾ |
ಯಯೌ ರಥಂ ಭೀಮಸೇನಸ್ಯ ರಾಜನ್
ಶರಾಭಿತಪ್ತೋ ನಕುಲೋ ಮಹಾತ್ಮಾ ॥34॥
ಮಹಾತ್ಮ ನಕುಲನು ಬೇರೆ ಯೋಧರಿಂದ ಮಾಡಲಾಗದ, ಸಜ್ಜನರು ಹೊಗಳುವಂಥ ಸಾಹಸವನ್ನು ರಣದಲ್ಲಿ ಮಾಡಿ, ರಾಜನೆ, ಈಗ ಅವನು ಬಾಣಗಳಿಂದ ವೇದನೆಪಟ್ಟು ಭೀಮಸೇನನ ರಥವನ್ನು ಹತ್ತಿದ.
ಸ ಭೀಮಸೇನಸ್ಯ ರಥಂ ಹತಾಶ್ವೋ
ಮಾದ್ರೀಸುತಃ ಕರ್ಣಸುತಾಭಿತಪ್ತಃ |
ಆಪುಪ್ಲುವೇ ಸಿಂಹ ಇವಾಚಲಾಗ್ರಂ
ಸಂಪ್ರೇಕ್ಷಮಾಣಸ್ಯ ಧನಂಜಯಸ್ಯ ॥35॥
ತನ್ನ ಕುದುರೆಗಳು ಹತವಾದಾಗ, ಬಾಣಗಳಿಂದ ತಾನೂ ವೇದನೆ ಪಡುವಾಗ, ನಕುಲನು, ಅರ್ಜುನನು ನೋಡುತ್ತಿದ್ದಂತೆ ಭೀಮನ ರಥದೊಳಗೆ ಬೆಟ್ಟದ ತುದಿಗೆ ಸಿಂಹ ಹಾರುವಂತೆ ಹಾರಿದ.
ತತಃ ಕ್ರುದ್ಧೋ ವೃಷಸೇನೋ ಮಹಾತ್ಮಾ
ವವರ್ಷ ತಾವಿಷುಜಾಲೇನ ಧೀರಃ |
ಮಹಾರಥಾವೇಕರಥೇ ಸಮೇತೌ
ಶರೈಃ ಪ್ರಭಿಂದನ್ನಿವ ಪಾಂಡವೇಯೌ ॥36॥
ಆಗ ಕ್ರುದ್ಧನಾದ ಮಹಾತ್ಮ ಧೀರ ವೃಷಸೇನನು ಒಂದು ರಥದಲ್ಲಿ ಜೊತೆಯಾಗಿದ್ದ ಭೀಮನಕುಲರ ಮೇಲೆ ಅವರನ್ನು ವಧಿಸುವಂತೆ ಬಾಣ ಸಮೂಹಗಳ ಮಳೆಗರೆದ.
ತಸ್ಮಿನ್ ರಥೇ ನಿಹತೇ ಪಾಂಡವಸ್ಯ
ಕ್ಷಿಪ್ರಂ ಚ ಖಡ್ಗೇ ವಿಶಿಖೈರ್ನಿಕೃತ್ತೇ |
ಭೀಮಾರ್ಜುನೌ ವೃಷಸೇನಾಯ ಕ್ರುದ್ಧೌ
ವವರ್ಷತುಃ ಶರವರ್ಷಂ ಸುಘೋರಮ್ ॥37॥
ನಕುಲನ ರಥ ಮುರಿಯಿತು, ಅವನ ಖಡ್ಗವೂ ಬೇಗನೆ ಬಾಣಗಳಿಂದ ಕಡಿದುಬಿತ್ತು ಎಂದು ಕೋಪದಿಂದ ಭೀಮಅರ್ಜುನರು ವೃಷಸೇನನ ಮೇಲೆ ಘೋರವಾದ ಬಾಣಗಳ ಮಳೆಗರೆದರು.
ಅಥಾಬ್ರುವೀನ್ಮಾರುತಿಃ ಫಲ್ಗುನಂ ತು
ಪಶ್ಯಸ್ವ ೈನಂ ನಕುಲಂ ಪೀಡಯಂತಮ್ |
ಅಯಂ ಚ ನೋ ಬಾಧತೇ ಕರ್ಣಪುತ್ರ-
ಸ್ತಸ್ಮಾದ್ ಭವಾನ್ ಪ್ರತ್ಯುಪಯಾತು ಕಾರ್ಣಿಮ್ ॥38॥
ಬಳಿಕ ಭೀಮ ಅರ್ಜುನನಿಗೆ ಹೇಳಿದ: ನೋಡು, ಈ ವೃಷಸೇನನು ನಕುಲನನ್ನು ಪೀಡಿಸುವುದನ್ನು. ನಮ್ಮನ್ನೂ ಈತ ಬಾಧಿಸುತ್ತಾನೆ. ಅದರಿಂದ ನೀನು ಅವನ ಬಳಿಗೆ ಹೋಗು.
ಸ ತನ್ನಿಶಮ್ಯೈವ ವಚಃ ಕಿರೀಟೀ
ರಥಂ ಸಮಾಸಾದ್ಯ ವೃಕೋದರಸ್ಯ |
ಕಪಿಧ್ವಜಂ ಕೇಶವಸಂಗೃಹೀತಂ
ಪ್ರೈಷೀದುಗ್ರೋ ವೃಷಸೇನಾಯ ವಾಹಮ್ ॥39॥
ವೃಕೋದರನ ಆ ಮಾತನ್ನು ಕೇಳಿ ಉಗ್ರನಾದ ಕಿರೀಟಿಯು ಕರ್ಣನ ಕಡೆಗೆ ಹೊರಟಿದ್ದ, ಕಪಿಯು ಧ್ವಜವಾಗಿ ಕೃಷ್ಣನು ಸಾರಥಿಯಾಗಿರುವ ತನ್ನ ರಥವನ್ನು ತಿರುಗಿಸಿ ವೃಷಸೇನನ ಕಡೆಗೇ ಕುದುರೆಗಳನ್ನು ನಡೆಸಿದ.
ನಕುಲಮಥ ವಿದಿತ್ವಾ ಛಿನ್ನಬಾಣಾಸನಾಸಿಂ
ವಿರಥಮರಿಶರಾರ್ತಂ ಕರ್ಣಪುತ್ರಾಸ್ತ್ರಭಗ್ನಮ್ |
ಪವನಧುತಪತಾಕಾ ಹ್ರಾದಿನೋ ವಲ್ಗಿತಾಶ್ವಾ
ವರಪುರುಷನಿಯತ್ತಾಸ್ತೇ ರಥಾಃ ಶೀಘ್ರಮೀಯುಃ ॥40॥
ನಕುಲನ ಧನುಸ್ಸು ಖಡ್ಗಗಳು ಕಡಿದುಹೋದುದನ್ನು, ರಥ ಮುರಿದುದನ್ನು ವೃಷಸೇನನ ಬಾಣಗಳಿಗೆ ಸೋತು ಅವನು ವೇದನೆಪಡುತ್ತಿದ್ದುದನ್ನು ತಿಳಿದು, ಸೇನಾಪತಿಯಾದ ದೃಷ್ಟದ್ಯುಮ್ನನ ಆದೇಶದಿಂದ, ಗಾಳಿಯಲ್ಲಿ ಹಾರಾಡುವ ಪತಾಕೆಗಳುಳ್ಳ

ಓಡುವ ಕುದುರೆಗಳುಳ್ಳ ಶಬ್ದಮಾಡುವ ಪಾಂಡವಪಕ್ಷದ ರಥಗಳು ಬೇಗನೆ ವೃಷಸೇನನ ಕಡೆಗೆ ಹರಿದುವು.
ದ್ರುಪದಸುತವರಿಷ್ಠಾಃ ಪಂಚ ಶೈನೇಯಷಷ್ಠಾ
ದ್ರುಪದದುಹಿತೃಪುತ್ರಾಃ ಪಂಚ ಚಾಮಿತ್ರಸಾಹಾಃ ।
ದ್ವಿರದರಥನರಾಶ್ವಾನ್ ಸೂದಯಂತಸ್ತ್ವದೀಯಾನ್
ಭುಜಗಪತಿನಿಕಾಶೈರ್ಮಾರ್ಗಣೈರಾತ್ತಶಸ್ತ್ರಾಃ ॥41॥
ಧೃಷ್ಟದ್ಯುಮ್ನ ಮುಂತಾದವರು ಐದು ಮಂದಿ, ಆರನೆಯವನಾದ ಸಾತ್ಯಕಿ, ಶತ್ರುನಾಶಕರಾದ ದ್ರೌಪದೀಪುತ್ರರು ಐದು ಮಂದಿ, ಹೀಗೆ ಹನ್ನೊಂದು ಮಂದಿ ಶಸ್ತ್ರಗಳನ್ನು ಹಿಡಿದು ನಿನ್ನ ಕಡೆಯ ಗಜ ರಥ ಪದಾತಿ ಅಶ್ವಗಳನ್ನು ಹಾವುಗಳಂತಹ ಬಾಣಗಳಿಂದ ನಾಶಮಾಡುತ್ತ ಇದ್ದಾಗ....
ಅಥ ತವ ರಥಮುಖ್ಯಾಸ್ತಾನ್ ಪ್ರತೀಯುಸ್ತ್ವರಂತೋ
ಹೃದಿಕಸುತಕೃಪೌ ಚ ದ್ರೌಣಿದುರ್ಯೋಧನೌ ಚ ।
ಶಕುನಿಸುತವೃಕೌ ಚ ಕ್ರಾಥದೇವಾವೃಧೌ ಚ
ದ್ವಿರದಜಲದಘೋಷೈಃ ಸ್ಯಂದನೈಃ ಕಾರ್ಮುಕೈಶ್ಚ ॥42॥
ಕೃತವರ್ಮ ಕೃಪರು, ಅಶ್ವತ್ಥಾಮ ದುರ್ಯೋಧನರು ಶಕುನಿಸುತನಾದ ಉಲೂಕ, ವೃಕ ಕ್ರಾಥ ದೇವಾವೃಧರು ಇವರೆಲ್ಲ ನಿನ್ನ ಕಡೆಯ ಮುಖ್ಯರಥಿಕರು ಬೇಗನೆ ಆನೆಗಳ ಧ್ವನಿಮೋಡಗಳಂಥ ಧ್ವನಿಗೈವ ರಥಗಳಿಂದಲೂ ಬಿಲ್ಲುಗಳಿಂದಲೂ ಯುಕ್ತರಾಗಿ ಅವರನ್ನು ಇದಿರಿಸಿದರು.
ತವ ನರವರವರ್ಯಾಸ್ತಾನ್ ದಶೈಕಂ ಚ ವೀರಾನ್
ಪ್ರವರಶರವರಾಗ್ರೈಸ್ತಾಡಯಂತೋಭ್ಯರುಂಧನ್ ।
ನವಜಲದಸವರ್ಣೈರ್ಹಸ್ತಿಭಿಸ್ತಾನುದೀಯುಃ
ಗಿರಿಶಿಖರನಿಕಾಶೈರ್ಭೀಮವೇಗೈಃ ಕುಣಿಂದಾಃ ॥43॥
ಈ ಶ್ರೇಷ್ಠ ಯೋಧರು ಪಾಂಡವರ ಪಕ್ಷದ ಹನ್ನೊಂದು ವೀರರನ್ನು ಶ್ರೇಷ್ಠವಾದ ಬಾಣಗಳಿಂದ ಹೊಡೆದರು. ಹೊಸ ಮೋಡಗಳಂತೆ ಕಪ್ಪಾದ ಗಿರಿಶಿಖರಗಳಂತೆ ಕಾಣುವ ಭಯಂಕರ ವೇಗಉಳ್ಳ ಆನೆಗಳಿಂದ ಕುಣಿಂದರು ಕೌರವರ ಕಡೆಯವರನ್ನು ಇದಿರಿಸಿದರು.
ಸುಕಲ್ಪಿತಾ ಹೈಮವತಾ ಮದೋತ್ಕಟಾ
ರಣಾಭಿಕಾಮೈಃ ಕೃತಿಭಿಃ ಸಮಾಸ್ಥಿತಾಃ ।
ಸುವರ್ಣಜಾಲಾವತತಾ ಬಭುರ್ಗಜಾ-
ಸ್ತಥಾ ಯಥಾ ವೈ ಜಲದಾಃ ಸವಿದ್ಯುತಃ ॥44॥
ಚೆನ್ನಾಗಿ ಸಜ್ಜಾದ ಹಿಮವತ್ಪ್ರದೇಶದಲ್ಲಿ ಹುಟ್ಟಿದ ಮದಭರಿತವಾದ ಬಂಗಾರದ ಮಾಲೆಗಳಿಂದ ಆಚ್ಛಾದಿತವಾದ ಗಜಗಳನ್ನು ಯುದ್ಧೇಚ್ಛುಗಳಾದ ನಿಪುಣರಾದ ಕುಣಿಂದವೀರರು ಏರಿದ್ದರು. ಅವುಗಳು ಮಿಂಚಿನಿಂದ ಕೂಡಿದ ಕಾರ್ಮೋಡಗಳಂತೆ ಕಂಡುಬಂದುವು.
ಕುಣಿಂದಪುತ್ರೋ ದಶಭಿರ್ಮಹಾಶರೈಃ
ಕೃಪಂ ಸಸೂತಾಶ್ವಮಪೀಡಯದ್ ಭೃಶಮ್ ।
ತತಃ ಶರದ್ವತ್ಸುತಸಾಯಕೈರ್ಹತಃ
ಸಹೈವ ನಾಗೇನ ಪಪಾತ ಭೂತಳೇ ॥45॥
ಕುಣಿಂದ ರಾಜಕುಮಾರನು ಹತ್ತು ದೊಡ್ಡ ಬಾಣಗಳಿಂದ ಕೃಪನನ್ನೂ ಅವನ ಸಾರಥಿ ಅಶ್ವಗಳನ್ನೂ ಚೆನ್ನಾಗಿ ಪೀಡಿಸಿದ. ಒಡನೆ ಕೃಪನ ಬಾಣಗಳಿಂದ ಆನೆಯೊಂದಿಗೇ ಹತನಾಗಿ ನೆಲದಲ್ಲಿ ಬಿದ್ದ.
ಕುಣಿಂದಪುತ್ರಾವರಜಸ್ತು ತೋಮರೈ-
ರ್ದಿವಾಕರಾಂಶುಪ್ರತಿಮೈರಯಸ್ಮಯೈಃ ।
ರಥಂ ಚ ವಿಕ್ಷೋಭ್ಯ ನನಾದ ನರ್ದತ-
ಸ್ತತೋऽಸ್ಯ ಗಾಂಧಾರಪತಿಃ ಶಿರೋऽಹರತ್ ॥46॥
ಕುಣಿಂದಪುತ್ರನ ತಮ್ಮನು ಸೂರ್ಯಕಿರಣಗಳಂತೆ ತಾಪದಾಯಕವಾದ ಕಬ್ಬಿಣದ ತೋಮರಗಳಿಂದ ಶಕುನಿಯ ರಥವನ್ನು ಮುರಿದು ಗರ್ಜನೆ ಮಾಡಿದ. ಗರ್ಜಿಸುತ್ತಿದ್ದಂತೇ ಅವನ ಶಿರಸ್ಸನ್ನು ಶಕುನಿ ಕೆಡವಿದ.
ತತಃ ಕುಣಿಂದೇಷು ಹತೇಷು ತೇಷ್ವಥ
ಪ್ರಹೃಷ್ಟರೂಪಾಸ್ತವ ತೇ ಮಹಾರಥಾಃ ।
ಭೃಶಂ ಪ್ರದಧ್ಮುರ್ಲವಣಾಂಬುಸಂಭವಾನ್
ಪರಾಶ್ಚ ಬಾಣಾಸನಪಾಣಯೋऽಭ್ಯಯುಃ ॥47॥
ಕುಣಿಂದರು ಹೀಗೆ ಹತರಾದಾಗ ನಿನ್ನ ಕಡೆಯ ಮಹಾರಥರು ಉತ್ಸಾಹಿತರಾಗಿ ಚೆನ್ನಾಗಿ ಶಂಖನಾದ ಮಾಡಿದರು. ಆಗ ಶತ್ರುಗಳು ಧನುರ್ಧಾರಿಗಳಾಗಿ ಆಕ್ರಮಿಸಿದರು.
ಅಥಾಭವದ್ ಯುದ್ಧಮತೀವ ದಾರುಣಂ
ಪುನಃ ಕುರೂಣಾಂ ಸಹ ಪಾಂಡುಸೃಂಜಯೈಃ ।
ಶರಾಸಿಶಕ್ತ್ಯ ೃಷ್ಟಿಗದಾಪರಶ್ವಧೈ-
ರ್ನರಾಶ್ವನಾಗಾಸುಹರಂ ಭೃಶಾಕುಲಮ್ ॥48॥

ಆಗ ಅತ್ಯಂತ ದಾರುಣವಾದ ಯುದ್ಧ ಪಾಂಡವಸೃಂಜಯರೊಂದಿಗೆ ಕೌರವರಿಗೆ ನಡೆಯಿತು. ಬಾಣ ಖಡ್ಗ ಶಕ್ತಿ ಋಷ್ಟಿ ಗದೆ ಪರಶುಗಳಿಂದ ಪದಾತಿ ಅಶ್ವ ಗಜ ಯೋಧರ ಪ್ರಾಣಗಳನ್ನು ತೆಗೆಯುತ್ತ ಬಹಳ ವ್ಯಾಕುಲತೆಯನ್ನುಂಟು ಮಾಡಿತು.
ರಥಾಶ್ವಮಾತಂಗಪದಾತಿಭಿಸ್ತತಃ
ಪರಸ್ಪರಂ ವಿಪ್ರಹತಾ ಗತಾಃ ಕ್ಷಿತಿಮ್ |
ಯಥಾ ಸವಿದ್ಯುತ್ಸ್ತನಿತಾ ಬಲಾಹಕಾಃ
ಸಮಾಸ್ಥಿತಾ ದಿಗ್ಭ್ಯ ಇವೋಗ್ರಮಾರುತೈಃ ॥49॥
ರಥ ಅಶ್ವ ಗಜ ಪದಾತಿಗಳು ಪರಸ್ಪರ ಹೊಡೆಸಿಕೊಂಡು ನೆಲದ ಮೇಲೊರಗಿದುವು. ಮಿಂಚುಗುಡುಗುಗಳಿಂದ ಕೂಡಿದ ಮೋಡಗಳು ದಿಕ್ಕುಗಳಿಂದ ಬೀಸಿದ ಚಂಡಮಾರುತಗಳಿಗೆ ಸಿಲುಕಿ ನಾಶವಾಗುವಂತೆ.
ತತಃ ಶತಾನೀಕಮತಾನ್ ಮಹಾಗಜಾನ್
ತಥಾ ರಥಾನ್ ಪತ್ತಿಗಣಾಂಶ್ಚ ತಾನ್ ಬಹೂನ್ |
ಜಘಾನ ಭೋಜಶ್ಚ ಹಯಾನಥಾಪತನ್
ಕ್ಷಣಾನ್ನಿಕೃತ್ತಾಃ ಕೃತವರ್ಮಣಃ ಶರೈಃ ॥50॥
ಶತಾನೀಕನ ಕಡೆಯ ಮಹಾಗಜ ರಥ ಪದಾತಿಸಮೂಹ ಮತ್ತು ಅಶ್ವಗಳನ್ನು ಬಹುಸಂಖ್ಯೆಯಲ್ಲಿ ಕೃತವರ್ಮನು ಸಂಹರಿಸಿದ. ಅವು ಕ್ಷಣದಲ್ಲಿ ಕೃತವರ್ಮನ ಬಾಣಗಳಿಂದ ಕಡಿದುಬಿದ್ದುವು.
ಅಥಾಪರೇ ದ್ರೌಣಿಶರಾಹತಾ ದ್ವಿಪಾ-
ಸ್ತ್ರಯಃ ಸಸರ್ವಾಯುಧಯೋಧಕೇತನಾಃ |
ನಿಪೇತುರುರ್ವ್ಯಾಂ ವ್ಯಸವಃ ಪ್ರಪಾತಿತಾ-
ಸ್ತಥಾ ಯಥಾ ವಜ್ರಹತಾ ಮಹಾಚಲಾಃ ॥51॥
ಅಶ್ವತ್ಥಾಮನ ಬಾಣಗಳಿಂದ ಹೊಡೆಯಲ್ಪಟ್ಟ ಸರ್ವ ಆಯುಧ ಯೋಧ ಪತಾಕೆಗಳಿಂದ ಯುಕ್ತವಾದ ಮೂರು ಬೇರೆ ಗಜಗಳು ಬೀಳಿಸಲ್ಪಟ್ಟು ಅಸುನೀಗಿ ನೆಲದಲ್ಲಿ ಒರಗಿದುವು.
ಕುಣಿಂದರಾಜಾವರಜಾದನಂತರಃ
ಸ್ತನಾಂತರೇ ಪತ್ರಿವರ್ಯೈರತಾಡಯತ್ |
ತವಾತ್ಮಜಂ ತಸ್ಯ ತವಾತ್ಮಜಃ ಶರೈಃ
ಶಿತೈಃ ಶರೀರಂ ಬಿಭಿದೇ ದ್ವಿಪಂ ಚ ತಮ್ ॥52॥
ಕುಣಿಂದರಾಜನ ಎರಡನೆ ತಮ್ಮನು ನಿನ್ನ ಮಗನನ್ನು ಶ್ರೇಷ್ಠಬಾಣಗಳಿಂದ ಎದೆಯಲ್ಲಿ ಹೊಡೆದ. ನಿನ್ನ ಮಗನು ಅವನ ಶರೀರವನ್ನೂ ಗಜವನ್ನೂ ಬಾಣಗಳಿಂದ ಭೇದಿಸಿದ.
ಸ ನಾಗರಾಜಃ ಸಹ ರಾಜಸೂನುನಾ
ಪಪಾತ ರಕ್ತಂ ಬಹು ಸರ್ವತಃ ಕ್ಷರನ್ |
ಶಚೀಶವಜ್ರಪ್ರಹತೋಽಮ್ಬುದಾಗಮೇ
ಯಥಾ ಜಲಂ ಗೈರಿಕಪರ್ವತಸ್ತಥಾ ॥53॥
ಆ ಮದ್ದಾನೆ ರಾಜಕುಮಾರನೊಂದಿಗೇ ಮೈಯೆಲ್ಲ ಬಹಳ ರಕ್ತವನ್ನು ಸುರಿಸುತ್ತ ಮಳೆಗಾಲ ಬಂದಾಗ ಇಂದ್ರನ ವಜ್ರಾಯುಧದಿಂದ ಹೊಡೆಸಿಕೊಂಡು ಬೀಳುವ ಗೈರಿಕ ಧಾತುಮಯವಾದ ಕೆಂಪಾದ ಬೆಟ್ಟದಂತೆ ನೆಲದಲ್ಲಿ ಬಿದ್ದಿತು.
ಕುಣಿಂದಪುತ್ರಪ್ರಹಿತೋಽಪರದ್ವಿಪಃ
ಕ್ರಾಥಂ ಸಸೂತಾಶ್ವರಥಂ ವ್ಯಪೋಥಯತ್ |
ತತೋಽಪತತ್ಕ್ರಾಥಶರಾಭಿದಾರಿತಃ
ಸಹೇಶ್ವರೋ ವಜ್ರಹತೋ ಯಥಾ ಗಿರಿಃ ॥54॥
ನಿನ್ನ ಕಡೆಯ ಕುಣಿಂದಪುತ್ರನು ನುಗ್ಗಿಸಿದ ಇನ್ನೊಂದು ಆನೆ ಪಾಂಡವಪಕ್ಷದ ಕ್ರಾಥನನ್ನು ಸಾರಥಿ ಅಶ್ವ ರಥಸಮೇತವಾಗಿ ಪೀಡಿಸಿದಾಗ ಕ್ರಾಥನ ಬಾಣಗಳಿಂದ ಹೊಡೆಸಿಕೊಂಡು ಯೋಧನೊಂದಿಗೇ ವಜ್ರಾಹತವಾದ ಬೆಟ್ಟದಂತೆ ನೆಲದಲ್ಲಿ ಬಿದ್ದಿತು. ಇನ್ನುಮುಂದೆ `ಕುಣಿಂದಪುತ್ರೋ ನಕುಲಾತ್ಮಜಂ ಸ್ಮಯನ್' ಎಂದು 60ನೇ ಶ್ಲೋಕದಲ್ಲಿ ಹೇಳುವುದರಿಂದ ಯೋಧನೊಂದಿಗೇ ಆನೆ ಬಿದ್ದರೂ ಆನೆ ಮಾತ್ರ ಸತ್ತಿತು. ಯೋಧನಾದ ಕುಣಿಂದಪುತ್ರ ಸಾಯಲಿಲ್ಲ.
ರಥೀ ದ್ವಿಪಸ್ಥೇನ ಹತೋಽಪತಚ್ಛರೈಃ
ಕ್ರಥಾಧಿಪಃ ಪರ್ವತಜೇನ ದುರ್ಜಯಃ |
ಸ ವಾಜಿಸೂತೇಷ್ವಸನಸ್ತಥಾಪತದ್
ಯಥಾ ಮಹಾವಾತಹತೋ ಮಹಾದ್ರುಮಃ ॥55॥
ಕ್ರಥಾಧಿಪತಿಯು ಅಜೇಯನಾದ ರಥಿಕನಾಗಿದ್ದರೂ ಅವನು, ಪರ್ವತ ಪ್ರದೇಶದ ಇನ್ನೊಬ್ಬನು ಆನೆಯನ್ನೇರಿ ಬಂದು ಬಾಣಗಳಿಂದ ಅವನನ್ನು ಅಶ್ವ ಸೂತ ಧನುಸ್ಸುಗಳೊಂದಿಗೆ ಹೊಡೆದಾಗ, ಬಿರುಗಾಳಿಗೆ ಸಿಲುಕಿದ ಮಹಾವೃಕ್ಷದಂತೆ ಬಿದ್ದ.
ವೃಕೋ ದ್ವಿಪಸ್ಥಂ ಗಿರಿರಾಜವಾಸಿನಂ
ಭೃಶಂ ಶರೈರ್ದ್ವಾದಶಭಿಃ ಪರಾಭಿನತ್ |
ತತೋ ವೃಕಂ ಸಾಶ್ವರಥಂ ಮಹಾಗಜ-
ಸ್ತ್ವರಂಶ್ಚತುರ್ಭಿಶ್ಚರಣೈರ್ವ್ಯಪೋಥಯತ್ ॥56॥

ಆನೆಯ ಮೇಲಿದ್ದ ಪರ್ವತವಾಸಿಯನ್ನು ವೃಕರಾಜನು ಹನ್ನೆರಡು ಬಾಣಗಳಿಂದ ಚೆನ್ನಾಗಿ ಹೊಡೆದ. ಆಗ ಆನೆ ವೃಕನನ್ನು ಅಶ್ವರಥಗಳೊಂದಿಗೇ ವೇಗದಿಂದ ನಾಲ್ಕೂ ಕಾಲುಗಳಿಂದ ತುಳಿದು ಧ್ವಂಸಮಾಡಿತು.
ವಿಷಾಣಪುಚ್ಛಾಪರಗಾತ್ರಘಾತಿನಾ
ಗಜೇನ ಹಂತುಂ ಶಕುನಿಂ ಕುಣಿಂದಜಃ |
ಜಗಾಮ ವೇಗೇನ ಭೃಶಾರ್ದಯಂಶ್ಚ ತಂ
ತತೋಽಸ್ಯ ಗಾನ್ಧಾರಪತಿಃ ಶಿರೋಹರತ್ ||57||
ವೃಕನನ್ನು ತುಳಿದ ಗಜವು ದಂತ, ಬಾಲಗಳಿಂದಲೂ ಮೈಯ ಹಿಂಭಾಗ ದಿಂದಲೂ ಶತ್ರುಗಳನ್ನು ಕೊಲ್ಲುವಂಥದ್ದು. ಅದರಮೇಲೆ ಕುಳಿತು ಒಬ್ಬ ಕುಣಿಂದ ರಾಜನು ಶಕುನಿಯನ್ನು ಕೊಲ್ಲಲು ವೇಗದಿಂದ ಧಾವಿಸಿದ. ಅವನನ್ನು ಬಹಳ ಪೀಡಿಸಿದ. ಆದರೆ ಶಕುನಿ ಅವನ ಶಿರವನ್ನೇ ತರಿದ.
ತತಃ ಶತಾನೀಕಹತಾ ಮಹಾಗಜಾ
ಹಯಾ ರಥಾಃ ಪತ್ತಿಗಣಾಶ್ಚ ತಾವಕಾಃ |
ಸುಪರ್ಣವಾತಪ್ರಹತಾ ಯಥಾ ನಗಾ-
ಸ್ತಥಾ ಗತಾ ಗಾಮವಶಾ ವಿಚೂರ್ಣಿತಾಃ ||58||
ಶತಾನೀಕನಿಂದ ನಿನ್ನ ಪಕ್ಷದ ಮಹಾಗಜ ಅಶ್ವ ರಥ ಪದಾತಿಗಳು ಹತರಾಗಿ, ಗರುಡನ ರೆಕ್ಕೆಗಳ ಗಾಳಿಯ ಹೊಡೆತದಿಂದ ಮರಗಳು ಚೂರು ಚೂರಾಗಿ ಬಿದ್ದು ನೆಲಸಮವಾಗುವಂತೆ, ಬಿದ್ದರು.
ತತೋಽಭ್ಯವಿಧ್ಯದ್ ಬಹುಭಿಃ ಶಿತೈಃ ಶರೈಃ
ಕುಣಿಂದಪುತ್ರೋ ನಕುಲಾತ್ಮಜಂ ಸ್ಮಯನ್ |
ತತೋಽಸ್ಯ ಕಾಯಾನ್ನಿಚಕರ್ತ ನಾಕುಲಿಃ
ಶಿರಃ ಕ್ಷುರೇಣಾಂಬುಜಸನ್ನಿಭಾನನಮ್ ||59||
ಆಗ ನಕುಲಪುತ್ರ ಶತಾನೀಕನನ್ನು ಕುಣಿಂದಪುತ್ರನು ನಗುತ್ತ ತೀಕ್ಷ್ಣವಾದ ಬಹುಬಾಣಗಳಿಂದ ಹೊಡೆದ. ಶತಾನೀಕನು ಕ್ಷುರದಿಂದ, ಕಮಲಸದೃಶ ಮುಖದಿಂದ ಯುಕ್ತವಾದ ಅವನ ಶಿರಸ್ಸನ್ನು ಶರೀರದಿಂದ ಕತ್ತರಿಸಿ ತೆಗೆದ.
ತತಃ ಶತಾನೀಕಮವಿಧ್ಯದಾಶುಗೈ-
ಸ್ತ್ರಿಭಿಃ ಶಿತೈಃ ಕರ್ಣಸುತೋಽರ್ಜುನಂ ತ್ರಿಭಿಃ |
ತ್ರಿಭಿಶ್ಚ ಭೀಮಂ ನಕುಲಂ ಚ ಸಪ್ತಭಿ-
ರ್ಜನಾರ್ದನಂ ದ್ವಾದಶಭಿಶ್ಚ ಸಾಯಕೈಃ ||60||
ಕರ್ಣಸುತನಾದ ವೃಷಸೇನನು ತೀಕ್ಷ್ಣವಾದ ಮೂರು ಬಾಣಗಳಿಂದ ಶತಾನೀಕನನ್ನೂ, ಮೂರು ಬಾಣಗಳಿಂದ ಅರ್ಜುನನನ್ನೂ ಮೂರು ಬಾಣಗಳಿಂದ ಭೀಮನನ್ನೂ ಏಳು ಬಾಣಗಳಿಂದ ನಕುಲನನ್ನೂ ಹನ್ನೆರಡು ಬಾಣಗಳಿಂದ ಕೃಷ್ಣನನ್ನೂ ಹೊಡೆದ.
ತದಸ್ಯ ಕರ್ಮಾತಿಮನುಷ್ಯಕರ್ಮಣಃ
ಸಮೀಕ್ಷ್ಯ ಹೃಷ್ಟಾಃ ಕುರವೋಽಭ್ಯಪೂಜಯನ್ |
ಪರಾಕ್ರಮಜ್ಞಾಸ್ತು ಧನಂಜಯಸ್ಯ ತೇ
ಹುತೋಽಯಮಗ್ನಾವಿತಿ ತಂ ತು ಮೇನಿರೇ ||61||
ವೃಷಸೇನನ ಈ ಸಾಹಸ ಅತಿಮಾನುಷಕರ್ಮನ ಸಾಹಸವೆಂದು ಕಂಡು ಹೃಷ್ಟರಾದ ಕುರುಸೈನಿಕರು ಹೊಗಳಿದರು. ಅರ್ಜುನನ ಪರಾಕ್ರಮವನ್ನು ಬಲ್ಲವರು ಮಾತ್ರ ವೃಷಸೇನ ಅಗ್ನಿಯಲ್ಲಿ ಆಹುತಿಯಾದನೆಂದೇ ಭಾವಿಸಿದರು.
ತತಃ ಕಿರೀಟೀ ಪರವೀರಘಾತೀ
ಹತಾಶ್ವಮಾಲೋಕ್ಯ ನರಪ್ರವೀರಮ್ |
ಮಾದ್ರೀಸುತಂ ನಕುಲಂ ಲೋಕಮಧ್ಯೇ
ಸಮೀಕ್ಷ್ಯ ಕೃಷ್ಣಂ ಭೃಶವಿಕ್ಷತಂ ಚ ||62||
ತಮಭ್ಯಧಾವದ್ ವೃಷಸೇನಮಾಹವೇ
ಸ ಸೂತಜಸ್ಯ ಪ್ರಮುಖೇ ಸ್ಥಿತಂ ತದಾ ||63||
ಶತ್ರುವೀರನಾಶಕನಾದ ಅರ್ಜುನನು, ಶ್ರೇಷ್ಠಪುರುಷನಾದ ನಕುಲನು ಲೋಕದ ನಡುವೆ ವೃಷಸೇನನಿಂದ ಅಶ್ವರಹಿತನಾದುದನ್ನೂ ಕೃಷ್ಣನೂ ಬಹಳ ಗಾಯಗೊಂಡಿದ್ದನ್ನೂ ನೋಡಿ, ಕರ್ಣನ ಸಮಕ್ಷದಲ್ಲಿ ನಿಂತಿದ್ದ ವೃಷಸೇನನಿದಿರಿಗೆ ರಣದಲ್ಲಿ ಧಾವಿಸಿದ.
ತಮಾಪತಂತಂ ನರವೀರಮುಗ್ರಂ
ಮಹಾಹವೇ ಬಾಣಸಹಸ್ರಧಾರಿಣಮ್ |
ಅಭ್ಯಾಪತತ್ ಕರ್ಣಸುತೋ ಮಹಾರಥೋ
ಯಥೈವ ಚೇಂದ್ರಂ ನಮುಚಿಃ ಪುರಾತನೇ ||64||
ಉಗ್ರನಾದ ಪುರುಷವೀರನಾದ ಅರ್ಜುನನು ಸಾವಿರಾರು ಬಾಣಗಳನ್ನು ಧರಿಸುವವನು, ಮಹಾರಣದಲ್ಲಿ ತನ್ನಿದಿರಿಗೆ ಬಂದಾಗ, ಪ್ರಾಚೀನಕಾಲದಲ್ಲಿ ನಮುಚಿದಾನವನು ಇಂದ್ರನನ್ನು ಆಕ್ರಮಿಸಿದಂತೆ, ಮಹಾರಥನಾದ ವೃಷಸೇನನು ಅವನನ್ನು ಆಕ್ರಮಿಸಿದ.
ತತೋಽದ್ಭುತೇನೈಕಶತೇನ ಪಾರ್ಥಂ
ಶರೈರ್ವಿದ್ಧ್ವಾ ಸೂತಪುತ್ರಸ್ಯ ಪುತ್ರಃ |
ನನಾದ ನಾದಂ ಸುಮಹಾನುಭಾವೋ

ವಿದ್ವೇವ ಶಕ್ರಂ ನಮುಚಿಃ ಪುರಾ ವೈ ॥65॥
ಹಿಂದೆ ನಮುಚಿ ಇಂದ್ರನನ್ನು ಹೊಡೆದು ಗರ್ಜಿಸಿದಂತೆ ಮಹಾನುಭಾವ ವೃಷಸೇನನು ಅದ್ಭುತವಾದ ಒಂದು ನೂರು ಬಾಣಗಳಿಂದ ಮಹಾರಣದಲ್ಲಿ ಅರ್ಜುನನನ್ನು ಹೊಡೆದು ಗರ್ಜಿಸಿದ.
ಪುನಃ ಸ ಪಾರ್ಥಂ ವೃಷಸೇನ ಉಗ್ರೈ-
ರ್ಬಾಣೈರವಿಧ್ಯದ್ ಭುಜಮೂಲಮಧ್ಯೇ |
ತಥೈವ ಕೃಷ್ಣಂ ನವಭಿಃ ಸಮಾರ್ದಯತ್
ಪುನಶ್ಚ ಪಾರ್ಥಂ ದಶಭಿಃ ಶಿತಾಗ್ರೈಃ ॥66॥
ವೃಷಸೇನನು ಪುನಃ ಅರ್ಜುನನನ್ನು ಉಗ್ರವಾದ ಬಾಣಗಳಿಂದ ಬಾಹು ಮೂಲದ ಮಧ್ಯದಲ್ಲಿ ಹೊಡೆದ. ಕೃಷ್ಣನನ್ನೂ ಒಂಬತ್ತು ಬಾಣಗಳಿಂದ ಹೊಡೆದ. ಹರಿತವಾದ ತುದಿಯುಳ್ಳ ಹತ್ತು ಬಾಣಗಳಿಂದ ತಿರುಗಿ ಅರ್ಜುನನಿಗೆ ಹೊಡೆದ.
ಪೂರ್ವಂ ತಥಾ ವೃಷಸೇನೇನ ವಿದ್ಧೋ
ಮಹಾಜವೈಃ ಶ್ವೇತಹಯಃ ಶರೈಸ್ತೈಃ |
ಸಂರಂಭಮೀಷದ್ ಗಮಿತೋ ವಧಾಯ
ಕರ್ಣಾತ್ಮಜಸ್ಯಾಥ ಮನಃ ಪ್ರದಧ್ರೇ ॥67॥
ಮೊದಲಿಗೆ ವೃಷಸೇನನಿಂದ ಮಹಾವೇಗದ ಆ ಬಾಣಗಳಿಂದ ಹೊಡೆಸಿಕೊಂಡಾಗ ಅರ್ಜುನನನಿಗೆ ಅವನನ್ನು ಕೊಲ್ಲಲು ಸ್ವಲ್ಪ ಕೋಪ ಬಂದಿತ್ತು. ಇದೀಗ ಅವನು ಮನಸಿನಲ್ಲಿ ಅದಕ್ಕೆ ನಿರ್ಧಾರವನ್ನೇ ಮಾಡಿದ.
ತತಃ ಕಿರೀಟೀ ರಣಮೂರ್ಧ್ನಿ ಕೋಪಾತ್
ಕೃತ್ವಾ ತ್ರಿಶಾಖಾಂ ಭ್ರುಕುಟಿಂ ಲಲಾಟೇ |
ಮುಮೋಚ ತೂರ್ಣಂ ವಿಶಿಖಾನ್ಮಹಾತ್ಮಾ
ವಧೇ ಧೃತಃ ಕರ್ಣಸುತಸ್ಯ ಸಂಖ್ಯೇ ॥68॥
ಮಹಾತ್ಮಾ ಅರ್ಜುನನು ರಣದಲ್ಲಿ ವೃಷಸೇನನ ವಧ ನಿರ್ಧಾರ ಮಾಡಿಕೊಂಡು ಕೋಪದಿಂದ ಹಣೆಯಲ್ಲಿ ಹುಬ್ಬುಗಂಟಿಕ್ಕಿ ತ್ರಿವಳಿ ಮಾಡಿಕೊಂಡು ಬೇಗನೆ ಬಾಣಗಳನ್ನು ಎಸೆದ.
ಆರಕ್ತನೇತ್ರೋऽಂತಕಶತ್ರುಹಂತಾ
ಉವಾಚ ಕರ್ಣಂ ಭೃಶಮುತ್ಸ್ಮಯಂಸ್ತದಾ ॥69॥
ದುರ್ಯೋಧನಂ ದ್ರೌಣಿಮುಖಾಂಶ್ಚ ಸರ್ವಾ-
ನಯಂ ರಣೇऽಹಂ ವೃಷಸೇನಮುಗ್ರಮ್ |
ಸಂಪಶ್ಯತಃ ಕರ್ಣ ತವಾದ್ಯ ಸಂಖ್ಯೇ
ನಯಾಮಿ ಲೋಕಂ ನಿಶಿತೈಃ ಪೃಷತ್ಕೈಃ ॥70॥
ಯಮಸ್ಯ ಯಾವದ್ಧಿ ಜನಾ ವದಂತಿ
ಭವದ್ಭಿಃ ಸರ್ವೈರ್ಮಮ ಸೂನುರ್ಹತೋऽಸೌ |
ಏಕೋ ರಥೋ ಮದ್ವಿಹೀನಸ್ತರಸ್ವೀ
ಅಹಂ ವೀರಾಣಾಂ ಭವತಾಂ ಸಮಕ್ಷಮ್ ॥71॥
ಸಂರಕ್ಷ ೆಯತಾಂ ರಥಸಂಸ್ಥಾಃ ಸುತೋऽಯಂ
ಆದೌ ಹನಿಷ್ಯೇ ವೃಷಸೇನಮೇನಮ್ |
ಪಶ್ಚಾದ್ ವಧಿಷ್ಯೇ ತ್ವಾಮಪಿ ಸಂಪ್ರಮೂಢ-
ಮಹಂ ಹನಿಷ್ಯೇऽರ್ಜುನ ಆಜಿಮಧ್ಯೇ ॥72॥
ಕೋಪದಿಂದ ಕಣ್ಣು ಕೆಂಪು ಮಾಡಿಕೊಂಡು ಅಂತಕನಂತೆ ಶತ್ರುಹಂತಕನಾದ ಅರ್ಜುನನು ಬಹಳ ನಗುತ್ತ ಕರ್ಣನಿಗೆ ದುರ್ಯೋಧನ ಅಶ್ವತ್ಥಾಮ ಮುಂತಾದವರಿಗೆ ನುಡಿದ– `ಉಗ್ರನಾದ ವೃಷಸೇನನನ್ನು ಕರ್ಣ, ನೀನು ನೋಡುತ್ತಿರುವಂತೆಯೆ ನಾನು ರಣದಲ್ಲಿ ತೀಕ್ಷ್ಣವಾದ ಬಾಣಗಳಿಂದ ಯಮನ ಲೋಕಕ್ಕೆ ಅಟ್ಟುತ್ತೇನೆ. ಉತ್ತಮರಥಿಕನಾದ ಬಲಿಷ್ಠನಾದ ನನ್ನ ಮಗ ಅಭಿಮನ್ಯು ಏಕಾಕಿಯಾಗಿ ನನ್ನ ಸಹಾಯದಿಂದ ರಹಿತನಾಗಿದ್ದಾಗ ನೀವೆಲ್ಲರೂ ಸೇರಿ ಅವನನ್ನು ಕೊಂದಿರಿ' ಎಂದು ಜನರು ಈಗ ಹೇಳುತ್ತಿದ್ದಾರೆ. ವೀರರಾದ ನಿಮ್ಮೆಲ್ಲರ ಸಮಕ್ಷಮದಲ್ಲಿ ಮೊದಲಿಗೆ ಈ ವೃಷಸೇನನನ್ನು ಕೊಲ್ಲುತ್ತೇನೆ. ರಥದಲ್ಲಿದ್ದು ನೀವು ಈ ಮಗನನ್ನು ರಕ್ಷಿಸಿಕೊಳ್ಳಿ. ಬಳಿಕ, ಕರ್ಣ, ಮೂರ್ಖನಾದ ನಿನ್ನನ್ನು ಕೂಡ ಅರ್ಜುನನು ನಾನು ರಣದಲ್ಲಿ ಕೊಲ್ಲುತ್ತೇನೆ.
ತಮದ್ಯ ಮೂಲಂ ಕಲಹಸ್ಯ ಸಂಖ್ಯೇ
ದುರ್ಯೋಧನಾಪಾಶ್ರಯಜಾತದರ್ಪಮ್ |
ತ್ವಾಮದ್ಯ ಹಂತಾಸ್ಮಿ ರಣೇ ಪ್ರಸಹ್ಯ
ಅಸ್ಯೈವ ಹಂತಾ ಯುಧಿ ಭೀಮಸೇನಃ ॥73॥
ದುರ್ಯೋಧನನ ಆಶ್ರಯದಿಂದ ನಿನಗೆ ದರ್ಪ ಉಂಟಾಗಿದೆ. ಅದರಿಂದ ಕಲಹಕ್ಕೆ ಮೂಲನಾದ ನಿನ್ನನ್ನು ಈಗ ನಾನು ರಣದಲ್ಲಿ ಕೊಲ್ಲುವೆ, ಈ ದುರ್ಯೋಧನನನ್ನು ರಣದಲ್ಲಿ ಭೀಮ ಕೊಲ್ಲುತ್ತಾನೆ.
ದುರ್ಯೋಧನಸ್ಯಾಧಮಪೂರುಷಸ್ಯ
ಯಸ್ಯಾನಯಾದೇಷ ಮಹಾನ್ ಕ್ಷಯೋऽಭವತ್ ॥74॥
ಅಧಮಪುರುಷನಾದ ದುರ್ಯೋಧನನ ಅನೀತಿಯಿಂದ ಮಹಾವಿನಾಶ ಈಗ ಸಂಭವಿಸಿದೆ.'

ಸಂಜಯಃ
ಸ ಏವಮುಕತ್ವ ವಿನಿಮೃಜ್ಯ ಚಾಪಂ
ಲಕ್ಷ ್ಯಂ ಹಿ ಕೃತ್ವಾ ವೃಷಸೇನಮಾಜೌ |
ಮುಮೋಚ ಬಾಣಾನ್ ವಿಶಿಖಾನ್ಮಹಾತ್ಮಾ
ವಧಾಯ ರಾಜನ್ ಸೂತಪುತ್ರಸ್ಯ ಸಂಖೇ ||75||
ಸಂಜಯ ನುಡಿದ ರಾಜನೆ, ಮಹಾತ್ಮ ಅರ್ಜುನನು ಹೀಗೆ ನುಡಿದು ಬಿಲ್ಲನ್ನು ಸವರಿ ರಣದಲ್ಲಿ ವೃಷಸೇನನಿಗೆ ಗುರಿಇಟ್ಟು ಆ ಸೂತಪುತ್ರನ ವಧಕ್ಕಾಗಿ ಬಾಣಗಳನ್ನು ಹೊಡೆದ.
ವಿವ್ಯಾಧ ಚೈನಂ ದಶಭಿಃ ಪೃಷತ್ಕೈ-
ರ್ಮರ್ಮಸ್ವಶಂಕಂ ಪ್ರಸಭಂ ಕಿರೀಟೀ |
ಚಿಚ್ಛೇದ ಚಾಸ್ಯೇಷ್ವಸನಂ ಭುಜೌ ಚ
ಶರೈಶ್ಚತುರ್ಭಿಃ ಶಿರ ಏವ ಚೋಗ್ರೈಃ ||76||
ಅರ್ಜುನನು ವೃಷಸೇನನನ್ನು ಶಂಕೆ ಇಲ್ಲದೆ ಮರ್ಮಗಳಲ್ಲಿ ಒಮ್ಮೆಲೆ ಎಸೆದ ಹತ್ತು ಬಾಣಗಳಿಂದ ಚೆನ್ನಾಗಿ ಹೊಡೆದ. ಅವನ ಬಿಲ್ಲನ್ನೂ ಭುಜಗಳನ್ನೂ ಕತ್ತರಿಸಿದ. ಉಗ್ರವಾದ ನಾಲ್ಕು ಬಾಣಗಳಿಂದ ಶಿರಸ್ಸನ್ನೇ ತರಿದ.
ಸ ಪಾರ್ಥಬಾಣಾಭಿಹತಃ ಪಪಾತ
ರಥಾದ್ ವಿಬಾಹುರ್ವಿಶಿರಾ ಧರಾಯಾಮ್ |
ಸುಪುಷ್ಪಿತಃ ಪರ್ಣಧರೋಽತಿಕಾಯೋ
ವಾತೇರಿತಃ ಶಾಲ ಇವಾದ್ರಿಶೃಂಗಾತ್ ||77||
ವೃಷಸೇನನು ಅರ್ಜುನನ ಬಾಣಗಳಿಂದ ಹತನಾಗಿ ಭುಜಗಳನ್ನೂ ಶಿರಸ್ಸನ್ನೂ ಕಡಿದುಕೊಂಡು ರಥದಿಂದ ಒಳ್ಳೆಯ ಪುಷ್ಪಗಳಿಂದ ಎಲೆಗಳಿಂದ ಕೂಡಿದ ಎತ್ತರದ ಸಾಲವೃಕ್ಷವು ಬಿರುಗಾಳಿಯಿಂದ ಹೊಡೆಸಿಕೊಂಡು ಪರ್ವತ ಶಿಖರದಿಂದ ಬೀಳುವಂತೆ ನೆಲದಲ್ಲಿ ಬಿದ್ದ.

ಶಿರಃ ಕರೌ ಚೈವ ಧನುಶ್ಚ ಪಾರ್ಥ
ಏಕೇಷುಣಾ ವೃಷಸೇನಸ್ಯ ಸಂಖ್ಯೇ |
ಚಿಚ್ಛೇದ ಪಾರ್ಥೋರ್ಽ ಹ್ಯಂಗರಾಜಸ್ಯ ಸೈನ್ಯಂ
ಕೋಪಾಗ್ನಿನಾ ಚತುರಂಗಂ ದದಾಹ ||78||
ಅರ್ಜುನ ವೃಷಸೇನನ ತಲೆ ಭುಜ ಬಿಲ್ಲುಗಳನ್ನು ಕಡಿದ. ಕೋಪಾಗ್ನಿಯಿಂದ ಕರ್ಣನ ಚತುರಂಗಸೈನ್ಯವನ್ನೂ ಸುಟ್ಟ.
ತಂ ಪ್ರೇಕ್ಷ ್ಯ ಬಾಣಾಭಿಹತಂ ಪತಂತಂ
ರಥಾತ್ಸುತಂ ಸೂತಜಃ ಕ್ಷಿಪ್ರಕಾರೀ |
ರಥಂ ರಥೇನಾಶು ಜಗಾಮ ವೇಗಾತ್
ಕಿರೀಟಿನಃ ಪುತ್ರವಧಾಭಿತಪ್ತಃ ||79||
ಬಾಣದಿಂದ ಹತನಾಗಿ ರಥದಿಂದ ಮಗನು ಬೀಳುವುದನ್ನು ಕಂಡು ವೇಗದಿಂದ ಕಾರ್ಯಗಳನ್ನು ನಡೆಸುವ ಕರ್ಣನು ಅರ್ಜುನ ಮಾಡಿದ ಪುತ್ರವಧದಿಂದ ದುಃಖಿತನಾಗಿ ವೇಗವಾಗಿ ರಥದಿಂದ ಬೇಗನೆ ಹೊರಟ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ವೃಷಸೇನವಧೋ ನಾಮ ಏಕಾಶೀತಿತಮೋಽಧ್ಯಾಯಃ ||81||

ಎಂಬತ್ತೆರಡನೆಯ ಅಧ್ಯಾಯ
ಅರ್ಜುನರಥ ಕರ್ಣರಥದ ಮುಂದೆ ಬಂದು ನಿಂತಿತು.
ಸಂಜಯಃ
ತಮಾಯಾಂತಮಭಿಪ್ರೇಕ್ಷ ್ಯ ವೇಲೋದ್ವೃತ್ತಮಿವಾರ್ಣವಮ್ |
ಗರ್ಜಂತಂ ಸುಮಹಾಕಾಯಂ ದುರ್ನಿವಾರಂ ಸುರೈರಪಿ ||1||
ಅರ್ಜುನಂ ಪ್ರಾಹ ದಾಶಾರ್ಹಃ ಪ್ರಹಸ್ಯ ಪುರುಷರ್ಷಭಃ |
ಅಯಂ ಸ ರಥ ಆಯಾತಿ ಶ್ವೇತಾಶ್ವಃ ಶಲ್ಯಸಾರಥಿಃ ||2||
ಸಂಜಯನು ನುಡಿದ– ಮೇರೆಮೀರಿ ಬರುವ ಸಮುದ್ರದಂತೆ ಬರುತ್ತ ಗರ್ಜಿಸುತ್ತಿರುವ, ದೇವತೆಗಳಿಂದಲೂ ತಡೆಯಲಾಗದ ಮಹಾಕಾಯದ ಕರ್ಣನನ್ನು ಕಂಡು ಕೃಷ್ಣನು ನಕ್ಕು ಅರ್ಜುನನಿಗೆ ನುಡಿದ, `ಶಲ್ಯನ ಸಾರಥ್ಯದಲ್ಲಿ ಬಿಳಿಕುದುರೆಗಳನ್ನು ಹೂಡಿದ ರಥದಿಂದ ಕರ್ಣನು ಬರುತ್ತಿದ್ದಾನೆ.
ಯೇನ ತೇ ಸಹ ಯೋದ್ಧವ್ಯಂ ಸ್ಥಿರೋ ಭವ ಧನಂಜಯ |
ಪಶ್ಯ ಚೈನಂ ಸಮಾಯುಕ್ತಂ ರಥಂ ಕರ್ಣಸ್ಯ ಪಾಂಡವ ||3||
ಅವನೊಡನೆ ನೀನು ಯುದ್ಧ ಮಾಡಬೇಕಿದೆ, ಸ್ಥಿರವಾಗಿ ನಿಲ್ಲು, ಅರ್ಜುನ! ಒಳ್ಳೆಯ ಸಜ್ಜಾದ ಕರ್ಣನ ಈ ರಥವನ್ನು ನೋಡು.
ಶ್ವೇತವಾಜಿಸಮಾಯುಕ್ತಂ ಯುಕ್ತಂ ರಾಧಾಸುತೇನ ಚ |
ನಾನಾಪತಾಕಾಕಲಿಲಂ ಕಿಂಕಣೀಜಾಲಮಾಲಿನಮ್ ||4||
ಬಿಳಿಕುದುರೆಗಳನ್ನು ಹೂಡಿ ನಾನಾ ಪತಾಕೆಗಳಿಂದ ಅಲಂಕರಿಸಿ ಕಿರುಗಂಟೆಗಳ ಸಮೂಹಗಳ ಮೇಲೆ ತೊಡಿಸಿರುವ ರಥ ಕರ್ಣನಿಂದ

ಯುಕ್ತವಾಗಿ ಬರುತ್ತಿದೆ.
ಉಹ್ಯಮಾನಮಿವಾಕಾಶೇ ವಿಮಾನಂ ಪಾಂಡುರೈರ್ಹಯೈಃ |
ಧ್ವಜಂ ಚ ಪಶ್ಯ ಕರ್ಣಸ್ಯ ನಾಗಕಕ್ಷಂ ಮಹಾತ್ಮನಃ ||5||
ಆಕಾಶದಲ್ಲಿ ನಡೆಸುವ ವಿಮಾನದಂತಿದೆ. ಬಿಳಿಕುದುರೆಗಳಿಂದ ಕೂಡಿದೆ. `ನಾಗಕಕ್ಷ್ಯ' ಅಂದರೆ ಕರಿಯ ನಾಗರದಂತೆ ಕಪ್ಪಾದ ಭಯಂಕರವಾದ ಕಾಗೆಯ ಪ್ರತಿಮೆ ಮಹಾತ್ಮ ಕರ್ಣನ ಧ್ವಜವಿದು ಬರುವುದನ್ನು ನೋಡು.
ಆಖಂಡಲಧನುಃಪ್ರಖ್ಯಮುಲ್ಲಿಖಂತಮಿವಾಂಬರಮ್ |
ಪಶ್ಯ ಕರ್ಣಂ ಸಮಾಯಾಂತಂ ಧಾರ್ತರಾಷ್ಟ್ರಪ್ರಿಯೈಷಿಣಮ್ |
ಶರಧಾರಾ ವಿಮುಂಚಂತಂ ಧಾರಾಸಾರಮಿವಾಂಬುದಮ್ ||6||
ಕರ್ಣನ ರಥವು ಇಂದ್ರಧನುಸ್ಸಿನಂತೆ ಆಕಾಶವನ್ನು ಅಲಂಕರಿಸುತ್ತಿದೆ; ನೋಡು. ಮೋಡವು ಧಾರಾಕಾರವಾಗಿ ಮಳೆ ಸುರಿಸುವಂತೆ ಕರ್ಣನು ದುರ್ಯೋಧನನ ಪ್ರಿಯವನ್ನು ಬಯಸಿ ಬಾಣಗಳ ಮಳೆಗರೆಯುತ್ತಾನೆ.
ಏಷ ಮದ್ರೇಶ್ವರೋ ರಾಜಾ ರಥಾಗ್ರೇ ಪರ್ಯವಸ್ಥಿತಃ |
ನಿಯಚ್ಛತಿ ಹಯಾನಸ್ಯ ರಾಧೇಯಸ್ಯಾಮಿತೌಜಸಃ ||7||
ರಥದ ಅಗ್ರಭಾಗದಲ್ಲಿ ರಾಜಾ ಶಲ್ಯ ಕುಳಿತಿದ್ದಾನೆ. ಅಮಿತ ಪರಾಕ್ರಮಿಯಾದ ಕರ್ಣನ ಕುದುರೆಗಳನ್ನು ನಿಯಂತ್ರಿಸುತ್ತಾನೆ.
ಶೃಣು ದುಂದುಭಿನಿರ್ಘೋಷಂ ಶಂಖನಾದಂ ಚ ದಾರುಣಮ್ |
ಸಿಂಹನಾದಾಂಶ್ಚ ವಿವಿಧಾನ್ ಶೃಣು ಪಾಂಡವ ಸರ್ವಶಃ ||8||
ದುಂದುಭಿಧ್ವನಿಯನ್ನೂ ದಾರುಣವಾದ ಶಂಖನಾದವನ್ನೂ ನಾನಾ ಬಗೆಯ ಎಲ್ಲ ಸಿಂಹನಾದಗಳನ್ನೂ ಕೇಳು, ಅರ್ಜುನ.
ಅಂತರ್ಧಾಯ ಮಹಾಶಬ್ದಾನ್ ಕರ್ಣೇನಾಮಿತತೇಜಸಾ |
ದೋಧೂಯಮಾನಸ್ಯ ಭೃಶಂ ಧನುಷಃ ಶೃಣು ನಿಸ್ವನಮ್ ||9||
ಎಲ್ಲ ಮಹಾಶಬ್ದಗಳನ್ನೂ ಮೀರಿಸುವಂಥ, ಕರ್ಣನು ಅಮಿತಪರಾಕ್ರಮದಿಂದ ಬಹಳ ಓಲಾಡಿಸುವ ಧನುಸ್ಸಿನ ಶಬ್ದವನ್ನೂ ಕೇಳು.
ಏತೇ ದೀರ್ಯಂತಿ ಸಗಣಾಃ ಪಾಂಚಾಲಾನಾಂ ಮಹಾರಥಾಃ |
ದೃಷ್ಟ್ವಾ ಕೇಸರಿಣಂ ಕ್ರುದ್ಧಂ ಮೃಗಾ ಇವ ಮಹಾವನೇ ||10||
ಮಹಾ ಅರಣ್ಯದಲ್ಲಿ ಕ್ರುದ್ಧವಾದ ಸಿಂಹವನ್ನು ಕಂಡು ಜಿಂಕೆಗಳು ಕಂಗೆಡುವಂತೆ ಪಾಂಚಾಲರ ಮಹಾರಥರು ತಮ್ಮ ಕಡೆಯ ಯೋಧರೊಂದಿಗೆ ಕಂಗೆಡುತ್ತಿದ್ದಾರೆ.
ಸರ್ವಯತ್ನೇನ ಕೌಂತೇಯ ಹಂತುಮರ್ಹಸಿ ಸೂತಜಮ್ |
ನ ಹಿ ಕರ್ಣಶರಾನನ್ಯಃ ಸೋಢುಮುತ್ಸಹತೇಽನಘ ||11||
ಅರ್ಜುನ, ನೀನು ನಿನ್ನ ಸರ್ವಪ್ರಯತ್ನದಿಂದ ಕರ್ಣನನ್ನು ಕೊಲ್ಲಬೇಕು. ಕರ್ಣನ ಬಾಣಗಳನ್ನು ಬೇರೆ ಯಾವಾತನೂ ಸಹಿಸಲಾರ.
ಸದೇವಾಸುರಗಂದರ್ವಾಂಸ್ತ್ರೀನ್ ಲೋಕಾನ್ ಸಚರಾಚರಾನ್ |
ತ್ವಂ ಹಿ ಜೇತುಂ ರಣೇ ಶಕ್ತಸ್ತಥೈವ ವಿದಿತಂ ಮಮ ||12||
ದೇವ ಅಸುರ ಗಂಧರ್ವರಿಂದ ಕೂಡಿದ ಚರಾಚರಗಳಿಂದ ಸಮೇತವಾದ ಮೂರು ಲೋಕಗಳನ್ನು ರಣದಲ್ಲಿ ಜಯಿಸಲು ನೀನೇ ಶಕ್ತ. ನಾನು ಹಾಗೇ ತಿಳಿದಿದ್ದೇನೆ.
ಭೀಮಮುಗ್ರಂ ಮಹಾದೇವಂ ತ್ರ್ಯಕ್ಷಂ ಶರ್ವಂ ಕಪರ್ದಿನಮ್ |
ನ ಶಕ್ತಾ ದ್ರಷ್ಟುಮೀಶಾನಂ ಕಿಂ ಪುನರ್ಯೋಧಿತುಂ ಪ್ರಭುಮ್ ||13||
ಭಯಂಕರ ಉಗ್ರ ಮುಕ್ಕಣ್ಣ ಜಟಾಧಾರಿ ಮಹಾದೇವ ಈಶಾನನೆನಿಸಿದ ಪ್ರಭು ಶಿವನನ್ನು ಯಾರೂ ನೋಡಲೂ ಶಕ್ತರಲ್ಲ. ಅವನೊಂದಿಗೆ ಹೋರಾಡಲು ಶಕ್ತರಲ್ಲ ಎಂದು ಬೇರೇನು ಹೇಳಬೇಕು?
ತ್ವಯಾ ಸಾಕ್ಷಾನ್ಮಹಾದೇವಃ ಸರ್ವಭೂತಶಿವಃ ಶಿವಃ |
ಯುದ್ಧೇನಾರಾಧಿತಃ ಸ್ಥಾಣುರ್ದೇವಾಶ್ಚ ವರದಾಸ್ತವ ||14||
ಎಲ್ಲ ಜಂತುಗಳಿಗೂ ಸುಖನೀಡುವ ಸಾಕ್ಷಾತ್ ಮಹಾದೇವ ಶಿವನನ್ನು ನೀನು ಯುದ್ಧದಿಂದ ಆರಾಧಿಸಿರುವೆ. ಶಿವನೂ ದೇವತೆಗಳೂ ನಿನಗೆ ವರ ನೀಡಿದ್ದಾರೆ.
ತಸ್ಯ ಪಾರ್ಥ ಪ್ರಸಾದೇನ ದೇವದೇವಸ್ಯ ಶೂಲಿನಃ |
ಜಹಿ ಕರ್ಣಂ ಮಹಾಬಾಹೋ ನಮುಚಿಂ ವೃತ್ರಹಾ ಯಥಾ |
ಶ್ರೇಯಸ್ತೇಽಸ್ತು ಸದಾ ಪಾರ್ಥ ಯುದ್ಧೇ ಜಯಮವಾಪ್ನುಹಿ ||15||
ದೇವದೇವ ಶಿವನ ಅನುಗ್ರಹದಿಂದ, ಮಹಾಬಾಹು ಅರ್ಜುನ! ಇಂದ್ರನು ನಮುಚಿ ದಾನವನನ್ನು ಕೊಂದಂತೆ ನೀನು ಕರ್ಣನನ್ನು ಕೊಲ್ಲು. ಅರ್ಜುನ, ನಿನಗೆ ಸದಾ ಶ್ರೇಯಸ್ಸಾಗಲಿ, ಯುದ್ಧದಲ್ಲಿ ಜಯಶಾಲಿಯಾಗು.
ಅರ್ಜುನಃ
ಧ್ರುವ ಏವ ಜಯಃ ಕೃಷ್ಣ ಮಮ ನಾಸ್ತ್ಯತ್ರ ಸಂಶಯಃ |
ಸರ್ವಲೋಕಗುರುರ್ಯಸ್ತ್ವಂ ತುಷ್ಟೋಽಸಿ ಮಧುಸೂದನ ||16||
ಅರ್ಜುನ ನುಡಿದ– ಕೃಷ್ಣ, ನನಗೆ ನಿಶ್ಚಯವಾಗಿ ಜಯವೆ, ಇದರಲ್ಲಿ ಸಂಶಯವಿಲ್ಲ. ಸರ್ವಲೋಕೇಶ್ವರನು ನೀನು ನನಗೆ ಒಲಿದಿರುವೆ ತಾನೆ?
ಚೋದಯಾಶ್ವಾನ್ ಹೃಷೀಕೇಶ ರಥಂ ಮಮ ಮಹಾರಥ |
ನಾಹತ್ವಾ ಸಮರೇ ಶತ್ರುಂ ನಿವರ್ತಿಷ್ಯತಿ ಫಲ್ಗುನಃ ||17||

ಮಹಾರಥನೆ, ಕೃಷ್ಣ, ನನ್ನ ಕುದುರೆಗಳನ್ನು, ರಥವನ್ನು ನಡೆಸು. ರಣದಲ್ಲಿ ಶತ್ರುವನ್ನು ಕೊಲ್ಲದೆ ಅರ್ಜುನ ಹಿಂತಿರುಗುವುದಿಲ್ಲ.
ಅದ್ಯ ಕರ್ಣಂ ಹತಂ ಪಶ್ಯ ಮಚ್ಛರೈಃ ಶಕಲೀಕೃತಮ್ ।
ಮಾಂ ವಾ ದ್ರಕ್ಷ್ಯಸಿ ಗೋವಿಂದ ಕರ್ಣೇನ ನಿಹತಂ ಶರೈಃ ॥18॥
ಇಂದು ನನ್ನ ಬಾಣಗಳಿಂದ ಹೊಡೆಸಿಕೊಂಡು ಕರ್ಣನು ಚೂರಾಗುವುದನ್ನು ನೋಡು, ಇಲ್ಲವೆ, ಕೃಷ್ಣ, ನಾನಾದರೂ ಕರ್ಣನ ಬಾಣಗಳಿಂದ ಹತನಾಗುವುದನ್ನು ನೋಡುವೆ.
ಉಪಸ್ಥಿತಮಿದಂ ಘೋರಂ ಯುದ್ಧಂ ತ್ರೈಲೋಕ್ಯಮೋಹನಮ್ ।
ಯಜ್ಜನಾಃ ಕಥಯಿಷ್ಯಂತಿ ಯಾವದ್ಭೂಮಿರ್ಧರಿಷ್ಯತಿ ॥19॥
ಮೂರ್ಲೋಕವನ್ನು ಮೈಮರೆಸುವ ಘೋರಯುದ್ಧ ಇದೀಗ ನಡೆಯಲಿದೆ. ಅದನ್ನು ಮುಂದೆ ಭೂಮಿ ಇರುವಷ್ಟು ಕಾಲ ಜನರು ಹೇಳಿಕೊಳ್ಳಲಿದ್ದಾರೆ.
ಸಂಜಯಃ
ಏವಂ ಬ್ರುವಂಸ್ತದಾ ಪಾರ್ಥಃ ಕೃಷ್ಣಮಕ್ಲಿಷ್ಟಕಾರಿಣಮ್ ।
ಪ್ರತ್ಯುದ್ಯಯೌ ರಥೇನಾಶು ಗಜಂ ಪ್ರತಿಗಜೋ ಯಥಾ ॥20॥
ಸಂಜಯನು ನುಡಿದ– ಹೀಗೆ ಅರ್ಜುನನು ಅನಾಯಾಸವಾಗಿ ಕರ್ಮಮಾಡುವ ಕೃಷ್ಣನಿಗೆ ಹೇಳಿ, ಆನೆಗೆ ಇದಿರಾಗಿ ವಿರೋಧಿ ಆನೆ ನುಗ್ಗುವಂತೆ, ರಥದಿಂದ ಬೇಗನೆ ಮುಂದೆ ನುಗ್ಗಿದ.
ಪುನಶ್ಚಾಹ ಮಹಾತೇಜಾಃ ಪಾರ್ಥಃ ಕೃಷ್ಣಮರಿಂದಮಮ್ ।
ಚೋದಯಾಶ್ವಾನ್ ಹೃಷೀಕೇಶ ಕಾಲೋಽಯಮತಿವರ್ತತೇ ॥21॥
ಮಹಾಪರಾಕ್ರಮಿ ಅರ್ಜುನನು ಶತ್ರುನಾಶಕನಾದ ಕೃಷ್ಣನಿಗೆ ನುಡಿದ, `ಕುದುರೆಗಳನ್ನು ನಡೆಸು ಕೃಷ್ಣ! ಕಾಲ ಮೀರುತ್ತಿದೆ'
ಏವಮುಕ್ತಸ್ತದಾ ತೇನ ಪಾಂಡವೇನ ಮಹಾತ್ಮನಾ ॥22॥
ಜಯೇನ ಸಂಪೂಜ್ಯ ಸ ಪಾಂಡವಂ ತದಾ
ಪ್ರಚೋದಯಾಮಾಸ ಹಯಾನ್ ಮನೋಜವಾನ್ ।
ಸ ಪಾಂಡುಪುತ್ರಸ್ಯ ರಥೋ ಮನೋಜವಃ
ಕ್ಷಣೇನ ಕರ್ಣಸ್ಯ ರಥಾಗ್ರಗೋಽಭವತ್ ॥23॥
ಮಹಾತ್ಮ ಅರ್ಜುನನು ಹೀಗೆ ನುಡಿದಾಗ ಕೃಷ್ಣನು ಅರ್ಜುನನನ್ನು ಜಯವಾಗ ಲೆಂದು ಹರಸಿ ಮನೋವೇಗದ ಕುದುರೆಗಳನ್ನು ನಡೆಸಿದ. ಮನೋವೇಗವುಳ್ಳ ಅರ್ಜುನನ ಆ ರಥವು ಕ್ಷಣದಲ್ಲಿ ಕರ್ಣನ ರಥದ ಮುಂದೆ ಬಂದು ನಿಂತಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ದ್ವ್ಯಶೀತಿತಮೋಽಧ್ಯಾಯಃ ॥82॥

ಮಹಾಭಾರತತಾತ್ಪರ್ಯನಿರ್ಣಯ
ಏಕೇನ ಬಾಣೇನ ಸುತೇ ಹತೇ ಸ್ವೇ
ವೈಕರ್ತನೋ ವಾಸವಿಮಭ್ಯಧಾವತ್ ।
ತಯೋರಭೂದ್ ದ್ವೈರಥಯುದ್ಧಮದ್ಭುತಂ
ಸರ್ವಾಸ್ತ್ರವಿದ್ವರಯೋರುಗ್ರರೂಪವ್ ॥165॥
ಅರ್ಜುನನ ಒಂದೇ ಬಾಣದಿಂದ ತನ್ನ ಮಗ ವೃಷಸೇನ ಹತನಾದಾಗ ಕರ್ಣ ಅರ್ಜುನನ ಇದಿರಿಗೆ ಧಾವಿಸಿ ಬಂದ. ಎಲ್ಲ ಅಸ್ತ್ರಜ್ಞರೊಳಗೆ ಅಗ್ರಗಣ್ಯರಾದ ಅವರಿಬ್ಬರೊಳಗೆ ಭಯಂಕರವಾದ ಅದ್ಭುತ, ದ್ವಂದ್ವ ರಥಯುದ್ಧ ನಡೆಯಿತು.
ಪಕ್ಷಗ್ರಹಾಸ್ತತ್ರ ಸುರಾಸುರಾಸ್ತಯೋ-
ರನ್ಯೇ ಚ ಜೀವಾ ಗಗನಂ ಸಮಾಶ್ರಿತಾಃ ।
ಮಹಾನ್ ವಿವಾದೋಪ್ಯಭವತ್ ತಯೋಃ ಕೃತೇ
ತದಾ ಗಿರೀಶೋಽವದದಬ್ಜಯೋನಿವ್ ॥166॥
ದೇವತೆಗಳೂ ಅಸುರರೂ ಅವರೀರ್ವರ ಪಕ್ಷಗಳನ್ನು ಹಿಡಿದರು. ಇತರ ಚೇತನರೂ ನೋಡಲು ಆಕಾಶದಲ್ಲಿ ನಿಂತರು. ಆ ಈರ್ವರಿಗಾಗಿ ದೊಡ್ಡ ವಿವಾದವೇ ನಡೆಯಿತು. ಆಗ ಶಿವ ಬ್ರಹ್ಮನಿಗೆ ಹೇಳಿದ.
ಸುರಾಸುರಾಣಾಂ ಭೀಮದುರ್ಯೋಧನೌ ದ್ವೌ
ಸಮಾಶ್ರಯೌ ತತ್ಪ್ರಿಯೌ ಕರ್ಣಪಾರ್ಥೌ ।
ಪ್ರಾಣೋಪಮೌ ತೇನ ಚೈತತ್ಕೃತೇ ತೇ
ಸುರಾಸುರಾಃ ಕರ್ತುಮಿಚ್ಛಂತಿ ಯುದ್ಧಮ್ ॥167॥
`ದೇವತೆಗಳಿಗೂ ಅಸುರರಿಗೂ ಭೀಮ ಮತ್ತು ದುರ್ಯೋಧನರು ಆಶ್ರಯಭೂತರು. ಆ ಭೀಮದುರ್ಯೋಧನರಿಗೆ ಪ್ರಿಯರು, ಪ್ರಾಣಕ್ಕೆ ಸಮಾನರು ಅರ್ಜುನಕರ್ಣರು. ಅದರಿಂದ ಈ ಇಬ್ಬರಿಗಾಗಿ ದೇವತೆಗಳೂ ಅಸುರರೂ ಪರಸ್ಪರ ಯುದ್ಧಮಾಡಲು ಬಯಸಿದ್ದಾರೆ.
ತದಾ ವಿನಾಶೋ ಜಗತಾಂ ಮಹಾನ್ ಸ್ಯಾತ್
ತೇನಾನಯೋಃ ಸಮಮೇವಾಸ್ತು ಯುದ್ಧಮ್ ।
ಇತೀರಿತೇ ವಾಸವಃ ಪದ್ಮಯೋನಿಂ
ಜಗಾದ ಕೃಷ್ಣೋ ಯತ್ರ ಜಯಶ್ಚ ತತ್ರ ॥168॥

ಅದರಿಂದ ಲೋಕಗಳಿಗೆ ಮಹಾವಿನಾಶ ಉಂಟಾದೀತು. ಅದರಿಂದ ಅರ್ಜುನ ಕರ್ಣರಿಗೆ ಯುದ್ಧ ಸಮವೇ ಆಗಲಿ' ಹೀಗೆ ಶಿವ ಹೇಳಿದಾಗ ಇಂದ್ರ ಬ್ರಹ್ಮನಿಗೆ ಹೇಳಿದ- `ಯಾರ ಪಕ್ಷದಲ್ಲಿ ಕೃಷ್ಣನಿರುವನೋ ಅವನ ಪಕ್ಷದಲ್ಲಿ ಜಯ ನಿಶ್ಚಿತ.
ಕಾಮೋ ನ ಕೃಷ್ಣಸ್ಯ ಮೃಷಾ ಭವೇದ್ಧಿ
ಕಾಮೋಽಸ್ಯ ಪಾರ್ಥಸ್ಯ ಜಯಂ ಪ್ರದಾತುಮ್ |
ಇತ್ಯೂಚಿವಾನ್ ವಾಸವಃ ಫಲ್ಗುನಸ್ಯ
ಜಯೋಽಸ್ತು ಕರ್ಣಸ್ಯ ವಧಸ್ತಥೇತಿ |
ಉಕ್ತತ್ವಽನಮತ್ ಕಂಜಭವಸ್ತಥೇತಿ
ಪ್ರಾಹಾಸುರಾನ್ ದೇವತಾಶ್ಚಾಬಭಾಷೇ ॥169॥
ಶ್ರೀಕೃಷ್ಣನ ಸಂಕಲ್ಪ ಎಂದೂ ಹುಸಿಯಾಗುವುದಿಲ್ಲ. ಅವನು ಅರ್ಜುನನಿಗೆ ಜಯ ನೀಡಲು ಸಂಕಲ್ಪ ಮಾಡಿದ್ದಾನೆ. ಹೀಗೆ ಹೇಳಿದ ದೇವೇಂದ್ರ ಅರ್ಜುನನಿಗೆ ಜಯವಾಗಲಿ, ಕರ್ಣನ ವಧೆಯಾಗಲಿ ಎಂದು ಹೇಳಿ ಬ್ರಹ್ಮನನ್ನು ನಮಸ್ಕರಿಸಿದ. ಬ್ರಹ್ಮನೂ `ಹಾಗೇ ಆಗಲಿ' ಎಂದ. ಬಳಿಕ ಅಸುರರಿಗೂ ದೇವತೆಗಳಿಗೂ ಹೀಗೆ ಹೇಳಿದ.
ನ ಕರ್ಣಾರ್ಜುನಯೋರರ್ಥೇ ವಿರೋಧಂ ಕುರುತ ಕ್ವಚಿತ್ |
ಭೀಮದುರ್ಯೋಧನಾರ್ಥೇ ವಾ ಪಶ್ಯಂತ್ವೇವ ಚ ಸಂಯುಗಮ್ |
ಇತ್ಯುಕ್ತೇ ಶಾಂತಿಮಾಪನ್ನಾ ದದೃಶುಃ ಸಂಯುಗಂ ತಯೋಃ ॥170॥
`ಕರ್ಣಾರ್ಜುನರಿಗಾಗಲಿ ಭೀಮದುರ್ಯೋಧನರಿಗಾಗಲಿ ಎಂದೂ ಜಗಳಾಡಬೇಡಿ. ಅವರ ಯುದ್ಧವನ್ನು ಮಾತ್ರ ನೋಡಿರಿ' ಎಂದು ಬ್ರಹ್ಮ ನುಡಿದಾಗ ಎಲ್ಲರೂ ಶಾಂತರಾಗಿ ಕರ್ಣಾರ್ಜುನ ಯುದ್ಧವನ್ನು ವೀಕ್ಷಿಸಲು ತೊಡಗಿದರು.

ಎಂಬತ್ತಮೂರನೆಯ ಅಧ್ಯಾಯ
ಕರ್ಣಾರ್ಜುನರ ಜಯಾಪಜಯ ವಿಷಯದಲ್ಲಿ ಅಂತರಿಕ್ಷದಲ್ಲಿ ವಾದವಿವಾದಗಳು. ದೇವತೆಗಳು ಅರ್ಜುನ ಪಕ್ಷವನ್ನೂ ಅಸುರರು ಕರ್ಣಪಕ್ಷ ವನ್ನೂ ವಹಿಸಿದರು. ಅರ್ಜುನನಿಗೇ ಜಯವೆಂದು ಬ್ರಹ್ಮರುದ್ರರ ಘೋಷಣೆ.
ಸಂಜಯಃ
ವೃಷಸೇನಂ ಹತಂ ದೃಷ್ಟ್ವಾ ಶೋಕಾಮರ್ಷಸಮನ್ವಿತಃ |
ಮುಕ್ತ್ವಾ ಶೋಕೋದ್ಭವಂ ವಾರಿ ನೇತ್ರಾಭ್ಯಾಂ ಸಹಸಾ ವೃಷಃ ॥1॥
ರಥೇನ ಕರ್ಣಸ್ತೇಜಸ್ವೀ ಜಗಾಮಾಭಿಮುಖೋ ರಿಪೂನ್ |
ಯುದ್ಧಾಯಾಮರ್ಷತಾಮ್ರಾಕ್ಷಃ ಸಮಾಹೂಯ ಧನಂಜಯಮ್ ॥2॥
ಸಂಜಯ ನುಡಿದ– ವೃಷಸೇನನು ಹತನಾದುದನ್ನು ಕಂಡು ಶೋಕ ಅಸಹನೆಗಳಿಂದ ಕೂಡಿದ ಪರಾಕ್ರಮಿಯಾದ ಕರ್ಣನು ಒಡನೆ ಶೋಕದ ಕಣ್ಣೀರನ್ನು ಸುರಿಸಿ, ಅಸಹನೆಯಿಂದ ಕಣ್ಣು ಕೆಂಪು ಮಾಡಿಕೊಂಡು ರಥದಿಂದ ಶತ್ರುಗಳಿಗೆ ಇದಿರಾಗಿ ನಡೆದ. ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಿದ.
ತೌ ರಥೌ ಸೂರ್ಯಸಂಕಾಶೌ ವೈಯಾಘ್ರಪರಿವಾರಣೌ |
ಸಮೇತೌ ದದೃಶುಸ್ತತ್ರ ದ್ವಾವಿವಾರ್ಕೌ ಸಮಾಗತೌ ॥3॥
ಹುಲಿಯ ಚರ್ಮವನ್ನು ಹೊದ್ದಿಸಿದ ಸೂರ್ಯನಂತೆ ಬೆಳಗುವ ಆ ಎರಡು ರಥಗಳು ಸೇರಿದಾಗ ಇಬ್ಬರು ಸೂರ್ಯರೇ ಸೇರಿದಂತೆ ಜನರು ಕಂಡರು.
ಶ್ವೇತಾಶ್ವೌ ಪುರುಷಾದಿತ್ಯಾವಾಸ್ಥಿತಾವರಿಮರ್ದನೌ |
ಶುಶುಭಾತೇ ಮಹಾತ್ಮಾನೌ ಚಂದ್ರಾದಿತ್ಯೌ ಯಥಾ ದಿವಿ ॥4॥
ಬಿಳಿ ಕುದುರೆಗಳುಳ್ಳ ಶತ್ರುನಾಶಕರಾದ ಆ ಇಬ್ಬರು ಪುರುಷಶ್ರೇಷ್ಠರು ರಥದಲ್ಲಿ ನಿಂತು ಆಕಾಶದಲ್ಲಿ ನಿಂತ ಮಹಾತ್ಮರಾದ ಚಂದ್ರಸೂರ್ಯರಂತೆ ಕಂಗೊಳಿಸಿದರು.
ತೌ ದೃಷ್ಟ್ವಾ ವಿಸ್ಮಯಂ ಜಗ್ಮುಃ ಸರ್ವಭೂತಾನಿ ಮಾರಿಷ |
ತ್ರೈಲೋಕ್ಯವಿಜಯೇ ಯತ್ತಾವಿಂದ್ರವೈರೋಚನಾವಿವ ॥5॥
ಮೂರ್ಲೋಕವನ್ನು ಗೆಲ್ಲುವ ಪ್ರಯತ್ನದಲ್ಲಿದ್ದ ಇಂದ್ರ ಬಲಿಚಕ್ರವರ್ತಿಗಳಂತೆ ಕರ್ಣಾರ್ಜುನರರನ್ನು ಕಂಡು ಎಲ್ಲ ಜನರೂ ವಿಸ್ಮಯಗೊಂಡರು.
ರಥಜ್ಯಾತಳನಿರ್ಹ್ರಾದೈರ್ಬಾಣಶಂಖರವೈರಪಿ |
ತೌ ರಥಾವಭಿಧಾವಂತೌ ಸಮಾಲೋಕ್ಯ ಮಹೀಕ್ಷಿತಾಮ್ ॥6॥
ಧ್ವಜೌ ಚ ದೃಷ್ಟ್ವಾ ಸಂಸಕ್ತೌ ವಿಸ್ಮಯಃ ಸಮಪದ್ಯತ |
ಹಸ್ತಿಕಕ್ಷ್ಯಾಂ ಚ ಕರ್ಣಸ್ಯ ವಾನರಂ ಚ ಕಿರೀಟಿನಃ ॥7॥
ರಥ ಹೆದೆ ಹಸ್ತತಲ ಶಬ್ದಗಳಿಂದಲೂ ಬಾಣಶಂಖಗಳ ಧ್ವನಿಗಳಿಂದಲೂ ಯುಕ್ತವಾಗಿ ಎರಡು ರಥಗಳು ಪರಸ್ಪರ ನುಗ್ಗುವುದನ್ನೂ , ಕರ್ಣನ ಕಾಕಧ್ವಜ ಅರ್ಜುನನ ಕಪಿಧ್ವಜಗಳು ಪರಸ್ಪರ ವಿರೋಧಿಸುವುದನ್ನೂ ಕಂಡು ರಾಜರೆಲ್ಲರಿಗೆ ವಿಸ್ಮಯ ಉಂಟಾಯಿತು.
ತೌ ರಥೌ ಸಂಪ್ರಸಕ್ತೌ ಚ ದೃಷ್ಟ್ವಾ ಭಾರತ ಪಾರ್ಥಿವಾಃ |
ಸಿಂಹನಾದರವಾಂಶ್ಚಕ್ರುಃ ಸಾಧುವಾದಾಂಶ್ಚ ಪುಷ್ಕಲಾನ್ ॥8॥
ಆ ಎರಡು ರಥಗಳು ಪರಸ್ಪರ ಇದಿರಿಸಿದ್ದನ್ನು ಕಂಡು ರಾಜರು ಸಿಂಹನಾದ ಧ್ವನಿಗಳನ್ನೂ ಮಾಡಿದರು. `ಭಲೆ' ಎಂದೂ ಹೊಗಳಿದರು.
ಶ್ರುತ್ವಾ ತು ದ್ವೈರಥಂ ತಾಭ್ಯಾಂ ತತ್ರ ಯೋಧಾಃ ಸಮಂತತಃ |

ಚಕ್ರುರ್ಬಾಹುವಲಂ ಚೈವ ತಥಾ ಚೇಲವಲಂ ಮಹತ್ ॥9॥
ಎರಡು ರಥಗಳ ಯುದ್ಧ ನಡೆಯುತ್ತದೆ ಎಂದು ಕೇಳಿ ಎಲ್ಲ ಯೋಧರು ಕೈವಾರಿಸಿದರು. ಬಟ್ಟೆಯಾಡಿಸಿದರು.
ಆಜಗ್ಮುಃ ಕುರವಸ್ತತ್ರ ವಾದಿತ್ರಾನುಗತಾಸ್ತದಾ |
ಕರ್ಣಂ ಪ್ರಹರ್ಷಯಂತಶ್ಚ ಶಂಖಾನ್ ದಧ್ಮುಶ್ಚ ಪುಷ್ಕಲಾನ್ ॥10॥
ಕೌರವರು ಕರ್ಣನನ್ನು ಹುರಿದುಂಬಿಸುವುದಕ್ಕಾಗಿ ವಾದ್ಯಘೋಷಗಳೊಂದಿಗೆ ಅಲ್ಲಿಗೆ ಬಂದರು. ಬಹಳ ಶಂಖನಾದ ಮಾಡಿದರು.
ತಥೈವ ಪಾಂಡವಾಃ ಸರ್ವೇ ಹರ್ಷಯಂತೋ ಧನಂಜಯಮ್ |
ತೂರ್ಯಶಂಖನಿನಾದೇನ ದಿಶಃ ಸರ್ವಾ ವ್ಯನಾದಯನ್ ॥11॥
ಪಾಂಡವರೂ ಹಾಗೇ ಎಲ್ಲರೂ ಅರ್ಜುನನನ್ನು ಹುರಿದುಂಬಿಸುವುದಕ್ಕೆ ವಾದ್ಯ ಶಂಖನಾದಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿಸಿದರು.
ಕ್ಷ್ವೇಡಿತಾಸ್ಫೋಟಿತೋತ್ಕ್ರುಷ್ಟೈಸ್ತುಮುಲಂ ಸರ್ವತೋಽಭವತ್ |
ಬಾಹುಘೋಷಾಶ್ಚ ವೀರಾಣಾಂ ಕರ್ಣಾರ್ಜುನಸಮಾಗಮೇ ॥12॥
ವೀರರು ಗರ್ಜನೆ ಕೈಚಪ್ಪಾಳೆ ಕೂಗುಗಳಿಂದ ಭುಜತಟ್ಟುವುದರಿಂದ ಕರ್ಣಅರ್ಜುನರ ಸಮಾಗಮದಲ್ಲಿ ಎಲ್ಲೆಡೆ ದೊಡ್ಡಗದ್ದಲ ಉಂಟಾಯಿತು.
ತೌ ದೃಷ್ಟ್ವಾ ಪುರುಷವ್ಯಾಘ್ರೌ ರಥಸ್ಥೌ ರಥಿನಾಂ ವರೌ |
ಪ್ರಗೃಹೀತಮಹಾಚಾಪೌ ಶರಶಕ್ತಿಗದಾಯುಧೌ |
ವರ್ಮಿಣೌ ಬದ್ಧನಿಸಿತ್ರಂಶೌ ಶ್ವೇತಾಶ್ವೌ ಶಂಖಶೋಭಿನೌ ॥13॥
ರಥಿಕಶ್ರೇಷ್ಠರಾದ ಪುರುಷಶ್ರೇಷ್ಠರಾದ ಕರ್ಣಅರ್ಜುನರು ದೊಡ್ಡಬಿಲ್ಲು ಹಿಡಿದು ಬಾಣಶಕ್ತಿ ಗದಾಯುಧಗಳನ್ನು ಧರಿಸಿ ಕವಚತೊಟ್ಟು ಸೊಂಟಕ್ಕೆ ಕತ್ತಿ ಕಟ್ಟಿಕೊಂಡು ಶಂಖಗಳಿಂದ ಶೋಭಿಸುತ್ತ ಬಿಳಿಕುದುರೆ ಕಟ್ಟಿದ ರಥದಲ್ಲಿ ನಿಂತುದನ್ನು ಕಂಡು ಸಿದ್ಧಚಾರಣಸಮೂಹಗಳಿಗೆ ವಿಸ್ಮಯ ಉಂಟಾಯಿತು.
ಕೃಷ್ಣಶಲ್ಯರಥೋಪೇತೌ ತುಲ್ಯರೂಪೌ ಮಹಾರಥೌ |
ಸಿಂಹಸ್ಕಂಧೌ ಸಿಂಹಭುಜೌ ರಕ್ತಾಕ್ಷೌ ಹೇಮಮಾಲಿನೌ ॥14॥
ಕೃಷ್ಣಶಲ್ಯರು ನಡೆಸುವ ರಥಗಳುಳ್ಳವರು, ಇಬ್ಬರೂ ಒಂದೇರೀತಿ ಕಾಣುವ ಮಹಾರಥರು. ಸಿಂಹದ ಹೆಗಲು ಭುಜಗಳುಳ್ಳವರು ಕೆಂಪುಕಣ್ಣಿನವರು ಬಂಗಾರದ ಮಾಲೆ ತೊಟ್ಟವರು.
ಚಾಪವಿದ್ಯುಲ್ಲತೋಪೇತೌ ಶಸ್ತ್ರಸಂಪತ್ತಿಶೋಭಿನೌ |
ಚಾಮರವ್ಯಜನೋಪೇತೌ ಶ್ವೇತಚ್ಛತ್ರಾಭಿಶೋಭಿನೌ ॥15॥
ಮಿಂಚಿನ ಬಳ್ಳಿಯಂತಹ ಬಿಲ್ಲು ಹಿಡಿದವರು ಶಸ್ತ್ರಸಂಪತ್ತುಗಳಿಂದ ಶೋಭಿಸು ವವರು. ಚಾಮರ ಬೀಸಣಿಗೆಗಳುಳ್ಳವರು. ಶ್ವೇತಚ್ಛತ್ರಗಳಿಂದ ಶೋಭಿಸುವವರು.
ತೂಣೀರವರಸಂಪನ್ನೌ ದ್ವಾವಪಿ ಸ್ಮ ಸುದರ್ಶನೌ ॥16॥
ಒಳ್ಳೆ ಬತ್ತಳಿಕೆಗಳುಳ್ಳ ಇಬ್ಬರೂ ನೋಡಲು ಸುಂದರಾಕಾರದವರು.
ರಕ್ತಚಂದನದಿಗ್ಧಾಂಗೌ ಸಮದೌ ವೃಷಭಾವಿವ |
ಸಿಂಹಸ್ಕಂಧಪ್ರತೀಕಾಶೌ ವ್ಯೂಢೋರಸ್ಕೌ ಮಹಾಬಲೌ |
ಅನ್ಯೋನ್ಯಸ್ಪರ್ಧಿನೌ ರಾಜನ್ನನ್ಯೋನ್ಯಸ್ಯ ವಧೈಷಿಣೌ ॥17॥
ಕೆಂಪುಗಂಧ ಮೈಗೆ ಪೂಸಿಕೊಂಡವರು, ಮದಭರಿತರು, ಗೂಳಿಗಳಂಥವರು, ಸಿಂಹದ ಹೆಗಲಿನಿಂದ ಶೋಭಿಸುವವರು. ಅಗಲವಾದ ಎದೆಯುಳ್ಳವರು ಮಹಾಬಲಿಗಳು ಪರಸ್ಪರ ಸ್ಪರ್ಧಿಗಳು ಪರಸ್ಪರ ವಧಾಕಾಂಕ್ಷಿಗಳು.
ಅನ್ಯೋನ್ಯಮಭಿಧಾವಂತೌ ಗೋಷ್ಠೇಷ್ವಿವ ಮಹರ್ಷಭೌ |
ಪ್ರಭಿನ್ನಾವಿವ ಮಾತಂಗೌ ಸಂರಬ್ಧಾವಿವ ಚಾಚಲೌ ॥18॥
ಕೊಟ್ಟಿಗೆಗಳಲ್ಲಿ ಪರಸ್ಪರ ಹೋರುವ ಗೂಳಿಗಳಂತೆ, ಮದಜಲ ಸುರಿಸುವ ಆನೆಗಳಂತೆ, ಕೋಪಗೊಂಡ ಎರಡು ಬೆಟ್ಟಗಳಂತೆ ಕಾಣುವವರು.
ಆಶೀವಿಷಸಮಪ್ರಖ್ಯೌ ಯಮಕಾಲಾಂತಕೋಪಮೌ ॥19॥
ವಿಷದ ಹಾವುಗಳಂಥವರು, ಯಮಕಾಲಾಂತಕರಂಥವರು.
ಇಂದ್ರವೃತ್ರಾವಿವ ಕ್ರುದ್ಧೌ ಸೂರ್ಯಾಚಂದ್ರಮಸಪ್ರಭೌ |
ಮಹಾಗ್ರಹಾವಿವ ಕ್ರೂರೌ ಯುಗಾಂತೇ ಸಮುಪಸ್ಥಿತೌ ॥20॥
ಇಂದ್ರವೃತ್ರರಂತೆ ಕುಪಿತರಾದವರು ಸೂರ್ಯಚಂದ್ರರಂತೆ ಬೆಳಗುವವರು. ಯುಗಪ್ರಳಯದಲ್ಲಿ ಉದಿಸಿದ ಮಹಾಗ್ರಹಗಳಂತೆ ಕ್ರೂರರು.
ದೇವಗರ್ಭೌ ದೇವಸಮೌ ದೇವತುಲ್ಯೌ ಚ ರೂಪತಃ |
ಯದೃಚ್ಛಯಾ ಸಮಾಯಾತೌ ಸೂರ್ಯಾಚಂದ್ರಮಸಾವಿವ ॥21॥
ದೇವಾಂಶಸಂಭೂತರು, ದೇವತೆಗಳಂತೆ ಬಲದಲ್ಲಿ ಸಮಾನರು, ರೂಪ ದಲ್ಲಿಯೂ ದೇವಸಮಾನರು, ದೈವಾತ್ ಭೂಮಿಗೆ ಬಂದವರು ಸೂರ್ಯ ಚಂದ್ರರಂಥವರು.
ಬಲಿನೌ ಸಮರೇ ದೃಪ್ತೌ ನಾನಾಶಸ್ತ್ರಧರೌ ಯುಧಿ ॥22॥
ಬಲಿಷ್ಠರು ರಣದಲ್ಲಿ ದರ್ಪಉಳ್ಳವರು ರಣದಲ್ಲಿ ನಾನಾ ಶಸ್ತ್ರ ಧರಿಸುವವರು.
ಉಭೌ ವರಾಯುಧಧರಾವುಭೌ ರಣಕೃತಶ್ರಮೌ |

ಉಭೌ ಚ ಬಾಹುಶಬ್ದೇನ ನಾದಯಂತೌ ನಭಸ್ತಲಮ್ ॥23॥
ಇಬ್ಬರೂ ಉತ್ತಮ ಆಯುಧಗಳನ್ನು ಧರಿಸಿ ರಣದಲ್ಲಿ ಶ್ರಮಮಾಡುವವರು, ಇಬ್ಬರೂ ಭುಜತಟ್ಟಿ ಆಕಾಶದಲ್ಲಿ ಪ್ರತಿಧ್ವನಿ ಉಂಟುಮಾಡುವವರು.
ಉಭೌ ವಿಶ್ರುತಕರ್ಮಾಣೌ ಪೌರುಷೇಣ ಬಲೇನ ಚ |
ಉಭೌ ಚ ಸದೃಶೌ ಯುದ್ಧೇ ಶಂಬರಾಮರರಾಜಯೋಃ ॥24॥
ಇಬ್ಬರೂ ಪೌರುಷದಿಂದಲೂ ಬಲದಿಂದಲೂ ಪ್ರಸಿದ್ಧವಾದ ಸಾಹಸ ತೋರಿದವರು, ಇಬ್ಬರೂ ಯುದ್ಧದಲ್ಲಿ ಶಂಬರಾಸುರದೇವೇಂದ್ರರಿಗೆ ಸಮಾನರು.
ಕಾರ್ತವೀರ್ಯಸಮೌ ವೀರ್ಯೇ ತಥಾ ದಾಶರಥೇಃ ಸಮೌ |
ವಿಷ್ಣುವೀರ್ಯಸಮೌ ವೀರ್ಯೇ ತಥಾ ಭವಸಮೌ ಯುಧಿ ॥25॥
ಬಲದಲ್ಲಿ ಕಾರ್ತವೀರ್ಯನಿಗೆ, ಶ್ರೀರಾಮನಿಗೆ, ವಿಷ್ಣುವಿಗೆ, ರುದ್ರನಿಗೆ ಸಮರು.
ಉಭೌ ಶ್ವೇತಹಯೌ ರಾಜನ್ನಶ್ವಪ್ರವರವಾಹಿನೌ |
ಸಾರಥೀ ಪ್ರವರೌ ಚೈವ ತಯೋರಾಸ್ತಾಂ ಮಹಾಬಲೌ ॥26॥
ಇಬ್ಬರೂ ಬಿಳಿಕುದುರೆಗಳುಳ್ಳವರು, ಶ್ರೇಷ್ಠ ಕುದುರೆಗಳನ್ನೇರುವವರು. ಅವರಿಬ್ಬರಿಗೂ ಸಾರಥಿಗಳು ಉತ್ತಮರು, ಮಹಾಬಲಿಷ್ಠರು.
ತೌ ತು ದೃಷ್ಟ್ವಾ ಮಹಾರಾಜ ರಾಜಮಾನೌ ಮಹಾರಥೌ |
ಸಿದ್ಧಚಾರಣಸಂಘಾನಾಂ ವಿಸ್ಮಯಃ ಸಮಪದ್ಯತ ॥27॥
ಮಹಾರಾಜ, ಶೋಭಿಸುವ ಮಹಾರಥರಿಬ್ಬರನ್ನು ಕಂಡು ಸಿದ್ಧಚಾರಣ ಸಮೂಹಗಳಿಗೆ ವಿಸ್ಮಯ ಉಂಟಾಯಿತು.
ಧಾರ್ತರಾಷ್ಟ್ರಾಸ್ತತಃ ಕರ್ಣಂ ಸಬಲಾ ಭರತರ್ಷಭ |
ಪರಿವವ್ರುರ್ಮಹಾತ್ಮಾನಂ ಕ್ಷಿಪ್ರಮಾಹವಶೋಭಿನಮ್ ॥28॥
ರಾಜನೆ, ಕೌರವಯೋಧರು ಸೈನ್ಯಗಳೊಂದಿಗೆ ವೇಗವುಳ್ಳ ಯುದ್ಧದಲ್ಲಿ ಶೋಭಿಸುವ ಮಹಾತ್ಮನಾದ ಕರ್ಣನನ್ನು ಸುತ್ತುವರಿದರು.
ತಥೈವ ಪಾಂಡವಾ ಹೃಷ್ಟಾ ಧೃಷ್ಟದ್ಯುಮ್ನಪುರೋಗಮಾಃ |
ಪರಿವವ್ರುರ್ಮಹಾತ್ಮಾನಂ ಪಾರ್ಥಮಪ್ರತಿಮಂ ಯುಧಿ ॥29॥
ಹಾಗೆಯೇ ಧೃಷ್ಟದ್ಯುಮ್ನ ಮುಂತಾದ ಪಾಂಡವಯೋಧರು ಉತ್ಸಾಹಿತರಾಗಿ ಯುದ್ಧದಲ್ಲಿ ಅಪ್ರತಿಮನಾದ ಅರ್ಜುನನನ್ನು ಸುತ್ತುವರಿದರು.
ತಾವಕಾನಾಂ ರಣೇ ಕರ್ಣೋ ಗ್ಲಹ ಆಸೀದ್ ವಿಶಾಂಪತೇ |
ತಥೈವ ಪಾಂಡವೇಯಾನಾಂ ಗ್ಲಹಃ ಪಾರ್ಥೋಽಭವದ್ ಯುಧಿ ॥30॥
ನಿನ್ನವರಿಗೆ ಕರ್ಣನು ಯುದ್ಧದ ಜೂಜಿನಲ್ಲಿ ಪಣವಾದ, ಹಾಗೇ ಪಾಂಡವರಿಗೆ ಅರ್ಜುನನು ಪಣವಾದ.
ತ ಏವ ಸಭ್ಯಾಸ್ತತ್ರಾಸನ್ ಪ್ರೇಕ್ಷಕಾಶ್ಚಾಭವನ್ ಸ್ಮ ತೇ |
ತತ್ರೈಷಾಂ ಗ್ಲಹಮಾನಾನಾಂ ಧ್ರುತೌ ಜಯಪರಾಜಯೌ ॥31॥
ಹಿಂದೆ ಜೂಜಿನಲ್ಲಿ ಯಾರು ಸಭಾಸದರೋ ಅವರೆ ಇಲ್ಲಿಯೂ ಸಭಾಸದರು. ಯಾರು ಪ್ರೇಕ್ಷಕರಾಗಿದ್ದರೊ ಅವರೆ ಇಲ್ಲಿಯೂ ಪ್ರೇಕ್ಷಕರಾದರು. ಇಬ್ಬರಲ್ಲಿ ಯಾರಿಗೆ ಜಯ, ಯಾರಿಗೆ ಪರಾಜಯ, ಎಂಬುದನ್ನು ಅವರು ತಮ್ಮೊಳಗೇ ನಿಶ್ಚಯ ಮಾಡಿಕೊಂಡಿದ್ದರು.
ತಾಭ್ಯಾಂ ದ್ಯೂತಂ ಸಮಾಯತ್ತಂ ವಿಜಯಾಯೇತರಾಯ ವಾ |
ಅಸ್ಮಾಕಂ ಪಾಂಡವಾನಾಂ ಚ ಸ್ಥಿತಾನಾಂ ರಣಮೂರ್ಧನಿ ॥32॥
ರಣರಂಗದ ಅಗ್ರಭಾಗದಲ್ಲಿದ್ದ ನಮಗೂ ಪಾಂಡವರಿಗೂ ಜಯಕ್ಕಾಗಲಿ ವಿಜಯಕ್ಕಾಗಲಿ ಕರ್ಣಅರ್ಜುನರಿಂದಲೇ ಯುದ್ಧದ ಜೂಜು ನಡೆಯಿತು.
ತೌ ತು ಸ್ಥಿತೌ ಮಹಾರಾಜ ಸಮರೇ ಯುದ್ಧಶಾಲಿನೌ |
ಅನ್ಯೋನ್ಯಂ ಪ್ರತಿಸಂರಬ್ಧಾವನ್ಯೋನ್ಯಸ್ಯ ಜಯೈಷಿಣೌ ॥33॥
ಮಹಾರಾಜ, ಯುದ್ಧದಲ್ಲಿ ಶೋಭಿಸುವ ಅವರಿಬ್ಬರು ಪರಸ್ಪರವಾಗಿ ಕುಪಿತರಾದರು. ಪರಸ್ಪರ ಜಯಾಕಾಂಕ್ಷಿಗಳಾದರು.
ತಾವುಭೌ ಪ್ರಜಿಹೀರ್ಷೇತಾಮಿಂದ್ರವೃತ್ರಾವಿವಾಭಿತಃ |
ಭೀಮರೂಪಧರಾವಾಸ್ತಾಂ ಮಹಾಧೂಮಾವಿವ ಗ್ರಹೌ ॥34॥
ಅವರಿಬ್ಬರೂ ಇಂದ್ರವೃತ್ರರಂತೆ ಪರಸ್ಪರ ಪ್ರಹಾರ ಮಾಡಲು ಬಯಸಿದರು. ಭಯಂಕರರೂಪ ಧರಿಸಿ ಮಹಾಧೂಮವುಳ್ಳ ಗ್ರಹಗಳಂತೆ ಕಂಡುಬಂದರು.
ತತೋಽಂತರಿಕ್ಷೇ ಸಾಕ್ಷೇಪಾ ವಿವಾದಾ ಭರತರ್ಷಭ |
ಮಿಥೋ ಭೇದಾಶ್ಚ ಭೂತಾನಾಮಾಸನ್ಕರ್ಣಾರ್ಜುನಾಂತರೇ |
ವ್ಯಾಶ್ರಯಂತ ದಿಶೋ ಭಿನ್ನಾಃ ಸರ್ವಲೋಕಾಶ್ಚ ಮಾರಿಷ ॥35॥
ಆಗ ಅಂತರಿಕ್ಷದಲ್ಲಿ ಜನರ ನಡುವೆ ಪರಸ್ಪರ ಆಕ್ಷೇಪ ವಿವಾದ ಕಲಹಗಳು ಕರ್ಣಅರ್ಜುನರ ಜಯಾಪಜಯಗಳ ವಿಷಯದಲ್ಲಿ ಉಂಟಾದುವು. ಎಲ್ಲ ಜನರೂ ಭಿನ್ನಭಿನ್ನ ದಿಕ್ಕುಗಳನ್ನು ಆಶ್ರಯಿಸಿದರು.
ದೇವದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ |
ಪ್ರತಿಪಕ್ಷಗ್ರಹಂ ಚಕ್ರುಃ ಕರ್ಣಾರ್ಜುನಸಮಾಗಮೇ ॥36॥
ದೇವದಾನವಗಂಧರ್ವರೂ ಪಿಶಾಚ ನಾಗ ರಾಕ್ಷಸರು ಎಲ್ಲರೂ ಕರ್ಣ ಅರ್ಜುನರ ಯುದ್ಧದಲ್ಲಿ ಒಂದೊಂದು ಪಕ್ಷವನ್ನು ಹಿಡಿದರು.
ದ್ಯೌರಾಸೀತ್ ಕರ್ಣತೋ ವ್ಯಗ್ರಾ ಸನಕ್ಷತ್ರಾ ವಿಶಾಂಪತೇ |

ಭೂಮಿರ್ವಿಶಾಲಾ ಪಾರ್ಥಸ್ಯ ಮಾತೇವ ಜಯಕಾಂಕ್ಷಿಣೀ ॥37॥
ನಕ್ಷತ್ರಸಹಿತವಾದ ಸ್ವರ್ಗದ ಅಧಿದೇವತೆ ತಾಯಿಯಂತೆ ಕರ್ಣನ ಪಕ್ಷವನ್ನು ಗ್ರಹಿಸಿದಳು. ವಿಶಾಲವಾದ ಭೂಮಿಯ ಅಧಿದೇವತೆ ತಾಯಿಯಂತೆ ಅರ್ಜುನನ ಪಕ್ಷ ವಹಿಸಿದಳು.
ಕರ್ಣನು ಅರ್ಜುನನಿಂದ ತಾನು ಹತನಾಗಿ ಸ್ವರ್ಗಕ್ಕೆ ಹೋಗಬೇಕೆಂದೇ ಬಯಸಿದ್ದವನು. ತಾನು ಕುಂತೀಪುತ್ರನೆಂಬ ಸತ್ಯವನ್ನು ಧರ್ಮರಾಜನಿಗೆ ಹೇಳದೆ ಗೋಪ್ಯವಾಗಿರಿಸಿದ್ದರ ಉದ್ದೇಶ ಇದೇ ಆಗಿತ್ತು. ಅವನೇ ಕೃಷ್ಣನ ಮುಂದೆ ಹೇಳುತ್ತಾನೆ. ಇದನ್ನು ನೀನು ಹೇಳಿದರೆ ಧರ್ಮರಾಜನು ರಾಜ್ಯವನ್ನಾಳುವುದಿಲ್ಲ. ಕರ್ಣನೇ ರಾಜನಾಗಬೇಕೆನ್ನುತ್ತಾನೆ. ಧರ್ಮರಾಜನೆ ಶಾಶ್ವತವಾಗಿ ರಾಜ್ಯವಾಳಬೇಕು ಎಂದು ನನ್ನ ಅಪೇಕ್ಷೆ ಎಂದು ಉದ್ಯೋಗಪರ್ವದಲ್ಲಿ ಹೇಳಿದ್ದಾನೆ. ಹೀಗಾಗಿ ಸ್ವರ್ಗಾಕಾಂಕ್ಷಿಯಾದ ಕರ್ಣನ ಪಕ್ಷವನ್ನು ಸ್ವರ್ಗದ

ಅಧಿದೇವತೆ ವಹಿಸಿದಳು. ಭೂಭಾರಭೂತರಾದ ಕೌರವರ ಪಕ್ಷದವನೆಂದು ಭೂದೇವಿ ಕರ್ಣನ ಪಕ್ಷವನ್ನು ತಿರಸ್ಕರಿಸಿದಳು. ಭೂಭಾರ ಕಳೆಯುತ್ತಿರುವ ಅರ್ಜುನನ ಪಕ್ಷವನ್ನೇ ಹಿಡಿದಳು.
ಸರಿತಃ ಸಾಗರಾಶ್ಚೈವ ಗಿರಯಶ್ಚ ನರೋತ್ತಮ |
ವೃಕ್ಷಾಶ್ಚೌಷಧಯಸ್ತತ್ರ ವ್ಯಾಶ್ರಯಂತ ಕಿರೀಟಿನಮ್ ॥38॥
ನದೀ ಸಾಗರಗಳು ಪರ್ವತಗಳು ವೃಕ್ಷ ಔಷಧಿಗಳು ಅರ್ಜುನನ ಪಕ್ಷವನ್ನು ಹಿಡಿದವು.
ಅಸುರಾ ಯಾತುಧಾನಾಶ್ಚ ಗುಹ್ಯಕಾಶ್ಚ ಪರಂತಪ |
ಕರ್ಣತಃ ಸಮಪದ್ಯಂತ ಖೇಚರಾಣಿ ವಯಾಂಸಿ ಚ ॥39॥
ಅಸುರರು ಯಾತುಧಾನರು ಗುಹ್ಯಕರು ಖೇಚರರು ಪಕ್ಷಿಗಳು ಕರ್ಣನ ಪಕ್ಷವನ್ನು ಹಿಡಿದವು.
ರತ್ನಾನಿ ನಿಧಯಃ ಸರ್ವೇ ವೇದಾಶ್ಚಾಖ್ಯಾನಪಂಚಮಾಃ |
ಸೋಪವೇದೋಪನಿಷದಃ ಸರಹಸ್ಯಾಃ ಸಸಂಗ್ರಹಾಃ ॥40॥
ವಾಸುಕಿಶ್ಚಿತ್ರಸೇನಶ್ಚ ತಕ್ಷಕಶ್ಚೋಪತಕ್ಷಕಃ |
ಸರ್ಪಾಶ್ಚೈವ ತಥಾ ಸರ್ವೇ ಕಾದ್ರವೇಯಾಶ್ಚ ಸಾನ್ವಯಾಃ |
ವಿಷವಂತೋ ಮಹಾರೋಷಾ ನಾಗಾಶ್ಚಾರ್ಜುನತೋಽಭವನ್ ॥41॥
ರತ್ನಗಳು ನಿಧಿಗಳು ಎಲ್ಲ ವೇದಗಳು ಪುರಾಣಗಳು ಉಪವೇದಗಳು ಉಪನಿಷತ್ತುಗಳು ರಹಸ್ಯ ಸಂಗ್ರಹಗಳು, ವಾಸುಕಿ, ಚಿತ್ರಸೇನ ತಕ್ಷಕ ಉಪತಕ್ಷಕರು ಸರ್ಪಗಳು ಕದ್ರುವಿನ ಸಂತತಿಯವರು ವಿಷವುಳ್ಳ ಮಹಾರೋಷಭರಿತರಾದ ನಾಗರು ಎಲ್ಲರೂ ಅರ್ಜುನನ ಪಕ್ಷವನ್ನು ಹಿಡಿದರು.
ಐರಾವತಾಃ ಸೌರಭೇಯಾ ವೈಶಾಲೇಯಾಶ್ಚ ಭೋಗಿನಃ |
ಏತೇಽಭವನ್ನರ್ಜುನತಃ ಕ್ಷುದ್ರಸರ್ಪಾಸ್ತು ಕರ್ಣತಃ ॥42॥
ಐರಾವತ ಸೌರಭೇಯ ವೈಶಾಲೇಯ ನಾಗರು ಅರ್ಜುನನ ಪಕ್ಷವನ್ನೂ ಕ್ಷುದ್ರಸರ್ಪಗಳು ಕರ್ಣಪಕ್ಷವನ್ನೂ ಹಿಡಿದವು.
ಈಹಾಮೃಗಾ ವ್ಯಾಲಮೃಗಾ ಮಂಗಲ್ಯಾಶ್ಚ ಮೃಗದ್ವಿಜಾಃ |
ಪಾರ್ಥಸ್ಯ ವಿಜಯಂ ರಾಜನ್ ಸರ್ವ ಏವಾಭಿಸಂಶ್ರಿತಾಃ ॥43॥
ತೋಳಗಳು ವ್ಯಾಲಮೃಗಗಳು ಮಂಗಳಸೂಚಕವಾದ ಮೃಗಪಕ್ಷಿಗಳು ಎಲ್ಲರೂ ಅರ್ಜುನನ ವಿಜಯವನ್ನೇ ಹಾರೈಸಿದರು.
ವಸವೋ ಮರುತಃ ಸಾಧ್ಯಾ ರುದ್ರಾ ವಿಶ್ವೇಽಶ್ವಿನೌ ತಥಾ |
ಅಗ್ನಿರಿಂದ್ರಶ್ಚ ಸೋಮಶ್ಚ ಪವನಶ್ಚ ದಿಶೋ ದಶ |
ಧನಂಜಯಮುಪಾಜಗ್ಮುರಾದಿತ್ಯಾಃ ಕರ್ಣತೋಽಭವನ್ ॥44॥
ವಸುಗಳು ಮರುತರು ಸಾಧ್ಯರು ರುದ್ರರು ವಿಶ್ವೇದೇವತೆಗಳು ಅಶ್ವಿನೀದೇವತೆಗಳು ಅಗ್ನಿ ಇಂದ್ರ ಸೋಮ ವಾಯು ದಶದಿಕ್ಕುಗಳು ಅರ್ಜುನನ ಪಕ್ಷ ವಹಿಸಿದರು. ಆದಿತ್ಯರು ಕರ್ಣಪಕ್ಷ ವಹಿಸಿದರು.
ವಿಶಃ ಶೂದ್ರಾಶ್ಚ ಸೂತಾಶ್ಚ ವರ್ಣಸಂಕರಜಾಶ್ಚ ಯೇ |
ಸರ್ವಸತ್ತ್ವೇಷು ತೇ ರಾಜನ್ ರಾಧೇಯಮಭಜಂಸ್ತದಾ ॥45॥
ಎಲ್ಲ ಮನುಷ್ಯರಲ್ಲಿ ವೈಶ್ಯ ಶೂದ್ರ ಸೂತ ವರ್ಣಸಂಕರಜಾತರು ಕರ್ಣನ ಪಕ್ಷವನ್ನು ಹಿಡಿದರು.
ದೇವಾಸ್ತು ಪಿತೃಭಿಃ ಸಾರ್ಧಂ ಸಗಣಾರ್ಜುನತೋಽಭವನ್ |
ಬ್ರಹ್ಮ ಕ್ಷತ್ರಂ ಚ ಯಜ್ಞಾಶ್ಚ ದಕ್ಷಿಣಾಶ್ಚಾರ್ಜುನಂ ಶ್ರಿತಾಃ ॥46॥
ದೇವತೆಗಳು ಪಿತೃಗಳು ಅವರ ಗಣಗಳು ಅರ್ಜುನನ ಕಡೆ ನಿಂತವು. ಹಾಗೆ ಬ್ರಾಹ್ಮಣ ಕ್ಷತ್ರಿಯರು ಯಜ್ಞಗಳೂ ದಕ್ಷಿಣೆಗಳೂ ಅರ್ಜುನನ ಪರ ನಿಂತವು.
ದೇವಬ್ರಹ್ಮನೃಪರ್ಷೀಣಾಂ ಗಣಾಃ ಪಾಂಡವತೋಽಭವನ್ |
ತುಂಬುರುಪ್ರಮುಖಾ ರಾಜನ್ ಗಂಧರ್ವಾಶ್ಚ ಯತೋಽರ್ಜುನಃ ॥47॥
ದೇವರ್ಷಿ ಬ್ರಹ್ಮರ್ಷಿ ರಾಜರ್ಷಿಗಣಗಳು ಅರ್ಜುನನ ಪಕ್ಷವನ್ನು ಹಿಡಿದರು. ರಾಜನೆ, ತುಂಬುರು ಮುಂತಾದ ಗಂಧರ್ವರೂ ಅರ್ಜುನನ ಪಕ್ಷವನ್ನೆ ಹಿಡಿದರು.
ಪ್ರೇತಾಶ್ಚೈವ ಪಿಶಾಚಾಶ್ಚ ಕ್ರವ್ಯಾದಾಶ್ಚ ಮೃಗಾಂಡಜಾಃ |
ರಾಕ್ಷಸಾಃ ಸಹ ಯಾದೋಭಿಃ ಶ್ವಸೃಗಾಲಾಶ್ಚ ಕರ್ಣತಃ ॥48॥
ಪ್ರೇತ ಪಿಶಾಚ ಕ್ರವ್ಯಾದ ಮೃಗ ಅಂಡಜ ರಾಕ್ಷಸ ಯಾದಸ ಶ್ವ ಸೃಗಾಲಗಳೆಲ್ಲ ಕರ್ಣನ ಪಕ್ಷ ಹಿಡಿದವು.
ಯಮೋ ವೈಶ್ರವಣಶ್ಚೈವ ವರುಣಶ್ಚ ಯತೋಽರ್ಜುನಃ ॥49॥

ಯಮ ಕುಬೇರ ವರುಣರು ಅರ್ಜುನನ ಕಡೆ ನಿಂತರು.
ದೇವರ್ಷಿಬ್ರಹ್ಮರ್ಷಿಗಣಾಃ ಸರ್ವೇ ಚ ಖಚರಾಶ್ಚ ಯೇ |
ಪ್ರಾವೇಯಾಃ ಸಹ ಮೌನೇಯಾ ಗಂಧರ್ವಾಪ್ಸರಸಾಂ ಗಣಾಃ ॥50॥
ಉಹ್ಯಮಾನಾಸ್ತಥಾ ಮೇಘೈರ್ವಾಯುನಾ ಚ ಮನೀಷಿಣಃ |
ದಿದೃಕ್ಷವಃ ಸಮಾಜಗ್ಮುಃ ಕರ್ಣಾರ್ಜುನಸಮಾಗಮಮ್ ॥51॥
ದೇವರ್ಷಿ ಬ್ರಹ್ಮರ್ಷಿಗಣಗಳೂ ಎಲ್ಲ ಖೇಚರರೂ `ಪ್ರಾವೇಯ ಮೌನೇಯ' ಅಂದರೆ ಕಶ್ಯಪಪತ್ನಿಯರಾದ ಪ್ರಾವಾದೇವಿ ಮುನಿದೇವಿಯರ ಮಕ್ಕಳಾದ ಗಂಧರ್ವಾಪ್ಸರೆಯರ ಗಣಗಳು ಮೋಡ ಗಾಳಿಗಳು ಹೊರುವ ವಿಮಾನಗಳೇ ವಾಹನವಾಗಿ ಉಳ್ಳವರು ಆ ವಾಹನಗಳನ್ನೇರಿ ಕರ್ಣಾರ್ಜುನರಿಬ್ಬರ ಸಮರ ದರ್ಶನಾಕಾಂಕ್ಷಿಗಳಾಗಿ ಬಂದು ನೆರೆದರು.
ದೇವದಾನವಗಂಧರ್ವಾ ನಾಗಾ ಯಕ್ಷಾಃ ಪತತ್ರಿಣಃ |
ಮಹರ್ಷಯೋ ವೇದವಿದಃ ಪಿತರಶ್ಚ ಸ್ವಧಾಭುಜಃ ॥52॥
ತಪೋ ವಿದ್ಯಾಸ್ತಥೌಷಧ್ಯೋ ನಾನಾರೂಪಬಲಾನ್ವಿತಾಃ |
ಅಂತರಿಕ್ಷೇ ಮಹಾರಾಜ ವಿನದಂತೋऽವತಸ್ಥಿರೇ ॥53॥
ದೇವ ದಾನವ ಗಂಧರ್ವ ನಾಗ ಯಕ್ಷ ಪಕ್ಷಿಗಳು ವೇದವೇತ್ತರಾದ ಮಹರ್ಷಿಗಳು ಸ್ವಧಾಭೋಜಿಗಳಾದ ಪಿತೃಗಳು ತಪಸ್ಸು ವಿದ್ಯೆಗಳು ನಾನಾರೂಪ ಬಲಗಳುಳ್ಳ ಓಷಧಿಗಳು ಅಂತರಿಕ್ಷದಲ್ಲಿ ಶಬ್ದಮಾಡುತ್ತ ನಿಂತವು.
ಬ್ರಹ್ಮಾ ಬ್ರಹ್ಮರ್ಷಿಭಿಃ ಸಾರ್ಧಂ ಪ್ರಜಾಪತಿಭಿರೇವ ಚ |
ಭವೇನಾವಸ್ಥಿತೋ ಯಾನಂ ದಿವ್ಯಂ ತಂ ದೇಶಮಭ್ಯಯಾತ್ ॥54॥
ಬ್ರಹ್ಮನು ಬ್ರಹ್ಮರ್ಷಿಗಳೊಂದಿಗೆ ಪ್ರಜಾಪತಿಗಳೊಂದಿಗೆ ಶಿವನೊಂದಿಗೆ ದಿವ್ಯ ವಿಮಾನವನ್ನೇರಿ ಆ ಪ್ರದೇಶಕ್ಕೆ ಆಗಮಿಸಿದ.
ದ್ವೈಪಕ್ಷಮಾಸೀದ್ ದೇವಾನಾಮಸುರಾಣಾಂ ತಥೈವ ಚ |
ಸಮೇತೌ ತೌ ಮಹಾತ್ಮಾನೌ ದೃಷ್ಟ್ವಾ ಕರ್ಣಧನಂಜಯೌ ॥55॥
ಮಹಾತ್ಮರಾದ ಕರ್ಣಅರ್ಜುನರು ರಣರಂಗದಲ್ಲಿ ಸೇರಿದ್ದನ್ನು ಕಂಡು ಅಂತರಿಕ್ಷದಲ್ಲಿ ದೇವತೆಗಳದು, ಅಸುರರದೆಂದು ಎರಡು ಪಕ್ಷಗಳುಂಟಾದುವು.
ಯತಃ ಪಾರ್ಥಸ್ತತೋ ದೇವಾ ಯತಃ ಕರ್ಣಸ್ತತೋऽಸುರಾಃ |56॥
ಎಲ್ಲ ದೇವತೆಗಳೂ ಅರ್ಜುನನ ಪಕ್ಷದಲ್ಲಿ ನಿಂತರು. ಎಲ್ಲ ಅಸುರರೂ ಕರ್ಣನ ಪಕ್ಷದಲ್ಲಿ ನಿಂತರು.
ಪ್ರಜಾಪತಿರಥೋಕ್ತ್ವೈನಂ ಸ್ವಯಂಭುಂ ಸಮಚೋದಯತ್ |
ಸಮೋऽಸ್ತು ದೇವ ವಿಜಯ ಏತಯೋರ್ನರಸಿಂಹಯೋಃ ॥57॥
ಕರ್ಣಾರ್ಜುನ ವಿವಾದೇನ ಮಾ ನಶ್ಯೇದಖಿಲಂ ಜಗತ್
ತದುಪಶ್ರುತ್ಯ ಮಘವಾ ಪ್ರಣಿಪತ್ಯ ಪಿತಾಮಹಮ್ ॥58॥
ವ್ಯಜ್ಞಾಪಯತ ದೇವೇಶಮಿದಂ ಮತಿಮತಾಂ ವರಃ |
ಪೂರ್ವಂ ಭಗವತಾ ಪ್ರೋಕ್ತಂ ಕೃಷ್ಣಯೋರ್ವಿಜಯೋ ಧ್ರುವಃ ॥59॥
ತತ್ತಥಾಸ್ತು ನಮಸ್ತೇಸ್ತು ಪ್ರಸೀದ ಭಗವನ್ಮಮ ॥60॥
`ಪ್ರಜಾಪತಿ' ಅಂದರೆ ಶಿವನು ಬ್ರಹ್ಮನಲ್ಲಿ ಈ ಮಾತನ್ನು ಹೇಳಿ ಪ್ರಾರ್ಥಿಸಿದ– `ದೇವ, ಈ ಪುರುಷಶ್ರೇಷ್ಠರಾದ ಕರ್ಣಾರ್ಜುನರಿಗೆ ವಿಜಯ ಸಮವಾಗಲಿ. ಕರ್ಣಾರ್ಜುನರ ಕಲಹದಿಂದ ಎಲ್ಲ ಜಗತ್ತು ನಾಶವಾಗದಿರಲಿ' ಎಂದು.
ಇದನ್ನು ಕೇಳಿ ಮತಿ ಉಳ್ಳವರಲ್ಲಿ ಶ್ರೇಷ್ಠನಾದ ಇಂದ್ರನು ಬ್ರಹ್ಮನನ್ನು ನಮಸ್ಕರಿಸಿ ದೇವೇಶನಲ್ಲಿ ವಿಜ್ಞಾಪನೆ ಮಾಡಿದ– ಪೂಜ್ಯನು ಹಿಂದೆ ಹೇಳಿದುದುಂಟು. ಕೃಷ್ಣಾರ್ಜುನರಿಗೇ ಜಯ ಎಂದು. ಅದು ಈಗ ಹಾಗೇ ಆಗಲಿ.ಪೂಜ್ಯನೆ, ನಿನ್ನನ್ನು ನಮಿಸುತ್ತೇನೆ, ಪ್ರಸನ್ನನಾಗು'
ಬ್ರಹ್ಮೇಶಾನಾವಥೋ ವಾಕ್ಯಮೂಚತುಸ್ತ್ರಿದಶೇಶ್ವರಮ್ |
ವಿಜಯೋ ಧ್ರುವ ಏವಾಸ್ತು ವಿಜಯಸ್ಯ ಮಹಾತ್ಮನಃ ॥61॥
ಬ್ರಹ್ಮಶಿವರು ದೇವರಾಜನಿಗೆ ಹೇಳಿದರು: ಮಹಾತ್ಮನಾದ ವಿಜಯನಿಗೇ ವಿಜಯವಾಗಲಿ.
ಮನಸ್ವೀ ಬಲವಾನ್ ಶೂರಃ ಕೃತಾಸ್ತ್ರಶ್ಚ ತಪೋಧನಃ |
ಬಿಭರ್ತಿ ಚ ಮಹಾತೇಜಾ ಧನುರ್ವೇದಮಶೇಷತಃ ॥62॥
ಅರ್ಜುನನು ಮನೋನಿಗ್ರಹಉಳ್ಳವನು ಬಲಿಷ್ಠ ಶೂರ ಅಸ್ತ್ರಜ್ಞ ತಪಸ್ವಿ ಧನುರ್ವೇದವನ್ನು ಪೂರ್ತಿ ಧಾರಣ ಮಾಡಿದವನು.
ಪಾರ್ಥಃ ಸರ್ವಗುಣೋಪೇತೋ ದೇವಕಾರ್ಯಮಿದಂ ಯತಃ |
ಕ್ಲಿಶ್ಯಂತೇ ಪಾಂಡವಾ ನಿತ್ಯಂ ವನವಾಸಾದಿಭಿರ್ಭೃಶಮ್ ॥63॥
ಅರ್ಜುನನು ಸರ್ವಗುಣಸಂಪನ್ನ. ಅಂಥವನಿಗೆ ಜಯವು ದೇವಕಾರ್ಯ ವಾಗಿರುತ್ತದೆ. ಪಾಂಡವರು ವನವಾಸಾದಿಗಳಿಂದ ನಿತ್ಯ ಕ್ಲೇಶಪಟ್ಟವರು.
ಸಂಪನ್ನಸ್ತಪಸಾ ಚೈವ ಪರ್ಯಾಪ್ತಃ ಪುರುಷರ್ಷಭಃ ॥64॥
ವನವಾಸಾದಿ ಕ್ಲೇಶವನ್ನು ತಪೋರೂಪದಿಂದ ಸಹಿಸಿದ್ದರಿಂದ ಅರ್ಜುನನು ತಪಸ್ಸಿನಿಂದ ಸಂಪನ್ನನೇ ಆಗಿದ್ದಾನೆ. ಅದರಿಂದ ಎಲ್ಲ ಕಾರ್ಯದಲ್ಲಿ `ಪರ್ಯಾಪ್ತ' ಸಮರ್ಥನೆನಿಸಿದ್ದಾನೆ.
ಅತಿಕ್ರಾಮೇಚ್ಚ ಮಾಹಾತ್ಮ್ಯಾದ್ ದಿಷ್ಟಮಪ್ಯಸ್ಯ ಪರ್ಯಯಾತ್ |
ಅತಿಕ್ರಾಂತೇ ಚ ಲೋಕಾನಾಮಭಾವೋ ನಿಯತೋ ಭವೇತ್ ॥65॥

ಅರ್ಜುನನ ದೈವವಾದ ಕೃಷ್ಣನು ಕ್ರಮೇಣ ಅವನಿಗೆ ಮಾಹಾತ್ಮ್ಯವನ್ನು ಸಾಮರ್ಥ್ಯವನ್ನು ಕೊಟ್ಟು ಅವನು ಕರ್ಣನನ್ನು ಮೀರಿಸುವಂತೆ ಮಾಡುತ್ತಾನೆ. ಕರ್ಣನಿಗಿಂತ ಹೆಚ್ಚಿನ ಸಾಮರ್ಥ್ಯವನ್ನು ಅರ್ಜುನನಲ್ಲಿ ವ್ಯಕ್ತಗೊಳಿಸುತ್ತಾನೆ. ಹೀಗೆ ಅತಿಕ್ರಮಣವಾದಾಗ ವಿಜಯವಾಗದೆ ಹೋದರೆ ಲೋಕಕ್ಕೆ ನಾಶ ನಿಶ್ಚಿತ. ಅದರಿಂದ ಕರ್ಣನಿಗೆ ಪರಾಜಯ ನಿಶ್ಚಿತ.

ನ ವಿದ್ಯತೇ ವ್ಯವಸ್ಥಾನಂ ಕೃಷ್ಣಯೋಃ ಕ್ರುದ್ಧಯೋಃ ಕ್ವಚಿತ್ |
ಸ್ರಷ್ಟಾರೌ ಹ್ಯಸತಶ್ಚೋಭೌ ಸತಶ್ಚ ಪುರುಷರ್ಷಭೌ ॥66॥

ಕೃಷ್ಣಾರ್ಜುನರು ನರನಾರಾಯಣರು ವಾಯು ಅಂತರಿಕ್ಷರೂಪವಾದ ಸತ್ತಿಗೂ ಅವುಗಳಿಗಿಂತ ಭಿನ್ನವಾದ ಪೃಥಿವಿ ಅಪ್‌ತೇಜೋರೂಪವಾದ ಮಹಾಭೂತ ಗಳಿಗೂ ಇವರು ಸೃಷ್ಟಿಕರ್ತರು. ಅವರು ಕ್ರುದ್ಧರಾದರೆ ಎಲ್ಲಿಯೂ ವ್ಯವಸ್ಥೆ ಇಲ್ಲವಾದೀತು.

ನರನಾರಾಯಣಾವೇತೌ ಪುರಾಣಾವೃಷಿಸತ್ತಮೌ |
ಅನಿಯತ್ತೌ ನಿಯಂತಾರಾವಭೀತೌ ಸ್ಮ ಪರಂತಪೌ ॥67॥

ಅಂಥ ನರನಾರಾಯಣರೇ ಈ ಕೃಷ್ಣಾರ್ಜುನರು. ಪ್ರಾಚೀನ ಋಷಿಶ್ರೇಷ್ಠರು. ಅವರು ಯಾರಿಂದಲೂ ನಿಯಮ್ಯರಲ್ಲ. ಅವರು ಸರ್ವನಿಯಾಮಕರು, `ಅಭೀತ' ಭಯವಿಲ್ಲದವರು. ಶತ್ರುನಾಶಕರು.

ಕರ್ಣೋ ಲೋಕಾನಯಂ ಮುಖ್ಯಾನ್ ಪ್ರಾಪ್ನೋತು ಪುರುಷರ್ಷಭಃ |
ವೀರೋ ವೈಕರ್ತನಃ ಶೂರೋ ವಿಜಯಸ್ತ್ವಸ್ತು ಕೃಷ್ಣಯೋಃ ॥68॥

ಕರ್ಣನೂ `ವಿಕರ್ತನ' ಸೂರ್ಯನ ಅಂಶಸಂಭೂತನಾದ ಶ್ರೇಷ್ಠ ಪುರುಷನೆ, ವೀರ, ಶೂರ. ಅವನು ಸ್ವರ್ಗಲೋಕಗಳನ್ನು ಹೊಂದಲಿ. ಜಯವು ಮಾತ್ರ ಕೃಷ್ಣಾರ್ಜುನರಿಗೇ ಇರಲಿ.

ವಸೂನಾಂ ಚ ಸಲೋಕತ್ವಂ ಮರುತಾಂ ವಾ ಸಮಾಪ್ನುಯಾತ್ |
ಸಹಿತೋ ದ್ರೋಣಭೀಷ್ಮಾಭ್ಯಾಂ ನಾಕಲೋಕೇ ಮಹೀಯತಾಮ್ ॥69|

ಕರ್ಣನು ವಸುಗಳ ಅಥವಾ ಮರುತ್ತುಗಳ ಸಮಾನಲೋಕಗಳನ್ನು ಹೊಂದಲಿ. ದ್ರೋಣಭೀಷ್ಮರೊಂದಿಗೆ ಸ್ವರ್ಗಲೋಕದಲ್ಲಿ ಸತ್ಕಾರಭಾಜನನಾಗಲಿ.

ತಥೋಕ್ತೇ ದೇವದೇವಾಭ್ಯಾಂ ಸಹಸ್ರಾಕ್ಷೋಽಬ್ರವೀದ್ ವಚಃ |
ಆಮಂತ್ರ್ಯ ಸರ್ವಭೂತಾನಿ ಬ್ರಹ್ಮೇಶಾನಾನುಶಾಸನಾತ್ ॥70॥

ದೇವದೇವರಾದ ಬ್ರಹ್ಮಶಿವರು ಹೀಗೆ ಹೇಳಿದಾಗ ದೇವೇಂದ್ರನು ಎಲ್ಲರಿಗೂ ಬ್ರಹ್ಮಶಿವರ ಉಪದೇಶದಂತೆ ನುಡಿದ–

ಶ್ರುತಂ ಭವದ್ಭಿರ್ಯತ್ಪ್ರೋಕ್ತಂ ಭಗವದ್‌ಭ್ಯಾಂ ಜಗದ್ಧಿತಮ್ |
ತತ್ತಥಾ ನಾನ್ಯಥಾ ತದ್ಧಿ ತಿಷ್ಠಧ್ವಂ ಗತಮನ್ಯವಃ ॥71॥

ಪೂಜ್ಯರಿಬ್ಬರೂ ಜಗತ್ತಿಗೆ ಹಿತವಾದುದನ್ನು ಹೇಳಿದ್ದಾರೆ. ಅದನ್ನು ನೀವು ಕೇಳಿರುವಿರಿ. ಅದು ಹಾಗೇ ಆಗುವುದು. ಅಸಮಾಧಾನ ಪಡದೆ ತಾಳ್ಮೆಯಿಂದ ಯುದ್ಧವನ್ನು ನೋಡುತ್ತಿರಿ.

ಯದ್ಯಪಿ `ಅರ್ಜುನನಿಗೇ ಜಯ, ಕರ್ಣನಿಗೆ ಸ್ವರ್ಗಪ್ರಾಪ್ತಿ' ಎಂದು ಹೇಳಿದ್ದು ಬ್ರಹ್ಮ. ಶಿವನು ಇಬ್ಬರಿಗೂ ಜಯ ಸಮಾನವಾಗಲಿ ಎಂದಿದ್ದ. ಆದರೂ ಬ್ರಹ್ಮನು ಅರ್ಜುನನಿಗೆ ಜಯವೆಂದು ಹೇಳಿದ ಬಳಿಕ ಶಿವನು ಅದನ್ನು ಒಪ್ಪಿಕೊಂಡಿದ್ದರಿಂದ ಬ್ರಹ್ಮಶಿವರಿಬ್ಬರೂ ಹೇಳಿದರೆಂದು ಇಂದ್ರ ಹೇಳುತ್ತಿದ್ದಾನೆ.

ಇತಿ ಶ್ರುತ್ವೇಂದ್ರವಚನಂ ಸರ್ವಭೂತಾನಿ ಮಾರಿಷ |
ವಿಸ್ಮಿತಾನ್ಯಭವನ್ ರಾಜನ್ ಪೂಜಯಾಂಚಕ್ರಿರೇ ಚ ತತ್ ॥72॥

ದೇವೇಂದ್ರನ ಮಾತನ್ನು ಕೇಳಿ ಎಲ್ಲರೂ ವಿಸ್ಮಿತರಾದರು. ಅದನ್ನು ಪ್ರಶಂಸೆ ಮಾಡಿದರು.

ವ್ಯಸೃಜಂಶ್ಚ ಸುಗಂಧೀನಿ ನಾನಾರೂಪಾಣಿ ಖಾತ್ತಥಾ |
ಪುಷ್ಪವರ್ಷಾಣಿ ವಿಬುಧಾ ದೇವತೂರ್ಯಾಣ್ಯವಾದಯನ್ ॥73॥

ದೇವತೆಗಳು ರಣರಂಗದ ಮೇಲೆ ಸುಗಂಧಯುಕ್ತವಾದ ನಾನಾ ರೂಪವುಳ್ಳ ಪುಷ್ಪಗಳ ಮಳೆಗರೆದರು, ದೇವವಾದ್ಯಗಳನ್ನು ಮೊಳಗಿಸಿದರು.

ದಿದೃಕ್ಷವಶ್ಚಾಪ್ರತಿಮಂ ದ್ವೈರಥಂ ನರಸಿಂಹಯೋಃ |
ದೇವದಾನವಗಂಧರ್ವಾಃ ಸರ್ವ ಏವಾವತಸ್ಥಿರೇ ॥74॥

ಅಪ್ರತಿಮವಾದ ಕರ್ಣಾರ್ಜುನರ ದ್ವೈರಥ ಯುದ್ಧವನ್ನು ನೋಡಲು ಬಯಸಿ ದೇವದಾನವ ಗಂಧರ್ವರೆಲ್ಲರೂ ನೆರೆದರು.

ರಥೌ ಚ ತೌ ಶ್ವೇತಹಯೌ ಯುಕ್ತಕೇತೂ ಮಹಾಸ್ವನೌ |
ಯೌ ತೌ ಕರ್ಣಾರ್ಜುನೌ ರಾಜನ್ ಪ್ರಹೃಷ್ಟಾವಭ್ಯತಿಷ್ಠತಾಮ್ ॥75॥

ರಾಜನೆ, ಕರ್ಣಾರ್ಜುನರು ಬಲು ಹೃಷ್ಟರಾಗಿ ಏರಿ ಕುಳಿತ ರಥಗಳು ಬಿಳಿ ಕುದುರೆಗಳಿಂದ ಸಜ್ಜಾದ ಧ್ವಜಗಳಿಂದ ಕೂಡಿದ್ದು ದೊಡ್ಡ ಧ್ವನಿಯನ್ನು ಮಾಡುತ್ತಿದ್ದವು.

ಸಮಾಗತಾ ಲೋಕವೀರಾಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ |
ವಾಸುದೇವಾರ್ಜುನೌ ವೀರೌ ಕರ್ಣಶಲ್ಯೌ ಚ ಭಾರತ ॥76॥

ಲೋಕವೀರರು ಅಲ್ಲಿಗೆ ಬಂದವರು ಬೇರೆ ಬೇರೆಯಾಗಿ ಶಂಖಗಳನ್ನು ಊದಿದರು. ವೀರರಾದ ಕೃಷ್ಣಾರ್ಜುನರೂ ಕರ್ಣಶಲ್ಯರೂ ಹಾಗೇ ಶಂಖಗಳನ್ನು ಊದಿದರು.

ತದ್ಭೀರುಸಂತ್ರಾಸಕರಂ ಯುದ್ಧಂ ಸಮಭವತ್ ತದಾ |
ಅನ್ಯೋನ್ಯಸ್ಪರ್ಧಿನೋರ್ವೀರ್ಯೇ ಶಕ್ರಶಂಬರಯೋರಿವ ॥77॥

ಹೇಡಿಗಳಿಗೆ ಬಹಳ ಭಯ ಉಂಟುಮಾಡುವಂತೆ, ಇಂದ್ರಶಂಬರರಂತೆ ವೀರ್ಯದಲ್ಲಿ ಪರಸ್ಪರ ಸ್ಪರ್ಧಿಗಳಾದ ಕರ್ಣಾರ್ಜುನರಿಗೆ

ಯುದ್ಧ ನಡೆಯಿತು.
ತಯೋರ್ಧ್ವಜೌ ವೀತಭಯೌ ಶುಶುಭಾತೇ ರಥಸ್ಥಿತೌ |
ರಾಹುಕೇತೂ ಯಥಾಕಾಶೇ ಕ್ರುದ್ಧೌ ಯುದ್ಧೇ ಪರಸ್ಪರಮ್ ॥78॥
ಕರ್ಣಾರ್ಜುನರ ಧ್ವಜಗಳೆರಡೂ ಆಕಾಶದಲ್ಲಿ ರಾಹುಕೇತುಗಳಂತೆ ಕ್ರುದ್ಧವಾಗಿ ಪರಸ್ಪರ ಯುದ್ಧದಲ್ಲಿ ನಿರ್ಭಯವಾಗಿ ರಥದಲ್ಲಿದ್ದು ಶೋಭಿಸಿದುವು.
ಧ್ವಜಗಳು ಕ್ರುದ್ಧವಾಗುವುದೆಂದರೆ ಧ್ವಜವಾಗಿರುವ ಕಪಿ ಕಾಕಗಳಿಗೆ ಕ್ರೋಧ ಉಂಟಾಗುವುದು ವಿವಕ್ಷಿತವಾಗಿದೆ. ಇದು ಅಚೇತನಗಳಲ್ಲಿ ಚೇತನ ಸ್ವಭಾವದ ಆರೋಪರೂಪವಾದ ಕಾವ್ಯಾಲಂಕಾರವಲ್ಲ. ಏಕೆಂದರೆ ಅರ್ಜುನನ ಧ್ವಜವು ಸಾಕ್ಷಾತ್ ಹನುಮಂತನೆ. ಕರ್ಣನ ಧ್ವಜ ಯದ್ಯಪಿ ಕಾಗೆಯ ಪ್ರತಿಮೆ. ಆದರೆ ಕರ್ಣನ ಸರ್ಪಾಸ್ತ್ರದಲ್ಲಿ ಅಶ್ವಸೇನನಾಗ ಇದ್ದಂತೆ ಕಾಕ ಪ್ರತಿಮೆಯಲ್ಲಿಯೂ ಒಬ್ಬ ಕಾಕಾಸುರನಿದ್ದನೆಂದು ತಿಳಿಯಬೇಕು. ವಾದಿರಾಜರಿಗೆ ಸಿಕ್ಕಿದ ಭಾರತ ಪಾಠದಲ್ಲಿ ಬರುವ `ಹಸ್ತಕಾಕ್ಯಾ' ಶಬ್ದ ಆಧುನಿಕರಿಗೆ ಸಿಕ್ಕಿಲ್ಲ. `ಹಸ್ತಿಕಕ್ಷ್ಯಾ' ಆನೆಯ ನಡುವನ್ನು ಕಟ್ಟುವ ತೊಗಲಿನ ಹಗ್ಗವೇ ಕರ್ಣನ ಧ್ವಜವೆಂದು ಅವರು ತಿಳಿದಿದ್ದಾರೆ. ಮತ್ತು ಧ್ವಜ ವೆಂದರೆ ಬಟ್ಟೆಯ ತುಂಡು, ಪತಾಕೆಯೇ, ಬಾವುಟವೇ ಎಂದೂ ತಿಳಿದಿದ್ದಾರೆ.
ಕರ್ಣಸ್ಯಾಶೀವಿಷನಿಭಾ ರತ್ನಸಾರವತೀ ದೃಢಾ |
ಪುರಂದರಧನುಃಪ್ರಖ್ಯಾ ಹಸ್ತಕಾಕ್ಯಾ ವ್ಯರಾಜತ ॥79॥
ಕರ್ಣನ ಧ್ವಜವು ಕೃಷ್ಣಸರ್ಪದಂತೆ ಕಪ್ಪಾಗಿದ್ದು ರತ್ನಾಭರಣಭೂಷಿತವಾಗಿತ್ತು. ಅದರಿಂದ ಇಂದ್ರಧನುಸ್ಸಿನಂತೆ ಅನೇಕ ವರ್ಣಗಳಿಂದ ಕಂಗೊಳಿಸಿತ್ತು. ಅಂಥ ಹಸ್ತ ಅಳತೆಯ ಕಾಗೆಯ ಪ್ರತಿಮೆಯುಳ್ಳ ಧ್ವಜದಂಡವು ಶೋಭಿಸಿತು.
ಕಪಿಶ್ರೇಷ್ಠಸ್ತು ಪಾರ್ಥಸ್ಯ ವ್ಯಾದಿತಾಸ್ಯೋ ಭಯಂಕರಃ |
ಭೀಷಯನ್ನೇವ ದಂಷ್ಟ್ರಾಭಿರ್ದುರ್ನಿರೀಕ್ಷ್ಯೋ ರವಿರ್ಯಥಾ ॥80॥
ಅರ್ಜುನನ ಧ್ವಜವಾಗಿರುವ ಕಪಿಶ್ರೇಷ್ಠನು ಬಾಯಿತೆರೆದು ಕೋರೆ ಹಲ್ಲುಗಳಿಂದ ಭಯಪಡಿಸುತ್ತ ಭಯಂಕರವಾಗಿ ಸೂರ್ಯನಂತೆ ದಿಟ್ಟಿಸಿ ನೋಡಲಾಗದಂತಿದ್ದ.
ಯುದ್ಧಾಭಿಲಾಷುಕೋ ಭೂತ್ವಾ ಧ್ವಜೋ ಗಾಂಡೀವಧನ್ವನಃ |
ಕರ್ಣಧ್ವಜಮುಪಾತಿಷ್ಠತ್ ಸ್ವಸ್ಥಾನಾದ್ ವೇಗವಾನ್ ಕಪಿಃ ॥81॥
ಅರ್ಜುನನ ಧ್ವಜವಾದ ಕಪಿಶ್ರೇಷ್ಠನಿಗೆ ಯುದ್ಧದ ಅಭಿಲಾಷೆ ಉಂಟಾಯಿತು. ಅದರಿಂದ ಕರ್ಣನ ಧ್ವಜದ ಕಡೆಗೆ ತನ್ನ ಸ್ಥಾನದಿಂದ ವೇಗವಾಗಿ ಹಾರಿದ.
ಉತ್ಪತ್ಯ ತು ಮಹಾವೇಗಃ ಕಾಕಮಭ್ಯಾಹನತ್ ಕಪಿಃ |
ನಖೈಶ್ಚ ದಶನೈಶ್ಚೈವ ಗರುಡಃ ಪನ್ನಗಂ ಯಥಾ ॥82॥
ಮಹಾವೇಗದಿಂದ ಹಾರಿ ಕಾಗೆಯ ಪ್ರತಿಮೆಯನ್ನು ಕಪಿಶ್ರೇಷ್ಠನು ಉಗುರು ಹಲ್ಲುಗಳಿಂದ ಗರುಡನು ಹಾವನ್ನು ಹೊಡೆಯುವಂತೆ ಹೊಡೆದ.
ಸಾ ಕಿಂಕಿಣೀಕಾಭರಣಾ ಕಾಲಪಾಶೋಪಮಾಽಽಯಸೀ |
ಅಭ್ಯದ್ರವತ್ಸುಸಂಕ್ರುದ್ಧಾ ಹಸ್ತಕಾಕ್ಯಾಽಥ ತಂ ಕಪಿಮ್ ॥83॥
ಕಾಗೆಯ ಪ್ರತಿಮೆ ಕಿರುಘಂಟೆಗಳಿಂದ ಅಲಂಕೃತವಾಗಿತ್ತು. ಕಾಲಪಾಶದಂತೆ ಕಪ್ಪಾದ ಕಬ್ಬಿಣದ ಪ್ರತಿಮೆ. ಅದರಲ್ಲಿದ್ದ ಒಬ್ಬ ಕಾಕಾಸುರ ಕ್ರುದ್ಧನಾಗಿ ಕಪಿಯನ್ನು ಇದಿರಿಸಿದ.
ಇಲ್ಲಿ ಕರ್ಣನ ಧ್ವಜವನ್ನು `ಕಾಲಪಾಶೋಪಮಾ ಆಯಸೀ' ಎಂದಿದೆ. `ಅಯಸ್' ಅಂದರೆ ಕಬ್ಬಿಣ. ಕಬ್ಬಿಣದಿಂದ ಮಾಡಿದ ಕಾಗೆಯ ಪ್ರತಿಮೆ ಇದು, ಯಮಪಾಶದಂತೆ ಕಪ್ಪಾಗಿದ್ದು ಶತ್ರುಗಳಿಗೆ ಭಯ ಉಂಟುಮಾಡುತ್ತದೆಯೆ ಹೊರತು ಅದು ಬಟ್ಟೆ ತುಂಡಲ್ಲ ಎನ್ನುವುದು ಸ್ಪಷ್ಟವಿದೆ.
ಸೌವರ್ಣಾ ರಾಜತಾಶ್ಚೈವ ತೈಜಸಾಶ್ಚ ಪೃಥಗ್ವಿಧಾಃ |
ಕೇತವೋ ವಿನಿಪಾತ್ಯಂತೇ (ಅ.57.ಶ್ಲೋ.64)
ಇಲ್ಲಿ ಕೇತುಗಳು, ಅಂದರೆ ಧ್ವಜಗಳು ಚಿನ್ನ, ಬೆಳ್ಳಿ ಮುಂತಾದ ಲೋಹ ಮಯವೆಂದು ಸ್ಪಷ್ಟಹೇಳಿದೆ. `ತತೋ ಧ್ವಜಂ ಸ್ಫಾಟಿಕಚಿತ್ರಕಂಬುಂ(81.21) ವೃಷಸೇನನ ಧ್ವಜವು ಸ್ಫಟಿಕದ ಶಂಖವಾಗಿತ್ತು ಎಂದೂ ಹೇಳಿದೆ.
ತಯೋರ್ಘೋರತಮೇ ಯುದ್ಧೇ ದ್ವೈರಥೇ ದ್ಯೂತ ಆಹೃತೇ |
ಪ್ರಕುರ್ವಾತೇ ಧ್ವಜೌ ಯುದ್ಧಂ ಪ್ರತ್ಯಹೇಷನ್ ಹಯಾನ್ ಹಯಾಃ ॥
ಕರ್ಣಾರ್ಜುನರಿಗೆ ಅತ್ಯಂತ ಘೋರವಾದ ದ್ವೈರಥಯುದ್ಧರೂಪದ ದ್ಯೂತ ಪ್ರಾರಂಭವಾಗುವುಕ್ಕೆ ಮುನ್ನ ಇಬ್ಬರ ಧ್ವಜಗಳು ಹೀಗೆ ಯುದ್ಧಮಾಡಲು ತೊಡಗಿದುವು. ಹಾಗೇ ಅವರ ಕುದುರೆಗಳೂ ಪರಸ್ಪರ ಸ್ಪರ್ಧೆಯಿಂದ ಕೆನೆದುವು.
ಅವಿಧ್ಯತ್ಪುಂಡರೀಕಾಕ್ಷಃ ಶಲ್ಯಂ ನಯನಸಾಯಕೈಃ |
ಸ ಚಾಪಿ ಪುಂಡರೀಕಾಕ್ಷಂ ತಥೈವಾಭಿಸಮೈಕ್ಷತ ॥85॥
ಬಳಿಕ ಕೃಷ್ಣ ಶಲ್ಯನನ್ನು, ಶಲ್ಯ ಕೃಷ್ಣನನ್ನು ಹೀಗೆ ಪರಸ್ಪರ ದಿಟ್ಟಿಸಿದರು. ಕಣ್ಣೋಟದ ಬಾಣಗಳಿಂದ ಹೊಡೆದರು.
ತತ್ರಾಜಯದ್ ವಾಸುದೇವಃ ಶಲ್ಯಂ ನಯನಸಾಯಕೈಃ |
ಕರ್ಣಂ ಚಾಪ್ಯಜಯದ್ ದೃಷ್ಟ್ಯಾ ಕುಂತೀಪುತ್ರೋ ಧನಂಜಯಃ ॥86॥
ಈ ದೃಷ್ಟಿಯುದ್ಧದಲ್ಲಿ ಕೃಷ್ಣನು ಕಣ್ಣಿನ ಬಾಣಗಳಿಂದ ಶಲ್ಯನನ್ನು ಗೆದ್ದ. ಅರ್ಜುನನು ಕರ್ಣನನ್ನು ದೃಷ್ಟಿಬಾಣಗಳಿಂದ ಪರಾಭವಗೊಳಿಸಿದ.
ಕಣ್ಣು ಮಿಟುಕಿಸದೆ ಇಬ್ಬರು ಪರಸ್ಪರ ದಿಟ್ಟಿಸಿ ನೋಡುವಾಗ ಮೊದಲಿಗೆ ಕಣ್ಣು ಮಿಟುಕಿಸುವವನು ಪರಾಜಿತನಾಗುತ್ತಾನೆ.

ಅಥಾಬ್ರವೀತ್ ಸೂತಪುತ್ರಃ ಶಲ್ಯಮಾಭಾಷ್ಯ ಸಸ್ಮಿತಮ್ |
ಯದ್ಯರ್ಜುನೋ ರಣೇ ಹನ್ಯಾದದ್ಯ ಮಾಮಿಹ ಕರ್ಹಿಚಿತ್ |
ಕಿಮುತ್ತರಂ ತದಾ ತೇ ಸ್ಯಾತ್ಸಖೇ ಸತ್ಯಂ ಬ್ರವೀಹಿ ಮೇ ॥87॥
ಬಳಿಕ ಕರ್ಣನು ಶಲ್ಯನಿಗೆ ನಗುತ್ತ ನುಡಿದ– ಒಂದುವೇಳೆ ಅರ್ಜುನ ರಣದಲ್ಲಿ ನನ್ನನ್ನು ಕೊಂದರೆ ನಿನ್ನ ಪ್ರತಿಕ್ರಿಯೆ ಏನು? ಮಿತ್ರನೆ, ನನಗೆ ಹೇಳು.
ಶಲ್ಯಃ
ಯದಿ ಕರ್ಣ ರಣೇ ಹನ್ಯಾದದ್ಯ ತ್ವಾಂ ಶ್ವೇತವಾಹನಃ |
ಉಭಾವೇಕರಥೇನಾಹಂ ಹನ್ಯಾಂ ಮಾಧವಪಾಂಡವೌ ॥88॥
ಶಲ್ಯನು ನುಡಿದ– ಈಗ ರಣದಲ್ಲಿ ಅರ್ಜುನ ನಿನ್ನನ್ನು ಕೊಂದರೆ ಕೃಷ್ಣ ಮತ್ತು ಅರ್ಜುನರಿಬ್ಬರನ್ನು ನಾನು ಏಕರಥದಿಂದ ಕೊಲ್ಲುವೆನು.
ಸಂಜಯಃ
ಏವಮೇವ ತು ಗೋವಿಂದಮರ್ಜುನಃ ಪ್ರತ್ಯಭಾಷತ |
ತಂ ಪ್ರಹಸ್ಯಾಬ್ರವೀತ್ ಕೃಷ್ಣಃ ಪಾರ್ಥಂ ಪರಮಿದಂ ವಚಃ ॥89॥
ಇದೇರೀತಿಯಿಂದ ಅರ್ಜುನನೂ ಕೃಷ್ಣನನ್ನು ಕೇಳಿದ. ಕೃಷ್ಣ ಜೋರಾಗಿ ನಕ್ಕು ಅವನಿಗೆ ಈ ಮಾತನ್ನು ನುಡಿದ.
ಪತೇದ್ ದಿವಾಕರಃ ಸ್ಥಾನಾತ್ ಶೀರ್ಯೇತಾನೇಕಧಾ ಕ್ಷಿತಿಃ |
ಶೈತ್ಯಮಗ್ನಿರಿಯಾನ್ನ ತ್ವಾ ಕರ್ಣೋ ಹನ್ಯಾದ್ ಧನಂಜಯಮ್ ॥90॥
ಒಂದುವೇಳೆ ಸೂರ್ಯನು ಆಗಸದಿಂದ ಉದುರಿ ಬೀಳಬಹುದು. ಭೂಮಿ ಅನೇಕ ಭಾಗವಾಗಿ ಸೀಳಿಹೋದೀತು. ಬೆಂಕಿ ತಣ್ಣಗಾದೀತು. ಆದರೆ ಕರ್ಣನು ನಿನ್ನನ್ನು ಕೊಲ್ಲಲಾರ.
ಯದಿ ತ್ವೇವಂ ಕಥಂಚತ್ ಸ್ಯಾಲ್ಲೋಕಪರ್ಯಸನಂ ಭವೇತ್ |
ಹನ್ಯಾಂ ಕರ್ಣಂ ತಥಾ ಶಲ್ಯಂ ಬಾಹುಭ್ಯಾಮೇವ ಸಂಯುಗೇ ॥91॥
ಒಂದುವೇಳೆ ಹೇಗಾದರೂ ನಿನ್ನ ವಧ ನಡೆಯಿತೆಂದರೆ ಲೋಕನಾಶವಾದೀತು. ಕರ್ಣಶಲ್ಯರಿಬ್ಬರನ್ನೂ ಬಾಹುಯುದ್ಧದಿಂದಲೇ ನಾನು ವಧಿಸಿಯೇನು.
ಇತಿ ಕೃಷ್ಣವಚಃ ಶ್ರುತ್ವಾ ಪ್ರಹಸನ್ ಕಪಿಕೇತನಃ |
ಅರ್ಜುನಃ ಪ್ರತ್ಯುವಾಚೇದಂ ಕೃಷ್ಣಮಕ್ಲಿಷ್ಟಕಾರಿಣಮ್ |
ಮಮಾಪ್ಯೇತಾವಪರ್ಯಾಪ್ತೌ ಕರ್ಣಶಲ್ಯೌ ಜನಾರ್ದನ ॥92॥
ಕೃಷ್ಣನ ಮಾತನ್ನು ಕೇಳಿ ನಗುತ್ತ ಅರ್ಜುನನು ಅನಾಯಾಸದಿಂದ ಎಲ್ಲ ಕಾರ್ಯಗಳನ್ನು ಮಾಡಬಲ್ಲ ಕೃಷ್ಣನಿಗೆ ನುಡಿದ: ಕರ್ಣ ಶಲ್ಯರು ನನಗೂ ಸಮರ್ಥ ಪ್ರತಿಭಟರಲ್ಲ.
ಸಪತಾಕಧ್ವಜಂ ಕರ್ಣಂ ಸಶಲ್ಯರಥವಾಜಿನಮ್ |
ಸಚ್ಛತ್ರಕವಚಂ ಚೈವ ಸಶಕ್ತಿಶರಕಾರ್ಮುಕಮ್ ॥93॥
ದೃಷ್ಟಾಸ್ಯದ್ಯ ಶರೈಃ ಕರ್ಣಂ ರಣೇ ಕೃತ್ತಮನೇಕಧಾ |
ಅದ್ಯೈನಂ ಸರಥಂ ಸಾಶ್ವಂ ಸಶಕ್ತಿಕವಚಾಯುಧಮ್ ॥94॥
ಸಂಚೂರ್ಣಿತಮಿವಾಮರ್ದೇ ಪಾದಪಂ ಪಶ್ಯ ದಂತಿನಾ |
ಅದ್ಯ ರಾಧೇಯಭಾರ್ಯಾಣಾಂ ವೈಧವ್ಯಂ ಸಮುಪಸ್ಥಿತಮ್ ॥95॥
ಪತಾಕೆ ಧ್ವಜ ಶಲ್ಯ ರಥ ಅಶ್ವ ಛತ್ರ ಕವಚ ಶಕ್ತಿ ಬಾಣಬಿಲ್ಲು ಇವೆಲ್ಲವುಗಳ ಸಮೇತವಾಗಿ ಕರ್ಣನನ್ನು ರಣದಲ್ಲಿ ಬಾಣಗಳಿಂದ ನಾನು ಚೂರುಚೂರಾಗಿ ಮಾಡುವುದನ್ನು ನೀನು ಪ್ರತ್ಯಕ್ಷ ನೋಡುವೆ. ಇಂದು ರಥ ಅಶ್ವ ಶಕ್ತಿ ಕವಚ ಆಯುಧಗಳೊಂದಿಗೆ ಕರ್ಣನು ಆನೆಯು ತುಳಿದು ಪುಡಿಗೈದ ಮರದಂತೆ ಚೂರಾಗುತ್ತಾನೆ, ನೋಡು. ಕರ್ಣನ ಹೆಂಡಂದಿರಿಗೆ ವೈಧವ್ಯ ಬರುತ್ತದೆ.
ಇಲ್ಲಿ `ಸಪತಾಕ ಧ್ವಜಂ' ಎಂದು ಪತಾಕೆಯೊಂದಿಗೆ ಧ್ವಜವನ್ನು ಪ್ರತ್ಯೇಕವಾಗಿ ಹೇಳಿದ್ದರಿಂದ ಧ್ವಜ, ಪತಾಕೆಗಳು ಒಂದೇ ಅಲ್ಲ. ಪತಾಕೆ ಬಟ್ಟೆ ತುಂಡು, ಧ್ವಜವು ಲೋಹಪ್ರತಿಮೆಯಾಗಿರುತ್ತವೆ.
ಧ್ರುವಂ ಸ್ವಪ್ನೇಷ್ವನಿಷ್ಟಾನಿ ತಾಭಿರ್ದೃಷ್ಟಾನಿ ಮಾಧವ |
ಧ್ರುವಮದ್ಯೈವ ದ್ರಷ್ಟಾಸಿ ವಿಧವಾಃ ಕರ್ಣಯೋಷಿತಃ ॥96॥
ನ ಹಿ ಮೇ ಶಾಮ್ಯತೇ ವೈರಂ ಕೃಷ್ಣಾಂ ಯತ್ಪ್ರಾಹಸತ್ ಪುರಾ ॥97॥
ಅವರು ನಿಶ್ಚಯವಾಗಿ ರಾತ್ರಿ ಸ್ವಪ್ನಗಳಲ್ಲಿ ಅನಿಷ್ಟಗಳನ್ನು ನೋಡಿರುತ್ತಾರೆ ಕೃಷ್ಣ. ನಿಶ್ಚಯವಾಗಿಯೂ ನೀನು ಈಗಲೇ ಕರ್ಣನ ಭಾರ್ಯೆಯರು ವಿಧವೆಯರಾಗುವು ದನ್ನು ನೋಡುವೆ. ದ್ರೌಪದಿಯನ್ನು ಕರ್ಣನು ಅಪಹಾಸ್ಯ ಮಾಡಿದ್ದು ನನಗೆ ಮರೆಯಲು ಶಕ್ಯವಾಗುವುದಿಲ್ಲ.
ಅದ್ಯ ದ್ರಷ್ಟಾಸಿ ಗೋವಿಂದ ಕರ್ಣಮುನ್ಮಥಿತಂ ಮಯಾ |
ವಾರಣೇನೇವ ಮತ್ತೇನ ಪುಷ್ಪಿತಂ ಜಗತೀರುಹಮ್ ॥98॥
ಕೃಷ್ಣ, ಮದಿಸಿದ ಆನೆ ಹೂಬಿಟ್ಟ ಮರವನ್ನು ಪುಡಿಮಾಡುವಂತೆ ನಾನು ಕರ್ಣನನ್ನು ಪುಡಿಮಾಡುವೆನು, ಅದನ್ನು ನೀನು ನೋಡುವೆ.
ಅದ್ಯ ತಾ ಮಧುರಾ ವಾಚಃ ಶ್ರೋತಾಸಿ ಮಧುಸೂದನ |
ದಿಷ್ಟ್ಯಾ ಜಯಸಿ ವಾರ್ಷ್ಣೇಯ ಇತಿ ಕರ್ಣೇ ನಿಪಾತಿತೇ ॥99॥
ಕರ್ಣನು ಹತನಾದಾಗ `ಭಾಗ್ಯವಶದಿಂದ ನೀನು ಜಯಶಾಲಿಯಾದೆ!' ಎಂದು ಬಂಧುಗಳು ಹೊಗಳುವ ಸವಿನುಡಿಯನ್ನು ನೀನು

ಆಲಿಸಲಿರುವೆ ಕೃಷ್ಣ.
ಅದ್ಯಾಭಿಮನ್ಯುಜನನೀಮನೃಣಃ ಸಾಂತ್ವಯಿಷ್ಯಸಿ |
ಕುಂತೀಂ ಪಿತೃಷ್ವಸಾರಂ ಚ ಸಂಪ್ರಹೃಷ್ಟೋ ಜನಾರ್ದನ ॥100॥
ಅಭಿಮನ್ಯುವಿನ ತಾಯಿ ಸುಭದ್ರೆಯನ್ನು, ಕರ್ಣನಾಶದಿಂದ ಋಣ ತೀರಿಸಿದ ನೀನು ಸಂತೈಸುವಿ. ಸೋದರತ್ತೆಯಾದ ಕುಂತಿಯನ್ನು ಹರ್ಷದಿಂದ ಸಂತೈಸುವಿ.
ಅದ್ಯ ಬಾಷ್ಪಮುಖೀಂ ಕೃಷ್ಣಾಂ ಸಾಂತ್ವಯಿಷ್ಯಸಿ ಮಾಧವ |
ವಾಗ್ಭಿಃಶ್ಲಾಘ್ಯಮೃತಕಲ್ಪಾಭಿರ್ಧರ್ಮರಾಜಂ ಯುಧಿಷ್ಠಿರಮ್ ॥101॥
ಕಣ್ಣೀರಿಡುವ ದ್ರೌಪದಿಯನ್ನು ಮತ್ತು ಧರ್ಮರಾಜ ಯುಧಿಷ್ಠಿರನನ್ನು ನೀನು ಇಂದು ಅಮೃತದಂಥ ಸವಿ ಮಾತಿನಿಂದ ಸಂತೈಸುವಿ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಕರ್ಣಾರ್ಜುನಯುದ್ಧೇ ತ್ರ್ಯಶೀತಿತಮೋಽಧ್ಯಾಯಃ ॥83॥

ಮಹಾಭಾರತತಾತ್ಪರ್ಯನಿರ್ಣಯ
ವವರ್ಷತುಸ್ತೌ ಚ ಮಹಾಸ್ತ್ರಶಸ್ತ್ರೈ-
ರ್ಭೀಮೋ ರಥಸ್ಥೋಽವರಜಂ ಜುಗೋಪ |
ಶೈನೇಯಪಾಂಚಾಲಮುಖಾಶ್ಚ ಪಾರ್ಥ-
ಮಾವಾರ್ಯ ತಸ್ಥುಃ ಪ್ರಸಭಂ ನದಂತಃ ॥171॥
ಕರ್ಣಾರ್ಜುನರು ಮಹಾ ಅಸ್ತ್ರಶಸ್ತ್ರಗಳ ಸುರಿಮಳೆ ಮಾಡಿದರು. ರಥಾರೂಢನಾದ ಭೀಮ ಅರ್ಜುನನ ರಕ್ಷಣೆಗೆ ನಿಂತ. ಸಾತ್ಯಕಿ ದ್ರುಪದ ಮುಂತಾದವರೂ ಕೂಡ ಅರ್ಜುನನ ರಕ್ಷಣೆಗಾಗಿ ಸುತ್ತುವರಿದು ಗಟ್ಟಿಯಾಗಿ ಗರ್ಜನೆ ಮಾಡುತ್ತ ನಿಂತರು.
ದುರ್ಯೋಧನ ದ್ರೌಣಿಮುಖಾಶ್ಚ ಕರ್ಣಂ
ರರಕ್ಷುರಾವಾರ್ಯ ತದಾಽಽಸ ಯುದ್ಧಮ್ |
ತತ್ರಾರ್ಜುನಂ ಬಾಣಗಣೈಃ ಸ ಕರ್ಣಃ
ಸಮರ್ದಯಾಮಾಸ ವಿಶೇಷಯನ್ ರಣೇ |
ತದಾ ನದನ್ ಭೀಮಸೇನೋ ಜಗಾದ
ಗದಾಂ ಸಮಾದಾಯ ಸಮಾತ್ತರೋಷಃ ॥172॥
ದುರ್ಯೋಧನ ಅಶ್ವತ್ಥಾಮ ಮುಂತಾದವರು ಕರ್ಣನನ್ನು ಸುತ್ತುವರಿದು ರಕ್ಷಿಸತೊಡಗಿದರು. ಆಗ ಯುದ್ಧ ನಡೆಯಿತು. ಕರ್ಣ ಬಾಣಸಮೂಹಗಳಂದ ಯುದ್ಧದಲ್ಲಿ ಮೇಲುಗೈ ಸಾಧಿಸುತ್ತ ಅರ್ಜುನನನ್ನು ಪೀಡಿಸತೊಡಗಿದ. ಆಗ ಭೀಮಸೇನ ಕೋಪಾವಿಷ್ಟನಾಗಿ ಗದೆಯನ್ನು ಹಿಡಿದು ಗರ್ಜಿಸುತ್ತ ನುಡಿದ.
ಅಹಂ ಚೈನಂ ಗದಯಾ ಪೋಥಯಾಮಿ
ತ್ವಂ ವಾ ಜಹೀಮಂ ಸಮುಪಾತ್ತವೀರ್ಯಃ |
ಕೃಷ್ಣೋಽಪಿ ತಂ ಬೋಧಯಾಮಾಸ ಸಮ್ಯಙ್
ನರಾವೇಶಂ ವ್ಯಂಜಯನ್ ಭೂಯ ಏವ ॥ 173 ॥
`ಅರ್ಜುನ, ನಾನೇ ಕರ್ಣನನ್ನು ಗದೆಯಿಂದ ವಧಿಸುತ್ತೇನೆ ಅಥವಾ ನೀನು ಪರಾಕ್ರಮ ತೋರಿ ಇವನನ್ನು ವಧಿಸಬೇಕು.' ಹೀಗೆ ಭೀಮ ನುಡಿದಾಗ ಕೃಷ್ಣ ಅರ್ಜುನನಲ್ಲಿ ನರಾವೇಶವನ್ನು ಇನ್ನೂ ಅಧಿಕವಾಗಿ ಪ್ರಕಟಪಡಿಸುತ್ತ ಚೆನ್ನಾಗಿ ಹುರಿದುಂಬಿಸಿದ.
ಸಮ್ಯದ್ಧವೀರ್ಯಃ ಸ ತದಾ ಧನಂಜಯಃ
ಸುಯೋಧನದ್ರೌಣಿಕೃಪಾನ್ ಸಭೋಜಾನ್ |
ಸಾಕಂ ಚ ಬಾಣೈರ್ವಿರಥಾಂಶ್ಚಕಾರ
ವಿವ್ಯಾಧ ತಾನಪ್ಯರಿಹಾ ಸುಪುಂಖೈಃ ॥ 174 ॥
ಆಗ ಶತ್ರುನಾಶಕನಾದ ಅರ್ಜುನ ಶಕ್ತಿ ತುಂಬಿಕೊಂಡು ದುರ್ಯೋಧನ ಅಶ್ವತ್ಥಾಮ ಕೃಪ ಕೃತವರ್ಮರನ್ನು ಏಕಕಾಲದಲ್ಲಿ ವಿರಥರನ್ನಾಗಿ ಮಾಡಿದ ಮತ್ತು ಒಳ್ಳೆಯ ಗರಿಯಿಂದ ಕೂಡಿದ ಬಾಣಗಳಿಂದ ಹೊಡೆದ.
ತೇ ಕಿಂಚಿದ್ ದೂರತಸ್ತಸ್ಥುಃ ಪಶ್ಯಂತೋ ಯುದ್ಧಮದ್ಭುತಮ್ |
ಅಮಾನುಷಂ ತತ್ ಪಾರ್ಥಸ್ಯ ದೃಷ್ಟ್ವಾ ಕರ್ಮ ಗುರೋಃ ಸುತಃ |
ಗೃಹೀತ್ವಾ ಪಾಣಿನಾ ಪಾಣಿಂ ದುರ್ಯೋಧನಮಭಾಷತ ॥ 175 ॥
ದುರ್ಯೋಧನಾದಿಗಳು ಅದ್ಭುತವಾದ ಆ ಯುದ್ಧವನ್ನು ನೋಡುತ್ತ ಸ್ವಲ್ಪ ದೂರದಲ್ಲಿ ನಿಂತರು. ಅಶ್ವತ್ಥಾಮ ಅರ್ಜುನನ ಅತಿಮಾನುಷವಾದ ಯುದ್ಧವನ್ನು ನೋಡಿ ಕೈಯಿಂದ ದುರ್ಯೋಧನನ ಕೈಹಿಡಿದು ನುಡಿದ.
ದೃಷ್ಟಂ ಹಿ ಭೀಮಸ್ಯ ಬಲಂ ತ್ವಯಾದ್ಯ
ತಥೈವ ಪಾರ್ಥಸ್ಯ ಯಥಾ ಜಿತಾ ವಯಮ್ |
ಅಲಂ ವಿರೋಧೇನ ಸಮೇತ್ಯ ಪಾಂಡವೈಃ
ಪ್ರಶಾಧಿ ರಾಜ್ಯಂ ಚ ಮಯಾ ಸಮೇತಃ ॥ 176 ॥
`ಇಂದು ನೀನು ಭೀಮನ ಬಲವನ್ನು ಕಂಡಿರುವೆ. ಹಾಗೇ ಅರ್ಜುನನ ಬಲ ವನ್ನೂ ಕಂಡಿರುವೆ. ನಾವು ಸೋತಿದ್ದೇವೆ. ಇನ್ನು ಈ ವಿರೋಧ ಸಾಕು. ಪಾಂಡವ ರೊಡನೆ ಸಂಧಿ ಮಾಡಿಕೊಂಡು ರಾಜ್ಯವಾಳು. ನಾನು ನಿನ್ನ ಜೊತೆಗಿರುತ್ತೇನೆ.

ಧನಂಜಯಸ್ತಿಷ್ಠತಿ ವಾರಿತೋ ಮಯಾ
ಜನಾರ್ದನೋ ನೈವ ವಿರೋಧಮಿಚ್ಛತಿ |
ವೃಕೋದರಸ್ತದ್ವಚನೇ ಸ್ಥಿತಃ ಸದಾ
ಯುಧಿಷ್ಠಿರಃ ಶಾಂತಮನಾಸ್ತಥಾ ಯಮೌ ॥ 177 ॥
ನಾನು ತಡೆದರೆ ಅರ್ಜುನ ಸುಮ್ಮನಾಗುತ್ತಾನೆ. ಕೃಷ್ಣ ವಿರೋಧವನ್ನು ಸರ್ವಥಾ ಬಯಸುವುದಿಲ್ಲ. ಭೀಮ ಸದಾ ಕೃಷ್ಣನ ಮಾತಿನಂತೆ ನಡೆಯುವವ. ಯುಧಿಷ್ಠಿರ ಶಾಂತ ಸ್ವಭಾವದವನು. ನಕುಲಸಹದೇವರೂ ಹಾಗೇ.
ಹಿತಾರ್ಥಮೇತತ್ ತವ ವಾಕ್ಯಮೀರಿತಂ
ಗೃಹಾಣ ಮೇ ನೈವ ಭಯಾದುದೀರಿತಮ್ |
ಅಹಂ ಹ್ಯವಧ್ಯೋ ಮಮ ಚೈವ ಮಾತುಲೋ
ನ ಶಂಕಿತುಂ ಮೇ ವಚನಂ ತ್ವಮರ್ಹಸಿ ॥ 178 ॥
ನಿನ್ನ ಹಿತಕ್ಕಾಗಿ ನಾನೀ ಮಾತನ್ನು ಹೇಳಿದ್ದೇನೆ. ತಿಳಿದುಕೊಳ್ಳು. ನಾನೇನೂ ಭಯದಿಂದ ನುಡಿಯಲಿಲ್ಲ. ನಾನಾಗಲಿ, ನನ್ನ ಸೋದರಮಾವ ಕೃಪನಾಗಲಿ ಅವಧ್ಯರೆ. ನನ್ನ ಮಾತಿನಲ್ಲಿ ಅನುಮಾನ ಪಡಬೇಡ.'
ಇತೀರಿತಃ ಪ್ರಾಹ ಸುಯೋಧನಸ್ತಂ
ದುಃಶಾಸನಸ್ಯಾದ್ಯ ಪಪೌ ಹಿ ಶೋಣಿತಮ್ |
ಶಾರ್ದೂಲಚೇಷ್ಟಾಮಕರೋಚ್ಚ ಭೀಮೋ
ನ ಮೇ ಕಥಂಚಿತ್ ತದನೇನ ಸಂಧಿಃ ॥ 179 ॥
ಅಶ್ವತ್ಥಾಮ ಹೀಗೆ ಹೇಳಿದಾಗ ದುರ್ಯೋಧನನೆಂದ: `ಭೀಮ ಈಗ ದುಃಶಾಸನನ ನೆತ್ತರನ್ನು ಕುಡಿದಿದ್ದಾನೆ. ಹುಲಿಯಂತೆ ಕುಣಿದಿದ್ದಾನೆ. ಅದರಿಂದ ನನಗೆ ಅವನೊಡನೆ ಸಂಧಿ ಯಾವ ರೀತಿಯಿಂದಲೂ ಶಕ್ಯವಿಲ್ಲ.'
ಇತ್ಯುಕ್ತೋ ದ್ರೌಣಿರಾಸೀತ್ ಸ ತೂಷ್ಣೀಂ ಕರ್ಣಧನಂಜಯೌ |
ಮಹಾಸ್ತ್ರಶಸ್ತ್ರವರ್ಷೇಣ ಚಕ್ರತುಃ ಖಮನಂತರಮ್ ॥ 180 ॥
ದುರ್ಯೋಧನ ಹೀಗೆ ಹೇಳಿದಾಗ ಅಶ್ವತ್ಥಾಮ ಸುಮ್ಮನಾದ. ಕರ್ಣಾರ್ಜುನರು ಮಹಾ ಅಸ್ತ್ರಶಸ್ತ್ರಗಳಿಂದ ಆಕಾಶವನ್ನು ನಿಬಿಡವಾಗಿ ತುಂಬಿದರು.

ಎಂಬತ್ತನಾಲ್ಕನೆಯ ಅಧ್ಯಾಯ
ಅರ್ಜುನ ಅದ್ಭುತ ಪರಾಕ್ರಮ ತೋರುತ್ತಾನೆ. ಅಶ್ವತ್ಥಾಮ ದುರ್ಯೋಧನನಿಗೆ ಸಂಧಾನದ ಸಲಹೆ ನೀಡುತ್ತಾನೆ. ದುರ್ಯೋಧನ ನಿರಾಕರಿಸುತ್ತಾನೆ.
ಸಂಜಯಃ
ತದ್ದೇವನಾಗಾಸುರಸಿದ್ಧಯಕ್ಷೈ-
ರ್ಗಂಧರ್ವರಕ್ಷೋಽಪ್ಸರಸಾಂ ಸಮೂಹೈಃ |
ಬ್ರಹ್ಮರ್ಷಿರಾಜರ್ಷಿಸುಪರ್ಣಜುಷ್ಟಂ
ಬಭೌ ವಿಯದ್ ವಿಸ್ಮಯನೀಯರೂಪಮ್ ॥1॥
ಸಂಜಯ ನುಡಿದ– ದೇವತೆಗಳು ನಾಗರು ಅಸುರರು ಸಿದ್ಧ ಯಕ್ಷಗಂಧರ್ವ ರಾಕ್ಷಸ ಅಪ್ಸರೆಯರ ಸಮೂಹಗಳಿಂದ ತುಂಬಿ, ಬ್ರಹ್ಮರ್ಷಿರಾಜರ್ಷಿ ಗರುಡ ಪಕ್ಷಿಗಳಿಂದ ಸೇವ್ಯವಾದ ಆಕಾಶವು ಆಗ ಆಶ್ಚರ್ಯಕರವಾದ ಆಕಾರವನ್ನು ತಳೆಯಿತು.
ನಾನದ್ಯಮಾನಂ ನಿನದೈರ್ಮನೋಜ್ಞೈ
ರ್ವಾದಿತ್ರಗೀತಸ್ತುತಿಭಿಶ್ಚ ನೃತ್ತೈಃ |
ಸರ್ವೇಽಂತರಿಕ್ಷಂ ದದೃಶುರ್ಮನುಷ್ಯಾಃ
ಖಸ್ಥಾಂಶ್ಚ ತಾನ್ ವಿಸ್ಮಯನೀಯರೂಪಾನ್ ॥2॥
ಮನೋಜ್ಞವಾದ ಧ್ವನಿಗಳಿಂದ ತುಂಬಿ ವಾದ್ಯ ಗೀತ ಸ್ತೋತ್ರ ನೃತ್ಯಗಳಿಂದಲೂ ಯುಕ್ತವಾದ ಆಕಾಶವನ್ನೂ, ಆಶ್ಚರ್ಯಕರ ರೂಪ ಉಳ್ಳವರಾಗಿ ಆಕಾಶದಲ್ಲಿ ಸಂಚರಿಸುವ ಆ ದೇವ ಅಸುರ ಮುಂತಾದವರನ್ನೂ ಎಲ್ಲ ಮಾನವರೂ ನೋಡಿದರು.
ತತಃ ಪ್ರಹೃಷ್ಟಾಃ ಕುರುಪಾಂಡುಯೋಧಾ
ವಾದಿತ್ರಶಂಖಾಯುಧಸಿಂಹನಾದೈಃ |
ನಿನಾದಯಂತೋ ವಸುಧಾಂ ದಿಶಶ್ಚ
ಸ್ವನೇನ ಸರ್ವೇ ದ್ವಿಷತೋ ನಿಜಘ್ನುಃ ॥3॥
ಉತ್ಸಾಹಗೊಂಡ ಕೌರವಪಾಂಡವಯೋಧರು ವಾದ್ಯ ಶಂಖ ಆಯುಧ ಸಿಂಹಧ್ವನಿಗಳಿಂದ ಭೂಮಿಯನ್ನು ದಿಕ್ಕುಗಳಿಂದ ಪ್ರತಿಧ್ವನಿಸುತ್ತ ಎಲ್ಲರೂ ಶತ್ರುಸಂಹಾರಕ್ಕೆ ತೊಡಗಿದರು.
ನಾನಾಶ್ವಮಾತಂಗರಥಾಯುತಾಕುಲಂ
ವರಾಸಿಶಕ್ತ್ಯ ೃಷ್ಟಿನಿಪಾತದುಃಸಹಮ್ |
ಅಭೀರುಜುಷ್ಟಂ ಹತದೇಹಸಂಕುಲಂ
ರಣಾಜಿರಂ ಲೋಹಿತರಕ್ತಮಾಬಭೌ ॥4॥
ಗಜ ಅಶ್ವ ರಥ ಪದಾತಿಗಳಿಂದ ತುಂಬಿ, ಬಾಣ ಖಡ್ಗ ಶಕ್ತಿ ಋಷ್ಟಿಗಳ ಮಳೆಯಿಂದ ದುಃಸಹವಾಗಿ, ಹತರಾದವರ ದೇಹಗಳಿಂದ ತುಂಬಿ

ರಕ್ತದಿಂದ ಕೆಂಪಾದ ರಣರಂಗವು ವೀರರಿಂದ ಸೇವಿತವಾಗಿ ಶೋಭಿಸಿತು.
ಬಭೂವ ಯುದ್ಧಂ ಕುರುಪಾಂಡವಾನಾಂ
ಯಥಾ ಸುರಾಣಾಮಸುರೈಃ ಸಹಾಭವತ್ ॥5॥
ಸುರರಿಗೆ ಅಸುರರೊಡನೆ ನಡೆದ ಯುದ್ಧದಂತೆಯೆ ಕುರು ಪಾಂಡವರ ಯುದ್ಧವೂ ನಡೆಯಿತು.
ಯಥಾ ಪ್ರವೃತ್ತೇ ತುಮುಲೇ ಸುದಾರುಣೇ
ಧನಂಜಯಶ್ಚಾಧಿರಥಿಶ್ಚ ಸಾಯಕೈಃ।
ದಿಶಶ್ಚ ಸೈನ್ಯಂ ಚ ಶಿತೈರಜಿಹ್ಮಗೈಃ
ಪರಸ್ಪರಂ ಪ್ರೋರ್ಣುವತುಃ ಸ್ಮ ದಂಸಿತೌ ॥6॥
ಹಾಗೆ ದಾರುಣವಾದ ಮಹಾಯುದ್ಧ ನಡೆದಾಗ ಕವಚಧಾರಿಗಳಾದ ಅರ್ಜುನನೂ ಕರ್ಣನೂ ಹರಿತವಾದ ನೇರವಾದ ಬಾಣಗಳಿಂದ ಪರಸ್ಪರ ಮುಚ್ಚಿದರು. ಸೈನ್ಯವನ್ನೂ ದಿಕ್ಕುಗಳನ್ನೂ ಮುಚ್ಚಿದರು.
ತತಸ್ತ್ವದೀಯಾಶ್ಚ ಪರೇ ಚ ಸಾಯಕೈಃ
ಕೃತೇಽಂಧಕಾರೇ ವಿವಿದುರ್ನ ಕಿಂಚನ।
ಭಯಾತ್ತು ತಾವೇವ ರಥೌ ಸಮಾಶ್ರಯನ್
ತಮೋನುದೌ ಖೇ ಪ್ರಸೃತಾ ಇವಾಂಶವಃ ॥7॥
ಆಗಲೆ ನಿನ್ನವರೂ ಶತ್ರುಗಳೂ ಬಾಣಗಳಿಂದ ಅಂಧಕಾರ ಉಂಟುಮಾಡಿದಾಗ ಅವರಿಗೆ ಏನೂ ಕಾಣದಾಯಿತು. ಅವರು ಭಯದಿಂದ ಕರ್ಣಾರ್ಜುನರ ಆ ರಥಗಳನ್ನೇ ಆಕಾಶದಲ್ಲಿ ಹರಡುವ ಕಿರಣಗಳು ತಮಸ್ಸನ್ನು ಕಳೆವ ಸೂರ್ಯ ಚಂದ್ರರನ್ನೇ ಆಶ್ರಯಿಸುವಂತೆ ಆಶ್ರಯಿಸಿದರು.
ತತೋಽಸ್ತ್ರಮಸ್ತ್ರೇಣ ಪರಸ್ಪರಸ್ಯ ತೌ
ವಿಧೂಯ ವಾತಾವಿವ ಪೂರ್ವಪಶ್ಚಿಮೌ।
ಘನಾಂಧಕಾರೇ ವಿತತೇ ತಮೋನುದೌ
ಯಥೋದಿತೌ ತದ್ವದತೀವ ರೇಜತುಃ ॥8॥
ಪೂರ್ವ ಮತ್ತು ಪಶ್ಚಿಮದ ಗಾಳಿಗಳು ಪರಸ್ಪರ ತಡೆಯುವಂತೆ ಅವರು ಪರಸ್ಪರ ಅಸ್ತ್ರವನ್ನು ಅಸ್ತ್ರದಿಂದ ತಡೆಯುತ್ತ ಮೋಡಗಳಿಂದ ಅಂಧಕಾರ ಕವಿದಾಗ ತಮಸ್ಸನ್ನು ಕಳೆವ ಸೂರ್ಯಚಂದ್ರರಂತೆ ಉದಿಸಿ ಬಹಳವಾಗಿ ಶೋಭಿಸಿದರು.
ನ ಚಾತಿಸರ್ತವ್ಯಮಿತಿ ಪ್ರಚೋದಿತಾಃ
ಪರೇ ತ್ವದೀಯಾಶ್ಚ ತದಾವತಸ್ಥಿರೇ।
ಮಹಾರಥೌ ತೌ ಪರಿವಾರ್ಯ ಸರ್ವತಃ
ಸುರಾಸುರಾ ವಾಸವಶಂಬರಾವಿವ ॥9॥
ಯಾರೂ ಮುಂದೆ ಹೋಗಬೇಡಿರೆಂದು ಸೇನಾಧಿಪತಿಗಳ ಸೂಚನೆಯಿಂದ ಪರರೂ ನಿನ್ನವರು ಅಲ್ಲಿಯೇ ಮಹಾರಥರಾದ ಕರ್ಣಅರ್ಜುನರನ್ನು ಸುತ್ತು ವರಿದು ದೇವಾಸುರರು ಇಂದ್ರ ಶಂಬರರನ್ನು ಸುತ್ತುವರಿದು ನಿಂತಂತೆ ನಿಂತರು.
ಮೃದಂಗಭೇರೀಪಣವಾನಕಸ್ವನೈ-
ರ್ನಿನಾದಿತೇ ಭಾರತ ಶಂಖನಿಸ್ವನೈಃ।
ಸಸಿಂಹನಾದೌ ಬಭತುರ್ನರೋತ್ತಮೌ
ಶಶಾಂಕಸೂರ್ಯಾವಿವ ಮೇಘನಿಸ್ವನೈಃ ॥10॥
ರಾಜನೆ, ಮೃದಂಗ ಭೇರಿ ಪಣವ ಆನಕ ಶಂಖಧ್ವನಿಗಳಿಂದ ತುಂಬಿದ ರಣರಂಗದಲ್ಲಿ ಸಿಂಹನಾದ ಮಾಡುತ್ತ ಕರ್ಣಾರ್ಜುನರು ಮೋಡಗಳ ಗರ್ಜನೆ ಆಗುತ್ತಿದ್ದರೆ ಚಂದ್ರಸೂರ್ಯರು ಹೊಳೆಯುವ ಹಾಗೇ ಶೋಭಿಸಿದರು.
ಮಹಾಧನುರ್ಮಂಡಲಮಧ್ಯಗಾವುಭೌ
ಸುವರ್ಚಸೌ ಬಾಣಸಹಸ್ರರಶ್ಮಿನೌ।
ದಿಧಕ್ಷಮಾಣೌ ಸಚರಾಚರಂ ಜಗದ್
ಯುಗಾಂತಸೂರ್ಯಾವಿವ ದುಃಸಹೌ ರಣೇ ॥11॥
ಮಂಡಲಾಕಾರವಾಗಿ ಬಾಗಿಸಿದ ಮಹಾಧನುಗಳ ನಡುವೆ ಒಳ್ಳೆ ವರ್ಚಸ್ಸುಳ್ಳ ಕರ್ಣಾರ್ಜುನರು ಸಾವಿರಗಟ್ಟಲೆ ಬಾಣಗಳ ಕಿರಣಗಳನ್ನು ಸೂಸುತ್ತ ಸಚರಾಚರ ಪ್ರಪಂಚವನ್ನೇ ಸುಡಲು ಹೊರಟ ಇಬ್ಬರು ಸೂರ್ಯರಂತೆಯೆ ರಣದಲ್ಲಿ ಸಹಿಸಲಾಗದವರಾದರು.
ಉಭಾವಜೇಯಾವಹಿತಾಂತಕಾವುಭೌ
ಜಿಘಾಂಸತುಸ್ತೌ ಕೃತಿನೌ ಪರಸ್ಪರಮ್।
ಮಹಾಹವೇ ವೀರವರೌ ಸಮೀಯತು-
ರ್ಯಥೇಂದ್ರಜಂಭಾವಿವ ಕರ್ಣಪಾಂಡವೌ ॥12॥
ಕರ್ಣಾರ್ಜುನರು ಇಬ್ಬರೂ ಅಜೇಯರು. ಇಬ್ಬರೂ ಮಹಾವೀರರು ಶತ್ರುನಾಶಕರು ಮಹಾರಣದಲ್ಲಿ ಪರಸ್ಪರ ವಧಿಸಲು ಬಯಸುವವರು ನಿಪುಣರು ದೇವೇಂದ್ರ ಮತ್ತು ಜಂಭಾಸುರರಂತೆ ಮುಖಾಮುಖಿಯಾಗಿದ್ದಾರೆ.
ತತೋ ಮಹಾಸ್ತ್ರಾಣಿ ಮಹಾಧನುರ್ಧರೌ
ವಿಮುಂಚಮಾನಾವಿಷುಭಿರ್ಭಯಾನಕೈಃ।
ನರಾಶ್ವನಾಗಾನಮಿತಾನ್ ನಿಜಘ್ನತುಃ

ಪರಸ್ಪರಂ ಜಘ್ನತುರುತ್ತಮೇಷುಭಿಃ ॥13॥
ಕರ್ಣಾರ್ಜುನರು ಮಹಾಧನುರ್ಧಾರಿಗಳು, ಮಹಾ ಅಸ್ತ್ರಗಳನ್ನು ಪ್ರಯೋಗಿಸುತ್ತ ಭಯಾನಕವಾದ ಬಾಣಗಳಿಂದ ಲೆಕ್ಕವಿಲ್ಲದಷ್ಟು ಪದಾತಿ ಅಶ್ವಗಜಗಳನ್ನು ವಧಿಸಿದರು. ಉತ್ತಮ ಬಾಣಗಳಿಂದ ಪರಸ್ಪರ ಹೊಡೆದರು.
ತತೋ ವಿಸಸ್ರುಃ ಪುನರರ್ದಿತಾಃ ಶರೈ
ರ್ನರೋತ್ತಮಾಭ್ಯಾಂ ಕುರುಪಾಂಡವಾಶ್ರಯಾಃ |
ಸನಾಗಪತ್ತ್ಯಶ್ವರಥಾ ದಿಶೋ ಗತಾ-
ಸ್ತಥಾ ಯಥಾ ಸಿಂಹಭಯಾದ್ ವನೌಕಸಃ ॥14॥
ಆಗ ಕರ್ಣಾರ್ಜುನರಿಂದ ಪುನಃ ಹೊಡೆಸಿಕೊಂಡು ಕೌರವಪಾಂಡವರ ಕಡೆಯ ಗಜ ಪದಾತಿ ಅಶ್ವ ರಥಯೋಧರು ಸಿಂಹದ ಭಯದಿಂದ ಕಾಡುಪ್ರಾಣಿಗಳು ಓಡುವಂತೆ ಓಡಿದರು.
ತತಸ್ತು ದುರ್ಯೋಧನಭೋಜಸೌಬಲಾಃ
ದ್ರೌಣಿಶ್ಚ ಶಾರದ್ವತಸೂನುನಾ ಸಹ |
ಮಹಾರಥಾಃ ಪಂಚ ಧನಂಜಯಾಚ್ಯುತೌ
ಶರೈಃ ಶರೀರಾಂತಕರೈರತಾಡಯನ್ ॥15॥
ಬಳಿಕ ದುರ್ಯೋಧನ ಕೃತವರ್ಮ ಶಕುನಿ ಅಶ್ವತ್ಥಾಮ ಮತ್ತು ಕೃಪ ಈ ಐವರು ಮಹಾರಥರು ಶರೀರನಾಶಕರವಾದ ಮಹಾ ಬಾಣಗಳಿಂದ ಅರ್ಜುನ, ಕೃಷ್ಣರನ್ನು ಹೊಡೆದರು.
ಧನೂಂಷಿ ತೇಷಾಮಿಷುಧೀನ್ ಹಯಾನ್ ಧ್ವಜಾನ್
ರಥಾಂಶ್ಚ ಸೂತಾಂಶ್ಚ ಧನಂಜಯಃ ಶರೈಃ |
ಸಮಂ ಚ ಚಿಚ್ಛೇದ ಪರಾಭಿನಚ್ಚ ತಾನ್
ಶರೋತ್ತಮೈರ್ದ್ವಾದಶಭಿಶ್ಚ ಸೂತಜಮ್ ॥16॥
ಅವರ ಬಿಲ್ಲು ಬತ್ತಳಿಕೆ ಅಶ್ವ ಧ್ವಜ ರಥ ಸಾರಥಿಗಳನ್ನು ಅರ್ಜುನನು ಒಮ್ಮೆಲೆ ಬಾಣಗಳಿಂದ ಕತ್ತರಿಸಿದ, ಅವರನ್ನೂ ಹೊಡೆದ. ಉತ್ತಮವಾದ ಹನ್ನೆರಡು ಬಾಣಗಳಿಂದ ಕರ್ಣನನ್ನೂ ಹೊಡೆದ.
ಅಥಾಭ್ಯಧಾವಂಸ್ತ್ವರಿತಾಃ ಶತಂ ರಥಾಃ
ಶತಂ ಗಜಾಶ್ಚಾರ್ಜುನಮಾತತಾಯಿನಃ |
ಶಕಾಸ್ತುಷಾರಾ ಯವನಾಶ್ಚ ಸಾದಿನಃ
ಸಹೈವ ಕಾಂಬೋಜವರೈರ್ಜಿಘಾಂಸವಃ ॥17॥
ಬಳಿಕ ಅರ್ಜುನನನ್ನು ನೂರು ರಥಿಕರು ನೂರು ಗಜಯೋಧರು ಆಯುಧ ಹಿಡಿದು ವೇಗದಿಂದ ಆಕ್ರಮಿಸಿದರು. ಶಕ ತುಷಾರ ಯವನರ ಅಶ್ವಯೋಧರೂ ಕಾಂಬೋಜಯೋಧರೊಂದಿಗೆ ಅರ್ಜುನನನ್ನು ಕೊಲ್ಲಲು ಬಯಸಿ ಆಕ್ರಮಿಸಿದರು.
ವರಾಯುಧಾನ್ ಪಾಣಿಗತಾನ್ ಕರೈಃ ಸಹ
ಕ್ಷುರೈರ್ನ್ಯಕೃಂತಸ್ತ್ವರಿತಃ ಶಿರಾಂಸಿ ಚ |
ಹಯಾಂಶ್ಚ ನಾಗಾಂಶ್ಚ ರಥಾಂಶ್ಚ ಯುಧ್ಯತಾಂ
ಧನಂಜಯಃ ಶತ್ರುಗಣಂ ತಮಕ್ಷಿಣೋತ್ ॥18॥
ಅರ್ಜುನನು ಅವರು ಹಿಡಿದ ಆಯುಧಗಳನ್ನು ಕೈಗಳೊಂದಿಗೇ ವೇಗವಾಗಿ ಕ್ಷುರಗಳಿಂದ ಕತ್ತರಿಸಿದ. ತಲೆಗಳನ್ನೂ ಕತ್ತರಿಸಿದ, ಅವರ ಕುದುರೆ ಗಜ ರಥಗಳನ್ನೂ ಕತ್ತರಿಸಿ ಶತ್ರುಸಮೂಹವನ್ನೇ ನಾಶಪಡಿಸಿದ.
ತತೋಽಂತರಿಕ್ಷೇ ಸುರತೂರ್ಯನಿಸ್ವನಾಃ
ಸಸಾಧುವಾದಾ ಹೃಷಿತೈಃ ಸಮೀರಿತಾಃ |
ನಿಪೇತುರಪ್ಯುತ್ತಮಪುಷ್ಪವೃಷ್ಟಯಃ
ಸುರೂಪಗಂಧಾಃ ಪವನೇರಿತಾಃ ಶಿವಾಃ ॥19॥
ಆಗ ಅಂತರಿಕ್ಷದಲ್ಲಿ ದೇವತೆಗಳ ವಾದ್ಯಘೋಷಗಳು ಮತ್ತು ಹೃಷ್ಟರಾದ ದೇವತೆಗಳು ನುಡಿದ ಭಲೆ ಭೇಷ್ ಎನ್ನುವ ಶಬ್ದಗಳು ಕೇಳಿಬಂದುವು. ಉತ್ತಮ ವಾದ ರೂಪಗಂಧಯುಕ್ತವಾದ ಮಂಗಳಕರವಾದ ಉತ್ತಮ ಪುಷ್ಪವೃಷ್ಟಿಗಳೂ ಸುರಿದುವು.
ತದದ್ಭುತಂ ದೇವಮನುಷ್ಯಸಾಕ್ಷಿಕಂ
ಸಮೀಕ್ಷ್ಯ ಭೂತಾನಿ ವಿಸಿಷ್ಮಿಯುರ್ನೃಪ |
ತವಾತ್ಮಜಃ ಸೂತಸುತಶ್ಚ ನ ವ್ಯಥಾಂ
ನ ವಿಸ್ಮಯಂ ಜಗ್ಮತುರೇಕನಿಶ್ಚಯೌ ॥20॥
ದೇವಮಾನವರ ಕಣ್ಣ ಮುಂದೆ ನಡೆದ ಆ ಅದ್ಭುತವನ್ನು ನೋಡಿ, ರಾಜನೆ, ಎಲ್ಲರೂ ವಿಸ್ಮಿತರಾದರು. ನಿನ್ನ ಮಗನೂ ಕರ್ಣನೂ ವ್ಯಥೆಪಡಲಿಲ್ಲ, ವಿಸ್ಮಯವನ್ನೂ ಹೊಂದಲಿಲ್ಲ. ಏಕೆಂದರೆ ಇಬ್ಬರೂ ಅರ್ಜುನವಧೆಯ ಒಂದೇ ನಿಶ್ಚಯದವರು ಆಗಿದ್ದರು.
ಅಥಾಬ್ರವೀದ್ ದ್ರೋಣಸುತಸ್ತವಾತ್ಮಜಂ
ಕರಂ ಕರೇಣ ಪ್ರತಿಪೀಡ್ಯ ಸಾಂತ್ವಯನ್ ॥21॥
ಅಶ್ವತ್ಥಾಮನು ನಿನ್ನ ಮಗನನ್ನು, ಕೈಯನ್ನು ಕೈಯಿಂದ ಹಿಡಿದು, ಸಂತೈಸುತ್ತ ನುಡಿದ–
ಅಶ್ವತ್ಥಾಮಾ
ಪ್ರಸೀದ ದುರ್ಯೋಧನ ಶಾಮ್ಯ ಪಾಂಡವೈ-

ರಲಂ ವಿರೋಧೇನ ಧಿಗಸ್ತು ವಿಗ್ರಹಮ್ ॥22॥
ಅಶ್ವತ್ಥಾಮ ನುಡಿದ– ದುರ್ಯೋಧನ, ಪ್ರಸನ್ನನಾಗು, ಪಾಂಡವರೊಡನೆ ಸಂಧಿ ಮಾಡಿಕೊಳ್ಳು, ಕಲಹ ಸಾಕು. ಯುದ್ಧಕ್ಕೆ ಧಿಕ್ಕಾರವಿರಲಿ.
ಹತೋ ಗುರುರ್ಬ್ರಹ್ಮಸಮೋ ಮಹಾಸ್ತ್ರವಿತ್
ತಥೈವ ಭೀಷ್ಮಪ್ರಮುಖಾ ನರರ್ಷಭಾಃ |
ಅಹಂ ತ್ವವಧ್ಯೋ ಮಮ ಚಾಪಿ ಮಾತುಲಃ
ಪ್ರಶಾಧಿ ರಾಜ್ಯಂ ಸಹ ಪಾಂಡವೈಶ್ಚಿರಮ್ ॥23॥
ಬ್ರಹ್ಮಸಮಾನನಾದ ಮಹಾಅಸ್ತ್ರಜ್ಞನಾದ ಗುರುದ್ರೋಣ ಹತನಾಗಿದ್ದಾನೆ. ಭೀಷ್ಮಾದಿ ಪುರುಷಶ್ರೇಷ್ಠರೂ ಹತರಾದರು. ನಾನು ಅವಧ್ಯ. ನನ್ನ ಸೋದರಮಾವ ಕೃಪನೂ ಅವಧ್ಯ. ನಮ್ಮ ಬೆಂಬಲದಿಂದ ಪಾಂಡವರೊಂದಿಗೆ ಚಿರಕಾಲ ರಾಜ್ಯವಾಳು.
ಧನಂಜಯಃ ಸ್ಥಾಸ್ಯತಿ ವಾರಿತೋ ಮಯಾ
ಜನಾರ್ದನೋ ನೈವ ವಿರೋಧಮಿಚ್ಛತಿ |
ಯುಧಿಷ್ಠಿರೋ ಭೂತಹಿತೇ ಸದಾ ರತೋ
ವೃಕೋದರಸ್ತದ್ವಶಗಸ್ತಥಾ ಯಮೌ ॥24॥
ನಾನು ತಡೆದರೆ ಅರ್ಜುನ ಸುಮ್ಮನಿರುತ್ತಾನೆ. ಕೃಷ್ಣನು ಯುದ್ಧವನ್ನು ಸರ್ವಥಾ ಬಯಸುವುದಿಲ್ಲ. ಯುಧಿಷ್ಠಿರನಿಗೆ ಪ್ರಾಣಿಗಳ ಹಿತದಲ್ಲಿಯೇ ಸದಾ ಆಸಕ್ತಿ. ಅವನಿಗೆ ಭೀಮನು ವಶನಾಗಿರುತ್ತಾನೆ. ಹಾಗೇ ನಕುಲಸಹದೇವರೂ ವಶರಾಗಿರುತ್ತಾರೆ.
ತ್ವಯಾ ತು ಪಾರ್ಥೇನ ಕೃತೇ ಚ ಸಂಗಮೇ
ಪ್ರಜಾಃ ಶಿವಂ ಪ್ರಾಪ್ನುಯುರಿಚ್ಛಯಾ ತವ |
ವ್ರಜಂತು ಶೇಷಾಃ ಸ್ವಪುರಾಣಿ ಪಾರ್ಥಿವಾ
ನಿವೃತ್ತವೈರಾಶ್ಚ ಭವಂತು ಸೈನಿಕಾಃ ॥25॥
ನೀನು ಅರ್ಜುನನೊಂದಿಗೆ ಒಪ್ಪಂದ ಮಾಡಿಕೊಂಡರೆ ಪ್ರಜೆಗಳು ನಿನ್ನಿಚ್ಛೆಯಂತೆ ಸುಖ ಪಡೆಯುತ್ತಾರೆ. ಉಳಿದ ರಾಜರು ತಮ್ಮ ಊರುಗಳಿಗೆ ಹಿಂತಿರುಗಲಿ, ಸೈನಿಕರು ವೈರವನ್ನು ಬಿಟ್ಟುಬಿಡಲಿ.
ನ ಚೇದ್ವಚಃ ಶ್ರೋಷ್ಯಸಿ ಮೇ ನರಾಧಿಪ
ಧ್ರುವಂ ಪ್ರತಪ್ತಾಸಿ ಹತೋಽರಿಭಿರ್ಯುಧಿ |
ಇದಂ ಚ ದೃಷ್ಟಂ ಜಗತಾ ಸಹ ತ್ವಯಾ
ಕೃತಂ ಯದೇಕೇನ ಕಿರೀಟಮಾಲಿನಾ ॥26॥
ರಾಜನೆ, ನೀನು ನನ್ನ ಮಾತನ್ನು ಕೇಳದಿದ್ದರೆ ಶತ್ರುಗಳಿಂದ ರಣದಲ್ಲಿ ಹೊಡೆಸಿಕೊಂಡು ಪಶ್ಚಾತ್ತಾಪ ಪಡುವಿ. ಅರ್ಜುನ ಏಕಾಕಿಯಾಗಿ ಮಾಡಿದ ಈ ಸಾಹಸವನ್ನು ನೀನು ನೋಡಿದೆ, ಜಗತ್ತೂ ನೋಡಿದೆ.
ಯಥಾ ನ ಕುರ್ಯಾದ್ ಬಲಭಿನ್ನ ಚಾಂತಕೋ
ನ ಚ ಪ್ರಚೇತಾ ಭಗವಾನ್ನ ಯಕ್ಷರಾಟ್ ॥27॥
ಇಂಥ ಸಾಹಸವನ್ನು ಇಂದ್ರ ಮಾಡಲಾರ. ಯಮ ಮಾಡಲಾರ. ಭಗವಾನ್ ವರುಣ ಮಾಡಲಾರ. ಕುಬೇರನೂ ಮಾಡಲಾರ.
ಅತೋಽಪಿ ಭೂಯಾಂಶ್ಚ ಗುಣೈರ್ಧನಂಜಯಃ
ಸ ಚಾಭಿಪತ್ಸ್ಯತ್ಯಖಿಲಂ ವಚೋ ಮಮ |
ತವಾನುಯಾತ್ರಾಂ ಚ ತಥಾ ಕರಿಷ್ಯತಿ
ಪ್ರಸೀದ ರಾಜನ್ ಜಗತಃ ಶಮಾಯ ವೈ ॥28॥
ಅವರೆಲ್ಲರಿಗಿಂತ ಗುಣದಲ್ಲಿ ಅರ್ಜುನನೇ ಹೆಚ್ಚು. ಅವನು ನನ್ನ ಎಲ್ಲ ಮಾತನ್ನು ಅನುಮೋದಿಸುತ್ತಾನೆ. ನಿನ್ನನ್ನು ಅನುಸರಿಸಿ ಅವನು ನಡೆದುಕೊಳ್ಳುತ್ತಾನೆ. ರಾಜನೆ, ಪ್ರಸನ್ನನಾಗು, ಜಗತ್ತಿಗೆ ಕ್ಷೇಮವಾಗಲಿ.
ಮಮಾಪಿ ಮಾನಃ ಪರಮಃ ಸದಾ ತ್ವಯಿ
ಬ್ರವೀಮ್ಯತಸ್ತ್ವಂ ಪರಮಾಚ್ಚ ಸೌಹೃದಾತ್ |
ನಿವಾರಯಿಷ್ಯಾಮಿ ಹಿ ಕರ್ಣಮಪ್ಯಹಂ
ಯದಾ ಭವಾನ್ ಸಪ್ರಣಯೋ ಭವಿಷ್ಯತಿ ॥29॥
ನನಗೂ ನಿನ್ನಲ್ಲಿ ಬಹಳ ಅಭಿಮಾನ ಸದಾ ಇದೆ. ಅದರಿಂದ ಪರಮ ಸೌಹಾರ್ದದಿಂದ ನಿನಗೆ ಹೇಳುತ್ತಿದ್ದೇನೆ. ಕರ್ಣನನ್ನೂ ನಾನು ನೀನು ಪಾಂಡವ ರೊಂದಿಗೆ ಸ್ನೇಹದಿಂದಿರುವ ಪಕ್ಷದಲ್ಲಿ ತಡೆಯುತ್ತೇನೆ.
ವದಂತಿ ಮಿತ್ರಂ ಸಹಜಂ ವಿಚಕ್ಷಣಾ-
ಸ್ತಥೈವ ಸಾಮ್ನಾ ಚ ಧನೇನ ಚಾರ್ಜಿತಮ್ |
ಪ್ರತಾಪತಶ್ಚೋಪನತಂ ಚತುರ್ವಿಧಂ
ತದಸ್ತಿ ಸರ್ವಂ ತ್ವಯಿ ಪಾಂಡವೇಷು ಚ ॥30॥
ಮೈತ್ರಿಯು ಸಹಜವಾಗಿ ಬೆಳೆಯುವುದುಂಟು. ಒಪ್ಪಂದದಿಂದ ಮೈತ್ರಿ ಉಂಟಾಗಬಹುದು. ಧನದಿಂದ ಮೈತ್ರಿಯನ್ನು ಗಳಿಸಬಹುದು. ಪ್ರತಾಪದಿಂದಲೂ ಮೈತ್ರಿಯನ್ನು ಪಡೆಯಬಹುದು ಎಂದು ನಾಲ್ಕು ಬಗೆಯನ್ನು ತಿಳಿದವರು ಹೇಳುತ್ತಾರೆ. ಅವೆಲ್ಲವೂ ನಿನ್ನಲ್ಲಿ ಮತ್ತು ಪಾಂಡವರಲ್ಲಿ ಇವೆ.
`ಪ್ರ-ತಾಪ' ಅಂದರೆ ತಾಪ ಪರಿಹಾರ. ಕೋಪ ಶಮನದಿಂದಲೂ ಮೈತ್ರಿ.

ನಿಸರ್ಗತಸ್ತೇ ತವ ವೀರ ಬಾಂಧವಾಃ
ಪುನಶ್ಚ ಸಾಮ್ನಾ ಚ ಸಮಾಪ್ನುಹಿ ಸ್ಥಿರಮ್ |
ತ್ವಯಿ ಪ್ರಸನ್ನೋ ಯದಿ ಮಿತ್ರತಾಂ ಯಯು-
ರ್ಹಿತಂ ಕೃತಂ ಸ್ಯಾಜ್ಜಗತಸ್ತ್ವಯಾಽತುಲಮ್ ॥31॥
ಏಕೆಂದರೆ ಸಹಜವಾಗಿ ಪಾಂಡವರು ನಿನಗೆ ಬಂಧುಗಳಾದ್ದರಿಂದ ಮಿತ್ರರಾಗು ತ್ತಾರೆ. ಪುನಃ ಪ್ರೀತಿಯ ಒಪ್ಪಂದದಿಂದ ಆ ಮೈತ್ರಿಯನ್ನು ಸ್ಥಿರವಾಗಿ ಮಾಡಿಕೊಳ್ಳು. ಅರ್ಧರಾಜ್ಯದ ದಾನದಿಂದ ಅರ್ಜುನ ಪ್ರಸನ್ನನಾದರೆ, ಅವರು ನಿಶ್ಚಯವಾಗಿ ಮೈತ್ರಿಯನ್ನು ಮಾಡಿಕೊಳ್ಳುತ್ತಾರೆ. ಅರ್ಜುನನ ಕೋಪಶಮನದಿಂದ ಜಗತ್ತಿಗೇ ಬಹಳ ಹಿತ ಉಂಟಾದೀತು.
ಸ ಏವಮುಕ್ತಃ ಸುಹೃದಾ ವಚೋ ಹಿತಂ
ವಿಚಿಂತ್ಯ ನಿಃಶ್ವಸ್ಯ ಚ ದುರ್ಮನಾಽಬ್ರವೀತ್ ॥32॥
ಅಶ್ವತ್ಥಾಮನು ಹೀಗೆ ನುಡಿದಾಗ, ಹಿತಕರವಾದ ಆ ಮಾತನ್ನು ಆಲೋಚಿಸಿ ದುರ್ಯೋಧನನು ನಿಟ್ಟುಸಿರಿಟ್ಟು ವಿಷಾದದಿಂದ ನುಡಿದ–
ದುರ್ಯೋಧನಃ
ಯಥಾ ಭವಾನಾಹ ಸಖೇ ತಥೈವ ತ-
ನ್ಮಮಾಪಿ ವಿಜ್ಞಾಪಯತೋ ವಚಃ ಶೃಣು ॥33॥
ದುರ್ಯೋಧನ ನುಡಿದ– ಮಿತ್ರ, ನೀನು ಹೇಳಿದ್ದು ಸರಿಯೆ. ಆದರೆ ನಾನೂ ಒಂದು ಮಾತನ್ನು ಹೇಳುತ್ತೇನೆ, ಕೇಳು.
ನಿಹತ್ಯ ದುಃಶಾಸನಮುಕ್ತವಾನ್ ಬಹು
ಪ್ರಸಹ್ಯ ಶಾರ್ದೂಲವದೇವ ದುರ್ಮತಿಃ |
ವೃಕೋದರಸ್ತದ್ಧೃದಯೇ ಮಮ ಸ್ಥಿತಂ
ನ ತತ್ಪರೋಕ್ಷಂ ಭವತಃ ಕುತಃ ಶಮಃ ॥34॥
ದುರ್ಬುದ್ಧಿಯವನಾದ ಭೀಮನು ದುಃಶಾಸನನನ್ನು ಬಲಾತ್ಕಾರವಾಗಿ ಹುಲಿಯಂತೆ ಆಕ್ರಮಿಸಿ ಕೊಂದು ಹೇಳಿದ ಮಾತು ನನ್ನ ಮನದಲ್ಲಿದೆ. ಅದು ನಿನಗೂ ಪರೋಕ್ಷವಲ್ಲ, ಪ್ರತ್ಯಕ್ಷವೆ ಇದೆ ಎಂದ ಮೇಲೆ ಸಂಧಿ ಹೇಗೆ ಸಾಧ್ಯ?
ದುಃಶಾಸನನ್ನು ಕೊಂದು, `ಇದು ಸಾಲದು, ದುರ್ಯೋಧನನ ತಲೆಯನ್ನು ಕಾಲಿಂದ ತುಳಿದೇ ನೆಮ್ಮದಿ ಪಡೆಯುವೆನು'(80.44) ಎಂದು ಹೇಳಿದ ಮಾತು ನನ್ನ ಮನದಲ್ಲಿದೆ ಎಂದು ದುರ್ಯೋಧನ ಹೇಳುತ್ತಿದ್ದಾನೆ.
ನ ಚಾಪಿ ಕರ್ಣಂ ಗುರುಪುತ್ರ ಸಂಯುಗಾದ್
ಉಪಾರಮೇತ್ಯರ್ಹಸಿ ವೀರ ಭಾಷಿತುಮ್ |
ಶ್ರಮೇಣ ಯುಕ್ತೋ ಮಹತಾದ್ಯ ಫಲ್ಗುನ-
ಸ್ತಮೇಷ ಕರ್ಣಃ ಪ್ರಸಭಂ ಹನಿಷ್ಯತಿ ॥35॥
ಗುರುಪುತ್ರ, ವೀರ, ನೀನು ಕರ್ಣನನ್ನು `ಯುದ್ಧದಿಂದ ವಿರಮಿಸು' ಎಂದು ಉಪದೇಶಿಸುವುದು ಬೇಡ. ಅರ್ಜುನನು ಈಗ ಬಹಳ ಬಳಲಿದ್ದಾನೆ. ಅವನನ್ನು ಕರ್ಣನು ಬಲವಾಗಿ ಹೊಡೆದು ಸಂಹರಿಸುತ್ತಾನೆ.
ಸಂಜಯಃ
ತಮೇವಮುಕ್ತ್ವಾಭ್ಯನುನೀಯ ಚಾಸಕೃತ್
ತವಾತ್ಮಜಃ ಸ್ವಾನನುಶಾಸ್ತಿ ಸೈನಿಕಾನ್ |
ಸಮಾಘ್ನತಾಭಿದ್ರವತಾಹಿತಾನಿಮಾನ್
ಸಬಾಣಶಬ್ದಾನ್ ಕಿಮು ಜೋಷಮಾಸ್ಯತೇ ॥36॥
ದುರ್ಯೋಧನನು ಹೀಗೆ ಅಶ್ವತ್ಥಾಮನಿಗೆ ಹೇಳಿ ಅವನನ್ನು ಮತ್ತೆ ಮತ್ತೆ ಮನ ಒಲಿಸಿ, ತನ್ನ ಸೈನಿಕರಿಗೆ ಆಜ್ಞೆ ಮಾಡಿದ. `ಬಾಣಶಬ್ದಗಳನ್ನು ಮಾಡುವ ಈ ಶತ್ರುಗಳನ್ನು ಹೊಡೆಯಿರಿ. ಆಕ್ರಮಿಸಿರಿ, ಏಕೆ ಸುಮ್ಮನೆ ನಿಲ್ಲುವಿರಿ?' ಎಂದು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಅಶ್ವತ್ಥಾಮವಚನಂ ನಾಮ ಚತುರಶೀತಿತಮೋಽಧ್ಯಾಯಃ ॥84॥

ಮಹಾಭಾರತತಾತ್ಪರ್ಯನಿರ್ಣಯ
ಆಗ್ನೇಯವಾರುಣೈಂದ್ರಾದೀನ್ಯೇತಾನ್ಯನ್ಯೋನ್ಯಮೃತ್ಯವೇ |
ಬ್ರಹ್ಮಾಸ್ತ್ರಮಪ್ಯುಭೌ ತತ್ರ ಪ್ರಯುಜ್ಯಾನದತಾಂ ರಣೇ |
ಅನ್ಯೋನ್ಯಾಸ್ತ್ರಪ್ರತೀಘಾತಂ ಕೃತ್ವೋಭೌ ಚ ವಿರೇಜತುಃ ॥ 181 ॥
ಕರ್ಣಾರ್ಜುನರು ಪರಸ್ಪರ ವಧೆಗಾಗಿ ಆಗ್ನೇಯ ವಾರುಣ ಐಂದ್ರ ಮುಂತಾದ ಅಸ್ತ್ರಗಳನ್ನೂ ಬ್ರಹ್ಮಾಸ್ತ್ರವನ್ನೂ ಪ್ರಯೋಗಿಸಿ ಗರ್ಜಿಸಿದರು. ಪರಸ್ಪರ ಅಸ್ತ್ರಗಳ ಉಪಶಮನವನ್ನೂ ಮಾಡಿ ಇಬ್ಬರೂ ಶೋಭಿಸಿದರು.

ಎಂಬತ್ತೈದನೆಯ ಅಧ್ಯಾಯ
ಕರ್ಣಾರ್ಜುನರ ಅಸ್ತ್ರಯುದ್ಧ. ಅರ್ಜುನನ ಅಸ್ತ್ರ ಕರ್ಣನಿಂದ ವಿಫಲವಾಗುತ್ತಿರುವುದನ್ನು ಕಂಡು ಭೀಮನಿಗೂ ಶ್ರೀಕೃಷ್ಣನಿಗೂ ಅಸಮಾಧಾನ.
ಸಂಜಯಃ

ತೌ ಶಂಖಭೇರೀನಿನದೇ ಸಮೃದ್ಧೇ
ಸಮೀಯತುಃ ಶ್ವೇತಹಯೌ ನರಾಗ್ರ್ಯೌ |
ವೈಕರ್ತನಃ ಸೂತಪುತ್ರೋऽರ್ಜುನಶ್ಚ
ದುರ್ಮಂತ್ರಿತೇ ತವ ಪುತ್ರಸ್ಯ ರಾಜನ್ ॥1॥
ಸಂಜಯ ನುಡಿದ– ರಾಜನೆ, ಶಂಖ ಭೇರೀನಾದಗಳು ಬಹಳ ಕೇಳಿ ಬರುತ್ತಿದ್ದಂತೆ ಬಿಳಿ ಕುದುರೆಗಳುಳ್ಳ ಇಬ್ಬರು ಪುರುಷಶ್ರೇಷ್ಠರು ಕರ್ಣ ಮತ್ತು ಅರ್ಜುನರು, ನಿನ್ನ ದುಷ್ಟಮಂತ್ರಾಲೋಚನೆಯ ದುಷ್ಪರಿಣಾಮವಾಗಿ ಪರಸ್ಪರ ಇದಿರಾದರು.
ಯಥಾ ಗಜೌ ಹೈಮವತೌ ಪ್ರಭಿನ್ನೌ
ಪ್ರಗೃಹ್ಯ ದಂತಾವಿವ ವಾಶಿತಾರ್ಥೇ |
ತಥಾ ಸಮಾಜಗ್ಮತುರುಗ್ರವೇಗೌ
ಧನಂಜಯಶ್ಚಾಧಿರಥಿಶ್ಚ ವೀರೌ ॥2॥
ಹೆಣ್ಣಾನೆಯ ಸಲುವಾಗಿ ಎರಡು ಹಿಮಾಲಯದ ಗಂಡಾನೆಗಳು ಮದಜಲವನ್ನು ಸುರಿಸುತ್ತ ದಂತಗಳನ್ನು ದಂತಗಳಿಂದ ಹಿಡಿದು ಹೋರಾಡುವಂತೆ ವೀರರಾದ ಉಗ್ರವೇಗವುಳ್ಳ ಅರ್ಜುನ ಮತ್ತು ಕರ್ಣರು ಹೋರಾಡಲು ತೊಡಗಿದರು.
ಬಲಾಹಕೇನೇವ ಯಥಾ ಬಲಾಹಕೋ
ಯದೃಚ್ಛಯಾ ವಾ ಗಿರಿಣಾ ಗಿರಿರ್ಯಥಾ |
ತಥಾ ಧನುರ್ಜ್ಯಾತಳನೇಮಿನಿಸ್ವನೌ
ಸಮೀಯತುಸ್ತಾವಿಷುವರ್ಷವರ್ಷಿಣೌ ॥3॥
ಮೋಡವು ಮೋಡದೊಂದಿಗೆ, ಆಕಸ್ಮಿಕವಾಗಿ ಒಂದು ಬೆಟ್ಟ ಇನ್ನೊಂದು ಬೆಟ್ಟದೊಂದಿಗೆ ಕಾಳಗ ಮಾಡುವಂತೆ, ಧನುಸ್ಸು ಹೆದೆ ಹಸ್ತತಲ ಚಕ್ರ ಧ್ವನಿಗಳೊಂದಿಗೆ ಬಾಣಗಳ ಮಳೆಗರೆಯುತ್ತ ಕರ್ಣಾರ್ಜುನರು ಹೋರಾಡಿದರು.
ಪ್ರವೃದ್ಧಶೃಂಗದ್ರುಮವೀರುದೋಷಧೀ
ಪ್ರವೃದ್ಧನಾನಾವಿಧನಿರ್ಝರೌಕಸೌ |
ಯಥಾಚಲೌ ವಾ ಮಿಲಿತೌ ಮಹಾಬಲೌ
ತಥಾ ಮಹಾಸ್ತ್ರೈರಿತರೇತರಂ ಘ್ನತಃ ॥4॥
ಉನ್ನತವಾದ ಶಿಖರ ವೃಕ್ಷ ಲತೆ ಓಷಧಿಗಳುಳ್ಳ, ಉನ್ನತವಾದ ನಾನಾ ಬಗೆಯ ಜಲಪಾತಗಳಿಗೆ ಆಶ್ರಯವಾದ ಎರಡು ಬೆಟ್ಟಗಳು ಕಾಳಗಕ್ಕೆ ಸೇರಿದಂತೆ ಮಹಾಬಲಿಷ್ಠರಾದ ಕರ್ಣಅರ್ಜುನರು ಸೇರಿ ಪರಸ್ಪರವಾಗಿ ಮಹಾಅಸ್ತ್ರಗಳಿಂದ ಹೊಡೆದರು.
ಸ ಸನ್ನಿಪಾತಸ್ತು ತಯೋರ್ಮಹಾನಭೂತ್
ಸುರೇಶವೈರೋಚನಯೋರ್ಯಥಾ ಪುರಾ |
ಶರೈರ್ವಿಭಿನ್ನಾಂಗನಿಯಂತೃವಾಹಯೋಃ
ಸುದುಃಸಹೋऽನ್ಯೈಃ ಪರಿಭಿನ್ನದೇಹಯೋಃ ॥5॥
ಹಿಂದೆ ದೇವೇಂದ್ರ ಮತ್ತು ಬಲಿಚಕ್ರವರ್ತಿಗಳಿಗೆ ನಡೆದಂಥ ಮಹಾ ಸಂಘರ್ಷ ಕರ್ಣಾರ್ಜುನರಿಗೆ ನಡೆಯಿತು. ಬಾಣಗಳಿಂದ ಸಾರಥಿ ಅಶ್ವಗಳಿಗೆ ಮಾತ್ರವಲ್ಲದೆ ರಥಿಕರಾದ ತಮಗೂ ಶರೀರದಲ್ಲಿ ಬಹಳ ಗಾಯಗಳಾದುವು. ಅನ್ಯರಿಗೆ ಇಂಥ ಸಂಘರ್ಷ ಅಸಹನೀಯ.
ಪ್ರಭೂತಪದ್ಮೋತ್ಪಲಮತ್ಸ್ಯಕಚ್ಛಪೌ
ಮಹಾಹ್ರದೌ ಪಕ್ಷಿಗಣಾನುನಾದಿತೌ |
ಸುಸನ್ನಿಕೃಷ್ಟಾವನಿಲೋದ್ಧತೌ ಯಥಾ
ತಥಾ ರಥೌ ತೌ ಧ್ವಜಿನೌ ಸಮೀಯತುಃ ॥6॥
ಕೆಂದಾವರೆ ನೈದಿಲೆ ಮೀನು ಆಮೆಗಳಿಂದ ತುಂಬಿದ್ದು ಪಕ್ಷಿಸಮೂಹಗಳ ಕಲರವಯುಕ್ತವಾದ ದೊಡ್ಡ ಸರೋವರಗಳು ಎರಡು ಅಕಸ್ಮಾತ್ ಪರಸ್ಪರ ಸಮೀಪಕ್ಕೆ ಬಂದು ಗಾಳಿಯಿಂದ ಕ್ಷೋಭೆಗೊಂಡರೆ ಹೇಗಿರಬಹುದೋ ಹಾಗೇ ಧ್ವಜಯುಕ್ತವಾದ ಆ ಎರಡು ರಥಗಳು ಸಂಧಿಸಿದುವು.
ಉಭೌ ಮಹೇಂದ್ರಸ್ಯ ಸಮಾನವಿಕ್ರಮಾ-
ವುಭೌ ಮಹೇಂದ್ರಪ್ರತಿಮೌ ಮಹಾರಥೌ |
ಮಹೇಂದ್ರವಜ್ರಪ್ರತಿಮೈಶ್ಚ ಸಾಯಕೈ-
ರ್ಮಹೇಂದ್ರವೃತ್ರಾವಿವ ಸಂಪ್ರಜಹ್ರತುಃ ॥7॥
ಕರ್ಣಾರ್ಜುನರಿಬ್ಬರೂ ಮಹೇಂದ್ರನಂಥ ಪರಾಕ್ರಮ ಉಳ್ಳವರು. ನೋಡಲು ಮಹೇಂದ್ರನಂತಿರುವವರು, ಮಹಾರಥರು. ಮಹೇಂದ್ರನ ವಜ್ರಾಯುಧದಂಥ ಬಾಣಗಳಿಂದ ಅವರು ಮಹೇಂದ್ರವೃತ್ರಾಸುರರಂತೆ ಪರಸ್ಪರ ಹೊಡೆದರು.
ಸನಾಗಪತ್ತ್ಯಶ್ವರಥೇ ಉಭೇ ಬಲೇ
ವಿಚಿತ್ರವರ್ಣಾಭರಣಾಂಬರಸ್ರಜೇ |
ಚಕಂಪತುಶ್ಚೋನ್ನದತುಃ ಸ್ಮ ವಿಸ್ಮಯಾದ್
ವಿಯದ್ಗತಾಶ್ಚಾರ್ಜುನಕರ್ಣಸಂಯುಗೇ ॥8॥
ವಿಚಿತ್ರ ವರ್ಣಗಳ ಆಭರಣ ವಸ್ತ್ರ ಮಾಲೆಗಳುಳ್ಳ ಗಜ ಪದಾತಿ ಅಶ್ವರಥಗಳುಳ್ಳ ಎರಡೂ ಸೈನ್ಯಗಳು ನಡುಗಿದುವು. ಆಶ್ಚರ್ಯದಿಂದ ಉದ್ಗಾರ ಮಾಡಿದುವು. ಅಂತರಿಕ್ಷದಲ್ಲಿ ನೆರೆದವರೂ ಕೂಡ ಭಯ ವಿಸ್ಮಯಗಳಿಗೊಳಗಾಗಿ ಹಾಗೇ ಕರ್ಣಾರ್ಜುನರ ಯುದ್ಧದಲ್ಲಿ ಮಾಡಿದರು.

ಭುಜಾಃ ಸವಜ್ರಾಂಗುಲಯಃ ಸಮುಚ್ಛ್ರಿತಾಃ
ಸಸಿಂಹನಾದಾ ಹೃಷಿತೈರ್ದಿದೃಕ್ಷುಭಿಃ |
ಯದಾರ್ಜುನಂ ಮತ್ತಮಿವ ದ್ವಿಪೋ ದ್ವಿಪಂ
ಸಮಭ್ಯಯಾದಾಧಿರಥಿರ್ಜಿಘಾಂಸಯಾ ॥9॥
ಯುದ್ಧಪ್ರೇಕ್ಷಕರು, ಮದಿಸಿದ ಆನೆ ಮದಿಸಿದ ಇನ್ನೊಂದು ಆನೆಯನ್ನು ಆಕ್ರಮಿಸುವಂತೆ, ವಧೇಚ್ಛೆಯಿಂದ ಅರ್ಜುನನನ್ನು ಕರ್ಣ ಆಕ್ರಮಿಸಿದ್ದನ್ನು ಕಂಡು ಉತ್ಸಾಹಿತರಾಗಿ ಸಿಂಹನಾದಗೈಯುತ್ತ ವಜ್ರದುಂಗುರ ತೊಟ್ಟ ಬಾಹುಗಳನ್ನು ಮೇಲೆತ್ತಿದರು.
ಅಭ್ಯಕ್ರೋಶನ್ ಸೋಮಕಾಸ್ತತ್ರ ಪಾರ್ಥಂ
ತ್ವರಸ್ವ ಯಾಹ್ಯರ್ಜುನ ವಿಧ್ಯ ಕರ್ಣಮ್ |
ಛಿಂಧ್ಯಸ್ಯ ಮೂರ್ಧಾನಮಲಂ ಚಿರೇಣ
ಶ್ರದ್ಧಾಂ ಚ ರಾಜ್ಯೇ ಧೃತರಾಷ್ಟ್ರಸೂನೋಃ ॥10॥
ಸೋಮಕರು ಆಗ ಗಟ್ಟಿಯಾಗಿ ಕೂಗಿ ಪಾರ್ಥನಿಗೆ ಹೇಳಿದರು– `ಅರ್ಜುನ, ತ್ವರೆಮಾಡು, ಮುಂದೆ ನುಗ್ಗು, ಕರ್ಣನನ್ನು ಹೊಡೆ. ಅವನ ತಲೆಯನ್ನು ಕೆಡಹು. ತಡಮಾಡಬೇಡ, ದುರ್ಯೋಧನನಿಗೆ ರಾಜ್ಯಸಂಪಾದನೆಯಲ್ಲಿರುವ ಶ್ರದ್ಧೆಯನ್ನು ನಾಶಪಡಿಸು.'
ತಥಾಸ್ಮಾಕಂ ಬಹವಸ್ತತ್ರ ಯೋಧಾಃ
ಕರ್ಣಂ ತದಾ ಯಾಹಿ ಯಾಹೀತ್ಯವೋಚನ್ |
ಜಹ್ಯರ್ಜುನಂ ಕರ್ಣ ತತಃ ಸಚೀರಾಃ
ಪುನರ್ವನಂ ಯಾಂತು ಚಿರಾಯ ಪಾರ್ಥಾಃ ॥11॥
ಹಾಗೇ ನಮ್ಮ ಕಡೆಯ ಯೋಧರೂ ಕೂಡ ಕರ್ಣನಿಗೆ ಹೇಳಿದರು `ಕರ್ಣ, ಮುಂದೆ ನುಗ್ಗು, ಅರ್ಜುನನನ್ನು ಕೊಲ್ಲು, ಪಾಂಡವರು ಪುನಃ ನಾರುಡೆ ಉಟ್ಟು ಶಾಶ್ವತವಾಗಿ ವನವಾಸಕ್ಕೆ ಹೋಗಲಿ'
ತತಃ ಕರ್ಣಃ ಪ್ರಥಮಂ ತತ್ರ ಪಾರ್ಥಂ
ಮಹೇಷುಭಿರ್ದಶಭಿಃ ಪರ್ಯವಿದ್ಧ್ಯತ್ |
ತಮರ್ಜುನಃ ಪ್ರತ್ಯವಿಧ್ಯಚ್ಛಿತಾಗ್ರೈಃ
ಕಕ್ಷಾಂತರೇ ದಶಭಿರತೀವ ಕ್ರುದ್ಧಃ ॥12॥
ಆಗ ಕರ್ಣನು ಮೊದಲಿಗೆ ಅರ್ಜುನನನ್ನು ಹತ್ತು ಬಾಣಗಳಿಂದ ಹೊಡೆದ. ಅವನನ್ನು ಅರ್ಜುನನು ಬಲುಕ್ರುದ್ಧನಾಗಿ ಹರಿತವಾದ ತುದಿಉಳ್ಳ ಹತ್ತು ಬಾಣಗಳಿಂದ ಬಾಹುಮೂಲಗಳ ಮಧ್ಯದಲ್ಲಿ ಅಂದರೆ ಎದೆಯಲ್ಲಿ ಹೊಡೆದ.
ಪರಸ್ಪರಂ ತೌ ವಿಶಿಖೈಃ ಸುತೀಕ್ಷ್ಣೈರ್-
ಸ್ತತಕ್ಷತುಃ ಸೂತಪುತ್ರೋಽರ್ಜುನಶ್ಚ |
ಪರಸ್ಪರಸ್ಯಾಂತರೇಪ್ಸೂ ವಿಮರ್ದೇ
ಸುಭೀಮಮಭ್ಯಾಯಯತುಃ ಪ್ರಹೃಷ್ಟೌ ॥13॥
ಕರ್ಣಾರ್ಜುನರು ಬಹಳ ಉತ್ಸಾಹಗೊಂಡು ಬಲು ಹರಿತವಾದ ಬಾಣಗಳಿಂದ ಪರಸ್ಪರ ಹೊಡೆದರು. ರಣದಲ್ಲಿ ಇಬ್ಬರೂ ಭಯಂಕರವಾಗಿ ಹೊಡೆದರು. ಆಕ್ರಮಿಸಿದರು.
ತತೋಽರ್ಜುನಃ ಪ್ರಾಸೃಜದುಗ್ರಧನ್ವಾ
ಭುಜಾವುಭೌ ಗಾಂಡಿವಂ ಚಾನುಮೃಜ್ಯ |
ನಾರಾಚನಾಲೀಕವರಾಹಕರ್ಣಾನ್
ಕ್ಷುರಾಂಸ್ತಥಾ ಸಾಂಜಲಿಕಾರ್ಧಚಂದ್ರಾನ್ ॥14॥
ಉಗ್ರ ಧನುಸ್ಸಿನವನಾದ ಅರ್ಜುನನು ಎರಡು ಬಾಹುಗಳನ್ನೂ ಗಾಂಡೀವ ವನ್ನೂ ತೀಡಿ ನಾರಾಚ ನಾಲೀಕ ವರಾಹಕರ್ಣ ಕ್ಷುರ ಅಂಜಲಿಕ ಅರ್ಧಚಂದ್ರ ಬಾಣಗಳನ್ನು ಎಸೆದ.
ತೇ ಸರ್ವತಃ ಸಮಕೀರ್ಯಂತ ರಾಜನ್
ಪಾರ್ಥೇಷವಃ ಕರ್ಣರಥಂ ವಿಶಂತಃ |
ಅವಾಙ್ಮುಖಾಃ ಪಕ್ಷಿಗಣಾ ದಿನಾಂತೇ
ವಿಶಂತಿ ಕೇತಾರ್ಥಮಿವಾಶು ವೃಕ್ಷಮ್ ॥15॥
ಪಾರ್ಥನ ಆ ಬಾಣಗಳು ಎಲ್ಲವೂ ಕರ್ಣರಥವನ್ನು, ಸಾಯಂಕಾಲದಲ್ಲಿ ಪಕ್ಷಿಗಳು ಆಶ್ರಯಕ್ಕಾಗಿ ಮರವನ್ನು ಸೇರುವಂತೆ, ಮುಖ ಕೆಳಗೆ ಮಾಡಿಕೊಂಡು ಕರ್ಣನ ರಥವನ್ನು ಪ್ರವೇಶಿಸಿ ಎಲ್ಲೆಡೆ ಹರಡಿದುವು.
ಯಾನರ್ಜುನಃ ಸಭ್ರುಕುಟೀಕಟಾಕ್ಷಃ
ಕರ್ಣಾಯ ರಾಜನ್ನಸೃಜಜ್ಜಿತಾರಿಃ |
ತಾನ್ ಸಾಯಕೈರ್ಗ್ರಸತೇ ಸೂತಪುತ್ರಃ
ಕ್ಷಿಪ್ತಾನ್ ಕ್ಷಿಪ್ತಾನ್ ಪಾಂಡವಸ್ಯೇಷುಸಂಘಾನ್ ॥16॥
ಹೀಗೆ ಅರ್ಜುನನು ಹುಬ್ಬುಗಂಟಿಕ್ಕಿ ಕಡೆಗಣ್ಣಿಂದ ನೋಡುತ್ತ ಕರ್ಣನಿಗೆ ಯಾವ ಬಾಣಗಳನ್ನು ಎಸೆದನೋ, ಅವನೆಸೆದ ಆ ಬಾಣಸಮೂಹಗಳನ್ನು ಕರ್ಣನು ತನ್ನ ಬಾಣಗಳಿಂದ ನುಂಗಿದ.
ತತೋಽಸ್ತ್ರಮಾಗ್ನೇಯಮಮಿತ್ರತಾಪನಂ
ಮುಮೋಚ ಕರ್ಣಾಯ ಸುರೇಶ್ವರಾತ್ಮಜಃ |

ಧನಂಜಯಃ ಸಂಯುಗ ಮೂರ್ಧನಿ ಜ್ವಲನ್
ಅಥ ಪ್ರಜಜ್ವಾಲ ತದಸ್ತ್ರಮುತ್ತಮಮ್ ॥17॥
ಅರ್ಜುನನು ಶತ್ರುತಾಪಕನಾದ ಕರ್ಣನ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ. ರಣರಂಗದ ಅಗ್ರಭಾಗದಲ್ಲಿ ಜ್ವಲಿಸುತ್ತ ಅರ್ಜುನನು ಪ್ರಯೋಗಿಸಿದ ಆ ಉತ್ತಮ ಅಸ್ತ್ರವು ಬೆಂಕಿಯಾಗಿ ಪ್ರಜ್ವಲಿಸಿತು.
ಜ್ವಾಲಾಭಿರತ್ಯರ್ಥ ವಿನಿಃಸೃತಾಭಿ-
ರಸ್ತ್ರಸ್ಯ ಸೂರಸ್ಯ ಮಹೇಂದ್ರಸೂನೋಃ |
ಭೂಮ್ಯಂತರಿಕ್ಷೇ ಚ ದಿಶೋಽರ್ಕಮಾರ್ಗಂ
ಪ್ರಾವೃತ್ಯ ದೇಹೋಽಸ್ಯ ಬಭೂವ ದೀಪ್ತಃ ॥18॥
ಅರ್ಜುನನು ಪ್ರಯೋಗಿಸಿದ ಅಸ್ತ್ರ ಸೂರ್ಯರೂಪವಾಯಿತು. ಅದರಿಂದ ಬಹಳ ಜ್ವಾಲೆಗಳು ಹೊರಗೆ ಬಂದುವು. ಅದರ ದೇಹವು ಪ್ರಕಾಶಿಸುತ್ತ ಭೂಮಿ ಅಂತರಿಕ್ಷ ದಿಕ್ಗಳನ್ನು ಸೂರ್ಯಸಂಚಾರ ಮಾರ್ಗವನ್ನೂ ಆವರಿಸಿ ಬೆಳಗಿತು.
ಯೋಧಾಶ್ಚ ಸರ್ವೇ ಜ್ವಲಿತಾಂಬರಾ ಭೃಶಂ
ಪ್ರದುದ್ರುವುಸ್ತತ್ರ ವಿದಗ್ಧವಸತ್ರಃ |
ಶಬ್ದಶ್ಚ ಘೋರೋಽತಿ ಬಭೂವ ತತ್ರ
ಯಥಾ ವನೇ ವೇಣುವನಸ್ಯ ದಹ್ಯತಃ ॥19॥
ಎಲ್ಲ ಯೋಧರ ಉಟ್ಟ ಬಟ್ಟೆ ಹೊತ್ತಿ ಉರಿಯಿತು. ಅವರು ಉರಿಯುವ ಬಟ್ಟೆಗಳೊಂದಿಗೆ ಧಾವಿಸಿದರು. ಘೋರವಾದ ಆರ್ತನಾದ ಉಂಟಾಯಿತು. ಕಾಡಿನಲ್ಲಿ ಬಿದಿರ ಮೆಳೆ ಕಾಳ್ಗಿಚ್ಚಿನಲ್ಲಿ ಸುಡುವಾಗಿನ ಶಬ್ದದಂತೇ ಆರ್ತನಾದವಿತ್ತು.
ಸಮೀಕ್ಷ್ಯ ಕರ್ಣೋ ಜ್ವಲನಾಸ್ತ್ರಮುದ್ಯತಂ
ಸ ವಾರುಣಂ ತತ್ಪ್ರಶಮಾರ್ಥಮಾಹವೇ |
ಸಮುತ್ಸೃಜನ್ ಸೂತಸುತಃ ಪ್ರತಾಪವಾನ್
ಸ ತೇನ ವಹ್ನಿಂ ಶಮಯಾಂಬಭೂವ ॥20॥
ಆಗ್ನೇಯಾಸ್ತ್ರವು ಸೈನ್ಯವನ್ನು ಸುಡಲು ಉದ್ಯುಕ್ತವಾದಾಗ ಅದನ್ನು ನೋಡಿ ಕರ್ಣನು ಅದರ ಶಮನಕ್ಕಾಗಿ ರಣದಲ್ಲಿ ವಾರುಣಾಸ್ತ್ರವನ್ನು ಪ್ರಯೋಗಿಸಿದ. ಪ್ರತಾಪಶಾಲಿಯಾದ ಅವನು ಆ ಅಸ್ತ್ರದಿಂದ ಬೆಂಕಿಯನ್ನು ಆರಿಸಿದ.
ಬಲಾಹಕೌಘಶ್ಚ ದಿಶಸ್ತರಸ್ವೀ
ಚಕಾರ ಸರ್ವಾಸ್ತಿಮಿರೇಣ ಸಂವೃತಾಃ |
ತತೋ ಧರಿತ್ರೀಧರ ತುಲ್ಯರೋಧಸಃ
ಸಮಂತತೋ ವೈ ಪರಿವಾರ್ಯ ವಾರಿಣಾ |
ತೈಶ್ಚಾತಿವೇಗಾತ್ ಸ ತಥಾವಿಧೋಽಪಿ
ನೀತಃ ಶಮಂ ವಹ್ನಿರತಿಪ್ರಚಂಡಃ ॥21॥
ಮೋಡಗಳ ಸಮೂಹವು ವಾರುಣಾಸ್ತ್ರದಿಂದ ನಿರ್ಮಿತವಾಗಿದ್ದು ಬಹಳ ಶಕ್ತಿಯುಕ್ತವಾಗಿತ್ತು. ಎಲ್ಲ ದಿಕ್ಕುಗಳನ್ನೂ ಕತ್ತಲಿನಿಂದ ಆಚ್ಛಾದಿಸಿತು. ಪರ್ವತದಂಥ ತೀರವುಳ್ಳ ಜಲರಾಶಿಯಿಂದ ಎಲ್ಲೆಡೆ ಸುತ್ತಲೂ ನೀರುಹರಿಸಿ ಆ ಮೋಡಗಳು ಅತಿವೇಗದ ಬಲದಿಂದ ಆಗ್ನೇಯಾಸ್ತ್ರದಿಂದ ಉಂಟಾದ ಅತಿ ಪ್ರಚಂಡವಾದ ಬೆಂಕಿಯನ್ನೂ ಆರಿಸಿದವು.
ಬಲಾಹಕೈಶ್ಚೈವ ದಿಗಂತರಾಣಿ
ವ್ಯಾಪ್ತಾನಿ ಸರ್ವಾಣಿ ಯಥಾ ನಭಶ್ಚ |
ತಥಾ ಚ ಸರ್ವಾಸ್ತಿಮಿರೇಣ ವೈ ದಿಶೋ
ಮೇಘೈರ್ವೃತಾ ನ ಪ್ರದೃಶ್ಯೇತ ಕಿಂಚಿತ್ ॥22॥
ಮೋಡಗಳಿಂದ ದಿಕ್ಕುಗಳ ಅವಕಾಶಗಳು ಎಲ್ಲವೂ ವ್ಯಾಪ್ತವಾದುವು. ಆಕಾಶವೂ ವ್ಯಾಪ್ತವಾಯಿತು. ಹೀಗಾಗಿ ಎಲ್ಲ ದಿಕ್ಕುಗಳೂ ಮೋಡಗಳಿಂದಾವೃತ ವಾದ್ದರಿಂದ ಏನೂ ಗೋಚರಿಸದಂತಾಯಿತು.
ಅಪಾವಹನ್ ಮೇಘಗಣಾಂಸ್ತತಸ್ತಾನ್
ಸಮೀರಣಾಸ್ತ್ರೇಣ ಸಮೀರಿತೇನ ಸಃ |
ತತಃ ಸೋಽಸ್ತ್ರಂ ದಯಿತಂ ದೇವರಾಜ್ಞಃ
ಪ್ರಾದುಶ್ಚಕ್ರೇ ವಜ್ರಮತಿಪ್ರಭಾವಮ್ ॥23॥
ಆ ಮೋಡಸಮೂಹಗಳನ್ನು ಓಡಿಸುವುದಕ್ಕಾಗಿ ಅರ್ಜುನನು ವಾಯ್ವಸ್ತ್ರಮಂತ್ರ ವನ್ನು ಉಚ್ಚರಿಸಿದ. ಬಳಿಕ ದೇವರಾಜ ಇಂದ್ರನಿಗೆ ಪ್ರಿಯವಾದ ವಜ್ರಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದ. ಅದು ಅತ್ಯಂತ ಪ್ರಭಾವಶಾಲಿ.
ಗಾಂಡೀವಂ ಜ್ಯಾಂ ವಿಶಿಖಾಂಶ್ಚಾನುಮಂತ್ರ
ಧನಂಜಯಃ ಶತ್ರುಸಂಘಪ್ರಮಾಥೀ |
ತತಃ ಕ್ಷುರಪ್ರಾಂಜಲಿಕಾರ್ಧಚಂದ್ರಾ
ನಾರಾಚನಾಲೀಕವರಾಹಕರ್ಣಾಃ |
ಗಾಂಡೀವತಃ ಪ್ರಾದುರಾಸನ್ ಸುತೀಕ್ಷ್ಣಾಃ
ಸಹಸ್ರಶೋ ವಜ್ರಸಮಾನವೇಗಾಃ ॥24॥
ಶತ್ರುಸಮೂಹನಾಶಕನಾದ ಅರ್ಜುನನು ಗಾಂಡೀವ ಹೆದೆ ಬಾಣಗಳನ್ನು ಅಭಿಮಂತ್ರಿಸಿ ವಜ್ರಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದ.

ಆಗ ಗಾಂಡೀವದಿಂದ ಕ್ಷುರಪ್ರ ಅಂಜಲಿಕ ಅರ್ಧಚಂದ್ರ ನಾರಾಚ ನಾಲೀಕ ವರಾಹಕರ್ಣಗಳೆಂಬ ಬಾಣಗಳು ಬಲುತೀಕ್ಷ್ಣ ಹಾಗೂ ವಜ್ರಾಯುಧಕ್ಕೆ ಮಿಂಚಿಗೆ ಸಮಾನ ವೇಗವುಳ್ಳವು ಸಾವಿರಗಟ್ಟಲೆ ಪ್ರಾದುರ್ಭವಿಸಿದುವು.
ತೇ ಕರ್ಣಮಾಸಾದ್ಯ ಮಹಾಪ್ರಭಾವಾಃ
ಸುತೇಜನಾ ಗಾರ್ಧ್ರಪತ್ರಾಃ ಸುವೇಗಾಃ |
ಗಾತ್ರೇಷು ಸರ್ವೇಷು ಹಯೇಷು ಚಾಪಿ
ಶರಾಸನೇ ಯುಗಚಕ್ರೇ ಧ್ವಜೇ ಚ |
ನಿರ್ಭಿದ್ಯ ತೂರ್ಣಂ ವಿವಿಶುಃ ಸುತೀಕ್ಷ್ಣಾ-
ಸ್ತಾರ್ಕ್ಷ್ಯ ತ್ರಸ್ತಾ ಭೂಮಿಮಿವೋರಗಾಸ್ತೇ ॥25॥
ಗಾಂಡೀವದಿಂದ ಹೊರಟ ಆ ವಜ್ರಬಾಣಗಳು ಮಹಾಪ್ರಭಾವ ಉಳ್ಳವು. ಬಲು ತೀಕ್ಷ್ಣ, ಹದ್ದಿನ ರೆಕ್ಕೆ ಉಳ್ಳವು. ವೇಗ ಉಳ್ಳವು. ಅವು ಕರ್ಣನ ಸರ್ವಾಂಗಗಳಲ್ಲಿ ಕುದುರೆಗಳಲ್ಲಿ ಬಿಲ್ಲು ರಥ ಚಕ್ರ ಧ್ವಜಗಳಲ್ಲಿ ನಾಟಿ ಬೇಗನೆ ಗರುಡಗಳಿಗೆ ಭೀತಿಗೊಂಡ ಹಾವುಗಳಂತೆ ಭೂಮಿಯನ್ನು ಪ್ರವೇಶಿಸಿದುವು.
ಶರಾಚಿತಾಂಗೋ ರುಧಿರಾರ್ದ್ರಗಾತ್ರಃ
ಕರ್ಣಸ್ತದಾ ರೋಷವಿವೃತ್ತನೇತ್ರಃ |
ದೃಢಜ್ಯಮಾನಾಮ್ಯ ಸಮುದ್ರಘೋಷಂ
ಪ್ರಾದುಶ್ಚಕ್ರೇ ಭಾರ್ಗವಾಸ್ತ್ರಂ ಮಹಾತ್ಮಾ |
ಮಹೇಂದ್ರಶಸ್ತ್ರಾಭಿಮುಖಾನ್ ವಿಮುಕ್ತಾನ್
ಛಿತ್ವಾ ಕರ್ಣಃ ಪಾಂಡವಸ್ಯೇಷು ಸಂಘಾನ್ ॥26॥
ವಜ್ರಬಾಣಗಳಿಂದ ತುಂಬಿದ ಅಂಗಾಂಗಗಳಿಂದ ಸುರಿದ ರಕ್ತದಿಂದ ತೊಯ್ದ ಮಹಾತ್ಮ ಕರ್ಣನು ರೋಷದಿಂದ ಕಣ್ಣುಗಳನ್ನು ತಿರುಗಿಸುತ್ತ ದೃಢವಾದ ಹೆದೆವುಳ್ಳ ಸಮುದ್ರದಂತೆ ಘೋಷವುಳ್ಳ ಧನುಸ್ಸನ್ನು ಬಾಗಿಸಿ ಇಂದ್ರಾಸ್ತ್ರಕ್ಕೆ ಇದಿರಾಗಿ ಭಾರ್ಗವಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದ. ಅರ್ಜುನ ಎಸೆದ ಬಾಣಸಮೂಹ ಗಳನ್ನು ಕರ್ಣ ಕತ್ತರಿಸಿದ.
ತತಃ ಕರ್ಣೋ ಭಾರ್ಗವೇಣಾಭಿಸೃಷ್ಟಂ
ಪ್ರಾದುಶ್ಚಕ್ರೇ ಬ್ರಾಹ್ಮಮಸ್ತ್ರಂ ಮಹಾತ್ಮಾ |
ತತಃ ಪ್ರಜಜ್ವಾಲ ತದಸ್ತ್ರಮುಗ್ರಂ
ಯುಗಾಂತಸೂರ್ಯಜ್ವಲನಪ್ರಕಾಶಮ್ ॥27॥
ಬಳಿಕ ಮಹಾತ್ಮ ಕರ್ಣನು ಪರಶುರಾಮನಿತ್ತ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಆಗ ಉಗ್ರವಾದ ಆ ಅಸ್ತ್ರ ಯುಗಪ್ರಳಯದ ಸೂರ್ಯಜ್ವಾಲೆಯಂತೆ ಹೊಳೆಯುತ್ತ ಜ್ವಲಿಸಿತು.
ಪಾರ್ಥಾಸ್ತ್ರಮಸ್ತ್ರೇಣ ನಿಹತ್ಯ ತೇನ
ಜಘಾನ ಕರ್ಣೋ ನೃಗಜಾಶ್ವಸಂಘಾನ್ |
ಅಮೃಷ್ಯಮಾಣಸ್ತು ಮಹಾವಿಮರ್ದೇ
ಮಹಾರಥೋ ಭಾರ್ಗವಾಸ್ತ್ರಪ್ರಭಾವಾತ್ ॥28॥
ಮಹಾರಣದಲ್ಲಿ ಪಾರ್ಥನ ಅಸ್ತ್ರವನ್ನು ಮಹಾರಥನಾದ ಕರ್ಣನು ಸಹಿಸದೆ ಅದನ್ನು ಆ ಅಸ್ತ್ರದಿಂದ ನಿಷ್ಕ್ರಿಯಗೊಳಿಸಿ, ಪದಾತಿ ಗಜ ಅಶ್ವ ಯೋಧಸಮೂಹ ಗಳನ್ನು ಭಾರ್ಗವಾಸ್ತ್ರ ಪ್ರಭಾವದಿಂದ ಸಂಹರಿಸಿದ.
ಪಾಂಚಾಲಾನಾಂ ಪ್ರವರಾಂಶ್ಚಾಪಿ ಯೋಧಾನ್
ಕ್ರೋಧಾವಿಷ್ಟಃ ಸೂತಪುತ್ರಸ್ತರಸ್ವೀ |
ಬಾಣೈರ್ವಿವ್ಯಾಧಾಹವೇ ಸುಪ್ರಮುಕ್ತೈಃ
ಪ್ರಹಸ್ಯ ಕೃಷ್ಣೌ ತು ನರಪ್ರವೀರಃ ॥29॥
ಪಾಂಚಾಲರ ಮುಖ್ಯಯೋಧರನ್ನೂ ಕೂಡ ವೀರಪುರುಷನಾದ ಬಲಿಷ್ಠನಾದ ಕರ್ಣನು ಕ್ರೋಧಾವಿಷ್ಟನಾಗಿ ರಣದಲ್ಲಿ ಚೆನ್ನಾಗಿ ಎಸೆದ ಬಾಣಗಳಿಂದ ಹೊಡೆದ. ಅಟ್ಟಹಾಸ ಮಾಡಿ ಕೃಷ್ಣಾರ್ಜುನರನ್ನು ಹೊಡೆದ.
ತತಃ ಪಾಂಚಾಲಾಃ ಸೋಮಕಾಶ್ಚಾಪಿ ರಾಜನ್
ಕರ್ಣೇನಾಜೌ ಪೀಡ್ಯಮಾನಾಃ ಶರೌಘೈಃ |
ಕ್ರೋಧಾವಿಷ್ಟಾ ವಿವ್ಯಧುಸ್ತಂ ಸಮಂತಾತ್
ತೀಕ್ಷ್ಣೈರ್ಬಾಣೈಃ ಸೂತಪುತ್ರಂ ಸಮೇತಾಃ ॥30॥
ರಾಜನೆ, ಆಗ ಪಾಂಚಾಲರೂ ಸೋಮಕರೂ ರಣದಲ್ಲಿ ಕರ್ಣನ ಬಾಣ ಸಮೂಹಗಳಿಂದ ಪೀಡಿತರಾಗುತ್ತ ಕ್ರೋಧಾವಿಷ್ಟರಾಗಿ ಎಲ್ಲರೂ ಕೂಡಿ ಎಲ್ಲ ಕಡೆಗಳಿಂದ ತೀಕ್ಷ್ಣವಾದ ಬಾಣಗಳಿಂದ ಕರ್ಣನನ್ನು ಹೊಡೆದರು.
ತಾನಸ್ತಾಂಸ್ತೈಃ ಸ ನಿಕೃತ್ಯಾಶು ಬಾಣಾನ್
ಪಾಂಚಾಲಾನಾಂ ರಥನಾಗಾಶ್ವಸಂಘಾನ್ |
ಅಭ್ಯರ್ದಯದ್ ಬಾಣಗಣೈಃ ಪ್ರಸಹ್ಯ
ವಿಕ್ಷೋಭಯನ್ ಸಮರೇ ಸೂತಪುತ್ರಃ ॥31॥
ಕರ್ಣನು ರಣದಲ್ಲಿ ಅವರು ಎಸೆದ ಎಲ್ಲ ಬಾಣಗಳನ್ನು ಕತ್ತರಿಸಿ ಪಾಂಚಾಲರ ರಥ ಗಜ ಅಶ್ವಸಮೂಹಗಳನ್ನು ಬಾಣಸಮೂಹಗಳಿಂದ ಬಲವಾಗಿ ಕ್ಷೋಭೆ ಗೊಳಿಸಿ ಸಂಹರಿಸಿದ.

ತೇ ಭಿನ್ನದೇಹಾ ವ್ಯಸವೋ ನಿಪೇತುಃ
ಕರ್ಣೇಷುಭಿರ್ಭೂಮಿತಳೇ ಸ್ವನಂತಃ |
ಕ್ರುದ್ಧೇನ ಸಿಂಹೇನ ಯಥೈವ ನಾಗಾ
ಮಹಾಬಲಾ ಭೀಮಬಲೇನ ತದ್ವತ್ ॥32॥
ಅವರು ಕರ್ಣನ ಬಾಣಗಳಿಂದ ಕ್ಷತವಿಕ್ಷತರಾಗಿ, ಮಹಾಬಲಿಷ್ಠವಾದ ಆನೆಗಳು ಭೀಮಬಲವುಳ್ಳ ಕ್ರುದ್ಧವಾದ ಸಿಂಹದಿಂದ ಕ್ಷತವಿಕ್ಷತವಾಗಿ ಬೀಳುವಂತೆ, ಆರ್ತನಾದ ಮಾಡುತ್ತ ಅಸುನೀಗಿ ನೆಲದಲ್ಲಿ ಬಿದ್ದರು.
ಪಾಂಚಾಲಾನಾಂ ಪ್ರವರಾನ್ ಸನ್ನಿಹತ್ಯ
ಪ್ರಸ್ಪರ್ಧಮಾನಾನ್ ಬಲಿನೋ ಯೋಧಮುಖ್ಯಾನ್ |
ತತಃ ಸ ರಾಜನ್ ವಿರರಾಜ ಕರ್ಣಃ
ಶರಾನ್ ವಮನ್ ಮೇಘ ಇವಾಂಬುಧಾರಾಃ ॥33॥
ಕರ್ಣನು ಪಾಂಚಾಲರಲ್ಲಿ ಬಲಿಷ್ಠರಾದ ಸ್ಪರ್ಧಾಶೀಲರಾದ ಮುಖ್ಯರಾದ ಯೋಧರನ್ನು ಸಂಹರಿಸಿ, ಮೋಡವು ನೀರಿನ ಧಾರೆಯನ್ನು ಸುರಿಸುವಂತೆ ಬಾಣಗಳನ್ನು ಸುರಿಸುತ್ತ ಶೋಭಿಸಿದ.
ಕರ್ಣಸ್ಯ ಮತ್ವಾ ತು ಜಯಂ ತ್ವದೀಯಾಃ
ಪರಾಂ ಮುದಂ ಸಿಂಹನಾದಾಂಶ್ಚ ಚಕ್ರುಃ |
ಸರ್ವೇ ಹ್ಯಮನ್ಯಂತ ವಶೇ ಕೃತೌ ತೌ
ಕರ್ಣೇನ ಕೃಷ್ಣಾವಿತಿ ಕೌರವೇಂದ್ರ ॥34॥
ರಾಜನೆ, ನಿನ್ನವರು ಕರ್ಣನಿಗೇ ಜಯವೆಂದು ತಿಳಿದು, ಕರ್ಣನು ಕೃಷ್ಣಾರ್ಜುನರನ್ನು ತನ್ನ ನಿಯಂತ್ರಣಕ್ಕೆ ತಂದುಕೊಂಡನೆಂದು ಬಹಳ ಆನಂದವನ್ನು ಹೊಂದಿ ಸಿಂಹನಾದಗೈದರು.
ತತ್ತಾದೃಶಂ ಪ್ರೇಕ್ಷ್ಯ ಮಹಾರಥಸ್ಯ
ಕರ್ಣಸ್ಯ ವೀರ್ಯಂ ಚ ಪರೈರಸಹ್ಯಮ್ |
ದೃಷ್ಟ್ವಾ ತು ಕರ್ಣೇನ ಧನಂಜಯಸ್ಯ
ಸಂಗ್ರಾಮಮಧ್ಯೇ ನಿಹತಂ ತದಸ್ತ್ರಮ್ ॥35॥
ಅಮೃಷ್ಯಮಾಣಶ್ಚ ಮಹಾವಿಮರ್ದೇ
ತತ್ರಾಕ್ರುಧ್ಯದ್ ಭೀಮಸೇನೋ ಮಹಾತ್ಮಾ |
ಅಥಾಬ್ರವೀತ್ ಪಾಣಿನಾ ಪಾಣಿಮಾಘ್ನನ್
ಭೀಮೋಽರ್ಜುನಂ ಸತ್ಯಸಂಧಂ ತರಸ್ವೀ ॥36॥
ಶತ್ರುಗಳಿಗೆ ಸಹಿಸಲಾಗದಂಥ ಮಹಾರಥನಾದ ಕರ್ಣನ ಆ ರೀತಿಯ ಪರಾಕ್ರಮವನ್ನು ಕಂಡು, ಅರ್ಜುನನ ಅಸ್ತ್ರವನ್ನು ರಣದಲ್ಲಿ ಕರ್ಣನು ಭಾರ್ಗವಾಸ್ತ್ರದಿಂದ ನಿಷ್ಕ್ರಿಯಗೊಳಿಸಿದ್ದನ್ನು ಕಂಡು, ತಡೆದುಕೊಳ್ಳಲಾಗದೆ, ಮಹಾತ್ಮನಾದ ಬಲಿಷ್ಠನಾದ ಭೀಮಸೇನನು ಆ ಮಹಾಸಮರದಲ್ಲಿ ಕುಪಿತನಾದ. ಕೈಯಿಂದ ಕೈಯನ್ನು ಬಲವಾಗಿ ಮಸೆಯುತ್ತ ಸತ್ಯಸಂಧನಾದ ಅರ್ಜುನನಿಗೆ ನುಡಿದ.
`ಸತ್ಯಸಂಧ' ಎಂದರೆ ತಾನು ತನ್ನ ಪ್ರತಿಜ್ಞೆಯನ್ನು ಸತ್ಯವಾಗಿಸುವವನು. ಅರ್ಜುನನಲ್ಲಿ ಇದು ಈಗ ಭೀಮನಿಗೆ ಕಾಣುತ್ತಿಲ್ಲ. ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಮಾಡಿ ಬಂದ ಅರ್ಜುನ ಮೊದಲಿಗೆ ಪ್ರಹಾರ ಮಾಡಲು ಕರ್ಣನಿಗೇ ಅವಕಾಶ ಕೊಟ್ಟ. ತಾನೇ ಮೊದಲಿಗೆ ಪ್ರಹಾರ ಮಾಡಬೇಕಾಗಿತ್ತು. ಬಳಿಕವೂ ಕರ್ಣನ ಅಸ್ತ್ರಗಳಿಗೆ ಪ್ರತಿಯಾಗಿ ಅರ್ಜುನ ಅಸ್ತ್ರಪ್ರಯೋಗ ಮಾಡಿ ಆತ್ಮರಕ್ಷಣೆ ಮಾಡಿಕೊಂಡನೆ ಹೊರತು ಕರ್ಣನ ಮೇಲೆ ಆಕ್ರಮಣ ಮಾಡಲಿಲ್ಲ. ಶ್ಲೋಕ 12 ರಿಂದ 24ರವರೆಗೂ ಅರ್ಜುನ ಆತ್ಮರಕ್ಷಣೆ ಮಾಡಿಕೊಂಡಂತೇ ಕಂಡುಬಂದಿದೆ. ಕರ್ಣವಧೆಗಾಗಿ ಉಗ್ರವಾದ ಮಹಾ ಅಸ್ತ್ರವನ್ನು ಪ್ರಯೋಗಿಸುತ್ತಿಲ್ಲ. ಕರ್ಣನು ಪ್ರಯೋಗಿಸಿದ ಭಾರ್ಗವಾಸ್ತ್ರವು ಪರಶುರಾಮ ಉಪದೇಶಿಸಿದ ಬ್ರಹ್ಮಾಸ್ತ್ರ. ಅದಕ್ಕೆ ಪ್ರತಿಯಾಗಿ ಇನ್ನೊಂದು ಅಸ್ತ್ರವೆ ಇಲ್ಲದ್ದರಿಂದ ಅರ್ಜುನನು ಬ್ರಹ್ಮಾಸ್ತ್ರ ಪ್ರಯೋಗಿಸಲಿಲ್ಲ. ಇನ್ನು ಮುಂದೆಯೂ ಕರ್ಣನು ಬ್ರಹ್ಮಾಸ್ತ್ರಸಹಿತವಾದ ಸರ್ಪಾಸ್ತ್ರವನ್ನು ಪ್ರಯೋಗಿಸಿದಾಗ ಅರ್ಜುನ ಅದಕ್ಕೆ ಪ್ರತಿಯಾಗಿ ತಾನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಬಹುದಿತ್ತು. ಆದರೂ ಪ್ರಯೋಗಿಸುವುದಿಲ್ಲ. ಏಕೆಂದರೆ ಪರಶುರಾಮನ ಅನುಗ್ರಹದಿಂದ ಕರ್ಣನ ಅಸ್ತ್ರಪ್ರಯೋಗ ಬಹಳ ವೇಗವಾಗಿದೆ. ಅರ್ಜುನನಿಗೆ ಪ್ರತಿ ಬ್ರಹ್ಮಾಸ್ತ್ರ ಎಸೆಯಲು ವ್ಯವಧಾನವಿಲ್ಲ. ಹೀಗಾಗಿ ಅರ್ಜುನನು ತನ್ನ ಪ್ರತಿಜ್ಞೆಯನ್ನು ಈಡೇರಿಸುವಲ್ಲಿ ವಿಫಲನು ಆಗುವನೆಂದು ಭೀಮ ಕುಪಿತನಾದ. ಅದರಿಂದ ಭೀಮನು ಅರ್ಜುನನನ್ನು ರೊಚ್ಚಿಗೆಬ್ಬಿಸುವ ಸಲುವಾಗಿ, ನೀನು ಕರ್ಣನನ್ನು ಉಪೇಕ್ಷಿಸುತ್ತಿರುವೆ ಏಕೆ ಎಂದು ಆಕ್ಷೇಪಿಸುವುದು ಅಸಹಜವಲ್ಲ. ಕೃಷ್ಣನೂ ಹೇಳುತ್ತಾನೆ, ಧೈರ್ಯದಿಂದ ಕರ್ಣನನ್ನು ವಧಿಸು ಎಂದು. ಇಲ್ಲಿ ಕೃಷ್ಣ ಮತ್ತು ಭೀಮಸೇನರ ಮಾತುಗಳು ಆಸ್ವಾಭಾವಿಕವಲ್ಲ. ಪ್ರಕ್ಷಿಪ್ತವೆಂದು ಭಾವಿಸಲು ಕಾರಣವಿಲ್ಲ.
ಕಥಂ ನು ಪಾಪೋಽಯಮಪೇತಧರ್ಮಾಃ
ಸೂತಾತ್ಮಜಃ ಸಮರೇಽದ್ಯ ಪ್ರಸಹ್ಯ |
ಪಾಂಚಾಲಾನಾಂ ಯೋಧಮುಖ್ಯಾನನೇಕಾನ್
ನಿಜಘ್ನಿವಾಂಸ್ತವ ಜಿಷ್ಣೋ ಸಮಕ್ಷಮ್ ॥37॥
ಅರ್ಜುನ, ಧರ್ಮವನ್ನೊಲ್ಲದ ಪಾಪಿಯಾದ ಈ ಕರ್ಣ ನಿನ್ನ ಸಮಕ್ಷಮ ದಲ್ಲಿಯೇ ರಣದಲ್ಲಿ ಈಗ ಬಲವಾಗಿ ಪಾಂಚಾಲರ ಅನೇಕ ಮುಖ್ಯಯೋಧರನ್ನು ಹೇಗೆ ಕೊಂದಿದ್ದಾನೆ?
ಪೂರ್ವಂ ದೈತ್ಯೈರಜಿತಂ ಕಾಲಕೇಯೈಃ
ಸಾಕ್ಷಾತ್ಸ್ಥಾಣೋರ್ಬಾಹುಸಂಸ್ಪರ್ಶಮೇತ್ಯ ॥38॥

ಕಥಂ ನು ತ್ವಾಂ ಸೂತಪುತ್ರಃ ಕಿರೀಟಿನ್
ಮಹೇಷುಭಿರ್ದಶಭಿರವಿಧ್ಯದಗ್ರೇ ॥39॥
ಹಿಂದೆ ನೀನು ಸಾಕ್ಷಾತ್ ಕಿರಾತರೂಪಿ ಶಿವನ ಬಾಹುಸ್ಪರ್ಶಮಾಡಿ ಅವನ ಅನುಗ್ರಹದಿಂದ ಕಾಲಕೇಯದೈತ್ಯರಿಂದಲೂ ಗೆಲ್ಲಲಾಗದವನಾದೆ. ನಿನ್ನನ್ನು ಮೊದಲಿಗೇ ಕರ್ಣ ಹತ್ತು ಮಹಾಬಾಣಗಳಿಂದ ಹೇಗೆ ಹೊಡೆದ?
ತ್ವಯಾ ಕ್ಷಿಪ್ತಾಂಶ್ಚಾಗ್ರಸದ್ಬಾಣಸಂಘಾನ್
ಆಶ್ಚರ್ಯಮೇತತ್ ಪ್ರತಿಭಾತಿ ಮೇಽದ್ಯ |
ಕೃಷ್ಣಾಪರಿಕ್ಲೇಶಮನುಸ್ಮರ ತ್ವಂ
ಯಥಾಬ್ರುವೀತ್ ಷಂಢತಿಲಾನ್ಸ್ಮ ವಾಚಃ ॥40॥
ನೀನೆಸೆದ ಬಾಣಗಳ ಸಮೂಹಗಳನ್ನು ಅವನು ಈಗ ನುಂಗಿದ್ದಾನೆ ಎಂದರೆ ಇದು ನಿಜವಾಗಿ ಆಶ್ಚರ್ಯ ಎಂದು ನನಗನಿಸುತ್ತಿದೆ. ದ್ರೌಪದಿಗೆ ಈತ ಕಟುನುಡಿ ಗಳಿಂದ ಕ್ಲೇಶ ಉಂಟುಮಾಡಿದ್ದನ್ನು ನೆನಪಿಸಿಕೊಳ್ಳು, ನಮ್ಮನ್ನು ಜೊಳ್ಳು ಎಳ್ಳಿನ ಕಾಳುಗಳು, ನಪುಂಸಕರು ಎಂದೂ ಅಪಹಾಸ್ಯದ ಮಾತುಗಳನ್ನು ಆಡಿದ್ದಾನೆ.
ವಾಚಃ ಸುತೀಕ್ಷ್ಣಾಸ್ತ್ವಭಿದೋಽಮನೋಜ್ಞಾಃ
ಸೂತಾತ್ಮಜೋಽಯಂ ಗತಭೀರ್ದುರಾತ್ಮಾ |
ಸಂಸ್ಮೃತ್ಯ ಸರ್ವಂ ತದಿಹಾದ್ಯ ಪಾಪಂ
ಜಹ್ಯಾಶು ಕರ್ಣಂ ಯುಧಿ ಸವ್ಯಸಾಚಿನ್ ॥41॥
ಮೈಯೊಳಗಿನ ಎಲುಬುಗಳನ್ನು ಕೂಡ ಮುರಿಯುವಂತಹ ಮನಸಿಗೆ ಅಸಹ್ಯವಾದ ಮಾತುಗಳನ್ನು ಏನೂ ಭಯವಿಲ್ಲದೆ ದುರಾತ್ಮ ಕರ್ಣ ಆಡಿದ್ದಾನೆ. ಅದನ್ನು ಎಲ್ಲವನ್ನೂ ನೆನಪಿಸಿಕೊಂಡು ಈಗ ಪಾಪಿ ಕರ್ಣನನ್ನು ರಣದಲ್ಲಿ ಬೇಗನೆ ಕೊಲ್ಲು.
ಕಸ್ಮಾದುಪೇಕ್ಷಾಂ ಕುರುಷೇ ಕಿರೀಟಿ-
ನ್ನುಪೇಕ್ಷಿತುಂ ನಾಯಮಿಹಾದ್ಯ ಕಾಲಃ ॥42॥
ಯಾವ ಕಾರಣಕ್ಕೆ ನೀನು ಈತನಲ್ಲಿ ಉಪೇಕ್ಷೆ ಮಾಡುತ್ತಿರುವೆ? ಉಪೇಕ್ಷಿಸಲು ಈಗ ಇದು ಕಾಲವಲ್ಲ.
ಯಯಾ ಧೃತ್ಯಾ ಸರ್ವಭೂತಾನ್ಯಜೈಷೀ-
ರ್ಗ್ರಾಸಂ ದದದ್ ವಹ್ನಯೇ ಖಾಂಡವೇ ತ್ವಮ್ |
ತಯಾ ಧೃತ್ಯಾ ಸೂತಪುತ್ರಂ ಜಹಿ ತ್ವಂ
ಅಹಂ ವೈನಂ ಗದಯಾ ಪೋಥಯಿಷ್ಯೇ ॥43॥
ಯಾವ ಧೈರ್ಯದಿಂದ ಖಾಂಡವದಲ್ಲಿ ಅಗ್ನಿಗೆ ಅರಣ್ಯವನ್ನು ಆಹುತಿ ನೀಡುವಾಗ ಸುರಾಸುರರ ಸಮೇತ ಎಲ್ಲ ಜಂತುಗಳನ್ನೂ ನೀನು ಗೆದ್ದಿರುವೆಯೋ, ಆ ಧೈರ್ಯದಿಂದ ಕರ್ಣನನ್ನು ಕೊಲ್ಲು ಅಥವಾ ನಾನೇ ಅವನನ್ನು ಗದೆಯಿಂದ ಸಂಹರಿಸುತ್ತೇನೆ.
ಅಥಾಬ್ರುವೀದ್ ವಾಸುದೇವೋಽಪಿ ಪಾರ್ಥಂ
ದೃಷ್ಟ್ವಾ ರಥೇಷೂನ್ ಪ್ರತಿಹನ್ಯಮಾನಾನ್ |
ಅಮೀಮೃದತ್ ಸರ್ವಥಾ ತೇಽದ್ಯ ಕರ್ಣೋ
ಹ್ಯಸ್ತ್ರೈರಸ್ತ್ರಾಣಿ ಕಿಮಿದಂ ಕಿರೀಟಿನ್ ॥44॥
ಶ್ರೀಕೃಷ್ಣನೂ ಅರ್ಜುನನ ರಥೇಷು ಎಂಬ ಬಾಣಗಳನ್ನೂ ಕೂಡ ಕರ್ಣನು ಕತ್ತರಿಸಿದ್ದನ್ನು ಕಂಡು ನುಡಿದ: ಅರ್ಜುನ, ನಿನ್ನ ಅಸ್ತ್ರಗಳನ್ನೆಲ್ಲವನ್ನೂ ಅಸ್ತ್ರಗಳಿಂದ ಕರ್ಣನು ಈಗ ನಾಶ ಮಾಡಿದ್ದಾನೆ. ಇದೇನು ಅರ್ಜುನ?
ಸ ವೀರ ಕಿಂ ಮುಹ್ಯಸಿ ನಾವಧೀಯಸೇ
ನದಂತ್ಯೇತೇ ಕುರವಃ ಸಂಪ್ರಹೃಷ್ಟಾಃ |
ಕರ್ಣಂ ಪುರಸ್ಕೃತ್ಯ ವಿದುರ್ಹಿ ಸರ್ವೇ
ತ್ವದಸ್ತ್ರಮಸ್ತ್ರೈರ್ವಿನಿಪಾತ್ಯಮಾನಮ್ ॥45॥
ವೀರನೆ, ನೀನು ಏಕೆ ಮೋಹಗೊಳ್ಳುವೆ? ಏಕೆ ಎಚ್ಚರ ತಪ್ಪುತ್ತಿರುವೆ? ಈ ಕೌರವರು ಅತಿ ಉತ್ಸಾಹದಿಂದ ಕರ್ಣನನ್ನು ಹುರಿದುಂಬಿಸಿ ಗರ್ಜನ ಮಾಡುತ್ತಿದ್ದಾರೆ. ನಿನ್ನ ಅಸ್ತ್ರವನ್ನು ಅವನು ಪ್ರತ್ಯಸ್ತ್ರಗಳಿಂದ ನಿಷ್ಕ್ರಿಯಗೊಳಿಸುವುದನ್ನು ಅವರು ಗಮನಿಸುತ್ತಿದ್ದಾರೆ.
ಯಯಾ ಧೃತ್ಯಾ ನಿಹತಂ ತಾಮಸಾಸ್ತ್ರಂ
ಯುಗೇ ಯುಗೇ ರಾಕ್ಷಸಾಶ್ಚಾಪಿ ಘೋರಾಃ |
ದಂಭೋದ್ಭವಾಶ್ಚಾಸುರಾಶ್ಚಾಹವೇಷು
ತಯಾ ಧೃತ್ಯಾ ತ್ವಂ ಜಹಿ ಸೂತಪುತ್ರಮ್ ॥46॥
ನರನಾರಾಯಣಾವತಾರದಲ್ಲಿ ನೀನು ಯಾವ ಧೈರ್ಯದಿಂದ ಪ್ರತಿಯುಗದಲ್ಲಿ ರಾಕ್ಷಸರ ತಾಮಸಅಸ್ತ್ರಗಳನ್ನು ನಾಶಪಡಿಸಿರುವೆಯೋ, ಘೋರರಾಕ್ಷಸರನ್ನೂ, ದಂಭೋದ್ಭವರೆಂಬ ಅಸುರರನ್ನೂ ಯುದ್ಧಗಳಲ್ಲಿ ನಾಶಪಡಿಸಿರುವೆಯೋ ಆ ಧೈರ್ಯದಿಂದ ಕರ್ಣನನ್ನೂ ಕೊಲ್ಲು.
ದೇವಾಂಶಸಂಭೂತರಾದವರಿಗೆ ಮೂಲರೂಪದ ಎಲ್ಲ ಶಕ್ತಿ, ಸಾಮರ್ಥ್ಯ ವ್ಯಕ್ತವಿರುವುದಿಲ್ಲ. ಆದರೆ ಮೂಲರೂಪಸ್ಮರಣೆಯಿಂದ ಅದು ವ್ಯಕ್ತವಾಗುವುದು. ಅರ್ಜುನನು ಹಿಂದೆ ನರ. ಕೃಷ್ಣನು ನಾರಾಯಣ. ನಾರಾಯಣನಿಗೆ ಮೂಲರೂಪ ಮತ್ತು ಅವತಾರರೂಪಗಳಲ್ಲಿ ಏನೂ ವೈಲಕ್ಷಣ್ಯವಿರುವುದಿಲ್ಲ. `ಪೂರ್ಣಮದಃ ಪೂರ್ಣಮಿದಂ' ಎಂದು ಶ್ರುತಿ ಹೇಳುತ್ತದೆ. ಬೇರೆ ದೇವತೆ ಗಳಿಗೆ ಮೂಲರೂಪದ ಸ್ಮರಣೆಯಿಂದ ಅದರ ಶಕ್ತಿ, ಸಾಮರ್ಥ್ಯಬರುವುದುಂಟು. ಅದಕ್ಕೆ ಕೃಷ್ಣ ಅರ್ಜುನನಿಗೆ ನರಾವೇಶ ಬರುವುದಕ್ಕಾಗಿ ನರನು ದಂಭೋದ್ಭವ ದಾನವರನ್ನು ನಿಗ್ರಹಿಸಿದ ವೃತ್ತಾಂತವನ್ನು ನೆನಪಿಸುತ್ತಾನೆ.

ಸಂಛಿಂಧಿ ಮೂರ್ಧಾನಮರೇಃ ಪ್ರಸಹ್ಯ |
ವಜ್ರೇಣ ಶಕ್ರೋ ನಮುಚೇರಿವಾರೇಃ ॥47॥
ಕರ್ಣನ ಶಿರಸ್ಸನ್ನು, ಇಂದ್ರನು ವಜ್ರಾಯುಧದಿಂದ ಶತ್ರುವಾದ ನಮುಚಿ ದಾನವನ ಶಿರಸ್ಸನ್ನು ತರಿದಂತೆ, ಬಲವಾಗಿ ಕತ್ತರಿಸು.
ಕಿರಾತರೂಪೀ ಭಗವಾನ್ ಯಯಾ ಚ
ತ್ವಯಾ ಮಹತ್ಯಾ ಪರಿತೋಷಿತೋಽಭೂತ್ |
ತಾಂ ತ್ವಂ ಧೃತಿಂ ವೀರ ಪುನರ್ಗೃಹೀತ್ವಾ
ಸಹಾನುಬಂಧಂ ಜಹಿ ಸೂತಪುತ್ರಮ್ ॥48॥
ಕಿರಾತರೂಪಿಯಾದ ಭಗವಾನ್ ಶಿವನನ್ನು ಯಾವ ಮಹಾಧೈರ್ಯದಿಂದ ಹೊಡೆದು ಒಲಿಸಿಕೊಂಡೆಯೋ, ಆ ಧೈರ್ಯವನ್ನೇ ಪುನಃ ಅವಲಂಬಿಸಿ, ಪರಿವಾರದೊಂದಿಗೇ ಕರ್ಣನನ್ನು ಕೊಲ್ಲು.
ತತೋ ಮಹೀಂ ಸಾಗರಮೇಖಲಾಂ ತ್ವಂ
ಸಪತ್ತನಾಂ ಗ್ರಾಮವತೀಂ ಸಮೃದ್ಧಾಮ್ |
ಪ್ರಯಚ್ಛ ರಾಜ್ಞೇ ನಿಹತಾರಿಸಂಘಾಂ
ಯಶಶ್ಚ ಪಾರ್ಥಾತುಲಮಾಪ್ನುಹಿ ತ್ವಮ್ ॥49॥
ಸಮುದ್ರದಿಂದ ಸುತ್ತುವರಿದ, ಪಟ್ಟಣ ಗ್ರಾಮಗಳಿಂದ ಯುಕ್ತವಾದ ಸಮೃದ್ಧವಾದ ಇಡೀ ಭೂಮಿಯನ್ನು, ಶತ್ರುಸಮೂಹ ವಧಪೂರ್ವಕವಾಗಿ ರಾಜಾ ಯುಧಿಷ್ಠಿರನಿಗೆ ನೀಡು, ಅನುಪಮವಾದ ಯಶಸ್ಸನ್ನು ಪಡೆ, ಪಾರ್ಥ!
ಸಂಜಯಃ
ಸ ಏವಮುಕ್ತೋಽತಿಬಲೋ ಮಹಾತ್ಮಾ
ಚಕಾರ ಬುದ್ಧಿಂ ಹಿ ವಧಾಯ ಸೌತೇಃ ॥50॥
ಸಂಜಯನು ನುಡಿದ– ಹೀಗೆ ಭೀಮ ಮತ್ತು ಕೃಷ್ಣರು ಹೇಳಿದಾಗ, ಹಿಂದೆ ಬಲಿಷ್ಠನೆ ಆಗಿದ್ದವನು ಪುನಃ ಅತಿ ಬಲಿಷ್ಠನಾಗಿ, ಮಹಾತ್ಮ ಅರ್ಜುನನು ಸೌತಿಯ ವಧೆ ಮಾಡುವುದಾಗಿ ನಿರ್ಧಾರವನ್ನು ಕೈಗೊಂಡ.
`ಸೂತಸ್ಯ ಅಪತ್ಯಂ ಪುಮಾನ್ ಸೌತಿಃ' ಸೂತನು ಕರ್ಣನಿಗೆ ಸಾಕು ತಂದೆಯಾದ್ದರಿಂದ ಕರ್ಣನು ಸೂತಪುತ್ರನೆಂದೇ, ಸೂತನ ಅಪತ್ಯ ಎಂದೇ ಪ್ರಸಿದ್ಧ. ಅದರಿಂದ ಅವನು ಸೌತಿ ಎನಿಸಿದ್ದಾನೆ.
ಸಂಚೋದಿತೋ ಭೀಮಜನಾರ್ದನಾಭ್ಯಾಂ
ಸ್ಮೃತ್ವಾ ತದಾತ್ಮಾನಮವೇಕ್ಷ್ಯ ಸರ್ವಮ್ |
ಇಹಾತ್ಮನಶ್ಚಾಗಮನೇ ವಿದಿತ್ವಾ
ಪ್ರಯೋಜನಂ ಕೇಶವಮಿತ್ಯುವಾಚ ॥51॥
ಭೀಮ ಮತ್ತು ಕೃಷ್ಣರಿಂದ ಪ್ರೇರಿತನಾದ ಅರ್ಜುನನು ತನ್ನನ್ನು ನರಾವತಾರ ನೆಂದು ತಿಳಿದು ಭೂಮಿಯಲ್ಲಿ ತಾನು ಅವತರಿಸಿದುದರ ಪ್ರಯೋಜನವನ್ನೂ ಸ್ಮರಿಸಿ ಕೃಷ್ಣನಿಗೆ ಹೀಗೆ ಹೇಳಿದ.
ಪ್ರಾದುಷ್ಕರೋಮ್ಯೇಷ ಮಹಾಸ್ತ್ರಮುಗ್ರಂ
ಶಿವಾಯ ಲೋಕಸ್ಯ ವಧಾಯ ಸೌತೇಃ |
ತನ್ಮೇಽನುಜಾನಾತು ಭವಾನ್ ಸುರಾಶ್ಚ
ಬ್ರಹ್ಮಾ ಭವೋ ಬ್ರಹ್ಮವಿದಶ್ಚ ಸರ್ವೇ ॥52॥
ಕೃಷ್ಣ , ನಾನು ಕರ್ಣನ ವಧೆಗಾಗಿ, ಲೋಕದ ಒಳಿತಿಗಾಗಿ ಉಗ್ರವಾದ ಮಹಾಅಸ್ತ್ರವನ್ನು ಪ್ರಾದುರ್ಭಾವಗೊಳಿಸುತ್ತೇನೆ. ಅದಕ್ಕೆ ನೀನು ಅನುಜ್ಞೆ ನೀಡು. ದೇವತೆಗಳೂ ಬ್ರಹ್ಮ ರುದ್ರರೂ ಬ್ರಹ್ಮಜ್ಞಾನಿಗಳೂ ಎಲ್ಲರೂ ಅನುಮತಿ ನೀಡಲಿ.
ಇತ್ಯೂಚಿವಾನ್ ಬ್ರಾಹ್ಮಮಸಹ್ಯಮಸ್ತ್ರಂ
ಪ್ರಾದುಶ್ಚಕ್ರೇ ಮನಸಾ ಸಂವಿಧೇಯಮ್ ॥53॥
ಅರ್ಜುನನು ಹೀಗೆ ಹೇಳಿ ಮನಸಿನಲ್ಲಿಯೇ ಅಸಹನೀಯವಾದ ಒಂದು ಬ್ರಹ್ಮಾಸ್ತ್ರವನ್ನು ಪ್ರಾದುರ್ಭಾವಗೊಳಿಸಿದ.
ವೈಕರ್ತನೇನಾಪಿ ತಥಾಜಿಮಧ್ಯೇ
ಸಹಸ್ರಶೋ ಬಾಣಗಣಾ ವಿಸೃಷ್ಟಾಃ |
ತೇ ಘೋಷಿಣಃ ಪಾಂಡವಮಭ್ಯುಪೇಯುಃ
ಪರ್ಜನ್ಯಮುಕ್ತಾ ಇವ ವಾರಿಧಾರಾಃ ॥54॥
ಕರ್ಣನೂ `ತಥಾ' ಹಾಗೆಯೇ, ಅಂದರೆ, ಅರ್ಜುನನಂತೆ ತಾನೂ ಬ್ರಹ್ಮಾಸ್ತ್ರವನ್ನು ಪ್ರಾದುರ್ಭಾವಗೊಳಿಸಿ ಪ್ರಯೋಗಿಸಿ, ರಣದಲ್ಲಿ ತಾನೂ ಸಾವಿರಾರು ಬಾಣಸಮೂಹಗಳನ್ನು ಎಸೆದ. ಮೋಡವು ಸುರಿಸುವ ನೀರಿನ ಧಾರೆಗಳಂತೆ ಅರ್ಜುನನ ಮೇಲೆ ಅವು ಶಬ್ದಮಾಡುತ್ತ ಎರಗಿದುವು.
ವಸ್ತುತಃ 27ನೇ ಶ್ಲೋಕದಲ್ಲಿ ಕರ್ಣನು ಪ್ರಯೋಗಿಸಿದ ಅಸ್ತ್ರವು ನಿಜವಾಗಿ `ಬ್ರಹ್ಮಾಸ್ತ್ರ' ವಾಗಿರಲಿಲ್ಲ. ಪರಶುರಾಮರಲ್ಲಿ ವಿದ್ಯಾಭ್ಯಾಸ ಮಾಡುವಾಗ ಕರ್ಣ ತನ್ನನ್ನು ಬ್ರಾಹ್ಮಣನೆಂದು ಹೇಳಿಕೊಂಡರೂ ಒಮ್ಮೆ ಗುರು ಈತನ ತೊಡೆಯ ಮೇಲೆ ತಲೆಇಟ್ಟು ಮಲಗಿದಾಗ ಒಂದು ಕೀಟವು ಅವನ ತೊಡೆಯನ್ನು ಕೊರೆದು ರಕ್ತದ ಕೋಡಿಯನ್ನೇ ಹರಿಸಿತು. ಆದರೂ ಕರ್ಣ ಗುರುವಿಗೆ ನಿದ್ರಾಭಂಗ ವಾದೀತೆಂದು ಧೈರ್ಯದಿಂದ ಅದನ್ನು ಸಹಿಸಿಕೊಂಡ. `ಇದು ಕ್ಷತ್ರಿಯಸ್ವಭಾವ. ಅದರಿಂದ `ನೀನು ಬ್ರಾಹ್ಮಣನಲ್ಲ. ಆರು ನೀನು?' ಎಂದು ಕೇಳಿ ಕರ್ಣನಿಂದಲೇ ಆತ ಸೂತಪುತ್ರನೆಂದು ತಿಳಿದು ಕ್ಷತ್ರಿಯಸಂಸ್ಕಾರವಾಗಿಲ್ಲದ್ದರಿಂದ ಮುಂದೆ ನೀಡಬೇಕಾಗಿದ್ದ ಬ್ರಹ್ಮಾಸ್ತ್ರದ ಉಪದೇಶವನ್ನು ನೀಡಲಿಲ್ಲ.

ಯದ್ಯಪಿ ಶಾಂತಿಪರ್ವ (3.2)ದಲ್ಲಿ ಪರಶುರಾಮ ಕರ್ಣನಿಗೆ ಬ್ರಹ್ಮಾಸ್ತ್ರ ನೀಡಿದಂತೆ ಕಾಣುತ್ತದೆ. ಇಲ್ಲಿಯೆ ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸು ತ್ತಿದ್ದುದೂ ಕಾಣುತ್ತದೆ. ಆದರೆ ಕರ್ಣ ಬ್ರಹ್ಮಾಸ್ತೋಪದೇಶಕ್ಕೆ ಯೋಗ್ಯನಾಗಿರ ಲಿಲ್ಲ. ಅದರಿಂದ `ಬ್ರಹ್ಮ' ಎಂದರೆ ವೇದ. ಪಂಚಮವೇದ. ಮೊದಲಿಗೆ ಪರಶುರಾಮ ಉಪದೇಶಿಸಿದ್ದ ಅಸ್ತ್ರರೂಪವಾದ ವೇದಮಂತ್ರವೇ ಬ್ರಹ್ಮಾಸ್ತ್ರ. ಈ ಅರ್ಥದಲ್ಲಿ ಆಗ್ನೇಯ ವಾರುಣ ಮುಂತಾದ ಅಸ್ತ್ರಗಳೂ ಬ್ರಹ್ಮಾಸ್ತ್ರವೆ. ನಿಜವಾದ ಬ್ರಹ್ಮಾಸ್ತ್ರವೆಂದರೆ `ಬ್ರಹ್ಮಶಿರೋಸ್ತ್ರ'. ಈ ಬ್ರಹ್ಮಾಸ್ತ್ರದ ಉಪದೇಶವಿರುತ್ತಿದ್ದರೆ ಕರ್ಣ ಯುದ್ಧದಲ್ಲಿ ಸಾಯುತ್ತಿರಲಿಲ್ಲ. ಬ್ರಹ್ಮಾಸ್ತ್ರದಿಂದ ತನ್ನನ್ನು ರಕ್ಷಿಸಿಕೊಂಡು ಬೇರೆಯವರನ್ನೇ ಸಾಯಿಸುತ್ತಿದ್ದ. ಇದನ್ನು ಶಾಂತಿಪರ್ವ (2.4)ದಲ್ಲಿ ನಾರದರು ಧರ್ಮರಾಜನಿಗೆ ಹೇಳುತ್ತಾರೆ–

ಕ್ಷತ್ರಂ ಸ್ವರ್ಗಂ ಕಥಂ ಗಚ್ಛೇತ್ ಶಸ್ತ್ರಪೂತಮಿತಿ ಪ್ರಭೋ |
ಸಂಘರ್ಷ ಜನನಸ್ತಸ್ಮಾತ್ ಕನ್ಯಾಗರ್ಭೋ ವಿನಿರ್ಮಿತಃ ॥

ಕರ್ಣನು ಶಸ್ತ್ರಯುದ್ಧದಲ್ಲಿ ಪುನೀತನಾಗಿ ಮಡಿದು ಸ್ವರ್ಗಪಡೆಯಲಿ ಎಂದು ಹರಿ ಸಂಕಲ್ಪಿಸಿದ್ದುದರಿಂದ ಕ್ಷತ್ರಿಯಜಾತಿಯಲ್ಲಿಯೇ ಜನಿಸಿದ. ಆದರೆ ಅವಿವಾಹಿತಕನ್ಯೆಯಾದ ಕುಂತಿಯ ಗರ್ಭದಲ್ಲಿ ಅವನನ್ನು ಹುಟ್ಟಿಸಿ ಕ್ಷತ್ರಿಯ ಸಂಸ್ಕಾರವಿಲ್ಲದಂತೆ ಮಾಡಿ, ಬ್ರಹ್ಮಾಸ್ತ್ರ ಸಿಗದಂತೆ ಮಾಡಿ ಅರ್ಜುನನ ಶಸ್ತ್ರದಿಂದ ಸ್ವರ್ಗ ಹೊಂದುವಂತೆ ಮಾಡಿದ್ದಾನೆ ಶ್ರೀಹರಿ. ಇದು ಲಕ್ಷಾಲಂಕಾರದಲ್ಲಿ ಸ್ಪಷ್ಟವಿದೆ. ಮೇಲಿನ ಭಾರತಶ್ಲೋಕದಲ್ಲಿ `ಕ್ಷತ್ರಂ' ಎಂದರೆ `ಕ್ಷತ್ರಿಯಜಾತಿ ಯುದ್ಧದಿಂದ ಸ್ವರ್ಗಕ್ಕೆ ಹೋಗಬೇಕೆಂದೇ ಸಂಘರ್ಷಕಾರಿಯಾದ ಕರ್ಣ ಹುಟ್ಟಿದ' ಎಂದು ಹೇಳಿದಂತೆ ಮೇಲುನೋಟಕ್ಕೆ ಕಾಣಬಹುದು. ಆದರೆ `ಕನ್ಯಾಗರ್ಭೋ ವಿನಿರ್ಮಿತಃ' ಕನ್ಯಾಪುತ್ರನಾಗಿ ಕರ್ಣ ಜನಿಸಿದ್ದು ಏಕೆ? ವಿವಾಹಿತ ಕನ್ಯೆಯಲ್ಲಿ ಹುಟ್ಟಿದ್ದರೂ ಆತ, ಕ್ಷತ್ರಿಯರಾಗಿ ಜನಿಸಿದ ಕೌರವಪಾಂಡವರಲ್ಲಿ ಪರಸ್ಪರ ಸಂಘರ್ಷವನ್ನು ಉಂಟುಮಾಡುವ ಸಾಧ್ಯತೆ ಇತ್ತು ತಾನೆ? ಅದರಿಂದ `ಕ್ಷತ್ರಂ' ಎಂದರೆ `ಕ್ಷತ್ರಿಯ ಜಾತಿಯವನಾದ ಕರ್ಣ 'ಎಂದರ್ಥ. ಹೀಗಾಗಿ-

`ತದಸ್ಯ ಹತ್ವಾ ವಿರರಾಜ ಕರ್ಣೋ
ಮುಕತ್ತ್ವ ಶರಾನ್ ಮೇಘ ಇವಾಂಬುಧಾರಾಃ'

ಎಂದು ಪ್ರಕ್ಷಿಪ್ತಶ್ಲೋಕವಿಟ್ಟುಕೊಂಡು `ಅರ್ಜುನನು ದೇವತೆಗಳ ಅನುಮತಿ ಪಡೆದು ಪ್ರಯತ್ನಪೂರ್ವಕವಾಗಿ ಬಿಟ್ಟ ಅಮೋಘವಾದ ಬ್ರಹ್ಮಾಸ್ತ್ರವನ್ನು ಕೂಡ ಕರ್ಣನು ಸ್ವಲ್ಪವೂ ಶ್ರಮಪಡದೆ, ಸಾಧಾರಣ ಬಾಣಗಳಿಂದಲೇ `ಧ್ವಂಸ' ಮಾಡುತ್ತಾನೆ' ಎಂದು ವಿಮರ್ಶಕರು ಆಕ್ಷೇಪಿಸಿ ಹೇಳುತ್ತಿರುವುದು ಸಂಗತವಲ್ಲ. ನಿಜವಾದ ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವೇ ಪ್ರತ್ಯಸ್ತ್ರ.

ಅರ್ಜುನನೂ ಕೂಡ ನಿಜವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿರಲಿಲ್ಲ. ಆ ಅಸ್ತ್ರ ಪ್ರಪಂಚವನ್ನೇ ಸುಡುವಂಥದ್ದು. ಪ್ರಕೃತ ಅರ್ಜುನನು ಪ್ರಯೋಗಿಸಿದ ಬ್ರಹ್ಮಾಸ್ತ್ರ ಬಾಣಸಮೂಹಮಯ. ದಿಕ್ಕುದಿಕ್ಕುಗಳಲ್ಲಿ ಎಲ್ಲೆಡೆ ಬಾಣಗಳ ಮಳೆ ಸುರಿಸಿತಷ್ಟೆ. ಮತ್ತು ಬ್ರಹ್ಮಶಿರೋಸ್ತ್ರವನ್ನು ಅದನ್ನು ತಿಳಿಯದವನ ಮೇಲೆ, ಕರ್ಣನ ಮೇಲೆ ಪ್ರಯೋಗಿಸುವುದು ನಿಷಿದ್ಧವೂ ಆಗಿತ್ತು. ಅರ್ಜುನ ಹಿಂದೆ `ಯೇ ನಾಸ್ತ್ರಜ್ಞಾಸ್ತಾನಹಂ ಹನ್ಮಿ ಶಸ್ತ್ರೈಃ' ಅಸ್ತ್ರಜ್ಞರಲ್ಲದವರನ್ನು ಶಸ್ತ್ರಗಳಿಂದಲೇ ಕೊಲ್ಲುವೆ. ಹೊರತು ಅಸ್ತ್ರದಿಂದ ಲೋಕವನ್ನು ಭಸ್ಮಮಾಡಲಾರೆ (67.43) ಎಂದು ಹೇಳಿದ್ದ.

ಸ ಭೀಮಸೇನಂ ಚ ಜನಾರ್ದನಂ ಚ
ಕಿರೀಟಿನಂ ಚಾಪ್ಯಮನುಷ್ಯಕರ್ಮಾ |
ತ್ರಿಭಿಸ್ತ್ರಿಭಿರ್ಭೀಮಬಲೋ ನಿಹತ್ಯ
ನನಾದ ಘೋರಂ ಮಹತಾ ಸ್ವರೇಣ ॥55॥

ಅಮಾನುಷ ಕರ್ಮವನ್ನು ಮಾಡುವ ಭೀಮಬಲನಾದ ಕರ್ಣನು ಭೀಮಸೇನನನ್ನೂ ಕೃಷ್ಣನನ್ನೂ ಅರ್ಜುನನನ್ನೂ ಮೂರು ಮೂರು ಬಾಣಗಳಿಂದ ಚೆನ್ನಾಗಿ ಹೊಡೆದು ಘೋರವಾಗಿ ದೊಡ್ಡ ಧ್ವನಿಯಿಂದ ಗರ್ಜಿಸಿದ.

ಸ ಕರ್ಣಬಾಣಾಭಿಹತಃ ಕಿರೀಟೀ
ಭೀಮಂ ತಥಾ ಪ್ರೇಕ್ಷ್ಯ ಜನಾರ್ದನಂ ಚ |
ಅಮೃಷ್ಯಮಾಣಃ ಪುನರೇವ ಪಾರ್ಥಃ
ಶರಾನ್ ದಶಾಷ್ಟೌ ಚ ಸಮುದ್ಬಬರ್ಹ ॥56॥

ಕರ್ಣನ ಬಾಣಗಳಿಂದ ಹೊಡೆಸಿಕೊಂಡ ಅರ್ಜುನನು, ಭೀಮನೂ ಕೃಷ್ಣನೂ ಹಾಗೇ ಹೊಡೆಸಿಕೊಂಡಿದ್ದನ್ನು ನೋಡಿ, ಸಹನೆಯಾಗದೆ ಪುನಃ ಹದಿನೆಂಟು ಬಾಣಗಳನ್ನು ಎಸೆದ. ಮನಸಿನಲ್ಲಿ ಪ್ರಾದುರ್ಭಾವಗೊಳಿಸಿದ್ದ ಬ್ರಹ್ಮಾಸ್ತ್ರವು ಹೀಗೆ ಕೇವಲ ಬಾಣಮಯವಾಗಿತ್ತು.

ಪುನಶ್ಚ ಕರ್ಣಂ ತ್ರಿಭಿರಷ್ಟಭಿಶ್ಚ
ದ್ವಾಭ್ಯಾಂ ಚತುರ್ಭಿರ್ದಶಭಿಶ್ಚ ವಿದ್ಧ್ವಾ |
ಚತುಃಶತಾನ್ ದ್ವಿರದಾನ್ ಸಾಯುಧೀಯಾನ್
ಹತ್ವಾ ರಥಾನಷ್ಟಶತಂ ಜಘಾನ ॥57॥

ಪುನಃ ಕರ್ಣನನ್ನು ಮೂರು ಎಂಟು ಎರಡು ನಾಲ್ಕು ಹತ್ತು ಬಾಣಗಳಿಂದ ಕ್ರಮವಾಗಿ ಹೊಡೆದು, ನಾನ್ನೂರು ಗಜಾರೋಹಿಗಳನ್ನು ಆಯುಧಸಮೇತವಾಗಿ ಸಂಹರಿಸಿದ, ಎಂಟು ನೂರು ರಥಿಕರನ್ನೂ ಸಂಹರಿಸಿದ, ಅರ್ಜುನ.

ಸಹಸ್ರಮಶ್ವಾಂಶ್ಚ ಪುನಶ್ಚ ಸಾದೀನ್
ಅಷ್ಟೌ ಸಹಸ್ರಾಣಿ ಚ ಪತ್ತಿವೀರಾನ್ |
ಕರ್ಣಂ ಸಸೂತಂ ಸರಥಾಶ್ವಕೇತುಂ
ಅದೃಶ್ಯಮಂಜೋಗತಿಭಿಶ್ಚ ಚಕ್ರೇ ॥58॥

ಒಂದು ಸಾವಿರ ಅಶ್ವಗಳನ್ನೂ ಎಂಟು ಸಾವಿರ ಆಶ್ವಾರೋಹಿಗಳನ್ನೂ ಪದಾತಿಗಳನ್ನೂ ಕರ್ಣನನ್ನೂ ಅವನ ಸಾರಥಿ ರಥ ಅಶ್ವ ಧ್ವಜಗಳನ್ನೂ ಬಾಣಗಳಿಂದ ಮುಚ್ಚಿ ಕಣ್ಣಿಗೆ ಕಾಣದಂತೆ ಮಾಡಿದ.

ತತೋಽಕ್ರೋಶನ್ ಕುರವೋ ವಧ್ಯಮಾನಾ

ಧನಂಜಯೇನಾಧಿರಥಿಂ ಸಮಂತಾತ್ ।
ಮುಂಚಾಭಿವಿದ್ಧ್ಯಾರ್ಜುನಮಾಶು ಕರ್ಣ
ಬಾಣೈಃ ಪುರಾ ಹಂತಿ ಕುರೂನ್ ಸಮಗ್ರಾನ್ ॥59॥
ಆಗ ಕೌರವಸೈನಿಕರು ಒಂದೇ ಸವನೆ ಅರ್ಜುನನ ಬಾಣಗಳಿಂದ ಹೊಡೆಸಿ ಕೊಂಡು ಆಕ್ರಂದನ ಮಾಡಿದರು. ಎಲ್ಲ ಕಡೆಗಳಿಂದಲೂ, ಕರ್ಣನನ್ನು `ಬಾಣಗಳನ್ನು ಎಸೆ, ಕರ್ಣ, ಅರ್ಜುನನ್ನು ಬೇಗನೆ ಬಾಣಗಳಿಂದ ಹೊಡೆ, ಎಲ್ಲ ಕೌರವಯೋಧರನ್ನು ಅರ್ಜುನನು ಕೊಲ್ಲುವುದಕ್ಕೆ ಮೊದಲೇ ಅವನನ್ನು ಬಾಣಗಳಿಂದ ಹೊಡೆ' ಎಂದು ಯೋಧರು ಕೂಗಿಕೊಂಡರು.
ಸ ಚೋದಿತಃ ಸರ್ವಯತ್ನೇನ ಕರ್ಣೋ
ಮುಮೋಚ ಬಾಣಾನ್ ಸುಬಹೂನಭೀಕ್ಷ್ಣಮ್ ।
ತೇ ಪಾಂಡುಪಾಂಚಾಲಗಣಾನ್ನಿಜಘ್ನು
ರ್ಮರ್ಮಚ್ಛಿದಃ ಶೋಣಿತಮಾಂಸದಿಗ್ಧಾಃ ॥60॥
ಯೋಧರು ಹೀಗೆ ಹೇಳಿದಾಗ ಕರ್ಣನು ಸರ್ವಪ್ರಯತ್ನದಿಂದ ಒಂದೇ ಸವನೆ ಬಹು ಬಾಣಗಳನ್ನು ಎಸೆದ. ಆ ಬಾಣಗಳು ಪಾಂಡವಪಾಂಚಾಲಸೈನ್ಯಗಳನ್ನು ಭೇದಿಸಿದುವು. ಮರ್ಮಗಳನ್ನು ಭೇದಿಸಿದುವು. ರಕ್ತಮಾಂಸಗಳಲ್ಲಿ ಅದ್ದಿ ಹೋದುವು.
ತಾವುತ್ತಮೌ ಸರ್ವಧನುರ್ಧರಾಣಾಂ
ಮಹಾಬಲೌ ಸರ್ವಸಪತ್ನಸಾಹೌ ।
ನಿಜಘ್ನತುಶ್ಚಾಹಿತಸೈನ್ಯಮುಗ್ರಾ-
ವನ್ಯೋನ್ಯಮಪ್ಯಸ್ತ್ರವಿದೌ ಮಹಾಸ್ತ್ರೈಃ ॥61॥
ಕರ್ಣಾರ್ಜುನರು ಎಲ್ಲ ಧನುರ್ಧಾರಿಗಳಲ್ಲಿ ಉತ್ತಮರು ಮಹಾಬಲಿಗಳು ಎಲ್ಲ ಶತ್ರುಗಳನ್ನು ಮಣಿಸುವವರು ಉಗ್ರರು ಅಸ್ತ್ರಜ್ಞರು, ಮಹಾಅಸ್ತ್ರಗಳಿಂದ ಶತ್ರುಸೈನ್ಯವನ್ನು ಹೊಡೆದರು. ತಾವೂ ಅನ್ಯೋನ್ಯವಾಗಿ ಹೊಡೆದುಕೊಂಡರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಕರ್ಣಾರ್ಜುನಯುದ್ಧೇ ಪಂಚಾಶೀತಿತಮೋಽಧ್ಯಾಯಃ ॥85॥
ಎಂಬತ್ತಾರನೆಯ ಅಧ್ಯಾಯಃ
ಪ್ರೇಕ್ಷಕನಾಗಿ ರಣರಂಗಕ್ಕೆ ಯುಧಿಷ್ಠಿರನ ಆಗಮನ.
ಅರ್ಜುನ ಕುರುಸೈನ್ಯವನ್ನು ಹೊಡೆದೋಡಿಸುತ್ತಾನೆ.
ಸಂಜಯಃ
ಅಥೋಪಯಾತಸ್ತ್ವರಿತೋ ದಿದೃಕ್ಷು-
ರ್ಮಂತ್ರೌಷಧಾಭ್ಯಾಂ ವಿರುಜೋ ವಿಶಲ್ಯಃ ।
ಕೃತಃ ಸುಹೃದ್ಭಿರ್ಭಿಷಜಾಂ ವರಿಷ್ಠೈ-
ರ್ಯುಧಿಷ್ಠಿರಸ್ತತ್ರ ಸುವರ್ಣವರ್ಮಾ ॥1॥
ಸಂಜಯ ನುಡಿದ ಯುಧಿಷ್ಠಿರನು ಪ್ರೀತಿಪಾತ್ರರಾದ ಶ್ರೇಷ್ಠವೈದ್ಯರಿಂದ ಮೈಗೆ ನಾಟಿದ್ದ ಶಸ್ತ್ರವನ್ನು ತೆಗೆಸಿಕೊಂಡು, ಮಂತ್ರ ಮತ್ತು ಔಷಧಗಳಿಂದ ನೋವನ್ನು ನಿವಾರಿಸಿಕೊಂಡು, ಬಂಗಾರದ ಕವಚವನ್ನು ಧರಿಸಿ ಪ್ರೇಕ್ಷಕನಾಗಿ ರಣರಂಗಕ್ಕೆ ಬೇಗನೆ ಬಂದ.
ತತೋಪಯಾತಂ ಯುಧಿ ಧರ್ಮರಾಜಂ
ದೃಷ್ಟ್ವಾ ಮುದಾ ಸರ್ವಭೂತಾನ್ಯನಂದನ್ ।
ರಾಹೋರ್ವಿಮುಕ್ತಂ ವಿಮಲಂ ಸಮಗ್ರಂ
ಚಂದ್ರಂ ಯಥೈವಾಭ್ಯುದಿತಂ ತಥೈವ ॥2॥
ರಣರಂಗದಲ್ಲಿ ಬಂದು ಉಪಸ್ಥಿತನಾದ ಧರ್ಮರಾಜನನ್ನು ಕಂಡು ಯೋಧರೂ ರಾಹುವಿನಿಂದ ಮುಕ್ತನಾದ ನಿರ್ಮಲನಾದ ಪೂರ್ಣಚಂದ್ರನು ಉದಿಸಿದಾಗ ಜನರು ನೋಡಿ ಆನಂದಿಸುವಂತೆ ಆನಂದಪಟ್ಟರು.
ದೃಷ್ಟ್ವಾಜಿಮುಖ್ಯಾವಥ ಯುಧ್ಯಮಾನೌ
ದಿದೃಕ್ಷವಃ ಶೂರವರಾವರಿನೌ ।
ಕರ್ಣಂ ಚ ಪಾರ್ಥಂ ಚ ನಿಯಮ್ಯ ವಾಹಾನ್
ಖಸ್ಥಾ ಮಹೀಸ್ಥಾಶ್ಚ ಜನಾ ವತಸ್ಥುಃ ॥3॥
ರಣದಲ್ಲಿ ಮುಖ್ಯರಾದ ಶತ್ರುನಾಶಕರಾದ ಶ್ರೇಷ್ಠಶೂರರಾದ ಕರ್ಣ ಮತ್ತು ಅರ್ಜುನರು ನಿಂತುದನ್ನು ನೋಡಿ, ಅವರು ಹೋರಾಡುವುದನ್ನು ನೋಡಲು ಬಯಸಿದ ಸ್ವರ್ಗವಾಸಿಗಳು, ಭೂಲೋಕವಾಸಿಗಳು ತಮ್ಮ ವಾಹನಗಳನ್ನು ನಿಲ್ಲಿಸಿ ತಾವೂ ನಿಂತರು.
ಸ ಕಾರ್ಮುಕಜ್ಯಾತಳಸನ್ನಿಪಾತಃ
ಸುಮುಕ್ತಬಾಣಸ್ತುಮುಲೋ ಬಭೂವ ।
ಘ್ನತೋಸ್ತಥಾನ್ಯೋನ್ಯಮಿಷುಪ್ರವೈಕೈ
ರ್ಧನಂಜಯಸ್ಯಾಧಿರಥೇಶ್ಚ ರಾಜನ್ ॥4॥
ರಾಜನೆ, ಅರ್ಜುನನಿಗೂ ಕರ್ಣನಿಗೂ ಬಿಲ್ಲು ಹೆದೆ ಹಸ್ತ ತಲಗಳನ್ನು ಸೇರಿಸಿ ಬಾಣಪ್ರಯೋಗ ಮಾಡುವ ಈ ಯುದ್ಧವು ಇದು, ಉತ್ತಮಬಾಣಗಳಿಂದ ಅನ್ಯೋನ್ಯ ವಧ ಮಾಡುವ ಯುದ್ಧವಾದ್ದರಿಂದ ಬಹಳ ದೊಡ್ಡ ಯುದ್ಧವಾಯಿತು.
ಪ್ರಾಚ್ಛಾದಯಾಮಾಸ ತತಃ ಪೃಷತ್ಕೈಃ
ಸುಘೋಷಮಾಸ್ಫೋಟ್ಯ ಚ ಗಾಂಡಿವಜ್ಯಾಮ್ ।

ತಸ್ಮಿನ್ ಕ್ಷಣೇ ಸೂತಪುತ್ರಸ್ತು ಪಾರ್ಥಂ
ಸಮಾಚಿನೋತ್ ಕ್ಷುದ್ರಕಾಣಾಂ ಶತೇನ ॥5॥
ಅರ್ಜುನನು ಗಾಂಡಿವದ ಹೆದೆಯನ್ನು ದೊಡ್ಡಶಬ್ದದೊಂದಿಗೆ ಠೇಂಕರಿಸಿ ಬಾಣಗಳಿಂದ ಕರ್ಣನನ್ನು ಆಚ್ಛಾದಿಸಿದ. ಅದೇ ಕ್ಷಣದಲ್ಲಿ ಕರ್ಣನು ಅರ್ಜುನನನ್ನು ನೂರು ಕ್ಷುದ್ರಕಬಾಣಗಳಿಂದ ಪ್ರಹರಿಸಿದ.
ನಿರ್ಮುಕ್ತಸರ್ಪಪ್ರತಿಮೈಶ್ಚ ತೀಕ್ಷ್ಣೈ ಃಣ ೃಃ
ತೈಲಪ್ರಧೌತೈಃ ಖಗಪತ್ರವಾಜೈಃ |
ಷಷ್ಟ್ಯಾ ನಾರಾಚೈರ್ವಾಸುದೇವಂ ಬಿಭೇದ
ತದಂತರೇ ಸ ತ್ವರನ್ ಸೋಮಕಾಂಶ್ಚ ॥6॥
ಪೊರೆಬಿಟ್ಟ ಹಾವಿನಂತಿರುವ, ತೀಕ್ಷ್ಣವಾದ, ತೈಲದಿಂದ ಹದಮಾಡಿದ ಹದ್ದಿನ ರೆಕ್ಕೆಗಳು ಪುಕ್ಕವಾಗಿರುವ ಅರವತ್ತು ನಾರಾಚಬಾಣಗಳಿಂದ ಕರ್ಣನು ಕೃಷ್ಣನನ್ನೂ ಹೊಡೆದ. ಅದೇ ಸಮಯದಲ್ಲಿ ಅವನು ವೇಗದಿಂದ ಸೋಮಕರನ್ನೂ ಹೊಡೆದ.
ಪ್ರಾಚ್ಛಾದಯಂಸ್ತೇ ನಿಶಿತೈಃ ಪೃಷತ್ಕೈ
ರ್ಜೀಮೂತಸಂಘಾ ನಭಸೀವ ಸೂರ್ಯಮ್ |
ಆಗಚ್ಛತಸ್ತಾನ್ ವಿಶಿಖೈರನೇಕೈ-
ರ್ವ್ಯಷ್ಟಂಭಯತ್ ಸೂತಪುತ್ರಃ ಕೃತಾಸ್ತ್ರಃ ॥7॥
ಸೋಮಕರು ಕರ್ಣನನ್ನು, ಮೋಡಸಮೂಹಗಳು ಆಕಾಶದಲ್ಲಿ ಸೂರ್ಯ ನನ್ನು ಆಚ್ಛಾದಿಸುವಂತೆ, ಬಾಣಗಳಿಂದ ಆಚ್ಛಾದಿಸಿದರು. ಅಸ್ತ್ರಜ್ಞನಾದ ಕರ್ಣನು ತನ್ನ ಮೇಲೆ ಬೀಳುವ ಬಾಣಗಳನ್ನು ಅನೇಕ ಬಾಣಗಳಿಂದ ತಡೆದ.
ತೈರಸ್ತಮಸ್ತ್ರಂ ವಿನಿಹತ್ಯ ಸರ್ವಂ
ಜಘಾನ ತೇಷಾಂ ರಥವಾಜಿನಾಗಾನ್ |
ತಥಾ ತು ಸೈನ್ಯಪ್ರವರಾಂಶ್ಚ ರಾಜ-
ನ್ನಭ್ಯರ್ದಯನ್ ಮಾರ್ಗಣೈಃ ಸೂತಪುತ್ರಃ ॥8॥
ಅವರು ಎಸೆದ ಅಸ್ತ್ರವನ್ನು ಎಲ್ಲವನ್ನೂ ಕರ್ಣನು ನಾಶಗೊಳಿಸಿ ಅವರ ರಥ ಅಶ್ವ ಗಜಗಳನ್ನೂ ಸಂಹರಿಸಿದ. ರಾಜನೆ, ಅವನು ಸೈನ್ಯದಲ್ಲಿ ಮುಖ್ಯರಾದವರನ್ನೂ ಬಾಣಗಳಿಂದ ಪೀಡಿಸಿದ.
ತೇ ಭಿನ್ನದೇಹಾ ವ್ಯಸವೋ ನಿಪೇತುಃ
ಕರ್ಣೇಷುಭಿರ್ಭೂಮಿತಳೇ ಸ್ತನಂತಃ |
ಕ್ರುದ್ಧೇನ ಸಿಂಹೇನ ಯಥಾ ಶ್ವಯೂಥ್ಯಾ
ಮಹಾಬಲಾ ಭೀಮಬಲೇನ ತದ್ವತ್ ॥9॥
ಅವರು ಕರ್ಣನ ಬಾಣಗಳಿಂದ ಶರೀರದಲ್ಲಿ ಗಾಯಹೊಂದಿ ಕೂಗಿ ಭೂತಲದಲ್ಲಿ ಮಹಾಬಲವುಳ್ಳ ಶ್ವಾನಸಮೂಹಗಳು ಭೀಮಬಲ ಉಳ್ಳ ಸಿಂಹದಿಂದ ಸತ್ತು ಬೀಳುವಂತೆ ಸತ್ತುಬಿದ್ದರು,
ಪುನಶ್ಚ ಪಾಂಚಾಲವರಾಸ್ತಥಾನ್ಯೇ
ತದಂತರೇ ಕರ್ಣಧನಂಜಯಾಭ್ಯಾಮ್ |
ಪ್ರಸ್ಕಂದಿನೋ ಬಲಿನಃ ಸಾಧುಮುಕ್ತೈಃ
ಕರ್ಣೇನ ಬಾಣೈರ್ನಿಹತಾಃ ಪ್ರಸಹ್ಯ ॥10॥
ಕರ್ಣವಧಕ್ಕಾಗಿ, ಮತ್ತು ಅರ್ಜುನರಕ್ಷಣೆಗಾಗಿ ಬಂದ ಬಲಿಷ್ಠರಾದ ಶತ್ರುತಾಪಕರಾದ ಪಾಂಚಾಲಮುಖ್ಯರು ಮತ್ತು ಬೇರೆ ವೀರರೂ ಕರ್ಣನು ಚೆನ್ನಾಗಿ ಪ್ರಯೋಗಿಸಿದ ಬಾಣಗಳಿಂದ ಬಲವಾಗಿ ಹೊಡೆಯಲ್ಪಟ್ಟರು.
ಜಯಂ ತು ಮತ್ವಾ ವಿಪುಲಂ ತ್ವದೀಯಾ-
ಸ್ತಳಾನ್ನಿಜಘ್ನುಃ ಸಿಂಹನಾದಾಂಶ್ಚ ನೇದುಃ ॥11॥
ಆಗ ಜಯ ಪೂರ್ತಿಯಾಗಿ ತಮ್ಮದೇ ಎಂದು ನಿಶ್ಚಯಮಾಡಿಕೊಂಡು ನಿನ್ನವರು ಕೈಚಪ್ಪಾಳೆ ಹೊಡೆದರು. ಸಿಂಹನಾದಗಳನ್ನು ಮಾಡಿದರು.
ತತೋ ಧನುರ್ಜ್ಯಾಮವಧಮ್ಯ ಶೀಘ್ರಂ
ಶರಾನಸ್ತಾನಾಧಿರಥೇರ್ವಿಧಮ್ಯ |
ಸುಸಂರಬ್ಧಃ ಕರ್ಣಶರಕ್ಷತಾಂಗೋ
ರಣೇ ಪಾರ್ಥಃ ಕೌರವಾನ್ ಪ್ರತ್ಯಗೃಹ್ಣಾತ್ ॥12॥
ಆಗ ಅರ್ಜುನನು ಕರ್ಣನ ಬಾಣಗಳಿಂದ ಮೈಗಾಯ ಮಾಡಿಕೊಂಡಿದ್ದರೂ ಬಿಲ್ಲಿನ ಹಗ್ಗವನ್ನು ತೀಡಿ ಬೇಗನೆ, ಕರ್ಣನೆಸೆದ ಬಾಣಗಳನ್ನು ನಾಶಪಡಿಸಿ, ಬಲು ಕೋಪದಿಂದ ರಣದಲ್ಲಿ ಕೌರವರನ್ನು ತನ್ನ ನಿಯಂತ್ರಣಕ್ಕೆ ತಂದುಕೊಂಡ.
ಜ್ಯಾಂ ಚಾನುಮೃಜ್ಯಾಭ್ಯಹನತ್ ತಳತ್ರೇ
ಬಾಣಾಂಧಕಾರಂ ತ್ವಕರೋತ್ ಕ್ಷಣೇನ |
ಶಲ್ಯಂ ಚ ಕರ್ಣಂ ಚ ಕುರೂಂಶ್ಚ ಸರ್ವಾನ್
ಬಾಣೈರವಿಧ್ಯದ್ಯುಗಪತ್ ಕಿರೀಟೀ ॥13॥
ಅರ್ಜುನನು ಬಿಲ್ಲಿನ ಹೆದೆಯನ್ನು ತೀಡಿ ಕೈಚೀಲದ ಮೇಲೆ ಹೊಡೆದು ಕ್ಷಣದಲ್ಲಿ ಬಾಣಗಳಿಂದ ಅಂಧಕಾರ ಉಂಟುಮಾಡಿದ. ಶಲ್ಯ, ಕರ್ಣರನ್ನು ಮತ್ತು ಎಲ್ಲ ಕೌರವ ಯೋಧರನ್ನೂ ಒಮ್ಮೆಲೇ ಬಾಣಗಳಿಂದ ಹೊಡೆದ.

ನ ಪಕ್ಷಿಣಃ ಸಂಪತಂತ್ಯಂತರಿಕ್ಷೇ
ತದಾ ಮಹಾಸ್ತ್ರೇಣ ಕೃತೇಂಧಕಾರೇ ॥14॥
ಮಹಾ ಅಸ್ತ್ರದಿಂದ ಅಂಧಕಾರವನ್ನು ಅರ್ಜುನನು ಸೃಷ್ಟಿ ಮಾಡಿದ್ದರಿಂದ ಆಕಾಶದಲ್ಲಿ ಪಕ್ಷಿಗಳು ಆಗ ಹಾರಾಡುತ್ತಿರಲಿಲ್ಲ.
ಶಲ್ಯಂ ಚ ಪಾರ್ಥೋ ದಶಭಿಃ ಪೃಷತ್ಕೈಃ
ಭೃಶಂ ತನುತ್ರೇ ಪ್ರಹಸನ್ನವಿಧ್ಯತ್ |
ತತಃ ಕರ್ಣಂ ದ್ವಾದಶಭಿಃ ಸುಮುಕ್ತೈ-
ರ್ವಿದ್ಧ್ವಾ ಪುನಃ ಸಪ್ತಭಿರಭ್ಯವಿಧ್ಯತ್ ॥15॥
ಶಲ್ಯನನ್ನು ಕೂಡ ಅರ್ಜುನನು ನಗುತ್ತ ಹತ್ತು ಬಾಣಗಳಿಂದ ಕವಚದಲ್ಲಿ ಚೆನ್ನಾಗಿ ಪ್ರಹಾರ ಮಾಡಿದ. ಚೆನ್ನಾಗಿ ಬಾಣವೆಸೆದು ಕರ್ಣನನ್ನು ಹನ್ನೆರಡು ಬಾಣಗಳಿಂದ ಹೊಡೆದು ತಿರುಗಿ ಏಳು ಬಾಣಗಳಿಂದಲೂ ಹೊಡೆದ.
ಸ ಪಾರ್ಥಬಾಣಾಸನವೇಗನುನ್ನೈ-
ರ್ದೃಢಾಹತಃ ಪತ್ರಿಭಿರುಗ್ರವೇಗೈಃ |
ವಿಭಿನ್ನಗಾತ್ರಃ ಕ್ಷತಜೋಕ್ಷಿತಾಂಗಃ
ಕರ್ಣೋ ಬಭೌ ರುದ್ರ ಇವಾತತೇಷುಃ ॥16॥
ಅರ್ಜುನನ ಧನುಸ್ಸಿನ ವೇಗದಿಂದ ಪ್ರೇರಿತವಾಗಿ ಉಗ್ರವೇಗವನ್ನು ಹೊಂದಿದ ಬಾಣಗಳಿಂದ ದೃಢವಾಗಿ ಆಘಾತ ಹೊಂದಿ ಮೈಗಾಯಗೊಂಡು ನೆತ್ತರಿನಿಂದ ಮೈತೊಯ್ದಾಗ, ಕರ್ಣನು ಬಾಣಗಳನ್ನು ಧರಿಸಿ ರುದ್ರನಂತೇ ಕಂಡುಬಂದ.
ಪ್ರಕ್ರೀಡಮಾನೋಽಥ ಶ್ಮಶಾನಮಧ್ಯೇ
ರೌದ್ರೇ ಮುಹೂರ್ತೇ ರುಧಿರಾರ್ದ್ರಗಾತ್ರಃ ॥17॥
ಏಕೆಂದರೆ ರೌದ್ರಮುಹೂರ್ತದಲ್ಲಿ ರುದ್ರನೂ ಸ್ಮಶಾನದಲ್ಲಿ ನೆತ್ತರಿನಿಂದ ಮೈತೊಯ್ದುಕೊಂಡು ಕ್ರೀಡೆಯಾಡುತ್ತಾನೆ.
ತತಸ್ತ್ರಿಭಿಶ್ಚ ತ್ರಿದಶಾಧಿಪೋಪಮಂ
ಶರೈರ್ಬಿಭೇದಾಧಿರಥಿರ್ಧನಂಜಯಮ್ |
ಶರಾಂಸ್ತು ಪಂಚ ಜ್ವಲಿತಾನಿವೋರಗಾನ್
ಪ್ರವೀರಯಾಮಾಸ ಜಿಘಾಂಸುರಚ್ಯುತೇ ॥18॥
ಬಳಿಕ ಇಂದ್ರನಂತಿರುವ ಅರ್ಜುನನನ್ನು ಕರ್ಣನು ಮೂರು ಬಾಣಗಳಿಂದ ಹೊಡೆದ. ಹಾವುಗಳಂತೆ ಜ್ವಲಿಸುವ ಐದು ಬಾಣಗಳಿಂದ ಕೃಷ್ಣನನ್ನೂ ಕೊಲ್ಲಲು ಬಯಸಿ ಅವನಿಗೆ ಎಸೆದ.
ತೇ ವರ್ಮ ಭಿತ್ತ್ವಾ ಪುರುಷೋತ್ತಮಸ್ಯ
ಸುವರ್ಣಚಿತ್ರಂ ನ್ಯಪತನ್ ಸುಮುಕ್ತಾಃ |
ವೇಗೇನ ಗಾಮಾವಿವಿಶುಃ ಸುವೇಗಾಃ
ತ್ಯಕ್ತ್ವಾ(ಸ್ನಾತ್ವಾ) ಚ ಕರ್ಣಾಭಿಮುಖಾಃ ಪ್ರತೀಯುಃ ॥19॥
ಚೆನ್ನಾಗಿ ಎಸೆದ ಆ ಬಾಣಗಳು ಪುರುಷೋತ್ತಮನ ಬಂಗಾರದ ಸುಂದರ ಕವಚವನ್ನು ಹೊಡೆದು ಕೆಳಗೆ ಬಿದ್ದುವು. ವೇಗವುಳ್ಳ ಆ ಬಾಣಗಳು ವೇಗದಿಂದ ಭೂಮಿಯನ್ನು ಪ್ರವೇಶಿಸಿದುವು. ಆದರೆ ತಕ್ಷಕಪುತ್ರನಾದ ಅಶ್ವಸೇನನಿಗೆ ಸಹಾಯಕ್ಕೆಂದು ಬಂದಿದ್ದ ಐದು ಸರ್ಪಗಳಿಂದ ಆ ಬಾಣಗಳು ಆವಿಷ್ಟವಾದ್ದರಿಂದ ಅವು ಭೂಮಿಯನ್ನು ಬಿಟ್ಟು ತಿರುಗಿ ಕರ್ಣನ ಕಡೆಗೇ ಹಾರಿಬಂದುವು.
ತಾನ್ ಪಂಚಭಲ್ಲೈಸ್ತ್ವರಿತೈಃ ಸುಮುಕ್ತೈ-
ಸ್ತ್ರಿಧಾ ತ್ರಿಧೈಕೈಕಮಥೋಚ್ಚಕರ್ತ |
ಧನಂಜಯಸ್ತೇ ನ್ಯಪತನ್ ಪೃಥಿವ್ಯಾಂ
ಮಹಾಹಯಸ್ತಕ್ಷಕಪುತ್ರಪಕ್ಷಾಃ ॥20॥
ಅರ್ಜುನನು ಚೆನ್ನಾಗಿ ಪ್ರಯೋಗಿಸಿದ ವೇಗದ ಐದು ಭಲ್ಲೆಗಳಿಂದ ಆ ಐದೂ ಬಾಣಗಳನ್ನು ಒಂದೊಂದನ್ನು ಮೂರು ಮೂರಾಗಿ ಕತ್ತರಿಸಿದ. ಅವು, ತಕ್ಷಕಪುತ್ರನಾದ ಅಶ್ವಸೇನನ ಪಕ್ಷದವು, ಮಹಾಸರ್ಪಗಳು. ನೆಲದಲ್ಲಿ ಬಿದ್ದುವು. ಕರ್ಣನೆಸೆದ ಆ ಬಾಣಗಳು ಕೃಷ್ಣನನ್ನು ಹೊಡೆದು, ತಿರುಗಿ ಕರ್ಣನ ಬಳಿಗೇ ಹೋಗುತ್ತಿದ್ದರೂ, ಅವು ಕೃಷ್ಣನಿಗೆ ಹೊಡೆದವುಗಳೆಂದು ಅಸಹನೆಯಿಂದ, ಅರ್ಜುನ ಅವುಗಳನ್ನು ಬಾಣಗಳಿಂದ ಮೂರು ಮೂರು ಚೂರುಗಳಾಗಿ ಕತ್ತರಿಸಿದ.
ತತಃ ಪ್ರಜಜ್ವಾಲ ಕಿರೀಟಮಾಲೀ
ಕ್ರೋಧೇನ ಕಕ್ಷಂ ಪ್ರದಹನ್ನಿವಾಗ್ನಿಃ |
ಸ ಕರ್ಣಮಾಕರ್ಣವಿಕೃಷ್ಟಸೃಷ್ಟೈಃ
ಶರೈಃ ಶರೀರಾಂತಕರೈರ್ಜ್ವಲದ್ಭಿಃ |
ಮರ್ಮಸ್ವವಿಧ್ಯತ್ಸ ಚಚಾಲ ದುಃಖಾದ್
ಧೈರ್ಯಾತ್ತು ತಸ್ಥಾವತಿಮಾತ್ರಧೈರ್ಯಃ ॥21॥
ಕರ್ಣ ಕೃಷ್ಣನಿಗೆ ಹೊಡೆದಿದ್ದಕ್ಕೆ ಅರ್ಜುನನು ಕೋಪದಿಂದ ಉರಿದ, ಕಾಡನ್ನು ಸುಡುವ ಬೆಂಕಿಯಂತೆ. ಕಿವಿವರೆಗೆ ಹೆದೆಯನ್ನು ಸೆಳೆದು ಶರೀರನಾಶಕವಾದ ಉರಿವ ಬಾಣಗಳನ್ನು ಎಸೆದು ಕರ್ಣನನ್ನು ಮರ್ಮಗಳಲ್ಲಿ ಹೊಡೆದ. ಕರ್ಣನು ವೇದನೆಯಿಂದ ವಿಚಲಿತನಾದ. ಆದರೂ ಅತ್ಯಂತ ಧೈರ್ಯಶಾಲಿಯಾದ್ದರಿಂದ ಅವನು ಧೈರ್ಯದಿಂದ ಸ್ಥಿರವಾಗಿ ನಿಂತುಕೊಂಡ.
ತತಃ ಶರೌಘೈಃ ಪ್ರದಿಶೋ ದಿಶಶ್ಚ
ರವಿಪ್ರಭಾ ಕರ್ಣರಥಶ್ಚ ರಾಜನ್ |

ಅದೃಶ್ಯ ಆಸೀತ್ ಕುಪಿತೇ ಧನಂಜಯೇ
ತುಷಾರನೀಹಾರವೃತಂ ಯಥಾ ನಭಃ ॥22॥
ಅರ್ಜುನ ಕುಪಿತನಾದಾಗ, ರಾಜನೆ, ಬಾಣಪ್ರವಾಹಗಳಿಂದ ದಿಕ್ಕುವಿದಿಕ್ಕುಗಳು ಸೂರ್ಯಕಿರಣಗಳು ಮತ್ತು ಕರ್ಣನ ರಥ ಎಲ್ಲವೂ ಹಿಮ ಮಂಜುಗಳಿಂದ ತುಂಬಿದ ಆಕಾಶದಂತೆ ಅದೃಶ್ಯವಾದಂತಾಯಿತು.
ಸ ಚಕ್ರರಕ್ಷಾನಥ ಪಾದರಕ್ಷಾನ್
ಪುರಃಸರಾನ್ ಪೃಷ್ಠಗೋಪಾಂಶ್ಚ ಸರ್ವಾನ್ ।
ದುರ್ಯೋಧನೇನಾನುಮತಾನರಿಘ್ನಾನ್
ಸಮುಚ್ಛ್ರಿತಾನ್ ಸುರಥಾನ್ ಸಾರಭೂತಾನ್ ॥23॥
ದ್ವಿಸಾಹಸ್ರಾನ್ ಸಮರೇ ಸವ್ಯಸಾಚೀ
ಕುರುಪ್ರವೀರಾನೃಷಭಃ ಕುರೂಣಾಮ್ ।
ಕ್ಷಣೇನ ಸರ್ವಾನ್ ಸರಥಾಶ್ವಸೂತಾನ್
ನಿನಾಯ ರಾಜನ್ ಕ್ಷಯಮೇಕವೀರಃ ॥24॥
ಕುರುಶ್ರೇಷ್ಠ ಏಕೈಕ ವೀರನಾದ ಅರ್ಜುನನು ಕರ್ಣರಥದ ಚಕ್ರರಕ್ಷಕ ಪಾದರಕ್ಷಕ ಪೃಷ್ಠರಕ್ಷಕ ಮುಂತಾದವರೆಲ್ಲರನ್ನೂ ಮತ್ತು ದುರ್ಯೋಧನನು ಕಳಿಸಿದ ಎರಡು ಸಾವಿರ ಶ್ರೇಷ್ಠ ರಥಿಕರನ್ನೂ , ರಣದಲ್ಲಿ ಶತ್ರುಹಂತಕರಾದ ಆ ಕೌರವವೀರರು ಒಟ್ಟಾಗಿ ಬಂದಿದ್ದರೂ, ಕ್ಷಣದಲ್ಲಿ ಎಲ್ಲರನ್ನೂ, ರಥಅಶ್ವಸಾರಥಿ ಸಹಿತವಾಗಿ ನಾಶಮಾಡಿದ.
ಅಥೋ ಪಲಾಯಂತ ವಿಹಾಯ ಕರ್ಣಂ
ತವಾತ್ಮಜಾಃ ಕುರವಶ್ಚಾವಶಿಷ್ಟಾಃ ।
ಹತಾನವಾಕೀರ್ಯ ಶರಕ್ಷತಾಂಶ್ಚ
ಲಾಲಪ್ಯಮಾನಾಂಸ್ತನಯಾನ್ ಪಿತೄಂಶ್ಚ ॥25॥
ಉಳಿದ ನಿನ್ನ ಮಕ್ಕಳೂ ಕುರುಯೋಧರೂ ಕರ್ಣನನ್ನು ಬಿಟ್ಟು ಪಲಾಯನಗೈದರು. ಹತರಾದ ಅಥವಾ ಬಾಣಗಳಿಂದ ಗಾಯಗೊಂಡು ಕೂಗಿಕೊಳ್ಳುತ್ತಿರುವ ಪುತ್ರರನ್ನೂ ಪಿತೃಗಳನ್ನೂ ಹಾಗೇ ಬಿಟ್ಟು ಓಡಿಹೋದರು.
ಸ ಸರ್ವತಃ ಪ್ರೇಕ್ಷ್ಯ ದಿಶೋ ವಿಶೂನ್ಯಾ
ಭಯಾವದೀರ್ಣೈಃ ಕುರುಭಿರ್ವಿಹೀನಾಃ ।
ನ ವಿವ್ಯಥೇ ಭಾರತ ತತ್ರ ಕರ್ಣಃ
ಪ್ರತೀಪಮೇವಾರ್ಜುನಮಭ್ಯಧಾವತ್ ॥26॥
ಕರ್ಣನು, ಎಲ್ಲ ದಿಕ್ಕುಗಳು ಭಯದಿಂದ ಬಲಗುಂದಿದ ಕುರುಯೋಧರಿಂದ ಪರಿತ್ಯಕ್ತವಾಗಿ ಶೂನ್ಯವಾಗಿರುವುದನ್ನು ನೋಡಿಯೂ, ವ್ಯಥೆಗೊಳ್ಳಲಿಲ್ಲ. ರಾಜನೆ, ಅವನು ಅರ್ಜುನನಿಗೆ ಇದಿರಾಗಿಯೇ ನುಗ್ಗಿದ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಾರ್ಜುನಯುದ್ಧೇ ಷಡಶೀತಿತಮೋಽಧ್ಯಾಯಃ ॥86॥

ಮಹಾಭಾರತತಾತ್ಪರ್ಯನಿರ್ಣಯ
ಕ್ರಮೇಣ ವೃದ್ಧೋರುಬಲೇನ ತತ್ರ
ಸುರೇಂದ್ರಪುತ್ರೇಣ ವಿರೋಚನಾತ್ಮಜಃ ।
ನಿರಾಕೃತೋ ನಾಗಮಯಂ ಶರೋತ್ತಮಂ
ಬ್ರಹ್ಮಾಸ್ತ್ರಯುಕ್ತಂ ವಿಸಸರ್ಜ ವಾಸವೌ ॥ 182॥
ಅರ್ಜುನ ಕ್ರಮವಾಗಿ ಹೆಚ್ಚು ಹೆಚ್ಚು ಶಕ್ತಿ ತುಂಬಿಕೊಂಡವನಾಗಿ ಕರ್ಣನನ್ನು ಪರಾಭವಗೊಳಿಸಿದಾಗ ಕರ್ಣ ಬ್ರಹ್ಮಾಸ್ತ್ರಯುಕ್ತವಾದ ನಾಗಮಯವಾದ ಬಾಣವನ್ನು ಅರ್ಜುನನ ಮೇಲೆಸೆದ.
ತಂ ವಾಸುದೇವೋ ರಥಮಾನಮಯ್ಯ
ಮೋಘಂ ಚಕಾರಾರ್ಜುನತಃ ಕಿರೀಟಮ್ ।
ಚೂರ್ಣೀಕೃತಂ ತೇನ ಸುರೇಂದ್ರಸೂನೋ
ರ್ದಿವ್ಯಂ ಯಯೌ ಬಾಣಗತಶ್ಚ ನಾಗಃ ॥ 183 ॥
ಆಗ ಕೃಷ್ಣ ರಥವನ್ನು ನೆಲದಲ್ಲಿ ತಗ್ಗಿಸಿ ಆ ಬಾಣವನ್ನು ಅರ್ಜುನನಲ್ಲಿ ವ್ಯರ್ಥಗೊಳಿಸಿದ. ಅರ್ಜುನನ ದಿವ್ಯ ಕಿರೀಟ ಮಾತ್ರ ಆ ಬಾಣದಿಂದ ಚೂರು ಚೂರಾಯಿತು. ಬಾಣದಲ್ಲಿದ್ದ ಅಶ್ವಸೇನ ನಾಗ ಹೊರಟು ಹೋದ.
ನಮಿತೇ ವಾಸುದೇವೇನ ರಥೇ ಪಂಚಾಂಗುಲಂ ಭುವಿ ।
ಅಪಾಂಗದೇಶಮುದ್ದಿಶ್ಯ ಮುಕ್ತೇ ನಾಗೇ ಕಿರೀಟಿನಃ ॥ 184 ॥
ಭಂಕತ್ವ ಕಿರೀಟಂ ವಿಯತಿ ಗಚ್ಛತಿ ಪ್ರಭುಣೋದಿತಃ ।
ಬಾಣೈಸ್ತಕ್ಷಕಪುತ್ರಂ ತಂ ವಾಸವಿಃ ಪೂರ್ವವೈರಿಣಮ್ ॥ 185 ॥
ಹತ್ವಾ ನಿಪಾತಯಾಮಾಸ ಭೂವೌ ಕರ್ಣಸ್ಯ ಪಶ್ಯತಃ ।
ಬ್ರಹ್ಮಾಸ್ತ್ರಸ್ಯಾತಿವೇಗಿತ್ವಂ ಪ್ರಾಪ್ತಂ ಕರ್ಣೇನ ಭಾರ್ಗವಾತ್ ॥ 186 ॥
ಅರ್ಜುನನ ಕಡೆಗಣ್ಣ ಪ್ರದೇಶಕ್ಕೆ ಎಸೆದಿದ್ದ ನಾಗಾಸ್ತ್ರ, ಕೃಷ್ಣನಿಂದ ರಥ ಐದು ಅಂಗುಲದಷ್ಟು ನೆಲದಲ್ಲಿ ತಗ್ಗಿಸಲ್ಪಟ್ಟಾಗ,

ಅರ್ಜುನನ ದಿವ್ಯವಾದ ಕಿರೀಟವನ್ನು ಪುಡಿ ಮಾಡಿ ಆಕಾಶದಲ್ಲಿ ಹಾರಿಹೋಗುತ್ತಿತ್ತು. ಕೃಷ್ಣನ ಮಾತಿನಂತೆ ಅರ್ಜುನ ತನ್ನ ಹಿಂದಿನ ವೈರಿಯಾದ ಆ ತಕ್ಷಕಪುತ್ರ ಅಶ್ವಸೇನನನ್ನು ಕರ್ಣ ನೋಡುತ್ತಿದ್ದಂತೆಯೇ ಬಾಣಗಳಿಂದ ಕೊಂದು ನೆಲದಲ್ಲಿ ಕೆಡವಿದ.
ಬ್ರಹ್ಮಾಸ್ತ್ರಪ್ರಯೋಗದಲ್ಲಿ ಅತಿವೇಗ ವನ್ನು ಕರ್ಣ ಪರಶುರಾಮನಿಂದ ಪಡೆದಿದ್ದ.
ಪುನಶ್ಚ ಪಾರ್ಥೇನ ಮಹಾಸ್ತ್ರಯುದ್ಧಂ
ಪ್ರಕುರ್ವತಃ ಸೂರ್ಯಸುತಸ್ಯ ಚಕ್ರಮ್ |
ರಥಸ್ಯ ಭೂಮಿರ್ಗ್ರಸತಿ ಸ್ಮ ಶಾಪಾ
ದಸಾತ್ರಣಿ ದಿವ್ಯಾನಿ ಚ ವಿಸ್ಮೃತಿಂ ಯಯುಃ ॥ 187 ॥
ಪುನಃ ಕರ್ಣ ಅರ್ಜುನನೊಡನೆ ಮಹಾಅಸ್ತ್ರಗಳಿಂದ ಯುದ್ಧ ಮಾಡುತ್ತಿದ್ದಾಗ ಬ್ರಾಹ್ಮಣಶಾಪದಿಂದ ಅವನ ರಥವನ್ನು ನೆಲ ನುಂಗಿತು. ಹಾಗೇ ಪರಶುರಾಮನ ಶಾಪದಿಂದ ದಿವ್ಯಾಸ್ತ್ರಗಳೂ ಅವನಿಗೆ ಮರೆತು ಹೋದುವು.

ಎಂಬತ್ತೇಳನೆಯ ಅಧ್ಯಾಯ
ಶ್ರೀಕೃಷ್ಣ ರಥವನ್ನು ಒತ್ತಿ ತಗ್ಗಿಸಿದಾಗ, ಸರ್ಪಾಸ್ತ್ರ ಗುರಿತಪ್ಪಿ ಅರ್ಜುನನ ಕಿರೀಟವನ್ನು ಮಾತ್ರ ಹೊಡೆದು ಪುಡಿಮಾಡಿತು. ಆ ಅಶ್ವಸೇನಸರ್ಪನನ್ನು ಅರ್ಜುನ ಸಂಹರಿಸಿದ. (ಈ ವಿಷಯದಲ್ಲಿ ಒಂದು ಕೂಟ ಶ್ಲೋಕವಿದೆ.) ಬಳಿಕ ಕರ್ಣನ ರಥಚಕ್ರವನ್ನು ಭೂಮಿ ನುಂಗಿತು.
ಸಂಜಯಃ
ತತೋಽಪಯಾತಾಃ ಶರಪಾತಮಾತ್ರ-
ಮವಸ್ಥಿತಾಃ ಕುರವೋ ಭಿನ್ನಸೇನಾಃ |
ವಿದ್ಯುತ್ಪ್ರಕಾಶಂ ದದೃಶುಃ ಸಮಂತಾದ್
ಧನಂಜಯಾಸ್ತ್ರಂ ಸಮುದೀರ್ಯಮಾಣಮ್ ॥1॥
ಸಂಜಯನು ನುಡಿದ– ಚದುರಿದ ಸೈನ್ಯಗಳು ಅರ್ಜುನನ ಬಾಣಗಳು ಬೀಳುವ ಪ್ರದೇಶವನ್ನು ಮಾತ್ರ ದಾಟಿ ಆಚೆ ದೂರಹೋಗಿ ನಿಂತವು. ಮಿಂಚಿನಂತೆ ಹೊಳೆಯುವ ಅರ್ಜುನನ ಅಸ್ತ್ರವು ಎಲ್ಲಕಡೆ ಹರಡುವುದನ್ನು ಕಂಡವು.
ತದರ್ಜುನಾಸ್ತ್ರಂ ಗ್ರಸತೇ ಸ್ಮ ವೀರಾನ್
ಕೃತ್ಸ್ನಂ ತದಾಕಾಶಮನಂತಘೋಷಮ್ |
ಕ್ರುದ್ಧೇನ ಪಾರ್ಥೇನ ತದಾಶು ಸೃಷ್ಟಂ
ವಧಾಯ ಕರ್ಣಸ್ಯ ಮಹಾವಿಮರ್ದೇ ॥2॥
ಆ ಅರ್ಜುನನ ಅಸ್ತ್ರವು ಎಲ್ಲ ವೀರರನ್ನು ಮಾತ್ರವಲ್ಲದೆ ಅಪರಿಮಿತ ಶಬ್ದಗಳಿಗೆ ಆಶ್ರಯವಾದ ಇಡೀ ಆಕಾಶವನ್ನೇ ನುಂಗಿತು. ಅದು, ಮಹಾರಣದಲ್ಲಿ ಕರ್ಣನ ವಧೆಗಾಗಿ ಕ್ರುದ್ಧನಾದ ಅರ್ಜುನ ಕ್ಷಣಮಾತ್ರದಲ್ಲಿ ಪ್ರಯೋಗಿಸಿದ ಅಸ್ತ್ರವಾಗಿತ್ತು.
ಕರ್ಣಃ ಸುಘೋರೇಷ್ವಸನಂ ದೃಢಜ್ಯಂ
ವಿಸ್ಫಾರಯಿತ್ವಾ ವ್ಯಸೃಜಚ್ಛರೌಘಾನ್ |
ಉದೀರ್ಯಮಾಣಂ ಸ್ಮ ಕುರೂನ್ ದಹತ್ತತ್
ಸುವರ್ಣಪುಂಖೈರ್ವಿಶಿಖೈರ್ಮಮರ್ದ ॥3॥
ಕರ್ಣನು ದೃಢವಾದ ಹೆದೆಯುಳ್ಳ ಬಲು ಘೋರವಾದ ಬಿಲ್ಲನ್ನು ಸೆಳೆದು ಬಾಣಪ್ರವಾಹಗಳನ್ನು ಹರಿಸಿದ. ಅರ್ಜುನನ ಬಿಲ್ಲಿನಿಂದ ಹೊರಟು ಬಂದು ಕೌರವರನ್ನು ಸುಡುತ್ತಿದ್ದ ಅಸ್ತ್ರವನ್ನು, ಬಂಗಾರದ ಪುಕ್ಕವುಳ್ಳ ಬಾಣಗಳಿಂದ ಕತ್ತರಿಸಿದ.
ರಾಮಾದುಪಾತ್ತೇನ ಮಹಾಮಹಿಮ್ನಾ
ಆಥರ್ವಣೇನಾರಿವಿನಾಶನೇನ |
ತದರ್ಜುನಾಸ್ತ್ರಂ ವ್ಯಧಮದ್ ದಹಂತಂ
ಪಾರ್ಥಂ ಚ ಬಾಣೈರ್ನಿಶಿತೈರ್ನಿಜಘ್ನೇ ॥4॥
ಪರಶುರಾಮನಿಂದ ಪಡೆದ ಮಹಾಮಹಿಮೆಯುಳ್ಳ ಶತ್ರುನಾಶಕವಾದ ಅಥರ್ವಣವೇದೋಕ್ತವಾದ ಅಸ್ತ್ರದಿಂದ ಕರ್ಣನು ಅರ್ಜುನನ ಅಸ್ತ್ರವನ್ನು ನಿಷ್ಕ್ರಿಯಗೊಳಿಸಿದ. ಶತ್ರುಸೈನ್ಯವನ್ನು ದಹಿಸುತ್ತಿದ್ದ ಅರ್ಜುನನನ್ನೂ ಹರಿತವಾದ ಬಾಣಗಳಿಂದ ಹೊಡೆದ.
ತತೋ ವಿಮರ್ದಃ ಸುಮಹಾನ್ ಬಭೂವ
ತಸ್ಯಾರ್ಜುನಸ್ಯಾಧಿರಥೇಶ್ಚ ರಾಜನ್ |
ಅನ್ಯೋನ್ಯಮಾಸಾದಯತೋಃ ಪೃಷತ್ಕೈ-
ರ್ವಿಷಾಣಘಾತೈರ್ದ್ವಿಪಯೋರಿವೋಗ್ರೈಃ ॥5॥
ಆಗ ರಾಜನೆ, ಅರ್ಜುನನಿಗೂ ಕರ್ಣನಿಗೂ ದೊಡ್ಡ ಕಾಳಗ ನಡೆಯಿತು. ಉಗ್ರವಾದ ಎರಡು ಆನೆಗಳು ದಂತಗಳ ತಿವಿತಗಳಿಂದ ಹೋರಾಡುವಂತೆ ಅವರಿಬ್ಬರೂ ಬಾಣಗಳಿಂದ ಪರಸ್ಪರ ಹೊಡೆದರು.
ತತೋಽಸ್ತ್ರಸಂಘಾತಸಮಾವೃತಂ ತದಾ
ಬಭೂವ ರಾಜಂಸ್ತುಮುಲಂ ರಣಾಜಿರಮ್ |
ತತ್ಕರ್ಣಪಾರ್ಥೌ ಶರವೃಷ್ಟಿಸ್ಯಂ-
ರ್ನಿರಂತರಂ ಚಕ್ರತುರಂಬರಂ ತದಾ ॥6॥
ರಾಜನೆ, ಆಗ ಘೋರವಾದ ರಣರಂಗವು ಅಸ್ತ್ರಸಮೂಹಗಳಿಂದ ಆಚ್ಛಾದಿತವಾಯಿತು. ಕರ್ಣಾರ್ಜುನರು ಬಾಣವೃಷ್ಟಿ

ಸಮೂಹಗಳಿಂದ ಆಕಾಶವು ಎಡೆ ಇಲ್ಲದೆ ತುಂಬಿಹೋಗುವಂತೆ ಮಾಡಿದರು.
ತದ್ಬಾಣಜಾಲೈಕಮಯಂ ಮಹಾಸ್ತ್ರಂ
ಸರ್ವೇSದ್ರಾಕ್ಷುಃ ಕುರವಃ ಸೋಮಕಾಶ್ಚ |
ನಾನ್ಯಂ ಚ ಭೂತಂ ದದೃಶುಸ್ತದಾ ತೇ
ಬಾಣಾಂಧಕಾರೇ ತುಮುಲೇ ಚ ತಸ್ಮಿನ್ ॥7॥
ಬಾಣಸಮೂಹಮಯವಾದ ಆ ಮಹಾಸ್ತ್ರ, ಒಂದನ್ನೇ ಕೌರವರೂ ಸೋಮಕರೂ ಕಂಡರೆ ಹೊರತು ಬೇರೆ ಜನರನ್ನು ಅವರು ಘೋರವಾದ ಆ ಬಾಣಾಂಧಕಾರದಲ್ಲಿ ನೋಡಲಾರದವರಾದರು.
ತೌ ಸಂದಧಾನಾವನಿಶಂ ಸ್ಮ ರಾಜನ್
ಸಮಸ್ಯಂತೌ ಚಾಪಿ ಶರಾನನೇಕಾನ್ |
ಸಂದರ್ಶಯಂತೋ ಯುಧಿ ಮಾರ್ಗಾನ್ ವಿಚಿತ್ರಾನ್
ಧನುರ್ಧರಾಣಾಂ ಪ್ರವರೌ ಕೃತಾಸ್ತ್ರೌ ॥8॥
ರಾಜನೆ, ಕರ್ಣಾರ್ಜುನರು ಎಡೆಬಿಡದೆ ಅನೇಕ ಬಾಣಗಳನ್ನು ಹೂಡಿ ಎಸೆದರು. ವಿಚಿತ್ರವಾದ ವರಸೆಗಳನ್ನು ರಣದಲ್ಲಿ ತೋರಿದರು. ಇಬ್ಬರೂ ಅಸ್ತ್ರಜ್ಞರು, ಧನುರ್ಧಾರಿಗಳಲ್ಲಿ ಶ್ರೇಷ್ಠರು.
ತಯೋರೇವಂ ಯುಧ್ಯತೋರಾಜಿಮಧ್ಯೇ
ಸೂತಾತ್ಮಜೋSಭೂದಧಿಕಃ ಕದಾಚಿತ್ |
ಪಾರ್ಥಃ ಕದಾಚಿತ್ತ್ವಧಿಕಃ ಕಿರೀಟೀ
ವೀರ್ಯಾಸ್ತ್ರಸಂಪದ್‌ಬಲಲಾಘವೈಸ್ತು ॥9॥
ಅವರಿಬ್ಬರೂ ರಣರಂಗದಲ್ಲಿ ಹೋರಾಡುತ್ತಿದ್ದಾಗ ಪರಾಕ್ರಮ ಅಸ್ತ್ರಜ್ಞಾನ ಸಂಪತ್ತು ಬಲ ವೇಗಗಳಲ್ಲಿ ಕೆಲವೊಮ್ಮೆ ಕರ್ಣ ಹೆಚ್ಚಾದ. ಕೆಲವೊಮ್ಮೆ ಅರ್ಜುನನೇ ಹೆಚ್ಚಾದ.
ದೃಷ್ಟ್ವಾ ತತಸ್ತಂ ಯುಧಿ ಸಂಪ್ರಹಾರಂ
ಪರಸ್ಪರಸ್ಯಾಂತರಮೀಕ್ಷಮಾಣಯೋಃ |
ಘೋರಂ ತದಾ ದುರ್ವಿಷಹಂ ರಣೇSನ್ಯೈ-
ರ್ಯೋಧಾಃ ಸರ್ವೇ ವಿಸ್ಮಯಮಭ್ಯಗಚ್ಛನ್ ॥10॥
ಪರಸ್ಪರರಲ್ಲಿ ಶೈಥಿಲ್ಯವನ್ನು ಕಾಣಲು ಯತ್ನಿಸುತ್ತ ರಣದಲ್ಲಿ ಹೋರಾಡುತ್ತಿದ್ದ ಆ ಕರ್ಣಾರ್ಜುನರ ಘೋರವಾದ, ಅನ್ಯರಿಗೆ ಸಹಿಸಲು ಸಾಧ್ಯವಲ್ಲದ ಆ ಯುದ್ಧವನ್ನು ನೋಡಿ ಯೋಧರೆಲ್ಲರೂ ವಿಸ್ಮಯ ಹೊಂದಿದರು.
ತತೋSಥ ಭೂತಾನ್ಯಂತರಿಕ್ಷೇ ಸ್ಥಿತಾನಿ
ಕರ್ಣಾರ್ಜುನೌ ತೌ ಪ್ರಶಶಂಸುರ್ನರೇಂದ್ರ |
ಭೋಃ ಕರ್ಣ ಸಾಧ್ವರ್ಜುನ ಸಾಧು ಚೇತಿ
ಹೃಷ್ಟಾಃ ಪ್ರೋಚುಃ ಸಂಘಶಃ ಪ್ರೀತಿಮಂತಃ ॥11॥
ರಾಜನೆ, ಅಂತರಿಕ್ಷದಲ್ಲಿ ನೆರೆದ ಪ್ರೇಕ್ಷಕರು ಕರ್ಣಾರ್ಜುನರನ್ನು ಪ್ರಶಂಸೆ ಮಾಡಿದರು. ಹೇ ಕರ್ಣ, ಭಲೆ ! ಹೇ ಅರ್ಜುನ, ಭಲೆ ! ಎಂದು ಒಕ್ಕೊರಲಿನಿಂದ ಪ್ರೀತಿಯಿಂದ ಉತ್ಸಾಹದಿಂದ ನುಡಿದರು.
ತಸ್ಮಿನ್ ವಿಮರ್ದೇ ರಥವಾಜಿನಾಗಾಃ
ಪದಾತಿಸಂಘಾ ವಸುಧಾಂ ವ್ಯಕಂಪಯನ್ |
ತತಸ್ತು ಪಾತಾಳತಳೇ ಶಯಾನೋ
ನಾಗೋSಶ್ವಸೇನಃ ಕೃತವೈರೋSರ್ಜುನೇನ ॥12॥
ರಾಜಂಸ್ತದಾ ಖಾಣ್ಡವದಾಹಮಧ್ಯೇ
ಕೃತ್ವಾ ಸುವೇಗಂ ವಸುಧಾತಳಸ್ಥಃ |
ಅಥೋತ್ಪಪಾತೋರ್ಧ್ವಗತಿರ್ಜವೇನ
ಸಂದೃಶ್ಯ ಕರ್ಣಾರ್ಜುನಯೋರ್ವಿಮರ್ದಮ್ ॥13॥
ಅಯಂ ಹಿ ಕಾಲೋSಸ್ಯ ದುರಾತ್ಮನೋ ವೈ
ಪಾರ್ಥಸ್ಯ ವೈರಪ್ರತಿಯಾತನಾಯ |
ಸಂಚಿಂತ್ಯ ತೂಣಂ ಪ್ರವಿವೇಶ ಚೈವ
ಕರ್ಣಸ್ಯ ರಾಜನ್ ಶರರೂಪಧಾರೀ ॥14॥
ಆ ಯುದ್ಧದಲ್ಲಿ ರಥ ಅಶ್ವ ಗಜ ಪದಾತಿಸಮೂಹಗಳು ನೆಲವನ್ನು ಕಂಪಿಸಿದುವು. ಆಗ ಪಾತಾಳತಳದಲ್ಲಿ ಒರಗಿದ್ದ ಅಶ್ವಸೇನನಾಗನು ವೇಗದಿಂದ ಭೂತಳಕ್ಕೆ ಬಂದು ಸೇರಿದ. ಹಿಂದೆ ಖಾಂಡವದಾಹದಲ್ಲಿ ಅರ್ಜುನ ಅವನೊಂದಿಗೆ ವೈರವನ್ನು ಮಾಡಿದ್ದ. ಅವನು ವೇಗದಿಂದ ಮೇಲೆ ಆಕಾಶದಲ್ಲಿ ಹಾರಿ ಬಂದು ಕರ್ಣಾರ್ಜುನರ ಯುದ್ಧವನ್ನು ಕಂಡು, ದುರಾತ್ಮ ಅರ್ಜುನನು ಮಾಡಿದ ವೈರವನ್ನು ತೀರಿಸಲು ಇದು ಯೋಗ್ಯಕಾಲವೆಂದು ಆಲೋಚಿಸಿ, ಕರ್ಣನ ಬತ್ತಳಿಕೆಯನ್ನು ಅಂದರೆ ಬತ್ತಳಿಕೆಯಲ್ಲಿದ್ದ ಸರ್ಪಮುಖದ ಬಾಣವನ್ನು, ಅದೇ ಆಕಾರ ತಳೆದು ಯೋಗಬಲದಿಂದ ಪ್ರವೇಶಿಸಿ ಕುಳಿತ.
ಅಶ್ವಸೇನನೇ ಸರ್ಪಾಸ್ತ್ರರೂಪದಲ್ಲಿ ಬಹಳ ಹಿಂದೆಯೇ ಕರ್ಣನಲ್ಲಿ ಬಂದು ಸೇರಿಕೊಂಡಿದ್ದನೆಂದೂ, ಬಹಳ ಹಿಂದಿನಿಂದಲೂ ಕರ್ಣ ಅವನನ್ನು ಬಿಡದೆ ಪೂಜಿಸುತ್ತಿದ್ದನೆಂದೂ ತಿಳಿಯಬಾರದು. ಹಿಂದಿನಿಂದಲೂ ಸರ್ಪಾಸ್ತ್ರದಲ್ಲಿ ಪ್ರಸಿದ್ಧ ನಾಗದೇವತೆಗಳನ್ನು ಆತ

ಪೂಜಿಸುತ್ತಿದ್ದ. ಅಶ್ವಸೇನನನ್ನಲ್ಲ.
ಕರ್ಣಸ್ತು ಪಾರ್ಥಂ ನ ವಿಶೇಷಯದ್ಯದಾ
ದೃಢಂ ಚ ಪಾರ್ಥೇನ ಶರೈರ್ನಿಪೀಡಿತಃ |
ಕ್ರುದ್ಧಸ್ತತಸ್ತತ್ವಧಿರಥಿಸ್ತರಸ್ವೀ
ಮನೋ ದಧೇ ಚೈಕಶಯೇ ಶರಾಖ್ಯೇ ॥15॥
ತತಃ ಸ ಕರ್ಣಃ ಶರವಿಕ್ಷತಾಂಗೋ
ಮನೋ ದಧೇ ಹ್ಯೇಕಶರಸ್ಯ ಮೋಕ್ಷೇ ॥16॥
ಕರ್ಣನು ಅರ್ಜುನನನ್ನು ಮೀರಿಸಲು ಶಕ್ತನಾಗದಿದ್ದಾಗ, ಅರ್ಜುನನಿಂದ ದೃಢವಾಗಿ ಬಾಣಗಳಿಂದ ಪೀಡಿತನೂ ಆದಾಗ, ಬಲಿಷ್ಠನಾದ ಅವನು ಕ್ರುದ್ಧನಾಗಿ `ಸರ್ಪಬಾಣ' ಎಂಬ ಹೆಸರಿನ ಪ್ರಧಾನವಾದ ಸರ್ಪದಲ್ಲಿ ಮನಸ್ಸಿಟ್ಟ. ಬಾಣಗಳಿಂದ ಮೈಯೆಲ್ಲ ಕ್ಷತವಿಕ್ಷತನಾಗಿದ್ದರಿಂದ ಬಾಣಗಳಲ್ಲಿ ಮುಖ್ಯವಾದ ಸರ್ಪಾಸ್ತ್ರವನ್ನೇ ಬಿಡಲು ಮನಸ್ಸು ಮಾಡಿದ.
ತತೋ ರಿಪುಘ್ನಂ ಸಮಧತ್ತ ಕರ್ಣಃ
ಸುಸಂಚಿತಂ ಸರ್ಪಮುಖಂ ಜ್ವಲಂತಮ್ |
ರೌದ್ರಂ ಶರಂ ಸಂಯತಿ ಸುಪ್ರಧೌತಂ
ಪಾರ್ಥಾರ್ಥಮತ್ಯರ್ಥಚಿರಾಯ ಗುಪ್ತಮ್ ॥17॥
ಸದಾರ್ಚಿತಂ ಚಂದನಚೂರ್ಣಶಾಯಿನಂ
ಸುವರ್ಣತೂಣೀರಶಯಂ ಮಹಾವಿಷಮ್ |
ಪ್ರದೀಪ್ತಮೈರಾವತವಂಶಸಂಭವಂ
ಶಿರೋ ಜಿಹೀರ್ಷುರ್ಯುಧಿ ಫಲ್ಗುನಸ್ಯ ॥18॥
ಆಗ ಶತ್ರುನಾಶಕವಾದ, ಬಹುಕಾಲದಿಂದ ಸಂಗ್ರಹಿಸಿ ಇಟ್ಟಿದ್ದ, ಚೆನ್ನಾಗಿ ಎಣ್ಣೆಯಿಂದ ಹದಮಾಡಿದ್ದ, ಅರ್ಜುನನ ನಾಶಕ್ಕೆಂದೇ ಬಹುಕಾಲದಿಂದ ರಕ್ಷಿಸಿ ಇಟ್ಟುಕೊಂಡಿದ್ದ, ಇದೀಗ ಬಂಗಾರದ ಬತ್ತಳಿಕೆಯೊಳಗೆ ಬಂದು ಕುಳಿತಿದ್ದ, ಮಹಾವಿಷಭರಿತವಾದ ಜ್ವಲಿಸುವ ಐರಾವತಸರ್ಪದ ವಂಶದಲ್ಲಿ ಬಂದಿದ್ದ , ಸದಾ ಚಂದನಚೂರ್ಣದಲ್ಲಿಟ್ಟು ತನ್ನಿಂದ ಪೂಜಿತವಾಗಿದ್ದ , ಭಯಂಕರವಾದ ಸರ್ಪಾಸ್ತ್ರಬಾಣವನ್ನು ರಣದಲ್ಲಿ ಅರ್ಜುನನ ಶಿರವನ್ನು ತೆಗೆಯುವುದಕ್ಕಾಗಿ ಕರ್ಣನು ಧನುಸ್ಸಿನಲ್ಲಿ ಹೂಡಿದ.
ತತಃ ಪ್ರಜಜ್ವಾಲ ನಭೋ ದಿಶಶ್ಚ
ಉಲ್ಕಾಶ್ಚ ಘೋರಾಃ ಸಹಸಾ ನಿಪೇತುಃ |
ತಸ್ಮಿಂಸ್ತು ನಾಗೇ ಧನುಷಿ ಪ್ರಯುಕ್ತೇ
ಹಾಹಾಕೃತಾಃ ಸರ್ವಲೋಕಾಃ ಸಶಕ್ರಾಃ ॥19॥
ಕರ್ಣನು ಸರ್ಪಾಸ್ತ್ರವನ್ನು ಧನುಸ್ಸಿನಲ್ಲಿ ಹೂಡಿದಾಗ ಆಕಾಶವೂ ದಿಕ್ಕುಗಳೂ ಜ್ವಲಿಸಿದುವು. ಘೋರವಾದ ಉಲ್ಕೆಗಳು ಅಕಸ್ಮಾತ್ ಕೆಳಗೆ ಬಿದ್ದುವು. ಇಂದ್ರಾದಿ ಸರ್ವಲೋಕಗಳು ಹಾಹಾಕಾರ ಮಾಡಿದವು.
ಸ ಸೂತಪುತ್ರಸ್ತಮಪಾಂಗದೇಶೇ
ಪಾರ್ಥೋನ್ಮುಖಂ ಸಂ ನಯತಿಸ್ಮರೋಷಾತ್ |
ನ ತಂ ಸ್ಮ ಜಾನಾತಿ ಮಹಾನುಭಾವಂ
ಅಪಾಂಗದೇಶಾಭಿನಿವಿಷ್ಟಮಾಜೌ ॥
ನ ಚಾಪಿ ತಂ ಬುಬುಧೇ ಸೂತಪುತ್ರೋ
ಬಾಣೇ ಪ್ರವಿಷ್ಟಂ ಯೋಗಬಲೇನ ನಾಗಮ್ ॥20॥
ಕರ್ಣ ಆ ಸರ್ಪಬಾಣವನ್ನು ಅರ್ಜುನನಿಗೆ ಅಭಿಮುಖವಾಗಿ, ಅವನ ತಲೆ ಒಡೆದು ಚೂರಾಗುವಂತೆ, ಕಡೆಗಣ್ಣ ಅಂಚಿನಲ್ಲಿ ಹಣೆಗೆ ತಾಕುವಂತೆ ಗುರಿಇಟ್ಟ. ಕಡೆಗಣ್ಣಂಚಿಗೆ ತಾಗಬೇಕೆಂದೆ ಕರ್ಣನಿಗೆ ದೃಢವಾದ ಅಭಿಪ್ರಾಯವಿದ್ದುದು ಶಲ್ಯನಿಗೆ ತಿಳಿಯಲಿಲ್ಲ. ಕರ್ಣನಿಗೂ ಅಶ್ವಸೇನನಾಗನು ಯೋಗಬಲದಿಂದ ಬಾಣದಲ್ಲಿ ಪ್ರವೇಶ ಮಾಡಿದ್ದು ತಿಳಿದಿರಲಿಲ್ಲ. `ನ ಚಾಪಿ ತಂ ಬುಬುಧೇ'
ತಮಬ್ರವೀನ್ಮದ್ರರಾಜೋ ಮಹಾತ್ಮಾ
ವೈಕರ್ತನಂ ಪ್ರೇಕ್ಷ ಯ ಹಿ ಸಂಹಿತೇಷುಮ್ |
ನ ಕರ್ಣ ಗ್ರೀವಾಮಿಷುರೇಷ ಪ್ರಾಪ್ಸ್ಯತೇ
ಸಂಲಕ್ಷ ಯ ಸಂಧತ್ಸ್ವ ಶರಂ ಶಿರೋಘ್ನಮ್ ॥21॥
ಕರ್ಣನ ಅಭಿಪ್ರಾಯವನ್ನು ತಿಳಿಯದಿದ್ದ ಮಹಾತ್ಮ ಶಲ್ಯನು, ಕರ್ಣನು ಹಣೆಗೆ ಗುರಿಯಿಟ್ಟು ಶರಸಂಧಾನ ಮಾಡಿದ್ದನ್ನು ಕಂಡು ಆತಂಕಗೊಂಡು ನುಡಿದ `ಕರ್ಣ, ಈ ಬಾಣ ಈಗ ಅರ್ಜುನನ ಕುತ್ತಿಗೆಯನ್ನು ತಲುಪುವುದಿಲ್ಲ. ಶಿರಸ್ಸು ಕಡಿದುಬೀಳುವಂತೆ ಸರಿಯಾಗಿ ಗುರಿಯಿಟ್ಟು ಪುನಃ ಬಾಣವನ್ನು ಹೂಡು.'
ಅಥಾಬ್ರವೀತ್ ಕ್ರೋಧಸಂರಕ್ತನೇತ್ರಃ
ಕರ್ಣಃ ಶಲ್ಯಂ ಸಂಧಿತೇಷುಃ ಪ್ರಸಹ್ಯ |
ನ ಸಂಧತ್ತೇ ದ್ವಿಃ ಶರಂ ಶಲ್ಯ ಕರ್ಣೋ
ನ ಮಾದೃಶಾಃ ಶಾಠ್ಯಯುಕ್ತಾ ಭವಂತಿ ॥22॥
ಕರ್ಣನಿಗೆ ಕೋಪದಿಂದ ಕಣ್ಣು ಕೆಂಪಾಯಿತು. `ಶಲ್ಯ, ಕರ್ಣನು ಎರಡು ಬಾರಿ ಒಂದು ಬಾಣವನ್ನು ಹೂಡುವುದಿಲ್ಲ. ನನ್ನಂಥವರು ಶಾಠ್ಯಯುಕ್ತರಾಗುವುದಿಲ್ಲ.'

ಒಮ್ಮೆ ಗುರಿ ಇಟ್ಟುದನ್ನು ಇದಿರಾಳಿಯು ಗಮನಿಸಿ ಅದಕ್ಕೆ ಸರಿಯಾಗಿ ಅವನೂ ಗುರಿಇಟ್ಟು ಬಾಣವನ್ನು ಬಿಡುತ್ತಾನೆ. ಇದು ಯುದ್ಧದಲ್ಲಿ ಧರ್ಮ. ಗುರಿಯನ್ನು ಬದಲಿಸಿದರೆ ಇದಿರಾಳಿ ತಬ್ಬಿಬ್ಬಾಗುತ್ತಾನೆ. ಇದು ವಂಚನೆ, ಶಾಠ್ಯ. ಅದರಿಂದ ಗುರಿಯನ್ನು ಬದಲಿಸುವುದಿಲ್ಲ ಎನ್ನುತ್ತಾನೆ ಕರ್ಣ.

ತಥೈವ ಚೋಕ್ತತ್ವ ವಿಸಸರ್ಜ ತಂ ಶರಂ
ಪ್ರಯತ್ನತೋ ವರ್ಷಗಣಾಭಿಪೂಜಿತಮ್ |
ಹತೋಽಸಿ ವೈ ಫಲ್ಗುನ ಇತ್ಯವೋಚತ್
ತತಸ್ತ್ವರನ್ನೂರ್ಜಿತಮುತ್ಸಸರ್ಜ ॥23॥

ಕರ್ಣನು ಶಲ್ಯನಿಗೆ ಹೀಗೆ ಹೇಳಿ, ಪ್ರಯತ್ನದಿಂದ ಆನೇಕ ವರ್ಷಕಾಲ ತಾನು ಪೂಜಿಸಿದ್ದ ಆ ಸರ್ಪಾಸ್ತ್ರವನ್ನು ಎಸೆದುಬಿಟ್ಟ. `ಅರ್ಜುನ! ನೀನೀಗ ಹತನಾದೆ!' ಎಂದ. ಹೀಗೆ ಹೇಳುತ್ತಲೆ ಶ್ರೇಷ್ಠವಾದ ಆ ಬಾಣವನ್ನು ಎಸೆದ.

ಸಂಧೀಯಮಾನಂ ಭುಜಗಂ ದೃಷ್ಟ್ವಾ ಕರ್ಣೇನ ಮಾಧವಃ |
ಆಕ್ರಾಮತ್ ಸ್ಯಂದನಂ ಪದ್ಭ್ಯಾಂ ಬಲೇನ ಬಲಿನಾಂ ವರಃ ॥24॥
ಅವಗಾಢೇ ರಥೇ ಭೂಮೌ ಜಾನುಭ್ಯಾಮಗಮನ್ ಹಯಾಃ ॥25॥

ಕರ್ಣನು ಸರ್ಪಾಸ್ತ್ರವನ್ನು ಹೂಡಿದ್ದನ್ನು ಕಂಡು ಬಲಿಷ್ಠರಲ್ಲಿ ಶ್ರೇಷ್ಠನಾದ ಕೃಷ್ಣನು ರಥವನ್ನು ಕಾಲುಗಳಿಂದ ಬಲವಾಗಿ ಮೆಟ್ಟಿದ. ಅದರಿಂದ ರಥ ನೆಲದಲ್ಲಿ ಸ್ವಲ್ಪ ಹೂತುಹೋಯಿತು. ಕುದುರೆಗಳು ಮೊಣಕಾಲೂರಿ ನಿಂತುವು.

ತಮಾಪತಂತಂ ಜ್ವಲಿತಂ ನಿರೀಕ್ಷ್ಯ
ವಿಯದ್ಗತಂ ವೃಷ್ಣಿಕುಲ ಪ್ರವೀರಃ |
ರಥಸ್ಯ ಚಕ್ರಂ ಸಹಸಾ ನಿಪೀಡ್ಯ
ಪಂಚಾಂಗುಲಂ ಮಜ್ಜಯತಿ ಸ್ಮ ವೀರಃ ॥26॥

ಜ್ವಲಿಸುತ್ತ ಆ ಸರ್ಪಾಸ್ತ್ರವು ಆಕಾಶದಲ್ಲಿ ಬರುತ್ತಿದ್ದುದನ್ನು ಕಂಡು ಶ್ರೀಕೃಷ್ಣ ರಥಚಕ್ರವನ್ನು ಬಲವಾಗಿ ಒತ್ತಿ, ಐದು ಅಂಗುಲದಷ್ಟು ಅದು ನೆಲದಲ್ಲಿ ಹೂತುಹೋಗುವಂತೆ ಮಾಡಿದ.

ತತೋಽಂತರಿಕ್ಷೇ ಸುಮಹಾನ್ನಿನಾದಃ
ಸಂಪೂಜನಾರ್ಥಂ ಮಧುಸೂದನಸ್ಯ |
ದಿವ್ಯಾಶ್ಚ ವಾಚಃ ಸಹಸಾ ಬಭೂವು-
ರ್ದಿವ್ಯಾನಿ ಪುಷ್ಪಾಣ್ಯಥ ಸಿಂಹನಾದಾಃ |
ತಸ್ಮಿಂಸ್ತಥಾ ವೈ ಧರಣೀಂ ನಿಮಗ್ನೇ
ರಥೇ ಪ್ರಯತ್ನಾನ್ಮಧುಸೂದನಸ್ಯ ॥27॥

ಕೃಷ್ಣನ ಪ್ರಯತ್ನದಿಂದ ರಥವು ನೆಲದಲ್ಲಿ ಹೂತುಹೋದಾಗ ಅಂತರಿಕ್ಷದಲ್ಲಿ ದೊಡ್ಡ ಶಬ್ದ ಕೃಷ್ಣನ ಆರಾಧನೆಗಾಗಿ ಸ್ತುತಿರೂಪವಾಗಿ ಕೇಳಿಸಿತು. ದಿವ್ಯವಾದ ನುಡಿಗಳು ಅನಿರೀಕ್ಷಿತವಾಗಿ ಉಕ್ತವಾದುವು. ದಿವ್ಯ ಪುಷ್ಪಗಳು ಸುರಿದುವು. ಸಿಂಹನಾದಗಳು ಕೇಳಿಸಿದುವು.

ಅಥಾರ್ಜುನಸ್ಯೋತ್ತಮಗಾತ್ರಭೂಷಣಂ
ಧರಾವಿಯದ್ದ್ಯೋ ಸಲಿಲೇಷು ವಿಶ್ರುತಮ್ |
ಬಲಾಸ್ತ್ರಸರ್ಗೋತ್ತಮಯತ್ನಮನ್ಯುಭಿಃ
ಶರೇಣ ಮೂರ್ಧ್ನಃ ಸ ಜಹಾರ ಸೂತಜಃ ॥28॥

ಅರ್ಜುನನ ಶಿರೋಭೂಷಣವಾದ ಕಿರೀಟವು ಭೂಮಿ ಅಂತರಿಕ್ಷ ಸ್ವರ್ಗ ಪಾತಾಳಲೋಕಗಳಲ್ಲಿ ಎಲ್ಲೆಡೆ ಸುಪ್ರಸಿದ್ಧವಾಗಿತ್ತು. ಕರ್ಣನು ತನ್ನ ಬಲ ಅಸ್ತ್ರಪ್ರಯೋಗ ಉತ್ತಮ ಯತ್ನ ಹಾಗೂ ಕೋಪಗಳಿಂದ ಸರ್ಪಬಾಣದ ಮೂಲಕ ಅರ್ಜುನನ ತಲೆಯಿಂದ ಆ ಕಿರೀಟವನ್ನು ತೆಗೆದ.

ವಿಶುದ್ಧ ಜಾಂಬೂನದರತ್ನಭೂಷಿತಂ
ಪಾರ್ಥೋತ್ತಮಾಂಗಾದಹರತ್ತರಸ್ವೀ |
ತದ್ಧೇಮಜಾಲಾವತತಂ ಸುಘೋಷಂ
ಜಾಜ್ವಲ್ಯಮಾನಂ ನಿಪಪಾತ ಭೂವೌ ॥29॥

ಶುದ್ಧಚಿನ್ನದಿಂದ ಮಾಡಿದ ರತ್ನಖಚಿತವಾದ ಬಂಗಾರದ ಮಾಲೆಗಳಿಂದ ಅಲಂಕೃತವಾದ ಆ ಕಿರೀಟವನ್ನು ಸರ್ಪಾಸ್ತ್ರವು ವೇಗವಾಗಿ ಅರ್ಜುನನ ತಲೆಯಿಂದ ತೆಗೆಯಿತು. ಕಿರೀಟವು ದೊಡ್ಡ ಶಬ್ದದೊಂದಿಗೆ ಪುಡಿಯಾಗಿ ಜ್ವಲಿಸುತ್ತ ನೆಲದಲ್ಲಿ ಬಿದ್ದಿತು.

ದಿವಾಕರೇಂದ್ರುಜ್ವಲನಗ್ರಹತ್ವಿಷಂ
ಸುವರ್ಣಮುಕ್ತಾಮಣಿಜಾಲಭೂಷಿತಮ್ |
ಪುರಂದರಾರ್ಥಂ ತಪಸಾ ಪ್ರಯತ್ನತಃ
ಸ್ವಯಂ ಕೃತಂ ಯದ್ ವಿಭುನಾ ಸ್ವಯಂಭುವಾ ॥30॥

ಸೂರ್ಯ ಚಂದ್ರ ಗ್ರಹಗಳಂಥ ಪ್ರಕಾಶದ ಆ ಕಿರೀಟವು ಬಂಗಾರ ಮತ್ತು ಮಣಿಗಳ ಸಮೂಹದಿಂದ ಅಲಂಕೃತವಾಗಿತ್ತು. ಬ್ರಹ್ಮನು ತಾನೇ ಸ್ವತಃ ಇಂದ್ರನಿಗಾಗಿ ತಪಸ್ಸಿನಿಂದ ಮತ್ತು ಪ್ರಯತ್ನದಿಂದ ಆ ಕಿರೀಟವನ್ನು ನಿರ್ಮಿಸಿದ್ದ.

ಮಹಾರ್ಹರೂಪಂ ದ್ವಿಷತಾಂ ಭಯಂಕರಂ
ವಿಭಾತಿ ಚಾತ್ಯರ್ಥಸುಖಂ ಸುಗಂಧಿ ತತ್ |
ನಿಜಘ್ನುಷೇ ದೇವರಿಪೂನ್ ಸುರೇಶ್ವರಃ

ಸ್ವಯಂ ದದೌ ಯತ್ಸುಮನಾಃ ಕಿರೀಟಿನೇ ॥31॥
ಬಹುಮೂಲ್ಯವಾದುದು ಆ ಕಿರೀಟ, ಶತ್ರುಗಳಿಗೆ ಭಯಂಕರವಾಗಿ, ಮಿತ್ರರಿಗೆ ಅತ್ಯಂತ ಸುಖಕಾರಿಯಾಗಿ ಸುಗಂಧ ಬೀರುತ್ತಿತ್ತು. ಅರ್ಜುನನು ದೇವಶತ್ರುಗಳಾದ ಕಾಲಕೇಯದಾನವರನ್ನು ಕೊಲ್ಲುವ ಸಂದರ್ಭದಲ್ಲಿ ದೇವೇಂದ್ರನು ಸ್ವತಃ ಪ್ರೀತಿಯಿಂದ ಅರ್ಜುನನಿಗೆ ಅದನ್ನು ತೊಡಿಸಿದ್ದ.
ಹರಾಂಬುಪಾಖಂಡಲವಿತ್ತಗೋಪ್ತೃಭಿಃ
ಪಿನಾಕಪಾಶಾಶನಿಸಾಯಕೋತ್ತಮೈಃ |
ಸುರೋತ್ತಮೈರಪ್ಯವಿಷಹ್ಯಮರ್ದಿತುಂ
ಪ್ರಸಹ್ಯ ನಾಗೇನ ಜಹಾರ ಯದ್ವೃಷಃ ॥32॥
`ಹರ ಅಂಬುಪ ಆಖಂಡಲಗೋಪ್ತೃ ವಿತ್ತಗೋಪ್ತೃ' ಅಂದರೆ, ಶಿವ ವರುಣ ಇಂದ್ರ ಕುಬೇರರು ಪಿನಾಕ ಪಾಶ ವಜ್ರಾಯುಧ ಬಾಣಗಳನ್ನು ಹಿಡಿದವರು. ಇಂಥ ದೇವೋತ್ತಮರಿಗೂ ನಾಶಮಾಡಲಾಗದ ಆ ಕಿರೀಟವನ್ನು ಅಶ್ವಸೇನನಾಗನ ಮೂಲಕ ಕರ್ಣನು ಪುಡಿ ಮಾಡಿದ.
ತದುತ್ತಮೇಷೂನ್ಮಥಿತಂ ವಿಷಾಗ್ನಿನಾ
ಪ್ರದೀಪ್ತಮರ್ಚಿಷ್ಮದಭಿಕ್ಷಿತಿ ಪ್ರಿಯಮ್ |
ಪಪಾತ ಪಾರ್ಥಸ್ಯ ಕಿರೀಟಮುತ್ತಮಂ
ದಿವಾಕರೋಽಸ್ತಾದಿವ ಪರ್ವತಾಜ್ಜ್ವಲನ್ ॥33॥
ಪ್ರಿಯವಾದ ಆ ಉತ್ತಮವಾದ ಕಿರೀಟವು ಉತ್ತಮವಾದ ಸರ್ಪಾಸ್ತ್ರದಿಂದ ಪುಡಿಯಾಯಿತು. ಸರ್ಪವಿಷದ ಬೆಂಕಿಯಿಂದ ಹೊತ್ತಿ ಉರಿದು ಜ್ವಾಲೆ ಉಗುಳುತ್ತ ಸೂರ್ಯನು ಉರಿಯುತ್ತ ಅಸ್ತಾಚಲದಿಂದ ಬೀಳುವಂತೆ ನೆಲದಲ್ಲಿ ಬಿದ್ದಿತು.
ಸ ದುಷ್ಟಭಾವೋ ವಿತಥಪ್ರತಿಜ್ಞಃ
ಕಿರೀಟಮಭ್ಯಾಹನದರ್ಜುನಸ್ಯ |
ವಿಶುದ್ಧಜಾಂಬೂನದರತ್ನಭೂಷಿತಂ
ಜಾಜ್ವಲ್ಯಮಾನಂ ನಿಪಪಾತ ಭೂಮೌ ॥34॥
ಅರ್ಜುನನ ತಲೆಯನ್ನು ಹೊಡೆಯುವ ದುಷ್ಟಪ್ರತಿಜ್ಞೆ ಕರ್ಣನದಾಗಿತ್ತು. ಆ ಪ್ರಯತ್ನದಲ್ಲಿ ಆತ ವಿಫಲನಾಗಿ ಕೇವಲ ಅವನ ಕಿರೀಟವನ್ನು ಹೊಡೆದ. ಶುದ್ಧಚಿನ್ನದಿಂದಾದುದು, ರತ್ನಖಚಿತವಾದುದು ಆದ ಅದು ಚೆನ್ನಾಗಿ ಹೊಳೆಯುತ್ತ ನೆಲದಲ್ಲಿ ಬಿದ್ದಿತು.
ತತಃ ಕಿರೀಟಂ ಬಹುರತ್ನಮಂಡಿತಂ
ಜಹಾರ ನಾಗೋಽರ್ಜುನಮೂರ್ಧತೋ ಬಲಾತ್ |
ಗಿರೇಃ ಸುಜಾತಾಂಕುರಪುಷ್ಪಿತದ್ರುಮಂ
ಮಹೇಂದ್ರವಜ್ರಃ ಶಿಖರಂ ಯಥೋತ್ತಮಮ್ ॥35॥
ಬಹುರತ್ನಗಳಿಂದ ಅಲಂಕೃತವಾದ ಆ ಕಿರೀಟವನ್ನು ಅರ್ಜುನನ ಶಿರಸ್ಸಿನಿಂದ ಬಲಾತ್ಕಾರವಾಗಿ ಸರ್ಪವು ಒಳ್ಳೆಯ ಚಿಗುರು, ಹೂಗಳಿಂದ ಯುಕ್ತವಾದ ಮರಗಳುಳ್ಳ ಪರ್ವತಶಿಖರವನ್ನು ಮಹೇಂದ್ರನ ವಜ್ರಾಯುಧ ಬೀಳಿಸಿದಂತೆ ಬೀಳಿಸಿತು.
ಮಹೀ ವಿಯದ್ದ್ಯೌಃ ಸಲಿಲಾನಿ ವಾಯುನಾ
ಯಥಾ ವಿಭಿನ್ನಾನಿ ವಿಭಾಂತಿ ಭಾರತ |
ತಥೈವ ಶಬ್ದೋ ಭುವನೇಷ್ವಭೂತ್ ತದಾ
ಜನಾ ವ್ಯವಸ್ಯನ್ ವ್ಯಥಿತಾಶ್ಚ ಚಸ್ಖಲುಃ ॥36॥
ಪೃಥಿವಿ ಆಕಾಶ ಅಂತರಿಕ್ಷ ಸಮುದ್ರಗಳು ವಾಯುವಿನ ಹೊಡೆತದಿಂದ ಹೊಡೆಸಿಕೊಂಡು ಶಬ್ದಮಾಡುವಂತೆ ಅರ್ಜುನ ಕಿರೀಟವೂ ಸರ್ಪಾಸ್ತ್ರದಿಂದ ಹೊಡೆಸಿಕೊಂಡು ದೊಡ್ಡ ಶಬ್ದ ಮಾಡಿತು. ಜನರು ಅದನ್ನು ಭೂಕಂಪಾದಿ ಶಬ್ದಗಳಲ್ಲಿ ಒಂದಿರಬೇಕೆಂದೇ ಮೊದಲಿಗೆ ತಿಳಿದರು. ಬಳಿಕ ಕಿರೀಟ ಪುಡಿಯಾದ ಶಬ್ದವೆಂದು ತಿಳಿದು ವ್ಯಥೆಗೊಂಡರು, ನಡುಗಿದರು.
ತತಃ ಸಮುದ್ಗ್ರಥ್ಯ ಸಿತೇನ ವಾಸಸಾ
ಸ್ವಮೂರ್ಧಜಾನವ್ಯಥಿತಸ್ತತೋಽರ್ಜುನಃ |
ವಿನಾ ಕಿರೀಟಂ ಶುಶುಭೇ ಸ ಪಾರ್ಥಃ
ಶ್ಯಾಮೋ ಯುವಾ ಶೈಲ ಇವಾಸ್ತಶೃಂಗಃ ॥37॥
ಶ್ಯಾಮಲವರ್ಣದ ಯುವಕನಾದ ಅರ್ಜುನನು ತಲೆಗೂದಲನ್ನು ಬಿಳಿಬಟ್ಟೆ ಯಿಂದ ಮುಚ್ಚಿ, ಕಿರೀಟವಿಲ್ಲದೆ, ಶಿಖರವಿಲ್ಲದ ಪರ್ವತದಂತೆ ಶೋಭಿಸಿದ.
ಗೋಕರ್ಣಾ ಸುಮುಖೀ ಕೃತೇನ ಇಷುಣಾ ಗೋಪುತ್ರ ಸಂಪ್ರೇಷಿತಾ
ಗೋಶಬ್ದಾತ್ಮಜಭೂಷಣಂ ಸುವಿಹಿತಂ ಸುವ್ಯಕ್ತಗೋಽಸುಪ್ರಭಮ್ |
ದೃಷ್ಟ್ವಾ ಗೋಗತಕಂ ಜಹಾರ  ಮಕುಟಂ ಗೋಶಬ್ದಗೋಪೂರಿ ವೈ
ಗೋಕರ್ಣಾಸನಮರ್ದನಶ್ಚ ನ ಯಯಾವಪ್ರಾಪ್ಯ ಮೃತ್ಯೋರ್ವಶಮ್ ॥38॥
ಇದೊಂದು ಕೂಟ ಶ್ಲೋಕ.
ಇದಕ್ಕೆ ಈ ಪ್ರಚಲಿತ ಪಾಠಕ್ಕಿಂತ ಬೇರೆಯಾದ ಇನ್ನೊಂದು ಪಾಠವಿದೆ. ಸರಳವಾಗಿದೆ, ಸುಂದರವಾಗಿದೆ–
ಗೋಕರ್ಣಾಭಿಮುಖೀಕೃತೇನ ಇಷುಣಾ ಗೋಪುತ್ರಸಂಪ್ರೇಕ್ಷಿತಾ
ಗೋಶಬ್ದಾತ್ಮಜಭೂಷಣಂ ಸುವಿಹಿತಂ ಸುವ್ಯಕ್ತಗೋಸುಪ್ರಭಮ್ |

ದೃಷ್ಟ್ವಾ ಗೋಗತಕಂ ಜಹಾರ ಮಕುಟಂ ಗೋಶಬ್ದಗೋಪೂರಿ ವೈ
ಗೋಕರ್ಣಾಸನಮರ್ದನಭ್ರಮತಯಾ ನ ಪ್ರಾಪ
ಮೃತ್ಯೋರ್ವಶಮ್ ॥38॥

`ಕರ್ಣನಿಗೆ ಅರ್ಜುನವಧೆ ಮಾಡುವೆನೆಂದು ಕೇವಲ ಭ್ರಮವಿದ್ದುದರಿಂದ, ಅವನು ಅರ್ಜುನನಿಗೆ ಅಭಿಮುಖವಾಗಿ ಎಸೆದ ಸರ್ಪಾಸ್ತ್ರದಿಂದಲೂ ಕರ್ಣನನ್ನು ನೋಡುತ್ತ ಎದುರಿಗೇ ನಿಂತಿದ್ದ ಅರ್ಜುನನು ಮೃತ್ಯುವಶನಾಗಲಿಲ್ಲ. ಕರ್ಣನು ಆ ಸಪ್ರಾಸ್ತ್ರದಿಂದ ಅರ್ಜುನನ ಭೂಷಣವಾದ ಕಿರೀಟವನ್ನು ಮಾತ್ರ ತೆಗೆದ. ಗೋಚರವಾಗಿ ಎದುರಿಗೇ ಇದ್ದ ಅರ್ಜುನನ ಶಿರಸ್ಸನ್ನು ಅವನಿಗೆ ತೆಗಯಲಾಗಲಿಲ್ಲ.

`ಇದು ಸರಳ ಅರ್ಥಾನುವಾದ. ಇಲ್ಲಿ ಗೋಶಬ್ದವು ಬೇರೆಬೇರೆ ಅನೇಕ ಅರ್ಥಗಳಲ್ಲಿ ಪ್ರಯುಕ್ತವಾಗಿದೆ.

`ಗೋಕರ್ಣ'– ಗೋಶಬ್ದಕ್ಕೆ ವಾಕ್ಕು ಅಂದರೆ ವಾಗ್ರೂಪವಾದ ವೇದ ಎಂದರ್ಥವಿದೆ. `ಗೋ'ವಿನಲ್ಲಿ ವೇದದ ಮಾತಿನಲ್ಲಿ ಸದಾ `ಕರ್ಣ' ಕಿವಿಗೊಟ್ಟು ಕೇಳುವ ಸ್ವಭಾವದವನು. ಅಧ್ಯಯನಶೀಲನಾದವನು `ಗೋಕರ್ಣ' ಅರ್ಜುನ. ಸಾಕ್ಷಾತ್ ಕೃಷ್ಣನಿಂದ ಗೀತೋಪದೇಶವನ್ನಾಲಿಸಿದವನು ಅರ್ಜುನ. ಅಧ್ಯಾತ್ಮಾರ್ಥದಲ್ಲಿ ಅರ್ಜುನನು ಶ್ರವಣಮನನಾದಿಗುಣಗಳಿಗೆ ಪ್ರತೀಕ. ಅಂಥ `ಗೋಕರ್ಣ'ನಾದ ಅರ್ಜುನನಿಗೆ `ಅಭಿಮುಖೀಕೃತೇನ' ಅಭಿಮುಖವಾಗುವಂತೆ ಮಾಡಿದ `ಇಷುಣಾ' ಬಾಣದಿಂದ, `ಗೋಪುತ್ರ'ನನ್ನು ಅಂದರೆ ಸೂರ್ಯಪುತ್ರನಾದ ಕರ್ಣನನ್ನು `ಪ್ರೇಕ್ಷಿತಾ' ನೋಡುತ್ತ ಎದುರಿಗೇ ರಥದಲ್ಲಿ ನಿಂತಿದ್ದ ಅರ್ಜುನನು `ನ ಪ್ರಾಪ ಮೃತ್ಯೋರ್ವಶಂ' ಮೃತ್ಯುವಶನಾಗಲಿಲ್ಲ.

ಏಕೆಂದರೆ ತಾನು ಅರ್ಜುನನ ವಧ ಮಾಡಬಲ್ಲೆನೆಂದು ಕರ್ಣ ತಿಳಿದಿದ್ದುದು ಕೇವಲ ಭ್ರಮೆ.

`ಗೋಕರ್ಣ' ಎಲ್ಲ ದಿಕ್ಕುಗಳಲ್ಲಿ `ಕರ್ಣ' ಕಿವಿಗಳುಳ್ಳವನು ಸಹಸ್ರಾಕ್ಷ ನಾದ್ದರಿಂದ ಸಹಸ್ರಕರ್ಣನು ಇಂದ್ರ. ಅಥವಾ `ಗೋ' ನೀರಿನಲ್ಲಿ ಸಮುದ್ರದಲ್ಲಿ `ಕರ್ಣ' ಅಂದರೆ ಕರ್ಣಧಾರ, ಚುಕ್ಕಾಣಿ ಹಿಡಿದವನು ಮೂರ್ಲೋಕ ಸಾಮ್ರಾಜ್ಯದ ನಾವೆಯನ್ನು ಕರ್ಣಧಾರನಾಗಿ ನಡೆಸುವವನು ಇಂದ್ರ `ಗೋಕರ್ಣ' ಅವನ `ಆಸನ' ಸಿಂಹಾಸನ ಉಳ್ಳವನು ಅರ್ಜುನನೆ. ಅಂದರೆ ಅರ್ಜುನ ಸ್ವರ್ಗಲೋಕಕ್ಕೆ ಹೋಗಿದ್ದಾಗ ಇಂದ್ರ ತನ್ನ ಸಿಂಹಾಸನದಲ್ಲಿ ಅರ್ಜುನನನ್ನು ಜೊತೆಗೇ ಕೂಡಿಸಿಕೊಂಡಿದ್ದಾನೆ. ಅವನ ಅರ್ಧಾಸನ ಕೊಟ್ಟಿದ್ದಾನೆ ಎಂದಮೇಲೆ ಈ `ಗೋಕರ್ಣಾಸನ'ನಾದ ಅರ್ಜುನನ `ಮರ್ದನ' ಎನ್ನುವುದು ಕರ್ಣನಿಗೆ ಬರೀ ಕನಸು, ಭ್ರಮೆ. ಕರ್ಣನಿಗೆ ಈ ಭ್ರಮೆ ಇದೆ.

`ಗೋಕರ್ಣಾಸನ ಮರ್ದನ ಭ್ರಮತಯಾ' `ಅರ್ಜುನನ ವಧೆ ಮಾಡಬಲ್ಲೆ' ಎನ್ನುವ ಭ್ರಮೆ ಇದ್ದಿದ್ದರಿಂದ `ದೃಷ್ಟ್ವಾ ಗೋಗತ ಕಂ' ಕರ್ಣನು ಅರ್ಜುನನ ತಲೆಯನ್ನೇ ಗುರಿಯಾಗಿಟ್ಟುಕೊಂಡು ನೋಡಿದ. `ಗೋಗತ' ಎಂದರೆ `ಗೋಚರ'. `ಗೋ' ಅಂದರೆ ಕಣ್ಣು. ಕಣ್ಣಿಗೆ ಬಿದ್ದುದು ಎಲ್ಲ `ಗೋಚರ'ವೆನಿಸುತ್ತದೆ. ಹೀಗೆ ಗೋಚರವಾದ `ಕಂ' ಎಂದರೆ ತಲೆ. ತಲೆಗೇ ಗುರಿಇಟ್ಟು ಸರ್ಪಾಸ್ತ್ರವನ್ನು ಎಸೆದಿದ್ದಾನೆ. ಆದರೂ ಸರ್ಪಾಸ್ತ್ರ ತಲೆಯನ್ನು ಬಿಟ್ಟು ತಲೆಮೇಲಿನ ಕಿರೀಟಕ್ಕೇ ನಾಟಿತು. ಕಿರೀಟ ಮಾತ್ರವೇ ಪುಡಿಯಾಯಿತು. ತಲೆ ಉಳಿಯಿತು. ಅರ್ಜುನನು `ನ ಪ್ರಾಪ ಮೃತ್ಯೋರ್ವಶಂ' ಮೃತ್ಯುವಿಗೆ ವಶನಾಗಲಿಲ್ಲ.

ಆ ಕಿರೀಟವು `ಗೋಶಬ್ದಾತ್ಮಜ ಭೂಷಣ'ವಾಗಿತ್ತು. `ಗೋ ಶಬ್ದ' ಅಂದರೆ ವಜ್ರಾಯುಧದ ಶಬ್ದ. ವಜ್ರಾಯುಧವನ್ನೆಸೆದು ಸಿಡಿಲಿನ ಶಬ್ದ ಉಂಟುಮಾಡುವವನು `ಗೋಶಬ್ದ'ನು ಇಂದ್ರ. ಅರ್ಜುನನಿಗೆ ಇಂದ್ರ ತಾನೇ ತೊಡಿಸಿದ `ಭೂಷಣ' ಈ ಮುಕುಟ. `ಸುವಿಹಿತಂ' ಬ್ರಹ್ಮದೇವ ತಾನೇ ಪ್ರಯತ್ನಮಾಡಿ ಅದನ್ನು ಚೆನ್ನಾಗಿ ನಿರ್ಮಿಸಿ ಇಂದ್ರನಿಗೆ ಕೊಟ್ಟಿದ್ದ.

`ಸುವ್ಯಕ್ತಗೋ ಸುಪ್ರಭಂ' ಮೋಡಗಳ ಮರೆಯಿಂದ ಈಚೆ ಬಂದು `ಸುವ್ಯಕ್ತ'ನಾದ `ಗೋ' ಸೂರ್ಯನಂತೆ `ಸುಪ್ರಭೆ' ಉಳ್ಳದ್ದು ಈ ಕಿರೀಟ.

`ಗೋಶಬ್ದ ಗೋಪೂರಿ' `ಗೋಶಬ್ದ' `ಗೋ' ಎಂದು `ಶಬ್ದ' ಹೆಸರುಳ್ಳ ಸೂರ್ಯನಂತೆ `ಗೋ' ಪ್ರಕಾಶದಿಂದ ಲೋಕವನ್ನು `ಪೂರಿ' ತುಂಬುವ ಬೆಳಗಿಸುವ ಕಿರೀಟ ಅದು.

ಪ್ರಚಲಿತ ಪಾಠದಲ್ಲಿ ವ್ಯಾಖ್ಯಾನಕಾರರ ಪ್ರಕಾರ ಅರ್ಥಹೀಗೆ– ಕಣ್ಣುಗಳೇ ಕಿವಿಗಳಾಗಿ ಉಳ್ಳ ಸುಮುಖಿಯಾದ ಸರ್ಪಿಣಿ ತಕ್ಷಕನಾಗನ ಪತ್ನಿ, ಅಶ್ವಸೇನನ ತಾಯಿ, ಅರ್ಜುನನಿಂದ ಖಾಂಡವವನ ದಹನಕಾಲದಲ್ಲಿ ಹತಳಾಗಿದ್ದವಳು ನಿಮಿತ್ತಮಾತ್ರವಾಗಿ ಈಗ ಅರ್ಜುನನ ಕಿರೀಟವನ್ನು ಮಾತ್ರ ಹಾರಿಸಿದಳು. ಖಾಂಡವದಹನಕಾಲದಲ್ಲಿ ಪುತ್ರನಾದ ಅಶ್ವಸೇನನನ್ನು ಉಳಿಸಲು ಅವನನ್ನು ನುಂಗಿ, ವನದಿಂದ ಹಾರಿಹೋಗುತ್ತಿದ್ದಾಗ, ಅರ್ಜುನನ ಬಾಣದಿಂದ ತಾನು ಹತಳಾದರೂ ಪುತ್ರನು ಉಳಿದುಕೊಂಡಿದ್ದರಿಂದ ಪುತ್ರನನ್ನು ಉಳಿಸಿದ ತಾಯಿಯ ಮುಖವು ಸುಮುಖ. ತಾಯಿ ಸುಮುಖಿ. ತಾನು ಉಳಿಸಿದ ಪುತ್ರನು ಕಿರೀಟವನ್ನು ಹಾರಿಸಿದ್ದರಿಂದ `ಆತ್ಮಾ ವೈ ಪುತ್ರ ನಾಮಾಸಿ' ಎಂಬಂತೆ ತಾನೇ ಕಿರೀಟವನ್ನು ಹಾರಿಸಿದಂತಾಯಿತು. `ಗೋ' ಅಂದರೆ ರಶ್ಮಿ, ರಶ್ಮಿಯುಕ್ತನಾದ ಸೂರ್ಯ. ಅವನ `ಪುತ್ರ' ಕರ್ಣ. ಕರ್ಣನಿಂದ `ಪ್ರೇಷಿತಾ' ಕಳಿಸಲ್ಪಟ್ಟವಳು ಕಿರೀಟವನ್ನು ಹಾರಿಸಿದಳು. `ಗೋ' ಅಂದರೆ ರಶ್ಮಿ, ಕುದುರೆಗಳ ಲಗಾಮು ಹಗ್ಗಗಳು. ಅವುಗಳ ಪ್ರದೇಶದಲ್ಲಿ ಅರ್ಜುನನ ಶಿರಸ್ಸು ಇದ್ದುದರಿಂದ ಅದು `ಗೋಗತ'ವಾದ `ಕಂ' ಗೋಗತಕಂ ಎನಿಸುತ್ತದೆ. ಶಿರಸ್ಸೆಂದರೆ ಇಲ್ಲಿ ಕುತ್ತಿಗೆ ವಿವಕ್ಷಿತವಾಗಿದೆ. ಕರ್ಣನು ಅರ್ಜುನನ ಕುತ್ತಿಗೆಯನ್ನು ನೋಡಿ ಗುರಿ ಇಟ್ಟು ತನ್ನನ್ನು ಅಂದರೆ ಸರ್ಪಾಸ್ತ್ರರೂಪದಲ್ಲಿದ್ದ ಅಶ್ವಸೇನನ ತಾಯಿಯಾದ ತನ್ನನ್ನು ಅರ್ಜುನನು ಹೊಡೆದಿದ್ದರಿಂದ ಅವಳು ಕುತ್ತಿಗೆಯನ್ನು `ದೃಷ್ಟ್ವಾ' ನೋಡುತ್ತಿದ್ದರೂ, ಶ್ರೀಕೃಷ್ಣನು ಅರ್ಜುನನ ರಥವನ್ನು ನೆಲದಲ್ಲಿ ಒತ್ತಿದ್ದರಿಂದ, ಅರ್ಜುನನ ತಲೆ ಕೆಳಗೆ ಬಂದರೂ ಬಾಣದ ವೇಗದಿಂದ ತಾನು ಕೆಳಗೆ ಬರಲಾಗದೆ, ಆ ಪ್ರದೇಶದಲ್ಲಿದ್ದ ಕಿರೀಟವನ್ನು ಮಾತ್ರ ಅಪಹರಿಸಿದಳು. ಬಳಿಕ ಅಶ್ವಸೇನ ಪುನಃ ತನ್ನನ್ನು ಎಸೆಯುವಂತೆ ಕರ್ಣನನ್ನು ಕೇಳಿಕೊಂಡರೂ ಅವನು ನಿರಾಕರಿಸಿದ್ದರಿಂದ ತಾನೇ ಅರ್ಜುನನನ್ನು ಕೊಲ್ಲಲು ಬಂದ. ಆಗ ಅರ್ಜುನನ ಬಾಣದಿಂದ ಹತನಾದ. ಹೀಗೆ ಅರ್ಜುನನು `ಅಪ್ರಾಪ್ಯ' ಸರ್ಪವನ್ನು ಪುನಃ ಹೊಂದದೆ `ಮೃತ್ಯೋರ್ವಶಂ ನ ಯಯೌ' ಮೃತ್ಯುವಶನಾಗಲಿಲ್ಲ. `ಸುವ್ಯಕ್ತ'ವಾದ `ಗೋ' `ಅಸು' ತೇಜೋಬಲಗಳಿಂದ `ಪ್ರಭಂ' ಹೊಳೆಯುವ ಅರ್ಜುನನನ್ನು ನೋಡಿಯೂ ಅವನನ್ನು ಕೊಲ್ಲಲಾಗಲಿಲ್ಲ. `ಗೋಶಬ್ದ' `ಗೋ' ರಶ್ಮಿಗಳಿರುವುದರಿಂದ ರಶ್ಮಿಉಳ್ಳವನೆಂದು `ಶಬ್ದ' ವ್ಯವಹಾರವುಳ್ಳವನು ಸೂರ್ಯ. ಅವನಂತೆ `ಗೋ'ಗಳಿಂದ ಕಿರಣಗಳಿಂದ ಲೋಕವನ್ನು `ಪೂರಿ' ತುಂಬಿಸುವ ಕಿರೀಟವು `ಗೋಶಬ್ದ ಗೋಪೂರಿ'ಯಾಗಿದೆ. ಅಂಥ ಕಿರೀಟವನ್ನು ಮಾತ್ರ ಹಾರಿಸಲು

ಸಾಧ್ಯವಾಯಿತು. ಅರ್ಜುನನು `ಗೋಕರ್ಣ'ವಾದ ಸರ್ಪವನ್ನು `ಅಸನ' ಬಾಣಪ್ರಯೋಗದಿಂದ `ಮರ್ದನಃ' ಸಂಹಾರ ಮಾಡಿದ. `ಕೃತೇನ ಇಷುಣಾ' ಅಂದರೆ ತಾಯಿ ಸ್ವತಃ ನಿರ್ಮಿಸಿ ರಕ್ಷಿಸಿದ ಮಗನೇ ಬಾಣರೂಪವಾಗಿದ್ದಾನೆ, ಅಂಥ ಬಾಣದಿಂದ ಯುಕ್ತಳಾಗಿ ಅವನ ಮೂಲಕ `ಸುಮುಖಿ'ಯು ಕಿರೀಟವನ್ನು ಹಾರಿಸಿದಳು ಎಂದರ್ಥ. ನೀಲಕಂಠೀ ಮುಂತಾದ ವ್ಯಾಖ್ಯಾನಕಾರರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ.

ಸ ಸಾಯಕಃ ಕರ್ಣಭುಜೇರಿತಸ್ತತೋ
ಹುತಾಶನಾರ್ಕಪ್ರತಿಮದ್ಯುತಿರ್ಮಹಾನ್ |
ಮಹೋರಗಃ ಕೃತವೈರೋಽರ್ಜುನೇನ
ಕಿರೀಟಮಾಸಾದ್ಯ ಸಮುತ್ಪಪಾತ ॥39॥

ಕರ್ಣನ ಕೈಯಿಂದ ಪ್ರಯೋಗಿಸಲ್ಪಟ್ಟ ಆ ಮಹಾಬಾಣವು ಅಗ್ನಿಸೂರ್ಯರಂತೆ ಹೊಳೆಯುವ ಮಹಾಸರ್ಪ, ಅರ್ಜುನನಲ್ಲಿ ವೈರ ಮಾಡಿದ್ದವನು. ಅವನು ಕಿರೀಟವನ್ನು ಎತ್ತಿಕೊಂಡು ಮೇಲೆ ಹಾರಿದ.

ತಂ ಚಾಪಿ ದಗ್ಧ್ವಾ ತಪನೀಯಚಿತ್ರಂ
ಕಿರೀಟಮಸ್ಯಾತ್ಮವಿನಾಶನಾಯ |
ಇಯೇಷ ಗಂತುಂ ಪುನರೇವ ತೂಣಂ
ಪೃಷ್ಟಶ್ಚ ಕರ್ಣೇನ ತತೋಽಬ್ರವೀದಿದಮ್ ॥40॥

ಅರ್ಜುನನ ಬಂಗಾರದ ಸುಂದರವಾದ ಆ ಕಿರೀಟವನ್ನು ಸುಟ್ಟ ಬಳಿಕ ತನ್ನ ವಿನಾಶವನ್ನು ತಾನೇ ತಂದುಕೊಳ್ಳುವುದಕ್ಕೆಂದು ಕರ್ಣನ ಬತ್ತಳಿಕೆಯನ್ನು ತಿರುಗಿ ಪ್ರವೇಶಮಾಡಲು ಬಯಸಿದ ಅಶ್ವಸೇನ. ಕರ್ಣ ಕೇಳಿದಾಗ ಅವನು ನುಡಿದ.

ಮುಕ್ತಸ್ತ್ವಯಾಹಂ ನ ಸಮೀಕ್ಷ್ಯ ಕರ್ಣ
ಶಿರೋ ಹೃತಂ ಯನ್ನ ಮಯಾರ್ಜುನಸ್ಯ |
ಸಮೀಕ್ಷ್ಯ ಮಾಂ ಮುಂಚ ರಣೇ ತ್ವಮಾಶು
ಹಂತಾಸ್ಮಿ ಶತ್ರುಂ ತವ ಚಾತ್ಮನಶ್ಚ ॥41॥

ಕರ್ಣ, ನೀನು ಗುರಿಯನ್ನು ಸರಿಯಾಗಿ ಲಕ್ಷ್ಯವಿಟ್ಟು ನೋಡದೆ ನನ್ನನ್ನು ಎಸೆದುದರಿಂದ ಅರ್ಜುನನ ಶಿರಸ್ಸನ್ನು ಹಾರಿಸಲು ನನಗೆ ಶಕ್ಯವಾಗಲಿಲ್ಲ. ಸರಿಯಾಗಿ ನೋಡಿ ರಣದಲ್ಲಿ ನನ್ನನ್ನು ಎಸೆ. ನಿನಗೂ ನನಗೂ ಶತ್ರುವಾಗಿರುವ ಅರ್ಜುನನನ್ನು ನಾನು ಬೇಗನೆ ಸಂಹರಿಸುತ್ತೇನೆ.

ಇತ್ಯೇವಮುಕ್ತೋ ಯುಧಿ ಸೂತಪುತ್ರ-
ಸ್ತಮಬ್ರವೀತ್ ಕೋ ಭವಾನುಗ್ರರೂಪಃ॥42॥

ರಣದಲ್ಲಿ ಅಶ್ವಸೇನ ನಾಗನು ಹೀಗೆ ಹೇಳಿದಾಗ ಕರ್ಣನು ಕೇಳಿದ, `ಯಾರು ನೀನು, ಉಗ್ರರೂಪದವನು?'

ತಮಬ್ರವೀದ್ ವಿದ್ಧಿ ಕೃತಾಗಸಂ ಮಾಂ
ಪಾರ್ಥೇನ ಮಾತುರ್ವಧಜಾತವೈರಮ್ |
ಯದಿ ಸ್ವಯಂ ವಜ್ರಧರೋಽಸ್ಯ ಗೋಪ್ತಾ
ತಥಾಪಿ ಯಾತಾ ಪಿತೃರಾಜವೇಶ್ಮನಿ ॥43॥

`ಅರ್ಜುನನು ನನ್ನಲ್ಲಿ ಅಪರಾಧ ಮಾಡಿದ್ದಾನೆ, ನನ್ನ ತಾಯಿಯನ್ನು ಕೊಂದು ನನ್ನ ವೈರವನ್ನು ಕಟ್ಟಿಕೊಂಡಿದ್ದಾನೆ. ಸ್ವತಃ ದೇವೇಂದ್ರನೇ ಈತನ ರಕ್ಷಣೆಗೆ ನಿಂತರೂ ಅವನೂ ಯಮಸದನಕ್ಕೇ ಹೋಗುತ್ತಾನೆ' ಎಂದು ಅಶ್ವಸೇನ ನುಡಿದ.

ತ್ವಂ ಮಾವಮಂಸ್ಥಾಃ ಕುರು ಮೇ ವಚೋಽದ್ಯ
ನಿಹನ್ಮಿ ಶತ್ರುಂ ತವ ಮುಂಚ ಮಾಂ ತ್ವಮ್ |
ತ್ವಯಾ ನ ಸಂಧಾನವತಾಹಂ ಮುಕ್ತ-
ಸ್ತೇನಾಪಿ ಕೃಷ್ಣೇನ ಚ ವಂಚಿತೋಽಸ್ಮಿ ॥44॥

`ಕರ್ಣ, ನೀನು ಅವಮಾನಿಸಬೇಡ, ನನ್ನ ಮಾತನ್ನು ನಡೆಸಿಕೊಡು. ನಿನ್ನ ಶತ್ರುವನ್ನು ಕೊಲ್ಲುತ್ತೇನೆ, ಪುನಃ ನನ್ನನ್ನು ಎಸೆ. ನೀನು ಸರಿಯಾಗಿ ಗುರಿ ಇಟ್ಟು ಬಿಲ್ಲಿಗೆ ನನ್ನನ್ನು ಹೂಡದೇ ಎಸೆದುಬಿಟ್ಟೆ. ಕೃಷ್ಣನಿಂದಲೂ ನಾನು ವಂಚನೆಗೊಳಗಾದೆ.'

ಕರ್ಣಃ

ನ ನಾಗ ಕರ್ಣೋಽದ್ಯ ರಣೇ ಪರಸ್ಯ
ಬಲಂ ಸಮಾಸ್ಥಾಯ ಜಯಂ ಬುಭೂಷೇತ್ |
ನ ಸಂದಧೇ ದ್ವಿಃ ಶರಮೇವ ನಾಗ
ಯದ್ಯರ್ಜುನಾನಾಂ ಶತಮೇವ ಹನ್ಯಾತ್ ॥45॥

ಕರ್ಣನುಡಿದ– ನಾಗನೆ, ಈ ಕರ್ಣ ಇನ್ನೊಬ್ಬರ ಬಲವನ್ನು ಆಶ್ರಯಿಸಿ ಜಯ ಸಂಪಾದನೆ ಮಾಡಲು ಬಯಸುವುದಿಲ್ಲ. ನೂರು ಅರ್ಜುನರನ್ನು ಕೊಲ್ಲಬೇಕಾಗಿ ಬಂದರೂ ಕರ್ಣನು ಎರಡು ಬಾರಿ ಬಾಣವನ್ನು ಹೂಡಿದ್ದಿಲ್ಲ.

`ಸರ್ಪಾಸ್ತ್ರದಲ್ಲಿ ನಾನು ಪೂಜಿಸುತ್ತಿದ್ದ ನಾಗದೇವತೆಗಳೇ ನನ್ನ ಶತ್ರುವನ್ನು ಗೆಲ್ಲಬೇಕು. ಮೂರನೆಯವನಾದ ನಿನ್ನನ್ನು ನಾನು ಶತ್ರುನಾಶ ಮಾಡಲು ಕೇಳಿಕೊಳ್ಳಲಾರೆ' ಎನ್ನುತ್ತಾನೆ ಕರ್ಣ. ಸರ್ಪಾಸ್ತ್ರ ಗುರಿತಪ್ಪಿರದಿದ್ದರೆ `ಅಶ್ವಸೇನನ ಸಹಾಯದಿಂದ ಕರ್ಣ ಶತ್ರುವಧೆ ಮಾಡಿದನೆಂ'ದು ಅಪಖ್ಯಾತಿ ಬರುತ್ತಿತ್ತು. ಅದರಿಂದ ಕೃಷ್ಣ ಕರ್ಣನಿಗೆ ವಂಚನೆ ಮಾಡಿಲ್ಲ. ಅನುಗ್ರಹವನ್ನೇ ಮಾಡಿದ. ಅರ್ಜುನನನ್ನೂ ರಕ್ಷಿಸಿದ.

ವ್ಯಾಲಾಸ್ತ್ರಸರ್ಗೋತ್ತಮಯತ್ನಮನ್ಯುಭಿ-

ಹರ್ಂತಾಸ್ಮಿ ಪಾರ್ಥಂ ಸುಸುಖೀ ವ್ರಜ ತ್ವಮ್ ॥46॥
ನಾಗನೆ, ಅಸ್ತ್ರಪ್ರಯೋಗ, ಉತ್ತಮಪ್ರಯತ್ನ ಹಾಗೂ ರೋಷಗಳಿಂದಲೇ ಅರ್ಜುನನನ್ನು ನಾನು ಕೊಲ್ಲುವೆನು, ನೀನು ಹೋಗು, ಸುಖವಾಗಿರು.'
ಸ ಏವಮುಕ್ತೋ ಯುಧಿ ನಾಗರಾಜಃ
ಕರ್ಣೇನ ರೋಷಾದಸಹಂಸ್ತು ವಾಕ್ಯಮ್ |
ಸ್ವಯಂ ಪ್ರಾಯಾತ್ ಪಾರ್ಥವಧಾಯ ರಾಜನ್
ಕೃತ್ವೇಷುರೂಪಂ ವಿಜಿಘಾಂಸುರರ್ಜುನಮ್ ॥47॥
ರಾಜನೆ, ಕರ್ಣನು ರಣದಲ್ಲಿ ಈ ಮಾತನ್ನು ನುಡಿದಾಗ ನಾಗರಾಜನಿಗೆ ಸಹನೆಯಾಗಲಿಲ್ಲ. ರೋಷದಿಂದ ಅರ್ಜುನನನ್ನು ಕೊಲ್ಲುವ ಬಯಕೆಯಿಂದ ಬಾಣರೂಪವನ್ನು ತಳೆದು ಅರ್ಜುನನ ವಧೆಗೆ ತಾನೇ ಹೊರಟ.
ತತಃ ಕೃಷ್ಣಃ ಪಾರ್ಥಮುವಾಚ ಸಂಖೇ
ಮಹೋರಗಂ ಕೃತವೈರಂ ಜಹಿ ತ್ವಮ್ ॥48॥
ಆಗ ಶ್ರೀಕೃಷ್ಣನು ರಣದಲ್ಲಿ ಅರ್ಜುನನಿಗೆ ನುಡಿದ, `ನಿನ್ನಲ್ಲಿ ವೈರಮಾಡಿರುವ ಮಹಾಸರ್ಪವನ್ನು ನೀನು ವಧಿಸು'
ಸ ಏವಮುಕ್ತೋ ಮಧುಸೂದನೇನ
ಗಾಂಡೀವಧನ್ವಾ ರಿಪುಷೂಗ್ರಧನ್ವಾ |
ಉವಾಚ ಕೋ ನ್ವೇಷ ಮಮಾದ್ಯ ನಾಗಃ
ಸ್ವಯಂ ಯ ಆಗಾದ್ ಗರುಡಸ್ಯೇವ ವಕ್ತ್ರಮ್ ॥49॥
ಶತ್ರುಗಳಿಗೆ ಉಗ್ರವಾದ ಧನುಸ್ಸನ್ನು ಧರಿಸುವ ಗಾಂಢೀವಧನುರ್ಧಾರಿಯಾದ ಅರ್ಜುನನು ಕೃಷ್ಣನ ಈ ಮಾತನ್ನು ಕೇಳಿ ನುಡಿದ: `ಯಾರು ಈ ನಾಗ? ಗರುಡನ ಬಾಯಿಗೆ ತಾನೇ ಬೀಳುವಂತೆ ನನ್ನ ಬಳಿಗೆ ಬರುತ್ತಿದ್ದಾನೆ!'
ಕೃಷ್ಣಃ
ಯೋಽಸೌ ತ್ವಯಾ ಖಾಂಡವೇ ಚಿತ್ರಭಾನುಂ
ಸಂತರ್ಪಯಾನೇನ ಧನುರ್ಧರೇಣ |
ವಿಯದ್ಗತೋ ಬಾಣನಿಕೃತ್ತದೇಹೋ
ಹ್ಯನೇಕರೂಪೋ ನಿಹತಾಸ್ಯ ಮಾತಾ ॥50॥
ಶ್ರೀಕೃಷ್ಣ ನುಡಿದ– `ಧನುರ್ಧಾರಿ ನೀನು ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಪಡಿಸುತ್ತಿದ್ದಾಗ ಆಕಾಶದಲ್ಲಿ ಹಾರಿಹೋಗುತ್ತಿದ್ದ ಈತನ ಶರೀರವನ್ನು ಬಾಣದಿಂದ ಕತ್ತರಿಸಿದ್ದೆ. ಈತನ ತಾಯಿಯನ್ನೂ ಕೊಂದಿದ್ದೆ. ಅವನು ಅನೇಕ ರೂಪದವನು. ಬಾಣರೂಪದಿಂದ ಬರುತ್ತಿದ್ದಾನೆ.
ಸ ಏಷ ತೇ ವೈರಮನುಸ್ಮರನ್ ವೈ
ತ್ವಾಮದ್ಯ ಚಾಯಾತಿ ವಧಾಯ ಪಾರ್ಥ |
ನಭಶ್ಚ್ಯುತಾಂ ಪ್ರಜ್ವಲಿತಾಂ ಮಹೋಲ್ಕಾಂ
ಪಶ್ಯೈನಮಾಯಾಂತಮಮಿತ್ರಸಾಹ ॥51॥
ಅವನು ಈಗ ನಿನ್ನಲ್ಲಿ ವೈರವನ್ನೇ ಬಗೆದು ನಿನ್ನನ್ನು ಕೊಲ್ಲಲು ಬರುತ್ತಿದ್ದಾನೆ, ಅರ್ಜುನ! ಶತ್ರುನಾಶಕನೆ, ಆಕಾಶದಿಂದ ಉದುರಿ ಬೀಳುವ ಉರಿವ ದೊಡ್ಡ ಉಲ್ಕೆಯಂತೆ ಬರುತ್ತಿದ್ದಾನೆ ನೋಡು.
ಸಂಜಯಃ
ತತಸ್ತು ಜಿಷ್ಣುಃ ಪರಿವೃತ್ಯ ರೋಷಾ-
ಚ್ಚಿಚ್ಛೇದ ಷಡ್ಭಿರ್ನಿಶಿತೈಃ ಪೃಷತ್ಕೈಃ |
ನಾಗಂ ವಿಯತ್ತಿರ್ಯಗಿವೋತ್ಪತಂತಂ
ಸ ಚ್ಛಿನ್ನಗಾತ್ರೋ ನಿಪಪಾತ ಭೂಮೌ ॥52॥
ಸಂಜಯ ನುಡಿದ– ಆಗ ಅರ್ಜುನನು ರೋಷದಿಂದ ಸರ್ಪದ ಕಡೆಗೆ ತಿರುಗಿ, ಆಕಾಶದಲ್ಲಿ ವಕ್ರಗತಿಯಿಂದ ಹಿಂತಿರುಗಿ ತನ್ನ ಕಡೆಗೇ ಹಾರಿಬರುತ್ತಿದ್ದ ಆತನನ್ನು ಹರಿತವಾದ ಆರು ಬಾಣಗಳಿಂದ ಕತ್ತರಿಸಿದ. ಅವನು ಛಿನ್ನಭಿನ್ನವಾಗಿ ನೆಲದಲ್ಲಿ ಬಿದ್ದ.
ಹತೇ ತು ತಸ್ಮಿನ್ ಭುಜಗೇ ಕಿರೀಟಿನಾ
ಸ್ವಯಂ ವಿಭುಃ ಪಾರ್ಥಿವ ಭೂತಳಾದಥ |
ಸಮುಜ್ಜಹಾರಾಶು ಮಹಾಭುಜಃ ಸ ತಂ
ರಥಂ ಭುಜಾಭ್ಯಾಂ ಪುರುಷೋತ್ತಮಃ ಪುನಃ ॥53॥
ರಾಜನೇ ! ಅಶ್ವಸೇನ ನಾಗನು ಅರ್ಜುನನಿಂದ ಹತನಾದಾಗ ಸರ್ವಶಕ್ತನಾದ ಶ್ರೀಕೃಷ್ಣ ಬೇಗನೆ ಆ ರಥವನ್ನು ತಾನೇ ಎರಡು ಕೈಗಳಿಂದ ಪುನಃ ನೆಲದಿಂದ ಮೇಲೆತ್ತಿದ.
ತ್ರಾತಶ್ಚ ಪಾರ್ಥಃ ಪ್ರಣತಾಶ್ಚ ವಾಹಾಃ
ಸಂಸ್ಥಾಪ್ಯ ಕೃಷ್ಣೇನ ಪುನಸ್ತದೀಯಾಃ ॥54॥
ಶ್ರೀಕೃಷ್ಣನು ಕಾಲಿಂದ ರಥವನ್ನು ನೆಲಕ್ಕೆ ಒತ್ತಿದಾಗ ಅದರ ಭಾರಕ್ಕೆ ಕುದುರೆಗಳು ನೆಲದ ಮೇಲೆ ಮೊಳಕಾಲೂರಿ ನಿಂತಿದ್ದುವು. ಕೃಷ್ಣನು ಈಗ ರಥವನ್ನು ಮೇಲೆತ್ತಿ ಕುದುರೆಗಳನ್ನು ಪುನಃ ಕಾಲೂರಿ ನಿಲ್ಲುವಂತೆ ಮಾಡಿ ಕಾಪಾಡಿದ, ಅರ್ಜುನನನ್ನೂ ಕಾಪಾಡಿದ.
ತಸ್ಮಿನ್ ಮುಹೂರ್ತೇ ದಶಭಿಃ ಪೃಷತ್ಕೈಃ

ಶಿಲಾಶಿತೈರ್ಬರ್ಹಿಣಕಂಕಪತ್ರೈಃ|
ವಿವ್ಯಾಧ ಕರ್ಣಃ ಪುರುಷಪ್ರವೀರಂ
ಧನಂಜಯಂ ತಿರ್ಯಗವೇಕ್ಷಮಾಣಃ ॥55॥
ಆ ಮುಹೂರ್ತದಲ್ಲಿ ಕರ್ಣನು ವಕ್ರದೃಷ್ಟಿಯಿಂದ ನೋಡುತ್ತ ನವಿಲು ಹದ್ದುಗಳ ಗರಿಗಳಿಂದ ಕೂಡಿದ, ಮಸೆಗಲ್ಲಿಗೆ ತಿಕ್ಕಿ ಹದ ಮಾಡಿದ ಹತ್ತು ಬಾಣಗಳಿಂದ ಪುರುಷೋತ್ತಮನಾದ ಅರ್ಜುನನನ್ನು ಹೊಡೆದ.
ತತೋಽರ್ಜುನೋ ದ್ವಾದಶಭಿರ್ವಿಮುಕ್ತೈ-
ರ್ವಾರಾಹಕರ್ಣೈರ್ನಿಶಿತೈಃ ಸಮರ್ಪ್ಯ|
ನಾರಾಚಮಾಶೀವಿಷತುಲ್ಯವೇಗಂ
ಆಕರ್ಣಪೂರ್ಣಾಯತಮುತ್ಸಸರ್ಜ ॥56॥
ಅರ್ಜುನನೂ ಹನ್ನೆರಡು ತೀಕ್ಷ್ಣ ವರಾಹಕರ್ಣ ಬಾಣಗಳಿಂದ ಹೊಡೆದು ಪುನಃ ಸರ್ಪವಿಷದ ವೇಗದಂಥ ವೇಗವುಳ್ಳ ನಾರಾಚವನ್ನು ಕಿವಿಯವರೆಗೆ ಸೆಳೆದು ಕರ್ಣನ ಮೇಲೆ ಎಸೆದ.
ಸ ಚಿತ್ರವರ್ಮೇಷುವರೋ ವಿದಾರ್ಯ
ಪ್ರಾಣಾನ್ನಿರಸ್ಯನ್ನಿವ ಸಾಧು ಮುಕ್ತಃ|
ಕರ್ಣಸ್ಯ ಪೀತ್ವಾ ರುಧಿರಂ ವಿವೇಶ
ವಸುಂಧರಾಂ ಶೋಣಿತದಿಗ್ಧವಾಜಃ ॥57॥
ಚೆನ್ನಾಗಿ ಎಸೆದ ಆ ಉತ್ತಮ ಬಾಣವು ಕರ್ಣನ ಸುಂದರವಾದ ಕವಚವನ್ನು ಭೇದಿಸಿ, ಪ್ರಾಣವನ್ನೇ ಕಳೆಯುವುದೋ ಎಂಬಂತೆ ಕರ್ಣನ ನೆತ್ತರನ್ನು ಕುಡಿದು, ರೆಕ್ಕೆಗಳಲ್ಲಿ ನೆತ್ತರಿಂದ ತೋಯ್ದುಕೊಂಡು, ನೆಲವನ್ನು ಹೊಕ್ಕಿತು.
ತತೋ ವೃಷೋ ಬಾಣನಿಪಾತಕೋಪಿತೋ
ಮಹೋರಗೋ ದಂಡವಿಘಟ್ಟಿತೋ ಯಥಾ|
ತಥಾಶುಕಾರೀ ವ್ಯಸೃಜಚ್ಛರೋತ್ತಮಾನ್
ಮಹಾವಿಷಃ ಸರ್ಪ ಇವೋತ್ತಮಂ ವಿಷಮ್ ॥58॥
ಕೋಲಿಂದ ಹೊಡೆದ ದೊಡ್ಡ ಹಾವಿನಂತೆ ಬಾಣಗಳ ಹೊಡೆತದಿಂದ ಕರ್ಣ ಕುಪಿತನಾದ. ಮಹಾವಿಷದ ಸರ್ಪವು ಉತ್ತಮ ವಿಷವನ್ನು ಕಾರುವಂತೆ ವೇಗವುಳ್ಳ ಕರ್ಣನು ಉತ್ತಮವಾದ ಬಾಣಗಳನ್ನು ಎಸೆದ.
ಜನಾರ್ದನಂ ದ್ವಾದಶಭಿಃ ಪರಾಭಿನತ್
ನವೈರ್ನವತ್ಯಾ ಚ ಶರೈಸ್ತಥಾರ್ಜುನಮ್|
ಶರೇಣ ಘೋರೇಣ ಪುನಶ್ಚ ಪಾಂಡವಂ
ವಿಭಿದ್ಯ ಕರ್ಣೋಽಭ್ಯನದತ್ ಜಹಾಸ ಚ ॥59॥
ಶ್ರೀಕೃಷ್ಣನನ್ನು ಹನ್ನೆರಡು ಬಾಣಗಳಿಂದ ಹೊಡೆದು, ತೊಂಬತ್ತು ನೂತನ ಬಾಣಗಳಿಂದ ಅರ್ಜುನನನ್ನೂ ಹೊಡೆದ. ಪುನಃ ಘೋರವಾದ ಬಾಣದಿಂದ ಅರ್ಜುನನನ್ನು ಹೊಡೆದು ಕರ್ಣನು ಗರ್ಜಿಸಿದ. ಅಟ್ಟಹಾಸ ಗೈದ.
ತಮಸ್ಯ ಹರ್ಷಂ ಮಮೃಷೇ ನ ಪಾಂಡವೋ
ಬಿಭೇದ ಮರ್ಮಾಣಿ ತತೋಽಸ್ಯ ಮರ್ಮವಿತ್|
ಪರಃಶತೈಃ ಪತ್ರಿಭಿರಿಂದ್ರವಿಕ್ರಮ-
ಸ್ತಥಾ ಯಥೇಂದ್ರೋ ಬಲಮೋಜಸಾಽಹನತ್ ॥60॥
ಕರ್ಣನ ಹರ್ಷವನ್ನು ಅರ್ಜುನ ಸಹಿಸಲಿಲ್ಲ. ಮರ್ಮಸ್ಥಳವನ್ನು ಬಲ್ಲ ಅರ್ಜುನ ಕರ್ಣನ ಮರ್ಮಸ್ಥಳಗಳಿಗೆ ಹೊಡೆದ. ಇಂದ್ರನು ಬಲಾಸುರನನ್ನು ಹೊಡೆದಂತೆ ಇಂದ್ರನಂಥ ಪರಾಕ್ರಮಿಯಾದ ಅರ್ಜುನನು ರೆಕ್ಕೆಗಳುಳ್ಳ ನೂರಾರು ಬಾಣಗಳಿಂದ ಕರ್ಣನನ್ನು ಬಲವಾಗಿ ಹೊಡೆದ.
ತತಃ ಶರಾಣಾಂ ನವತಿಂ ತದಾರ್ಜುನಃ
ಸಸರ್ಜ ಕರ್ಣೇಽಂತಕದಂಡಸನ್ನಿಭಾಮ್|
ಶರೈರ್ಭೃಶಾಯಸ್ತತನುಃ ಪ್ರವಿವ್ಯಥೇ
ತಥಾ ಯಥಾ ವಜ್ರವಿದಾರಿತೋಽಚಲಃ ॥61॥
ಯಮದಂಡದಂಥ ತೊಂಬತ್ತು ಬಾಣಗಳನ್ನು ಅರ್ಜುನನು ಕರ್ಣನ ಮೇಲೆ ಎಸೆದ. ವಜ್ರಾಯುಧದಿಂದ ಸೀಳಿದ ಬೆಟ್ಟದಂತೆ, ಕರ್ಣನು ಬಾಣಗಳಿಂದ ಆಯಾಸಗೊಂಡು ನೋವನ್ನು ಅನುಭವಿಸಿದ.
ಮಣಿಪ್ರವೇಕೋತ್ತಮವಜ್ರಹಾಟಕೈ-
ರಲಂಕೃತಂ ಚಾಸ್ಯ ವರಾಂಗಭೂಷಣಮ್|
ಪ್ರವಿದ್ಧಮುರ್ವ್ಯಾಂ ನಿಪಪಾತ ಪತ್ರಿಭಿ-
ರ್ಧನಂಜಯೇನೋತ್ತಮಕುಂಡಲೇಽಪಿ ಚ ॥62॥
ಉತ್ತಮ ರತ್ನ, ಉತ್ತಮವಾದ ವಜ್ರ ಮತ್ತು ಬಂಗಾರದಿಂದ ಅಲಂಕೃತವಾದ ಕರ್ಣನ ಶಿರೋಭೂಷಣವಾದ ಕಿರೀಟವು ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟು ನೆಲದಲ್ಲಿ ಬಿದ್ದಿತು. ಉತ್ತಮವಾದ ಕುಂಡಲಗಳೂ ಬಿದ್ದುವು.
ಮಹಾಧನಂ ಶಿಲ್ಪಿವರೈಃ ಪ್ರಯತ್ನತಃ
ಕೃತಂ ಯದಸ್ಯೋತ್ತಮವರ್ಮ ಭಾಸ್ವರಮ್|

ಸುದೀರ್ಘಕಾಲೇನ ತದಸ್ಯ ಪಾಂಡವಃ
ಕ್ಷಣೇನ ಬಾಣೈರ್ಬಹುಧಾ ವ್ಯಶಾತಯತ್ ॥63॥
ಶ್ರೇಷ್ಠ ಅಕ್ಕಸಾಲಿಗಳು ದೀರ್ಘಕಾಲ ಪ್ರಯತ್ನಮಾಡಿ ನಿರ್ಮಿಸಿದ್ದ ಹೊಳೆಯುವ ಕರ್ಣನ ಅಮೂಲ್ಯವಾದ ಕವಚವನ್ನು ಕೂಡ ಬಾಣಗಳಿಂದ ಕ್ಷಣದಲ್ಲಿ ಬಹುಚೂರುಗಳಾಗಿ ಮಾಡಿದ.
ಸ ತಂ ವಿವರ್ಮಾಣಮಥೋತ್ತಮೇಷುಭಿಃ
ಶಿತೈಶ್ಚತುರ್ಭಿಃ ಕುಪಿತಃ ಪರಾಭಿನತ್ |
ಸ ವಿವ್ಯಥೇಽತ್ಯರ್ಥಮರಿಪ್ರಹಾರತೋ
ಯಥಾತುರಃ ಪಿತ್ತಕಫಾನಿಲವ್ರಣೈಃ ॥64॥
ಕವಚವಿಲ್ಲದಿದ್ದ ಕರ್ಣನನ್ನು ಅರ್ಜುನನು ಕೋಪದಿಂದ ತೀಕ್ಷ್ಣವಾದ ನಾಲ್ಕು ಉತ್ತಮ ಬಾಣಗಳಿಂದ ಹೊಡೆದ. ರೋಗಿಯು ಪಿತ್ತ ಕಫ ವಾತಗಳಿಂದ ವ್ರಣಗಳಿಂದ ಹೆಚ್ಚು ಬಳಲುವಂತೆ ಕರ್ಣನೂ ಶತ್ರುವಿನ ಅತಿಯಾದ ಪ್ರಹಾರಗಳಿಂದ ಬಹಳ ವ್ಯಥೆಪಟ್ಟ.
ಮಹಾಧನುರ್ಮಂಡಲನಿಃಸೃತೈಃ ಶಿತೈಃ
ಕ್ರಿಯಾಪ್ರಯತ್ನಪ್ರಹಿತೈರ್ಬಲೇನ ಚ |
ತತಕ್ಷ ಕರ್ಣಂ ಬಹುಭಿಃ ಶರೋತ್ತಮೈ-
ರ್ಬಿಭೇದ ಮರ್ಮಸ್ವಪಿ ಚಾರ್ಜುನಸ್ತ್ವರನ್ ॥65॥
ಮಹಾಧನುಸ್ಸನ್ನು ಮಂಡಲಾಕಾರವಾಗಿ ಮಾಡಿ, ಕ್ರಿಯೆ ಪ್ರಯತ್ನ ಬಲಗಳಿಂದ ತೀಕ್ಷ್ಣವಾದ ಬಹಳ ಉತ್ತಮ ಬಾಣಗಳನ್ನೆಸೆದು ಅರ್ಜುನನು ಕರ್ಣನನ್ನು ಗಾಯಗೊಳಿಸಿದ, ವೇಗವಾಗಿ ಮರ್ಮಗಳಲ್ಲಿಯೂ ಭೇದಿಸಿದ.
ದೃಢಾಹತಃ ಪತ್ರಿಭಿರುಗ್ರವೇಗೈಃ
ಪಾರ್ಥೇನ ಕರ್ಣೋ ವಿವಿಧೈಃ ಶಿತಾಗ್ರೈಃ |
ಬಭೌ ಗಿರಿರ್ಗೈರಿಕಧಾತುರಕ್ತಃ
ಕ್ಷರನ್ ಪ್ರಪಾತೈರಿವ ರಕ್ತಮಂಭಃ ॥66॥
ಉಗ್ರವೇಗದ ತೀಕ್ಷ್ಣವಾದ ಮೊನೆಯುಳ್ಳ ನಾನಾ ಬಗೆಯ ಬಾಣಗಳಿಂದ ಅರ್ಜುನನು ಕರ್ಣನನ್ನು ದೃಢವಾಗಿ ಹೊಡೆದಾಗ, ಗೈರಿಕಾದಿ ಕೆಂಪುಧಾತುಗಳಿಂದ ಕೆಂಪಾದ ಬೆಟ್ಟವು ಜಲಪಾತಗಳಲ್ಲಿ ಕೆಂಪುನೀರನ್ನು ಸುರಿಸುವಂತೆ, ರಕ್ತವನ್ನು ಸುರಿಸುತ್ತ ಕರ್ಣನು ಶೋಭಿಸಿದ.
ತತೋಽರ್ಜುನಃ ಕರ್ಣಮವಕ್ರಗೈರ್ನವೈಃ
ಸುವರ್ಣಪುಂಖೈಃ ಸುದೃಢೈರಯಸ್ಮಯೈಃ |
ಯಮೋಗ್ರದಂಡಪ್ರತಿಮೈಃ ಸ್ತನಾಂತರೇ
ಪರಾಭಿನತ್ ಕ್ರೌಂಚಮಿವಾದ್ರಿಮಗ್ನಿಜಃ ॥67॥
ಸುವರ್ಣ ಪುಂಖಗಳುಳ್ಳ ಬಲು ದೃಢವಾದ ಉಗ್ರವಾದ ಯಮದಂಡದಂಥ ಕಬ್ಬಿಣದ ನೇರವಾದ ಹೊಸ ಬಾಣಗಳಿಂದ, ಕ್ರೌಂಚಪರ್ವತವನ್ನು ಕಾರ್ತಿಕೇಯನು ಹೊಡೆದಂತೆ, ಅರ್ಜುನನು ಕರ್ಣನನ್ನು ಎದೆಯಲ್ಲಿ ಹೊಡೆದ.
ತತಃ ಶರಾವಾಪಮಪಾಸ್ಯ ಸೂತಜೋ
ಧನುಶ್ಚ ತಚ್ಛಕ್ರಶರಾಸನೋಪಮಮ್ |
ತತೋ ರಥಸ್ಥಃ ಸ ಮುಮೋಚ ಚ ಸ್ಖಲನ್
ಪ್ರಶೀರ್ಣಮುಷ್ಟಿಃ ಸುಭೃಶಾಹತಃ ಪ್ರಭೋ ॥68॥
ಆಗ ಕರ್ಣನು ಬತ್ತಳಿಕೆಯನ್ನೂ ಬಿಟ್ಟು. ಇಂದ್ರಚಾಪದಂಥ ಧನುಸ್ಸನ್ನೂ ಬಿಟ್ಟುಬಿಟ್ಟ. ಬಹು ಹೊಡೆತಗಳಿಂದ ಅವನ ಮುಷ್ಟಿ ಪೂರ್ತಿ ಸಡಿಲಾಯಿತು. ನಡುಗುತ್ತ ರಥದಲ್ಲಿ ಕುಳಿತುಬಿಟ್ಟ.
ನ ಹ್ಯರ್ಜುನಸ್ತಂ ವ್ಯಸನೇ ತದೇಯಿವಾನ್
ನಿಹಂತುಮಾರ್ಯಃ ಪುರುಷವ್ರತೇ ಸ್ಥಿತಃ |
ತತಸ್ತಮಿಂದ್ರಾವರಜಃ ಸ ಸಂಭ್ರಮಾದ್
ಉವಾಚ ಕಿಂ ಪಾಂಡವ ಹೇ ಪ್ರಮಾದ್ಯಸೇ ॥69॥
ಕರ್ಣನು ಸಂಕಟಕ್ಕೆ ಈಡಾಗಿದ್ದಾಗ ವೀರಪುರುಷರ ವ್ರತದಲ್ಲಿ ನಿಷ್ಠೆಯಿಂದಿರುವ ಪೂಜ್ಯನಾದ ಅರ್ಜುನನು ಅವನನ್ನು ಇನ್ನೂ ಹೆಚ್ಚು ಹೊಡೆಯಲಿಲ್ಲ ಆಕ್ರಮಿಸಲಿಲ್ಲ. ಆಗ ಶ್ರೀಕೃಷ್ಣ ಆತುರದಿಂದ ಕೇಳಿದ `ಏನು ಅರ್ಜುನ! ಏಕೆ ಲಕ್ಷ್ಯವಿಲ್ಲದೆ ನಿಂತೆ?'
ನೈವಾಹಿತಾನಾಂ ಸತತಂ ವಿಪಶ್ಚಿತಃ
ಕ್ಷಣಂ ಪ್ರತೀಕ್ಷಂತ್ಯಪಿ ದುರ್ಬಲೀಯಸಾಮ್ |
ವಿಶೇಷತೋಽರೀನ್ ವ್ಯಸನೇಷು ಪಂಡಿತೋ
ನಿಹತ್ಯ ಧರ್ಮಂ ಚ ಯಶಶ್ಚ ವಿಂದತಿ ॥70॥
ಬಲ್ಲವರು ದುರ್ಬಲರಾದ ಶತ್ರುಗಳನ್ನೂ ಕೂಡ ಮಣಿಸಲು ಎಂದೂ ಸಮಯಕ್ಕೆ ಕಾಯುವುದಿಲ್ಲ. ವಿಶೇಷವಾಗಿ ರಣಪಂಡಿತನು ದುಷ್ಟ ಶತ್ರುಗಳನ್ನು ಅವರು ಸಂಕಟದಲ್ಲಿ ಬಿದ್ದಾಗಲೆ ನಿಗ್ರಹಿಸಿ ಪುಣ್ಯ ಭಾಜನರಾಗುತ್ತಾನೆ, ಕೀರ್ತಿಯನ್ನು ಪಡೆಯುತ್ತಾನೆ.
ತಮೇಕವೀರಂ ತವ ಚಾಹಿತಂ ಸದಾ
ತ್ವರಸ್ವ ಕರ್ಣಂ ಸಹಸಾಭಿಮರ್ದಿತುಮ್ |
ಪುರಾ ಸಮರ್ಥಃ ಸಮುಪೈತಿ ಸೂತಜೋ
ವಿಧ್ಯ ತ್ವಮೇನಂ ನಮುಚಿಂ ಯಥಾ ಹರಿಃ ॥71॥

ಆದರಿಂದ ದೊಡ್ಡ ವೀರನಾದ, ನಿನಗೆ ಸದಾ ಶತ್ರುವಾಗಿರುವ ಕರ್ಣನನ್ನು ಅವಕಾಶ ಸಿಕ್ಕಾಗ ಒಡನೆ ಮರ್ದಿಸಲು ತ್ವರೆ ಮಾಡು. ಅವನು  ಸಾವರಿಸಿಕೊಂಡು ಆಕ್ರಮಿಸುವುದರೊಳಗಾಗಿ ನಮುಚಿದಾನವನನ್ನು ಇಂದ್ರನು ವಧಿಸಿದಂತೆ ನೀನು ಈತನನ್ನು ಈಗಲೆ ವಧಿಸು.'

ತಥಾಸ್ತು ದೇವೇತ್ಯಭಿಪೂಜ್ಯ ಸತ್ವರಂ
ಜನಾರ್ದನಂ ಕರ್ಣಮವಿಧ್ಯದರ್ಜುನಃ |
ಶರೋತ್ತಮೈಃ ಸರ್ವಕುರೂತ್ತಮಸ್ತ್ವರನ್
ಯಥಾ ಬಲಿಂ ದೈತ್ಯಪತಿಂ ಸುರಾಧಿಪಃ ॥72॥

`ದೇವ! ತಥಾಸ್ತು' ಎಂದು, ಶ್ರೀಕೃಷ್ಣನನ್ನು ಎಲ್ಲ ಕುರುವಂಶದವರಲ್ಲಿ ಶ್ರೇಷ್ಠನಾದ ಅರ್ಜುನನು ಗೌರವಿಸಿ, ಬೇಗನೆ ಶ್ರೇಷ್ಠಬಾಣಗಳಿಂದ ಕರ್ಣನನ್ನು  ದೈತ್ಯರಾಜನಾದ ಬಲಿಯನ್ನು ಇಂದ್ರ ಹೊಡೆದಂತೆ ಹೊಡೆಯಲು ತೊಡಗಿದ.

ಸಾಶ್ವಂ ತು ಕರ್ಣಂ ಸರಥಂ ಕಿರೀಟೀ
ಸಮಾಚಿನೋದ್ ಭಾರತ ವತ್ಸದಂತೈಃ |
ಪ್ರಚ್ಛಾದಯಾಮಾಸ ದಿಶಶ್ಚ ಬಾಣೈಃ
ಸರ್ವಪ್ರಯತ್ನಾತ್ ತಪನೀಯಪುಂಖೈಃ ॥73॥

ರಾಜನೆ, ಕರ್ಣನನ್ನು ಅವನ ರಥವನ್ನು ಅಶ್ವಗಳ ಸಮೇತವಾಗಿ ವತ್ಸದಂತ ಬಾಣಗಳಿಂದ ಅರ್ಜುನನು ಹೊಡೆದ. ಎಲ್ಲ ದಿಕ್ಕುಗಳನ್ನೂ ಸರ್ವಪ್ರಯತ್ನಮಾಡಿ ಚಿನ್ನದ ಪುಕ್ಕವುಳ್ಳ ಬಾಣಗಳಿಂದ ಮುಚ್ಚಿದ.

ಸ ವತ್ಸದಂತೈಃ ಪೃಥುಪೀನವಕ್ಷಾಃ
ಸಮಾಚಿತಃ ಸ್ವಾಧಿರಥಿರ್ವಿಭಾತಿ |
ಸುಪುಷ್ಪಿತಾಶೋಕಪಲಾಶಶಾಲ್ಮಲಿ-
ರ್ಯಥಾಚಲಶ್ಚಂದನಕಾನನಾಯುತಃ ॥74॥

ವಿಸ್ತಾರವಾದ ಉಬ್ಬಿದ ಎದೆಯುಳ್ಳ ಕರ್ಣನು ಅರ್ಜುನನ ವತ್ಸದಂತ ಬಾಣಗಳಿಂದ ಚುಚ್ಚಿಸಿಕೊಂಡು, ಹೂಬಿಟ್ಟ ಅಶೋಕ ಪಲಾಶ ಶಾಲ್ಮಲಿ ವೃಕ್ಷಗಳಿಂದ ಕೂಡಿದ ಶ್ರೀಗಂಧದ ಕಾಡುಗಳಿಂದ ತುಂಬಿದ ಬೆಟ್ಟದಂತೆ ಕಾಣಿಸಿಕೊಂಡ.

ಶರೈಃ ಶರೀರೇ ಬಹುಧಾ ಸಮರ್ಪಿತೈ-
ರ್ವಿಭಾತಿ ಕರ್ಣಃ ಸಮರೇ ವಿಶಾಂಪತೇ |
ಮಹೀರುಹೈರಾಚಿತಸಾನುಕಂದರೋ
ಯಥಾ ಗಿರೀಂದ್ರಃ ಶುಭಕರ್ಣಿಕಾರವಾನ್ ॥75॥

ರಾಜನೆ, ಮೈಯೆಲ್ಲ ಬಹಳವಾಗಿ ನಾಟಿದ ಬಾಣಗಳಿಂದ ಕರ್ಣನು ರಣದಲ್ಲಿ, ವೃಕ್ಷಗಳಿಂದ ತುಂಬಿದ ತಪ್ಪಲು ಕಣಿವೆಗಳುಳ್ಳ ದೊಡ್ಡ ಬೆಟ್ಟವು ಒಳ್ಳೆಯ ಬೆಟ್ಟದಾವರೆಗಳಿಂದ ಶೋಭಿಸುವಂತೆ ಶೋಭಿಸಿದ.

ಸ ಬಾಣಸಂಘಾನ್ ಧನುಷಾ ವ್ಯವಾಸೃಜನ್
ವಿಭಾತಿ ಕರ್ಣಃ ಶರಜಾಲರಶ್ಮಿವಾನ್ |
ಸಲೋಹಿತೋ ರಕ್ತಗಭಸ್ತಿಮಂಡಲೋ
ದಿವಾಕರೋಽಸ್ತಾಭಿಮುಖೋ ಯಥಾ ತಥಾ ॥76॥

ಕರ್ಣನು ಕೃಷ್ಣನು ಹೇಳಿದಂತೆಯೆ ಬೇಗನೆ ಸಾವರಿಸಿಕೊಂಡು ಬಿಲ್ಲಿನಿಂದ ಬಾಣಗಳನ್ನು ಎಸೆಯುತ್ತ ಶರಸಮೂಹವೆಂಬ ಕಿರಣಪುಂಜಗಳಿಂದ ಕೆಂಪುಕಿರಣಗಳ ಸಮೂಹದಿಂದ ಹೊಳೆಯುತ್ತ ಅಸ್ತಾಚಲಕ್ಕೆ ಅಭಿಮುಖವಾಗಿ ಹೋಗುವ ಸೂರ್ಯ ಕೆಂಪಾಗಿ ಹೇಗೆ ಹೊಳೆಯುವನೊ ಹಾಗೆ ಶೋಭಿಸಿದ.

ಬಾಹ್ವಂತರಾದಾಧಿರಥೇರ್ವಿಮುಕ್ತಾನ್
ಬಾಣಾನ್ ಮಹಾಹೀನಿವ ದೀಪ್ಯಮಾನಾನ್ |
ವ್ಯಧ್ವಂಸಯನ್ನರ್ಜುನಬಾಹುಮುಕ್ತಾಃ
ಶರಾಃ ಸಮಾಸಾದ್ಯ ದಿಶಃ ಶಿತಾಗ್ರಾಃ ॥77॥

ಕರ್ಣನ ತೋಳುಗಳ ನಡುವಿಂದ ಹೊರಡುವ ಮಹಾಸರ್ಪಗಳಂಥ ಉಜ್ವಲವಾದ ಬಾಣಗಳನ್ನು, ಅರ್ಜುನನ ಬಾಹುಗಳಿಂದ ಹೊರಡುವ ತೀಕ್ಷ್ಣವಾದ ಮೊನೆಯುಳ್ಳ ಬಾಣಗಳು ಎಲ್ಲ ದಿಕ್ಕುಗಳನ್ನು ಆವರಿಸುತ್ತ ನಾಶಪಡಿಸಿದುವು.

ತತೋ ಮಹೇಂದ್ರಾಶನಿತುಲ್ಯನಿಸ್ವನಂ
ಮಹಾಶರಂ ಸರ್ಪವಿಷಾನಲೋಪಮಮ್ |
ಅಯಸ್ಮಯಂ ರೌದ್ರಮಹಾಸ್ತ್ರಸಮ್ಮಿತಂ
ಮಹಾಹವೇ ಕ್ಷೇಪ್ತುಮನಾ ಧನಂಜಯಃ ॥78॥

ಇಂದ್ರನ ವಜ್ರಾಯುಧದಂಥ ಧ್ವನಿ ಮಾಡುವ, ಸರ್ಪವಿಷ ಮತ್ತು ಬೆಂಕಿಗೆ ಸಮಾನವಾದ ರೌದ್ರ ಮಹಾಅಸ್ತ್ರದಿಂದ ಅಭಿಮಂತ್ರಿತವಾಗಿರುವ ಕಬ್ಬಿಣದ ಅಂಜಲಿಕವೆಂಬ ಮಹಾ ಬಾಣವನ್ನು ಮಹಾರಣದಲ್ಲಿ ಎಸೆಯಲು ಅರ್ಜುನ ಮನಸು ಮಾಡಿದ.

ಕಾಲೋ ಹ್ಯದೃಶ್ಯೋ ನೃಪ ವಿಪ್ರಶಾಪಾ-
ನ್ನಿದರ್ಶಯನ್ ಕರ್ಣವಧಂ ಬ್ರುವಾಣಃ |
ಭೂಮಿಸ್ತು ಚಕ್ರಂ ಗ್ರಸತೀತ್ಯವೋಚತ್
ಕರ್ಣಸ್ಯ ತಸ್ಮಿನ್ ವಧಕಾಲೇಽಭ್ಯುಪೇತೇ ॥79॥

ರಾಜನೆ, ವಿಪ್ರಶಾಪದಿಂದ ಈ ಬಾಣದಿಂದಲೇ ಮರಣವಾಗಲಿರುವುದರಿಂದ ಆಗ ಅದೃಶ್ಯರೂಪದಿಂದ ಮೃತ್ಯು ಬಂದು ಕರ್ಣನಿಗೆ ವಿಪ್ರಶಾಪದಿಂದ ವಧವಾಗುವುದಕ್ಕೆ ಚಕ್ರಪತನರೂಪ ನಿದರ್ಶನವನ್ನು ತೋರುತ್ತ ಮೊದಲಿಗೇ ಹೇಳಿತು `ಕರ್ಣನಿಗೆ ವಿಪ್ರಶಾಪದಂತೆ ಬರುವ ಆ ವಧಕಾಲ ಬಂದಾಗ ಭೂಮಿಯು ಅವನ ರಥ ಚಕ್ರವನ್ನು ನುಂಗುತ್ತದೆ' ಎಂದಿತು.
ಬ್ರಾಹ್ಮಂ ಮಹಾಸ್ತ್ರಂ ಮನಸಿ ಪ್ರನಷ್ಟಂ
ಯದ್ ಭಾರ್ಗವೋಪ್ಯಸ್ಯ ದದೌ ಮಹಾತ್ಮಾ |
ವಾಮಂ ಚಕ್ರಂ ಗ್ರಸತೇ ಮೇದಿನೀ ಸ್ಮ
ಪ್ರಾಪ್ತೇ ತಸ್ಮಿನ್ ವಧಕಾಲೇ ನೃವೀರ |
ತತೋ ರಥೋ ಘೂರ್ಣಿತವಾನ್ನರೇಂದ್ರ
ಶಾಪಾತ್ತದಾ ಬ್ರಾಹ್ಮಣಸತ್ತಮಸ್ಯ ॥80॥
ಸ ಕಂಪಿತಶ್ಚೈತ್ಯ ಇವಾತಿಮಾತ್ರಂ
ಸುಪುಷ್ಪಿತೋ ಭೂಮಿತಳೇ ನಿಮಗ್ನಃ |
ತತಶ್ಚಕ್ರಮಪತತ್ ತಸ್ಯ ಭೂಮೌ
ಸ ವಿಹ್ವಲಃ ಸಮರೇ ಸೂತಪುತ್ರಃ ॥81॥
`ವೀರ ಕರ್ಣನೆ, ನಿನಗೆ ಆ ವಧಕಾಲ ಬಂದಾಗ ಮಹಾತ್ಮ ಪರಶುರಾಮ ಉಪದೇಶಿಸಿದ್ದ ಮಹಾಬ್ರಹ್ಮಾಸ್ತ್ರವು ಮನಸಿನಲ್ಲಿ ಮರೆಯಾಗುತ್ತದೆ. ರಥದ ಎಡ ಚಕ್ರವನ್ನು ಭೂಮಿ ನುಂಗುತ್ತದೆ' ಎಂದು ಮೃತ್ಯು ಹೇಳಿತು. ರಾಜನೆ, ಇದಕ್ಕೆ ನಿದರ್ಶನವಾಗಿ ಆಗಲೆ ಕರ್ಣನ ರಥವು ಬ್ರಾಹ್ಮಣಶಾಪದಿಂದ ಅಲುಗಾಡಲು ತೊಡಗಿತು. ರಥಚಕ್ರವು ಹಳ್ಳದಲ್ಲಿ ಬಿದ್ದಿತು. ರಥವು ಆಗ, ಚೆನ್ನಾಗಿ ಹೂಬಿಟ್ಟ ಚೈತ್ಯವೃಕ್ಷವು ಅತಿಯಾಗಿ ಕಂಪಿಸುತ್ತ ನೆಲದಲ್ಲಿ ನಿಂತಂತೆ ಕಾಣಿಸಿಕೊಂಡಿತು. ಇದನ್ನು ಕಂಡು ಕರ್ಣನು ರಣದಲ್ಲಿ ಭಯದಿಂದ ವಿಹ್ವಲನಾದ.
ಘೂರ್ಣೇ ರಥೇ ಬ್ರಾಹ್ಮಣಸ್ಯಾಭಿಶಾಪಾದ್
ರಾಮಾದುಪಾತ್ತೇಽಪ್ರತಿಭಾತಿ ಚಾಸ್ತ್ರೇ |
ಛಿನ್ನೇ ಶರೇ ಸರ್ಪಮುಖೇ ಚ ಘೋರೇ
ಪಾರ್ಥೇನ ತಸ್ಮಿನ್ ವಿಷಸಾದ ಕರ್ಣಃ ॥82॥
ರಥವು ಈಗ ಕಂಪಿಸಲು ತೊಡಗಿದೆ. ಬ್ರಾಹ್ಮಣಶಾಪದಿಂದ ಪರಶುರಾಮನು ಉಪದೇಶಿಸಿದ ಅಸ್ತ್ರ ವಿಸ್ಮೃತವಾಗಲಿದೆ. ಸರ್ಪಮುಖದ ಘೋರ ಅಸ್ತ್ರವೂ ಅರ್ಜುನನಿಂದ ಚೂರಾಗಿದೆ, ಕರ್ಣನಿಗೆ ಈಗ ವಿಷಾದ ಉಂಟಾಯಿತು.
ಅಮೃಷ್ಯಮಾಣೋ ವ್ಯಸನಾನಿ ತಾನಿ
ಹಸ್ತೌ ವಿಧುನ್ವನ್ ಸ ವಿಗರ್ಹಮಾಣಃ |
ಧರ್ಮಪ್ರಧಾನಾನಭಿಪಾತಿ ಧರ್ಮ
ಇತ್ಯಬ್ರುವನ್ ಧರ್ಮವಿದಃ ಸದೈವ ॥83॥
ವಯಂ ಚ ನಿತ್ಯಂ ಪ್ರಯತಾಮ ಧರ್ಮಂ
ಚರ್ತುಂ ಯಥಾಶಕ್ತಿ ಯಥಾಶ್ರುತಂ ಚ |
ನೈವಾದ್ಯ ಚಾಸ್ಮಾನಭಿಪಾತಿ ಭಕ್ತಾನ್
ಮನ್ಯೇ ನ ನಿತ್ಯಂ ಪರಿಪಾತಿ ಧರ್ಮಃ ॥84॥
ಈ ಎಲ್ಲ ದುಃಶಕುನಗಳನ್ನು ತಡೆದುಕೊಳ್ಳಲಾಗದೆ ಕರ್ಣನು ಅವುಗಳನ್ನು ನಿಂದಿಸುತ್ತ ಎರಡೂ ಕೈಗಳನ್ನು ಕೊಡವುತ್ತ ತನಗೆ ತಾನೇ ಹೇಳಿಕೊಂಡ `ಧರ್ಮಜ್ಞರು ಸದಾ ಹೇಳಿದ್ದಾರೆ: `ಧರ್ಮಪರರಾದವರನ್ನು ಧರ್ಮವು ಕಾಪಾಡುತ್ತದೆ' ಎಂದು. ನಾವು ನಿತ್ಯ ಧರ್ಮದಲ್ಲಿರಲು, ತಿಳಿದಷ್ಟು, ಶಕ್ತಿ ಇದ್ದಷ್ಟು ಪ್ರಯತ್ನಿಸುತ್ತಿದ್ದೇವೆ. ಭಕ್ತರಾದ ನಮ್ಮನ್ನು ಈಗ ಧರ್ಮವು ಕಾಪಾಡುತ್ತಿಲ್ಲ. ಅದರಿಂದ `ಧರ್ಮವು ಸದಾ ಕಾಪಾಡುತ್ತದೆ' ಎನ್ನುವುದನ್ನು ನಾನು ಒಪ್ಪುವುದಿಲ್ಲ.'
ಏವಂ ಬ್ರುವನ್ ಪ್ರಸ್ಖಲಿತಶ್ಚ ಸೂತೋ
ವಿಭಜ್ಯಮಾನೋಽರ್ಜುನಶಸ್ತ್ರಪಾತೈಃ |
ಮರ್ಮಾಭಿಘಾತಾಚ್ಛಿಥಿಲಃ ಕ್ರಿಯಾಸು
ಪುನಃ ಪುನರ್ಧರ್ಮಮಗರ್ಹದಾಜೌ ॥85॥
ಹೀಗೆ ಹೇಳುತ್ತ ಕರ್ಣನು ರಥದಲ್ಲಿ ಎಡವುತ್ತಾನೆ, ಅರ್ಜುನನ ಶಸ್ತ್ರಪಾತದಿಂದ ಮೈಗಾಯ ಮಾಡಿಕೊಳ್ಳುತ್ತಾನೆ. ಮರ್ಮಸ್ಥಾನಗಳಲ್ಲಿ ಏಟು ಬೀಳುವುದರಿಂದ ಶಸ್ತ್ರಪ್ರಯೋಗ ಕ್ರಿಯೆಯಲ್ಲಿ ಶೈಥಿಲ್ಯವನ್ನೂ ತೋರುತ್ತಾನೆ. `ಇದೆಲ್ಲಕ್ಕೂ ನಾನು ಮಾಡಿದ ಪುಣ್ಯಕರ್ಮ ನನ್ನನ್ನು ಈಗ ಕಾಪಾಡದಿರುವುದೇ ಕಾರಣ' ಎಂದು ಪುನಃ ಪುನಃ ಧರ್ಮವನ್ನು ಹಳಿಯುತ್ತಾನೆ.
ಬ್ರಾಹ್ಮಣನ ಶಾಪದಿಂದಲೇ ಅರ್ಥಾತ್ ಬ್ರಾಹ್ಮಣಾಪರಾಧರೂಪವಾದ ಅಧರ್ಮದ ಕಾರಣದಿಂದಲೇ ತನಗೆ ಈ ದುಃಸ್ಥಿತಿ ಎನ್ನುವುದು ಕರ್ಣನಿಗೆ ತಿಳಿದೇ ಇದೆ. ಆದರೆ `ದಾನಶೂರಕರ್ಣ' ಎಂದು ಎಲ್ಲರೂ ಹೇಳುವಷ್ಟು ಮಟ್ಟಿಗೆ ಕವಚವನ್ನೂ ಕಿತ್ತು ಕೊಟ್ಟ ಮಹತ್ತಾದ ಧರ್ಮ ಮಾಡಿದರೂ ಅದು ಬ್ರಾಹ್ಮಣಾಪರಾಧವೆಂಬ ಅಧರ್ಮವನ್ನು ಪರಿಹರಿಸುತ್ತಿಲ್ಲ. ನನ್ನನ್ನು ಕಾಪಾಡು ತ್ತಿಲ್ಲ ಎಂದು ಅಸಮಾಧಾನ. ಕೋಪ, ಕರ್ಣನಲ್ಲಿ ಆವಿಷ್ಟನಾದ ಅಸುರನಿಗೆ. ಕರ್ಣನಿಗೆ ಕೋಪವಿಲ್ಲ. ಆದರೂ ಹತಾಶತೆ ಇದೆ. ಬ್ರಾಹ್ಮಣಶಾಪದ ಅಮೋಘವಾದ ಪ್ರಭಾವಕ್ಕೆ ತಲೆಬಾಗಿ ಪಶ್ಚಾತ್ತಾಪ ಪಡುತ್ತಾನೆ.
ತತಃ ಶರೈರ್ಭೀಮತರೈರವಿಧ್ಯತ್ತ್ರಿಭಿರಾಹವೇ |
ಹಸ್ತೇ ಕೃಷ್ಣಂ ತದಾ ಪಾರ್ಥಮಭ್ಯವಿಧ್ಯಚ್ಚ ಸಪ್ತಭಿಃ ॥86॥

ಅದರಿಂದ ಕರ್ಣ ಇನ್ನೂ ಹೆಚ್ಚು ಭಯಂಕರವಾದ ಮೂರು ಬಾಣಗಳಿಂದ ಕೃಷ್ಣನನ್ನು ಬಾಹುವಿನಲ್ಲಿ ಹೊಡೆದ. ಅರ್ಜುನನನ್ನು ಏಳು ಬಾಣಗಳಿಂದ ಹೊಡೆದ.
ಹಳ್ಳಕ್ಕೆ ಒಂದು ಚಕ್ರ ಬಿದ್ದಿತಷ್ಟೆ. `ಚಕ್ರಂ ಅಪತತ್' (ಶ್ಲೋ.81) ಅದು ಹೂತು ಹೋಗಲಿಲ್ಲ. ಕುದುರೆಗಳು ಬಲವಾಗಿ ಎಳೆದ ಮಾತ್ರಕ್ಕೆ ರಥ ಮೇಲೆ ಬಂದಿತ್ತೆಂದು ತಿಳಿಯಬೇಕು. ಅಸ್ತ್ರಗಳೂ ಕೂಡ ತತ್ಕಾಲದಲ್ಲಿ ಮರೆಯಾಗಲಿಲ್ಲ. ಏಕೆಂದರೆ ಚಕ್ರವನ್ನು ಭೂಮಿ ಇನ್ನೂ ನುಂಗಿಲ್ಲ. `ಅಗ್ರಸನ್ ಮಹೀಚಕ್ರಂ' `ಭೂಮಿ ನುಂಗಿತು' ಎನ್ನುವುದು ಮುಂದೆ ಬರಬೇಕಷ್ಟೆ. (ಶ್ಲೋ.103)
ತತೋಽರ್ಜುನಃ ಸಪ್ತದಶ ತಿಗ್ಮತೇಜಾ ಅಜಿಹ್ಮಗಾನ್ |
ಇಂದ್ರಾಶನಿಸಮಾನ್ ಘೋರಾನಸೃಜತ್ಪಾವಕೋಪಮಾನ್ ॥87॥
ಆಗ ಪ್ರಖರ ತೇಜಸ್ಸುಳ್ಳ ಅರ್ಜುನನು ಬೆಂಕಿಯಂತಿರುವ ಇಂದ್ರನ ವಜ್ರಾಯುಧಕ್ಕೆ ಸಮವಾದ ಘೋರವಾದ ಹದಿನೇಳು ಬಾಣಗಳನ್ನು ಎಸೆದ.
ನಿರ್ಭಿದ್ಯ ತೇ ಭೀಮವೇಗಾ ನ್ಯಪತನ್ ಪೃಥಿವೀತಳೇ |
ಕಂಪಿತಾತ್ಮಾ ತಥಾ ಕರ್ಣಃ ಶಕ್ತ್ಯಾ ಚೇಷ್ಟಾಮದರ್ಶಯತ್ ॥88॥
ಆ ಬಾಣಗಳು ಭಯಂಕರ ವೇಗ ಉಳ್ಳವುಗಳು. ಕರ್ಣನನ್ನು ಗಾಯಗೊಳಿಸಿ ನೆಲದಲ್ಲಿ ಬಿದ್ದುವು. ಅದರಿಂದ ಕರ್ಣ ನಡುಗಿದ. ತನ್ನೆಲ್ಲ ಶಕ್ತಿಯನ್ನು ಹಾಕಿ ಯುದ್ಧ ಮಾಡಿದ.
ಬಲೇನಾಥ ಸ ಸಂಸ್ತಭ್ಯ ಬ್ರಹ್ಮಾಸ್ತ್ರಂ ಸಮುದೈರಯತ್ |
ಐಂದ್ರಾಸ್ತ್ರಮರ್ಜುನಶ್ಚಾಪಿ ತದ್ ದೃಷ್ಟ್ವಾಭ್ಯಮಂತ್ರಯತ್ ॥89॥
ಕರ್ಣನು ಧೈರ್ಯದಿಂದ ಬಲಪೂರ್ವಕವಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಅರ್ಜುನನು ಅದನ್ನು ನೋಡಿ ಐಂದ್ರಾಸ್ತ್ರವನ್ನು ಅಭಿಮಂತ್ರಿಸಿದ.
ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವೇ ಪ್ರತ್ಯಸ್ತ್ರ. ಆದರೂ ಅರ್ಜುನನು ಐಂದ್ರಾಸ್ತ್ರವನ್ನು ಪ್ರಯೋಗಿಸಿದ್ದರಿಂದ, ಕರ್ಣನ ಈ ಬ್ರಹ್ಮಾಸ್ತ್ರವು `ಬ್ರಹ್ಮ' ಅಂದರೆ ವೇದ, ವೇದಮಂತ್ರರೂಪವಾದ ಒಂದು ಅಸ್ತ್ರ ಎಂದು ತಿಳಿಯಬೇಕು. ನಿಜವಾಗಿ ಬ್ರಹ್ಮಾಸ್ತ್ರವು ಬ್ರಹ್ಮಶಿರೋಽಸ್ತ್ರವೇ. ಅದು ಕರ್ಣನಿಗೆ ಪರಶುರಾಮರಿಂದ ಉಪದಿಷ್ಟವಾಗಿರಲಿಲ್ಲ. ಬೇರೆ ಇಂಥ ಬ್ರಹ್ಮಾಸ್ತ್ರಗಳು ಇನ್ನೂ ರಥಚಕ್ರವನ್ನು ಭೂಮಿ ನುಂಗುವವರೆಗೆ ಕರ್ಣನಿಗೆ ಸ್ಮರಣೆಗೆ ಬರುತ್ತಿವೆ.
ಗಾಂಡೀವಂ ಜ್ಯಾಂ ಚ ಬಾಣಾಂಶ್ಚ ಅನುಮಂತ್ರ್ಯ ಧನಂಜಯಃ |
ಅಸೃಜತ್ ಶರವರ್ಷಾಣಿ ವರ್ಷಾಣೀವ ಪುರಂದರಃ ॥90॥
ಅರ್ಜುನನು ಗಾಂಡೀವ ಧನುಸ್ಸನ್ನೂ ಹೆದೆಯನ್ನೂ ಬಾಣಗಳನ್ನೂ ವೇದಮಂತ್ರಗಳಿಂದ ಅಭಿಮಂತ್ರಿಸಿ, ಇಂದ್ರನು ನೀರಿನ ಮಳೆ ಸುರಿಸುವಂತೆ, ಬಾಣಗಳ ಮಳೆಗರೆದ.
ತತಸ್ತೇಜೋಮಯಾ ಬಾಣಾ ರಥಾತ್ ಪಾರ್ಥಸ್ಯ ನಿಃಸೃತಾಃ |
ಪ್ರಾದುರಾಸನ್ ಮಹಾವೀರ್ಯಾಃ ಕರ್ಣಸ್ಯ ರಥಮಂತಿಕಾತ್ ॥91॥
ಆಗ ತೇಜೋಮಯವಾದ ದಿವ್ಯಅಲೌಕಿಕವಾದ ಮಹಾಶಕ್ತಿಶಾಲಿಯಾದ ಬಾಣಗಳು ಅರ್ಜುನನ ರಥದಿಂದ ಹೊರಟು ಕರ್ಣನ ರಥದ ಬಳಿಗೆ ಹಾರಿಬಂದುವು.
ತಾನ್ ಕರ್ಣಸ್ತ್ವಗ್ರತೋಽಭ್ಯಸ್ತಾನ್ ಮೋಘಾಂಶ್ಚಕ್ರೇ ಮಹಾರಥಃ |
ತತೋಽಬ್ರವೀದ್ ವೃಷ್ಣಿವೀರಸ್ತಸ್ಮಿನ್ನಸ್ತ್ರೇ ವಿನಾಶಿತೇ ॥92॥
ಮಹಾರಥನಾದ ಕರ್ಣನು ಆ ಬಾಣಗಳನ್ನು ಎದುರಿಗೆ ಬರುತ್ತಿದ್ದಂತೆಯೇ ತಡೆದು ವ್ಯರ್ಥಗೊಳಿಸಿದ. ಅರ್ಜುನನ ಆ ಅಸ್ತ್ರ ಹೀಗೆ ನಿಷ್ಕ್ರಿಯವಾದಾಗ ಶ್ರೀಕೃಷ್ಣ ಅರ್ಜುನನಿಗೆ ನುಡಿದ.
ವಿಸೃಜಾಸ್ತ್ರಂ ಪರಂ ಪಾರ್ಥ ರಾಧೇಯೋ ಗ್ರಸತೇ ಶರಾನ್ |
ಬ್ರಹ್ಮಾಸ್ತ್ರಮರ್ಜುನಶ್ಚಾಪಿ ಸಮ್ಮಂತ್ರ್ಯಾಥ ಪ್ರಯೋಜಯತ್ ॥93॥
`ಅರ್ಜುನ, ಇನ್ನೊಂದು ಅಸ್ತ್ರವನ್ನೇ ಪ್ರಯೋಗಿಸು. ಕರ್ಣನು ಬೇರೆ ಬಾಣಗಳನ್ನು ನಿಷ್ಕ್ರಿಯಗೊಳಿಸುತ್ತಾನೆ' ಎಂದು. ಅರ್ಜುನನೂ ಕೂಡ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಎಸೆದ.
ಛಾದಯಿತ್ವಾ ತತೋ ಬಾಣೈಃ ಕರ್ಣಂ ಪ್ರತ್ಯಸ್ಯದರ್ಜುನಃ |
ತಸ್ಯ ಕರ್ಣಃ ಶರೈಃ ಕ್ರುದ್ಧಶ್ಚಿಚ್ಛೇದ ಜ್ಯಾಂ ಸುತೇಜನೈಃ ॥94॥
ಅರ್ಜುನನು ಬಾಣಗಳಿಂದ ಕರ್ಣನನ್ನು ಆಚ್ಛಾದಿಸಿ ಕರ್ಣನಿಗೆ ಪ್ರತಿಯಾಗಿ ಹೊಡೆದ. ಕರ್ಣನು ಕ್ರುದ್ಧನಾಗಿ ತೀಕ್ಷ್ಣವಾದ ಬಾಣಗಳಿಂದ ಅರ್ಜುನನ ಬಿಲ್ಲಿನ ಹೆದೆಯನ್ನು ಕತ್ತರಿಸಿದ.
ತಸ್ಯ ಜ್ಯಾಮವಧಾಯಾನ್ಯಾಮನುಮೃಜ್ಯ ಚ ಪಾಂಡವಃ |
ಶರೈರವಾಕಿರತ್ ಕರ್ಣಂ ದೀಪ್ಯಮಾನೈಃ ಸಹಸ್ರಶಃ ॥95॥
ದ್ವಿತೀಯಾಂ ಚ ತೃತೀಯಾಂ ಚ ಚತುರ್ಥೀಂ ಪಂಚಮೀಂ ತಥಾ |
ಷಷ್ಠೀಮಥಾಸ್ಯ ಚಿಚ್ಛೇದ ಸಪ್ತಮೀಂ ಚ ತಥಾಷ್ಟಮೀಂ ॥96॥
ನವಮೀಂ ದಶಮೀಂ ಚಾಸ್ಯ ತಥಾಚೈಕಾದಶೀಂ ವೃಷಃ |
ಜ್ಯಾಶತಂ ಶತಸಂಧಾನಂ ಸ ಕರ್ಣೋ ನಾವಬುಧ್ಯತೇ ॥97॥
ಕರ್ಣನು ಗಾಂಡೀವದ ಹೆದೆಗಳನ್ನು ಕಡಿದಂತೆಲ್ಲ ಮತ್ತೆಮತ್ತೆ ಅರ್ಜುನನು ಹೆದೆಗಳನ್ನು ಕಟ್ಟುತ್ತಲೇ ಇರುತ್ತಾನೆ. ಕರ್ಣನು ಎರಡನೆ ಮೂರನೆ ನಾಲ್ಕನೆ ಐದನೆ ಆರನೆ ಏಳನೆ ಎಂಟನೆ ಒಂಬತ್ತನೆ ಹತ್ತನೆ ಹನ್ನೊಂದನೆ ಹೆದೆಗಳನ್ನು ಕೂಡ ಕಡಿದರೆ, ಅರ್ಜುನನು ಹನ್ನೆರಡನೆ ಹದಿಮೂರನೆ ಎಂದು ಬೇರೆಬೇರೆ ಹೆದೆಗಳನ್ನು ಕಟ್ಟುತ್ತಾನೆ. ನೂರು ಹೆದೆಗಳಿಗೆ ನೂರು ಬಾಣಗಳನ್ನು ಹೂಡುತ್ತಾನೆ

ಅರ್ಜುನ.
ತತೋ ಜ್ಯಾಮವಧಾಯಾನ್ಯಾಮನುಮೃಜ್ಯ ಚ ಪಾಂಡವಃ |
ಶರೈರವಾಕಿರತ್ ಕರ್ಣಂ ದೀಪ್ಯಮಾನೈಃ ಸಹಸ್ರಶಃ ॥98॥
ಬೇರೆ ಹೆದೆಯನ್ನು ಕೈಯಿಂದ ಸವರಿ ಬಿಲ್ಲಿಗೆ ಕಟ್ಟಿದ, ಅರ್ಜುನ. ತೇಜೋಮಯವಾದ ಸಾವಿರಾರು ಬಾಣಗಳನ್ನು ಕರ್ಣನ ಮೇಲೆ ಎಸೆದ.
ತಸ್ಯ ಜ್ಯಾಚ್ಛೇದನಂ ಕರ್ಣೋ ಜ್ಯಾವಧಾನಂ ಚ ಸಂಯುಗೇ |
ನಾನ್ವಬುಧ್ಯತ ಶೀಘ್ರತ್ವಾತ್ ತದದ್ಭುತಮಿವಾಭವತ್ ॥99|
ಅರ್ಜುನನ ಹೆದೆಯನ್ನು ಕರ್ಣ ಕಡಿಯುವುದು, ಅದನ್ನು ಅರ್ಜುನನು ಬಿಲ್ಲಿಗೆ ಕಟ್ಟುವುದು ಎರಡೂ ಅತಿಶೀಘ್ರವಾಗಿ ನಡೆದುದರಿಂದ ಅದು ಬೇರೆಯಾಗಿ ಯಾರಿಗೂ ತಿಳಿಯಲಿಲ್ಲ. ಅದು ಅದ್ಭುತವಾಗಿತ್ತು.
ಒಂದು ಹೆದೆ ಕಡಿದುದು ಯಾವಾಗ, ಇನ್ನೊಂದನ್ನು ಅರ್ಜುನನು ಕಟ್ಟಿದ್ದು ಯಾವಾಗ ಎನ್ನುವುದೇ ಕರ್ಣನಿಗೇ ತಿಳಿಯಲಿಲ್ಲ. ವಸ್ತುತಃ ಗಾಂಡೀವ ದಿವ್ಯವಾದ ಧನುಸ್ಸು. ಅದರ ಹೆದೆಯೂ ದಿವ್ಯವೆ. ಬಳ್ಳಿಯ ತುದಿಯನ್ನು ಕತ್ತರಿಸಿದರೆ ಅದು ತಿರುಗಿ ಚಿಗುರುವಂತೆ ಹೆದೆಯೂ ಒಮ್ಮೆ ಕಡಿದರೂ ತಿರುಗಿ ಚಿಗುರಿ ಬೆಳೆದು ಮೊದಲಿನಂತಾಗುತ್ತದೆ. `ಅನ್ಯಾ ಜ್ಯಾ' `ಬೇರೆ ಹೆದೆ' ಎಂದು ಹೇಳಿದರೆ ಬೇರೆಯೆ ಒಂದು ಹೆದೆಯನ್ನು ಎತ್ತಿಕೊಂಡು ತಕ್ಷಣ ಕಟ್ಟಿದನೆಂದು ಅರ್ಥವಲ್ಲ. `ಕಡಿದ' ಹೆದೆಯೇ `ಬೇರೆ'ಯಾಗಿ, `ಕಡಿದುದಕ್ಕಿಂತ ಬೇರೆ' ಎನಿಸಿ ಅಂದರೆ ಪೂರ್ಣ ಮೊದಲಿನ ಹೆದೆಯೇ ಆಗಿ ಪ್ರಾದುರ್ಭವಿಸುತ್ತದೆ, ಎಂದು ಲಕ್ಷಾಲಂಕಾರ ಹೇಳುತ್ತದೆ. ಹೆದೆಕಡಿದು ಹೋದಾಗ ಅದನ್ನೇ ಪುನಃ ಕಟ್ಟುತ್ತಾನೆ ಅರ್ಜುನ, ಬೇರೆ ಹೆದೆಯನ್ನು ತಂದು ಕಟ್ಟುವುದಿಲ್ಲ. `ಜ್ಯಾ ಶತಂ' ಎಂದರೆ ಹೆದೆಗಳು ನೂರು ಎಂದು ಹೇಳಿದ ಮಾತ್ರಕ್ಕೆ ಹೆದೆ ನೂರಲ್ಲ, ನೂರಾರು ಸಾವಿರಾರು ಲೆಕ್ಕವಿಲ್ಲದಷ್ಟು ಬಾರಿ ಕಡಿದರೂ ಅದು ಕಡಿದುದಕ್ಕಿಂತ ಬೇರೆ, ಮೊದಲಿನಂತಾಗುತ್ತದೆ. ಅರ್ಜುನನು ಹೆದೆ ಕಟ್ಟುವುದು, ಬಾಣವನ್ನು ಹೂಡುವುದು ಇವೆರಡೂ ಕ್ರಿಯೆಗಳು ಅತಿವೇಗದಿಂದ ನಡೆಯುವುದರಿಂದ ಕರ್ಣನಿಗೂ ಕೂಡ ಎರಡರ ನಡುವಿನ ಅಂತರ ತಿಳಿಯಲಿಲ್ಲ.
ಅಸ್ತ್ರೈರಸ್ತ್ರಾಣಿ ರಾಧೇಯಃ ಪ್ರತ್ಯಹನ್ ಸವ್ಯಸಾಚಿನಃ |
ಚಕ್ರೇ ಚಾಭ್ಯಧಿಕಂ ಪಾರ್ಥಾತ್ ಸ್ವವೀರ್ಯಂ ಪ್ರತಿದರ್ಶಯನ್ ॥100॥
ಅರ್ಜುನನ ಅಸ್ತ್ರಗಳನ್ನು ಅಸ್ತ್ರಗಳಿಂದ ಕರ್ಣನು ನಿಷ್ಕ್ರಿಯಗೊಳಿಸಿದ. ಅರ್ಜುನನಿಗಿಂತ ಹೆಚ್ಚಿನ ಕೌಶಲವನ್ನೇ ತೋರಿ ತನ್ನ ಪರಾಕ್ರಮವನ್ನು ಸ್ಪಷ್ಟವಾಗಿ ದೃಢಪಡಿಸಿದ.
ತತಃ ಕೃಷ್ಣೋಽರ್ಜುನಂ ದೃಷ್ಟ್ವಾ ಕರ್ಣಾಸ್ತ್ರೇಣಾಭಿಪೀಡಿತಮ್ |
ಅಭ್ಯಸೇತ್ಯಬ್ರವೀತ್ ಪಾರ್ಥಮಾತಿಷ್ಠಾಸ್ತ್ರಮನುತ್ತಮಮ್ ॥101॥
ಶ್ರೀಕೃಷ್ಣ ಅರ್ಜುನನು ಕರ್ಣಾಸ್ತ್ರದಿಂದ ಪೀಡಿತನಾಗುತ್ತಿರುವುದನ್ನು ಕಂಡು `ಅಸ್ತ್ರ ಗಳನ್ನು ಮತ್ತೆ ಮತ್ತೆ ಪ್ರಯೋಗಿಸುತ್ತಿರು. ಉತ್ತಮಾಸ್ತ್ರಗಳನ್ನು ಪ್ರಯೋಗಿಸು' ಎಂದ.
ತತೋಽನ್ಯಮಗ್ನಿಸದೃಶಂ ಶರಂ ಸರ್ಪವಿಷೋಪಮಮ್ |
ಅಶ್ಮಸಾರಮಯಂ ದಿವ್ಯಮನುಮಂತ್ರ್ಯ ಧನಂಜಯಃ ॥102|
ರೌದ್ರಮಸ್ತ್ರಂ ಸಮಾಧಾಯ ಕ್ಷೇಪ್ತುಕಾಮಃ ಕಿರೀಟವಾನ್ |
ತತೋಽಗ್ರಸನ್ಮಹೀ ಚಕ್ರಂ ರಾಧೇಯಸ್ಯ ಮಹಾಮೃಧೇ ॥103॥
ಅರ್ಜುನನು ಈಗ ಬೇರೊಂದು ಅಗ್ನಿಸದೃಶವಾದ ಸರ್ಪವಿಷಸದೃಶವಾದ ಕಬ್ಬಿಣದ ದಿವ್ಯವಾದ ಅಂಜಲಿಕ ಬಾಣವನ್ನು ಅಭಿಮಂತ್ರಿಸಿ ರೌದ್ರ ಅಸ್ತ್ರವನ್ನು ಆವಾಹಿಸಿ ಅದನ್ನು ಕರ್ಣನ ಮೇಲೆ ಎಸೆಯಲು ಬಯಸಿದ. ಆಗಲೆ ಅದು ಮೃತ್ಯುಕಾಲವಾಗಿದ್ದರಿಂದ ಮಹಾರಣದಲ್ಲಿ ಕರ್ಣನ ರಥಚಕ್ರವನ್ನು ಭೂಮಿ ನುಂಗಿತು.
ತತೋಽವತೀರ್ಯ ರಾಧೇಯೋ ರಥಾದಾಶು ಸಮುದ್ಯತಃ |
ಚಕ್ರಂ ಭುಜಾಭ್ಯಾಮಾಲಂಬ್ಯ ಸಮುತ್ಕ್ಷೇಪ್ತುಮಿಯೇಷ ಸಃ ॥104॥
ಒಡನೆ ಕರ್ಣನು ವೇಗವಾಗಿ ರಥದಿಂದ ಇಳಿದು ಬೇಗನೆ ಚಕ್ರವನ್ನು ಎರಡು ಕೈಗಳಿಂದ ಹಿಡಿದು ಮೇಲೆ ಎತ್ತಲು ಬಯಸಿದ. ಅದಕ್ಕೆ ಉದ್ಯುಕ್ತನಾದ.
ಸಪ್ತದ್ವೀಪಾ ವಸುಮತೀ ಸಶೈಲವನಕಾನನಾ |
ಗೀರ್ಣಚಕ್ರಾ ಸಮುತ್ಕ್ಷಿಪ್ತಾ ಕರ್ಣೇನ ಚತುರಂಗುಲಮ್ ॥105॥
ಆದರೆ ಚಕ್ರವನ್ನು ಎತ್ತಲು ಯತ್ನಿಸಿದರೆ ಚಕ್ರವನ್ನು ನುಂಗಿದ್ದ ಭೂಮಿಯೇ ಸಪ್ತದ್ವೀಪ ಸಮೇತವಾಗಿ ಪರ್ವತ ವನ ಅರಣ್ಯಗಳೊಂದಿಗೆ ನಾಲ್ಕು ಅಂಗುಲದಷ್ಟು ಮೇಲೆ ಬಂದಿತೆ ಹೊರತು ನೆಲ ಚಕ್ರವನ್ನು ಬಿಡಲಿಲ್ಲ.
ಗ್ರಸ್ತಚಕ್ರಸ್ತು ರಾಧೇಯಃ ಕೋಪಾದಶ್ರೂಣ್ಯವರ್ತಯತ್ |
ಸೋಽಬ್ರವೀದರ್ಜುನಂ ಚಾಪಿ ಮುಹೂರ್ತಂ ಕ್ಷಮ ಪಾಂಡವ ॥106॥
ಚಕ್ರವನ್ನು ನೆಲ ನುಂಗಿತೆಂದು ಕರ್ಣನು ಕೋಪದಿಂದ ಕಣ್ಣೀರು ಸುರಿಸಿದ. ಅವನು ಅರ್ಜುನನಿಗೆ ಹೇಳಿದ `ಅರ್ಜುನ, ಒಂದು ಮುಹೂರ್ತ ಕಾಲ ತಾಳು' ಎಂದು.
ಸವ್ಯಂ ಚಕ್ರಂ ಮಹೀಗ್ರಸ್ತಂ ದೃಷ್ಟ್ವಾ ದೈವಾದಿದಂ ಮಮ |
ಪಾರ್ಥ ಕಾಪುರುಷಾಚೀರ್ಣಮಭಿಸಂಧಿಂ ವಿವರ್ಜಯ ॥107॥
ನನ್ನ ರಥದ ಎಡ ಚಕ್ರವಿದು ದೈವಾತ್ ನೆಲದಲ್ಲಿ ಹೂತು ಹೋಗಿದೆ. ಅರ್ಜುನ, ಕೆಟ್ಟಮನುಜರಲ್ಲಿ ಕಾಣುವಂಥ ದುರುದ್ದೇಶವಿಟ್ಟುಕೊಳ್ಳಬೇಡ. ಅದು ನಿನ್ನಲ್ಲಿ ಇದ್ದರೆ ಬಿಟ್ಟುಬಿಡು.
ಪ್ರಕೀರ್ಣಕೇಶೇ ವಿಮುಖೇ ಬ್ರಾಹ್ಮಣೇ ಚ ಕೃತಾಂಜಲೌ |

ಶರಣಾಗತೇ ನ್ಯಸ್ತಶಸ್ತ್ರೇ ತಥಾ ವ್ಯಸನಗೇಽರ್ಜುನ ॥108॥
ಅಬಾಣೇ ಭ್ರಷ್ಟಕವಚೇ ಭ್ರಷ್ಟಭಗ್ನಾಯುಧೇ ತಥಾ |
ನ ಶೂರಾಃ ಪ್ರಹರಂತ್ಯಾಜೌ ನ ರಾಜ್ಞೋ ಪಾರ್ಥಿವಾಸ್ತಥಾ |
ತ್ವಂ ಚ ಶೂರೋಽಸಿ ಕೌಂತೇಯ ತಸ್ಮಾತ್ ಕ್ಷಮ
ಮುಹೂರ್ತಕಮ್ ॥109॥
ಯಾವಚ್ಚಕ್ರಮಿದಂ ಭೂಮೇರುದ್ಧರಾಮಿ ಧನಂಜಯ |
ನ ಮಾಂ ರಥಸ್ಥೋ ಭೂಮಿಷ್ಠಮಸಜ್ಜಂ ಹಂತುಮರ್ಹಸಿ |
ನ ವಾಸುದೇವಾತ್ ತ್ವತ್ತೋ ವಾ ಪಾಂಡವೇಯ ಬಿಭೇಮ್ಯಹಮ್| 110
ತಲೆಕೂದಲು ಕೆದರಿಕೊಂಡವನ ಮೇಲೆ, ಯುದ್ಧ ಪರಾಙ್ಮುಖನಾದವನ ಮೇಲೆ, ಬ್ರಾಹ್ಮಣನ ಮೇಲೆ, ಕೈಮುಗಿದು ರಕ್ಷಣೆಯನ್ನು ಬೇಡುವವನ ಮೇಲೆ, ಶರಣಾಗತನ ಮೇಲೆ, ಶಸ್ತ್ರತ್ಯಾಗ ಮಾಡಿದವನ ಮೇಲೆ, ವ್ಯಸನದಲ್ಲಿರುವವನ ಮೇಲೆ, ಶಸ್ತ್ರರಹಿತನ ಮೇಲೆ, ಕವಚವಿಲ್ಲದವನ ಮೇಲೆ, ಆಯುಧ ನಾಶಹೊಂದಿದವನ ಮೇಲೆ, ರಾಜನ ಮೇಲೆ, ಕ್ಷತ್ರಿಯರು ಎಂದೂ ಶಸ್ತ್ರಪ್ರಯೋಗವನ್ನು ಮಾಡುವುದಿಲ್ಲ. ನೀನು ಶೂರ. ಅದರಿಂದ ಒಂದು ಮುಹೂರ್ತ ತಾಳು. ಅರ್ಜುನ, ಅಷ್ಟರಲ್ಲಿ ನಾನು ಈ ಚಕ್ರವನ್ನು ನೆಲದೊಳಗಿಂದ ಮೇಲೆ ಎತ್ತುತ್ತೇನೆ. ನಾನು ನೆಲದಲ್ಲಿ ನಿಂತಿರುವಾಗ, ಯುದ್ಧಕ್ಕೆ ಸನ್ನದ್ಧನಾಗಿಲ್ಲದಿರು ವಾಗ ನೀನು ರಥದಲ್ಲಿದ್ದು ನನ್ನನ್ನು ಹೊಡೆಯುವುದು ಯುಕ್ತವಲ್ಲ. ಅದು ಯುದ್ಧಧರ್ಮವಲ್ಲ, ಅದರಿಂದ ನಾನು ಹೀಗೆ ಹೇಳುತ್ತಿದ್ದೇನೆ, ನಾನು ವಾಸುದೇವನಿಗಾಗಲಿ, ನಿನಗಾಗಲಿ ಭಯಪಡುತ್ತಿಲ್ಲ.
ಧರ್ಮಭೀರುವಾದ ಅರ್ಜುನ 69ನೇ ಶ್ಲೋಕದಲ್ಲಿ ಹೇಳಿದಂತೆ ತಾಳಲೂ ಬಹುದೆಂದು ಕರ್ಣನಿಗೆ ಒಂದು ದೂರದ ಆಸೆ ಮಾತ್ರ. ಕುಶಕಾಶಾವಲಂಬನ.
ತ್ವಂ ಹಿ ಕ್ಷತ್ರಿಯದಾಯಾದೋ ಮಹಾಕುಲವಿವರ್ಧನಃ |
ಸ್ಮೃತ್ವಾ ಧರ್ಮೋಪದೇಶಂ ತ್ವಂ ಮುಹೂರ್ತಂ ಕ್ಷಮ ಪಾಂಡವ ॥111॥
ನೀನು ಕ್ಷತ್ರಿಯಕುಲದಲ್ಲಿ ಹುಟ್ಟಿದವನು, ಮಹತ್ತಾದ ಕುರುಕುಲದ ಕೀರ್ತಿ ಯನ್ನು ಬೆಳಗಿಸಬೇಕಾದವನು. ಅದರಿಂದ ಧರ್ಮೋಪದೇಶವನ್ನು ನೆನೆದು ಒಂದು ಮುಹೂರ್ತಕಾಲ ತಡೆದುಕೊಳ್ಳು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣಾರ್ಜುನಯುದ್ಧೇ ಭೂಮ್ಯಾ ಕರ್ಣಚಕ್ರಗ್ರಸಣಂ ನಾಮ ಸಪ್ತಾಶೀತಿತಮೋಧ್ಯಾಯಃ ॥87॥
ಮಹಾಭಾರತತಾತ್ಪರ್ಯನಿರ್ಣಯ
ಉದ್ವರ್ತುಕಾಮೋ ರಥಚಕ್ರಮೇವ
ಪಾರ್ಥಂ ಯಯಾಚೇಽವಸರಂ ಪ್ರದಾತುಮ್ |
ನೇತ್ಯಾಹ ಕೃಷ್ಣೋಂಜಲಿಕಂ ಸುಘೋರಂ
ತ್ರಿನೇತ್ರದತ್ತಂ ಜಗೃಹೇ ಚ ಪಾರ್ಥಃ ॥ 188 ॥
ಕರ್ಣ ರಥದ ಚಕ್ರವನ್ನು ಎತ್ತಲು ಬಯಸಿ ಅದಕ್ಕೆ ಕಾಲಾವಕಾಶ ನೀಡಲು ಅರ್ಜುನನನ್ನು ಕೇಳಿಕೊಂಡ. `ಇಲ್ಲ' ಎಂದ ಕೃಷ್ಣ. ಅರ್ಜುನ ಶಿವನಿಂದ ದತ್ತವಾದ ಬಲು ಘೋರವಾದ ಅಂಜಲಿಕಾಸ್ತ್ರವನ್ನೆತ್ತಿಕೊಂಡ.
ಸತ್ಯೇನ ಧರ್ಮೇಣ ಚ ಸನ್ನಿಯೋಜ್ಯ
ಮುಮೋಚ ಕರ್ಣಸ್ಯ ವಧಾಯ ಬಾಣಮ್ |
ಚಿಚ್ಛೇದ ತೇನೈವ ಚ ತಸ್ಯ ಶೀರ್ಷಂ
ಸಂಧಿತ್ಸತೋ ಬಾಣವರಂ ಸುಘೋರಮ್ ॥ 189 ॥
ಬಲುಘೋರವಾದ ಶ್ರೇಷ್ಠ ಬಾಣವನ್ನು ಹೂಡಬೇಕೆಂದು ಕರ್ಣ ಯತ್ನಿಸು ವಷ್ಟರಲ್ಲಿ ಅರ್ಜುನ ಅವನ ವಧಕ್ಕಾಗಿ ಅಂಜಲಿಕಾಸ್ತ್ರವನ್ನು ತನ್ನ ಸತ್ಯಧರ್ಮಗಳಿಂದ ಜೊತೆಗೂಡಿಸಿ ಪ್ರಯೋಗಿಸಿದ. ಅದರಿಂದಲೆ ಕರ್ಣನ ಶಿರವನ್ನು ತರಿದ.
ಅಪರಾಹ್ಣೇಽಪರಾಹ್ಣಸ್ಯ ಸೂರ್ಯಜಸ್ಯೇಂದ್ರಸೂನುನಾ |
ಛಿನ್ನಮಂಜಲಿಕೇನಾಽಜೌ ಸೋತ್ಸೇಧಮಪತಚ್ಛಿರಃ ॥ 190 ॥
ಎರಡನೆ ದಿನದ ಅಪರಾಹ್ಣಕಾಲದಲ್ಲಿ ಯುದ್ಧದಲ್ಲಿ ಅಂಜಲಿಕಾಸ್ತ್ರದಿಂದ ಅರ್ಜುನ ಕಡಿದ ಕರ್ಣನ ಶಿರಸ್ಸು ಬಾಣದ ವೇಗದಿಂದ ಮೇಲೆ ಹಾರಿ ಕೆಳಗೆ ಬಿದ್ದಿತು.

ಎಂಬತ್ತೆಂಟನೆಯ ಅಧ್ಯಾಯಃ
ರಥಚಕ್ರವನ್ನೆತ್ತಲು ಮುಹೂರ್ತವ್ಯವಧಾನವನ್ನು ಕರ್ಣ ಕೇಳಿಕೊಂಡರೆ ಅದನ್ನು ಶ್ರೀಕೃಷ್ಣ ನಿರಾಕರಿಸಿದ. ಅಂಜಲಿಕಾಸ್ತ್ರದಿಂದ ಅರ್ಜುನ ಕರ್ಣನ ಶಿರವನ್ನು ತರಿದ
ಸಂಜಯಃ
ಅಥಾಬ್ರವೀದ್ ವಾಸುದೇವೋ ರಥಸ್ಥೋ
ರಾಧೇಯ ದಿಷ್ಟ್ಯಾ ಸ್ಮರಸೀಹ ಧರ್ಮಮ್ |
ಪ್ರಾಯೇಣ ನೀಚಾ ವ್ಯಸನೇಷು ಮಗ್ನಾ
ನಿಂದಂತಿ ದೈವಂ ಕುಕೃತಂ ನ ತು ಸ್ವಮ್ ॥1॥
ಸಂಜಯ ನುಡಿದ– ಆಗ ರಥದಲ್ಲಿದ್ದ ವಾಸುದೇವ ನುಡಿದ `ಕರ್ಣ, ನೀನು ಈಗ ಅದೃಷ್ಟವಶಾತ್ ಧರ್ಮವನ್ನು ನೆನೆಯುತ್ತಿರುವೆ.

ನೀಚರು ಸಾಮಾನ್ಯವಾಗಿ ಹೀಗೇ ತಾವು ವ್ಯಸನದಲ್ಲಿ ಮುಳುಗಿದಾಗ ದೈವವನ್ನು ನಿಂದಿಸುತ್ತಾರೆ, ತಾವೇ ಮಾಡಿರುವ ಕುಕೃತ್ಯಗಳನ್ನು ನೆನೆಯುವುದಿಲ್ಲ.
ಯದ್ ದ್ರೌಪದೀಮೇಕವಸ್ತ್ರಾಂ ಸಭಾಯಾಂ
ಆನಾಯಯಸ್ತ್ವಂ ಚ ಸುಯೋಧನಶ್ಚ |
ದುಃಶಾಸನಃ ಶಕುನಿಃ ಸೌಬಲಶ್ಚ
ನ ತೇ ಕರ್ಣ ಪ್ರತ್ಯಭಾತ್ ತತ್ರ ಧರ್ಮಃ ॥2॥
ಏಕವಸ್ತ್ರೆಯಾದ ದ್ರೌಪದಿಯನ್ನು ಅಂದು ನೀನೂ, ದುರ್ಯೋಧನನೂ, ದುಃಶಾಸನ ಶಕುನಿಗಳೂ ಸಭೆಗೆ ಎಳೆದು ತಂದಿರಿ. ಆಗ ಧರ್ಮ ನಿನ್ನ ಮನಸ್ಸಿಗೆ ಹೊಳೆಯಲಿಲ್ಲ!
ಯದಾ ಸಭಾಯಾಂ ಕೌಂತೇಯಮನಕ್ಷಜ್ಞಂ ಯುಧಿಷ್ಠಿರಮ್ |
ಅಕ್ಷಜ್ಞಃ ಶಕುನಿರ್ಜೇತಾ ತದಾ ಧರ್ಮಃ ಕ್ವ ತೇ ಗತಃ ॥3॥
ಸಭೆಯಲ್ಲಿ ದ್ಯೂತವನ್ನು ತಿಳಿಯದಿದ್ದ ಧರ್ಮರಾಜನನ್ನು, ತಿಳಿದಿದ್ದ ಶಕುನಿ ಪರಾಭವಗೊಳಿಸಿದಾಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ಯದ್ ಭೀಮಸೇನಂ ಸರ್ಪೈಶ್ಚ ವಿಷಯುಕ್ತೈಶ್ಚ ಭೋಜನೈಃ |
ಅಚರದ್ ವಿಕೃತೈ ರಾಜನ್ ಕ್ವ ತೇ ಧರ್ಮಸ್ತದಾ ಗತಃ ॥4॥
ಭೀಮಸೇನನನ್ನು ಸರ್ಪಗಳಿಂದ ವಿಷಯುಕ್ತ ಭೋಜನಗಳಿಂದ, ವಿರುದ್ಧ ಕರ್ಮ ಆಚರಣೆಗಳಿಂದ ಹಿಂಸೆ ಮಾಡಿದಾಗ ಅಂಗರಾಜ, ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ಯದ್ ವಾರಣಾವತೇ ಪಾರ್ಥಾನ್ ಸುಪ್ತಾನ್ ಜತುಗೃಹೇ ತದಾ |
ಆದೀಪಯಸ್ತ್ವಂ ರಾಧೇಯ ಕ್ವ ತೇ ಧರ್ಮಸ್ತದಾ ಗತಃ ॥5॥
ವಾರಣಾವತದಲ್ಲಿ ಅರಗಿನ ಮನೆಯಲ್ಲಿ ನಿದ್ದೆ ಮಾಡುತ್ತಿದ್ದಾಗ ಪಾಂಡವರನ್ನು ನೀನು ಸುಡಿಸಿದೆ. ಆಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ವನವಾಸೇ ವ್ಯತೀತೇ ಚ ಕರ್ಣ ವರ್ಷೇ ತ್ರಯೋದಶೇ |
ನ ಪ್ರಯಚ್ಛಸಿ ಯದ್ ರಾಜ್ಯಂ ಕ್ವ ತೇ ಧರ್ಮಸ್ತದಾ ಗತಃ ॥6॥
ಕರ್ಣ, ಹದಿಮೂರನೆ ವರ್ಷ ವನವಾಸ ಮುಗಿದಾಗ ಪಾಂಡವರಿಗೆ ಅವರ ರಾಜ್ಯವನ್ನು ಕೊಡಲಿಲ್ಲ, ಆಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ಯದಾ ರಜಸ್ವಲಾಂ ಕೃಷ್ಣಾಂ ದುಃಶಾಸನವಶೇ ಸ್ಥಿತಾಮ್ |
ಸಭಾಯಾಂ ಪ್ರಾಹಸಃ ಕರ್ಣ ಕ್ವ ತೇ ಧರ್ಮಸ್ತದಾ ಗತಃ ॥7॥
ರಜಸ್ವಲೆಯಾದ ದ್ರೌಪದಿ ದುಃಶಾಸನನ ವಶದಲ್ಲಿ ಸಭೆಯಲ್ಲಿ ನಿಂತಾಗ ಅಪಹಾಸಗೈದೆ, ಕರ್ಣ, ಆಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ಯದನಾರ್ಯೈಃ ಪುರಾ ಕೃಷ್ಣಾಂ ಕ್ಲಿಶ್ಯಮಾನಾಮನಾಗಸಮ್ |
ವಿನಷ್ಟಾಃ ಪಾಂಡವಾಃ ಕೃಷ್ಣೇ ಶಾಶ್ವತಂ ನರಕಂ ಗತಾಃ ॥8॥
ಪತಿಮನ್ಯಂ ವೃಣೀಷ್ವೇತಿ ವದಂಸ್ತ್ವಂ ಗಜಗಾಮಿನೀಮ್ |
ಉಪಪ್ರೇಕ್ಷಸಿ ರಾಧೇಯ ಕ್ವ ತೇ ಧರ್ಮಸ್ತದಾ ಗತಃ ॥9॥
ಹಿಂದೆ ಅಯೋಗ್ಯರಾದ ದುರ್ಯೋಧನ ಮುಂತಾದವರು ನಿರಪರಾಧಿನಿ ಯಾದ ದ್ರೌಪದಿಯನ್ನು ಕ್ಲೇಶಪಡಿಸುವಾಗ, `ದ್ರೌಪದಿ, ಪಾಂಡವರು ಸತ್ತರು, ಶಾಶ್ವತ ನರಕಕ್ಕೇ ಹೋದರು. ಬೇರೆ ಪತಿಯನ್ನು ವರಿಸಿಕೊಳ್ಳು ಎಂದು ಹೇಳುತ್ತ ಗಜಗಾಮಿನಿಯಾದ ದ್ರೌಪದಿಯ ಮುಂದೆ ನಿಂತು ಕೆಟ್ಟಕಣ್ಣಿಂದ ನೋಡಿದೆ. ಕರ್ಣ, ಆಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ರಾಜ್ಯಲುಬ್ಧಃ ಪುನಃ ಕರ್ಣ ಸಮಾಹ್ವಯಸಿ ಪಾಂಡವಮ್ |
ಗಾಂಧಾರರಾಜಮಾಶ್ರಿತ್ಯ ಕ್ವ ತೇ ಧರ್ಮಸ್ತದಾ ಗತಃ ॥10॥
ರಾಜ್ಯಲೋಭದಿಂದ ಶಕುನಿಯಲ್ಲಿ ಭರವಸೆ ಇಟ್ಟು ಪುನಃ ಧರ್ಮರಾಜನನ್ನು ಜೂಜಿಗೆ ಕರೆದೆ. ಆಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?
ಯದಾಭಿಮನ್ಯುಂ ಬಹವೋ ಯುದ್ಧೇ ಜಘ್ನುರ್ಮಹಾರಥಾಃ |
ಪರಿವಾರ್ಯ ರಣೇ ಬಾಲಂ ಕ್ವ ತೇ ಧರ್ಮಸ್ತದಾ ಗತಃ ॥11॥
ಬಾಲಕ ಅಭಿಮನ್ಯು ಒಬ್ಬನನ್ನು ನೀವು ಬಹುಮಂದಿ ಮಹಾರಥರು ಸೇರಿ ಸುತ್ತುವರಿದು ರಣದಲ್ಲಿ ಹತ್ಯೆ ಮಾಡಿದಿರಿ. ಆಗ ನಿನ್ನ ಧರ್ಮ ಎಲ್ಲಿಗೆ ಹೋಗಿತ್ತು?'
ಸಂಜಯಃ
ಏವಮುಕ್ತೇ ತು ರಾಧೇಯೇ ವಾಸುದೇವೇನ ಪಾಂಡವಮ್ |
ಮನ್ಯುರಭ್ಯಾವಿಶತ್ ತೀವ್ರಃ ಸ್ಮೃತ್ವಾ ತತ್ತದ್ಧನಂಜಯಮ್ ॥12॥
ಸಂಜಯ ನುಡಿದ– ಹೀಗೆ ಶ್ರೀಕೃಷ್ಣ ಕರ್ಣನಿಗೆ ಹೇಳಿದಾಗ ಅರ್ಜುನನಿಗೆ ಕರ್ಣನು ಗೈದ ಎಲ್ಲ ಅಕೃತ್ಯಗಳು ನೆನಪಿಗೆ ಬಂದುವು. ತೀವ್ರ ಕೋಪಾವೇಶ ಉಂಟಾಯಿತು.
ತಸ್ಯ ಕ್ರೋಧೇನ ಸರ್ವೇಭ್ಯಃ ಸ್ರೋತೋಭ್ಯಸ್ತೇಜಸೋಽರ್ಚಿಷಃ |
ಪ್ರಾದುರಾಸನ್ ಮಹಾರಾಜ ತದದ್ಭುತಮಿವಾಭವತ್ ॥13॥
ಅರ್ಜುನನಿಗೆ ಕೋಪದಿಂದ ಕಣ್ಣು ಮೂಗು ಮುಂತಾದ ಎಲ್ಲ ನವದ್ವಾರಗಳಿಂದಲೂ ಬೆಂಕಿಯ ಜ್ವಾಲೆಗಳು ಪ್ರಾದುರ್ಭವಿಸಿದುವು. ಮಹಾರಾಜ, ಅದು ಅದ್ಭುತವಾಗಿತ್ತು.

ಏವಮುಕ್ತಸ್ತದಾ ಕರ್ಣೋ ವಾಸುದೇವೇನ ಭಾರತ |
ಲಜ್ಜಯಾವನತೋ ಭೂತ್ವಾ ನೋತ್ತರಂ ಕಿಂಚಿದುಕ್ತವಾನ್ ॥14॥
ಶ್ರೀಕೃಷ್ಣ ಹೀಗೆ ಹೇಳಿದಾಗ `ಅಸುರಾವೇಶದಿಂದ ತಾನು ನಿಜವಾಗಿ ತಪ್ಪು ಮಾಡಿದ್ದೇನೆ' ಎಂದು ಮನಸ್ಸಿನಲ್ಲಿ ಒಪ್ಪಿಕೊಂಡು ಕರ್ಣನು ಲಜ್ಜೆಯಿಂದ ತಲೆ ತಗ್ಗಿಸಿದ. ಏನೂ ಉತ್ತರವನ್ನು ಹೇಳಲಿಲ್ಲ.
ಅಸುರಾವೇಶದಿಂದ ತಾನು ತಪ್ಪು ಮಾಡಿದ್ದನ್ನು ಕರ್ಣ ಒಪ್ಪಿಕೊಂಡು ಪಶ್ಚಾತ್ತಾಪ ಪಡುವುದರಿಂದ ಶ್ರೀಕೃಷ್ಣ ಕ್ಷಮಾದಾನ ಮಾಡಬಹುದಿತ್ತೇನೊ! ಆದರೂ ಆವಿಷ್ಟನಾದ ಅಸುರನನ್ನು ಕ್ಷಮಿಸುವಂತಿಲ್ಲ. ಭೀಮ ರಕ್ತಪಾನ ಮಾಡುವಾಗಲೂ ದುಃಶಾಸನ ತಾನೇನೂ ತಪ್ಪು ಮಾಡಿಲ್ಲ, ಎಂದ. ಮುಂದೆ ದುರ್ಯೋಧನ ತೊಡೆ ಮುರಿದು ಬಿದ್ದಾಗ ಕೃಷ್ಣನನ್ನೇ ಆಕ್ಷೇಪಿಸುತ್ತಾನೆ ಆತ. ಹಾಗೆ ಅಸುರರು ತಪ್ಪು ಒಪ್ಪಿಕೊಳ್ಳುವುದೇ ಇಲ್ಲ. ಅವರಿಗೆ ಕ್ಷಮೆಯ ಪ್ರಸಂಗವೆ ಇಲ್ಲ. ಅದರಿಂದ ಕರ್ಣನನ್ನು ಕೃಷ್ಣ ಕ್ಷಮಿಸಲಿಲ್ಲ. ಮತ್ತು ಬ್ರಾಹ್ಮಣಶಾಪ ಅಮೋಘ. ಅದನ್ನು ಕೆಡಲು ಬಿಡುವುದೂ ಇಲ್ಲ ಶ್ರೀಕೃಷ್ಣ.
ಕ್ರೋಧಾತ್ ಪ್ರಸ್ಫುರಮಾಣೌಷ್ಠೋ ಧನುರುದ್ಯಮ್ಯ ಭಾರತ |
ಯೋಧಯಾಮಾಸ ವೈ ಪಾರ್ಥಂ ಮಹಾವೇಗ ಪರಾಕ್ರಮಃ ॥15॥
ಕ್ರೋಧದಿಂದ ತುಟಿ ಅದರುತ್ತಿದ್ದಂತೇ ಕರ್ಣನು ಬಿಲ್ಲನ್ನೆತ್ತಿ ಮಹಾವೇಗ ಪರಾಕ್ರಮಗಳನ್ನು ಮೆರೆಸುತ್ತ ಅರ್ಜುನನೊಡನೆ ಹೋರಾಡಿದ.
ತತೋಽಬ್ರವೀದ್ ವಾಸುದೇವಃ ಫಲ್ಗುನಂ ಪುರುಷರ್ಷಭಮ್ |
ದಿವ್ಯಾಸ್ತ್ರೇಣೈವ ನಿರ್ಭಿದ್ಯ ಪಾತಯಸ್ವ ಮಹಾಬಲ ॥16॥
ಪುರುಷೋತ್ತಮನಾದ ಅರ್ಜುನನಿಗೆ ಶ್ರೀಕೃಷ್ಣ ನುಡಿದ `ಮಹಾಬಲಿಯೇ, ಕರ್ಣನನ್ನು ದಿವ್ಯ ಅಸ್ತ್ರದಿಂದಲೇ ಹೊಡೆದು ಬೀಳಿಸು' ಎಂದು.
ಛಿಂಧ್ಯಸ್ಯ ಮೂರ್ಧಾನಮರೇಃ ಶರೇಣ
ನ ಯಾವದಾರೋಹತಿ ವೈ ರಥಂ ವೃಷಃ |
ತಥೈವ ಸಂಪೂಜ್ಯ ಸ ತದ್ವಚಃ ಪ್ರಭೋ-
ಸ್ತತಃ ಕ್ಷುರಂ ಪ್ರಜ್ವಲಿತಂ ಪ್ರಗೃಹ್ಯ |
ಜಘಾನ ಕಕ್ಷ್ಯಾಮಮಲಾರ್ಕವರ್ಣಾಂ
ಮಹಾರಥೇ ರಥಚಕ್ರೇ ವಿಮಗ್ನೇ ॥17॥
`ಕರ್ಣನು ರಥವನ್ನು ಏರುವುದರೊಳಗಾಗಿ ಅವನ ಶಿರಸ್ಸನ್ನು ಬಾಣದಿಂದ ಕತ್ತರಿಸು' ಎಂದು ಶ್ರೀಕೃಷ್ಣ ನುಡಿದ. `ಹಾಗೇ ಆಗಲಿ' ಎಂದು ಪ್ರಭುವಿನ ಆ ಮಾತನ್ನು ಅಂಗೀಕರಿಸಿ ಮೊದಲಿಗೆ ಅರ್ಜುನನು ಜ್ವಲಿಸುವ ಒಂದು ಕ್ಷುರವನ್ನು ಎತ್ತಿಕೊಂಡು ಅದರಿಂದ ನಿರ್ಮಲ ಸೂರ್ಯನಂತೆ ಬೆಳಗುವ ಕರ್ಣನ ಮಹಾರಥದಲ್ಲಿದ್ದ ಕಾಕಧ್ವಜವನ್ನು ಕತ್ತರಿಸಿದ. ರಥಚಕ್ರವು ಆಗಲೆ ನೆಲದಲ್ಲಿ ಹೂತು ಹೋಗಿತ್ತು.
ತಂ ಹಸ್ತಿಕಕ್ಷ್ಯಾಪ್ರವರಂ ಬೃಹಂತಂ
ಸುವರ್ಣಮುಕ್ತಾಮಣಿವಜ್ರಮೃಷ್ಟಮ್ |
ಕಾಲಪ್ರಯತ್ನೋತ್ತಮಶಿಲ್ಪಿಯತ್ನೈಃ
ಕೃತಂ ಸುರೂಪಂ ವಿಗತಾಂಧಕಾರಮ್ ॥18॥
(ಧ್ವಜವು ರಥಿಕನಿಗೆ ಜಯವನ್ನು ತಂದುಕೊಡುವ ಸಾಮರ್ಥ್ಯಉಳ್ಳದ್ದು. ಅದಕ್ಕೆ ಅರ್ಜುನ ಮೊದಲಿಗೆ ಅದನ್ನು ಪುಡಿಗೈದ.) ಕಾಲ ಪ್ರಯತ್ನ ಮತ್ತು ಉತ್ತಮ ಶಿಲ್ಪಿಗಳ ಯತ್ನಗಳಿಂದ ನಿರ್ಮಿತವಾದ, ತಮಸ್ಸನ್ನು ದೂರಮಾಡುವ, ಸುಂದರವಾದ, ಬಂಗಾರ ಮುತ್ತು ರತ್ನ ವಜ್ರಗಳಿಂದ ಶುದ್ಧೀಕರಿಸಿದ, ಅಂಧಕಾರವನ್ನು ದೂರಮಾಡುವ, ಹಸ್ತಪ್ರಮಾಣದ ಕಾಗೆಯ ಪ್ರತಿಮೆಯುಳ್ಳ ಉನ್ನತವಾದ ಕರ್ಣನ ಧ್ವಜವನ್ನು ಅರ್ಜುನ ಕೆಡವಿದ.
ಊರ್ಜಸ್ಕರಂ ತವ ಸೈನ್ಯಸ್ಯ ನಿತ್ಯಂ
ಅಮಿತ್ರವಿತ್ರಾಸನಮೀಡ್ಯರೂಪಮ್ |
ವಿಖ್ಯಾತಮಾದಿತ್ಯಸುತಸ್ಯ ಲೋಕೇ
ತ್ವಿಷಾ ಸಮಂ ಪಾವಕಭಾನುಚಂದ್ರೈಃ ॥19॥
ಆ ಕಾಕಧ್ವಜವು ನಿನ್ನ ಸೈನ್ಯಕ್ಕೆ ಸದಾ ಬಲಕಾರಿಯಾಗಿತ್ತು. ಶತ್ರುಗಳಿಗೆ ಭಯ ಉಂಟುಮಾಡುತ್ತಿತ್ತು. ಪ್ರಶಸ್ತರೂಪ ಉಳ್ಳದ್ದಾಗಿತ್ತು. ಸೂರ್ಯಪುತ್ರನ ಧ್ವಜವೆಂದು ಲೋಕದಲ್ಲಿ ವಿಖ್ಯಾತವಾಗಿತ್ತು. ಪ್ರಕಾಶದಲ್ಲಿ ಅಗ್ನಿ ಸೂರ್ಯ ಚಂದ್ರರಂತಿತ್ತು.
ತತಃ ಕ್ಷುರಪ್ರೇಣ ಸುಸಂಶಿತೇನ
ಸುವರ್ಣಪುಂಖೇನ ಶರೇಣ ಯತ್ತಃ |
ಶ್ರಿಯಾ ಜ್ವಲಂತಂ ಧ್ವಜಮುನ್ಮಮಾಥ
ಮಹಾರಥಸ್ಯಾಧಿರಥೇರ್ಮಹಾತ್ಮಾ ॥20॥
ಕಾಂತಿಯಿಂದ ಜ್ವಲಿಸುತ್ತಿದ್ದ, ಮಹಾರಥನಾದ ಕರ್ಣನ ಆ ಧ್ವಜವನ್ನು ಮಹಾತ್ಮಾ ಅರ್ಜುನನು ಒಳ್ಳೆ ತೀಕ್ಷ್ಣವಾದ ಬಂಗಾರದ ಪುಕ್ಕಉಳ್ಳ ಕ್ಷುರಪ್ರ ಎಂಬ ಬಾಣದಿಂದ ಪ್ರಯತ್ನಪೂರ್ವಕವಾಗಿ ಪುಡಿಗೈದ.
ಯಶಶ್ಚ ಧರ್ಮಶ್ಚ ಜಯಶ್ಚ ಮಾರಿಷ
ಪ್ರಿಯಾಣಿ ಸರ್ವಾಣಿ ಚ ತೇನ ಕೇತುನಾ |
ಸಾಕಂ ಕುರೂಣಾಂ ಹೃದಯಾನಿ ಚಾಪತನ್

ಬಭೂವ ಹಾಹೇತಿ ಚ ನಿಸ್ವನೋ ಮಹಾನ್ ॥21॥
ರಾಜನೆ, ಯಶಸ್ಸು, ಧರ್ಮ, ಜಯ ಮತ್ತು ಪ್ರಿಯಕರವಾದ ಎಲ್ಲ ವಸ್ತುಗಳೂ ಕೌರವಯೋಧರ ಹೃದಯಸ್ಥೈರ್ಯಗಳೂ ಆ ಧ್ವಜದೊಂದಿಗೇ ಕುಸಿದು ಬಿದ್ದುವು. ದೊಡ್ಡದಾದ ಹಾಹಾಕಾರದ ಧ್ವನಿಯೂ ಉಂಟಾಯಿತು.
ಅಥ ತ್ವರನ್ ಕರ್ಣವಧಾಯ ಪಾಂಡವೋ
ಮಹೇಂದ್ರವಜ್ರಾಂತಕದಂಡಸನ್ನಿಭಮ್ |
ಆದತ್ತ ಪಾರ್ಥೋಽಂಜಲಿಕಂ ನಿಷಂಗಾತ್
ಸಹಸ್ರರಶ್ಮೇರಿವ ರಶ್ಮಿಮುತ್ತಮಮ್ ॥22॥
ಬಳಿಕ ಕರ್ಣನ ವಧೆಗೆ ತ್ವರೆ ಮಾಡುತ್ತ ಅರ್ಜುನನು ಬತ್ತಳಿಕೆಯಿಂದ ಮಹೇಂದ್ರನ ವಜ್ರಾಯುಧದಂತೆ, ಅಂತಕನ ದಂಡದಂತೆ ಹೊಳೆವ ಆಗತಾನೇ ಅಭಿಮಂತ್ರಿತವಾಗಿರಿಸಿದ್ದ ಅಂಜಲಿಕಬಾಣವನ್ನು, ಸೂರ್ಯಮಂಡಲದಿಂದ ಕಿರಣಗಳಂತೆ, ಎತ್ತಿಕೊಂಡ.
ಮರ್ಮಚ್ಛಿದಂ ಶೋಣಿತಮಾಂಸದಿಗ್ಧಂ
ವೈಶ್ವಾನರಾರ್ಕಪ್ರತಿಮಂ ಮಹಾರ್ಹಮ್ |
ನರಾಶ್ವನಾಗಾಸುಹರಂ ತ್ರ್ಯರತ್ನಿಂ
ಷಡ್ವಾಜಮಂಜೋಗತಿಮುಗ್ರವೇಗಮ್ ॥23॥
ಅಂಜಲಿಕಾಸ್ತ್ರವು ಮರ್ಮವನ್ನು ಛೇದಿಸುವುದು, ರಕ್ತಮಾಂಸದಿಂದ ತೊಯ್ದು ಅಗ್ನಿಸೂರ್ಯರಂತೆ ಹೊಳೆಯುತ್ತ ಪದಾತಿ ಅಶ್ವ ಗಜಗಳ ಪ್ರಾಣಗಳನ್ನೇ ತೆಗೆಯುವುದು. ಮೂರು ಮೊಳ ಪ್ರಮಾಣದ್ದು, ಆರು ರೆಕ್ಕೆ ಉಳ್ಳದ್ದು. ಭಯಂಕರ ವೇಗದ ಗತಿ ಉಳ್ಳದ್ದು, ಬಹು ಬೆಲೆಬಾಳುವ ಬಾಣವಾಗಿದೆ.
ಸಹಸ್ರನೇತ್ರಾಶನಿತುಲ್ಯತೇಜಸಂ
ನಿಶಾಸು ಕ್ರವ್ಯಾದಮಿವಾತಿದುಃಸಹಮ್ |
ಪಿನಾಕನಾರಾಯಣಚಕ್ರಸನ್ನಿಭಂ
ಭಯಂಕರಂ ಪ್ರಾಣಭೃತಾಂ ವಿನಾಶನಮ್ ॥24॥
ಇಂದ್ರನ ವಜ್ರಾಯುಧದಂತೆ ತೇಜಸ್ಸುಳ್ಳದ್ದು. ರಾತ್ರಿಕಾಲದ ಹಿಂಸ್ರಪ್ರಾಣಿ ಗಳಂತೆ ಸಹಿಸಲು ಅತಿ ಅಸಾಧ್ಯವಾದುದು. ಶಿವನ ಪಿನಾಕದಂತೆ, ನಾರಾಯಣನ ಚಕ್ರದಂತೆ ಭಯಂಕರ, ಉಸಿರಾಡುವ ಎಲ್ಲರನ್ನೂ ನಾಶಮಾಡಬಲ್ಲುದು.
ಯುಕ್ತತ್ವ ಮಹಾಸ್ತ್ರೇಣ ಪರೇಣ ಮಂತ್ರವಿದ್
ವಿಕೃಷ್ಯ ಗಾಂಡೀವಮುವಾಚ ಸಸ್ವನಮ್ |
ಅಯಂ ಮಹಾಸೊತ್ರಽಪ್ರತಿಮೋ ಧೃತಃ ಶರಃ
ಶರೀರಭಿಚ್ಚಾಸುಹರಶ್ಚ ದುರ್ಹೃದಃ ॥25॥
ಇಂಥ ಉತ್ತಮವಾದ ಮಹಾ ಅಂಜಲಿಕ ಬಾಣವನ್ನು ಗಾಂಡೀವದಲ್ಲಿ ಹೂಡಿ ಸೆಳೆದು ಮಂತ್ರವೇತ್ತನಾದ ಅರ್ಜುನನು ದೊಡ್ಡ ಧ್ವನಿಯಿಂದ ನುಡಿದ– ಮಹಾಸ್ತ್ರರೂಪವಾದ, ಅನುಪಮವಾದ, ಶತ್ರುಗಳ ಶರೀರವನ್ನು ಬಗೆದು ಪ್ರಾಣವನ್ನು ತೆಗೆವ ಈ ಬಾಣವನ್ನು ಎತ್ತಿಕೊಂಡಿದ್ದೇನೆ.
ತಪೋಽಸ್ತಿ ತಪ್ತಂ ಗುರವಶ್ಚ ತೋಷಿತಾ
ಮಯಾ ಯದೀಷ್ಟಂ ಸುಹೃದಾಂ ತಥಾ ಕೃತಮ್ |
ಅನೇನ ಸತ್ಯೇನ ನಿಹಂತ್ವಯಂ ಶರಃ
ಸುಸಂಹಿತಃ ಕರ್ಣಮರಿಂ ಮಯಾರ್ಚಿತಃ ॥26॥
ನಾನು ತಪಸ್ಸು ಮಾಡಿದ್ದರೆ, ಗುರುಗಳನ್ನು ಸಂತೋಷಪಡಿಸಿದ್ದರೆ, ಬಂಧುಮಿತ್ರರ ಅಭೀಷ್ಟಗಳನ್ನು ಸಲ್ಲಿಸಿದ್ದರೆ ಈ ಸತ್ಯದ ಪುಣ್ಯದಿಂದ ಸರಿಯಾಗಿ ಬಿಲ್ಲಿನಲ್ಲಿ ಹೂಡಿರುವ, ನನ್ನಿಂದ ಅಭಿಮಂತ್ರಣ ಮಾಡಿ ಆರಾಧಿತವಾದ ಈ ಬಾಣವು ಶತ್ರುವಾದ ಕರ್ಣನನ್ನು ವಧಿಸಲಿ.
ಇತ್ಯೂಚಿವಾಂಸ್ತಂ ಸ ಮುಮೋಚ ಬಾಣಂ
ಧನಂಜಯಃ ಕರ್ಣವಧಾಯ ಘೋರಮ್ |
ಕೃತ್ಯಾಮಥರ್ವಾಂಗಿರಸೀಮಿವೋಗ್ರಾಂ
ದೀಪ್ತಾಮಸಹ್ಯಾಂ ಯುಧಿ ಮೃತ್ಯುನಾಪಿ ॥27॥
ಅರ್ಜುನನು ಹೀಗೆ ಹೇಳಿ, ಕರ್ಣನ ವಧೆಗಾಗಿ, ಘೋರವಾದ, ಅಥರ್ವವೇದೋಕ್ತ ಕೃತ್ರಿಮದೇವತೆಯಂತೆ ಉಗ್ರವಾದ, ರಣದಲ್ಲಿ ಮೃತ್ಯುವಿಗೂ ಸಹಿಸಲಾಗದಂಥ ಉಜ್ವಲವಾದ ಬಾಣವನ್ನು ಎಸೆದ.
ಬ್ರುವನ್ ಕಿರೀಟೀ ತಮಿತಿ ಪ್ರಹೃಷ್ಟೋ
ಹ್ಯಯಂ ಶರೋ ಮೇ ವಿಜಯಾವಹೋಽಸ್ತು |
ಜಿಘಾಂಸುರರ್ಕೇಂದುಸಮಪ್ರಭಾವಃ
ಕರ್ಣಂ ರಿಪುಂ ಮೇ ನಯತಾಂ ಯಮಾಯ ॥28॥
ತೇನೇಷುವರ್ಯೇಣ ಕಿರೀಟಮಾಲೀ
ಪ್ರಹೃಷ್ಟರೂಪೋ ವಿಜಯಾವಹೇನ |
ಜಿಘಾಂಸುರರ್ಕೇಂದುಸಮಪ್ರಭೇಣ
ಚಕ್ರೇ ವಿಷಕ್ತಂ ರಿಪುಮಾತತಾಯೀ ॥29॥

`ಸೂರ್ಯಚಂದ್ರರಂಥ ಪ್ರಭಾವದಿಂದ ಶತ್ರುವನ್ನು ಕೊಲ್ಲಲು ಹೊರಟ ಈ ನನ್ನ ಬಾಣವು ನನಗೆ ವಿಜಯವನ್ನು ತಂದುಕೊಡಲಿ. ನನ್ನ ಶತ್ರುವಾದ ಕರ್ಣನನ್ನು ಯಮನ ಬಳಿಗೆ ಒಯ್ಯಲಿ' ಎಂದು ಅಸ್ತ್ರದೇವತೆಯನ್ನು ಪ್ರಾರ್ಥಿಸುತ್ತ ಶಸ್ತ್ರಧಾರಿಯಾದ, ಶತ್ರುವಧವನ್ನು ಬಯಸಿದ್ದ ಅರ್ಜುನನು ವಿಜಯವನ್ನು ತಂದುಕೊಡುವ ಸೂರ್ಯಚಂದ್ರಸಮಾನ ಕಾಂತಿಯುಳ್ಳ ಆ ಉತ್ತಮವಾದ ಬಾಣದಿಂದ ಶತ್ರುವನ್ನು ಇರಿದ.

ತತೋಽರ್ಜುನಸ್ತಸ್ಯ ಶಿರೋ ಜಹಾರ
ವೃತ್ರಸ್ಯ ವಜ್ರೇಣ ಯಥಾ ಮಹೇಂದ್ರಃ |
ಶರೋತ್ತಮೇನಾಂಜಲಿಕೇನ ರಾಜನ್
ತದಾ ಮಹಾಸ್ತ್ರಪ್ರತಿಮಂತ್ರಿತೇನ ॥30॥

ರಾಜನೆ, ಮಹೇಂದ್ರನು ವಜ್ರಾಯುಧದಿಂದ ವೃತ್ರಾಸುರನ ಶಿರವನ್ನು ತೆಗೆದಂತೆ, ಮಹಾಸ್ತ್ರಮಂತ್ರದಿಂದ ಅಭಿಮಂತ್ರಿತವಾದ ಅಂಜಲಿಕವೆಂಬ ಉತ್ತಮ ಬಾಣದಿಂದ ಅರ್ಜುನನು ಕರ್ಣನ ಶಿರವನ್ನು ತೆಗೆದುಬಿಟ್ಟ.

ಪಾರ್ಥೋಽಪರಾಹ್ಣೇ ಶಿರ ಉಚ್ಚಕರ್ತ
ವೈಕರ್ತನಸ್ಯಾಥ ಮಹೇಂದ್ರಸೂನುಃ |
ತತ್ಪಾಪತಚ್ಚಾಂಜಲಿಕೇನ ಛಿನ್ನಂ
ಅಥಾಸ್ಯ ಕಾಯೋ ನಿಪಪಾತ ಪಶ್ಚಾತ್ ॥31॥

ಅರ್ಜುನನು ಅಪರಾಹ್ಣಕಾಲದಲ್ಲಿ ಅಪರ ವಯಸ್ಸಿನ ಕರ್ಣನ ಶಿರವನ್ನು ಕತ್ತರಿಸಿದ. ಅಂಜಲಿಕಬಾಣದಿಂದ ಅದು ಕಡಿದುಬಿದ್ದಿತು. ಬಳಿಕ ಅವನ ಶರೀರವೂ ಬಿದ್ದಿತು.

ತತೋ ಜ್ವಲದ್ವಹ್ನಿಸಮಾನವರ್ಚಸಂ
ಶರನ್ನಭೋಮಧ್ಯಗಭಾಸ್ಕರೋಪಮಮ್ |
ವರಾಂಗಮುರ್ವ್ಯಾಮಪತಚ್ಚಮೂಪತೇ-
ರ್ದಿವಾಕರೋಽಸ್ತಾದಿವ ರಕ್ತಮಂಡಲಃ ॥32॥

ಜ್ವಲಿಸುವ ಅಗ್ನಿಯಂತೆ ಶರತ್ಕಾಲದ ಮಧ್ಯಾಕಾಶದ ಸೂರ್ಯನಂತೆ ಹೊಳೆಯುತ್ತಿದ್ದ ಸೇನಾಪತಿ ಕರ್ಣನ ಶಿರಸ್ಸು , ಅಸ್ತಪರ್ವತದಿಂದ ಬೀಳುವ ಕೆಂಪುಮಂಡಲದ ಸೂರ್ಯನಂತೆ, ನೆಲದಲ್ಲಿ ಬಿದ್ದಿತು.

ತತೋಽಸ್ಯ ದೇಹಂ ಸತತಂ ಸುಖೋಚಿತಂ
ಸುರೂಪಮತ್ಯರ್ಥಮುದಾರಕರ್ಮಣಃ |
ಪರೇಣ ಕೃಚ್ಛ್ರೇಣ ಶಿರಃ ಸಮತ್ಯಜದ್
ಗೃಹಂ ಮಹದ್ಧೀವ ಸಭಂಗಮೀಶ್ವರಃ ॥33॥

ಸಂಪತ್ಸಮೃದ್ಧವಾದ ತನ್ನ ಮನೆ ಮುರಿದಾಗ ಅದನ್ನು ಮನೆಯೊಡೆಯನು ಕಷ್ಟದಿಂದ ಬಿಡುವಂತೆ, ಕರ್ಣನ ಶಿರಸ್ಸು ಅವನ ಶರೀರವನ್ನು ಬಲುಕಷ್ಟದಿಂದ ಬಿಟ್ಟಿತು. ಆ ಶರೀರವು ಸದಾ ಸುಖಭೋಗಕ್ಕೆ ಉಚಿತವಾಗಿತ್ತು. ಸುಂದರವಾಗಿತ್ತು. ಬಹಳ ದಾನಾದಿ ಉತ್ತಮ ಕರ್ಮಗಳನ್ನು ಆ ಶರೀರದಿಂದ ಕರ್ಣನು ಮಾಡುತ್ತಿದ್ದ.

ಶರೈರ್ವಿಭಗ್ನಂ ವ್ಯಸು ತದ್ವಿವರ್ಮಣಃ
ಪಪಾತ ಕರ್ಣಸ್ಯ ಶರೀರಮುಚ್ಛ್ರಿತಮ್ |
ಸ್ರವದ್ವ್ರಣಂ ಗೈರಿಕತೋಯವಿಸ್ರವಂ
ಗಿರೇರ್ಯಥಾ ವಜ್ರಹತಂ ಶಿರಸ್ತಥಾ ॥34॥

ಬಾಣಗಳಿಂದ ಬಹಳ ಗಾಯಗೊಂಡ, ಕವಚವಿಲ್ಲದ, ಪ್ರಾಣವಿಲ್ಲದ ಕರ್ಣನ ಉನ್ನತವಾದ ಶರೀರವು ಗಾಯದಿಂದ ರಕ್ತವನ್ನು ಹರಿಸುತ್ತ ಗೈರಿಕ ಧಾತುವಿನಿಂದ ಕೆಂಪಾದ ನೀರನ್ನು ಸುರಿಸುತ್ತ ವಜ್ರದಿಂದ ಕಡಿದ ಪರ್ವತ ಶಿಖರ ಬೀಳುವಂತೆ ಬಿದ್ದಿತು.

ದೇಹಾತ್ತು ಕರ್ಣಸ್ಯ ನಿಪಾತಿತಸ್ಯ
ತೇಜಃ ಸೂರ್ಯಂ ಖಂ ವಿತತ್ಯಾ ವಿವೇಶ |
ತದದ್ಭುತಂ ಸರ್ವಮನುಷ್ಯಯೋಧಾಃ
ಪಶ್ಯಂತಿ ರಾಜನ್ನಿಹತೇ ಸ್ಮ ಕರ್ಣೇ ॥35॥

ಅರ್ಜುನನು ಕರ್ಣನ ಶರೀರವನ್ನು ಬೀಳಿಸಿದಾಗ ಅದರಿಂದ ಹೊರಟ ಕರ್ಣನ ಸ್ವರೂಪಭೂತವಾದ ಒಂದು ತೇಜಸ್ಸು ಮೇಲೇರಿ ಆಕಾಶವನ್ನು ಬೆಳಗಿಸುತ್ತ ಸೂರ್ಯನನ್ನು ಪ್ರವೇಶಿಸಿತು. ರಾಜನೆ, ಕರ್ಣ ಮಡಿದಾಗ ಎಲ್ಲ ಮನುಷ್ಯ ಯೋಧರೂ ಆ ಅದ್ಭುತವನ್ನು ಕಣ್ಣಾರೆ ಕಂಡರು.

ತತಃ ಶಂಖಾನ್ ಪಾಂಡವಾ ದಧ್ಮುರುಚ್ಚೈ-
ರ್ದೃಷ್ಟ್ವಾ ಕರ್ಣಂ ಪಾತಿತಂ ಫಾಲ್ಗುನೇನ |
ತಥೈವ ಕೃಷ್ಣಶ್ಚ ಧನಂಜಯಶ್ಚ
ಹೃಷ್ಟೌ ತದಾ ದಧ್ಮತುರಾಶು ಶಂಖೌ ॥36॥

ಒಡನೆ ಪಾಂಡವರು ಅರ್ಜುನನಿಂದ ಕರ್ಣನು ಬೀಳಿಸಲ್ಪಟ್ಟಿದ್ದನ್ನು ಕಂಡು ಗಟ್ಟಿಯಾಗಿ ಶಂಖಗಳನ್ನು ಊದಿದರು. ಹಾಗೇ ಕೃಷ್ಣಾರ್ಜುನರೂ ಹರ್ಷಗೊಂಡು ಬೇಗನೆ ಶಂಖಗಳನ್ನು ಊದಿದರು.

ತಂ ಸೋಮಕಾಃ ಪ್ರೇಕ್ಷ್ಯ ಕಯ ಹತಂ ಶಯಾನಂ
ಪ್ರೀತಾ ನಾದಂ ಸಹ ಸೈನ್ಯೈರಕುರ್ವನ್ |

ತೂರ್ಯಾಣಿ ಚಾಜಘ್ನುರತೀವ ಹೃಷ್ಟಾ
ವಾಸಾಂಸಿ ಚೈವಾದುಧುವುರ್ಭುಜಾಂಶ್ಚ ॥37॥
ಸೋಮಕಯೋಧರು ಕರ್ಣನಲ್ಲಿ ಆವಿಷ್ಟನಾದ ಅಸುರನು ಸತ್ತುಬಿದ್ದುದನ್ನು ಕಂಡು ಸಂತುಷ್ಟರಾಗಿ ಸೈನ್ಯಗಳೊಂದಿಗೆ ಗರ್ಜನೆ ಮಾಡಿದರು. ಅತ್ಯಂತ ಹರ್ಷಗೊಂಡು ವಾದ್ಯಗಳನ್ನು ಮೊಳಗಿಸಿದರು. ಉತ್ತರೀಯವನ್ನು ಎತ್ತಿ ಹಾರಿಸಿದರು. ಬಾಹುಗಳನ್ನು ಕುಣಿಸಿದರು.
ಸಂವರ್ಧಯಂತಶ್ಚ ನರೇಂದ್ರಯೋಧಾಃ
ಪಾರ್ಥಂ ಸಮಾಜಗ್ಮುರತೀವ ಹೃಷ್ಟಾಃ |
ಬಲಾನ್ವಿತಾಶ್ಚಾಪ್ಯಪರೇ ಹ್ಯನೃತ್ಯ-
ನ್ನನ್ಯೋನ್ಯಮಾಶ್ಲಿಷ್ಯ ನದಂತ ಊಚುಃ ॥38॥
ರಾಜಯೋಧರು ಅತ್ಯಂತ ಹೃಷ್ಟರಾಗಿ ಅರ್ಜುನನನ್ನು ಅಭಿನಂದಿಸುತ್ತ ಬಂದರು. ಸೈನ್ಯಗಳೊಂದಿಗೆ ತಾವು ಕುಣಿದರು. ಪರಸ್ಪರ ತಬ್ಬಿಕೊಂಡು ಕರ್ಣಾವಸಾನವನ್ನು ಹೇಳಿಕೊಂಡರು.
ದೃಷ್ಟ್ವಾ ತು ಕರ್ಣಂ ಭುವಿ ನಿಷ್ಟನಂತಂ
ಹತಂ ತಥಾ ಸಾಯಕೇನಾವಭಿನ್ನಮ್ |
ಮಹಾನಿಲೇನಾದ್ರಿಮಿವಾಪವಿದ್ಧಂ
ಯಜ್ಞಾವಸಾನೇಽಗ್ನಿಮಿವ ಪ್ರಶಾಂತಮ್ ॥39॥
ರಣರಂಗದಲ್ಲಿ ಗರ್ಜಿಸುತ್ತಿದ್ದ ಕರ್ಣನು ಬಾಣದಿಂದ ಬಹಳ ಗಾಯಗೊಂಡು ಸತ್ತುದನ್ನು ಕಂಡು ಪಾಂಡವಯೋಧರು ಕುಣಿದರು. ಪರಸ್ಪರ ತಬ್ಬಿಕೊಂಡು ಕರ್ಣಾವಸಾನವನ್ನು ಹೇಳಿಕೊಂಡರು. ಚಂಡಮಾರುತದಿಂದ ಬೆಟ್ಟದ ತುದಿ ಕಡಿದು ಬಿದ್ದಂತೆ, ಯಾಗದ ಕೊನೆಯಲ್ಲಿ ಅಗ್ನಿ ಆರಿದಂತೆ ಕರ್ಣನ ಅವಸಾನವಿತ್ತು.
ಶರೈರಾಚಿತಸರ್ವಾಂಗಃ ಶೋಣಿತೌಘಪರಿಪ್ಲುತಃ |
ವಿಭಾತಿ ದೇಹಃ ಕರ್ಣಸ್ಯ ಸ್ವರಶ್ಮಿಭಿರಿವಾಂಶುಮಾನ್ ॥40॥
ಮೈಯೆಲ್ಲ ನೆಟ್ಟ ಬಾಣಗಳಿಂದ ಕೂಡಿದ್ದು ರಕ್ತಪ್ರವಾಹದಿಂದ ತೊಯ್ದು ಕರ್ಣನ ಶರೀರವು ತನ್ನ ಕಿರಣಗಳಿಂದ ಶೋಭಿಸುವ ಸೂರ್ಯನಂತಿತ್ತು.
ಪ್ರತಾಪ್ಯ ಸೇನಾಮಾಮಿತ್ರೀಂ ದೀಪ್ತೈಃ ಶರಗಭಸ್ತಿಭಿಃ |
ಬಲಿನಾರ್ಜುನಕಾಲೇನ ನೀತೋಽಸ್ತಂ ಕರ್ಣಭಾಸ್ಕರಃ ॥41॥
ಶತ್ರುಸೈನ್ಯವನ್ನು ಜ್ವಲಿಸುವ ಬಾಣಕಿರಣಗಳಿಂದ ಸುಡುತ್ತಿದ್ದ ಕರ್ಣನೆಂಬ ಸೂರ್ಯನು ಬಲಿಷ್ಠನಾದ ಅರ್ಜುನನೆಂಬ ಕಾಲದ ಪ್ರಭಾವದಿಂದ ಅಸ್ತಮಿಸಿದ.
ಅಸ್ತಂ ಗಚ್ಛನ್ಯಥಾದಿತ್ಯಃ ಪ್ರಭಾಮಾದಾಯ ಗಚ್ಛತಿ |
ಏವಂ ಜೀವಿತಮಾದಾಯ ಕರ್ಣಸ್ಯೇಷುರ್ಜಗಾಮ ಹ ॥42॥
ಅಸ್ತಮಿಸುವ ಸೂರ್ಯನು ತನ್ನ ಕಿರಣಗಳನ್ನು ತನ್ನೊಂದಿಗೆ ಒಯ್ಯುತ್ತ ಹೋಗುವಂತೆ ಕರ್ಣನಲ್ಲಿ ನೆಟ್ಟ ಬಾಣವೂ ಕೂಡ ಅಸ್ತಮಿಸುವಾಗ ಅವನ ಪ್ರಾಣಗಳನ್ನೂ ಜೊತೆಗೆ ಒಯ್ಯುತ್ತಲೇ ಅಸ್ತಂಗತವಾಯಿತು.
ಅಪರಾಹ್ಣೇಽಪರಾಹ್ಣಸ್ಯ ಸೂತಪುತ್ರಸ್ಯ ಮಾರಿಷ |
ಛಿನ್ನಮಂಜಲಿಕೇನಾಜೌ ಸೋತ್ಸೇಧಮಪತಚ್ಛಿರಃ ॥43॥
ಪಾಂಡವರಿಗಿಂತ `ಅಪರಅಹ' ಹೆಚ್ಚುಕಾಲ ಬದುಕಿದ್ದ ಕರ್ಣನ ಶಿರಸ್ಸು ಅಪರಾಹ್ಣ ಕಾಲದಲ್ಲಿ ರಣದಲ್ಲಿ ಅಂಜಲಿಕಬಾಣದಿಂದ ಕಡಿದು, ಚೆಂಡಿನಂತೆ ಸ್ವಲ್ಪ ಮೇಲಕ್ಕೆ ಹಾರಿ ಕೆಳಗೆ ಬಿದ್ದಿತು.
ಕುಂತಿ ಇನ್ನೂ ಕನ್ಯಾವಸ್ಥೆಯಲ್ಲಿದ್ದಾಗಲೇ ಜನಿಸಿದ್ದ ಕರ್ಣನು, ಅವಳು ಪಾಂಡುವನ್ನು ವಿವಾಹವಾಗಿ ಅನೇಕ ವರ್ಷಗಳನ್ನು ಕಳೆದಾಗ ಜನಿಸಿದ ಪಾಂಡವರಿಗಿಂತ `ಅಪರ ಅಹ' ಹೆಚ್ಚುಕಾಲ ಬದುಕಿದವನಾದ್ದರಿಂದ `ಅಪರಾಹ್ಣ' ಎನಿಸುತ್ತಾನೆ. ಅವನು ಅಪರಾಹ್ಣ ಸಮಯದಲ್ಲಿಯೇ ಮಡಿದ. ಹಗಲಿನ ಸಮಯವನ್ನು ಐದು ಭಾಗ ಮಾಡಿದರೆ ನಾಲ್ಕನೆ ಭಾಗವೂ `ಅಪರಾಹ್ಣ'ವೆನಿಸುತ್ತದೆ.
ಉಪರ್ಯುಪರಿ ಸೈನ್ಯಾನಾಂ ತಸ್ಯ ಶತ್ರೋಸ್ತದಂಜಸಾ |
ಶಿರಃ ಕರ್ಣಸ್ಯ ಸೋತ್ಸೇಧಮಿಷುಃ ಸೋಽಪಾಹರದ್ ದ್ರುತಮ್ ॥44॥
ಅರ್ಜುನನ ಅಂಜಲಿಕಬಾಣವು ಶಿರಶ್ಛೇದಕ್ಕಿಂತ ಮೊದಲಿಗೆ, ಶರೀರಸಹಿತ ವಾದ ಕರ್ಣನ ಶಿರಸ್ಸನ್ನು ಶರೀರದೊಂದಿಗೇ ಸರ್ವಸೈನ್ಯಗಳಿಗಿಂತ ಸ್ವಲ್ಪ ಮೇಲಕ್ಕೆ ಹಾರಿಸಿ, ಬೇಗನೆ ಚೆನ್ನಾಗಿ ಶಿರಸ್ಸನ್ನು ಕತ್ತರಿಸಿತು.
ಕರ್ಣಂ ತು ಶೂರಂ ಪತಿತಂ ಪೃಥಿವ್ಯಾಂ
ಶರಾಚಿತಂ ಶೋಣಿತದಿಗ್ಧಗಾತ್ರಮ್ |
ದೃಷ್ಟ್ವಾ ಶಯಾನಂ ಭುವಿ ಮದ್ರರಾಜ-
ಶ್ಛಿನ್ನಧ್ವಜೇನಾಪಯಯೌ ರಥೇನ ॥45॥
ಶೂರ ಕರ್ಣನು ಬಾಣಗಳಿಂದ ಮೈಯೆಲ್ಲ ತುಂಬಿಕೊಂಡು, ರಕ್ತಸಿಕ್ತವಾದ ಮೈಯವನಾಗಿ ನೆಲದಲ್ಲಿ ಬಿದ್ದು ಮಲಗಿದುದನ್ನು ಕಂಡು ಸಾರಥಿ ಶಲ್ಯನು ಧ್ವಜ ರಹಿತವಾದ ಆ ರಥದಿಂದಲೇ ದೂರಕ್ಕೆ ಹೊರಟುಹೋದ.
ಕರ್ಣೇ ಹತೇ ಕುರವಃ ಪ್ರಾದ್ರವಂತ
ಭಯಾರ್ದಿತಾ ಗಾಢವಿದ್ಧಾಶ್ಚ ಸಂಖ್ಯೇ |
ಅವೇಕ್ಷಮಾಣಾ ಮುಹುರರ್ಜುನಸ್ಯ

ಧ್ವಜಂ ಮಹಾಂತಂ ವಪುಷಾ ಜ್ವಲಂತಮ್ ॥46॥
ಕರ್ಣನು ಹತನಾದಾಗ ಕೌರವಸೈನಿಕರು ರಣದಲ್ಲಿ ಗಾಢವಾಗಿ ಗಾಯ ಗೊಂಡು, ಅರ್ಜುನನ ಮಹಾವಾನರಧ್ವಜವು ಶರೀರದಿಂದ ಜ್ವಲಿಸುವುದನ್ನು ಪುನಃಪುನಃ ನೋಡುತ್ತ ಭಯವಿಹ್ವಲರಾಗಿ ಪಲಾಯನಗೈದರು.
ಅರ್ಜುನನ ಧ್ವಜವು ಉಜ್ವಲವಾಗಿ ಬೆಳಗುವುದರಿಂದ ಮುಂದೆ ಜಯ ಅರ್ಜುನನಿಗೆ ನಿಶ್ಚಿತವೆಂದು ಕುರುಸೈನಿಕರು ಭಯಪಟ್ಟರು.
ಸಹಸ್ರನೇತ್ರಪ್ರತಿಮಾನಕರ್ಮಣಃ
ಸಹಸ್ರಪತ್ರಪ್ರತಿಮಾನನಂ ಶುಭಮ್ |
ಸಹಸ್ರರಶ್ಮಿರ್ದಿನಸಂಕ್ಷಯೇ ಯಥಾ
ತಥಾಪತತ್ತಸ್ಯ ಶಿರೋ ವಸುಂಧರಾಮ್ ॥47॥
ಹಗಲು ಕಳೆದಾಗ ಸೂರ್ಯನು ಕೆಳಗೆ ಬೀಳುವಂತೆ, ಸಹಸ್ರಾಕ್ಷ ಇಂದ್ರನಂತೆ ಪರಾಕ್ರಮಯುಕ್ತನಾಗಿದ್ದ ಕರ್ಣನ ಕಮಲದಂಥ ಸುಂದರವಾದ ಮುಖ ಉಳ್ಳ ಶಿರಸ್ಸು ನೆಲದ ಮೇಲೆ ಬಿದ್ದಿತು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕರ್ಣವಧೋ ನಾಮ ಅಷ್ಟಾಶೀತಿತಮೋಽಧ್ಯಾಯಃ ॥88॥

ಮಹಾಭಾರತತಾತ್ಪರ್ಯನಿರ್ಣಯ
ತಸ್ಮಿನ್ ಹತೇ ದೀನಮುಖಃ ಸುಯೋಧನೋ
ಯಯೌ ಸಮಾಹೃತ್ಯ ಬಲಂ ಸಶಲ್ಯಃ |
ಯುಧಿಷ್ಠಿರಃ ಕರ್ಣವಧಂ ನಿಶಮ್ಯ
ತದಾ ಸಮಾಗತ್ಯ ದದರ್ಶ ತತ್ತನುಮ್ ॥ 191 ॥
ಕರ್ಣ ಹತನಾದಾಗ ದುರ್ಯೋಧನ ಬಾಡಿದ ಮುಖದವನಾಗಿ ತನ್ನ ಸೈನ್ಯವನ್ನು ಹಿಂತೆಗೆದುಕೊಂಡು ಶಲ್ಯನೊಡನೆ ಹೊರಟುಹೋದ. ಯುಧಿಷ್ಠಿರ ಕರ್ಣನ ವಧೆಯಾದುದನ್ನು ಕೇಳಿ ಬಂದು ಅವನ ಶವವನ್ನು ಕಂಡ.

ಎಂಬತ್ತೊಂಬತ್ತನೆಯ ಅಧ್ಯಾಯ
ಕುರುಸೈನ್ಯದ ಪಲಾಯನ. ದುರ್ಯೋಧನನಿಗೆ ಶಲ್ಯನ ಸಾಂತ್ವನ.
ಸಂಜಯಃ
ಶಲ್ಯಸ್ತು ಕರ್ಣೇ ನಿಹತೇ ಕಿರೀಟಿನಾ
ತ್ರಸ್ತಂ ಬಲಂ ಪ್ರಸಮೀಕ್ಷ್ಯಾರ್ತರೂಪಮ್ |
ಯಯೌ ಹತೇ ಚಾಧಿರಥೌ ಪದಾನುಗೇ
ರಥೇನ ಸಂಭಿನ್ನಪರಿಚ್ಛದೇನ ॥1॥
ಸಂಜಯ ನುಡಿದ– ಅರ್ಜುನನಿಂದ ಕರ್ಣ ಹತನಾದಾಗ, ಕೌರವಸೈನ್ಯವು ಭಯಾರ್ತವಾದುದನ್ನು ಶಲ್ಯನು ಕಂಡು, ಕರ್ಣನೂ ಅವನ ಕಡೆಯ ಸೈನಿಕರೂ ಹತರಾಗಿದ್ದರಿಂದ, ರಥದ ಸಾಮಗ್ರಿಗಳೂ ನಷ್ಟವಾಗಿದ್ದರಿಂದ, ರಣರಂಗವನ್ನು ಬಿಟ್ಟು ಆ ರಥದಿಂದಲೆ ಶಲ್ಯನು ಹೊರಟುಹೋದ. (ಭೂಮಿ ಈಗ ರಥಚಕ್ರವನ್ನು ನುಂಗಿಕೊಂಡಿರಲಿಲ್ಲ.)
ಶಲ್ಯಸ್ತು ಕರ್ಣಾರ್ಜುನಯೋರ್ವಿಮರ್ದೇ
ಬಲಾನಿ ದೃಷ್ಟ್ವಾ ಮೃದಿತಾನಿ ಬಾಣೈಃ |
ದುರ್ಯೋಧನಂ ಯಾಂತಮವೇಕ್ಷಮಾಣೋ
ಸಂದರ್ಶಯದ್ ಭಾರತ ಯುದ್ಧಭೂಮಿಮ್ ॥2॥
ಕರ್ಣಾರ್ಜುನರ ಯುದ್ಧದಲ್ಲಿ ಕುರುಸೈನಿಕರೇ ಹೆಚ್ಚಾಗಿ ಬಾಣಗಳಿಂದ ನಾಶವಾದರು. ಅದನ್ನು ಕಂಡು, ದುರ್ಯೋಧನನು ರಣರಂಗಕ್ಕೆ ಹೋಗುವುದನ್ನು ಕಂಡು, ಶಲ್ಯನು ಅವನಿಗೆ ರಣಭೂಮಿಯನ್ನು ತೋರಿಸಿದ.
ನಿಪಾತಿತಸ್ಯಂದನವಾಜಿನಾಗಂ
ದೃಷ್ಟ್ವಾ ಬಲಂ ತದ್ಧತಸೂತಪುತ್ರಮ್ |
ದುರ್ಯೋಧನೋಽಶ್ರುಪ್ರತಿಪೂರ್ಣನೇತ್ರೋ
ಮುಹುರ್ಮುಹುರ್ನ್ಯಶ್ವಸದಾರ್ತರೂಪಃ ॥3॥
ಕೌರವಸೈನ್ಯದಲ್ಲಿ ಸೇನಾಪತಿ ಕರ್ಣ ಹತನಾಗಿದ್ದಾನೆ. ರಥ ಅಶ್ವ ಗಜ ಸೈನಿಕರೂ ಹತರಾಗಿದ್ದಾರೆ. ಇದನ್ನು ಕಂಡು ದುರ್ಯೋಧನನು ದುಃಖಾರ್ತನಾಗಿ ಕಣ್ಣಲ್ಲಿ ನೀರು ತುಂಬಿಕೊಂಡು ಪುನಃ ಪುನಃ ನಿಟ್ಟುಸಿರಿಟ್ಟ.
ಕರ್ಣಂ ತು ಶೂರಂ ಪತಿತಂ ಪೃಥಿವ್ಯಾಂ
ಶರಾಚಿತಂ ಶೋಣಿತದಿಗ್ಧಗಾತ್ರಮ್ |
ಯದೃಚ್ಛಯಾ ಸೂರ್ಯಮಿವಾವನಿಸ್ಥಂ
ದಿದೃಕ್ಷವಃ ಸಂಪರಿವಾರ್ಯ ತಸ್ಥುಃ ॥4॥
ಶೂರಕರ್ಣನು ಬಾಣಗಳಿಂದ ತುಂಬಿಕೊಂಡು ಮೈಯೆಲ್ಲ ರಕ್ತದಿಂದ ತೊಯ್ದು ನೆಲದಲ್ಲಿ ಬಿದ್ದು, ಅಕಸ್ಮಾತ್ ಸೂರ್ಯನೆ ನೆಲದಲ್ಲಿ ಬಿದ್ದಂತೆ ಕಂಡು ಬಂದ. ಅವನನ್ನು ಕಾಣಲು ಪಾಂಡವಕೌರವ ಸೈನಿಕರು ಸುತ್ತುವರಿದು ನೆರೆದು ನಿಂತರು.
ಪ್ರಹೃಷ್ಟವಿತ್ರಸ್ತವಿಷಣ್ಣವಿಸ್ಮಿತಾ-

ಸ್ತಥಾಪರೇ ಶೋಕಗತಾ ಇವಾಭವನ್ |
ಪರೇ ತ್ವದೀಯಾಶ್ಚ ಪರಸ್ಪರೇಣ
ಯಥಾ ಯಥೈಷಾಂ ಪ್ರಕೃತಿಸ್ತಥಾಭವನ್ ॥5॥
ಕರ್ಣನು ತೋರಿದ ಪರಾಕ್ರಮವನ್ನು ನೆನೆದು ಕೆಲವರಿಗೆ ಹರ್ಷ, ಇನ್ನು ನಮ್ಮ ಗತಿ ಏನೆಂದು ಕೆಲವರಿಗೆ ಭಯ. ದಿಕ್ಕೇ ತೋಚದೆ ಕೆಲವರಿಗೆ ವಿಷಾದ, ಇಂಥ ಶೂರನೂ ಮಡಿದನೆ ಎಂದು ಕೆಲವರಿಗೆ ವಿಸ್ಮಯ, ಕರ್ಣ ಇನ್ನಿಲ್ಲವೆಂದು ಕೆಲವರು ಶೋಕದಲ್ಲಿಯೇ ಮುಳುಗಿದ್ದಂತೆ ಕಂಡರು. ಹೀಗೆ ಪಾಂಡವ ಸೈನಿಕರೂ  ನಿನ್ನವರೂ ಪರಸ್ಪರವಾಗಿ ತಮ್ಮತಮ್ಮ ಸ್ವಭಾವಕ್ಕೆ ಅನುಗುಣವಾಗಿ ಪ್ರತಿಕ್ರಿಯಿಸಿದರು.
ಪ್ರವಿದ್ಧವರ್ಮಾಭರಣಾಂಬರಾಯುಧಂ
ಧನಂಜಯೇನಾಭಿಹತಂ ಹತೌಜಸಮ್ |
ನಿಶಾಮ್ಯ ಕರ್ಣಂ ಕುರವಃ ಪ್ರದುದ್ರುವು
ರ್ಹತರ್ಷಭಾ ಗಾವ ಇವಾಕುಲಾಕುಲಾಃ ॥6॥
ಕರ್ಣನು ಅರ್ಜುನನ ಬಾಣಗಳಿಂದ ಹೊಡೆಸಿಕೊಂಡು ಬಲಗುಂದಿ ಕವಚ ಆಭರಣ ವಸ್ತ್ರ ಆಯುಧವೆಲ್ಲವನ್ನೂ ಕಳೆದುಕೊಂಡಿದ್ದನ್ನು ಕಂಡು ಕುರುಸೈನಿಕರು ಪಲಾಯನ ಮಾಡಿದರು, ಗೂಳಿ ಹತವಾದಾಗ ಹಸುಗಳಂತೆ ಬಹಳ ಕಳವಳಗೊಂಡರು.
ತಥೈವ ರಾಜನ್ ಸೋಮಕಾಃ ಸೃಂಜಯಾಶ್ಚ
ಶಂಖಾನ್ ದಧ್ಮುಃ ಸಸ್ವಜುಶ್ಚಾಪಿ ಸರ್ವೇ |
ಪರಸ್ಪರಂ ಕ್ಷತ್ರಿಯಾ ಹೃಷ್ಟರೂಪಾಃ
ಸೂತಾತ್ಮಜೇ ನಿಹತೇ ವೈ ತದಾನೀಮ್ ॥7॥
ಕರ್ಣನು ಹತನಾದಾಗ, ರಾಜನೆ, ಸೋಮಕರೂ ಸೃಂಜಯರೂ ಶಂಖನಾದ ಗೈದರು. ಕ್ಷತ್ರಿಯರು ಪರಸ್ಪರವಾಗಿ ತಬ್ಬಿಕೊಂಡರು ಹರ್ಷಪಟ್ಟರು.
ಕೃತ್ವಾ ವಿಮರ್ದಂ ಭೃಶಮರ್ಜುನೇನ
ಕರ್ಣೋ ಹತಃ ಕೇಸರಿಣೇವ ನಾಗಃ |
ತೀರ್ಣಾ ಪ್ರತಿಜ್ಞಾ ಪುರುಷರ್ಷಭೇಣ
ವೈರಸ್ಯಾಂತಂ ಗತವಾಂಶ್ಚಾಪಿ ಪಾರ್ಥಃ ॥8॥
ಅರ್ಜುನನೊಂದಿಗೆ ಬಹಳ ಹೋರಾಡಿ ಕರ್ಣ ಸಿಂಹದೊಂದಿಗೆ ಹೋರಾಡಿ ಆನೆ ಹತವಾದಂತೆ ಹತನಾದ. ಇದರಿಂದ ಅರ್ಜುನ ತನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಂಡ. ಕರ್ಣನಲ್ಲಿದ್ದ ವೈರಕ್ಕೆ ಮಂಗಳವನ್ನೂ ಹಾಡಿದ.
ದೃಷ್ಟ್ವಾ ಶಯಾನಂ ಭುವಿ ಮದ್ರರಾಜೋ
ಭೀತೋಽಪಸರ್ಪತ್ಸರಥಃ ಸುಶೀಘ್ರಮ್ ॥9॥
ಮದ್ರಾಧಿಪಶ್ಚಾಪಿ ವಿಮೂಢಚೇತಾ-
ಸ್ತೂರ್ಣಂ ರಥೇನಾಪಹೃತಧ್ವಜೇನ |
ದುರ್ಯೋಧನಸ್ಯಾಂತಿಕಮೇತ್ಯ ಶೀಘ್ರಂ
ಸಂಭಾಷ್ಯ ದುಃಖಾರ್ತಮುವಾಚ ವಾಕ್ಯಮ್ ॥10॥
ಕರ್ಣ ನೆಲದಲ್ಲಿ ಒರಗಿದ್ದನ್ನು ಕಂಡು ಭೀತನಾಗಿ ಶಲ್ಯನು ರಥದೊಂದಿಗೆ ದೂರಕ್ಕೆ ಹೊರಟುಹೋದ. ಅವನ ಮನಸ್ಸು ದಿಗ್ಭ್ರಮೆಹೊಂದಿತ್ತು. ಧ್ವಜರಹಿತ ವಾಗಿದ್ದ ಆ ರಥದಿಂದ ಬೇಗನೆ ದುರ್ಯೋಧನನ ಬಳಿಗೆ ಹೋಗಿ ಸಂಭಾಷಣೆ ಮಾಡುತ್ತ ದುಃಖಾರ್ತನಾದ ಆತನಿಗೆ ಹೀಗೆ ಹೇಳಿದ.
ಎರಡನೇ ಮೂರನೇ ಶ್ಲೋಕದಲ್ಲಿ ಹಿಂದೆ ಹೇಳಿದ್ದನ್ನೆ ತಿರುಗಿ ಹೇಳಿ ಆ ಘಟನೆಯನ್ನು ಸಂಜಯ ಮುಂದುವರಿಸಿ ಹೇಳುತ್ತಿದ್ದಾನೆ. ಇದು ಪುರಾಣ ಶೈಲಿ.
ವಿಶೀರ್ಣನಾಗಾಶ್ವರಥಪ್ರವೀರಂ
ಬಲಂ ತ್ವದೀಯಂ ಯಮರಾಷ್ಟ್ರಕಲ್ಪಮ್ |
ಅನ್ಯೋನ್ಯಮಾಸಾದ್ಯ ಹತಂ ಮಹದ್ಭಿ-
ರ್ನರಾಶ್ವನಾಗೈರ್ಗಿರಿಕೂಟಕಲ್ಪೈಃ ॥11॥
`ನಿನ್ನ ಸೈನ್ಯವು ಈಗ ಗಜ ಅಶ್ವ ರಥ ಪದಾತಿಗಳೆಲ್ಲವನ್ನೂ ಕಳೆದುಕೊಂಡು ಯಮರಾಷ್ಟ್ರದಂತಾಗಿದೆ. ಪಾಂಡವ ಸೈನಿಕರೊಂದಿಗೆ ನಿನ್ನವರು ಪರಸ್ಪರ ಹೋರಾಡಿ ಪರ್ವತಶಿಖರಗಳಂಥ ಮಹಾ ಪದಾತಿ ಅಶ್ವ ಗಜಗಳಿಂದ ಹತರಾಗಿದ್ದಾರೆ.
ನೈತಾದೃಶಂ ಭಾರತ ಯುದ್ಧಮಾಸೀದ್
ಯಥಾದ್ಯ ಕರ್ಣಾರ್ಜುನಯೋರ್ಬಭೂವ |
ಗ್ರಸ್ತೌ ಹಿ ಕರ್ಣೇನ ಸಮೇತ್ಯ ಕೃಷ್ಣಾ-
ವನ್ಯೇ ಚ ಸರ್ವೇ ತವ ಶತ್ರವೋ ಯೇ ॥12॥
ರಾಜನೆ, ಕರ್ಣ ಅರ್ಜುನರ ಈ ಯುದ್ಧದಂಥ ಯುದ್ಧ ಹಿಂದೆ ಎಂದೂ ಆಗಿಲ್ಲ. ಕರ್ಣನು ಕೃಷ್ಣಾರ್ಜುನರನ್ನು ಇದಿರಿಸಿ ಇಬ್ಬರನ್ನೂ ಆಕ್ರಮಿಸಿದ್ದ. ನಿನ್ನ ಶತ್ರುಗಳಾದ ಬೇರೆ ಯೋಧರನ್ನೂ ಆಕ್ರಮಿಸಿದ್ದ.
ದೈವಂ ತು ಯತ್ತತ್ಸ್ವವಶಂ ಪ್ರವೃತ್ತಂ
ತತ್ಪಾಂಡವಾನ್ ಪಾತಿ ಹಿನಸ್ತಿ ಚಾಸ್ಮಾನ್ |

ತವಾರ್ಥಸಿದ್ಧ್ಯರ್ಥಕರಾ ಹಿ ಸರ್ವೇ
ಪ್ರಸಹ್ಯ ವೀರಾ ನಿಹತಾ ದ್ವಿಷದ್ಭಿಃ ॥13॥
ಆದರೇನು? ದೈವ ಸ್ವತಂತ್ರವಾಗಿ ಪ್ರವೃತ್ತಿ ಮಾಡುತ್ತದೆ. ಅದು ಪಾಂಡವರನ್ನು ಕಾಪಾಡುತ್ತಲೇ ಇದೆ, ನಮ್ಮನ್ನು ವಧಿಸುತ್ತಲೇ ಇದೆ. ನಿನ್ನ ಅಭೀಷ್ಟಸಿದ್ಧಿಗಾಗಿ ಪ್ರಯತ್ನಿಸುವ ವೀರರು ಎಲ್ಲರೂ ಶತ್ರುಗಳಿಂದ ಹತರಾಗಿದ್ದಾರೆ.
ಕುಬೇರವೈವಸ್ವತವಾಸವಾನಾಂ
ತುಲ್ಯಪ್ರಭಾವಾ ವರುಣಸ್ಯ ಚಾಪಿ।
ವೀರ್ಯೇಣ ಶೌರ್ಯೇಣ ಬಲೇನ ಚೈವ
ತೈಸ್ತೈಶ್ಚ ಯುಕ್ತಾ ವಿಪುಲೈರ್ಗುಣೌಘೈಃ ॥14॥
ನಮ್ಮ ಕಡೆಯ ಭೀಷ್ಮದ್ರೋಣಾದಿಗಳು ಕುಬೇರ ಯಮ ಇಂದ್ರ ವರುಣರಿಗೆ ಸಮಾನವಾದ ಸಾಮರ್ಥ್ಯವಿದ್ದವರು. ವೀರ್ಯ ಶೌರ್ಯ ಬಲಗಳಿಂದಲೂ ಆಯಾ ವಿಪುಲ ಗುಣಗಳಿಂದಲೂ ಯುಕ್ತರಾದವರೆ.
ಅವಧ್ಯಕಲ್ಪಾ ನಿಹತಾ ನರೇಂದ್ರಾ-
ಸ್ತವಾರ್ಥಕಾಮಾ ಯುಧಿ ಪಾಂಡವೇಯೈಃ।
ತನ್ಮಾ ಶುಚೋ ಭಾರತ ದಿಷ್ಟಮೇತತ್
ಪರ್ಯಾಯಸಿದ್ಧಿರ್ನ ಸದಾಸ್ತಿ ಸಿದ್ಧಿಃ ॥15॥
ಅದರಿಂದ ಅವರು ಸಾಮಾನ್ಯವಾಗಿ ಅವಧ್ಯರೆಂದೇ ಹೇಳಬಹುದು. ಆದರೆ ಪಾಂಡವರ ಕಡೆಯವರಿಂದ ರಣದಲ್ಲಿ ಅಂಥ ರಾಜರು, ನಿನ್ನ ಅಭೀಷ್ಟಸಿದ್ಧಿಯನ್ನೇ ಬಯಸುವವರು, ಹತರಾದರು. ಅದರಿಂದ ರಾಜನೆ, ಶೋಕಿಸಬೇಡ. ಇದು ಅದೃಷ್ಟದ ಕೈವಾಡ, ಅದರಿಂದ ಅವರಿಗೊಮ್ಮೆ ನಮಗೊಮ್ಮೆ ಎಂದು ಪರ್ಯಾಯವಾಗಿ ಅಭೀಷ್ಟಸಿದ್ಧಿಯಾಗುವುದೆ ಹೊರತು ಸದಾ ಸಿದ್ಧಿ ಎನ್ನುವುದು ಯಾರಿಗೂ ಒಬ್ಬನಿಗೆ ಇಲ್ಲ.
ಏತದ್ ವಚೋ ಮದ್ರಪತೇರ್ನಿಶಮ್ಯ
ಸ್ವಂ ಚಾಪನೀತಂ ಮನಸಾ ನಿರೀಕ್ಷ್ಯ।
ದುರ್ಯೋಧನೋ ದೀನಮನಾ ವಿಸಂಜ್ಞಃ
ಪುನಃ ಪುನರ್ನ್ಯಶ್ವಸದಾರ್ತರೂಪಃ ॥16॥
ಮದ್ರರಾಜನಾದ ಶಲ್ಯನ ಈ ಮಾತುಗಳನ್ನು ಕೇಳಿ, ತಾನು ಹಿಂದೆ ಮಾಡಿದ್ದ ಅಕೃತ್ಯಗಳನ್ನೂ ಮನಸಿನಲ್ಲಿ ಆಲೋಚಿಸಿ, ದುರ್ಯೋಧನನು ಕಳವಳಗೊಂಡು ಅಸಹಾಯಕನಾಗಿ ಮೈಮರೆತು ಪುನಃಪುನಃ ನಿಟ್ಟುಸಿರಿಟ್ಟ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಶಲ್ಯವಾಕ್ಯಂ ನಾಮ ಏಕೋನನವತಿತಮೋಽಧ್ಯಾಯಃ ॥89॥

## ತೊಂಬತ್ತನೆಯ ಅಧ್ಯಾಯ

ಕೌರವರ ಇಪ್ಪತ್ತೈದುಸಾವಿರ ಯೋಧರನ್ನು ಭೀಮಸೇನ ಮತ್ತು ಧೃಷ್ಟದ್ಯುಮ್ನರು ನಾಶಮಾಡಿದರು.
ಧೃತರಾಷ್ಟ್ರಃ
ಕಥಂ ತು ಕರ್ಣಾರ್ಜುನಯೋರ್ವಿಮರ್ದೇ
ದಗ್ಧಸ್ಯ ರೌದ್ರೇಽಹನಿ ವಿದ್ರುತಸ್ಯ।
ಬಭೂವ ಸೈನ್ಯಸ್ಯ ಕುರೂದ್ವಹಾನಾಂ
ರೂಪಂ ತಥೈವೋನ್ಮಥಿತೇ ಚ ಕರ್ಣೇ ॥1॥
ಧೃತರಾಷ್ಟ್ರ ಕೇಳಿದ– ಕರ್ಣಾರ್ಜುನರ ಯುದ್ಧ ನಡೆದ ಭಯಂಕರವಾದ ದಿನದಲ್ಲಿ ಕರ್ಣನು ಹತನಾದಾಗ, ಬಾಣದಿಂದ ದಗ್ಧವಾದ ಮತ್ತು ಓಡಿಹೋದ ಕುರುಸೈನ್ಯದ ರೂಪ ಹೇಗೆ ಇತ್ತು?
ಸಂಜಯಃ
ಶೃಣು ರಾಜನ್ನವಹಿತೋ ಯಥಾ ವೃತ್ತೋ ಮಹಾಕ್ಷಯಃ।
ಘೋರೋ ಮನುಷ್ಯದೇಹಾನಾಮಾಜೌ ಚ ಗಜವಾಜಿನಾಮ್ ॥2॥
ಸಂಜಯ ನುಡಿದ– ರಾಜನೆ, ಮನಸ್ಸಿಟ್ಟು ಕೇಳು. ಮನುಷ್ಯದೇಹ ಉಳ್ಳವ ರಿಗೂ ಗಜ ಅಶ್ವಗಳಿಗೂ ಘೋರವಾದ ಮಹಾಕ್ಷಯ ಹೇಗೆ ಉಂಟಾಯಿತೆಂದು ಹೇಳುತ್ತೇನೆ.
ಯದಾ ಕರ್ಣೇ ಹತೇ ಪಾರ್ಥಃ ಸಿಂಹನಾದಮಥಾಕರೋತ್।
ತದಾ ತವ ಸುತಾನ್ ರಾಜನ್ನಾವಿವೇಶ ಮಹದ್ಭಯಮ್ ॥3॥
ಕರ್ಣನು ಹತನಾದ ಬಳಿಕ ಅರ್ಜುನನು ಯಾವಾಗ ಸಿಂಹನಾದಗೈದನೋ ಆಗ ನಿನ್ನ ಮಕ್ಕಳನ್ನು ಮಹಾಭಯ ಹೊಕ್ಕಿತು.
ನ ಸಂಧಾತುಮನೀಕಾನಿ ನ ಚೈವಾಥ ಪರಾಕ್ರಮೇ।
ಆಸೀದ್ ಬುದ್ಧಿರ್ಹತೇ ಕರ್ಣೇ ತವ ಯೋಧಸ್ಯ ಕಸ್ಯಚಿತ್ ॥4॥
ಕರ್ಣ ಹತನಾದಾಗ ನಿನ್ನ ಕಡೆಯ ಯೋಧನಿಗೆ ಯಾವನಿಗೂ ಸೈನ್ಯವನ್ನು ಸೇರಿಸುವುದರಲ್ಲಿಯೂ ಉತ್ಸಾಹ ಉಂಟಾಗಲಿಲ್ಲ. ಸ್ವತಃ ಪರಾಕ್ರಮ ತೋರುವಲ್ಲಿಯೂ ಉತ್ಸಾಹ ಬರಲಿಲ್ಲ.
ವಣಿಜೋ ನಾವಿ ಭಿನ್ನಾಯಾಮಗಾಧೇ ಸಾಗರೇ ಯಥಾ।

ಅಪಾರೇ ಪಾರಮಿಚ್ಛಂತೋ ಹತೇ ದ್ವೀಪೇ ಕಿರೀಟಿನಾ ॥5॥
ವರ್ತಕರು ಅಗಾಧವಾದ ಸಮುದ್ರದಲ್ಲಿ ನೌಕೆ ಒಡೆದಾಗ ಹೇಗೆ ಅಪಾರ ಸಾಗರದಲ್ಲಿ ಪಾರ(ದಂಡೆ)ವನ್ನು ಬಯಸುವರೋ ಹಾಗೇ ಅರ್ಜುನನಿಂದ ಕರ್ಣ ಹತನಾದಾಗ ನಮ್ಮ ಯೋಧರು ಅಪಾರವಾದ ಯುದ್ಧದಲ್ಲಿ ಪಾರಗಾಣಲು ಬಯಸಿದರು.
ಸೂತಪುತ್ರೇ ಹತೇ ರಾಜನ್ ವಿತ್ರಸ್ತಾಃ ಕ್ಷತವಿಕ್ಷತಾಃ |
ಅನಾಥಾ ನಾಥಮಿಚ್ಛಂತೋ ಮೃಗಾಃ ಸಿಂಹೈರಿವಾರ್ದಿತಾಃ ॥6॥
ರಾಜನೆ, ಕರ್ಣನು ಹತನಾದಾಗ ನಮ್ಮ ಯೋಧರು ಭಯಗೊಂಡರು. ಕ್ಷತ ವಿಕ್ಷತರಾದರು. ಅನಾಥರಾಗಿ ನಾಥನೊಬ್ಬನನ್ನು ಸಿಂಹದಿಂದ ಪೀಡಿತವಾದ ಮೃಗಗಳಂತೆ ಬಯಸಿದರು.
ಭಗ್ನಶೃಂಗಾ ಇವ ವೃಷಾ ಭಗ್ನದಂಷ್ಟ್ರಾ ಇವೋರಗಾಃ |
ಪ್ರತ್ಯಪಾಯಾಮ ಸಾಯಾಹ್ನೇ ನಿರ್ಜಿತಾಃ ಸವ್ಯಸಾಚಿನಾ ॥7॥
ಕೊಂಬುಕಿತ್ತ ಎತ್ತುಗಳಂತೆ, ಹಲ್ಲು ಕಿತ್ತ ಹಾವುಗಳಂತೆ ಆಗಿ ನಾವು ಸಂಜೆ ಅರ್ಜುನನಿಂದ ಪರಾಭವಗೊಂಡು ಪಲಾಯನ ಮಾಡಿದೆವು.
ಹತಪ್ರವೀರಾ ವಿಧ್ವಸ್ತಾ ನಿಕೃತ್ತಾ ನಿಶಿತೈಃ ಶರೈಃ |
ಸೂತಪುತ್ರೇ ಹತೇ ರಾಜನ್ ಪುತ್ರಾಸ್ತೇ ವ್ಯದ್ರವನ್ ಭಯಾತ್ ॥8॥
ರಾಜನೆ, ಕರ್ಣನು ಹತನಾದಾಗ ನಿನ್ನ ಮಕ್ಕಳ ಸೈನ್ಯದಲ್ಲಿ ಪ್ರಧಾನವೀರರೆಲ್ಲರೂ ಹತರಾದ್ದರಿಂದ ತಾವೂ ತೀಕ್ಷ್ಣವಾದ ಬಾಣಗಳಿಂದ ಹೊಡೆಸಿಕೊಂಡು ನಾಶವಾದರು. ಹೀಗೆ ಸೈನ್ಯ ನಾಶವಾದಾಗ ನಿನ್ನ ಮಕ್ಕಳು ಭಯದಿಂದ ಓಡಿದರು.
ವಿಶಸ್ತ್ರಕವಚಾಃ ಸರ್ವೇ ಕಾಂದಿಶೀಕಾ ವಿಚೇತಸಃ |
ಅನ್ಯೋನ್ಯಮವಮೃದ್ನಂತೋ ವೀಕ್ಷಮಾಣಾ ಭಯಾರ್ದಿತಾಃ ॥9॥
ಯೋಧರ ಶಸ್ತ್ರಕವಚಗಳು ನಾಶವಾದುವು. ಎಲ್ಲರೂ ಭಯದಿಂದ ಓಡಿದರು. ಭಯಪೀಡಿತರಾಗಿ ಬುದ್ಧಿಗೆಟ್ಟು ತಮ್ಮನ್ನು ತಾವೇ ಪರಸ್ಪರವಾಗಿ ತುಳಿಯುತ್ತ ದಿಕ್ಕುಗಳನ್ನು ನೋಡುತ್ತ ಓಡಿದರು.
ಮಾಮೇವ ತೂರ್ಣಂ ಬೀಭತ್ಸುರ್ಮಾಮೇವ ಚ ವೃಕೋದರಃ |
ಅಭಿಯಾತೀತಿ ಮನ್ವಾನಾಃ ಪೇತುಃ ಸೇದುಶ್ಚ ಭಾರತ ॥10॥
ರಾಜನೆ, ನನ್ನನ್ನೇ ಅರ್ಜುನ ಬೆನ್ನಟ್ಟಿ ಬರುತ್ತಿದ್ದಾನೆ, ನನ್ನನ್ನೇ ಭೀಮ ಅಟ್ಟಿಸಿಕೊಂಡು ಬರುತ್ತಿದ್ದಾನೆ ಎಂದು ಭ್ರಮಿಸಿ ಅವರು ಬೀಳುತ್ತಾರೆ, ಎದ್ದು ಓಡುತ್ತಾರೆ.
ಹಯಾನನ್ಯೇ ರಥಾನನ್ಯೇ ಗಜಾನನ್ಯೇ ಮಹಾರಥಾಃ |
ಆರುಹ್ಯ ಜವಸಂಪನ್ನಾಃ ಪಲಾಯಂತಶ್ಚ ಸರ್ವಶಃ ॥11॥
ಮಹಾರಥರು ಭೀಮಾರ್ಜುನರಿಗೆ ಹೆದರಿ ಅಶ್ವಗಳನ್ನೇರಿ ಕೆಲವರು, ರಥವನ್ನೇರಿ ಕೆಲವರು, ಗಜಗಳನ್ನೇರಿ ಕೆಲವರು, ಹೀಗೆ ಎಲ್ಲರೂ ವೇಗದಿಂದ ಪಲಾಯನಗೈದರು.
ಕುಂಜರೈಃ ಸ್ಯಂದನಾಃ ಕ್ಷುಣ್ಣಾಃ ಸಾದಿನಶ್ಚ ಮಹಾರಥೈಃ |
ಪದಾತಿಸಂಘಾಶ್ಚಾಶ್ವೌಘೈಃ ಪಲಾಯದ್ಭಿರ್ಭಯಾರ್ದಿತೈಃ ॥12॥
ವೇಗವಾಗಿ ಧಾವಿಸುವಾಗ ಗಜಾರೋಹಿಗಳು ರಥಾರೋಹಿಗಳನ್ನು, ಮಹಾರಥರು ಅಶ್ವಾರೋಹಿಗಳನ್ನು, ಅಶ್ವಾರೋಹಿಗಳು ಪದಾತಿಸಮೂಹಗಳನ್ನು ಹೀಗೆ ಭಯಪೀಡಿತರಾಗಿ ಓಡುವಾಗ ತಮ್ಮ ಕಡೆಯವರನ್ನೇ ತಾವು ಧ್ವಂಸ ಮಾಡಿದರು.
ವ್ಯಾಲತಸ್ಕರಸಂಕೀರ್ಣೇ ಸಾರ್ಥಹೀನಾ ಯಥಾ ವನೇ |
ತಥಾ ತ್ವದೀಯಾ ನಿಹತೇ ಸೂತಪುತ್ರೇ ತದಾಭವನ್ ॥13॥
ಪ್ರಯಾಣಿಕರಲ್ಲಿ ಗುಂಪಿನಿಂದ ಬೇರ್ಪಟ್ಟವರು ಒಂಟಿಯಾಗಿ ಮೃಗಗಳಿಂದ, ಕಳ್ಳ ದರೋಡೆಕೋರರಿಂದ ತುಂಬಿದ ಅರಣ್ಯದಲ್ಲಿ ಹೇಗೋ ಹಾಗೇ, ಕರ್ಣನು ಹತನಾದಾಗ ನಿನ್ನವರೂ ಸಂಕಟಕ್ಕೀಡಾದರು.
ಹತಾರೋಹಾಃ ಯಥಾ ನಾಗಾಶ್ಛಿನ್ನಹಸ್ತಾ ಯಥಾ ನರಾಃ |
ಸರ್ವಂ ಪಾರ್ಥಮಯಂ ಘೋರಂ ಸಂಪಶ್ಯಂತೋ
ಭಯಾತುರಾಃ ॥14॥
ಮಾವುತರಿಲ್ಲದ ಆನೆ ಹೇಗೋ, ಕೈ ಕಡಿದುಕೊಂಡ ಪದಾತಿಗಳು ಹೇಗೋ ಹಾಗೇ ಎಲ್ಲವೂ ಪಾರ್ಥಮಯ, ಘೋರವಾಗಿ ಕಂಡುಬಂದಿತು. ಅದನ್ನು ನೋಡಿ ಭಯ, ಕಳವಳಗಳಿಗೆ ನಿನ್ನವರು ಈಡಾದರು.
ತಾನ್ ಪ್ರೇಕ್ಷ ಯ ದ್ರುವತಃ ಸರ್ವಾನ್ ಭೀಮಸೇನಭಯಾರ್ದಿತಾನ್ |
ದುರ್ಯೋಧನೋಽಥ ಸ್ವಂ ಸೂತಂ ವಹೇತ್ಯುಕ್ತ್ವೇದಮಬ್ರವೀತ್ ॥15॥
ಭೀಮಸೇನನ ಭಯದಿಂದ ಪೀಡಿತರಾಗಿ ಎಲ್ಲರೂ ಓಡುತ್ತಿದ್ದುದನ್ನು ಕಂಡು ದುರ್ಯೋಧನನು ತನ್ನ ಸಾರಥಿಗೆ `ಹೋಗು' ಎನ್ನುತ್ತ ಹೀಗೆ ಹೇಳಿದ.
ನಾತಿಕ್ರಮೇಚ್ಚ ಮಾಂ ಪಾರ್ಥೋ ಧನುಷ್ಪಾಣಿಂ ವ್ಯವಸ್ಥಿತಮ್ |
ಜಘನೇ ಸರ್ವಸೈನ್ಯಾನಾಂ ಶನೈರಶ್ವಾನ್ ಪ್ರಚೋದಯ ॥16॥
`ಎಲ್ಲ ಸೈನ್ಯಗಳ ಹಿಂಭಾಗದಲ್ಲಿ ಧನುಷ್ಪಾಣಿಯಾಗಿ ನಾನು ನಿಂತರೆ ನನ್ನನ್ನು ಅರ್ಜುನನು ಅತಿಕ್ರಮಿಸಿ ಹೋಗಲಾರ. ಮೆಲ್ಲನೆ ಕುದುರೆಗಳನ್ನು ನಡೆಸು.'
ಜಘನೇ ಯುಧ್ಯಮಾನಂ ಹಿ ಕೌಂತೇಯೋ ಮಾಂ ನ ಸಂಶಯಃ |
ನೋತ್ಸಹೇತ ವ್ಯತಿಕ್ರಾಂತುಂ ವೇಲಾಮಿವ ಮಹೋದಧಿಃ ॥17॥
`ನನ್ನ ಸೈನ್ಯಗಳ ಹಿಂಭಾಗದಲ್ಲಿ ನಾನು ಯುದ್ಧಮಾಡುತ್ತ ನಿಂತರೆ ಅರ್ಜುನನು, ಮಹಾಸಮುದ್ರವು ತೀರವನ್ನು ಹೇಗೋ ಹಾಗೆ,

ನನ್ನನ್ನು ಅತಿಕ್ರಮಿಸಿ ಹೋಗಲಾರ. ಇದರಲ್ಲಿ ಸಂಶಯವಿಲ್ಲ.'
ಅದ್ಯಾರ್ಜುನಂ ಸಗೋವಿಂದಂ ಮಾನಿನಂ ಚ ವೃಕೋದರಮ್ |
ನಿಹತ್ಯ ಶಿಷ್ಟಾನ್ ಶತ್ರೂಂಶ್ಚ ಕರ್ಣಸ್ಯಾನೃಣ್ಯಮಾಪ್ನುಯಾಮ್ ॥18॥
`ಈಗ ನಾನು ಕೃಷ್ಣಸಮೇತನಾದ ಅರ್ಜುನನನ್ನೂ, ಅಭಿಮಾನಿಯಾದ ಭೀಮಸೇನನನ್ನೂ, ಉಳಿದ ಶತ್ರುಗಳನ್ನೂ ಸಂಹರಿಸಿ ಕರ್ಣನ ಋಣದಿಂದ ಮುಕ್ತನಾಗುವೆನು.'
ತಚ್ಛ್ರುತ್ವಾ ಕುರುರಾಜಸ್ಯ ಶೂರಾರ್ಥಸದೃಶಂ ವಚಃ |
ಸೂತೋ ಹೇಮಪ್ರತಿಚ್ಛನ್ನಾನ್ ಶನೈರಶ್ವಾನಚೋದಯತ್ ॥19॥
ಶ್ರೇಷ್ಠ ಶೂರರಿಗೆ ಒಪ್ಪುವಂಥ ಆ ದುರ್ಯೋಧನನ ಮಾತನ್ನು ಕೇಳಿ ಸಾರಥಿಯು ಬಂಗಾರದಿಂದ ಅಲಂಕೃತ ಕುದುರೆಗಳನ್ನು ಮೆಲ್ಲನೆ ನಡೆಸಿದ.
ರಥಾಶ್ವಗಜಹೀನಾಸ್ತು ಪಾದಾತಾಸ್ತವ ಮಾರಿಷ |
ಪಂಚವಿಂಶತಿಸಾಹಸ್ರಾ ಯುದ್ಧಾಯೈವ ವ್ಯವಸ್ಥಿತಾಃ ॥20॥
ರಾಜನೆ, ರಥ ಅಶ್ವ ಗಜಗಳಿಲ್ಲದೆಯೆ ಕೇವಲ ಪದಾತಿಗಳು ಇಪ್ಪತ್ತೈದು ಸಾವಿರ ಸಂಖ್ಯೆಯಲ್ಲಿ ಯುದ್ಧಕ್ಕೆ ನಿಂತರು.
ತಾನ್ ಭೀಮಸೇನಃ ಸಂಕ್ರುದ್ಧೋ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಬಲೇನ ಚತುರಂಗೇಣ ಪರಿಕ್ಷಿಪ್ಯ ನಿಜಘ್ನತುಃ ॥21॥
ಅವರನ್ನು ಕುಪಿತನಾದ ಭೀಮಸೇನನೂ ಧೃಷ್ಟದ್ಯುಮ್ನನೂ ಚತುರಂಗ ಸೈನ್ಯದಿಂದ ಸುತ್ತಲೂ ಆವರಿಸಿ ಹೊಡೆದು ಕೊಲ್ಲಲು ತೊಡಗಿದರು.
ಪ್ರತ್ಯಯುಧ್ಯಂತ ತೇ ಸರ್ವೇ ಭೀಮಸೇನಂ ಸಪಾರ್ಷತಮ್ |
ಪಾರ್ಥಪಾರ್ಷತಯೋಶ್ಚಾನ್ಯೇ ಜಗೃಹುಸ್ತತ್ರ ನಾಮನೀ ॥22॥
ಅವರೆಲ್ಲರೂ ಭೀಮಸೇನ, ಧೃಷ್ಟದ್ಯುಮ್ನರನ್ನು ಇದಿರಿಸಿ ಹೋರಾಡಿದರು. ಕೆಲವರು ಭೀಮಸೇನ, ಧೃಷ್ಟದ್ಯುಮ್ನರ ಹೆಸರು ಹಿಡಿದು ಕರೆದು ಯುದ್ಧಕ್ಕೆ ಆಹ್ವಾನಿಸಿದರು.
ಅಕ್ರುದ್ಧ್ಯತ ತದಾ ಭೀಮಸ್ತೈ ರಣೇ ಪ್ರತ್ಯುಪಸ್ಥಿತೈಃ |
ಸೋಽವತೀರ್ಯ ರಥಾತ್ ತೂರ್ಣಂ ಗದಾಪಾಣಿರಯುಧ್ಯತ ॥23॥
ಆಗ ಭೀಮ ಕುಪಿತನಾದ. ಬೇಗನೆ ರಥದಿಂದ ಇಳಿದು ಗದಾಪಾಣಿಯಾಗಿ ರಣದಲ್ಲಿ ಇದಿರಾಗಿ ಬಂದು ನಿಂತವರೊಡನೆ ಯುದ್ಧ ಮಾಡಿದ.
ನ ತಾನ್ ರಥಸ್ಥೋ ಭೂಮಿಷ್ಠಾನ್ ಧರ್ಮಾಪೇಕ್ಷೀ ವೃಕೋದರಃ |
ಯೋಧಯಾಮಾಸ ಕೌಂತೇಯೋ ಭುಜವೀರ್ಯಮುಪಾಶ್ರಿತಃ ॥24॥
ನೆಲದಲ್ಲಿ ನಿಂತು ಹೋರಾಡುವವರೊಡನೆ ರಥದಲ್ಲಿ ಕುಳಿತ ಭೀಮಸೇನನು ಹೋರಾಡಲಿಲ್ಲ. ಅದು ಧರ್ಮವಲ್ಲ. ಅದಕ್ಕೆ ಧರ್ಮಯುದ್ಧಾಪೇಕ್ಷೆಯಿಂದ ಅವನು ಕೆಳಗಿಳಿದು ಬಾಹುಬಲದಿಂದಲೇ ಹೋರಾಡಿದ.
ಜಾತರೂಪಪರಿಚ್ಛನ್ನಾಂ ಪ್ರಗೃಹ್ಯ ಮಹತೀಂ ಗದಾಮ್ |
ಅವಧೀತ್ ತಾವಕಾನ್ ಸರ್ವಾನ್ ದಂಡಪಾಣಿರಿವಾಂತಕಃ ॥25॥
ಬಂಗಾರದಿಂದ ಮುಚ್ಚಿದ ದೊಡ್ಡಗದೆಯನ್ನು ಹಿಡಿದು ದಂಡಪಾಣಿಯಾದ ಅಂತಕನಂತೆ ನಿನ್ನವರೆಲ್ಲರನ್ನೂ ಸದೆಬಡಿದ.
ಪದಾತಿನೋಽಪಿ ಸಂರಬ್ಧಾಸ್ತ್ಯಕ್ತ್ವಾ ಜೀವಿತಮಾತ್ಮನಃ |
ಭೀಮಮಭ್ಯದ್ರವನ್ ಸಂಖ್ಯೇ ಪತಂಗಾ ಇವ ಪಾವಕಮ್ ॥26॥
ಪದಾತಿಗಳು ಕೂಡ ಕುಪಿತರಾಗಿ, ಜೀವದ ಹಂಗು ತೊರೆದು ರಣದಲ್ಲಿ ವೇಗದಿಂದ ದೀಪದ ಹುಳುಗಳು ಬೆಂಕಿಯಲ್ಲಿ ಬೀಳುವಂತೆ ಭೀಮನ ಮೇಲೇರಿ ಹೋದರು.
ಆಸಾದ್ಯ ಭೀಮಸೇನಂ ತು ಸಂರಬ್ಧಾ ಯುದ್ಧದುರ್ಮದಾಃ |
ವಿನೇಶುಃ ಸಹಸಾ ದೃಷ್ಟ್ವಾ ಭೂತಗ್ರಾಮಾ ಇವಾಂತಕಮ್ ॥27॥
ಯುದ್ಧದ ಚಟ ಉಳ್ಳವರಾದ ಆ ಪದಾತಿ ಸೈನಿಕರು ಕುಪಿತರಾಗಿ ವೇಗದಿಂದ ಭೀಮನನ್ನು ಇದಿರಿಸಿ ಪ್ರಾಣಿಸಮೂಹಗಳು ಅಂತಕನ ದರ್ಶನ ಮಾತ್ರದಿಂದಲೇ ಪ್ರಾಣ ಬಿಡುವಂತೆ ಒಡನೆ ಹತರಾದರು.
ಶ್ಯೇನವದ್ ವ್ಯಚರದ್ ಭೀಮೋ ಗದಾಹಸ್ತೋ ಮಹಾಬಲಃ |
ಪಂಚವಿಂಶತಿಸಾಹಸ್ರಾನ್ ತಾವಕಾನಾಮಪೋಥಯತ್ ॥28॥
ಮಹಾಬಲಿ ಭೀಮ ಗದಾಪಾಣಿಯಾಗಿ ಗಿಡಗಪಕ್ಷಿಯಂತೆ ರಣದಲ್ಲಿ ಸಂಚರಿಸಿದ. ನಿನ್ನ ಕಡೆಯ ಇಪ್ಪತ್ತೈದು ಸಾವಿರ ಸೈನಿಕರನ್ನೂ ನಾಶಗೊಳಿಸಿದ.
ಹತ್ವಾ ತತ್ಪುರುಷಾನೀಕಂ ಭೀಮಃ ಸತ್ಯಪರಾಕ್ರಮಃ |
ಧೃಷ್ಟದ್ಯುಮ್ನಂ ಪುರಸ್ಕೃತ್ಯ ಪುನಸ್ತಸ್ಥೌ ಮಹಾಬಲಃ ॥29॥
ಸಫಲಪರಾಕ್ರಮಿಯಾದ ಮಹಾಬಲಿ ಭೀಮನು ಆ ಇಪ್ಪತ್ತೈದು ಸಾವಿರ ಪದಾತಿ ಸೈನ್ಯವನ್ನು ಸಂಹರಿಸಿ ಧೃಷ್ಟದ್ಯುಮ್ನನನ್ನು ಮುಂದಿಟ್ಟುಕೊಂಡು ಪುನಃ ರಣರಂಗದಲ್ಲಿ ನಿಂತ.
ಧೃಷ್ಟದ್ಯುಮ್ನೋಽಪಿ ಚ ಮಹಾನಮಿತ್ರಗಣಮರ್ದನಃ |
ಪುತ್ರಃ ಪಾಂಚಾಲರಾಜಸ್ಯ ಧನುರ್ಧರವರೋ ಯುಧಿ ॥30॥
ಧೃಷ್ಟದ್ಯುಮ್ನನೂ ಮಹಾಯೋಧ. ರಣದಲ್ಲಿ ಶತ್ರುಸಮೂಹಗಳನ್ನು ನಾಶಮಾಡುವವ. ಪಾಂಚಾಲರಾಜ ದ್ರುಪದನ ಪುತ್ರ. ಮಹಾ

ಧನುರ್ಧಾರಿ.
ವಿಪ್ರಲೀನಾನ್ ರಥಾಶ್ವೇಭ್ಯಃ ಪದಾತೀಯಾನ್ ಸಮಂತತಃ|
ಪಂಚವಿಂಶತಿಸಾಹಸ್ರಾನವಧೀನ್ನಿಶಿತೈಃ ಶರೈಃ ॥31॥
ರಥ ಅಶ್ವ ಗಜಗಳಲ್ಲಿ ಅಡಗಿದ ಇಪ್ಪತ್ತೈದು ಸಾವಿರ ಪದಾತಿಸೈನಿಕರೆಲ್ಲರನ್ನು ಧೃಷ್ಟದ್ಯುಮ್ನನು ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿದ.
ಶರೈರ್ನಿಕೃತ್ತಾಃ ಸಮರೇ ಧೃಷ್ಟದ್ಯುಮ್ನೇನ ತಾವಕಾಃ|
ಪಂಚವಿಂಶತಿಸಾಹಸ್ರಾಃ ಕಾಲಮಾರ್ಚ್ಛನ್ ಪದಾತಯಃ ॥32॥
ರಣದಲ್ಲಿ ಧೃಷ್ಟದ್ಯುಮ್ನನ ಬಾಣಗಳಿಂದ ಕತ್ತರಿಸಲ್ಪಟ್ಟು ನಿನ್ನ ಕಡೆಯ ಇಪ್ಪತ್ತೈದು ಸಾವಿರ ಪದಾತಿ ಸೈನಿಕರು ಕಾಲವಶರಾದರು.
ಹತ್ವಾ ತಂ ಪುರುಷಾನೀಕಂ ಧೃಷ್ಟದ್ಯುಮ್ನೋ ಮಹಾಬಲಃ|
ಭೀಮಸೇನಂ ಪುರಸ್ಕೃತ್ಯ ನಚಿರಾತ್ ಪ್ರತ್ಯದೃಶ್ಯತ ॥33॥
ಮಹಾಬಲಿಯಾದ ಧೃಷ್ಟದ್ಯುಮ್ನನು ಆ ಪದಾತಿ ಸೈನ್ಯವನ್ನು ಸಂಹರಿಸಿ ಪುನಃ ಭೀಮಸೇನನನ್ನು ಮುಂದೆ ಮಾಡಿಕೊಂಡು ಬೇಗನೆ ರಣರಂಗದಲ್ಲಿ ಗೋಚರನಾದ.
ತಂ ಪಾರಾವತವರ್ಣಾಶ್ವಂ ಕ್ರುದ್ಧಂ ಕ್ರುದ್ಧಾಂತಕೋಪಮಮ್|
ಧೃಷ್ಟದ್ಯುಮ್ನಂ ರಣೇ ದೃಷ್ಟ್ವಾ ತ್ವದೀಯಾಃ ಪ್ರಾದ್ರವನ್
ಭಯಾತ್ ॥34॥
ಕುಪಿತನಾದ ಅಂತಕನಂತಿರುವ, ಪಾರಿವಾಳವರ್ಣದ ಅಶ್ವಗಳನ್ನು ಹೂಡಿದ ರಥವೇರಿದ್ದ ಧೃಷ್ಟದ್ಯುಮ್ನನನ್ನು ರಣದಲ್ಲಿ ಕಂಡು ನಿನ್ನವರು ಭಯದಿಂದ ಪಲಾಯನಗೈದರು.
ಮಾದ್ರೀಪುತ್ರೌ ತು ಶಕುನಿಂ ಸಾತ್ಯಕಿಶ್ಚ ಮಹಾರಥಃ ॥35॥
ನಕುಲಸಹದೇವರೂ ಮಹಾರಾಜನಾದ ಸಾತ್ಯಕಿಯೂ ಶಕುನಿಯನ್ನು ಆಕ್ರಮಿಸಿದರು. ಉತ್ಸಾಹದಿಂದ ಶಕುನಿಯ ಸೈನ್ಯವನ್ನು ವಧಿಸಿದರು.
ಜವೇನಾಭ್ಯಪತನ್ ಹೃಷ್ಟಾ ನಿಘ್ನಂತಃ ಸೌಬಲಂ ಬಲಮ್|
ತಸ್ಯಾಶ್ವವಾರಾನ್ ಸುಬಹೂನ್ ವಿನಿಹತ್ಯ ಶಿತೈಃ ಶರೈಃ ॥36॥
ಅವರು ಶಕುನಿಯ ಅಶ್ವಯೋಧರನ್ನು ಬಹುಸಂಖ್ಯೆಯಲ್ಲಿ ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿ, ಶಕುನಿಯನ್ನು ಉತ್ಸಾಹದಿಂದ ವೇಗವಾಗಿ ಆಕ್ರಮಿಸಿದರು. ಆಗ ದೊಡ್ಡ ಯುದ್ಧ ನಡೆಯಿತು.
ತಮಭ್ಯಧಾವಂಸ್ತ್ವರಿತಾಸ್ತತೋ ಯುದ್ಧಮಭೂನ್ಮಹತ್|
ಧನಂಜಯೋಪಿ ಚಾಭ್ಯೇತ್ಯ ರಥಾನೀಕಂ ತವ ಪ್ರಭೋ ॥37॥
ವಿಶ್ರುತಂ ತ್ರಿಷು ಲೋಕೇಷು ವ್ಯಾಕ್ಷಿಪದ್ ಗಾಂಡಿವಂ ಧನುಃ|
ರಾಜನ್, ಅರ್ಜುನನು ಕೂಡ ನಿನ್ನ ಸೈನ್ಯದ ಇದಿರಿಗೆ ನುಗ್ಗಿ ಬಂದು ಮೂಲರ್ೋಕದಲ್ಲಿ ಪ್ರಖ್ಯಾತವಾದ ಗಾಂಡೀವ ಧನುಸ್ಸನ್ನು ಠೇಂಕರಿಸಿದ.
ಕೃಷ್ಣಸಾರಥಿಮಾಯಾಂತಂ ದೃಷ್ಟ್ವಾ ಶ್ವೇತಹಯಂ ರಥಮ್ ॥38॥
ಅರ್ಜುನಂ ಚಾಪಿ ಯೋದ್ಧಾರಂ ತ್ವದೀಯಾಃ ಪ್ರಾದ್ರವನ್ ಭಯಾತ್|
ಸಾರಥಿ ಕೃಷ್ಣನನ್ನೂ ಶ್ವೇತ ಅಶ್ವಯುಕ್ತವಾಗಿ ಆಗಮಿಸುವ ರಥವನ್ನೂ ಅದರಲ್ಲಿ ಯೋಧನಾದ ಅರ್ಜುನನನ್ನೂ ಕಂಡು ಭಯದಿಂದ ನಿನ್ನವರು ಓಡಿದರು.
ವಿಪ್ರಹೀನ ರಥಾಶ್ವೇಭಾ ನೃಪೈಶ್ಚ ಪರಿವರ್ಜಿತಾಃ ॥39॥
ಪಂಚವಿಂಶತಿಸಾಹಸ್ರಾಃ ಕಾಲಮಾರ್ಚ್ಛನ್ ಪದಾತಯಃ|
ಇಪ್ಪತ್ತೈದು ಸಾವಿರ ಪದಾತಿಯೋಧರು ರಥ ಅಶ್ವ ಗಜಯೋಧರ ಮತ್ತು ರಾಜರ ರಕ್ಷಣೆಯಿಲ್ಲದೆ ಎಲ್ಲರೂ ಕಾಲವಶರಾದರು.
ಹತ್ವಾ ತತ್ಪುರುಷಾನೀಕಂ ಪಾಂಚಾಲಾನಾಂ ಮಹಾರಥಾಃ ॥40॥
ಚೇಕಿತಾನಃ ಶಿಖಂಡೀ ಚ ದ್ರೌಪದೇಯಾಶ್ಚ ಮಾರಿಷ|
ಹತ್ವಾ ತ್ವದೀಯಂ ಸುಮಹತ್ಸೈನ್ಯಂ ಶಂಖಾನಥಾಧಮನ್ ॥41॥
ರಾಜನ್, ಚೇಕಿತಾನ, ಶಿಖಂಡಿ ಮತ್ತು ದ್ರೌಪದೀಪುತ್ರರು ನಿನ್ನ ಮಹಾಸೈನ್ಯ ವನ್ನು ಸಂಹರಿಸಿ ಶಂಖನಾದಗಳನ್ನು ಗೈದರು.
ತೇ ಸರ್ವೇ ತಾವಕಾನ್ ಪ್ರೇಕ್ಷ ್ಯ ದ್ರವಮಾಣಾನ್ ಪರಾಙ್ಮುಖಾನ್|
ಅಭ್ಯದ್ರವನ್ ಜಿಘಾಂಸಂತೋ ವೃಷಾನ್ ಜಿತ್ವಾ ಯಥಾ ವೃಷಾಃ ॥42॥
ಅವರೆಲ್ಲರೂ ನಿನ್ನವರು ಸೋತು ಬೆನ್ನು ತಿರುಗಿಸಿ ಓಡುವುದನ್ನು ಕಂಡು, ಕಾಳಗದಲ್ಲಿ ಗೂಳಿಯು, ಸೋತು ಓಡುವ ಗೂಳಿಯನ್ನು ಅಟ್ಟಿಸಿಕೊಂಡು ಹೋಗುವಂತೆ, ಅವರನ್ನು ಸಂಹರಿಸಲು ಅಟ್ಟಿಸಿಕೊಂಡು ಧಾವಿಸಿದರು.
ಸೇನಾವಶೇಷಂ ತಂ ದೃಷ್ಟ್ವಾ ತವ ಸೈನ್ಯಂ ಪರಾಙ್ಮುಖಮ್|
ವ್ಯವಸ್ಥಿತಃ ಸವ್ಯಸಾಚೀ ಚುಕ್ರೋಧ ಬಲವತ್ತದಾ ॥43॥
ಅಳಿದುಳಿದ ಸೈನ್ಯವು ಪಲಾಯನ ಮಾಡುವುದನ್ನು ಕಂಡು ಯುದ್ಧಸನ್ನದ್ಧನಾಗಿ ನಿಂತಿದ್ದ ಅರ್ಜುನನು ಬಲವಾಗಿ ಕೋಪಗೊಂಡ.
ತವ ಸೇನಾಂ ಶರೈ ರಾಜನ್ ಸಹಸಾ ಸಮವಾರಯತ್|
ರಜಸಾ ಚೋದ್ಧತೇನಾಥ ನ ಸ್ಮ ಕಿಂಚಿದ್ ವ್ಯದೃಶ್ಯತ ॥44॥
ರಾಜನ್, ಅರ್ಜುನನು ನಿನ್ನ ಸೈನ್ಯವನ್ನು ಒಡನೆ ಬಾಣಗಳಿಂದ ಆಚ್ಛಾದಿಸಿದ. ಆಗ ಎದ್ದ ಧೂಳಿನಿಂದ ಏನೂ ಕಾಣದಾಯಿತು.

ಅಂಧಕಾರೀಕೃತೇ ಲೋಕೇ ಶರಭೂತೇ ಮಹೀತಳೇ |
ದಿಶಃ ಸರ್ವಾ ಮಹಾರಾಜ ತಾವಕಾಃ ಪ್ರಾದ್ರವನ್ ಭಯಾತ್ ॥45॥
ಲೋಕ ಅಂಧಕಾರಮಯವಾಯಿತು. ನೆಲ ಬಾಣಗಳಿಂದ ತುಂಬಿತು. ಮಹಾರಾಜ, ನಿನ್ನ ಸೈನಿಕರು ಭಯದಿಂದ ಎಲ್ಲ ದಿಕ್ಕುಗಳಿಗೆ ಓಡಿದರು.
ಭಜ್ಯಮಾನೇಷು ಸೈನ್ಯೇಷು ಕುರುರಾಜೋ ವಿಶಾಂಪತೇ |
ಪರಾನಭಿಮುಖಾಂಶ್ಚೈವ ಸುತಸ್ತೇ ಸಮುಪಾದ್ರವತ್ ॥46॥
ರಾಜನೆ, ನಿನ್ನ ಮಗ ದುರ್ಯೋಧನ, ಸೈನ್ಯಗಳು ನಾಶವಾಗುತ್ತಿದ್ದಾಗ ತನ್ನೆದುರಿಗೆ ಬಂದ ಶತ್ರುಗಳನ್ನು ಆಕ್ರಮಿಸಿದ.
ತತೋ ದುರ್ಯೋಧನಃ ಸರ್ವಾನಾಜುಹಾವಾಥ ಪಾಂಡವಾನ್ |
ಯುದ್ಧಾಯ ಭರತಶ್ರೇಷ್ಠ ದೇವಾನಿವ ಪುರಾ ಬಲಿಃ ॥47॥
ಆಗ, ರಾಜನೆ, ದುರ್ಯೋಧನನು ಹಿಂದೆ ಬಲಿಚಕ್ರವರ್ತಿ ದೇವತೆಗಳನ್ನು ಯುದ್ಧಕ್ಕೆ ಆಹ್ವಾನಿಸಿದಂತೆ ಎಲ್ಲ ಪಾಂಡವಸೈನಿಕರನ್ನೂ ಆಹ್ವಾನಿಸಿದ.
ತ ಏನಮಭಿವರ್ತಂತ ಭರ್ತ್ಸಯಂತೋ ಮುಹುರ್ಮುಹುಃ |
ದುರ್ಯೋಧನೋಽಪ್ಯಸಂಭ್ರಾಂತಸ್ತಾನರೀನ್ ನಿಶಿತೈಃ ಶರೈಃ |
ವ್ಯಧಮದ್ ಯುಧಿ ರಾಜೇಂದ್ರ ಘೋರರೂಪೋ ವಿಶಾಂಪತೇ ॥48॥
ಪಾಂಡವರ ಸೈನಿಕರು ಆಗ ದುರ್ಯೋಧನನನ್ನು ಪುನಃ ಪುನಃ ಧಿಕ್ಕರಿಸುತ್ತ ಇದಿರಿಸಿದರು. ದುರ್ಯೋಧನನು ಏನೂ ದಿಗ್ಭ್ರಮೆಗೊಳ್ಳದೆ ಆ ಶತ್ರುಗಳನ್ನು ತೀಕ್ಷ್ಣವಾದ ಬಾಣಗಳಿಂದ ಘೋರರೂಪನಾಗಿ ಧ್ವಂಸ ಮಾಡಿದ.
ತತ್ರಾದ್ಭುತಮಪಶ್ಯಾಮ ತವ ಪುತ್ರಸ್ಯ ಪೌರುಷಮ್ |
ಯದೇನಂ ಪಾಂಡವಾಃ ಸರ್ವೇ ನ ಶೇಕುರತಿವರ್ತಿತುಮ್ ॥49॥
ಆಗ, ರಾಜನೆ, ನಿನ್ನ ಮಗನ ಪೌರುಷ ಅದ್ಭುತವಾಗಿದ್ದುದನ್ನು ನಾವು ಕಂಡೆವು. ಪಾಂಡವ ಸೈನಿಕರು ಯಾರೂ ಅವನನ್ನು ಅತಿಕ್ರಮಿಸಲು ಶಕ್ತರಾಗಲಿಲ್ಲ.
ನಾತಿದೂರಾಪಯಾತಂ ತು ಕೃತಬುದ್ಧಿಂ ಪಲಾಯನೇ |
ದುರ್ಯೋಧನಃ ಸ್ವಕಂ ಸೈನ್ಯಮಪಶ್ಯಚ್ಛರವಿಕ್ಷತಮ್ ॥50॥
ದುರ್ಯೋಧನನು ತನ್ನ ಸೈನ್ಯ ಬಾಣಗಳಿಂದ ಬಹಳ ಗಾಯಗೊಂಡು, ಪಲಾಯನ ಮಾಡಲು ನಿಶ್ಚಯಿಸಿ, ಇನ್ನೂ ಹೆಚ್ಚು ದೂರಕ್ಕೆ ಹೋಗಿಲ್ಲದಿದ್ದಾಗಲೆ ಅದನ್ನು ಕಂಡ.
ತತೋಽವಸ್ಥಾಪ್ಯ ರಾಜೇಂದ್ರ ಕೃತಬುದ್ಧಿಸ್ತವಾತ್ಮಜಃ |
ಹರ್ಷಯನ್ನಿವ ತಾನ್ ಯೋಧಾನಿದಂ ವಚನಮಬ್ರವೀತ್ ॥51॥
ರಾಜನೆ, ಬುದ್ಧಿವಂತನಾದ ನಿನ್ನ ಮಗನು ಆಗ ಆ ಸೈನ್ಯವನ್ನು ತಡೆದು ನಿಲ್ಲಿಸಿ ಯೋಧರನ್ನು ಉತ್ಸಾಹಗೊಳಿಸುವುದಕ್ಕಾಗಿ ನುಡಿದ.
ದುರ್ಯೋಧನಃ
ನ ತಂ ದೇಶಂ ಪ್ರಪಶ್ಯಾಮಿ ಪೃಥಿವ್ಯಾಂ ಪರ್ವತೇಷು ಚ |
ಯತ್ರ ಯಾತಾನ್ನ ವೋ ಹನ್ಯುಃ ಪಾಂಡವಾಃ ಕಿಂ ಗತೇನ ವಃ ॥52॥
ದುರ್ಯೋಧನ ನುಡಿದ– ಯೋಧರೆ, ನೀವು ಎಲ್ಲಿಗೆ ಓಡಿ ಹೋದರೆ ಪಾಂಡವರು ನಿಮ್ಮನ್ನು ಕೊಲ್ಲದೆ ಬಿಡುವರೊ ಅಂಥ ಪ್ರದೇಶವನ್ನು ನೆಲದಲ್ಲಾಗಲಿ, ಪರ್ವತಗಳಲ್ಲಾಗಲಿ ನಾ ಕಾಣೆ. ಅದರಿಂದ ನೀವು ಓಡಿ ಹೋಗುವುದರಿಂದ ಏನು ಪ್ರಯೋಜನ?
ಅಲ್ಪಂ ಚ ಬಲಮೇತೇಷಾಂ ಕೃಷ್ಣೌ ಚ ಭೃಶವಿಕ್ಷತೌ |
ಯದಿ ಸರ್ವೇಽತ್ರ ತಿಷ್ಠಾಮೋ ಧ್ರುವೋ ನೋ ವಿಜಯೋ
ಭವೇತ್ ॥53॥
ಪಾಂಡವರ ಸೈನ್ಯ ಅಲ್ಪ. ಕೃಷ್ಣಾರ್ಜುನರೂ ಬಹಳ ಗಾಯಗೊಂಡಿದ್ದಾರೆ. ನಾವು ಎಲ್ಲರೂ ಒಂದಾಗಿ ನಿಂತರೆ ನಮಗೆ ನಿಶ್ಚಯವಾಗಿ ಜಯವೇ ಉಂಟಾಗುವುದು.
ವಿಪ್ರಯಾತಾಂಶ್ಚ ನೋ ಭಿನ್ನಾನ್ ಪಾಂಡವಾಃ ಕೃತಕಿಲ್ಬಿಷಾನ್ |
ಅನುಸೃತ್ಯ ವಧಿಷ್ಯಂತಿ ಶ್ರೇಯಾನ್ನಃ ಸಮರೇ ವಧಃ ॥54॥
ನಾವು ಚದುರಿ ಓಡಲು ತೊಡಗಿದರೆ ಅಪರಾಧಿಗಳಾದ ನಮ್ಮನ್ನು ಪಾಂಡವ ಸೈನಿಕರು ಬೆನ್ನಟ್ಟಿ ಬಂದು ವಧಿಸುತ್ತಾರೆ. ಅದಕ್ಕಿಂತ ನಾವು ರಣದಲ್ಲಿ ಸಾಯುವುದೇ ಲೇಸು.
ಸುಖಃ ಸಾಂಗ್ರಾಮಿಕೋ ಮೃತ್ಯುಃ ಕ್ಷತ್ರಧರ್ಮೇಣ ಯುಧ್ಯತಾಮ್ |
ಮೃತೋ ದುಃಖಂ ನ ಜಾನೀತೇ ಪ್ರೇತ್ಯ ಚಾನಂತ್ಯಮಶ್ನುತೇ ॥55॥
ಕ್ಷಾತ್ರಧರ್ಮದಿಂದ ಹೋರಾಡುವವರಿಗೆ ರಣದಲ್ಲಿ ಮಡಿದರೆ ಸುಖ. ಮಡಿದವನು ದುಃಖವನ್ನು ಕಾಣಲಾರ. ಪರಲೋಕಕ್ಕೆ ಹೋಗಿ ಅವನು ಅಕ್ಷಯ ಸುಖವನ್ನೇ ಉಣ್ಣುತ್ತಾನೆ.
ಶೃಣುಧ್ವಂ ಕ್ಷತ್ರಿಯಾಃ ಸರ್ವೇ ಯಾವಂತಃ ಸ್ಥ ಸಮಾಗತಾಃ |
ಯದಾ ಶೂರಂ ಚ ಭೀರುಂ ಚ ಮಾರಯತ್ಯಂತಕೋ ಯಮಃ ॥56॥
ಕೋ ನು ಮೂಢೋ ನ ಯುಧ್ಯೇತ ಮಾದೃಶಃ ಕ್ಷತ್ರಿಯವ್ರತಃ |
ದ್ವಿಷತೋ ಭೀಮಸೇನಸ್ಯ ಕ್ರುದ್ಧಸ್ಯ ವಶಮೇಷ್ಯಥ ॥57॥
ಪಿತಾಮಹೈರಾಚರಿತಂ ನ ಧರ್ಮಂ ಹಾತುಮರ್ಹಥ |

ನ ಹ್ಯಧರ್ಮೋಽಸ್ತಿ ಪಾಪೀಯಾನ್ ಕ್ಷತ್ರಿಯಸ್ಯ ಪಲಾಯನಾತ್ ॥58॥
ಇಲ್ಲಿಗೆ ಬಂದಿರುವ ಎಲ್ಲ ಕ್ಷತ್ರಿಯರೂ ಕೇಳಿ. ಶೂರನನ್ನೂ ಹೇಡಿಯನ್ನೂ ಇಬ್ಬರನ್ನೂ ಅಂತಕನಾದ ಯಮ ಕೊಲ್ಲುತ್ತಾನೆ ಎಂದಮೇಲೆ ಕ್ಷತ್ರಿಯರ ಯುದ್ಧದಲ್ಲಿ ಅಪಲಾಯನದ ವ್ರತನಿಷ್ಠನಾದವನು ನನ್ನಂಥವನು ಯಾವನು ತಾನೆ ಮೂರ್ಖತನ ದಿಂದ ಯುದ್ಧವನ್ನು ಬಿಡುತ್ತಾನೆ? ಕುಪಿತನಾದ ಶತ್ರು ಭೀಮಸೇನನ ವಶಕ್ಕೆ ಹೋಗು ವಿರೇನು? ನಮ್ಮ ತಾತಂದಿರು ನಡೆಸಿಕೊಂಡು ಬಂದ ಧರ್ಮವನ್ನು ತೊರೆಯ ಬೇಡಿರಿ. ಪಲಾಯನಕ್ಕಿಂತ ಹೆಚ್ಚಿನದಾದ ಪಾಪಕರ ಅಧರ್ಮ ಕ್ಷತ್ರಿಯನಿಗೆ ಇಲ್ಲ.
ಯುದ್ಧಧರ್ಮಾನ್ನ ಚ ಶ್ರೇಯಾನ್ ಪಂಥಾಃ ಸ್ವರ್ಗಸ್ಯ ವಿದ್ಯತೇ |
ಅಚಿರೇಣ ಹತಾ ಲೋಕಂ ಸರ್ವೇ ಯೋಧಾಃ ಸಮಾಪ್ಸ್ಯತ ॥59॥
ಯುದ್ಧ ಧರ್ಮಕ್ಕಿಂತ ಹೆಚ್ಚು ಶ್ರೇಯಸ್ಕರವಾದ ಮಾರ್ಗ ಸ್ವರ್ಗಕ್ಕೆ ಇನ್ನೊಂದಿಲ್ಲ. ನೀವೆಲ್ಲ ಯೋಧರು ಬೇಗನೆ ಹತರಾಗಿ ಸ್ವರ್ಗವನ್ನು ಪಡೆಯಿರಿ.
ಸಂಜಯಃ
ಏವಂ ಬ್ರುವತಿ ತೇ ಪುತ್ರೇ ಸೈನಿಕಾಃ ಭೃಶವಿಕ್ಷತಾಃ |
ಅನಾದೃತ್ಯೈವ ತದ್ವಾಕ್ಯಂ ಪ್ರಾದ್ರುವನ್ ಸರ್ವತೋ ದಿಶಃ ॥60॥
ಸಂಜಯ ನುಡಿದ– ನಿನ್ನ ಮಗ ಹೀಗೆ ಹೇಳುತ್ತಿದ್ದರೂ ಬಹಳ ಗಾಯಗೊಂಡಿದ್ದ ಸೈನಿಕರು ಅವನ ಮಾತನ್ನು ಕೇಳದೆ ಎಲ್ಲ ದಿಕ್ಕುಗಳಿಗೆ ಪಲಾಯನವನ್ನೇ ಮಾಡಿದರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಕರ್ಣಪರ್ವಣಿ ಕುರುಸೈನ್ಯಪಲಾಯನಂ ನಾಮ ನವತಿತಮೋಽಧ್ಯಾಯಃ ॥90॥

ತೊಂಬತ್ತೊಂದನೆಯ ಅಧ್ಯಾಯ
ಶಲ್ಯನ ಸಲಹೆಯಂತೆ ದುರ್ಯೋಧನ ತನ್ನ ಸೈನ್ಯವನ್ನು
ಶಿಬಿರಕ್ಕೆ ಹಿಂತಿರುಗಿಸಿದ.
ಸಂಜಯಃ
ದೃಷ್ಟ್ವಾ ತು ಸೈನ್ಯಂ ವಿನಿವರ್ತ್ಯಮಾನಂ
ಪುತ್ರೇಣ ತೇ ಮದ್ರಪತಿಸ್ತದಾನೀಮ್ |
ಸಂತ್ರಸ್ತರೂಪಃ ಪರಿಮೂಢಚೇತಾ
ದುರ್ಯೋಧನಂ ವಾಕ್ಯಮಿದಂ ಬಭಾಷೇ ॥1॥
ಸಂಜಯ ನುಡಿದ– ನಿನ್ನ ಮಗನು ಪಲಾಯನ ಮಾಡುತ್ತಿದ್ದ ಸೈನ್ಯವನ್ನು ಹಿಂತಿರುಗಿಸಲು ಯತ್ನಿಸುವುದನ್ನು ಭಯಗೊಂಡು ಮಂಕಾಗಿದ್ದ ಶಲ್ಯನು ನೋಡಿ ಅವನಿಗೆ ಹೀಗೆ ಹೇಳಿದ–
ಪಶ್ಯೇದಮುಗ್ರಂ ನರವಾಜಿನಾಗೈ-
ರಾಯೋಧನಂ ವೀರಹತೈಃ ಸುಪೂರ್ಣಮ್ ॥2॥
ನೋಡು, ವೀರರಿಂದ ಹತವಾದ ಪದಾತಿ ಅಶ್ವ ಗಜಗಳಿಂದ ತುಂಬಿ ಉಗ್ರವಾಗಿರುವ ಈ ರಣಭೂಮಿಯನ್ನು ನೋಡು.
ಮಹೀಧರಾಭೈಃ ಪತಿತೈರ್ಮಹಾಗಜೈ
ರ್ಮಹೀಂ ಪ್ರಪನ್ನೈಃ ಶರವಿದ್ಧಮರ್ಮಭಿಃ |
ತೈರ್ವಿಹ್ವಲದ್ಭಿಶ್ಚ ಗತಾಸುಭಿಶ್ಚ
ಪ್ರಧ್ವಸ್ತಚಿತ್ರಾಯುಧವರ್ಮಯೋಧೈಃ ॥3॥
ಬಿದ್ದಿರುವ ಈ ಮಹಾಗಜಗಳು ಬೆಟ್ಟದಾಕಾರದವು. ಭೂಮಿಯಲ್ಲಿ ಒರಗಿವೆ. ಬಾಣಗಳಿಂದ ಮರ್ಮಸ್ಥಾನಗಳಲ್ಲಿ ಏಟು ಬಿದ್ದಿದೆ. ಕೆಲವು ಗಜಗಳು ಇನ್ನೂ ನರಳುತ್ತಿವೆ. ಕೆಲವು ಸತ್ತಿವೆ. ಅವುಗಳ ಆರೋಹಿಗಳಾದ ಯೋಧರು ಕೂಡ ಸುಂದರವಾದ ಆಯುಧ, ಕವಚಗಳನ್ನು ಕಳೆದುಕೊಂಡು ಬಿದ್ದಿದ್ದಾರೆ.
ವಜ್ರಾಪವಿದ್ಧೈರಿವ ಚಾಚಲೇಂದ್ರೈ
ರ್ವಿಭಿನ್ನಪಾಷಾಣಮೃಗದ್ರುಮೌಷಧೈಃ |
ಪ್ರವಿದ್ಧಘಂಟಾಂಕುಶತೋಮರಧ್ವಜೈಃ
ಸಹೇಮಮಾಲೈ ರುಧಿರೌಘಸಂಪ್ಲುತೈಃ ॥4॥
ಈ ಆನೆಗಳ ಗಂಟೆ ಅಂಕುಶ ತೋಮರ ಧ್ವಜಗಳೆಲ್ಲವೂ ಬಂಗಾರದ ಮಾಲೆಗಳೂ ಚೂರುಚೂರಾಗಿವೆ. ಮೈಯು ರಕ್ತಪ್ರವಾಹದಿಂದ ತೊಯ್ದಿದೆ. ವಜ್ರಾಯುಧದಿಂದ ಚೂರುಚೂರಾದ ಬಂಡೆಗಲ್ಲು ಮೃಗ ವೃಕ್ಷ ಓಷಧಿಗಳಿಂದ ಕೂಡಿದ ಬೆಟ್ಟಗಳಂತೆ ಈ ಗಜಗಳು ಕಾಣುತ್ತಿವೆ.
ಶರಾವಭಿನ್ನೈಃ ಪತಿತೈಶ್ಚ ವಾಜಿಭಿಃ
ಶ್ವಸದ್ಭಿರನ್ಯೈಃ ಕ್ಷತಜಂ ವಮದ್ಭಿಃ |
ದೀನೈಃ ಸ್ತನದ್ಭಿಃ ಪರಿವೃತ್ತನೇತ್ರೈಃ
ಮಹೀಂ ದಶದ್ಭಿಃ ಕೃಪಣಂ ನದದ್ಭಿಃ ॥5॥
ಬಾಣಗಳ ಏಟಿನಿಂದ ಬಿದ್ದ ಅಶ್ವಗಳು ಊರ್ಧ್ವಶ್ವಾಸ ಎಳೆಯುತ್ತ ನೆತ್ತರನ್ನು ಕಾರುತ್ತ, ದೀನವಾಗಿ ಕೆನೆಯುತ್ತ, ಕಣ್ಣುಗಳನ್ನು ತಿರುಗಿಸುತ್ತ, ನೆಲಕಚ್ಚಿ ಕರುಣಾ ಜನಕವಾಗಿ ನರಳುತ್ತಿವೆ.

ತಥಾಪವಿದ್ಧೈರ್ಗಜವಾಜಿಯೋಧೈ-
ರ್ಮಂದಾಸುಭಿಶ್ಚೈವ ಗತಾಸುಭಿಶ್ಚ |
ನರಾಶ್ವನಾಗೈಶ್ಚ ರಥೈಶ್ಚ ಮರ್ದಿತೈ-
ರ್ಮಹೀ ಮಹಾವೈತರಣೀವ ದುರ್ದೃಶಾ ॥6॥
ಈ ಗಜ ಅಶ್ವ ಪದಾತಿಗಳು ಬಾಣಗಳಿಂದ ಗಾಯಗೊಂಡು ಮಂದವಾಗಿ ಉಸಿರೆಳೆಯುತ್ತಿವೆ ಅಥವಾ ಸತ್ತಿರುತ್ತವೆ. ಪದಾತಿ ಅಶ್ವ ಗಜ ರಥಯೋಧರು ಸತ್ತುಬಿದ್ದಿರುವುದರಿಂದ ಈ ರಣಭೂಮಿ ಮಹಾವೈತರಣಿಯಂತೆ ನೋಡಲು ಅಸಾಧ್ಯವೆನಿಸಿದೆ.
ಗಜೈರ್ನಿಕೃತ್ತಾಯತಹಸ್ತಗಾತ್ರೈ-
ರುದ್ವೇಪಮಾನೈಃ ಪತಿತೈಃ ಪೃಥಿವ್ಯಾಮ್ ॥7॥
ಈ ಗಜಗಳ ನಿಡಿದಾದ ಸೊಂಡಿಲು ಮುಂತಾದ ಅವಯವಗಳು ಬಾಣಗಳಿಂದ ಕತ್ತರಿಸಿ ಬಿದ್ದಿವೆ. ಅವು ನೆಲದಲ್ಲಿ ಬಿದ್ದು ನಡುಗುತ್ತಿವೆ.
ವಿಶೀರ್ಣದಂತೈಃ ಕ್ಷತಜಂ ವಮದ್ಭಿಃ
ಸ್ಫುರದ್ಭಿರಾರ್ತೈಃ ಕರುಣಂ ರಣಾಜಿರೇ |
ಸುವರ್ಣವರ್ಮಾಯುಧಪಾದಗೋಪ್ತೃಭಿಃ
ಪ್ರಕೀರ್ಣತೂಣೀರಪತಾಕಕೇತುಭಿಃ ॥8॥
ದಂತಗಳು ತುಂಡಾಗಿವೆ. ವೇದನೆಯನ್ನು ತಾಳಲಾರದೆ ನೆತ್ತರನ್ನು ಕಾರುತ್ತ ನಡುಗುತ್ತ ಸಂಕಟದಲ್ಲಿ ಬಿದ್ದಿವೆ. ರಕ್ಷಕಯೋಧರ ಸುವರ್ಣಕವಚ ಆಯುಧ ಪಾದಗಳು ಕಡಿದುಬಿದ್ದಿವೆ. ಅವರ ಬತ್ತಳಿಕೆಗಳು ಪತಾಕೆ ಧ್ವಜಗಳು ಚೂರುಚೂರಾಗಿ ಹರಡಿವೆ.
ಸುವರ್ಣಜಾಲಾವತತೈರ್ಭೃಶಾಹತೈ-
ರ್ಮಹೀ ಬಭೌ ದ್ಯೌರ್ಜಲದೈರಿವಾವೃತಾ ॥9॥
ಬಂಗಾರದ ಮಾಲೆಗಳಿಂದ ಅಲಂಕೃತವಾದ ಮಹಾ ಗಜಗಳು ಬಹಳ ಹತವಾಗಿ ಭೂಮಿಯಲ್ಲಿ ಬಿದ್ದಿದ್ದರಿಂದ ಭೂಮಿಯು ಮೋಡಮುಸುಕಿದ ಆಕಾಶದಂತೆ ಕಾಣುತ್ತಿದೆ.
ಯಶಸ್ವಿಭಿರ್ನಾಗರಥಾಶ್ವಯೋಧಿಭಿಃ
ಪದಾತಿಭಿಶ್ಚಾಭಿಮುಖೈರ್ಹತೈಃ ಪರೈಃ |
ವಿಕೀರ್ಣವರ್ಮಾಭರಣಾಂಬರಾಯುಧೈ-
ರ್ವೃತಾ ಸ್ಮಶಾನೈರಿವ ಪಾವಕೈರ್ಮಹೀ ॥10॥
ಯಶಸ್ವಿಯಾಗಿ ಯುದ್ಧ ನಡೆಸಿದ ಗಜ ರಥ ಅಶ್ವಯೋಧರೂ ಪದಾತಿಗಳೂ ಎದುರಾಗಿ ಬಂದ ಶತ್ರುಗಳಿಂದ ಹತರಾಗಿ ಬಿದ್ದಿದ್ದರಿಂದ, ಅವರ ಕವಚ ಆಭರಣ ವಸ್ತ್ರ ಆಯುಧಗಳು ಎಲ್ಲೆಡೆ ಚೆಲ್ಲಿವೆ. ಅದರಿಂದ ರಣಭೂಮಿಯು ಎಲ್ಲೆಡೆ ಅಗ್ನಿಗಳಿಂದ ಬೆಳಗುವ ಸ್ಮಶಾನಗಳಿಂದಲೇ ತುಂಬಿದಂತೆ ಕಂಡುಬರುತ್ತಿದೆ.
ಶರಪ್ರಹಾರಾಭಿಹತೈರ್ಮಹಾರಥೈ-
ರವೇಕ್ಷಮಾಣೈಃ ಪತಿತೈಃ ಸಹಸ್ರಶಃ |
ಪುನಷ್ಚಸಂಜ್ಞೈಃ ಪುನರುಚ್ಛ್ವಸದ್ಭಿ-
ರ್ಮಹೀ ಬಭೂವಾಗ್ನಿಪರೀತಗಾತ್ರಾ |
ದಿವಶ್ಚ್ಯುತೈರ್ಭೂರತಿದೀಪ್ತಿಮದ್ಭಿಃ
ನಕ್ತಂ ಗ್ರಹೈರ್ದ್ಯೌರಮಲೇವ ದೀಪ್ತೈಃ ॥11॥
ಬಾಣಪ್ರಹಾರದಿಂದ ಹತರಾದ ಮಹಾರಥರು ಸಾವಿರಾರು ಸಂಖ್ಯೆಯಲ್ಲಿ ನೆಲದಲ್ಲಿ ಒರಗಿದ್ದಾರೆ. ಎಚ್ಚರತಪ್ಪಿ ಊರ್ಧ್ವಶ್ವಾಸವನ್ನು ಎಳೆಯುತ್ತಿದ್ದಾರೆ. ಆದರೂ ಕಣ್ಣು ತೆರೆದು ನೋಡುತ್ತಿರುವಂತೆ ಕಾಣುತ್ತಾರೆ. ಅತ್ಯಂತ ದೀಪ್ತಿಯಿಂದ ಬೆಳಗುತ್ತ ಸ್ವರ್ಗದಿಂದ ಚ್ಯುತರಾಗಿ ಕೆಳಗೆ ಬಿದ್ದಂತೆ ಕಾಣುತ್ತಾರೆ. ಅದರಿಂದ ರಣಭೂಮಿಯು ಅಗ್ನಿಗಳಿಂದ ಎಲ್ಲೆಡೆ ಅಲಂಕೃತವಾದಂತೆ ಇದ್ದು, ಅದು ರಾತ್ರಿಯಲ್ಲಿ ಬೆಳಗುವ ಗ್ರಹಗಳಿಂದ ಅಲಂಕೃತವಾದ ನಿರ್ಮಲವಾದ ಆಕಾಶದಂತೇ ಕಾಣುತ್ತದೆ.
ಶರಾಸ್ತು ಕರ್ಣಾರ್ಜುನಬಾಹುಮುಕ್ತಾ
ವಿದಾರ್ಯ ನಾಗಾಶ್ವಮನುಷ್ಯದೇಹಾನ್ |
ಪ್ರಾಣಾನ್ನಿರಸ್ಯಾಶು ಮಹೀಮತೀಯು-
ರ್ಮಹೋರಗಾ ವಾಸಮಿವಾಭಿತೋಽಸ್ತ್ರೈಃ ॥12॥
ಅಸ್ತ್ರಗಳಿಂದ ಕರ್ಣಅರ್ಜುನರ ಬಾಹುಗಳಿಂದ ಹೊರಟ ಬಾಣಗಳು ಗಜ ಅಶ್ವ ಮನುಷ್ಯರ ದೇಹಗಳನ್ನು ಸೀಳಿ, ಪ್ರಾಣಗಳನ್ನು ಹೊರಗೆ ಹಾಕಿ, ವೇಗವಾಗಿ ಭೂಮಿಯನ್ನು ದೊಡ್ಡ ಹಾವುಗಳು ಬಿಲಗಳನ್ನು ಪ್ರವೇಶಿಸುವಂತೆ ಪ್ರವೇಶಿಸಿದುವು.
ಹತೈರ್ಮನುಷ್ಯಾಶ್ವಗಜೈಶ್ಚ ಸಂಖ್ಯೇ
ಶರಾವಭಿನ್ನೈಶ್ಚ ರಥೈರ್ಬಭೂವ |
ಧನಂಜಯಸ್ಯಾಧಿರಥೇಶ್ಚ ಮಾರ್ಗೇ
ಅಗಮ್ಯರೂಪಾ ವಸುಧಾ ಬಭೂವ ॥13॥
ರಣದಲ್ಲಿ ಹತರಾದ ಮನುಷ್ಯರು ಮತ್ತು ಅಶ್ವ ಗಜಗಳಿಂದ, ಹಾಗೂ ಬಾಣಗಳಿಂದ ಪುಡಿಯಾದ ರಥಗಳಿಂದ, ಅರ್ಜುನನ ಮತ್ತು ಕರ್ಣನ ಮಾರ್ಗಗಳಲ್ಲಿ ರಣಭೂಮಿ ಅಗಮ್ಯಸ್ವರೂಪವಾಯಿತು.
ರಥೈರ್ವರೇಷೂನ್ಮಥಿತೈಶ್ಚ ಯೋಧೈಃ
ಸಂಸ್ಯೂತಸೂತಾಶ್ವವರಾಯುಧಧ್ವಜೈಃ |

ವಿಶೀರ್ಣಯೋಕ್ತ್ರೈರ್ವಿನಿಕೃತ್ತಬಂಧುರೈ-
ರ್ನಿಕೃತ್ತಚಕ್ರಾಕ್ಷಯುಗತ್ರಿವೇಣುಭಿಃ ॥14॥
ವಿಮುಕ್ತಯಂತ್ರೈರ್ನಿಹತೈರಯಸ್ಮಯೈ-
ರ್ಹತಾನುಷಂಗೈರ್ವಿನಿಷಂಗಬಂಧುರೈಃ |
ಪ್ರಭಗ್ನನೀಡೈರ್ಮಣಿಹೇಮಮಂಡಿತೈಃ
ಸ್ತೃತಾ ಮಹೀ ದ್ಯೌರಿವ ಶಾರದೈರ್ಘನೈಃ ॥15॥
ಉತ್ತಮ ಬಾಣಗಳಿಂದ ಪುಡಿಯಾದ ರಥಗಳು, ಹತರಾದ ಯೋಧರು, ಸಾರಥಿ ಅಶ್ವ ಉತ್ತಮ ಆಯುಧ ಧ್ವಜಗಳು ಯೋಕ್ತ್ರ, ಬಂಧುರ ಚಕ್ರ ಅಕ್ಷ ಯುಗ ತ್ರಿವೇಣು ಯಂತ್ರ ಅನುಷಂಗ ವಿನಿಷಂಗ ನೀಡ ಮಣಿ ಬಂಗಾರಗಳ ಆಭರಣಗಳು ಎಲ್ಲವೂ ಬಾಣಗಳಿಂದ ಪುಡಿಯಾಗಿ ನೆಲದ ಮೇಲೆ ಹರಡಿದ್ದು ರಣಭೂಮಿಯು ಶರತ್ಕಾಲದ ಮೋಡಗಳಿಂದ ತುಂಬಿದ ಅಂತರಿಕ್ಷದಂತೆ ಕಂಗೊಳಿಸಿತು.
ವಿಕೃಷ್ಯಮಾಣೈರ್ಜವನೈರಲಂಕೃತೈ-
ರ್ಹತೇಶ್ವರೈರಾಜಿರಥೈಃ ಸುಕಲ್ಪಿತೈಃ |
ಮನುಷ್ಯಮಾತಂಗರಥಾಶ್ವರಾಶಿಭಿ-
ರ್ದ್ರುತಂ ವ್ರಜಂತೋ ಬಹುಧಾ ವಿಚೂರ್ಣಿತಾಃ ॥16॥
ಸಾಮಗ್ರಿಗಳಿಂದ ಸಜ್ಜಾಗಿ ಅಲಂಕೃತವಾದ ರಥಗಳಲ್ಲಿ ರಥಿಕಯೋಧರು ಹತರಾದ್ದರಿಂದ ಕುದುರೆಗಳು ಆ ರಥಗಳನ್ನು ಎಳೆಯುವಾಗ ಪಲಾಯನ ಮಾಡುತ್ತಿದ್ದ ಯೋಧರು ರಥಚಕ್ರಗಳಿಗೆ ಸಿಲುಕಿ ಚೂರ್ಣಿತರಾದರು. ಮತ್ತು ಮನುಷ್ಯ ಗಜ ರಥ ಅಶ್ವಸಮೂಹಗಳ ಮಧ್ಯದಲ್ಲಿ ಸಿಲುಕಿ ಅಪಘಾತದಿಂದಲೂ ಚೂರ್ಣಿತರಾದರು.
ಸಹೇಮಪಟ್ಟಾಃ ಪರಿಘಾಃ ಪರಶ್ವಧಾಃ
ಶಿತಾಶ್ಚ ಶೂಲಾ ಮುಸಲಾನಿ ಪಟ್ಟಿಶಾಃ |
ಪೇತುಶ್ಚ ಖಡ್ಗಾ ವಿಮಲಾ ವಿಕೋಶಾ
ಗದಾಶ್ಚ ಜಾಂಬೂನದಪಟ್ಟಬದ್ಧಾಃ ॥17॥
ಬಂಗಾರದ ಪಟ್ಟಿಯಿಂದ ಅಲಂಕೃತವಾದ ಪರಿಘ, ಪರಶು, ತೀಕ್ಷ್ಣವಾದ ಶೂಲ, ಮುಸಲ, ಪಟ್ಟಿಶ, ಒರೆಯಿಂದ ತೆಗೆದ ನಿರ್ಮಲವಾದ ಖಡ್ಗ, ಬಂಗಾರದ ಪಟ್ಟಿಯಿಂದ ಖಚಿತವಾದ ಗದೆಗಳು.
ಚಾಪಾನಿ ಜಾಂಬೂನದಭೂಷಣಾನಿ
ಶರಾಶ್ಚ ಕಾರ್ತಸ್ವರಚಿತ್ರಪುಂಖಾಃ |
ಋಷ್ಟ್ಯಶ್ಚ ಪೀತಾ ವಿಮಲಾ ವಿಕೋಶಾಃ
ಪ್ರಾಸಾಃ ಸದಂಡಾಃ ಕನಕಾವಭಾಸಾಃ ॥18॥
ಚಿನ್ನದಿಂದ ಅಲಂಕೃತವಾದ ಬಿಲ್ಲುಗಳು, ಚಿನ್ನದ ಸುಂದರ ಪುಕ್ಕವುಳ್ಳ ಬಾಣಗಳು, ಹಳದಿ ಬಣ್ಣದ ನಿರ್ಮಲವಾದ ಕೋಶದಿಂದ ಹೊರಗೆ ತೆಗೆದ ಋಷ್ಟಿಗಳು, ಪ್ರಾಸಗಳು, ಬಂಗಾರದ ಹೊಳೆವ ದಂಡಗಳು,
ಛತ್ರಾಣಿ ವಾಲವ್ಯಜನಾನಿ ಶಂಖಾಃ
ಸ್ರಜಶ್ಚ ಪುಷ್ಪೋತ್ತಮಹೇಮಚಿತ್ರಾಃ |
ಕುಥಾಃ ಪತಾಕಾಂಬರಭೂಷಣಾನಿ
ಕಿರೀಟಮಾಲಾ ಮುಕುಟಾಶ್ಚ ಶುಭ್ರಾಃ ॥19॥
ಛತ್ರಗಳು ಬಾಲವ್ಯಜನಗಳು ಶಂಖಗಳು, ಪುಷ್ಪ ಮತ್ತು ಉತ್ತಮ ಚಿನ್ನಗಳಿಂದ ಸುಂದರವಾದ ಮಾಲೆಗಳು ಆನೆಗಳ ಮೇಲಿನ ರತ್ನಗಂಬಳಿಗಳು, ಪತಾಕೆಗಳು ವಸ್ತ್ರ ಅಲಂಕಾರಗಳು ಕಿರೀಟ ಮಾಲೆಗಳು ಮತ್ತು ಶುಭ್ರವಾದ ಕಿರೀಟಗಳು.
ಪ್ರಕೀರ್ಣಕಾ ವಿಪ್ರಕೀರ್ಣಾಶ್ಚ ರಾಜನ್
ಪ್ರವಾಲಮುಕ್ತಾತರಲಾಶ್ಚ ಹಾರಾಃ |
ಆಪೀಡಕೇಯೂರವರಾಂಗದಾನಿ
ಗ್ರೈವೇಯನಿಷ್ಕಾಃ ಸಸುವರ್ಣಸೂತ್ರಾಃ ॥20॥
ಅಲ್ಲಲ್ಲಿ ಬಿದ್ದಿರುವ ಚಾಮರಗಳು ಹವಳ ಮುತ್ತುಗಳಿಂದ ಹೊಳೆವ ಹಾರಗಳು ಶಿರಸತ್ರಾಣ ಕೇಯೂರ ಉತ್ತಮವಾದ ಅಂಗದ ಹಾರ ಪದಕ ಚಿನ್ನದ ಸರಪಣಿ.
ಮಣ್ಯುತ್ತಮಾ ವಜ್ರಸುವರ್ಣಮುಕ್ತಾ
ರತ್ನಾನಿ ಚೋಚ್ಚಾವಚಮಂಗಲಾನಿ |
ಗಾತ್ರಾಣಿ ಚಾತ್ಯಂತಸುಖೋಚಿತಾನಿ
ಶಿರಾಂಸಿ ಚೇಂದುಪ್ರತಿಮಾನನಾನಿ ॥21॥
ಉತ್ತಮವಾದ ಮಣಿ ವಜ್ರ ಸುವರ್ಣ ಮುತ್ತುಗಳು ಮಂಗಳಕರವಾದ ಸಣ್ಣ ದೊಡ್ಡ ರತ್ನಗಳು ಅತ್ಯಂತ ಸುಖಭೋಗಯೋಗ್ಯವಾದ ಶರೀರಾವಯವಗಳು, ಚಂದ್ರನಂಥ ಮುಖದಿಂದ ಕೂಡಿದ ಶಿರಸ್ಸುಗಳು ರಣಾಂಗಣದಲ್ಲಿ ಹರಡಿವೆ.
ದೇಹಾಂಶ್ಚ ಭೋಗಾಂಶ್ಚ ಪರಿಚ್ಛದಾಂಶ್ಚ
ತ್ಯಕ್ತ್ವಾ ಮನೋಜ್ಞಾನಿ ಸುಖಾನಿ ಚಾಪಿ |
ಸ್ವಧರ್ಮನಿಷ್ಠಾಂ ಮಹತೀಮವಾಪ್ಯ
ಪ್ರಾಪ್ತವ್ಯಲೋಕಾನ್ ಯಶಸಾ ಸಮೀಯುಃ ॥22॥

ಸೈನಿಕರು ದೇಹ ಭೋಗಪದಾರ್ಥ ಉಪಕರಣ, ಮನೋಜ್ಞವಾದ ಸುಖಾನುಭವಗಳೆಲ್ಲವನ್ನೂ ಬಿಟ್ಟು ಶ್ರೇಷ್ಠವಾದ ಸ್ವಧರ್ಮನಿಷ್ಠೆಯನ್ನು ಹೊಂದಿ, ಕೀರ್ತಿಯಿಂದ ಹೊಂದಬೇಕಾಗಿರುವ ಪುಣ್ಯಲೋಕಗಳನ್ನು ಹೋಗಿ ಸೇರಿದರು.
ನಿವರ್ತ ದುರ್ಯೋಧನ ಯಾಂತು ಸೈನಿಕಾ
ವ್ರಜಸ್ವ ರಾಜನ್ ಶಿಬಿರಾಯ ಮಾನದ |
ದಿವಾಕರೋ ಹ್ಯೇಷ ವಿಲಂಬತೇ ಪ್ರಭೋ
ಪುನಸ್ತ್ವಮೇವಾತ್ರ ನರೇಂದ್ರ ಕಾರಣಮ್ ॥23॥
`ದುರ್ಯೋಧನ, ಯುದ್ಧ ಸಾಕು, ಸೈನಿಕರು ಹಿಂದಿರುಗಲಿ. ನೀನು ಶಿಬಿರಕ್ಕೆ ಹೋಗು. ಸೂರ್ಯ ಮುಳುಗುತ್ತಿದ್ದಾನೆ. ಕರ್ಣನ ಸಾವಿಗೆ ನೀನೇ ಕಾರಣ' ಎಂದು ಶಲ್ಯನು ನುಡಿದ.
ಇತ್ಯೇವಮುಕ್ತ್ವಾ ವಿರರಾಮ ಶಲ್ಯೋ
ದುರ್ಯೋಧನಃ ಶೋಕಪರೀತಚೇತಾಃ |
ಹಾ ಕರ್ಣ ಹಾ ಕರ್ಣ ಇತಿ ಬ್ರುವಾಣ
ಆರ್ತೋ ವಿಸಂಜ್ಞೋ ಭೃಶಮಶ್ರುನೇತ್ರಃ ॥24॥
ಹೀಗೆ ಹೇಳಿ ಶಲ್ಯ ಸುಮ್ಮನಾದ. ದುಯೋರ್ಧನ ಶೋಕಾವಿಷ್ಟಚಿತ್ತನಾಗಿ ಹಾ ಕರ್ಣ! ಹಾ ಕರ್ಣ! ಎನ್ನುತ್ತ ಕಳವಳಗೊಂಡು ಮೈಮರೆತು ಬಹಳ ಕಣ್ಣೀರು ಸುರಿಸಿದ.
ತಂ ದ್ರೋಣಪುತ್ರಪ್ರಮುಖಾ ನರೇಂದ್ರಾಃ
ಸರ್ವೇ ಸಮಾಶ್ವಾಸ್ಯ ಸಹ ಪ್ರಯಾಂತಿ |
ನಿರೀಕ್ಷಮಾಣಾ ಮುಹುರರ್ಜುನಸ್ಯ
ಧ್ವಜಂ ಮಹಾಂತಂ ಯಶಸಾ ಜ್ವಲಂತಮ್ ॥25॥
ಅಶ್ವತ್ಥಾಮ ಮುಂತಾದವರು ಮತ್ತು ಎಲ್ಲ ರಾಜರು ದುರ್ಯೋಧನನನ್ನು ಸಂತೈಸಿ ಪುನಃಪುನಃ ಕೀರ್ತಿಯಿಂದ ಜ್ವಲಿಸುವ ಅರ್ಜುನನ ಮಹಾಧ್ವಜವನ್ನು ನೋಡುತ್ತ ಜೊತೆಗೆ ನಡೆದರು.
ನರಾಶ್ವಮಾತಂಗಶರೀರಜೇನ
ರಕ್ತೇನ ಸಿಕ್ತಾ ರುಧಿರೇಣ ಭೂಮಿಃ |
ರಕ್ತಾಂಬರಸ್ರುಕ್ತಪನೀಯಯೋಗಾ-
ನ್ನಾರೀ ಪ್ರಕಾಶಾ ಇವ ಸರ್ವಗಮ್ಯಾ ॥26॥
ಮನುಷ್ಯರ ಕುದುರೆಗಳ ಆನೆಗಳ ಶರೀರದಿಂದ ಸುರಿದ ಕೆಂಪಾದ ರಕ್ತದಿಂದ ತೊಯ್ದ ರಣಭೂಮಿಯು, ಕೆಂಪು ಬಟ್ಟೆ, ಮಾಲೆ, ಬಂಗಾರದ ಆಭರಣಗಳು ಎಲ್ಲೆಡೆ ಹರಡಿರುವುದರಿಂದ, ಕೆಂಪುಬಟ್ಟೆ ಉಟ್ಟು ಮಾಲೆ ಆಭರಣಗಳನ್ನು ಧರಿಸುವ ವೇಶ್ಯೆಯಂತೆ ಕಂಡುಬಂದಿತು.
ಪ್ರಚ್ಛನ್ನರೂಪಾಂ ರುಧಿರೇಣ ರಾಜನ್
ರೌದ್ರೇ ಮುಹೂರ್ತೇಽತಿವಿರಾಜಮಾನಾಮ್ |
ನೈವಾವತಸ್ಥುಃ ಕುರವಃ ಸಮೀಕ್ಷ್ಯ
ಪ್ರವ್ರಾಜಿತಾ ನರದೇವಾ ಯಯುಸ್ತೇ ॥27॥
ರಣಭೂಮಿಯು ರಕ್ತದಿಂದ ನಿಜರೂಪವನ್ನು ಮರೆಮಾಡಿಕೊಂಡು ಸಾಯಂಕಾಲದ ರುದ್ರದೇವತಾಕವಾದ ಆ ಮುಹೂರ್ತದಲ್ಲಿ ಬಹಳ ವಿರಾಜ ಮಾನವಾಗಿದ್ದರೂ ಆ ದೃಶ್ಯವನ್ನು ನೋಡಿ ಸಹಿಸಲಾಗದೆ ಕೌರವರ ಕಡೆಯ ಆ ರಾಜರು ಹೊರಟುಹೋದರು, ಹೊರತು ಅಲ್ಲಿ ನಿಲ್ಲಲಿಲ್ಲ.
ವಧೇನ ಕರ್ಣಸ್ಯ ಸುದುಃಖಿತಾಸ್ತೇ
ಹಾ ಕರ್ಣ ಹಾ ಕರ್ಣ ಇತಿ ಬ್ರುವಾಣಾಃ |
ದ್ರುತಂ ಪ್ರಯಾತಾಃ ಶಿಬಿರಾಣಿ ರಾಜನ್
ದಿವಾಕರಂ ರಕ್ತಮವೇಕ್ಷಮಾಣಾಃ ॥28॥
ಕರ್ಣವಧದಿಂದ ಅವರು ಬಹಳ ದುಃಖಿತರಾಗಿದ್ದರು. ಹಾ ಕರ್ಣ ಹಾ ಕರ್ಣ ಎಂದು ಎನ್ನುತ್ತ, ಸೂರ್ಯನು ಕೆಂಪಾದುದನ್ನು ಕಂಡು, ಬೇಗನೆ ಶಿಬಿರಗಳಿಗೆ ಹೋದರು.
ಗಾಂಡೀವಮುಕ್ತೈಸ್ತು ಸುವರ್ಣಪುಂಖೈಃ
ಶಿಲಾಶಿತೈಃ ಶೋಣಿತದಿಗ್ಧವಾಜೈಃ |
ಶರೈಶ್ಚಿತಾಂಗೋ ಭುವಿ ಭಾತಿ ಕರ್ಣೋ
ಹತೋಽಪಿ ಸನ್ ಸೂರ್ಯ ಇವಾಂಶುಮಾಲೀ ॥29॥
ಅತ್ತ ಗಾಂಡೀವದಿಂದ ಹೊರಟ ಚಿನ್ನದ ಪುಕ್ಕಉಳ್ಳ, ಪುಕ್ಕದಲ್ಲಿ ರಕ್ತದಿಂದ ತೊಯ್ದ, ಮಸೆಗಲ್ಲಿಗೆ ತಿಕ್ಕಿ ತೀಕ್ಷ್ಣವಾದ ಬಾಣಗಳನ್ನು ಮೈತುಂಬ ಧರಿಸಿ ನೆಲದ ಮೇಲೊರಗಿ ಶೋಭಿಸುತ್ತಿದ್ದಾನೆ ಕರ್ಣ. ಹತನಾದರೂ ಮೈತುಂಬ ಕಿರಣಗಳನ್ನು ಹೊರುವ ಸೂರ್ಯನಂತೆ ಕಾಣುತ್ತಿದ್ದಾನೆ.
ಕರ್ಣಸ್ಯ ದೇಹಂ ರುಧಿರಾವಸಿಕ್ತಂ
ಭಕ್ತಾನುಕಂಪೀ ಭಗವಾನ್ ವಿವಸ್ವಾನ್ |
ಸ್ಪೃಷ್ಟ್ವಾಂಶುಭಿರ್ಲೋಹಿತರಕ್ತರೂಪಃ

ಸಿಷ್ಣಾಸುರಭ್ಯೇತಿ ಪರಂ ಸಮುದ್ರಮ್ ॥30॥
ಸೂರ್ಯಭಕ್ತನಾದ ಆ ಕರ್ಣನ ರಕ್ತಸಿಕ್ತವಾದ ಶವಶರೀರವನ್ನು ಭಕ್ತರಲ್ಲಿ ಅನುಕಂಪೆ ತೋರುವ ಭಗವಾನ್ ಸೂರ್ಯದೇವನು ಕಿರಣಗಳಿಂದ ಸ್ಪರ್ಶಿಸಿ, ಮೈಯೆಲ್ಲ ರಕ್ತವರ್ಣನಾಗಿ, ಸ್ನಾನ ಮಾಡಲು ಪಶ್ಚಿಮಸಮುದ್ರವನ್ನು ಹೋಗಿ ಸೇರಿದ.
ಮೃತನ ಶವವನ್ನು ಬಂಧುಮಿತ್ರರು ಸ್ಪರ್ಶಿಸಿ ಸ್ನಾನ ಮಾಡುವುದರಿಂದ ಮೃತನಿಗೆ ಸ್ನಾನಫಲ ದೊರಕುವುದು, ಸದ್ಗತಿಯಾಗುವುದು, ಕರ್ಣನ ರಕ್ತಸಿಕ್ತವಾದ ಶರೀರವನ್ನು ತನ್ನ ಎಲ್ಲಾ ಕಿರಣಗಳಿಂದ ತಬ್ಬಿಕೊಂಡಿದ್ದರಿಂದಲೇ ಸೂರ್ಯಬಿಂಬ ಕೆಂಪಾಯಿತೆಂದು ಉತ್ಪ್ರೇಕ್ಷೆ. ಪಶ್ಚಿಮ ಸಮುದ್ರವನ್ನು ಸೇರಿದ್ದು ಸ್ನಾನಕ್ಕಾಗಿ ಎಂದೂ, ಸ್ನಾನವೂ ಕೂಡ ಮೈಗೆ ಹತ್ತಿದ ನೆತ್ತರನ್ನು ತೊಳೆಯುವುದಕ್ಕಾಗಿ ಅಲ್ಲ, ಕರ್ಣನಿಗೆ ಸದ್ಗತಿಯಾಗಲೆಂಬ ಉದ್ದೇಶದಿಂದ ಎಂದೂ ಉತ್ಪ್ರೇಕ್ಷೆ. ವಸ್ತುತಃ ಇದು ವಸ್ತುಸ್ಥಿತಿಯೆ. ಇದನ್ನು ತಿಳಿದೇ ದೇವತೆಗಳೂ ಋಷಿಗಳೂ ಹಾಗೇ ಮನಸಿನಲ್ಲಿ ಆಲೋಚಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರೆಂದು ಇನ್ನೊಂದು ಉತ್ಪ್ರೇಕ್ಷೆಯನ್ನು ಮುಂದಿನ ಶ್ಲೋಕದಲ್ಲಿ ಬಣ್ಣಿಸುತ್ತಾರೆ ಶ್ರೀವ್ಯಾಸರು, `ಇತೀವ' ಎಂದು ಇವ ಶಬ್ದದಿಂದ.
ಇತೀವ ಸಂಚಿಂತ್ಯ ಸುರರ್ಷಿಸಂಘಾಃ
ಸಂಪ್ರಸ್ಥಿತಾ ಯಾಂತಿ ಯಥಾನಿಕೇತಮ್ |
ಸಂಚಿಂತಯಿತ್ವಾ ಚ ಜನಾ ವಿಸಸ್ರು-
ರ್ಯಥಾಸುಖಂ ಖಂ ಚ ಮಹೀತಳಂ ಚ ॥31॥
ಪ್ರಾಯಃ ಹೀಗೆ ಆಲೋಚಿಸಿ ದೇವಋಷಿಸಮೂಹಗಳು ಹೊರಟು ಅವರವರ ಸ್ಥಾನಗಳಿಗೆ ಹೋದವು. ಇತರ ಜನರೂ ಹೀಗೇ ಚಿಂತಿಸಿ ಯಥೇಚ್ಛವಾಗಿ ಆಕಾಶವನ್ನೂ ಭೂಮಿಯನ್ನೂ ಸೇರಿದರು.
ದೇವತೆಗಳೂ ಋಷಿಗಳೂ ಆಕಾಶವನ್ನು, ಮನುಷ್ಯರು ಭೂಮಿಯಲ್ಲೇ ಅವರವರ ಮನೆ, ಬಿಡಾರಗಳನ್ನೂ ಹೋಗಿ ಸೇರಿದರು.
ತದದ್ಭುತಂ ಪ್ರಾಣಭೃತಾಂ ಭಯಂಕರಂ
ನಿಶಾಮ್ಯ ಯುದ್ಧಂ ಕುರುವೀರಮುಖ್ಯಯೋಃ |
ಧನಂಜಯಸ್ಯಾಧಿರಥೇಶ್ಚ ವಿಸ್ಮಿತಾಃ
ಪ್ರಶಂಸಮಾನಾಃ ಪ್ರಯಯುಸ್ತದಾ ಜನಾಃ ॥32॥
ಕರ್ಣಾರ್ಜುನರ ಯುದ್ಧ ಅದ್ಭುತ. ಪ್ರಾಣಿಗಳಿಗೆ ಎಲ್ಲರಿಗೂ ಭಯಂಕರ. ಅದನ್ನು ನೋಡಿ ವಿಸ್ಮಿತರಾಗಿ ಪ್ರಶಂಸೆ ಮಾಡುತ್ತ ಜನರು ಹೊರಟುಹೋದರು.
ಶರೈಃ ಸಂಕೃತ್ತವರ್ಮಾಣಂ ವೀರಂ ವಿಶಸನೇ ಹತಮ್ |
ಗತಾಸುಮಪಿ ರಾಧೇಯಂ ನೈವ ಲಕ್ಷ್ಮೀರ್ವ್ಯಮುಂಚತ ॥33॥
ಬಾಣಗಳಿಂದ ಕರ್ಣನ ಕವಚ ಚೂರಾಯಿತು. ವಿನಾಶಕಾರಿಯಾದ ಯುದ್ಧದಲ್ಲಿ ಆ ವೀರನು ಹತನಾದ. ಪ್ರಾಣಗಳು ಹೊರಟುಹೋದರೂ ಅವನ ಕಾಂತಿ ಹೊರಟುಹೋಗಲಿಲ್ಲ.
ನಿಷ್ಟಪ್ತಹೇಮವಪುಷಂ ಜ್ವಲನಾರ್ಕಸಮತ್ವಿಷಮ್ |
ಜೀವಂತಮಿವ ತಂ ಶೂರಂ ಸರ್ವಭೂತಾನಿ ಮೇನಿರೇ ॥34॥
ಪುಟಕ್ಕಿಟ್ಟ ಚಿನ್ನದಂಥ ಶರೀರದವನು, ಉರಿವ ಸೂರ್ಯನಂಥ ತೇಜಸ್ಸುಳ್ಳವನು. ಇನ್ನೂ ಜೀವಂತನಿದ್ದಾನೆ ಎನ್ನುವಂತೆ ಆತನನ್ನು ಎಲ್ಲ ಜನರೂ ತಿಳಿದರು.
ಹತಸ್ಯಾಪಿ ಮಹಾರಾಜ ಸೂತಪುತ್ರಸ್ಯ ಸಂಯುಗೇ |
ವಿತ್ರೇಸುಃ ಸರ್ವಭೂತಾನಿ ಸಿಂಹಸ್ಯೇವೇತರೇ ಮೃಗಾಃ ॥35॥
ಮಹಾರಾಜ, ರಣದಲ್ಲಿ ಕರ್ಣನು ಹತನಾಗಿದ್ದರೂ ಅವನನ್ನು ಕಂಡವರು  ಸಿಂಹ ಸತ್ತುಬಿದ್ದರೂ ಬೇರೆ ಮೃಗಗಳು ಅದನ್ನು ನೋಡಿ ಭಯಪಡುವಂತೆ ಎಲ್ಲರೂ ಭಯಪಟ್ಟರು.
ನಾಭವದ್ ವಿಕೃತಂ ಕಿಂಚಿತ್ ಮೃತಸ್ಯಾಪಿ ಮಹಾತ್ಮನಃ |
ಚಾರುವೇಷಧರಂ ರಾಜಚ್ಚಾರುಮೌಲಿಶಿರೋಧರಮ್ |
ತನ್ಮುಖಂ ಸೂತಪುತ್ರಸ್ಯ ಪೂರ್ಣಚಂದ್ರಸಮದ್ಯುತಿ ॥36॥
ಆ ಮಹಾತ್ಮನು ಮೃತನಾದರೂ ಅವನಲ್ಲಿ ಏನೂ ವಿಕಾರ ಉಂಟಾಗಲಿಲ್ಲ. ಸುಂದರ ವೇಷಧಾರಿ, ಹೊಳೆಯುವ ಸುಂದರ ಶಿರಸ್ಸು ಕುತ್ತಿಗೆಗಳುಳ್ಳದ್ದು ಅವನ ಮುಖ. ಪೂರ್ಣಚಂದ್ರ ಸಮಾನವಾದ ಕಾಂತಿ ಉಳ್ಳದ್ದಾಗಿತ್ತು.
ನಾನಾಭರಣವಾನ್ ರಾಜನ್ ಮೃಷ್ಟಜಾಂಬೂನದಾಂಗದಃ |
ಹತೋ ವೈಕರ್ತನಃ ಶೇತೇ ಪಾದಪೋಽಂಕುರವಾನಿವ ॥37॥
ರಾಜನೆ, ಕರ್ಣನು ನಾನಾ ಆಭರಣಗಳನ್ನು ಧರಿಸಿದ್ದ, ಶುದ್ಧ ಸುವರ್ಣಮಯ ವಾದ ತೋಳ್ಬಳೆಯನ್ನು ಧರಿಸಿದ್ದ. ಹತನಾದರೂ ಅವನು ಚಿಗುರಿನಿಂದ ಯುಕ್ತವಾದ ವೃಕ್ಷದಂತೇ ಇದ್ದ.
ಕನಕೋತ್ತಮಸಂಕಾಶಃ ಪ್ರದೀಪ್ತ ಇವ ಪಾವಕಃ |
ಸ ಶಾಂತಃ ಪುರುಷವ್ಯಾಘ್ರಃ ಪಾರ್ಥಸಾಯಕವಾರಿಣಾ |
ಯಥಾ ಹಿ ಜ್ವಲನೋ ದೀಪ್ತೋ ಜಲಮಾಸಾದ್ಯ ಶಾಮ್ಯತಿ ॥38॥
ಬಂಗಾರದಂಥ ಉತ್ತಮ ಕಾಂತಿ ಉಳ್ಳವನು ಜ್ವಲಿಸುವ ಅಗ್ನಿಯಂತಿದ್ದ. ಉರಿವ ಬೆಂಕಿ ನೀರು ಬಿದ್ದರೆ ಆರಿಹೋಗುತ್ತದೆ. ಹಾಗೇ ಪುರುಷಶ್ರೇಷ್ಠನಾದ ಕರ್ಣನು ಅರ್ಜುನನ ಬಾಣವೆಂಬ ನೀರು ಬಿದ್ದಿದ್ದರಿಂದ ಆರಿಹೋದ.
ಕರ್ಣಾಗ್ನಿಃ ಸಮರೇ ತದ್ವತ್ ಪಾರ್ಥಮೇಘೇನ ಶಾಮಿತಃ |
ಪ್ರಗೃಹ್ಯ ಚ ಯಶೋ ದೀಪ್ತಂ ಸುಯುದ್ಧೇನಾತ್ಮನೋ ಭುವಿ ॥39॥

ಕರ್ಣನೆಂಬ ಅಗ್ನಿಯು ರಣದಲ್ಲಿ ಒಳ್ಳೆಯ ಯುದ್ಧದಿಂದ ಭೂಮಂಡಲದಲ್ಲಿ ಜ್ವಲಿಸುವ ಕೀರ್ತಿಯನ್ನು ಸಂಪಾದಿಸಿ ಅರ್ಜುನನೆಂಬ ಮೋಡದಿಂದ ಆರಿಹೋದ.
ವಿಸೃಜ್ಯ ಶರವರ್ಷಾಣಿ ಪ್ರತಾಪ್ಯ ಚ ದಿಶೋ ದಶ ॥40॥
ಸಪುತ್ರಃ ಪುರುಷವ್ಯಾಘ್ರಃ ಸಂಶಾಂತಃ ಪಾರ್ಥತೇಜಸಾ |
ಪ್ರತಾಪ್ಯ ಪಾಂಡವಾನ್ ರಾಜನ್ ಪಾಂಚಾಲಾಂಶ್ಚಾಸ್ತ್ರತೇಜಸಾ ॥41॥
ಕರ್ಣನು ಬಾಣಗಳ ಮಳೆಗರೆದು ಹತ್ತುದಿಕ್ಕುಗಳನ್ನು ಸುಟ್ಟು, ಅಸ್ತ್ರತೇಜಸ್ಸಿನಿಂದ ಪಾಂಡವ ಪಾಂಚಾಲ ಸೈನಿಕರನ್ನು ಸುಟ್ಟು ಅರ್ಜುನನ ತೇಜಸ್ಸಿನಿಂದ ಅವನು ತಾನೂ ತನ್ನ ಮಕ್ಕಳೊಂದಿಗೇ ಆರಿಹೋದ.
ದದಾನೀತ್ಯೇವ ಯೋಽವೋಚನ್ನ ನಾಸ್ತೀತ್ಯರ್ಥಿತೋಽರ್ಥಿಭಿಃ |
ಸದ್ಭಿಃ ಸದಾ ಸತ್ಪುರುಷಃ ಸ ಹತೋ ದ್ವೈರಥೇ ವೃಷಃ ॥42॥
ಬೇಡುವವರು ಬೇಡಿದಾಗ ಕೊಡುವೆನೆಂದೇ ಹೇಳಿದ ಹೊರತು ಇಲ್ಲ ಎನ್ನಲೇ ಇಲ್ಲ. ಸಜ್ಜನರೊಂದಿಗೆ ಸದಾ ಸಜ್ಜನನೇ ಆಗಿರುತ್ತಿದ್ದ. ದ್ವೈರಥಯುದ್ಧದಲ್ಲಿ ಮಡಿದ.
ಯಸ್ಯ ಬ್ರಾಹ್ಮಣಸಾತ್ಸರ್ವಮಾತ್ಮಾರ್ಥಂ ನ ಮಹಾತ್ಮನಃ |
ನಾದೇಯಂ ಬ್ರಾಹ್ಮಣೇಷ್ವಾಸೀದ್ ಯಸ್ಯ ಸ್ವಮಪಿ ಜೀವಿತಮ್ ॥43॥
ಸದಾ ನೃಣಾಂ ಪ್ರಿಯೋ ದಾತಾ ಪ್ರಿಯದಾನೋ ದಿವಂ ಗತಃ ॥44॥
ಯಾರ ಸರ್ವಸ್ವವು ಬ್ರಾಹ್ಮಣನಿಗಾಗಿ ಬ್ರಾಹ್ಮಣಾಧೀನವಿರುತ್ತಿತ್ತೆ ಹೊರತು ತನ್ನ ಅಧೀನ, ತನಗಾಗಿ ಎಂದೇನೂ ಇರಲಿಲ್ಲ. ಬ್ರಾಹ್ಮಣರಿಗೆ ಕೊಡಲಾಗದುದೆಂದು ಏನೂ ಇರಲಿಲ್ಲ. ತನ್ನ ಬದುಕು ಕೂಡ ಬ್ರಾಹ್ಮಣರಿಗೆ ಕೊಡಲಾಗದ್ದೆಂದಿರಲಿಲ್ಲ. ಸದಾ ಮಾನವರಿಗೆ ಪ್ರಿಯನಾದ ದಾನಿ ಆತ. ದಾನ ಅವನಿಗೆ ಪ್ರಿಯ. ಅವನೀಗ ದಿವಂಗತನಾದ.
ಸ ಪಾರ್ಥಾಸ್ತ್ರವಿನಿರ್ದಗ್ಧೋ ಗತಃ ಪರಮಿಕಾಂ ಗತಿಮ್ |
ಯಮಾಶ್ರಿತ್ಯಾಕರೋದ್ ವೈರಂ ಸುತಸ್ತೇ ಸ ಗತೋ ದಿವಮ್ ॥45॥
ಆದಾಯ ತವ ಪುತ್ರಾಣಾಂ ಜಯಾಶಾಂ ಶರ್ಮ ವರ್ಮ ಚ ॥46॥
ಅರ್ಜುನನ ಬಾಣದಿಂದ ಸುಟ್ಟು ಪರಗತಿಯನ್ನು ಹೊಂದಿದ. ರಾಜನೆ, ಯಾರಲ್ಲಿ ಭರವಸೆ ಇಟ್ಟು ನಿನ್ನ ಮಗ ದುರ್ಯೋಧನನು ಪಾಂಡವರಲ್ಲಿ ವೈರ ಮಾಡಿದನೋ ಆ ಕರ್ಣನು ಈಗ ನಿನ್ನ ಮಕ್ಕಳ ಜಯದಾಸೆಯನ್ನೂ ಸುಖವನ್ನೂ ರಕ್ಷಣೆಯನ್ನೂ ಸೆಳೆದುಕೊಂಡೇ ದಿವಂಗತನಾದ.
ಹತೇ ಸ್ಮ ಕರ್ಣೇ ಸರಿತೋ ನ ಸ್ರುವಂತಿ
ಜಗಾಮ ಚಾಸ್ತಂ ಕಲುಷೋ ದಿವಾಕರಃ |
ಗ್ರಹಶ್ಚ ತಿರ್ಯಗ್ ಜ್ವಲನಾರ್ಕವರ್ಣಃ
ಸೋಮಸ್ಯ ಪುತ್ರೋಽಭ್ಯುದಿಯಾಯ ರಾಜನ್ ॥47॥
ಕರ್ಣನು ಹತನಾದಾಗ ನದಿಗಳು ಹರಿಯುವುದನ್ನು ನಿಲ್ಲಿಸಿದುವು. ಸೂರ್ಯನು ಕಲುಷಿತನಾಗಿ ಅಸ್ತಮಿಸಿದ. ಸೂರ್ಯಅಗ್ನಿಗಳಿಗೆ ಸಮಾನ ವರ್ಣವುಳ್ಳ ಮಂಗಳಗ್ರಹವೂ ಚಂದ್ರಪುತ್ರನಾದ ಬುಧಗ್ರಹವೂ ಅಡ್ಡಲಾಗಿ ಉದಿಸಿದುವು.
ನಭಃ ಪಫಾಲೇವ ನನಾದ ಚೋರ್ವೀ
ವವುಶ್ಚ ವಾತಾಃ ಪರುಷಾಃ ಸುಘೋರಾಃ |
ದಿಶಃ ಸಧೂಮಾಶ್ಚ ಭೃಶಂ ಪ್ರಜಜ್ವಲು-
ರ್ಮಹಾರ್ಣವಾಶ್ಚುಕ್ಷುಭಿರೇ ಚ ಸಸ್ವನಾಃ ॥48॥
ಆಕಾಶವೇ ಸೀಳಿದಂತೆ, ಭೂಮಿಯೇ ಆರ್ತನಾದ ಗೈದಂತೆ ಆಯಿತು. ಗಾಳಿಯೂ ಕಠಿನವಾಗಿ ಬಲುಘೋರವಾಗಿ ಬೀಸಿತು. ದಿಕ್ಕುಗಳೂ ಬಹಳ ಹೊಗೆ, ಜ್ವಾಲೆಗಳಿಂದ ತುಂಬಿದುವು. ಮಹಾ ಸಮುದ್ರಗಳು ಕ್ಷೋಭೆಗೊಂಡು ಬಹಳ ಶಬ್ದ ಉಂಟುಮಾಡಿದುವು.
ಸಕಾನನಾಶ್ಚಾದ್ರಿವರಾಶ್ಚಕಂಪುಃ
ಪ್ರವಿವ್ಯಥುರ್ಭೂತಗಣಾಶ್ಚ ಮಾರಿಷ |
ಬೃಹಸ್ಪತಿಃ ಸಂಪರಿವಾರ್ಯ ರೋಹಿಣೀಂ
ಬಭೂವ ಚಂದ್ರಾರ್ಕಸಮಾನವರ್ಣಃ ॥49॥
ಅರಣ್ಯಸಹಿತವಾಗಿ ದೊಡ್ಡ ಬೆಟ್ಟಗಳೂ ಚಲಿಸಿದುವು. ಭೂತಗಣಗಳು ವ್ಯಥೆಗೊಂಡುವು. ಬೃಹಸ್ಪತಿಯು ರೋಹಿಣಿಯನ್ನು ಸುತ್ತಲೂ ಆವರಿಸಿ ಚಂದ್ರ ಸೂರ್ಯರಿಗೆ ಸಮಾನವಾದ ವರ್ಣದಿಂದ ಪ್ರಕಾಶಿಸಿದ.
ಹತೇ ಕರ್ಣೇ ನ ದಿಶೋ ವಿಜಜ್ವಲು-
ಸ್ತಮೋವೃತಾ ದ್ಯೌರ್ವಿಚಚಾಲ ಭೂಮಿಃ |
ಪಪಾತ ಚೋಲ್ಕಾ ಜ್ವಲನಪ್ರಕಾಶಾ
ನಿಶಾಚರಾಶ್ಚಾಪ್ಯಭವನ್ ಪ್ರಹೃಷ್ಟಾಃ ॥50॥
ಕರ್ಣನು ಹತನಾದಾಗ ದಿಕ್ಕುಗಳು ಪ್ರಕಾಶಿಸಲಿಲ್ಲ. ಅಂತರಿಕ್ಷವು ಅಂಧಕಾರದಿಂದ ಆವೃತವಾಯಿತು. ಭೂಮಿ ಕಂಪಿಸಿತು. ಉಲ್ಕೆ ಬೆಂಕಿಯಂತೆ ಜ್ವಲಿಸಿ ಬಿದ್ದಿತು. ನಿಶಾಚರರು ಹರ್ಷಗೊಂಡರು.
ಶಶಿಪ್ರಕಾಶಾನನಮರ್ಜುನೋ ಯದಾ
ಶರೇಣ ಕರ್ಣಸ್ಯ ಶಿರೋ ನ್ಯಪಾತಯತ್ |
ಅಥಾಂತರಿಕ್ಷೇ ಸಹಸೈವ ಶಬ್ದೋ

ಬಭೂವ ಹಾಹೇತಿ ಸುರೈರ್ವಿಮುಕ್ತಃ ॥51॥
ಚಂದ್ರನಂತೆ ಶೋಭಿಸುವ ಮುಖವುಳ್ಳ ಕರ್ಣನ ಶಿರಸ್ಸನ್ನು ಅರ್ಜುನನು ಬಾಣದಿಂದ ಬೀಳಿಸಿದಾಗ ಒಡನೆ ಅಂತರಿಕ್ಷದಲ್ಲಿ ದೇವತೆಗಳು ಮಾಡಿದ ಹಾಹಾ ಶಬ್ದ ಕೇಳಿಸಿತು.
ಸ ದೇವಗಂಧರ್ವಮನುಷ್ಯಪೂಜಿತಂ
ನಿಹತ್ಯ ಕರ್ಣಂ ರಿಪುಮಾಹವೇಽರ್ಜುನಃ |
ರರಾಜ ಪಾರ್ಥಃ ಪರಮೇಣ ತೇಜಸಾ
ವೃತ್ರಂ ನಿಹತ್ಯೇವ ಸಹಸ್ರಲೋಚನಃ ॥52॥
ದೇವ ಗಂಧರ್ವ ಮನುಷ್ಯರಿಂದ ಪೂಜಿತನಾದ ಶತ್ರುವಾದ ಕರ್ಣನನ್ನು ರಣದಲ್ಲಿ ಕೊಂದು, ವೃತ್ರನನ್ನು ಕೊಂದ ಇಂದ್ರನಂತೆ, ಅರ್ಜುನನು ಪರಮ ತೇಜಸ್ಸಿನಿಂದ ಮೆರೆದ.
ಕರ್ಣನು ದುರ್ಯೋಧನ ದುಃಶಾಸನ ಕರ್ಣ ಶಕುನಿಗಳೆಂಬ ದುಷ್ಟ ಚತುಷ್ಟಯದಲ್ಲಿ ಸೇರಿದವನೆಂದು ಪ್ರಸಿದ್ಧನಾದವನು.
ಪಾಂಡವರಲ್ಲಿ ಸದಾ ದ್ವೇಷಮಾಡಿ ದುರ್ಯೋಧನನಿಂದಲೂ ಅವರಲ್ಲಿ ದ್ವೇಷ ಮಾಡಿಸಿದವನು–
`ಯಮಾಶ್ರಿತ್ಯಾಕರೋದ್ ವೈರಂ ಸುತಸ್ತೇ ಸ ಗತೋ ದಿವಂ'
ಎಂದು (ಶ್ಲೋ.45)ರಲ್ಲಿ ಸಂಜಯನು ಧೃತರಾಷ್ಟ್ರನಿಗೆ ಹೇಳುವಂತೆ ದುರ್ಯೋಧನನಲ್ಲಿದ್ದ ಪಾಂಡವದ್ವೇಷಕ್ಕೆಲ್ಲ ಮೂಲಪ್ರೇರಕನೇ ಕರ್ಣನಾಗಿದ್ದ, ನಿಜ. ಆದರೆ ಅವನು ಭಗವಾನ್ ಸೂರ್ಯದೇವನ ಅವತಾರ. ಎಲ್ಲರ ಕಣ್ಣುಗಳಲ್ಲಿದ್ದು ಎಲ್ಲರಿಗೂ ದೃಷ್ಟಿಭಾಗ್ಯ ನೀಡುವ ತತ್ತ್ವದೇವತೆ ಅವನು. ಅವನಿಲ್ಲದಿದ್ದರೆ ಎಲ್ಲರೂ ಅಂಧಕಾರದಲ್ಲಿ ಮುಳುಗಿ ನಾಶವಾದಾರು.
ಜ್ಯೋತಿಷಿಗಳು ಸೂರ್ಯನನ್ನು ಪಾಪಗ್ರಹಗಳ ಪೈಕಿ ಸೇರಿದವನೆನ್ನುವ ಮಾತು ನಿಜವಾದ ಅರ್ಥದಲ್ಲಿ ಸರ್ವಥಾ ಅಸಮರ್ಥನೀಯ. ಗ್ರಹಗಳು ಎಲ್ಲರೂ ಪುಣ್ಯಾತ್ಮರಾದ ದೇವತೆಗಳು. ಯಾರೂ ಪಾಪಿಗಳಲ್ಲ. ಜನರ ಪೂರ್ವಜನ್ಮದ ಪುಣ್ಯಪಾಪಗಳನ್ನು ಅನುಸರಿಸಿ ಜನ್ಮಕುಂಡಲಿಯಲ್ಲಿ ಸಂಚರಿಸುತ್ತ ಸರಿಯಾದ ಕಾಲದಲ್ಲಿ ಸರಿಯಾದ ಸೂಚನೆ ನೀಡುತ್ತಾರೆ. ಪಾಪಗಳನ್ನು ಮೊದಲೇ ತಿಳಿಸಿ, ಶಾಂತಿ ಮಾಡಿಸಿ, ಕಳೆಯುತ್ತಾರೆ.
ಸಿಂಹಿಕಾ ಪುತ್ರನಾದ ಅತ್ಯಂತ ದುಷ್ಟನಾದ ರಾಹು ಗ್ರಹವೆಂದು ಪ್ರಸಿದ್ಧ ನಾದರೂ ಅವನು ವಸ್ತುತಃ ದೇವತೆಯಲ್ಲ, ದೈತ್ಯ. ದೈತ್ಯನು ಸೂರ್ಯನ ಪುತ್ರನೆನ್ನಲು ಏನೂ ಆಧಾರವಿಲ್ಲ. ಮತ್ತು ಅವನು ಗ್ರಹನೂ ಅಲ್ಲ. ಅವನು ಕೇವಲ ರಾಹುಶಿರಸ್ಸಿನಲ್ಲಿ ಆವಿಷ್ಟನಾಗಿ ಸೂರ್ಯಚಂದ್ರರ ಗ್ರಹಣ ಮಾತ್ರವನ್ನು ಮಾಡುತ್ತಾನೆ. ಬ್ರಹ್ಮಪುತ್ರನಾದ ರಾಹುಗ್ರಹವು ಅದೇ ಶಿರಸ್ಸಿನಲ್ಲಿರುವವನು, ಸರ್ವರಿಗೂ ಪೂಜ್ಯನಾದ ದೇವತೆಯೆ.
ಸೂರ್ಯನ ಪುತ್ರರು ಯಮ ಮತ್ತು ಶನಿ. ಇಬ್ಬರೂ ದೇವೋತ್ತಮರು. ಹಾಗೇ ಸಾಕ್ಷಾತ್ ಸೂರ್ಯಾಂಶ ಸಂಭೂತನಾದ ಕರ್ಣನೂ ದೇವತಾತ್ಮನೂ ಮಹಾತ್ಮನೂ ಆಗಿದ್ದ. ಹಿಂದೆ ಆತನು ಸುಗ್ರೀವಾವತಾರದಲ್ಲಿ ವಾಲಿಯನ್ನು ಶ್ರೀರಾಮನಿಂದ ಕೊಲ್ಲಿಸಿದ್ದ. ಆ ದೋಷದಿಂದ, ಈ ಕರ್ಣಾವತಾರದಲ್ಲಿ ಅಸುರಾವೇಶ ಉಂಟಾಯಿತು. ಮನುಷ್ಯರ ಬುದ್ಧಿ ಪಿಶಾಚಾವೇಶದಿಂದ ಕೆಡುವಂತೆ ಕರ್ಣನ ಬುದ್ಧಿಯೂ ಆಗಾಗ ಅಸುರಾವೇಶದಿಂದ ಕೆಡುತ್ತಲೇ ಇದ್ದುದರಿಂದ ಆತ ದುರ್ಯೋಧನನ ಸಂಗ ಮಾಡಿದ.
ಆದರೂ ಸುಗ್ರೀವನಾಗಿ ಅವನು ಶ್ರೀರಾಮನ ಸೇವೆಯನ್ನು ಬಹಳ ಮಾಡಿದ್ದರಿಂದ, ಕರ್ಣನಾಗಿಯೂ ಶ್ರೀಪರಶುರಾಮನ ಸೇವೆ ಮಾಡಿದ್ದರಿಂದ ಆ ಪುಣ್ಯ ಅವನ ಯೋಗ್ಯತೆಗಿಂತ ಹೆಚ್ಚಿನದಾಗಿದ್ದರಿಂದ ಶ್ರೀಕೃಷ್ಣ ಅದನ್ನು ಪಾಂಡವ ದ್ವೇಷದ ಮೂಲಕ ಕಳೆದು, ಅನುಗ್ರಹಿಸಿದ್ದಾನೆ. ವಸ್ತುತಃ ಕೌರವಸ್ನೇಹ ಮತ್ತು ಪಾಂಡವದ್ವೇಷ ಪರಶುರಾಮನಿಗೆ ಇಷ್ಟವಾಗಿತ್ತು. ಅದಕೆಂದೇ ಎಲ್ಲ ವಿದ್ಯೆಗಳನ್ನು ಪ್ರೀತಿಯಿಂದ ಉಪದೇಶಿಸಿದ್ದ. ಹೀಗೆ ಅಸುರಾವೇಶವೂ ಕರ್ಣನಿಗೆ ಹಿತವನ್ನೇ ಉಂಟುಮಾಡಿತು. ಅವನಲ್ಲಿ ಹರಿಯ ವಿಶೇಷ ಸನ್ನಿಧಾನವಿದ್ದಿದ್ದರಿಂದ ರಣರಂಗದಲ್ಲಿ ಅರ್ಜುನನನ್ನು ಮೀರಿಸಿ ಪರಾಕ್ರಮ ತೋರಿದ. ರಥಚಕ್ರವನ್ನು ಎತ್ತುವ ಪ್ರಯತ್ನದಲ್ಲಿ ಭೂಮಿಯನ್ನೇ ನಾಲ್ಕು ಅಂಗುಲದಷ್ಟು ಮೇಲಕ್ಕೆ ಎತ್ತಿದ!
ಅರ್ಜುನನಿಂದ ತನಗೆ ಪವಿತ್ರಕುರುಕ್ಷೇತ್ರದ ರಣರಂಗದಲ್ಲಿ ಮರಣ ಬರಬೇಕು, ಆ ರಣಯಜ್ಞದಲ್ಲಿ ಪಶುವಾಗಿ ತಾನು ಆಹುತಿಯಾಗಬೇಕು. ಅದರಿಂದಲೇ ತನಗೆ ಕೀರ್ತಿ ಮತ್ತು ಸ್ವರ್ಗ ಪ್ರಾಪ್ತಿ ಎಂದು ಬಗೆದು, ಪಾಂಡವ ದ್ವೇಷವನ್ನು ಸ್ವತಃ ಸೂರ್ಯದೇವನೇ ಅಪೇಕ್ಷಿಸಿದ್ದನೆಂದರೂ ತಪ್ಪಿಲ್ಲ. ಅದರಲ್ಲಿಯೂ ಪಾಂಡವದ್ವೇಷದ ಕಿಚ್ಚಿನಿಂದ ದುರ್ಯೋಧನನ ಸರ್ವನಾಶ ಮಾಡುವುದು ಅವನ ಮುಖ್ಯ ಉದ್ದೇಶವಾಗಿತ್ತು.
ಮೂಲರೂಪದಲ್ಲಿ ತನ್ನ ಮಗನಾದ ಯಮನ ಅವತಾರ ಧರ್ಮರಾಜನೇ ರಾಜ್ಯವಾಳಲಿ, ತಾನು ಕುಂತಿಯ ಹಿರಿಯ ಮಗನೆಂದು ಹೇಳಿಕೊಂಡು ರಾಜನಾಗುವುದು ಬೇಡ, ಅದು ತನಗೆ ಇಷ್ಟವಿಲ್ಲವೆಂದು ಶ್ರೀಕೃಷ್ಣನ ಮುಂದೆ ಅವನು ತಾನೇ ಹೇಳಿದ್ದುಂಟು. ಅರ್ಜುನನನ್ನು ತಾನು ಕೊಲ್ಲುವೆನೆಂದು ಪದೇಪದೇ ಅವನು ಹೇಳುತ್ತಿದ್ದುದು ದುರ್ಯೋಧನನ ಪ್ರೀತಿಗಾಗಿ. ಆ ಮೂಲಕ ಪಾಂಡವಕೌರವ ಸಂಘರ್ಷ ಉಂಟಾಗುವುದಕ್ಕಾಗಿ. ಅದಕ್ಕಾಗಿಯೇ ಶ್ರೀಪರಶುರಾಮನು ಅವನಿಗೆ ಅಸ್ತ್ರವಿದ್ಯೆಯನ್ನು ಅನುಗ್ರಹಿಸಿದ್ದ ಮತ್ತು ಇದು, ಕ್ಷತ್ರಿಯಸ್ವಭಾವಸಹಜವೂ ಹೌದು, ಅಸುರಾವೇಶವೂ ಹೌದು.
ಹೀಗೆ ದೇವೋತ್ತಮನಾದ ಕರ್ಣನ ಅವಸಾನವಾದಾಗ ದೇವತೆಗಳು ಹಾಹಾಕಾರ ಮಾಡಿದ್ದು ಸಹಜವೆ. ಭೂಮಿಅಂತರಿಕ್ಷ ಮುಂತಾದವುಗಳು ಕ್ಷೋಭೆಗೊಂಡುದುದೂ ಸಹಜವೆ.
ತತೋ ರಥೇನಾಂಬುದವೃಂದನಾದಿನಾ
ಶರನ್ನಭೋಮಧ್ಯಗಭಾಸ್ಕರತ್ವಿಷಾ |
ಪತಾಕಿನಾ ಭೀಮನಿನಾದಕೇತುನಾ
ಹಿಮೇಂದುಶಂಖಸ್ಫಟಿಕಾವಭಾಸಿನಾ |
ಸುವರ್ಣಮುಕ್ತಾಮಣಿವಜ್ರವಿದ್ರುಮೈ-
ರಲಂಕೃತೇನಾಪ್ರತಿಮಾನರಂಹಸಾ ॥53॥

ಕೃಷ್ಣಾರ್ಜುನರು ಇತ್ತ ರಣರಂಗದಲ್ಲಿ ರಥದಲ್ಲಿ ಶೋಭಿಸಿದರು. ಅವರ ರಥನಾದವು ಮೋಡಸಮೂಹಗಳ ನಾದದಂತಿತ್ತು. ರಥದ ಪ್ರಕಾಶ ಶರತ್ಕಾಲದ ಆಕಾಶ ಮಧ್ಯದಲ್ಲಿ ಬೆಳಗುವ ಸೂರ್ಯನಂತಿತ್ತು. ಪತಾಕೆಗಳಿಂದ ಶೋಭಿಸುವ ಆ ರಥದ ಧ್ವಜವು ವಾನರಧ್ವಜ, ಭಯಂಕರ ನಾದ ಮಾಡುತ್ತಿತ್ತು. ರಥದ ಬಣ್ಣ ಹಿಮ ಚಂದ್ರ ಶಂಖ ಸ್ಫಟಿಕಗಳ ಬಣ್ಣವಾಗಿತ್ತು. ಬಂಗಾರ ಮುತ್ತುರತ್ನ ವಜ್ರ ಹವಳಗಳಿಂದ ಅಲಂಕೃತವಾಗಿದ್ದು ಅಪ್ರತಿಮ ವೇಗಶಾಲಿಯಾಗಿತ್ತು ಆ ರಥ.

ನರೋತ್ತಮೌ ಪಾಂಡವಕೇಶಿಮರ್ದನಾ-
ವುದಾಹಿತಾವಗ್ನಿದಿವಾಕರೋಪಮೌ |
ರಣಾಜಿರೇ ವೀತಭಯೌ ವಿರೇಜತುಃ
ಸಮಾನಯಾನಾವಿವ ವಿಷ್ಣುವಾಸವೌ ॥54॥

ರಣರಂಗದಲ್ಲಿ ಉತ್ತಮರಾದ ಅಗ್ನಿಸೂರ್ಯರಂಥ ಪುರುಷಶ್ರೇಷ್ಠರಾದ ಅರ್ಜುನಕೃಷ್ಣರು ನಿರ್ಭೀತರಾಗಿ, ಒಂದೇ ರಥದಲ್ಲಿ ಕುಳಿತ ವಿಷ್ಣು ಇಂದ್ರರಂತೆ, ಜೊತೆಯಾಗಿ ಕುಳಿತು ಶೋಭಿಸಿದರು.

ತತೋ ಧನುರ್ಜ್ಯಾತಳನೇಮಿನಿಸ್ವನೈಃ
ಪ್ರಸಹ್ಯ ಕೃತ್ವಾ ಚ ರಿಪೂನ್ ಹತಪ್ರಭಾನ್ |
ಸಂಸಾಧಯಿತ್ವೈವ ಕುರೂನ್ ಶರೌಘೈಃ
ಕಪಿಧ್ವಜಃ ಪಕ್ಷಿವರಧ್ವಜಶ್ಚ |
ಪ್ರಸಹ್ಯ ಶಂಖೌ ಧಮತುಃ ಸುಘೋಷೌ
ಮನಾಂಸ್ಯರೀಣಾಮವಸಾದಯಂತೌ ॥55॥

ಬಿಲ್ಲಿನ ಹೆದೆ ಕರತಳ ಚಕ್ರಧ್ವನಿಗಳಿಂದ ಶತ್ರುಗಳನ್ನು ಬಲವಾಗಿ ನಿಷ್ಪ್ರಭರನ್ನಾಗಿಸಿ, ಬಾಣಪ್ರವಾಹಗಳಿಂದ ಕೌರವ ಸೈನಿಕರನ್ನು ನಾಶಗೊಳಿಸಿ ಅರ್ಜುನ ಮತ್ತು ಕೃಷ್ಣರು ಶತ್ರುಗಳ ಮನಸ್ಸಿನಲ್ಲಿ ವಿಷಾದ ಉಂಟುಮಾಡುತ್ತ, ಬಲವಾಗಿ ಒಳ್ಳೆಯ ಧ್ವನಿಯುಳ್ಳ ಶಂಖಗಳನ್ನು ಊದಿದರು.

ಸುವರ್ಣಜಾಲಾವತತೌ ಮಹಾಸ್ವನೌ
ಹಿಮಾವದಾತೌ ಪರಿಗೃಹ್ಯ ಪಾಣಿಭಿಃ |
ಚುಚುಂಬತುಃ ಶಂಖವರೌ ನೃಣಾಂ ವರೌ
ವರಾನನಾಭ್ಯಾಂ ಯುಗಪಚ್ಚ ದಧ್ಮತುಃ ॥56॥

ಬಂಗಾರದ ಮಾಲೆಗಳಿಂದ ತುಂಬಿದ, ಮಹಾಧ್ವನಿಯುಳ್ಳ, ಹಿಮದಂತೆ ಬಿಳಿಯಾದ ಶ್ರೇಷ್ಠ ಶಂಖಗಳನ್ನು ಕೈಗಳಿಂದ ಹಿಡಿದು, ಶ್ರೇಷ್ಠಪುರುಷರು ಶ್ರೇಷ್ಠ ಮುಖಗಳಿಂದ ಚುಂಬಿಸಿ ಏಕಕಾಲದಲ್ಲಿ ಊದಿದರು.

ಪಾಂಚಜನ್ಯಸ್ಯ ನಿರ್ಘೋಷೋ ದೇವದತ್ತಸ್ಯ ಚೋಭಯೋಃ |
ಪೃಥಿವೀಮಂತರಿಕ್ಷಂ ಚ ದ್ಯಾಮಪಶ್ಚಾಪ್ಯಪೂರಯತ್ ॥57॥

ಪಾಂಚಜನ್ಯ ಹಾಗೂ ದೇವದತ್ತ ಎರಡೂ ಶಂಖಗಳ ಘೋಷಗಳು ಪೃಥಿವಿ ಅಂತರಿಕ್ಷಸ್ವರ್ಗಸಮುದ್ರಜಲಗಳನ್ನು ತುಂಬಿಕೊಂಡುವು.

ತೌ ಶಂಖಶಬ್ದೇನ ನಿನಾದಯಂತೌ
ವನಾನಿ ಶೈಲಾನ್ ಸರಿತೋ ದಿಶಶ್ಚ |
ವಿತ್ರಾಸಯಂತೌ ತವ ಪುತ್ರಸೇನಾಂ
ಯುಧಿಷ್ಠಿರಂ ನಂದಯತಃ ಸ್ಮ ವೀರೌ ॥58॥

ವೀರರಾದ ಆ ಕೃಷ್ಣಾರ್ಜುನರು ಶಂಖಶಬ್ದದಿಂದ ವನ ಶೈಲ ನದಿ ದಿಕ್ಕುಗಳನ್ನೆಲ್ಲಾ ಪ್ರತಿಧ್ವನಿಸುವಂತೆ ಮಾಡುತ್ತ, ನಿನ್ನ ಮಕ್ಕಳ ಸೈನ್ಯವನ್ನು ಭಯಪಡಿಸುತ್ತ ಯುಧಿಷ್ಠಿರನನ್ನು ಸಂತೋಷಗೊಳಿಸಿದರು.

ತತಃ ಪ್ರಯಾತಾಃ ಕುರವೋ ಜವೇನ
ಶ್ರುತ್ವೈವ ಶಂಖಸ್ವನಮೀರ್ಯಮಾಣಮ್ |
ವಿಹಾಯ ಮದ್ರಾಧಿಪತಿಂ ಪತಿಂ ಚ
ದುರ್ಯೋಧನಂ ಭಾರತ ಭಾರತಾನಾಮ್ ॥59॥

ಕೌರವರ ಸೈನಿಕರು, ಕೃಷ್ಣಾರ್ಜುನರ ಶಂಖನಾದ ಉಂಟಾಗುತ್ತಿದ್ದಂತೆ, ಅದನ್ನು ಕೇಳಿದೊಡನೆ, ಕುರುಸೈನ್ಯದ ಅಧಿಪತಿಯಾದ ದುರ್ಯೋಧನನನ್ನೂ ಮದ್ರರಾಜ ಶಲ್ಯನನ್ನೂ ಬಿಟ್ಟು ಪಲಾಯನ ಮಾಡಿದರು.

ಮಹಾಹವೇ ತಂ ಬಹು ಶೋಭಮಾನಂ
ಧನಂಜಯಂ ಭೂತಗಣಾಃ ಸಮೇತಾಃ |
ತದಾನ್ವಮೋದಂತ ಜನಾರ್ದನಂ ಚ
ಪ್ರಭಾಕರಾವಭ್ಯುದಿತೌ ಯಥೈವ ॥60॥

ಮಹಾರಣದಲ್ಲಿ ಬಹಳ ಶೋಭಿಸುತ್ತಿರುವ, ಉದಿಸಿದ ಎರಡು ಸೂರ್ಯರಂತೆ ಕಂಡುಬರುವ ಅರ್ಜುನನನ್ನೂ ಕೃಷ್ಣನನ್ನೂ ಜನಸಮೂಹಗಳು ಸೇರಿ ಅಭಿನಂದಿಸಿದವು.

ಸಮಾಚಿತೌ ಕರ್ಣಶರೈಃ ಪರಂತಪಾ-
ವುಭೌ ವ್ಯಭಾತಾಂ ಸಮರೇಽಚ್ಯುತಾರ್ಜುನೌ |
ತಮೋ ನಿಹತ್ಯಾಭ್ಯುದಿತೌ ಯಥಾಮಲೌ
ಶಶಾಂಕಸೂರ್ಯಾವಿವ ರಶ್ಮಿಮಾಲಿನೌ ॥61॥

ಶತ್ರುತಾಪಕರಾದ ಕೃಷ್ಣಾರ್ಜುನರಿಬ್ಬರು ಸಮರದಲ್ಲಿ ಕರ್ಣಬಾಣಗಳಿಂದ ತುಂಬಿಕೊಂಡು, ತಮಸ್ಸನ್ನು ನಾಶಮಾಡಿ ಉದಿಸಿದ ಕಿರಣಸಮೂಹವುಳ್ಳ ನಿರ್ಮಲ ಚಂದ್ರಸೂರ್ಯರಂತೆ ಬೆಳಗಿದರು.
ವಿಹಾಯ ತಾನ್ ಬಾಣಗಣಾನಥಾಗತೌ
ಸುಹೃದ್ವೃತಾವಪ್ರತಿಮಾನವಿಕ್ರಮೌ |
ಸುಖಂ ಪ್ರವಿಷ್ಟೌ ಶಿಬಿರಂ ಸ್ವಮೀಶ್ವರೌ
ಸದಸ್ಯಹೂತಾವಿವ ವಾಸವಾಚ್ಯುತೌ ॥62॥
ಅಪ್ರತಿಮ ಪರಾಕ್ರಮಿಗಳಾದ, ಸರ್ವಸಮರ್ಥರಾದ ಕೃಷ್ಣಾರ್ಜುನರು ತಮ್ಮ ಶರೀರದಲ್ಲಿ ನೆಟ್ಟ ಕರ್ಣನ ಬಾಣಗಳನ್ನು ವೈದ್ಯರಿಂದ ಹೊರತೆಗೆಸಿ, ಬಂಧುಮಿತ್ರರಿಂದೊಡಗೂಡಿ, ಯಜ್ಞಗಳಲ್ಲಿ ಸದಸ್ಯರಿಂದ ಆಹೂತರಾದ ಇಂದ್ರ ಉಪೇಂದ್ರರಂತೆ, ಸುಖವಾಗಿ ತಮ್ಮ ಬಿಡಾರಗಳನ್ನು ಪ್ರವೇಶಿಸಿದರು.
ಸದೇವಗಂಧರ್ವಮನುಷ್ಯಚಾರಣೈ-
ರ್ಮಹರ್ಷಿಭಿರ್ಯಕ್ಷಮಹೋರಗೈರಪಿ |
ಜಯಾಭಿವೃದ್ಧ್ಯಾ ಪರಯಾಭಿಪೂಜಿತೌ
ನಿಹತ್ಯ ಕರ್ಣಂ ಪರಮಾಹವೇ ತದಾ ॥63॥
ಕೃಷ್ಣಾರ್ಜುನರು ಮಹಾರಣದಲ್ಲಿ ಕರ್ಣವಧೆ ಮಾಡಿ, ದೇವ ಗಂಧರ್ವ ಮನುಷ್ಯ ಚಾರಣ ಮಹರ್ಷಿ ಯಕ್ಷ ಮಹಾನಾಗರಿಂದ `ಜಯವಾಗಲಿ' ಎಂದು ಉತ್ತಮ ಜಯಾಭಿವೃದ್ಧ್ಯಾಶಂಸನದಿಂದ ಪೂಜಿತರಾದರು.
ಯಥಾನುರೂಪಂ ಪ್ರತಿಪೂಜ್ಯ ತಾನಥ
ಪ್ರಶಸ್ಯಮಾನಾವತುಲೈಶ್ಚ ಕರ್ಮಭಿಃ |
ನನಂದತುಸ್ತೌ ಸಸುಹೃದ್ಗಣೌ ತದಾ
ಬಲಂ ನಿಯಮ್ಯೇವ ಸುರೇಶಕೇಶವೌ ॥64॥
ಇದಕ್ಕೆ ಪ್ರತಿಯಾಗಿ ಕೃಷ್ಣಾರ್ಜುನರು ಎಲ್ಲರನ್ನೂ ಯಥಾಯೋಗ್ಯವಾಗಿ ಗೌರವಿಸಿ, ಅನುಪಮ ಕರ್ಮಗಳಿಂದ ಪ್ರಶಂಸಾಭಾಜನರಾಗಿ, ಬಲಾಸುರನನ್ನು ನಿಗ್ರಹಿಸಿದ ಇಂದ್ರಉಪೇಂದ್ರರು ಆನಂದಿತರಾದಂತೆ, ಬಂಧುಮಿತ್ರರೊಂದಿಗೆ ಆನಂದಿಸಿದರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಏಕನವತಿತಮೋಽಧ್ಯಾಯಃ ॥91॥

ತೊಂಬತ್ತೆರಡನೆಯ ಅಧ್ಯಾಯ
ಕುರುಸೈನ್ಯದ ಶಿಬಿರ ಪ್ರವೇಶ.
ಸಂಜಯಃ
ಹತೇ ವೈಕರ್ತನೇ ಕರ್ಣೇ ಕುರವೋ ಭಯಪೀಡಿತಾಃ |
ವೀಕ್ಷಮಾಣಾ ದಿಶಃ ಸರ್ವಾಃ ಪಲಾಯಂತೇ ಸ್ಮ ಸರ್ವತಃ ॥1॥
ಸಂಜಯ ನುಡಿದ– ಕರ್ಣನು ಹತನಾದಾಗ ಕೌರವರ ಸೈನಿಕರು ಎಲ್ಲರೂ ಭಯಪೀಡಿತರಾಗಿ ಎಲ್ಲ ದಿಕ್ಕುಗಳನ್ನೂ ನೋಡುತ್ತ ಪಲಾಯನಗೈದರು.
ವೀರಂ ತು ನಿಹತಂ ಶ್ರುತ್ವಾ ಶತ್ರುಭಿಃ ಪರಮಾಹವೇ |
ಸರ್ವೇ ದಿಶೋಽನ್ವಕೀರ್ಯಂತ ತಾವಕಾ ಭಯಮೋಹಿತಾಃ ॥2॥
ವೀರಕರ್ಣನು ಮಹಾರಣದಲ್ಲಿ ಶತ್ರುಗಳಿಂದ ಹತನಾದನೆಂದು ಕೇಳಿಯೇ ನಿನ್ನವರನೇಕರು ಭಯದಿಂದ ದಿಗ್ಭ್ರಾಂತರಾಗಿ ಎಲ್ಲ ದಿಕ್ಕುಗಳಿಗೆ ಓಡಿದರು.
ತತೋಽವಹಾರಂ ಚಕ್ರುಸ್ತೇ ರಾಜನ್ ಯೋಧಾಃ ಸಮಂತತಃ |
ವಾರ್ಯಮಾಣಾ ಭಯೋದ್ವಿಗ್ನಾಸ್ತವ ಪುತ್ರೇಣ ಭಾರತ ॥3॥
ರಾಜನೆ, ನಿನ್ನ ಮಗನು ತಡೆಯುತ್ತಿದ್ದರೂ ಭಯದಿಂದ ಉದ್ವಿಗ್ನರಾದ ಆ ಯೋಧರು ಎಲ್ಲೆಡೆ ರಣರಂಗದಿಂದ ಹಿಂದಿರುಗಿದರು.
ತೇಷಾಂ ತು ಮತಮಾಜ್ಞಾಯ ಪುತ್ರಸ್ತೇ ಭರತರ್ಷಭ |
ಅವಹಾರಂ ತತಶ್ಚಕ್ರೇ ಶಲ್ಯಸ್ಯಾನುಮತೇ ನೃಪ ॥4॥
ಅವರ ಅಭಿಪ್ರಾಯವನ್ನು ತಿಳಿದು ನಿನ್ನ ಮಗನೂ ಶಲ್ಯನ ಅನುಮತಿಯಿಂದ ರಣರಂಗದಿಂದ ಹಿಂತಿರುಗಿದ.
ಯೋಧೈರ್ಮಹಾರಥೈಃ ಸಾರ್ಧಂ ವೃತೋ ಭಾರತ ತಾವಕೈಃ |
ಹತಾವಶೇಷೈಸ್ತ್ವರಿತಃ ಶಿಬಿರಾಯೈವ ದುದ್ರುವೇ ॥5॥
ಮಹಾರಥರಾದ ಯೋಧರೊದಿಗೆ ಅಳಿದುಳಿದ ನಿನ್ನ ಕಡೆಯ ಸೈನಿಕರಿಂದ ಪರಿವೃತನಾಗಿ ನಿನ್ನ ಮಗನು ಶಿಬಿರಕ್ಕೆ ಬೇಗನೆ ಧಾವಿಸಿ ಬಂದ.
ಗಾಂಧಾರಾಣಾಂ ಸಹಸ್ರೇಣ ಶಕುನಿಃ ಪರಿವಾರಿತಃ |
ಹತಮಾಧಿರಥಿಂ ದೃಷ್ಟ್ವಾ ಶಿಬಿರಾಯೈವ ದುದ್ರುವೇ ॥6॥
ಗಾಂಧಾರದ ಸಾವಿರ ಸೈನಿಕರಿಂದ ಪರಿವೃತನಾದ ಶಕುನಿ, ಕರ್ಣನು ಹತನಾದುದನ್ನು ನೋಡಿ ಶಿಬಿರಕ್ಕೇ ಧಾವಿಸಿ ಬಂದ.
ಕೃಪಃ ಶಾರದ್ವತೋ ರಾಜನ್ನಾಗಾನೀಕೇನ ಸಂವೃತಃ |
ಮಹತಾ ಮೇಘಕಲ್ಪೇನ ಶಿಬಿರಾಯೈವ ದುದ್ರುವೇ ॥7॥

ಕೃಪನೂ ಮೋಡಕ್ಕೆ ಹೋಲುವಂಥ ದೊಡ್ಡ ಗಜಸೈನ್ಯದಿಂದ ಪರಿವೃತನಾಗಿ ಶಿಬಿರಕ್ಕೆ ಧಾವಿಸಿ ಬಂದ.
ಅಶ್ವತ್ಥಾಮಾ ತತಃ ಶೂರೋ ವಿನಿಃಶ್ವಸ್ಯ ಮುಹುರ್ಮುಹುಃ |
ಪಾಂಡವಾನಾಂ ಜಯಂ ದೃಷ್ಟ್ವಾ ಶಿಬಿರಾಯೈವ ದುದ್ರುವೇ ॥8॥
ಶೂರನಾದ ಅಶ್ವತ್ಥಾಮನೂ ಪಾಂಡವರ ಜಯವನ್ನು ಕಂಡು ಪುನಃ ಪುನಃ ನಿಟ್ಟುಸಿರಿಟ್ಟು ಶಿಬಿರಕ್ಕೆ ಧಾವಿಸಿಬಂದ.
ಸಂಶಪ್ತಕಾವಶೇಷೇಣ ಬಲೇನ ಮಹತಾ ವೃತಃ |
ಸುಶರ್ಮಾಪಿ ಯಯೌ ರಾಜನ್ ವೀಕ್ಷಮಾಣೋ ಭಯಾತುರಾನ್॥9॥
ಸಂಶಪ್ತಕರಲ್ಲಿ ಅಳಿದುಳಿದ ದೊಡ್ಡ ಸೈನ್ಯದಿಂದ ಪರಿವೃತನಾಗಿ, ಭಯದಿಂದ ಕಳವಳಗೊಂಡ ಸೈನಿಕರನ್ನು ನೋಡುತ್ತ ಸುಶರ್ಮನೂ ಶಿಬಿರಕ್ಕೆ ಹಿಂತಿರುಗಿದ.
ದುರ್ಯೋಧನೋಽಪಿ ನೃಪತಿರ್ಹೃತಸರ್ವಸ್ವ ಆತುರಃ |
ಯಯೌ ಶೋಕಸಮಾವಿಷ್ಟಶ್ಚಿಂತಯನ್ ವಿಮನಾ ಬಹು ॥10॥
ರಾಜಾ ದುರ್ಯೋಧನನೂ ತನ್ನ ಸರ್ವಸ್ವನೆನಿಸಿದ ಕರ್ಣನು ಹತನಾದಾಗ ಕಳವಳಗೊಂಡು, ಶೋಕದಿಂದ ಆವಿಷ್ಟನಾಗಿ ದುಃಖಿತನಾಗಿ ಬಹಳ ಆಲೋಚಿಸುತ್ತ ಶಿಬಿರಕ್ಕೆ ನಡೆದ.
ಛಿನ್ನಧ್ವಜೇನ ಶಲ್ಯಸ್ತು ರಥೇನ ರಥಿನಾಂ ವರಃ |
ಪ್ರಯಯೌ ಶಿಬಿರಾಯೈವ ವೀಕ್ಷಮಾಣೋ ದಿಶೋ ದಶ ॥11॥
ರಥಿಕರಲ್ಲಿ ಶ್ರೇಷ್ಠನಾದ ಶಲ್ಯನು ಧ್ವಜವಿಲ್ಲದ ರಥದಿಂದ ಹತ್ತುದಿಕ್ಕುಗಳನ್ನೂ ನೋಡುತ್ತ ಶಿಬಿರಕ್ಕೇ ನಡೆದ.
ತತೋಽಪರೇ ಸುಬಹವೋ ಭಾರತಾನಾಂ ಮಹಾರಥಾಃ |
ಪ್ರಾದ್ರವಂತ ರಣಂ ಹಿತ್ವಾ ಭಯಾವಿಷ್ಟಾ ವಿಚೇತಸಃ ॥12॥
ಕುರುಸೈನ್ಯದ ಬೇರೆ ಮಹಾರಥರು ಬಹುಮಂದಿ ಭಯಾವಿಷ್ಟರಾಗಿ ಬುದ್ಧಿಗೆ ಏನೂ ತೋಚದೆ ರಣರಂಗವನ್ನು ತೊರೆದು ಪಲಾಯನ ಮಾಡಿದರು.
ಅಶ್ರುಕಂಠಾ ಭಯೋದ್ವಿಗ್ನಾ ವೇಪಮಾನಾಃ ಸುವಿಹ್ವಲಾಃ |
ಕುರವಃ ಪ್ರದ್ರುತಾಃ ಸರ್ವೇ ದೃಷ್ಟ್ವಾ ಕರ್ಣಂ ನಿಪಾತಿತಮ್ |
ಪ್ರಶಂಸಂತೋರ್ಜುನಂ ಕೇಚಿತ್ ಕೇಚಿತ್ ಕರ್ಣಂ ಮಹಾರಥಾಃ ॥13॥
ಕರ್ಣನು ಹತನಾದುದನ್ನು ಕಂಡು ಕಣ್ಣೀರಿನಿಂದ ಗದ್ಗದಕಂಠರಾಗಿ, ಭಯದಿಂದ ಉದ್ವಿಗ್ನರಾಗಿ ಕಳವಳಗೊಂಡು ನಡುಗುತ್ತ ಕುರುಸೈನಿಕರು ಎಲ್ಲರೂ ಪಲಾಯನ ಗೈದರು. ಕೆಲವು ಮಹಾರಥರು ಅರ್ಜುನನನ್ನು ಹೊಗಳುತ್ತಿದ್ದರು. ಕೆಲವರು ಕರ್ಣನನ್ನು ಹೊಗಳುತ್ತಿದ್ದರು.
ತೇಷಾಂ ಯೋಧಸಹಸ್ರಾಣಾಂ ತಾವಕಾನಾಂ ಮಹಾಮೃಧೇ |
ನಾಸೀತ್ತತ್ರ ಪುಮಾನ್ ಕಶ್ಚಿದ್ ಯೋ ಯುದ್ಧಾಯ ಮನೋ ದಧೇ|14|
ನಿನ್ನ ಕಡೆಯ ಸಾವಿರಾರು ಯೋಧರಲ್ಲಿ ಮುಂದೆ ಮಹಾರಣದಲ್ಲಿ ಯುದ್ಧ ಮಾಡಲು ಮನಸು ಮಾಡಿದವನು ಯಾವನೊಬ್ಬ ವ್ಯಕ್ತಿಯೂ ಇರಲಿಲ್ಲ.
ಹತೇ ಕರ್ಣೇ ಮಹಾರಾಜ ನಿರಾಶಾಃ ಕುರವೋಽಭವನ್ |
ಜೀವಿತೇಷ್ವಥ ರಾಜ್ಯೇಷು ದಾರೇಷು ಚ ಧನೇಷು ಚ ॥15॥
ಮಹಾರಾಜ, ಕರ್ಣನು ಹತನಾದಾಗ ಕೌರವಪಕ್ಷದವರು ತಮ್ಮ ಬದುಕು ರಾಜ್ಯ ಹೆಂಡತಿ ಮಕ್ಕಳು ಧನ ಸಂಪತ್ತುಗಳಲ್ಲಿ ನಿರಾಸೆ ಹೊಂದಿದರು.
ತಾನ್ ಸಮಾನೀಯ ಪುತ್ರಸ್ತೇ ಯತ್ನೇನ ಮಹತಾ ವಿಭೋ |
ಯುದ್ಧಾಯೈವ ಮನೋ ದಧ್ರೇ ದುಃಖಶೋಕಸಮನ್ವಿತಃ ॥16॥
ರಾಜನೆ, ದುಃಖಶೋಕಗಳಿಂದ ಯುಕ್ತನಾದ ನಿನ್ನ ಮಗನು ಸರ್ವಪ್ರಯತ್ನ ದಿಂದ ಅವರನ್ನು ತಂದು ಸೇರಿಸಿ ಯುದ್ಧವನ್ನೇ ಮುಂದುವರಿಸಲು ನಿಶ್ಚಯಿಸಿದ.
ತಸ್ಯಾಜ್ಞಾಂ ಶಿರಸಾ ತೇಽಪಿ ಪ್ರತಿಗೃಹ್ಯ ವಿಶಾಂಪತೇ |
ವಿವರ್ಣವದನಾ ದೀನಾ ನ್ಯವಿಶಂತ ಮಹಾರಥಾಃ ॥17॥
ರಾಜನೆ, ಅವನ ಆಜ್ಞೆಯನ್ನು ಆ ಮಹಾರಥರು ಶಿರಸಾ ವಹಿಸಿ ಕಳೆಗುಂದಿದ ಮುಖದವರಾಗಿ ದೀನರಾಗಿ ಶಿಬಿರವನ್ನು ಸೇರಿದರು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ಸೇನಾಪಹಾರೋ ನಾಮ ದ್ವಿನವತಿತಮೋಽಧ್ಯಾಯಃ ॥92॥

ಮಹಾಭಾರತತಾತ್ಪರ್ಯನಿರ್ಣಯ
ಶಶಂಸ ಕೃಷ್ಣಂ ಚ ಧನಂಜಯಂ ಚ
ಭೀಮಂ ಚ ಯೇನ್ಯೇಪಿ ಯುಧಿ ಪ್ರವೀರಾಃ |
ಗತ್ವಾ ಚ ತೇ ಶಿಬಿರಂ ಮೋದಮಾನಾ
ಊಷುಃ ಸಕೃಷ್ಣಾಸ್ತದನುವ್ರತಾಃ ಸದಾ ॥ 192 ॥
ಧರ್ಮರಾಜ, ಕೃಷ್ಣನನ್ನೂ ಅರ್ಜುನನನ್ನೂ ಭೀಮನನ್ನೂ ಹೊಗಳಿದ. ಬೇರೆ ವೀರರೂ ಹೊಗಳಿದರು. ಎಲ್ಲರೂ ಕೃಷ್ಣನೊಂದಿಗೆ ಶಿಬಿರಕ್ಕೆ ಹೋಗಿ ಕೃಷ್ಣನಿಗೆ ಪ್ರಿಯರಾಗಿದ್ದು ಆನಂದದಿಂದ ವಾಸ ಮಾಡಿದರು.

ತೊಂಬತ್ತಮೂರನೆಯ ಅಧ್ಯಾಯ
ರಣರಂಗದಲ್ಲಿ ಒರಗಿದ ಕರ್ಣನನ್ನು ಕಂಡು
ಯುಧಿಷ್ಠಿರ ಕೃಷ್ಣಾರ್ಜುನರನ್ನು ಅಭಿನಂದಿಸಿದನು.
ಸಂಜಯಃ
ತಥಾ ನಿಪಾತಿತೇ ಕರ್ಣೇ ತವ ಸೈನ್ಯೇ ಚ ವಿದ್ರುತೇ |
ಆಶ್ಲಿಷ್ಯ ಪಾರ್ಥಂ ದಾಶಾರ್ಹೋ ಹರ್ಷಾದ್ ವಚನಮಬ್ರವೀತ್ ||1||
ಸಂಜಯ ನುಡಿದ– ಕರ್ಣನು ಹಾಗೆ ಹತನಾಗಿ ಬಿದ್ದಾಗ, ನಿನ್ನ ಸೈನ್ಯವೂ ಪಲಾಯನ ಮಾಡಿದಾಗ ಶ್ರೀಕೃಷ್ಣ ಹರ್ಷದಿಂದ ಅರ್ಜುನನನ್ನು ಆಲಿಂಗಿಸಿ ಈ ಮಾತನ್ನು ನುಡಿದ.
ಹತೋ ಬಲಭಿದಾ ವೃತ್ರಸ್ತ್ವಯಾ ಕರ್ಣೋ ಧನಂಜಯ |
ವೃತ್ರಕರ್ಣವಧಂ ಘೋರಂ ಕಥಯಿಷ್ಯಂತಿ ಮಾನವಾಃ ||2||
ಅರ್ಜುನ, ಇಂದ್ರನು ವೃತ್ರನನ್ನು ವಧಿಸಿದ, ನೀನು ಕರ್ಣನನ್ನು ವಧಿಸಿದೆ. ಮುಂದೆ ಘೋರವಾದ ಈ ವೃತ್ರಕರ್ಣವಧಗಳನ್ನು ಮಾನವರು ಒಬ್ಬರಿಗೊಬ್ಬರು ಹೇಳುತ್ತಾರೆ.
ವಜ್ರೇಣ ನಿಹತೋ ವೃತ್ರಃ ಸಂಯುಗೇ ಭೂರಿತೇಜಸಾ |
ತ್ವಯಾ ತು ನಿಹತಃ ಕರ್ಣೋ ಧನುಷಾ ನಿಶಿತೈಃ ಶರೈಃ ||3||
ಇಂದ್ರನು ವೃತ್ರನನ್ನು ರಣದಲ್ಲಿ ಬಹಳ ತೇಜಸ್ಸಿನಿಂದ ಕೂಡಿದ ವಜ್ರಾಯುಧದಿಂದ ವಧಿಸಿದ. ನೀನು ಕರ್ಣನನ್ನು ಕೇವಲ ಬಿಲ್ಲಿನಿಂದಲೇ ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿರುವೆ.
ತಮಿಮಂ ವಿಕ್ರಮಂ ಲೋಕೇ ಪ್ರಥಿತಂ ತೇ ಯಶೋವಹಮ್ |
ನಿವೇದಯಾವಃ ಕೌಂತೇಯ ಧರ್ಮರಾಜಾಯ ಧೀಮತೇ ||4||
ಅರ್ಜುನ, ಕೀರ್ತಿಯನ್ನು ತಂದುಕೊಡುವ ಈ ನಿನ್ನ ಪರಾಕ್ರಮವು ಲೋಕದಲ್ಲಿ ಪ್ರಸಿದ್ಧವಾಗುತ್ತದೆ. ಇದನ್ನು ಧೀಮಂತನಾದ ಧರ್ಮರಾಜನಿಗೆ ನಾವು ಹೇಳೋಣ.
ಕರ್ಣಾರ್ಜುನಯುದ್ಧದ ಪ್ರಾರಂಭದಲ್ಲಿ ಧರ್ಮರಾಜನು ರಣರಂಗಕ್ಕೆ ಬಂದುದು ಹಿಂದೆ ಉಕ್ತವಾಗಿದೆ. ಆದರೆ ಅವನು ಅಗ ಬಂದುದು ಯುದ್ಧದ ವೀಕ್ಷಣಕ್ಕಾಗಿ ಅಲ್ಲ, ಕೃಷ್ಣಾರ್ಜುನರಲ್ಲಿ ಮತ್ತು ವೀರಯೋಧರಲ್ಲಿ ಉತ್ಸಾಹ ತುಂಬುವುದಕ್ಕಾಗಿ. ಅದರಿಂದ ಸ್ವಲ್ಪಕಾಲ ಅವರ ಮುಂದೆ ಇದ್ದು, ವಿಶ್ರಾಂತಿಗಾಗಿ ತಿರುಗಿ ಶಿಬಿರಕ್ಕೆ ಹೋಗಿ ಮಲಗಿದ. ಇದು ಇಲ್ಲಿಯೆ ಮುಂದೆ ಸ್ಪಷ್ಟವಿದೆ.
ವಧಂ ಕರ್ಣಸ್ಯ ಸಂಗ್ರಾಮೇ ದೀರ್ಘಕಾಲ ಚಿಕೀರ್ಷಿತಮ್ |
ನಿವೇದ್ಯ ಧರ್ಮರಾಜಸ್ಯ ತ್ವಮಾನೃಣ್ಯಂ ಗಮಿಷ್ಯಸಿ ||5||
ಹದಿಮೂರು ವರ್ಷಗಳ ಸುದೀರ್ಘವಾದ ವನವಾಸ ಕಾಲದಲ್ಲಿಯೇ, ಮುಂದೆ ಕರ್ಣನ ವಧವಾಗಬೇಕೆಂದು ಪಾಂಡವರೆಲ್ಲರೂ ಬಯಸಿದ್ದರು. ಅಂಥ ಕರ್ಣವಧೆ ಈಗ ಆಗಿಹೋಯಿತೆಂದು ಧರ್ಮರಾಜನಲ್ಲಿ ನಿವೇದಿಸಿಕೊಂಡು ನೀನು ಋಣಮುಕ್ತನಾಗುವಿ.
ವರ್ತಮಾನೇ ತು ಯುದ್ಧೇ ವೈ ತವ ಕರ್ಣಸ್ಯ ಚೋಭಯೋಃ |
ದ್ರಷ್ಟುಮಾಯೋಧನಂ ಪೂರ್ವಮಾಗತೋ ಧರ್ಮನಂದನಃ ||6||
ನಿನಗೂ ಕರ್ಣನಿಗೂ ಇಬ್ಬರಿಗೂ ಯುದ್ಧವಾಗುತ್ತಿರುವಾಗ ಅದನ್ನು ನೋಡಲು ರಣರಂಗಕ್ಕೆ ಹಿಂದೆಯೇ ಧರ್ಮರಾಜ ಬಂದಿದ್ದ.
ಸುಭೃಶಂ ಗಾಢವಿದ್ಧತ್ವಾನ್ನಾಶಕತ್ ಸ್ಥಾತುಮಾಹವೇ |
ತತಃ ಸ್ವಶಿಬಿರಂ ಯಾತಃ ಸ ರಾಜಾ ಪುರುಷರ್ಷಭ ||7||
ಆದರೆ ಬಹಳ ಗಾಢವಾಗಿ ಗಾಯಗೊಂಡಿದ್ದರಿಂದ ರಣರಂಗದಲ್ಲಿಯೇ ನಿಂತಿರಲು ಅವನು ಶಕ್ತನಾಗಲಿಲ್ಲ. ಅದರಿಂದ ತನ್ನ ಶಿಬಿರಕ್ಕೆ ಆಗಲೇ ಹೊರಟು ಹೋಗಿದ್ದ.
ತಥೇತ್ಯುಕ್ತೇ ಕೇಶವಸ್ತು ಪಾರ್ಥೇನ ಯದುಪುಂಗವಃ |
ಪರ್ಯವರ್ತಯದವ್ಯಗ್ರೋ ರಥಂ ರಥವರಸ್ಯ ತಮ್ ||8||
`ಹಾಗೆ ಆಗಲಿ' ಎಂದು ಅರ್ಜುನನು ನುಡಿದಾಗ ಶ್ರೀಕೃಷ್ಣನು ಉತ್ತಮ ರಥಿಕನಾದ ಅರ್ಜುನನ ಆ ರಥವನ್ನು ಶಿಬಿರದ ಕಡೆಗೆ ತಿರುಗಿಸಿದ.
ಧೃಷ್ಟದ್ಯುಮ್ನಂ ಯುಧಾಮನ್ಯುಂ ಮಾದ್ರೀಪುತ್ರೌ ವೃಕೋದರಮ್ |
ಯುಯುಧಾನಂ ಚ ಗೋವಿಂದ ಇದಂ ವಚನಮಬ್ರವೀತ್ ||9||
ಧರ್ಮರಾಜಸ್ಯ ಪಾರ್ಶ್ವಂ ವೈ ಯಾವದ್ ಗಚ್ಛಾಮ್ಯಹಂ ತ್ವರನ್ ||10||
ಪರಾನಭಿಮುಖಾ ಯತ್ತಾಸ್ತಿಷ್ಠಧ್ವಂ ಭದ್ರಮಸ್ತು ವಃ |
ನಿವೇದ್ಯೇ ಧರ್ಮರಾಜಾಯ ಹತಃ ಕರ್ಣೋಽರ್ಜುನೇನ ವೈ |
ತಾವದ್ಭವದ್ಭಿರ್ಯತ್ತೈಸ್ತು ಭವಿತವ್ಯಂ ನರಾಧಿಪೈಃ ||11||
ಧೃಷ್ಟದ್ಯುಮ್ನ ಯುಧಾಮನ್ಯು ನಕುಲಸಹದೇವರು ಮತ್ತು ಭೀಮಸೇನ ಸಾತ್ಯಕಿಗಳಿಗೆ ಶ್ರೀಕೃಷ್ಣ ನುಡಿದ– `ಧರ್ಮರಾಜನ ಬಳಿಗೆ ನಾನೀಗ ಬೇಗನೆ ಹೋಗುತ್ತಿದ್ದೇನೆ. ನೀವು ಶತ್ರುಗಳಿಗೆ ಮುಖಮಾಡಿ ಜಾಗರೂಕರಾಗಿ ನಿಂತಿರಿ. ನಿಮಗೆ ಒಳ್ಳೆಯದಾಗಲಿ. ಕರ್ಣನು ಅರ್ಜುನನಿಂದ ಹತನಾದುದನ್ನು ನಾನು ಧರ್ಮರಾಜನಿಗೆ ನಿವೇದಿಸುತ್ತೇನೆ. ಅಷ್ಟರವರೆಗೆ ನೀವು ರಾಜರು ಇಲ್ಲಿಯೇ ಜಾಗರೂಕರಾಗಿರಬೇಕು' ಎಂದು.
ಸ ತೈಃ ಶೂರೈರನುಜ್ಞಾತೋ ಯಯೌ ರಾಜನಿವೇಶನಮ್ |

ಪಾರ್ಥಮಾದಾಯ ಗೋವಿಂದೋ ದದರ್ಶ ಚ ಯುಧಿಷ್ಠಿರಮ್ ॥12॥
ಶಯಾನಂ ರಾಜಶಾರ್ದೂಲಂ ಕಾಂಚನೇ ಶಯನೋತ್ತಮೇ |
ಅಗೃಹ್ಣೀತಾಂ ಚ ಚರಣೌ ಮುದಿತೌ ಪಾರ್ಥಿವಸ್ಯ ತೌ ॥13॥
ಶ್ರೀಕೃಷ್ಣನು ಶೂರರಿಂದ ಅನುಜ್ಞೆ ಪಡೆದು ಅರ್ಜುನನನ್ನು ಕರೆದುಕೊಂಡು ಅರಮನೆಗೆ ತೆರಳಿದ. ರಾಜಾ ಯುಧಿಷ್ಠಿರನನ್ನು ಕಂಡ. ರಾಜನು ಸುವರ್ಣಮಯ ವಾದ ಉತ್ತಮವಾದ ಶಯ್ಯೆಯ ಮೇಲೆ ಒರಗಿದ್ದ. ಸಂತುಷ್ಟರಾದ ಕೃಷ್ಣಾರ್ಜುನರು ರಾಜನ ಚರಣಗಳನ್ನು ಹಿಡಿದುಕೊಂಡರು.
ತಯೋಃ ಪ್ರಹರ್ಷಮಾಲಕ್ಷ್ಯ ಪ್ರಹಾರಾಂಶ್ಚಾತಿಮಾನುಷಾನ್ |
ರಾಧೇಯಂ ನಿಹತಂ ಮತ್ವಾ ಸಮುತ್ತಸ್ಥೌ ಯುಧಿಷ್ಠಿರಃ ॥14॥
ಅವರ ಸಂತೋಷವನ್ನು ಗಮನಿಸಿ, ಅವರ ಮೈಗಾಗಿದ್ದ ಅತಿಮಾನುಷ ಪ್ರಹಾರಗಳನ್ನೂ ಗಮನಿಸಿ, ಕರ್ಣನು ಹತನಾದನೆಂದು ಊಹಿಸಿ ತಿಳಿದು,
ಯುಧಿಷ್ಠಿರನು ಶಯ್ಯೆಯಿಂದ ಮೇಲೆದ್ದ.
ಉತ್ಥಾಯ ಸ ಮಹಾಬಾಹುಃ ಪುನಃ ಪುನರರಿಂದಮ |
ವಾಸುದೇವಾರ್ಜುನೌ ಪ್ರೇಮ್ಣಾ ತಾವುಭೌ ಪರಿಷಸ್ವಜೇ ॥15॥
ಮಹಾಬಾಹು ಯುಧಿಷ್ಠಿರನು ಎದ್ದು ಕೃಷ್ಣಾರ್ಜುನರಿಬ್ಬರನ್ನೂ ಪುನಃ ಪುನಃ ಆಲಿಂಗಿಸಿದ.
ತತೋಽಸ್ಮೈ ತದ್ಯಥಾವೃತ್ತಂ ವಾಸುದೇವಃ ಪ್ರಿಯಂವದಃ |
ಕಥಯಾಮಾಸ ಕರ್ಣಸ್ಯ ನಿಧನಂ ಯದುನಂದನಃ ॥16॥
ಪ್ರಿಯವಾಗಿ ಮಾತನಾಡುವ ಶ್ರೀಕೃಷ್ಣನು ಯುಧಿಷ್ಠಿರನಿಗೆ ಕರ್ಣವಧವನ್ನು ಯಥಾವತ್ತಾಗಿ ಬಣ್ಣಿಸಿ ಹೇಳಿದ.
ಈಷದುತ್ಸ್ಮಯಮಾನಸ್ತು ಕೃಷ್ಣೋ ರಾಜಾನಮಬ್ರವೀತ್ |
ಯುಧಿಷ್ಠಿರಂ ಹತಾಮಿತ್ರಂ ಕೃತಾಂಜಲಿರಥಾಚ್ಯುತಃ ॥17॥
ಬಳಿಕ ಶತ್ರುರಹಿತನಾದ ರಾಜಾ ಯುಧಿಷ್ಠಿರನಿಗೆ ಶ್ರೀಕೃಷ್ಣನು ನಸುನಗುತ್ತ ಕೈಮುಗಿದು ಹೇಳಿದ.
ದಿಷ್ಟ್ಯಾ ಗಾಂಡೀವಧನ್ವಾ ಚ ಪಾಂಡವಶ್ಚ ವೃಕೋದರಃ |
ತ್ವಂ ಚಾಪಿ ಕುಶಲೀ ರಾಜನ್ ಮಾದ್ರೀಪುತ್ರೌ ಚ ಪಾಂಡವೌ ॥18॥
`ಅದೃಷ್ಟವಶದಿಂದ ರಾಜನೆ, ಗಾಂಡೀವ ಧನುಸ್ಸನ್ನು ಹಿಡಿದಿರುವ ಅರ್ಜುನನೂ, ಭೀಮಸೇನನೂ ನೀನೂ ನಕುಲಸಹದೇವರೂ ಕ್ಷೇಮದಿಂದ ಇರುವಿರಿ.
ಮುಕ್ತಾ ವೀರಕ್ಷಯಾದಸ್ಮಾತ್ ಸಂಗ್ರಾಮಾಲ್ಲೋಮಹರ್ಷಣಾತ್ |
ಕ್ಷಿಪ್ರಮುತ್ತರಕಾಲಾನಿ ಕುರು ಕಾರ್ಯಾಣಿ ಪಾರ್ಥಿವ ॥19॥
ವೀರವಿನಾಶಕಾರಿಯಾದ ರೋಮಾಂಚಕರವಾದ ಈ ಯುದ್ಧದಿಂದ ನೀವು ಪಾರಾಗಿರುವಿರಿ. ಮುಂದೆ ಮಾಡಬೇಕಾಗಿರುವ ಕಾರ್ಯಗಳನ್ನು ಬೇಗನೆ ನಡೆಸಿರಿ.
ಹತೋ ವೈಕರ್ತನಃ ಕ್ರೂರಃ ಸೂತಪುತ್ರೋ ಮಹಾಬಲಃ |
ದಿಷ್ಟ್ಯಾ ಜಯಸಿ ರಾಜೇಂದ್ರ ದಿಷ್ಟ್ಯಾ ವರ್ಧಸಿ ಪಾಂಡವ ॥20॥
ಮಹಾಬಲನಾದ ಕ್ರೂರನಾದ ಸೂತಪುತ್ರ ಕರ್ಣನು ಹತನಾಗಿದ್ದಾನೆ, ಅದೃಷ್ಟವಶದಿಂದ ನೀನು ಜಯ ಗಳಿಸಿರುವೆ. ಅದೃಷ್ಟವಶದಿಂದ ಭಾಗ್ಯಶಾಲಿ ಆಗಿರುವೆ.
ಯಃ ಸ ದ್ಯೂತಜಿತಾಂ ಕೃಷ್ಣಾಂ ಪ್ರಾಹಸತ್ಪುರುಷಾಧಮಃ |
ತಸ್ಯಾದ್ಯ ಸೂತಪುತ್ರಸ್ಯ ಭೂಮಿಃ ಪಿಬತಿ ಶೋಣಿತಮ್ ॥21॥
ಜೂಜಿನಲ್ಲಿ ಜಿತಳಾದ ದ್ರೌಪದಿಗೆ ಯಾವ ಪುರುಷಾಧಮನು ಅಪಹಾಸ ಮಾಡಿದ್ದನೋ ಆ ಸೂತಪುತ್ರನ ರಕ್ತವನ್ನು ರಣಭೂಮಿ ಇದೀಗ ಪಾನ ಮಾಡುತ್ತಿದೆ.
ಶೇತೇಽಸೌ ಶರದೀರ್ಣಾಂಗಃ ಶತ್ರುಸ್ತೇ ಕುರುಪುಂಗವ |
ತಂ ಪಶ್ಯ ಪುರುಷವ್ಯಾಘ್ರ ವಿಭಿನ್ನಂ ಬಹುಧಾ ಶರೈಃ ॥22॥
ರಾಜನೆ, ಬಾಣದಿಂದ ಮೈಯೆಲ್ಲಾ ಸೀಳಿ ನೆಲದ ಮೇಲೆ ಒರಗಿದ್ದಾನೆ, ನಿನ್ನ ಶತ್ರು ಕರ್ಣ. ಅವನು ಬಾಣದಿಂದ ಬಹಳ ತುಂಡಾಗಿ ಬಿದ್ದಿರುವುದನ್ನು ನೋಡು' ಎಂದು.
ಯುಧಿಷ್ಠಿರಸ್ತು ದಾಶಾರ್ಹಂ ಪ್ರಹೃಷ್ಟಃ ಪ್ರತ್ಯಪೂಜಯತ್ |
ದಿಷ್ಟ್ಯಾ ದಿಷ್ಟ್ಯೇತಿ ರಾಜೇಂದ್ರ ಪ್ರೀತ್ಯಾ ಚೇದಮುವಾಚ ಹ ॥23॥
ಯುಧಿಷ್ಠಿರನು ಶ್ರೀಕೃಷ್ಣನನ್ನು ಉತ್ಸಾಹದಿಂದ `ಸಂತೋಷ, ಬಹಳ ಸಂತೋಷ' ಎಂದು ಪ್ರತಿಯಾಗಿ ಅಭಿನಂದಿಸಿದ. ಪ್ರೀತಿಯಿಂದ ಮತ್ತೆ ನುಡಿದ–
ನೈತಚ್ಚಿತ್ರಂ ಮಹಾಬಾಹೋ ತ್ವಯಿ ದೇವಕಿನಂದನ |
ತ್ವಯಾ ಸಾರಥಿನಾ ಪಾರ್ಥೋ ಯತ್ಕುರ್ಯಾದದ್ಯ ಪೌರುಷಮ್ ॥24॥
`ಕೃಷ್ಣ, ಮಹಾಬಾಹೋ, ನಿನ್ನಲ್ಲಿ ಇದೇನೂ ಆಶ್ಚರ್ಯವಲ್ಲ. ನೀನು ಸಾರಥಿ ಆಗಿರುವಾಗ ಅರ್ಜುನನು ಅವಶ್ಯವಾಗಿ ಒಳ್ಳೆಯ ಪೌರುಷವನ್ನೇ ತೋರ್ತುತಾನೆ!
ಪಸ್ಪರ್ಶ ಚ ಕುರುಶ್ರೇಷ್ಠಃ ಸಾನಂದಂ ದಕ್ಷಿಣಂ ಭುಜಮ್ |
ಉವಾಚ ಧರ್ಮಭೃತ್ ಪಾರ್ಥ ಉಭೌ ತೌ ಕೇಶವಾರ್ಜುನೌ ॥25॥

ಯುಧಿಷ್ಠಿರನು ಕೃಷ್ಣಾರ್ಜುನರಿಬ್ಬರ ಬಲಭುಜವನ್ನು ಸ್ಪರ್ಶಿಸಿ ಆನಂದದಿಂದ ಇಬ್ಬರಿಗೂ ನುಡಿದ.
ನರನಾರಾಯಣೌ ದೇವೌ ಕಥಿತೌ ನಾರದೇನ ಹ |
ಧರ್ಮಸಂಸ್ಥಾಪನೇ ಯುಕ್ತೌ ಪುರಾಣೌ ಪುರುಷೋತ್ತಮೌ ॥26॥
ನಾರದರು ಹೇಳಿದ್ದರು– ನೀವಿಬ್ಬರು ನರನಾರಾಯಣರು ದೇವೋತ್ತಮರು ಧರ್ಮಸಂಸ್ಥಾಪನೆಗಾಗಿ ನಿರತರಾದ ಪುರಾಣ ಪುರುಷೋತ್ತಮರು.
ಅಸಕೃಚ್ಚಾಪಿ ಮೇಧಾವೀ ಕೃಷ್ಣದ್ವೈಪಾಯನೋ ಮಮ |
ಕಥಾಮೇತಾಂ ಮಹಾಬಾಹೋ ದಿವ್ಯಾಮಕಥಯತ್ ಪ್ರಭುಃ ॥27॥
ಮೇಧಾವಿಯಾದ ಕೃಷ್ಣದ್ವೈಪಾಯನ ಪ್ರಭುವೂ ಕೂಡ ದಿವ್ಯವಾದ ಈ ಕಥೆಯನ್ನು ಅನೇಕ ಬಾರಿ ನನಗೆ ಹೇಳಿದ್ದಾರೆ.
ತವ ಕೃಷ್ಣ ಪ್ರಭಾವೇಣ ಗಾಂಡೀವೇನ ಧನಂಜಯಃ |
ಜಯತ್ಯಭಿಮುಖಾನ್ ಶತ್ರೂನ್ನ ಚಾಸೀದ್ವಿಮುಖಃ ಕ್ವಚಿತ್ ॥28॥
ಕೃಷ್ಣ, ನಿನ್ನ ಪ್ರಭಾವದಿಂದ ಅರ್ಜುನನು ಗಾಂಡೀವದಿಂದ ತನಗೆ ಇದಿರಾದ ಶತ್ರುಗಳನ್ನು ಪರಾಭವಗೊಳಿಸುತ್ತಾನೆ. ಅವನೆಂದೂ ಯುದ್ಧದಿಂದ ಪರಾಙ್ಮುಖನು ಆದುದಿಲ್ಲ.
ಜಯಶ್ಚೈವ ಧ್ರುವೋಽಸ್ಮಾಕಂ ನ ತ್ವಸ್ಮಾಕಂ ಪರಾಜಯಃ |
ಯದಾ ತ್ವಂ ಯುಧಿ ಪಾರ್ಥಸ್ಯ ಸಾರಥ್ಯಮುಪಜಗ್ಮಿವಾನ್ | |29॥
ನೀನು ರಣದಲ್ಲಿ ಅರ್ಜುನನಿಗೆ ಸಾರಥ್ಯಮಾಡುವಾಗ ನಮಗೆ ನಿಶ್ಚಯವಾಗಿ ಜಯವೆ ಹೊರತು ಪರಾಜಯವಿಲ್ಲ.
ಏವಮುಕತ್ವ ಮಹಾರಾಜ ತಂ ರಥಂ ಹೇಮಭೂಷಿತಮ್ |
ದಂತವರ್ಣೈರ್ಹಯೈರ್ಯುಕ್ತಂ ಕಾಲವಾಲೈರ್ಮಹಾರಥಃ ॥30॥
ಆಸ್ಥಾಯ ಪುರುಷವ್ಯಾಘ್ರಃ ಸ್ವಬಲೇನಾಭಿಸಂವೃತಃ |
ಕೃಷ್ಣಾರ್ಜುನಾಭ್ಯಾಂ ವೀರಾಭ್ಯಾಮನುಯಾತಂ ತತಃ ಪ್ರಿಯಮ್ ॥31॥
ಪ್ರಯಯೌ ಬಹುವೃತ್ತಾಂತಂ ದ್ರಷ್ಟುಮಾಯೋಧನಂ ತದಾ |
ಆಭಾಷಮಾಣಸ್ತೌ ವೀರಾವುಭೌ ಮಾಧವಫಲ್ಗುನೌ ॥32॥
ಸ ದದರ್ಶ ರಣೇ ಕರ್ಣಂ ಶಯಾನಂ ಪುರುಷರ್ಷಭಮ್ |
ಗಾಂಡೀವಮುಕ್ತೈರ್ವಿಶಿಖೈಃ ಸರ್ವತಃ ಶಕಲೀಕೃತಮ್ ॥33॥
ಮಹಾರಾಜ, ಮಹಾರಥನಾದ ಯುಧಿಷ್ಠಿರನು ಕೃಷ್ಣಾರ್ಜುನರಿಗೆ ಹೀಗೆ ಹೇಳಿ, ದಂತವರ್ಣದ ಮೈಯ, ಕಪ್ಪುಬಾಲದ ಕುದುರೆಗಳನ್ನು ಹೂಡಿದ, ಬಂಗಾರದಿಂದ ಅಲಂಕೃತವಾದ ರಥವನ್ನೇರಿ ತನ್ನ ಸೈನ್ಯದಿಂದ ಪರಿವೃತನಾಗಿ, ವೀರರಾದ ಕೃಷ್ಣಾರ್ಜುನರು ಹಿಂಬಾಲಿಸಿ ಬರುತ್ತಿದ್ದಂತೆ, ತನಗೆ ಪ್ರಿಯವಾದ ಬಹುವೃತ್ತಾಂತಗಳಿಂದ ತುಂಬಿದ ಯುಕ್ತವಾದ ರಣರಂಗವನ್ನು ಕಾಣಲು ತೆರಳಿದ. ವೀರರಾದ ಕೃಷ್ಣಾರ್ಜುನರೊಡನೆ ಸಂಭಾಷಣೆ ನಡೆಸುತ್ತ, ರಣಭೂಮಿಯಲ್ಲಿ ಒರಗಿದ್ದ ಪುರುಷಶ್ರೇಷ್ಠನಾದ ಕರ್ಣನನ್ನು ಕಂಡ. ಗಾಂಡೀವದಿಂದ ಹೊರಟ ಬಾಣಗಳಿಂದ ಕರ್ಣನ ಮೈಯೆಲ್ಲ ಗಾಯಗೊಂಡಿದ್ದುದನ್ನು ಕಂಡ.
ಸಪುತ್ರಂ ನಿಹತಂ ದೃಷ್ಟ್ವಾ ಕರ್ಣಂ ರಾಜಾ ಯುಧಿಷ್ಠಿರಃ |
ಪ್ರಶಶಂಸ ನರವ್ಯಾಘ್ರಾವುಭೌ ಮಾಧವಪಾಂಡವೌ ॥34॥
ಕರ್ಣನು ಪುತ್ರಸಮೇತನಾಗಿ ಹತನಾಗಿರುವುದನ್ನು ಕಂಡು ಯುಧಿಷ್ಠಿರನು ಪುರುಷೋತ್ತಮರಾದ ಕೃಷ್ಣಾರ್ಜುನರನ್ನು ಪ್ರಶಂಸೆಗೈದ.
ಅದ್ಯ ರಾಜಾಸ್ಮಿ ಗೋವಿಂದ ಪೃಥಿವ್ಯಾಂ ಭ್ರಾತೃಭಿಃ ಸಹ |
ತ್ವಯಾ ನಾಥೇನ ವೀರೇಣ ವಿದುಷಾ ಪರಿಪಾಲಿತಃ ॥35॥
ಕೃಷ್ಣ, ನಾನು ಈಗ ಭೂಮಿಯಲ್ಲಿ ರಾಜನಾಗಿದ್ದೇನೆ. ನಾಥನಾದ ವೀರನಾದ ಸರ್ವಜ್ಞನಾದ ನಿನ್ನಿಂದ ಸೋದರರರೊಂದಿಗೆ ನಾನು ರಕ್ಷಿತನಾಗಿದ್ದೇನೆ.
ಹತಂ ದೃಷ್ಟ್ವಾ ನರವ್ಯಾಘ್ರಂ ರಾಧೇಯಮಭಿಮಾನಿನಮ್ |
ನಿರಾಶೋಽದ್ಯ ದುರಾತ್ಮಾಸೌ ಧಾರ್ತರಾಷ್ಟ್ರೋ ಭವಿಷ್ಯತಿ |
ಜೀವಿತಾಚ್ಚಾಪಿ ರಾಜ್ಯಾಚ್ಚ ಹತೇ ಕರ್ಣೇ ಮಹಾರಥೇ ॥36॥
ಅಭಿಮಾನಿಯಾದ ಪುರುಷಶ್ರೇಷ್ಠನಾದ ಮಹಾರಥನಾದ ಕರ್ಣನು ಹತ ನಾದುದನ್ನು ಕಂಡು ಈಗ ದುರಾತ್ಮನಾದ ಆ ದುರ್ಯೋಧನನು ಜೀವನದಲ್ಲಿಯೂ ರಾಜ್ಯದಲ್ಲಿಯೂ ನಿರಾಶನಾಗುತ್ತಾನೆ.
ತ್ವತ್ಪ್ರಸಾದಾದ್ ವಯಂ ಚೈವ ಕೃತಾರ್ಥಾಃ ಪುರುಷರ್ಷಭಃ |
ತ್ವಂ ಚ ಗಾಂಡೀವಧನ್ವಾ ಚ ವಿಜಯೀ ಯದುನಂದನ |
ದಿಷ್ಟ್ಯಾ ಜಯಸಿ ಗೋವಿಂದ ದಿಷ್ಟ್ಯಾ ಕರ್ಣೋ ನಿಪಾತಿತಃ ॥37॥
ನಿನ್ನ ಅನುಗ್ರಹದಿಂದ ನಾವು ಕೃತಾರ್ಥರಾದೆವು. ಪುರುಷೋತ್ತಮನಾದ ನೀನೂ, ಗಾಂಡೀವಧಾರಿ ಅರ್ಜುನನೂ ಜಯಶಾಲಿಗಳು. ಗೋವಿಂದ, ನೀನು ಗೆದ್ದೆ, ನಿನಗೆ ಅಭಿನಂದನೆ, ಕರ್ಣ ಬಿದ್ದ, ನಿನಗೆ ಅಭಿನಂದನೆ.
ಸಂಜಯಃ
ಏವಂ ಸ ಬಹುಶೋ ಹೃಷ್ಟಃ ಪ್ರಶಶಂಸ ಜನಾರ್ದನಮ್ |
ಅರ್ಜುನಂ ಚಾಪಿ ರಾಜೇಂದ್ರ ಧರ್ಮರಾಜೋ ಯುಧಿಷ್ಠಿರಃ ॥38॥
ಸಂಜಯನು ಧೃತರಾಷ್ಟ್ರನಿಗೆ ನುಡಿದ– ಹೀಗೆ ಯುಧಿಷ್ಠಿರನು ಕೃಷ್ಣನನ್ನೂ ಅರ್ಜುನನನ್ನೂ ಬಹುವಾಗಿ ಪ್ರಶಂಸೆ ಮಾಡಿದ.
ದೃಷ್ಟ್ವಾ ಚ ಕರ್ಣಂ ನಿಹತಂ ಸಪುತ್ರಂ ಪಾರ್ಥಸಾಯಕೈಃ |

ಪುನರ್ಜಾತಮಿವಾತ್ಮಾನಂ ಮೇನೇ ಕುರುಕುಲೋದ್ವಹಃ ॥39॥
ಕರ್ಣನು ಪುತ್ರಸಮೇತನಾಗಿ ಅರ್ಜುನನ ಬಾಣಗಳಿಂದ ಸತ್ತಿದ್ದನ್ನು ಕಂಡು ಧರ್ಮರಾಜ ತಾನು ಪುನಃ ಹುಟ್ಟಿಬಂದೆನೆಂದುಕೊಂಡ.
ತತೋ ಭೀಮಪ್ರಭೃತಿಭಿಃ ಸರ್ವೈಶ್ಚ ಭ್ರಾತೃಭಿರ್ವೃತಮ್ |
ವರ್ಧಯಂತಿ ಸ್ಮ ರಾಜಾನಂ ಹರ್ಷಯುಕ್ತಾ ಮಹಾರಥಾಃ ॥40॥
ಬಳಿಕ ಭೀಮ ಮುಂತಾದ ಎಲ್ಲ ಸೋದರರಿಂದ ಪರಿವೃತನಾದ ಧರ್ಮರಾಜನನ್ನು ಹರ್ಷಗೊಂಡ ಮಹಾರಥರು ಅಭಿನಂದಿಸಿದರು.
ನಕುಲಃ ಸಹದೇವಶ್ಚ ಪಾಂಡವಶ್ಚ ವೃಕೋದರಃ |
ಸಾತ್ಯಕಿಶ್ಚ ಮಹಾರಾಜ ವೃಷ್ಣೀನಾಂ ಪ್ರವರೋ ರಥಃ ॥41॥
ಧೃಷ್ಟದ್ಯುಮ್ನಃ ಶಿಖಂಡೀ ಚ ಪಾಂಡುಪಾಂಚಾಲಸೃಂಜಯಾಃ |
ಪೂಜಯಂತಿ ಸ್ಮ ಕೌಂತೇಯಂ ನಿಹತೇ ಸೂತನಂದನೇ ॥42॥
ನಕುಲಸಹದೇವ ಭೀಮಸೇನ ಸಾತ್ಯಕಿ ಧೃಷ್ಟದ್ಯುಮ್ನ ಶಿಖಂಡಿ ಮತ್ತು ಎಲ್ಲ ಪಾಂಡವರ ಪಾಂಚಾಲ ಸೃಂಜಯರ ಸೈನಿಕರು ಕರ್ಣನು ಹತನಾದುದಕ್ಕೆ ಅಭಿನಂದನೆ ಮಾಡಿದರು.
ತೇ ವರ್ಧಯಿತ್ವಾ ನೃಪತಿಂ ಪಾಂಡುಪುತ್ರಂ ಯುಧಿಷ್ಠಿರಮ್ |
ಜಿತಕಾಶಿನೋ ಲಬ್ಧಲಕ್ಷ್ಯಾ ಯುದ್ಧಶೌಂಡಾಃ ಪ್ರಹಾರಿಣಃ ॥43॥
ಸ್ತುವಂತಃ ಸ್ತವಯುಕ್ತಾಭಿರ್ವಾಗ್ಭಿಃ ಕೃಷ್ಣೌ ಪರಂತಪೌ |
ಜಗ್ಮುಃ ಸ್ವಶಿಬಿರಾಯೈವ ಮುದಾ ಯುಕ್ತಾ ಮಹಾರಥಾಃ ॥44॥
ಆ ಮಹಾರಥರು ಯುಧಿಷ್ಠಿರನನ್ನು ಅಭಿನಂದಿಸಿ, ಜಯದಿಂದ ಶೋಭಿಸು ವವರೂ ಗುರಿ ತಪ್ಪದವರೂ ಯುದ್ಧನಿಪುಣರೂ ಚೆನ್ನಾಗಿ ಹೊಡೆಯಬಲ್ಲವರೂ ಆದ ಆ ಮಹಾರಥರು ಕೃಷ್ಣಾರ್ಜುನರನ್ನು ಹೊಗಳಿಕೆಯ ಶಬ್ದಗಳಿಂದ ಹೊಗಳುತ್ತ ಸಂತೋಷದಿಂದ ತಮ್ಮ ಶಿಬಿರಗಳಿಗೆ ಪ್ರಯಾಣ ಮಾಡಿದರು.
ಏವಮೇಷ ಕ್ಷಯೋ ವೃತ್ತಃ ಸುಮಹಾನ್ ಲೋಮಹರ್ಷಣಃ |
ತವ ದುರ್ಮಂತ್ರಿತೇ ರಾಜನ್ನತೀತಂ ಕಿಂ ನು ಶೋಚಸಿ ॥45॥
ರಾಜನೆ, ಹೀಗೆ ರೋಮಾಂಚಕಾರಿಯಾದ ಈ ಮಹಾ ವಿನಾಶವು ನಿನ್ನ ದುಷ್ಟಮಂತ್ರಾಲೋಚನೆಯ ಫಲವಾಗಿ ನಡೆದೇ ಹೋಯಿತು. ಆಗಿ ಹೋದುದಕ್ಕೆ ಮತ್ತೆ ಏಕೆ ಶೋಕಿಸುವೆ?
ವೈಶಂಪಾಯನಃ
ಶ್ರುತ್ವಾ ತದಪ್ರಿಯಂ ರಾಜನ್ ಧೃತರಾಷ್ಟ್ರೋ ಮಹೀಪತಿಃ |
ಪಪಾತ ಭೂಮೌ ನಿಶ್ಚೇಷ್ಟಃ ಕೌರವ್ಯಃ ಪರಮಾರ್ತಿವಾನ್ ॥46॥
ವೈಶಂಪಾಯನನು ಜನಮೇಜಯರಾಜನಿಗೆ ನುಡಿದ– ರಾಜನೆ, ಕರ್ಣವಧದ ಅಪ್ರಿಯವಾದ ವಾರ್ತೆಯನ್ನು ಕೇಳಿ ರಾಜಾ ಧೃತರಾಷ್ಟ್ರನು ಬಹಳ ದುಃಖದಿಂದ ನಿಶ್ಚೇಷ್ಟನಾಗಿ ನೆಲದಲ್ಲಿ ಬಿದ್ದ.
ತಥಾ ಸತ್ಯವ್ರತಾ ದೇವೀ ಗಾಂಧಾರೀ ಧರ್ಮದರ್ಶಿನೀ |
ತಂ ಪ್ರತ್ಯಗೃಹ್ಣಾದ್ ವಿದುರೋ ನೃಪತಿಂ ಸಂಜಯಸ್ತದಾ |
ಪರ್ಯಾಶ್ವಾಸಯತಶ್ಚೈವಂ ತಾವುಭಾವೇವ ಭೂಮಿಪಮ್ ॥47॥
ಹಾಗೇ, ವ್ರತವನ್ನು ತಪ್ಪದೆ ಪಾಲಿಸುವ, ಧರ್ಮವನ್ನು ತಿಳಿಯಬಲ್ಲ ದೇವಿ ಗಾಂಧಾರಿಯೂ ಪರಮದುಃಖದಿಂದ ನಿಶ್ಚೇಷ್ಟಳಾಗಿ ಬಿದ್ದಳು. ರಾಜಾ ಧೃತರಾಷ್ಟ್ರನನ್ನು ವಿದುರನೂ ಸಂಜಯನೂ ಹಿಡಿದುಕೊಂಡರು. ಇಬ್ಬರೂ ಅವನನ್ನು ಸಂತೈಸಿದರು.
ತಥೈವೋತ್ಥಾಪಯಾಮಾಸುರ್ಗಾಂಧಾರೀಂ ರಾಜಯೋಷಿತಃ |
ತಾಭ್ಯಾಮಾಶ್ವಾಸಿತೋ ರಾಜಾ ತೂಷ್ಣೀಮಾಸೀದ್ ವಿಚೇತನಃ ॥48॥
ಹಾಗೇ ಗಾಂಧಾರಿಯನ್ನು ರಾಜಮಹಿಷಿಯರು ಎಬ್ಬಿಸಿದರು. ವಿದುರ ಸಂಜಯರಿಂದ ಸಾಂತ್ವನಗೊಂಡು ಧೃತರಾಷ್ಟ್ರ ಏನೂ ಆಡದೆ ಸುಮ್ಮನೆ ಕುಳಿತ. ಅವನ ಬುದ್ಧಿಗೆ ಏನೂ ತೋಚಲಿಲ್ಲ.
ಇದಂ ಮಹಾಯುದ್ಧಮಖಂ ಮಹಾತ್ಮನೋ-
ರ್ಧನಂಜಯಸ್ಯಾಧಿರಥೇಶ್ಚ ಯಃ ಪಠೇತ್ |
ಸ ಸಮ್ಯಗಿಷ್ಟಸ್ಯ ಮಖಸ್ಯ ಯತ್ಫಲಂ
ತದಾಪ್ನುಯಾತ್ ಸಂಶ್ರವಣಾಚ್ಚ ಭಾರತ ॥49॥
ಮಹಾತ್ಮರಾದ ಅರ್ಜುನ ಮತ್ತು ಕರ್ಣರ ಈ ಮಹಾ ಯುದ್ಧಯಜ್ಞವನ್ನು ಯಾವನು ಪಠಿಸುವನೋ ಅವನು ಚೆನ್ನಾಗಿ ನಡೆಸಿದ ಯಜ್ಞದ ಫಲವನ್ನೇ ಪಡೆಯುತ್ತಾನೆ. ಇದರ ಸರಿಯಾದ ಶ್ರವಣದಿಂದಲೂ ಇದೇ ಫಲ ಲಭ್ಯ.
ಮಖೋ ಹಿ ವಿಷ್ಣುರ್ಭಗವಾನ್ ಸನಾತನೋ
ವಹಂತಿ ತಂ ಚಾಗ್ನ್ಯನಿಲೇಂದುಭಾನವಃ |
ಅತೋಽನಸೂಯುಃ ಶೃಣುತೇ ಪಠೇಚ್ಚ ಯಃ
ಸ ಸರ್ವಲೋಕಾಂಶ್ಚ ಜಯೇತ್ಸುಖೀ ಭವೇತ್ ॥50॥
ಸನಾತನನಾದ ಭಗವಾನ್ ವಿಷ್ಣುವೇ ಯಜ್ಞಸ್ವರೂಪ. ಅವನನ್ನು ತಮ್ಮೊಳಗೆ ಹೊತ್ತವರು ಅಗ್ನಿ ವಾಯು ಚಂದ್ರ ಸೂರ್ಯರು. ಅದರಿಂದ ಅಸೂಯೆ ಇಲ್ಲದೆ ಕೇಳುವವನೂ ಹೇಳುವವನೂ ಎಲ್ಲ ಪುಣ್ಯಲೋಕಗಳನ್ನೂ ಪಡೆಯುವನು, ಸುಖಿಯಾಗುವನು.
ಮಖೋ ಹಿ ವಿಷ್ಣುರ್ಭಗವಾನ್ ಸನಾತನಃ
ಸ ಚಾತ್ರ ದೇವಃ ಪರಿಕೀರ್ತ್ಯತೇ ಯತಃ |

ತತಃ ಸ ಕಾಮಾಂಲ್ಲಭತೇ ಸುಖೀ ನರೋ
ಮಹಾಮುನೇಸ್ತಸ್ಯ ವಚೋಽಮಿತಂ ಯಥಾ ॥51॥
ಸನಾತನನಾದ ಭಗವಾನ್ ವಿಷ್ಣುವೇ ಯಜ್ಞಸ್ವರೂಪ. ಆ ದೇವನು ಇಲ್ಲಿ ವರ್ಣಿತನಾಗುತ್ತಾನೆ. ಅದನ್ನು ಹೇಳುವ ಕೇಳುವ ಮಾನವನು ಎಲ್ಲ ಕಾಮನೆಗಳನ್ನೂ ಪೂರೈಸಿಕೊಳ್ಳುತ್ತಾನೆ. ಸುಖಿಯಾಗುತ್ತಾನೆ. ಏಕೆಂದರೆ ಮಹಾಮುನಿಯ ಮಾತು ಇದು ಮಹಾಭಾರತ, ಅಮಿತಫಲದಾಯಕ.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಕರ್ಣಪರ್ವಣಿ ತ್ರಿನವತಿತಮೋಽಧ್ಯಾಯಃ ॥93॥
॥ ಸಮಾಪ್ತಂ ಕರ್ಣಪರ್ವ ॥
॥ ಶುಭಮಸ್ತು ॥
॥ ಶ್ರೀವೇದವ್ಯಾಸಾಯ ನಮಃ ॥
ಜನಮೇಜಯಃ
ಏವಂ ನಿಪಾತಿತೇ ಕರ್ಣೇ ಸಮರೇ ಸವ್ಯಸಾಚಿನಾ ।
ಅಲ್ಪಾವಶಿಷ್ಟಾಃ ಕುರವಃ ಕಿಮಕುರ್ವತ ವೈ ದ್ವಿಜ ॥
ವಿದೀರ್ಯಮಾಣಂ ಚ ಬಲಂ ದೃಷ್ಟ್ವಾ ರಾಜಾ ಸುಯೋಧನಃ ।
ಪಾಂಡವೈಃ ಪ್ರಾಪ್ತಕಾಲಂ ಚ ಕಿಂ ಪ್ರಾಪದ್ಯತ ಕೌರವಃ ॥
ಏತದಿಚ್ಛಾಮ್ಯಹಂ ಶ್ರೋತುಂ ತದಾಚಕ್ಷ್ವ ದ್ವಿಜೋತ್ತಮ ।
ನ ಹಿ ತೃಪ್ಯಾಮಿ ಪೂರ್ವೇಷಾಂ ಶೃಣ್ವಾನಶ್ಚರಿತಂ ಮಹತ್ ॥
ವೈಶಂಪಾಯನಃ
ತತಃ ಕರ್ಣೇ ಹತೇ ರಾಜನ್ ಧಾರ್ತರಾಷ್ಟ್ರಃ ಸುಯೋಧನಃ ।

ಕರ್ಣಪರ್ವತ್ವಿದಂ ಶ್ರುತ್ವಾ ಸ್ವರ್ಣದಾನಂ ಸಮಾಚರೇತ್ ।
ರಥಂ ಸ್ವರ್ಣಮಯಂ ದತ್ವಾ ಸರ್ವಪಾಪೈಃ ಪ್ರಮುಚ್ಯತೇ ॥
ಯಜ್ಞಸ್ಯ ಫಲಮಾಪ್ನೋತಿ ತೀರ್ಥಸ್ನಾನಫಲಂ ತಥಾ ।
ಆಧಿವ್ಯಾಧಿವಿನಿರ್ಮುಕ್ತಃ ಪರಮಂ ಪದಮಾಪ್ನುಯಾತ್ ॥
ವಾಚಕೋ ಯತ್ತು ಗಾಂ ದತ್ವಾ ಸುಶೀಲಾಂ ಸ್ವರ್ಣಭೂಷಿತಾಮ್ ।
ವಸ್ತ್ರಾಣಿ ತದ್ವದ್ ದತ್ವಾ ತು ದೀರ್ಘಮಾಯುರವಾಪ್ನುಯಾತ್ ॥
॥ ಶ್ರೀಕೃಷ್ಣಾರ್ಪಣಮಸ್ತು ॥
॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥

# ಮಹಾಭಾರತ

## ಶಲ್ಯಪರ್ವ

### 1. ಶಲ್ಯಪರ್ವ

### ಒಂದನೆಯ ಅಧ್ಯಾಯ

ಶಲ್ಯ ಮತ್ತು ದುರ್ಯೋಧನರ ವಧೆಯನ್ನು ಸಂಜಯನ ಮಾತಿನಿಂದ
ತಿಳಿದ ಧೃತರಾಷ್ಟ್ರನು ಮೂರ್ಛೆ ಹೊಂದಿದ್ದು. ಎಚ್ಚರಗೊಂಡ
ಧೃತರಾಷ್ಟ್ರನನ್ನು ವಿದುರನು ಸಮಾಧಾನಪಡಿಸಿದ್ದು.
ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥
ಸಮಸ್ತಗುಣಪರಿಪೂರ್ಣನಾದ, ಸಕಲದೋಷದೂರನಾದ, ಸಕಲಸಚ್ಛಾಸ್ತ್ರ- ಪ್ರತಿಪಾದ್ಯನಾದ, ಮುಕ್ತಾಮುಕ್ತನಿಯಾಮಕನಾದ, ಮುಕ್ತಗಮ್ಯನಾದ ಶ್ರೀಮನ್ನಾರಾಯಣನನ್ನು ನಮಸ್ಕರಿಸಿ, ನರೋತ್ತಮನೆನಿಸಿದ ಮುಖ್ಯಪ್ರಾಣನನ್ನೂ, ನರರೂಪಿಯಾದ ಅರ್ಜುನನನ್ನೂ, ಸಕಲಮಂಗಳದೇವತೆಯಾದ ಜಗನ್ಮಾತೆಯಾದ ಲಕ್ಷ್ಮೀದೇವಿಯನ್ನೂ, ವಿದ್ಯಾಭಿಮಾನಿನಿಯಾದ ಸರಸ್ವತಿಯನ್ನೂ, ಗ್ರಂಥಕರ್ತೃಗಳಾದ ಶ್ರೀವೇದವ್ಯಾಸರನ್ನೂ ನಮಸ್ಕರಿಸಿ, ಜಯಪ್ರದವಾದ ಜಯನಾಮಕವಾದ ಮಹಾಭಾರತವನ್ನು ಆರಂಭಿಸಬೇಕು.
ಜನಮೇಜಯಃ
ಏವಂ ನಿಪಾತಿತೇ ಕರ್ಣೇ ಸಮರೇ ಸವ್ಯಸಾಚಿನಾ ।
ಅಲ್ಪಾವಶಿಷ್ಟಾಃ ಕುರವಃ ಕಿಮಕುರ್ವತ ವೈ ದ್ವಿಜ ॥1॥
ಮಹಾಭಾರತದ ಹದಿನೇಳನೆಯ ದಿನದ ಯುದ್ಧದಲ್ಲಿ ಸವ್ಯಸಾಚಿ ಎನಿಸಿದ ಅರ್ಜುನನು ಕರ್ಣನನ್ನು ಹೊಡೆದುರುಳಿಸಿದ. ಅನಂತರ ಕೌರವ ಪಕ್ಷದಲ್ಲಿ ಕೆಲವರಷ್ಟೇ ಉಳಿದಿದ್ದರು. ಸೈನ್ಯವು ಕ್ಷೀಣಿಸಿತ್ತು. ಎಲೈ ದ್ವಿಜನೇ! ಉಳಿದ ಕೌರವರು ಏನು ಮಾಡಿದರು?
ಉದೀರ್ಯಮಾಣಂ ಚ ಬಲಂ ದೃಷ್ಟ್ವಾ ರಾಜಾ ಸುಯೋಧನಃ ।
ಪಾಂಡವೈಃ ಪ್ರಾಪ್ತಕಾಲಂ ಚ ಕಿಂ ಪ್ರಾಪದ್ಯತ ಕೌರವಃ ॥2॥
ಯುದ್ಧವನ್ನು ಗೆದ್ದುಕೊಂಡ ಪಾಂಡವರ ಸೈನ್ಯದಲ್ಲಿ ಹೊಸ ಹುರುಪು ಕಂಡುಬರುತ್ತಿದೆ. ಕಾಲವು ಪಾಂಡವರಿಗೆ ಅನುಕೂಲವಾಗಿದೆ. ಇದನ್ನು ನೋಡಿದ ದುರ್ಯೋಧನನು ಕಾಲೋಚಿತವಾದ ಯಾವ ಕಾರ್ಯದಲ್ಲಿ ತೊಡಗಿದ?

ಏತದಿಚ್ಛಾಮ್ಯಹಂ ಶ್ರೋತುಂ ತದಾಚಕ್ಷ್ವ ದ್ವಿಜೋತ್ತಮ |
ನ ಹಿ ತೃಪ್ಯಾಮಿ ಪೂರ್ವೇಷಾಂ ಶೃಣ್ವಾನಶ್ಚರಿತಂ ಮಹತ್ ॥3॥
ಹೇ ದ್ವಿಜಶ್ರೇಷ್ಠನೇ! ಈ ಎಲ್ಲಾ ವಿಷಯಗಳನ್ನು ಕೇಳಲು ಬಯಸುತ್ತೇನೆ. ಅವೆಲ್ಲವನ್ನೂ ಹೇಳು. ಏಕೆಂದರೆ ನನ್ನ ಪೂರ್ವಜರ ಅದ್ಭುತವಾದ ಚರಿತ್ರೆಯನ್ನು ಕೇಳಿದಷ್ಟೂ ನನಗೆ ತೃಪ್ತಿ ಉಂಟಾಗುವುದಿಲ್ಲ. ಪುನಃ ಪುನಃ ಕೇಳುವ ಇಚ್ಛೆ ಉಂಟಾಗುತ್ತಿದೆ.
ವೈಶಂಪಾಯನಃ
ತತಃ ಕರ್ಣೇ ಹತೇ ರಾಜನ್ ಧಾರ್ತರಾಷ್ಟ್ರಃ ಸುಯೋಧನಃ |
ಭೃಶಂ ಶೋಕಾರ್ಣವೇ ಮಗ್ನೋ ನಿರಾಶಃ ಸರ್ವತೋಽಭವತ್ ॥4॥
ವೈಶಂಪಾಯನರು ಹೇಳುತ್ತಾರೆ ಮಹಾಭಾರತ ಯುದ್ಧದಲ್ಲಿ ಕರ್ಣನು ಹತನಾದಾಗ ದುರ್ಯೋಧನನು ಬಹಳವಾಗಿ ದುಃಖಿತನಾಗುತ್ತಾನೆ. ಶೋಕಸಾಗರದಲ್ಲಿ ಮುಳುಗಿದ ಅವನನ್ನು ಸರ್ವವಿಧದಲ್ಲಿಯೂ ನಿರಾಶೆಯು ಆವರಿಸುತ್ತದೆ.
ಹಾ ಕರ್ಣ ಹಾ ಕರ್ಣ ಇತಿ ಶೋಚಮಾನೋ ಮುಹುರ್ಮುಹುಃ |
ಕೃಚ್ಛ್ರಾತ್ ಸ್ವಶಿಬಿರಂ ಪ್ರಾಯಾದ್ಧತಶಿಷ್ಟೈರ್ನೃಪೈಃ ಸಹ ॥5॥
``ಹಾ ಕರ್ಣ! ಹಾ ಕರ್ಣ!'' ಎಂಬುದಾಗಿ ಮತ್ತೆ ಮತ್ತೆ ದುಃಖಿಸುತ್ತಾ ಅಳಿದುಳಿದ ರಾಜರೊಡನೆ ತನ್ನ ಶಿಬಿರಕ್ಕೆ ಬಹಳ ಕಷ್ಟದಿಂದ ತೆರಳಿದ.
ಸ ಸಮಾಶ್ವಾಸ್ಯಮಾನೋಽಪಿ ಹೇತುಭಿಃ ಶಾಸ್ತ್ರನಿಶ್ಚಿತೈಃ |
ದುಃಖಾರ್ತೋ ನಾಲಭಚ್ಛರ್ಮ ಸೂತಪುತ್ರವಧಂ ಸ್ಮರನ್ ॥6॥
ದುಃಖಿಸುತ್ತಿರುವ ಸುಯೋಧನನನ್ನು ರಾಜರು ಶಾಸ್ತ್ರದ ಸಹೇತುಕ ಹಿತನುಡಿಗಳಿಂದ ಸಮಾಧಾನಪಡಿಸುತ್ತಾರೆ. ಆದರೂ ಪ್ರಾಣಸ್ನೇಹಿತನಾದ ಕರ್ಣನ ವಧೆಯನ್ನು ನೆನೆಯುತ್ತಾ ಮತ್ತೂ ದುಃಖಿತನಾದ ದುರ್ಯೋಧನನು ಮನಸ್ಸಮಾಧಾನವನ್ನು ಹೊಂದಲಿಲ್ಲ.
ಸ ದೈವಂ ಬಲವನ್ಮತ್ವಾ ಪ್ರಭಾತೇ ವಿಮಲೇ ಸತಿ |
ಸಂಗ್ರಾಮೇ ನಿಶ್ಚಯಂ ಕೃತ್ವಾ ಪುನರ್ಯುದ್ಧಾಯ ನಿರ್ಯಯೌ ॥7॥
`ವಿಧಿಯೇ ಬಲವತ್ತಾದದ್ದು, ಅದೇ ಮುಂದಾಗುವುದನ್ನು ನಿಶ್ಚಯಿಸುತ್ತದೆ' ಎಂದು ಅರಿತ ದುರ್ಯೋಧನನು ಸೂರ್ಯೋದಯವಾಗುತ್ತಿರಲು ಯುದ್ಧದಲ್ಲಿಯೇ ನಿಶ್ಚಯವುಳ್ಳವನಾಗಿ ಮತ್ತೆ ಯುದ್ಧಕ್ಕಾಗಿ ಹೊರಡುತ್ತಾನೆ.
ಶಲ್ಯಂ ಸೇನಾಪತಿಂ ಕೃತ್ವಾ ವಿಧಿವದ್ ರಾಜಪುಂಗವಃ(ಮ್) |
ರಣಾಯ ನಿರ್ಯಯೌ ರಾಜಾ ಹತಶೇಷೈರ್ನೃಪೈಃ ಸಹ ॥8॥
ತೆರವಾದ ಸೇನಾಧಿಪತಿ ಸ್ಥಾನದಲ್ಲಿ ಶ್ರೇಷ್ಠರಾಜನಾದ ಶಲ್ಯನನ್ನು ವಿಧ್ಯುಕ್ತವಾಗಿ ನೇಮಿಸುತ್ತಾನೆ. ಬದುಕುಳಿದ ರಾಜರೊಡನೆ ದುರ್ಯೋಧನನು ಯುದ್ಧಕ್ಕೆ ಹೊರಡುತ್ತಾನೆ.
ತತಃ ಸುತುಮುಲಂ ಯುದ್ಧಂ ಕುರುಪಾಂಡವಸೇನಯೋಃ |
ಬಭೂವ ಭರತಶ್ರೇಷ್ಠ ದೇವಾಸುರರಣೋಪಮಮ್ | |9॥
ಭರತಶ್ರೇಷ್ಠನೇ! ಕೌರವ-ಪಾಂಡವರ ಸೇನೆಗಳ ಮಧ್ಯೆ ಬಹಳ ಗೊಂದಲ- ಮಯವಾದ ಹಾಗೂ ಭಯಂಕರವಾದ ಯುದ್ಧವು ನಡೆಯುತ್ತದೆ. ಈ ಯುದ್ಧವು ಹಿಂದೆ ದೇವಾಸುರರ ನಡುವೆ ನಡೆದ ಯುದ್ಧದ ಹಾಗೆ ಇತ್ತು.
ತತಃ ಶಲ್ಯೋ ಮಹಾರಾಜ ಕೃತ್ವಾ ಕದನಮಾಹವೇ |
ಸಸೈನ್ಯೋಽಥ ಮಧ್ಯಾಹ್ನೇ ಧರ್ಮರಾಜೇನ ಘಾತಿತಃ ॥10॥
ಮಹಾರಾಜ! ಶಲ್ಯನೂ ಕೂಡ ಯುದ್ಧದಲ್ಲಿ ಬಹಳವಾಗಿ ಹೋರಾಡುತ್ತಾನೆ. ಮಧ್ಯಾಹ್ನದ ಸಮಯದಲ್ಲಿ ಧರ್ಮರಾಜನು ಶಲ್ಯನನ್ನೂ ಅವನ ಸೈನ್ಯವನ್ನೂ ಸಾಯಿಸುತ್ತಾನೆ.
ತತೋ ದುರ್ಯೋಧನೋ ರಾಜಾ ಹತಬಂಧೂ ರಣಾಜಿರಾತ್ |
ಅಪಸೃತ್ಯ ಹ್ರದಂ ಘೋರಂ ವಿವೇಶ ರಿಪುಜಾದ್ಭಯಾತ್ ॥11॥
ತನ್ನ ಎಲ್ಲಾ ತಮ್ಮಂದಿರನ್ನೂ, ಸಂಬಂಧಿಗಳನ್ನು ಕಳೆದುಕೊಂಡ ದುರ್ಯೋಧನನು ರಣರಂಗವನ್ನು ತೊರೆದು, ಶತ್ರುಗಳಿಂದ ಭಯಗೊಂಡು ಭಯಂಕರವಾದ (ವೈಶಂಪಾಯನ) ಸರೋವರವನ್ನು ಪ್ರವೇಶಿಸಿ ಅಡಗಿಕೊಳ್ಳುತ್ತಾನೆ.
ಅಥಾಪರಾಹ್ಣೇ ತಸ್ಯಾಹ್ನಃ ಪರಿವಾರ್ಯ ಮಹಾರಥೈಃ |
ಹ್ರದಾದಾಹೂಯ ಯುದ್ಧಾಯ ಭೀಮಸೇನೇನ ಪಾತಿತಃ ॥12॥
ಇಷ್ಟೆಲ್ಲಾ ನಡೆದ ನಂತರ ಅದೇ ದಿನ ಅಪರಾಹ್ಣದಲ್ಲಿ ಭೀಮಸೇನನು ಮಹಾರಥರನ್ನೆಲ್ಲಾ ಸೋಲಿಸಿ, ಸರೋವರದ ಬಳಿಗೆ ಬರುತ್ತಾನೆ. ಮಡುವಿನಲ್ಲಿ ಅಡಗಿದ ದುರ್ಯೋಧನನನ್ನು ಕಟುನುಡಿಗಳಿಂದ ಯುದ್ಧಕ್ಕಾಗಿ ಹೊರಸೆಳೆದು ಹೊಡೆದುರುಳಿಸುತ್ತಾನೆ.
ತಸ್ಮಿಂಸ್ತು ನಿಹತೇ ವೀರೇ ಹತಶಿಷ್ಟಾಸ್ತ್ರಯೋ ರಥಾಃ |
ಕೃತವರ್ಮಾ ಕೃಪೋ ದ್ರೌಣಿರ್ಜಘ್ನುಃ ಪಾಂಡವಸೈನಿಕಾನ್ ॥13॥
ದುರ್ಯೋಧನನು ಹತನಾದ ಮೇಲೆ ಉಳಿದ ಮೂವರು ಮಹಾರಥರು ಕೃತವರ್ಮ, ಕೃಪ ಹಾಗೂ ಅಶ್ವತ್ಥಾಮ. ಇವರು ಪಾಂಡವಸೈನಿಕರನ್ನು ಸದೆಬಡಿದರು.
ತತೋಽಪರಾಹ್ಣಸಮಯೇ ಶಿಬಿರಾದೇತ್ಯ ಸಂಜಯಃ |
ಪ್ರವಿವೇಶ ಪುರೀಂ ದೀನೋ ದುಃಖಶೋಕಸಮನ್ವಿತಃ ॥14॥
ನಂತರ ಅಪರಾಹ್ಣಕಾಲದಲ್ಲಿ ಸಂಜಯನು ದುಃಖ ಹಾಗೂ ಶೋಕದಿಂದ ದೀನನಾಗಿ ಶಿಬಿರದಿಂದ ಹಿಂತಿರುಗಿ ಹಸ್ತಿನಾಪುರಕ್ಕೆ ಬಂದನು.

ಪ್ರವಿಶ್ಯ ತು ಪುರಂ ತೂರ್ಣಂ ಭುಜಾವುದ್ಯಮ್ಯ ದುಃಖಿತಃ |
ವೇಪಮಾನಸ್ತದಾ ರಾಜ್ಞಃ ಪ್ರವಿವೇಶ ನಿವೇಶನಮ್ ||15||
ಪಟ್ಟಣವನ್ನು ಪ್ರವೇಶಿಸಿದ ಸಂಜಯನು ಭುಜಗಳನ್ನು ಎತ್ತಿಕೊಂಡು ದುಃಖದಿಂದ ನಡುಗುತ್ತಾ ರಾಜನ ಅರಮನೆಯನ್ನು ಪ್ರವೇಶಿಸಿದನು.
ಧಾವತಶ್ಚಾಪ್ಯಪಶ್ಯತ್ ಸ ತತ್ರತ್ಯಾನ್ ಪುರುಷರ್ಷಭಾನ್ |
ನಷ್ಟಚಿತ್ತಾನಿವೋನ್ಮತ್ತಾನ್ ಶೋಕೇನ ಭೃಶದುಃಖಿತಾನ್ ||16||
ಅರಮನೆಯಲ್ಲಿ ಅವನ ಕಂಡ ದೃಶ್ಯ ಹೀಗಿತ್ತು ಅಲ್ಲಿರುವ ಪುರುಷಶ್ರೇಷ್ಠರು ಮನಸ್ಸಿನ ಸ್ಥಿಮಿತವನ್ನು ಕಳೆದುಕೊಂಡು, ಬಹಳ ದುಃಖಿತರಾಗಿ, ಹುಚ್ಚರಂತೆ ಆ ಕಡೆ ಈ ಕಡೆ (ಅತ್ತಿತ್ತ) ಓಡಾಡುತ್ತಿದ್ದರು.
ದೃಷ್ಟ್ವೈವ ನರಾನ್ ಶೀಘ್ರಂ ವ್ಯಾಜಹಾರಾತಿದುಃಖಿತಾನ್ |
ರುರೋದ ಚ ನರವ್ಯಾಘ್ರ ಹಾ ರಾಜನ್ನಿತಿ ದುಃಖಿತಃ ||17||
ಅಹೋ ಬತ ವಿಪನ್ನೋಽಸ್ಮಿ ನಿಧನೇನ ಮಹಾತ್ಮನಃ |
ಅಸೌ ಸುಬಲವಾನ್ ಕಾಲೋ ಗತಿಶ್ಚ ವಿಷಮಾ ತಥಾ |
ಶಕ್ರತುಲ್ಯಬಲಾಃ ಸರ್ವೇ ಯತ್ರಾಹನ್ಯಂತ ಪಾರ್ಥಿವಾಃ ||18||
ಹೀಗೆ ಬಹುದುಃಖಿತರಾದ ಅರಮನೆಯ ಜನರನ್ನು ಕಂಡು ಸಂಜಯನೂ ದುಃಖಿತನಾಗುತ್ತಾನೆ. ಅಳುತ್ತಾ ಹೀಗೆ ಹೇಳಿದ, ``ನರಶ್ರೇಷ್ಠ! ರಾಜನೇ! ಮಹಾತ್ಮ ಸುಯೋಧನನ ಸಾವಿನಿಂದ ಬಹಳ ದುಃಖಿತನಾಗಿದ್ದೇನೆ. ಕಾಲವು ಬಹಳ ಬಲಶಾಲಿಯಾದದ್ದು. ಅದರ ಗತಿಯು ನಮಗೆ ವಿಪರೀತವಾಗಿದೆ. ಏಕೆಂದರೆ ಪರಾಕ್ರಮದಲ್ಲಿ ಇಂದ್ರನಿಗೆ ಸದೃಶರಾದ ರಾಜರು ಈ ಯುದ್ಧದಲ್ಲಿ ಮಡಿದಿದ್ದಾರೆ.''
ವೈಶಂಪಾಯನಃ
ದೃಷ್ಟ್ವೈವ ಹಿ ಪುರೇ ರಾಜನ್ ಜನಃ ಸರ್ವೋ ಹಿ ಸಂಜಯಮ್ |
ಶೋಕೇನ ಮಹತಾ ಯುಕ್ತಃ ಸರ್ವತೋ ರಾಜಸತ್ತಮ |
ಪುರುರೋದ ಭಯೋದ್ವಿಗ್ನೋ ಹಾ ರಾಜನ್ನಿತಿ ಸಸ್ವನಮ್ ||19||
ರಾಜೋತ್ತಮನೇ! ಅರಮನೆಯಲ್ಲಿ ಸಂಜಯನನ್ನು ಕಂಡಾಕ್ಷಣ ಎಲ್ಲಾ ಜನರೂ ಬಹಳ ದುಃಖದಿಂದ ಕೂಡಿದವರಾಗಿ ಹಾಗೂ ಭಯದಿಂದ ಕಳವಳಗೊಂಡವರಾಗಿ ``ಹಾ! ರಾಜನ್!'' ಎಂದು ಜೋರಾಗಿ ಶಬ್ದಮಾಡುತ್ತಾ ಅತ್ತರು.
ಆಕುಮಾರಂ ನರವ್ಯಾಘ್ರ ತತ್ ಪುರಂ ವೈ ಸಮಂತತಃ |
ಆರ್ತನಾದಂ ಮಹಚ್ಚಕ್ರೇ ಶ್ರುತ್ವಾ ವಿನಿಹತಂ ನೃಪಮ್ ||20||
ನರೋತ್ತಮನೇ! ರಾಜ ದುರ್ಯೋಧನನು ಮಡಿದ ವಾರ್ತೆಯನ್ನು ಕೇಳಿ ಅರಮನೆಯಲ್ಲಿ ಮಕ್ಕಳಾದಿಯಾಗಿ ಎಲ್ಲರೂ ಜೋರಾಗಿ ಅಳುತ್ತಾರೆ. ಇಡೀ ಅರಮನೆಯೇ ದುಃಖದಲ್ಲಿ ಮುಳುಗಿತು.
ಪಪಾತ ಚ ತತೋ ಭೂಮೌ ಸ ಚೈವ ಪುರುಷರ್ಷಭಃ |
ಶ್ರುತ್ವಾ ಸ ತಾನಿವೋನ್ಮತ್ತಾನ್ ಶೋಕೇನ ಭೃಶಪೀಡಿತಾನ್ ||21||
ಬಹುದುಃಖಿತರಾಗಿ ಉನ್ಮತ್ತರಂತೆ ವರ್ತಿಸುತ್ತಿದ್ದ ಅರಮನೆಯ ಜನರ ದುಃಖದ ಆರ್ತನಾದವನ್ನು ಕೇಳಿದ ಧೃತರಾಷ್ಟ್ರನು ಭೂಮಿಯಲ್ಲಿ ಕುಸಿದು ಬೀಳುತ್ತಾನೆ.
ತಥಾ ಸ ವಿಹ್ವಲಃ ಸೂತಃ ಪ್ರವಿಶ್ಯ ನೃಪತಿಕ್ಷಯಮ್ |
ದದರ್ಶ ನೃಪತಿಶ್ರೇಷ್ಠಂ ಪ್ರಜ್ಞಾಚಕ್ಷುಷಮೀಶ್ವರಮ್ ||22||
ನಂತರ ಒಳಗೆ ಪ್ರವೇಶಿಸಿದ, ದುಃಖವಿಹ್ವಲನಾದ ಸಂಜಯನು ಬಾಹ್ಯಕಣ್ಣನ್ನು ಕಳೆದುಕೊಂಡಿದ್ದರೂ ಪ್ರಜ್ಞಾನೇತ್ರವನ್ನು ಹೊಂದಿದ ಧೃತರಾಷ್ಟ್ರನನ್ನು ನೋಡುತ್ತಾನೆ.
ದೃಷ್ಟ್ವಾ ಚಾಸೀನಮನಘಂ ಸಮಂತಾತ್ ಪರಿವಾರಿತಮ್ |
ಸ್ನುಷಾಭಿರ್ಭರತಶ್ರೇಷ್ಠ ಗಾಂಧಾರ್ಯಾ ವಿದುರೇಣ ಚ ||23||
ತಥಾಽನ್ಯೈಶ್ಚ ಸುಹೃದ್ಭಿಶ್ಚ ಜ್ಞಾತಿಭಿಶ್ಚ ಹಿತೈಷಿಭಿಃ |
ತಮೇವ ಚಾರ್ಥಂ ಧ್ಯಾಯಂತಂ ಕರ್ಣಸ್ಯ ನಿಧನಂ ಪ್ರತಿ ||24||
ರುದನ್ನೇವಾಬ್ರವೀದ್ವಾಕ್ಯಂ ರಾಜಾನಂ ಜನಮೇಜಯ |
ನಾತಿಹೃಷ್ಟಮನಾಃ ಸೂತೋ ಬಾಷ್ಪಸಂದಿಗ್ಧಯಾ ಗಿರಾ ||25||
ಭರತಶ್ರೇಷ್ಠ! ನಿಷ್ಪಾಪಿಯಾದ ಧೃತರಾಷ್ಟ್ರನನ್ನು ಸೊಸೆಯಂದಿರು, ಗಾಂಧಾರಿ ಹಾಗೂ ವಿದುರ ಮೊದಲಾದವರು ಸುತ್ತಲೂ ಸುತ್ತುವರಿದಿದ್ದಾರೆ. ಹಾಗೆಯೇ ಬೇರೆ ಸ್ನೇಹಿತರು, ಬಾಂಧವರು ಹಾಗೂ ಹಿತೈಷಿಗಳು ಸೇರಿದ್ದಾರೆ. ರಾಜನಾದರೂ ಕರ್ಣನ ಮರಣವನ್ನೇ ನೆನೆಸಿಕೊಳ್ಳುತ್ತಿದ್ದಾನೆ. ಹೇ ಜನಮೇಜಯ! ಇಂತಹ ಧೃತರಾಷ್ಟ್ರನನ್ನು ನೋಡಿದ ಸಂಜಯನು ಅಸಂತುಷ್ಟಮನಸ್ಸುಳ್ಳವನಾಗಿ, ಕಣ್ಣೀರಿನಿಂದ ಗಂಟಲು ಕಟ್ಟಿದವನಾಗಿ ರಾಜ ಧೃತರಾಷ್ಟ್ರನಿಗೆ ಹೀಗೆ ಹೇಳುತ್ತಾನೆ.
ಸಂಜಯಃ
ಸಂಜಯೋಽಹಂ ನರವ್ಯಾಘ್ರ ನಮಸ್ತೇ ಭರತರ್ಷಭ ||26||
ಮದ್ರಾಧಿಪೋ ಹತಃ ಶಲ್ಯಃ ಸೌಬಲಶ್ಶಕುನಿಸ್ತಥಾ |
ಉಲೂಕಃ ಪುರುಷವ್ಯಾಘ್ರ ಕೈತವ್ಯೋ ದೃಢವಿಕ್ರಮಃ ||27||
ಹೇ ನರಶ್ರೇಷ್ಠ! ನಾನು ಸಂಜಯ ಬಂದಿದ್ದೇನೆ. ನಿನಗೆ ನಮಸ್ಕಾರ. ಯುದ್ಧದಲ್ಲಿ ಮದ್ರದೇಶಾಧಿಪತಿಯಾದ ಶಲ್ಯನೂ, ಸುಬಲನ ಮಗನಾದ ಶಕುನಿಯೂ, ಕಿತವನ ಮಗನಾದ, ಒಳ್ಳೆಯ ಪರಾಕ್ರಮಿಯಾದ ಉಲೂಕ ಇವರೇ ಮೊದಲಾದವರು ಯುದ್ಧದಲ್ಲಿ

ಮಡಿದಿದ್ದಾರೆ.
ಸಂಶಪ್ತಕಾ ಹತಾಃ ಸರ್ವೇ ಕಾಂಭೋಜಾಶ್ಚ ಶಕೈಸ್ಸಹ |
ಮ್ಲೇಚ್ಛಾಶ್ಚ ಪಾರ್ವತೀಯಾಶ್ಚ ಯವನಾಶ್ಚ ನಿಪಾತಿತಾಃ |
ಮತ್ಸ್ಯಾಶ್ಚೈವ ಮಹಾರಾಜನ್ ಶೂರಸೇನಾಶ್ಚ ಪಾತಿತಾಃ ॥28॥
ರಾಜನೇ, ಸಂಶಪ್ತಕರು, ಕಾಂಭೋಜದೇಶದ ಯೋಧರು, ಶಕರು, ಮ್ಲೇಚ್ಛರು, ಪರ್ವತವಾಸಿ ಯೋಧರು, ಯವನರು, ಮತ್ಸ್ಯದೇಶದ ಯೋಧರು, ಶೂರಸೇನರು ಇವರೆಲ್ಲರೂ ಯುದ್ಧದಲ್ಲಿ ಪ್ರಾಣವನ್ನು ಕಳೆದುಕೊಂಡಿದ್ದಾರೆ.
ಪ್ರಾಚ್ಯಾ ಹತಾ ಮಹಾರಾಜ ದಾಕ್ಷಿಣಾತ್ಯಾಶ್ಚ ಸರ್ವಶಃ |
ಉದೀಚ್ಯಾಶ್ಚ ಹತಾಸ್ಸರ್ವೇ ಪ್ರತೀಚ್ಯಾಶ್ಚ ಪರಂತಪ ॥29॥
ಮಹಾರಾಜ| ಶತ್ರುತಾಪಕರ! ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ ದಿಕ್ಕಿನ ಯೋಧರು ಎಲ್ಲರೂ ಯುದ್ಧದಲ್ಲಿ ಮಡಿದಿದ್ದಾರೆ.
ರಾಜಾನೋ ರಾಜಪುತ್ರಾಶ್ಚ ಸರ್ವೇ ವಿನಿಹತಾ ನೃಪ |
ಕರ್ಣಪುತ್ರೋ ಹತಶ್ಶೂರಃ ವೃಷಸೇನೋ ಮಹಾಬಲಃ ॥30॥
ರಾಜರು, ರಾಜಕುಮಾರರು ಎಲ್ಲರೂ ನಷ್ಟರಾಗಿದ್ದಾರೆ. ಮಹಾಬಲಶಾಲಿಯಾದ ಶೂರನಾದ ಕರ್ಣಪುತ್ರ ವೃಷಸೇನನೂ (ಸತ್ಯಸೇನನೂ) ಹತನಾಗಿದ್ದಾನೆ.
ದುರ್ಯೋಧನೋ ಹತೋ ರಾಜನ್ ಯಥೋಕ್ತಂ ಪಾಂಡುಸೂನುನಾ |
ಭಗ್ನಸಕ್ಥಿರ್ಮಹಾರಾಜ ಶೇತೇ ಪಾಂಸುಷು ರೂಷಿತಃ ॥31॥
ಮಹಾರಾಜ! ಹಿಂದೆ ಭೀಮಸೇನನು ಪ್ರತಿಜ್ಞೆಮಾಡಿದ ರೀತಿಯಲ್ಲಿಯೇ ದುರ್ಯೋಧನನು ತೊಡೆಮುರಿದು ಧೂಳಿನಿಂದ ಲೇಪಿತನಾಗಿ ಭೂಮಿಯಲ್ಲಿ ಮಲಗಿದ್ದಾನೆ.
ಧೃಷ್ಟದ್ಯುಮ್ನೋ ಹತೋ ರಾಜನ್ ಶಿಖಂಡೀ ಚಾಪರಾಜಿತಃ |
ಉತ್ತಮೌಜಾ ಯುಧಾಮನ್ಯುಃ ತಥಾ ಸರ್ವೇ ಪ್ರಭದ್ರಕಾಃ ॥32॥
ಪಾಂಚಾಲಾಶ್ಚ ಮಹಾರಾಜ ಚೇದಯಶ್ಚ ನಿಷೂದಿತಾಃ |
ತವ ಪುತ್ರಾಃ ಹತಾಸ್ಸರ್ವೇ ದ್ರೌಪದೇಯಾಶ್ಚ ಭಾರತ ॥33॥
ರಾಜನೇ! ಇನ್ನು ಪಾಂಡವರ ಕಡೆಯಲ್ಲಿ ಧೃಷ್ಟದ್ಯುಮ್ನನೂ ಹತನಾಗಿದ್ದಾನೆ. ಸದಾ ಜಯಶಾಲಿಯಾದ ಶಿಖಂಡಿಯೂ ಮಡಿದಿದ್ದಾನೆ. ಉತ್ತಮೌಜ, ಯುಧಾಮನ್ಯು, ಪ್ರಭದ್ರಕರು, ಪಾಂಚಾಲರು, ಚೇದಿದೇಶದ ಯೋಧರು, ಇವರೆಲ್ಲರೂ ಹತರಾಗಿದ್ದಾರೆ.
ಭರತಕುಲಪ್ರಸೂತನೇ! ನಿನ್ನ ಎಲ್ಲಾ ಮಕ್ಕಳೂ ಯುದ್ಧದಲ್ಲಿ ಮಡಿದಿದ್ದಾರೆ. ದ್ರೌಪದಿಯ ಕುಮಾರರಾದ ಉಪಪಾಂಡವರೂ ಸತ್ತಿದ್ದಾರೆ.
ನರಾಃ ವಿನಿಹತಾಸ್ಸರ್ವೇ ಗಜಾಶ್ಚ ವಿನಿಷೂದಿತಾಃ |
ರಥಿನಶ್ಚ ನರವ್ಯಾಘ್ರ ತಥಾಽಶ್ವಾ ನಿಹತಾ ಯುಧಿ ॥34॥
ನರಶ್ರೇಷ್ಠ! ಯುದ್ಧದಲ್ಲಿ ಎಲ್ಲಾ ಪದಾತಿಗಳು, ಆನೆಗಳು, ರಥಿಕರು ಹಾಗೂ ಕುದುರೆಗಳು ಎಲ್ಲರೂ ಸತ್ತಿದ್ದಾರೆ.
ನಿಶ್ಶೇಷಂ ಶಿಬಿರಂ ರಾಜನ್ ತಾವಕಾನಾಂ ಕೃತಂ ಪ್ರಭೋ |
ಪಾಂಡವಾನಾಂ ಚ ಶೂರಾಣಾಂ ಸಮಾಸಾದ್ಯ ಪರಸ್ಪರಮ್ ॥35॥
ರಾಜನೇ! ನಿನ್ನ ಹಾಗೂ ಪಾಂಡವರ ಸೈನ್ಯವು ಪರಸ್ಪರ ಹೋರಾಡಿ ಸತ್ತಿದೆ. ಎರಡೂ ಕಡೆಯ ಯುದ್ಧ ಶಿಬಿರಗಳು ಖಾಲಿಯಾಗಿವೆ.
ಪ್ರಾಯಃ ಸ್ತ್ರೀಶೇಷಮಭವತ್ ಜಗತ್ ಕಾಲೇನ ಮೋಹಿತಮ್ |
ಸಪ್ತ ವೈ ಪಾಂಡವಾಶ್ಶಿಷ್ಟಾ ಧಾರ್ತರಾಷ್ಟ್ರಾಃ ತ್ರಯೋ ಜನಾಃ ॥36॥
ಬಹುಶಃ ಕಾಲಪಾಶಕ್ಕೊಳಗಾಗಿ ಮೋಹಕ್ಕೊಳಗಾದ ಜಗತ್ತಿನಲ್ಲಿ ಸ್ತ್ರೀಯರು ಮಾತ್ರ ಉಳಿದಿದ್ದಾರೆ. ಪಾಂಡವರಲ್ಲಿ ಏಳು ಮಂದಿ ಹಾಗೂ ಕೌರವರ ಕಡೆಯಲ್ಲಿ ಮೂವರು ಉಳಿದಿದ್ದಾರೆ.
ತೇ ಚೈವ ಭ್ರಾತರಃ ಪಂಚ ವಾಸುದೇವೋಽಥ ಸಾತ್ಯಕಿಃ |
ಕೃಪಶ್ಚ ಕೃತವರ್ಮಾ ಚ ದ್ರೌಣಿಶ್ಚ ಜಯತಾಂ ವರಃ ॥37॥
ಪಾಂಡವರಲ್ಲಿ ಧರ್ಮರಾಜ ಮೊದಲಾದ ಪಂಚ ಪಾಂಡವರು, ಶ್ರೀ ಕೃಷ್ಣ ಹಾಗೂ ಸಾತ್ಯಕಿ ಇವರು ಉಳಿದುಕೊಂಡಿದ್ದಾರೆ. ಕೌರವರ ಕಡೆಯಲ್ಲಿ ಕೃಪಾಚಾರ್ಯ, ಕೃತವರ್ಮ ಹಾಗೂ ಜಯಶಾಲಿಯಾದ ಅಶ್ವತ್ಥಾಮ ಇವರು ಉಳಿದಿದ್ದಾರೆ.
ಏತೇ ಶೇಷಾ ಮಹಾರಾಜ ರಥಿನೋ ರಾಜಸತ್ತಮ |
ಅಕ್ಷೋಹಿಣೀನಾಮಷ್ಟಾನಾಂ ದಶಾನಾಂ ಚ ನರೇಶ್ವರ |
ಏತೇ ಶೇಷಾ ಮಹಾರಾಜ ಸರ್ವೇಽನ್ಯೇ ನಿಧನಂ ಗತಾಃ ॥38॥
ಹೇ ರಾಜಶ್ರೇಷ್ಠ! ಪಾಂಡವರ ಏಳು ಅಕ್ಷೋಹಿಣೀ ಸೈನ್ಯ ಹಾಗೂ ಕೌರವರ ಹನ್ನೊಂದು ಅಕ್ಷೌಹಿಣಿ ಸೈನ್ಯದಲ್ಲಿ ಈಗ ಉಳಿದಿರುವವರು ಇವರು ಮಾತ್ರ. ಮಹಾರಾಜ! ಉಳಿದೆಲ್ಲರೂ ನಿಧನ ಹೊಂದಿದ್ದಾರೆ.
ಕಾಲೇನ ನಿಹತಂ ಸರ್ವಂ ಜಗದ್ವೈ ಭರತರ್ಷಭ |
ದುರ್ಯೋಧನಂ ವೈ ಪುರತಃ ಕೃತ್ವಾ ಸರ್ವೇ ಹತಾ ನರಾಃ ॥39॥
ಭರತಶ್ರೇಷ್ಠನೇ! ಇಡೀ ಜಗತ್ತು ಕಾಲನಾಮಕ ಭಗವಂತನಿಂದ ಹತವಾಗಿದೆ. ದುರ್ಯೋಧನನನ್ನು ಮುಂದಿಟ್ಟುಕೊಂಡು ಎಲ್ಲಾ ಜನರೂ ಮೃತರಾಗಿದ್ದಾರೆ.
ವೈಶಂಪಾಯನಃ
ಏತಚ್ಛ್ರುತ್ವಾ ವಚಃ ಕ್ರೂರಂ ಧೃತರಾಷ್ಟ್ರೋ ಜನೇಶ್ವರಃ |

ನಿಪಪಾತ ಮಹಾರಾಜ ಗತಸತ್ತ್ವೋ ಮಹೀತಳೇ ॥40॥
ವೈಶಂಪಾಯನರು ಹೇಳಿದರು ಮಹಾರಾಜ! ಕರ್ಣಕಠೋರವಾದ ಈ ಮಾತನ್ನು ಕೇಳಿದ ಚಕ್ರವರ್ತಿ ಧೃತರಾಷ್ಟ್ರನು ಶಕ್ತಿ ಕಳೆದುಕೊಂಡು ನೆಲದಲ್ಲಿ ಕುಸಿದುಬಿದ್ದನು.
ತಸ್ಮಿನ್ ನಿಪತಿತೇ ವೀರೇ ವಿದುರೋಽಪಿ ಮಹಾಯಶಾಃ |
ನಿಪಪಾತ ಮಹಾರಾಜ ಪುತ್ರವ್ಯಸನಕರ್ಶಿತಃ ॥41॥
ಧೃತರಾಷ್ಟ್ರನು ಕುಸಿದು ಬೀಳಲು ಮಹಾಕೀರ್ತಿಶಾಲಿಯಾದ ವಿದುರನೂ ಕೂಡ ರಾಜಪುತ್ರರ ವಿಷಯದಲ್ಲಿ ದುಃಖಕ್ಕೊಳಗಾಗಿ ಕುಸಿಯುತ್ತಾನೆ.
ಗಾಂಧಾರೀ ಚ ಮಹಾಭಾಗಾ ಸರ್ವಾಶ್ಚ ಕುರುಯೋಷಿತಃ |
ಪತಿತಾಸ್ಸಹಸಾ ಭೂಮೌ ಶ್ರುತ್ವಾ ಘೋರತರಂ ವಚಃ ॥42॥
ಅತಿಭಯಂಕರವಾದ ಮಾತನ್ನು ಕೇಳಿ ಮಹಾಭಾಗ್ಯವಂತಳಾದ ಗಾಂಧಾರಿ ಹಾಗೂ ಎಲ್ಲಾ ಕೌರವಸ್ತ್ರೀಯರೂ ಕೂಡಲೇ ನೆಲದಲ್ಲಿ ಕುಸಿದು ಬಿದ್ದರು.
ನಿಃಸಂಜ್ಞಂ ಪತಿತಂ ಭೂಮೌ ತದಾಸೀದ್ರಾಜಮಂಡಲಮ್ |
ವಿಲಾಪಂಮೂರ್ಛೋಪಹತಂ ಚಿತ್ರಂ ನ್ಯಸ್ತಂ ಪಟೇ ಯಥಾ ॥43॥
ಸ್ತ್ರೀಯರು, ಪುರುಷರೂ ಸೇರಿ ಇಡೀ ರಾಜನ ಅಂತಃಪುರದ ಸಕಲಪರಿವಾರವೇ ನೆಲದಲ್ಲಿ ಬಿದ್ದು ಎಲ್ಲರ ಸದ್ದು ಅಡಗಿದೆ. ದುಃಖದಿಂದ ಮೂರ್ಛಾವಸ್ಥೆಗೆ ಹೋಗಿದೆ. ಈ ದೃಶ್ಯವು ಬಟ್ಟೆಯೊಂದರಲ್ಲಿ ಬರೆದ ಚಿತ್ರದ ಹಾಗೆ ಇತ್ತು.
ಕೃಚ್ಛ್ರೇಣ ತು ತತಸ್ತತ್ರ ಧೃತರಾಷ್ಟ್ರೋ ಮಹೀಪತಿಃ |
ಶನೈರಲಭತ ಪ್ರಾಣಾನ್ ಪುತ್ರವ್ಯಸನಕರ್ಶಿತಃ ॥44॥
ಅನಂತರ ಪುತ್ರಶೋಕಕ್ಕೊಳಗಾದ ರಾಜ ಧೃತರಾಷ್ಟ್ರನು ಬಹಳ ಕಷ್ಟದಿಂದ ನಿಧಾನವಾಗಿ ಪ್ರಾಣವನ್ನು (ಚೇತನ) ಹೊಂದಿದನು.
ಲಬ್ಧ್ವಾ ತು ನೃಪತಿಃ ಪ್ರಾಣಾನ್ ವೇಪಮಾನಃ ಪುನಃ ಪುನಃ |
ನಿರೀಕ್ಷ್ಯ ಚ ದಿಶಸ್ಸರ್ವಾಃ ಕ್ಷತ್ತಾರಂ ವಾಕ್ಯಮಬ್ರವೀತ್ ॥45॥
ಪ್ರಾಣಶಕ್ತಿಯಿಂದ ಜಾಗೃತನಾದ ಧೃತರಾಷ್ಟ್ರನು ಮತ್ತೆ ಮತ್ತೆ ನಡುಗುತ್ತಾನೆ. ತನ್ನ ಸುತ್ತಲಿನ ದೃಶ್ಯವನ್ನು ನೋಡಿ ವಿದುರನಿಗೆ ಹೇಳುತ್ತಾನೆ.
ಧೃತರಾಷ್ಟ್ರಃ
ವಿದ್ವನ್ ಕ್ಷತ್ತರ್ಮಹಾಪ್ರಾಜ್ಞ ತ್ವಂ ಗತಿರ್ಭರತರ್ಷಭ |
ಮಮಾನಾಥಸ್ಯ ಸುಭೃಶಂ ಪುತ್ರಹೀನಸ್ಯ ಸರ್ವಶಃ ॥46॥
ಧೃತರಾಷ್ಟ್ರನು ಹೇಳಿದನು ವಿದ್ವನ್! ಮಹಾಜ್ಞಾನಿಯೇ! ಭರತಶ್ರೇಷ್ಠ! ವಿದುರ! ಮಕ್ಕಳನ್ನು ಕಳೆದುಕೊಂಡು ಎಲ್ಲಾ ರೀತಿಯಲ್ಲಿ ಅನಾಥನಾದ ನನಗೆ ಅತಿಶಯವಾದ ಆಶ್ರಯ ನೀನೇ ಆಗಿದ್ದಿ.
ವೈಶಂಪಾಯನಃ
ಏವಮುಕ್ತ್ವಾ ತತೋ ಭೂಯೋ ನಿಸ್ಸಂಜ್ಞಃ ಪತಿತೋ ಭುವಿ ॥47॥
ವೈಶಂಪಾಯನರು ಹೇಳಿದರು ಹೀಗೆ ಹೇಳಿದ ನಂತರ ಧೃತರಾಷ್ಟ್ರನು ಮತ್ತೆ ಮೂರ್ಛಿತನಾಗಿ ನೆಲದಲ್ಲಿ ಬಿದ್ದನು.
ತಂ ತಥಾ ಪತಿತಂ ದೃಷ್ಟ್ವಾ ಬಾಂಧವಾಸ್ತಸ್ಯ ಕೇಚನ |
ತೇ ಶೀತೈಸ್ಸಿಷಿಚುಸ್ತೋಯೈಃ ವಿವಿಜುರ್ವ್ಯಜನೈರಪಿ ॥48॥
ಹೀಗೆ ಬಿದ್ದ ರಾಜನನ್ನು ನೋಡಿದ ಅವನ ಕೆಲವು ಬಾಂಧವರು ಶೀತೋದಕವನ್ನು ಸಿಂಪಡಿಸಿ ಬೀಸಣಿಕೆಗಳಿಂದ ಗಾಳಿ ಬೀಸಿದರು.
ತೂಷ್ಣೀಮಾಸೀನ್ಮಹೀಪಾಲಃ ಪುತ್ರವ್ಯಸನಕರ್ಶಿತಃ ॥49॥
ಮಕ್ಕಳ ದುಃಖದಿಂದ ಕೃಶನಾದ ರಾಜನು ಏನೂ ಮಾತನಾಡದೆ ಸುಮ್ಮನೆ ಇದ್ದ.
ಸ ತು ದೀರ್ಘೇಣ ಕಾಲೇನ ಪ್ರತ್ಯಾಶ್ವಸ್ತೋ ಮಹೀಪತಿಃ |
ನಿಃಶ್ವಸನ್ ಪನ್ನಗ ಇವ ಕುಂಭಕ್ಷಿಪ್ತೋಽಭವನ್ನೃಪ ॥50॥
ರಾಜನೇ! ದೀರ್ಘಸಮಯದ ನಂತರ ಎಚ್ಚರಗೊಂಡ ಧೃತರಾಷ್ಟ್ರನು ಘಟದೊಳಗಿರಿಸಿದ ಹಾವಿನ ಹಾಗೆ ದೀರ್ಘವಾಗಿ ಉಸಿರಾಡುತ್ತಾನೆ.
ಸಂಜಯೋಽಪ್ಯರುದತ್ ತತ್ರ ದೃಷ್ಟ್ವಾ ರಾಜಾನಮಾತುರಮ್ |
ತಥಾ ಸರ್ವಾಃ ಸ್ತ್ರಿಯಶ್ಚೈವ ಗಾಂಧಾರೀ ಚ ಯಶಸ್ವಿನೀ ॥51॥
ದುಃಖಕ್ಕೊಳಗಾದ ರಾಜ ಧೃತರಾಷ್ಟ್ರನನ್ನು ನೋಡಿ ಸಂಜಯನೂ ಅಳುತ್ತಾನೆ. ಹಾಗೆಯೇ ಎಲ್ಲಾ ಸ್ತ್ರೀಯರೂ ಮತ್ತು ಯಶಸ್ವಿನಿಯಾದ ಗಾಂಧಾರಿಯೂ ಅಳುತ್ತಾರೆ.
ತತೋ ದೀರ್ಘೇಣ ಕಾಲೇನ ವಿದುರಂ ವಾಕ್ಯಮಬ್ರವೀತ್ |
ಧೃತರಾಷ್ಟ್ರೋ ನರವ್ಯಾಘ್ರೋ ಮುಹ್ಯಮಾನಃ ಪುನಃ ಪುನಃ ॥52॥
ಅನಂತರ ತುಂಬಾ ಸಮಯ ಕಳೆದ ಮೇಲೆ ನರಶ್ರೇಷ್ಠನಾದ ಧೃತರಾಷ್ಟ್ರನು ಮತ್ತೆ ಮತ್ತೆ ಮೂರ್ಛಿತನಾಗುತ್ತಾ ವಿದುರನಿಗೆ ಹೇಳುತ್ತಾನೆ.
ಧೃತರಾಷ್ಟ್ರಃ
ಗಚ್ಛಂತು ಯೋಷಿತಸ್ಸರ್ವಾಃ ಗಾಂಧಾರೀ ಚ ಯಶಸ್ವಿನೀ |
ತಥೇಮೇ ಸುಹೃದಸ್ಸರ್ವೇ ಮುಹ್ಯತೇ ಮೇ ಮನೋ ಭೃಶಮ್ ॥53॥

ಅರಮನೆಯ ಎಲ್ಲಾ ಸ್ತ್ರೀಯರೂ, ಯಶಸ್ವಿನಿಯಾದ ಗಾಂಧಾರಿಯೂ ಹಾಗೂ ಈ ಎಲ್ಲಾ ಸುಹೃತ್ಸಂಬಂಧಿಗಳೂ ಇಲ್ಲಿಂದ ಹೊರಟುಹೋಗಲಿ. ನನ್ನ ಮನಸ್ಸು ತುಂಬಾ ಭ್ರಾಂತವಾಗಿದೆ.
ವೈಶಂಪಾಯನಃ
ಏವಮುಕ್ತಸ್ತತಃ ಕ್ಷತ್ತಾ ತಾಃ ಸ್ತ್ರಿಯೋ ಭರತರ್ಷಭ |
ವಿಸರ್ಜಯಾಮಾಸ ತದಾ ಮುಹ್ಯಮಾನೋ ನರಾಧಿಪ ॥54॥
ಭರತಶ್ರೇಷ್ಠನೇ! ನರಾಧಿಪನೇ! ಧೃತರಾಷ್ಟ್ರನು ಹೀಗೆ ಹೇಳಿದಾಗ, ದುಃಖದಿಂದ ಮತ್ತೆ ಮತ್ತೆ ಮೂಢನಾದ ವಿದುರನು ಎಲ್ಲಾ ಸ್ತ್ರೀಯರನ್ನು ನಿಧಾನವಾಗಿ ಕಳುಹಿಸುತ್ತಾನೆ.
ನಿರ್ಜಗ್ಮುಶ್ಚ ತತಸ್ಸರ್ವಾಃ ತಾಸ್ತ್ರಿಯೋ ಜನಮೇಜಯ |
ಸುಹೃದಶ್ಚ ತಥಾ ಸರ್ವೇ ದೃಷ್ಟ್ವಾ ರಾಜಾನಮಾತುರಮ್ ॥55॥
ಜನಮೇಜಯನೇ! ಅನಂತರ ಎಲ್ಲಾ ಸ್ತ್ರೀಯರೂ ಹಾಗೂ ಎಲ್ಲಾ ಸ್ನೇಹಿತರೂ ದುಃಖಿತನಾದ ಧೃತರಾಷ್ಟ್ರನನ್ನು ಕಂಡು ಹೊರಟುಹೋದರು.
ತತೋ ನರಪತಿಸ್ತತ್ರ ಸಂಜ್ಞಾಂ ಲಬ್ಧ್ವಾ ಪರಂತಪ |
ಗತಿರ್ಮೇ ಕೋ ಭವೇದದ್ಯ ಇತಿ ಚಿಂತಾಸಮಾಕುಲಃ ॥56॥
ಅವೈಕ್ಷತ್ ಸಂಜಯಂ ತತ್ರ ರುದಮಾನೋ ಮಹೀಪತಿಃ ॥57॥
ಶತ್ರುತಾಪಕರನೇ! ಅನಂತರ ರಾಜ ಧೃತರಾಷ್ಟ್ರನು ಎಚ್ಚರಗೊಂಡು ``ನನಗೆ ಇನ್ನಾರು ಗತಿ?'' ಎಂಬುದಾಗಿ ಚಿಂತಾಕ್ರಾಂತನಾಗಿ ಅಳುತ್ತಾ ಸಂಜಯನನ್ನು ನೋಡಿದ.
ಪ್ರಾಂಜಲಿಂ ಸಂಜಯಂ ದೃಷ್ಟ್ವಾ ರುದಮಾನಂ ಮುಹುರ್ಮುಹುಃ |
ಬಹುಶಶ್ಚಿಂತಯಿತ್ವಾ ತು ಸಂಜಯಂ ವಾಕ್ಯಮಬ್ರವೀತ್ ॥58॥
ಕೈಮುಗಿದು ಮತ್ತೆ ಮತ್ತೆ ಅಳುತ್ತಿರುವ ಸಂಜಯನನ್ನು ನೋಡಿ ಬಹಳವಾಗಿ ಆಲೋಚಿಸಿ ಈ ಮಾತನ್ನು ಹೇಳಿದನು.
ಪ್ರಾಂಜಲಿರ್ನಿಶ್ವಸಂತಂ ಚ ತಂ ನರೇಂದ್ರಂ ಮುಹುರ್ಮುಹುಃ |
(ರಾಜಾನಂ ಶೋಚಮಾನಸ್ತು ತಂ ಶೋಚಂತಂ ಮುಹುರ್ಮುಹುಃ-ಪಾ)
ಸಮಾಶ್ವಾಸಯತ ಕ್ಷತ್ತಾ ವಚಸಾ ಮಧುರೇಣ ಚ ॥59॥
ದುಃಖದಿಂದ ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತಿದ್ದ ರಾಜನನ್ನು ವಿದುರನು ಅಂಜಲಿಬದ್ಧನಾಗಿ ಮಧುರವಾದ ಮಾತಿನಿಂದ ಸಮಾಧಾನಪಡಿಸುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಧೃತರಾಷ್ಟ್ರನು ಅಳುತ್ತಾ ಸಂಜಯನಲ್ಲಿ ಯುದ್ಧವೃತ್ತಾಂತವನ್ನು ಕೇಳುವುದು.
ವಿಸೃಷ್ಟಾಸ್ವಥ ನಾರೀಷು ಧೃತರಾಷ್ಟ್ರೋಽಂಬಿಕಾಸುತಃ |
ವಿಲಲಾಪ ಮಹಾರಾಜ ದುಃಖಾದ್ದುಃಖತರಂ ಗತಃ ॥1॥
ಮಹಾರಾಜ! ವಿದುರನ ಮಾತಿನಂತೆ ಅಂತಃಪುರದ ಸ್ತ್ರೀಯರು ಹೊರಗೆ ಹೋದ ಮೇಲೆ ಅಂಬಿಕಾಪುತ್ರನಾದ ಧೃತರಾಷ್ಟ್ರನು ಅತ್ಯಂತದುಃಖವನ್ನು ಹೊಂದಿದವನಾಗಿ ಜೋರಾಗಿ ಅತ್ತನು.
ಸಧೂಮಮಿವ ನಿಃಶ್ವಸ್ಯ ಕರೌ ಧುನ್ವನ್ ಪುನಃ ಪುನಃ |
ಬಹುಶಶ್ಚಿಂತಯಿತ್ವಾ ತು ಸಂಜಯಂ ವಾಕ್ಯಮಬ್ರವೀತ್ ॥2॥
ಬೆಂಕಿಯಂತೆ ಬಿಸಿಯಾದ ನಿಟ್ಟುಸಿರನ್ನು ಬಿಟ್ಟು, ಮತ್ತೆ ಮತ್ತೆ ಕೈಹೊಸೆಯುತ್ತಾ, ಬಹಳವಾಗಿ ಚಿಂತಿಸಿ ಸಂಜಯನನ್ನು ಕುರಿತು ಹೀಗೆಂದನು.
ಧೃತರಾಷ್ಟ್ರಃ
ಅಹೋ ಬತ ಮಹದ್ದುಃಖಂ ಯದಹಂ ಪಾಂಡವಾನ್ ರಣೇ |
ಕ್ಷೇಮಿಣಶ್ಚಾವ್ಯಯಾಂಶ್ಚೈವ ತ್ವತ್ತಃ ಸೂತ ಶೃಣೋಮ್ಯಹಮ್ ॥3॥
ಸಂಜಯ! ಯುದ್ಧದಲ್ಲಿ ಪಾಂಡವರು ಯಾವುದೇ ಹಾನಿಗೊಳಗಾಗದೆ ಕ್ಷೇಮವಾಗಿದ್ದಾರೆ ಎಂಬುದನ್ನು ನಾನು ನಿನ್ನಿಂದ ಕೇಳಿ ತಿಳಿದುಕೊಂಡೆ. ಈ ಸಮಾಚಾರದಿಂದ ನನಗೆ ಬಹಳ ದುಃಖವಾಗಿದೆ. ಹಾ! ಕಷ್ಟ!
ವಜ್ರಸಾರಮಯಂ ನೂನಂ ಹೃದಯಂ ಮಮ ದುರ್ಭಿದಮ್ |
ಯಚ್ಛ್ರುತ್ವಾ ನಿಹತಾನ್ ಪುತ್ರಾನ್ ದೀರ್ಯತೇ ನ ಸಹಸ್ರಧಾ ॥4॥
ನನ್ನ ಮಕ್ಕಳು ಸತ್ತಿದ್ದಾರೆ ಎಂಬ ವಿಷಯವನ್ನು ಕೇಳಿಯೂ ಸಾವಿರಹೋಳಾಗದ ನನ್ನೀ ಹೃದಯವು ನಿಶ್ಚಯವಾಗಿಯೂ ಎಂದಿಗೂ ಒಡೆಯದ ವಜ್ರಾಯುಧ(ವಜ್ರ)ದಂತೆ ಸಾರಭೂತವಾಗಿದೆ.
ಚಿಂತಯಿತ್ವಾ ವಚಸ್ತೇಷಾಂ ಬಾಲಕ್ರೀಡಾಂ ಚ ಸಂಜಯ |
ಅದ್ಯ ಚೈವ ಹತಾನ್ ಶ್ರುತ್ವಾ ಭೃಶಂ ಮೇ ದೂಯತೇ ಮನಃ ॥5॥
ಸಂಜಯ! ನನ್ನ ಮಕ್ಕಳ ಬಾಲ್ಯದ ತೊದಲ್ನುಡಿಗಳನ್ನೂ, ಅವರ ಬಾಲ್ಯದ ಚೇಷ್ಟೆಗಳನ್ನು ನೆನೆಸಿಕೊಂಡು, ಮತ್ತೆ ಈಗ ಅವರು

ಸತ್ತಿದ್ದಾರೆ ಎಂದು ಕೇಳಿ ನನ್ನ ಮನಸ್ಸು ಬಹಳವಾಗಿ ದುಃಖಿತವಾಗಿದೆ.
ಅಂಧತ್ವಾದ್ಯದಿ ಪುತ್ರಾಣಾಂ ನ ಮೇ ರೂಪನಿದರ್ಶನಮ್ |
ಪುತ್ರಸ್ನೇಹಕೃತಾ ಪ್ರೀತಿಃ ನಿತ್ಯಮೇತೇಷು ಧಾರಿತಾ ॥6॥
ನಾನು ಕುರುಡನಾದ್ದರಿಂದ ನನ್ನ ಮಕ್ಕಳ ರೂಪವನ್ನು ನಾನು ಕಾಣಲಿಲ್ಲ. ಆದರೂ ಮಕ್ಕಳ ಮಮತೆಯಿಂದುಂಟಾದ ಪ್ರೀತಿಯನ್ನು ಅವರಲ್ಲಿ ನಿತ್ಯವೂ ಹೊಂದಿದ್ದೇನೆ.
ಬಾಲಭಾವಮತಿಕ್ರಾಂತಾನ್ ಯೌವನಸ್ಥಾಂಶ್ಚ ತಾನಹಮ್ |
ವೃದ್ಧಿಪ್ರಾಪ್ತಾನಹಂ ಶ್ರುತ್ವಾ ಹೃಷ್ಟ ಆಸಂ ತದಾ ಭೃಶಮ್ ॥7॥
ಬಾಲ್ಯವನ್ನು ಕಳೆದುಕೊಂಡು ನನ್ನ ಮಕ್ಕಳು ಯೌವನಾಸ್ಥೆಗೆ ಬಂದು ಬೆಳೆದು ನಿಂತರು ಎಂಬುದನ್ನು ಕೇಳಿದಾಗ ನಾನು ಬಹಳವಾಗಿ ಸಂತೋಷಗೊಂಡಿದ್ದೆ.
ತಾನದ್ಯ ನಿಹತಾನ್ ಶ್ರುತ್ವಾ ಹೃತೈಶ್ವರ್ಯಾನ್ ಹೃತೌಜಸಃ |
ನ ಲಭೇ ವೈ ಕ್ವಚಿಚ್ಛಾಂತಿಂ ಪುತ್ರಾಧಿಭಿರಭಿಪ್ಲುತಃ ॥8॥
ಅಂತಹ ನನ್ನ ಮಕ್ಕಳು ಇಂದು ಸಂಪತ್ತು ಕೀರ್ತಿ ಓಜಸ್ಸುಗಳನ್ನು (ಪರಾಕ್ರಮ) ಕಳೆದುಕೊಂಡು ಸತ್ತಿದ್ದಾರೆ ಎಂದು ಕೇಳಿ ಪುತ್ರಶೋಕದಿಂದ ತುಂಬಿ ಎಲ್ಲಿಯೂ ನೆಮ್ಮದಿಯನ್ನು ನಿಶ್ಚಯವಾಗಿಯೂ ಹೊಂದಲಾರೆ.
ಏಹ್ಯೇಹಿ ವತ್ಸ ರಾಜೇಂದ್ರ ಮಮಾನಾಥಸ್ಯ ಪುತ್ರಕ |
ತ್ವಯಾ ಹೀನೋ ಮಹಾಬಾಹೋ ಕಾಂ ನು ಯಾಸ್ಯಾಮ್ಯಹಂ ಗತಿಮ್ ॥
ರಾಜನೇ! ಪ್ರಿಯನೇ! ಅನಾಥನಾದ ನನ್ನ ಕುಮಾರನೇ! ಎದ್ದೇಳು! ಎದ್ದೇಳು! ಹೇ ಮಹಾಪರಾಕ್ರಮಿಯೇ! ನಿನ್ನನ್ನಗಲಿ ನಾನು ಯಾವ ಗತಿಯನ್ನು ತಾನೇ ಹೊಂದಲಿ?
ಗತಿರ್ಭೂತ್ವಾ ಮಹಾರಾಜ ಜ್ಞಾತೀನಾಂ ಸುಹೃದಾಂ ತಥಾ |
ಅಂಧಂ ವೃದ್ಧಂ ಚ ಮಾಂ ವೀರ ವಿಹಾಯ ತ್ವಂ ಕ್ವ ಗಚ್ಛಸಿ ॥10॥
ಹೇ ಮಹಾರಾಜ! ಬಂಧುಗಳಿಗೆ ಹಾಗೂ ಸ್ನೇಹಿತರಿಗೆ ನೀನೇ ಸರ್ವಾಶ್ರಯನಾಗಿದ್ದಿ. ಹೇ ವೀರನೇ! ಕಣ್ಣುಕಾಣಿಸದ ಮುದುಕನಾದ ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋಗುತ್ತಿ?
ಯಾ ಕೃಪಾ ಯಾ ಚ ತೇ ಪ್ರೀತಿಃ ಯಾ ಚ ರಾಜಸು ಮಾನಿತಾ |
ಕಥಂ ತ್ವಂ ನಿಹತಃ ಪಾರ್ಥೈಃ ಸಂಯುಗೇಷ್ವಪರಾಜಿತಃ ॥11॥
ಪ್ರಜೆಗಳಲ್ಲಿ ನೀನು ಮಾಡುವ ಕರುಣೆಯಾಗಲೀ ಹಾಗೂ ನೀನು ತೋರುವ ಪ್ರೀತಿಯಾಗಲೀ, ರಾಜರೆಲ್ಲರು ನಿನಗೆ ಕೊಡುವ ಗೌರವವಾಗಲೀ ಅಸದೃಶವಾದುದು. ಹೀಗೆ ಯುದ್ಧದಲ್ಲಿ ಸದಾ ಜಯಶಾಲಿಯಾದ ನಿನ್ನನ್ನು ಪಾಂಡವರು ಹೇಗೆ ತಾನೆ ಕೊಂದು ಹಾಕಿದರು?
ಕಥಂ ತ್ವಂ ಪೃಥಿವೀಪಾಲಾನ್ ತ್ಯಕತ್ವ ತಾತ ಸಮಾಗತಾನ್ |
ಶೇಷೇಽದ್ಯ ನಿಹತೋ ಭೂಮೌ ಪ್ರಾಕೃತಃ ಕುನೃಪೋ ಯಥಾ ॥12॥
ರಾಜನೇ! ನಿನ್ನ ದರ್ಶನಕ್ಕಾಗಿ ಅನೇಕ ಚಕ್ರವರ್ತಿಗಳು ಬಂದಿದ್ದಾರೆ. ಅಂತಹವರನ್ನು ಬಿಟ್ಟು ಇಂದು ನೀನು ಭೂಮಿಯಲ್ಲಿ ಸಾಮಾನ್ಯರಾಜನಂತೆ ಹೇಗೆ ಸತ್ತು ಮಲಗಲು ಸಾಧ್ಯವಾಯಿತು?
ಕೋ ನು ಮಾಮುತ್ಥಿತಂ(ಮುತ್ಥಿತಃ) ವೀರ(ಕಾಲೇ)ತಾತ ತಾತೇತಿ ವಕ್ಷ್ಯತಿ |
ಮಹಾರಾಜೇತಿ ಸತತಂ ಲೋಕನಾಥೇತಿ ಚಾಸಕೃತ್ ॥13॥
ಹೇ ವೀರ! (ನನ್ನ ಏಳುವಿಕೆಯನ್ನೇ ಎದುರುನೋಡುತ್ತಾ) ನಾನು ಎದ್ದಾಗ ``ತಂದೆ! ಅಪ್ಪ! ಮಹಾರಾಜ! ಲೋಕನಾಥ!'' ಎಂಬುದಾಗಿ ಪದೇ ಪದೇ ಯಾರು ಹೇಳುವರು?
ಪರಿಷ್ವಜ್ಯ ತು ಕಂ ಕಂಠೇ ಸ್ನೇಹೇನ ಕ್ಲಿನ್ನಲೋಚನಃ |
ಅನುಶಾಸ್ಮಾಸ್ಮಿ ಕೌರವ್ಯ ತತ್ ಸಾಧು ವದ ಮೇ ವಚಃ ॥14॥
ಕುರುಕುಲನಂದನ! ನಾನಾದರೂ ಪ್ರೀತಿಯಿಂದ ತೇವಗೊಂಡ ಕಣ್ಣುಳ್ಳವನಾಗಿ ಯಾರನ್ನು ಆಲಿಂಗಿಸಿಕೊಳ್ಳಲಿ? ಯಾರಿಗೆ ಆದೇಶವನ್ನು ಕೊಡಲಿ? ಈ ಎಲ್ಲಾ ನನ್ನ ಪ್ರಶ್ನೆಗಳಿಗೆ ಒಳ್ಳೆಯ ಉತ್ತರವನ್ನು ಕೊಡು.
ನನು ನಾಮಾಹಮಶ್ರೌಷಂ ವಚನಂ ತವ ಪುತ್ರಕ |
ಭೂಯಸೀ ಮಮ ಸೇನಾ ಚ ತಾತ ಪಾರ್ಥಸ್ಯ ನೋ ತಥಾ ॥15॥
ಪ್ರಿಯಕುಮಾರನೇ! ಹಿಂದೆ ನೀನಾಡಿದ ಮಾತನ್ನು ನಾನೂ ಕೇಳಿಸಿಕೊಂಡಿದ್ದೆ! ``ತಂದೆ! ನನ್ನ ಸೈನ್ಯವು ಬಹಳವಾಗಿದೆ. ಪಾಂಡವರ ಸೈನ್ಯವು ಹಾಗಿಲ್ಲ''.
ಭಗದತ್ತಃ ಕೃಪಶ್ಶಲ್ಯ ಆವಂತ್ಯೌ ಚ ಜಯದ್ರಥಃ |
ಭೂರಿಶ್ರವಾಃ ಸೋಮದತ್ತೋ ಮಹಾರಾಜಶ್ಚ ಬಾಹ್ಲಿಕಃ ॥16॥
ಅಶ್ವತ್ಥಾಮಾ ಕೃತವರ್ಮಾ ಮಾಗಧಶ್ಚ ಮಹಾಬಲಃ |
ಬೃಹದ್ಬಲಶ್ಚ ಕಾಶೀಶಃ ಶಕುನಿಶ್ಚಾಪಿ ಸೌಬಲಃ ॥17॥
ಮ್ಲೇಚ್ಛಾಶ್ಚ ಬಹುಸಾಹಸ್ರಾಃ ಶಕಾಶ್ಚ ಯವನೈಸ್ಸಹ |
ಸುದಕ್ಷಿಣಶ್ಚ ಕಾಂಭೋಜಃ ತ್ರಿಗರ್ತಾಧಿಪತಿಸ್ತಥಾ ॥18॥
ಭೀಷ್ಮಃ ಪಿತಾಮಹಶ್ಚೈವ ಭಾರದ್ವಾಜೋಽಥ ಗೌತಮಃ |
ಶ್ರುತಾಯುಶ್ಚಾಶ್ರುತಾಯುಶ್ಚ ಶತಾಯುಶ್ಚಾಪಿ ವೀರ್ಯವಾನ್ ॥19॥

ಜಲಸಂಧೋಽಪ್ಯಾರ್ಶ್ಯರ್ಶೃಂಗೀ ರಾಕ್ಷಸಶ್ಚಾಪ್ಯಲಾಯುಧಃ |
ಅಲಂಬುಸೋ ವೀರಬಾಹುಃ ಸುಬಾಹುಶ್ಚ ಶತಾಯುಧಃ ||20||
ಏತೇ ಚಾನ್ಯೇ ಚ ಬಹವೋ ರಾಜಾನೋ ರಾಜಸತ್ತಮ |
ಮದರ್ಥಂ ಪ್ರಹರಿಷ್ಯಂತಿ ಪ್ರಾಣಾಂಸ್ತ್ಯಕ್ತ್ವಾ ಮಹಾರಣೇ ||21||
ಎಲೈ ರಾಜಶ್ರೇಷ್ಠನೇ! ಭಗದತ್ತ, ಕೃಪ, ಶಲ್ಯ, ಅವಂತಿ ದೇಶದ ರಾಜ, ಜಯದ್ರಥ, ಭೂರಿಶ್ರವಸ್ಸು, ಸೋಮದತ್ತ, ಬಾಹ್ಲಿಕ ಮಹಾರಾಜ, ಅಶ್ವತ್ಥಾಮ, ಕೃತವರ್ಮ, ಮಗಧಾಧಿಪತಿಯಾದ ಮಹಾಬಲಶಾಲಿ ಬೃಹದ್ಬಲ, ಕಾಶಿದೇಶದ ರಾಜ, ಸುಬಲದೇಶದ ಅಧಿಪತಿ ಶಕುನಿ, ಅನೇಕ ಸಹಸ್ರ ಸಂಖ್ಯೆಯ ಮ್ಲೇಚ್ಛರು, ಅಷ್ಟೇ ಸಂಖ್ಯೆಯ ಶಕರು, ಯವನರು, ಸುದಕ್ಷಿಣ, ಕಾಂಭೋಜ, ತ್ರಿಗರ್ತದೇಶದ ರಾಜ, ಪಿತಾಮಹನಾದ ಭೀಷ್ಮ, ಭರದ್ವಾಜಪುತ್ರನಾದ ಗೌತಮ, ಶ್ರುತಾಯು, ಅಶ್ರುತಾಯು, ಬಲಶಾಲಿಯಾದ ಶತಾಯು, ಜಲಸಂಧ, ಆರ್ಶ್ಯಶೃಂಗಿ, ಅಲಾಯುಧನೆಂಬ ರಾಕ್ಷಸ, ಅಲಂಬುಸ, ವೀರಬಾಹು, ಸುಬಾಹು, ಶತಾಯುಧ ಇವರು ಹಾಗೂ ಇನ್ನೂ ಅನೇಕ ರಾಜರುಗಳು ನನಗಾಗಿ ಯುದ್ಧ ಮಾಡುತ್ತಾರೆ. ರಣರಂಗದಲ್ಲಿ ನನಗಾಗಿ ಪ್ರಾಣವನ್ನೂ ಬಿಡುತ್ತಾರೆ.
ತೇಷಾಂ ಮಧ್ಯೇ ಸ್ಥಿತೋ ಯುದ್ಧೇ ಭ್ರಾತೃಭಿಃ ಪರಿವಾರಿತಃ |
ಯೋಧಯಿಷ್ಯಾಮ್ಯಹಂ ಪಾರ್ಥಾನ್ ಪಾಂಚಾಲಾನ್ ಸೃಂಜಯಾಂಸ್ತಥಾ ||
ಸೋಮಕಾನ್ ನೃಪಶಾರ್ದೂಲ ದ್ರೌಪದೇಯಾಂಶ್ಚ ಸಂಯುಗೇ |
ಸಾತ್ಯಕಿಂ ಕುಂತಿಭೋಜಂ ಚ ರಾಕ್ಷಸಂ ಚ ಘಟೋತ್ಕಚಮ್ ||23||
ಏಕೋಽಪ್ಯೇಷಾಂ ಮಹಾರಾಜ ಸಮರ್ಥಸ್ಸನ್ನಿವಾರಣೇ |
ಸಮರೇ ಪಾಂಡುಯೋಧಾನಾಂ ಸಂಕ್ರುದ್ಧೋ ಹ್ಯಭಿಧಾವತಾಮ್ |
ಕಿಂ ಪುನಸ್ಸಹಿತೋ ವೀರೈಃ ಕೃತವೈರಶ್ಚ ಪಾಂಡವೈಃ ||24||
``ಎಲೈ ರಾಜೇಂದ್ರನೇ! ಇಂತಹ ಯೋಧರ ಮಧ್ಯದಲ್ಲಿ ಸುತ್ತಲೂ ಸಹೋದರರನ್ನು ಸೇರಿಸಿಕೊಂಡು ಎದುರು ಪಕ್ಷದಲ್ಲಿರುವ ಪಾರ್ಥರು, ಪಾಂಚಾಲರು, ಸೃಂಜಯರು, ಸೋಮಕರು, ದ್ರೌಪದಿಕುಮಾರರು, ಸಾತ್ಯಕಿ, ಕುಂತಿಭೋಜ, ರಾಕ್ಷಸನಾದ ಘಟೋತ್ಕಚ ಇವರೆಲ್ಲರ ಜೊತೆಗೆ ಹೋರಾಡುತ್ತೇನೆ. ಮಹಾರಾಜ! ರಣರಂಗದಲ್ಲಿ ಯುದ್ಧಕ್ಕೆ ಧಾವಿಸಿಬರುವ ಈ ಪಾಂಡವರನ್ನು ಎದುರಿಸಲು ಕೋಪಗೊಂಡ ನಾನೊಬ್ಬನೇ ಸಾಕು. ಹಾಗಿರುವಾಗ ಪಾಂಡವರೊಡನೆ ದ್ವೇಷಸಾಧಿಸುತ್ತಿರುವ ನಾನು ವೀರಯೋಧರಿಂದ ಕೂಡಿಕೊಂಡಿರುವಾಗ ಮತ್ತೇನು ಹೇಳಬೇಕು?''
ಅಥವಾ ಸರ್ವಪಾಂಚಾಲ್ಯೈಃ ಪಾಂಡವಸ್ಯಾನುಸೈನಿಕೈಃ |
ಯೋತ್ಸ್ಯಾಮಿ ಸಹ ರಾಜೇಂದ್ರ ಹನಿಷ್ಯಾಮಿ ಚ ತಾನ್ ಮೃಧೇ ||25||
``ಅಥವಾ ಪಾಂಡವರ ಅನುಯಾಯಿಗಳಾದ ಸೈನಿಕರಿಂದ ಕೂಡಿಕೊಂಡ ಸರ್ವಪಾಂಚಾಲರ ಜೊತೆಗೆ ಹೋರಾಡುತ್ತೇನೆ. ರಾಜೇಂದ್ರ! ರಣರಂಗದಲ್ಲಿ ಅವರೆಲ್ಲರನ್ನೂ ಸಾಯಿಸುತ್ತೇನೆ''.
ಕರ್ಣಸ್ತ್ವೇಕೋ ಮಯಾ ಸಾರ್ಧಂ ನಿಹನಿಷ್ಯತಿ ಪಾಂಡವಾನ್ |
ತೇ ವೈ ನೃಪತಯೋ ವೀರಾಃ ಸ್ಥಾಸ್ಯಂತಿ ಮಮ ಶಾಸನೇ ||26||
``ಕರ್ಣನು ನನಗೆ ಸಹಾಯಕ್ಕೆ ನಿಂತುಕೊಂಡು ಪಾಂಡವರನ್ನು ಕೊಂದುಹಾಕುವನು. ಹಿಂದೆ ಹೇಳಿದ ಎಲ್ಲಾ ವೀರರಾದ ರಾಜರೂ ನನ್ನ ಅಧೀನದಲ್ಲಿಯೇ ಇರುತ್ತಾರೆ''.
ಯಶ್ಚ ತೇಷಾಂ ಪ್ರಣೇತಾ ವೈ ವಾಸುದೇವೋ ಮಹಾಬಲಃ |
ನ ಸ ಸಂನಹ್ಯತೇ ರಾಜನ್ನಿತಿ ಮಾಮಬ್ರವೀದ್ವಚಃ ||27||
``ಹೇ ರಾಜನ್! ಇನ್ನು ಪಾಂಡವರಿಗೆ ಮಾರ್ಗದರ್ಶಕನಾದ ವಸುದೇವಪುತ್ರ ಶ್ರೀಕೃಷ್ಣನೂ ಯುದ್ಧದಲ್ಲಿ ಕವಚವನ್ನು ತೊಡುವುದಿಲ್ಲ'' ಎಂಬುದಾಗಿ ದುರ್ಯೋಧನನು ನನಗೆ ಹೇಳಿದ್ದಾನೆ.
ಏವಂ ಚ ವದತಸ್ಸೂತ ಬಹುಶೋ ಮಮ ಸನ್ನಿಧೌ |
ಯುಕ್ತಿತೋಽಪ್ಯನುಪಶ್ಯಾಮಿ ನಿಹತಾನ್ ಪಾಂಡವಾನ್ ಮೃಧೇ ||28||
ಎಲೈ ಸೂತನೇ! ಇಂತಹ ಅನೇಕ ಮಾತುಗಳನ್ನು ದುರ್ಯೋಧನನು ನನ್ನ ಮುಂದೆ ಹೇಳಿದ್ದಾನೆ. ಯುಕ್ತಿಗಳಿಂದ ವಿಚಾರಮಾಡಿದಾಗಲೂ ಪಾಂಡವರೆಲ್ಲರೂ ಯುದ್ಧದಲ್ಲಿ ಮಡಿದಿರುವರು ಎಂಬುದಾಗಿ ನಿರೀಕ್ಷಿಸುತ್ತಿದ್ದೇನೆ.
ತೇಷಾಂ ಮಧ್ಯೇ ಸ್ಥಿತೋ ಯತ್ರ ಹನ್ಯತೇ ಮಮ ಪುತ್ರಕಃ |
ವ್ಯಾಯಚ್ಛಮಾನಸ್ಸಮರೇ ಕಿಮನ್ಯದ್ಭಾಗಧೇಯತಃ ||29||
ಇಂತಹವರ ಮಧ್ಯದಲ್ಲಿ ಸದಾ ಯುದ್ಧದಲ್ಲಿ ಉದ್ಯುಕ್ತನಾದ ನನ್ನ ಪ್ರಿಯ ಮಗನು ಹತನಾಗಿದ್ದಾನೆಂದರೆ ವಿಧಿಯನ್ನಲ್ಲದೆ ಬೇರೇನನ್ನು ಹೇಳಲು ಸಾಧ್ಯ?
ಭೀಷ್ಮಶ್ಚ ನಿಹತೋ ಯತ್ರ ಲೋಕನಾಥಃ ಪ್ರತಾಪವಾನ್ |
ಶಿಖಂಡಿನಂ ಸಮಾಸಾದ್ಯ ಮೃಗೇಂದ್ರ ಇವ ಕುಂಜರಮ್ ||30||
ದ್ರೋಣಶ್ಚ ಬ್ರಾಹ್ಮಣೋ ವೃದ್ಧಃ ಸರ್ವಶಸ್ತ್ರಾಸ್ತ್ರಪಾರಗಃ |
ನಿಹತಃ ಪಾಂಡವೈಸ್ಸಂಖ್ಯೇ ಕಿಮನ್ಯದ್ಭಾಗಧೇಯತಃ ||31||
ಶಿಖಂಡಿಯನ್ನು ಮುಂದಿಟ್ಟುಕೊಂಡು ಪರಾಕ್ರಮಿಯಾದ ಲೋಕೇಶ್ವರ ಭೀಷ್ಮನೂ ಆನೆಯ ಮುಂದೆ ಸಿಂಹದ ಹಾಗೆ ತಾನು ಹತನಾಗಿದ್ದಾನೆ. ಸಕಲಶಸ್ತ್ರ-ಅಸ್ತ್ರವೇತ್ತನಾದ ಜ್ಞಾನವಯೋವೃದ್ಧಬ್ರಾಹ್ಮಣ ದ್ರೋಣನೂ ಯುದ್ಧದಲ್ಲಿ ಪಾಂಡವರಿಂದ ಹತನಾಗಿದ್ದಾನೆ. ಅದೃಷ್ಟವಲ್ಲದೆ ಬೇರೇನೂ ಇಲ್ಲಿ ಕಾರಣವಾಗಿಲ್ಲ.
ಭೂರಿಶ್ರವಾ ಹತೋ ಯತ್ರ ಸೋಮದತ್ತಶ್ಚ ಸಂಯುಗೇ |

ಬಾಹ್ಲಿಕಶ್ಚ ಮಹಾರಾಜಃ ಕಿಮನ್ಯದ್ಭಾಗಧೇಯತಃ ॥32॥
ಯುದ್ಧದಲ್ಲಿ ಭೂರಿಶ್ರವಸ್ಸು, ಸೋಮದತ್ತ, ಬಾಹ್ಲಿಕ ಮಹಾರಾಜ ಇವರೆಲ್ಲರೂ ಹತರಾಗಿದ್ದಾರೆ. ವಿಧಿಯೇ ಇಲ್ಲಿ ಪ್ರಧಾನ ಕಾರಣ.
ಭಗದತ್ತೋ ಹತೋ ಯತ್ರ ರಾಜ(ಗಜ)ಯುದ್ಧವಿಶಾರದಃ|
ಜಯದ್ರಥಶ್ಚ ನಿಹತಃ ಕಿಮದ್ಯದ್ಭಾಗಧೇಯತಃ ॥33॥
ಯಾವ ಈ ಯುದ್ಧದಲ್ಲಿ, ಯುದ್ಧದಲ್ಲಿ ಕುಶಲನಾದ ಭಗದತ್ತ, ಜಯದ್ರಥನೂ ಸತ್ತಿದ್ದಾರೆ. ಅಹೋ! ವಿಧಿಯಲ್ಲದೇ ಬೇರೆ ಏನೂ ಕಾರಣವಿಲ್ಲ.
ಸುದಕ್ಷಿಣೋ ಹತೋ ಯತ್ರ ಜಲಸಂಧಶ್ಚ ಕೌರವಃ|
ಶ್ರುತಾಯುಶ್ಚ ಶತಾಯುಶ್ಚ ಕಿಮನ್ಯದ್ಭಾಗಧೇಯತಃ ॥34॥
ಸುದಕ್ಷಿಣ, ಜಲಸಂಧ, ಶ್ರುತಾಯು, ಶತಾಯು ಮೊದಲಾದವರೂ ಯುದ್ಧದಲ್ಲಿ ಸತ್ತಿದ್ದಾರೆ. ವಿಧಿಯೇ ಇದಕ್ಕೆಲ್ಲಾ ಕಾರಣ.
ಮಹಾಬಲಸ್ತಥಾ ಶಲ್ಯಃ ಸರ್ವಶಸತ್ರಸ್ತ್ರಪಾರಗಃ|
ನಿಹತಃ ಪಾಂಡವೈಸ್ಸಂಖೇ ಕಿಮನ್ಯದ್ಭಾಗಧೇಯತಃ ॥35॥
ಮಹಾಬಲ, ಸಕಲಶಸ್ತ್ರವೇತ್ತನಾದ ಶಲ್ಯ ಇವರೂ ಯುದ್ಧದಲ್ಲಿ ಪಾಂಡವರ ಕೈಯಿಂದ ಹತರಾಗಿದ್ದಾರೆ. ಇದು ವಿಧಿಯಲ್ಲದೆ ಮತ್ತೇನು?
ಬೃಹದ್ಬಲೋ ಹತೋ ಯತ್ರ ಮಾಗಧಶ್ಚ ಮಹಾಬಲಃ|
ಆವಂತ್ಯೌ ನಿಹತೌ ಯತ್ರ ಶಕುನಿಶ್ಚಾಪಿ ಸೌಬಲಃ ॥36॥
ತ್ರಿಗರ್ತಶ್ಚ ಮಹಾಬಾಹುಃ ಸಂಶಪ್ತಾಶ್ಚ ಮಹಾಬಲಾಃ|
ನಾರಾಯಣಾ ಹತಾ ಯತ್ರ ಗೋಪಾಲಾ ಯುದ್ಧದುರ್ಮದಾಃ ॥37॥
ಮ್ಲೇಚ್ಛಾಶ್ಚ ಬಹುಸಾಹಸ್ರಾಃ ಕಿಮನ್ಯದ್ಭಾಗಧೇಯತಃ ॥38॥
ಬೃಹದ್ಬಲ, ಬಲಶಾಲಿಯಾದ ಮಗಧರಾಜ, ಅವಂತಿದೇಶದ ರಾಜರು, ಸುಬಲದೇಶದ ರಾಜ ಶಕುನಿ, ತ್ರಿಗರ್ತದೇಶದ ಮಹಾಬಾಹು, ಬಲಶಾಲಿಗಳಾದ ಸಂಶಪ್ತಕರು, ಯುದ್ಧವಿಶಾರದರಾದ ಗೋಪಾಲರುಳ್ಳ ನಾರಾಯಣೀ ಸೇನೆ, ಸಾವಿರಾರು ಸಂಖ್ಯೆಯಲ್ಲಿದ್ದ ಮ್ಲೇಚ್ಛಸೈನ್ಯ ಇವರೆಲ್ಲರೂ ಯುದ್ಧದಲ್ಲಿ ಹತರಾಗಿದ್ದಾರೆ. ಇದೂ ವಿಧಿಯ ಪ್ರಾಬಲ್ಯವೇ ಸರಿ.
ಅಲಂಬುಸಸ್ತಥಾ ಶೂರೋ ರಾಕ್ಷಸಶ್ಚಾಪ್ಯಲಾಯುಧಃ|
ಆರ್ಶ್ಯಶೃಂಗಶ್ಚ ನಿಹತಃ ಕಿಮನ್ಯದ್ಭಾಗಧೇಯತಃ ॥39॥
ಶೂರನಾದ ಅಲಂಬುಸ, ಅಲಾಯುಧ ರಾಕ್ಷಸ, ಆರ್ಶ್ಯಶೃಂಗ ಇವರೂ ಸತ್ತಿದ್ದಾರೆ. ಇದಕ್ಕೂ ವಿಧಿಯೇ ಕಾರಣ.
ರಾಜಾನೋ ರಾಜಪುತ್ರಾಶ್ಚ ಶೂರಾಃ ಪರಿಘಬಾಹವಃ|
ನಾನಾದೇಶಸಮಾವೃತ್ತಾಃ ಕ್ಷತ್ರಿಯಾ ಯತ್ರ ಸಂಜಯ|
ನಿಹತಾಃ ಪಾಂಡವೇಯೈಸ್ತೈಃ ಕಿಮನ್ಯದ್ಭಾಗಧೇಯತಃ ॥40॥
ರಾಜರು, ರಾಜಪುತ್ರರು, ಯುದ್ಧಕ್ಕಾಗಿ ಸೇರಿದ ನಾನಾ ದೇಶದ ಕ್ಷತ್ರಿಯರು ಈ ಯುದ್ಧದಲ್ಲಿ ಪಾಂಡವರ ಕಡೆಯವರಿಂದ ಹತರಾಗಿದ್ದಾರೆ. ಇದು ವಿಧಿಯ ಆಟವೇ ಸರಿ.
ದುರ್ಯೋಧನೋ ಹತೋ ಯತ್ರ ಪುತ್ರಾಶ್ಚಾಸ್ಯ ಮಹಾತ್ಮನಃ|
ಸೋದರಾಶ್ಚ ಮಹೇಷ್ವಾಸಾಃ ಕಿಮನ್ಯದ್ಭಾಗಧೇಯತಃ ॥41॥
ದುರ್ಯೋಧನನೂ, ಮಹಾಬಲಶಾಲಿಯಾದ ಅವನ ಮಕ್ಕಳೂ, ಮಹಾಬಿಲ್ಗಾರರಾದ ಅವನ ಸಹೋದರರೂ ಸತ್ತಿದ್ದಾರೆ. ವಿಧಿಯಲ್ಲದೆ ಬೇರೆ ಕಾರಣವೇ ಇಲ್ಲ.
ಯತ್ರ(ಶ್ಚ) ಭಾಗ್ಯಸಮಾಯುಕ್ತಃ ಸ ಶಿವಂ ಪ್ರಾಪ್ನುಯಾದ್ಭುವಿ ॥42॥
ಅಹಂ ನಿ(ವಿ)ಯುಕ್ತಃ ಸ್ವೈರ್ಭಾಗ್ಯೈಃ ಪುತ್ರೈಶ್ಚ ಸಹ ಸಂಜಯ|
ಕಥಮಂಧೋ ಭವಿಷ್ಯಾಮಿ ವೃದ್ಧಶ್ಶತ್ರುವಶಂ ಗತಃ ॥43॥
ಯಾರು ಭಾಗ್ಯಶಾಲಿಗಳೋ ಅವರು ಭೂಮಿಯಲ್ಲಿ ಮಂಗಳವನ್ನು ಹೊಂದುತ್ತಾರೆ. ನಾನು ಭಾಗ್ಯಶಾಲಿಯೂ ಅಲ್ಲ. ಮಕ್ಕಳನ್ನೂ ಕಳೆದುಕೊಂಡಿದ್ದೇನೆ. ವೃದ್ಧ ಹಾಗೂ ಕುರುಡನಾದ ನಾನು ಏನಾದರೂ ಶತ್ರುಗಳ ಕೈಗೆ ಸಿಕ್ಕಿಹಾಕಿಕೊಂಡರೆ ಏನು ಮಾಡುವುದು?
ನಾನ್ಯದದ್ಯ ಪರಂ ಮನ್ಯೇ ವನವಾಸಾದೃತೇ ಪ್ರಭೋ|
ಸೋಽಹಂ ವನಂ ಗಮಿಷ್ಯಾಮಿ ನಿರ್ಬಂಧುರ್ಜ್ಞಾತಿಸಂಕ್ಷಯೇ ॥44॥
ಬಂಧುಗಳನ್ನೂ, ಸಂಬಂಧಿಗಳನ್ನು ಕಳೆದುಕೊಂಡ ನನಗೆ ವನವಾಸಕ್ಕಿಂತ ಉತ್ತಮವಾದ ಬೇರೆ ಯಾವುದೂ ಇಲ್ಲ. ಆದ್ದರಿಂದ ನಾನು ವನಕ್ಕೆ ತೆರಳುತ್ತೇನೆ.
ನ ಹಿ ಮೇಽನ್ಯದ್ಭವೇಚ್ಛ್ರೇಯೋ ವನಾಭ್ಯುಪಗಮಾದೃತೇ|
ಏತಾಮವಸ್ಥಾಂ ಪ್ರಾಪ್ತಸ್ಯ ಲೂನಪಕ್ಷಸ್ಯ ಸಂಜಯ ॥45॥
ಹೇ ಸಂಜಯ! ನನ್ನ ಕಡೆಯವರನ್ನೆಲ್ಲಾ ಕಳೆದುಕೊಂಡು ಇಂತಹ ಅವಸ್ಥೆಯನ್ನು ಹೊಂದಿದ್ದೇನೆ. ಅಂತಹ ನನಗೆ ವನವಾಸಕ್ಕಿಂತ ಬೇರೆ ಯಾವುದೇ ಶ್ರೇಯಸ್ಕರವಾದ ಕಾರ್ಯವು ಇಲ್ಲ.
ದುರ್ಯೋಧನೋ ಹತೋ ಯತ್ರ ಶಲ್ಯಶ್ಚ ಬಲವಾನ್ ಯುಧಿ|
ದುಶ್ಶಾಸನೋ ವಿಶಸ್ತಶ್ಚ ವಿಕರ್ಣಶ್ಚ ಮಹಾಬಲಃ ॥46॥
ಕಥಂ ನು ಭೀಮಸೇನಸ್ಯ ಶ್ರೋಷ್ಯೇಽಹಂ ಶಬ್ದಮುತ್ತಮಮ್|
ಏಕೇನ ಸಮರೇ ಯೇನ ಹತಂ ಪುತ್ರಶತಂ ಮಮ ॥47॥

ಅಸಕೃದ್ವದತಸ್ತಸ್ಯ ದುರ್ಯೋಧನವಧೇನ ಚ |
ಪುತ್ರಶೋಕಾಭಿಸಂತಪ್ತೋ ನ ಶ್ರೋಷ್ಯೇ ಪರುಷಾ ಗಿರಃ ॥48॥
ದುರ್ಯೋಧನ, ಶಲ್ಯ, ದುಃಶಾಸನ, ವಿಶಸ್ತ, ವಿಕರ್ಣ ಇವರೆಲ್ಲಾ ಸತ್ತಿದ್ದಾರೆ. ಏಕಾಕಿಯಾಗಿ ನನ್ನ ನೂರು ಜನ ಮಕ್ಕಳನ್ನು ಸಾಯಿಸಿದ ಭೀಮಸೇನನ ಭಯಂಕರವಾದ ಯುದ್ಧಗರ್ಜನೆಯನ್ನು ಹೇಗೆ ನಾನು ಕೇಳಲಿ? ಕೇಳಲು ಅಸಾಧ್ಯವಾದ ಕ್ರೂರಮಾತುಗಳನ್ನು ಈ ಭೀಮಸೇನ ಆಡುತ್ತಾನೆ. ದುರ್ಯೋಧನ ವಧೆಯಿಂದಾಗಿ ಪುತ್ರಶೋಕದಿಂದ ಬಳಲುತ್ತಿರುವ ನಾನು ಅವನ ಕಠಿಣಮಾತುಗಳನ್ನು ಕೇಳಲಾರೆ.
ವೈಶಂಪಾಯನಃ
ಏವಂ ಸ ಶೋಕಸಂತಪ್ತಃ ಪಾರ್ಥಿವೋ ಹತಬಾಂಧವಃ |
ಮುಹುರ್ಮುಹುರ್ಮುಹ್ಯಮಾನಃ ದುಃಖೇನ ಮಹತಾಽಽಪ್ಲುತಃ ॥49॥
ವಿಲಪ್ಯ ಸುಚಿರಂ ಕಾಲಂ ಧೃತರಾಷ್ಟ್ರೋಽಂಬಿಕಾಸುತಃ |
ದೀರ್ಘಮುಷ್ಣಂ ವಿನಿಶ್ವಸ್ಯ ಚಿಂತಯಿತ್ವಾ ಪರಾಭವಮ್ ॥50॥
ದುಃಖೇನ ಮಹತಾ ರಾಜನ್ ಸಂತಪ್ತೋ ಭರತರ್ಷಭ |
ಪುನರ್ಗಾವಲ್ಗಣಿಂ ಸೂತಂ ಪರ್ಯಪೃಚ್ಛದ್ಯಥಾತಥಮ್ ॥51॥
ವೈಶಂಪಾಯನರು ಹೇಳುತ್ತಾರೆ ಹೀಗೆ ಬಂಧುಗಳನ್ನು ಕಳೆದುಕೊಂಡು ಶೋಕದಿಂದ ಜರ್ಝರಿತನಾದ ಧೃತರಾಷ್ಟ್ರನು ಬಹಳವಾದ ದುಃಖದಿಂದ ಕೂಡಿಕೊಂಡವನಾಗಿ ಮತ್ತೆ ಮತ್ತೆ ಮೂರ್ಛೆಹೋದನು. ತುಂಬಾ ಸಮಯ ಹೀಗೆ ದುಃಖಿಸುತ್ತಾ ಅಂಬಿಕಾಸುತನಾದ ಧೃತರಾಷ್ಟ್ರನು ನಿಡಿದಾದ ಬಿಸಿಯುಸಿರನ್ನು ಬಿಡುತ್ತಾ, ತನ್ನ ಸೋಲನ್ನು ನೆನೆಯುತ್ತಾ, ಬಹಳವಾದ ದುಃಖದಿಂದ ಸಂತಪ್ತನಾಗಿ ಪುನಃ ಸಂಜಯನನ್ನು ಕೇಳುತ್ತಾನೆ.
ಧೃತರಾಷ್ಟ್ರಃ
ಭೀಷ್ಮದ್ರೋಣೌ ಹತೌ ಶ್ರುತ್ವಾ ಸೂತಪುತ್ರಂ ಚ ಪಾತಿತಮ್ |
ಸೇನಾಪತಿಂ ಮಹೇಷ್ವಾಸಂ ಕಿಮಕುರ್ವತ ಮಾಮಕಾಃ ॥52॥
ಧೃತರಾಷ್ಟ್ರ ಹೇಳುತ್ತಾನೆ (ಧೃತರಾಷ್ಟ್ರನು ಮತ್ತೆ ಹಿಂದಿನ ಘಟನೆಗಳನ್ನು ಮೆಲುಕು ಹಾಕಲಿಕ್ಕಾಗಿ ಪ್ರಶ್ನಿಸುತ್ತಾನೆ) ಯುದ್ಧದಲ್ಲಿ ಸೇನಾಪತಿಗಳಾಗಿ ನಿಯುಕ್ತರಾಗಿದ್ದ ಮಹಾಪರಾಕ್ರಮಿಗಳಾದ ಭೀಷ್ಮಾಚಾರ್ಯರು, ದ್ರೋಣಾಚಾರ್ಯರು ಹಾಗೂ ಕರ್ಣ ಇವರು ಹತರಾದ ನಂತರ ನನ್ನ ಪಕ್ಷದವರು ಏನು ಮಾಡಿದರು?
ಯಂ ಯಂ ಸೇನಾಪ್ರಣೇತಾರಂ ಯುದ್ಧೇ ಕುರ್ವಂತಿ ಮಾಮಕಾಃ |
ಅಚಿರೇಣೈವ ಕಾಲೇನ ತಂ ತಂ ನಿಘ್ನಂತಿ ಪಾಂಡವಾಃ ॥53॥
ನಮ್ಮವರು ಯಾರನ್ನೆಲ್ಲಾ ಸೇನಾಧಿಪತಿಗಳನ್ನಾಗಿ ಮಾಡಿದರೂ ಪಾಂಡವರು ಶೀಘ್ರದಲ್ಲಿಯೇ ಅವರನ್ನು ಸಾಯಿಸುತ್ತಾರೆ.
ರಣಮೂರ್ಧ್ನಿ ಹತೋ ಭೀಷ್ಮಃ ಪಶ್ಯತಾಂ ವಃ ಕಿರೀಟಿನಾ |
ಏವಮೇವ ಹತೋ ದ್ರೋಣಃ ಸರ್ವೇಷಾಮೇವ ಪಶ್ಯತಾಮ್ ॥54॥
ಯುದ್ಧದಲ್ಲಿ ಎಲ್ಲರು ನೋಡುತ್ತಿರುವಂತೆಯೇ ಅರ್ಜುನನು ಭೀಷ್ಮನನ್ನು ಸೋಲಿಸಿದ್ದಾನೆ. ದ್ರೋಣನೂ ಎಲ್ಲರ ಎದುರುಗಡೆಯೇ ಹತನಾಗಿದ್ದಾನೆ.
ಏವಮೇವ ಹತೋ ಕರ್ಣಃ ಸೂತಪುತ್ರಃ ಪ್ರತಾಪವಾನ್ |
ಸರಾಜಕಾನಾಂ ಸರ್ವೇಷಾಂ ಪಶ್ಯತಾಂ ವಃ ಕಿರೀಟಿನಾ ॥55॥
ಅರ್ಜುನನು ಮಹಾಪ್ರತಾಪಿಯಾದ ಸೂತಪುತ್ರ ಕರ್ಣನನ್ನೂ ಎಲ್ಲಾ ರಾಜರುಗಳ ಸಮಕ್ಷಮದಲ್ಲಿಯೇ ಕೊಂದಿದ್ದಾನೆ.
ಪೂರ್ವಮೇವಾಹಮುಕ್ತೋಽಸ್ಮಿ ವಿದುರೇಣ ಮಹಾತ್ಮನಾ |
ದುರ್ಯೋಧನಾಪರಾಧೇನ ಪ್ರಜೇಯಂ ವಿನಶಿಷ್ಯತಿ ॥56॥
ಮಹಾತ್ಮನಾದ ವಿದುರನು ಮೊದಲೇ ನನಗೆ ಹೇಳಿದ್ದ- ದುರ್ಯೋಧನನಿಂದಾಗಿ ನಿನ್ನ ಪ್ರಜೆಗಳೂ ಮಕ್ಕಳು ಎಲ್ಲರೂ ನಾಶ ಹೊಂದುವವರೆಂದು.
ಕೇಚಿನ್ನ ಸಮ್ಯಕ್ಪಶ್ಯಂತಿ ಮೂಢಾಃ ಸಮ್ಯಗವೇಕ್ಷ್ಯ ಚ |
ತದಿದಂ ಮಮ ಮೂಢಸ್ಯ ತಥಾಭೂತಂ ವಚಸ್ತು ತತ್ ॥57॥
ಲೋಕದಲ್ಲಿ ಮೂಢರಾದ ಕೆಲವರು ಪ್ರತ್ಯಕ್ಷವಾಗಿ ನೋಡುತ್ತಿದ್ದರೂ ವಿಷಯಪದಾರ್ಥಗಳನ್ನು ಸರಿಯಾಗಿ ಗಮನಿಸುವುದಿಲ್ಲ. ಈ ಮಾತಿಗೆ ದೃಷ್ಟಾಂತ- ಮೂಢನಾದ ನಾನೇ! ನನ್ನ ಪಾಲಿಗೆ ಈ ಮಾತು ಸತ್ಯವಾಗಿದೆ.
ಯದಬ್ರುವೀನ್ಮಾಂ ಧರ್ಮಾತ್ಮಾ ವಿದುರೋ ದೀರ್ಘದರ್ಶಿವಾನ್ |
ತತ್ತಥಾ ಸಮನುಪ್ರಾಪ್ತಂ ವಚನಂ ದೀರ್ಘದರ್ಶಿನಃ ॥58॥
ಧರ್ಮಾತ್ಮನಾದ ಹಾಗೂ ದೂರದರ್ಶಿಯಾದ ವಿದುರನು ಯಾವುದನ್ನು ನನಗೆ ಹೇಳಿದ್ದನೋ ಅದು ಹಾಗೆಯೇ ನಡೆದಿದೆ.
ದೈವೋಪಹತಚಿತ್ತೇನ ಯನ್ಮಯಾನುಷ್ಠಿತಂ ಪುರಾ |
ಅನಯಸ್ಯ ಫಲಂ ತಸ್ಯ ಬ್ರೂಹಿ ಗಾವಲ್ಗಣೇ ಪುನಃ ॥59॥
ಹೇ ಸಂಜಯ! ವಿಧಿಯ ಆಟಕ್ಕೆ ಒಳಗಾದ ನಾನು ಏನೆಲ್ಲಾ ಅನ್ಯಾಯಗಳನ್ನು ಮಾಡಿದ್ದೇನೋ ಅವುಗಳಿಂದುಂಟಾಗುವ ಫಲವನ್ನು ಮತ್ತೆ ಹೇಳು.
ಕೋ ವಾ ಮುಖಮನೀಕಾನಾಮಾಸೀತ್ಕರ್ಣೇ ನಿಪಾತಿತೇ |
ಅರ್ಜುನಂ ವಾಸುದೇವಂ ಚ ಕೋ ವಾ ಪ್ರತ್ಯುದ್ಯಯೌ ರಥೀ ॥60॥

ಸೇನಾಪತಿಯಾದ ಕರ್ಣನು ಯುದ್ಧದಲ್ಲಿ ಮಡಿದ ಮೇಲೆ ಯಾರು ನಮ್ಮ ಸೇನೆಯ ಅಧಿಪತಿಯಾದರು? ಕೃಷ್ಣಾರ್ಜುನರನ್ನು ಯಾರು ಯುದ್ಧದಲ್ಲಿ ಎದುರಿಸಿದರು?
ಕೇಽರಕ್ಷನ್ ದಕ್ಷಿಣಂ ಚಕ್ರಂ ಮದ್ರರಾಜಸ್ಯ ಸಂಯುಗೇ |
ವಾಮಂ ವಾ ಯೋದ್ಧುಕಾಮಸ್ಯ ಕೇ ವಾ ವೀರಸ್ಯ ಪೃಷ್ಠತಃ ॥61॥
ಮದ್ರರಾಜನಾದ ಶಲ್ಯನ ರಥದ ಬಲಭಾಗದ ಚಕ್ರರಕ್ಷಕ ಯಾರಾಗಿದ್ದರು? ಯುದ್ಧಸನ್ನದ್ಧನಾದ ಶಲ್ಯನ ಎಡಭಾಗದ ಚಕ್ರರಕ್ಷಕರು ಯಾರು? ಪರಾಕ್ರಮಿಯಾದ ಅವನ ಹಿಂದೆ ಯಾರಿದ್ದರು?
ಕಥಂ ಚ ವಸ್ಸಮೇತಾನಾಂ ಮಹಾರಾಜೋ ಮಹಾಬಲಃ |
ನಿಹತಃ ಪಾಂಡವೈಸ್ಸಂಖ್ಯೇ ಪುತ್ರಾ ವಾ ಮಮ ಸಂಜಯ |
ಬ್ರೂಹಿ ಸರ್ವಂ ಯಥಾತತ್ತ್ವಂ ಭಾರತಾನಾಂ ಮಹಾಕ್ಷಯಮ್ ॥62॥
ಹೀಗೆ ಸುತ್ತಲೂ ನಮ್ಮವರು ಸುತ್ತುವರಿದಿದ್ದರೂ ಮಹಾಬಲಶಾಲಿಯಾದ ಮದ್ರರಾಜನನ್ನು ಹಾಗೂ ನನ್ನ ಮಕ್ಕಳನ್ನು ಯುದ್ಧದಲ್ಲಿ ಪಾಂಡವರು ಹೇಗೆ ಕೊಂದುಹಾಕಿದರು? ಕುರುಗಳ ನಾಶವು ಹೇಗೆ ನಡೆಯಿತೆಂಬುದನ್ನು ಯಥಾವತ್ತಾಗಿ ಎಲ್ಲವನ್ನೂ ಹೇಳು.
ಯಥಾ ಚ ನಿಹತಸ್ಸಂಖ್ಯೇ ಪುತ್ರೋ ದುರ್ಯೋಧನೋ ಮಮ |
ಪಾಂಚಾಲಾಶ್ಚ ಯಥಾ ಸರ್ವೇ ನಿಹತಾಃ ಸ್ಪಪದಾನುಗಾಃ ॥63॥
ದ್ವಂದ್ವಯುದ್ಧದಲ್ಲಿ ನನ್ನ ಮಗ ದುರ್ಯೋಧನನು ಹೇಗೆ ಸತ್ತ? ಸೇವಕರಿಂದ ಸಹಿತರಾದ ದ್ರೌಪದಿಯ ಐದು ಮಕ್ಕಳು ಹೇಗೆ ಹತರಾದರು?
ಧೃಷ್ಟದ್ಯುಮ್ನಶ್ಶಿಖಂಡೀ ಚ ದ್ರೌಪದ್ಯಾಃ ಪಂಚ ಚಾತ್ಮಜಾಃ |
ಪಾಂಡವಾಶ್ಚ ಯಥಾ ಮುಕ್ತಾಃ ತಥಾ ತೌ ಸಾತ್ವತೌ ಭುವಿ(ಯುಧಿ) ॥
ಕೃಪಶ್ಚ ಕೃತವರ್ಮಾ ಚ ಭಾರದ್ವಾಜಾತ್ಮಜಸ್ತಥಾ ॥65॥
ಪಾಂಡವರ ಪಕ್ಷದಲ್ಲಿ ಧೃಷ್ಟದ್ಯುಮ್ನ, ಶಿಖಂಡಿ, ದ್ರೌಪದಿಯ ಐದು ಮಕ್ಕಳು, ಧರ್ಮರಾಜ ಮೊದಲಾದ ಪಂಚ ಪಾಂಡವರು ಹಾಗೂ ಕೌರವರ ಪಕ್ಷದಲ್ಲಿ ಪರಾಕ್ರಮಿಗಳಾದ ಕೃಪ, ಕೃತವರ್ಮ, ಅಶ್ವತ್ಥಾಮ ಇವರು ಯುದ್ಧದಲ್ಲಿ ಹೇಗೆ ಉಳಿದುಕೊಂಡರು?
ಯದ್ಯಥಾ ಯಾದೃಶಂ ವೃತ್ತಂ ಯಥಾ ಚೈವೇಹ ಸಾಂಪ್ರತಮ್ |
ನಿಖಿಲಂ ಶ್ರೋತುಮಿಚ್ಛಾಮಿ ಕುಶಲೋ ಹ್ಯಸಿ ಸಂಜಯ ॥66॥
ಈ ಎಲ್ಲಾ ವಿಷಯಗಳನ್ನು ಹೇಗೆ ನಡೆದಿದೆಯೋ ಹಾಗೆಯೇ ಕೇಳಲು ಉತ್ಸುಕನಾಗಿದ್ದೇನೆ. ಸಂಜಯ! ಇವೆಲ್ಲವನ್ನೂ ಹೇಳಲು ನೀನು ಸಮರ್ಥನಾಗಿರುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಸಂಜಯನು ಧೃತರಾಷ್ಟ್ರನಿಗೆ ಭೀಮಾದಿಗಳ ಯುದ್ಧವನ್ನು ವರ್ಣಿಸುವುದು
ಸಂಜಯಃ
ಶೃಣು ರಾಜನ್ನವಹಿತೋ ಯಥಾವೃತ್ತೋ ಮಹಾನ್ ಕ್ಷಯಃ |
ಕುರೂಣಾಂ ಪಾಂಡವಾನಾಂ ಚ ಸಮಾಸಾದ್ಯ ಪರಸ್ಪರಮ್ ॥1॥
ರಾಜನ್! ಪರಸ್ಪರವಾಗಿ ಯುದ್ಧಮಾಡುತ್ತಿದ್ದ ಕೌರವರ ಮತ್ತು ಪಾಂಡವರ ಮಹತ್ತಾದ ನಾಶವನ್ನು ಹೇಳುತ್ತೇನೆ. ಗಮನವಿಟ್ಟು ಕೇಳು.
ನಿಹತೇ ಸೂತಪುತ್ರೇ ತು ಪಾಂಡವೇನ ಮಹಾತ್ಮನಾ |
ವಿದ್ರುತೇಷು ಚ ಸೈನ್ಯೇಷು ಸಮಾನೀತೇಷು ಚಾಸಕೃತ್ ॥2॥
ಮಹಾತ್ಮನಾದ ಅರ್ಜುನನಿಂದ ಕರ್ಣನು ಹತನಾಗಲು ಒಟ್ಟುಸೇರಿಸಿದ್ದ ಎಲ್ಲಾ ಸೈನ್ಯವೂ ಭಯದಿಂದ ಓಡಿಹೋಯಿತು. ಪ್ರಯತ್ನಪಟ್ಟು ಮತ್ತೆ ಕರೆತಂದರೂ ಪುನಃ ಓಡಲಾರಂಭಿಸಿತು.
ಘೋರೇ ಮನುಷ್ಯದೇಹಾನಾಮಾಜೌ ನರವರಕ್ಷಯೇ |
ಯತ್ತತ್ಕರ್ಣೇ ಹತೇ ಪಾರ್ಥಃ ಸಿಂಹನಾದಮಥಾಕರೋತ್ ॥3॥
ಭಯಂಕರವಾದ ಯುದ್ಧದಲ್ಲಿ ನರಶ್ರೇಷ್ಠರು ಸತ್ತುಬಿದ್ದಿದ್ದಾರೆ. ಬಹುದೊಡ್ಡದಾದ ಹೆಣದ ರಾಶಿ ಬಿದ್ದಿದೆ. ಕರ್ಣನು ಯಾವಾಗ ಸತ್ತನೋ ಆಗ ಅರ್ಜುನನು ಸಿಂಹಗರ್ಜನೆಯನ್ನು ಮಾಡಿದನು.
ತದಾ ತವ ಸುತಾನ್ ರಾಜನ್ ಪ್ರಾವಿಶತ್ ಸುಮಹದ್ಭಯಮ್ ॥4॥
ಅರ್ಜುನನ ಗರ್ಜನೆ, ಕರ್ಣನ ಸಾವು ಇವೆರಡರಿಂದ ನಿನ್ನ ಮಕ್ಕಳು ಭಯಗ್ರಸ್ತರಾದರು.
ನ ಸಂಧಾತುಮನೀಕಾನಿ ನ ಚೈವಾಥ ಪರಾಕ್ರಮೇ |
ಆಸೀದ್ ಬುದ್ಧಿರ್ಹತೇ ಕರ್ಣೇ ತವ ಯೋಧಸ್ಯ ಕಸ್ಯಚಿತ್ ॥5॥
ಕರ್ಣನನ್ನು ಕಳೆದುಕೊಂಡ ನಿನ್ನ ಯೋಧರಿಗೆ ಚದುರಿಹೋದ ಸೈನ್ಯವನ್ನು ಒಟ್ಟು ಸೇರಿಸಲೂ ಆಗಲಿಲ್ಲ. ವೀರಾವೇಶದಿಂದ ಯುದ್ಧ ಮಾಡಲೂ ಮನಸ್ಸುಂಟಾಗಲಿಲ್ಲ.
ವಣಿಜೋ ನಾವಿ ಭಿನ್ನಾಯಾಮಗಾಧೇ ವಿಪ್ಲವಾ ಇವ |
ಅಪಾರೇ ಪಾರಮಿಚ್ಛಂತೋ ಹತೇ ದ್ವೀಪೇ ಕಿರೀಟಿನಾ ॥6॥

ಸೂತಪುತ್ರೇ ಹತೇ ರಾಜನ್ ವಿತ್ರಸ್ತಾಃ ಶರವಿಕ್ಷತಾಃ |
ಅನಾಥಾ ನಾಥಮಿಚ್ಛಂತೋ ಮೃಗಾಃ ಸಿಂಹಾರ್ದಿತಾ ಇವ ॥7॥
ಭಗ್ನಶೃಂಗಾ ಇವ ವೃಷಾ ಶೀರ್ಣದಂಷ್ಟ್ರಾ ಇವೋರಗಾಃ |
ಪ್ರತ್ಯುಪಾಯಾಮ ಸಾಯಾಹ್ನೇ ನಿರ್ಜಿತಾ ಸವ್ಯಸಾಚಿನಾ ॥8॥
ಹತಪ್ರವೀರಾ ವಿಧ್ವಸ್ತಾ ನಿಕೃತ್ತಾ ನಿಶಿತೈಃ ಶರೈಃ |
ಸೂತಪುತ್ರೇ ಹತೇ ರಾಜನ್ ಪುತ್ರಾಸ್ತೇ ಪ್ರಾದ್ರವಂಸ್ತತಃ ॥9॥
ವಿಧ್ವಸ್ತಕವಚಾಃ ಸರ್ವೇ ಕಾಂದಿಶೀಕಾ ವಿಚೇತಸಃ |
ಅನ್ಯೋನ್ಯಮಭಿನಿಘ್ನಂತೋ ವೀಕ್ಷಮಾಣಾ ಭಯಾದ್ ದಿಶಃ ॥10॥
ಅಪಾರವಾದ ಕಡಲನ್ನು ದಾಟಿ ದಡಸೇರಲು ಉತ್ಸುಕನಾದ ವ್ಯಾಪಾರಿಯ ನಾವೆಯೂ ಮುರಿದುಬಿದ್ದಿದೆ. ಪಕ್ಕದಲ್ಲಿಯೇ ಆಧಾರವಾಗಬಹುದಾಗಿದ್ದ ದ್ವೀಪವೂ ನಾಶವಾಗಿದೆ. ಆಗ ಉಂಟಾಗುವ ಕ್ಷೋಭೆಯಂತೆ ಕೌರವರಲ್ಲಿಯೂ ಕ್ಷೋಭೆಯು ಉಂಟಾಯಿತು. ಭಯಂಕರವಾದ ಯುದ್ಧದಲ್ಲಿ ಜಯವನ್ನು ಗಳಿಸಬೇಕೆಂಬ ತವಕದಲ್ಲಿ ಇದ್ದ ಕೌರವರಿಗೆ ಆಶ್ರಯನಾಗಿದ್ದ ಕರ್ಣನನ್ನು ಅರ್ಜುನನು ಸಂಹರಿಸಿದ್ದಾನೆ. ರಾಜನೇ! ಕರ್ಣನು ಹತನಾಗಲು ನಿನ್ನ ಮಕ್ಕಳೆಲ್ಲರೂ ಭಯಗೊಂಡು ಅನಾಥವಾದ ಜಿಂಕೆಗಳು ಸಿಂಹದಿಂದ ದಾಳಿಗೊಳಗಾಗಿ ರಕ್ಷಕರನ್ನು ಹುಡುಕುವಂತೆ ಅರ್ಜುನನಿಂದ ಸೋತು ರಣರಂಗದಿಂದ ಓಡಿಹೋದರು. ತಮ್ಮ ಕೋಡನ್ನು ಕಳೆದುಕೊಂಡ ಎತ್ತುಗಳಂತೆ, ವಿಷದ ಹಲ್ಲುಗಳನ್ನು ಕಳೆದುಕೊಂಡ ಹಾವುಗಳಂತೆ ನಿನ್ನ ಮಕ್ಕಳು ವೀರಯೋಧರನ್ನು ಕಳೆದುಕೊಂಡು ಸವ್ಯಸಾಚಿಯಾದ ಅರ್ಜುನನ ಹರಿತವಾದ ಬಾಣಗಳಿಂದ ಗಾಯಗೊಂಡು ಪಲಾಯನ ಮಾಡಿದರು. ಸಾಯಂಕಾಲದ ಹೊತ್ತು ನಾವೆಲ್ಲಾ ಶಿಬಿರಗಳನ್ನು ಸೇರಿಕೊಂಡೆವು.
ಮಾಮೇವ ನೂನಂ ಬೀಭತ್ಸುರ್ಮಾಮೇವ ಚ ವೃಕೋದರಃ |
ಅಭಿಯಾತೀತಿ ಮನ್ವಾನಾಃ ಪೇತುರ್ಮಮ್ರುಶ್ಚ ಭಾರತ ॥11॥
ನನ್ನ ವಿರುದ್ಧವಾಗಿ ಯುದ್ಧಮಾಡಲು ಯುದ್ಧ ಭಯಂಕರನಾದ ಅರ್ಜುನನು ಬಂದಿದ್ದಾನೆ, ನನ್ನ ವಿರುದ್ಧವಾಗಿ ಯುದ್ಧಮಾಡಲು ಭೀಮನು ಬಂದಿದ್ದಾನೆ, ಎಂಬುದಾಗಿ ತಿಳಿಯುತ್ತಾ ಭಯದಿಂದ ಬೀಳುತ್ತಿದ್ದರು. ಬಿದ್ದು ಸಾಯುತ್ತಿದ್ದರು.
ಅಶ್ವಾನನ್ಯೇ ಗಜಾನನ್ಯೇ ರಥಾನನ್ಯೇ ಮಹಾರಥಾಃ |
ಆರುಹ್ಯ ಜವಸಂಪನ್ನಾಃ ಪಾದಾತಾನ್ ಪ್ರಜಹುರ್ಭಯಾತ್ ॥12॥
ಮಹಾರಥರೆನಿಸಿದವರೂ ಕೂಡ ಭಯಗೊಂಡು ಕೆಲವರು ಕುದುರೆಗಳನ್ನೂ, ಕೆಲವರು ಆನೆಗಳನ್ನೂ, ಕೆಲವರು ರಥವನ್ನೂ ಹತ್ತಿ ಬಹುವೇಗದಿಂದ ಓಡಿಹೋದರು.
ಕುಂಜರೈಃ ಸ್ಯಂದನಾ ಭಗ್ನಾಃ ಸಾದಿನಶ್ಚ ಮಹಾರಥೈಃ |
ಪದಾತಿಸಂಘಾಶ್ಚಾಶ್ವೌಘೈಃ ಪಲಾಯದ್ಭಿರ್ಭೃಶಂ ಹತಾಃ ॥13॥
ಓಡುತ್ತಿದ್ದ ಆನೆಗಳಿಂದಾಗಿ ರಥಗಳು ಪುಡಿಯಾದವು. ದೊಡ್ಡ ದೊಡ್ಡ ರಥಗಳಿಗೆ ಸಿಲುಕಿ ಕುದುರೆ ಸವಾರರು ಸತ್ತುಬಿದ್ದರು. ಓಡುತ್ತಿರುವ ಕುದುರೆಗಳ ಕಾಲಿಗೆ ಸಿಲುಕಿ ಪದಾತಿಗಳು ಬಹಳವಾಗಿ ಸತ್ತರು.
ವ್ಯಾಲತಸ್ಕರಸಂಕೀರ್ಣೇ ಸಾರ್ಥಹೀನಾ ಯಥಾ ವನೇ |
ತಥಾ ತ್ವದೀಯಾ ನಿಹತೇ ಸೂತಪುತ್ರೇ ತದಾಽಭವನ್ ॥14॥
ಸೇನಾಪತಿಯಾದ ಕರ್ಣನು ಸತ್ತು ಬಿದ್ದಾಗ ನಿನ್ನ ಕಡೆಯವರೆಲ್ಲಾ ಅನಾಥರಾದರು. ವಿಷಜಂತುಗಳು ಮತ್ತು ಕಳ್ಳರಿಂದ ತುಂಬಿದ ಕಾಡಿನಲ್ಲಿ ರಕ್ಷಕರಿಲ್ಲದಿರುವ ಜನರಂತೆ ನಿನ್ನ ಕಡೆಯವರು ಆದರು.
ಹತಾರೋಹಾಸ್ತಥಾ ನಾಗಾಶ್ಛಿನ್ನಹಸ್ತಾಸ್ತಥಾಽಪರೇ |
ಸರ್ವಂ ಪಾರ್ಥಮಯಂ ಲೋಕಮಪಶ್ಯನ್ ವೈ ಭಯಾರ್ದಿತಾಃ ॥15॥
ಕುದುರೆಗಳನ್ನು ಮನೆಗಳನ್ನು ಕಳಕೊಂಡವರು, ಕೈಮುರಿದುಕೊಂಡವರು ಹೀಗೆ ಎಲ್ಲರೂ ಭಯದಿಂದ ಸುತ್ತಮುತ್ತಲೂ ಅರ್ಜುನನೇ ಇದ್ದಾನೆ ಎಂಬುದಾಗಿ ತಿಳಿದರು.
ತಾನ್ ಪ್ರೇಕ್ಷ್ಯ ದ್ರವತಃ ಸರ್ವಾನ್ ಭೀಮಸೇನಭಯಾರ್ದಿತಾನ್ |
ದುರ್ಯೋಧನೋಽಥ ಸ್ವಂ ದೂತಂ ಹಾಹಾಕೃತ್ವೈವಮಬ್ರವೀತ್ ॥16॥
ಹೀಗೆ ಭೀಮನ ಭಯದಿಂದ ಓಡುತ್ತಿರುವ ತನ್ನ ಕಡೆಯವರನ್ನೆಲ್ಲಾ ನೋಡಿದ ದುರ್ಯೋಧನನು ಜೋರಾಗಿ ಬೊಬ್ಬೆಹೊಡೆದು ತನ್ನ ದೂತ(ಸಾರಥಿ)ನಿಗೆ ಹೀಗೆ ಹೇಳುತ್ತಾನೆ.
ನಾತಿಕ್ರಮಿಷ್ಯತೇ ಪಾರ್ಥೋ ಧನುಷ್ಪಾಣಿಮವಸ್ಥಿತಮ್ |
ಜಘನೇ ವರ್ತಮಾನಂ ಮಾಂ ತೂರ್ಣಮಶ್ವಾನ್ ಪ್ರಚೋದಯ ॥17॥
ಧನುರ್ಧಾರಿಯಾಗಿ ಸೇನಾಸಮುದ್ರದ ತೀರದಲ್ಲಿ ಯುದ್ಧಮಾಡುತ್ತಾ ಇರುವ ನನ್ನನ್ನು ಅರ್ಜುನನು ಇನ್ನೂ ದಾಟಿಹೋಗಲಿಲ್ಲ. ಆದ್ದರಿಂದ ಬೇಗನೆ ಕುದುರೆಗಳನ್ನು ಓಡಿಸು.
ಸಮರೇ ಯುಧ್ಯಮಾನಂ ಹಿ ಕೌಂತೇಯೋ ಮಾಂ ಧನಂಜಯಃ |
ನೋತ್ಸಹೇತಾಪ್ಯತಿಕ್ರಾಂತುಂ ವೇಲಾಮಿವ ಮಹಾರ್ಣವಃ ॥18॥
ಮಹಾಸಮುದ್ರವೂ ಕೂಡ ತೀರವನ್ನು ಮೀರಿ ಹೋಗಲಾರದು. ಹಾಗೆಯೇ ರಣರಂಗದಲ್ಲಿ ಯುದ್ಧಮಾಡುತ್ತಿರುವ ನನ್ನನ್ನು ಕುಂತೀಪುತ್ರ ಅರ್ಜುನನು ಮೀರಿಹೋಗಲು ಸಮರ್ಥನಾಗಲಾರನು.
ಅದ್ಯಾರ್ಜುನಂ ಸಗೋವಿಂದಂ ಮಾನಿನಂ ಚ ವೃಕೋದರಮ್ |
ನಿಹತ್ಯ ಶಿಷ್ಟಾನ್ ಶತ್ರೂಂಶ್ಚ ಕರ್ಣಸ್ಯಾನೃಣ್ಯಮಾಪ್ನುಯಾಮ್ ॥19॥

ಇವತ್ತು ನಾನು ಅರ್ಜುನ ಮತ್ತು ಅವನ ಸಹವರ್ತಿ ಕೃಷ್ಣ, ಇವರೀರ್ವರನ್ನೂ, ಮಾನವಂತನಾದ ಭೀಮನನ್ನೂ ಹಾಗೂ ಉಳಿದೆಲ್ಲಾ ಶತ್ರುಗಳನ್ನೂ ಕೊಂದು ಕರ್ಣನ ಋಣವನ್ನು ಪರಿಹರಿಸಿಕೊಳ್ಳುತ್ತೇನೆ.''
ತಚ್ಛ್ರುತ್ವಾ ಕುರುರಾಜಸ್ಯ ಶೂರಾರ್ಯಸದೃಶಂ ವಚಃ |
ಸೂತೋ ಹೇಮಪರಿಚ್ಛನ್ನಾನ್ ಶನೈರಶ್ವಾನಚೋದಯತ್ ॥20॥
ದುರ್ಯೋಧನನ ಈ ವೀರೋಚಿತವಾದ ಮಾತನ್ನುಕೇಳಿದ ಸಾರಥಿಯು ಬಂಗಾರದ ಮೇಲ್ಹೊದಿಕೆಗಳನ್ನು ಹಾಕಿಕೊಂಡಿರುವ ಕುದುರೆಗಳನ್ನು ಓಡಿಸುತ್ತಾನೆ.
ಗಜಾಶ್ವರಥಹೀನಾಸ್ತು ಪದಾತಾಶ್ಚೈವ ಮಾರಿಷ |
ಪಂಚವಿಂಶತಿಸಾಹಸ್ರಾಃ ಪ್ರಾದ್ರವನ್ ಶನಕೈರಿವ ॥21॥
ಎಲೈ ರಾಜನೇ! ಕೌರವನ ಪಕ್ಷದಲ್ಲಿ ಆನೆ, ಕುದುರೆ, ರಥಗಳು ಇರಲಿಲ್ಲ. ಕೇವಲ ಇಪ್ಪತ್ತೈದು ಸಾವಿರ ಪದಾತಿಗಳು ನಿಧಾವಾಗಿ ಶತ್ರುಗಳ ಮೇಲೇರಿ ಬಂದರು.
ತಾನ್ ಭೀಮಸೇನಃ ಸಂಕ್ರುದ್ಧೋ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಬಲೇನ ಚತುರಂಗೇಣ ಪರಿಕ್ಷಿಪ್ಯಾಹನಚ್ಛರೈಃ ॥22॥
ಕುಪಿತನಾದ ಭೀಮಸೇನ ಮತ್ತು ದ್ರುಪದಪುತ್ರನಾದ ಧೃಷ್ಟದ್ಯುಮ್ನರು ಗಜಾಶ್ವರಥಪದಾತಿಯುಕ್ತವಾದ ಚತುರಂಗಸೇನೆಯಿಂದ ಎದುರಿಸಿ ಕ್ರಮೇಣ ನಾಶಮಾಡಿದರು.
ಪ್ರತ್ಯಯುಧ್ಯಂಸ್ತು ತೇ ಸರ್ವೇ ಭೀಮಸೇನಂ ಸಪಾರ್ಷತಮ್ |
ಪಾರ್ಥಪಾರ್ಷತಯೋಶ್ಚಾನ್ಯೇ ಜಗೃಹುಸ್ತತ್ರ ನಾಮನೀ ॥23॥
ದುರ್ಯೋಧನನ ಸೈನಿಕರೂ ಈ ಭೀಮ-ಧೃಷ್ಟದ್ಯುಮ್ನರನ್ನು ಎದುರಿಸಿ ಅವರೀರ್ವರ ಹೆಸರನ್ನು ಕರೆಯುತ್ತಾ ಯುದ್ಧಮಾಡಿದರು.
ಅಕ್ರುಧ್ಯತ ರಣೇ ಭೀಮಸ್ತೈರ್ಮೃಧೇ ಪ್ರತ್ಯವಸ್ಥಿತೈಃ |
ಸೋಽವತೀರ್ಯ ರಥಾತ್ತೂರ್ಣಂ ಗದಾಪಾಣಿರಯುಧ್ಯತ ॥24॥
ಯುದ್ಧದಲ್ಲಿ ಪ್ರತಿಸ್ಪರ್ಧಿಗಳಾಗಿ ನಿಂತಿರುವ ಶತ್ರುಸೈನಿಕರಿಂದಾಗಿ ಭೀಮನು ಮತ್ತೂ ಕ್ರುದ್ಧನಾದನು. ಕೂಡಲೇ ರಥದಿಂದ ಕೆಳಗೆ ಧುಮುಕಿ ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಯುದ್ಧಮಾಡಿದನು.
ನ ತಾನ್ ರಥಸ್ಥೋ ಭೂಮಿಷ್ಠಾನ್ ಧರ್ಮಾಪೇಕ್ಷೀ ವೃಕೋದರಃ |
ಯೋಧಯಾಮಾಸ ಕೌಂತೇಯೋ ಭುಜವೀರ್ಯಮುಪಾಶ್ರಿತಃ ॥25॥
ಧರ್ಮಯುದ್ಧದಲ್ಲಿ ತೊಡಗಿರುವ ಭೀಮನು ತಾನು ರಥದ ಮೇಲಿನಿಂದ ಕೆಳಗಿರುವ ಪದಾತಿಗಳೊಂದಿಗೆ ಯುದ್ಧಮಾಡಲು ಇಷ್ಟಪಡಲಿಲ್ಲ. ಅದು ಧರ್ಮವಿರುದ್ಧವಾಗುತ್ತಿತ್ತು. ತನ್ನ ಭುಜಬಲದಿಂದಲೇ ಯುದ್ಧ ಮಾಡಿದನು.
ಜಾತರೂಪಪರಿಚ್ಛನ್ನಾಂ ಪ್ರಗೃಹ್ಯ ಮಹತೀಂ ಗದಾಮ್ |
ನ್ಯವಧೀತ್ ತಾವಕಾನ್ ಸರ್ವಾನ್ ದಂಡಪಾಣಿರಿವಾಂತಕಃ ॥26॥
ಬಂಗಾರದ ಹೊದಿಕೆಯುಳ್ಳ ಬೃಹತ್ತಾದ ಗದೆಯನ್ನು ಕೈಗೆತ್ತಿಕೊಂಡು ನಿನ್ನ ಕಡೆಯವರೆನ್ನೆಲ್ಲ ಸಾಯಿಸಿದನು. ಅದು ಯಮನು ದಂಡಪಾಣಿಯಾಗಿ ಜೀವರನ್ನು ಸಾಯಿಸುವ ಹಾಗೆ ಇತ್ತು.
ಪದಾತಯೋ ಹಿ ಸಂರಬ್ಧಾಸ್ತ್ಯಕ್ತಜೀವಿತಬಾಂಧವಾಃ |
ಭೀಮಮಭ್ಯದ್ರವನ್ ಸಂಖೇ ಪತಂಗಾ ಇವ ಪಾವಕಮ್ ॥27॥
ತಮ್ಮ ಪ್ರಾಣ ಹಾಗೂ ಬಂಧುಗಳ ಮಮತೆಯನ್ನು ಬಿಟ್ಟ ಸೈನಿಕರು ಬಹು ಸಂಭ್ರಮದಿಂದ ಯುದ್ಧದಲ್ಲಿ ಭೀಮನನ್ನು ಎದುರಿಸಿದರು. ಇದು ಪತಂಗಗಳು ತಾವಾಗಿಯೇ ಬೆಂಕಿಗೆ ಬೀಳುವ ಹಾಗೆ ಇತ್ತು.
ಆಸಾದ್ಯ ಭೀಮಸೇನಂ ತೇ ಸಂರಬ್ಧಾ ಯುದ್ಧದುರ್ಮದಾಃ |
ವಿನೇದುಃ ಸಹಸಾ ದೃಷ್ಟ್ವಾ ಭೂತಗ್ರಾಮಾ ಇವಾಂತಕಮ್ ॥28॥
ಭೀಮಸೇನನ ಎದುರಿಗೆ ಬಂದ ಯುದ್ಧದ ಮದವೇರಿದ ಸೈನಿಕರು ಕೂಡಲೇ ಜೋರಾಗಿ ಬೊಬ್ಬಿಟ್ಟರು. ಅದು, ಯಮನನ್ನು ಕಂಡು ಜೀವರು ಬೊಬ್ಬಿಡುವಂತೆ ಇತ್ತು.
ಶ್ಯೇನವದ್ ವ್ಯಚರದ್ ಭೀಮಃ ಖಡ್ಗೇನ ಗದಯಾ ತಥಾ |
ಪಂಚವಿಂಶತಿಸಾಹಸ್ರಾಂಸ್ತಾವಕಾನಾಂ ವ್ಯಪೋಥಯತ್ ॥29॥
ರಣರಂಗದಲ್ಲಿ ಭೀಮನು ಗರುಡನಂತೆ ಸಂಚರಿಸುತ್ತಾ, ಖಡ್ಗ ಮತ್ತು ಗದೆಯಿಂದ ನಿನ್ನ ಕಡೆಯ ಇಪ್ಪತ್ತೈದು ಸಾವಿರ ಸೈನಿಕರನ್ನು ಕೆಳಬೀಳಿಸಿದನು.
ಹತ್ವಾ ತತ್ಪುರುಷಾನೀಕಂ ಭೀಮಃ ಸತ್ಯಪರಾಕ್ರಮಃ |
ಧೃಷ್ಟದ್ಯುಮ್ನಂ ಪುರಸ್ಕೃತ್ಯ ಪುನಸ್ತಸ್ಥೌ ಮಹಾಬಲಃ ॥30॥
ಮಹಾಬಲಶಾಲಿ ಹಾಗೂ ಸತ್ಯಪರಾಕ್ರಮನಾದ ಭೀಮನು ಆ ಸೈನಿಕಸಮೂಹವನ್ನು ಸಾಯಿಸಿ, ಸೇನಾಪತಿ ಧೃಷ್ಟದ್ಯುಮ್ನನನ್ನು ಮುಂದೆ ಇಟ್ಟುಕೊಂಡು ಮತ್ತೆ ಯುದ್ಧಕ್ಕೆ ನಿಂತನು.
ಧನಂಜಯೋ ರಥಾನೀಕಮನ್ವಪದ್ಯತ ವೀರ್ಯವಾನ್ ॥31॥
ಮಾದ್ರೀಪುತ್ರೌ ಚ ಶಕುನಿಂ ಸಾತ್ಯಕಿಶ್ಚ ಮಹಾಬಲಃ |
ಜವೇನಾಭ್ಯಪತನ್ ಹೃಷ್ಟಾ ಘ್ನಂತೋ ದೌರ್ಯೋಧನಂ ಬಲಮ್ ॥32॥
ವೀರನಾದ ಅರ್ಜುನನು ರಥಸೇನೆಯನ್ನು ಎದುರಿಸಿದ. ಮಾದ್ರಿಯ ಪುತ್ರರಾದ ನಕುಲ-ಸಹದೇವ ಹಾಗೂ ಮಹಾಬಲಶಾಲಿಯಾದ ಸಾತ್ಯಕಿ ಇವರು ದುರ್ಯೋಧನನ ಸೇನೆಯನ್ನು ಸಂತೋಷದಿಂದ ಸದೆಬಡಿಯುತ್ತಾ ವೇಗವಾಗಿ ಶಕುನಿಯನ್ನು ಎದುರುಗೊಂಡರು.

ತಸ್ಯಾಶ್ವವಾಹಾನ್ ಸುಬಹೂಂಸ್ತೇ ನಿಹತ್ಯ ಶಿತೈಃ ಶರೈಃ |
ತಮನ್ವಧಾವಂಸ್ತ್ವರಿತಾಸ್ತತ್ರ ಯುದ್ಧಮವರ್ತತ ॥33॥
ಆ ಶಕುನಿಯ ಅನೇಕ ಕುದುರೆಸವಾರರನ್ನು ಹರಿತವಾದ ಬಾಣಗಳಿಂದ ಕೊಂದು, ಬೇಗನೆ ಅವನ ಮೇಲೆ ಆಕ್ರಮಣ ಮಾಡಿದನು. ಅಲ್ಲಿ ಅವರ ಮಧ್ಯೆ ಯುದ್ಧ ನಡೆಯಿತು.
ತತೋ ಧನಂಜಯೋ ರಾಜನ್ ರಥಾನೀಕಮಗಾಹತ |
ವಿಶ್ರುತಂ ತ್ರಿಷು ಲೋಕೇಷು ಗಾಂಡೀವಂ ವ್ಯಾಕ್ಷಿಪನ್ ಧನುಃ ॥34॥
ರಾಜನೇ! ಅರ್ಜುನನು ಮೂರು ಲೋಕದಲ್ಲಿ ಪ್ರಸಿದ್ಧವಾದ ತನ್ನ ಗಾಂಡೀವ ಧನುಸ್ಸನ್ನು ಠೇಂಕರಿಸುತ್ತಾ ರಥಸೇನೆಯನ್ನು ಪ್ರವೇಶಿಸಿದನು.
ಕೃಷ್ಣಸಾರಥಿಮಾಯಾಂತಂ ದೃಷ್ಟ್ವಾ ಶ್ವೇತಹಯಂ ರಥಮ್ |
ಅರ್ಜುನಂ ಚಾಪಿ ಯೋದ್ಧಾರಂ ತ್ವದೀಯಾಃ ಪ್ರಾದ್ರವನ್ ಭಯಾತ್ ॥
ಕೃಷ್ಣನೇ ಸಾರಥಿಯಾಗಿಯುಳ್ಳ ಮತ್ತು ಬೆಳ್ಳಗಿನ ಕುದುರೆಗಳನ್ನು ಹೊಂದಿದ ರಥವನ್ನೂ, ಅದರ ಮೇಲಿಂದ ಯುದ್ಧ ಮಾಡುತ್ತಿರುವ ಅರ್ಜುನನನ್ನೂ ಕಂಡು ನಿನ್ನವರು ಭಯದಿಂದ ಓಡಿಹೋದರು.
ವಿಪ್ರಹೀನರಥಾಶ್ವಾಶ್ಚ ಶರೈಶ್ಚ ಪರಿವಾರಿತಾಃ |
ಪಂಚವಿಂಶತಿಸಾಹಸ್ರಾಃ ಪಾರ್ಥಮಾರ್ಚ್ಛನ್ ಪದಾತಯಃ ॥36॥
ರಥಗಳನ್ನೂ ಕುದುರೆಗಳನ್ನೂ ಕಳೆದುಕೊಂಡ ಇಪ್ಪತ್ತೈದು ಸಾವಿರ ಕಾಲಾಳುಗಳು ಬಾಣಗಳಿಂದ ಆಚ್ಛಾದಿತರಾಗಿ ಅರ್ಜುನನನ್ನು ಆಕ್ರಮಿಸಿದರು.
ಹತ್ವಾ ತತ್ಪುರುಷಾನೀಕಂ ಪಾಂಚಾಲಾನಾಂ ಮಹಾರಥಃ |
ಭೀಮಸೇನಂ ಪುರಸ್ಕೃತ್ಯ ನ ಚಿರಾತ್ ಪ್ರತ್ಯದೃಶ್ಯತ ॥37॥
ಪಾಂಚಾಲದೇಶದ ಮಹಾರಥಿಯಾದ ಧೃಷ್ಟದ್ಯುಮ್ನನು ಆ ಕಾಲಾಳುಸೈನ್ಯವನ್ನು ಕೊಂದುಹಾಕಿ, ಭೀಮಸೇನನನ್ನು ಮುಂದಿಟ್ಟುಕೊಂಡು ಬೇಗನೆ ಕಾಣಿಸಿಕೊಂಡನು.
ಮಹಾಧನುರ್ಧರಃ ಶ್ರೀಮಾನಮಿತ್ರಗಣಮರ್ದನಃ |
ಪುತ್ರಃ ಪಾಂಚಾಲರಾಜಸ್ಯ ಧೃಷ್ಟದ್ಯುಮ್ನೋ ಮಹಾಯಶಾಃ ॥38॥
ಪಾಂಚಾಲರಾಜನಾದ, ದ್ರುಪದನ ಮಗನಾದ ಈ ಧೃಷ್ಟದ್ಯುಮ್ನನು ಕಾಂತಿಮಾನ್ ಆಗಿದ್ದಾನೆ. ಒಳ್ಳೆಯ ಬಿಲ್ಗಾರನೂ ಹೌದು. ಶತ್ರುಗಳ ಸಮೂಹವನ್ನು ನಾಶ ಮಾಡುವವನು. ಬಹಳ ಕೀರ್ತಿವಂತನಾಗಿದ್ದಾನೆ.
ಪಾರಾವತಸವರ್ಣಾಶ್ವಂ ಕೋವಿದಾರವರಧ್ವಜಮ್ |
ಧೃಷ್ಟದ್ಯುಮ್ನಂ ರಣೇ ದೃಷ್ಟ್ವಾ ತ್ವದೀಯಾಃ ಪ್ರಾದ್ರವನ್ ಭಯಾತ್ ॥39॥
ಪಾರಿವಾಳದ ಹಾಗೆ ಬೆಳ್ಳಗಿನ ಕುದುರೆಗಳುಳ್ಳ, ಕೋವಿದಾರ ವೃಕ್ಷದ ಧ್ವಜವುಳ್ಳ ಧೃಷ್ಟದ್ಯುಮ್ನನನ್ನು ನೋಡಿ ನಿನ್ನವರು ಭಯದಿಂದ ಓಡಿ ಹೋದರು.
ಗಾಂಧಾರರಾಜಂ ಶೀಘ್ರಾಸ್ತ್ರಮನುಸೃತ್ಯ ಯಶಸ್ವಿನೌ |
ಅಚಿರಾತ್ ಪ್ರತ್ಯದೃಶ್ಯೇತಾಂ ಮಾದ್ರೀಪುತ್ರೌ ಸಸಾತ್ಯಕೀ ॥40॥
ಯಶೋವಂತರಾದ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಸಾತ್ಯಕಿಯೊಂದಿಗೆ ಶೀಘ್ರವಾಗಿ ಅಸ್ತ್ರಪ್ರಯೋಗಮಾಡುವ ಶಕುನಿಯನ್ನು ಬೆನ್ನಟ್ಟುತ್ತಾ ಬೇಗನೆ ಕಾಣಿಸಿಕೊಂಡರು.
ಚೇಕಿತಾನಃ ಶಿಖಂಡೀ ಚ ದ್ರೌಪದೇಯಾಶ್ಚ ಮಾರಿಷ |
ಹತ್ವಾ ತ್ವದೀಯಂ ಸುಮಹತ್ಸೈನ್ಯಂ ಶಂಖಾನಥಾಧಮನ್ ॥41॥
ರಾಜನೇ! ಚೇಕಿತಾನ, ಶಿಖಂಡೀ ಮತ್ತು ದ್ರೌಪದಿಯ ಮಕ್ಕಳು ನಿನ್ನ ಪಕ್ಷದ ಬಹಳ ಸೈನ್ಯವನ್ನು ನಾಶಮಾಡಿ ವಿಜಯದ ಶಂಖನಾದವನ್ನು ಮಾಡಿದರು.
ತೇ ಸರ್ವೇ ತಾವಕಾನ್ ಪ್ರೇಕ್ಷ್ಯ ದ್ರವತೋ ವೈ ಪರಾಙ್ಮುಖಾನ್ |
ಅಭ್ಯಧಾವಂತ ನಿಘ್ನಂತೋ ವೃಷಾನ್ ಜಿತ್ವಾ ವೃಷಾ ಇವ ॥42॥
ಗೂಳಿಕಾಳಗದಲ್ಲಿ ಗೆದ್ದ ಗೂಳಿಯು ಸೋತ ಗೂಳಿಯನ್ನು ಅಟ್ಟಿಸಿಕೊಂಡು ಹೋಗುವಂತೆ ಯುದ್ಧದಿಂದ ವಿಮುಖರಾಗಿ ಓಡುತ್ತಿರುವ ನಿನ್ನ ಕಡೆಯವರನ್ನು ನೋಡಿದ ಪಾಂಡವ ವೀರರು ಹೊಡೆಯುತ್ತಾ ಅಟ್ಟಿಸಿಕೊಂಡು ಹೋದರು.
ಸೇನಾವಶೇಷಂ ತಂ ದೃಷ್ಟ್ವಾ ತವ ಪುತ್ರಸ್ಯ ಪಾಂಡವಃ |
ಅವಸ್ಥಿತಂ ಸವ್ಯಸಾಚೀ ಚುಕ್ರೋಧ ಬಲವನ್ನೃಪ ॥43॥
ರಾಜನೇ! ನಿನ್ನ ಮಗನ ಸೈನ್ಯದ ಅವಶೇಷವನ್ನು ಕಂಡ ಸವ್ಯಸಾಚಿ ಎನಿಸಿದ ಅರ್ಜುನನು ಬಹು ಕುಪಿತನಾದನು.
ತತ ಏನಂ ಶರೈ ರಾಜನ್ ಸಹಸಾ ಸಮವಾಕಿರತ್ |
ರಜಸಾ ಚೋದ್ಗತೇನಾಥ ನ ಸ್ಮ ಕಿಂಚನ ದೃಶ್ಯತೇ ॥44॥
ಅಳಿದುಳಿದ ಸೇನೆಯ ಮೇಲೆ ಅರ್ಜುನನು ಬಾಣಗಳ ಮಳೆಯನ್ನು ಸುರಿಸಿದನು. ಅದರಿಂದ ಎದ್ದ ಧೂಳಿನಿಂದ ಯಾವ ಪದಾರ್ಥಗಳೂ ಕಾಣದಾದವು.
ಅಂಧಕಾರೀಕೃತೇ ಲೋಕೇ ಶರೀಭೂತೇ ಮಹೀತಳೇ |
ದಿಶಃ ಸರ್ವಾ ಮಹಾರಾಜ ತಾವಕಾಃ ಪ್ರಾದ್ರವನ್ ಭಯಾತ್ ॥45॥
ಭೂಮಿಯು ಬಾಣಗಳಿಂದ ತುಂಬಿಹೋಯಿತು. ಯುದ್ಧದ ಧೂಳಿನಿಂದ ಎಲ್ಲಾ ದಿಕ್ಕುಗಳಲ್ಲೂ ಕತ್ತಲೆ ಆವರಿಸಿತು. ನಿನ್ನವರು

ಭಯದಿಂದ ಓಡಿಹೋದರು.
ಭಜ್ಯಮಾನೇಷು ಸರ್ವೇಷು ಕುರುರಾಜೋ ವಿಶಾಂಪತೇ |
ಪರೇಷಾಮಾತ್ಮನಶ್ಚೈವ ಸೈನ್ಯೇ ತೇ ಸಮುಪಾದ್ರವತ್ ॥46॥
ರಾಜನೇ! ಎಲ್ಲರೂ ಯುದ್ಧದಲ್ಲಿ ನಾಶಹೊಂದುತ್ತಿರಲು ಕುರುರಾಜನಾದ ದುರ್ಯೋಧನನು ಎದುರಾಳಿಗಳ ಹಾಗೂ ತನ್ನ ಸೈನ್ಯದ ಮೇಲೆ ಏರಿಬಂದನು.
ತತೋ ದುರ್ಯೋಧನಃ ಸರ್ವಾನಾಜುಹಾವಾಥ ಪಾಂಡವಾನ್ |
ಯುದ್ಧಾಯ ಭರತಶ್ರೇಷ್ಠ ದೇವಾನಿವ ಪುರಾ ಬಲಿಃ ॥47॥
ಹೇ ಭಾರತೋತ್ತಮನೇ! ಅನಂತರ ಬಲಿಯು ದೇವತೆಗಳನ್ನು ಯುದ್ಧಕ್ಕೆ ಕರೆದಂತೆ ದುರ್ಯೋಧನನು ಎಲ್ಲಾ ಪಾಂಡವರನ್ನೂ ಯುದ್ಧಕ್ಕೆ ಆಹ್ವಾನಿಸುತ್ತಾನೆ.
ತ ಏನಮಭಿಗರ್ಜಂತಂ ಸಹಿತಾಃ ಸಮುಪಾದ್ರವನ್ |
ನಾನಾಶಸ್ತ್ರಸೃಜಃ ಕ್ರುದ್ಧಾ ಭರ್ತ್ಸಯಂತೋ ಮುಹುರ್ಮುಹುಃ ॥48॥
ಹೀಗೆ ಗರ್ಜಿಸುತ್ತಿರುವ ದುರ್ಯೋಧನನನ್ನು ಎಲ್ಲರೂ ಸೇರಿ ವಿವಿಧ ಶಸತ್ರಸ್ತ್ರಗಳ ಮಳೆಗರೆಯುತ್ತ, ಕೋಪದಿಂದ ಪರಸ್ಪರ ದೂಷಿಸುತ್ತಾ ಚೆನ್ನಾಗಿ ಎದುರಿಸಿದರು.
ದುರ್ಯೋಧನೋಽಪ್ಯಸಂಭ್ರಾಂತಸ್ತಾನರೀನ್ ವ್ಯಧಮಚ್ಚರೈಃ ॥49॥
ದುರ್ಯೋಧನನೂ ಯಾವುದೇ ಗಾಬರಿಗೊಳಗಾಗದೆ ಆ ಶತ್ರುಗಳನ್ನು ಬಾಣಗಳಿಂದ ಪುಡಿ ಪುಡಿ ಮಾಡಿದನು.
ತತ್ರಾದ್ಭುತಮಪಶ್ಯಾಮ ತವ ಪುತ್ರಸ್ಯ ಪೌರುಷಮ್ |
ಯದೇನಂ ಪಾಂಡವಾಃ ಸರ್ವೇ ನ ಶೇಕುರತಿವರ್ತಿತುಮ್ ॥50॥
ಪಾಂಡವರಿಗೆ ಮೀರಲಾಗದ ನಿನ್ನ ಮಗನ ಅದ್ಭುತವಾದ ಪೌರುಷವನ್ನು ನಾವೆಲ್ಲಾ ನೋಡಿದೆವು.
ನಾತಿದೂರಾಪಯಾತಂ ಚ ಕೃತಬುದ್ಧಿಂ ಪಲಾಯನೇ |
ದುರ್ಯೋಧನಃ ಸ್ವಕಂ ಸೈನ್ಯಮಪಶ್ಯದ್ ಭೃಶವಿಕ್ಷತಮ್ ॥51॥
ದುರ್ಯೋಧನನು ಸನಿಹದಲ್ಲಿಯೇ ತನ್ನ ಸೈನ್ಯವು ಬಹಳವಾಗಿ ಪೆಟ್ಟು ತಿಂದು ಓಡಿಹೋಗಲು ನಿಶ್ಚಯಿಸಿರುವುದನ್ನು ನೋಡಿದನು.
ತತೋಽವಸ್ಥಾಪ್ಯ ರಾಜೇಂದ್ರ ಕೃತಬುದ್ಧಿಸ್ತವಾತ್ಮಜಃ |
ಹರ್ಷಯನ್ನಿವ ತಾನ್ ಯೋಧಾಂಸ್ತತೋ ವಚನಮಬ್ರವೀತ್ ॥52॥
ರಾಜಶ್ರೇಷ್ಠನೇ! ನಿನ್ನ ಮಗನು ಯುದ್ಧದ ದೃಢನಿಶ್ಚಯವನ್ನು ಮಾಡಿಕೊಂಡು, ಆ ತನ್ನ ಸೈನ್ಯವನ್ನು ತಡೆದು ನಿಲ್ಲಿಸಿ, ತದನಂತರ ಆ ಯೋಧರಿಗೆ ಸಂತೋಷವನ್ನು ಉಂಟುಮಾಡಲಿಕ್ಕಾಗಿ ಈ ಮಾತನ್ನು ಹೇಳುತ್ತಾನೆ.
ನ ತಂ ದೇಶಂ ಪ್ರಪಶ್ಯಾಮಿ ಪೃಥಿವ್ಯಾಂ ಪರ್ವತೇಷು ಚ |
ಯತ್ರ ಯಾತಾನ್ನ ವೋ ಹನ್ಯುಃ ಪಾಂಡವಾಃ ಕಿಂ ಸೃತೇನ ವಃ ॥53॥
``ನೀವು ಓಡಿಹೋಗುವುದರಿಂದ ಏನು ಫಲ? ಏಕೆಂದರೆ ಪಾಂಡವರ ಕೈಯಿಂದ ತಪ್ಪಿಸಿಕೊಂಡು ಇರಲು ಯಾವುದೇ ಸ್ಥಳವು ಭೂಮಿಯಲ್ಲಾಗಲೀ, ಪರ್ವತಗಳಲ್ಲಾಗಲೀ ನನ್ನ ಅರಿವಿಗೆ ಗೋಚರಿಸುತ್ತಿಲ್ಲ. ಪಾಂಡವರು ಬಂದು ನಿಮ್ಮನ್ನು ಕೊಲ್ಲದಿರುವ ಯಾವುದೇ ಸ್ಥಾನ ಸಿಗಲಾರದು.
ಸ್ವಲ್ಪಂ ಚೈವ ಬಲಂ ತೇಷಾಂ ಕೃಷ್ಣೌ ಚ ಭೃಶವಿಕ್ಷತೌ |
ಯದಿ ಸರ್ವೇಽತ್ರ ತಿಷ್ಠಾಮೋ ಧ್ರುವಂ ನೋ ವಿಜಯೋ ಭವೇತ್ ॥
ಬದಲಾಗಿ ನಾವು ಎಲ್ಲರೂ ಇಲ್ಲಿಯೇ ಪಾಂಡವರನ್ನು ಎದುರಿಸಿದರೆ ನಮಗೆ ಜಯವು ನಿಶ್ಚಿತ. ಏಕೆಂದರೆ ಅವರ ಸೈನ್ಯವೂ ಸ್ವಲ್ಪವಷ್ಟೇ ಉಳಿದಿದೆ. ಅರ್ಜುನ ಮತ್ತು ಶ್ರೀಕೃಷ್ಣರೂ ಬಹಳವಾಗಿ ಗಾಯಗೊಂಡು ದಣಿದಿದ್ದಾರೆ.
ವಿಪ್ರಯಾತಾಂಸ್ತು ವೋ ಭಿನ್ನಾನ್ ಪಾಂಡವಾಃ ಕೃತಕಿಲ್ಬಿಷಾನ್ |
ಅನುಸೃತ್ಯ ಹನಿಷ್ಯಂತಿ ಶ್ರೇಯೋ ನಃ ಸಮರೇ ವಧಃ ॥55॥
ನೀವೆಲ್ಲಾ ಭಯದಿಂದ ಬೇರೆ ಬೇರೆಯಾಗಿ ಇಲ್ಲಿಂದ ಓಡಿಹೋದರೆ ಅಪರಾಧಿಗಳಾದ ನಿಮ್ಮನ್ನು ಪಾಂಡವರು ಅಟ್ಟಿಸಿಕೊಂಡು ಬಂದು ಸಾಯಿಸುತ್ತಾರೆ. ಅದಕ್ಕಿಂತ ರಣರಂಗದಲ್ಲಿ ಯುದ್ಧಮಾಡಿ ಸಾಯುವುದೇ ಲೇಸು.
ಸುಖಃ ಸಾಂಗ್ರಾಮಿಕೋ ಮೃತ್ಯುಃ ಕ್ಷತ್ರಧರ್ಮೇಣ ಯುಧ್ಯತಾಮ್ |
ಮೃತೋ ದುಃಖಂ ನ ಜಾನೀತೇ ಪ್ರೇತ್ಯ ಚಾನಂತ್ಯಮಶ್ನುತೇ ॥56॥
ಕ್ಷತ್ರಿಯ ಧರ್ಮದಿಂದ ಯುದ್ಧಮಾಡುವ ಯೋಧನಿಗೆ ಸಂಗ್ರಾಮದಲ್ಲಿ ಬರುವ ಮರಣವು ಸುಖಪ್ರದವಾಗುವುದು. ಯುದ್ಧದಲ್ಲಿ ಸತ್ತರೂ ದುಃಖವನ್ನು ಅನುಭವಿಸುವುದಿಲ್ಲ. ಮರಣಹೊಂದಿ ವೀರಸ್ವರ್ಗರೂಪವಾದ ಸುಖವನ್ನು ಪಡೆಯುತ್ತಾನೆ.
ಶೃಣ್ವಂತು ಕ್ಷತ್ರಿಯಾಃ ಸರ್ವೇ ಯಾವಂತೋಽತ್ರ ಸಮಾಗತಾಃ |
ದ್ವಿಷತೋ ಭೀಮಸೇನಸ್ಯ ವಶಮೇಷ್ಯಥ ವಿದ್ರುತಾಃ ॥57॥
ಕ್ಷತ್ರಿಯರೇ! ಯಾರೆಲ್ಲಾ ಇಲ್ಲಿ ಯುದ್ಧಕ್ಕೆ ಬಂದಿರುವಿರೋ ಎಲ್ಲರೂ ಕೇಳಿ. ನೀವು ಇಲ್ಲಿಂದ ಓಡಿಹೋದರೆ ಶತ್ರುವಾದ ಭೀಮಸೇನನ ವಶಕ್ಕೆ ಒಳಗಾಗುವಿರಿ.
ಪಿತಾಮಹೈರಾಚರಿತಂ ನ ಧರ್ಮಂ ಹಾತುಮರ್ಹಥ |
ನಾನ್ಯತ್ಕರ್ಮಾಸ್ತಿ ಪಾಪೀಯಃ ಕ್ಷತ್ರಿಯಸ್ಯ ಪಲಾಯನಾತ್ ॥58॥
ನಿಮ್ಮ ತಾತಂದಿರು ನಡೆಸಿಕೊಂಡು ಬಂದಿರುವ ಕ್ಷತ್ರಿಯ ಧರ್ಮವನ್ನು ಬಿಡುವುದು ಯೋಗ್ಯವಲ್ಲ. ಕ್ಷತ್ರಿಯನಿಗೆ ರಣರಂಗದಿಂದ ಓಡಿಹೋಗುವುದಕ್ಕಿಂತ ಮಿಗಿಲಾದ ಇನ್ನೊಂದು ಪಾಪವು ಇಲ್ಲ.

ನ ಯುದ್ಧಧರ್ಮಾಚ್ಛ್ರೇಯಾನ್ ಹಿ ಪಂಥಾಃ ಸ್ವರ್ಗಸ್ಯ ಕೌರವಾಃ |
ಅಚಿರೇಣಾರ್ಜಿತಾಲ್ಲೋಕಾನ್ ಸದ್ಯೋ ಯುದ್ಧಾತ್ ಸಮಶ್ನುತೇ ॥59॥
ಕೌರವವೀರರೇ! ಸ್ವರ್ಗಪ್ರಾಪ್ತಿಗೆ ಯುದ್ಧಧರ್ಮಕ್ಕಿಂತ ಬೇರೆಯಾದ ಮಾರ್ಗವೇ ಇಲ್ಲ. ಬಹಳ ಕಾಲದ ಸಾಧನೆಯಿಂದ ಪಡೆಯಬಹುದಾದ ಉತ್ತಮಲೋಕಗಳನ್ನು ಯುದ್ಧದಿಂದ ಶೀಘ್ರದಲ್ಲಿಯೇ ಪಡೆಯಬಹುದು.
ತಸ್ಯ ತದ್ವಚನಂ ರಾಜ್ಞಃ ಪೂಜಯಿತ್ವಾ ಮಹಾರಥಾಃ |
ಪುನರೇವಾಭ್ಯವರ್ತಂತ ಕ್ಷತ್ರಿಯಾಃ ಪಾಂಡವಾನ್ ಪ್ರತಿ ॥60॥
ಪರಾಜಯಮಮೃಷ್ಯಂತಃ ಕೃತಚಿತ್ತಾಶ್ಚ ವಿಕ್ರಮೇ ॥61॥
ರಾಜನಾದ ದುರ್ಯೋಧನನ ಮಾತನ್ನು ಗೌರವಿಸಿದ ಮಹಾರಥಿಕರಾದ ಕ್ಷತ್ರಿಯಯೋಧರು ಪುನಃ ಪಾಂಡವರನ್ನು ಎದುರಿಸಿದರು. ಅವರು ಯುದ್ಧದಲ್ಲಿ ಸೋಲನ್ನು ಸಹಿಸಿಕೊಳ್ಳುವವರಲ್ಲ. ವಿಜಯವನ್ನು ಪಡೆಯಲೇಬೇಕೆಂದು ನಿಶ್ಚಯಿಸಿಕೊಂಡು ಪಾಂಡವರ ಜೊತೆಗೆ ಯುದ್ಧಕ್ಕೆ ನಿಂತರು.
ತತಃ ಪ್ರವವೃತೇ ಯುದ್ಧಂ ಪುನರೇವ ಸುದಾರುಣಮ್ |
ತಾವಕಾನಾಂ ಪರೇಷಾಂ ಚ ದೇವಾಸುರರಣೋಪಮಮ್ ॥62॥
ಅನಂತರ ನಿನ್ನ ಕಡೆಯವರಿಗೂ ಪಾಂಡವರಿಗೂ ಪುನಃ ಘೋರವಾದ ಯುದ್ಧವು ನಡೆಯಿತು. ಅದು ದೇವಾಸುರರ ಯುದ್ಧದಂತೆ ಇತ್ತು.
ಯುಧಿಷ್ಠಿರಪುರೋಗಾಂಶ್ಚ ಸರ್ವಸೈನ್ಯೇನ ಪಾಂಡವಾನ್ |
ಅನ್ವಧಾವನ್ಮಹಾರಾಜ ಪುತ್ರೋ ದುರ್ಯೋಧನಸ್ತವ ॥63॥
ಮಹಾರಾಜ! ನಿನ್ನ ಮಗನಾದ ದುರ್ಯೋಧನನು ತನ್ನೆಲ್ಲಾ ಸೈನ್ಯದ ಜೊತೆಗೆ ಧರ್ಮರಾಜ ಮೊದಲಾದ ಪಾಂಡವರ ಮೇಲೆ ಆಕ್ರಮಣ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ಕರ್ಣನ ಸಾವಿನಿಂದ ದುಃಖಿತನಾದ ದುರ್ಯೋಧನನಿಗೆ ಕೃಪರು ತಮ್ಮ ಮತ್ತು ಪರರ ದೌರ್ಬಲ್ಯ-ಪ್ರಾಬಲ್ಯಗಳನ್ನು ತಿಳಿಸಿ ಸಂಧಾನಕ್ಕೆ ಪ್ರೇರೇಪಿಸುವುದು
ಸಂಜಯಃ
ಪತಿತಾನಿ ಚ ನೀಡಾನಿ ಧ್ವಜಾಂಶ್ಚೈವ ಮಹಾತ್ಮನಾಮ್ ॥1॥
ರಣೇ ವಿನಿಹತಾನ್ ನಾಗಾನ್ ದೃಷ್ಟ್ವಾ ಪತ್ತೀಂಶ್ಚ ಮಾರಿಷ |
ಆಯೋಧನಂ ಚಾತಿಘೋರಂ ರುದ್ರಸ್ಯಾಕ್ರೀಡಸನ್ನಿಭಮ್ ॥2॥
ಸಂಜಯ ರಾಜನೇ! ರಣರಂಗದಲ್ಲಿ ಬಿದ್ದಿರುವ ಮಹಾಯೋಧರ ರಥದ ಆಸನಗಳು, ಧ್ವಜಗಳು, ಸತ್ತುಬಿದ್ದಿರುವ ಆನೆಗಳು, ಪದಾತಿಗಳು ಇವೆಲ್ಲವನ್ನೂ ನೋಡಿದರೆ ರಣರಂಗವು ರುದ್ರನ ಭಯಂಕರವಾದ ಕ್ರೀಡಾಭೂಮಿಯಾದ ಸ್ಮಶಾನದ ಹಾಗೆ ಗೋಚರಿಸುತ್ತಿತ್ತು.
ಅಪ್ರಖ್ಯಾತಿಂ ಗತಾನಾಂ ತು ರಾಜ್ಞಾಂ ಶತಸಹಸ್ರಶಃ |
ಕೃಪಾವಿಷ್ಟಃ ಕೃಪೋ ದೃಷ್ಟ್ವಾ ವಯಃಶೀಲಸಮನ್ವಿತಃ ॥3॥
ಅಬ್ರವೀತ್ ತತ್ರ ತೇಜಸ್ವೀ ಸೋಽಭಿಸೃತ್ಯ ಜನಾಧಿಪಮ್ |
ದುರ್ಯೋಧನಮನುಕ್ರೋಶಾದ್ ವಚನಂ ವಚನಕ್ಷಮಃ ॥4॥
ಯುದ್ಧದಲ್ಲಿ ಮರಣವನ್ನು ಹೊಂದಿ ಸಾವಿರಾರು ಸಂಖ್ಯೆಯಲ್ಲಿ ನಾಮಾವಶೇಷಕ್ಕೆ ಒಳಗಾದ ರಾಜರನ್ನು ಕಂಡು, ವಯಸ್ಸು-ಗುಣಗಳಿಂದ ಕೂಡಿದ ತೇಜೋವಂತನಾದ ಕೃಪನು ಕರುಣೆಯಿಂದ ಕೂಡಿದವನಾಗಿ ರಾಜನಾದ ದುರ್ಯೋಧನನ ಸಮೀಪಕ್ಕೆ ಬಂದು ಸಮಾಧಾನದಿಂದ ಈ ಮಾತನ್ನು ಹೇಳುತ್ತಾನೆ. ಕೃಪನು ಒಳ್ಳೆಯ ಸಮಯೋಚಿತವಾದ ಮಾತುಗಾರನಾಗಿದ್ದನು.
ಕೃಪಃ
ದುರ್ಯೋಧನ ನಿಬೋಧೇದಂ ಯತ್ ತ್ವಾ ವಕ್ಷ್ಯಾಮಿ ಕೌರವ |
ಶ್ರುತ್ವಾ ಕುರು ಮಹಾರಾಜ ಯದಿ ತೇ ರೋಚತೇಽನಘ ॥5॥
ಕೃಪರು ``ಕುರುವಂಶಸಂಭೂತನಾದ ದುರ್ಯೋಧನನೇ! ನಾನು ಹೇಳುವ ಮಾತನ್ನು ಕೇಳು. ಪಾಪರಹಿತನಾದ ಮಹಾರಾಜನೇ! ನನ್ನ ಮಾತನ್ನು ಕೇಳಿದ ನಂತರ ನಿನಗೆ ಅದು ಯುಕ್ತವೆನಿಸಿದರೆ ಹಾಗೆಯೇ ಮಾಡು.
ನ ಯುದ್ಧಧರ್ಮಾಚ್ಛ್ರೇಯಾನ್ ವೈ ಪಂಥಾ ರಾಜೇಂದ್ರ ವಿದ್ಯತೇ |
ಯಂ ಸಮಾಶ್ರಿತ್ಯ ಯುಧ್ಯಂತೇ ಕ್ಷತ್ರಿಯಾಃ ಕ್ಷತ್ರಿಯರ್ಷಭ ॥6॥
ರಾಜೇಂದ್ರ! ಕ್ಷತ್ರಿಯರಿಗೆ ಯುದ್ಧಕ್ಕಿಂತ ಬೇರೆಯಾದ ಉತ್ತಮ ಮಾರ್ಗವು ಇಲ್ಲ. ಕ್ಷತ್ರಿಯೋತ್ತಮನೇ! ಕ್ಷತ್ರಿಯರು ಆ ಯುದ್ಧಧರ್ಮವನ್ನು ಆಶ್ರಯಿಸಿಯೇ ಯುದ್ಧವನ್ನು ಮಾಡುತ್ತಾರೆ.
ಪುತ್ರೋ ಭ್ರಾತಾ ಪಿತಾ ಚೈವ ಸ್ವಸ್ರೀಯೋ ಮಾತುಲಸ್ತಥಾ |
ಸಂಬಂಧಿಬಾಂಧವಾಶ್ಚೈವ ಯೋದ್ಧವ್ಯಾಃ ಕ್ಷತ್ರಜೀವಿನಾ ॥7॥
ಕ್ಷತ್ರೀಯನಾದವನು ಮಗ, ಸಹೋದರ, ತಂದೆ, ಸೋದರಳಿಯ, ಸೋದರಮಾವ, ಸಂಬಂಧಿಗಳು ಇವರ ಜೊತೆಗೆ ಯುದ್ಧವನ್ನು

ಮಾಡಬೇಕು.
ವಧೇ ಚೈವ ಪರೋ ಧರ್ಮಃ ತಥಾऽಧರ್ಮಃ ಪಲಾಯನೇ |
ತೇ ಸುಘೋರಾಂ ಸಮಾಪನ್ನಾ ಜೀವಿಕಾಂ ಜೀವಿತಾರ್ಥಿನಃ ॥8॥
ಯುದ್ಧದಲ್ಲಿ ಸಾಯುವುದೂ ಉತ್ತಮ ಧರ್ಮ. ಹಾಗೆಯೇ ಓಡಿಹೋಗುವುದು ದೊಡ್ಡದಾದ ಅಧರ್ಮ, ಜೀವದ ಆಸೆಯಿಂದ ಓಡಿಹೋಗುವವರು ಅತ್ಯಂತ ನೀಚವಾದ ಜೀವನವನ್ನು ಪಡೆಯುತ್ತಾರೆ.
ತತ್ರ ತ್ವಾಂ ನೃಪ ವಕ್ಷ್ಯಾಮಿ ಕಿಂಚಿದೇವ ಹಿತಂ ವಚಃ |
ಹತೇ ಭೀಷ್ಮೇ ಹತೇ ದ್ರೋಣೇ ಕರ್ಣೇ ಚೈವ ಮಹಾರಥೇ ॥9॥
ಜಯದ್ರಥೇ ಚ ನಿಹತೇ ತವ ಭ್ರಾತೃಷು ಚಾನಘ |
ಲಕ್ಷ ್ಮಣೇ ತವ ಪುತ್ರೇ ಚ ಕಿಂ ಶೇಷಂ ಪರ್ಯುಪಾಸ್ಮಹೇ ॥10॥
ರಾಜನೇ! ಈ ಸಂದರ್ಭದಲ್ಲಿ ನಾನು ಕೆಲವು ಹಿತನುಡಿಗಳನ್ನು ನಿನಗೆ ಹೇಳುತ್ತೇನೆ. ಮಹಾರಥರೆನಿಸಿರುವ ಭೀಷ್ಮ, ದ್ರೋಣ, ಕರ್ಣ ಮೊದಲಾದವರೆ ಹತರಾಗಿದ್ದಾರೆ. ಜಯದ್ರಥನೂ ಸತ್ತಿದ್ದಾನೆ. ನಿನ್ನ ಸಹೋದರರರೂ ಮರಣಹೊಂದಿದ್ದಾರೆ. ನಿನ್ನ ಮಗನಾದ ಲಕ್ಷ್ಮಣನೂ ಸತ್ತಿದ್ದಾನೆ. ಹೀಗಿರುವಾಗ ನಾವು ಯಾರನ್ನು ಆಶ್ರಯಿಸಿಕೊಳ್ಳುವುದು?
ಯೇಷು ಭಾರಂ ಸಮಾಸಜ್ಯ ರಾಜ್ಯೇ ಮತಿಮಕುರ್ಮಹಿ |
ತೇ ಸಂತ್ಯಜ್ಯ ತನೂರ್ಯಾತಾಃ ಶೂರಾ ಬ್ರಹ್ಮವಿದಾಂ ಗತಿಮ್ ॥11॥
ಯಾರ ಮೇಲೆ ಭಾರವನ್ನು ಹಾಕಿ ರಾಜ್ಯವನ್ನು ವತ್ತೆ ನಮ್ಮದಾಗಿಸಿಕೊಳ್ಳುವ ಆಲೋಚನೆಯನ್ನು ಮಾಡಿದ್ದೇವೆಯೋ ಅಂತಹ ಶೂರರು ಶರೀರರವನ್ನು ತೊರೆದು ಬ್ರಹ್ಮಜ್ಞಾನಿಗಳು ಹೊಂದುವ ಉತ್ತಮಲೋಕವನ್ನು ಹೊಂದಿದ್ದಾರೆ.
ವಯಂ ತ್ವಿಹ ವಿನಾಭೂತಾ ಗುಣವದ್ಭಿರ್ಮಹಾರಥೈಃ |
ಕೃಪಣಂ ವರ್ತಯಿಷ್ಯಾಮಃ ಪಾತಯಿತ್ವಾ ನೃಪಾನ್ ಬಹೂನ್ ॥12॥
ಗುಣಶಾಲಿಗಳಾದ ಮಹಾರಥರು ನಮ್ಮ ಜೊತೆಗೆ ಇಲ್ಲವಾಗಿದ್ದಾರೆ. ರಾಜರನ್ನು ಕಳೆದುಕೊಂಡು ನಾವು ಬಹಳ ದಯನೀಯವಾದ ಅವಸ್ಥೆಯನ್ನು ಹೊಂದಿದ್ದೇವೆ.
ಸರ್ವೈರಪಿ ಚ ಜೀವದ್ಭಿಃ ಬೀಭತ್ಸುರ್ನ ಪರಾಜಿತಃ |
ಕೃಷ್ಣೋ ನೇತಾ ಮಹಾಬಾಹುಃ ದೇವೈರಪಿ ದುರಾಸದಃ ॥13॥
ಬದುಕಿರುವ ಯಾರೂ ಕೂಡ ಅರ್ಜುನನನ್ನು ಸೋಲಿಸಲು ಸಾಧ್ಯವಿಲ್ಲ. ಮಹಾವೀರನಾದ ಸಾರಥಿ ಶ್ರೀಕೃಷ್ಣನನ್ನು ಎದುರಿಸಲು ದೇವತೆಗಳಿಗೂ ಸಾಧ್ಯವಿಲ್ಲ.
ಇಂದ್ರಕಾರ್ಮುಕವಜ್ರಾಭಮಿಂದ್ರಕೇತುಮಿವೋಚ್ಛ್ರಿತಮ್ |
ವಾನರಂ ಕೇತುಮಾಸಾದ್ಯ ಸಂಚಚಾಲ ಮಹಾಚಮೂಃ ॥14॥
ಇಂದ್ರನ ಧನುಸ್ಸಿನ ಹಾಗೆ ಬಣ್ಣವುಳ್ಳ, ಇಂದ್ರನ ಧ್ವಜದ ಹಾಗೆ ಎತ್ತರವಾಗಿಯುಳ್ಳ ಕಪಿಧ್ವಜವನ್ನು ಹೊಂದಿರುವ ಅರ್ಜುನನನ್ನು ಸಮೀಪಿಸಿದ ನಮ್ಮ ದೊಡ್ಡದಾದ ಸೈನ್ಯವು ಭಯದಿಂದ ಕಂಪಿಸಿದೆ.
ಸಿಂಹನಾದೇನ ಭೀಮಸ್ಯ ಪಾಂಚಜನ್ಯಸ್ವನೇನ ಚ |
ಗಾಂಡೀವಸ್ಯ ಚ ನಿರ್ಘೋಷಾತ್ ಸಮ್ಮುಹ್ಯಂತೇ ಮನಾಂಸಿ ನಃ ॥15॥
ಭೀಮನ ಸಿಂಹನಾದ, ಶ್ರೀಕೃಷ್ಣನ ಪಾಂಚಜನ್ಯಶಂಖದ ನಾದ ಹಾಗೂ ಗಾಂಡೀವಧನುಸ್ಸಿನ ಘೋಷದಿಂದ ನಮ್ಮ ಮನಸ್ಸುಗಳು ಭಯದಿಂದ ಚಂಚಲಿತವಾಗಿವೆ.
ಚಲಂತೀವ ಮಹಾವಿದ್ಯುನ್ಮುಷ್ಣಂತೀ ನಯನಪ್ರಭಾಮ್ |
ಅಲಾತಮಿವ ಚಾವಿದ್ಧಂ ಗಾಂಡೀವಂ ಸಮದೃಶ್ಯತ ॥16॥
ಚಲಿಸುತ್ತಿರುವ ದೊಡ್ಡಮಿಂಚಿನಂತೆ ಕಣ್ಣುಕೋರೈಸುತ್ತಿರುವ ಹಾಗೂ ಬೆಂಕಿಯ ಚಕ್ರದಂತೆ ಅರ್ಜುನನ ಗಾಂಡೀವಧನುಸ್ಸು ಕಾಣಿಸುತ್ತಿದೆ.
ಜಾಂಬೂನದವಿಚಿತ್ರಂ ಯದ್ಧೂಯಮಾನಂ ಮಹದ್ಧನುಃ |
ದೃಶ್ಯತೇ ದಿಕ್ಷು ಸರ್ವಾಸು ವಿದ್ಯುದಭ್ರಗಣೇಷ್ವಿವ ॥17॥
ಎಲ್ಲ ದಿಕ್ಕುಗಳಲ್ಲಿಯೂ ಚಲಿಸುತ್ತಿರುವ ಅರ್ಜುನನ ಈ ಗಾಂಡೀವ ಧನುಸ್ಸು ಮೋಡಗಳ ಗುಂಪಿನಲ್ಲಿ ಕಾಣಿಸುವ ಮಿಂಚಿನಂತೆ ಇದೆ.
ಉಹ್ಯಮಾನಾಶ್ಚ ಕೃಷ್ಣೇನ ವಾಯುನೇವ ಬಲಾಹಕಾಃ |
ಜಾಂಬೂನದವಿಚಿತ್ರಾಂಗಾ ವಹಂತ್ಯೇವಾರ್ಜುನಂ ಹಯಾಃ ॥18॥
ಗಾಳಿಯಿಂದಾಗಿ ಮೋಡಗಳು ಓಡುವಂತೆ ಶ್ರೀಕೃಷ್ಣನಿಂದಾಗಿ ಬಹು ವೇಗದಿಂದ ಓಡುತ್ತಿರುವ, ಮೈಮೇಲಿನ ಬಂಗಾರದ ಆಭರಣಗಳಿಂದಾಗಿ ವಿಚಿತ್ರವಾದ ಅಂಗಗಳುಳ್ಳ ಕುದುರೆಗಳು ಅರ್ಜುನನನ್ನು ಹೊತ್ತು ಸಾಗುತ್ತಿವೆ.
ತಾವಕಂ ತದ್ಬಲಂ ಸರ್ವಮರ್ಜುನೋಽಸ್ತ್ರವಿದಾಂ ವರಃ |
ಗಹನಂ ಶಿಶಿರಾಪಾಯೇ ದದಾಹಾಗ್ನಿರಿವೋತ್ಥಿತಃ ॥19॥
ರಾಜನೇ! ಶಿಶಿರ ಋತು ಕಳೆದಾಗ ಹಬ್ಬಿದ ಕಾಡ್ಗಿಚ್ಚು ಕಾಡನ್ನು ಸುಡುವಂತೆ ಅಸ್ತ್ರವೇತ್ತನಾದ ಅರ್ಜುನನು ನಿನ್ನ ಸೈನ್ಯವನ್ನು ನಾಶಮಾಡಿದನು.
ಗಾಹಮಾನಾಮನೀಕಾನಿ ಮಹೇಂದ್ರಸದೃಶಂ ಪ್ರಭುಮ್ |
ಧನಂಜಯಮಪಶ್ಯಾಮ ಚತುರ್ದಂತಮಿವ ದ್ವಿಪಮ್ ॥20॥
ಇಂದ್ರನ ಹಾಗೆ ಕಾಂತಿಯುಳ್ಳ ಅರ್ಜುನನು ನಾಲ್ಕು ದಾಡೆಗಳುಳ್ಳ ಆನೆಯಂತೆ ಸೈನ್ಯವನ್ನು ಪ್ರವೇಶಿಸುವುದನ್ನು ನಾವು ನೋಡಿದೆವು.

ವಿಕ್ಷೋಭಯಂತಂ ಸೇನಾಂ ವೈ ತ್ರಾಸಯಂತಂ ಚ ಪಾರ್ಥಿವಾನ್ |
ಧನಂಜಯಮಪಶ್ಯಾಮ ನಲಿನೀಷ್ವಿವ ಕುಂಜರಮ್ ||21||
ಸೈನ್ಯವನ್ನು ಅಲ್ಲೋಲ-ಕಲ್ಲೋಲಮಾಡುತ್ತಿರುವ ಹಾಗೂ ರಾಜರೆಲ್ಲರನ್ನು ಪೀಡಿಸುತ್ತಿರುವ ಅರ್ಜುನನನ್ನು ನೋಡಿದೆವು. ಅದು ಆನೆಯು ಕೊಳವನ್ನು ಕದಡುವಂತೆ ಇತ್ತು.
ತ್ರಾಸಯಂತಂ ತಥಾ ಯೋಧಾನ್ ರಥಘೋಷೇಣ ಪಾಂಡವಮ್ |
ಭೂಯ ಏವ ಹಿ ಪಶ್ಯಾಮಃ ಸಿಂಹಂ ಮೃಗಗಣಾ ಇವ ||22||
ಸಿಂಹವನ್ನು ಕಂಡ ಜಿಂಕೆಗಳಂತೆ ರಥದ ಶಬ್ಧಘೋಷದಿಂದ ಯೋಧರನ್ನು ಭಯಪಡಿಸುತ್ತಿರುವ ಅರ್ಜುನನನ್ನು ಪುನಃ ನೋಡಿದೆವು.
ಸರ್ವಲೋಕಮಹೇಷ್ವಾಸೌ ವೃಷಭೌ ಸರ್ವಧನ್ವಿನಾಮ್ |
ಆಮುಕ್ತಕವಚೌ ಕೃಷ್ಣೌ ಲೋಕಮಧ್ಯೇ ವಿರೇಜತುಃ ||23||
ಕವಚಧಾರಿಗಳಾದ, ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಹಾಗೂ ಲೋಕಪ್ರಸಿದ್ಧವಾದ ಧನುಸ್ಸನ್ನು ಹೊಂದಿದ ಶ್ರೀಕೃಷ್ಣ ಮತ್ತು ಅರ್ಜುನರು ಯೋಧರ ಮಧ್ಯದಲ್ಲಿ ಶೋಭಿಸುತ್ತಿದ್ದರು.
ಅದ್ಯ ಸಪ್ತದಶಾಹಾನಿ ವರ್ತಮಾನಸ್ಯ ಭಾರತ |
ಸಂಗ್ರಾಮಸ್ಯಾತಿಘೋರಸ್ಯ ಯುಧ್ಯತಾಂ ಚಾಪಿ ನೋ ಯುಧಿ ||24||
ಭಾರತ! ರಣರಂಗದಲ್ಲಿ ಯುದ್ಧಮಾಡುತ್ತಿರುವ ನಮ್ಮ ಯೋಧರಿಗೆ ಬಹಳ ಘೋರವಾದ ಯುದ್ಧದಲ್ಲಿ ಹದಿನೇಳು ದಿನಗಳು ಆದವು.
ವಾಯುನೇವ ವಿಧೂತಾನಿ ತವಾನೀಕಾನಿ ಗಚ್ಛತಾ |
ಶರದಂಭೋದಜಾಲಾನಿ ವ್ಯಶೀರ್ಯಂತ ಬಲಾನಿ ನಃ ||25||
ಗಾಳಿಯಿಂದಾಗಿ ಶರತ್ಕಾಲದ ಮೋಡಗಳು ಛಿದ್ರಗೊಳ್ಳುವಂತೆ ನಿನ್ನ ಸೇನೆಯು ಎಲ್ಲಾ ಕಡೆಯೂ ಛಿದ್ರ-ವಿಚ್ಛಿದ್ರವಾಗಿದೆ.
ತಾಂ ನಾವಮಿವ ಪರ್ಯಸ್ತಾಂ ಭ್ರಾಂತವಾತಾಂ ಮಹಾರ್ಣವೇ |
ತವ ಸೇನಾಂ ಮಹಾರಾಜ ಸವ್ಯಸಾಚೀ ವ್ಯಕಂಪಯತ್ ||26||
ಮಹಾರಾಜ! ಮಹಾಸಮುದ್ರದಲ್ಲಿ ಗಾಳಿಯ ಹೊಡೆತಕ್ಕೆ ಸಿಕ್ಕ ನಾವೆಯಂತೆ ಇರುವ ನಿನ್ನ ಸೇನೆಯನ್ನು ಅರ್ಜುನನು ಬಹಳವಾಗಿ ಭಯದಿಂದ ನಡುಗುವಂತೆ ಮಾಡಿದ.
ಕ್ವ ನು ತೇ ಸೂತಪುತ್ರೋಽಭೂತ್ ಕ್ವ ನು ದ್ರೋಣಃ ಸಹಾತ್ಮಜಃ |
ಅಹಂ ಕ್ವ ನು ಕ್ವ ಚಾತ್ಮಾ ತೇ ಹಾರ್ದಿಕ್ಯಶ್ಚ ತಥಾ ಕ್ವ ನು ||27||
ದುಃಶಾಸನಶ್ಚ ಭ್ರಾತಾ ತೇ ಭ್ರಾತೃಭಿಃ ಸಹಿತಃ ಕ್ವ ನು ||28||
ಬಾಣಗೋಚರಸಂಪ್ರಾಪ್ತಂ ಪ್ರೇಕ್ಷ್ಯ ಚೈವ ಜಯದ್ರಥಮ್ |
ಸಂಬಂಧಿನಸ್ತೇ ಭ್ರಾತೄಂಶ್ಚ ಸಹಾಯಾನ್ ಮಾತುಲಾಂಸ್ತಥಾ ||29||
ಅಂದು ಜಯದ್ರಥನು ಬಾಣಗಳ ಹೊಡೆತಕ್ಕೆ ಸಿಲುಕಿದಾಗ ಅದನ್ನು ನೋಡಿಯೂ ಸೂತಪುತ್ರ ಕರ್ಣನು ಎಲ್ಲಿ ಹೋದ? ಮಗನಾದ ಅಶ್ವತ್ಥಾಮನಿಂದ ಕೂಡಿದ ದ್ರೋಣ ಎಲ್ಲಿ ಹೋಗಿದ್ದ? ನಾನೆಲ್ಲಿದ್ದೆ? ಕೃತವರ್ಮ ಎಲ್ಲಿಹೋದ? ದುಃಶಾಸನ ಮೊದಲಾದ ನಿನ್ನ ಸಹೋದರರರು ಎಲ್ಲಿ ಹೋಗಿದ್ದರು? ಸೋದರಮಾವಂದಿರು ಎಲ್ಲಿದ್ದರು?
ಸರ್ವಕ್ಷತ್ರಸ್ಯ ಮಿಷತೋ ಲೋಕಾನಾಕ್ರಮ್ಯ ಮೂರ್ಧನಿ |
ಜಯದ್ರಥೋ ಹತೋ ರಾಜನ್ ಕಿಂ ನು ಶೇಷಮುಪಾಸ್ಮಹೇ ||30||
ಎಲ್ಲ ಕ್ಷತ್ರಿಯಕುಲವೇ ನೋಡುತ್ತಿರಲು ಅರ್ಜುನನು ನಿನ್ನ ಸಂಬಂಧಿಕರನ್ನೂ ಸಹೋದರರರನ್ನೂ ಸೋದರಮಾವಂದಿರನ್ನೂ ಸಹಾಯಕರನ್ನೂ ಹಾಗೂ ಎಲ್ಲರನ್ನೂ ಆಕ್ರಮಿಸಿ ಸೋಲಿಸಿ ಜಯದ್ರಥನನ್ನು ಕೊಂದುಹಾಕಿದ್ದಾನೆ. ಆದ್ದರಿಂದ ನಮ್ಮ ಭರವಸೆಗೆ ಯೋಗ್ಯರಾದವರು ಬೇರಾರಿದ್ದಾರೆ?
ಕೋ ವೇಹ ಸ ಪುಮಾನಸ್ತಿ ಯೋ ವಿಜೇಷ್ಯತಿ ಪಾಂಡವಮ್ |
ತಸ್ಯ ಚಾಸಕತ್ರಣಿ ದಿವ್ಯಾನಿ ವಿವಿಧಾನಿ ಮಹಾತ್ಮನಃ ||31||
ಗಾಂಡೀವಸ್ಯ ಚ ನಿರ್ಘೋಷೋ ವೀರ್ಯಾಣಿ ಹರತೇ ಹಿ ನಃ ||32||
ಮಹಾತ್ಮನಾದ ಅರ್ಜುನನ ವಿವಿಧಪ್ರಕಾರದ ದಿವ್ಯವಾದ ಅಸ್ತ್ರಗಳು, ಗಾಂಡೀವಧನುಸ್ಸಿನ ಠೇಂಕಾರ ಇವುಗಳು ನಮ್ಮ ಸಾಮರ್ಥ್ಯವನ್ನೇ ಅಡಗಿಸಿವೆ. ಅಂತಹ ಅರ್ಜುನನನ್ನು ಗೆಲ್ಲುವ ವ್ಯಕ್ತಿ ಯಾವನಿದ್ದಾನೆ?
ನಷ್ಟಚಂದ್ರಾ ಯಥಾ ರಾತ್ರಿಃ ಸೇನೇಯಂ ಹತನಾಯಕಾ |
ನಾಗನಕ್ರಝಷಾಕೀರ್ಣಾ ನದೀ ವಿಲುಲಿತಾ ಯಥಾ ||33||
ಸೇನಾಧಿಪತಿಯನ್ನು ಕಳೆದುಕೊಂಡಿರುವ ನಮ್ಮ ಈ ಸೈನ್ಯವು ಚಂದ್ರನಿಲ್ಲದ ರಾತ್ರಿಯಂತೆ ಮಾರ್ಗದರ್ಶಕರಿಲ್ಲದಾಗಿದೆ. ಆನೆ ಮೊಸಳೆ ಮೀನುಗಳು ನದಿಯನ್ನು ಅಲ್ಲೋಲ-ಕಲ್ಲೋಲಮಾಡುವಂತಾಗಿವೆ.
ಧ್ವನಿಜ್ಯಾಂ ಹತನೇತ್ರಾಯಾಂ ಯಥೇಷ್ಟಂ ಶ್ವೇತವಾಹನಃ |
ಚರಿಷ್ಯತಿ ಮಹಾರಾಜ ಕಕ್ಷೇಽಗ್ನಿರಿವ ಸ ಜ್ವಲನ್ ||34||
ಮಹಾರಾಜ! ನೇತಾರನನ್ನು ಕಳೆದುಕೊಂಡಿರುವ ನಮ್ಮ ಸೈನ್ಯವನ್ನು ಶ್ವೇತವಾಹನನಾದ ಅರ್ಜುನನು ಪ್ರವೇಶಿಸಿ ಕಾಡ್ಗಿಚ್ಚು ಕಾಡನ್ನು ಸುಡುವಂತೆ ಸಂಚರಿಸುತ್ತಿದ್ದಾನೆ.
ಸಾತ್ಯಕೇಶ್ಚೈವ ಯೋ ವೇಗೋ ಭೀಮಸೇನಸ್ಯ ಚೋಭಯೋಃ |
ದಾರಯೇತ ಗಿರೀನ್ ಸರ್ವಾನ್ ಶೋಷಯೇತಾಪಿ ಸಾಗರಾನ್ ||35||
ಸಾತ್ಯಕಿಯ ಹಾಗೂ ಭೀಮಸೇನನ ಯುದ್ಧವೇಗವು ಎಲ್ಲಾ ಪರ್ವತಗಳನ್ನೇ ಸೀಳಬಹುದು. ಸಮುದ್ರಗಳನ್ನೇ ಒಣಗಿಸಬಹುದು.

ಉವಾಚ ವಾಕ್ಯಂ ಯದ್ ಭೀಮಃ ಸಭಾಮಧ್ಯೇ ವಿಶಾಂಪತೇ |
ಕೃತಂ ತತ್ ಸಫಲಂ ಸರ್ವಂ ಭೂಯಶ್ಚೈವ ಕರಿಷ್ಯತಿ ||36||
ರಾಜನೇ! ಸಭೆಯ ಮಧ್ಯದಲ್ಲಿ ಭೀಮನು ಯಾವ ಮಾತನ್ನು ಆಡಿದ್ದನೋ ಅದನ್ನು ಸತ್ಯವನ್ನಾಗಿ ಮಾಡಿದ್ದಾನೆ. ಅದಕ್ಕಿಂತಲೂ ಅಧಿಕವಾದುದನ್ನೇ ಮಾಡುವನು.
ಪ್ರಮುಖಸ್ಥೇ ತದಾ ಕರ್ಣೇ ಬಲಂ ಪಾಂಡವರಕ್ಷಿತಮ್ |
ದುರಾಸದಂ ತಥಾ ಗುಪ್ತಂ ವ್ಯೂಢಂ ಗಾಂಡೀವಧನ್ವಿನಾ ||37||
ಕರ್ಣನು ಸೇನಾಪ್ರಮುಖನಾಗಿರುವಾಗಲೂ ಗಾಂಡೀವಧಾರಿ ಅರ್ಜುನನಿಂದ ರಕ್ಷಿಸಲ್ಪಟ್ಟ ಹಾಗೂ ವ್ಯೂಹರಚನೆಗೆ ಒಳಪಟ್ಟ ಪಾಂಡವ ಸೈನ್ಯವನ್ನು ಎದುರಿಸುವುದು ಅತಿಕಠಿಣಸಾಧ್ಯವಾಗಿತ್ತು.
ಯುಷ್ಮಾಭಿಸ್ತಾನಿ ಚೀರ್ಣಾನಿ ಯಾನ್ಯಸಾಧೂನಿ ಸಾಧುಷು |
ಅಕಾರಣಕೃತಾನ್ಯೇವ ತೇಷಾಂ ವಃ ಫಲಮಾಗತಮ್ ||38||
ಸಜ್ಜನರ ವಿಷಯದಲ್ಲಿ ನೀವು ಯಾವುದೇ ಕಾರಣವಿಲ್ಲದೆಯೇ ನ್ಯಾಯವಿರುದ್ಧವಾಗಿ ನಡೆದುಕೊಂಡಿರಿ. ಅದರ ಫಲವು ಈಗ ನಮಗೆ ಒದಗಿಬಂದಿದೆ.
ಆತ್ಮನೋಽರ್ಥೇ ತ್ವಯಾ ಲೋಕೋ ಯತ್ನತಃ ಸರ್ವ ಆಹೃತಃ |
ಸ ತೇ ಸಂಶಯಿತಸ್ತಾತ ಆತ್ಮಾ ಚ ಭರತರ್ಷಭ ||39||
ಭಾರತೋತ್ತಮನೇ! ನಿನ್ನ ಸ್ವಾರ್ಥಕ್ಕಾಗಿ ಎಲ್ಲರನ್ನೂ ಎಲ್ಲವನ್ನೂ ನೀನು ಪ್ರಯತ್ನಪೂರ್ವಕವಾಗಿ ನಿನ್ನ ಅಂಕೆಯಲ್ಲಿಟ್ಟುಕೊಂಡಿ. ಪ್ರಿಯನೇ! ಆದರೆ ಅಂತಹ ನೀನೇ ಬದುಕುವುದು ಸಂದಿಗ್ಧವಾಗಿದೆ.
ರಕ್ಷ ದುರ್ಯೋಧನಾತ್ಮಾನಮ್ ಆತ್ಮಾ ಸರ್ವಸ್ಯ ಭಾಜನಮ್ |
ಭಿನ್ನೇ ಹಿ ಭಾಜನೇ ತಾತ ದಿಶೋ ಗಚ್ಛತಿ ತದ್ಗತಮ್ ||40||
ದುರ್ಯೋಧನ! ನಿನ್ನನ್ನು ನೀನು ರಕ್ಷಿಸಿಕೊಳ್ಳು. ಪ್ರಿಯ! ಏಕೆಂದರೆ ಎಲ್ಲದಕ್ಕೂ ಮುಖ್ಯ ಪಾತ್ರ. ಪಾತ್ರವೇ ಒಡೆದುಹೋದರೆ ಅದರಲ್ಲಿರುವ ಎಲ್ಲವೂ ದಿಕ್ಕಾಪಾಲಾಗುತ್ತದೆ.
ಹೀಯಮಾನೇನ ಚೇತ್ ಸಂಧಿಃ ಪರ್ಯೇಷ್ಟವ್ಯಃ ಸಮೇನ ಚ |
ವಿಗ್ರಹೋ ವರ್ಧಮಾನೇನ ನೀತಿರೇಷಾ ಬೃಹಸ್ಪತೇಃ ||41||
ಬಲಹೀನನಾಗುವಾಗ ಸಮಾನನಾದವರ ಜೊತೆಗೆ ಸಂಧಿಯನ್ನು ಮಾಡಿಕೊಳ್ಳಬೇಕು. ಬಲವನ್ನು ವೃದ್ಧಿಸಿಕೊಂಡಾಗ ಸಮರೊಂದಿಗೆ ಯುದ್ಧಕ್ಕೆ ಇಳಿಯಬೇಕು. ಇದು ಬೃಹಸ್ಪತಿಯ ನ್ಯಾಯ.
ತೇ ವಯಂ ಪಾಂಡುಪುತ್ರೇಭ್ಯೋ ಹೀನಾಃ ಸ್ಮ ಬಲಶಕ್ತಿತಃ |
ಅತ್ರ ತೈಃ ಪಾಂಡವೈಃ ಸಾರ್ಧಂ ಸಂಧಿಂ ಮನ್ಯೇ ಕ್ಷಮಂ ಪ್ರಭೋ ||42||
ಅಂತಹ ನಾವು ಬಲದಲ್ಲಿ ಪಾಂಡವರಿಂದ ಕೆಳಗಿದ್ದೇವೆ. ಪ್ರಭುವೇ! ಈ ಸಂದರ್ಭದಲ್ಲಿ ಅಂತಹ ಬಲಶಾಲಿಗಳಾದ ಪಾಂಡವರೊಂದಿಗೆ ಸಂಧಿಯು ಯುಕ್ತವಾಗುವುದೆಂದು ನನ್ನ ಅಭಿಪ್ರಾಯ.
ನ ಜಾನೀತೇ ಹಿ ಯಃ ಶ್ರೇಯಃ ಶ್ರೇಯಸಶ್ಚಾವಮನ್ಯತೇ |
ಸ ಕ್ಷಿಪ್ರಂ ಭ್ರಶ್ಯತೇ ರಾಜ್ಯಾನ್ನ ಚ ಶ್ರೇಯೋಽನುವಿಂದತಿ ||43||
ಯಾವನು ಶ್ರೆಯಸ್ಕರವಾದುದನ್ನು ತಿಳಿಯುವುದಿಲ್ಲವೋ, ತಿಳಿದಿದ್ದರೂ ಅವಮಾನಪಡಿಸುತ್ತಾನೆಯೋ, ಅಂತಹವನು ರಾಜ್ಯವನ್ನು ಕಳೆದುಕೊಳ್ಳುತ್ತಾನೆ. ಶ್ರೇಯಸ್ಸನ್ನು ಹೊಂದುವುದೂ ಇಲ್ಲ.
ಪ್ರಣಿಪತ್ಯ ಹಿ ರಾಜಾನಂ ರಾಜ್ಯಂ ಯದಿ ಲಭೇಮಹಿ |
ಶ್ರೇಯಃ ಸ್ಯಾನ್ನ ತು ಮೌರ್ಖ್ಯೇಣ ರಾಜನ್ ಗಂತುಂ ಪರಾಭವಮ್ ||
ಧರ್ಮರಾಜನಿಗೆ ನಮಸ್ಕರಿಸಿ ರಾಜ್ಯವನ್ನು ಪಡೆದುಕೊಂಡರೆ ಅದು ಶ್ರೇಯಸ್ಸಿಗೆ ಕಾರಣವಾಗುತ್ತದೆ. ಮೂರ್ಖತನದಿಂದ ಯುದ್ಧಮಾಡಿ ಸೋಲುವುದು ಒಳ್ಳೆಯದಲ್ಲ.
ವೈಚಿತ್ರವೀರ್ಯವಚನಾತ್ ಕೃಪಾಶೀಲೋ ಯುಧಿಷ್ಠಿರಃ |
ವಿನಿಯುಂಜೀತ ರಾಜ್ಯೇ ತ್ವಾಂ ಗೋವಿಂದವಚನೇನ ಚ ||45||
ಕೃಪಾಶೀಲನಾದ ಧರ್ಮರಾಜನು ಧೃತರಾಷ್ಟ್ರ ಮತ್ತು ಶ್ರೀಕೃಷ್ಣನ ಮಾತಿಗೆ ಸರಿಯಾಗಿ ನಿನ್ನನ್ನೂ ರಾಜ್ಯದಲ್ಲಿ ರಾಜನಾಗಿ ನೇಮಿಸುತ್ತಾನೆ.
ಅಜಾತಶತ್ರುಃ ಕೌರವ್ಯೋ ಗುರುಶುಶ್ರೂಷಣೇ ರತಃ |
ಧೃತರಾಷ್ಟ್ರಸ್ಯ ವಚನಂ ನಾವಮಂಸ್ಯತಿ ಧಾರ್ಮಿಕಃ |
ಕುರ್ವಂತಿ ಭ್ರಾತರಶ್ಚಾಸ್ಯ ವಚನಂ ನಾತ್ರ ಸಂಶಯಃ ||46||
ಹಿರಿಯರ ಮಾತನ್ನು ಗೌರವಿಸುವ ಧರ್ಮರಾಜನು ಮಹಾಧಾರ್ಮಿಕನಾಗಿದ್ದಾನೆ. ಅವನು ಧೃತರಾಷ್ಟ್ರನ ಮಾತನ್ನು ಮೀರುವುದಿಲ್ಲ. ಧರ್ಮರಾಜನ ಮಾತನ್ನು ಅವನ ತಮ್ಮಂದಿರೂ ನಡೆಸಿಕೊಡುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಯದ್ಯದ್ ಬ್ರೂಯಾದ್ ಹೃಷೀಕೇಶೋ ರಾಜಾನಮಪರಾಜಿತಮ್ |
ಅರ್ಜುನೋ ಭೀಮಸೇನಶ್ಚ ಸರ್ವೇ ಕುರ್ಯುರಸಂಶಯಮ್ ||47||
ಸೋಲಿಲ್ಲದ ಧರ್ಮರಾಜನಿಗೆ ಹೃಷೀಕೇಶನು ಏನನ್ನು ಆದೇಶಿಸುತ್ತಾನೆಯೋ ಅದನ್ನು ಅರ್ಜುನ, ಭೀಮಸೇನ ಮತ್ತು ಎಲ್ಲರೂ ನಿಸ್ಸಂಶಯವಾಗಿ ನಡೆಸುತ್ತಾರೆ.
ನಾತಿಕ್ರಾಮತಿ ತತ್ ಕೃಷ್ಣೋ ವಚನಂ ಕೌರವಸ್ಯ ತು |

ಧೃತರಾಷ್ಟ್ರಸ್ಯ ಮನ್ಯೇಽಹಂ ನಾಪಿ ಕೃಷ್ಣಸ್ಯ ಪಾಂಡವಃ ॥48॥
ಕುರುರಾಜನಾದ ಧೃತರಾಷ್ಟ್ರನ ಮಾತನ್ನು ಕೃಷ್ಣನೂ ಮೀರುವುದಿಲ್ಲ ಎಂಬುದಾಗಿ ಭಾವಿಸುತ್ತೇನೆ. ಕೃಷ್ಣನ ಮಾತನ್ನು ಪಾಂಡವರು ಮೀರುವುದಿಲ್ಲ ಎಂಬುದಾಗಿ ಅಂದುಕೊಂಡಿದ್ದೇನೆ.
ಏತತ್ ಕ್ಷೇಮಮಹಂ ಮನ್ಯೇ ತವ ಪಾರ್ಥೈರವಿಗ್ರಹಮ್ ॥49॥
ಪಾಂಡವರೊಂದಿಗೆ ಯುದ್ಧಮಾಡದಿರುವುದೇ ನಿನಗೆ ಕ್ಷೇಮವೆಂದು ತಿಳಿಯುತ್ತೇನೆ.
ನೈತದ್ ಬ್ರುವೀಮಿ ಕಾರ್ಪಣ್ಯಾನ್ನ ಪ್ರಾಣಪರಿರಕ್ಷಣಾತ್ |
ಪಥ್ಯಂ ರಾಜನ್ ಬ್ರುವೀಮಿ ತ್ವಾಂ ತತ್ ಪರಾಸುಃ ಸ್ಮರಿಷ್ಯಸಿ ॥50॥
ಕೃಪಣತೆಯಿಂದಾಗಲೀ ಅಥವಾ ಜೀವರಕ್ಷಣೆಗಾಗಿ ಈ ಮಾತನ್ನು ಹೇಳುತ್ತಿಲ್ಲ. ನಿನಗೆ ಯೋಗ್ಯವಾದುದನ್ನೇ ಹೇಳುತ್ತಿದ್ದೇನೆ. ಸಾಯುವ ಸಂದರ್ಭದಲ್ಲಿ ಇದನ್ನು ಸ್ಮರಿಸಿಕೊಳ್ಳುತ್ತಿ.
ಸಂಜಯಃ
ಇತಿ ವೃದ್ಧೋ ವಿಲಪ್ಯೈತತ್ ಕೃಪಃ ಶಾರದ್ವತೋ ವಚಃ |
ದೀರ್ಘಮುಷ್ಣಂ ಚ ನಿಃಶ್ವಸ್ಯ ಶುಶೋಚ ಚ ಮುಮೋಹ ಹ ॥51॥
ಸಂಜಯ ಶರದ್ವಾನನ ಮಗನಾದ ಕೃಪಾಚಾರ್ಯನು ಈ ರೀತಿಯಲ್ಲಿ ವಿಲಪಿಸುತ್ತಾ, ನಿಡಿದಾಗಿ ಬಿಸಿಯುಸಿರನ್ನು ಬಿಡುತ್ತಾ ದುಃಖಪಟ್ಟನು ಮತ್ತು ಮೂರ್ಛೆಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ದುರ್ಯೋಧನನು ಸಕಾರಣವಾಗಿ ಸಂಧಿಗೆ ಒಪ್ಪದಿರುವುದು.
ಸಂಜಯಃ
ಏವಮುಕ್ತಸ್ತತೋ ರಾಜಾ ಗೌತಮೇನ ಮಹಾತ್ಮನಾ |
ನಿಃಶ್ವಸ್ಯ ದೀರ್ಘಮುಷ್ಣಂ ಚ ತೂಷ್ಣೀಮಾಸೀದ್ ವಿಶಾಂಪತೇ ॥1॥
ಸಂಜಯ ಮಹಾರಾಜ! ಮಹಾತ್ಮನಾದ ಕೃಪನು ಹೀಗೆ ಹೇಳಿದಾಗ ರಾಜ ದುರ್ಯೋಧನನು ಬಿಸಿಯಾದ ನಿಟ್ಟುಸಿರನ್ನು ಬಿಟ್ಟು ಸುಮ್ಮನೆ ಇದ್ದ.
ತತೋ ಮುಹೂರ್ತಂ ಸ ಧ್ಯಾತ್ವಾ ಪುತ್ರಸ್ತವ ಮಹಾಮನಾಃ |
ಕೃಪಂ ಶಾರದ್ವತಂ ವಾಕ್ಯಮಿತ್ಯುವಾಚ ಪರಂತಪಃ ॥2॥
ಅನಂತರ ಸ್ವಲ್ಪ ಕಾಲ ಆಲೋಚನೆ ಮಾಡಿ ದೃಢಮನಸ್ಕನಾದ ಹಾಗೂ ಶತ್ರುಗಳಿಗೆ ದುಃಖವನ್ನುಂಟುಮಾಡುವ ನಿನ್ನ ಮಗನು ಶರದ್ವಾನನ ಮಗನಾದ ಕೃಪನಿಗೆ ಹೀಗೆ ಹೇಳುತ್ತಾನೆ.
ದುರ್ಯೋಧನಃ
ಯತ್ ಕಿಂಚಿತ್ ಸುಹೃದಾ ವಾಚ್ಯಂ ತತ್ ಸರ್ವಂ ಶ್ರಾವಿತಂ ತ್ವಯಾ |
ಕೃತಂ ಚ ಭವತಾ ಸರ್ವಂ ಪ್ರಾಣಾನ್ ಸಂತ್ಯಜ್ಯ ಯುಧ್ಯತಾ ॥3॥
ದುರ್ಯೋಧನ ನನ್ನ ಬಗ್ಗೆ ಒಳ್ಳೆಯ ಅಭಿಪ್ರಾಯವುಳ್ಳ ಪ್ರಿಯಮಿತ್ರನಾದ ನೀನು ಮಿತ್ರನು ಹೇಳಲೇಬೇಕಾದ ಮಾತನ್ನು ನನಗೆ ಹೇಳಿರುವಿ.ನಿನ್ನ ಕರ್ತವ್ಯಗಳನ್ನೆಲ್ಲಾ ಪೂರೈಸಿರುವಿ. ಪ್ರಾಣದ ಆಸೆಯನ್ನೂ ತ್ಯಜಿಸಿ ನನಗಾಗಿ ಯುದ್ಧ ಮಾಡಿರುವಿ.
ಗಾಹಮಾನಮನೀಕಾನಿ ಯುಧ್ಯಮಾನಂ ಮಹಾರಥೈಃ |
ಪಾಂಡವೈರತಿತೇಜೋಭಿಃ ಲೋಕಸ್ತತ್ವಮನುದೃಷ್ಟವಾನ್ ॥4॥
ಪಾಂಡವರ ಕಡೆಯ ಬಹಳ ತೇಜೋವಂತರಾದ ಮಹಾರಥರೊಡನೆ ಯುದ್ಧಮಾಡುತ್ತಾ ಸೈನ್ಯವನ್ನು ಪ್ರವೇಶಿಸುತ್ತಿರುವ ನಿನ್ನನ್ನು ಇಡೀ ಲೋಕವೇ ಮತ್ತೆ ಮತ್ತೆ ನೋಡಿದೆ.
ಸುಹೃದಾ ಯದ್ವಿತಂ ವಾಚ್ಯಂ ಭವತಾ ಶ್ರಾವಿತೋಽಸ್ಮ್ಯಹಮ್ |
ನಾಭಿನಂದಾಮಿ ತತ್ಸರ್ವಂ ಮುಮೂರ್ಷುರಿವ ಭೇಷಜಮ್ ॥5॥
ಸಹೃದಯದ ಸ್ನೇಹಿತನು ಹೇಳುವ ಹಿತವಾದ ಮಾತನ್ನು ನೀನು ಹೇಳಿರುವೆ. ನಾನು ಅದನ್ನು ಕೇಳಿದ್ದೇನೆ. ಆದರೆ ನೀನು ಹೇಳಿದ್ದೆಲ್ಲವನ್ನೂ ನಾನು ಅನುಮೋದಿಸಲಾರೆ. ಏಕೆಂದರೆ ಸಾಯಲು ಹೊರಟ ವ್ಯಕ್ತಿಗೆ ಔಷಧಿಯು ಉಚಿತವೆನಿಸುವುದಿಲ್ಲ.
ಹೇತುಕಾರಣಸಂಯುಕ್ತಂ ಹಿತಂ ವಚನಮುತ್ತಮಮ್ |
ಉಚ್ಯಮಾನಂ ಮಹಾಬಾಹೋ ನ ಮೇ ವಿಪ್ರಾಗ್ರ್ಯ ರೋಚತೇ ॥6॥
ಮಹಾಬಾಹೋ ! ಬ್ರಾಹ್ಮಣೋತ್ತಮನೇ! ಸಕಾರಣವಾದ ಹಿತವಾದ ನಿನ್ನ ಉತ್ತಮವಾದ ಮಾತುಗಳೂ ನನ್ನ ಪಾಲಿಗೆ ಪ್ರಿಯವೆನಿಸುವುದಿಲ್ಲ.
ರಾಜ್ಯಾದ್ ವಿನಿಷ್ಕೃತೋಽಸ್ಮಾಭಿಃ ಕಥಂ ಸೋಽಸ್ಮಾಸು ವಿಶ್ವಸೇತ್ ॥7॥
ನಾವು ಪಾಂಡವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿದೆವು. ಅಂಥವರು ನಮ್ಮಲ್ಲಿ ಹೇಗೆ ವಿಶ್ವಾಸವಿರಿಸಲು ಸಾಧ್ಯ?
ಅಕ್ಷದ್ಯೂತೇ ಚ ನೃಪತಿಃ ಜಿತೋಽಸ್ಮಾಭಿಃ ಮಹಾಧನಃ |
ಸ ಕಥಂ ಮಮ ವಾಕ್ಯಾನಿ ಶ್ರದ್ದಧ್ಯಾದ್ ಭೂಯ ಏವ ತು ॥8॥

ಸಕಲಸಂಪದ್ಭರಿತನಾದ ರಾಜ ಧರ್ಮರಾಜನು ದ್ಯೂತದಲ್ಲಿ ನಮ್ಮಿಂದ ಸೋತು ಹೋಗಿದ್ದಾನೆ. ಅಂತಹವನು ಮತ್ತೆ ನನ್ನ ಮಾತುಗಳನ್ನು ಹೇಗೆ ನಂಬುವನು?
ತಥಾ ದೌತ್ಯೇನ ಸಂಪ್ರಾಪ್ತಃ ಕೃಷ್ಣಃ ಪಾರ್ಥಹಿತೇ ರತಃ |
ಪ್ರಕ್ಷುಬ್ಧಶ್ಚ ಹೃಷೀಕೇಶಃ ತಚ್ಚ ಕರ್ಮ ವಿರೋಧಿತಮ್ ॥9॥
ಸ ಹಿ ಮೇ ವಚನಂ ಬ್ರಹ್ಮನ್ ಕಥಮೇವಾಭಿಮಂಸ್ಯತೇ ॥10॥
ಪಾರ್ಥನ ಕ್ಷೇಮವನ್ನು ಬಯಸಿ ಶ್ರೀಕೃಷ್ಣನು ಶಾಂತಿದೂತನಾಗಿ ಬಂದಾಗ ಆ ಹೃಷೀಕೇಶನಿಗೆ ಮೋಸ ಮಾಡಿದೆ. ಆ ಕಾರ್ಯವು ಲೋಕ-ಧರ್ಮವಿರೋಧಿ ಆಗಿತ್ತು. ಧರ್ಮರಾಜನು ನನ್ನ ಮಾತಲ್ಲಿ ಹೇಗೆ ತಾನೇ ವಿಶ್ವಾಸವಿರಿಸಿಯಾನು?
ವಿಲಲಾಪ ಚ ಯತ್ ಕೃಷ್ಣಾ ಸಭಾಮಧ್ಯೇ ಸಮೇಯುಷೀ |
ನೈತನ್ಮರ್ಷಯತೇ ಕೃಷ್ಣೋ ನ ರಾಜ್ಯಹರಣಂ ತಥಾ ॥11॥
ತುಂಬಿದ ಸಭೆಯಲ್ಲಿ ಬಲಾತ್ಕಾರದಿಂದ ತರಲ್ಪಟ್ಟ ದ್ರೌಪದಿಯು ಬಹಳವಾಗಿ ದುಃಖದಿಂದ ಗೋಳಿಟ್ಟಳು. ಇದನ್ನು ಹಾಗೂ ಪಾಂಡವರಿಂದ ರಾಜ್ಯವನ್ನು ಕಸಿದುಕೊಂಡಿರುವುದನ್ನು ಕೃಷ್ಣನು ಸಹಿಸಿಕೊಳ್ಳಲಾರನು.
ಏಕಪ್ರಾಣೌ ಹಿ ತೌ ಕೃಷ್ಣಾವನ್ಯೋನ್ಯಮಭಿಸಂಹಿತೌ |
ಪುರಾ ಯಚ್ಛ್ರುತಮಸ್ಮಾಭಿಃ ಅದ್ಯ ಪಶ್ಯಾಮಿ ತತ್ ಪ್ರಭೋ ॥12॥
ಪ್ರಭೋ! ಪರಸ್ಪರವಾಗಿ ಜೊತೆ-ಜೊತೆಯಾಗಿ ಅವಲಂಬಿತರಾದ ಆ ಕೃಷ್ಣಾರ್ಜುನರು ಇಬ್ಬರು ಎರಡು ದೇಹ ಹಾಗೂ ಒಂದು ಪ್ರಾಣವನ್ನು ಹೊಂದಿರುವವರು. ಇದನ್ನು ಹಿಂದೆ ನಾನು ಕೇಳಿ ತಿಳಿದುಕೊಂಡಿದ್ದೆ. ಇವತ್ತು ಅದನ್ನು ಕಾಣುತ್ತಿದ್ದೇನೆ.
ಸ್ವಸ್ರೀಯಂ ಚ ಹತಂ ದೃಷ್ಟ್ವಾ ದುಃಖಂ ಸ್ವಪಿತಿ ಕೇಶವಃ |
ಕೃತಾಗಸೋ ವಯಂ ತಸ್ಯ ಸ ಮದರ್ಥೇ ಕಥಂ ಕ್ಷಮೇತ್ ॥13॥
ತನ್ನ ತಂಗಿಯ ಮಗ ಅಭಿಮನ್ಯುವು ಹತನಾಗಿರುವುದನ್ನು ಕಂಡು ಕೇಶವನು ದುಃಖದಿಂದ ಮೂರ್ಛಿತನಾಗಿದ್ದಾನೆ. ಅವನಿಗೆ ಇಂತಹ ಅಪರಾಧವನ್ನು ಮಾಡಿರುವೆವು. ಅಂತಹ ನಮ್ಮ ಮೇಲೆ ಅವನು ಕ್ಷಮೆಯನ್ನು ಹೇಗೆ ತೋರಿಸಿಯಾನು?
ಅಭಿಮನ್ಯೋರ್ವಿನಾಶೇನ ನ ಶರ್ಮ ಲಭತೇಽರ್ಜುನಃ |
ಸ ಕಥಂ ಮದ್ಧಿತೇ ಯತ್ನಂ ಪ್ರಕರಿಷ್ಯತಿ ಯಾಚಿತಃ ॥14॥
ಅಭಿಮನ್ಯುವಿನ ನಾಶದಿಂದ ಅರ್ಜುನನು ನೆಮ್ಮದಿಯನ್ನು ಕಳೆದುಕೊಂಡಿದ್ದಾನೆ. ನಾವು ಬೇಡಿಕೊಂಡರೂ ಅಂತಹ ಅರ್ಜುನನು ನನ್ನ ಒಳಿತಿಗೆ ಹೇಗೆ ಪ್ರಯತ್ನಿಸಿಯಾನು?
ಮಧ್ಯಮಃ ಪಾಂಡವಸ್ತೀಕ್ಷ್ಣೋ ಭೀಮಸೇನೋ ಮಹಾಬಲಃ |
ಪ್ರತಿಜ್ಞಾತಂ ಚ ತೇನೋಗ್ರಂ ಭಗ್ನದರ್ಪಃ ಕಥಂ ಕ್ಷಮೇತ್ ॥15॥
ಮಧ್ಯಮಪಾಂಡವನೆನಿಸಿದ ಮಹಾಬಲಶಾಲಿಯಾದ ಅಷ್ಟೇ ಭಯಂಕರನಾದ ಭೀಮಸೇನನು ಕಠಿಣವಾದ ಪ್ರತಿಜ್ಞೆಯನ್ನು ಮಾಡಿದ್ದಾನೆ. ನಮ್ಮಿಂದ ಪರಾಭವವನ್ನು ಅನುಭವಿಸಿದ ಭೀಮನು ನಮ್ಮನ್ನು ಹೇಗೆ ಕ್ಷಮಿಸಿಯಾನು?
ಉಭೌ ಚ ಬದ್ಧನಿಸ್ತ್ರಿಂಶೌ ಕಾಲಾಗ್ನಿಸದೃಶದ್ಯುತೀ |
ಕೃತವೈರೌ ತು ತೌ ವೀರೌ ಯಮಾವಪಿ ಯಮೋಪಮೌ ॥16॥
ಈ ಅವಳಿಗಳಾದ ನಕುಲ-ಸಹದೇವ ಇವರು ಇಬ್ಬರೂ ನಮ್ಮಲ್ಲಿ ವೈರವನ್ನು ಸಾಧಿಸುತ್ತಿರುತ್ತಾರೆ. ಖಡ್ಗಧಾರಿಗಳಾದ ಇವರು ಪ್ರಳಯಕಾಲದ ಬೆಂಕಿಯಂತೆ ಪ್ರಕಾಶಮಾನರಾಗಿದ್ದಾರೆ. ಅಂತಹ ವೀರರು ಯಮನ ಹಾಗೆ ತೋರುತ್ತಿದ್ದಾರೆ.
ಧೃಷ್ಟದ್ಯುಮ್ನಃ ಶಿಖಂಡೀ ಚ ಕೃತವೈರೌ ಮಯಾ ಸಹ |
ತೌ ಕಥಂ ಮದ್ಧಿತೇ ಯತ್ನಂ ಕುರ್ಯಾತಾಂ ದ್ವಿಜಸತ್ತಮ ॥17॥
ದ್ವಿಜಶ್ರೇಷ್ಠನೇ! ಧೃಷ್ಟದ್ಯುಮ್ನ ಹಾಗೂ ಶಿಖಂಡಿಯೂ ನನ್ನ ಜೊತೆಗೆ ಶತ್ರುತ್ವವನ್ನು ಸಾಧಿಸುತ್ತಿದ್ದಾರೆ. ಅಂತಹ ಇವರು ನನ್ನ ಹಿತಕ್ಕಾಗಿ ಹೇಗೆ ತಾನೇ ಪ್ರಯತ್ನಿಸಿಯಾರು?
ದುಃಶಾಸನೇನ ಯತ್ ಕೃಷ್ಣಾ ಏಕವಸ್ತ್ರಾ ರಜಸ್ವಲಾ |
ಪರಿಕ್ಲಿಷ್ಟಾ ಸಭಾಮಧ್ಯೇ ಸರ್ವಲೋಕಸ್ಯ ಪಶ್ಯತಃ ॥18॥
ತಥಾ ವಿವಸನಾಂ ದೀನಾಂ ಸ್ಮರಂತ್ಯೋಽದ್ಯಾಪಿ ಪಾಂಡವಾಃ |
ನ ನಿವಾರಯಿತುಂ ಶಕ್ಯಾಃ ಸಂಗ್ರಾಮಾತ್ ತೇ ಪರಂತಪಾಃ ॥19॥
ಎಲ್ಲಾ ಜನರೂ ನೋಡುತ್ತಿರುವಾಗಲೇ ಸಭಾಮಧ್ಯದಲ್ಲಿ ರಜಸ್ವಲೆಯಾಗಿ ಏಕವಸ್ತ್ರಧಾರಿಣಿಯಾದ ದ್ರೌಪದಿಯನ್ನು ದುಃಶಾಸನನು ಬಹಳವಾಗಿ ಖೇದಪಡುವಂತೆ ಮಾಡಿದ. ಅಷ್ಟೇ ಅಲ್ಲದೇ ಅವಳ ವಸ್ತ್ರವನ್ನು ಎಳೆಯಲೂ ಪ್ರಯತ್ನಿಸಿದ. ದುಃಖಿಸುತ್ತಿದ್ದ ಆ ದ್ರೌಪದಿಯನ್ನು ಪಾಂಡವರು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ಶತ್ರುಸಂಹಾರಕರಾದ ಅವರನ್ನು ಯುದ್ಧದಿಂದ ಹೊರಹೋಗುವಂತೆ ಮಾಡುವುದು ಅಸಾಧ್ಯವಾದುದು.
ಸದಾ ಚ ದ್ರೌಪದೀ ಕ್ರುದ್ಧಾ ಮದ್ವಿನಾಶಾಯ ದೀಕ್ಷಿತಾ |
ಉಗ್ರಂ ತೇಪೇ ತಪಃ ಕೃಷ್ಣಾ ಭರ್ತೄಣಾಮರ್ಥಸಿದ್ಧಯೇ ॥20॥
ನನ್ನ ವಿಷಯದಲ್ಲಿ ಬಹಳವಾಗಿ ಕೋಪಿಸಿಕೊಂಡಿರುವ ದ್ರೌಪದಿಯು ನನ್ನ ನಾಶಕ್ಕಾಗಿ ದೀಕ್ಷಿತಳಾಗಿದ್ದಾಳೆ. ತನ್ನ ಗಂಡಂದಿರ ಸಂಪತ್ತು ಮತ್ತೆ ಪ್ರಾಪ್ತಿಯಾಗಲೆಂದು ಕಠಿಣವಾದ ತಪಸ್ಸನ್ನು ಆಚರಿಸಿದ್ದಾಳೆ.
ನಿಃಶ್ವಸಂತೀ ಭೃಶಂ ಶೇತೇ ಯಾವದ್ವೈರಸ್ಯ ಯಾತನಾ |
ನಿಕ್ಷಿಪ್ಯ ಮಾನಂ ದರ್ಪಂ ಚ ವಾಸುದೇವಸಹೋದರೀ ॥21॥
ಕೃಷ್ಣಾಯಾಃ ಪ್ರೇಷ್ಯವದ್ಭೂತ್ವಾ ಶುಶ್ರೂಷಾಂ ಕುರುತೇ ಸದಾ |

ಇತಿ ವೈರಂ ಸಮುನ್ನದ್ಧಂ ನ ನಿರ್ವಾತಿ ಕಥಂಚನ ॥22॥
ಅಭಿಮನ್ಯೋರ್ವಿನಾಶೇನ ಸ ಸಂಧೇಯಃ ಕಥಂ ಭವೇತ್ ॥23॥
ವಾಸುದೇವನ ಭಗಿನಿಯಾದ ಸುಭದ್ರೆಯು ಶತ್ರುತ್ವದ ಪ್ರತೀಕಾರ ನಡೆಯುವಲ್ಲಿವರೆಗೂ ನಿಡಿದಾದ ಉಸಿರನ್ನು ಬಿಡುತ್ತಾ, ತನ್ನ ಅಭಿಮಾನವನ್ನೂ ದರ್ಪವನ್ನೂ ತೊರೆದು ದ್ರೌಪದಿಯ ದಾಸಿಯಾಗಿ ಸೇವೆಯನ್ನು ಮಾಡುತ್ತಿದ್ದಾಳೆ. ಹೀಗೆ ಎದ್ದಿರುವ ಶತ್ರುತ್ವವನ್ನು ಯಾವ ರೀತಿಯಲ್ಲಿಯೂ ನಿವಾರಿಸಲಾಗದು. ಏಕೆಂದರೆ ಅಭಿಮನ್ಯುವಿನ ಹತ್ಯೆಯಿಂದ ದ್ರೌಪದಿಯು ಬಹಳ ದುಃಖಿತಳಾಗಿದ್ದಾಳೆ. ತನ್ನ ಸೇವೆಯನ್ನು ಮಾಡುತ್ತಿರುವ ಸುಭದ್ರೆಯ ಮಗನ ಮರಣವು ತನ್ನ ಮಕ್ಕಳ ನಾಶಕ್ಕಿಂತಲೂ ಅಧಿಕವಾಗಿ ಆಕೆಗೆ ದುಃಖವನ್ನುಂಟುಮಾಡಿದೆ. ಆ ವೈರವನ್ನು ದ್ರೌಪದಿಯು ಯಾವತ್ತೂ ಮರೆಯಲಾರಳು. ಆದ್ದರಿಂದ ಅವಳ ಪತಿಯಾದ ಧರ್ಮರಾಜನೊಂದಿಗೆ ಸಂಧಿಯನ್ನು ಹೇಗೆ ಮಾಡಲು ಸಾಧ್ಯ?
ಕಥಂ ನು ರಾಜಾ ಭುಕ್ತ್ವೇಮಾಂ ಪೃಥಿವೀಂ ಸಾಗರಾಂಬರಾಮ್ |
ಪಾಂಡವಾನಾಂ ಪ್ರಸಾದೇನ ಸಂಭೋಜ್ಯಂ ರಾಜ್ಯಮಲ್ಪಕಮ್ ॥24॥
ಸಾಗರಪರ್ಯಂತವಾದ ಭೂಮಂಡಲದ ಚಕ್ರವರ್ತಿಯಾಗಿ ಅನುಭವಿಸಿದ ನಾನು ಪಾಂಡವರು ಪ್ರಸಾದರೂಪವಾಗಿ ಕೊಡುವ ಅಲ್ಪರಾಜ್ಯವನ್ನು ಹೇಗೆ ಅನುಭವಿಸಲಿ?
ಉಪರ್ಯುಪರಿ ರಾಜ್ಞಾಂ ವೈ ಜ್ವಲಿತಾ ಭಾಸ್ಕರೋ ಯಥಾ |
ಯುಧಿಷ್ಠಿರಂ ಕಥಂ ಪಶ್ಚಾದ್ ಅನುಯಾಸ್ಯಾಮಿ ದಾಸವತ್ ॥25॥
ಸೂರ್ಯನು ಎಲ್ಲರಿಗಿಂತಲೂ ಮೇಲೆ ಇದ್ದುಕೊಂಡು ಪ್ರಜ್ವಲಿಸುವಂತೆ ರಾಜರ ಮೇಲೆ ಅಧಿಕಾರ ಚಲಾಯಿಸುತ್ತಿರುವ ನಾನು ದಾಸನಂತೆ ಧರ್ಮರಾಜನನ್ನು ಹೇಗೆ ಅನುಸರಿಸಿಕೊಂಡು ಹೋಗಲಿ?
ಕಥಂ ಭೋಗಾನ್ ಸ್ವಯಂ ಭುಕತ್ವ ದತ್ವಾ ದೇಯಾಂಶ್ಚ ಪುಷ್ಕಲಾನ್ |
ಕೃಪಣಂ ವರ್ತಯಿಷ್ಯಾಮಿ ಕುನೃಪೈಃ ಸಹ ಜೀವಿಕಾಮ್ ॥26॥
ಸ್ವಯಂ ನಾನೇ ಎಲ್ಲಾ ಸುಖಗಳನ್ನೂ ಅನುಭವಿಸಿ, ಕೈತುಂಬ ದಾನವನ್ನು ಮಾಡಿ, ಕೆಟ್ಟ ರಾಜರಂತೆ ಬದುಕಿಗಾಗಿ ದಯನೀಯ ಜೀವನವನ್ನು ಹೇಗೆ ಬಾಳಲಿ?
ನಾಭ್ಯಸೂಯಾಮಿ ತೇ ವಾಕ್ಯಮುಕ್ತಂ ಸ್ನೇಹಾದಿದಂ ತ್ವಯಾ |
ನ ತು ಸಂಧಿಮಹಂ ಮನ್ಯೇ ಪ್ರಾಪ್ತಕಾಲಂ ಕಥಂಚನ ॥27॥
ನೀನು ಸ್ನೇಹದಿಂದ ಹೇಳಿದ ಮಾತಲ್ಲಿ ನಾನು ತಪ್ಪನ್ನು ಕಾಣಲಾರೆ. ಆದರೆ ಹೇಗೆ ವಿಚಾರಮಾಡಿದರೂ ಇದು ಸಂಧಿಗೆ ಯೋಗ್ಯವಾದ ಕಾಲವೆಂದು ನಾನು ಭಾವಿಸಲಾರೆ.
ಸುನೀತಮನುಪಶ್ಯಾಮಿ ಸುಯುದ್ಧೇನ ಪರಂತಪ |
ನಾಯಂ ಕ್ಲೀಬಯಿತುಂ ಕಾಲಃ ಸಂಯೋದ್ಧುಂ ಕಾಲ ಏವ ನಃ ॥28॥
ಹೇ ಶತ್ರುಭಯಂಕರನೇ! ಚೆನ್ನಾಗಿ ಯುದ್ಧಮಾಡುವುದರಲ್ಲೇ ಒಳ್ಳೆಯ ನೀತಿಯನ್ನು ಕಾಣುತ್ತಿದ್ದೇನೆ. ನಪುಂಸಕನಂತಿರಲು ಇದು ಸರಿಯಾದ ಸಂದರ್ಭವಲ್ಲ. ಇದು ನಮಗೆ ಚೆನ್ನಾಗಿ ಯುದ್ಧಮಾಡಲು ಯೋಗ್ಯವಾದ ಕಾಲವಾಗಿದೆ.
ಇಷ್ಟಂ ಮೇ ಬಹುಭಿರ್ಯಜ್ಞೈಃ ದತ್ತಾ ವಿಪ್ರೇಷು ದಕ್ಷಿಣಾಃ |
ಪ್ರಾಪ್ತಃ ಕ್ರಮೋ ನರೇಂದ್ರಾಣಾಂ ಶತ್ರೂಣಾಂ ಮೂರ್ಧ್ನ್ಯವಸ್ಥಿತಾಮ್ ॥
ಭೃತ್ಯಾ ಮೇ ಸಂಭೃತಾಸ್ತಾತ ದೀನಾಶ್ಚಾಪ್ಯುದ್ಧೃತಾಃ ಜನಾಃ |
ನೋತ್ಸಹೇಽಹಂ ದ್ವಿಜಶ್ರೇಷ್ಠ ಪಾಂಡವಂ ವಕ್ತುಮೀದೃಶಮ್ ॥30॥
ನಾನು ಅನೇಕ ಯಜ್ಞಗಳನ್ನು ಮಾಡಿರುವೆನು. ಬ್ರಾಹ್ಮಣರಿಗೆ ಬೇಕಾದಷ್ಟು ದಕ್ಷಿಣೆಯನ್ನು ಕೊಟ್ಟಿರುವೆನು. ಸಕಲ ಸೌಭಾಗ್ಯಗಳನ್ನೂ ಅನುಭವಿಸಿರುವೆನು. ವೇದಾಧ್ಯಯನವನ್ನು ಮಾಡಿರುವೆನು. ಶತ್ರುಗಳನ್ನು ಹಡೆಮುರಿ ಕಟ್ಟಿರುವೆನು. ಪ್ರಿಯನೇ! ನನ್ನ ಸೇವಕರೂ ನನ್ನಿಂದ ಚೆನ್ನಾಗಿ ಪೋಷಿಸಲ್ಪಟ್ಟಿದ್ದಾರೆ. ದೀನರನು ನನ್ನಿಂದ ಉದ್ಧೃತರಾಗಿದ್ದಾರೆ. ದ್ವಿಜೋತ್ತಮನೇ! ಪಾಂಡವನಿಗೆ ನೀನು ಹೇಳಿದಂತೆ ಕೇಳಲು ನಾನು ಉತ್ಸಾಹವನ್ನು ತೋರಿಸಲಾರೆನು.
ಜಿತಾನಿ ಪರರಾಷ್ಟ್ರಾಣಿ ಸ್ವರಾಷ್ಟ್ರಮನುಪಾಲಿತಮ್ |
ಭುಕ್ತಾಶ್ಚ ವಿವಿಧಾ ಭೋಗಾಃ ತ್ರಿವರ್ಗಾಃ ಸೇವಿತಾ ಮಯಾ ॥31॥
ಪಿತೄಣಾಂ ಗತಮಾನೃಣ್ಯಂ ಕ್ಷತ್ರಧರ್ಮಸ್ಯ ಚೋಭಯೋಃ ॥32॥
ಪರರ ರಾಜ್ಯಗಳನ್ನು ಗೆದ್ದಿದ್ದೇನೆ. ನನ್ನ ರಾಷ್ಟ್ರವನ್ನು ಚೆನ್ನಾಗಿ ರಕ್ಷಣೆ ಮಾಡಿರುವೆನು. ಬೇರೆ ಬೇರೆ ಬಗೆಯ ಸುಖಭೋಗಗಳನ್ನು ಅನುಭವಿಸಿರುವೆನು. ತ್ರಿವರ್ಗವೆನಿಸಿದ ಧರ್ಮ-ಅರ್ಥ-ಕಾಮಗಳನ್ನು ಕೈವಶ ಮಾಡಿಕೊಂಡಿರುವೆನು. ಪಿತೃಋಣವನ್ನು ತೀರಿಸಿಕೊಂಡಿರುವೆನು. ಕ್ಷತ್ರಿಯಧರ್ಮವನ್ನು ಪಾಲಿಸಿ ಆ ಧರ್ಮದ ಋಣವನ್ನೂ ಕಳೆದುಕೊಂಡಿರುವೆನು.
ನ ಧ್ರುವಂ ಸುಖಮಸ್ತೀಹ ಕುತೋ ರಾಜ್ಯಂ ಕುತೋ ಯಶಃ |
ಇಹ ಕೀರ್ತಿರ್ವಿಚೇತವ್ಯಾ ಸಾ ಚ ಯುದ್ಧೇನ ನಾನ್ಯಥಾ ॥33॥
ಇಲ್ಲಿ ಸುಖವೂ ಶಾಶ್ವತವಲ್ಲ. ಎಲ್ಲಿಯದ್ದು ರಾಜ್ಯ? ಎಲ್ಲಿಯದ್ದು ಕೀರ್ತಿ? ಇಲ್ಲಿ ಭೂಮಿಯಲ್ಲಿ ಒಳ್ಳೆಯ ಕೀರ್ತಿಯನ್ನು ಸಂಪಾದಿಸಬೇಕು. ಅದಕ್ಕಾಗಿ ಇರುವ ಒಂದೇ ದಾರಿಯೆಂದರೆ ಅದು ಯುದ್ಧ ಮಾತ್ರ.
ವೃಥಾ ಚ ಯತ್ ಕ್ಷತ್ರಿಯಸ್ಯ ನಿಧನಂ ತದ್ ವಿಗರ್ಹಿತಮ್ |
ಅಧರ್ಮಃ ಸುಮಹಾನೇಷ ವಿಣ್ಮೂತ್ರಮರಣಂ ಗೃಹೇ ॥34॥
ಯುದ್ಧಮಾಡದೆ ವ್ಯರ್ಥವಾಗಿ ಕ್ಷತ್ರಿಯನು ಸಾಯುವುದನ್ನು ಶಾಸ್ತ್ರವು ನಿಂದಿಸಿದೆ. ಮಲ-ಮೂತ್ರಗಳ ಮಧ್ಯೆ ಸಾಯುವುದು ಅತ್ಯಂತ ದೊಡ್ಡದಾದ ಅಧರ್ಮ.

ಅರಣ್ಯೇ ಯೋ ವಿಮುಂಚೇತ ಸಂಗ್ರಾಮೇ ವಾ ತನುಂ ನೃಪಃ |
ಕ್ರತೂನಾಹೃತ್ಯ ಮಹತೋ ಮಹಿಮಾನಂ ಸ ಗಚ್ಛತಿ ||35||
ಕಾಡಿನಲ್ಲಿ ಯಾಗ-ಯಜ್ಞರೂಪವಾದ ಸ್ವಧರ್ಮವನ್ನು ಆಚರಿಸಿಯೋ ಅಥವಾ ಯುದ್ಧದಲ್ಲಿಯೋ ಯಾವ ರಾಜನು ಶರೀರವನ್ನು ತ್ಯಜಿಸುತ್ತಾನೆಯೋ ಅಂತಹವನು ದೊಡ್ಡದಾದ ಮಹಿಮೆಯುಳ್ಳವನಾಗುತ್ತಾನೆ.
ಕೃಪಣಂ ವಿಲಪನ್ನಾರ್ತೋ ಜರಯಾ ಚ ಪರಿಪ್ಲುತಃ |
ಮ್ರಿಯತೇ ರುದತಾಂ ಮಧ್ಯೇ ಜ್ಞಾತೀನಾಂ ನ ಸ ಪೂರುಷಃ ||36||
ದುಃಖದಿಂದ ಅಳುತ್ತಾ ದೀನನಾಗಿ, ಮುಪ್ಪಿನಿಂದ ಜರ್ಝರಿತನಾಗಿ ಸುತ್ತ ನಿಂತು ಅಳುತ್ತಿರುವ ಬಂಧುಗಳ ಮಧ್ಯೆ ಸಾಯುವ ಕ್ಷತ್ರಿಯನು ನಿಜವಾದ ಪುರುಷ ಎಂದೆನಿಸುವುದಿಲ್ಲ.
ತ್ಯಕ್ತ್ವಾ ನಾನಾವಿಧಾನ್ ಭೋಗಾನ್ ಪ್ರಾಪ್ತಾನಾಂ ಪರಮಾಂ ಗತಿಮ್ |
ಅಪೀದಾನೀಂ ಸುಯುದ್ಧೇನ ಗಚ್ಛೇಯಂ ತತ್ಸಲೋಕತಾಮ್ ||37||
ಹಿಂದೆ ಎಲ್ಲಾ ಸುಖಭೋಗಗಳನ್ನೂ ತ್ಯಜಿಸಿ ಮರಣಹೊಂದಿ ಉತ್ತಮ ಸ್ಥಾನವನ್ನು ಪಡೆದಿರುವವರ ಲೋಕವನ್ನು ನಾನಿಂದು ಒಳ್ಳೆಯ ಯುದ್ಧದ ಮೂಲಕ ಹೊಂದುವೆನು.
ಶೂರಾಣಾಮಾರ್ಯವೃತ್ತಾನಾಂ ಸಂಗ್ರಾಮೇಷ್ವನಿವರ್ತಿನಾಮ್ |
ಧೀಮತಾಂ ಸತ್ಯಸಂಧಾನಾಂ ಸರ್ವೇಷಾಂ ಕ್ರತುಯಾಜಿನಾಮ್ ||38||
ಶಸ್ತ್ರಾವಭೃಥಮಾಪ್ತಾನಾಂ ಧ್ರುವೋ ವಾಸಸ್ತ್ರಿವಿಷ್ಟಪೇ ||39||
ಯಾಗ-ಯಜ್ಞಗಳನ್ನು ಮಾಡುತ್ತಾ, ಯುದ್ಧದಲ್ಲಿ ಹೆದರಿ ಹಿಂತಿರುಗದೆ ಇರುವ ಶೂರರ ಹಾಗೂ ಧರ್ಮಶೀಲರಾದ ಧೈರ್ಯಶಾಲಿಗಳಾದ ಸತ್ಯವಂತರಾದ, ಜೀವನದ ಅವಭೃಥವೆನಿಸಿದ ಮರಣವನ್ನು ಯುದ್ಧದಲ್ಲಿ ಶಸ್ತ್ರದಿಂದಲೇ ಹೊಂದಿದ ಎಲ್ಲರಿಗೂ ಸ್ವರ್ಗದಲ್ಲಿ ವಾಸವು ನಿಶ್ಚಿತವಾಗಿದೆ.
ಮುದಾ ನೂನಂ ಪ್ರಪಶ್ಯಂತಿ ಯೋಧಾನಪ್ಸರಸಾಂ ಗಣಾಃ ||40||
ಅಂತಹ ಯೋಧರನ್ನು ಸ್ವರ್ಗದಲ್ಲಿ ಅಪ್ಸರಸ್ತ್ರೀಯರು ಸಂತೋಷದಿಂದ ನೋಡಿಕೊಳ್ಳುತ್ತಾರೆ.
ಪಶ್ಯಂತಿ ನೂನಂ ಪಿತರಃ ಪೂಜಿತಾಃ ಸುರಸಂಸದಿ |
ಅಪ್ಸರೋಭಿಃ ಪರಿವೃತಾ ಮೋದಮಾನಾಸ್ತ್ರಿವಿಷ್ಟಪೇ ||41||
ಇಂತಹ ಯೋಧರು ಸ್ವರ್ಗದಲ್ಲಿ ದೇವತೆಗಳ ಸಭೆಯಲ್ಲಿ ಮಾನಿತರಾಗಿ ಅಪ್ಸರಾಸ್ತ್ರೀಯರೊಡನೆ ಕ್ರೀಡಿಸುವುದನ್ನು ಪಿತೃಗಣಗಳು ನೋಡುತ್ತವೆ.
ಪಂಥಾನಮಮರೈಃ ಪ್ರಾಪ್ತಂ ಶೂರೈಶ್ಚಾಪ್ಯನಿವರ್ತಿಭಿಃ |
ಅಪಿ ತೈಃ ಸಂಗತಂ ಮಾರ್ಗಂ ವಯಮಧ್ಯಾರುಹೇಮಹಿ ||42||
ಪಿತಾಮಹೇನ ವೃದ್ಧೇನ ತಥಾಽಽಚಾರ್ಯೇಣ ಧೀಮತಾ |
ಜಯದ್ರಥೇನ ಕರ್ಣೇನ ತಥಾ ದುಃಶಾಸನಾದಿಭಿಃ ||43||
ದೇವತೆಗಳು ಈಗಾಗಲೇ ಹೊಂದಿರುವ, ಶೂರರಾದ, ಯುದ್ಧದಲ್ಲಿ ಹಿಂತಿರುಗದಿರುವ ಯೋಧರಿಂದ ಪ್ರಾಪ್ತವಾದ ದಾರಿಯನ್ನು ನಾವಿಂದು ತುಳಿಯುವೆವು. ಆ ಮಾರ್ಗವನ್ನು ಪಿತಾಮಹರಾದ ವೃದ್ಧಭೀಷ್ಮಾಚಾರ್ಯರು, ಧೀಮಂತರಾದ ದ್ರೋಣಾಚಾರ್ಯರು, ಜಯದ್ರಥ, ಕರ್ಣ ಹಾಗೂ ದುಃಶಾಸನಾದಿಗಳು ಹೊಂದಿರುತ್ತಾರೆ.
ಘಟಮಾನಾ ಮದರ್ಥೇಽಸ್ಮಿನ್ ಹತಾಃ ಶೂರಾ ಜನಾಧಿಪಾಃ |
ಶೇರತೇ ಲೋಹಿತಾಕ್ತಾಂಗಾಃ ಪೃಥಿವ್ಯಾಂ ಶರವಿಕ್ಷತಾಃ ||44||
ನನಗಾಗಿ ಈ ಯುದ್ಧದಲ್ಲಿ ತೊಡಗಿ ಶೂರರಾದ ರಾಜರೆಲ್ಲರು ಬಾಣದಿಂದ ಹೊಡಿಸಿಕೊಂಡು ರಕ್ತಸಿಕ್ತಶರೀರದೊಂದಿಗೆ ಭೂಮಿಯಲ್ಲಿ ಬಿದ್ದಿದ್ದಾರೆ.
ನಾನಾಶಸ್ತ್ರವೃತಾಃ ಶೂರಾ ಯಥೋಕ್ತಕ್ರತುಯಾಜಿನಃ |
ತ್ಯಕ್ತ್ವಾ ಪ್ರಾಣಾನ್ ಯಥಾ ನ್ಯಾಯಮಿಮೇ ಸಮಿತಿ ಶೇರತೇ ||45||
ವಿವಿಧಶಸ್ತ್ರಧಾರಿಗಳಾದ, ಶಾಸ್ತ್ರೋಕ್ತರೀತಿಯಲ್ಲಿ ಯಾಗ-ಯಜ್ಞಗಳನ್ನು ನಡೆಸುವ ಶೂರರು ನ್ಯಾಯೋಚಿತವಾದ ಯುದ್ಧವನ್ನು ಮಾಡಿ ಪ್ರಾಣವನ್ನು ಕಳೆದುಕೊಂಡು ಸತ್ತು ಬಿದ್ದಿದ್ದಾರೆ.
ಸ್ವೈರಂ ಚ ಚರಿತಃ ಪಂಥಾ ದುರ್ಗಮೋ ಹಿ ಪುನರ್ಭವೇತ್ |
ಸಂಪತದ್ಭಿರ್ಮಹಾವೇಗೈಃ ಇತೋ ಯಾಸ್ಯಾಮಿ ಸದ್ಗತಿಮ್ ||46||
ಈ ವೀರಸ್ವರ್ಗದ ಮಾರ್ಗವನ್ನು ಯೋಧರು ಯಥೇಚ್ಛವಾಗಿ ನಿರ್ಮಿಸಿದ್ದಾರೆ. ಅಸಂಖ್ಯಾತ ವೀರರು ಮರಣಹೊಂದಿ ವೇಗವಾಗಿ ಆ ಮಾರ್ಗದಲ್ಲಿ ಸಂಚರಿಸುತ್ತಿರುವ ಕಾರಣ ಆ ಮಾರ್ಗದಲ್ಲಿ ಹೋಗುವುದೂ ಕಷ್ಟಸಾಧ್ಯವಾಗಿದೆ. ನಾನೂ ಕೂಡ ಇಲ್ಲಿಂದ ಒಳ್ಳೆಯ ಗತಿಯನ್ನು ಹೊಂದುವೆನು.
ಯೇ ಮದರ್ಥಂ ಹತಾಃ ಶೂರಾಃ ತೇಷಾಂ ಕೃತಮನುಸ್ಮರನ್ |
ಋಣಂ ತತ್ಪ್ರತಿಮುಂಚಾನೋ ನ ರಾಜ್ಯೇ ಮನ ಆದಧೇ ||47||
ಯಾವ ಶೂರರು ನನಗಾಗಿ ಸತ್ತಿದ್ದಾರೆಯೋ ಅಂತಹವರ ಕಾರ್ಯವನ್ನು ನೆನೆಸುತ್ತಾ, ಅವರ ಋಣವನ್ನು ತೀರಿಸುತ್ತಾ ನಾನು ರಾಜ್ಯವನ್ನು ಬಯಸುವುದಿಲ್ಲ.
ಘಾತಯಿತ್ವಾ ವಯಸ್ಯಾಂಶ್ಚ ಭ್ರಾತೄನಥ ಪಿತಾಮಹಾನ್ |
ಜೀವಿತಂ ಪರಿರಕ್ಷೇಯಂ ಲೋಕೋ ಮಾಂ ಗರ್ಹಯೇದ್ ಧ್ರುವಮ್ ||

ಒಂದು ವೇಳೆ ನಾನು ಮಿತ್ರರನ್ನು, ಸಹೋದರರನ್ನು, ಪಿತಾಮಹರನ್ನು ಸಾಯಿಸಿ ನನ್ನನ್ನು ಮಾತ್ರ ರಕ್ಷಿಸಿಕೊಂಡರೆ ಲೋಕದ ಜನರು ಖಂಡಿತ ನನ್ನನು ನಿಂದಿಸುತ್ತಾರೆ.
ಕೀದೃಶಂ ಚ ಭವೇದ್ ರಾಜ್ಯಂ ಮಮ ಹೀನಸ್ಯ ಬಂಧುಭಿಃ |
ಸಖಿಭಿಶ್ಚ ಸುಹೃದ್ಭಿಶ್ಚ ಪ್ರಣಿಪತ್ಯ ಚ ಪಾಂಡವಮ್ ||49||
ಬಂಧುಗಳನ್ನೂ, ಸ್ನೇಹಿತರನ್ನೂ ಸಖರನ್ನೂ ಕಳೆದುಕೊಂಡು, ಪಾಂಡವರಿಗೆ ಶರಣಾಗಿ ನನಗೆ ಪ್ರಾಪ್ತವಾಗುವ ರಾಜ್ಯವು ಎಂತಹದ್ದು?
ಸೋಽಹಮೇತಾದೃಶಂ ಕೃತ್ವಾ ಜಗತೋಽಸ್ಯ ಪರಾಭವಮ್ |
ಸುಯುದ್ಧೇನ ಹತಃ ಸ್ವರ್ಗಂ ಪ್ರಾಪ್ಸ್ಯಾಮಿ ನ ತದನ್ಯಥಾ ||50||
ಅಂತಹ ನಾನು ಈ ಜಗತ್ತನ್ನು ಕಡೆಗಣಿಸಿ ಚೆನ್ನಾಗಿ ಯುದ್ಧವನ್ನು ಮಾಡಿ ಸತ್ತು ವೀರಸ್ವರ್ಗವನ್ನು ಹೊಂದುವೆನು. ಇದಕ್ಕೆ ಹೊರತಾಗಿ ಬೇರೇನನ್ನೂ ಮಾಡಲಾರೆ.
ಸಂಜಯಃ
ಏವಂ ದುರ್ಯೋಧನೇನೋಕ್ತಂ ಸರ್ವಂ ಸಂಪೂಜ್ಯ ತದ್ವಚಃ |
ಸಾಧು ಸಾಧ್ವಿತಿ ರಾಜಾನಂ ಕ್ಷತ್ರಿಯಾಃ ಸಂಬಭಾಷಿರೇ ||51||
ಸಂಜಯ ಹೀಗೆ ದುರ್ಯೋಧನನ ಮಾತನ್ನು ಕೇಳಿ ಕೊಂಡಾಡಿದ ಕ್ಷತ್ರಿಯರು ಅವನನ್ನು ``ಬಹಳ ಸಾಧುವಾಗಿದೆ'' ಎಂದು ಚೆನ್ನಾಗಿ ಹೊಗಳುತ್ತಾರೆ.
ಪರಾಜಯಮಶೋಚಂತಃ ಕೃತಚಿತ್ತಾಶ್ಚ ವಿಕ್ರಮೇ |
ಸರ್ವೇ ಸುನಿಶ್ಚಿತಾ ಯೋದ್ಧುಮುದಗ್ರಮನಸೋಽಭವನ್ ||52||
ಯುದ್ಧದ ಸೋಲಿನಿಂದ ದುಃಖಿತರಾಗದೆ ಜಯದಲ್ಲಿ ದೃಢನಿಶ್ಚಯವುಳ್ಳವರಾಗಿ ಎಲ್ಲರೂ ಯುದ್ಧಮಾಡಲು ಉತ್ಸುಕವಾದ ಮನಸ್ಸುಳ್ಳವರಾದರು.
ಸಮಾಶ್ವಾಸ್ಯ ಚ ರಾಜಾನಂ ಸರ್ವೇ ಯುದ್ಧಾಭಿನಂದಿನಃ |
ಉದಗ್ದ್ವಿಯೋಜನಂ ಗತ್ವಾ ಪ್ರತ್ಯತಿಷ್ಠಂತ ಕೌರವಾಃ ||53||
ಎಲ್ಲಾ ಕೌರವರೂ ಯುದ್ಧವನ್ನೇ ಶ್ಲಾಘಿಸುತ್ತಾ ರಾಜ ದುರ್ಯೋಧನನನ್ನು ಸಮಾಧಾನಪಡಿಸಿ, ಉತ್ತರದಿಕ್ಕಿನಲ್ಲಿ ಎರಡು ಯೋಜನದೂರವನ್ನು ಕ್ರಮಿಸಿ ಡೇರೆಯನ್ನು ಹಾಕಿಕೊಂಡರು.
ಆಕಾಶೇ ವಿದ್ರುಮೇ ಪುಣ್ಯೇ ಪ್ರಸ್ಥೇ ಹಿಮವತಃ ಶುಭೇ |
ಅರುಣಾಂ ಸರಸ್ವತೀಂ ಪ್ರಾಪ್ಯ ಪಪುಃ ಸಸ್ನುಶ್ಚ ತೇ ಜಲಮ್ ||54||
ಮರಗಳಿಲ್ಲದ, ಹಿಮಾಲಯದ ಸಮತಟ್ಟಾದ ಪ್ರದೇಶದಲ್ಲಿ ಮಂಗಳಮಯವಾದ ಶುಭ್ರಾಕಾಶದಿಂದ ಆಚ್ಛಾದಿತವಾದ ಸ್ಥಳದಲ್ಲಿ ಕೆಂಪಾದ ನೀರನ್ನು ಹೊಂದಿದ ಸರಸ್ವತೀನದಿಯನ್ನು ಹೊಂದಿ ನೀರನ್ನು ಕುಡಿದರು, ಸ್ನಾನವನ್ನು ಮಾಡಿದರು.
ತವ ಪತ್ರಾಃ ಕೃತೋತ್ಸಾಹಾಃ ಪರ್ಯವರ್ತಂತ ಭಾರತ |
ಪರಾಜಯಮಶೋಚಂತಃ ಕೃತಚಿತ್ತಾಶ್ಚ ಯೋಧನೇ ||55||
ಭಾರತ! ನಿನ್ನ ಮಕ್ಕಳು ಉತ್ತಮ ಉತ್ಸಾಹದಿಂದ, ಸೋಲಿನಿಂದ ಧೃತಿಗೆಡದೆ ಯುದ್ಧದಲ್ಲಿ ದೃಢನಿಶ್ಚಯವುಳ್ಳವರಾಗಿ ಸಂಚರಿಸಿದರು.
ಪರ್ಯವಸ್ಥಾಪ್ಯ ಚಾತ್ಮಾನಮನ್ಯೋನ್ಯೇನ ಪುನಃ ಪುನಃ |
ಸರ್ವೇ ರಾಜನ್ ನ್ಯವರ್ತಂತ ಕ್ಷತ್ರಿಯಾಃ ಕಾಲಚೋದಿತಾಃ ||56||
ರಾಜನೇ! ಕಾಲದಿಂದ ಪ್ರೇರಿತರಾಗಿ ಪರಸ್ಪರವಾಗಿ ಮತ್ತೆ ಮತ್ತೆ ಹುರಿದುಂಬಿಸಿಕೊಳ್ಳುತ್ತಾ ಎಲ್ಲರೂ ಯುದ್ಧಭೂಮಿಗೆ ಹಿಂತಿರುಗಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಪಂಚಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ದುರ್ಯೋಧನನು ಸೇನಾಧಿಪತ್ಯದ ಬಗ್ಗೆ ವಿಚಾರ ಮಾಡಿದಾಗ
ಅಶ್ವತ್ಥಾಮನು ಶಲ್ಯನನ್ನು ಸೂಚಿಸಿದನು. ಆ ಪ್ರಕಾರ ದುರ್ಯೋಧನನು ಶಲ್ಯನನ್ನು ಸೇನಾಪತಿಯಾಗಲು ಪ್ರಾರ್ಥಿಸಿದನು.
ಸಂಜಯಃ
ತಥಾ ಹಿಮವತಃ ಪ್ರಸ್ಥೇ ಸರ್ವೇ ಯುದ್ಧಾಭಿನಂದಿನಃ |
ಸರ್ವೇ ಏವ ಮಹಾರಾಜ ಯೋಧಾಸ್ತತ್ರ ಸಮಾಗತಾಃ ||1||
ಸಂಜಯ ಮಹಾರಾಜ! ಹಿಮಾಲಯದ ಸಮತಟ್ಟಾದ ಪ್ರದೇಶದಲ್ಲಿ ಯುದ್ಧದಿಂದಲೇ ಆನಂದವನ್ನು ಪಡೆಯುವ ಎಲ್ಲಾ ಯೋಧರೂ ಬಂದು ಸೇರಿದರು.
ಶಲ್ಯಶ್ಚ ಚಿತ್ರಸೇನಶ್ಚ ಶಕುನಿಶ್ಚ ಮಹಾರಥಃ |
ಅಶ್ವತ್ಥಾಮಾ ಕೃಪಶ್ಚೈವ ಕೃತವರ್ಮಾ ಚ ಸಾತ್ವತಃ ||2||
ಸುಷೇಣೋಽರಿಷ್ಟಸೇನಶ್ಚ ಧೃತಸೇನಶ್ಚ ವೀರ್ಯವಾನ್ |
ಜಯತ್ಸೇನಶ್ಚ ರಾಜಾನಃ ತೇ ರಾತ್ರಿಮುಷಿತಾಸ್ತತಃ ||3||
ಶಲ್ಯ, ಚಿತ್ರಸೇನ, ಮಹಾರಥನಾದ ಶಕುನಿ, ಅಶ್ವತ್ಥಾಮ, ಕೃಪ, ಸಾತ್ವತಕುಲೋತ್ಪನ್ನನಾದ ಕೃತವರ್ಮ, ಸುಷೇಣ, ಅರಿಷ್ಟಸೇನ, ವೀರನಾದ ಧೃತಸೇನ, ಜಯತ್ಸೇನ, ಮೊದಲಾದ ರಾಜರು ರಾತ್ರಿಯಲ್ಲಿ ಅಲ್ಲಿಯೇ ತಂಗಿದರು.

ರಣೇ ಕರ್ಣೇ ಹತೇ ವೀರೇ ತ್ರಾಸಿತಾ ಜಿತಕಾಶಿಭಿಃ |
ನಾಲಭನ್ ಶರ್ಮ ತೇ ಪುತ್ರಾ ಹಿಮವಂತಮೃತೇ ಗಿರಿಮ್ ||4||
ವೀರನಾದ ಕರ್ಣನು ಯುದ್ಧದಲ್ಲಿ ಮಡಿದ ಮೇಲೆ, ಜಯ ಪಡೆಯುವ ಇಚ್ಛೆಯುಳ್ಳ ಪಾಂಡವರಿಂದ ಕಷ್ಟಕ್ಕೊಳಗಾದ ದುರ್ಯೋಧನನನ್ನು ಹೊರತುಪಡಿಸಿ ಉಳಿದ ನಿನ್ನ ಮಕ್ಕಳು ಇತರ ಕೆಲವು ಭಟರೊಡನೆ ಹಿಮಾಲಯ ಪರ್ವತದಲ್ಲಿ ವಾಸಿಸುತ್ತಿದ್ದಾರೆ. ಹಿಮವದ್ಗಿರಿಯಲ್ಲಿ ಅಲ್ಲದೆ ಬೇರೆ ಕಡೆ ನೆಮ್ಮದಿಯನ್ನು ಕಾಣದಾದರು. (ಅಂತಹವರನ್ನು ಕರೆತರಲು ದುರ್ಯೋಧನನು ಅಲ್ಲಿಗೆ ಹೋದ ಎಂದು ಅಭಿಪ್ರಾಯ.)
ತೇಽಬ್ರುವನ್ ಸಹಿತಾಸ್ತತ್ರ ರಾಜಾನಂ ಸೈನ್ಯಸನ್ನಿಧೌ |
ಕೃತಯತ್ನಾ ರಣೇ ರಾಜನ್ ಸಂಪೂಜ್ಯ ವಿಧಿವದ್ ತದಾ ||5||
ರಾಜನೇ! ಆಗ ಅಂತಹವರೆಲ್ಲಾ ಸೇರಿ ಸೈನ್ಯದ ಎದುರಿನಲ್ಲಿ ವಿಧಿವತ್ತಾಗಿ ಪ್ರಯತ್ನಪೂರ್ವಕ ರಾಜ ದುರ್ಯೋಧನನಿಗೆ ಸತ್ಕಾರವನ್ನು ಮಾಡಿ ಹೀಗೆ ಹೇಳುತ್ತಾರೆ.
ಸೈನಿಕಾಃ
ಕೃತ್ವಾ ಸೇನಾಪ್ರಣೇತಾರಂ ಪರಾಂಸ್ತ್ವಂ ಯೋದ್ಧುಮರ್ಹಸಿ ||6||
ಯೇನಾಭಿಗುಪ್ತಾ ಯಾಸ್ಯಾಮೋ ಜಯೇಮಾಸುಹೃದೋ ವಯಮ್ ||
ಸೈನಿಕರು ನೀನು ಸೇನಾಧಿಪತಿಯನ್ನು ನೇಮಿಸಿ ಪರರೊಡನೆ ಯುದ್ಧಮಾಡುವುದು ಯೋಗ್ಯವಾಗಿದೆ. ಅಂತಹ ಸೇನಾಧಿಪತಿಯ ರಕ್ಷಣೆಯಲ್ಲಿ ನಾವು ಯುದ್ಧಕ್ಕೆ ತೆರಳುವೆವು. ಹಾಗೂ ನಾವು ಶತ್ರುಗಳನ್ನು ಸೋಲಿಸಿ ಜಯವನ್ನು ಸಂಪಾದಿಸುವೆವು.
ಸಂಜಯಃ
ತತೋ ದುರ್ಯೋಧನಃ ಸ್ಥಿತ್ವಾ ರಣೇ ರಥವರೋತ್ತಮೇ |
ಸರ್ವಸತ್ತ್ವವಿಭಾಗಜ್ಞಮಂತಕಪ್ರತಿಮಂ ರಣೇ ||8||
ಸ್ವಾಂಗಪ್ರಚ್ಛನ್ನಶಿರಸಂ ಕಂಬುಗ್ರೀವಂ ಪ್ರಿಯಂವದಮ್ |
ವ್ಯಾಕೋಚಪದ್ಮಾಭಮುಖಂ ವ್ಯಾಘ್ರಾಸ್ಯಂ ಮೇರುಗೌರವಮ್ ||9||
ಶಂಭೋರ್ವೃಷಸ್ಯ ಸದೃಶಂ ಸ್ಕಂಧನೇತ್ರಗತಿಸ್ವರೈಃ |
ಪುಷ್ಟಶ್ಲಿಷ್ಟಾಯತಭುಜಂ ಸುವಿಸ್ತೀರ್ಣೋರಸಂ ಶುಭಮ್ ||10||
ಜವೇ ಬಲೇ ಚ ಸದೃಶಮರುಣಾನುಜವಾತಯೋಃ |
ಆದಿತ್ಯಸ್ಯ ತ್ವಿಷಾ ತುಲ್ಯಂ ಬುದ್ಧ್ಯಾ ಚೋಶನಸಾ ಸಮಮ್ ||11||
ಕಾಂತಿರೂಪಮುಖೈಶ್ವರ್ಯೈಃ ತ್ರಿಭಿಶ್ಚಂದ್ರಮಸೋಪಮಮ್ |
ಕಾಂಚನೋಪಲಸಂಘಾತಸದೃಶಂ ಶ್ಲಿಷ್ಟಸಂಧಿಕಮ್ ||12||
ಸುವೃತ್ತೋರುಕಟೀಜಂಘಂ ಸುಪಾದಂ ಸ್ವಂಗುಲೀಯಕಮ್ |
ಸ್ಮೃತ್ವಾ ಸ್ಮೃತ್ವೈವ ಚ ಗುಣಾನ್ ಧಾತ್ರಾ ಯತ್ನೇನ ನಿರ್ಮಿತಮ್||13||
ಸರ್ವಲಕ್ಷಣಸಂಪೂರ್ಣಂ ನಿಪುಣಂ ಶ್ರುತಿಸಾಗರಮ್ |
ಜೇತಾರಂ ತರಸಾಽರೀಣಾಮಜಯ್ಯಂ ಶತ್ರುಭಿರ್ಬಲಾತ್ ||14||
ಪ್ರಯೋಗಬಲಸಂಹಾರಪ್ರಾಯಶ್ಚಿತ್ತಂ ಸುಮಂಗಲಮ್ |
ಪ್ರಯೋಗವಿನಿಯೋಗೌ ಚ ಸ್ಮೃತಿಂ ಯಸ್ಯ ಗುಣಾನ್ ವಿದುಃ ||15||
ದಶಾಂಗಂ ಯಶ್ಚತುಷ್ಪಾದಮಿಷ್ವಸ್ತ್ರಂ ವೇದ ತತ್ತ್ವದಃ |
ಸಾಂಗಾಂಶ್ಚ ಚತುರೋ ವೇದಾನ್ ಸಮ್ಯಗಾಖ್ಯಾನಪಂಚಮಾನ್||16||
ಆರಾಧ್ಯ ತ್ರ್ಯಮ್ಬಕಂ ಯತ್ನಾದ್ ವ್ರತೈರುಗ್ರೈರ್ಮಹಾತಪಾಃ |
ಲಬ್ಧವಾನಸ್ತ್ರಜಾಲಂ ಚ ಶಿಕ್ಷಾಂ ಚ ಶಶಿಶೇಖರಾತ್ ||17||
ಅಯೋನಿಜಾಯಾಮುತ್ಪನ್ನೋ ದ್ರೋಣೇನಾಯೋನಿಜೇನ ಯಃ |
ತಮಪ್ರತಿಮಕರ್ಮಾಣಂ ರೂಪೇಣಾಪ್ರತಿಮಂ ಭುವಿ ||18||
ಸಂಜಯ ತದನಂತರ ದುರ್ಯೋಧನನು ರಣರಂಗದಲ್ಲಿ ಉತ್ತಮವಾದ ರಥದಲ್ಲಿ ನಿಂತು ತನಗೆ ಸಮಾನನಾದ ಅಶ್ವತ್ಥಾಮನ ಸಮೀಪಕ್ಕೆ ಬರುತ್ತಾನೆ. ಅಶ್ವತ್ಥಾಮನು ಎಲ್ಲಾ ಪ್ರಾಣಿಗಳ ಸಾಮರ್ಥ್ಯವಿಭಾಗವನ್ನು ಬಲ್ಲವನು. ಯುದ್ಧದಲ್ಲಿ ಯಮನಿಗೆ ಸದೃಶನಾದವನು. ತನ್ನ ತಲೆಗೂದಲುಗಳಿಂದ ತಲೆಯನ್ನು ಮುಚ್ಚಿಕೊಂಡಿದ್ದಾನೆ. ಶಂಖದಂತೆ ಸುಂದರವಾದ ಕುತ್ತಿಗೆಯುಳ್ಳವನು. ವ್ಯಾಘ್ರದಂತೆ ಮುಖವುಳ್ಳವನು. ಮೇರುವಿನಂತೆ ಗಂಭೀರನಾಗಿದ್ದಾನೆ. ಭುಜ, ಕಣ್ಣು, ನಡೆ ಮತ್ತು ಧ್ವನಿಯಲ್ಲಿ ರುದ್ರನ ವಾಹನವಾದ ವೃಷಭಕ್ಕೆ ಸದೃಶನಾದವನು. ದಷ್ಟಪುಷ್ಟವಾದ ನೀಳತೋಳಿನವನು. ಚೆನ್ನಾಗಿ ವಿಸ್ತೃತವಾದ ಎದೆಯುಳ್ಳವನು. ಮಂಗಳಮಯನಾಗಿದ್ದಾನೆ. ವೇಗದಲ್ಲಿಯೂ ಬಲದಲ್ಲಿಯೂ ಗರುಡ ಮತ್ತು ವಾಯುವಿಗೆ ಸಮಾನನಾಗಿದ್ದಾನೆ. ಪ್ರಕಾಶದಲ್ಲಿ ಸೂರ್ಯನಿಗೆ ಸದೃಶನಾಗಿದ್ದಾನೆ. ಶುಕ್ರನಿಗೆ ಸಮಾನವಾದ ಬುದ್ಧಿಶಕ್ತಿಯನ್ನು ಹೊಂದಿದ್ದಾನೆ. ದೇಹದ ಕಾಂತಿ, ಮುಖ ಹಾಗೂ ಐಶ್ವರ್ಯಗಳಿಂದ ಚಂದ್ರನಿಗೆ ಸದೃಶನಾಗಿದ್ದಾನೆ. ಬಂಗಾರದ ಕಲ್ಲುಗಳ ರಾಶಿಯಂತೆ ಪ್ರಕಾಶಿಸುವ ಶರೀರವನ್ನು ಹೊಂದಿದ್ದಾನೆ. ಅಂಗಾಂಗಗಳ ಸಂಧಿಸ್ಥಾನಗಳು ಸುದೃಢವಾಗಿವೆ. ವೃತ್ತಾಕಾರವಾದ ತೊಡೆ, ಸೊಂಟ ಹಾಗೂ ಮೊಣಕಾಲುಗಳು ಇವನದ್ದು. ಸುಂದರವಾದ ಪಾದವುಳ್ಳವನು. ಬೆರಳುಗಳೂ ಸುಂದರವಾಗಿವೆ. ಚತುರ್ಮುಖಬ್ರಹ್ಮನು ಸದ್ಗುಣಗಳನ್ನು ಮತ್ತೆ ಮತ್ತೆ ಜ್ಞಾಪಿಸಿಕೊಂಡು ಪ್ರಯತ್ನಪೂರ್ವಕವಾಗಿ ಅಶ್ವತ್ಥಾಮನ ಶರೀರವನ್ನು ನಿರ್ಮಿಸಿದ್ದಾನೆ. ಶರೀರದ ಸಕಲಶುಭಲಕ್ಷಣಗಳನ್ನು ಹೊಂದಿದ್ದಾನೆ. ಚತುರನಾಗಿದ್ದಾನೆ. ಸಕಲವೇದಗಳನ್ನು ಬಲ್ಲವನಾಗಿದ್ದಾನೆ. ಶತ್ರುಗಳನ್ನು ಕ್ಷಣಮಾತ್ರದಲ್ಲಿ ಸೋಲಿಸಬಲ್ಲ. ಆದರೆ

ಬಲಶಾಲಿಗಳಿಗೂ ಇವನನ್ನು ಗೆಲ್ಲಲು ಸಾಧ್ಯವಿಲ್ಲ. ವ್ರತ, ಪ್ರಾಪ್ತಿ, ಧೃತಿ, ಪುಷ್ಟಿ, ಸ್ಮೃತಿ, ಕ್ಷೇಪ, ಶತ್ರುಭೇದನ, ಚಿಕಿತ್ಸಾ, ಉದ್ದೀಪನ ಮತ್ತು ಕೃಷ್ಟಿ ಎಂಬ ಧನುರ್ವೇದದ ಹತ್ತು ಅಂಗಗಳನ್ನು ಸರಿಯಾಗಿ ಬಲ್ಲವನಾಗಿದ್ದಾನೆ. ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೌತಿಷ, ಕಲ್ಪ ಎಂಬ ಷಡಂಗೋಪೇತವಾದ ಋಗಾದಿ ನಾಲ್ಕು ವೇದಗಳನ್ನು ಮತ್ತು ಇತಿಹಾಸ-ಪುರಾಣರೂಪವಾದ ಐದನೆಯ ವೇದವನ್ನೂ ತಿಳಿದಿರುತ್ತಾನೆ. ಮಹಾತಪಸ್ವಿಯಾದ ಅಶ್ವತ್ಥಾಮನು ಉಗ್ರ ತಪಸ್ಸಿನಿಂದ ರುದ್ರನನ್ನು ಆರಾಧಿಸಿ ಒಲಿಸಿಕೊಂಡು ಶಶಿಶೇಖರನಿಂದ ಅಸ್ತ್ರಸಮೂಹವನ್ನೇ ಪಡೆದಿರುತ್ತಾನೆ. ಅವುಗಳ ಪ್ರಯೋಗದ ಶಿಕ್ಷಣವನ್ನೂ ತಿಳಿದುಕೊಂಡಿದ್ದಾನೆ.

ಪಾರಗಂ ಸರ್ವವಿದ್ಯಾನಾಂ ಗುಣವಂತಮನಿಂದಿತಮ್ |
ತಂ ಸಮೇತ್ಯಾತ್ಮನಸ್ತುಲ್ಯಮಶ್ವತ್ಥಾಮಾನಮಬ್ರವೀತ್ ॥19॥

ಅಯೋನಿಜೆಯಾದ ಕೃಪಿಯಲ್ಲಿ ಅಯೋನಿಜನಾದ ದ್ರೋಣನಿಂದ ಹುಟ್ಟಿರುತ್ತಾನೆ. ಅಸದೃಶವಾದ ಕಾರ್ಯವನ್ನು ಮಾಡುವ ಇವನು ಭೂಮಿಯಲ್ಲಿ ಅಪ್ರತಿಮವಾದ ಸೌಂದರ್ಯವುಳ್ಳವಾಗಿದ್ದಾನೆ. ಸಕಲವಿದ್ಯೆಗಳನ್ನೂ ಚೆನ್ನಾಗಿ ತಿಳಿದುಕೊಂಡಿದ್ದಾನೆ. ಸದ್ಗುಣಭರಿತನಾಗಿದ್ದಾನೆ. ನಿಂದಿತವಾದ ಯಾವ ಅಂಶಗಳೂ ಇವನಲ್ಲಿ ಇಲ್ಲ. ಇಂತಹ ಅಶ್ವತ್ಥಾಮನನ್ನು ಸಮೀಪಿಸಿ ದುರ್ಯೋಧನನು ಹೀಗೆ ಹೇಳುತ್ತಾನೆ.

ದುರ್ಯೋಧನಃ

ಯಂ ಪುರಸ್ಕೃತ್ಯ ಸಹಿತಾ ಯುಧಿ ಜೇಷ್ಯಾಮ ಪಾಂಡವಾನ್ |
ಗುರುಪುತ್ರೋಽದ್ಯ ಸರ್ವೇಷಾಮಸ್ಮಾಕಂ ಪರಮಾ ಗತಿಃ ॥20॥
ಭವಾಂಸ್ತಸ್ಮಾನ್ನಿಯೋಗಾತ್ ತೇ ಕೋಽಸ್ತು ಸೇನಾಪತಿರ್ಮಮ ॥21॥

ದುರ್ಯೋಧನ ಯಾರನ್ನು ಮುಂದಿಟ್ಟುಕೊಂಡು ನಾವೆಲ್ಲಾ ಸೇರಿಕೊಂಡು ಯುದ್ಧದಲ್ಲಿ ಪಾಂಡವರ ಮೇಲೆ ಜಯವನ್ನು ಸಾಧಿಸಿಕೊಳ್ಳುವೆವೋ ಅಂತಹ ಗುರುಪುತ್ರನಾದ ಅಶ್ವತ್ಥಾಮನೇ ಇಂದು ನಮಗೆಲ್ಲಾ ಉತ್ತಮವಾದ ಆಶ್ರಯನಾಗಿದ್ದಾನೆ. ಅಶ್ವತ್ಥಾಮ! ನಿನ್ನ ಆದೇಶದಂತೆ ನನ್ನ ಸೇನಾಧಿಪತಿಯನ್ನಾಗಿ ಯಾರನ್ನು ನೇಮಿಸಲಿ?

ದ್ರೌಣಿಃ

ಅಯಂ ಕುಲೇನ ವೀರ್ಯೇಣ ತೇಜಸಾ ಯಶಸಾ ಶ್ರಿಯಾ |
ಸರ್ವೈರ್ಗುಣೈಃ ಸಮುದಿತಃ ಶಲ್ಯೋ ನೋಽಸ್ತು ಚಮೂಪತಿಃ ॥22॥

ಅಶ್ವತ್ಥಾಮ ಈ ಶಲ್ಯನು ಕುಲದಿಂದ, ವೀರ್ಯದಿಂದ, ತೇಜಸ್ಸಿನಿಂದ, ಕೀರ್ತಿಯಿಂದ, ಸಂಪತ್ತಿನಿಂದ ಹಾಗೂ ಸರ್ವಗುಣಗಳಿಂದ ಉತ್ಕೃಷ್ಟನಾಗಿದ್ದಾನೆ. ಅಂತಹ ಶಲ್ಯನೇ ನಮಗೆ ಸೇನಾಧಿಪತಿಯಾಗಲಿ.

ಭಾಗಿನೇಯಾನ್ ನಿಜಾಂಸ್ತ್ಯಕ್ತ್ವಾ ಕೃತಜ್ಞೋಽಸ್ಮಾನುಪಾಗತಃ |
ಮಹಾಸೇನೋ ಮಹಾಬಾಹುಃ ಮಹಾಸೇನ ಇವಾಪರಃ ॥23॥

ತನ್ನ ತಂಗಿ ಮಾದ್ರಿಯ ಮಕ್ಕಳನ್ನು ಬಿಟ್ಟು ಕೃತಜ್ಞತೆಯಿಂದ ನಿನ್ನ ಪಕ್ಷಕ್ಕೆ ಬಂದಿರುತ್ತಾನೆ ದ್ವಿತೀಯಸ್ಕಂದನ ಹಾಗೆ ಮಹಾಬಾಹುವಾದ ಈತ ಮಹತ್ತಾದ ಸೈನ್ಯವನ್ನು ಹೊಂದಿ ಮುನ್ನಡೆಸುವವನಾಗಿದ್ದಾನೆ.

ತಂ ತು ಸೇನಾಪತಿಂ ಮನ್ಯೇ ನೃಪತಿಂ ನೃಪಸತ್ತಮ |
ಶಕ್ಯಃ ಪ್ರಾಪ್ತುಂ ಜಯೋಽಸ್ಮಾಭಿರ್ದೇವೈಃ ಸ್ಕಂದಮಿವೋರ್ಜಿತಮ್ ॥24॥

ರಾಜಶ್ರೇಷ್ಠನೇ! ಈ ಶಲ್ಯರಾಜನನ್ನೇ ನಾನು ಸೇನಾಧಿಪತಿ ಎಂಬುದಾಗಿ ತಿಳಿಯುತ್ತೇನೆ. ಉತ್ಕೃಷ್ಟನಾದ ಸ್ಕಂದನ ಸೇನಾಧಿಪತ್ಯದಲ್ಲಿ ದೇವತೆಗಳು ಜಯವನ್ನು ಹೊಂದಿದಂತೆ ನಾವೂ ಇವನ ಸೇನಾಧಿಪತ್ಯದಲ್ಲಿ ಜಯವನ್ನು ಗಳಿಸಬಹುದು.

ಸಂಜಯಃ

ತಥೋಕ್ತೇ ದ್ರೋಣಪುತ್ರೇಣ ಸರ್ವ ಏವ ನರಾಧಿಪಾಃ |
ಪರಿವಾರ್ಯ ಸ್ಥಿತಾಃ ಶಲ್ಯಂ ಜಯಶಬ್ದಂ ಚ ಚಕ್ರಿರೇ ॥25॥

ಸಂಜಯ ಅಶ್ವತ್ಥಾಮನು ಹೀಗೆ ಹೇಳಿದ್ದನ್ನು ಕೇಳಿಸಿಕೊಂಡ ಎಲ್ಲ ರಾಜರೂ ಶಲ್ಯನನ್ನು ಸುತ್ತುವರೆದು ನಿಂತುಕೊಂಡು `ಶಲ್ಯನಿಗೆ ಜಯವಾಗಲಿ' ಎಂದು ಹೇಳಿದರು.

ಯುದ್ಧಾಯ ಚ ಮನಶ್ಚಕ್ರುರಾವೇಶಂ ಚ ಪರಂ ಯಯುಃ ॥26॥

ಯುದ್ಧಕ್ಕೆ ಮನಸ್ಸನ್ನು ಸಜ್ಜುಗೊಳಿಸಿ ಬಹಳವಾದ ಯುದ್ಧಾವೇಶವನ್ನು ಹೊಂದಿದರು.

ತತೋ ದುರ್ಯೋಧನಃ ಶಲ್ಯಂ ಭೂಮೌ ಸ್ಥಿತ್ವಾ ರಥೇ ಸ್ಥಿತಮ್ |
ಪ್ರೋವಾಚ ಪ್ರಾಂಜಲಿರ್ಭೂತ್ವಾ ಶಲ್ಯಂ ಭೀಷ್ಮಸಮಂ ರಣೇ ॥27॥

ಅನಂತರ ರಣರಂಗದಲ್ಲಿ ದುರ್ಯೋಧನನು ರಥದಿಂದ ಕೆಳಗಿಳಿದು, ನೆಲದಲ್ಲಿ ನಿಂತುಕೊಂಡು ಯುದ್ಧವಿಷಯದಲ್ಲಿ ಭೀಷ್ಮಾಚಾರ್ಯರಿಗೆ ಸದೃಶನಾದ ಶಲ್ಯನಿಗೆ ಹೀಗೆ ಹೇಳುತ್ತಾನೆ.

ದುರ್ಯೋಧನಃ

ಅಯಂ ಸ ಕಾಲಃ ಸಂಪ್ರಾಪ್ತೋ ಮಿತ್ರಾಣಾಂ ಮಿತ್ರಸತ್ತಮ |
ಯತ್ರ ಮಿತ್ರಮಮಿತ್ರಂ ವಾ ಪರೀಕ್ಷಂತೇ ಬುಧಾ ಜನಾಃ ॥28॥

ದುರ್ಯೋಧನ ಉತ್ತಮ ಮಿತ್ರನೇ! ಯಾವ ಸಂದರ್ಭದಲ್ಲಿ ಜ್ಞಾನಿಗಳು ಯಾರು ಮಿತ್ರರು, ಯಾರು ಮಿತ್ರರಲ್ಲ ಎಂಬುದನ್ನು ನಿಶ್ಚಯಿಸುತ್ತಾರೆಯೋ ಅಂತಹ ಈ ಸಂದರ್ಭವು ಮಿತ್ರರಾದ ನಮಗೆ ಪ್ರಾಪ್ತವಾಗಿದೆ.

ಸ ಭವಾನಸ್ತು ನಃ ಶೂರಃ ಪ್ರಣೇತಾ ವಾಹಿನೀಮುಖೇ ॥29॥

ಶೂರನಾದ ನೀನು ನಮ್ಮ ಸೇನೆಗೆ ಮುಖ್ಯ ನೇತಾರನಾಗಬೇಕು.

ರಣಂ ತು ಯಾತೇ ಭವತಿ ಪಾಂಡವಾ ಮಂದಚೇತಸಃ |

ಭವಿಷ್ಯಂತಿ ಸಹಾಮಾತ್ಯಾಃ ಸಬಲಾ ಅಪಿ ದುರ್ಬಲಾಃ ॥30॥
ನೀನು ಯುದ್ಧಕ್ಕೆ ಹೊರಟರೆ ಪಾಂಡವರು ಮತಿಹೀನರಾಗುತ್ತಾರೆ. ಮಂತ್ರಿಗಳೊಡನೆ ಇದ್ದರೂ, ಸೈನ್ಯವನ್ನು ಹೊಂದಿದ್ದರೂ ದುರ್ಬಲರಾಗುತ್ತಾರೆ.
ಶಲ್ಯಃ
ಯತ್ತು ಮಾಂ ಮನ್ಯಸೇ ರಾಜನ್ ಕುರುರಾಜ ಕರೋಮಿ ತತ್ |
ತ್ವತ್ಪ್ರಿಯಾರ್ಥಂ ಹಿ ಮೇ ಸರ್ವಂ ಪ್ರಾಣಾ ರಾಜ್ಯಂ ಧನಾನಿ ಚ ॥31॥
ಶಲ್ಯ ರಾಜನೇ! ನಾನು ಯಾವ ರೀತಿಯಲ್ಲಿ ಇರಬೇಕೆಂದು ನೀನು ಅಭಿಪ್ರಾಯ ಪಡುತ್ತೀಯೋ ಹಾಗೆಯೇ ನಾನು ಮಾಡುತ್ತೇನೆ. ನನ್ನ ಪ್ರಾಣ, ರಾಜ್ಯ, ಸಂಪತ್ತು ಎಲ್ಲವೂ ನಿನ್ನ ಕ್ಷೇಮಕ್ಕೇನೇ ಇವೆ.
ದುರ್ಯೋಧನಃ
ಸೇನಾಪತ್ಯಂ ತು ವರಯೇ ತ್ವಾಮಹಂ ಮಾತುಲಾತುಲಮ್ |
ಸೋಽಸ್ಮಾನ್ ಪಾಹಿ ಯುಧಾಂ ಶ್ರೇಷ್ಠ ಸ್ಕಂದೋ ದೇವಾನಿವಾಹವೇ ॥
ದುರ್ಯೋಧನ ಮಾವನೇ! ಪರಾಕ್ರಮದಲ್ಲಿ ಅಸದೃಶನಾದ ನಿನ್ನಲ್ಲಿ ಸೇನಾಧಿಪತ್ಯವನ್ನು ವಹಿಸಿಕೊಳ್ಳುವಂತೆ ಕೇಳಿಕೊಳ್ಳುತ್ತೇನೆ. ಯುದ್ಧವಿಶಾರದನೇ! ಸ್ಕಂದನು ದೇವತೆಗಳನ್ನು ಅಸುರಯುದ್ಧದಲ್ಲಿ ಕಾಪಾಡಿದಂತೆ ನೀನು ನಮ್ಮನ್ನು ರಕ್ಷಿಸು.
ಅಭಿಷಿಂಚ(ಚ್ಯ)ಸ್ವ ರಾಜೇಂದ್ರ ದೇವಾನಾಮಿವ ಪಾವಕಿಃ |
ಜಹಿ ಶತ್ರೂನ್ ರಣೇ ವೀರ ಮಹೇಂದ್ರೋ ದಾನವಾನಿವ ॥33॥
ರಾಜೇಂದ್ರನೇ! ಅಗ್ನಿಪುತ್ರನಾದ ಸ್ಕಂದನು ದೇವತೆಗಳಿಂದ ಸೇನಾಧಿಪತ್ಯದಲ್ಲಿ ಅಭಿಷಿಕ್ತನಾದ ಹಾಗೆ ನನ್ನಿಂದ ನೀನು ಅಭಿಷಿಕ್ತನಾಗು. ವೀರನೇ! ಯುದ್ಧದಲ್ಲಿ ದಾನವರನ್ನು ದೇವೇಂದ್ರನು ಸದೆಬಡಿದಂತೆ ಶತ್ರುಗಳನ್ನು ಸಂಹರಿಸು.''
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಪ್ರಭಾತಾಯಾಂ ತು ಶರ್ವರ್ಯಾಂ ಗುರುಪುತ್ರಾನುಮೋದಿತಃ |
ಶಲ್ಯಂ ಸೇನಾಪತಿಂ ಕೃತ್ವಾ ಯೋದ್ಧುಂ ದುರ್ಯೋಧನೋಽಭ್ಯಯಾತ್ ॥
ಆ ರಾತ್ರಿ ಬೆಳಗಾದಾಗ ದುರ್ಯೋಧನ ಅಶ್ವತ್ಥಾಮನ ಸಮ್ಮತಿ ಪಡೆದು ಶಲ್ಯನನ್ನು ಸೇನಾಪತಿಯನ್ನಾಗಿ ಮಾಡಿ ಯುದ್ಧ ಮಾಡಲು ಹೊರಟನು.
* * * * *
ಏಳನೆಯ ಅಧ್ಯಾಯ
ದುರ್ಯೋಧನನು ಶಲ್ಯನನ್ನು ಸೇನಾಪತಿಯನ್ನಾಗಿ ನೇಮಿಸುವುದು.
ಶಲ್ಯನನ್ನು ವಧಿಸುವ ಬಗ್ಗೆ ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುವುದು.
ಸಂಜಯಃ
ಏತಚ್ಛ್ರುತ್ವಾ ವಚೋ ರಾಜ್ಞೋ ಮದ್ರರಾಜಃ ಪ್ರತಾಪವಾನ್ |
ದುರ್ಯೋಧನಂ ತದಾ ರಾಜನ್ನಿದಂ ವಚನಮಬ್ರವೀತ್ ॥1॥
ಸಂಜಯ ರಾಜನೇ! ಪ್ರತಾಪಶಾಲಿಯಾದ ಮದ್ರರಾಜ ಶಲ್ಯನು ರಾಜ ದುರ್ಯೋಧನನ ಈ ಮಾತನ್ನು ಕೇಳಿದಾಗ ದುರ್ಯೋಧನನನ್ನು ಕುರಿತು ಈ ಮಾತನ್ನು ಹೇಳುತ್ತಾನೆ.
ಶಲ್ಯಃ
ದುರ್ಯೋಧನ ಮಹಾಬಾಹೋ ಶೃಣು ವಾಕ್ಯಮರಿಂದಮ |
ಯಾವೇತೌ ಮನ್ಯಸೇ ಕೃಷ್ಣೌ ರಥಸ್ಥೌ ರಥಿನಾಂ ವರೌ |
ನ ಮೇ ತುಲ್ಯಾವುಭಾವೇತೌ ಬಾಹುವೀರ್ಯೇ ಕಥಂಚನ ॥2॥
ಶಲ್ಯ ಶತ್ರುದಮನನಾದ ದುರ್ಯೋಧನನೇ! ಮಹಾಬಾಹೋ! ಈ ಮಾತನ್ನು ಕೇಳು. ರಥದಲ್ಲಿ ಇರುವ ಈ ಯಾವ ಕೃಷ್ಣಾರ್ಜುನರನ್ನು ರಥಿಗಳಲ್ಲೇ ಶ್ರೇಷ್ಠರು ಎಂಬುದಾಗಿ ತಿಳಿದುಕೊಂಡಿದ್ದೀಯೋ, ಅವರಿಬ್ಬರೂ ಯಾವ ರೀತಿಯಲ್ಲಿಯೂ ನನ್ನ ಭುಜಬಲಕ್ಕೆ ಸಮಾನರಾಗಲಾರರು.
ಉದ್ಯತಾಂ ಪೃಥಿವೀಂ ಸರ್ವಾಂ ಸಸುರಾಸುರಮಾನವಾನ್ |
ಯೋಧಯೇಯಂ ರಣಮುಖೇ ಸಂಕ್ರುದ್ಧಃ ಕಿಮು ಪಾಂಡವಾನ್ ॥3॥
ದೇವತೆಗಳು, ದಾನವರು ಹಾಗೂ ಮಾನವರನ್ನು ಸೇರಿಸಿಕೊಂಡು ಇಡೀ ಭೂಮಂಡಲವಾಸಿಗಳೂ ಎದ್ದುಬಂದರೂ ರಣರಂಗದಲ್ಲಿ ನಾನು ಕ್ರೋಧಾವೇಶದಿಂದ ಯುದ್ಧ ಮಾಡಬಲ್ಲೆನು. ಪಾಂಡವರು ಏನು?
ವಿಜೇಷ್ಯೇ ಚ ರಣೇ ಪಾರ್ಥಾನ್ ಸೋಮಕಾಂಶ್ಚ ಸಮಾಗತಾನ್ ॥4॥
ಯುದ್ಧದಲ್ಲಿ ಬರುವ ಪಾಂಡವರನ್ನೂ ಸೋಮಕರನ್ನೂ ಗೆಲ್ಲುತ್ತೇನೆ.
ಅಹಂ ಸೇನಾಪ್ರಣೇತಾ ವೈ ಭವಿಷ್ಯಾಮಿ ನ ಸಂಶಯಃ |
ತಂ ಚ ವ್ಯೂಹಂ ವಿಧಾಸ್ಯಾಮಿ ನ ಕರಿಷ್ಯಂತಿ ಯಂ ಪರೇ ॥5॥

ನಾನು ಸೇನಾಧಿಪತಿಯಾಗುತ್ತೇನೆ. ಇದರಲ್ಲಿ ಸಂಶಯವಿಲ್ಲ. ಬೇರೆ ಯಾರೂ ನಿರ್ಮಿಸದೇ ಇರುವ ಸೇನಾವ್ಯೂಹವನ್ನು ನಾನು ರಚಿಸುತ್ತೇನೆ.
ಅದ್ಯೈವಾಹಂ ರಣೇ ಸರ್ವಾನ್ ಪಾಂಚಾಲಾನ್ ಸಹ ಪಾಂಡವೈಃ |
ನಿಹನಿಷ್ಯಾಮಿ ರಾಜೇಂದ್ರ ಸ್ವರ್ಗಂ ಯಾಸ್ಯಾಮಿ ವಾ ಹತಃ ||6||
ರಾಜೇಂದ್ರ! ರಣರಂಗದಲ್ಲಿ ಈ ದಿನವೇ ನಾನು ಪಾಂಚಾಲರನ್ನೂ, ಪಾಂಡವರನ್ನೂ ನಾಶಮಾಡುತ್ತೇನೆ. ಅಥವಾ ನಾನೇ ಯುದ್ಧದಲ್ಲಿ ಪ್ರಾಣಕಳೆದುಕೊಂಡು ವೀರಸ್ವರ್ಗಕ್ಕೆ ಹೋಗುತ್ತೇನೆ.
ಅದ್ಯ ಪಶ್ಯಂತು ಮಾಂ ಲೋಕಾ ವಿಚರಂತಮಭೀತವತ್ |
ಅದ್ಯ ಪಾಂಡುಸುತಾಃ ಸರ್ವೇ ವಾಸುದೇವೋಽಥ ಸಾತ್ಯಕಿಃ ||7||
ಯಾವುದೇ ಭಯವಿಲ್ಲದೆ ರಣರಂಗದಲ್ಲಿ ಸಂಚರಿಸುವ ನನ್ನನ್ನು ಪಾಂಡವರು, ವಾಸುದೇವ, ಸಾತ್ಯಕಿ ಮೊದಲಾದ ಎಲ್ಲರೂ ನೋಡುವಂತಾಗಲಿ.
ಪಾಂಚಾಲಾಶ್ಚೇದಯಶ್ಚೈವ ದ್ರೌಪದೇಯಾಶ್ಚ ಸರ್ವಶಃ |
ಧೃಷ್ಟದ್ಯುಮ್ನಃ ಶಿಖಂಡೀ ಚ ಸರ್ವೇ ಚಾಪಿ ಪ್ರಭದ್ರಕಾಃ ||8||
ವಿಕ್ರಮಂ ಮಮ ಪಶ್ಯಂತು ಧನುಷಶ್ಚ ಮಹದ್ಬಲಮ್ |
ಲಾಘವಂ ಚಾಸ್ತ್ರವೀರ್ಯಂ ಚ ಭುಜಯೋಶ್ಚ ಬಲಂ ಯುಧಿ ||9||
ಯುದ್ಧದಲ್ಲಿ ಪಾಂಚಾಲರು, ಚೇದಿದೇಶದ ಯೋಧರು, ದ್ರೌಪದಿಯ ಮಕ್ಕಳು, ಧೃಷ್ಟದ್ಯುಮ್ನ, ಶಿಖಂಡೀ, ಪ್ರಭದ್ರಕರು ಇವರೆಲ್ಲರೂ ನನ್ನ ಪರಾಕ್ರಮವನ್ನೂ, ಮಹಾಬಲವನ್ನೂ, ಲಾಘವಾದಿ ಐಶ್ವರ್ಯವನ್ನೂ, ಅಸ್ತ್ರಸಾಮರ್ಥ್ಯವನ್ನೂ, ಭುಜಬಲವನ್ನೂ ನೋಡಲಿ.
ಅದ್ಯ ಪಶ್ಯಂತು ಮೇ ಪಾರ್ಥಾಃ ಸಿದ್ಧಾಶ್ಚ ಸಹ ಚಾರಣೈಃ |
ಯಾದೃಶಂ ಮೇ ಬಲಂ ಬಾಹ್ವೋಃ ಸಂಪದಸ್ತ್ರೇಷು ಯಾ ಚ ಮೇ ||10||
ಪಾರ್ಥರು, ಸಿದ್ಧರು, ಚಾರಣರು ನನ್ನ ಬಾಹುಗಳಲ್ಲಿ ಎಂತಹ ಬಲವಿದೆ, ನನ್ನ ಅಸ್ತ್ರಸಂಪತ್ತು ಎಂತಹದ್ದು ಎಂಬುದನ್ನು ನೋಡಲಿ.
ಅದ್ಯ ಮೇ ವಿಕ್ರಮಂ ದೃಷ್ಟ್ವಾ ಪಾಂಡವಾನಾಂ ಮಹಾರಥಾಃ |
ಪ್ರತೀಕಾರಪರಾ ಭೂತ್ವಾ ಚೇಷ್ಟಂತಾಂ ವಿವಿಧಾಃ ಕ್ರಿಯಾಃ ||11||
ಇವತ್ತು ಪಾಂಡವರ ಸೈನ್ಯದ ಮಹಾರಥರು ನನ್ನ ವಿಕ್ರಮವನ್ನು ನೋಡಿ ಅದಕ್ಕೆ ಪ್ರತಿಯುದ್ಧ ಮಾಡಲು ಬೇಕಾದ ಬೇರೆ ಬೇರೆ ಕ್ರಿಯೆಗಳನ್ನು ಕೈಗೊಳ್ಳಲಿ.
ಅದ್ಯ ಸೈನ್ಯಾನಿ ಪಾಂಡೂನಾಂ ದ್ರಾವಯಿಷ್ಯೇ ಸಮಂತತಃ |
ಭೀಷ್ಮದ್ರೋಣಾವತಿ ವಿಭೋ ಸೂತಪುತ್ರಂ ಚ ಸಂಯುಗೇ ||12||
ವಿಭುವೇ! ಇಂದು ನಾನು ಭೀಷ್ಮ-ದ್ರೋಣ ಹಾಗೂ ಕರ್ಣರು ಮಾಡಿದ್ದಕ್ಕಿಂತಲೂ ಅಧಿಕವಾದ ರೀತಿಯಲ್ಲಿ ಪಾಂಡವರ ಸೇನೆಯನ್ನು ಎಲ್ಲಾ ದಿಕ್ಕುಗಳಿಂದಲೂ ಓಡಿಸುತ್ತೇನೆ.
ವಿಚರಿಷ್ಯೇ ರಣಮುಖೇ ಪ್ರಿಯಾರ್ಥಂ ತವ ಕೌರವ |
ಇತಿ ಸತ್ಯಂ ಬ್ರವೀಮ್ಯೇತದ್ ದುರ್ಯೋಧನ ನ ಸಂಶಯಃ ||13||
ಹೇ ಕೌರವ! ನಿನ್ನ ಸಂತೋಷಕ್ಕಾಗಿ ಯುದ್ಧದ ಮುಂಚೂಣಿಯಲ್ಲಿ ಇರುತ್ತೇನೆ. ದುರ್ಯೋಧನ! ಸತ್ಯವಾಗಿ ಈ ಮಾತನ್ನು ಹೇಳುತ್ತಿದ್ದೇನೆ. ಇದರಲ್ಲಿ ಸಂಶಯ ಬೇಡ.
ಸಂಜಯಃ
ಏವಮುಕ್ತಸ್ತದಾ ರಾಜಾ ಮದ್ರಾಧಿಪತಿಮಂಜಸಾ |
ಅಭ್ಯಷಿಂಚಚ್ಚ ಸೇನಾಯಾಂ ಮಧ್ಯೇ ಭಾರತಸತ್ತಮ ||14||
ವಿಧಿನಾ ಶಾಸ್ತ್ರದೃಷ್ಟೇನ ಹೃಷ್ಟರೂಪೋ ವಿಶಾಂಪತೇ |
ಅಭಿಷಿಕ್ತೇ ತತಃ ಶಲ್ಯೇ ಸಿಂಹನಾದೋ ಮಹಾನಭೂತ್ ||15||
ಸಂಜಯ ಭಾರತೋತ್ತಮನೇ! ಶಲ್ಯನ ಈ ಮಾತನ್ನು ಕೇಳಿದ ಸಂತುಷ್ಟನಾದ ರಾಜ ದುರ್ಯೋಧನನು ಮದ್ರರಾಜನನ್ನು ಒಳ್ಳೆಯ ರೀತಿಯಲ್ಲಿ ಸೈನ್ಯದ ಮಧ್ಯದಲ್ಲಿ ಶಾಸೊತ್ರೇಕ್ತವಿಧಿಯಿಂದ ಸೇನಾಧಿಪತಿಯನ್ನಾಗಿ ಅಭಿಷೇಕ ಮಾಡಿದನು. ಶಲ್ಯನು ಪಟ್ಟಾಭಿಷಿಕ್ತನಾದಾಗ ದೊಡ್ಡದಾದ ಸಿಂಹನಾದವು ಉಂಟಾಯಿತು.
ತವ ಸೈನ್ಯೇಷ್ವವಾದ್ಯಂತ ವಾದಿತ್ರಾಣಿ ಚ ಸಂಘಶಃ |
ಹೃಷ್ಟಾಶ್ಚಾಸಂಸ್ತದಾ ಯೋಧಾ ಮದ್ರಕಾಶ್ಚ ಮಹಾರಥಾಃ ||16||
ತುಷ್ಟುವುಶ್ಚೈವ ರಾಜಾನಂ ಶಲ್ಯಮಾಹವಶೋಭಿನಮ್ ||17||
ನಿನ್ನ ಸೈನ್ಯದಲ್ಲಿ ವಾದ್ಯಗಳು ಗುಂಪು - ಗುಂಪಾಗಿ ವಾದಿಸಲ್ಪಟ್ಟವು. ನಿನ್ನ ಸೈನ್ಯದ ಯೋಧರು ಹಾಗೂ ಮದ್ರದೇಶದ ಮಹಾರಥಿಕರೂ ಸಂತೋಷಪಟ್ಟರು. ಹಾಗೂ ಸೇನಾಧಿಪತಿಯಾಗಿ ಯುದ್ಧಕ್ಕೇ ಶೋಭೆಯನ್ನು ತಂದುಕೊಟ್ಟ ತಮ್ಮ ರಾಜನಾದ ಶಲ್ಯನನ್ನು ಸ್ತುತಿಸಿದರು.
ಸೈನಿಕಾಃ
ಜಯ ರಾಜಂಶ್ಚಿರಂ ಜೀವ ಜಹಿ ಶತ್ರೂನ್ ಸಮಾಗತಾನ್ ||18||
ತವ ಬಾಹುಬಲಂ ಪ್ರಾಪ್ಯ ಧಾರ್ತರಾಷ್ಟ್ರೋ ಮಹಾಬಲಃ |
ನಿಖಿಲಾಂ ಪೃಥಿವೀಂ ಸರ್ವಾಂ ಪ್ರಶಾಸ್ತು ನಿಹತದ್ವಿಷಮ್ ||19||
ಸೈನಿಕರು ಹೇ ರಾಜನೇ! ನಿನಗೆ ಜಯವಾಗಲಿ. ಬಾಳಿ ಬದುಕು. ಬಂದಿರುವ ಶತ್ರುಗಳನ್ನು ಸಂಹರಿಸು. ನಿನ್ನ ಬಾಹುಬಲವನ್ನು

ಹೊಂದಿದ ಮಹಾಬಲಶಾಲಿಯಾದ ದುರ್ಯೋಧನನು ಶತ್ರುಗಳನ್ನು ಸಂಹರಿಸಿ ಇಡೀ ಭೂಮಂಡಲವನ್ನು ಆಳಲಿ.
ತ್ವಂ ಹಿ ಶಕ್ತೋ ರಣೇ ಜೇತುಂ ದೇವಗಂಧರ್ವದಾನವಾನ್ |
ಮರ್ತ್ಯಧರ್ಮಾಣ ಇಹ ತು ಕಿಂ ನ ಸೋಮಕಸೃಂಜಯಾನ್ ॥20॥
ನೀನು ಯುದ್ಧದಲ್ಲಿ ದೇವತೆಗಳು, ಗಂಧರ್ವರು ಹಾಗೂ ದಾನವರನ್ನೂ ಗೆಲ್ಲಲು ಸಮರ್ಥನಾಗಿರುವಿ. ಹಾಗಿರುವಾಗ ಮಾನವರಾಗಿರುವ ಈ ಸೋಮಕರು, ಸೃಂಜಯರು ನಿನ್ನಿಂದ ಸೋಲದಿರುತ್ತಾರೆಯೇ?
ಸಂಜಯಃ
ಏವಂ ಸಂಸ್ತೂಯಮಾನಸ್ತು ಮದ್ರಾಣಾಮಧಿಪೋ ಬಲೀ |
ಹರ್ಷಂ ಪ್ರಾಪ ತದಾ ವೀರೋ ದುಷ್ಪ್ರಾಪಮಕೃತಾತ್ಮಭಿಃ ॥21॥
ಸಂಜಯ ಹೀಗೆ ಸ್ತುತಿಸುತ್ತಿರಲು ಬಲಶಾಲಿಯಾದ ಶಲ್ಯನು ಬಹಳ ಆನಂದವನ್ನು ಅನುಭವಿಸಿದನು. ಆ ಆನಂದವು ಪ್ರಯತ್ನಶೀಲರಲ್ಲದ ವ್ಯಕ್ತಿಗಳಿಗೆ ಹೊಂದಲು ಕಷ್ಟಸಾಧ್ಯವಾಗಿರುತ್ತದೆ.
ಅದ್ಯ ಜೇಷ್ಯಾಮಿ ಕೌರವ್ಯ ಸರ್ವಾನ್ ಶತ್ರೂನ್ ತವ ಪ್ರಭೋ |
ಏತಚ್ಛ್ರುತ್ವಾ ಸಿಂಹ(ಸಿಂಹ್ಯ)ನಾದಮಕರೋದ್ ವಾಹಿನೀ ತವ ॥22॥
ಪ್ರಭೋ! ದುರ್ಯೋಧನ! ಇವತ್ತು ನಿನ್ನ ಎಲ್ಲ ಶತ್ರುಗಳನ್ನೂ ಗೆಲ್ಲುತ್ತೇನೆ. ಈ ಮಾತನ್ನು ಕೇಳಿ ನಿನ್ನ ಸೇನೆಯು ಸಿಂಹನಾದವನ್ನು ಮಾಡಿತು.
ಅಭಿಷಿಕ್ತೇ ತದಾ ಶಲ್ಯೇ ತವ ಸೈನ್ಯೇಷು ಮಾನದ |
ನ ಕರ್ಣವ್ಯಸನಂ ಕಿಂಚಿನ್ಮೇನಿರೇ ತತ್ರ ಭಾರತ ॥23॥
ಗೌರವಪಾತ್ರನಾದ ಧೃತರಾಷ್ಟ್ರನೇ! ಶಲ್ಯನನ್ನು ಸೇನಾಧಿಪತಿಯನ್ನಾಗಿ ನೇಮಿಸಿದಾಗ ಕರ್ಣನ ಅವಸಾನದಿಂದ ಉಂಟಾದ ದುಃಖವನ್ನು ಸ್ವಲ್ಪವೂ ಮನಗಾಣಲಿಲ್ಲ.
ಹೃಷ್ಟಾಃ ಸುಮನಸಶ್ಚೈವ ಬಭೂವುಸ್ತತ್ರ ಸೈನಿಕಾಃ |
ಮೇನಿರೇ ಚ ತದಾ ಪಾರ್ಥಾನ್ ಮದ್ರರಾಜವಶಂ ಗತಾನ್ ॥24॥
ಸೈನಿಕರು ಸಂತೋಷದಿಂದ ನಿರ್ಮಲ ಮನಸ್ಸುಳ್ಳವರಾದರು. ಪಾಂಡವರೆಲ್ಲರೂ ಶಲ್ಯನ ವಶಕ್ಕೆ ಒಳಗಾಗುವರೆಂದು ಆಗ ಅಂದುಕೊಂಡರು.
ಪ್ರಹರ್ಷಂ ಪ್ರಾಪ್ಯ ಸೇನಾ ತು ತಾವಕೀ ಭರತರ್ಷಭ |
ತಾಂ ರಾತ್ರಿಂ ಸುಖಿನೀ ಸುಪ್ತಾ ಸ್ವಸ್ಥಚಿತ್ತೇವ ಚಾಭವತ್ ॥25॥
ಭರತಶ್ರೇಷ್ಠನೇ! ನಿನ್ನ ಸೇನೆಯು ಬಹಳವಾಗಿ ಆನಂದವನ್ನು ಹೊಂದಿತು. ಸೈನಿಕರು ಮನದ ಗೊಂದಲಗಳನ್ನೆಲ್ಲಾ ದೂರೀಕರಿಸಿ ಸುಖವಾಗಿ ಆ ರಾತ್ರಿ ಮಲಗಿದರು.
ಸೈನ್ಯಸ್ಯ ತವ ತಂ ಶ್ರುತ್ವಾ ಶಬ್ದಂ ರಾಜಾ ಯುಧಿಷ್ಠಿರಃ |
ವಾರ್ಷ್ಣೇಯಮಬ್ರವೀದ್ ವಾಕ್ಯಂ ಸರ್ವಕ್ಷತ್ರಸ್ಯ ಪಶ್ಯತಃ ॥26॥
ನಿನ್ನ ಸೈನ್ಯದ ಆ ಸಿಂಹನಾದವನ್ನು ಕೇಳಿದ ಯುಧಿಷ್ಠಿರನು ಎಲ್ಲಾ ಕ್ಷತ್ರಿಯರ ಸಮ್ಮುಖದಲ್ಲಿ ಕೃಷ್ಣನಿಗೆ ಹೀಗೆ ಹೇಳುತ್ತಾನೆ.
ಯುಧಿಷ್ಠಿರಃ
ಮದ್ರರಾಜಃ ಕೃತಃ ಶಲ್ಯೋ ಧಾರ್ತರಾಷ್ಟ್ರೇಣ ಮಾಧವ |
ಸೇನಾಪತಿರ್ಮಹೇಷ್ವಾಸಃ ಸರ್ವಸೈನ್ಯೇಷು ಪೂಜಿತಃ ॥27॥
ಯುಧಿಷ್ಠಿರ ಮಾಧವ! ಮದ್ರಾಧಿಪನಾದ ಶಲ್ಯನು ಸೇನಾಧಿಪನಾಗಿದ್ದಾನೆ. ಆ ಶಲ್ಯನು ಮಹಾ ಬಿಲ್ಗಾರನು. ಅವನು ಎಲ್ಲರ ಗೌರವಕ್ಕೂ ಪಾತ್ರನಾಗಿದ್ದಾನೆ.
ಏತಜ್ಜ್ಞಾತ್ವಾ ತಥಾ ಭೂತಂ ಕುರು ಮಾಧವ ನಃ ಕ್ಷಮಮ್ |
ಭವಾನ್ ನೇತಾ ಚ ಗೋಪ್ತಾ ಚ ವಿಧತ್ಸ್ವ ಯದನಂತರಮ್ ॥28॥
ಮಾಧವ! ಇದನ್ನು ತಿಳಿದು ನಮಗೂ ಶಲ್ಯನ ಹಾಗೆಯೇ ದಕ್ಷನಾದ ಸೇನಾಪತಿಯನ್ನು ನೇಮಿಸು. ನೀನೇ ನಮಗೆ ನಾಯಕ ಹಾಗೂ ರಕ್ಷಕ. ನಿನ್ನಿಂದ ನೇಮಿಸಲ್ಪಡುವವನು ನಿನ್ನ ಅನಂತರದ ಸ್ಥಾನದಲ್ಲಿ ಇರುತ್ತಾನೆ.
ಸಂಜಯಃ
ತಮಬ್ರವೀನ್ಮಹಾರಾಜ ವಾಸುದೇವೋ ಮಹಾರಥಮ್ ॥29॥
ಸಂಜಯ ಮಹಾರಾಜ! ವಾಸುದೇವನು ಮಹಾರಥನಾದ ಧರ್ಮರಾಜನಿಗೆ ಹೀಗೆ ಹೇಳುತ್ತಾನೆ.
ಶ್ರೀಭಗವಾನ್
ಆರ್ತಾಯನಿಮಹಂ ಜಾನೇ ಯಥಾ ತತ್ತ್ವೇನ ಭಾರತ |
ವೀರ್ಯವಾಂಶ್ಚ ಮಹೇಷ್ವಾಸೋ ಮಹಾತ್ಮಾ ಚ ವಿಶೇಷತಃ ॥30॥
ಕೃತೀ ಚ ಚಿತ್ರಯೋಧೀ ಚ ಸಂಯುಕ್ತೋ ಲಾಘವೇನ ಚ ॥31॥
ಶ್ರೀಭಗವಾನ್ ಭಾರತ! ಋತಾಯನನ ಮಗನಾದ ಶಲ್ಯನನ್ನು ನಾನು ಚೆನ್ನಾಗಿ ಬಲ್ಲೆ. ಅವನು ವೀರನೂ ಹೌದು. ಮಹಾಬಿಲ್ಗಾರನೂ ಹೌದು. ವಿಶೇಷವಾಗಿ ಮಹಾಧೈರ್ಯಶಾಲಿಯಾಗಿದ್ದಾನೆ. ಮಹಾಕಾರ್ಯಗಳನ್ನು ಮಾಡಿದವನಾಗಿದ್ದಾನೆ. ಚಿತ್ರ-ವಿಚಿತ್ರವಾದ ಯುದ್ಧವನ್ನು ಮಾಡುವವನಾಗಿದ್ದಾನೆ. ನಿರಾಯಾಸವಾಗಿ ಯುದ್ಧ ಮಾಡಬಲ್ಲವನಾಗಿದ್ದಾನೆ.
ಯಾದೃಗ್ಭೀಷ್ಮಸ್ತಥಾ ದ್ರೋಣೋ ಯಾದೃಕ್ ಕರ್ಣಶ್ಚ ಸಂಯುಗೇ |
ತಾದೃಶಸ್ತದ್ವಿಶಿಷ್ಟೋ ವಾ ಮದ್ರರಾಜೋ ನ ಸಂಶಯಃ ॥32॥

ಈ ಶಲ್ಯನು ಯುದ್ಧದಲ್ಲಿ ಭೀಷ್ಮನ ಹಾಗೆ, ದ್ರೋಣನ ಹಾಗೆ, ಕರ್ಣನ ಹಾಗೆ ಇದ್ದಾನೆ. ಅಥವಾ ಅವರಿಗಿಂತಲೂ ವೈಶಿಷ್ಟ್ಯಪೂರ್ಣನಾಗಿದ್ದಾನೆ.
ಯುಧ್ಯಮಾನಸ್ಯ ತಸ್ಯಾಜೌ ಚಿಂತಯನ್ನೇವ ಭಾರತ |
ಯೋದ್ಧಾರಂ ನಾಧಿಗಚ್ಛಾಮಿ ತುಲ್ಯರೂಪಂ ಜನಾಧಿಪಮ್ ॥33॥
ಯುಧಿಷ್ಠಿರ! ಯುದ್ಧದಲ್ಲಿ ತೊಡಗಿರುವ ಅವನನ್ನು ನೆನೆಸಿಕೊಂಡಾಗ ಅವನಿಗೆ ಸಮಾನವಾದ ಪರಾಕ್ರಮವುಳ್ಳ ಯುದ್ಧಮಾಡುವ ಇನ್ನೊಬ್ಬ ರಾಜನನ್ನು ತಿಳಿಯದವನಾಗಿದ್ದೇನೆ.
ಶಿಖಂಡ್ಯರ್ಜುನಭೀಮಾನಾಂ ಸಾತ್ವತಸ್ಯ ಚ ಭಾರತ |
ಧೃಷ್ಟದ್ಯುಮ್ನಸ್ಯ ಚ ತಥಾ ಬಲೇನಾಭ್ಯಧಿಕೋ ರಣೇ ॥34॥
ಭರತಕುಲೋದ್ಭವನೇ! ಈ ಶಲ್ಯನು ಬಲದಲ್ಲಿ ಶಿಖಂಡಿ, ಅರ್ಜುನ, ಭೀಮ ಸಾತ್ಯಕಿ, ಧೃಷ್ಟದ್ಯುಮ್ನ ಇವರೆಲ್ಲರಿಗಿಂತಲೂ ಉತ್ತಮನಾಗಿದ್ದಾನೆ.
ಮದ್ರರಾಜೋ ಮಹಾರಾಜ ಸಿಂಹದ್ವಿರದವಿಕ್ರಮಃ |
ವಿಚರಿಷ್ಯತ್ಯಭೀಃ ಕಾಲೇ ಕಾಲಃ ಕ್ರುದ್ಧಃ ಪ್ರಜಾಸ್ವಿವ ॥35॥
ಮಹಾರಾಜ! ಶಲ್ಯನು ಸಿಂಹದ ಹಾಗೆ, ಆನೆಯ ಹಾಗೆ ನಿರ್ಭೀತನಾಗಿ ಪ್ರಳಯಕಾಲದಲ್ಲಿ ಕುಪಿತನಾದ ಯಮನು ಜನರ ಮಧ್ಯೆ ಸಂಚರಿಸುವಂತೆ ರಣರಂಗದಲ್ಲಿ ಸಂಚರಿಸುತ್ತಾನೆ.
ತಸ್ಯಾದ್ಯ ನ ಪ್ರಪಶ್ಯಾಮಿ ಪ್ರತಿಯೋದ್ಧಾರಮಾಹವೇ |
ತ್ವಾಮೃತೇ ಪುರುಷವ್ಯಾಘ್ರ ಶಾರ್ದೂಲಸಮವಿಕ್ರಮಮ್ ॥36॥
ಪುರುಷಶ್ರೇಷ್ಠನೇ! ಸಿಂಹದ ಪರಾಕ್ರಮಕ್ಕೆ ಸದೃಶಪರಾಕ್ರಮವುಳ್ಳ ನಿನ್ನನ್ನು ಬಿಟ್ಟರೆ ಅವನಿಗೆ ವಿರುದ್ಧವಾಗಿ ರಣರಂಗದಲ್ಲಿ ಯುದ್ಧಮಾಡುವವನು ಇನ್ನೊಬ್ಬ ಕಾಣಿಸುವುದಿಲ್ಲ.
ಸ ತ್ವಮೇಕೋ ಹಿ ಲೋಕೇಽಸ್ಮಿನ್ ನಾನ್ಯಸ್ತ್ವತ್ತಃ ಪುಮಾನ್ ಭವೇತ್ |
ಮದ್ರರಾಜಂ ರಣೇ ಕ್ರುದ್ಧಂ ಯೋ ಹನ್ಯಾತ್ ಕುರುನಂದನ ॥37॥
ಕುರುನಂದನ! ಯುದ್ಧದಲ್ಲಿ ಕ್ರುದ್ಧನಾದ ಮದ್ರರಾಜನನ್ನು ಸಾಯಿಸುವವನು ಇರುವುದಾದರೆ ಲೋಕದಲ್ಲಿ ಅಂಥವನು ನೀನೊಬ್ಬನೇ. ನಿನಗಿಂತ ಬೇರೆಯಾದ ವ್ಯಕ್ತಿಯು ಯಾರೂ ಇಲ್ಲ.
ಅಹನ್ಯಹನಿ ಯುಧ್ಯಂತಂ ಕ್ಷೋಭಯಂತಂ ಬಲಂ ತವ ॥38॥
ತಸ್ಮಾಜ್ಜಹಿ ರಣೇ ಶಲ್ಯಂ ಮಘವಾನಿವ ಶಂಬರಮ್ |
ಅಜೇಯಶ್ಚಾಪ್ಯಸೌ ವೀರೋ ಧಾರ್ತರಾಷ್ಟ್ರೇಣ ಸತ್ಕೃತಃ ॥39॥
ಆದ್ದರಿಂದ ಪ್ರತಿದಿನವೂ ಯುದ್ಧ ಮಾಡುತ್ತಾ ನಿನ್ನ ಸೈನ್ಯಬಲವನ್ನು ನಾಶಮಾಡುತ್ತಿರುವ ಶಲ್ಯನನ್ನು ಇಂದ್ರನು ಶಂಬರಾಸುರನನ್ನು ಕೊಂದಂತೆ ಯುದ್ಧದಲ್ಲಿ ಸಾಯಿಸು. ಇವನು ಧೃತರಾಷ್ಟ್ರನಿಂದಲೂ ಸತ್ಕೃತನಾದ ಮಹಾವೀರ. ಅವನು ಬೇರೆ ಯಾರಿಂದಲೂ ಸೋಲಲಾರನು.
ತವೈವ ವಿಜಯೋ ನೂನಂ ಹತೋ ಮದ್ರೇಶ್ವರೋ ಭವೇತ್ |
ತಸ್ಮಿನ್ ಹತೇ ಹತಂ ಸರ್ವಂ ಧಾರ್ತರಾಷ್ಟ್ರಬಲಂ ಮಹತ್ ॥40॥
ನಿಶ್ಚಯವಾಗಿಯೂ ಗೆಲುವು ನಿನ್ನದೇ. ಶಲ್ಯನು ಸಾಯಬೇಕು. ಅವನು ಸತ್ತರೆ ಕೌರವನ ಸೇನೆಯೆಲ್ಲವೂ ಸಾಯುತ್ತದೆ.
ಏತಚ್ಛ್ರುತ್ವಾ ಮಹಾರಾಜ ವಚನಂ ಮಮ ಸಾಂಪ್ರತಮ್ |
ಪ್ರತ್ಯುದ್ಯಾಹಿ ರಣೇ ಪಾರ್ಥ ಮದ್ರರಾಜಂ ಮಹಾರಥಮ್ ॥41॥
ಮಹಾರಾಜ ಪಾರ್ಥ! ಯುಧಿಷ್ಠಿರ! ಈಗ ನನ್ನ ಈ ಮಾತನ್ನು ಕೇಳಿ ಮಹಾರಥನಾದ ಶಲ್ಯನನ್ನು ಯುದ್ಧದಲ್ಲಿ ಎದುರಿಸು.
ಜಹಿ ಚೈನಂ ಮಹಾಬಾಹೋ ವಾಸವೋ ನಮುಚಿಂ ಯಥಾ |
ನ ಚೈವಾತ್ರ ದಯಾ ಕಾರ್ಯಾ ಮಾತುಲೋಽಯಂ ಮಮೇತಿ ಚ ॥
ಮಹಾಬಾಹುವೇ! ಇಂದ್ರನು ನಮುಚಿದೈತ್ಯನನ್ನು ಕೊಂದಹಾಗೆ ಈ ಶಲ್ಯನನ್ನೂ ನೀನು ಕೊಲ್ಲು. ಇವನು ನನ್ನ ಸೋದರಮಾವನೆಂಬ ಕಾರಣದಿಂದ ಯಾವ ರೀತಿ ದಯೆಯನ್ನೂ ತೋರಬೇಡ.
ಕ್ಷತ್ರಧರ್ಮಂ ಪುರಸ್ಕೃತ್ಯ ಜಹಿ ಮದ್ರಜನೇಶ್ವರಮ್ ॥43॥
ಪ್ರತಿಪಕ್ಷದಲ್ಲಿರುವ ಸಂಬಂಧಿಗಳೂ ವಧಾರ್ಹರೆ ಎಂಬ ಕ್ಷತ್ರಿಯಧರ್ಮವನ್ನು ಮುಂದಿಟ್ಟುಕೊಂಡು ಶಲ್ಯನನ್ನು ಸಂಹರಿಸು.
ದ್ರೋಣಭೀಷ್ಮಾರ್ಣವಂ ತೀರ್ತ್ವಾ ಕರ್ಣಪಾತಾಲಸಂಭವಮ್ |
ಮಾ ನಿಮಜ್ಜಸ್ವ ಸಗಣಃ ಶಲ್ಯಮಾಸಾದ್ಯ ಗೋಷ್ಪದಮ್ ॥44॥
ನೀನು ದ್ರೋಣ, ಭೀಷ್ಮರೆಂಬ ದೊಡ್ಡಸಮುದ್ರವನ್ನೇ ದಾಟಿರುವಿ. ಕರ್ಣನೆಂಬ ಮಹಾಗರ್ತವನ್ನೂ ದಾಟಿರುವಿ. ಹಸುವಿನ ಪಾದದಷ್ಟು ಚಿಕ್ಕದಾದ ಶಲ್ಯನೆಂಬ ಗುಂಡಿಯಲ್ಲಿ ಸಪರಿವಾರನಾಗಿ ಮುಳುಗಬೇಡ.
ಯಚ್ಚ ವೈ ತಪಸೋ ವೀರ್ಯಂ ಯಚ್ಚ ಕ್ಷತ್ರಬಲಂ ತವ |
ತದ್ದರ್ಶಯ ರಣೇ ಸರ್ವಂ ಜಹಿ ಚೈನಂ ಮಹಾಬಲಮ್ ॥45॥
ನಿನ್ನ ತಪಸ್ಸಿನ ಸಾಮರ್ಥ್ಯವೇನಿದೆಯೋ, ಕ್ಷತ್ರಿಯಪರಾಕ್ರಮವು ಏನಿದೆಯೋ ಅದನ್ನು ಯುದ್ಧದಲ್ಲಿ ತೋರಿಸು. ಈ ಮಹಾಬಲಶಾಲಿಯಾದ ಶಲ್ಯನನ್ನು ಯುದ್ಧದಲ್ಲಿ ಕೊಂದುಹಾಕು.
ಸಂಜಯಃ
ಏತಾವದುಕ್ತ್ವಾ ವಚನಂ ಕೇಶವಃ ಪರವೀರಹಾ |

ಜಗಾಮ ಶಿಬಿರಂ ಸಾಯಂ ಪೂಜ್ಯಮಾನೋ ಹಿ ಪಾಂಡವೈಃ ॥46॥
ಸಂಜಯ ಶತ್ರುವೀರರನ್ನು ಸದೆಬಡಿಯುವ ಕೇಶವನು ಇಷ್ಟು ಮಾತುಗಳನ್ನು ಹೇಳಿ ಸಾಯಂಕಾಲದ ಹೊತ್ತಿನಲ್ಲಿ ಪಾಂಡವರಿಂದ ಪೂಜಿತನಾಗಿ ಶಿಬಿರದ ಕಡೆಗೆ ನಡೆದನು.
ಕೇಶವೇ ತು ತಥಾ ಯಾತೇ ಧರ್ಮರಾಜೋ ಯುಧಿಷ್ಠಿರಃ |
ವಿಸೃಜ್ಯ ಸರ್ವಾನ್ ಭ್ರಾತೄಂಶ್ಚ ಪಾಂಚಾಲನಥ ಸೋಮಕಾನ್ ॥47॥
ಸುಷ್ವಾಪ ರಜನೀಂ ತಾಂ ತು ವಿಶಲ್ಯ ಇವ ಕುಂಜರಃ ॥48॥
ಧರ್ಮರಾಜ ಯುಧಿಷ್ಠಿರನು ಕೇಶವನು ಹೋದ ಮೇಲೆ ತನ್ನ ಸೋದರರರನ್ನೂ, ಪಾಂಚಾಲರನ್ನೂ, ಸೋಮಕರನ್ನೂ ಎಲ್ಲರನ್ನೂ ಬೀಳ್ಕೊಟ್ಟು, ಆ ರಾತ್ರಿಯಲ್ಲಿ ಅಂಕುಶರಹಿತವಾದ ಆನೆಯಂತೆ ಮಲಗಿದನು.
ತೇ ಚ ಸರ್ವೇ ಮಹೇಷ್ವಾಸಾಃ ಪಾಂಚಾಲಾಃ ಪಾಂಡವಾಸ್ತದಾ |
ಕರ್ಣಸ್ಯ ನಿಧನೇ ಹೃಷ್ಟಾಃ ಸುಷುಪುಸ್ತಾಂ ನಿಶಾಂ ತದಾ ॥49॥
ಆಗ ಆ ಎಲ್ಲಾ ಮಹಾಬಿಲ್ಲಾರರಾದ ಪಾಂಚಾಲರು, ಪಾಂಡವರು ಕರ್ಣನ ಸಾವಿನಿಂದ ಸಂತುಷ್ಟರಾಗಿ ರಾತ್ರಿ ನಿದ್ದೆ ಮಾಡಿದರು.
ಗತಜ್ವರಂ ಮಹೇಷ್ವಾಸಂ ತೀರ್ಣಪಾರಂ ಮಹಾರಥಮ್ |
ಬಭೂವ ಪಾಂಡವೇಯಾನಾಂ ಸೈನ್ಯಂ ಪ್ರಮುದಿತಂ ನಿಶಿ ॥50॥
ಸೂತಪುತ್ರಸ್ಯ ನಿಧನಾದ್ ಜಯಂ ಲಬ್ಧ್ವಾ ಚ ಮಾರಿಷ ॥51॥
ರಾಜನೇ! ಕರ್ಣನ ಮರಣದಿಂದಾಗಿ ಪಾಂಡವರ ಸೈನ್ಯವು ಉದ್ವೇಗವನ್ನು ಕಳೆದುಕೊಂಡಿತು. ಮಹಾಬಿಲ್ಲಾರರನ್ನೂ, ಮಹಾರಥಿಕರನ್ನೂ ಹೊಂದಿದ ಸೈನ್ಯವು ಶತ್ರುಸಾಗರವನ್ನು ದಾಟಿ, ಆ ರಾತ್ರಿಯಲ್ಲಿ ಬಹಳವಾಗಿ ಮುದಗೊಂಡಿತು. ಸೂತಪುತ್ರನಾದ ಕರ್ಣನ ನಿಧನದಿಂದ ಯುದ್ಧದಲ್ಲಿ ಜಯವನ್ನು ಹೊಂದಿದ್ದೂ ಇದಕ್ಕೆ ಕಾರಣವಾಗಿತ್ತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ - 28ನೇ ಅಧ್ಯಾಯ
ತಮಭ್ಯಯುಃ ಪಾಂಡವಾಶ್ಚ ಹೃಷ್ಟಾ ಯುದ್ಧಾಯ ದಂಸಿತಾಃ |
ತತ್ರಾಽಸೀತ್ ಸುಮಹದ್ ಯುದ್ಧಂ ಪಾಂಡವಾನಾಂ ಪರೈಃ ಸಹ ॥2॥
ಪಾಂಡವರೂ ಯುದ್ಧಕ್ಕೆ ಸನ್ನದ್ಧರಾಗಿ ಉತ್ಸಾಹಗೊಂಡು ಅವನನ್ನು ಎದುರಿಸಿದರು. ಆಗ ಅವರಿಗೆ ಕೌರವರೊಡನೆ ಬಹಳ ದೊಡ್ಡ ಯುದ್ಧ ನಡೆಯಿತು.
ಅಗ್ರೇ ಭೀಮಃ ಪಾಂಡವಾನಾಂ ಮಧ್ಯೇ ರಾಜಾ ಯುಧಿಷ್ಠಿರಃ |
ಪೃಷ್ಠೇ ಗಾಂಡೀವಧನ್ವಾಽಽಸೀದ್ ವಾಸುದೇವಾಭಿರಕ್ಷಿತಃ ॥3॥
ಚಕ್ರರಕ್ಷೌ ಯಮೌ ರಾಜ್ಞೋ ಧೃಷ್ಟದ್ಯುಮ್ನಶ್ಚ ಸಾತ್ಯಕಿಃ |
ನೃಪಸ್ಯ ಪಾರ್ಶ್ವಯೋರಾಸ್ತಾಮಗ್ರೇಽನ್ಯೇಷಾಂ ಗುರೋಃ ಸುತಃ ॥4॥
ಮಧ್ಯೇ ಶಲ್ಯಃ ಪೃಷ್ಠತೋಽಭೂದ್ ಭ್ರಾತೃಭಿಶ್ಚ ಸುಯೋಧನಃ |
ಚಕ್ರರಕ್ಷೌ ತು ಶಲ್ಯಸ್ಯ ಶಕುನಿಸ್ತತ್ಸುತಸ್ತಥಾ |
ಕೃಪಶ್ಚ ಕೃತವರ್ಮಾ ಚ ಪಾರ್ಶ್ವಯೋಃ ಸಮವಸ್ಥಿತೌ ॥5॥
ಪಾಂಡವರ ಸೈನ್ಯಕ್ಕೆ ಮುಂಭಾಗದಲ್ಲಿ ಭೀಮನೂ ಮಧ್ಯದಲ್ಲಿ ರಾಜಾ ಯುಧಿಷ್ಠಿರನೂ ಹಿಂಭಾಗದಲ್ಲಿ ಕೃಷ್ಣನ ರಕ್ಷಣೆಯಲ್ಲಿ ಗಾಂಡೀವಧಾರಿ ಅರ್ಜುನನೂ ಇದ್ದನು. ಯುಧಿಷ್ಠಿರನಿಗೆ ಚಕ್ರರಕ್ಷಕರಾಗಿ ನಕುಲ-ಸಹದೇವರಿದ್ದರು. ಧೃಷ್ಟದ್ಯುಮ್ನ ಸಾತ್ಯಕಿಯರು ಅವನ ಪಾರ್ಶ್ವದಲ್ಲಿದ್ದರು. ಕೌರವರ ಸೈನ್ಯಕ್ಕೆ ಮುಂಭಾಗದಲ್ಲಿ ಅಶ್ವತ್ಥಾಮ, ಮಧ್ಯದಲ್ಲಿ ಶಲ್ಯ, ಹಿಂಭಾಗದಲ್ಲಿ ಸೋದರರೊಂದಿಗೆ ದುರ್ಯೋಧನ ನಿಂತಿದ್ದನು. ಶಲ್ಯನಿಗೆ ಚಕ್ರರಕ್ಷಕರಾಗಿ ಶಕುನಿ ಮತ್ತು ಅವನ ಮಗ, ಪಾರ್ಶ್ವಗಳಲ್ಲಿ ಕೃಪ ಮತ್ತು ಕೃತವರ್ಮ ಇದ್ದರು.
ತತ್ರಾಭವನ್ಮಹದ್ ಯುದ್ಧಂ ಭೀಮಸ್ಯ ದ್ರೌಣಿನಾ ಸಹ |
ರಾಜ್ಞಃ ಶಲ್ಯೇನ ಚ ತಥಾ ಘೋರರೂಪಂ ಭಯಾನಕಮ್ ॥ 6 ॥
ಆಗ ಭೀಮನಿಗೆ ಅಶ್ವತ್ಥಾಮನೊಡನೆ ದೊಡ್ಡ ಯುದ್ಧ ನಡೆಯಿತು. ಧರ್ಮರಾಜನಿಗೂ ಶಲ್ಯನಿಗೂ ಹಾಗೇ ಭಯಾನಕವಾದ ಘೋರರೂಪದ ಯುದ್ಧ ನಡೆಯಿತು.
ತತ್ರ ನಾತಿಪ್ರಯತ್ನೇನ ದ್ರೌಣಿರ್ಭೀಮೇನ ಸಾಯಕೈಃ |
ವಿರಥೀಕೃತಸ್ತಥಾ ಧರ್ಮಸೂನುಃ ಶಲ್ಯೇನ ತತ್ಕ್ಷಣಾತ್ ॥ 7 ॥
ಭೀಮ ಹೆಚ್ಚು ಪ್ರಯತ್ನವಿಲ್ಲದೆ ಅಶ್ವತ್ಥಾಮನನ್ನು ಬಾಣಗಳಿಂದ ವಿರಥನನ್ನಾಗಿ ಮಾಡಿದನು. ಇತ್ತ ಶಲ್ಯನೂ ಧರ್ಮರಾಜನನ್ನು ಕ್ಷಣದಲ್ಲಿ ವಿರಥನನ್ನಾಗಿ ಮಾಡಿದನು.
ಆಸಸಾದ ತದಾ ಶಲ್ಯಂ ಕಪಿಪ್ರವರಕೇತನಃ |
ತಯೋರಾಸೀನ್ಮಹದ್ ಯುದ್ಧಮದ್ಭುತಂ ರೋಮಹರ್ಷಣಮ್ ॥ 8 ॥
ಆಗ ಶಲ್ಯನನ್ನು ಅರ್ಜುನ ಎದುರಿಸಿದನು. ಅವರೊಳಗೆ ಅದ್ಭುತ ರೋಮಾಂಚಕರ ಮಹಾಯುದ್ಧವಾಯಿತು.
ರಥಮನ್ಯಂ ಸಮಾಸ್ಥಾಯ ದ್ರೌಣಿರ್ಭೀಮಂ ಸಮಭ್ಯಯಾತ್ |

ದುರ್ಯೋಧನಶ್ಚ ಭೀಮಸ್ಯ ಶರೈರಾವಾರಯದ್ ದಿಶಃ ॥ 9 ॥
ಅಶ್ವತ್ಥಾಮ ಇನ್ನೊಂದು ರಥವನ್ನೇರಿ ಭೀಮನನ್ನು ಎದುರಿಸಿದನು. ದುರ್ಯೋಧನನೂ ಬಾಣಗಳಿಂದ ಭೀಮನ ಸುತ್ತ ಎಲ್ಲ ದಿಕ್ಕುಗಳನ್ನು ಆವರಿಸಿದನು.
ತಾವುಭೌ ಶರವರ್ಷೇಣ ವಾರಯಾಮಾಸ ಮಾರುತಿಃ |
ತಾಭ್ಯಾಂ ತಸ್ಯಾಭವದ್ ಯುದ್ಧಂ ಸುಘೋರಮತಿಮಾನುಷಮ್ ॥
ಅಶ್ವತ್ಥಾಮ ದುರ್ಯೋಧನರಿಬ್ಬರನ್ನೂ ಭೀಮನು ಬಾಣಗಳ ಮಳೆಯಿಂದ ತಡೆದನು. ಅವರೊಡನೆ ಭೀಮನಿಗೆ ಬಲು ಘೋರವಾದ ಅತಿಮಾನುಷವಾದ ಯುದ್ಧ ನಡೆಯಿತು.
ದುರ್ಯೋಧನಸ್ಯಾವರಜಾನ್ ದ್ರೌಪದೇಯಾ ಯುಯುತ್ಸುನಾ |
ಶಿಖಂಡ್ಯಾದ್ಯೈರ್ಮಾತುಲೈಶ್ಚ ಸಹ ಸರ್ವಾನ್ ನ್ಯವಾರಯನ್ ॥11॥
ದುರ್ಯೋಧನನ ತಮ್ಮಂದಿರೆಲ್ಲರನ್ನೂ ದ್ರೌಪದೀಪುತ್ರರು ಯುಯುತ್ಸುವಿನೊಡನೆ ಮತ್ತು ಶಿಖಂಡಿ ಮುಂತಾದ ಸೋದರಮಾವಂದಿರೊಡನೆ ಕೂಡಿ ಎದುರಿಸಿದರು.
ಸಹದೇವಸ್ತು ಶಕುನಿಮುಲೂಕಂ ನಕುಲಸ್ತಥಾ |
ಧೃಷ್ಟದ್ಯುಮ್ನಶ್ಚ ಹಾರ್ದಿಕ್ಯಂ ಸಾತ್ಯಕಿಃ ಕೃಪಮೇವ ಚ ॥12॥
ಸಹದೇವ ಶಕುನಿಯನ್ನೂ, ನಕುಲ ಉಲೂಕನನ್ನೂ, ಧೃಷ್ಟದ್ಯುಮ್ನ ಕೃತವರ್ಮನನ್ನೂ, ಸಾತ್ಯಕಿ ಕೃಪನನ್ನೂ ಎದುರಿಸಿದರು.
ತೇಷಾಂ ತದಭವದ್ ಯುದ್ಧಂ ಚಿತ್ರಂ ಲಘು ಚ ಸುಷ್ಠು ಚ |
ಶಲ್ಯಸ್ತು ಶರಸಂಘಾತೈಃ ಪಾರ್ಥಸ್ಯಾವಾರಯದ್ ದಿಶಃ ॥13॥
ಅವರಿಗೆ ವಿಚಿತ್ರ ವೇಗಪೂರ್ಣವಾದ ಒಳ್ಳೆಯ ಯುದ್ಧ ನಡೆಯಿತು. ಶಲ್ಯ ಬಾಣ ಸಮೂಹಗಳಿಂದ ಅರ್ಜುನನ ಸುತ್ತ ಎಲ್ಲ ದಿಕ್ಕುಗಳನ್ನು ಆವರಿಸಿದನು.
ಸೋಽಪಿ ವಿವ್ಯಾಧ ವಿಶಿಖೈಃ ಶಲ್ಯಮಾಹವಶೋಭಿನಮ್ |
ತಯೋಸ್ತು ಸಮಮೇವಾಽಸೀಚ್ಚಿರಂ ದೇವಾಸುರೋಪಮಮ್ ॥14॥
ಅರ್ಜುನ ಯುದ್ಧದಲ್ಲಿ ಮೆರೆಯುತ್ತಿದ್ದ ಶಲ್ಯನನ್ನು ಬಾಣಗಳಿಂದ ಹೊಡೆದನು. ಅವರೊಳಗಣ ಯುದ್ಧ ದೇವಾಸುರ ಯುದ್ಧದಂತೆ ಬಹುಕಾಲ ಸಮವೇ ಆಯಿತು.
ತತಃ ಶರಂ ವಜ್ರನಿಭಂ ಮದ್ರರಾಜಃ ಸಮಾದದೇ |
ತೇನ ವಿವ್ಯಾಧ ಬೀಭತ್ಸುಂ ಹೃದಯೇ ಸ ಮುಮೋಹ ಚ ॥15॥
ಬಳಿಕ ಶಲ್ಯ ವಜ್ರಾಯುಧದಂಥ ಬಾಣವನ್ನೆತ್ತಿಕೊಂಡನು. ಅದರಿಂದ ಅರ್ಜುನನನ್ನು ಎದೆಯಲ್ಲಿ ಹೊಡೆದನು. ಅರ್ಜುನ ಮೂರ್ಛಿತನಾದನು.
ಉಪಲಭ್ಯ ಪುನಃ ಸಂಜ್ಞಾಂ ವಾಸವಿಃ ಶತ್ರುತಾಪನಃ |
ಚಿಚ್ಛೇದ ಕಾರ್ಮುಕಂ ಸಂಖ್ಯೇ ಮದ್ರರಾಜಸ್ಯ ಧೀಮತಃ ॥16॥
ಶತ್ರುತಾಪಕನಾದ ಅರ್ಜುನ ಪುನಃ ಎಚ್ಚೆತ್ತು ಯುದ್ಧದಲ್ಲಿ ಬುದ್ಧಿವಂತನಾದ ಶಲ್ಯನ ಬಿಲ್ಲನ್ನು ಕಡಿದನು.
ಸೋಽನ್ಯತ್ ಕಾರ್ಮುಕಮಾದಾಯ ಮುಮೋಚಾಸ್ತ್ರಾಣಿ ಫಲ್ಗುನೇ |
ಸೌರಂ ಯಾಮ್ಯಂ ಚ ಪಾರ್ಜನ್ಯಂ ತಾನ್ಯೈಂದ್ರೇಣ ಜಘಾನ ಸಃ ॥17॥
ಶಲ್ಯ ಇನ್ನೊಂದು ಬಿಲ್ಲನ್ನೆತ್ತಿಕೊಂಡು ಸೂರ್ಯ ಯಮ ಪರ್ಜನ್ಯ ಅಸ್ತ್ರಗಳನ್ನು ಅರ್ಜುನನ ಮೇಲೆ ಎಸೆದನು. ಅರ್ಜುನನು ಅವುಗಳನ್ನು ಇಂದ್ರಾಸ್ತ್ರದಿಂದ ಪರಿಹರಿಸಿದನು.
ಪುನರ್ನ್ಯಕೃಂತತ್ ತಚ್ಚಾಪಮಿಂದ್ರಸೂನುರಮರ್ಷಿತಃ |
ಶಲ್ಯೋ ಗದಾಂ ಸಮಾವಿದ್ಧ್ಯ ಚಿಕ್ಷೇಪಾರ್ಜುನವಕ್ಷಸಿ ॥18॥
ಅರ್ಜುನನು ಪುನಃ ಕುಪಿತನಾಗಿ ಶಲ್ಯನ ಬಿಲ್ಲನ್ನು ಕತ್ತರಿಸಿದನು. ಶಲ್ಯ ಗದೆಯನ್ನು ಎತ್ತಿಕೊಂಡು ಅರ್ಜುನನ ಎದೆಯ ಮೇಲೆ ಎಸೆದನು.
ತದಾ ಮುಮೋಹ ಬೀಭತ್ಸುಸ್ತತ ಉಚ್ಚುಕ್ರುಶುಃ ಪರೇ |
ಪ್ರಾಪ್ಯ ಸಂಜ್ಞಾಂ ಪುನಃ ಪಾರ್ಥಃ ಶಲ್ಯಂ ವಿವ್ಯಾಧ ವಕ್ಷಸಿ |
ಸ ವಿಹ್ವಲಿತಸರ್ವಾಂಗಃ ಶಿಶ್ರಿಯೇ ಧ್ವಜಮುತ್ತಮಮ್ ॥19॥
ಆಗ ಅರ್ಜುನನು ಮೂರ್ಛಿತನಾದನು. ಶತ್ರುಗಳು ಜಯಘೋಷ ಮಾಡಿದರು.
ಸಮಾಶ್ವಸ್ತಃ ಪುನರ್ಬಾಣಂ ಯಮದಂಡನಿಭಂ ರಣೇ |
ಮುಮೋಚ ಪಾರ್ಥಸ್ಯ ಸ ಚ ನಿರ್ಬಿಭೇದ ಸ್ತನಾಂತರಮ್ ॥20॥
ತೇನ ವಿಹ್ವಲಿತಃ ಪಾರ್ಥೋ ಧ್ವಜಯಷ್ಟಿಂ ಸಮಾಶ್ರಿತಃ ॥21॥
ಶಲ್ಯ ಸಾವರಿಸಿಕೊಂಡು ಪುನಃ ಯಮದಂಡಕ್ಕೆ ಸಮಾನವಾದ ಬಾಣವನ್ನು ಯುದ್ಧದಲ್ಲಿ ಅರ್ಜುನನಿಗೆ ಎಸೆದನು. ಆ ಬಾಣ ಅರ್ಜುನನ ಎದೆಯನ್ನು ಒಡೆಯಿತು. ಅದರಿಂದ ನಡುಗಿದ ಅರ್ಜುನ ಧ್ವಜಸ್ತಂಭವನ್ನು ಆಧರಿಸಿ ನಿಂತನು.
ಸಮಾಶ್ವಸ್ತಃ ಪುಚಿಚ್ಛೇದ ಮದ್ರರಾಜಸ್ಯ ಕಾರ್ಮುಕಮ್ |
ಛತ್ರಂ ಧ್ವಜಂ ಚ ತರಸಾ ಸಾರಥಿಂ ಚ ನ್ಯಪಾತಯತ್ ॥22॥
ಅರ್ಜುನ ಸಾವರಿಸಿಕೊಂಡು ಶಲ್ಯನ ಬಿಲ್ಲನ್ನು ಕಡಿದನು. ಅವನ ಛತ್ರವನ್ನೂ ಧ್ವಜವನ್ನೂ ಸಾರಥಿಯನ್ನೂ ವೇಗದಿಂದ ಉರುಳಿಸಿದನು.

ತದಾಽನ್ಯಂ ರಥಮಾಸ್ಥಾಯ ಧರ್ಮರಾಜಃ ಶರೋತ್ತಮೈಃ |
ಚತುರ್ಭಿಶ್ಚತುರೋ ವಾಹಾನ್ಶಲ್ಯಸ್ಯ ನಿಜಘಾನ ಹ ॥23॥
ಅಷ್ಟರಲ್ಲಿ ಧರ್ಮರಾಜ ಇನ್ನೊಂದು ರಥವನ್ನೇರಿ ನಾಲ್ಕು ಉತ್ತಮ ಬಾಣಗಳಿಂದ ಶಲ್ಯನ ನಾಲ್ಕು ಕುದುರೆಗಳನ್ನು ಸಂಹರಿಸಿದನು.
ಶಲ್ಯೋಽನ್ಯಂ ರಥಮಾಸ್ಥಾಯ ಸರ್ವಾಂಸ್ತಾನ್ ಶರವೃಷ್ಟಿಭಿಃ |
ಛಾದಯಾಮಾಸ ರಾಜಾನಂ ವಿರಥಂ ಚ ಚಕಾರ ಹ ॥24॥
ಶಲ್ಯ ಇನ್ನೊಂದು ರಥವನ್ನೇರಿ ಅವರೆಲ್ಲರನ್ನೂ ಬಾಣಗಳ ಮಳೆಗಳಿಂದ ಆವರಿಸಿದ ಮತ್ತು ಧರ್ಮರಾಜನನ್ನು ವಿರಥನನ್ನಾಗಿ ಮಾಡಿದನು.
ನಿಹತ್ಯಾಶ್ವಾನ್ ಸಾತ್ಯಕೇಶ್ಚ ಧೃಷ್ಟದ್ಯುಮ್ನಸ್ಯ ಚಾಭಿಭೂಃ |
ಚಾಪೇ ಚ್ಛಿತ್ವಾ ಚ ಯಮಯೋರ್ದಧ್ಮೌ ಶಂಖಂ ಮಹಾಸ್ವನಮ್ ॥25॥
ಶತ್ರುಗಳನ್ನು ಪರಾಭವಗೊಳಿಸುವ ಶಲ್ಯ, ಸಾತ್ಯಕಿ-ಧೃಷ್ಟದ್ಯುಮ್ನರ ಕುದುರೆಗಳನ್ನು ಕೊಂದು, ನಕುಲ-ಸಹದೇವರ ಬಿಲ್ಲುಗಳನ್ನು ಕಡಿದು, ದೊಡ್ಡ ಧ್ವನಿಯ ಶಂಖವನ್ನು ಮೊಳಗಿಸಿದನು.
ತತಸ್ತು ಶಲ್ಯಂ ಸಮುದೀರ್ಯಮಾಣಂ ದೃಷ್ಟ್ವಾ ರಣೇ ಭೀಮಸೇನಸ್ತರಸ್ವೀ |
ನ್ಯವಾರಯದ್ ಬಾಣವರೈರನೇಕೈಶ್ಚಕಾರ ಚೈನಂ ವಿರಥಂ ಕ್ಷಣೇನ ॥26॥
ಬಳಿಕ ಯುದ್ಧದಲ್ಲಿ ದುರ್ಯೋಧನಾದಿಗಳು ಶಲ್ಯನನ್ನು ಅತಿಯಾಗಿ ಹೊಗಳುತ್ತಿದ್ದುದನ್ನು ಕಂಡು ವೇಗಶಾಲಿಯಾದ ಭೀಮಸೇನ ಅನೇಕ ಉತ್ತಮ ಬಾಣಗಳಿಂದ ಅವನನ್ನು ತಡೆದನು. ಕ್ಷಣದಲ್ಲಿ ಅವನನ್ನು ವಿರಥನನ್ನಾಗಿ ಮಾಡಿದನು.
ಆಸ್ಥಾಯ ಚಾನ್ಯಂ ರಥಮಾಪತಂತಂ
ಪುನಶ್ಚ ಶಲ್ಯಂ ಭೃಶಮೇವ ಮರ್ಮಸು |
ನಿರ್ಭಿದ್ಯ ಬಾಣೈರ್ವಿರಥಂ ಚಕಾರ
ಪುನಸ್ತೃತೀಯಂ ಚ ರಥಂ ರುರೋಜ ॥27॥
ಇನ್ನೊಂದು ರಥವನ್ನೇರಿ ಪುನಃ ಬಂದ ಶಲ್ಯನನ್ನು ಭೀಮಸೇನ ಬಾಣಗಳಿಂದ ಮರ್ಮಗಳಲ್ಲಿ ಚೆನ್ನಾಗಿ ಹೊಡೆದು ವಿರಥನನ್ನಾಗಿ ಮಾಡಿದನು. ತಿರುಗಿ ಅವನ ಮೂರನೆಯ ರಥವನ್ನೂ ಮುರಿದನು.
ಆತ್ತಾನ್ಯಾತ್ತಾನ್ಯಾಯುಧಾನ್ಯಸ್ಯ ಭೀಮಃ
ಸರ್ವಾಣಿ ಚಿಚ್ಛೇದ ಬಿಭೇದ ಚಾಸ್ಯ |
ಮರ್ಮಾಣಿ ಬಾಣೈರ್ನಿತರಾಂ ಪುನಶ್ಚ
ಸ ಮುಷ್ಟಿಮುದ್ಯಮ್ಯ ಜಗಾಮ ಧರ್ಮಜಮ್ ॥28॥
ಶಲ್ಯ ಎತ್ತಿಕೊಂಡ ಎಲ್ಲ ಆಯುಧಗಳನ್ನೂ ಭೀಮಸೇನ ಕಡಿದನು. ಪುನಃ ಬಾಣಗಳಿಂದ ಅವನ ಮರ್ಮಸ್ಥಲಗಳನ್ನು ಬಹಳ ಗಾಯಗೊಳಿಸಿದನು. ಶಲ್ಯ ಮುಷ್ಟಿಯನ್ನೆತ್ತಿ ಧರ್ಮರಾಜನ ಬಳಿಗೆ ಹೊರಟನು.
ತಂ ಭೀಮಭಿನ್ನಮರ್ಮಾಣಂ ವಿವರ್ಮಾಣಂ ನಿರಾಯುಧಮ್ |
ಶ್ವಾಸಮಾತ್ರಾವಶಿಷ್ಟಂ ಚ ಮರಣಾಯೈವ ಕೇವಲಮ್ ॥29॥
ಆತ್ಮಾನಮಭಿಗಚ್ಛಂತಂ ದೃಷ್ಟ್ವಾಽನ್ಯಂ ರಥಮಾಸ್ಥಿತಃ |
ಹಂತುಕಾಮೋ ರಣೇ ವೀರಮಮೋಘಾಂ ಶಕ್ತಿಮಾದದೇ ॥30॥
ಶಲ್ಯನ ಮರ್ಮಸ್ಥಾನಗಳನ್ನು ಮೊದಲೇ ಭೀಮ ಹೊಡೆದಿದ್ದ. ಅವನು ಈಗ ಕವಚರಹಿತ, ನಿರಾಯುಧ. ಶ್ವಾಸಮಾತ್ರ ಉಳಿದಿತ್ತು. ಕೇವಲ ಮರಣ ಹೊಂದುವುದಕ್ಕಾಗಿಯೇ ಧರ್ಮರಾಜನೆದುರಿಗೆ ಬರುತ್ತಿದ್ದ. ಅಂಥ ವೀರ ಶಲ್ಯನನ್ನು ಕಂಡು ಅವನನ್ನು ಯುದ್ಧದಲ್ಲಿ ಕೊಲ್ಲಲು ಬಯಸಿ ಧರ್ಮರಾಜ ಇನ್ನೊಂದು ರಥವೇರಿ ಅಮೋಘವಾದ ಶಕ್ತ್ಯಾಯುಧವನ್ನೆತ್ತಿಕೊಂಡನು.
ದಿವ್ಯಾಸ್ತ್ರೈರಪಿ ಸಂಯೋಜ್ಯ ತಾಂ ತದಾ ಧರ್ಮನಂದನಃ |
ಸತ್ಯಧರ್ಮಫೈಶ್ಚೈವ ಚಿಕ್ಷೇಪಾಸ್ಯ ಹೃದಿ ತ್ವರನ್ ॥31॥
ಸ ಭಿನ್ನಹೃದಯೋ ಭೂಮೌ ಪಪಾತಾಭಿಮುಖೋ ನೃಪಮ್ |
ಸತ್ಯಧರ್ಮರತಃ ಶಲ್ಯ ಇಂದ್ರಸ್ಯಾತಿಥಿತಾಮಗಾತ್ ॥32॥
ಧರ್ಮರಾಜ ಶಕ್ತ್ಯಾಯುಧವನ್ನು ದಿವ್ಯ ಅಸ್ತ್ರಗಳಿಂದಲೂ ಸತ್ಯ-ಧರ್ಮಗಳ ಪುಣ್ಯಗಳಿಂದಲೂ ಕೂಡಿದ ಶಲ್ಯನ ಎದೆಯ ಮೇಲೆ ವೇಗವಾಗಿ ಎಸೆದನು. ಶಲ್ಯ ಎದೆ ಒಡೆದು ಧರ್ಮರಾಜನೆದುರಿನಲ್ಲಿ ನೆಲದ ಮೇಲೆ ಬಿದ್ದನು. ಹೀಗೆ ಸತ್ಯ-ಧರ್ಮರತನಾದ ಶಲ್ಯ ಸ್ವರ್ಗದಲ್ಲಿ ಇಂದ್ರನಿಗೆ ಅತಿಥಿಯಾದನು.
* * * * *

## ಎಂಟನೆಯ ಅಧ್ಯಾಯ

### ಎರಡೂ ಕಡೆಯ ಸೈನ್ಯಗಳಿಂದ ವ್ಯೂಹರಚನೆ ಹಾಗೂ ಯುದ್ಧಕ್ಕಾಗಿ ನಿರ್ಗಮನ

ಸಂಜಯಃ
ವ್ಯತೀತಾಯಾಂ ರಜನ್ಯಾಂ ತು ರಾಜಾ ದುರ್ಯೋಧನಸ್ತದಾ |
ಅಬ್ರವೀತ್ ತಾವಕಾನ್ ಸರ್ವಾನ್ ಸನ್ನಹ್ಯಂತಾಂ ಮಹಾರಥಾಃ ॥1॥
ರಾತ್ರಿಕಳೆದು ಬೆಳಕು ಹರಿದಾಗ ದುರ್ಯೋಧನನು ತನ್ನ ಕಡೆಯವರಿಗೆ ಹೇಳುತ್ತಾನೆ- ``ಮಹಾರಥಿಕರೇ! ಕವಚಧಾರಣೆಯನ್ನು ಮಾಡಿ ಯುದ್ಧಕ್ಕೆ ತಯಾರಾಗಿ'' ಎಂದು.
ರಾಜ್ಞಸ್ತು ಮತಮಾಸ್ಥಾಯ ಸಮನಹ್ಯತ ಸಾ ಚಮೂಃ |

ಅಚೋದಯಂಸ್ತದಾ ತೂರ್ಣಂ ಪರ್ಯಧಾವಂಸ್ತಥಾ ಪರಾನ್ ॥2॥
ರಾಜನ ಅಭಿಪ್ರಾಯವನ್ನು ಅರಿತ ಆ ಸೈನ್ಯವು ಕವಚಧಾರಣೆ ಮಾಡಿ ಯುದ್ಧಕ್ಕೆ ತಯಾರಾಯಿತು. ಶೀಘ್ರವಾಗಿ ಯುದ್ಧಕ್ಕೆ ಪ್ರೇರೇಪಿಸಿದರು. ಕೆಲವರು ಎಲ್ಲಾ ಕಡೆಗೆ ಓಡಲು ತೊಡಗಿದರು.
ಅಕಲ್ಪ್ಯಂತ ಚ ಮಾತಂಗಾನ್ ಸಮನಹ್ಯಂತ ಪತ್ತಯಃ|
ಹಯಾನಾಸ್ತರಣೋಪೇತಾನ್ ಚಕ್ರುರನ್ಯೇ ಸಹಸ್ರಶಃ ॥3॥
ಕೆಲವರು ಆನೆಗಳನ್ನು ಯುದ್ಧಕ್ಕೆ ಸಜ್ಜುಗೊಳಿಸಿದರು. ಪದಾತಿಗಳು ಕವಚಧಾರಣೆ ಮಾಡಿಕೊಂಡರು. ಇನ್ನು ಕೆಲವರು ಕುದುರೆಗಳಿಗೆ ಕವಚಗಳನ್ನು ಹಾಕಿದರು.
ವಾದಿತ್ರಾಣಾಂ ಚ ನಿನದಃ ಪ್ರಾದುರಾಸೀದ್ ವಿಶಾಂಪತೇ|
ಚೋದನಾರ್ಥಂ ಚ ಸೈನ್ಯಾನಾಂ ಯೋಧಾನಾಂ ಚಾಪ್ಯನೇಕಶಃ ॥4॥
ಪ್ರಜಾಪತಿಯೇ! ಸೈನ್ಯವನ್ನೂ ಯೋಧರನ್ನೂ ಹುರಿದುಂಬಿಸಲು ವಿವಿಧ ವಾದ್ಯಗಳ ನಾದವು ಅನೇಕ ಬಾರಿ ಕೇಳಿಬಂದಿತು.
ತತೋ ಬಲಾನಿ ಸರ್ವಾಣಿ ಹತಶಿಷ್ಟಾನಿ ಭಾರತ|
ಸನ್ನದ್ಧಾನ್ಯೇವ ದೃಶ್ಯಂತೇ ಮೃತ್ಯುಂ ಕೃತ್ವಾ ನಿವರ್ತನಮ್ ॥5॥
ಭರತವಂಶೋದ್ಭವನೇ! ಅನಂತರ ಅಳಿದು ಉಳಿದುಕೊಂಡಿರುವ ಎಲ್ಲಾ ಸೈನ್ಯವೂ ಮೃತ್ಯುವನ್ನೂ ಓಡಿಸುವ ರೀತಿಯಲ್ಲಿ ಯುದ್ಧಕ್ಕೆ ಸನ್ನದ್ಧವಾಯಿತು.
ಶಲ್ಯಂ ಸೇನಾಪತಿಂ ಕೃತ್ವಾ ಮದ್ರರಾಜಂ ಮಹಾರಥಮ್|
ಪ್ರವಿಭಜ್ಯ ಬಲಂ ಸರ್ವಮನೀಕೇಷು ವ್ಯವಸ್ಥಿತಾಃ ॥6॥
ಮಹಾರಥಿಯಾದ ಮದ್ರಾಧಿಪತಿಯನ್ನು ಸೇನಾಧಿಪತಿಯನ್ನಾಗಿ ಮಾಡಿಕೊಂಡು ಇಡೀ ಸೇನೆಯು ಬೇರೆ ಬೇರೆ ದಳಗಳಾಗಿ ವಿಭಾಗಿಸಲ್ಪಟ್ಟು ವ್ಯವಸ್ಥೆಗೊಳಿಸಲ್ಪಟ್ಟಿತು.
ತತಃ ಸರ್ವೇ ಸಮಾಗಮ್ಯ ಪುತ್ರೇಣ ತವ ಚೋದಿತಾಃ|
ಕೃಪಶ್ಚ ಕೃತವರ್ಮಾ ಚ ದ್ರೌಣಿಃ ಶಲ್ಯೋಽಥ ಸೌಬಲಃ ॥7॥
ಅನ್ಯೇ ಚ ಪಾರ್ಥಿವಾಃ ಸರ್ವೇ ಸಮಯಂ ಚಕ್ರಿರೇ ತದಾ ॥8॥
ನಿನ್ನ ಮಗನ ಪ್ರೇರಣೆಯಿಂದ ಎಲ್ಲರೂ ಬಂದು ಸೇರಿದರು. ಕೃಪ, ಕೃತವರ್ಮ, ಅಶ್ವತ್ಥಾಮ, ಶಲ್ಯ, ಶಕುನಿ ಹಾಗೂ ಇನ್ನಿತರ ರಾಜರುಗಳು ಬಂದು ಯುದ್ಧ ನಿಯಮಗಳನ್ನು ರಚಿಸಿಕೊಂಡರು.
ಕೌರವಸೈನಿಕಾಃ
ನ ತ್ವೇಕೇನ ಚ ಯೋದ್ಧವ್ಯಂ ಕಥಂಚಿದಿಹ ಪಾಂಡವೈಃ ॥9॥
ಯೋ ಹ್ಯೇಕಃ ಪಾಂಡವೈರ್ಯುದ್ಧ್ಯೇದ್ ಯೋ ವಾ ಯುಧ್ಯಂತಮುತ್ಸೃಜೇತ್|
ಸ ಪಂಚಭಿರ್ಭವೇದ್ಯುಕ್ತಃ ಪಾತಕೈಶ್ಚೋಪಪಾತಕೈಃ ॥10॥
ಕೌರವನ ಸೈನಿಕರು ``ಪಾಂಡವರ ಜೊತೆಗೆ ಒಬ್ಬನೇ ಯಾವನೂ ಯುದ್ಧ ಮಾಡಬಾರದು. ಯಾವನಾದರೂ ಒಬ್ಬನೇ ಪಾಂಡವರ ಜೊತೆಗೆ ಯುದ್ಧಮಾಡಿದರೆ, ಅಥವಾ ಪಾಂಡವರೊಡನೆ ಏಕಾಂಗಿಯಾಗಿ ಯುದ್ಧಮಾಡುತ್ತಿರುವವನನ್ನು ಬಿಟ್ಟು ಬಿಡುತ್ತಾನೆಯೋ ಅಂತಹವನು ಐದು ತರಹದ ಪಾತಕ-ಉಪಪಾತಕಗಳಿಂದ ಕೂಡಿಕೊಳ್ಳುತ್ತಾನೆ.
ಅದ್ಯಾಚಾರ್ಯಸುತೋ ದ್ರೌಣಿಃ ನೈಕೋ ಯುಧ್ಯೇತ ಶತ್ರುಭಿಃ|
ಅನ್ಯೋನ್ಯಂ ಪರಿರಕ್ಷದ್ಭಿರ್ಯೋದ್ಧವ್ಯಂ ಸಹಿತೈಶ್ಚ ನಃ ॥11॥
ಇವತ್ತಿನ ಯುದ್ಧದಲ್ಲಿ ಅಶ್ವತ್ಥಾಮನು ಕೂಡ ಒಬ್ಬಂಟಿಯಾಗಿ ಶತ್ರುಗಳೊಡನೆ ಯುದ್ಧ ಮಾಡುವುದಿಲ್ಲ. ನಾವು ಪರಸ್ಪರವಾಗಿ ನಮ್ಮನ್ನು ರಕ್ಷಿಸಿಕೊಳ್ಳುತ್ತಾ ಜೊತೆಯಾಗಿಯೇ ಯುದ್ಧವನ್ನು ಮಾಡಬೇಕು.
ಸಂಜಯಃ
ಏವಂ ತೇ ಸಮಯಂ ಕೃತ್ವಾ ಸರ್ವೇ ತತ್ರ ಮಹಾರಥಾಃ|
ಮದ್ರಾಧಿಪಂ ಪುರಸ್ಕೃತ್ಯ ತೂರ್ಣಮಭ್ಯದ್ರವನ್ ಪರಾನ್ ॥12॥
ಸಂಜಯ ಹೀಗೆ ಆ ಎಲ್ಲಾ ಮಹಾಯೋಧರೂ ನಿಯಮಗಳನ್ನು ಮಾಡಿಕೊಂಡು ಶಲ್ಯನನ್ನು ಮುಂದಿರಿಸಿಕೊಂಡು ತಡಮಾಡದೇ ಶತ್ರುಗಳನ್ನು ಎದುರಿಸಿದರು.
ತಥೈವ ಪಾಂಡವಾ ರಾಜನ್ ವ್ಯೂಹ್ಯ ಸೈನ್ಯಂ ಮಹಾರಣೇ|
ಅಭ್ಯಯುಃ ಕೌರವಾನ್ ಯುದ್ಧೇ ಯೋತ್ಸ್ಯಮಾನಾಃ ಸಮಂತತಃ॥13॥
ಅದೇ ರೀತಿಯಲ್ಲಿ ಪಾಂಡವರೂ ಯುದ್ಧದಲ್ಲಿ ಸೈನ್ಯದ ವ್ಯೂಹಗಳನ್ನು ರಚಿಸಿಕೊಂಡು ಎಲ್ಲಾ ದಿಕ್ಕುಗಳಿಂದಲೂ ಯುದ್ಧಮಾಡುವವರಾಗಿ ಕೌರವರನ್ನು ಎದುರಿಸಿದರು.
ತದ್ಬಲಂ ಭರತಶ್ರೇಷ್ಠ ಕ್ಷುಬ್ಧಾರ್ಣವಸಮಸ್ವನಮ್|
ಸಮುದ್ಧತಪದಾತ್ಯಶ್ವಮುದ್ಧೂತರಥಕುಂಜರಮ್ ॥14॥
ಭರತೋತ್ತಮನೇ! ಪಾಂಡವರ ಸೇನೆಯು ಕ್ಷೋಭೆಗೆ ಒಳಪಟ್ಟ ಸಾಗರದ ಹಾಗೆ ಧ್ವನಿ ಮಾಡುತ್ತಿತ್ತು. ಆ ಸೈನ್ಯದಲ್ಲಿ ಬಲದಿಂದ ದೃಪ್ತರಾದ ಪದಾತಿಗಳೂ ಕುದುರೆ ಆಳುಗಳೂ, ಮದವೇರಿದ ಆನೆಗಳೂ, ಮೇಲೇರಿ ಬರುವ ರಥಗಳೂ ಇದ್ದವು.
ಧೃತರಾಷ್ಟ್ರಃ
ದ್ರೋಣಸ್ಯೇವ ಚ ಭೀಷ್ಮಸ್ಯ ರಾಧೇಯಸ್ಯ ಮಯಾ ಶ್ರುತಮ್|
ಪತನಂ ಶಂಸ ಮೇ ಭೂಯಃ ಶಲ್ಯಸ್ಯಾಥ ಸುತಸ್ಯ ಮೇ ॥15॥

ಧೃತರಾಷ್ಟ್ರ, ದ್ರೋಣ, ಭೀಷ್ಮ ಹಾಗೂ ಕರ್ಣನು ಯುದ್ಧದಲ್ಲಿ ಸೋತಿದ್ದನ್ನು ನಾನು ಕೇಳಿದ್ದೆ. ಅದೇ ರೀತಿಯಲ್ಲಿ ಶಲ್ಯನೂ ಹಾಗೂ ನನ್ನ ಮಗನಾದ ದುರ್ಯೋಧನನೂ ಯುದ್ಧದಲ್ಲಿ ಹೇಗೆ ಬಿದ್ದರು ಎಂಬುದನ್ನು ಮತ್ತೆ ಹೇಳು.
ಕಥಂ ರಣೇ ಹತಃ ಶಲ್ಯೋ ಧರ್ಮರಾಜೇನ ಸಂಜಯ |
ಭೀಮಸೇನೇನ ಬಲಿನಾ ಪುತ್ರೋ ದುರ್ಯೋಧನೋ ಮಮ ॥16॥
ಸಂಜಯನೇ, ಧರ್ಮರಾಜನಿಂದ ಶಲ್ಯನು ಹೇಗೆ ಸಾಯಿಸಲ್ಪಟ್ಟನು? ಬಲಶಾಲಿಯಾದ ಭೀಮಸೇನನು ನನ್ನ ಮಗನಾದ ದುರ್ಯೋಧನನನ್ನು ಹೇಗೆ ಕೊಂದನು? ವಿವರಿಸು.
ಸಂಜಯಃ
ಕ್ಷಯಂ ಮನುಷ್ಯದೇಹಾನಾಂ ರಥನಾಗಾಶ್ವಸಂಕ್ಷಯಮ್ |
ಶೃಣು ರಾಜನ್ ಸ್ಥಿರೋ ಭೂತ್ವಾ ಸಂಗ್ರಾಮಂ ಶಂಸತೋ ಮಮ ॥17॥
ಸಂಜಯ ರಾಜನೇ! ನಾನು ನಿನಗೆ ಯುದ್ಧಸ್ಥಿತಿಯನ್ನು ವಿವರಿಸುತ್ತಿದ್ದೇನೆ. ಮನುಷ್ಯರು ಯುದ್ಧದಲ್ಲಿ ಹೇಗೆ ಸಾಯುತ್ತಿದ್ದಾರೆ, ರಥಗಳು, ಅಶ್ವಗಳು ಹೇಗೆ ನಾಶವಾಗುತ್ತಿವೆ ಎಂಬುದನ್ನು ನಿನಗೆ ಹೇಳುತ್ತೇನೆ. ಯಾವುದೇ ವಿಕಾರಕ್ಕೆ ಒಳಗಾಗದೆ ಸ್ಥಿರವಾಗಿ ಇದ್ದುಕೊಂಡು ಕೇಳು.
ಆಶಾ ಬಲವತೀ ರಾಜನ್ ಪುತ್ರಾಣಾಂ ತೇಽಭವತ್ ತದಾ |
ಹತೇ ಭೀಷ್ಮೇ ಹತೇ ದ್ರೋಣೇ ಸೂತಪುತ್ರೇ ಚ ಪಾತಿತೇ ॥18॥
ಶಲ್ಯಃ ಪಾರ್ಥಾನ್ ರಣೇ ಸರ್ವಾನ್ ನಿಹನಿಷ್ಯತಿ ಪಾರ್ಥಿವಃ |
ತಾಮಾಶಾಂ ಹೃದಯೇ ಕೃತ್ವಾ ಸಮಾಶ್ವಾಸ್ಯ ಚ ಭಾರತ ॥19॥
ರಾಜನೇ! ಭೀಷ್ಮ, ದ್ರೋಣ, ಕರ್ಣರು ಯುದ್ಧದಲ್ಲಿ ಮಡಿದಾಗ ನಿನ್ನ ಮಕ್ಕಳಿಗೆ ಶಲ್ಯರಾಜನು ಎಲ್ಲಾ ಪಾಂಡವರನ್ನು ಯುದ್ಧದಲ್ಲಿ ಸಾಯಿಸುವನು ಎಂಬುದಾಗಿ ಬಲವತ್ತಾದ ಆಸೆಯಿತ್ತು. ಭರತಕುಲೋದ್ಭವನೇ! ಆ ಆಸೆಯಿಂದಲೇ ಅವರು ತಮ್ಮನ್ನು ತಾವು ಸಮಾಧಾನಪಡಿಸಿಕೊಂಡರು.
ಮದ್ರರಾಜಂ ಚ ಸಮರೇ ಸಮಾಶ್ರಿತ್ಯ ಮಹಾರಥಮ್ |
ನಾಥವಂತಮಿವಾತ್ಮಾನಮ್ ಅಮನ್ಯತ ಸುತಸ್ತವ ॥20॥
ನಿನ್ನ ಮಗ ದುರ್ಯೋಧನನು ಮಹಾರಥನಾದ ಶಲ್ಯನನ್ನು ಆಶ್ರಯಿಸಿಕೊಂಡು ತನಗೆ ರಕ್ಷಕನಿದ್ದಾನೆ ಎಂಬ ವಿಶ್ವಾಸವನ್ನು ಹೊಂದಿದನು.
ಯದಾ ಕರ್ಣೇ ಹತೇ ಪಾರ್ಥಾಃ ಸಿಂಹನಾದಂ ಪ್ರಚಕ್ರಿರೇ |
ತದಾ ರಾಜನ್ ಧಾರ್ತರಾಷ್ಟ್ರಾನ್ ಆವಿವೇಶ ಮಹದ್ಭಯಮ್ ॥21॥
ರಾಜನೆ! ಹಿಂದೆ ಕರ್ಣನು ಸತ್ತು ಬಿದ್ದಾಗ ಪಾಂಡವರು ಸಂತೋಷದಿಂದ ಸಿಂಹಗರ್ಜನೆಯನ್ನು ಮಾಡಿದ್ದರು. ಅದನ್ನು ಕೇಳಿಸಿಕೊಂಡಾಗ ನಿನ್ನ ಕಡೆಯವರಲ್ಲಿ ಬಹಳವಾದ ಭಯವು ಸೇರಿಕೊಂಡಿತ್ತು.
ತಾನ್ ಸಮಾಶ್ವಾಸಯಾಮಾಸ ಮದ್ರರಾಜೋ ಮಹಾರಥಃ |
ವ್ಯೂಹ್ಯ ವ್ಯೂಹಂ ಮಹಾರಾಜ ಸರ್ವತೋಭದ್ರಮೃದ್ಧಿಮತ್ ॥22॥
ಅಂತಹ ಭಯಗ್ರಸ್ತರಾದ ನಿನ್ನ ಕಡೆಯವರನ್ನು ಮಹಾರಥನಾದ ಶಲ್ಯನು ಸಮಾಧಾನಪಡಿಸಿದ. ಮಹಾರಾಜ! ಅದಕ್ಕಾಗಿ ಉನ್ನತವಾದ ಬೇರೆ ಬೇರೆ ವ್ಯೂಹಗಳನ್ನು ಎಲ್ಲಾ ಕಡೆಯೂ ರಚಿಸಿದನು.
ಪ್ರತ್ಯುದ್ಯಾತೋ ರಣೇ ಪಾರ್ಥಾನ್ ಮದ್ರರಾಜಃ ಪ್ರತಾಪವಾನ್ |
ವಿಧೂನ್ವನ್ ಕಾರ್ಮುಕಂ ಚಿತ್ರಂ ಭಾರಘ್ನಂ ವೇಗವತ್ತರಮ್ ॥23॥
ಪ್ರತಾಪಿಯಾದ ಶಲ್ಯನು ಬಹಳವೇಗದಿಂದ ಪ್ರಯೋಗಿಸಬಹುದಾದ, ಎಂತಹ ಹೊಡೆತವನ್ನೂ ಸಹಿಸಿಕೊಳ್ಳುವ ವಿಚಿತ್ರವಾದ ಬಿಲ್ಲನ್ನು ಠೇಂಕರಿಸುತ್ತಾ ಪಾಂಡವರನ್ನು ಎದುರುಗೊಂಡನು.
ರಥಪ್ರವರಮಾಸ್ಥಾಯ ಸೈನ್ಯಪಾರ್ಶ್ವೇ ಮಹಾರಥಃ |
ತಸ್ಯ ಸೀತಾ ಮಹಾರಾಜ ರಥಸ್ಥಾಶೋಭಯದ್ ರಥಮ್ ॥24॥
ಸೈನ್ಯದ ಒಂದು ಪಾರ್ಶ್ವದಲ್ಲಿ ಮಹಾರಥನಾದ ಶಲ್ಯನು ಶ್ರೇಷ್ಠವಾದ ರಥದಮೇಲೆ ನಿಂತಿದ್ದಾನೆ. ಮಹಾರಾಜನೇ! ಅವನ ರಥದ ಮೇಲೆ ಚಿನ್ನದ ಫಲಕದಲ್ಲಿ ನೇಗಿಲಿನಿಂದ ಕೆತ್ತಿದ ರೇಖೆಗಳು ರಥಕ್ಕೆ ವಿಶೇಷ ಶೋಭೆಯನ್ನು ಉಂಟುಮಾಡುತ್ತಿದ್ದವು.
ಸ ತೇನ ಸಂವೃತೋ ರಾಜಾ ಬಲೇನಾಮಿತ್ರಕರ್ಶನಃ |
ತಸ್ಥೌ ಶೂರೋ ಮಹಾರಾಜ ಪುತ್ರಾಣಾಂ ತೇ ಭಯಪ್ರಣುತ್ ॥25॥
ಮಹಾರಾಜನೇ! ಶತ್ರುಗಳನ್ನು ಸದೆಬಡಿಯುವ ಶಲ್ಯನು ಸೈನ್ಯದಿಂದ ಸುತ್ತುವರಿಯಲ್ಪಟ್ಟಿದ್ದಾನೆ. ನಿನ್ನ ಮಕ್ಕಳ ಭಯವನ್ನು ಕಳೆಯುವ ಸಾಮರ್ಥ್ಯವುಳ್ಳ ಈ ಶೂರನಾದ ಶಲ್ಯನು ಯುದ್ಧಕ್ಕೆ ಸನ್ನದ್ಧನಾಗಿ ನಿಂತುಕೊಂಡನು.
ಪೂರ್ವತೋ ಮದ್ರರಾಜೋಽಭೂನ್ಮುಖಂ ವ್ಯೂಹಸ್ಯ ದಂಸಿತಃ |
ಮದ್ರಕೈಃ ಸಹಿತೋ ವೀರೈಃ ಕರ್ಣಪುತ್ರೈಶ್ಚ ರಕ್ಷಿತಃ ॥26॥
ಕವಚಧಾರಿಯಾದ ಶಲ್ಯನು ಸೈನ್ಯದ ವ್ಯೂಹದ ಪೂರ್ವಭಾಗದಲ್ಲಿ ಮುಖಭಾಗದಲ್ಲಿ ನಿಂತುಕೊಂಡನು. ಅವನ ಸುತ್ತ ವೀರರಾದ ಮದ್ರದೇಶದವರು ಹಾಗೂ ಕರ್ಣನ ಮಕ್ಕಳು ರಕ್ಷಣೆಗಾಗಿ ನಿಂತರು.
ಸವ್ಯೇಽಭೂತ್ ಕೃತವರ್ಮಾ ತು ತ್ರಿಗರ್ತೈಃ ಪರಿವಾರಿತಃ |
ಗೌತಮೋ ದಕ್ಷಿಣೇ ಪಾರ್ಶ್ವೇ ಶಕೈಶ್ಚ ಯವನೈಃ ಸಹ ॥27॥
ತ್ರಿಗರ್ತದೇಶದ ಯೋಧರಿಂದ ಸುತ್ತುವರಿಯಲ್ಪಟ್ಟ ಕೃತವರ್ಮನು ಸೈನ್ಯದ ಎಡಭಾಗದಲ್ಲಿ ನಿಂತನು. ಶಕರು ಮತ್ತು ಯವನರ ಜೊತೆಗೆ ಕೃಪಾಚಾರ್ಯನು ಸೈನ್ಯದ ದಕ್ಷಿಣಭಾಗದಲ್ಲಿ ನಿಂತನು.

ಅಶ್ವತ್ಥಾಮಾ ಪೃಷ್ಠತೋಽಭೂತ್ ಕಾಂಭೋಜೈಃ ಪರಿವಾರಿತಃ |
ದುರ್ಯೋಧನೋಽಭವನ್ಮಧ್ಯೇ ರಕ್ಷಿತಃ ಕುರುಪುಂಗವೈಃ ॥28॥
ಕಾಂಭೋಜವೀರರ ಜೊತೆಗೆ ಅಶ್ವತ್ಥಾಮನು ಸೈನ್ಯವ್ಯೂಹದ ಹಿಂಬದಿಯಲ್ಲಿ ನಿಂತುಕೊಂಡನು. ಈ ವ್ಯೂಹದ ಮಧ್ಯಭಾಗದಲ್ಲಿ ಕುರುಶ್ರೇಷ್ಠರಿಂದ ರಕ್ಷಿತನಾದ ದುರ್ಯೋಧನನು ಇದ್ದನು.
ಹಯಾನೀಕೇನ ಮಹತಾ ಸೌಬಲಶ್ಚಾಪಿ ಸಂವೃತಃ |
ಪ್ರಯಯೌ ಸರ್ವಸೈನ್ಯಾನಿ ಕೈತವ್ಯಶ್ಚ ಮಹಾರಥಃ ॥29॥
ಶಕುನಿಯು ಬೃಹತ್ಸಂಖ್ಯೆಯ ಕುದುರೆಯೇರಿದ ಸೈನಿಕರಿಂದ ಸುತ್ತುವರಿಸಿಕೊಂಡು ಯುದ್ಧಕ್ಕೆ ನಡೆದ. ಹಾಗೆಯೇ ಮಹಾರಥನಾದ ಉಲೂಕನು ಎಲ್ಲಾ ಸೇನೆಯ ಜೊತೆಗೆ ಯುದ್ಧದಲ್ಲಿ ಮುನ್ನಡೆದ.
ಪಾಂಡವೇಯಾ ಮಹೇಷ್ವಾಸಾ ವ್ಯೂಹ್ಯ ಸೈನ್ಯಮರಿಂದಮಾಃ |
ತ್ರಿಧಾ ಭೂತಾ ಮಹಾರಾಜ ತವ ಸೈನ್ಯಮಭಿದ್ರವನ್ ॥30॥
ಮಹಾರಾಜನೇ! ಶತ್ರುಗಳನ್ನು ಬಗ್ಗುಬಡಿಯುವ ಸಾಮರ್ಥ್ಯವುಳ್ಳ ಮಹಾಬಿಲ್ಗಾರರಾದ ಪಾಂಡವರ ಸೈನಿಕರೂ ವ್ಯೂಹವನ್ನು ರಚಿಸಿಕೊಂಡು ಮೂರು ವಿಭಾಗದಲ್ಲಿ ಬೇರ್ಪಟ್ಟು ನಿನ್ನ ಸೈನ್ಯವನ್ನು ಎದುರಿಸಿದರು.
ಧೃಷ್ಟದ್ಯುಮ್ನಃ ಶಿಖಂಡೀ ಚ ಸಾತ್ಯಕಿಶ್ಚ ಮಹಾರಥಃ |
ಶಲ್ಯಸ್ಯ ವಾಹಿನೀಂ ತೂರ್ಣಮಭಿದುದ್ರುವುರಾಹವೇ ॥31॥
ಆ ಮೂರುವಿಭಾಗಗಳ ನೇತಾರರಾದ ಧೃಷ್ಟದ್ಯುಮ್ನ, ಶಿಖಂಡಿ ಹಾಗೂ ಸಾತ್ಯಕಿ ಇವರು ಕೂಡಲೇ ಯುದ್ಧದಲ್ಲಿ ಶಲ್ಯನ ಸೈನ್ಯವನ್ನು ಎದುರಿಸಲಿಕ್ಕಾಗಿ ಎಲ್ಲ ಕಡೆಗಳಿಂದಲೂ ಆಕ್ರಮಣ ಮಾಡಿದರು.
ತತೋ ಯುಧಿಷ್ಠಿರೋ ರಾಜಾ ಸ್ವೇನಾನೀಕೇನ ಸಂವೃತಃ |
ಶಲ್ಯಮೇವಾಭಿದುದ್ರಾವ ಜಿಘಾಂಸುರ್ಭರತರ್ಷಭ ॥32॥
ಭಾರತೋತ್ತಮನೇ! ಅನಂತರ ರಾಜನಾದ ಯುಧಿಷ್ಠಿರನು ತನ್ನ ಸೈನ್ಯದಿಂದ ಸುತ್ತುವರಿಯಲ್ಪಟ್ಟವನಾಗಿ ಶಲ್ಯನ ಮೇಲೆಯೇ ಏರಿಬಂದನು. ಅವನಿಗೆ ಶಲ್ಯನನ್ನು ಕೊಲ್ಲಬೇಕೆಂದು ಬಲವಾದ ಇಚ್ಛೆಯು ಉಂಟಾಗಿತ್ತು.
ಹಾರ್ದಿಕ್ಯಂ ತು ಮಹೇಷ್ವಾಸಃ ಅರ್ಜುನಃ ಶತ್ರುಪೂಗಹಾ |
ಸಂಶಪ್ತಕಗಣಾಂಶ್ಚೈವ ವೇಗಿತೋಽಭಿವಿದುದ್ರುವೇ ॥33॥
ಶತ್ರುಗಳ ಸಮೂಹವನ್ನೂ ಸಾಯಿಸುವ ಅರ್ಜುನನು ಮಹಾ ಬಿಲ್ಗಾರನಾಗಿದ್ದನು. ಅವನು ಕೃತವರ್ಮನನ್ನು ಎದುರಿಸಿದನು. ಹಾಗೆಯೇ ಸಂಶಪ್ತಕಗಣವನ್ನೂ ವೇಗದಿಂದ ಎದುರಿಸಿದನು.
ಗೌತಮಂ ಭೀಮಸೇನೋಽಪಿ ಸೋಮಕಾಶ್ಚ ಮಹಾರಥಾಃ |
ಅಭ್ಯದ್ರುವಂತ ರಾಜೇಂದ್ರ ಜಿಘಾಂಸಂತಃ ಪರಾನ್ ಯುಧಿ ॥34॥
ಕೃಪಾಚಾರ್ಯನನ್ನು ಭೀಮನು ಎದುರಿಸಿದನು. ಭೀಮನ ಜೊತೆಗೆ ಮಹಾರಥರಾದ ಸೋಮಕರೂ ಸೇರಿಕೊಂಡರು. ರಾಜೇಂದ್ರನೇ! ಯುದ್ಧದಲ್ಲಿ ಅವರು ಶತ್ರುಗಳನ್ನು ಹಿಂಸಿಸುತ್ತಿದ್ದರು.
ಮಾದ್ರೀಪುತ್ರೌ ಚ ಶಕುನಿಮುಲೂಕಂ ಚ ಮಹಾರಥಮ್ |
ಸಸೈನ್ಯೌ ಸಹಸೈವೋಭಾವುಪತಸ್ಥತುರಾಹವೇ ॥35॥
ನಕುಲ-ಸಹದೇವರು ಶಕುನಿ ಮತ್ತು ಉಲೂಕನನ್ನು ಎದುರಿಸಿದರು. ಇಬ್ಬರೂ ಸೈನ್ಯವನ್ನು ಹೊಂದಿದ್ದರು. ಇಬ್ಬರೂ ಒಟ್ಟಿಗೆನೇ ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿದರು.
ತಥೈವಾಯುತಶೋ ಯೋಧಾಃ ತಾವಕಾಃ ಪಾಂಡವಾನ್ ರಣೇ |
ಅಭ್ಯದ್ರುವಂತ ಸಂಕ್ರುದ್ಧಾ ವಿವಿಧಾಯುಧಪಾಣಯಃ ॥36॥
ನಿನ್ನ ಹತ್ತು ಸಾವಿರದಷ್ಟು ಯೋಧರು ಕೈಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಬಹಳ ಕುಪಿತರಾಗಿ ಪಾಂಡವರನ್ನು ವೇಗವಾಗಿ ಎದುರಿಸಿದರು.
ಧೃತರಾಷ್ಟ್ರಃ
ಹತೇ ಭೀಷ್ಮೇ ಮಹೇಷ್ವಾಸೇ ದ್ರೋಣೇ ಕರ್ಣೇ ಜಯದ್ರಥೇ |
ಕುರುಷ್ವಲ್ಪಾವಶಿಷ್ಟೇಷು ಪಾಂಡವೇಷು ಚ ಸಂಯುಗೇ ॥37॥
ಧೃತರಾಷ್ಟ್ರ ಮಹಾಬಿಲ್ಗಾರನಾದ ಭೀಷ್ಮ, ದ್ರೋಣ, ಕರ್ಣ ಹಾಗೂ ಜಯದ್ರಥ ಇವರೆಲ್ಲರೂ ಸತ್ತ ಮೇಲೆ ರಣರಂಗದಲ್ಲಿ ಕೌರವರ ಮತ್ತು ಪಾಂಡವರ ಸೈನ್ಯಗಳು ಸ್ವಲ್ಪವೇ ಉಳಿದವು.
ಸಂರಬ್ಧೇಷು ಚ ಪಾರ್ಥೇಷು ಪರಾಕ್ರಾಂತೇಷು ಸಂಜಯ |
ಮಾಮಕಾನಾಂ ಪರೇಷಾಂ ಚ ಕಿಂ ಶಿಷ್ಟಮಭವದ್ ಬಲಮ್ ॥38॥
ಸಂಜಯನೇ! ಪಾಂಡವರು ಕೋಪದಿಂದ ಯುದ್ಧಮಾಡಿ ಪರರ ಮೇಲೆ ಆಕ್ರಮಣ ಮಾಡಿದಾಗ ನಮ್ಮ ಕಡೆಯಲ್ಲಿ ಮತ್ತು ಶತ್ರುಕಡೆಯಲ್ಲಿ ಎಷ್ಟು ಸೈನ್ಯವು ಉಳಿದುಕೊಂಡಿತ್ತು?
ಸಂಜಯಃ
ಯಥಾ ವಯಂ ಪರೇ ರಾಜನ್ ಯುದ್ಧಾಯ ಸಮವಸ್ಥಿತಾಃ |
ಯಾವಚ್ಚಾಸೀದ್ ಬಲಂ ಶಿಷ್ಟಂ ಸಂಗ್ರಾಮೇ ತನ್ನಿಬೋಧ ಮೇ ॥39॥
ಸಂಜಯ ರಾಜನೇ! ನಾವು ಶತ್ರುಗಳೊಡನೆ ಯುದ್ಧಕ್ಕಾಗಿ ಸೇರಿದಾಗ ಎಷ್ಟು ಸೈನ್ಯ ಉಳಿಯಿತು ಎಂಬುದನ್ನು ಹೇಳುತ್ತೇನೆ. ಕೇಳು.
ಏಕಾದಶಸಹಸ್ರಾಣಿ ರಥಾನಾಂ ಭರತರ್ಷಭ |

ದಶ ದಂತಿಸಹಸ್ರಾಣಿ ಸಪ್ತ ಚೈವ ಶತಾನಿ ಚ ॥40॥
ಪೂರ್ಣೇ ಶತಸಹಸ್ರೇ ದ್ವೇ ಹಯಾನಾಂ ಭರತರ್ಷಭ।
ಪತ್ತಿ ಕೋಟ್ಯಸ್ತಥಾ ತಿಸ್ರೋ ಬಲಮೇತತ್ ತವಾನಘ ॥41॥
ಭರತೋತ್ತಮನೇ! ಪಾಪದೂರನೇ! ಹನ್ನೊಂದು ಸಾವಿರ ರಥಗಳು, ಹತ್ತು ಸಾವಿರದ ಏಳುನೂರು ಆನೆಗಳು, ಇನ್ನೂರು ಸಾವಿರ (2 ಲಕ್ಷ) ಕುದುರೆಗಳು, ಮೂರುಕೋಟಿಸಂಖ್ಯೆಯ ಪದಾತಿಗಳು- ಇಷ್ಟು ನಿನ್ನ ಕಡೆಯಲ್ಲಿ ಇತ್ತು.
ರಥಾನಾಂ ಷಟ್ ಸಹಸ್ರಾಣಿ ಷಟ್ ಸಹಸ್ರಾಶ್ಚ ಕುಂಜರಾಃ।
ದಶ ಚಾಶ್ವಸಹಸ್ರಾಣಿ ಪತ್ತಿಕೋಟಿಶತಾನಿ ಚ ॥42॥
ಏತದ್ ಬಲಂ ಪಾಂಡವಾನಾಮಭವಚ್ಚೇಷಮಾಹವೇ।
ಏತ ಏವ ಸಮಾಜಗ್ಮುರ್ಯುದ್ಧಾಯ ಭರತರ್ಷಭ ॥43॥
ಪಾಂಡವರ ಕಡೆಯಲ್ಲಿ ಆರು ಸಾವಿರ ರಥಗಳು, ಆರು ಸಾವಿರ ಆನೆಗಳು, ಹತ್ತುಸಾವಿರ ಕುದುರೆಗಳು, ನೂರು ಕೋಟಿ ಪದಾತಿಗಳು ಇದ್ದರು. ಇದು ನಮ್ಮ ಮತ್ತು ಪಾಂಡವರ ಕಡೆಯಲ್ಲಿ ಉಳಿದುಕೊಂಡಿರುವ ಸೈನ್ಯದ ಪ್ರಮಾಣ. ಭಾರತೋತ್ತಮನೇ! ಇದೇ ಸೈನ್ಯವು ಯುದ್ಧಕ್ಕೆ ಹೊರಟಿತು.
ಏವಂ ವಿಭಜ್ಯ ರಾಜೇಂದ್ರ ಮದ್ರರಾಜಮತೇ ಸ್ಥಿತಾಃ।
ಪಾಂಡವಾನ್ ಪ್ರತ್ಯುಪಾಜಗ್ಮುಃ ಜಯಗೃದ್ಧ್ರಾಃ ಪ್ರಮನ್ಯವಃ ॥44॥
ಹೀಗೆ ಶಲ್ಯನ ವಶದಲ್ಲಿ ಇದ್ದ ಸೈನ್ಯವು ವಿಭಾಗಗೊಂಡು ಪಾಂಡವರ ಮೇಲೆ ಆಕ್ರಮಣ ಮಾಡಿತು. ಅವರೆಲ್ಲರೂ ಬಹಳ ಕೋಪಿಷ್ಠರಾಗಿದ್ದರು ಹಾಗೂ ಜಯವನ್ನು ಪಡೆಯಲೇಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ್ದರು.
ತಥೈವ ಪಾಂಡವಾಃ ಶೂರಾಃ ಸಮರೇ ಜಿತಕಾಶಿನಃ।
ಉಪಯಾತಾ ನರವ್ಯಾಘ್ರಾಃ ಪಾಂಚಾಲಾಶ್ಚ ಯಶಸ್ವಿನಃ ॥45॥
ಅದೇ ರೀತಿಯಲ್ಲಿ ಶೂರರಾದ ಪಾಂಡವರೂ ಜಯವನ್ನು ಅಪೇಕ್ಷಿಸಿಕೊಂಡು ಯುದ್ಧಕ್ಕೆ ಬಂದರು. ಅವರೆಲ್ಲ ಪುರುಷಶ್ರೇಷ್ಠರಾಗಿದ್ದರು. ಕೀರ್ತಿಶಾಲಿಗಳಾದ ಪಾಂಚಾಲರೂ ಯುದ್ಧಕ್ಕೆ ಬಂದರು.
ಏವಮೇತೇ ಬಲೌಘೇನ ಪರಸ್ಪರಜಯೈಷಿಣಃ।
ಉಪಯಾತಾ ಮಹಾವ್ಯಾಘ್ರಾಃ ಪೂರ್ವಾಂ ಸಂಧ್ಯಾಂ ಪ್ರತಿ ಪ್ರಭೋ ॥
ಪ್ರಭುವೇ! ಪ್ರಾತಃಸಂಧ್ಯೆಯ ಸಮಯದಲ್ಲಿ ಹೀಗೆ ಇವರೆಲ್ಲರೂ ಪರಸ್ಪರವಾಗಿ ಜಯವನ್ನು ಬಯಸುತ್ತಾ, ಸೈನ್ಯದ ಜೊತೆಗೆ ಹತ್ತಿರಕ್ಕೆ ಬಂದರು. ಅವರೆಲ್ಲಾ ಮಹಾವೀರರಾಗಿದ್ದರು.
ತತಃ ಪ್ರವವೃತೇ ಯುದ್ಧಂ ಘೋರರೂಪಂ ಭಯಾನಕಮ್।
ತಾವಕಾನಾಂ ಪರೇಷಾಂ ಚ ನಿಘ್ನತಾಮಿತರೇತರಮ್ ॥47॥
ತದನಂತರ ಬಹಳ ಭಯವನ್ನುಂಟುಮಾಡುವ ಘೋರವಾದ ಯುದ್ಧವು ನಡೆಯಿತು. ನಿನ್ನ ಕಡೆಯವರು ಮತ್ತು ಶತ್ರುಕಡೆಯವರು ಪರಸ್ಪರವಾಗಿ ಹೊಡೆದುಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಲ್ಯಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಹದಿನೆಂಟನೆಯ ದಿನದ ಯುದ್ಧದ ಆರಂಭ. ಸಂಕುಲಯುದ್ಧ.
ಸಂಜಯಃ
ತತಃ ಪ್ರವವೃತೇ ಯುದ್ಧಂ ಭೀರೂಣಾಂ ಭಯವರ್ಧನಮ್।
ಸೃಂಜಯೈಃ ಸಹ ರಾಜೇಂದ್ರ ದೇವಾಸುರರಣೋಪಮಮ್ ॥1॥
ಸಂಜಯ ರಾಜೇಂದ್ರನೇ! ಅನಂತರ ಕೌರವರಿಗೂ ಸೃಂಜಯರಿಗೂ ಘೋರವಾದ ಹಾಗೂ ಭಯವನ್ನು ಉಂಟುಮಾಡುವ ಯುದ್ಧವು ಆರಂಭಗೊಂಡಿತು. ಅದು ದೇವತೆಗಳು ಮತ್ತು ಅಸುರರ ನಡುವೆ ನಡೆದ ಯುದ್ಧಕ್ಕೆ ಸಮಾನವಾಗಿತ್ತು.
ನರೌಘಾಶ್ಚ ಗಜೌಘಾಶ್ಚ ವಾಜಿನಶ್ಚ ಸಹಸ್ರಶಃ।
ಸಾದಿನಶ್ಚ ಪರಾಕ್ರಾಂತಾಃ ಸಮಾಜಗ್ಮುಃ ಪರಸ್ಪರಮ್ ॥2॥
ಕಾಲಾಳುಗಳು, ಗಜಸೈನ್ಯ, ಹಯಸೈನ್ಯ ಹಾಗೂ ರಥಸೈನ್ಯವು ಸಾವಿರಾರು ಸಂಖ್ಯೆಯಲ್ಲಿ ಪರಸ್ಪರವಾಗಿ ಪರಾಕ್ರಮವನ್ನು ತೋರುತ್ತಾ ಎದುರುಗೊಂಡವು.
ನಾಗಾನಾಂ ಭೀಮರೂಪಾಣಾಂ ದ್ರವತಾಂ ನಿಃಸ್ವನೋ ಮಹಾನ್।
ಅಶ್ರೂಯತ ಯಥಾ ಕಾಲೇ ಜಲದಾನಾಂ ನಭಃಸ್ಥಲೇ ॥3॥
ಭಯವನ್ನುಂಟು ಮಾಡುವ ಆಕಾರವುಳ್ಳ ಗಜಗಳು ಓಡುವಾಗ ದೊಡ್ಡದಾಗಿ ಶಬ್ದವು ಉಂಟಾಗುತ್ತಿತ್ತು. ಅದು ಮಳೆಗಾಲದಲ್ಲಿ ಮೋಡಗಳಿಂದ ಉಂಟಾಗುವ ಧ್ವನಿಯಂತೆ ಇತ್ತು.
ನಾಗೈರಭ್ಯಾಹತಾಃ ಕೇಚಿತ್ ಸರಥಾ ರಥಿನೋ ಭೃಶಮ್।
ವ್ಯದ್ರವಂತ ರಣೇ ಭೀತಾ ದ್ರಾವ್ಯಮಾಣಾ ಮದೋತ್ಕಟೈಃ ॥4॥
ರಥದ ಮೇಲೆ ಕುಳಿತು ಯುದ್ಧಮಾಡುತ್ತಿದ್ದ ಕೆಲವು ಯೋಧರು ಗಜಗಳ ಆಕ್ರಮಣಕ್ಕೆ ಒಳಗಾದರು. ಮದಭರಿತವಾದ ಆನೆಗಳು

ಅಟ್ಟಿಸಿಕೊಂಡು ಬರುತ್ತಿರಲು ಇವರು ಹೆದರಿ ರಥಸಹಿತವಾಗಿ ಯುದ್ಧದಿಂದ ಓಡಿ ಹೋದರು.
ಹಯೌಘಾನ್ ಪಾದರಕ್ಷಾಂಶ್ಚ ರಥಿನಸ್ತತ್ರ ಶಿಕ್ಷಿತಾಃ |
ಶರೈಃ ಸಂಪ್ರೇಷಯಾಮಾಸುಃ ಪರಲೋಕಾಯ ಭಾರತ ॥5॥
ಭರತಕುಲೋದ್ಭವನೇ! ಆ ಯುದ್ಧಸ್ಥಳದಲ್ಲಿ ಯುದ್ಧದಲ್ಲಿ ಒಳ್ಳೆಯ ನೈಪುಣ್ಯವನ್ನು ಹೊಂದಿದ ರಥಿಕರು ಕುದುರೆ-ಆಳುಗಳನ್ನು ಮತ್ತು ಕಾಲಾಳುಗಳನ್ನು ಕೊಂದು ಪರಲೋಕಕ್ಕೆ ಕಳುಹಿಸಿದರು.
ಸಾದಿನಃ ಶಿಕ್ಷಿತಾ ರಾಜನ್ ಪರಿವಾರ್ಯ ಮಹಾರಥಾನ್ |
ವಿಚರಂತೋ ರಣೇ ಹ್ಯಘ್ನನ್ ಪ್ರಾಸಶಕ್ತ್ಯಾದಿಭಿಸ್ತದಾ ॥6॥
ರಾಜನೇ! ಆಗ ಶಿಕ್ಷಿತರಾದ ರಥಿಕರು ರಣರಂಗದಲ್ಲಿ ಸುತ್ತಾಡುತ್ತಾ, ಮಹಾರಥರನ್ನು ಆಕ್ರಮಿಸಿ ತಮ್ಮ ಪ್ರಾಸಾಯುಧ, ಶಕ್ತ್ಯಾಯುಧಗಳಿಂದ ಅವರನ್ನು ಸಾಯಿಸಿದರು.
ಧನ್ವಿನಃ ಪುರುಷಾಃ ಕೇಚಿತ್ ಸನ್ನಿವಾರ್ಯ ಮಹಾರಥಮ್ |
ಏಕಂ ಬಹವ ಆಸಾದ್ಯ ಪ್ರೈಷಯನ್ ವೈ ಯಮಕ್ಷಯಮ್ ॥7॥
ಕೆಲವು ಯೋಧರು ಧನುರ್ಧಾರಿಗಳಾಗಿ ಒಬ್ಬ ಮಹಾರಥನನ್ನು ಗುಂಪಾಗಿ ಆಕ್ರಮಿಸಿ ಯಮಪುರಿಗೆ ಕಳುಹಿಸಿದರು.
ನಾಗಂ ರಥಗತಾಶ್ಚಾನ್ಯೇ ಪರಿವಾರ್ಯ ಮಹಾರಥಾಃ |
ಸೋತ್ತರಾಯುಧಿನಂ ಜಘ್ನುಃ ದ್ರವಮಾಣಾ ಮಹಾರಥಾಃ ॥8॥
ಕೆಲವು ಮಹಾರಥರು ರಥಗಳನ್ನೇರಿಕೊಂಡು ಆನೆಗಳ ಮೇಲೆ ಆಕ್ರಮಣ ಮಾಡಿದರು. ವೇಗವಾಗಿ ಸಂಚರಿಸುತ್ತಲೇ ತಮ್ಮ ಮುಂದಿದ್ದ ಯೋಧರನ್ನು ಹೊಡೆದರು.
ತಥಾ ವರೂಥಿನಃ ಕ್ರುದ್ಧಾ ವಿಕಿರಂತಃ ಶರಾನ್ ಬಹೂನ್ |
ನಾಗಾಃ ಜಘ್ನುರ್ಮಹಾರಾಜ ಪರಿವಾರ್ಯ ಸಮಂತತಃ ॥9॥
ಮಹಾರಾಜನೇ! ಗುಂಪಾಗಿದ್ದ ಯೋಧರು ಕೋಪದಿಂದ ಬಹಳ ಬಾಣಗಳನ್ನು ಬಿಡುತ್ತಾ ಸುತ್ತಲೂ ಸುತ್ತುವರಿದು ಹೊಡೆದರು.
ನಾಗೋ ನಾಗಮಭಿದ್ರುತ್ಯ ರಥೀ ಚ ರಥಿನಂ ರಣೇ |
ಶಕ್ತಿತೋಮರನಾರಾಚೈಃ ನಿರ್ಜಘ್ನುಃ ತತ್ರ ತತ್ರ ಹ ॥10॥
ಗಜಗಳು ಗಜಗಳನ್ನು ಅಟ್ಟಿಸಿಕೊಂಡು ಹೋಗುತ್ತಿದ್ದವು. ರಥಿಕರು ರಥಿಕರನ್ನು ಹಿಂಬಾಲಿಸಿಕೊಂಡು ಅಲ್ಲಲ್ಲಿ ಶಕ್ತ್ಯಾಯುಧ, ತೋಮರ, ಬಾಣಗಳಿಂದ ಹೊಡೆದಾಡಿಕೊಂಡರು.
ಪಾದಾತಾನವಮರ್ದಂತೋ ರಥವಾರಣವಾಜಿನಃ |
ರಥಮಧ್ಯೇ ವ್ಯದೃಶ್ಯಂತ ಕುರ್ವಂತೋ ಮಹದಾಕುಲಮ್ ॥11॥
ರಥ, ಆನೆ, ಕುದುರೆಗಳಲ್ಲಿ ಹತ್ತಿಕುಳಿತು ಯುದ್ಧಮಾಡುವವರು ಕಾಲಾಳುಗಳನ್ನು ಹೊಡೆಯುತ್ತಿದ್ದರು. ರಥಗಳ ಸಮೂಹದ ಮಧ್ಯದಲ್ಲಿ ಇಂತಹ ಯೋಧರು ಕಾಣಿಸಿಕೊಂಡು ಬಹಳವಾದ ವ್ಯಾಕುಲತೆಯನ್ನೇ ಉಂಟುಮಾಡಿದರು.
ಹಯಾಶ್ಚ ಪರ್ಯಧಾವಂತ ಚಾಮರೈರುಪಶೋಭಿತಾಃ |
ಹಂಸಾ ಹಿಮವತಃ ಪ್ರಸ್ಥೇ ಪಿಬಂತ ಇವ ಮೇದಿನೀಮ್ ॥12॥
ಶ್ವೇತವರ್ಣದ ಹಂಸಪಕ್ಷಿಗಳು ಹಿಮಾಲಯದ ಪ್ರದೇಶಗಳಲ್ಲಿ ಎಲ್ಲಾ ಕಡೆಯು ಸಂಚರಿಸುತ್ತಿರುತ್ತವೆ. ಅದೇ ರೀತಿಯಲ್ಲಿ ರಣಭೂಮಿಯಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸುತ್ತಿರುವ ಕುದುರೆಗಳು ಕಾಣಿಸಿಕೊಂಡವು. ಅವುಗಳಿಗೆ ಚಾಮರಗಳನ್ನು ಕಟ್ಟಿದ್ದರು. ಇದರಿಂದಾಗಿ ಬಹಳ ಸುಂದರವಾಗಿ ಕಾಣಿಸುತ್ತಿದ್ದವು.
ತೇಷಾಂ ತು ವಾಜಿನಾಂ ಭೂಮಿಃ ಖುರೈಶ್ಚಿತ್ರಾ ವಿಶಾಂಪತೇ |
ಅಶೋಭತ ಯಥಾ ನಾರೀ ಕರಜೈಃ ಕ್ಷತವಿಕ್ಷತಾ ॥13॥
ರಾಜನೇ! ಕುದುರೆಗಳ ಸಂಚಾರದಿಂದಾಗಿ ಅವುಗಳ ಗೊರಸಿನ ಆಘಾತಕ್ಕೆ ಒಳಗಾದ ಯುದ್ಧಭೂಮಿಯು ಪ್ರಿಯಕರನ ನಖಗಳಿಂದ ಗಾಯಗೊಂಡ ನಾರಿಯಂತೆ ಚಿತ್ರ ವಿಚಿತ್ರವಾಗಿ ಕಾಣಿಸುತ್ತಿತ್ತು.
ವಾಜಿನಾಂ ಖುರಶಬ್ದೇನ ರಥನೇಮಿಸ್ವನೇನ ಚ |
ಪತ್ತೀನಾಂ ಪದಶಬ್ದೇನ ನಾಗಾನಾಂ ಬೃಂಹಿತೇನ ಚ ॥14॥
ವಾದಿತ್ರಾಣಾಂ ಚ ಘೋಷೇಣ ಶಂಖಾನಾಂ ನಿಃಸ್ವನೇನ ಚ |
ಅಭವನ್ನಾದಿತಾ ಭೂಮಿಃ ನಿರ್ಘಾತೈರಿವ ಭಾರತ ॥15॥
ಭರತಕುಲೋದ್ಭವನೇ! ಕುದುರೆಗಳ ಕಾಲ್ಗೊರಸಿನ ಧ್ವನಿ, ರಥಗಳ ಗಾಲಿಯಚ್ಚಿನ ಶಬ್ದ, ಪದಾತಿಗಳ ಪಾದಾಘಾತದ ಶಬ್ದ, ಆನೆಗಳ ಘೀಳಿಡುವಿಕೆ, ವಾದ್ಯಗಳ ಘೋಷ, ಶಂಖಗಳ ತೀಕ್ಷ್ಣವಾದ ಧ್ವನಿ- ಇವುಗಳಿಂದ ಭೂಮಿಯು ಗುಡುಗಿನ ಶಬ್ದದಂತೆ ಪ್ರತಿಧ್ವನಿಸುತ್ತಿತ್ತು.
ಧನುಷಾಂ ಕೂಜಮಾನಾನಾಂ ನಿಸ್ತ್ರಿಂಶಾನಾಂ ಚ ದೀಪ್ಯತಾಮ್ |
ಕವಚಾನಾಂ ಪ್ರಭಾಭಿಶ್ಚ ನ ಪ್ರಾಜ್ಞಾಯತ ಕಿಂಚನ ॥16॥
ಬಿಲ್ಲುಗಳ ಠೇಂಕಾರ, ಪ್ರಜ್ವಲಿಸುವ ಶಸ್ತ್ರಸಮೂಹ, ಹಾಗೂ ಯೋಧರ ಕವಚಗಳ ಪ್ರಕಾಶ - ಇವುಗಳಿಂದಾಗಿ ಬೇರೆ ಯಾವುದೂ ತಿಳಿಯಲ್ಪಡುತ್ತಿರಲಿಲ್ಲ.
ಬಹವೋ ಬಾಹವಶ್ಛಿನ್ನಾ ನಾಗರಾಜಕರೋಪಮಾಃ |
ಉದ್ವೇಷ್ಟಂತಿ ವಿಚೇಷ್ಟಂತಿ ವೇಗಂ ಕುರ್ವಂತಿ ದಾರುಣಮ್ ॥17॥
ಯುದ್ಧದಲ್ಲಿ ಕತ್ತರಿಸಲ್ಪಟ್ಟ ಕೈಗಳು ಆನೆಯ ಸೊಂಡಿಲಿನಂತೆ ಕಾಣಿಸುತ್ತಿದ್ದವು. ಅವು ಈಗಷ್ಟೇ ಕಡಿದುಬಿದ್ದಿದ್ದರಿಂದ ವಿವಿಧರೀತಿಯ ಚಲನೆಯುಳ್ಳವಾಗಿದ್ದವು. ನೋಡಲು ಈ ದೃಶ್ಯ ಭಯಂಕರವಾಗಿ ಕಾಣುತ್ತಿತ್ತು.

ಶಿರಸಾಂ ಚ ಮಹಾರಾಜ ಪತತಾಂ ವಸುಧಾತಲೇ |
ಚ್ಯುತಾನಾಮಿವ ತಾಲೇಭ್ಯಃ ಫಲಾನಾಂ ಶ್ರೂಯತೇ ಸ್ವನಃ ॥18॥
ಮಹಾರಾಜ! ತಲೆಗಳು ಕಡಿದು ನೆಲದ ಮೇಲೆ ಬೀಳುವಾಗ ತಾಳೆಮರದಿಂದ ಫಲಗಳು ಬೀಳುವಾಗ ಉಂಟಾಗುವ ಧ್ವನಿಯಂತೆ ಧ್ವನಿಯು ಉಂಟಾಗುತ್ತಿತ್ತು.
ಶಿರೋಭಿಃ ಪತಿತೈರ್ಭಾತಿ ರುಧಿರಾರ್ದ್ರೈರ್ವಸುಂಧರಾ |
ತಪನೀಯನಿಭೈಃ ಕಾಲೇ ನಲಿನೈರಿವ ಭಾರತ ॥19॥
ಭರತಕುಲೋದ್ಭವನೇ! ಕೆಳಬಿದ್ದ ತಲೆಗಳಿಂದ ಸುರಿಯುತ್ತಿರುವ ರಕ್ತದಿಂದ ಭೂಮಿಯು ಆವೃತವಾಗಿ ಶೋಭಿಸುತ್ತಿತ್ತು. ಬಂಗಾರದ ಕಾಂತಿಯುಳ್ಳ ಕಮಲಗಳಿಂದ ಶೋಭಿಸುವಂತೆ ಇತ್ತು.
ಉದ್ವೃತ್ತನಯನೈಸ್ತೈಸ್ತು ಗತಸತ್ತ್ವೈರ್ಮಹೀ ತದಾ |
ವ್ಯಭ್ರಾಜತ ಮಹಾರಾಜ ಪುಂಡರೀಕೈರಿವಾವೃತಾ ॥20॥
ಕೆಳಬಿದ್ದ ತಲೆಗಳ ಕಣ್ಣುಗಳು ಮೇಲ್ಮುಖವಾಗಿದ್ದವು. ಕಣ್ಣುಗಳ ಶಕ್ತಿಯು ನಷ್ಟವಾಗಿತ್ತು. ಭೂಮಿಯು ಕಮಲಗಳಿಂದ ಆವರಿಸಲ್ಪಟ್ಟ ಹಾಗೆ ಶೋಭಿಸುತ್ತಿತ್ತು.
ಬಾಹುಭಿಶ್ಚಂದನಾದಿಗ್ಧೈಃ ಸಕೇಯೂರೈರ್ಮಹಾಘನೈಃ |
ಪತಿತೈರ್ಭಾತಿ ರಾಜೇಂದ್ರ ಮಹೀ ಶಕ್ರಧ್ವಜೈರಿವ ॥21॥
ಕಡಿದುಬಿದ್ದ ಕೈಗಳಲ್ಲಿ ಹಚ್ಚಿದ ಚಂದನ ಹಾಗೆಯೇ ಇತ್ತು. ಕಟ್ಟಿದ ಭುಜಾಲಂಕಾರಗಳು ಹಾಗೆಯೇ ಇದ್ದವು. ರಾಜೇಂದ್ರ! ಇಂಥ ಕೈಗಳನ್ನು ನೋಡಿದರೆ ಇಂದ್ರನ ಧ್ವಜಗಳು ಭೂಮಿಯಲ್ಲಿ ಬಿದ್ದಿರುವ ಹಾಗೆ ಕಾಣಿಸುತ್ತಿತ್ತು.
ಊರುಭಿಶ್ಚ ನರೇಂದ್ರಾಣಾಂ ವಿನಿಕೃತ್ತೈರ್ಮಹಾಹವೇ |
ಹಸ್ತಿಹಸ್ತೋಪಮೈರನ್ಯೈಃ ಸಂವೃತಂ ತದ್ರಣಾಂಗಣಮ್ ॥22॥
ಆ ಮಹಾಯುದ್ಧದಲ್ಲಿ ರಾಜರ ಬೃಹತ್ತಾದ ಕೈಗಳು ಕಡಿದು ಕೆಳಬಿದ್ದಿದ್ದವು. ಯುದ್ಧಭೂಮಿಯು ಆನೆಗಳ ಸೊಂಡಿಲುಗಳಿಂದ ಆವೃತವಾದ ಹಾಗೆ ಭಾಸಮಾನವಾಗುತ್ತಿತ್ತು.
ಕಬಂಧಶತಸಂಕೀರ್ಣಂ ಛತ್ರಚಾಮರಶೋಭಿತಮ್ |
ಸೇನಾವನಂ ತಚ್ಛುಶುಭೇ ವನಂ ಪುಷ್ಪಚಿತಂ ಯಥಾ ॥23॥
ತಲೆಕಡಿದ ಶರೀರಗಳು ರಣರಂಗದಲ್ಲಿ ತುಂಬಿಹೋಗಿದ್ದವು. ಕೆಳಗೆ ಬಿದ್ದ ಛತ್ರ-ಚಾಮರಗಳಿಂದ ಯುದ್ಧಭೂಮಿಯು ಶೋಭಿಸುತ್ತಿತ್ತು. ಹೀಗೆ ಸೇನೆಯು ಪುಷ್ಪಭರಿತವಾದ ವಿಶಾಲ ವನದಂತೆ ಪ್ರಕಾಶಿಸುತ್ತಿತ್ತು.
ತತ್ರ ಯೋಧಾ ಮಹಾರಾಜ ವಿಚರಂತೋ ಹ್ಯಭೀತವತ್ |
ದೃಶ್ಯಂತೇ ರುಧಿರಾದ್ರಾಂಗಾಃ ಪುಷ್ಪಿತಾ ಇವ ಕಿಂಶುಕಾಃ ॥24॥
ಮಹಾರಾಜ! ಆ ರಣರಂಗದಲ್ಲಿ ಯೋಧರು ರಕ್ತಸಿಕ್ತವಾದ ಶರೀರದೊಂದಿಗೆ ಯಾವುದೇ ಭಯವಿಲ್ಲದೆ ಸಂಚರಿಸುತ್ತಿದ್ದರು. ಪಲಾಶ ವೃಕ್ಷವು ಹೂಬಿಟ್ಟ ಹಾಗೆ ಕಾಣಿಸುತ್ತಿತ್ತು.
ಮಾತಂಗಾಶ್ಚಾಪ್ಯದೃಶ್ಯಂತ ಶರತೋಮರಪೀಡಿತಾಃ |
ಪತಂತಸ್ತತ್ರ ತತ್ರೈವ ಶ್ವೇತಾಭ್ರಸದೃಶಾ ರಣೇ ॥25॥
ಬಾಣ ಹಾಗೂ ತೋಮರ ಆಯುಧಗಳಿಂದ ಪೆಟ್ಟು ತಿಂದ ಆನೆಗಳು ರಣರಂಗದಲ್ಲಿ ಬಿದ್ದಿವೆ. ಅದು ಬೆಳ್ಳಗಿನ ಮೋಡಗಳೇ ನೆಲದಲ್ಲಿ ಬಿದ್ದ ಹಾಗೆ ಕಾಣುತ್ತಿತ್ತು.
ಗಜಾನೀಕಂ ಮಹಾರಾಜ ವಧ್ಯಮಾನಂ ಮಹಾರಥೈಃ |
ವ್ಯಕೀರ್ಯತ ದಿಶಃ ಸರ್ವಾ ವಾತನುನ್ನಾ ಘನಾ ಇವ ॥26॥
ಮಹಾರಾಜ! ಮಹಾರಥರು ಗಜಸೈನ್ಯದ ಮೇಲೆ ಆಕ್ರಮಣ ಮಾಡಿದರು. ಆಗ ಗಾಳಿಗೆ ಸಿಲುಕಿದ ಮೋಡಗಳಂತೆ ಎಲ್ಲಾ ದಿಕ್ಕುಗಳಲ್ಲಿಯೂ ಆ ಆನೆಗಳು ಓಡತೊಡಗಿದವು.
ತೇ ಗಜಾ ಗಿರಿಸಂಕಾಶಾಃ ಪೇತುರುರ್ವ್ಯಾಂ ಸಮಂತತಃ |
ವಜ್ರಭಿನ್ನಾ ಇವ ಬಭುಃ ಪರ್ವತಾ ಯುಗಪರ್ಯಯೇ ॥27॥
ಆಕ್ರಮಣಕ್ಕೆ ಒಳಗಾದ ಆ ಪರ್ವತದಷ್ಟು ದೊಡ್ಡದಾದ ಆನೆಗಳು ಯುಗಾವಸಾನದಲ್ಲಿ ವಜ್ರಾಯುಧದಿಂದ ಪೆಟ್ಟು ತಿಂದ ಪರ್ವತಗಳಂತೆ ಭೂಮಿಯಲ್ಲಿ ಎಲ್ಲಂದರಲ್ಲಿ ಬಿದ್ದವು.
ಹಯಾನಾಂ ಸಾದಿಭಿಃ ಸಾರ್ಧಂ ಪತಿತಾನಾಂ ಮಹೀತಳೇ |
ರಾಶಯಃ ಪ್ರತ್ಯದೃಶ್ಯಂತ ಗಿರಿಮಾತ್ರಾಸ್ತತಸ್ತತಃ ॥28॥
ನೆಲದಲ್ಲಿ ಕುದುರೆ ಮತ್ತು ರಥದ ಜೊತೆಗೆ ಯೋಧರು ಪರ್ವತಾಕಾರದಲ್ಲಿ ರಾಶಿ-ರಾಶಿಯಾಗಿ ಬಿದ್ದಿದ್ದು ಕಂಡುಬಂತು.
ಸಂಜಜ್ಞೇ ರಣಭೂಮೌ ತು ಪರಲೋಕವಹಾ ನದೀ |
ಶೋಣಿತೋದಾ ರಥಾವರ್ತಾ ಧ್ವಜವೃಕ್ಷಾಸ್ಥಿಶರ್ಕರಾ ॥29॥
ಪರಲೋಕದ ಕಡೆಗೆ ಹರಿಯುವ ನದಿಯೊಂದು ರಣಭೂಮಿಯಲ್ಲಿ ಹುಟ್ಟಿಕೊಂಡಿತು. ರಕ್ತವೇ ಅದರಲ್ಲಿ ಹರಿಯುವ ನೀರು. ರಥಗಳೇ ಆ ನದಿಯಲ್ಲಿ ಕಾಣಿಸುವ ಸುಳಿಗಳು. ಧ್ವಜಗಳೇ ತೀರದಲ್ಲಿ ಇರುವ ವೃಕ್ಷಗಳು. ಎಲುಬುಗಳೇ ಕಲ್ಲು-ಮರಳು.
ಭುಜನಕ್ರಾ ಧನುಃಸ್ರೋತಾ ಹಸ್ತಿಶೈಲಾ ಹಯೋರಗಾ |
ಮೇದೋಮಜ್ಜಾಕರ್ದಮಿನೀ ಛತ್ರಹಂಸೋಪಶೋಭಿತಾ ॥30॥
ಕೆಳಬಿದ್ದಿರುವ ಕೈಗಳೇ ಮೊಸಳೆಗಳು. ಕೆಳಗೆ ಬಿದ್ದಿರುವ ಬಿಲ್ಲುಗಳೇ ಜಲಸ್ರೋತಸ್ಸುಗಳು. ಆನೆಗಳೇ ನದಿಬದಿಯಲ್ಲಿ ಕಾಣುವ

ಪರ್ವತಶಿಖರಗಳು. ಕುದುರೆಗಳೇ ಸರ್ಪಗಳು. ಮೇದಸ್ಸು, ಮಜ್ಜಗಳೇ ಕೆಸರು. ರಥದ ಛತ್ರಗಳೇ ಓಡಾಡುವ ಹಂಸಪಕ್ಷಿಗಳು.
ಕವಚೋಷ್ಣೀಷಸಂಛನ್ನಾ ಪತಾಕಾರುಚಿರದ್ರುಮಾ |
ಚಕ್ರನಕ್ರಾವಲೀಜುಷ್ಟಾ ತ್ರಿವೇಣೂರಗಸಂವೃತಾ ||31||
ಕವಚ-ತಲೆಮುಂಡಾಸುಗಳಿಂದ ಈ ನದಿಯು ಆವೃತವಾಗಿದೆ. ಹಾರುವ ಪತಾಕೆಗಳು ಸುಂದರವಾದ ಮರಗಳಂತಿವೆ. ಚಕ್ರಗಳೇ ಚಕ್ರವಾಕಪಕ್ಷಿಗಳು. ತ್ರಿವೇಣುಗಳೆಂಬ ಸರ್ಪಗಳು ಈ ನದಿಯಲ್ಲಿ ತುಂಬಿಕೊಂಡಿವೆ.
ಶೂರಾಣಾಂ ಹರ್ಷಜನನೀ ಭೀರೂಣಾಂ ಭಯವರ್ಧನೀ |
ಪ್ರಾವರ್ತತ ನದೀ ರೌದ್ರಾ ಕುರುಸೃಂಜಯಸಂಕುಲೇ ||32||
ಈ ನದಿಯು ಶೂರರಿಗೆ ಆನಂದವನ್ನುಂಟುಮಾಡುವುದು. ಭೀತರಿಗೆ ಭಯವನ್ನು ಹೆಚ್ಚಿಸುವಂತಹುದು. ಕೌರವರ-ಸೃಂಜಯರ ಯುದ್ಧದಲ್ಲಿ ಘೋರವಾದ ಈ ರಕ್ತದ ನದಿಯು ಹರಿಯಿತು.
ತಾಂ ನದೀಂ ಪಿತೃಲೋಕಾಯ ವಹಂತೀಮತಿಭೈರವಾಮ್ |
ತೇರುರ್ವಾಹನನೌಭಿಸ್ತೇ ಶೂರಾಃ ಪರಿಘಬಾಹವಃ ||33||
ಪಿತೃಲೋಕಕ್ಕೆ ಕರೆದೊಯ್ಯುವ ಆ ಅತಿಭಯಂಕರವಾದ ನದಿಯನ್ನು ಪರಿಘಾಯುಧವನ್ನು ಹಿಡಿದುಕೊಂಡಿರುವ ಶೂರಯೋಧರು ವಾಹನವೆಂಬ ನಾವೆಯಿಂದ ದಾಟಿದರು.
ವರ್ತಮಾನೇ ತಥಾ ಯುದ್ಧೇ ನಿರ್ಮರ್ಯಾದೇ ವಿಶಾಂಪತೇ |
ಚತುರಂಗಕ್ಷಯೇ ಘೋರೇ ಯುದ್ಧೇ ದೇವಾಸುರೋಪಮೇ ||34||
ಆಕ್ರೋಶನ್ ಬಾಂಧವಾಶ್ಚಾನ್ಯೇ ಭಯಾರ್ತಾನಾಂ ನಿವರ್ತನೇ ||35||
ರಾಜನ್! ಮಿತಿಯಿಲ್ಲದೆ ಯುದ್ಧವು ನಡೆಯುತ್ತಿತ್ತು. ದೇವಾಸುರರ ಯುದ್ಧದಂತಿರುವ ಆ ಯುದ್ಧದಲ್ಲಿ ಚತುರಂಗಸೇನೆಯೂ ನಾಶವಾಗುತ್ತಿತ್ತು. ಇಂತಹ ಯುದ್ಧದಲ್ಲಿ ಭಯಗ್ರಸ್ತರಾದವರನ್ನು ಯುದ್ಧಮಾಡದೆ ಹಿಂತಿರುಗಿಬರುವಂತೆ ಕೆಲವು ಬಾಂಧವರು ಕೂಗಿ ಹೇಳುತ್ತಿದ್ದರು.
ನಿರ್ಮರ್ಯಾದೇ ತಥಾ ಯುದ್ಧೇ ವರ್ತಮಾನೇ ಭಯಾನಕೇ |
ಅರ್ಜುನೋ ಭೀಮಸೇನಶ್ಚ ಮೋಹಯಾಂಚಕ್ರತುಃ ಪರಾನ್ ||36||
ಅಮಿತವಾದ ಹಾಗೂ ಭಯಾನಕವಾದ ಯುದ್ಧದಲ್ಲಿ ಅರ್ಜುನ ಮತ್ತು ಭೀಮಸೇನನು ಶತ್ರುಗಳನ್ನು ಮೂರ್ಛೆಬೀಳಿಸಿದರು.
ಸಾ ವಧ್ಯಮಾನಾ ಮಹತೀ ಸೇನಾ ತವ ಜನಾಧಿಪ |
ಅಮುಹ್ಯತ್ ತತ್ರ ತತ್ರೈವ ಯೋಷಿನ್ಮದವಶಾದಿವ ||37||
ಜನನಾಯಕನೇ! ಹೀಗೆ ಆಕ್ರಮಣಕ್ಕೊಳಗಾದ ನಿನ್ನ ಸೈನ್ಯವು ಸ್ತ್ರೀಯರ ಮದಾಸವಕ್ಕೆ ಒಳಗಾಗಿ ಮೂರ್ಛೆ ಹೋದಂತೆ ಮೂರ್ಛೆ ಹೊಂದಿತು.
ಮೋಹಯಿತ್ವಾ ಚ ತಾಂ ಸೇನಾಂ ಭೀಮಸೇನಧನಂಜಯೌ |
ದಧ್ಮತುರ್ವಾರಿಜೌ ತತ್ರ ಸಿಂಹನಾದಂ ಚ ನೇದತುಃ ||38||
ಭೀಮ ಮತ್ತು ಅರ್ಜುನರು ನಿನ್ನ ಸೇನೆಯನ್ನು ಮೋಹಗೊಳಿಸಿ ತಮ್ಮ ತಮ್ಮ ಶಂಖವನ್ನು ಊದುತ್ತಾ ಸಿಂಹನಾದವನ್ನು ಮಾಡಿದರು.
ಶ್ರುತ್ವೈವ ಚ ಮಹಾಶಬ್ದಂ ಧೃಷ್ಟದ್ಯುಮ್ನಶಿಖಂಡಿನೌ |
ಧರ್ಮರಾಜಂ ಪುರಸ್ಕೃತ್ಯ ಮದ್ರರಾಜಮಭಿದ್ರುತೌ ||39||
ಈ ಮಹಾನಾದವನ್ನು ಕೇಳಿದೊಡನೆಯೇ ಧೃಷ್ಟದ್ಯುಮ್ನ ಮತ್ತು ಶಿಖಂಡಿಯು ಧರ್ಮರಾಜರನ್ನು ಮುಂದಿಟ್ಟುಕೊಂಡು ಶಲ್ಯನ ಎದುರು ಯುದ್ಧಕ್ಕೆ ಬಂದರು.
ತತ್ರಾಶ್ಚರ್ಯಮಪಶ್ಯಾಮ ಘೋರರೂಪಂ ವಿಶಾಂಪತೇ |
ಶಲ್ಯೇನ ಸಂಗತಾಃ ಶೂರಾ ಯದಯುಧ್ಯಂತ ಭಾಗಶಃ ||40||
ರಾಜನ್! ಅಲ್ಲೊಂದು ಭಯಂಕರವಾದ ಆಶ್ಚರ್ಯವು ನಡೆದದ್ದನ್ನು ನೋಡಿದೆವು. ಶಲ್ಯನೊಡನೆ ಸೇರಿಕೊಂಡ ಶೂರರು ಬೇರೆ ಬೇರೆ ವಿಭಾಗಗಳಲ್ಲಿ ಯುದ್ಧಮಾಡಿದರು.
ಮಾದ್ರೀಪುತ್ರೌ ಸರಭಸೌ ಕೃತಾಸೌತ್ರ ಯುದ್ಧದುರ್ಮದೌ |
ಅಭೀತೌ ತ್ವರಯಾ ಯುಕ್ತೌ ಜಿಗೀಷಂತೌ ಬಲಂ ತವ ||41||
ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಅಸ್ತ್ರಧಾರಿಗಳಾಗಿ ಯುದ್ಧಕ್ಕೆ ಸನ್ನದ್ಧರಾದರು. ಯುದ್ಧದಲ್ಲಿ ಯಾರೂ ಅವರನ್ನು ಗೆಲ್ಲಲು ಸಾಧ್ಯವಿಲ್ಲ. ಭಯವೆಂಬುದು ಅವರ ಜಾಯಮಾನಗುಣವಲ್ಲ. ಅವರು ನಿನ್ನ ಸೈನ್ಯವನ್ನು ಗೆಲ್ಲುವ ಉದ್ದೇಶದಿಂದ ಶೀಘ್ರವಾಗಿ ಯುದ್ಧದಲ್ಲಿ ಸೇರಿಕೊಂಡರು.
ತತೋಽಭ್ಯವರ್ತತ ಬಲಂ ತಾವಕಂ ಭರತರ್ಷಭ |
ತತಃ ಶರಪ್ರವೃದ್ಧೈಶ್ಚ ಪಾಂಡವೈರ್ಜಿತಕಾಶಿಭಿಃ ||42||
ಭರತಶ್ರೇಷ್ಠನೇ! ನಿನ್ನ ಸೈನ್ಯವು ಕೂಡ ಧೈರ್ಯದಿಂದ ಯುದ್ಧಕ್ಕೆ ಮುನ್ನುಗ್ಗಿತು. ಜಯವನ್ನು ಹೊಂದುವ ಇಚ್ಛೆಯುಳ್ಳ ಪಾಂಡವರು ಆ ಸೈನ್ಯವನ್ನು ಎದುರಿಸಿದರು.
ವಧ್ಯಮಾನಾ ಚಮೂಃ ಸಾ ತು ಪುತ್ರಾಣಾಂ ಪ್ರೇಕ್ಷತಾಂ ತವ ||43||
ನಿನ್ನ ಮಕ್ಕಳು ನೋಡುತ್ತಿದ್ದಂತೆಯೇ ನಿನ್ನ ಆ ಸೈನ್ಯವು ನಾಶ ಹೊಂದಿತು.
ಭೇಜೇ ದಶ ದಿಶೋ ರಾಜನ್ ಪ್ರಣುನ್ನಾ ದೃಢವಿಕ್ರಮೈಃ ||44||
ರಾಜನೇ! ಗಟ್ಟಿಯಾದ ವಿಕ್ರಮವುಳ್ಳ ಪಾಂಡವರಿಂದ ದಾಳಿಗೊಳಗಾದ ನಿನ್ನ ಸೈನ್ಯವು ಹತ್ತು ದಿಕ್ಕುಗಳಲ್ಲಿಯೂ ಓಡತೊಡಗಿತು.

ಹಾಹಾಕಾರೋ ಮಹಾನ್ ಜಜ್ಞೇ ಯೋಧಾನಾಂ ತವ ಭಾರತ ||45||
ಭರತಕುಲೋದ್ಭವನೇ! ನಿನ್ನಯೋಧರು ಜೋರಾಗಿ ಹಾಹಾಕಾರವನ್ನು ಮಾಡಿದರು.
ತಿಷ್ಠ ತಿಷ್ಠೇತಿ ವಾಗಾಸೀದ್ ದ್ರಾವಿತಾನಾಂ ಮಹಾತ್ಮಭಿಃ |
ಕ್ಷತ್ರಿಯಾಣಾಂ ತದಾಽನ್ಯೋನ್ಯಂ ಸಂಗ್ರಾಮೇ ಜಯಮಿಚ್ಛತಾಮ್ ||46||
ಮಹಾಪರಾಕ್ರಮಿಗಳಿಂದ ನಿನ್ನ ಸೈನ್ಯವು ಓಡಿಸಲ್ಪಟಾಗ ನಿಲ್ಲು! ನಿಲ್ಲು! ಎಂಬ ಮಾತು ಕೇಳಿಬಂದಿತು. ಜಯವನ್ನು ಬಯಸುವ ಕ್ಷತ್ರಿಯರು ಪುನಃ ಪರಸ್ಪರವಾಗಿ ಕಾದಾಡಿದರು.
ಪ್ರಾದ್ರವಂತೇ ಚ ಭಗ್ನಾಸ್ತೇ ಪಾಂಡವೈಸ್ತವ ಸೈನಿಕಾಃ |
ತ್ಯಕತ್ವ ಯುದ್ಧೇ ಪ್ರಿಯಾನ್ ಪುತ್ರಾನ್ ಭ್ರಾತೄನಪಿ ಪಿತಾಮಹಾನ್ ||
ಪಾಂಡವರಿಂದ ಭಗ್ನರಾದ ನಿನ್ನ ಸೈನಿಕರು ಪ್ರಿಯರಾದ ಮಕ್ಕಳನ್ನು, ಸಹೋದರರನ್ನು ಹಾಗೂ ತಾತಂದಿರನ್ನು ಬಿಟ್ಟು ಓಡಿಹೋದರು.
ಮಾತುಲಾನ್ ಭಾಗಿನೇಯಾಂಶ್ಚ ತಥಾ ಸಂಬಂಧಿಬಾಂಧವಾನ್ |
ಹಯಾ ದ್ವಿಪಾಶ್ಚ ರಥಿನೋ ಭಿಯಾ ಜಗ್ಮುಃ ಸಮಂತತಃ ||48||
ಸೋದರಮಾವಂದಿರನ್ನು, ಸೋದರ ಅಳಿಯಂದಿರನ್ನು, ಸಂಬಂಧಿಗಳನ್ನು, ಬಾಂಧವರನ್ನೂ ಬಿಟ್ಟು ಓಡಿಹೋದರು. ಕುದುರೆಗಳು, ಆನೆಗಳು, ರಥಿಕರು ಎಲ್ಲಾ ಕಡೆಗಳಲ್ಲಿಯೂ ಭಯದಿಂದ ಹೊರಟುಹೋದರು.
ಆತ್ಮತ್ರಾಣಕೃತೋತ್ಸಾಹಾಸ್ತಾವಕಾ ಭರತರ್ಷಭ ||49||
ಭರತೋತ್ತಮನೇ! ನಿನ್ನ ಕಡೆಯವರಿಗೆ ತಮ್ಮ ಪ್ರಾಣರಕ್ಷಣೆಯಲ್ಲಿಯೇ ಅತಿಯಾದ ಉತ್ಸಾಹವಿತ್ತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ನಕುಲನು ಕರ್ಣನ ಮೂವರು ಮಕ್ಕಳನ್ನೂ ವಧಿಸಿದ್ದು
ಸಂಜಯಃ
ತತ್ ಪ್ರಭಗ್ನಂ ಬಲಂ ದೃಷ್ಟ್ವಾ ತಾವಕಾ ಭರತರ್ಷಭ |
ಮದ್ರರಾಜಂ ಪುರಸ್ಕೃತ್ಯ ಜಗ್ಮುರ್ಯುದ್ಧಾಯ ಭಾರತ ||1||
ಸಂಜಯ ಭಾರತೋತ್ತಮನೇ! ನಿನ್ನ ಕಡೆಯವರು ತಮ್ಮ ಸೈನ್ಯವು ನಾಶವಾದುದನ್ನು ಕಂಡು, ಭಾರತ! ಶಲ್ಯನನ್ನು ಮುಂದುಮಾಡಿಕೊಂಡು ಯುದ್ಧಕ್ಕೆ ತೆರಳಿದರು.
ಮದ್ರರಾಜೋ ಮಹಾರಾಜ ಸಾರಥಿಂ ವಾಕ್ಯಮಬ್ರವೀತ್ ||2||
ಮಹಾರಾಜ! ಶಲ್ಯನು ತನ್ನ ಸಾರಥಿಗೆ ಹೀಗೆ ಹೇಳುತ್ತಾನೆ.
ಶಲ್ಯಃ
ಏಷ ತಿಷ್ಠತಿ ವೈ ರಾಜಾ ಪಾಂಡುಪುತ್ರೋ ಯುಧಿಷ್ಠಿರಃ |
ಛತ್ರೇಣ ಧ್ರಿಯಮಾಣೇನ ಪಾಂಡುರೇಣ ವಿರಾಜತಾ ||3||
ತತ್ರ ಮಾಂ ಪ್ರಾಪಯ ಕ್ಷಿಪ್ರಂ ಸಾರಥೇ ಪಶ್ಯ ಮೇ ಬಲಮ್ |
ನ ಸಮರ್ಥಾಸ್ತು ಮೇ ಪಾರ್ಥಾಃ ಸ್ಥಾತುಮದ್ಯಾಗ್ರತೋ ಯುಧಿ ||4||
ಶಲ್ಯ ರಾಜನಾದ ಪಾಂಡುಪುತ್ರಯುಧಿಷ್ಠಿರನು ಬೆಳ್ಳಗಿನ ಛತ್ರದಡಿಯಲ್ಲಿ ನಿಂತಿರುತ್ತಾನೆ. ಸಾರಥಿಯೇ! ಆ ಸ್ಥಳಕ್ಕೆ ಬೇಗನೇ ಕರದುಕೊಂಡು ಹೋಗು. ನನ್ನ ಬಲ ಮತ್ತು ಸೈನ್ಯವನ್ನು ನೋಡು. ಇಂದಿನ ಯುದ್ಧದಲ್ಲಿ ಪಾಂಡವರು ನನ್ನ ಮುಂದೆ ನಿಲ್ಲಲು ಸಮರ್ಥರಾಗುವುದಿಲ್ಲ.
ಸಂಜಯಃ
ಏವಮುಕ್ತಸ್ತತಃ ಪ್ರಾಯಾನ್ಮದ್ರರಾಜಸ್ಯ ಸಾರಥಿಃ |
ಯತ್ರ ರಾಜಾ ಧರ್ಮಪುತ್ರಃ ಸತ್ಯಸಂಧೋ ಯುಧಿಷ್ಠಿರಃ ||5||
ಸಂಜಯ ಇದನ್ನು ಕೇಳಿಸಿಕೊಂಡ ಸಾರಥಿಯು ಸತ್ಯನಿಷ್ಠನಾದ ಯುಧಿಷ್ಠಿರ ಇದ್ದಲ್ಲಿಗೆ ಕರೆದುಕೊಂಡು ಹೋದನು.
ಆಪತತ್ ತಚ್ಚ ಸಹಸಾ ಪಾಂಡವಾನಾಂ ಮಹದ್ಬಲಮ್ |
ದಧಾರೈಕೋ ರಣೇ ಶಲ್ಯೋ ವೇಲೇವೋದ್ವೃತ್ತಮರ್ಣವಮ್ ||6||
ಕೂಡಲೇ ಪಾಂಡವರ ದೊಡ್ಡದಾದ ಸೇನೆಯು ಕೌರವರ ಸೈನ್ಯದ ಮೇಲೆ ಎರಗಿತು. ಯುದ್ಧದಲ್ಲಿ ಶಲ್ಯನೊಬ್ಬನೇ, ಉಕ್ಕಿಬಂದ ಸಮುದ್ರವನ್ನು ತೀರವು ತಡೆಯುವಂತೆ ತಡೆದನು.
ಪಾಂಡವಾನಾಂ ಬಲೌಘಸ್ತು ಶಲ್ಯಮಾಸಾದ್ಯ ಮಾರಿಷ |
ವ್ಯತಿಷ್ಠತ ತದಾ ಯುದ್ಧೇ ಸಿಂಧೋರ್ವೇಗ ಇವಾಚಲಮ್ ||7||
ರಾಜನೇ! ಯುದ್ಧದಲ್ಲಿ ಪಾಂಡವರ ಸೈನ್ಯಸಮೂಹವು ಶಲ್ಯನ ಬಳಿ ಬಂದು ನಿಂತು ಬಿಟ್ಟಿತು. ಇದು ಪರ್ವತದ ಬಳಿ ಸಾಗರದ ವೇಗವು ನಿಂತ ಹಾಗೆ ಇತ್ತು.
ಮದ್ರರಾಜಂ ತು ಸಮರೇ ದೃಷ್ಟ್ವಾ ಯುದ್ಧಾಯ ವಿಷ್ಠಿತಮ್ |

ಕುರವಃ ಸನ್ನ್ಯವರ್ತಂತ ಮೃತ್ಯುಂ ಕೃತ್ವಾ ನಿವರ್ತನಮ್ ॥8॥
ಶಲ್ಯನು ಯುದ್ಧಮಾಡಲು ರಣರಂಗದಲ್ಲಿ ನಿಂತಿರುವುದನ್ನು ಕಂಡು ಕೌರವರು ಮೃತ್ಯುವನ್ನೇ ಹಿಂದಿಕ್ಕಿ ಯುದ್ಧಕ್ಕೆ ಮರಳಿದರು.
ತೇಷು ರಾಜನ್ನಿವೃತ್ತೇಷು ವ್ಯೂಢಾನೀಕೇಷು ಭಾಗಶಃ |
ಪ್ರಾವರ್ತತ ಮಹಾರೌದ್ರಃ ಸಂಗ್ರಾಮಃ ಶೋಣಿತೋದಕಃ ॥9॥
ಹೀಗೆ ಅವರು ಹಿಂತಿರುಗಿ ಬಂದು ಭಾಗ ಭಾಗವಾಗಿ ವ್ಯೂಹಗಳನ್ನು ರಚಿಸಿಕೊಂಡರು. ತದನಂತರ ರಕ್ತವನ್ನು ಚೆಲ್ಲುವ ಮಹಾಘೋರವಾದ ಯುದ್ಧವು ಪ್ರಾರಂಭವಾಯಿತು.
ಸಂಗತಶ್ಚಿತ್ರಸೇನೇನ ನಕುಲೋ ಯುದ್ಧದುರ್ಮದಃ ॥10॥
ಯುದ್ಧದಲ್ಲಿ ಮಣಿಸಲಾಗದ ನಕುಲ ಕರ್ಣಪುತ್ರನಾದ ಚಿತ್ರಸೇನನನ್ನು ಎದುರಿಸಿದನು.
ತೌ ಪರಸ್ಪರಮಾಸಾದ್ಯ ಚಿತ್ರಕಾರ್ಮುಕಯೋಧಿನೌ |
ಮೇಘಾವಿವ ಯಥೋದ್ವೃತ್ತೌ ದಕ್ಷಿಣೋತ್ತರವರ್ಷಿಣೌ ॥11॥
ಅವರಿಬ್ಬರೂ ಚಿತ್ರ ವಿಚಿತ್ರವಾಗಿ ಬಿಲ್ಲಿನ ಯುದ್ಧವನ್ನು ಮಾಡುವವರು. ಪರಸ್ಪರವಾಗಿ ಯುದ್ಧಕ್ಕೆ ಎದುರಾದರು. ಸಮೃದ್ಧವಾದ ದಕ್ಷಿಣದಿಕ್ಕು ಮತ್ತು ಉತ್ತರದಿಕ್ಕುಗಳಲ್ಲಿ ಮಳೆಯನ್ನು ಸುರಿಸುವ ಮೋಡಗಳು ಎದುರಾದಂತೆ ಇದು ಕಾಣಿಸಿತು.
ಶರತೋಯೈಃ ಸಿಷಿಚತುಃ ತೌ ಪರಸ್ಪರಮಾಹವೇ ॥12॥
ಯುದ್ಧದಲ್ಲಿ ಇವರಿಬ್ಬರೂ ಬಾಣಗಳ ಮಳೆಯನ್ನೇ ಸುರಿಸಿದರು.
ನಾಂತರಂ ತತ್ರ ಪಶ್ಯಾಮಃ ಪಾಂಡವಸ್ಯೇತರಸ್ಯ ವಾ ॥13॥
ನಕುಲ ಮತ್ತು ಚಿತ್ರಸೇನರ ಪರಾಕ್ರಮದಲ್ಲಿ ಸ್ವಲ್ಪವೂ ವ್ಯತ್ಯಾಸವನ್ನು ನೋಡಲು ನಮಗೆ ಸಾಧ್ಯವಾಗಲಿಲ್ಲ.
ಉಭೌ ಕೃತಾಸ್ತ್ರೌ ಬಲಿನೌ ರಥಚರ್ಯಾವಿಶಾರದೌ |
ಪರಸ್ಪರವಧೇ ಯುಕ್ತೌ ಛಿದ್ರಾನ್ವೇಷಣತತ್ಪರೌ ॥14॥
ಇಬ್ಬರೂ ಬಲಶಾಲಿಗಳು, ಅಸ್ತ್ರಗಳನ್ನು ಕರಗತಮಾಡಿಕೊಂಡವರು. ರಥದ ಪ್ರಯೋಗದಲ್ಲಿಯೂ ನಿಪುಣರು. ಪರಸ್ಪರವಾಗಿ ಕೊಲ್ಲಲು ಪ್ರಯತ್ನಿಸುತ್ತಾ ಅದಕ್ಕೆ ಅವಕಾಶವನ್ನು ಹುಡುಕುತ್ತಿದ್ದರು.
ಚಿತ್ರಸೇನಸ್ತು ಭಲ್ಲೇನ ಪೀತೇನ ನಿಶಿತೇನ ಚ |
ನಕುಲಸ್ಯ ಮಹಾರಾಜ ಮುಷ್ಟಿದೇಶೇಽಚ್ಛಿನದ್ಧನುಃ ॥15॥
ಮಹಾರಾಜ! ಚಿತ್ರಸೇನನು ಹರಿತವಾದ ಭಲ್ಲಾಯುಧದಿಂದ ನಕುಲನ ಬಿಲ್ಲನ್ನು, ಅದನ್ನು ಮುಷ್ಟಿಯಲ್ಲಿ ಹಿಡಿಯುವ ಸ್ಥಾನದಲ್ಲಿ ಹೊಡೆದು ತುಂಡರಿಸಿದನು.
ಅಥೈನಂ ಛಿನ್ನಧನ್ವಾನಂ ರುಗ್ಮಪುಂಖೈಃ ಶಿಲಾಶಿತೈಃ |
ತ್ರಿಭಿಃ ಶರೈರಸಂಭ್ರಾಂತೋ ಲಲಾಟೇ ವೈ ಸಮರ್ಪಯತ್ ॥16॥
ಬಿಲ್ಲನ್ನು ಕಳೆದುಕೊಂಡ ನಕುಲನಿಗೆ ಕಲ್ಲಿನಲ್ಲಿ ತೇದು ಹರಿತಗೊಳಿಸಿದ ಹಾಗೂ ಬೆಳ್ಳಿಯ ಹಿಂಬಾಗವುಳ್ಳ ಮೂರು ಬಾಣಗಳಿಂದ ಹಣೆಗೆ ಹೊಡೆದನು.
ಹಯಾಂಶ್ಚಾಸ್ಯ ಶರೈಸ್ತೀಕ್ಷ್ಣೈಃ ಪ್ರೇಷಯಾಮಾಸ ಮೃತ್ಯವೇ |
ತಥಾ ಧ್ವಜಂ ಸಾರಥಿಂ ಚ ತ್ರಿಭಿಸ್ತ್ರಿಭಿರತಾಡಯತ್ ॥17॥
ಹರಿತವಾದ ಬಾಣಗಳಿಂದ ನಕುಲನ ಕುದುರೆಗಳನ್ನು ಕೊಂದು ಯಮನಿಗೆ ಅರ್ಪಿಸಿದನು. ಪುನಃ ಮೂರು ಮೂರು ಬಾಣಗಳಿಂದ ಧ್ವಜವನ್ನೂ ಸಾರಥಿಯನ್ನು ಹೊಡೆದನು.
ಸ ಶತ್ರುಭುಜನಿರ್ಮುಕ್ತೈಃ ಲಲಾಟಸ್ಥೈಸ್ತ್ರಿಭಿಃ ಶರೈಃ |
ನಕುಲಃ ಶುಶುಭೇ ರಾಜನ್ ತ್ರಿಶೃಂಗ ಇವ ಪರ್ವತಃ ॥18॥
ಶತ್ರು ಬಿಟ್ಟ ಮೂರು ಬಾಣಗಳು ನಕುಲನ ಹಣೆಯಲ್ಲಿ ಅಂಟಿಕೊಂಡಿವೆ. ರಾಜನೇ! ಮೂರು ಶಿಖರಗಳುಳ್ಳ ಪರ್ವತದಂತೆ ನಕುಲನು ಶೋಭಿಸಿದನು.
ಸಂಛಿನ್ನಧನ್ವಾ ವಿರಥಃ ಖಡ್ಗಮಾದಾಯ ಚರ್ಮ ಚ |
ರಥಾದವಾತರದ್ ವೀರಃ ಶೈಲಾಗ್ರಾದಿವ ಕೇಸರೀ ॥19॥
ಬಿಲ್ಲನ್ನು, ರಥವನ್ನೂ ಕಳೆದುಕೊಂಡ ನಕುಲನು ಖಡ್ಗ ಮತ್ತು ಚರ್ಮ(ಗುರಾಣಿ)ವನ್ನು ಹಿಡಿದುಕೊಂಡು ಪರ್ವತದ ತುದಿಯಿಂದ ಸಿಂಹವು ಜಿಗಿಯುವಂತೆ ರಥದಿಂದ ಕೆಳಗಿಳಿದನು.
ಪದ್ಭ್ಯಾಮಾಪತತಸ್ತಸ್ಯ ಶರವೃಷ್ಟಿಮವಾಸೃಜತ್ |
ನಕುಲೋಽಪ್ಯಗ್ರಹೀತ್ ತಾಂ ವೈ ಚರ್ಮಣಾ ಲಘುವಿಕ್ರಮಃ ॥20॥
ಕಾಲಿನಿಂದ ನಡೆಯುತ್ತಾ ಯುದ್ಧಮಾಡುತ್ತಿದ್ದ ಆ ನಕುಲನ ಮೇಲೆ ಚಿತ್ರಸೇನನು ಬಾಣಗಳ ಮಳೆಯನ್ನು ಸುರಿಸಿದನು. ಬಹಳ ವಿಕ್ರಮನಾದ ನಕುಲನು ಆ ಬಾಣಗಳನ್ನು ತನ್ನ ಚರ್ಮದಿಂದ ತಡೆದನು.
ಚಿತ್ರಸೇನರಥಂ ಪ್ರಾಪ್ಯ ಚಿತ್ರಯೋಧೀ ಜಿತಶ್ರಮಃ |
ಆರುರೋಹ ಮಹಾಬಾಹುಃ ಸರ್ವಸೈನ್ಯಸ್ಯ ಪಶ್ಯತಃ ॥21॥
ವಿಶಿಷ್ಟ ರೀತಿಯಲ್ಲಿ ಯುದ್ಧಮಾಡುವ ನಕುಲನು ಚಿತ್ರಸೇನನ ರಥವನ್ನು ಸಮೀಪಿಸಿ ಯಾವುದೇ ಆಯಾಸವಿಲ್ಲದೆ, ಎಲ್ಲರೂ ನೋಡುತ್ತಿದ್ದಂತೆಯೇ ಅವನ ರಥದ ಮೇಲೆ ಹತ್ತಿದನು.
ಸಕುಂಡಲಂ ಸಮಕುಟಂ ಸುನಾಸಂ ಸ್ವಾಯತೇಕ್ಷಣಮ್ |
ಚಿತ್ರಸೇನಶಿರಃ ಕಾಯಾದ್ ಅಪಾಹರತ ಪಾಂಡವಃ ॥22॥

ನಕುಲನು ಕುಂಡಲ-ಕಿರೀಟಗಳನ್ನು ಧರಿಸಿದ, ಒಳ್ಳೆಯ ನಾಸಿಕ ಹಾಗೂ ವಿಶಾಲವಾದ ಕಣ್ಣುಗಳುಳ್ಳ ಚಿತ್ರಸೇನನ ತಲೆಯನ್ನು ಕಡಿದು ಹಾಕಿದನು.
ಸ ಪಪಾತ ರಥೋಪಸ್ಥಾದ್ ದಿವಾಕರಸಮಪ್ರಭಃ ॥23॥
ಸೂರ್ಯನ ಹಾಗೆ ಪ್ರಕಾಶಿಸುತ್ತಿದ್ದ ಚಿತ್ರಸೇನನು ರಥದಿಂದ ಕೆಳಗೆ ಬಿದ್ದನು.
ಚಿತ್ರಸೇನಶಿರಸ್ತತ್ ತು ದೃಷ್ಟ್ವಾ ತತ್ರ ಮಹಾರಥಾಃ।
ಸಿಂಹನಾದಸ್ವನಾಂಶ್ಚಕ್ರುಃ ಸಾಧುವಾದಾಂಶ್ಚ ಪುಷ್ಕಲಾನ್ ॥24॥
ಕೆಳಗೆ ಬಿದ್ದ ಚಿತ್ರಸೇನನ ತಲೆಯನ್ನು ನೋಡಿ ಅಲ್ಲಿ ನೆರೆದಿದ್ದ ಮಹಾರಥರು ಸಿಂಹಗರ್ಜನೆಯನ್ನು ಮಾಡುತ್ತಾ ಬಹಳವಾಗಿ ಅಭಿನಂದನೆಯ ಮಾತುಗಳನ್ನು ಹೇಳಿದರು.
ವಿಶಸ್ತಂ ಭ್ರಾತರಂ ದೃಷ್ಟ್ವಾ ಕರ್ಣಪುತ್ರೌ ಮಹಾರಥೌ।
ಸುಶರ್ಮಾ ಸತ್ಯಸೇನಶ್ಚ ಮುಂಚಂತೌ ನಿಶಿತಾನ್ ಶರಾನ್ ॥25॥
ತತೋಽಭ್ಯಧಾವತಾಂ ತೂರ್ಣಂ ಪಾಂಡವಂ ರಥಿನಾಂ ವರಮ್।
ಜಿಘಾಂಸಂತೌ ಯಥಾನಾಗಂ ವ್ಯಾಘ್ರೌ ರಾಜನ್ ಮಹಾವನೇ ॥26॥
ತಮ್ಮ ಸಹೋದರನು ಸತ್ತಿದ್ದನ್ನು ನೋಡಿದ ಕರ್ಣನ ಇನ್ನಿಬ್ಬರು ಪುತ್ರರಾದ ಮಹಾರಥರೂ ಆದ ಸುಶರ್ಮ ಮತ್ತು ಸತ್ಯಸೇನ ಎಂಬವರು ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ನಕುಲನನ್ನು ಎದುರುಗೊಂಡರು. ನಕುಲನು ಶ್ರೇಷ್ಠ ರಥಿಕನಾಗಿದ್ದ. ದೊಡ್ಡಕಾಡಿನಲ್ಲಿ ಆನೆಯನ್ನು ಕೊಲ್ಲುವುದಕ್ಕಾಗಿ ಹುಲಿಗಳೆರಡು ಎರಗಿದಂತೆ ಇತ್ತು.
ತಾವಭ್ಯವರ್ಷತಾಂ ತೀಕ್ಷ್ಣೈಃ ದ್ವಾವಪ್ಯೇನಂ ಮಹಾರಥೌ।
ಶರೌಘಾನ್ ಸಮ್ಯಗಸ್ಯಂತೌ ಜೀಮೂತೌ ಸಲಿಲಂ ಯಥಾ ॥27॥
ಆ ಮಹಾರಥರಾದ ಕರ್ಣಪುತ್ರರೀರ್ವರೂ ಹರಿತವಾದ ಬಾಣಗಳ ಮಳೆಯನ್ನು ಸುರಿಸಿದರು. ಎರಡು ಮೋಡಗಳು ಚೆನ್ನಾಗಿ ಮಳೆ ಸುರಿಸಿದಂತೆ ಇದು ಕಂಡಿತು.
ಸ ಶರೈಃ ಸರ್ವತೋ ವಿದ್ಧಃ ಪ್ರಹೃಷ್ಟ ಇವ ಪಾಂಡವಃ।
ಅನ್ಯತ್ ಕಾರ್ಮುಕಮಾದಾಯ ರಥಮಾರುಹ್ಯ ವೀರ್ಯವಾನ್ ॥28॥
ಬಾಣಗಳಿಂದ ಎಲ್ಲಾ ಕಡೆಯಿಂದಲೂ ಹೊಡೆಯಲ್ಪಟ್ಟ ನಕುಲನು ಬಹಳವಾಗಿ ಸಂತುಷ್ಟನಾದನು. ವೀರನಾದ ಅವನು ಇನ್ನೊಂದು ಬಿಲ್ಲನ್ನು ಕೈಗೆತ್ತಿಕೊಂಡು ರಥವನ್ನು ಹತ್ತಿದನು.
ಅತಿಷ್ಠತ ರಣೇ ವೀರಃ ಕ್ರುದ್ಧರೂಪ ಇವಾಂತಕಃ ॥29॥
ಕುಪಿತನಾದ ಯಮನ ಹಾಗೆ ವೀರನಾದ ನಕುಲನು ಯುದ್ಧಕ್ಕೆ ನಿಂತನು.
ತೌ ತಸ್ಯ ಭ್ರಾತರೌ ವೀರೌ ಶರೈಃ ಸನ್ನತಪರ್ವಭಿಃ।
ರಥಂ ವಿಶಕಲೀಕರ್ತುಂ ಸಮಾರಬ್ಧೌ ವಿಶಾಂಪತೇ ॥30॥
ರಾಜನೇ! ಆ ವೀರರಾದ ಸಹೋದರರು ಚೆನ್ನಾಗಿ ಬಗ್ಗಿಸಿದ ಸಂಧಿಗಳುಳ್ಳ ಬಾಣಗಳಿಂದ ನಕುಲನ ರಥವನ್ನು ನಾಶಮಾಡಲು ಆರಂಬಿಸಿದರು.
ತತಃ ಪ್ರಸಹ್ಯ ನಕುಲಃ ಚತುರ್ಭಿಶ್ಚತುರೋ ಹಯಾನ್।
ಜಘಾನ ನಿಶಿತೈರ್ಬಾಣೈಃ ಸತ್ಯಸೇನಸ್ಯ ಸಂಯುಗೇ ॥31॥
ಅನಂತರ ಯುದ್ಧದಲ್ಲಿ ನಕುಲನು ನಾಲ್ಕು ಬಾಣಗಳನ್ನು ಪ್ರಯೋಗಿಸಿ ಸತ್ಯಸೇನನ ನಾಲ್ಕು  ಕುದುರೆಗಳನ್ನು ಕೊಂದನು.
ತತಃ ಸಂಧಾಯ ನಾರಾಚಂ ರುಗ್ಮಪುಂಖಂ ಶಿಲಾಶಿತಮ್।
ಧನುಶ್ಚಿಚ್ಛೇದ ರಾಜೇಂದ್ರ ಸತ್ಯಸೇನಸ್ಯ ಪಾಂಡವಃ ॥32॥
ರಾಜೇಂದ್ರ! ನಕುಲನು ಪುನಃ ಬಂಗಾರದ ರೆಕ್ಕೆಗಳುಳ್ಳ, ಕಲ್ಲಿನಲ್ಲಿ ತೇದು ಹರಿತಗೊಳಿಸಿದ ಬಾಣವನ್ನು ಬಿಲ್ಲಿಗೆ ಜೋಡಿಸಿ ಸತ್ಯಸೇನನ ಧನುಸ್ಸನ್ನು ತುಂಡರಿಸಿದನು.
ಅಥಾನ್ಯಂ ರಥಮಾಸ್ಥಾಯ ಧನುರಾದಾಯ ಚಾಪರಮ್।
ಸತ್ಯಸೇನಃ ಸುಶರ್ಮಾ ಚ ಪಾಂಡವಂ ಪರ್ಯಧಾವತಾಮ್ ॥33॥
ಅನಂತರ ಸತ್ಯಸೇನನು ಮತ್ತೊಂದು ರಥವನ್ನು ಹತ್ತಿ, ಇನ್ನೊಂದು ಬಿಲ್ಲನ್ನು ಹಿಡಿದುಕೊಂಡು, ಸುಶರ್ಮನ ಜೊತೆಗೂಡಿ ನಕುಲನನ್ನು ಎದುರಿಸಿದನು.
ಅವಿಧ್ಯತ್ ತಾವಸಂಭ್ರಾಂತೌ ಮಾದ್ರೀಪುತ್ರಶ್ಚ ವೀರ್ಯವಾನ್।
ದ್ವಾಭ್ಯಾಂ ದ್ವಾಭ್ಯಾಂ ಮಹಾರಾಜ ಶರಾಭ್ಯಾಂ ರಣಮೂರ್ಧನಿ ॥34॥
ಮಹಾರಾಜ! ಯುದ್ಧದಲ್ಲಿ ವೀರನಾದ ನಕುಲನು ಧೃತಿಗೆಡದಿರುವ ಆ ಸಹೋದರರನ್ನು ಎರಡೆರಡು ಬಾಣಗಳಿಂದ ಹೊಡೆದನು.
ಸುಶರ್ಮಾ ತು ತತಃ ಕ್ರುದ್ಧಃ ಪಾಂಡವಸ್ಯ ಮಹದ್ಧನುಃ।
ಚಿಚ್ಛೇದ ಪ್ರಹಸನ್ ಯುದ್ಧೇ ಕ್ಷುರಪ್ರೇಣ ಮಹಾರಥಃ ॥35॥
ಮಹಾರಥನಾದ ಸುಶರ್ಮನು ಕೋಪಗೊಂಡು ಜೋರಾಗಿ ನಗುತ್ತಾ ಶೀಘ್ರಗಾಮಿಯಾದ ಬಾಣದಿಂದ ನಕುಲನ ದೊಡ್ಡದಾದ ಬಿಲ್ಲನ್ನು ತುಂಡು ಮಾಡಿದನು.
ಅಥಾನ್ಯದ್ಧನುರಾದಾಯ ನಕುಲಃ ಕ್ರೋಧಮೂರ್ಚ್ಛಿತಃ।
ಸುಶರ್ಮಾಣಂ ತ್ರಿಭಿರ್ವಿದ್ಧ್ವಾ ಧ್ವಜಮೇಕೇನ ಚಿಚ್ಛಿದೇ ॥36॥
ಬಹಳ ಕೋಪಗೊಂಡ ನಕುಲನು ಇನ್ನೊಂದು ಬಿಲ್ಲನ್ನು ಹಿಡಿದುಕೊಂಡು ಮೂರು ಬಾಣಗಳಿಂದ ಸುಶರ್ಮನಿಗೆ ಹೊಡೆದನು.

ಒಂದು ಬಾಣವನ್ನು ಪ್ರಯೋಗಿಸಿ ಅವನ ಧ್ವಜವನ್ನು ತುಂಡರಿಸಿದನು.
ಸತ್ಯಸೇನಸ್ಯ ಚ ಧನುರ್ಹಸ್ತಾವಾಪಂ ಚ ಮಾರಿಷ |
ಚಿಚ್ಛೇದ ತರಸಾ ಯುದ್ಧೇ ತತ ಉಚ್ಚುಕ್ರುಶುರ್ಜನಾಃ ॥38॥
ಮಹಾರಾಜ! ಅನಂತರ ಯುದ್ಧದಲ್ಲಿ ನಕುಲನು ಸತ್ಯಸೇನನ ಧನುಸ್ಸನ್ನು ಮತ್ತು ________ ಹಸ್ತರಕ್ಷಕವನ್ನು ಬೇಗನೇ ಪುಡಿಮಾಡಿದನು. ಅದರಿಂದ ಎಲ್ಲಾ ಜನರು ಜೋರಾಗಿ ಶಬ್ದ ಮಾಡಿದರು.
ಅಥಾನ್ಯದ್ಧನುರಾದಾಯ ಶತ್ರುಘ್ನಂ ಭಾರಸಾಧನಮ್ |
ಶರೈಃ ಸಂಛಾದಯಾಮಾಸ ಸಮಂತಾತ್ ಪಾಂಡುನಂದನಮ್ ॥39॥
ಅನಂತರ ಸತ್ಯಸೇನನು ಶತ್ರುಸಂಹಾರಕವಾದ ಬಹಳ ಭಾರವುಳ್ಳ ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ನಕುಲನ ಮೇಲೆ ಎಲ್ಲಾ ಕಡೆಯಿಂದಲೂ ಬಾಣಗಳಿಂದ ಆಚ್ಛಾದಿಸಿದನು.
ಸನ್ನಿವಾರ್ಯ ತು ತಾನ್ ಬಾಣಾನ್ ನಕುಲಃ ಪರವೀರಹಾ |
ಸತ್ಯಸೇನಸುಶರ್ಮಾಣೌ ದ್ವಾಭ್ಯಾಂ ದ್ವಾಭ್ಯಾಮವಿಧ್ಯತ ॥40॥
ಶತ್ರುವೀರಸಂಹಾರಕನಾದ ನಕುಲನು ಆ ಬಾಣಗಳನ್ನು ತುಂಡರಿಸಿ ಸತ್ಯಸೇನ ಮತ್ತು ಸುಶರ್ಮರನ್ನು ಎರಡೆರಡು ಬಾಣಗಳಿಂದ ಹೊಡೆದನು.
ತಾವೇನಂ ಪ್ರತ್ಯವಿಧ್ಯೇತಾಂ ಪೃಥಕ್ ಪೃಥಗಜಿಹ್ಮಗೈಃ |
ಸಾರಥಿಂ ಚಾಸ್ಯ ರಾಜೇಂದ್ರ ಶರೈರ್ವಿವ್ಯಧತುಃ ಶಿತೈಃ ॥41॥
ಆ ಸಹೋದರರೀರ್ವರೂ ಪ್ರತ್ಯೇಕ ಪ್ರತ್ಯೇಕವಾಗಿ ನಕುಲನನ್ನು ಬಾಣಗಳಿಂದ ಹೊಡೆದರು. ರಾಜೇಂದ್ರ! ಹರಿತವಾದ ಬಾಣಗಳಿಂದ ನಕುಲನ ಸಾರಥಿಯನ್ನು ಹೊಡೆದು ಗಾಯಗೊಳಿಸಿದರು.
ಸತ್ಯಸೇನೋ ರಥೇಷಾಂ ತು ನಕುಲಸ್ಯ ಧನುಸ್ತದಾ |
ಪೃಥಕ್ ಶರಾಭ್ಯಾಂ ಚಿಚ್ಛೇದ ಕೃತಹಸ್ತಃ ಪ್ರತಾಪವಾನ್ ॥42॥
ಯುದ್ಧದಲ್ಲಿ ಸಿದ್ಧಹಸ್ತನಾದ ಪ್ರತಾಪಿ ಸತ್ಯಸೇನನು ಪ್ರತ್ಯೇಕ ಪ್ರತ್ಯೇಕವಾಗಿ ಎರಡೆರಡು ಬಾಣಗಳಿಂದ ನಕುಲನ ಬಿಲ್ಲು ಮತ್ತು ರಥದ ನೊಗವನ್ನೂ ತುಂಡರಿಸಿದನು.
ಸ ರಥೇಽತಿರಥಸ್ತಿಷ್ಠನ್ ರಥಶಕ್ತಿಂ ಪರಾಮೃಶನ್ |
ಸ್ವರ್ಣದಂಡಾಮಕುಂಠಾಗ್ರಾಂ ತೈಲಧೌತಾಂ ಸುನಿರ್ಮಲಾಮ್ ॥43॥
ಲೇಲಿಹಾನಾಂ ಮಹಾಬಾಹೋ ನಾಗಕನ್ಯಾಂ ಮಹಾವಿಷಾಮ್ |
ಸಮುದ್ಯಮ್ಯ ಪ್ರಚಿಕ್ಷೇಪ ಸತ್ಯಸೇನಸ್ಯ ಸಂಯುಗೇ ॥44॥
ಅನಂತರ ಅತಿರಥನೆನಿಸಿದ ನಕುಲನು ರಥದ ಮೇಲೆ ನಿಂತುಕೊಂಡು ಸ್ವಚ್ಛವಾದ, ಹರಿತವಾದ ಅಗ್ರವುಳ್ಳ, ಎಣ್ಣೆಯಲ್ಲಿ ಅದ್ದಿದ ಬಂಗಾರದ ದಂಡವುಳ್ಳ ರಥದ ಶಕ್ತಿಯನ್ನು ತೆಗೆದುಕೊಂಡನು. ಮಹಾಬಾಹೋ! ಬಹಳವಿಷವುಳ್ಳ ನಾಗಕನ್ಯೆಯಂತೆ ಹೊಳೆಯುತ್ತಿರುವ ಆ ರಥಶಕ್ತಿಯನ್ನು ಎತ್ತಿಕೊಂಡು ಯುದ್ಧದಲ್ಲಿ ಸತ್ಯಸೇನನ ಮೇಲೆ ಎಸೆದನು.
ಸಾ ತಸ್ಯ ಹೃದಯಂ ಸಂಖ್ಯೇ ಬಿಭೇದ ಶತಧಾ ನೃಪ |
ಸ ಪಪಾತ ರಥಾದ್ ಭೂಮಿಂ ಗತಸತ್ತ್ವೋಽಲ್ಪಚೇತನಃ ॥45॥
ರಾಜನೇ! ಯುದ್ಧದಲ್ಲಿ ಆ ರಥಶಕ್ತಿಯು ಸತ್ಯಸೇನನ ಹೃದಯವನ್ನು ನೂರಾರು ಭಾಗವಾಗಿ ಪುಡಿಮಾಡಿತು. ಅಲ್ಪನಾದ ಸತ್ಯಸೇನನು ಶಕ್ತಿಯನ್ನು ಕಳೆದುಕೊಂಡು ರಥದಿಂದ ಭೂಮಿಯಲ್ಲಿ ಬಿದ್ದನು.
ಭ್ರಾತರಂ ನಿಹತಂ ದೃಷ್ಟ್ವಾ ಸುಶರ್ಮಾ ಕ್ರೋಧಮೂರ್ಚ್ಛಿತಃ |
ಅಭ್ಯವರ್ಷಚ್ಛರೈಸ್ತೂರ್ಣಂ ಪದಾತಿಂ ಪಾಂಡುನಂದನಮ್ ॥46॥
ಸುಶರ್ಮನು ತನ್ನ ಅಣ್ಣನು ಸತ್ತಿದ್ದನ್ನು ನೋಡಿ ಕೋಪದಿಂದ ಕುದಿಯುತ್ತಾ ನೆಲದ ಮೇಲೆ ನಿಂತಿದ್ದ ನಕುಲನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ನಕುಲಂ ವಿರಥಂ ದೃಷ್ಟ್ವಾ ದ್ರೌಪದೇಯೋ ಮಹಾರಥಃ |
ಶ್ರುತಸೋಮೋಽಭಿದುದ್ರಾವ ಪರೀಪ್ಸನ್ ಪಿತರಂ ರಣೇ ॥47॥
ನಕುಲನು ರಥವನ್ನು ಕಳೆದುಕೊಂಡಿದ್ದನು. ಅದನ್ನು ನೋಡಿದ ಮಹಾರಥನಾದ ದ್ರೌಪದಿಯ ಪುತ್ರ ಶ್ರುತಸೋಮನು ಯುದ್ಧದಲ್ಲಿ ತನ್ನ ತಂದೆಯನ್ನು ರಕ್ಷಿಸಲಿಕ್ಕಾಗಿ ಓಡಿಬಂದನು,
ತತೋಽಧಿರುಹ್ಯ ನಕುಲಃ ಶ್ರುತಸೋಮಸ್ಯ ತಂ ರಥಮ್ |
ಶುಶುಭೇ ಭರತಶ್ರೇಷ್ಠೋ ಗಿರಿಸ್ಥ ಇವ ಕೇಸರೀ ॥48॥
ಭರತಶ್ರೇಷ್ಠನಾದ ನಕುಲನು ಶ್ರುತಸೋಮನ ರಥವನ್ನು ಏರಿ ಪರ್ವತದ ಮೇಲೆ ಇರುವ ಸಿಂಹದ ಹಾಗೆ ಶೋಭಿಸಿದನು.
ಸೋಽನ್ಯತ್ ಕಾರ್ಮುಕಮಾದಾಯ ಸುಶರ್ಮಾಣಮಯೋಧಯತ್ ॥
ನಕುಲನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಸುಶರ್ಮನ ಜೊತೆಗೆ ಕಾದಾಡಿದನು.
ತಾವುಭೌ ಶರವರ್ಷಾಭ್ಯಾಂ ಸಮಾಸಾದ್ಯ ಪರಸ್ಪರಮ್ |
ಪರಸ್ಪರವಧೇ ಯತ್ನಂ ಚಕ್ರತುಃ ಸುಮಹಾರಥೌ ॥50॥
ಒಳ್ಳೆಯ ಮಹಾರಥರಾದ ಈ ನಕುಲ - ಸುಶರ್ಮರು ಪರಸ್ಪರವಾಗಿ ಬಾಣಗಳ ಮಳೆಗೈಯುತ್ತಾ ಒಬ್ಬರನ್ನೊಬ್ಬರು ಸಾಯಿಸಲು ಯತ್ನಿಸಿದರು.
ಸುಶರ್ಮಾ ತು ಸುಸಂಕ್ರುದ್ಧಃ ಪಾಂಡವಂ ವಿಶಿಖೈಸ್ತ್ರಿಭಿಃ |

ಶ್ರುತಸೋಮಂ ಚ ವಿಂಶತ್ಯಾ ಬಾಹ್ವೋರುರಸಿ ಚಾರ್ಪಯತ್ ॥51॥
ಬಹಳ ಕ್ರುದ್ಧನಾದ ಸುಶರ್ಮನು ನಕುಲನ ಮೇಲೆ ಹರಿತವಾದ ತುದಿಯುಳ್ಳ ಮೂರು ಬಾಣಗಳಿಂದ ಮತ್ತು ಶ್ರುತಸೇನನ ಮೇಲೆ ಇಪ್ಪತ್ತು ಬಾಣಗಳಿಂದ ಕೈ ಮತ್ತು ಎದೆಯ ಮೇಲೆ ಹೊಡೆದನು.
ತತಃ ಕ್ರುದ್ಧೋ ಮಹಾರಾಜ ನಕುಲಃ ಪರವೀರಹಾ |
ಶರೈಸ್ತಸ್ಯ ದಿಶಃ ಸರ್ವಾನ್ ಛಾದಯಾಮಾಸ ವೀರ್ಯವಾನ್ ॥52॥
ಮಹಾರಾಜನೇ! ಶತ್ರುಗಳನ್ನು ಸದೆಬಡಿಯುವ ವೀರನಾದ ನಕುಲನು ಬಹಳ ಕೋಪಗೊಂಡು ಸುಶರ್ಮನನ್ನು ಎಲ್ಲಾ ದಿಕ್ಕುಗಳಲ್ಲಿಯೂ ಬಾಣಗಳಿಂದ ಮುಚ್ಚಿಬಿಟ್ಟನು.
ತತೋ ಗೃಹೀತ್ವಾ ತೀಕ್ಷ್ಣಾಗ್ರಮರ್ಧಚಂದ್ರಂ ಸುತೇಜನಮ್ |
ಸವೇಗಯುಕ್ತಂ ಚಿಕ್ಷೇಪ ಕರ್ಣಪುತ್ರಸ್ಯ ಸಂಯುಗೇ ॥53॥
ಅನಂತರ ಯುದ್ಧದಲ್ಲಿ ಹರಿತವಾದ, ಅರ್ಧಚಂದ್ರಾಕಾರದ, ಬಹಳ ತೇಜಸ್ಸುಳ್ಳ ಆಯುಧವನ್ನು ತೆಗೆದುಕೊಂಡು ಕರ್ಣಪುತ್ರ ಸುಶರ್ಮನ ಕಡೆಗೆ ಬಹಳ ವೇಗವಾಗಿ ಪ್ರಯೋಗಿಸಿದನು.
ತಸ್ಯ ತೇನ ಶಿರಃ ಕಾಯಾದ್ ಜಹಾರ ನೃಪಸತ್ತಮ |
ಪಶ್ಯತಾಂ ಸರ್ವಸೈನ್ಯಾನಾಂ ತದದ್ಭುತಮಿವಾಭವತ್ ॥54॥
ರಾಜಶ್ರೇಷ್ಠನೇ! ಆ ಅರ್ಧಚಂದ್ರಾಯುಧದಿಂದ ಎಲ್ಲರ ಸಮಕ್ಷಮದಲ್ಲಿ ಸುಶರ್ಮನ ತಲೆಯನ್ನು ಕಡಿದನು. ಇದು ಬಹಳ ಅದ್ಭುತವಾಗಿತ್ತು.
ಸ ಹತಃ ಪ್ರಾಪತದ್ ರಾಜನ್ ನಕುಲೇನ ಮಹಾತ್ಮನಾ |
ನದೀವೇಗಾದ್ ಯಥಾ ಭಗ್ನಸ್ತೀರಜಃ ಪಾದಪೋ ಮಹಾನ್ ॥55॥
ರಾಜನೇ! ನದಿಯ ರಭಸದ ಪ್ರವಾಹದಿಂದ ತೀರದ ಮರವು ಕೆಳಬೀಳುವಂತೆ ಈ ಸುಶರ್ಮನು ಮಹಾತ್ಮನಾದ ನಕುಲನಿಂದಾಗಿ ಸತ್ತು ಕೆಳಗೆ ಬಿದ್ದನು.
ಕರ್ಣಪುತ್ರವಧಂ ದೃಷ್ಟ್ವಾ ನಕುಲಸ್ಯ ಚ ವಿಕ್ರಮಮ್ |
ಪ್ರದುದ್ರಾವ ಭಯಾತ್ ಸೇನಾ ತಾವಕೀ ಭರತರ್ಷಭ॥56॥
ಭಾರತೋತ್ತಮನೇ! ಕರ್ಣಪುತ್ರರು ಸತ್ತಿದ್ದನ್ನು ಮತ್ತು ನಕುಲನ ಪರಾಕ್ರಮವನ್ನು ನೋಡಿದ ನಿನ್ನ ಸೇನೆಯು ಭಯದಿಂದ ಪಲಾಯನ ಮಾಡಿತು.
ತಾಂ ತು ಸೇನಾಂ ಮಹಾರಾಜ ಮದ್ರರಾಜಃ ಪ್ರತಾಪವಾನ್ |
ಅಪಾಲಯದ್ ರಣೇ ಶೂರಃ ಸೇನಾಪತಿರರಿಂದಮಃ ॥57॥
ಮಹಾರಾಜನೇ! ಹೀಗೆ ಓಡಿಹೋಗುತ್ತಿದ್ದ ಆ ನಿನ್ನ ಸೇನೆಯನ್ನು ಶತ್ರುದಮನನಾದ ಶೂರ ಹಾಗೂ ಪ್ರತಾಪಿಯಾದ ಸೇನಾಧಿಪತಿ ಶಲ್ಯನು ರಕ್ಷಿಸಿದನು.
ವಿಭೀಸ್ತಸ್ಥೌ ಮಹಾರಾಜ ವ್ಯವಸ್ಥಾಪ್ಯ ಚ ವಾಹಿನೀಮ್ ॥58॥
ಮಹಾರಾಜ! ಶಲ್ಯನು ಸೈನ್ಯವನ್ನು ಚೆನ್ನಾಗಿ ನಿಲ್ಲಿಸಿ ನಿರ್ಭೀತನಾಗಿ ನಿಂತುಕೊಂಡನು.
ಸಿಂಹನಾದಂ ಭೃಶಂ ಕೃತ್ವಾ ಧನುಃಶಬ್ದಂ ಚ ದಾರುಣಮ್ |
ತಾವಕಾಃ ಸಮರೇ ರಾಜನ್ ರಕ್ಷಿತಾ ದೃಢಧನ್ವ(ನ್ವಿ)ನಾ ॥59॥
ರಾಜನೇ! ಬಹಳವಾಗಿ ಸಿಂಹನಾದವನ್ನು ಮಾಡುತ್ತಾ ಭಯಂಕರವಾದ ಧನುಸ್ಸಿನ ಠೇಂಕಾರವನ್ನೂ ಮಾಡುತ್ತಾ ಇದ್ದ ಧನುರ್ಧಾರಿಯಾದ ಶಲ್ಯನು ರಣರಂಗದಲ್ಲಿ ನಿನ್ನವರನ್ನು ರಕ್ಷಿಸಿದನು.
ಪ್ರತ್ಯುದ್ಯಯುರರೀನ್ ಸರ್ವಾನ್ ಸಮಂತಾದ್ ವಿಗತವ್ಯಥಾಃ |
ಮದ್ರರಾಜಂ ಮಹೇಷ್ವಾಸಂ ಪರಿವಾರ್ಯ ಸಮಂತತಃ ॥60॥
ಎಲ್ಲಾ ದುಃಖಗಳನ್ನೂ ಕಳೆದುಕೊಂಡು ಮಹಾಬಿಲ್ಲಾರನಾದ ಶಲ್ಯನನ್ನು ಎಲ್ಲಾ ಕಡೆಗಳಿಂದ ರಕ್ಷಿಸುತ್ತಾ ಎಲ್ಲಾ ದಿಕ್ಕುಗಳಲ್ಲೂ ಶತ್ರುಗಳನ್ನು ಎದುರಿಸಿದರು.
ಸ್ಥಿತಾ ರಾಜನ್ ಮಹಾಸೇನಾ ಯೋದ್ಧುಕಾಮಾ ಸಮಂತತಃ |
ಸಾತ್ಯಕಿರ್ಭೀಮಸೇನಶ್ಚ ಮಾದ್ರೀಪುತ್ರೌ ಚ ಪಾಂಡವೌ ॥61॥
ಯುಧಿಷ್ಠಿರಂ ಪುರಸ್ಕೃತ್ಯ ಹ್ರೀನಿಷೇಧಮರಿಂದಮಮ್ |
ಪರಿವಾರ್ಯ ಮಹೇಷ್ವಾಸಾಃ ಸಿಂಹನಾದಂ ಪ್ರಚಕ್ರಿರೇ ॥62॥
ರಾಜನೇ! ಯುದ್ಧದ ಇಚ್ಛೆಯಿಂದ ದೊಡ್ಡದಾದ ಸೈನ್ಯವು ಎಲ್ಲ ಕಡೆಯೂ ನಿಂತುಕೊಂಡಿತು. ಸಾತ್ಯಕಿ, ಭೀಮಸೇನ, ನಕುಲ-ಸಹದೇವರ ಮೊದಲಾದ ಮಹಾಬಿಲ್ಲಾರರು ಯುಧಿಷ್ಠಿರನನ್ನು ಮುಂದಿಟ್ಟುಕೊಂಡು, ಎದುರಿಸಲು ಅಸಾಧ್ಯನಾದ ಹಾಗೂ ಶತ್ರುಸಂಹಾರಕನಾದ ಯುಧಿಷ್ಠಿರನನ್ನು ಸುತ್ತುವರಿದು ಸಿಂಹನಾದವನ್ನು ಮಾಡಿದರು.
ಬಾಣಶಂಖರವಾಂಶ್ಚೋಗ್ರಾನ್ ಕ್ಷ್ವೇಲಾಂಶ್ಚ ವಿವಿಧಾನ್ ದಧುಃ ॥63॥
ಬಾಣದ ಧ್ವನಿ, ಶಂಖದ ಧ್ವನಿಯನ್ನು ಹಾಗೂ ವಿವಿಧ ಸಿಂಹನಾದವನ್ನು ಮಾಡಿದರು.
ತಥೈವ ತಾವಕಾಃ ಸರ್ವೇ ಮದ್ರಾಧಿಪತಿಮಂಜಸಾ |
ಪರಿವಾರ್ಯ ಸುಸಂರಬ್ಧಾಃ ಪುನರ್ಯುದ್ಧಮರೋಚಯನ್ ॥64॥
ಅಲ್ಲಿಯೇ ನಿನ್ನವರು ಎಲ್ಲರೂ ಸೇರಿ ಶಲ್ಯನನ್ನು ಸುತ್ತುವರಿದು ಬಹಳವಾದ ತಯಾರಿಯೊಂದಿಗೆ ಮತ್ತೆ ಯುದ್ಧವನ್ನು ಮಾಡಲು ಇಷ್ಟಪಟ್ಟರು.

ತತಃ ಪ್ರವವೃತೇ ಯುದ್ಧಂ ಭೀರೂಣಾಂ ಭಯವರ್ಧನಮ್ |
ತಾವಕಾನಾಂ ಪರೇಷಾಂ ಚ ಮೃತ್ಯುಂ ಕೃತ್ವಾ ನಿವರ್ತನಮ್ ॥65॥
ಅನಂತರ ಭಯಗೊಳ್ಳುವವರ ಭಯವನ್ನು ಹೆಚ್ಚು ಮಾಡುವ ಯುದ್ಧವು ಆರಂಭವಾಯಿತು. ನಿನ್ನ ಕಡೆಯವರು ಮತ್ತು ಶತ್ರುಕಡೆಯವರು ಮರಣವನ್ನೇ ಹಿಂದಿಕ್ಕಿ ಯುದ್ಧದಲ್ಲಿ ಪಾಲ್ಗೊಂಡರು.
ಯಥಾ ದೈವಾಸುರಂ ಯುದ್ಧಂ ಪೂರ್ವಮಾಸೀದ್ ವಿಶಾಂಪತೇ |
ಅಭೀತಾನಾಂ ತದಾ ರಾಜನ್ ಯಮರಾಷ್ಟ್ರವಿವರ್ಧನಮ್ ॥66॥
ರಾಜನೇ! ಹಿಂದೆ ದೇವತೆಗಳು ಮತ್ತು ಅಸುರರಿಗೆ ಎಂತಹ ಯುದ್ಧನಡೆಯಿತೋ ಅಂತಹ ಯುದ್ಧವು ಯುದ್ಧದ ಭಯವಿಲ್ಲದ ಯೋಧರ ಮಧ್ಯೆ ನಡೆಯಿತು.
ತತಃ ಕಪಿಧ್ವಜೋ ರಾಜನ್ ಹತ್ವಾ ಸಂಶಪ್ತಕಾನ್ ರಣೇ |
ಅಭ್ಯದ್ರವತ ತಾಂ ಸೇನಾಂ ಕೌರವೀಂ ಪಾಂಡುನಂದನಃ ॥67॥
ರಾಜನೇ! ಅನಂತರ ಯುದ್ಧದಲ್ಲಿ ಸಂಶಪ್ತಕರನ್ನು ಹೊಡೆದುರುಳಿಸಿದ ಪಾಂಡುಪುತ್ರ ಅರ್ಜುನನು ಕೌರವರ ಸೈನ್ಯವನ್ನು ಎದುರಿಸಿದನು.
ತಥೈವ ಪಾಂಡವಾಃ ಶೇಷಾಃ ಧೃಷ್ಟದ್ಯುಮ್ನಪುರೋಗಮಾಃ |
ಅಭ್ಯಧಾವಂತ ತಾಂ ಸೇನಾಂ ವಿಸೃಜಂತಃ ಶಿತಾನ್ ಶರಾನ್ ॥68॥
ಹಾಗೆಯೇ ಧೃಷ್ಟದ್ಯುಮ್ನ ಮೊದಲಾದ ಉಳಿದ ಪಾಂಡವರು ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಕೌರವಸೇನೆಯನ್ನು ಎದುರಿಸಿದರು.
ಪಾಂಡವೈರಭಿಕೀರ್ಣಾನಾಂ ಸಮ್ಮೋಹಃ ಸಮಜಾಯತ |
ನ ವಿಜಾನಂತ್ಯನೀಕಾನಿ ದಿಶೋ ವಾ ಪ್ರದಿಶಸ್ತಥಾ ॥69॥
ಪಾಂಡವರು ಬಾಣಗಳನ್ನು ಪ್ರಯೋಗಿಸಿದಾಗ ಶತ್ರುಗಳಿಗೆ ಮೋಹವು ಉಂಟಾಯಿತು. ಇದರಿಂದಾಗಿ ಸೈನ್ಯವು ದಿಕ್ಕು ಯಾವುದು, ವಿದಿಕ್ಕು ಯಾವುದು ಎಂಬುದನ್ನು ತಿಳಿಯಲಿಲ್ಲ.
ಆಪೂರ್ಯಮಾಣಾನಿ ಶಿತೈಃ ಶರೈಃ ಪಾಂಡವಚೋದಿತೈಃ ॥70॥
ಪಾಂಡವರು ಬಿಟ್ಟ ಹರಿತವಾದ ಬಾಣಗಳು ಕೌರವಸೈನ್ಯವನ್ನು ಚೆನ್ನಾಗಿ ಆವರಿಸಿದವು.
ಹತಪ್ರವೀರಾ ವಿಧ್ವಸ್ತಾ ಕೀರ್ಯಮಾಣಾಃ ಸಮಂತತಃ |
ಕೌರವ್ಯಾಽವಧ್ಯತ ಚಮೂಃ ಪಾಂಡುಪುತ್ರೈರ್ಮಹಾರಥೈಃ ॥71॥
ಮಹಾರಥರಾದ ಪಾಂಡವರು ಎಲ್ಲಾ ಕಡೆಗಳಿಂದ ಬಾಣಗಳನ್ನು ಪ್ರಯೋಗಿಸಿದಾಗ ಕೌರವರ ಕಡೆಯ ವೀರರು ಸತ್ತುಹೋದರು. ಕೌರವರ ಸೇನೆಯು ಘಾಸಿಗೊಂಡಿತು.
ತಥೈವ ಪಾಂಡವೀ ಸೇನಾ ಶರೈಃ ರಾಜನ್ ಸಮಂತತಃ |
ರಣೇಽಹನ್ಯತ ಪುತ್ರೈಸ್ತೇ ಶತಶೋಽಥ ಸಹಸ್ರಶಃ ॥72॥
ರಾಜನೇ! ಅದೇ ರೀತಿಯಲ್ಲಿ ನಿನ್ನ ಮಕ್ಕಳೂ ಕೂಡ ಎಲ್ಲ ಕಡೆಗಳಿಂದಲೂ ಬಾಣಗಳನ್ನು ಪ್ರಯೋಗಿಸಿ ಪಾಂಡವರ ಸೈನ್ಯವನ್ನು ನಾಶಮಾಡಿದರು.
ತೇ ಸೇನೇ ಭೃಶಸಂತಪ್ತೇ ವಧ್ಯಮಾನೇ ಪರಸ್ಪರಮ್ |
ವ್ಯಾಕುಲೇ ಸಮಪದ್ಯೇತಾಂ ವರ್ಷಾಸು ಸರಿತಾವಿವ ॥73॥
ಮಳೆಗಾಲದಲ್ಲಿ ನದಿಗಳು ದಡವನ್ನು ಮೀರುವಂತೆ ಕೌರವರ ಮತ್ತು ಪಾಂಡವರ ಸೈನ್ಯಗಳು ಪರಸ್ಪರವಾಗಿ ಹೊಡೆದುಕೊಂಡು ಬಹಳ ದುಃಖವನ್ನು ಅನುಭವಿಸಿ ವ್ಯಾಕುಲತೆಯನ್ನು ಹೊಂದಿದವು.
ದ್ರವಮಾಣೇಷು ಸೈನ್ಯೇಷು ವಿನದತ್ಸು ಚ ದಂತಿಷು ॥74॥
ಕೂಜತಾಂ ಸ್ತನತಾಂ ಚಾಪಿ ಪದಾತೀನಾಂ ಮಹಾಹವೇ ॥75॥
ವಿದ್ರುತೇಷು ಮಹಾರಾಜ ಹಯೇಷು ಬಹುಧಾ ತದಾ |
ಸಂಕ್ಷಯೇ ದಾರುಣೇ ಜಾತೇ ಸಂಗರೇ ಸರ್ವದೇಹಿನಾಮ್ ॥76॥
ನಾನಾಶಸ್ತ್ರಸಮಾವಾಪೇ ವ್ಯತಿಷಕ್ತರಥದ್ವಿಪೇ |
ಹರ್ಷಣೇ ಯುದ್ಧಶೌಂಡಾನಾಂ ಭೀರೂಣಾಂ ಭಯವರ್ಧನೇ ॥77॥
ಗಾಹಮಾನೇಷು ಯೋಧೇಷು ಪರಸ್ಪರವಧೈಷಿಷು |
ಪ್ರಾಣಾದೇಷು ಮಹಾಘೋರೇ ವರ್ತಮಾನೇ ದುರೋದರೇ ॥78॥
ಸಂಗ್ರಾಮೇ ಘೋರರೂಪೇ ತು ಯಮರಾಷ್ಟ್ರವಿವರ್ಧನೇ |
ಪಾಂಡವಾಸ್ತಾವಕಂ ಸೈನ್ಯಂ ವ್ಯಧಮನ್ ನಿಶಿತೈಃ ಶರೈಃ ॥79॥
ಸೈನ್ಯವು ಓಡುತ್ತಿತ್ತು. ಆನೆಗಳು ಘೀಳಿಡುತ್ತಿದ್ದವು. ರಣರಂಗದಲ್ಲಿ ಪದಾತಿಗಳು ಜೋರಾಗಿ ಬೊಬ್ಬಿಡುತ್ತಿದ್ದರು. ಮಹಾರಾಜನೇ! ಕುದುರೆಗಳು ಓಡಿಹೋಗುತ್ತಿದ್ದವು. ಯುದ್ಧದಲ್ಲಿ ಎರಡೂ ಕಡೆಯ ಯೋಧರು ನಾಶವಾಗುತ್ತಿದ್ದರು. ಅನೇಕ ವಿಧದ ಶಸ್ತ್ರಗಳು ಬೀಳುತ್ತಿದ್ದವು. ಆನೆಗಳೂ ರಥಗಳೂ ಪರಸ್ಪರ ಹೊಡೆದುಕೊಂಡು ನಾಶವಾಗುತ್ತಿದ್ದವು. ಯುದ್ಧನಿಪುಣರಿಗೆ ಆನಂದವನ್ನು ಉಂಟುಮಾಡುತ್ತಿತ್ತು. ಯುದ್ಧದಿಂದ ಹೆದರುವವರಿಗೆ ಭಯವನ್ನು ಹೆಚ್ಚು ಮಾಡುತ್ತಿತ್ತು. ಯೋಧರು ಪರಸ್ಪರವಾಗಿ ಸಂಹರಿಸುವ ಇಚ್ಛೆಯಿಂದ ಯುದ್ಧಕ್ಕೆ ಪ್ರವೇಶಿಸುತ್ತಿದ್ದರು. ಪ್ರಾಣವನ್ನೇ ಒತ್ತೆಯಿಟ್ಟು ಭಯಂಕರವಾದ ಯುದ್ಧವು ಆರಂಭವಾಯಿತು. ಘೋರವಾದ ಯುದ್ಧವು ಯಮನ ರಾಜ್ಯವನ್ನು ವೃದ್ಧಿಗೊಳಿಸುವಂತಿತ್ತು. ಅಂತಹ ಯುದ್ಧದಲ್ಲಿ ಪಾಂಡವರು ಹರಿತವಾದ ಬಾಣಗಳಿಂದ ನಿನ್ನ

ಸೈನ್ಯವನ್ನು ನಾಶಮಾಡಿದರು.
ತಥೈವ ತಾವಕಾ ಯೋಧಾ ಜಘ್ನುಃ ಪಾಂಡವಸೈನಿಕಾನ್ |
ತಸ್ಮಿಂಸ್ತಥಾ ವರ್ತಮಾನೇ ಯುದ್ಧೇ ಭೀರುಭಯಂಕರೇ ॥80॥
ಪೂರ್ವಾಹ್ಣೇ ಚಾಪಿ ಸಂಪ್ರಾಪ್ತೇ ಭಾಸ್ಕರೋದಯನಂ ಪ್ರತಿ |
ಲಬ್ಧಲಕ್ಷಾಃ ಪರೇ ರಾಜನ್ ರಕ್ಷಿತಾಶ್ಚ ಮಹಾತ್ಮಭಿಃ ॥81॥
ಅಯೋಧಯಂಸ್ತವ ಬಲಂ ಮೃತ್ಯುಂ ಕೃತ್ವಾ ನಿವರ್ತನಮ್ |
ಬಲಿಭಿಃ ಪಾಂಡವೈರ್ದೃಪ್ತೈಃ ಲಬ್ಧಲಕ್ಷೈಃ ಪ್ರಹಾರಿಭಿಃ ॥82॥
ಕೌರವ್ಯಸೀದತ್ಪೃತನಾ ಗೌರಿವಾಗ್ನಿಸಮಾಕುಲಾ |
ತಾಂ ದೃಷ್ಟ್ವಾ ಸೀದತೀಂ ಸೇನಾಂ ಪಂಕಗಾಮಿವ ದುರ್ಬಲಾಮ್ ॥83॥
ಉಜ್ಜಿಹೀರ್ಷುಸ್ತದಾ ಶಲ್ಯಃ ಪ್ರದುದ್ರಾವ ಚಮೂಪತಿಃ |
ಮದ್ರರಾಜಸ್ತು ಸಂಕ್ರುದ್ಧೋ ಗೃಹೀತ್ವಾ ಧನುರುತ್ತಮಮ್ ॥84॥
ಹಾಗೆಯೇ ನಿನ್ನ ಕಡೆಯ ಯೋಧರು ಪಾಂಡವ ಸೈನಿಕರನ್ನು ನಾಶಮಾಡಿದರು. ಹೀಗೆ ಹೆದರಿಕೆಯುಳ್ಳವರಿಗೆ ಭಯಂಕರವಾಗಿ ಕಾಣಿಸುವ ಯುದ್ಧವು ಪೂರ್ವಾಹ್ಣದ ಸೂರ್ಯೋದಯದ ಸಮಯದಲ್ಲಿ ನಡೆಯಿತು. ರಾಜನೇ! ಮಹಾತ್ಮರಿಂದ ರಕ್ಷಿತರಾದ ಯುದ್ಧಕುಶಲರಾದ ಇತರ ಯೋಧರು ಮೃತ್ಯುವನ್ನೇ ಹಿಮ್ಮೆಟ್ಟಿಸಿ ನಿನ್ನ ಸೈನ್ಯದೊಡನೆ ಹೋರಾಡಿದರು. ಗುರಿಯನ್ನು ಭೇದಿಸುವುದರಲ್ಲಿ ನಿಪುಣರಾದ ಬಲಶಾಲಿಗಳಾದ ಪಾಂಡವರು ಕೌರವಸೈನ್ಯವನ್ನು ಆಕ್ರಮಿಸಿದರು. ಕೌರವನ ಸೇನೆಯು ಬೆಂಕಿಯಿಂದ ಆವರಿಸಲ್ಪಟ್ಟ ಹಸುವಿನಂತೆ ಬಹಳ ಕಷ್ಟವನ್ನು ಅನುಭವಿಸಿತು. ಹೀಗೆ ಕೆಸರಲ್ಲಿ ಸಿಕ್ಕಿಕೊಂಡ ದುರ್ಬಲವ್ಯಕ್ತಿಯಂತೆ ಕಷ್ಟಕ್ಕೊಳಗಾದ ಸೈನ್ಯವನ್ನು ನೋಡಿ ಸೇನಾಪತಿಯಾದ ಶಲ್ಯನು ಆ ಸೈನ್ಯವನ್ನು ರಕ್ಷಿಸುವುದಕ್ಕಾಗಿ ಓಡಿಬಂದನು. ಶಲ್ಯನು ಕೈಯಲ್ಲಿ ಶ್ರೇಷ್ಠವಾದ ಬಿಲ್ಲನ್ನು ಹಿಡಿದುಕೊಂಡಿದ್ದನು.
ಆವಿವೇಶ ತತಸ್ತೀವ್ರಂ ತಾವಕಾನಾಂ ಮಹದ್ಭಯಮ್ |
ಪಾಂಡವಾನಾಂ ಚ ರಾಜೇಂದ್ರ ತಥಾ ಭೂತೇ ಮಹಾಹವೇ ॥85॥
ರಾಜೇಂದ್ರ! ಹೀಗೆ ನಡೆದ ಯುದ್ಧದಲ್ಲಿ ನಿನ್ನ ಕಡೆಯವರಿಗೆ ಬಹಳವಾದ ಭಯವು ಉಂಟಾಯಿತು. ಪಾಂಡವರೂ ಭಯಗ್ರಸ್ತರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಶಲ್ಯನ ಪರಾಕ್ರಮ. ಕೌರವ-ಪಾಂಡವರ ದ್ವಂದ್ವಯುದ್ಧ.
ಭೀಮಸೇನನು ಶಲ್ಯನನ್ನು ಸೋಲಿಸಿದ್ದು.
ಸಂಜಯಃ
ತಸ್ಮಿನ್ ವಿಲುಲಿತೇ ಸೈನ್ಯೇ ವಧ್ಯಮಾನೇ ಪರಸ್ಪರಮ್ |
ಅಭ್ಯದ್ರವತ ಸಂಗ್ರಾಮೇ ಪಾಂಡವಾನಾತತಾಯಿನಃ ॥1॥
ಸಂಜಯ ಎರಡೂ ಸೇನೆಗಳು ಪರಸ್ಪರವಾಗಿ ಹೊಡೆದುಕೊಂಡು ನಷ್ಟವಾಗುತ್ತಿರಲು ಆತತಾಯಿಗಳು ಪಾಂಡವರನ್ನು ಯುದ್ಧದಲ್ಲಿ ಎದುರಿಸಿದರು.
ಪಾಂಡವಾಶ್ಚ ಮಹಾರಾಜ ಸಮರೇ ಜಿತಕಾಶಿನಃ |
ಮದ್ರರಾಜಂ ಸಮಾಸಾದ್ಯ ವಿವ್ಯಧುರ್ನಿಶಿತೈಃ ಶರೈಃ ॥2॥
ಮಹಾರಾಜ! ಯುದ್ಧದಲ್ಲಿ ಜಯವನ್ನು ಬಯಸುವ ಪಾಂಡವರಾದರೂ ಶಲ್ಯನ ಹತ್ತಿರಕ್ಕೆ ಬಂದು ಹರಿತವಾದ ಬಾಣಗಳಿಂದ ಹೊಡೆದರು.
ತತಃ ಶರಶತೈಸ್ತೀಕ್ಷ್ಣೈಃ ಮದ್ರರಾಜೋ ಮಹಾರಥಃ |
ಅರ್ದಯಾಮಾಸ ತಾಂ ಸೇನಾಂ ಧರ್ಮರಾಜಸ್ಯ ಪಶ್ಯತಃ ॥3॥
ಮಹಾರಥನಾದ ಶಲ್ಯನು ಚೂಪಾದ ನೂರು ಬಾಣಗಳಿಂದ ಧರ್ಮರಾಜನು ನೋಡುತ್ತಿದ್ದಂತೆಯೇ ಅವನ ಸೈನ್ಯವನ್ನು ಪುಡಿಮಾಡಿದನು.
ಪ್ರಾದುರಾಸನ್ ನಿಮಿತ್ತಾನಿ ಘೋರರೂಪಾಣ್ಯನೇಕಶಃ |
ಚಚಾಲ ಶಬ್ದಂ ಕುರ್ವಾಣಾ ಮಹೀ ಚಾಪಿ ಸಪರ್ವತಾ ॥4॥
ಆಗ ಘೋರರೂಪದ ಅನೇಕ ಶಕುನಗಳು ಕಾಣಿಸಿಕೊಂಡವು. ಪರ್ವತದಿಂದ ಸಹಿತವಾದ ಭೂಮಿಯು ಶಬ್ದವನ್ನು ಉಂಟುಮಾಡುತ್ತಾ ಕಂಪಿಸಿತು.
ಸದಂಡಶೂಲ ದೀಪ್ತಾಗ್ರಾಃ ಶೀರ್ಯಮಾಣಾಃ ಸಮಂತತಃ |
ಉಲ್ಕಾ ಭೂಮೌ ದಿವಃ ಪೇತುಃ ಆಹತ್ಯ ರವಿಮಂಡಲಮ್ ॥5॥
ಸೂರ್ಯಮಂಡಲಕ್ಕೆ ತಾಗಿ ಉಲ್ಕೆಗಳು ಆಕಾಶದಿಂದ ಭೂಮಿಗೆ ಎಲ್ಲಾ ಕಡೆಗಳಲ್ಲಿಯೂ ಬೀಳತೊಡಗಿದವು. ಜೊತೆಗೆ ದಂಡಾಕಾರದ ಶೂಲಗಳೂ ಬಿದ್ದವು. ಆ ಶೂಲದ ತುದಿಗಳು ಪ್ರಜ್ವಲಿಸುತ್ತಿದ್ದವು.
ಮೃಗಾಶ್ಚ ಮಹಿಷಾಶ್ಚೈವ ಪಕ್ಷಿಣಶ್ಚ ವಿಶಾಂಪತೇ |

ಅಪಸವ್ಯಂ ತದಾ ಚಕ್ರುಃ ಸೇನಾಂ ತೇ ಬಹುಶೋ ನೃಪ ॥6॥
ರಾಜನ್! ಜಿಂಕೆಗಳು, ಕೋಣಗಳು, ಪಕ್ಷಿಗಳು ನಿನ್ನ ಸೇನೆಗೆ ಎಡದಿಂದ ಸುತ್ತುಬರುತ್ತಿದ್ದವು.
ತತಸ್ತು ಯುದ್ಧಮತ್ಯುಗ್ರಮಭವತ್ ಸಂಪ್ರಹಾರಿಣಾಮ್ ॥7॥
ಶಸ್ತ್ರಪ್ರಹಾರವನ್ನು ಮಾಡುವ ಯೋಧರ ನಡುವೆ ಬಹಳ ಉಗ್ರವಾದ ಯುದ್ಧವು ನಡೆಯಿತು.
ತತಃ ಸರ್ವಾಣ್ಯನೀಕಾನಿ ಸನ್ನಿಪತ್ಯ ಜನಾಧಿಪ |
ಅಭ್ಯಯುಃ ಕೌರವಾ ರಾಜನ್ ಪಾಂಡವಾನಾಮನೀಕಿನೀಮ್ ॥8॥
ಜನನಾಯಕನೇ! ರಾಜನೇ! ಅನಂತರ ಸೈನ್ಯವನ್ನೆಲ್ಲಾ ಒಗ್ಗೂಡಿಸಿ ಕೌರವರು ಪಾಂಡವರ ಸೈನ್ಯವನ್ನು ಎದುರಿಸಿದರು.
ಶಲ್ಯಸ್ತು ಶರವರ್ಷೇಣ ವರ್ಷನ್ನಿವ ಸಹಸ್ರದೃಕ್ |
ಅಭ್ಯವರ್ಷದದೀನಾತ್ಮಾ ಕುಂತೀಪುತ್ರಂ ಯುಧಿಷ್ಠಿರಮ್ ॥9॥
ಶಲ್ಯನಾದರೂ ಇಂದ್ರನು ಮಳೆಗರೆಯುವಂತೆ ಬಾಣಗಳ ಮಳೆಯನ್ನು ಸುರಿಸುತ್ತಾ ಧೃತಿಗೆಡದೆ ಕುಂತೀಪುತ್ರ ಯುಧಿಷ್ಠಿರನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ಭೀಮಸೇನಂ ಶರೈಶ್ಚಾಪಿ ರುಗ್ಮಪುಂಖೈಃ ಶಿಲಾಶಿತೈಃ |
ದ್ರೌಪದೇಯಾಂಸ್ತತಃ ಸರ್ವಾನ್ ಮಾದ್ರೀಪುತ್ರೌ ಚ ಪಾಂಡವೌ ॥10॥
ಧೃಷ್ಟದ್ಯುಮ್ನಂ ಸ ಶೈನೇಯಂ ಶಿಖಂಡಿನಮಥಾಹವೇ |
ಏಕೈಕಂ ದಶಭಿರ್ಬಾಣೈಃ ವಿವ್ಯಾಧ ಚ ಮಹಾಬಲಃ ॥11॥
ಅನಂತರ ಯುದ್ಧದಲ್ಲಿ ಮಹಾಬಲಶಾಲಿಯಾದ ಶಲ್ಯನು ಬಂಗಾರದ ರೆಕ್ಕೆಗಳುಳ್ಳ, ಸಾಣೆಹಿಡಿದ ಬಾಣಗಳಿಂದ ಭೀಮಸೇನನನ್ನೂ, ದ್ರೌಪದಿಯ ಎಲ್ಲಾ ಮಕ್ಕಳನ್ನೂ, ನಕುಲ-ಸಹದೇವರನ್ನೂ, ಧೃಷ್ಟದ್ಯುಮ್ನನನ್ನೂ, ಶೈನೇಯನನ್ನೂ, ಶಿಖಂಡಿಯನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಹತ್ತತ್ತು ಬಾಣಗಳಿಂದ ಹೊಡೆದನು.
ತತೋಽಸೃಜದ್ ಬಾಣವರ್ಷಂ ಘರ್ಮಾಂತೇ ಮಘವಾನಿವ ॥12॥
ಬೇಸಿಗೆಯ ಕೊನೆಗೆ ಇಂದ್ರನು ಮಳೆ ಸುರಿಸುವಂತೆ ಬಾಣಗಳ ಮಳೆಯನ್ನು ಸುರಿಸಿದನು.
ತತಃ ಪ್ರಭದ್ರಕಾ ರಾಜನ್ ಸೋಮಕಾಶ್ಚ ಸಹಸ್ರಶಃ |
ಪತಿತಾಃ ಪಾತ್ಯಮಾನಾಶ್ಚ ದೃಶ್ಯಂತೇ ತಸ್ಯ ಸಾಯಕೈಃ ॥13॥
ರಾಜನೇ! ಅನಂತರ ಶಲ್ಯನ ಬಾಣಗಳ ಹೊಡೆತದಿಂದ ಪ್ರಭದ್ರಕರು, ಸೋಮಕರು ಸಾವಿರಾರು ಸಂಖ್ಯೆಯಲ್ಲಿ ಕೆಳಗೆ ಬಿದ್ದಿರುವುದು ಕಂಡಿತು.
ಭ್ರಮರಾಣಾಮಿವ ವ್ರಾತಾಃ ಶಲಭಾನಾಮಿವ ವ್ರಜಾಃ |
ಹ್ರಾದಿನ್ಯ ಇವ ಮೇಘೇಭ್ಯಃ ಶಲ್ಯಸ್ಯ ನ್ಯಪತನ್ ಶರಾಃ ॥14॥
ಶಲ್ಯನು ಬಿಡುತ್ತಿರುವ ಬಾಣಗಳು ದುಂಬಿಗಳ ಸಮೂಹದಂತೆ, ಶಲಭಗಳ ಗುಂಪಿನಂತೆ ಕಾಣಿಸುತ್ತಿದ್ದವು. ಮೋಡಗಳಿಂದ ಹೊರಹೊಮ್ಮುವ ಮಿಂಚಿನಂತೆ ಇದ್ದವು.
ದ್ವಿರದಾಸ್ತುರಗಾಶ್ಚಾರ್ತಾಃ ಪತ್ತಯೋ ರಥಿನಸ್ತಥಾ |
ಶಲ್ಯಸ್ಯ ಬಾಣೈರ್ನ್ಯಪತನ್ ಬಭ್ರಮುರ್ವ್ಯನದಂಸ್ತಥಾ ॥15॥
ಶಲ್ಯನ ಬಾಣಗಳಿಂದ ಹೊಡೆಯಲ್ಪಟ್ಟ ಆನೆಗಳು, ಕುದುರೆಗಳು, ಪದಾತಿಗಳು ಹಾಗೂ ರಥಿಕರು ನೆಲಕ್ಕೊರಗಿದರು.
ಮೂರ್ಛೆಹೋದರು ಮತ್ತು ನೋವಿನಿಂದ ನರಳಿದರು.
ಆವಿಷ್ಟ ಇವ ಮದ್ರೇಶೋ ಮನ್ಯುನಾ ಪೌರುಷೇಣ ಚ |
ಪ್ರೋಚ್ಛಾದಯದರೀನ್ ಸಂಖ್ಯೇ ಕಾಲಸೃಷ್ಟ ಇವಾಂತಕಃ ॥16॥
ಪ್ರಳಯಕಾಲದ ಯಮನ ಹಾಗೆ ಶಲ್ಯನು ಕೋಪ ಮತ್ತು ಪೌರುಷಗಳಿಂದ ಯುಕ್ತನಾಗಿ ಯುದ್ಧದಲ್ಲಿ ಶತ್ರುಗಳನ್ನು ಸದೆಬಡಿದನು.
ವಿನರ್ದಮಾನೋ ಮದ್ರೇಶೋ ಮೇಘಹ್ರಾದೋ ಮಹಾಬಲಃ ॥17॥
ಮೇಘದಂತೆ ಗಂಭೀರಧ್ವನಿ ಮಾಡುತ್ತಾ ಮಹಾಬಲನಾದ ಶಲ್ಯನು ಶತ್ರುಸೈನ್ಯವನ್ನು ನಾಶಮಾಡಿದನು.
ಸಾ ವಧ್ಯಮಾನಾ ಶಲ್ಯೇನ ಪಾಂಡವಾನಾಮನೀಕಿನೀ |
ಅಜಾತಶತ್ರುಂ ಕೌಂತೇಯಮಭ್ಯಧಾವದ್ ಯುಧಿಷ್ಠಿರಮ್ ॥18॥
ಶಲ್ಯನಿಂದ ಆಘಾತಕ್ಕೊಳಗಾದ ಪಾಂಡವರ ಆ ಸೈನ್ಯವು ಅಜಾತಶತ್ರುವಾದ ಯುಧಿಷ್ಠಿರನ ಬಳಿಗೆ ಓಡಿಹೋಯಿತು.
ತಾಂ ಸಮರ್ಪ್ಯ ತತಃ ಸಂಖ್ಯೇ ಲಘುಹಸ್ತಃ ಶಿತೈಃ ಶರೈಃ |
ಶರವರ್ಷೇಣ ಮಹತಾ ಯುಧಿಷ್ಠಿರಮಪೀಡಯತ್ ॥19॥
ಅನಂತರ ಯುದ್ಧದಲ್ಲಿ ವೇಗವಾಗಿ ಶಸ್ತ್ರಪ್ರಯೋಗಮಾಡಬಲ್ಲ ಶಲ್ಯನು ಆ ಪಾಂಡವರ ಸೈನ್ಯವನ್ನು ಘಾಸಿಗೊಳಿಸಿ, ಯುಧಿಷ್ಠಿರನ ಮೇಲೆ ಬಹಳವಾಗಿ ಹರಿತವಾದ ಬಾಣಗಳ ಮಳೆಯನ್ನು ಸುರಿಸಿ ಘಾಸಿಗೊಳಿಸಿದನು.
ತಮಾಪತಂತಂ ಜಾತ್ಯಶ್ವೈಃ ಕ್ರುದ್ಧೋ ರಾಜಾ ಯುಧಿಷ್ಠಿರಃ |
ಅವಾರಯಚ್ಛರೈಸ್ತೀಕ್ಷ್ಣೈಃ ಮತ್ತದ್ವಿಪಮಿವಾಂಕುಶೈಃ ॥20॥
ಒಳ್ಳೆಯ ಜಾತಿಯ ಆಶ್ವಗಳುಳ್ಳ ರಥದಮೂಲಕ ತನ್ನ ಮೇಲೆ ಎರಗಿದ ಶಲ್ಯನನ್ನು ಕುಪಿತನಾದ ಯುಧಿಷ್ಠಿರನು, ಮದವೇರಿದ ಆನೆಯನ್ನು ಅಂಕುಶದಿಂದ ನಿಗ್ರಹಿಸುವಂತೆ ಹರಿತವಾದ ಬಾಣಗಳಿಂದ ತಡೆದನು.
ತಸ್ಯ ಶಲ್ಯಃ ಶರಂ ಘೋರಂ ಮುಮೋಚಾಶೀವಿಷೋಪಮಮ್ |
ಸೋಽತಿವಿದ್ಧೋ ಮಹಾತ್ಮಾ ವೈ ವೇಗೇನಾಭ್ಯಪತಚ್ಚ ಗಾಮ್ ॥21॥

ಶಲ್ಯನು ಧರ್ಮರಾಜನ ಮೇಲೆ ಸರ್ಪಕ್ಕೆ ಸದೃಶವಾದ ಘೋರವಾದ ಬಾಣವನ್ನು ಪ್ರಯೋಗಿಸಿದನು. ಅದರ ಹೊಡೆತಕ್ಕೆ ಒಳಗಾದ ಮಹಾತ್ಮನಾದ ಧರ್ಮರಾಜನು ವೇಗದಿಂದ ಭೂಮಿಯಲ್ಲ ಬಿದ್ದನು.
ತತೋ ವೃಕೋದರಃ ಕ್ರುದ್ಧಃ ಶಲ್ಯಂ ವಿವ್ಯಾಧ ಸಪ್ತಭಿಃ |
ಪಂಚಭಿಃ ಸಹದೇವಸ್ತು ನಕುಲೋ ದಶಭಿಃ ಶರೈಃ ॥22॥
ಇದರಿಂದ ಕುಪಿತನಾದ ಭೀಮನು ಶಲ್ಯನ ಮೇಲೆ ಏಳು ಬಾಣಗಳನ್ನು ಬಿಟ್ಟು ಶಲ್ಯನನ್ನು ಗಾಯಗೊಳಿಸಿದನು. ಸಹದೇವನು ಐದು ಹಾಗೂ ನಕುಲನು ಹತ್ತು ಬಾಣಗಳನ್ನು ಬಿಟ್ಟು ಘಾಸಿಗೊಳಿಸಿದರು.
ದ್ರೌಪದೇಯಾಶ್ಚ ಶತ್ರುಘ್ನಂ ಶೂರಮಾರ್ತಾಯನಿಂ ಶರೈಃ |
ಅಭ್ಯವರ್ಷನ್ ಮಹಾಮೇಘಾ ಮಹೀಧರಮಿವೋನ್ನತಮ್ ॥23॥
ದ್ರೌಪದಿಯ ಮಕ್ಕಳೂ ಕೂಡ ಶತ್ರುಸಂಹಾರಕನಾದ ಶಲ್ಯನ ಮೇಲೆ ಬಾಣಗಳಿಂದ ಮಳೆಯನ್ನೇ ಸುರಿಸಿದರು. ಇದು ದೊಡ್ಡದಾದ ಮೋಡಗಳು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಇತ್ತು.
ತತೋ ದೃಷ್ಟ್ವಾ ವಿನರ್ದಂತಂ ಶಲ್ಯಂ ಪಾರ್ಥೈಃ ಸಮಂತತಃ |
ಕೃತವರ್ಮಾ ಕೃಪಶ್ಚೈವ ಸಂಕ್ರುದ್ಧಾವಭ್ಯಧಾವತಾಮ್ ॥24॥
ಅನಂತರ ಪಾಂಡವರು ಎಲ್ಲಾ ಕಡೆಯಿಂದಲೂ ಶಲ್ಯನನ್ನು ಘಾಸಿಗೊಳಿಸುವುದನ್ನು ಕಂಡ ಕೃತವರ್ಮ ಮತ್ತು ಕೃಪಾಚಾರ್ಯರು ಕೋಪದಿಂದ ಓಡಿ ಬಂದರು.
ಉಲೂಕಶ್ಚಾಪಿ ಕೌರವ್ಯಃ ಶಕುನಿಶ್ಚಾಪಿ ಸೌಬಲಃ |
ಸ್ಮಯಮಾನಶ್ಚ ಶನಕೈರಶ್ವತ್ಥಾಮಾ ಮಹಾಬಲಃ ॥25॥
ತವ ಪುತ್ರಾಶ್ಚ ಸಬಲಾ ಜುಗುಪುಃ ಶಲ್ಯಮಾಹವೇ ॥26॥
ಕುರುಕುಲೋದ್ಭವನಾದ ಉಲೂಕ, ಸುಬಲದೇಶದ ಶಕುನಿ, ಮುಗುಳ್ನಗುತ್ತಿದ್ದ ಮಹಾಬಲಶಾಲಿ ಅಶ್ವತ್ಥಾಮ ಹಾಗೂ ನಿನ್ನ ಮಕ್ಕಳು ಯುದ್ಧದಲ್ಲಿ ಶಲ್ಯನನ್ನು ರಕ್ಷಿಸಿದರು.
ಭೀಮಸೇನಂ ತ್ರಿಭಿರ್ವಿದ್ಧ್ವಾ ಕೃತವರ್ಮಾ ಶಿಲೀಮುಖೈಃ |
ಬಾಣವರ್ಷೇಣ ಮಹತಾ ಕ್ರುದ್ಧರೂಪಮವಾರಯತ್ ॥27॥
ಕೃತವರ್ಮನು ಭೀಮನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿ ಹೊಡೆದು, ಬಹಳವಾದ ಬಾಣದ ಮಳೆಯನ್ನೇ ಸುರಿಸಿ ಕ್ರುದ್ಧನಾದ ಭೀಮನನ್ನು ತಡೆದನು.
ಧೃಷ್ಟದ್ಯುಮ್ನಂ ಕೃಪಃ ಕ್ರುದ್ಧೋ ಬಾಣವರ್ಷೈರವರ್ಷಯತ್ |
ದ್ರೌಪದೇಯಾಂಶ್ಚ ಶಕುನಿರ್ಯಮೌ ಚ ದ್ರೌಣಿರಭ್ಯಯಾತ್ ॥28॥
ಕುಪಿತನಾದ ಕೃಪನು ಧೃಷ್ಟದ್ಯುಮ್ನನನ್ನು ಬಾಣಗಳ ಮಳೆಯಿಂದ ತಡೆದನು. ದ್ರೌಪದಿಯ ಮಕ್ಕಳನ್ನು ಶಕುನಿಯೂ, ನಕುಲ-ಸಹದೇವರನ್ನು ಅಶ್ವತ್ಥಾಮನೂ ಎದುರಿಸಿದರು.
ದುರ್ಯೋಧನೋ ಯುಧಾಂ ಶ್ರೇಷ್ಠೋ ಹ್ಯಾಹವೇ ಕೇಶವಾರ್ಜುನೌ |
ಸಮಭ್ಯಗಾದುಗ್ರತೇಜಾಃ ಶರೈಶ್ಚಾಭ್ಯಹನದ್ ಯುಧಿ ॥29॥
ಯುದ್ಧದಲ್ಲಿ ಶ್ರೇಷ್ಠನೆನಿಸಿದ ದುರ್ಯೋಧನನು ಉಗ್ರತೇಜಸ್ಸಿನಿಂದ ಕೂಡಿಕೊಂಡು ರಣರಂಗದಲ್ಲಿ ಕೇಶವ ಮತ್ತು ಅರ್ಜುನನನ್ನು ಎದುರಿಸಿದನು. ಮತ್ತು ಬಾಣಗಳಿಂದ ಹೊಡೆದನು.
ಏವಂ ದ್ವಂದ್ವಶತಾನ್ಯಾಸನ್ ತ್ವದೀಯಾನಾಂ ಪರೈಃ ಸಹ |
ಘೋರರೂಪಾಣಿ ಚಿತ್ರಾಣಿ ತತ್ರ ತತ್ರ ವಿಶಾಂಪತೇ ॥30॥
ಹೀಗೆ ನಿನ್ನ ಕಡೆಯವರು ಪಾಂಡವರೊಂದಿಗೆ ಅನೇಕ ದ್ವಂದ್ವಯುದ್ಧವನ್ನು ಮಾಡಿದರು. ರಾಜನೇ! ಈ ಘೋರವಾದ ದ್ವಂದ್ವಯುದ್ಧವು ಅನೇಕ ಕಡೆಗಳಲ್ಲಿ ನಡೆಯಿತು.
ಋಕ್ಷವರ್ಣಾನ್ ಜಘಾನಾಶ್ವಾನ್ ಭೋಜೋ ಭೀಮಸ್ಯ ಸಂಯುಗೇ ॥
ರಣರಂಗದಲ್ಲಿ ಕೃತವರ್ಮನು ಭೀಮನ ನಕ್ಷತ್ರದ ವರ್ಣವುಳ್ಳ ಕುದುರೆಗಳನ್ನು ಬೀಳಿಸಿದನು.
ಸೋಽವತೀರ್ಯ ರಥೋಪಸ್ಥಾದ್ಧತಾಶ್ವಃ ಪಾಂಡುನಂದನಃ |
ಕಾಲೋ ದಂಡಮಿವೋದ್ಯಮ್ಯ ಗದಾಪಾಣಿರಯುಧ್ಯತ ॥32॥
ಕುದುರೆಗಳನ್ನು ಕಳೆದುಕೊಂಡ ಭೀಮನು ರಥದಿಂದ ಕೆಳಗಿಳಿದು ಯಮನು ದಂಡವನ್ನು ಹಿಡಿದಂತೆ ಗದೆಯನ್ನು ಹಿಡಿದುಕೊಂಡು ಯುದ್ಧಮಾಡಿದನು.
ಪ್ರಮುಖೇ ಸಹದೇವಸ್ಯ ಜಘಾನಾಶ್ವಾಂಸ್ತು ಮದ್ರರಾಟ್ |
ತತಃ ಶಲ್ಯಸ್ಯ ತನಯಂ ಸಹದೇವೋಽಸಿನಾಽವಧೀತ್ ॥33॥
ಶಲ್ಯನು ಸಹದೇವನ ಕುದುರೆಗಳನ್ನು ಸಾಯಿಸಿದನು. ಅನಂತರ ಸಹದೇವನು ಶಲ್ಯನ ಮಗನನ್ನು ಕತ್ತಿಯಿಂದ ಕೊಂದನು.
ಗೌತಮಃ ಪುನರಾಚಾರ್ಯೋ ಧೃಷ್ಟದ್ಯುಮ್ನಮಯೋಧಯತ್ |
ಅಸಂಭ್ರಾಂತೋ ಹ್ಯಸಂಭ್ರಾಂತಂ ಯತ್ನವಾನ್ ಯತ್ನವತ್ತರಮ್ ॥34॥
ಪ್ರಯತ್ನಶೀಲನಾದ ಕೃಪಾಚಾರ್ಯನು ಯಾವುದೇ ಗಾಬರಿಗೊಳಗಾಗದೆ ಧೃಷ್ಟದ್ಯುಮ್ನನೊಡನೆ ಯುದ್ಧ ಮಾಡಿದನು. ಧೃಷ್ಟದ್ಯುಮ್ನನೂ ಹಾಗೆಯೇ ಪ್ರಯತ್ನಶೀಲನಾಗಿದ್ದನು ಹಾಗೂ ಯಾವುದೇ ಗಾಬರಿಗೆ ಒಳಗಾಗಲಿಲ್ಲ.
ದ್ರೌಪದೇಯಾಂಸ್ತಥಾ ವೀರಾನ್ ಏಕೈಕಂ ದಶಭಿಃ ಶರೈಃ |
ಅವಿಧ್ಯದಾಚಾರ್ಯಸುತೋ ನಾತಿಕ್ರುದ್ಧಃ ಸ್ಮಯನ್ನಿವ ॥35॥

ಅಶ್ವತ್ಥಾಮನು ಬಹಳ ಕೋಪವನ್ನು ತೋರಿಸದೆ ಮುಗುಳ್ನಗುತ್ತಾ ದ್ರೌಪದಿಯ ಮಕ್ಕಳ ಮೇಲೆ ಪ್ರತ್ಯೇಕ ಪ್ರತ್ಯೇಕವಾಗಿ ಹತ್ತತ್ತು ಬಾಣಗಳನ್ನು ಪ್ರಯೋಗಿಸಿದನು.

ಭೋಜಶ್ಚ ಭೀಮಸೇನಸ್ಯ ಜಘಾನಾಶ್ವಾನ್ ಮಹಾಹವೇ |
ಸೋಽವತೀರ್ಯ ರಥಾತ್ ತೂರ್ಣಂ ಹತಾಶ್ವಃ ಪಾಂಡುನಂದನಃ ||
ಕಾಲೋ ದಂಡಮಿವೋದ್ಯಮ್ಯ ಗದಾಂ ಕ್ರುದ್ಧೋ ಮಹಾಬಲಃ |
ಪೋಥಯಾಮಾಸ ತುರಗಾನ್ ರಥಂ ಚ ಕೃತವರ್ಮಣಃ ||37||

ಕೃತವರ್ಮನು ಯುದ್ಧದಲ್ಲಿ ಭೀಮಸೇನನ ಕುದುರೆಗಳನ್ನು ಬೀಳಿಸಿದನು. ಕುದುರೆಗಳನ್ನು ಕಳೆದುಕೊಂಡ ಭೀಮಸೇನನು ಕೂಡಲೇ ರಥದಿಂದ ಕೆಳಗಿಳಿದು ಯಮನು ದಂಡವನ್ನೆತ್ತಿಕೊಂಡಂತೆ ಗದೆಯನ್ನು ಹಿಡಿದುಕೊಂಡು ಕೃತವರ್ಮನ ಕುದುರೆಗಳನ್ನೂ, ರಥವನ್ನು ಪುಡಿಮಾಡಿದನು.

ಕೃತವರ್ಮಾ ತ್ವವಪ್ಲುತ್ಯ ರಥಾತ್ ತಸ್ಮಾದಪಾಕ್ರಮತ್ ||38||

ಕೃತವರ್ಮನಾದರೂ ರಥದಿಂದ ಕೆಳಗೆ ಧುಮುಕಿ ಓಡಿಹೋದನು.

ಶಲ್ಯೋಽಪಿ ರಾಜನ್ ಸಂಕ್ರುದ್ಧೋ ನಿಘ್ನನ್ ಪಾಂಡವಸೋಮಕಾನ್ |
ಪುನರೇವ ಶಿತೈರ್ಬಾಣೈರ್ಯುಧಿಷ್ಠಿರಮಪೀಡಯತ್ ||39||

ರಾಜನ್! ಕ್ರುದ್ಧನಾದ ಶಲ್ಯನು ಪಾಂಡವರನ್ನೂ ಸೋಮಕರನ್ನೂ ಹೊಡೆಯುತ್ತಾ ಪುನಃ ಹರಿತವಾದ ಬಾಣಗಳಿಂದ ಯುಧಿಷ್ಠಿರನನ್ನು ಪೀಡಿಸಿದನು.

ತಸ್ಯ ಭೀಮೋ ರಣೇ ಕ್ರುದ್ಧಃ ಸಂದಷ್ಟದಶನಚ್ಛದಃ |
ವಿನಾಶಾಯಾಭಿಸಂಧಾಯ ಗದಾಮಾದತ್ತ ವೀರ್ಯವಾನ್ ||40||

ರಣರಂಗದಲ್ಲಿ ಕೋಪದಿಂದ ಹಲ್ಲುಕಚ್ಚುತ್ತಾ ವೀರ್ಯವಂತನಾದ ಭೀಮನು ಆ ಶಲ್ಯನನ್ನು ಮುಗಿಸಲಿಕ್ಕಾಗಿ ಗದೆಯನ್ನು ಎತ್ತಿಕೊಂಡನು.

ಯಮದಂಡಪ್ರತೀಕಾಶಾಂ ಕಾಲರಾತ್ರಿಮಿವೋದ್ಯತಾಮ್ |
ಗಜವಾಜಿಮನುಷ್ಯಾಣಾಂ ಪ್ರಾಣಾಂತಕರಣೀಮಪಿ ||41||
ಹೇಮಪಟ್ಟಪರಿಕ್ಷಿಪ್ತಾಮುಲ್ಕಾಮಾಪತಿತಾಮಿವ |
ಶೈಕ್ಯಾಂ ವ್ಯಾಲೀಮಿವಾತ್ಯುಗ್ರಾಂ ವಜ್ರಕಲ್ಪಾಮಯಸ್ಮಯೀಮ್ ||42||
ಚಂದನಾಗರುಪಂಕಾಕ್ತಾಂ ಪ್ರಮದಾಮೀಪ್ಸಿತಾಮಿವ |
ವಸಾಮೇದೋಽಸೃಗಾದಿಗ್ಧಾಂ ಜಿಹ್ವಾಂ ವೈವಸ್ವತೀಮಿವ ||43||
ಬದ್ಧಘಂಟಾರವಯುತಾಂ ವಾಸವೀಮಶನೀಮಿವ |
ನಿರ್ಮುಕ್ತಾಶೀವಿಷಾಕಾರಾಂ ಪೃಕ್ತಾಂ ಗಜಮದೈರಪಿ ||44||
ತ್ರಾಸನೀಂ ಪರಸೈನ್ಯಾನಾಂ ಸ್ವಸೈನ್ಯಪರಿಹರ್ಷಿಣೀಮ್ |
ಮನುಷ್ಯಲೋಕೇ ವಿಖ್ಯಾತಾಂ ಗಿರಿಶೃಂಗವಿದಾರಿಣೀಮ್ ||45||
ಯಥಾ ಕೈಲಾಸಶಿಖರೇ ಮಹೇಶ್ವರಸಖಂ ಬಲೀ |
ಆಹ್ವಯಾಮಾಸ ಕೌಂತೇಯಃ ಸಂಕ್ರುದ್ಧಮಲಕಾಪತಿಮ್ ||46||
ಯಥಾ ಮಾಯಾವಿನೋ ದೃಪ್ತಾನ್ ಸುಬಹೂನ್ ಧನದಾಲಯೇ |
ಜಘಾನ ಗುಹ್ಯಕಾನ್ ಕ್ರುದ್ಧಃ ಕಲ್ಹಾರಾರ್ಥೇ ಮಹಾಬಲಃ ||47||
ನಿವಾರ್ಯಮಾಣೋ ಬಹುಭಿಃ ದ್ರೌಪದ್ಯಾಃ ಪ್ರಿಯಮಾಸ್ಥಿತಃ ||48||
ತಾಂ ವಜ್ರಮಣಿರತ್ನೌಘಕಾಮಷ್ಟಾಶ್ರಾಂ ವಜ್ರಗೌರವಾಮ್ |
ಸಮುದ್ಯಮ್ಯ ಮಹಾಬಾಹುಃ ಶಲ್ಯಮಭ್ಯದ್ರವದ್ ರಣೇ ||49||

ಆ ಗದೆಯು ಯಮನ ದಂಡದಂತಿತ್ತು. ಪ್ರಳಯಕಾಲದ ರಾತ್ರಿಯಂತೆ ಕಾಣಿಸುತ್ತಿತ್ತು. ಆನೆ ಕುದುರೆ ಮನುಷ್ಯರ ಪ್ರಾಣವನ್ನು ತೆಗೆಯುವ ಸಾಮರ್ಥ್ಯವನ್ನು ಹೊಂದಿತ್ತು. ಆ ಗದೆಗೆ ಬಂಗಾರದ ಹೊದಿಕೆಯನ್ನು ಹಾಕಲಾಗಿತ್ತು. ಮೇಲಿಂದ ಬೀಳುತ್ತಿರುವ ಉಲ್ಕೆಯಂತೆ ಇತ್ತು. ಬುಟ್ಟಿಯಲ್ಲಿ ಕುಳಿತಿರುವ ಸರ್ಪದಂತೆ ಘೋರವಾಗಿ ಇತ್ತು. ಕಬ್ಬಿಣದಿಂದ ರಚಿತವಾದ ಈ ಗದೆಯು ವಜ್ರಾಯುಧಕ್ಕೆ ಸಮಾನವಾಗಿತ್ತು. ಚಂದನ, ಅಗರುಗಳಿಂದ ಲೇಪಿತವಾಗಿತ್ತು. ಪರಿಮಳದಿಂದಾಗಿ ಅನುರಕ್ತಳಾದ ಸ್ತ್ರೀಯಂತೆ ಇತ್ತು. ರಕ್ತಮಾಂಸಮೇದಸ್ಸುಗಳಿಂದ ಸಿಕ್ತವಾದ ಯಮನ ನಾಲಿಗೆಯಂತೆ ಕಾಣಿಸುತ್ತಿತ್ತು. ಅದಕ್ಕೆ ಜೋಡಿಸಿದ ಘಂಟೆಯು ಬಹಳ ಶಬ್ದವನ್ನು ಮಾಡುತ್ತಿತ್ತು. ಇಂದ್ರನ ವಜ್ರಾಯುಧದಂತೆ ಇತ್ತು. ಪಂಜರದಿಂದ ಹೊರಬಿಟ್ಟ ಸರ್ಪದ ಆಕಾರವುಳ್ಳದ್ದಾಗಿತ್ತು. ಮದಗಜಗಳಿಗೂ ಭಯವನ್ನುಂಟುಮಾಡುತ್ತಿತ್ತು. ಭೀಮಸೇನನ ಗದೆಯು ಶತ್ರುಗಳಿಗೆ ಭಯವನ್ನೂ ಸ್ವಪಕ್ಷದವರಿಗೆ ಆನಂದವನ್ನೂ ಉಂಟುಮಾಡುತ್ತಿತ್ತು. ಮನುಷ್ಯಲೋಕದಲ್ಲಿ ಬಹಳ ಪ್ರಸಿದ್ಧವಾಗಿದೆ. ಪರ್ವತಗಳ ಶಿಖರಗಳನ್ನೂ ಪುಡಿಮಾಡುವಂತಹದ್ದು. ಯಾವ ಗದೆಯನ್ನು ಹಿಡಿದುಕೊಂಡು ಬಲಶಾಲಿಯಾದ ಭೀಮಸೇನನು ಕೈಲಾಸದಲ್ಲಿ ರುದ್ರನ ಮಿತ್ರನಾದ ಕ್ರುದ್ಧನಾದ ಕುಬೇರನನ್ನು ಯುದ್ಧಕ್ಕೆ ಆಹ್ವಾನಿಸಿದನೋ ಆ ಗದೆ ಇದೇ ಆಗಿತ್ತು. ಸೌಗಂಧಿಕಾಪುಷ್ಪಹರಣ ಸಂದರ್ಭದಲ್ಲಿ ಯಾವ ಗದೆಯಿಂದ ಅಹಂಕಾರಿಗಳಾದ ಬಹಳ ಮಾಯಾವಿ ಗಂಧರ್ವರನ್ನು, ಗುಹ್ಯಕರನ್ನೂ ಮಹಾಬಲಶಾಲಿಯಾದ ಭೀಮಸೇನನು ಸಂಹರಿಸಿದನೋ ಅದೇ ಗದೆಯು ಇದು ಆಗಿತ್ತು. ದ್ರೌಪದಿಗೆ ಪ್ರಿಯವಾದ ಸೌಗಂಧಿಕಾಪುಷ್ಪ ಹರಣ ಸಂದರ್ಭದಲ್ಲಿ ಅನೇಕರ ವಿರೋಧವನ್ನೂ ಲೆಕ್ಕಿಸಲಿಲ್ಲ. ಅಂತಹ ಗದೆಯನ್ನು ಹಿಡಿದುಕೊಂಡು ಶಲ್ಯನೊಡನೆ ಯುದ್ಧಕ್ಕೆ ಬಂದನು. ಆ ಗದೆಯು ವಜ್ರದ ಮಣಿ, ರತ್ನಾದಿಗಳಿಂದ ಅಲಂಕೃತವಾಗಿತ್ತು. ವಜ್ರಾಯುಧದಷ್ಟು ಭಾರವಾದ ಗದೆಯನ್ನು ಎತ್ತಿ ಯುದ್ಧಕ್ಕೆ ನಡೆದನು.

ಗದಯಾ ಯುದ್ಧಕುಶಲಸ್ತಯಾ ದಾರುಣನಾದಯಾ |
ಪೋಥಯಾಮಾಸ ಶಲ್ಯಸ್ಯ ಚತುರೋಽಶ್ವಾನ್ ಮಹಾಜವಾನ್ ॥50॥
ಗದಾಯುದ್ಧದಲ್ಲಿ ನಿಪುಣನಾದ ಭೀಮಸೇನನು ಭಯಂಕರ ಶಬ್ಧವನ್ನುಂಟು ಮಾಡುವ ಗದೆಯಿಂದ ಶಲ್ಯನ ರಥಕ್ಕೆ ಕಟ್ಟಿದ ಬಹಳ ವೇಗವುಳ್ಳ ನಾಲ್ಕು ಕುದುರೆಗಳನ್ನು ಸಂಹರಿಸಿದನು.
ತತಃ ಶಲ್ಯೋ ರಣೇ ಕ್ರುದ್ಧಃ ಪೀನೇ ವಕ್ಷಸಿ ತೋಮರಮ್ |
ಚಿಕ್ಷೇಪ ಭೀಮಸೇನಸ್ಯ ಸೋಽಸ್ರುವಚ್ಛೋಣಿತಂ ಬಹು ॥51॥
ಅನಂತರ ಶಲ್ಯನು ಯುದ್ಧದಲ್ಲಿ ಭೀಮಸೇನನ ದಷ್ಟಪುಷ್ಟವಾದ ಎದೆಗೆ ತನ್ನ ತೋಮರಾಯುಧವನ್ನು ಬಿಸಾಡಿದನು. ಬಹಳವಾಗಿ ರಕ್ತವು ಸುರಿಯಿತು.
ತಮೇವಾದಾಯ ಭೀಮಸ್ತು ತತಃ ಕೋಪಸಮನ್ವಿತಃ |
ಯಂತಾರಂ ಮದ್ರರಾಜಸ್ಯ ನಿರ್ಬಿಭೇದ ತದಾ ಹೃದಿ ॥52॥
ಭೀಮನಾದರೂ ಅದೇ ತೋಮರಾಯುಧವನ್ನು ಹಿಡಿದುಕೊಂಡು ಕೋಪದಿಂದ ಶಲ್ಯನ ಸಾರಥಿಯನ್ನು ಸಾಯಿಸಿದನು.
ಸ ಭಿನ್ನವರ್ಮಾ ರುಧಿರಂ ವಮನ್ ವಿತ್ರಸ್ತಮಾನಸಃ |
ಪಪಾತಾಭಿಮುಖೋ ವೀರೋ ಮದ್ರರಾಜಸ್ತ್ವಪಾಕ್ರಮತ್ ॥53॥
ಶಲ್ಯನ ಸಾರಥಿಯು ಕವಚವನ್ನು ಕಳೆದುಕೊಂಡು ರಕ್ತವನ್ನು ವಾಂತಿಮಾಡಿದನು. ಮನಸ್ಸಿನ ಸ್ಥಿಮಿತವನ್ನು ಕಳೆದುಕೊಂಡು ಶಲ್ಯನ ಮುಂದೆಯೇ ರಥದಿಂದ ಕೆಳಗೆ ಬಿದ್ದನು. ವೀರನಾದ ಶಲ್ಯನಾದರೂ ಯುದ್ಧದಿಂದ ಓಡಿಹೋದನು.
ಕೃತಪ್ರತಿಕೃತಂ ದೃಷ್ಟ್ವಾ ಶಲ್ಯೋ ವಿಸ್ಮಿತಮಾನಸಃ |
ಗದಾಮಾಶ್ರಿತ್ಯ ಧೀರಾತ್ಮಾ ಪ್ರತ್ಯಮಿತ್ರಮುದೈಕ್ಷತ ॥54॥
ತಾನು ಕೊಟ್ಟ ಪೆಟ್ಟಿಗೆ ಪ್ರತಿಯಾಗಿ ಪೆಟ್ಟನ್ನು ಪಡೆದ ಶಲ್ಯನು ಬಹಳವಾಗಿ ಆಶ್ಚರ್ಯಚಕಿತನಾದನು. ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ತನ್ನ ಶತ್ರುವಿನ ಕಡೆಗೆ ನೋಡಿದನು.
ತತಃ ಸುಮನಸಃ ಪಾರ್ಥಾ ಭೀಮಸೇನಮಪೂಜಯನ್ |
ತದ್ ದೃಷ್ಟ್ವಾ ಕರ್ಮ ಸಂಗ್ರಾಮೇ ಘೋರಮಕ್ಲಿಷ್ಟಕರ್ಮಣಃ ॥55॥
ಆಗ ಸಂತುಷ್ಟರಾದ ಪಾಂಡವರು ಭೀಮಸೇನನನ್ನು ಆರಾಧಿಸಿದರು. ಭೀಮನಾದರೂ ಎಂತಹ ಯುದ್ಧವನ್ನೂ ಸುಲಭವಾಗಿ ಮಾಡುವವನು. ಯುದ್ಧದಲ್ಲಿ ಅವನ ಭಯಂಕರವಾದ ಕಾರ್ಯವನ್ನು ನೋಡಿ ಭೀಮನನ್ನು ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ಶಲ್ಯ ಮತ್ತು ಭೀಮರಲ್ಲಿ ಗದಾಯುದ್ಧ.
ಸಂಜಯಃ
ಪತಿತಂ ಪ್ರೇಕ್ಷ್ಯ ಯಂತಾರಂ ಶಲ್ಯಃ ಶೈಕ್ಯಾಯಸೀಂ ಗದಾಮ್ |
ಆದಾಯ ತರಸಾ ರಾಜನ್ ತಸ್ಥೌ ಗಿರಿರಿವಾಚಲಃ ॥1॥
ಸಂಜಯ ರಾಜನೇ! ಸಾರಥಿಯು ಕೆಳಬಿದ್ದಿದ್ದನ್ನು ನೋಡಿ ಶಲ್ಯನು ಕಬ್ಬಿಣದ ಗದೆಯನ್ನು ಬೇಗನೆ ತೆಗೆದುಕೊಂಡು ಪರ್ವತದ ಹಾಗೆ ಸ್ಥಿರವಾಗಿ ನಿಂತನು.
ತಂ ದೀಪ್ತಮಿವ ಕಾಲಾಗ್ನಿಂ ಪಾಶಹಸ್ತಮಿವಾಂತಕಮ್ |
ಸಶೃಂಗಮಿವ ಕೈಲಾಸಂ ಸವಜ್ರಮಿವ ವಾಸವಮ್ ॥2॥
ಸಶೂಲಮಿವ ಹಿ ತ್ರ್ಯಕ್ಷಂ ಸಚಕ್ರಮಿವ ಚಕ್ರಿಣಮ್ |
ಸಶಕ್ತಿಮಿವ ಸೇನಾನ್ಯಂ ವನೇ ಮತ್ತಮಿವ ದ್ವಿಪಮ್ ॥3॥
ಜವೇನಾಭ್ಯದ್ರವದ್ ಭೀಮೋ ಪ್ರಗೃಹ್ಯ ಮಹತೀಂ ಗದಾಮ್ ॥4॥
ಶಲ್ಯನು ಪ್ರಳಯಕಾಲದ ಬೆಂಕಿಯಂತೆ ಪ್ರಕಾಶಿಸುತ್ತಿದ್ದನು. ಪಾಶಾಯುಧವನ್ನು ಹಿಡಿದಿರುವ ಯಮನಂತೆ, ಶಿಖರದಿಂದ ಯುಕ್ತವಾದ ಕೈಲಾಸಪರ್ವತದಂತೆ, ವಜ್ರಾಯುಧವನ್ನು ಹಿಡಿದಿರುವ ಇಂದ್ರನಂತೆ, ಶೂಲವನ್ನು ಧರಿಸಿರುವ ರುದ್ರನಂತೆ, ಚಕ್ರಧಾರಿಯಾದ ವಿಷ್ಣುವಿನಂತೆ, ಶಕ್ತ್ಯಾಯುಧವನ್ನು ಹಿಡಿದಿರುವ ಸ್ಕಂದನಂತೆ, ಕಾಡಿನಲ್ಲಿ ಮದವೇರಿದ ಆನೆಯಂತೆ ಶಲ್ಯನು ಕಾಣುತ್ತಿದ್ದನು. ಅಂತಹ ಶಲ್ಯನನ್ನು ಭೀಮಸೇನನು ದೊಡ್ಡದಾದ ಗದೆಯನ್ನು ಹಿಡಿದುಕೊಂಡು ಎದುರಿಸಿದನು.
ತತಃ ಶಂಖಪ್ರಣಾದಶ್ಚ ತೂರ್ಯಾಣಾಂ ಚ ಸಹಸ್ರಶಃ |
ಸಿಂಹನಾದಶ್ಚ ಸಂಜಜ್ಞೇ ಶೂರಾಣಾಂ ಹರ್ಷವರ್ಧನಃ ॥5॥
ಅನಂತರ ಶಂಖದ ನಾದವೂ, ಸಾವಿರಾರು ವಾದ್ಯಗಳ ಶಬ್ದವೂ, ಸಿಂಹನಾದವೂ ಉಂಟಾಯಿತು. ಇದು ಶೂರರ ಆನಂದವನ್ನು ಹೆಚ್ಚಿಸುತ್ತಿತ್ತು.
ಪ್ರೇಕ್ಷಂತೇ ಸರ್ವತಸ್ತೇ ಹಿ ಯೋಧಾ ಮತ್ತಾವಿವ ದ್ವಿಪೌ |
ತಾವಕಾಶ್ಚ ಪರೇ ಚೈವ ಸಾಧು ಸಾಧ್ವಿತ್ಯಪೂಜಯನ್ ॥6॥
ಎಲ್ಲಾ ಕಡೆಯಿಂದಲೂ ಯೋಧರು ಮದವೇರಿದ ಆನೆಗಳಂತೆ ಇರುವ ಭೀಮ-ಶಲ್ಯರನ್ನು ನೋಡಿದರು. ನಿನ್ನ ಕಡೆಯವರು ಹಾಗೂ

ಎದುರುಕಡೆಯವರೂ ಚೆನ್ನಾಗಿದೆ! ಚೆನ್ನಾಗಿದೆ! ಎಂದು ಕೊಂಡಾಡಿದರು.
ನ ಹಿ ಮದ್ರಾಧಿಪಾದನ್ಯೋ ರಾಮಾದ್ವಾ ಯದುನಂದನಾತ್ |
ಸೋಢುಮುತ್ಸಹತೇ ವೇಗಂ ಭೀಮಸೇನಸ್ಯ ಸಂಯುಗೇ ॥7॥
ಶಲ್ಯ, ಪರಶುರಾಮ, ಕೃಷ್ಣ - ಈ ಮೂವರನ್ನು ಬಿಟ್ಟು ಬೇರೆ ಯಾರೂ ಯುದ್ಧದಲ್ಲಿ ಭೀಮಸೇನನ ವೇಗವನ್ನು ಸಹಿಸಲು ಉದ್ಯುಕ್ತರಾಗುವುದಿಲ್ಲ. ಇದು ಪ್ರಸಿದ್ಧ.
ತಥಾ ಮದ್ರಾಧಿಪಸ್ಯಾಪಿ ಗದಾವೇಗಂ ಮಹಾತ್ಮನಃ |
ಸೋಢುಮುತ್ಸಹತೇ ನಾನ್ಯಃ ಪುಮಾನ್ ಯುಧಿ ವೃಕೋದರಾತ್ ॥8॥
ಹಾಗೆಯೇ ಯುದ್ಧದಲ್ಲಿ ಮಹಾತ್ಮನಾದ ಶಲ್ಯನ ಗದಾವೇಗವನ್ನು ಸಹಿಸುವವನೂ ಭೀಮನನ್ನು ಬಿಟ್ಟರೆ ಬೇರೆ ಯಾರೂ ಇರಲಿಲ್ಲ.
ಗೋವೃಷಾವಿವ ನರ್ದಂತೌ ಮಂಡಲಾನಿ ವಿಚೇರತುಃ |
ಆವಲ್ಗಂತೌ ಗದಾಹಸ್ತೌ ಮದ್ರರಾಜವೃಕೋದರೌ ॥9॥
ಶಲ್ಯ ಮತ್ತು ಭೀಮಸೇನರು ಎರಡು ಎತ್ತುಗಳಂತೆ ಶಬ್ದಮಾಡುತ್ತಾ ಮಂಡಲಾಕಾರದಲ್ಲಿ ಸಂಚರಿಸಿದರು. ಇಬ್ಬರೂ ಗದೆಗಳನ್ನು ಹಿಡಿದುಕೊಂಡು ಚೆನ್ನಾಗಿ ಸಂಚರಿಸುತ್ತಿದ್ದರು.
ಮಂಡಲಾವರ್ತಮಾರ್ಗೇಷು ಗದಾವಿಹರಣೇಷು ಚ |
ನಿರ್ವಿಶೇಷಮಭೂದ್ ಯುದ್ಧಂ ತಯೋಃ ಪುರುಷಸಿಂಹಯೋಃ ॥10॥
ಮಂಡಲದಲ್ಲಿ ತಿರುಗುವ ಗತಿಯಲ್ಲಿ ಮತ್ತು ಗದೆಯ ತಿರುಗಿಸುವಿಕೆಯಲ್ಲಿ ಆ ಪುರುಷಶ್ರೇಷ್ಠರಿಗೆ ಸ್ವಲ್ಪವೂ ವ್ಯತ್ಯಾಸವಿರಲಿಲ್ಲ. ಯುದ್ಧದಲ್ಲಿ ಇಬ್ಬರೂ ಸಮಾನರಾಗಿದ್ದರು.
ತಪ್ತಹೇಮಮಯೈಃ ಶುಭ್ರೈಃ ಬಭೂವ ಭಯವರ್ಧಿನೀ |
ಅಗ್ನಿಜ್ವಾಲೈರಿವಾವಿದ್ಧಾ ಪಟ್ಟೈಃ ಶಲ್ಯಸ್ಯ ಸಾ ಗದಾ ॥11॥
ಶಲ್ಯನ ಗದೆಯ ಪಟ್ಟಿಗಳು ಕಾದ ಬಂಗಾರದಿಂದ ನಿರ್ಮಿತವಾಗಿದ್ದವು. ಬೆಂಕಿಯ ಕೆನ್ನಾಲಿಗೆಯಂತೆ ಈ ಪಟ್ಟಿಗಳು ಇದ್ದವು. ಆ ಗದೆಯು ನೋಡುಗರ ಭಯವನ್ನು ಹೆಚ್ಚಿಸುತ್ತಿತ್ತು.
ತಥೈವ ಚರತೋ ಮಾರ್ಗಾನ್ ಮಂಡಲೇಷು ಮಹಾತ್ಮನಃ |
ವಿದ್ಯುದಭ್ರಪ್ರತೀಕಾಶಾ ಭೀಮಸ್ಯ ಶುಶುಭೇ ಗದಾ ॥12॥
ಹಾಗೆಯೇ ಮಂಡಲಾಕಾರವಾಗಿ ಗತಿಗಳನ್ನು ಮಾಡುತ್ತಿದ್ದ ಮಹಾತ್ಮ ಭೀಮಸೇನನ ಗದೆಯೂ ಶೋಭಿಸುತ್ತಿತ್ತು. ಅದು ಮಿಂಚುತ್ತಿರುವ ಮೇಘದಂತೆ ಕಾಣಿಸುತ್ತಿತ್ತು.
ತಾಡಿತಾ ಮದ್ರರಾಜಸ್ಯ ಭೀಮಸ್ಯ ಗದಯಾ ಗದಾ |
ದೀಪ್ಯಮಾನೇವ ಖೇ ರಾಜನ್ ಸಸೃಜೇ ಪಾವಕಾರ್ಚಿಷಃ ॥13॥
ಶಲ್ಯನ ಗದೆಯು ಭೀಮನ ಗದೆಗೆ ತಾಗಿದಾಗ ಆಕಾಶದಲ್ಲಿ ಬೆಂಕಿಯ ಕಿಡಿಗಳು ಹುಟ್ಟುತ್ತಿದ್ದವು.
ತಥಾ ಭೀಮೇನ ಶಲ್ಯಸ್ಯ ತಾಡಿತಾ ಗದಯಾ ಗದಾ |
ಅಂಗಾರವರ್ಷಂ ಮುಮುಚೇ ತದದ್ಭುತಮಿವಾಭವತ್ ॥14॥
ಹಾಗೆಯೇ ಭೀಮನ ಗದೆಯು ಶಲ್ಯನ ಗದೆಗೆ ತಾಗಿದಾಗ ಕೆಂಡದ ಮಳೆಯನ್ನೇ ಹುಟ್ಟಿಸುತ್ತಿತ್ತು. ಅದು ಬಹಳ ಅದ್ಭುತವಾಗಿತ್ತು.
ದಂತೈರಿವ ಮಹಾನಾಗೌ ಶೃಂಗೈರಿವ ಮಹಾವೃಷೌ |
ತೌ ವಿರೇಜತುರನ್ಯೋನ್ಯಂ ಗದಾಭ್ಯಾಂ ಸುಪರಿಕ್ಷತೌ ॥15॥
ಆನೆಗಳೆರಡು ತಮ್ಮ ದಂತಗಳಿಂದ, ಎರಡು ಗೂಳಿಗಳು ತಮ್ಮ ಕೊಂಬಿನಿಂದ ಕಾದಾಡಿದಂತೆ ಅವರೀರ್ವರೂ ಗದೆಗಳನ್ನು ಹಿಡಿದುಕೊಂಡು ಪರಸ್ಪರ ಗಾಯಗೊಳಿಸುತ್ತಾ ವಿರಾಜಿಸಿದರು.
ತೌ ಗದಾಭಿಹತೈರ್ಗಾತ್ರೈಃ ಕ್ಷಣೇನ ರುಧಿರೋಕ್ಷಿತೌ |
ಪ್ರೇಕ್ಷಣೀಯತರಾವಾಸ್ತಾಂ ಪುಷ್ಪಿತಾವಿವ ಕಿಂಶುಕೌ ॥16॥
ಇಬ್ಬರ ಶರೀರಕ್ಕೂ ಗದೆಯು ತಗಲಿದಾಗ ಗಾಯಗಳು ಉಂಟಾಗಿ ರಕ್ತ ಸೋರುತ್ತಿತ್ತು. ಇದು ಮುತ್ತುಗದ ವೃಕ್ಷವು ಹೂವು ಬಿಟ್ಟಂತೆ ನೋಡಲು ಸುಂದರವಾಗಿತ್ತು.
ಗದಯಾ ಮದ್ರರಾಜೇನ ಸವ್ಯಂ ದಕ್ಷಿಣಮಾಹತಃ |
ಭೀಮಸೇನೋ ಮಹಾಬಾಹುಃ ನ ಚಚಾಲಾಚಲೋ ಯಥಾ ॥17॥
ಶಲ್ಯನು ಭೀಮನನ್ನು ಗದೆಯಿಂದ ಎಡ-ಬಲಗಳಲ್ಲಿ ಹೊಡೆದಾಗ ಮಹಾಬಾಹುವಾದ ಭೀಮಸೇನನು ಪರ್ವತದ ಹಾಗೆ ಸ್ಥಿರವಾಗಿ ನಿಂತನು.
ತಥಾ ಭೀಮಗದಾವೇಗೈಃ ತಾಡ್ಯಮಾನೋ ಮುಹುರ್ಮುಹುಃ |
ಶಲ್ಯೋ ನ ವಿವ್ಯಥೇ ಧೀಮಾನ್ ದಂತಿನೇವ ಹತೋ ಗಿರಿಃ ॥18॥
ಹಾಗೆಯೇ ಭೀಮನು ಮತ್ತೆ ಮತ್ತೆ ಗದೆಯಿಂದ ಶಲ್ಯನಿಗೆ ಹೊಡೆದರೂ ಬುದ್ಧಿವಂತನಾದ ಶಲ್ಯನು ಆನೆಯ ಹೊಡೆತಕ್ಕೆ ಸಿಕ್ಕ ಪರ್ವತದಂತೆ ಚಲಿಸದೆ ನಿಂತನು.
ಶುಶ್ರುವೇ ದಿಕ್ಷು ಸರ್ವಾಸು ತಯೋಃ ಪುರುಷಸಿಂಹಯೋಃ |
ಗದಾನಿಪಾತಸಂಹ್ಲಾದೋ ವಜ್ರಯೋರಿವ ನಿಸ್ವನಃ ॥19॥
ಆ ಪುರುಷಶ್ರೇಷ್ಠರು ಗದಾಯುದ್ಧ ಮಾಡುತ್ತಿದ್ದಾಗ ಗದೆಗಳ ಶಬ್ದವು ಎಲ್ಲಾ ದಿಕ್ಕುಗಳಲ್ಲಿ ಕೇಳಿಸುತ್ತಿತ್ತು. ಅದು ವಜ್ರಾಯುಧದ ಧ್ವನಿಯಂತೆ ಇತ್ತು.

ನಿವೃತ್ಯ ತು ಮಹಾವೀರ್ಯೌ ಸಮುಚ್ಛ್ರಿತಗದಾವುಭೌ |
ಪುನರಂತರಮಾರ್ಗಸ್ಥೌ ಮಂಡಲಾನಿ ವಿಚೇರತುಃ ॥20॥
ಕೈಯಲ್ಲಿ ಗದೆಗಳನ್ನು ಹಿಡಿದುಕೊಂಡು ಇಬ್ಬರೂ ಸ್ವಲ್ಪ ಹೊತ್ತು ಹಿಂತಿರುಗಿ ಮತ್ತೆ ಪುನಃ ಮಂಡಲದ ಒಳಭಾಗದಲ್ಲಿ ಇದ್ದುಕೊಂಡು ಸಂಚರಿಸಿದರು.
ತದಾಽಭ್ಯೇತ್ಯ ಪದಾನ್ಯಷ್ಟೌ ಸನ್ನಿಪಾತೋಽಭವತ್ ತಯೋಃ |
ಉದ್ಯಮ್ಯ ಬಾಹುದಂಡಾಭ್ಯಾಮತಿಮಾನುಷಕರ್ಮಣೋಃ ॥21॥
ಅವರಿಬ್ಬರೂ ಎಂಟು ಪಾದದಷ್ಟು ಅಂತರದಲ್ಲಿ ಇದ್ದುಕೊಂಡು, ಮನುಷ್ಯರಿಗೆ ಸಾಧ್ಯವಿಲ್ಲದ ಕೆಲಸವನ್ನು ಮಾಡುವವರಾಗಿ ಬಾಹುಗಳನ್ನು ಎತ್ತಿಕೊಂಡು ಒಬ್ಬರ ಮೇಲೊಬ್ಬರು ಬಿದ್ದರು.
ಪ್ರಾರ್ಥಯಾನೌ ತದಾಽನ್ಯೋನ್ಯಂ ಮಂಡಲಾನಿ ವಿಚೇರತುಃ |
ಕ್ರಿಯಾವಿಶೇಷಂ ಕೃತಿನೌ ದರ್ಶಯಾಮಾಸತುಸ್ತದಾ ॥22॥
ಆಗ ಮಹಾಪ್ರಯತ್ನಶೀಲರಾದ ಅವರಿಬ್ಬರೂ ಪರಸ್ಪರವಾಗಿ ಹಿಂಸಿಸುತ್ತಾ ಮಂಡಲಾಕಾರದಲ್ಲಿ ಸಂಚರಿಸಿದರು. ವಿಶಿಷ್ಠವಾದ ಕಾರ್ಯವನ್ನು ತೋರಿಸಿಕೊಟ್ಟರು.
ಅಭ್ಯುದ್ಯತಗದೌ ವೀರೌ ಸಶೃಂಗಾವಿವ ಪರ್ವತೌ |
ತಾವಾಜಘ್ನತುರನ್ಯೋನ್ಯಂ ಯಥಾ ಭೂಮಿಚಲೇಽಚಲೌ ॥23॥
ಗದೆಯನ್ನು ಎತ್ತಿಕೊಂಡಿದ್ದ ಆ ವೀರರು ಶಿಖರವುಳ್ಳ ಪರ್ವತದಂತೆ ಕಾಣಿಸುತ್ತಿದ್ದರು. ಭೂಮಿಯ ಮೇಲೆ ಎರಡು ಪರ್ವತಗಳು ಪರಸ್ಪರ ಹೊಡೆದಾಡಿದಂತೆ ಅವರು ಪರಸ್ಪರವಾಗಿ ಹೊಡೆದಾಡಿದರು.
ತೌ ಪರಸ್ಪರಸಂವೇಗಾದ್ ಗದಾಭ್ಯಾಂ ಚ ಭೃಶಾಹತೌ |
ಯುಗಪತ್ ಪೇತತುರ್ವೀರಾವುಭಾವಿಂದ್ರಬಲೀ ಇವ ॥24॥
ಬಹಳ ವೇಗವಾಗಿ ಗದೆಯಿಂದ ಹೊಡೆಯುತ್ತ ಅವರಿಬ್ಬರೂ ಏಕಕಾಲದಲ್ಲಿ ನೆಲಕ್ಕೆ ಬಿದ್ದರು. ಇಂದ್ರ ಮತ್ತು ಬಲಿ ಯುದ್ಧಮಾಡಿದಂತೆ ಈ ಗದಾಯುದ್ಧವು ಇತ್ತು.
ಉಭಯೋಃ ಸೇನಯೋಃ ಶಬ್ದಸ್ತದಾ ಹಾಹಾಕೃತೋಽಭವತ್ |
ಭೃಶಂ ಮರ್ಮಣ್ಯಭಿಹತಾವುಭಾವಾಸ್ತಾಂ ಸುವಿಹ್ವಲೌ ॥25॥
ಆಗ ಎರಡೂ ಸೈನ್ಯದಲ್ಲಿಯೂ ಹಾಹಾಕಾರದ ಶಬ್ದವು ಉಂಟಾಯಿತು. ಮರ್ಮಸ್ಥಾನದಲ್ಲಿ ಚೆನ್ನಾಗಿ ಪೆಟ್ಟು ತಿಂದ ಇಬ್ಬರೂ ಬಹಳ ವ್ಯಥೆಗೊಳಗಾದರು.
ತತಃ ಸ್ವರಥಮಾರೋಪ್ಯ ಮದ್ರಾಣಾಮಧಿಪಂ ರಣೇ |
ಅಪೋವಾಹ ಕೃಪಃ ಶಲ್ಯಂ ತೂರ್ಣಮಾಯೋಧನಾದ್ ಬಹಿಃ ॥26॥
ಆಗ ಕೃಪಾಚಾರ್ಯನು ರಣರಂಗದಲ್ಲಿ ಶಲ್ಯನನ್ನು ತನ್ನ ರಥದಲ್ಲಿ ಹತ್ತಿಸಿಕೊಂಡು ಯುದ್ಧಭೂಮಿಯಿಂದ ಹೊರಭಾಗಕ್ಕೆ ಕರೆದೊಯ್ದನು.
ಜೀವವದ್ ವಿಹ್ವಲತ್ವಾತ್ ತು ಮಹಾಪಾಣಿರ್ವೃಕೋದರಃ |
ನಿಮೇಷಾತ್ ಪುನರುತ್ಥಾಯ ಸಮಾಹ್ವಯತ ಮದ್ರಪಮ್ ॥27॥
ಮನುಷ್ಯಜೀವರ ಹಾಗೆ ನೋವಿನ ನಟನೆ ಮಾಡುತ್ತ ಮಹಾಬಾಹುವಾದ ಭೀಮಸೇನನು ನಿಮಿಷಮಾತ್ರದಲ್ಲಿ ಮತ್ತೆ ಎದ್ದು ಶಲ್ಯನನ್ನು ಯುದ್ಧಕ್ಕೆ ಆಹ್ವಾನಿಸಿದನು.
ತತಸ್ತು ತಾವಕಾಃ ಶೂರಾ ನಾನಾದೇಶಸಮಾಗತಾಃ |
ನಾನಾವಾದಿತ್ರಶಬ್ದೇನ ಪಾಂಡುಸೈನ್ಯಮಯೋಧಯನ್ ॥28॥
ಅನಂತರ ನಿನ್ನ ಪಕ್ಷದ ನಾನಾದೇಶಗಳಿಂದ ಬಂದ ಶೂರರು ವಿವಿಧರೀತಿಯ ವಾದ್ಯಗಳ ಶಬ್ದವನ್ನು ಮಾಡುತ್ತಾ ಪಾಂಡವರ ಸೈನ್ಯದೊಡನೆ ಕಾದಾಡಿದರು.
ಭುಜಾವುದ್ಧೃತ್ಯ ಶಸ್ತ್ರಂ ಚ ಶಬ್ದೇನ ಮಹತಾ ವೃತಾಃ |
ಅಭ್ಯದ್ರವನ್ ಮಹಾರಾಜ ದುರ್ಯೋಧನಪುರೋಗಮಾಃ ॥29॥
ಮಹಾರಾಜ! ದುರ್ಯೋಧನ ಮೊದಲಾದವರು ಬಹಳವಾದ ಶಬ್ದವನ್ನು ಮಾಡುತ್ತಾ ಭುಜವನ್ನು ಮತ್ತು ಶಸ್ತ್ರವನ್ನು ಮೇಲೆತ್ತಿಕೊಂಡು ಯುದ್ಧಕ್ಕಾಗಿ ಓಡಿಬಂದರು.
ತದನೀಕಮಭಿಪ್ರೇಕ್ಷ್ಯ ತತಸ್ತೇ ಪಾಂಡುನಂದನಾಃ |
ಆಯಯುಃ ಸಿಂಹನಾದೇನ ದುರ್ಯೋಧನವಧೇಪ್ಸಯಾ ॥30॥
ಅನಂತರ ಪಾಂಡವರು ಆ ಸೈನ್ಯವನ್ನು ನೋಡಿ ದುರ್ಯೋಧನನನ್ನು ಕೊಲ್ಲುವ ಇಚ್ಛೆಯಿಂದ ಸಿಂಹನಾದವನ್ನು ಮಾಡುತ್ತಾ ಬಂದರು.
ತೇಷಾಮಾಪತತಾಂ ತೂರ್ಣಂ ಪುತ್ರಸ್ತೇ ಭರತರ್ಷಭ |
ಪ್ರಾಸೇನ ಚೇಕಿತಾನಂ ಚ ವಿವ್ಯಾಧ ಹೃದಯೇ ಭೃಶಮ್ ॥31॥
ಭರತೋತ್ತಮನೇ! ಅವರು ಮೇಲೇರಿ ಬರುತ್ತಿರಲು ನಿನ್ನ ಮಗ ದುರ್ಯೋಧನನು ಪ್ರಾಸಾಯುಧದಿಂದ ಚೇಕಿತಾನನ ಹೃದಯಕ್ಕೆ ಚೆನ್ನಾಗಿ ಹೊಡೆದನು.
ಸ ಪಪಾತ ರಥೋಪಸ್ಥಾತ್ ತವ ಪುತ್ರೇಣ ತಾಡಿತಃ |
ರುಧಿರೌಘಪರಿಕ್ಲಿನ್ನಃ ಪ್ರವಿಶ್ಯ ವಿಪುಲಂ ತಮಃ ॥32॥

ನಿನ್ನ ಮಗನು ಹೊಡೆದಾಗ ಆ ಚೇಕಿತಾನನು ರಥದಿಂದ ಕೆಳಗೆ ಬಿದ್ದನು. ರಕ್ತದಿಂದ ತೊಯ್ದವನಾಗಿ ಮೂರ್ಛೆಯನ್ನು ಹೊಂದಿದನು.
ಚೇಕಿತಾನಂ ಹತಂ ದೃಷ್ಟ್ವಾ ಪಾಂಡವೇಯಾ ಮಹಾರಥಾಃ |
ಅಸಕ್ತಮಭ್ಯವರ್ಷಂತ ಶರವರ್ಷಾಣಿ ಭಾಗಶಃ ॥33॥
ಚೇಕಿತಾನನು ಸತ್ತಿದ್ದನ್ನು ನೋಡಿದ ಮಹಾರಥರಾದ ಪಾಂಡವರು ಪ್ರತ್ಯೇಕ ಪ್ರತ್ಯೇಕವಾಗಿ ಬಾಣಗಳ ಮಳೆಯನ್ನು ಸುರಿಸಿದರು.
ತಾವಕಾನಾಮನೀಕೇಷು ಪಾಂಡವಾ ಜಿತಕಾಶಿನಃ |
ವ್ಯಚರಂತ ಮಹಾರಾಜ ಪ್ರೇಕ್ಷಣೀಯಾಃ ಸಮಂತತಃ ॥34॥
ಮಹಾರಾಜ! ಯುದ್ಧದಲ್ಲಿ ಜಯವನ್ನು ಬಯಸುತ್ತಿದ್ದ ಪಾಂಡವರು ನಿನ್ನವರ ಸೈನ್ಯದಲ್ಲಿ ಎಲ್ಲಾ ಕಡೆಯೂ ಸಂಚರಿಸಿದರು. ಅದು ನೋಡಲು ಸುಂದರವಾಗಿತ್ತು.
ಕೃಪಶ್ಚ ಕೃತವರ್ಮಾ ಚ ಸೌಬಲಶ್ಚ ಮಹಾಬಲಃ |
ಅಯೋಧಯನ್ ಧರ್ಮರಾಜಂ ಮದ್ರರಾಜಪುರಸ್ಕೃತಾಃ ॥35॥
ಕೃಪ, ಕೃತವರ್ಮ, ಮಹಾಬಲಶಾಲಿಯಾದ ಶಕುನಿ ಇವರು ಶಲ್ಯನನ್ನು ಮುಂದಿಟ್ಟುಕೊಂಡು ಧರ್ಮರಾಜನೊಡನೆ ಕಾದಾಡಿದರು.
ಭಾರದ್ವಾಜಸ್ಯ ಹಂತಾರಂ ಭೂರಿವೀರ್ಯಸಮನ್ವಿತಮ್ |
ದುರ್ಯೋಧನೋ ಮಹಾರಾಜ ಧೃಷ್ಟದ್ಯುಮ್ನಮಯೋಧಯತ್ ॥36॥
ಮಹಾರಾಜ! ದುರ್ಯೋಧನನು ದೃಷ್ಟದ್ಯುಮ್ನನ ಜೊತೆಗೆ ಯುದ್ಧಮಾಡಿದನು. ಈ ದೃಷ್ಟದ್ಯುಮ್ನನು ಮಹಾಪರಾಕ್ರಮಿಯಾದ ದ್ರೋಣಾಚಾರ್ಯರನ್ನು ಕೊಂದಿದ್ದನು.
ತ್ರಿಸಹಸ್ರರಥಾ ರಾಜನ್ ತವ ಪುತ್ರೇಣ ಚೋದಿತಾಃ |
ಅಯೋಧಯಂತ ವಿಜಯಂ ದ್ರೋಣಪುತ್ರಪುರಸ್ಕೃತಾಃ ॥37॥
ರಾಜನ್! ನಿನ್ನ ಮಗನ ಆದೇಶದಂತೆ ಮೂರುಸಾವಿರ ರಥಿಕರು ಅಶ್ವತ್ಥಾಮನನ್ನು ಮುಂದಿಟ್ಟುಕೊಂಡು ಅರ್ಜುನನ ಜೊತೆಗೆ ಯುದ್ಧ ಮಾಡಿದರು.
ವಿಜಯೇ ಧೃತಸಂಕಲ್ಪಾಃ ಸಮಭಿತ್ಯಕ್ತಜೀವಿತಾಃ |
ಪ್ರಾವಿಶಂಸ್ತಾವಕಾ ರಾಜನ್ ಹಂಸಾ ಇವ ಮಹತ್ ಸರಃ ॥38॥
ರಾಜನೇ! ನಿನ್ನ ಕಡೆಯವರು ಜಯವನ್ನು ಪಡೆಯಬೇಕೆಂಬ ನಿಶ್ಚಲವಾದ ಇಚ್ಛೆಯಿಂದ ಪ್ರಾಣದ ಆಸೆಯನ್ನೇ ತೊರೆದಿದ್ದರು. ಅವರು ಹಂಸಪಕ್ಷಿಗಳು ದೊಡ್ಡ ಸರೋವರವನ್ನು ಪ್ರವೇಶಿಸುವಂತೆ ಪರಸೈನ್ಯವನ್ನು ಪ್ರವೇಶಿಸಿದರು.
ತತೋ ಯುದ್ಧಮಭೂದ್ ಘೋರಂ ಪರಸ್ಪರವಧೈಷಿಣಾಮ್ |
ಅನ್ಯೋನ್ಯಸ್ತವಸಂಯುಕ್ತಮನ್ಯೋನ್ಯಪ್ರೀತಿವರ್ಧನಮ್ ॥39॥
ಸ್ವಪಕ್ಷದವರಿಂದ ಸ್ತುತಿಸಲ್ಪಡುತ್ತಾ, ಸ್ವಪಕ್ಷದವರಿಗೆ ಆನಂದವನ್ನುಂಟುಮಾಡುತ್ತಾ ಪರಸ್ಪರವಾಗಿ ಪರಪಕ್ಷದವರನ್ನು ಕೊಲ್ಲುವ ಇಚ್ಛೆಯಿಂದ ಬಹಳ ಘೋರವಾದ ಯುದ್ಧವು ನಡೆಯಿತು.
ತಸ್ಮಿನ್ ಪ್ರವೃತ್ತೇ ಸಂಗ್ರಾಮೇ ರಾಜನ್ ವೀರವರಕ್ಷಯೇ |
ಅನಿಲೇನೇರಿತಂ ಘೋರಮುತ್ತಸ್ಥೌ ಪಾರ್ಥಿವಂ ರಜಃ ॥40॥
ರಾಜನೇ! ಹೀಗೆ ಪ್ರಾರಂಭವಾದ ಯುದ್ಧದಲ್ಲಿ ಮಹಾ ಮಹಾವೀರರು ಮಡಿಯಲು ಗಾಳಿಯಿಂದಾಗಿ ನೆಲದ ಧೂಳು ಭಯಂಕರವಾಗಿ ಮೇಲೆದ್ದಿತು.
ಶ್ರವಣಾನ್ನಾಮಧೇಯಾನಾಂ ಪಾರ್ಥಿವಾನಾಂ ಚ ಕೀರ್ತನಾತ್ |
ಪರಾನ್ ವಯಂ ವಿಜಾನೀಮೋ ಯೇ ವಾಽಯುಧ್ಯನ್ನಭೀತವತ್ ॥41॥
ಯಾರೆಲ್ಲಾ ಭಯವನ್ನು ತೊರೆದು ಯುದ್ಧಮಾಡುತ್ತಿದ್ದಾರೆಯೋ ಅಂತಹ ರಾಜರ ಹೆಸರುಗಳನ್ನು ಕೇಳುವುದರಿಂದ, ಹೇಳುವುದರಿಂದ ನಾವು ಶತ್ರುಗಳನ್ನು ತಿಳಿಯಬಹುದಾಗಿದೆ.
ತದ್ರಜಃ ಪುರುಷವ್ಯಾಘ್ರ ಶೋಣಿತೇನ ಪ್ರಣಾಶಿತಮ್ |
ದಿಶಶ್ಚ ವಿಮಲಾಃ ಜಾತಾಃ ತಸ್ಮಿನ್ ರಜಸಿ ನಾಶಿತೇ ॥42॥
ಪುರುಷಸಿಂಹನೇ! ಮೇಲೆದ್ದ ಧೂಳನ್ನು ಅಲ್ಲಿ ಹರಿಯುತ್ತಿದ್ದ ರಕ್ತದ ಧಾರೆಗಳು ತಣಿಸಿದವು. ಹೀಗೆ ಧೂಳು ಹೋಗಲು ದಿಕ್ಕುಗಳು ನಿರ್ಮಲವಾದವು.
ತತಃ ಪ್ರವೃತ್ತೇ ಸಂಗ್ರಾಮೇ ಘೋರರೂಪೇ ಸಮಂತತಃ |
ತಾವಕಾನಾಂ ಪರೇಷಾಂ ಚ ನಾಸೀತ್ ಕಶ್ಚಿತ್ ಪರಾಙ್ಮುಖಃ ॥43॥
ಅನಂತರ ನಡೆದ ಭಯಂಕರವಾದ, ಎಲ್ಲಾ ಕಡೆಯೂ ಹರಡಿದ ಘೋರವಾದ ಯುದ್ಧದಲ್ಲಿ ನಿನ್ನವರಲ್ಲಾಗಲೀ ಅಥವಾ ಶತ್ರುಗಳ ಪಕ್ಷದಲ್ಲಾಗಲೀ ಯಾರೂ ಹಿಂತಿರುಗಲಿಲ್ಲ.
ಬ್ರಹ್ಮಲೋಕಪರಾ ಭೂತ್ವಾ ಪ್ರಾರ್ಥಯಂತೋ ಜಯಂ ಯುಧಿ |
ಸುಯುದ್ಧೇನ ಪರಾಕ್ರಾಂತಾ ನರಾಃ ಸ್ವರ್ಗಮಭೀಪ್ಸವಃ ॥44॥
ಯುದ್ಧದಲ್ಲಿ ಬ್ರಹ್ಮಲೋಕಪ್ರಾಪ್ತಿಯನ್ನು ಪ್ರಾರ್ಥಿಸುತ್ತಾ, ಜನರು ಸ್ವರ್ಗವನ್ನು ಅಪೇಕ್ಷಿಸುತ್ತಾ ಆಕ್ರಮಣಮಾಡಿ ಚೆನ್ನಾಗಿ ಯುದ್ಧ ಮಾಡಿದರು.
ಭರ್ತೃಪಿಂಡವಿಮೋಕ್ಷಾರ್ಥಂ ಮಿತ್ರಕಾರ್ಯೇ ಚ ವಿಷ್ಠಿತಾಃ |
ಸ್ವರ್ಗೇ ಸಂಸಕ್ತಮನಸೋ ಯೋಧಾ ಯುಯುಧಿರೇ ತದಾ ॥45॥
ಯಜಮಾನನ ಅನ್ನದ ಋಣವನ್ನು ತೀರಿಸಲಿಕ್ಕಾಗಿ ಹಾಗೂ ಮಿತ್ರನ ಕೆಲಸದಲ್ಲಿ ವೇತನವನ್ನು ಪಡೆಯುವವರಾಗಿ ಯುದ್ಧ

ಮಾಡಿದರು. ಯೋಧರು ಸ್ವರ್ಗಲೋಕದಲ್ಲಿ ನೆಟ್ಟಮನಸ್ಸುಳ್ಳವರಾಗಿದ್ದರು.
ನಾನಾರೂಪಾಣಿ ಶಸಾತ್ರಣಿ ವಿಸೃಜಂತೋ ಮಹಾರಥಾಃ |
ಅನ್ಯೋನ್ಯಮಭಿಗರ್ಜಂತಃ ಪ್ರಹರಂತಃ ಪರಸ್ಪರಮ್ ॥46॥
ಹತ ವಧ್ಯತ ಗೃಹ್ಣೀತ ಪ್ರಹರಧ್ವಂ ನಿಕೃಂತತ ॥47॥
ಇತಿ ಸ್ಮ ವಾಚೋಽಶ್ರೂಯಂತ ತವ ತೇಷಾಂ ಚ ವೈ ಬಲೇ ॥48॥
ಮಹಾರಥರು ನಾನಾವಿಧದ ಶಸ್ತ್ರಗಳನ್ನು ಪ್ರಯೋಗಿಸುತ್ತಾ, ಒಬ್ಬರಿಗೊಬ್ಬರು ಗರ್ಜಿಸಿಕೊಂಡು, ಪರಸ್ಪರ ಹೊಡೆದುಕೊಳ್ಳುತ್ತ ``ಕೊಲ್ಲು! ಸಾಯಿಸು! ಹಿಡಿ! ಹೊಡಿ! ಕಿತ್ತುಹಾಕು'' ಎಂಬುದಾಗಿ ನಿನ್ನ ಮತ್ತು ಶತ್ರುಗಳ ಸೈನ್ಯವು ಹೇಳುತ್ತಿತ್ತು.
ತತಃ ಶಲ್ಯೋ ಮಹಾರಾಜ ಧರ್ಮರಾಜಂ ಯುಧಿಷ್ಠಿರಮ್ |
ವಿವ್ಯಾಧ ನಿಶಿತೈರ್ಬಾಣೈಃ ಹಂತುಕಾಮೋ ಮಹಾರಥಃ ॥49॥
ಮಹಾರಾಜ! ಅನಂತರ ಮಹಾರಥನಾದ ಶಲ್ಯನು ಯುಧಿಷ್ಠಿರನನ್ನು ಕೊಲ್ಲುವ ಉದ್ದೇಶದಿಂದ ಹರಿತವಾದ ಬಾಣಗಳಿಂದ ಅವನಿಗೆ ಹೊಡೆದನು.
ತಸ್ಯ ಪಾರ್ಥೋ ಮಹಾರಾಜ ನಾರಾಚಾನ್ ವೈ ಚತುರ್ದಶ |
ಮರ್ಮಾಣ್ಯುದ್ದಿಶ್ಯ ಮರ್ಮಜ್ಞೋ ನಿಜಘಾನ ಹಸನ್ನಿವ ॥50॥
ಮಹಾರಾಜ! ಧರ್ಮರಾಜನು ಮುಗುಳ್ನಗುತ್ತಾ, ಯುದ್ಧಮರ್ಮವನ್ನು ತಿಳಿದವನಾಗಿ, ಶಲ್ಯನ ಮರ್ಮಸ್ಥಾನವನ್ನು ಅರಿತುಕೊಂಡು ಹದಿನಾಲ್ಕು ಬಾಣಗಳನ್ನು ಪ್ರಯೋಗಿಸಿದನು.
ಸಂವಾರ್ಯ ಪಾಂಡವಂ ಬಾಣೈಃ ಹಂತುಕಾಮೋ ಮಹಾಯಶಾಃ |
ವಿವ್ಯಾಧ ಸಮರೇ ಕ್ರುದ್ಧೋ ಬಹುಭಿಃ ಕಂಕಪತ್ರಿಭಿಃ ॥51॥
ಬಹಳ ಕೀರ್ತಿಶಾಲಿಯಾದ ಧರ್ಮರಾಜನು ಧರ್ಮರಾಜನನ್ನು ಕೊಲ್ಲಲಿಕ್ಕಾಗಿ ಬಾಣಗಳಿಂದ ಅವನ್ನು ಆಚ್ಛಾದಿಸಿ ಕೋಪದಿಂದ ಅನೇಕ ಬಾಣಗಳನ್ನು ಪ್ರಯೋಗಿಸಿ ಹೊಡೆದನು.
ಅಥ ಮದ್ರೋ ಮಹಾರಾಜ ಶರೇಣ ನತಪರ್ವಣಾ |
ಯುಧಿಷ್ಠಿರಂ ಸಮಾಜಘ್ನೇ ಸರ್ವಸೈನ್ಯಸ್ಯ ಪಶ್ಯತಃ ॥52॥
ಮಹಾರಾಜ! ಅನಂತರ ಶಲ್ಯನು ಎಲ್ಲರು ನೋಡುತ್ತಿರುವಂತೆಯೇ ಬಾಗಿದ ಸಂಧಿಗಳುಳ್ಳ ಬಾಣದಿಂದ ಯುಧಿಷ್ಠಿರನನ್ನು ಚೆನ್ನಾಗಿ ಹೊಡೆದನು.
ಧರ್ಮರಾಜೋಽಪಿ ಸಂಕ್ರುದ್ಧೋ ಮದ್ರರಾಜಂ ಮಹಾರಥಮ್ |
ವಿವ್ಯಾಧ ನಿಶಿತೈರ್ಬಾಣೈಃ ಕಂಕಬರ್ಹಿಣವಾಜಿತೈಃ ॥53॥
ಕುಪಿತನಾದ ಧರ್ಮರಾಜನಾದರೂ ಮಹಾರಥ ಶಲ್ಯನನ್ನು ಹರಿತವಾದ ಹಾಗೂ ಕಂಕ-ಮಯೂರಗಳಿಂದಾಗಿ ಶೋಭಿಸುವ ಬಾಣಗಳಿಂದ ಹೊಡೆದನು.
ಚಂದ್ರಸೇನಂ ಚ ಸಪ್ತತ್ಯಾ ಸೂತಂ ಚ ನವಭಿಃ ಶರೈಃ |
ದ್ರುಮಸೇನಂ ಚತುಃಷಷ್ಟ್ಯಾ ನಿಜಘಾನ ಮಹಾಬಲಃ ॥54॥
ಅನಂತರ ಮಹಾಬಲಶಾಲಿಯಾದ ಯುಧಿಷ್ಠಿರನು ಚಂದ್ರಸೇನನನ್ನು ಎಪ್ಪತ್ತು ಬಾಣಗಳಿಂದ, ಸಾರಥಿಯನ್ನು ಒಂಬತ್ತು ಬಾಣಗಳಿಂದ, ದ್ರುಮಸೇನನನ್ನು ಅರವತ್ತನಾಲ್ಕು ಬಾಣಗಳಿಂದಲೂ ಹೊಡೆದನು.
ಚಕ್ರರಕ್ಷೇ ಹತೇ ಶಲ್ಯಃ ಪಾಂಡವೇನ ಮಹಾತ್ಮನಃ |
ನಿಜಘಾನ ಮಹಾರಾಜ ಚೇದೀನ್ ವೈ ಪಂಚವಿಂಶತಿಮ್ ॥55॥
ಮಹಾರಾಜ! ಹೀಗೆ ಧರ್ಮರಾಜನು ತನ್ನ ಚಕ್ರರಕ್ಷಕರನ್ನು ಸಾಯಿಸಿದಾಗ ಶಲ್ಯನು ಇಪ್ಪತ್ತೈದು ಚೇದಿಗಳನ್ನು ಸಾಯಿಸಿದನು.
ಸಾತ್ಯಕಿಂ ಪಂಚವಿಂಶತ್ಯಾ ಭೀಮಸೇನಂ ಚ ಪಂಚಭಿಃ |
ಮಾದ್ರೀಪುತ್ರೌ ಚ ವಿಂಶತ್ಯಾ ವಿವ್ಯಾಧ ನಿಶಿತೈಃ ಶರೈಃ ॥56॥
ಹರಿತವಾದ ಇಪ್ಪತ್ತೈದು ಬಾಣಗಳಿಂದ ಸಾತ್ಯಕಿಯನ್ನೂ, ಐದು ಬಾಣಗಳಿಂದ ಭೀಮಸೇನನನ್ನೂ, ಇಪ್ಪತ್ತು ಬಾಣಗಳಿಂದ ನಕುಲ-ಸಹದೇವರನ್ನೂ ಹೊಡೆದನು.
ಏವಂ ವಿಚರತಸ್ತಸ್ಯ ಸಂಗ್ರಾಮೇ ರಾಜಸತ್ತಮ |
ಸಂಪ್ರೈಷಯಚ್ಛಿತಾನ್ ಪಾರ್ಥಃ ಶರಾನಾಶೀವಿಷೋಪಮಾನ್ ॥57॥
ರಾಜಶ್ರೇಷ್ಠನೇ! ಹೀಗೆ ರಣರಂಗದಲ್ಲಿ ಶಲ್ಯನು ಸಂಚರಿಸುತ್ತಿರಲು ಯುಧಿಷ್ಠಿರನು ಸರ್ಪಸದೃಶವಾದ ಹರಿತವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.
ಧ್ವಜಾಗ್ರಂ ಚಾಸ್ಯ ಸಮರೇ ಕುಂತೀಪುತ್ರೋ ಯುಧಿಷ್ಠಿರಃ |
ಪ್ರಮುಖೇ ಯುಧ್ಯಮಾನಸ್ಯ ಭಲ್ಲೇನಾಪಾಹರದ್ ರಥಾತ್ ॥58॥
ಯುಧಿಷ್ಠಿರನು ಕೌರವರ ಸೈನ್ಯದ ಸೇನಾಧಿಪತಿಯಾಗಿ ಯುದ್ಧಮಾಡುತ್ತಿದ್ದ ಆ ಶಲ್ಯನ ಧ್ವಜದ ತುದಿಭಾಗವನ್ನು ಭಲ್ಲೆಯಿಂದ ಕಿತ್ತುಹಾಕಿದನು.
ಪಾಂಡುಪುತ್ರೇಣ ವೈ ತಸ್ಯ ಕೇತುಶ್ಛಿನ್ನೋ ಮಹಾತ್ಮನಾ |
ನಿಪತಂತಮಪಶ್ಯಾಮ ಗಿರೇಃ ಶೃಂಗಮಿವಾಹತಮ್ ॥59॥
ಮಹಾತ್ಮನಾದ ಯುಧಿಷ್ಠಿರನು ಶಲ್ಯನ ರಥದ ಪತಾಕೆಯನ್ನು ತುಂಡರಿಸಿದನು. ಇದು ಪರ್ವತದ ಶಿಖರವು ತುಂಡಾದ ಹಾಗೆ ಕಾಣಿಸುತ್ತಿತ್ತು.

ಧ್ವಜಂ ನಿಪತಿತಂ ದೃಷ್ಟ್ವಾ ಪಾಂಡವಂ ಚಾಪ್ಯವಸ್ಥಿತಮ್ |
ಸಂಕ್ರುದ್ಧೋ ಮದ್ರರಾಜೋಽಭೂದ್ ಶರವರ್ಷಂ ಮುಮೋಚ ಹ ||
ತನ್ನ ರಥದ ಧ್ವಜವು ಬಿದ್ದಿದ್ದನ್ನು ಶಲ್ಯನು ನೋಡಿದನು. ಎದುರುಗಡೆ ಧರ್ಮರಾಜನು ನಿಂತಿದ್ದನ್ನೂ ಕಂಡನು. ಮಹಾರಾಜನಾದ ಶಲ್ಯನು ಬಹಳ ಕುಪಿತನಾಗಿ ಬಾಣಗಳ ಮಳೆಯನ್ನೇ ಸುರಿಸಿದನು.
ಶಲ್ಯಃ ಸಾಯಕವರ್ಷೇಣ ಪರ್ಜನ್ಯ ಇವ ವೃಷ್ಟಿಮಾನ್ |
ಅಭ್ಯವರ್ಷದಮೇಯಾತ್ಮಾ ಕ್ಷತ್ರಿಯಂ ಕ್ಷತ್ರಿಯರ್ಷಭಃ ||61||
ಪರ್ಜನ್ಯನು (ವರುಣನು) ಮಳೆಯನ್ನು ಸುರಿಸುವಂತೆ ಕ್ಷತ್ರಿಯೋತ್ತಮನಾದ ಹಾಗೂ ಅಪರಿಮಿತ ಆತ್ಮವಿಶ್ವಾಸವನ್ನು ಹೊಂದಿದ ಶಲ್ಯನು ಧರ್ಮರಾಜನ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾನೆ.
ಸಾತ್ಯಕಿಂ ಭೀಮಸೇನಂ ಚ ಮಾದ್ರೀಪುತ್ರೌ ಚ ಪಾಂಡವೌ |
ಏಕೈಕಂ ದಶಭಿರ್ವಿದ್ಧ್ವಾ ಯುಧಿಷ್ಠಿರಮಪೀಡಯತ್ ||62||
ಸಾತ್ಯಕಿಯನ್ನೂ, ಭೀಮಸೇನನನ್ನೂ, ನಕುಲ-ಸಹದೇವರನ್ನೂ ಒಂದೊಂದು ಬಾಣದಿಂದ ಹೊಡೆದು, ಯುಧಿಷ್ಠಿರನನ್ನೂ ಪೀಡಿಸಿದನು.
ತೇನ ಬಾಣಮಯಂ ಜಾಲಂ ವಿಸೃಷ್ಟಂ ಪಾಂಡವೋರಸಿ |
ಅಪಶ್ಯಾಮ ಮಹಾರಾಜ ಮೇಘಜಾಲಮಿವೋತ್ಥಿತಮ್ ||63||
ಮಹಾರಾಜ! ಶಲ್ಯನು ಪಾಂಡವರ ಮೇಲೆ ಬಾಣದ ಬಲೆಯನ್ನೇ ನಿರ್ಮಿಸಿದನು. ಇದು ಮೋಡದ ಬಲೆಯು ಎದ್ದು ಬಂದಂತೆ ಕಾಣಿಸುತ್ತಿತ್ತು.
ತಸ್ಯ ಶಲ್ಯೋ ರಣೇ ಕ್ರುದ್ಧೋ ಬಾಣೈಃ ಸನ್ನತಪರ್ವಭಿಃ |
ದಿಶಃ ಪ್ರಚ್ಛಾದಯಾಮಾಸ ಪ್ರದಿಶಶ್ಚ ಮಹಾರಥಃ ||64||
ಮಹಾರಥನಾದ ಶಲ್ಯನು ಬಹಳ ಕೋಪಗೊಂಡು ಯುದ್ಧದಲ್ಲಿ ಬಾಗಿದ ಸಂಧಿಗಳುಳ್ಳ ಬಾಣಗಳಿಂದ ದಿಕ್ಕು-ವಿದಿಕ್ಕುಗಳನ್ನು ಮುಚ್ಚಿದನು.
ತತೋ ಯುಧಿಷ್ಠಿರೋ ರಾಜಾ ಬಾಣವರ್ಷೇಣ ಪೀಡಿತಃ |
ಬಭೂವ ಭೃಶವಿಕ್ರಾಂತೋ ಜಂಭೋ ವಜ್ರಭೃತಾ ಯಥಾ ||65||
ಅನಂತರ ರಾಜ ಯುಧಿಷ್ಠಿರನು ಬಾಣಗಳಿಂದ ಪೀಡಿತನಾಗಿ ಜಂಭಾಸುರನು ಇಂದ್ರನಿಂದ ಪೀಡಿತನಾದ ಹಾಗೆ ಬಹಳವಾಗಿ ಆಯಾಸಗೊಂಡನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ದ್ವಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ಶಲ್ಯನ ಪರಾಕ್ರಮದ ವರ್ಣನೆ
ಸಂಜಯಃ
ಪೀಡಿತೇ ಧರ್ಮರಾಜೇ ತು ಮದ್ರರಾಜೇನ ಮಾರಿಷ |
ಸಾತ್ಯಕಿರ್ಭೀಮಸೇನಶ್ಚ ಮಾದ್ರೀಪುತ್ರೌ ಚ ದುರ್ಜಯೌ ||1||
ಪರಿವಾರ್ಯ ರಥೈಃ ಶಲ್ಯಂ ಪೀಡಯಾಮಾಸುರಾಹವೇ ||2||
ಸಂಜಯ ರಾಜನೇ! ಶಲ್ಯನು ಧರ್ಮರಾಜನನ್ನು ಪೀಡಿಸಿದಾಗ ಸಾತ್ಯಕಿ, ಭೀಮಸೇನ ಮತ್ತು ಜಯಿಸಲು ಅಶಕ್ಯರಾದ ನಕುಲ-ಸಹದೇವ ಇವರು ಶಲ್ಯನನ್ನು ಸುತ್ತುವರಿದು ಯುದ್ಧದಲ್ಲಿ ಅವನನ್ನು ಹಿಂಸಿಸಿದರು.
ತಮೇಕಂ ಬಹುಭಿರ್ದೃಷ್ಟ್ವಾ ಪೀಡ್ಯಮಾನಂ ಮಹಾರಥೈಃ |
ಸಾಧುವಾದೋ ಮಹಾನ್ ಜಜ್ಞೇ ಸಿದ್ಧಾಶ್ಚಾಸನ್ ಪ್ರಹರ್ಷಿತಾಃ ||3||
ಅನೇಕ ಮಹಾರಥರು ಒಬ್ಬನನ್ನು ಹಿಂಸಿಸಿದ್ದನ್ನು ನೋಡಿ ``ಸಾಧು!'' ಎಂಬ ಶಬ್ದವು ದೊಡ್ಡದಾಗಿ ಉಂಟಾಯಿತು. ಸಿದ್ಧಪುರುಷರು ಸಂತೋಷಪಟ್ಟರು.
ಆಶ್ಚರ್ಯಮಿತ್ಯಭಾಷಂತ ಮುನಯಶ್ಚಾಪಿ ಸಂಗತಾಃ ||4||
ಸೇರಿದ ಮುನಿಗಳು `ಆಶ್ಚರ್ಯ' ಎಂದು ಹೇಳಿದರು.
ಭೀಮಸೇನೋ ರಣೇ ಶಲ್ಯಂ ಶಲ್ಯಭೂತಂ ಪರಾಕ್ರಮೇ |
ಏಕೇನ ವಿದ್ಧ್ವಾ ಬಾಣೇನ ಪುನರ್ವಿವ್ಯಾಧ ಸಪ್ತಭಿಃ ||5||
ಯುದ್ಧದಲ್ಲಿ ತನ್ನ ಪರಾಕ್ರಮಕ್ಕೆ ಕಂಟಕಪ್ರಾಯನಾದ ಶಲ್ಯನನ್ನು ಭೀಮಸೇನನು ಮೊದಲು ಒಂದು ಬಾಣದಿಂದ ಹೊಡೆದನು. ಪುನಃ ಏಳು ಬಾಣಗಳಿಂದ ಹೊಡೆದನು.
ಸಾತ್ಯಕಿಶ್ಚ ಶತೇನೈನಂ ಧರ್ಮರಾಜಪರೀಪ್ಸಯಾ |
ಮದ್ರೇಶ್ವರಮವಾಕೀರ್ಯ ಸಿಂಹನಾದಮಥಾನದತ್ ||6||
ಧರ್ಮರಾಜನನ್ನು ರಕ್ಷಿಸುವ ಉದ್ದೇಶದಿಂದ ಸಾತ್ಯಕಿಯು ನೂರು ಬಾಣಗಳಿಂದ ಶಲ್ಯನನ್ನು ಹೊಡೆದನು ಮತ್ತು ಸಿಂಹಗರ್ಜನೆಯನ್ನು ಮಾಡಿದನು.

ನಕುಲಃ ಪಂಚಭಿಶ್ಚೈವ ಸಹದೇವಶ್ಚ ಸಪ್ತಭಿಃ |
ವಿದ್ಧ್ವಾ ತತ್ರ ತತಸ್ತೂರ್ಣಂ ಪುನರ್ವಿವ್ಯಾಧ ಸಪ್ತಭಿಃ ||7||
ನಕುಲನು ಐದುಬಾಣಗಳನ್ನೂ, ಸಹದೇವನು ಏಳು ಬಾಣಗಳನ್ನೂ ಶೀಘ್ರವಾಗಿ ಪ್ರಯೋಗಿಸಿದರು. ಪುನಃ ಏಳು ಬಾಣಗಳಿಂದ ಹೊಡೆದನು.
ಸ ತು ಶೂರೋ ರಣೇ ಯತ್ತಃ ಪೀಡಿತಸ್ತೈರ್ಮಹಾರಥೈಃ |
ವಿಕೃಷ್ಯ ಕಾರ್ಮುಕಂ ಘೋರಂ ವೇಗಘ್ನಂ ಭಾರಸಾಧನಮ್ ||8||
ಯುದ್ಧದಲ್ಲಿ ಮಹಾರಥರಿಂದ ಪೀಡಿತನಾದ ಶಲ್ಯನಾದರೂ ಪಯತ್ನಶೀಲನಾಗಿ ಪರರ ಯುದ್ಧವೇಗವನ್ನು ತಡೆಯಬಲ್ಲ ಭಾರವಾದ ಭಯಂಕರವಾದ ಬಿಲ್ಲನ್ನು ಕೈಗೆತ್ತಿಕೊಂಡನು.
ಸಾತ್ಯಕಿಂ ಪಂಚವಿಂಶತ್ಯಾ ಶಲ್ಯೋ ವಿವ್ಯಾಧ ಮಾರಿಷ ||9||
ಮಾರಿಷ! ಶಲ್ಯನು ಸಾತ್ಯಕಿಯ ಮೇಲೆ ಇಪ್ಪತ್ತೈದು ಬಾಣಗಳನ್ನು ಬಿಟ್ಟು ಹೊಡೆದನು.
ಭೀಮಸೇನಂ ತ್ರಿಸಪ್ತತ್ಯಾ ನಕುಲಂ ಪಂಚಭಿಸ್ತಥಾ ||10||
ಭೀಮಸೇನನನ್ನು ಎಪ್ಪತ್ಮೂರು ಬಾಣಗಳಿಂದಲೂ, ನಕುಲನನ್ನು ಐದು ಬಾಣಗಳಿಂದಲೂ ಪೀಡಿಸಿದನು.
ಸಮ್ಯಕ್ ಸವಿಶಿಖಂ ಚಾಪಂ ಸಹದೇವಸ್ಯ ಧನ್ವಿನಃ |
ಛಿತ್ತ್ವಾ ಭಲ್ಲೇನ ಸಮರೇ ವಿವ್ಯಾಧೈನಂ ತ್ರಿಸಪ್ತಭಿಃ ||11||
ಶಲ್ಯನು ಭಲ್ಲವನ್ನು ಪ್ರಯೋಗಿಸಿ ಧನುರ್ಧಾರಿಯಾದ ಸಹದೇವನ ಕೈಯಲ್ಲಿ ಹೆದೆಯೇರಿಸಿದ್ದ ಬಿಲ್ಲನ್ನು ತುಂಡರಿಸಿದನು ಮತ್ತು ಇಪ್ಪತ್ತೊಂದು ಬಾಣಗಳಿಂದ ಹೊಡೆದನು.
ಸಹದೇವಸ್ತು ಸಮರೇ ಮಾತುಂ ಭೂರಿವರ್ಚಸಮ್ |
ಸಜ್ಜಮನ್ಯದ್ಧನುಃ ಕೃತ್ವಾ ಪಂಚಭಿಃ ಸಮತಾಡಯತ್ ||12||
ಸಹದೇವನು ಇನ್ನೊಂದು ಬಿಲ್ಲನ್ನು ಹೆದೆಏರಿಸಿ ರಣರಂಗದಲ್ಲಿ ಬಹಳ ತೇಜಸ್ಸುಳ್ಳ ತನ್ನ ಮಾವ ಶಲ್ಯನನ್ನು ಐದು ಬಾಣಗಳಿಂದ ಚೆನ್ನಾಗಿ ಹೊಡೆದನು.
ಶರೈರಾಶೀವಿಷಾಕಾರೈರರ್ತಜ್ವಲನಸನ್ನಿಭೈಃ |
ಸಾರಥಿಂ ಚಾಸ್ಯ ಸಮರೇ ಶರೇಣಾನತಪರ್ವಣಾ ||13||
ಯುದ್ಧದಲ್ಲಿ ಬಗ್ಗಿದ ಸಂಧಿಯುಳ್ಳ ಬಿಲ್ಲಿನಿಂದ ರವಿ ಮತ್ತು ಬೆಂಕಿಗೆ ಸದೃಶವಾದ ಸರ್ಪಾಕಾರದ ಬಾಣಗಳನ್ನು ಪ್ರಯೋಗಿಸಿ ಶಲ್ಯನ ಸಾರಥಿಯನ್ನು ಕೊಂದು ಹಾಕಿದನು.
ವಿವ್ಯಾಧ ಭೃಶಸಂಕ್ರುದ್ಧಸ್ತಂ ಚ ಭೂಯಸ್ತ್ರಿಭಿಃ ಶರೈಃ |
ಭೀಮಸೇನಃ ತ್ರಿಸಪ್ತತ್ಯಾ ಸಾತ್ಯಕಿರ್ನವಭಿಃ ಶರೈಃ ||14||
ಬಹಳ ಕೋಪದಿಂದ ಮತ್ತೆ ಮೂರು ಬಾಣಗಳಿಂದ ಶಲ್ಯನನ್ನೂ ಹೊಡೆದನು.
ಧರ್ಮರಾಜಸ್ತಥಾ ಷಷ್ಟ್ಯಾ ಗಾತ್ರೇ ಶಲ್ಯಂ ಸಮರ್ಪಯತ್ ||15||
ಭೀಮಸೇನನು ಎಪ್ಪತ್ಮೂರು ಬಾಣಗಳಿಂದ, ಸಾತ್ಯಕಿಯು ಒಂಬತ್ತು ಬಾಣಗಳಿಂದ, ಹಾಗೆಯೇ ಧರ್ಮರಾಜನು ಅರವತ್ತು ಬಾಣಗಳಿಂದ ಶಲ್ಯನ ದೇಹಕ್ಕೆ ಹೊಡೆದರು.
ತತಃ ಶಲ್ಯೋ ಮಹಾರಾಜ ನಿರ್ವಿದ್ಧಸ್ತೈರ್ಮಹಾರಥೈಃ |
ಸುಸ್ರಾವ ರುಧಿರಂ ಗಾತ್ರೈರ್ಗೈರಿಕಂ ಪರ್ವತೋ ಯಥಾ ||16||
ಮಹಾರಾಜ! ಅನಂತರ ಶಲ್ಯನು ಆ ಮಹಾರಥರಿಂದ ಹೊಡೆಯಲ್ಪಟ್ಟವನಾಗಿ ಪರ್ವತದಲ್ಲಿ ಗರಿಕೆಯ ರಸವು ಹೊರಸೂಸಿದಂತೆ ಇವನ ದೇಹದಲ್ಲಿ ಬಹಳವಾಗಿ ರಕ್ತವು ಹರಿಯಿತು.
ತಾಂಶ್ಚ ಸರ್ವಾನ್ ಮಹೇಷ್ವಾಸಾನ್ ಪಂಚಭಿಃ ಪಂಚಭಿಃ ಶರೈಃ |
ವಿವ್ಯಾಧ ತರಸಾ ರಾಜನ್ ತದದ್ಭುತಮಿವಾಭವತ್ ||17||
ರಾಜನೇ! ಶಲ್ಯನು ಇವರೆಲ್ಲರನ್ನೂ ಪ್ರತ್ಯೇಕವಾಗಿ ಐದೈದು ಬಾಣಗಳಿಂದ ಕೂಡಲೇ ಹೊಡೆದನು. ಅದು ಬಹಳ ಅದ್ಭುತವಾಗಿತ್ತು.
ತತೋಽಪರೇಣ ಭಲ್ಲೇನ ಧರ್ಮಪುತ್ರಸ್ಯ ಮಾರಿಷ |
ಧನುಶ್ಚಿಚ್ಛೇದ ಸಮರೇ ಸಜ್ಯಂ ಸ ಚ ಮಹಾರಥಃ ||18||
ಮಾರಿಷನೇ! ಯುದ್ಧದಲ್ಲಿ ಮಹಾರಥನಾದ ಶಲ್ಯನು ಅನಂತರ ಇನ್ನೊಂದು ಭಲ್ಲೆಯಿಂದ ಧರ್ಮರಾಜನ ಹೆದೆಯೇರಿಸಿದ ಬಿಲ್ಲನ್ನು ಮುರಿದನು.
ಅಥಾನ್ಯದ್ ಧನುರಾದಾಯ ಧರ್ಮಪುತ್ರೋ ಮಹಾರಥಃ |
ಸಾಶ್ವಸೂತಧ್ವಜರಥಂ ಶಲ್ಯಂ ಪ್ರಾಚ್ಛಾದಯಚ್ಛರೈಃ ||19||
ಅನಂತರ ಮಹಾರಥನಾದ ಧರ್ಮರಾಜನು ಇನ್ನೊಂದು ಬಿಲ್ಲನ್ನು ತೆಗೆದುಕೊಂಡು ಬಾಣಗಳಿಂದ ಶಲ್ಯನನ್ನೂ, ಅವನ ರಥ, ಸಾರಥಿ, ಕುದುರೆಗಳನ್ನು ಮುಚ್ಚಿಹಾಕಿದನು.
ಪ್ರಚ್ಛಾದ್ಯಮಾನಃ ಸಮರೇ ಧರ್ಮಪುತ್ರಸ್ಯ ಸಾಯಕೈಃ |
ಯುಧಿಷ್ಠಿರಮಥಾವಿಧ್ಯದ್ ದಶಭಿರ್ನಿಶಿತೈಃ ಶರೈಃ ||20||
ಧರ್ಮರಾಜ ಬಾಣಗಳಿಂದ ಆಚ್ಛಾದಿತನಾದ ಶಲ್ಯನು ಆ ಯುದ್ಧದಲ್ಲಿ ಹರಿತವಾದ ಹತ್ತು ಬಾಣಗಳಿಂದ ಧರ್ಮರಾಜನನ್ನು ಹೊಡೆದನು.
ಸಾತ್ಯಕಿಸ್ತು ತತಃ ಕ್ರುದ್ಧೋ ಧರ್ಮಪುತ್ರೇ ಶರಾರ್ದಿತೇ |

ಮದ್ರಾಣಾಮಧಿಪಂ ಶೂರಂ ಶರೈರ್ವಿವ್ಯಾಧ ಪಂಚಭಿಃ ॥21॥
ಅನಂತರ ಶಲ್ಯನಿಂದ ಧರ್ಮರಾಜನು ಪೀಡಿತನಾಗಲು ಸಾತ್ಯಕಿಯು ಬಹಳ ಕೋಪಗೊಂಡು ಐದು ಬಾಣಗಳಿಂದ ಮದ್ರಾಧಿಪತಿಶಲ್ಯನನ್ನು ಹೊಡೆದನು.
ಸ ಸಾತ್ಯಕೇಶ್ಚ ಚಿಚ್ಛೇದ ಕ್ಷುರಪ್ರೇಣ ಮಹದ್ಧನುಃ |
ಭೀಮಸೇನಮುಖಾಂಸ್ತಾಂಸ್ತಾನ್ ತ್ರಿಭಿಸ್ತ್ರಿಭಿರತಾಡಯತ್ ॥22॥
ಶಲ್ಯನು ಶೀಘ್ರಗಾಮಿಯಾದ ಕ್ಷುರಪ್ರ ಎಂಬ ಆಯುಧದಿಂದ ಸಾತ್ಯಕಿಯ ದೊಡ್ಡದಾದ ಬಿಲ್ಲನ್ನು ತುಂಡರಿಸಿದನು. ಭೀಮಸೇನ ಮೊದಲಾದವರನ್ನು ಮೂರು ಮೂರು ಬಾಣಗಳಿಂದ ಹೊಡೆದನು.
ತಸ್ಯ ಕ್ರುದ್ಧೋ ಮಹಾರಾಜ ಸಾತ್ಯಕಿಃ ಸತ್ಯವಿಕ್ರಮಃ |
ತೋಮರಂ ಪ್ರೇಷಯಾಮಾಸ ಸ್ವರ್ಣದಂಡಂ ಮಹಾರಣೇ ॥23॥
ಮಹಾರಾಜ! ಮಹಾವಿಕ್ರಮವುಳ್ಳ ಸಾತ್ಯಕಿಯು ಶಲ್ಯನ ಮೇಲೆ ಕೋಪಿಸಿಕೊಂಡು ಆ ಮಹಾಯುದ್ಧದಲ್ಲಿ ಬಂಗಾರದ ದಂಡವುಳ್ಳ ತೋಮರ ಎಂಬ ಆಯುಧವನ್ನು ಪ್ರಯೋಗಿಸಿದನು.
ಭೀಮಸೇನಃ ಶರಂ ಘೋರಂ ಕಾರ್ತಸ್ವರವಿಭೂಷಿತಮ್ |
ನಕುಲಃ ಸಮರೇ ಶಕ್ತಿಂ ಸಹದೇವೋ ಗದಾಂ ಶುಭಾಮ್ ॥24॥
ಧರ್ಮರಾಜಃ ಶತಘ್ನೀಂ ತು ಜಿಘಾಂಸುಃ ಶಲ್ಯಮಾಹವೇ ॥25॥
ಶಲ್ಯನನ್ನು ಕೊಲ್ಲುವ ಇಚ್ಛೆಯಿಂದ ಭೀಮಸೇನನು ಬಂಗಾರದಿಂದ ಶೋಬಿಸುವ ಭಯಂಕರವಾದ ಬಾಣವನ್ನೂ, ನಕುಲನು ಶಕ್ತ್ಯಾಯುಧವನ್ನೂ, ಸಹದೇವನು ಮಂಗಳಮಯವಾದ ಗದೆಯನ್ನೂ. ಧರ್ಮರಾಜನು ಶತಘ್ನಿ ಆಯುಧವನ್ನೂ ಪ್ರಯೋಗಿಸಿದರು.
ತಾನಾಪತತ ಏವಾಶು ಪಂಚಾನಾಂ ವೈ ಭುಜಚ್ಯುತಾನ್ |
ಸಾತ್ಯಕಿಪ್ರಹಿತಂ ಶಲ್ಯೋ ಭಲ್ಲೈಶ್ಚಿಚ್ಛೇದ ತೋಮರಮ್ ॥26॥
ಐವರ ಕೈಗಳಿಂದ ಪ್ರಯುಕ್ತವಾದ ಆ ಆಯುಧಗಳನ್ನು ಶಲ್ಯನು ನಿಗ್ರಹಿಸಿದನು. ಭಲ್ಲೆಯಿಂದ ಸಾತ್ಯಕಿಯ ತೋಮರಾಯುಧವನ್ನು ಪುಡಿಮಾಡಿದನು.
ವೃಕೋದರೇಣ ಪ್ರಹಿತಂ ಶರಂ ಕನಕಭೂಷಿತಮ್ |
ದ್ವಿಧಾ ಚಿಚ್ಛೇದ ಸಮರೇ ಕೃತಹಸ್ತಃ ಪ್ರತಾಪವಾನ್ ॥27॥
ಯುದ್ಧದಲ್ಲಿ ಸಿದ್ಧಹಸ್ತನಾದ ಮಹಾಪ್ರತಾಪಿ ಶಲ್ಯನು, ಭೀಮನು ಪ್ರಯೋಗಿಸಿದ ಬಂಗಾರದ ಬಾಣವನ್ನು ಎರಡಾಗಿ ತುಂಡರಿಸಿದನು.
ನಕುಲಪ್ರೇಷಿತಾಂ ಶಕ್ತಿಂ ಹೇಮದಂಡಾಂ ಭಯಾವಹಾಮ್ |
ಗದಾಂ ಚ ಸಹದೇವೇನ ಶರೌಘೈಃ ಸಮವಾರಯತ್ ॥28॥
ನಕುಲನು ಪ್ರಯೋಗಿಸಿದ ಬಂಗಾರದ ಹಿಡಿಯುಳ್ಳ, ಭಯಂಕರವಾದ ಶಕ್ತ್ಯಾಯುಧವನ್ನು, ಸಹದೇವನ ಗದೆಯನ್ನೂ ಬಾಣಗಳನ್ನು ಬಿಟ್ಟು ತಡೆದನು.
ಶರಾಭ್ಯಾಂ ಚ ಶತಘ್ನೀಂ ತಾಂ ರಾಜ್ಞಶ್ಚಿಚ್ಛೇದ ಭಾರತ |
ಪಶ್ಯತಾಂ ಪಾಂಡುಪುತ್ರಾಣಾಂ ಸಿಂಹನಾದಮನಾದಯತ್ ॥29॥
ಧರ್ಮರಾಜನು ಪ್ರಯೋಗಿಸಿದ ಶತಘ್ನೀ ಆಯುಧವನ್ನು ಪಾಂಡವರ ಸಮ್ಮುಖದಲ್ಲಿಯೇ ತುಂಡರಿಸಿದನು. ಸಿಂಹಗರ್ಜನೆಯನ್ನು ಮಾಡಿದನು.
ನಾಮೃಷ್ಯತ್ ತತ್ತು ಶೈನೇಯಃ ಶತ್ರೋರ್ವಿಜಯಮಾಹವೇ ॥30॥
ಯುದ್ಧದಲ್ಲಿ ಶತ್ರುವಿನ ವಿಜಯವನ್ನು ಸಾತ್ಯಕಿಯು ಸಹಿಸಿಕೊಳ್ಳಲಿಲ್ಲ.
ಅಥಾನ್ಯದ್ ಧನುರಾದಾಯ ಸಾತ್ಯಕಿಃ ಕ್ರೋಧಮೂರ್ಚ್ಛಿತಃ |
ದ್ವಾಭ್ಯಾಂ ಮದ್ರೇಶ್ವರಂ ವಿದ್ಧ್ವಾ ಸಾರಥಿಂ ಚ ತ್ರಿಭಿಃ ಶರೈಃ ॥31॥
ಸಾತ್ಯಕಿಯು ಬಹಳ ಕೋಪಗೊಂಡವನಾಗಿ ಇನ್ನೊಂದು ಬಿಲ್ಲನ್ನು ತೆಗೆದುಕೊಂಡು ಎರಡು ಬಾಣಗಳಿಂದ ಶಲ್ಯನನ್ನು, ಮೂರು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದನು.
ತತಃ ಶಲ್ಯೋ ರಣೇ ರಾಜನ್ ಸರ್ವಾಂಸ್ತಾನ್ ದಶಭಿಃ ಶರೈಃ |
ವಿವ್ಯಾಧ ಸುಭೃಶಂ ಕ್ರುದ್ಧಃ ತೋತ್ತ್ರೈರಿವ ಮಹಾದ್ವಿಪಾನ್ ॥32॥
ರಾಜನೇ! ಅನಂತರ ಯುದ್ದದಲ್ಲಿ ಶಲ್ಯನು ಬಹಳವಾಗಿ ಕೋಪಗೊಂಡು ಚಾಟಿಯಿಂದ ಮಹಾಗಜಗಳನ್ನು ಹೊಡೆಯುವಂತೆ ಅವರೆಲ್ಲರನ್ನೂ ಹತ್ತತ್ತು ಬಾಣಗಳಿಂದ ಹೊಡೆದನು.
ತೇ ವಾರ್ಯಮಾಣಾಃ ಸಮರೇ ಮದ್ರರಾಜೇನ ಧೀಮತಾ |
ನ ಶೇಕುಃ ಪ್ರಮುಖೇ ಸ್ಥಾತುಂ ತಸ್ಯ ಶತ್ರುನಿಷೂದನ ॥33॥
ಶತ್ರುಗಳನ್ನು ನಾಶಮಾಡುವವನೇ! ರಣರಂಗದಲ್ಲಿ ಬುದ್ಧಿವಂತನಾದ ಶಲ್ಯನಿಂದ ನಿವಾರಿಸಲ್ಪಟ್ಟ ಅವರೆಲ್ಲರೂ ಶಲ್ಯನ ಮುಂದೆ ನಿಲ್ಲಲು ಸಮರ್ಥರಾಗಲಿಲ್ಲ.
ತತೋ ದುರ್ಯೋಧನೋ ರಾಜಾ ದೃಷ್ಟ್ವಾ ಶಲ್ಯಸ್ಯ ವಿಕ್ರಮಮ್ |
ನಿಹತಾನ್ ಪಾಂಡವಾನ್ ಮೇನೇ ಪಾಂಚಾಲಾಂಶ್ಚ ಸಸೃಂಜಯಾನ್ ॥
ಅನಂತರ ರಾಜನಾದ ದುರ್ಯೋಧನನು ಶಲ್ಯನ ಯುದ್ಧವಿಕ್ರಮವನ್ನು ನೋಡಿ ಪಾಂಡವರು, ಸೃಂಜಯರು, ಪಾಂಚಾಲರು ಸತ್ತರು ಎಂದು ಭಾವಿಸಿದನು.
ತಥಾವಿಧಂ ಮಹಾರಾಜ ಮದ್ರರಾಜಸ್ಯ ವಿಕ್ರಮಮ್ |

ಅಸಹ್ಯಂ ಮಾನವೈರ್ಯುದ್ಧೇ ತದ್ ಬಭೂವ ನರರ್ಷಭ ॥35॥
ಮಹಾರಾಜ! ನರೋತ್ತಮ! ಶಲ್ಯನ ಅಂತಹ ವಿಕ್ರಮವು ಮನುಷ್ಯರಿಗೆ ಸಹಿಸಲು ಅಸಾಧ್ಯವಾದುದಾಗಿತ್ತು.
ತತೋ ರಾಜನ್ ಮಹಾಬಾಹುಃ ಭೀಮಸೇನಃ ಪ್ರತಾಪವಾನ್ |
ಸಂತ್ಯಜ್ಯ ಮನಸಾ ಪ್ರಾಣಾನ್ ಮದ್ರರಾಜಮಯೋಧಯತ್ ॥36॥
ರಾಜನ್! ಪ್ರತಾಪಿಯಾದ ಮಹಾಬಾಹು ಭೀಮಸೇನನು ಮನದಲ್ಲಿ ಸಾವನ್ನು ನಿಶ್ಚಯಿಸಿಕೊಂಡು ಶಲ್ಯನ ಜೊತೆಗೆ ಹೋರಾಡಿದನು.
ನಕುಲಃ ಸಹದೇವಶ್ಚ ಸಾತ್ಯಕಿಶ್ಚ ಮಹಾರಥಃ |
ಪರಿವಾರ್ಯ ತದಾ ಶಲ್ಯಂ ಸಮಂತಾದ್ ವ್ಯಕಿರಚ್ಛರೈಃ ॥37॥
ನಕುಲ, ಸಹದೇವ, ಸಾತ್ಯಕಿ ಮೊದಲಾದ ಮಹಾರಥರು ಶಲ್ಯನನ್ನು ಎಲ್ಲಾ ಕಡೆಗಳಿಂದ ಸುತ್ತುವರಿದು ಅವನ ಮೇಲೆ ಬಾಣಗಳನ್ನು ಪ್ರಯೋಗಿಸಿದರು.
ಸ ಚತುರ್ಭಿರ್ಮಹೇಷ್ವಾಸೈಃ ಪಾಂಡವಾನಾಂ ಮಹಾರಥೈಃ |
ವೃತಸ್ತಾನ್ ಯೋಧಯಾಮಾಸ ಮದ್ರರಾಜಃ ಪ್ರತಾಪವಾನ್ ॥38॥
ಪ್ರತಾಪಿಯಾದ ಶಲ್ಯನು ಮಹಾರಥರು ಹಾಗೂ ಮಹಾಬಿಲ್ಲಾರರಾದ ಆ ನಾಲ್ವರಿಂದ ಸುತ್ತುವರಿಯಲ್ಪಟ್ಟವನಾಗಿದ್ದರೂ ಅವರೊಂದಿಗೆ ಹೋರಾಡಿದನು.
ತಸ್ಯ ಧರ್ಮಸುತೋ ರಾಜನ್ ಕ್ಷುರಪ್ರೇಣ ಮಹಾಹವೇ |
ಚಕ್ರರಕ್ಷಂ ಜಘಾನಾಶು ಮದ್ರರಾಜಸ್ಯ ಪಶ್ಯತಃ ॥39॥
ರಾಜನ್! ಶಲ್ಯನು ನೋಡುತ್ತಿದ್ದಂತೆಯೇ ಧರ್ಮರಾಜನು ಕ್ಷುರಪ್ರಾಯುಧದಿಂದ ಅವನ ರಥದ ಚಕ್ರರಕ್ಷಕನನ್ನು ಬೇಗನೇ ಕೊಂದನು.
ತಸ್ಮಿಂಸ್ತು ನಿಹತೇ ಶೂರೇ ಚಕ್ರರಕ್ಷೇ ಮಹಾಬಲೇ |
ಮದ್ರರಾಜೋಽತಿಬಲವಾನ್ ಸೈನಿಕಾನಾವೃಣೋಚ್ಛರೈಃ ॥40॥
ಮಹಾಬಲಶಾಲಿಯಾದ ಚಕ್ರರಕ್ಷಕನು ಸತ್ತುಹೋಗಲು ಅತಿಬಲಶಾಲಿಯಾದ ಶಲ್ಯನು ಸೈನಿಕರನ್ನು ಬಾಣಗಳಿಂದ ಮುಚ್ಚಿಬಿಟ್ಟನು.
ಸಮಾಚ್ಛನ್ನಾಂಸ್ತತಸ್ತಾಂಸ್ತು ರಾಜನ್ ವೀಕ್ಷ್ಯ ಸ್ವಸೈನಿಕಾನ್ |
ಚಿಂತಯಾಮಾಸ ಸಮರೇ ಧರ್ಮಪುತ್ರೋ ಯುಧಿಷ್ಠಿರಃ ॥41॥
ರಾಜನ್! ತನ್ನ ಸೈನಿಕರನ್ನು ಶಲ್ಯನು ಬಾಣಗಳಿಂದ ಮುಚ್ಚಿದ್ದನ್ನು ನೋಡಿದ ಧರ್ಮರಾಜನು ಯುದ್ಧದಲ್ಲಿ ಚಿಂತಿಸತೊಡಗಿದನು.
ಯುಧಿಷ್ಠಿರಃ
ಕಥಂ ನು ನ ಭವೇತ್ ಸತ್ಯಂ ಮಾಧವಸ್ಯ ವಚೋ ಮಹತ್ |
ಅಭಿಕ್ರುದ್ಧೋ ಮಹಾರಾಜ ಕ್ಷಪಯೇತ ಬಲಂ ಮಮ ॥42॥
ಅಹಂ ಮದ್ಭ್ರಾತರಶ್ಚೈವ ಸಾತ್ಯಕಿಶ್ಚ ಮಹಾರಥಃ |
ಪಾಂಚಾಲಾಃ ಸೃಂಜಯಾಶ್ಚೈವ ನ ಶಕ್ತಾಃ ಸ್ಮ ಹಿ ಮದ್ರಪಮ್ ॥43॥
ನಿಹನಿಷ್ಯತಿ ಚೈವಾದ್ಯ ಮಾತುಲೋಽಸ್ಮಾನ್ ಮಹಾಬಲಃ |
ಗೋವಿಂದವಚನಂ ಸತ್ಯಂ ಕಥಂ ಭವತಿ ಕಿಂತ್ವಿದಮ್ ॥44॥
ಯುಧಿಷ್ಠಿರ ಮಾಧವನ ಹಿರಿದಾದ ಮಾತು ಸತ್ಯವಾಗದಿರಲು ಹೇಗೆ ಸಾಧ್ಯ? ಆದರೆ ಕ್ರುದ್ಧನಾದ ಶಲ್ಯನು ನನ್ನ ಸೇನೆಯನ್ನು ನಾಶಮಾಡುತ್ತಿದ್ದಾನೆ. (ನಾನು, ನನ್ನ ಸಹೋದರರು, ಸಾತ್ಯಕಿ, ಸೃಂಜಯರು, ಪಾಂಚಾಲರು ಯಾರೂ ಕೂಡ ಶಲ್ಯನನ್ನು ನಿಗ್ರಹಿಸಲು ಸಮರ್ಥರಾಗಲಿಲ್ಲ. ಮಹಾಬಲಶಾಲಿಯಾದ ಶಲ್ಯನು ನಮ್ಮನ್ನೆಲ್ಲಾ ಸಾಯಿಸುತ್ತಿದ್ದಾನೆ. ಹಾಗಿದ್ದರೆ ಗೋವಿಂದನ ಮಾತು ಹೇಗೆ ಸತ್ಯವಾದೀತು?)
ಸಂಜಯಃ
ತತಃ ಸರಥನಾಗಾಶ್ವಾಃ ಪಾಂಡವಾಃ ಪಾಂಡುಪೂರ್ವಜ |
ಮದ್ರೇಶ್ವರಂ ಸಮಾಸೇದುಃ ಪೀಡಯಂತಃ ಸಮಂತತಃ ॥45॥
ಸಂಜಯ ಪಾಂಡುವಿನ ಅಣ್ಣನೇ! ಅನಂತರ ರಥ ಆನೆ ಅಶ್ವಗಳಿಂದ ಕೂಡಿದ ಪಾಂಡವರು ಶಲ್ಯನನ್ನು ಸುತ್ತಲೂ ಹಿಂಸಿಸುತ್ತಾ ಒಟ್ಟು ಸೇರಿದರು.
ನಾನಾಶಸ್ತ್ರೌಘಬಹುಲಾಂ ಶಸ್ತ್ರವೃಷ್ಟಿಂ ಸಮುತ್ಥಿತಾಮ್ |
ವ್ಯಧಮತ್ ಸಮರೇ ರಾಜನ್ ಮಹಾಭ್ರಾಣೀವ ಮಾರುತಃ ॥46॥
ರಾಜನ್! ಗಾಳಿಯು ಮಹಾಮೇಘಗಳನ್ನು ಛಿದ್ರಗೊಳಿಸುವಂತೆ ಶಲ್ಯನು ಯುದ್ಧದಲ್ಲಿ ನಾನಾವಿಧದ ಶಸ್ತ್ರಸಮೂಹಗಳುಳ್ಳ ಶಸ್ತ್ರಗಳ ಮಳೆಯನ್ನು ನಾಶಮಾಡಿದನು.
ತತಃ ಕನಕಪುಂಖಾಂತಾಂ ಶಲ್ಯಕ್ಷಿಪ್ತಾಂ ವಿಯದ್ಗತಾಮ್ |
ಶರವೃಷ್ಟಿಮಪಶ್ಯಾಮ ಶಲಭಾನಾಮಿವಾಯತಿಮ್ ॥47॥
ಅನಂತರ ಶಲ್ಯನು ಬಂಗಾರದ ರೆಕ್ಕೆಗಳುಳ್ಳ ಬಾಣಗಳ ಮಳೆಯನ್ನು ಆಕಾಶದಲ್ಲಿ ಸುರಿಸಿ ಆಕಾಶವನ್ನು ಬಾಣಗಳಿಂದ ತುಂಬಿದನು. ಅದು ಶಲಭಗಳು ಆಕಾಶವನ್ನು ವ್ಯಾಪಿಸಿದಂತೆ ಕಾಣಿಸಿತು.
ತೇ ಶರಾ ಮದ್ರರಾಜೇನ ಪ್ರೇಷಿತಾ ರಣಮೂರ್ಧನಿ |
ಸಂಪತಂತಃ ಸ್ಮ ದೃಶ್ಯಂತೇ ಶಲಭಾನಾಂ ವ್ರಜಾ ಇವ ॥48॥
ಮದ್ರರಾಜ ಶಲ್ಯನು ಪ್ರಯೋಗಿಸಿದ ಆ ಬಾಣಗಳು ರಣರಂಗದಲ್ಲಿ ಎಲ್ಲ ಕಡೆಯೂ ಬೀಳಲು ತೊಡಗಿದ್ದನ್ನು ನಾವು ನೋಡಿದೆವು. ಅದು ಶಲಭಗಳು ಬಿದ್ದ ಹಾಗೆ ಕಾಣಿಸುತ್ತಿತ್ತು.

ಮದ್ರರಾಜಧನುರ್ಮುಕ್ತೈಃ ಶರೈಃ ಕನಕಭೂಷಣೈಃ |
ನಿರಂತರಮಿವಾಕಾಶಂ ಸಂಬಭೂವ ಜನಾಧಿಪ ॥49॥
ಜನನಾಯಕನೇ! ಶಲ್ಯನು ಬಿಟ್ಟ ಬಂಗಾರದಿಂದ ಶೋಭಿಸುವ ಬಾಣಗಳು ಆಕಾಶವನ್ನೆಲ್ಲಾ ತುಂಬಿ ಆಕಾಶದಲ್ಲಿ ಎಡೆಯೇ (ಸ್ಥಳವೇ) ಇಲ್ಲದಂತಾಯಿತು.
ನ ಪಾಂಡವಾನಾಂ ನಾಸ್ಮಾಕಂ ತತ್ರ ಕಶ್ಚಿದ್ ವ್ಯದೃಶ್ಯತ |
ಬಾಣಾಂಧಕಾರೇ ಮಹತಿ ಕೃತೇ ತತ್ರ ಮಹಾಹವೇ ॥50॥
ನಮಗಾಗಲೀ, ಪಾಂಡವರಿಗಾಗಲೀ ಅಲ್ಲಿ ಯಾರೂ ಕಾಣಿಸಲಿಲ್ಲ. ಆ ಯುದ್ಧದಲ್ಲಿ ಆ ರೀತಿಯಲ್ಲಿ ಬಾಣಗಳಿಂದ ಕತ್ತಲೆ ನಿರ್ಮಿಸಲ್ಪಟ್ಟಿತು.
ಮದ್ರರಾಜೇನ ಬಲಿನಾ ಲಾಘವಾಚ್ಚರವೃಷ್ಟಿಭಿಃ |
ಲೋಡ್ಯಮಾನಂ ತದಾ ದೃಷ್ಟ್ವಾ ಪಾಂಡವಾನಾಂ ಬಲಾರ್ಣವಮ್ ॥
ಬಲಶಾಲಿಯಾದ ಶಲ್ಯನು ಅನಾಯಾಸವಾಗಿ ಬಾಣಗಳ ಮಳೆಯನ್ನು ಸುರಿಸಿ ಪಾಂಡವರ ಸೈನ್ಯವನ್ನು ಅಲ್ಲೋಲ-ಕಲ್ಲೋಲ ಮಾಡಿದನು.
ವಿಸ್ಮಯಂ ಪರಮಂ ಜಗ್ಮುಃ ದೇವಗಂಧರ್ವದಾನವಾಃ ॥52॥
ಇದನ್ನು ನೋಡಿದ ದೇವತೆಗಳು, ಗಂಧರ್ವರು, ದಾನವರು ಆಶ್ಚರ್ಯವನ್ನು ಹೊಂದಿದರು.
ಸ ತು ತಾನ್ ಸರ್ವತೋ ಯತ್ನಾತ್ ಶರೈಃ ಸಂಪೀಡ್ಯ ಮಾರಿಷ |
ಧರ್ಮರಾಜಮವಚ್ಛಾದ್ಯ ಸಿಂಹವದ್ ವ್ಯನದನ್ ಮುಹುಃ ॥53॥
ರಾಜನೇ! ಶಲ್ಯನಾದರೂ ಪ್ರಯತ್ನಪೂರ್ವಕವಾಗಿ ಅವರನ್ನು ಬಾಣಗಳಿಂದ ಹಿಂಸಿಸಿ, ಧರ್ಮರಾಜನನ್ನು ಆಚ್ಛಾದಿಸಿ ಪುನಃ ಸಿಂಹನಾದವನ್ನು ಮಾಡಿದನು.
ತೇ ಚ್ಛನ್ನಾಃ ಸಮರೇ ತೇನ ಪಾಂಡವಾನಾಂ ಮಹಾರಥಾಃ |
ನ ಶೇಕುಸ್ತೇ ತದಾ ಯುದ್ಧೇ ಪ್ರತ್ಯುದ್ಯಾತುಂ ಮಹಾರಥಾಃ ॥54॥
ಮಹಾರಥರಾದ ಪಾಂಡವರು ಯುದ್ಧದಲ್ಲಿ ಹೀಗೆ ಅವನಿಂದ ಮುಚ್ಚಲ್ಪಟ್ಟು ಮಹಾರಥಿಯಾದ ಶಲ್ಯನ ಕಡೆಗೆ ಹೋಗಲು ಸಮರ್ಥರಾಗಲಿಲ್ಲ.
ಧರ್ಮರಾಜಪುರೋಗಾಸ್ತು ಭೀಮಸೇನಮುಖಾ ರಥಾಃ |
ನಿಜಘ್ನುಃ ಸಮರೇ ಶೂರಂ ಶಲ್ಯಮಾಹವಶೋಭಿನಮ್ ॥55॥
ಧರ್ಮರಾಜನನ್ನು ಮುಂದಿರಿಸಿಕೊಂಡು ಭೀಮಸೇನ ಮೊದಲಾದವರು ಯುದ್ಧದಲ್ಲಿ ಶೋಭಿಸುತ್ತಿರುವ ಶಲ್ಯನನ್ನು ಬಿಟ್ಟೂಬಿಡದೆ ಅಲ್ಲಿಯೇ ಹೊಡೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಲ್ಯಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ಅರ್ಜುನ ಮತ್ತು ಅಶ್ವತ್ಥಾಮರ ಯುದ್ಧ. ಪಾಂಚಾಲವೀರನಾದ ಸುರಥನ ವಧೆ.
ಸಂಜಯಃ
ಅರ್ಜುನೋ ದ್ರೌಣಿನಾ ವಿದ್ಧೋ ಯುದ್ಧೇ ಬಹುಭಿರಾಯಸೈಃ |
ತಸ್ಯ ಚಾನುಚರೈಃ ಶೂರೈಃ ತ್ರಿಗರ್ತಾನಾಂ ಮಹಾರಥೈಃ ॥1॥
ದ್ರೌಣಿಂ ವಿವ್ಯಾಧ ಸಮರೇ ತ್ರಿಭಿರೇವ ಶಿಲೀಮುಖೈಃ |
ತಥೇತರಾನ್ ಮಹೇಷ್ವಾಸಾನ್ ದ್ವಾಭ್ಯಾಂ ದ್ವಾಭ್ಯಾಂ ಸಮಾಚ್ಛಿನತ್ ॥2॥
ಭೂಯಶ್ಚೈತಾನ್ ಮಹಾಬಾಹುಃ ಶರವರ್ಷೈರವಾಕಿರತ್ ॥3॥
ಸಂಜಯ ಇನ್ನೊಂದು ಕಡೆಯಲ್ಲಿ ಯುದ್ಧದಲ್ಲಿ ಅಶ್ವತ್ಥಾಮನು ಮಹಾರಥರಾದ ತ್ರಿಗರ್ತದೇಶದ ಯೋಧರಿಂದ ಕೂಡಿಕೊಂಡು ಕಬ್ಬಿಣದ ಅನೇಕ ಶಸ್ತ್ರಗಳಿಂದ ಅರ್ಜುನನನ್ನು ಹೊಡೆದನು. ಆಗ ಅರ್ಜುನನು ಯುದ್ಧದಲ್ಲಿ ಕೇವಲ ಮೂರೇ ಬಾಣಗಳಿಂದ ಅಶ್ವತ್ಥಾಮನಿಗೆ ಹೊಡೆದನು. ಹಾಗೆಯೇ ಉಳಿದ ಬಿಲ್ಗಾರರನ್ನು ಎರಡೆರಡು ಬಾಣಗಳಿಂದಲೇ ಚೆನ್ನಾಗಿ ಹೊಡೆದನು. ಪುನಃ ಈ ಮಹಾವೀರರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ಶರಕಂಟಕಿನಸ್ತೇ ತು ತಾವಕಾ ಭರತರ್ಷಭ |
ನ ಜಹುಃ ಸಮರೇ ಪಾರ್ಥಂ ವಧ್ಯಮಾನಾಃ ಶಿಲೀಮುಖೈಃ ॥4॥
ಭಾರತೋತ್ತಮನೇ! ನಿನ್ನವರನ್ನು ಬಾಣಗಳು ಚುಚ್ಚಿಕೊಂಡಿದ್ದರೂ, ಪುನಃ ಮೇಲಿಂದ ಬಾಣಗಳ ಪೆಟ್ಟು ಬೀಳುತ್ತಿದ್ದರೂ ಯುದ್ಧದಲ್ಲಿ ಅರ್ಜುನನ ಜೊತೆಗಿನ ಕಾದಾಟವನ್ನು ಬಿಡಲಿಲ್ಲ.
ಅರ್ಜುನಂ ರಥವಂಶೇನ ದ್ರೋಣಪುತ್ರಪುರೋಗಮಾಃ |
ಪರಿವಾರ್ಯ ಮುದಾ ಯುಕ್ತಾ ಯೋಧಯಂತಶ್ಚಕಾಶಿರೇ ॥5॥
ಅಶ್ವತ್ಥಾಮನ ನೇತೃತ್ವದಲ್ಲಿ ನಿನ್ನ ಕಡೆಯ ಯೋಧರು ಆನಂದದಿಂದ ಕೂಡಿದವರಾಗಿ ಯುದ್ಧಮಾಡುತ್ತಾ ರಥಸಮೂಹದಿಂದ ಅರ್ಜುನನನ್ನು ಸುತ್ತುವರಿದರು. ಇದು ನೋಡಲು ಸುಂದರವಾಗಿ ಕಾಣಿಸುತ್ತಿತ್ತು.

ತೈಸ್ತು ಕ್ಷಿಪ್ತಾಃ ಶರಾ ರಾಜನ್ ಕಾರ್ತಸ್ವರವಿಭೂಷಿತಾಃ |
ಅರ್ಜುನಸ್ಯ ರಥೋಪಸ್ಥಂ ಪೂರಯಾಮಾಸುರಂಜಸಾ ||6||
ರಾಜನೇ! ಅವರು ಪ್ರಯೋಗಿಸಿದ ಬಂಗಾರದಿಂದ ಅಲಂಕೃತವಾದ ಬಾಣಗಳಿಂದ ಅರ್ಜುನನ ರಥವು ಪೂರ್ಣವಾಗಿ ತುಂಬಿಹೋಯಿತು.
ತಥಾ ಕೃಷ್ಣೌ ಮಹೇಷ್ವಾಸೌ ವೃಷಭೌ ಸರ್ವಧನ್ವಿನಾಮ್ |
ವಿವ್ಯಧುಶ್ಚ ಶರೈರ್ಘೋರೈಃ ಪ್ರಹೃಷ್ಟಾ ಯುದ್ಧದುರ್ಮದಾಃ ||7||
ಹಾಗೆಯೇ ಮಹಾಬಿಲ್ಲಾರರಾದ ಕೃಷ್ಣ-ಅರ್ಜುನರು ಭಯಂಕರವಾದ ಬಾಣಗಳಿಂದ ಶತ್ರುಗಳನ್ನು ಘಾಸಿಗೊಳಿಸಿದರು. ಅವರೀರ್ವರೂ ಎಲ್ಲಾ ಬಿಲ್ಲಾರರಲ್ಲಿಯೇ ಶ್ರೇಷ್ಠರಾಗಿದ್ದರು. ಯುದ್ಧದಲ್ಲಿ ಅವರನ್ನು ನಿಗ್ರಹಿಸಲು ಯಾರಿಗೂ ಸಾಧ್ಯವಿರಲಿಲ್ಲ. ಯುದ್ಧದಿಂದಾಗಿ ಬಹಳ ಸಂತುಷ್ಟರಾಗಿದ್ದರು.
ಕೂಬರಂ ರಥಚಕ್ರಾಣಿ ಈಷಾನ್ ಯೋಕ್ತ್ರಾಣಿ ಚಾಭಿ ಭೋಃ |
ಯುಗಂ ಚೈವಾನುಕರ್ಷಂ ಚ ಶರಭೂತಮಭೂತ್ ತದಾ ||8||
ಎಲೈ ರಾಜನೇ! ಅರ್ಜುನನ ರಥದ ಗಾಲಿಯಚ್ಚು, ಮುಖ್ಯದಂಡ, ಚಕ್ರಗಳು, ಲಗಾಮುಗಳು, ಕುದುರೆಗಳ ನೊಗ ಇವೆಲ್ಲವೂ ಬಾಣಗಳಿಂದ ತುಂಬಿಹೋಗಿದ್ದವು.
ನೈತಾದೃಶಂ ದೃಷ್ಟಪೂರ್ವಂ ರಾಜನ್ ನೈವ ಚ ಮೇ ಶ್ರುತಮ್ |
ಯಾದೃಶಂ ತಸ್ಯ ಪಾರ್ಥಸ್ಯ ತಾವಕಾಃ ಸಂಪ್ರಚಕ್ರಿರೇ ||9||
ರಾಜನೆ! ನಿನ್ನ ಪಕ್ಷದವರು ಅರ್ಜುನನ ಮೇಲೆ ಮಾಡಿದ ಆಕ್ರಮಣದ ರೀತಿಯನ್ನು ನಾನು ಹಿಂದೆ ಎಂದೂ ನೋಡಿಯೂ ಇಲ್ಲ, ಎಲ್ಲಿಯೂ ಕೇಳಿಯೂ ಇಲ್ಲ.
ಸ ರಥಃ ಸರ್ವತೋ ಭಾತಿ ರುಗ್ಮಪುಂಖೈಃ ಶಿಲಾಶಿತೈಃ |
ಉಲ್ಕಾಶತೈಃ ಸಂಪ್ರದೀಪ್ತಂ ವಿಮಾನಮಿವ ಭೂತಳೇ ||10||
ಆ ಅರ್ಜುನನ ರಥವು ಬಂಗಾರದ ರೆಕ್ಕೆಯ ಹರಿತವಾದ ಬಾಣಗಳಿಂದಾಗಿ ನೂರಾರು ಉಲ್ಕೆಗಳಿಂದ ಬೆಳಗುತ್ತಿರುವ ವಿಮಾನದ ಹಾಗೆ ಎಲ್ಲಾ ಕಡೆಗಳಿಂದಲೂ ಶೋಭಿಸುತ್ತಿತ್ತು.
ತತೋಽರ್ಜುನೋ ಮಹಾರಾಜ ಶರೈಃ ಸನ್ನತಪರ್ವಭಿಃ |
ಅವಾಕಿರತ್ ತಾಂ ಪೃತನಾಂ ಮೇಘೋ ವೃಷ್ಟ್ಯಾ ಯಥಾಽಚಲಮ್ ||
ಮಹಾರಾಜ! ಅನಂತರ ಅರ್ಜುನನು ಚೆನ್ನಾಗಿ ಬಗ್ಗಿದ ಸಂಧಿಗಳುಳ್ಳ ಬಾಣಗಳಿಂದ ಪರರ ಸೈನ್ಯದ ಮೇಲೆ ಮಳೆಗೆರೆದ. ಈ ದೃಶ್ಯ ಮೋಡವು ಪರ್ವತದ ಮೇಲೆ ಮಳೆಗರೆದಂತೆ ಕಾಣಿಸುತ್ತಿತ್ತು.
ತೇ ವಧ್ಯಮಾನಾಃ ಸಮರೇ ಪಾರ್ಥನಾಮಾಂಕಿತೈಃ ಶರೈಃ |
ಪಾರ್ಥಭೂತಮಮನ್ಯಂತ ಪ್ರೇಕ್ಷಮಾಣಾಸ್ತಥಾವಿಧಮ್ ||12||
ಅರ್ಜುನನ ಹೆಸರನ್ನು ಕೆತ್ತಿದ ಬಾಣಗಳು ಶತ್ರುಯೋಧರನ್ನು ಘಾಸಿಗೊಳಿಸುತ್ತಿದ್ದವು. ಇದನ್ನು ನೋಡಿದರೆ ಎಲ್ಲವೂ ಅರ್ಜುನಮಯವಾದಂತೆ ಕಾಣಿಸುತ್ತಿತ್ತು.
ತತೋಽದ್ಭುತಶರಜ್ವಾಲೋ ಧನುಃಶಬ್ದಾನಿಲೋ ಮಹಾನ್ |
ಸೇನೇಂಧನಂ ದದಾಹಾಶು ತಾವಕಂ ಪಾರ್ಥಪಾವಕಃ ||13||
ಅನಂತರ ಅರ್ಜುನನೆಂಬ ಬೆಂಕಿಯು ಸೇನೆ ಎಂಬ ಕಟ್ಟಿಗೆಯನ್ನು ಸುಟ್ಟುಹಾಕಿತು. ಅರ್ಜುನನ ಅದ್ಭುತವಾದ ಬಾಣಗಳೇ ಬೆಂಕಿಯ ಜ್ವಾಲೆಗಳು, ಧನುಸ್ಸಿನ ಠೇಂಕಾರವೇ ದೊಡ್ಡದಾದ ಗಾಳಿ. ಈ ಅರ್ಜುನನೆಂಬ ಬೆಂಕಿಯು ನಿನ್ನವರ ಸೈನ್ಯವನ್ನು ಸುಡುತ್ತಿತ್ತು.
ಚಕ್ರಾಣಾಂ ಪತತಾಂ ಚೈವ ಯುಗಾನಾಂ ಚ ಧರಾತಳೇ |
ತೂಣೀರಾಣಾಂ ಪತಾಕಾನಾಂ ಧ್ವಜಾನಾಂ ಚ ರಥೈಃ ಸಹ ||14||
ಈಷಾಣಾಮನುಕರ್ಷಾಣಾಂ ತ್ರಿವೇಣೂನಾಂ ಚ ಭಾರತ |
ಅಕ್ಷಾಣಾಮಥ ಯೋಕ್ತ್ರಾಣಾಂ ಪ್ರತೋದಾನಾಂ ಚ ರಾಶಯಃ ||15||
ಶಿರಸಾಂ ಪತತಾಂ ಚೈವ ಕುಂಡಲೋಷ್ಣೀಷಧಾರಿಣಾಮ್ |
ಭುಜಾನಾಂ ಚ ಮಹಾರಾಜ ಸುಸ್ಕಂಧಾನಾಂ ಸಮಂತತಃ ||16||
ಛತ್ರಾಣಾಂ ವ್ಯಜನೈಃ ಸಾರ್ಧಂ ಮಕುಟಾನಾಂ ಚ ರಾಶಯಃ |
ಸಮದೃಶ್ಯಂತ ಪಾರ್ಥಸ್ಯ ರಥಮಾರ್ಗೇಷು ಸರ್ವಶಃ ||17||
ಭರತಕುಲೋದ್ಭವನೇ! ಮಹಾರಾಜ! ಅರ್ಜುನನ ರಥದ ಮಾರ್ಗದಲ್ಲಿ ನೆಲದಲ್ಲಿ ರಥದ ಚಕ್ರಗಳು ಮುರಿದು ರಾಶಿಬಿದ್ದಿದ್ದವು. ರಥದ ನೊಗಗಳು, ಯೋಧರ ಬತ್ತಳಿಕೆಗಳು, ಪತಾಕೆಗಳು, ಧ್ವಜಗಳು, ರಥಗಳು, ರಥದ ಮುಖ್ಯ ಸ್ತಂಭ, ಉಪಸ್ತಂಭಗಳು, ರಥದ ಮುಂಭಾಗಗಳು, ಲಗಾಮುಗಳು, ಚಾವಟಿಗಳು ರಾಶಿಯಾಗಿ ಬಿದ್ದಿದ್ದವು. ಕುಂಡಲ ಮತ್ತು ಶಿರೋಽಲಂಕಾರಸಹಿತವಾದ ತಲೆಗಳು, ಭುಜಗಳು, ಸ್ಕಂಧಗಳು ಎಲ್ಲೆಲ್ಲೂ ಬಿದ್ದಿದ್ದವು. ದಾರಿಯಲ್ಲಿ ಛತ್ರಗಳು, ಧ್ವಜಗಳು, ಕಿರೀಟಗಳು ರಾಶಿಯಾಗಿ ಬಿದ್ದಿದ್ದು ಕಾಣಿಸಿತು.
ತತಃ ಕ್ರುದ್ಧಸ್ಯ ಪಾರ್ಥಸ್ಯ ರಥಮಾರ್ಗೇ ವಿಶಾಂಪತೇ |
ಅಗಮ್ಯರೂಪಾ ಪೃಥಿವೀ ಮಾಂಸಶೋಣಿತಕರ್ದಮಾ ||18||
ಬಭೂವ ಭರತಶ್ರೇಷ್ಠ ರುದ್ರಸ್ಯಾಕ್ರೀಡನಂ ಯಥಾ ||19||
ಮಹಾರಾಜ! ಕುಪಿತನಾದ ಅರ್ಜುನನ ಮಾರ್ಗದಲ್ಲಿ ರಕ್ತ-ಮಾಂಸಗಳು ತುಂಬಿದ್ದರಿಂದ ಸಂಚರಿಸಲು ಅಸಾಧ್ಯವಾಗಿತ್ತು. ಭಾರತೋತ್ತಮನೇ! ಆ ಭೂಭಾಗವು ರುದ್ರನ ಕ್ರೀಡಾಸ್ಥಾನದ ಹಾಗೆ ಆಗಿತ್ತು.

ಭೀರೂಣಾಂ ತ್ರಾಸಜನನೀ ಶೂರಾಣಾಂ ಹರ್ಷವರ್ಧನೀ ॥20॥
ಆ ಪ್ರದೇಶವು ಭಯಗ್ರಸ್ತರಿಗೆ ಬಹಳ ದುಃಖದಾಯಕವೂ, ಶೂರರಿಗೆ ಆನಂದದಾಯಕವೂ ಆಗಿತ್ತು.
ಹತ್ವಾ ತು ಸಮರೇ ಪಾರ್ಥಃ ಸಹಸ್ರೇ ದ್ವೇ ಪರಂತಪಃ |
ರಥಾನಾಂ ಸವರೂಥಾನಾಂ ವಿಧೂಮೋಽಗ್ನಿರಿವ ಜ್ವಲನ್ ॥21॥
ಶತ್ರುತಾಪಕನಾದ ಅರ್ಜುನನು ಯುದ್ಧದಲ್ಲಿ ಎರಡುಸಾವಿರ ಲೋಹಾವರಣಸಹಿತವಾದ ರಥಗಳನ್ನು ಧೂಮರಹಿತವಾದ ಬೆಂಕಿಯಂತೆ ಸುಟ್ಟುಹಾಕಿದನು.
ಯಥಾ ಹಿ ಭಗವಾನ್ ವಹ್ನಿಃ ಜಗದ್ದಗ್ಧ್ವಾ ಚರಾಚರಮ್ |
ವಿಧೂಮೋ ದೃಶ್ಯತೇ ರಾಜನ್ ಬಲಮಾನಸ್ತಥಾಽರ್ಜುನಃ ॥22॥
ಷಡ್ಗುಣೈಶ್ವರ್ಯಸಂಪನ್ನನಾದ ವಹ್ನಿಯು ಚರಾಚರ ಜಗತ್ತನ್ನೇ ತಿಂದು ಧೂಮರಹಿತವಾಗಿ ಕಾಣಿಸುವಂತೆ, ರಾಜನೇ! ಅರ್ಜುನನು ಕಾಣಿಸಿದನು.
ದ್ರೌಣಿಸ್ತು ಸಮರೇ ದೃಷ್ಟ್ವಾ ಪಾಂಡವಸ್ಯ ಪರಾಕ್ರಮಮ್ |
ರಥೇನಾತಿಪತಾಕೇನ ಪಾಂಡವಂ ಪರ್ಯವಾರಯತ್ ॥23॥
ತಾವುಭೌ ಪುರುಷವ್ಯಾಘ್ರೌ ಶ್ವೇತಾಶ್ವೌ ಧನ್ವಿನಾಂ ವರೌ |
ಸಮೀಯತುಸ್ತದಾ ತೂರ್ಣಂ ಪರಸ್ಪರವಧೈಷಿಣೌ ॥24॥
ಯುದ್ಧದಲ್ಲಿ ಅರ್ಜುನನ ಪರಾಕ್ರಮವನ್ನು ನೋಡಿದ ಅಶ್ವತ್ಥಾಮನು ದೊಡ್ಡಪತಾಕೆಯುಳ್ಳ ರಥವನ್ನೇರಿ ಅರ್ಜುನನನ್ನು ಸುತ್ತುವರಿದನು. ಆ ಇಬ್ಬರೂ ಪುರುಷೋತ್ತಮರು ಬೆಳ್ಳಗಿನ ಅಶ್ವಗಳನ್ನು ಹೊಂದಿದ್ದರು. ಧನುರ್ಧಾರಿಗಳಲ್ಲಿಯೇ ಶ್ರೇಷ್ಠರಾಗಿದ್ದರು. ಒಬ್ಬರನ್ನೊಬ್ಬರು ಸಂಹರಿಸುವ ಇಚ್ಛೆಯಿಂದ ಬೇಗನೆ ಸಮೀಪಕ್ಕೆ ಬಂದರು.
ತಯೋರಾಸೀನ್ಮಹಾರಾಜ ಬಾಣವರ್ಷಂ ಸುದಾರುಣಮ್ |
ಜೀಮೂತಯೋರ್ಯಥಾ ವೃಷ್ಟಿಃ ತಪಾಂತೇ ಭರತರ್ಷಭ ॥25॥
ಅನ್ಯೋನ್ಯಸ್ಪರ್ಧಿನೌ ತೌ ತು ಶರೈಃ ಸನ್ನತಪರ್ವಭಿಃ |
ತತಕ್ಷತುರ್ಮೃಧೇಽನ್ಯೋನ್ಯಂ ಶೃಂಗಾಭ್ಯಾಂ ವೃಷಭಾವಿವ |
ತಯೋರ್ಯುದ್ಧಂ ಮಹಾರಾಜ ಚಿರಂ ಸಮಮಿವಾಭವತ್ ॥26॥
ಮಹಾರಾಜ! ಅವರಿಬ್ಬರೂ ಘೋರವಾದ ಬಾಣಗಳ ಸುರಿಮಳೆಯನ್ನು ಸುರಿಸುತ್ತಿದ್ದರು. ಭಾರತೋತ್ತಮನೇ! ಬೇಸಿಗೆಯ ಕೊನೆಯ ಭಾಗದಲ್ಲಿ ಮೋಡಗಳಿಂದ ಸುರಿಯುವ ಮಳೆಯಂತೆ ಇತ್ತು. ಪರಸ್ಪರ ಸ್ಪರ್ಧಿಗಳಾಗಿದ್ದ ಅವರೀರ್ವರೂ ಚೆನ್ನಾಗಿ ಬಾಗಿದ ಗಂಟುಗಳುಳ್ಳ ಬಾಣಗಳಿಂದ ಗಾಯಗೊಳಿಸಿದರು. ಕೊಂಬುಗಳಿಂದ ಗೂಳಿಗಳೆರಡು ಹೊಡೆದಾಡಿದಂತೆ ಕಾಣಿಸುತ್ತಿತ್ತು. ಮಹಾರಾಜ! ಅವರ ಯುದ್ಧವು ಬಹಳ ಸಮಯದ ತನಕ ಸಮಾನವಾಗಿತ್ತು.
ಅಸಕ್ತ್ರಣಾಂ ಸಂಗಮಶ್ಚೈವ ಘೋರಸ್ತತ್ರಾಭವತ್ ಪುನಃ ॥27॥
ತತೋಽರ್ಜುನಂ ದ್ವಾದಶಭೀ ರುಗ್ಮಪುಂಖೈಃ ಸುತೇಜನೈಃ |
ವಾಸುದೇವಂ ಚ ದಶಭಿಃ ದ್ರೌಣಿರ್ವಿವ್ಯಾಧ ಭಾರತ ॥28॥
ಪುನಃ ಘೋರವಾದ ಅಸ್ತ್ರಗಳ ಸಂಗಮವು ಉಂಟಾಯಿತು. ಭರತಕುಲೋದ್ಭವನೇ! ಅನಂತರ ಅಶ್ವತ್ಥಾಮನು ಬಂಗಾರದ ರೆಕ್ಕೆಗಳುಳ್ಳ, ತೇಜಸ್ಸಿನಿಂದ ಕೂಡಿದ ಹನ್ನೆರಡು ಬಾಣಗಳಿಂದ ಅರ್ಜುನನನ್ನೂ, ಹತ್ತು ಬಾಣಗಳಿಂದ ಶ್ರೀಕೃಷ್ಣನನ್ನೂ ಹೊಡೆದನು.
ತತಃ ಪ್ರಹಸ್ಯ ಬೀಭತ್ಸುರ್ವಿಕ್ಷಿಪನ್ ಗಾಂಡಿವಂ ಧನುಃ |
ಮಾನಯಿತ್ವಾ ಮುಹೂರ್ತಂ ತು ಗುರುಪುತ್ರಂ ಮಹಾರಥಮ್ ॥29॥
ವ್ಯಶ್ವಸೂತರಥಂ ಚಕ್ರೇ ಸವ್ಯಸಾಚೀ ಪರಂತಪಃ |
ಮೃದುಪೂರ್ವಂ ತತಶ್ಚೈನಂ ತ್ರಿಭಿರ್ವಿವ್ಯಾಧ ಸಾಯಕೈಃ ॥30॥
ಅನಂತರ ಚೆನ್ನಾಗಿ ನಕ್ಕು, ಗಾಂಡೀವವನ್ನು ಠೇಂಕರಿಸುತ್ತಾ, ಮಹಾರಥನಾದ ಗುರುಪುತ್ರ ಅಶ್ವತ್ಥಾಮನನ್ನು ಗೌರವಿಸುತ್ತಾ ಸ್ವಲ್ಪ ಕಾಲ ಕಳೆದನು. ತದನಂತರ ಶತ್ರುನಾಶಕನಾದ ಸವ್ಯಸಾಚಿ ಅರ್ಜುನನು ಅಶ್ವತ್ಥಾಮನ ಅಶ್ವಗಳನ್ನೂ ಸಾರಥಿಯನ್ನೂ ನಾಶಮಾಡಿದನು. ಅನಂತರ ನಿಧಾನವಾಗಿ ಮೂರು ಬಾಣಗಳಿಂದ ಈ ಅಶ್ವತ್ಥಾಮನನ್ನು ಹೊಡೆದನು.
ಹತಾಶ್ವೇ ತು ರಥೇ ತಿಷ್ಠನ್ ದ್ರೋಣಪುತ್ರೋಽಪ್ಯವಿಸ್ಮಯನ್ |
ಮುಸಲಂ ಪಾಂಡುಪುತ್ರಾಯ ಚಿಕ್ಷೇಪ ಪರಿಘೋಪಮಮ್ ॥31॥
ಕುದುರೆಗಳು ಸತ್ತಾಗ ಅಶ್ವತ್ಥಾಮನು ರಥದಲ್ಲೇ ನಿಂತುಕೊಂಡು ಗಾಬರಿಗೊಳ್ಳದೆ ಪರಿಘಾಯುಧಕ್ಕೆ ಸಮಾನವಾದ ಮುಸಲಾಯುಧವನ್ನು (ಒನಕೆ) ಅರ್ಜುನನ ಮೇಲೆ ಬಿಸಾಡಿದನು.
ತಮಾಪತಂತಂ ಸಹಸಾ ಹೇಮಪಟ್ಟವಿಭೂಷಿತಮ್ |
ಚಿಚ್ಛೇದ ಸಪ್ತಧಾ ವೀರಃ ಪಾರ್ಥಃ ಶತ್ರುನಿಬರ್ಹಣಃ ॥32॥
ಬಂಗಾರದ ಪಟ್ಟಿಗಳಿಂದ ಅಲಂಕೃತವಾದ ಮುಸಲವು ಬೀಳುತ್ತಿರಲು, ಶತ್ರುನಾಶಕನಾದ ವೀರ ಅರ್ಜುನನು ಅದನ್ನು ಏಳು ತುಂಡುಗಳನ್ನಾಗಿ ಮಾಡಿದನು.
ಸಂಛಿನ್ನಂ ಮುಸಲಂ ದೃಷ್ಟ್ವಾ ದ್ರೌಣಿಃ ಪರಮಕೋಪನಃ |
ಆದದೇ ಪರಿಘಂ ಘೋರಂ ನಗೇಂದ್ರಶಿಖರೋಪಮಮ್ ॥33॥
ಬಹಳ ಕೋಪಿಷ್ಠನಾದ ಅಶ್ವತ್ಥಾಮನು ಮುಸಲವು ತುಂಡಾಗಿದ್ದನ್ನು ನೋಡಿ ಘೋರವಾದ, ಶ್ರೇಷ್ಠಪರ್ವತದ ಶಿಖರದಂತಿರುವ ಪರಿಘಾಯುಧವನ್ನು ತೆಗೆದುಕೊಂಡನು.

ಚಿಕ್ಷೇಪ ಚೈವ ಪಾರ್ಥಾಯ ದ್ರೌಣಿರ್ಯುದ್ಧವಿಶಾರದಃ ॥34॥
ಯುದ್ಧನಿಪುಣನಾದ ಅಶ್ವತ್ಥಾಮನು ಅದನ್ನು ಅರ್ಜುನನ ಮೇಲೆ ಪ್ರಯೋಗಿಸಿ ಬಿಸಾಡಿದನು.
ತಮಂತಕಮಿವ ಕ್ರುದ್ಧಂ ಪರಿಘಂ ಪ್ರೇಕ್ಷ್ಯ ಪಾಂಡವಃ |
ಅರ್ಜುನಸ್ತ್ವರಿತೋ ಜಘ್ನೇ ಪಂಚಭಿಃ ಸಾಯಕೋತ್ತಮೈಃ ॥35॥
ಪಾಂಡುಪುತ್ರ ಅರ್ಜುನನು ಕೋಪಗೊಂಡ ಯಮನಂತೆ ಮೇಲೆ ಬೀಳುತ್ತಿದ್ದ ಪರಿಘಾಯುಧವನ್ನು ನೋಡಿ ಕೂಡಲೇ ಐದು ಉತ್ತಮ ಬಾಣಗಳಿಂದ ಹೊಡೆದನು.
ಸ ಚ್ಛಿನ್ನಃ ಪತಿತೋ ಭೂಮೌ ಪಾರ್ಥಬಾಣೈರ್ಮಹಾಹವೇ |
ದಾರಯನ್ ಪೃಥಿವೀಂದ್ರಾಣಾಂ ಮನಃ ಶಬ್ದೇನ ಭಾರತ ॥36॥
ಭರತಕುಲೋದ್ಭವನೇ! ಯುದ್ಧದಲ್ಲಿ ಅರ್ಜುನನ ಬಾಣಗಳಿಂದಾಗಿ ಪರಿಘಾಯುಧವು ತುಂಡಾಗಿ ಭೂಮಿಯಲ್ಲಿ ಬಿದ್ದಿತು. ಅದರ ಶಬ್ದದಿಂದ ರಾಜರೆಲ್ಲರ ಮನಸ್ಸು ಒಡೆದು ಹೋಯಿತು.
ತತೋಽಪರೈಸ್ತ್ರಿಭಿರ್ಭಲ್ಲೈಃ ದ್ರೌಣಿಂ ವಿವ್ಯಾಧ ಪಾಂಡವಃ ॥37॥
ಅರ್ಜುನನನ್ನು ತದನಂತರ ಬೇರೆ ಮೂರು ಭಲ್ಲೆಗಳನ್ನು ತೆಗೆದುಕೊಂಡು ಅಶ್ವತ್ಥಾಮನಿಗೆ ಹೊಡೆದನು.
ಸೋಽತಿವಿದ್ಧೋ ಬಲವತಾ ಪಾರ್ಥೇನ ಸುಮಹಾಬಲಃ |
ನ ಮುಮೋಹ ತದಾ ದ್ರೌಣಿಃ ಪೌರುಷೇ ಸ್ವೇ ವ್ಯವಸ್ಥಿತಃ ॥38॥
ಬಹಳ ಬಲಶಾಲಿಯಾದ ಅಶ್ವತ್ಥಾಮನು ಬಲಶಾಲಿಯಾದ ಅರ್ಜುನನಿಂದ ಪೆಟ್ಟು ತಿಂದರೂ ಮೂರ್ಛೆ ಹೋಗಲಿಲ್ಲ. ಆ ದ್ರೋಣಪುತ್ರನು ತನ್ನ ಪುರುಷಬಲದಿಂದ ಹಾಗೆಯೇ ನಿಂತುಕೊಂಡನು.
ಸುರಥಂ ತು ಮಹಾರಾಜ ಭಾರದ್ವಾಜೋ ಮಹಾರಥಃ |
ಅವಾಕಿರತ್ ಶರವ್ರಾತೈಃ ಸರ್ವಕ್ಷತ್ರಸ್ಯ ಪಶ್ಯತಃ ॥39॥
ಮಹಾರಾಜ! ಮಹಾರಥನಾದ ಅಶ್ವತ್ಥಾಮನು ಎಲ್ಲರೂ ನೋಡುತ್ತಿದ್ದಂತೆಯೇ ಮಹಾರಥನಾದ ಸುರಥನನ್ನು ಬಾಣಸಮೂಹದಿಂದ ಆಚ್ಛಾದಿತನನ್ನಾಗಿ ಮಾಡಿದನು.
ತತಸ್ತು ಸುರಥೋಽಪ್ಯಾಜೌ ಪಾಂಚಾಲಾನಾಂ ಮಹಾರಥಃ |
ರಥೇನ ಮೇಘಘೋಷೇಣ ದ್ರೌಣಿಮೇವಾಭ್ಯಧಾವತ ॥40॥
ಪಾಂಚಾಲದೇಶದ ರಾಜನಾದ ಮಹಾರಥ ಸುರಥನು ಯುದ್ಧದಲ್ಲಿ ಮೇಘದಂತೆ ಶಬ್ದವನ್ನು ಮಾಡುವ ರಥದ ಮೇಲೆ ಕುಳಿತವನಾಗಿ ಅಶ್ವತ್ಥಾಮನನ್ನೇ ಎದುರಿಸಿದನು.
ವಿಚಕರ್ಷ ಧನುಃಶ್ರೇಷ್ಠಂ ಸರ್ವಭಾರಸಹಂ ದೃಢಮ್ |
ಜ್ವಲದಾಶೀವಿಷಸಮೈಃ ಶರೈರಾಚ್ಛಾದಯನ್ ಶಿತೈಃ ॥41॥
ಸಕಲ ಭಾರವನ್ನೂ ಹೊರುವ ಸಾಮರ್ಥ್ಯವುಳ್ಳ ದೃಢವಾದ ಶ್ರೇಷ್ಠ ಬಿಲ್ಲನ್ನು ತೆಗೆದುಕೊಂಡು ಹೆದೆಯೇರಿಸಿದನು. ಸುಡುತ್ತಿರುವ ಸರ್ಪಗಳ ಹಾಗೆ ಇರುವ ಹರಿತವಾದ ಬಾಣಗಳಿಂದ ಶತ್ರುಗಳನ್ನು ಆಚ್ಛಾದಿಸಿದನು.
ಸುರಥಂ ತು ತದಾ ಕ್ರುದ್ಧಮಾಪತಂತಂ ಮಹಾರಥಮ್ |
ಚುಕೋಪ ಸಮರೇ ದ್ರೌಣಿರ್ದಂಡಾಹತ ಇವೋರಗಃ ॥42॥
ಆಗ ಅಶ್ವತ್ಥಾಮನು ಕ್ರೋಧದಿಂದ ತನ್ನೆಡೆ ಬರುತ್ತಿರುವ ಸುರಥನನ್ನು ನೋಡಿ, ದಂಡದಿಂದ ಹೊಡೆಸಿಕೊಂಡ ಸರ್ಪದ ಹಾಗೆ ಯುದ್ಧದಲ್ಲಿ ಬಹಳ ಕೋಪಗೊಂಡನು.
ತ್ರಿಶಿಖಾಂ ಭ್ರುಕುಟೀಂ ಕೃತ್ವಾ ಸೃಕ್ವಿಣೀ ಪರಿಲೇಲಿಹನ್ |
ಉದ್ವೀಕ್ಷ್ಯ ಸುರಥಂ ರೋಷಾದ್ ಧನುರ್ಜ್ಯಾಮವಮೃಜ್ಯ ಚ ॥43॥
ಮುಮೋಚ ತೀಕ್ಷ್ಣಂ ನಾರಾಚಂ ಯಮದಂಡಸಮಪ್ರಭಮ್ ॥44॥
ಹುಬ್ಬನ್ನು ಗಂಟಿಕ್ಕುತ್ತಾ, ತುಟಿಗಳನ್ನು ನಾಲಿಗೆಯಿಂದ ಸವರುತ್ತಾ, ಕೋಪದಿಂದ ಸುರಥನನ್ನು ದಿಟ್ಟಿಸಿನೋಡುತ್ತಾ, ಧನುಸ್ಸಿನ ಹಗ್ಗವನ್ನು ಒರೆಸುತ್ತಾ ಹರಿತವಾದ ಯಮನ ದಂಡಕ್ಕೆ ಸದೃಶವಾದ ಬಾಣವನ್ನು ಬಿಟ್ಟನು.
ಸ ತಸ್ಯ ಹೃದಯಂ ಭಿತ್ತ್ವಾ ಪ್ರವಿವೇಶಾತಿವೇಗಿತಃ |
ಶಕ್ರಾಶನಿರಿವೋತ್ಸೃಷ್ಟೋ ವಿದಾರ್ಯ ಧರಣೀತಳಮ್ ॥45॥
ಆ ಬಾಣವು ಸುರಥನ ಹೃದಯವನ್ನು ಭೇದಿಸಿತು. ಇಂದ್ರನ ವಜ್ರಾಯುಧವು ಭೂಮಿಯನ್ನು ಸೀಳುವಂತೆ ಇತ್ತು.
ತತಃ ಸ ಪತಿತೋ ಭೂಮೌ ನಾರಾಚೇನ ಸಮಾಹತಃ |
ವಜ್ರೇಣೇವ ಮಹಾಶೃಂಗಂ ಪರ್ವತಸ್ಯ ಮಹಾವನೇ ॥46॥
ದೊಡ್ಡಕಾಡಿನಲ್ಲಿ ವಜ್ರಾಯುಧದ ದೊಡ್ಡದಾದ ಶಿಖರವು ಬೀಳುವಂತೆ ಸುರಥನೂ ಬಾಣದಿಂದ ಬಹಳವಾಗಿ ಹೊಡೆತ ತಿಂದು ಭೂಮಿಯಲ್ಲಿ ಬಿದ್ದನು.
ತಸ್ಮಿಂಸ್ತು ನಿಹತೇ ಶೂರೇ ದ್ರೋಣಪುತ್ರಃ ಪ್ರತಾಪವಾನ್ |
ಆರುರೋಹ ರಥಂ ತೂರ್ಣಂ ತಮೇವ ರಥಿನಾಂ ವರಃ ॥47॥
ಶೂರನಾದ ಸುರಥನು ಸತ್ತುಹೋಗಲು ಮಹಾಪ್ರತಾಪಿಯಾದ ಅಶ್ವತ್ಥಾಮನು ಅದೇ ರಥವನ್ನು ಬೇಗನೇ ಹತ್ತಿದನು.
ತತಃ ಸದ್ಯೋ ಮಹಾರಾಜ ದ್ರೌಣಿರಾಹವದುರ್ಮದಃ |
ಅರ್ಜುನಂ ಯೋಧಯಾಮಾಸ ಸಂಶಪ್ತಕವೃತೋ ರಣೇ ॥48॥
ಮಹಾರಾಜ! ಅನಂತರ ಕೂಡಲೇ ಯುದ್ಧದಲ್ಲಿ ನಿಗ್ರಹಿಸಲು ಅಸಾಧ್ಯನಾದ ಅಶ್ವತ್ಥಾಮನು ಸಂಶಪ್ತಕರಿಂದ

ಸುತ್ತುವರಿಯಲ್ಪಟ್ಟವನಾಗಿ ಅರ್ಜುನನ ಜೊತೆಗೆ ಯುದ್ಧ ಮಾಡಿದನು.
ತತ್ರ ಯುದ್ಧಂ ಮಹಚ್ಚಾಸೀದ್ ಅರ್ಜುನಸ್ಯ ಪರೈಃ ಸಹ |
ಮಧ್ಯಂದಿನಗತೇ ಸೂರ್ಯೇ ಯಮರಾಷ್ಟ್ರವಿವರ್ಧನಮ್ ॥49॥
ಅಲ್ಲಿ ಸೂರ್ಯನು ಮಧ್ಯಂದಿನಕ್ಕೆ ಪ್ರವೇಶಿಸುತ್ತಿದ್ದಾಗ, ಅರ್ಜುನನಿಗೂ ಅವನ ಶತ್ರುಗಳಿಗೂ, ಯಮನ ರಾಜ್ಯದಲ್ಲಿ ಜೀವರ ಸಂಖ್ಯೆಯನ್ನು ಅಭಿವೃದ್ಧಿ ಪಡಿಸುವ ದೊಡ್ಡದಾದ ಯುದ್ಧವು ನಡೆಯಿತು.
ತತ್ರಾಶ್ಚರ್ಯಮಪಶ್ಯಾಮ ದೃಷ್ಟ್ವಾ ತೇಷಾಂ ಪರಾಕ್ರಮಮ್ |
ಯದೇಕೋ ಯುಗಪದ್ವೀರಾನ್ ಸಮಯೋಧಯದರ್ಜುನಃ ॥50॥
ಅಲ್ಲಿ ಅರ್ಜುನನು ಒಂದೇ ಬಾರಿಗೆ ಅನೇಕ ವೀರರೊಡನೆ ಒಬ್ಬಂಟಿಯಾಗಿ ಕಾದಾಡಿದನು. ಅವನ ಪರಾಕ್ರಮವನ್ನು ನೋಡಿ ಬಹಳವಾದ ದೊಡ್ಡ ಅದ್ಭುತವನ್ನು ನೋಡಿದೆವು.
ವಿಮರ್ದಶ್ಚ ಮಹಾನಾಸೀದ್ ಏಕಸ್ಯ ಬಹುಭಿಃ ಸಹ |
ಶತಕ್ರತೋರ್ಯಥಾ ಪೂರ್ವಂ ಮಹತ್ಯಾ ದೈತ್ಯಸೇನಯಾ ॥51॥
ಹಿಂದೆ ಇಂದ್ರನು ದೊಡ್ಡದಾದ ದೈತ್ಯರ ಸೇನೆಯ ಜೊತೆಗೆ ಹೋರಾಡಿದಂತೆ ಅರ್ಜುನನಿಗೆ ಅನೇಕ ಶತ್ರುಗಳೊಂದಿಗೆ ದೊಡ್ಡದಾದ ಕಾದಾಟವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ಸಂಕುಲಯುದ್ಧ
ಸಂಜಯಃ
ದುರ್ಯೋಧನೋ ಮಹಾರಾಜ ಧೃಷ್ಟದ್ಯುಮ್ನಶ್ಚ ಪಾರ್ಷತಃ |
ಚಕ್ರತುಃ ಸುಮಹದ್ಯುದ್ಧಂ ಶರಶಕ್ತಿಸಮಾಕುಲಮ್ ॥1॥
ಸಂಜಯ ಮಹಾರಾಜ! ದುರ್ಯೋಧನ ಮತ್ತು ದ್ರುಪದನ ಮಗ ಧೃಷ್ಟದ್ಯುಮ್ನ ಇವರೀರ್ವರು ಬಹಳ ವಿಶಿಷ್ಟವಾದ ಯುದ್ಧವನ್ನು ಮಾಡಿದರು. ಆ ಯುದ್ಧದಲ್ಲಿ ಬಾಣಗಳ ಪ್ರಯೋಗವು ಇತ್ತು.
ತಯೋ ರಾಜನ್ ಸಮಾಪೇತುಃ ಶರಧಾರಾಃ ಸಹಸ್ರಶಃ |
ಅಂಬುದಾನಾಂ ಯಥಾ ಕಾಲೇ ಜಲಧಾರಾಃ ಸಮಂತತಃ ॥2॥
ರಾಜನೇ! ಮಳೆಗಾಲದಲ್ಲಿ ಮೋಡಗಳಿಂದ ಜಲಧಾರೆಗಳು ಎಲ್ಲಾ ಕಡೆಯೂ ಬೀಳುವಂತೆ ಇವರೀರ್ವರ ಮೇಲೆಯೂ ಸಾವಿರಾರು ಬಾಣಗಳ ಧಾರೆಗಳು ಬಿದ್ದವು.
ರಾಜಾ ತು ಪಾರ್ಷತಂ ವಿದ್ಧ್ವಾ ಶರೈಃ ಸನ್ನತಪರ್ವಭಿಃ |
ದ್ರೋಣಹಂತಾರಮುಗ್ರೇಷು ಪುನರ್ವಿವ್ಯಾಧ ಸಪ್ತಭಿಃ ॥3॥
ದುರ್ಯೋಧನನು ಚೆನ್ನಾಗಿ ಬಾಗಿದ ಸಂಧಿಗಳುಳ್ಳ ಬಾಣಗಳಿಂದ ಧೃಷ್ಟದ್ಯುಮ್ನನಿಗೆ ಹೊಡೆದನು. ಪುನಃ ದ್ರೋಣನನ್ನು ಕೊಂದದ್ದನ್ನು ಸ್ಮರಿಸಿಕೊಂಡು ಏಳು ಬಾಣಗಳಿಂದ ಹೊಡೆದನು.
ಧೃಷ್ಟದ್ಯುಮ್ನಶ್ಚ ಸಮರೇ ಬಲವಾನ್ ದೃಢವಿಕ್ರಮಃ |
ಸಪ್ತತ್ಯಾ ವಿಶಿಖಾನಾಂ ವೈ ದುರ್ಯೋಧನಮಪೀಡಯತ್ ॥4॥
ಆ ಯುದ್ಧದಲ್ಲಿ ದೃಢವಾದ ಪರಾಕ್ರಮವುಳ್ಳ ಧೃಷ್ಟದ್ಯುಮ್ನನು ಹರಿತವಾದ ಎಪ್ಪತ್ತು ಬಾಣಗಳಿಂದ ದುರ್ಯೋಧನನನ್ನು ಘಾಸಿಗೊಳಿಸಿದನು.
ಪೀಡಿತಂ ಪ್ರೇಕ್ಷ್ಯ ರಾಜಾನಂ ಸೋದರ್ಯಾ ಭರತರ್ಷಭ |
ಮಹತ್ಯಾ ಸೇನಯಾ ಸಾರ್ಧಂ ಪರಿವವ್ರುಶ್ಚ ಪಾರ್ಷತಮ್ ॥5॥
ಭಾರತೋತ್ತಮನೇ! ರಾಜನು ಪೆಟ್ಟುತಿಂದಿದ್ದನ್ನು ನೋಡಿದ ಅವನ ಸಹೋದರರು ದೊಡ್ಡದಾದ ಸೈನ್ಯದೊಂದಿಗೆ ಧೃಷ್ಟದ್ಯುಮ್ನನನ್ನು ಸುತ್ತುವರಿದರು.
ಸ ತೈಃ ಪರಿವೃತಃ ಶೂರೈಃ ಸರ್ವತೋಽತಿರಥೈರ್ಭೃಶಮ್ |
ವ್ಯಚರತ್ ಸಮರೇ ರಾಜನ್ ದರ್ಶಯನ್ ಹಸ್ತಲಾಘವಮ್ ॥6॥
ರಾಜನೇ! ಅತಿರಥ-ಶೂರರಿಂದ ಎಲ್ಲೆಡೆಯಿಂದ ಚೆನ್ನಾಗಿ ಸುತ್ತುವರಿಯಲ್ಪಟ್ಟ ಧೃಷ್ಟದ್ಯುಮ್ನನು ಯುದ್ಧದಲ್ಲಿ, ಅಸ್ತ್ರಪ್ರಯೋಗದಲ್ಲಿ ತನ್ನ ಕೈಚಳಕವನ್ನು ತೋರಿಸುತ್ತಾ ಸಂಚರಿಸಿದನು.
ಶಿಖಂಡೀ ಕೃತವರ್ಮಾಣಂ ಗೌತಮಂ ಚ ಮಹಾರಥಮ್ |
ಪ್ರಭದ್ರಕೈಃ ಸಮಾಯುಕ್ತೋ ಯೋಧಯಾಮಾಸ ಧನ್ವಿನೌ ॥7॥
ಮತ್ತೊಂದು ಕಡೆ ಶಿಖಂಡಿಯು ಪ್ರಭದ್ರಕಸೇನೆಯನ್ನು ಕೂಡಿಕೊಂಡು ಧನುರ್ಧಾರಿಗಳಾದ ಹಾಗೂ ಮಹಾರಥರೆನಿಸಿರುವ ಕೃತವರ್ಮ ಮತ್ತು ಕೃಪಾಚಾರ್ಯರ ಜೊತೆಗೆ ಯುದ್ಧ ಮಾಡಿದನು.
ತತಸ್ತೌ ಚ ಮಹಾಯುದ್ಧೇ ಯಮತುಲ್ಯಪರಾಕ್ರಮೌ |
ಯೋಧಯಾಮಾಸ ಸಮರೇ ವೀರೈರ್ದುರ್ಮಂತ್ರಿತೇ ತವ ॥8॥

ಅನಂತರ ಆ ಮಹಾಯುದ್ಧದಲ್ಲಿ ಯಮನಿಗೆ ಸದೃಶವಾದ ಪರಾಕ್ರಮವುಳ್ಳ ಈ ಕೃತವರ್ಮ ಮತ್ತು ಕೃಪಾಚಾರ್ಯರು ವೀರಾವೇಶದಿಂದ ಯುದ್ಧ ಮಾಡಿದರು.
ತತ್ರಾಸೀತ್ ಸುಮಹದ್ಯುದ್ಧಂ ಘೋರರೂಪಂ ವಿಶಾಂಪತೇ |
ಪ್ರಾಣಾನ್ ಸಂತ್ಯಜತೋರ್ಯುದ್ಧೇ ಪ್ರಾಣದ್ಯೂತಾಭಿದೇವಿನೋಃ ॥9॥
ರಾಜನೇ! ಅಲ್ಲಿ ಯುದ್ಧದಲ್ಲಿ ಪ್ರಾಣವನ್ನೇ ಒತ್ತೆಯಿಟ್ಟು ಪ್ರಾಣಗಳನ್ನೇ ಬಿಡುತ್ತಿರುವ ಇವರೀರ್ವರ ಮಧ್ಯೆ ಘೋರವಾದ ದೊಡ್ಡಯುದ್ಧವು ನಡೆಯಿತು.
ಶಲ್ಯಸ್ತು ಶರವರ್ಷಾಣಿ ವಿಮುಂಚನ್ ಸರ್ವತೋ ದಿಶಮ್ |
ಪಾಂಡವಾನ್ ಪೀಡಯಾಮಾಸ ಸಸಾತ್ಯಕಿವೃಕೋದರಾನ್ ॥10॥
ಶಲ್ಯನಾದರೂ ಎಲ್ಲಾ ದಿಕ್ಕುಗಳಲ್ಲಿ ಬಾಣಗಳ ಮಳೆಯನ್ನು ಸುರಿಸುತ್ತಾ ಸಾತ್ಯಕಿ, ಭೀಮಸೇನರಿಂದ ಸಹಿತರಾದ ಪಾಂಡವರನ್ನು ಪೀಡಿಸಿದನು.
ಶಲ್ಯಸಾಯಕಭಿನ್ನಾನಾಂ ಪಾಂಡವಾನಾಂ ಮಹಾಮೃಧೇ |
ತ್ರಾತಾರಂ ನಾಧ್ಯಗಚ್ಛಂತ ತತ್ರ ಕೇಚಿನ್ಮಹಾರಥಾಃ ॥11॥
ಸಾತ್ಯಕಿಮೊದಲಾದವರು ಪೆಟ್ಟು ತಿಂದಾಗ ಆ ದೊಡ್ಡಯುದ್ಧದಲ್ಲಿ ಕೆಲವು ಮಹಾರಥರಾದ ಪಾಂಡವರಿಗೆ ರಕ್ಷಕರಾಗಿ ಯಾರೂ ಸಿಗದೇ ಹೋದರು.
ತತಸ್ತು ನಕುಲಃ ಶೂರೋ ಧರ್ಮರಾಜೇ ಪ್ರಪೀಡಿತೇ |
ಅಭಿದುದ್ರಾವ ವೇಗೇನ ಮಾತುಲಂ ಮಾದ್ರಿನಂದನಃ ॥12॥
ಧರ್ಮರಾಜನು ಯುದ್ಧದಲ್ಲಿ ಬಹಳವಾಗಿ ಪೀಡಿತನಾದಾಗ ಮಾದ್ರಿಯ ಪುತ್ರನಾದ ನಕುಲನು ಸೋದರಮಾವ ಶಲ್ಯನನ್ನು ಯುದ್ಧದಲ್ಲಿ ಬಹಳ ವೇಗವಾಗಿ ಓಡಿಸತೊಡಗಿದನು.
ಸಂಛಾದ್ಯ ಸಮರೇ ಶಲ್ಯಂ ನಕುಲಃ ಪರವೀರಹಾ |
ವಿವ್ಯಾಧ ಚೈನಂ ದಶಭಿಃ ಸ್ಮಯಮಾನಃ ಸ್ತನಾಂತರೇ ॥13॥
ಶತ್ರುವೀರರನ್ನು ಸದೆಬಡಿಯುವ ನಕುಲನು ಯುದ್ಧದಲ್ಲಿ ಶಲ್ಯನನ್ನು ಆಚ್ಛಾದಿಸಿ ನಗುತ್ತಾ ಅವನ ಎದೆಗೆ ಹತ್ತು ಬಾಣಗಳಿಂದ ಹೊಡೆದನು.
ಸರ್ವಪಾರಶವೈರ್ಬಾಣೈಃ ಕರ್ಮಾರಪರಿಮಾರ್ಜಿತೈಃ |
ಸುವರ್ಣಪುಂಖೈರ್ವಿಶಿಖೈಃ ಧನುರ್ಯಂತ್ರಪ್ರಪೀಡಿತೈಃ ॥14॥
ಆ ಎಲ್ಲಾ ಬಾಣಗಳನ್ನು ಲೋಹಗಳಿಂದ ನಿರ್ಮಿಸಲಾಗಿತ್ತು. ಕಮ್ಮಾರರು ಅವುಗಳನ್ನು ಚೆನ್ನಾಗಿ ಶುದ್ಧೀಕರಿಸಿದ್ದರು. ಬಾಣದ ರೆಕ್ಕೆಗಳನ್ನು ಬಂಗಾರದಿಂದ ಮಾಡಲಾಗಿತ್ತು. ತುದಿಗಳು ಬಹಳ ಚೂಪಾಗಿದ್ದವು. ಧನುಸ್ಸೆಂಬ ಯಂತ್ರದಿಂದ ಪ್ರಯೋಗಿಸಲ್ಪಟ್ಟಿದ್ದವು.
ಶಲ್ಯಸ್ತು ಪೀಡಿತಸ್ತೇನ ಸ್ವಸ್ರೀಯೇಣ ತು ಮಾತುಲಃ |
ನಕುಲಂ ಪೀಡಯಾಮಾಸ ಶರೈಃ ಸನ್ನತಪರ್ವಭಿಃ ॥15॥
ಇಂತಹ ಬಾಣಗಳಿಂದ ಸೋದರಳಿಯ ನಕುಲನು ಸೋದರಮಾವ ಶಲ್ಯನನ್ನು ಹೊಡೆದನು. ಆಗ ಶಲ್ಯನು ಚೆನ್ನಾಗಿ ಬಾಗಿದ ಸಂಧಿಗಳುಳ್ಳ ಬಾಣಗಳಿಂದ ನಕುಲನನ್ನು ಪೀಡಿಸಿದನು.
ತತೋ ಯುಧಿಷ್ಠಿರೋ ರಾಜಾ ಭೀಮಸೇನಶ್ಚ ಸಾತ್ಯಕಿಃ |
ಸಹದೇವಶ್ಚ ಮಾದ್ರೇಯೋ ಮದ್ರರಾಜಮುಪಾದ್ರವನ್ ॥16॥
ಅನಂತರ ರಾಜ ಯುಧಿಷ್ಠಿರ, ಭೀಮಸೇನ, ಸಾತ್ಯಕಿ, ಮಾದ್ರಿಕುಮಾರ ಸಹದೇವ ಇವರು ಶಲ್ಯನನ್ನು ಸಮೀಪಿಸಿದರು.
ತಾನಾಪತತ ಏವಾಶು ಪೂರಯಾಣಾನ್ ರಥಸ್ವನೈಃ |
ದಿಶಶ್ಚ ಪ್ರದಿಶಶ್ಚೈವ ಕಂಪಯಾನಾಂಶ್ಚ ಮೇದಿನೀಮ್ ॥17॥
ಪ್ರತಿಜಗ್ರಾಹ ಸಮರೇ ಸೇನಾಪತಿರಮಿತ್ರಜಿತ್ ॥18॥
ಅವರು ಬರುತ್ತಿರುವಾಗ ಅವರ ರಥದ ಧ್ವನಿಯು ದಿಕ್ಕು-ವಿದಿಕ್ಕುಗಳಲ್ಲಿ ಎಲ್ಲೆಡೆ ತುಂಬಿಹೋಯಿತು. ಭೂಮಿಯೇ ನಡುಗುತ್ತಿತ್ತು. ಅಂತಹ ಯುಧಿಷ್ಠಿರಾದಿಗಳನ್ನು ಸೇನಾಧಿಪತಿಯಾದ ಶತ್ರುಗಳನ್ನು ಜಯಿಸುವ ಶಲ್ಯನು ಯುದ್ಧದಲ್ಲಿ ತಡೆದು ನಿಲ್ಲಿಸಿದನು.
ಯುಧಿಷ್ಠಿರಂ ತ್ರಿಭಿರ್ವಿದ್ಧ್ವಾ ಭೀಮಸೇನಂ ಚ ಪಂಚಭಿಃ |
ಸಾತ್ಯಕಿಂ ಚ ಶತೇನಾಜೌ ಸಹದೇವಂ ತ್ರಿಭಿಃ ಶರೈಃ ॥19॥
ಧರ್ಮರಾಜನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದನು. ಭೀಮಸೇನನ ಮೇಲೆ ಐದು ಬಾಣಗಳನ್ನೂ, ಸಾತ್ಯಕಿಯ ಮೇಲೆ ನೂರು ಬಾಣಗಳನ್ನೂ ಸಹದೇವನ ಮೇಲೆ ಮೂರು ಬಾಣಗಳನ್ನೂ ಪ್ರಯೋಗಿಸಿ ಹೊಡೆದನು.
ತತಸ್ತು ಸಶರಂ ಚಾಪಂ ನಕುಲಸ್ಯ ಮಹಾತ್ಮನಃ |
ಮದ್ರೇಶ್ವರಃ ಕ್ಷುರಪ್ರೇಣ ಮಧ್ಯೇ ಚಿಚ್ಛೇದ ಮಾರಿಷ ॥20॥
ರಾಜನೇ! ಅನಂತರ ಶಲ್ಯನು ಶೀಘ್ರಗಾಮಿಯಾದ ಬಾಣದಿಂದ ಮಹಾತ್ಮ ನಕುಲನ ಬಾಣಯುಕ್ತವಾದ ಬಿಲ್ಲನ್ನು ಮಧ್ಯದಲ್ಲಿ ತುಂಡರಿಸಿದನು.
ತದಪಾಸ್ಯ ಧನುಶ್ಛಿನ್ನಂ ತತಃ ಶಲ್ಯಸ್ಯ ಸಾಯಕೈಃ |
ಅಥಾನ್ಯದ್ ಧನುರಾದಾಯ ಮಾದ್ರೀಪುತ್ರೋ ಮಹಾಬಲಃ ॥21॥
ಮದ್ರರಾಜರಥಂ ತೂರ್ಣಂ ಪೂರಯಾಮಾಸ ಪತ್ರಿಭಿಃ ॥22॥
ಶಲ್ಯನ ಬಾಣಗಳಿಂದ ತುಂಡಾದ ಬಿಲ್ಲನ್ನು ಬಿಸಾಕಿ, ಮಹಾಬಲಶಾಲಿ ಸಹದೇವನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡು,

ಬಾಣಗಳನ್ನು ಪ್ರಯೋಗಿಸಿ ಶಲ್ಯನ ರಥವನ್ನು ಬಾಣಗಳಿಂದ ತುಂಬುವಂತೆ ಮಾಡಿದನು.
ಯುಧಿಷ್ಠಿರಸ್ತು ಮದ್ರೇಶಂ ಸಹದೇವಶ್ಚ ಮಾರಿಷ |
ದಶಭಿರ್ದಶಭಿರ್ಬಾಣೈಃ ಉರಸ್ಯೇನಂ ಅಪೀಡ್ಯತಾಮ್ ||23||
ಮಹಾರಾಜನೇ! ಯುಧಿಷ್ಠಿರನಾದರೂ ಹತ್ತು ಬಾಣಗಳನ್ನು ಶಲ್ಯನ ಎದೆಗೆ ಪ್ರಯೋಗಿಸಿ ಶಲ್ಯನನ್ನು ಪೀಡಿಸಿದನು. ಸಹದೇವನೂ ಹತ್ತು ಬಾಣಗಳನ್ನು ಶಲ್ಯನ ಎದೆಗೆ ಬಿಟ್ಟು ಅವನನ್ನು ಪೀಡಿಸಿದನು.
ಭೀಮಸೇನಸ್ತಥಾ ಷಷ್ಟ್ಯಾ ಸಾತ್ಯಕಿರ್ನವಭಿಃ ಶರೈಃ |
ಮದ್ರರಾಜಮಭಿದ್ರುತ್ಯ ಜಘ್ನತುಃ ಕಂಕಪತ್ರಿಭಿಃ ||24||
ಭೀಮಸೇನನು ಮತ್ತು ಸಾತ್ಯಕಿಯು ಶಲ್ಯನನ್ನು ಅಟ್ಟಿಸಿಕೊಂಡು ಹೋಗಿ ಕ್ರಮವಾಗಿ ಅರವತ್ತು ಮತ್ತು ಒಂಬತ್ತು ಕಂಕಪತ್ರಗಳುಳ್ಳ ಬಾಣಗಳಿಂದ ಹೊಡೆದರು.
ಮದ್ರರಾಜಸ್ತತಃ ಕ್ರುದ್ಧಃ ಸಾತ್ಯಕಿಂ ದಶಭಿಃ ಶರೈಃ |
ವಿವ್ಯಾಧ ಭೂಯಃ ಸಪ್ತತ್ಯಾ ಶರಾಣಾಂ ನತಪರ್ವಣಾಮ್ ||25||
ಅನಂತರ ಶಲ್ಯನು ಕೋಪಗೊಂಡು ಸಾತ್ಯಕಿಯನ್ನು ಹತ್ತು ಬಾಣಗಳಿಂದ ಹೊಡೆದನು. ಪುನಃ ಬಾಗಿದ ಸಂಧಿಗಳುಳ್ಳ ಎಪ್ಪತ್ತು ಬಾಣಗಳಿಂದ ಹೊಡೆದನು.
ಅಥಾಸ್ಯ ಸಶರಂ ಚಾಪಂ ಮುಷ್ಟೌ ಚಿಚ್ಛೇದ ಮಾರಿಷ |
ಹಯಾಂಶ್ಚ ಚತುರಃ ಸಂಖ್ಯೇ ಪ್ರೇಷಯಾಮಾಸ ಮೃತ್ಯವೇ ||26||
ರಾಜನೇ! ಅನಂತರ ಸಾತ್ಯಕಿಯ ಬಾಣಸಹಿತವಾದ ಬಿಲ್ಲನ್ನು ಮುಷ್ಟಿದೇಶದಲ್ಲಿ ತುಂಡುಮಾಡಿದನು. ಯುದ್ಧದಲ್ಲಿ ಅವನ ನಾಲ್ಕು ಕುದುರೆಗಳನ್ನು ಕೊಂದು ಯಮನ ಬಳಿಗೆ ಕಳುಹಿಸಿದನು.
ವಿರಥಂ ಸಾತ್ಯಕಿಂ ಕೃತ್ವಾ ಮದ್ರರಾಜೋ ಮಹಾಬಲಃ |
ವಿಶಿಖಾನಾಂ ಶತೇನೈನಮಾಜಘಾನ ಸಮಂತತಃ ||27||
ಮಹಾಬಲಶಾಲಿಯಾದ ಶಲ್ಯನು ಸಾತ್ಯಕಿಯ ರಥವನ್ನೂ ಪುಡಿಮಾಡಿದನು. ಅವನನ್ನು ನೂರು ಬಾಣಗಳಿಂದ ಎಲ್ಲಾ ಕಡೆಗಳಿಂದ ಚೆನ್ನಾಗಿ ಥಳಿಸಿದನು.
ಮಾದ್ರೀಪುತ್ರೌ ಚ ಸಂರಬ್ಧೌ ಭೀಮಸೇನಂ ಚ ಪಾಂಡವಮ್ |
ಯುಧಿಷ್ಠಿರಂ ಚ ಕೌರವ್ಯ ವಿವ್ಯಾಧ ನಿಶಿತೈಃ ಶರೈಃ ||28||
ಕ್ರೋಧಯುಕ್ತರಾದ ನಕುಲ-ಸಹದೇವರನ್ನು, ಭೀಮಸೇನನನ್ನು ಮತ್ತು ಯುಧಿಷ್ಠಿರನನ್ನು ಹರಿತವಾದ ಬಾಣಗಳಿಂದ ಹೊಡೆದನು.
ತತ್ರಾದ್ಭುತಮಪಶ್ಯಾಮ ಮದ್ರರಾಜಸ್ಯ ಪೌರುಷಮ್ |
ಯದೇನಂ ಸಹಿತಾಃ ಪಾರ್ಥಾ ನಾಭ್ಯವರ್ತಂತ ಸಂಯುಗೇ ||29||
ಅಲ್ಲಿ ಶಲ್ಯನ ಅದ್ಭುತವಾದ ಪೌರುಷವನ್ನು ನೋಡಿದೆವು. ಈ ಪೌರುಷವನ್ನು ಪಾಂಡವರೆಲ್ಲರೂ ಸೇರಿದರೂ ಮೀರಲು ಆಗಲಿಲ್ಲ.
ಅಥಾನ್ಯಂ ರಥಮಾಸ್ಥಾಯ ಸಾತ್ಯಕಿಃ ಸತ್ಯವಿಕ್ರಮಃ |
ಪೀಡಿತಾನ್ ಪಾಂಡವಾನ್ ದೃಷ್ಟ್ವಾ ಮದ್ರರಾಜವಶಂ ಗತಾನ್ ||30||
ಅಭಿದುದ್ರಾವ ವೇಗೇನ ಮದ್ರಾಣಾಮಧಿಪಂ ಬಲೀ ||31||
ನಿಜವಾಗಿಯೂ ಪರಾಕ್ರಮಿಯಾದ ಸಾತ್ಯಕಿಯು ಇನ್ನೊಂದು ರಥವನ್ನು ಏರಿಕೊಂಡು ಶಲ್ಯನ ವಶಕ್ಕೊಳಗಾಗಿ ಪೀಡಿತರಾದ ಪಾಂಡವರನ್ನು ನೋಡಿದನು. ಕೂಡಲೇ ಬಲಶಾಲಿಯಾದ ಸಾತ್ಯಕಿಯು ವೇಗವಾಗಿ ಶಲ್ಯನೆಡೆಗೆ ಸಾಗಿದನು.
ಆಪತಂತಂ ರಥಂ ತಸ್ಯ ಶಲ್ಯಃ ಸಮಿತಿಶೋಭನಃ |
ಪ್ರತ್ಯುದ್ಯಯೌ ರಥೇನೈನಂ ಮತ್ತೋ ಮತ್ತಮಿವ ದ್ವಿಪಮ್ ||32||
ಯುದ್ಧದಲ್ಲಿ ಶೋಭಿಸುತ್ತಿದ್ದ ಶಲ್ಯನು ಬರುತ್ತಿರುವ ಸಾತ್ಯಕಿಯ ರಥವನ್ನು ಕಂಡು ತಾನೂ ರಥದಲ್ಲೇ ಅವನನ್ನು ಎದುರುಗೊಂಡನು. ಇದು ಮದವೇರಿದ ಒಂದು ಆನೆಯು ಇನ್ನೊಂದು ಮದವೇರಿದ ಆನೆಯನ್ನು ಎದಿರುಗೊಂಡಂತೆ ಇತ್ತು.
ಸ ಸನ್ನಿಪಾತಸ್ತುಮುಲೋ ಬಭೂವಾದ್ಭುತದರ್ಶನಃ |
ಸಾತ್ಯಕೇಶ್ಚೈವ ಶೂರಸ್ಯ ಮದ್ರಾಣಾಮಧಿಪಸ್ಯ ಚ ||33||
ಯಾದೃಶೋ ವೈ ಪುರಾ ವೃತ್ತಃ ಶಂಬರಾಮರರಾಜಯೋಃ ||34||
ಶೂರನಾದ ಸಾತ್ಯಕಿ ಮತ್ತು ಮದ್ರಾಧಿಪತಿ ಶಲ್ಯನ ಯುದ್ಧವು ನೋಡಲು ಬಹಳ ಅದ್ಭುತವಾಗಿತ್ತು. ಅವರಿಬ್ಬರ ಯುದ್ಧವು ಶಂಬರಾಸುರ ಮತ್ತು ಇಂದ್ರನ ನಡುವೆ ನಡೆದ ಯುದ್ಧದಂತೆ ಇತ್ತು.
ಸಾತ್ಯಕಿಃ ಪ್ರೇಕ್ಷ್ಯ ಸಮರೇ ಮದ್ರರಾಜಮವಸ್ಥಿತಮ್ |
ವಿವ್ಯಾಧ ನಿಶಿತೈರ್ಬಾಣೈಃ ತಿಷ್ಠ ತಿಷ್ಠೇತಿ ಚಾಬ್ರವೀತ್ ||35||
ಯುದ್ಧದಲ್ಲಿ ಸಾತ್ಯಕಿಯು ನಿಂತಿರುವ ಶಲ್ಯನನ್ನು ನೋಡಿ ಹರಿತವಾದ ಬಾಣಗಳಿಂದ ಹೊಡೆದನು ಮತ್ತು ನಿಲ್ಲು! ನಿಲ್ಲು! ಎಂಬುದಾಗಿಯೂ ಹೇಳಿದನು.
ಮದ್ರರಾಜಸ್ತು ಸುಭೃಶಂ ವಿದ್ಧಸ್ತೇನ ಮಹಾತ್ಮನಾ |
ಸಾತ್ಯಕಿಂ ಪ್ರತಿವಿವ್ಯಾಧ ವಿಂಶತ್ಯಾ ನಿಶಿತೈಃ ಶರೈಃ ||36||
ಆ ಮಹಾತ್ಮ ಸಾತ್ಯಕಿಯಿಂದ ಚೆನ್ನಾಗಿ ಪೆಟ್ಟು ತಿಂದ ಶಲ್ಯನು ಇಪ್ಪತ್ತು ಹರಿತವಾದ ಬಾಣಗಳಿಂದ ಸಾತ್ಯಕಿಯನ್ನು ಪ್ರತಿಯಾಗಿ ಹೊಡೆದನು.

ತತಃ ಪಾರ್ಥಾ ಮಹೇಷ್ವಾಸಾಃ ಸಾತ್ವತಾಭಿಮುಖಂ ನೃಪಮ್ |
ಅಭ್ಯದ್ರುವನ್ ರಥೈಸ್ತೂರ್ಣಂ ಮಾತುಲಂ ವಧಕಾಮ್ಯಯಾ ॥37॥
ಅನಂತರ ಮಹಾಬಿಲ್ಗಾರರಾದ ಪಾಂಡವರು ಬೇಗನೇ ರಥವನ್ನು ಹತ್ತಿಕೊಂಡು ಸಾತ್ಯಕಿಯ ಮುಂದೆ ಯುದ್ಧ ಮಾಡುತ್ತಿದ್ದ ಸೋದರಮಾವ ಶಲ್ಯರಾಜನನ್ನು ಬೇಗನೇ ಸಮೀಪಿಸಿದರು.
ತತ ಆಸೀತ್ ಪರಾಮರ್ದಃ ತುಮುಲಃ ಶೋಣಿತೋದಕಃ |
ಶೂರಾಣಾಂ ಯುಧ್ಯಮಾನಾನಾಂ ಸಿಂಹಾನಾಮಿವ ಗರ್ಜತಾಮ್ ॥
ಅನಂತರ ಶೂರರಾದ ಹಾಗೂ ಮಹಾಬಲರಾದ ಪಾಂಡವರು ಸಿಂಹದಂತೆ ಗರ್ಜಿಸುತ್ತಾ ಯುದ್ಧವನ್ನು ಮಾಡಿದಾಗ ಅವರ ಯುದ್ಧದಲ್ಲಿ ರಕ್ತವು ಹೊಳೆಯಾಗಿ ಹರಿಯುತ್ತಿತ್ತು. ನಿಯಂತ್ರಣಕ್ಕೆ ಸಿಲುಕದ ಕೋಲಾಹಲವು ಉಂಟಾಯಿತು.
ತೇಷಾಮಾಸೀನ್ಮಹಾರಾಜ ವ್ಯತಿಕ್ಷೇಪಃ ಪರಸ್ಪರಮ್ |
ಸಿಂಹಾನಾಮಾಮಿಷೇಪ್ಸೂನಾಂ ಗರ್ಜತಾಮಿವ ಸಂಯುಗೇ ॥39॥
ಮಹಾರಾಜನೇ! ಆ ಎರಡೂ ಪಕ್ಷದವರಿಗೆ ಪರಸ್ಪರವಾಗಿ ಯುದ್ಧವು ಉಂಟಾಯಿತು. ಮಾಂಸದ ರುಚಿಯನ್ನು ಅಪೇಕ್ಷಿಸುವ ಸಿಂಹಗಳು ಗರ್ಜಿಸುತ್ತಾ ಪರಸ್ಪರವಾಗಿ ಕಾದಾಡುವಂತೆ ಇತ್ತು.
ತೇಷಾಂ ಬಾಣಸಹಸ್ರೌಘೈಃ ಆಕೀರ್ಣಾ ವಸುಧಾಽಭವತ್ |
ಅಂತರಿಕ್ಷಂ ಚ ಸಹಸಾ ಬಾಣಭೂತಮಭೂತ್ ತದಾ ॥40॥
ಆ ಪಾಂಡವರು ಬಿಟ್ಟ ಬಾಣಸಮೂಹದಿಂದಾಗಿ ಭೂಮಿಯ ಮೇಲ್ಭಾಗವು ತುಂಬಿಹೋಯಿತು. ಆಕಾಶವೂ ಬಾಣಗಳಿಂದ ತುಂಬಿಹೋಗಿತ್ತು.
ಶರಾಂಧಕಾರೇ ಮಹತಿ ಕೃತೇ ತತ್ರ ಸಮಂತತಃ |
ಅಭ್ರಚ್ಛಾಯೇವ ಸಂಜಜ್ಞೇ ಶರೈಃ ಪೂರ್ಣೈರ್ಮಹಾತ್ಮಭಿಃ ॥41॥
ಅಂತರಿಕ್ಷವು ಬಾಣಗಳಿಂದ ತುಂಬಿರುವುದರಿಂದ ಪೂರ್ಣರಾದ ಮಹಾತ್ಮರಿಂದ ಉಂಟಾದ ಮೋಡದ ನೆರಳಿನಂತೆ ಇತ್ತು.
ತತ್ರ ರಾಜನ್ ಶರೈರ್ಮುಕ್ತೈಃ ನಿರ್ಮುಕ್ತೈರಿವ ಪನ್ನಗೈಃ |
ರುಗ್ಮಪುಂಖೈಃ ಪ್ರಕಾಶದ್ಭಿಃ ವ್ಯರಾಜಂತ ದಿಶಸ್ತಥಾ ॥42॥
ರಾಜನೇ! ಅಲ್ಲಿ ಪ್ರಯೋಗಿಸಿದ ಬಾಣಗಳು, ಬುಟ್ಟಿಯಿಂದ ಹೊರಬಿಟ್ಟ ಸರ್ಪಗಳಂತೆ ಇದ್ದವು. ಬಂಗಾರದ ರೆಕ್ಕೆಗಳಿಂದ ಪ್ರಕಾಶಿಸುತ್ತಿದ್ದ ಆ ಬಾಣಗಳಿಂದ ದಿಕ್ಕುಗಳು ಶೋಭಿಸುತ್ತಿದ್ದವು.
ತತ್ರಾದ್ಭುತಂ ಪರಂ ಚಕ್ರೇ ಶಲ್ಯಃ ಶತ್ರುನಿಬರ್ಹಣಃ |
ತದೇಕಃ ಸಮರೇ ಶೂರೋ ಯೋಧಯಾಮಾಸ ವೈ ಬಹೂನ್ ॥43॥
ಶತ್ರುನಾಶಕನಾದ ಶಲ್ಯನು ಅತ್ಯುತ್ತಮವಾದ ಅದ್ಭುತವನ್ನು ಮಾಡಿದನು. ಯುದ್ಧದಲ್ಲಿ ಶೂರನಾದ ಶಲ್ಯನು ಒಬ್ಬನೇ ಅನೇಕರೊಂದಿಗೆ ಯುದ್ಧ ಮಾಡಿದನು.
ಮದ್ರರಾಜಭುಜೋತ್ಸೃಷ್ಟೈಃ ಕಂಕಬರ್ಹಿಣವಾಜಿತೈಃ |
ಸಂಪತದ್ಭಿಃ ಶರೈಘೋರೈರವಾಕೀರ್ಯತ ಮೇದಿನೀ ॥44॥
ಶಲ್ಯನು ಪ್ರಯೋಗಿಸಿದ ಕಂಕ-ಬರ್ಹಿಗಳಿಂದ ಕೂಡಿದ ಘೋರವಾದ ಬಾಣಗಳಿಂದ ಭೂಮಿಯು ಆವರಿಸಲ್ಪಟ್ಟಿತು.
ತತ್ರ ಶಲ್ಯರಥಂ ಘೋರಂ ವಿಚರಂತಂ ಮಹಾಹವೇ |
ಅಪಶ್ಯಾಮ ಯಥಾಪೂರ್ವಂ ಶಕ್ರಸ್ಯಾಸುರಸಂಕ್ಷಯೇ ॥45॥
ಹಿಂದೆ ದಾನವರ ಜೊತೆಗೆ ನಡೆದ ಯುದ್ಧದಲ್ಲಿ ಇಂದ್ರನ ರಥವು ವೇಗವಾಗಿ ಸಂಚರಿಸುತ್ತಿದ್ದುದರಿಂದ ಕಾಣಿಸುತ್ತಿರಲಿಲ್ಲ. ಹಾಗೆಯೇ ಈ ಮಹಾಯುದ್ಧದಲ್ಲಿ ಸಂಚರಿಸುತ್ತಿದ್ದ ಶಲ್ಯನ ರಥವೂ ಕಾಣಿಸುತ್ತಿರಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾರನೆಯ ಅಧ್ಯಾಯ
ಶಲ್ಯ ಮತ್ತು ಯುಧಿಷ್ಠಿರನ ಮಧ್ಯ ಯುದ್ಧ
ಸಂಜಯಃ
ತತಃ ಸೇನಾ ತವ ವಿಭೋ ಮದ್ರರಾಜಪುರಸ್ಕೃತಾ |
ಪುನರಭ್ಯದ್ರವತ್ ಪಾರ್ಥಾನ್ ವೇಗೇನ ಮಹತಾ ರಣೇ ॥1॥
ಸಂಜಯ ಪ್ರಭುವೇ! ಅನಂತರ ಯುದ್ಧದಲ್ಲಿ ನಿನ್ನ ಸೇನೆಯು ಶಲ್ಯನ ನೇತೃತ್ವದಲ್ಲಿ ಬಹಳ ವೇಗದಿಂದ ಪಾಂಡವರ ಮೇಲೆ ಏರಿಬಂತು.
ಪೀಡಿತಾಸ್ತಾವಕಾಃ ಸರ್ವೇ ಪ್ರಧಾವಂತೋ ರಣೋತ್ಕಟಾಃ |
ಕ್ಷಣೇನ ಚೈವ ಪಾರ್ಥಾಸ್ತೇ ಬಹುತ್ವಾತ್ ಸಮಲೋಲಯನ್ ॥2॥
ನಿನ್ನ ಕಡೆಯ ಯೋಧರು ನಾನಾ ವಿಧದ ಪೀಡೆಗೆ ಒಳಗಾಗಿದ್ದರೂ ಸಂಖ್ಯೆಯಲ್ಲಿ ಪಾಂಡವರಿಗಿಂತ ಅಧಿಕವಾಗಿ ಇರುವ ಕಾರಣದಿಂದ ಯುದ್ಧದಲ್ಲಿ ಉತ್ಕಟ ಉತ್ಸಾಹವುಳ್ಳವರಾಗಿ ಓಡುತ್ತಾ ಒಂದೇ ಕ್ಷಣದಲ್ಲಿ ಪಾಂಡವರನ್ನು ಅಲ್ಲೋಲ- ಕಲ್ಲೋಲರನ್ನಾಗಿ ಮಾಡಿದರು.
ತೈರ್ವಧ್ಯಮಾನಾಃ ಕುರುಭಿಃ ಪಾಂಡವಾನಾವತಸ್ಥಿರೇ |

ನಿವಾರ್ಯಮಾಣಾ ಭೀಮೇನ ಪಶ್ಯತೋಃ ಕೃಷ್ಣಪಾರ್ಥಯೋಃ ॥3॥
ಕೌರವರ ಹೊಡೆತಕ್ಕೆ ಒಳಗಾದ ಪಾಂಡವರ ಕಡೆಯವರು ಕೃಷ್ಣಾರ್ಜುನರು ನೋಡುತ್ತಿದ್ದಂತೆಯೇ, ಭೀಮನು ತಡೆಯುತ್ತಿದ್ದರೂ ರಣರಂಗದಲ್ಲಿ ನಿಲ್ಲಲಿಲ್ಲ.
ಕ್ಷಣೇನೈವ ಹಿ ತೇ ರಾಜನ್ ಸಮದೃಶ್ಯಂತ ವಿದ್ರುತಾಃ ॥4॥
ರಾಜನೇ! ಒಂದೇ ಕ್ಷಣದಲ್ಲಿ ಅವರೆಲ್ಲರೂ ರಣರಂಗದಿಂದ ಓಡಿಹೋದರು.
ತತೋ ಧನಂಜಯಃ ಕ್ರುದ್ಧಃ ಕೃಪಂ ಸಹ ಪದಾನುಗೈಃ |
ಅವಾರಯಚ್ಛರೌಘೇಣ ಕೃತವರ್ಮಾಣಮೇವ ಚ ॥5॥
ಅನಂತರ ಕೋಪಗೊಂಡ ಅರ್ಜುನನು ಕೃಪನನ್ನೂ, ಕೃತವರ್ಮನನ್ನು, ಜೊತೆಗಿದ್ದ ಪದಾತಿಗಳನ್ನೂ ತನ್ನ ಬಾಣಗಳ ಸಮೂಹದಿಂದ ತಡೆದನು.
ಶಕುನಿಂ ಸಹದೇವಶ್ಚ ಸಹಸೈನ್ಯಮವಾರಯತ್ ॥6॥
ಸಹದೇವನು ಸೈನ್ಯಸಮೇತನಾದ ಶಕುನಿಯನ್ನು ತಡೆದನು.
ನಕುಲಃ ಪಾರ್ಶ್ವತಃ ಸ್ಥಿತ್ವಾ ಮದ್ರರಾಜಮಯೋಧಯತ್ ॥7॥
ನಕುಲನು ಒಂದು ಬದಿಯಲ್ಲಿ ನಿಂತು ಶಲ್ಯನೊಡನೆ ಯುದ್ಧ ಮಾಡಿದನು.
ದ್ರೌಪದೇಯಾ ನರೇಂದ್ರಾಂಶ್ಚ ಭೂಯಿಷ್ಠಾನ್ ಸಮವಾರಯನ್ |
ದ್ರೋಣಪುತ್ರಂ ಚ ಪಾಂಚಾಲ್ಯಃ ಶಿಖಂಡೀ ಸಮವಾರಯತ್ ॥8॥
ದ್ರೌಪದಿಯ ಮಕ್ಕಳು ಬಹಳವಾದ ರಾಜರನ್ನು ತಡೆದರು. ದ್ರುಪದನ ಮಗನಾದ ಶಿಖಂಡಿಯು ದ್ರೋಣಪುತ್ರ ಅಶ್ವತ್ಥಾಮನನ್ನು ತಡೆದನು.
ಭೀಮಸೇನಸ್ತು ರಾಜಾನಂ ಗದಾಪಾಣಿರವಾರಯತ್ |
ಶಲ್ಯಂ ತು ಸಹ ಸೈನ್ಯೇನ ಕುಂತೀಪುತ್ರೋ ಯುಧಿಷ್ಠಿರಃ ॥9॥
ಭೀಮಸೇನನಾದರೂ ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ದುರ್ಯೋಧನನನ್ನು ತಡೆದನು. ಸೈನ್ಯಸಮೇತನಾದ ಶಲ್ಯನನ್ನು ಧರ್ಮರಾಜನು ತಡೆದನು.
ತತಃ ಸಮಭವದ್ ಯುದ್ಧಂ ಸಂಸಕ್ತಂ ತತ್ರ ತತ್ರ ಹ |
ತಾವಕಾನಾಂ ಪರೇಷಾಂ ಚ ಸಂಗ್ರಾಮೇಷ್ವನಿವರ್ತಿನಾಮ್ ॥10॥
ಅನಂತರ ನಿನ್ನ ಕಡೆಯವರಿಗೂ ಪಾಂಡವರಿಗೂ ಅಲ್ಲಲ್ಲಿ ದ್ವಂದ್ವಯುದ್ಧವು ನಡೆಯಿತು. ಆ ಯೋಧರೆಲ್ಲರೂ ಯುದ್ಧದಲ್ಲಿ ಬೆನ್ನುತೋರಿಸುವವರಾಗಿರಲಿಲ್ಲ.
ತತ್ರ ಪಶ್ಯಾಮಹೇ ಕರ್ಮ ಶಲ್ಯಸ್ಯಾತಿಮಹದ್ರಣೇ |
ಯದೇಕಃ ಸರ್ವಸೈನ್ಯಾನಿ ಪಾಂಡವಾನಾಮಯುಧ್ಯತ ॥11॥
ಆ ಯುದ್ಧದಲ್ಲಿ ಶಲ್ಯನು ಒಬ್ಬಂಟಿಗನಾಗಿ ಪಾಂಡವರ ಸೈನ್ಯದೊಡನೆ ಯುದ್ಧ ಮಾಡಿದ ಮಹತ್ಕರ್ಮವನ್ನು ನಾವು ನೋಡಿದೆವು.
ವ್ಯದೃಶ್ಯತ ತದಾ ಶಲ್ಯೋ ಯುಧಿಷ್ಠಿರಸಮೀಪತಃ |
ಕ್ರೂರಶ್ಚಂದ್ರಮಸೋಽಭ್ಯಾಶೇ ಶನೈಶ್ಚರ ಇವ ಗ್ರಹಃ ॥12॥
ಆಗ ಶಲ್ಯನು ಯುಧಿಷ್ಠಿರನ ಸಮೀಪದಲ್ಲಿ ಕಾಣಿಸಿಕೊಂಡನು. ಅದು ಚಂದ್ರನ ಸನಿಹದಲ್ಲಿ ಕ್ರೂರಸ್ವಭಾವದ ಶನಿಗ್ರಹವು ಕಾಣಿಸಿದ ಹಾಗೆ ಇತ್ತು.
ಪೀಡಯಿತ್ವಾ ತು ರಾಜಾನಂ ಶರೈರಾಶೀವಿಷೋಪಮೈಃ |
ಅಭ್ಯಧಾವತ್ ಪುನರ್ಭೀಮಂ ಶರವರ್ಷೈರವಾಕಿರತ್ ॥13॥
ಶಲ್ಯನು ಧರ್ಮರಾಜನನ್ನು ಸರ್ಪಸದೃಶವಾದ ಬಾಣಗಳಿಂದ ಹೊಡೆದು ಪುನಃ ಭೀಮನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಸ್ಯ ತಲ್ಲಾಘವಂ ದೃಷ್ಟ್ವಾ ತಥೈವ ಚ ಕೃತಾಸ್ತ್ರತಾಮ್ |
ಅಪೂಜಯನ್ನನೀಕಾನಿ ಪರೇಷಾಂ ತಾವಕಾನಿ ಚ ॥14॥
ಶಲ್ಯನ ಅಸ್ತ್ರಪರಿಣತಿಯನ್ನೂ ಹಾಗೂ ಯುದ್ಧಕೌಶಲವನ್ನೂ ನೋಡಿದ ಉಭಯ ಪಕ್ಷದ ಸೈನಿಕರೂ ಕೊಂಡಾಡಿದರು.
ಪೀಡ್ಯಮಾನಾಸ್ತು ಶಲ್ಯೇನ ಪಾಂಡವಾ ಭೃಶವಿಕ್ಷತಾಃ |
ಪ್ರಾದ್ರವಂತ ರಣಂ ಹಿತ್ವಾ ಕ್ರೋಶಮಾನೇ ಯುಧಿಷ್ಠಿರೇ ॥15॥
ಶಲ್ಯನ ಹೊಡೆತಕ್ಕೆ ಒಳಗಾದ ಪಾಂಡವರು ಬಹಳ ಗಾಯಗೊಂಡು ಯುದ್ಧವನ್ನು ನಿಲ್ಲಿಸಿ ದಿಕ್ಕಾಪಾಲಾಗಿ ಓಡಿಹೋದರು. ಯುಧಿಷ್ಠಿರನು ಕೂಗಿ ಕರೆಯುತ್ತಿದ್ದರೂ ಯಾರೂ ನಿಲ್ಲಲಿಲ್ಲ.
ವಧ್ಯಮಾನೇಷ್ವನೀಕೇಷು ಮದ್ರರಾಜೇನ ಪಾಂಡವಃ |
ಅಮರ್ಷವಶಮಾಪನ್ನೋ ಧರ್ಮರಾಜೋ ಯುಧಿಷ್ಠಿರಃ ॥16॥
ಶಲ್ಯನು ಪಾಂಡವರ ಸೈನ್ಯವನ್ನು ಘಾಸಿಗೊಳಿಸಿದಾಗ ಧರ್ಮರಾಜ ಯುಧಿಷ್ಠಿರನು ಬಹಳ ಅಸಹನೆಯನ್ನು ಅನುಭವಿಸಿದನು.
ತತಃ ಪೌರುಷಮಾಸ್ಥಾಯ ಮದ್ರರಾಜಮಪೀಡಯತ್ |
ಜಯೋ ವಾಽಸ್ತು ವಧೋ ವೇತಿ ಕೃತಬುದ್ಧಿರ್ಮಹಾರಥಃ ॥17॥
ಸಮಾಹೂಯಾಬ್ರವೀತ್ ಸರ್ವಾನ್ ಭ್ರಾತೄನ್ ಕೃಷ್ಣಂ ಚ ಪಾಂಡವಃ ॥
ಅನಂತರ ಮಹಾರಥನಾದ ಯುಧಿಷ್ಠಿರನು ಪೌರುಷವನ್ನು ಹೊಂದಿ ಶಲ್ಯನನ್ನು ಹೊಡೆದನು. ಜಯವನ್ನು ಪಡೆಯುವುದು ಅಥವಾ ಮರಣವನ್ನು ಹೊಂದುವುದು ಎಂಬುದಾಗಿ ಧರ್ಮರಾಜನು ನಿಶ್ಚಯವನ್ನು ಮಾಡಿಕೊಂಡಿದ್ದನು. ತನ್ನ ಎಲ್ಲಾ ಸಹೋದರರನ್ನೂ

ಕೃಷ್ಣನನ್ನೂ ಕರೆದು ಈ ಮಾತನ್ನು ಹೇಳಿದನು.
ಯುಧಿಷ್ಠಿರಃ
ಭೀಷ್ಮೋ ದ್ರೋಣಶ್ಚ ಕರ್ಣಶ್ಚ ಯೇ ಚಾನ್ಯೇ ಪೃಥಿವೀಕ್ಷಿತಃ |
ಕೌರವಾರ್ಥೇ ಪರಾಕ್ರಾಂತಾಃ ಸಂಗ್ರಾಮೇ ನಿಧನಂ ಗತಾಃ ||19||
ಯುಧಿಷ್ಠಿರ ಭೀಷ್ಮ, ದ್ರೋಣ, ಕರ್ಣ ಹಾಗೂ ಇನ್ನೂ ಬೇರೆ ರಾಜರುಗಳು ದುರ್ಯೋಧನನಿಗಾಗಿ ಯುದ್ಧದಲ್ಲಿ ಪರಾಕ್ರಮವನ್ನು ಮೆರೆದು ಸತ್ತಿದ್ದಾರೆ.
ಯಥಾಭಾಗಂ ಯಥೋತ್ಸಾಹಂ ಭವಂತಃ ಕೃತಪೌರುಷಾಃ |
ಭಾಗೋಽವಶಿಷ್ಟ ಏವಾಯಂ ಮಮ ಶಲ್ಯೋ ಮಹಾರಥಃ ||20||
ನೀವೆಲ್ಲಾ ನಿಮ್ಮ ನಿಮ್ಮ ಯುದ್ಧೋತ್ಸಾಹಕ್ಕೆ ಅನುಗುಣವಾಗಿ ನಿಮ್ಮ ಪೌರುಷವನ್ನು ತೋರಿಸಿದ್ದೀರಿ. ನನ್ನ ಪಾಲು ಉಳಿದಿದ್ದು, ಮಹಾರಥನಾದ ಶಲ್ಯನು ನನ್ನ ಭಾಗವಾಗಿದ್ದಾನೆ.
ಸೋಽಹಮದ್ಯ ಯುಧಾ ಜೇತುಮ್ ಆಶಂಸೇ ಮದ್ರಕೇಶ್ವರಮ್ |
ಅತ್ರ ಯನ್ಮಾನಸಂ ಸರ್ವಂ ತದ್ವಿತಂ ನಿಗದಾಮಿ ವಃ ||21||
ಅಂತಹ ನಾನು ಇವತ್ತು ಶಲ್ಯನನ್ನು ಯುದ್ಧದಲ್ಲಿ ಗೆಲ್ಲಲು ಬಯಸುತ್ತೇನೆ. ನನ್ನ ಹಿತವಾದ ಮನೋಽಭಿಪ್ರಾಯವನ್ನು ನಿಮ್ಮ ಮುಂದೆ ಹೇಳುತ್ತೇನೆ.
ಚಕ್ರರಕ್ಷಾವಿಮೌ ಶೂರೌ ಮಮ ಮಾದ್ರವತೀಸುತೌ |
ಅಜಯ್ಯೌ ವಾಸವೇನಾಪಿ ಸಮರೇ ವೀರಸಮ್ಮತೌ ||22||
ಮಾದ್ರಿಯ ಪುತ್ರರಾದ ನಕುಲ-ಸಹದೇವರು ನನ್ನ ರಥದ ಚಕ್ರರಕ್ಷಕರಾಗುವರು. ಇವರಿಬ್ಬರನ್ನು ಯುದ್ಧದಲ್ಲಿ ಗೆಲ್ಲಲು ಇಂದ್ರನಿಗೂ ಅಸಾಧ್ಯವಾಗುವುದು ಎಂಬುದಾಗಿ ವೀರರಿಂದ ಪರಿಗಣಿತರಾಗಿದ್ದಾರೆ.
ಸಾಧ್ವಿಮೌ ಮಾತುಲಂ ಯುದ್ಧೇ ಕ್ಷತ್ರಧರ್ಮಪುರಸ್ಕೃತೌ |
ಮದರ್ಥೇ ಪ್ರತಿಯುಧ್ಯೇತಾಂ ಮಾನಾರ್ಹೌ ಸತ್ಯಸಂಗರೌ ||23||
ಸಾಧುಸ್ವಭಾವದ ಇವರೀರ್ವರೂ ಕ್ಷತ್ರಿಯಧರ್ಮವನ್ನು ಗೌರವಿಸಿ, ನನಗಾಗಿ ಸೋದರಮಾವನ ಜೊತೆಗೇ ಯುದ್ಧಕ್ಕೆ ಸಿದ್ಧರಾಗಿದ್ದಾರೆ. ಯಥಾರ್ಥವಾದ ಯುದ್ಧವನ್ನು ಮಾಡುವ ಇವರು ಗೌರವಕ್ಕೆ ಪಾತ್ರರಾಗಿದ್ದಾರೆ.
ಮಾಂ ವಾ ಶಲ್ಯೋ ರಣೇ ಹಂತಾ ತಂ ವಾಽಹಂ ಭದ್ರಮಸ್ತು ವಃ |
ಇತಿ ಸತ್ಯಾಮಿಮಾಂ ವಾಚಂ ಲೋಕವೀರಾ ನಿಬೋಧತ ||24||
ಯುದ್ಧದಲ್ಲಿ ಒಂದೋ ನನ್ನನ್ನು ಶಲ್ಯನು ಕೊಲ್ಲಬೇಕು ಅಥವಾ ನಾನು ಅವನನ್ನು ಕೊಲ್ಲಬೇಕು. ನಿಮಗೆ ಒಳ್ಳೆಯದಾಗಲಿ. ಈ ಸತ್ಯವಾದ ಮಾತನ್ನು ಲೋಕವೀರರೆನಿಸಿದ ನೀವೆಲ್ಲಾ ತಿಳಿದುಕೊಳ್ಳಿ.
ಯೋತ್ಸ್ಯೇಽಹಂ ಮಾತುಲೇನಾದ್ಯ ಕ್ಷತ್ರಧರ್ಮೇಣ ಪಾರ್ಥಿವಾಃ |
ಸ್ವಮಂಶಮಭಿಸಂಧಾಯ ವಿಜಯಾಯೇತರಾಯ ಚ ||25||
ರಾಜರೇ! ನಾನಿವತ್ತು ಕ್ಷತ್ರಿಯಧರ್ಮಕ್ಕನುಸಾರವಾಗಿ ನನ್ನ ಭಾಗದ ಕರ್ತವ್ಯವನ್ನು ಗಮನದಲ್ಲಿಟ್ಟುಕೊಂಡು ನನ್ನ ಸೋದರಮಾವನ ಜೊತೆಗೆ ಹೋರಾಡುತ್ತೇನೆ. ವಿಜಯವೋ ಅಥವಾ ಸೋಲೋ ಆಗಬಹುದು.
ತಸ್ಯ ಹ್ಯಭ್ಯಧಿಕಂ ಶಸ್ತ್ರಂ ಸರ್ವೋಪಕರಣಾನಿ ಚ |
ಸಂಯುಜ್ಯಂತಾಂ ರಥೇ ಕ್ಷಿಪ್ರಂ ಶಾಸ್ತ್ರವದ್ ರಥಯೋಜಕೈಃ ||26||
ರಥವನ್ನು ಸನ್ನದ್ಧಗೊಳಿಸುವವರು ಉತ್ತಮೋತ್ತಮವಾದ ಶಸ್ತ್ರಗಳನ್ನು, ಇತರ ಸಾಮಗ್ರಿಗಳನ್ನು ರಥದಲ್ಲಿ ಶಾಸೊತ್ರೋಕ್ತರೀತಿಯಲ್ಲಿ ಬೇಗನೆ ಜೋಡಿಸಲಿ.
ಶೈನೇಯೋ ದಕ್ಷಿಣಂ ಪಕ್ಷಂ ಧೃಷ್ಟದ್ಯುಮ್ನಸ್ತಥೋತ್ತರಮ್ |
ಪೃಷ್ಠಗೋಪೋ ಭವತ್ವದ್ಯ ಮಮ ಪಾರ್ಥೋ ಧನಂಜಯಃ ||27||
ಸಾತ್ಯಕಿಯು ನನ್ನ ಬಲಭಾಗದ ರಕ್ಷಕನಾಗಿರಲಿ. ಧೃಷ್ಟದ್ಯುಮ್ನನು ಎಡಭಾಗದ ರಕ್ಷಕನಾಗಿರಲಿ. ಅರ್ಜುನನು ಇಂದು ನನ್ನ ಹಿಂಭಾಗದ ರಕ್ಷಕನಾಗಲಿ.
ಪುರಸ್ಸರೋ ಮಮಾದ್ಯಾಸ್ತು ಭೀಮಃ ಶಸ್ತ್ರಭೃತಾಂ ವರಃ |
ಏವಮಭ್ಯಧಿಕಃ ಶಲ್ಯಾದ್ ಭವಿಷ್ಯಾಮಿ ಮಹಾಮೃಧೇ ||28||
ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಭೀಮಸೇನನು ಎದುರುಗಡೆ ಇರಲಿ. ಹೀಗೆ ನಾನು ಈ ಮಹಾಯುದ್ಧದಲ್ಲಿ ಶಲ್ಯನಿಗಿಂತ ಅಧಿಕನಾಗುತ್ತೇನೆ.
ಸಂಜಯಃ
ಏವಮುಕ್ತಾಸ್ತಥಾ ಚಕ್ರುಃ ತತೋ ರಾಜ್ಞಃ ಪ್ರಿಯೈಷಿಣಃ ||29||
ಸಂಜಯ ಹೀಗೆ ರಾಜನು ಹೇಳಿದಾಗ ಅವನಿಗೆ ಪ್ರಿಯವಾದುದನ್ನು ಮಾಡುವವರಾಗಿ ಹಾಗೆಯೇ ಮಾಡಿದರು.
ತತಃ ಪ್ರಹರ್ಷಃ ಸೈನ್ಯಾನಾಂ ಪುನರಾಸೀತ್ ತದಾ ನೃಪ |
ಪಾಂಚಾಲಾನಾಂ ಸೋಮಕಾನಾಂ ಮತ್ಸ್ಯಾನಾಂ ಚ ಮಹಾತ್ಮನಾಮ್ ||
ರಾಜನೇ! ಅನಂತರ ಮಹಾತ್ಮರಾದ ಪಾಂಚಾಲರ, ಸೋಮಕರ, ಮಾತ್ಸ್ಯರ ಸೈನ್ಯಗಳಲ್ಲಿ ಪುನಃ ಸಂತೋಷವು ಉಂಟಾಯಿತು.
ಪ್ರತಿಜ್ಞಾತಂ ಚ ಸಂಗ್ರಾಮೇ ಧರ್ಮರಾಜಸ್ಯ ಪೂಜಯನ್ ||31||
ಅವರೆಲ್ಲರೂ ರಣರಂಗದಲ್ಲಿ ಧರ್ಮರಾಜನು ಮಾಡಿದ ಪ್ರತಿಜ್ಞೆಯನ್ನು ಸ್ವೀಕರಿಸಿದರು.

ತತಃ ಶಂಖಾಂಶ್ಚ ಭೇರೀಶ್ಚ ಶತಶಶ್ಚೈವ ಪುಷ್ಕರಾನ್ |
ಅವಾದಯಂತ ಪಾಂಚಾಲಾಃ ಸಿಂಹನಾದಾಂಶ್ಚ ನೇದಿರೇ ||32||
ಅನಂತರ ಪಾಂಚಾಲರು ಶಂಖಗಳನ್ನೂ, ಭೇರಿಗಳನ್ನೂ, ಪುಷ್ಕರ ವಾದ್ಯಗಳನ್ನೂ ನುಡಿಸಿದರು ಮತ್ತು ಸಿಂಹನಾದವನ್ನು ಮಾಡಿದರು.
ತೇಽಭ್ಯಧಾವಂಶ್ಚ ಸಂರಬ್ಧಾ ಮದ್ರರಾಜಂ ತರಸ್ವಿನಮ್ ||33||
ಮಹತಾ ಹರ್ಷಜೇನಾಥ ನಾದೇನ ಕುರುನಂದನ |
ಹ್ರಾದೇನ ಗಜಘಂಟಾನಾಂ ಶಂಖಾನಾಂ ನಿನದೇನ ಚ ||34||
ತೂರ್ಯಶಬ್ದೇನ ಮಹತಾ ನಾದಯಂತಶ್ಚ ಮೇದಿನೀಮ್ ||35||
ಅವರು ರೋಷಯುಕ್ತರಾಗಿ ವೇಗವುಳ್ಳ ಶಲ್ಯನ ಮೇಲೆ ಎರಗಿದರು. ಕುರುನಂದನನೇ! ಮಹಾ ಆನಂದದ ಶಬ್ದದಿಂದ, ಆನೆಗಳ ಗಂಟೆಗಳ ಸ್ವರದಿಂದ, ಶಂಖಗಳ ಧ್ವನಿಯಿಂದ ಉಂಟಾದ ಬಹಳವಾದ ವಾದ್ಯಗಳ ಘೋಷದಿಂದ ಭೂಮಿಯನ್ನೆಲ್ಲಾ ನಾದಮಯವನ್ನಾಗಿ ಮಾಡುತ್ತಾ ಶಲ್ಯನನ್ನು ಎದುರಿಸಿದರು.
ತಾನ್ ಪ್ರತ್ಯಗೃಹ್ಣಾತ್ ಪುತ್ರಸ್ತೇ ಮದ್ರರಾಜಶ್ಚ ವೀರ್ಯವಾನ್ |
ಮಹಾಮೇಘಾನಿವ ಬಹೂನ್ ಶೈಲೌ ದ್ವೌ ತೋಯದಾಗಮೇ ||36||
ಹಾಗೆ ಬಂದ ಪಾಂಡವರ ಸೈನ್ಯವನ್ನು ನಿನ್ನ ಮಗನಾದ ದುರ್ಯೋಧನ ಮತ್ತು ಶಲ್ಯನು ತಡೆಹಿಡಿದರು. ಮಳೆಗಾಲದ ಮಹಾಮೇಘಗಳನ್ನು ಎರಡು ಪರ್ವತಗಳು ತಡೆದಂತೆ ಇತ್ತು.
ಶಲ್ಯಸ್ತು ಸಮರಶ್ಲಾಘೀ ಧರ್ಮರಾಜಮರಿಂದಮಮ್ |
ವವರ್ಷ ಶರವರ್ಷೇಣ ಮಘವಾನಿವ ಪರ್ವತಮ್ ||37||
ಯುದ್ಧದಲ್ಲಿ ಪರಮಾಸಕ್ತನಾದ ಶಲ್ಯನಾದರೂ ಶತ್ರುನಾಶಕನಾದ ಧರ್ಮರಾಜನ ಮೇಲೆ ಬಾಣಗಳ ಮಳೆಗೆರೆದನು. ಇಂದ್ರನು ಪರ್ವತಗಳ ಮೇಲೆ ಮಳೆಸುರಿಸಿದಂತಿತ್ತು.
ತಥೈವ ಕುರುರಾಜೋಽಪಿ ಪ್ರಗೃಹ್ಯ ರುಚಿರಂ ಧನುಃ |
ದ್ರೋಣೋಪದೇಶಾನ್ ವಿವಿಧಾನ್ ದರ್ಶಯಾನೋ ಮಹಾಮನಾಃ ||
ವವರ್ಷ ಶರವರ್ಷಾಣಿ ಚಿತ್ರಂ ಲಘು ಚ ಸುಷ್ಠು ಚ ||39||
ಹಾಗೆಯೇ ಬಹಳ ಮನೋಸ್ಥೈರ್ಯವುಳ್ಳ ಯುಧಿಷ್ಠಿರನೂ ಸುಂದರವಾದ ಬಿಲ್ಲನ್ನು ಎತ್ತಿಕೊಂಡು ದ್ರೋಣಾಚಾರ್ಯರು ಕಲಿಸಿಕೊಟ್ಟ ಅನೇಕ ಅಸ್ತ್ರವಿದ್ಯೆಗಳನ್ನು ತೋರಿಸಿದನು. ಸುಂದರವಾದ ಚಿತ್ರವಿಚಿತ್ರವಾದ ಶೀಘ್ರಗಾಮಿಗಳಾದ ಬಾಣಗಳ ಮಳೆಯನ್ನೇ ಸುರಿಸಿದನು.
ನ ಚಾಸ್ಯ ವಿವರಂ ಕಶ್ಚಿದ್ ದದರ್ಶ ಚರತೋ ರಣೇ ||40||
ರಣರಂಗದಲ್ಲಿ ಸಂಚರಿಸುತ್ತಿದ್ದ ಯುಧಿಷ್ಠಿರನ ಯುದ್ಧದಲ್ಲಿ ಯಾರಿಗೂ ಸ್ವಲ್ಪ ಲೋಪವೂ ಕಾಣಿಸಲಿಲ್ಲ. ನಿರಂತರವಾಗಿ ಯುದ್ಧ ಮಾಡುತ್ತಿದ್ದನು.
ತಾವುಭೌ ವಿವಿಧೈರ್ಬಾಣೈಃ ತತಕ್ಷಾತೇ ಪರಸ್ಪರಮ್ |
ಶಾರ್ದೂಲಾವಾಮಿಷಪ್ರೇಪ್ಸೂ ಪರಾಕ್ರಾಂತಾವಿವಾಹವೇ ||41||
ಮಾಂಸವನ್ನು ಬಯಸಿರುವ ಎರಡು ಸಿಂಹಗಳಂತೆ ಅವರಿಬ್ಬರೂ ವಿವಿಧ ರೀತಿಯ ಬಾಣಗಳಿಂದ ಪರಸ್ಪರವಾಗಿ ಗಾಯಗೊಳಿಸಿದರು. ಅವರಿಬ್ಬರೂ ಯುದ್ಧದಲ್ಲಿ ಮಹಾಪರಾಕ್ರಮವನ್ನು ತೋರಿಸುತ್ತಿದ್ದರು.
ಭೀಮಸ್ತು ರಣಶೌಂಡೇನ ತವ ಪುತ್ರೇಣ ಸಂಗತಃ ||42||
ಯುದ್ಧನಿಪುಣನಾದ ನಿನ್ನ ಮಗ ದುರ್ಯೋಧನನ ಜೊತೆಗೆ ಭೀಮನು ಯುದ್ಧದಲ್ಲಿ ಒಟ್ಟಾದನು.
ಪಾಂಚಾಲ್ಯಃ ಸಾತ್ಯಕಿಶ್ಚೈವ ತಥಾ ಮಾದ್ರೀಸುತಾವುಭೌ |
ಶಕುನಿಪ್ರಮುಖಾನ್ ವೀರಾನ್ ಪ್ರತ್ಯಗೃಹ್ಣನ್ ಸಮಂತತಃ ||43||
ಧೃಷ್ಟದ್ಯುಮ್ನ, ಸಾತ್ಯಕಿ ಮತ್ತು ನಕುಲ-ಸಹದೇವರು ಶಕುನಿ ಮೊದಲಾದ ವೀರರನ್ನು ಸುತ್ತಲೂ ಎದುರುಗೊಂಡರು.
ತದಾಽಽಸೀತ್ ತುಮುಲಂ ಯುದ್ಧಂ ಪುನರೇವ ಜಯೈಷಿಣಾಮ್ |
ತಾವಕಾನಾಂ ಪರೇಷಾಂ ಚ ರಾಜನ್ ದುರ್ಮಂತ್ರಿತೇ ತವ ||44||
ಆಗ ಮತ್ತೆ ಜಯಕಾಂಕ್ಷಿಗಳಾದ ಅವರಲ್ಲಿ ಘೋರವಾದ ಯುದ್ಧವು ನಡೆಯಿತು. ರಾಜನೇ! ನಿನ್ನ ದುರಾಲೋಚನೆಯಿಂದ ಆರಬ್ಧವಾದ ಯುದ್ಧವು ನಿನ್ನವರು ಮತ್ತು ಪಾಂಡವರ ಮಧ್ಯೆ ಘೋರವಾಗಿ ನಡೆಯಿತು.
ದುರ್ಯೋಧನಸ್ತು ಭೀಮಸ್ಯ ಶರೇಣಾನತಪರ್ವಣಾ |
ಚಿಚ್ಛೇದೋದ್ದಿಶ್ಯ ಸಂಗ್ರಾಮೇ ಧ್ವಜಂ ಹೇಮವಿಭೂಷಿತಮ್ ||45||
ಯುದ್ಧದಲ್ಲಿ ದುರ್ಯೋಧನನು ಬಗ್ಗಿದ ಸಂಧಿಗಳುಳ್ಳ ಬಾಣದಿಂದ ಭೀಮನ ಬಂಗಾರದಿಂದ ಅಲಂಕೃತವಾದ ಧ್ವಜವನ್ನು ತುಂಡರಿಸಿದನು.
ಸಕಿಂಕಿಣೀಕಜಾಲೇನ ಮಹತಾ ಚಾರುದರ್ಶನಃ |
ಪಪಾತ ರುಚಿರಃ ಸಿಂಹೋ ಭೀಮಸೇನಸ್ಯ ಪಶ್ಯತಃ ||46||
ಯುದ್ಧದಲ್ಲಿ ಭೀಮನು ನೋಡುತ್ತಿದ್ದಂತೆಯೇ ಸುಂದರವಾದ ಧ್ವಜವು ಸುಂದರವಾಗಿ ಸಿಂಹದಂತೆ ಶಬ್ದಮಾಡುತ್ತಿದ್ದ ಘಂಟೆಗಳ ಜೊತೆಗೆ ಕೆಳಗೆ ಬಿತ್ತು.
ಪುನಶ್ಚಾಸ್ಯ ಧನುಶ್ಚಿತ್ರಂ ಗಜರಾಜಕರೋಪಮಮ್ |

ಕ್ಷುರೇಣ ಶಿತಧಾರೇಣ ಪ್ರಚಕರ್ತ ನರಾಧಿಪಃ ॥47॥
ರಾಜ ದುರ್ಯೋಧನನು ಮತ್ತೆ ಪುನಃ ಭೀಮನ ಆನೆಯ ಸೊಂಡಿಲಿನಂತಿದ್ದ ಸುಂದರವಾದ ಬಿಲ್ಲನ್ನು ಹರಿತವಾದ ಅಲಗುಗಳುಳ್ಳ ಕತ್ತಿಯಿಂದ ಕತ್ತರಿಸಿದನು.
ಸಂಛಿನ್ನಧನ್ವಾ ತೇಜಸ್ವೀ ರಥಶಕ್ತ್ಯಾ ಸುತಂ ತವ |
ಬಿಭೇದೋರಸಿ ವಿಕ್ರಮ್ಯ ರಥೋಪಸ್ಥ ಉಪಾವಿಶತ್ ॥48॥
ಬಿಲ್ಲು ಮುರಿದುಹೋಗಲು ತೇಜಸ್ವಿಯಾದ ಭೀಮನು ಪರಾಕ್ರಮದಿಂದ ರಥಶಕ್ತಿ ಎಂಬ ಆಯುಧದಿಂದ ನಿನ್ನ ಮಗನಾದ ದುರ್ಯೋಧನನ ಎದೆಗೆ ಹೊಡೆದನು. ದುರ್ಯೋಧನನು ರಥದ ಮೇಲೆಯೇ ಕುಸಿದುಬಿದ್ದನು.
ತಸ್ಮಿನ್ ಮೋಹಮನುಪ್ರಾಪ್ತೇ ಪುನರೇವ ವೃಕೋದರಃ |
ಯಂತುರೇವ ಶಿರಃ ಕಾಯಾತ್ ಕ್ಷುರಪ್ರೇಣಾಹರತ್ ತದಾ ॥49॥
ದುರ್ಯೋಧನನು ಮೂರ್ಛೆಹೊಂದಿದಾಗ ಭೀಮನು ಪುನಃ ಕ್ಷುರಪ್ರ ಸಾಧನದಿಂದ ಸಾರಥಿಯ ತಲೆಯನ್ನು ಕಡಿದನು.
ಹತಸೂತಾ ಹಯಾಸ್ತಸ್ಯ ರಥಮಾದಾಯ ಭಾರತ |
ವ್ಯದ್ರವಂತ ದಿಶೋ ರಾಜನ್ ಹಾಹಾಕಾರಸ್ತತೋಽಭವತ್ ॥50॥
ಭಾರತನೇ! ರಾಜನೇ! ಸಾರಥಿಯು ಸತ್ತುಬಿದ್ದಾಗ ರಥದ ಕುದುರೆಗಳು ರಥವನ್ನು ಎಳೆದುಕೊಂಡು ದಿಕ್ಕಾಪಾಲಾಗಿ ಓಡಿದವು. ಅದರಿಂದ ಹಾಹಾಕಾರವು ಉಂಟಾಯಿತು.
ತಮಭ್ಯಧಾವಂಸ್ತತ್ರಾಣಾರ್ಥಂ ದ್ರೋಣಪುತ್ರೋ ಮಹಾರಥಃ |
ಕೃಪಶ್ಚ ಕೃತವರ್ಮಾ ಚ ಪುತ್ರಂ ತೇಽಭಿಪರೀಪ್ಸವಃ ॥51॥
ಅವನ ರಕ್ಷಣೆಗಾಗಿ ಮಹಾರಥನಾದ ಅಶ್ವತ್ಥಾಮನು ಓಡಿಬಂದನು. ನಿನ್ನ ಮಗನನ್ನು ರಕ್ಷಿಸುವ ಇಚ್ಛೆಯಿಂದ ಕೃಪ, ಕೃತವರ್ಮ ಮೊದಲಾದವರು ಬಂದರು.
ತಸ್ಮಿನ್ ವಿಲುಲಿತೇ ಸೈನ್ಯೇ ತ್ರಸ್ತಾಸ್ತಸ್ಯ ಪದಾನುಗಾಃ |
ಗಾಂಡೀವಧನ್ವಾ ವಿಷ್ಫಾರ್ಯ ಧನುಸ್ತಾನಹನಚ್ಛರೈಃ ॥52॥
ಆ ದಿಕ್ಕಾಪಾಲಾದ ಸೈನ್ಯದಲ್ಲಿ ದುರ್ಯೋಧನನ ಪದಾತಿಗಳು ಬಹಳ ಭಯಗ್ರಸ್ಥರಾದರು. ಹೀಗೆ ಹೆದರಿದ ಪದಾತಿಗಳನ್ನು ಗಾಂಡೀವಧಾರಿಯಾದ ಅರ್ಜುನನು ತನ್ನ ಧನುಸ್ಸನ್ನು ಟೇಂಕರಿಸಿ ಬಾಣಗಳನ್ನು ಬಿಟ್ಟು ಸಾಯಿಸಿದನು.
ಯುಧಿಷ್ಠಿರಸ್ತು ಮದ್ರೇಶಮಭ್ಯಧಾವದಮರ್ಷಿತಃ |
ಸ್ವಯಂ ಸಂಚೋದಯನ್ನಶ್ವಾನ್ ದಂತವರ್ಣಾನ್ ಮನೋಜವಾನ್ ॥
ಸಹನೆ ಕಳೆದುಕೊಂಡಿದ್ದ ಯುಧಿಷ್ಠಿರನು ಶಲ್ಯನನ್ನು ಎದುರಿಸಿದನು. ದಂತದ ಹಾಗೆ ಶ್ವೇತವರ್ಣದ ಮನೋವೇಗವುಳ್ಳ ಕುದುರೆಗಳನ್ನು ಶಲ್ಯನ ರಥದ ಸನಿಹಕ್ಕೆ ಕಳುಹಿಸು ಎಂಬುದಾಗಿ ತನ್ನ ಸಾರಥಿಗೆ ಆದೇಶ ಮಾಡುತ್ತಾ ಶಲ್ಯನ ಸಮೀಪಕ್ಕೆ ಬಂದನು.
ತತ್ರಾದ್ಭುತಮಪಶ್ಯಾಮ ಕುಂತೀಪುತ್ರೇ ಯುಧಿಷ್ಠಿರಃ |
ಪುರಾ ಭೂತ್ವಾ ಮೃದುರ್ದಾಂತೋ ಯತ್ ತದಾ ದಾರುಣೋಭವತ್ ॥
ನಾವು ಅಲ್ಲೊಂದು ಅದ್ಭುತವನ್ನು ನೋಡಿದೆವು. ಹಿಂದೆ ಮೃದುಸ್ವಭಾವದವನಾಗಿ ಇಂದ್ರಿಯನಿಗ್ರಹವನ್ನು ಕಾಪಾಡಿಕೊಂಡಿದ್ದ ಯುಧಿಷ್ಠಿರನು ಶಲ್ಯನ ಸಮೀಪಕ್ಕೆ ಬಂದಾಗ ಬಹಳ ಕ್ರೂರಿಯಾದನು. ಇದೇ ಆ ಅದ್ಭುತ.
ವಿವೃತಾಕ್ಷಸ್ತು ಕೌಂತೇಯೋ ದೀಪ್ಯಮಾನಸ್ತು ಮನ್ಯುನಾ |
ಚಿಚ್ಛೇದ ಯೋಧಾನ್ ನಿಶಿತೈಃ ಶರೈಃ ಶತಸಹಸ್ರಶಃ ॥55॥
ಧರ್ಮರಾಜನು ಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತಾ ಪ್ರಕಾಶಿಸುತ್ತಿದ್ದನು. ಹರಿತವಾದ ಬಾಣಗಳನ್ನು ಪ್ರಯೋಗಿಸಿ ನೂರಾರು-ಸಾವಿರಾರು ಸಂಖ್ಯೆಯಲ್ಲಿ ಯೋಧರನ್ನು ಸಂಹರಿಸಿದನು.
ಯಾಂ ಯಾಂ ಪ್ರತ್ಯುದ್ಯಯೌ ಸೇನಾಂ ತಾಂ ತಾಂ ಜ್ಯೇಷ್ಠಸ್ತು ಪಾಂಡವಃ|
ಶರೈರಪಾತಯದ್ ರಾಜನ್ ಗಿರೀನ್ ವಜ್ರೈರಿವೋತ್ತಮೈಃ ॥56॥
ರಾಜನೇ! ಇಂದ್ರನು ಎದುರಿಗೆ ಬಂದ ಪರ್ವತಗಳನ್ನೆಲ್ಲಾ ತನ್ನ ವಜ್ರಾಯುಧದಿಂದ ಪುಡಿಮಾಡಿದ. ಅದೇ ರೀತಿಯಲ್ಲಿ ಧರ್ಮರಾಜನೂ ಕೂಡ ಯಾವ ಯಾವ ಸೈನ್ಯವು ಎದುರಿಗೆ ಬರುತ್ತಿತ್ತೋ ಆ ಆ ಸೇನೆಯನ್ನು ಬಾಣಗಳಿಂದ ಕೆಳಗೆ ಬೀಳಿಸಿದನು.
ಸಾಶ್ವಸೂತಧ್ವಜವರಾನ್ ರಥಿನೋಽಪಾತಯದ್ ಬಹೂನ್ |
ಆಕ್ರೀಡದೇಕೋ ಬಲವಾನ್ ಪವನಸ್ತೋಯದೈರಿವ ॥57॥
ಯುಧಿಷ್ಠಿರನು ಒಬ್ಬಂಟಿಯಾಗಿಯೇ ಅಶ್ವ-ಸಾರಥಿ-ಧ್ವಜ ಸಹಿತವಾಗಿ ಅನೇಕ ರಥಿಕಯೋಧರನ್ನು ಸಾಯಿಸಿದ. ಹೀಗೆ ಜೋರಾದ ಗಾಳಿಯು ಮೋಡಗಳೊಡನೆ ಆಟ ಆಡುವಂತೆ ತಾನೂ ಆಟವಾಡಿದ.
ಸಾಶ್ವಾರೋಹಾಂಶ್ಚ ತುರಗಾನ್ ಪತ್ತೀನ್ ನೈಕಸಹಸ್ರಶಃ |
ವ್ಯಪೋಥಯತ ಸಂಗ್ರಾಮೇ ಕ್ರುದ್ಧೋ ರುದ್ರಃ ಪಶೂನಿವ ॥58॥
ಹಾಗೆಯೇ ಕ್ರುದ್ಧನಾದ ಯುಧಿಷ್ಠಿರನು ಅನೇಕ ಸಂಖ್ಯೆಯ ಅಶ್ವಾರೋಹಿಗಳನ್ನು, ಕುದುರೆಗಳನ್ನು, ಪದಾತಿಗಳನ್ನು ಯುದ್ಧದಲ್ಲಿ ಪುಡಿಗೈದ. ಇದು ಕ್ರುದ್ಧನಾದ ರುದ್ರನು ಪಶುಗಳನ್ನು ಸದೆಬಡಿಯುವಂತೆ ಇತ್ತು.
ಶೂನ್ಯಮಾಯೋಧನಂ ಕೃತ್ವಾ ಶರವರ್ಷೈಃ ಸಮಂತತಃ |
ಅಭ್ಯಧಾವತ ಮದ್ರೇಶಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥59॥
ಹೀಗೆ ಎಲ್ಲಾ ಕಡೆಯೂ ಬಾಣಗಳ ಮಳೆಯನ್ನು ಸುರಿಸಿ, ರಣರಂಗವನ್ನು ಖಾಲಿಮಾಡಿ, ಶಲ್ಯ! ನಿಲ್ಲು! ಎಂದು ಹೇಳುತ್ತಾ ಶಲ್ಯನ ಕಡೆಗೆ ಧಾವಿಸಿದನು.

ತಸ್ಯ ತಚ್ಚರಿತಂ ದೃಷ್ಟ್ವಾ ಸಂಗ್ರಾಮೇ ಭೀಮಕರ್ಮಣಃ |
ವಿತ್ರೇಸುಸ್ತಾವಕಾಃ ಸರ್ವೇ ಶಲ್ಯಸ್ತ್ವೇನಂ ಸಮಭ್ಯಯಾತ್ ||60||
ಭಯಂಕರವಾಗಿ ಹೋರಾಡುತ್ತಿದ್ದ ಯುಧಿಷ್ಠಿರನ ಯುದ್ಧದಲ್ಲಿ ಆ ಕಾರ್ಯವನ್ನು ನೋಡಿ ನಿನ್ನ ಕಡೆಯವರೆಲ್ಲಾ ಭಯಗ್ರಸ್ಥರಾದರು. ಇಂತಹ ಧರ್ಮರಾಜನನ್ನು ಶಲ್ಯನು ಎದುರಿಸಿದನು.
ತತಸ್ತು ತೌ ಸುಸಂರಬ್ಧೌ ಪ್ರಧ್ಮಾಪ್ಯ ಸಲಿಲೋದ್ಭವೌ |
ಸಮಾಹೂಯ ತದಾಽನ್ಯೋನ್ಯಂ ಭರ್ತ್ಸಯಂತೌ ಸಮೀಯತುಃ ||61||
ಅನಂತರ ಮಹಾಗರ್ವಿಷ್ಠರಾದ ಶಲ್ಯ-ಯುಧಿಷ್ಠಿರರು ಶಂಖನಾದವನ್ನು ಮಾಡಿದರು. ಪರಸ್ಪರ ಸಂಬೋಧಿಸಿಕೊಂಡು ಬೈಯ್ದುಕೊಳ್ಳುತ್ತಾ ಸಮೀಪಿಸಿದರು.
ಶಲ್ಯಸ್ತು ಶರವರ್ಷೇಣ ಯುಧಿಷ್ಠಿರಮಪೀಡಯತ್ |
ಮದ್ರರಾಜಂ ಚ ಕೌಂತೇಯಃ ಶರವರ್ಷೈರವಾಕಿರತ್ ||62||
ಶಲ್ಯನಾದರೂ ಬಾಣಗಳ ಮಳೆಗರೆದು ಯುಧಿಷ್ಠಿರನನ್ನು ಪೀಡಿಸಿದನು. ಹಾಗೆಯೇ ಯುಧಿಷ್ಠಿರನೂ ಶಲ್ಯನ ಮೇಲೆ ಬಾಣಗಳ ಸುರಿಮಳೆಯನ್ನು ಸುರಿಸಿದನು.
ವ್ಯದೃಶ್ಯೇತಾಂ ತದಾ ರಾಜನ್ ಕಂಕಪತ್ರಿಭಿರಾಹವೇ |
ಉದ್ಭಿನ್ನರುಧಿರೌ ತತ್ರ ಮದ್ರರಾಜಯುಧಿಷ್ಠಿರೌ ||63||
ರಾಜನೇ! ಆಗ ಯುದ್ಧದಲ್ಲಿ ಕಂಕಪತ್ರವುಳ್ಳ ಬಾಣಗಳಿಂದಾಗಿ ಧರ್ಮರಾಜ ಮತ್ತು ಶಲ್ಯರಿಬ್ಬರ ದೇಹದಿಂದಲೂ ರಕ್ತವು ಕೋಡಿ ಹರಿಯಿತು.
ಪುಷ್ಪಿತಾವಿವ ರಾಜಂತೌ ವನೇ ಶಾಲ್ಮಲಿಕಿಂಶುಕೌ |
ದೀಪ್ಯಮಾನೌ ಮಹಾತ್ಮಾನೌ ಪ್ರಾಣದ್ಯೂತೇಷು ದುರ್ಮದೌ ||64||
ಕಾಡಿನಲ್ಲಿ ಹೂಬಿಟ್ಟ ಶಾಲ್ಮಲೀ ವೃಕ್ಷ ಮತ್ತು ಪಲಾಶವೃಕ್ಷದ ಹಾಗೆ ಶೋಭಿಸುತ್ತಿದ್ದರು. ಪ್ರಾಣವನ್ನೇ ಒತ್ತೆಯಿಟ್ಟು ಗರ್ವದಿಂದ ಹೋರಾಡುತ್ತಿದ್ದ ಆ ಮಹಾತ್ಮರು ಆ ರೀತಿಯಲ್ಲಿ ಪ್ರಕಾಶಿಸುತ್ತಿದ್ದರು.
ದೃಷ್ಟ್ವಾ ಸೈನ್ಯಾನಿ ಸರ್ವಾಣಿ ನಾಧ್ಯವಸ್ಯಂಸ್ತಯೋರ್ಜಯಮ್ |
ಹತ್ವಾ ಮದ್ರಾಧಿಪಂ ಪಾರ್ಥೋ ಭೋಕ್ಷ್ಯತೇಽದ್ಯ ವಸುಂಧರಾಮ್ ||
ಶಲ್ಯೋ ವಾ ಪಾಂಡವಂ ಹತ್ವಾ ದದ್ಯಾದ್ ದುರ್ಯೋಧನಾಯ ಗಾಮ್ |
ಇತಿ ವಾ ನಿಶ್ಚಯೋ ನಾಭೂದ್ ಯೋಧಾನಾಂ ತತ್ರ ಭಾರತ ||66||
ಭರತವಂಶೋದ್ಭವನೇ! ಎಲ್ಲಾ ಸೈನ್ಯಗಳು ಈ ಯುದ್ಧವನ್ನು ನೋಡಿ ಅವರಿಬ್ಬರಲ್ಲಿ ಜಯವನ್ನು ನಿರ್ಣಯಿಸಲು ಅಸಮರ್ಥವಾದವು. ಯುಧಿಷ್ಠಿರನು ಶಲ್ಯನನ್ನು ಕೊಂದು ಭೂಮಿಯನ್ನು ಭೋಗಿಸುತ್ತಾನೋ? ಅಥವಾ ಶಲ್ಯನೇ ಧರ್ಮರಾಜನನ್ನು ಸಾಯಿಸಿ ದುರ್ಯೋಧನನಿಗೆ ಭೂಮಿಯನ್ನು ಕೊಡಿಸುತ್ತಾನೆಯೋ? ಈ ರೀತಿಯಲ್ಲಿ ಯೋಧರು ಯಾವುದನ್ನೂ ನಿರ್ಣಯ ಮಾಡಲು ಅಸಮರ್ಥರಾದರು.
ಪ್ರದಕ್ಷಿಣಮಭೂತ್ ಸರ್ವಂ ಧರ್ಮರಾಜಸ್ಯ ಯುಧ್ಯತಃ |
ತತಃ ಶರಶತಂ ಶಲ್ಯೋ ಮುಮೋಚಾಶು ಯುಧಿಷ್ಠಿರೇ ||67||
ಯುದ್ಧಮಾಡುತ್ತಿದ್ದ ಧರ್ಮರಾಜನಿಗೆ ಎಲ್ಲಾ ವಿಷಯಗಳು ಹಾಗೂ ಪರಿಸ್ಥಿತಿಯು ಅನುಕೂಲಕರವಾಗಿದ್ದವು. ಅನಂತರ ಶಲ್ಯನು ಯುಧಿಷ್ಠಿರನ ಮೇಲೆ ನೂರು ಬಾಣಗಳನ್ನು ಬೇಗನೇ ಪ್ರಯೋಗಿಸಿದನು.
ಧನುಶ್ಚಾಸ್ಯ ಶಿತಾಗ್ರೇಣ ಬಾಣೇನ ನಿರಕೃಂತತ ||68||
ಯುಧಿಷ್ಠಿರನ ಬಿಲ್ಲನ್ನು ಹರಿತವಾದ ಅಗ್ರವುಳ್ಳ ಬಾಣದಿಂದ ತುಂಡರಿಸಿದನು.
ಸೋಽನ್ಯತ್ ಕಾರ್ಮುಕಮಾದಾಯ ಶಲ್ಯಂ ಶರಶತೈಸ್ತ್ರಿಭಿಃ |
ಅವಿಧ್ಯತ್ ಕಾರ್ಮುಕಂ ತಸ್ಯ ಕ್ಷುರಪ್ರೇಣ ನ್ಯಕೃಂತತ ||69||
ಧರ್ಮರಾಜನು ಮತ್ತೊಂದು ಬಿಲ್ಲನ್ನು ತೆಗೆದುಕೊಂಡು ಶಲ್ಯನ ಮೇಲೆ ಮುನ್ನೂರು ಬಾಣಗಳನ್ನು ಪ್ರಯೋಗಿಸಿದನು. ಹಾಗೂ ಶಲ್ಯನ ಬಿಲ್ಲನ್ನು ಕ್ಷುರಪ್ರದಿಂದ ತುಂಡರಿಸಿದನು.
ಅಥಾಸ್ಯ ನಿಜಘಾನಾಶ್ವಾನ್ ಚತುರೋ ನತಪರ್ವಭಿಃ |
ದ್ವಾಭ್ಯಾಮಥ ಶಿತಾಗ್ರಾಭ್ಯಾಮುಭೌ ವೈ ಪಾರ್ಷ್ಣಿಸಾರಥೀ ||70||
ಅನಂತರ ಬಗ್ಗಿದ ಸಂಧಿಗಳುಳ್ಳ ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನು ಸಾಯಿಸಿದನು. ಚೂಪಾದ ಅಗ್ರವುಳ್ಳ ಎರಡು ಬಾಣಗಳಿಂದ ಪಾರ್ಶ್ವರಕ್ಷಕರನ್ನು ಮತ್ತು ಸಾರಥಿಯನ್ನು ಸಾಯಿಸಿದನು.
ತತೋಽಸ್ಯ ದೀಪ್ಯಮಾನೇನ ಪೀತೇನ ನಿಶಿತೇನ ಚ |
ಪ್ರಮುಖೇ ವರ್ತಮಾನಸ್ಯ ಭಲ್ಲೇನಾಪಾಹರದ್ ಧ್ವಜಮ್ ||71||
ಅನಂತರ ಪ್ರಕಾಶಿಸುತ್ತಿರುವ ಹಳದಿಬಣ್ಣದ ಹರಿತವಾದ ಭಲ್ಲೆಯಿಂದ ಮುಂದುಗಡೆ ಇದ್ದ ಶಲ್ಯನ ಧ್ವಜವನ್ನು ತುಂಡರಿಸಿದನು.
ತತಃ ಪ್ರಭಗ್ನಂ ತತ್ಸೈನ್ಯಂ ಧಾರ್ತರಾಷ್ಟ್ರಮರಿಂದಮ ||72||
ಶತ್ರುಸಂಹಾರಕನೇ! ಅನಂತರ ಕೌರವರ ಸೈನ್ಯವು ನಾಶವಾಯಿತು.
ತತೋ ಮದ್ರಾಧಿಪಂ ದ್ರೌಣಿರಭ್ಯಧಾವತ್ ತಥಾ ಕೃತಮ್ |
ಆರೋಪ್ಯ ಚೈನಂ ಸ್ವರಥಂ ತ್ವರಮಾಣಃ ಪ್ರದುದ್ರುವೇ ||73||
ಹೀಗೆ ಮಾಡಲ್ಪಟ್ಟ ಶಲ್ಯನನ್ನು ಅಶ್ವತ್ಥಾಮನು ಸಮೀಪಿಸಿ, ತನ್ನ ರಥದಲ್ಲಿ ಏರಿಸಿಕೊಂಡು ಬೇಗನೇ ಅಲ್ಲಿಂದ ಓಡಿಹೋದನು.

ಮುಹೂರ್ತಮಿವ ತಾನ್ ಹತ್ವಾ ನರ್ದಮಾನೇ ಯುಧಿಷ್ಠಿರೇ ।
ಸ್ಥಿತ್ವಾ ತತೋ ಮದ್ರಪತಿರನ್ಯಂ ಸ್ಯಂದನಮಾಸ್ಥಿತಃ ॥74॥
ಧರ್ಮರಾಜನು ಕೌರವಸೇನೆಯನ್ನು ಕೊಂದು ವೀರನಾದವನ್ನು ಮಾಡುತ್ತಿರಲು ಶಲ್ಯನು ಒಂದು ಮುಹೂರ್ತಕಾಲ ಸುಮ್ಮನಿದ್ದು, ಅನಂತರ ಮತ್ತೊಂದು ರಥವನ್ನು ಏರಿ ಯುದ್ಧಕ್ಕೆ ಸನ್ನದ್ಧನಾಗಿ ನಿಂತನು.
ವಿಧಿವತ್ ಕಲ್ಪಿತಂ ಶುಭ್ರಂ ಮಹಾಂಬುದನಿನಾದಿನಮ್ ।
ನ್ಯಸ್ತಯಂತ್ರೋಪಕರಣಂ ದ್ವಿಷತಾಂ ರೋಮಹರ್ಷಣಮ್ ॥75॥
ಆ ರಥವು ಶಾಸ್ತ್ರೋಕ್ತರೀತಿಯಲ್ಲಿ ನಿರ್ಮಿತವಾಗಿತ್ತು. ಶುಭ್ರವಾದ ಆ ರಥವು ದೊಡ್ಡ ಮೇಘದ ಧ್ವನಿಯನ್ನು ಹುಟ್ಟಿಸುತ್ತಿತ್ತು. ಯುದ್ಧಕ್ಕೆ ಬೇಕಾದ ಸಾಮಗ್ರಿಗಳು ಹಾಗೂ ಬಿಡಿಭಾಗಗಳು ಚೆನ್ನಾಗಿ ಜೋಡಿಸಲ್ಪಟ್ಟಿದ್ದವು. ಹೀಗೆ ಈ ರಥವು ಶತ್ರುಗಳಿಗೆ ಭಯದಿಂದ ರೋಮಾಂಚನವನ್ನುಂಟು ಮಾಡುತ್ತಿತ್ತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಯುಧಿಷ್ಠಿರ-ಶಲ್ಯರ ಯುದ್ಧ, ಯುಧಿಷ್ಠಿರನಿಂದ ಶಲ್ಯನ ವಧೆ
ಸಂಜಯಃ
ಸುಕೂಬರಂ ಸುಚಕ್ರಾಕ್ಷಂ ವಿಧೇಯಾಶ್ವಂ ಸುಸಾರಥಿಮ್ ॥1॥
ಅಥಾನ್ಯದ್ ಧನುರಾದಾಯ ಬಲವದ್ವೇಗವತ್ತರಮ್ ।
ಯುಧಿಷ್ಠಿರಂ ಮದ್ರಪತಿಃ ವಿದ್ಧ್ವಾ ಸಿಂಹ ಇವಾನದತ್ ॥2॥
ಸಂಜಯ ಮದ್ರರಾಜ ಶಲ್ಯನ ರಥದ ಯುಗಬಂಧನಸ್ಥಾನ, ಚಕ್ರ, ಚಕ್ರದ ಅಚ್ಚು, ಅಶ್ವಗಳು, ಸಾರಥಿ ಇವೆಲ್ಲವೂ ಸನ್ನದ್ಧವಾಗಿದ್ದವು. ಇಂತಹ ರಥದಲ್ಲಿ ಇದ್ದುಕೊಂಡು ಶಲ್ಯನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಬಲಶಾಲಿ ಯುಧಿಷ್ಠಿರನನ್ನು ಹೊಡೆದನು. ಸಿಂಹಗರ್ಜನೆಯನ್ನು ಮಾಡಿದನು.
ತತಃ ಸ ಶರವರ್ಷೇಣ ಪರ್ಜನ್ಯ ಇವ ವೃಷ್ಟಿಮಾನ್ ।
ಅಭ್ಯವರ್ಷದಮೇಯಾತ್ಮಾ ಕ್ಷತ್ರಿಯಾನ್ ಕ್ಷತ್ರಿಯರ್ಷಭಃ ॥3॥
ಕ್ಷತ್ರಿಯೋತ್ತಮನಾದ ಶಲ್ಯನು, ಪರ್ಜನ್ಯನು ಮಳೆಗರೆಯುವಂತೆ ಬಾಣಗಳ ಮಳೆಯನ್ನು ಸುರಿಸಿ, ಕ್ಷತ್ರಿಯರ ಮೇಲೆ ಬಾಣಪ್ರಯೋಗವನ್ನು ಮಾಡಿದನು. ಅವನ ಸಾಮರ್ಥ್ಯವು ಎಣಿಕೆಗೆ ನಿಲುಕಲಾಗದ್ದು.
ಸಾತ್ಯಕಿಂ ದಶಭಿರ್ವಿದ್ಧ್ವಾ ಭೀಮಸೇನಂ ತ್ರಿಭಿಃ ಶರೈಃ ।
ಸಹದೇವಂ ತ್ರಿಭಿರ್ವಿದ್ಧ್ವಾ ಯುಧಿಷ್ಠಿರಮಪೀಡಯತ್ ॥4॥
ಹತ್ತು ಬಾಣಗಳಿಂದ ಸಾತ್ಯಕಿಯನ್ನೂ, ಮೂರು ಬಾಣಗಳಿಂದ ಭೀಮನನ್ನೂ, ಮೂರು ಬಾಣಗಳಿಂದ ಸಹದೇವನನ್ನೂ ಹೊಡೆದು ಧರ್ಮರಾಜನನ್ನು ಪೀಡಿಸಿದನು.
ತಾಂಸ್ತಾನನ್ಯಾನ್ ಮಹೇಷ್ವಾಸಾನ್ ಸಾಶ್ವಾನ್ ಸರಥಕುಂಜರಾನ್ ।
ಅರ್ದಯಾಮಾಸ ವಿಶಿಖೈಃ ಮದ್ರರಾಜಃ ಪ್ರತಾಪವಾನ್ ॥5॥
ಪ್ರತಾಪಿಯಾದ ಶಲ್ಯನು ಸಾತ್ಯಕಿ ಮೊದಲಾದವರು ಹಾಗೂ ಬೇರೆ ಬಿಲ್ಗಾರರನ್ನೂ ಹರಿತವಾದ ಬಾಣಗಳಿಂದ ಅಶ್ವ-ರಥಸಹಿತವಾಗಿ ಹೊಡೆದುರುಳಿಸಿದನು.
ಕುಂಜರಾನ್ ಕುಂಜರಾರೋಹಾನ್ ಅಶ್ವಾನಶ್ವಪ್ರಧಾವಿನಃ ।
ರಥಾಂಶ್ಚ ರಥಿಭಿಃ ಸಾರ್ಧಂ ಜಘಾನ ರಥಿನಾಂ ವರಃ ॥6॥
ರಥಿಕರಲ್ಲೇ ಶ್ರೇಷ್ಠನಾದ ಶಲ್ಯನು ಆನೆಗಳನ್ನೂ, ಆನೆಸವಾರರನ್ನೂ, ಅಶ್ವಗಳನ್ನೂ ಅಶ್ವಾರೋಹಿಗಳನ್ನೂ, ರಥಗಳನ್ನೂ, ರಥಿಕರನ್ನೂ ನಾಶಮಾಡಿದನು.
ಬಾಹೂಂಶ್ಚ ಚಿಚ್ಛೇದ ತದಾ ಸಾಯುಧಾನ್ ಕೇತನಾನಿ ಚ ।
ಚಕಾರ ಚ ಮಹೀಂ ಯೋಧೈಸ್ತೀರ್ಣಾಂ ವೇದೀಂ ಕುಶೈರಿವ ॥7॥
ಆ ಯುದ್ಧದಲ್ಲಿ ಆಯುಧಧಾರಿಗಳ ಕೈಗಳನ್ನು ಆಯುಧಸಮೇತವಾಗಿ ತುಂಡರಿಸಿದ. ಹಾಗೆಯೇ ಧ್ವಜಗಳನ್ನೂ ತುಂಡು ಮಾಡಿದನು. ನೆಲದ ಮೇಲೆಲ್ಲಾ ಯೋಧರು ಸತ್ತು ಬಿದ್ದಿದ್ದು ನೋಡಿದರೆ ಯಜ್ಞವೇದಿಕೆಯು ದರ್ಭೆಯಿಂದ ಹಾಸಲ್ಪಟ್ಟಂತಿತ್ತು.
ತಥಾ ತಮರಿಸೈನ್ಯಾನಿ ಘ್ನಂತಂ ಮೃತ್ಯುಮಿವಾಂತಕಮ್ ।
ಪರಿವವ್ರುರ್ಭೃಶಂ ಕ್ರುದ್ಧಾಃ ಪಾಂಡುಪಾಂಚಾಲಸೋಮಕಾಃ ॥8॥
ಹೀಗೆ ಶತ್ರುಸೈನ್ಯಗಳನ್ನು ನಾಶಮಾಡುತ್ತಿರುವ, ಯಮನಂತೆ ಇರುವ ಶಲ್ಯನನ್ನು ಪಾಂಡವರು, ಪಾಂಚಾಲರು ಮತ್ತು ಸೋಮಕರು ಬಹಳ ಕೋಪದಿಂದ ಸುತ್ತುವರಿದರು.
ಸಂಜಯಃ
ತಂ ಭೀಮಸೇನಶ್ಚ ಶಿನೇಶ್ಚ ನಪ್ತಾ
ಮಾದ್ರ್ಯಾಶ್ಚ ಪುತ್ರೌ ಪುರುಷಪ್ರವೀರೌ ।
ಸಮಾಪತನ್ ಭೀಮಬಲೇನ ರಾಜನ್

ಪರ್ಯಾಪುರನ್ಯೋನ್ಯಮಥಾಹ್ವಯಂತಃ ॥9॥

ಸಂಜಯ ರಾಜನೇ! ಆ ಶಲ್ಯನನ್ನು ಭೀಮಸೇನ, ಶಿನಿಯ ಮೊಮ್ಮಗ ಸಾತ್ಯಕಿ, ಮಾದ್ರಿಯ ಕುಮಾರರಾದ, ಪುರುಷೋತ್ತಮರಾದ ನಕುಲ-ಸಹದೇವ ಇವರೆಲ್ಲರೂ ಭಯಂಕರವಾದ ಬಲದೊಂದಿಗೆ ಎದುರಿಸಿ ಬಂದರು. ಶಲ್ಯನೊಡನೆ ದ್ವಂದ್ವಯುದ್ಧಕ್ಕೆ ಆಹ್ವಾನವನ್ನು ಕೊಟ್ಟರು.

ತತಸ್ತು ಶೂರಾಃ ಸಮರೇ ನರೇಂದ್ರಾ
ಮದ್ರೇಶ್ವರಂ ಪ್ರಾಪ್ಯ ಯುಧಾಂ ವರಿಷ್ಠಮ್ |
ಆವಾರ್ಯ ಚೈನಂ ಸಮರೇ ನೃವೀರಾ
ಜಘ್ನುಃ ಶಿತೈಃ ಪತ್ರಿಭಿರುಗ್ರವೇಗೈಃ ॥10॥

ಅನಂತರ ಶೂರರಾದ ರಾಜರುಗಳು ಯುದ್ಧದಲ್ಲಿ ಶ್ರೇಷ್ಠನಾದ ಶಲ್ಯನ ಬಳಿಗೆ ಬಂದು ಅವನನ್ನು ಸುತ್ತುವರಿದರು ಮತ್ತು ಹರಿತವಾದ ಹಾಗೂ ಬಹು ವೇಗವುಳ್ಳ ಬಾಣಗಳಿಂದ ಹೊಡೆದರು.

ಸಂರಕ್ಷಿತೋ ಭೀಮಸೇನೇನ ರಾಜಾ
ಮಾದ್ರೀಸುತಾಭ್ಯಾಮಥ ಮಾಧವೇನ |
ಮದ್ರಾಧಿಪಂ ಪತ್ರಿಭಿರುಗ್ರವೇಗೈಃ
ಸ್ತನಾಂತರೇ ಧರ್ಮಸುತೋ ನಿಜಘ್ನೇ ॥11॥

ಭೀಮಸೇನ, ನಕುಲ-ಸಹದೇವ ಹಾಗೂ ಸಾತ್ಯಕಿಯ ರಕ್ಷಣೆಯಲ್ಲಿ ಇದ್ದ ಧರ್ಮರಾಜನು ಉಗ್ರವೇಗವುಳ್ಳ ಬಾಣಗಳಿಂದ ಶಲ್ಯನ ಎದೆಗೆ ಚೆನ್ನಾಗಿ ಹೊಡೆದನು.

ಸರ್ವೇಽಪಿ ಭೀಮಪ್ರಮುಖಾಶ್ಚ ವೀರಾಃ
ಶಲ್ಯಂ ಸಮಭ್ಯೇತ್ಯ ತತೋ ನಿಜಘ್ನುಃ ॥12॥

ಅನಂತರ ಭೀಮಸೇನ ಮೊದಲಾದ ಎಲ್ಲಾ ವೀರರೂ ಶಲ್ಯನನ್ನು ಹೊಡೆದರು.

ತತೋ ರಣೇ ತಾವಕಾನಾಂ ರಥೌಘಾಃ
ಸಮೀಕ್ಷ್ಯ ಮದ್ರಾಧಿಪತಿಂ ಶರಾರ್ತಮ್ |
ಪರ್ಯಾವವ್ರುಃ ಪ್ರವರಾಃ ಸರ್ವಯೋಧಾ
ದುರ್ಯೋಧನಸ್ಯಾನುಮತೇ ಸಮಂತಾತ್ ॥13॥

ಅನಂತರ ಯುದ್ಧದಲ್ಲಿ ಶಲ್ಯನು ಬಾಣಗಳಿಂದ ಘಾಸಿಗೊಂಡಿದ್ದನ್ನು ನೋಡಿದ ನಿನ್ನ ಕಡೆಯ ರಥಸಮೂಹ ಹಾಗೂ ಉತ್ತಮ ಯೋಧರು ದುರ್ಯೋಧನನ ಆದೇಶದಂತೆ ಎಲ್ಲಾ ಕಡೆಗಳಿಂದ ಸುತ್ತುವರಿದರು.

ತತೋ ದ್ರುತಂ ಮದ್ರಜನಾಧಿಪೋ ರಣೇ
ಯುಧಿಷ್ಠಿರಂ ಸಪ್ತಭಿಃ ಪ್ರತ್ಯವಿಧ್ಯತ್ |
ತಂ ಚಾಪಿ ಪಾರ್ಥೋ ನವಭಿಃ ಪೃಷತ್ಕೈಃ
ವಿವ್ಯಾಧ ರಾಜಂಸ್ತುಮುಲೇ ಮಹಾತ್ಮಾ ॥14॥

ಅನಂತರ ಯುದ್ಧದಲ್ಲಿ ಶಲ್ಯನು ಬೇಗನೇ ಯುಧಿಷ್ಠಿರನನ್ನು ಏಳು ಬಾಣಗಳಿಂದ ಹೊಡೆದನು. ರಾಜನೆ! ಆ ದ್ವಂದ್ವಯುದ್ಧದಲ್ಲಿ ಮಹಾತ್ಮನಾದ ಧರ್ಮರಾಜನೂ ಒಂಬತ್ತು ಬಾಣಗಳಿಂದ ಶಲ್ಯನನ್ನು ಹೊಡೆದನು.

ಆಕರ್ಣಪೂರ್ಣಾಯತಸಂಪ್ರಯುಕ್ತೈಃ
ಶರೈಸ್ತದಾ ಸಂಯತಿ ತೈಲಧೌತೈಃ |
ಅನ್ಯೋನ್ಯಮಾಚ್ಛಾದಯತಾಂ ಮಹಾರಥೌ
ಮದ್ರಾಧಿಪಶ್ಚಾಪಿ ಯುಧಿಷ್ಠಿರಶ್ಚ ॥15॥

ಮಹಾರಥರಾದ ಶಲ್ಯ ಮತ್ತು ಯುಧಿಷ್ಠಿರರು ಪರಸ್ಪರವಾಗಿ ದ್ವಂದ್ವಯುದ್ಧದಲ್ಲಿ ತೊಡಗಿದ್ದರು. ಆ ಯುದ್ಧದಲ್ಲಿ ಇಬ್ಬರೂ ತೈಲವನ್ನು ಲೇಪಿಸಿದ ಶರಗಳನ್ನು ಬಿಲ್ಲಿನ ಹಗ್ಗವನ್ನು ಕಿವಿಯ ತನಕ ಎಳೆದು ಪ್ರಯೋಗಿಸಿ ಪರಸ್ಪರವಾಗಿ ಬಾಣಗಳಿಂದ ಆಚ್ಛಾದಿಸಿದರು.

ತತಸ್ತು ತೂರ್ಣಂ ಸಮರೇ ಮಹಾರಥೌ
ಪರಸ್ಪರಸ್ಯಾಂತರಮೀಕ್ಷಮಾಣೌ |
ಶರೈರ್ಭೃಶಂ ವಿವ್ಯಧತುರ್ನೃಪೋತ್ತಮೌ
ಮಹಾಬಲೌ ಶತ್ರುಭಿರಪ್ರಧೃಷ್ಯೌ ॥16॥

ಅನಂತರ ಯುದ್ಧದಲ್ಲಿ ಮಹಾರಥರಾದ, ನೃಪಶ್ರೇಷ್ಠರೂ ಆದ ಅವರಿಬ್ಬರೂ ಪರಸ್ಪರವಾಗಿ ಹೊಡೆಯಲು ಅವಕಾಶವನ್ನು ನಿರೀಕ್ಷಿಸುತ್ತಿದ್ದರು. ಬಲಶಾಲಿಗಳಾದ ಅವರು ಶತ್ರುಗಳಿಗೆ ವಶರಾಗಲು ಅಸಾಧ್ಯರು. ಅವರು ಪರಸ್ಪರವಾಗಿ ಬಾಣಗಳಿಂದ ಗುರಿ ಇಟ್ಟು ಹೊಡೆದರು.

ತತೋ ಧನುರ್ಜ್ಯಾತಲನಿಃಸ್ವನೋ ಮಹಾನ್
ಮಹೇಂದ್ರವಜ್ರಾಶನಿತುಲ್ಯನಿಃಸ್ವನಃ |
ಪರಸ್ಪರಂ ಬಾಣಶತೈರ್ಮಹಾತ್ಮನೋಃ
ಪ್ರವರ್ಷತೋರ್ಮದ್ರಪಪಾಂಡವಾಗ್ರ್ಯಯೋಃ ॥17॥

ಅನಂತರ ಬಿಲ್ಲಿನ ಹಗ್ಗವನ್ನು ಎಳೆಯುವ ಧ್ವನಿಯು ಇಂದ್ರನ ವಜ್ರಾಯುಧದ ಧ್ವನಿಯಂತೆ ಜೋರಾಗಿತ್ತು. ಶಲ್ಯ ಮತ್ತು

ಯುಧಿಷ್ಠಿರರು ಪರಸ್ಪರವಾಗಿ ನೂರಾರು ಬಾಣಗಳ ಮಳೆಯನ್ನು ಸುರಿಸುತ್ತಿದ್ದಾಗ ಇಂತಹ ಧ್ವನಿಯು ಕೇಳಿಸುತ್ತಿತ್ತು.
ತೌ ಚೇರತುರ್ವ್ಯಾಘ್ರಶಿಶುಪ್ರಕಾಶೌ
ಮಹಾಹವೇಷ್ವಾಮಿಷಗರ್ಧಿನಾವಿವ |
ವಿಷಾಣಿನೌ ನಾಗವರಾವಿವೋಲ್ಬಣೌ
ತತಕ್ಷತುಃ ಸಂಯುಗಜಾತದರ್ಪೌ ||18||
ಮಾಂಸದ ಆಸೆಯುಳ್ಳ ಸಿಂಹದ ಮರಿಗಳಂತೆ ಅವರಿಬ್ಬರೂ ಮಹಾಯುದ್ಧದಲ್ಲಿ ಸಂಚರಿಸುತ್ತಿದ್ದರು. ಯುದ್ಧದ ಮದವೇರಿಸಿಕೊಂಡ ಅವರಿಬ್ಬರೂ ಭಯಂಕರವಾದ ದಂತವುಳ್ಳ ಆನೆಗಳಂತೆ ಪರಸ್ಪರ ಹೊಡೆದುಕೊಂಡರು.
ತತಶ್ಚ ಮದ್ರಾಧಿಪತಿರ್ಮಹಾತ್ಮಾ
ಯುಧಿಷ್ಠಿರಂ ಭೀಮಬಲಂ ಪ್ರಸಹ್ಯ |
ವಿವ್ಯಾಧ ಗಾಢಂ ಹೃದಿ ಸಂಶಿತೇನ
ಶರೇಣ ಸೂರ್ಯಾಗ್ನಿಸಮಪ್ರಭೇಣ ||19||
ಅನಂತರ ಮಹಾತ್ಮನಾದ ಶಲ್ಯನು ಭಯಂಕರ ಬಲವುಳ್ಳ ಯುಧಿಷ್ಠಿರನನ್ನು ನಿಗ್ರಹಿಸಿ ಅವನ ಹೃದಯಕ್ಕೆ ಬಹಳ ಹರಿತವಾದ ಹಾಗೂ ಸೂರ್ಯನಂತೆ, ಬೆಂಕಿಯಂತೆ ಕಾಂತಿಯುಳ್ಳ ಬಾಣದಿಂದ ಚೆನ್ನಾಗಿ ಹೊಡೆದನು.
ತತೋಽತಿವಿದ್ಧೋಽಥ ಯುಧಿಷ್ಠಿರೋಽಪಿ
ಸುಸಂಪ್ರಯುಕ್ತೇನ ಶರೇಣ ರಾಜನ್ |
ಜಘಾನ ಮದ್ರಾಧಿಪತಿಂ ಮಹಾತ್ಮಾ
ಮುದಂ ಚ ಲೇಭೇ ವೃಷಭಃ ಕುರೂಣಾಮ್ ||20||
ರಾಜನೇ! ಇದಾದ ನಂತರ ಚೆನ್ನಾಗಿ ಹೊಡೆತಕ್ಕೊಳಗಾದ ಯುಧಿಷ್ಠಿರನು ಬಾಣವನ್ನು ಚೆನ್ನಾಗಿ ಪ್ರಯೋಗಿಸಿ ಶಲ್ಯನನ್ನು ಹೊಡೆದನು. ಮಹಾತ್ಮನಾದ ಕುರುಶ್ರೇಷ್ಠ ಧರ್ಮರಾಜನು ಇದರಿಂದ ಒಳ್ಳೆಯ ಆನಂದವನ್ನು ಅನುಭವಿಸಿದನು.
ತತೋ ಮುಹೂರ್ತಾದಿವ ಪಾರ್ಥಿವೇಂದ್ರೋ
ಲಬ್ಧ್ವಾ ಸಂಜ್ಞಾಂ ಕ್ರೋಧಸಂರಕ್ತನೇತ್ರಃ |
ಶರೇಣ ಪಾರ್ಥಂ ತ್ವರಿತೋ ಜಘಾನ
ಸಹಸ್ರನೇತ್ರಪ್ರತಿಮಪ್ರಭಾವಃ ||21||
ಸ್ವಲ್ಪಕಾಲದಲ್ಲಿಯೇ ಎಚ್ಚರಗೊಂಡ ಶಲ್ಯನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಬೇಗನೇ ಯುಧಿಷ್ಠಿರನ ಮೇಲೆ ಬಾಣವನ್ನು ಪ್ರಯೋಗಿಸಿದನು. ಪರಾಕ್ರಮದಲ್ಲಿ ಶಲ್ಯನು ಇಂದ್ರನ ಹಾಗೆ ಶೋಭಿಸುತ್ತಿದ್ದನು.
ತ್ವರಂಸ್ತತೋ ಧರ್ಮಸುತೋ ಮಹಾತ್ಮಾ
ಶಲ್ಯಸ್ಯ ರುಷ್ಟೋ ನವಭಿಃ ಪೃಷತ್ಕೈಃ |
ಭಿತ್ವಾ ಹ್ಯುರಸ್ತಪನೀಯಂ ಚ ವರ್ಮ
ಜಘಾನ ಷಡ್ಭಿಸ್ತ್ವಪರೈಃ ಪೃಷತ್ಕೈಃ ||22||
ಮಹಾತ್ಮನಾದ ಧರ್ಮರಾಜನು ಕೂಡಲೇ ಕುಪಿತನಾಗಿ ಒಂಬತ್ತು ಬಾಣಗಳಿಂದ ಶಲ್ಯನ ಎದೆಗೆ ಹೊಡೆದನು. ಬೇರೆ ಆರು ಬಾಣಗಳಿಂದ ಅವನ ಬಂಗಾರದ ಎದೆಕವಚವನ್ನು ಸೀಳಿದನು.
ತತಸ್ತು ಮದ್ರಾಧಿಪತಿಃ ಪ್ರಹೃಷ್ಟೋ
ಧನುಃ ಪ್ರಗೃಹ್ಯ ವ್ಯಸೃಜತ್ ಪೃಷತ್ಕಾನ್ |
ದ್ವಾಭ್ಯಾಂ ಶರಾಭ್ಯಾಂ ಚ ತಥೈವ ರಾಜನ್
ಚಿಚ್ಛೇದ ಚಾಪಂ ಕುರುಪುಂಗವಸ್ಯ ||23||
ಶಲ್ಯ ಸಂತೋಷದಿಂದ ಬಿಲ್ಲನ್ನು ಎತ್ತಿಕೊಂಡು ಬಾಣಗಳನ್ನು ಪ್ರಯೋಗಿಸಿದನು. ರಾಜನೇ, ಎರಡು ಬಾಣಗಳಿಂದ ಧರ್ಮರಾಜನ ಬಿಲ್ಲನ್ನು ಮುರಿದನು.
ನವಂ ತತೋಽನ್ಯತ್ ಸಮರೇ ಪ್ರಗೃಹ್ಯ
ರಾಜಾ ಧನುರ್ಘೋರತರಂ ಮಹಾತ್ಮಾ |
ಶಲ್ಯಂ ತು ವಿವ್ಯಾಧ ಶರೈಃ ಸಮಂತಾದ್
ಯಥಾ ಮಹೇಂದ್ರೋ ನಮುಚಿಂ ಶಿತಾಗ್ರೈಃ ||24||
ಯುದ್ಧದಲ್ಲಿ ಧರ್ಮರಾಜನು ಇನ್ನೊಂದು ಹೊಸದಾದ ಬಿಲ್ಲನ್ನು ಎತ್ತಿಕೊಂಡು ಶಲ್ಯನಿಗೆ ಎಲ್ಲಾ ಕಡೆಗಳಿಂದಲೂ ಬಾಣಗಳನ್ನು ಪ್ರಯೋಗಿಸಿದನು. ನಮುಚಿ ಅಸುರನನ್ನು ಇಂದ್ರನು ಹರಿತವಾದ ಬಾಣಗಳಿಂದ ಆಕ್ರಮಿಸಿದಂತೆ ಇದು ಇತ್ತು.
ತತಸ್ತು ಶಲ್ಯೋ ನವಭಿಃ ಪೃಷತ್ಕೈಃ
ಭೀಮಸ್ಯ ರಾಜ್ಞಶ್ಚ ಯುಧಿಷ್ಠಿರಸ್ಯ |
ನಿಕೃತ್ಯ ರೌಗ್ಮೇ ವರವರ್ಮಣೀ ತಯೋಃ
ವಿದಾರಯಾಮಾಸ ಚ ತೌ ಮಹಾತ್ಮಾ ||25||
ಮಹಾತ್ಮನಾದ ಶಲ್ಯನು ಒಂಬತ್ತು ಬಾಣಗಳಿಂದ ಭೀಮನ ಹಾಗೂ ಧರ್ಮರಾಜನ ಉತ್ತಮವಾದ ಬಂಗಾರದ ಕವಚಗಳನ್ನು ಕಿತ್ತು ತುಂಡರಿಸಿದನು.
ತತೋಽಪರೇಣ ಜ್ವಲನೋಗ್ರತೇಜಸಾ

ಕ್ಷುರೇಣ ರಾಜ್ಞೋ ಧನುರುನ್ಮಮಾಥ |
ಕೃಪಶ್ಚ ತಸ್ಯೈವ ಜಘಾನ ಸೂತಂ
ಷಡ್ಭಿಃ ಶರೈಃ ಸೋಽಭಿಮುಖಃ ಪಪಾತ ॥26॥
ಅನಂತರ ಬೆಂಕಿಯಂತೆ ಭಯಂಕರ ತೇಜಸ್ಸುಳ್ಳ ಇನ್ನೊಂದು ಕತ್ತಿಯಿಂದ ಧರ್ಮರಾಜನ ಬಿಲ್ಲನ್ನು ತುಂಡರಿಸಿದನು. ಕೃಪಾಚಾರ್ಯನು ಕೂಡಲೇ ಆರು ಬಾಣಗಳಿಂದ ಶಲ್ಯನ ಸಾರಥಿಯನ್ನು ಕೊಂದನು. ಸಾರಥಿಯು ಶಲ್ಯನ ಮುಂದೆಯೇ ನೆಲಕ್ಕೆ ಬಿದ್ದನು.
ಮದ್ರಾಧಿಪಶ್ಚಾಪಿ ಯುಧಿಷ್ಠಿರಸ್ಯ
ಶರೈಶ್ಚತುರ್ಭಿರ್ನಿಜಘಾನ ವಾಹಾನ್ |
ವಾಹಾಂಶ್ಚ ಹತ್ವಾಽಪ್ಯಕರೋನ್ಮಹಾತ್ಮಾ
ಯೋಧಕ್ಷಯಂ ಧರ್ಮಸುತಸ್ಯ ರಾಜ್ಞಃ ॥27॥
ಶಲ್ಯನು ನಾಲ್ಕು ಬಾಣಗಳಿಂದ ಯುಧಿಷ್ಠಿರನ ರಥದ ನಾಲ್ಕು ಕುದುರೆಗಳನ್ನು ಬೀಳಿಸಿದನು. ಹೀಗೆ ಕುದುರೆಗಳನ್ನು ಕೊಂದು ಧರ್ಮರಾಜನ ಯೋಧರನ್ನು ನಾಶಮಾಡಿದನು.
ಯದದ್ಭುತಂ ಕರ್ಮ ನ ಶಕ್ಯಮನ್ಯೈಃ
ಸುದುಃಸಹಂ ತತ್ ಕೃತವಂತಮೇಕಮ್ |
ಶಲ್ಯಂ ನರೇಂದ್ರಶ್ಚ ವಿಷಣ್ಣಭಾವಾದ್
ವಿಚಿಂತಯಾಮಾಸ ಮೃದಂಗಕೇತುಃ ॥28॥
ಯಾವ ಇಂತಹ ಅದ್ಭುತಕೆಲಸವನ್ನು ಇನ್ನೊಬ್ಬ ಮಾಡುವುದು ಅಸಾಧ್ಯವೋ ಅಂತಹ ಕೆಲಸವನ್ನು ಮಾಡಿದ ಏಕೈಕ ವ್ಯಕ್ತಿ ಶಲ್ಯನನ್ನು ನೋಡಿ ಮೃದಂಗದ ಚಿಹ್ನೆಯ ಧ್ವಜವನ್ನು ಹೊಂದಿದ ಧರ್ಮರಾಜನು ವಿಷಾದ ಮನಸ್ಸಿನಿಂದ ಹೀಗೆ ಆಲೋಚಿಸಿದನು.
ಕಿಮೇತದಿಂದ್ರಾವರಜಸ್ಯ ವಾಕ್ಯಂ
ಮೋಘಂ ಭವತ್ಯದ್ಯ ವಿಧಿರ್ಬಲೇನ |
ಜಹೀತಿ ಶಲ್ಯಂ ಹ್ಯವದತ್ ತದಾಜೌ
ನ ಲೋಕನಾಥಸ್ಯ ವಚೋಽನ್ಯಥಾ ಸ್ಯಾತ್ ॥29॥
ಉಪೇಂದ್ರಕೃಷ್ಣನ ಮಾತು ಇಂದು ಸುಳ್ಳಾಗುತ್ತಿದೆ. ವಿಧಿಬಲವೇ ಇದಕ್ಕೆ ಕಾರಣ. ಯುದ್ಧದಲ್ಲಿ ಶಲ್ಯನನ್ನು ಕೊಲ್ಲು ಎಂದು ಅವನು ನನಗೆ ಆದೇಶ ಕೊಟ್ಟಿದ್ದ. ಲೋಕಸ್ವಾಮಿಯಾದ ಶ್ರೀಕೃಷ್ಣನ ಮಾತು ಸುಳ್ಳಾಗುವುದಿಲ್ಲ.
ತಥಾಽಽತುರೇ ರಾಜನಿ ಭೀಮಸೇನೋ
ಮದ್ರಾಧಿಪಸ್ಯಾಶು ತತೋ ಮಹಾತ್ಮಾ |
ಛಿತ್ವಾ ಧನುರ್ವೇಗವತಾ ಶರೇಣ
ದ್ವಾಭ್ಯಾಮವಿಧ್ಯತ್ ಸುಭೃಶಂ ನರೇಂದ್ರಮ್ ॥30॥
ಹೀಗೆ ಧರ್ಮರಾಜನು ದುಃಖಿತನಾಗಿರಲು ಮಹಾತ್ಮನಾದ ಭೀಮಸೇನನು ವೇಗವಾದ ಬಾಣದಿಂದ ಬೇಗನೇ ಶಲ್ಯನ ಬಿಲ್ಲನ್ನು ತುಂಡುಮಾಡಿದನು. ಎರಡು ಬಾಣಗಳಿಂದ ಶಲ್ಯನನ್ನು ಚೆನ್ನಾಗಿ ಹೊಡೆದನು.
ತಥಾಽಪರೇಣಾಸ್ಯ ಜಹಾರ ಯಂತುಃ
ಕಾಯಾಚ್ಛಿರಃ ಸನ್ನಹನೀಯಮಧ್ಯಾತ್ |
ಜಘಾನ ಚಾಶ್ವಾಂಶ್ಚತುರಃ ಸುಶೀಘ್ರಾನ್
ತಥಾ ಧ್ವಜಂ ವೈ ಕುಪಿತೋ ವೃಕೋದರಃ ॥31॥
ಹಾಗೆಯೇ ಸನ್ನದ್ಧವಾದ ಯುದ್ಧದ ಮಧ್ಯದಲ್ಲಿ ಇನ್ನೊಂದು ಬಾಣದಿಂದ ಶಲ್ಯನ ಸಾರಥಿಯ ತಲೆಯನ್ನು ಕಡಿದನು. ಕುಪಿತನಾದ ಭೀಮಸೇನನು ಶಲ್ಯನ ರಥದ ಶೀಘ್ರಗಾಮಿಗಳಾದ ನಾಲ್ಕು ಕುದುರೆಗಳನ್ನು ಕೊಂದನು. ಹಾಗೆಯೇ ಧ್ವಜವನ್ನೂ ತುಂಡರಿಸಿದನು.
ತಮಗ್ರಣೀಃ ಸರ್ವಧನುರ್ಧರಾಣಾಮ್
ಏಕಂ ಚರಂತಂ ಸಮರೇಽತಿವೇಗಮ್ |
ಭೀಮಃಶತೇನಾವಿಕಿರಚ್ಛರಾಣಾಂ
ಮಾದ್ರೀಸುತಃ ಸಹದೇವಸ್ತಥೈವ ॥32॥
ಧನುರ್ಧಾರಿಗಳಲ್ಲೇ ಶ್ರೇಷ್ಠನಾದ ಭೀಮನು ಯುದ್ಧದಲ್ಲಿ ಒಬ್ಬಂಟಿಗನಾಗಿ ವೇಗದಿಂದ ಸಂಚರಿಸುತ್ತಿದ್ದ ಶಲ್ಯನ ಮೇಲೆ ನೂರು ಬಾಣಗಳ ಮಳೆಯನ್ನು ಸುರಿಸಿದನು. ಹಾಗೆಯೇ ಸಹದೇವನೂ ಬಾಣಗಳ ಮಳೆಯನ್ನು ಸುರಿಸಿದನು.
ತೈಃ ಸಾಯಕೈರ್ಮೋಹಿತಂ ವೀಕ್ಷ್ಯ ಶಲ್ಯಂ
ಭೀಮಃಶರೈರಸ್ಯ ಚಕರ್ತ ವರ್ಮ |
ಸ ಭೀಮಸೇನೇನ ನಿಕೃತ್ತವರ್ಮಾ
ಮದ್ರಾಧಿಪಶ್ಚರ್ಮಸಹಸ್ರಧಾರಮ್ ॥33॥
ಪ್ರಗೃಹ್ಯ ಖಡ್ಗಂ ರಥಾನ್ಮಹಾತ್ಮಾ
ಪ್ರಸ್ಕಂದ್ಯ ಕುಂತೀಸುತಮಭ್ಯಧಾವತ್ |
ಛಿತ್ವಾ ರಥೇಷಾಂ ನಕುಲಸ್ಯ ಸೋಽಥ
ಯುಧಿಷ್ಠಿರಂ ಭೀಮಬಲೋಭ್ಯಧಾವತ್ ॥34॥

ಆ ಬಾಣಗಳಿಂದ ಶಲ್ಯನು ಮೂರ್ಛೆಹೊಂದಿದನು. ಅದನ್ನು ನೋಡಿದ ಭೀಮನು ಬಾಣಗಳನ್ನು ಪ್ರಯೋಗಿಸಿ ಅವನ ಕವಚವನ್ನು ತುಂಡರಿಸಿದನು. ಭೀಮಸೇನನಿಂದ ಕವಚವನ್ನು ಕಳೆದುಕೊಂಡ ಶಲ್ಯನು ಸಾವಿರಧಾರೆಗಳುಳ್ಳ ಚರ್ಮಾಯುಧ ಹಾಗೂ ಖಡ್ಗವನ್ನು ತೆಗೆದುಕೊಂಡು ರಥದಿಂದ ಕೆಳಗೆ ಧುಮುಕಿದನು ಮತ್ತು ಭೀಮಸೇನನ ಮೇಲೆ ಎರಿಬಂದನು. ನಕುಲನ ರಥದ ಈಷಾವನ್ನು (ಆಧಾರ) ತುಂಡರಿಸಿ ಅನಂತರ ಧರ್ಮರಾಜನನ್ನು ಎದುರಿಸಿದನು.

ತಂ ಚಾಪಿ ರಾಜಾನಮಥೋತ್ಪತಂತಂ
 ಕ್ರುದ್ಧಂ ಯಥೈವಾಂತಕಮಾಪತಂತಮ್ |
ಧೃಷ್ಟದ್ಯುಮ್ನೋ ದ್ರೌಪದೇಯಾಃ ಶಿಖಂಡೀ
 ಶಿನೇಶ್ಚ ನಪ್ತಾ ಸಹಸಾ ಪರೀಯುಃ ॥35॥

ಅನಂತರ ಕೋಪದಿಂದ ಯಮನ ಹಾಗೆ ಹಾರಿಕೊಂಡು ಬರುತ್ತಿರುವ ಶಲ್ಯನನ್ನು ನೋಡಿ ಧೃಷ್ಟದ್ಯುಮ್ನ, ದ್ರೌಪದಿಯ ಮಕ್ಕಳು, ಶಿಖಂಡಿ ಹಾಗೂ ಸಾತ್ಯಕಿ ಕೂಡಲೇ ಶಲ್ಯನಿಗೆ ಮುತ್ತಿಗೆ ಹಾಕಿದರು.

ಅಥಾಸ್ಯ ಚರ್ಮಾಪ್ರತಿಮಂ ನ್ಯಕೃಂತದ್
 ಭೀಮೋ ಮಹಾತ್ಮಾ ದಶಭಿಃ ಪೃಷತ್ಕೈಃ |
ಖಡ್ಗಂ ಚ ಭಲ್ಲೇನ ನಿಕೃತ್ಯ ಮುಷ್ಟೌ
 ನದನ್ ಪ್ರಹೃಷ್ಟಸ್ತವ ಸೈನ್ಯಮಧ್ಯೇ ॥36॥

ಮಹಾತ್ಮನಾದ ಭೀಮನು ಹತ್ತು ಬಾಣಗಳನ್ನು ಪ್ರಯೋಗಿಸಿ ಶಲ್ಯನ ಚರ್ಮಾಯುಧವನ್ನು ತುಂಡರಿಸಿದನು. ಭೀಮನು ಆನಂದದಿಂದ ಸೈನ್ಯದ ಮಧ್ಯೆ ಕುಣಿಯುತ್ತಾ ಭಲ್ಲೆಯಿಂದ ಹೊಡೆದು ಅವನ ಖಡ್ಗವನ್ನೂ ಮುಷ್ಟಿಸಹಿತವಾಗಿ ತುಂಡರಿಸಿದನು.

ತತ್ಕರ್ಮ ಭೀಮಸ್ಯ ಸಮೀಕ್ಷ್ಯ ಹೃಷ್ಟಾಃ
 ತೇ ಪಾಂಡವಾನಾಂ ಪ್ರವರಾ ರಥೌಘಾಃ |
ನಾದಂ ಪ್ರಚಕ್ರುರ್ಭೃಶಮುತ್ಸ್ಮಯಂತಃ
 ಶಂಖಾಂಶ್ಚ ದಧ್ಮುಃ ಶಶಿಸನ್ನಿಕಾಶಾನ್ ॥37॥

ಭೀಮನ ಆ ಕಾರ್ಯವನ್ನು ನೋಡಿ ಪಾಂಡವರ ಸೈನ್ಯದ ಶ್ರೇಷ್ಠ ರಥಿಕರು ಆನಂದವನ್ನು ಹೊಂದಿದರು. ಬಹಳವಾಗಿ ನಗುತ್ತಾ ಜಯಘೋಷವನ್ನು ಮಾಡಿದರು. ಚಂದ್ರನ ಹಾಗೆ ಬೆಳ್ಳಗಿರುವ ಶಂಖಗಳನ್ನು ಊದಿದರು.

ತೇನಾಥ ಶಬ್ದೇನ ಸುಭೀಷಣೇನ
 ತವಾಭಿತಪ್ತಂ ಬಲಮಪ್ರಧೃಷ್ಯಮ್ |
ಸ್ವೇದಾಭಿಭೂತಂ ರುಧಿರೋಕ್ಷಿತಾಂಗಂ
 ವಿಸಂಜ್ಞಕಲ್ಪಂ ಚ ತಥಾ ವಿಷಣ್ಣಮ್ ॥38॥

ಆ ಭಯಂಕರವಾದ ಶಬ್ದದಿಂದ ನಿನ್ನ ಅಜೇಯವಾದ ಸೈನ್ಯವು ಬಹಳವಾಗಿ ದುಃಖವನ್ನು ಅನುಭವಿಸಿತು. ಸೈನಿಕರ ರಕ್ತಸಿಕ್ತವಾದ ಶರೀರಗಳು ಬೆವರಿನಿಂದ ತೊಯ್ದುಹೋದವು. ಎಲ್ಲರೂ ಮೂರ್ಛೆಹೋದವರಂತೆ ವಿಷಾದಕ್ಕೊಳಗಾದರು.

ಸ ಮದ್ರರಾಜಃ ಸಹಸಾ ವಿಕೀರ್ಣೋ
 ಭೀಮಾಗ್ರಗೈಃ ಪಾಂಡವಯೋಧಮುಖ್ಯೈಃ |
ಯುಧಿಷ್ಠಿರಸ್ಯಾಭಿಮುಖೋ ಜವೇನ
 ಸಿಂಹೋ ಯಥಾ ಮೃಗಹೇತೋಃ ಪ್ರಯಾತಃ ॥39॥

ಭೀಮನ ನೇತೃತ್ವದಲ್ಲಿ ಪಾಂಡವಯೋಧರ ಬಾಣಗಳಿಂದ ಮುಚ್ಚಲ್ಪಟ್ಟ ಶಲ್ಯನು ಕೂಡಲೇ ಎದ್ದು ವೇಗವಾಗಿ ಯುಧಿಷ್ಠಿರನ ಎದುರು ಬಂದನು. ಜಿಂಕೆಯನ್ನು ಕೊಲ್ಲಲು ಸಿಂಹವು ಬಂದ ಹಾಗೆ ಶಲ್ಯನು ಧರ್ಮರಾಜನ ಬಳಿಗೆ ಬಂದನು.

ಸ ಧರ್ಮರಾಜೋ ನಿಹತಾಶ್ವಸೂತಃ
 ಕ್ರೋಧೇನ ದೀಪ್ತಜ್ವಲನಪ್ರಕಾಶಃ |
ದೃಷ್ಟ್ವಾ ಚ ಮದ್ರಾಧಿಪತಿಂ ಸತೂರ್ಣಂ
 ಸಮಭ್ಯಧಾವತ್ ತಮರಿಂ ಬಲೇನ ॥40॥

ಕುದುರೆ ಮತ್ತು ಸಾರಥಿಯರನ್ನು ಕಳೆದುಕೊಂಡಿದ್ದ ಧರ್ಮರಾಜನು ಕೋಪದಿಂದ ಉರಿಯುತ್ತಿರುವ ಬೆಂಕಿಯಂತೆ ಕಾಣಿಸುತ್ತಿದ್ದನು. ಶಲ್ಯನನ್ನು ಕಂಡು ಕೂಡಲೇ ಬಲದಿಂದ ಶತ್ರುವನ್ನು ಎದುರಿಸಿದನು.

ಗೋವಿಂದವಾಕ್ಯಂ ತ್ವರಿತೋ ವಿಚಿಂತ್ಯ
 ದಧ್ರೇ ಮತಿಂ ಶಲ್ಯವಿನಾಶನಾಯ |
ಸ ಧರ್ಮರಾಜೋ ನಿಹತಾಶ್ವಸೂತೋ
 ರಥೇಽತಿಷ್ಠಚ್ಛಕ್ತಿಮೇವಾಭಿಕಾಂಕ್ಷನ್ ॥41॥

ಶ್ರೀಕೃಷ್ಣನ ಮಾತನ್ನು ಬೇಗನೆ ಚಿಂತನೆಗೆ ತಂದುಕೊಂಡು ಶಲ್ಯನನ್ನು ಕೊಲ್ಲುವ ನಿರ್ಧಾರವನ್ನು ಮಾಡಿದನು. ಅಂತಹ ಧರ್ಮರಾಜನು ಅಶ್ವ ಮತ್ತು ಸೂತರು ಇಲ್ಲದಿದ್ದರೂ ಶಕ್ತಿ ಆಯುಧವನ್ನು ಅಪೇಕ್ಷಿಸಿಕೊಂಡು ರಥದ ಮೇಲೆಯೇ ನಿಂತನು.

ತಚ್ಚಾಪಿ ಶಲ್ಯಸ್ಯ ನಿಶಾಮ್ಯ ಕರ್ಮ
 ತಮಾತ್ಮನೋ ಭಾಗಮಥಾವಶಿಷ್ಟಮ್ |
ಕೃತ್ವಾ ಮನಃ ಶತ್ರುವಧೇ ಮಹಾತ್ಮಾ
 ಯಥೋಕ್ತಮಿಂದ್ರಾವರಜಸ್ಯ ಚಕ್ರೇ ॥42॥

ಜೊತೆಗೆ ಶಲ್ಯನ ಆ ಅದ್ಭುತ ಯುದ್ಧಕರ್ಮವನ್ನು ನೋಡಿದ ಧರ್ಮರಾಜನು ಈ ಶಲ್ಯನು ತನ್ನ ಪಾಲಿನ ಭಾಗವಾಗಿ ಉಳಿದುಕೊಂಡಿದ್ದಾನೆ ಎಂಬುದಾಗಿ ಅರಿತುಕೊಂಡು, ಮಹಾತ್ಮನಾದ ಧರ್ಮರಾಜನು ಉಪೇಂದ್ರಕೃಷ್ಣನ ಮಾತನ್ನು ನಡೆಸಲಿಕ್ಕಾಗಿ ಶತ್ರುವಾದ ಶಲ್ಯನ ವಧೆಗಾಗಿ ಮನಸ್ಸನ್ನು ಮಾಡಿದನು.

ಸ ಧರ್ಮರಾಜೋ ಮಣಿಹೇಮದಂಡಾಂ
ಜಗ್ರಾಹ ಶಕ್ತಿಂ ಜ್ವಲನಪ್ರಕಾಶಾಮ್ |
ನೇತ್ರೇ ಚ ದೀಪ್ತೇ ಸಹಸಾ ವಿವೃತ್ಯ
ಮದ್ರಾಧಿಪಂ ಕ್ರುದ್ಧಮನಾ ನಿರೈಕ್ಷತ್ ॥43॥

ಆ ಧರ್ಮರಾಜನು ಮಣಿ ಮತ್ತು ಬಂಗಾರದ ದಂಡವುಳ್ಳ ಶಕ್ತ್ಯಾಯುಧವನ್ನು ತೆಗೆದುಕೊಂಡನು. ಅದು ಬೆಂಕಿಯಂತೆ ಪ್ರಕಾಶಿಸುತ್ತಿತ್ತು. ಪ್ರಕಾಶಿಸುತ್ತಿರುವ ತನ್ನ ಕಣ್ಣುಗಳನ್ನು ತಿರುಗಿಸುತ್ತಾ ಕೋಪದಿಂದ ಶಲ್ಯನನ್ನು ನೋಡಿದನು.

ನಿರೀಕ್ಷಿತೋ ಧರ್ಮಸುತೇನ ರಾಜ್ಞಾ
ಪೂತಾತ್ಮನಾ ನಿರ್ಹೃತಕಲ್ಮಷೇಣ |
ಅಭೂನ್ನ ಯದ್ಭಸ್ಮ ಸ ಮದ್ರರಾಜಃ
ತದದ್ಭುತಂ ಮೇ ಪ್ರತಿಭಾತಿ ರಾಜನ್ ॥44॥

ರಾಜನೇ! ಯಾವುದೇ ದೋಷಗಳಿಲ್ಲದ, ಪವಿತ್ರಸ್ವರೂಪನಾದ ಧರ್ಮರಾಜನು ದಿಟ್ಟಿಸಿ ನೋಡುತ್ತಿದ್ದರೂ ಶಲ್ಯನು ಭಸ್ಮವಾಗಲಿಲ್ಲ. ಇದು ದೊಡ್ಡ ಅದ್ಭುತವೆಂದು ನನಗೆ ತೋರುತ್ತದೆ. ಏಕೆಂದರೆ ಧರ್ಮರಾಜನ ದೃಷ್ಟಿಗೆ ಅಷ್ಟು ಸಾಮರ್ಥ್ಯವಿದೆ.

ತತಸ್ತು ಶಕ್ತಿಂ ರುಚಿರೋಗ್ರದಂಡಾಂ
ಮಣಿಪ್ರಬದ್ಧಾಂ ಜ್ವಲಿತಾಂ ಪ್ರದೀಪ್ತಾಮ್ |
ಚಿಕ್ಷೇಪ ವೇಗಾತ್ ಸುಭೃಶಂ ಮಹಾತ್ಮಾ
ಮದ್ರಾಧಿಪಾಯ ಪ್ರವರಃ ಕುರೂಣಾಮ್ ॥45॥
ದೀಪ್ತಾಮಥೈನಾಂ ಮಹತಾ ಬಲೇನ
ಮದ್ರಾಧಿಪಸ್ಯಾಶು ವಿನಾಶನಾಯ ॥46॥

ಅನಂತರ ಕುರುಶ್ರೇಷ್ಠನಾದ ಧರ್ಮರಾಜನು ಶಲ್ಯನನ್ನು ಬೇಗನೆ ಕೊಲ್ಲಲಿಕ್ಕಾಗಿ ಅವನ ಮೇಲೆ ಶಕ್ತ್ಯಾಯುಧವನ್ನು ಬಹಳ ಬಲವನ್ನು ಉಪಯೋಗಿಸಿ ವೇಗವಾಗಿ ಪ್ರಯೋಗಿಸುತ್ತಾನೆ. ಆ ಶಕ್ತ್ಯಾಯುಧದ ದಂಡವು ಬಹಳ ಸುಂದರವಾಗಿತ್ತು. ಅದರಲ್ಲಿ ಮಣಿಗಳು ಜೋಡಿಸಲ್ಪಟ್ಟಿದ್ದವು. ಬೆಂಕಿಯಂತೆ ಪ್ರಜ್ವಲಿಸುತ್ತಿತ್ತು. ಅಂತಹ ಶಕ್ತ್ಯಾಯುಧವನ್ನು ವೇಗವಾಗಿ ಬಿಸಾಡುತ್ತಾನೆ.

ಸ ವಿಷ್ಫುಲಿಂಗಾಂ ಸಹಸಾ ಪತಂತೀಂ
ಪ್ರೈಕ್ಷಂತ ಸರ್ವೇ ಕುರವಃ ಸಮೇತಾಃ |
ಯಥಾ ಯುಗಾಂತೇ ಮಹತೀಮಿವೋಲ್ಕಾಂ
ತಾಂ ಕಾಲರಾತ್ರೀಮಿವ ಪಾಶಹಸ್ತಾಮ್ ॥47॥

ಕಿಡಿಗಳನ್ನು ಕಾರುತ್ತಾ ವೇಗವಾಗಿ ಬೀಳುತ್ತಿದ್ದ ಆ ಶಕ್ತ್ಯಾಯುಧವನ್ನು ಎಲ್ಲಾ ಕುರುಗಳು ನೋಡಿದರು. ಯುಗದ ಕೊನೆಯಲ್ಲಿ ಉಲ್ಕಾಪಾತವಾದಂತೆ ಇತ್ತು. ಪಾಶವನ್ನು ಹಿಡಿದುಕೊಂಡು ಬರುತ್ತಿದ್ದ ಕಾಲರಾತ್ರಿಯಂತೆ ಕಾಣಿಸುತ್ತಿತ್ತು.

ಸಬ್ರಹ್ಮದಂಡಪ್ರತಿಮಾಮಮೋಘಾಂ
ಸಸರ್ಜ ಯತ್ತೋ ಯುಧಿ ಧರ್ಮರಾಜಃ ॥48॥

ಬ್ರಹ್ಮದಂಡದ ಹಾಗೆ ಎಂದೂ ವ್ಯರ್ಥವಾಗದ ಶಕ್ತ್ಯಾಯುಧವನ್ನು ಯುದ್ಧದಲ್ಲಿ ಪ್ರಯತ್ನಪೂರ್ವಕವಾಗಿ ಧರ್ಮರಾಜನು ಪ್ರಯೋಗಿಸಿದ್ದಾನೆ.

ಗಂಧಸ್ರಗಗ್ರ್ಯಾಶನಪಾನಭಕ್ಷ್ಯೈಃ
ಅಭ್ಯರ್ಚಿತಾಂ ಪಾಂಡುಸುತೈಃ ಪ್ರಯತ್ನಾತ್ |
ಸಂವರ್ತಕಾಗ್ನಿಪ್ರತಿಮಾಂ ಜ್ವಲಂತೀಂ
ಕೃತ್ಯಾಮಥರ್ವಾಂಗಿರಸೀಮಿವೋಗ್ರಾಮ್ ॥49॥

ಶಕ್ತ್ಯಾಯುಧವನ್ನು ಪಾಂಡವರು ಗಂಧ-ಮಾಲೆ-ನೈವೇದ್ಯ-ಪಾನ-ಭಕ್ಷಗಳನ್ನು ಅರ್ಪಿಸಿ ಪ್ರಯತ್ನಪೂರ್ವಕವಾಗಿ ಅರ್ಚಿಸಿದ್ದರು. ಆ ಆಯುಧವು ಪ್ರಳಯಕಾಲದ ಸಂವರ್ತಕಾಗ್ನಿಯಂತೆ ಜ್ವಲಿಸುತ್ತಿತ್ತು. ಅಥರ್ವಾಂಗಿರಸ ಮಾಟದ ಕೃತ್ಯದ ಹಾಗೆ ಇತ್ತು.

ಈಶಾನಹೇತೋಃ ಪ್ರತಿನಿರ್ಮಿತಾಂ ತಾಂ
ತ್ವಷ್ಟ್ರಾ ರಿಪೂಣಾಮಸುದೇಹಭಕ್ಷ್ಯಾಮ್ |
ಭೂಮ್ಯಂತರಿಕ್ಷಾದ್ರಿಜಲಾಶ್ರಯಾಣಿ
ಪ್ರಸಹ್ಯ ಭೂತಾನಿ ನಿಹಂತುಮೀಶಾಮ್ ॥50॥

ಆ ಆಯುಧವನ್ನು ಈಶಾನದೇವತೆಗಾಗಿ ತ್ವಷ್ಟೃಪ್ರಜಾಪತಿಯು(ವಿಶ್ವಕರ್ಮನು) ನಿರ್ಮಿಸಿದ್ದನು. ಶತ್ರುಗಳ ಪ್ರಾಣವನ್ನೂ ಶರೀರವನ್ನೂ ಭಕ್ಷಿಸುವಂತಹದ್ದು. ಭೂಮಿ, ಅಂತರಿಕ್ಷ, ಪರ್ವತಗಳು, ಸಮುದ್ರಮೊದಲಾದ ಜಲಾಶಯಗಳು ಮತ್ತು ಎಲ್ಲಾ ಪ್ರಾಣಿಗಳು- ಇವೆಲ್ಲವನ್ನೂ ನುಂಗಿಹಾಕುವ ಸಾಮರ್ಥ್ಯ ಈ ಶಕ್ತ್ಯಾಯುಧಕ್ಕಿದೆ.

ಘಂಟಾಪತಾಕಾಮಣಿವಜ್ರಭೂಷಿತಾಂ
ವೈಡೂರ್ಯಚಿತ್ರಾಂ ತಪನೀಯದಂಡಾಮ್ |
ತ್ವಷ್ಟ್ರಾ ಪ್ರಯತ್ನಾನ್ನಿಯಮೇನ ಕ್ಲಪ್ತಾಂ

ಬ್ರಹ್ಮದ್ವಿಷಾಮಂತಕರೀಮಮೋಘಾಮ್ ॥51॥
ಘಂಟೆ, ಪತಾಕೆ, ಮಣಿ, ವಜ್ರಗಳಿಂದ ಅಲಂಕೃತವಾಗಿತ್ತು. ವೈಡೂರ್ಯದ ಚಿಹ್ನೆಯನ್ನು ಹೊಂದಿತ್ತು. ದಂಡವು ಬಂಗಾರದ್ದಾಗಿತ್ತು. ವಿಶ್ವಕರ್ಮನು ಪ್ರಯತ್ನಪೂರ್ವಕವಾಗಿ ನಿಯಮದಿಂದ ಮಾಡಿದ್ದಾಗಿತ್ತು. ಬ್ರಹ್ಮದ್ವೇಷಿಗಳನ್ನು ನಾಶಮಾಡುವಂತಹದ್ದು. ಅದು ಎಂದೂ ವ್ಯರ್ಥವಾಗುವಂತಹದ್ದಲ್ಲ.
ಬಲಪ್ರಯತ್ನಾದನಿರೋಧವೇಗಾಂ
ಮಂತ್ರೈಶ್ಚ ಘೋರೈರಭಿಮಂತ್ರ್ಯ ಯತ್ನಾತ್ |
ಸಸರ್ಜ ಮಾರ್ಗೇಣ ಸ ಚಾಂಬರೇಣ
ವಧಾಯ ಮದ್ರಾಧಿಪತೇಸ್ತದಾನೀಮ್ ॥52॥
ಬಲದಲ್ಲಾಗಲೀ ಪ್ರಯೋಗದಲ್ಲಾಗಲೀ ಎದುರಿಸಲಾಗದ ವೇಗವನ್ನು ಹೊಂದಿತ್ತು. ಘೋರವಾದ ಮಂತ್ರಗಳಿಂದ ಅಭಿಮಂತ್ರಿತವಾಗಿ ಪ್ರಯೋಗಿಸಲ್ಪಟ್ಟಿತ್ತು. ಅದನ್ನು ಧರ್ಮರಾಜನು ಶಲ್ಯನ ವಧೆಗಾಗಿ ಆಕಾಶಮಾರ್ಗದಲ್ಲಿ ಪ್ರಯೋಗಿಸಿದ್ದಾನೆ.
ಹತೋ ಹ್ಯಸಾವಿತ್ಯಭಿಗರ್ಜಮಾನೋ
ರುದ್ರೋಽಂಧಕಾಯಾಂತಕರಂ ಯಥೇಷುಮ್ |
ಪ್ರಸಾರ್ಯ ಬಾಹುಂ ಸುದೃಢಂ ಸುಪಾಣಿಂ
ಕ್ರೋಧೇನ ನೃತ್ಯನ್ನಿವ ದರ್ಪಹಂತಾ ॥53॥
ರುದ್ರನು ಅಂಧಕಾಸುರನ ಮೇಲೆ ಬಾಣವನ್ನು ಪ್ರಯೋಗಿಸಿದಂತೆ ಶತ್ರುವಿನ ದರ್ಪವನ್ನು ನಾಶಮಾಡುವ ಧರ್ಮರಾಜನು ಒಳ್ಳೆಯ ಹಸ್ತಗಳುಳ್ಳ ತನ್ನ ದೃಢವಾದ ಬಾಹುಗಳನ್ನು ಮುಂದೆ ಚಾಚಿ, ಕೋಪದಿಂದ ನೃತ್ಯವನ್ನು ಮಾಡುತ್ತಾ ಈ ಶಲ್ಯನು ಸತ್ತೇ ಹೋದ! ಎಂಬುದಾಗಿ ಗರ್ಜಿಸುತ್ತಾ ಶಕ್ತ್ಯಾಯುಧವನ್ನು ಪ್ರಯೋಗಿಸಿದನು.
ಸ್ಫುರತ್ ಪ್ರಭಾಮಂಡಲಮಂಶುಜಾಲೈಃ
ಧರ್ಮಾತ್ಮನೋ ಮದ್ರವಿನಾಶಕಾಲೇ |
ಪುರತ್ರಯಪ್ರೋತ್ಸರಣೇ ಪುರಸ್ತಾ-
ನ್ಮಾಹೇಶ್ವರಂ ರೂಪಮಭೂತ್ ತದಾನೀಮ್ ॥54॥
ಶಲ್ಯನನ್ನು ಕೊಲ್ಲುವ ಆ ಸಂದರ್ಭದಲ್ಲಿ ಕಾಂತಿಯಿಂದ ತುಂಬಿದ ಧರ್ಮರಾಜನು ತ್ರಿಪುರವನ್ನು ನಾಶಮಾಡುವಾಗಿನ ರುದ್ರನ ರೂಪವನ್ನು ಪಡೆದನು.
ಆವರ್ತನಾಕುಂಚಿತಬಾಹುದಂಡಃ
ಸಂಧ್ಯಾವಿಹಾರೀ ತನುವೃತ್ತಮಧ್ಯಃ |
ವಿಶಾಲವಕ್ಷಾ ಭಗವಾನ್ ಹರೋ ಯಥಾ
ಸುದುರ್ನಿರೀಕ್ಷ್ಯೋಽಭವದರ್ಜುನಾಗ್ರಜಃ ॥55॥
ಆಯುಧವನ್ನು ತಿರುಗಿಸುವುದಕ್ಕಾಗಿ ಬಾಹುಗಳನ್ನು ಬಗ್ಗಿಸಿಕೊಂಡಿರುವ, ತೆಳ್ಳಗಿನ ನಡುಬಾಗವುಳ್ಳ, ವಿಶಾಲವಾದ ಎದೆಯುಳ್ಳ ಭಗವಾನ್ ರುದ್ರನು ಸಂಧ್ಯಾಕಾಲದಲ್ಲಿ ಧರ್ಮರಕ್ಷಣೆಗಾಗಿ ಶೂಲವನ್ನು ಹಿಡಿದುಕೊಂಡು ಹೇಗಿದ್ದನೋ ಹಾಗೆ ಅರ್ಜುನನ ಅಗ್ರಜನಾದ ಧರ್ಮರಾಜನು ಭಯಂಕರರೂಪದಿಂದಾಗಿ ನೋಡಲಿಕ್ಕೇ ಅಸಾಧ್ಯನಾಗಿದ್ದನು.
ತಾಂ ಸರ್ವಶಕ್ತ್ಯಾ ಪ್ರಹಿತಾಂ ಸಶಕ್ತಿಂ
ಯುಧಿಷ್ಠಿರೇಣಾಪ್ರತಿವಾರ್ಯವೀರ್ಯಾಮ್ |
ಪ್ರತಿಗ್ರಹಾಯಾಭಿನನಂದ ಶಲ್ಯಃ
ಸಮ್ಯಗ್ಘುತಾಮಗ್ನಿರಿವಾಜ್ಯಧಾರಾಮ್ ॥56॥
ಯುಧಿಷ್ಠಿರನು ತನ್ನೆಲ್ಲಾ ಶಕ್ತಿಯನ್ನು ಉಪಯೋಗಿಸಿ ತಡೆಯಲಾದ ಸಾಮರ್ಥ್ಯವುಳ್ಳ ಶಕ್ತ್ಯಾಯುಧವನ್ನು ಪ್ರಯೋಗಿಸಿದ್ದಾನೆ. ಅಂತಹ ಆಯುಧವನ್ನು ಸ್ವೀಕರಿಸಲು ಶಲ್ಯನಿಗೆ ಬಹಳ ಸಂತೋಷವಾಯಿತು. ಆಜ್ಯಧಾರೆಯನ್ನು ಸ್ವೀಕರಿಸಲು ಮುನ್ನುಗ್ಗುವ ಹುತಾಶನ ಅಗ್ನಿಯಂತೆ ಸ್ವೀಕರಿಸಲು ಉದ್ಯುಕ್ತನಾದನು.
ಸಾ ತಸ್ಯ ಮರ್ಮಾಣಿ ವಿದಾರ್ಯ ಶುಭ್ರಮ್
ಉರೋ ವಿಶಾಲಂ ಚ ತಥೈವ ಭಿತ್ತ್ವಾ |
ವಿವೇಶ ಗಾಂ ತೋಯಮಿವಾಪ್ರಸಕ್ತಾ
ಯಶೋ ವಿಶಾಲಂ ನೃಪತೇರ್ಹರಂತೀ ॥57॥
ಆ ಶಕ್ತ್ಯಾಯುಧವು ಶಲ್ಯನ ಶುಭ್ರವಾದ ಮರ್ಮಸ್ಥಾನವನ್ನು ಸೀಳಿ ವಿಶಾಲವಾದ ಎದೆಯನ್ನೂ ಸೀಳಿತು. ನೀರು ವೇಗವಾಗಿ ಭೂಮಿಯನ್ನು ಪ್ರವೇಶಿಸುವಂತೆ ರಾಜನ ಸರ್ವತ್ರ ವಿಸ್ತೃತವಾದ ಕೀರ್ತಿಯನ್ನು ನಾಶಮಾಡಿತು.
ನಾಸಾಕ್ಷಿಕರ್ಣಾಸ್ಯವಿನಿಃಸೃತೇನ
ಪ್ರಸ್ಯಂದತಾ ಚ ವ್ರಣಸಂಭವೇನ |
ಸಂಸಿಕ್ತಗಾತ್ರೋ ರುಧಿರೇಣ ಸೋಽಭೂತ್
ಕ್ರೌಂಚೋ ಯಥಾ ಸ್ಕಂದಹತೋ ಮಹಾದ್ರಿಃ ॥58॥
ಮೂಗು, ಕಣ್ಣು, ಕಿವಿ, ಬಾಯಿಗಳಲ್ಲಿ ಗಾಯಗೊಂಡು ರಕ್ತವನ್ನು ಸುರಿಸುತ್ತಾ ಶಲ್ಯನ ಮೈಯೆಲ್ಲಾ ರಕ್ತದಿಂದ ತೊಯ್ದು ಹೋಯಿತು. ಸ್ಕಂದನಿಂದ ಪುಡಿಯಾಗಿ ತನ್ನಲ್ಲಿನ ಗೈರಿಕಾದಿ ಧಾತುಗಳಿಂದ ರಕ್ತವರ್ಣಕ್ಕೆ ತಿರುಗಿದ ಕ್ರೌಂಚಪರ್ವತದ ಹಾಗೆ ಶಲ್ಯನು ಕಾಣಿಸಿಕೊಂಡನು.

ಪ್ರಸಾರ್ಯ ಬಾಹೂ ಸ ರಥಾದ್ಗತೋ ಗಾಂ
ಸಂಭಿನ್ನವರ್ಮಾ ಕುರುನಂದನೇನ |
ಮಹೇಂದ್ರವೀರ್ಯಪ್ರತಿಮೋ ಮಹಾತ್ಮಾ
ವಜ್ರಾಹತಂ ಶೃಂಗಮಿವಾಚಲಸ್ಯ ॥59॥
ಧರ್ಮರಾಜನು ಶಲ್ಯನ ಕವಚವನ್ನು ತುಂಡರಿಸಿದಾಗ ಶಲ್ಯನು ಕೈಗಳನ್ನು ಚಾಚಿಕೊಂಡು ರಥದಿಂದ ನೆಲದ ಮೇಲೆ ಬಂದನು. ದೇವೇಂದ್ರನ ಸದೃಶವಾದ ಪರಾಕ್ರಮವುಳ್ಳ ಮಹಾತ್ಮ ಶಲ್ಯನು ವಜ್ರಾಯುಧದಿಂದ ಪುಡಿಯಾದ ಪರ್ವತದ ಶಿಖರದಂತೆ ಕಂಡನು.
ತತೋ ನಿಪತಿತೋ ಭೂಮಾವಿಂದ್ರಧ್ವಜ ಇವೋಚ್ಛ್ರಿತಃ |
ಬಾಹೂ ಪ್ರಸಾರ್ಯಾಭಿಮುಖೋ ಧರ್ಮರಾಜಸ್ಯ ಮದ್ರರಾಟ್ ॥60॥
ನೆಲದ ಮೇಲೆ ಬಿದ್ದ ಶಲ್ಯನು ಎತ್ತರವಾದ ಇಂದ್ರಧ್ವಜದಂತೆ ಕಂಡನು. ಎರಡು ಕೈಗಳನ್ನು ಚಾಚಿಕೊಂಡು ಧರ್ಮರಾಜನ ಎದುರುಗಡೆ ಬಂದನು.
ಶಕ್ತ್ಯಾ ವಿಭಿನ್ನಹೃದಯೋ ವಿಪ್ರಯುಕ್ತಾಯುಧಧ್ವಜಃ |
ಹತೋ ನಿಪತಿತೋ ಭೂಮಾವಿಂದ್ರಧ್ವಜ ಇವ ಸ್ಥಿತಃ ॥61॥
ಶಕ್ತ್ಯಾಯುಧದಿಂದ ಶಲ್ಯನ ಎದೆ ಒಡೆದಿದೆ. ಆಯುಧ-ಧ್ವಜಗಳು ಮುರಿದು ಹೋಗಿವೆ. ಇಂದ್ರನ ಧ್ವಜದ ಹಾಗೆ ಶೋಭಿಸುತ್ತಿದ್ದ ಶಲ್ಯನು ಭೂಮಿಯಲ್ಲಿ ಸತ್ತುಬಿದ್ದನು.
ಸ ತಥಾ ಭಿನ್ನಸರ್ವಾಂಗೋ ರುಧಿರೇಣ ಸಮುಕ್ಷಿತಃ |
ಪ್ರತ್ಯುದ್ಗತ ಇವ ಪ್ರೇಮ್ಣಾ ಭೂಮ್ಯಾ ಸ ನರಪುಂಗವಃ ॥62॥
ಹೀಗೆ ಎದೆ ಒಡೆದು ರಕ್ತಸಿಕ್ತನಾದ ಶಲ್ಯನು ನೆಲದ ಮೇಲೆ ಬಿದ್ದಿದ್ದಾನೆ. ಈ ದೃಶ್ಯ ಭೂಮಿಯು ತನ್ನ ಪ್ರಿಯನಾದ ರಾಜನನ್ನು ಪ್ರೀತಿಯಿಂದ ಸ್ವಾಗತಿಸಿದಂತೆ ಇತ್ತು.
ಪ್ರಿಯಯಾ ಕಾಂತಯಾ ಕಾಂತಃ ಪತಮಾನ ಇವೋರಸಿ |
ಚಿರಂ ಭುಕತ್ವ ವಸುಮತೀಂ ಪ್ರಿಯಾಂ ಕಾಂತಾಮಿವ ಪ್ರಭುಃ ॥63॥
ಸರ್ವೈರಂಗೈಃ ಸಮಾಶ್ಲಿಷ್ಯ ಪ್ರಸುಪ್ತ ಇವ ಸೋಽಭವತ್ |
ಧರ್ಮ್ಯೇ ಧರ್ಮಾತ್ಮನಾ ಯುದ್ಧೇ ನಿಹತೋ ಧರ್ಮಸೂನುನಾ ॥64॥
ಪ್ರಿಯತಮನು ತನ್ನ ಪ್ರಿಯೆಯ ಎದೆಯಲ್ಲಿ ತಲೆಯಿಟ್ಟು ಬೀಳುವಂತೆ ಭೂಮಿಯನ್ನು ಬಹಳ ಸಮಯದಿಂದ ಆಳಿ ಭೂಮಿಯ ಮೇಲೆಯೇ ಬಿದ್ದಿದ್ದಾನೆ. ಅಂಗಾತ ಮಲಗಿದ ಶಲ್ಯನನ್ನು ನೋಡಿದರೆ ತನ್ನ ಎಲ್ಲಾ ಅಂಗಗಳಿಂದಲೂ ಪ್ರಿಯತಮೆಯನ್ನು ಆಲಿಂಗಿಸಿಕೊಂಡು ಮಲಗಿದಂತೆ ಇತ್ತು. ಧರ್ಮಯುದ್ಧದಲ್ಲಿ ಧರ್ಮಾವತಾರಿಯಾದ ಯುಧಿಷ್ಠಿರನು ಶಲ್ಯನನ್ನು ಕೊಂದಿದ್ದಾನೆ.
ಸಮ್ಯಗ್ ಹುತ ಇವೋತ್ಸೃಷ್ಟಃ ಪ್ರಶಾಂತೋಽಗ್ನಿರಿವಾಧ್ವರೇ ॥65॥
ಯಜ್ಞದಲ್ಲಿ ಚೆನ್ನಾಗಿ ಹುತವಾಗಿ, ಕೊನೆಗೆ ಸ್ವಿಷ್ಟಕೃತ್ ಆಹುತಿಯನ್ನೂ ಸ್ವೀಕರಿಸಿ, ಯಾಗಾಗ್ನಿಯು ನಂದಿಹೋಗುವಂತೆ ಶಲ್ಯನು ಪ್ರಾಣತ್ಯಾಗ ಮಾಡಿದನು.
ತಂ ಶಾಂತಮಪಿ ಮದ್ರೇಶಂ ಲಕ್ಷ್ಮೀರ್ನೈವ ವ್ಯಮುಂಚತ ॥66॥
ಹೀಗೆ ಪ್ರಾಣಬಿಟ್ಟ ಶಲ್ಯನನ್ನು ಲಕ್ಷ್ಮಿಯು ಬಿಡಲಿಲ್ಲ. (ಭೂಮಿಯಲ್ಲಿಯೇ ಬಿದ್ದಿರುವ ಕಾರಣ ಲಕ್ಷ್ಮಿಯು ಅವನ ಜೊತೆಗೇ ಇದ್ದಳು.)
ತತೋ ಯುಧಿಷ್ಠಿರಶ್ಚಾಪಮಾದಾಯೇಂದ್ರಧನುಷ್ಪ್ರಭಮ್ |
ವ್ಯಧಮದ್ ದ್ವಿಷತಃ ಸಂಖ್ಯೇ ಖಗರಾಡಿವ ಪನ್ನಗಾನ್ ॥67॥
ಶಲ್ಯನು ಬಿದ್ದ ಮೇಲೆ ಯುಧಿಷ್ಠಿರನು ಇಂದ್ರಧನುಸ್ಸಿನ ಕಾಂತಿಯುಳ್ಳ ಬಿಲ್ಲನ್ನುಹಿಡಿದು ರಣರಂಗದಲ್ಲಿ ಶತ್ರುಗಳನ್ನು ನಾಶ ಮಾಡಿದನು. ಈ ದೃಶ್ಯವು ಗರುಡನು ಸರ್ಪಗಳನ್ನು ನಾಶ ಮಾಡಿದಂತೆ ಇತ್ತು.
ದೇಹಾಂಸ್ತು ನಿಶಿತೈರ್ಭಲ್ಲೈ ರಿಪೂಣಾಂ ನಾಶಯತ್ ಕ್ಷಣಾತ್ ॥68॥
ಶತ್ರುಗಳ ಶರೀರಗಳನ್ನು ಭಲ್ಲೆಯಿಂದ ಕ್ಷಣದಲ್ಲಿ ಧರ್ಮಜನು ನಾಶಮಾಡಿದನು.
ತತಃ ಪಾರ್ಥಸ್ಯ ಬಾಣೌಘೈರಾವೃತಾಃ ಸೈನಿಕಾಸ್ತವ |
ನಿಮೀಲಿತಾಕ್ಷಾಃ ಕೂಜಂತಿ ಭೃಶಮನ್ಯೋನ್ಯಕರ್ಶಿತಾಃ ॥69॥
ಇತ್ತ ಅರ್ಜುನನು ನಿನ್ನ ಕಡೆಯ ಸೈನಿಕರ ಮೇಲೆ ಬಾಣಗಳನ್ನು ಪುಂಖಾನುಪುಂಖವಾಗಿ ಪ್ರಯೋಗಿಸಿದ್ದಾನೆ. ಇದರಿಂದಾಗಿ ಸೈನಿಕರಿಗೆ ಕಣ್ಣು ಬಿಡಲೂ ಆಗುತ್ತಿರಲಿಲ್ಲ. ಪರಸ್ಪರ ತಾವು ತಾವೇ ಎಳೆದಾಡಿಕೊಳ್ಳುತ್ತಿದ್ದರು.
ಸಂತಪ್ತಾ ಬಭ್ರಮುಶ್ಚೈವ ವಿಶಸ್ತ್ರಾಯುಧಜೀವಿತಾಃ ॥70॥
ಆಯುಧಗಳಿಂದಲೇ ಬದುಕಬಲ್ಲ ಆ ನಿನ್ನ ಸೈನಿಕರು ಬಾಣಗಳ ಆಘಾತದಿಂದಾಗಿ ಬಹಳ ದುಃಖಪಟ್ಟರು ಮತ್ತು ಭ್ರಮೆಗೆ ಒಳಗಾದರು.
ತತಃ ಶಲ್ಯೇ ನಿಪತಿತೇ ಮದ್ರರಾಜಾನುಜೋ ಯುವಾ |
ಭ್ರಾತುಃ ಸರ್ವೈರ್ಗುಣೈರ್ಯುಕ್ತೋ ರಥೀ ಪಾಂಡವಮಭ್ಯಯಾತ್ ॥71॥
ಶಲ್ಯನು ಸತ್ತ ಅನಂತರ ಅವನ ತಮ್ಮನು ಪಾಂಡವರನ್ನು ಎದುರಿಸಿದನು. ಯುವಕನಾದ ಈತನು ಎಲ್ಲಾ ಗುಣಗಳಿಂದಲೂ ಶಲ್ಯನಿಗೆ ಸಮಾನನಾಗಿದ್ದನು. ಮಹಾರಥಿಯೂ ಆಗಿದ್ದನು.
ವಿವ್ಯಾಧ ಚ ನರಶ್ರೇಷ್ಠೋ ನಾರಾಚೈರ್ಬಹುಭಿಸ್ತ್ವರನ್ |
ಹತಸ್ಯಾಪಚಿತಿಂ ಭ್ರಾತುಃ ಚಿಕೀರ್ಷನ್ ಯುದ್ಧದುರ್ಮದಃ ॥72॥
ಯುದ್ಧದಲ್ಲಿ ಯಾರಿಂದಲೂ ಮಣಿಸಲಾಗದ ರಾಜನು ಸತ್ತು ಹೋದ ಅಣ್ಣನಿಗೆ ಔರ್ಧ್ವದೈಹಿಕ ಆರಾಧನೆ ಮಾಡುವ ಇಚ್ಛೆಯುಳ್ಳವನಾಗಿ ಬಾಣಗಳಿಂದ ಬಹಳವಾಗಿ ಪಾಂಡವರನ್ನು ಬೇಗನೇ ಹೊಡೆದನು.

ತಂ ವಿವ್ಯಾಧಾಶುಗೈಃ ಷಡ್ಭಿರ್ಧರ್ಮರಾಜಸ್ತ್ವರನ್ನಿವ |
ಕಾರ್ಮುಕಂ ಚಾಸ್ಯ ಚಿಚ್ಛೇದ ಕ್ಷುರಾಭ್ಯಾಂ ಧ್ವಜಮೇವ ಚ ॥73॥
ಕೂಡಲೇ ಧರ್ಮರಾಜನು ಆರು ಬಾಣಗಳಿಂದ ಶಲ್ಯನ ತಮ್ಮನನ್ನು ಹೊಡೆದನು. ಎರಡು ಕತ್ತಿಗಳಿಂದ ಅವನ ಬಿಲ್ಲನ್ನೂ, ರಥದ ಧ್ವಜವನ್ನೂ ತುಂಡರಿಸಿದನು.
ತತೋಽಸ್ಯ ದೀಪ್ಯಮಾನೇನ ಸುದೃಢೇನ ಶಿತೇನ ಚ |
ಪ್ರಮುಖೇ ವರ್ತಮಾನಸ್ಯ ಭಲ್ಲೇನಾಪಾಹರಚ್ಛಿರಃ ॥74॥
ಅನಂತರ ಧರ್ಮರಾಜನು ಗಟ್ಟಿಯಾದ ಹರಿತವಾದ ಪ್ರಕಾಶಿಸುತ್ತಿದ್ದ ಭಲ್ಲೆಯಿಂದ ಶತ್ರುಸೇನೆಯ ಮುಂಭಾಗದಲ್ಲಿರುವ ಶಲ್ಯನ ಸಹೋದರನ ತಲೆಯನ್ನು ಕಡಿದನು.
ಸಕುಂಡಲಂ ತದ್ ದದೃಶೇ ಪತಮಾನಂ ಶಿರೋ ರಣೇ |
ಪುಣ್ಯಕ್ಷಯಮಿವ ಪ್ರಾಪ್ಯ ಪುನಃ ಸ್ವರ್ಗಾದಿವ ಚ್ಯುತಃ ॥75॥
ಸ್ವರ್ಗಕ್ಕೆ ಹೋದವನು ಪುಣ್ಯಹ್ರಾಸವಾದಾಗ ಕೆಳಗೆ ಬೀಳುತ್ತಾನೆ. ಹಾಗೆಯೇ ಕರ್ಣಕುಂಡಲಸಹಿತವಾದ ತಲೆ ರಣರಂಗದಲ್ಲಿ ಕೆಳಗೆ ಬಿತ್ತು.
ತಸ್ಯಾಪಕೃಷ್ಟಶೀರ್ಷಂ ತತ್ ಶರೀರಮಪತದ್ ರಥಾತ್ |
ರುಧಿರೇಣಾವಸಿಕ್ತಾಂಗಂ ದೃಷ್ಟ್ವಾ ಸೈನ್ಯಮಭಜ್ಯತ ॥76॥
ತಲೆಕಡಿದ ಅವನ ಶರೀರವು ರಕ್ತದಿಂದ ಸಿಕ್ತವಾಗಿ ಕೆಳಗೆ ಬಿತ್ತು. ಅದನ್ನು ನೋಡಿದ ಸೈನ್ಯವು ದಿಕ್ಕಾಪಾಲಾಯಿತು.
ವಿಚಿತ್ರಕವಚೇ ತಸ್ಮಿನ್ ಹತೇ ಮದ್ರಾಧಿಪಾನುಜೇ |
ಹಾಹಾಕಾರಂ ವಿಕುರ್ವಾಣಾಃ ಕುರವೋ ವಿಪ್ರದುದ್ರುವುಃ ॥77॥
ವಿಚಿತ್ರಕವಚವನ್ನು ಧಾರಣೆ ಮಾಡಿದ್ದ ಶಲ್ಯನ ತಮ್ಮನು ಸತ್ತಾಗ ಕುರುಸೈನಿಕರು ಹಾಹಾಕಾರವನ್ನು ಮಾಡುತ್ತಾ ಎಲ್ಲಾ ಕಡೆ ಓಡಿದರು.
ಶಲ್ಯಾನುಜಂ ಹತಂ ದೃಷ್ಟ್ವಾ ತಾವಕಾಸ್ತ್ಯಕ್ತಜೀವಿತಾಃ |
ವಿತ್ರೇಸುಃ ಪಾಂಡವಭಯಾತ್ ಸರ್ವೇ ಧ್ವಸ್ತಾಸ್ತದಾ ಭೃಶಮ್ ॥78॥
ಶಲ್ಯನ ತಮ್ಮನು ಸತ್ತಿದ್ದನ್ನು ನೋಡಿದ ನಿನ್ನ ಕಡೆಯವರು ಪ್ರಾಣ ಕಳೆದುಕೊಂಡ ಹಾಗೆ ಭಯಗೊಂಡರು. ಆಗ ಪಾಂಡವರ ಭಯದಿಂದಲೇ ಎಲ್ಲರೂ ನಾಶವಾದರು.
ತಾಂಸ್ತಥಾ ಭಜ್ಯಮಾನಾಂಸ್ತು ಕೌರವಾನ್ ಭರತರ್ಷಭ |
ಶಿನೇರ್ನಪ್ತಾ ಕಿರನ್ ಬಾಣೈರಭ್ಯವರ್ತತ ಸಾತ್ಯಕಿಃ ॥79॥
ಭಾರತೋತ್ತಮನೇ! ಹೀಗೆ ಎಲ್ಲ ಕಡೆಯೂ ಬೇರೆ ಬೇರೆಯಾಗಿ ಓಡುತ್ತಿದ್ದ ಕೌರವರ ಮೇಲೆ ಶಿನಿಯ ಮೊಮ್ಮಗನಾದ ಸಾತ್ಯಕಿಯು ಬಾಣಗಳ ಮಳೆಯನ್ನು ಸುರಿಸಿದನು.
ತಮಾಯಾಂತಂ ಮಹೇಷ್ವಾಸಮಪ್ರಮತ್ತಂ ದುರಾಸದಮ್ |
ಹಾರ್ದಿಕ್ಯಸ್ತ್ವರಿತೋ ರಾಜನ್ ಪ್ರತ್ಯಗೃಹ್ಣಾದಭೀತವತ್ ॥80॥
ರಾಜನೇ! ದೊಡ್ಡ ಬಿಲ್ಗಾರನಾದ, ಗಾಬರಿಗೆ ಒಳಗಾಗದ, ಎದುರಿಸಲು ಅಶಕ್ಯನಾದ ಸಾತ್ಯಕಿಯನ್ನು ಕೃತವರ್ಮನು ಭಯಗೊಳ್ಳದೆ ಕೂಡಲೇ ತಡೆದನು.
ತೌ ಸಮೇತೌ ಮಹಾತ್ಮಾನೌ ವಾರ್ಷ್ಣೇಯಾವಪರಾಜಿತೌ |
ಹಾರ್ದಿಕ್ಯಃ ಸಾತ್ಯಕಿಶ್ಚೈವ ಸಿಂಹಾವಿವ ಬಲೋತ್ಕಟೌ ॥81॥
ವೃಷ್ಣಿವಂಶದಲ್ಲಿ ಜನಿಸಿದ ಮಹಾತ್ಮರಾದ ಅವರಿಬ್ಬರೂ ಸೋಲುವವರಲ್ಲ. ಹಾರ್ದಿಕ್ಯಪುತ್ರನಾದ ಕೃತವರ್ಮ ಮತ್ತು ಸಾತ್ಯಕಿ ಇವರಿಬ್ಬರೂ ಬಲಶಾಲಿಗಳಾದ ಸಿಂಹಗಳ ಹಾಗೆ ಯುದ್ಧದಲ್ಲಿ ಎದುರಾದರು.
ಇಷುಭಿರ್ವಿಮಲಾಭಾಸೈಃ ಛಾದಯಂತೌ ಪರಸ್ಪರಮ್ |
ಅರ್ಚಿರ್ಭಿರಿವ ಸೂರ್ಯಸ್ಯ ದಿವಾಕರಸಮಪ್ರಭೌ ॥82॥
ದಿವಾಕರ ಸಮಾನವಾದ ಪ್ರಭೆಯುಳ್ಳ ಇಬ್ಬರೂ ಸೂರ್ಯನ ಕಿರಣಗಳಂತೆ ಶುಭ್ರಕಾಂತಿಯುಳ್ಳ ಬಾಣಗಳಿಂದ ಪರಸ್ಪರವಾಗಿ ಆಚ್ಛಾದಿಸಿಕೊಂಡರು.
ಚಾಪಮಾರ್ಗಬಲೋದ್ಧೂತಾನ್ ಮಾರ್ಗಣಾನ್ ವೃಷ್ಣಿಸಿಂಹಯೋಃ |
ಆಕಾಶೇ ಸಮಪಶ್ಯಾಮ ಪತಂಗಾನಿವ ಶೀಘ್ರಗಾನ್ ॥83॥
ವೃಷ್ಣಿವಂಶದ ಶ್ರೇಷ್ಠರಾದ ಕೃತವರ್ಮ-ಸಾತ್ಯಕಿಯರ ಬಿಲ್ಲಿನಿಂದ ವೇಗವಾಗಿ ಪ್ರಯುಕ್ತವಾದ ಬಾಣಗಳು ಆಕಾಶದಲ್ಲಿ ಶೀಘ್ರಗಾಮಿಗಳಾದ ಪತಂಗಗಳ ಹಾಗೆ ನಮಗೆ ಕಂಡವು.
ಸಾತ್ಯಕಿಂ ದಶಭಿರ್ವಿದ್ಧ್ವಾ ಹಯಾಂಶ್ಚಾಸ್ಯ ತ್ರಿಭಿಃ ಶರೈಃ |
ಚಾಪಮೇಕೇನ ಚಿಚ್ಛೇದ ಹಾರ್ದಿಕ್ಯೋ ನತಪರ್ವಣಾ ॥84॥
ಕೃತವರ್ಮನು ಬಾಗಿದ ಸಂಧಿಗಳುಳ್ಳ ಹತ್ತುಬಾಣಗಳಿಂದ ಸಾತ್ಯಕಿಯನ್ನು ಹೊಡೆದನು. ಮೂರು ಬಾಣಗಳಿಂದ ಅವನ ಕುದುರೆಗಳನ್ನು ಹೊಡೆದನು. ಒಂದು ಬಾಣದಿಂದ ಅವನ ಬಿಲ್ಲನ್ನು ಮುರಿದನು.
ತನ್ನಿಕೃತ್ತಂ ಧನುಃಶ್ರೇಷ್ಠಮಪಾಸ್ಯ ಶಿನಿಪುಂಗವಃ |
ಅನ್ಯದಾದತ್ತ ವೇಗೇನ ಧನುರ್ಜಲದನಿಃಸ್ವನಮ್ ॥85॥
ಸಾತ್ಯಕಿಯು ಮುರಿದ ಬಿಲ್ಲನ್ನು ಬಿಸಾಕಿ, ಕೂಡಲೇ ಗುಡುಗಿನ ಧ್ವನಿಯನ್ನು ಉಂಟುಮಾಡುವ ಇನ್ನೊಂದು ಬಿಲ್ಲನ್ನು

ತೆಗೆದುಕೊಂಡನು.
ತದಾದಾಯ ಧನುಃಶ್ರೇಷ್ಠಂ ವರಿಷ್ಠಃ ಸರ್ವಧನ್ವಿನಾಮ್ |
ಹಾರ್ದಿಕ್ಯಂ ದಶಭಿರ್ಬಾಣೈಃ ಪ್ರತ್ಯವಿಧ್ಯತ್ ಸ್ತನಾಂತರೇ ॥86॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯು ಆ ಉತ್ತಮವಾದ ಬಿಲ್ಲನ್ನು ಹಿಡಿದುಕೊಂಡು ಹತ್ತು ಬಾಣಗಳಿಂದ ಕೃತವರ್ಮನ ಎದೆಗೆ ಗುರಿಯಿಟ್ಟು ಹೊಡೆದನು.
ತತೋ ಯುಗಂ ರಥೇಷಾಂ ಚ ಛಿತ್ವಾ ಭಲ್ಲೈಃ ಸುಸಂಶಿತೈಃ |
ಅಶ್ವಾಂಶ್ಚಾಸ್ಯಾವಧೀತ್ ತೂರ್ಣಂ ತಥೋಭೌ ಪಾರ್ಷ್ಣಿಸಾರಥೀ॥87॥
ಅನಂತರ ರಥದ ಯುಗ, ರಥದ ಈಷಾದಂಡ ಇವುಗಳನ್ನೂ ಭಲ್ಲೆಯಿಂದ ತುಂಡರಿಸಿ, ಕೂಡಲೇ ಅವನ ಕುದುರೆಗಳನ್ನೂ ಸಾಯಿಸಿದನು. ಹೀಗೆ ಕೃತವರ್ಮ- ಸಾತ್ಯಕಿಯರು ಪರಸ್ಪರವಾಗಿ ಯುದ್ಧ ಮಾಡಿದರು.
ಹಾರ್ದಿಕ್ಯಂ ವಿರಥಂ ದೃಷ್ಟ್ವಾ ಕೃಪಃ ಶಾರದ್ವತಃ ಪ್ರಭೋ |
ಅಪೋವಾಹ ತತಃ ಕ್ಷಿಪ್ರಂ ರಥಮಾರೋಪ್ಯ ವೀರ್ಯವಾನ್ ॥88॥
ಪ್ರಭುವೇ! ಕೃತವರ್ಮನು ರಥವನ್ನು ಕಳೆದುಕೊಂಡಿದ್ದನ್ನು ನೋಡಿದ ವೀರನಾದ ಕೃಪಾಚಾರ್ಯನು ಅವನನ್ನು ಕೂಡಲೇ ತನ್ನ ರಥದ ಮೇಲೆ ಹತ್ತಿಸಿಕೊಂಡು ಅಲ್ಲಿಂದ ಕರೆದುಕೊಂಡು ಹೋದನು.
ಮದ್ರರಾಜೇ ಹತೇ ರಾಜನ್ ವಿರಥೇ ಕೃತವರ್ಮಣಿ |
ದುರ್ಯೋಧನಬಲಂ ಸರ್ವಂ ಪುನರಾಸೀತ್ ಪರಾಙ್ಮುಖಮ್ ॥89॥
ಶಲ್ಯನು ಸತ್ತು, ಕೃತವರ್ಮನು ರಥಕಳೆದುಕೊಂಡಾಗ ದುರ್ಯೋಧನನ ಸೈನ್ಯವು ಪುನಃ ಸೋತುಹೋಯಿತು.
ಸ್ವೇ ಪರೇ ನಾವಬುಧ್ಯಂತ ಸೈನ್ಯೇ ತು ರಜಸಾ ವೃತೇ |
ಬಲಂ ತು ಹತಭೂಯಿಷ್ಠಂ ತ್ರಸ್ತಮಾಸೀತ್ ಪರಾಙ್ಮುಖಮ್ ॥90॥
ಎಲ್ಲಾ ಕಡೆಯೂ ಧೂಳು ತುಂಬಿದ್ದರಿಂದ ತನ್ನವರು ಯಾರು, ಪರರು ಯಾರು ಎಂಬುದನ್ನು ಸೈನಿಕರು ಗುರುತಿಸದಾದರು. ಹೆಚ್ಚಿನವರು ಸತ್ತಿದ್ದರಿಂದ ಕೌರವಸೈನ್ಯವು ಭಯಗೊಂಡು ಓಡಿ ಹೋಯಿತು.
ತತೋ ಮುಹೂರ್ತಾತ್ ತೇಽಪಶ್ಯನ್ ರಜೋ ಭೌಮಂ ಸಮುತ್ಥಿತಮ್ |
ವಿವಿಧೈಃ ಶೋಣಿತಸ್ರಾವೈಃ ಪ್ರಶಾಂತಂ ಭರತರ್ಷಭ ॥91॥
ಭರತಶ್ರೇಷ್ಠನೇ! ರಣರಂಗದಲ್ಲಿ ಭೂಮಿಯಿಂದ ಎದ್ದ ಧೂಳು ಅಲ್ಲಿ ಹರಿದ ರಕ್ತದ ಧಾರೆಗಳಿಂದ ತೊಯ್ದು, ಕ್ಷಣಮಾತ್ರದಲ್ಲಿ ಶಾಂತವಾದುದನ್ನು ಅವರು ನೋಡಿದರು.
ತತೋ ದುರ್ಯೋಧನೋ ದೃಷ್ಟ್ವಾ ಭಗ್ನಂ ಸ್ವಬಲಮಂತಿಕಾತ್ |
ಜವೇನಾಪತತಃ ಪಾರ್ಥಾನ್ ಏಕಃ ಸರ್ವಾನವಾರಯತ್ ॥92॥
ತನ್ನ ಸೈನ್ಯವೆಲ್ಲಾ ನಾಶವಾದುದನ್ನು ಹತ್ತಿರದಿಂದ ನೋಡಿದ ದುರ್ಯೋಧನನು ವೇಗದಿಂದ ಮುಂಬರುತ್ತಿದ್ದ ಪಾಂಡವರನ್ನು ಒಬ್ಬಂಟಿಯಾಗಿ ಎದುರಿಸಿದನು.
ತತೋ ಮುಹೂರ್ತಾತ್ ತೇಽಪಶ್ಯನ್ ತವ ಯೋಧಾಃ ಸಮಾಗತಾನ್ ॥
ಪಾಂಡವಾನ್ ಸರಥಾನ್ ದೃಷ್ಟ್ವಾ ಧೃಷ್ಟದ್ಯುಮ್ನಂ ಚ ಪಾರ್ಷತಮ್ ॥
ಆನರ್ತಂ ಚ ದುರಾಧರ್ಷಂ ಶಿತೈರ್ಬಾಣೈರವಾರಯತ್ |
ತಂ ಪರೇ ನಾತ್ಯವರ್ತಂತ ಮರ್ತ್ಯಾ ಮೃತ್ಯುಮಿವಾಗತಮ್ ॥95॥
ರಥಗಳ ಮೇಲೆ ಬರುತ್ತಿರುವ ಪಾಂಡವರನ್ನೂ, ಧೃಷ್ಟದ್ಯುಮ್ನನನ್ನೂ, ದುರ್ಜಯನಾದ ಆನರ್ತಾಧಿಪತಿಯನ್ನೂ ಹರಿತವಾದ ಬಾಣಗಳಿಂದ ತಡೆದನು. ಮರಣಶೀಲರಾದ ಮಾನವರು ಮೃತ್ಯುವನ್ನು ಮೀರಿಹೋಗಲು ಸಾಧ್ಯವಿಲ್ಲ. ಹಾಗೆಯೇ ದುರ್ಯೋಧನನನ್ನೂ ಯಾರಿಗೂ ಮೀರಿ ಹೋಗಲು ಆಗಲಿಲ್ಲ.
ಅಥಾನ್ಯಂ ರಥಮಾಸ್ಥಾಯ ಹಾರ್ದಿಕ್ಯೋಽಪಿ ನ್ಯವರ್ತತ ॥96॥
ಅಷ್ಟರಲ್ಲಿ ಕೃತವರ್ಮನೂ ಇನ್ನೊಂದು ರಥವನ್ನು ಹತ್ತಿ ಯುದ್ಧಕ್ಕೆ ಬಂದನು.
ತತೋ ಯುಧಿಷ್ಠಿರೋ ರಾಜಾ ತ್ವರಮಾಣೋ ಮಹಾರಥಃ |
ಚತುರ್ಭಿರ್ನಿಜಘಾನಾಶ್ವಾನ್ ಪತ್ರಿಭಿಃ ಕೃತವರ್ಮಣಃ ॥97॥
ಕೂಡಲೇ ಧರ್ಮರಾಜನು ನಾಲ್ಕು ಬಾಣಗಳಿಂದ ಕೃತವರ್ಮನ ರಥದ ಕುದುರೆಗಳನ್ನು ಸಾಯಿಸಿದನು.
ವಿವ್ಯಾಧ ಗೌತಮಂ ಚಾಪಿ ಷಡ್ಭಿರ್ಭಲ್ಲೈಃ ಸುತೇಜನೈಃ ॥98॥
ಒಳ್ಳೆಯ ತೇಜಸ್ಸುಳ್ಳ ಆರು ಭಲ್ಲೆಗಳಿಂದ ಕೃಪನನ್ನು ಹೊಡೆದನು.
ಅಶ್ವತ್ಥಾಮಾ ತತೋ ರಾಜ್ಞಾ ಹತಾಶ್ವಂ ವಿರಥೀಕೃತಮ್ |
ಸಮಪೋವಾಹ ಹಾರ್ದಿಕ್ಯಂ ಸ್ವರಥೇನ ಯುಧಿಷ್ಠಿರಾತ್ ॥99॥
ಅನಂತರ ಅಶ್ವತ್ಥಾಮನು ರಥರಹಿತನಾದ ಕೃತವರ್ಮನನ್ನು ತನ್ನ ರಥದಲ್ಲಿ ಹತ್ತಿಸಿಕೊಂಡು ಯುಧಿಷ್ಠಿರನ ಬಳಿಯಿಂದ ಬೇರೆಡೆಗೆ ಕರೆದೊಯ್ದನು.
ತತಃ ಶಾರದ್ವತೋಽಷ್ಟಾಭಿಃ ಪ್ರತ್ಯವಿಧ್ಯದ್ಯುಧಿಷ್ಠಿರಮ್ |
ವಿವ್ಯಾಧ ಚಾಶ್ವಾನ್ ನಿಶಿತೈಃ ತಸ್ಯಾಷ್ಟಾಭಿಃ ಶಿಲೀಮುಖೈಃ ॥100॥
ಕೃಪಾಚಾರ್ಯನು ಎಂಟು ಬಾಣಗಳಿಂದ ಧರ್ಮರಾಜನನ್ನು ಹೊಡೆದನು. ಮತ್ತೆ ಹರಿತವಾದ ಎಂಟು ಬಾಣಗಳಿಂದ ಅವನ ಕುದುರೆಗಳನ್ನೂ ಹೊಡೆದನು.

ಏವಮೇತನ್ಮಹಾರಾಜ ಯುದ್ಧಶೇಷಮವರ್ತತ |
ತವ ದುರ್ಮಂತ್ರಿತೇ ಘೋರಂ ತವ ಪುತ್ರಸ್ಯ ಭಾರತ ||101||
ಮಹಾರಾಜ! ಭರತಕುಲೋದ್ಭವನೇ! ನಿನ್ನ ಕುಬುದ್ಧಿಯಿಂದ ಪ್ರಾರಂಭವಾದ ಯುದ್ಧದಲ್ಲಿ ಕೊನೆಯ ಭಾಗದ ಯುದ್ಧವು ಹೀಗೆ ನಡೆಯಿತು.
ತಸ್ಮಿನ್ ಮಹೇಷ್ವಾಸವರೇ ವಿಶಸ್ತೇ
ಸಂಗ್ರಾಮಮಧ್ಯೇ ಕುರುಪುಂಗವೇನ |
ಪಾರ್ಥಾಃ ಸಮಸ್ತಾಃ ಪರಮಪ್ರಹೃಷ್ಟಾಃ
ಶಂಖಾಂಶ್ಚ ದಧ್ಮುರ್ಹತಮೀಕ್ಷ್ಯ ಶಲ್ಯಮ್ ||102||
ಹೀಗೆ ಮಹಾಬಿಲ್ಗಾರರಲ್ಲಿಯೇ ಶ್ರೇಷ್ಠನಾದ ಶಲ್ಯನು ರಣರಂಗದ ಮಧ್ಯದಲ್ಲಿ ಸತ್ತುಹೋಗಲು ಎಲ್ಲಾ ಪಾಂಡವರು ಬಹಳ ಸಂತೋಷಪಟ್ಟರು. ಸತ್ತುಹೋದ ಶಲ್ಯನನ್ನು ಕಂಡು ಆನಂದದಿಂದ ಶಂಖನಾದವನ್ನು ಮಾಡಿದರು.
ಯುಧಿಷ್ಠಿರಂ ಚ ಪ್ರಶಶಂಸುರಾಜೌ
ಸುರಾಃ ಪುರಾ ವೃತ್ರವಧೇ ಯಥೇಂದ್ರಮ್ |
ಚಕ್ರುಶ್ಚ ನಾನಾವಿಧವಾದ್ಯಶಬ್ದಾನ್
ನಿನಾದಯಂತೋ ವಸುಧಾಂ ಸಮಂತಾತ್ ||103||
ಹಿಂದೆ ವೃತ್ರಾಸುರನನ್ನು ಕೊಂದ ಇಂದ್ರನನ್ನು ದೇವತೆಗಳು ಕೊಂಡಾಡಿದಂತೆ ಪಾಂಡವರು ಯುದ್ಧದಲ್ಲಿ ಗೆದ್ದ ಧರ್ಮರಾಜನನ್ನು ಹೊಗಳಿದರು. ಬೇರೆ ಬೇರೆ ರೀತಿಯ ವಾದ್ಯಘೋಷಗಳನ್ನು ಉಂಟುಮಾಡುತ್ತಾ ಭೂಮಿಯನ್ನು ನಾದದಿಂದ ತುಂಬಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಸಪ್ತದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಸಂಕುಲಯುದ್ಧ
ಸಂಜಯಃ
ಶಲ್ಯೇ ತು ನಿಹತೇ ರಾಜನ್ ಮದ್ರರಾಜಪದಾನುಗಾಃ |
ರಥಾಃ ಸಪ್ತಶತಂ ವೀರಾ ನಿರ್ಯಯುರ್ಮಹತೋ ಬಲಾತ್ ||1||
ಸಂಜಯ ಸೇನಾಧಿಪತಿಯಾದ ಶಲ್ಯನು ಸತ್ತ ನಂತರ ಅವನ ಸಹಚರರಾದ ಏಳು ನೂರು ರಥಿಕವೀರರು ಕೌರವರ ಸೇನೆಯಿಂದ ಹೊರ ಹೊರಟರು.
ದುರ್ಯೋಧನಸ್ತು ದ್ವಿರದಮಾರುಹ್ಯಾಚಲಸನ್ನಿಭಮ್ |
ಛತ್ರೇಣ ಧ್ರಿಯಮಾಣೇನ ವೀಜ್ಯಮಾನಶ್ಚ ಚಾಮರೈಃ ||2||
ದುರ್ಯೋಧನನು ಪರ್ವತಸದೃಶವಾದ ಆನೆಯ ಮೇಲೇರಿ ಬಂದನು. ಅವನ ತಲೆಯ ಮೇಲೆ ಛತ್ರವನ್ನು ಹಿಡಿದಿದ್ದರು. ಚಾಮರಗಳಿಂದ ಗಾಳಿ ಬೀಸುತ್ತಿದ್ದರು.
ನ ಗಂತವ್ಯಂ ನ ಗಂತವ್ಯಮಿತಿ ಮದ್ರಾನವಾರಯತ್ ||3||
ಹೊರಹೋಗುತ್ತಿರುವ ಮದ್ರದೇಶದ ಯೋಧರನ್ನು ದುರ್ಯೋಧನನು ಹೋಗಬೇಡಿ! ಹೋಗಬೇಡಿ! ಎಂಬುದಾಗಿ ತಡೆದನು.
ದುರ್ಯೋಧನೇನ ತೇ ವೀರಾ ವಾರ್ಯಮಾಣಾಃ ಪುನಃ ಪುನಃ ||4||
ಯುಧಿಷ್ಠಿರಂ ಜಿಘಾಂಸಂತಃ ಪಾಂಡೂನಾಂ ಪ್ರಾವಿಶನ್ ಬಲಮ್ ||5||
ದುರ್ಯೋಧನನಿಂದ ಮತ್ತೆ ಮತ್ತೆ ತಡೆಯಲ್ಪಟ್ಟ ಆ ವೀರರು ಯುಧಿಷ್ಠಿರನನ್ನು ಕೊಲ್ಲುವ ಇಚ್ಛೆಯಿಂದ ಪಾಂಡವರ ಸೈನ್ಯವನ್ನು ಪ್ರವೇಶಿಸಿದರು.
ತೇ ತು ಶೂರಾ ಮಹಾರಾಜ ಕೃತಚಿತ್ತಾಃ ಸ್ಮ ಯೋಧನೇ |
ಧನುಃಶಬ್ದಂ ಮಹತ್ ಕೃತ್ವಾ ಸಹಾಯುಧ್ಯಂತ ಪಾಂಡವೈಃ ||6||
ಯುದ್ಧಮಾಡುವುದರಲ್ಲಿ ದೃಢನಿಶ್ಚಯವನ್ನು ಮಾಡಿಕೊಂಡ ಆ ಮದ್ರದೇಶದ ಯೋಧರು ಬಿಲ್ಲಿನ ಠೇಂಕಾರವನ್ನು ಜೋರಾಗಿ ಮಾಡುತ್ತಾ ಪಾಂಡವರೊಂದಿಗೆ ಯುದ್ಧವನ್ನು ಮಾಡಿದರು.
ದೃಷ್ಟ್ವಾ ತು ನಿಹತಂ ಶಲ್ಯಂ ಧರ್ಮಪುತ್ರಂ ಚ ಪೀಡಿತಮ್ |
ಮದ್ರರಾಜಪ್ರಿಯೇ ಯುಕ್ತೈಃ ಮದ್ರಕಾಣಾಂ ಮಹಾರಥೈಃ ||7||
ಆಜಗಾಮ ತತಃ ಪಾರ್ಥೋ ಗಾಂಡೀವಂ ವಿಕ್ಷಿಪನ್ ಧನುಃ |
ಪೂರಯನ್ ರಥಘೋಷೇಣ ದಿಶಃ ಸರ್ವಾ ಮಹಾರಥಃ ||8||
ಶಲ್ಯನು ಸತ್ತು ಬಿದ್ದಿದ್ದಾನೆ. ಶಲ್ಯನಿಗೆ ಇಷ್ಟವಾದುದನ್ನು ಮಾಡಲು ಉದ್ಯುಕ್ತರಾದ ಮದ್ರದೇಶದ ಮಹಾರಥರು ಧರ್ಮರಾಜನನ್ನು ಬಹಳವಾಗಿ ಪೀಡಿಸಿದ್ದಾರೆ. ಇದನ್ನು ನೋಡಿದ ಅರ್ಜುನನು ಗಾಂಡೀವಧನುಸ್ಸನ್ನು ಠೇಂಕರಿಸುತ್ತಾ ಬಂದನು. ಮಹಾರಥನಾದ ಅರ್ಜುನನು ರಥಘೋಷದಿಂದ ದಿಕ್ಕುಗಳನ್ನೆಲ್ಲಾ ತುಂಬಿದನು.
ತತೋಽರ್ಜುನಶ್ಚ ಭೀಮಶ್ಚ ಮಾದ್ರೀಪುತ್ರೌ ಚ ಪಾಂಡವೌ |
ಸಾತ್ಯಕಿಶ್ಚ ನರವ್ಯಾಘ್ರೋ ದ್ರೌಪದೇಯಾಶ್ಚ ಸರ್ವಶಃ ||9||

ಧೃಷ್ಟದ್ಯುಮ್ನಃ ಶಿಖಂಡೀ ಚ ಪಾಂಚಾಲ್ಯೈಃ ಸಹ ಸೋಮಕೈಃ |
ಯುಧಿಷ್ಠಿರಂ ಪರೀಪ್ಸಂತಃ ಸಮಂತಾತ್ ಪರ್ಯವಾರಯನ್ ॥10॥
ಅನಂತರ ಅರ್ಜುನ, ಭೀಮ, ನಕುಲ-ಸಹದೇವರು, ಮನುಷ್ಯಶ್ರೇಷ್ಠನಾದ ಸಾತ್ಯಕಿ, ದ್ರೌಪದಿಯ ಎಲ್ಲಾ ಮಕ್ಕಳು, ಧೃಷ್ಟದ್ಯುಮ್ನ, ಶಿಖಂಡಿ, ಪಾಂಚಾಲರು, ಸೋಮಕರು ಇವರೆಲ್ಲಾ ಯುಧಿಷ್ಠಿರನನ್ನು ರಕ್ಷಿಸುವವರಾಗಿ ಸುತ್ತಲೂ ನೆರೆದು, ಬಂದಿರುವ ಶತ್ರುಗಳನ್ನು ತಡೆದರು.
ತೇ ಸಮಂತಾತ್ ಪರಿವೃತಾಃ ಪಾಂಡವ್ಯೈಃ ಪುರುಷರ್ಷಭೈಃ |
ಕ್ಷೋಭಯಂತಿ ಸ್ಮ ತಾಂ ಸೇನಾಂ ಮಕರಾಃ ಸಾಗರಂ ಯಥಾ ॥11॥
ಪುರುಷಶ್ರೇಷ್ಠರಾದ ಪಾಂಡವರೆಲ್ಲರೂ ಸುತ್ತುವರಿದಿರಲು ಮದ್ರದೇಶದ ಯೋಧರು ಮೊಸಳೆಗಳು ಸಮುದ್ರವನ್ನು ಕ್ಷೋಭೆಗೊಳಿಸುವಂತೆ ಪಾಂಡವಸೇನೆಯನ್ನು ಕ್ಷೋಭೆಗೊಳಿಸಿದರು.
ಪುರೋವಾತೇನ ಗಂಗೇವ ಕ್ಷೋಭ್ಯಮಾಣಾ ಮಹಾನದೀ |
ಅಕ್ಷೋಭ್ಯತ ಮಹಾರಾಜ ಪಾಂಡೂನಾಂ ಧ್ವಜಿನೀ ಪುನಃ ॥12॥
ವಿರುದ್ಧದಿಕ್ಕಿನಲ್ಲಿ ಬೀಸುವ ಗಾಳಿಯಿಂದ ಗಂಗಾನದಿಯು ಕ್ಷೋಭಿಸುವಂತೆ ಮಹಾರಾಜ! ಪಾಂಡವರ ಸೈನ್ಯವು ಮತ್ತೊಮ್ಮೆ ಕ್ಷೋಭೆಗೊಳಗಾಯಿತು.
ಪ್ರಸ್ಕಂದ್ಯ ಮಹತೀಂ ಸೇನಾಂ ತ್ಯಕ್ತಾತ್ಮಾನೋ ಮಹಾರಥಾಃ |
ವೃಕ್ಷಾನಿವ ಮಹಾವಾತಾಃ ಕಂಪಯಂತಿ ಸ್ಮ ತಾವಕಾಃ ॥13॥
ಮಹಾತ್ಮರಾದ, ಪ್ರಾಣದ ಆಸೆಯನ್ನು ತೊರೆದಿರುವ ನಿನ್ನ ಕಡೆಯ ಆ ಮಹಾರಥರು ಪಾಂಡವಸೇನೆಯನ್ನು ಬಿರುಗಾಳಿಯು ಮರಗಳನ್ನು ತಿರುಗಿಸಿ ಬೀಳಿಸುವಂತೆ ಮಥಿಸಿದರು.
ಬಹವಶ್ಚುಕ್ರುಶುಸ್ತತ್ರ ಕ್ವ ಚ ರಾಜಾ ಯುಧಿಷ್ಠಿರಃ |
ಭ್ರಾತರೋ ವಾಽಸ್ಯ ತೇ ಶೂರಾ ದೃಶ್ಯಂತೇ ನೇಹ ಕೇಚನ ॥14॥
ಪಾಂಚಾಲಾನಾಂ ಮಹಾವೀರ್ಯಃ ಶಿಖಂಡೀ ಚ ಮಹಾರಥಃ ॥15॥
ಧೃಷ್ಟದ್ಯುಮ್ನೋಽಥ ಶೈನೇಯೋ ದ್ರೌಪದೇಯಾಶ್ಚ ಸರ್ವಶಃ |
ಏವಂ ತಾನ್ ವಾದಿನಃ ಶೂರಾ ದ್ರೌಪದೇಯಾ ಮಹಾರಥಾಃ ॥16॥
ಅನೇಕ ಮಂದಿ ಅಲ್ಲಿ ರಾಜ ಯುಧಿಷ್ಠಿರನು ಎಲ್ಲಿ ಇದ್ದಾನೆ? ಅವನ ಸಹೋದರರು ಎಲ್ಲಿ? ಯಾರೂ ಕಾಣಿಸುತ್ತಿಲ್ಲ ಏಕೆ? ಪಾಂಚಾಲರಲ್ಲಿ ಮಹಾವೀರನಾದ ಸಾತ್ಯಕಿ, ಮಹಾರಥನಾದ ಶಿಖಂಡಿ, ಧೃಷ್ಟದ್ಯುಮ್ನ, ಶೈನೇಯ, ದ್ರೌಪದಿಯ ಮಕ್ಕಳು ಇವರೆಲ್ಲಾ ಎಲ್ಲಿದ್ದಾರೆ ಎಂಬುದಾಗಿ ಜೋರಾಗಿ ಕೂಗಿಕೊಂಡರು.
ಅಭ್ಯಘ್ನನ್ ಯುಯುಧುಶ್ಚೈವ ಮದ್ರರಾಜಪದಾನುಗಾನ್ ॥17॥
ಹೀಗೆ ಕೂಗುತ್ತಿದ್ದ ವೈರಿಗಳನ್ನು ಮಹಾರಥರಾದ ದ್ರೌಪದಿಪುತ್ರರು ತಡೆದರು ಮತ್ತು ಅವರೊಂದಿಗೆ ಯುದ್ಧವನ್ನು ಮಾಡಿದರು.
ಚಕ್ರೈರ್ವಿಮಥಿತೈಃ ಕೇಚಿತ್ ಕೇಚಿಚ್ಛಿನ್ನೈರ್ಮಹಾರಥೈಃ |
ಪ್ರಾದ್ರುಶ್ಯಂತೈವ ಸಮರೇ ತಾವಕಾ ನಿಹತಾ ಪರೈಃ ॥18॥
ಯುದ್ಧದಲ್ಲಿ ನಿನ್ನ ಪಕ್ಷದ ಯೋಧರು ಅವರ ಪ್ರತಿಸ್ಪರ್ಧಿಗಳಿಂದ ಹೊಡಿಸಿಕೊಂಡು ಕೆಲವರು ಚಕ್ರಗಳ ಅಡಿಗೆ ಸಿಲುಕಿದ್ದರು. ಕೆಲವರು ಮಹಾರಥರಿಂದ ಸಾಯಿಸಲ್ಪಟ್ಟವರಾಗಿ ಕಂಡುಬಂದರು.
ಆಲೋಕ್ಯ ಪಾಂಡವಾನ್ ಯುದ್ಧೇ ಯೋಧಾ ರಾಜನ್ ಸಮಂತತಃ |
ವಾರ್ಯಮಾಣಾ ಯಯುಃ ಸರ್ವೇ ತವ ಪುತ್ರೇಣ ಭಾರತ ॥19॥
ರಾಜನೇ! ಯುದ್ಧದಲ್ಲಿ ಎಲ್ಲಾ ಕಡೆಯೂ ಪಾಂಡವರು ಇರುವುದನ್ನು ನೋಡಿದ ಎಲ್ಲಾ ಯೋಧರು ನಿನ್ನ ಮಗ ದುರ್ಯೋಧನನು ತಡೆಯುತ್ತಿದ್ದರೂ ಹೊರಟು ಹೋದರು.
ದುರ್ಯೋಧನಸ್ತು ತಾನ್ ವೀರಾನ್ ವಾರಯಾಮಾಸ ಸಾಂತ್ವಯನ್ |
ನ ಚಾಸ್ಯ ಶಾಸನಂ ಕಶ್ಚಿತ್ ತತ್ರ ಚಕ್ರೇ ಮಹಾರಥಃ ॥20॥
ದುರ್ಯೋಧನನು ಆ ವೀರರನ್ನು ಸಮಾಧಾನಪಡಿಸುತ್ತಾ ಹೋಗದಂತೆ ತಡೆದನು. ಆದರೆ ಯಾವ ಒಬ್ಬ ಮಹಾರಥನೂ ದುರ್ಯೋಧನನ ಆಜ್ಞೆಯನ್ನು ಪಾಲಿಸಲಿಲ್ಲ.
ತತೋ ಗಾಂಧಾರರಾಜಸ್ಯ ಪುತ್ರಃ ಶಕುನಿರಬ್ರವೀತ್ |
ದುರ್ಯೋಧನಂ ಮಹಾರಾಜ ವಚನಂ ವಚನಕ್ಷಮಮ್ ॥21॥
ಮಹಾರಾಜ! ಅನಂತರ ಗಾಂಧಾರರಾಜನ ಮಗನಾದ ಒಳ್ಳೆಯ ಮಾತುಗಾರನಾದ ಶಕುನಿಯು ದುರ್ಯೋಧನನಿಗೆ ಈ ಮಾತುಗಳನ್ನು ಹೇಳುತ್ತಾನೆ.
ಶಕುನಿಃ
ಕಿಂ ನಃ ಸಂಪ್ರೇಕ್ಷಮಾಣಾನಾಂ ಮದ್ರಾಣಾಂ ಹನ್ಯತೇ ಬಲಮ್ |
ನ ಯುಕ್ತಮೇತತ್ ಸಮರೇ ತ್ವಯಿ ತಿಷ್ಠತಿ ಭಾರತ ॥22॥
ಶಕುನಿ ಭರತಕುಲೋದ್ಭವನೇ! ನಾವೆಲ್ಲರು ನೋಡುತ್ತಿದ್ದ ಹಾಗೆಯೇ ಮದ್ರದೇಶದ ಯೋಧರ ಸೈನ್ಯವೆಲ್ಲವೂ ನಾಶವಾಗುತ್ತಿದೆ. ಇದು ಯಾಕೆ ಹೀಗಾಗುತ್ತಿದೆ? ಯುದ್ಧದಲ್ಲಿ ನೀನು ನಿಂತಿರಬೇಕಾದರೆ ಇದು ಸರಿಯಲ್ಲ.
ಸಹಿತೈರ್ನಾಮ ಯೋದ್ಧವ್ಯಮಿತ್ಯೇವಂ ಸಮಯಃ ಕೃತಃ |
ಅಥ ಕಸ್ಮಾತ್ ಪರಾನೇವಂ ಘ್ನತೋ ಮರ್ಷಯಸೇಽನಘ ॥23॥

ನಾವು ಮತ್ತು ಮದ್ರದೇಶದ ಯೋಧರು ಸೇರಿಯೇ ಯುದ್ಧ ಮಾಡುವುದೆಂಬುದಾಗಿ ಒಪ್ಪಂದ ಮಾಡಿಕೊಂಡಿದ್ದೆವು.
ದೋಷದೂರನಾದ ದುರ್ಯೋಧನನೇ! ಹಾಗಿರುವಾಗ ಅವರು ಹೊಡೆತ ತಿನ್ನುತ್ತಿದ್ದರೂ ನೀನು ಹೇಗೆ ಸಹಿಸಿಕೊಂಡಿರುವಿ?
ದುರ್ಯೋಧನಃ
ವಾರ್ಯಮಾಣಾ ಮಯಾ ಪೂರ್ವಂ ನೈತೇ ಕುರ್ವಂತಿ ಶಾಸನಮ್ |
ಏತೇ ಹಿ ನಿಹತಾಃ ಸರ್ವೇ ಪ್ರಸ್ಕಂದಂತೋಽರಿವಾಹಿನೀಮ್ ॥24॥
ದುರ್ಯೋಧನ ನಾನು ನೀವು ಯುದ್ಧಕ್ಕೆ ಹೋಗಬೇಡಿ! ಎಂದು ತಡೆಯುತ್ತಿದ್ದರೂ ನನ್ನ ಆಜ್ಞೆಯನ್ನು ನಡೆಸಿಕೊಡಲಿಲ್ಲ.
ಅವರೆಲ್ಲರೂ ಶತ್ರುಗಳ ಸೈನ್ಯವನ್ನು ಕೆರಳಿಸಲು ಹೋಗಿ ನಾಶವಾಗಿದ್ದಾರೆ.
ಶಕುನಿಃ
ನ ಭರ್ತುಃ ಶಾಸನಂ ಶೂರಾ ರಣೇ ಕುರ್ವಂತ್ಯಮರ್ಷಿತಾಃ |
ಅಲಂ ರೋದ್ಧುಂ ತವೈತೇಷಾಂ ನಾಯಂ ಕಾಲ ಉಪೇಕ್ಷಿತುಮ್ |
ಯಾಮಃ ಸರ್ವೇಽತ್ರ ಸಂಭೂಯ ಸವಾಜಿರಥಕುಂಜರಾಃ ॥25॥
ಶಕುನಿ ಅಸಹನೆಗೊಳಗಾದ ಶೂರರು ಯುದ್ಧದಲ್ಲಿ ಯಜಮಾನನ ಶಾಸನವನ್ನು ಮನ್ನಿಸುವುದಿಲ್ಲ. ಅವರನ್ನು ತಡೆಯುತ್ತಾ ಕಾಲಹರಣಮಾಡುವುದು ಸಾಕು. ಪಾಂಡವರ ಬಗ್ಗೆ ಔದಾಸೀನ್ಯವನ್ನು ಮಾಡುವ ಕಾಲ ಇದಲ್ಲ. ಆದ್ದರಿಂದ ನಾವೇ ಯುದ್ಧಕ್ಕೆ ಹೋಗೋಣ.
ಪರಿತ್ರಾತುಂ ಮಹೇಷ್ವಾಸಾನ್ ಮದ್ರರಾಜಪದಾನುಗಾನ್ ॥26॥
ಶಲ್ಯನ ಸಹವರ್ತಿಗಳಾದ ಯೋಧರನ್ನು ರಕ್ಷಿಸಲು ನಾವೇ ಮುನ್ನುಗ್ಗೋಣ.
ಅನ್ಯೋನ್ಯಂ ಪರಿರಕ್ಷಾಮೋ ಯತ್ನೇನ ಮಹತಾ ನೃಪ |
ಏವಂ ಸರ್ವೇ ತು ಸಂಚಿಂತ್ಯ ಪ್ರಯಾಮೋ ಯತ್ರ ಸೈನಿಕಾಃ ॥27॥
ರಾಜನೇ! ಬಹಳವಾದ ಪ್ರಯತ್ನದಿಂದ ನಮ್ಮನ್ನು ನಾವೇ ಪರಸ್ಪರವಾಗಿ ರಕ್ಷಿಸಿಕೊಳ್ಳೋಣ. ಹೀಗೆ ಎಲ್ಲರೂ ನಿಶ್ಚಯಮಾಡಿಕೊಂಡು ಸೈನಿಕರಿದ್ದಲ್ಲಿಗೆ ಯುದ್ಧವನ್ನು ಮಾಡುವುದಕ್ಕಾಗಿ ಹೋಗೋಣ!
ಸಂಜಯಃ
ಏವಮುಕ್ತಸ್ತತೋ ರಾಜಾ ಸೈನ್ಯೇನ ಮಹತಾ ವೃತಃ |
ಪ್ರಯಯೌ ಸಿಂಹನಾದೇನ ಕಂಪಯಾನೋ ವಸುಂಧರಾಮ್ ॥28॥
ಸಂಜಯ ಶಕುನಿ ಹೀಗೆ ಹೇಳಲು ದುರ್ಯೋಧನನು ದೊಡ್ಡದಾದ ತನ್ನ ಸೇನೆಯ ಜೊತೆಗೆ ಸೇರಿಕೊಂಡು ಸಿಂಹನಾದವನ್ನು ಮಾಡುತ್ತಾ, ಭೂಮಂಡಲವನ್ನೇ ನಡುಗಿಸುತ್ತಾ ಹೋದನು.
ಘ್ನತ ಗೃಹ್ಣೀತ ಯುಧ್ಯಧ್ವಂ ಪ್ರಹರಧ್ವಂ ನಿಕೃಂತತ |
ಇತ್ಯಾಸೀತ್ ತುಮುಲಃಶಬ್ದಃ ತವ ಸೈನ್ಯಸ್ಯ ಭಾರತ ॥29॥
ಭಾರತ! ಕೊಲ್ಲಿರಿ! ಹಿಡಿಯಿರಿ! ಯುದ್ಧಮಾಡಿ! ಹೊಡೆಯಿರಿ! ತುಂಡರಿಸಿ! ಇಂತಹ ಗೊಂದಲಯುಕ್ತವಾದ ಶಬ್ದಗಳು ನಿನ್ನ ಸೈನ್ಯದಲ್ಲಿ ಕೇಳಿ ಬಂದವು.
ಪಾಂಡವಾಶ್ಚ ರಣೇ ದೃಷ್ಟ್ವಾ ಮದ್ರರಾಜಪದಾನುಗಾನ್ |
ಅಭ್ಯವರ್ತಂತ ಸಂಗ್ರಾಮೇ ಗುಲ್ಮಮಾಸ್ಥಾಯ ಮಧ್ಯಮಮ್ ॥30॥
ಪಾಂಡವರು ಯುದ್ಧದಲ್ಲಿ ಮದ್ರರಾಜನ ಅನುಚರರನ್ನು ನೋಡಿ ಮಧ್ಯಮ ಸೇನೆಯ ಮುಖ್ಯಭಾಗವನ್ನು ಆಶ್ರಯಿಸಿಕೊಂಡು ಯುದ್ಧದಲ್ಲಿ ಅವರನ್ನು ಎದುರಿಸಿದರು. (ಸೇನಾಮುಖಂ ಗುಲ್ಮಗಣೌ - ಇತ್ಯಮರಃ)
ತೇ ಮುಹೂರ್ತಾದ್ ರಣೇ ವೀರಾ ಹಸ್ತಾಹಸ್ತಂ ವಿಶಾಂಪತೇ |
ನಿಹತಾಃ ಪ್ರತ್ಯದೃಶ್ಯಂತ ಮದ್ರರಾಜಪದಾನುಗಾಃ ॥31॥
ರಾಜನೇ! ಆ ಮದ್ರರಾಜನ ಅನುಚರ ವೀರರು ಕೈ-ಕೈ ಮಿಲಾಯಿಸಿ ಒಂದು ಮುಹೂರ್ತಕಾಲದಲ್ಲಿಯೇ ವಧಿಸಲ್ಪಟ್ಟರು.
ತತೋ ನಃ ಸಂಪ್ರಯಾತಾನಾಂ ಹತಾಮಿತ್ರಾಸ್ತರಸ್ವಿನಃ |
ಹೃಷ್ಟಾಃ ಕಿಲಕಿಲಾಶಬ್ದಮಕುರ್ವನ್ ಸಹಿತಾಃ ಪರೇ ॥32॥
ನಾವು ಅಲ್ಲಿ ತಲುಪುವಷ್ಟರಲ್ಲಿ ಹಳ ವೇಗವುಳ್ಳ ಶತ್ರುಪಕ್ಷದ ಪಾಂಡವರ ಕಡೆಯವರು ಯುದ್ಧದಲ್ಲಿ ಜಯವನ್ನು ಸಂಪಾದಿಸಿಕೊಂಡಿದ್ದರು. ಸಂತೋಷದಿಂದ ಕಿಲಿ-ಕಿಲ ಶಬ್ದವನ್ನು ಮಾಡುತ್ತಾ ಒಟ್ಟಾಗಿದ್ದರು.
ಅಥೋತ್ಥಿತಾನಿ ಮುಂಡಾನಿ ಸಮದೃಶ್ಯಂತ ಸರ್ವಶಃ |
ಪಪಾತ ಮಹತೀ ಚೋಲ್ಕಾ ಮಧ್ಯೇನಾದಿತ್ಯಮಂಡಲಾತ್ ॥33॥
ಎಲ್ಲೆಡೆ ಸತ್ತುಬಿದ್ದ ಶರೀರಗಳ ರಾಶಿಗಳು ಕಂಡವು.ಸೂರ್ಯಮಂಡಲದ ಮಧ್ಯದಿಂದ ದೊಡ್ಡದಾದ ಉಲ್ಕೆಯೊಂದು ಕೆಳಗೆ ಬಿತ್ತು.
ರಥೈರ್ಭಗ್ನೈರ್ಯುಗಾಕ್ಷೈಶ್ಚ ನಿಹತೈಶ್ಚ ಮಹಾರಥೈಃ |
ಅಶ್ವೈರ್ನಿಪಾತಿತೈಶ್ಚೈವ ದೃಶ್ಯಂತೇ ಸ್ಮ ಸಮಂತತಃ ॥34॥
ಮುರಿದು ಬಿದ್ದ ರಥಗಳು, ರಥದ ನೊಗಸಂಧಿಗಳು, ರಥದ ಗಾಲಿಯಚ್ಚುಗಳು, ಸತ್ತುಬಿದ್ದ ಮಹಾರಥರು, ಕೆಳಗೆ ಬಿದ್ದ ಕುದುರೆಗಳು ಇವೆಲ್ಲಾ ಎಲ್ಲಾ ಕಡೆಯೂ ಕಾಣಸಿಗುತ್ತಿದ್ದವು.
ವಾತಾಯಮಾನೈಸ್ತುರಗೈಃ ಯುಗಾಸಕ್ತೈಃ ಸಮಂತತಃ |
ಅಕೃಷ್ಯಂತ ಮಹಾರಾಜ ಯೋಧಾಸ್ತತ್ರ ರಣಾಜಿರೇ ॥35॥
ರಥದ ನೊಗಕ್ಕೆ ಕಟ್ಟಿದ ಕುದುರೆಗಳು ನೊಗದ ಜೊತೆಗೆ ವಾಯುವೇಗದಿಂದ ಸಂಚರಿಸುತ್ತಾ ರಣರಂಗದಲ್ಲಿ ಯೋಧರನ್ನು ಆ ಕಡೆ-ಈ

ಕಡೆ ಎಳೆದಾಡಿದವು.
ಭಗ್ನಚಕ್ರಾನ್ ರಥಾನ್ ಕೇಚಿದ್ ಅವಹಂಸ್ತುರಗಾ ರಣೇ |
ರಥಾರ್ಧಂ ಕೇಚಿದಾದಾಯ ದಿಶೋ ದಶ ವಿಬಭ್ರಮುಃ ||36||
ಯುದ್ಧಾಂಗಣದಲ್ಲಿ ಕೆಲವು ಕುದುರೆಗಳು ಚಕ್ರ ಮುರಿದ ರಥಗಳನ್ನು ತಮ್ಮೊಂದಿಗೆ ಒಯ್ಯುತ್ತಿದ್ದವು. ಕೆಲವು ಕುದುರೆಗಳು ತುಂಡಾದ ಅರ್ಧರಥವನ್ನೇ ತಮ್ಮೊಡನೆ ತೆಗೆದುಕೊಂಡು ಹತ್ತು ದಿಕ್ಕುಗಳಲ್ಲಿಯೂ ತಿರುಗಾಡಿದವು.
ತತ್ರ ತತ್ರ ಚ ದೃಶ್ಯಂತೇ ಯೋಕ್ತ್ರೈಃ ಶ್ಲಿಷ್ಟಾಃ ಸ್ಮ ವಾಜಿನಃ ||37||
ಸಾರಥಿಗಳಿಂದ ರಕ್ಷಿಸಲ್ಪಟ್ಟ ಕುದುರೆಗಳು ಅಲ್ಲಲ್ಲಿ ಕಂಡುಬಂದವು.
ರಥಿನಃ ಪಾತ್ಯಮಾನಾಶ್ಚ ವ್ಯದೃಶ್ಯಂತ ನರೋತ್ತಮ |
ಗಗನಾತ್ ಪ್ರಚ್ಯುತಾಃ ಸಿದ್ಧಾಃ ಪುಣ್ಯಾನಾಮಿವ ಸಂಕ್ಷಯೇ ||38||
ನರೋತ್ತಮನೇ! ಕೆಳಬಿದ್ದಿರುವ ಲೆಕ್ಕವಿಲ್ಲದಷ್ಟು ರಥಿಕರು ಕಂಡುಬಂದರು. ಪುಣ್ಯಕಳೆದುಕೊಂಡು ಆಕಾಶದಿಂದ ಕೆಳಬಿದ್ದ ಸಿದ್ಧಪುರುಷರಂತೆ ಕಂಡುಬಂದರು.
ನಿಹತೇಷು ಚ ಶೂರೇಷು ಮದ್ರರಾಜಾನುಗೇಷು ಚ |
ಅಸ್ಮಾನಾಪತತಶ್ಚಾಪಿ ದೃಷ್ಟ್ವಾ ಪಾರ್ಥಾ ಮಹಾರಥಾಃ ||39||
ಅಭ್ಯವರ್ತಂತ ವೇಗೇನ ಜಯಗೃಧ್ರಾಃ ಪ್ರಹಾರಿಣಃ |
ಬಾಣಶಬ್ದರವಾನ್ ಕೃತ್ವಾ ವಿಮಿಶ್ರಾನ್ ಶಂಖನಿಃಸ್ವನೈಃ ||40||
ಶೂರರಾದ ಮದ್ರರಾಜನ ಅನುಚರರು ಸತ್ತಾಗ ಹಾಗೂ ನಾವು ಯುದ್ಧದಲ್ಲಿ ಆಕ್ರಮಣಮಾಡುತ್ತಿರುವುದನ್ನು ನೋಡಿದ ಪಾಂಡವರ ಮಹಾರಥರು ಜಯದ ಅಭಿಲಾಷೆಯುಳ್ಳವರಾಗಿ ವೇಗದಿಂದ ಪ್ರಹಾರ ಮಾಡುತ್ತಾ ಎದುರಿಸಿದರು. ಶಂಖನಾದವನ್ನು ಮಾಡುತ್ತಾ ಅದರೊಂದಿಗೆ ಬಾಣಶಬ್ದವನ್ನೂ ಉಂಟುಮಾಡುತ್ತಿದ್ದರು.
ಅಸ್ಮಾಂಸ್ತು ಪುನರಾಸಾದ್ಯ ಲಬ್ಧಲಕ್ಷಾಃ ಪ್ರಹಾರಿಣಃ |
ಶರಾಸನಾನಿ ಧೂನ್ವಾನಾಃ ಸಿಂಹನಾದಾನ್ ಪ್ರಚಕ್ರಿರೇ ||41||
ನಮ್ಮನ್ನು ಎದುರಿಸಿ, ಮತ್ತೆ ಪುನಃ ನಮ್ಮನ್ನು ಗುರಿಯಿಟ್ಟು ಹೊಡೆಯುತ್ತಿದ್ದರು. ಬಿಲ್ಲುಗಳನ್ನು ಠೇಂಕರಿಸುತ್ತಾ ಸಿಂಹಗರ್ಜನೆಯನ್ನು ಮಾಡಿದರು.
ತತೋ ಹತಮಭಿಪ್ರೇಕ್ಷ್ಯ ಮದ್ರರಾಜಬಲಂ ಮಹತ್ |
ಮದ್ರರಾಜಂ ಚ ಸಮರೇ ದೃಷ್ಟ್ವಾ ಶೂರಂ ನಿಪಾತಿತಮ್ ||42||
ದುರ್ಯೋಧನಬಲಂ ಸರ್ವಂ ಪುನರಾಸೀತ್ ಪರಾಙ್ಮುಖಮ್ ||43||
ಅನಂತರ ದೊಡ್ಡದಾದ ಮದ್ರರಾಜನ ಸೇನೆಯೂ ನಾಶವಾದದ್ದನ್ನು ಮತ್ತು ಶೂರನಾದ ಶಲ್ಯನು ಸತ್ತುಬಿದ್ದಿದ್ದನ್ನು ನೋಡಿ ದುರ್ಯೋಧನನ ಎಲ್ಲಾ ಸೇನೆಯೂ ಯುದ್ಧದಿಂದ ವಿಮುಖವಾಗಿ ಹಿಂತಿರುಗಿತು.
ವಧ್ಯಮಾನಂ ಮಹಾರಾಜ ಪಾಂಡವೈರ್ಜಿತಕಾಶಿಭಿಃ |
ದಿಶೋ ಭೇಜೇ ಚ ಸಂಭ್ರಾಂತಂ ತ್ರಾಸಿತಂ ದೃಢಧನ್ವಿಭಿಃ ||44||
ಮಹಾರಾಜನೇ! ವಿಜಯದ ಲಕ್ಷ್ಯವುಳ್ಳ ಪಾಂಡವರ ಹೊಡೆತಕ್ಕೆ ಒಳಗಾದ ಕೌರವಸೇನೆಯು ಕರ್ತವ್ಯಮೂಢವಾಗಿ ದಿಕ್ಕಾಪಾಲಾಗಿ ಓಡುತ್ತಿತ್ತು ಮತ್ತು ಬಿಲ್ಗಾರರಿಂದ ದಾಳಿಗೆ ಒಳಗಾಗಿ ದುಃಖವನ್ನು ಅನುಭವಿಸಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಅಷ್ಟಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ
ಸಂಕುಲಯುದ್ಧ
ಸಂಜಯಃ
ಪಾತಿತೇ ಯುಧಿ ದುರ್ಧರ್ಷೇ ಮದ್ರರಾಜೇ ಮಹಾರಥೇ |
ಹತಪ್ರವೀರಾ ವಿಧ್ವಸ್ತಾ ನಿಕೃತ್ತಾ ನಿಶಿತೈಃ ಶರೈಃ ||1||
ಸಂಜಯ ಯುದ್ಧದಲ್ಲಿ ಮದ್ರರಾಜನಾದ ಶಲ್ಯನು ಸತ್ತು ಬಿದ್ದಿದ್ದಾನೆ. ಅವನು ಮಹಾರಥನಾಗಿದ್ದನು ಹಾಗೂ ಯಾರಿಗೂ ಅವನನ್ನು ಎದುರಿಸುವುದು ಕಷ್ಟಸಾಧ್ಯವಾಗಿತ್ತು. ಜೊತೆಗೆ ಮಹಾವೀರರು ಹರಿತವಾದ ಬಾಣಗಳಿಂದ ಸತ್ತಿದ್ದಾರೆ.
ತಾವಕಾಸ್ತವ ಪುತ್ರಾಶ್ಚ ಪ್ರಾಯಶೋ ವಿಮುಖಾ ಭವನ್ |
ವಣಿಜೋ ನಾವಿ ಭಿನ್ನಾಯಾಂ ಯಥಾಽಗಾಧೇ ಮಹಾರ್ಣವೇ ||2||
ಅಗಾಧವಾದ ಮಹಾಸಮುದ್ರದಲ್ಲಿ ನಾವೆಯು ಒಡೆದುಹೋದಾಗ ವ್ಯಾಪಾರಿಗಳು ತಮ್ಮ ವ್ಯಾಪಾರದಿಂದ ಹಿಂತಿರುಗುವಂತೆ ನಿನ್ನ ಕಡೆಯವರು ಹಾಗೂ ನಿನ್ನ ಮಕ್ಕಳು ಬಹುಶಃ ಯುದ್ಧದಿಂದ ವಿಮುಖರಾದರು.
ಅಪಾರೇ ಪಾರಮಿಚ್ಛಂತೋ ಹತೇ ಶೂರೇ ಮಹಾತ್ಮನಿ |
ಮದ್ರರಾಜೇ ಮಹಾರಾಜ ವಿತ್ರೇಸುಃ ಶರವಿಕ್ಷತಾಃ ||3||
ಮಹಾರಾಜನೇ! ಶೂರನಾದ ಮಹಾತ್ಮಶಲ್ಯನು ಸತ್ತಬಳಿಕ ಅಪಾರವಾದ ಯುದ್ಧದ ಕೊನೆಯನ್ನು ಬಯಸುತ್ತಿದ್ದ ನಿನ್ನ ಪಕ್ಷದವರು ಬಾಣಗಳಿಂದ ಗಾಯಗೊಂಡು ಬಹಳವಾಗಿ ಭಯಪಟ್ಟರು.

ಅನಾಥಾ ನಾಥಮಿಚ್ಛಂತೋ ಮೃಗಾಃ ಸಿಂಹಾರ್ದಿತಾ ಇವ |
ವೃಷಾ ಯಥಾ ಭಗ್ನಶೃಂಗಾಃ ಶೀರ್ಣದಂತಾ ಗಜಾ ಇವ ॥4॥
ಸಿಂಹದ ಆಕ್ರಮಣಕ್ಕೊಳಗಾದ ರಕ್ಷಕರಿಲ್ಲದ ಜಿಂಕೆಗಳು ರಕ್ಷಕರನ್ನು ಬಯಸುವಂತೆ, ಕೊಂಬುಮುರಿದ ಎತ್ತುಗಳಂತೆ, ದಂತವನ್ನು ಕಳೆದುಕೊಂಡ ಆನೆಗಳಂತೆ ನಿನ್ನವರು ಬಹಳವಾಗಿ ಭಯಗೊಂಡರು.
ಮಧ್ಯಾಹ್ನೇ ಪ್ರತ್ಯಪಾಯಾತಾ ನಿರ್ಜಿತಾ ಧರ್ಮಸೂನುನಾ |
ನ ಸಂಧಾತುಮನೀಕಾನಿ ನ ಚ ರಾಜನ್ ಪರಾಕ್ರಮೇ ॥5॥
ಆಸೀದ್ ಬುದ್ಧಿರ್ಹತೇ ಶಲ್ಯೇ ತವ ಯೋಧಸ್ಯ ಕಸ್ಯಚಿತ್ |
ಭೀಷ್ಮೇ ದ್ರೋಣೇ ಚ ನಿಹತೇ ಸೂತಪುತ್ರೇ ಚ ಭಾರತ ॥6॥
ಯದ್ದುಃಖಂ ತವ ಯೋಧಾನಾಂ ಭಯಂ ಚಾಸೀದ್ ವಿಶಾಂಪತೇ |
ತದ್ಭಯಂ ಸ ಚ ನಃ ಶೋಕೋ ಭೂಯ ಏವಾಭ್ಯವರ್ಧತ ॥7॥
ಧರ್ಮರಾಜನಿಂದ ಸೋತು ಹೋದ ಇವರು ಮಧ್ಯಾಹ್ನದ ಹೊತ್ತಿಗೇನೇ ಯುದ್ಧದಿಂದ ಪಲಾಯನ ಮಾಡಿದರು. ರಾಜನೇ! ಶಲ್ಯನು ಸತ್ತಾಗ ಯಾವ ಯೋಧನಿಗೂ ಕೂಡ ಸೈನ್ಯವನ್ನು ಸೇರಿಸುವ ಅಥವಾ ಪರಾಕ್ರಮವನ್ನು ತೋರಿಸುವ ಮನಸ್ಸು ಉಂಟಾಗಲಿಲ್ಲ. ಭರತಕುಲೋದ್ಭವನೇ! ಭೀಷ್ಮ, ದ್ರೋಣ, ಕರ್ಣ ಇವರೆಲ್ಲಾ ಯುದ್ಧದಲ್ಲಿ ಮಡಿದಾಗ ನಿನ್ನ ಕಡೆಯ ಯೋಧರಿಗೆ ಯಾವ ದುಃಖವು ಉಂಟಾಗಿತ್ತೋ, ಯಾವ ಭಯ ಅವರನ್ನು ಆವರಿಸಿತ್ತೋ ಆ ಎಲ್ಲಾ ದುಃಖ ಮತ್ತು ಭಯವು ನಮಗೆ ಮತ್ತೆ ಹೆಚ್ಚಾಯಿತು.
ನಿರಾಶಾಶ್ಚ ಜಯೇ ತಸ್ಮಿನ್ ಹತೇ ಶಲ್ಯೇ ಮಹಾರಥೇ |
ಹತಪ್ರವೀರಾ ವಿಧ್ವಸ್ತಾ ನಿಕೃತ್ತಾ ನಿಶಿತೈಃ ಶರೈಃ ॥8॥
ಮಹಾರಥನಾದ ಶಲ್ಯನು ಸತ್ತಾಗ ಜಯದ ಆಸೆಯು ನಾಶವಾಯಿತು. ಹರಿತವಾದ ಬಾಣಗಳಿಂದ ಯೋಧರು ಪ್ರಾಣತ್ಯಾಗವನ್ನು ಮಾಡಿದ್ದಾರೆ.
ಮದ್ರರಾಜೇ ಹತೇ ರಾಜನ್ ಯೋಧಾಸ್ತೇ ಪ್ರಾದ್ರವನ್ ಭಯಾತ್ ॥9॥
ರಾಜನೇ! ಶಲ್ಯನು ಸತ್ತಮೇಲೆ ಎಲ್ಲಾ ಯೋಧರು ಭಯಗೊಂಡು ಪಲಾಯನ ಮಾಡಿದ್ದಾರೆ.
ಅಶ್ವಾನನ್ಯೇ ಗಜಾನನ್ಯೇ ರಥಾನನ್ಯೇ ಮಹಾರಥಾಃ |
ಆರುಹ್ಯ ಜವಸಂಪನ್ನಾಃ ಪದಾತಾಃ ಪ್ರಾದ್ರವನ್ ಭಯಾತ್ ॥10॥
ಭಯಪಟ್ಟ ಯೋಧರಲ್ಲಿ ಕೆಲವರು ಕುದುರೆಗಳನ್ನೇರಿ, ಕೆಲವರು ಆನೆಗಳನ್ನೇರಿ, ಕೆಲವರು ರಥಗಳನ್ನೇರಿ, ಪದಾತಿಗಳು ಕಾಲುಗಳಿಂದಲೇ ಬಹಳ ವೇಗದಿಂದ ಓಡಿಹೋದರು.
ದ್ವಿಸಾಹಸ್ರಂ ಚ ಮಾತಂಗಾ ಗಿರಿರೂಪಾಃ ಪ್ರಹಾರಿಣಃ |
ಸಂಪ್ರಾದ್ರವನ್ ಹತೇ ಶಲ್ಯೇ ಅಂಕುಶಾಂಗುಷ್ಠಚೋದಿತಾಃ ॥11॥
ಶಲ್ಯನು ಸತ್ತಾಗ ಪರ್ವತದ ಹಾಗೆ ಆಕಾರವುಳ್ಳ, ಚೆನ್ನಾಗಿ ಹೊಡೆಯುವ ಸಾಮರ್ಥ್ಯವುಳ್ಳ ಎರಡುಸಾವಿರ ಆನೆಗಳು ಅಂಕುಶ ಹಾಗೂ ಕಾಲಿನ ಹೆಬ್ಬೆರಳಿನ ತಿವಿತಕ್ಕೊಳಗಾಗಿ ಚೆನ್ನಾಗಿ ಪಲಾಯನಗೈದವು.
ತೇ ರಣಾದ್ ಭರತಶ್ರೇಷ್ಠ ತಾವಕಾಃ ಪ್ರಾದ್ರವನ್ ದಿಶಃ |
ಧಾವಂತಶ್ಚಾಪ್ಯದೃಶ್ಯಂತ ಶ್ವಸಮಾನಾಃ ಶರಾತುರಾಃ ॥12॥
ಭಾರತೋತ್ತಮನೇ! ಬಾಣದ ಹೊಡೆತದಿಂದ ದುಃಖಿತರಾದ ನಿನ್ನ ಕಡೆಯವರು ಜೋರಾಗಿ ಉಸಿರಾಡುತ್ತಾ ದಿಕ್ಕಾಪಾಲಾಗಿ ಓಡಿಹೋಗುವುದು ಕಂಡುಬಂತು.
ತಾನ್ ಪ್ರಭಗ್ನಾನ್ ದ್ರುತಾನ್ ದೃಷ್ಟ್ವಾ ಹತೋತ್ಸಾಹಾನ್ ಪರಾಜಿತಾನ್|
ಅಭ್ಯದ್ರವಂತ ಪಾಂಚಾಲಾಃ ಪಾಂಡವಾಶ್ಚ ಜಯೈಷಿಣಃ ॥13॥
ಹೀಗೆ ಚೆನ್ನಾಗಿ ಹೊಡೆತ ತಿಂದು, ಯುದ್ಧದ ಉತ್ಸಾಹವನ್ನು ಕಳೆದುಕೊಂಡು, ಸೋತು ಓಡಿಹೋಗುತ್ತಿರುವ ನಿನ್ನ ಯೋಧರನ್ನು ನೋಡಿ ಜಯವನ್ನೇ ಬಯಸುವ ಪಾಂಡವರು ಮತ್ತು ಪಾಂಚಾಲರು ಅವರನ್ನು ಅಟ್ಟಿಸಿಕೊಂಡು ಹೋದರು.
ಬಾಣಶಬ್ದರವಶ್ಚಾಪಿ ಸಿಂಹನಾದಶ್ಚ ಪುಷ್ಕಲಃ |
ಶಂಖಶಬ್ದಶ್ಚ ಶೂರಾಣಾಂ ದಾರುಣಃ ಸಮಪದ್ಯತ ॥14॥
ಬಾಣಗಳ (ಸೊಂಯ್ ಎನ್ನುವ) ಶಬ್ದ, ಶೂರರು ಉಂಟುಮಾಡುವ ಬಹಳವಾದ ಸಿಂಹಗರ್ಜನೆ ಹಾಗೂ ಶಂಖಗಳ ಧ್ವನಿಯು ಬಹಳ ಕ್ರೂರವಾಗಿ ಕೇಳಿಸುತ್ತಿತ್ತು.
ದೃಷ್ಟ್ವಾ ತು ತಾವಕಂ ಸೈನ್ಯಂ ಭಯತ್ರಸ್ತಂ ಪ್ರವಿದ್ರುತಮ್ |
ಅನ್ಯೋನ್ಯಂ ಸಮಭಾಷಂತ ಪಾಂಚಾಲಾಃ ಪಾಂಡವೈಃ ಸಹ ॥15॥
ಭಯಗೊಂಡು ಓಡುತ್ತಿರುವ ನಿನ್ನ ಕಡೆಯ ಸೈನ್ಯವನ್ನು ನೋಡಿ ಪಾಂಚಾಲರು ಮತ್ತು ಪಾಂಡವರು ಪರಸ್ಪರವಾಗಿ ಮಾತನಾಡಿಕೊಂಡರು.
ಪಾಂಚಾಲಾಃ
ಅದ್ಯ ರಾಜಾ ಸತ್ಯಧೃತಿರ್ಹತಾಮಿತ್ರೋ ಯುಧಿಷ್ಠಿರಃ |
ಅದ್ಯ ದುರ್ಯೋಧನೋ ಹೀನೋ ದೀಪ್ತಯಾ ನೃಪತಿಶ್ರಿಯಾ ॥16॥
ಪಾಂಚಾಲರು ನಿಜವಾದ ಧೈರ್ಯಶಾಲಿಯಾದ ಯುಧಿಷ್ಠಿರನು ಇಂದು ಶತ್ರುಗಳನ್ನು ಕೊಂದಿದ್ದಾನೆ. ಇಂದು ದುರ್ಯೋಧನನು ಪ್ರಕಾಶಮಾನವಾದ ರಾಜತೇಜಸ್ಸನ್ನು ಕಳೆದುಕೊಂಡಿದ್ದಾನೆ.
ಅದ್ಯ ಶ್ರುತ್ವಾ ಹತಂ ಪುತ್ರಂ ಧೃತರಾಷ್ಟ್ರೋ ಜನೇಶ್ವರಃ |

ನಿಃಸಂಜ್ಞಃ ಪತಿತೋ ಭೂಮೌ ಕಶ್ಮಲಂ ಪ್ರತಿಪತ್ಸ್ಯತೇ ॥17॥
ಇವತ್ತು ಮಗನ ಸಾವಿನ ವಾರ್ತೆಯನ್ನು ಕೇಳಿ ರಾಜ ಧೃತರಾಷ್ಟ್ರನು ನಿಶ್ಚೇಷ್ಟನಾಗಿ ನೆಲಕ್ಕೆ ಬಿದ್ದು ಮೂರ್ಛೆ ಹೋಗುತ್ತಾನೆ.
ಅದ್ಯ ಜಾನಾತಿ ಕೌಂತೇಯಂ ಸಮರ್ಥಂ ಸರ್ವಧನ್ವಿನಾಮ್ ।
ಅದ್ಯಾತ್ಮಾನಂ ಚ ದುರ್ಮೇಧಾ ಗರ್ಹಯಿಷ್ಯತಿ ಪಾಪಕೃತ್ ॥18॥
ಇವತ್ತು ಧರ್ಮರಾಜನು ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠನು ಎಂಬುದನ್ನು ಒಪ್ಪಿಕೊಳ್ಳುತ್ತಾನೆ. ಕೆಟ್ಟ ಆಲೋಚನೆಗಳುಳ್ಳ ಪಾಪಿಯಾದ ಧೃತರಾಷ್ಟ್ರನು ಇವತ್ತು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾನೆ.
ಅದ್ಯ ಕ್ಷತ್ತುರ್ವಚಃ ಸತ್ಯಂ ಸ್ಮರತಾಂ ಬ್ರುವತೋ ಹಿತಮ್ ॥19॥
ಹಿತವಾದ ಮಾತನ್ನು ಹೇಳುತ್ತಿದ್ದ ವಿದುರನ ಮಾತುಗಳನ್ನು ಸ್ಮರಿಸಿಕೊಳ್ಳುವವರು ಇವತ್ತು ಅದು ಸತ್ಯವಾಗಿರುವುದನ್ನು ಮನಗಾಣುತ್ತಾರೆ.
ಅದ್ಯಪ್ರಭೃತಿ ಪಾರ್ಥಸ್ಯ ಪ್ರೇಷ್ಯಭೂತೋ ಹ್ಯುಪಾಚರನ್ ।
ವಿಜಾನಾತು ನೃಪೋ ದುಃಖಂ ಯತ್ ಪ್ರಾಪ್ತಂ ಪಾಂಡುನಂದನ್ಯೈಃ ॥20॥
ಇವತ್ತಿನಿಂದ ಧರ್ಮರಾಜನ ಸೇವಕನಾಗಿ, ಅವನ ಸೇವೆಮಾಡಲಿರುವ ರಾಜನು ಪಾಂಡುವಿನ ಮಕ್ಕಳು ಹಿಂದೆ ಅನುಭವಿಸಿದ ದುಃಖವನ್ನು ತಿಳಿದುಕೊಳ್ಳಲಿ.
ಅದ್ಯ ಕೃಷ್ಣಸ್ಯ ಮಾಹಾತ್ಮ್ಯಂ ಜಾನಾತು ಸ ಮಹೀಪತಿಃ ।
ಅದ್ಯಾರ್ಜುನಧನುರ್ಘೋಷಂ ಘೋರಂ ಜಾನಾತು ಸಂಯುಗೇ ॥21॥
ಅಸ್ತ್ರಾಣಾಂ ಚ ಬಲಂ ಸರ್ವಂ ಬಾಹ್ವೋಶ್ಚ ಬಲಮಾಹವೇ ।
ಪುತ್ರಾಣಾಂ ಚ ವಧಂ ಘೋರಂ ಭೀಮೇನ ಶ್ರೋಷ್ಯತೇ ನೃಪಃ ॥22॥
ರಾಜನು ಇವತ್ತು ಶ್ರೀಕೃಷ್ಣನ ಮಹಿಮೆಯನ್ನು ತಿಳಿದುಕೊಳ್ಳಲಿ. ಅರ್ಜುನನ ಗಾಂಡೀವದ ಕಠೋರವಾದ ಠೇಂಕಾರವು ಯುದ್ಧದಲ್ಲಿ ಹೇಗಿದೆ ಎಂಬುದನ್ನು ಅರಿಯಲಿ. ಅರ್ಜುನನ ಅಸ್ತ್ರಬಲ, ಬಾಹುಬಲವನ್ನೂ ತಿಳಿದುಕೊಳ್ಳಲಿ.
ಅದ್ಯ ಜ್ಞಾಸ್ಯತಿ ಭೀಮಸ್ಯ ಬಲಂ ಘೋರಂ ಮಹಾತ್ಮನಃ ।
ಹತೇ ದುರ್ಯೋಧನೇ ಯುದ್ಧೇ ಶಕ್ರೇಣೇವ ತು ಶಂಬರೇ ॥23॥
ಯುದ್ಧದಲ್ಲಿ ಇಂದ್ರನಿಂದ ಶಂಬರಾಸುರನು ಸತ್ತಹಾಗೆ ಇವತ್ತು ದುರ್ಯೋಧನನು ಭೀಮನ ಕೈಯಲ್ಲಿ ಸತ್ತಾಗ ರಾಜನು ಭೀಮನ ಘೋರವಾದ ಬಲವೇನೆಂಬುದನ್ನು ತಿಳಿಯುತ್ತಾನೆ.
ಯತ್ ಕೃತಂ ಭೀಮಸೇನೇನ ದುಃಶಾಸನವಧೇ ತದಾ ।
ಕೋಽನ್ಯಃ ಕರ್ತಾಽಸ್ತಿ ತಲ್ಲೋಕೇ ಋತೇ ಭೀಮಂ ಮಹಾಬಲಮ್ ॥
ಭೀಮಸೇನನು ದುಃಶಾಸನನನ್ನು ಕೊಲ್ಲುವಾಗ ಯಾವ ಬಲಕಾರ್ಯವನ್ನು ತೋರಿಸಿದ್ದನೋ ಲೋಕದಲ್ಲಿ ಅಂತಹ ಕಾರ್ಯವನ್ನು ಮಾಡಲು ಭೀಮನಲ್ಲದೆ ಬೇರೆ ಯಾರೂ ಮಾಡಲು ಸಾಧ್ಯವಿಲ್ಲ.
ಜಾನೀತಾಮದ್ಯ ಜ್ಯೇಷ್ಠಸ್ಯ ಪಾಂಡವಸ್ಯ ಪರಾಕ್ರಮಮ್ ।
ಮದ್ರರಾಜಂ ಹತಂ ಶ್ರುತ್ವಾ ದೇವೈರಪಿ ಸುದುಃಸಹಮ್ ॥25॥
ದೇವತೆಗಳಿಗೂ ಸಾಯಿಸಲು ಅಸಾಧ್ಯನೆನಿಸಿದ ಶಲ್ಯನನ್ನು ಧರ್ಮರಾಜನು ಇಂದು ಕೊಂದಿದ್ದಾನೆ. ಇದನ್ನು ಕೇಳಿ ರಾಜನಿಗೆ ಧರ್ಮರಾಜನ ಪರಾಕ್ರಮದ ಅರಿವಾಗಲಿ.
ಅದ್ಯ ಜ್ಞಾಸ್ಯತಿ ಸಂಗ್ರಾಮೇ ಮಾದ್ರೀಪುತ್ರೌ ಮಹಾಬಲೌ ।
ನಿಹತೇ ಸೌಬಲೇ ವೀರೇ ಗಾಂಧಾರೇಷು ಚ ಸರ್ವಶಃ ॥26॥
ಶಕುನಿ ಮತ್ತು ಗಾಂಧಾರದೇಶದ ಎಲ್ಲಾ ಯೋಧರನ್ನು ನಕುಲ-ಸಹದೇವರು ಕೊಂದಿದ್ದಾರೆ. ಇದರಿಂದಾಗಿ ರಾಜನಿಗೆ ಇಂದು ನಕುಲ-ಸಹದೇವರ ಮಹತ್ತಾದ ಬಲವೇನೆಂಬುದನ್ನು ತಿಳಿಯುವದು.
ಕಥಂ ತೇಷಾಂ ಜಯೋ ನ ಸ್ಯಾದ್ ಯೇಷಾಂ ಯೋದ್ಧಾ ಧನಂಜಯಃ ।
ಸಾತ್ಯಕಿರ್ಭೀಮಸೇನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥27॥
ಯಾರ ಪಕ್ಷದಲ್ಲಿ ಅರ್ಜುನ, ಸಾತ್ಯಕಿ, ಭೀಮಸೇನ ಮತ್ತು ಧೃಷ್ಟದ್ಯುಮ್ನರು ಇರುತ್ತಾರೆಯೋ ಅವರಿಗೆ ಜಯವು ನಿಶ್ಚಿತ. ವಿಜಯವು ಉಂಟಾಗದಿರಲು ಹೇಗೆ ಸಾಧ್ಯ?
ದ್ರೌಪದ್ಯಾಸ್ತನಯಾಃ ಪಂಚ ಮಾದ್ರೀಪುತ್ರೌ ಚ ಪಾಂಡವೌ ।
ಶಿಖಂಡೀ ಚ ಮಹೇಷ್ವಾಸೋ ರಾಜಾ ಚೈವ ಯುಧಿಷ್ಠಿರಃ ॥28॥
ಯೇಷಾಂ ಚ ಜಗತಾಂ ನಾಥೋ ನಾಥಃ ಕೃಷ್ಣೋ ಜನಾರ್ದನಃ ।
ಕಥಂ ತೇಷಾಂ ಜಯೋ ನ ಸ್ಯಾದ್ ಯೇಷಾಂ ಧರ್ಮೋ ವ್ಯಪಾಶ್ರಯಃ ॥
ದ್ರೌಪದಿಯ ಐದು ಮಕ್ಕಳು, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ಮಹಾಬಿಲ್ಲಾರನಾದ ಶಿಖಂಡೀ, ರಾಜ ಯುಧಿಷ್ಠಿರ ಇವರು ಯಾವ ಪಕ್ಷದಲ್ಲಿ ಇದ್ದಾರೆಯೋ, ಜಗನ್ನಾಥನಾದ ಶ್ರೀಕೃಷ್ಣನೇ ಯಾವ ಪಕ್ಷಕ್ಕೆ ರಕ್ಷಕನಾಗಿದ್ದಾನೋ, ಯಾರ ಧರ್ಮವು ಶಾಸ್ತ್ರಸಮ್ಮತವಾಗಿದ್ದವೋ ಅಂತಹ ಪಾಂಡವರ ಪಕ್ಷಕ್ಕೆ ಜಯವುಂಟಾಗದಿರಲು ಸಾಧ್ಯವಿಲ್ಲ.
ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ ।
ಯೇಷಾಂ ನಾಥೋ ಹೃಷೀಕೇಶಃ ಸರ್ವಲೋಕವಿಭುರ್ಹರಿಃ ॥30॥
ಸಕಲಲೋಕಸ್ವಾಮಿಯಾದ ಶ್ರೀಹರಿ ಯಾರಿಗೆ ರಕ್ಷಕನಾಗಿದ್ದಾನೆಯೋ ಅಂತಹವರಿಗೆ ದ್ರವ್ಯಲಾಭ, ಜಯಲಾಭಗಳು ಸಂಭವಿಸುತ್ತವೆ. ಅವರಿಗೆ ಸೋಲೆಂಬುದು ಇಲ್ಲವೇ ಇಲ್ಲ.

ಭೀಷ್ಮಂ ದ್ರೋಣಂ ಚ ಕರ್ಣಂ ಚ ಮದ್ರರಾಜಾನಮೇವ ಚ |
ತಥಾಽನ್ಯಾನ್ ನೃಪತೀನ್ ವೀರಾನ್ ಶತಶೋಽಥ ಸಹಸ್ರಶಃ ॥31॥
ಕೋಽನ್ಯಃ ಶಕ್ತೋ ರಣೇ ಜೇತುಮ್ ಋತೇ ಪಾರ್ಥಂ ಯುಧಿಷ್ಠಿರಮ್ |
ಯಸ್ಯ ನಾಥೋ ಹೃಷೀಕೇಶಃ ಸದಾ ಸತ್ಯಯಶೋನಿಧಿಃ ॥32॥
ಭೀಷ್ಮನನ್ನು, ದ್ರೋಣನನ್ನು, ಕರ್ಣನನ್ನು, ಶಲ್ಯನನ್ನು ಹಾಗೂ ನೂರಾರು ಸಾವಿರಾರು ಬೇರೆ ವೀರರಾದ ರಾಜರನ್ನು ಯುದ್ಧದಲ್ಲಿ ಗೆಲ್ಲುವುದು ಯುಧಿಷ್ಠಿರನಿಗೆ ಹೊರತಾಗಿ ಬೇರೆ ಯಾರಿಗೂ ಸಾಧ್ಯವಿಲ್ಲ. ಈ ಯುಧಿಷ್ಠಿರನಿಗೆ ವಂಚನೆಯಿಲ್ಲದ ಶುಭ್ರಕೀರ್ತಿಯ ಗಣಿಯಾದ ಶ್ರೀಕೃಷ್ಣನೇ ರಕ್ಷಕನಾಗಿದ್ದಾನೆ.
ಸಂಜಯಃ
ಇತ್ಯೇವಂ ವದಮಾನಾಸ್ತೇ ಹರ್ಷೇಣ ಮಹತಾ ಯುತಾಃ |
ಪ್ರಭಿನ್ನಾಂಸ್ತಾವಕಾನ್ ರಾಜನ್ ಸೃಂಜಯಾಃ ಪೃಷ್ಠತೋಽನ್ವಯುಃ ॥33॥
ಸಂಜಯ ರಾಜನೇ! ಈ ರೀತಿಯಾಗಿ ಮಾತನಾಡುತ್ತಾ ಬಹಳವಾದ ಸಂತೋಷದಿಂದ ಕೂಡಿದವರಾಗಿ ಸೃಂಜಯರು ಪೆಟ್ಟುತಿಂದು ಓಡಿಹೋಗುತ್ತಿರುವ ನಿನ್ನವರನ್ನು ಬೆನ್ನಟ್ಟಿ ಹೋದರು.
ಧನಂಜಯೋ ರಥಾನೀಕಮಭ್ಯವರ್ತತ ವೀರ್ಯವಾನ್ |
ಮಾದ್ರೀಪುತ್ರೌ ಚ ಶಕುನಿಂ ಸಾತ್ಯಕಿಶ್ಚ ಮಹಾರಥಃ ॥34॥
ವೀರ್ಯವಂತನಾದ ಅರ್ಜುನನು ರಥಸೈನ್ಯದ ಮೇಲೆ ದಾಳಿಮಾಡಿದನು. ನಕುಲ- ಸಹದೇವರು ಮತ್ತು ಮಹಾರಥನಾದ ಸಾತ್ಯಕಿಯು ಶಕುನಿಯ ಮೇಲೆ ಆಕ್ರಮಣ ಮಾಡಿದರು.
ತಾನ್ ಪ್ರೇಕ್ಷ್ಯ ದ್ರವತಃ ಸರ್ವಾನ್ ಭೀಮಸೇನಭಯಾರ್ದಿತಾನ್ |
ದುರ್ಯೋಧನಸ್ತದಾ ಸೂತಮಬ್ರವೀದ್ ವಿಸ್ಮಯನ್ನಿವ ॥35॥
ಭೀಮಸೇನನ ಭಯದಿಂದ ಹೆದರಿ ಓಡಿಹೋಗುತ್ತಿದ್ದ ಅವರೆಲ್ಲರನ್ನು ನೋಡಿ ದುರ್ಯೋಧನನು ತನ್ನ ಸಾರಥಿಗೆ ಹೀಗೆ ಹೇಳುತ್ತಾನೆ
ದುರ್ಯೋಧನಃ
ನ ಮಾಽತಿಕ್ರಮತೇ ಪಾರ್ಥೋ ಧನುಷ್ಪಾಣಿಮವಸ್ಥಿತಮ್ |
ಜಘನೇ ಸರ್ವಸೈನ್ಯಾನಾಂ ಶನೈರಶ್ವಾನ್ ಪ್ರಚೋದಯ ॥36॥
ದುರ್ಯೋಧನ ಧನುರ್ಧಾರಿಯಾಗಿ ಸಕಲಸೈನ್ಯದ ಪೃಷ್ಠಭಾಗದಲ್ಲಿ ಇರುವ ನನ್ನನ್ನು ಯುಧಿಷ್ಠಿರನು ಅತಿಕ್ರಮಿಸಲು ಸಾಧ್ಯವಿಲ್ಲ. ಆದ್ದರಿಂದ ಕುದುರೆಗಳನ್ನು ನಿಧಾನವಾಗಿ ಓಡಿಸು.
ಜಘನೇ ಯುಧ್ಯಮಾನಂ ಹಿ ಕೌಂತೇಯೋ ಮಾಂ ಧನಂಜಯಃ |
ನೋತ್ಸಹೇತ ವ್ಯತಿಕ್ರಾಂತುಂ ವೇಲಾಮಿವ ಮಹೋದಧಿಃ ॥37॥
ಸೈನ್ಯದ ಹಿಂಭಾಗದಲ್ಲಿ ಯುದ್ಧಮಾಡುತ್ತಿರುವ ನನ್ನನ್ನು ಅರ್ಜುನನೂ ಮೀರಿಹೋಗಲು ಸಾಧ್ಯವಿಲ್ಲ. ಏಕೆಂದರೆ ಸಮುದ್ರವು ತೀರವನ್ನು ಮೀರುವುದಿಲ್ಲ. ಹಾಗೆಯೇ ನಾನು ನನ್ನ ಸೈನ್ಯವನ್ನು ರಕ್ಷಿಸುತ್ತಿದ್ದೇನೆ.
ಪಶ್ಯ ಸೈನ್ಯಂ ಮಹತ್ಸೂತ ಪಾಂಡವೈಃ ಸಮಭಿದ್ರುತಮ್ |
ಸೈನ್ಯರೇಣುಂ ಸಮುದ್ಧೂತಂ ಪಶ್ಯ ಚೈನಂ ಸಮಂತತಃ ॥38॥
ಸೂತನೇ! ಪಾಂಡವರಿಂದಾಗಿ ಓಡಿಹೋಗುತ್ತಿರುವ ನಮ್ಮ ದೊಡ್ಡದಾದ ಸೈನ್ಯವನ್ನು ನೋಡು! ಎಲ್ಲೆಡೆ ಧೂಳು ಎದ್ದಿದೆ. ಅದನ್ನೂ ನೋಡು.
ಸಿಂಹನಾದಾಂಶ್ಚ ಬಹುಶಃ ಶೃಣು ಘೋರಾನ್ ಭಯಾನಕಾನ್ |
ತಸ್ಮಾದ್ ಯಾಹಿ ಶನೈಃ ಸೂತ ಜಘನಂ ಪರಿಪಾಲಯ ॥39॥
ಭಯವನ್ನು ಹುಟ್ಟಿಸುವ ಘೋರವಾದ ಸಿಂಹನಾದವನ್ನು ಕೇಳು. ಆದ್ದರಿಂದ ನಿಧಾನವಾಗಿ ಹೋಗು. ಆ ಮೂಲಕ ಸೈನ್ಯದ ಹಿಂಭಾಗವನ್ನಾದರೂ ರಕ್ಷಿಸೋಣ.
ಮಯಿ ಸ್ಥಿತೇ ಚ ಸಮರೇ ನಿರುದ್ಧೇಷು ಚ ಪಾಂಡುಷು |
ಪುನರಾವರ್ತತೇ ತೂರ್ಣಂ ಮಾಮಕಂ ಬಲಮೋಜಸಾ ॥40॥
ನಾನು ಯುದ್ಧದಲ್ಲಿ ನಿಂತು ಪಾಂಡವರನ್ನು ನಿಗ್ರಹಿಸಿದರೆ ನನ್ನ ಸೈನ್ಯವು ಹೊಸಸಾಮರ್ಥ್ಯವನ್ನು ಮೈಗೂಡಿಸಿಕೊಂಡು ಬೇಗನೆ ಯುದ್ಧಕ್ಕೆ ಹಿಂತಿರುಗುತ್ತದೆ.
ಸಂಜಯಃ
ತಚ್ಛ್ರುತ್ವಾ ತವ ಪುತ್ರಸ್ಯ ಭಾಷತೋ ಮಧುರಂ ವಚಃ |
ಸಾರಥಿರ್ಹೇಮಸಂಛನ್ನಾನ್ ಶನೈರಶ್ವಾನಚೋದಯತ್ ॥41॥
ಸಂಜಯ ನಿನ್ನಮಗನು ಆಡಿದ ಮಧುರವಾದ ಮಾತನ್ನು ಕೇಳಿದ ಸಾರಥಿಯು ಬಂಗಾರದ ಕವಚವನ್ನು ಹೊಂದಿದ ಕುದುರೆಗಳನ್ನು ನಿಧಾನವಾಗಿ ನಡೆಸಿದನು.
ಗಜಾಶ್ವರಥಿಭಿರ್ಹೀನಾಃ ತ್ಯಕ್ತಾತ್ಮಾನಃ ಪದಾತಯಃ |
ಏಕವಿಂಶತಿಸಾಹಸ್ರಾಃ ಸಂಯುಗಾಯಾವತಸ್ಥಿರೇ ॥42॥
ತಮ್ಮ ಪ್ರಾಣದ ಮೇಲೆ ಆಶೆಯನ್ನು ಬಿಟ್ಟಿರುವ, ಆನೆ ಕುದುರೆ ರಥಗಳಿಂದಾಗಿ ಹೊಡೆತವನ್ನು ತಿಂದಿರುವ ಇಪ್ಪತ್ತೊಂದು ಸಾವಿರ ಸಂಖ್ಯೆಯಲ್ಲಿ ಇದ್ದ ಕಾಲಾಳುಗಳು ಯುದ್ಧಕ್ಕಾಗಿ ಮತ್ತೆ ಬಂದರು.
ನಾನಾದೇಶಸಮುದ್ಭೂತಾ ನಾನಾರಂಜಿತವಾಸಸಃ |

ಅವಸ್ಥಿತಾಸ್ತದಾ ಯೋಧಾಃ ಪ್ರಾರ್ಥಯಂತೋ ಮಹದ್ಯಶಃ ॥43॥
ಆಗ ನಾನಾದೇಶಗಳಿಂದ ಭಿನ್ನ-ಭಿನ್ನವಾದ ಬಟ್ಟೆಗಳನ್ನು ಧರಿಸಿರುವ ಯೋಧರು ದೊಡ್ಡ ಯಶಸ್ಸನ್ನು ಪ್ರಾರ್ಥಿಸುತ್ತಾ ನಿಂತರು.
ತೇಷಾಮಾಪತತಾಂ ತತ್ರ ಸಂಸೃಷ್ಟಾನಾಂ ಪರಸ್ಪರಮ್ |
ಸಮ್ಮರ್ದಸ್ತು ಮಹಾನ್ ಜಜ್ಞೇ ಘೋರರೂಪೋ ಭಯಂಕರಃ ॥44॥
ಯುದ್ಧದಲ್ಲಿ ತೊಡಗಿದ, ಪರಸ್ಪರ ಮೇಲೆ ಬೀಳುತ್ತಿರುವ ಆ ಯೋಧರ ಮಧ್ಯದಲ್ಲಿ ಘೋರಸ್ವರೂಪದ ದೊಡ್ಡ ಯುದ್ಧವು ನಡೆಯಿತು.
ಭೀಮಸೇನಂ ತದಾ ರಾಜನ್ ಧೃಷ್ಟದ್ಯುಮ್ನಂ ಚ ಪಾರ್ಷತಮ್ |
ಬಲೇನ ಚತುರಂಗೇಣ ನಾನಾದೇಶ್ಯಾ ನ್ಯವಾರಯನ್ ॥45॥
ರಾಜನೇ! ಭೀಮನನ್ನು ಮತ್ತು ಧೃಷ್ಟದ್ಯುಮ್ನನನ್ನು ಚತುರಂಗಬಲದೊಂದಿಗೆ ನಾನಾದೇಶದ ಯೋಧರು ತಡೆದರು.
ಭೀಮಮೇವಾಭ್ಯವರ್ತಂತ ರಣೇಽನ್ಯೇ ತು ಪದಾತಯಃ |
ಪ್ರಕ್ಷ್ವೇಡ್ಯಾಸ್ಫೋಟ್ಯ ಸಂಹೃಷ್ಟಾ ವೀರಲೋಕಮಿಯಾಸವಃ ॥46॥
ಇನ್ನೊಂದು ಭಾಗದಿಂದ ಪದಾತಿಗಳು ಭೀಮನನ್ನೊಬ್ಬನನ್ನೇ ಆಕ್ರಮಿಸಿದರು. ಅವರು ಸಂತೋಷದಿಂದ ಭುಜವನ್ನು ತಟ್ಟಿಕೊಳ್ಳುತ್ತಾ ವೀರಲೋಕಕ್ಕೆ ಹೋಗುವ ಇಚ್ಛೆಯುಳ್ಳವರಾಗಿದ್ದರು.
ಆಸಾದ್ಯ ಭೀಮಸೇನಂ ತು ಸಂಕ್ರುದ್ಧಾ ಯುದ್ಧದುರ್ಮದಾಃ |
ಧಾರ್ತರಾಷ್ಟ್ರಾಸ್ತದಾ ನೇದುರ್ನಾನ್ಯಾಮಕಥಯನ್ ಕಥಾಮ್ ॥47॥
ಯುದ್ಧದಲ್ಲಿ ಮಣಿಸಲು ಕಷ್ಟಸಾಧ್ಯವಾದ ಹಾಗೂ ಕೋಪಭರಿತವಾದ ಧಾರ್ತರಾಷ್ಟ್ರ ಸೇನೆಯು ಭೀಮಸೇನನ ಬಳಿಗೆ ಬಂದು ಜೋರಾಗಿ ಶಬ್ದವನ್ನುಂಟುಮಾಡಿತು. ಬೇರೆ ಯಾವುದೇ ವಿಷಯದ ಬಗ್ಗೆ ಮಾತನಾಡುತ್ತಿರಲಿಲ್ಲ.
ಪರಿವಾರ್ಯ ರಣೇ ಭೀಮಂ ನಿಜಘ್ನುಸ್ತೇ ಸಮಂತತಃ ॥48॥
ಯುದ್ಧದಲ್ಲಿ ಭೀಮನನ್ನು ಸುತ್ತುವರಿದು ಎಲ್ಲಾ ಕಡೆಯಿಂದಲೂ ಹೊಡೆದರು.
ಸ ವಧ್ಯಮಾನಃ ಸಮರೇ ಪದಾತಿಗಣಸಂವೃತಃ |
ನ ಚಚಾಲ ರಥೋಪಸ್ಥೇ ಮೈನಾಕ ಇವ ಪರ್ವತಃ ॥49॥
ಪದಾತಿಗಳ ಸಮೂಹವು ಸುತ್ತ ನೆರೆದು, ಯುದ್ಧದಲ್ಲಿ ಭೀಮನಿಗೆ ಹೊಡೆಯುತ್ತಿದ್ದರೂ ಭೀಮಸೇನನು ಮೈನಾಕ ಪರ್ವತದ ಹಾಗೆ ಅಚಲನಾಗಿ ರಥದ ಆಸನದಿಂದ ಚಲಿಸಲಿಲ್ಲ.
ತೇ ತು ಕ್ರುದ್ಧಾ ಮಹಾರಾಜ ಪಾಂಡವಸ್ಯ ಮಹಾರಥಾಃ |
ನಿಗೃಹೀತುಂ ಪ್ರಚಕ್ರುರ್ಹಿ ಯೋಧಾಶ್ಚಾನ್ಯೇ ನ್ಯವಾರಯನ್ ॥50॥
ಮಹಾರಾಜನೇ! ಪಾಂಡವರ ಮಹಾರಥರು ಬಹಳ ಕೋಪಿಸಿಕೊಂಡು ಆ ಪದಾತಿಗಳನ್ನು ಹಿಡಿಯಲು ತೊಡಗಿದರು. ಆಗ ಬೇರೆ ಯೋಧರು ಅವರನ್ನು ತಡೆದರು.
ಅಕ್ರುಧ್ಯತ ರಣೇ ಭೀಮಃ ತೈಸ್ತದಾ ಪರ್ಯವಸ್ಥಿತೈಃ ॥51॥
ಯುದ್ಧದಲ್ಲಿ ಸುತ್ತಲೂ ನೆರೆದ ಯೋಧರ ಮೇಲೆ ಭೀಮನು ಕೋಪಿಸಿಕೊಂಡನು.
ಸೋಽವತೀರ್ಯ ರಥಾತ್ ತೂರ್ಣಂ ಪದಾತಿಃ ಸಮವಸ್ಥಿತಃ |
ಜಾತರೂಪಪರಿಚ್ಛನ್ನಾಂ ಪ್ರಗೃಹ್ಯ ಮಹತೀಂ ಗದಾಮ್ ॥52॥
ತಕ್ಷಣ ಭೀಮನು ರಥದಿಂದ ಕೆಳಗಿಳಿದು ಕಾಲುಗಳಲ್ಲಿಯೇ ನಿಂತನು. ಬಂಗಾರದ ಲೇಪವುಳ್ಳ ದೊಡ್ಡ ಗದೆನ್ನು ಕೈಯಲ್ಲಿ ಹಿಡಿದುಕೊಂಡನು.
ಅವಧೀತ್ ತಾವಕಾನ್ ಯೋಧಾನ್ ದಂಡಪಾಣಿರಿವಾಂತಕಃ ॥53॥
ದಂಡಧಾರಿಯಾದ ಯಮನಂತೆ ಭೀಮನು ಆ ಗದೆಯಿಂದ ನಿನ್ನ ಕಡೆಯ ಯೋಧರನ್ನು ಹೊಡೆದನು.
ವಿಪ್ರಹೀಣರಥಾಶ್ವಾಂಸ್ತಾನ್ ನರಾನ್ ಸ ಪುರುಷರ್ಷಭಃ |
ರಥಾಶ್ಚ ದ್ವಿಪಹೀನಾಸ್ತು ತಾನ್ ಭೀಮೋ ಗದಯಾ ಬಲೀ ॥54॥
ಪುರುಷಶ್ರೇಷ್ಠನಾದ ಬಲಶಾಲಿ ಭೀಮನು ರಥ-ಕುದುರೆಗಳನ್ನು ಕಳೆದುಕೊಂಡಿರುವ ಪದಾತಿಗಳನ್ನು ಗದೆಯಿಂದ ಹೊಡೆದನು. ರಥಗಳನ್ನೂ ಹೊಡೆದನು. ಆನೆಗಳನ್ನು ಕಳೆದುಕೊಂಡಿರುವ ಗಜವಾಹಿಗಳನ್ನೂ ಕೊಂದನು.
ಏಕವಿಂಶತಿಸಾಹಸ್ರಾನ್ ಪದಾತೀನವಪೋಥಯತ್ ॥55॥
ಇಪ್ಪತ್ತೊಂದು ಸಾವಿರ ಪದಾತಿಗಳನ್ನು ಮರ್ದಿಸಿದನು.
ಹತ್ವಾ ತತ್ ಪುರುಷಾನೀಕಂ ಭೀಮಃ ಸತ್ಯಪರಾಕ್ರಮಃ |
ಧೃಷ್ಟದ್ಯುಮ್ನಂ ಪುರಸ್ಕೃತ್ಯ ನಚಿರಾತ್ ಪ್ರತ್ಯದೃಶ್ಯತ ॥56॥
ಯಥಾರ್ಥವಾದ ಪರಾಕ್ರಮವುಳ್ಳ ಭೀಮಸೇನನು ಪುರುಷಸೈನ್ಯವನ್ನು ಕೊಂದು ಧೃಷ್ಟದ್ಯುಮ್ನನ ಜೊತೆಗೆ ಬೇಗನೇ ಕಾಣಿಸಿಕೊಂಡನು.
ಪಾದಾತಾ ನಿಹತಾ ಭೂಮೌ ಶಿಶ್ಯಿರೇ ರುಧಿರೋಕ್ಷಿತಾಃ |
ಪ್ರಭಗ್ನಾ ಇವ ವಾತೇನ ಕರ್ಣಿಕಾರಾಃ ಸುಪುಷ್ಪಿತಾಃ ॥57॥
ಬಿರುಗಾಳಿಗೆ ಮುರಿದು ಕೆಳಬಿದ್ದ ಹೂಬಿಟ್ಟ ಕರ್ಣಿಕಾರ(ಕಣಗಿಲೆ) ಮರಗಳಂತೆ ರಕ್ತಸಿಕ್ತದೇಹವುಳ್ಳ ಪದಾತಿಗಳು ಭೂಮಿಯಲ್ಲಿ ಮಲಗಿದ್ದರು.
ನಾನಾಶಸ್ತ್ರಸಮಾಯುಕ್ತಾ ನಾನಾಕುಂಡಲಧಾರಿಣಃ |
ನಾನಾಜಾತ್ಯಾ ಹತಾಸ್ತತ್ರ ನಾನಾದೇಶಸಮಾಗತಾಃ ॥58॥

ನಾನಾವಿಧದ ಶಸ್ತ್ರಗಳನ್ನು ಹಿಡಿದಿರುವ, ನಾನಾವಿಧದ ಕುಂಡಲವನ್ನು ಧರಿಸಿರುವ, ನಾನಾಜಾತಿಯವರಾದ, ನಾನಾದೇಶಗಳಿಂದ ಬಂದಿರುವ ಯೋಧರು ಅಲ್ಲಿ ಸತ್ತಿದ್ದರು.
ಪತಾಕಾಧ್ವಜಸಂಪನ್ನಂ ಪದಾತೀನಾಂ ಮಹದ್ಬಲಮ್ |
ನಿಕೃತ್ತಂ ವಿಬಭೌ ತತ್ರ ಭಿನ್ನಂ ತಾಲವನಂ ಯಥಾ ॥59॥
ಪತಾಕೆ ಹಾಗೂ ಧ್ವಜಗಳನ್ನು ಹೊಂದಿದ ಆ ಪದಾತಿಗಳ ಸೇನೆಯು ಸತ್ತು ಕೆಳಬಿದ್ದಿತು. ಇದು ತಾಲವೃಕ್ಷಗಳ ವನವು ತುಂಡರಿಸಿ ಬಿದ್ದ ಹಾಗೆ ಇತ್ತು.
ಯುಧಿಷ್ಠಿರಪುರೋಗಾಸ್ತು ಸಹಸೈನ್ಯಾ ಮಹಾರಥಾಃ |
ಅಭ್ಯಧಾವನ್ ಮಹಾತ್ಮಾನಃ ಪುತ್ರಂ ದುರ್ಯೋಧನಂ ತವ ॥60॥
ಯುಧಿಷ್ಠಿರನೇ ಮೊದಲಾದ ಮಹಾತ್ಮರಾದ ಮಹಾರಥರು ಸೈನ್ಯಸಮೇತವಾಗಿ ನಿನ್ನ ಮಗ ದುರ್ಯೋಧನನಿಗೆ ಮುತ್ತಿಗೆ ಹಾಕಿದರು.
ತೇ ಸರ್ವೇ ತಾವಕಾನ್ ದೃಷ್ಟ್ವಾ ಮಹೇಷ್ವಾಸಾನ್ ಪರಾಙ್ಮುಖಾನ್ |
ನಾತ್ಯವರ್ತಂತ ತೇ ಪುತ್ರಂ ವೇಲಾಮಿವ ಮಹೋರ್ಮಯಃ ॥61॥
ಆ ಪಾಂಡವರ ಯೋಧರೆಲ್ಲರೂ ನಿನ್ನ ಪಕ್ಷದ ಮಹಾಬಿಲ್ಗಾರರು ಯುದ್ಧದಿಂದ ಪಲಾಯನಮಾಡಿದ್ದನ್ನು ಕಂಡು ಸೈನ್ಯದ ಹಿಂಭಾಗದಲ್ಲಿ ಇದ್ದ ನಿನ್ನ ಮಗನನ್ನು ಮೀರಿ ಹೋಗಲಿಲ್ಲ. ಸಮುದ್ರವು ತೀರವನ್ನು ಮೀರದಿರುವಂತೆ ಪಾಂಡವರು ದುರ್ಯೋಧನನನ್ನು ದಾಟಿ ಹೋಗಲಿಲ್ಲ.
ತದದ್ಭುತಮಪಶ್ಯಾಮ ತವ ಪುತ್ರಸ್ಯ ವಿಕ್ರಮಮ್ |
ಯದೇಕಂ ಸಹಿತಾಃ ಪಾರ್ಥಾ ನ ಶೇಕುರತಿವರ್ತಿತುಮ್ ॥62॥
ಪಾಂಡವರ ಕಡೆಯವರು ಎಲ್ಲರು ಸೇರಿದ್ದರೂ ದುರ್ಯೋಧನನು ಒಬ್ಬನೇ ಅವರನ್ನು ತಡೆಹಿಡಿದನು. ನಿನ್ನ ಮಗನ ಈ ಪರಾಕ್ರಮವು ಬಹಳ ಅದ್ಭುತವಾಗಿತ್ತು.
ನಾತಿದೂರೇಽಪಯಾತಂ ತಂ ಕೃತಬುದ್ಧಿಂ ಪಲಾಯನೇ |
ದುರ್ಯೋಧನಃ ಸ್ವಕಂ ಸೈನ್ಯಮಬ್ರವೀದ್ ಭೃಶವಿಕ್ಷತಮ್ ॥63॥
ಬಹಳವಾಗಿ ಗಾಯಗೊಂಡು ಯುದ್ಧದಿಂದ ಪಲಾಯನ ಮಾಡುವ ನಿಶ್ಚಯವನ್ನು ಮಾಡಿಕೊಂಡು ಹತ್ತಿರದಲ್ಲಿಯೇ ಇರುವ ತನ್ನ ಸೈನ್ಯವನ್ನು ಕುರಿತು ದುರ್ಯೋಧನನು ಹೀಗೆ ಹೇಳುತ್ತಾನೆ.
ದುರ್ಯೋಧನಃ
ನ ತಂ ದೇಶಂ ಪ್ರಪಶ್ಯಾಮಿ ಪೃಥಿವ್ಯಾಂ ಪರ್ವತೇಷು ವಾ |
ಯತ್ರ ಯಾತಾನ್ ನ ವೋ ಹನ್ಯುಃ ಪಾಂಡವಾಃ ಕಿಂ ದ್ರುತೇನ ವಃ ॥
ದುರ್ಯೋಧನ ನೀವು ಇಲ್ಲಿಂದ ಓಡಿಹೋದರೂ ಪಾಂಡವರ ಕೈಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಪಾಂಡವರ ಆಕ್ರಮಣಕ್ಕೆ ಒಳಗಾಗದ ಪ್ರದೇಶವು ಪೃಥ್ವಿಯಲ್ಲಾಗಲೀ, ಪರ್ವತಗಳಲ್ಲಾಗಲೀ ಎಲ್ಲಿಯೂ ಇಲ್ಲ. ಆದ್ದರಿಂದ ನೀವು ಓಡುವುದರಿಂದ ಏನು ಪ್ರಯೋಜನ?
ಅಲ್ಪಂ ಚ ಬಲಮೇತೇಷಾಂ ಕೃಷ್ಣೌ ಚ ಭೃಶದುಃಖಿತೌ |
ಯದಿ ಸರ್ವೇ ಪ್ರತಿಷ್ಠಾಮೋ ಧ್ರುವಂ ನೋ ವಿಜಯೋ ಭವೇತ್ ॥65॥
ಪಾಂಡವರ ಸೇನೆಯು ಸಂಖ್ಯೆಯಲ್ಲಿ ಕಡಿಮೆಯಾಗಿದೆ. ಶ್ರೀಕೃಷ್ಣ-ಅರ್ಜುನರೂ ಕೂಡ ಬಹಳವಾಗಿ ಬಳಲಿದ್ದಾರೆ. ಆದ್ದರಿಂದ ಒಂದು ವೇಳೆ ನಾವು ಎಲ್ಲರು ನಿಂತು ಯುದ್ಧ ಮಾಡಿದರೆ ಜಯವು ನಿಶ್ಚಯವಾಗಿಯೂ ನಮ್ಮದಾಗುವುದು.
ವಿಪ್ರಯಾತಾಂಸ್ತು ನೋ ಭಿನ್ನಾನ್ ಪಾಂಡವಾಃ ಕೃತಕಿಲ್ಬಿಷಾನ್ |
ಅನುವ್ರಜ್ಯ ಹನಿಷ್ಯಂತಿ ಶ್ರೇಯೋ ನಃ ಸಮರೇ ಸ್ಥಿತಿಃ ॥66॥
ಅಪರಾಧ ಮಾಡಿ ನಾವು ಬೇರೆ ಬೇರೆ ದಿಕ್ಕುಗಳಲ್ಲಿ ಓಡಿಹೋದರೆ ಪಾಂಡವರು ಹಿಂಬಾಲಿಸಿಕೊಂಡು ಬಂದು ಸಾಯಿಸುತ್ತಾರೆ. ಅದಕ್ಕಿಂತ ಯುದ್ಧದಲ್ಲಿ ನಿಲ್ಲುವುದೇ ಶ್ರೇಯಸ್ಕರ.
ಶೃಣ್ವಂತು ಕ್ಷತ್ರಿಯಾಃ ಸರ್ವೇ ಯಾವಂತಃ ಸ್ಥ ಸಮಾಗತಾಃ ॥67॥
ಕ್ಷತ್ರಿಯವೀರರೇ! ಎಲ್ಲರೂ ಕೇಳಿಸಿಕೊಳ್ಳಿ! ಬಂದಿರುವ ನೀವೆಲ್ಲರೂ ಯುದ್ಧದಲ್ಲಿ ನಿಲ್ಲಿ.
ಯದಿ ಶೂರಂ ಚ ಭೀಮಂ ಚ ಮಾನಯತ್ಯಂತಕಃ ಸದಾ |
ಕೋ ನು ಮೂಢೋ ನ ಯುಧ್ಯೇತ ಪುರುಷಃ ಕ್ಷತ್ರಿಯರ್ಷಭಃ ॥68॥
ಒಂದು ವೇಳೆ ಶೂರನಾದ ಭೀಮನನ್ನು ಎದುರಿಸಿದರೆ ಯಮನೂ ಕೂಡ ಗೌರವಿಸುತ್ತಾನೆ. ಕ್ಷತ್ರಿಯೋತ್ತಮನಾದ ಯಾವ ಪುರುಷನೂ ಯುದ್ಧ ಮಾಡದಿರಲಾರನು.
ಶ್ರೇಯೋ ನೋ ಭೀಮಸೇನಸ್ಯ ಕ್ರುದ್ಧಸ್ಯ ಪ್ರಮುಖೇ ಸ್ಥಿತಿಃ ॥69॥
ಏಕೆಂದರೆ ಯುದ್ಧದಲ್ಲಿ ಕ್ರುದ್ಧನಾದ ಭೀಮನ ಮುಂದೆ ಯುದ್ಧಕ್ಕೆ ನಿಲ್ಲುವುದರಿಂದಲೇ ನಮಗೆ ಶ್ರೇಯಸ್ಸು ಉಂಟಾಗುತ್ತದೆ.
ಮುಖ್ಯಃ ಸಾಂಗ್ರಾಮಿಕೋ ಮೃತ್ಯುರ್ದುಃಖೋ ವ್ಯಾಧಿಜರಾದಿಭಿಃ |
ಮರ್ತ್ಯೇನಾವಶ್ಯಂ ಮರ್ತವ್ಯಂ ಗೃಹೇಷ್ವಪಿ ಕದಾಚನ ॥70॥
ಕ್ಷತ್ರಿಯನಿಗೆ ಯುದ್ಧದಲ್ಲಿ ಬರುವ ಮರಣವು ಶ್ರೇಷ್ಠವಾಗಿದೆ. ರೋಗ-ಮುಪ್ಪುಗಳಿಂದ ಬರುವ ಮರಣವು ಅವನಿಗೆ ದುಃಖದಾಯಕ. ಮನುಷ್ಯನು ಯಾವತ್ತಾದರೂ ಮನೆಯಲ್ಲಿಯಾದರೂ ಅವಶ್ಯವಾಗಿ ಸಾಯಲೇಬೇಕು.
ಯುಧ್ಯತಃ ಕ್ಷತ್ರಧರ್ಮೇಣ ಮೃತ್ಯುರೇಷ ಸನಾತನಃ ॥71॥
ಕ್ಷತ್ರಿಯಧರ್ಮಕ್ಕನುಸಾರವಾಗಿ ಯುದ್ಧಮಾಡಿಕೊಂಡು ಸಾಯುವುದು ಯಾವತ್ತೂ ಉಳಿಯುವಂತಹದ್ದು.

ಜಿತ್ವಾ ವಾ ಸುಖಮಾಪ್ನೋತಿ ಹತಃ ಪ್ರೇತ್ಯ ಮಹದ್ಯಶಃ |
ನ ಯುದ್ಧಧರ್ಮಾಚ್ಛ್ರೇಯಾನ್ ವೈ ಪಂಥಾಃ ಸ್ವರ್ಗಸ್ಯ ಕೌರವಾಃ ||72||
ಗೆದ್ದರೆ ಸುಖವನ್ನು ಹೊಂದುವವನು. ಸತ್ತರೆ ಬಹಳವಾದ ಕೀರ್ತಿಯನ್ನು ಹೊಂದುವವನು. ಕೌರವರೇ! ಸ್ವರ್ಗವನ್ನು ಪಡೆಯಲು ಯುದ್ಧಕ್ಕಿಂತ ಬೇರೆಯಾದ ಮಾರ್ಗವು ಇಲ್ಲ.
ಅಚಿರೇಣ ಜಿತಾಲ್ಲೋಕಾನ್ ಹತೋ ಯುಧಿ ಸಮಶ್ನುತೇ ||73||
ಯುದ್ಧದಲ್ಲಿ ಮರಣವನ್ನು ಹೊಂದಿದರೆ ಬೇಗನೆ ವೀರಸ್ವರ್ಗವನ್ನು ಹೊಂದುವವನು.
ಸಂಜಯಃ
ಶ್ರುತ್ವಾ ತು ವಚನಂ ತಸ್ಯ ಪೂಜಯಿತ್ವಾ ತು ಪಾರ್ಥಿವಾಃ |
ಪುನರೇವಾಭ್ಯವರ್ತಂತ ಪಾಂಡವಾನಾತತಾಯಿನಃ ||74||
ಸಂಜಯ ದುರ್ಯೋಧನ ಆಡಿದ ಮಾತುಗಳನ್ನು ಕೇಳಿ, ಗೌರವಿಸಿ ಆತತಾಯಿಗಳಾದ ರಾಜರುಗಳು ಪುನಃ ಪಾಂಡವರನ್ನು ಎದುರಿಸಿದರು.
ತಾನಾಪತತ ಏವಾಶು ವ್ಯೂಢಾನೀಕಾಃ ಪ್ರಹಾರಿಣಃ |
ಪ್ರತ್ಯುದ್ಯಯುಸ್ತದಾ ಪಾರ್ಥಾ ಜಯಗೃಧ್ರಾಃ ಪ್ರಮನ್ಯವಃ ||75||
ಹೀಗೆ ಮೇಲೇರಿ ಬಂದ ಕೌರವಯೋಧರನ್ನು ಸೈನ್ಯದ ವ್ಯೂಹಗಳಲ್ಲಿ ಯುದ್ಧಸನ್ನದ್ಧರಾದ ಪಾಂಡವಯೋಧರು ಎದುರಿಸಿದರು. ಪಾಂಡವಯೋಧರು ಜಯವನ್ನೇ ಅಪೇಕ್ಷಿಸುತ್ತಿದ್ದರು ಮತ್ತು ಬಹಳವಾಗಿ ಕೋಪಿಸಿಕೊಂಡಿದ್ದರು.
ಧನಂಜಯೋ ರಥೇನಾಜಾವಭ್ಯವರ್ತತ ವೀರ್ಯವಾನ್ |
ವಿಶ್ರುತಂ ತ್ರಿಷು ಲೋಕೇಷು ಗಾಂಡೀವಂ ವಿಕ್ಷಿಪನ್ ಧನುಃ ||76||
ವೀರನಾದ ಅರ್ಜುನನು ಮೂರುಲೋಕಗಳಲ್ಲಿ ಪ್ರಸಿದ್ಧವಾದ ತನ್ನ ಗಾಂಡೀವ ಧನುಸ್ಸನ್ನು ಠೇಂಕರಿಸುತ್ತಾ ರಥದಲ್ಲಿದ್ದುಕೊಂಡು ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿದನು.
ಮಾದ್ರೀಪುತ್ರೌ ಚ ಶಕುನಿಂ ಸಾತ್ಯಕಿಶ್ಚ ಮಹಾಬಲಃ |
ಜವೇನಾಭ್ಯಪತನ್ ಹೃಷ್ಟಾ ಯತ್ತಾ ವೈ ತಾವಕಂ ಬಲಮ್ ||77||
ನಕುಲ-ಸಹದೇವರು ಮತ್ತು ಬಲಶಾಲಿಯಾದ ಸಾತ್ಯಕಿಯು ಶಕುನಿಯನ್ನು ಎದುರಿಸಿ ಕಾದಾಡಿದರು. ಅವರೆಲ್ಲರೂ ಸಂತೋಷದಿಂದ ಸಾವಧಾನದಿಂದ ನಿನ್ನ ಸೈನ್ಯವನ್ನು ಎದುರಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಏಕೋನವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಸಾತ್ಯಕಿಯಿಂದ ಸಾಲ್ವನ ವಧೆ
ಸಂಜಯಃ
ಸನ್ನಿವೃತ್ತೇ ಬಲೌಘೇ ತು ಸಾಲ್ವೋ ಮ್ಲೇಚ್ಛಗಣಾಧಿಪಃ |
ಅಭ್ಯವರ್ತತ ಸಂಕ್ರುದ್ಧಃ ಪಾಂಡೂನಾಂ ಸುಮಹದ್ಬಲಮ್ ||1||
ಸಂಜಯ ಹೀಗೆ ಕೌರವನ ಸೇನೆಯು ಯುದ್ಧದಿಂದ ಹಿಂತಿರುಗಿದಾಗ ಮ್ಲೇಚ್ಛಸೈನ್ಯದ ನೇತಾರನಾದ ಸಾಲ್ವನು ಬಹಳ ಕೋಪದಿಂದ ಪಾಂಡವರ ಅಗಾಧವಾದ ಸೈನ್ಯವನ್ನು ಎದುರಿಸಿದನು.
ಆಸ್ಥಾಯ ಚ ಮಹಾನಾಗಂ ಪ್ರಭಿನ್ನಂ ಪರ್ವತೋಪಮಮ್ |
ದೃಪ್ತಮೈರಾವತಪ್ರಖ್ಯಮಮಿತ್ರಗಣಮರ್ದನಮ್ ||2||
ಅನೇಕ ಶಿಖರಗಳಿಂದ ವಿಸ್ತಾರವಾದ ಪರ್ವತಕ್ಕೆ ಸದೃಶವಾದ ಆನೆಯ ಮೇಲೆ ಕುಳಿತುಕೊಂಡು ಸಾಲ್ವನು ಪಾಂಡವರನ್ನು ಎದುರಿಸಿದನು. ಆ ಆನೆಯು ಮದವೇರಿದ ಐರಾವತದ ಹಾಗೆ ಶತ್ರುಗಳನ್ನು ಸದೆಬಡಿಯುತ್ತಿತ್ತು.
ಯೋಽಸೌ ಮಹಾಭದ್ರಕುಲಪ್ರಸೂತಃ
ಸಂಪೂಜಿತೋ ಧಾರ್ತರಾಷ್ಟ್ರೇಣ ನಿತ್ಯಮ್ |
ಸುಕಲ್ಪಿತಃ ಶಾಸ್ತ್ರವಿನಿಶ್ಚಯಜ್ಞೈಃ
ಸದೌಪವಾಹ್ಯಃ ಸತತಂ ಚ ರಾಜ್ಞಃ ||3||
ಆ ಆನೆಯು ದೊಡ್ಡದಾದ ಮಂಗಳವಾದ ಕುಲದಲ್ಲಿ ಹುಟ್ಟಿದ್ದಾಗಿತ್ತು. ದುರ್ಯೋಧನನು ಅದನ್ನು ನಿತ್ಯವೂ ಪೂಜಿಸುತ್ತಿದ್ದನು. ಪ್ರಾಣಿಶಾಸ್ತ್ರ ಹಾಗೂ ಯುದ್ಧಶಾಸ್ತ್ರವೇತ್ತರಿಂದ ಮಾಡಲ್ಪಟ್ಟಿದ್ದ ಒಳ್ಳೆಯ ವ್ಯವಸ್ಥೆಯನ್ನು ಹೊಂದಿತ್ತು. ಯಾವಾಗಲೂ ರಾಜನನ್ನು ಹೊರಲು ಉಪಯೋಗಿಸಲ್ಪಡುತ್ತಿತ್ತು.
ಐರಾವತಂ ದೈತ್ಯಗಣಾನ್ ವಿಮೃದ್ನನ್
ಶಕ್ರೋ ಯಥಾ ಸಂಜನಯನ್ ಭಯಾನಿ |
ತಮಾಸ್ಥಿತೋ ರಾಜವರೋ ಬಭೂವ
ಯಥೋದಯಸ್ಥಃ ಸವಿತಾ ಕ್ಷಪಾಂತೇ ||4||
ಇಂದ್ರನು ಯಾವ ರೀತಿಯಲ್ಲಿ ಐರಾವತದ ಮೇಲೆ ಏರಿಬಂದು ದೈತ್ಯಸಮೂಹವನ್ನು ಭಯಗ್ರಸ್ತವನ್ನಾಗಿರಿಸಿದನೋ, ಯಾವ

ರೀತಿಯಲ್ಲಿ ರಾತ್ರಿಕಳೆದು ಉದಯಕಾಲದಲ್ಲಿ ಉದಯಾಚಲದಲ್ಲಿ ರವಿಯು ಕಂಡುಬರುತ್ತಾನೆಯೋ ಹಾಗೆ ರಾಜಶ್ರೇಷ್ಠನಾದ ಸಾಲ್ವನು ಆನೆಯನ್ನು ಏರಿ ಯುದ್ಧಕ್ಕೆ ಬಂದನು.

ಸ ತೇನ ನಾಗಪ್ರವರೇಣ ರಾಜನ್
 ಅಭ್ಯುದ್ಯಯೌ ಪಾಂಡುಸುತಾನ್ ಸಮಸ್ತಾನ್ |
ಶಿತೈಃ ಪೃಷತ್ಕೈರ್ವಿದದಾರ ಚಾಪಿ
 ಮಹೇಂದ್ರವಜ್ರಪ್ರತಿಮೈಃ ಸುಘೋರೈಃ ||5||

ರಾಜನೇ! ಅಂತಹ ಶ್ರೇಷ್ಠ ಆನೆಯನ್ನು ಹತ್ತಿಕೊಂಡು ಸಾಲ್ವನು ಎಲ್ಲಾ ಕಡೆಯಿಂದಲೂ ಪಾಂಡವರನ್ನು ಎದುರಿಸಿದನು ಮತ್ತು ಹರಿತವಾದ, ಇಂದ್ರನ ವಜ್ರಾಯುಧಕ್ಕೆ ಸದೃಶವಾದ ಬಾಣಗಳಿಂದ ಪಾಂಡುಸುತರನ್ನು ಗಾಯಗೊಳಿಸಿದನು.

ತತಃ ಶರಾನ್ ವೈ ಸೃಜತೋ ಮಹಾರಣೇ
 ಯೋಧಾಂಶ್ಚ ರಾಜನ್ ನಯತೋ ಯಮಕ್ಷಯಮ್ |
ನಾಸ್ಯಾಂತರಂ ದದೃಶುಃ ಸ್ವೇ ಪರೇ ವಾ
 ಯಥಾ ಪುರಾ ವಜ್ರಧರಸ್ಯ ದೈತ್ಯಾಃ ||6||

ರಾಜನೇ! ಮಹಾಯುದ್ಧದಲ್ಲಿ ಬಾಣಗಳನ್ನು ಪ್ರಯೋಗಿಸುತ್ತಾ ಯೋಧರನ್ನು ಯಮಪುರಿಗೆ ಕಳುಹಿಸಿಕೊಡುತ್ತಿದ್ದನು. ಇವನು ಯುದ್ಧದಲ್ಲಿ ವಿಶ್ರಾಂತಿಯನ್ನು ಸ್ವಲ್ಪವೂ ಪಡೆಯುತ್ತಲೇ ಇರಲಿಲ್ಲ. ಹಿಂದೆ ದೈತ್ಯರೂ ಕೂಡ ಇಂದ್ರನ ಯುದ್ಧದಲ್ಲಿ ಶೂನ್ಯಾವಕಾಶವನ್ನು ಕಾಣಲು ಸಾಧ್ಯವಾಗಲಿಲ್ಲ. ಹಾಗೆಯೇ ಸಾಲ್ವನ ಯುದ್ಧದಲ್ಲಿಯೂ ವಿರಾಮಾವಕಾಶವನ್ನು ಕಾಣದಾದರು.

ತೇ ಪಾಂಡವಾಃ ಸೃಂಜಯಾಃ ಸೋಮಕಾಶ್ಚ
 ತಮೇವ ನಾಗಂ ದದೃಶುಃ ಸಮಂತಾತ್ |
ಸಹಸ್ರಶೋ ವೈ ವಿಚರಂತಮೇಕಂ
 ಯಥಾ ಮಹೇಂದ್ರಸ್ಯ ಗಜಂ ಸಮೀಕೇ ||7||

ಹಿಂದೆ ಇಂದ್ರನ ಐರಾವತವು ವೇಗವಾಗಿ ಸಂಚಾರಮಾಡುತ್ತಾ ಸಾವಿರಾರು ಆನೆಗಳು ಇದ್ದ ಹಾಗೆ ಎಲ್ಲೆಡೆಯೂ ಕಾಣಿಸುತ್ತಿತ್ತು. ಹಾಗೆಯೇ ಸಾಲ್ವನ ಆನೆಯೂ ಎಲ್ಲಾ ಕಡೆಯೂ ಸಂಚರಿಸುತ್ತಾ ಇರುವುದನ್ನು ಪಾಂಡವರು, ಸೃಂಜಯರು, ಸೋಮಕರು ನೋಡಿದರು. ವೇಗವಾಗಿ ತಿರುಗುತ್ತಿದ್ದ ಒಂದೇ ಆನೆಯು ರಣರಂಗದಲ್ಲಿ ಸಾವಿರಾರು ಆನೆಗಳು ಇದ್ದ ಹಾಗೆ ಕಾಣಿಸುವಂತೆ ಮಾಡಿತು.

ಸಂದ್ರಾವ್ಯಮಾಣಂ ತು ಬಲಂ ಪರೇಷಾಂ
 ಪರೇತಕಲ್ಪಂ ವಿಬಭೌ ಸಮಂತಾತ್ |
ನೈವಾವತಸ್ಥೇ ಸಮರೇ ಭೃಶಂ ಭಯಾದ್
 ವಿಮರ್ದಮಾನಂ ತು ಪರಸ್ಪರಂ ತದಾ ||8||

ಆನೆಯಿಂದಾಗಿ ಶತ್ರುಪಕ್ಷದ ಸೈನಿಕರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು. ಸೈನ್ಯವೆಲ್ಲವೂ ನಾಶವಾದಂತೆ ಭಾಸಮಾನವಾಗುತ್ತಿತ್ತು. ಆಗ ಪರಸ್ಪರವಾಗಿ ಹೊಡೆದುಕೊಳ್ಳುತ್ತಿದ್ದ ಸೈನಿಕರು ಭಯಗೊಂಡು ಯುದ್ಧದಲ್ಲಿ ನಿಲ್ಲದೆ ಪಲಾಯನ ಮಾಡಿದರು.

ತತಃ ಪ್ರಭಗ್ನಾ ಸಹಸಾ ಮಹಾಚಮೂಃ
 ಸಾ ಪಾಂಡವೀ ತೇನ ಜನಾಧಿಪೇನ |
ದಿಶಶ್ಚತಸ್ರಃ ಸಹಸಾ ಪ್ರಧಾವಿತಾ
 ಗಜೇಂದ್ರವೇಗಂ ತಮಪಾರಯಂತೀ ||9||

ಆ ಸಾಲ್ವರಾಜನಿಂದಾಗಿ ನಾಶಹೊಂದಿದ ಪಾಂಡವರ ಸೇನೆಯು ಗಜೇಂದ್ರನ ವೇಗವನ್ನು ತಪ್ಪಿಸಿಕೊಳ್ಳಲಿಕ್ಕಾಗಿ ನಾಲ್ಕೂ ದಿಕ್ಕುಗಳಲ್ಲಿ ಕೂಡಲೇ ಓಡಿಹೋಯಿತು.

ದೃಷ್ಟ್ವಾ ತು ತಾಂ ವೇಗವತಾ ಪ್ರಭಗ್ನಾಂ
 ಸರ್ವೇ ತ್ವದೀಯಾ ಯುಧಿ ಯೋಧಮುಖ್ಯಾಃ |
ಅಪೂಜಯಂಸ್ತತ್ರ ನರಾಧಿಪಂ ತಂ
 ದಧ್ಮುಶ್ಚ ಶಂಖಾನ್ ಶಶಿಸನ್ನಿಕಾಶಾನ್ ||10||

ಹೀಗೆ ಯುದ್ಧದಲ್ಲಿ ವೇಗವಾಗಿ ನಾಶವಾದ ಪಾಂಡವರ ಸೈನ್ಯವನ್ನು ನೋಡಿ ನಿನ್ನ ಪಕ್ಷದ ಯೋಧರು ಮ್ಲೇಚ್ಛರಾಜ ಸಾಲ್ವನನ್ನು ಕೊಂಡಾಡಿದರು. ಮತ್ತು ಚಂದ್ರನ ಹಾಗೆ ಶೋಭಿಸುತ್ತಿದ್ದ ಶಂಖಗಳನ್ನು ಊದಿದರು.

ಶ್ರುತ್ವಾ ನಿನಾದಂ ತ್ವಥ ಕೌರವಾಣಾಂ
 ಹರ್ಷಾದ್ ವಿಮುಕ್ತಂ ಸಹ ಶಂಖನಾದೈಃ |
ಸೇನಾಪತಿಃ ಪಾಂಡವಸೃಂಜಯಾನಾಂ
 ಪಾಂಚಾಲಪುತ್ರೋ ಮಮೃಷೇ ನ ರೋಷಾತ್ ||11||

ಹೀಗೆ ಕೌರವರ ಆನಂದದಿಂದುಂಟಾದ ಜಯದ ಶಬ್ದವನ್ನು ಮತ್ತು ಶಂಖನಾದವನ್ನು ಕೇಳಿ ಕೋಪಗೊಂಡ ಪಾಂಡವರು ಮತ್ತು ಸೃಂಜಯರ ಸೇನಾಧಿಪತಿಯಾದ ಧೃಷ್ಟದ್ಯುಮ್ನನು ಇದನ್ನು ಸಹಿಸಿಕೊಳ್ಳಲಿಲ್ಲ.

ತತಸ್ತಮೇವ ದ್ವಿರದಂ ಮಹಾತ್ಮಾ
 ಪ್ರತ್ಯುದ್ಯಯೌ ತ್ವರಮಾಣೋ ಜಯಾಯ |
ಜಂಭೋ ಯಥಾ ಶಕ್ರಸಮಾಸ್ಥಿತಂ ವೈ
 ನಾಗೇಂದ್ರಮೈರಾವತಮಿಂದ್ರವಾಹ್ಯಮ್ ||12||

ಅನಂತರ ಮಹಾತ್ಮನಾದ ಧೃಷ್ಟದ್ಯುಮ್ನನು ಕೂಡಲೇ ಅದೇ ಆನೆಯನ್ನು ಎದುರಿಸಿದನು. ಇದು ಇಂದ್ರನ ಜೊತೆಗೆ ಯುದ್ಧಮಾಡುವ ಸಂದರ್ಭದಲ್ಲಿ ಜಂಭಾಸುರನು ಇಂದ್ರನು ಐರಾವತದ ಮೇಲೆ ಕೂತಿರುವಾಗಲೇ ಇಂದ್ರನ ವಾಹನವಾದ ಐರಾವತವನ್ನು ಎದುರಿಸಿದಂತೆ ಇತ್ತು.

ತಮಾಪತಂತಂ ಸಹಸಾ ತು ದೃಷ್ಟ್ವಾ
ಪಾಂಚಾಲರಾಜಂ ಯುಧಿ ರಾಜಸಿಂಹಮ್ |
ತಂ ವೈ ದ್ವಿಪಂ ಪ್ರೇಷಯಾಮಾಸ ತೂರ್ಣಂ
ವಧಾಯ ರಾಜನ್ ದ್ರುಪದಾತ್ಮಜಸ್ಯ ॥13॥

ರಾಜನೇ! ಬೇಗನೇ ಬರುತ್ತಿರುವ ಪಾಂಚಾಲದೇಶದ ನೃಪಶ್ರೇಷ್ಠನಾದ ಧೃಷ್ಟದ್ಯುಮ್ನನನ್ನು ನೋಡಿ ಸಾಲ್ವನು ಕೂಡಲೇ ಆನೆಯನ್ನು ಧೃಷ್ಟದ್ಯುಮ್ನನ ಮೇಲೆ ಏರಿ ಹೋಗುವಂತೆ ಪ್ರೇರೇಪಿಸಿದನು.

ಸ ತಂ ದ್ವಿಪಂ ಸಹಸಾಽಭ್ಯಾಪತಂತಂ
ಹ್ಯವಿಧ್ಯದರ್ಕಪ್ರತಿಮೈಃ ಪೃಷತ್ಕೈಃ |
ತಂ ತೈಲಧೌತೈರ್ನಿಶಿತೈರ್ಜ್ವಲದ್ಭಿಃ
ನಾರಾಚಮುಖ್ಯೈಸ್ತ್ರಿಭಿರುಗ್ರಹಸ್ತಮ್ ॥14॥

ಧೃಷ್ಟದ್ಯುಮ್ನನು ತನ್ನ ಮೇಲೆ ಏರಿ ಬರುತ್ತಿರುವ ಭಯಂಕರವಾದ ಸೊಂಡಿಲಿನ ಆ ಆನೆಯ ಮೇಲೆ ಎಣ್ಣೆಯಲ್ಲಿ ಅದ್ದಿದ, ಹರಿತವಾದ ಹಾಗೂ ಕಾಂತಿಯಿಂದ ಪ್ರಜ್ವಲಿಸುತ್ತಿರುವ ಶ್ರೇಷ್ಠ ಬಾಣಗಳನ್ನು ಪ್ರಯೋಗಿಸಿ ಆನೆಯನ್ನು ಹೊಡೆದನು. ಆ ಬಾಣಗಳು ಸೂರ್ಯನಂತೆ ಹೊಳೆಯುತ್ತಿದ್ದವು.

ತತೋಽಪರಾನ್ ಪಂಚಶತಾನ್ ಮಹಾತ್ಮಾ
ನಾರಾಚಮುಖ್ಯಾನ್ ವಿಸಸರ್ಜ ಕುಂಭೇ |
ಸ ತೈಸ್ತು ವಿದ್ಧಃ ಪರಮದ್ವಿಪೋ ರಣೇ
ನದನ್ ಪರಾವೃತ್ಯ ಭೃಶಂ ಪ್ರದುದ್ರುವೇ ॥15॥

ಮಹಾತ್ಮನಾದ ಧೃಷ್ಟದ್ಯುಮ್ನನು ಆನೆಯ ಕುಂಭಸ್ಥಳದ ಮೇಲೆ ಐನೂರು ಉತ್ತಮ ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳಿಂದ ಚೆನ್ನಾಗಿ ಹೊಡೆತಕ್ಕೆ ಒಳಗಾದ ಆನೆಯು ಘೀಳಿಡುತ್ತಾ ಯುದ್ಧದಿಂದ ಹಿಂತಿರುಗಿ ಜೋರಾಗಿ ಓಡಲು ಆರಂಭಿಸಿತು.

ತಂ ನಾಗರಾಜಂ ಸಹಸಾ ಪ್ರಣುನ್ನಂ
ವಿದ್ರಾವ್ಯಮಾಣಂ ಚ ನಿಗೃಹ್ಯ ಸಾಲ್ವಃ |
ತೋತ್ರಾಂಕುಶೈಃ ಪ್ರೇಷಯಾಮಾಸ ತೂರ್ಣಂ
ಪಾಂಚಾಲರಾಜಸ್ಯ ಸುತಂ ಪ್ರದರ್ಶ್ಯ ॥16॥

ಹೀಗೆ ಬಾಣಗಳ ಪೆಟ್ಟು ತಿಂದು ಓಡುತ್ತಿರುವ ಆನೆಯನ್ನು ಸಾಲ್ವರಾಜನು ನಿಗ್ರಹಿಸಿ ಬೆತ್ತ ಮತ್ತು ಅಂಕುಶಗಳಿಂದ ಅದನ್ನು ತಿವಿದು ಧೃಷ್ಟದ್ಯುಮ್ನನನ್ನು ತೋರಿಸಿ ಅವನೆಡೆಗೆ ಹೋಗುವಂತೆ ಮಾಡಿದನು.

ದೃಷ್ಟ್ವಾಽಽಪತಂತಂ ಸಹಸಾ ಗಜೇಂದ್ರಂ
ಧೃಷ್ಟದ್ಯುಮ್ನಃ ಸ್ವರಥಾಚ್ಛೀಘ್ರಮೇವ |
ಗದಾಂ ಗೃಹೀತ್ವಾ ಸುಜವೇನ ವೀರೋ
ಭೂಮಿಂ ಪ್ರಪನ್ನೋ ಭಯವಿಹ್ವಲಾಂಗಃ ॥17॥

ವೇಗವಾಗಿ ತನ್ನಮೇಲೆ ದಾಳಿಮಾಡುತ್ತಿರುವ ಆನೆಯನ್ನು ನೋಡಿ ಧೃಷ್ಟದ್ಯುಮ್ನನು ಬೇಗನೇ ಗದೆಯನ್ನು ಹಿಡಿದುಕೊಂಡು, ಒಳ್ಳೆಯ ವೇಗದಿಂದ ನೆಲಕ್ಕೆ ಜಿಗಿದಿದ್ದಾನೆ. ಆನೆಯ ಭಯದಿಂದ ಅಂಗಾಂಗಗಳ ಶಕ್ತಿಯನ್ನು ಕಳೆದುಕೊಂಡವನಾದನು.

ಸ ತಂ ರಥಂ ಹೇಮವಿಭೂಷಿತಾಂಗಂ
ಸಾಶ್ವಂ ಸಸೂತಂ ಸಹಸಾ ವಿಮೃದ್ಯ |
ಉತ್ಕ್ಷಿಪ್ಯ ಹಸ್ತೇನ ತದಾ ಮಹಾದ್ವಿಪಃ
ತಂ ಪೋಥಯಾಮಾಸ ವಸುಂಧರಾತಳೇ ॥18॥

ಆ ದೊಡ್ಡದಾದ ಆನೆಯು ಬಂಗಾರದ ಅಲಂಕಾರವನ್ನು ಹೊಂದಿದ ರಥವನ್ನು ಸಾರಥಿ ಮತ್ತು ಅಶ್ವಗಳ ಜೊತೆಗೆ ಪುಡಿಮಾಡಿ, ತನ್ನ ಸೊಂಡಿಲಿನಲ್ಲಿ ಎತ್ತಿ ನೆಲಕ್ಕೆ ಅಪ್ಪಳಿಸಿತು.

ಪಾಂಚಾಲರಾಜಸ್ಯ ಸುತಂ ತು ದೃಷ್ಟ್ವಾ
ತದಾಽರ್ದಿತಂ ನಾಗವರೇಣ ತೇನ |
ತಮಭ್ಯಧಾವತ್ ಸಹಸಾ ಜವೇನ
ಭೀಮಃ ಶಿಖಂಡೀ ಚ ಶಿನೇಶ್ಚ ನಪ್ತಾ ॥19॥

ಧೃಷ್ಟದ್ಯುಮ್ನನು ಆನೆಯ ದಾಳಿಗೆ ಒಳಗಾಗಿದ್ದನ್ನು ನೋಡಿದ ಭೀಮ, ಶಿಖಂಡಿ ಮತ್ತು ಸಾತ್ಯಕಿಯರು ಕೂಡಲೇ ವೇಗವಾಗಿ ಧಾವಿಸಿ ಬಂದರು.

ಶರೈಶ್ಚ ವೇಗಂ ಸಹಸಾ ನಿಗೃಹ್ಯ
ತಸ್ಯಾಭಿತೋ ಹ್ಯಾಪತತೋ ಗಜಸ್ಯ |
ಸ ಸಂಗೃಹೀತೋ ರಥಿಭಿರ್ಗಜೋ ವೈ
ಚಚಾಲ ತೈರ್ವಾರ್ಯಮಾಣಶ್ಚ ಸಂಖ್ಯೇ ॥20॥

ಮೇಲೇರಿ ಬರುತ್ತಿದ್ದ ಆನೆಯಮೇಲೆ ಎಲ್ಲಾ ಕಡೆಗಳಿಂದ ಬಾಣಗಳನ್ನು ಪ್ರಯೋಗಿಸಿ ಆನೆಯನ್ನು ನಿಗ್ರಹಿಸಿದರು. ಹೀಗೆ ಮಹಾರಥರಿಂದ ನಿರ್ಬಂಧಕ್ಕೊಳಗಾದ ಆನೆಯು ಯುದ್ಧದಲ್ಲಿ ಅವರು ತಡೆದಾಗ ವಿಚಲಿತವಾಯಿತು.
ತತಃ ಪೃಷತ್ಕಾನ್ ಪ್ರವವರ್ಷ ರಾಜಾ
ಸೂರ್ಯೋ ಯಥಾ ರಶ್ಮಿಜಾಲೈಃ ಸಮಂತಾತ್ |
ತೈರಾಶುಗೈರ್ವಧ್ಯಮಾನಾ ರಥೌಘಾಃ
ಪ್ರದುದ್ರುವುಸ್ತತ್ರ ತತಃ ಸ್ಮ ಸರ್ವೇ ||21||
ಅನಂತರ ಸೂರ್ಯನು ತನ್ನ ಕಿರಣಗಳನ್ನು ಎಲ್ಲಾ ಕಡೆಯೂ ಬೀಳಿಸುವಂತೆ ಸಾಲ್ವರಾಜನು ಬಾಣಗಳನ್ನು ಎಲ್ಲೆಡೆ ಬೀಳಿಸಿದನು. ಆ ಬಾಣಗಳ ಹೊಡೆತಕ್ಕೆ ಸಿಲುಕಿದ ರಥಯೋಧರ ಸಮೂಹವು ಯುದ್ಧದಿಂದ ಬೇಗನೆ ಓಡಿಹೋಯಿತು.
ತತ್ ಕರ್ಮ ಸಾಲ್ವಸ್ಯ ಸಮೀಕ್ಷ್ಯ ಸರ್ವೇ
ಪಾಂಚಾಲಮತ್ಸ್ಯಾ ನೃಪ ಸೃಂಜಯಾಶ್ಚ |
ಹಾಹಾಕಾರೈರ್ನಾದಯಂತಸ್ತು ಯುದ್ಧೇ
ದ್ವಿಪಂ ಸಮಂತಾದ್ ರುರುಧುರ್ನರಾಗ್ರ್ಯಾಃ ||22||
ರಾಜನೇ! ಸಾಲ್ವನ ಆ ಕಾರ್ಯವನ್ನು ನೋಡಿ ಪಾಂಚಾಲರು, ಮತ್ಸ್ಯರು, ಸೃಂಜಯರು ಮೊದಲಾದ ಶ್ರೇಷ್ಠವೀರರು ಜೋರಾಗಿ ಕೂಗಿಕೊಳ್ಳುತ್ತಾ ಯುದ್ಧದಲ್ಲಿ ಆನೆಯನ್ನು  ಸುತ್ತಲೂ ತಡೆದರು.
ಪಾಂಚಾಲರಾಜಸ್ತ್ವರಿತಸ್ತು ಶೂರೋ
ಗದಾಂ ಪ್ರಗೃಹ್ಯಾಚಲಶೃಂಗಕಲ್ಪಾಮ್ |
ಅಸಂಭ್ರಮಂ ಭಾರತ ಶತ್ರುಘಾತೀ
ಜವೇನ ವೀರೋಽನುಸಸಾರ ನಾಗಮ್ ||23||
ಭಾರತನೇ! ಶೂರನಾದ ಧೃಷ್ಟದ್ಯುಮ್ನನು ಬೇಗನೇ ಪರ್ವತಶಿಖರದಂತಿರುವ ಗದೆಯನ್ನು ಹಿಡಿದುಕೊಂಡು ಆನೆಯನ್ನು ಬೆನ್ನಟ್ಟಿ ಹೋದನು. ಧೃಷ್ಟದ್ಯುಮ್ನನು ಯಾವುದೇ ಗಾಬರಿಗೊಳಗಾಗದೆ ಶತ್ರುಗಳನ್ನು ಸದೆಬಡಿಯುವ ಸಾಮರ್ಥ್ಯ ಉಳ್ಳವನಾಗಿದ್ದನು.
ತತೋಽಥ ನಾಗಂ ಧರಣೀಧರಾಭಂ
ಮದಂ ಸ್ರವಂತಂ ಜಲದಪ್ರಕಾಶಮ್ |
ಗದಾಂ ಸಮಾವಿಧ್ಯ ಭೃಶಂ ಜಘಾನ
ಪಾಂಚಾಲರಾಜಸ್ಯ ಸುತಸ್ತರಸ್ವೀ ||24||
ಪರ್ವತಾಕಾರದ ಆನೆಯು ತನ್ನ ಗಂಡಸ್ಥಳದಿಂದ ಮೋಡಗಳು ಮಳೆಸುರಿಸುವಂತೆ ಮದರಸವನ್ನು ಸುರಿಸುತ್ತಿತ್ತು. ಅಂತಹ ಅನೆಯ ಮೇಲೆ ಧೃಷ್ಟದ್ಯುವ್ನನು ಗದಾಪ್ರಯೋಗವನ್ನು ಮಾಡಿ ಚೆನ್ನಾಗಿ ಹೊಡೆದನು.
ಸ ಭಿನ್ನಕುಂಭಃ ಸಹಸಾ ವಿನದ್ಯ
ಮುಖಾತ್ ಪ್ರಭೂತಂ ಕ್ಷತಜಂ ವಿಮುಂಚನ್ |
ಪಪಾತ ನಾಗೋ ಧರಣೀಧರಾಭಃ
ಕ್ಷಿತಿಪ್ರಕಂಪಾಚ್ಚಲಿತೋ ಯಥಾಽದ್ರಿಃ ||25||
ಆನೆಯ ಕುಂಭಸ್ಥಳವು ಒಡೆದು ಹೋದಾಗ ಆನೆಯು ಜೋರಾಗಿ ಬೊಬ್ಬಿಡುತ್ತಾ ಬಾಯಿಯಿಂದ ರಕ್ತವನ್ನು ಕಾರಲು ಪ್ರಾರಂಭಿಸಿತು. ಭೂಕಂಪದಿಂದ ಪರ್ವತಗಳು ತುಂಡರಿಸಿದ ಹಾಗೆ ಪರ್ವತಾಕಾರದ ಆನೆಯು ಭೂಮಿಯಲ್ಲಿ ಬಿದ್ದಿತು.
ನಿಪಾತ್ಯಮಾನೇ ತು ತದಾ ಗಜೇಂದ್ರೇ
ಹಾಹಾಕೃತೇ ತವ ಪುತ್ರಸ್ಯ ಸೈನ್ಯೇ |
ಸಾಲ್ವಸ್ಯ ರಾಜ್ಞಸ್ತು ಶಿನಿಪ್ರವೀರೋ
ಜಹಾರ ಭಲ್ಲೇನ ಶಿರಃಶಿತೇನ ||26||
ಗಜರಾಜನು ಸತ್ತು ಬಿದ್ದಾಗ ನಿನ್ನ ಮಗನ ಸೈನ್ಯದಲ್ಲಿ ಹಾಹಾಕಾರ ಉಂಟಾಯಿತು. ಶಿನಿವೀರನಾದ ಸಾತ್ಯಕಿಯು ಹರಿತವಾದ ಭಲ್ಲೆಯಿಂದ ಸಾಲ್ವನ ತಲೆಯನ್ನು ಕಡಿದು ಹಾಕಿದನು.
ಹೃತೋತ್ತಮಾಂಗೋ ಯುಧಿ ಸಾತ್ತ್ವತೇನ
ಪಪಾತ ಭೂಮೌ ಸಹನಾಗರಾಜಃ |
ಯಥಾದ್ರಿಶೃಂಗಂ ಸುಮಹತ್ ಪ್ರಣುನ್ನಂ
ವಜ್ರೇಣ ದೇವಾಧಿಪಚೋದಿತೇನ ||27||
ಸಾತ್ಯಕಿಯು ಸಾಲ್ವನ ತಲೆಯನ್ನು ಕಡಿದಾಗ ಸಾಲ್ವನು ಕೂಡಲೇ ವೇಗವಾಗಿ ಭೂಮಿಯಲ್ಲಿ ಬಿದ್ದನು. ದೇವೇಂದ್ರನು ಪ್ರಯೋಗಿಸಿದ ವಜ್ರಾಯುಧದಿಂದ ದೊಡ್ಡದಾದ ಪರ್ವತಶಿಖರವು ಬಿದ್ದ ಹಾಗೆ ಕಾಣಿಸಿತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ವಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ಸಾತ್ಯಕಿಯಿಂದ ಕೃತವರ್ಮನ ಪರಾಜಯ

ಸಂಜಯಃ
ತಸ್ಮಿಂಸ್ತು ನಿಹತೇ ಸಾಲ್ವೇ ಶೂರೇ ಸಮಿತಿಶೋಭನೇ |
ತವಾಭಜ್ಯದ್ಬಲಂ ವೇಗಾದ್ ವಾತೇನೇವ ಮಹಾದ್ರುಮಃ ||1||
ಸಂಜಯ ಮಹಾಭಾರತದ ಯುದ್ಧದಲ್ಲಿ ಬಹಳವಾಗಿ ಪ್ರಕಾಶಿಸುತ್ತಿದ್ದ ಸಾಲ್ವನು ಸತ್ತಿದ್ದಾನೆ. ಆಗ ಗಾಳಿಗೆ ಸಿಕ್ಕಿ ನೆಲಕ್ಕುರುಳಿದ ಮರದಂತೆ ನಿನ್ನ ಮಹಾಸೇನೆಯು ನಾಶವನ್ನು ಹೊಂದಿತು.
ತತ್ ಪ್ರಭಗ್ನಂ ಬಲಂ ದೃಷ್ಟ್ವಾ ಕೃತವರ್ಮಾ ಮಹಾರಥಃ |
ದಧಾರ ಸಮರೇ ಶೂರಃ ಶತ್ರುಸೇನಾಂ ಮಹಾಬಲಃ ||2||
ಹೀಗೆ ತನ್ನ ಸೈನ್ಯವು ನಾಶವಾಗಿದ್ದನ್ನು ನೋಡಿದ ಶೂರನಾದ ಮಹಾರಥ ಕೃತವರ್ಮನು ಯುದ್ಧದಲ್ಲಿ ಶತ್ರುಸೇನೆಯನ್ನು ಮುಂದೆ ಹೋಗದಂತೆ ಹಿಡಿದಿಟ್ಟನು.
ಸನ್ನಿವೃತ್ತಾಸ್ತು ತೇ ವೀರಾ ದೃಷ್ಟ್ವಾ ಸಾತ್ವತಮಾಹವೇ |
ಶೈಲೋಪಮಂ ಸ್ಥಿತಂ ರಾಜನ್ ವಿಕಿರಂತಂ ಶರಾನ್ ಯುಧಿ ||3||
ರಾಜನೇ! ಯುದ್ಧದಲ್ಲಿ ಬಾಣಗಳನ್ನು ಪ್ರಯೋಗಿಸುತ್ತಾ ಕಲ್ಲಿನಂತೆ ನಿಂತಿರುವ ಕೃತವರ್ಮನನ್ನು ನೋಡಿ ಕೌರವವೀರರು ಮತ್ತೆ ಯುದ್ಧಕ್ಕೆ ಹಿಂತಿರುಗಿದರು.
ತತಃ ಪ್ರವವೃತೇ ಯುದ್ಧಂ ಕುರೂಣಾಂ ಪಾಂಡವೈಃ ಸಹ |
ನಿವೃತ್ತಾನಾಂ ಮಹಾರಾಜ ಮೃತ್ಯುಂ ಕೃತ್ವಾ ನಿವರ್ತನಮ್ ||4||
ಮಹಾರಾಜ! ಅನಂತರ ಕುರುಗಳಿಗೂ ಪಾಂಡವರಿಗೂ ಯುದ್ಧವು ನಡೆಯಿತು. ಅವರೆಲ್ಲಾ ಮೃತ್ಯುವನ್ನೇ ಹಿಮ್ಮೆಟ್ಟಿ ಯುದ್ಧಕ್ಕೆ ಹಿಂತಿರುಗಿದ್ದರು.
ತತ್ರಾಶ್ಚರ್ಯಮಭೂದ್ಯುದ್ಧಂ ಸಾತ್ವತಸ್ಯ ಪರೈಃ ಸಹ |
ಯದೇಕೋ ವಾರಯಾಮಾಸ ಪಾಂಡುಸೇನಾಂ ದುರಾಸದಾಮ್ ||5||
ಅಲ್ಲಿ ಕೃತವರ್ಮನು ಏಕಾಕಿಯಾಗಿ ಶತ್ರುಗಳೊಂದಿಗೆ ಹೋರಾಡಿದನು. ಸಾಮಾನ್ಯದವರಿಗೆ ಎದುರಿಸಲಾಗದ ಪಾಂಡವಸೇನೆಯನ್ನು ಕೃತವರ್ಮನು ಏಕಾಕಿಯಾಗಿ ನಿಂತು ತಡೆದದ್ದು ಬಹಳ ಆಶ್ಚರ್ಯಜನಕವಾಗಿತ್ತು.
ತೇಷಾಮನ್ಯೋನ್ಯಸುಹೃದಾಂ ಕೃತೇ ಕರ್ಮಣಿ ದುಷ್ಕರೇ |
ಸಿಂಹನಾದಃ ಪ್ರಹೃಷ್ಟಾನಾಂ ದಿವಿಸ್ಪೃಕ್ ಸುಮಹಾನಭೂತ್ ||6||
ಕೃತವರ್ಮನು ಇಂತಹ ಶ್ರೇಷ್ಠ ಕರ್ಮವನ್ನು ಮಾಡಿದಾಗ ಪರಸ್ಪರವಾಗಿ ಹಿತವನ್ನು ಬಯಸುವ ಕೌರವರ ಸೈನಿಕರು ಆನಂದದಿಂದ ಸಿಂಹನಾದವನ್ನು ಮಾಡಿದರು. ಆ ಧ್ವನಿಯು ದಿಗಂತವನ್ನು ತಲುಪುವಷ್ಟು ಜೋರಾಗಿತ್ತು.
ತೇನ ಶಬ್ದೇನ ವಿತ್ರಸ್ತಾನ್ ಪಾಂಚಾಲಾನ್ ಭರತರ್ಷಭ |
ಶಿನೇರ್ನಪ್ತಾ ಮಹಾಬಾಹುರನ್ವಪದ್ಯತ ಸಾತ್ಯಕಿಃ ||7||
ಭಾರತೋತ್ತಮನೇ! ಕೌರವಸೈನ್ಯದ ಆ ಸಿಂಹನಾದದಿಂದ ಪಾಂಚಾಲರು ಭಯಗ್ರಸ್ಥರಾದರು. ಅಗ ಶಿನಿಯ ಮೊಮ್ಮಗನಾದ ಮಹಾಬಾಹುಶಾಲಿ ಸಾತ್ಯಕಿಯು ಶತ್ರುಸೈನ್ಯವನ್ನು ಎದುರಿಸಿದನು.
ಸ ಸಮಾಸಾದ್ಯ ರಾಜಾನಂ ಕ್ಷೇಮಧೂರ್ತಿಂ ಮಹಾಬಲಮ್ |
ಸಪ್ತಭಿರ್ನಿಶಿತೈರ್ಬಾಣೈರನಯದ್ ಯಮಸಾದನಮ್ ||8||
ಸಾತ್ಯಕಿಯು ಮಹಾಬಲಶಾಲಿಯಾದ ಕ್ಷೇಮಧೂರ್ತಿ ರಾಜನನ್ನು ಹರಿತವಾದ ಏಳು ಬಾಣಗಳಿಂದ ಹೊಡೆದು ಸಾಯಿಸಿ ಯಮಪುರಕ್ಕೆ ಕಳುಹಿಸಿದನು.
ತಮಾಯಾಂತಂ ಮಹಾಬಾಹುಂ ಪ್ರವರ್ಷಂತಂ ಶರಾನ್ ಬಹೂನ್ |
ಜವೇನಾಭ್ಯಪತದ್ಧೀಮಾನ್ ಹಾರ್ದಿಕಃ ಶಿನಿಪುಂಗವಮ್ ||9||
ಹೀಗೆ ಬಾಣಗಳ ಮಳೆಯನ್ನು ಸುರಿಸುತ್ತಾ ಬರುತ್ತಿದ್ದ ಸಾತ್ಯಕಿಯನ್ನು ಬುದ್ಧಿವಂತನಾದ ಕೃತವರ್ಮನು ವೇಗವಾಗಿ ಎದುರಿಸಿದನು.
ತೌ ಸಿಂಹಾವಿವ ನರ್ದಂತೌ ಧನ್ವಿನೌ ರಥಿನಾಂ ವರೌ |
ಅನ್ಯೋನ್ಯಮಭ್ಯಧಾವೇತಾಂ ಶಸ್ತ್ರಪ್ರವರಧಾರಿಣೌ ||10||
ಧನುರ್ಧಾರಿಗಳಲ್ಲಿಯೂ, ರಥಿಕರಲ್ಲಿಯೂ ಶ್ರೇಷ್ಠರಾದ ಸಾತ್ಯಕಿ-ಕೃತವರ್ಮರು ಉತ್ತಮವಾದ ಶಸ್ತ್ರಗಳನ್ನು ಹಿಡಿದುಕೊಂಡು ಎರಡು ಸಿಂಹಗಳಂತೆ ಯುದ್ಧದಲ್ಲಿ ಪರಸ್ಪರವಾಗಿ ಎದುರುಗೊಂಡರು.
ಪಾಂಡವಾಃ ಸಹ ಪಾಂಚಾಲೈರ್ಯೋಧಾಶ್ಚಾನ್ಯೇ ನೃಪೋತ್ತಮ |
ಪ್ರೇಕ್ಷಕಾಃ ಸಮಪದ್ಯಂತ ತಯೋರ್ಘೋರೇ ಸಮಾಗಮೇ ||11||
ನೃಪಶ್ರೇಷ್ಠನೇ! ಅವರಿಬ್ಬರ ಘೋರವಾದ ಯುದ್ಧದಲ್ಲಿ ಪಾಂಚಾಲರು, ಪಾಂಡವರು ಮತ್ತು ಉಳಿದ ಯೋಧರು ಪ್ರೇಕ್ಷಕರಾದರು.
ನಾರಾಚೈರ್ವತ್ಸದಂತೈಶ್ಚ ವೃಷ್ಣ್ಯಂಧಕಮಹಾರಥೌ |
ಅಭಿಜಘ್ನತುರನ್ಯೋನ್ಯಂ ಪ್ರಹೃಷ್ಟಾವಿವ ಕುಂಜರೌ ||12||
ವೃಷ್ಣಿವಂಶ ಮತ್ತು ಅಂಧಕವಂಶದ ವೀರರಾದ ಸಾತ್ಯಕಿ ಮತ್ತು ಕೃತವರ್ಮರು ಬಾಣಗಳಿಂದ ಮತ್ತು ಕರುವಿನ ಹಲ್ಲಿನ ಆಕಾರದ ಆಯುಧಗಳಿಂದ ಮದವೇರಿದ ಆನೆಗಳಂತೆ ಪರಸ್ಪರವಾಗಿ ಹೊಡೆದುಕೊಂಡರು.
ಚರಂತೌ ವಿವಿಧಾನ್ ಮಾರ್ಗಾನ್ ಹಾರ್ದಿಕ್ಯಶಿನಿಪುಂಗವೌ |
ಮುಹುರಂತರ್ದಧಾತೇ ತೌ ಬಾಣವೃಷ್ಟ್ಯಾ ಪರಸ್ಪರಮ್ ||13||
ಕೃತವರ್ಮ ಮತ್ತು ಸಾತ್ಯಕಿಯರು ವಿವಿಧ ರೀತಿಯ ಯುದ್ಧವರಸೆಗಳನ್ನು ತೋರಿಸುತ್ತಾ ಪುನಃ ಬಾಣಗಳ ಮಳೆಯಿಂದ ಪರಸ್ಪರವಾಗಿ

ಮುಚ್ಚಿಹಾಕಿದರು.
ಚಾಪವೇಗಬಲೋದ್ಧೂತಾನ್ ಮಾರ್ಗಣಾನ್ ವೃಷ್ಣಿಸಿಂಹಯೋಃ |
ಆಕಾಶೇ ಸಮಪಶ್ಯಾಮ ಪತಂಗಾನಿವ ಶೀಘ್ರಗಾನ್ ॥14॥
ವೃಷ್ಣಿವಂಶದ ಶ್ರೇಷ್ಠ ಯೋಧರಾದ ಇವರಿಬ್ಬರೂ ಬಿಲ್ಲಿನಿಂದ ಬಾಣಗಳನ್ನು ವೇಗವಾಗಿ ಪ್ರಯೋಗಿಸುತ್ತಿದ್ದರು. ಆಕಾಶದಲ್ಲಿ ಆ ಬಾಣಗಳು ಹಾರುತ್ತಿದ್ದಾಗ ವೇಗವಾಗಿ ಪತಂಗಗಳು ಹಾರುತ್ತಿರುವಂತೆ ಭಾಸಮಾನವಾಗುತ್ತಿತ್ತು.
ತಮೇಕಂ ಸತ್ಯಕರ್ಮಾಣಮಾಸಾದ್ಯ ಹೃದಿಕಾತ್ಮಜಃ |
ಅವಿಧ್ಯನ್ನಿಶಿತೈರ್ಬಾಣೈಶ್ಚತುರ್ಭಿಶ್ಚತುರೋ ಹಯಾನ್ ॥15॥
ಸ ದೀರ್ಘಬಾಹುಃ ಸಂಕ್ರುದ್ಧಸ್ತೋತ್ರಾರ್ದಿತ ಇವ ದ್ವಿಪಃ |
ಅಷ್ಟಾಭಿಃ ಕೃತವರ್ಮಾಣಮವಿಧ್ಯತ್ ಪರಮೇಷುಭಿಃ ॥16॥
ಹೃದಿಕನ ಮಗನಾದ ಕೃತವರ್ಮನು ಸಾತ್ಯಕಿಗೆ ನಾಲ್ಕು ಬಾಣಗಳನ್ನೂ ಮತ್ತು ಅವನ ಕುದುರೆಗಳಿಗೆ ನಾಲ್ಕು ಬಾಣಗಳನ್ನೂ ಹೊಡೆದನು. ದೀರ್ಘಬಾಹುವಾದ ಸಾತ್ಯಕಿಯು ಚಾಟಿಯ ಏಟುತಿಂದ ಆನೆಯಂತೆ ಕೋಪಗೊಂಡು ಉತ್ತಮವಾದ ಎಂಟು ಬಾಣಗಳಿಂದ ಕೃತವರ್ಮನನ್ನು ಹೊಡೆದನು.
ತತಃ ಪೂರ್ಣಾಯತೋತ್ಸೃಷ್ಟೈಃ ಕೃತವರ್ಮಾ ಶಿಲೀಮುಖೈಃ |
ಸಾತ್ಯಕಿಂ ತ್ರಿಭಿರಾಹತ್ಯ ಧನುರೇಕೇನ ಚಿಚ್ಛಿದೇ ॥17॥
ಅನಂತರ ಕೃತವರ್ಮನು ಪೂರ್ಣಬಲಪ್ರಯೋಗಮಾಡಿ ಮೂರು ಬಾಣಗಳನ್ನು ಸಾತ್ಯಕಿಯ ಮೇಲೆ ಪ್ರಯೋಗಿಸಿದನು. ಒಂದು ಬಾಣದಿಂದ ಅವನ ಬಿಲ್ಲನ್ನು ಮುರಿದನು.
ನಿಕೃತ್ತಂ ತದ್ಧನುಃಶ್ರೇಷ್ಠಮಪಾಸ್ಯ ಶಿನಿಪುಂಗವಃ |
ಅನ್ಯದಾದತ್ತ ವೇಗೇನ ಶೈನೇಯಃ ಸಶರಂ ಧನುಃ ॥18॥
ಸಾತ್ಯಕಿಯು ತುಂಡಾದ ಆ ಉತ್ತಮ ಬಿಲ್ಲನ್ನು ಬಿಸಾಡಿ, ಇನ್ನೊಂದು ಬಾಣಸಹಿತವಾದ ಬಿಲ್ಲನ್ನು ಶೀಘ್ರವಾಗಿ ತೆಗೆದುಕೊಂಡನು.
ತದಾದಾಯ ಧನುಃಶ್ರೇಷ್ಠಂ ವರಿಷ್ಠಂ ಸರ್ವಧನ್ವಿನಾಮ್ |
ಆರೋಪ್ಯ ಚ ಮಹಾವೀರ್ಯೋ ಮಹಾಬುದ್ಧಿರ್ಮಹಾಬಲಃ ॥19॥
ಅಮೃಷ್ಯಮಾಣೋ ಧನುಷಃ ಛೇದನಂ ಕೃತವರ್ಮಣಃ |
ಕುಪಿತೋಽತಿರಥಃ ಶೀಘ್ರಂ ಕೃತವರ್ಮಾಣಮಭ್ಯಯಾತ್ ॥20॥
ಎಲ್ಲಾ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯು ಆ ಉತ್ತಮ ಬಿಲ್ಲನ್ನು ಹಿಡಿದುಕೊಂಡನು. ಸಾತ್ಯಕಿಯು ಮಹಾಬುದ್ಧಿವಂತ, ಮಹಾಬಲಶಾಲಿ ಹಾಗೂ ಮಹಾವೀರನೂ ಆಗಿದ್ದನು. ಕೃತವರ್ಮನು ತನ್ನ ಬಿಲ್ಲನ್ನು ತುಂಡರಿಸಿದ್ದನ್ನು ಸಹಿಸಲಿಲ್ಲ. ಕೋಪಗೊಂಡು ಕೂಡಲೇ ಬಿಲ್ಲಿಗೆ ಹೆದೆಯೇರಿಸಿ ಕೃತವರ್ಮನನ್ನು ಎದುರಿಸಿದನು.
ತತಃ ಸ ದಶಭಿರ್ಬಾಣೈರ್ನಿಶಿತೈಃ ನತಪರ್ವಭಿಃ |
ಜಘಾನ ಚಾಶ್ವಾನ್ ಸೂತಂ ಚ ಧ್ವಜಂ ಚ ಕೃತವರ್ಮಣಃ ॥21॥
ಅನಂತರ ಸಾತ್ಯಕಿಯು ಬಾಗಿದ ಸಂಧಿಗಳುಳ್ಳ ಹರಿತವಾದ ಹತ್ತುಬಾಣಗಳಿಂದ ಕೃತವರ್ಮನ ಕುದುರೆಗಳನ್ನೂ, ಸಾರಥಿಯನ್ನೂ, ರಥದ ಧ್ವಜವನ್ನೂ ಬೀಳಿಸಿದನು.
ತತೋ ರಾಜನ್ ಮಹೇಷ್ವಾಸಃ ಕೃತವರ್ಮಾ ಮಹಾರಥಃ |
ಹತಾಶ್ವಸೂತಂ ಸಂಪ್ರೇಕ್ಷ್ಯ ರಥಂ ಹೇಮಪರಿಷ್ಕೃತಮ್ ॥22॥
ರೋಷೇಣ ಮಹತಾಽಽವಿಷ್ಟಃ ಶೂಲಮುದ್ಯಮ್ಯ ಮಾರಿಷ |
ಚಿಕ್ಷೇಪ ಭುಜವೇಗೇನ ಜಿಘಾಂಸುಃ ಶಿನಿಪುಂಗವಮ್ ॥23॥
ರಾಜನೇ! ಒಳ್ಳೆಯ ಬಿಲ್ಗಾರನಾದ ಮಹಾರಥ ಕೃತವರ್ಮನು ಬಂಗಾರದಿಂದ ಸುಂದರವಾದ ತನ್ನ ರಥವು ಕುದುರೆ ಮತ್ತು ಸಾರಥಿಯ ಜೊತೆಗೆ ನಾಶವಾಗಿದ್ದನ್ನು ಕಂಡು ಬಹಳ ಕೋಪಗೊಂಡನು. ರಾಜನೇ! ಕುಪಿತನಾದ ಕೃತವರ್ಮನು ಶೂಲವನ್ನು ಹಿಡಿದುಕೊಂಡು ಸಾತ್ಯಕಿಯನ್ನು ಕೊಲ್ಲುವ ಇಚ್ಛೆಯುಳ್ಳವನಾಗಿ ಬಾಹುಬಲವನ್ನು ಉಪಯೋಗಿಸಿ ಸಾತ್ಯಕಿಯ ಮೇಲೆ ಬಿಸಾಕಿದನು.
ತಚ್ಛೂಲಂ ಸಾತ್ವತೋಽಪ್ಯಾಜೌ ನಿರ್ಭಿದ್ಯ ನಿಶಿತೈಃ ಶರೈಃ |
ಚೂರ್ಣಿತಂ ಪಾತಯಾಮಾಸ ಮೋಹಯನ್ನಿವ ಮಾಧವಃ ॥24॥
ಆ ಶೂಲವನ್ನು ಸಾತ್ಯಕಿಯು ಹರಿತವಾದ ಬಾಣಗಳಿಂದ ಕತ್ತರಿಸಿಹಾಕಿದನು. ತನ್ನ ಆಯುಧವು ಪುಡಿಯಾದುದನ್ನು ಕಂಡು ಕೃತವರ್ಮನು ಮೂರ್ಛೆಹೊಂದುವ ರೀತಿಯಲ್ಲಿ ಮಾಡಿದನು.
ತತೋಽಪರೇಣ ಭಲ್ಲೇನ ಹೃದ್ಯೇನಂ ಸಮತಾಡಯತ್ ॥25॥
ಅನಂತರ ಇನ್ನೊಂದು ಭಲ್ಲೆಯಿಂದ ಕೃತವರ್ಮನ ಎದೆಗೆ ಚೆನ್ನಾಗಿ ಹೊಡೆದನು.
ಸ ಯುದ್ಧೇ ಯುಯುಧಾನೇನ ಹತಾಶ್ವೋ ಹತಸಾರಥಿಃ |
ಕೃತವರ್ಮಾ ಕೃತಾಸ್ತ್ರೇಣ ಧರಣೀಮನ್ವಪದ್ಯತ ॥26॥
ಅಸ್ತ್ರವೇತ್ತನಾದ ಸಾತ್ಯಕಿಯು ಯುದ್ಧದಲ್ಲಿ ಕೃತವರ್ಮನ ಅಶ್ವ-ಸಾರಥಿಗಳನ್ನು ಕೊಂದಿದ್ದ. ಹೀಗೆ ಕೃತವರ್ಮನು ನೆಲದಲ್ಲಿ ನಿಲ್ಲುವಂತೆ ಮಾಡಿದನು.
ತಸ್ಮಿನ್ ಸಾತ್ಯಕಿನಾ ವೀರೇ ದ್ವೈರಥೇ ವಿರಥೀಕೃತೇ |
ಸಮಪದ್ಯತ ಸರ್ವೇಷಾಂ ಸೈನ್ಯಾನಾಂ ಸುಮಹದ್ಭಯಮ್ ॥27॥
ರಥಗಳ ದ್ವಂದ್ವಯುದ್ಧದಲ್ಲಿ ಸಾತ್ಯಕಿಯು ಕೃತವರ್ಮನನ್ನು ರಥರಹಿತನನ್ನಾಗಿ ಮಾಡಿದಾಗ ಎಲ್ಲಾ ಸೈನ್ಯಗಳೂ ಬಹಳವಾಗಿ

ಭಯಗೊಂಡವು.
ಪುತ್ರಸ್ಯ ತವ ಚಾತ್ಯರ್ಥಂ ವಿಷಾದಃ ಸಮಪದ್ಯತ ॥28॥
ನಿನ್ನ ಮಗನಾದ ದುರ್ಯೋಧನನು ತುಂಬಾ ದುಃಖಪಟ್ಟನು.
ಹತಸೂತೇ ಹತಾಶ್ವೇ ಚ ವಿರಥೇ ಕೃತವರ್ಮಣಿ |
ಹತಾಶ್ವಂ ಚ ಸಮಾಲಕ್ಷ್ಯ ಹತಸೂತಮರಿಂದಮಮ್ ॥29॥
ಅಭ್ಯಧಾವತ್ ಕೃಪೋ ರಾಜನ್ ಜಿಘಾಂಸುಃ ಶಿನಿಪುಂಗವಮ್ ॥30॥
ಕೃತವರ್ಮನ ಸಾರಥಿಯು ಸತ್ತಿದ್ದಾನೆ. ಅಶ್ವಗಳು ಸತ್ತಿವೆ. ರಥವನ್ನು ಕಳೆದುಕೊಂಡಿದ್ದಾನೆ. ರಾಜನೇ! ಇಂತಹ ಶತ್ರುಮಾರಕನಾದ ಕೃತವರ್ಮನನ್ನು ನೋಡಿದ ಕೃಪಾಚಾರ್ಯನು ಸಾತ್ಯಕಿಯನ್ನು ಕೊಲ್ಲುವುದಕ್ಕಾಗಿ ಬಂದನು.
ತಮಾರೋಪ್ಯ ರಥೋಪಸ್ಥೇ ಮಿಷತಾಂ ಸರ್ವಧನ್ವಿನಾಮ್ |
ಅಪೋವಾಹ ಮಹಾರಾಜ ತೂರ್ಣಮಾಯೋಧನಾದಪಿ ॥31॥
ರಾಜನೇ! ಸಕಲಧನುರ್ಧಾರಿಗಳು ನೋಡುತ್ತಿದ್ದಾಗಲೇ ಕೃಪಾಚಾರ್ಯನು ಕೃತವರ್ಮನನ್ನು ತನ್ನ ರಥದಲ್ಲಿ ಹತ್ತಿಸಿಕೊಂಡು ರಣರಂಗದಿಂದ ಬೇಗನೇ ಕರೆದೊಯ್ದನು.
ಶೈನೇಯೇಽಧಿಷ್ಠಿತೇ ರಾಜನ್ ವಿರಥೇ ಕೃತವರ್ಮಣಿ |
ದುರ್ಯೋಧನಬಲಂ ಸರ್ವಂ ಪುನರಾಸೀತ್ ಪರಾಙ್ಮುಖಮ್ ॥32॥
ರಾಜನೇ! ಸಾತ್ಯಕಿಯು ಯುದ್ಧದಲ್ಲಿ ಜಯವನ್ನು ಗಳಿಸಿದ್ದಾನೆ. ಕೃತವರ್ಮನು ವಿರಥನಾಗಿದ್ದಾನೆ. ಹೀಗಾದಾಗ ದುರ್ಯೋಧನ ಸೈನ್ಯವು ಸೋತು ಪುನಃ ಯುದ್ಧದಿಂದ ಹಿಂದೆ ಸರಿಯಿತು.
ತತ್ ಪರೇ ನಾನ್ವಬುಧ್ಯಂತ ಸೈನ್ಯೇ ಚ ರಜಸಾ ವೃತೇ |
ತಾವದ್ ವಿಪ್ರದ್ರುತಂ ರಾಜನ್ ದುರ್ಯೋಧನಮೃತೇ ನೃಪ ॥33॥
ರಾಜನೇ! ದುರ್ಯೋಧನನೊಬ್ಬನನ್ನು ಬಿಟ್ಟು ಕೌರವರ ಎಲ್ಲಾ ಸೈನ್ಯವು ಸೋತು ಓಡುತ್ತಿರಲು ಬಹಳವಾಗಿ ಎದ್ದ ಧೂಳು ಸೈನ್ಯವನ್ನೆಲ್ಲಾ ಆವರಿಸಿತು. ಆ ಧೂಳಿನಿಂದಾಗಿ ಯಾರಿಗೂ ಏನೂ ಕಾಣಿಸದಂತಾಯಿತು.
ದುರ್ಯೋಧನಸ್ತು ಸಂಪ್ರೇಕ್ಷ್ಯ ಭಗ್ನಂ ಸ್ವಬಲಮಂತಿಕಾತ್ |
ಜವೇನಾಭ್ಯಪತತ್ ತೂರ್ಣಂ ಸರ್ವಾಂಶ್ಚೈಕೋ ನ್ಯವಾರಯತ್ ॥34॥
ದುರ್ಯೋಧನನು ತನ್ನ ಸೈನ್ಯವು ನಾಶವಾಗಿರುವುದನ್ನು ಹತ್ತಿರದಿಂದ ನೋಡಿದನು. ಕೂಡಲೇ ವೇಗದಿಂದ ಧಾವಿಸಿ ಒಬ್ಬನೇ ಓಡಿಹೋಗುತ್ತಿದ್ದ ಎಲ್ಲರನ್ನೂ ತಡೆದು ನಿಲ್ಲಿಸಿದನು.
ಪಾಂಡವಾನ್ ಸಮರೇ ಕ್ರುದ್ಧೋ ಧೃಷ್ಟದ್ಯುಮ್ನಂ ಚ ಪಾರ್ಷತಮ್ |
ಶಿಖಂಡಿನಂ ದ್ರೌಪದೇಯಾನ್ ಪಾಂಚಾಲಾನಾಂ ಚ ಯೇ ಗಣಾಃ ॥
ಕೇಕಯಾನ್ ಸೋಮಕಾಂಶ್ಚೈವ ಯೋಧಯಾಮಾಸ ಮಾರಿಷ ॥36॥
ರಾಜನೇ! ಯುದ್ಧದಲ್ಲಿ ಪಾಂಡವರನ್ನು, ಧೃಷ್ಟದ್ಯುಮ್ನನನ್ನು, ಶಿಖಂಡಿಯನ್ನು, ದ್ರೌಪದಿಯ ಮಕ್ಕಳನ್ನು, ಪಾಂಚಾಲರನ್ನು, ಕೇಕಯರನ್ನು ಮತ್ತು ಸೋಮಕರನ್ನು ಎದುರಿಸಿ ಹೋರಾಡಿದನು.
ಅಸಂಭ್ರಮಂ ದುರಾಧರ್ಷಃ ಶಿತೈರಸ್ತ್ರೈರವಾಕಿರತ್ |
ಅತಿಷ್ಠದಾಹವೇ ಯತ್ತಃ ಪುತ್ರಸ್ತವ ಮಹಾಬಲಃ ॥37॥
ಯುದ್ಧದಲ್ಲಿ ಎದುರಿಸಲು ಅಶಕ್ಯನಾದ ಮಹಾಬಲಶಾಲಿಯಾದ ನಿನ್ನ ಮಗನು ಯಾವುದೇ ರೀತಿಯ ಕಳವಳಕ್ಕೆ ಒಳಗಾಗದೆ ಶತ್ರುಗಳ ಮೇಲೆ ಹರಿತವಾದ ಬಾಣಗಳ ಮಳೆಯನ್ನು ಸುರಿಸುತ್ತಾ ಧೈರ್ಯದಿಂದ ನಿಂತನು.
ಯಥಾ ಯಜ್ಞೇ ಮಹಾನಗ್ನಿರ್ಮಂತ್ರಪೂತಃ ಪ್ರಕಾಶತೇ ॥38॥
ಯಜ್ಞದಲ್ಲಿ ಮಂತ್ರಪೂತವಾದ ಅಗ್ನಿಯಂತೆ ದುರ್ಯೋಧನನು ಪ್ರಜ್ವಲಿಸುತ್ತಿದ್ದನು.
ತಂ ಪರೇ ನಾತ್ಯವರ್ತಂತ ಮರ್ತ್ಯಾ ಮೃತ್ಯುಮಿವಾಹವೇ |
ಅಥಾನ್ಯಂ ರಥಮಾಸ್ಥಾಯ ಹಾರ್ದಿಕ್ಯಃ ಸಮವರ್ತತ ॥39॥
ಮನುಷ್ಯರು ಯಮನನ್ನು ಮೀರಿಹೋಗಲಾರರು. ಹಾಗೆಯೇ ಬೇರೆ ಯಾರಿಗೂ ದುರ್ಯೋಧನನನ್ನು ಮೀರಿ ಹೋಗಲು ಆಗಲಿಲ್ಲ. ಅಷ್ಟು ಸಮಯಕ್ಕೆ ಕೃತವರ್ಮನು ಇನ್ನೊಂದು ರಥವನ್ನು ಏರಿ ಯುದ್ಧಕ್ಕೆ ಹಿಂತಿರುಗಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ದುರ್ಯೋಧನನ ಪರಾಕ್ರಮ.
ಎರಡೂ ಕಡೆಯ ಸೇನೆಯ ಘೋರವಾದ ಯುದ್ಧ.
ಸಂಜಯಃ
ಪುತ್ರಸ್ತು ತೇ ಮಹಾರಾಜ ರಥಸ್ಥೋ ರಥಿನಾಂ ವರಃ |
ದುರಾಧರ್ಷೋ ಬಭೌ ಯುದ್ಧೇ ಯಥಾ ರುದ್ರಃ ಪ್ರತಾಪವಾನ್ ॥1॥
ಸಂಜಯ ಮಹಾರಾಜ! ನಿನ್ನ ಮಗನಾದ ಮಹಾರಥ ದುರ್ಯೋಧನನು ಯುದ್ಧದಲ್ಲಿ ರಥದ ಮೇಲೆ ಇದ್ದುಕೊಂಡು

ಶೋಭಿಸುತ್ತಿದ್ದನು. ಅವನನ್ನು ಎದುರಿಸುವುದು ಕಷ್ಟಸಾಧ್ಯವಾಗಿತ್ತು. ವಿರೋಧಿಗಳನ್ನು ಸುಡುವ ರುದ್ರನ ಹಾಗೆ ಕಾಣಿಸುತ್ತಿದ್ದನು.
ತಸ್ಯ ಬಾಣಸಹಸ್ರೈಸ್ತು ಪ್ರಚ್ಛನ್ನಾ ಹ್ಯಭವನ್ಮಹೀ |
ಪರಾಂಶ್ಚ ಸಿಷಿಚೇ ಬಾಣೈರ್ಧಾರಾಭಿರಿವ ಪರ್ವತಾನ್ ॥2॥
ಸಾವಿರಾರು ಬಾಣಗಳಿಂದ ಭೂಮಿಯನ್ನು ಆಚ್ಛಾದಿಸಿದ್ದನು. ಪರ್ವತದ ಮೇಲೆ ಮಳೆಯ ನೀರಧಾರೆಗಳು ಬೀಳುವಂತೆ ಶತ್ರುಗಳನ್ನು ಗುಂಪುಗುಂಪಾದ ಬಾಣಗಳಿಂದ ಘಾಸಿಗೊಳಿಸಿದನು.
ನ ಚ ಸೋಽಸ್ತಿ ಪುಮಾನ್ ಕಶ್ಚಿತ್ ಪಾಂಡವಾನಾಂ ಬಲಾರ್ಣವೇ |
ಹತೋ ಗಜೋ ರಥೋ ವಾಽಪಿ ಯೋಽಸ್ಯ ಬಾಣೈರವಿಕ್ಷತಃ ॥3॥
ಪಾಂಡವರ ದೊಡ್ಡದಾದ ಸೈನ್ಯದಲ್ಲಿ ದುರ್ಯೋಧನನ ಬಾಣದ ಹೊಡೆತವನ್ನು ತಪ್ಪಿಸಿಕೊಂಡವರು ಯಾರೂ ಇರಲಿಲ್ಲ. ಕುದುರೆ, ಆನೆ, ರಥಗಳೆಲ್ಲವೂ ಬಾಣಗಳ ಹೊಡೆತಕ್ಕೆ ಒಳಗಾಗಿದ್ದವು.
ಯಂ ಯಂ ಹಿ ಸಮರೇ ಯೋಧಂ ಪ್ರಪಶ್ಯಾಮಿ ವಿಶಾಂಪತೇ |
ಸ ಸ ಬಾಣೈಶ್ಚಿತೋಽಭೂದ್ವೈ ತವ ಪುತ್ರೇಣ ಭಾರತ ॥4॥
ರಾಜನೇ! ಭರತಕುಲೋದ್ಭವನೇ! ಯುದ್ಧದಲ್ಲಿ ಯಾರನ್ನೆಲ್ಲಾ ನೋಡುತ್ತೇನೆಯೋ ಅವರೆಲ್ಲರೂ ನಿನ್ನ ಮಗನ ಬಾಣಗಳ ಪೆಟ್ಟನ್ನು ತಿಂದವರೇ.
ಯಥಾ ಸೈನ್ಯೇನ ರಜಸಾ ಸಮುದ್ಧೂತೇನ ವಾಹಿನೀ |
ಪ್ರತ್ಯದೃಶ್ಯತ ಸಂಛನ್ನಾ ತಥಾ ಬಾಣೈರ್ಮಹಾತ್ಮನಃ ॥5॥
ಸೈನ್ಯದ ಓಡಾಟದಿಂದ ಬಹಳವಾದ ಧೂಳು ಸೈನ್ಯದ ಮೇಲೆಲ್ಲಾ ವ್ಯಾಪಿಸಿತ್ತು. ಅದೇ ರೀತಿ ಮಹಾತ್ಮನಾದ ದುರ್ಯೋಧನನು ಬಿಟ್ಟ ಬಾಣಗಳು ಇಡೀ ಸೈನ್ಯಗಳನ್ನೆ ಮುಚ್ಚಿಹಾಕಿದ್ದವು.
ಬಾಣಭೂತಾಮಪಶ್ಯಾಮ ಪೃಥಿವೀಂ ಪೃಥಿವೀಪತೇ |
ದುರ್ಯೋಧನೇನಾಪತತಾ ಕ್ಷಿಪ್ರಹಸ್ತೇನ ಧನ್ವಿನಾ ॥6॥
ರಾಜನೇ! ಬಾಣಗಳಿಂದ ಆವೃತವಾದ ನೆಲವು ಬಾಣಮಯವಾಗಿತ್ತು. ಧನುರ್ಧಾರಿಯಾದ ದುರ್ಯೋಧನನು ಈ ಬಾಣಗಳನ್ನು ಪ್ರಯೋಗಿಸಿದ್ದನು.
ತೇಷು ಯೋಧಸಹಸ್ರೇಷು ತಾವಕೇಷು ಪರೇಷು ಚ |
ಏಕೋ ದುರ್ಯೋಧನಶ್ಚಾಸೀತ್ ತತ್ರ ತತ್ರ ಮತಿರ್ಮಮ ॥7॥
ನಿನ್ನ ಕಡೆಯ ಹಾಗೂ ಶತ್ರುಕಡೆಯ ಸಾವಿರಾರು ಯೋಧರು ಯುದ್ಧ ಮಾಡುತ್ತಿದ್ದರು. ಅವರಲ್ಲಿ ದುರ್ಯೋಧನನೊಬ್ಬನೇ ಮುಖ್ಯ ಯೋಧನಾಗಿದ್ದನು.
ಅತ್ರಾದ್ಭುತಮಪಶ್ಯಾಮ ತವ ಪುತ್ರಸ್ಯ ವಿಕ್ರಮಮ್ |
ಯದೇಕಂ ಸಹಿತಾಃ ಪಾರ್ಥಾ ನಾತ್ಯವರ್ತಂತ ಭಾರತ ॥8॥
ಭರತಕುಲೋದ್ಭವನೇ! ಒಬ್ಬಂಟಿಯಾದ ನಿನ್ನ ಮಗನನ್ನು ಪಾಂಡವರು ಎಲ್ಲರು ಸೇರಿಯೂ ಮೀರಲು ಆಗಲಿಲ್ಲ. ನಿನ್ನ ಮಗನ ಇಂತಹ ಅದ್ಭುತವಾದ ಪರಾಕ್ರಮವನ್ನು ನಾವು ನೋಡಿದೆವು.
ಯುಧಿಷ್ಠಿರಂ ಶತೇನಾಜೌ ವಿವ್ಯಾಧ ಭರತರ್ಷಭ |
ಭೀಮಸೇನಂ ತ್ರಿಸಪ್ತತ್ಯಾ ಸಹದೇವಂ ಚ ಪಂಚಭಿಃ ॥9॥
ಭರತಶ್ರೇಷ್ಠನೇ! ಯುದ್ಧದಲ್ಲಿ ದುರ್ಯೋಧನನು ಯುಧಿಷ್ಠಿರನನ್ನು ನೂರು ಬಾಣಗಳಿಂದ ಹೊಡೆದನು. ಭೀಮನನ್ನು ಎಪ್ಪತ್ತಮೂರು ಬಾಣಗಳಿಂದ ಹಾಗೂ ಸಹದೇವನನ್ನು ಐದು ಬಾಣಗಳಿಂದ ಹೊಡೆದನು.
ನಕುಲಂ ಚ ಚತುಃಷಷ್ಟ್ಯಾ ಧೃಷ್ಟದ್ಯುಮ್ನಂ ಚ ಪಂಚಭಿಃ |
ಸಪ್ತಭಿರ್ದ್ರೌಪದೇಯಾಂಶ್ಚ ತ್ರಿಭಿರ್ವಿವ್ಯಾಧ ಸಾತ್ಯಕಿಮ್ ॥10॥
ನಕುಲನ ಮೇಲೆ ಅರವತ್ತನಾಲ್ಕು, ಧೃಷ್ಟದ್ಯುಮ್ನನ ಮೇಲೆ ಐದು, ದ್ರೌಪದಿಯ ಮಕ್ಕಳ ಮೇಲೆ ಏಳು, ಸಾತ್ಯಕಿಯ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿ ಹೊಡೆದನು.
ಧನುಶ್ಚಿಚ್ಛೇದ ಭಲ್ಲೇನ ಸಹದೇವಸ್ಯ ಭಾರತ ॥11॥
ಭಾರತ! ದುರ್ಯೋಧನನು ಸಹದೇವನ ಬಿಲ್ಲನ್ನು ಮುರಿದು ಹಾಕಿದನು.
ತದಪಾಸ್ಯ ಧನುಶ್ಛಿನ್ನಂ ಮಾದ್ರೀಪುತ್ರಃ ಪ್ರತಾಪವಾನ್ |
ಅಭ್ಯಧಾವತ ರಾಜಾನಂ ಪ್ರಗೃಹ್ಯ ಸುಮಹದ್ಧನುಃ ॥12॥
ಪ್ರತಾಪಿಯಾದ ಸಹದೇವನು ಮುರಿದ ಬಿಲ್ಲನ್ನು ಬಿಸಾಡಿ, ಇನ್ನೊಂದು ದೊಡ್ಡಬಿಲ್ಲನ್ನು ಎತ್ತಿಕೊಂಡು ದುರ್ಯೋಧನನನ್ನು ಎದುರಿಸಿದನು.
ತತೋ ದುರ್ಯೋಧನಂ ಸಂಖ್ಯೇ ವಿವ್ಯಾಧ ದಶಭಿಃ ಶರೈಃ |
ನಕುಲಶ್ಚ ತತೋ ವೀರೋ ರಾಜಾನಂ ನವಭಿಃ ಪುನಃ ॥13॥
ಯುದ್ಧದಲ್ಲಿ ಸಹದೇವನು ಹತ್ತು ಬಾಣಗಳಿಂದ ದುರ್ಯೋಧನನನ್ನು ಹೊಡೆದನು. ವೀರನಾದ ನಕುಲನು ಒಂಬತ್ತು ಬಾಣಗಳಿಂದ ದುರ್ಯೋಧನನನ್ನು ಹೊಡೆದನು.
ಘೋರರೂಪೈರ್ಮಹೇಷ್ವಾಸೋ ವಿವ್ಯಾಧ ಚ ನನಾದ ಚ ॥14॥
ದೊಡ್ಡಬಿಲ್ಲಾರರಾದ ಅವರು ಭಯಂಕರವಾಗಿ ಹೊಡೆದರು ಮತ್ತು ಸಿಂಹನಾದವನ್ನು ಮಾಡಿದರು.
ಸಾತ್ಯಕಿಶ್ಚಾಪಿ ರಾಜಾನಂ ಶರೇಣ ನತಪರ್ವಣಾ |

ದ್ರೌಪದೇಯಾಸ್ತ್ರಿಸಪ್ತತ್ಯಾ ಧರ್ಮರಾಜಶ್ಚ ಪಂಚಭಿಃ ॥15॥
ಸಾತ್ಯಕಿಯೂ ಕೂಡ ಬಾಗಿದ ಸಂಧಿಯುಳ್ಳ ಬಾಣದಿಂದ ರಾಜನನ್ನು ಹೊಡೆದನು. ದ್ರೌಪದಿಯ ಮಕ್ಕಳು ಎಪ್ಪತ್ತಮೂರು ಬಾಣಗಳಿಂದ ಮತ್ತು ಧರ್ಮರಾಜನು ಐದು ಬಾಣಗಳಿಂದ ದುರ್ಯೋಧನನನ್ನು ಹೊಡೆದರು.
ಅಶೀತ್ಯಾ ಭೀಮಸೇನಶ್ಚ ಶರೈಃ ರಾಜಾನಮರ್ದಯನ್ ॥16॥
ಭೀಮಸೇನನು ಎಂಬತ್ತು ಬಾಣಗಳಿಂದ ರಾಜನನ್ನು ಥಳಿಸಿದನು.
ಸಮಂತಾತ್ ಕೀರ್ಯಮಾಣಸ್ತು ಬಾಣಸ್ಯೆರ್ಿಂರ್ಮಹಾತ್ಮಭಿಃ।
ನ ಚಚಾಲ ಮಹಾರಾಜ ಸರ್ವಸೈನ್ಯಸ್ಯ ಪಶ್ಯತಃ ॥17॥
ಎಲ್ಲಾ ಕಡೆಯಿಂದಲೂ ಮಹಾತ್ಮರಾದ ಪಾಂಡವರು ಬಾಣಗಳನ್ನು ಪ್ರಯೋಗಿಸುತ್ತಿದ್ದರೂ ಮಹಾರಾಜನೇ! ಎಲ್ಲ ಸೈನ್ಯ ನೋಡುತ್ತಿದ್ದರೂ ದುರ್ಯೋಧನನು ಸ್ವಲ್ಪವೂ ವಿಚಲಿತನಾಗಲಿಲ್ಲ.
ಲಾಘವಾತ್ ಸೌಷ್ಠವಾಚ್ಚಾಪಿ ವೀರ್ಯಾಚ್ಚಾಪಿ ಮಹಾತ್ಮನಃ।
ಅತಿ ಸರ್ವಾಣಿ ಭೂತಾನಿ ದದೃಶುಃ ಸರ್ವಮಾನವಾಃ ॥18॥
ದುರ್ಯೋಧನನು ಅನಾಯಾಸವಾಗಿ, ಕುಶಲತೆಯಿಂದ ಮತ್ತು ವೀರತನದಿಂದ ಎಲ್ಲರನ್ನೂ ಮೀರಿರುವುದನ್ನು ಎಲ್ಲಾ ಪ್ರಾಣಿಗಳೂ ಹಾಗೂ ಎಲ್ಲಾ ಮನುಷ್ಯರು ನೋಡಿದರು.
ಧಾರ್ತರಾಷ್ಟ್ರಸ್ಯ ರಾಜೇಂದ್ರ ಯಾತ್ವಾ ಹಿ ಸ್ವಲ್ಪಮಂತರಮ್।
ಅಪಶ್ಯಮಾನಾ ರಾಜಾನಂ ಪರ್ಯಧಾವಂತ ದಂಸಿತಾಃ ॥19॥
ರಾಜೇಂದ್ರನೇ! ಕವಚಧಾರಿಗಳಾದ ಕೌರವಯೋಧರು ದುರ್ಯೋಧನನಿಗೆ ಸ್ವಲ್ಪವೇ ಅಂತರದಲ್ಲಿ (ಅತೀ ಸಮೀಪದಲ್ಲಿ) ಅವಕಾಶವಿಲ್ಲದಂತೆ ರಾಜನನ್ನು ಸುತ್ತುವರಿದು ನಿಂತರು.
ತೇಷಾಮಾಪತತಾಂ ಘೋಷಃ ತುಮುಲಃ ಸಮಜಾಯತ।
ಕ್ಷುಬ್ಧಸ್ಯ ಹಿ ಸಮುದ್ರಸ್ಯ ಪ್ರಾವೃಟ್ಕಾಲೇ ಯಥಾ ನಿಶಿ ॥20॥
ಮಳೆಗಾಲದಲ್ಲಿ ರಾತ್ರಿಯ ಸಮಯದಲ್ಲಿ ಕ್ಷೋಭೆಗೊಳಗಾದ ಸಮುದ್ರದ ಭೋರ್ಗರೆತ ಬಹಳವಾಗಿರುತ್ತದೆ. ರಣರಂಗದಲ್ಲಿ ಪರಸ್ಪರವಾಗಿ ಆಕ್ರಮಿಸುತ್ತಿರುವ ಯೋಧರಲ್ಲಿ ಅಂತಹ ಘೋಷವು ಉಂಟಾಯಿತು.
ಸಮಾಸಾದ್ಯ ರಣೇ ತೇ ತು ರಾಜಾನಮಪರಾಜಿತಮ್।
ಪ್ರತ್ಯುದ್ಯಯುರ್ಮಹೇಷ್ವಾಸಾಃ ಪಾಂಡವಾನಾತತಾಯಿನಃ ॥21॥
ಯುದ್ಧದಲ್ಲಿ ಸೋಲಿಲ್ಲದ ರಾಜ ದುರ್ಯೋಧನನನ್ನು ಸಮೀಪಿಸಿದ್ದ ಆತತಾಯಿಗಳಾದ ಕೌರವಯೋಧರು ಧನುರ್ಧಾರಿಗಳಾಗಿ ಪಾಂಡವರನ್ನು ಎದುರಿಸಿದರು.
ಭೀಮಸೇನಂ ರಣೇ ಕ್ರುದ್ಧಂ ದ್ರೋಣಪುತ್ರೋ ನ್ಯವಾರಯತ್ ॥22॥
ಯುದ್ಧದಲ್ಲಿ ಕ್ರುದ್ಧನಾಗಿದ್ದ ಭೀಮಸೇನನನ್ನು ಅಶ್ವತ್ಥಾಮನು ತಡೆದನು.
ತತೋ ಬಾಣೈರ್ಮಹಾರಾಜ ಪ್ರಮುಕ್ತೈಃ ಸರ್ವತೋ ದಿಶಮ್।
ನಾಜ್ಞಾಯಂತ ರಣೇ ವೀರಾ ನ ದಿಶಃ ಪ್ರದಿಶಸ್ತಥಾ ॥23॥
ಮಹಾರಾಜನೆ! ಯುದ್ಧದಲ್ಲಿ ಎಲ್ಲಾ ದಿಕ್ಕುಗಳಲ್ಲಿ ಪ್ರಯೋಗಿಸಲ್ಪಟ್ಟ ಬಾಣಗಳಿಂದಾಗಿ ವೀರರಿಗೆ ದಿಕ್ಕುಗಳು ಯಾವುವು? ವಿದಿಕ್ಕುಗಳು ಯಾವುವು? ಎಂದು ಗುರುತಿಸಲು ಆಗಲಿಲ್ಲ.
ತಾವುಭೌ ಕೃತಕರ್ಮಾಣಾವುಭೌ ಭಾರತ ದುಃಸಹೌ।
ಘೋರರೂಪಮಯುಧ್ಯೇತಾಂ ಕೃತಪ್ರತಿಕೃತೈಷಿಣೌ ॥24॥
ಭರತವಂಶೋದ್ಭವನೇ! ಬಹಳವಾದ ಮಹತ್ಕಾರ್ಯಗಳನ್ನು ಮಾಡಿರುವ, ಯುದ್ಧದಲ್ಲಿ ಎದುರಿಸಲು ಅಶಕ್ಯರಾದ ಆ ಭೀಮ-ಅಶ್ವತ್ಥಾಮರು ಪರಸ್ಪರವಾಗಿ ಬಾಣಗಳಿಂದಲೇ ಉತ್ತರ ಕೊಡುತ್ತಿದ್ದರು. ಅವರಿಬ್ಬರ ಮಧ್ಯೆ ಘೋರವಾದ ಯುದ್ಧವು ನಡೆಯಿತು.
ತ್ರಾಸಯಂತೌ ಜಗತ್ ಸರ್ವಂ ಜ್ಯಾಕ್ಷೇಪವಿಹತತ್ವಚೌ ॥25॥
ಬಿಲ್ಲಿನ ಹಗ್ಗವನ್ನು ಎಳೆಯುವುದರಿಂದ ಚರ್ಮ ಹರಿದುಹೋಗಿತ್ತು. ಇಡೀ ಜಗತ್ತನ್ನೇ ಆತಂಕಕ್ಕೆ ಒಳಪಡಿಸಿದ್ದರು.
ಶಕುನಿಶ್ಚ ಧನುಶ್ಛಿತ್ವಾ ಯುಧಿಷ್ಠಿರಮಪೀಡಯತ್ ॥26॥
ಶಕುನಿಯು ಧರ್ಮರಾಜನ ಬಿಲ್ಲನ್ನು ಮುರಿದು ಅವನನ್ನು ಪೀಡಿಸಿದನು.
ತಸ್ಯಾಶ್ವಾಂಶ್ಚತುರೋ ಹತ್ವಾ ಸುಬಲಸ್ಯ ಸುತೋ ವಿಭುಃ।
ನಾದಂ ಚಕಾರ ಬಲವಾನ್ ಸರ್ವಸೈನ್ಯಾನಿ ಕಂಪಯನ್ ॥27॥
ಶಕುನಿಯು ಧರ್ಮರಾಜನ ನಾಲ್ಕು ಕುದುರೆಗಳನ್ನು ಕೊಂದುಹಾಕಿದನು. ಬಲಶಾಲಿಯಾದ ಶಕುನಿಯು ಜೋರಾಗಿ ನಾದವನ್ನು ಮಾಡಿದ. ಅದನ್ನು ಕೇಳಿ ಎಲ್ಲಾ ಸೈನ್ಯವು ಕಂಪಿಸಿತು.
ಏತಸ್ಮಿನ್ನಂತರೇ ವೀರೋ ರಾಜಾನಮಪರಾಜಿತಮ್।
ಅಪೋವಾಹ ರಥೇನಾಜೌ ಸಹದೇವಃ ಪ್ರತಾಪವಾನ್ ॥28॥
ಈ ಮಧ್ಯದಲ್ಲಿ ವೀರನಾದ ಪ್ರತಾಪಿ ಸಹದೇವನು ಧರ್ಮರಾಜನನ್ನು ರಥದಲ್ಲಿ ಹತ್ತಿಸಿಕೊಂಡು ರಣರಂಗದಿಂದ ಕರೆದುಕೊಂಡು ಹೋದನು.
ಅಥಾನ್ಯಂ ರಥಮಾಸ್ಥಾಯ ಧರ್ಮರಾಜೋ ಯುಧಿಷ್ಠಿರಃ।
ಶಕುನಿಂ ನವಭಿರ್ವಿದ್ಧ್ವಾ ಪುನರ್ವಿವ್ಯಾಧ ಪಂಚಭಿಃ ॥29॥

ಯುಧಿಷ್ಠಿರನು ಇನ್ನೊಂದು ರಥವನ್ನು ಏರಿಕೊಂಡು ಬಂದು ಶಕುನಿಯ ಮೇಲೆ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು. ಪುನಃ ಐದು ಬಾಣಗಳಿಂದ ಹೊಡೆದನು.
ನನಾದ ಚ ಮಹಾನಾದಂ ಪ್ರವರಃ ಸರ್ವಧನ್ವಿನಾಮ್ |
ತದ್ ಯುದ್ಧಮಭವಚ್ಚಿತ್ರಂ ಘೋರರೂಪಂ ಚ ಮಾರಿಷ ॥30॥
ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಧರ್ಮರಾಜನು ಜೋರಾಗಿ ಶಬ್ದವನ್ನು ಮಾಡಿದನು. ರಾಜನೇ! ಭಯಂಕರವಾದ, ವಿಚಿತ್ರವಾದ ಯುದ್ಧವು ನಡೆಯಿತು.
ಈಕ್ಷಿತೃಪ್ರೀತಿಜನನಂ ಸಿದ್ಧಚಾರಣಸೇವಿತಮ್ ॥31॥
ಆ ಯುದ್ಧವನ್ನು ನೋಡಿದವರಿಗೆ ಬಹಳ ಸಂತೋಷವಾಗುತ್ತಿತ್ತು. ಸಿದ್ಧರು, ಚಾರಣರು ಕೊಂಡಾಡುತ್ತಿದ್ದರು.
ಉಲೂಕಸ್ತು ಮಹೇಷ್ವಾಸೋ ನಕುಲಂ ಯುದ್ಧದುರ್ಮದಮ್ |
ಅಭ್ಯದ್ರವದಮೇಯಾತ್ಮಾ ಶರವರ್ಷೈಃ ಸಮಂತತಃ ॥32॥
ಧನುರ್ಧಾರಿಯಾದ ಮಹಾತ್ಮ ಉಲೂಕನು ಬಾಣಗಳ ಮಳೆಯನ್ನು ಸುರಿಸುತ್ತಾ ಯುದ್ಧದುರ್ಮದನಾದ ನಕುಲನನ್ನು ಎದುರಿಸಿದನು.
ತಥೈವ ನಕುಲಃ ಶೂರಃ ಸೌಬಲಸ್ಯ ಸುತಂ ರಣೇ |
ಶರವರ್ಷೇಣ ಮಹತಾ ಸಮಂತಾತ್ ಪರ್ಯವಾರಯತ್ ॥33॥
ಅದೇ ರೀತಿಯಲ್ಲಿ ಶೂರನಾದ ನಕುಲನು ಎಲ್ಲಾ ಕಡೆಗಳಿಂದ ಬಾಣಗಳ ಮಳೆಯನ್ನು ಸುರಿಸುತ್ತಾ ಶಕುನಿಯ ಮಗನನ್ನು ಎದುರಿಸಿ ತಡೆದನು.
ತೌ ತತ್ರ ಸಮರೇ ವೀರೌ ಕುಲಪುತ್ರೌ ಮಹಾರಥೌ |
ಯೋಧಯಂತಾವದೃಶ್ಯೇತಾಂ ಪರಸ್ಪರಕೃತಾಗಸೌ ॥34॥
ಆ ಯುದ್ಧದಲ್ಲಿ ಸತ್ಕುಲಪ್ರಸೂತರಾದ ಆ ವೀರರಿಬ್ಬರೂ ಪರಸ್ಪರವಾಗಿ ಪ್ರಹಾರ ಮಾಡಿಕೊಂಡು ಯುದ್ಧ ಮಾಡುತ್ತಿರುವುದು ಕಂಡುಬಂದಿತು.
ತಥೈವ ಕೃತವರ್ಮಾ ತು ಶೈನೇಯಂ ಶತ್ರುತಾಪನಮ್ |
ಯೋಧಯನ್ ಶುಶುಭೇ ರಾಜನ್ ಬಲಿಃ ಶಕ್ರಮಿವಾಹವೇ ॥35॥
ಕೃತವರ್ಮನು ಶತ್ರುತಾಪಕನಾದ ಸಾತ್ಯಕಿಯೊಡನೆ ಯುದ್ಧ ಮಾಡಿದನು. ರಾಜನೇ! ಯುದ್ಧದಲ್ಲಿ ಬಲಿಯು ಇಂದ್ರನನ್ನು ಎದುರಿಸಿ ಶೋಭಿಸಿದಂತೆ ಕೃತವರ್ಮನು ಶೋಭಿಸುತ್ತಿದ್ದನು.
ದುರ್ಯೋಧನೋ ಧನುಶ್ಛಿತ್ವಾ ಧೃಷ್ಟದ್ಯುಮ್ನಸ್ಯ ಸಂಯುಗೇ |
ಅಥೈನಂ ಛಿನ್ನಧನ್ವಾನಂ ವಿವ್ಯಾಧ ನಿಶಿತೈಃ ಶರೈಃ ॥36॥
ಇನ್ನೊಂದೆಡೆ ಯುದ್ಧದಲ್ಲಿ ದುರ್ಯೋಧನನು ಧೃಷ್ಟದ್ಯುಮ್ನನ ಬಿಲ್ಲನ್ನು ಮುರಿದು ಹರಿತವಾದ ಬಾಣಗಳಿಂದ ಹೊಡೆದನು.
ಧೃಷ್ಟದ್ಯುಮ್ನೋಽಪಿ ಸಮರೇ ಪ್ರಗೃಹ್ಯ ಸುಮಹಾಯುಧಮ್ |
ರಾಜಾನಂ ಯೋಧಯಾಮಾಸ ಪಶ್ಯತಾಂ ಸರ್ವಧನ್ವಿನಾಮ್ ॥37॥
ಧೃಷ್ಟದ್ಯುಮ್ನನೂ ಕೂಡ ರಣರಂಗದಲ್ಲಿ ದೊಡ್ಡದಾದ ಆಯುಧವನ್ನು ಹಿಡಿದುಕೊಂಡು, ಎಲ್ಲಾ ಧನುರ್ಧಾರಿಯೋಧರ ಮುಂದೆಯೇ ದುರ್ಯೋಧನನ ಜೊತೆ ಹೋರಾಡಿದನು.
ತಯೋರ್ಯುದ್ಧಂ ಮಹಚ್ಚಾಸೀತ್ ಸಂಕ್ರಂದೇ ಭರತರ್ಷಭ |
ಪ್ರಭಿನ್ನಯೋರ್ಯಥಾ ಸಕ್ತಂ ಮತ್ತಯೋರ್ವನಹಸ್ತಿನೋಃ ॥38॥
ಭಾರತೋತ್ತಮನೇ! ರಣರಂಗದಲ್ಲಿ ಅವರಿಬ್ಬರ ಯುದ್ಧವು ಮಹತ್ತರವಾಗಿತ್ತು. ಮದವೇರಿದ ಕಾಡಾನೆಗಳು ಕಾದಾಡಿದಂತೆ ಅವರೀರ್ವರೂ ಕಾದಾಡಿದರು.
ಗೌತಮಸ್ತು ರಣೇ ಕ್ರುದ್ಧೋ ದ್ರೌಪದೇಯಾನ್ ಮಹಾಬಲಾನ್ |
ವಿವ್ಯಾಧ ಬಹುಭಿರ್ಘೋರೈಃ ಶರೈಃ ಸನ್ನತಪರ್ವಭಿಃ ॥39॥
ಮತ್ತೊಂದೆಡೆ ಕೃಪಾಚಾರ್ಯನು ಕೋಪದಿಂದ, ಮಹಾಬಲಶಾಲಿಗಳಾದ ದ್ರೌಪದಿಯ ಮಕ್ಕಳನ್ನು ಬಾಗಿದ ಸಂಧಿಗಳುಳ್ಳ ಘೋರವಾದ ಬಾಣಗಳಿಂದ ಹೊಡೆದನು.
ತಸ್ಯ ತೈರಭವದ್ ಯುದ್ಧಮಿಂದ್ರಿಯೈರಿವ ದೇಹಿನಃ |
ಘೋರರೂಪಮಸಂಹಾರ್ಯಂ ನಿರ್ಮರ್ಯಾದಮತೀವ ಚ ॥40॥
ಶರೀರದಲ್ಲಿ ಜೀವಾತ್ಮನೊಡನೆ ಪಂಚೇಂದ್ರಿಯಗಳು ಹೊಡೆದಾಡುವಂತೆ ದ್ರೌಪದಿಯ ಐದು ಜನ ಮಕ್ಕಳು ಕೃಪಾಚಾರ್ಯನ ಜೊತೆಗೆ ಹೋರಾಡುತ್ತಿದ್ದರು. ಆ ಯುದ್ಧವು ಯುದ್ಧದ ಎಲ್ಲೆಯನ್ನು ಮೀರುತ್ತಿತ್ತು. ಅದನ್ನು ನಿಲ್ಲಿಸಲೂ ಆಗದಷ್ಟು ಘೋರರೂಪವಾಗಿತ್ತು.
ತೇ ಚ ತಂ ಪೀಡಯಾಮಾಸುರಿಂದ್ರಿಯಾಣೀವ ಬಾಲಿಶಮ್ ॥41॥
ಇಂದ್ರಿಯಗಳು ಬಾಲಿಶನಾದ ಜೀವನನ್ನು ಪೀಡಿಸುವಂತೆ ಆ ದ್ರೌಪದಿಪುತ್ರರು ಕೃಪಾಚಾರ್ಯನನ್ನು ಯುದ್ಧದಲ್ಲಿ ಚೆನ್ನಾಗಿ ಪೀಡಿಸಿದರು.
ಸ ಚ ತಾನ್ ಪ್ರತಿಸಂರಬ್ಧಃ ಪ್ರತ್ಯಯೋಧಯದಾಹವೇ |
ಏವಂ ಚಿತ್ರಮಭೂದ್ ಯುದ್ಧಂ ತಸ್ಯ ತೈಃ ಸಹ ಭಾರತ ॥42॥
ಕೃಪಾಚಾರ್ಯನೂ ಕೂಡ ಆ ಯುದ್ಧದಲ್ಲಿ ಬಹಳ ಕೋಪಗೊಂಡು ಪ್ರತಿಯುದ್ಧವನ್ನು ಮಾಡಿದನು. ಭರತಕುಲೋದ್ಭವನೇ, ಹೀಗೆ ಅವರಿಗೂ ಕೃಪಾಚಾರ್ಯನಿಗೂ ವಿಚಿತ್ರವಾದ ಯುದ್ಧವು ನಡೆಯಿತು.

ಉತ಼಼್ಾಯೋತ಼್ಾಯ ಹಿ ಯಥಾ ದೇಹಿನಾಮಿಂದ್ರಿಯೈರ್ವಿಭೋ ॥43॥
ಮನುಷ್ಯರ ಇಂದ್ರಿಯಗಳು ಮತೆ ಮತ್ತೆ ಜಾಗೃತವಾಗಿ ಜೀವನನ್ನು ಆಕ್ರಮಿಸುವಂತೆ ದ್ರೌಪದಿಯ ಮಕ್ಕಳು ಕೃಪಾಚಾರ್ಯನ ಮೇಲೆ ಮತ್ತೆ ಮತ್ತೆ ದಾಳಿಮಾಡಿದರು.
ನರಾಶ್ಚೈವ ನರೈಃ ಸಾರ್ಧಂ ದಂತಿನೋ ದಂತಿಭಿಸ್ತಥಾ |
ಹಯಾ ಹಯೈಃ ಸಮಾಸಕ್ತಾ ರಥಿನೋ ರಥಿಭಿಸ್ತಥಾ |
ಸಂಕುಲಂ ಚಾಭವದ್ ಭೂಯೋ ಘೋರರೂಪಂ ವಿಶಾಂಪತೇ ॥44॥
ಇದಂ ಚಿತ್ರಮಿದಂ ಘೋರಮಿದಂ ರೌದ್ರಮಿತಿ ಪ್ರಭೋ |
ಯುದ್ಧಾನ್ಯಾಸನ್ ಮಹಾರಾಜ ಘೋರಾಣಿ ಚ ಬಹೂನಿ ಚ ॥45॥
ಪದಾತಿಗಳು ಪದಾತಿಗಳೊಡನೆ, ಆನೆಗಳು ಆನೆಗಳ ಜೊತೆಗೆ, ಕುದುರೆಗಳು ಕುದುರೆಗಳೊಡನೆ, ರಥಿಕರು ರಥಿಕರ ಜೊತೆಗೆ ದ್ವಂದ್ವಯುದ್ಧವನ್ನು ಮಾಡುತ್ತಿದ್ದರು. ರಾಜನೇ! ಈ ಸಂಕುಲಯುದ್ಧವು ಬಹಳ ಘೋರವಾಗಿತ್ತು, ವಿಚಿತ್ರವಾಗಿತ್ತು, ಭಯಾನಕವಾಗಿತ್ತು. ಮಹಾರಾಜನೇ! ಹೀಗೆ ಈ ಅನೇಕ ಯುದ್ಧಗಳು ಭಯವನ್ನು ಹುಟ್ಟಿಸುವಂತಿದ್ದವು.
ತೇ ಸಮಾಸಾದ್ಯ ಸಮರೇ ಪರಸ್ಪರಮರಿಂದಮಾಃ |
ವಿವ್ಯಧುಶ್ಚೈವ ಜಘ್ನುಶ್ಚ ಸಮಾಭಾಷ್ಯ ಮಹಾಬಲಾಃ ॥46॥
ರಣರಂಗದಲ್ಲಿ ಶತ್ರುಗಳನ್ನು ಮಣಿಸುವ ಮಹಾಬಲಶಾಲಿಗಳಾದ ಅವರು ಪರಸ್ಪರವಾಗಿ ಎದುರುಗೊಂಡು, ಚೆನ್ನಾಗಿ ಮಾತನಾಡುತ್ತಾ, ಒಬ್ಬರಿಗೊಬ್ಬರು ಹೊಡೆದುಕೊಂಡರು ಮತ್ತು ಒಬ್ಬರಿಗೊಬ್ಬರು ತಿವಿದುಕೊಂಡರು.
ತೇಷಾಂ ರಥಸಮುದ್ಧೂತಂ ರಜಸ್ತೀವ್ರಮದೃಶ್ಯತ |
ಪ್ರವಾತೇನೋದ್ಧತಂ ರಾಜನ್ ಧಾವದ್ಭಿಶ್ಚಾಶ್ವಸಾದಿಭಿಃ ॥47॥
ರಾಜನೇ! ಅವರ ರಥಗಳಿಂದಾಗಿ ಮೇಲೆದ್ದ ಧೂಳು ಬಹಳವಾಗಿ ಕಂಡುಬಂದಿತು. ಹಾಗೆಯೇ ಓಡುತ್ತಿರುವ ಕುದುರೆಸವಾರರಿಂದಾಗಿ ಎದ್ದ ಧೂಳು ಬೀಸುವ ಗಾಳಿಗೆ ಸಿಲುಕಿ ಎಲ್ಲೆಡೆ ವ್ಯಾಪಿಸಿಕೊಂಡಿತು.
ರಥನೇಮಿಸಮುದ್ಧೂತಂ ನಿಃಶ್ವಾಸೈಶ್ಚಾಪಿ ದಂತಿನಾಮ್ |
ರಜಃಸಂಧ್ಯಾಭ್ರಕಲಿಲಂ ದಿವಾಕರಪಥಂ ಯಯೌ ॥48॥
ರಥಗಳ ಚಕ್ರದಿಂದ ಎದ್ದ ಧೂಳು, ಆನೆಗಳ ಉಸಿರಾಟದಿಂದಾಗಿ ಎದ್ದ ಧೂಳು ಸಂಧ್ಯಾಕಾಲದ ಮೋಡದ ಜೊತೆಗೆ ಸೇರಿಕೊಂಡು ಸೂರ್ಯಮಾರ್ಗದ ತನಕ ಹೋಯಿತು.
ರಜಸಾ ತೇನ ಸಂಪೃಕ್ತೇ ಭಾಸ್ಕರೇ ನಿಷ್ಪ್ರಭೀಕೃತೇ |
ಸಂಛಾದಿತಾಽಭವದ್ ಭೂಮಿಸ್ತೇ ಚ ಶೂರಾ ಮಹಾರಥಾಃ ॥49॥
ಆ ಧೂಳಿನ ಸಂಪರ್ಕಕ್ಕೊಳಗಾದ ಸೂರ್ಯನು ತನ್ನ ಕಾಂತಿಯನ್ನು ಕಳೆದುಕೊಂಡನು. ಭೂಮಿಯೂ ಕೂಡ ಆ ಧೂಳಿನಿಂದ ಮುಚ್ಚಿಹೋಯಿತು. ಹಾಗೆಯೇ ಶೂರರಾದ ಮಹಾರಥರೂ ಕೂಡ ಧೂಳಿನಿಂದ ಮುಚ್ಚಲ್ಪಟ್ಟರು.
ಮುಹೂರ್ತಮಿವ ಸಂಪೃಕ್ತಂ ವಿರಜಸ್ಕಂ ಸಮಂತತಃ |
ವೀರಶೋಣಿತಸಿಕ್ತಾಯಾಂ ಭೂಮೌ ಭರತಸತ್ತಮ ॥50॥
ಭಾರತೋತ್ತಮನೇ! ಒಂದೇ ಮುಹೂರ್ತದಲ್ಲಿ ವೀರರ ರಕ್ತದಿಂದ ಸಿಕ್ತವಾದ ಭೂಮಿಯಲ್ಲಿ ಎಲ್ಲಾ ಕಡೆಯ ಧೂಳು ನಂದಿಹೋಯಿತು.
ಉಪಾಶಾಮ್ಯತ್ ತತಸ್ತೀವ್ರಂ ತದ್ರಜೋ ಘೋರದರ್ಶನಮ್ |
ತತೋಽಪಶ್ಯಂ ಮಹಾರಾಜ ದ್ವಂದ್ವಯುದ್ಧಾನಿ ಭಾರತ ॥51॥
ಪ್ರಗ್ರಹಂ ಚ ಯಥಾ ಶ್ರೇಷ್ಠಂ ಮಧ್ಯಾಹ್ನೇ ವೈ ಸುದಾರುಣೇ |
ವರ್ಮಣಾಂ ತತ್ರ ರಾಜೇಂದ್ರ ವ್ಯದೃಶ್ಯಂತೋಜ್ಜ್ವಲತ್ಪ್ರಭಾಃ ॥52॥
ಅನಂತರ ಅಲ್ಲಿತನಕ ಘೋರವಾಗಿ ಮೇಲೆದ್ದ ಆ ಧೂಳು ಉಪಶಮನಗೊಂಡಿತು. ಭರತಕುಲೋದ್ಭವನೇ! ಮಹಾರಾಜನೇ! ಧೂಳು ಹೋದ ಮೇಲೆ ಅಲ್ಲಿ ದಾರುಣವಾದ ಆ ಮಧ್ಯಾಹ್ನದಲ್ಲಿ ದ್ವಂದ್ವಯುದ್ಧವು ನಡೆಯುವುದನ್ನು ನೋಡಿದೆ. ಆ ದ್ವಂದ್ವಯುದ್ಧವು ಬಹಳ ಉತ್ತಮವಾಗಿತ್ತು. ರಾಜೇಂದ್ರನೇ! ಯೋಧರ ಕವಚಗಳ ಪ್ರಭೆಯು ಚೆನ್ನಾಗಿ ಕಾಣಿಸುತ್ತಿತ್ತು.
ಶಬ್ದಸ್ತು ತುಮುಲಃಸಂಖೇ ಶರಾಣಾಂ ಪತತಾಮಭೂತ್ |
ಮಹಾವೇಣುವನಸ್ಯೇವ ದಹ್ಯಮಾನಸ್ಯ ಪರ್ವತೇ ॥53॥
ಆ ಯುದ್ಧದಲ್ಲಿ ಬಾಣಗಳು ಬೀಳುತ್ತಿರುವಾಗ ಕೋಲಾಹಲಯುಕ್ತವಾದ ಶಬ್ದವು ಉಂಟಾಯಿತು. ಪರ್ವತದಲ್ಲಿ ಬಿದಿರಿನ ಕಾಡಿಗೆ ಬೆಂಕಿ ಬಿದ್ದಾಗ ಉಂಟಾಗುವ ಶಬ್ದದಂತೆ ಈ ಶಬ್ದವು ಕೇಳಿಬರುತ್ತಿತ್ತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಲ್ಯಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ಮೂರನೆಯ ಅಧ್ಯಾಯ
ಕೌರವ ಸೇನೆಯ ಮಹಾರಥರ ವಧೆ. ಎರಡೂ ಸೇನೆಗಳ ಮಧ್ಯೆ ಎಲ್ಲೆ ಮೀರಿದ ಯುದ್ಧ. ಶಕುನಿಯ ಯುದ್ಧ ಮತ್ತು ಅವನ ಪರಾಜಯ.
ಸಂಜಯಃ
ವರ್ತಮಾನೇ ಮಹಾಯುದ್ಧೇ ಘೋರರೂಪೇ ಭಯಾನಕೇ |

ಅಭಜ್ಯತ ಬಲಂ ತತ್ರ ತವ ಪುತ್ರಸ್ಯ ಪಾಂಡವೈಃ ॥1॥
ಸಂಜಯ ಆ ರಣರಂಗದಲ್ಲಿ ಭಯವನ್ನು ಉಂಟುಮಾಡುವ ಘೋರವಾದ ಯುದ್ಧ ನಡೆಯಿತು. ಅಲ್ಲಿ ನಿನ್ನ ಮಗ ದುರ್ಯೋಧನನ ಸೈನ್ಯವನ್ನು ಪಾಂಡವರು ನಾಶಮಾಡಿದರು.
ತಾಂಸ್ತು ಯತ್ನೇನ ಮಹತಾ ಸನ್ನಿವರ್ತ್ಯ ಮಹಾರಥಾನ್ |
ಪುತ್ರಾಸ್ತೇ ಯೋಧಯಾಮಾಸುಃ ಪಾಂಡವಾನಾಮನೀಕಿನೀಮ್ ॥2॥
ನಿನ್ನ ಮಕ್ಕಳು ಯುದ್ಧದಿಂದ ಪಲಾಯನಮಾಡುತ್ತಿದ್ದ ಮಹಾರಥ ಯೋಧರನ್ನು ಬಹಳ ಪ್ರಯತ್ನಪಟ್ಟು ಹಿಂತಿರುಗುವಂತೆ ಮಾಡಿ ಪಾಂಡವರ ಸೈನ್ಯದ ಜೊತೆಗೆ ಯುದ್ಧ ಮಾಡಿದರು.
ನಿವೃತ್ತಾಃ ಸಹಸಾ ಯೋಧಾಃ ತವ ಪುತ್ರಪ್ರಿಯೈಷಿಣಃ |
ಸನ್ನಿವೃತ್ತೇಷು ತೇಷ್ವೇವ ಯುದ್ಧಮಾಸೀತ್ ಸುದಾರುಣಮ್ ॥3॥
ದುರ್ಯೋಧನನಿಗೆ ಪ್ರಿಯವನ್ನೇ ಬಯಸುವ ಆ ಯೋಧರು ಕೂಡಲೇ ಹಿಂತಿರುಗಿ ಯುದ್ಧಕ್ಕೆ ಬಂದರು. ಅವರು ಮತ್ತೆ ಯುದ್ಧಕ್ಕೆ ಹಿಂತಿರುಗಿದಾಗ ಬಹಳ ದಾರುಣವಾದ ಯುದ್ಧವು ನಡೆಯಿತು.
ತಾವಕಾನಾಂ ಪರೇಷಾಂ ಚ ಸುರಾಸುರರಣೋಪಮಮ್ |
ಪರೇಷಾಂ ತವ ಸೈನ್ಯೇ ವಾ ನಾಸ್ತಿ ಕಶ್ಚಿತ್ ಪರಾಙ್ಮುಖಃ ॥4॥
ನಿನ್ನವರಿಗೂ ಮತ್ತು ಶತ್ರುಪಕ್ಷದವರಿಗೂ ನಡೆದ ಯುದ್ಧವು ದೇವಾಸುರರ ಯುದ್ಧದ ಹಾಗೆ ಇತ್ತು. ಎರಡೂ ಕಡೆಯ ಸೈನ್ಯದಲ್ಲಿಯೂ ಯಾವನು ಕೂಡ ಯುದ್ಧದಿಂದ ವಿಮುಖನಾಗಲಿಲ್ಲ.
ಅನುಮಾನೇನ ಯುಧ್ಯಂತೇ ಸಂಜ್ಞಾಭಿಶ್ಚ ಪರಸ್ಪರಮ್ |
ತೇಷಾಂ ಕ್ಷಯೋ ಮಹಾನಾಸೀದ್ ಯುಧ್ಯತಾಮಿತರೇತರಮ್ ॥5॥
ಅನುಮಾನದಿಂದ ಮತ್ತು ಹೆಸರು ಕರೆಯುವುದರಿಂದ ಪರಸ್ಪರವಾಗಿ ಗುರುತಿಸಿಕೊಂಡು, ಎರಡೂ ಪಕ್ಷದವರೂ ಯುದ್ಧ ಮಾಡುತ್ತಿದ್ದರು. ಪರಸ್ಪರವಾಗಿ ಯುದ್ಧ ಮಾಡುತ್ತಿದ್ದ ಎರಡೂ ಪಕ್ಷದವರೂ ತುಂಬ ನಾಶವನ್ನು ಹೊಂದಿದರು.
ತತೋ ಯುಧಿಷ್ಠಿರೋ ರಾಜಾ ಕ್ರೋಧೇನ ಮಹತಾ ವೃತಃ |
ಜಿಗೀಷಮಾಣಃ ಸಂಗ್ರಾಮೇ ಧಾರ್ತರಾಷ್ಟ್ರಾನ್ ಸರಾಜಕಾನ್ ॥6॥
ತ್ರಿಭಿಃ ಶಾರದ್ವತಂ ವಿದ್ಧ್ವಾ ರುಗ್ಮಪುಂಖೈಃ ಶಿಲಾಶಿತೈಃ |
ಚತುರ್ಭಿರ್ನಿಜಘಾನಾಶ್ವಾನ್ ನಾರಾಚೈಃ ಕೃತವರ್ಮಣಃ ॥7॥
ಅನಂತರ ಯುಧಿಷ್ಠಿರನು ಬಹಳ ಕೋಪದಿಂದ ಆವಿಷ್ಟನಾಗಿ, ಧೃತರಾಷ್ಟ್ರನ ಮಕ್ಕಳನ್ನೂ, ಅವರ ಕಡೆಯ ಬೇರೆ ರಾಜರನ್ನೂ ಗೆಲ್ಲುವ ಅಭಿಪ್ರಾಯವುಳ್ಳವನಾಗಿ ಕೃತವರ್ಮನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸುತ್ತಾನೆ. ಆ ಬಾಣಗಳು ಸಾಣೆಗಲ್ಲಿನಲ್ಲಿ ಹರಿತಗೊಳಿಸಲ್ಪಟ್ಟಿದ್ದವು ಮತ್ತು ಬಂಗಾರದ ರೆಕ್ಕೆಗಳನ್ನು ಹೊಂದಿದ್ದವು. ಮತ್ತೆ ಅಂತಹದ್ದೇ ನಾಲ್ಕು ಬಾಣಗಳನ್ನು ಪ್ರಯೋಗಿಸಿ ಕೃತವರ್ಮನ ನಾಲ್ಕು ಕುದುರೆಗಳನ್ನು ಹೊಡೆದುರುಳಿಸಿದನು.
ಅಶ್ವತ್ಥಾಮಾ ತು ಹಾರ್ದಿಕ್ಯಮಪೋವಾಹ ಯಶಸ್ವಿನಮ್ ॥8॥
ಆಗ ಅಶ್ವತ್ಥಾಮನು ಯಶೋವಂತನಾದ ಕೃತವರ್ಮನನ್ನು ರಣರಂಗದಿಂದ ಹೊರಗೆ ಕರೆದೊಯ್ದನು.
ಅಥ ಶಾರದ್ವತೋಽಷ್ಟಾಭಿಃ ಪ್ರತ್ಯಯುಧ್ಯದ್ಯುಧಿಷ್ಠಿರಮ್ ॥9॥
ಅನಂತರ ಪುನಃ ಕೃತವರ್ಮನು ಯುಧಿಷ್ಠಿರನನ್ನು ಎದುರಿಸಿದನು.
ತತೋ ದುರ್ಯೋಧನೋ ರಾಜಾ ರಥಾನ್ ಸಪ್ತಶತಾನ್ ರಣೇ |
ಪ್ರೈಷಯದ್ಯತ್ರ ರಾಜಾಽಸೌ ಧರ್ಮಪುತ್ರೋ ಯುಧಿಷ್ಠಿರಃ ॥10॥
ರಾಜನಾದ ದುರ್ಯೋಧನನು ರಣರಂಗದಲ್ಲಿ ಯುಧಿಷ್ಠಿರ ಇದ್ದ ಕಡೆಗೆ ಏಳುನೂರು ರಥಗಳನ್ನು ಯುದ್ಧಕ್ಕಾಗಿ ಕಳುಹಿಸಿದನು.
ತೇ ರಥಾ ರಥಿಭಿರ್ಯುಕ್ತಾ ಮನೋಮಾರುತರಂಹಸಃ |
ಅಭ್ಯದ್ರುವಂತ ಸಂಗ್ರಾಮೇ ಕೌಂತೇಯಸ್ಯ ರಥಂ ಪ್ರತಿ ॥11॥
ದುರ್ಯೋಧನನು ಕಳುಹಿಸಿದ ರಥಗಳು ರಥಿಕರನ್ನು ಕೂಡಿಕೊಂಡು ಮನೋವೇಗ ಮತ್ತು ವಾಯುವೇಗದಿಂದ ಧರ್ಮರಾಜ ರಥದ ಬಳಿಗೆ ಧಾವಿಸಿ ಬಂದವು.
ತೇ ಸಮಂತಾನ್ಮಹಾರಾಜ ಪರಿವಾರ್ಯ ಯುಧಿಷ್ಠಿರಮ್ |
ಅದೃಶ್ಯಂ ಸಾಯಕೈಶ್ಚಕ್ರುಃ ಮೇಘಾ ಇವ ದಿವಾಕರಮ್ ॥12॥
ಆ ರಥವೇರಿ ಬಂದ ಯೋಧರು ಧರ್ಮರಾಜನನ್ನು ಸುತ್ತುವರಿದರು. ಬಾಣಗಳನ್ನು ಪ್ರಯೋಗಿಸಿ ಧರ್ಮರಾಜನು ಕಾಣಿಸದಂತೆ ಅವನನ್ನು ಮುಚ್ಚಿಹಾಕಿದರು. ಇದು ಮೋಡಗಳು ಸೂರ್ಯನನ್ನು ಮುಚ್ಚಿದಂತೆ ಆಗಿತ್ತು.
ತಂ ದೃಷ್ಟ್ವಾ ಧರ್ಮರಾಜಾನಂ ಕೌರವೈಸ್ತೈಃ ಸಮಾವೃತಮ್ |
ನಾಮೃಷ್ಯಂತ ಸುಸಂಕ್ರುದ್ಧಾಃ ಶಿಖಂಡಿಪ್ರಮುಖಾ ರಥಾಃ ॥13॥
ಕೌರವರು ಧರ್ಮರಾಜನನ್ನು ಹೀಗೆ ಸುತ್ತುವರಿದು ಆಕ್ರಮಿಸಿದ್ದನ್ನು ನೋಡಿ ಶಿಖಂಡಿ ಮೊದಲಾದ ಮಹಾರಥರು ಸಹಿಸಲಿಲ್ಲ.
ರಥೈರಶ್ವವರೈರ್ಯುಕ್ತೈಃ ಕಿಂಕಿಣೀಜಾಲಸಂವೃತೈಃ |
ಆಜಗ್ಮುರಭಿರಕ್ಷಂತಃ ಕುಂತೀಪುತ್ರಂ ಯುಧಿಷ್ಠಿರಮ್ ॥14॥
ಕಿಂಕಿಣೀ ಮಣಿಗಳಿಂದ ಅಲಂಕೃತವಾದ, ಉತ್ತಮ ಅಶ್ವಗಳನ್ನು ಹೊಂದಿದ ರಥಗಳನ್ನು ಏರಿ ಯುಧಿಷ್ಠಿರನನ್ನು ರಕ್ಷಿಸಲಿಕ್ಕಾಗಿ ಬೇಗನೆ ಅಲ್ಲಿಗೆ ಬಂದರು.
ತತಃ ಪ್ರವವೃತೇ ಘೋರಃ ಸಂಗ್ರಾಮಃ ಶೋಣಿತೋದಕಃ |

ಪಾಂಡವಾನಾಂ ಕುರೂಣಾಂ ಚ ಯಮರಾಷ್ಟ್ರವಿವರ್ಧನಃ ॥15॥
ಆಗ ಅಲ್ಲಿ ರಕ್ತದ ಪ್ರವಾಹವನ್ನೇ ಹರಿಸುವ ಘೋರವಾದ ಯುದ್ಧವು ನಡೆಯಿತು. ಪಾಂಡವರಿಗೂ ಕೌರವರಿಗೂ ನಡೆದ ಆ ಯುದ್ಧವು ಯಮನ ಪಟ್ಟಣದಲ್ಲಿ ಜೀವರ ಸಂಖ್ಯೆಯನ್ನು ಹೆಚ್ಚಿಸುತ್ತಿತ್ತು.
ರಥಾನ್ ಸಪ್ತದಶಾನ್ ಹತ್ವಾ ಕುರೂಣಾಮಾತತಾಯಿನಾಮ್ |
ಪಾಂಡವಾಃ ಸಹ ಪಾಂಚಾಲ್ಯೈಃ ಪುನರೇವಾಭ್ಯವಾರಯನ್ ॥16॥
ಪಾಂಡವರು ಪಾಂಚಾಲರ ಜೊತೆಗೆ ಸೇರಿ ಆತತಾಯಿಗಳಾದ ಕೌರವರ ಹದಿನೇಳು ರಥಗಳನ್ನು ನಾಶಮಾಡಿ, ಅದರಲ್ಲಿದ್ದ ಯೋಧರನ್ನು ಕೊಂದು ಅವರನ್ನು ತಡೆದರು.
ತತ್ರ ಯುದ್ಧಂ ಮಹಚ್ಚಾಸೀತ್ ತವ ಪುತ್ರಸ್ಯ ಪಾಂಡವೈಃ |
ನ ಚ ತತ್ತಾದೃಶಂ ದೃಷ್ಟಂ ನೈವ ಚಾಪಿ ಪರಿಶ್ರುತಮ್ ॥17॥
ಪಾಂಡವರಿಗೂ ನಿನ್ನ ಮಗನಿಗೂ ನಡೆದ ಯುದ್ಧವು ಎಷ್ಟು ದೊಡ್ಡದಾಗಿತ್ತೆಂದರೆ ಅಂತಹ ಯುದ್ಧವನ್ನು ಹಿಂದೆ ಯಾರೂ ನೋಡಿದ್ದೂ ಇಲ್ಲ, ಕೇಳಿದ್ದೂ ಇಲ್ಲ.
ವರ್ತಮಾನೇ ಮಹಾಯುದ್ಧೇ ನಿರ್ಮರ್ಯಾದೇ ಸಮಂತತಃ |
ವಧ್ಯಮಾನೇಷು ಯೋಧೇಷು ತಾವಕೇಷ್ವಿತರೇಷು ಚ ॥18॥
ನಿನದತ್ಸು ಚ ವೀರೇಷು ಶಂಖವರ್ಯೈಶ್ಚ ಪೂರಿತೈಃ |
ಉತ್ಕೃಷ್ಟೈಃ ಸಿಂಹನಾದೈಶ್ಚ ಗರ್ಜಿತೇನ ಚ ಧನ್ವಿನಾಮ್ ॥19॥
ಹೀಗೆ ಅಪರಿಮಿತವಾಗಿ ಎಲ್ಲಾ ಕಡೆಯಲ್ಲೂ ನಡೆಯುತ್ತಿದ್ದ ಆ ಮಹಾಯುದ್ಧದಲ್ಲಿ ನಿನ್ನಕಡೆಯ ಮತ್ತು ಪರಪಕ್ಷದ ಯೋಧರು ಸಾಯುತ್ತಿದ್ದರು. ವೀರರು ಗರ್ಜಿಸುತ್ತಾ, ಶಂಖನಾದವನ್ನು ಮಾಡುತ್ತಿರಲು ಎಲ್ಲಾ ಕಡೆಯೂ ಧನುರ್ಧಾರಿಗಳ ಸಿಂಹನಾದವು ತುಂಬಿಹೋಯಿತು.
ಅತಿಪ್ರವೃದ್ಧೇ ಯುದ್ಧೇ ಚ ಭಿದ್ಯಮಾನೇಷು ಮರ್ಮಸು |
ವಧ್ಯಮಾನೇಷು ಯೋಧೇಷು ಜಯಗೃಧ್ರೇಷು ಭಾರತ ॥20॥
ಭರತಕುಲಪ್ರಸೂತನೇ! ಮರ್ಮತಾಡನದಿಂದ ಕೂಡಿದ ಬಹಳವಾಗಿ ವೃದ್ಧಿಸಿದ ಆ ಯುದ್ಧದಲ್ಲಿ ಜಯವನ್ನೇ ಬಯಸಿ ಹೋರಾಡುತ್ತಿದ್ದ ಯೋಧರು ಸಾಯುತ್ತಿದ್ದರು.
ಸಂಹಾರೇ ಸರ್ವತೋ ಜಾತೇ ಪೃಥಿವ್ಯಾಂ ಘೋರಸಂಭವೇ |
ಬಹ್ವೀನಾಮುತ್ತಮಸ್ತ್ರೀಣಾಂ ಸೀಮಂತೋದ್ಧರಣೇ ಕೃತೇ ॥21॥
ಘೋರವಾದ ಯುದ್ಧದಿಂದಾಗಿ ಭೂಮಿಯಲ್ಲಿ ಅನೇಕರು ಸಾಯುತ್ತಿರಲು ಅವರ ಪತ್ನಿಯರಾದ ಉತ್ತಮಸ್ತ್ರೀಯರು ತಮ್ಮ ಕೇಶವಿನ್ಯಾಸವನ್ನು ಕಳೆದುಕೊಂಡು ವಿಧವೆಯರಾಗುತ್ತಿದ್ದರು.
ನಿರ್ಮರ್ಯಾದೇ ಮಹಾಯುದ್ಧೇ ವರ್ತಮಾನೇ ಸುದಾರುಣೇ |
ಪ್ರಾದುರಾಸನ್ ವಿನಾಶಾಯ ತದೋತ್ಪಾತಾಃ ಸುದಾರುಣಾಃ ॥22॥
ಹೀಗೆ ಮಹಾಯುದ್ಧವು ಎಲ್ಲೆಮೀರಿ ನಡೆಯುತ್ತಿರಲು ಜಗತ್ತಿಗೇ ವಿನಾಶವನ್ನು ಸೂಚಿಸುವ ದುಃಖಕರವಾದ ಶಕುನಗಳು ಕಾಣಿಸಿಕೊಂಡವು.
ಚಚಾಲ ಶಬ್ದಂ ಕುರ್ವಾಣಾ ಸಪರ್ವತವನಾ ಮಹೀ |
ಸದಂಡಾಶ್ಚೋಲ್ಮುಕಾ ರಾಜನ್ ನಿಪತಂತಿ ಸಮಂತತಃ ॥23॥
ಪರ್ವತ, ಕಾಡುಗಳಿಂದ ಸಹಿತವಾದ ಭೂಮಿಯು ಜೋರಾದ ಶಬ್ದದೊಂದಿಗೆ ಕಂಪಿಸಿತು. ರಾಜನೇ! ದಂಡಸಹಿತವಾದ ಉಲ್ಕೆಗಳು ಎಲ್ಲಾ ಕಡೆ ಬೀಳತೊಡಗಿದವು.
ಉಲ್ಕಾಃ ಪೇತುರ್ದಿವೋ ಭೂಮಾವಾಹತ್ಯ ರವಿಮಂಡಲಮ್ |
ವಿಷ್ವಗ್ವಾತಾಃ ಪ್ರಾದುರಾಸನ್ ನೀಚೈಃ ಶರ್ಕರವರ್ಷಿಣಃ ॥24॥
ಆಕಾಶದಿಂದ ಸೂರ್ಯಮಂಡಲಕ್ಕೆ ತಾಗಿಕೊಂಡು ಉಲ್ಕೆಗಳು ಭೂಮಿಗೆ ಅಪ್ಪಳಿಸುತ್ತಿದ್ದವು. ಕೆಳಗಿನಿಂದ ಮರಳನ್ನು ಎರಚುತ್ತಾ ಸುಂಟರಗಾಳಿಯು ಎದ್ದಿತು.
ಅಶ್ರೂಣಿ ಮುಮುಚುರ್ನಾಗಾಃ ವೇಪಥುಶ್ಚಾವಿಶದ್ ಭೃಶಮ್ ॥25॥
ಆನೆಗಳು ಕಣ್ಣೀರು ಸುರಿಸಿದವು. ಮೈಯ್ಯೆಲ್ಲಾ ನಡುಕವುಂಟಾಯಿತು.
ಏತಾನ್ ಘೋರಾನನಾದೃತ್ಯ ಸಮುತ್ಪಾತಾನ್ ಸುದಾರುಣಾನ್ |
ಪುನರ್ಯುದ್ಧಾಯ ಸಮ್ಮಂತ್ರ್ಯ ಕ್ಷತ್ರಿಯಾಸ್ತಸ್ಥುರವ್ಯಥಾಃ ॥26॥
ರಮಣೀಯೇ ಕುರುಕ್ಷೇತ್ರೇ ಪುಣ್ಯೇ ಸ್ವರ್ಗಯಿಯಾಸವಃ |
ತತೋ ಗಾಂಧಾರರಾಜಸ್ಯ ಪುತ್ರಃ ಶಕುನಿರಬ್ರವೀತ್ ॥27॥
ಇಷ್ಟೆಲ್ಲಾ ಘೋರವಾದ ಶಕುನಗಳು ಕಾಣಿಸುತ್ತಿದ್ದರೂ ಅವುಗಳನ್ನು ಕಡೆಗಣಿಸಿ ಕ್ಷತ್ರಿಯವೀರರು ಯಾವುದೇ ದುಃಖಕ್ಕೆ ಒಳಗಾಗದೇ ಮತ್ತೆ ಯುದ್ಧಕ್ಕೆ ಆಹ್ವಾನಿಸುತ್ತಾ ನಿಂತುಕೊಂಡರು. ಅವರೆಲ್ಲರೂ ಸುಂದರವಾದ ಹಾಗೂ ಪುಣ್ಯಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಹೋರಾಡಿ ಸ್ವರ್ಗಕ್ಕೆ ಹೋಗುವ ಇಚ್ಛೆಯುಳ್ಳವರಾಗಿದ್ದರು. ಆಗ ಗಾಂಧಾರದೇಶದ ರಾಜಪುತ್ರನಾದ ಶಕುನಿಯು ಹೀಗೆ ಹೇಳುತ್ತಾನೆ.
ಶಕುನಿಃ
ಯುಧ್ಯಧ್ವಮಗ್ರತೋ ಯಾವತ್ ಪೃಷ್ಠತೋ ಹನ್ಮಿ ಪಾಂಡವಾನ್ ॥28॥
ಶಕುನಿ ನೀವೆಲ್ಲಾ ಮುಂದುಗಡೆಯಿಂದ ಯುದ್ಧವನ್ನು ಮಾಡುತ್ತಿರಿ. ನಾನು ಹಿಂದುಗಡೆಯಿಂದ ಪಾಂಡವರನ್ನು ಕೊಲ್ಲುತ್ತೇನೆ.

ಸಂಜಯಃ
ತತೋಽಭ್ಯಧಾವಂಸ್ತ್ವರಿತಾ ಮದ್ರಯೋಧಾಸ್ತರಸ್ವಿನಃ|
ಹೃಷ್ಟಾಃ ಕಿಲಕಿಲಶಬ್ದಾನ್ ಅಕುರ್ವನ್ನಪರೇ ತಥಾ ||29||
ಆಗ ಬಹಳ ವೇಗವುಳ್ಳ ಮದ್ರದೇಶದ ಯೋಧರು ಕೂಡಲೇ ಕಿಲಕಿಲಶಬ್ದವನ್ನು ಮಾಡುತ್ತಾ ಬರುತ್ತಾರೆ. ಹಾಗೆಯೇ ಬೇರೆ ಯೋಧರೂ ಬರುತ್ತಾರೆ.
ತೇಽಸ್ಮಾಂಸ್ತು ಪುನರಾಸಾದ್ಯ ಲಬ್ಧಲಕ್ಷಾ ದುರಾಸದಾಃ|
ಶರಾಸನಾನಿ ಧೂನ್ವಾನಾಃ ಶರವರ್ಷೈರವಾಕಿರನ್ ||30||
ಎದುರಿಸಲು ಅಶಕ್ಯರಾದ, ಗುರಿಯಿಟ್ಟು ಯುದ್ಧಮಾಡುವುದರಲ್ಲಿ ನಿಪುಣರಾದ ಪಾಂಡವರು ಮತ್ತೆ ನಮ್ಮ ಮೇಲೆ ಆಕ್ರಮಣವನ್ನು ಮಾಡಿ, ಬಿಲ್ಲುಗಳನ್ನು ಠೇಂಕರಿಸುತ್ತಾ ನಮ್ಮವರ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತತೋ ಹತಂ ಪರ್ಯಸ್ತತ್ರ ಮದ್ರರಾಜಬಲಂ ತದಾ|
ದುರ್ಯೋಧನಬಲಂ ದೃಷ್ಟ್ವಾ ಪುನರಾಸೀತ್ ಪರಾಙ್ಮುಖಮ್ ||31||
ಆಗ ಪಾಂಡವರು ಮದ್ರಸೈನ್ಯವನ್ನು ನಾಶಮಾಡಿದ್ದನ್ನು ನೋಡಿದ ದುರ್ಯೋಧನನ ಸೈನ್ಯವು ಪುನಃ ಯುದ್ಧದಿಂದ ಹಿಮ್ಮೆಟ್ಟಿತು.
ಗಾಂಧಾರರಾಜಸ್ತು ಪುನರ್ವಾಕ್ಯಮಾಹ ತತೋ ಬಲೀ ||32||
ಅನಂತರ ಬಲಶಾಲಿಯಾದ ಶಕುನಿಯು ಈ ವಾಕ್ಯವನ್ನು ಹೇಳುತ್ತಾನೆ.
ಶಕುನಿಃ
ನಿವರ್ತಧ್ವಮಧರ್ಮಜ್ಞಾ ಯುಧ್ಯಧ್ವಂ ಕಿಂ ದ್ರುತೇನ ವಃ ||33||
ಶಕುನಿ ಯುದ್ಧಧರ್ಮವನ್ನು ತಿಳಿಯದ ಯೋಧರೇ! ಯುದ್ಧಕ್ಕೆ ಬೆನ್ನುಹಾಕಿ ಓಡುವುದರಿಂದ ಏನು ಪ್ರಯೋಜನ? ಯುದ್ಧಕ್ಕೆ ಮರಳಿ ಯುದ್ಧ ಮಾಡಿರಿ.
ಸಂಜಯಃ
ಅನೀಕಂ ದಶಸಾಹಸ್ರಮಶ್ವಾನಾಂ ಭರತರ್ಷಭ|
ಆಸೀದ್ ಗಾಂಧಾರರಾಜಸ್ಯ ವಿಮಲಪ್ರಾಸಯೋಧಿನಾಮ್ ||34||
ಸಂಜಯ ಭರತಕುಲಶ್ರೇಷ್ಠನೇ! ಶಕುನಿಯ ಸೈನ್ಯದಲ್ಲಿ ಶುಭ್ರವಾದ ಪ್ರಾಸಾಯುಧದಿಂದ ಯುದ್ಧಮಾಡುವ ಹತ್ತುಸಾವಿರ ಅಶ್ವಾರೋಹಿಗಳು ಇದ್ದರು.
ಬಲೇನ ತೇನ ವಿಕ್ರಮ್ಯ ವರ್ತಮಾನೇ ಜನಕ್ಷಯೇ|
ಪೃಷ್ಠತಃ ಪಾಂಡವಾನೀಕಮಭ್ಯಘ್ನನ್ ನಿಶಿತೈಃ ಶರೈಃ ||35||
ಆ ಸೈನ್ಯವು ಯುದ್ಧಮಾಡುತ್ತಾ ಯೋಧರನ್ನು ನಾಶಮಾಡುತ್ತಿರುವಾಗ ಹಿಂಭಾಗದಿಂದ ಶಕುನಿಯು ಹರಿತವಾದ ಬಾಣಗಳಿಂದ ಪಾಂಡವರ ಸೈನ್ಯವನ್ನು ನಾಶಮಾಡಿದನು.
ತದಭ್ರಮಿವ ವಾತೇನ ಕ್ಷಿಪ್ಯಮಾಣಂ ಸಮಂತತಃ|
ಅಭಜ್ಯತ ಮಹಾರಾಜ ಪಾಂಡವಾನಾಂ ಮಹದ್ಬಲಮ್ ||36||
ಮಹಾರಾಜನೇ! ಗಾಳಿಯ ಹೊಡೆತಕ್ಕೆ ಸಿಲುಕಿ ನುಚ್ಚುನೂರಾದ ಮೋಡದಂತೆ ಪಾಂಡವರ ಮಹಾಸೇನೆಯೂ ಛಿದ್ರ-ವಿಚ್ಛಿದ್ರವಾಯಿತು.
ತತೋ ಯುಧಿಷ್ಠಿರಃ ಪ್ರೇಕ್ಷ್ಯ ಭಗ್ನಂ ಸ್ವಬಲಮಂತಿಕಾತ್|
ಅಭ್ಯಚೋದಯದವ್ಯಗ್ರಃ ಸಹದೇವಂ ಮಹಾಬಲಮ್ ||37||
ಆಗ ಧರ್ಮರಾಜನು ತನ್ನ ಸೈನ್ಯವು ನಾಶವಾಗುವುದನ್ನು ಹತ್ತಿರದಿಂದಲೇ ನೋಡಿ ತಾನು ಯಾವುದೇ ಕಳವಳಕ್ಕೆ ಒಳಗಾಗದೆ ಮಹಾಬಲಶಾಲಿಯಾದ ಸಹದೇವನಿಗೆ ಹೀಗೆ ಆದೇಶಿಸುತ್ತಾನೆ.
ಯುಧಿಷ್ಠಿರಃ
ಅಸೌ ಸುಬಲಪುತ್ರೋ ನೋ ಜಘನೇ ಪಶ್ಯ ದಂಸಿತಃ|
ಸೇನಾಂ ನಿಷೂದಯತ್ಯೇಷ ಪಶ್ಯ ಪಾಂಡವ ದುರ್ಮತಿಮ್ ||38||
ಯುಧಿಷ್ಠಿರ ಸಹದೇವನೇ! ಈ ಶಕುನಿಯು ಕವಚಧಾರಿಯಾಗಿ ನಮ್ಮ ಹಿಂಭಾಗದಲ್ಲಿ ಸೈನ್ಯವನ್ನು ನಾಶಮಾಡುತ್ತಿದ್ದಾನೆ. ಇಂತಹ ಕಪಟಿಯನ್ನು ನೋಡು.
ಗಚ್ಛ ತ್ವಂ ದ್ರೌಪದೇಯೈಶ್ಚ ಶಕುನಿಂ ಸೌಬಲಂ ಜಹಿ ||39||
ನೀನು ದ್ರೌಪದಿಯ ಪುತ್ರರೊಡನೆ ಸೇರಿಕೊಂಡು ಆ ಶಕುನಿಯನ್ನು ಕೊಲ್ಲು.
ರಥಾನೀಕೇನ ಯುದ್ಧ್ಯೇಽಹಂ ಪಾಂಚಾಲ್ಯೈಃ ಸಹಿತೋಽನಘ|
ಗಚ್ಛಂತು ಕುಂಜರಾಃ ಸರ್ವೇ ವಾಜಿನಶ್ಚ ಮಹಾಜವಾಃ ||40||
ಪಾದಾತಾಶ್ಚ ತ್ರಿಸಾಹಸ್ರಾಃ ಶಕುನಿಂ ತೈರ್ವೃತೋ ಜಹಿ ||41||
ದೋಷರಹಿತನೇ! ನಾನು ಪಾಂಚಾಲರನ್ನು ಕೂಡಿಕೊಂಡು ರಥಸೈನ್ಯಮೂಲಕ ಯುದ್ಧಮಾಡುತ್ತೇನೆ. ಎಲ್ಲಾ ಆನೆಗಳು, ಎಲ್ಲಾ ವೇಗಗಾಮಿಗಳಾದ ಕುದುರೆಗಳು, ಮೂರು ಸಾವಿರ ಪದಾತಿಗಳೂ ಶಕುನಿಯ ಕಡೆಗೆ ಹೋಗಲಿ. ಅವರು ಶಕುನಿಯನ್ನು ಸುತ್ತಲೂ ಆಕ್ರಮಿಸಿದಾಗ ನೀನು ಶಕುನಿಯನ್ನು ಕೊಲ್ಲು.
ಸಂಜಯಃ
ತತೋ ಗಜಾಃ ಸಪ್ತಶತಂ ಚಾಪಪಾಣಿಭಿರಾವೃತಾಃ|

ಪಂಚ ಚಾಶ್ವಸಹಸ್ರಾಣಿ ಸಹದೇವಶ್ಚ ವೀರ್ಯವಾನ್ ॥42॥
ಪಾದಾತಾಶ್ಚ ತ್ರಿಸಾಹಸ್ರಾ ದ್ರೌಪದೇಯಾಶ್ಚ ಸರ್ವಶಃ।
ರಣೇ ವಾಽಭ್ಯದ್ರುವಂತೇ ತು ಶಕುನಿಂ ಯುದ್ಧದುರ್ಮದಮ್ ॥43॥
ಸಂಜಯ ಅನಂತರ ಧನುರ್ಧಾರಿಗಳನ್ನು ಹೊಂದಿರುವ ಏಳುನೂರು ಆನೆಗಳು, ಐದುಸಾವಿರ ಕುದುರೆಗಳು, ವೀರನಾದ ಸಹದೇವನು, ಮೂರುಸಾವಿರ ಪದಾತಿಗಳು, ದ್ರೌಪದಿಯ ಎಲ್ಲಾ ಮಕ್ಕಳೂ ಯುದ್ಧಮದವನ್ನು ಏರಿಸಿಕೊಂಡಿರುವ ಶಕುನಿಯನ್ನು ಎದುರಿಸಿದರು.
ತತಸ್ತು ಸೌಬಲೋ ರಾಜನ್ನಭ್ಯತಿಕ್ರಮ್ಯ ಪಾಂಡವಾನ್।
ಜಘಾನ ಪೃಷ್ಠತಃ ಸೇನಾಂ ಜಯಗೃಧ್ನುಃ ಪ್ರತಾಪವಾನ್ ॥44॥
ರಾಜನೇ! ಜಯದ ಮೇಲೆ ಕಣ್ಣಿಟ್ಟಿರುವ ಮಹಾಪ್ರತಾಪಿ ಶಕುನಿಯು ಪಾಂಡವರನ್ನೆಲ್ಲಾ ಮೀರಿ ಹಿಂಭಾಗದಿಂದ ಸೈನ್ಯವನ್ನು ನಾಶಮಾಡಿದನು.
ಅಶ್ವಾರೋಹಾಃ ಸಮಾರಬ್ಧಾಃ ಪಾಂಡವಾನಾಂ ತರಸ್ವಿನಾಮ್।
ಪ್ರಾವಿಶನ್ ಸೌಬಲಾನೀಕಮಭ್ಯತಿಕ್ರಮ್ಯ ತಾನ್ ರಥಾನ್ ॥45॥
ಯುದ್ಧಸನ್ನದ್ಧರಾದ ವೇಗಶಾಲಿಗಳಾದ ಪಾಂಡವರ ಅಶ್ವಾರೋಹಿಗಳು ಶಕುನಿಯ ರಥಗಳನ್ನೂ ಮೀರಿ ಅವನ ಸೈನ್ಯವನ್ನು ಪ್ರವೇಶಿಸಿದವು.
ತೇ ತತ್ರ ಸಾದಿನಃ ಶೂರಾಃ ಸೌಬಲಸ್ಯ ಮಹದ್ಬಲಮ್।
ಗಜಮಧ್ಯೇ ವ್ಯವಸ್ಥಾಪ್ಯ ಶರವರ್ಷೈರವಾಕಿರನ್ ॥46॥
ಆ ಅಶ್ವಾರೋಹಿ ಶೂರರು ಶಕುನಿಯ ದೊಡ್ಡದಾದ ಸೇನೆಯನ್ನು ಆನೆಗಳ ಮಧ್ಯೆ ನಿಲ್ಲಿಸಿ ಅದರ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ತದುದ್ಯತಗದಾಪ್ರಾಸಂ ಮಹಾಪುರುಷಸೇವಿತಮ್।
ಪ್ರಾವರ್ತತ ಮಹದ್ಯುದ್ಧಂ ರಾಜನ್ ದುರ್ಮಂತ್ರಿತೇ ತವ ॥47॥
ರಾಜನೇ! ನಿನ್ನ ದುರಾಲೋಚನೆಯಿಂದ ನಡೆದ ಯುದ್ಧದಲ್ಲಿ ದೊಡ್ಡದಾದ ಕಾದಾಟವು ಏರ್ಪಟ್ಟಿತ್ತು. ಮಹಾಯೋಧರು ಗದಾಯುಧ, ಪ್ರಾಸಾಯುಧಗಳನ್ನು ಎತ್ತಿ ಯುದ್ಧ ಮಾಡುತ್ತಿದ್ದರು.
ಉಪಾರಮಂತ ನಿಃಶಬ್ದಾಃ ಪ್ರೇಕ್ಷಕಾ ರಥಿನೋಽಭವನ್।
ನ ಹಿ ಸ್ವೇಷಾಂ ಪರೇಷಾಂ ಚ ವಿಶೇಷಃ ಸಮದೃಶ್ಯತ ॥48॥
ಆಗ ಶಕುನಿಯ ಸೈನ್ಯದ ರಥಿಕರು ನಿಶ್ಶಬ್ದರಾಗಿ ಯುದ್ಧವನ್ನು ನಿಲ್ಲಿಸಿ ಮೂಕಪ್ರೇಕ್ಷಕರಾದರು. ನಮ್ಮವರಿಗೂ ಶತ್ರುಗಳಿಗೂ ಪರಾಕ್ರಮದ ವಿಷಯದಲ್ಲಿ ಯಾವುದೇ ವ್ಯತ್ಯಾಸವು ಕಾಣಿಸಲಿಲ್ಲ.
ಶೂರಬಾಹುವಿಸೃಷ್ಟಾನಾಂ ಶರಾಣಾಂ ಭರತರ್ಷಭ।
ಜ್ಯೋತಿಷಾಮಿವ ಸಂಪಾತಮಪಶ್ಯನ್ ಕುರುಪಾಂಡವಾಃ ॥49॥
ಭಾರತೋತ್ತಮನೇ! ಶೂರರು ಪ್ರಯೋಗಿಸಿದ ಬಾಣಗಳು ನಕ್ಷತ್ರಗಳ ಹಾಗೆ ಬೀಳುತ್ತಿರುವುದನ್ನು ಕುರುಗಳು ಮತ್ತು ಪಾಂಡವರು ನೋಡಿದರು.
ಶಕ್ತಿಭಿರ್ವಿಮಲಾಭಿಶ್ಚ ತತ್ರ ತತ್ರ ವಿಶಾಂಪತೇ।
ಸಂಪತಂತೀಭಿರಾಕಾಶಮಾವೃತಂ ಬಹ್ವಶೋಭತ ॥50॥
ರಾಜನೇ! ಪರಿಶುಭ್ರವಾದ ಶಕ್ತ್ಯಾಯುಧಗಳು ರಣರಂಗದಲ್ಲಿ ಅಲ್ಲಲ್ಲಿ ಬೀಳುತ್ತಿರುವಾಗ ಆಕಾಶವು ಬಹಳವಾಗಿ ಶೋಭಿಸಿತು.
ಪ್ರಾಸಾನಾಂ ಪತತಾಂ ರಾಜನ್ ರೂಪಮಾಸೀತ್ ಸಮಂತತಃ।
ಶಲಭಾನಾಮಿವಾಕಾಶೇ ತದಾ ಭರತಸತ್ತಮ ॥51॥
ರಾಜನೇ! ಭರತೋತ್ತಮನೇ! ಪ್ರಾಸಾಯುಧಗಳು ಆಕಾಶದಲ್ಲಿ ಎಲ್ಲಾ ಕಡೆಯಿಂದ ಬೀಳುತ್ತಿರುವುದನ್ನು ನೋಡಿದರೆ ಶಲಭಗಳು ಬೀಳುತ್ತಿರುವಂತೆ ಕಾಣಿಸುತ್ತಿತ್ತು.
ರುಧಿರೋಕ್ಷಿತಸರ್ವಾಂಗೈರ್ವಿಪ್ರವಿದ್ಧೈರ್ನಿಯಂತೃಭಿಃ।
ಹಯಾಃ ಪರಿಪತಂತಿ ಸ್ಮ ಶತಶೋಽಥ ಸಹಸ್ರಶಃ ॥52॥
ಕುದುರೆಗಳ ಮೈಯೆಲ್ಲಾ ಗಾಯವಾಗಿತ್ತು. ಅಶ್ವಾರೋಹಿಗಳು ಬಲವಾಗಿ ಅವುಗಳನ್ನು ನಿಯಂತ್ರಿಸುತ್ತಿದ್ದರು. ಇಂತಹ ನೂರಾರು ಸಾವಿರಾರು ಕುದುರೆಗಳು ದುಃಖಪಡುತ್ತಿದ್ದವು.
ಅನ್ಯೋನ್ಯಂ ಪ್ರತಿವಿದ್ಧಾಶ್ಚ ಸಮಾಸಾದ್ಯ ಪರಸ್ಪರಮ್।
ಪರಿಕ್ಷತಾಃ ಸ್ಮ ದೃಶ್ಯಂತೇ ವಮಂತೋ ರುಧಿರಂ ಮುಖೈಃ ॥53॥
ಪರಸ್ಪರವಾಗಿ ಒಂದರ ಮೇಲೊಂದು ಹೊಡೆದಾಡಿದ ಕುದುರೆಗಳು ಗಾಯಗೊಂಡು ಬಾಯಿಯಿಂದ ರಕ್ತವನ್ನು ವಾಂತಿಮಾಡುತ್ತಿದ್ದವು.
ತತೋಽಭವತ್ ತಮೋ ಘೋರಂ ಸೈನ್ಯೇನ ರಜಸಾ ವೃತಮ್।
ತಾನಪಾಕ್ರಮತೋಽದ್ರಾಕ್ಷಂ ತಸ್ಮಾದ್ದೇಶಾದರಿಂದಮಾನ್ ॥54॥
ಆಗ ಸೈನ್ಯವು ಧೂಳಿನಿಂದ ಆವೃತಗೊಂಡು ಭಯಂಕರವಾದ ಕತ್ತಲೆಯು ಉಂಟಾಯಿತು. ಅಲ್ಲಿ ಆಕ್ರಮಿಸುತ್ತಿರುವ ಶತ್ರುಸಂಹಾರಕರಾದ ಯೋಧರನ್ನು ನೋಡಿದೆನು.
ಅಶ್ವಾನ್ ಗಜಾನ್ ಮನುಷ್ಯಾಂಶ್ಚ ರಜಸಾ ಸಂವೃತೇ ಸತಿ।
ಭೂಮೌ ನಿಪತಿತಾಶ್ಚಾನ್ಯೇ ವಮಂತೋ ರುಧಿರಂ ಬಹು ॥55॥
ಕುದುರೆಗಳನ್ನು, ಆನೆಗಳನ್ನು, ಪದಾತಿಗಳನ್ನು ಧೂಳು ಆವರಿಸಿ ಮುಚ್ಚಿಹಾಕಿದಾಗ ಉಳಿದವರು ರಕ್ತವನ್ನು ಕಾರುತ್ತಾ

ನೆಲಕ್ಕುರುಳಿದರು.
ಕೇಶಾಕೇಶಿ ಸಮಾಲಗ್ನಾ ನ ಶೇಕುಶ್ಚೇಷ್ಟಿತುಂ ನರಾಃ |
ಅನ್ಯೋನ್ಯಮಶ್ವಪೃಷ್ಠೇಭ್ಯೋ ವಿಕರ್ಷಂತೋ ಮಹಾಬಲಾಃ ॥56॥
ಯೋಧರು ಪರಸ್ಪರವಾಗಿ ಜುಟ್ಟನ್ನು ಹಿಡಿದುಕೊಂಡು ಎಳೆದಾಡಿದಾಗ ಯಾರಿಗೂ ಅಲ್ಲಾಡಲೂ ಸಾಧ್ಯವಾಗಲಿಲ್ಲ.
ಮಹಾಬಲಶಾಲಿಗಳು ಪರಸ್ಪರವಾಗಿ ಒಬ್ಬರನ್ನೊಬ್ಬರು ಕುದುರೆಯಿಂದ ಕೆಳಗೆ ಎಳೆಯುತ್ತಿದ್ದರು.
ಮಲ್ಲಾ ಇವ ಸಮಾಸಕ್ತಾ ನಿಜಘ್ನುರಿತರೇತರಮ್ |
ಅಶ್ವಾಶ್ಚ ವ್ಯಪಕೃಷ್ಯಂತ ಬಹವೋಽತ್ರ ಗತಾಸವಃ ॥57॥
ಪರಸ್ಪರವಾಗಿ ಮಲ್ಲರ ಹಾಗೆ ಹೊಡೆದಾಡಿಕೊಂಡರು. ಅನೇಕ ಕುದುರೆಗಳು ಪ್ರಾಣ ಕಳೆದುಕೊಂಡು ಎಳೆದು ಹಾಕಲ್ಪಟ್ಟವು.
ಭೂಮೌ ನಿಪತಿತಾಶ್ಚಾನ್ಯೇ ಬಹವೋಽಥ ಜಿಗೀಷವಃ |
ತತ್ರ ತತ್ರ ವ್ಯದೃಶ್ಯಂತ ಪುರುಷಾಃ ಶೂರಮಾನಿನಃ ॥58॥
ಜಯದ ಬಯಕೆಯನ್ನು ಹೊಂದಿದ ಅನೇಕರು ಪ್ರಾಣಬಿಟ್ಟು ಭೂಮಿಯಲ್ಲಿ ಬಿದ್ದರು. ಅವರೆಲ್ಲರೂ ತಮ್ಮನ್ನು ತಾವೇ ಮಹಾಶೂರರೆಂದು ತಿಳಿದುಕೊಂಡಿದ್ದರು.
ರಕ್ತೋಕ್ಷಿತೈಶ್ಛಿನ್ನಭುಜೈಃ ಅಪಕೃಷ್ಟಶಿರೋಧರೈಃ |
ವ್ಯದೃಶ್ಯತ ಮಹೀ ಕೀರ್ಣಾ ಶತಶೋಽಥ ಸಹಸ್ರಶಃ ॥59॥
ಕೆಲವು ದೇಹಗಳು ರಕ್ತಸಿಕ್ತವಾಗಿದ್ದವು. ಕೆಲವದರ ಕೈಗಳು ಕಡಿದುಹೋಗಿದ್ದವು. ಕೆಲವದರ ಕುತ್ತಿಗೆ ಸೀಳಲ್ಪಟ್ಟಿತ್ತು. ಇಂತಹ ನೂರಾರು ಸಾವಿರಾರು ದೇಹಗಳಿಂದ ರಣಭೂಮಿಯು ತುಂಬಿಹೋಗಿತ್ತು.
ಅನ್ಯೋನ್ಯಂ ಪ್ರತಿವಿದ್ಧಾಶ್ಚ ಸಮಾಸಾದ್ಯ ಪರಸ್ಪರಮ್ ॥60॥
ಯೋಧರು ಪರಸ್ಪರ ಒಬ್ಬರನ್ನೊಬ್ಬರು ಹೊಡೆದುಕೊಳ್ಳುತ್ತಿದ್ದರು.
ದೂರಂ ನ ಶಕ್ಯಂ ತತ್ರಾಸೀದ್ ಗಂತುಮಶ್ವೇನ ಕೇನಚಿತ್ |
ಸಾರೋಹೈರ್ನಿಹತೈರಶ್ವೈರಾವೃತೇ ವಸುಧಾತಳೇ ॥61॥
ಭೂಮಿಯ ಮೇಲೆ ಆರೋಹಿಗಳ ಜೊತೆಗೇನೇ ಕುದುರೆಗಳು ಸತ್ತು ರಾಶಿ ಬಿದ್ದ ಕಾರಣದಿಂದ ಯಾವುದೇ ಕುದುರೆಗಳಿಗೂ ಸ್ವಲ್ಪದೂರ ಹೋಗಲೂ ಸಾಧ್ಯವಾಗುತ್ತಿರಲಿಲ್ಲ.
ರುಧಿರೋಕ್ಷಿತಸರ್ವಾಂಗೈರಾತ್ತಶಸ್ತ್ರೈರುದಾಯುಧೈಃ |
ನಾನಾಪ್ರಹರಣೈರ್ಘೋರೈಃ ಪರಸ್ಪರವಧೈಷಿಭಿಃ ॥62॥
ಸುಸನ್ನಿವಿಷ್ಟೇ ಸಂಗ್ರಾಮೇ ಹತಭೂಯಿಷ್ಠಸೈನಿಕೇ |
ಸ ಮುಹೂರ್ತಂ ತದಾ ಯುದ್ಧ್ವಾ ಸರ್ವಯೋಧವಧೇ ಕೃತೇ ॥63॥
ಷಟ್ಸಹಸ್ರೈರ್ಹಯೈಃ ಶಿಷ್ಟೈರಪಾಯಾಚ್ಛಕುನಿಸ್ತತಃ ॥64॥
ಯೋಧರ ಮೈಯೆಲ್ಲಾ ಗಾಯವಾಗಿ ರಕ್ತ ಸುರಿಯುತ್ತಿತ್ತು. ಆದರೂ ಶಸ್ತ್ರ ಮತ್ತು ಆಯುಧಗಳನ್ನು ಹಿಡಿದುಕೊಂಡು ಹೋರಾಡುತ್ತಿದ್ದರು. ಒಬ್ಬರನ್ನೊಬ್ಬರು ಸಾಯಿಸುವ ಇಚ್ಛೆಯುಳ್ಳವರಾಗಿ ಘೋರವಾದ ಅನೇಕ ರೀತಿಯ ಹೊಡೆದಾಟದಲ್ಲಿ ತೊಡಗಿದ್ದರು. ಅಂತಹ ಯುದ್ಧದಲ್ಲಿ ತನ್ನ ಕಡೆಯ ಅನೇಕ ಸೈನಿಕರು ಮತ್ತು ಮಹಾಯೋಧರು ಸತ್ತುಹೋದಾಗ ಶಕುನಿಯು ಒಂದು ಮುಹೂರ್ತದಷ್ಟು ಸಮಯ ಯುದ್ಧಮಾಡಿ ಉಳಿದ ಆರುಸಾವಿರ ಕುದುರೆಗಳೊಡನೆ ರಣರಂಗದಿಂದ ಪಲಾಯನ ಮಾಡಿದನು.
ತಥೈವ ಪಾಂಡವಾನೀಕಂ ರುಧಿರೇಣ ಸಮುಕ್ಷಿತಮ್ |
ತ್ರಿಸಾಹಸ್ರೈ ರಥೈಃ ಶಿಷ್ಟೈರಪಾಯಾಚ್ಛಾಂತವಾಹನಮ್ ॥65॥
ಅದೇ ರೀತಿಯಲ್ಲಿ ಪಾಂಡವರ ಸೈನ್ಯವೂ ಬಹಳವಾಗಿ ಗಾಯಗೊಂಡು ರಕ್ತದಿಂದ ಸಿಕ್ತವಾಗಿತ್ತು. ರಥದ ಕುದುರೆಗಳು ಬಹಳ ದಣಿದಿದ್ದವು. ಆಗ ಉಳಿದ ಮೂರುಸಾವಿರ ರಥಗಳೊಡನೆ ಪಾಂಡವರ ಸೈನ್ಯವೂ ಯುದ್ಧದಿಂದ ಹಿಂತಿರುಗಿತು.
ಅಶ್ವಾರೋಹಾಸ್ತು ಪಾಂಡೂನಾಮಬ್ರುವನ್ ರುಧಿರೋಕ್ಷಿತಾಃ |
ಸುಸನ್ನಿವಿಷ್ಟೇ ಸಂಗ್ರಾಮೇ ಭೂಯಿಷ್ಠಂ ತ್ಯಕ್ತಜೀವಿತಾಃ ॥66॥
ರಕಸಿಕ್ತರಾದ ಪಾಂಡವರ ಅಶ್ವಾರೋಹಿಗಳು ಪ್ರಾಣದ ಆಸೆಯನ್ನು ತೊರೆದು, ಚೆನ್ನಾಗಿ ನಡೆಯುತ್ತಿದ್ದ ಆ ಯುದ್ಧದಲ್ಲಿ ಹೀಗೆ ಹೇಳುತ್ತಾರೆ.
ಪಾಂಡವಸಾದಿನಃ
ನ ಹಿ ಶಕ್ಯಂ ರಥೈರ್ಯೋದ್ಧುಂ ಕುತ ಏವ ಮಹಾಗಜೈಃ |
ರಥಾನೇವ ರಥಾ ಯಾಂತು ಕುಂಜರಾಃ ಕುಂಜರಾನಪಿ ॥67॥
ಪಾಂಡವ ಆಶ್ವಾರೋಹಿಗಳು ರಥದ ಮೇಲಿದ್ದುಕೊಂಡು ಶತ್ರುಗಳನ್ನು ತಡೆಯುವುದೇ ಅಸಾಧ್ಯವಾಗಿದೆ. ಹಾಗಿರುವಾಗ ಆನೆಗಳಿಂದ ತಡೆಯುವುದು ಹೇಗೆ ಸಾಧ್ಯವಾದೀತು? ಆದ್ದರಿಂದ ರಥಗಳು ರಥಗಳನ್ನೇ ತಡೆದು ನಿಲ್ಲಿಸಲಿ. ಆನೆಗಳು ಆನೆಗಳನ್ನು ತಡೆಯಲಿ.
ಪ್ರತಿಯಾತೋಽಪಿ ಶಕುನಿಃ ಸ್ವಮನೀಕಮವಸ್ಥಿತಃ |
ಸ ಪುನಃ ಸೌಬಲೋ ರಾಜಾ ಯುದ್ಧಮಭ್ಯಾಗಮಿಷ್ಯತಿ ॥68॥
ಶಕುನಿಯು ಈಗ ಯುದ್ಧವನ್ನು ಬಿಟ್ಟು ಹೋಗಿದ್ದರೂ ತನ್ನ ಸೈನ್ಯವನ್ನು ಪುನಃ ಸಜ್ಜುಗೊಳಿಸಿ ಮತ್ತೆ ಯುದ್ಧಕ್ಕೆ ಬರುವವನಿದ್ದಾನೆ.
ಸಂಜಯಃ
ತತಶ್ಚ ದ್ರೌಪದೇಯಾಸ್ತು ತೇ ಚ ಮತ್ತಾ ಮಹಾಗಜಾಃ |
ಪ್ರಯಯುರ್ಯತ್ರ ಪಾಂಚಾಲ್ಯೋ ಧೃಷ್ಟದ್ಯುಮ್ನೋ ಮಹಾರಥಃ ॥69॥

ಸಂಜಯ ಅನಂತರ ದ್ರೌಪದಿಪುತ್ರರು ಮತ್ತು ಆ ಮದವೇರಿದ ಮಹಾಗಜಗಳು, ಮಹಾರಥನಾದ ಧೃಷ್ಟದ್ಯುಮ್ನನು ಇದ್ದಲ್ಲಿಗೆ ಬಂದರು.
ಸಹದೇವೋಽಪಿ ಕೌರವ್ಯ ರಜೋಮೇಘೇ ಸಮುತ್ಥಿತೇ |
ಏಕಾಕೀ ಪ್ರಯಯೌ ತತ್ರ ಯತ್ರ ರಾಜಾ ಯುಧಿಷ್ಠಿರಃ ॥70॥
ಕುರುವಂಶೋದ್ಭವನೇ! ಎಲ್ಲೆಡೆ ಧೂಳು ತುಂಬಿಕೊಂಡಾಗ ಸಹದೇವನೂ ಕೂಡ ಒಬ್ಬಂಟಿಯಾಗಿ ಯುಧಿಷ್ಠಿರನಿದ್ದಲ್ಲಿಗೆ ಬೇಗನೇ ಹೋದನು.
ತತ್ರ ತೇಷು ಪ್ರಯಾತೇಷು ಶಕುನಿಃ ಸೌಬಲಃ ಪುನಃ |
ಪಾರ್ಶ್ವತೋಽಭ್ಯಹನತ್ ಕ್ರುದ್ಧೋ ಧೃಷ್ಟದ್ಯುಮ್ನಸ್ಯ ವಾಹಿನೀಮ್ ॥71॥
ಅವರೆಲ್ಲರೂ ಹೊರಟುಹೋದಾಗ ಶಕುನಿಯು ಬದಿಯಲ್ಲಿ ನಿಂತುಕೊಂಡು ಕೋಪದಿಂದ ಧೃಷ್ಟದ್ಯುಮ್ನನ ಸೈನ್ಯದ ಮೇಲೆ ಆಕ್ರಮಣವನ್ನು ಮಾಡಿದನು.
ತತ್ ಪುನಸ್ತುಮುಲಂ ಯುದ್ಧಂ ಪ್ರಾಣಾಂಸ್ತ್ಯಕ್ತ್ವಾಽಭ್ಯವರ್ತತ |
ತಾವಕಾನಾಂ ಪರೇಷಾಂ ಚ ಪರಸ್ಪರವಧೈಷಿಣಾಮ್ ॥72॥
ಆಗ ಮತ್ತೆ ಘೋರವಾದ ಯುದ್ಧವು ನಡೆಯಿತು. ನಿನ್ನವರು ಮತ್ತು ಪರಪಕ್ಷದವರು ಜಯಕ್ಕಾಗಿ ಪ್ರಾಣವನ್ನೇ ಒತ್ತೆಯಿಟ್ಟು ಹೋರಾಡುತ್ತಿದ್ದರು.
ತೇ ಹ್ಯನ್ಯೋನ್ಯಮತಕ್ಷಂತ ತಸ್ಮಿನ್ ವೀರಸಮಾಗಮೇ |
ಯೋಧಾಃ ಪರ್ಯಪತನ್ ರಾಜನ್ ಶತಶೋಽಥ ಸಹಸ್ರಶಃ ॥73॥
ರಾಜನೇ! ವೀರರು ಸೇರಿದ್ದ ಆ ಯುದ್ಧದಲ್ಲಿ ಯೋಧರು ಒಬ್ಬರನ್ನೊಬ್ಬರು ಗಾಯಗೊಳಿಸುತ್ತಾ ನೂರಾರು, ಸಾವಿರಾರು ಸಂಖ್ಯೆಯಲ್ಲಿ ಸತ್ತು ಬೀಳುತ್ತಿದ್ದರು.
ಅಸಿಭಿಶ್ಛಿದ್ಯಮಾನಾನಾಂ ಶಿರಸಾಂ ಲೋಕಸಂಕ್ಷಯೇ |
ಪ್ರಾದುರಾಸೀನ್ಮಹಾಶಬ್ದಃ ಸಾಲಾನಾಂ ಪತತಾಮಿವ ॥74॥
ಲೋಕವೇ ನಾಶವಾಗುವ ರೀತಿಯಲ್ಲಿ ಕತ್ತಿಗಳಿಂದ ತಲೆಗಳು ಕಡಿದು ನೆಲಕ್ಕುರುಳುತ್ತಿದ್ದಾಗ ಬಹಳ ಶಬ್ದವು ಉಂಟಾಯಿತು. ಆ ಶಬ್ದವು ತಾಳೆಮರಗಳಿಂದ ತಾಳೆಹಣ್ಣುಗಳು ಕೆಳಗೆ ಬೀಳುವಾಗ ಉಂಟಾಗುವ ಶಬ್ದದಂತೆ ಇತ್ತು.
ವಿಮುಕ್ತಾನಾಂ ಶರೀರಾಣಾಂ ಭಿನ್ನಾನಾಂ ಪತತಾಂ ಭುವಿ |
ಸಾಯುಧಾನಾಂ ಚ ಬಾಹೂನಾಂ ವೀರಾಣಾಂ ಚ ವಿಶಾಂಪತೇ ॥75॥
ರಾಜನೇ! ಯುದ್ಧದಲ್ಲಿ ಅನೇಕ ವೀರರ ದೇಹಗಳು ತುಂಡಾಗಿ ಬೀಳುತ್ತಿದ್ದವು. ಕೆಲವರ ಬಾಹುಗಳು ಆಯುಧಸಮೇತವಾಗಿ ಕಡಿದು ಬೀಳುತ್ತಿದ್ದವು.
ಆಸೀತ್ ಕಟಕಟಾಶಬ್ದಃ ಸುಮಹಾನ್ ರೋಮಹರ್ಷಣಃ |
ನಿಘ್ನಂತೋ ನಿಶಿತೈಃ ಶಸ್ತ್ರೈಃ ಭ್ರಾತೄನ್ ಪುತ್ರಾನ್ ಸಖೀನಪಿ ॥76॥
ಯೋಧರು ಹರಿತವಾದ ಬಾಣಗಳಿಂದ ಸಹೋದರರರನ್ನೂ, ಪುತ್ರರನ್ನೂ ಸ್ನೇಹಿತರನ್ನೂ ಸಾಯಿಸುತ್ತಿದ್ದರು. ಆಗ ಉಂಟಾದ ಕಟಕಟ ಧ್ವನಿಯು ರೋಮಾಂಚನವನ್ನುಂಟು ಮಾಡುತ್ತಿತ್ತು.
ಯೋಧಾಃ ಪರಿಪತಂತಿ ಸ್ಮ ಯಥಾಽಽಮಿಷಕೃತೇ ಖಗಾಃ ॥77॥
ಮಾಂಸಕ್ಕಾಗಿ ಹಪಹಪಿಸುವ ಪಕ್ಷಿಗಳಂತೆ ಯೋಧರು ಜಯಕ್ಕಾಗಿ ಪರಿತಪಿಸುತ್ತಿದ್ದರು.
ಅನ್ಯೋನ್ಯಂ ಪ್ರತಿಸಂರಬ್ಧಾಃ ಪರಸ್ಪರವಧೈಷಿಣಃ |
ಅಹಂ ಪೂರ್ವಮಹಂ ಪೂರ್ವಮಿತ್ಯಭ್ಯಘ್ನನ್ ಸಹಸ್ರಶಃ ॥78॥
ಒಬ್ಬರು ಇನ್ನೊಬ್ಬರ ಮೇಲೆ ಕೋಪಿಸಿಕೊಂಡು, ಎದುರಾಳಿಗಳನ್ನು ಕೊಲ್ಲುವ ಅಭಿಪ್ರಾಯವುಳ್ಳವರಾಗಿ ಸಾವಿರಾರು ಯೋಧರು `ನಾ ಮುಂದು ನಾ ಮುಂದು' ಎಂಬುದಾಗಿ ಪರಸ್ಪರವಾಗಿ ಹೊಡೆದುಕೊಂಡರು.
ಸಂಘಾತೈರಾಸನಾದ್ ಭ್ರಷ್ಟೈರಶ್ವಾರೋಹೈರ್ಗತಾಸುಭಿಃ |
ಹಯಾಃ ಪರಿತಪಂತಿ ಸ್ಮ ಶತಶೋಽಥ ಸಹಸ್ರಶಃ ॥79॥
ಯುದ್ಧದಲ್ಲಿ ಅಶ್ವಾರೋಹಿಗಳು ಕುದುರೆಯ ಮೇಲಿನ ಆಸನದಿಂದ ಕೆಳಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾರೆ. ಆಗ ಇಂತಹ ನೂರಾರು, ಸಾವಿರಾರು ಕುದುರೆಗಳು ಯಜಮಾನರಿಗಾಗಿ ದುಃಖಿಸುತ್ತಿದ್ದವು.
ಸ್ಫುರತಾಂ ಪ್ರತಿವಿಷ್ಟಾನಾಮಶ್ವಾನಾಂ ಶೀಘ್ರಸಾರಿಣಾಮ್ |
ಸ್ತನತಾಂ ಚ ಮನುಷ್ಯಾಣಾಂ ಪತತಾಂ ಚ ವಿಶಾಂಪತೇ ॥80॥
ಶಕ್ತ್ಯೃಷ್ಟಿಪ್ರಾಸಶಬ್ದಶ್ಚ ತುಮುಲಃ ಸಮಜಾಯತ |
ಭಿಂದಂತಃ ಪರಮಮರ್ಮಾಣಿ ರಾಜನ್ ದುರ್ಮಂತ್ರಿತೇ ತವ ॥81॥
ಪ್ರಜಾಪಾಲಕನೇ! ರಾಜನೇ! ನಿನ್ನ ಕುಬುದ್ಧಿಯಿಂದ ನಡೆದ ಯುದ್ಧದಲ್ಲಿ ಶೀಘ್ರಗಾಮಿಗಳಾದ ಕುದುರೆಗಳು ಶೋಭಿಸುತ್ತಾ ಕೆಳಬೀಳುತ್ತಿದ್ದವು. ಸಿಂಹಗರ್ಜನೆ ಮಾಡುತ್ತಾ ಮನುಷ್ಯರು ನೆಲಕ್ಕೊರಗುತ್ತಿದ್ದರು. ಶಕ್ತಿ, ಋಷ್ಟಿ, ಪ್ರಾಸ ಮೊದಲಾದ ಆಯುಧಗಳ ಧ್ವನಿಯು ಗೊಂದಲಮಯವಾಗಿ ಉಂಟಾಯಿತು. ಆ ಮೂಲಕ ಯೋಧರು ಎದುರಾಳಿಗಳ ಮರ್ಮಸ್ಥಾನವನ್ನು ಭೇದಿಸುತ್ತಿದ್ದರು.
ನಿಹತಾಶ್ಚ ಶಿತೈಃ ಶಸ್ತ್ರೈಃ ನ ನ್ಯವರ್ತಂತ ತಾವಕಾಃ |
ಮತ್ತಾಃ ರುಧಿರಗಂಧೇನ ಬಹವೋ ಗತಚೇತಸಃ ॥82॥
ಜಘ್ನುಃ ಪರಾನ್ ಸ್ವಕಾಂಶ್ಚೈವ ಪ್ರಾಪ್ತಾನ್ ಪ್ರಾಪ್ತಾನನಂತರಾನ್ |
ಬಹವಶ್ಚ ಗತಪ್ರಾಣಾಃ ಕ್ಷತ್ರಿಯಾಃ ಜಯಗೃಧ್ನಿನಃ ॥83॥

ನಿನ್ನ ಕಡೆಯ ಯೋಧರು ಹರಿತವಾದ ಆಯುಧಗಳಿಂದ ಪ್ರಾಣಕಳೆದುಕೊಂಡು ಮತ್ತೆ ಬದುಕಿ ಹಿಂತಿರುಗಲಿಲ್ಲ. ತುಂಬಾ ಜನ ಯೋಧರು ರಕ್ತದ ವಾಸನೆಯಿಂದ ಮತ್ತರಾಗಿ ಮನಸ್ಸಿನ ಮೇಲಿನ ಹತೋಟಿಯನ್ನು ಕಳೆದುಕೊಂಡರು. ಅದರ ಪರಿಣಾಮವಾಗಿ ಎದುರಿಗೆ ಯಾರು ಬಂದರೂ ಅವರು ತಮ್ಮವರೋ ಅಥವಾ ಶತ್ರುಪಕ್ಷದವರೋ ಎಂಬುದಾಗಿ ವಿಚಾರ ಮಾಡದೆ ಸಾಯಿಸುತ್ತಿದ್ದರು. ಹೀಗೆ ಜಯವನ್ನೇ ಗಮದಲ್ಲಿರಿಸಿಕೊಂಡು ಹೋರಾಡಿದ ಅನೇಕ ಕ್ಷತ್ರಿಯರು ಪ್ರಾಣತ್ಯಾಗ ಮಾಡಿದರು.

ಏವಂ ಹಿ ಯೋಧಾಃ ಸಂರಬ್ಧಾಃ ಪರಸ್ಪರಸಮಾಹತಾಃ |
ಭೂಮಾವಭ್ಯಪತನ್ ರಾಜನ್ ಶರಶಕ್ತಿಭಿರಾಹತಾಃ ॥84॥

ರಾಜನೇ! ಈ ರೀತಿಯಲ್ಲಿ ಯುದ್ಧದಲ್ಲಿ ಯೋಧರು ಬಹಳ ರೋಷವುಳ್ಳವರಾಗಿ ಪರಸ್ಪರವಾಗಿ ಬಾಣ ಶಕ್ತ್ಯಾಯುಧಗಳಿಂದ ಹೊಡೆದುಕೊಂಡು ಪ್ರಾಣಕಳೆದುಕೊಂಡು ನೆಲದಲ್ಲಿ ಬಿದ್ದರು.

ವೃಕಗೃಧ್ರಶ್ವಕಾಕಾನಾಮತುಲೇ ಮೋದಕೇ ಸತಿ |
ಆಸೀದ್ ಬಲಕ್ಷಯೋ ಘೋರಸ್ತವ ಪುತ್ರಸ್ಯ ಪಶ್ಯತಃ ॥85॥

ಹೀಗೆ ಹೆಣಗಳ ರಾಶಿಗಳು ಬಿದ್ದಾಗ ತೋಳ, ಹದ್ದು, ನಾಯಿ, ಕಾಗೆಗಳಿಗೆ ಬಹಳ ಆನಂದ ಉಂಟಾಯಿತು. ನಿನ್ನ ಮಗನು ನೋಡುತ್ತಿದ್ದಂತೆಯೇ ಘೋರವಾಗಿ ಸೈನ್ಯವು ಕ್ಷೀಣಿಸಿತು.

ನರಾಶ್ವಕಾಯೈಃ ಸಂಛನ್ನಾ ಭೂಮಿರಾಸೀದ್ ವಿಶಾಂಪತೇ |
ರುಧಿರೋದಕಚಿತ್ರಾ ಚ ಭೀರೂಣಾಂ ಭಯವರ್ಧಿನೀ ॥86॥

ರಾಜನೇ! ಮನುಷ್ಯರು ಮತ್ತು ಕುದುರೆಗಳ ಶರೀರಗಳಿಂದ ಭೂಮಿಯು ಮುಚ್ಚಿಹೋಗಿತ್ತು. ಅಲ್ಲಲ್ಲಿ ರಕ್ತದ ಹೊಳೆಯಿಂದಾಗಿ ರಣರಂಗವು ಚಿತ್ರ-ವಿಚಿತ್ರವಾಗಿ ಕಾಣಿಸುತ್ತಿತ್ತು. ಸ್ವಭಾವತಃ ಭಯಸ್ವಭಾವದ ವ್ಯಕ್ತಿಗಳಿಗೆ ಮತ್ತೂ ಭಯವನ್ನು ಅಧಿಕಮಾಡುತ್ತಿತ್ತು.

ಅಸಿಭಿಃ ಪಟ್ಟಿಸೈಃ ಶೂಲೈಃ ತಕ್ಷಮಾಣಾಃ ಪುನಃ ಪುನಃ |
ತಾವಕಾಃ ಪಾಂಡವೇಯಾಂಶ್ಚ ನಾತ್ಯವರ್ತಂತ ಭಾರತ ॥87॥

ರಾಜನೇ! ನಿನ್ನವರು ಮತ್ತು ಪಾಂಡವರು ಕತ್ತಿ, ಪಟ್ಟಿಸ, ಶೂಲ ಮೊದಲಾದವುಗಳಿಂದ ಮತ್ತೆ ಮತ್ತೆ ಹೊಡೆಯುತ್ತಾ ಇದ್ದರು. ಯಾರೂ ಯುದ್ಧದಿಂದ ಹಿಂದೆ ಸರಿಯಲಿಲ್ಲ.

ಪ್ರಹರಂತೋ ಯಥಾಶಕ್ತಿ ಯಾವತ್ ಪ್ರಾಣಸ್ಯ ಧಾರಣಾ |
ಯೋಧಾಃ ಪರಿತಪಂತಿ ಸ್ಮ ವಮಂತೋ ರುಧಿರಂ ಮುಖೈಃ ॥88॥

ಯೋಧರು ದೇಹದಲ್ಲಿ ಪ್ರಾಣವು ಇರುವಲ್ಲಿಯವರೆಗೆ ತಮ್ಮ ತಮ್ಮ ಶಕ್ತಿಗೆ ಅನುಸಾರವಾಗಿ ಹೊಡೆದಾಡುತ್ತಿದ್ದರು. ಬಾಯಿಯಿಂದ ರಕ್ತವನ್ನು ವಾಂತಿಮಾಡುತ್ತಾ ಬಹಳವಾಗಿ ಕಷ್ಟಪಡುತ್ತಿದ್ದರು.

ಶಿರೋ ಗೃಹೀತ್ವಾ ಕೇಶೇಷು ಕಬಂಧಃ ಪ್ರತ್ಯದೃಶ್ಯತ |
ಉದ್ಯಮ್ಯ ನಿಶಿತಂ ಖಡ್ಗಂ ರುಧಿರೇಣ ಸಮುಕ್ಷಿತಮ್ ॥89॥

ತಲೆಯ ಜುಟ್ಟನ್ನು ಹಿಡಿದುಕೊಂಡು ಹರಿತವಾದ ಖಡ್ಗದಿಂದ ಕಡಿದು ದೇಹವನ್ನು ರಕ್ತಸಿಕ್ತವನ್ನಾಗಿ ಮಾಡುತ್ತಿದ್ದರು.

ಅಥೋತ್ಥಿತೇಷು ಕಬಂಧೇಷು ಯುದ್ಧೇ ತಸ್ಮಿನ್ ಜನಾಧಿಪ |
ತದಾ ರುಧಿರಗಂಧೇನ ಯೋಧಾಃ ಕಶ್ಮಲಮಾವಿಶನ್ ॥90॥

ರಕ್ತಸಿಕ್ತವಾಗಿ ಕೆಳಬಿದ್ದ ದೇಹಗಳು ಎಲ್ಲೆಲ್ಲೂ ಎದ್ದು ಕಾಣಿಸುತ್ತಿದ್ದವು. ಜನನಾಯಕನೇ! ಆ ರಕ್ತದ ವಾಸನೆಯಿಂದಾಗಿ ಯೋಧರು ಮೂರ್ಛೆ ಹೋದರು.

ಮಂದೀಭೂತೇ ತತಃ ಶಬ್ದೇ ಪಾಂಡವಾನಾಂ ಮಹದ್ಬಲಮ್ |
ಅಲ್ಪಾವಶಿಷ್ಟೈಸ್ತುರಗೈರಭ್ಯವರ್ತತ ಸೌಬಲಃ ॥91॥

ಯುದ್ಧದ ತುಮುಲ ಶಬ್ದವು ಕಡಿಮೆಯಾದಾಗ ಶಕುನಿ ಅಳಿದುಳಿದ ಕುದುರೆಸೈನ್ಯದ ಜೊತೆಗೆ ಬಂದು ಪಾಂಡವರ ದೊಡ್ಡದಾದ ಸೇನೆಯನ್ನು ಎದುರಿಸಿದನು.

ತತೋಽಭ್ಯಧಾವಂಸ್ತ್ವರಿತಾಃ ಪಾಂಡವಾ ಜಯಗೃದ್ಧಿನಃ |
ಪದಾತಯಶ್ಚ ನಾಗಾಶ್ಚ ಸಾದಿನಶ್ಚೋದ್ಯತಾಯುಧಾಃ ॥92॥

ಕೋಷ್ಠೀಕೃತ್ಯ ತದಾ ಹ್ಯೇನಂ ಪರಿಕ್ಷಿಪ್ಯ ಚ ಸರ್ವಶಃ |
ಶಸ್ತ್ರೈರ್ನಾನಾವಿಧೈರ್ಜಘ್ನುರ್ಯುದ್ಧಪಾರಂ ತಿತೀರ್ಷವಃ ॥93॥

ಆಗ ಜಯಾಕಾಂಕ್ಷಿಗಳಾದ ಪಾಂಡವರು, ಅವರ ಪದಾತಿಗಳು, ಆನೆಗಳು, ಅಶ್ವಾರೋಹಿಗಳು ಕೂಡಲೇ ಆಯುಧದಾರಿಗಳಾಗಿ ಶಕುನಿಯನ್ನು ಒತ್ತಟ್ಟಿಗೆ ಸೇರಿಸಿ ಎಲ್ಲಾ ಕಡೆಯಿಂದ ಆಕ್ರಮಿಸಿದರು. ಯುದ್ಧದ ಕೊನೆಯನ್ನು ತಲುಪುವ ಇಚ್ಛೆಯುಳ್ಳ, ಆ ಮೂಲಕ ಯುದ್ಧವನ್ನು ಪರಿಸಮಾಪ್ತಿಗೊಳಿಸುವ ಉದ್ದೇಶದಿಂದ ಶಕುನಿಯನ್ನು ನಾನಾವಿಧದ ಶಸ್ತ್ರಗಳಿಂದ ಹೊಡೆದರು.

ತ್ವದೀಯಾಂಸ್ತಂ ತು ಸಂಪ್ರೇಕ್ಷ್ಯ ಸರ್ವಶಃ ಸಮಭಿದ್ರುತಮ್ |
ಸಾಶ್ವಪತ್ತಿದ್ವಿಪರಥಾಃ ಪಾಂಡವಾನಭಿದುದ್ರುವುಃ ॥94॥

ಹೀಗೆ ಎಲ್ಲಾ ಕಡೆಯಿಂದ ಆಕ್ರಮಣಕ್ಕೆ ಒಳಗಾದ ಶಕುನಿಯನ್ನು ನೋಡಿದ ನಿನ್ನವರು ಕುದುರೆ ಪದಾತಿ ಆನೆ ರಥಗಳಿಂದ ಕೂಡಿಕೊಂಡು ಪಾಂಡವರನ್ನು ಎದುರಿಸಿದರು.

ಕೇಚಿತ್ ಪದಾತಯಃ ಪದ್ಭಿರ್ಮುಷ್ಟಿಭಿಶ್ಚ ಪರಸ್ಪರಮ್ |
ನಿಜಘ್ನುಃ ಸಮರೇ ಶೂರಾಃ ಕ್ಷೀಣಶಸ್ತ್ರಾಸ್ತತೋಽಪತನ್ ॥95॥

ಸೈನ್ಯದಲ್ಲಿ ಶಸ್ತ್ರಸಂಗ್ರಹ ಕ್ಷೀಣಿಸಿದಾಗ ಕೆಲವು ಪದಾತಿಗಳು ಕಾಲಿನಿಂದ, ಮುಷ್ಟಿಯಿಂದ ಪರಸ್ಪರವಾಗಿ ಹೊಡೆದುಕೊಂಡು ಸತ್ತು

ಬಿದ್ದರು.
ರಥೇಭ್ಯೋ ರಥಿನಃ ಪೇತುರ್ದ್ವಿಪೇಭ್ಯೋ ಹಸ್ತಿಸಾದಿನಃ |
ವಿಮಾನೇಭ್ಯಃ ಪರಿಭ್ರಷ್ಟಾಃ ಸಿದ್ಧಾಃ ಪುಣ್ಯಕ್ಷಯೇ ಯಥಾ ||96||
ರಥದ ಮೇಲೆ ಕುಳಿತ ಯೋಧರು ರಥಗಳಿಂದ ಕೆಳಗೆ ಬಿದ್ದರು. ಆನೆಗಳನ್ನೇರಿಕುಳಿತವರು ಆನೆಗಳಿಂದ ಕೆಳಗೆ ಬಿದ್ದರು. ಅಶ್ವಾರೋಹಿಗಳು ಕುದುರೆಗಳ ಮೇಲಿಂದ ಕೆಳಗೆ ಬಿದ್ದರು. ಹೀಗೆ ಬೀಳುತ್ತಿದ್ದ ಯೋಧರು ಪುಣ್ಯಹ್ರಾಸವಾದಾಗ ವಿಮಾನದಿಂದ ಕೆಳಬಿದ್ದ ಸಿದ್ಧಪುರುಷರಂತೆ ಕಂಡರು.
ಏವಮನ್ಯೋನ್ಯಮಾಯತ್ತಾ ಯೋಧಾ ಜಘ್ನುರ್ಮಹಾಮೃಧೇ |
ಪಿತೄನ್ ಭ್ರಾತೄನ್ ವಯಸ್ಯಾಂಶ್ಚ ಪುತ್ರಾನಪಿ ತಥಾऽಪರೇ ||97||
ಹೀಗೆ ಮಹಾಯುದ್ಧದಲ್ಲಿ ಯೋಧರು ಪರಸ್ಪರವಾಗಿ ಆಕ್ರಮಿಸಿ ಪಿತೃಗಳನ್ನು, ಸಹೋದರರನ್ನು, ಸ್ನೇಹಿತರನ್ನು, ಪುತ್ರರನ್ನು ಕೊಂದರು.
ಏವಮಾಸೀದಮರ್ಯಾದಂ ಯುದ್ಧಂ ಭರತಸತ್ತಮ |
ಪ್ರಾಸಾಸಿಬಾಣಕಲಿಲೇ ವರ್ತಮಾನೇ ಸುದಾರುಣೇ ||98||
ಭರತೋತ್ತಮನೇ! ನಡೆಯುತ್ತಿದ್ದ ಯುದ್ಧವು ಈ ರೀತಿಯಲ್ಲಿ ಪ್ರಾಸ, ಕತ್ತಿ, ಬಾಣಗಳಿಂದ ಕೂಡಿಕೊಂಡು ಭಯಂಕರವಾಗಿ ಎಲ್ಲೆಮೀರಿ ನಡೆಯುತ್ತಿತ್ತು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ತ್ರಯೋವಿಂಶೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಶ್ರೀಕೃಷ್ಣನ ಮುಂದೆ ಅರ್ಜುನನು ದುರ್ಯೋಧನನ ದುರಾಗ್ರಹವನ್ನು ನಿಂದಿಸುವುದು. ರಥಸೇನೆಯ ಸಂಹಾರ.
ಸಂಜಯಃ
ತಸ್ಮಿನ್ ಶಬ್ದೇ ಮೃದೌ ಜಾತೇ ಪಾಂಡವೈರ್ನಿಹತೇ ಬಲೇ |
ಅಶ್ವೈಃ ಸಪ್ತಶತೈಃ ಶಿಷ್ಟೈಃ ಉಪಾವರ್ತತ ಸೌಬಲಃ ||1||
ಸಂಜಯ ಶಸ್ತ್ರಗಳ ಶಬ್ದವು ಕ್ಷೀಣಿಸಿತು. ಪಾಂಡವರು ಕೌರವರ ಸೇನೆಯನ್ನು ನಾಶ ಮಾಡಿದ್ದಾರೆ. ಆಗ ಶಕುನಿಯು ಉಳಿದ ಏಳುನೂರು ಕುದುರೆಗಳೊಂದಿಗೆ ಕೌರವಸೇನೆಯನ್ನು ಸಮೀಪಿಸಿದನು.
ಸ ಗತ್ವಾ ವಾಹಿನೀಂ ತೂರ್ಣಂ ಚೋದಯಾನಃ ಸ್ವಕಾನ್ ಯುಧಿ |
ಯುಧ್ಯಧ್ವಮಿತಿ ಸಂಹೃಷ್ಟಃ ಪುನಃ ಪುನರರಿಂದಮಃ ||2||
ಅಪೃಚ್ಛತ್ ಕ್ಷತ್ರಿಯಾಂಶ್ಚಾತ್ರ ಕ್ವ ಸ ರಾಜಾ ಸುಯೋಧನಃ |
ಶಕುನೇಸ್ತು ವಚಃ ಶ್ರುತ್ವಾ ತ ಊಚುರ್ಭರತರ್ಷಭ ||3||
ಸೈನ್ಯದ ಸಮೀಪಕ್ಕೆ ಹೋದ ಶಕುನಿಯು ಯುದ್ಧದಲ್ಲಿ ತನ್ನವರನ್ನು ಪ್ರೇರೇಪಿಸಿದನು. ``ಯುದ್ಧ ಮಾಡಿ'' ಎಂಬುದಾಗಿ ಸಂತೋಷದಿಂದ ಮತ್ತೆ ಮತ್ತೆ ಹೇಳುತ್ತಿದ್ದನು. ಶತ್ರುನಾಶಕನಾದ ಶಕುನಿಯು ಅಲ್ಲಿದ್ದ ಕ್ಷತ್ರಿಯರನ್ನು ಕೇಳುತ್ತಾನೆ ``ಆ ನಮ್ಮ ರಾಜ ದುರ್ಯೋಧನನು ಎಲ್ಲಿ ಇದ್ದಾನೆ?'' ಶಕುನಿಯ ಮಾತನ್ನು ಕೇಳಿದ ಸೈನಿಕರು ಹೀಗೆ ಉತ್ತರಿಸುತ್ತಾರೆ.
ಸೈನಿಕಾಃ
ಅಸೌ ತಿಷ್ಠತಿ ಕೌರವ್ಯೋ ರಣಮಧ್ಯೇ ಮಹಾರಥಃ |
ಯತ್ರೈತತ್ ಸುಮಹಚ್ಛತ್ರಂ ಪೂರ್ಣಚಂದ್ರಸಮಪ್ರಭಮ್ ||4||
ಸೈನಿಕರು ಕುರುವಂಶಸಂಜಾತನಾದ ಮಹಾರಥ ದುರ್ಯೋಧನನು ರಣರಂಗದ ಮಧ್ಯದಲ್ಲಿ ನಿಂತಿದ್ದಾನೆ. ಅಲ್ಲಿ ಪೂರ್ಣಚಂದ್ರನ ಕಾಂತಿಯುಳ್ಳ ದೊಡ್ಡದಾದ ಛತ್ರವು ಶೋಭಿಸುತ್ತಿದೆ.
ಯತ್ರೈತೇ ಸಕಲತ್ರಾಣಾ ರಥಾಸ್ತಿಷ್ಠಂತಿ ದಂಸಿತಾಃ |
ಯತ್ರೈಷ ಶಬ್ದಸ್ತುಮುಲಃ ಪರ್ಜನ್ಯನಿನದೋಪಮಃ ||5||
ಅಲ್ಲಿ ರಥಗಳಲ್ಲಿ ಶರೀರರಕ್ಷಕವಾದ ಕವಚಗಳು ಮತ್ತು ಆವರಣಸಾಧನಗಳು ಸುಸಜ್ಜಿತವಾಗಿವೆ. ಮೋಡಗಳ ಗರ್ಜನೆಯಂತೆ ಭಯಾನಕ ಶಬ್ದವು ಕೇಳಿಸುತ್ತಿದೆ.
ತತ್ರ ಗಚ್ಛ ದ್ರುತಂ ರಾಜನ್ ತತೋ ದ್ರಕ್ಷ್ಯಸಿ ಕೌರವಮ್ ||6||
ಎಲೈ ಶಕುನಿಮಹಾರಾಜನೇ! ಅಲ್ಲಿಗೆ ಬೇಗನೇ ಹೋಗು. ಅಲ್ಲಿ ದುರ್ಯೋಧನನನ್ನು ನೋಡುವಿ.
ಸಂಜಯಃ
ಏವಮುಕ್ತಸ್ತು ತೈಃ ಶೂರೈಃ ಶಕುನಿಃ ಸೌಬಲಸ್ತದಾ |
ಪ್ರಯಯೌ ತತ್ರ ಯತ್ರಾಸೌ ಪುತ್ರಸ್ತವ ಜನಾಧಿಪ ||7||
ಜನನಾಯಕನೇ! ಶೂರಸೈನಿಕರು ಹೇಳಿದ ಈ ಮಾತನ್ನು ಕೇಳಿದ ಶಕುನಿಯು ನಿನ್ನ ಮಗನಿದ್ದಲ್ಲಿಗೆ ಬೇಗನೆ ಹೋದನು.
ಸರ್ವತಃ ಸಂವೃತೋ ವೀರೈಃ ಸಮರೇಷ್ವನಿವರ್ತಿಭಿಃ ||8||
ದುರ್ಯೋಧನನ ಸುತ್ತಲೂ ವೀರರು ಸುತ್ತುವರಿದಿದ್ದರು. ಆ ವೀರರು ಯುದ್ಧದಿಂದ ಯಾವತ್ತೂ ಹಿಂತಿರುಗಿದವರಲ್ಲ.
ತತೋ ದುರ್ಯೋಧನಂ ದೃಷ್ಟ್ವಾ ರಥಾನೀಕೇ ವ್ಯವಸ್ಥಿತಮ್ |

ಸರಥಾಂಸ್ತಾವಕಾನ್ ಸರ್ವಾನ್ ಹರ್ಷಯನ್ ಶಕುನಿಸ್ತತಃ ॥9॥
ದುರ್ಯೋಧನಮಿದಂ ವಾಕ್ಯಂ ಹೃಷ್ಟರೂಪೋ ವಿಶಾಂಪತೇ |
ಕೃತಕಾರ್ಯಮಿವಾತ್ಮಾನಂ ಮನ್ಯಮಾನೋಽಬ್ರವೀನ್ನೃಪಮ್ ॥10॥
ರಾಜನೇ! ರಥಸೈನ್ಯದ ಮಧ್ಯದಲ್ಲಿ ಇದ್ದ ದುರ್ಯೋಧನನನ್ನು ನೋಡಿದ ಶಕುನಿಯು ನಿನ್ನ ಪಕ್ಷದ ಸಕಲ ರಥಿಕರನ್ನು ಸಂತೋಷಪಡಿಸುತ್ತಾ, ತನ್ನನ್ನು ಕೃತಕೃತ್ಯನಾಗಿ ತಿಳಿದುಕೊಂಡಿದ್ದ ದುರ್ಯೋಧನನಿಗೆ ಈ ಮಾತನ್ನು ಹೇಳಿದನು.
ಶಕುನಿಃ
ಜಹಿ ರಾಜನ್ ರಥಾನೀಕಮಶ್ವಾಃ ಸರ್ವೇ ಹತಾ ಮಯಾ |
ನಾತ್ಯಕಕತ್ವ ಜೀವಿತಂ ಸಂಖ್ಯೇ ಶಕ್ಯೋ ಜೇತುಂ ಯುಧಿಷ್ಠಿರಃ ॥11॥
ಶಕುನಿ ರಾಜನೇ! ನೀನು ಶತ್ರುಗಳ ರಥಸೈನ್ಯವನ್ನು ನಾಶ ಮಾಡು. ನಾನು ಎಲ್ಲಾ ಅಶ್ವಗಳನ್ನು ಕೊಂದಿರುವೆನು. ಯುಧಿಷ್ಠಿರನು ಯುದ್ಧದಲ್ಲಿ ಪ್ರಾಣಗಳನ್ನು ಬಿಡದ ಹೊರತು ಗೆಲ್ಲಲು ಸಾಧ್ಯವಿಲ್ಲ.
ಹತೇ ತಸ್ಮಿನ್ ರಥಾನೀಕೇ ಪಾಂಡವೇನಾಭಿಪಾಲಿತೇ |
ಗಜಾನೇತಾನ್ ಹನಿಷ್ಯಾಮಃ ಪದಾತೀಂಶ್ಚೇತರಾನ್ ಬಹೂನ್ ॥12॥
ಯುಧಿಷ್ಠಿರನು ಸತ್ತ ನಂತರ ಅವನ ರಕ್ಷಣೆಯಲ್ಲಿದ್ದ ರಥಸೇನೆಯನ್ನೂ ನಾಶಮಾಡಲಾಗುತ್ತದೆ. ಅನಂತರ ಬಹಳವಾಗಿರುವ ಈ ಆನೆಗಳನ್ನೂ ಪದಾತಿಗಳನ್ನೂ ಸಂಹರಿಸುತ್ತೇವೆ.
ಸಂಜಯಃ
ಶ್ರುತ್ವಾ ತು ವಚನಂ ತಸ್ಯ ತಾವಕಾ ಜಯಗೃಧ್ನವಃ |
ಜವೇನಾಭ್ಯಪತನ್ ಹೃಷ್ಟಾಃ ಪಾಂಡವಾನಾಮನೀಕಿನೀಮ್ ॥13॥
ಸಂಜಯ ಶಕುನಿಯ ಮಾತನ್ನು ಕೇಳಿದ ನಿನ್ನ ಪಕ್ಷದವರು ಜಯವನ್ನು ಅಪೇಕ್ಷಿಸಿಕೊಂಡು ಸಂತೋಷದಿಂದ ಪಾಂಡವರ ಸೈನ್ಯದ ಮೇಲೆ ವೇಗವಾಗಿ ಆಕ್ರಮಣ ಮಾಡಿದರು.
ಬದ್ಧನಿಸ್ತ್ರಿಂಶತೂಣೀರಾಃ ಪ್ರಗೃಹೀತಶರಾಸನಾಃ |
ಶರಾಸನಾನಿ ಧೂನ್ವಾನಾಃ ಸಿಂಹನಾದಾನ್ ಪ್ರಚಕ್ರಿರೇ ॥14॥
ತುಂಬಿದ ಬತ್ತಳಿಕೆಗಳನ್ನು ಕಟ್ಟಿಕೊಂಡು, ಕೈಯಲ್ಲಿ ಬಿಲ್ಲನ್ನು ಹಿಡಿದು, ಬಿಲ್ಲಿನ ಠೇಂಕಾರವನ್ನು ಮಾಡುತ್ತಾ ಸಿಂಹನಾದವನ್ನು ಮಾಡಿದರು.
ತತೋ ಜ್ಯಾತಳನಿರ್ಘೋಷಃ ಪುನರಾಸೀದ್ ವಿಶಾಂಪತೇ |
ಪ್ರಾದುರಾಸೀತ್ ಶರಾಣಾಂ ಚ ಪ್ರಮುಕ್ತಾನಾಂ ಸುದಾರುಣಃ ॥15॥
ಬಿಲ್ಲಿನ ಹಗ್ಗವನ್ನು ಹಿಡಿದೆಳೆಯುತ್ತಾ ಶಬ್ಧವನ್ನು ಉಂಟುಮಾಡುತ್ತಿದ್ದರು.  ಆ ಶಬ್ಧದ ಜೊತೆಗೆ ಬಾಣಗಳನ್ನು ಪ್ರಯೋಗಿಸುವಾಗ ದಾರುಣವಾದ ಶಬ್ಧವು ಉಂಟಾಯಿತು.
ತಾನ್ ಸಮೀಪಗತಾನ್ ದೃಷ್ಟ್ವಾ ಜವೇನೋದ್ಯತಕಾರ್ಮುಕಾನ್ |
ಉವಾಚ ದೇವಕೀಪುತ್ರಂ ಕುಂತೀಪುತ್ರೋ ಧನಂಜಯಃ ॥16॥
ಹೀಗೆ ಬಿಲ್ಲುಗಳನ್ನು ಎತ್ತಿಹಿಡಿಯುತ್ತಾ ಹತ್ತಿರ ಬರುತ್ತಿರುವ ಆ ಯೋಧರನ್ನು ನೋಡಿ ಅರ್ಜುನನು ಶ್ರೀಕೃಷ್ಣನಿಗೆ ಹೀಗೆ ಹೇಳಿದನು.
ಅರ್ಜುನಃ
ಚೋದಯಾಶ್ವಾನಸಂಭ್ರಾಂತಃ ಪ್ರವಿಶ್ಯೈತದ್ ಬಲಾರ್ಣವಮ್ |
ಅಂತಮದ್ಯ ಗಮಿಷ್ಯಾಮಿ ಶತ್ರೂಣಾಂ ನಿಶಿತೈಃ ಶರೈಃ ॥17॥
ಅರ್ಜುನ ಯಾವುದೇ ಕಳವಳಕ್ಕೆ ಒಳಗಾಗದೆ ಕುದುರೆಗಳನ್ನು ಓಡಿಸು. ಈ ಸೈನ್ಯಸಾಗರವನ್ನು ಪ್ರವೇಶಿಸು, ಹರಿತವಾದ ಬಾಣಗಳಿಂದ ಶತ್ರುಗಳನ್ನು ಕೊನೆಗಾಣಿಸುತ್ತೇನೆ.
ಅಷ್ಟಾದಶ ದಿನಾನ್ಯದ್ಯ ಯುದ್ಧಸ್ಯಾಸ್ಯ ಜನಾರ್ದನ |
ವರ್ತಮಾನಸ್ಯ ಮಹತಃ ಸಮಾಸಾದ್ಯ ಪರಸ್ಪರಮ್ ॥18॥
ಜನಾರ್ದನನೇ! ದೊಡ್ಡದಾಗಿ ನಡೆಯುತ್ತಿರುವ ಈ ಯುದ್ಧಕ್ಕಾಗಿ ಪರಸ್ಪರವಾಗಿ ಎದುರುಗೊಂಡು ಇಂದಿಗೆ ಹದಿನೆಂಟು ದಿನಗಳು ಆದವು.
ಅನಂತಕಲ್ಪಾ ಧ್ವಜಿನೀ ಹತಾ ಹ್ಯೇಷಾಂ ಮಹಾತ್ಮನಾಮ್ |
ಕ್ಷಯಮದ್ಯ ಗತಾ ಯುದ್ಧೇ ಪಶ್ಯ ದೈವಂ ಯಥಾವಿಧಮ್ ॥19॥
ಯಥಾಯೋಗ್ಯವಾದ ಅದೃಷ್ಟವನ್ನು ನೋಡು. ಮಹಾತ್ಮರಾದ ಕೌರವರ ಕೊನೆಯಿಲ್ಲದಂತಿದ್ದ  ಸೈನ್ಯವು ನಷ್ಟವಾಗಿದೆ.
ಸಮುದ್ರಕಲ್ಪಂ ತು ಬಲಂ ಧಾರ್ತರಾಷ್ಟ್ರಸ್ಯ ಮಾಧವ |
ಅಸ್ಮಾನಾಸಾದ್ಯ ಸಂಜಲಿತಂ ಗೋಷ್ಪದೋಪಮಮಚ್ಯುತ ॥20॥
ಮಾಧವನೇ! ಕೌರವನ ಸೈನ್ಯವು ಆರಂಭದಲ್ಲಿ ಸಮುದ್ರದ ಹಾಗೆ ಬಹಳ ವಿಸ್ತೃತವಾಗಿತ್ತು. ಅಚ್ಯುತ! ನಮ್ಮೊಡನೆ ಯುದ್ಧಕ್ಕೆ ನಿಂತು ಅದು ಹಸುವಿನ ಪಾದಗಾತ್ರಕ್ಕೆ ಕ್ಷೀಣಿಸಿದೆ.
ಹತೇ ಭೀಷ್ಮೇ ತು ಸಂದಧ್ಯಾತ್ ಶಿವಂ ಸ್ಯಾದಿತಿ ಮಾಧವ |
ನ ಚ ತತ್ ಕೃತವಾನ್ ಮೂಢೋ ಧಾರ್ತರಾಷ್ಟ್ರಃ ಸುಬಾಲಿಶಃ ॥21॥
ಮಾಧವ! ಭೀಷ್ಮನು ಸತ್ತಾಗ ನಮ್ಮೊಡನೆ ಸಂಧಿ ಮಾಡಿಕೊಂಡಿದ್ದರೆ ಮಂಗಳವಾಗುತ್ತಿತ್ತು. ಆದರೆ ಮೂಢನಾದ ಬಾಲಿಶಬುದ್ಧಿಯ ದುರ್ಯೋಧನನು ಹಾಗೆ ಮಾಡಲಿಲ್ಲ.

ಉಕ್ತಂ ಭೀಷ್ಮೇಣ ಯದ್ವಾಕ್ಯಂ ಹಿತಂ ಪಥ್ಯಂ ಚ ಮಾಧವ |
ತಚ್ಚಾಪಿ ನಾಸೌ ಕೃತವಾನ್ ಹೀನಬುದ್ಧಿಃ ಸುಯೋಧನಃ ॥22॥
ಮಾಧವ! ಭೀಷ್ಮನು ನುಡಿದ ಹಿತವಾದ ಹಾಗೂ ಅನುಕರಣೀಯವಾದ ಮಾತನ್ನೂ ಹೀನಬುದ್ಧಿಯ ದುರ್ಯೋಧನನು ನಡೆಸಲಿಲ್ಲ.
ತಸ್ಮಿಂಸ್ತು ನಿಹತೇ ಭೀಷ್ಮೇ ಪ್ರಚ್ಯುತೇ ಪೃಥಿವೀಪತೌ |
ನ ಜಾನೇ ಕಾರಣಂ ಕಿನ್ನು ಯೇನ ಯುದ್ಧಮವರ್ತತ ॥23॥
ಭೀಷ್ಮನು ಸತ್ತಾಗ ರಾಜನು ಎಲ್ಲದರಿಂದಲೂ ಚ್ಯುತನಾದ. ಆದರೂ ಯುದ್ಧವು ಮುಂದುವರಿಯಲು ಕಾರಣವೇನೆಂದು ನಾನೂ ತಿಳಿಯದಾದೆನು.
ಮೂಢಾಂಸ್ತು ಸರ್ವಥಾ ಮನ್ಯೇ ಧಾರ್ತರಾಷ್ಟ್ರಾನ್ ಸುಬಾಲಿಶಾನ್ |
ಪತಿತೇ ಶಂತನೋಃ ಪುತ್ರೇ ಯೇಽಕಾರ್ಷುಃ ಸಂಗರಂ ಪುನಃ ॥24॥
ಈ ಧೃತರಾಷ್ಟ್ರನ ಮಕ್ಕಳು ಮೂಢರು ಮತ್ತು ಬಾಲಬುದ್ಧಿಯವರೆಂದು ನಾನು ತಿಳಿಯುತ್ತೇನೆ. ಏಕೆಂದರೆ ಶಂತನುವಿನ ಮಗನಾದ ಭೀಷ್ಮನು ಯುದ್ಧದಲ್ಲಿ ಬಿದ್ದ ಮೇಲೆ ಪುನಃ ಯುದ್ಧವನ್ನು ಯಾರು ಮಾಡಿಯಾರು?
ಅನಂತರಂ ಚ ನಿಹತೇ ದ್ರೋಣೇ ಬ್ರಹ್ಮವಿದಾಂ ವರೇ |
ರಾಧೇಯೇ ಚ ವಿಕರ್ಣೇ ಚ ನೈವ ಶಾಮ್ಯತಿ ವೈಶಸಮ್ ॥25॥
ಅನಂತರ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ದ್ರೋಣನು ಸತ್ತ. ಕರ್ಣ, ವಿಕರ್ಣರೂ ಸತ್ತರು. ಆದರೂ ಈ ಯುದ್ಧದ ಹಿಂಸೆಯು ಕೊನೆಗೊಳ್ಳಲಿಲ್ಲ.
ಅಲ್ಪಾವಶಿಷ್ಟೇ ಸೈನ್ಯೇಽಸ್ಮಿನ್ ಸೂತಪುತ್ರೇ ನಿಪಾತಿತೇ |
ಸಹಪುತ್ರೇ ನರವ್ಯಾಘ್ರೇ ನೈವ ಶಾಮ್ಯತಿ ವೈಶಸಮ್ ॥26॥
ಸೂತಪುತ್ರ ಕರ್ಣನು ಮಡಿದ ನಂತರ ಅವನ ಮಗನೂ ಸತ್ತುಹೋದ. ಸೈನ್ಯವೂ ಸ್ವಲ್ಪವಷ್ಟೇ ಉಳಿಯಿತು. ಆದರೂ ಈ ವೈರವು ನಾಶವಾಗಲಿಲ್ಲ.
ಭೂರಿಶ್ರವಸಿ ಶಲ್ಯೇ ಚ ಸಾಲ್ವೇ ಚೈವ ಜನಾರ್ದನ |
ಆವಂತ್ಯೇಷು ಚ ಶೂರೇಷು ನೈವ ಶಾಮ್ಯತಿ ವೈಶಸಮ್ ॥27॥
ಜನಾರ್ದನನೇ! ಭೂರಿಶ್ರವಸ್ಸು, ಶಲ್ಯ, ಸಾಲ್ವ, ಅವಂತಿದೇಶದ ಶೂರರು, ಇವರೆಲ್ಲಾ ಸತ್ತರೂ ಯುದ್ಧದ ಕಾವು ಆರಲಿಲ್ಲ.
ಭಗದತ್ತೇ ಹತೇ ಶೂರೇ ಕಾಂಭೋಜೇ ಚ ಸುದಕ್ಷಿಣೇ |
ದುಃಶಾಸನೇ ಚ ನಿಹತೇ ನೈವ ಶಾಮ್ಯತಿ ವೈಶಸಮ್ ॥28॥
ಭಗದತ್ತ, ಶೂರನಾದ ಕಾಂಭೋಜರಾಜ ಸುದಕ್ಷಿಣ, ದುಃಶಾಸನ ಇವರೆಲ್ಲರೂ ಸತ್ತರೂ ಯುದ್ಧವು ನಿಲ್ಲಲೇ ಇಲ್ಲ.
ದೃಷ್ಟ್ವಾ ಚ ನಿಹತಾನ್ ಶೂರಾನ್ ಪರಾನ್ ಮಾಂಡಲಿಕಾನ್ ನೃಪಾನ್|
ಬಲಿನಶ್ಚ ರಣೇ ಕೃಷ್ಣ ನೈವ ಶಾಮ್ಯತಿ ವೈಶಸಮ್ ॥29॥
ಕೃಷ್ಣನೇ! ಶೂರರೂ ಸತ್ತರು. ಬೇರೆ ಮಾಂಡಲಿಕ ರಾಜರೂ ಸತ್ತುಹೋದರು. ಬಲಶಾಲಿಗಳಾದ ಯೋಧರೂ ಸತ್ತರು. ಇದನ್ನು ನೋಡಿಯೂ ಯುದ್ಧದ ಹಿಂಸೆಯು ನಿಲ್ಲಲಿಲ್ಲ.
ಅಕ್ಷೋಹಿಣೀಂ ಹತಾಂ ದೃಷ್ಟ್ವಾ ಭೀಮಸೇನೇನ ಸಂಯುಗೇ |
ಮೋಹಾದ್ವಾ ಯದಿ ವಾ ಲೋಭಾನ್ನೈವ ಶಾಮ್ಯತಿ ವೈಶಸಮ್ ॥30॥
ಯುದ್ಧದಲ್ಲಿ ಭೀಮಸೇನನು ಅಕ್ಷೌಹಿಣಿಸೈನ್ಯವನ್ನು ಸದೆಬಡಿದನು. ಮೋಹದಿಂದಲೋ, ಲೋಭದಿಂದಲೋ ಯುದ್ಧವು ನಿಲ್ಲಲೇ ಇಲ್ಲ.
ಕೋ ನು ರಾಜಾ ಕುಲೇ ಜಾತಃ ಕೌರವೇಯೋ ವಿಶೇಷತಃ |
ನಿರರ್ಥಕಂ ಮಹದ್ವೈರಂ ಕುರ್ಯಾದನ್ಯಃ ಸುಯೋಧನಾತ್ ॥31॥
ಕುರುವಂಶದಲ್ಲಿ ದುರ್ಯೋಧನನನ್ನು ಬಿಟ್ಟರೆ ಬೇರೆ ಯಾವ ರಾಜನು ತಾನೇ ಹೀಗೆ ನಿಷ್ಪ್ರಯೋಜಕವಾದ, ದೀರ್ಘವಾದ ವೈರವನ್ನು ಮಾಡಿಯಾನು?
ಗುಣತೋಽಭ್ಯಧಿಕಾನ್ ಶ್ರುತ್ವಾ ಬಲತಃ ಶೌರ್ಯತೋಽಪಿ ವಾ |
ಅಮೂಢಃ ಕೋ ನು ಯುದ್ಧ್ಯೇತ ಜಾನನ್ ಪ್ರಾಜ್ಞೋ ಹಿತಾಹಿತಮ್॥
ಒಳಿತು-ಕೆಡುಕುಗಳನ್ನು ವಿಚಾರ ಮಾಡುವ ಬುದ್ಧಿವಂತ ಜ್ಞಾನಿಗಳಾದ ಯಾರೂ ಕೂಡ ಗುಣದಲ್ಲಿ, ಬಲದಲ್ಲಿ ಮತ್ತು ಶೌರ್ಯದಲ್ಲಿ ಅಧಿಕರಾದವರೊಂದಿಗೆ ಎಂದೂ ಯುದ್ಧವನ್ನು ಮಾಡುವುದಿಲ್ಲ.
ಯತ್ತು(ಯತ್ರ) ತಸ್ಯ ಮನೋ ಹ್ಯಾಸೀತ್ ತ್ವಯೋಕ್ತಸ್ಯ ಹಿತಂ ವಚಃ |
ಪ್ರಶಮೇ ಪಾಂಡವೈಃ ಸಾರ್ಧಂ ಸೋಽನ್ಯಸ್ಯ ಶೃಣುಯಾತ್ ಕಥಮ್ ॥
ಯೇನ ಶಾಂತನವೋ ಭೀಷ್ಮೋ ದ್ರೋಣೋ ವಿದುರ ಏವ ಚ |
ಪ್ರತ್ಯಾಖ್ಯಾತಾಃ ಶಮಸ್ಯಾರ್ಥೇ ಕಿನ್ನು ತಸ್ಯಾಸ್ತಿ ಭೇಷಜಮ್ ॥34॥
ನಿನ್ನ ಹಿತವಾದ ಮಾತನ್ನು ಕೇಳಿಯೂ ಯಾವನ ಮನಸ್ಸು ಪಾಂಡವರೊಂದಿಗೆ ಸಂಧಿಮಾಡಲು ಉದ್ಯುಕ್ತವಾಗಲಿಲ್ಲವೋ ಅಂತಹವನು ಬೇರೆಯವರ ಮಾತನ್ನು ಹೇಗೆ ಕೇಳಿಯಾನು? ಯಾವ ದುರ್ಯೋಧನನು ಸಂಧಿಯ ವಿಚಾರದಲ್ಲಿ ಭೀಷ್ಮನನ್ನು, ದ್ರೋಣನನ್ನು, ವಿದುರನನ್ನು ತಿರಸ್ಕರಿಸಿದನೋ ಅಂತಹವನಿಗೆ ಬೇರೆ ಯಾವ ಔಷಧಿ ಇದ್ದೀತು?
ಮೋಹಾದ್ಯೇನ ಪಿತಾ ವೃದ್ಧಃ ಪ್ರತ್ಯಾಖ್ಯಾತೋ ಜನಾರ್ದನ |
ತಥಾ ಮಾತಾ ಹಿತಂ ವಾಕ್ಯಂ ಭಾಷಮಾಣಾ ಹಿತೈಷಿಣೀ ॥35॥

ಪ್ರತ್ಯಾಖ್ಯಾತಾ ಹ್ಯಸತ್ಕೃತ್ಯ ಕಸ್ಮಾದ್ ರೋಚಯತೇ ವಚಃ ॥36॥
ಜನಾರ್ದನನೇ! ಯಾವ ದುರ್ಯೋಧನನು ರಾಜ್ಯಮೋಹದಿಂದ ವೃದ್ಧನಾದ ತಂದೆಯ ಹಾಗೂ ತಾಯಿಯ ಹಿತವಾದ ಮಾತನ್ನು ತಿರಸ್ಕರಿಸಿದನೋ ಅಂಥವನಿಗೆ ಬೇರೆ ಯಾವ ವಾಕ್ಯವು ಹಿತವೆನಿಸಲು ಸಾಧ್ಯ?
ಕುಲಾಂತಕರಣೋ ವ್ಯಕ್ತಂ ಜಾತ ಏಷ ಜನಾರ್ದನ |
ಯಥಾಸ್ಯ ದೃಶ್ಯತೇ ಚೇಷ್ಟಾ ನೀತಿಶ್ಚೈವ ವಿಶಾಂಪತೇ ॥37॥
ಜನಾರ್ದನನೇ! ಇವನು ಕೌರವಕುಲನಾಶಮಾಡಲೆಂದೇ ಹುಟ್ಟಿದವನು ಎಂಬುದು ಅವನ ನಡವಳಿಕೆಗಳು ಮತ್ತು ನೀತಿಗಳನ್ನು ನೋಡಿದಾಗ ಸ್ಪಷ್ಟವಾಗಿ ಗೋಚರಿಸುತ್ತಿದೆ.
ನೈಷ ದಾಸ್ಯತಿ ನೋ ರಾಜ್ಯಮಿತಿ ಮೇ ಮತಿರಚ್ಯುತ ॥38॥
ಅಚ್ಯುತನೇ! ಅವನು ರಾಜ್ಯವನ್ನು ಕೊಡಲಾರ ಎಂದು ನನಗೆ ತೋರುತ್ತದೆ.
ಉಕ್ತೋ ಹಿ ಬಹುಶಸ್ತಾತ ವಿದುರೇಣ ಮಹಾತ್ಮನಾ |
ನ ಜೀವನ್ ದಾಸ್ಯತೇ ಭಾಗಂ ಧಾರ್ತರಾಷ್ಟ್ರಃ ಕಥಂಚನ ॥39॥
ಯಾವತ್ ಪ್ರಾಣಾ ಧರಿಷ್ಯಂತಿ ಧಾರ್ತರಾಷ್ಟ್ರೇಽಪಿ ಮಾನದ |
ತಾವದ್ಯುಷ್ಮಾಸ್ವಪಾಪೇಷು ಪ್ರಕರಿಷ್ಯಂತಿ ಪಾಪಕಮ್ ॥40॥
ನ ಚ ಶಕ್ಯೋಽನ್ಯಥಾ ಜೇತುಮ್ ಋತೇ ಯುದ್ಧೇನ ಮಾಧವ |
ಇತ್ಯಬ್ರುವೀತ್ ಸದಾ ಮಾಂ ಹಿ ವಿದುರಃ ಸತ್ಯದರ್ಶನಃ ॥41॥
ಪ್ರಿಯನೇ! ಮಾಧವನೇ! ಸತ್ಯದರ್ಶನನಾದ ವಿದುರನು ನನಗೆ ಅನೇಕ ಬಾರಿ ಹೀಗೆ ಹೇಳಿದ್ದ- ದುರ್ಯೋಧನನು ಜೀವ ಇರುವಲ್ಲಿವರೆಗೆ ರಾಜ್ಯದ ಭಾಗವನ್ನು ಯಾವ ರೀತಿಯಲ್ಲಿಯೂ ಕೊಡುವುದಿಲ್ಲ. ಮಾನವಂತ ಅರ್ಜುನನೇ! ದುರ್ಯೋಧನನು ದೇಹದಲ್ಲಿ ಪ್ರಾಣ ಇರುವಲ್ಲಿಯ ತನಕ ತಪ್ಪು ಮಾಡದ ನಿಮ್ಮಲ್ಲಿ ಪಾಪಕೆಲಸಗಳನ್ನು ಮಾಡುತ್ತಲೇ ಇರುತ್ತಾನೆ. ಅವನನ್ನು ಮಣಿಸಲು ಯುದ್ಧವಲ್ಲದೆ ಬೇರೆ ದಾರಿಯೇ ಇಲ್ಲ.
ತತ್ ಸರ್ವಮದ್ಯ ಜಾನಾಮಿ ವ್ಯವಸಾಯಂ ದುರಾತ್ಮನಃ |
ಯದುಕ್ತಂ ವಚನಂ ತೇನ ವಿದುರೇಣ ಮಹಾತ್ಮನಾ ॥42॥
ಮಹಾತ್ಮನಾದ ವಿದುರನು ಯಾವ ಮಾತನ್ನು ಹೇಳಿದ್ದನೋ ಆ ಎಲ್ಲ ಪ್ರಯತ್ನಗಳನ್ನು ದುರಾತ್ಮನಾದ ದುರ್ಯೋಧನನು ಮಾಡುತ್ತಿರುವುದನ್ನು ಇಂದು ನಾನು ನೋಡಿ ತಿಳಿಯುತ್ತಿದ್ದೇನೆ.
ಯೋ ಹಿ ಶ್ರುತ್ವಾ ವಚಃ ಪಥ್ಯಂ ಧಾರ್ತರಾಷ್ಟ್ರೋ ಯಥಾತಥಮ್ |
ನಾಕರೋದ್ ವಿದುರಸ್ಯಾತೋ ಧ್ರುವಂ ನಾಶ ಉಪಸ್ಥಿತಃ ॥43॥
ಯಾವ ದುರ್ಯೋಧನನು ವಿದುರನ ಪಥ್ಯವಾದ ಹಿತನುಡಿಗಳನ್ನು ಕೇಳಿ ಅದರಂತೆ ನಡೆಯಲಿಲ್ಲವೋ, ಆ ಕಾರಣದಿಂದ ಖಂಡಿತವಾಗಿಯೂ ಅವನ ನಾಶವು ಸಮೀಪಿಸುತ್ತಿದೆ.
ಉಕ್ತಂ ಹಿ ಬಹುಭಿಃ ಸಿದ್ಧೈರ್ಜಾತಮಾತ್ರೇ ಸುಯೋಧನೇ |
ಏನಂ ಪ್ರಾಪ್ಯ ದುರಾತ್ಮಾನಂ ಕ್ಷಯಂ ಕ್ಷತ್ರಂ ಗಮಿಷ್ಯತಿ ॥44॥
ಈ ದುರ್ಯೋಧನನು ಹುಟ್ಟಿದಾಕ್ಷಣ ಅನೇಕ ಸಿದ್ಧಪುರುಷರು ಹೇಳಿದ್ದರು ``ದುಷ್ಟನಾದ ಇವನನ್ನು ಪಡೆದ ಕುಲವೇ ನಿರ್ವಂಶವಾಗುತ್ತದೆ'' ಎಂದು.
ತದಿದಂ ವಚನಂ ತೇಷಾಂ ಸತ್ಕರಿಷ್ಯಾಮಿ ಮಾಧವ ॥45॥
ಮಾಧವ! ಇವರ ಮಾತನ್ನು ನಾನಿಂದು ಸತ್ಯವನ್ನಾಗಿ ಮಾಡುತ್ತೇನೆ.
ಕ್ಷತ್ರಿಯೇಷು ಹತೇಷ್ವಾಶು ಶೂನ್ಯೇ ಚ ಶಿಬಿರೇ ಕೃತೇ |
ವಧಾಯ ಚಾತ್ಮನೋಽಸ್ಮಾಭಿಃ ಸಂಯುಗಂ ರೋಚಯಿಷ್ಯತಿ ॥46॥
ಕ್ಷತ್ರಿಯವೀರರು ಸತ್ತು ಸೇನಾಶಿಬಿರಗಳು ಬರಿದಾದಾಗ ದುರ್ಯೋಧನನು ತನ್ನ ನಾಶಕ್ಕಾಗಿ ನಮ್ಮೊಂದಿಗೆ ಯುದ್ಧವನ್ನು ಬಯಸುತ್ತಾನೆ.
ತದಂತಂ ಹಿ ಭವೇದ್ ವೈರಮನುಮಾನೇನ ಮಾಧವ ॥47॥
ಮಾಧವ! ಹೀಗೆ ಅವನು ಸತ್ತಮೇಲೆ ಅವನ ದ್ವೇಷವು ಉಪಶಮನಗೊಳ್ಳುತ್ತದೆ ಎಂಬುದಾಗಿ ನಾನು ಊಹಿಸುತ್ತೇನೆ.
ಏವಂ ಪಶ್ಯಾಮಿ ವಾರ್ಷ್ಣೇಯ ಚಿಂತಯನ್ ಪ್ರಜ್ಞಯಾ ಸ್ವಯಮ್ |
ವಿದುರಸ್ಯ ಚ ವಾಕ್ಯೇನ ಚೇಷ್ಟಯಾ ಚ ದುರಾತ್ಮನಃ ॥48॥
ವಾರ್ಷ್ಣೇಯ! ಹೀಗೆ ನನ್ನ ಅಂತಃಪ್ರಜ್ಞೆಯಿಂದ, ವಿದುರನ ವಾಕ್ಯದಿಂದ ಹಾಗೂ ದುಷ್ಟನಾದ ದುರ್ಯೋಧನನ ಚೇಷ್ಟೆಯಿಂದ ಮುಂದೆ ನಡೆಯುವುದನ್ನು ಊಹಿಸಿ ನೋಡುತ್ತೇನೆ.
ತಸ್ಮಾದ್ ಯಾಹಿ ಚಮೂಂ ವೀರ ಯಾವದ್ವನ್ಮಿ ಶಿತೈಃ ಶರೈಃ |
ದುರ್ಯೋಧನಂ ದುರಾತ್ಮಾನಂ ವಾಹಿನೀಂ ಚಾಸ್ಯ ಸಂಯುಗೇ ॥49॥
ಆದ್ದರಿಂದ ಹರಿತವಾದ ಬಾಣಗಳಿಂದ ಅವನ ಸೈನ್ಯವನ್ನು ಕೊಲ್ಲಲು ಅನುಕೂಲವಾಗುವ ರೀತಿಯಲ್ಲಿ ರಥವನ್ನು ನಡೆಸು. ದುಷ್ಟನಾದ ದುರ್ಯೋಧನನನ್ನೂ ಅವನ ಸೈನ್ಯವನ್ನೂ ಯುದ್ಧದಲ್ಲಿ ಕೊಲ್ಲಲು ಯೋಗ್ಯವಾದ ಸ್ಥಳಕ್ಕೆ ಕರೆದುಕೊಂಡು ಹೋಗು.
ಕ್ಷೇಮಮದ್ಯ ಕರಿಷ್ಯಾಮಿ ಧರ್ಮರಾಜಸ್ಯ ಮಾಧವ |
ಹತ್ವೈತದ್ ದುರ್ಬಲಂ ಸೈನ್ಯಂ ಧಾರ್ತರಾಷ್ಟ್ರಸ್ಯ ಪಶ್ಯತಃ ॥50॥
ಮಾಧವನೇ! ಇವತ್ತು ದುರ್ಯೋಧನನ ದುರ್ಬಲವಾದ ಈ ಸೈನ್ಯವನ್ನು ಅವನ ಸಮ್ಮುಖದಲ್ಲಿಯೇ ಕೊಂದು, ಆ ಮೂಲಕ ಧರ್ಮರಾಜನಿಗೆ ಮಂಗಳವನ್ನು ಉಂಟುಮಾಡುತ್ತೇನೆ.

ಸಂಜಯಃ
ಅಭೀಶುಹಸ್ತೋ ದಾಶಾರ್ಹಸ್ತಥೋಕ್ತಃ ಸವ್ಯಸಾಚಿನಾ |
ತಂ ಬಲೌಘಮಮಿತ್ರಾಣಾಂ ತೂರ್ಣಂ ಸಂಪ್ರಾವಿಶದ್ ರಣೇ ॥51॥
ಸಂಜಯ ಅರ್ಜುನನು ಹೀಗೆ ಹೇಳಲು ಶ್ರೀಕೃಷ್ಣನು ಕುದುರೆಲಗಾಮನ್ನು ಕೈಯಲ್ಲಿ ಹಿಡಿದುಕೊಂಡು ಬೇಗನೇ ಶತ್ರುಗಳ ಸೈನ್ಯದ ಒಳಗೆ ಪ್ರವೇಶ ಮಾಡಿದನು.
ಶರಾಸನವರಂ ಘೋರಂ ಶಕ್ತಿಕಂಟಕಸಂವೃತಮ್ |
ಗದಾಪರಿಘಪಾಷಾಣಂ ರಥನಾಗಮಹಾದ್ರುಮಮ್ ॥52॥
ಹಯಪತ್ತಿಸಮಾಕೀರ್ಣಂ ಗಾಹಮಾನೋ ಮಹಾಯಶಾಃ |
ವ್ಯಚರತ್ ತತ್ರ ಗೋವಿಂದಃ ಸ್ವರಥೇನಾಶುಪಾತಿನಾ ॥53॥
ರಣರಂಗದಲ್ಲಿ ಬಿಲ್ಲು, ಶಕ್ತಿ, ಕಂಟಕ ಮೊದಲಾದವು ಎಲ್ಲಾ ಕಡೆಯೂ ಬಿದ್ದಿದ್ದವು. ಅಲ್ಲಿ ಬಿದ್ದಿರುವ ಶಕ್ತ್ಯಾಯುಧಗಳೇ ಕಂಟಕಗಳು. ಗದೆ ಮತ್ತು ಪರಿಘಾಯುಧಗಳೇ ಅಲ್ಲಿರುವ ಕಲ್ಲುಗಳು. ರಥ ಮತ್ತು ಆನೆಗಳೇ ದೊಡ್ಡ ಮರಗಳು. ಕುದುರೆಗಳು ಮತ್ತು ಪದಾತಿಗಳು ತುಂಬಿಹೋಗಿದ್ದರು. ಅಂತಹ ಸೈನ್ಯವನ್ನು ಪ್ರವೇಶಿಸಿ, ಶ್ರೀಕೃಷ್ಣನು ಶೀಘ್ರವಾಗಿ ಚಲಿಸುವ ತನ್ನ ರಥದ ಮೇಲೆ ಕುಳಿತು ಸಂಚರಿಸಿದನು.
ತೇ ಹಯಾಃ ಪಾಂಡರಾ ರಾಜನ್ ವಹಂತೋಽರ್ಜುನಮಾಹವೇ |
ದಿಕ್ಷು ಸರ್ವಾಸ್ವದೃಶ್ಯಂತ ದಾಶಾರ್ಹೇಣ ಪ್ರಚೋದಿತಾಃ ॥54॥
ರಾಜನೇ! ಶ್ರೀಕೃಷ್ಣನಿಂದ ಪ್ರೇರಿತವಾದ ಬೆಳ್ಳಗಿನ ಕುದುರೆಗಳು ಯುದ್ಧದಲ್ಲಿ ಅರ್ಜುನನನ್ನು ಎಲ್ಲಾ ದಿಕ್ಕುಗಳಲ್ಲಿಯೂ ಕರೆದೊಯ್ದುವು.
ತತಃ ಪ್ರಾಯಾದ್ ರಥೇನಾಜೌ ಸವ್ಯಸಾಚೀ ಪರಂತಪಃ |
ಕಿರನ್ ಶರಶತಾಂಸ್ತೀಕ್ಷ್ಣಾನ್ ವಾರಿಧಾರಾ ಇವಾಂಬುದಃ ॥55॥
ಶತ್ರುತಾಪಕನಾದ ಅರ್ಜುನನು ರಥದ ಮೂಲಕ ಯುದ್ಧಕ್ಕೆ ತೆರಳಿದನು. ಮೋಡವು ಮಳೆಯನ್ನು ಸುರಿಸುವಂತೆ ಅರ್ಜುನನು ನೂರಾರು ತೀಕ್ಷ್ಣವಾದ ಬಾಣಗಳ ಮಳೆಗರೆದನು.
ಪ್ರಾದುರಾಸೀನ್ಮಹಾಶಬ್ದಃ ಶರಾಣಾಂ ನತಪರ್ವಣಾಮ್ |
ಇಷುಭಿಶ್ಛಾದ್ಯಮಾನಾನಾಂ ಸಂಗ್ರಾಮೇ ಸವ್ಯಸಾಚಿನಾ ॥56॥
ಅರ್ಜುನನು ಬಾಗಿದ ಸಂಧಿಯುಳ್ಳ ಬಾಣಗಳಿಂದ ಎಲ್ಲರನ್ನೂ ಮುಚ್ಚಿಹಾಕಿದನು. ಆಗ ಬಾಣಗಳಿಂದ ದೊಡ್ಡ ಶಬ್ದವು ಉಂಟಾಯಿತು.
ಅಸಜ್ಜಂತಸ್ತನುತ್ರೇಷು ಶರೌಘಾಃ ಪ್ರಾಪತನ್ ಭುವಿ |
ಇಂದ್ರಾಶನಿಸಮಸ್ಪರ್ಶಾ ಗಾಂಡೀವಪ್ರೇಷಿತಾಃ ಶರಾಃ ॥57॥
ಇಂದ್ರನ ವಜ್ರಾಯುಧದ ಸ್ಪರ್ಶಕ್ಕೆ ಸದೃಶವಾದ, ಗಾಂಡೀವಧನುಸ್ಸಿನಿಂದ ಹೊರಟ ಬಾಣಗಳು ಯೋಧರ ದೇಹದ ಕವಚದಲ್ಲಿ ಸಿಕ್ಕಿಕೊಳ್ಳದೆ, ಅವುಗಳಿಗೆ ತಾಗಿ ಕೆಳಗೆ ಬಿದ್ದವು.
ನರಾನ್ ನಾಗಾನ್ ಸಮಾಹತ್ಯ ಹಯಾಂಶ್ಚಾಪಿ ವಿಶಾಂಪತೇ |
ಅಪತಂಸ್ತು ರಣೇ ಬಾಣಾಃ ಪತಂಗಾ ಇವ ಘೋಷಿಣಃ ॥58॥
ರಾಜನೇ! ಮನುಷ್ಯರನ್ನು, ಆನೆಗಳನ್ನು, ಕುದುರೆಗಳನ್ನು ಹೊಡೆದು ಕೆಳಗೆ ಬೀಳುತ್ತಿರುವ ಬಾಣಗಳು ರಣರಂಗದಲ್ಲಿ ಪತಂಗಗಳು ಬೀಳುವಂತೆ ಬೀಳುತ್ತಿದ್ದವು.
ಆಸೀತ್ ಸರ್ವಮವಚ್ಛನ್ನಂ ಗಾಂಡೀವಪ್ರೇಷಿತೈಃ ಶರೈಃ |
ನ ಪ್ರಾಜ್ಞಾಯಂತ ಸಂಗ್ರಾಮೇ ದಿಶೋ ವಾ ಪ್ರದಿಶೋಽಪಿ ವಾ ॥59॥
ಗಾಂಡೀವ ಧನುಸ್ಸಿನಿಂದ ಪ್ರಯುಕ್ತವಾದ ಬಾಣಗಳು ಎಲ್ಲವನ್ನೂ ಮುಚ್ಚಿಹಾಕಿದವು. ಆಗ ಯುದ್ಧಾಂಗಣದಲ್ಲಿ ದಿಕ್ಕುಗಳನ್ನು ಮತ್ತು ವಿದಿಕ್ಕುಗಳನ್ನುತಿಳಿಯುವುದೇ ಸಾಧ್ಯವಾಗಲಿಲ್ಲ.
ಸರ್ವಮಾಸೀಜ್ಜಗತ್ ಪೂರ್ಣಂ ಪಾರ್ಥನಾಮಾಂಕಿತೈಃ ಶರೈಃ |
ರುಗ್ಮಪುಂಖೈಃ ಶಿತೈರ್ಬಾಣೈಃ ಕರ್ಮಾರಪರಿಮಾರ್ಜಿತೈಃ ॥60॥
ಕಮ್ಮಾರನು ಚೆನ್ನಾಗಿ ಶುಭ್ರಗೊಳಿಸಿದ, ಬಂಗಾರದ ರೆಕ್ಕೆಗಳುಳ್ಳ ಹಾಗೂ ಪಾಂಡವರ ರಾಜಮುದ್ರೆಯನ್ನು ಹೊಂದಿದ ಹರಿತವಾದ ಬಾಣಗಳಿಂದ ಇಡೀ ಪ್ರಪಂಚವೇ ತುಂಬಿಹೋಯಿತು.
ತೇ ದಹ್ಯಮಾನಾಃ ಪಾರ್ಥೇನ ಪಾವಕೇನೇವ ಕುಂಜರಾಃ |
ಸಮಾಸೀದಂಸ್ತು ಕೌರವ್ಯಾ ವಧ್ಯಮಾನಾಃ ಶಿತೈಃ ಶರೈಃ ॥61॥
ಅರ್ಜುನನ ಹರಿತವಾದ ಬಾಣಗಳಿಂದ ಹೊಡೆಯಲ್ಪಟ್ಟ ಆನೆಗಳು ಬೆಂಕಿಯಿಂದ ಸುಟ್ಟುಹೋಗುವಂತೆ ಸುಟ್ಟುಹೋಗುತ್ತಿದ್ದವು ಮತ್ತು ಬಹಳ ದುಃಖವನ್ನು ಅನುಭವಿಸುತ್ತಿದ್ದವು.
ಶರಚಾಪಧರಃ ಪಾರ್ಥಃ ಪ್ರಜ್ವಲನ್ನಿವ ಭಾರತ |
ದದಾಹ ಸಮರೇ ಯೋಧಾನ್ ಕಕ್ಷಮಗ್ನಿರಿವ ಜ್ವಲನ್ ॥62॥
ಭರತಕುಲೋದ್ಭವನೇ! ಬಾಣ-ಬಿಲ್ಲುಗಳನ್ನು ಧರಿಸಿರುವ ಅರ್ಜುನನು ಪ್ರಜ್ವಲಿಸುತ್ತಾ, ಅಗ್ನಿಯು ಕಾಡನ್ನು ಸುಡುವಂತೆ ಯುದ್ಧದಲ್ಲಿ ಯೋಧರನ್ನು ಸುಟ್ಟು ಹಾಕಿದನು.
ಯಥಾ ವನಾಂತೇ ವನಜೈರ್ವಿಸೃಷ್ಟಃ
ಕಕ್ಷಂ ದಹೇತ್ ಕೃಷ್ಣಗತಿಃ ಸುಘೋರಃ |
ಭೂರಿದ್ರುಮಂ ಶುಷ್ಕಲತಾಪ್ರತಾನಂ

ಭೃಶಂ ಸಮಿದ್ಧೋ ಜ್ವಲನಃ ಪ್ರತಾಪೀ ॥63॥
ಕಾಡಿನಲ್ಲಿಯೇ ಬೆಳೆದ ಬಿದಿರುಗಳಿಂದ ಉಂಟಾದ ಕಾಡ್ಗಿಚ್ಚು ಕಪ್ಪಾದ ಹೊಗೆಯನ್ನು ಉಗುಳುತ್ತಾ, ಭಯಂಕರವಾಗಿ ಹಬ್ಬಿ, ಎತ್ತರವಾಗಿ ಬೆಳೆದ ಮರಗಳುಳ್ಳ, ಒಣಗಿದ ಲತೆಗಳಿಂದ ಪೂರ್ಣವಾದ ಕಾಡನ್ನು ಸುಟ್ಟುಹಾಕುತ್ತದೆ. ಅದರಿಂದ ಮತ್ತೂ ಪ್ರಜ್ವಲಿಸಿ ತನ್ನ ಪ್ರತಾಪವನ್ನು ತೋರಿಸುತ್ತದೆ.
ಏವಂ ಸ ನಾರಾಚಗಣಪ್ರತಾಪೀ
ಶರಾಗ್ನಿರುಚ್ಚಾವಚತಿಗ್ಮತೇಜಾಃ |
ದದಾಹ ಸರ್ವಾಂ ತವ ಪುತ್ರಸೇನಾಮ್
ಅಮೃಷ್ಯಮಾಣಸ್ತರಸಾ ತರಸ್ವೀ ॥64॥
ಹಾಗೆಯೇ ಆ ಬಾಣಗಳನ್ನು ಬಿಡುವುದರಲ್ಲಿ ಪ್ರತಾಪವುಳ್ಳ, ಮೇಲೆ ಕೆಳಗೆ ಹರಡಿದ ಕಠೋರವಾದ ತೇಜಸ್ಸುಳ್ಳ ಅರ್ಜುನನ ಬಾಣದ ಅಗ್ನಿಯು ಸಹನೆಯನ್ನು ಕಳೆದುಕೊಂಡು ನಿನ್ನ ಮಗನ ಎಲ್ಲಾ ಸೈನ್ಯವನ್ನು ಸುಟ್ಟುಹಾಕಿತು.
ತಸ್ಯೇಷವಃ ಪ್ರಾಣಹರಾಃ ಸುಮುಕ್ತಾ
ನ ಸಜ್ಜಂತೇ ವರ್ಮಸು ರುಗ್ಮಪಂಖಾಃ |
ನ ಚ ದ್ವಿತೀಯಂ ಪ್ರಮುಮೋಚ ಕಾಂಡಮ್
ನರೇ ಹಯೇ ವಾಽಪಿ ರಥೇ ದ್ವಿಪೇ ವಾ ॥65॥
ಅರ್ಜುನನು ಪ್ರಯೋಗಿಸಿದ ಬಾಣಗಳು ಪ್ರಾಣವನ್ನೇ ತೆಗೆಯುವ ಸಾಮರ್ಥ್ಯವುಳ್ಳವು. ಅವು ಕವಚಗಳಲ್ಲಿ ಅಂಟಿಕೊಳ್ಳಲಿಲ್ಲ. ಕವಚಗಳನ್ನೇ ಸೀಳಿ ಆ ಕಡೆ ಬರುತ್ತಿದ್ದವು. ಅರ್ಜುನನು ಮತ್ತೆ ಬಾಣವನ್ನು ಪ್ರಯೋಗಿಸುತ್ತಿರಲಿಲ್ಲ. ಅವನ ಒಂದೇ ಬಾಣದಿಂದ ಶತ್ರುಗಳು ನಾಶವಾಗುತ್ತಿದ್ದರು.
ಅನೇಕರೂಪಾಕೃತಿಭಿಶ್ಚ ಬಾಣೈಃ
ಮಹಾರಥಾನೀಕಮನುಪ್ರವಿಶ್ಯ |
ಸ ಏವಮೇಕಂ ತವ ಪುತ್ರಸೇನಾಂ
ಜಘಾನ ದೈತ್ಯಾನಿವ ವಜ್ರಪಾಣಿಃ ॥66॥
ವಜ್ರಪಾಣಿಯಾದ ದೇವೇಂದ್ರನು ದೈತ್ಯರನ್ನು ಕೊಂದುಹಾಕಿದಂತೆ ಅರ್ಜುನನು ಅನೇಕ ರೂಪ, ಅನೇಕ ಆಕೃತಿಯುಳ್ಳ ಬಾಣಗಳಿಂದ ಮಹಾರಥರ ಸೇನೆಯನ್ನು ಪ್ರವೇಶಿಸಿ, ಏಕಾಕಿಯಾಗಿ ನಿನ್ನ ಮಗನ ಸೇನೆಯನ್ನು ನಾಶಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಧೃಷ್ಟದ್ಯುಮ್ನನಿಂದ ಸೋತ ದುರ್ಯೋಧನನ ಪಲಾಯನ.
ಅಶ್ವತ್ಥಾಮಾದಿಗಳಿಂದ ಅವನ ಹುಡುಕಾಟ
ಸಂಜಯಃ
ಅಸ್ಯ(ಪಶ್ಯ)ತಾಂ ಯತಮಾನಾನಾಂ ಶೂರಾಣಾಮನಿವರ್ತಿನಾಮ್ |
ಸಂಕಲ್ಪಮಕರೋನ್ಮೋಘಂ ಗಾಂಡೀವೇನ ಧನಂಜಯಃ ॥1॥
ಸಂಜಯ ಕೌರವಸೈನ್ಯದ ಶೂರರು ಯುದ್ಧದಿಂದ ಯಾವತ್ತೂ ಹಿಂತಿರುಗುವವರಲ್ಲ. ಆದರೆ ಅವರು ನೋಡುತ್ತಿದ್ದಂತೆಯೇ ಅರ್ಜುನನು ತನ್ನ ಗಾಂಡೀವಧನುಸ್ಸಿನಿಂದ ಅವರ ಸಂಕಲ್ಪವನ್ನು ಸುಳ್ಳು ಮಾಡಿದನು.
ಇಂದ್ರಾಶನಿಸಮಸ್ಪರ್ಶಾನ್ ಅವಿಷಹ್ಯಾನ್ ಮನೋಜವಾನ್ |
ವಿಸೃಜನ್ ದೃಶ್ಯತೇ ಬಾಣಾನ್ ಧಾರಾ ಮುಂಚನ್ನಿವಾಂಬುದಃ ॥2॥
ಮೋಡಗಳು ಮಳೆಯ ಧಾರೆಗಳನ್ನು ಸುರಿಸುವಂತೆ ಅರ್ಜುನನು ಬಾಣಗಳನ್ನು ಬೀಳಿಸುತ್ತಿರುವುದು ಕಂಡುಬಂದಿತು. ಆ ಬಾಣಗಳು ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದ ಸ್ಪರ್ಶವುಳ್ಳವು ಮತ್ತು ಸಹಿಸಲು ಅಸಾಧ್ಯವಾದ ಮನೋವೇಗವುಳ್ಳವು.
ತತ್ಸೈನ್ಯಂ ಭರತಶ್ರೇಷ್ಠ ವಧ್ಯಮಾನಂ ಕಿರೀಟಿನಾ |
ಸಂಪ್ರದುದ್ರಾವ ಸಂಗ್ರಾಮಾನ್ ತವ ಪುತ್ರಸ್ಯ ಪಶ್ಯತಃ ॥3॥
ಭರತಶ್ರೇಷ್ಠನೇ! ಅರ್ಜುನನು ನಿನ್ನ ಸೈನ್ಯವನ್ನು ಹೊಡೆಯುತ್ತಿದ್ದಾಗ ನಿನ್ನ ಮಗನ ಸಮ್ಮುಖದಲ್ಲಿಯೇ ಸೈನ್ಯವು ಯುದ್ಧದಿಂದ ಪಲಾಯನ ಮಾಡಿತು.
ಹತಧುರ್ಯರಥಾಃ ಕೇಚಿದ್ಧತಸೂತಾಸ್ತಥಾ ಪರೇ |
ಭಗ್ನಾಕ್ಷಯುಗಚಕ್ರೇಷಾಃ ಕೇಚಿದಾಸನ್ ವಿಶಾಂಪತೇ ॥4॥
ರಾಜನೇ! ಕೆಲವರ ರಥದ ನೊಗವು ಮತ್ತು ಕೆಲವರ ರಥಗಳೇ ಪುಡಿಯಾದವು. ಕೆಲವರ ಸಾರಥಿಗಳು ಹತರಾದರು. ಕೆಲವರ ರಥದ ಚಕ್ರದ ಅಚ್ಚು, ಕೆಲವರ ರಥದ ಚಕ್ರ, ಕೆಲವರ ರಥದ ಯುಗಗಳು ತುಂಡಾದವು.
ಅನ್ಯೇಷಾಂ ಸಾಯಕಾಃ ಕ್ಷೀಣಾಸ್ತಥಾಽನ್ಯೇ ಶರಪೀಡಿತಾಃ |
ಅಕ್ಷತಾ ಯುಗಪತ್ ಕೇಚಿತ್ ಪ್ರಾದ್ರವನ್ ಭಯಪೀಡಿತಾಃ ॥5॥
ಕೆಲವರ ಬತ್ತಳಿಕೆಯಲ್ಲಿನ ಬಾಣಗಳು ಖಾಲಿಯಾದವು. ಕೆಲವರು ಬಾಣದಿಂದ ಪೀಡಿತರಾದರು. ಕೆಲವರು ಗಾಯಗೊಳ್ಳದಿದ್ದರೂ

ಭಯದಿಂದ ಓಡಿಹೋದರು.
ಕೇಚಿತ್ ಪುತ್ರಾನುಪಾದಾಯ ಹತಭೂಯಿಷ್ಠವಾಹನಾಃ |
ವಿಚುಕ್ರುಶುಃ ಪಿತೄನನ್ಯೇ ಸಹಾಯಾನಪರೇ ಪುನಃ ॥6॥
ಕೆಲವರು ತಮ್ಮ ವಾಹನವನ್ನು ಕಳೆದುಕೊಂಡು ಮಕ್ಕಳನ್ನು ಕರೆದುಕೊಂಡು ಓಡಿಹೋದರು. ಕೆಲವರು ಪಿತೃಗಳನ್ನು ಹಿಡಿದುಕೊಂಡು ಜೋರಾಗಿ ಬೊಬ್ಬಿಡುತ್ತಿದ್ದರು. ಕೆಲವರು ತಮ್ಮ ಸಹಾಯಕರನ್ನು ಹಿಡಿದುಕೊಂಡು ಗೋಳಿಡುತ್ತಿದ್ದರು.
ಬಾಂಧವಾಂಶ್ಚ ನರವ್ಯಾಘ್ರ ಭ್ರಾತೄನ್ ಸಂಬಂಧಿನಸ್ತಥಾ |
ದುದ್ರುವುಃ ಕೇಚಿದುತ್ಸೃಜ್ಯ ತತ್ರ ತತ್ರ ವಿಶಾಂಪತೇ ॥7॥
ನರೋತ್ತಮನೇ! ಜನಾಧಿಪತಿಯೇ! ಕೆಲವರು ತಮ್ಮ ಬಾಂಧವರನ್ನು, ಸಹೋದರರರನ್ನು, ಸಂಬಂಧಿಗಳನ್ನು ಅಲ್ಲಲ್ಲಿಯೇ ಬಿಟ್ಟು ತಾವು ಮಾತ್ರ ಓಡಿಹೋದರು.
ಬಹವೋಽತ್ರ ಭೃಶಂ ವಿದ್ಧ್ವಾ ಮುಹ್ಯಮಾನಾ ಮಹಾರಥಾಃ |
ನಷ್ಟಸಂಜ್ಞಾಃ ಸ್ಮ ದೃಶ್ಯಂತೇ ಪಾರ್ಥಬಾಣಹತಾ ನರಾಃ ॥8॥
ಅನೇಕ ಮಹಾರಥಯೋಧರು ಬಾಣಗಳಿಂದ ಚೆನ್ನಾಗಿ ಪೆಟ್ಟು ತಿಂದು ಭ್ರಮೆಗೊಳಗಾದರು ಮತ್ತು ಮೂರ್ಛೆ ಹೋದರು. ಯೋಧರು ಅರ್ಜುನನ ಬಾಣಗಳಿಂದ ಸಾಯುತ್ತಿದ್ದರು.
ತಾನನ್ಯೇ ರಥಮಾರೋಪ್ಯ ಸಮಾಶ್ವಾಸ್ಯ ಮುಹೂರ್ತಕಮ್ |
ವಿಶ್ರಾಂತಾಶ್ಚ ವಿತೃಷ್ಣಾಶ್ಚ ಪುನರ್ಯುದ್ಧಾಯ ಜಗ್ಮಿರೇ ॥9॥
ಕೆಲವರು ಅಂತಹವರನ್ನು ರಥದ ಮೇಲೆ ಹತ್ತಿಸಿಕೊಂಡು ಸ್ವಲ್ಪಸಮಯ ಉಪಚಾರ ಮಾಡಿದರು. ಉಪಚಾರವನ್ನು ಪಡೆದ ಯೋಧರು ಶ್ರಮವನ್ನು ಕಳೆದುಕೊಂಡು, ನೀರಡಿಕೆಯಿಂದ ಮುಕ್ತರಾಗಿ ಪುನಃ ಯುದ್ಧಕ್ಕೆ ಹೋದರು.
ತಾನಪಾಸ್ಯ ಗತಾಃ ಕೇಚಿತ್ ಪುನರೇವ ಯುಯುತ್ಸವಃ |
ಕುರ್ವಂತಸ್ತವ ಪುತ್ರಸ್ಯ ಶಾಸನಂ ಯುದ್ಧದುರ್ಮದಾಃ ॥10॥
ಕೆಲವರು ರಣರಂಗದಲ್ಲಿ ಬಿದ್ದಿರುವ ಗಾಯಾಳುಗಳನ್ನು ಅಲ್ಲಿಯೇ ಬಿಟ್ಟು ಯುದ್ಧಮಾಡುವ ಹುಮ್ಮಸ್ಸಿನಿಂದ, ದುರ್ಯೋಧನನ ಆಜ್ಞೆಯನ್ನು ಪಾಲಿಸುವವರಾಗಿ ಪುನಃ ಯುದ್ಧಕ್ಕೆ ತೊಡಗಿದರು.
ಪಾನೀಯಮಪರೇ ಪೀತ್ವಾ ಸಮಾಶ್ವಾಸ್ಯ ಚ ವಾಹನಾನ್ |
ವರ್ಮಾಣಿ ಚ ಸಮಾರೋಪ್ಯ ಜಗ್ಮುರ್ಭರತಸತ್ತಮ ॥11॥
ಭರತೋತ್ತಮನೇ! ಕೆಲವರು ಪಾನೀಯವನ್ನು ಕುಡಿದು, ತಮ್ಮ ವಾಹನಗಳಾದ ಆನೆ-ಕುದುರೆಗಳನ್ನು ಸಮಾಧಾನಪಡಿಸಿ, ಕವಚಗಳನ್ನು ಸರಿಪಡಿಸಿಕೊಂಡು ಪುನಃ ಯುದ್ಧಕ್ಕೆ ನಡೆದರು.
ಸಮಾಶ್ವಾಸ್ಯ ಪರೇ ಭ್ರಾತೄನ್ ನಿಕ್ಷಿಪ್ಯ ಶಿಬಿರೇಽಪಿ ಚ |
ಪುತ್ರಾನನ್ಯೇ ಪಿತೄನನ್ಯೇ ಪುನರ್ಯುದ್ಧಮರೋಚಯನ್ ॥12॥
ಕೆಲವರು ಗಾಯಗೊಂಡ ಸಹೋದರರರನ್ನು, ಪಿತೃಗಳನ್ನು, ಮಕ್ಕಳನ್ನು ಶಿಬಿರದಲ್ಲಿ ಇರಿಸಿ, ತಾವು ಪುನಃ ಯುದ್ಧಕ್ಕೆ ತೆರಳಿದರು. ಅವರಿಗೆ ಯುದ್ಧವು ಬಹಳ ಇಷ್ಟವಾಗಿತ್ತು.
ಸಜ್ಜಯಿತ್ವಾ ರಥಾನ್ ಕೇಚಿತ್ ಯಥಾಮುಖ್ಯಂ ವಿಶಾಂಪತೇ |
ಆಪ್ಲುತ್ಯ ಪಾಂಡವಾನೀಕಂ ಪುನರ್ಯುದ್ಧಮರೋಚಯನ್ ॥13॥
ರಾಜನೇ! ಕೆಲವರು ಸೇನಾಧಿಪತಿಯ ಅಣತಿಗೆ ಅನುಸಾರವಾಗಿ ರಥಗಳನ್ನು ಸಜ್ಜುಗೊಳಿಸಿ, ಪಾಂಡವರ ಸೇನೆಯ ಮೇಲೆ ಧುಮುಕಿ, ಪುನಃ ಯುದ್ಧದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರಿಗೂ ಹೋರಾಟವು ಹರ್ಷದಾಯಕವಾಗಿತ್ತು.
ತೇ ಶೂರಾಃ ಕಿಂಕಿಣೀಜಾಲೈಃ ಸಮಾಚ್ಛನ್ನಾ ಬಭಾಸಿರೇ |
ತ್ರೈಲೋಕ್ಯಸಮರೇ ಯುಕ್ತಾ ಯಥಾ ದೈವತದಾನವಾಃ ॥14॥
ಆ ಶೂರರು ರಥದ ಕಿಂಕಿಣೀಸಮೂಹದಿಂದ ಆವೃತರಾಗಿ ಶೋಭಿಸುತ್ತಿದ್ದರು. ಮೂರುಲೋಕದ ಯುದ್ಧದಲ್ಲಿ ದೇವತೆಗಳು, ದಾನವರು ಶೋಭಿಸುವಂತೆ ಇತ್ತು.
ಆಗಮ್ಯ ಸಹಸಾ ಕೇಚಿದ್ ರಥೈಃ ಸ್ವರ್ಣವಿಭೂಷಿತೈಃ |
ಪಾಂಡವಾನಾಮನೀಕೇಷು ಧೃಷ್ಟದ್ಯುಮ್ನಮಯೋಧಯನ್ ॥15॥
ಕೆಲವರು ಬಂಗಾರ ವಿಭೂಷಣವುಳ್ಳ ರಥಗಳಲ್ಲಿ ಕೂಡಲೇ ಬಂದು ಪಾಂಡವರ ಸೈನ್ಯದಲ್ಲಿದ್ದ ಧೃಷ್ಟದ್ಯುಮ್ನನೊಡನೆ ಹೋರಾಡಿದರು.
ಧೃಷ್ಟದ್ಯುಮ್ನೋಽಪಿ ಪಾಂಚಾಲ್ಯಃ ಶಿಖಂಡೀ ಚ ಮಹಾರಥಃ |
ನಾಕುಲಿಶ್ಚ ಶತಾನೀಕೋ ರಥಾನೀಕಮಯೋಧಯನ್ ॥16॥
ಧೃಷ್ಟದ್ಯುಮ್ನ, ಮಹಾರಥನಾದ ಶಿಖಂಡಿ, ನಕುಲನ ಮಗ ಶತಾನೀಕ ಇವರೆಲ್ಲರೂ ರಥಸೇನೆಯನ್ನು ಎದುರಿಸಿದರು.
ಪಾಂಚಾಲ್ಯಸ್ತು ತತಃ ಕ್ರುದ್ಧಃ ಸೈನ್ಯೇನ ಮಹತಾ ವೃತಃ |
ಅಭ್ಯದ್ರವತ್ ಸುಸಂರಬ್ಧಾನ್ ತಾವಕಾನ್ ಹಂತುಮುದ್ಯತಃ ॥17॥
ಧೃಷ್ಟದ್ಯುಮ್ನನಾದರೂ ಬಹಳ ಕೋಪಗೊಂಡು ದೊಡ್ಡದಾದ ಸೈನ್ಯವನ್ನು ಕೂಡಿಕೊಂಡು ನಿನ್ನ ಕಡೆಯವರನ್ನು ಕೊಲ್ಲಲು ಉದ್ಯುಕ್ತನಾದ ಮತ್ತು ಯುದ್ಧಸನ್ನದ್ಧರಾದ ನಿನ್ನವರನ್ನು ಅಟ್ಟಿಸಿಕೊಂಡು ಹೋದನು.
ತತಸಾತ್ವಪತತಸ್ತಸ್ಯ ತವ ಪುತ್ರೋ ಜನಾಧಿಪಃ |
ಬಾಣಸಂಘಾನನೇಕಾನ್ ವೈ ಪ್ರೇಷಯಾಮಾಸ ಭಾರತ ॥18॥

ಭರತಕುಲೋದ್ಭವನೇ! ಧೃಷ್ಟದ್ಯುಮ್ನನು ಬರುತ್ತಿರಲು ನಿನ್ನ ಮಗನಾದ ದುರ್ಯೋಧನನು ಅನೇಕ ಬಾಣಸಮೂಹಗಳನ್ನು ಪ್ರಯೋಗಿಸಿದನು.
ಧೃಷ್ಟದ್ಯುಮ್ನಸ್ತತೋ ರಾಜನ್ ತವ ಪುತ್ರೇಣ ಧನ್ವಿನಾ |
ನಾರಾಚೈರ್ಬಹುಭಿಃ ಕ್ಷಿಪ್ರಂ ಬಾಹ್ವೋರುರಸಿ ಚಾರ್ದಿತಃ ||19||
ರಾಜನೇ! ಧನುರ್ಧಾರಿಯಾದ ನಿನ್ನ ಮಗನು ಪ್ರಯೋಗಿಸಿದ ಅನೇಕ ಬಾಣಗಳು ಬೇಗನೆ ಧೃಷ್ಟದ್ಯುಮ್ನನ ಬಾಹುಗಳಿಗೆ ಮತ್ತು ಎದೆಗೆ ನೋವನ್ನು ಮಾಡಿದವು.
ಸೋಽತಿವಿದ್ಧೋ ಮಹೇಷ್ವಾಸಃ ತೋತ್ರಾರ್ದಿತ ಇವ ದ್ವಿಪಃ |
ತಸ್ಯಾಶ್ವಾಂಶ್ಚತುರೋ ಬಾಣೈಃ ಪ್ರೇಷಯಾಮಾಸ ಮೃತ್ಯವೇ ||20||
ಆ ಬಾಣಗಳ ಹೊಡೆತದಿಂದ ಮಹಾಬಿಲ್ಗಾರನಾದ ಧೃಷ್ಟದ್ಯುಮ್ನನು ಚಾವಟಿಯಿಂದ ಹೊಡೆಯಲ್ಪಟ್ಟ ಆನೆಯಂತೆ ಬಹಳವಾಗಿ ಪೆಟ್ಟುತಿಂದನು. ಧೃಷ್ಟದ್ಯುಮ್ನನು ನಾಲ್ಕು ಬಾಣಗಳನ್ನು ಪ್ರಯೋಗಿಸಿ ದುರ್ಯೋಧನನ ನಾಲ್ಕು ಕುದುರೆಗಳನ್ನು ಕೊಂದನು.
ಸಾರಥೇಶ್ಚಾಸ್ಯ ಭಲ್ಲೇನ ಶಿರಃ ಕಾಯಾದಪಾಹರತ್ ||21||
ಭಲ್ಲೆಯಿಂದ ದುರ್ಯೋಧನನ ಸಾರಥಿಯ ತಲೆಯನ್ನು ಕಡಿದನು.
ತತೋ ದುರ್ಯೋಧನೋ ರಾಜಾ ಪೃಷ್ಠಮಾರುಹ್ಯ ವಾಜಿನಃ |
ಅಪಾಕ್ರಾಮದ್ ಹತರಥೋ ನಾತಿದೂರಮರಿಂದಮಃ ||22||
ಅನಂತರ ರಥವನ್ನು ಕಳೆದುಕೊಂಡ, ಶತ್ರುಮಾರಕನಾದ ದುರ್ಯೋಧನನು ಕುದುರೆಯ ಬೆನ್ನಿನ ಮೇಲೆ ಹತ್ತಿಕೊಂಡು ಅಲ್ಲಿಂದ ಹೊರಗೋಡಿದನು.
ದೃಷ್ಟ್ವಾ ತು ಹತಭೂಯಿಷ್ಠಂ ಸ್ವಮನೀಕಮಮರ್ಷಣಃ |
ತವ ಪುತ್ರೋ ಮಹಾರಾಜ ಪ್ರಯಯೌ ಯತ್ರ ಸೌಬಲಃ ||23||
ಮಹಾರಾಜನೇ! ದುರ್ಯೋಧನನು ತನ್ನ ಸೈನ್ಯವು ಬಹಳವಾಗಿ ನಾಶವಾಗಿರುವುದನ್ನು ನೋಡಿ ಶಕುನಿಯಿದ್ದಲ್ಲಿಗೆ ಬೇಗನೇ ಹೋದನು.
ತತೋ ರಥೇಷು ಭಗ್ನೇಷು ತ್ರಿಸಾಹಸ್ರಾ ಮಹಾದ್ವಿಪಾಃ |
ಪಾಂಡವಾನ್ ರಥಿನಃ ಪಂಚ ಸಮಂತಾತ್ ಪರ್ಯವಾರಯನ್ ||24||
ರಥಗಳೆಲ್ಲಾ ಪುಡಿಯಾದಾಗ ಮೂರುಸಾವಿರ ಮಹಾಗಜಗಳು ಐದು ಜನ ಮಹಾರಥರಾದ ಪಾಂಡವರನ್ನು ಸುತ್ತಲೂ ಸುತ್ತುವರಿದವು.
ತೇ ವೃತಾಃ ಸಮರೇ ಪಂಚ ಗಜಾನೀಕೇನ ಭಾರತ |
ಅಶೋಭಂತ ನರವ್ಯಾಘ್ರಾ ಗ್ರಹಾಸ್ತಾರಾಗಣೈರಿವ ||25||
ಭರತಕುಲೋದ್ಭವನೇ! ಯುದ್ಧದಲ್ಲಿ ಗಜಸೈನ್ಯದಿಂದ ಸುತ್ತುವರಿಯಲ್ಪಟ್ಟ ಪಂಚಪಾಂಡವರು ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟ ಗ್ರಹಗಳಂತೆ ಕಂಡುಬಂದರು.
ತತೋಽರ್ಜುನೋ ಮಹಾರಾಜ ಲಬ್ಧಲಕ್ಷ್ಯೋ ಮಹಾಭುಜಃ |
ವಿನಿರ್ಯಯೌ ರಥೇನೈವ ಶ್ವೇತಾಶ್ವಃ ಕೃಷ್ಣಸಾರಥಿಃ ||26||
ಮಹಾರಾಜನೇ! ಅನಂತರ ಮಹಾಭುಜನಾದ, ಕೃಷ್ಣಸಾರಥಿಯಾದ, ಬೆಳ್ಳಗಿನ ಅಶ್ವಗಳನ್ನು ಹೊಂದಿದ್ದ ಅರ್ಜುನನು ಗುರಿಯನ್ನು ನಿಶ್ಚಯಿಸಿಕೊಂಡು, ರಥದ ಮೂಲಕವೇ ಹೊರನಡೆದನು.
ತೈಃ ಸಮಂತಾತ್ ಪರಿವೃತಃ ಕುಂಜರೈಃ ಪರ್ವತೋಪಮೈಃ |
ನಾರಾಚೈರ್ವಿಮಲೈಸ್ತೀಕ್ಷ್ಣೈರ್ಗಜಾನೀಕಮಯೋಧಯನ್ ||27||
ಪರ್ವತಾಕಾರದ ಆನೆಗಳು ಅರ್ಜುನನ ಸುತ್ತಲೂ ಸುತ್ತುವರಿದು ಇದ್ದವು. ಅರ್ಜುನನು ಹರಿತವಾದ ವಿವಿಧ ಬಾಣಗಳಿಂದ ಗಜಸೈನ್ಯವನ್ನು ಎದುರಿಸಿ ಯುದ್ಧಮಾಡಿದನು.
ತತ್ರೈಕಬಾಣನಿಹತಾನ್ ಅಪಶ್ಯಾಮ ಮಹಾಗಜಾನ್ |
ಪತಿತಾನ್ ಪಾತ್ಯಮಾನಾಂಶ್ಚ ಪ್ರಭಗ್ನಾನ್ ಸವ್ಯಸಾಚಿನಾ ||28||
ಅರ್ಜುನನು ಪ್ರಯೋಗಿಸಿದ ಒಂದೊಂದೇ ಬಾಣದಿಂದ ಅನೇಕ ಮಹಾಗಜಗಳು ಬೀಳುತ್ತಿದ್ದವು. ಅನೇಕ ಗಜಗಳು ಸಾಯುತ್ತಿದ್ದವು. ಅನೇಕ ಮಹಾಗಜಗಳು ನೆಲಕ್ಕುರುಳುತ್ತಿದ್ದವು. ಇದನ್ನು ನಾವು ನೋಡಿದೆವು.
ಭೀಮಸೇನಸ್ತು ತಾನ್ ದೃಷ್ಟ್ವಾ ನಾಗಾನ್ ವೈ ಪರ್ವತೋಪಮಾನ್ |
ಕರೇಣ ಗೃಹ್ಯ ಮಹತೀಂ ಗದಾಮಭ್ಯದ್ರವದ್ ಬಲೀ ||29||
ಅವಪ್ಲುತ್ಯ ರಥಾತ್ ತೂರ್ಣಂ ದಂಡಪಾಣಿರಿವಾಂತಕಃ ||30||
ಪರ್ವತಸದೃಶವಾದ ಆ ಆನೆಗಳನ್ನು ನೋಡಿದ ಬಲಶಾಲಿಯಾದ ಭೀಮಸೇನನು ಕೈಯಲ್ಲಿ ದೊಡ್ಡ ಗದೆಯನ್ನು ಹಿಡಿದುಕೊಂಡು ಅವನ್ನು ಎದುರಿಸಿದನು. ಕೂಡಲೇ ರಥದಿಂದ ಕೆಳಕ್ಕೆ ಹಾರಿ ದಂಡವನ್ನು ಹಿಡಿದಿರುವ ಯಮನಂತೆ ಕಂಡುಬಂದನು.
ತಮುದ್ಯತಗದಂ ದೃಷ್ಟ್ವಾ ಪಾಂಡವಾನಾಂ ಮಹಾರಥಮ್ |
ವಿತ್ರೇಸುಸ್ತಾವಕಾ ಯೋಧಾಃ ಶಕೃನ್ಮೂತ್ರಂ ಚ ಸುಸ್ರುವುಃ ||31||
ಗದೆಯನ್ನು ಎತ್ತಿಹಿಡಿದಿರುವ ಪಾಂಡವರ ಮಹಾರಥನಾದ ಭೀಮನನ್ನು ನೋಡಿ ನಿನ್ನ ಕಡೆಯ ಯೋಧರು ಬಹಳವಾಗಿ ಭಯಪಟ್ಟರು. ಭಯದಿಂದ ಮಲ-ಮೂತ್ರಗಳನ್ನು ವಿಸರ್ಜಿಸಿದರು.
ಆವಿಗ್ನಂ ಚ ಬಲಂ ಸರ್ವಂ ಗದಾಹಸ್ತೇ ವೃಕೋದರೇ ||32||
ಭೀಮಸೇನನು ಕೈಯಲ್ಲಿ ಗದೆಯನ್ನು ಹಿಡಿಕೊಂಡಾಗ ಎಲ್ಲಾ ಸೇನೆಗಳೂ ಉದ್ವೇಗಕ್ಕೊಳಗಾದವು.

ಗದಯಾ ಭೀಮಸೇನೇನ ಭಿನ್ನಕುಂಭಾನ್ ಕೃತವ್ರಣಾನ್ |
ಧಾವಮಾನಾನಪಶ್ಯಾಮ ಕುಂಜರಾನ್ ಪರ್ವತೋಪಮಾನ್ ॥33॥
ಭೀಮನು ಗದೆಯಿಂದ ಆನೆಗಳ ಕುಂಭಸ್ಥಳವನ್ನು ಸೀಳಿದನು. ಆನೆಗಳ ಮೈಯಲ್ಲೆಲ್ಲಾ ಗಾಯಗಳುಂಟಾದವು. ಅಂತಹ ಪರ್ವತಸದೃಶವಾದ ಆನೆಗಳು ಓಡುತ್ತಿರುವುದನ್ನು ನಾವು ನೋಡಿದೆವು.
ಪ್ರಧಾವ್ಯ ಕುಂಜರಾಸ್ತೇ ತು ಭೀಮಸೇನಗದಾಹತಾಃ |
ಪೇತುರಾರ್ತಸ್ವರಂ ಕೃತ್ವಾ ಛಿನ್ನಪಕ್ಷಾ ಇವಾದ್ರಯಃ ॥34॥
ಭೀಮಸೇನನ ಗದೆಯಿಂದ ಪೆಟ್ಟು ತಿಂದ ಆ ಆನೆಗಳು ಬಹಳವಾಗಿ ಓಡಿ ನೋವಿನಿಂದ ಶಬ್ದಮಾಡುತ್ತಾ ರೆಕ್ಕೆ ತುಂಡಾದ ಪರ್ವತಗಳ ಹಾಗೆ ನೆಲಕ್ಕೆ ಬಿದ್ದವು.
ತಾನ್ ಭಿನ್ನಕುಂಭಾಸ್ತು ಬಹೂನ್ ದ್ರವಮಾಣಾನಿತಸ್ತತಃ |
ಪತಮಾನಾಂಸ್ತು ಸಂಪ್ರೇಕ್ಷ್ಯ ವಿತ್ರೇಸುಸ್ತವ ಸೈನಿಕಾಃ ॥35॥
ಸೀಳಿದ ಕುಂಭಸ್ಥಳವುಳ್ಳ ಆನೆಗಳು ರಣರಂಗದಲ್ಲಿ ಅಲ್ಲಿಂದಿಲ್ಲಿಗೆ ಓಡುತ್ತಾ, ಅಲ್ಲಲ್ಲಿ ಬೀಳುತ್ತಿರುವುದನ್ನು ನೋಡಿದ ಸೈನಿಕರು ಬಹಳವಾಗಿ ಭಯವನ್ನು ಹೊಂದಿದರು.
ಯುಧಿಷ್ಠಿರೋಽಪಿ ಸಂಕ್ರುದ್ಧೋ ಮಾದ್ರೀಪುತ್ರೌ ಚ ಪಾಂಡವೌ |
ಗಾರ್ಧ್ರ(ಪತ್ರೈ)ಪಕ್ಷೈಃ ಶಿತೈರ್ಬಾಣೈರ್ಜಘ್ನುರ್ವೈ ಗಜಯೋಧಿನಃ ॥36॥
ಕ್ರುದ್ಧನಾದ ಯುಧಿಷ್ಠಿರ, ನಕುಲ-ಸಹದೇವರು ಕೂಡ ಹದ್ದಿನ ರೆಕ್ಕೆಯುಳ್ಳ ಹರಿತವಾದ ಬಾಣಗಳಿಂದ ಗಜಾರೋಹಿಗಳನ್ನು ಕೊಂದರು.
ಧೃಷ್ಟದ್ಯುಮ್ನಸ್ತು ಸಮರೇ ಪರಾಜಿತ್ಯ ನರಾಧಿಪಮ್ |
ಅಪಕ್ರಾಂತೇ ತವ ಸುತೇ ಹಯಪೃಷ್ಠಂ ಸಮಾಶ್ರಿತೇ ॥37॥
ದೃಷ್ಟ್ವಾ ಚ ಪಾಂಡವಾನ್ ಸರ್ವಾನ್ ಕುಂಜರೈಃ ಪರಿವಾರಿತಾನ್ |
ಧೃಷ್ಟದ್ಯುಮ್ನೋ ಮಹಾರಾಜ ಸಹ ಸರ್ವೈಃ ಪ್ರಭದ್ರಕೈಃ ॥38॥
ಪುತ್ರಃ ಪಾಂಚಾಲರಾಜಸ್ಯ ಜಿಘಾಂಸುಃ ಕೌರವಾನ್ ಯಯೌ ॥39॥
ನಿನ್ನ ಮಗ ದುರ್ಯೋಧನನು ಕುದುರೆಯನ್ನೇರಿ ಓಡಿಹೋದ ಮೇಲೆ, ಯುದ್ಧದಲ್ಲಿ ದುರ್ಯೋಧನನನ್ನು ಸೋಲಿಸಿದ ಧೃಷ್ಟದ್ಯುಮ್ನನು ಪಾಂಡವರನ್ನು ಗಜಸೇನೆಯು ಸುತ್ತುವರಿದಿರುವುದನ್ನು ನೋಡಿದನು. ಮಹಾರಾಜನೇ! ಪಾಂಚಾಲರಾಜನ ಮಗನಾದ ಧೃಷ್ಟದ್ಯುಮ್ನನು ಪ್ರಭದ್ರಕರೊಡನೆ ಸೇರಿಕೊಂಡು ಕೌರವರನ್ನು ಕೊಲ್ಲಲು ನಡೆದನು.
ಅದೃಷ್ಟ್ವಾ ತು ರಥಾನೀಕೇ ದುರ್ಯೋಧನಮರಿಂದಮಮ್ |
ಅಶ್ವತ್ಥಾಮಾ ಕೃಪಶ್ಚೈವ ಕೃತವರ್ಮಾ ಚ ಸಾತ್ವತಃ ॥40॥
ಅಪೃಚ್ಛನ್ ಕ್ಷತ್ರಿಯಾಂಸ್ತತ್ರ ಕ್ವ ನೋ ದುರ್ಯೋಧನೋ ಗತಃ ॥41॥
ರಥಸೈನ್ಯದಲ್ಲಿ ಶತ್ರುಸಂಹಾರಕನಾದ ದುರ್ಯೋಧನನನ್ನು ನೋಡದೆ ಅಶ್ವತ್ಥಾಮ, ಕೃಪ ಮತ್ತು ಸಾತ್ವತವಂಶದ ಕೃತವರ್ಮ ಇವರು ದುರ್ಯೋಧನನು ಎಲ್ಲಿಗೆ ಹೋದನು ಎಂದು ಅಲ್ಲಿದ್ದ ಕ್ಷತ್ರಿಯರನ್ನು ಕೇಳುತ್ತಾರೆ.
ಅಪಶ್ಯಮಾನಾ ರಾಜಾನಂ ವರ್ತಮಾನೇ ಜನಕ್ಷಯೇ ॥42॥
ಮನ್ವಾನಾ ನಿಹತಂ ತತ್ರ ತವ ಪುತ್ರಂ ಮಹಾರಥಾಃ |
ವಿಷಣ್ಣವದನಾ ಭೂತ್ವಾ ಪರ್ಯಪೃಚ್ಛಂತ ತೇ ಸುತಮ್ ॥43॥
ನಡೆಯುತ್ತಿರುವ ಜನಸಂಹಾರದಲ್ಲಿ ರಾಜನನ್ನು ಎಲ್ಲಿಯೂ ಕಾಣದೆ ನಿನ್ನ ಮಗನು ಸತ್ತಿದ್ದಾನೆ ಎಂದು ಆ ಮಹಾರಥರು ತಿಳಿದು ದುಃಖದಿಂದ ಬಾಡಿದ ಮುಖವುಳ್ಳವರಾಗಿ ನಿನ್ನ ಮಗನ ಬಗ್ಗೆ ಕೇಳಿದರು.
ಆಹುಃ ಕೇಚಿದ್ಧತೇ ಸೂತೇ ಪ್ರಯಾತೋ ಯತ್ರ ಸೌಬಲಃ |
ಹಿತ್ವಾ ಪಾಂಚಾಲರಾಜಸ್ಯ ತದನೀಕಂ ದುರುತ್ಸಹಮ್ ॥44॥
ತನ್ನ ಸಾರಥಿ ಸತ್ತನಂತರ ದುರ್ಯೋಧನನು, ಧೃಷ್ಟದ್ಯುಮ್ನನ ಬಹಳವಾದ ಉತ್ಸಾಹವುಳ್ಳ ಸೈನ್ಯವನ್ನು ಬಿಟ್ಟು ಶಕುನಿಯ ಬಳಿಗೆ ಹೋದನು ಎಂದು ಕೆಲವರು ಹೇಳಿದರು.
ಅಪರೇ ತ್ವಬ್ರುವಂಸ್ತತ್ರ ಕ್ಷತ್ರಿಯಾ ಭೃಶವಿಕ್ಷತಾಃ ॥45॥
ತುಂಬಾ ಗಾಯಗೊಂಡಿದ್ದ ಬೇರೆ ಕೆಲವು ಕ್ಷತ್ರಿಯರೂ ಹೀಗೆ ಹೇಳುತ್ತಾರೆ
ಕ್ಷತ್ರಿಯಾಃ
ದುರ್ಯೋಧನೇನ ಕಿಂ ಕಾರ್ಯಂ ದ್ರಕ್ಷ್ಯಧ್ವಂ ಯದಿ ಜೀವತಿ |
ಯುಧ್ಯಧ್ವಂ ಸಹಿತಾಃ ಸರ್ವೇ ಕಿಂ ವಾ ರಾಜಾ ಕರಿಷ್ಯತಿ ॥46॥
ಕ್ಷತ್ರಿಯರು ದುರ್ಯೋಧನನಿಂದ ಆಗಬೇಕಾದ ಕೆಲಸ ಏನಿದೆ? ಒಂದು ವೇಳೆ ಅವನು ಬದುಕಿದ್ದರೆ ಅವನನ್ನು ನೋಡುವಿರಿ. ಈಗ ಎಲ್ಲರೂ ಸೇರಿ ಯುದ್ಧಮಾಡಿ. ರಾಜನು ಏನು ಮಾಡಿಯಾನು?
ಸಂಜಯಃ
ತೇ ಕ್ಷತ್ರಿಯಾಃ ಕ್ಷತೈರ್ಗಾತ್ರೈಃ ಹತಭೂಯಿಷ್ಠವಾಹನಾಃ |
ಶರೈಃ ಸಂಪೀಡ್ಯಮಾನಾಶ್ಚ ನಾತಿವ್ಯಕ್ತಮಿವಾಬ್ರುವನ್ ॥47॥
ಸಂಜಯ ಆ ಕ್ಷತ್ರಿಯರು ತಮ್ಮ ವಾಹನಗಳನ್ನು ಕಳೆದುಕೊಂಡಿದ್ದರು. ಮೈಯೆಲ್ಲಾ ಗಾಯಗೊಂಡಿದ್ದರು. ಬಾಣಗಳಿಂದ ಬಹಳವಾಗಿ ನೋವನ್ನು ಅನುಭವಿಸುತ್ತಿದ್ದರು. ಆದ್ದರಿಂದ ಅಸ್ಪಷ್ಟವಾಗಿ ಹೇಳುತ್ತಿದ್ದರು.
ಕ್ಷತ್ರಿಯಾಃ

ಇದಂ ಸರ್ವಂ ಬಲಂ ಹನ್ಮೋ ಯೇನ ಸ್ಮ ಪರಿವಾರಿತಾಃ |
ಏತೇ ಸರ್ವೇ ಗಜಾನ್ ಹತ್ವಾ ಉಪಯಾಂತಿ ಸ್ಮ ಪಾಂಡವಾಃ ॥48॥
ಕ್ಷತ್ರಿಯರು ಯಾವ ಸೈನ್ಯವು ನಮ್ಮನ್ನು ಮುತ್ತಿಗೆ ಹಾಕಿದೆಯೋ ಅಂತಹ ಸೈನ್ಯವನ್ನು ನಾವು ನಾಶಮಾಡುತ್ತೇವೆ. ಈ ಪಾಂಡವರು ಆನೆಗಳನ್ನು ಕೊಂದು ಹತ್ತಿರಕ್ಕೆ ಬರುತ್ತಿದ್ದಾರೆ.
ಶ್ರುತ್ವಾ ತು ವಚನಂ ತೇಷಾಮಶ್ವತ್ಥಾಮಾ ಮಹಾಬಲಃ |
ಭಿತ್ತ್ವಾ ಪಾಂಚಾಲರಾಜಸ್ಯ ತದನೀಕಂ ದುರಾಸದಮ್ ॥49॥
ಕೃಪಶ್ಚ ಕೃತವರ್ಮಾ ಚ ಪ್ರಯಯುರ್ಯತ್ರ ಸೌಬಲಃ |
ರಥಾನೀಕಂ ಪರಿತ್ಯಜ್ಯ ಶೂರಾಃ ಸುದೃಢಧನ್ವಿನಃ ॥50॥
ಅವರ ಮಾತನ್ನು ಕೇಳಿದ ಮಹಾಬಲಶಾಲಿಯಾದ ಅಶ್ವತ್ಥಾಮನು, ಕೃಪ ಮತ್ತು ಕೃತವರ್ಮರು, ದೃಢವಾದ ಧನುಸ್ಸನ್ನು ಹೊಂದಿದ ಪಾಂಚಾಲರಾಜನನ್ನೆದುರಿಸಲು ಅಸಾಧ್ಯವಾದ ಸೇನಾವ್ಯೂಹವನ್ನು ಸೀಳಿ, ರಥಸೇನೆಯನ್ನೂ ಬಿಟ್ಟು ಶಕುನಿ ಇದ್ದಲ್ಲಿಗೆ ಹೋದರು.
ತತಸ್ತೇಷು ಪ್ರಯಾತೇಷು ಧೃಷ್ಟದ್ಯುಮ್ನಪುರಸ್ಕೃತಾಃ |
ಆಯಯುಃ ಪಾಂಡವಾ ರಾಜನ್ ವಿನಿಘ್ನಂತಶ್ಚ ತಾವಕಾನ್ ॥51॥
ರಾಜನ್! ಅವರು ಹೊರಟುಹೋದಮೇಲೆ ಧೃಷ್ಟದ್ಯುಮ್ನಮೊದಲಾದ ಪಾಂಡವರು ನಿನ್ನ ಕಡೆಯವರನ್ನು ಸಾಯಿಸುತ್ತಾ ಬಂದರು.
ದೃಷ್ಟ್ವಾ ತು ತಾನಾಪತತಃ ಸಂಪ್ರಹೃಷ್ಟಾನ್ ಮಹಾರಥಾನ್ |
ಪರಾಕ್ರಾಂತಾಂಸ್ತತೋ ದೃಷ್ಟ್ವಾ ನಿರಾಶಾ ಜೀವಿತೇಽಭವನ್ ॥52॥
ಬಹಳ ಆನಂದದಿಂದ ತಮ್ಮ ಮೇಲೆ ಆಕ್ರಮಣ ಮಾಡುತ್ತಿರುವ ಆ ಮಹಾರಥರನ್ನು ನೋಡಿ ನಿನ್ನವರು ಜೀವನದಲ್ಲಿ ನಿರಾಶೆಯನ್ನು ಹೊಂದಿದರು.
ವಿವರ್ಣಮುಖಭೂಯಿಷ್ಠಮಭವತ್ ತಾವಕಂ ಬಲಮ್ ॥53॥
ನಿನ್ನ ಸೇನೆಯಲ್ಲಿ ಎಲ್ಲರ ಮುಖವು ಕಳೆಗುಂದಿ ಕಪ್ಪಾಯಿತು.
ಪರಿಕ್ಷೀಣಾಯುಧಾನ್ ದೃಷ್ಟ್ವಾ ತಾನಹಂ ಪರಿವಾರಿತಾನ್ |
ರಾಜನ್ ಬಲೇನ ತ್ರ್ಯಂಗೇನ ತ್ಯಕ್ತ್ವಾ ಜೀವಿತಮಾತ್ಮನಃ ॥54॥
ಆತ್ಮನಾ ಪಂಚಮೋಽಯುಧ್ಯಂ ಪಾಂಚಾಲಸ್ಯ ಮಹಾಬಲಮ್ ॥55॥
ರಾಜನೆ! ನಿನ್ನ ಸೈನಿಕರ ಆಯುಧಗಳು ಮುಗಿಯುತ್ತಿರುವುದನ್ನು ಮತ್ತು ಅವರು ಶತ್ರುಗಳಿಂದ ಸುತ್ತುವರಿದುದನ್ನು ನೋಡಿ ನಾನು ನನ್ನ ಜೀವದ ಆಸೆಯನ್ನು ತೊರೆದು ಕುದುರೆ, ಆನೆ ಮತ್ತು ಪದಾತಿಗಳೆಂಬ ಮೂರು ಅಂಗವುಳ್ಳ ಸೈನ್ಯವನ್ನು ಕೂಡಿಕೊಂಡು ದುರ್ಯೋಧನ, ಕೃಪ, ಕೃತವರ್ಮ, ಅಶ್ವತ್ಥಾಮರ ನಂತರ ಐದನೆಯವನಾಗಿ ಪಾಂಚಾಲರ ಮಹಾಸೈನ್ಯವನ್ನು ಎದುರಿಸಿದೆನು.
ತಸ್ಮಿನ್ ದೇಶೇ ವ್ಯವಸ್ಥಾಪ್ಯ ತತ್ರ ಶಾರದ್ವತಃ ಸ್ಥಿತಃ |
ಪ್ರದುದ್ರುವುಃ ತದಾ ಯೋಧಾಃ ಕಿರೀಟಿಶರಪೀಡಿತಾಃ ॥56॥
ಅಲ್ಲಿ ಕೃಪನು ನಿಂತು ಯುದ್ಧಮಾಡುತ್ತಿದ್ದ ಸ್ಥಳದಲ್ಲಿ ನಾನೂ ಹೋಗಿ ಚೆನ್ನಾಗಿ ಸನ್ನದ್ಧನಾಗಿ ಯುದ್ಧವನ್ನು ಮಾಡಿದೆನು. ಆ ಸಂದರ್ಭದಲ್ಲಿ ಅರ್ಜುನನ ಬಾಣಗಳಿಂದ ಪೀಡಿತರಾದ ಯೋಧರು ಓಡುತ್ತಿದ್ದರು.
ಧೃಷ್ಟದ್ಯುಮ್ನಸ್ಯ ಚಾನೀಕೇ ತತ್ರ ನೋಽಭೂದ್ ರಣೋ ಮಹಾನ್ |
ನಿರ್ಜಿತಾಸ್ತೇ ವಯಂ ಸರ್ವೇ ವ್ಯಪಯಾತಾ ರಣಾತ್ ತತಃ ॥57॥
ಅಲ್ಲಿ ಧೃಷ್ಟದ್ಯುಮ್ನನ ಸೈನ್ಯದೊಂದಿಗೆ ನಮಗೆ ದೊಡ್ಡ ಕಾದಾಟ ನಡೆಯಿತು. ಅನಂತರ ಯುದ್ಧದಲ್ಲಿ ಅವರಿಂದ ಸೋತ ನಾವೆಲ್ಲ ರಣರಂಗದಿಂದ ಹಿಂತಿರುಗಿದೆವು.
ಅಥಾಪಶ್ಯಂ ಸಾತ್ಯಕಿಂ ತಮುಪಯಾಂತಂ ಮಹಾರಥಮ್ |
ರಥೈಶ್ಚತುಃಶತೈರ್ವೀರೋ ಮಾಂ ಚಾಭ್ಯದ್ರವದಾಹವೇ ॥58॥
ಆಗ ನಾನು ಮಹಾರಥನಾದ ಸಾತ್ಯಕಿಯು ನನ್ನ ಸಮೀಪಕ್ಕೆ ಬರುತ್ತಿರುವುದನ್ನು ನೋಡಿದೆ. ವೀರನಾದ ಸಾತ್ಯಕಿಯು ನಾಲ್ಕುನೂರು ರಥಗಳಿಂದ ಕೂಡಿಕೊಂಡು ನನ್ನ ಮೇಲೆ ಆಕ್ರಮಣ ಮಾಡಿದನು.
ಧೃಷ್ಟದ್ಯುಮ್ನಾದಹಂ ಮುಕ್ತಃ ಕಥಂಚಿಚ್ಛ್ರಾಂತವಾಹನಃ |
ಪತಿತೋ ಮಾಧವಾನೀಕೇ ದುಷ್ಕೃತೀ ನರಕೇ ಯಥಾ ॥59॥
ಧೃಷ್ಟದ್ಯುಮ್ನನ ಕೈಯಿಂದ ನಾನು ಹೇಗೋ ಕಷ್ಟಪಟ್ಟು ತಪ್ಪಿಸಿಕೊಂಡೆನು. ಆದರೆ ನನ್ನ ವಾಹನವು ಆಯಾಸಗೊಂಡಿದ್ದರಿಂದ ಪಾಪಿಯು ನರಕದಲ್ಲಿ ಬೀಳುವಂತೆ ಸಾತ್ಯಕಿಯ ಸೈನ್ಯದ ಮಧ್ಯೆ ಸಿಕ್ಕಿಹಾಕಿಕೊಂಡೆನು.
ತತ್ರ ಯುದ್ಧಮಭೂದ್ ಘೋರಂ ಮುಹೂರ್ತಮತಿದಾರುಣಮ್ ॥
ಅಲ್ಲಿ ಒಂದು ಮುಹೂರ್ತದ ಕಾಲ ದುಃಖದಾಯಕವಾದ ಘೋರವಾದ ಯುದ್ಧವು ನಡೆಯಿತು.
ಸಾತ್ಯಕಿಸ್ತು ಮಹಾಬಾಹುರ್ಮಮ ಹತ್ವಾ ಪರಿಚ್ಛದಮ್ |
ಜೀವಗ್ರಾಹಮಗೃಹ್ಣಾನ್ಮಾಂ ಮೂರ್ಚ್ಛಿತಂ ಪತಿತಂ ಭುವಿ ॥61॥
ಮಹಾಬಾಹುವಾದ ಸಾತ್ಯಕಿಯಾದರೂ ನನ್ನ ಸಕಲಯುದ್ಧಸಾಮಗ್ರಿಗಳನ್ನು ನಾಶಮಾಡಿದನು. ಭೂಮಿಯಲ್ಲಿ ಮೂರ್ಛೆತಪ್ಪಿ ಬಿದ್ದ ನನ್ನನ್ನು ಜೀವಸಹಿತವಾಗಿ ಹಿಡಿದನು.
ತದಾ ಮುಹೂರ್ತಾದೇವಾಥ ಗಜಾನೀಕಮವಧ್ಯತ |
ಗದಯಾ ಭೀಮಸೇನೇನ ನಾರಾಚೈರರ್ಜುನೇನ ಚ ॥62॥
ಆಗ ಭೀಮಸೇನನ ಗದೆಯಿಂದ ಮತ್ತು ಅರ್ಜುನನ ಬಾಣಗಳಿಂದ ಒಂದೇ ಮುಹೂರ್ತದಲ್ಲಿ ಗಜಪಡೆಯು ನಾಶವಾಯಿತು.

ಅಭಿಪಿಷ್ಟೈರ್ಮಹಾನಾಗೈಃ ಸಮಂತಾತ್ ಪರ್ವತೋಪಮೈಃ |
ನಾತಿಪ್ರಸಿದ್ಧೈವ ಗತಿಃ ಪಾಂಡವಾನಾಮಜಾಯತ ||63||
ಪರ್ವತಸದೃಶವಾದ ಆನೆಗಳು ಪುಡಿಪುಡಿಯಾಗಿ ಎಲ್ಲಾ ಕಡೆಯೂ ಬಿದ್ದಿದ್ದವು. ಇದರಿಂದಾಗಿ ಪಾಂಡವರಿಗೆ ರಣರಂಗದಲ್ಲಿ ನಡೆದಾಡುವ ದಾರಿಯು ಗೋಚರಿಸದೆ ಅವರಿಗೆ ನಡೆದಾಡಲು ತುಂಬಾ ಕಷ್ಟವಾಯಿತು.
ರಥಮಾರ್ಗಂ ತತಶ್ಚಕ್ರೇ ಭೀಮಸೇನೋ ಮಹಾಬಲಃ |
ಪಾಂಡವಾನಾಂ ಮಹಾರಾಜ ವ್ಯಪಕರ್ಷನ್ ಮಹಾಗಜಾನ್ ||64||
ಮಹಾರಾಜನೇ! ಅನಂತರ ಮಹಾಬಲಶಾಲಿಯಾದ ಭೀಮಸೇನನು ಮಹಾಗಜಗಳನ್ನು ದಾರಿಯಿಂದ ಎಳೆದು, ಪಾಂಡವರ ಸಂಚಾರಕ್ಕೆ ಅನುಕೂಲವಾಗುವ ರೀತಿಯಲ್ಲಿ ರಥಮಾರ್ಗವನ್ನು ಮಾಡಿಕೊಟ್ಟನು.
ಅಶ್ವತ್ಥಾಮಾ ಕೃಪಶ್ಚೈವ ಕೃತವರ್ಮಾ ಚ ಸಾತ್ವತಃ |
ಅಪಶ್ಯಂತೋ ಗಜಾನೀಕೇ ದುರ್ಯೋಧನಮರಿಂದಮಮ್ ||65||
ರಾಜಾನಂ ಮೃಗಯಾಮಾಸುಃ ತವ ಪುತ್ರಂ ಮಹಾರಥಮ್ ||66||
ಅಶ್ವತ್ಥಾಮ, ಕೃಪ ಮತ್ತು ಕೃತವರ್ಮರು ಗಜಪಡೆಯಲ್ಲಿ ಶತ್ರುಸಂಹಾರಕನಾದ ದುರ್ಯೋಧನನನ್ನು ಕಾಣದೆ ಮಹಾರಥನಾದ ನಿನ್ನ ಮಗನನ್ನು ಹುಡುಕತೊಡಗಿದರು.
ಪರಿತ್ಯಜ್ಯ ಚ ಪಾಂಚಾಲ್ಯಂ ಪ್ರಯಾತಾ ಯತ್ರ ಸೌಬಲಃ |
ರಾಜ್ಞೋಽದರ್ಶನಸಂವಿಗ್ನಾ ವರ್ತಮಾನೇ ಜನಕ್ಷಯೇ ||67||
ದುರ್ಯೋಧನನು ಕಾಣಿಸದಿದ್ದುದರಿಂದ ಉದ್ವಿಗ್ನರಾದ ಅವರು ನಡೆಯುತ್ತಿರುವ ಜನಸಂಹಾರದಲ್ಲಿ ಧೃಷ್ಟದ್ಯುಮ್ನನನ್ನು ಬಿಟ್ಟು ಶಕುನಿ ಇದ್ದಲ್ಲಿಗೆ ಹೋದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಸಂಜಯಜೀವಗ್ರಹಣಂ ನಾಮ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಭೀಮನು ಉಳಿದ ದುರ್ಯೋಧನನ ಸಹೋದರರನ್ನು ಕೊಲ್ಲುವುದು.
ಸಂಜಯಃ
ಗಜಾನೀಕೇ ಹತೇ ತಸ್ಮಿನ್ ಪಾಂಡುಪುತ್ರೇಣ ಭಾರತ |
ವಧ್ಯಮಾನೇ ಬಲೇ ರಾಜನ್ ಭೀಮಸೇನೇನ ಸರ್ವಶಃ ||1||
ವಿಚರಂತಮಪಶ್ಯಾಮ ಭೀಮಸೇನಂ ರಣಾಜಿರೇ |
ದಂಡಹಸ್ತಮಿವ ಕ್ರುದ್ಧಮಂತಕಂ ಪ್ರಾಣಹಾರಿಣಮ್ ||2||
ಸಂಜಯ ಭರತಕುಲಜಾತನೇ! ರಾಜನೇ! ಗಜಸೈನ್ಯವನ್ನು ಭೀಮನು ಕೊಂದಿದ್ದಾನೆ. ಎಲ್ಲಾ ಸೈನ್ಯವನ್ನು ನಾಶಮಾಡಿದ್ದಾನೆ. ಇಂತಹ ಭೀಮನು ರಣರಂಗದಲ್ಲಿ ಸಂಚರಿಸುತ್ತಿದ್ದರೆ ಜೀವರ ಪ್ರಾಣವನ್ನು ತೆಗೆಯುವ ಯಮನು ಕೋಪದಿಂದ ದಂಡವನ್ನು ಹಿಡಿದುಕೊಂಡು ಸಂಚರಿಸುತ್ತಿದ್ದಂತೆ ನಮಗೆ ಕಾಣಿಸುತ್ತಿತ್ತು.
ಸಮೇತ್ಯ ಚ ಮಹಾರಾಜ ಹತಶೇಷಾಃ ಸುತಾಸ್ತವ |
ಅದೃಶ್ಯಮಾನೇ ಕೌರವ್ಯೇ ಪುತ್ರೇ ದುರ್ಯೋಧನೇ ತವ ||3||
ಸೋದರ್ಯಾಃ ಸಹಿತಾ ಭೂತ್ವಾ ಭೀಮಸೇನಮುಪಾದ್ರವನ್ ||4||
ಮಹಾರಾಜನೇ! ನಿನ್ನ ಮಗನಾದ ದುರ್ಯೋಧನನು ಎಲ್ಲಿಯೂ ಕಾಣಿಸದೇ ಇದ್ದಾಗ ನಿನ್ನ ಬದುಕಿ ಉಳಿದ ಬೇರೆ ಮಕ್ಕಳು ಒಟ್ಟಾಗಿ ಭೀಮಸೇನನನ್ನು ಎದುರಿಸಿದರು.
ದುರ್ಮರ್ಷಣೋ ಮಹಾರಾಜ ಜೈತ್ರೋ ಭೂರಿಬಲೋ ನಲಃ |
ಸುನಾಭೋ ಜಯಸೇನಶ್ಚ ದುರ್ವಿಷಹ್ಯಸ್ತಥೈವ ಚ ||5||
ದುಷ್ಪ್ರಧರ್ಷಸುಜಾತೌ ಚ ಪುತ್ರಾವಭಿಮತೌ ತವ |
ದುರ್ವಿಮೋಚನನಾಮಾ ಚ ಶ್ರುತರ್ವಾ ಚ ಮಹಾಬಲಃ ||6||
ಇತ್ಯೇತೇ ಸಹಿತಾ ಭೂತ್ವಾ ತವ ಪುತ್ರಾಃ ಸಮಂತತಃ ||7||
ಭೀಮಸೇನಮಭಿದ್ರುತ್ಯ ರುರುಧುಃ ಸರ್ವತೋ ದಿಶಃ ||8||
ಮಹಾರಾಜನೇ! ದುರ್ಮರ್ಷಣ, ಜೈತ್ರ, ಭೂರಿಬಲ, ನಲ, ಸುನಾಭ, ಜಯಸೇನ, ದುರ್ವಿಷಹ್ಯ, ದುಷ್ಪ್ರಧರ್ಷ, ಸುಜಾತ, ದುರ್ವಿಮೋಚನ, ಮಹಾಬಲಶಾಲಿಯಾದ ಶ್ರುತರ್ವಾ- ಈ ನಿನ್ನ ಮಕ್ಕಳು ಎಲ್ಲರೂ ಒಟ್ಟಾಗಿ ಭೀಮಸೇನನ ಬಳಿಗೆ ಧಾವಿಸಿ ಬಂದು ಎಲ್ಲಾ ದಿಕ್ಕುಗಳಲ್ಲಿಯೂ ಅವನನ್ನು ತಡೆದರು.
ತತೋ ಭೀಮೋ ಮಹಾರಾಜ ಸ್ವರಥಂ ಪುನರಾಸ್ಥಿತಃ |
ಮುಮೋಚ ನಿಶಿತಾನ್ ಬಾಣಾನ್ ಪುತ್ರಾಣಾಂ ತವ ಮರ್ಮಸು ||9||
ಮಹಾರಾಜನೇ! ಅನಂತರ ಭೀಮನು ತನ್ನ ರಥವನ್ನು ಪುನಃ ಏರಿ ನಿನ್ನ ಮಕ್ಕಳ ಮರ್ಮಸ್ಥಾನಕ್ಕೆ ಬಾಣಗಳನ್ನು ಬಿಟ್ಟನು.
ತೇ ಕೀರ್ಯಮಾಣಾ ಭೀಮೇನ ಪುತ್ರಾಸ್ತವ ಮಹಾರಣೇ |
ಭೀಮಸೇನಮವಾಸೇಧನ್ ಪ್ರವಣಾದಿವ ಕುಂಜರಮ್ ||10||

ಮಹಾಯುದ್ಧದಲ್ಲಿ ಭೀಮನಿಂದ ಈ ರೀತಿಯಲ್ಲಿ ಬಾಣಗಳಿಂದ ಪ್ರಹಾರಕ್ಕೆ ಒಳಗಾದ ನಿನ್ನ ಮಕ್ಕಳು ಆನೆಯನ್ನು ಬೇಟೆಗಾರರು ಕೆಳಗಿನಿಂದ ಎಳೆಯುವಂತೆ ಭೀಮನನ್ನು ಸ್ವಲ್ಪದೂರಕ್ಕೆ ಎಳೆದೊಯ್ದರು.
ತತಃ ಕ್ರುದ್ಧೋ ರಣೇ ಭೀಮಃ ಶಿರೋ ದುರ್ಮರ್ಷಣಸ್ಯ ಚ |
ಕ್ಷುರಪ್ರೇಣ ಪ್ರಮಥ್ಯಾಶು ಪಾತಯಾಮಾಸ ಭೂತಳೇ ॥11॥
ಇದರಿಂದ ಕೋಪಗೊಂಡ ಭೀಮನು ಯುದ್ಧದಲ್ಲಿ ಕ್ಷುರಪ್ರದಿಂದ ದುರ್ಮರ್ಷಣನ ತಲೆಯನ್ನು ಪುಡಿಮಾಡಿ ನೆಲಕ್ಕೆ ಬೀಳಿಸಿದನು.
ತತೋಽಪರೇಣ ಭಲ್ಲೇನ ಸರ್ವಾವರಣಭೇದಿನಾ |
ಶ್ರುತಾಂತಮವಧೀದ್ ಭೀಮಃ ತವ ಪುತ್ರಂ ಮಹಾರಥಮ್ ॥12॥
ಅನಂತರ ಎಲ್ಲಾ ಕವಚಗಳನ್ನೂ ಭೇದಿಸುವ ಇನ್ನೊಂದು ಭಲ್ಲೆಯಿಂದ ನಿನ್ನ ಮಗನಾದ ಮಹಾರಥ ಶ್ರುತಾಂತನನ್ನು ಕೊಂದನು.
ಜಯತ್ಸೇನಂ ತತೋ ವಿದ್ಧ್ವಾ ನಾರಾಚೇನ ಹಸನ್ನಿವ |
ಪಾತಯಾಮಾಸ ಕೌರವ್ಯಂ ರಥೋಪಸ್ಥಾದರಿಂದಮಃ ॥13॥
ತದನಂತರ ಶತ್ರುಸಂಹಾರಕನಾದ ಭೀಮನು ನಗುತ್ತಾ ಬಾಣದಿಂದ ಕುರುಪುತ್ರ ಜಯತ್ಸೇನನನ್ನು ಕೊಂದು ರಥದ ಮೇಲಿನಿಂದ ಕೆಳಗೆ ಬೀಳಿಸಿದನು.
ಸ ಪಪಾತ ರಥಾದ್ ರಾಜನ್ ಭೂಮೌ ತೂರ್ಣಂ ಮಮಾರ ಚ ॥
ರಥದಿಂದ ನೆಲಕ್ಕೆ ಬಿದ್ದ ಜಯತ್ಸೇನನು ಕೂಡಲೇ ಸತ್ತುಹೋದನು.
ಶ್ರುತರ್ವಾ ತು ತತೋ ಭೀಮಂ ಕ್ರುದ್ಧೋ ವಿವ್ಯಾಧ ಮಾರಿಷ |
ಶತೇನ ಗೃಧ್ರವಾಜಾನಾಂ ಶರಾಣಾಂ ನತಪರ್ವಣಾಮ್ ॥15॥
ರಾಜನ್! ಕೋಪಗೊಂಡ ಶ್ರುತರ್ವನು ಬಾಗಿದ ಸಂಧಿಗಳುಳ್ಳ, ಹದ್ದಿನ ರೆಕ್ಕೆಗಳುಳ್ಳ ನೂರು ಬಾಣಗಳಿಂದ ಭೀಮನಿಗೆ ಹೊಡೆದನು.
ತತಃ ಕ್ರುದ್ಧೋ ರಣೇ ಭೀಮೋ ಜೈತ್ರಂ ಭೂರಿಬಲಂ ನಲಮ್ |
ತ್ರೀನೇತಾಂಸ್ತ್ರಿಭಿರಾನರ್ಚ್ಛದ್ ವಿಷಾಗ್ನಿಪ್ರತಿಮೈಃ ಶರೈಃ ॥16॥
ಇದರಿಂದ ಕೋಪಗೊಂಡ ಭೀಮನು ವಿಷದ ಹಾಗೆ ಪ್ರಾಣಹಾರಿಯಾದ, ಅಗ್ನಿಯಂತೆ ಸುಡುವ ಮೂರು ಬಾಣಗಳಿಂದ ಜೈತ್ರನನ್ನು, ಭೂರಿಬಲನನ್ನು ಮತ್ತು ನಲನನ್ನು ಹೊಡೆದನು.
ತೇ ಹತಾ ನ್ಯಪತನ್ ಭೂಮೌ ಸ್ಯಂದನೇಭ್ಯೋ ಮಹಾರಥಾಃ |
ವಸಂತೇ ಪುಷ್ಪಶಬಲಾ ನಿಕೃತ್ತಾ ಇವ ಕಿಂಶುಕಾಃ ॥17॥
ಆ ಮೂವರೂ ಮಹಾರಥರು ಸತ್ತು, ರಥಗಳಿಂದ ನೆಲಕ್ಕೆ ಬಿದ್ದರು. ಅವರು ವಸಂತ ಕಾಲದಲ್ಲಿ ಹೂವುಗಳಿಂದ ಮಿಶ್ರವರ್ಣಕ್ಕೆ ತಿರುಗಿದ ಪಲಾಶ (ಮುತ್ತುಗ) ವೃಕ್ಷಗಳು ಕಡಿದು ನೆಲಕ್ಕೆ ಬಿದ್ದ ಹಾಗೆ ಕಾಣಿಸಿಕೊಂಡರು.
ತತೋಽಪರೇಣ ತೀಕ್ಷ್ಣೇನ ನಾರಾಚೇನ ಪರಂತಪ |
ದುರ್ವಿಮೋಚನಮಾಹತ್ಯ ಪ್ರೇಷಯಾಮಾಸ ಮೃತ್ಯವೇ ॥18॥
ಶತ್ರುತಾಪಕನೇ! ಅನಂತರ ಭೀಮನು ಇನ್ನೊಂದು ಬಾಣದಿಂದ ದುರ್ವಿಮೋಚನನನ್ನು ಕೊಂದು ಯಮನಿಗೆ ಕಳುಹಿಸಿಕೊಟ್ಟನು.
ಸ ಹತಃ ಪ್ರಾಪತದ್ ಭೂಮೌ ಸ್ವರಥಾತ್ ರಥಿನಾಂ ವರಃ |
ಗಿರೇಸ್ತು ಕೂಟಜೋ ವೃಕ್ಷೋ ಮಾರುತೇನೇವ ಪಾತಿತಃ ॥19॥
ಪರ್ವತಶಿಖರದಲ್ಲಿ ಹುಟ್ಟಿದ ಮರವು ಗಾಳಿಯ ಹೊಡೆತಕ್ಕೆ ಸಿಲುಕಿ ನೆಲಕ್ಕೆ ಬಿದ್ದಹಾಗೆ ರಥಿಕರಲ್ಲಿಯೇ ಶ್ರೇಷ್ಠನಾದ ದುರ್ವಿಮೋಚನನೂ ಸತ್ತು ತನ್ನ ರಥದಿಂದ ನೆಲಕ್ಕೆ ಬಿದ್ದನು.
ದುಷ್ಪ್ರಧರ್ಷಂ ತತಶ್ಚೈವ ಸುಜಾತಂ ಚ ಸುತೌ ತವ |
ಏಕೈಕಂ ಹ್ಯವಧೀತ್ ಸಂಖ್ಯೇ ದ್ವಾಭ್ಯಾಂ ದ್ವಾಭ್ಯಾಂ ಮಹಾಬಲಃ ॥20॥
ಮಹಾಬಲನಾದ ಭೀಮನು ನಿನ್ನ ಮತ್ತಿಬ್ಬರ ಮಕ್ಕಳಾದ ದುಷ್ಪ್ರಧರ್ಷ ಮತ್ತು ಸುಜಾತನನ್ನು ಒಬ್ಬೊಬ್ಬರಿಗೆ ಎರಡೆರಡು ಬಾಣಗಳನ್ನು ಪ್ರಯೋಗಿಸಿ, ಯುದ್ಧದಲ್ಲಿ ಹೊಡೆದನು.
ತೌ ಶಿಲೀಮುಖವಿದ್ಧಾಂಗೌ ಪೇತತೂ ರಥಸತ್ತಮೌ ॥21॥
ಮಹಾರಥರಾದ ಅವರಿಬ್ಬರೂ ಬಾಣಗಳಿಂದ ತಮ್ಮ ಅವಯವಗಳನ್ನು ಕಳೆದುಕೊಂಡು ಕೆಳಗೆ ಬಿದ್ದರು.
ತತೋ ಯತಂತಮಪರಮಭಿವೀಕ್ಷ್ಯ ಸುತಂ ತವ |
ಭಲ್ಲೇನ ಯುಧಿ ವಿವ್ಯಾಧ ಭೀಮೋ ದುರ್ವಿಷಹಂ ರಣೇ ॥22॥
ನಂತರ ಭೀಮನು ಯುದ್ಧಪ್ರಯತ್ನದಲ್ಲಿ ತೊಡಗಿದ ನಿನ್ನ ಇನ್ನೊಬ್ಬ ಮಗ ದುರ್ವಿಷಹನನ್ನು ನೋಡಿ ಭಲ್ಲೆಯಿಂದ ಹೊಡೆದನು.
ಸ ಪಪಾತ ರಣೇ ರಾಜನ್ ಪಶ್ಯತಾಂ ಸರ್ವಧನ್ವಿನಾಮ್ ॥23॥
ರಾಜನ್! ರಣರಂಗದಲ್ಲಿ ಎಲ್ಲಾ ಧನುರ್ಧಾರಿಗಳು ನೋಡುತ್ತಿದ್ದಂತೆಯೇ ಆ ದುರ್ವಿಷಹನು ಕೆಳಕ್ಕೆ ಬಿದ್ದನು.
ದೃಷ್ಟ್ವಾ ತು ನಿಹತಾನ್ ಭ್ರಾತೄನ್ ಬಹೂನೇಕೇನ ಸಂಯುಗೇ |
ಅಮರ್ಷವಶಮಾಪನ್ನಃ ಶ್ರುತರ್ವಾ ಭೀಮಮಭ್ಯಯಾತ್ ॥24॥
ಯುದ್ಧದಲ್ಲಿ ಭೀಮಸೇನನು ಒಬ್ಬನೇ ಅನೇಕ ಮಂದಿ ತನ್ನ ಸಹೋದರರನ್ನು ಕೊಂದಿದ್ದನ್ನು ಸಹಿಸಲಾಗದೆ ಶ್ರುತರ್ವನು ಭೀಮನನ್ನು ಎದುರಿಸಿದನು.
ವಿಕ್ಷಿಪಂಸ್ತು ಮಹಚ್ಚಾಪಂ ಕಾರ್ತಸ್ವರವಿಭೂಷಿತಮ್ |
ವಿಸೃಜನ್ ಸಾಯಕಾಂಶ್ಚೈವ ವಿಷಾಗ್ನಿಪ್ರತಿಮಾನ್ ಬಹೂನ್ ॥25॥
ಬಂಗಾರದಿಂದ ಅಲಂಕೃತವಾದ ತನ್ನ ದೊಡ್ಡಬಿಲ್ಲನ್ನು ಎಳೆದು ಹಿಡಿದುಕೊಂಡು ವಿಷಸದೃಶವಾದ, ಬೆಂಕಿಯಂತಿರುವ ಅನೇಕ

ಬಾಣಗಳನ್ನು ಪ್ರಯೋಗಿಸಿದನು.
ಸ ತು ರಾಜನ್ ಧನುಶ್ಚಿತ್ವಾ ಪಾಂಡವಸ್ಯ ಮಹಾಮೃಧೇ |
ಅಥೈನಂ ಛಿನ್ನಧನ್ವಾನಂ ವಿಂಶತ್ಯಾ ಸಮವಾಕಿರತ್ ॥26॥
ರಾಜನೇ! ಆ ಮಹಾಯುದ್ಧದಲ್ಲಿ ಶ್ರುತರ್ವನು ಭೀಮನ ಧನುಸ್ಸನ್ನು ಮುರಿದನು. ಅನಂತರ ಬಿಲ್ಲು ಮುರಿದುಕೊಂಡ ಭೀಮನ ಮೇಲೆ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು.
ತತೋಽನ್ಯದ್ಧನುರಾದಾಯ ಭೀಮಸೇನೋ ಮಹಾರಥಃ |
ಅವಾಕಿರತ್ ತವ ಸುತಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥27॥
ಮಹಾರಥನಾದ ಭೀಮನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು, ಬಾಣಗಳ ಮಳೆಯನ್ನು ಸುರಿಸುತ್ತಾ ನಿಲ್ಲು! ನಿಲ್ಲು! ಎಂದು ಹೇಳಿದನು.
ಮಹದಾಸೀತ್ ತಯೋರ್ಯುದ್ಧಂ ಚಿತ್ರರೂಪಂ ಭಯಾನಕಮ್ |
ಯಾದೃಶಃ ಸಮರಃ ಪೂರ್ವಂ ಜಂಭವಾಸವಯೋರಭೂತ್ ॥28॥
ಶ್ರುತರ್ವ ಮತ್ತು ಭೀಮಸೇನರ ಮಧ್ಯ ಭಯವನ್ನು ಹುಟ್ಟಿಸುವ, ವಿಚಿತ್ರವಾದ ಯುದ್ಧವು ನಡೆಯಿತು. ಈ ದೃಶ್ಯ ಹಿಂದೆ ಜಂಭಾಸುರ ಮತ್ತು ಇಂದ್ರನ ನಡುವೆ ನಡೆದ ಯುದ್ಧದ ಹಾಗೆ ಇತ್ತು.
ತಯೋಸ್ತತ್ರ ಶರೈರ್ಘೋರೈರ್ಯಮದಂಡನಿಭೈಃ ಶಿತೈಃ |
ಸಮಾಚ್ಛನ್ನಾ ಧರಾ ಸರ್ವಾ ಖಂ ಚ ಸರ್ವಾ ದಿಶಸ್ತಥಾ ॥29॥
ರಣರಂಗದಲ್ಲಿ ಅವರಿಬ್ಬರು ಪ್ರಯೋಗಿಸಿದ ಹರಿತವಾದ, ಯಮನ ದಂಡಕ್ಕೆ ಸದೃಶವಾದ ಬಾಣಗಳಿಂದ ಭೂಮಿ, ಆಕಾಶ ಮತ್ತು ಎಲ್ಲಾ ದಿಕ್ಕುಗಳೂ ಮುಚ್ಚಿಹೋದವು.
ತತಃ ಶ್ರುತರ್ವಾ ಸಂಕ್ರುದ್ಧೋ ಧನುರಾಯಮ್ಯ ಸಾಯಕೈಃ |
ಭೀಮಸೇನಂ ರಣೇ ರಾಜನ್ ಬಾಹ್ವೋರುರಸಿ ಚಾಪರ್ಯತ್ ॥30॥
ರಾಜನೇ! ಅನಂತರ ಕೋಪಗೊಂಡ ಶ್ರುತರ್ವನು ಧನುಸ್ಸನ್ನು ಚೆನ್ನಾಗಿ ಬಗ್ಗಿಸಿ ಭೀಮನ ಬಾಹುಗಳು ಮತ್ತು ಎದೆಗೆ ಬಾಣಗಳನ್ನು ಬಿಟ್ಟನು.
ಸೋಽತಿವಿದ್ಧೋ ಮಹಾರಾಜ ತವ ಪುತ್ರೇಣ ಧನ್ವಿನಾ |
ಭೀಮಃ ಸಂಚುಕ್ಷುಭೇ ಕ್ರುದ್ಧಃ ಪರ್ವಣೀವ ಮಹೋದಧಿಃ ॥31॥
ಧನುರ್ಧಾರಿಯಾದ ನಿನ್ನ ಮಗನು ಬಿಟ್ಟ ಬಾಣಗಳಿಂದ ಬಹಳವಾಗಿ ಪೆಟ್ಟು ತಿಂದ ಭೀಮನು ಕೋಪಗೊಂಡು ಪರ್ವಕಾಲದಲ್ಲಿ ಉಕ್ಕೇರುವ ಮಹಾಸಮುದ್ರದ ಹಾಗೆ ಕ್ಷೋಭೆಗೊಳಗಾದನು.
ತತೋ ಭೀಮೋ ರುಷಾವಿಷ್ಟಃ ಪುತ್ರಸ್ಯ ತವ ಭಾರತ |
ಸಾರಥಿಂ ಚತುರೋಽಶ್ವಾಂಶ್ಚ ಶರೈರ್ನಿನ್ಯೇ ಯಮಕ್ಷಯಮ್ ॥32॥
ಭರತಕುಲೋದ್ಭವನೇ! ರೋಷದಿಂದ ಕೂಡಿದ ಭೀಮನು ನಿನ್ನ ಮಗನ ಸಾರಥಿಯನ್ನು ಮತ್ತು ನಾಲ್ಕು ಕುದುರೆಗಳನ್ನು ಬಾಣಗಳಿಂದ ಕೊಂದು ಯಮಪುರಿಗೆ ಅಟ್ಟಿದನು.
ವಿರಥಂ ತಂ ಸಮಾಲಕ್ಷ್ಯ ವಿಶಿಖೈರ್ಲೋಮವಾಪಿಭಿಃ |
ಅವಾಕಿರದಮೇಯಾತ್ಮಾ ದರ್ಶಯನ್ ಪಾಣಿಲಾಘವಮ್ ॥33॥
ರಥವನ್ನು ಕಳೆದುಕೊಂಡ ಶ್ರುತರ್ವನನ್ನು ನೋಡಿದ ಭೀಮನು ತನ್ನ ಹಸ್ತಚಾತುರ್ಯವನ್ನು ತೋರಿಸುತ್ತಾ, ರೋಮರಂಧ್ರಗಳನ್ನು ಭೇದಿಸುವಂಥ ಹರಿತವಾದ ಬಾಣಗಳ ಮಳೆಯನ್ನು ಸುರಿಸುತ್ತಾನೆ.
ಶ್ರುತರ್ವಾ ವಿರಥೋ ರಾಜನ್ ನಾದದೇ ಖಡ್ಗಚರ್ಮಣೀ ॥34॥
ರಾಜನೇ! ರಥವನ್ನು ಕಳೆದುಕೊಂಡ ಶ್ರುತರ್ವನು ಖಡ್ಗ ಮತ್ತು ಚರ್ಮ (ಗುರಾಣಿ)ವನ್ನು ತೆಗೆದುಕೊಂಡನು.
ಅಥಾಸ್ಯಾದದತಃ ಖಡ್ಗಂ ಶತಚಂದ್ರಂ ಚ ಭಾನುಮತ್ |
ಕ್ಷುರಪ್ರೇಣ ಶಿರಃ ಕಾಯಾತ್ ಪಾತಯಾಮಾಸ ಪಾಂಡವಃ ॥35॥
ನೂರು ಚಂದ್ರರ ಚಿಹ್ನೆಗಳುಳ್ಳ ಮತ್ತು ಒಳ್ಳೆಯ ಕಾಂತಿಯುಳ್ಳ ಖಡ್ಗವನ್ನು ಹಿಡಿದುಕೊಳ್ಳುತ್ತಿರುವಾಗಲೇ ಭೀಮನು ಕ್ಷುರಪ್ರದಿಂದ ಅವನ ತಲೆಯನ್ನು ಕಡಿದು ಕೆಳಗೆ ಬೀಳಿಸಿದನು.
ಛಿನ್ನೋತ್ತಮಾಂಗಸ್ಯ ತತಃ ಕ್ಷುರಪ್ರೇಣ ಮಹಾತ್ಮನಾ |
ಪಪಾತ ಕಾಯಃ ಸ್ವರಥಾದ್ ವಸುಧಾಮನುನಾದಯನ್ ॥36॥
ಮಹಾತ್ಮನಾದ ಭೀಮನು ಕ್ಷುರಪ್ರದಿಂದ ತಲೆಯನ್ನು ಕಡಿದಾಗ ಶ್ರುತರ್ವನ ದೇಹವು ಅವನ ರಥದಿಂದ ಜೋರಾಗಿ ಶಬ್ದವನ್ನು ಉಂಟುಮಾಡುತ್ತಾ ನೆಲಕ್ಕೆ ಬಿದ್ದಿತು.
ತಸ್ಮಿನ್ನಿಪತಿತೇ ವೀರೇ ತಾವಕಾ ಭಯಮೋಹಿತಾಃ |
ಅಭ್ಯದ್ರವಂತ ಸಂಗ್ರಾಮೇ ಭೀಮಸೇನಂ ಯುಯುತ್ಸವಃ ॥37॥
ಶ್ರುತರ್ವನು ಬಿದ್ದಾಗ ನಿನ್ನ ಕಡೆಯವರು ಭಯದಿಂದಾಗಿ ಮೂಢರಾಗಿ, ಭೀಮನೊಡನೆ ಯುದ್ಧಮಾಡುವ ಇಚ್ಛೆಯಿಂದ ರಣರಂಗದಲ್ಲಿ ಭೀಮನೆಡೆಗೆ ಧಾವಿಸಿ ಬಂದರು.
ತಾನಾಪತತ ಏವಾಶು ಹತಶೇಷಾನ್ ಮಹಾಬಲಾನ್ |
ದಂಸಿತಃ ಪ್ರತಿಜಗ್ರಾಹ ಭೀಮಸೇನಃ ಪ್ರತಾಪವಾನ್ ॥38॥
ತನ್ನ ಮೇಲೆ ಬೇಗನೇ ಆಕ್ರಮಣಮಾಡುತ್ತಿದ್ದ ಅಳಿದುಳಿದ ಮಹಾಬಲಶಾಲಿಗಳಾದ ಆ ಯೋಧರನ್ನು ಕವಚಧಾರಿಯಾದ,

ಮಹಾಪ್ರತಾಪಿಯಾದ ಭೀಮನು ತಡೆಹಿಡಿದನು.
ತೇ ತು ತಂ ವೈ ಸಮಾಸಾದ್ಯ ಪರಿವವ್ರುಃ ಸಮಂತತಃ ॥39॥
ಅವರೆಲ್ಲರೂ ಭೀಮನ ಬಳಿಗೆ ಬಂದು ಸುತ್ತಲೂ ಸುತ್ತುವರಿದರು.
ತತಸ್ತು ಸಂವೃತೋ ಭೀಮಃ ತಾವಕೈರ್ನಿಶಿತೈಃ ಶರೈಃ |
ಪೀಡಯಾಮಾಸ ತಾನ್ ಸರ್ವಾನ್ ಸಹಸ್ರಾಕ್ಷ ಇವಾಸುರಾನ್ ॥40॥
ನಿನ್ನ ಪಕ್ಷದವರಿಂದ ಸುತ್ತುವರಿಯಲ್ಪಟ್ಟ ಭೀಮನು, ದೇವೇಂದ್ರನು ಅಸುರರನ್ನು ಪೀಡಿಸುವಂತೆ ಹರಿತವಾದ ಬಾಣಗಳಿಂದ ಅವರೆಲ್ಲರನ್ನೂ ಪೀಡಿಸಿದನು.
ತತಃ ಪಂಚಶತಾನ್ ಹತ್ವಾ ಸ್ವವರೂಥಾನ್ ಮಹಾರಥಾನ್ |
ಜಘಾನ ಕುಂಜರಾನೀಕಂ ಪುನಃ ಸಪ್ತಶತಂ ಯುಧಿ ॥41॥
ಅನಂತರ ಭೀಮನು ಆವರಣಸಹಿತರಾದ ಐದುನೂರು ಮಹಾರಥರನ್ನು ಕೊಂದನು. ಪುನಃ ಯುದ್ಧದಲ್ಲಿ ಏಳುನೂರು ಗಜಪಡೆಯನ್ನೂ ಸಾಯಿಸಿದನು.
ಹತ್ವಾ ದಶ ಸಹಸ್ರಾಣಿ ಪತ್ತೀನಾಂ ಪರಮೇಷುಭಿಃ |
ವಾಜಿನಾಂ ಚ ಶತಾನ್ಯಷ್ಟೌ ಪಾಂಡವಃ ಸ ವಿರಾಜತೇ ॥42॥
ಉತ್ತಮವಾದ ಬಾಣಗಳಿಂದ ಹತ್ತು ಸಾವಿರ ಪದಾತಿಗಳನ್ನು ವಧಿಸಿದನು. ಎಂಟುನೂರು ಅಶ್ವಾರೋಹಿಗಳನ್ನು ಕೊಂದನು. ಹೀಗೆ ಭೀಮನು ವಿರಾಜಮಾನನಾಗಿದ್ದನು.
ಭೀಮಸೇನಸ್ತು ಕೌಂತೇಯೋ ಹತ್ವಾ ಯುದ್ಧೇ ಸುತಾಂಸ್ತವ |
ಮೇನೇ ಕೃತಾರ್ಥಮಾತ್ಮಾನಂ ಸಫಲಂ ಜನ್ಮ ಚ ಪ್ರಭೋ ॥43॥
ಪ್ರಭುವೇ! ಕುಂತೀಪುತ್ರನಾದ ಭೀಮನು ಯುದ್ಧದಲ್ಲಿ ನಿನ್ನ ಮಕ್ಕಳನ್ನು ಕೊಂದು ತನ್ನನ್ನು ಕೃತಕೃತ್ಯನನ್ನಾಗಿಯೂ, ತನ್ನ ಜನ್ಮವನ್ನು ಸಾರ್ಥಕವನ್ನಾಗಿಯೂ ತಿಳಿದುಕೊಂಡನು.
ತಂ ತಥಾ ಯುಧ್ಯಮಾನಂ ಚ ವಿನಿಘ್ನಂತಂ ಚ ತಾವಕಾನ್ |
ಈಕ್ಷಿತುಂ ನೋತ್ಸಹಂತೇ ಸ್ಮ ತವ ಸೈನ್ಯಾ ನರಾಧಿಪ ॥44॥
ಜನನಾಯಕನೇ! ಹೀಗೆ ಯುದ್ಧಮಾಡುತ್ತಾ ನಿನ್ನ ಕಡೆಯವರನ್ನು ಸಾಯಿಸುತ್ತಿರುವ ಭೀಮನನ್ನು ನೋಡಲೂ ನಿನ್ನ ಸೈನಿಕರಿಗೆ ಸಾಧ್ಯವಾಗಲಿಲ್ಲ.
ವಿದ್ರಾವ್ಯ ತು ಕುರೂನ್ ಸರ್ವಾನ್ ತಾಂಶ್ಚ ಹತ್ವಾ ಪದಾನುಗಾನ್ |
ದೋರ್ಭ್ಯಾಂ ಶಬ್ದಂ ತತಶ್ಚಕ್ರೇ ತ್ರಾಸಯಾನೋ ಹಯದ್ವಿಪಾನ್ ॥45॥
ಕುರುಯೋಧರನ್ನೆಲ್ಲಾ ಯುದ್ಧದಿಂದ ಓಡಿಸಿ, ಪದಾತಿಗಳನ್ನೆಲ್ಲಾ ಕೊಂದು, ಆನೆ ಮತ್ತು ಕುದುರೆಗಳಿಗೆ ಭಯವನ್ನು ಹುಟ್ಟಿಸುವಂಥ ಶಬ್ದವನ್ನು ತನ್ನ ಕೈಗಳಿಂದ ಮಾಡಿದನು.
ಹತಭೂಯಿಷ್ಠಯೋಧಾ ತು ತವ ಸೇನಾ ವಿಶಾಂಪತೇ |
ಕಿಂಚಿಚ್ಛೇಷಾ ಮಹಾರಾಜ ಕೃಪಣಾ ಸಮಪದ್ಯತ ॥46॥
ರಾಜನೇ! ನಿನ್ನ ಸೈನ್ಯದ ಹೆಚ್ಚಿನ ಯೋಧರು ಸತ್ತುಹೋದರು. ಮಹಾರಾಜ! ಉಳಿದ ಕೆಲವೇ ಜನರೂ ದಯನೀಯ ಸ್ಥಿತಿಯನ್ನು ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಗಜಯುದ್ಧಂ ನಾಮ ಷಟ್‌ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಕೃಷ್ಣಾರ್ಜುನರ ಸಂವಾದ, ಸಂಕುಲಯುದ್ಧ, ಭೀಮನಿಂದ
ಧೃತರಾಷ್ಟ್ರಪುತ್ರ ಸುದರ್ಶನನ ವಧೆ.
ಸಂಜಯಃ
ದುರ್ಯೋಧನೋ ಮಹಾರಾಜ ಸುದರ್ಶಶ್ಚಾಪಿ ತೇ ಸುತಃ |
ಹತಶೇಷೌ ತದಾ ಸಂಖ್ಯೇ ವಾಜಿಮಧ್ಯೇ ವ್ಯವಸ್ಥಿತೌ ॥1॥
ಸಂಜಯ ಮಹಾರಾಜನೇ! ದುರ್ಯೋಧನ ಮತ್ತು ನಿನ್ನ ಇನ್ನೊಬ್ಬ ಮಗ ಸುದರ್ಶನರು ಯುದ್ಧದಲ್ಲಿ ಆಗ ಉಳಿದುಕೊಂಡಿದ್ದರು. ಅವರು ಅಶ್ವಗಳ ಮಧ್ಯೆ ಇದ್ದರು.
ತತೋ ದುರ್ಯೋಧನಂ ದೃಷ್ಟ್ವಾ ವಾಜಿಮಧ್ಯೇ ವ್ಯವಸ್ಥಿತಮ್ |
ಉವಾಚ ದೇವಕೀಪುತ್ರಃ ಕುಂತೀಪುತ್ರಂ ಧನಂಜಯಮ್ ॥2॥
ಅನಂತರ ಕುದುರೆಗಳಲ್ಲಿ ಇದ್ದ ದುರ್ಯೋಧನನನ್ನು ನೋಡಿದ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳಿದನು.
ಶ್ರೀಭಗವಾನ್
ಶತ್ರವೋ ಹತಭೂಯಿಷ್ಠಾಃ ಜ್ಞಾತಯಃ ಪರಿಪಾಲಿತಾಃ |
ಗೃಹೀತ್ವಾ ಸಂಜಯಂ ಚಾಸೌ ನಿವೃತ್ತಃ ಶಿನಿಪುಂಗವಃ ॥3॥
ಶ್ರೀಭಗವಾನ್ ಹೆಚ್ಚಿನ ಶತ್ರುಗಳು ಸತ್ತುಹೋದರು. ನಮ್ಮ ಸಂಬಂಧಿಗಳನ್ನು ರಕ್ಷಿಸಲಾಗಿದೆ. ಸಾತ್ಯಕಿಯು ಸಂಜಯನನ್ನು ಬಂಧಿಸಿ

ಎಳೆದೊಯ್ದಿದ್ದಾನೆ.
ಪರಿಶ್ರಾಂತಶ್ಚ ನಕುಲಃ ಸಹದೇವಶ್ಚ ಭಾರತ |
ಯೋಧಯಿತ್ವಾ ರಣೇ ಪಾಪಾನ್ ಧಾರ್ತರಾಷ್ಟ್ರಪದಾನುಗಾನ್ ॥4॥
ಭರತಕುಲೋದ್ಭವನೇ! ನಕುಲ ಮತ್ತು ಸಹದೇವನು ದುರ್ಯೋಧನನ ಅನುಯಾಯಿಗಳಾದ ಪಾಪಿಗಳೊಡನೆ ಯುದ್ಧ ಮಾಡಿ, ಬಹಳವಾಗಿ ಆಯಾಸಗೊಂಡಿದ್ದಾರೆ.
ಸುಯೋಧನಂ ಪರಿತ್ಯಜ್ಯ ತ್ರಯ ಏತೇ ವ್ಯವಸ್ಥಿತಾಃ |
ಕೃಪಶ್ಚ ಕೃತವರ್ಮಾ ಚ ದ್ರೌಣಿಶ್ಚೈವ ಮಹಾರಥಃ ॥5॥
ದುರ್ಯೋಧನನನ್ನು ಬಿಟ್ಟು ಕೃಪ, ಕೃತವರ್ಮ ಮತ್ತು ಅಶ್ವತ್ಥಾಮ ಈ ಮೂವರು ಇದ್ದಾರೆ.
ಅಸೌ ತಿಷ್ಠತಿ ಪಾಂಚಾಲ್ಯಃ ಶ್ರಿಯಾ ಪರಮಯಾ ಯುತಃ |
ದುರ್ಯೋಧನಬಲಂ ಹತ್ವಾ ಸಹಸರ್ವೈಃ ಪ್ರಭದ್ರಕೈಃ ॥6॥
ಈ ಪಾಂಚಾಲರಾಜ ಧೃಷ್ಟದ್ಯುಮ್ನನು ಎಲ್ಲಾ ಪ್ರಭದ್ರಕರೊಡಗೂಡಿ ದುರ್ಯೋಧನನ ಸೈನ್ಯವನ್ನು ನಾಶಮಾಡಿದ್ದಾನೆ. ಇದರಿಂದಾಗಿ ವಿಶಿಷ್ಟವಾದ ಕಾಂತಿಯಿಂದ ಯುಕ್ತನಾಗಿದ್ದಾನೆ.
ಅಸೌ ದುರ್ಯೋಧನಃ ಪಾರ್ಥ ವಾಜಿಮಧ್ಯೇ ವ್ಯವಸ್ಥಿತಃ |
ಛತ್ರೇಣ ಧ್ರಿಯಮಾಣೇನ ಪ್ರೇಕ್ಷಮಾಣೋ ಮುಹುರ್ಮುಹುಃ ॥7॥
ಪಾರ್ಥನೇ! ಈ ದುರ್ಯೋಧನನು ಅಶ್ವಗಳ ಮಧ್ಯದಲ್ಲಿ ನಿಂತಿದ್ದಾನೆ. ಅಲ್ಲಿಯೂ ಅವನಿಗೆ ರಾಜಮರ್ಯಾದೆಯ ಛತ್ರವನ್ನು ಹಿಡಿದಿದ್ದಾರೆ. ಅವನು ಪುನಃ ಪುನಃ ಸುತ್ತ ಮುತ್ತ ನೋಡುತ್ತಿದ್ದಾನೆ.
ಪ್ರತಿವ್ಯೂಹ್ಯ ಬಲಂ ಸರ್ವಂ ರಣಮಧ್ಯೇ ವ್ಯವಸ್ಥಿತಃ |
ಏನಂ ಹತ್ವಾ ಶಿತೈರ್ಬಾಣೈಃ ಕೃತಕೃತ್ಯೋ ಭವಿಷ್ಯಸಿ ॥8॥
ರಣರಂಗದ ಮಧ್ಯದಲ್ಲಿ ತನ್ನೆಲ್ಲಾ ಸೈನ್ಯವನ್ನು ವ್ಯೂಹದಲ್ಲಿ ನಿಲ್ಲಿಸಿ, ತಾನು ನಿಂತುಕೊಂಡಿದ್ದಾನೆ. ಅವನನ್ನು ಹರಿತವಾದ ಬಾಣಗಳಿಂದ ಕೊಂದು ನೀನು ಕೃತಕೃತ್ಯನಾಗುವಿ.
ಗಜಾನೀಕಂ ಹತಂ ದೃಷ್ಟ್ವಾ ತ್ವಾಂ ಚ ಪ್ರಾಪ್ತಮರಿಂದಮಮ್ |
ಯಾವನ್ನಾಭ್ಯತಿವರ್ತೇತ ತಾವಜ್ಜಹಿ ಸುಯೋಧನಮ್ ॥9॥
ಗಜಪಡೆಯು ನಾಶವಾಗಿದೆ. ನೀನು ಅವನನ್ನು ಸಮೀಪಿಸುತ್ತಿದ್ದಿ. ಇದನ್ನು ನೋಡಿ ಅವನು ಮತ್ತೆ ಯುದ್ಧವನ್ನು ಮೀರಿ ಪಲಾಯನ ಮಾಡುವುದಕ್ಕಿಂತ ಮೊದಲೇ ಆ ದುರ್ಯೋಧನನನ್ನು ಸಾಯಿಸು.
ಯಾತು ಕಶ್ಚಿತ್ತು ಪಾಂಚಾಲ್ಯಂ ಕ್ಷಿಪ್ರಮಾಗಮ್ಯತಾಮಿತಿ |
ಪರಿಶ್ರಾಂತಬಲಸ್ತಾತ ನೈಷ ಮುಚ್ಯೇತ ಕಿಲ್ಬಿಷೀ ॥10॥
ಯಾರಾದರೊಬ್ಬರನ್ನು ಧೃಷ್ಟದ್ಯುಮ್ನನ ಬಳಿಗೆ ಹೇಳಿ ಕಳುಹಿಸು `ನೀನು ಬೇಗನೇ ಇಲ್ಲಿಗೆ ಬಾ' ಎಂದು. ಪ್ರಿಯನೇ! ಈ ದುರ್ಯೋಧನನ ಸೈನ್ಯವು ಬಹಳ ಆಯಾಸಗೊಂಡಿದೆ. ಆದ್ದರಿಂದ ಪಾಪಿಯಾದ ಅವನು ಬದುಕುಳಿಯಲು ಸಾಧ್ಯವಿಲ್ಲ.
ತವ ಹತ್ವಾ ಬಲಂ ಸರ್ವಂ ಸಂಗ್ರಾಮೇ ಧೃತರಾಷ್ಟ್ರಜಃ |
ಜಿತಾನ್ ಪಾಂಡುಸುತಾನ್ ಮತ್ವಾ ರೂಪಂ ಧಾರಯತೇ ಮಹತ್ ॥
ಈ ದುರ್ಯೋಧನನು ಯುದ್ಧದಲ್ಲಿ ನಿನ್ನ ಎಲ್ಲಾ ಸೈನ್ಯವನ್ನು ನಾಶಮಾಡಿ ಪಾಂಡವರನ್ನು ಗೆಲ್ಲುತ್ತೇನೆ ಎಂದು ತಿಳಿದುಕೊಂಡು ಉಗ್ರರೂಪವನ್ನು ತಾಳಿದ್ದಾನೆ.
ನಿಹತಂ ಸ್ವಬಲಂ ದೃಷ್ಟ್ವಾ ಪೀಡಿತಂ ಚಾಪಿ ಪಾಂಡವೈಃ |
ಧ್ರುವಮೇಷ್ಯತಿ ಸಂಗ್ರಾಮೇ ವಧಾಯೈವಾತ್ಮನೋ ನೃಪಃ ॥12॥
ಅಷ್ಟೇ ಅಲ್ಲದೆ ಯುದ್ಧದಲ್ಲಿ ಪಾಂಡವರು ತನ್ನ ಸೈನ್ಯವನ್ನು ಕೊಂದಿರುವುದನ್ನೂ, ಉಳಿದ ಸೈನ್ಯವು ಪೆಟ್ಟುತಿಂದಿರುವುದನ್ನೂ ಅವನು ನೋಡಿದ್ದಾನೆ. ಆದ್ದರಿಂದ ಖಂಡಿತವಾಗಿ ಮತ್ತೆ ಯುದ್ಧಕ್ಕೆ ಬರುತ್ತಾನೆ. ಆದರೆ ಅದು ಅವನ ಸಾವಿಗೇ ಕಾರಣವಾಗುವುದು.
ಸಂಜಯಃ
ಏವಮುಕ್ತಃ ಫಲ್ಗುನಸ್ತು ಕಷ್ಣಂ ವಚನಮಬ್ರವೀತ್ ॥13॥
ಸಂಜಯ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳಿದಾಗ ಕೇಳಿಸಿಕೊಂಡ ಅರ್ಜುನನು ಹೀಗೆ ಹೇಳುತ್ತಾನೆ.
ಅರ್ಜುನಃ
ಧೃತರಾಷ್ಟ್ರಸುತಾಃ ಸರ್ವೇ ಹತಾ ಭೀಮೇನ ಮಾನದ ॥14॥
ಅರ್ಜುನ ಪೂಜ್ಯನೇ! ಭೀಮನು ಧೃತರಾಷ್ಟ್ರನ ಎಲ್ಲಾ ಮಕ್ಕಳನ್ನೂ ಕೊಂದಿದ್ದಾನೆ.
ಯಾವೇತಾವಸ್ಥಿತೌ ಕೃಷ್ಣ ತಾವದ್ಯ ನ ಭವಿಷ್ಯತಃ |
ಹತೋ ಭೀಷ್ಮೋ ಹತೋ ದ್ರೋಣಃ ಕರ್ಣೋ ವೈಕರ್ತನೋ ಹತಃ ॥
ಮದ್ರರಾಜೋ ಹತಃ ಶಲ್ಯೋ ಹತಃ ಕೃಷ್ಣಜಯದ್ರಥಃ |
ಹಯಾಃ ಪಂಚಶತಾಃ ಶಿಷ್ಟಾಃ ಶಕುನೇಃ ಸೌಬಲಸ್ಯ ಚ ॥16॥
ರಥಾನಾಂ ಚ ಶತೇ ಶಿಷ್ಟೇ ದ್ವೇ ಏವ ತು ಜನಾರ್ದನ |
ದಂತಿನಾಂ ಚ ಶತಂ ಸಾಗ್ರಂ ತ್ರಿಸಹಸ್ರಂ ಚ ಪತ್ತಯಃ ॥17॥
ಕೃಷ್ಣನೇ! ಇವರಿಬ್ಬರು ಈಗ ಉಳಿದಿದ್ದಾರೆ. ಅವರೂ ಇವತ್ತು ಇಲ್ಲವಾಗುತ್ತಾರೆ. ಭೀಷ್ಮನು ಸತ್ತಿದ್ದಾನೆ. ದ್ರೋಣನೂ ಸತ್ತಿದ್ದಾನೆ. ಕರ್ಣನೂ ಮಡಿದಿದ್ದಾನೆ. ಮದ್ರರಾಜ ಶಲ್ಯನು ಸತ್ತಿದ್ದಾನೆ. ಶ್ರೀಕೃಷ್ಣನೇ! ಜಯದ್ರಥನೂ ಸತ್ತಿದ್ದಾನೆ. ಈಗ ಶಕುನಿಯ ಬಳಿ ಐನೂರು

ಅಶ್ವಾರೋಹಿಗಳು ಉಳಿದುಕೊಂಡಿದ್ದಾರೆ. ಜನಾರ್ದನನೇ! ಇನ್ನೂರು ರಥಗಳು ಉಳಿದುಕೊಂಡಿವೆ, ನೂರಕ್ಕಿಂತ ಸ್ವಲ್ಪ ಹೆಚ್ಚು ಆನೆಗಳು ಇವೆ. ಮೂರುಸಾವಿರ ಪದಾತಿಗಳು ಇದ್ದಾರೆ.
ಅಶ್ವತ್ಥಾಮಾ ಕೃಪಶ್ಚೈವ ತ್ರಿಗರ್ತಾಧಿಪತಿಸ್ತಥಾ |
ಉಲೂಕಃ ಶಕುನಿಶ್ಚೈವ ಕೃತವರ್ಮಾ ಚ ಸಾತ್ವತಃ ॥18॥
ಅಶ್ವತ್ಥಾಮ, ಕೃಪ ಮತ್ತು ತ್ರಿಗರ್ತಾಧಿಪತಿಯಾದ ಸುಶರ್ಮ, ಉಲೂಕ, ಶಕುನಿ, ಸಾತ್ವತನಾದ ಕೃತವರ್ಮ ಇವರಿಷ್ಟು ಮಂದಿ ಉಳಿದಿದ್ದಾರೆ.
ಏತದ್ ಬಲಮಭೂಚ್ಚೇಷಂ ಧಾರ್ತರಾಷ್ಟ್ರಸ್ಯ ಮಾಧವ |
ಮೋಕ್ಷೋ ನ ನೂನಂ ಕಾಲಾದ್ಧಿ ವಿದ್ಯತೇ ಭುವಿ ಕಸ್ಯಚಿತ್ ॥19॥
ಮಾಧವನೇ! ದುರ್ಯೋಧನನ ಬಳಿ ಈಗ ಇಷ್ಟು ಸೈನ್ಯ ಉಳಿದಿದೆ. ಭೂಮಿಯಲ್ಲಿ ಯಾರೂ ಕೂಡ ಕಾಲದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.
ತಥಾ ವಿನಿಹತೇ ಸೈನ್ಯೇ ಪಶ್ಯ ದುರ್ಯೋಧನಂ ಸ್ಥಿತಮ್ |
ಅದ್ಯಾಹ್ನಾ ಹಿ ಮಹಾರಾಜೋ ಹತಾಮಿತ್ರೋ ಭವಿಷ್ಯತಿ ॥20॥
ಹೀಗೆ ತನ್ನ ಸೈನ್ಯವು ನಾಶವಾಗಿರುವಾಗಲೂ ಇರುವ ದುರ್ಯೋಧನನನ್ನು ನೋಡು. ಈ ದಿನ ನಮ್ಮ ರಾಜನಾದ ಧರ್ಮರಾಜನು ತನ್ನೆಲ್ಲಾ ಶತ್ರುಗಳನ್ನು ಕಳೆದುಕೊಳ್ಳುವನು.
ನ ಹಿ ಮೇ ಮೋಕ್ಷ್ಯತೇ ಕಶ್ಚಿತ್ ಪರೇಷಾಮಿತಿ ನಿಶ್ಚಯಃ |
ಯೇ ತ್ವದ್ಯ ಸಮರಂ ಕೃಷ್ಣ ನ ಹಾಸ್ಯಂತಿ ರಣೋತ್ಕಟಾಃ ॥21॥
ಕೃಷ್ಣನೇ! ಯಾವ ಶತ್ರುಯೋಧರು ಯುದ್ಧದಲ್ಲಿ ಪರಮಾಸಕ್ತರಾಗಿ ಯುದ್ಧವನ್ನು ಬಿಟ್ಟು ಹೋಗುವುದಿಲ್ಲವೋ, ಅವರು ಯಾರೂ ಕೂಡ ನನ್ನ ಕೈಯಿಂದ ತಪ್ಪಿಸಿಕೊಳ್ಳಲಾರರು ಎಂಬುದು ನನ್ನ ನಿಶ್ಚಯ.
ತಾನ್ ವೈ ಸರ್ವಾನ್ ಹನಿಷ್ಯಾಮಿ ಯದ್ಯಪಿ ಸ್ಯುರಮಾನುಷಾಃ ॥22॥
ಯದ್ಯಪಿ ಅವರೆಲ್ಲರೂ ಮನುಷ್ಯರಿಗೂ ಮೀರಿದ ಪರಾಕ್ರಮಿಗಳು. ಆದರೂ ಅವರನ್ನೆಲ್ಲರನ್ನೂ ಕೊಲ್ಲುವೆನು.
ಅದ್ಯ ಯುದ್ಧೇ ಸಮುನ್ನದ್ಧಂ ದೀರ್ಘಂ ರಾಜ್ಞಃ ಪ್ರಜಾಗರಮ್ |
ಅಪನೇಷ್ಯಾಮಿ ಗಾಂಧಾರಂ ಪಾತಯಿತ್ವಾ ಶಿತೈಃ ಶರೈಃ ॥23॥
ಧರ್ಮರಾಜನಿಗೆ ದೀರ್ಘಕಾಲದಿಂದ ನಿದ್ದೆ ಕೆಡಿಸಿದ, ಇಂದು ಯುದ್ಧದಲ್ಲಿ ಬಹಳವಾಗಿ ಮೆರೆಯುತ್ತಿರುವ ಶಕುನಿಯನ್ನು ಹರಿತವಾದ ಬಾಣಗಳಿಂದ ಬೀಳಿಸಿ ವಧೆ ಮಾಡುವೆನು.
ನಿಕೃತ್ಯಾ ವೈ ದುರಾಚಾರೋ ಯಾನಿ ರತ್ನಾನಿ ಸೌಬಲಃ |
ಸಭಾಯಾಮಾಹರದ್ ದ್ಯೂತೇ ಪುನಸ್ತಾನ್ಯಾಹರಾಮ್ಯಹಮ್ ॥24॥
ಯಾವ ದುರಾಚಾರಿಯಾದ ಶಕುನಿಯು ದ್ಯೂತಸಭೆಯಲ್ಲಿ ಕಪಟದಿಂದ ನಮ್ಮ ಯಾವ ರತ್ನಾಭರಣಗಳನ್ನು ಅಪಹರಿಸಿದ್ದಾನೋ ಅವೆಲ್ಲವನ್ನೂ ಪುನಃ ಕಸಿದುಕೊಳ್ಳುವೆನು.
ಅದ್ಯ ವೇತ್ಸ್ಯಂತಿ ಮಚ್ಛಕ್ತಿಂ ಸರ್ವಾ ನಾಗಪುರಸ್ತ್ರಿಯಃ |
ಶ್ರುತ್ವಾ ಪತೀಂಶ್ಚ ಪುತ್ರಾಂಶ್ಚ ಪಾಂಡವೈರ್ನಿಹತಾನ್ ಯುಧಿ ॥25॥
ಇಂದು ಯುದ್ಧದಲ್ಲಿ ತಮ್ಮ ಪತಿಗಳು ಮಕ್ಕಳು ಪಾಂಡವರಿಂದ ಸತ್ತಿರುವುದನ್ನು ಕೇಳಿ ತಿಳಿದು ಹಸ್ತಿನಾವತಿಯ ಎಲ್ಲಾ ಸ್ತ್ರೀಯರು ನಮ್ಮ ಶಕ್ತಿ- ಸಾಮರ್ಥ್ಯವೇನೆಂಬುದನ್ನು ತಿಳಿಯುವರು.
ಸಮಾಪ್ತಮದ್ಯ ವೈ ಕೃಷ್ಣಃ ಸರ್ವಂ ಕರ್ಮ ಭವಿಷ್ಯತಿ ॥26॥
ಕೃಷ್ಣನೇ! ಇವತ್ತು ನಮ್ಮೆಲ್ಲ ಕಾರ್ಯಗಳೂ ಕೊನೆಗೊಳ್ಳುವವು.
ಅದ್ಯ ದುರ್ಯೋಧನೋ ದೀಪ್ತಾಂ ಶ್ರಿಯಂ ಪ್ರಾಣಾನಪಿ ತ್ಯಜೇತ್ |
ನಾಪಯಾತಿ ಭಯಾತ್ ಕೃಷ್ಣ ಸಂಗ್ರಾಮಾದ್ ಯದಿ ಚೇನ್ಮಮ ॥27॥
ಇವತ್ತು ದುರ್ಯೋಧನನು ತನ್ನ ಪ್ರಕಾಶಮಾನವಾದ ಕಾಂತಿಯನ್ನೂ, ಪ್ರಾಣವನ್ನೂ ಬಿಡುವನು. ಒಂದು ವೇಳೆ ನನ್ನ ಭಯದಿಂದಾಗಿ ದುರ್ಯೋಧನನು ಯುದ್ಧದಿಂದ ಪಲಾಯನ ಮಾಡದಿದ್ದರೆ, ಶ್ರೀಕೃಷ್ಣನೇ! ತುಂಬಾ ಬಾಲಿಶವಾಗಿ ವ್ಯವಹರಿಸುವ ದುರ್ಯೋಧನನು ಸತ್ತುಹೋದ ಎಂಬುದಾಗಿ ತಿಳಿ.
ನಿಹತಂ ವಿದ್ಧಿ ವಾರ್ಷ್ಣೇಯ ಧಾರ್ತರಾಷ್ಟ್ರಂ ಸುಬಾಲಿಶಮ್ ॥28॥
ಮಮ ಹ್ಯೇತದಪರ್ಯಾಪ್ತಂ ವಾಜಿಬೃಂದಮರಿಂದಮ |
ಸೋಢುಂ ಜ್ಯಾತಳನಿರ್ಘೋಷಾನ್ ಯಾಹಿ ಯಾವನ್ನಿಹನ್ಮ್ಯಹಮ್ ॥
ಶತ್ರುನಾಶಕನೇ! ಈ ಅಶ್ವಸಮೂಹವು ನನ್ನ ಬಿಲ್ಲಿನ ಹಗ್ಗದ ಶಬ್ದವನ್ನು ಸಹಿಸಲು ಶಕ್ತವಾಗುವುದಿಲ್ಲ. ನಾನು ದುರ್ಯೋಧನನನ್ನು ಕೊಲ್ಲುವ ಹಾಗೆ ರಥವನ್ನು ತೆಗೆದುಕೊಂಡು ಹೋಗು.
ಸಂಜಯಃ
ಏವಮುಕ್ತಸ್ತು ದಾಶಾರ್ಹಃ ಪಾಂಡವೇನ ಯಶಸ್ವಿನಾ |
ಅಚೋದಯದ್ ಹಯಾನ್ ರಾಜನ್ ದುರ್ಯೋಧನಬಲಂ ಪ್ರತಿ ॥
ಸಂಜಯ ಯಶೋವಂತನಾದ ಅರ್ಜುನನು ಶ್ರೀಕೃಷ್ಣನಿಗೆ ಹೀಗೆ ಹೇಳಿದಾಗ ಶ್ರೀಕೃಷ್ಣನು ದುರ್ಯೋಧನನ ಸೈನ್ಯದ ಕಡೆಗೆ ಹೋಗುವಂತೆ ತನ್ನ ರಥದ ಕುದುರೆಗಳನ್ನು ಪ್ರಚೋದಿಸಿದನು.
ತದನೀಕಮಭಿಪ್ರೇಕ್ಷ್ಯ ತ್ರಯಃ ಸಜ್ಜಾ ಮಹಾರಥಾಃ |

ಭೀಮಸೇನೋಽರ್ಜುನಶ್ಚೈವ ಸಹದೇವಶ್ಚ ಮಾರಿಷ ॥31॥
ರಾಜನ್! ಕೌರವರ ಆ ಸೈನ್ಯವನ್ನು ನೋಡಿ ಮಹಾರಥರಾದ ಭೀಮಸೇನ, ಅರ್ಜುನ ಮತ್ತು ಸಹದೇವ ಇವರು ಯುದ್ಧಕ್ಕೆ ಸನ್ನದ್ಧರಾದರು.
ಪ್ರಯಯುಃ ಸಿಂಹನಾದೇನ ದುರ್ಯೋಧನಜಿಘಾಂಸಯಾ ॥32॥
ದುರ್ಯೋಧನನನ್ನು ಸಾಯಿಸುವ ಇಚ್ಛೆಯಿಂದ ಸಿಂಹಗರ್ಜನೆಯನ್ನು ಮಾಡುತ್ತಾ ಹೋದರು.
ತಾನ್ ಸಮೀಕ್ಷ್ಯ ತತಃ ಸರ್ವಾನ್ ಜವೇನೋದ್ಯತಕಾರ್ಮುಕಾನ್ |
ಸೌಬಲೋಽಭ್ಯದ್ರವದ್ ಯುದ್ಧೇ ಪಾಂಡವಾನಾತತಾಯಿನಃ ॥33॥
ಅನಂತರ ವೇಗವಾಗಿ ಬಿಲ್ಲನ್ನು ಹಿಡಿದುಕೊಂಡು ಬರುತ್ತಿರುವ ಭೀಮಸೇನಾದಿಗಳನ್ನು ನೋಡಿದ ಶಕುನಿಯು ಯುದ್ಧದಲ್ಲಿ ಆತತಾಯಿಗಳಾದ ಪಾಂಡವರನ್ನು ಎದುರಿಸಿದನು.
ಸುದರ್ಶನಸ್ತವ ಸುತೋ ಭೀಮಸೇನಂ ಸಮಭ್ಯಯಾತ್ |
ಸುಶರ್ಮಾ ಶಕುನಿಶ್ಚೈವ ಯುಯುಧಾತೇ ಕಿರೀಟಿನಾ ॥34॥
ನಿನ್ನ ಮಗನಾದ ಸುದರ್ಶನನು ಭೀಮಸೇನನನ್ನು ಎದುರಿಸಿದನು. ಸುಶರ್ಮ ಮತ್ತು ಶಕುನಿಯು ಅರ್ಜುನನನ್ನು ಎದುರಿಸಿದರು.
ಸಹದೇವಂ ತವ ಸುತೋ ಹಯಪೃಷ್ಠಗತೋಽಭ್ಯಯಾತ್ ॥35॥
ನಿನ್ನ ಮಗನಾದ ದುರ್ಯೋಧನನು ಕುದುರೆಯ ಏರಿ ಸಹದೇವನನ್ನು ಎದುರಿಸಿದನು.
ತತೋಽಭ್ಯಾಪತತಃ ಕ್ಷಿಪ್ರಂ ತವ ಪುತ್ರೋ ಜನಾಧಿಪ |
ಸಹದೇವಸ್ಯ ಶಿರಸಿ ಪ್ರಾಸೇನ ಪ್ರಾಹರದ್ ಭೃಶಮ್ ॥36॥
ಜನಾಧಿಪತಿಯೇ! ನಿನ್ನ ಮಗನು ಮೇಲೇರಿ ಬರುತ್ತಿದ್ದ ಸಹದೇವನ ತಲೆಯ ಮೇಲೆ ಪ್ರಾಸಾಯುಧದಿಂದ ಬಹಳ ಜೋರಾಗಿ ಹೊಡೆದನು.
ಸೋಪಾವಿಶದ್ ರಥೋಪಸ್ಥೇ ತವ ಪುತ್ರೇಣ ಘಾತಿತಃ |
ರುಧಿರಾಪ್ಲುತಸರ್ವಾಂಗೋ ಆಶೀವಿಷ ಇವ ಶ್ವಸನ್ ॥37॥
ನಿನ್ನ ಮಗನಿಂದ ಪೆಟ್ಟುತಿಂದ ಸಹದೇವನು ರಥದ ಮೇಲೆಯೇ ಕುಸಿದು ಕುಳಿತನು. ಅವನ ಮೈಯೆಲ್ಲ ರಕ್ತದಿಂದ ತೊಯ್ದುಹೋಗಿತ್ತು. ಹಾವಿನಂತೆ ಭುಸುಗುಟ್ಟುತ್ತಿದ್ದನು.
ಪ್ರತಿಲಭ್ಯ ತತಃ ಸಂಜ್ಞಾಂ ಸಹದೇವೋ ವಿಶಾಂಪತೇ |
ದುರ್ಯೋಧನಂ ಶರೈಸ್ತೀಕ್ಷ್ಣೈಃ ಸಂಕ್ರುದ್ಧಃ ಸಮವಾಕಿರತ್ ॥38॥
ರಾಜನ್! ಸಹದೇವನು ಎಚ್ಚರಗೊಂಡು ಬಹಳ ಕೋಪದಿಂದ ದುರ್ಯೋಧನನ ಮೇಲೆ ತೀಕ್ಷ್ಣವಾದ ಬಾಣಗಳ ಮಳೆಯನ್ನು ಸುರಿಸಿದನು.
ಪಾರ್ಥೋಽಪಿ ಯುಧಿ ವಿಕ್ರಮ್ಯ ಕುಂತೀಪುತ್ರೋ ಧನಂಜಯಃ |
ಶೂರಾಣಾಮಶ್ವಪೃಷ್ಠೇಭ್ಯಃ ಶಿರಾಂಸಿ ನಿಚಕರ್ತ ಹ ॥39॥
ಯುದ್ಧದಲ್ಲಿ ಅರ್ಜುನನೂ ಪರಾಕ್ರಮದಿಂದ ಅಶ್ವಾರೋಹಿಗಳ ತಲೆಗಳನ್ನು ಕಡಿದುಹಾಕಿದನು. ಅದು ಬಹಳ ಅದ್ಭುತವಾಗಿತ್ತು!
ತದನೀಕಂ ತದಾ ಪಾರ್ಥೋ ವ್ಯಧಮದ್ ಬಹುಭಿಃ ಶರೈಃ |
ಪಾತಯಿತ್ವಾ ಹಯಾನ್ ಸರ್ವಾಃ ತ್ರಿಗರ್ತಾನಾಂ ರಥಾನ್ಯಯೌ ॥40॥
ಅರ್ಜುನನು ಆ ಕೌರವಸೈನ್ಯವನ್ನು ಅನೇಕ ಬಾಣಗಳಿಂದ ಪುಡಿಗೈದನು. ತ್ರಿಗರ್ತರ ಎಲ್ಲಾ ಅಶ್ವಸೈನ್ಯವನ್ನು ಬೀಳಿಸಿ ರಥಸೈನ್ಯದ ಮೇಲೆ ದಾಳಿ ಮಾಡಿದನು.
ತತಸ್ತೇ ಸಹಿತಾಃ ಸರ್ವೇ ತ್ರಿಗರ್ತಾನಾಂ ಮಹಾರಥಾಃ |
ಅರ್ಜುನಂ ವಾಸುದೇವಂ ಚ ಶರವರ್ಷೈರವಾಕಿರನ್ ॥41॥
ಆಗ ತ್ರಿಗರ್ತದೇಶದ ಎಲ್ಲಾ ಮಹಾರಥರೂ ಒಟ್ಟಾಗಿ ಅರ್ಜುನ ಮತ್ತು ಶ್ರೀಕೃಷ್ಣನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು.
ಸತ್ಯಕರ್ಮಾಣಮಾಕ್ಷಿಪ್ಯ ಕ್ಷುರಪ್ರೇಣ ಮಹಾಯಶಾಃ |
ತತೋಽಸ್ಯ ಸ್ಯಂದನಸ್ಯೇಷಾಂ ಚಿಚ್ಛೇದ ಪಾಂಡುನಂದನಃ ॥42॥
ಮಹಾಕೀರ್ತಿಶಾಲಿಯಾದ ಅರ್ಜುನನು ಕ್ಷುರಪ್ರದಿಂದ ಸತ್ಯಕರ್ಮನನ್ನು ಹೊಡೆದನು. ಅವನ ರಥದ ಈಷಾಯಂತ್ರವನ್ನು ತುಂಡು ಮಾಡಿದನು.
ಶಿಲಾಶಿತೇನ ಚ ವಿಭೋ ಕ್ಷುರಪ್ರೇಣ ಮಹಾರಥಃ |
ಶಿರಶ್ಚಿಚ್ಛೇದ ಸಹಸಾ ತಪ್ತಕುಂಡಲಭೂಷಿತಮ್ ॥43॥
ಮಹಾರಥನಾದ ಅರ್ಜುನನು ಸಾಣೆಕಲ್ಲಿಗೆ ತಿಕ್ಕಿ ಹರಿತಗೊಳಿಸಿದ್ದ ಕ್ಷುರಪ್ರದಿಂದ ಹೊಳೆಯುವ ಬಂಗಾರದ ಕರ್ಣಕುಂಡಲದಿಂದ ಶೋಭಿಸುವ ಸತ್ಯಕರ್ಮನ ತಲೆಯನ್ನು ಕೂಡಲೇ ಕಡಿದನು.
ಅನ್ಯೇಷುಮಥ ಚಾದತ್ತ ಯೋಧಾನಾಂ ಮಿಷತಾಂ ತತಃ |
ಯಥಾ ಸಿಂಹೋ ವನೇ ರಾಜನ್ ಮೃಗಾನ್ ಪ್ರತಿ ಬುಭುಕ್ಷಿತಃ ॥44॥
ರಾಜನ್! ವನದಲ್ಲಿ ಹಸಿದ ಸಿಂಹವು ಜಿಂಕೆಗಳ ಮೇಲೆ ದಾಳಿಮಾಡುವಂತೆ, ಯೋಧರು ನೋಡುತ್ತಿರುವಾಗಲೇ ಅರ್ಜುನನು ಸತ್ಯೇಷುವಿನ ಪ್ರಾಣವನ್ನು ತೆಗೆದನು.
ತಂ ನಿಹತ್ಯ ತತಃ ಪಾರ್ಥಃ ಸುಶರ್ಮಾಣಂ ತ್ರಿಭಿಃ ಶರೈಃ |
ವಿದ್ಧ್ವಾ ಚ ನ್ಯಹನತ್ ಸರ್ವಾನ್ ರಥಾನ್ ರುಗ್ಮವಿಭೂಷಿತಾನ್ ॥45॥

ಅವನನ್ನು ಕೊಂದ ನಂತರ ಅರ್ಜುನನು ಸುಶರ್ಮನನ್ನು ಮೂರು ಬಾಣಗಳಿಂದ ಹೊಡೆದು ಸಾಯಿಸಿದನು. ಹಾಗೆಯೇ ಬಂಗಾರದಿಂದ ಅಲಂಕೃತವಾದ ಎಲ್ಲ ರಥಗಳನ್ನು ನಾಶಮಾಡಿದನು.
ತತಸ್ತು ಪ್ರವರಃ ಪಾರ್ಥೋ ದೀರ್ಘಕಾಲಸುಸಂಭೃತಮ್ |
ಮುಂಚನ್ ಕ್ರೋಧವಿಷಂ ತೀವ್ರಂ ತ್ರಿಗರ್ತಾಧಿಪತಿಂ ಪ್ರತಿ ||46||
ಅನಂತರ ಶ್ರೇಷ್ಠನಾದ ಅರ್ಜುನನು ಬಹಳ ಕಾಲದಿಂದ ಧಾರಣೆಮಾಡಿಕೊಂಡಿದ್ದ, ಬಹಳ ತೀಕ್ಷ್ಣವಾದ ಕೋಪವೆಂಬ ವಿಷವನ್ನು ತ್ರಿಗರ್ತಾಧಿಪತಿ ಸುಶರ್ಮನ ಮೇಲೆ ಪ್ರಯೋಗಿಸಿದನು.
ತಮರ್ಜುನಃ ಪೃಷತ್ಕಾನಾಂ ಶತೇನ ನತಪರ್ವಣಾಮ್ |
ಪೂರಯಿತ್ವಾ ತತೋ ವಾಹಾನ್ ನ್ಯಹನತ್ ತತ್ರ ಧನ್ವಿನಃ ||47||
ಅರ್ಜುನನು ಬಾಗಿದ ಸಂಧಿಗಳುಳ್ಳ ನೂರು ಬಾಣಗಳಿಂದ ಧನುರ್ಧಾರಿಗಳಾದ ವೀರರ ಅಶ್ವಗಳ ಮೇಲೆ ಪ್ರಯೋಗಿಸಿ ಅವುಗಳನ್ನು ಕೊಂದನು.
ತತಃ ಶರಂ ಸಮಾದಾಯ ಯಮದಂಡೋಪಮಂ ಮಹತ್ |
ಸುಶರ್ಮಾಣಂ ಸಮುದ್ದಿಶ್ಯ ಚಿಕ್ಷೇಪಾಶು ಹಸನ್ನಿವ ||48||
ಅನಂತರ ಅರ್ಜುನನು ಯಮದಂಡಸದೃಶವಾದ ದೊಡ್ಡದಾದ ಬಾಣವನ್ನು ತೆಗೆದುಕೊಂಡು ಸುಶರ್ಮನ ಮೇಲೆ ನಗುತ್ತಾ ಕೂಡಲೇ ಪ್ರಯೋಗಿಸಿದನು.
ಸ ಶರಃ ಪ್ರೇಷಿತಸ್ತೇನ ಕ್ರೋಧದೀಪ್ತೇನ ಧನ್ವಿನಾ |
ಸುಶರ್ಮಾಣಂ ಸಮಾಸಾದ್ಯ ಬಿಭೇದ ಹೃದಯಂ ರಣೇ ||49||
ಕೋಪದಿಂದ ಪ್ರಕಾಶಿಸುತ್ತಿದ್ದ ಅರ್ಜುನನು ಬಿಟ್ಟ ಆ ಬಾಣವು ಸುಶರ್ಮನ ಹೃದಯವನ್ನು ಭೇದಿಸಿತು.
ಸ ಗತಾಸುರ್ಮಹಾರಾಜ ನಿಪಪಾತ ಮಹೀತಳೇ |
ನಂದಯನ್ ಪಾಂಡವಾನ್ ಸರ್ವಾನ್ ವ್ಯಥಯಂಶ್ಚೈವ ತಾವಕಾನ್ ||
ಮಹಾರಾಜನೇ! ಸುಶರ್ಮನು ಪ್ರಾಣವನ್ನು ಕಳೆದುಕೊಂಡು ನೆಲಕ್ಕೆ ಬಿದ್ದನು. ಹೀಗೆ ಎಲ್ಲಾ ಪಾಂಡವರಿಗೆ ಸಂತೋಷವನ್ನೂ, ನಿನ್ನ ಕಡೆಯವರಿಗೆ ದುಃಖವನ್ನೂ ಉಂಟುಮಾಡಿದನು.
ಸುಶರ್ಮಾಣಂ ರಣೇ ಹತ್ವಾ ಪುತ್ರಾನಸ್ಯ ಮಹಾರಥಾನ್ |
ಸಪ್ತ ಚಾಷ್ಟೌ ಚ ದಶ ಚ ಸಾಯಕೈರನಯತ್ ಕ್ಷಯಮ್ ||51||
ಯುದ್ಧದಲ್ಲಿ ಸುಶರ್ಮನನ್ನು ಕೊಂದು ಮಹಾರಥರಾದ ಅವನ ಮಕ್ಕಳನ್ನು ಕ್ರಮವಾಗಿ ಏಳು, ಎಂಟು ಮತ್ತು ಹತ್ತು ಬಾಣಗಳಿಂದ ಕೊಂದು ಹಾಕಿದನು.
ತತೋಽಸ್ಯ ನಿಶಿತೈರ್ಬಾಣೈಃ ಸರ್ವಾನ್ ಹತ್ವಾ ಪದಾನುಗಾನ್ |
ಅಗಚ್ಛತ್ ಭಾರತೀಂ ಸೇನಾಂ ಹತಶೇಷಾನ್ ಮಹಾರಥಾನ್ ||52||
ಅನಂತರ ಹರಿತವಾದ ಬಾಣಗಳಿಂದ ಎಲ್ಲಾ ಪದಾತಿಗಳನ್ನು ಕೊಂದುಹಾಕಿ, ಸ್ವಲ್ಪವೇ ಮಹಾರಥ ಯೋಧರನ್ನು ಹೊಂದಿರುವ ಕೌರವರ ಸೈನ್ಯದ ಮೇಲೆ ಆಕ್ರಮಣವನ್ನು ಮಾಡಿದನು.
ಭೀಮಸ್ತು ಸಮರೇ ಕ್ರುದ್ಧಃ ಪುತ್ರಂ ತವ ಜನಾಧಿಪ |
ಸುದರ್ಶನಮದೃಶ್ಯಂ ತು ಶರೈಶ್ಚಕ್ರೇ ಹಸನ್ನಿವ ||53||
ಜನಾಧಿಪತಿಯೇ! ಭೀಮನು ಯುದ್ಧದಲ್ಲಿ ಬಹಳ ಕೋಪದಿಂದ ಯುಕ್ತನಾಗಿ ನಗುತ್ತಾ ಬಾಣಗಳಿಂದ ನಿನ್ನ ಮಗ ಸುದರ್ಶನನನ್ನು ಮುಚ್ಚಿ ಅವನು ಕಾಣದ ರೀತಿಯಲ್ಲಿ ಮಾಡಿದನು.
ತತೋಽಸ್ಯ ಪ್ರಹಸನ್ ಕ್ರುದ್ಧಃ ಶಿರಃ ಕಾಯಾದಪಾಹರತ್ |
ಕ್ಷುರಪ್ರೇಣ ಸುತೀಕ್ಷ್ಣೇನ ಸ ಹತಃ ಪ್ರಾಪತದ್ ಭುವಿ ||54||
ಕ್ರುದ್ಧನಾದ ಭೀಮನು ನಗುತ್ತಾ ಬಹಳ ತೀಕ್ಷ್ಣವಾದ ಕ್ಷುರಪ್ರದಿಂದ ಸುದರ್ಶನನ ತಲೆಯನ್ನು ಕಡಿದನು. ತಲೆ ಕಡಿಸಿಕೊಂಡ ಸುದರ್ಶನನು ಸತ್ತು ನೆಲಕ್ಕೆ ಬಿದ್ದನು.
ತಸ್ಮಿಂಸ್ತು ನಿಹತೇ ವೀರೇ ತತಸ್ತಸ್ಯ ಪದಾನುಗಾಃ |
ಪರಿವವ್ರೂ ರಣೇ ಭೀಮಂ ಕಿರಂತೋ ವಿಶಿಖಾನ್ ಶಿತಾನ್ ||55||
ವೀರನಾದ ಸುದರ್ಶನನು ಸತ್ತಾಗ ಅವನ ಬೆಂಬಲಕ್ಕೆ ಇದ್ದ ಪದಾತಿಗಳು ಹರಿತವಾದ ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸುತ್ತಾ, ರಣರಂಗದಲ್ಲಿ ಭೀಮನನ್ನು ಸುತ್ತುವರಿದರು.
ತತಸ್ತು ನಿಶಿತೈರ್ಬಾಣೈಃ ತದನೀಕಂ ವೃಕೋದರಃ |
ಇಂದ್ರಾಶನಿಸಮಸ್ಪರ್ಶೈಃ ಸಮಂತಾತ್ ಪರ್ಯವಾಕಿರತ್ ||56||
ಆಗ ಭೀಮಸೇನನು ಆ ಸೈನ್ಯದ ಮೇಲೆ ಇಂದ್ರನ ವಜ್ರಾಯುಧಕ್ಕೆ ಸದೃಶವಾದ ಪೆಟ್ಟು ಕೊಡುವ ಹರಿತವಾದ ಬಾಣಗಳ ಮಳೆಯನ್ನು ಸುರಿಸಿದನು.
ತತಃ ಕ್ಷಣೇನ ತಾನ್ ಭೀಮೋ ನ್ಯಹನದ್ ಭರತರ್ಷಭ ||57||
ಭರತೋತ್ತಮನೇ! ಭೀಮನು ಕ್ಷಣಮಾತ್ರದಲ್ಲಿ ಅವರನ್ನೆಲ್ಲರನ್ನೂ ಕೊಂದನು.
ತೇಷು ತೂತ್ಸಾದ್ಯಮಾನೇಷು ಸೇನಾಧ್ಯಕ್ಷಾ ಮಹಾಬಲಾಃ |
ಭೀಮಸೇನಂ ಸಮಾಸಾದ್ಯ ತತೋಽಯುಧ್ಯಂತ ಭಾರತ ||58||
ಭಾರತನೇ! ಸೈನಿಕರು ಸತ್ತಾಗ ಮಹಾಬಲರಾದ ಸೇನಾಧ್ಯಕ್ಷರು ಭೀಮನನ್ನು ಎದುರಿಸಿ ಯುದ್ಧ ಮಾಡಿದರು.

ತಾಂಸ್ತು ಸರ್ವಾನ್ ಶರೈರ್ಘೋರೈರವಾಕಿರತ ಪಾಂಡವಃ ॥59॥
ಭೀಮನು ಅವರೆಲ್ಲರ ಮೇಲೆ ಘೋರವಾದ ಬಾಣಗಳನ್ನು ಪ್ರಯೋಗಿಸಿದನು.
ತಥೈವ ತಾವಕಾ ರಾಜನ್ ಪಾಂಡವೇಯಾನ್ ಮಹಾರಥಾನ್ |
ಶರವರ್ಷೇಣ ಮಹತಾ ಸಮಂತಾತ್ ಪರ್ಯವಾರಯನ್ ॥60॥
ರಾಜನೇ! ಅದೇರೀತಿಯಲ್ಲಿ ನಿನ್ನ ಕಡೆಯವರೂ ಪಾಂಡವರ ಮಹಾರಥಯೋಧರ ಮೇಲೆ ಬಹಳವಾದ ಬಾಣಗಳ ಮಳೆಯನ್ನು ಸುರಿಸುತ್ತಾ ಸುತ್ತುವರಿದರು.
ವ್ಯಾಕುಲಂ ತದಭೂತ್ ಸರ್ವಂ ಪಾಂಡವಾನಾಂ ಪರೈಃ ಸಹ |
ತಾವಕಾನಾಂ ಚ ಸಮರೇ ಪಾಂಡವೇಯೈರ್ಯುಯುತ್ಸತಾಮ್ ॥61॥
ಪಾಂಡವರು ಶತ್ರುಗಳೊಡನೆ ಮತ್ತು ನಿನ್ನವರು ಪಾಂಡವರ ಜೊತೆ ಕಾದಾಡುವ ಇಚ್ಛೆಯುಳ್ಳವರಾದ್ದರಿಂದ ಪರಸ್ಪರವಾಗಿ ಎಲ್ಲವೂ ವ್ಯಾಕುಲಗೊಂಡಿತು. (ಕಲಸುಮೇಲೋಗರವಾಯಿತು.)
ತತ್ರ ಯೋಧಾಸ್ತದಾ ಪೇತುಃ ಪರಸ್ಪರಸಮಾಹತಾಃ |
ಉಭಯೋಃ ಸೇನಯೋ ರಾಜನ್ ಸಂಶೋಚಂತಿ ಸ್ಮ ಬಾಂಧವಾನ್ ॥
ರಾಜನೇ! ರಣರಂಗದಲ್ಲಿ ಆಗ ಪರಸ್ಪರವಾಗಿ ಹೊಡೆದಾಡುತ್ತಾ ಎರಡೂ ಸೈನ್ಯದ ಯೋಧರು ಸತ್ತು ಬಿದ್ದರು. ತನ್ಮೂಲಕ ಬಾಂಧವರು ದುಃಖಪಡುವಂತೆ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಸುಶರ್ಮವಧೋ ನಾಮ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಸಹದೇವನು ಶಕುನಿ ಮತ್ತು ಉಲೂಕನನ್ನು ವಧಿಸುವುದು.
ಸಂಜಯಃ
ತಸ್ಮಿನ್ ಪ್ರವೃತ್ತೇ ಸಂಗ್ರಾಮೇ ಗಜವಾಜಿನರಕ್ಷಯೇ |
ಶಕುನಿಃ ಸೌಬಲೋ ರಾಜನ್ ಸಹದೇವಂ ಸಮಭ್ಯಯಾತ್ ॥1॥
ಸಂಜಯ ರಾಜನೇ! ಆನೆ ಕುದುರೆ ಮನುಷ್ಯರು ನಾಶವಾಗುತ್ತಿರುವ ಆ ಸಂಗ್ರಾಮದಲ್ಲಿ ಸೌಬಲದೇಶದ ರಾಜ ಶಕುನಿಯು ಸಹದೇವನನ್ನು ಚೆನ್ನಾಗಿ ಎದುರಿಸಿದನು.
ತತೋಽಸ್ಯಾಪತತಸ್ತೂರ್ಣಂ ಸಹದೇವಃ ಪ್ರತಾಪವಾನ್ |
ಶರೌಘಾನ್ ಪ್ರೇಷಯಾಮಾಸ ಪತಂಗಾನಿವ ಶೀಘ್ರಗಾನ್ ॥2॥
ಅನಂತರ ಶಕುನಿಯು ವೇಗವಾಗಿ ಮೇಲೇರಿ ಬರುತ್ತಿರುವಾಗ ಪ್ರತಾಪಿಯಾದ ಸಹದೇವನು ಪತಂಗಗಳ ಹಾಗೆ ಬೇಗನೆ ಹಾರುವ ಬಾಣಗಳನ್ನು ಗುಂಪು ಗುಂಪಾಗಿ ಶಕುನಿಯ ಮೇಲೆ ಬೀಳಿಸುತ್ತಾನೆ.
ಉಲೂಕಃ ಸಮರೇ ಭೀಮಂ ವಿವ್ಯಾಧ ದಶಭಿಃ ಶರೈಃ |
ಶಕುನಿಸ್ತು ಮಹಾರಾಜ ಭೀಮಂ ವಿದ್ಧ್ವಾ ತ್ರಿಭಿಃ ಶರೈಃ ॥3॥
ಯುದ್ಧದಲ್ಲಿ ಉಲೂಕನು ಭೀಮನ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸುತ್ತಾನೆ. ಮಹಾರಾಜನೇ! ಶಕುನಿಯು ಭೀಮನನ್ನು ಮೂರು ಬಾಣಗಳಿಂದ ಹೊಡೆಯುತ್ತಾನೆ.
ಸಾಯಕಾನಾಂ ನವತ್ಯಾ ವೈ ಸಹದೇವಂ ಸಮಾಕಿರತ್ ॥4॥
ಸಹದೇವನ ಮೇಲೆ ತೊಂಬತ್ತುಬಾಣಗಳ ಮಳೆಯನ್ನು ಸುರಿಸುತ್ತಾನೆ.
ತೇ ಶೂರಾಃ ಸಮರೇ ರಾಜನ್ ಸಮಾಸಾದ್ಯ ಪರಸ್ಪರಮ್ |
ವಿವ್ಯಧುರ್ನಿಶಿತೈರ್ಬಾಣೈಃ ಕಂಕಬರ್ಹಿಣವಾಜಿತೈಃ ॥5॥
ರಾಜನೇ! ಯುದ್ಧದಲ್ಲಿ ಆ ಶೂರರು ಪರಸ್ಪರ ಎದುರುಗೊಂಡು ಕಂಕ ಮತ್ತು ನವಿಲುಗಳ ಗರಿಯಂತೆ ರೆಕ್ಕೆಯುಳ್ಳ ಹರಿತವಾದ ಬಾಣಗಳಿಂದ ಒಬ್ಬರನ್ನೊಬ್ಬರು ಹೊಡೆದುಕೊಂಡರು.
ಸ್ವರ್ಣಪುಂಖೈಃ ಶಿಲಾಧೌತೈರಾಕರ್ಣಾತ್ ಪ್ರಹಿತೈಃ ಶರೈಃ ॥6॥
ಆ ಬಾಣಗಳನ್ನು ಎಣ್ಣೆಯಲ್ಲಿ ಅದ್ದಲಾಗಿತ್ತು. ಸಾಣೆಕಲ್ಲುಗಳಲ್ಲಿ ತೇದು ಹರಿತಗೊಳಿಸಲಾಗಿತ್ತು ಮತ್ತು ಅವುಗಳನ್ನು ಪ್ರಯೋಗಿಸುವಾಗ ಬಿಲ್ಲಿನ ಹಗ್ಗವನ್ನು ಕಿವಿಯವರೆಗೆ ಎಳೆದು ಬಿಡಲಾಗುತ್ತಿತ್ತು.
ತೇಷಾಂ ಚಾಪಭುಜೋತ್ಸೃಷ್ಟಾ ಶರವೃಷ್ಟಿರ್ವಿಶಾಂಪತೇ |
ಪ್ರಾಚ್ಛಾದಯದ್ ದಿಶಃ ಸರ್ವಾ ಧಾರಾಭಿರಿವ ತೋಯದಃ ॥7॥
ರಾಜನೇ! ಆ ಯೋಧರು ತಮ್ಮ ಬಿಲ್ಲಿನಿಂದ ಸುರಿಸಿದ ಬಾಣಗಳ ಮಳೆಯಿಂದಾಗಿ ಎಲ್ಲಾ ದಿಕ್ಕುಗಳು ಮೋಡಗಳಿಂದ ಸುರಿಸಲ್ಪಟ್ಟ ಜಲಧಾರೆಯಿಂದ ಮುಚ್ಚಿಹೋದಂತೆ ಮುಚ್ಚಲ್ಪಟ್ಟಿದ್ದವು.
ತತಃ ಕ್ರುದ್ಧೋ ರಣೇ ಭೀಮಃ ಸಹದೇವಶ್ಚ ಭಾರತ |
ಚೇರತುಃ ಕದನಂ ಸಂಖ್ಯೇ ಪ್ರಕುರ್ವಂತೌ ಮಹಾಬಲೌ ॥8॥
ಭರತಕುಲಜಾತನೇ! ಅನಂತರ ಮಹಾಬಲಶಾಲಿಗಳಾದ ಭೀಮ ಮತ್ತು ಸಹದೇವರು ಕೋಪಗೊಂಡು ಯುದ್ಧದಲ್ಲಿ ಕಾದಾಟವನ್ನು ಮಾಡುತ್ತಾ ಸಂಚರಿಸಿದರು.

ತಾಭ್ಯಾಂ ಶರಶತೈಶ್ಛಿನ್ನಂ ತದ್ಬಲಂ ಭರತರ್ಷಭ |
ಅಂಧಕಾರಮಿವಾಕಾಶಮಭವತ್ ತತ್ರ ತತ್ರ ಹ ॥9॥
ಭರತೋತ್ತಮನೇ! ಅವರು ಪ್ರಯೋಗಿಸಿದ ಹರಿತವಾದ ಬಾಣಗಳು ಕೌರವಸೈನ್ಯವನ್ನು ಪುಡಿ ಮಾಡಿದವು. ಬಾಣಗಳಿಂದಾಗಿ ಅಲ್ಲಿ ಕತ್ತಲೆಯು ಆವರಿಸಿದಂತಾಯಿತು.
ಅಶ್ವೈರ್ವಿಪರಿಧಾವದ್ಭಿಃ ಶರೈಶ್ಛಿನ್ನೈರ್ವಿಶಾಂಪತೇ |
ತತ್ರ ತತ್ರ ಕೃತೋ ಮಾರ್ಗೋ ವಿಕರ್ಷದ್ಭಿರ್ಹತಾನ್ ಬಹೂನ್ ॥10॥
ರಾಜನೇ! ಬಾಣಗಳಿಂದ ಪೆಟ್ಟು ತಿಂದ ಕುದುರೆಗಳು ವಿಪರೀತವಾಗಿ ಓಡಲಾರಂಭಿಸಿದವು. ಆಗ ಸತ್ತು ಬಿದ್ದವರನ್ನು ಎಳೆದೊಯ್ದದ್ದರಿಂದ ಅಲ್ಲಲ್ಲಿ ಮಾರ್ಗಗಳು ತಯಾರಾದವು.
ನಿಹತಾನಾಂ ಹಯಾನಾಂ ಚ ಸಹೈವ ಹಯಯೋಧಿಭಿಃ |
ವರ್ಮಭಿರ್ವಿನಿಕೃತ್ತೈಶ್ಚ ಪ್ರಾಸೈಶ್ಛಿನ್ನೈಶ್ಚ ಮಾರಿಷ ॥11॥
ಅಸಿಭಿಃ ಶಕ್ತಿಭಿಶ್ಚೈವ ತೋಮರೈಶ್ಚ ಪರಂತಪ |
ಸಂಛನ್ನಾ ವಸುಧಾ ತೈಸ್ತು ಕುಸುಮೈಃ ಶಬಲಾ ಇವ ॥12॥
ರಾಜನೇ! ಅಶ್ವಗಳು ಸತ್ತುಬಿದ್ದಿದ್ದವು. ಅಶ್ವಾರೋಹಿಗಳೂ ಸತ್ತುಬಿದ್ದಿದ್ದರು. ಹರಿದ ಕವಚಗಳು ನೆಲಕ್ಕೆ ಬಿದ್ದಿದ್ದವು. ತುಂಡಾದ ಪ್ರಾಸಾಯುಧಗಳು, ಕತ್ತಿಗಳು, ಶಕ್ತ್ಯಾಯುಧಗಳು, ತೋಮರಗಳು ಇವೆಲ್ಲಾ ನೆಲದ ಮೇಲೆ ಬಿದ್ದಿದ್ದವು. ಭೂಮಿಯು ಬಣ್ಣಬಣ್ಣದ ಹೂವುಗಳಿಂದ ಆವೃತವಾದಂತೆ ಕಾಣಿಸುತ್ತಿತ್ತು.
ಯೋಧಾಸ್ತತ್ರ ಮಹಾರಾಜ ಸಮಾಸಾದ್ಯ ಪರಸ್ಪರಮ್ |
ವ್ಯಚರಂತ ರಣೇ ಕ್ರುದ್ಧಾ ನಿನಿಘ್ನತುಃ ಪರಸ್ಪರಮ್ ॥13॥
ಮಹಾರಾಜನೇ! ರಣರಂಗದಲ್ಲಿ ಯೋಧರು ಪರಸ್ಪರವಾಗಿ ಎದುರುಗೊಂಡು, ಕೋಪಗೊಂಡವರಾಗಿ ಸಂಚರಿಸುತ್ತಿದ್ದರು ಮತ್ತು ಪರಸ್ಪರ ಹೊಡೆದುಕೊಂಡರು.
ಉದ್ವೃತ್ತನಯನೈ ರೋಷಾತ್ ಸಂದಷ್ಟೋಷ್ಠಪುಟೈರ್ಮುಖೈಃ |
ಸಕುಂಡಲೈರ್ಮಹೀ ಚ್ಛನ್ನಾ ಪದ್ಮಕಿಂಜಲ್ಕಸನ್ನಿಭೈಃ ॥14॥
ಕೆಳಗೆಬಿದ್ದ ತಲೆಗಳಲ್ಲಿ ಕಣ್ಣುಗಳು ಕೋಪದಿಂದಾಗಿ ಮೇಲೆ ಬಂದಿದ್ದವು. ಹಲ್ಲುಗಳು ಕಚ್ಚಿಕೊಂಡಿದ್ದವು. ಕಿವಿಯಲ್ಲಿ ಕುಂಡಲಗಳು ಶೋಭಿಸುತ್ತಿದ್ದವು. ಇಂತಹ ತಲೆಗಳಿಂದಾಗಿ ಭೂಮಿಯು ಪದ್ಮದ ಕೇಸರದಿಂದ ಆವೃತವಾದಂತೆ ಇತ್ತು.
ಭುಜೈಶ್ಛಿನ್ನೈರ್ಮಹಾರಾಜ ನಾಗರಾಜಕರೋಪಮೈಃ |
ಸಗದೈಃ ಸತಲತ್ರೈಶ್ಚ ಸಾಸಿಪ್ರಾಸಪರಶ್ವಧೈಃ ॥15॥
ಕಬಂಧೈರುತ್ಥಿತೈಶ್ಚೈವ ನೃತ್ಯದ್ಭಿಶ್ಚಾಪರೈರ್ಯುಧಿ |
ಕ್ರವ್ಯಾದಗಣಸಂಪೂರ್ಣಾ ಘೋರಾಽಭೂತ್ ಪೃಥಿವೀ ವಿಭೋ ॥16॥
ಮಹಾರಾಜನೇ! ತುಂಡರಿಸಿದ ಭುಜಗಳು ಆನೆಯ ಸೊಂಡಿಲಿನಂತಿದ್ದವು. ಆ ಭುಜಗಳು ಗದೆ, ಗುರಾಣಿ, ಕತ್ತಿ, ಕೊಡಲಿಗಳನ್ನು ಹಿಡಿದುಕೊಂಡಿದ್ದವು. ದೇಹಗಳು ಸುತ್ತ ಇವೆಯೇನೋ ಎಂಬಂತೆ ಕಂಡವು. ಮಾಂಸವನ್ನು ತಿನ್ನುವ ಭೂತಗಳಿಂದ ತುಂಬಿದ ಯುದ್ಧಭೂಮಿಯು ತುಂಬ ಘೋರವಾಗಿತ್ತು.
ಅಲ್ಪಾವಶಿಷ್ಟೇ ಸೈನ್ಯೇ ತು ಕೌರವೇಯಾನ್ ಮಹಾಹವೇ |
ಪ್ರಹೃಷ್ಟಾಃ ಪಾಂಡವಾ ಭೂತ್ವಾ ನಿನ್ಯಿರೇ ಯಮಸಾದನಮ್ ॥17॥
ಮಹಾಯುದ್ಧದಲ್ಲಿ ಸಂತುಷ್ಟರಾದ ಪಾಂಡವರು ಸ್ವಲ್ಪವೇ ಉಳಿದ ಕೌರವಸೈನ್ಯವನ್ನು ಕೊಂದು ಯಮಪುರಿಗೆ ಕಳುಹಿಸಿದರು.
ಏತಸ್ಮಿನ್ನಂತರೇ ಶೂರಃ ಸೌಬಲೇಯಃ ಪ್ರತಾಪವಾನ್ |
ಪ್ರಾಸೇನ ಸಹದೇವಸ್ಯ ಶಿರಸಿ ಪ್ರಾಹರದ್ ಭೃಶಮ್ ॥18॥
ಈ ಮಧ್ಯದಲ್ಲಿ ಶೂರನಾದ ಪ್ರತಾಪಿ ಶಕುನಿಯು ಪ್ರಾಸಾಯುಧದಿಂದ ಸಹದೇವನ ತಲೆಗೆ ಬಲವಾಗಿ ಹೊಡೆದನು.
ಸ ವಿಹ್ವಲೋ ಮಹಾರಾಜ ರಥೋಪಸ್ಥ ಉಪಾವಿಶತ್ ॥19॥
ಮಹಾರಾಜನೇ! ಇದರಿಂದ ಬಹಳ ವ್ಯಥೆಗೊಳಗಾದ ಸಹದೇವನು ರಥದಲ್ಲಿಯೇ ಕುಸಿದು ಕುಳಿತನು.
ಸಹದೇವಂ ತಥಾ ದೃಷ್ಟ್ವಾ ಭೀಮಸೇನಃ ಪ್ರತಾಪವಾನ್ |
ಸರ್ವಸೈನ್ಯಾನಿ ಸಂಕ್ರುದ್ಧೋ ವಾರಯಾಮಾಸ ಭಾರತ ॥20॥
ಭರತಕುಲೋದ್ಭವನೇ! ಸಹದೇವನು ವ್ಯಥೆಗೊಳಗಾದದ್ದನ್ನು ನೋಡಿದ ಪ್ರತಾಪಿ ಭೀಮನು ಕೋಪಗೊಂಡು ಎಲ್ಲಾ ಸೈನ್ಯವನ್ನೂ ತಡೆದು ನಿಲ್ಲಿಸಿದನು.
ನಿರ್ಬಿಭೇದ ಚ ನಾರಾಚೈಃ ಶತಶೋಽಥ ಸಹಸ್ರಶಃ |
ಸ ನಿರ್ಭಿದ್ಯ ರಣೇ ಚಕ್ರೇ ಸಿಂಹನಾದಮಥಾನದತ್ ॥21॥
ಭೀಮನು ಬಾಣಗಳನ್ನು ಪ್ರಯೋಗಿಸಿ ನೂರಾರು, ಸಾವಿರಾರು ಯೋಧರನ್ನು ಕೊಂದನು. ರಣರಂಗದಲ್ಲಿ ಹೀಗೆ ಎಲ್ಲರನ್ನೂ ಸಾಯಿಸಿ ಸಿಂಹನಾದವನ್ನು ಮಾಡಿದನು.
ತೇನ ಶಬ್ದೇನ ವಿತ್ರಸ್ತಾಃ ಸರ್ವೇ ಸಹಯವಾರಣಾಃ |
ಪ್ರಾದ್ರವನ್ ಸಹಸಾ ಭೀತಾಃ ಶಕುನೇಶ್ಚ ಪದಾನುಗಾಃ ॥22॥
ಆ ಶಬ್ದವನ್ನು ಕೇಳಿದ ಎಲ್ಲಾ ಕುದುರೆಗಳು, ಆನೆಗಳು, ಶಕುನಿಯ ಸಹಾಯಕ ಸೈನಿಕರೂ ಕೂಡ ಭಯದಿಂದಾಗಿ ಬೇಗನೇ ಪಲಾಯನಗೈದರು.

ಪ್ರಭಗ್ನಾನಥ ತಾನ್ ದೃಷ್ಟ್ವಾ ರಾಜಾ ದುರ್ಯೋಧನೋಽಬ್ರವೀತ್ ॥
ಕೈ-ಕಾಲು ಮುರಿದುಕೊಂಡ ಆ ಸೈನಿಕರನ್ನು ನೋಡಿದ ದುರ್ಯೋಧನನು ಹೀಗೆ ಹೇಳಿದನು
ದುರ್ಯೋಧನಃ
ನಿವರ್ತಧ್ವಮಧರ್ಮಜ್ಞಾ ಯುಧ್ಯಧ್ವಂ ಕಿಂ ದ್ರುತೇನ ವಃ |
ಇಹ ಕೀರ್ತಿಂ ಸಮಾಧಾಯ ಪ್ರೇತ್ಯ ಲೋಕಾನ್ ಸಮಶ್ನುತೇ ॥24॥
ಪ್ರಾಣಾನ್ ಜಹಾತಿ ಯೋ ವೀರೋ ಯುಧಿ ಪೃಷ್ಠಮದರ್ಶಯನ್ ॥
ದುರ್ಯೋಧನ ಓಡುವುದರಿಂದ ಏನು ಪ್ರಯೋಜನ? ಧರ್ಮವನ್ನು ತಿಳಿಯದ ಮೂಢರೇ! ಮತ್ತೆ ಯುದ್ಧಕ್ಕೆ ಹಿಂತಿರುಗಿರಿ. ಯಾವ ವೀರನು ಯುದ್ಧದಲ್ಲಿ ಬೆನ್ನು ತೋರಿಸದೆ ಪ್ರಾಣತ್ಯಾಗಮಾಡುತ್ತಾನೆಯೋ ಅವನು ಇಲ್ಲಿ ಕೀರ್ತಿಯನ್ನೂ, ಸತ್ತು ಉತ್ತಮ ಲೋಕಗಳನ್ನೂ ಹೊಂದುವನು.
ಸಂಜಯಃ
ಏವಮುಕ್ತಾಸ್ತತೋ ರಾಜ್ಞಾ ಸೌಬಲಸ್ಯ ಪದಾನುಗಾಃ |
ಪಾಂಡವಾನಭ್ಯವರ್ತಂತ ಮೃತ್ಯುಂ ಕೃತ್ವಾ ನಿವರ್ತನಮ್ ॥26॥
ದುರ್ಯೋಧನನು ಹೀಗೆ ಹೇಳಿದಾಗ ಶಕುನಿಯ ಪದಾತಿಗಳು ಮರಣವನ್ನೇ ಹಿಮ್ಮೆಟ್ಟಿ ಅರ್ಜುನನನ್ನು ಎದುರಿಸಿದರು.
ದ್ರವದ್ಭಿಸ್ತು ತತೋ ರಾಜನ್ ಕೃತಃ ಶಬ್ದೋಽತಿದಾರುಣಃ |
ಕ್ಷುಬ್ಧಸಾಗರಸಂಕಾಶಃ ಕ್ಷುಭಿತೈಃ ಸರ್ವತೋ ದಿಶಮ್ ॥27॥
ರಾಜನೇ! ಯುದ್ಧದ ಉನ್ಮಾದದಿಂದ ಕ್ಷೋಭೆಗೊಳಗಾಗಿ ಎಲ್ಲಾ ದಿಕ್ಕುಗಳಲ್ಲಿ ಓಡುತ್ತಿರುವಾಗ ಕ್ಷೋಭೆಗೊಳಗಾದ ಸಾಗರದಿಂದ ಬರುವ ಶಬ್ದದ ಹಾಗೆ ಬಹಳ ದುಃಖದಾಯಕವಾದ ಘೋರಶಬ್ದವು ಉಂಟಾಯಿತು.
ತಾಂಸ್ತಥಾಽಽಪತತೋ ದೃಷ್ಟ್ವಾ ಸೌಬಲಸ್ಯ ಪದಾನುಗಾನ್ |
ಪ್ರತ್ಯುದ್ಯಯುರ್ಮಹಾರಾಜ ಪಾಂಡವಾ ವಿಜಯೇ ಧೃತಾಃ ॥28॥
ಮಹಾರಾಜನೇ! ಯುದ್ಧದಲ್ಲಿ ಜಯವನ್ನು ನಿಶ್ಚಯಿಸಿಕೊಂಡ ಪಾಂಡವರು ಹೀಗೆ ಓಡಿ ಬಂದು ಆಕ್ರಮಣ ಮಾಡುತ್ತಿರುವ ಶಕುನಿಯ ಪದಾತಿಗಳನ್ನು ಎದುರಿಸಿದರು.
ಪ್ರತ್ಯಾಶ್ವಸ್ಯ ಚ ದುರ್ಧರ್ಷಃ ಸಹದೇವೋ ವಿಶಾಂಪತೇ |
ಶಕುನಿಂ ದಶಭಿರ್ವಿದ್ಧ್ವಾ ಹಯಾಂಶ್ಚಾಸ್ಯ ತ್ರಿಭಿಃ ಶರೈಃ ॥29॥
ಚಕ್ರವರ್ತಿಯೇ! ಯುದ್ಧದಲ್ಲಿ ಎದುರಿಸಲು ಅಶಕ್ಯನಾದ ಸಹದೇವನು ಸುಧಾರಿಸಿಕೊಂಡು, ಶಕುನಿಗೆ ಹತ್ತು ಬಾಣಗಳಿಂದ ಹೊಡೆದನು ಮತ್ತು ಅವನ ಕುದುರೆಗಳಿಗೆ ಮೂರು ಬಾಣಗಳಿಂದ ಹೊಡೆದನು.
ಧನುಶ್ಚಿಚ್ಛೇದ ಚ ಶರೈಃ ಸೌಬಲಸ್ಯ ಹಸನ್ನಿವ ॥30॥
ನಗುತ್ತಾ ಬಾಣಗಳಿಂದ ಶಕುನಿಯ ಬಿಲ್ಲನ್ನು ತುಂಡರಿಸಿದನು.
ಅಥಾನ್ಯದ್ಧನುರಾದಾಯ ಶಕುನಿರ್ಯುದ್ಧದುರ್ಮದಃ |
ವಿವ್ಯಾಧ ನಕುಲಂ ಷಷ್ಟ್ಯಾ ಭೀಮಸೇನಂ ಚ ಸಪ್ತಭಿಃ ॥31॥
ಯುದ್ಧದ ಮದವೇರಿಸಿಕೊಂಡ ಶಕುನಿಯು ಇನ್ನೊಂದು ಧನುಸ್ಸನ್ನು ತೆಗೆದುಕೊಂಡು ನಕುಲನ ಮೇಲೆ ಅರವತ್ತು ಬಾಣಗಳನ್ನೂ, ಭೀಮಸೇನನ ಮೇಲೆ ಏಳು ಬಾಣಗಳನ್ನೂ ಪ್ರಯೋಗಿಸಿದನು.
ಉಲೂಕಸ್ತು ಮಹಾರಾಜ ಭೀಮಂ ವಿವ್ಯಾಧ ಸಪ್ತಭಿಃ |
ಸಹದೇವಂ ಚ ಸಪ್ತತ್ಯಾ ಪರೀಪ್ಸನ್ ಪಿತರಂ ರಣೇ ॥32॥
ಮಹಾರಾಜನೇ! ಉಲೂಕನು ಏಳು ಬಾಣಗಳಿಂದ ಭೀಮನನ್ನು ಹೊಡೆದನು. ತನ್ನ ತಂದೆಯನ್ನು ರಕ್ಷಿಸಲಿಕ್ಕಾಗಿ ಸಹದೇವನ ಮೇಲೆ ಎಪ್ಪತ್ತು ಬಾಣಗಳನ್ನು ಬಿಟ್ಟನು.
ತಂ ಭೀಮಸೇನಃ ಸಮರೇ ವಿವ್ಯಾಧ ನಿಶಿತೈಃ ಶರೈಃ |
ಶಕುನಿಂ ಚ ಚತುಷ್ಷಷ್ಟ್ಯಾ ಪಾರ್ಶ್ವಸ್ಥಾಂಶ್ಚ ತ್ರಿಭಿಸ್ತ್ರಿಭಿಃ ॥33॥
ಉಲೂಕನ ಮೇಲೆ ಭೀಮಸೇನನು ಯುದ್ಧದಲ್ಲಿ ಹರಿತವಾದ ಬಾಣಗಳನ್ನು ಪ್ರಯೋಗಿಸಿ ಘಾಸಿಪಡಿಸಿದನು. ಶಕುನಿಗೆ ಅರವತ್ತನಾಲ್ಕು ಮತ್ತು ಅವನ ಆಕಡೆ ಈಕಡೆ ಇರುವ ಯೋಧರಿಗೆ ಮೂರು ಮೂರು ಬಾಣಗಳನ್ನು ಬಿಟ್ಟನು.
ತೇ ಹನ್ಯಮಾನಾ ಭೀಮೇನ ನಾರಾಚೈಸ್ತೈಲಪಾಯಿತೈಃ |
ಸಹದೇವಂ ರಣೇ ಕ್ರುದ್ಧಃ ಛಾದಯನ್ ಶರವೃಷ್ಟಿಭಿಃ ॥34॥
ಪರ್ವತಂ ವಾರಿಧಾರಾಭಿಃ ಸವಿದ್ಯುತ ಇವಾಂಬುದಾಃ |
ತತೋ ಹ್ಯಾಪತತಸ್ತೂರ್ಣಂ ಸಹದೇವಃ ಪ್ರತಾಪವಾನ್ ॥35॥
ಭೀಮನಿಂದ ಎಣ್ಣೆಯಲ್ಲಿ ಅದ್ದಿದ ಬಾಣಗಳ ಪೆಟ್ಟು ತಿಂದ ಯೋಧರು ಕೋಪಗೊಂಡು ಬಾಣಗಳ ಮಳೆಯನ್ನು ಸುರಿಸಿ, ಸಹದೇವನನ್ನು ಬಾಣಗಳಿಂದ ಮುಚ್ಚಿಹಾಕಿದರು. ಇದು ಮೋಡಗಳು ಮಿಂಚುಸಹಿತವಾಗಿ ಮಳೆಸುರಿಸಿ ಪರ್ವತವನ್ನು ಮುಚ್ಚಿದಂತೆ ಇತ್ತು.
ಉಲೂಕಸ್ಯ ಮಹಾರಾಜ ಭಲ್ಲೇನಾಪಹರಚ್ಛಿರಃ |
ಸ ಜಗಾಮ ರಥಾದ್ ಭೂಮಿಂ ಸಹದೇವೇನ ಪಾತಿತಃ ॥36॥
ಮಹಾರಾಜನೇ! ಆಗ ಪ್ರತಾಪಿಯಾದ ಸಹದೇವನು ತನ್ನ ಮೇಲೆ ಆಕ್ರಮಣ ಮಾಡುತ್ತಿರುವ ಉಲೂಕನ ತಲೆಯನ್ನು ಭಲ್ಲೆಯಿಂದ ಕಡಿದನು. ಸಹದೇವನಿಂದ ಹೊಡೆಯಲ್ಪಟ್ಟ ಉಲೂಕನು ರಥದಿಂದ ಕೆಳಗೆ ಬಿದ್ದನು.

ರುಧಿರಾಪ್ಲುತಸರ್ವಾಂಗೋ ನಂದಯನ್ ಪಾಂಡವಾನ್ ರಣೇ |
ಪುತ್ರಂ ತು ನಿಹತಂ ದೃಷ್ಟ್ವಾ ಶಕುನಿಸ್ತತ್ರ ಭಾರತ ॥37॥
ಸಾಸ್ರುಕಂಠೋ ವಿನಿಃಶ್ವಸ್ಯ ಕ್ಷತ್ತುರ್ವಾಕ್ಯಮನುಸ್ಮರನ್ |
ಚಿಂತಯಿತ್ವಾ ಮುಹೂರ್ತಂ ತು ಬಾಷ್ಪಪೂರ್ಣೇಕ್ಷಣಃ ಶ್ವಸನ್ ॥38॥
ಉಲೂಕನ ಶರೀರವೆಲ್ಲವೂ ರಕ್ತದಿಂದ ತೊಯ್ದುಹೋಗಿತ್ತು. ಇದು ಪಾಂಡವರಿಗೆ ಆನಂದವನ್ನುಂಟುಮಾಡಿತು.
ಭರತಕುಲೋದ್ಭವನೇ! ತನ್ನ ಮಗ ಉಲೂಕನು ಸತ್ತಿದ್ದನ್ನು ನೋಡಿದ ಶಕುನಿಗೆ ಕಣ್ಣೀರುತುಂಬಿಕೊಂಡು ಗಂಟಲು ಕಟ್ಟಿತು.
ನಿಟ್ಟುಸಿರು ಬಿಡುತ್ತಾ ಸ್ವಲ್ಪಕಾಲ ಆಲೋಚಿಸಿ ವಿದುರನು ಹೇಳಿದ ಮಾತನ್ನು ಸ್ಮರಿಸಿಕೊಳ್ಳುತ್ತಾನೆ.
ಸಹದೇವಂ ಸಮಾಸಾದ್ಯ ವಿವ್ಯಾಧ ತ್ರಿಭಿರಾಶುಗೈಃ ॥39॥
ಸಹದೇವನ ಸಮೀಪಕ್ಕೆ ಬಂದು ಬೇಗನೆ ಹೋಗುವ ಮೂರು ಬಾಣಗಳಿಂದ ಸಹದೇವನನ್ನು ಹೊಡೆಯುತ್ತಾನೆ.
ತಾನಪಾಸ್ಯ ಶರಾನ್ ಮುಕ್ತಾನ್ ಶರಸ್ಸಂಘೈಃ ಪ್ರತಾಪವಾನ್ |
ಸಹದೇವೋ ಮಹಾರಾಜ ಧನುಶ್ಚಿಚ್ಛೇದ ಸಂಯುಗೇ ॥40॥
ಮಹಾರಾಜನೇ! ಪ್ರತಾಪಿಯಾದ ಸಹದೇವನು ಶಕುನಿಯು ಬಿಟ್ಟ ಬಾಣಗಳನ್ನು ತುಂಡರಿಸಿ, ಯುದ್ಧದಲ್ಲಿ ಶಕುನಿಯ ಬಿಲ್ಲನ್ನು ತುಂಡರಿಸುತ್ತಾನೆ.
ಛಿನ್ನೇ ಧನುಷಿ ರಾಜೇಂದ್ರ ಶಕುನಿಃ ಸೌಬಲಸ್ತದಾ |
ಪ್ರಗೃಹ್ಯ ವಿಮಲಂ ಖಡ್ಗಂ ಸಹದೇವಾಯ ಪ್ರಾಹಿಣೋತ್ ॥41॥
ರಾಜೇಂದ್ರನೇ! ತನ್ನ ಬಿಲ್ಲು ತುಂಡಾದಾಗ ಶಕುನಿಯು ಶುಭ್ರವಾದ ಖಡ್ಗವನ್ನು ಎತ್ತಿಕೊಂಡು ಸಹದೇವನಿಗೆ ಗುರಿಯಿಟ್ಟು ಬಿಸಾಡುತ್ತಾನೆ.
ತಮಾಪತಂತಂ ಸಹಸಾ ಘೋರರೂಪಂ ವಿಶಾಂಪತೇ |
ದ್ವಿಧಾ ಚಿಚ್ಛೇದ ರಾಜೇಂದ್ರ ಸೌಬಲಸ್ಯ ಹಸನ್ನಿವ ॥42॥
ಜನನಾಯಕನೇ! ರಾಜೇಂದ್ರನೇ! ಸಹದೇವನು ತನ್ನೆಡೆಗೆ ಬೀಳುತ್ತಾ ಇದ್ದ ಶಕುನಿಯ ಘೋರರೂಪವಾದ ಖಡ್ಗವನ್ನು ಕೂಡಲೇ ನಗುತ್ತಾ ಎರಡಾಗಿ ತುಂಡುಮಾಡಿದನು.
ಅಸಿಂ ದೃಷ್ಟ್ವಾ ದ್ವಿಧಾ ಚ್ಛಿನ್ನಂ ಪ್ರಗೃಹ್ಯ ಮಹತೀಂ ಗದಾಮ್ |
ಪ್ರಾಹಿಣೋತ್ ಸಹದೇವಾಯ ಸಾ ಮೋಘಾ ನ್ಯಪತದ್ ಭುವಿ ॥43॥
ಕತ್ತಿಯು ಎರಡಾಗಿ ತುಂಡಾಗಿದ್ದನ್ನು ನೋಡಿದ ಶಕುನಿಯು ದೊಡ್ಡದಾದ ಗದೆಯನ್ನು ಎತ್ತಿಕೊಂಡು ಸಹದೇವನೆಡೆ ಬಿಸಾಡುತ್ತಾನೆ. ಆದರೆ ಆ ಗದೆಯೂ ವ್ಯರ್ಥವಾಗಿ ಭೂಮಿಗೆ ಬಿತ್ತು.
ತತಃ ಶಕ್ತಿಂ ಮಹಾಘೋರಂ ಕಾಲರಾತ್ರಿಮಿವೋದ್ಯತಾಮ್ |
ಪ್ರೇಷಯಾಮಾಸ ಸಂಕ್ರುದ್ಧಃ ಪಾಂಡವಂ ಪ್ರತಿ ಸೌಬಲಃ ॥44॥
ಅನಂತರ ಕೋಪಗೊಂಡ ಶಕುನಿಯು ಸಹದೇವನ ಮೇಲೆ ಯೋಧರಿಗೆ ಕಾಳರಾತ್ರಿಯಂತೆ ಭಯಂಕರವಾದ, ತುಂಬ ಘೋರರೂಪದ ಶಕ್ತ್ಯಾಯುಧವನ್ನು ಪ್ರಯೋಗಿಸಿ ಕಳುಹಿಸುತ್ತಾನೆ.
ತಾಮಾಪತಂತೀಂ ಸಹಸಾ ಶರೈಃ ಕಾಂಚನಭೂಷಣೈಃ |
ತ್ರಿಧಾ ಚಿಚ್ಛೇದ ಸಮರೇ ಸಹದೇವೋ ಹಸನ್ನಿವ ॥45॥
ತನ್ನ ಮೇಲೆ ಬೀಳುತ್ತಿರುವ ಆ ಶಕ್ತ್ಯಾಯುಧವನ್ನು ಸಹದೇವನು ನಗುತ್ತಾ ಬಂಗಾರ ಅಲಂಕಾರವುಳ್ಳ ಬಾಣಗಳಿಂದ ಕೂಡಲೇ ಮೂರಾಗಿ ತುಂಡರಿಸುತ್ತಾನೆ.
ಸಾ ಪಪಾತ ತ್ರಿಧಾ ಛಿನ್ನಾ ಭೂಮೌ ಕನಕಭೂಷಣಾ |
ಶೀರ್ಯಮಾಣಾ ಯಥಾ ದೀಪ್ತಾ ಗಗನಾದ್ ವೈ ಶತಹ್ರದಾ ॥46॥
ಮೂರು ಭಾಗವಾಗಿ ತುಂಡಾದ ಬಂಗಾರದ ಅಲಂಕಾರವನ್ನು ಹೊಂದಿರುವ ಶಕ್ತ್ಯಾಯುಧವು ಆಕಾಶದಿಂದ ಹೊಳೆಯುವ ಮಿಂಚು ನೆಲಕ್ಕೆ ಬೀಳುವಂತೆ ಭೂಮಿಗೆ ಬಿತ್ತು.
ಶಕ್ತಿಂ ವಿನಿಹತಾಂ ದೃಷ್ಟ್ವಾ ಸೌಬಲಂ ಚ ಭಯಾರ್ದಿತಮ್ |
ದುದ್ರುವುಸ್ತಾವಕಾಃ ಸರ್ವೇ ಭಯೇ ಜಾತೇ ಸಸೌಬಲಾಃ ॥47॥
ಶಕ್ತ್ಯಾಯುಧವು ನಾಶವಾಗಿದ್ದನ್ನು ನೋಡಿದ ಶಕುನಿಯು ಭಯಗೊಂಡಿದ್ದಾನೆ. ಇವೆರಡನ್ನೂ ನೋಡಿದ ನಿನ್ನ ಕಡೆಯವರು ಮತ್ತು ಶಕುನಿಯ ಕಡೆಯವರು ಭಯದಿಂದಾಗಿ ಓಡಿಹೋದರು.
ಅಥೋತ್ಕ್ರುಷ್ಟಂ ಮಹಚ್ಚಾಸೀತ್ ಪಾಂಡವೈರ್ಜಿತಕಾಶಿಭಿಃ |
ಧಾರ್ತರಾಷ್ಟ್ರಾಃ ತತಃ ಸರ್ವೇ ಪ್ರಾಯಶೋ ವಿಮುಖಾ ಭವನ್ ॥48॥
ಜಯವನ್ನೇ ಬಯಸುವ ಪಾಂಡವರು ಮಾಡಿದ ಯುದ್ಧವು ಬಹಳ ಉತ್ತಮವಾಗಿತ್ತು. ಅನಂತರ ದುರ್ಯೋಧನನ ಎಲ್ಲಾ ಸೈನ್ಯವೂ ಬಹುಪಾಲು ಯುದ್ಧದಿಂದ ಹಿಂತಿರುಗಿತು.
ತಾನ್ ವೈ ವಿಮನಸೋ ದೃಷ್ಟ್ವಾ ಮಾದ್ರೀಪುತ್ರಃ ಪ್ರತಾಪವಾನ್ |
ಶರೈರನೇಕಸಾಹಸ್ರೈಃ ವಾರಯಾಮಾಸ ಸಂಯುಗೇ ॥49॥
ಯುದ್ಧದಲ್ಲಿ ಉತ್ಸಾಹವನ್ನು ಕಳೆದುಕೊಂಡ ಆ ಸೈನ್ಯವನ್ನು ಪ್ರತಾಪಿಯಾದ ಸಹದೇವನು ಅನೇಕ ಸಾವಿರ ಬಾಣಗಳನ್ನು ಬಿಟ್ಟು ತಡೆಯುತ್ತಾನೆ.
ತತೋ ಗಾಂಧಾರಕೈರ್ಗುಪ್ತಂ ಶ್ರೇಷ್ಠೈರಶ್ವೈರ್ಜಯೇ ಧೃತಮ್ |

ಆಸಸಾದ ರಣೇ ಯಾಂತಂ ಸಹದೇವೋಽಥ ಸೌಬಲಮ್ ॥50॥
ಅನಂತರ ಯುದ್ಧದಲ್ಲಿ ಗಾಂಧಾರದೇಶದ ಶ್ರೇಷ್ಠ ಅಶ್ವಾರೋಹಿ ಯೋಧರಿಂದ ರಕ್ಷಿತನಾಗಿ ಹೋಗುತ್ತಿರುವ ಶಕುನಿಯನ್ನು ಸಹದೇವನು ಸಮೀಪಿಸಿದನು.
ಸ್ವಮಂಶಮವಶಿಷ್ಟಂ ಸ ಸಂಸ್ಮೃತ್ಯ ಶಕುನಿಂ ನೃಪ |
ರಥೇನ ಕಾಂಚನಾಂಗೇನ ಸಹದೇವಃ ಸಮಭ್ಯಯಾತ್ ॥51॥
ರಾಜನ್! ಶಕುನಿಯನ್ನು ತನ್ನ ಭಾಗವಾಗಿ ಉಳಿದುಕೊಂಡಿರುವುದನ್ನು ಸ್ಮರಿಸಿಕೊಂಡ ಸಹದೇವನು ಬಂಗಾರದ ಅವಯವಗಳುಳ್ಳ ರಥದ ಮೇಲಿದ್ದುಕೊಂಡು ಬಂದನು.
ಅಧಿಜ್ಯಂ ಬಲವತ್ ಕೃತ್ವಾ ವ್ಯಾಕ್ಷಿಪನ್ ಸಶರಂ ಧನುಃ |
ಸ ಸೌಬಲಮಭಿದ್ರುತ್ಯ ಗೃಧ್ರಪಕ್ಷೈಃ ಶಿಲಾಸಿತೈಃ ॥52॥
ಭೃಶಮಭ್ಯಹನತ್ ಕ್ರುದ್ಧಃ ತೋತ್ತ್ರೈರಿವ ಮಹಾದ್ವಿಪಮ್ |
ಉವಾಚ ಚೈನಂ ಮೇಧಾವೀ ನಿಗೃಹ್ಯ ಸ್ಮಾರಯನ್ನಿವ ॥53॥
ತನ್ನ ದೊಡ್ಡದಾದ ಬಿಲ್ಲಿನ ಹಗ್ಗವನ್ನು ಶಬ್ದಮಾಡುತ್ತಾ ಕಟ್ಟಿಕೊಂಡು, ಬಾಣಸಹಿತವಾದ ಬಿಲ್ಲನ್ನು ಪ್ರಯೋಗಿಸುತ್ತಾ, ಶಕುನಿಯ ಮೇಲೆ ಸಾಣೆಕಲ್ಲಿನಲ್ಲಿ ಹರಿತಗೊಳಿಸಿದ ಬಾಣಗಳನ್ನು ಬಿಡುತ್ತಾ, ಶಕುನಿಯನ್ನು ಅಟ್ಟಿಸಿಕೊಂಡು ಹೋದನು. ಆ ಬಾಣಗಳಿಗೆ ಗಿಡುಗನ ರೆಕ್ಕೆಗಳಿದ್ದವು. ಕ್ರುದ್ಧನಾದ ಸಹದೇವನು ದೊಡ್ಡದಾದ ಆನೆಯನ್ನು ಚಾಟಿಗಳಿಂದ ಹೊಡೆಯುವಂತೆ ಬಾಣಗಳಿಂದ ಶಕುನಿಯನ್ನು ಚೆನ್ನಾಗಿ ಹೊಡೆಯುತ್ತಾನೆ. ಮೇಧಾವಿಯಾದ ಸಹದೇವನು ಶಕುನಿಯನ್ನು ತಡೆಹಿಡಿದುಕೊಂಡು ಅವನಿಗೆ ಹಿಂದಿನ ಘಟನೆಗಳನ್ನು ಸ್ಮರಣೆಗೆ ತಂದುಕೊಡುತ್ತಾ ಹೀಗೆ ಹೇಳುತ್ತಾನೆ.
ಸಹದೇವಃ
ಕ್ಷತ್ರಧರ್ಮೇ ಸ್ಥಿತೋ ಭೂತ್ವಾ ಯುಧ್ಯಸ್ವ ಪುರುಷೋ ಭವ |
ಯತ್ ತದಾ ಭಾಷಸೇ ಮೂಢ ಗೃಹ್ಣನ್ನಕ್ಷಾನ್ ಸಭಾತಳೇ ॥54॥
ಫಲಮದ್ಯ ಪ್ರಪದ್ಯಸ್ವ ಕರ್ಮಣಸ್ತಸ್ಯ ದುರ್ಮತೇ |
ನಿಹತಾಸ್ತೇ ದುರಾತ್ಮಾನೋ ಯೇಽಸ್ಮಾನಪ್ಯಹಸನ್ ಪುರಾ ॥55॥
ಸಹದೇವ ಮೂಢನಾದ ಶಕುನಿಯೇ! ಕ್ಷತ್ರಿಯಧರ್ಮಕ್ಕನುಸಾರವಾಗಿ ನಿಂತುಕೊಂಡು ಯುದ್ಧ ಮಾಡು. ದುಷ್ಟಬುದ್ಧಿಯವನೇ! ದ್ಯೂತಸಭೆಯಲ್ಲಿ ಏನು ಹೇಳಿದ್ದಿಯೋ ಆ ಕರ್ಮದ ಫಲವನ್ನು ಇಂದು ಅನುಭವಿಸು. ಹಿಂದೆ ದ್ಯೂತದಲ್ಲಿ ಸೋತ ನಮ್ಮನ್ನು ನೋಡಿ ಯಾರೆಲ್ಲಾ ನಕ್ಕಿದ್ದರೋ ದುಷ್ಟರಾದ ಅವರೆಲ್ಲಾ ಇಂದು ಸತ್ತುಹೋಗಿದ್ದಾರೆ.
ದುರ್ಯೋಧನಃ ಕುಲಾಂಗಾರಃ ಶಿಷ್ಟಸ್ತ್ವಂ ತಸ್ಯ ಮಾತುಲಃ ॥56॥
ದುರ್ನಡತೆಯ ದುರ್ಯೋಧನ ಮತ್ತು ಅವನ ಸೋದರಮಾವನಾದ ನೀನು ಮಾತ್ರ ಉಳಿದುಕೊಂಡಿದ್ದೀರಿ.
ಅದ್ಯ ತೇ ಪಾತಯಿಷ್ಯಾಮಿ ಶರೇಣ ಗ್ರಥಿತಂ ಶಿರಃ |
ವೃಕ್ಷಾತ್ ಫಲಮಿವೋದ್ವೃತ್ಯ ಲಗುಡೇನ ಪ್ರಮಾಥಿನಾ ॥57॥
ಮರದಿಂದ ಹಣ್ಣನ್ನು ಕೋಲಿನಿಂದ ಬಡಿದು ಬೀಳಿಸುವಂತೆ ಇವತ್ತು ಬಾಣದಿಂದ ನಿನ್ನ ತಲೆಯನ್ನು ಕೆಳಗೆ ಬೀಳಿಸುತ್ತೇನೆ.
ಏವಮುಕತ್ವ ಮಹಾರಾಜ ಸಹದೇವೋ ಮಹಾಬಲಃ |
ಸಂಕ್ರುದ್ಧೋ ನರಶಾರ್ದೂಲೋ ವೇಗೇನಾಭಿಜಗಾಮ ಹ ॥58॥
ಮಹಾರಾಜನೇ! ಹೀಗೆ ಹೇಳಿದ ನರೋತ್ತಮನಾದ ಸಹದೇವನು ಕೋಪದಿಂದ ವೇಗವಾಗಿ ಶಕುನಿಯ ಎದುರುಗಡೆ ಬಂದನು.
ಅಭಿಗಮ್ಯ ತು ದುರ್ಧರ್ಷಃ ಸಹದೇವೋ ವಿಶಾಂಪತೇ |
ವಿಕೃಷ್ಯ ಬಲವಚ್ಚಾಪಂ ಕ್ರೋಧೇನ ಪ್ರದಹನ್ನಿವ ॥59॥
ಶಕುನಿಂ ದಶಭಿರ್ವಿದ್ಧ್ವಾ ಚತುರ್ಭಿಶ್ಚಾಸ್ಯ ವಾಜಿನಃ |
ಛತ್ರಂ ಧ್ವಜಂ ಧನುಶ್ಚಾಸ್ಯ ಛಿತ್ವಾ ಸಿಂಹ ಇವಾನದತ್ ॥60॥
ರಾಜನೇ! ಎದುರಿಸಲು ಅಶಕ್ಯನಾದ ಸಹದೇವನು ಎದುರು ಬಂದು ಗಟ್ಟಿಯಾದ ತನ್ನ ಬಿಲ್ಲನ್ನು ಎಳೆದು ನಗುತ್ತಾ, ಶಕುನಿಯ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿದನು. ನಾಲ್ಕು ಬಾಣಗಳಿಂದ ಶಕುನಿಯ ಕುದುರೆಗಳನ್ನು ಹೊಡೆದನು. ಶಕುನಿಯ ರಥದ ಧ್ವಜ, ಛತ್ರ ಮತ್ತು ಬಿಲ್ಲನ್ನು ತುಂಡರಿಸಿ ಸಿಂಹದಂತೆ ಘರ್ಜಿಸಿದನು.
ಛಿನ್ನಧ್ವಜಧನುಶ್ಛತ್ರಃ ಸಹದೇವೇನ ಸೌಬಲಃ |
ಕೃತೋ ವಿದ್ಧಶ್ಚ ಬಹುಭಿಃ ಸರ್ವಮರ್ಮಸು ಸಾಯಕೈಃ ॥61॥
ಶಕುನಿಯು ತನ್ನ ಧ್ವಜ, ಬಿಲ್ಲುಗಳನ್ನು ಕಳೆದುಕೊಂಡಿದ್ದಾನೆ. ಸಹದೇವನು ಪ್ರಯೋಗಿಸಿದ ಅನೇಕ ಬಾಣಗಳಿಂದ ಎಲ್ಲಾ ಮರ್ಮಸ್ಥಾನಗಳಲ್ಲಿ ಪೆಟ್ಟುತಿಂದು ಗಾಯಗೊಂಡಿದ್ದಾನೆ.
ತತೋ ಭೂಯೋ ಮಹಾಬಾಹುಃ ಸಹದೇವಃ ಪ್ರತಾಪವಾನ್ |
ಶಕುನೇಃ ಪ್ರೇಷಯಾಮಾಸ ಶರವೃಷ್ಟಿಂ ದುರಾಸದಾಮ್ ॥62॥
ಅನಂತರ ಪ್ರತಾಪಿಯಾದ ಸಹದೇವನು ಪುನಃ ಶಕುನಿಯ ಮೇಲೆ ಬಾಣಗಳ ಮಳೆಯನ್ನೇ ಸುರಿಸುತ್ತಾನೆ.
ತತಸ್ತು ಕ್ರುದ್ಧಃ ಸುಬಲಸ್ಯ ಪುತ್ರೋ
ಮಾದ್ರೀಸುತಂ ಸಹದೇವಂ ವಿಮರ್ದೇ |
ಪ್ರಾಸೇನ ಜಾಂಬೂನದಭೂಷಣೇನ
ಜಿಘಾಂಸುರೇಕೋಽಭಿಪಪಾತ ಶೀಘ್ರಮ್ ॥63॥

ಕುಪಿತನಾದ ಶಕುನಿಯು ಯುದ್ಧದಲ್ಲಿ ಸಹದೇವನನ್ನು ಕೊಲ್ಲುವ ಇಚ್ಛೆಯಿಂದ ಬಂಗಾರದ ಅಲಂಕಾರವುಳ್ಳ ಪ್ರಾಸಾಯುಧವನ್ನು ವೇಗವಾಗಿ ಸಹದೇವನ ಮೇಲೆ ಬೀಳಿಸಿದನು.

ಮಾದ್ರೀಸುತಸ್ತಸ್ಯ ಸಮುದ್ಯತಂ ತಂ
ಪ್ರಾಸಂ ಸುವೃತ್ತೌ ಚ ಭುಜೌ ರಣಾಗ್ರೇ |
ಭಲ್ಲೈಸ್ತ್ರಿಭಿರ್ಯುಗಪತ್ ಸಂಚಕರ್ತ
ನನಾದ ಚೋಚ್ಚೈಸ್ತರಸಾಽಽಜಿಮಧ್ಯೇ ॥64॥

ಯುದ್ಧದ ಮುಂಚೂಣಿಯಲ್ಲಿದ್ದ ಸಹದೇವನು ಭಲ್ಲೆಯಿಂದ ಶಕುನಿಯ ಪ್ರಾಸಾಯುಧವನ್ನೂ, ಎರಡು ಕೈಗಳನ್ನೂ ಏಕಕಾಲದಲ್ಲಿ ತುಂಡರಿಸಿದನು. ಮತ್ತು ರಣರಂಗದ ಮಧ್ಯದಲ್ಲಿ ಜೋರಾಗಿ ಶಬ್ದವನ್ನು ಮಾಡಿದನು.

ತಸ್ಯಾಶುಕಾರೀ ಸುಸಮಾಹಿತೇನ
ಸುವರ್ಣಪುಂಖೇನ ದೃಢಾಯಸೇನ |
ಭಲ್ಲೇನ ಸರ್ವಾವರಣಾತಿಗೇನ
ಶಿರಃ ಶರೀರಾತ್ ಪ್ರಮಮಾಥ ಭೂಯಃ ॥65॥

ವೇಗವಾಗಿ ಯುದ್ಧಮಾಡುತ್ತಿದ್ದ ಸಹದೇವನು ಗಟ್ಟಿಯಾದ ಕಬ್ಬಿಣದಿಂದ ರಚಿತವಾದ, ಬಂಗಾರದ ರೆಕ್ಕೆಗಳುಳ್ಳ ಭಲ್ಲೆಯನ್ನು ಚೆನ್ನಾಗಿ ಪ್ರಯೋಗಿಸಿದನು. ಆ ಭಲ್ಲೆಯು ಎಲ್ಲಾ ಕವಚಗಳನ್ನೂ ಸೀಳಿ ಒಳಹೋಗುವಂತಹದ್ದು. ಅದರಿಂದ ಶಕುನಿಯ ತಲೆಯನ್ನು ಚೆನ್ನಾಗಿ ಮತ್ತೆ ಮತ್ತೆ ಥಳಿಸಿದನು.

ಶರೇಣ ಕಾರ್ತಸ್ವರಭೂಷಿತೇನ
ದಿವಾಕರಾಭೇಣ ಸುಸಂಶಿತೇನ |
ಹೃತೋತ್ತಮಾಂಗೋ ಯುಧಿ ಪಾಂಡವೇನ
ಪಪಾತ ಭೂಮೌ ಸುಬಲಸ್ಯ ಪುತ್ರಃ ॥66॥

ಸೂರ್ಯನ ಪ್ರಭೆಯುಳ್ಳ, ಬಂಗಾರದ ಅಲಂಕಾರವುಳ್ಳ ಹರಿತವಾದ ಬಾಣಗಳಿಂದ ಸಹದೇವನು ಶಕುನಿಯ ತಲೆಯನ್ನು ಕಡಿದನು. ಯುದ್ಧದಲ್ಲಿ ತಲೆಯನ್ನು ಕಳೆದುಕೊಂಡ ಶಕುನಿಯು ಭೂಮಿಗೆ ಬಿದ್ದನು.

ಶತ್ರೋಃ ಶಿರೋ ವೇಗವತಾ ಶರೇಣ
ಸುವರ್ಣಪುಂಖೇನ ಶಿಲಾಶಿತೇನ |
ಪ್ರಾವೇಪಯತ್ ಕುಪಿತಃ ಪಾಂಡುಪುತ್ರೋ
ಯತ್ತತ್ಕುರೂಣಾಮನಯಸ್ಯ ಮೂಲಮ್ ॥67॥

ಕುಪಿತನಾದ ಸಹದೇವನು ಕೌರವರ ಅನ್ಯಾಯಕ್ಕೆ ಮೂಲವಾದ ಶಕುನಿಯ ತಲೆಯನ್ನು ಸುವರ್ಣಪುಂಖವುಳ್ಳ, ಸಾಣೆಕಲ್ಲಿನಲ್ಲಿ ಹರಿತಗೊಳಿಸಿದ ಬಾಣದಿಂದ ಅತ್ತಿಂದಿತ್ತ ಹೊರಳಾಡಿಸಿದನು.

ಮರ್ಮಚ್ಛಿದಾ ವೇಗವತಾ ಶರೇಣ
ತಸ್ಯೋತ್ತಮಾಂಗಂ ಚ ಭುಜೌ ಸುವೃತ್ತೌ |
ಶಕ್ತಿಶ್ಚ ಭೂಮೌ ನಿಪಪಾತ ಪೂರ್ವಂ
ಪಶ್ಚಾತ್ ಕಬಂಧಂ ರುಧಿರಾವಸಿಕ್ತಮ್ ॥68॥

ರಾಜನ್! ಮರ್ಮಘಾತಿಯಾದ ವೇಗವಾದ ಬಾಣವು ತಾಗಿ ಮೊದಲು ಶಕುನಿಯ ತಲೆಯು ನೆಲಕ್ಕೆ ಬಿತ್ತು. ಅನಂತರ ಅವನ ರಕ್ತಸಿಕ್ತವಾದ ಹಾಗೂ ನಡುಗುತ್ತಿರುವ ದೇಹವು ರಥದಿಂದ ಕೆಳಕ್ಕೆ ಜೋರಾಗಿ ಬಿದ್ದಿತು. ದೇಹದಲ್ಲಿ ಬಂಗಾರದ ನಕ್ಷತ್ರಗಳ ಆಭರಣಗಳು ಅಲಂಕಾರವಾಗಿದ್ದವು. ಆಗ ಮಹಾತ್ಮನಾದ ಸಹದೇವನು ಸಿಂಹನಾದವನ್ನು ಮಾಡಿದನು.

ವಿಷ್ಯಂದಮಾನಂ ನಿಪಪಾತ ಘೋರಂ
ರಥೋತ್ತಮಾತ್ ಪಾರ್ಥಿವ ಪಾರ್ಥಿವಸ್ಯ |
ಸುವರ್ಣತಾರಾಗಣಭೂಷಿತಾಂಗಂ
ಸ ಸಿಂಹನಾದಂ ವಿನದನ್ ಮಹಾತ್ಮಾ ॥69॥

ನಿಹತ್ಯ ಪಾಪಂ ಸುಬಲಸ್ಯ ಪುತ್ರಂ
ಜಾತಂ ಕುರೂಣಾಮನಯಸ್ಯ ಮೂಲಮ್ |
ಸುವರ್ಣಪುಂಖೈರಿಷುಭಿಃ ಪತಂತಮ್
ಪ್ರಾವೇಶಯತ್ ಕುಪಿತಃ ಪಾಂಡುಪುತ್ರಃ ॥70॥

ಕುಪಿತನಾದ ಸಹದೇವನು ಕೌರವರ ದುರ್ನಡತೆಗೆ ಮೂಲಪ್ರೇರಕನಾದ ಪಾಪಿ ಶಕುನಿಯನ್ನು ಬಂಗಾರದ ರೆಕ್ಕೆಗಳುಳ್ಳ ಬಾಣಗಳಿಂದ ಕೆಳಗೆ ಬೀಳಿಸಿ ಮೃತ್ಯುವಿನ ಹೊಟ್ಟೆಯೊಳಗೆ ಪ್ರವೇಶಿಸುವಂತೆ ಮಾಡಿದನು.

ತಂ ಪಾಂಡುಪುತ್ರಂ ಪ್ರತಿಪೂಜಯಂತೋ
ಹೃಷ್ಟಾ ಬ್ರುವಾಣಾಃ ಸಹದೇವಮಾಜೌ |
ದಿಷ್ಟ್ಯಾ ಹತೋ ನೈಕೃತಿಕೋ ದುರಾತ್ಮಾ
ಸಹಾತ್ಮಜೋ ವೀರ ರಣೇ ತ್ವಯೇತಿ ॥71॥

ರಣರಂಗದಲ್ಲಿ ಎಲ್ಲರೂ ಸಹದೇವನ ಪ್ರತಾಪದಿಂದ ಸಂತುಷ್ಟರಾಗಿ ಅವನನ್ನು ಕೊಂಡಾಡಿ ಪೂಜಿಸುತ್ತಾರೆ. ವೀರನಾದ ಸಹದೇವನೇ! ದುಷ್ಟನಾದ ಶಕುನಿಯನ್ನೂ ಅವನ ಮಗನನ್ನೂ ಯುದ್ಧದಲ್ಲಿ ಕೊಂದಿದ್ದಿ. ಇದು ನಮ್ಮ ಅದೃಷ್ಟ! ಎಂದು ಅವನನ್ನು

ಹೊಗಳುತ್ತಾರೆ.
ಹೃತೋತ್ತಮಾಂಗಂ ಶಕುನಿಂ ಸಮೀಕ್ಷ್ಯ
ಭೂಮೌ ಶಯಾನಂ ರುಧಿರಾರ್ದ್ರಗಾತ್ರಮ್ |
ಯೋಧಾಸ್ತ್ವದೀಯಾ ಭಯನಷ್ಟಸತ್ತ್ವಾ
ದಿಶಃ ಪ್ರಜಗ್ಮುಃ ಪ್ರಗೃಹೀತಶಸ್ತ್ರಾಃ ॥72॥
ತಲೆಕಡಿದು ರಕ್ತಸಿಕ್ತವಾದ ದೇಹದೊಡನೆ ನೆಲದಲ್ಲಿ ಮಲಗಿರುವ ಶಕುನಿಯನ್ನು ನೋಡಿದ ನಿನ್ನ ಕಡೆಯ ಯೋಧರು ಭಯದಿಂದಾಗಿ ತಮ್ಮೆಲ್ಲಾ ಶಕ್ತಿಯನ್ನು ಕಳೆದುಕೊಂಡವರಾಗಿ, ತಮ್ಮ ಆಯುಧಗಳನ್ನು ಹಿಡಿದುಕೊಂಡು ಎಲ್ಲಾ ದಿಕ್ಕುಗಳಲ್ಲಿಯೂ ಓಡಿಹೋದರು.
ವಿಪ್ರದ್ರುತಾಃ ಶುಷ್ಕಮುಖಾ ವಿಸಂಜ್ಞಾ
ಗಾಂಡೀವಘೋಷೇಣ ಸಮಾಹತಾಶ್ಚ |
ಇತಸ್ತತೋ ಭಗ್ನರಥಾಶ್ವನಾಗಾಃ
ಪದಾತಯಶ್ಚೈವ ಸಧಾರ್ತರಾಷ್ಟ್ರಾಃ ॥73॥
ಮತ್ತೊಂದೆಡೆ ಕುದುರೆ ಆನೆ ರಥಗಳನ್ನು ಕಳೆದುಕೊಂಡಿರುವ ಪದಾತಿಗಳು ಗಾಂಡೀವಧನುಸ್ಸಿನ ಶಬ್ದದಿಂದಾಗಿ ಭಯಗೊಂಡು ಕಳೆಗುಂದಿದ ಮುಖದೊಂದಿಗೆ ವಿವೇಕಹೀನರಾಗಿ ಅಲ್ಲಲ್ಲಿ ಓಡಿಹೋದರು.
ತತೋ ರಥಾಚ್ಛಕುನಿಂ ಪಾತಯಿತ್ವಾ
ಮುದಾಽನ್ವಿತಾ ಭಾರತ ಪಾಂಡವೇಯಾಃ |
ಶಂಖಾನ್ ಪ್ರದಧ್ಮುಃ ಸಮರೇ ಪ್ರಹೃಷ್ಟಾಃ
ಸಕೇಶವಾಃ ಸೈನಿಕಾನ್ ಹರ್ಷಯಂತಃ ॥74॥
ಭರತಕುಲೋದ್ಭವನೇ! ಶಕುನಿಯನ್ನು ರಥದಿಂದ ಕೆಳಕ್ಕೆ ಬೀಳಿಸಿ, ಆನಂದ ಪೂರ್ಣರಾದ ಪಾಂಡವರು ಶ್ರೀಕೃಷ್ಣನೊಡನೆ ಸಂತೋಷದಿಂದ ಶಂಖನಾದವನ್ನು ಮಾಡಿ ತಮ್ಮ ಸೈನಿಕರಿಗೂ ಸಂತೋಷವನ್ನು ಉಂಟುಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಶಕುನಿವಧೋ ನಾಮ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಶಲ್ಯವಧಪರ್ವ ॥
* * * * *
2. ಹ್ರದಪ್ರವೇಶಪರ್ವ
ಇಪ್ಪತ್ತೊಂಬತ್ತನೆಯ ಅಧ್ಯಾಯ
ಉಳಿದ ಕೌರವಸೇನೆಯ ನಾಶ. ಸಂಜಯನನ್ನು ಬಂಧಿಸದೆ ಬಿಟ್ಟಿದ್ದು. ದುರ್ಯೋಧನನು ಸರೋವರವನ್ನು ಪ್ರವೇಶಿಸಿದ್ದು. ಯುಯುತ್ಸುವು ಅರಮನೆಯ ಸ್ತ್ರೀಯರನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಹೋಗಿದ್ದು.
ಸಂಜಯಃ
ತತಃ ಕ್ರುದ್ಧಾ ಮಹಾರಾಜ ಸೌಬಲಸ್ಯ ಪದಾನುಗಾಃ |
ತ್ಯಕ್ತ್ವಾ ಜೀವಿತಮಾಕ್ರಂದೇ ಪಾಂಡವಾನ್ ಪರ್ಯವಾರಯನ್ ॥1॥
ಸಂಜಯ ಮಹಾರಾಜನೇ! ಅನಂತರ ಕೋಪಗೊಂಡ ಶಕುನಿಯ ಪದಾತಿಗಳು ಪ್ರಾಣವನ್ನು ಬಿಡುವವರಾಗಿ ಯುದ್ಧದಲ್ಲಿ ಪಾಂಡವರನ್ನು ಸುತ್ತುವರಿದರು.
ತಾನರ್ಜುನಃ ಪ್ರತ್ಯಗೃಹ್ಣಾದ್ ಸಹದೇವಜಯೇ ಧೃತಃ |
ಭೀಮಸೇನಶ್ಚ ತೇಜಸ್ವೀ ಕ್ರುದ್ಧಾಶೀವಿಷದರ್ಶನಃ ॥2॥
ಸಹದೇವನಿಗೆ ಜಯ ತಂದುಕೊಡಲು ನಿಶ್ಚಯಿಸಿಕೊಂಡಿದ್ದ ಅರ್ಜುನನು ಆ ಪದಾತಿಗಳನ್ನು ತಡೆಹಿಡಿದನು. ಕುಪಿತಗೊಂಡ ಹಾವಿನ ಹಾಗೆ ಕಾಣಿಸುವ ಭೀಮನೂ ಅವರನ್ನು ತಡೆಹಿಡಿದನು.
ಶಕ್ತ್ಯೃಷ್ಟಿಪ್ರಾಸಹಸ್ತಾನಾಂ ಸಹದೇವಂ ಜಿಘಾಂಸತಾಮ್ |
ಸಂಕಲ್ಪಮಕರೋನ್ಮೋಘಂ ಗಾಂಡೀವೇನ ಧನಂಜಯಃ ॥3॥
ಶಕ್ತಿ, ಋಷ್ಟಿ, ಪ್ರಾಸ ಆಯುಧಗಳನ್ನು ಕೈಯಲ್ಲಿ ಹಿಡಿದುಕೊಂಡು ಸಹದೇವನ ಮೇಲೆ ಆಕ್ರಮಣ ಮಾಡುವ ಇಚ್ಛೆಯುಳ್ಳ ಆ ಪದಾತಿಗಳ ಸಂಕಲ್ಪವನ್ನು ಅರ್ಜುನನು ತನ್ನ ಗಾಂಡೀವಧನುಸ್ಸಿನಿಂದ ಸುಳ್ಳನ್ನಾಗಿ ಮಾಡಿದನು.
ಪ್ರಗೃಹೀತಾಯುಧಾನ್ ಬಾಹೂನ್ ಯೋಧಾನಾಮಭಿಧಾವತಾಮ್ |
ಭಲ್ಲೈಶ್ಚಿಚ್ಛೇದ ಬೀಭತ್ಸುಃ ಶಿರಾಂಸ್ಯಪಿ ಭುಜಾನಪಿ ॥4॥
ಓಡಿಕೊಂಡು ಎದುರಿಸುತ್ತಿದ್ದ ಆ ಪದಾತಿಗಳ ಕೈಗಳನ್ನು ಆಯುಧಸಮೇತವಾಗಿ ಭಲ್ಲೆಯಿಂದ ಅರ್ಜುನನು ತುಂಡರಿಸಿದನು. ಹಾಗೆಯೇ ತಲೆಗಳನ್ನೂ ಭುಜಗಳನ್ನೂ ಕತ್ತರಿಸಿದನು.
ತೇ ಹತಾಃ ಪ್ರತ್ಯಪದ್ಯಂತ ವಸುಧಾಂ ವಿಗತಾಸವಃ |
ತ್ವರತಾ ಲೋಕವೀರೇಣ ನಿಹತಾಃ ಸವ್ಯಸಾಚಿನಾ ॥5॥
ಲೋಕವೀರನಾದ, ಶೀಘ್ರವಾಗಿ ಯುದ್ಧಮಾಡುವ ಸವ್ಯಸಾಚಿ ಅರ್ಜುನನಿಂದ ಹತರಾದವರು ಪ್ರಾಣಗಳನ್ನು ಕಳೆದುಕೊಂಡು ಭೂಮಿಯಲ್ಲಿ ಬಿದ್ದರು.
ತತೋ ದುರ್ಯೋಧನೋ ರಾಜಾ ದೃಷ್ಟ್ವಾ ಸ್ವಬಲಸಂಕ್ಷಯಮ್ |

ಹತಶೇಷಾನ್ ಸಮಾನೀಯ ರಥಾನ್ ನವಶತಾನ್ ವಿಭೋ ॥6॥
ಕುಂಜರಾಂಶ್ಚ ಹಯಾಂಶ್ಚೈವ ಪಾದಾತಾಂಶ್ಚ ಪರಂತಪಃ |
ಉವಾಚ ದುಃಖಿತಾನ್ ಸರ್ವಾನ್ ಧಾರ್ತರಾಷ್ಟ್ರೋ ಮಹೀಪತಿಃ ॥7॥
ಅನಂತರ ರಾಜ ದುರ್ಯೋಧನನು ತನ್ನ ಸೈನ್ಯವು ಕ್ಷೀಣಿಸುವುದನ್ನು ನೋಡಿ ಉಳಿದ ಒಂಬೈನೂರು ರಥಗಳನ್ನು, ಆನೆಗಳನ್ನು, ಕುದುರೆಗಳನ್ನು ಹಾಗೂ ಪದಾತಿಗಳನ್ನು ಒಟ್ಟು ಸೇರಿಸಿದನು. ಶತ್ರುತಾಪಕನಾದ ರಾಜ ದುರ್ಯೋಧನನು ದುಃಖಿತರಾದ ಅವರನ್ನು ಕುರಿತು ಹೀಗೆ ಹೇಳುತ್ತಾನೆ.
ದುರ್ಯೋಧನಃ
ಸಮಾಸಾದ್ಯ ರಣೇ ಸರ್ವಾನ್ ಪಾಂಡವಾನ್ ಸಸುಹೃದ್ಗಣಾನ್ |
ಪಾಂಚಾಲ್ಯಂ ಚಾಪಿ ಸಬಲಂ ಹತ್ವಾ ಶೀಘ್ರಂ ನಿವರ್ತತ ॥8॥
ದುರ್ಯೋಧನ ಯುದ್ಧದಲ್ಲಿ ಎಲ್ಲಾ ಪಾಂಡವರನ್ನೂ, ಅವರ ಸ್ನೇಹಿತರನ್ನೂ, ಸೈನ್ಯಸಮೇತನಾದ ಧೃಷ್ಟದ್ಯುಮ್ನನನ್ನು ಎದುರಿಸಿ, ಅವರೆಲ್ಲರನ್ನೂ ಕೊಂದು ಬೇಗನೇ ಹಿಂತಿರುಗಿ ಬನ್ನಿ.
ಸಂಜಯಃ
ತಸ್ಯೈತೇ ಶಿರಸಾ ಗೃಹ್ಯ ಶಾಸನಂ ಯುದ್ಧದುರ್ಮದಾಃ |
ಪ್ರತ್ಯುದ್ಯಯೂ ರಣೇ ಪಾರ್ಥಾನ್ ತವ ಪುತ್ರಸ್ಯ ಶಾಸನಾತ್ ॥9॥
ಸಂಜಯ ಯುದ್ಧಮದವನ್ನು ಹೊಂದಿದ ಅವರೆಲ್ಲರೂ ದುರ್ಯೋಧನನ ಆ ಆಜ್ಞೆಯನ್ನು ತಲೆಬಾಗಿ ಸ್ವೀಕರಿಸಿ, ನಿನ್ನ ಮಗನ ಅಪ್ಪಣೆಯ ಪ್ರಕಾರ ಯುದ್ಧದಲ್ಲಿ ಪಾಂಡವರನ್ನು ಎದುರಿಸಿದರು.
ತಾನಭ್ಯಾಪತತಃ ಶೀಘ್ರಂ ಹತಶೇಷಾನ್ ಮಹಾರಣೇ |
ಶರೈರಾಶೀವಿಷಾಕಾರೈಃ ಪಾಂಡವಾಃ ಸಮವಾಕಿರನ್ ॥10॥
ಆ ಮಹಾಯುದ್ಧದಲ್ಲಿ ಅಳಿದುಳಿದ ಕೌರವಯೋಧರು ತಮ್ಮ ಮೇಲೆ ಆಕ್ರಮಿಸಿದಾಗ ಪಾಂಡವರು ಅವರ ಮೇಲೆ ಹಾವಿನ ಆಕಾರದ ಬಾಣಗಳನ್ನು ಶೀಘ್ರದಲ್ಲಿ  ಚೆನ್ನಾಗಿ ಬೀಳಿಸಿದರು.
ತತಃ ಸೈನ್ಯಂ ಸಮರೇ ತಸ್ಮಿನ್ ಮುಹೂರ್ತೇನ ಮಹಾತ್ಮಭಿಃ |
ಅವಿಧ್ಯತ ರಣಂ ಪ್ರಾಪ್ಯ ತ್ರಾತಾರಂ ನಾಭ್ಯವಿಂದತ ॥11॥
ಆ ಯುದ್ಧದಲ್ಲಿ ಒಂದು ಮುಹೂರ್ತಕಾಲದಲ್ಲಿಯೇ ಮಹಾತ್ಮರಾದ ಪಾಂಡವರಿಂದ ಕೌರವಸೈನ್ಯವೆಲ್ಲವೂ ಪೆಟ್ಟುತಿಂದು ಜರ್ಝರಿತವಾಯಿತು. ಯುದ್ಧಕ್ಕೆ ಬಂದ ಆ ಸೈನ್ಯಕ್ಕೆ ಯಾವ ರಕ್ಷಕರೂ ಇಲ್ಲವಾದರು.
ಪಲಾಯಮಾನಂ ತು ಭಯಾನ್ನಾವತಿಷ್ಠತಿ ದಂಸಿತಮ್ ॥12॥
ಯುದ್ಧಕ್ಕಾಗಿ ಕವಚಧಾರಣೆ ಮಾಡಿಕೊಂಡಿದ್ದರೂ ಭಯದಿಂದಾಗಿ ಓಡುತ್ತಿರುವ ಕೌರವಸೈನ್ಯವು ಯುದ್ಧದಲ್ಲಿ ನಿಲ್ಲಲಿಲ್ಲ.
ಅಶ್ವೈರ್ವಿಪರಿಧಾವದ್ಭಿಃ ಸೈನ್ಯೇನ ರಜಸಾ ವೃತೇ |
ನ ಪ್ರಾಜ್ಞಾಯಂತ ಸಮರೇ ದಿಶಶ್ಚ ಪ್ರದಿಶಸ್ತಥಾ ॥13॥
ದಿಕ್ಕಾಪಾಲಾಗಿ ಓಡುತ್ತಿದ್ದ ಕುದುರೆಗಳು ಹಾಗೂ ಸೈನ್ಯದಿಂದಾಗಿ ಎದ್ದ ಧೂಳು ಎಲ್ಲವನ್ನೂ ಮರೆಮಾಚಿತು. ಅದರಿಂದಾಗಿ ದಿಕ್ಕು-ವಿದಿಕ್ಕುಗಳು ಯಾರಿಗೂ ಗೋಚರಿಸಲಿಲ್ಲ.
ತತಸ್ತು ಪಾಂಡವಾನೀಕಾನ್ನಿಃಸೃತ್ಯ ಬಹವೋ ಜನಾಃ |
ಅಭ್ಯಘ್ನನ್ ತಾವಕಾನ್ ಯುದ್ಧೇ ಮುಹೂರ್ತಾದಿವ ಭಾರತ ॥14॥
ಭರತಕುಲೋದ್ಭವನೇ! ಅನಂತರ ಅನೇಕ ಯೋಧರು ಪಾಂಡವರ ಸೈನ್ಯದಿಂದ ಹೊರಬಂದು ನಿನ್ನವರನ್ನು  ಮುಹೂರ್ತಮಾತ್ರದಲ್ಲಿ ಹೊಡೆದುರುಳಿಸಿದರು.
ತತೋ ನಿಃಶೇಷಮಭವತ್ ತವ ಸೈನ್ಯಂ ವಿಶಾಂಪತೇ ॥15॥
ರಾಜನೇ! ಅದರಿಂದ ನಿನ್ನ ಸೈನ್ಯವು ಸಂಪೂರ್ಣವಾಗಿ ನಾಶವಾಯಿತು.
ಅಕ್ಷೋಹಿಣ್ಯಃ ಸಮೇತಾಸ್ತು ತವ ಪುತ್ರಸ್ಯ ಭಾರತ |
ಏಕಾದಶ ಹತಾ ಯುದ್ಧೇ ತಾಃ ಪ್ರಭೋ ಪಾಂಡುಸೃಂಜಯೈಃ ॥16॥
ಭಾರತನೇ! ಮಹಾಯುದ್ಧದಲ್ಲಿ ಒಟ್ಟುಸೇರಿದ ನಿನ್ನ ಮಗನ ಕಡೆಯ ಹನ್ನೊಂದು ಅಕೌಹಿಣೀ ಸೈನ್ಯವನ್ನು  ಪಾಂಡವರು ಮತ್ತು ಸೃಂಜಯರು ನಾಶಮಾಡಿದರು.
ತೇಷು ರಾಜಸಹಸ್ರೇಷು ತಾವಕೇಷು ಮಹಾತ್ಮಸು |
ಏಕೋ ದುರ್ಯೋಧನೋ ರಾಜನ್ನದೃಶ್ಯತ ಭೃಶಂ ಕ್ಷತಃ ॥17॥
ರಾಜನೇ! ನಿನ್ನ ಪಕ್ಷದಲ್ಲಿದ್ದ ಮಹಾತ್ಮರಾದ ರಾಜರೆಲ್ಲರಲ್ಲಿ ದುರ್ಯೋಧನನೊಬ್ಬನು ಉಳಿದವನಾಗಿ ಬಹಳವಾಗಿ ಗಾಯಗೊಂಡು ಕಾಣಿಸಿಕೊಂಡನು.
ತತೋ ವೀಕ್ಷ್ಯ ದಿಶಃ ಸರ್ವಾ ದೃಷ್ಟ್ವಾ ಶೂನ್ಯಾಂ ಚ ಮೇದಿನೀಮ್ |
ವಿಹೀನಃ ಸರ್ವಯೋಧೈಶ್ಚ ಪಾಂಡವಾನ್ ವೀಕ್ಷ್ಯ ಸಂಯುಗೇ ॥18॥
ಮುದಿತಾನ್ ಸರ್ವಸಿದ್ಧಾರ್ಥಾನ್ ನರ್ದಮಾನಾನ್ ಸಮಂತತಃ |
ಬಾಣಶಬ್ದರವಾಂಶ್ಚೈವ ಶ್ರುತ್ವಾ ತೇಷಾಂ ಮಹಾತ್ಮನಾಮ್ ॥19॥
ದುರ್ಯೋಧನೋ ಮಹಾರಾಜ ಕಲ್ಮಶೀನಾಭಿಸಂವೃತಃ |
ಅಪಯಾನೇ ಮನಶ್ಚಕ್ರೇ ವಿಹೀನಬಲವಾಹನಃ ॥20॥

ಎಲ್ಲಾ ಕಡೆಯೂ ನೋಡಿದ ದುರ್ಯೋಧನನು ಸಮಸ್ತ ಭೂಮಿಯನ್ನು ತನ್ನ ಮಟ್ಟಿಗೆ ಶೂನ್ಯವನ್ನಾಗಿ ನೋಡಿದನು. ದುರ್ಯೋಧನನು ತನ್ನೆಲ್ಲಾ ಯೋಧರನ್ನು ಕಳೆದುಕೊಂಡಿದ್ದನು. ಯುದ್ಧದಲ್ಲಿ ಪಾಂಡವರು ಜಯವನ್ನು ಪಡೆದು ರಾಜ್ಯವನ್ನು ಹೊಂದಿದವರಾಗಿ ಸಂತುಷ್ಟರಾಗಿದ್ದಾರೆ. ಎಲ್ಲೆಡೆಯೂ ಜಯದ ಘೋಷ ಕೇಳಿಸುತ್ತಿತ್ತು. ಮಹಾತ್ಮರಾದ ಪಾಂಡವರ ಬಾಣಗಳ ಶಬ್ದವೂ ಕೇಳಿಸುತ್ತಿತ್ತು. ಇವೆಲ್ಲವನ್ನೂ ಕೇಳಿಸಿಕೊಂಡ ದುರ್ಯೋಧನನು ಬಹಳವಾಗಿ ದುಃಖವನ್ನು ಅನುಭವಿಸಿದನು. ಮಹಾರಾಜ, ಸೈನ್ಯ-ವಾಹನಗಳನ್ನು ಕಳೆದುಕೊಂಡ ದುರ್ಯೋಧನನು ತಪ್ಪಿಸಿಕೊಂಡು ಹೋಗುವ ನಿರ್ಧಾರವನ್ನು ಮಾಡಿದನು.
ಧೃತರಾಷ್ಟ್ರಃ
ನಿಹತೇ ಮಾಮಕೇ ಸೈನ್ಯೇ ನಿಃಶೇಷೇ ಶಿಬಿರೇ ಕೃತೇ |
ಪಾಂಡವಾನಾಂ ಬಲಂ ಸೂತ ಕಿಂ ಶೇಷಮಭವತ್ ತದಾ ॥21॥
ಧೃತರಾಷ್ಟ್ರ ಸಂಜಯ! ನನ್ನ ಕಡೆಯ ಸೈನ್ಯವು ನಿಃಶೇಷವಾಗಿ ನಾಶವಾದಾಗ ಮತ್ತು ನಮ್ಮವರ ಶಿಬಿರವೆಲ್ಲವೂ ಬರಿದಾದಾಗ ಪಾಂಡವರ ಕಡೆಯಲ್ಲಿ ಎಷ್ಟು ಸೈನ್ಯವು ಉಳಿದಿತ್ತು?
ಏತನ್ಮೇ ಪೃಚ್ಛತೋ ಬ್ರೂಹಿ ಕುಶಲೋ ಹ್ಯಸಿ ಸಂಜಯ ॥22॥
ಸಂಜಯನೇ! ಇದನ್ನು ನೀನು ಹೇಳು. ಏಕೆಂದರೆ ನೀನು ಬಹಳ ನಿಪುಣನಾಗಿರುವಿ.
ಯಶ್ಚ ದುರ್ಯೋಧನೋ ಮಂದಃ ಕೃತವಾಂಸ್ತನಯೋ ಮಮ |
ಬಲಕ್ಷಯಂ ತದಾ ದೃಷ್ಟ್ವಾಽಕುಶಲಃ ಪೃಥಿವೀಪತಿಃ ॥23॥
ತನ್ನ ಸೈನ್ಯವೆಲ್ಲವೂ ನಾಶವಾಗಿದ್ದುದನ್ನು ನೋಡಿ ಅಕುಶಲನಾದ ಹಾಗೂ ಮೂಢನಾದ ನನ್ನ ಮಗ ದುರ್ಯೋಧನನು ಏನನ್ನು ಮಾಡಿದನು?
ಸಂಜಯಃ
ದ್ವೇ ಸಹಸ್ರೇ ರಥಾನಾಂ ತು ಸಪ್ತ ನಾಗಶತಾನಿ ಚ |
ಪಂಚ ಚಾಶ್ವಸಹಸ್ರಾಣಿ ಪತ್ತೀನಾಮಯುತಂ ತಥಾ ॥24॥
ಏತಚ್ಛೇಷಮಭೂದ್ ರಾಜನ್ ಪಾಂಡವಾನಾಂ ಬಲಂ ತದಾ |
ಪರಿಗೃಹ್ಯ ಹಿ ಯದ್ಯುದ್ಧೇ ಧೃಷ್ಟದ್ಯುಮ್ನೋ ವ್ಯವಸ್ಥಿತಃ ॥25॥
ಸಂಜಯ ರಾಜನೇ! ಪಾಂಡವರ ಬಳಿಯಲ್ಲಿ ಆಗ ಎರಡು ಸಾವಿರ ರಥಗಳು, ಏಳು ನೂರು ಆನೆಗಳು, ಐದುಸಾವಿರ ಕುದುರೆಗಳು ಮತ್ತು ಹತ್ತುಸಾವಿರ ಪದಾತಿಗಳು ಇರುವ ಸೈನ್ಯವು ಉಳಿದಿತ್ತು. ಇವಿಷ್ಟನ್ನು ಧೃಷ್ಟದ್ಯುಮ್ನನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿದ್ದ.
ಏಕಾಕೀ ಭರತಶ್ರೇಷ್ಠ ತತೋ ದುರ್ಯೋಧನೋ ನೃಪಃ |
ನಾಪಶ್ಯತ್ ಸಮರೇ ಕಂಚಿತ್ ಸಹಾಯಂ ರಥಿನಾಂ ವರಃ ॥26॥
ಅನಂತರ ದುರ್ಯೋಧನನು ಒಬ್ಬಂಟಿಯಾಗಿ ಇದ್ದನು. ಯುದ್ಧದಲ್ಲಿ ಅವನಿಗೆ ಸಹಾಯ ಮಾಡುವವರು ಯಾರೂ ಕಾಣಿಸಲಿಲ್ಲ.
ನರ್ದಮಾನಾನ್ ಪರಾನ್ ದೃಷ್ಟ್ವಾ ಸ್ವಬಲಸ್ಯ ಚ ಸಂಕ್ಷಯಮ್ |
ದೃಷ್ಟ್ವಾ ಭರತಶಾರ್ದೂಲ ಕಶ್ಮಲೇನಾಭಿಸಂವೃತಃ ॥27॥
ಭರತಕುಲಶ್ರೇಷ್ಠನೇ! ಜಯದ ಕೇಕೆಯನ್ನು ಹಾಕುತ್ತಿರುವ ಪಾಂಡವರನ್ನು ಮತ್ತು ನಾಶವಾಗಿರುವ ತನ್ನ ಸೈನ್ಯವನ್ನು ನೋಡಿದ ದುರ್ಯೋಧನನು ಬಹಳ ದುಃಖಕ್ಕೊಳಗಾದನು.
ಹತಂ ಸ್ವಹಯಮುತ್ಸೃಜ್ಯ ಪ್ರೋತ್ಪ್ಲುತ್ಯ ಪ್ರಾದ್ರವದ್ ಭಯಾತ್ ॥28॥
ತನ್ನ ಕುದುರೆಯೂ ಸತ್ತಿರುವುದರಿಂದ ಅದನ್ನು ಬಿಟ್ಟು ತಾನು ಹಾರಿ ಭಯದಿಂದ ಜೋರಾಗಿ ಓಡಿದನು.
ಏಕಾದಶ ಚಮೂಭರ್ತಾ ಪುತ್ರೋ ದುರ್ಯೋಧನಸ್ತವ |
ಗದಾಮಾದಾಯ ತೇಜಸ್ವೀ ಪದಾತಿಃ ಪ್ರಸ್ಥಿತೋ ಹ್ರದಮ್ ॥29॥
ಒಂದುಕಾಲದಲ್ಲಿ ಹನ್ನೊಂದು ಅಕ್ಷೌಹಿಣಿಸೇನೆಗೆ ಒಡೆಯನಾದ, ನಿನ್ನ ಮಗ ತೇಜಸ್ವಿಯಾದ ದುರ್ಯೋಧನನು ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಬರಿಗಾಲಿನಿಂದ ಸರೋವರದೆಡೆಗೆ ನಡೆಯತೊಡಗಿದನು.
ನಾತಿದೂರಂ ತತೋ ಗತ್ವಾ ಪದ್ಭ್ಯಾಮೇವ ಜನಾಧಿಪಃ |
ಸಸ್ಮಾರ ವಚನಂ ಕ್ಷತ್ತುಃ ಧರ್ಮಶೀಲಸ್ಯ ಧೀಮತಃ ॥30॥
ರಾಜನಾದ ದುರ್ಯೋಧನನು ಕಾಲುಗಳಿಂದಲೇ ಸ್ವಲ್ಪದೂರ ನಡೆದು, ಬುದ್ಧಿವಂತನಾದ ಧಾರ್ಮಿಕ ವಿದುರನ ಮಾತನ್ನು ಸ್ಮರಿಸಿಕೊಳ್ಳುತ್ತಾನೆ.
ದುರ್ಯೋಧನಃ
ಇದಂ ನೂನಂ ಮಹಾಪ್ರಾಜ್ಞೋ ವಿದುರೋ ದೃಷ್ಟವಾನ್ ಪುರಾ |
ಮಹದ್ವ್ಯಸನಮಸ್ಮಾಕಂ ಕ್ಷತ್ರಿಯಾಣಾಂ ಚ ಸರ್ವಶಃ ॥31॥
ದುರ್ಯೋಧನ ನಮಗೆ ಬಂದಿರುವ ಈ ದೊಡ್ಡದಾದ ದುಃಖ, ಕ್ಷತ್ರಿಯರ ನಾಶ ಇವೆಲ್ಲವನ್ನೂ ಮಹಾಜ್ಞಾನಿಯಾದ ವಿದುರನು ಮೊದಲೇ ನೋಡಿದ್ದ (ತಿಳಿದಿದ್ದ).
ಸಂಜಯಃ
ಏವಂ ವಿಚಿಂತಯಾನಶ್ಚ ಪ್ರವಿವೇಶ ಹ್ರದಂ ನೃಪ |
ದುಃಖಸಂತಪ್ತಹೃದಯೋ ದೃಷ್ಟ್ವಾ ರಾಜನ್ ಬಲಕ್ಷಯಮ್ ॥32॥
ಸಂಜಯ ರಾಜನೇ! ಹೀಗೆ ಚಿಂತಿಸುತ್ತಾ ತನ್ನ ಸೈನ್ಯಬಲವೆಲ್ಲಾ ನಾಶವಾಗಿದ್ದುದನ್ನು ನೋಡಿ, ಮನಸ್ಸಿನಲ್ಲಿ ಬಹಳವಾದ ದುಃಖದ ತಾಪವನ್ನು ಅನುಭವಿಸುತ್ತಾ ಸರೋವರವನ್ನು ಪ್ರವೇಶಿಸಿದನು.

ದಶೈಕಾಕ್ಷೋಹಿಣೀಭರ್ತಾ ಸ್ವಯಂ ದುರ್ಯೋಧನೋಽಪಿ ಸನ್ |
ಪ್ರಾಪ್ತವಾನ್ ವ್ಯಸನಂ ತೀವ್ರಂ ದೈವಂ ಹಿ ಬಲವತ್ತರಮ್ ॥33॥
ಹನ್ನೊಂದು ಅಕ್ಷೌಹಿಣಿ ಸೈನ್ಯವನ್ನು ಸ್ವಂತಕ್ಕೆ ಹೊಂದಿದ್ದ ದುರ್ಯೋಧನನೂ ಬಹಳವಾದ ದುಃಖವನ್ನು ಪಡೆದನು. ವಿಧಿಯೇ ತುಂಬ ಬಲಶಾಲಿಯಾದದ್ದು. ಇದು ಪ್ರಸಿದ್ಧ.
ಪಾಂಡವಾಃ ತು ಮಹಾರಾಜ ಧೃಷ್ಟದ್ಯುಮ್ನಪುರೋಗಮಾಃ |
ಅಭ್ಯಧಾವಂತ ಸಂಕ್ರುದ್ಧಾಃ ತವ ರಾಜನ್ ಬಲಂ ಪ್ರತಿ ॥34॥
ಮಹಾರಾಜನೇ! ಧೃಷ್ಟದ್ಯುಮ್ನ ಮೊದಲಾದ ಪಾಂಡವರು ಕುಪಿತರಾಗಿ ನಿನ್ನ ಕಡೆಯ ಸೈನ್ಯದ ಮೇಲೆ ಆಕ್ರಮಣ ಮಾಡಿದರು.
ಶಕ್ತ್ಯೃಷ್ಟಿಪ್ರಾಸಹಸ್ತಾನಾಂ ಯೋಧಾನಾಮಭಿಗರ್ಜತಾಮ್ |
ಸಂಕಲ್ಪಮಕರೋನ್ಮೋಘಂ ಗಾಂಡೀವೇನ ಧನಂಜಯಃ ॥35॥
ಶಕ್ತಿ, ಋಷ್ಟಿ, ಪ್ರಾಸ ಮೊದಲಾದ ಆಯುಧಗಳನ್ನು ಧರಿಸಿಕೊಂಡು ಜೋರಾಗಿ ಗರ್ಜನೆ ಮಾಡುತ್ತಿದ್ದ ಕೌರವಯೋಧರ ಸಂಕಲ್ಪವನ್ನು ಅರ್ಜುನನು ತನ್ನ ಗಾಂಡೀವದಿಂದ ಸುಳ್ಳನ್ನಾಗಿ ಮಾಡಿದನು.
ತಾನ್ ಹತ್ವಾ ನಿಶಿತೈರ್ಬಾಣೈಃ ಸಾಮಾತ್ಯಾನ್ ಸಹ ಬಂಧುಭಿಃ |
ರಥೇ ಶ್ವೇತಹಯೇ ತಿಷ್ಠನ್ನರ್ಜುನೋ ಬಹ್ವಶೋಭತ ॥36॥
ಆ ಕೌರವಯೋಧರನ್ನು, ಅವರ ಮುಖಂಡರು ಮತ್ತು ಬಂಧುಗಳನ್ನೂ ಹರಿತವಾದ ಬಾಣಗಳಿಂದ ಕೊಂದು, ಬೆಳ್ಳಗಿನ ಕುದುರೆಗಳುಳ್ಳ ತನ್ನ ರಥದಲ್ಲಿ ಅರ್ಜುನನು ಚೆನ್ನಾಗಿ ಪ್ರಕಾಶಿಸುತ್ತಿದ್ದನು.
ಸುಬಲಸ್ಯ ಹತೇ ಪುತ್ರೇ ಸವಾಜಿರಥಕುಂಜರೇ |
ಮಹಾವನಮಿವ ಚ್ಛಿನ್ನಮಭವತ್ ತಾವಕಂ ಬಲಮ್ ॥37॥
ಶಕುನಿಯು ತನ್ನ ಅಶ್ವಸೈನ್ಯ, ಗಜಸೈನ್ಯ ಮತ್ತು ರಥಸೈನ್ಯದೊಡನೆ ನಾಶವಾದಾಗ ನಿನ್ನ ಸೈನ್ಯವೆಲ್ಲವೂ ದೊಡ್ಡ ಕಾಡು ಕಡಿದು ಬಿದ್ದಂತೆ ಛಿದ್ರಗೊಂಡಿತು.
ಅನೇಕಶತಸಾಹಸ್ರೇ ಬಲೇ ದುರ್ಯೋಧನಾರ್ಜಿತೇ |
ನಾನ್ಯೋ ಮಹಾರಥೋ ರಾಜನ್ ಜೀವಮಾನೋಽಪ್ಯದೃಶ್ಯತ ॥38॥
ಅನೇಕ ನೂರುಸಾವಿರದಷ್ಟು ಸೈನ್ಯವನ್ನು ದುರ್ಯೋಧನನು ಒಟ್ಟುಮಾಡಿದ್ದ. ರಾಜನೇ! ಒಬ್ಬ ಮಹಾರಥನೂ ಈಗ ಬದುಕಿದ್ದು ಕಾಣಿಸುವುದಿಲ್ಲ.
ದ್ರೋಣಪುತ್ರಾದೃತೇ ವೀರಾನ್ ತಥೈವ ಕೃತವರ್ಮಣಃ |
ಕೃಪಾಚ್ಚ ಗೌತಮಾದ್ ರಾಜನ್ ಪಾರ್ಥಿವಾಚ್ಚ ತವಾತ್ಮಜಾತ್ ॥39॥
ಅಶ್ವತ್ಥಾಮ, ಕೃಪ ಮತ್ತು ಕೃತವರ್ಮರನ್ನು ಹಾಗೂ ನಿನ್ನ ಮಗ ದುರ್ಯೋಧನನನ್ನು ಬಿಟ್ಟು ಯಾರೂ ಕೂಡ ಮಹಾರಥರು ಬದುಕುಳಿಯಲಿಲ್ಲ.
ಧೃಷ್ಟದ್ಯುಮ್ನಸ್ತು ಮಾಂ ದೃಷ್ಟ್ವಾ ಹಸನ್ ಸಾತ್ಯಕಿಮಬ್ರವೀತ್ ॥40॥
ಧೃಷ್ಟದ್ಯುಮ್ನನು ನನ್ನನ್ನು ನೋಡಿ ನಗುತ್ತಾ ಸಾತ್ಯಕಿಗೆ ಹೇಳಿದನು
ಧೃಷ್ಟದ್ಯುಮ್ನಃ
ಕಿಮನೇನ ಗೃಹೀತೇನ ನಾನೇನಾರ್ಥೋಽಸ್ತಿ ಜೀವತಾ ॥41॥
ಧೃಷ್ಟದ್ಯುಮ್ನ ಇವನನ್ನು ಹಿಡಿದು ಏನು ಪ್ರಯೋಜನ? ಇವನು ಬದುಕಿದ್ದರೂ ಪ್ರಯೋಜನವಿಲ್ಲ.
ಸಂಜಯಃ
ಧೃಷ್ಟದ್ಯುಮ್ನವಚಃ ಶ್ರುತ್ವಾ ಶಿನೇರ್ನಪ್ತಾ ಮಹಾರಥಃ |
ಉದ್ಯಮ್ಯ ನಿಶಿತಂ ಖಡ್ಗಂ ಹಂತುಂ ಮಾಮುದ್ಯತಸ್ತದಾ ॥42॥
ಸಂಜಯ ಧೃಷ್ಟದ್ಯುಮ್ನನ ಮಾತನ್ನು ಕೇಳಿ ಮಹಾರಥನಾದ ಸಾತ್ಯಕಿಯು ಹರಿತವಾದ ಖಡ್ಗವನ್ನು ಮೇಲೆತ್ತಿ ನನ್ನನ್ನು ಕೊಲ್ಲಲು ಉದ್ಯುಕ್ತನಾದನು.
ತದಾಽಽಗಮ್ಯ ಮಹಾಪ್ರಾಜ್ಞಃ ಕೃಷ್ಣದ್ವೈಪಾಯನೋಽಬ್ರವೀತ್ ॥43॥
ಆಗ ಬಂದ ಮಹಾಜ್ಞಾನಿಯಾದ ವೇದವ್ಯಾಸದೇವರು ಹೀಗೆ ಹೇಳಿದರು.
ವ್ಯಾಸಃ
ಮುಚ್ಯತಾಂ ಸಂಜಯೋ ಜೀವನ್ ನ ಹಂತವ್ಯಃ ಕಥಂಚನ ॥44॥
ವ್ಯಾಸಃ ಸಂಜಯನನ್ನು ಜೀವಸಹಿತವಾಗಿ ಬಿಟ್ಟುಬಿಡಿ. ಅವನನ್ನು ಯಾವ ರೀತಿಯಲ್ಲಿಯೂ ಕೊಲ್ಲಬೇಡಿ.
ಸಂಜಯಃ
ದ್ವೈಪಾಯನವಚಃ ಶ್ರುತ್ವಾ ಶಿನೇರ್ನಪ್ತಾ ಕೃತಾಂಜಲಿಃ |
ತತೋ ಮಾಮಬ್ರವೀನ್ಮುಕ್ತ್ವಾ ಸ್ವಸ್ತಿ ಸಂಜಯ ಸಾಧಯ ॥45॥
ಸಂಜಯ ವೇದವ್ಯಾಸರ ಮಾತನ್ನು ಕೇಳಿ ಸಾತ್ಯಕಿಯು ಕೈಗಳನ್ನು ಜೋಡಿಸಿದನು. ನಂತರ ನನಗೆ ಹೇಳಿದ- ಸಂಜಯನೇ! ನಿನಗೆ ಮಂಗಳವಾಗಲಿ. ಮಂಗಳವನ್ನೇ ಸಾಧಿಸು.
ಅನುಜ್ಞಾತೋ ಹ್ಯಹಂ ತೇನ ನ್ಯಸ್ತವರ್ಮಾ ನಿರಾಯುಧಃ |
ಪ್ರಾತಿಷ್ಠಂ ಯೇನ ನಗರಂ ಸಾಯಾಹ್ನೇ ರುಧಿರೋಕ್ಷಿತಃ ॥46॥
ಅವನ ಆಜ್ಞೆಯನ್ನು ಪಡೆದು ಕವಚ ಮತ್ತು ಆಯುಧಗಳನ್ನು ಕಳಚಿಟ್ಟು, ರಕ್ತದಿಂದ ಲೇಪಿತನಾಗಿ ನಾನು ಸಾಯಂಕಾಲದಲ್ಲಿ

ಪಟ್ಟಣಕ್ಕೆ ಹೊರಟೆನು.
ಕ್ರೋಶಮಾತ್ರಮಪಕ್ರಾಂತಂ ಗದಾಪಾಣಿಮವಸ್ಥಿತಮ್ |
ಏಕಂ ದುರ್ಯೋಧನಂ ರಾಜನ್ನಪಶ್ಯಂ ಭೃಶವಿಕ್ಷತಮ್ ॥47॥
ರಾಜನೇ! ಒಂದು ಕ್ರೋಶದಷ್ಟು ದೂರ ಬಂದಾಗ ಕೈಯಲ್ಲಿ ಬಹಳವಾಗಿ ಗಾಯಗೊಂಡ ಹಾಗೂ ಗದೆಯನ್ನು ಹಿಡಿದ ದುರ್ಯೋಧನನನ್ನು ನೋಡಿದೆನು.
ಸ ತು ಮಾಮಶ್ರುಪೂರ್ಣಾಕ್ಷೋ ನಾಶಕ್ನೋದಭಿವೀಕ್ಷಿತುಮ್ |
ಉಪಪ್ರೈಕ್ಷತ ಮಾಂ ದೃಷ್ಟ್ವಾ ತದಾ ದೀನಮುಪಸ್ಥಿತಮ್ ॥48॥
ಕಣ್ಣುಗಳಲ್ಲಿ ನೀರುತುಂಬಿಕೊಂಡಿದ್ದ ದುರ್ಯೋಧನನಿಗೆ ನನ್ನನ್ನು ನೋಡಲೂ ಆಗಲಿಲ್ಲ. ದುಃಖಿತನಾಗಿದ್ದ ನನ್ನನ್ನು ಹತ್ತಿರಕ್ಕೆ ಬಂದು ನೋಡಿದನು.
ತಂ ಚಾಹಮನುಶೋಚಾನೋ ದೃಷ್ಟ್ವೈಕಾಕಿನಮಾಹವೇ |
ಮುಹೂರ್ತಂ ನಾಶಕಂ ವಕ್ತುಂ ಕಿಂಚಿದ್ ದುಃಖಪರಿಪ್ಲುತಃ ॥49॥
ಯುದ್ಧದಲ್ಲಿ ಏಕಾಕಿಯಾಗಿ ಇದ್ದ ದುರ್ಯೋಧನನನ್ನು ನೋಡಿ ನಾನು ಕೂಡ ಬಹಳ ದುಃಖಪಟ್ಟೆನು. ದುಃಖದಿಂದ ತುಂಬಿದ ನಾನು ಒಂದು ಮುಹೂರ್ತದಷ್ಟು ಕಾಲ ಏನು ಮಾತನಾಡಲೂ ಶಕ್ತನಾಗಲಿಲ್ಲ.
ಯಸ್ಯ ಮೂರ್ಧಾಭಿಷಿಕ್ತಾನಾಂ ಸಹಸ್ರಂ ಮಣಿಮೌಲಿನಾಮ್ |
ಆಹೃತ್ಯ ಚ ಕರಂ ಸರ್ವಂ ಸ್ವಸ್ಯ ವೈ ವಶಮಾಗತಮ್ ॥50॥
ಕಿರೀಟದಲ್ಲಿ ಮಣಿಗಳನ್ನು ಧರಿಸಿರುವ ಪಟ್ಟಾಭಿಷಿಕ್ತ ಸಾವಿರಾರು ರಾಜರು ಯಾರಿಗೆ ಕರವನ್ನು ಕೊಟ್ಟು ಯಾರ ವಶರಾಗಿದ್ದರೋ ಅಂತಹ ದುರ್ಯೋಧನನಿಗೆ ಯಾರಿಗೂ ಬರದ ಆಪತ್ತು ಬಂದಿದೆ. ಆದ್ದರಿಂದ ವಿಧಿಯೇ ಬಲಶಾಲಿಯಾದುದು.
ಚತುಃಸಾಗರಪರ್ಯಂತಾ ಪೃಥಿವೀ ರತ್ನಭೂಷಿತಾ |
ಕರ್ಣೇನೈಕೇನ ಯಸ್ಯಾರ್ಥೇ ಕರಮಾಹಾರಿತಾ ಪುರಾ ॥51॥
ಯಸ್ಯಾಜ್ಞಾ ಪರರಾಷ್ಟ್ರೇಷು ಕರ್ಣೇನೈವ ಪ್ರಸಾರಿತಾ |
ನಾಭವದ್ ಯಸ್ಯ ಶಸ್ತ್ರೇಷು ಖೇದೋ ರಾಜ್ಞಃ ಪ್ರಶಾಸತಃ ॥52॥
ಹಿಂದೆ ಕರ್ಣನೊಬ್ಬನೇ ನಾಲ್ಕು ಸಾಗರಗಳ ತನಕ ವ್ಯಾಪ್ತವಾದ ರತ್ನತುಂಬಿದ ಭೂಭಾಗವನ್ನೇ ಗೆದ್ದು, ಕಪ್ಪವಾಗಿ ಈ ದುರ್ಯೋಧನನಿಗೆ ಒಪ್ಪಿಸಿದ್ದನು. ಇವನ ಶಾಸನಗಳನ್ನು ಕರ್ಣನೇ ಪರದೇಶಗಳಲ್ಲಿ ಚಲಾವಣೆಗೆ ತರುತ್ತಿದ್ದ. ರಾಜ್ಯಭಾರ ಮಾಡುತ್ತಿದ್ದ ಈ ದುರ್ಯೋಧನನಿಗೆ ಶಸ್ತ್ರಗಳನ್ನು ಪ್ರಯೋಗಿಸುವ ಕ್ಲೇಶವೇ ಉಂಟಾಗಿರಲಿಲ್ಲ.
ಆಸೀನೋ ಹಸ್ತಿನಾಪುರೇ ಕ್ಷೇಮಂ ರಾಜ್ಯಮಕಂಟಕಮ್ |
ಅನ್ವಪಾಲಯದೈಶ್ವರ್ಯಾತ್ ಕುಬೇರಮಪಿ ನಾಸ್ಮರತ್ ॥53॥
ಹಸ್ತಿನಪುರದಲ್ಲಿಯೇ ಇದ್ದುಕೊಂಡು ಯಾವುದೇ ತೊಂದರೆಗಳಿಲ್ಲದೆ ಕ್ಷೇಮದಿಂದ ರಾಜ್ಯಭಾರವನ್ನು ಮಾಡುತ್ತಿದ್ದ. ಇವನ ಐಶ್ವರ್ಯವನ್ನು ಕಂಡು ಐಶ್ವರ್ಯಾಧಿಪತಿ ಕುಬೇರನನ್ನೂ ಎಲ್ಲರೂ ಮರೆತರು.
ಭವನಾದ್ ಭವನಂ ರಾಜನ್ ಪ್ರಯಾತುಃ ಪೃಥಿವೀಪತೇ |
ದೇವಾಲಯಪ್ರವೇಶೇ ಚ ಪಂಥಾ ಯಸ್ಯ ಹಿರಣ್ಮಯಃ ॥54॥
ರಾಜನೇ! ದುರ್ಯೋಧನನು ಮನೆಯೊಳಗಿರುವ ದೇವಮಂದಿರಕ್ಕೆ ಹೋಗುವ ಸಂದರ್ಭದಲ್ಲಿ ಅರಮನೆಯ ಒಳಗಿರುವ ಒಂದು ಭವನದಿಂದ ಇನ್ನೊಂದು ಭವನಕ್ಕೆ ಹೋಗುವ ದಾರಿ ಬಂಗಾರಮಯವಾಗಿತ್ತು.
ಪತಾಕಾವೃತಸೂರ್ಯಾಂಶುಃ ತೋರಣೋಚ್ಛ್ರಿತಶೋಭನಃ |
ಪ್ರಯಾಣೇ ಪೃಥಿವೀಭರ್ತುರ್ಧನ್ಯಾನಾಮಭವನ್ ಗೃಹಾಃ ॥55॥
ಅವನು ಸಂಚರಿಸುತ್ತಿರುವಾಗ ದಾರಿಯಲ್ಲಿ ಸಜ್ಜನರ ಮನೆಗಳನ್ನು ಪತಾಕೆಗಳಿಂದ ಅಲಂಕರಿಸಲಾಗುತ್ತಿತ್ತು. ಪತಾಕೆಗಳಿಂದಾಗಿ ಸೂರ್ಯಕಿರಣಗಳು ಮರೆಯಾಗುತ್ತಿದ್ದವು. ತೋರಣಗಳನ್ನು ಕಟ್ಟಿದ್ದರಿಂದ ಮಾಂಗಲ್ಯವು ಶೋಭಿಸುತ್ತಿತ್ತು.
ಆರುಹ್ಯೈರಾವತಪ್ರಖ್ಯಂ ನಾಗಮಿಂದ್ರಸಮೋ ಬಲೀ |
ವಿಭೂತ್ಯಾ ಸುಮಹತ್ಯಾ ಯಃ ಪ್ರಯಾತಿ ಪೃಥಿವೀಪತಿಃ ॥56॥
ಬಲದಲ್ಲಿ ದೇವೇಂದ್ರನಿಗೆ ಸಮಾನನಾದ ದುರ್ಯೋಧನನು ಐರಾವತಸದೃಶವಾದ ಆನೆಯನ್ನು ಹತ್ತಿಕೊಂಡು, ಬಹಳವಾದ ಕಾಂತಿಯಿಂದ ಕೂಡಿಕೊಂಡು ಸಂಚರಿಸುತ್ತಿದ್ದನು.
ತಂ ಭೃಶಕ್ಷತಮಿಂದ್ರಾಭಂ ಪದ್ಭ್ಯಾಮೇವ ಧರಾತಳೇ |
ತಿಷ್ಠಂತಮೇಕಂ ದೃಷ್ಟ್ವಾ ತು ಮಮಾಭೂತ್ ಕ್ಲೇಶ ಉತ್ತಮಃ ॥57॥
ಇಂತಹ ದುರ್ಯೋಧನನು ಬಹಳವಾಗಿ ಗಾಯಗೊಂಡು ನೆಲದಲ್ಲಿ ಬರಿಗಾಲಲ್ಲಿ ನಿಂತಿರುವುದನ್ನು ಕಂಡು ನನಗೆ ಬಹಳ ದುಃಖ ಉಂಟಾಯಿತು.
ತಸ್ಯ ಚೈವಂವಿಧಸ್ಯಾಸ್ಯ ಜಗನ್ನಾಥಸ್ಯ ಭೂಪತೇಃ |
ವಿಪದಪ್ರತಿಮಾಭೂದ್ಯಾ ಬಲೀಯಾನ್ ವಿಧಿರೇವ ಹಿ ॥58॥
ಹಿಂದೆ ಹೇಳಿದ ರೀತಿಯಲ್ಲಿ ಜಗತ್ತಿಗೇನೇ ಒಡೆಯನಾದ ದುರ್ಯೋಧನನಿಗೆ ಇಂಥ ಮಹತ್ತರವಾದ ಆಪತ್ತು ಬಂದಿದೆ. ಆದ್ದರಿಂದ ಅದೃಷ್ಟವೇ ಎಲ್ಲಕ್ಕಿಂತಲೂ ಬಲಶಾಲಿಯಾದದ್ದು.
ತತೋಽಸ್ಯ ತದಹಂ ಸರ್ವಮುಕ್ತವಾನ್ ನೃಪತೇಸ್ತದಾ |
ದ್ವೈಪಾಯನಪ್ರಸಾದಾಚ್ಚ ಜೀವತೋ ಮೋಕ್ಷಮಾಹವೇ ॥59॥

ಅನಂತರ ಆಗ ನಾನು, ಯುದ್ಧದಲ್ಲಿ ವೇದವ್ಯಾಸರ ಅನುಗ್ರಹದಿಂದಾಗಿ ನಾನು ಬದುಕಿರುವ ವಿಷಯವನ್ನೆಲ್ಲ ಅವನಿಗೆ ಹೇಳಿದೆ.
ಸ ಮುಹೂರ್ತಮಿವ ಧ್ಯಾತ್ವಾ ಪ್ರತಿಲಭ್ಯ ಚ ಚೇತನಾಮ್ |
ಭ್ರಾತೄಂಶ್ಚ ಸರ್ವಾನ್ಸೈನ್ಯಾಂಶ್ಚ ಪರ್ಯಪೃಚ್ಛತ ಮಾಂ ತತಃ ॥60॥
ದುರ್ಯೋಧನನು ಸ್ವಲ್ಪಕಾಲ ಆಲೋಚಿಸಿ, ಚೈತನ್ಯವನ್ನು ಹೊಂದಿ ತನ್ನ ಸಹೋದರರ ಬಗ್ಗೆ ಮತ್ತು ತನ್ನ ಎಲ್ಲಾ ಸೈನ್ಯದ ಬಗ್ಗೆ ನನ್ನನ್ನು ಕೇಳಿದನು.
ತಸ್ಮೈ ತದಹಮಾಚಕ್ಷೇ ಸರ್ವಂ ಪ್ರತ್ಯಕ್ಷದರ್ಶಿವಾನ್ |
ಭ್ರಾತೄಣಾಂ ನಿಧನಂ ಸರ್ವಂ ಸೈನ್ಯಾನಾಂ ಚ ನಿಪಾತನಮ್ ॥61॥
ಎಲ್ಲಾ ಘಟನೆಗಳನ್ನು ಪ್ರತ್ಯಕ್ಷವಾಗಿ ನೋಡಿದ್ದ ನಾನು ಎಲ್ಲವನ್ನೂ ಅವನಿಗೆ ಹೇಳಿದೆ. ಅವನ ಸಹೋದರರ ಮರಣ ಮತ್ತು ಎಲ್ಲಾ ಸೈನ್ಯಗಳ ನಾಶವನ್ನೂ ಹೇಳಿದೆ.
ತ್ರಯಃ ಕಿಲ ರಥಾಃ ಶಿಷ್ಟಾಃ ತಾವಕಾನಾಂ ನರಾಧಿಪ |
ಇತಿ ಪ್ರಸ್ಥಾನಕಾಲೇ ಮಾಂ ಕೃಷ್ಣದ್ವೈಪಾಯನೋಽಬ್ರವೀತ್ ॥62॥
ರಾಜನೇ! ನಿನ್ನ ಕಡೆಯ ಮೂರು ಮಹಾರಥರು ಉಳಿದುಕೊಂಡಿದ್ದಾರೆ ಎಂದು ವೇದವ್ಯಾಸರು ಹೊರಡುವ ಸಂದರ್ಭದಲ್ಲಿ ನನಗೆ ಹೇಳಿದ್ದರು.
ಸ ದೀರ್ಘಮಿವ ನಿಃಶ್ವಸ್ಯ ಸಂಪ್ರೇಕ್ಷ್ಯ ಚ ಪುನಃ ಪುನಃ |
ಅಂಸೇ ಮಾಂ ಪಾಣಿನಾ ಗೃಹ್ಯ ಪುತ್ರಸ್ತೇ ಪರ್ಯಭಾಷತ ॥63॥
ಇದನ್ನು ಕೇಳಿದ ನಿನ್ನ ಮಗ ದುರ್ಯೋಧನನು ದೀರ್ಘವಾಗಿ ಉಸಿರುಬಿಡುತ್ತಾ ಮತ್ತೆ ಮತ್ತೆ ನನ್ನನ್ನು ನೋಡುತ್ತಾ ನನ್ನ ಕೈಯನ್ನು ಹಿಡಿದುಕೊಂಡು ಹೀಗೆ ಹೇಳಿದನು.
ದುರ್ಯೋಧನಃ
ತ್ವದನ್ಯೋ ನೇಹ ಸಂಗ್ರಾಮೇ ಕಶ್ಚಿಜ್ಜೀವತಿ ಸಂಜಯ |
ದ್ವಿತೀಯಂ ನೈವ ಪಶ್ಯಾಮಿ ಸಸಹಾಯಾಶ್ಚ ಪಾಂಡವಾಃ ॥64॥
ದುರ್ಯೋಧನ ಸಂಜಯನೇ! ನಿನ್ನನ್ನು ಬಿಟ್ಟು ಬೇರೆ ಯಾರೂ ಈ ಯುದ್ಧದಲ್ಲಿ ಉಳಿದಿಲ್ಲ. ನೀನಲ್ಲದೆ ಎರಡನೆಯ ಬೇರೊಬ್ಬ ವ್ಯಕ್ತಿಯನ್ನು ನಾನು ನೋಡುತ್ತಿಲ್ಲ. ಆದರೆ ಪಾಂಡವರಿಗೆ ಸಹಾಯಕರು ತುಂಬಾ ಜನರು ಇದ್ದಾರೆ.
ಬ್ರೂಯಾಃ ಸಂಜಯ ರಾಜಾನಂ ಪ್ರಜ್ಞಾಚಕ್ಷುಷಮೀಶ್ವರಮ್ |
ದುರ್ಯೋಧನಸ್ತವ ಪುತ್ರಃ ಪ್ರವಿಷ್ಟೋ ಹ್ರದಮಿತ್ಯುತ ॥65॥
ಸಂಜಯ! ಜ್ಞಾನಚಕ್ಷುವಾದ, ನಮ್ಮೆಲ್ಲರ ಸ್ವಾಮಿಯಾದ ರಾಜಧೃತರಾಷ್ಟ್ರನಿಗೆ ಹೇಳು, ನಿನ್ನ ಮಗನಾದ ದುರ್ಯೋಧನನು ಸರೋವರವನ್ನು ಪ್ರವೇಶಿಸಿದ್ದಾನೆ ಎಂದು.
ಸುಹೃದ್ಭಿಸ್ತಾದೃಶೈರ್ಹೀನಃ ಪುತ್ರೈರ್ಭ್ರಾತೃಭಿರೇವ ಚ |
ಪಾಂಡವೈಶ್ಚ ಹೃತೇ ರಾಜ್ಯೇ ಕೋ ನು ಜೀವೇತ ಮಾದೃಶಃ ॥66॥
ಅಂತಹ ಸ್ನೇಹಿತರೂ ಇಲ್ಲ. ಮಕ್ಕಳೂ ಇಲ್ಲ, ಸಹೋದರರೂ ಇಲ್ಲ. ಹೀಗಿರುವಾಗ ಪಾಂಡವರು ನನ್ನ ರಾಜ್ಯವನ್ನು ಕಸಿದುಕೊಂಡಿದ್ದಾರೆ. ನನ್ನಂತಹವರು ಹೇಗೆ ತಾನೇ ಜೀವದಿಂದಿರಲು ಸಾಧ್ಯ?
ಆಚಕ್ಷೀಥಾಃ ಸರ್ವಮಿದಂ ಮಾಂ ಚ ಮುಕ್ತಂ ಮಹಾಭಯಾತ್ |
ಅಸ್ಮಿಂಸ್ತೋಯಹ್ರದೇ ಸುಪ್ತಂ ಜೀವಂತಂ ಭೃಶವಿಕ್ಷತಮ್ ॥67॥
ಈ ಎಲ್ಲವನ್ನೂ ಧೃತರಾಷ್ಟ್ರನಿಗೆ ಹೇಳು. ನಾನು ಮರಣಭಯದಿಂದ ಮುಕ್ತನಾಗಿರುವುದನ್ನೂ ಹೇಳು. ಬಹಳವಾಗಿ ಗಾಯಗೊಂಡಿರುವ ನಾನು ಈ ಸರೋವರದಲ್ಲಿ ಬದುಕಿದ್ದು ನಿದ್ದೆ ಮಾಡುತ್ತಿರುವೆನು ಎಂದೂ ಹೇಳು.
ಸಂಜಯಃ
ಏವಮುಕ್ತ್ವಾ ಮಹಾರಾಜ ಪ್ರಾವಿಶತ್ ತಂ ಹ್ರದಂ ನೃಪ |
ಅಸ್ತಂಭಯತ ತೋಯಂ ಚ ಮಾಯಯಾ ಮನುಜಾಧಿಪಃ ॥68॥
ಸಂಜಯ ರಾಜನೇ! ಹೀಗೆ ಹೇಳಿ ದುರ್ಯೋಧನನು ಸರೋವರವನ್ನು ಪ್ರವೇಶಿಸುತ್ತಾನೆ. ಜನನಾಯಕನಾದ ಆತನು ಮಾಯಾವಿದ್ಯೆಯಿಂದ ಜಲಸ್ತಂಭನವನ್ನು ಮಾಡಿಕೊಂಡನು.
ತಸ್ಮಿನ್ ಹ್ರದಂ ಪ್ರವಿಷ್ಟೇ ತು ತ್ರೀನ್ ರಥಾನ್ ಶ್ರಾಂತವಾಹನಾನ್ |
ಅಪಶ್ಯಂ ಸಹಿತಾನೇಕಃ ತಂ ದೇಶಂ ಸಮುಪೇಯುಷಃ ॥69॥
ದುರ್ಯೋಧನನು ಸರೋವರದಲ್ಲಿ ಇಳಿದಮೇಲೆ ಏಕಾಕಿಯಾದ ನಾನು ಆ ಜಾಗಕ್ಕೆ ಒಟ್ಟಾಗಿ ಬರುತ್ತಿದ್ದ ಮೂರು ಮಹಾರಥವೀರರನ್ನು ಕಂಡೆನು. ಅವರ ವಾಹನದ ಕುದುರೆಗಳೂ ಆಯಾಸಗೊಂಡಿದ್ದವು.
ಕೃಪಂ ಶಾರದ್ವತಂ ವೀರಂ ದ್ರೌಣಿಂ ಚ ರಥಿನಾಂ ವರಮ್ |
ಭೋಜಂ ಚ ಕೃತವರ್ಮಾಣಂ ಸಹಿತಾನ್ ಶರವಿಕ್ಷತಾನ್ ॥70॥
ಶರದ್ವಾನ್ ವಂಶದ ವೀರ ಕೃಪ, ರಥಿಕರಲ್ಲಿಯೇ ಶ್ರೇಷ್ಠನಾದ ಅಶ್ವತ್ಥಾಮ, ಭೋಜವಂಶದ ಕೃತವರ್ಮ- ಇವರೇ ಆ ಮೂವರು ವೀರರು. ಅವರೆಲ್ಲರೂ ಬಾಣಗಳಿಂದ ಬಹಳ ಗಾಯವನ್ನು ಹೊಂದಿದ್ದರು.
ತೇ ಸರ್ವೇ ಮಾಮಭಿಪ್ರೇಕ್ಷ್ಯ ತೂರ್ಣಮಶ್ವಾನಚೋದಯನ್ |
ಉಪೇತ್ಯ ಚೈವ ಮಾಮೂಚುರ್ದಿಷ್ಟ್ಯಾ ಜೀವಸಿ ಸಂಜಯ ॥71॥
ಅವರೆಲ್ಲರೂ ನನ್ನನ್ನು ನೋಡಿ ಕೂಡಲೇ ತಮ್ಮ ಕುದುರೆಗಳನ್ನು ನನ್ನೆಡೆಗೆ ನಡೆಸಿದರು. ನನ್ನ ಹತ್ತಿರ ಬಂದು, ಸಂಜಯನೇ!

ಅದೃಷ್ಟದಿಂದ ನೀನು ಬದುಕಿ ಉಳಿದಿದ್ದಿ ಎಂದು ಹೇಳಿದರು.
ಅಪೃಚ್ಛಂಶ್ಚೈವ ಮಾಂ ಸರ್ವೇ ಪುತ್ರಂ ತವ ಜನಾಧಿಪಮ್ |
ಕಚ್ಚಿದ್ ದುರ್ಯೋಧನೋ ರಾಜಾ ಸ ನೋ ಜೀವತಿ ಸಂಜಯ ॥72॥
ಅವರೆಲ್ಲರೂ ನನ್ನಲ್ಲಿ ನಿನ್ನ ಮಗನ ಬಗ್ಗೆ ಪ್ರಶ್ನಿಸಿದರು. ಸಂಜಯನೇ! ನಮ್ಮ ರಾಜನಾದ ದುರ್ಯೋಧನನು ಬದುಕಿದ್ದಾನೆಯಾ? ಎಂದು.
ಆಖ್ಯಾತವಾನಹಂ ತೇಭ್ಯಃ ತದಾ ಕುಶಲಿನಂ ನೃಪಮ್ |
ತಚ್ಚೈವ ಸರ್ವಮಾಚಕ್ಷೇ ಯನ್ಮಾಂ ದುರ್ಯೋಧನೋಽಬ್ರವೀತ್ ॥73॥
ಆಗ ನಾನು ರಾಜನು ಸೌಖ್ಯವಾಗಿದ್ದಾನೆ ಎಂದು ಹೇಳಿದೆನು. ಮತ್ತು ದುರ್ಯೋಧನನು ನನ್ನಲ್ಲಿ ಏನೆಲ್ಲಾ ಹೇಳಿದ್ದನೋ ಅದೆಲ್ಲವನ್ನೂ ಅವರಿಗೆ ಹೇಳಿದೆನು.
ಹ್ರದಂ ಚೈವಾಚಚಕ್ಷೇಽಹಂ ಯಂ ಪ್ರವಿಷ್ಟೋ ಜನಾಧಿಪಃ ॥74॥
ರಾಜನು ಯಾವ ಸರೋವರದೊಳಗೆ ಇದ್ದನೋ ಆ ಸರೋವರವನ್ನೂ ಅವರಿಗೆ ತಿಳಿಸಿದೆ.
ಅಶ್ವತ್ಥಾಮಾ ತು ತದ್ ರಾಜನ್ ನಿಶಮ್ಯ ವಚನಂ ಮಮ |
ಹ್ರದಪ್ರವೇಶಂ ಶ್ರುತ್ವಾ ಚ ಕರುಣಂ ಪರ್ಯದೇವಯತ್ ॥75॥
ಅಶ್ವತ್ಥಾಮನು ನಾನು ಹೇಳಿದ ಮಾತನ್ನು ಕೇಳಿ, ರಾಜನು ಸರೋವರದಲ್ಲಿ ಇದ್ದಾನೆ ಎಂಬುದನ್ನು ತಿಳಿದು ಕರುಣೆಯಿಂದ ಬಹಳ ಮರುಕಪಟ್ಟನು.
ಅಹೋ ಧಿಕ್ ಸ ನ ಜಾನಾತಿ ಜೀವತೋಽಸ್ಮಾನ್ ನರಾಧಿಪಃ |
ಪರ್ಯಾಪ್ತಾ ಹಿ ವಯಂ ತೇನ ಸಹ ಯೋಧಯಿತುಂ ಪರಾನ್ ॥76॥
ಅಯ್ಯೋ! ಧಿಕ್ಕಾರವಿರಲಿ! ನಾವು ಬದುಕಿರುವ ವಿಷಯವನ್ನು ರಾಜನು ತಿಳಿದಿಲ್ಲ. ಅವನೊಡನೆ ಸೇರಿಕೊಂಡು ಶತ್ರುಗಳ ವಿರುದ್ಧ ಹೋರಾಟ ಮುಂದುವರಿಸಲು ನಾವು ಸಾಕಾಗುತ್ತಿದ್ದೆವು.
ತೇ ತು ತತ್ರ ಚಿರಂ ಕಾಲಂ ವಿಲಪ್ಯ ಚ ಮಹಾರಥಾಃ |
ಪ್ರಾದ್ರವನ್ ರಥಿನಾಂ ಶ್ರೇಷ್ಠಾ ದೃಷ್ಟ್ವಾ ಪಾಂಡುಸುತಾನ್ ರಣೇ ॥
ಆ ಮೂವರು ಅಲ್ಲಿ ಬಹಳ ಹೊತ್ತಿನವರೆಗೆ ಅಳುತ್ತಿದ್ದರು. ರಣರಂಗದಲ್ಲಿ ಪಾಂಡವರನ್ನು ನೋಡಿದೊಡನೆ ಓಡಿದರು.
ತೇ ತು ಮಾಂ ರಥಮಾರೋಪ್ಯ ಕೃಪಸ್ಯ ತು ಪರಿಕ್ಷತಮ್ |
ಸೇನಾನಿವೇಶಮಾಜಗ್ಮುರ್ಹತಶೇಷಾಸ್ತ್ರಯೋ ರಥಾಃ ॥78॥
ಅವರು ನನ್ನನ್ನೂ ರಥದಲ್ಲಿ ಹತ್ತಿಸಿಕೊಂಡು ಕೃಪನ ಮುರಿದುಹೋದ ಸೇನಾಶಿಬಿರಕ್ಕೆ ಕರೆದೊಯ್ದರು. ಆ ಮೂರು ಮಹಾರಥರ ಅಸ್ತ್ರಗಳೂ ನಷ್ಟವಾಗಿದ್ದವು.
ತತ್ರ ಗುಲ್ಮಾಃ ಪರಿಕ್ಷಿಪ್ತಾಃ ಸೂರ್ಯೇ ಚಾಸ್ತಮಿತೇ ಸತಿ |
ಸರ್ವೇ ವಿಚುಕ್ರುಶುಃ ಶ್ರುತ್ವಾ ಪುತ್ರಾಣಾಂ ತವ ಸಂಕ್ಷಯಮ್ ॥79॥
ಅಲ್ಲಿ ಸೂರ್ಯಾಸ್ತವಾಗಲು ಪಹರೆದಾರರು ಗೊಂದಲಕ್ಕೊಳಗಾದರು. ನಿನ್ನ ಮಗನ ಸಮಾಚಾರವನ್ನು ಕೇಳಿ ಎಲ್ಲರೂ ದುಃಖದಿಂದ ಬೊಬ್ಬಿಟ್ಟರು.
ತತೋ ವೃದ್ಧಾ ಮಹಾರಾಜ ಯೋಷಿತಾಂ ರಕ್ಷಣೇ ರತಾಃ |
ರಾಜದಾರಾನುಪಾದಾಯ ಪ್ರಯಯುರ್ನಗರಂ ಪ್ರತಿ ॥80॥
ಮಹಾರಾಜನೇ! ವೃದ್ಧರಾದವರು ಸ್ತ್ರೀಯರ ರಕ್ಷಣೆಯಲ್ಲಿ ತೊಡಗಿದರು. ರಾಣಿಯರನ್ನು ಕರೆದುಕೊಂಡು ನಗರಗಳಿಗೆ ತೆರಳಿದರು.
ತತ್ರ ವಿಕ್ರೋಶತೀನಾಂ ಚ ರುದಂತೀನಾಂ ಚ ನಿಃಸ್ವನಃ |
ಪ್ರಾದುರಾಸೀನ್ಮಹಾಘೋರಃ ಶ್ರುತ್ವಾ ತಂ ಬಲಸಂಕ್ಷಯಮ್ ॥81॥
ದುರ್ಯೋಧನನ ಬಲದ ಅವಸಾನವನ್ನು ಕೇಳಿ ಎಲ್ಲರೂ ದುಃಖದಿಂದ ಜೋರಾಗಿ ಅಳುತ್ತಿದ್ದರು. ಆ ಅಳುವಿನ ಧ್ವನಿಯು ಕರ್ಣಕಠೋರವಾಗಿತ್ತು.
ತತಸ್ತು ಯೋಷಿತೋ ರಾಜನ್ ಕ್ರಂದಂತ್ಯೋ ವೈ ಮುಹುರ್ಮುಹುಃ |
ಕುರರ್ಯ ಇವ ಶಬ್ದೇನ ನಾದಯಂತ್ಯೋ ಮಹೀತಳಮ್ ॥82॥
ರಾಜನೇ! ರಾಜಸ್ತ್ರೀಯರು ಮತ್ತೆ ಮತ್ತೆ ಅಳುತ್ತಾ, ಕುರರಪಕ್ಷಿಗಳಂತೆ ಭೂಮಿಯಲ್ಲೆಲ್ಲ ಶಬ್ದವನ್ನು ಹರಡಿದರು.
ಆಜಘ್ನುಃ ಕರಜೈಶ್ಚಾಪಿ ಪಾಣಿಭಿಶ್ಚ ಶಿರಾಂಸ್ಯುತ |
ಲುಲುವುಶ್ಚ ತದಾ ಕೇಶಾನ್ ಕ್ರೋಶಂತ್ಯಸ್ತತ್ರ ತತ್ರ ಹ ॥83॥
ದುಃಖದಿಂದಾಗಿ ತಮ್ಮ ತಲೆಯನ್ನು ಉಗುರುಗಳಿಂದ ಕೆರೆದುಕೊಂಡರು. ಕೈಗಳಿಂದ ತಲೆಗೆ ಹೊಡೆದುಕೊಂಡರು. ಜೋರಾಗಿ ಬೊಬ್ಬಿಡುತ್ತಾ ತಮ್ಮ ತಲೆಗೂದಲನ್ನು ಕೀಳುತ್ತಿದ್ದರು.
ಹಾಹಾಕಾರಂ ವಿಕುರ್ವಾಣಾ ವಿನಿಘ್ನಂತ್ಯ ಉರಾಂಸಿ ಚ |
ಕ್ರೋಶಂತ್ಯಸ್ತತ್ರ ರುರುದುಃ ಕ್ರಂದಮಾನಾ ವಿಶಾಂಪತೇ ॥84॥
ಹಾಹಾಕಾರವನ್ನು ಮಾಡುತ್ತಾ ತಮ್ಮ ಎದೆಗೆ ಬಡಿದುಕೊಳ್ಳುತ್ತಿದ್ದರು. ರಾಜನೇ! ಕಿರುಚುತ್ತಾ, ಬೊಬ್ಬಿಡುತ್ತಾ ಅಳುತ್ತಿದ್ದರು.
ತತೋ ದುರ್ಯೋಧನಾಮಾತ್ಯಾಃ ಸಾಸ್ರುಕಂಠಾ ಭೃಶಾತುರಾಃ |
ರಾಜದಾರಾನುಪಾದಾಯ ಪ್ರಯಯುರ್ನಗರಂ ಪ್ರತಿ ॥85॥
ಅನಂತರ ದುರ್ಯೋಧನನ ಮಂತ್ರಿಗಳು ದುಃಖದಿಂದ ಗಂಟಲುಕಟ್ಟಿದವರಾಗಿ, ಬಹಳವಾಗಿ ಅಳುತ್ತಿದ್ದರು. ಅವರು ರಾಜಸ್ತ್ರೀಯರನ್ನು

ಕರೆದುಕೊಂಡು ನಗರಕ್ಕೆ ಹೋದರು.
ವೇತ್ರಝರ್ಝರಹಸ್ತಾಶ್ಚ ದ್ವಾರಾಧ್ಯಕ್ಷಾ ವಿಶಾಂಪತೇ |
ಶಯನೀಯಾನಿ ಶುಭ್ರಾಣಿ ಮೃದ್ವಾಸ್ತರಣವಂತಿ ಚ ॥86॥
ಸಮಾದಾಯ ಯಯುಸ್ತೂರ್ಣಂ ನಗರಂ ಜನರಕ್ಷಿಣಃ ॥87॥
ರಾಜನೇ! ದ್ವಾರಪಾಲಕರು ಚಾಟಿಯನ್ನು ಕೈಯಿಂದ ಬೀಸುತ್ತಾ ಶುಭ್ರವಾದ ಹಾಸಿಗೆ ಮತ್ತು ಮೃದುವಾದ ಹೊದಿಕೆಗಳನ್ನು ತೆಗೆದುಕೊಂಡು ನಗರದ ಕಡೆಗೆ ಬೇಗನೇ ನಡೆದರು.
ಆಸ್ಥಾಯಾಶ್ವತರೀಯುಕ್ತಾನ್ ಸ್ಯಂದನಾನಪರೇ ಪುನಃ |
ಸ್ವಾನ್ ಸ್ವಾನ್ ದಾರಾನುಪಾದಾಯ ಪ್ರಯಯುರ್ನಗರಂ ಪ್ರತಿ ॥88॥
ಮತ್ತೆ ಕೆಲವರು ಒಳ್ಳೆಯ ಕುದುರೆಗಳುಳ್ಳ ರಥಗಳನ್ನು ಹತ್ತಿ, ತಮ್ಮ ತಮ್ಮ ಪತ್ನಿಯರನ್ನು ಕರೆದುಕೊಂಡು ನಗರದ ಕಡೆಗೆ ಹೋದರು.
ಅದೃಷ್ಟಪೂರ್ವಾ ಯಾ ನಾರ್ಯೋ ಭಾಸ್ಕರೇಣಾಪಿ ವೇಶ್ಮಸು |
ದದೃಶುಸ್ತಾ ಮಹಾರಾಜ ಜನಾ ಯಾಂತೀಃ ಪುರಂ ಪ್ರತಿ ॥89॥
ಯಾವ ರಾಜಸ್ತ್ರೀಯರು ಸೂರ್ಯನ ದರ್ಶನವನ್ನೂ ಮಾಡದೆ ಬಹಳ ಜತನದಿಂದ ಅರಮನೆಯೊಳಗೆಯೇ ಇರುತ್ತಿದ್ದರೋ ಅಂತಹವರು ಪಟ್ಟಣಕ್ಕೆ ಹೋಗುತ್ತಿರುವುದನ್ನು ಎಲ್ಲರೂ ನೋಡಿದರು.
ತಾಃ ಸ್ತ್ರಿಯೋ ಭರತಶ್ರೇಷ್ಠ ಸೌಕುಮಾರ್ಯಸಮನ್ವಿತಾಃ |
ಪ್ರಯಯುರ್ನಗರಂ ತೂರ್ಣಂ ಹತಸ್ವಜನಬಾಂಧವಾಃ ॥90॥
ಭರತೋತ್ತಮನೇ! ಬಹಳ ಕೋಮಲತೆಯನ್ನು ಹೊಂದಿದ ಆ ಸ್ತ್ರೀಯರು ತಮ್ಮ ಸ್ವಂತದ ಬಾಂಧವರನ್ನು ಕಳೆದುಕೊಂಡು ನಗರಕ್ಕೆ ಬೇಗನೇ ಹೋದರು.
ಆಗೋಪಾಲಾವಿಪಾಲೇಭ್ಯೋ ದ್ರವಂತೋ ನಗರಂ ಪ್ರತಿ |
ಯಯುರ್ಮನುಷ್ಯಾಃ ಸಂಭ್ರಾಂತಾ ಭೀಮಸೇನಭಯಾರ್ದಿತಾಃ ॥91॥
ಗೋವುಗಳನ್ನು ಮೇಯಿಸುವ, ಆಡುಗಳನ್ನು ಮೇಯಿಸುವ ಜನರವರೆಗೆ ಎಲ್ಲರೂ ನಗರದ ಕಡೆಗೆ ಓಡುತ್ತಿದ್ದರು. ಅವರೆಲ್ಲರೂ ಭೀಮಸೇನನಿಗೆ ಭಯಪಟ್ಟು ಕಾರ್ಯಾಕಾರ್ಯವಿವೇಕವನ್ನು ಕಳೆದುಕೊಂಡರು.
ಅಪಿ ಚೈಷಾಂ ಭಯಂ ತೀವ್ರಂ ಪಾರ್ಥೇಭ್ಯೋಽಭೂತ್ ಸುದಾರುಣಮ್ |
ಪ್ರೇಕ್ಷಮಾಣಸ್ತದಾಽನ್ಯೋನ್ಯಮಧಾವನ್ ನಗರಂ ಪ್ರತಿ ॥92॥
ಪಾಂಡವರಿಂದ ಅವರಿಗೆ ಬಹಳದುಃಖದಾಯಕವಾದ ಭಯವು ಉಂಟಾಯಿತು. ಒಬ್ಬರಿಗೊಬ್ಬರು ಮುಖವನ್ನು ನೋಡುತ್ತಾ ನಗರದ ಕಡೆಗೆ ಧಾವಿಸಿದರು.
ತಸ್ಮಿಂಸ್ತದಾ ವರ್ತಮಾನೇ ವಿಪ್ಲವೇ ಭೃಶದಾರುಣೇ |
ಯುಯುತ್ಸುಃ ಶೋಕಸಮ್ಮೂಢಃ ಪ್ರಾಪ್ತಕಾಲಮಚಿಂತಯನ್ ॥93॥
ಹೀಗೆ ಆಗ ಭಯಂಕರವಾದ ಗೊಂದಲವು ಏರ್ಪಡುತ್ತಿರಲು ಶೋಕದಿಂದ ಮೂಢನಾದ ಯುಯುತ್ಸುವು ಕಾಲಕ್ಕೆ ಅನುಗುಣವಾಗಿ ಆಲೋಚಿಸಿದನು.
ಯುಯುತ್ಸುಃ
ಜಿತೋ ದುರ್ಯೋಧನಃ ಸಂಖೇ ಪಾಂಡವೈರ್ಭೀಮವಿಕ್ರಮೈಃ |
ಏಕಾದಶಚಮೂಭರ್ತಾ ಭ್ರಾತರಶ್ಚಾಸ್ಯ ಸೂದಿತಾಃ ॥94॥
ಯುಯುತ್ಸು ಭಯಂಕರ ಪರಾಕ್ರಮಿಗಳಾದ ಪಾಂಡವರಿಂದ ಹನ್ನೊಂದು ಅಕ್ಷೌಹಿಣಿಸೇನೆಗೆ ಅಧಿಪತಿಯಾದ ದುರ್ಯೋಧನನು ಸೋತಿದ್ದಾನೆ. ಅವನ ಸಹೋದರರೆಲ್ಲರೂ ಸತ್ತಿದ್ದಾರೆ.
ಹತಾಶ್ಚ ಕುರವಃ ಸರ್ವೇ ಭೀಷ್ಮದ್ರೋಣಪುರಃಸರಾಃ |
ಅಹಮೇಕೋ ವಿಮುಕ್ತಶ್ಚ ಭಾಗ್ಯಯೋಗಾದ್ ಯದೃಚ್ಛಯಾ ॥95॥
ಭೀಷ್ಮ-ದ್ರೋಣಾದಿ ಎಲ್ಲಾ ಕುರುವೀರರು ಯುದ್ಧದಲ್ಲಿ ಪ್ರಾಣತ್ಯಾಗ ಮಾಡಿದ್ದಾರೆ. ಭಗವಂತನ ಇಚ್ಛೆಯಿಂದ ಅದೃಷ್ಟವಶಾತ್ ನಾನೊಬ್ಬನೇ ಮುಕ್ತನಾಗಿದ್ದೇನೆ.
ವಿದ್ರುತಾನಿ ಚ ಸೈನ್ಯಾನಿ ಶಿಬಿರಾದ್ ವೈ ಸಮಂತತಃ ॥96॥
ಶಿಬಿರಗಳಲ್ಲಿದ್ದ ಸೈನ್ಯಗಳೂ ಎಲ್ಲಾ ಕಡೆಗೆ ಓಡತೊಡಗಿದವು.
ದುರ್ಯೋಧನಸ್ಯ ಸಚಿವಾ ಯೇ ಕೇಚಿದವಶೇಷಿತಾಃ |
ರಾಜದಾರಾನುಪಾದಾಯ ವ್ಯಧಾವನ್ ನಗರಂ ಪ್ರತಿ ॥97॥
ಯುದ್ಧದಲ್ಲಿ ಅಳಿದುಳಿದ ಕೆಲವು ದುರ್ಯೋಧನ ಸಚಿವರು ರಾಜಸ್ತ್ರೀಯರನ್ನು ಕರೆದುಕೊಡು ನಗರಕ್ಕೆ ಬೇಗನೇ ಸಾಗಿದರು.
ಪ್ರಾಪ್ತಕಾಲಮಹಂ ಮನ್ಯೇ ಪ್ರವೇಶಂ ತೈಃ ಸಹಾಭಿ ಭೋ |
ಯುಧಿಷ್ಠಿರಮನುಜ್ಞಾಪ್ಯ ವಾಸುದೇವಂ ತಥೈವ ಚ ॥98॥
ನಾನೀಗ ಈ ಮಂತ್ರಿಗಳ ಜೊತೆಗೆ ಸೇರುವುದು ಒಳ್ಳೆಯದು ಎಂದು ಅಂದುಕೊಳ್ಳುತ್ತೇನೆ. ಈ ವಿಷಯದಲ್ಲಿ ಧರ್ಮರಾಜನ ಮತ್ತು ಶ್ರೀಕೃಷ್ಣನ ಅಪ್ಪಣೆಯನ್ನು ಪಡೆಯುತ್ತೇನೆ.
ಸಂಜಯಃ
ಏವಮೇತನ್ಮಹಾಬಾಹುರುಭಯೋಃ ಸನ್ನ್ಯವೇದಯತ್ ॥99॥
ಸಂಜಯ ಮಹಾಬಾಹುವಾದ ಯುಯುತ್ಸುವು ಆ ಇಬ್ಬರಲ್ಲಿಯೂ ಈ ರೀತಿಯಲ್ಲಿ ನಿವೇದಿಸಿಕೊಂಡನು.

ತಸ್ಯ ಪ್ರೀತೋಽಭವದ್ ರಾಜಾ ನಿತ್ಯಂ ಕರುಣವೇದಿನಃ |
ಪರಿಷ್ವಜ್ಯ ಮಹಾಬಾಹುರ್ವೈಶ್ಯಾಪುತ್ರಂ ವ್ಯಸರ್ಜಯತ್ ॥100॥
ಕರುಣೆಯನ್ನು ನಿತ್ಯವೂ ಅನುಭವಿಸುವ ಧರ್ಮರಾಜನು ಯುಯುತ್ಸುವಿನ ಬಗ್ಗೆ ಪ್ರೀತನಾಗಿ ಅವನನ್ನು ಆಲಿಂಗಿಸಿ ವೇಶ್ಯಾಪುತ್ರನಾದ ಯುಯುತ್ಸುವನ್ನು ಬೀಳ್ಕೊಡುತ್ತಾನೆ.
ತತಃ ಸ ರಥಮಾಸ್ಥಾಯ ದ್ರುತಮಶ್ವಾನಚೋದಯತ್ |
ಸಂಭಾವಯಿತ್ವಾ ತಾಂಶ್ಚಾಪಿ ರಾಜದಾರಾನ್ ಪುರಂ ಪ್ರತಿ ॥101॥
ಅನಂತರ ಯುಯುತ್ಸುವು ರಥವನ್ನು ಹತ್ತಿ ಕುದುರೆಗಳನ್ನು ಬೇಗನೇ ಓಡಿಸುತ್ತಾನೆ. ಜೊತೆಗೆ ರಾಜಪತ್ನಿಯರನ್ನೂ ನಗರಕ್ಕೆ ಕರೆದೊಯ್ಯುತ್ತಾನೆ.
ತೈಶ್ಚೈವ ಸಹಿತಃ ಕ್ಷಿಪ್ರಮಸ್ತಂ ಗಚ್ಛತಿ ಭಾಸ್ಕರೇ |
ಪ್ರವಿಷ್ಟೋ ಹಸ್ತಿನಪುರಂ ಬಾಷ್ಪಕಂಠಾಶ್ರುಲೋಚನಃ ॥102॥
ಸೂರ್ಯಾಸ್ತಮಾನವಾಗುತ್ತಿರಲು ಯುಯುತ್ಸುವು ಆ ಕ್ಷತ್ರಿಯಸ್ತ್ರೀಯರ ಜೊತೆಗೆ ಬೇಗನೆ ಹಸ್ತಿನಪುರವನ್ನು ಪ್ರವೇಶಿಸುತ್ತಾನೆ. ಅವನ ಕಂಠ ದ್ರವಯುಕ್ತವಾಗಿತ್ತು ಮತ್ತು ಕಣ್ಣುಗಳು ಕಣ್ಣೀರಿನಿಂದ ತುಂಬಿದ್ದವು.
ಅಪಶ್ಯಚ್ಚ ಮಹಾಪ್ರಾಜ್ಞಂ ವಿದುರಂ ಸಾಶ್ರುಲೋಚನಮ್ |
ರಾಜ್ಞಃ ಸಮೀಪಾನ್ನಿಷ್ಕ್ರಾಂತಂ ಶೋಕೋಪಹತಚೇತಸಮ್ ॥103॥
ಮತ್ತು ಅಲ್ಲಿ ರಾಜಧೃತರಾಷ್ಟ್ರನ ಹತ್ತಿರದಿಂದ ನಿರ್ಗಮಿಸುತ್ತಿದ್ದ ಮಹಾಜ್ಞಾನಿ ವಿದುರನನ್ನು ನೋಡಿದನು. ವಿದುರನೂ ಕೂಡ ಮನಸ್ಸಿನಲ್ಲಿಯೇ ದುಃಖಿಸುತ್ತಾ ಕಣ್ಣುಗಳಲ್ಲಿ  ನೀರನ್ನು  ತುಂಬಿಕೊಂಡಿದ್ದನು.
ತಮಬ್ರುವೀತ್ ಸತ್ಯಧೃತಿಃ ಪ್ರಣತಂ ತ್ವಗ್ರತಃ ಸ್ಥಿತಮ್ ॥104॥
ಸತ್ಯನಿಷ್ಠೆಯುಳ್ಳ ವಿದುರನು ಎದುರಿಗೆ ನಿಂತು ನಮಸ್ಕರಿಸಿದ ಯುಯುತ್ಸುವಿಗೆ ಹೀಗೆ ಹೇಳುತ್ತಾನೆ.
ವಿದುರಃ
ಅಸ್ಮಿನ್ ಕುರುಕ್ಷಯೇ ವೃತ್ತೇ ದಿಷ್ಟ್ಯಾ ತ್ವಂ ಪುತ್ರ ಜೀವಸಿ |
ವಿನಾ ರಾಜ್ಞಃ ಪ್ರವೇಶಾದ್ವೈ ಕಿಮಸಿ ತ್ವಮಿಹಾಗತಃ ॥105॥
ವಿದುರ ಇಲ್ಲಿ ಕುರುಗಳೆಲ್ಲಾ ಯುದ್ಧದಲ್ಲಿ ನಾಶವಾದಾಗ ನೀನೊಬ್ಬನೇ ಅದೃಷ್ಟವಶಾತ್ ಬದುಕಿ ಉಳಿದಿರುವಿ. ರಾಜನಾದ ಯುಧಿಷ್ಠಿರನು ಹಸ್ತಿನಪುರವನ್ನು ಪ್ರವೇಶಿಸುವುದಕ್ಕಿಂತ ಮೊದಲೇ ನೀನು ಯಾವ ಕಾರಣದಿಂದ ಇಲ್ಲಿಗೆ ಬಂದಿರುವಿ?
ಏತದ್ ವೈ ಕಾರಣಂ ಸರ್ವಂ ವಿಸ್ತರೇಣ ನಿವೇದಯ ॥106॥
ಇದಕ್ಕೆ ಏನು ಕಾರಣವೆಂಬುದನ್ನು ನನಗೆ ವಿಸ್ತಾರವಾಗಿ ತಿಳಿಸು.
ಯುಯುತ್ಸುಃ
ನಿಹತೇ ಶಕುನೌ ತಾತ ಸಜ್ಞಾತಿಸುತಬಾಂಧವೇ |
ಹತಶೇಷಪರೀವಾರೋ ರಾಜಾ ದುರ್ಯೋಧನಸ್ತತಃ ॥107॥
ಯುಯುತ್ಸು ತಾತನೇ! ಬಂಧುಬಾಂಧವರು ಮತ್ತು ಮಕ್ಕಳೊಂದಿಗೆ ಶಕುನಿಯು ಯುದ್ಧದಲ್ಲಿ ಮರಣಹೊಂದಿದ ಮೇಲೆ ದುರ್ಯೋಧನನು ಉಳಿದ ಸೈನ್ಯವನ್ನು ತನ್ನ ಸುತ್ತಲೂ ನೇಮಿಸಿಕೊಂಡನು.
ಸ್ವಕಂ ಹಯಂ ಸಮುತ್ಸೃಜ್ಯ ಪ್ರಾಙ್ಮುಖಃ ಪ್ರಾದ್ರವದ್ ಭಯಾತ್॥108॥
ಭಯಗೊಂಡ ದುರ್ಯೋಧನನು ತನ್ನ ಕುದುರೆಗಳ ಕಟ್ಟನ್ನು ಬಿಚ್ಚಿ ತಾನು ಪೂರ್ವದಿಕ್ಕಿಗೆ ಪಲಾಯನ ಮಾಡಿದನು.
ಅಪಕ್ರಾಂತೇ ತು ನೃಪತೌ ಸ್ಕಂಧಾವಾರನಿವೇಶನಾತ್ |
ಭಯವ್ಯಾಕುಲಿತಂ ಸೈನ್ಯಂ ಪ್ರಾದ್ರವನ್ನಗರಂ ಪ್ರತಿ ॥109॥
ರಾಜನಾದ ದುರ್ಯೋಧನನು ಕಾವಲುಗೋಪುರದಿಂದ ಹಾರಿ ತಪ್ಪಿಸಿಕೊಂಡು ಹೋದ ನಂತರ ಭಯದಿಂದ ಗಲಿಬಿಲಿಗೊಂಡ ಸೈನ್ಯವು ಹಸ್ತಿನಪುರಕ್ಕೆ  ಓಡಿಹೋಯಿತು.
ತತೋ ರಾಜ್ಞಃ ಕಳತ್ರಾಣಿ ಭ್ರಾತೃಣಾಂ ಚಾಪಿ ಸರ್ವಶಃ |
ವಾಹನೇಷು ಸಮಾರೋಪ್ಯ ಸ್ತ್ರ್ಯಧ್ಯಕ್ಷಾಃ ಪ್ರಾದ್ರವನ್ ಭಯಾತ್ ॥110॥
ಅನಂತರ ಮೂರೂ ಸೈನ್ಯಗಳ ಮುಖ್ಯಾಳುಗಳು ರಾಜನ ಮತ್ತು ಅವನ ಸಹೋದರರ ಪತ್ನಿಯರನ್ನು ವಾಹನಗಳಲ್ಲಿ ಹತ್ತಿಸಿ ಭಯದಿಂದ ಬೇಗನೇ ಓಡಿದರು.
ತತೋಽಹಂ ಸಮನುಜ್ಞಾಪ್ಯ ರಾಜಾನಂ ಸಹಕೇಶವಮ್ |
ಪ್ರವಿಷ್ಟೋ ಹಸ್ತಿನಪುರಂ ರಕ್ಷನ್ ಲೋಕಸ್ಯ ವಾಚ್ಯತಾಮ್ ॥111॥
ಅನಂತರ ನಾನು ಧರ್ಮರಾಜನ ಮತ್ತು ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದುಕೊಂಡು ಲೋಕವಾರ್ತೆಯನ್ನು ರಕ್ಷಿಸುವವನಾಗಿ ಹಸ್ತಿನಪುರವನ್ನು ಪ್ರವೇಶಿಸಿದೆನು.
ಸಂಜಯಃ
ಏತಚ್ಛ್ರುತ್ವಾ ತು ವಚನಂ ವೇಶ್ಯಾಪುತ್ರೇಣ ಭಾಷಿತಮ್ |
ಪ್ರಾಪ್ತಕಾಲಮಿತಿ ಜ್ಞಾತ್ವಾ ವಿದುರಃ ಸರ್ವಧರ್ಮವಿತ್ ॥112॥
ಅಪೂಜಯದಮೇಯಾತ್ಮಾ ಯುಯುತ್ಸುಂ ವಾಕ್ಯಕೋವಿದಮ್ ॥113॥
ಸಂಜಯ ವೇಶ್ಯಾಪುತ್ರ ಯುಯುತ್ಸುವು ಹೇಳಿದ ಮಾತುಗಳನ್ನು ಕೇಳಿಸಿಕೊಂಡ, ಸಕಲಧರ್ಮಗಳನ್ನು ತಿಳಿದಿರುವ ವಿದುರನು, ಇದೆಲ್ಲವೂ ಕಾಲಪ್ರೇರಕನಾದ ನಾರಾಯಣನಿಂದ ಆಯಿತೆಂದು ಅರಿತುಕೊಂಡನು, ವಿದುರನು ಚೆನ್ನಾಗಿ ಮಾತನಾಡುವ

ಯುಯುತ್ಸುವನ್ನು ಗೌರವಿಸಿದನು.
ವಿದುರಃ
ಪ್ರಾಪ್ತಕಾಲಮಿದಂ ಸರ್ವಂ ಭವತೋ ಭರತಕ್ಷಯೇ |
ಸಂಸ್ಕೃತಃ ಕುಲಧರ್ಮಶ್ಚ ಸಾನುಕ್ರೋಶತಯಾ ತದಾ ॥114॥
ವಿದುರ ಭರತವಂಶವು ನಾಶವಾಗುತ್ತಿರುವ ಈ ಸಂದರ್ಭದಲ್ಲಿ ನಿನ್ನ ಮಟ್ಟಿಗೆ ನಡೆದದ್ದೆಲ್ಲವೂ ಕಾಲನಿಯಾಮಕನಾದ ಶ್ರೀಹರಿಯಿಂದಲೇ. ನೀನು ದಯೆಯಿಂದ ಯುಕ್ತನಾದವನಾಗಿ ಕುಲಧರ್ಮಗಳನ್ನು ನೆನಪಿಸಿಕೊಳ್ಳುತ್ತಾ ಅವನ್ನು ರಕ್ಷಿಸುತ್ತಿರುವಿ.
ಅದ್ಯಾಹಮಪಿ ವಿಶ್ರಾಂತಃ ಶ್ವೋ ಗಂತಾಸ್ಮಿ ಯುಧಿಷ್ಠಿರಮ್ ॥115॥
ಇವತ್ತು ನಾನೂ ಕೂಡ ಬಹಳ ಆಯಾಸಗೊಂಡಿದ್ದೇನೆ. ನಾಳೆ ಯುಧಿಷ್ಠಿರನ ಬಳಿಗೆ ಹೋಗುತ್ತೇನೆ.
ಸಂಜಯಃ
ಏತಾವದುಕತ್ತ್ವ ವಚನಂ ವಿದುರಃ ಸರ್ವಧರ್ಮವಿತ್ |
ಯುಯುತ್ಸುಂ ಸಮನುಜ್ಞಾಪ್ಯ ವಿವೇಶ ನೃಪತೇಃ ಕ್ಷಯಮ್ ॥116॥
ಸಂಜಯ ಸಕಲಧರ್ಮಸೂಕ್ಷ್ಮಗಳನ್ನು ತಿಳಿದುಕೊಂಡ ವಿದುರನು ಇಷ್ಟು ಹೇಳಿ ಸುಮ್ಮನಾಗುತ್ತಾನೆ. ಯುಯುತ್ಸುವಿನ ಒಪ್ಪಿಗೆಯನ್ನು ಪಡೆದು ರಾಜನ ಮನೆಯನ್ನು ಪ್ರವೇಶಿಸುತ್ತಾನೆ.
ಪೌರಜಾನಪದೈರ್ದುಃಖಾದ್ ಹಾಹೇತಿ ಭೃಶನಾದಿತಮ್ |
ನಿರಾನಂದಂ ಗತಶ್ರೀಕಂ ಹೃತನಾಗಮಿವಾಶಯಮ್ ॥117॥
ಶೂನ್ಯರೂಪಮವಧ್ವಸ್ತಂ ದೃಷ್ಟ್ವಾ ಧ್ವಸ್ತರತೋಽಭವತ್ ॥118॥
ಆ ಅರಮನೆಯಲ್ಲಿ ಪುರವಾಸಿಗಳು, ಗ್ರಾಮವಾಸಿಗಳು ಹಾ ಎಂದು ಬಹಳ ಶಬ್ದವನ್ನು ಮಾಡುತ್ತಿದ್ದರು. ಯಾರಿಗೂ ಆನಂದವು ಇಲ್ಲದಾಯಿತು. ಸಂಪತ್ತು ಹೊರಟುಹೋಯಿತು. ಆ ಅಂತಃಪುರವು ಶೂನ್ಯವಾಗಿತ್ತು. ಇದನ್ನು ನೋಡಿ ವಿದುರನು ಮತ್ತೂ ದುಃಖಿತನಾದನು.
ವಿದುರಃ ಸರ್ವಧರ್ಮಜ್ಞೋ ವ್ಯಾಕುಲೇನಾಂತರಾತ್ಮನಾ |
ವಿವೇಶ ನೃಪತೇರ್ವೇಶ್ಮ ನಿಶಶ್ವಾಸ ಶನೈಃ ಶನೈಃ ॥119॥
ಸರ್ವಧರ್ಮಜ್ಞನಾದ ವಿದುರನು ಮನಸ್ಸಿನಿಂದ ತುಂಬಾ ವ್ಯಥೆಯನ್ನು ಅನುಭವಿಸುತ್ತಾ ರಾಜನ ಮನೆಯೊಳಗೆ ಪ್ರವೇಶಿಸಿದನು ಮತ್ತು ನಿಧಾನವಾಗಿ ಉಸಿರಾಡಿದನು.
ಯುಯುತ್ಸುರಪಿ ತಾಂ ರಾತ್ರಿಂ ಸ್ವಗೃಹೇ ನ್ಯವಸತ್ ತದಾ ॥120॥
ಯುಯುತ್ಸುವೂ ಆದಿನದ ರಾತ್ರಿಯಲ್ಲಿ ತನ್ನ ಮನೆಯಲ್ಲಿಯೇ ವಾಸಮಾಡಿದನು.
ವಂದ್ಯಮಾನಃ ಸ್ವಕೈಶ್ಚಾಪಿ ನಾಭ್ಯನಂದತ್ ಸುದುಃಖಿತಃ |
ಚಿಂತಯಾನೋ ಮಹಾರಾಜ ಹತಾನಾಂ ಚ ಪರಸ್ಪರಮ್ ॥121॥
ತನ್ನವರು ತನಗೆ ನಮಸ್ಕರಿಸುತ್ತಿದ್ದರೂ ಬಹಳ ದುಃಖಿತನಾದ ಯುಯುತ್ಸು ಅದರಿಂದ ಸಂತುಷ್ಟನಾಗಲಿಲ್ಲ. ಮಹಾರಾಜನೇ! ಅವನು ಮಹಾಯುದ್ಧದಲ್ಲಿ  ಪರಸ್ಪರ ಕಾದಾಡಿ ಸತ್ತವರ ಬಗ್ಗೆಯೇ ಚಿಂತಿಸುತ್ತಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಲ್ಯಪರ್ವಣಿ ಶಕುನಿವಧೋ ನಾಮ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಹ್ರದಪ್ರವೇಶಪರ್ವ ॥

॥ ಸಮಾಪ್ತಂ ಶಲ್ಯಪರ್ವ ॥
* * * * *

ಮಹಾಭಾರತ
ಗದಾಪರ್ವ
ಒಂದನೆಯ ಅಧ್ಯಾಯ
ಕೃಪ, ಕೃತವರ್ಮ ಮತ್ತು ಅಶ್ವತ್ಥಾಮರು ದ್ವೈಪಾಯನ ಸರೋವರದ ಹತ್ತಿರ ದುರ್ಯೋಧನನ ಜೊತೆಗೆ ಮಾತನಾಡುತ್ತಿರುವಾಗ ಯದೃಚ್ಛಯಾ ಅಲ್ಲಿಗೆ ಬೇಟೆಗಾರರು ಬಂದುದು. ಬೇಟೆಗಾರರ ಮಾತಿನಂತೆ ಪರಿವಾರಸಮೇತರಾದ ಪಾಂಡವರು ಸರೋವರದ ಹತ್ತಿರ ಬರುವುದು, ಅವರನ್ನು ನೋಡಿ ದುರ್ಯೋಧನನ ಒಪ್ಪಿಗೆಯಿಂದ ಕೃಪಾದಿಗಳು ದೂರ ಹೋಗಿ ಆಲದ ಮರದ ಕೆಳಗೆ ಕುಳಿತುಕೊಂಡಿದ್ದು. ದುರ್ಯೋಧನನು ಪುನಃ ಜಲಸ್ತಂಭನ ಮಾಡಿ ಸರೋವರವನ್ನು ಪ್ರವೇಶಿಸಿದ್ದು.
ಸಂಜಯಃ
ಮುಹೂರ್ತಾದಿವ ರಾಜೇಂದ್ರ ಸರ್ವಂ ಶೂನ್ಯಮದೃಶ್ಯತ |
ಮತ್ತವಾರಣಸಂಘುಷ್ಟಂ ಶಿಬಿರಂ ವಿದ್ರುತೇ ಬಲೇ ॥1॥
ಸಂಜಯ ರಾಜೇಂದ್ರನೇ! ಸೈನ್ಯಬಲವೆಲ್ಲವೂ ಓಡಿಹೋದಾಗ ಮದವೇರಿದ ಆನೆಗಳಿಂದ ಪೂರ್ಣವಾಗಿದ್ದ ಸೇನಾಶಿಬಿರಗಳು ಎಲ್ಲವೂ ಒಂದು ಮುಹೂರ್ತದಲ್ಲಿಯೇ ಶೂನ್ಯವಾಗಿ ಕಂಡಿತು.

ಯತ್ರ ಶಬ್ದೇನ ಮಹತಾ ಅಬುಧ್ಯಂತ ಮಹಾರಥಾಃ |
ತತ್ರ ಶಬ್ದಂ ನ ಶೃಣುಮೋ ಮನುಷ್ಯಸ್ಯಾಪಿ ಕಸ್ಯಚಿತ್ ॥2॥
ಯಾವ ಶಿಬಿರದಲ್ಲಿ ಜೋರಾಗಿ ಕೇಳಿಸುತ್ತಿದ್ದ ಧ್ವನಿಯಿಂದಾಗಿಯೇ ಮಹಾರಥರ ಯೋಧರ ಇರುವಿಕೆಯು ತಿಳಿಯಲ್ಪಡುತ್ತಿತ್ತೋ, ಅಂತಹ ಸ್ಥಳದಲ್ಲಿ ಮನುಷ್ಯರದ್ದಾಗಲೀ, ಬೇರೆ ಯಾವುದೇ ಪ್ರಾಣಿಗಳದ್ದಾಗಲೀ ಶಬ್ದವು ಕೇಳಿಸುತ್ತಿರಲಿಲ್ಲ.
ಧೃತರಾಷ್ಟ್ರಃ
ಹತೇಷು ತೇಷು ಸೈನ್ಯೇಷು ಪಾಂಡುಪುತ್ರೈ ರಣಾಜಿರೇ |
ಮಾಮಕಾ ಹ್ಯವಶಿಷ್ಟಾಸ್ತೇ ಕಿಮಕುರ್ವತ ಸಂಜಯ ॥3॥
ಧೃತರಾಷ್ಟ್ರ ಸಂಜಯನೇ! ರಣರಂಗದಲ್ಲಿ ಪಾಂಡವರು ನನ್ನ ಮಕ್ಕಳನ್ನೆಲ್ಲಾ ಕೊಂದ ಮೇಲೆ, ಉಳಿದ ನನ್ನ ಕಡೆಯವರು ಏನು ಮಾಡಿದರು?
ಕೃಪಶ್ಚ ಕೃತವರ್ಮಾ ಚ ದ್ರೋಣಪುತ್ರಶ್ಚ ವೀರ್ಯವಾನ್ |
ದುರ್ಯೋಧನಶ್ಚ ಮಂದಾತ್ಮಾ ರಾಜಾ ಕಿಮಕರೋತ್ ತದಾ ॥4॥
ಕೃಪ, ಕೃತವರ್ಮ, ದ್ರೋಣಪುತ್ರನಾದ, ವೀರನಾದ ಅಶ್ವತ್ಥಾಮ ಮತ್ತು ಮಬ್ಬು ಕವಿದ ಬುದ್ಧಿಯುಳ್ಳ ರಾಜ ದುರ್ಯೋಧನ ಇವರು ಏನು ಮಾಡಿದರು?
ಸಂಜಯಃ
ಸಂಪ್ರಾದ್ರುವತ್ಸು ದಾರೇಷು ಕ್ಷತ್ರಿಯಾಣಾಂ ಮಹಾತ್ಮನಾಮ್ |
ವಿದ್ರುತೇ ಶಿಬಿರೇ ಶೂನ್ಯೇ ಭಯೋದ್ವಿಗ್ನಾಸ್ತ್ರಯೋ ರಥಾಃ ॥5॥
ನಿಶಮ್ಯ ಪಾಂಡುಪುತ್ರಾಣಾಂ ಜಯಿನಾಂ ಸುಮಹಾಸ್ವನಮ್ ॥6॥
ಸಂಜಯ ಪಾಂಡವರ ಜಯಕಾರದ ಜೋರಾದ ಧ್ವನಿಯು ಕೇಳಿಸುತ್ತಿತ್ತು. ಮಹಾತ್ಮರಾದ ಕ್ಷತ್ರಿಯರ ಪತ್ನಿಯರು ನಗರದ ಕಡೆ ಧಾವಿಸಿ ಓಡುತ್ತಿದ್ದರು. ಕೌರವಸೇನಾಶಿಬಿರವೆಲ್ಲವೂ ಬರಿದಾಗಿದೆ. ಇದನ್ನೆಲ್ಲ ನೋಡಿ ಮಹಾರಥರಾದ ಕೃಪ, ಕೃತವರ್ಮ ಮತ್ತು ಅಶ್ವತ್ಥಾಮರು ಭಯದಿಂದ ಕಂಗಾಲಾದರು.
ಸಂಜಯಃ
ವಿದ್ರುತಂ ಶಿಬಿರಂ ದೃಷ್ಟ್ವಾ ಸಾಯಾಹ್ನೇ ರಾಜಗರ್ಧಿನಃ ॥7॥
ಸ್ಥಾನಂ ನಾರೋಚಯಂಸ್ತತ್ರ ತತಸ್ತಂ ಹ್ರದಮಭ್ಯಯುಃ ॥8॥
ಸಂಜಯ ರಾಜನಾದ ದುರ್ಯೋಧನನನ್ನು ಅಪೇಕ್ಷಿಸಿ ತಿರುಗುತ್ತಿದ್ದ ಆ ಮೂವರು ಸಾಯಂಕಾಲದ ಸಮಯದಲ್ಲಿ ಬರಿದಾದ ಶಿಬಿರಗಳನ್ನು ಕಂಡು, ಆ ಜಾಗದಲ್ಲಿ ಇರಲು ಇಷ್ಟಪಡಲಿಲ್ಲ. ಅನಂತರ ಅವರು ಸರೋವರದ ಕಡೆಗೆ ಹೋದರು.
ಯುಧಿಷ್ಠಿರೋಽಪಿ ಕೌಂತೇಯೋ ಭ್ರಾತೃಭಿಃ ಸಹಿತೋ ರಣೇ |
ಹೃಷ್ಟಃ ಪರ್ಯತಪದ್ ರಾಜನ್ ದುರ್ಯೋಧನವಧೇಪ್ಸಯಾ ॥9॥
ರಾಜನೇ! ಸಹೋದರರರನ್ನು ಕೂಡಿಕೊಂಡ ಧರ್ಮರಾಜನೂ ಕೂಡ ಯುದ್ಧದ ಜಯದಿಂದ ಸಂತುಷ್ಟನಾಗಿ, ದುರ್ಯೋಧನನನ್ನು ಕೊಲ್ಲುವ ಇಚ್ಛೆಯಿಂದ ಆಲೋಚನಾಮಗ್ನನಾದನು. (ಸುತ್ತಲೂ ಸಂಚರಿಸಿದನು.)
ಮಾರ್ಗಮಾಣಾಸ್ತು ಸಂಕ್ರುದ್ಧಾಸ್ತವ ಪುತ್ರಂ ಜಿಘಾಂಸವಃ |
ಯತ್ನತೋಽನ್ವೇಷಮಾಣಾಶ್ಚ ನೈವಾಪಶ್ಯನ್ ನರಾಧಿಪಮ್ ॥10॥
ನಿನ್ನ ಮಗನನ್ನು ಕೊಲ್ಲುವ ಬಯಕೆಯಿಂದ ಕುಪಿತರಾಗಿ ಹುಡುಕುತ್ತಿದ್ದ ಪಾಂಡವರು ಬಹಳ ಪ್ರಯತ್ನಪಟ್ಟು ಹುಡುಕಾಡಿದರೂ ದುರ್ಯೋಧನನನ್ನು ನೋಡಲಾಗಲಿಲ್ಲ.
ಸ ತು ತೀವ್ರೇಣ ವೇಗೇನ ಗದಾಪಾಣಿರಪಾಕ್ರಮತ್ |
ತಂ ಹ್ರದಂ ಪ್ರಾವಿಶಚ್ಚಾಪಿ ವಿಷ್ಟಭ್ಯಾಪಃ ಸ್ವಮಾಯಯಾ ॥11॥
ರಾಜ ದುರ್ಯೋಧನನಾದರೂ ಗದೆಯನ್ನು ಹಿಡಿದುಕೊಂಡು ಬಹಳವೇಗವಾಗಿ ತನ್ನ ಮಾಯೆಯಿಂದ ಜಲವನ್ನು ಸ್ತಂಭನಗೊಳಿಸಿ ಸರೋವರದ ಒಳಗೆ ಪ್ರವೇಶಿಸಿದನು.
ತದಾ ತು ಪಾಂಡವಾಃ ಸರ್ವೇ ಸುಪರಿಶ್ರಾಂತವಾಹನಾಃ |
ತತಸ್ತೇ ಶಿಬಿರಂ ಪ್ರಾಪ್ಯ ವ್ಯತಿಷ್ಠನ್ ಸಹಸೈನಿಕಾಃ ॥12॥
ಆ ಸಂದರ್ಭದಲ್ಲಿ ಪಾಂಡವರ ರಥದ ಕುದುರೆಗಳು ಬಹಳ ಬಳಲಿದ್ದವು. ಎಲ್ಲಾ ಪಾಂಡವರು ತಮ್ಮ ಸೈನಿಕರೊಡನೆ ಶಿಬಿರಕ್ಕೆ ಹೋಗಿ ವಿಶ್ರಾಂತಿ ಪಡೆದರು.
ತತಃ ಕೃಪಶ್ಚ ದ್ರೌಣಿಶ್ಚ ಕೃತವರ್ಮಾ ಚ ಸಾತ್ವತಃ |
ಸನ್ನಿವಿಷ್ಟೇಷು ಪಾರ್ಥೇಷು ಪ್ರಯಯುಸ್ತಂ ಹ್ರದಂ ಶನೈಃ ॥13॥
ಪಾಂಡವರು ಅಲ್ಲಿಂದ ಹೊರಟನಂತರ ಕೃಪ, ಕೃತವರ್ಮ ಮತ್ತು ಅಶ್ವತ್ಥಾಮರು ನಿಧಾನವಾಗಿ ಆ ಸರೋವರದ ಹತ್ತಿರ ಬರುತ್ತಾರೆ.
ತೇ ತಂ ಹ್ರದಂ ಸಮಾಸಾದ್ಯ ಯತ್ರ ಶೇತೇ ನರಾಧಿಪಃ |
ಅಭ್ಯಭಾಷಂತ ದುರ್ಧರ್ಷಂ ರಾಜಾನಂ ಸುಪ್ತಮಂಭಸಿ ॥14॥
ದುರ್ಯೋಧನನು ಯಾವ ಸರೋವರದಲ್ಲಿ ಮಲಗಿದ್ದನೋ ಆ ಸರೋವರಕ್ಕೆ ಬಂದ ಕೃಪ ಮೊದಲಾದವರು ನೀರೊಳಗೆ ಮಲಗಿದ್ದ, ಪರರಿಗೆ ಎದುರಿಸಲಾಗದ ದುರ್ಯೋಧನನಿಗೆ ಹೀಗೆ ಹೇಳುತ್ತಾರೆ.
ಕೃಪಾದಯಃ
ರಾಜನ್ನುತ್ತಿಷ್ಠ ಯುಧ್ಯಸ್ವ ಸಹಾಸ್ಮಾಭಿರ್ಯುಧಿಷ್ಠಿರಮ್ |

ಜಿತ್ವಾ ವಾ ಪೃಥಿವೀಂ ಭುಂಕ್ಷ್ವ ಹತೋ ವಾ ಸ್ವರ್ಗಮಾಪ್ನುಹಿ ||15||
ಕೃಪಾದಿಗಳು ರಾಜನೇ! ಎದ್ದೇಳು! ನಮ್ಮೊಡನೆ ಸೇರಿ ಯುದ್ಧ ಮಾಡು. ಧರ್ಮರಾಜನನ್ನು ಗೆದ್ದು ಭೂಮಂಡಲವನ್ನು ಅನುಭವಿಸು. ಅಥವಾ ಸತ್ತು ವೀರಸ್ವರ್ಗವನ್ನು ಹೊಂದು.
ತೇಷಾಮಪಿ ಬಲಂ ಸರ್ವಂ ಹತಂ ದುರ್ಯೋಧನ ತ್ವಯಾ |
ಪ್ರತಿರುದ್ಧಾಶ್ಚ ಭೂಯಿಷ್ಠಂ ಯೇ ಶಿಷ್ಟಾಸ್ತತ್ರ ಸೈನಿಕಾಃ ||16||
ದುರ್ಯೋಧನನೇ! ಅವರ ಎಲ್ಲಾ ಸೈನ್ಯವು ಕೂಡ ನಿನ್ನಿಂದ ನಾಶವಾಗಿದೆ. ಉಳಿದ ಸೈನಿಕರು ಗಾಯಗೊಂಡು ಯುದ್ಧಮಾಡಲು ಸಾಧ್ಯವಾಗದ ಸ್ಥಿತಿಯಲ್ಲಿದ್ದಾರೆ.
ನ ತೇ ವೇಗಂ ವಿಷಹಿತುಂ ಶಕ್ತಾಸ್ತವ ವಿಶಾಂಪತೇ |
ಅಸ್ಮಾಭಿರಭಿಗುಪ್ತಸ್ಯ ತಸ್ಮಾದುತ್ತಿಷ್ಠ ಭಾರತ ||17||
ಭರತಕುಲೋದ್ಭವನೇ! ರಾಜನೇ! ನಮ್ಮ ರಕ್ಷಣೆಯಲ್ಲಿರುವ ನಿನ್ನ ಯುದ್ಧವೇಗವನ್ನು ಸಹಿಸಲು ಅವರು ಶಕ್ತರಾಗುವುದಿಲ್ಲ.
ದುರ್ಯೋಧನಃ
ದಿಷ್ಟ್ಯಾ ಪಶ್ಯಾಮಿ ವೋ ಮುಕ್ತಾನ್ ಈದೃಶಾಜ್ಜನಸಂಕ್ಷಯಾತ್ |
ಪಾಂಡುಕೌರವಸಮ್ಮರ್ದೇ ಜೀವಮಾನಾನ್ ನರರ್ಷಭಾನ್ ||18||
ದುರ್ಯೋಧನ ಯುದ್ಧದಿಂದ ಈ ರೀತಿಯಾಗಿ ಜನರ ನಾಶವು ನಡೆಯುತ್ತಿದ್ದರೂ ನೀವು ಅದೃಷ್ಟದಿಂದಾಗಿ ಬದುಕುಳಿದಿದ್ದೀರಿ ಎಂಬುದಾಗಿ ನಾನು ಭಾವಿಸುತ್ತೇನೆ.
ವಿಜೇಷ್ಯಾಮೋ ವಯಂ ಸರ್ವೇ ವಿಶ್ರಾಂತಾ ವಿಗತಕ್ಲಮಾಃ |
ಭವಂತಶ್ಚ ಪರಿಶ್ರಾಂತಾ ಅಹಂ ಚ ಭೃಶವಿಕ್ಷತಃ ||19||
ನೀವೂ ಎಲ್ಲರೂ ಬಹಳ ಆಯಾಸಗೊಂಡಿರುವಿರಿ. ನಾನೂ ಬಹಳವಾಗಿ ಗಾಯಗೊಂಡಿರುವೆನು. ಆದ್ದರಿಂದ ನಾವೆಲ್ಲಾ ವಿಶ್ರಾಂತಿಯನ್ನು ತೆಗೆದುಕೊಂಡು, ಆಯಾಸದ ದುಃಖವನ್ನು ಕಳೆದುಕೊಂಡು, ಅನಂತರ ಶತ್ರುಗಳನ್ನು ಗೆಲ್ಲೋಣ.
ಉದೀರ್ಣಂ ಚ ಬಲಂ ತೇಷಾಂ ತೇನ ಯುದ್ಧಂ ನ ರೋಚಯೇ ||20||
ಅಷ್ಟೇ ಅಲ್ಲದೆ ಅವರ ಸೈನ್ಯಬಲವು ಈಗ ಬಹಳ ಹೆಚ್ಚಾಗಿ ಇದೆ. ಆದ್ದರಿಂದಲೂ ಈಗ ಯುದ್ಧವನ್ನು ನಾನು ಇಷ್ಟಪಡುವುದಿಲ್ಲ.
ಭವತಾಮದ್ಭುತಂ ವೀರಾ ಯುದ್ಧೇ ಮಹದಿದಂ ಮನಃ |
ಅಸ್ಮಾಸು ಚ ಪರಾ ಭಕ್ತಿರ್ದರ್ಶಿತಾ ಕಾರ್ಯಗೌರವಾತ್ ||21||
ವಿಶ್ರಮ್ಯೈಕಾಂ ನಿಶಾಮದ್ಯ ಭವದ್ಭಿಃ ಸಹಿತೋ ರಣೇ |
ಪ್ರತಿಯೋದ್ಧಾಸ್ಮಿ ತಾನ್ ಶತ್ರೂನ್ ಶ್ವೋ ವಾ ನ ಸ್ಯಾಚ್ಛ್ರಮೋ ಮಮ ||
ವೀರರೇ! ನಿಮಗೆ ಯುದ್ಧದಲ್ಲಿ ಬಹಳವಾದ ಮನಸ್ಸಿದೆಯೆಂಬುದು ಬಹಳ ಅದ್ಭುತವಾಗಿದೆ. ನನ್ನಲ್ಲಿ ಬಹಳವಾದ ಭಕ್ತಿಯನ್ನೂ ತೋರಿಸಿದ್ದೀರಿ. ಮಾಡುವ ಕೆಲಸವು ಬಹಳವಾಗಿರುವುದರಿಂದ ಒಂದು ರಾತ್ರಿ ವಿಶ್ರಾಂತಿಯನ್ನು ಪಡೆದು ಅನಂತರ ನಿಮ್ಮ ಜೊತೆಗೆ ಸೇರಿ ಶತ್ರುಗಳನ್ನು ಎದುರಿಸಿ ಯುದ್ಧವನ್ನು ಮಾಡುವೆನು. ನಾಳೆ ನನಗೆ ಆಯಾಸವಿರದು.
ಸಂಜಯಃ
ಏವಮುಕ್ತೋಽಬ್ರವೀದ್ ದ್ರೌಣೀ ರಾಜಾನಂ ಯುದ್ಧದುರ್ಮದಮ್ ||
ಸಂಜಯ ಯುದ್ಧದ ಮದವನ್ನೇರಿಸಿಕೊಂಡಿರುವ ದುರ್ಯೋಧನನಿಗೆ ಅಶ್ವತ್ಥಾಮನು ಹೀಗೆ ಹೇಳುತ್ತಾನೆ.
ಅಶ್ವತ್ಥಾಮಾ
ಉತ್ತಿಷ್ಠ ರಾಜನ್ ಭದ್ರಂ ತೇ ವಿಜೇಷ್ಯಾಮೋ ರಣೇ ಪರಾನ್ ||24||
ಅಶ್ವತ್ಥಾಮ ರಾಜನೇ! ಎದ್ದು ಬಾ! ನಿನಗೆ ಮಂಗಳವಾಗಲಿ. ಯುದ್ಧದಲ್ಲಿ ಶತ್ರುಗಳನ್ನು ನಾವು ಗೆಲ್ಲುವೆವು.
ಇಷ್ಟಾಪೂರ್ತೇನ ಸತ್ಯೇನ ದಾನೇನ ಚ ಜಪೇನ ಚ |
ಶಪೇ ರಾಜನ್ ಯಥಾ ಹ್ಯದ್ಯ ನಿಹನಿಷ್ಯಾಮಿ ಸೋಮಕಾನ್ ||25||
ರಾಜನೇ! ನನ್ನ ಇಷ್ಟಾಪೂರ್ತಾದಿ ಸತ್ಕರ್ಮಗಳು, ಸತ್ಯ, ದಾನ ಹಾಗೂ ಜಪದ ಆಧಾರದಲ್ಲಿ ಶಪಥವನ್ನು ಮಾಡುತ್ತೇನೆ. ಇವತ್ತು ಸೋಮಕರನ್ನು ನಾಶಮಾಡುತ್ತೇನೆ.
ಮಾ ಸ್ಮ ಯಜ್ಞಕೃತಾಲ್ಲೋಕಾನ್ ಪ್ರಾಪ್ನುಯಾಂ ಸಜ್ಜನೋಚಿತಾನ್ |
ಯದೀಮಾಂ ರಜನೀಂ ವ್ಯುಷ್ಟಾಂ ನ ಹಿ ಹನ್ಮಿ ಪರಾನ್ ರಣೇ ||26||
ಒಂದು ಪಕ್ಷ ಈ ರಾತ್ರಿ ಕಳೆದು ಬೆಳಗಾದ ನಂತರ ಯುದ್ಧದಲ್ಲಿ ಶತ್ರುಗಳನ್ನು ನಾಶ ಮಾಡದಿದ್ದರೆ ಯಜ್ಞಮಾಡಿ ಸಜ್ಜನರು ಪಡೆಯುವ ಲೋಕಗಳಿಗೆ ನಾನು ಹೋಗಲಾರೆನು. ನನಗೆ ಆ ಲೋಕಗಳು ಬೇಡವೇ ಬೇಡ.
ನಾಹತ್ವಾ ಸರ್ವಪಾಂಚಾಲಾನ್ ವಿಮೋಕ್ಷ್ಯೇ ಕವಚಂ ವಿಭೋ |
ಇತಿ ಸತ್ಯಂ ಬ್ರವೀಮ್ಯೇತತ್ ತನ್ಮೇ ಶೃಣು ಜನಾಧಿಪ ||27||
ವಿಭುವೇ! ಎಲ್ಲಾ ಪಾಂಚಾಲರನ್ನು ಕೊಲ್ಲದೆ ನನ್ನ ಕವಚವನ್ನು ಬಿಚ್ಚಲಾರೆ. ರಾಜನೇ! ಇದು ಸತ್ಯ. ನನ್ನ ಮಾತನ್ನು ಕೇಳು.
ಸಂಜಯಃ
ತೇಷು ಸಂಭಾಷಮಾಣೇಷು ವ್ಯಾಧಾಸ್ತಂ ದೇಶಮಾಗಮನ್ |
ಮಾಂಸಭಾರಪರಿಶ್ರಾಂತಾಃ ಪಾನೀಯಾರ್ಥಂ ಯದೃಚ್ಛಯಾ ||28||
ಸಂಜಯ ಹೀಗೆ ಅವರೆಲ್ಲಾ ಮಾತನಾಡುತ್ತಿರಲು ಯದೃಚ್ಛಯಾ ಬೇಟೆಗಾರರು ಆ ಸ್ಥಳಕ್ಕೆ ಬಂದರು. ಮಾಂಸವನ್ನು ಹೊತ್ತು ಒಯ್ಯುವಾಗ ಬಳಲಿದ ಅವರು ನೀರನ್ನು ಕುಡಿಯಲಿಕ್ಕಾಗಿ ಅಲ್ಲಿಗೆ ಬಂದರು.

ತೇ ಹಿ ನಿತ್ಯಂ ಮಹಾರಾಜ ಭೀಮಸೇನಸ್ಯ ಲುಬ್ಧಕಾಃ|
ಮಾಂಸಭಾರಾನುಪಾಜಹ್ರುಃ ಭಕ್ತ್ಯಾ ಪರಮಯಾ ಯುತಾಃ ॥29॥
ಮಹಾರಾಜ! ಆ ವ್ಯಾಧರು ಭೀಮಸೇನನ ಮೇಲಿನ ಬಹಳವಾದ ಭಕ್ತಿಯಿಂದ ನಿತ್ಯವೂ ಮಾಂಸವನ್ನು ಅರ್ಪಿಸುತ್ತಿದ್ದರು.
ತೇ ತತ್ರ ವಿಷ್ಠಿತಾಸ್ತೇಷಾಂ ಸರ್ವಂ ತದ್ವಚನಂ ರಹಃ|
ದುರ್ಯೋಧನವಚಶ್ಚೈವ ಶುಶ್ರುವುಃ ಸಂಗತಾ ಮಿಥಃ ॥30॥
ಅವರು ಆ ಪ್ರದೇಶದಲ್ಲಿ ಮರೆಯಲ್ಲಿ ನಿಂತುಕೊಂಡು, ಅಲ್ಲಿ ನಡೆದ ಎಲ್ಲಾ ಮಾತುಕತೆಗಳನ್ನು ಕೇಳಿಸಿಕೊಂಡರು. ದುರ್ಯೋಧನನು ಆಡಿದ ಮಾತನ್ನೂ ಕೇಳಿಸಿಕೊಂಡರು.
ತೇ ಹಿ ಸರ್ವೇ ಮಹೇಷ್ವಾಸಾ ಅಯುದ್ಧಾರ್ಥಿನಿ ಕೌರವೇ|
ನಿರ್ಬಂಧಂ ಪರಮಂ ಚಕ್ರುಃ ಸುಭೃಶಂ ಯುದ್ಧಕಾಂಕ್ಷಿಣಃ ॥31॥
ಕೃಪ ಮೊದಲಾದ ಮಹಾಧನುರ್ಧಾರಿಗಳು ಯುದ್ಧವನ್ನು ಇಷ್ಟಪಡದ ದುರ್ಯೋಧನನನ್ನು ಯುದ್ಧಕ್ಕಾಗಿ ನಿರ್ಬಂಧಗೊಳಿಸಿದರು. ಅವರೆಲ್ಲಾ ಯುದ್ಧವನ್ನು ಬಹಳವಾಗಿ ಅಪೇಕ್ಷಿಸುವವರಾಗಿದ್ದರು.
ತಾಂಸ್ತಥಾ ತೇ ಸಮುದ್ವೀಕ್ಷ್ಯ ಕೌರವಾಣಾಂ ಮಹಾರಥಾನ್|
ಅಯುದ್ಧಮನಸಂ ಚೈವ ರಾಜಾನಂ ಸ್ಥಿತಮಂಭಸಿ ॥32॥
ವ್ಯಾಧರು ಇಂತಹ ಮನಸ್ಥಿತಿಯುಳ್ಳ ಕೌರವವೀರರು ಹೀಗೆ ಇರುವುದನ್ನು ನೋಡಿದರು. ಯುದ್ಧದಲ್ಲಿ ಆಸಕ್ತಿಯನ್ನು ಕಳೆದುಕೊಂಡು ನೀರಿನೊಳಗೆ ಇರುವ ದುರ್ಯೋಧನನನ್ನೂ ನೋಡಿದರು.
ತೇಷಾಂ ಶ್ರುತ್ವಾ ಚ ಸಂವಾದಂ ರಾಜ್ಞಶ್ಚ ಸಲಿಲೇ ಸತಃ|
ವ್ಯಾಧಾ ವ್ಯಜಾನನ್ ರಾಜೇಂದ್ರ ಸಲಿಲಸ್ಥಂ ಸುಯೋಧನಮ್ ॥33॥
ರಾಜೇಂದ್ರನೇ! ಅನಂತರ ಅಲ್ಲಿ ಮೇಲೆ ಇರುವ ಅವರಿಗೆ ಮತ್ತು ನೀರಿನೊಳಗೆ ಸೇರಿಕೊಂಡ ದುರ್ಯೋಧನನಿಗೆ ನಡೆದ ಸಂವಾದವನ್ನು ಕೇಳಿದ ವ್ಯಾಧರು ದುರ್ಯೋಧನನು ನೀರೊಳಗೆ ಇದ್ದಾನೆ ಎಂದು ತಿಳಿದುಕೊಂಡರು.
ತೇ ಪೂರ್ವಂ ಪಾಂಡುಪುತ್ರೇಣ ಪೃಷ್ಟಾ ಹ್ಯಾಸನ್ ಸುತಂ ತವ|
ಯದೃಚ್ಛಯಾ ಗತಾಸ್ತತ್ರ ರಾಜಾನಂ ಪರಿಮಾರ್ಗಿತುಮ್ ॥34॥
ಅಕಸ್ಮಾತ್ತಾಗಿ ಬಂದ ಇದೇ ವ್ಯಾಧರನ್ನು ಹಿಂದೆ ರಾಜನನ್ನು ಹುಡುಕುತ್ತಿದ್ದ ಪಾಂಡವರು ನಿನ್ನ ಮಗನ ಬಗ್ಗೆ ಕೇಳಿದ್ದರು.
ತತಸ್ತೇ ಪಾಂಡುಪುತ್ರಸ್ಯ ಸ್ಮೃತ್ವಾ ತದ್ಭಾಷಿತಂ ತದಾ|
ಅನ್ಯೋನ್ಯಮಬ್ರುವನ್ ರಾಜನ್ ಮೃಗವ್ಯಾಧಾಃ ಶನೈರಿದಮ್ ॥35॥
ಅನಂತರ ಧರ್ಮರಾಜನು ಹೇಳಿದ್ದ ಮಾತನ್ನು ಸ್ಮರಿಸಿಕೊಂಡ ವ್ಯಾಧರು ತಮ್ಮ ತಮ್ಮಲ್ಲೇ ಮೆಲ್ಲನೆ ಮಾತನಾಡಿಕೊಂಡರು.
ವ್ಯಾಧಾಃ
ದುರ್ಯೋಧನಂ ಖ್ಯಾಪಯಾಮೋ ಧನಂ ದಾಸ್ಯತಿ ಪಾಂಡವಃ|
ಸುವ್ಯಕ್ತಮಿಹ ನಃ ಖ್ಯಾತೋ ಹ್ರದೇ ದುರ್ಯೋಧನೋ ನೃಪಃ ॥36॥
ವ್ಯಾಧರು ರಾಜ ದುರ್ಯೋಧನನು ಈ ಸರೋವರದಲ್ಲಿ ಇರುವುದು ನಮಗೆ ಚೆನ್ನಾಗಿ ತಿಳಿದಿದೆ. ಇದನ್ನು ಧರ್ಮರಾಜನಿಗೆ ಹೇಳೋಣ. ಆಗ ಧರ್ಮರಾಜನು ನಮಗೆ ಹಣವನ್ನು ಕೊಡುವನು.
ತಸ್ಮಾದ್ ಗಚ್ಛಾಮಹೇ ಸರ್ವೇ ಯತ್ರ ರಾಜಾ ಯುಧಿಷ್ಠಿರಃ|
ಆಖ್ಯಾತುಂ ಸಲಿಲೇ ಸುಪ್ತಂ ದುರ್ಯೋಧನಮಮರ್ಷಣಮ್ ॥37॥
ಆದ್ದರಿಂದ ಎಲ್ಲಿ ಯುಧಿಷ್ಠಿರ ಇದ್ದಾನೆಯೋ ಅಲ್ಲಿಗೆ ಹೋಗೋಣ. ಸರೋವರದಲ್ಲಿ ಅಸಹನೆಯಿಂದ ಮಲಗಿದ್ದ ದುರ್ಯೋಧನನ ಬಗ್ಗೆ ತಿಳಿಸೋಣ.
ಧೃತರಾಷ್ಟ್ರಾತ್ಮಜಂ ತಸ್ಮೈ ಭೀಮಸೇನಾಯ ಧೀಮತೇ|
ಶಯಾನಂ ಸಲಿಲೇ ಸರ್ವೇ ಕಥಯಾಮೋ ಧನುರ್ಭೃತೇ ॥38॥
ಬುದ್ಧಿವಂತನಾದ ಧನುರ್ಧಾರಿ ಭೀಮಸೇನನಿಗೆ ನೀರಿನಲ್ಲಿ ಮಲಗಿರುವ ದುರ್ಯೋಧನನ ಬಗ್ಗೆ ಹೇಳೋಣ.
ಸ ನೋ ದಾಸ್ಯತಿ ಧರ್ಮಾತ್ಮಾ ಧನಾನಿ ಬಹುಲಾನ್ಯುತ|
ಕಿಂ ನೋ ಮಾಂಸೇನ ಶುಷ್ಕೇಣ ಪರಿಕ್ಲಿಷ್ಟೇನ ಶೋಷಿಣಾ ॥39॥
ಭೀಮನಾದರೂ ಖಂಡಿತವಾಗಿಯೂ ನಮಗೆ ಬಹಳ ಹಣವನ್ನು ಕೊಡುತ್ತಾನೆ. ಈ ಒಣಗಿದ ಹಾಗೂ ಕಷ್ಟದಾಯಕವಾದ ಮಾಂಸದಿಂದ ಏನಾಗಬೇಕಾಗಿದೆ?
ಸಂಜಯಃ
ಏವಮುಕತ್ವ ತು ತೇ ವ್ಯಾಧಾಃ ಸಂಪ್ರಹೃಷ್ಟಾಃ ಧನಾರ್ಥಿನಃ|
ಮಾಂಸಭಾರಾನುಪಾದಾಯ ಪ್ರಯಯುಃ ಶಿಬಿರಂ ಪ್ರತಿ ॥40॥
ಸಂಜಯ ಹಣದ ಆಸೆಯುಳ್ಳ ಆ ವ್ಯಾಧರು ಹೀಗೆ ಹೇಳಿ ಬಹಳ ಸಂತೋಷದಿಂದ ಮಾಂಸದ ಮೂಟೆಗಳನ್ನು ಹಿಡಿದುಕೊಂಡು ಪಾಂಡವರ ಶಿಬಿರದೆಡೆಗೆ ತೆರಳಿದರು.
ಪಾಂಡವಾಶ್ಚ ಮಹಾರಾಜ ಲಬ್ಧಲಕ್ಷಾಃ ಪ್ರಹಾರಿಣಃ|
ಅಪಶ್ಯಮಾನಾಃ ಸಮರೇ ದುರ್ಯೋಧನಮವಸ್ಥಿತಮ್ ॥41॥
ನಿಕೃತೇಸ್ತಸ್ಯ ಪಾಪಸ್ಯ ಯುದ್ಧಾಭಿಗಮನೇಪ್ಸಯಾ|
ಚಾರಾನ್ ಸಂಪ್ರೇಷಯಾಮಾಸುಃ ಸಮಂತಾತ್ ತದ್ ರಣಾಜಿರಾತ್ ॥

ಮಹಾರಾಜ! ಗುರಿಯಿಟ್ಟು ಹೊಡೆಯುವ ನೈಪುಣ್ಯವನ್ನು ಪಡೆದಿರುವ ಪಾಂಡವರು ರಣರಂಗದಲ್ಲಿ ದುರ್ಯೋಧನನನ್ನು ಕಾಣದೆ, ದುರ್ಯೋಧನನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಲಿಕ್ಕಾಗಿ, ಅವನನ್ನು ಮತ್ತೆ ಯುದ್ಧಕ್ಕೆ ಬರುವಂತೆ ಮಾಡಲು ರಣರಂಗದಿಂದ ಎಲ್ಲಾ ಕಡೆಯೂ ಗೂಢಚಾರರನ್ನು ಕಳುಹಿಸಿದರು.
ಆಗತ್ಯ ತು ತತಃ ಸರ್ವೇ ನಷ್ಟಂ ದುರ್ಯೋಧನಂ ನೃಪಮ್ |
ನ್ಯವೇದಯಂತ ಸಹಿತಾ ಧರ್ಮರಾಜಸ್ಯ ಸೈನಿಕಾಃ ॥43॥
ಆ ಎಲ್ಲಾ ಗೂಢಚಾರರು ಒಟ್ಟಾಗಿ ಬಂದು ದುರ್ಯೋಧನನು ಸತ್ತುಹೋಗಿದ್ದಾನೆ ಎಂದು ಧರ್ಮರಾಜನಿಗೆ ನಿವೇದಿಸಿಕೊಂಡರು.
ತೇಷಾಂ ತದ್ವಚನಂ ಶ್ರುತ್ವಾ ಚಾರಾಣಾಂ ಭರತರ್ಷಭ |
ಚಿಂತಾಮಭ್ಯಗಮತ್ ತೀವ್ರಂ ನಿಶಶ್ವಾಸ ಚ ಪಾರ್ಥಿವಃ ॥44॥
ಭಾರತೋತ್ತಮನೇ! ಗೂಢಚಾರರ ಆ ಮಾತನ್ನು ಕೇಳಿದ ರಾಜನು ಚಿಂತಗೊಳಗಾದನು ಮತ್ತು ವೇಗವಾಗಿ ಉಸಿರುಬಿಟ್ಟನು.
ಯುಧಿಷ್ಠಿರಃ
ಅರಿಶೇಷೇ ಜೀವತಿ ತು ಸಂದಿಗ್ಧೋ ವಿಜಯೋ ಭವೇತ್ |
ರಾಜ್ಯಂ ಕಥಂ ಲಭೇ ತದ್ಧಿ ಪೂಜಿತಂ ವಿಜಯಾದಿಭಿಃ ॥45॥
ಯುಧಿಷ್ಠಿರ ಶತ್ರುಗಳಲ್ಲಿ ಸ್ವಲ್ಪ ಶೇಷವು ಉಳಿದಿರುವಾಗ ಯುದ್ಧದ ಜಯವು ನಿಶ್ಚಿತವಾಗುವುದಿಲ್ಲ. ಆದ್ದರಿಂದ ವಿಜಯೋತ್ಸವವನ್ನು ಆಚರಿಸಿ ರಾಜ್ಯವನ್ನು ಹೇಗೆ ಪಡೆಯಲು ಸಾಧ್ಯ?
ಸಂಜಯಃ
ಅಥ ಸ್ಥಿತಾನಾಂ ಪಾಂಡೂನಾಂ ದೀನಾನಾಂ ಭರತರ್ಷಭ |
ತಸ್ಮಾದ್ ದೇಶಾದಪಾಕ್ರಮ್ಯ ತ್ವರಿತಾ ಲುಬ್ಧಕಾ ವಿಭೋ ॥46॥
ಆಜಗ್ಮುಃ ಶಿಬಿರಂ ಹೃಷ್ಟಾ ದೃಷ್ಟ್ವಾ ದುರ್ಯೋಧನಂ ನೃಪಮ್ |
ವಾರ್ಯಮಾಣಾಃ ಪ್ರವಿಷ್ಟಾಶ್ಚ ಭೀಮಸೇನಂ ದಿದೃಕ್ಷವಃ ॥47॥
ಸಂಜಯ ಭರತರ್ಷಭನೇ! ಹೀಗೆ ಪಾಂಡವರು ದುಃಖಿತರಾಗಿ ಇರಲು ವ್ಯಾಧರು ಸರೋವರದ ಪ್ರದೇಶದಿಂದ ಹೊರಟು ಪಾಂಡವರ ಶಿಬಿರಕ್ಕೆ ಬಂದರು. ಬಹಳ ಸಂತುಷ್ಟರಾದ ಅವರು ದುರ್ಯೋಧನನನ್ನು ನೋಡಿದ್ದರು. ದ್ವಾರಪಾಲಕರು ತಡೆಯುತ್ತಿದ್ದರೂ ಭೀಮನನ್ನು ನೋಡುವ ಇಚ್ಛೆಯಿಂದ ಬಂದಿದ್ದರು.
ತೇ ತು ಪಾಂಡವಮಾಸಾದ್ಯ ಭೀಮಸೇನಂ ಮಹಾಬಲಮ್ |
ತಸ್ಮೈ ತತ್ ಸರ್ವಮಾಚಖ್ಯುರ್ಯದ್ ವೃತ್ತಂ ಯಚ್ಚ ವೈ ಶ್ರುತಮ್ ॥
ಬೇಟೆಗಾರರು ಮಹಾಬಲಶಾಲಿಯಾದ ಭೀಮನ ಹತ್ತಿರ ಬಂದು ನಡೆದ ಎಲ್ಲಾ ಸಮಾಚಾರಗಳನ್ನು ಮತ್ತು ತಾವು ಕೇಳಿಸಿಕೊಂಡ ವಿಷಯಗಳನ್ನು ಭೀಮನಿಗೆ ಹೇಳಿದರು.
ತತೋ ವೃಕೋದರೋ ರಾಜನ್ ದತ್ತ್ವಾ ತೇಷಾಂ ಧನಂ ಬಹು |
ಧರ್ಮರಾಜಾಯ ತತ್ಸರ್ವಮಾಚಚಕ್ಷೇ ಪರಂತಪಃ ॥49॥
ರಾಜನೇ! ಅನಂತರ ಶತ್ರುತಾಪಕನಾದ ಭೀಮನು ಅವರಿಗೆ ಬಹಳ ಹಣವನ್ನು ಕೊಟ್ಟು ಎಲ್ಲಾ ಸಮಾಚಾರವನ್ನು ಧರ್ಮರಾಜನಿಗೆ ಹೇಳಿದನು.
ಭೀಮಃ
ಅಸೌ ದುರ್ಯೋಧನೋ ರಾಜನ್ ವಿಜ್ಞಾತೋ ಮಮ ಲುಬ್ಧಕೈಃ |
ಸಂಸ್ತಭ್ಯ ಸಲಿಲಂ ಶೇತೇ ಯಸ್ಯಾರ್ಥೇ ಪರಿತಪ್ಯಸೇ ॥50॥
ಭೀಮ ರಾಜನೇ! ನನ್ನ ಈ ವ್ಯಾಧರು ದುರ್ಯೋಧನನನ್ನು ಕಂಡುಹಿಡಿದಿದ್ದಾರೆ. ಯಾರಿಗಾಗಿ ನೀನು ಪರಿತಾಪ ಪಡುತ್ತಿದ್ದಿಯೋ ಆ ದುರ್ಯೋಧನನು ಜಲಸ್ತಂಭಮಾಡಿ ನೀರಿನೊಳಗೆ ಮಲಗಿದ್ದಾನೆ.
ಸಂಜಯಃ
ತದ್ವಚೋ ಭೀಮಸೇನಸ್ಯ ಪ್ರಿಯಂ ಶ್ರುತ್ವಾ ವಿಶಾಂಪತೇ |
ಅಜಾತಶತ್ರುಃ ಕೌಂತೇಯೋ ಹೃಷ್ಟೋಽಭೂತ್ ಸಹ ಸೋದರೈಃ ॥51॥
ಸಂಜಯ ರಾಜನೇ! ಭೀಮನಾಡಿದ ಪ್ರಿಯವಾದ ಮಾತನ್ನು ಕೇಳಿದ ಅಜಾತಶತ್ರು ಧರ್ಮರಾಜನು ಸಂತೋಷಪಟ್ಟ. ಜೊತೆಗೆ ಅವನ ತಮ್ಮಂದಿರೂ ಸಂತುಷ್ಟರಾದರು.
ತಂ ಚ ಶ್ರುತ್ವಾ ಮಹೇಷ್ವಾಸಾಃ ಪ್ರವಿಷ್ಟಂ ಸಲಿಲಹ್ರದೇ |
ಕ್ಷಿಪ್ರಮೇವ ತತೋಽಗಚ್ಛನ್ ಪುರಸ್ಕೃತ್ಯ ಜನಾರ್ದನಮ್ ॥52॥
ದುರ್ಯೋಧನನು ಸರೋವರದಲ್ಲಿ ಪ್ರವೇಶಿಸಿರುವುದನ್ನು ಕೇಳಿದ ಮಹಾಬಿಲ್ಲಾರರಾದ ಪಾಂಡವರು ಕೃಷ್ಣನನ್ನು ಮುಂದಿಟ್ಟುಕೊಂಡು ಬೇಗನೇ ಅಲ್ಲಿಗೆ ಹೋದರು.
ತತಃ ಕಿಲಕಿಲಾಶಬ್ದಃ ಪ್ರಾದುರಾಸೀದ್ ವಿಶಾಂಪತೇ |
ಪಾಂಡವಾನಾಂ ಪ್ರಹೃಷ್ಟಾನಾಂ ಪಾಂಚಾಲಾನಾಂ ಚ ಸರ್ವಶಃ ॥53॥
ರಾಜನೇ! ಸಂತೋಷವನ್ನು ಹೊಂದಿದ ಪಾಂಡವರು ಮತ್ತು ಪಾಂಚಾಲರಲ್ಲಿ ಎಲ್ಲೆಡೆ ಕಿಲಕಿಲ ಶಬ್ದವು ಉಂಟಾಯಿತು.
ಸಿಂಹನಾದಾಂಸ್ತತಶ್ಚಕ್ರುಃ ಕ್ಷ್ವೇಲಾಂಶ್ಚ ಭರತರ್ಷಭ |
ತ್ವರಿತಾಃ ಕ್ಷತ್ರಿಯಾ ರಾಜನ್ ಜಗ್ಮುರ್ದ್ವೈ ರ್ೃಪಾಯನಹ್ರದಮ್ ॥54॥
ಭರತರ್ಷಭನೇ! ಅನಂತರ ಸಿಂಹಗರ್ಜನೆಯನ್ನು ಮಾಡಿದರು. ಯುದ್ಧದ ಅಟ್ಟಹಾಸಧ್ವನಿಯನ್ನು ಮಾಡಿದರು. ರಾಜನೇ! ಕ್ಷತ್ರಿಯರು

ಅವಸರದಿಂದ ದ್ವೈಪಾಯನ ಸರೋವರಕ್ಕೆ ಬಂದರು.
ಜ್ಞಾತಃ ಪಾಪೋ ಧಾರ್ತರಾಷ್ಟ್ರೋ ದೃಷ್ಟವೀರ್ಯೋಽಸಕೃದ್ ರಣೇ |
ಪ್ರಾಕ್ರೋಶನ್ ಸೈನಿಕಾಸ್ತತ್ರ ಹೃಷ್ಟರೂಪಾಃ ಸಮಂತತಃ ॥55॥
``ರಣರಂಗದಲ್ಲಿ ಅನೇಕ ಬಾರಿ ತನ್ನ ಪರಾಕ್ರಮವನ್ನು ತೋರಿಸಿದ ಪಾಪಿ ದುರ್ಯೋಧನನು ಎಲ್ಲಿದ್ದಾನೆಂದು ಗೊತ್ತಾಗಿದೆ'' ಹೀಗೆ ಸೈನಿಕರು ಎಲ್ಲಾ ಕಡೆಯೂ ಸಂತೋಷದಿಂದ ಬೊಬ್ಬೆ ಹಾಕಿದರು.
ತೇಷಾಮಾಶು ಪ್ರಯಾತಾನಾಂ ರಥಾನಾರುಹ್ಯ ವೇಗಿನಾಮ್ |
ಬಭೂವ ತುಮುಲಃಶಬ್ದೋ ದಿವಿಸ್ಪೃಕ್ ಪೃಥಿವೀಪತೇ ॥56॥
ರಥಗಳನ್ನೇರಿ ವೇಗವಾಗಿ ಹೋಗುತ್ತಿದ್ದಾಗ ಗೊಂದಲದ ಶಬ್ದವು ಉಂಟಾಯಿತು. ರಾಜನೇ! ಆ ಶಬ್ದವು ಆಕಾಶದ ತನಕ ಹಬ್ಬಿತು.
ದುರ್ಯೋಧನಂ ಪರೀಪ್ಸಂತಸ್ತತ್ರ ತತ್ರ ಯುಧಿಷ್ಠಿರಮ್ |
ಅನ್ವಯುಸ್ತ್ವರಿತಾಸ್ತೇ ವೈ ರಾಜಾನಂ ಶ್ರಾಂತವಾಹನಾಃ ॥57॥
ದುರ್ಯೋಧನನನ್ನು ಅಪೇಕ್ಷಿಸಿ ಹೊರಟ ಅವರು ಧರ್ಮರಾಜನನ್ನು ಅನುಸರಿಸಿಕೊಂಡು ಹೋದರು. ಕೆಲವೆಡೆ ಅವರ ರಥದ ಕುದುರೆಗಳು ಆಯಾಸಗೊಂಡವು.
ಅರ್ಜುನೋ ಭೀಮಸೇನಶ್ಚ ಮಾದ್ರೀಪುತ್ರೌ ಚ ಪಾಂಡವೌ |
ಧೃಷ್ಟದ್ಯುಮ್ನಶ್ಚ ಪಾಂಚಾಲ್ಯಃ ಶಿಖಂಡೀ ಚಾಪರಾಜಿತಃ ॥59॥
ಉತ್ತಮೌಜಾ ಯುಧಾಮನ್ಯುಃ ಸಾತ್ಯಕಿಶ್ಚ ಮಹಾರಥಃ |
ಪಾಂಚಾಲಾನಾಂ ಚ ಯೇ ಶಿಷ್ಟಾ ದ್ರೌಪದೇಯಾಶ್ಚ ಭಾರತ ॥59॥
ಹಯಾಶ್ಚ ಸರ್ವೇ ನಾಗಾಶ್ಚ ಶತಶಶ್ಚ ಪದಾತಯಃ ॥60॥
ಅರ್ಜುನ, ಭೀಮಸೇನ, ನಕುಲ, ಸಹದೇವ, ಧೃಷ್ಟದ್ಯುಮ್ನ, ಸೋಲಿಲ್ಲದ ಶಿಖಂಡಿ, ಉತ್ತಮೌಜ, ಯುಧಾಮನ್ಯು, ಮಹಾರಥನಾದ ಸಾತ್ಯಕಿ, ಉಳಿದ ಪಾಂಚಾಲದೇಶದ ವೀರರು, ದ್ರೌಪದಿಯ ಮಕ್ಕಳು, ಕುದುರೆಗಳು, ಆನೆಗಳು, ನೂರಾರು ಪದಾತಿಗಳು ಇವರೆಲ್ಲರೂ ಧರ್ಮರಾಜನನ್ನು ಅನುಸರಿಸಿಕೊಂಡು ಹೋದರು.
ತತಃ ಪ್ರಾಪ್ತೋ ಮಹಾರಾಜ ಧರ್ಮಪುತ್ರಃ ಪ್ರತಾಪವಾನ್ |
ದ್ವೈಪಾಯನಹ್ರದಂ ಖ್ಯಾತಂ ಯತ್ರ ದುರ್ಯೋಧನೋಽಭವತ್ ॥61॥
ಮಹಾರಾಜನೇ! ಪ್ರತಾಪಿಯಾದ ಧರ್ಮರಾಜನು ದುರ್ಯೋಧನನು ಅಡಗಿ ಕುಳಿತಿರುವ ಪ್ರಸಿದ್ಧವಾದ ದ್ವೈಪಾಯನಸರೋವರಕ್ಕೆ ಬಂದನು.
ಶೀತಾಮಲಜಲಂ ಹೃದ್ಯಂ ದ್ವಿತೀಯಮಿವ ಸಾಗರಮ್ |
ಮಾಯಯಾ ಸಲಿಲಂ ಸ್ತಭ್ಯ ಯತ್ರ ಶೇತೇ ಸುತಸ್ತವ ॥62॥
ತಂಪಾದ ಶುಭ್ರನೀರಿರುವ ಆ ಸರೋವರವು ಸಾಗರದಷ್ಟು ವಿಶಾಲವಾಗಿತ್ತು. ಅಲ್ಲಿ ನಿನ್ನ ಮಗ ದುರ್ಯೋಧನನು ಜಲವನ್ನು ಸ್ತಂಭನಗೊಳಿಸಿ ನೀರಿನೊಳಗೆ ಮಲಗಿದ್ದನು.
ಅತ್ಯದ್ಭುತೇನ ವಿಧಿನಾ ದೈವಯೋಗೇನ ಭಾರತ |
ಸಲಿಲಾಂತರ್ಗತಃ ಶೇತೇ ದುರ್ದರ್ಶಃ ಕಸ್ಯಚಿದ್ ವಿಭೋ ॥63॥
ಮಾನುಷಸ್ಯ ಮನುಷ್ಯೇಂದ್ರೋ ಗದಾಹಸ್ತೋ ನರಾಧಿಪ ॥64॥
ಪ್ರಭುವೇ! ಭರತಕುಲೋದ್ಭವನೇ! ದುರ್ಯೋಧನನು ದೈವಪ್ರಾಪ್ತವಾದ ಅತ್ಯದ್ಭುತ ಮಾಯಾವಿಧಾನದಿಂದ ನೀರಿನೊಳಗೆ ಮಲಗಿಕೊಂಡಿದ್ದನು. ರಾಜನೇ! ಗದೆಯನ್ನು ಹಿಡಿದುಕೊಂಡು ಮಲಗಿರುವ ಈ ಮನುಷ್ಯೋತ್ತಮನನ್ನು ಯಾವ ಮನುಷ್ಯನೂ ಎದುರಿಸಲು ಸಾಧ್ಯವಾಗದು.
ತತೋ ದುರ್ಯೋಧನೋ ರಾಜಾ ಸಲಿಲಾಂತರ್ಗತೋಽಪಿ ಸನ್ |
ಶುಶ್ರುವೇ ತುಮುಲಂ ಶಬ್ದಂ ಜಲದೋಪಮನಿಃಸ್ವನಮ್ ॥65॥
ನೀರಿನೊಳಗಿದ್ದರೂ ದುರ್ಯೋಧನನು ಹೊರಗಡೆ ಉಂಟಾದ ತುಮುಲಶಬ್ದವನ್ನು ಕೇಳಿಸಿಕೊಂಡನು. ಆ ಶಬ್ದವು ಗುಡುಗಿನಂತೆ ಕೇಳಿಸುತ್ತಿತ್ತು.
ಯುಧಿಷ್ಠಿರೋಽಪಿ ರಾಜೇಂದ್ರ ಹ್ರದಂ ತೈಃ ಸಹ ಸೋದರೈಃ |
ಆಜಗಾಮ ಮಹಾರಾಜ ತವ ಪುತ್ರವಧಾಯ ವೈ ॥66॥
ರಾಜೇಂದ್ರನೇ! ಯುಧಿಷ್ಠಿರನೂ ತನ್ನ ತಮ್ಮಂದಿರೊಂದಿಗೆ ನಿನ್ನ ಮಗ ದುರ್ಯೋಧನನನ್ನು ಕೊಲ್ಲಲಿಕ್ಕಾಗಿ ಆ ಸರೋವರದ ಹತ್ತಿರ ಬಂದನು.
ಮಹತಾ ಸಿಂಹನಾದೇನ ರಥನೇಮಿಸ್ವನೇನ ಚ |
ಧೂನ್ವಂಶ್ಚಾಪಿ ಮಹಾರೇಣುಂ ಕಂಪಯಂಶ್ಚಾಪಿ ಮೇದಿನೀಮ್ ॥67॥
ಬರುತ್ತಿರುವಾಗ ದೊಡ್ಡದಾಗಿ ಸಿಂಹನಾದವನ್ನು ಮಾಡುತ್ತಿದ್ದನು. ರಥದ ಅಚ್ಚುಗಳು ಶಬ್ದ ಮಾಡುತ್ತಿದ್ದವು. ಜೊತೆಗೆ ಧೂಳು ಬಹಳವಾಗಿ ಹಬ್ಬಿತ್ತು. ಬರುತ್ತಿರುವಾಗ ನೆಲವೇ ಕಂಪಿಸುತ್ತಿತ್ತು.
ಯೌಧಿಷ್ಠಿರಸ್ಯ ಸೈನ್ಯಸ್ಯ ಶ್ರುತ್ವಾ ಶಬ್ದಂ ಮಹಾರಥಾಃ |
ಕೃತವರ್ಮಾ ಕೃಪೋ ದ್ರೌಣೀ ರಾಜಾನಮಿದಬ್ರುವನ್ ॥68॥
ಯುಧಿಷ್ಠಿರನ ಸೈನ್ಯದ ಆ ಧ್ವನಿಯನ್ನು ಕೇಳಿಸಿಕೊಂಡ ಮಹಾರಥರಾದ ಕೃಪ, ಕೃತವರ್ಮ ಮತ್ತು ಅಶ್ವತ್ಥಾಮರು ರಾಜನಿಗೆ ಹೀಗೆ ಹೇಳಿದರು.

ಕೃಪಾದಯಃ
ಇಮೇ ಹ್ಯಾಯಾಂತಿ ಸಂಹೃಷ್ಟಾಃ ಪಾಂಡವಾ ಜಿತಕಾಶಿನಃ |
ಅಪಯಾಸ್ಯಾಮಹೇ ತಾವದ್ ಅನುಜಾನಾತು ನೋ ಭವಾನ್ ॥69॥
ಕೃಪಾದಿಗಳು ಜಯವನ್ನು ಅಪೇಕ್ಷಿಸುತ್ತಿರುವ ಈ ಪಾಂಡವರು ಬಹಳ ಸಂತೋಷದಿಂದ ಬರುತ್ತಿದ್ದಾರೆ. ನಾವಾದರೂ ಈಗಲೇ ಇಲ್ಲಿಂದ ಹೊರಡುತ್ತೇವೆ. ನಮಗೆ ಅಪ್ಪಣೆಯನ್ನು ಕೊಡು.
ಸಂಜಯಃ
ದುರ್ಯೋಧನಸ್ತು ತಚ್ಛ್ರುತ್ವಾ ತೇಷಾಂ ಚೈವ ಯಶಸ್ವಿನಾಮ್ |
ತಥೇತ್ಯುಕ್ತ್ವಾ ಹ್ರದಂ ತಂ ವೈ ಮಾಯಯಾಽಸ್ತಂಭಯತ್ ಪ್ರಭೋ ॥
ಸಂಜಯ ಪ್ರಭುವೇ! ಕೀರ್ತಿವಂತರಾದ ಅವರ ಮಾತನ್ನು ಕೇಳಿದ ದುರ್ಯೋಧನನು ಹಾಗೆಯೇ ಆಗಲಿ ಎಂದು ಹೇಳಿದನು ಮತ್ತು ತನ್ನ ಮಾಯಾವಿದ್ಯೆಯಿಂದ ಜಲಸ್ತಂಭವನ್ನು ಮಾಡಿ ಸರೋವರದ ಒಳಗೆ ಪ್ರವೇಶಿಸಿದನು.
ತೇ ತ್ವನುಜ್ಞಾಪ್ಯ ರಾಜಾನಂ ಭೃಶಂ ಶೋಕಪರಾಯಣಾಃ |
ಜಗ್ಮುರ್ದೂರಂ ಮಹಾರಾಜ ಕೃಪಪ್ರಭೃತಯೋ ರಥಾಃ ॥71॥
ಮಹಾರಾಜ! ಆ ಕೃಪಾದಿ ಮಹಾರಥರು ರಾಜನ ಅನುಜ್ಞೆಯನ್ನು ಪಡೆದು ಬಹಳ ದುಃಖಿತರಾಗಿ ತುಂಬ ದೂರ ಹೋದರು.
ತೇ ಗತ್ವಾ ದೂರಮಧ್ವಾನಂ ನ್ಯಗ್ರೋಧಂ ಪ್ರೇಕ್ಷ್ಯ ಮಾರಿಷ |
ನ್ಯವಿಶಂತ ಭೃಶಂ ಶ್ರಾಂತಾಃ ಚಿಂತಯಂತೋ ನೃಪಂ ಪ್ರತಿ ॥72॥
ರಾಜನೇ! ದೂರದ ತನಕ ಹೋದ ಅವರು ಒಂದು ಆಲದ ಮರವನ್ನು ನೋಡಿ ಬಹಳ ಆಯಾಸಗೊಂಡಿದ್ದರಿಂದ ಅಲ್ಲಿ ಕುಳಿತುಕೊಂಡರು. ದುರ್ಯೋಧನನ ಬಗೆಗೆ ಚಿಂತೆಗೊಳಗಾದರು.
ವಿಷ್ಟಭ್ಯ ಸಲಿಲಂ ಸುಪ್ತೋ ಧಾರ್ತರಾಷ್ಟ್ರೋ ಮಹಾಬಲಃ |
ಪಾಂಡವಾಶ್ಚಾಪಿ ಸಂಪ್ರಾಪ್ತಾಃ ತಂ ದೇಶಂ ಯುದ್ಧಮೀಪ್ಸವಃ ॥73॥
ಮಹಾಬಲಶಾಲಿಯಾದ ದುರ್ಯೋಧನನು ಜಲವನ್ನು ಪ್ರವೇಶಿಸಿ ಮಲಗಿದನು. ಯುದ್ಧವನ್ನು ಅಪೇಕ್ಷಿಸುವ ಪಾಂಡವರು ಆ ಸ್ಥಳಕ್ಕೆ ಬಂದರು.
ಕೃಪಾದಯಃ
ಕಥಂ ನ ಯುದ್ಧಂ ಭವಿತಾ ಕಥಂ ನು ಸ್ಯಾತ್ ಸ ಪಾರ್ಥಿವಃ |
ಕಥಂ ನು ಪಾಂಡವಾಶ್ಚಾತ್ರ ಪ್ರತಿಪತ್ಸ್ಯಂತಿ ಕೌರವಮ್ ॥74॥
ಕೃಪಾದಿಗಳು ಯುದ್ಧವು ನಡೆಯದಿರಲಿಕ್ಕೆ ಹೇಗೆ ತಾನೇ ಸಾಧ್ಯ? ನಮ್ಮ ರಾಜನು ಹೇಗೆ ಇದ್ದಾನು? ಅಲ್ಲಿ ಪಾಂಡವರು ದುರ್ಯೋಧನನನ್ನು ಹೇಗೆ ಕಂಡುಹಿಡಿದಾರು?
ಸಂಜಯಃ
ಇತ್ಯೇವಂ ಚಿಂತಯಂತಸ್ತೇ ರಥೇಭ್ಯೋಽಶ್ವಾನ್ ವಿಮುಚ್ಯ ಚ |
ತತ್ರಾಸಾಂಚಕ್ರಿರೇ ರಾಜನ್ ಕೃಪಪ್ರಭೃತಯಸ್ತದಾ ॥75॥
ಸಂಜಯ ರಾಜನೇ! ಈ ರೀತಿಯಲ್ಲಿ ಚಿಂತಿಸುತ್ತಾ ಕೃಪಾದಿಗಳು ತಮ್ಮ ರಥಕ್ಕೆ ಕಟ್ಟಿದ ಕುದುರೆಗಳನ್ನು ಬಿಚ್ಚಿ ಅಲ್ಲಿಯೇ ಕುಳಿತುಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದುರ್ಯೋಧನಸ್ಯ ಹ್ರದಪ್ರವೇಶೋ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಯುಧಿಷ್ಠಿರನು ಸರೋವರದಲ್ಲಿ ಅಡಗಿದ್ದ ದುರ್ಯೋಧನನಿಗೆ ನಿಷ್ಠುರಮಾತುಗಳಿಂದ ಬೈಯುವುದು. ಯುಧಿಷ್ಠಿರ-ದುರ್ಯೋಧನರ ನಡುವೆ ವಿವಾದ. ಯುಧಿಷ್ಠಿರನ ಕಟುವಾದ ಮಾತುಗಳಿಂದ ಕುಪಿತನಾದ ದುರ್ಯೋಧನನು ಗದೆಯನ್ನು ಹಿಡಿದುಕೊಂಡು ಸರೋವರದಿಂದ ಹೊರಬಂದುದು. ಯುಧಿಷ್ಠಿರ-ದುರ್ಯೋಧನರ ಮಧ್ಯೆ ಪುನಃ ವಿವಾದ.
ಸಂಜಯಃ
ತತಸ್ತೇಷ್ವಪಯಾತೇಷು ರಥೇಷು ತ್ರಿಷು ಪಾಂಡವಾಃ |
ತಂ ಹ್ರದಂ ಪ್ರತ್ಯಪದ್ಯಂತ ಯತ್ರ ದುರ್ಯೋಧನೋಽಭವತ್ ॥1॥
ಸಂಜಯ ಕೃಪಾದಿ ಮಹಾರಥರು ಆ ಸ್ಥಳದಿಂದ ಹೊರಗೆ ಹೋದ ನಂತರ ಪಾಂಡವರು ಎಲ್ಲಿ ದುರ್ಯೋಧನನು ಇದ್ದನೋ ಆ ಸರೋವರದ ಕಡೆಗೆ ಬಂದರು.
ಆಸಾದ್ಯ ತು ಕುರುಶ್ರೇಷ್ಠ ತತ್ರ ದ್ವೈಪಾಯನಂ ಹ್ರದಮ್ |
ಸ್ತಂಭಿತಂ ಧಾರ್ತರಾಷ್ಟ್ರೇಣ ದೃಷ್ಟ್ವಾ ತಂ ಸಲಿಲಾಶಯಮ್ ॥2॥
ವಾಸುದೇವಮಿದಂ ವಾಕ್ಯಮಬ್ರವೀತ್ ಕುರುನಂದನಃ ॥3॥
ಕುರುಶ್ರೇಷ್ಠನೇ! ದ್ವೈಪಾಯನಸರೋವರಕ್ಕೆ ಬಂದ ಧರ್ಮರಾಜನು ಜಲಸ್ತಂಭನ ಮಾಡಿಕೊಂಡು ನೀರೊಳಗೆ ಮಲಗಿದ್ದ ದುರ್ಯೋಧನನನ್ನು ನೋಡಿ ಶ್ರೀಕೃಷ್ಣನಿಗೆ ಈ ಮಾತನ್ನು ಹೇಳುತ್ತಾನೆ.
ಯುಧಿಷ್ಠಿರಃ

ಪಶ್യೇಮಾಂ ಧಾರ್ತರಾಷ್ಟ್ರೇಣ ಮಾಯಾಮಪ್ಸು ಪ್ರಯೋಜಿತಾಮ್ |
ವಿಷ್ಟಭ್ಯ ಸಲಿಲಂ ಶೇತೇ ನಾಸ್ಯ ಮಾನುಷತೋ ಭಯಮ್ ॥4॥
ಯುಧಿಷ್ಠಿರ ದುರ್ಯೋಧನನು ನೀರಿನೊಳಗೆ ಪ್ರಯೋಗಿಸಿದ ಈ ಮಾಯೆಯನ್ನು ನೋಡು! ನೀರನ್ನು ಸ್ತಂಭನಗೊಳಿಸಿ ಮಲಗಿದ್ದಾನೆ. ಇವನಿಗೆ ಮನುಷ್ಯರಿಂದ ಭಯವಿಲ್ಲ.
ದೈವೀಂ ಮಾಯಾಮಿಮಾಂ ಕೃತ್ವಾ ಸಲಿಲಾಂತರ್ಗತೋ ಹ್ಯಯಮ್ |
ನಿಕೃತ್ಯಾ ನಿಕೃತಿಪ್ರಜ್ಞೋ ನ ಸ ಜೀವನ್ ವಿಮೋಕ್ಷ್ಯತೇ ॥5॥
ಮಾಟ-ಮಂತ್ರಗಳಲ್ಲಿ ನಿಪುಣನಾದ ಈ ದುರ್ಯೋಧನನು ಈ ದೈವಿಕ ಮಾಯೆಯನ್ನು ಪ್ರಯೋಗಿಸಿ ಮಾಟ ಮಾಡಿ ನೀರಿನೊಳಗೆ ಇದ್ದಾನೆ. ಇವನನ್ನು ಬದುಕಿರಲು ಬಿಡಬಾರರು.
ಯದ್ಯಸ್ಯ ಸಮರೇ ಸಾಹ್ಯಂ ಕುರುತೇ ವಾಸವಃ ಸ್ವಯಮ್ |
ತಥಾಽಪ್ಯೇತಂ ಹತಂ ಯುದ್ಧೇ ಲೋಕಾ ದ್ರಕ್ಷ್ಯಂತಿ ಮಾಧವ ॥6॥
ಒಂದು ಪಕ್ಷ ಸ್ವತಃ ದೇವೇಂದ್ರನೇ ಇವನಿಗೆ ಸಹಾಯ ಮಾಡಲು ಬಂದರೂ ಯುದ್ಧದಲ್ಲಿ ಇವನು ಸಾಯುವುದನ್ನು ಲೋಕದ ಜನರು ನೋಡುವರು.
ಶ್ರೀಭಗವಾನ್
ಮಾಯಾವಿನ ಇಮಾಂ ಮಾಯಾಂ ಮಾಯಯಾ ಜಹಿ ಭಾರತ |
ಮಾಯಾವೀ ಮಾಯಯಾ ವಧ್ಯಃ ಸತ್ಯಮೇತದ್ ಯುಧಿಷ್ಠಿರ ॥7॥
ಶ್ರೀಭಗವಾನ್ ಭರತಕುಲೋದ್ಭವನೇ! ಮಾಯಾವಿಯ ಈ ಮಾಯೆಯನ್ನು ಮಾಯೆಯಿಂದಲೇ ನಾಶ ಮಾಡು. ಯುಧಿಷ್ಠಿರನೇ! ಮಾಯೆಯನ್ನು ಮಾಯೆಯಿಂದಲೇ ಹೋಗಲಾಡಿಸಬೇಕೆಂಬ ನಿಯಮವು ಸತ್ಯವಾಗಿದೆ.
ಕ್ರಿಯಾಭ್ಯುಪಾಯೈರ್ಬಹುಭಿಃ ಮಾಯಾಮಪ್ಸು ಪ್ರಯೋಜ್ಯ ಚ |
ಜಹಿ ತ್ವಂ ಭರತಶ್ರೇಷ್ಠ ಮಾಯಾತ್ಮಾನಂ ಸುಯೋಧನಮ್ ॥8॥
ಭರಶ್ರೇಷ್ಠನೇ! ಮಾಯೆಯನ್ನು ನಿವಾರಣೆಮಾಡುವ ಬೇರೆ ಬೇರೆ ಕ್ರಿಯೆಗಳನ್ನು ನೀರಿನಲ್ಲಿ ಪ್ರಯೋಗಿಸಿ, ಮಾಯಾಸ್ವರೂಪನಾದ ದುರ್ಯೋಧನನನ್ನು ನೀನು ಕೊಲ್ಲು.
ಕ್ರಿಯಾಭ್ಯುಪಾಯೈರಿಂದ್ರೇಣ ನಿಹತಾ ದೈತ್ಯದಾನವಾಃ |
ಕ್ರಿಯಾಭ್ಯುಪಾಯೈಃ ಪೂರ್ವಂ ಹಿ ಬಲಿರ್ಬದ್ಧೋ ಮಹಾತ್ಮನಾ ॥9॥
ಮಾಯಾನಿವರ್ತಕವಾದ ಕ್ರಿಯೆಗಳನ್ನು ಮಾಡಿಯೇ ದೈತ್ಯರು ಮತ್ತು ದಾನವರನ್ನು ಕೊಂದಿದ್ದಾನೆ. ಮಹಾತ್ಮನಾದ ವಾಮನನು ಈ ಕ್ರಿಯೆಗಳಿಂದಲೇ ಬಲಿಚಕ್ರವರ್ತಿಯನ್ನು ಬಂಧಿಸಿದನು.
ಕ್ರಿಯಾಭ್ಯುಪಾಯೈಃ ಪೂರ್ವಂ ಹಿ ಹಿರಣ್ಯಾಕ್ಷೋ ಮಹಾಸುರಃ |
ಹಿರಣ್ಯಕಶಿಪುಶ್ಚೈವ ಕ್ರಿಯಯೈವ ನಿಷೂದಿತಃ ॥10॥
ಇಂತಹ ಕ್ರಿಯೆಗಳ ಪ್ರಯೋಗ ಮಾಡಿಯೇ ಮಾಯಾವಿಯಾದ ಮಹಾಸುರ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಇವರನ್ನು ಪರಮಾತ್ಮನು ನಾಶ ಮಾಡಿದನು.
ವೃತ್ರಶ್ಚ ನಿಹತೋ ರಾಜನ್ ಸಾನುಬಂಧಃ ಸಹಾನುಗಃ ॥11॥
ರಾಜನೇ! ಇಂತಹ ಕ್ರಿಯಾಪ್ರಯೋಗಗಳಿಂದಲೇ ಪರಿವಾರಸಮೇತನಾದ ವೃತ್ರಾಸುರನನ್ನು ಸಾಯಿಸಲಾಯಿತು.
ತಥಾ ಪೌಲಸ್ತ್ಯತನಯೋ ರಾವಣೋ ನಾಮ ರಾಕ್ಷಸಃ |
ರಾಮೇಣ ನಿಹತೋ ರಾಜನ್ ಸಾನುಬಂಧಃ ಸಹಾನುಗಃ ॥12॥
ರಾಜನೇ! ಅದೇ ರೀತಿಯಲ್ಲಿ ಕ್ರಿಯಾಪ್ರಯೋಗ ಮಾಡಿ ಶ್ರೀರಾಮನು ಪೌಲಸ್ತ್ಯನ ಮಗನಾದ ರಾವಣನೆಂಬ ರಾಕ್ಷಸನನ್ನೂ ಅವನ ಸಹಾನುವರ್ತಿಗಳನ್ನು ಸಂಹರಿಸಿದನು.
ಕ್ರಿಯಯಾ ಯೋಗಮಾಸ್ಥಾಯ ತಥಾ ತ್ವಮಪಿ ವಿಕ್ರಮ |
ಕ್ರಿಯಾಭ್ಯುಪಾಯೈರ್ನಿಹತೋ ಯಮೋ ನಾಮ ಮಹಾಸುರಃ ॥13॥
ಮಹಾಪರಾಕ್ರಮಿಯೇ! ನೀನೂ ಕೂಡ ಅಂತಹ ಕ್ರಿಯಾಪ್ರಯೋಗಗಳಿಂದಲೇ ನಿನ್ನ ವಿಕ್ರಮವನ್ನು ತೋರಿಸು. ಯಮ ಎಂಬ ದೊಡ್ಡ ಅಸುರನೂ ಹೀಗೆಯೇ ವಧಿಸಲ್ಪಟ್ಟನು.
ನರಕಶ್ಚ ಮಹಾವೀರ್ಯೋ ವಿಪ್ರಚಿತ್ತಿಶ್ಚ ವೀರ್ಯವಾನ್ |
ವಾತಾಪಿರಿಲ್ವಲಶ್ಚೈವ ತ್ರಿಶಿರಾಶ್ಚ ತಥಾ ವಿಭೋ ॥14॥
ಸುಂದೋಪಸುಂದಾವಸುರೌ ಕ್ರಿಯಯೈವ ನಿಷೂದಿತೌ |
ತಾರಕಶ್ಚ ಮಹಾದೈತ್ಯೋ ಹ್ಯಂಧಕಶ್ಚ ನಿಷೂದಿತಃ ॥15॥
ಮಹಾವೀರನಾದ ನರಕ, ವೀರನಾದ ವಿಪ್ರಚಿತ್ತಿ, ವಾತಾಪಿ, ಇಲ್ವಲ, ತ್ರಿಶಿರ, ಸುಂದೋಪಸುಂದರು, ತಾರಕಾಸುರ, ಮಹಾದೈತ್ಯನಾದ ಅಂಧಕ ಇವರೆಲ್ಲಾ ಇಂಥ ಕ್ರಿಯಾಪ್ರಯೋಗಗಳಿಂದಲೇ ಕೊಲ್ಲಲ್ಪಟ್ಟರು.
ಕ್ರಿಯಾಭ್ಯುಪಾಯೈರಿಂದ್ರೇಣ ತ್ರಿದಿವಂ ಭುಜ್ಯತೇ ವಿಭೋ |
ಕ್ರಿಯಾ ಬಲವತೀ ರಾಜನ್ ನಾನ್ಯತ್ ಕಿಂಚಿದ್ ಯುಧಿಷ್ಠಿರ ॥16॥
ವಿಭುವೇ! ಇಂದ್ರನೂ ಇಂತಹ ಕ್ರಿಯೆಗಳಿಂದಲೇ ಮೂರುಲೋಕವನ್ನೂ ಆಳುತ್ತಿದ್ದಾನೆ. ಯುಧಿಷ್ಠಿರರಾಜನೇ! ಕ್ರಿಯಾಪ್ರಯೋಗಗಳು ಬಹಳ ಬಲಶಾಲಿಗಳಾದವು. ಬೇರೆ ಯಾವುದೂ ಅಲ್ಲ.
ದೈತ್ಯಾಶ್ಚ ಬಹವೋ ರಾಜನ್ ರಾಕ್ಷಸಾಃ ಪಾರ್ಥಿವಾಸ್ತಥಾ |

ಕ್ರಿಯಾಭ್ಯುಪಾಯೈರ್ನಿಹತಾಃ ಕ್ರಿಯಾಂ ತಸ್ಮಾತ್ ಸಮಾಚರ ॥17॥
ಅನೇಕ ದೈತ್ಯರು, ರಾಕ್ಷಸರು, ರಾಜರು, ಇಂಥ ಕ್ರಿಯೆಗಳಿಂದಲೇ ಕೊಲ್ಲಲ್ಪಟ್ಟರು. ಆದ್ದರಿಂದ ರಾಜನೇ! ನೀನೂ ಕೂಡ ಕ್ರಿಯೆಗಳನ್ನು ನಡೆಸು.
ಸಂಜಯಃ
ಇತ್ಯುಕ್ತೋ ವಾಸುದೇವೇನ ಪಾಂಡವಃ ಸಂಶಿತವ್ರತಃ।
ಜಲಸ್ಥಂ ತಂ ಮಹಾರಾಜ ತವ ಪುತ್ರಂ ಮಹಾರಥಮ್ ॥18॥
ಅಭ್ಯಭಾಷತ ಕೌಂತೇಯಃ ಪ್ರಹಸನ್ನಿವ ಭಾರತ ॥19॥
ಸಂಜಯ ಕೃಷ್ಣನು ಹೀಗೆ ಹೇಳಿದಾಗ ಯುಧಿಷ್ಠಿರನು ವ್ರತನಿಷ್ಠನಾಗಿ ಜಲದಲ್ಲಿ ಮುಳುಗಿದ್ದ ನಿನ್ನ ಮಗ ಮಹಾರಥ ದುರ್ಯೋಧನನಿಗೆ ನಗುತ್ತಾ ಹೀಗೆ ಹೇಳಿದನು.
ಯುಧಿಷ್ಠಿರಃ
ಸುಯೋಧನ ಕಿಮರ್ಥೋಽಯಮಾರಂಭೋಽಪ್ಸು ಕೃತಸ್ತ್ವಯಾ।
ಸರ್ವಕ್ಷತ್ರಂ ಘಾತಯಿತ್ವಾ ಸ್ವಜನಂ ಚ ವಿಶಾಂಪತೇ ॥20॥
ಯುಧಿಷ್ಠಿರ ಹೇ ಮಹಾರಾಜ ಸುಯೋಧನನೇ! ಎಲ್ಲಾ ಕ್ಷತ್ರಿಯರನ್ನೂ, ನಿನ್ನ ಬಾಂಧವರನ್ನೂ ಕೊಂದು ಏಕೆ ಈಗ ನೀರಿನಲ್ಲಿ ಕಾರ್ಯಾರಂಭವನ್ನು ಮಾಡಿರುವಿ?
ಜಲಾಶಯಂ ಪ್ರವಿಷ್ಟೋಽದ್ಯ ವಾಂಛನ್ ಜೀವಿತಮಾತ್ಮನಃ।
ಉತ್ತಿಷ್ಠ ರಾಜನ್ ಯುದ್ಧ್ಯಸ್ವ ಸಹಾಸ್ಮಾಭಿಃ ಸುಯೋಧನ ॥21॥
ಬದುಕುವ ಆಸೆಯಿಂದ ಇವತ್ತು ನೀನು ಜಲಾಶಯವನ್ನು ಪ್ರವೇಶಮಾಡಿರುವಿ. ರಾಜಸುಯೋಧನನೇ! ಎದ್ದು ಮೇಲೆ ಬಾ. ನಮ್ಮೊಡನೆ ಯುದ್ಧವನ್ನು ಮಾಡು.
ಕ್ವ ತೇ ದರ್ಪೋ ನರಶ್ರೇಷ್ಠ ಸ ಚ ಮಾನಃ ಕ್ವ ತೇ ಗತಃ।
ಯಸ್ತ್ವಂ ಸಂಸ್ತಂಭ್ಯ ಸಲಿಲಂ ರಾಜನ್ ಭೀತೋ ವ್ಯವಸ್ಥಿತಃ ॥22॥
ಹೇ ನರೋತ್ತಮನೇ! ನೀನು ನಮ್ಮಿಂದ ಭಯಗೊಂಡು ಜಲವನ್ನು ಸ್ತಂಭನಗೊಳಿಸಿ ಅಡಗಿ ಕುಳಿತುಕೊಂಡಿದ್ದಿ. ನಿನ್ನ ದರ್ಪ, ಅಹಂಕಾರ ಇವೆಲ್ಲ ಎಲ್ಲಿ ಹೋದವು?
ಸರ್ವೇ ತ್ವಾಂ ಶೂರ ಇತ್ಯೇವಂ ಜನಾ ಜಲ್ಪಂತಿ ಸಂಸದಿ।
ವ್ಯರ್ಥಂ ತದ್ ಭವತೋ ಮನ್ಯೇ ಶೌರ್ಯಂ ಸಲಿಲಶಾಯಿನಃ ॥23॥
ಸಭೆಗಳಲ್ಲಿ ಎಲ್ಲರೂ ನಿನ್ನನ್ನು ಶೂರ ಎಂಬುದಾಗಿಯೇ ಮಾತನಾಡಿಕೊಳ್ಳುತ್ತಾರೆ. ಈಗ ನೀರಿನಲ್ಲಿ ಮಲಗಿ ಅಡಗಿಕೊಂಡಿರುವ ನಿನ್ನ ಆ ಶೂರತ್ವವು ವ್ಯರ್ಥವೆಂಬುದಾಗಿ ತಿಳಿಯುತ್ತೇನೆ.
ಉತ್ತಿಷ್ಠ ರಾಜನ್ ಯುಧ್ಯಸ್ವ ಕ್ಷತ್ರಿಯೋಽಸಿ ಕುಲೋದ್ಭವಃ।
ಕೌರವೇಯೋ ವಿಶೇಷೇಣ ಕುಲಂ ಜನ್ಮ ಚ ಸಂಸ್ಮರ ॥24॥
ನೀನು ಕ್ಷತ್ರಿಯಕುಲದಲ್ಲಿ ಹುಟ್ಟಿದವನು. ಅದರಲ್ಲಿಯೂ ವಿಶೇಷವಾಗಿ ಕುರುಕುಲದಲ್ಲಿ ಹುಟ್ಟಿದವನು. ರಾಜನೇ! ನಿನ್ನ ಕುಲವನ್ನೂ, ನಿನ್ನ ಹುಟ್ಟನ್ನೂ ಸ್ಮರಿಸಿಕೊಳ್ಳು! ಎದ್ದೇಳು! ಯುದ್ಧ ಮಾಡು.
ಸ ಕಥಂ ಕೌರವೇ ವಂಶೇ ಪ್ರಶಸ್ತಂ ಜನ್ಮ ಚಾತ್ಮನಃ।
ಯುದ್ಧಾದ್ಭೀತಸ್ತತಸ್ತೋಯಂ ಪ್ರವಿಶ್ಯ ಪ್ರತಿತಿಷ್ಠಸಿ ॥25॥
ಕುರುಕುಲದಲ್ಲಿ ಯೋಗ್ಯವಾದ ಜನ್ಮವು ನಿನಗೆ ಹೇಗೆ ಹೊಂದಿಕೆ ಆದೀತು? ನೀನು ನಮ್ಮೊಡನೆ ಯುದ್ಧಮಾಡಲು ಹೆದರಿ ಈಗ ನೀರಲ್ಲಿ ಪ್ರವೇಶ ಮಾಡಿ ಅಡಗಿ ಕುಳಿತಿರುವಿ.
ಅಯುದ್ಧೇನ ವ್ಯವಸ್ಥಾನಂ ನೈಷ ಧರ್ಮಃ ಸನಾತನಃ।
ಅನಾರ್ಯಜುಷ್ಟಮಸ್ವರ್ಗ್ಯಂ ರಣಾದ್ ರಾಜ್ಞಃ ಪಲಾಯನಮ್ ॥26॥
ಯುದ್ಧ ಮಾಡದೆ ಇರುವುದು ಸನಾತನವಾದ ಧರ್ಮವಲ್ಲ. ರಾಜನಾದವನು ಯುದ್ಧದಿಂದ ಓಡಿಹೋಗುವುದು ತಿಳಿದವರಿಂದ ಸ್ವೀಕಾರಯೋಗ್ಯವಾದ ಕಾರ್ಯವಲ್ಲ. ಅದು ಸ್ವರ್ಗಕ್ಕೂ ಕಾರಣವಾಗುವುದಿಲ್ಲ.
ಕಥಂ ಪಾರಮಗತ್ವಾ ಹಿ ಯುದ್ಧಂ ತ್ವಂ ವೈ ಜಿಜೀವಿಷುಃ।
ಇಮಾನ್ ನಿಪತಿತಾನ್ ದೃಷ್ಟ್ವಾ ಪುತ್ರಾನ್ ಭ್ರಾತೄನ್ ಪಿತೄನ್ ಸಖೀನ್ ॥
ರಣರಂಗದಲ್ಲಿ ಸತ್ತು ಬಿದ್ದಿರುವ ನಿನ್ನ ಮಕ್ಕಳು, ಸಹೋದರರು, ಪಿತೃಗಳು, ಸ್ನೇಹಿತರು ಇವರೆಲ್ಲರನ್ನು ನೋಡಿಯೂ ನೀನು ಬದುಕುಳಿಯಬೇಕೆಂಬ ಆಸೆಯಿಂದ ಯುದ್ಧ ಮಾಡದೆ ಇರುವುದು ಹೇಗೆ ಸಾಧ್ಯ?
ಸಂಬಂಧಿನೋ ಬಾಂಧವಾಂಶ್ಚ ವಯಸ್ಯಾನ್ ಮಾತುಲಾಂಸ್ತಥಾ।
ಘಾತಯಿತ್ವಾ ಕಥಂ ತಾತ ಹ್ರದೇ ತಿಷ್ಠಸಿ ಸಾಂಪ್ರತಮ್ ॥28॥
ಸಂಬಂಧಿಗಳು, ಬಂಧುಗಳು, ಗೆಳೆಯರು, ಸೋದರಮಾವಂದಿರು ಇವರೆಲ್ಲರನ್ನೂ ಯುದ್ಧದಲ್ಲಿ ಸಾಯಿಸಿ, ಈಗ ನೀನು ಸರೋವರದಲ್ಲಿ ಅಡಗಿ ಕುಳಿತುಕೊಳ್ಳುವುದು ಹೇಗೆ ಯುಕ್ತವಾದೀತು?
ಶೂರಮಾನೀ ನ ಶೂರಸ್ತ್ವಂ ಮಿಥ್ಯಾ ವದಸಿ ಕೌರವ।
ಶೂರೋಽಹಮಿತಿ ದುರ್ಬುದ್ಧೇ ಸರ್ವಲೋಕಸ್ಯ ಪಶ್ಯತಃ ॥29॥
ನೀನು ನಿನ್ನನ್ನು ಶೂರ ಎಂಬುದಾಗಿ ತಿಳಿದುಕೊಂಡಿದ್ದಿ. ಆದರೆ ನೀನು ಶೂರನಲ್ಲ. ಕೌರವ! ಎಲ್ಲರ ಎದುರುಗಡೆ ನಾನು ಶೂರನಾಗಿದ್ದೇನೆ ಎಂದು ನೀನು ಸುಳ್ಳನ್ನು ಹೇಳುತ್ತಾ ಇದ್ದೀಯ.

ನ ಹಿ ಶೂರಾಃ ಪಲಾಯಂತೇ ಶತ್ರೂನ್ ದೃಷ್ಟ್ವಾ ಕಥಂಚನ |
ಬ್ರೂಹಿ ವಾ ತ್ವಂ ಯಯಾ ವೃತ್ತ್ಯಾ ಶೂರಸ್ತ್ಯಜಸಿ ಸಂಯುಗಮ್ ॥30॥
ಶೂರರಾದವರು ಶತ್ರುಗಳನ್ನು ನೋಡಿ ಯಾವ ಕಾರಣಕ್ಕೂ ಓಡಿಹೋಗುವುದಿಲ್ಲ. ನೀನು ಯಾವ ಪ್ರವೃತ್ತಿಯನ್ನು ಅವಲಂಬಿಸಿ ಯುದ್ಧವನ್ನು ಬಿಡುತ್ತಿ ಎಂಬುದನ್ನು ಶೂರನಾದ ನೀನು ಹೇಳು.
ಸ ತ್ವಮುತ್ತಿಷ್ಠ ಯುಧ್ಯಸ್ವ ವಿಹಾಯ ಭಯಮಾತ್ಮನಃ ॥31॥
ಆದ್ದರಿಂದ ನಿನ್ನಲ್ಲಿರುವ ಭಯವನ್ನು ಬಿಟ್ಟು ಎದ್ದು ಬಾ. ಯುದ್ಧ ಮಾಡು.
ಪಾತಯಿತ್ವಾ ಸರ್ವಸೈನ್ಯಾನ್ ಭ್ರಾತೄಂಶ್ಚೈವ ಸುಯೋಧನ |
ನೇದಾನೀಂ ಜೀವಿತೇ ಬುದ್ಧಿಃ ಕಾರ್ಯಾ ಧರ್ಮಚಿಕೀರ್ಷಯಾ ॥32॥
ಕ್ಷತ್ರಧರ್ಮಂ ಸಮಾಶ್ರಿತ್ಯ ತ್ವದ್ವಿಧೇನ ಸುಯೋಧನ ॥33॥
ಸುಯೋಧನನೇ! ಎಲ್ಲಾ ಸೈನ್ಯಗಳನ್ನು ಮತ್ತು ಎಲ್ಲಾ ಸಹೋದರರನ್ನೂ ಯುದ್ಧದಲ್ಲಿ ಕೊಲ್ಲಿಸಿ ಈಗ ಬದುಕುವ ವಿಷಯದಲ್ಲಿ ನಿಶ್ಚಯಮಾಡಿಕೊಂಡಿರುವುದು ಯೋಗ್ಯವಲ್ಲ. ದುರ್ಯೋಧನನೇ! ಕ್ಷತ್ರಿಯಧರ್ಮವನ್ನು ಆಶ್ರಯಿಸಿರುವ ನಿನ್ನಂತಹವರು ಹೀಗೆ ಮಾಡುವುದು ಧರ್ಮವನ್ನು ಅನುಸರಿಸುವ ದಾರಿಯಲ್ಲ.
ಯತ್ತು ಕರ್ಣಮುಪಾಶ್ರಿತ್ಯ ಶಕುನಿಂ ಚಾಪಿ ಸೌಬಲಮ್ |
ದುಃಶಾಸನಂ ಚ ಮೋಹಾತ್ ತ್ವಮಾತ್ಮಾನಂ ನಾವಬುದ್ಧವಾನ್ ॥34॥
ಕರ್ಣ, ಶಕುನಿ ಮೊದಲಾದವರನ್ನು ಆಶ್ರಯಿಸಿದ ನೀನು ನಿನ್ನನ್ನು ಭ್ರಮೆಯಿಂದಾಗಿ ಸಾವಿಲ್ಲದವನು ಎಂಬುದಾಗಿ ಅರಿತಿದ್ದಿ. ನಿನ್ನನ್ನು ನೀನು ಸರಿಯಾಗಿ ತಿಳಿದುಕೊಳ್ಳಲಿಲ್ಲ.
ತತ್ ಪಾಪಂ ಸುಮಹತ್ ಕೃತ್ವಾ ಪ್ರತಿಯುಧ್ಯಸ್ವ ಭಾರತ ॥35॥
ಇಂಥ ಬಹಳ ದೊಡ್ಡದಾದ ಪಾಪವನ್ನು ಮಾಡಿರುವ ಭರತಕುಲೋದ್ಭವನೇ! ನಮ್ಮ ವಿರುದ್ಧವಾಗಿ ಯುದ್ಧ ಮಾಡು.
ಕಥಂ ಹಿ ತ್ವದ್ವಿಧೋ ಮೋಹಾದ್ ರೋಚಯೇತ ಪಲಾಯನಮ್ ॥36॥
ನಿನ್ನಂತಹವರು ಮೋಹಕ್ಕೆ ಒಳಗಾಗಿ ಯುದ್ಧಮಾಡದೆ ಓಡುವುದು ಹೇಗೆ ಸಾಧ್ಯ?
ಕ್ವ ಚೈತತ್ ಪೌರುಷಂ ಯಾತಂ ಕ್ವ ಚ ಮಾನಃ ಸುಯೋಧನ |
ಕ್ವ ಚ ವಿಕ್ರಾಂತತಾ ಯಾತಾ ಕಿಂ ನು ಶೇಷೇ ಜಲಾಶಯೇ ॥37॥
ಸುಯೋಧನನೇ! ನಿನ್ನ ಆ ಪೌರುಷ ಎಲ್ಲಿಗೆ ಹೋಯಿತು? ನಿನ್ನ ಅಭಿಮಾನ, ಅಹಂಕಾರಗಳು ಎಲ್ಲಿಗೆ ಹೋದವು? ನಿನ್ನ ಪರಾಕ್ರಮವು ಎಲ್ಲಿಗೆ ಹೋಯಿತು? ಜಲಾಶಯದಲ್ಲಿ ಏಕೆ ಮಲಗಿರುವಿ?
ಸ ತ್ವಮುತ್ತಿಷ್ಠ ಯುಧ್ಯಸ್ವ ಕ್ಷತ್ರಧರ್ಮೇಣ ಭಾರತ ॥38॥
ಭರತಕುಲೋದ್ಭವನೇ! ಅಂತಹ ನೀನು ಕ್ಷತ್ರಿಯಧರ್ಮಕ್ಕನುಸಾರವಾಗಿ ಯುದ್ಧ ಮಾಡು.
ಅಸ್ಮಾನ್ ವಾ ತ್ವಂ ಪರಾಜಿತ್ಯ ಪ್ರಶಾಧಿ ಪೃಥಿವೀಮಿಮಾಮ್ |
ಅಥವಾ ನಿಹತೋಽಸ್ಮಾಭಿಃ ಭೂಮೌ ಸ್ವಪ್ಸ್ಯಸಿ ಭಾರತ ॥39॥
ದುರ್ಯೋಧನನೇ! ನಮ್ಮನು ಸೋಲಿಸಿ ನೀನು ಈ ಭೂಮಿಯನ್ನು ಆಳು ಅಥವಾ ನಮ್ಮಿಂದ ಹತನಾಗಿ ಭೂಮಿಯಲ್ಲಿ ಮಲಗು.
ಏಷ ತೇ ಪ್ರಥಮೋ ಧರ್ಮಃ ಸೃಷ್ಟೋ ಧಾತ್ರಾ ಮಹಾತ್ಮನಾ |
ತಂ ಕುರುಷ್ವ ಯಥಾತಥ್ಯಂ ರಾಜಾ ಭವ ಮಹಾರಥ ॥40॥
ಇದು ಮಹಾತ್ಮನಾದ ಚತುರ್ಮುಖನು ನಿನಗೆ ವಿಧಿಸಿದ ಮೊದಲನೆಯ ಧರ್ಮ. ಮಹಾರಥನೇ! ಆ ಧರ್ಮವನ್ನು ಹಾಗೆಯೇ ಆಚರಿಸಿ ರಾಜನಾಗು.
ಸಂಜಯಃ
ಏವಮುಕ್ತೋ ಮಹಾರಾಜ ಧರ್ಮಪುತ್ರೇಣ ಧೀಮತಾ |
ಸಲಿಲಸ್ಥಸ್ತವ ಸುತ ಇದಂ ವಚನಮಬ್ರವೀತ್ ॥41॥
ಸಂಜಯ ಮಹಾರಾಜನೇ! ಹೀಗೆ ಧರ್ಮರಾಜನು ಹೇಳಿದ್ದನ್ನು ಕೇಳಿಸಿಕೊಂಡ ನಿನ್ನ ಮಗ ದುರ್ಯೋಧನನು ನೀರಿನಲ್ಲಿದ್ದೇ ಈ ಮಾತನ್ನು ಹೇಳುತ್ತಾನೆ.
ದುರ್ಯೋಧನಃ
ನೈತಚ್ಚಿತ್ರಂ ಮಹಾರಾಜ ಯದ್ ಭೀಃ ಪ್ರಾಣಿನಮಾವಿಶೇತ್ |
ನ ಚ ಪ್ರಾಣಭಯಾದ್ ಭೀತೋ ವ್ಯಪಯಾತೋಽಸ್ಮಿ ಭಾರತ ॥42॥
ದುರ್ಯೋಧನ ಮಹಾರಾಜ ಧರ್ಮರಾಜನೇ! ಪ್ರಾಣವುಳ್ಳವರಿಗೆ ಭಯವು ಕಾಣಿಸಿಕೊಳ್ಳುವುದು ಸಹಜ. ಅದರಲ್ಲಿ ವಿಚಿತ್ರವಾದುದು ಯಾವುದೂ ಇಲ್ಲ. ನಾನಾದರೂ ಪ್ರಾಣಭಯದಿಂದ ಹೆದರಲಿಲ್ಲ. ಅಥವಾ ಓಡಿ ಹೋಗಲಿಲ್ಲ.
ವಿರಥಶ್ಚಾನಿಷಂಗೀ ಚ ನಿಹತಃ ಪಾರ್ಷ್ಣಿಸಾರಥಿಃ |
ಏಕಶ್ಚ ವಿಗಣಃ ಸೋಽಹಂ ಪ್ರತ್ಯಾಶ್ವಾಸಮರೋಚಯಮ್ ॥43॥
ನನ್ನ ರಥ, ಸಾರಥಿ, ಪಾರ್ಶ್ವದಲ್ಲಿದ್ದ ಯೋಧರು, ಇವರೆಲ್ಲಾ ನಾಶವಾಗಿದ್ದಾರೆ. ನನ್ನ ಜೊತೆಗಿದ್ದವರು ಯಾರೂ ಇಲ್ಲ. ಅಂತಹ ನಾನು ವಿಶ್ರಾಂತಿಯನ್ನು ಬಯಸುತ್ತೇನೆ.
ನ ಪ್ರಾಣಹೇತೋರ್ನ ಭಯಾನ್ನ ವಿಷಾದಾದ್ ವಿಶಾಂಪತೇ |
ಇದಮಂಭಃ ಪ್ರವಿಷ್ಟೋಽಸ್ಮಿ ಶ್ರಮಾತ್ತ್ವಿದಮನುಷ್ಠಿತಮ್ ॥44॥
ರಾಜನೇ! ನಾನು ಪ್ರಾಣಭಯದಿಂದಾಗಲಿ ಪ್ರಾಣವನ್ನು ರಕ್ಷಿಸಿಕೊಳ್ಳಲಿಕ್ಕಾಗಿಯೋ ಅಥವಾ ದುಃಖದಿಂದಲೋ ಈ ಜಲಾಶಯದ ಒಳಗೆ

ಪ್ರವೇಶಿಸಲಿಲ್ಲ. ಆದರೆ ನನಗೆ ಶ್ರಮವಾಗಿದ್ದ ಕಾರಣದಿಂದ ಇದನ್ನು ಮಾಡುತ್ತಿದ್ದೇನೆ.
ತ್ವಂ ಚಾಶ್ವಸಿಹಿ ಕೌಂತೇಯ ಯೇ ಚಾಪ್ಯನುಗತಾಸ್ತವ |
ಅಹಮುತ್ಥಾಯ ವಃ ಸರ್ವಾನ್ ಪ್ರತಿಯೋದ್ಧಾಸ್ಮಿ ಸಂಯುಗೇ ॥45॥
ಕುಂತೀಪುತ್ರ ಯುಧಿಷ್ಠಿರನೇ! ನೀನೂ ಕೂಡ ನಿನ್ನ ಜೊತೆಗಿರುವವರೊಂದಿಗೆ ವಿಶ್ರಾಂತಿ ಪಡೆ. ನಾನು ವಿಶ್ರಾಂತಿಯನ್ನು ಮುಗಿಸಿ ಎದ್ದು ಎಲ್ಲರ ಜೊತೆಗೆ ಯುದ್ಧದಲ್ಲಿ ಹೋರಾಡುವೆನು.
ಯುಧಿಷ್ಠಿರಃ
ಆಶ್ವಸ್ತಾಶ್ಚ ವಯಂ ಸರ್ವೇ ಚಿರಂ ತ್ವಾಂ ಮೃಗಯಾಮಹೇ |
ತ್ವಮಿದಾನೀಂ ಸಮುತ್ತಿಷ್ಠ ಯುದ್ಧಸ್ವೇಹ ಸುಯೋಧನ ॥46॥
ಯುಧಿಷ್ಠಿರ ಸುಯೋಧನನೇ! ನಾವೆಲ್ಲರೂ ವಿಶ್ರಾಂತಿಯನ್ನು ಪಡೆದಾಗಿದೆ. ಬಹಳ ಸಮಯದಿಂದ ನಿನ್ನನ್ನು ಹುಡುಕುತ್ತಿದ್ದೇವೆ. ಈಗ ನೀನು ಎದ್ದು ನಮ್ಮೊಡನೆ ಯುದ್ಧವನ್ನು ಮಾಡು.
ಹತ್ವಾ ಚ ಸಮರೇ ಪಾರ್ಥಾನ್ ಸ್ಫೀತಂ ರಾಜ್ಯಮವಾಪ್ನುಹಿ |
ನಿಹತೋ ವಾ ರಣೇಽಸ್ಮಾಭಿರ್ವೀರಲೋಕಂ ಗಮಿಷ್ಯಸಿ ॥47॥
ಯುದ್ಧದಲ್ಲಿ ಪಾಂಡವರನ್ನು ಕೊಂದು ಸಮೃದ್ಧವಾದ ರಾಜ್ಯವನ್ನು ಹೊಂದು. ಅಥವಾ ಈ ಯುದ್ಧದಲ್ಲಿ ನಮ್ಮಿಂದ ಸತ್ತು ವೀರಸ್ವರ್ಗಕ್ಕೆ ಹೋಗು.
ದುರ್ಯೋಧನಃ
ಯದರ್ಥಂ ರಾಜ್ಯಮಿಚ್ಛೇಯಂ ಕುರೂಣಾಂ ಕುರುನಂದನ |
ತ ಇಮೇ ನಿಹತಾಃ ಸರ್ವೇ ಭ್ರಾತರೋ ಮೇ ಜನೇಶ್ವರ ॥48॥
ದುರ್ಯೋಧನ ಕುರುಪುತ್ರನೇ! ಯಾರಿಗಾಗಿ ನಾನು ಕುರುಗಳ ರಾಜ್ಯವನ್ನು ಅಪೇಕ್ಷಿಸಿದ್ದೆನೋ, ಜನಾಧಿಪತಿಯೇ! ನನ್ನ ಆ ಸಹೋದರರೆಲ್ಲರೂ ಸತ್ತಿದ್ದಾರೆ.
ಕ್ಷೀಣರತ್ನಾಂ ಚ ಪೃಥಿವೀಂ ಹತಕ್ಷತ್ರಿಯಪುಂಗವಾಮ್ |
ನೈತಾಮಿಚ್ಛಾಮ್ಯಹಂ ಭೋಕ್ತುಂ ವಿಧವಾಮಿವ ಯೋಷಿತಮ್ ॥49॥
ಎಲ್ಲಾ ರತ್ನಗಳನ್ನು ಕಳೆದುಕೊಂಡು, ಕ್ಷತ್ರಿಯವೀರರಿಂದ ರಹಿತವಾಗಿರುವ, ವಿಧವಾಸ್ತ್ರೀಯಂತೆ ಇರುವ ಈ ಪೃಥಿವಿಯನ್ನು ಭೋಗಿಸಲು ನಾನು ಇಷ್ಟಪಡುವುದಿಲ್ಲ.
ಅದ್ಯಾಪಿ ತ್ವಹಮಾಶಂಸೇ ತ್ವಾಂ ವಿಜೇತುಂ ಯುಧಿಷ್ಠಿರ |
ಭುಂಕ್ತ್ವಾ ಪಾಂಚಾಲಪಾಂಡೂನಾಮುತ್ಸಾಹಂ ಭರತರ್ಷಭ ॥50॥
ಭರತಶ್ರೇಷ್ಠ ಯುಧಿಷ್ಠಿರನೇ! ಇಂದಿಗೂ ಕೂಡ ನಾನು ಯುದ್ಧದಲ್ಲಿ ಪಾಂಚಾಲರ ಮತ್ತು ಪಾಂಡವರ ಯುದ್ಧೋತ್ಸಾಹವನ್ನು ಮುರಿದು ನಿನ್ನನ್ನು ಗೆಲ್ಲಬೇಕೆಂದು ಇಚ್ಛಿಸುತ್ತೇನೆ.
ನ ತ್ವಿದಾನೀಮಹಂ ಮನ್ಯೇ ಕಾರ್ಯಂ ಯುದ್ಧೇನ ಕೇನಚಿತ್ |
ದ್ರೋಣೇ ಕರ್ಣೇ ಚ ಸಂಶಾಂತೇ ನಿಹತೇ ಚ ಪಿತಾಮಹೇ ॥51॥
ದ್ರೋಣ, ಕರ್ಣ, ಪಿತಾಮಹನಾದ ಭೀಷ್ಮ ಇವರೆಲ್ಲಾ ಸತ್ತಮೇಲೆ ಯಾವುದೇ ಯುದ್ಧದಿಂದ ಆಗಬೇಕಾದದ್ದು ಯಾವುದೂ ಇಲ್ಲವೆಂದು ನಾನಿಂದು ತಿಳಿದಿದ್ದೇನೆ.
ಅಸ್ತೀತ್ವದಾನೀಮಿಯಂ ರಾಜನ್ ಕೇವಲಾ ಪೃಥಿವೀ ತವ |
ಅಸಹಾಯೋ ಹಿ ಕೋ ರಾಜಾ ರಾಜ್ಯಮಿಚ್ಛೇತ್ ಪ್ರಶಾಸಿತುಮ್ ॥52॥
ರಾಜನ್! ಬರಿದಾದ ಈ ಪೃಥಿವಿಯು ಈಗ ನಿನಗೇ ಇರಲಿ. ಜೊತೆಗೆ ಯಾರೂ ಇಲ್ಲದಿರುವ ಯಾವ ರಾಜನು ರಾಜ್ಯವನ್ನು ಆಳಲು ಅಪೇಕ್ಷಿಸುತ್ತಾನೆ?
ಸುಹೃದಸ್ತಾದೃಶಾನ್ ಹಿತ್ವಾ ಪುತ್ರಾನ್ ಭ್ರಾತೄನ್ ಪಿತೄನಪಿ |
ಭವದ್ಭಿಶ್ಚ ಹೃತೇ ರಾಜ್ಯೇ ಕೋ ನು ಜೀವೇತ ಮಾದೃಶಃ ॥53॥
ಅಂತಹ ಮಿತ್ರರನ್ನು, ಅಂತಹ ಮಕ್ಕಳನ್ನು, ಅಂತಹ ಸಹೋದರರರನ್ನು, ಅಂತಹ ಪಿತೃಗಳನ್ನು ಕಳೆದುಕೊಂಡು, ನಿಮ್ಮಿಂದಾಗಿ ರಾಜ್ಯವೂ ಕಳೆದುಹೋದ ಮೇಲೆ ನನ್ನಂತಹವನು ಯಾವನು ತಾನೇ ಬದುಕಿಯಾನು?
ಅಹಂ ವನಂ ಗಮಿಷ್ಯಾಮಿ ಅಜಿನೈಃ ಪರಿವಾರಿತಃ |
ರತಿರ್ಹಿ ನಾಸ್ತಿ ಮೇ ರಾಜ್ಯೇ ಹತಪಕ್ಷಸ್ಯ ಭಾರತ ॥54॥
ಭಾರತ! ನಾನಾದರೂ ಅಜಿನಧಾರಿಯಾಗಿ ಕಾಡಿಗೆ ಹೋಗುವೆನು. ನನ್ನ ಪಕ್ಷದವರೆಲ್ಲಾ ಸತ್ತಿರುವುದರಿಂದ ನನಗೆ ರಾಜ್ಯದಲ್ಲಿ ಸುಖವೇ (ಆಸಕ್ತಿಯೇ) ಇಲ್ಲ.
ಹತಬಾಂಧವಭೂಯಿಷ್ಠಾ ಹತಾಶ್ವಾ ಹತಕುಂಜರಾ |
ಏಷಾ ತೇ ಪೃಥಿವೀ ರಾಜನ್ ಭುಂಕ್ಷ್ವೈನಾಂ ವಿಗತಜ್ವರಃ ॥55॥
ಅಧಿಕಾಂಶದಲ್ಲಿ ಸಂಬಂಧಿಗಳೇ ಸತ್ತುಹೋಗಿರುವ, ಆನೆ-ಕುದುರೆಗಳನ್ನು ಕಳೆದುಕೊಂಡಿರುವ ಈ ಪೃಥಿವಿಯನ್ನು ಯಾವುದೇ ಹೆದರಿಕೆಯಿಲ್ಲದೆ ನೀನೇ ಅನುಭವಿಸು.
ವನಮೇವ ಗಮಿಷ್ಯಾಮಿ ವಾಸಿತೋ ಮೃಗಚರ್ಮಣಾ |
ನ ಹಿ ಮೇ ನಿರ್ಜಿತಸ್ಯಾಸ್ತಿ ಜೀವಿತೇಽದ್ಯ ಸ್ಪೃಹಾ ವಿಭೋ ॥56॥
ವಿಭುವೇ! ನಾನು ಮೃಗಚರ್ಮವನ್ನು ಧರಿಸಿ ಕಾಡಿಗೇ ಹೋಗುವೆನು. ಸೋತುಹೋದ ನನಗೆ ಇಂದು ಜೀವನದಲ್ಲಿ ಆಸೆಯೇ ಇಲ್ಲ.

ಗಚ್ಛ ತ್ವಂ ಭುಂಕ್ಷ್ವ ರಾಜೇಂದ್ರ ಪೃಥಿವೀಂ ನಿಹತದ್ವಿಷಮ್ |
ಹತಯೋಧಾಂ ನಷ್ಟರತ್ನಾಂ ಶೀರ್ಣಕ್ಷತ್ರಾಂ ಯಥಾಸುಖಮ್ ||57||
ಹೋಗು! ರಾಜೇಂದ್ರನೇ! ಶತ್ರುಗಳು ನಾಶವಾಗಿದ್ದಾರೆ. ಯೋಧರು ಸತ್ತಿದ್ದಾರೆ. ಸಂಪತ್ತು ಇಲ್ಲವಾಗಿದೆ. ಕ್ಷತ್ರಿಯರು ಕ್ಷೀಣಿಸಿದ್ದಾರೆ. ಇಂತಹ ಪೃಥಿವಿಯನ್ನು ನಿನಗೆ ಬೇಕಾದ ರೀತಿಯಲ್ಲಿ ಅನುಭವಿಸು.
ಸಂಜಯಃ
ದುರ್ಯೋಧನಂ ತವ ಸುತಂ ಸಲಿಲಸ್ಥಂ ಮಹಾಯಶಾಃ |
ಶ್ರುತ್ವಾ ತು ಕರುಣಂ ವಾಕ್ಯಮಭಾಷತ ಯುಧಿಷ್ಠಿರಃ ||58||
ಸಂಜಯ ಈ ಕರುಣಾಪೂರ್ಣವಾದ ಮಾತನ್ನು ಕೇಳಿಸಿಕೊಂಡ ಮಹಾಕೀರ್ತಿವಂತನಾದ ಯುಧಿಷ್ಠಿರನು ನೀರಿನೊಳಗಿದ್ದ ನಿನ್ನ ಮಗ ದುರ್ಯೋಧನನಿಗೆ ಹೀಗೆ ಹೇಳುತ್ತಾನೆ.
ಯುಧಿಷ್ಠಿರಃ
ಆರ್ತಪ್ರಲಾಪಂ ಮಾ ತಾತ ಸಲಿಲಸ್ಥಃ ಪ್ರಭಾಷಥಾಃ |
ನೈತನ್ಮೇ ರೋಚತೇ ರಾಜನ್ ವಾಶಿತಂ ಶಕುನೇರಿವ ||59||
ಯುಧಿಷ್ಠಿರ ಪ್ರಿಯನೇ! ನೀರೊಳಗಿದ್ದುಕೊಂಡು ದುಃಖಿತರು ಮಾಡುವ ಪ್ರಲಾಪವನ್ನು ಮಾಡಬೇಡ. ರಾಜನೇ! ಗುಬ್ಬಿಗಳ ಕಲರವದಂತಿರುವ ಈ ನಿನ್ನ ಮಾತುಗಳು ನನಗೆ ಇಷ್ಟವಾಗುವುದಿಲ್ಲ.
ಯದಿ ವಾಽಪಿ ಸಮರ್ಥಃ ಸ್ಯಾಸ್ತ್ವಂ ದಾನಾಯ ಸುಯೋಧನ |
ನಾಹಮಿಚ್ಛೇಯಮವನಿಂ ತ್ವಯಾ ದತ್ತಾಂ ಪ್ರಶಾಸಿತುಮ್ ||60||
ಒಂದು ಪಕ್ಷದಲ್ಲಿ ನೀನು ನನಗೆ ಭೂಮಿಯನ್ನು ದಾನ ಮಾಡಲು ಸಮರ್ಥನಾಗಿದ್ದರೂ, ನೀನು ದಾನ ಮಾಡಿದ ಭೂಮಿಯನ್ನು ಆಳಲು ನಾನು ಇಚ್ಛಿಸುವುದಿಲ್ಲ.
ಅಧರ್ಮೇಣ ನ ಗೃಹ್ಣೀಯಾಂ ತ್ವಯಾ ದತ್ತಾಂ ಮಹೀಮಿಮಾಮ್ |
ನ ಹಿ ಧರ್ಮೋ ಭವೇದ್ ರಾಜನ್ ಕ್ಷತ್ರಿಯಸ್ಯ ಪ್ರತಿಗ್ರಹಃ ||61||
ದಾನಸ್ವೀಕಾರಮಾಡುವುದು ಕ್ಷತ್ರಿಯನ ಧರ್ಮವಲ್ಲ. ಆದ್ದರಿಂದ ನೀನು ದಾನಮಾಡಿದ ಪೃಥಿವಿಯನ್ನು ಧರ್ಮವಿರುದ್ಧವಾಗಿ ನಾನು ಸ್ವೀಕರಿಸಲಾರೆನು.
ತ್ವಯಾ ದತ್ತಾಂ ನ ಚೇಚ್ಛೇಯಂ ಪೃಥಿವೀಮಖಿಲಾಮಪಿ |
ತ್ವಾಂ ಚ ಯುದ್ಧೇ ವಿನಿರ್ಜಿತ್ಯ ಭೋಕ್ತಾಸ್ಮಿ ವಸುಧಾಮಿಮಾಮ್ ||62||
ನೀನು ದಾನಮಾಡುವ ಸಮಸ್ತಪೃಥಿವಿಯನ್ನೂ ನಾನು ಬಯಸುವುದಿಲ್ಲ. ಯುದ್ಧದಲ್ಲಿ ನಿನ್ನನ್ನು ಗೆದ್ದು ಈ ಭೂಮಿಯನ್ನು ಅನುಭವಿಸುವೆನು.
ಅನೀಶ್ವರಶ್ಚ ಪೃಥಿವೀಂ ಕಥಂ ತ್ವಂ ದಾತುಮಿಚ್ಛಸಿ |
ತ್ವಯೈಷಾ ಪೃಥಿವೀ ರಾಜನ್ ಕಿಂ ನ ದತ್ತಾ ತದೈವ ಹಿ ||63||
ನೀನೀಗ ರಾಜನಲ್ಲ. ನೀನು ಆಗಲೇ ರಾಜ್ಯವನ್ನು ಕಳೆದುಕೊಂಡದ್ದಾಗಿದೆ. ಸ್ವಾಮಿಯಾಗದವನು ಪೃಥಿವಿಯನ್ನು ದಾನ ಮಾಡಲು ಹೇಗೆ ಬಯಸಬಹುದು?
ಧರ್ಮತೋ ಯಾಚಮಾನಸ್ಯ ಶಮಾರ್ಥಂ ಚ ಕುಲಸ್ಯ ನಃ |
ವಾರ್ಷ್ಣೇಯಃ ಪ್ರಥಮಂ ರಾಜನ್ ಪ್ರತ್ಯಾಖ್ಯಾತೋ ಮಹಾಬಲಃ ||64||
ರಾಜನೇ! ನಮ್ಮ ಕುಲದ ಕ್ಷೇಮಕ್ಕಾಗಿ ಧರ್ಮಮಾರ್ಗದಲ್ಲಿಯೇ ಮೊದಲು ಶ್ರೀಕೃಷ್ಣನು ಬೇಡಿದನು. ಮಹಾಬಲಶಾಲಿಯಾದ ಆ ಕೃಷ್ಣನನ್ನೇ ನೀನು ತಿರಸ್ಕರಿಸಿದಿ.
ಕಿಮಿದಾನೀಂ ದದಾಸ್ಯದ್ಯ ಕೋ ಹಿ ತೇ ಚಿತ್ತವಿಭ್ರಮಃ |
ಅಭಿಯುಕ್ತೋ ಹಿ ಕೋ ರಾಜನ್ ದಾತುಮಿಚ್ಛತಿ ಮೇದಿನೀಮ್ ||65||
ನೀನು ಇವತ್ತು ಏತಕ್ಕಾಗಿ ಕೊಡುತ್ತಿ? ನಿನಗೆ ಎಂತಹ ಬುದ್ಧಿಭ್ರಮಣೆಯುಂಟಾಗಿದೆ! ರಾಜನೇ! ಶತ್ರುಗಳಿಂದ ಆಕ್ರಮಣಕ್ಕೊಳಗಾದ ಯಾವ ಪುರುಷನು ಭೂಮಿಯನ್ನು ದಾನ ಮಾಡಲು ಇಷ್ಟಪಡುವನು?
ನ ತ್ವಮದ್ಯ ಮಹೀಂ ದಾತುಮ್ ಈಶಃ ಕೌರವನಂದನ |
ಆಚ್ಛೇತ್ತುಂ ವಾ ಬಲಾದ್ ರಾಜನ್ ಸ ಕಥಂ ದಾತುಮಿಚ್ಛಸಿ ||66||
ಕೌರವಪುತ್ರನೇ! ಇಂದು ನೀನು ಭೂಮಿಯನ್ನು ದಾನಮಾಡಲು ಶಕ್ತನಾಗುವುದಿಲ್ಲ. ಅಥವಾ ಅದನ್ನು ಕಸಿದುಕೊಳ್ಳಲೂ ಶಕ್ತನಾಗಲಾರೆ. ಹೀಗಿರುವಾಗ ನೀನು ದಾನ ಮಾಡಲು ಹೇಗೆ ಬಯಸುವೆ?
ಮಾಂ ತ್ವಂ ನಿರ್ಜಿತ್ಯ ಸಂಗ್ರಾಮೇ ಪಾಲಯೇಮಾಂ ವಸುಂಧರಾಮ್ ||
ಯುದ್ಧದಲ್ಲಿ ನನ್ನನ್ನು ಗೆದ್ದು ಈ ಭೂಮಿಯನ್ನು ಆಳು.
ಸೂಚ್ಯಗ್ರೇಣಾಪಿ ಯದ್ ಭೂಮೇರಪಿ ದೀಯೇರ್ತ ಭಾರತ |
ತನ್ಮಾತ್ರಮಪಿ ವೈ ಮಹ್ಯಂ ನ ದದಾತಿ ಪುರಾ ಭವಾನ್ ||68||
ಸ ಕಥಂ ಪೃಥಿವೀಮೇನಾಂ ಪ್ರದದಾಸಿ ವಿಶಾಂಪತೇ |
ಸೂಚ್ಯಗ್ರಂ ನಾತ್ಯಜಃ ಪೂರ್ವಂ ಸ ಕಥಂ ತ್ಯಜಸಿ ಕ್ಷಿತಿಮ್ ||69||
ಭಾರತ! ಹಿಂದೆ ನೀನು ಸೂಜಿಯಮೊನೆಯಿಂದ ವಿಭಾಗ ಮಾಡಬಹುದಾದ ಭೂಮಿಯನ್ನೂ ನನಗೆ ಕೊಡಲಿಲ್ಲ. ರಾಜನೇ! ಅಂತಹ ನೀನು ಪೂರ್ಣಪೃಥಿವಿಯನ್ನು ಹೇಗೆ ದಾನ ಮಾಡುವಿ? ಹಿಂದೆ ಸೂಜಿಯ ಮೊನೆಯಷ್ಟು ಜಾಗವನ್ನೂ ಬಿಡದವನು ಈಗ ಇಡೀ

ಭೂಮಿಯನ್ನು  ಹೇಗೆ ಬಿಟ್ಟುಕೊಡುತ್ತಿ?
ಏವಮೈಶ್ವರ್ಯಮಾಸಾದ್ಯ ಕೇವಲಂ ಪೃಥಿವೀಪತೇ |
ಕೋ ನು ಮೂಢೋ ವ್ಯವಸ್ಯೇತ ಶತ್ರೋರ್ದಾತುಂ ವಸುಂಧರಾಮ್ ॥
ರಾಜನೇ! ಇಂತಹ ಸಂಪತ್ತನ್ನು ಹೊಂದಿದ್ದು, ಶತ್ರುವಿಗೆ ಪೃಥಿವಿಯನ್ನು ದಾನ ಮಾಡಲು ಯಾವ ಮೂರ್ಖನು ತಾನೆ ಪ್ರಯತ್ನಪಟ್ಟಾನು?
ತ್ವಂ ತು ಕೇವಲಮೌರ್ಖ್ಯೇಣ ವಿಮೂಢೋ ನಾವಬುಧ್ಯಸೇ |
ಪೃಥಿವೀಂ ದಾತುಕಾಮೋಽಪಿ ಜೀವಂಸ್ತ್ವಂ ನ ವಿಮೋಕ್ಷ್ಯಸೇ ॥71॥
ನೀನು ಕೇವಲ ಮೂರ್ಖತನದಿಂದ ಮೋಹಗೊಂಡು ಯಾವುದನ್ನೂ ತಿಳಿಯಲಾರೆ. ನೀನು ಪೃಥಿವಿಯನ್ನು ದಾನಮಾಡಲು ಇಚ್ಛಿಸಿದರೂ ನಮ್ಮ ಕೈಯಿಂದ ಬದುಕಿ ಉಳಿಯಲಾರೆ.
ಅಸ್ಮಾನ್ ವಾ ತ್ವಂ ಪರಾಜಿತ್ಯ ಪ್ರಶಾಧಿ ಪೃಥಿವೀಮಿಮಾಮ್ |
ಅಥವಾ ನಿಹತೋಽಸ್ಮಾಭಿರ್ವ್ರಜ ಲೋಕಾನನುತ್ತಮಾನ್ ॥72॥
ನಮ್ಮನ್ನು ಗೆದ್ದು ಈ ಪೃಥಿವಿಯನ್ನು ಆಳು. ಅಥವಾ ಸತ್ತು ಉತ್ತಮಲೋಕವನ್ನು ಹೊಂದು.
ಆವಯೋರ್ಜೀವತೋ ರಾಜನ್ ಮಯಿ ಚ ತ್ವಯಿ ಚ ಧ್ರುವಮ್ |
ಸಂಶಯಃ ಸರ್ವಭೂತಾನಾಂ ವಿಜಯೇ ನೌ ಭವಿಷ್ಯತಿ ॥73॥
ನಮ್ಮಿಬ್ಬರಲ್ಲಿ ಇಬ್ಬರೂ ಬದುಕಿದ್ದರೆ ಎಲ್ಲರಿಗೂ ನಮ್ಮ ಜಯದ ವಿಷಯದಲ್ಲಿ ಖಂಡಿತವಾಗಿಯೂ ಸಂಶಯವು ಉಂಟಾಗುವುದು.
ಜೀವಿತಂ ತವ ದುಷ್ಪ್ರಾಪಂ ಮಯಿ ಸಂಪ್ರತಿ ವರ್ತತೇ |
ಜೀವಯೇಯಮಹಂ ಪಾಪ ನ ತ್ವಂ ಜೀವಿತುಮರ್ಹಸಿ ॥74॥
ಈಗ ನಿನ್ನ ಜೀವನವು ಕಷ್ಟದಲ್ಲಿದೆ. ನಾನು ಬದುಕುವೆನು. ಆದರೆ ಪಾಪಿಯೇ! ನೀನು ಜೀವಿಸಲು ಯೋಗ್ಯನಲ್ಲ.
ದಹನೇ ಹಿ ಕೃತೋ ಯತ್ನಃ ತ್ವಯಾಽಸ್ಮಾಸು ವಿಶೇಷತಃ |
ಆಶೀವಿಷವಿಷೈಶ್ಚಾಪಿ ಜಲೇ ವಾಽಪಿ ಪ್ರವೇಶನೈಃ ॥75॥
ನಮ್ಮನ್ನು ಸುಡಲು ವಿಶೇಷಪ್ರಯತ್ನವನ್ನು ಹಿಂದೆ ಮಾಡಿದ್ದಿ. ಹಾವುಗಳಿಂದ, ವಿಷದಿಂದ, ನೀರಿನಲ್ಲಿ  ಕೊಲ್ಲಲು ಪ್ರಯತ್ನಿಸಿದ್ದಿ.
ತ್ವಯಾ ವಿನಿಕೃತಾ ರಾಜನ್ ರಾಜ್ಯಸ್ಯ ಹರಣೇನ ಚ ॥76॥
ದ್ಯೂತದ ಮೂಲಕ ನಮ್ಮ ರಾಜ್ಯವನ್ನು ಕಸಿದುಕೊಂಡು ನಮಗೆ ಮೋಸವನ್ನು ಮಾಡಿದ್ದಿ.
ಅಪ್ರಿಯಾಣಾಂ ಚ ವಚನೈಃ ದ್ರೌಪದ್ಯಾ ಕರ್ಷಣೇನ ಚ ॥77॥
ಅಪ್ರಿಯವಾದ ಮಾತುಗಳಿಂದ, ದ್ರೌಪದಿಯನ್ನು ಎಳೆಯುವ ಮೂಲಕ ನಮಗೆ ಬಹಳ ಅನಿಷ್ಟವನ್ನು  ಮಾಡಿದ್ದಿ.
ಏತಸ್ಮಾತ್ ಕಾರಣಾತ್ ಪಾಪ ಜೀವಿತಂ ತೇ ನ ವಿದ್ಯತೇ |
ಉತ್ತಿಷ್ಠೋತ್ತಿಷ್ಠ ಯುಧ್ಯಸ್ವ ತತ್ತೇ ಶ್ರೇಯೋ ಭವಿಷ್ಯತಿ ॥78॥
ಪಾಪಿಯೇ! ಈ ಎಲ್ಲಾ ಕಾರಣಗಳಿಂದ ನೀನು ಬದುಕಬಾರದು. ಏಳು! ಎದ್ದೇಳು! ಯುದ್ಧ ಮಾಡು. ಅದರಿಂದ ನಿನಗೆ ಶ್ರೇಯಸ್ಸು ಉಂಟಾಗುತ್ತದೆ.
ಸಂಜಯಃ
ಏವಂ ತು ವಿವಿಧಾ ವಾಚೋ ಜಯಯುಕ್ತಾಃ ಪುನಃ ಪುನಃ |
ಕೀರ್ತಯಂತಿ ಸ್ಮ ತೇ ವೀರಾಃ ತತ್ರ ತತ್ರ ನರಾಧಿಪ ॥79॥
ಸಂಜಯ ರಾಜನೇ! ಯುದ್ಧದಲ್ಲಿ ಜಯವನ್ನು ಹೊಂದಿದ ಪಾಂಡವವೀರರು ಈ ರೀತಿಯಲ್ಲಿ ವಿವಿಧ ಮಾತುಗಳನ್ನು ಅಲ್ಲಲ್ಲಿ ಹೇಳುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಯುಧಿಷ್ಠಿರನ ಮಾತಿನಂತೆ ದುರ್ಯೋಧನನು ಸರೋವರದಿಂದ ಹೊರಬಂದು ಯಾವನಾದರೊಬ್ಬ ಪಾಂಡವನ ಜೊತೆಗೆ ಯುದ್ಧಕ್ಕೆ ಸಿದ್ಧನಾಗುವುದು.
ಧೃತರಾಷ್ಟ್ರಃ
ಏವಂ ಸಂತರ್ಜ್ಯಮಾನಸ್ತು ಪುತ್ರೋ ಮಮ ಮಹೀಪತಿಃ |
ಪ್ರಕೃತ್ಯಾ ಮನ್ಯುಮಾನ್ ವೀರಃ ಕಥಮಾಸೀತ್ ಪರಂತಪಃ ॥1॥
ಧೃತರಾಷ್ಟ್ರ ಹೀಗೆ ಯುಧಿಷ್ಠಿರಾದಿಗಳಿಂದ ಚೆನ್ನಾಗಿ ನಿಂದನೆಗೊಳಗಾದ ನನ್ನ ಮಗ ರಾಜ ದುರ್ಯೋಧನನು ಏನು ಮಾಡಿದನು? ಅವನು ಸ್ವಭಾವತಃ ಕೋಪಿಷ್ಠ. ವೀರನಾದ ಅವನು ಶತ್ರುಗಳಿಗೆ ತಾಪವನ್ನುಂಟು ಮಾಡುವವನು.
ನ ಹಿ ಸಂತರ್ಜನಾ ತೇನ ಶ್ರುತಪೂರ್ವಾ ಕದಾಚನ |
ರಾಜಭಾವೇನ ಮಾನ್ಯಶ್ಚ ಸರ್ವಲೋಕಸ್ಯ ಸೋಽಭವತ್ ॥2॥
ಇದಕ್ಕಿಂತ ಮೊದಲು ಯಾವತ್ತೂ ಕೂಡ ಅವನು ನಿಂದನೆಯ ಮಾತುಗಳನ್ನು ಕೇಳಿದವನಲ್ಲ. ಏಕೆಂದರೆ ಅವನು ರಾಜನಾದ್ದರಿಂದ ಎಲ್ಲರಿಗೂ ಪೂಜ್ಯನೇ ಆಗಿದ್ದನು.
ಇದಂ ಚ ಪೃಥಿವೀ ಸರ್ವಾ ಸಮ್ಲೇಚ್ಛಾಟವಿಕಾ ಭೃಶಮ್ |

ಪ್ರಸಾದಾದ್ಧ್ರಿಯತೇ ತಸ್ಯ ಪ್ರತ್ಯಕ್ಷಂ ತವ ಸಂಜಯ ॥3॥
ಸಂಜಯನೇ! ನಿನಗೆ ಪ್ರತ್ಯಕ್ಷವಾಗಿ ಕಾಣುವ ಮ್ಲೇಚ್ಛಭೂಮಿ, ವನಪ್ರದೇಶಗಳಿಂದ ಸಹಿತವಾದ ಎಲ್ಲಾ ಭೂಭಾಗವೂ ಆ ದುರ್ಯೋಧನನ ಅನುಗ್ರಹದಿಂದಲೇ ಚೆನ್ನಾಗಿ ಇದೆ.
ಸ ತಥಾ ತರ್ಜ್ಯಮಾನಸ್ತು ವಿಷಮಸ್ಥೋ ವಿಶೇಷತಃ |
ವಿಹೀನಶ್ಚ ಸ್ವಕೈರ್ಭೃತ್ಯೈರ್ವಿಜನೈಶ್ಚ ಧೃತೋ ಭೃಶಮ್ ॥4॥
ಶ್ರುತ್ವಾ ವಾಚಃ ಸುಕಟುಕಾ ಜಯಯುಕ್ತಾಃ ಪುನಃ ಪುನಃ |
ಕಿಮಬ್ರವೀತ್ ಪಾಂಡವೇಯಾನ್ ತನ್ಮಮಾಚಕ್ಷ್ವ ಸಂಜಯ ॥5॥
ತನ್ನ ಸೇವಕರು, ಬಂಧುಜನರು, ಇವರನ್ನೆಲ್ಲ ಕಳೆದುಕೊಂಡು ವಿಷಮಸ್ಥಿತಿಗೆ ತಲಪಿರುವ ದುರ್ಯೋಧನನು ಈಗ ಶತ್ರುಗಳಿಂದ ಬಂಧನಕ್ಕೊಳಗಾಗಿದ್ದಾನೆ. ಯುದ್ಧದಲ್ಲಿ ವಿಜಯವನ್ನು ಸಂಪಾದಿಸಿರುವ ಪಾಂಡವರು ಮತ್ತೆ ಮತ್ತೆ ಆಡಿದ ಕಟುವಾದ ಮಾತುಗಳನ್ನು ಕೇಳಿ ಪಾಂಡವರಿಗೆ ಏನು ಉತ್ತರವನ್ನು ಕೊಟ್ಟ? ಸಂಜಯನೇ! ಅದನ್ನು ನನಗೆ ಹೇಳು.
ಸಂಜಯಃ
ತರ್ಜ್ಯಮಾನಸ್ತದಾ ರಾಜಾ ಉದಕಸ್ಥಸ್ತವಾತ್ಮಜಃ |
ಯುಧಿಷ್ಠಿರೇಣ ರಾಜೇಂದ್ರ ಭ್ರಾತೃಭಿಃ ಸಹಿತೇನ ಹಿ ॥6॥
ಶ್ರುತ್ವಾ ತು ಕಟುಕಾ ವಾಚೋ ವಿಷಮಸ್ಥೋ ನರಾಧಿಪಃ |
ದೀರ್ಘಮುಷ್ಣಂ ಚ ನಿಃಶ್ವಸ್ಯ ಸಲಿಲಸ್ಥೋ ಮುಹುರ್ಮುಹುಃ ॥7॥
ಸಲಿಲಾಂತರ್ಗತೋ ರಾಜಾ ಧೂನ್ವನ್ ಹಸ್ತೌ ಪುನಃ ಪುನಃ |
ಮನಶ್ಚಕಾರ ಯುದ್ಧಾಯ ರಾಜಾನಂ ಚಾಭ್ಯಭಾಷತ ॥8॥
ಸಂಜಯ ನೀರೊಳಗೆ ಇದ್ದ ನಿನ್ನ ಮಗ ದುರ್ಯೋಧನನು, ತಮ್ಮಂದಿರೊಡನೆ ಸೇರಿಕೊಂಡು ಯುಧಿಷ್ಠಿರನು ಆಡಿದ ತೀಕ್ಷ್ಣವಾದ ನಿಂದನೆಯ ಮಾತುಗಳನ್ನು ಕೇಳಿ ಮನಸ್ಸಿನ ಸ್ಥಿತಿಯಲ್ಲಿ ಏರುಪೇರು ಮಾಡಿಕೊಂಡನು. ನೀರಿನೊಳಗೆಯೇ ಮತ್ತೆ ಮತ್ತೆ ಬಿಸಿಯಾದ ನಿಟ್ಟುಸಿರನ್ನು ಬಿಟ್ಟನು. ನೀರಿನೊಳಗಿಂದಲೇ ತನ್ನ ಕೈಗಳನ್ನು ಕೊಡವುತ್ತಾ ಯುದ್ಧ ಮಾಡುವ ಇಚ್ಛೆಯುಳ್ಳವನಾಗಿ ಧರ್ಮರಾಜನಿಗೆ ಹೀಗೆ ಹೇಳುತ್ತಾನೆ.
ದುರ್ಯೋಧನಃ
ಯೂಯಂ ಸಸುಹೃದಃ ಪಾರ್ಥಾಃ ಸರ್ವೇ ಸಾಯುಧವಾಹನಾಃ |
ಅಹಮೇಕಃ ಪರಿದ್ಯೂನೋ ವಿರಥೋ ಹತವಾಹನಃ ॥9॥
ದುರ್ಯೋಧನ ನೀವು ಪಾಂಡವರು ತುಂಬಾ ಗೆಳೆಯರ ಜೊತೆಗೆ ಇದ್ದೀರಿ. ಆಯುಧ, ವಾಹನಗಳನ್ನೂ ಹೊಂದಿದ್ದೀರಿ. ಆದರೆ ನಾನು ಒಬ್ಬಂಟಿಯಾಗಿದ್ದೇನೆ. ಎಲ್ಲವನ್ನು ಕಳೆದುಕೊಂಡಿದ್ದೇನೆ. ರಥವು ನಾಶವಾಗಿದೆ. ವಾಹನದ ಕುದುರೆಗಳು ಸತ್ತು ಹೋಗಿವೆ.
ಆತ್ತಶಸ್ತ್ರೈ ರಥಗತೈರ್ಬಹುಭಿಃ ಪರಿವಾರಿತಃ |
ಕಥಮೇಕಃ ಪದಾತಿಃ ಸನ್ನಶಸ್ತ್ರೋ ಯೋದ್ಧುಮುತ್ಸಹೇ ॥10॥
ಕೈಯಲ್ಲಿ ಶಸ್ತ್ರಗಳನ್ನು ಹಿಡಿದು ಅನೇಕರು ಸುತ್ತುವರಿದಿರುವಾಗ ಶಸ್ತ್ರಗಳಿಲ್ಲದ, ಏಕಾಕಿಯಾದ, ನಾನು ನೆಲದಲ್ಲಿ ನಿಂತುಕೊಂಡು ಯುದ್ಧಮಾಡಲು ಹೇಗೆ ಸಾಧ್ಯವಾದೀತು?
ಏಕೈಕಶ್ಯೈವ ಮಾಂ ಯೂಯಂ ಯೋಧಯಧ್ವಂ ಯುಧಿಷ್ಠಿರ |
ನ ಹ್ಯೇಕೋ ಬಹುಭಿರ್ಯೋಧೈರ್ನ್ಯಾಯ್ಯಂ ಯೋಧಯಿತುಂ ರಿಪುಃ ॥
ಯುಧಿಷ್ಠಿರನೇ! ನೀವು ಒಬ್ಬೊಬ್ಬರಾಗಿಯೇ ನನ್ನ ಜೊತೆಗೆ ಯುದ್ಧ ಮಾಡಿ. ಅನೇಕ ಯೋಧರ ಜೊತೆಗೆ ಶತ್ರುವು ಒಬ್ಬಂಟಿಯಾಗಿ ಯುದ್ಧಮಾಡುವುದು ನ್ಯಾಯ ಸಮ್ಮತವಾದುದಲ್ಲ.
ಹೀನಶಸ್ತ್ರೋ ವಿಕವಚಃ ಶ್ರಾಂತಶ್ಚಾಪಃ ಸಮಾಶ್ರಿತಃ |
ಭೃಶಂ ವಿಕ್ಷತಗಾತ್ರಶ್ಚ ಶ್ರಾಂತವಾಹನಸೈನಿಕಃ ॥12॥
ಶಸ್ತ್ರಗಳು ನಾಶವಾಗಿವೆ. ಕವಚವು ಕಳೆದುಹೋಗಿದೆ. ಆದ್ದರಿಂದಲೇ ಆಯಾಸಗೊಂಡ ನಾನು ನೀರಿನಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದೇನೆ. ನನ್ನ ಮೈಯಲ್ಲಿ ಆಳವಾದ ಗಾಯಗಳಾಗಿವೆ. ನನ್ನ ವಾಹನಗಳು, ಸೈನಿಕರು ಯಾವುದೂ ಇಲ್ಲವಾಗಿವೆ.
ನ ಮೇ ತ್ವತ್ತೋ ಭಯಂ ರಾಜನ್ ನ ಚ ಪಾರ್ಥಾದ್ ವೃಕೋದರಾತ್ |
ಫಲ್ಗುನಾದ್ ವಾಸುದೇವಾದ್ ವಾ ಪಾಂಚಾಲೇಭ್ಯೋಽಥವಾ ಪುನಃ ॥13॥
ಯಮಾಭ್ಯಾಂ ಯುಯುಧಾನಾದ್ವಾ ಯೇ ಚಾನ್ಯೇ ತವ ಸೈನಿಕಾಃ |
ಏಕಃ ಸರ್ವಾನಹಂ ಕ್ರುದ್ಧಾನ್ ಏತಾನ್ ಯೋದ್ಧುಮಿಹೋತ್ಸಹೇ ॥14॥
ರಾಜನೇ! ನನಗೆ ನಿನ್ನಿಂದಲಾಗಲೀ, ಭೀಮಸೇನನಿಂದಾಗಲೀ, ಅರ್ಜುನನಿಂದಾಗಲೀ, ಕೃಷ್ಣನಿಂದಾಗಲೀ, ಪಾಂಚಾಲರಿಂದಾಗಲೀ, ಅವಳಿಗಳಾದ ನಕುಲ-ಸಹದೇವರಿಂದಾಗಲೀ, ಯುಯುಧಾನನಿಂದಾಗಲೀ ಅಥವಾ ಬೇರೆ ನಿನ್ನ ಸೈನಿಕರಿಂದಾಗಲೀ ಭಯವು ಇಲ್ಲ. ನಾನೊಬ್ಬನೇ ಕ್ರುದ್ಧರಾದ ಇವರೆಲ್ಲರೊಡನೆ ಯುದ್ಧವನ್ನು ಮಾಡಬಲ್ಲೆ.
ಧರ್ಮಮೂಲಂ ಸತಾಂ ಕೀರ್ತಿರ್ಮನುಷ್ಯಾಣಾಂ ಜನಾಧಿಪ |
ಧರ್ಮಂ ಚೈವೇಹ ಕೀರ್ತಿಂ ಚ ಪಾಲಯನ್ ಪ್ರಬ್ರವೀಮಿ ತೇ ॥15॥
ಜನನಾಯಕನೇ! ಸಜ್ಜನರ ಕೀರ್ತಿಯು ಧರ್ಮಮಾರ್ಗದಲ್ಲಿ ಬರಬೇಕು. ಇಲ್ಲಿ ಧರ್ಮವನ್ನೂ ಕೀರ್ತಿಯನ್ನೂ ರಕ್ಷಿಸುವವನಾಗಿ ನಿನಗೆ ಹೇಳುತ್ತಿದ್ದೇನೆ.
ಅಹಮುತ್ಥಾಯ ವಃ ಸರ್ವಾನ್ ಪ್ರತಿಯೋತ್ಸ್ಯಾಮಿ ಸಂಯುಗೇ |

ಅನ್ವಭ್ಯಾಶಂ ಗತಾನ್ ಸರ್ವಾನ್ ನಿಹನಿಷ್ಯಾಮಿ ಭಾರತ ॥16॥
ನಾನು ಎದ್ದು ಬಂದು ಯುದ್ಧದಲ್ಲಿ ನಿಮ್ಮೆಲ್ಲರ ಜೊತೆಗೆ ಪ್ರತಿಯುದ್ಧವನ್ನು ಮಾಡುವೆನು. ಭರತಕುಲೋದ್ಭವನೇ! ನನಗೆ ಎದುರಾಗಿ ಬರುವವರನ್ನೆಲ್ಲಾ ಕೊಂದು ಹಾಕುವೆನು.
ಅದ್ಯಃ ವಃ ಸರಥಾನ್ ಸಾಶ್ವಾನ್ ಅಶಸೊತ್ರೇ ವಿರಥೋಽಪಿ ಸನ್ |
ನಕ್ಷತ್ರಾಣೀವ ಸರ್ವಾಣಿ ಸವಿತಾ ರಾತ್ರಿಸಂಕ್ಷಯೇ ॥17॥
ತೇಜಸಾ ನಾಶಯಿಷ್ಯಾಮಿ ಸ್ಥಿರೀಭವತ ಪಾಂಡವಾಃ ॥18॥
ಇಂದು ನನ್ನ ಬಳಿ ಶಸ್ತ್ರ-ರಥಗಳು ಇಲ್ಲವಾದರೂ ರಾತ್ರಿ ಕಳೆದು ಬೆಳಗಾದಾಗ ಒಬ್ಬನೇ ಸೂರ್ಯನು ತನ್ನ ತೇಜಸ್ಸಿನಿಂದ ಎಲ್ಲಾ ನಕ್ಷತ್ರಗಳನ್ನು ಕಳೆಗುಂದಿಸುವಂತೆ, ಅಶ್ವ-ರಥಯುಕ್ತರಾದ ನಿಮ್ಮೆಲ್ಲರನ್ನೂ ನನ್ನ ತೇಜಸ್ಸಿನಿಂದ ನಾಶಮಾಡುತ್ತೇನೆ. ಪಾಂಡವರೇ ಯುದ್ಧಕ್ಕೆ ಸನ್ನದ್ಧರಾಗಿರಿ.
ಅದ್ಯಾನೃಣ್ಯಂ ಗಮಿಷ್ಯಾಮಿ ಕ್ಷತ್ರಿಯಾಣಾಂ ಯಶಸ್ವಿನಾಮ್ |
ಬಾಹ್ಲೀಕದ್ರೋಣಭೀಷ್ಮಾಭ್ಯಾಂ ಕರ್ಣಸ್ಯ ಚ ಮಹಾತ್ಮನಃ ॥19॥
ಜಯದ್ರಥಸ್ಯ ಶೂರಸ್ಯ ಭಗದತ್ತಸ್ಯ ಚೋಭಯೋಃ |
ಮದ್ರರಾಜಸ್ಯ ಶಲ್ಯಸ್ಯ ಭೂರಿಶ್ರವಸ ಏವ ಚ ॥20॥
ಭ್ರಾತೃಣಾಂ ಭರತಶ್ರೇಷ್ಠ ಶಕುನೇಃ ಸೌಬಲಸ್ಯ ಚ |
ಮಿತ್ರಾಣಾಂ ಸುಹೃದಾಂ ಚೈವ ಬಾಂಧವಾನಾಂ ಚ ಸರ್ವಶಃ ॥21॥
ಆನೃಣ್ಯಮದ್ಯ ಯಾಸ್ಯಾಮಿ ಹತ್ವಾ ತ್ವಾಂ ಭ್ರಾತೃಭಿಃ ಸಹ ॥22॥
ಕೀರ್ತಿವಂತರಾದ ಬಾಹ್ಲೀಕ, ದ್ರೋಣ, ಭೀಷ್ಮ, ಮಹಾತ್ಮನಾದ ಕರ್ಣ, ಶೂರರಾದ ಜಯದ್ರಥ ಮತ್ತು ಭಗದತ್ತ, ಮದ್ರರಾಜ ಶಲ್ಯ, ಭೂರಿಶ್ರವಸ್ಸು, ನನ್ನ ತಮ್ಮಂದಿರು, ಶಕುನಿ, ನನ್ನ ಮಿತ್ರರು, ಸ್ನೇಹಿತರು, ಬಂಧುಗಳು ಇವರೆಲ್ಲರ ಋಣವನ್ನು ಪರಿಹರಿಸಿಕೊಳ್ಳುತ್ತೇನೆ. ನಿನ್ನನ್ನೂ ನಿನ್ನ ಸಹೋದರರನ್ನೂ ಕೊಂದು ಋಣಮುಕ್ತನು ಆಗುತ್ತೇನೆ.
ಸಂಜಯಃ
ಏವಮುಕತ್ವ ತು ವಚನಂ ವಿರರಾಮ ನರಾಧಿಪಃ |
ಸಲಿಲಾಂತರ್ಗತಃ ಶ್ರೀಮಾನ್ ಪುತ್ರೋ ದುರ್ಯೋಧನಸ್ತವ ॥23॥
ಸಂಜಯ ನೀರೊಳಗಿದ್ದ ನಿನ್ನ ಮಗ ದುರ್ಯೋಧನನು ಹೀಗೆ ಹೇಳಿ ತನ್ನ ಮಾತನ್ನು ನಿಲ್ಲಿಸಿದನು.
ಯುಧಿಷ್ಠಿರಃ
ದಿಷ್ಟ್ಯಾ ತ್ವಮಪಿ ಜಾನೀಷೇ ಕ್ಷತ್ರಧರ್ಮಂ ಸುಯೋಧನ |
ದಿಷ್ಟ್ಯಾ ತೇ ವರ್ತತೇ ಬುದ್ಧಿರ್ಯುದ್ಧಾಯೈವ ಮಹಾಭುಜ ॥24॥
ಯುಧಿಷ್ಠಿರ ಸುಯೋಧನ! ಅದೃಷ್ಟವಶಾತ್ ನೀನೂ ಕೂಡ ಕ್ಷತ್ರಿಯಧರ್ಮವನ್ನು ತಿಳಿದಿದ್ದಿ. ಮಹಾಭುಜನೇ! ಅದೃಷ್ಟವಶಾತ್ ನಿನಗೂ ಯುದ್ಧದಲ್ಲಿ ನಿಶ್ಚಯವು ಉಂಟಾಗಿದೆ.
ದಿಷ್ಟ್ಯಾ ಶೂರೋಽಸಿ ಗಾಂಧಾರೇ ದಿಷ್ಟ್ಯಾ ಜಾನಾಸಿ ಸಂಗರಮ್ |
ಯಸ್ತ್ವಮೇಕೋಽದ್ಯ ನಃ ಸರ್ವಾನ್ ಸಂಯುಗೇ ಯೋದ್ಧುಮಿಚ್ಛಸಿ ॥
ದುರ್ಯೋಧನನೇ! ಅದೃಷ್ಟವಶಾತ್ ನೀನು ಶೂರನಾಗಿರುವಿ. ಅದೃಷ್ಟವಶಾತ್ ನೀನು ಯುದ್ಧದ ಬಗ್ಗೆ ತಿಳಿದಿರುವಿ. ಏಕೆಂದರೆ ಏಕಾಕಿಯಾದ ನೀನು ನಮ್ಮೆಲ್ಲರೊಡನೆ ಯುದ್ಧದಲ್ಲಿ ಕಾದಾಡಲು ಬಯಸುತ್ತಿರುವಿ.
ಏಕ ಏಕೇನ ಸಂಗಮ್ಯ ಯತ್ತೇ ಸಮ್ಮತಮಾಯುಧಮ್ |
ತತ್ ತ್ವಮಾದಾಯ ಯುಧ್ಯಸ್ವ ಪ್ರೇಕ್ಷಕಾಸ್ತೇ ವಯಂ ಸ್ಥಿತಾಃ ॥26॥
ನಿನಗೆ ಯಾವ ಆಯುಧದಲ್ಲಿ ಒಪ್ಪಿಗೆ ಇದೆಯೋ, ಆ ಆಯುಧವನ್ನು ಹಿಡಿದು ಒಬ್ಬೊಬ್ಬನ ಜೊತೆಗೆ ಕಾದಾಡು. ಉಳಿದ ನಾವು ಪ್ರೇಕ್ಷಕರಾಗಿರುತ್ತೇವೆ.
ಅಯಮಿಷ್ಟಂ ಚ ತೇ ಕಾಮಂ ವೀರ ಭೂಯೋ ದದಾಮ್ಯಹಮ್ |
ಹನ್ಯೈಕಂ ಭವ ನೋ ರಾಜಾ ಹತೋ ವಾ ಸ್ವರ್ಗಮಾಪ್ನುಹಿ ॥27॥
ವೀರನೇ! ನಾನು ನಿನಗೆ ಇಷ್ಟವಾದ ಇನ್ನೊಂದು ಕಾಮನೆಯನ್ನೂ ಕೊಡುತ್ತೇನೆ. ನಮ್ಮಲ್ಲಿ ಯಾರಾದರೊಬ್ಬರನ್ನು ಕೊಂದರೂ ನೀನು ರಾಜನಾಗುವಿ ಅಥವಾ ಸತ್ತು ವೀರಸ್ವರ್ಗವನ್ನು ಹೊಂದುವಿ.
ದುರ್ಯೋಧನಃ
ಏಕಶ್ಚೇದ್ ಯೋದ್ಧುಮಾಕ್ರಂದೇ ವರೋಽದ್ಯ ಮಮ ದೀಯತಾಮ್ |
ಆಯುಧಾನಾಮಿಯಂ ಚಾಪಿ ಮತಾ ಮೇ ಸತತಂ ಗದಾ ॥28॥
ದುರ್ಯೋಧನ ನಾನು ಒಬ್ಬಂಟಿಯಾಗಿ ಯುದ್ಧ ಮಾಡುವ ವರವನ್ನು ಕೊಡುವುದಾದರೆ ಆಯುಧಗಳಲ್ಲಿ ಈ ಗದೆಯು ನನಗೆ ಸಮ್ಮತವಾಗಿದೆ.
ಭ್ರಾತೃಣಾಂ ಭವತಾಮೇಕಃ ಶಕ್ಯಂ ಮಾಂ ಯೋ ಹಿ ಮನ್ಯತೇ |
ಪದಾತಿರ್ಗದಯಾ ಸಂಖ್ಯೇ ಸ ಯುಧ್ಯತು ಮಯಾ ಸಹ ॥29॥
ಅಣ್ಣ-ತಮ್ಮಂದಿರಾದ ನಿಮ್ಮಲ್ಲಿ ಯಾರಿಗಾದರೂ ನನ್ನ ಜೊತೆಗೆ ಕಾದಾಡುವ ಸಾಮರ್ಥ್ಯ ಇದ್ದರೆ ಅಂತಹವನು ಕಾಲಲ್ಲಿ ನಿಂತುಕೊಂಡು ನನ್ನೊಡನೆ ಯುದ್ಧವನ್ನು ಮಾಡಲಿ.
ವೃತ್ತಾನಿ ರಥಯುದ್ಧಾನಿ ವಿಚಿತ್ರಾಣಿ ಪದೇ ಪದೇ |

ಇದಂ ತ್ವೇಕಂ ಗದಾಯುದ್ಧಂ ಭವತ್ವದ್ಯಾದ್ಭುತಂ ಮಹತ್ ॥30॥
ವಿಚಿತ್ರವಾದ ರಥಯುದ್ಧಗಳು ಹೆಜ್ಜೆ ಹೆಜ್ಜೆಗೆ ಹಿಂದೆ ನಡೆದಿದ್ದವು. ಇದೊಂದು ಅದ್ಭುತವಾದ ಗದಾಯುದ್ಧವು ಇವತ್ತು ನಡೆಯಲಿ.
ಅರ್ಥಾನಾಮಪಿ ಪರ್ಯಾಯಂ ಭೋಕ್ತುಮಿಚ್ಛಂತಿ ಮಾನವಾಃ।
ಯುದ್ಧಾನಾಮಪಿ ಪರ್ಯಾಯೋ ಭವತ್ವನುಮತೇ ತವ ॥31॥
ವಿಷಯಪದಾರ್ಥಗಳನ್ನು ಭೋಗಿಸುವಾಗ ಮನುಷ್ಯನು ಭಿನ್ನಭಿನ್ನ ವಿಷಯಪದಾರ್ಥಗಳನ್ನು ಬಯಸುತ್ತಾನೆ. ಹಾಗೆಯೇ ನಿನ್ನ ಅನುಮತಿಯ ಮೇರೆಗೆ ಯುದ್ಧದಲ್ಲಿಯೂ ಬೇರೆ ಬೇರೆ ರೀತಿಯ ಯುದ್ಧಗಳು ನಡೆಯಲಿ.
ಗದಯಾ ತ್ವಾಂ ಮಹಾಬಾಹೋ ವಿಜೇಷ್ಯಾಮಿ ಸಹಾನುಜಮ್।
ಪಾಂಚಾಲಾನ್ ಸೃಂಜಯಾಂಶ್ಚೈವ ಯೇ ಚಾನ್ಯೇ ತವ ಬಾಂಧವಾಃ ॥
ಗದೆಯಿಂದಲೇ ನಿನ್ನನ್ನೂ, ನಿನ್ನ ತಮ್ಮಂದಿರನ್ನೂ, ಪಾಂಚಾಲರನ್ನೂ, ಸೃಂಜಯರನ್ನೂ ಹಾಗೂ ನಿನ್ನ ಬಾಂಧವರು ಯಾರಿದ್ದಾರೆಯೋ ಅವರೆಲ್ಲರನ್ನೂ ಗೆಲ್ಲುತ್ತೇನೆ.
ತಿಷ್ಠಂತು ಪ್ರೇಕ್ಷಕಾಃ ಸರ್ವೇ ಗದಾಯುದ್ಧಂ ಪ್ರವರ್ತತಾಮ್।
ನ ಹಿ ಮೇ ಸಂಭ್ರಮೋ ಜಾತು ಶಕ್ರಾದಪಿ ಯುಧಿಷ್ಠಿರ ॥33॥
ಎಲ್ಲರೂ ಪ್ರೇಕ್ಷಕರಾಗಲಿ. ಗದಾಯುದ್ಧವು ನಡೆಯಲಿ. ಯುಧಿಷ್ಠಿರನೇ! ಇಂದ್ರನು ಬಂದರೂ ನಾನು ಕಳವಳಕ್ಕೆ ಒಳಗಾಗುವುದಿಲ್ಲ.
ಶ್ರೀಭೀಮಸೇನಃ
ಉತ್ತಿಷ್ಠೋತ್ತಿಷ್ಠ ಗಾಂಧಾರೇ ಮಾಂ ಯೋಧಯ ಸುಯೋಧನ।
ಏಕ ಏಕೇನ ಸಂಗಮ್ಯ ಗದಯಾ ಸಂಯುಗೇ ಬಲೀ ॥34॥
ಶ್ರೀಭೀಮಸೇನ ಸುಯೋಧನನೇ! ಏಳು! ಎದ್ದೇಳು! ನನ್ನೊಡನೆ ಯುದ್ಧಮಾಡು. ಬಲಶಾಲಿಯಾದ ನೀನು ಗದೆಯನ್ನು ಹಿಡಿದು ಒಬ್ಬನ ಜೊತೆಗೆ ಕಾದಾಡು.
ಪುರುಷೋ ಭವ ಗಾಂಧಾರೇ ಯುಧ್ಯಸ್ವ ಸುಸಮಾಹಿತಃ।
ಅದ್ಯ ತೇ ಜೀವಿತಂ ನಾಸ್ತಿ ಯದಿಂದ್ರೋಽಪಿ ತವಾಶ್ರಯಃ ॥35॥
ಮನಸ್ಸನ್ನು ದೃಢಪಡಿಸಿಕೊಂಡು ಪೌರುಷದಿಂದ ಕಾದಾಡು. ಇಂದ್ರನನ್ನು ಆಶ್ರಯಿಸಿದರೂ ನೀನಿವತ್ತು ಬದುಕುವುದಿಲ್ಲ.
ಸಂಜಯಃ
ಏತತ್ ಸ ನರಶಾರ್ದೂಲೋ ನಾಮೃಷ್ಯತ ತವಾತ್ಮಜಃ।
ಸಲಿಲಾಂತರ್ಗತಃ ಶ್ವಭ್ರೇ ಮಹಾನಾಗ ಇವ ಶ್ವಸನ್ ॥36॥
ಸಂಜಯ ನರೋತ್ತಮನಾದ ನಿನ್ನ ಮಗ ದುರ್ಯೋಧನನು ಇದನ್ನು ಸಹಿಸಲಿಲ್ಲ. ಬಿಲದೊಳಗೆ ಸರ್ಪವು ಬುಸುಗುಟ್ಟುವಂತೆ ನೀರಿನೊಳಗಿಂದಲೇ ಅವನು ಉಸಿರು ಬಿಡುತ್ತಿದ್ದನು.
ತತೋಽಸೌ ವಾಕ್ಪ್ರತೋದೇನ ತುದ್ಯಮಾನಃ ಪುನಃ ಪುನಃ।
ವಾಚಂ ನ ಮಮೃಷೇ ಧೀಮಾನ್ ಉತ್ತಮಾಶ್ವಃ ಕಶಾಮಿವ ॥37॥
ಮಾತೆಂಬ ಚಾವಟಿಯಿಂದ ಮತ್ತೆ ಮತ್ತೆ ಹೊಡೆಸಿಕೊಂಡ ಬುದ್ಧಿವಂತನಾದ ದುರ್ಯೋಧನನು, ಚಾಟಿಯ ಏಟನ್ನು ಒಳ್ಳೆಯ ಜಾತಿಯ ಅಶ್ವವು ಸಹಿಸದೆ ಇರುವಂತೆ, ಭೀಮನ ಮಾತುಗಳನ್ನು ಸಹಿಸದಾದನು.
ಸಂಕ್ಷೋಭ್ಯ ಸಲಿಲಂ ವೇಗಾದ್ ಗದಾಮಾದಾಯ ವೀರ್ಯವಾನ್।
ಅದ್ರಿಸಾರಮಯೀಂ ಗುರ್ವೀಂ ಜಾತರೂಪಪರಿಷ್ಕೃತಾಮ್ ॥38॥
ಅಂತರ್ಜಲಾತ್ ಸಮುತ್ತಸ್ಥೌ ನಾಗೇಂದ್ರ ಇವ ನಿಃಶ್ವಸನ್ ॥39॥
ವೀರನಾದ ದುರ್ಯೋಧನನು ಆನೆಯಂತೆ ಉಸಿರುಬಿಡುತ್ತಾ ನೀರನ್ನು ವೇಗವಾಗಿ ಅಲ್ಲೋಲಕಲ್ಲೋಲಪಡಿಸಿ ಗದೆಯನ್ನು ಹಿಡಿದುಕೊಂಡು ನೀರಿನ ಒಳಗಿನಿಂದ ಹೊರಬಂದನು. ಆ ಗದೆಯು ಬಂಗಾರದ ಅಲಂಕಾರಗಳಿಂದ ಭೂಷಿತವಾಗಿತ್ತು. ಪರ್ವತದಂತೆ ಬಹಳ ಭಾರವಾಗಿತ್ತು.
ಸ ಹಿತ್ವಾ ಸ್ತಂಭಿತಂ ತೋಯಂ ಸ್ಕಂದೇ ಕೃತ್ವಾಽಽಯಸೀಂ ಗದಾಮ್।
ಉದತಿಷ್ಠತ ಪುತ್ರಸ್ತೇ ಪ್ರತಪನ್ ರಶ್ಮಿಮಾನಿವ ॥40॥
ಅಲ್ಲಿ ತನಕ ಸ್ತಂಭನಗೊಳಿಸಿದ ನೀರನ್ನು ಬಿಟ್ಟು ಹೆಗಲ ಮೇಲೆ ಭಾರವಾದ ಕಬ್ಬಿಣದ ಗದೆಯನ್ನು ಇಟ್ಟುಕೊಂಡು ನಿನ್ನ ಮಗನು ಸೂರ್ಯನಂತೆ ತಾಪವನ್ನು ಉಂಟುಮಾಡುತ್ತ ಮೇಲೆದ್ದು ಬಂದನು.
ತತಃ ಶೈಕ್ಯಾಯಸೀಂ ಗುರ್ವೀಂ ಕಾಂಚನಾಂಗದಭೂಷಣಾಮ್।
ಗದಾಂ ಪರಾಮೃಶನ್ ಧೀಮಾನ್ ಧಾರ್ತರಾಷ್ಟ್ರೋ ಮಹಾಯಶಾಃ ॥
ಲೋಹದಿಂದ ನಿರ್ಮಿತವಾದ, ಬಂಗಾರದ ಅಲಂಕಾರಗಳುಳ್ಳ, ಭಾರವಾದ ಗದೆಯನ್ನು ಸರಿಪಡಿಸಿಕೊಂಡು ಬುದ್ಧಿವಂತನಾದ, ಮಹಾಯಶೋವಂತನಾದ ದುರ್ಯೋಧನನು ಮೇಲೆದ್ದು ಬಂದನು.
ಗದಾಹಸ್ತಂ ತು ತಂ ದೃಷ್ಟ್ವಾ ಸಶೃಂಗಮಿವ ಪರ್ವತಮ್।
ಪ್ರಜಾನಾಮಿವ ಸಂಕ್ರುದ್ಧಂ ಶೂಲಪಾಣಿಮವಸ್ಥಿತಮ್ ॥42॥
ಸಗದೋ ಭಾರತೋ ಭಾತಿ ಪ್ರತಪನ್ ಭಾಸ್ಕರೋ ಯಥಾ ॥43॥
ಜೀವರ ಮೇಲೆ ಕೋಪಗೊಂಡ ಶೂಲಧಾರಿಯಾದ ರುದ್ರನಂತೆ ದುರ್ಯೋಧನನು ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಬಂದಾಗ ಶಿಖರದಿಂದ ಕೂಡಿದ ಪರ್ವತದಂತೆ ಕಾಣಿಸುತ್ತಿದ್ದನು. ಗದಾಸಹಿತನಾದ ದುರ್ಯೋಧನನು ಸುಡುತ್ತಿರುವ ಸೂರ್ಯನಂತೆ ಶೋಭಿಸುತ್ತಿದ್ದನು.

ತಮುತ್ತೀರ್ಣಂ ಮಹಾಬಾಹುಂ ಗದಾಹಸ್ತಮರಿಂದಮಮ್ |
ಮೇನಿರೇ ಸರ್ವಭೂತಾನಿ ದಂಡಹಸ್ತಮಿವಾಂತಕಮ್ ॥44॥
ನೀರಿನಿಂದ ಮೇಲೆದ್ದ, ಶತ್ರುಸಂಹಾರಕನಾದ, ಗದಾಪಾಣಿಯಾದ ಮಹಾಬಾಹು ದುರ್ಯೋಧನನನ್ನು ನೋಡಿದ ಎಲ್ಲರೂ ದಂಡವನ್ನು ಹಿಡಿದಿರುವ ಯಮನೆಂದು ತಿಳಿದರು.
ವಜ್ರಹಸ್ತಂ ಯಥಾ ಶಕ್ರಂ ಶೂಲಹಸ್ತಂ ಯಥಾ ಹರಮ್ |
ದದೃಶುಃ ಸರ್ವಪಾಂಚಾಲಾಃ ಪುತ್ರಂ ತವ ಜನಾಧಿಪ ॥45॥
ರಾಜನೇ! ಎಲ್ಲಾ ಪಾಂಚಾಲರು ವಜ್ರಧಾರಿಯಾದ ಇಂದ್ರನಂತೆ ಇರುವ, ಶೂಲಧಾರಿಯಾದ ರುದ್ರನಂತಿರುವ ನಿನ್ನ ಮಗನನ್ನು ನೋಡಿದರು.
ತಮುತ್ತೀರ್ಣಂ ತು ಸಂಪ್ರೇಕ್ಷ್ಯ ಸಮಹೃಷ್ಯಂತ ಸರ್ವಶಃ |
ಪಾಂಚಾಲಾಃ ಪಾಂಡವೇಯಾಶ್ಚ ತೇಽನ್ಯೋನ್ಯಸ್ಯ ತಳಂ ದದುಃ ॥46॥
ದುರ್ಯೋಧನನು ಎದ್ದು ಬಂದಾಗ ಎಲ್ಲರೂ ಸಂತೋಷಪಟ್ಟರು. ಪಾಂಚಾಲರು ಮತ್ತು ಪಾಂಡವರು ಪರಸ್ಪರವಾಗಿ ಕೈಗಳಿಂದ ಚಪ್ಪಾಳೆ ತಟ್ಟಿದರು.
ಅಪಹಾಸಂ ತು ತಂ ಮತ್ವಾ ಪುತ್ರೋ ದುರ್ಯೋಧನಸ್ತವ |
ಉದ್ವೃತ್ಯ ನಯನೇ ಕ್ರೂರೇ ದಿಧಕ್ಷುರಿವ ಪಾಂಡವಾನ್ ॥47॥
ತ್ರಿಶಿಖಾಂ ಭ್ರುಕುಟೀಂ ಕೃತ್ವಾ ಸಂದಷ್ಟದಶನಚ್ಛದಃ |
ಪ್ರತ್ಯುವಾಚ ತತಸ್ತಾನ್ ವೈ ಪಾಂಡವಾನ್ ಸಹಕೇಶವಾನ್ ॥48॥
ಇದನ್ನು ನೋಡಿದ ನಿನ್ನ ಮಗನು `ಇವರು ನನ್ನನ್ನು ಅಪಹಾಸ ಮಾಡುತ್ತಿದ್ದಾರೆ' ಎಂದು ತಿಳಿದು ತನ್ನ ಕ್ರೂರವಾದ ದೃಷ್ಟಿಯಿಂದ ಪಾಂಡವರನ್ನು ಸುಟ್ಟುಬಿಡುವಂತೆ ಹುಬ್ಬುಗಂಟಿಕ್ಕಿ, ಹಲ್ಲುಗಳನ್ನು ಕಡಿಯುತ್ತಾ ಕೃಷ್ಣಸಮೇತರಾದ ಪಾಂಡವರಿಗೆ ಪ್ರತ್ಯುತ್ತರವನ್ನು ಕೊಡುತ್ತಾನೆ.
ದುರ್ಯೋಧನಃ
ಅಪಹಾಸಸ್ಯ ವೋಽದ್ಯಾಸ್ಯ ಪ್ರತಿಮೋಕ್ತಾಸ್ಮಿ ಪಾಂಡವಾಃ |
ಗಮಿಷ್ಯಥ ಹತಾಃ ಸದ್ಯಃ ಸಪಾಂಚಾಲಾ ಯಮಕ್ಷಯಮ್ ॥49॥
ದುರ್ಯೋಧನ ಪಾಂಡವರೇ! ಇವತ್ತು ಈ ಅಪಹಾಸ್ಯವನ್ನು ನಿಲ್ಲಿಸುವೆನು. ಪಾಂಚಾಲರನ್ನು ಸೇರಿಸಿಕೊಂಡು ನನ್ನಿಂದ ಹತರಾದ ನೀವು ಕೂಡಲೇ ಯಮನ ಸನ್ನಿಧಾನಕ್ಕೆ ಹೋಗುವಿರಿ.
ಸಂಜಯಃ
ಉತ್ಥಿತಸ್ತು ಜಲಾತ್ ತಸ್ಮಾದ್ ಯೋದ್ಧುಕಾಮಃ ಸುತಸ್ತವ |
ಅತಿಷ್ಠಚ್ಚ ಗದಾಪಾಣೀ ರುಧಿರೇಣ ಸಮುಕ್ಷಿತಃ ॥50॥
ಸಂಜಯ ನೀರಿನಿಂದ ಮೇಲೆದ್ದ ನಿನ್ನ ಮಗನು ಮೈಯೆಲ್ಲ ರಕ್ತದಿಂದ ತೋಯ್ದವನಾಗಿ, ಯುದ್ಧಮಾಡುವ ಇಚ್ಛೆಯಿಂದ ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ನಿಂತನು.
ತಸ್ಯ ಶೋಣಿತದಿಗ್ಧಸ್ಯ ಸಲಿಲೇನ ಸಮುಕ್ಷಿತಮ್ |
ಶರೀರಂ ತು ತದಾ ಭಾತಿ ಸ್ರವನ್ನಿವ ಮಹೀಧರಃ ॥51॥
ಗಾಯಗೊಂಡ ದುರ್ಯೋಧನನ ಗಾಯಗಳಿಂದ ನೀರು ಸುರಿಯುತ್ತಿದ್ದಾಗ ಅವನ ಶರೀರವು ಗೈರಿಕಾದಿ ಧಾತುಗಳನ್ನು ಸುರಿಸುತ್ತಿರುವ ಪರ್ವತದ ಹಾಗೆ ಕಾಣಿಸುತ್ತಿತ್ತು.
ತಮುದ್ಯತಗದಂ ವೀರಂ ಮೇನಿರೇ ತತ್ರ ಪಾಂಡವಾಃ |
ವೈವಸ್ವತಮಿವ ಕ್ರುದ್ಧಂ ಶೂಲಪಾಣಿಮವಸ್ಥಿತಮ್ ॥52॥
ಗದೆಯನ್ನೆತ್ತಿಕೊಂಡ ವೀರನಾದ ದುರ್ಯೋಧನನನ್ನು ಪಾಂಡವರು, ಶೂಲವನ್ನು ಹಿಡಿದುಕೊಂಡ ಕ್ರುದ್ಧನಾದ ಯಮನಂತೆ ತಿಳಿದರು.
ಸ ಮೇಘನಿನದೋ ಹರ್ಷಾದ್ ವಿನದನ್ನಿವ ಗೋವೃಷಃ |
ಆಜುಹಾವ ತದಾ ಪಾರ್ಥಾನ್ ಗದಯಾ ಭೀಮವಿಕ್ರಮಃ ॥53॥
ದುರ್ಯೋಧನನು ಸಂತೋಷದಿಂದ ಮೋಡದಂತೆ ಗುಡುಗುತ್ತಿದ್ದನು. ಎತ್ತಿನ ಹಾಗೆ ಗುಟುರು ಹಾಕುತ್ತಿದ್ದನು. ಭಯಂಕರ ಪರಾಕ್ರಮವುಳ್ಳ ದುರ್ಯೋಧನನು ಗದೆಯನ್ನು ತೋರಿಸಿ ಪಾಂಡವರನ್ನು ಯುದ್ಧಕ್ಕೆ ಕರೆದನು.
ದುರ್ಯೋಧನಃ
ಏಕೈಕಶಶ್ಚ ಮಾಂ ಯೂಯಂ ಯೋಧಯಧ್ವಂ ಯುಧಿಷ್ಠಿರ |
ನ ಹ್ಯೇಕೋ ಬಹುಭಿರ್ನ್ಯಾಯ್ಯಂ ವೀರ ಯೋಧಯಿತುಂ ರಣೇ ॥54॥
ದುರ್ಯೋಧನ ಧರ್ಮರಾಜನೇ! ನೀವು ನನ್ನೊಡನೆ ಒಬ್ಬೊಬ್ಬರಾಗಿ ಯುದ್ಧವನ್ನು ಮಾಡಿ. ಯುದ್ಧದಲ್ಲಿ ಒಬ್ಬನು ಅನೇಕ ಜನರೊಡನೆ ಕಾದಾಡುವುದು ಯುಕ್ತಿಯುಕ್ತವಲ್ಲ.
ನ್ಯಸ್ತವರ್ಮಾ ವಿಶೇಷೇಣ ಶ್ರಾಂತಶ್ಚಾಪ್ಸು ಪರಿಪ್ಲುತಃ |
ಭೃಶಂ ವಿಕ್ಷತಗಾತ್ರಶ್ಚ ಹತವಾಹನಸೈನಿಕಃ ॥55॥
ನಾನು ಕವಚವನ್ನು ಕಳೆದುಕೊಂಡಿದ್ದೇನೆ. ಬಹಳವಾಗಿ ಆಯಾಸಗೊಂಡಿದ್ದರಿಂದ ನೀರಲ್ಲಿ ಇದ್ದೆ. ನನ್ನ ಶರೀರವು ಬಹಳವಾಗಿ ಗಾಯಗೊಂಡಿದೆ. ನನ್ನ ವಾಹನಗಳು, ಸಾರಥಿ ಸತ್ತುಹೋಗಿವೆ.

ಅವಶ್ಯಮೇವ ಯೋದ್ಧವ್ಯಂ ಸರ್ವೈರೇವ ಮಹಾರಥ |
ಯುಕ್ತಂ ನ ಯುಕ್ತಮಿತ್ಯೇತತ್ ವೇತ್ಸಿ ತ್ವಂ ಚೈವ ಸರ್ವದಾ ॥56॥
ಮಹಾರಥನೇ! ಎಲ್ಲರೊಡನೆ ಅವಶ್ಯವಾಗಿ ಯುದ್ಧಮಾಡಲೇಬೇಕೆಂಬುದರಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ನೀನೂ ಕೂಡ ತಿಳಿದುಕೊಂಡಿರುವಿ.
ಯುಧಿಷ್ಠಿರಃ
ಮಾ ಭೂದಿಯಂ ತವ ಪ್ರಜ್ಞಾ ಕಥಮೇಕಂ ಸುಯೋಧನ |
ಯದಾಽಭಿಮನ್ಯುಂ ಬಹವೋ ಯುಧಿ ಜಘ್ನುರ್ಮಹಾರಥಾಃ ॥57॥
ಯುಧಿಷ್ಠಿರ ಸುಯೋಧನನೇ! ಯುದ್ಧದಲ್ಲಿ ಅನೇಕ ಮಹಾರಥರು ಒಬ್ಬನೇ ಅಭಿಮನ್ಯುವನ್ನು ಕೊಲ್ಲುವಾಗ ನಿನಗೆ ಈ ಪ್ರಜ್ಞೆಯು ಯಾಕೆ ಉಂಟಾಗಲಿಲ್ಲ?
ಕ್ಷತ್ರಧರ್ಮಂ ಭೃಶಂ ಕ್ರೂರಂ ನಿರಪೇಕ್ಷಂ ಸುನಿರ್ಘೃಣಮ್ |
ಅನ್ಯಥಾ ತು ಕಥಂ ಹನ್ಯುರಭಿಮನ್ಯುಂ ತಥಾಗತಮ್ ॥58॥
ವಸ್ತುತಃ ಕ್ಷತ್ರಿಯಧರ್ಮವು ಬಹಳವಾಗಿ ಕ್ರೂರವಾದುದು. ಯಾವುದನ್ನೂ ಅಪೇಕ್ಷಿಸುವುದಿಲ್ಲ. ದಯೆಯಿಲ್ಲದ್ದು. ಇಲ್ಲದೇ ಹೋಗಿದ್ದರೆ ಸುಮ್ಮಸುಮ್ಮನೆ ಅಭಿಮನ್ಯುವನ್ನು ಹೇಗೆ ಕೊಂದರು?
ಸರ್ವೇ ಭವಂತೋ ಧರ್ಮಜ್ಞಾಃ ಸರ್ವೇ ಶೂರಾಸ್ತನುತ್ಯಜಃ |
ನ್ಯಾಯೇನ ಯುಧ್ಯತಾಂ ಪ್ರೋಕ್ತಾ ಶಕ್ರಲೋಕಗತಿಃ ಪರಾ ॥59॥
ನೀವೆಲ್ಲರೂ ಧರ್ಮವನ್ನು ತಿಳಿದವರು, ಶೂರರು. ಯುದ್ಧದಲ್ಲಿ ಶರೀರವನ್ನು ತ್ಯಾಗಮಾಡಲೂ ಸಿದ್ಧರಾದವರು. ಅಂತಹ ನೀವು ಏಕಾಕಿ ಅಭಿಮನ್ಯುವನ್ನು ಹೇಗೆ ಕೊಂದಿರಿ? ನ್ಯಾಯದಿಂದ ಹೋರಾಡುವವರಿಗೇನೆ ಇಂದ್ರನ ಸ್ವರ್ಗವು ಸಿಗುವುದೆಂದು ಶಾಸ್ತ್ರವು ಹೇಳಿದೆ.
ಯದ್ಯೇಕಸ್ತು ನ ಹಂತವ್ಯೋ ಬಹುಭಿರ್ಧರ್ಮ ಏವ ತು |
ತದಾಽಭಿಮನ್ಯುಂ ಬಹವೋ ನಿಜಘ್ನುಸ್ತ್ವನ್ಮತೇ ಕಥಮ್ ॥60॥
ಒಂದು ಪಕ್ಷದಲ್ಲಿ ಒಬ್ಬನನ್ನು ಅನೇಕರು ಕೊಲ್ಲಬಾರದು ಎಂಬುದು ಧರ್ಮವೆಂದಾದರೆ ಅನೇಕರು ಒಬ್ಬಂಟಿಯಾದ ಅಭಿಮನ್ಯುವನ್ನು ಕೊಂದರು ಎಂಬುದು ನಿಮ್ಮ ಮತದಲ್ಲಿ ಹೇಗೆ ಯುಕ್ತವಾಗುತ್ತದೆ?
ಸರ್ವೋ ವಿಮೃಶತೇ ಜಂತುಃ ಕೃಚ್ಛ್ರಸ್ಥೋ ಧರ್ಮದರ್ಶನಮ್ |
ಯದಸೌ ಪಿಹಿತಂ ದ್ವಾರಂ ಪರಲೋಕಸ್ಯ ಪಶ್ಯತಿ ॥61॥
ತಾವು ಕಷ್ಟದಲ್ಲಿ ಇದ್ದಾಗ ಎಲ್ಲಾ ಪ್ರಾಣಿಗಳೂ ಧರ್ಮದ ವಿಚಾರವನ್ನು ವಿಮರ್ಶಿಸುತ್ತವೆ. ಧರ್ಮವನ್ನು ಸಹಿಸದಿರುವುದು ಪರಲೋಕದ ದ್ವಾರದ ಮುಚ್ಚುವಿಕೆಗೆ ಕಾರಣವಾಗುತ್ತದೆ.
ಆಮುಂಚ ಕವಚಂ ವೀರ ಮೂರ್ಧಜಾನ್ ಯಮಯಸ್ವ ಚ |
ಯಚ್ಚಾನ್ಯದಪಿ ತೇ ನಾಸ್ತಿ ತದಪ್ಯಾಚಕ್ಷ್ವ ಭಾರತ॥62॥
ವೀರನೇ, ಭರತಕುಲೋದ್ಭವನೇ! ಕವಚವನ್ನು ಧರಿಸು. ಕೇಶಬಂಧವನ್ನು ಮಾಡಿಕೊ! ಯುದ್ಧಕ್ಕೆ ಬೇಕಾದ ಸಾಮಗ್ರಿಗಳು ನಿನ್ನ ಬಳಿ ಇಲ್ಲವಾದರೆ ನಮ್ಮಿಂದ ಕೇಳಿ ಪಡೆದುಕೊ.
ಇದಮೇಕಂ ಚ ತೇ ಕಾಮಂ ವೀರ ಭೂಯೋ ದದಾಮ್ಯಹಮ್ ॥63॥
ನಿನಗೆ ಈ ಮೂರನೆಯ ವರವನ್ನು ಮತ್ತೆ ಕೊಡುತ್ತಿದ್ದೇನೆ.
ಪಂಚಾನಾಂ ಪಾಂಡವೇಯಾನಾಂ ಯೇನ ಯೋದ್ಧುಮಿಹೇಚ್ಛಸಿ |
ತಂ ಹತ್ವಾ ಭವ ರಾಜಾ ತ್ವಂ ಹತೋ ವಾ ಸ್ವರ್ಗಮಾಪ್ನುಹಿ ॥64॥
ಪಂಚಪಾಂಡವರಲ್ಲಿ ಇಲ್ಲಿ ಯಾರೊಡನೆ ಯುದ್ಧವನ್ನು ಇಚ್ಛಿಸುತ್ತೀಯೋ, ಅವನನ್ನು ಕೊಂದು ರಾಜನಾಗು ಅಥವಾ ನೀನು ಸತ್ತು ಸ್ವರ್ಗಕ್ಕೆ ಹೋಗು.
ಋತೇ ಚ ಜೀವಿತಂ ವೀರ ಯುದ್ಧೇ ಕಿಂ ಕುರ್ಮಿ ತೇ ಪ್ರಿಯಮ್ ॥
ನಿನ್ನ ಜೀವವೊಂದನ್ನು ಹೊರತುಪಡಿಸಿ ಬೇರೆ ನಿನಗೆ ಪ್ರಿಯವಾದುದನ್ನು ಏನಾದರೂ ಕೇಳು. ಅದನ್ನು ನಡೆಸಿಕೊಡುತ್ತೇನೆ.
ಸಂಜಯಃ
ತತಸ್ತವ ಸುತೋ ರಾಜನ್ ವರ್ಮ ಜಗ್ರಾಹ ಕಾಂಚನಮ್ |
ವಿಚಿತ್ರಂ ಚ ಶಿರಸ್ತ್ರಾ(ಸಾತ್ರ)ಣಂ ಜಾಂಬೂನದಪರಿಷ್ಕೃತಮ್ ॥66॥
ಸಂಜಯ ರಾಜನೇ! ಅನಂತರ ನಿನ್ನ ಮಗನು ಬಂಗಾರದ ಕವಚವನ್ನು ತೆಗೆದುಕೊಂಡನು. ವಿಚಿತ್ರವಾದ ತಲೆರಕ್ಷಕವನ್ನೂ ಸ್ವೀಕರಿಸಿದನು. ಅದಕ್ಕೂ ಬಂಗಾರದ ಪಟ್ಟಿಯನ್ನು ಹಾಕಲಾಗಿತ್ತು.
ಸೋಽವಬದ್ಧಶಿರಸ್ತ್ರಾಣಃ ಶುದ್ಧಕಾಂಚನವರ್ಮಭೃತ್ |
ರರಾಜ ರಾಜನ್ ಪುತ್ರಸ್ತೇ ಕಾಂಚನಃ ಶೈಲರಾಡಿವ ॥67॥
ರಾಜನೇ! ಹೀಗೆ ಶಿರಸ್ತ್ರಾಣವನ್ನು ಕಟ್ಟಿಕೊಂಡು, ಬಂಗಾರದ ಕವಚವನ್ನು ಧರಿಸಿರುವ ನಿನ್ನ ಮಗನು ಬಂಗಾರದ ಪರ್ವತರಾಜನಂತೆ ಶೋಭಿಸುತ್ತಿದ್ದನು.
ಸನ್ನದ್ಧಃ ಸಗದೋ ರಾಜನ್ ಸಜ್ಜಃ ಸಂಗ್ರಾಮಮೂರ್ಧನಿ |
ಅಬ್ರವೀತ್ ಪಾಂಡವಾನ್ ರಾಜನ್ ಪುತ್ರೋ ದುರ್ಯೋಧನಸ್ತವ॥68॥
ರಾಜನೇ! ಗದೆಯನ್ನು ಹಿಡಿದುಕೊಂಡು ರಣರಂಗದಲ್ಲಿ ಸನ್ನದ್ಧನಾದ ನಿನ್ನ ಮಗ ದುರ್ಯೋಧನನು ಎಲ್ಲವನ್ನೂ

ಸಿದ್ಧಪಡಿಸಿಕೊಂಡು ಪಾಂಡವರನ್ನು ಕುರಿತು ಹೀಗೆ ಹೇಳುತ್ತಾನೆ.
ದುರ್ಯೋಧನಃ
ಭ್ರಾತೄಣಾಂ ಭವತಾಮೇಕೋ ಯುಧ್ಯತಾಂ ಗದಯಾ ಮಯಾ |
ಸಹದೇವೇನ ವಾ ಯೋತ್ಸ್ಯೇ ಭೀಮೇನ ನಕುಲೇನ ವಾ ॥69॥
ಅಥವಾ ಫಲ್ಗುನೇನಾದ್ಯ ತ್ವಯಾ ವಾ ಭರತರ್ಷಭ |
ಯೋತ್ಸ್ಯೇಹಂ ಸಂಗರಂ ಪ್ರಾಪ್ಯ ವಿಜೇಷ್ಯೇ ಚ ರಣಾಜಿರೇ ॥70॥
ದುರ್ಯೋಧನ ನಿಮ್ಮ ಸಹೋದರರಲ್ಲಿ ಒಬ್ಬ ಗದೆಯನ್ನು ತೆಗೆದುಕೊಂಡು ನನ್ನ ಜೊತೆಗೆ ಯುದ್ಧ ಮಾಡಲಿ. ಆ ವ್ಯಕ್ತಿಯು ಸಹದೇವನೋ, ಭೀಮನೋ ಅಥವಾ ನಕುಲನೊ ಆಗಿರಲಿ ಅಥವಾ ಅರ್ಜುನನನೊಡನೆ ನನ್ನ ಯುದ್ಧವು ನಡೆಯಲಿ ಅಥವಾ ಭರತಶ್ರೇಷ್ಠನೇ, ನಿನ್ನ ಜೊತೆಗೆ ಯುದ್ಧವು ನಡೆಯಲಿ. ನಾನು ರಣರಂಗಕ್ಕೆ ಬಂದು ಯುದ್ಧವನ್ನು ಮಾಡುವೆನು. ಅದರಲ್ಲಿ ಜಯವು ನನ್ನ ಪಾಲಿಗೇ ಸಿಗುವುದು.
ಅಹಮದ್ಯ ಗಮಿಷ್ಯಾಮಿ ವೈರಸ್ಯಾಂತಂ ಸುದುರ್ಗಮಮ್ |
ಗದಯಾ ಪುರುಷವ್ಯಾಘ್ರ ಹೇಮಪಟ್ಟನಿಬದ್ಧಯಾ ॥71॥
ಪುರುಷಸಿಂಹನೇ! ಇವತ್ತು ನಾನು ನಮ್ಮ ನಡುವೆ ಏರ್ಪಟ್ಟಿದ್ದ ವೈರವನ್ನು ಬಿಡುವೆನು. ವೈರದ ಕೊನೆಯನ್ನು ಕಾಣುವುದು ಅಷ್ಟು ಸುಲಭವಲ್ಲ. ನನ್ನ ಕೈಯಲ್ಲಿರುವ ಸುವರ್ಣಪಟ್ಟಿಯುಳ್ಳ ಗದೆಯಿಂದ ಇದನ್ನೆಲ್ಲ ಮಾಡಿ ತೋರಿಸುವೆನು.
ಗದಾಯುದ್ಧೇ ನ ಮೇ ಕಶ್ಚಿತ್ ಸದೃಶೋಽಸ್ತೀತಿ ಚಿಂತಯ ॥72॥
ಗದಾಯುದ್ಧದಲ್ಲಿ ನನಗೆ ಸದೃಶನಾದ ಇನ್ನೊಬ್ಬ ವ್ಯಕ್ತಿಯೇ ಇಲ್ಲ ಎಂಬುದಾಗಿ ತಿಳಿದುಕೊಳ್ಳು.
ಗದಯಾ ಪೋಥಯಿಷ್ಯಾಮಿ ಸರ್ವಾನೇವ ಪೃಥಕ್ ಪೃಥಕ್ ॥73॥
ಈ ಗದೆಯಿಂದ ಎಲ್ಲರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಪುಡಿ ಮಾಡುವೆನು.
ನ ಮೇ ಸಮರ್ಥಾಃ ಸರ್ವೇ ವೈ ಯೋದ್ಧುಂ ನ್ಯಾಯೇನ ಕೇಚನ |
ನ ಯುಕ್ತಮಾತ್ಮನಾ ವಕ್ತುಮೇವಂ ಗರ್ವೋದ್ಧತಂ ವಚಃ ॥74॥
ನ್ಯಾಯಪ್ರಕಾರವಾಗಿ ನೋಡುವುದಾದರೆ ಯುದ್ಧದಲ್ಲಿ ನನಗೆ ಸಮಾನನಾಗಿ ಯುದ್ಧ ಮಾಡುವವನು ಯಾವನೂ ಇಲ್ಲ. ನೀನು ಗರ್ವದಿಂದ ಕೂಡಿದ, ಅಯುಕ್ತವಾದ ಮಾತುಗಳನ್ನಾಡುವುದು ಸರಿಯಲ್ಲ.
ಅಥವಾ ಸಫಲಂ ಹ್ಯೇತತ್ಕರಿಷ್ಯೇ ಭವತಾಂ ಪುರಃ |
ಅಸ್ಮಿನ್ಮುಹೂರ್ತೇ ಸತ್ಯಂ ವಾ ಮಿಥ್ಯಾ ವೈ ತದ್ ಭವಿಷ್ಯತಿ ॥75॥
ಅಥವಾ ಫಲಪ್ರಾಪ್ತಿಗಾಗಿ ನಿನ್ನ ಎದುರಿನಲ್ಲಿಯೇ, ಈ ಮುಹೂರ್ತದಲ್ಲಿಯೇ ಆ ಕೆಲಸವನ್ನು ಮಾಡಿ ಮುಗಿಸುವೆನು. ಅದು ಸತ್ಯವೋ ಮಿಥ್ಯವೋ ಆಗಿರಬಹುದು.
ಗೃಹ್ಯತಾಂ ಚ ಗದಾ ಯೋ ವೈ ಯುಧ್ಯತೇಽದ್ಯ ಮಯಾ ಸಹ ॥76॥
ಇಂದು ನನ್ನೊಡನೆ ಯಾರು ಕಾದಾಡುತ್ತಾರೆಯೋ ಅವರು ಗದೆಯನ್ನು ಹಿಡಿಯಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ತಮ್ಮಲ್ಲಿ ಯಾರನ್ನಾದರೊಬ್ಬರನ್ನು ಸೋಲಿಸಿದರೂ ರಾಜ್ಯವನ್ನು ಪಡೆಯುವಿ ಎಂಬ ಯುಧಿಷ್ಠಿರನ ಬಗ್ಗೆ ಶ್ರಿಕೃಷ್ಣನು ಕೋಪಗೊಂಡಿದ್ದು, ಭೀಮನೂ
ಕೂಡ ದುರ್ಯೋಧನನನ್ನು ಸೋಲಿಸುವ ವಿಚಾರದಲ್ಲಿಯೂ ಶ್ರೀಕೃಷ್ಣನು
ತನ್ನ ಸಂಶಯವನ್ನು ವ್ಯಕ್ತಪಡಿಸಿದ್ದು. ಕೃಷ್ಣನನ್ನು ಕುರಿತು ತನ್ನ ಸಾಮರ್ಥ್ಯವನ್ನು ಹೇಳಿಕೊಂಡು, ದುರ್ಯೋಧನನನ್ನು ಸಾಯಿಸುವುದು ಸುಲಭ ಎಂದು ಭೀಮನು ಹೇಳಿದಾಗ ಕೃಷ್ಣ ಮೊದಲಾದವರಿಂದ ಭೀಮನ ಪ್ರಶಂಸೆ.
ಭೀಮ ಮತ್ತು ದುರ್ಯೋಧನರ ಮಧ್ಯೆ ವೀರೋಚಿತ
ಮಾತುಗಳ ಮೂಲಕ ಯುದ್ಧಕ್ಕೆ ತಯಾರಿ.
ಸಂಜಯಃ
ಏವಂ ದುರ್ಯೋಧನೇ ರಾಜನ್ ಗರ್ಜಮಾನೇ ಪುನಃ ಪುನಃ |
ವಾಸುದೇವೋಽಬ್ರವೀದ್ ಕ್ರುದ್ಧೋ ಯುಧಿಷ್ಠಿರಮಿದಂ ವಚಃ ॥1॥
ಸಂಜಯ ರಾಜನೇ! ಹೀಗೆ ದುರ್ಯೋಧನನು ಮತ್ತೆ ಮತ್ತೆ ಗರ್ಜಿಸುತ್ತಿರಲು ಕೋಪಗೊಂಡ ಶ್ರೀಕೃಷ್ಣನು ಯುಧಿಷ್ಠಿರನಿಗೆ ಈ ಮಾತನ್ನು ಹೇಳುತ್ತಾನೆ.
ಶ್ರೀಭಗವಾನ್
ಕಿಮಿದಂ ವ್ಯಾಹೃತಂ ರಾಜನ್ ತ್ವಯಾ ಸಾಹಸಮೀದೃಶಮ್ |
ಏಕಮೇವ ನಿಹತ್ಯಾಜೌ ಭವ ರಾಜಾ ಕುರುಷ್ವಿತಿ ॥2॥
ಶ್ರೀಭಗವಾನ್ ರಾಜನೇ! `ನಮ್ಮಲ್ಲಿ ಯಾರಾದರೂ ಒಬ್ಬನನ್ನು ಯುದ್ಧದಲ್ಲಿ ಕೊಂದು ರಾಜನಾಗು' ಈ ರೀತಿಯ ಸಾಹಸದ ಮಾತನ್ನು ದುರ್ಯೋಧನನಿಗೆ ಏಕೆ ಹೇಳಿದಿ?
ಯದಿ ನಾಮ ಹ್ಯಯಂ ಕ್ರುದ್ಧೋ ವರಯೇತ್ ತ್ವಾಂ ಯುಧಿಷ್ಠಿರ |

ಅರ್ಜುನಂ ನಕುಲಂ ವಾಽಪಿ ಸಹದೇವಮಥಾಪಿ ವಾ |
ನ ಸಮರ್ಥಾನಹಂ ಮನ್ಯೇ ಗದಾಹಸ್ತಸ್ಯ ಸಂಯುಗೇ ||3||
ಯುಧಿಷ್ಠಿರನೇ! ಒಂದು ವೇಳೆ ಕ್ರುದ್ಧನಾದ ದುರ್ಯೋಧನನು ನಿನ್ನನ್ನು ಅಥವಾ ಅರ್ಜುನನನ್ನು ಅಥವಾ ನಕುಲ ಅಥವಾ ಸಹದೇವನನ್ನು ಯುದ್ಧಕ್ಕೆ ಕೇಳಿಕೊಂಡರೆ, ಈ ನೀವು ಯಾರೂ ಯುದ್ಧದಲ್ಲಿ ಗದೆಹಿಡಿದು ಕಾದಾಡಲು ಸಮರ್ಥರೆಂದು ನಾನು ಭಾವಿಸುವುದಿಲ್ಲ.
ಏತೇನ ಹಿ ಕೃತಾ ಯೋಧ್ಯಾ ವರ್ಷಾಣೀಹ ತ್ರಯೋದಶ |
ಆಯಸೈಃ ಪುರುಷೈ ರಾಜನ್ ಭೀಮಸೇನವಧೇಪ್ಸಯಾ ||4||
ರಾಜನೇ! ಈ ದುರ್ಯೋಧನನು ಭೀಮನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಹದಿಮೂರು ವರ್ಷಗಳ ಕಾಲ ಕಬ್ಬಿಣದ ಪುರುಷಾಕಾರಗಳೊಂದಿಗೆ (ಕಬ್ಬಿಣದಂತೆ ಗಟ್ಟಿಯಾದ ಪುರುಷರೊಂದಿಗೆ) ಕಾದಾಟದ ಕ್ರಿಯೆಗಳ ಅಭ್ಯಾಸವನ್ನು ಮಾಡಿದ್ದಾನೆ.
ಕಥಂ ನಾಮ ಭವೇತ್ ಕಾರ್ಯಮಸ್ಮಾಭಿರ್ಭರತರ್ಷಭ |
ಸಾಹಸಂ ಕೃತವಾನ್ ಯತ್ ತ್ವಮನುಕ್ರೋಶಾನ್ನೃಪೋತ್ತಮ ||5||
ಭರತಶ್ರೇಷ್ಠನೇ! ನೃಪೋತ್ತಮನೇ! ಕೋಪದಿಂದ ನೀನು ಮಾಡಿದ ಈ ಕಾರ್ಯವನ್ನು ನಮ್ಮಂತಹವರು ಹೇಗೆ ಮಾಡಲು ಸಾಧ್ಯ?
ನ ಚಾನ್ಯಮದ್ಯ ಪಶ್ಯಾಮಿ ಪ್ರತಿಯೋದ್ಧಾರಮಾಹವೇ |
ಋತೇ ವೃಕೋದರಾತ್ ಪಾರ್ಥಾತ್ ಸ ಚ ನಾತಿಕೃತಶ್ರಮಃ ||6||
ದುರ್ಯೋಧನನಿಗೆ ವಿರುದ್ಧವಾಗಿ ಯುದ್ಧಮಾಡಬಲ್ಲ ಇನ್ನೊಬ್ಬ ವ್ಯಕ್ತಿಯು ಕಾಣಿಸುವುದಿಲ್ಲ. ಭೀಮನೊಬ್ಬನೇ ಸಮರ್ಥ. ಅವನಾದರೂ ಬಹಳ ಅಭ್ಯಾಸವನ್ನು ಮಾಡಿಲ್ಲ.
ತದಿದಂ ದ್ಯೂತಮಾರಬ್ಧಂ ಪುನರೇವ ಯಥಾ ಪುರಾ |
ವಿಷಮಂ ಶಕುನೇಶ್ಚೈವ ತವ ಚೈವ ವಿಶೇಷತಃ ||7||
ಈ ಪ್ರಕಾರವಾಗಿ ನೀನು ಮತ್ತೆ ಹಿಂದಿನ ಹಾಗೆಯೇ ದ್ಯೂತವನ್ನು (ಜೂಜನ್ನು) ಆಡಲು ಪ್ರಾರಂಭಿಸಿದ್ದಿ. ನಿನ್ನ ಈ ದ್ಯೂತವು ಶಕುನಿಯ ದ್ಯೂತಕ್ಕಿಂತಲೂ ವಿಶೇಷವಾದದ್ದು.
ಬಲೀ ಭೀಮಃ ಸಮರ್ಥಶ್ಚ ಕೃತೀ ರಾಜನ್ ಸುಯೋಧನಃ |
ಬಲವಾನ್ ವೈ ಕೃತೀ ವೇತಿ ಕೃತೀ ರಾಜನ್ ವಿಶಿಷ್ಯತೇ ||8||
ಭೀಮನು ಬಲಶಾಲಿ ಹಾಗೂ ಸಮರ್ಥನಿದ್ದಾನೆ. ದುರ್ಯೋಧನನು ತುಂಬಾ ಅಭ್ಯಾಸವನ್ನು ಮಾಡಿರುತ್ತಾನೆ. ಬಲಶಾಲಿ ಮತ್ತು ಅಭ್ಯಾಸಶೀಲರಲ್ಲಿ ಅಭ್ಯಾಸನಿರತರಾದವರು ವಿಶಿಷ್ಟರಾಗಿರುತ್ತಾರೆ.
ಸೋಽಯಂ ರಾಜಂಸ್ತ್ವಯಾ ಶತ್ರುಃ ಸಮೇ ಪಥಿ ನಿವೇಶಿತಃ |
ನ್ಯಸ್ತಶ್ಚಾತ್ಮಾ ಸುವಿಷಮೇ ಕೃಚ್ಛ್ರಮಾಪಾದಿತಾ ವಯಮ್ ||9||
ರಾಜನೇ! ನೀನು ಶತ್ರುವಿಗೆ ಅನುಕೂಲವಾದ ಮಾರ್ಗವನ್ನು ಮಾಡಿಕೊಟ್ಟೆ. ನಿನಗೆ ಸ್ವತಃ ಅನನುಕೂಲವಾದ ಮಾರ್ಗವನ್ನು ಮಾಡಿಕೊಂಡಿ. ಜೊತೆಗೆ ನಾವೂ ಕೂಡ ಬಹಳ ಸಂಕಟದಲ್ಲಿ ಸಿಲುಕಿಕೊಳ್ಳುವ ಹಾಗೆ ಮಾಡಿದಿ.
ಕೋ ಹಿ ಸರ್ವಾನ್ ವಿನಿರ್ಜಿತ್ಯ ಶತ್ರೂನೇಕೇನ ವೈರಿಣಾ |
ಪಣಿತ್ವಾ ಚೈಕಪಾಣೇನ ಶೋಚಯೇದೇವಮಾಹವಮ್ ||10||
ಕೃಚ್ಛ್ರಪ್ರಾಪ್ತೇನ ಚ ತಥಾ ಹಾರಯೇದ್ ರಾಜ್ಯಮಾಗತಮ್ ||11||
ಎಲ್ಲಾ ಶತ್ರುಗಳನ್ನೂ ಗೆದ್ದು, ಒಬ್ಬನೇ ಶತ್ರುವು ಉಳಿದುಕೊಂಡಿದ್ದು, ಅವನೂ ಕಷ್ಟದಲ್ಲಿರುವಾಗ, ಒಬ್ಬನನ್ನು ಗೆದ್ದರೂ ಸಾಕು ಎಂಬ ಪಣವನ್ನು ನಿರ್ಧರಿಸಿ, ಯುದ್ಧವನ್ನು ಸೋಲಲು ಯಾವನು ತಾನೇ ಇಷ್ಟಪಡುವನು? ಕಷ್ಟಪಟ್ಟು ಕೈಗೆ ಬಂದ ರಾಜ್ಯವನ್ನು ಈ ರೀತಿಯಲ್ಲಿ ಯಾವನು ತಾನೇ ಕಳೆದುಕೊಳ್ಳುವನು?
ನ ಹಿ ಪಶ್ಯಾಮಿ ತಲ್ಲೋಕೇ ಯಾಽದ್ಯ ದುರ್ಯೋಧನಂ ರಣೇ |
ಗದಾಹಸ್ತಂ ವಿಜೇತುಂ ವೈ ಶಕ್ತಃ ಸ್ಯಾದಮರೋಽಪಿ ಹಿ ||12||
ಯುದ್ಧದಲ್ಲಿ ಗದಾಧಾರಿಯಾದ ದುರ್ಯೋಧನನನ್ನು ಗೆಲ್ಲುವ ಸಾಮರ್ಥ್ಯವುಳ್ಳವನು ಈ ಲೋಕದಲ್ಲಿ ಯಾವನೂ ಕಾಣಿಸುತ್ತಿಲ್ಲ. ಆ ಸಾಮರ್ಥ್ಯವಿರುವ ದೇವತೆಯೂ ಯಾರೂ ಕಾಣಿಸುವುದಿಲ್ಲ.
ಫಲ್ಗುನೋ ವಾ ಭವಾನ್ ವಾಽಪಿ ಮಾದ್ರೀಪುತ್ರಾವಥಾಪಿ ವಾ |
ನ ಸಮರ್ಥಾನಹಂ ಮನ್ಯೇ ಗದಾಹಸ್ತಸ್ಯ ಸಂಯುಗೇ ||13||
ಗದೆಯನ್ನು ಹಿಡಿದ ದುರ್ಯೋಧನನ ಜೊತೆಗೆ ಯುದ್ಧಮಾಡುವ ಸಾಮರ್ಥ್ಯವು ನಿನಗಾಗಲಿ, ಅರ್ಜುನನಿಗಾಗಲೀ, ನಕುಲನಿಗಾಗಲೀ, ಸಹದೇವನಿಗಾಗಲೀ ಇಲ್ಲವೆಂದು ನಾನು ತಿಳಿದುಕೊಂಡಿದ್ದೇನೆ.
ನ ತ್ವಂ ಭೀಮೋ ನ ನಕುಲಃ ಸಹದೇವೋಽಥ ಫಲ್ಗುನಃ |
ಜೇತುಂ ನ್ಯಾಯೇನ ಶಕ್ತೋ ವೈ ಕೃತೀ ರಾಜಾ ಸುಯೋಧನಃ ||14||
ನೀನು, ಭೀಮ, ನಕುಲ, ಸಹದೇವ, ಅರ್ಜುನ ಇವರಿಗೆ ಯಾರಿಗೂ ಕೂಡ ಅಭ್ಯಾಸನಿರತನಾದ ದುರ್ಯೋಧನನನ್ನು ನ್ಯಾಯಮಾರ್ಗದಲ್ಲಿ ಗೆಲ್ಲಲು ಸಾಧ್ಯವಿಲ್ಲ.
ಸ ಕಥಂ ವದಸೇ ಶತ್ರುಂ ಯುಧ್ಯಸ್ವ ಗದಯೇತಿ ಹ |
ಏಕಂ ವಾ ತ್ವಂ ನಿಹತ್ಯಾಜೌ ಭವ ರಾಜೇತಿ ಭಾರತ ||15||
ಗದೆಯಿಂದ ಯುದ್ಧಮಾಡಿ ಒಬ್ಬನನ್ನಾದರೂ ಕೊಂದು ರಾಜನಾಗು ಎಂದು ಶತ್ರುವಿಗೆ ನೀನು ಹೇಳಲು ಹೇಗೆ ಸಾಧ್ಯ?
ನೂನಂ ನ ರಾಜ್ಯಭಾಗೇಷಾ ಪಾಂಡೋಃ ಕುಂತ್ಯಾಶ್ಚ ಸಂತತಿಃ |

ಅತ್ಯಂತವನವಾಸಾಯ ಸೃಷ್ಟಾ ಭೈಕ್ಷ್ಯಾಯ ವಾ ಪುನಃ ॥16॥
ಖಂಡಿತವಾಗಿಯೂ ಪಾಂಡುವಿನ ಸಂತತಿಯಾಗಲೀ, ಕುಂತಿಯ ಸಂತತಿಯಾಗಲೀ ರಾಜ್ಯವನ್ನು ಅನುಭವಿಸುವುದಿಲ್ಲ. ಪುನಃ ವನವಾಸಕ್ಕೋ ಅಥವಾ ಭಿಕ್ಷೆ ಬೇಡಲಿಕ್ಕೋ ಈ ಸಂತತಿಯು ಹುಟ್ಟಿದೆ.
ಶ್ರೀಭೀಮಸೇನಃ
ಮಧುಸೂದನ ಮಾ ಕಾರ್ಷೀರ್ವಿಷಾದಂ ಯದುಪುಂಗವ |
ಅದ್ಯ ಪಾರಂ ಗಮಿಷ್ಯಾಮಿ ವೈರಸ್ಯಾಸ್ಯ ಸುದುರ್ಗಮಮ್ ॥17॥
ಶ್ರೀಭೀಮಸೇನ ಮಧುಸೂದನನೇ! ಯದುಶ್ರೇಷ್ಠನೇ! ವಿಷಾದ ಪಡಬೇಡ. ಈ ವೈರವನ್ನು ಇಂದು ಕೊನೆಗೊಳಿಸುತ್ತೇನೆ.
ಅಹಂ ಸುಯೋಧನಂ ಸಂಖ್ಯೇ ಹನಿಷ್ಯಾಮಿ ನ ಸಂಶಯಃ |
ವಿಜಯೋ ವೈ ಧ್ರುವಃ ಕೃಷ್ಣ ಧರ್ಮರಾಜಸ್ಯ ದೃಶ್ಯತೇ ॥18॥
ನಾನು ಸುಯೋಧನನನ್ನು ಯುದ್ಧದಲ್ಲಿ ಸಾಯಿಸುತ್ತೇನೆ. ಸಂಶಯ ಬೇಡ. ನಿಶ್ಚಿತವಾಗಿ ಧರ್ಮರಾಜನಿಗೆ ಜಯವು ಕಾಣಿಸಿಕೊಳ್ಳುತ್ತದೆ.
ಅಧ್ಯ(ತ್ಯ)ರ್ಧೇನ ಗುಣೇನೇಯಂ ಗದಾ ಗುರುತರೀ ಮಮ |
ನ ತಥಾ ಧಾರ್ತರಾಷ್ಟ್ರಸ್ಯ ಮಾ ಕಾರ್ಷೀರ್ಮಾಧವ ವ್ಯಥಾಮ್ ॥19॥
ನನ್ನ ಗದೆಯು ದುರ್ಯೋಧನನ ಗದೆಗಿಂತ ಒಂದೂವರೆಪಟ್ಟು ಅಧಿಕ ಭಾರವಾಗಿದೆ. ಆದರೆ ದುರ್ಯೋಧನನ ಗದೆಯು ಹಾಗಿಲ್ಲ. ಮಾಧವನೇ! ವ್ಯಥೆಯನ್ನು ಮಾಡಬೇಡ.
ಅನಯಾ ಗದಯಾ ಚಾಹಂ ಸಂಯುಗೇ ಯೋದ್ಧುಮುತ್ಸಹೇ |
ಭವಂತಃ ಪ್ರೇಕ್ಷಕಾಃ ಸರ್ವೇ ಮಮ ಸಂತು ಜನಾರ್ದನ ॥20॥
ಈ ಗದೆಯಿಂದಲೇ ನಾನು ಯುದ್ಧಮಾಡಲು ಬಯಸುತ್ತೇನೆ. ಜನಾರ್ದನನೇ! ನೀವೆಲ್ಲರೂ ನನಗೆ ಪ್ರೇಕ್ಷಕರಾಗಿ ಇರಿ.
ಸಾಮರಾನಪಿ ಲೋಕಾಂಸ್ತ್ರೀನ್ ನಾನಾಶಸ್ತ್ರಧರಾನ್ ಯುಧಿ |
ಯೋಧಯೇಯಂ ರಣೇ ಕೃಷ್ಣ ಕಿಮುತಾದ್ಯ ಸುಯೋಧನಮ್ ॥21॥
ದೇವತೆಗಳಿಂದ ಕೂಡಿ ಶಸ್ತ್ರಧಾರಿಗಳಾದ ಮೂರೂ ಲೋಕದ ಯೋಧರನ್ನೂ ಯುದ್ಧದಲ್ಲಿ ಎದುರಿಸಿ ಕಾದಾಡಬಲ್ಲೆ. ಶ್ರೀಕೃಷ್ಣನೇ! ಇವತ್ತು ಈ ಸುಯೋಧನನು ಯಾವ ಲೆಕ್ಕಕ್ಕೆ?
ಸಂಜಯಃ
ತಂ ತಥಾ ಭಾಷಮಾಣಂ ತು ವಾಸುದೇವೋ ವೃಕೋದರಮ್ |
ಹೃಷ್ಟಃ ಸಂಪೂಜಯಾಮಾಸ ವಚನಂ ಚೇದಮಬ್ರವೀತ್ ॥22॥
ಸಂಜಯ ಹೀಗೆ ಮಾತನಾಡುತ್ತಿದ್ದ ಭೀಮನಿಗೆ ಸಂತುಷ್ಟನಾದ ಶ್ರೀಕೃಷ್ಣನು ಅಭಿನಂದಿಸಿದನು ಮತ್ತು ಈ ಮಾತನ್ನು ಹೇಳಿದನು.
ಶ್ರೀಭಗವಾನ್
ತ್ವಾಮಾಸಾದ್ಯ ಮಹಾಬಾಹೋ ಧರ್ಮರಾಜೋ ಯುಧಿಷ್ಠಿರಃ |
ನಿಹತಾರಿಃ ಸ್ವಕಾಂ ದೀಪ್ತಾಂ ಶ್ರಿಯಮಾಪ್ನೋತ್ಯಸಂಶಯಮ್ ॥23॥
ಶ್ರೀಭಗವಾನ್ ಮಹಾಬಾಹುವೇ! ನಿನ್ನನ್ನು ಹೊಂದಿ ಧರ್ಮರಾಜ ಯುಧಿಷ್ಠಿರನು ಶತ್ರುಗಳನ್ನೆಲ್ಲಾ ಕೊಂದು, ಪ್ರಕಾಶಮಾನವಾದ ತನ್ನ ಸಂಪತ್ತನ್ನು ನಿಸ್ಸಂಶಯವಾಗಿ ಪಡೆಯುತ್ತಾನೆ.
ತ್ವಯಾ ವಿನಿಹತಾಃ ಸರ್ವೇ ಧೃತರಾಷ್ಟ್ರಸುತಾ ರಣೇ |
ರಾಜಾನೋ ರಾಜಪುತ್ರಾಶ್ಚ ನಾಗಾಶ್ಚ ವಿನಿಪಾತಿತಾಃ ॥24॥
ರಣರಂಗದಲ್ಲಿ ಧೃತರಾಷ್ಟ್ರನ ಎಲ್ಲಾ ಮಕ್ಕಳೂ ನಿನ್ನಿಂದ ಸತ್ತಿದ್ದಾರೆ. ರಾಜರು, ರಾಜಕುಮಾರರು, ಆನೆಗಳು ಇವೆಲ್ಲವನ್ನೂ ನೀನು ಕೊಂದು ಬೀಳಿಸಿರುವಿ.
ಕಲಿಂಗಮಾಗಧಾಃ ಪ್ರಾಚ್ಯಾ ಗಾಂಧಾರಾಃ ಕುರವಸ್ತಥಾ |
ತ್ವಾಮಾಸಾದ್ಯ ಮಹಾಯುದ್ಧೇ ನಿಹತಾಃ ಪಾಂಡುನಂದನ ॥25॥
ಪಾಂಡುನಂದನನೇ! ಕಲಿಂಗರು, ಮಾಗಧರು, ಪ್ರಾಚ್ಯರು, ಗಾಂಧಾರರು, ಕುರುಗಳು ಇವರೆಲ್ಲಾ ಮಹಾಯುದ್ಧದಲ್ಲಿ ನಿನ್ನನ್ನು ಎದುರಿಸಿ ತಾವೇ ಸತ್ತುಹೋಗಿದ್ದಾರೆ.
ಹತ್ವಾ ದುರ್ಯೋಧನಂ ಚಾಪಿ ಪ್ರಯಚ್ಛೋರ್ವೀಂ ಸಸಾಗರಾಮ್ |
ಧರ್ಮರಾಜಾಯ ಕೌಂತೇಯ ಸಶೈಲವನಕಾನನಾಮ್ ॥26॥
ಕೌಂತೇಯನೇ! ದುರ್ಯೋಧನನನ್ನೂ ಕೊಂದು ಸಾಗರಪರ್ಯಂತವಾದ, ಪರ್ವತ ವನ ಕಾನನಗಳಿಂದ ಕೂಡಿದ ಭೂಮಿಯನ್ನು ಧರ್ಮರಾಜನಿಗೆ ಕೊಡು.
ತ್ವಾಂ ತು ಪ್ರಾಪ್ಯ ರಣೇ ಪಾಪೋ ಧಾರ್ತರಾಷ್ಟ್ರೋ ವಿನಶ್ಯತಿ |
ತ್ವಮಸ್ಯ ಸಕ್ಥಿನೀ ಭಿತ್ವಾ ಪ್ರತಿಜ್ಞಾಂ ಪಾಲಯಿಷ್ಯಸಿ ॥27॥
ಯುದ್ಧದಲ್ಲಿ ನಿನ್ನನ್ನು ಎದುರಾಳಿಯಾಗಿ ಹೊಂದಿ ಪಾಪಿಯಾದ ದುರ್ಯೋಧನನು ನಾಶವಾಗುತ್ತಾನೆ. ಅವನ ತೊಡೆ(ಬೆನ್ನುಮೂಳೆಯ ಸಂಧಿ)ಗಳನ್ನು ಮುರಿದು ನಿನ್ನ ಪ್ರತಿಜ್ಞೆಯನ್ನು ಪೂರೈಸು.
ಯತ್ನೇನ ಹಿ ತ್ವಯಾ ಪಾರ್ಥ ಯೋದ್ಧವ್ಯೋ ಧೃತರಾಷ್ಟ್ರಜಃ |
ಕೃತೀ ಚ ಯುದ್ಧಶೌಂಡಶ್ಚ ಬಲವಾಂಶ್ಚೈವ ಪಾರ್ಥಿವಃ ॥28॥
ಭೀಮಸೇನನೇ! ನೀನಾದರೂ ಬಹಳ ಪ್ರಯತ್ನಪಟ್ಟು ದುರ್ಯೋಧನನ ಜೊತೆಗೆ ಯುದ್ಧ ಮಾಡಬೇಕು. ಏಕೆಂದರೆ ರಾಜ ದುರ್ಯೋಧನನು ತುಂಬಾ ಅಭ್ಯಾಸ ಮಾಡಿರುತ್ತಾನೆ. ಯುದ್ಧದಲ್ಲಿ ನಿಪುಣನಾಗಿದ್ದಾನೆ ಹಾಗೂ ಬಲಶಾಲಿಯಾಗಿದ್ದಾನೆ.

ಸಂಜಯಃ
ತತಸ್ತು ಸಾತ್ಯಕೀ ರಾಜನ್ ಪೂಜಯಾಮಾಸ ಪಾಂಡವಮ್ |
ವಿವಿಧಾಭರಣಸ್ರಗ್ಭಿರ್ಭೀಮಸೇನಂ ಜನೇಶ್ವರ ||29||
ಸಂಜಯ ರಾಜನೇ! ಅನಂತರ ಸಾತ್ಯಕಿಯು ವಿವಿಧ ಆಭರಣ ಹಾಗೂ ಹಾರಗಳಿಂದ ಭೀಮಸೇನನನ್ನು ಪೂಜಿಸಿ ಗೌರವಿಸುತ್ತಾನೆ.
ಪಾಂಚಾಲಾಃ ಪಾಂಡವೇಯಾಶ್ಚ ಧರ್ಮರಾಜಪುರೋಗಮಾಃ |
ತದ್ವಚೋ ಭೀಮಸೇನಸ್ಯ ಸರ್ವ ಏವಾಭ್ಯಪೂಜಯನ್ ||30||
ಭೀಮಸೇನನ ಮಾತನ್ನು ಪಾಂಚಾಲರು, ಧರ್ಮರಾಜ ಮೊದಲಾದ ಪಾಂಡವರು ಎಲ್ಲರೂ ಒಪ್ಪಿಕೊಂಡು ಅನುಮೋದಿಸುತ್ತಾರೆ.
ತತೋ ಭೀಮಬಲೋ ಭೀಮೋ ಯುಧಿಷ್ಠಿರಮಥಾಬ್ರವೀತ್ |
ಸೃಂಜಯೈಃ ಸಹ ತಿಷ್ಠಂತಂ ತಪಂತಮಿವ ಭಾಸ್ಕರಮ್ ||31||
ಸೂರ್ಯನಂತೆ ಪ್ರಕಾಶಿಸುತ್ತಾ, ಸೃಂಜಯರೊಡನೆ ನಿಂತಿದ್ದ ಯುಧಿಷ್ಠಿರನಿಗೆ ಭಯಂಕರವಾದ ಬಲವುಳ್ಳ ಭೀಮನು ಹೀಗೆ ಹೇಳುತ್ತಾನೆ.
ಭೀಮಃ
ಅಹಮೇತೇನ ಸಂಗಮ್ಯ ಸಂಯುಗೇ ಯೋದ್ಧುಮುತ್ಸಹೇ |
ನ ಹಿ ಶಕ್ತೋ ರಣೇ ಜೇತುಂ ಮಾಮೇಷ ಪುರುಷಾಧಮಃ |
ಸುಯೋಧನೇ ಧಾರ್ತರಾಷ್ಟ್ರೇ ಖಾಂಡವೇಽಗ್ನಿಮಿವಾರ್ಜುನಃ ||32||
ಭೀಮ ಯುದ್ಧದಲ್ಲಿ ನಾನು ಈ ದುರ್ಯೋಧನನನ್ನು ಎದುರಿಸಿ ಯುದ್ಧ ಮಾಡಲು ಉದ್ಯುಕ್ತನಾಗಿದ್ದೇನೆ. ಈ ಪುರುಷಾಧಮನು ಯುದ್ಧದಲ್ಲಿ ನನ್ನನ್ನು ಗೆಲ್ಲಲು ಖಂಡಿತವಾಗಿ ಸಮರ್ಥನಾಗುವುದಿಲ್ಲ.
ಅದ್ಯ ಕ್ರೋಧಂ ವಿಮೋಕ್ಷ್ಯಾಮಿ ನಿಹಿತಂ ಹೃಚ್ಛಯಂ ಭೃಶಮ್ ||33||
ನನ್ನ ಹೃದಯದೊಳಗೆ ಸುಪ್ತಗೊಳಿಸಿ ಇಟ್ಟುಕೊಂಡಿದ್ದ ಬಹಳವಾದ ಕೋಪವನ್ನು, ಖಾಂಡವವನಕ್ಕೆ ಅರ್ಜುನನು ಬೆಂಕಿಯನ್ನಿಟ್ಟಂತೆ ಇವತ್ತು ಧೃತರಾಷ್ಟ್ರಪುತ್ರ ದುರ್ಯೋಧನನ ಮೇಲೆ ಹಾಕುತ್ತೇನೆ.
ಶಲ್ಯಮದ್ಯೋದ್ಧರಿಷ್ಯಾಮಿ ತವ ಪಾಂಡವ ಹೃದ್ಗತಮ್ ||34||
ನಿಹತ್ಯ ಗದಯಾ ಪಾಪಮದ್ಯ ರಾಜನ್ ಸುಖೀ ಭವ ||35||
ರಾಜ ಧರ್ಮರಾಜನೇ! ಇಂದು ಈ ಪಾಪಿ ದುರ್ಯೋಧನನನ್ನು ಗದೆಯಿಂದ ಕೊಂದು, ನಿನ್ನ ಹೃದಯಕ್ಕೆ ಅಂಟಿಕೊಂಡಿದ್ದ ಮುಳ್ಳನ್ನು ಕಿತ್ತು ಹಾಕುತ್ತೇನೆ. ನೀನು ಸುಖಿಯಾಗಿರು.
ಅದ್ಯ ಕೀರ್ತಿಮಯೀಂ ಮಾಲಾಂ ಪ್ರತಿಮೋಕ್ಷ್ಯೇಽಯೇ ತವಾನಘ |
ಪ್ರಾಣಾನ್ ಶ್ರಿಯಂ ಚ ರಾಜ್ಯಂ ಚ ಮೋಕ್ಷ್ಯತೇಽದ್ಯ ಸುಯೋಧನಃ ||
ಪಾಪದೂರನೇ! ಇವತ್ತು ಕೀರ್ತಿಯ ಮಾಲೆಯನ್ನು ನಿನಗೆ ತೊಡಿಸುತ್ತೇನೆ. ಇವತ್ತು ದುರ್ಯೋಧನನು ಪ್ರಾಣವನ್ನು, ಸಂಪತ್ತನ್ನು, ರಾಜ್ಯವನ್ನು ಕಳೆದುಕೊಳ್ಳುತ್ತಾನೆ.
ರಾಜಾ ತು ಧೃತರಾಷ್ಟ್ರೋಽಥ ಶ್ರುತ್ವಾ ಪುತ್ರಂ ನಿಪಾತಿತಮ್ |
ಸ್ಮರಿಷ್ಯತ್ಯಶುಭಂ ಕರ್ಮ ಯತ್ತಚ್ಛಕುನಿಬುದ್ಧಿಜಮ್ ||37||
ತನ್ನ ಮಗ ಸತ್ತುಬಿದ್ದ ವಿಷಯವನ್ನು ಕೇಳಿ ರಾಜ ಧೃತರಾಷ್ಟ್ರನು, ಶಕುನಿಯ ದುರ್ಬುದ್ಧಿಯಿಂದ ಉಂಟಾದ ಕೆಟ್ಟ ಕರ್ಮಗಳನ್ನು ಸ್ಮರಿಸಿಕೊಳ್ಳುವನು.
ಸಂಜಯಃ
ಇತ್ಯುಕ್ತ್ವಾ ಭರತಶ್ರೇಷ್ಠೋ ಗದಾಮುದ್ಯಮ್ಯ ಭಾರತ |
ಅವಾತಿಷ್ಠತ ಯುದ್ಧಾಯ ಶಕ್ರೋ ವೃತ್ರಮಿವಾಹ್ವಯನ್ ||38||
ಸಂಜಯ ಭರತಕುಲೋದ್ಭವನೇ! ಭೀಮಸೇನನು ಹೀಗೆ ಹೇಳಿ ಗದೆಯನ್ನು ಎತ್ತಿಕೊಂಡು, ಇಂದ್ರನು ವೃತ್ರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದಂತೆ ಯುದ್ಧಕ್ಕೆ ನಿಂತನು.
ತದಾಹ್ವಾನಮಮೃಷ್ಯನ್ ವೈ ತವ ಪುತ್ರೋಽತಿವೀರ್ಯವಾನ್ |
ಪ್ರತ್ಯುಪಸ್ಥಿತ ಏವಾಶು ಮತ್ತೋ ಮತ್ತಮಿವ ದ್ವಿಪಮ್ ||39||
ಆಗ ಬಹಳ ವೀರ್ಯವಂತನಾದ ನಿನ್ನ ಮಗ ದುರ್ಯೋಧನನು ಭೀಮಸೇನನ ಯುದ್ಧಾಹ್ವಾನವನ್ನು ಸಹಿಸಿಕೊಳ್ಳಲಾಗದೆ ಕೂಡಲೇ ಎದುರಿಗೆ ಬಂದು ನಿಂತನು. ಮದವೇರಿದ ಒಂದು ಆನೆಯನ್ನು ಇನ್ನೊಂದು ಮದ್ದಾನೆಯು ಎದುರಿಸಿದಂತೆ ಇತ್ತು.
ಗದಾಹಸ್ತಂ ತವ ಸುತಂ ಯುದ್ಧಾಯ ಸಮುಪಸ್ಥಿತಮ್ |
ದದೃಶುಃ ಪಾಂಡವಾಃ ಸರ್ವೇ ಕೈಲಾಸಮಿವ ಶೃಂಗಿಣಮ್ ||40||
ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಯುದ್ಧಕ್ಕೆ ಬಂದು ನಿಂತಿರುವ ನಿನ್ನ ಮಗನನ್ನು ಪಾಂಡವರು ಶಿಖರಸಹಿತವಾದ ಕೈಲಾಸಪರ್ವತದಂತೆ ಕಂಡರು.
ತಮೇಕಾಕಿನಮಾಸಾದ್ಯ ಧಾರ್ತರಾಷ್ಟ್ರಂ ಮಹಾಬಲಮ್ |
ನಿರ್ಯೂಥಮಿವ ಮಾತಂಗಂ ಸಮಹೃಷ್ಯಂತ ಪಾಂಡವಾಃ ||41||
ತನ್ನ ಗುಂಪನ್ನು ಕಳೆದುಕೊಂಡು ಒಬ್ಬಂಟಿಯಾಗಿ ನಿಂತ ಆನೆಯಂತೆ ಏಕಾಕಿಯಾಗಿ ಯುದ್ಧಕ್ಕೆ ತಯಾರಾಗಿ ಬಂದಿರುವ, ಮಹಾಬಲಶಾಲಿಯಾದ ನಿನ್ನ ಮಗ ದುರ್ಯೋಧನನನ್ನು ಕಂಡು ಪಾಂಡವರು ತುಂಬಾ ಸಂತೋಷಪಟ್ಟರು.
ತಮುದ್ಯತಗದಂ ದೃಷ್ಟ್ವಾ ಕೈಲಾಸಮಿವ ಶೃಂಗಿಣಮ್ |

ಭೀಮಸೇನಸ್ತದಾ ರಾಜನ್ ದುರ್ಯೋಧನಮಥಾಬ್ರವೀತ್ ॥42॥
ರಾಜನೇ! ಶಿಖರಸಹಿತವಾದ ಕೈಲಾಸಪರ್ವತದಂತೆ ಗದೆಯನ್ನೆತ್ತಿ ನಿಂತಿರುವ ದುರ್ಯೋಧನನಿಗೆ ಭೀಮಸೇನನು ಹೀಗೆ ಹೇಳುತ್ತಾನೆ.
ಭೀಮಃ
ರಾಜ್ಞಾ ಚ ಧೃತರಾಷ್ಟ್ರೇಣ ತ್ವಯಾ ಚಾಸ್ಮಾಸು ಯತ್ ಕೃತಮ್ |
ಸ್ಮರ ತದ್ ದುಷ್ಕೃತಂ ಕರ್ಮ ಯದ್ ವೃತ್ತಂ ವಾರಣಾವತೇ ॥43॥
ಭೀಮ ರಾಜನಾದ ಧೃತರಾಷ್ಟ್ರ ಮತ್ತು ನೀನು ನಮ್ಮ ಮೇಲೆ ಏನೆಲ್ಲಾ ಕೆಟ್ಟಕೆಲಸಗಳನ್ನು ಮಾಡಿದ್ದೀರೋ, ವಾರಣಾವತದಲ್ಲಿ ಏನೆಲ್ಲಾ ನಡೆಯಿತೋ ಅದೆಲ್ಲವನ್ನೂ ಸ್ಮರಿಸಿಕೊಳ್ಳು.
ದ್ರೌಪದೀ ಸುಪರಿಕ್ಲಿಷ್ಟಾ ಸಭಾಮಧ್ಯೇ ರಜಸ್ವಲಾ |
ದ್ಯೂತೇ ಚ ವಂಚಿತೋ ರಾಜಾ ಶಕುನೇರ್ಬುದ್ಧಿಲಾಘವಾತ್ ॥44॥
ರಜಸ್ವಲೆಯಾದ ದ್ರೌಪದಿಯು ಸಭೆಯ ಮಧ್ಯದಲ್ಲಿ ಬಹಳ ದುಃಖಕ್ಕೆ ಒಳಗಾದಳು. ಶಕುನಿಯ ಕಪಟಬುದ್ಧಿಯ ಬಲದಿಂದ ನಮ್ಮ ರಾಜನಾದ ಧರ್ಮರಾಜನನ್ನು ದ್ಯೂತದಲ್ಲಿ ಮೋಸಗೊಳಿಸಿದಿರಿ.
ಯಾನಿ ಚಾನ್ಯಾನಿ ದುಷ್ಟಾತ್ಮನ್ ಪಾಪಾನಿ ಕೃತವಾನಸಿ |
ಅನಾಗತಸ್ಸು ಪಾರ್ಥೇಷು ತಸ್ಯ ಪಶ್ಯ ಮಹತ್ ಫಲಮ್ ॥45॥
ದುಷ್ಟಸ್ವಭಾವದವನೇ! ತಪ್ಪೇ ಮಾಡದ ಪಾಂಡವರ ವಿಷಯದಲ್ಲಿ ಬೇರೆ ಏನೆಲ್ಲಾ ಕೆಟ್ಟಕಾರ್ಯಗಳನ್ನು ಮಾಡಿದ್ದೀಯೋ ಅದರದ್ದೆಲ್ಲಾ ಮಹತ್ತಾದ ಫಲವನ್ನು ನೋಡು.
ತ್ವತ್ಕೃತೇ ನಿಹತಃ ಶೇತೇ ಶರತಲ್ಪೇ ಮಹಾಯಶಾಃ |
ಗಾಂಗೇಯೋ ಭರತಶ್ರೇಷ್ಠಃ ಸರ್ವೇಷಾಂ ನಃ ಪಿತಾಮಹಃ ॥46॥
ಭರತಕುಲದಲ್ಲಿಯೇ ಶ್ರೇಷ್ಠನಾದ, ನಮ್ಮೆಲ್ಲರ ತಾತನಾದ, ಮಹಾಯಶೋವಂತ ಗಂಗಾಪುತ್ರ ಭೀಷ್ಮನು ನಿನಗಾಗಿ ಯುದ್ಧದಲ್ಲಿ ಪೆಟ್ಟು ತಿಂದು ಈಗ ಶರಮಂಚದಲ್ಲಿ ಮಲಗಿದ್ದಾನೆ.
ಹತೋ ದ್ರೋಣಶ್ಚ ಕರ್ಣಶ್ಚ ಹತಃ ಶಲ್ಯಶ್ಚ ವೀರ್ಯವಾನ್ |
ವೈರಾಗ್ನೇರಾದಿಕರ್ತಾ ಚ ಶಕುನಿರ್ವಿನಿಪಾತಿತಃ ॥47॥
ಭ್ರಾತರಸ್ತೇ ಹತಾಃ ಶೂರಾ ಪುತ್ರಾಶ್ಚ ಸಹಸೈನಿಕಾಃ |
ರಾಜಾನಶ್ಚ ಹತಾಃ ಶೂರಾಃ ಸಮರೇಷ್ವನಿವರ್ತಿನಃ ॥48॥
ದ್ರೋಣನು ಸತ್ತ. ಕರ್ಣನು ಸತ್ತ. ವೀರ್ಯವಂತನಾದ ಶಲ್ಯನು ಸತ್ತ. ವೈರಾಗ್ನಿ ಹುಟ್ಟಲು ಮೂಲಕಾರಣನಾದ ಶಕುನಿಯು ಸತ್ತುಬಿದ್ದಿದ್ದಾನೆ. ಶೂರರಾದ ನಿನ್ನ ತಮ್ಮಂದಿರು, ನಿನ್ನ ಮಕ್ಕಳು, ಸೈನಿಕರು, ಶೂರರಾದ ರಾಜರು ಇವರೆಲ್ಲಾ ಸತ್ತಿದ್ದಾರೆ. ಇವರೆಲ್ಲ ಯಾವತ್ತೂ ಯುದ್ಧಕ್ಕೆ ಬೆನ್ನು ಹಾಕಿದವರಲ್ಲ.
ಏತೇ ಚಾನ್ಯೇ ಚ ಬಹವೋ ನಿಹತಾಃ ಕ್ಷತ್ರಿಯರ್ಷಭಾಃ ॥49॥
ಇವರು ಮತ್ತು ಇನ್ನೂ ಅನೇಕ ಉತ್ತಮ ಕ್ಷತ್ರಿಯರು ಯುದ್ಧದಲ್ಲಿ ಸತ್ತಿದ್ದಾರೆ.
ಪ್ರಾತಿಕಾಮೀ ತಥಾ ಪಾಪೋ ದ್ರೌಪದ್ಯಾಃ ಕ್ಲೇಶಕೃದ್ಧತಃ |
ಅವಶಿಷ್ಟಸ್ತ್ವಮೇವೈಕಃ ಕುಲಘ್ನೋಽಧಮಪೂರುಷಃ ॥50॥
ದ್ರೌಪದಿಗೆ ದುಃಖವನ್ನುಂಟುಮಾಡಿದ ನಿನ್ನ ಸಾರಥಿಯಾದ ಪ್ರಾತಿಕಾಮಿಯೂ ವಧಿಸಲ್ಪಟ್ಟಿದ್ದಾನೆ. ಕುಲವನ್ನೇ ನಾಶಮಾಡಿದ ಕೆಟ್ಟಪುರುಷನಾದ ನೀನೊಬ್ಬನೇ ಉಳಿದುಕೊಂಡಿರುವಿ.
ತ್ವಾಮಪ್ಯದ್ಯ ಹನಿಷ್ಯಾಮಿ ಗದಯಾ ನಾತ್ರ ಸಂಶಯಃ |
ಅದ್ಯ ತೇಽಹಂ ರಣೇ ದರ್ಪಂ ಸರ್ವಂ ನಾಶಯಿತಾ ನೃಪ ॥51॥
ರಾಜ್ಯಾಶಾಂ ವಿಪುಲಾಂ ಚಾಪಿ ಪಾಂಡವೇಷು ಚ ದುಷ್ಕೃತಮ್ ॥52॥
ನಿನ್ನನ್ನೂ ಕೂಡ ಗದೆಯಿಂದ ಇಂದು ಕೊಲ್ಲುತ್ತೇನೆ. ಇದರಲ್ಲಿ ಸಂಶಯವಿಲ್ಲ. ರಾಜನೇ! ಇವತ್ತು ಯುದ್ಧದಲ್ಲಿ ನಿನ್ನ ಎಲ್ಲಾ ತರಹದ ದರ್ಪ-ಅಹಂಕಾರವನ್ನು ನಾನು ನಾಶಪಡಿಸುವೆನು. ಜೊತೆಗೆ ನಿನ್ನಲ್ಲಿ ತುಂಬಿರುವ ರಾಜ್ಯದ ಮೇಲಿನ ಅಭಿಲಾಷೆಯನ್ನೂ, ಪಾಂಡವರ ವಿಷಯದಲ್ಲಿ ಮಾಡಿದ ಅನಾಚಾರವನ್ನೂ ಕೊನೆಗೊಳಿಸುವೆನು.
ದುರ್ಯೋಧನಃ
ಕಿಂ ಕತ್ಥನೇನ ಬಹುಧಾ ಯುಧ್ಯಸ್ವಾದ್ಯ ಮಯಾ ಸಹ |
ಅದ್ಯ ತೇಽಹಂ ವಿನೇಷ್ಯಾಮಿ ಯುದ್ಧಶ್ರದ್ಧಾಂ ವೃಕೋದರ ॥53॥
ದುರ್ಯೋಧನ ಹೇ ವೃಕೋದರ! ಬಹಳವಾಗಿ ಜಂಭಕೊಚ್ಚಿ ಮಾತನಾಡಿದರೆ ಏನು ಫಲ? ಇವತ್ತು ನನ್ನ ಜೊತೆಗೆ ಯುದ್ಧ ಮಾಡು. ನಿನ್ನಲ್ಲಿರುವ ಯುದ್ಧದ ಶ್ರದ್ಧೆಯನ್ನೆ ಇವತ್ತು ನಾನು ನಾಶ ಮಾಡುತ್ತೇನೆ.
ಕಿಂ ನ ಪಶ್ಯಸಿ ಮಾಂ ಪಾರ್ಥ ಗದಾಪಾಣಿಮವಸ್ಥಿತಮ್ |
ಹಿಮವಚ್ಛಿಖರಾಕಾರಾಂ ಪ್ರಗೃಹ್ಯ ಮಹತೀಂ ಗದಾಮ್ ॥54॥
ಹೇ ಪಾರ್ಥ! ಹಿಮಾಲಯದ ಶಿಖರದಂತಿರುವ ದೊಡ್ಡದಾದ ಗದೆಯನ್ನು ಕೈಯಲ್ಲಿ ಹಿಡಿದಿರುವ ನನ್ನನ್ನು ನೀನು ನೋಡುತ್ತಿಲ್ಲವೇನು?
ಗದಿನಂ ಕೋಽದ್ಯ ಮಾಂ ಪಾರ್ಥ ಜೇತುಮುತ್ಸಹತೇ ರಿಪುಃ |
ನ್ಯಾಯತೋ ಯುಧ್ಯಮಾನಶ್ಚ ದೇವೇಷ್ವಪಿ ಪುರಂದರಃ ॥55॥
ಗದೆಯನ್ನು ಹಿಡಿದುಕೊಂಡು ಯುದ್ಧಕ್ಕೆ ನಿಂತಿರುವ ನನ್ನನ್ನು ಗೆಲ್ಲಲು ಯಾವ ಶತ್ರುವು ಉತ್ಸಾಹವನ್ನು ತೋರಿಯಾನು? ನ್ಯಾಯದಿಂದ ಯುದ್ಧಮಾಡುವ ದೇವೇಂದ್ರನೂ ನನ್ನ ವಿಷಯದಲ್ಲಿ ಉತ್ಸಾಹವನ್ನು ತೋರುವುದಿಲ್ಲ.

ಮಾ ವೃಥಾ ಗರ್ಜ ಕೌಂತೇಯ ಶಾರದಾಭ್ರ ಇವಾಜಲಃ |
ದರ್ಶಯಸ್ವ ಬಲಂ ಯುದ್ಧೇ ಯಾವನ್ನಾಸೂನ್ ನಿಹನ್ಮಿ ತೇ ॥56॥
ಶರತ್ಕಾಲದ ನೀರಿಲ್ಲದ ಮೋಡದಂತೆ ವ್ಯರ್ಥವಾಗಿ ಗರ್ಜನೆ ಮಾಡಬೇಡ. ಯುದ್ಧದಲ್ಲಿ ನಿನ್ನ ಬಲವನ್ನು ಪ್ರದರ್ಶಿಸು. ನಿನ್ನ ಪ್ರಾಣವನ್ನೇ ನಾಶಪಡಿಸುವೆನು.
ಸಂಜಯಃ
ತಸ್ಯ ತದ್ವಚನಂ ಶ್ರುತ್ವಾ ಪಾಂಚಾಲಾಃ ಸಹಸೃಂಜಯಾಃ |
ಸರ್ವೇ ಸಂಪೂಜಯಾಮಾಸುಃ ತದ್ವಚೋ ವಿಜಿಗೀಷವಃ ॥57॥
ಸಂಜಯ ದುರ್ಯೋಧನನ ಆ ಮಾತನ್ನು ಕೇಳಿ ಪಾಂಚಾಲರು, ಸೃಂಜಯರು ಇವರೆಲ್ಲರೂ ಯುದ್ಧವನ್ನು ಗೆಲ್ಲುವ ಇಚ್ಛೆಯಿಂದ ಅನುಮೋದಿಸಿದರು.
ತಂ ಮತ್ತಮಿವ ಮಾತಂಗಂ ತಳಶಬ್ದೇನ ಪಾರ್ಥಿವಾಃ |
ಭೂಯಃ ಸಂಹರ್ಷಯಾಮಾಸುಃ ರಾಜನ್ ದುರ್ಯೋಧನಂ ದ್ವಿಷಃ ॥
ರಾಜನೇ! ಮದವೇರಿದ ಮದ್ದಾನೆಯನ್ನು ಕರತಾಡನದಿಂದ ಹುರಿದುಂಬಿಸುವಂತೆ ಪಾಂಡವಶತ್ರುಗಳಾದ ಕ್ಷತ್ರಿಯ ರಾಜರೆಲ್ಲರು ಕರತಾಡನದಿಂದ ದುರ್ಯೋಧನನನ್ನು ಹುರಿದುಂಬಿಸಿದರು.
ಬೃಹಂತಿ ಕುಂಜರಾ ರಾಜನ್ ಹಯಾ ಹೇ(ಹ್ರೇ)ಷಂತಿ ಚಾಸಕೃತ್ |
ಶಸಾತ್ರಣಿ ಸಂಪ್ರದೀಪ್ಯಂತೇ ಪಾಂಡವಾನಾಂ ಯಶಸ್ವಿನಾಮ್ ॥59॥
ಆನೆಗಳು ಅನೇಕ ರೀತಿಯಲ್ಲಿ ಘೀಳಿಡುತ್ತಿದ್ದವು. ಕುದುರೆಗಳು ಹೇಷಾರವವನ್ನು ಮಾಡುತ್ತಿದ್ದವು. ಕೀರ್ತಿವಂತರಾದ ಪಾಂಡವರ ಶಸ್ತ್ರಗಳು ಚೆನ್ನಾಗಿ ಶೋಭಿಸುತ್ತಿದ್ದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ಬಲರಾಮನ ಆಗಮನ. ಅವನಿಗೆ ಸ್ವಾಗತ-ಉಪಚಾರ.
ಭೀಮ ಮತ್ತು ದುರ್ಯೋಧನರ ಯುದ್ಧ ಪ್ರಾರಂಭ.
ಸಂಜಯಃ
ತಸ್ಮಿನ್ ಯುದ್ಧೇ ಮಹಾರಾಜ ಸಂಪ್ರವೃತ್ತೇ ಭಯಾನಕೇ |
ಉಪಾವಿಷ್ಟೇಷು ಸರ್ವೇಷು ಪಾಂಡವೇಷು ಮಹಾತ್ಮಸು ॥1॥
ತತಸ್ತಾಳಧ್ವಜೋ ರಾಮಸ್ತಯೋರ್ಯುದ್ಧ ಉಪಸ್ಥಿತೇ |
ಶ್ರುತ್ವಾ ತಚ್ಛಿಷ್ಯಯೋರ್ಯುದ್ಧಮಾಜಗಾಮ ಮಹಾಬಲಃ ॥2॥
ಸಂಜಯ ಮಹಾರಾಜನೇ! ಆ ಯುದ್ಧವು ಭಯಾನಕವಾಗಿ ನಡೆಯುತ್ತಿದೆ. ಮಹಾತ್ಮರಾದ ಎಲ್ಲಾ ಪಾಂಡವರು ಕುಳಿತುಕೊಂಡಿದ್ದಾರೆ. ಭೀಮ-ದುರ್ಯೋಧನರಲ್ಲಿ ಯುದ್ಧವು ಪ್ರಾರಂಭವಾಗುತ್ತಿತ್ತು. ಆಗ ತನ್ನ ಶಿಷ್ಯರ ಯುದ್ಧವನ್ನು ಕೇಳಿ ತಿಳಿದ, ತಾಳೆಯ ಮರದ ಚಿಹ್ನೆಯುಳ್ಳ ಧ್ವಜವನ್ನು ಹೊಂದಿರುವ ಬಲರಾಮನು ಆ ಯುದ್ಧವನ್ನು ನೋಡಲು ಬಂದನು.
ತಂ ದೃಷ್ಟ್ವಾ ಪರಮಪ್ರೀತಾಃ ಪೂಜಯಿತ್ವಾ ಮಹಾಬಲಾಃ |
ಶಿಷ್ಯಯೋಃ ಕೌಶಲಂ ಯುದ್ಧೇ ಪಶ್ಯ ರಾಮೇತಿ ಚಾಬ್ರುವನ್ ॥3॥
ಅವನನ್ನು ನೋಡಿದ ಮಹಾಬಲಶಾಲಿಗಳಾದ ಪಾಂಡವರು ಬಲರಾಮನನ್ನು ಪೂಜಿಸಿದರು. `ನಿನ್ನ ಶಿಷ್ಯರ ಯುದ್ಧಕೌಶಲವನ್ನು ನೋಡು' ಎಂದು ಹೇಳಿದರು.
ಅಬ್ರವೀಚ್ಚ ತದಾ ರಾಮೋ ದೃಷ್ಟ್ವಾ ಕೃಷ್ಣಂ ಚ ಪಾಂಡವಮ್ |
ದುರ್ಯೋಧನಂ ಚ ಕೌರವ್ಯಂ ಗದಾಪಾಣಿಮವಸ್ಥಿತಮ್ ॥4॥
ಆಗ ಕೃಷ್ಣನನ್ನು, ಪಾಂಡವ ಭೀಮನನ್ನು, ಗದಾಪಾಣಿಯಾದ ಕೌರವ ದುರ್ಯೋಧನನನ್ನೂ ನೋಡಿ ಬಲರಾಮನು ಹೀಗೆ ಹೇಳುತ್ತಾನೆ.
ಬಲರಾಮಃ
ಚತ್ವಾರಿಂಶದ್ ದಿನಾನ್ಯದ್ಯ ದ್ವೇ ಚಾನ್ಯೇ ನಿಃಸೃತಸ್ಯ ಮೇ |
ಪುಷ್ಯೇಣ ಸಂಪ್ರಯಾತೋಽಸ್ಮಿ ಶ್ರವಣೇ ಪುನರಾಗತಃ ॥5॥
ಬಲರಾಮ ನಾನು ಹೊರಟು ನಲವತ್ತೆರಡು ದಿನಗಳು ಕಳೆದವು. ಪುಷ್ಯನಕ್ಷತ್ರದ ದಿನ ಹೊರಟ ನಾನು ಶ್ರವಣನಕ್ಷತ್ರದ ದಿನ ಮತ್ತೆ ಹಿಂತಿರುಗಿ ಬಂದಿದ್ದೇನೆ.
ಶಿಷ್ಯಯೋರ್ವೈ ಗದಾಯುದ್ಧಂ ದ್ರಷ್ಟುಕಾಮೋಽಸ್ಮಿ ಮಾಧವ ॥6॥
ಮಾಧವನೇ! ನನ್ನ ಇಬ್ಬರು ಶಿಷ್ಯರ ಗದಾಯುದ್ಧವನ್ನು ನೋಡಲು ಬಯಸಿರುವೆನು.
ಸಂಜಯಃ
ತತಸ್ತದಾ ಗದಾಹಸ್ತೌ ದುರ್ಯೋಧನವೃಕೋದರೌ |
ಯುದ್ಧಭೂಮಿಗತಾ ವೀರಾವುಭಾವೇವ ವಿರೇಜತುಃ॥7॥
ಸಂಜಯ ಆಗ ಗದಾಧಾರಿಗಳಾದ ದುರ್ಯೋಧನ ಮತ್ತು ಭೀಮಸೇನ ಇವರಿಬ್ಬರೂ ಯುದ್ಧಭೂಮಿಗೆ ಬಂದು ಇವರಿಬ್ಬರೇ ಅಲ್ಲಿ

ಪ್ರಕಾಶಿಸುತ್ತಿದ್ದರು.
ತತೋ ಯುಧಿಷ್ಠಿರೋ ರಾಜಾ ಪರಿಷ್ವಜ್ಯ ಹಲಾಯುಧಮ್ |
ಸ್ವಾಗತಂ ಕುಶಲಂ ಚಾಸ್ಮೈ ಪರ್ಯಪೃಚ್ಛದ್ಯಥಾತಥಮ್ ॥8॥
ಅನಂತರ ರಾಜನಾದ ಯುಧಿಷ್ಠಿರನು ಬಲರಾಮನನ್ನು ಆಲಿಂಗಿಸಿಕೊಂಡು ವಿಧ್ಯುಕ್ತರೀತಿಯಲ್ಲಿ ಸ್ವಾಗತ ಮತ್ತು ಕುಶಲಪ್ರಶ್ನೆಯನ್ನು ಮಾಡಿದನು.
ಕೃಷ್ಣೌ ಚಾಪಿ ಮಹೇಷ್ವಾಸಾವಭಿವಾದ್ಯ ಹಲಾಯುಧಮ್ |
ಸಸ್ವಜಾತೇ ಪರಂ ಪ್ರೀತ್ಯಾ ಪ್ರೀಯಮಾಣೌ ಯಶಸ್ವಿನೌ ॥9॥
ಮಹಾಬಿಲ್ಗಾರರಾದ ಕೃಷ್ಣ ಮತ್ತು ಅರ್ಜುನರು ಕೂಡ ಬಲರಾಮನನ್ನು ನಮಸ್ಕರಿಸಿ, ಪ್ರೀತಿಯಿಂದ ಆನಂದವನ್ನು ಅನುಭವಿಸುತ್ತಾ ಬಲರಾಮನನ್ನು ಆಲಿಂಗಿಸಿಕೊಂಡರು.
ಮಾದ್ರೀಪುತ್ರೌ ತಥಾ ಶೂರೌ ದ್ರೌಪದ್ಯಾಃ ಪಂಚ ಚಾತ್ಮಜಾಃ |
ಅಭಿವಾದ್ಯ ಸ್ಥಿತಾ ರಾಜನ್ ರೌಹಿಣೇಯಂ ಮಹಾಬಲಮ್ ॥10॥
ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ಮತ್ತು ದ್ರೌಪದಿಯ ಐದು ಮಕ್ಕಳು ಕೂಡ ಮಹಾಬಲಶಾಲಿಯಾದ ಬಲರಾಮನಿಗೆ ನಮಸ್ಕರಿಸಿ ನಿಂತುಕೊಂಡರು.
ಭೀಮಸೇನೋಽಪಿ ಬಲವಾನ್ ಪುತ್ರಶ್ಚ ತವ ಭಾರತ |
ತೌ ತಥೈವೋದ್ಯತಗದೌ ಪೂಜಯೇತಾಂ ಹಲಾಯುಧಮ್ ॥11॥
ಭೀಮಸೇನ ಮತ್ತು ನಿನ್ನ ಮಗ ಬಲಶಾಲಿಯಾದ ದುರ್ಯೋಧನನು ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಹಲಾಯುಧನಾದ ಬಲರಾಮನನ್ನು ಪೂಜಿಸಿದರು.
ಸ್ವಾಗತೇನ ಚ ತೇ ತತ್ರ ಪ್ರತಿಪೂಜ್ಯ ಪುನಃ ಪುನಃ |
ಪಶ್ಯ ಯುದ್ಧಂ ಮಹಾಬಾಹ್ವೋರಿತಿ ತೇ ರಾಮಮಬ್ರುವನ್ ॥12॥
ಏವಮೂಚುರ್ಮಹಾತ್ಮಾನಂ ರೌಹಿಣೇಯಂ ನರಾಧಿಪ ॥13॥
ಅಲ್ಲಿ ನೆರೆದಿದ್ದ ಪಾಂಡವರು ಮತ್ತೆ ಮತ್ತೆ ಬಲರಾಮನಿಗೆ ಸ್ವಾಗತವನ್ನು ಹೇಳಿ, ``ನರಾಧಿಪನೇ! ಈ ಮಹಾಬಾಹುಗಳ ಯುದ್ಧವನ್ನು ನೋಡು'' ಎಂದು ಹೇಳಿದರು.
ಪರಿಷ್ವಜ್ಯ ತದಾ ರಾಮಃ ಪಾಂಡವಾನ್ ಸೃಂಜಯಾನಪಿ |
ಅಪೃಚ್ಛತ್ ಕುಶಲಂ ಸರ್ವಾನ್ ಪಾಂಡವಾಂಶ್ಚಾಮಿತೌಜಸಃ ॥14॥
ಆಗ ಬಲರಾಮನು ಪಾಂಡವರನ್ನು, ಸೃಂಜಯರನ್ನು ಪ್ರೀತಿಯಿಂದ ಆಲಿಂಗಿಸಿಕೊಂಡನು. ಅಪಾರವಾದ ಓಜಸ್ಸು ಉಳ್ಳ ಪಾಂಡವರನ್ನು ಕುಶಲದ ಬಗ್ಗೆ ವಿಚಾರಿಸಿದನು.
ತಥೈವ ತೇ ಸಮಾಸಾದ್ಯ ಪಪ್ರಚ್ಛುಸ್ತಮನಾಮಯಮ್ ॥15॥
ಅದೇ ರೀತಿಯಲ್ಲಿ ಅವರೂ ಕೂಡ ಬಲರಾಮನ ಆರೋಗ್ಯದ ಬಗ್ಗೆ ವಿಚಾರಿಸಿದರು.
ತಾನ್ ಪ್ರತ್ಯರ್ಚ್ಯ ಹಲೀ ಸರ್ವಾನ್ ಕ್ಷತ್ರಿಯಾಂಶ್ಚಾಮಿತೌಜಸಃ |
ಕೃತ್ವಾ ಕುಶಲಸಂಪ್ರಶ್ನಂ ಸಂವಿದಂ ಚ ಯಥಾವಯಃ ॥16॥
ಬಲರಾಮನು ಬಹಳ ಓಜಸ್ಸುಳ್ಳ ಎಲ್ಲಾ ಕ್ಷತ್ರಿಯರನ್ನು ತಾನೂ ಗೌರವಿಸಿ, ಅವರ ಆರೋಗ್ಯವನ್ನು ವಿಚಾರಿಸಿದನು. ಮತ್ತು ವಯಸ್ಸಿಗೆ ಅನುಗುಣವಾಗಿ ಅವರೊಂದಿಗೆ ವಿಚಾರವಿನಿಮಯವನ್ನು ಮಾಡಿದನು.
ಜನಾರ್ದನಂ ಸಾತ್ಯಕಿಂ ಚ ಪ್ರೇಮ್ಣಾ ಸಂಪರಿಷಸ್ವಜೇ ॥17॥
ಶ್ರೀಕೃಷ್ಣನನ್ನೂ ಮತ್ತು ಸಾತ್ಯಕಿಯನ್ನು ಪ್ರೀತಿಯಿಂದ ಆಲಿಂಗಿಸಿಕೊಂಡನು.
ಮೂರ್ಧ್ನಿ ಚೈತಾವುಪಾಘ್ರಾಯ ಕುಶಲಂ ಪರ್ಯಪೃಚ್ಛತ ॥18॥
ಅವರ ನೆತ್ತಿಯನ್ನು ಆಘ್ರಾಣಿಸಿ ಕುಶಲಪ್ರಶ್ನೆಯನ್ನು ಮಾಡಿದನು.
ತೌ ಚೈನಂ ವಿಧಿವದ್ ರಾಜನ್ ಪೂಜಯಾಮಾಸತುರ್ಗುರುಮ್ |
ಬ್ರಹ್ಮಾಣಮಿವ ದೇವೇಶಮಿಂದ್ರೋಪೇಂದ್ರೌ ಮುದಾ ಯುತೌ ॥19॥
ರಾಜನೇ! ಹಿರಿಯನಾದ ಬಲರಾಮನನ್ನು ಅವರೂ ಕೂಡ, ಇಂದ್ರ ಮತ್ತು ಉಪೇಂದ್ರ (ವಾಮನ)ರು ಚತುರ್ಮುಖಬ್ರಹ್ಮನನ್ನು ಪೂಜಿಸಿದಂತೆ ವಿಧಿವತ್ತಾಗಿ ಪೂಜಿಸಿದರು.
ತತೋಽಬ್ರವೀದ್ ಧರ್ಮಸುತೋ ರೌಹಿಣೇಯಮರಿಂದಮಮ್ |
ಇದಂ ಭ್ರಾತ್ರೋರ್ಮಹಾಯುದ್ಧಂ ಪಶ್ಯ ರಾಮೇತಿ ಭಾರತ ॥20॥
ಭರತಕುಲೋದ್ಭವನೇ! ಅನಂತರ ಧರ್ಮರಾಜನು ಶತ್ರುಸಂಹಾರಕನಾದ ಬಲರಾಮನಿಗೆ ``ಬಲರಾಮನೇ! ಸಹೋದರರ ಮಧ್ಯೆ ನಡೆಯುತ್ತಿರುವ ಮಹಾಯುದ್ಧವನ್ನು ನೋಡು!'' ಎಂದು ಹೇಳಿದನು.
ತೇಷಾಂ ಮಧ್ಯೇ ಮಹಾಬಾಹುಃ ಶ್ರೀಮಾನ್ ಕೇಶವಪೂರ್ವಜಃ |
ನ್ಯವಿಶತ್ ಪರಮಪ್ರೀತಃ ಪ್ರೀಯಮಾಣೋ ಮಹಾರಥೈಃ ॥21॥
ಕಾಂತಿಮಂತನಾದ ಮಹಾಬಾಹು ಬಲರಾಮನು ಮಹಾರಥರಿಂದ ಪೂಜಿತನಾಗಿ ಬಹಳವಾಗಿ ಸಂಪ್ರೀತನಾಗಿ ಪಾಂಡವರ ಮಧ್ಯದಲ್ಲಿ ಕುಳಿತನು.
ಸ ಬಭೌ ರಾಜಮಧ್ಯಸ್ಥೋ ನೀಲಾವಾಸಾಃ ಸಿತಪ್ರಭಃ |
ದಿವೀವ ನಕ್ಷತ್ರಗಣೈಃ ಪರಿಕೀರ್ಣೋ ನಿಶಾಕರಃ ॥22॥

ರಾಜರೆಲ್ಲರ ಮಧ್ಯದಲ್ಲಿ ಇದ್ದ, ನೀಲಬಣ್ಣದ ಬಟ್ಟೆಯನ್ನು ಧರಿಸಿರುವ, ಬೆಳ್ಳಗಿನ ಪ್ರಭೆಯನ್ನು ಹೊಂದಿರುವ ಬಲರಾಮನು ಆಕಾಶದಲ್ಲಿ ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನ ಹಾಗೆ ಶೋಭಿಸಿದನು.
ತತಸ್ತಯೋಃ ಸನ್ನಿಪಾತಸ್ತುಮುಲೋ ರೋಮಹರ್ಷಣಃ |
ಆಸೀದಂತಕರೋ ರಾಜನ್ ವೈರಸ್ಯಾಂತಂ ವಿಧಿತ್ಸತೋಃ ॥23॥
ರಾಜನ್! ಅನಂತರ ವೈರವನ್ನು ಕೊನೆಗೊಳಿಸುವ ಇಚ್ಛೆಯನ್ನು ಹೊಂದಿರುವ ಆ ಭೀಮ-ದುರ್ಯೋಧನರ ಮಧ್ಯೆ ರೋಮಾಂಚನಕಾರಿಯಾದ ಭಯಂಕರವಾದ ಹೊಡೆದಾಟವು ನಡೆಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಸಾರಸ್ವತಪರ್ವ
ಆರನೆಯ ಅಧ್ಯಾಯ
ಬಲರಾಮನು ಮಾಡಿದ ತೀರ್ಥಯಾತ್ರೆಯ ಬಗ್ಗೆ ವೈಶಂಪಾಯನರಲ್ಲಿ ಜನಮೇಜಯನ ಪ್ರಶ್ನೆ. ವೈಶಂಪಾಯನರು ಅದನ್ನು ಹೇಳುತ್ತಾ ಪ್ರಭಾಸತೀರ್ಥಕ್ಕೆ ಆ ಹೆಸರು ಬರಲು ಕಾರಣವೇನೆಂಬುದನ್ನು ತಿಳಿಸುವುದು. ಚಂದ್ರನು ತನ್ನ ಪತ್ನಿಯರಾದ ಅಶ್ವಿನೀ ಮೊದಲಾದವರನ್ನು ಉಪೇಕ್ಷಿಸಿ ರೋಹಿಣಿಯೊಬ್ಬಳಲ್ಲಿಯೇ ಆಸಕ್ತನಾದಾಗ ಕೋಪಗೊಂಡ ದಕ್ಷನು ಚಂದ್ರನ ಮೇಲೆ ಕ್ಷಯರೋಗವನ್ನು ಹಾಕಿದ್ದು.
ಜನಮೇಜಯಃ
ಪೂರ್ವಮೇವ ಯದಾ ರಾಮೋ ಯುದ್ಧೇ ತಸ್ಮಿನ್ನುಪಸ್ಥಿತೇ |
ಆಮಂತ್ರ್ಯ ಕೇಶವಂ ಯಾತೋ ವೃಷ್ಣಿಭಿಃ ಸಹಿತಃ ಪ್ರಭುಃ ॥1॥
ಜನಮೇಜಯ ಹಿಂದೆಯೇ ಯಾವಾಗ ಯುದ್ಧವು ನಡೆಯುವುದು ನಿಶ್ಚಿತವಾಗಿತ್ತೋ ಆಗ ಪ್ರಭುವಾದ ಬಲರಾಮನು ಶ್ರೀಕೃಷ್ಣನ ಒಪ್ಪಿಗೆಯನ್ನು ಪಡೆದು ವೃಷ್ಣಿಗಳೊಡನೆ ಸೇರಿ ತೀರ್ಥಯಾತ್ರೆಗೆ ಹೋದನು. ಹೋಗುವ ಸಂದರ್ಭದಲ್ಲಿ ಹೀಗೆ ಹೇಳಿದ್ದನು.
ಬಲರಾಮಃ
ಸಾಹಾಯ್ಯಂ ಧಾರ್ತರಾಷ್ಟ್ರಸ್ಯ ನ ಚೇತ್ ಕರ್ತಾಸ್ಮಿ ಕೇಶವ |
ತಥೈವ ಪಾಂಡುಪುತ್ರಾಣಾಂ ಗಮಿಷ್ಯಾಮಿ ಯಥಾತಥಮ್ ॥2॥
ಬಲರಾಮ ಕೇಶವನೇ! ನಾನು ದುರ್ಯೋಧನನಿಗೆ ಯುದ್ಧದಲ್ಲಿ ಸಹಾಯವನ್ನು ಯಾವ ರೀತಿಯಲ್ಲಿ ಮಾಡುವುದಿಲ್ಲವೋ ಅದೇ ರೀತಿಯಲ್ಲಿ ಪಾಂಡವರಿಗೂ ಸಹಾಯ ಮಾಡುವುದಿಲ್ಲ. ನಾನು ತೀರ್ಥಯಾತ್ರೆಗೆ ಹೋಗುವೆನು.
ಜನಮೇಜಯಃ
ಏವಮುಕತ್ವ ತದಾ ರಾಮೋ ಯಾತಃ ಶತ್ರುನಿಷೂದನಃ |
ತಸ್ಯ ಚಾಗಮನಂ ಭೂಯೋ ಬ್ರಹ್ಮನ್ ಬ್ರೂಹ್ಯದ್ಯ ಮೇ ಪ್ರಭೋ॥3॥
ಜನಮೇಜಯ ಶತ್ರುಸಂಹಾರಕನಾದ ಬಲರಾಮನು ಹೀಗೆ ಹೇಳಿ ಹೊರಟುಹೋದನು. ಅವನು ಮತ್ತೆ ಬಂದಿದ್ದಾನೆ. ಜ್ಞಾನಿಯೇ! ಅವನ ಆಗಮನವನ್ನು ನನಗೆ ತಿಳಿಸಿಕೊಡು.
ಆಖ್ಯಾಹಿ ಮೇ ವಿಸ್ತರತಃ ಕಥಂ ರಾಮ ಉಪಸ್ಥಿತಃ |
ಕಥಂ ಚ ದೃಷ್ಟವಾನ್ ಯುದ್ಧಂ ಕುಶಲೋ ಹ್ಯಸಿ ವೈ ದ್ವಿಜ ॥4॥
ದ್ವಿಜನೇ! ನೀನು ಬಹಳ ನಿಪುಣನಾಗಿರುವಿ. ರಾಮನು ಹೇಗೆ ಇದ್ದ? ಯುದ್ಧವನ್ನು ಹೇಗೆ ನೋಡಿದ? ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.
ವೈಶಂಪಾಯನಃ
ಉಪಪ್ಲಾವ್ಯೇ ನಿವಿಷ್ಟೇಷು ಪಾಂಡವೇಷು ಮಹಾತ್ಮಸು |
ಪ್ರೇಷಿತೋ ಧಾರ್ತರಾಷ್ಟ್ರಸ್ಯ ಸಮೀಪಂ ಮಧುಸೂದನಃ ॥5॥
ಶಮಂ ಪ್ರತಿ ಮಹಾಬಾಹೋ ಹಿತಾರ್ಥಂ ಸರ್ವದೇಹಿನಾಮ್ |
ಸ ಗತ್ವಾ ಹಸ್ತಿನಪುರಂ ಧೃತರಾಷ್ಟ್ರಂ ಸಮೇತ್ಯ ಚ ॥6॥
ವೈಶಂಪಾಯನ ಮಹಾತ್ಮರಾದ ಪಾಂಡವರು ಉಪಪ್ಲಾವ್ಯದಲ್ಲಿ ವಾಸಮಾಡುತ್ತಿರುವಾಗ ಶ್ರೀಕೃಷ್ಣನನ್ನು ದುರ್ಯೋಧನನ ಸಮೀಪಕ್ಕೆ ಸಂಧಾನಕ್ಕಾಗಿ ಕಳುಹಿಸಿಕೊಟ್ಟರು. ಮಹಾಬಾಹುವೇ! ಎಲ್ಲರ ಕ್ಷೇಮವೂ ಅವರ ಉದ್ದೇಶವಾಗಿತ್ತು.
ಉಕ್ತವಾನ್ ವಚನಂ ಪಥ್ಯಂ ಹಿತಂ ಚೈವ ವಿಶಾಂಪತೇ |
ನ ಚ ತತ್ ಕೃತವಾನ್ ರಾಜಾ ಯಥಾಽಽಖ್ಯಾತಂ ಹಿ ತೇ ಪುರಾ ॥7॥
ಶ್ರೀಕೃಷ್ಣನು ಹಸ್ತಿನಪುರಕ್ಕೆ ಬಂದು ಧೃತರಾಷ್ಟ್ರನನ್ನು ಭೇಟಿಮಾಡಿ ಪಥ್ಯವಾದ ಹಿತವಾದ ಮಾತನ್ನು ಹೇಳಿದನು. ರಾಜನೇ! ರಾಜ ಧೃತರಾಷ್ಟ್ರನು ಅದನ್ನು ಮಾಡಲಿಲ್ಲ. ಇದರ ಬಗ್ಗೆ ನಾನು ನಿನಗೆ ಹಿಂದೆಯೇ ಹೇಳಿದ್ದೆ.
ಅನವಾಪ್ಯ ಶಮಂ ತತ್ರ ಕೃಷ್ಣಃ ಪುರುಷಸತ್ತಮಃ |
ಆಗಚ್ಛಚ್ಚ ಮಹಾಬಾಹುರುಪಪ್ಲಾವ್ಯಂ ಜನಾಧಿಪ ॥8॥
ರಾಜನೇ! ಪುರುಷೋತ್ತಮನಾದ ಮಹಾಬಾಹು ಶ್ರೀಕೃಷ್ಣನು ಸಂಧಿಯನ್ನು ಮಾಡಲಾಗದೆ ಮತ್ತೆ ಉಪಪ್ಲಾವ್ಯಕ್ಕೆ ಬಂದನು.
ತತಃ ಪ್ರತ್ಯಾಗತಃ ಕೃಷ್ಣೋ ಧೃತರಾಷ್ಟ್ರವಿಸರ್ಜಿತಃ |
ಆಜಗಾಮ ನರವ್ಯಾಘ್ರಃ ಪಾಂಡವಾನಾಮನೀಕಿನೀಮ್ ॥9॥

ಧೃತರಾಷ್ಟ್ರನಿಂದ ಬೀಳ್ಕೊಳ್ಳಲ್ಪಟ್ಟ ಶ್ರೀಕೃಷ್ಣನು ಹಿಂತಿರುಗಿ ಬಂದು ಪಾಂಡವರಿಗೆ ಹೀಗೆ ಹೇಳಿದನು (ಪಾಂಡವರ ಸೈನ್ಯದ ಕಡೆಗೆ ಬಂದನು.)
ಶ್ರೀಭಗವಾನ್
ನ ಕುರ್ವಂತಿ ವಚೋ ಮಹ್ಯಂ ಕುರವಃ ಕಾಲಚೋದಿತಾಃ |
ನಿರ್ಗಚ್ಛಧ್ವಂ ಪಾಂಡವೇಯಾಃ ಪುಷ್ಯೇಣ ಸಹಿತಾ ಮಯಾ ॥10॥
ಶ್ರೀಭಗವಾನ್ ಕಾಲದ ಪ್ರೇರಣೆಗೆ ಒಳಗಾದ ಕುರುಗಳು ನನ್ನ ಮಾತನ್ನು ನಡೆಸಿಕೊಡುವುದಿಲ್ಲ. ಪಾಂಡವರೇ! ಪುಷ್ಯನಕ್ಷತ್ರದ ದಿನ ನನ್ನೊಡನೆ ಹೊರಡಿ.
ವೈಶಂಪಾಯನಃ
ತತೋ ವಿಭಜ್ಯಮಾನೇಷು ಬಲೇಷು ಬಲಿನಾಂ ವರಃ |
ಪ್ರೋವಾಚ ಭ್ರಾತರಂ ಕೃಷ್ಣಂ ರೌಹಿಣೇಯಃ ಪ್ರತಾಪವಾನ್ ॥11॥
ಅನಂತರ ವ್ಯೂಹರಚನೆಗಾಗಿ ಸೈನ್ಯಗಳು ವಿಭಾಗಗೊಳ್ಳುತ್ತಿರಲು ಬಲಶಾಲಿಗಳಲ್ಲಿಯೇ ಶ್ರೇಷ್ಠನಾದ ಪ್ರತಾಪಿ ಬಲರಾಮನು ತನ್ನ ತಮ್ಮ ಶ್ರೀಕೃಷ್ಣನಿಗೆ ಹೀಗೆ ಹೇಳುತ್ತಾನೆ.
ತೇಷಾಮಪಿ ಮಹಾಬಾಹೋ ಸಾಹಾಯ್ಯಂ ಮಧುಸೂದನ |
ಕ್ರಿಯತಾಮಿತಿ ತತ್ ಕೃಷ್ಣೋ ನಾಸ್ಯ ಚಕ್ರೇ ವಚಸ್ತದಾ ॥12॥
ಮಹಾಬಾಹುವಾದ ಮಧುಸೂದನನೇ! ಕೌರವರಿಗೂ ಸಹಾಯವನ್ನು ಮಾಡು. ಎಂದು. ಆಗ ಶ್ರೀಕೃಷ್ಣನು ಬಲರಾಮನ ಮಾತನ್ನು ನಡೆಸಿಕೊಡಲಿಲ್ಲ.
ತತೋ ಮನ್ಯುಪರೀತಾತ್ಮಾ ಜಗಾಮ ಯದುನಂದನಃ |
ತೀರ್ಥಯಾತ್ರಾಂ ಹಲಧರಃ ಸರಸ್ವತ್ಯಾಂ ಮಹಾಯಶಾಃ ॥13॥
ಆಗ ಹಲಧಾರಿಯಾದ ಮಹಾಯಶೋವಂತ ಬಲರಾಮನು ಕೋಪದಿಂದ ಕೂಡಿದವನಾಗಿ ಸರಸ್ವತೀ ನದಿಗೆ ತೀರ್ಥಯಾತ್ರೆಗೆ ಹೋದನು.
ಮೈತ್ರೇ ನಕ್ಷತ್ರಯೋಗೇ ವೈ ಸಹಿತಃ ಸರ್ವಯಾದವೈಃ ॥14॥
ಆಶ್ರಯಾಮಾಸ ಭೋಜಸ್ತು ದುರ್ಯೋಧನಮರಿಂದಮಮ್ |
ಯುಯುಧಾನೇನ ಸಹಿತೋ ವಾಸುದೇವಶ್ಚ ಪಾಂಡವಾನ್ ॥15॥
ಶತ್ರುಸಂಹಾರಕನಾದ ಕೃತವರ್ಮನಾದರೂ ಎಲ್ಲಾ ಯಾದವರನ್ನೂ ಸೇರಿಸಿಕೊಂಡು ಅನೂರಾಧಾನಕ್ಷತ್ರದ ಯೋಗವಿದ್ದಾಗ ದುರ್ಯೋಧನನನ್ನು ಆಶ್ರಯಿಸಿದನು. ಯುಯುಧಾನನ ಜೊತೆಗೆ ಶ್ರೀಕೃಷ್ಣನು ಪಾಂಡವರನ್ನು ಆಶ್ರಯಿಸಿದನು.
ರೌಹಿಣೇಯೇ ಗತೇ ಶೂರೇ ಪುಷ್ಯೇಣ ಮಧುಸೂದನಃ |
ಪಾಂಡವೇಯಾನ್ ಪುರಸ್ಕೃತ್ಯ ಯಯಾವಭಿಮುಖಃ ಕುರೂನ್ ॥16॥
ಗಚ್ಛನ್ನೇವ ಪಥಿಸ್ಥಸ್ತು ರಾಮಃ ಪ್ರೇಷ್ಯಾನುವಾಚ ಹ॥17॥
ಬಲರಾಮನು ಹೊರಟುಹೋದ ಮೇಲೆ ಪುಷ್ಯಾನಕ್ಷತ್ರದ ದಿನ ಶ್ರೀಕೃಷ್ಣನು ಪಾಂಡವರನ್ನು ಮುಂದಿಟ್ಟುಕೊಂಡು ಕೌರವರನ್ನು ಎದುರಿಸಲು ಹೊರಟನು. ಆಗ ಮಾರ್ಗಮಧ್ಯದಲ್ಲಿ ಬಲರಾಮನು ತನ್ನ ಸೇವಕರಿಗೆ ಹೀಗೆ ಹೇಳಿದನು.
ಬಲರಾಮಃ
ಸಂಭಾರಾಂಸ್ತೀರ್ಥಯಾತ್ರಾಯಾಃ ಸರ್ವೋಪಕರಣಾನಿ ಚ |
ಆನಯಧ್ವಂ ದ್ವಾರಕಾಯಾ ಅಗ್ನೀನ್ ವೈ ಯಾಜಕಾಂಸ್ತಥಾ ॥18॥
ಬಲರಾಮ ತೀರ್ಥಯಾತ್ರೆಗೆ ಬೇಕಾದ ಎಲ್ಲ ಸಾಮಗ್ರಿಗಳನ್ನು ದ್ವಾರಕೆಯಿಂದ ತೆಗೆದುಕೊಂಡು ಬನ್ನಿ, ಜೊತೆಗೆ ಯಾಗಕ್ಕೆ ಬೇಕಾದ ಯಾಜ್ಞಕರನ್ನೂ ಅಗ್ನಿಯನ್ನೂ ತನ್ನಿ.
ಸುವರ್ಣಂ ರಾಜತಂ ಚೈವ ಧೇನೂರ್ವಾಸಾಂಸಿ ವಾಜಿನಃ |
ಋತ್ವಿಜಶ್ಚಾನಯಧ್ವಂ ವೈ ಶತಶಶ್ಚ ದ್ವಿಜರ್ಷಭಾನ್ ॥19॥
ಬಂಗಾರ, ಬೆಳ್ಳಿ, ಹಸುಗಳು, ವಸ್ತ್ರಗಳು, ಕುದುರೆಗಳು, ಋತ್ವಿಜರು, ಒಳ್ಳೆಯ ಬ್ರಾಹ್ಮಣರು- ಇವರೆಲ್ಲರನ್ನೂ ತೆಗೆದುಕೊಂಡು ಬನ್ನಿ.
ವೈಶಂಪಾಯನಃ
ಏತಂ ಸಂದಿಶ್ಯ ತು ಪ್ರೇಷ್ಯಾನ್ ಬಲದೇವೋ ಮಹಾಬಲಃ |
ತೀರ್ಥಯಾತ್ರಾಂ ಗತೋ ರಾಮಃ ಕುರೂಣಾಂ ವೈಶಸೇ ತದಾ ॥20॥
ಸರಸ್ವತ್ಯಾಃ ಪ್ರತಿಸ್ರೋತಃ ಸಮುದ್ರಾದಭಿಜಗ್ಮಿವಾನ್ |
ರಾಮೋ ಯದೂತ್ತಮಃ ಶ್ರೀಮಾನ್ ತೀರ್ಥಯಾತ್ರಾಮನುಸ್ಮರನ್ ॥
ವೈಶಂಪಾಯನ ಮಹಾಬಲಶಾಲಿಯಾದ ಬಲರಾಮನು ತನ್ನ ಸೇವಕರಿಗೆ ಹೀಗೆ ಹೇಳಿ, ಕುರುಗಳ ಹಿಂಸಾಸ್ಥಾನವಾದ ಕುರುಕ್ಷೇತ್ರದಿಂದ ತೀರ್ಥಯಾತ್ರೆಗಾಗಿ ಹೋದನು. ಸರಸ್ವತೀ ನದಿಯ ಪ್ರವಾಹಕ್ಕೆ ಪ್ರತಿಯಾಗಿ ಹೊರಟನು. ಯದುಶ್ರೇಷ್ಠನಾದ ಕಾಂತಿಮಂತನಾದ ಬಲರಾಮನು ತೀರ್ಥಯಾತ್ರೆಯ ವಿಚಾರವನ್ನೇ ಸ್ಮರಿಸಿಕೊಳ್ಳುತ್ತಿದ್ದನು.
ಋತ್ವಿಗ್ಭಿಶ್ಚ ಸುಹೃದ್ಭಿಶ್ಚ ತಥಾಽನ್ಯೈರ್ದ್ವಿಜಸತ್ತಮೈಃ |
ರಥೈರ್ನಾಗೈಸ್ತಥಾಶ್ವೈಶ್ಚ ಪ್ರೇಷ್ಯೈಶ್ಚ ಭರತರ್ಷಭ ॥22॥
ತನ್ನ ಜೊತೆಗೆ ಪುರೋಹಿತರನ್ನು, ಸ್ನೇಹಿತರನ್ನು, ಬೇರೆ ಬ್ರಾಹ್ಮಣೋತ್ತಮರನ್ನು, ರಥಗಳನ್ನು, ಆನೆಗಳನ್ನು, ಕುದುರೆಗಳನ್ನು, ಸೇವಕರನ್ನೂ ಕರೆದೊಯ್ದನು.

ಗೋಖರೋಷ್ಟ್ರಪ್ರಯುಕ್ತೈಶ್ಚ ಯಾನೈಶ್ಚ ಬಹುಭಿರ್ನೃಪ |
ಶ್ರಾಂತಾನಾಂ ಕ್ಲಾಂತಮನಸಾಂ ಶಿಶೂನಾಂ ವಿಪುಲಾಯುಷಾಮ್ ॥23॥
ರಾಜನೇ! ನಡೆದು ಆಯಾಸಗೊಂಡವರನ್ನು, ಮಕ್ಕಳನ್ನು, ವೃದ್ಧರನ್ನು ಕುಳ್ಳಿರಿಸಿ ಎತ್ತು, ಕತ್ತೆ, ಒಂಟೆಗಳು ಎಳೆಯುವ ಅನೇಕ ಬಂಡಿಗಳಲ್ಲಿ ಅವರ ಜೊತೆಗೆ ಬಲರಾಮನು ತೀರ್ಥಯಾತ್ರೆಗೆ ಹೊರಟನು.
ತಾನಿ ಯಾನಾನಿ ದೇಶೇಷು ಪ್ರತೀಕ್ಷಂತೇ ಸ್ಮ ಭಾರತ |
ಬುಭುಕ್ಷಿತಾನಾಮರ್ಥಾಯ ಕ್ಲೃಪ್ತಂ ರಾಜನ್ ಸಮಂತತಃ ॥24॥
ಭರತಕುಲೋದ್ಭವನೇ! ಯಾವ ಜಾಗದಲ್ಲಿ ಯಾವ ಯಾನಗಳನ್ನು ಜನರು ಎದುರುನೋಡುತ್ತಾರೆಯೋ ಅವೆಲ್ಲವೂ ಅಲ್ಲಿದ್ದವು. ರಾಜನೇ! ಹಸಿದವರಿಗೆ ಬೇಕಾದ ವ್ಯವಸ್ಥೆಯೂ ಅಲ್ಲಿ ಮಾಡಲ್ಪಟ್ಟಿತ್ತು.
ಯೋ ಯೋ ಯತ್ರ ದ್ವಿಜೋ ಭೋಕ್ತುಂ ಕಾಮಂ ಕಾಮಯತೇ ತದಾ |
ತಸ್ಯ ತಸ್ಯ ತು ತತ್ರೈವ ಉಪಜಹ್ರುಸ್ತಥಾ ನೃಪ ॥25॥
ಯಾವ ಬ್ರಾಹ್ಮಣನು ಎಲ್ಲಿ ಏನನ್ನು ತಿನ್ನಲು ಬಯಸುತ್ತಾನೆಯೋ ಅಂತಹವರಿಗೆ ಅಲ್ಲಿಯೇ ಅವುಗಳನ್ನು ಒದಗಿಸುತ್ತಿದ್ದರು.
ಯತ್ರ ಸ್ಥಿತಾ ನರಾ ರಾಜನ್ ರೌಹಿಣೇಯಸ್ಯ ಶಾಸನಾತ್ |
ಭಕ್ಷ್ಯಪೇಯಸ್ಯ ಕುರ್ವಂತಿ ರಾಶಿಂ ತತ್ರ ಪೃಥಕ್ ಪೃಥಕ್ ॥26॥
ಬಲರಾಮನ ಅಪ್ಪಣೆಯಿಂದಾಗಿ ಸೇವಕರು ಯಾತ್ರಿಕರಿದ್ದಲ್ಲಿಗೇ ತಿನ್ನುವ ಮತ್ತು ಕುಡಿಯುವ ಪದಾರ್ಥಗಳನ್ನು ಪ್ರತ್ಯೇಕ ಪ್ರತ್ಯೇಕ ರಾಶಿ ಮಾಡಿ ಇಡುತ್ತಿದ್ದರು.
ವಾಸಾಂಸಿ ಚ ಮಹಾರ್ಹಾಣಿ ಪರ್ಯಂಕಾಸ್ತರಣಾನಿ ಚ |
ಪೂಜಾರ್ಥಂ ತತ್ರ ಕ್ಲೃಪ್ತಾನಿ ವಿಪ್ರಾಣಾಂ ಸುಖಮಿಚ್ಛತಾಮ್ ॥27॥
ಯಾವ ಬ್ರಾಹ್ಮಣರು ಯಾತ್ರೆಯಲ್ಲಿ ಸುಖವಾಗಿ ಇರಲು ಇಷ್ಟಪಡುತ್ತಿದ್ದರೋ ಅವರಿಗಾಗಿ ಬೆಲೆಬಾಳುವ ವಸ್ತ್ರಗಳನ್ನು, ಮಂಚ-ಹಾಸಿಗೆ-ಹೊದಿಕೆಗಳನ್ನು ವ್ಯವಸ್ಥೆ ಮಾಡಿದ್ದನು.
ಯತ್ರೈವ ಸುಷುಪುರ್ವಿಪ್ರಾ ಯೇ ವಾ ಜಾಗ್ರತಿ ಭಾರತ |
ತತ್ರ ತತ್ರೈವ ಸರ್ವಸ್ಯ ಕ್ಲೃಪ್ತಂ ಸರ್ವಮದೃಶ್ಯತ ॥28॥
ರಾಜನೇ! ಯಾರು ನಿದ್ರೆಗೆಟ್ಟಿದ್ದರೋ ಅಂತಹ ಬ್ರಾಹ್ಮಣರು ಎಲ್ಲೆಲ್ಲಿ ಮಲಗುತ್ತಿದ್ದರೋ ಆಲ್ಲಲ್ಲಿಯೇ ಅವರಿಗೆ ಬೇಕಾದ ಎಲ್ಲಾ ವ್ಯವಸ್ಥೆಗಳು ಇರುವುದು ಕಂಡುಬಂತು.
ಯಥಾಸುಖಂ ಜನಃ ಸರ್ವಃ ತಿಷ್ಠತೇ ಚ ದಿವಾನಿಶಮ್ |
ಯಾತುಕಾಮಸ್ಯ ಯಾನಾನಿ ಪಾನಾನಿ ತೃಷಿತಸ್ಯ ಚ ॥29॥
ಹಗಲೂರಾತ್ರಿ ಜನರು ಸುಖವಾಗಿ ಇದ್ದರು. ಹೋಗಲು ಇಚ್ಛಿಸುವವರಿಗೆ ವಾಹನದ ವ್ಯವಸ್ಥೆ, ಬಾಯಾರಿದವರಿಗೆ ಪಾನೀಯದ ವ್ಯವಸ್ಥೆಯೂ ಇತ್ತು.
ಬುಭುಕ್ಷಿತಸ್ಯ ಚಾನ್ನಾನಿ ಸ್ವಾದೂನಿ ಭರತರ್ಷಭ ॥30॥
ಹಸಿದವರಿಗೆ ರುಚಿಯಾದ ಭೋಜನದ ವ್ಯವಸ್ಥೆಯೂ ಇತ್ತು.
ಉಪಜಹ್ರುರ್ನರಾಸ್ತತ್ರ ವಸ್ತ್ರಾಣ್ಯಾಭರಣಾನಿ ಚ ॥31॥
ಬಲರಾಮನ ಜನರು ವಸ್ತ್ರಗಳನ್ನೂ, ಆಭರಣಗಳನ್ನೂ ತಂದುಕೊಡುತ್ತಿದ್ದರು.
ಸ ಪಂಥಾಃ ಪ್ರವವೌ ರಾಜನ್ ಸರ್ವಸ್ಯೈವ ಸುಖಾವಹಃ |
ಸ್ವರ್ಗೋಪಮಸ್ತದಾ ರಾಜನ್ ನರಾಣಾಂ ತತ್ರ ಗಚ್ಛತಾಮ್ ॥32॥
ಆ ತೀರ್ಥಯಾತ್ರೆಯ ಮಾರ್ಗವು ಎಲ್ಲರಿಗೂ ಸುಖವನ್ನೇ ಕೊಡುತ್ತಿತ್ತು. ಆ ಮಾರ್ಗದಲ್ಲಿ ಹೋಗುವವರಿಗೆ ಆ ದಾರಿಯು ಸ್ವರ್ಗಲೋಕದಂತೆ ಸುಖವನ್ನು ಕೊಡುತ್ತಿತ್ತು.
ನಿತ್ಯಪ್ರಮುದಿತೋಪೇತಃ ಸ್ವಾದುಭಕ್ಷಜಲಾನ್ವಿತಃ |
ವಿಪಣಾಪಣಪಣ್ಯೈಶ್ಚ ನಾನಾಜನಪದೈರ್ವೃತಃ ॥33॥
ಆ ಮಾರ್ಗದಲ್ಲಿ ಇರುವವರೂ ನಿತ್ಯವೂ ಆನಂದದಿಂದ ಇದ್ದರು. ರುಚಿಯಾದ ಭಕ್ಷ್ಯಗಳು, ನೀರು ಅಲ್ಲಿ ಇರುತ್ತಿದ್ದವು. ಅಂಗಡಿ, ಮುಂಗಟ್ಟುಗಳು ಅಲ್ಲಿ ಇದ್ದವು. ಅನೇಕ ತರಹದ ಗ್ರಾಮಗಳು ಆಲ್ಲಿ ಸಿಗುತ್ತಿದ್ದವು.
ನಾನಾದ್ರುಮಲತೋಪೇತೋ ನಾನಾರತ್ನವಿಭೂಷಿತಃ ॥34॥
ದಾರಿಬದಿಯಲ್ಲಿ ಅನೇಕ ವಿಧದ ಮರಗಳು, ಬಳ್ಳಿಗಳು ಇದ್ದವು. ರತ್ನಗಳಿಂದ ಅಲಂಕೃತವಾಗಿತ್ತು.
ತತೋ ಮಹಾತ್ಮಾ ನಿಯಮೇ ಸ್ಥಿತಾತ್ಮಾ
ಪುಣ್ಯೇಷು ತೀರ್ಥೇಷು ವಸೂನಿ ರಾಜನ್ |
ದದೌ ದ್ವಿಜೇಭ್ಯಃ ಕ್ರತುದಕ್ಷಿಣಾಂ ಚ
ಯದುಪ್ರವೀರೋ ಹಲಧೃಕ್ ಪ್ರತೀತಃ ॥35॥
ರಾಜನೇ! ಅನಂತರ ಹಲಧಾರಿಯೆಂದು ಪ್ರಸಿದ್ಧನಾದ, ವ್ರತದಲ್ಲಿ ಇರುವ ಮಹಾತ್ಮ ಬಲರಾಮನು ಪುಣ್ಯಕ್ಷೇತ್ರಗಳಲ್ಲಿ ಬ್ರಾಹ್ಮಣರಿಗೆ ಬೇರೆ ಬೇರೆ ವಿಧದ ವಸ್ತುಗಳನ್ನು ದಾನಮಾಡಿದನು. ಯದುವೀರನಾದ ಬಲರಾಮನು ಯಜ್ಞದ ದಕ್ಷಿಣೆಯನ್ನೂ ಕೊಟ್ಟನು.
ದೋಗ್ಧ್ರೀಶ್ಚ ಧೇನೂಶ್ಚ ಸಹಸ್ರಶೋ ವೈ
ಸುವಾಸಸಃ ಕಾಂಚನಬದ್ಧಶೃಂಗಾಃ ॥36॥
ಒಳ್ಳೆಯ ಬಟ್ಟೆ ಮತ್ತು ಆಭರಣಗಳಿಂದ ಅಲಂಕೃತವಾದ ಹಾಲುಕೊಡುವ ಸಾವಿರಾರು ಹಸುಗಳನ್ನು ದಾನ ಮಾಡಿದನು. ಆ ಹಸುಗಳ

ಕೊಂಬಿಗೆ ಬಂಗಾರದ ಶಿಖರಗಳನ್ನು ಇಡಲಾಗಿತ್ತು.
ಹಯಾಂಶ್ಚ ನಾನಾವಿಧದೇಶಜಾತಾನ್
ಯಾನಾನಿ ದಾಸೀಶ್ಚ ಶುಚೀರ್ದ್ವಿಜೇಭ್ಯಃ ॥37॥
ಬ್ರಾಹ್ಮಣರಿಗೆ ನಾನಾವಿಧದೇಶಗಳಿಂದ ತಂದಿರುವ ಕುದುರೆಗಳನ್ನು, ರಥಗಳನ್ನು, ಶುಚಿಯರಾದ ದಾಸಿಯರನ್ನು ಕೊಟ್ಟನು.
ರತ್ನಾನಿ ಮುಕ್ತಾಮಣಿವಿದ್ರುಮಾಂಶ್ಚ
ಶಂಗೀಸುವರ್ಣಂ ರಜತಂ ಚ ಶುದ್ಧಮ್ |
ಅಯೋಮಯಂ ತಾಮ್ರಮಯಂ ಚ ಭಾಂಡಂ
ದದೌ ದ್ವಿಜಾತಿಪ್ರವರೇಷು ರಾಮಃ ॥38॥
ಬಲರಾಮನು ರತ್ನಗಳನ್ನು, ಮುತ್ತುಗಳನ್ನು, ಮಣಿಗಳನ್ನು, ಹವಳಗಳನ್ನು, ಅಲಂಕಾರಕ್ಕೆ ಬಳಸುವ ಬಂಗಾರವನ್ನು, ಪರಿಶುದ್ಧವಾದ ಬೆಳ್ಳಿಯನ್ನು, ಕಬ್ಬಿಣದ, ತಾಮ್ರದ ಪಾತ್ರೆಗಳನ್ನು ಉತ್ತಮ ಬ್ರಾಹ್ಮಣರಿಗೆ ದಾನ ಮಾಡಿದನು.
ಏವಂ ಸ ವಿತ್ತಂ ಪ್ರದದೌ ಮಹಾತ್ಮಾ
ಸರಸ್ವತೀತೀರ್ಥಗತೇಷು ಭೂರಿ ॥39॥
ಮಹಾತ್ಮನಾದ ಬಲರಾಮನು ಸರಸ್ವತೀ ತೀರಕ್ಕೆ ಬಂದ ಬ್ರಾಹ್ಮಣರಿಗೆ ಬಹಳವಾಗಿ ಹಣವನ್ನು ದಾನ ಮಾಡಿದನು.
ಯಯೌ ಕ್ರಮೇಣಾಪ್ರತಿಮಪ್ರಭಾವಃ
ತತಃ ಕುರುಕ್ಷೇತ್ರಮುದಾರವೃತ್ತಃ ॥40॥
ಸರಿಸಾಟಿಯಿಲ್ಲದ ಪ್ರಭಾವವುಳ್ಳ, ಉದಾರಚರಿತನಾದ ಬಲರಾಮನು ಕುರುಕ್ಷೇತ್ರಕ್ಕೆ ಹೋದನು.
ಜನಮೇಜಯಃ
ಸಾರಸ್ವತೀನಾಂ ತೀರ್ಥಾನಾಂ ಗುಣೋತ್ಪತ್ತಿಂ ವದಸ್ವ ಮೇ |
ಫಲಂ ಚ ದ್ವಿಪದಾಂ ಶ್ರೇಷ್ಠ ನಿವೃತ್ತಿಮಪಿ ಕರ್ಮಣಾಮ್ ॥41॥
ಜನಮೇಜಯ ಸರಸ್ವತಿಮೊದಲಾದ ತೀರ್ಥಗಳ ಗುಣೋತ್ಪತ್ತಿಯನ್ನು ನನಗೆ ಹೇಳು. ಮನುಜೋತ್ತಮನೇ! ಅಲ್ಲಿ ನಡೆಯುವ ದಾನಾದಿಕರ್ಮಗಳು ಫಲವಿಷಯದಲ್ಲಿ ಹೇಗೆ ಕಾರ್ಯಕಾರಿಗಳಾಗುತ್ತವೆ ಎಂಬುದನ್ನೂ ಹೇಳು.
ಯಥಾಕ್ರಮಂ ಚ ಭಗವನ್ ತೀರ್ಥಾನಾಮನುಪೂರ್ವಶಃ |
ಬ್ರೂಹಿ ಬ್ರಹ್ಮವಿದಾಂ ಶ್ರೇಷ್ಠ ಪರಂ ಕೌತೂಹಲಂ ಹಿ ಮೇ ॥42॥
ಬ್ರಹ್ಮಜ್ಞಾನಿಗಳಲ್ಲಿಯೇ ಶ್ರೇಷ್ಠನಾದವನೇ! ತೀರ್ಥಗಳ ಬಗ್ಗೆ ಕ್ರಮವಾಗಿ ಹೇಳು. ನನಗೆ ಬಹಳ ಕುತೂಹಲವುಂಟಾಗಿದೆ.
ವೈಶಂಪಾಯನಃ
ತೀರ್ಥಾನಾಂ ವಿಸ್ತರಂ ರಾಜನ್ ಗುಣೋತ್ಪತ್ತಿಂ ಚ ಸರ್ವಶಃ |
ಮಯೋಚ್ಯಮಾನಾಂ ಶೃಣು ಮೇ ಪುಣ್ಯಾಂ ರಾಜೇಂದ್ರ ಪಾವನೀಮ್ ॥
ವೈಶಂಪಾಯನ ರಾಜೇಂದ್ರನೇ! ತೀರ್ಥಗಳ ಗುಣೋತ್ಪತ್ತಿಯನ್ನೂ, ಅವುಗಳ ವಿಸ್ತಾರವನ್ನೂ ಎಲ್ಲವನ್ನೂ ಹೇಳುತ್ತೇನೆ. ನಾನು ಹೇಳುವುದನ್ನು ಕೇಳು. ಇದು ಬಹಳ ಪುಣ್ಯಪ್ರದ ಹಾಗೂ ಪವಿತ್ರತೆಯನ್ನು ಕೊಡುವಂತಹದ್ದು.
ಪೂರ್ವಂ ಮಹಾರಾಜ ಯದುಪ್ರವೀರ
ಋತ್ವಿಕ್ಸುಹೃದ್ವಿಪ್ರಗಣೈಶ್ಚ ಸಾರ್ಧಮ್ |
ಪುಣ್ಯಂ ಪ್ರಭಾಸಂ ಸಮುಪಾಜಗಾಮ
ಯತ್ರೋಡುರಾಡ್ಯಕ್ಷ್ಮಣಾ ಕ್ಲಿಶ್ಯಮಾಣಃ ॥44॥
ವಿಮುಕ್ತಶಾಪಃ ಪುನರಾತ್ತತೇಜಾಃ
ಸರ್ವಂ ಜಗದ್ಭಾಸಯತೇ ನರೇಂದ್ರ ॥45॥
ಹಿಂದೆ ಯದುವೀರನಾದ ಬಲರಾಮನು ಪುರೋಹಿತರು, ಸ್ನೇಹಿತರು, ಬ್ರಾಹ್ಮಣರು ಇವರನ್ನು ಕರೆದುಕೊಂಡು ಪುಣ್ಯವಾದ ಪ್ರಭಾಸಕ್ಷೇತ್ರಕ್ಕೆ ಹೋದನು. ಕ್ಷಯದಿಂದ ಕ್ಷೀಣಿಸಿದ್ದ ಚಂದ್ರನು ಆ ಕ್ಷೇತ್ರದಲ್ಲಿ ತನ್ನ ಶಾಪವನ್ನು ಕಳೆದುಕೊಂಡು ಮತ್ತೆ ತನ್ನ ಕಾಂತಿಯನ್ನು ಹೊಂದಿ ಇಡೀ ಜಗತ್ತನ್ನು ಪ್ರಕಾಶಪಡಿಸಿದನು.
ಏತತ್ತು ತೀರ್ಥಪ್ರವರಂ ಪೃಥಿವ್ಯಾಂ
ಪ್ರಭಾಸನಾತ್ ತಸ್ಯ ತತಃ ಪ್ರಭಾಸಃ ॥46॥
ಈ ಕ್ಷೇತ್ರವು ಭೂಮಿಯಲ್ಲಿಯೇ ಚೆನ್ನಾಗಿ ಶೋಭಿಸುವುದರಿಂದ ಇದಕ್ಕೆ ಪ್ರಭಾಸ ಎಂಬ ಹೆಸರು ಬಂತು. (ಪ್ರಭಾಸನಾತ್ ಪ್ರಭಾಸಃ)
ಜನಮೇಜಯಃ
ಕಿಮರ್ಥಂ ಭಗವಾನ್ ಸೋಮೋ ಯಕ್ಷ್ಮಣಾ ಪರ್ಯಗೃಹ್ಯತ |
ಕಥಂ ಚ ತೀರ್ಥಪ್ರವರೇ ತಸ್ಮಿಂಶ್ಚಂದ್ರೋ ನ್ಯಮಜ್ಜತ ॥47॥
ಜನಮೇಜಯ ಭಗವಾನ್ ಚಂದ್ರನು ಯಾವ ಕಾರಣದಿಂದ ಕ್ಷಯದಿಂದ ಪೀಡಿತನಾದನು? ಈ ಶ್ರೇಷ್ಠತೀರ್ಥಕ್ಷೇತ್ರದಲ್ಲಿ ಹೇಗೆ ಮುಳುಗಿದನು?
ಕಥಮಾಪ್ಲುತ್ಯ ತಸ್ಮಿಂಶ್ಚ ಪುನರಾಪ್ಯಾಯಿತಃ ಶಶೀ |
ಏತನ್ಮೇ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮುನೇ ॥48॥
ಈ ತೀರ್ಥದಲ್ಲಿ ಮುಳುಗಿ, ಶಾಪಮುಕ್ತನಾಗಿ ಮತ್ತೆ ಹೇಗೆ ಹಿಂದಿನಂತಾದ? ಮಹಾಜ್ಞಾನಿಯೇ! ಇವೆಲ್ಲವನ್ನೂ ನನಗೆ ಹೇಳು.
ವೈಶಂಪಾಯನಃ

ದಕ್ಷಸ್ಯ ತನಯಾ ರಾಜನ್ ಪ್ರಾದುರಾಸನ್ ವಿಶಾಂಪತೇ |
ಸಪ್ತವಿಂಶತ್ತು ತಾಃ ಕನ್ಯಾಃ ಸೋಮಾಯ ಪ್ರದದೌ ಪ್ರಭುಃ ॥49॥
ವೈಶಂಪಾಯನ ರಾಜನ್! ದಕ್ಷಪ್ರಜಾಪತಿಗೆ ಇಪ್ಪತ್ತೇಳು ಹೆಣ್ಣುಮಕ್ಕಳು ಹುಟ್ಟಿದರು. ಪ್ರಭುವಾದ ದಕ್ಷನು ಅವರನ್ನು ಚಂದ್ರನಿಗೆ ಮದುವೆ ಮಾಡಿಕೊಟ್ಟನು.
ನಕ್ಷತ್ರಯೋಗನಿರತಾಃ ಸಂಖ್ಯಾನಾರ್ಥಂ ಚ ತಾ ಭವನ್ |
ಪತ್ನ್ಯೋ ವೈ ತಸ್ಯ ರಾಜೇಂದ್ರ ಸೋಮಸ್ಯ ಶುಭಕರ್ಮಣಃ ॥50॥
ನಕ್ಷತ್ರಗಳೆಂದು ಗುರುತಿಸಲ್ಪಟ್ಟ ಆ ದೇವಿಯರು ಶುಭಾಶುಭಕರ್ಮಗಳನ್ನು ಚೆನ್ನಾಗಿ ಸೂಚಿಸುತ್ತಾ ಇದ್ದರು. ಶುಭಕರ್ಮವನ್ನು ಮಾಡುವ ಚಂದ್ರನ ಮಡದಿಯರಾಗಿದ್ದರು.
ತಾಸ್ತು ಸರ್ವಾ ವಿಶಾಲಾಕ್ಷ್ಯೋ ರೂಪೇಣಾಪ್ರತಿಮಾ ಭವನ್ |
ಅತ್ಯರಿಚ್ಯತ ತಾಸಾಂ ತು ರೋಹಿಣೀ ರೂಪಸಂಪದಾ ॥51॥
ವಿಶಾಲವಾದ ಕಣ್ಣುಳ್ಳ ಅವರೆಲ್ಲರೂ ರೂಪದಿಂದ ಅಸದೃಶರಾಗಿದ್ದರು. ಅವರಲ್ಲಿಯೂ ರೋಹಿಣಿಯು ತನ್ನ ರೂಪಸಂಪತ್ತಿನಿಂದ ಉಳಿದವರನ್ನು ಮೀರಿದ್ದಳು.
ತತಸ್ತಸ್ಯಾಂ ಸ ಭಗವಾನ್ ಪ್ರೀತಿಂ ಚಕ್ರೇ ನಿಶಾಕರಃ |
ಸಾಽಸ್ಯ ಹೃದ್ಯಾ ಬಭೂವಾಥ ತಸ್ಮಾತ್ ತಾಂ ಭಜತೇ ಸದಾ ॥52॥
ಆ ಕಾರಣದಿಂದ ಚಂದ್ರನು ಆ ರೋಹಿಣಿಯಲ್ಲಿ ಪ್ರೀತಿಮಾಡಿದನು. ಅವಳು ಅವನಿಗೆ ಬಹಳ ಇಷ್ಟವಾದಳು. ಯಾವಾಗಲೂ ಅವಳನ್ನೇ ಉಪಭೋಗಿಸಿದನು.
ಶಶೀ ಪುರಾ ಹಿ ರಾಜೇಂದ್ರ ರೋಹಿಣ್ಯಾಮವಸಚ್ಚಿರಮ್ |
ತತೋಽಸ್ಮೈ ಕುಪಿತಾನ್ಯಾಸನ್ ನಕ್ಷತ್ರಾಣಿ ಮಹಾತ್ಮನೇ ॥53॥
ರಾಜನೇ! ಚಂದ್ರನು ರೋಹಿಣಿಯ ಸಮೀಪದಲ್ಲಿಯೇ ಬಹಳ ಕಾಲ ವಾಸಮಾಡಿದನು. ಅದರಿಂದಾಗಿ ಉಳಿದ ನಕ್ಷತ್ರಗಳು ಅವನ ಮೇಲೆ ಕೋಪಗೊಂಡವು.
ತಾ ಗತ್ವಾ ಪಿತರಂ ಪ್ರಾಹುಃ ಪ್ರಜಾಪತಿಮನಿಂದಿತಾಃ ॥54॥
ಯಾವುದೇ ಕಳಂಕವಿಲ್ಲದ ಅವರು ತಂದೆಯಾದ ದಕ್ಷಪ್ರಜಾಪತಿಯ ಬಳಿಗೆ ಬಂದು ಹೀಗೆ ಹೇಳಿದರು.
ತಾರಕಾಃ
ಸೋಮೋ ವಸತಿ ನಾಸ್ಮಾಸು ರೋಹಿಣ್ಯಾಂ ವಸತೇ ಸದಾ ॥55॥
ತಾ ವಯಂ ಸಹಿತಾಃ ಸರ್ವಾಃ ತ್ವತ್ಸಕಾಶಂ ಪ್ರಜೇಶ್ವರ |
ವತ್ಸ್ಯಾಮೋ ನಿಯತಾಹಾರಾಃ ತಪಶ್ಚರಣತತ್ಪರಾಃ ॥56॥
ನಕ್ಷತ್ರಗಳು ಚಂದ್ರನು ನಮ್ಮ ಸಮೀಪ ವಾಸ ಮಾಡುತ್ತಿಲ್ಲ. ಯಾವಾಗಲೂ ರೋಹಿಣಿಯ ಸಮೀಪದಲ್ಲಿಯೇ ವಾಸಿಸುತ್ತಾನೆ. ಪ್ರಜಾಪತಿಯೇ! ಅಂತಹ ನಾವೆಲ್ಲ ಸೇರಿ ನಿನ್ನ ಹತ್ತಿರವೇ ವಾಸಮಾಡುತ್ತೇವೆ. ಇಲ್ಲಿ ಇದ್ದುಕೊಂಡು ಆಹಾರನಿಯಮವನ್ನು ಮಾಡಿಕೊಂಡು ತಪಸ್ಸನ್ನು ಆಚರಿಸುತ್ತೇವೆ.
ವೈಶಂಪಾಯನಃ
ಶ್ರುತ್ವಾ ತು ವಚನಂ ತಾಸಾಂ ದಕ್ಷಃ ಸೋಮಮಥಾಬ್ರವೀತ್ ॥57॥
ವೈಶಂಪಾಯನ ಅವರ ಮಾತನ್ನು ಕೇಳಿ ದಕ್ಷನು ಚಂದ್ರನಿಗೆ ಹೀಗೆ ಹೇಳುತ್ತಾನೆ.
ದಕ್ಷಃ
ಸೋಮ ವರ್ತಸ್ವ ಸರ್ವಾಸು ಮಾ ತ್ವಾಽಧರ್ಮೋ ಮಹಾನ್ ಸ್ಪೃಶೇತ್ ॥
ದಕ್ಷ ಚಂದ್ರನೇ! ಎಲ್ಲರ ಜೊತೆಗೂ ಇರು. ದೊಡ್ಡ ಪಾಪವು ನಿನಗೆ ತಾಗದಿರಲಿ.
ವೈಶಂಪಾಯನಃ
ತಾಃ ಸರ್ವಾಶ್ಚಾಬ್ರವೀದ್ ದಕ್ಷೋ ಗಚ್ಛಧ್ವಂ ಸೋಮಮಂತಿಕಮ್ |
ಸಮಂ ವತ್ಸ್ಯತಿ ಸರ್ವಾಸು ಚಂದ್ರಮಾ ಮಮ ಶಾಸನಾತ್ ॥59॥
ವೈಶಂಪಾಯನ ದಕ್ಷನು ಆ ಎಲ್ಲ ನಕ್ಷತ್ರಗಳಿಗೆ ಹೇಳುತ್ತಾನೆ- `ಚಂದ್ರನ ಸಮೀಪಕ್ಕೆ ಹೋಗಿರಿ. ನನ್ನ ಆದೇಶದಂತೆ ಚಂದ್ರನು ಎಲ್ಲರ ಹತ್ತಿರವೂ ಸಮಾನವಾಗಿ ವಾಸ ಮಾಡುತ್ತಾನೆ' ಎಂದು.
ವಿಸೃಷ್ಟಾಸ್ತಾಸ್ತದಾ ಜಗ್ಮುಃ ಶೀತಾಂಶೋರ್ಭವನಂ ಪ್ರತಿ ॥60॥
ದಕ್ಷನಿಂದ ಕಳುಹಿಸಲ್ಪಟ್ಟ ಅವರು ಚಂದ್ರನ ಮನೆಗೆ ಹೋದರು.
ತತಸ್ತು ಸೋಮೋ ಭಗವಾನ್ ಪುನರೇವ ಮಹೀಪತೇ |
ರೋಹಿಣ್ಯಾ ಸಾರ್ಧಮವಸತ್ ಪ್ರೀಯಮಾಣೋ ಮುಹುರ್ಮುಹುಃ ॥
ರಾಜನೇ! ಭಗವಾನ್ ಸೋಮನು ಪುನಃ ರೋಹಿಣಿಯ ಸಮೀಪದಲ್ಲಿಯೇ ಇರತೊಡಗಿದನು. ಅವಳನ್ನೇ ಮತ್ತೆ ಸಂತೋಷಪಡಿಸತೊಡಗಿದನು.
ತತಸ್ತಾಃ ಸಹಿತಾಃ ಸರ್ವಾ ಭೂಯಃ ಪಿತರಮಬ್ರುವನ್ ॥62॥
ಆಗ ಆ ನಕ್ಷತ್ರಗಳು ಎಲ್ಲರೂ ಸೇರಿಕೊಂಡು ಪುನಃ ತಂದೆಗೆ ಹೇಳಿದರು.
ನಕ್ಷತ್ರಾಣಿ
ಸೋಮೋ ವಸತಿ ನಾಸ್ಮಾಸು ನಾಕರೋದ್ ವಚನಂ ತವ |

ತವ ಶುಶ್ರೂಷಣೇ ಯುಕ್ತಾ ವತ್ಸ್ಯಾಮೋ ಹಿ ತವಾಗ್ರತಃ ॥63॥
ನಕ್ಷತ್ರಗಳು ಚಂದ್ರನು ನಮ್ಮ ಬಳಿ ವಾಸಮಾಡುತ್ತಿಲ್ಲ. ನಿನ್ನ ಮಾತನ್ನು ನಡೆಸಿಕೊಡುತ್ತಿಲ್ಲ. ನಿನ್ನ ಸೇವೆ ಮಾಡುತ್ತಾ ನಿನ್ನ ಮುಂದೆಯೇ ವಾಸಮಾಡುತ್ತೇವೆ.
ವೈಶಂಪಾಯನಃ
ತಾಸಾಂ ತು ವಚನಂ ಶ್ರುತ್ವಾ ದಕ್ಷಃ ಸೋಮಮಥಾಬ್ರವೀತ್ ॥64॥
ವೈಶಂಪಾಯನ ಅವರ ಈ ಮಾತನ್ನು ಕೇಳಿದ ದಕ್ಷನು ಸೋಮನಿಗೆ ಹೇಳಿದನು.
ದಕ್ಷಃ
ಸಮಂ ವರ್ತಸ್ವ ಸರ್ವಾಸು ಮಾ ತ್ವಾ ಶಪ್ಸ್ಯೇ ಹ ಚಂದ್ರಮಾಃ ॥65॥
ದಕ್ಷ ಚಂದ್ರನೇ! ಎಲ್ಲರ ಜೊತೆಗೆ ಸಮಾನವಾಗಿ ಇರು. ಇಲ್ಲದಿದ್ದರೆ ನಿನಗೆ ಶಾಪ ಕೊಡುವೆನು.
ವೈಶಂಪಾಯನಃ
ಅನಾದೃತ್ಯ ತು ತದ್ವಾಕ್ಯಂ ದಕ್ಷಸ್ಯ ಭಗವಾನ್ ಶಶೀ |
ರೋಹಿಣ್ಯಾ ಸಾರ್ಧಮವಸತ್ ತತಸ್ತಾಃ ಕುಪಿತಾಃ ಪುನಃ ॥66॥
ವೈಶಂಪಾಯನ ಭಗವಾನ್ ಚಂದ್ರನು ದಕ್ಷನ ಮಾತನ್ನು ಕಡೆಗಣಿಸಿ ರೋಹಿಣಿಯ ಹತ್ತಿರದಲ್ಲಿಯೇ ವಾಸಮಾಡುತ್ತಿದ್ದನು. ಅದರಿಂದ ಉಳಿದ ನಕ್ಷತ್ರಗಳು ಪುನಃ ಕೋಪಗೊಂಡವು.
ಗತ್ವಾ ಚ ವಚನಂ ಪ್ರಾಹುಃ ಶಿರೋಭಿಃ ಪ್ರಣತಾಸ್ತದಾ ॥67॥
ದಕ್ಷನ ಬಳಿಗೆ ಹೋಗಿ ತಲೆಬಾಗಿ ನಮಸ್ಕರಿಸಿ ಹೇಳಿದವು.
ನಕ್ಷತ್ರಾಣಿ
ಸೋಮೋ ವಸತಿ ನಾಸ್ಮಾಸು ತಸ್ಮಾನ್ನಃ ಶರಣಂ ಭವ |
ರೋಹಿಣ್ಯಾಮೇವ ಭಗವಾನ್ ಸದಾ ವಸತಿ ಚಂದ್ರಮಾಃ ॥68॥
ನಕ್ಷತ್ರಗಳು ಸೋಮನು ನಮ್ಮ ಬಳಿಯಲ್ಲಿ ವಾಸಿಸುತ್ತಿಲ್ಲ. ಆದ್ದರಿಂದ ನಮಗೆ ನೀನೇ ಆಶ್ರಯವನ್ನು ಕೊಡು. ಭಗವಾನ್ ಚಂದ್ರನು ರೋಹಿಣಿ ಸಮೀಪದಲ್ಲಿಯೇ ಯಾವಾಗಲೂ ವಾಸಿಸುತ್ತಿರುತ್ತಾನೆ.
ತಸ್ಮಾನ್ನಸ್ತ್ರಾಹಿ ಸರ್ವಾ ವೈ ಯಥಾ ನಃ ಸೋಮ ಆವಿಶೇತ್ ॥69॥
ಆದ್ದರಿಂದ ನಮ್ಮನ್ನೆಲ್ಲಾ ರಕ್ಷಿಸು. ಸೋಮನು ನಮ್ಮ ಸಮೀಪದಲ್ಲಿಯೂ ಇರುವಂತೆ ಮಾಡು.
ವೈಶಂಪಾಯನಃ
ತಚ್ಚ್ರುತ್ವಾ ಭಗವಾನ್ ಕ್ರುದ್ಧೋ ಯಕ್ಷ್ಮಾಣಂ ಪೃಥಿವೀಪತೇ |
ಸಸರ್ಜ ರೋಷಾತ್ ಸೋಮಾಯ ಸ ಚೋಡುಪತಿಮಾವಿಶತ್ ॥70॥
ವೈಶಂಪಾಯನ ರಾಜನ್! ಅದನ್ನು ಕೇಳಿದ ಭಗವಾನ್ ದಕ್ಷನು ಕ್ರೋಧದಿಂದ ಯಕ್ಷ್ಮ (ಕ್ಷಯರೋಗವನ್ನು) ಸೃಷ್ಟಿಮಾಡಿದನು. ರೋಷದಿಂದ ಅದನ್ನು ಚಂದ್ರನಿಗೆ ಪ್ರಯೋಗಿಸಿದನು. ಆ ಯಕ್ಷ್ಮವು ಚಂದ್ರನನ್ನು ಪ್ರವೇಶಿಸಿತು.
ಸ ಯಕ್ಷ್ಮಣಾಽಭಿಭೂತಃ ಸನ್ ಕ್ಷೀಯತೇಽಹರಹಃ ಶಶೀ ॥71॥
ಕ್ಷಯಕ್ಕೆ ತುತ್ತಾದ ಚಂದ್ರನು ದಿನೇದಿನೇ ಕ್ಷೀಣಿಸತೊಡಗಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ದೇವತೆಗಳಿಂದ ಸಂತುಷ್ಟನಾದ ದಕ್ಷನ ಆದೇಶದಂತೆ ಪ್ರಭಾಸತೀರ್ಥದಲ್ಲಿ ಅವಗಾಹನ ಮಾಡಿ, ಕ್ಷಯವನ್ನು ಪರಿಹರಿಸಿಕೊಂಡಿದ್ದು.
ಬಲರಾಮನು
ಆ ತೀರ್ಥದಲ್ಲಿ ಮಜ್ಜನಾದಿಗಳನ್ನು ಮಾಡಿದ್ದು.
ವೈಶಂಪಾಯನಃ
ಯತ್ನಂ ಚಾಪ್ಯಕರೋದ್ ರಾಜನ್ ಮೋಕ್ಷಾರ್ಥಂ ತಸ್ಯ ಯಕ್ಷ್ಮಣಃ ॥1॥
ಇಷ್ಟ್ವೇಷ್ಟಿಭಿರ್ಮಹಾರಾಜ ವಿಚಿತ್ರಾಭಿರ್ನಿಶಾಕರಃ |
ನ ಚಾಮುಚ್ಯತ ಶಾಪಾದ್ವೈ ಕ್ಷಯಂ ಚೈವಾಧಿಗಚ್ಛತಿ ॥2॥
ವೈಶಂಪಾಯನ ರಾಜನ್! ಚಂದ್ರನು ವಿಚಿತ್ರವಾದ ಅನೇಕ ಯಾಗಗಳನ್ನು ಮಾಡಿ ಆ ಕ್ಷಯದ ಪರಿಹಾರಕ್ಕಾಗಿ ಪ್ರಯತ್ನವನ್ನು ಕೂಡ ಮಾಡಿದನು. ಆದರೆ ದಕ್ಷಶಾಪದಿಂದಾಗಿ ಉಂಟಾದ ಕ್ಷಯವು ಕಳೆದು ಹೋಗಲಿಲ್ಲ.
ಕ್ಷೀಯಮಾಣೇ ತತಃ ಸೋಮೇ ಓಷಧ್ಯೋ ನ ಪ್ರಜಜ್ಞಿರೇ |
ನಿರಾಸ್ವಾದರಸಾಃ ಸರ್ವಾ ಹೀನವೀರ್ಯಾಶ್ಚ ಸರ್ವಶಃ ॥3॥
ಚಂದ್ರನು ಕ್ಷೀಣಿಸಿದಾಗ ಓಷಧಿಸಸ್ಯಗಳು ಹುಟ್ಟಲಿಲ್ಲ. ಎಲ್ಲಾ ಮರ-ಗಿಡಗಳ ರಸಗಳೂ ರುಚಿಯನ್ನು ಕಳೆದುಕೊಂಡವು. ಅವುಗಳ ಶಕ್ತಿಯೂ ಕುಂಠಿತವಾಯಿತು.
ಓಷಧೀನಾಂ ಕ್ಷಯೇ ಜಾತೇ ಪ್ರಾಣಿನಾಮಪಿ ಸಂಕ್ಷಯಃ |
ಕೃಶಾಶ್ಚಾಸನ್ ಪ್ರಜಾಃ ಸರ್ವಾಃ ಕ್ಷೀಯಮಾಣೇ ನಿಶಾಕರೇ ॥4॥
ಸಸ್ಯ-ಮರಗಳು ಕ್ಷೀಣಿಸಿದಾಗ ಪ್ರಾಣಿಗಳೂ ಕ್ಷೀಣಿಸ ತೊಡಗಿದವು. ಚಂದ್ರನು ಕ್ಷೀಣಿಸಿದಾಗ ಎಲ್ಲಾ ಮನುಷ್ಯರೂ ಕೃಶರಾದರು.

ತತೋ ದೇವಾಃ ಸಮಾಗಮ್ಯ ಸೋಮಮೂಚುರ್ನರಾಧಿಪ ॥5॥
ರಾಜನೇ! ಆಗ ದೇವತೆಗಳು ಚಂದ್ರನ ಬಳಿಗೆ ಬಂದು ಹೀಗೆ ಹೇಳುತ್ತಾರೆ.
ದೇವಾಃ
ಕಿಮಿದಂ ಭವತೋ ರೂಪಮೀದೃಶಂ ಸಂಪ್ರಕಾಶತೇ |
ಕಾರಣಂ ಬ್ರೂಹಿ ನಃ ಸರ್ವಂ ಯೇನೇದಂ ತೇ ಮಹದ್ಭಯಮ್ ॥6॥
ಶ್ರುತ್ವಾ ತು ಕಾರಣಂ ತ್ವತ್ತೋ ವಿಧಾಸ್ಯಾಮಸ್ತತೋ ವಯಮ್ ॥7॥
ದೇವತೆಗಳು ಏನಿದು? ನಿನ್ನ ರೂಪವು ಈ ರೀತಿಯಲ್ಲಿ ತೋರುತ್ತಿದೆ. ಇದಕ್ಕೇನು ಕಾರಣ? ನಿನ್ನನ್ನು ಯಾಕೆ ಈ ಭಯವು ಆವರಿಸಿಕೊಂಡಿದೆ? ಎಲ್ಲವನ್ನೂ ಹೇಳು. ಇದರ ಕಾರಣವನ್ನು ಕೇಳಿ ತಿಳಿದುಕೊಂಡು ಅನಂತರ ನಾವು ಏನು ಮಾಡಬೇಕೋ ಅದನ್ನು ಮಾಡುತ್ತೇವೆ.
ವೈಶಂಪಾಯನಃ
ಏವಮುಕ್ತಃ ಪ್ರತ್ಯುವಾಚ ಸರ್ವಾಂಸ್ತಾನ್ ಶಶಲಕ್ಷಣಃ |
ಶಾಪಸ್ಯ ಕಾರಣಂ ಚೈವ ಯಕ್ಷ್ಮಾಣಂ ಚ ತಥಾಽಽತ್ಮನಃ ॥8॥
ವೈಶಂಪಾಯನ ದೇವತೆಗಳ ಮಾತನ್ನು ಕೇಳಿಸಿಕೊಂಡ ಚಂದ್ರನು ಅವರಿಗೆ ಎಲ್ಲವನ್ನೂ ಹೇಳಿದನು. ಶಾಪದ ಕಾರಣವನ್ನೂ, ತನಗೆ ಬಂದ ಕ್ಷಯದ ಬಗ್ಗೆಯೂ ಹೇಳಿದನು.
ದೇವಾಸ್ತಸ್ಯ ವಚಃ ಶ್ರುತ್ವಾ ಗತ್ವಾ ದಕ್ಷಮಥಾಬ್ರುವನ್ ॥9॥
ದೇವತೆಗಳು ಅವನ ಮಾತನ್ನು ಕೇಳಿ ದಕ್ಷನಲ್ಲಿ ಹೋಗಿ ಅವನಿಗೆ ಹೀಗೆ ಹೇಳುತ್ತಾರೆ.
ದೇವಾಃ
ಪ್ರಸೀದತು ಭವಾನ್ ಸೋಮೇ ಶಾಪೋಽಯಂ ವಿನಿವರ್ತ್ಯತಾಮ್ |
ಅಸೌ ಹಿ ಚಂದ್ರಮಾ ಕ್ಷೀಣಃ ಕಿಂಚಿಚ್ಛೇಷಶ್ಚ ಲಕ್ಷ್ಯತೇ ॥10॥
ಕ್ಷಯಂ ವ್ರಜತಿ ಶೀತಾಂಶೌ ತತ್ಪ್ರಜಾ ಆಗತಾಃ ಕ್ಷಯಮ್ |
ವೀರುದೋಷಧಯಶ್ಚೈವ ಬೀಜಾನಿ ವಿವಿಧಾನಿ ಚ ॥11॥
ತೇಷಾಂ ಕ್ಷಯೇ ಕ್ಷಯೋಽಸ್ಮಾಕಮಿತಾಸ್ಮಾಭಿಃ ಜಗಚ್ಚ ಕಿಮ್ ॥12॥
ಇತಿ ಜ್ಞಾತ್ವಾ ಲೋಕಗುರೋ ಪ್ರಸಾದಂ ಕರ್ತುಮರ್ಹಸಿ ॥13॥
ದೇವತೆಗಳು ನೀನು ಚಂದ್ರನ ವಿಷಯದಲ್ಲಿ ಪ್ರಸನ್ನನಾಗು. ಅವನ ಶಾಪವು ಕಳೆದುಹೋಗಲಿ. ಈ ಚಂದ್ರನು ಬಹಳ ಕ್ಷೀಣಿಸಿದ್ದಾನೆ. ಸ್ವಲ್ಪವಷ್ಟೇ ಉಳಿದುಕೊಂಡಿದ್ದಾನೆ. ಚಂದ್ರನು ಕ್ಷಯಕ್ಕೊಳಗಾದಾಗ ಲೋಕದ ಪ್ರಜೆಗಳೆಲ್ಲರೂ ಕ್ಷಯಗೊಂಡಿದ್ದಾರೆ. ಮರಗಳು, ಗಿಡಗಳು, ಬೇರೆ ಬೇರೆ ಬೀಜಗಳು ಎಲ್ಲವೂ ಕ್ಷೀಣಿಸಿವೆ. ನಾವೂ ಕ್ಷೀಣಿಸಿದ್ದೇವೆ. ಇನ್ನು ಜಗತ್ತಿನ ಬಗ್ಗೆ ಏನು ಹೇಳುವುದು? ಇದೆಲ್ಲವನ್ನೂ ತಿಳಿದು ಜಗದ್ಗುರುವಾದ ನೀನು ಅನುಗ್ರಹವನ್ನು ಮಾಡು.
ವೈಶಂಪಾಯನಃ
ಏವಮುಕ್ತಸ್ತು ಸಂಚಿಂತ್ಯ ಪ್ರಾಹ ವಾಕ್ಯಂ ಪ್ರಜಾಪತಿಃ ॥14॥
ವೈಶಂಪಾಯನ ದೇವತೆಗಳು ಹೀಗೆ ಹೇಳಿದಾಗ ದಕ್ಷಪ್ರಜಾಪತಿಯು ಈ ವಾಕ್ಯವನ್ನು ಹೇಳುತ್ತಾನೆ.
ದಕ್ಷಃ
ನೈತಚ್ಛಕ್ಯಂ ಮಮ ವಚೋ ವ್ಯಾವರ್ತಯಿತುಮಂಜಸಾ |
ಹೇತುನಾ ತು ಮಹಾಭಾಗಾ ನಿವರ್ತಿಷ್ಯತಿ ಕೇನಚಿತ್ ॥15॥
ದಕ್ಷ ಮಹಾಭಾಗ್ಯವಂತರಾದ ದೇವತೆಗಳೇ! ನನ್ನ ಮಾತು ಪೂರ್ಣವಾಗಿ ಹಿಂತಿರುಗಲು ಸಾಧ್ಯವಿಲ್ಲ. ಯಾವುದಾದರೂ ಕಾರಣದಿಂದ ಅದು ಮರಳಬಹುದು.
ಸಮಂ ವರ್ತೇತ ಸರ್ವಾಸು ಶಶೀ ಭಾರ್ಯಾಸು ಸರ್ವಶಃ |
ಅಸ್ಮಿಂಸ್ತೀರ್ಥವರೇ ಚಾಪಿ ನಿಮಜ್ಜೇಚ್ಛಶಲಕ್ಷಣಃ ॥16॥
ಚಂದ್ರನು ತನ್ನ ಎಲ್ಲಾ ಪತ್ನಿಯರ ವಿಷಯದಲ್ಲಿ ಎಲ್ಲಾ ರೀತಿಯಲ್ಲಿಯೂ ಸಮವಾಗಿ ವರ್ತಿಸಬೇಕು. ಜೊತೆಗೆ ಚಂದ್ರನು ಈ ಪ್ರಭಾಸತೀರ್ಥದಲ್ಲಿ ಅವಗಾಹ (ಮುಳುಗು) ಸ್ನಾನವನ್ನು ಮಾಡಬೇಕು.
ಪುನರ್ವರ್ಧಿಷ್ಯತೇ ದೇವಾಃ ತದ್ವಿ ಸತ್ಯಂ ವಚೋ ಮಮ |
ಮಾಸಾರ್ಧಂ ಚ ಕ್ಷಯಂ ಸೋಮೋ ನಿತ್ಯಮೇವ ಗಮಿಷ್ಯತಿ ॥17॥
ಮಾಸಾರ್ಧಂ ಚ ಪುನರ್ವೃದ್ಧಿಂ ಸತ್ಯಮೇವ ಬ್ರವೀಮಿ ವಃ ॥18॥
ಚಂದ್ರದೇವನು ಪುನಃ ವೃದ್ಧಿಸುತ್ತಾನೆ. ಈ ಮಾತು ಸತ್ಯವಾದುದು. ಮುಂದೆಯೂ ನಿತ್ಯವಾಗಿ ತಿಂಗಳಲ್ಲಿ ಒಂದು ಅರ್ಧಭಾಗದಲ್ಲಿ ಪುನಃ ಕ್ಷಯವನ್ನು ಹೊಂದುತ್ತಾನೆ. ತಿಂಗಳಿನ ಇನ್ನೊಂದು ಅರ್ಧಬಾಗದಲ್ಲಿ ಪುನಃ ವೃದ್ಧಿಯನ್ನು ಹೊಂದುತ್ತಾನೆ. ನಾನು ಸತ್ಯವಾದುದನ್ನೇ ಹೇಳುತ್ತೇನೆ.
ತೀರ್ಥಯಾತ್ರಾಂ ತತಃ ಸೋಮೋ ಜಗಾಮ ಋಷಿಶಾಸನಾತ್ |
ಪ್ರಭಾಸಂ ಪರಮಂ ತೀರ್ಥಂ ಸರಸ್ವತ್ಯಾಂ ಜಗಾಮ ಹ ॥19॥
ಅನಂತರ ಋಷಿಗಳ ಆದೇಶದಂತೆ ಚಂದ್ರನು ಸರಸ್ವತೀ ನದಿಯು ಇಲ್ಲಿರುವ ಪ್ರಭಾಸತೀರ್ಥಕ್ಕೆ ತೀರ್ಥಯಾತ್ರೆಯನ್ನು ಕೈಗೊಳ್ಳುತ್ತಾನೆ.
ಅಮಾವಾಸ್ಯಾಂ ಮಹಾತೇಜಾಃ ತತ್ರ ಮಜ್ಜನ್ ಮಹಾದ್ಯುತಿಃ |
ಲೋಕಾನ್ ಪ್ರಭಾಸಯಾಮಾಸ ಶೀತಾಂಶುತ್ವಮವಾಪ ಚ ॥20॥

ಸ್ವಭಾವತಃ ತೇಜೋವಂತನಾದ ಚಂದ್ರನು ಅಮಾವಾಸ್ಯೆಯ ದಿನ ಪ್ರಭಾಸತೀರ್ಥದಲ್ಲಿ ಮುಳುಗಿ ಬಹಳ ಕಾಂತಿಯುಳ್ಳವನಾಗಿ ಲೋಕಗಳನ್ನೆಲ್ಲಾ ಬೆಳಗಿದನು. ತಂಪಾದ ಕಿರಣಗಳನ್ನು ಬೀರಿ ತಾನು ಶೀತಾಂಶು ಎಂಬುದಾಗಿ ಕರೆಯಲ್ಪಟ್ಟನು.
ದೇವಾಶ್ಚ ಸರ್ವೇ ರಾಜೇಂದ್ರ ಪ್ರಸಾದಂ ಪ್ರಾಪ್ಯ ಪುಷ್ಕಲಮ್ |
ಸೋಮೇನ ಸಹಿತಾ ಭೂತ್ವಾ ದಕ್ಷಸ್ಯ ಪ್ರಮುಖೇ ಸ್ಥಿತಾಃ ॥21॥
ರಾಜೇಂದ್ರನೇ! ಎಲ್ಲಾ ದೇವತೆಗಳು ಬಹಳ ಸಂತೋಷವನ್ನು ಹೊಂದಿ ಚಂದ್ರನೊಡನೆ ದಕ್ಷನ ಸನ್ನಿಧಾನಕ್ಕೆ ಹೋಗಿ ನಿಂತರು.
ತತಃ ಪ್ರಜಾಪತಿರ್ದೇವೋ ವಿಸಸರ್ಜಾಥ ದೇವತಾಃ |
ಸೋಮಂ ಚ ಭಗವಾನ್ ಭೂಯಃ ಪ್ರೀತೋ ವಚನಮಬ್ರವೀತ್ ॥22॥
ಅನಂತರ ದಕ್ಷನು ಎಲ್ಲಾ ದೇವತೆಗಳನ್ನು ಬೀಳ್ಕೊಟ್ಟನು. ಸೋಮನ ಮೇಲೆ ಪ್ರೀತನಾದ ದಕ್ಷನು ಅವನಿಗೆ ಹೀಗೆ ಹೇಳಿದನು.
ದಕ್ಷಃ
ಮಾಽವಮಂಸ್ಥಾಃ ಸ್ತ್ರಿಯಃ ಪುತ್ರ ಮಾ ಚ ವಿಪ್ರಾನ್ ಕದಾಚನ |
ಗಚ್ಛ ಯುಕ್ತಃ ಸದಾ ಭೂತ್ವಾ ಕುರು ತ್ವಂ ಶಾಸನಂ ಮಮ ॥23॥
ದಕ್ಷ ಪುತ್ರ! ಸ್ತ್ರೀಜನರನ್ನು ಮತ್ತು ಬ್ರಾಹ್ಮಣರನ್ನು ಯಾವತ್ತೂ ಅವಮಾನಿಸಬೇಡ. ಯಾವಾಗಲೂ ಯುಕ್ತವಾದುದನ್ನೇ ಮಾಡುತ್ತಾ ನನ್ನ ಆದೇಶವನ್ನು ಪಾಲಿಸುತ್ತಿರು.
ವೈಶಂಪಾಯನಃ
ಸ ವಿಸೃಷ್ಟೋ ಮಹಾತೇಜಾ ಜಗಾಮಾಥ ಸ್ವಮಾಲಯಮ್ |
ಪ್ರಜಾಶ್ಚ ಮುದಿತಾ ಭೂತ್ವಾ ಈಜಿರೇ ಚ ಯಥಾಪುರಮ್ ॥24॥
ವೈಶಂಪಾಯನ ದಕ್ಷನಿಂದ ಬೀಳ್ಕೊಳ್ಳಲ್ಪಟ್ಟ ಒಳ್ಳೆಯ ಪ್ರಕಾಶವುಳ್ಳ ಚಂದ್ರನು ತನ್ನ ಮನೆಗೆ ಬಂದನು. ಜನರು ಸಂತೋಷದಿಂದ ಹಿಂದಿನ ಹಾಗೆಯೇ ಕರ್ತವ್ಯನಿರತರಾಗಿ ಚಂದ್ರನನ್ನು ಪೂಜಿಸಿದರು.
ಏವಂ ತೇ ಸರ್ವಮಾಖ್ಯಾತಂ ಯಥಾ ಶಪ್ತೋ ನಿಶಾಕರಃ |
ಪ್ರಭಾಸಂ ಚ ಯಥಾ ತೀರ್ಥಂ ತೀರ್ಥಾನಾಂ ಪ್ರವರಂ ಹ್ಯಭೂತ್ ॥
ಚಂದ್ರನು ಯಾವರೀತಿಯಲ್ಲಿ ಶಾಪಕ್ಕೊಳಗಾದನು ಎಂಬುದನ್ನು ಎಲ್ಲವನ್ನೂ ಈ ರೀತಿಯಲ್ಲಿ ಹೇಳಿದೆನು. ಪ್ರಭಾಸತೀರ್ಥವು ತೀರ್ಥಗಳಲ್ಲಿಯೇ ಉತ್ತಮವಾದುದು ಹೇಗಾಯಿತು ಎಂಬುದನ್ನೂ ಹೇಳಿದೆನು.
ಅಮಾವಾಸ್ಯಾಂ ಮಹಾರಾಜ ಸ ನಿತ್ಯಂ ಶಶಲಕ್ಷಣಃ |
ಸ್ನಾತ್ವಾ ಹ್ಯಾಪ್ಯಾಯತೇ ಶ್ರೀಮಾನ್ ಪ್ರಭಾಸೇ ತೀರ್ಥಸತ್ತಮೇ ॥26॥
ಮಹಾರಾಜನೇ! ಇವತ್ತಿಗೂ ಕೂಡ ಪ್ರತಿ ಅಮಾವಾಸ್ಯೆಯದಿನ ಚಂದ್ರನು ಉತ್ತಮ ತೀರ್ಥವಾದ ಪ್ರಭಾಸತೀರ್ಥದಲ್ಲಿ ಸ್ನಾನಮಾಡಿ ಸಂತುಷ್ಟನಾಗುತ್ತಾನೆ.
ಅತಶ್ಚೈನಂ ಪ್ರಜಾನಂತಿ ಪ್ರಭಾಸಮಿತಿ ಭೂಮಿಪ |
ಪ್ರಭಾಂ ಹಿ ಪರಮಾಂ ಲೇಭೇ ತಸ್ಮಿನ್ನಾಮಜ್ಯ ಚಂದ್ರಮಾಃ ॥27॥
ರಾಜನೆ! ಈ ತೀರ್ಥದಲ್ಲಿ ಸ್ನಾನಮಾಡಿ ಚಂದ್ರನು ಪ್ರಭೆಯನ್ನು ಹೊಂದಿದನು ಎಂಬುದರಿಂದಾಗಿ ಎಲ್ಲರೂ ಇದನ್ನು ಪ್ರಭಾಸ ಎಂಬುದಾಗಿ ತಿಳಿಯುತ್ತಾರೆ.
ಲೋಕಾನ್ ಪ್ರಭಾಸಯಾಮಾಸ ಪುಪೋಷ ಚ ವಪುಸ್ತದಾ |
ತತ್ರ ಸ್ನಾತ್ವಾ ಹಲೀ ರಾಮೋ ದತ್ವಾ ಪ್ರೀತೋಽಥ ದಕ್ಷಿಣಾಃ ॥28॥
ಹಲಧಾರಿಯಾದ ಬಲರಾಮನು ಇಲ್ಲಿ ಸ್ನಾನವನ್ನು ಮಾಡಿ, ಸಂತೋಷದಿಂದ ದಕ್ಷಿಣೆಯನ್ನು ಕೊಟ್ಟು, ಲೋಕವನ್ನೆಲ್ಲಾ ಪ್ರಕಾಶಿಸಿದನು. ತನ್ನ ಶರೀರವನ್ನು ಪುಷ್ಟಿಗೊಳಿಸಿದನು.
ತತಸ್ತು ಚಮಸೋದ್ಭೇದಮಭೀತಸ್ತ್ವಗಮದ್ ಬಲೀ |
ಚಮಸೋದ್ಭೇದ ಇತ್ಯೇವ ಯಂ ಜನೋಽಕಥಯದ್ ಭುವಿ ॥29॥
ಅನಂತರ ಯಾವ ಕ್ಷೇತ್ರವನ್ನು ಜನರು ಚಮಸೋದ್ಭೇದ ಎಂದು ಕರೆಯುತ್ತಾರೆಯೋ ಆ ಚಮಸೋದ್ಭೇದಕ್ಷೇತ್ರಕ್ಕೆ ಬಲರಾಮನು ಭಯರಹಿತನಾಗಿ ಹೋದನು.
ತತ್ರ ದತ್ತತ್ವ ಚ ದಾನಾನಿ ವಿಶಿಷ್ಟಾನಿ ಹಲಾಯುಧಃ |
ಉಷಿತ್ವಾ ರಜನೀಮೇಕಾಂ ಸ್ನಾತ್ವಾ ಚ ವಿಧಿವತ್ ತದಾ ॥30॥
ಅಲ್ಲಿಗೆ ಹೋಗಿ ವಿಶಿಷ್ಟವಾದ ದಾನಗಳನ್ನು ಮಾಡಿದನು. ಒಂದು ರಾತ್ರಿ ಅಲ್ಲಿಯೇ ವಾಸಮಾಡಿ ವಿಧಿವತ್ತಾಗಿ ಸ್ನಾನ ಮಾಡಿದನು.
ಉದಪಾನಮಥಾಗಚ್ಛತ್ ತ್ವರಾವಾನ್ ಕೇಶವಾಗ್ರಜಃ |
ಆದ್ಯಂ ಸ್ವಸ್ತ್ಯಯನಂ ಚೈವ ತತ್ರಾವಾಪ್ಯ ಮಹತ್ಫಲಮ್ ॥31॥
ಶ್ರೀಕೃಷ್ಣನ ಅಣ್ಣನಾದ ಬಲರಾಮನು ಅನಂತರ ಉದಪಾನ ಕ್ಷೇತ್ರಕ್ಕೆ ಶೀಘ್ರವಾಗಿ ಹೋದನು. ಅಲ್ಲಿ ಉತ್ತಮವಾದ ಮಾಂಗಲ್ಯವನ್ನೂ ಮಹಾಫಲವನ್ನೂ ಪಡೆದನು.
ಸ್ನಿಗ್ಧಾನಿ ತತ್ರ ವಸ್ತೂನಿ ದ್ವಿಜೇಭ್ಯಶ್ಚ ತದಾ ದದೌ |
ತತ್ರ ದತ್ವಾ ಚ ದಾನಾನಿ ವಾಸಾಂಸಿ ಚ ಸಹಸ್ರಶಃ ॥32॥
ಅಲ್ಲಿ ಸ್ನೇಹಯುಕ್ತವಾದ ದ್ರವಪದಾರ್ಥಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಸಾವಿರಾರು ವಸ್ತ್ರದಾನವನ್ನೂ ಮಾಡಿದನು.
ಗವಾಂ ತಥಾ ಸಹಸ್ರಾಣಿ ಹೇಮಶೃಂಗವತಾಂ ಪುನಃ ॥33॥
ಬಂಗಾರದ ಕೊಂಬಿನ ಅಲಂಕಾರವುಳ್ಳ ಸಾವಿರಾರು ಹಸುಗಳನ್ನು ದಾನಮಾಡಿದನು.

ಹಯಾಂಶ್ಚ ನಾನಾವಿಧದೇಶಜಾತಾನ್
ಅನ್ಯಾನಿ ದಾನಾನಿ ತದಾ ದ್ವಿಜೇಭ್ಯಃ |
ರತ್ನಾನಿ ಮುಕ್ತಾಮಣಿ ವಿದ್ರುಮಾಂಶ್ಚ
ಶೃಂಗೀಸುವರ್ಣಂ ರಜತಂ ಚ ಶುದ್ಧಮ್ ॥34॥
ಬೇರೆ ಬೇರೆ ದೇಶಗಳಲ್ಲಿ ಜನಿಸಿದ ಕುದುರೆಗಳನ್ನು, ರತ್ನಗಳನ್ನು, ಮುತ್ತುಗಳನ್ನು, ಮಣಿಗಳನ್ನು, ಹವಳಗಳನ್ನು, ಅಲಂಕಾರಕ್ಕೆ ಬಳಸುವ ಬಂಗಾರವನ್ನು, ಪರಿಶುದ್ಧವಾದ ಬೆಳ್ಳಿಯನ್ನು ಕಬ್ಬಿಣದ, ತಾಮ್ರದ ಪಾತ್ರೆಗಳನ್ನು ಉತ್ತಮ ಬ್ರಾಹ್ಮಣರಿಗೆ ದಾನ ಮಾಡಿದನು.
ಅಯಸ್ಮಯಂ ತಾಮ್ರಮಯಂ ಚ ಭಾಂಡಂ
ದದೌ ದ್ವಿಜಾತಿಪ್ರವರೇಷು ರಾಮಃ |
ಏವಂ ಸ ವಿತ್ತಂ ಪ್ರದದೌ ಮಹಾತ್ಮಾ |
ಸಮಸ್ತತೀರ್ಥಪ್ರವರೇಷು ಭೂರಿ ॥35॥
ಬಲರಾಮನು ಉತ್ತಮ ಬ್ರಾಹ್ಮಣರಿಗೆ ಕಬ್ಬಿಣದ ಪಾತ್ರೆಗಳನ್ನು, ತಾಮ್ರದ ಪಾತ್ರೆಗಳನ್ನು ದಾನಮಾಡಿದನು. ಹೀಗೆ ಎಲ್ಲಾ ತೀರ್ಥಕ್ಷೇತ್ರಗಳಲ್ಲಿಯೂ ಬಹಳವಾದ ಸಂಪತ್ತನ್ನು ದಾನಮಾಡಿದನು.
ಯಯೌ ಕ್ರಮೇಣ ಚ ಪುನಃ ಕುರುಕ್ಷೇತ್ರಂ ಮುದಾ ಯುತಃ ॥36॥
ಸ್ನಿಗ್ಧತ್ವಾದೋಷಧೀನಾಂ ಚ ಭೂಮೇಶ್ಚ ಜನಮೇಜಯ ॥37॥
ಜಾನಂತಿ ಸಿದ್ಧಾ ಮುನಯೋ ನಿಗೂಢಾಂ ತಾಂ ಸರಸ್ವತೀಮ್ ॥38॥
ಕ್ರಮವಾಗಿ ಪುನಃ ಕುರುಕ್ಷೇತ್ರಕ್ಕೆ ಹೋದನು. ಅಲ್ಲಿರುವ ಸಸ್ಯಗಳು ತೇವಯುಕ್ತವಾಗಿ ಸ್ನಿಗ್ಧವಾಗಿರುವುದರಿಂದ ಮತ್ತು ಭೂಮಿಯೂ ತೇವಯುಕ್ತವಾಗಿರುವುದರಿಂದ ಅಲ್ಲಿ ಸರಸ್ವತಿಯು ಭೂಮಿಯೊಳಗೆ ಗುಪ್ತಗಾಮಿನಿಯಾಗಿದ್ದಾಳೆ ಎಂದು ಯೋಗಸಿದ್ಧಿಯುಳ್ಳ ಮುನಿಗಳು ತಿಳಿಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಗದಾಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ಏಕತ, ದ್ವಿತ, ತ್ರಿತನಾಮಕ ಬ್ರಾಹ್ಮಣರ ಕಥೆ
ವೈಶಂಪಾಯನಃ
ತಸ್ಮಾನ್ನದೀಗತಂ ಚಾಪಿ ಉದಪಾನಂ ಮಹಾತ್ಮನಃ |
ತ್ರಿತಸ್ಯ ಚ ಮಹಾರಾಜ ಜಗಾಮಾಥ ಹಲಾಯುಧಃ ॥1॥
ವೈಶಂಪಾಯನ ಮಹಾರಾಜನೇ! ಅಲ್ಲಿ ನದಿಮಧ್ಯದಲ್ಲಿ ಮಹಾತ್ಮನಾದ ತ್ರಿತ ಎಂಬ ಬ್ರಾಹ್ಮಣನ ನೀರಿನ ಬಾವಿಯಿತ್ತು. ಕುರುಕ್ಷೇತ್ರದಿಂದ ಬಲರಾಮನು ಆ ಉದಪಾನ (ಬಾವಿ) ಇದ್ದಲ್ಲಿಗೆ ಹೋದನು.
ತತ್ರ ದತ್ವಾ ಬಹು ದ್ರವ್ಯಂ ಪೂಜಯಿತ್ವಾ ಚ ವೈ ದ್ವಿಜಾನ್ |
ಉಪಸ್ಪೃಶ್ಯ ತು ತತ್ರೈವ ಪ್ರಹೃಷ್ಟೋ ಮುಸಲಾಯುಧಃ ॥2॥
ಅಲ್ಲಿ ಬಲರಾಮನು ಆಚಮನ ಮಾಡಿ, ಬ್ರಾಹ್ಮಣರನ್ನು ಆರಾಧಿಸಿ, ಬಹಳವಾದ ದ್ರವ್ಯಗಳನ್ನು ದಾನಮಾಡಿ ಸಂತುಷ್ಟನಾದನು.
ತತ್ರ ಧರ್ಮಪರೋ ಹ್ಯಾಸೀತ್ ತ್ರಿತಸ್ತು ಸುಮಹಾತಪಾಃ |
ಕೂಪೇ ಚ ವಸತಾ ತೇನ ಸೋಮಃ ಪೀತೋ ಮಹಾತ್ಮನಾ ॥3॥
ಮಹಾತಪಸ್ವಿಯಾದ ತ್ರಿತನು ಅಲ್ಲಿ ವಾಸಮಾಡಿದ್ದನು. ಬಾವಿಯಲ್ಲಿ ವಾಸಮಾಡುತ್ತಿದ್ದ ಅವನು ಹಿಂದೆ ಯಾಗದ ಸೋಮರಸವನ್ನು ಪಾನಮಾಡಿದ್ದನು.
ತತ್ರ ಚೈನಂ ಸಮುತ್ಸೃಜ್ಯ ಭ್ರಾತರೌ ಜಗ್ಮತುರ್ಗೃಹಾನ್ |
ತತಸ್ತು ತೌ ಶಶಾಪಾಥ ತ್ರಿತೋ ಬ್ರಾಹ್ಮಣಪುಂಗವಃ ॥4॥
ಈ ತ್ರಿತನನ್ನು ಅವನ ಸಹೋದರರಿಬ್ಬರು ಇಲ್ಲಿಯೇ ಬಾವಿಯಲ್ಲಿ ಬಿಟ್ಟು ಮನೆಗೆ ಹೋಗಿದ್ದರು. ಅದಕ್ಕಾಗಿ ಬ್ರಾಹ್ಮಣಶ್ರೇಷ್ಠನಾದ ತ್ರಿತನು ಅವರಿಗೆ ಶಾಪವನ್ನು ಕೊಟ್ಟಿದ್ದನು.
ಜನಮೇಜಯಃ
ಉದಪಾನಂ ಕಥಂ ಬ್ರಹ್ಮನ್ ಕಥಂ ಚ ಸುಮಹಾತಪಾಃ |
ಪತಿತಃ ಕಿಂಚ ಸಂತ್ಯಕ್ತೋ ಭ್ರಾತೃಭ್ಯಾಂ ದ್ವಿಜಸತ್ತಮ ॥5॥
ಕೂಪೇ ಕಥಂ ಚ ಹಿತ್ವೈನಂ ಜಗ್ಮತುರ್ಭ್ರಾತರೌ ಗೃಹಾನ್ |
ಏತದಾಚಕ್ಷ ್ವ ಮೇ ಬ್ರಹ್ಮನ್ ಯದಿ ಶ್ರಾವ್ಯಂ ಹಿ ಮನ್ಯಸೇ ॥6॥
ಜನಮೇಜಯ ಬ್ರಹ್ಮಜ್ಞಾನಿಯೇ! ವಿಪ್ರೋತ್ತಮನೇ! ಅಲ್ಲಿ ಬಾವಿಯು ಹೇಗೆ ಇತ್ತು? ಮಹಾತಪಸ್ವಿಯಾದ ತ್ರಿತನು ಅದರೊಳಗೆ ಹೇಗೆ ಬಿದ್ದನು? ಮತ್ತು ಅವನನ್ನು ಅವನ ಸಹೋದರರು ಬಾವಿಯಲ್ಲಿಯೇ ಏಕೆ ಬಿಟ್ಟು ಹೋದರು? ಇದೆಲ್ಲವೂ ನನಗೆ ಕೇಳಲು ಯೋಗ್ಯವಾಗಿದೆಯೆಂದು ನೀನು ತಿಳಿಯುವುದಾದರೆ ನನಗೆ ಹೇಳು.
ವೈಶಂಪಾಯನಃ

ಆಸನ್ ಪೂರ್ವಯುಗೇ ರಾಜನ್ ಮುನಯೋ ಭ್ರಾತರಸ್ತ್ರಯಃ|
ಏಕತಶ್ಚ ದ್ವಿತಶ್ಚೈವ ತ್ರಿತಶ್ಚಾದಿತ್ಯಸನ್ನಿಭಾಃ ||7||
ಸರ್ವೇ ಪ್ರಜಾಪತಿಸಮಾಃ ಪ್ರಜಾಪತಯ ಏವ ಚ|
ಬ್ರಹ್ಮಲೋಕಜಿತಾಃ ಸರ್ವೇ ತಪಸಾ ಬ್ರಹ್ಮವಾದಿನಃ ||8||
ರಾಜನೇ! ಹಿಂದಿನ ಯುಗದಲ್ಲಿ ಮೂವರು ಸಹೋದರರಾದ ಮುನಿಗಳು ಇದ್ದರು. ಅವರ ಹೆಸರು ಏಕ, ದ್ವಿತ ಮತ್ತು ತ್ರಿತ ಎಂಬುದಾಗಿತ್ತು. ಅವರೆಲ್ಲರೂ ಸೂರ್ಯನ ಹಾಗೆ ಕಾಂತಿಯುಳ್ಳವರಾಗಿದ್ದರು. ಅವರೆಲ್ಲರೂ ಪ್ರಜಾಪತಿಗೆ ಸಮಾನರಾಗಿದ್ದರು. ಒಳ್ಳೆಯ ಸಂತತಿಯನ್ನು ಹೊಂದಿದ್ದರು. ತಪಸ್ಸಿನಿಂದ ಬ್ರಹ್ಮಲೋಕವನ್ನೂ ಹೊಂದಿದ್ದರು. ಎಲ್ಲರೂ ಬ್ರಹ್ಮವಾದಿಗಳು ಆಗಿದ್ದರು.
ತೇಷಾಂ ತು ತಪಸಾ ಪ್ರೀತೋ ನಿಯಮೇನ ಯಮೇನ ಚ|
ಅಭವದ್ ಗೌತಮೋ ನಿತ್ಯಂ ಪಿತಾ ಧರ್ಮರತಃ ಸದಾ ||9||
ಯಾವಾಗಲೂ ಧರ್ಮದಲ್ಲಿಯೇ ಆಸಕ್ತನಾದ ಅವರ ತಂದೆ ಗೌತಮನು ಅವರ ತಪಸ್ಸು, ಯಮ, ನಿಯಮಗಳಿಂದ ಸಂತುಷ್ಟರಾದನು.
ಸ ತು ದೀರ್ಘೇಣ ಕಾಲೇನ ತೇಷಾಂ ಪ್ರೀತಿಮವಾಪ್ಯ ಚ|
ಜಗಾಮ ಭಗವನ್ ಸ್ಥಾನಮನುರೂಪಮಿವಾತ್ಮನಃ ||10||
ಗೌತಮನಾದರೂ ತುಂಬಾ ಸಮಯದ ತನಕ ಅವರ ಪ್ರೀತಿಯನ್ನು ಪಡೆದು ತನಗೆ ಯೋಗ್ಯ ಸ್ಥಾನವಾದ ಸ್ವರ್ಗಲೋಕಕ್ಕೆ ಹೋದನು.
ರಾಜಾನಸ್ತಸ್ಯ ಯೇ ಚಾಪಿ ಯಾಜ್ಯಾ ಹ್ಯಾಸನ್ ಮಹಾತ್ಮನಃ|
ತೇ ಸರ್ವೇ ಸ್ವರ್ಗತೇ ತಸ್ಮಿನ್ ತಸ್ಯ ಪುತ್ರಾನಪೂಜಯನ್ ||11||
ಆ ಗೌತಮನ ಮಾರ್ಗದರ್ಶನದಲ್ಲಿ ಯಾವ ರಾಜರುಗಳು ಯಾಗ-ಯಜ್ಞವನ್ನು ಮಾಡುತ್ತಿದ್ದರೋ, ಗೌತಮನು ಸ್ವರ್ಗಸ್ಥನಾದ ಮೇಲೆ ಆ ರಾಜರೆಲ್ಲರೂ ಅವನ ಮಕ್ಕಳನ್ನು ಪೂಜಿಸತೊಡಗಿದರು.
ತೇಷಾಂ ತು ಕರ್ಮಣಾ ರಾಜನ್ ತಪಸಾಽಧ್ಯಯನೇನ ಚ|
ತ್ರಿತಃ ಶ್ರೇಷ್ಠತ್ವಮಾಪೇದೇ ಯಥಾ ಚಾಸ್ಯ ಪಿತಾ ತಥಾ ||12||
ರಾಜನೇ! ಆ ಮೂವರಲ್ಲಿ ತ್ರಿತನು ತನ್ನ ಕರ್ಮ, ತಪಸ್ಸು ಮತ್ತು ಅಧ್ಯಯನದಿಂದ ಅವನ ತಂದೆಯಂತೆಯೇ ಶ್ರೇಷ್ಠತ್ವವನ್ನು ಹೊಂದಿದನು.
ತೇ ಸ್ಮ ಸರ್ವೇ ಮಹಾಭಾಗಾ ಮುನಯಃ ಪುಣ್ಯಲಕ್ಷಣಾಃ|
ಅಪೂಜಯನ್ ಮಹಾಭಾಗಂ ತಥಾ ವಿದ್ವಾಂಸ ಏವ ಚ ||13||
ಪುಣ್ಯವಂತರಾದ ಮಹಾಬಾಗ್ಯಶಾಲಿ ಮುನಿಗಳು ಮತ್ತು ವಿದ್ವಾಂಸರು ಆ ಮಹಾಭಾಗ್ಯಶಾಲಿಯಾದ ತ್ರಿತನನ್ನು ಪೂಜಿಸಿದರು.
ಕದಾಚಿದ್ಧಿ ತತೋ ರಾಜನ್ ಭ್ರಾತರಾವೇಕತದ್ವಿತೌ|
ಯಜ್ಞಾರ್ಥಂ ಚಕ್ರತುಶ್ಚಿಂತಾಂ ಧನಾರ್ಥಂ ಚ ವಿಶೇಷತಃ ||14||
ತಯೋಶ್ಚಿಂತಾ ಸಮಭವತ್ ತಂ ಪ್ರಗೃಹ್ಯ ಪರಂತಪ ||15||
ರಾಜನೇ! ಅನಂತರ ಒಂದು ಸಲ ಅವನ ಸಹೋದರರಾದ ಏಕ ಮತ್ತು ದ್ವಿತರು ಯಜ್ಞಕ್ಕಾಗಿ ಮತ್ತು ವಿಶೇಷವಾಗಿ ಸಂಪತ್ತಿಗಾಗಿ ಚಿಂತೆಯನ್ನು ಮಾಡಿದರು.
ಯಾಜ್ಯಾನ್ ಸರ್ವಾನುಪಾದಾಯ ಪರಿಗೃಹ್ಯ ಪಶೂಂಸ್ತತಃ|
ಸೋಮಂ ಪಾಸ್ಯಾಮಹೇ ಹೃಷ್ಟಾಃ ಪ್ರಾಪ್ಯ ಯಜ್ಞಂ ಮಹಾಫಲಮ್ ||
ಅವರಿಗೆ ಒಂದು ವಿಚಾರವು ಉಂಟಾಯಿತು. ಈ ತ್ರಿತನನ್ನು ಆಶ್ರಯಿಸಿ ಯಾಗ ಮಾಡಿಸುವವರನ್ನು ಸಂಗ್ರಹಿಸೋಣ. ಅವರಿಂದ ಪಶುಗಳನ್ನು ತೆಗೆದುಕೊಂಡು ಸೋಮಪಾನವನ್ನು ಮಾಡುವೆವು. ಆ ಮೂಲಕ ಯಾಗದ ಮಹತ್ಫಲವನ್ನು ಪಡೆಯುವೆವು.
ಚಕ್ರುಶ್ಚೈವ ತದಾ ರಾಜನ್ ಭ್ರಾತರಸ್ತ್ರಯ ಏವ ಚ ||17||
ರಾಜನೇ! ಆ ಮೂರು ಸಹೋದರರು ಹಾಗೆಯೇ ಮಾಡಿದರು.
ತಥಾ ಹಿ ತೇ ಪರಿಕ್ರಮ್ಯ ಯಾಜ್ಯಾನ್ ಸರ್ವಾನ್ ಪಶೂನ್ ಪ್ರತಿ|
ಯಾಜಯಿತ್ವಾ ತತೋ ಯಾಜ್ಯಾಲ್ಲಬ್ಧ್ವಾ ಚ ಸುಬಹೂನ್ ಪಶೂನ್ ||
ಆಲೋಚಿಸಿದ ಪ್ರಕಾರವೇ ಯಜಮಾನರಿಗಾಗಿ ಮತ್ತು ಪಶುಗಳಿಗಾಗಿ ಸುತ್ತಾಡಿ ತುಂಬಾ ಯಜಮಾನರನ್ನು ಸಂಪಾದಿಸಿ ಯಾಗಗಳನ್ನು ಮಾಡಿಸಿದರು. ಬಹಳವಾಗಿ ಪಶುಗಳನ್ನೂ ಸಂಪಾದಿಸಿದರು.
ಯಾಜ್ಯೇನ ಕರ್ಮಣಾ ತೇನ ಪ್ರತಿಗೃಹ್ಯ ವಿಧಾನತಃ|
ಪ್ರಾಚೀಂ ದಿಶಂ ಮಹಾರಾಜ ಆಜಗ್ಮುಸ್ತೇ ಮಹರ್ಷಯಃ ||19||
ವಿಧಿಪ್ರಕಾರ ಯಾಗಕರ್ಮಗಳಿಂದ ತಮಗೆ ಬೇಕಾದ ಪಶುಸಂಪತ್ತನ್ನು ಪಡೆದುಕೊಂಡು ಆ ಮಹರ್ಷಿಗಳು ಪೂರ್ವದಿಕ್ಕಿಗೆ ಹೋದರು.
ತ್ರಿತಸ್ತೇಷಾಂ ಮಹಾರಾಜ ಪುರಸ್ತಾದ್ ಯಾತಿ ಹೃಷ್ಟವತ್|
ಏಕತಶ್ಚ ದ್ವಿತಶ್ಚೈವ ಪೃಷ್ಠತಃ ಕಾಲಯನ್ ಪಶೂನ್ ||20||
ಮಹಾರಾಜನೇ! ಸಂತುಷ್ಟನಾದ ತ್ರಿತನು ಅವರೆಲ್ಲರ ಮುಂದುಗಡೆಯಿಂದ ಹೋಗುತ್ತಿದ್ದನು. ಏಕತ ಮತ್ತು ದ್ವಿತರು ಹಿಂದುಗಡೆಯಿಂದ ಪಶುಗಳನ್ನು ನಿಯಂತ್ರಿಸುತ್ತಾ ಬರುತ್ತಿದ್ದರು.
ತಯೋಶ್ಚಿಂತಾ ಸಮಭವದ್ ಏಕತಸ್ಯ ದ್ವಿತಸ್ಯ ಚ|
ಕಥಂ ನು ಸ್ಯುರಿಮಾ ಗಾವ ಆವಾಭ್ಯಾಂ ಚ ತ್ರಿತಂ ವಿನಾ ||21||
ಅವರಿಬ್ಬರಿಗೆ ಒಂದು ಅಲೋಚನೆ ಬಂತು ಈ ಹಸುಗಳು ನಮ್ಮಿಬ್ಬರ ಬಳಿಯೇ ಇರಬೇಕು. ತ್ರಿತನಿಗೆ ಇವು ಸೇರಬಾರದು. ಇದಕ್ಕೆ ಏನು ಮಾಡಬೇಕು? ಎಂದು.

ತಾವನ್ಯೋನ್ಯಂ ಸಮಾಭಾಷ್ಯ ಏಕತಶ್ಚ ದ್ವಿತಶ್ಚ ಹ |
ಯದೂಚತುರ್ಮಿಥಃ ಪಾಪೌ ತನ್ನಿಬೋಧ ಜನಾಧಿಪ ॥22॥
ರಾಜನ್! ಪಾಪಿಗಳಾದ ಏಕತ ಮತ್ತು ದ್ವಿತರು ತಮ್ಮಲ್ಲಿಯೇ ಪರಸ್ಪರವಾಗಿ ಏನನ್ನು ಮಾತಾಡಿಕೊಂಡರೆಂಬುದನ್ನು ಕೇಳು.
ಏಕತದ್ವಿತೌ
ತ್ರಿತೋ ಯಜ್ಞೇಷು ಕುಶಃ ತ್ರಿತೋ ವೇದೇಷು ನಿಷ್ಠಿತಃ |
ಅನ್ಯಾಸ್ತ್ರಿತೋ ಬಹುತರಾ ಗಾವಃ ಸಮುಪಲಪ್ಸ್ಯತೇ ॥23॥
ಏಕತ-ದ್ವಿತರು ತ್ರಿತನು ಯಜ್ಞದಲ್ಲಿ ನಿಪುಣನಾಗಿದ್ದಾನೆ. ವೇದಗಳಲ್ಲಿ ನಿಷ್ಣಾತನಾಗಿದ್ದಾನೆ. ತ್ರಿತನು ಬೇರೆ ಇನ್ನೂ ಅನೇಕ ಪಶುಗಳನ್ನು ಪಡೆಯುವನು.
ತೇನಾವಾಂ ಸಹಿತೌ ಭೂತ್ವಾ ಗಾಃ ಪ್ರಗೃಹ್ಯ ಪ್ರಯಾವಹೇ |
ತ್ರಿತೋಽಪಿ ಗಚ್ಛೇತ್ ತಂ ಕಾಮಂ ಭ್ರಾತೃಭ್ಯಾಂ ವೈ ವಿನಾಕೃತಃ ॥24॥
ಆದ್ದರಿಂದ ನಾವಿಬ್ಬರು ಒಟ್ಟುಸೇರಿ ಈ ಪಶುಗಳನ್ನು ತೆಗೆದುಕೊಂಡು ಹೋಗುವ. ತ್ರಿತನೂ ಕೂಡ ಸಹೋದರರ ಜೊತೆಗೆ ಹೋಗದೆ ನಮ್ಮಿಂದ ಬೇರೆಯಾಗಿ ಇಷ್ಟಬಂದ ದೇಶಕ್ಕೆ ಹೋಗಲಿ.
ವೈಶಂಪಾಯನಃ
ತೇಷಾಮಾಗಚ್ಛತಾಂ ರಾತ್ರೌ ಪಥಿ ಸ್ಥಾನೇ ವೃಕೋಽಭವತ್ |
ತಥಾ ಕೂಪೋಽವಿದೂರೇಽಭೂತ್ ಸರಸ್ವತ್ಯಾಸ್ತಟೀಗತಃ ॥25॥
ವೈಶಂಪಾಯನ ರಾತ್ರಿಯ ಹೊತ್ತು ನಡೆದು ಹೋಗುತ್ತಿದ್ದಾಗ ದಾರಿಮಧ್ಯದಲ್ಲಿ ತೋಳವೊಂದು ಬಂದಿತು. ಸರಸ್ವತಿನದೀತೀರದಲ್ಲಿ ಇದ್ದ ಬಾವಿಯೊಂದು ಅವರಿಗೆ ಬಹಳ ಹತ್ತಿರವಾಯಿತು.
ಅಥ ತ್ರಿತೋ ವೃಕಂ ದೃಷ್ಟ್ವಾ ಪಥಿ ತಿಷ್ಠಂತಮಗ್ರತಃ |
ತದ್ಭಯಾದಪಸರ್ಪನ್ ವೈ ತಸ್ಮಿನ್ ಕೂಪೇ ಪಪಾತ ಹ ॥26॥
ಅಗಾಧೇ ಸುಮಹಾಘೋರೇ ಸರ್ವಭೂತಭಯಂಕರೇ ॥27॥
ಮುಂದುಗಡೆ ದಾರಿಯಲ್ಲಿ ನಿಂತಿರುವ ತೋಳವನ್ನು ನೋಡಿದ ತ್ರಿತನು ಭಯದಿಂದ ಸರಿಯುತ್ತಾ ಇದ್ದಾಗ ಅವಸರವಾಗಿ ಬಾವಿಯಲ್ಲಿ ಬಿದ್ದನು. ಆ ಬಾವಿಯು ಬಹಳ ಆಳವಾಗಿತ್ತು. ಎಲ್ಲಾ ಪ್ರಾಣಿಗಳಿಗೂ ತುಂಬಾ ಭಯವನ್ನು ಹುಟ್ಟಿಸುತ್ತಿತ್ತು. ತುಂಬಾ ಘೋರವಾಗಿದ್ದಿತು.
ತ್ರಿತಸ್ತತೋ ಮಹಾಭಾಗಃ ಕೂಪಸ್ಥೋ ಮುನಿಸತ್ತಮಃ |
ಆರ್ತನಾದಂ ಮಹಚ್ಚಕ್ರಂ ತತಃ ಶುಶ್ರುವತುರ್ಮುನೀ ॥28॥
ಉತ್ತಮಮುನಿಯಾದ ತ್ರಿತನು ಬಾವಿಯಲ್ಲಿದ್ದುಕೊಂಡು ರಕ್ಷಣೆಗಾಗಿ ಜೋರಾಗಿ ಬೊಬ್ಬೆಯನ್ನು ಹಾಕುತ್ತಾನೆ. ಅದನ್ನು ಉಳಿದಿಬ್ಬರು ಮುನಿಗಳು ಕೇಳಿಸಿಕೊಂಡರು.
ತಂ ಜ್ಞಾತ್ವಾ ಪತಿತಂ ಕೂಪೇ ಭ್ರಾತರಾವೇಕತದ್ವಿತೌ |
ವೃಕತ್ರಾಸಾಚ್ಚ ಲೋಭಾಚ್ಚ ತಮುತ್ಸೃಜ್ಯ ಪ್ರಜಗ್ಮತುಃ |
ಭ್ರಾತೃಭ್ಯಾಂ ಪಶುಲುಬ್ಧಾಭ್ಯಾಮುತ್ಸೃಷ್ಟಃ ಸುಮಹಾತಪಾಃ ॥29॥
ತ್ರಿತನು ಬಾವಿಯಲ್ಲಿ ಬಿದ್ದಿರುವುದನ್ನು ತಿಳಿದ ಆ ಏಕತ ಮತ್ತು ದ್ವಿತ ಸಹೋದರರು ತೋಳಕ್ಕೆ ಹೆದರಿ ಮತ್ತು ಪಶುಗಳ ಮೇಲಿನ ಅತ್ಯಾಸೆಯಿಂದಾಗಿ ತ್ರಿತನನ್ನು ಬಿಟ್ಟು ಬೇಗನೇ ಹೋದರು.
ಉದಪಾನೇ ತದಾ ರಾಜನ್ ನಿರ್ಜಲೇ ಪಾಂಸುಸಂವೃತೇ ॥30॥
ತ್ರಿತ ಆತ್ಮಾನಮಾಲಕ್ಷ್ಯ ವೀರುತ್ಪುಂಜತೃಣಾವೃತೇ |
ನಿಮಗ್ನೋ ಭರತಶ್ರೇಷ್ಠ ಪಾಪಕೃನ್ನರಕೇ ಯಥಾ ॥31॥
ಸ ಬುದ್ಧ್ಯಾಗಣಯತ್ ಪ್ರಾಜ್ಞೋ ಮೃತ್ಯೋರ್ಭೀತೋ ಹ್ಯಸೋಮಪಃ |
ಸೋಮಃ ಕಥಂ ನು ಪಾತವ್ಯ ಇಹಸ್ಥೇನ ಮಯಾ ಭವೇತ್ ॥32॥
ರಾಜನ್! ಬಾವಿಯಲ್ಲಿ ನೀರು ಸ್ವಲ್ಪವೂ ಇರಲಿಲ್ಲ. ಧೂಳು ತುಂಬಿಕೊಂಡಿತ್ತು. ಗಿಡಗಂಟೆಗಳು ಪೂರ್ಣವಾಗಿ ಆವರಿಸಿಕೊಂಡಿದ್ದವು. ಸಹೋದರರಿಬ್ಬರೂ ಪಶುಗಳ ಮೇಲಿನ ಲೋಭದಿಂದ ತ್ರಿಕನನ್ನು ಬಿಟ್ಟು ಹೋಗಿದ್ದರು. ಆಗ ಪಾಪಿಯು ನರಕದಲ್ಲಿ ಮುಳುಗುವಂತೆ ತಾನು ಇಂತಹ ಬಾವಿಯಲ್ಲಿ ಮುಳುಗುತ್ತಿರುವುದನ್ನು ತಿಳಿದುಕೊಂಡ ತ್ರಿಕನಿಗೆ ಪಾನಕ್ಕೆ ಸೋಮವೂ ಸಿಗದಿದ್ದುದರಿಂದ ಮತ್ತು ಮರಣದ ಭಯಕ್ಕೆ ಒಳಗಾಗಿ ತನ್ನ ಬುದ್ಧಿಯಲ್ಲಿ ಹೀಗೆ ಆಲೋಚಿಸಿದನು- ``ನಾನು ಇಲ್ಲಿ ಬಾವಿಯೊಳಗಿದ್ದುಕೊಂಡೇ ಸೋಮವನ್ನು ಹೇಗೆ ಕುಡಿಯಲಿ?'' ಎಂದು
ಸ ಏವಮಭಿಸಂಚಿಂತ್ಯ ತಸ್ಮಿನ್ ಕೂಪೇ ಮಹಾತಪಾಃ ॥33॥
ದದರ್ಶ ವೀರುಧಾಂ ಜಾಲಂ ಲಂಬಮಾನಂ ಯದೃಚ್ಛಯಾ ॥34॥
ಹೀಗೆ ಆಲೋಚಿಸಿದ ಮಹಾತಪಸ್ವಿಯಾದ ತ್ರಿಕನು ಯದೃಚ್ಛಯಾ ಅಲ್ಲಿ ಜೋತು ಬಿದ್ದಿದ್ದ ಬಳ್ಳಿಗಳ ರಾಶಿಯನ್ನು ನೋಡಿದನು.
ಪಾಂಸುಗ್ರಸ್ತೇ ತತಃ ಕೂಪೇ ನ್ಯಖನತ್ ಸಲಿಲಂ ಮುನಿಃ |
ಅಗ್ನಿಂ ಸಂಕಲ್ಪಯಾಮಾಸ ಹೋತ್ರೇನಾತ್ಮಾನಮೇವ ಹಿ ॥35॥
ತ್ರಿಕನು ಧೂಳುತುಂಬಿದ ಬಾವಿಯಲ್ಲಿ ಅಗೆದು ನೀರನ್ನು ಪಡೆದನು. ಅಗ್ನಿಯನ್ನೂ ಆಹ್ವಾನಿಸಿದನು. ತನ್ನನ್ನೇ ಹೋತೃವನ್ನಾಗಿ ಸಂಕಲ್ಪಿಸಿಕೊಂಡನು.
ತತಸ್ತಾಂ ವೀರುಧಂ ಸೋಮಂ ಕಲ್ಪಯಿತ್ವಾ ಮಹಾತಪಾಃ |

ಋಚೋ ಯಜೂಂಷಿ ಸಾಮಾನಿ ಮನಸಾಽಚಿಂತಯನ್ಮುನಿಃ ॥36॥
ಅನಂತರ ಅಲ್ಲಿದ್ದ ಬಳ್ಳಿಗಳನ್ನೇ ಸೋಮಲತೆಯನ್ನಾಗಿ ಸಂಕಲ್ಪಿಸಿಕೊಂಡು, ಸಾಮವೇದದ ಮತ್ತು ಯಜುರ್ವೇದದ ಮಂತ್ರಗಳನ್ನು ಮನಸ್ಸಿನಿಂದಲೇ ಜಪಿಸಿದನು.
ಗ್ರಾವಾಣಃ ಶರ್ಕರಾಃ ಕೃತ್ವಾ ಪ್ರಚಕ್ರೇಽಭಿಷವಂ ನೃಪ ॥37॥
ಆಜ್ಯಂ ಚ ಸಲಿಲಂ ಚಕ್ರೇ ಭಾಗಾಂಶ್ಚ ತ್ರಿದಿವೌಕಸಾಮ್ |
ಸೋಮಸ್ಯಾಭಿಷವಸ್ಯಾಗ್ರೇ ಪ್ರವೃದ್ಧಸ್ತುಮುಲೋ ಧ್ವನಿಃ ॥38॥
ಅಲ್ಲಿ ಇದ್ದ ಮರಳಿನ ಕಣಗಳನ್ನೇ ಸೋಮಲತೆಯನ್ನು ಜಜ್ಜುವ ಕಲ್ಲನ್ನಾಗಿ ಮಾಡಿಕೊಂಡು ಬಳ್ಳಿಗಳ ರಸವನ್ನು ಹಿಂಡಿಕೊಂಡನು. ಅಲ್ಲಿದ್ದ ನೀರನ್ನೇ ತುಪ್ಪವನ್ನಾಗಿ ಮಾಡಿಕೊಂಡು ದೇವತೆಗಳಿಗೆ ಆಹುತಿಯನ್ನಾಗಿ ಸಮರ್ಪಿಸಿದನು. ಲತೆಗಳಿಂದ ಸೋಮರಸವನ್ನು ಹಿಂಡಿ ತೆಗೆದಾಗ ಜೋರಾಗಿ ಶಬ್ದವು ಉಂಟಾಯಿತು.
ಸ ಚಾವಿಶದ್ ದಿವಂ ರಾಜನ್ ಸ್ವರಶ್ಚೈವ ತ್ರಿತಸ್ಯ ವೈ |
ಸಮವಾಪ ಚ ತಂ ಯಜ್ಞಂ ಯಥೋಕ್ತಂ ಬ್ರಹ್ಮವಾದಿಭಿಃ ॥39॥
ರಾಜನೇ! ತ್ರಿತನಿಂದ ಹೊರಟ ಆ ಧ್ವನಿಯು ದೇವಲೋಕಕ್ಕೆ ತಲುಪಿತು. ಆ ಯಜ್ಞವು ಬ್ರಹ್ಮಜ್ಞಾನಿಗಳು ಮಾಡುವ ಯಾಗವಾಯಿತು.
ವರ್ತಮಾನೇ ತಥಾ ಯಜ್ಞೇ ತ್ರಿತಸ್ಯ ಸುಮಹಾತ್ಮನಃ |
ಆವಿಗ್ನಂ ತ್ರಿದಿವಂ ಸರ್ವಂ ಕಾರಣಂ ನ ಚ ಬುದ್ಧ್ಯತೇ ॥40॥
ಮಹಾತ್ಮನಾದ ತ್ರಿತನು ಯಜ್ಞವನ್ನು ಮಾಡುತ್ತಿದ್ದಾಗ ಸ್ವರ್ಗದಲ್ಲಿ ಭಯವು ಆವರಿಸಿಕೊಂಡಿತು. ಆದರೆ ಅದಕ್ಕೆ ಕಾರಣವೇನೆಂದು ಗೊತ್ತಾಗಲಿಲ್ಲ.
ತತಸ್ತು ತುಮುಲಂ ಶಬ್ದಂ ಶುಶ್ರಾವ ಸ ಬೃಹಸ್ಪತಿಃ |
ಶ್ರುತ್ವೈವ ಚಾಬ್ರುವೀದ್ ದೇವಾನ್ ಸರ್ವಾನ್ ದೇವಪುರೋಹಿತಃ ॥41॥
ಅನಂತರ ದೇವತೆಗಳ ಪುರೋಹಿತನಾದ ಬೃಹಸ್ಪತಿಯು ಆ ಭಯಂಕರ ಶಬ್ದವನ್ನು ಕೇಳಿಸಿಕೊಂಡನು. ಕೇಳಿದ ಕೂಡಲೇ ಎಲ್ಲಾ ದೇವತೆಗಳಿಗೂ ಹೀಗೆ ಹೇಳಿದನು
ಬೃಹಸ್ಪತಿಃ
ಸ ತಸ್ಯ ವರ್ತತೇ ಯಜ್ಞಃ ತತ್ರ ಗಚ್ಛಾಮಹೇ ಸುರಾಃ |
ಸ ಹಿ ಕ್ರುದ್ಧಃ ಸೃಜೇದನ್ಯಾನ್ ದೇವಾನಪಿ ಮಹಾತಪಾಃ ॥42॥
ಬೃಹಸ್ಪತಿ ದೇವತೆಗಳೇ! ಅದು ಆ ತ್ರಿತನು ಮಾಡುವ ಯಜ್ಞ. ನಾವು ಅಲ್ಲಿಗೆ ಹೋಗೋಣ. ಇಲ್ಲದಿದ್ದರೆ ಕೋಪದಿಂದ ಮಹಾತಪಸ್ವಿಯಾದ ಅವನು ಬೇರೆ ದೇವತೆಗಳನ್ನೂ ಸೃಷ್ಟಿ ಮಾಡಿಕೊಂಡಾನು.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ತಸ್ಯ ಸಹಿತಾಃ ಸರ್ವದೇವತಾಃ |
ಪ್ರಯಯುಸ್ತತ್ರ ಯತ್ರಾಸ್ತೇ ತ್ರಿತೋ ಯಜ್ಞಶ್ಚ ವರ್ತತೇ ॥43॥
ವೈಶಂಪಾಯನ ಬೃಹಸ್ಪತಿಯು ಹೇಳಿದ ಮಾತನ್ನು ಕೇಳಿದ ಎಲ್ಲಾ ದೇವತೆಗಳು ಒಟ್ಟಾಗಿ ತ್ರಿತನ ಯಜ್ಞ ನಡೆಯುವಲ್ಲಿಗೆ ಬಂದರು.
ತೇ ತತ್ರ ಗತ್ವಾ ವಿಬುಧಾಸ್ತಂ ಕೂಪಂ ಯತ್ರ ಸ ತ್ರಿತಃ |
ದದೃಶುಸ್ತಂ ಮಹಾತ್ಮಾನಂ ದೀಕ್ಷಿತಂ ಯಜ್ಞಕರ್ಮಣಿ ॥44॥
ಆ ದೇವತೆಗಳು ಯಾವ ಬಾವಿಯೊಳಗೆ ತ್ರಿತನು ಇದ್ದನೋ ಆ ಬಾವಿಗೆ ಹೋದರು. ಅಲ್ಲಿ ಯಜ್ಞದ ಕಾರ್ಯದಲ್ಲಿ ದೀಕ್ಷಿತನಾದ ತ್ರಿತನನ್ನು ನೋಡಿದರು.
ದೃಷ್ಟ್ವಾ ಚೈನಂ ಮಹಾತ್ಮಾನಂ ಶ್ರಿಯಾ ಪರಮಯಾ ಯುತಮ್ |
ಊಚುಶ್ಚೈನಂ ಮಹಾರಾಜ ಪ್ರಾಪ್ತಾ ಭಾಗಾರ್ಥಿನೋ ವಯಮ್ ॥45॥
ಮಹಾರಾಜನೇ! ಒಳ್ಳೆಯ ಕಾಂತಿಯನ್ನು ಹೊಂದಿರುವ ಆ ಮಹಾತ್ಮನನ್ನು ನೋಡಿ ಆ ದೇವತೆಗಳು ``ಯಜ್ಞಭಾಗವನ್ನು ಸ್ವೀಕರಿಸಲು ನಾವು ಬಂದಿದ್ದೇವೆ'' ಎಂದು ಹೇಳಿದರು.
ಅಥಾಬ್ರುವೀದ್ ಋಷಿರ್ದೇವಾನ್ ಪಶ್ಯಧ್ವಂ ತ್ರಿದಿವೌಕಸಃ |
ಅಸ್ಮಿನ್ ಪ್ರತಿಭಯೇ ಕೂಪೇ ನಿಮಗ್ನಂ ನಷ್ಟಚೇತಸಮ್ ॥46॥
ಅನಂತರ ಋಷಿ ತ್ರಿತನು ಹೀಗೆ ಹೇಳುತ್ತಾನೆ- `ದೇವತೆಗಳೇ! ನೋಡಿ. ಭರವಸೆಯನ್ನೇ ಕಳೆದುಕೊಂಡು ಭಯಂಕರವಾದ ಬಾವಿಯಲ್ಲಿ ಬಿದ್ದಿರುವ ನನ್ನನ್ನು ನೋಡಿರಿ'.
ತತಸ್ತ್ರಿತೋ ಮಹಾರಾಜ ಭಾಗಾಂಸ್ತೇಷಾಂ ಯಥಾವಿಧಿ |
ಮಂತ್ರಯುಕ್ತಾನ್ ಸಮಾಜಹ್ರೇ ತೇನ ಪ್ರೀತಾಸ್ತತೋಽಭವನ್ ॥47॥
ಮಹಾರಾಜನೇ! ಯಜ್ಞದಲ್ಲಿ ತ್ರಿತನು ವಿಧಿವತ್ತಾಗಿ ದೇವತೆಗಳ ಭಾಗವನ್ನು ಮಂತ್ರಸಹಿತವಾಗಿ ಸಮರ್ಪಿಸಿರುತ್ತಾನೆ. ಅದರಿಂದ ದೇವತೆಗಳು ಸಂತುಷ್ಟರಾಗುತ್ತಾರೆ.
ತತೋ ಯಥಾವಿಧಿ ಪ್ರಾಪ್ತಾನ್ ಭಾಗಾನ್ ಪ್ರಾಪ್ಯ ದಿವೌಕಸಃ |
ಪ್ರೀತಾತ್ಮಾನೋ ದದುಸ್ತಸ್ಮೈ ವರಾನ್ ಯಾನ್ ಮನಸೇಚ್ಛತಿ ॥48॥
ತ್ರಿತನು ವಿಧಿವತ್ತಾಗಿ ಸಮರ್ಪಿಸಿದ ಆಹುತಿಗಳನ್ನು ಸ್ವೀಕರಿಸಿದ ದೇವತೆಗಳು ಸಂತುಷ್ಟರಾಗಿ ಅವನು ಮನಸ್ಸಿನಲ್ಲಿ ಇಚ್ಛಿಸಿದ ಎಲ್ಲಾ ವರಗಳನ್ನು ಕೊಡುತ್ತಾರೆ.
ಸ ತು ವವ್ರೇ ವರಂ ದೇವಾನ್ ತ್ರಾತುಮರ್ಹಥ ಮಾಮಿಹ |

ಯಶ್ಚೇಹಾಪಃ ಸ್ಪೃಶೇತ್ ಕೂಪೇ ಸ ಸೋಮಪಗತಿಂ ಲಭೇತ್ ॥49॥
ತ್ರಿತನು ದೇವತೆಗಳಲ್ಲಿ `ನನ್ನನ್ನು ಈ ಬಾವಿಯಿಂದ ರಕ್ಷಿಸಿರಿ. ಈ ಬಾವಿಯ ನೀರನ್ನು ಕುಡಿದವರು ಸೋಮಪಾನಕ್ಕೆ ಯೋಗ್ಯವಾದ ಲೋಕಕ್ಕೆ ಹೋಗಲಿ' ಎಂಬ ವರವನ್ನು ಬೇಡಿದನು.
ತತ್ರ ಚೋರ್ಮಿಮತೀ ರಾಜನ್ನುತ್ಪಪಾತ ಸರಸ್ವತೀ |
ತಯೋತ್ಕ್ಷಿಪ್ತಸ್ತ್ರಿತಸ್ತಸ್ಥೌ ಪೂಜಯಂಸ್ತ್ರಿದಿವೌಕಸಃ ॥50॥
ರಾಜನೇ! ಅಲ್ಲಿ ಸರಸ್ವತಿಯು ದೊಡ್ಡ ತೆರೆಗಳೊಂದಿಗೆ ಎದ್ದು ಹರಿದಳು. ಆ ನೀರಿನ ಪ್ರವಾಹದಿಂದಾಗಿ ತ್ರಿತನು ಮೇಲೆದ್ದು ದೇವತೆಗಳನ್ನು ಪೂಜಿಸಿದನು.
ತಥೇತಿ ಚೋಕ್ತತ್ವ ವಿಬುಧಾ ಜಗ್ಮೂ ರಾಜನ್ ಯಥಾಗತಮ್ |
ತ್ರಿತಶ್ಚಾಪ್ಯಗಮತ್ ಪ್ರೀತಃ ಸ್ವಮೇವ ಭವನಂ ತದಾ ॥51॥
`ಹಾಗೆಯೇ ಆಗಲಿ' ಎಂದು ಹೇಳಿ ದೇವತೆಗಳು ಬಂದಹಾಗೆಯೇ ಹೊರಟು ಹೋದರು. ತ್ರಿತನು ಸಂತುಷ್ಟನಾಗಿ ತಾನೇ ಸ್ವತಃ ತನ್ನ ಮನೆಗೆ ಹೋದನು.
ಕ್ರುದ್ಧಃ ಸ ತು ಸಮಾಸಾದ್ಯ ತಾವೃಷೀ ಭ್ರಾತರೌ ತದಾ |
ಉವಾಚ ಪರುಷಂ ವಾಕ್ಯಂ ಶಶಾಪ ಚ ಪರಂತಪ ॥52॥
ಆಗ ಕೋಪಗೊಂಡ ತ್ರಿತನು ತನ್ನ ಸಹೋದರರಾದ ಏಕತ ಮತ್ತು ದ್ವಿತರನ್ನು ಶಪಿಸಿದನು ಮತ್ತು ಕಠೋರವಾದ ಮಾತನ್ನು ಆಡಿದನು.
ತ್ರಿತಃ
ಪಶುಲುಬ್ಧೌ ಯುವಾಂ ಯಸ್ಮಾನ್ಮಾಮುತ್ಸೃಜ್ಯ ಪ್ರಧಾವಿತೌ |
ತಸ್ಮಾದ್ ರೂಪೇಣ ತಾಸಾಂ ವೈ ದಂಷ್ಟ್ರಿಣಾಮಭಿತಶ್ಚರೌ ॥53॥
ಭವಿತಾರೌ ಮಯಾ ಶಪ್ತೌ ಪ್ರಾಪ್ತೇನಾನೇನ ಕರ್ಮಣಾ |
ಪಶವಶ್ಚೈವ ಯುವಯೋರ್ಗೋಲಾಂಗೂಲರ್ಕ್ಷವಾನರಾಃ ॥54॥
ತ್ರಿತ ಯಾವ ಕಾರಣದಿಂದ ಪಶುಗಳ ಮೇಲಿನ ಲೋಭದಿಂದ ನನ್ನನ್ನು ಬಿಟ್ಟು ಓಡಿಹೋದಿರೋ ಆ ಕಾರಣದಿಂದ ಪಶುಗಳ ರೂಪವನ್ನು ಪಡೆದು, ಕ್ರೂರವಾದ ಹಲ್ಲುಗಳ ಸಹಿತ ಎಲ್ಲೆಲ್ಲೂ ಸಂಚರಿಸಿ. ನಿಮ್ಮ ಕೆಟ್ಟಕೆಲಸದಿಂದಾಗಿ ನೀವಿಬ್ಬರೂ ನನ್ನ ಈ ಶಾಪಕ್ಕೆ ಒಳಗಾಗಿ. ನಿಮ್ಮ ಈ ಪಶುಗಳು ಬಾಲ ಮತ್ತು ಕಪ್ಪುಮೂತಿಗಳುಳ್ಳ ಕೋತಿಗಳಾಗಲಿ.
ವೈಶಂಪಾಯನಃ
ಇತ್ಯುಕ್ತೇಽಥ ತದಾ ತೇನ ಕ್ಷಣಾದೇವ ವಿಶಾಂಪತೇ |
ತಥಾಭೂತಾವದೃಶ್ಯೇತಾಂ ವಚನಾತ್ ಸತ್ಯವಾದಿನಃ ॥55॥
ವೈಶಂಪಾಯನ ರಾಜನೇ! ತ್ರಿತನು ಹೇಳಿದ ಮರುಕ್ಷಣದಲ್ಲಿಯೇ ಸತ್ಯವಾದಿಯಾದ ತ್ರಿತನ ಮಾತಿನಿಂದ ಹಾಗೆಯೇ ಕಾಣಿಸಿಕೊಂಡರು.
ತತ್ರಾಪ್ಯಮಿತವಿಕ್ರಾಂತಃ ಸ್ಪೃಷ್ಟ್ವಾ ತೋಯಂ ಹಲಾಯುಧಃ |
ದತ್ವಾ ಚ ವಿವಿಧಾನ್ ದೇಯಾನ್ ಪೂಜಯಿತ್ವಾ ಚ ವೈ ದ್ವಿಜಾನ್ ॥56॥
ಬಹಳ ಪರಾಕ್ರಮಿಯಾದ ಬಲರಾಮನು ಉದಪಾನದ ತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡಿದನು. ಬ್ರಾಹ್ಮಣರನ್ನು ಪೂಜಿಸಿ ವಿವಿಧ ದ್ರವ್ಯಗಳನ್ನು ದಾನ ಮಾಡಿದನು.
ಉದಪಾನಂ ಚ ತದ್ ದೃಷ್ಟ್ವಾ ಪ್ರಶಸ್ಯ ಚ ಪುನಃ ಪುನಃ |
ನದೀಗತಮಮೇಯಾತ್ಮಾ ಪ್ರಾಪ್ತೋ ವಿನಶನಂ ತದಾ ॥57॥
ನದಿಯಲ್ಲಿರುವ ಆ ಉದಪಾನವನ್ನು ನೋಡಿ ಮತ್ತೆ ಮತ್ತೆ ಅದರ ಮಹಿಮೆಯನ್ನು ಕೊಂಡಾಡುತ್ತಾ ಅಲ್ಲಿಂದ ವಿನಶನಕ್ಷೇತ್ರಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಬಲಭದ್ರಸ್ಯ ತೀರ್ಥಯಾತ್ರಾವರ್ಣನಂ ನಾಮ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಬಲರಾಮನು ಸರಸ್ವತೀತೀರದಲ್ಲಿರುವ ಅನೇಕ ತೀರ್ಥಕ್ಷೇತ್ರಗಳಿಗೆ ಯಾತ್ರೆ ಮಾಡಿದ್ದರ ವರ್ಣನೆ. ಆ ತೀರ್ಥಗಳ ಮಹಿಮೆಗಳ ವರ್ಣನೆ
ವೈಶಂಪಾಯನಃ
ತತೋ ವಿನಶನಂ ರಾಜನ್ ಆಜಗಾಮ ಹಲಾಯುಧಃ |
ಶೂದ್ರಾಭೀರಾನ್ ಪ್ರತಿ ದ್ವೇಷಾದ್ ಯತ್ರ ನಷ್ಟಾ ಸರಸ್ವತೀ ॥1॥
ವೈಶಂಪಾಯನ ರಾಜನೇ! ಅನಂತರ ಬಲರಾಮನು ವಿನಶನ ಕ್ಷೇತ್ರಕ್ಕೆ ಬಂದನು. ದುಷ್ಟರಾದ ಕೆಲವು ಶೂದ್ರರಿಂದ ಮತ್ತು ಸಂಕರಜಾತಿಯವರ ಮೇಲಿನ ದ್ವೇಷದಿಂದಾಗಿ ಸರಸ್ವತೀನದಿಯು ಗುಪ್ತಗಾಮಿನಿಯಾದದ್ದು ಈ ಸ್ಥಳದಲ್ಲಿಯೇ.
ಯಸ್ಮಾತ್ ಸಾ ಭರತಶ್ರೇಷ್ಠ ಶೂದ್ರದ್ವೇಷ್ಯಾ ಸರಸ್ವತೀ |
ತಸ್ಮಾತ್ ತಾಮೃಷಯೋ ನಿತ್ಯಮಾಹುರ್ವಿನಶನೇತಿ ಹ ॥2॥
ಯಾವಕಾರಣದಿಂದ ಸರಸ್ವತಿಯು ಶೂದ್ರದ್ವೇಷಿಯಾಗಿದ್ದಳೋ ಆ ಕಾರಣದಿಂದ ಋಷಿಗಳು ಅವಳನ್ನು ನಿತ್ಯವಾಗಿಯೂ ವಿನಶನಾ ಎಂದು ಕರೆಯುತ್ತಿದ್ದರು.

ತಚ್ಚಾಪ್ಯತಿಕ್ರಮ್ಯ ಬಲವಾನ್ ಸರಸ್ವತ್ಯಾಂ ಮಹಾತಪಾಃ |
ಅಭೂಮಿಕಂ ತತೋಽಗಚ್ಛತ್ ಸರಸ್ವತ್ಯಾಸ್ತಟಂ ಪರಮ್ ॥3॥
ಮಹಾತಪಸ್ವಿಯಾದ ಬಲರಾಮನು ಅಲ್ಲಿಯೂ ಜಲದಿಂದ ಆಚಮನಾದಿಗಳನ್ನು ಮಾಡಿ ಸರಸ್ವತಿಯ ಇನ್ನೊಂದು ತೀರದಲ್ಲಿದ್ದ ಅಭೂಮಿಕಾ ಎಂಬ ಕ್ಷೇತ್ರಕ್ಕೆ ಬಂದನು.
ಯತ್ರ ಚಾಪ್ಸರಸಃ ಶುಭ್ರಾಃ ಸರ್ವಕಾಲಮತಂದ್ರಿತಾಃ |
ಕ್ರೀಡಾಭಿರ್ವಿಪುಲಾಭಿಶ್ಚ ಕ್ರೀಡಂತಿ ವಿಮಲಾನನಾಃ ॥4॥
ಆ ಅಭೂಮಿಕೆ(ಸುಭೂಮಿಕೆ)ಯಲ್ಲಿ ಪರಿಶುದ್ಧರಾದ ಸುಂದರವದನದ ಅಪ್ಸರಸ್ತ್ರೀಯರು ಯಾವುದೇ ಸಂಕೋಚವಿಲ್ಲದೆ ಬಹಳವಾದ ಕ್ರೀಡೆಗಳನ್ನು ಆಡುತ್ತಿದ್ದರು.
ತತ್ರ ದೇವಾಃ ಸಗಂಧರ್ವಾ ಮಾಸಿ ಮಾಸಿ ಜನೇಶ್ವರ |
ಅಭಿಗಚ್ಛಂತಿ ತತ್ತೀರ್ಥಂ ಪುಣ್ಯಂ ಬ್ರಾಹ್ಮಣಸೇವಿತಮ್ ॥5॥
ಬ್ರಾಹ್ಮಣರಿಂದ ಸೇವಿಸಲ್ಪಡುವ ಆ ಪುಣ್ಯಪ್ರದವಾದ ತೀರ್ಥಕ್ಕೆ ದೇವತೆಗಳು ಗಂಧರ್ವರೊಡನೆ ಪ್ರತೀ ತಿಂಗಳು ಶ್ರದ್ಧೆಯಿಂದ ಬರುತ್ತಾರೆ.
ತತ್ರ ನೃತ್ಯಂತಿ ಗಂಧರ್ವಾಃ ತಥೈವಾಪ್ಸರಸಾಂ ಗಣಾಃ |
ಸಮೇತಾಃ ಸಹಿತಾ ರಾಜನ್ ಯಥಾಪ್ರಾಪ್ತಂ ಯಥಾಸುಖಮ್ ॥6॥
ಅಲ್ಲಿ ಗಂಧರ್ವರು ಅಪ್ಸರಸ್ತ್ರೀಯರ ಜೊತೆಗೆ ಸುಖವಾಗಿ ಯಥೇಷ್ಟವಾಗಿ ನೃತ್ಯವನ್ನು ಮಾಡುತ್ತಾರೆ.
ತತ್ರ ಮೋದಂತಿ ದೇವಾಶ್ಚ ಪಿತರಶ್ಚ ಸವೀರುಧಃ |
ಪುಣ್ಯೈಃ ಪುಷ್ಪೈಃ ಸದಾ ದಿವ್ಯೈಃ ಕೀರ್ಯಮಾಣೈಃ ಪುನಃ ಪುನಃ ॥7॥
ಅಲ್ಲಿ ದೇವತೆಗಳು, ಪಿತೃಗಳು ಕೂಡ ತಮಗಿಷ್ಟವಾದ ಲತೆ-ಗಿಡಗಳೊಂದಿಗೆ ಆನಂದವನ್ನು ಪಡುತ್ತಿದ್ದರು. ಅವರ ಮೇಲೆ ಮತ್ತೆ ಮತ್ತೆ ಪುಣ್ಯವಾದ ಪುಷ್ಪಗಳ ಮಳೆಯು ಸುರಿಯುತ್ತಿತ್ತು.
ಆಕ್ರೀಡಭೂಮಿಃ ಸಾ ರಾಜನ್ ತಾಸಾಮಪ್ಸರಸಾಂ ಶುಭಾ |
ಸುಭೂಮಿಕೇತಿ ವಿಖ್ಯಾತಾ ಸರಸ್ವತ್ಯಾಸ್ತಟೇ ವನೇ ॥8॥
ರಾಜನೇ! ಮಂಗಳಸ್ವರೂಪದ ಆ ಸುಭೂಮಿಕಾ ಕ್ಷೇತ್ರವು ಅಪ್ಸರಾಸ್ತ್ರೀಯರ ಕ್ರೀಡಾಸ್ಥಾನವಾಗಿತ್ತು. ಸರಸ್ವತೀನದಿಯ ತೀರದ ಕಾಡಿನಲ್ಲಿ ಇರುವ ಈ ಕ್ಷೇತ್ರವು ಸುಭೂಮಿಕಾ ಎಂದು ಪ್ರಸಿದ್ಧವಾಗಿದೆ.
ತತ್ರ ಸ್ನಾತ್ವಾ ಚ ದತ್ತ್ವಾ ಚ ವಸು ವಿಪ್ರೇಷು ಮಾಧವಃ |
ಶ್ರುತ್ವಾ ಗೀತಂ ಚ ತದ್ ದಿವ್ಯಂ ವಾದಿತ್ರಾಣಾಂ ಚ ನಿಸ್ವನಮ್ ॥9॥
ಮಧುಕುಲೋದ್ಭವನಾದ ಬಲರಾಮನು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಬ್ರಾಹ್ಮಣರಿಗೆ ಸಂಪತ್ತನ್ನು ದಾನ ಮಾಡಿದನು. ಅಲ್ಲಿ ಕೇಳಿಸುತ್ತಿದ್ದ ದಿವ್ಯವಾದ ಗೀತೆಗಳನ್ನು ಮತ್ತು ವಾದ್ಯಗಳ ಸುಶ್ರಾವ್ಯಧ್ವನಿಯನ್ನು ಕೇಳಿಸಿಕೊಂಡನು.
ಛಾಯಾಂ ಚ ವಿಪುಲಾಂ ದೃಷ್ಟ್ವಾ ದೇವಗಂಧರ್ವರಕ್ಷಸಾಮ್ |
ಗಂಧರ್ವಾಣಾಂ ತತಸ್ತೀರ್ಥಮಗಮದ್ ರೋಹಿಣೀಸುತಃ ॥10॥
ದೇವತೆಗಳ, ಗಂಧರ್ವರ, ರಕ್ಕಸರ ಪ್ರತೀಕಗಳನ್ನು ನೋಡಿದ ಬಲರಾಮನು ತೀರ್ಥಕ್ಷೇತ್ರಕ್ಕೆ ಹೋದನು.
ವಿಶ್ವಾವಸುಮುಖಾಸ್ತತ್ರ ಗಂಧರ್ವಾಸ್ತಪಸಾಽನ್ವಿತಾಃ |
ನೃತ್ತವಾದಿತ್ರಗೀತಂ ಚ ಪ್ರಾಪ್ತವಂತೋ ಮನೋರಮಮ್ ॥11॥
ತಪಸ್ಸಿನಿಂದ ಕೂಡಿದ ವಿಶ್ವಾವಸು ಮೊದಲಾದ ಗಂಧರ್ವರು ಅಲ್ಲಿ ಮನಸ್ಸಿಗೆ ಮುದನೀಡುವ ನೃತ್ಯ, ವಾದ್ಯ ಮತ್ತು ಗೀತೆಗಳನ್ನು ಪಡೆದುಕೊಂಡರು. ಅರ್ಥಾತ್ ಅವರೆಲ್ಲಾ ಒಳ್ಳೆಯ ನೃತ್ಯವನ್ನು ಮಾಡುತ್ತಾ ವಾದ್ಯಸಹಿತವಾಗಿ ಹಾಡುತ್ತಿದ್ದರು.
ತತ್ರ ದತ್ತ್ವಾ ಹಲಧರೋ ವಿಪ್ರೇಭ್ಯೋ ವಿವಿಧಂ ವಸು |
ಅಜಾವಿಕಂ ಖರೋಷ್ಟ್ರಂ ಚ ಸುವರ್ಣಂ ರಜತಂ ತಥಾ ॥12॥
ಅಲ್ಲಿ ಬಲರಾಮನು ಬ್ರಾಹ್ಮಣರಿಗೆ ಆಡು, ಒಂಟೆ, ಬಂಗಾರ, ಬೆಳ್ಳಿ ಗಳನ್ನು ದಾನ ಮಾಡಿದನು.
ಭೋಜಯಿತ್ವಾ ದ್ವಿಜಾನ್ ಕಾಮೈಃ ಸಂತರ್ಪ್ಯ ಚ ಮಹಾಧನೈಃ |
ಪ್ರಯಯೌ ಸಹಿತೋ ವಿಪ್ರೈಃ ಸ್ತೂಯಮಾನಶ್ಚ ಮಾಧವಃ ॥13॥
ಬ್ರಾಹ್ಮಣರಿಗೆ ಅವರಿಗಿಷ್ಟವಾದ ಪದಾರ್ಥಗಳಿಂದ ಭೋಜನಮಾಡಿಸಿದನು. ಬಹಳ ಧನವನ್ನು ಕೊಟ್ಟು ಅವರನ್ನು ತೃಪ್ತಿಪಡಿಸಿದನು. ಎಲ್ಲರೂ ಅವನನ್ನು ಕೊಂಡಾಡುತ್ತಿದ್ದರು. ಬ್ರಾಹ್ಮಣರನ್ನು ಕೂಡಿಕೊಂಡು ಅಲ್ಲಿಂದ ಹೊರಟನು.
ತಸ್ಮಾದ್ ಗಂಧರ್ವತೀರ್ಥಾಚ್ಚ ಮಹಾಬಾಹುರರಿಂದಮಃ |
ಗರ್ಗಸ್ರೋತೋ ಮಹತ್ತೀರ್ಥಮಾಜಗಾಮೈಕಕುಂಡಲಃ ॥14॥
ಮಹಾಬಾಹುವಾದ, ಒಂದು ಕಿವಿಯಲ್ಲಿ ಕುಂಡಲವನ್ನು ಧರಿಸಿರುವ ಬಲರಾಮನು ಆ ಗಂಧರ್ವತೀರ್ಥದಿಂದ ಹೊರಟು ಗರ್ಗಸ್ರೋತಸ್ಸು ಎಂಬ ದೊಡ್ಡ ತೀರ್ಥಕ್ಷೇತ್ರಕ್ಕೆ ಬಂದನು.
ತತ್ರ ಗರ್ಗೇಣ ವೃದ್ಧೇನ ತಪಸಾ ಭಾವಿತಾತ್ಮನಾ |
ಕಾಲಜ್ಞಾನಗತಿಶ್ಚೈವ ಜ್ಯೋತಿಷಾಂ ಗತಿರೇವ ಚ ॥15॥
ಉತ್ಪಾತಾ ದಾರುಣಾಶ್ಚೈವ ಶುಭಾಶ್ಚ ಜನಮೇಜಯ |
ಸರಸ್ವತ್ಯಾಃ ಶುಭೇ ತೀರ್ಥೇ ವಿಹಿತಾಶ್ಚ ಮಹಾತ್ಮನಾ ॥16॥
ಜನಮೇಜಯನೇ! ಸರಸ್ವತೀ ನದಿಯಲ್ಲಿರುವ ಪುಣ್ಯಪ್ರದವಾದ ಆ ಕ್ಷೇತ್ರದಲ್ಲಿ ವೃದ್ಧನಾದ ಮಹಾತ್ಮ ಗರ್ಗಮುನಿಯು ತಪಸ್ಸಿನಿಂದ

ತನ್ನಲ್ಲಿ ಸಾಮರ್ಥ್ಯವನ್ನು ವೃದ್ಧಿಸಿಕೊಂಡು ಕಾಲದ ಗತಿಯನ್ನೂ, ಜ್ಞಾನದ ಗತಿಯನ್ನೂ, ಗ್ರಹ-ತಾರೆಗಳ ಗತಿಯನ್ನೂ ಶುಭ ಮತ್ತು ಅಶುಭ ಉತ್ಪಾತಗಳನ್ನು ನಿರ್ಣಯಿಸಿದ್ದನು.

ತಸ್ಯ ನಾಮ್ನಾ ಚ ತತ್ತೀರ್ಥಂ ಗರ್ಗಸ್ರೋತ ಇತಿ ಸ್ಮೃತಮ್ ॥17॥

ಆ ಕ್ಷೇತ್ರವು ಅವನ ಹೆಸರಿನಿಂದಲೇ ಗರ್ಗಸ್ರೋತಸ್ಸು ಎಂದು ಹೆಸರನ್ನು ಪಡೆಯಿತು.

ತತ್ರ ಗರ್ಗಂ ಮಹಾತ್ಮಾನಮೃಷಯಃ ಸುವ್ರತಾ ನೃಪ |
ಉಪಾಸಾಂಚಕ್ರಿರೇ ನಿತ್ಯಂ ಕಾಲಜ್ಞಾನಂ ಪ್ರತಿ ಪ್ರಭೌ ॥18॥

ರಾಜನ್! ಆ ಗರ್ಗಸ್ರೋತಸ್ ಕ್ಷೇತ್ರದಲ್ಲಿ ವ್ರತನಿಷ್ಠರಾದ ಋಷಿಗಳು ನಿತ್ಯದಲ್ಲಿಯೂ ಕಾಲಜ್ಞಾನವನ್ನು ಪಡೆಯುವುದಕ್ಕಾಗಿ ಮಹಾತ್ಮನಾದ ಗರ್ಗನನ್ನು ಪೂಜಿಸಿದರು.

ತತ್ರ ಗತ್ವಾ ಮಹಾರಾಜ ಬಲಃ ಶ್ವೇತಾನುಲೇಪನಃ |
ವಿಧಿವದ್ಧಿ ಧನಂ ಪ್ರಾದಾನ್ಮುನೀನಾಂ ಭಾವಿತಾತ್ಮನಾಮ್ ॥19॥

ಮಹಾರಾಜನೇ! ಶ್ವೇತವರ್ಣದ ವರ್ಣಿಕೆಯನ್ನು ಲೇಪಿಸಿಕೊಂಡ ಬಲರಾಮನು ಆ ಗರ್ಗಕ್ಷೇತ್ರಕ್ಕೆ ಹೋಗಿ, ವಿಧಿವತ್ತಾಗಿ ಸಾಧಕರಾದ ಮುನಿಗಳಿಗೆ ಹಣವನ್ನು ದಾನವಾಗಿ ಕೊಟ್ಟನು.

ಉಚ್ಚಾವಚಾಂಸ್ತಥಾ ದೇಯಾನ್ ದ್ವಿಜೇಭ್ಯೋಽಭಿಪ್ರದಾಯ ಚ |
ನೀಲಾವಾಸಾಸ್ತತೋಽಗಚ್ಛತ್ ಶಂಖತೀರ್ಥಂ ಮಹಾಯಶಾಃ ॥20॥

ಕೊಡುವ ಪದಾರ್ಥಗಳು ಉತ್ತಮ, ಸಾಮಾನ್ಯ ಎಂದು ಎರಡು ಬಗೆಯವುಗಳು. ಅವೆಲ್ಲವನ್ನೂ ಜ್ಞಾನಿಯಾದ, ನೀಲವಸ್ತ್ರನಾದ ಬಲರಾಮನು ಬ್ರಾಹ್ಮಣರಿಗೆ ದಾನಮಾಡಿ ಅನಂತರ ಶಂಖತೀರ್ಥವೆಂಬ ಪ್ರಸಿದ್ಧವಾದ ತೀರ್ಥಕ್ಷೇತ್ರಕ್ಕೆ ಹೋದನು.

ತತ್ರಾಪಶ್ಯನ್ಮಹಾಶಂಖಂ ಮಹಾಪದ್ಮಮಿವೋತ್ಥಿತಮ್ ॥21॥

ಅಲ್ಲಿ ದೊಡ್ಡ ಪದ್ಮದ ಹಾಗೆ ಮೇಲೆದ್ದು ಬಂದ ಮಹಾಶಂಖವೆಂಬ ವೃಕ್ಷವನ್ನು ನೋಡಿದನು.

ಶ್ವೇತಪರ್ವತಸಂಕಾಶಮೃಷಿಸ್ಯಂರ್ನಿಷೇವಿತಮ್ |
ಸರಸ್ವತ್ಯಾಸ್ತಟೇ ಜಾತಂ ನಗಂ ತಾಲಧ್ವಜೋ ಬಲೀ ॥22॥

ಆ ವೃಕ್ಷವು ಬೆಳ್ಳಗಿನ ಪರ್ವತದ ಹಾಗೆ ಕಾಣಿಸುತ್ತಿತ್ತು. ಅದರ ಕೆಳಗೆ ಋಷಿ-ಮುನಿಗಳು ವಾಸಿಸುತ್ತಿದ್ದರು. ಸರಸ್ವತೀನದಿಯ ತೀರದಲ್ಲದು ಬೆಳೆದು ನಿಂತಿತ್ತು. ಅಂತಹ ಮರವನ್ನು, ತಾಳೆ ಮರದ ಚಿಹ್ನೆಯ ಧ್ವಜವನ್ನು ಹೊಂದಿರುವ ಬಲರಾಮನು ನೋಡಿದನು.

ಯಕ್ಷವಿದ್ಯಾಧರಾಶ್ಚೈವ ರಾಕ್ಷಸಾಶ್ಚ ಸಹಸ್ರಶಃ |
ಪಿಶಾಚಾಶ್ಚಾಮಿತಬಲಾಸ್ತತ್ರ ಸಿದ್ಧಾಃ ಸಹಸ್ರಶಃ ॥23॥
ತೇ ಸರ್ವೇ ಹ್ಯಶನಂ ಕೃತ್ವಾ ಫಲೈಸ್ತಸ್ಯ ವನಸ್ಪತೇಃ |
ವ್ರತೈಶ್ಚ ನಿಯಮೈಶ್ಚೈವ ಕಾಲೇ ಕಾಲೇ ಸ್ಮ ಭುಂಜತೇ ॥24॥

ಸಾವಿರಾರು ಸಂಖ್ಯೆಯಲ್ಲಿ ಯಕ್ಷರು, ವಿದ್ಯಾಧರರು, ರಾಕ್ಷಸರು, ಅಮಿತ ಬಲಶಾಲಿಗಳಾದ ಪಿಶಾಚರು, ಸಿದ್ಧರು ಇವರೆಲ್ಲರೂ ಈ ವೃಕ್ಷದ ಫಲವನ್ನು ತಮ್ಮ ಭೋಜವನ್ನಾಗಿ ಸ್ವೀಕರಿಸುತ್ತಿದ್ದರು. ವ್ರತ-ನಿಯಮಗಳಲ್ಲಿ ಆಸಕ್ತರಾದ ಅವರೆಲ್ಲರೂ ಕಾಲ ಕಾಲದಲ್ಲಿ ಈ ಫಲಗಳನ್ನು ತಿನ್ನುತ್ತಿದ್ದರು.

ಅದೃಶ್ಯಮಾನಾ ಮನುಜೈರ್ವ್ಯಚರನ್ ಭರತರ್ಷಭ ॥25॥

ಭರತಕುಲಶ್ರೇಷ್ಠನೇ! ಇವರ್ಯಾರೂ ಕೂಡ ಮನುಷ್ಯರ ದೃಷ್ಟಿಗೆ ಬೀಳದೆ ಸಂಚಾರ ಮಾಡುತ್ತಿದ್ದರು.

ಏವಂ ಖ್ಯಾತೋ ನರಪತೇ ಲೋಕೇಽಸ್ಮಿನ್ ಸ ವನಸ್ಪತಿಃ |
ತತ್ರ ತೀರ್ಥಂ ಸರಸ್ವತ್ಯಾಃ ಪಾವನಂ ಲೋಕವಿಶ್ರುತಮ್ ॥26॥

ರಾಜನೇ! ಈ ವೃಕ್ಷವು ಲೋಕದಲ್ಲಿ ಈ ರೀತಿಯಲ್ಲಿ ಪ್ರಸಿದ್ಧವಾಗಿತ್ತು. ಅಲ್ಲಿ ಸರಸ್ವತಿಯ ತೀರ್ಥವೂ ಪವಿತ್ರವೆಂದು ಲೋಕಪ್ರಸಿದ್ಧವಾಗಿತ್ತು.

ತಸ್ಮಿಂಶ್ಚ ಯದುಶಾರ್ದೂಲೋ ದತ್ವಾ ತೀರ್ಥೇ ಯಶಸ್ವಿನಾಮ್ |
ತಾಮ್ರಾಯಸಾನಿ ಭಾಂಡಾನಿ ವಸ್ತ್ರಾಣ್ಯಾಭರಣಾನಿ ಚ ॥27॥

ಆ ಕ್ಷೇತ್ರದಲ್ಲಿ ಯದುಶ್ರೇಷ್ಠನಾದ ಬಲರಾಮನು ತಾಮ್ರದ, ಕಬ್ಬಿಣದ ಪಾತ್ರೆಗಳನ್ನು, ವಸ್ತ್ರಗಳನ್ನು, ಆಭರಣಗಳನ್ನು ದಾನ ಮಾಡಿದನು.

ಪೂಜಯಿತ್ವಾ ದ್ವಿಜಾಂಶ್ಚೈವ ಪೂಜಿತಶ್ಚ ದ್ವಿಜೋತ್ತಮೈಃ |
ಪುಣ್ಯಂ ರಾಜನ್ನಾಜಗಾಮ ಮುನಿತೀರ್ಥಂ ಮಹಾಬಲಃ ॥28॥

ರಾಜನೇ! ಅಲ್ಲಿ ಬ್ರಾಹ್ಮಣರನ್ನು ಪೂಜಿಸಿ, ಬೇರೆ ಬ್ರಾಹ್ಮಣರಿಂದ ತಾನು ಪೂಜೆಯನ್ನು ಸ್ವೀಕರಿಸಿ, ಬಲರಾಮನು ಮುನಿತೀರ್ಥಕ್ಷೇತ್ರಕ್ಕೆ ಬಂದನು

ತತ್ರ ಗತ್ವಾ ಮುನೀನ್ ದೃಷ್ಟ್ವಾ ನಾನಾವೇಷಧರಾನ್ ಬಹೂನ್ |
ಆಪ್ಲುತ್ಯ ಸಲಿಲೇ ಚಾಪಿ ಪೂಜಯಾಮಾಸ ವೈ ದ್ವಿಜಾನ್ ॥29॥

ಮುನಿತೀರ್ಥಕ್ಕೆ ಹೋದ ಬಲರಾಮನು ಅಲ್ಲಿ ಬೇರೆ ಬೇರೆ ವಿಧದಲ್ಲಿ ವೇಷಧಾರಣೆ ಮಾಡಿಕೊಂಡಿದ್ದ ಮುನಿಗಳನ್ನು ನೋಡಿದ. ತೀರ್ಥದಲ್ಲಿ ಅವಗಾಹನ ಸ್ನಾನವನ್ನು ಮಾಡಿ ಬ್ರಾಹ್ಮಣರನ್ನು ಪೂಜಿಸಿದನು.

ತಥೈವ ದತತ್ವ ವಿಪ್ರೇಭ್ಯಃ ಪರಿಭೋಗಾನ್ ಸುಪುಷ್ಕಲಾನ್ |
ತತಃ ಪ್ರಾಯಾದ್ ಬಲೋ ರಾಜನ್ ದಕ್ಷಿಣೇನ ಸರಸ್ವತೀಮ್ ॥30॥

ಹಾಗೆಯೇ ಬ್ರಾಹ್ಮಣರಿಗೆ ಬಹಳವಾಗಿ ಭೋಗಪದಾರ್ಥಗಳನ್ನು ದಾನಮಾಡಿ ಬಲರಾಮನು ಅಲ್ಲಿಂದ ಮುಂದೆ ಸರಸ್ವತಿಯ

ದಕ್ಷಿಣಭಾಗವನ್ನು ತಲುಪಿದನು.
ಗತ್ವಾ ಚೈನಾಂ ಮಹಾಬಾಹುರ್ನಾತಿದೂರೇ ಮಹಾಯಶಾಃ |
ಧರ್ಮಾತ್ಮಾ ನಾಗಧನ್ವಾನಂ ತೀರ್ಥಂ ಚಾಗಮದಚ್ಯುತಃ ||31||
ಮಹಾಕೀರ್ತಿಶಾಲಿಯಾದ, ಮಹಾಬಾಹುವಾದ ಧರ್ಮಾತ್ಮ ಬಲರಾಮನು ಸ್ವಲ್ಪದೂರದಲ್ಲಿಯೇ ಇದ್ದ ನಾಗಧನ್ವ ಎಂಬ ತೀರ್ಥಕ್ಕೆ ಹೋದನು.
ತತ್ರ ಪನ್ನಗರಾಜಸ್ಯ ವಾಸುಕೇಸ್ಸನ್ನಿವೇಶನಮ್ |
ಮಹಾದ್ಯುತೇರ್ಮಹಾರಾಜ ಬಹುಭಿಃ ಪನ್ನಗೈರ್ವೃತಮ್ ||32||
ಮಹಾರಾಜನೇ! ಸರ್ಪಗಳಿಂದ ತುಂಬಿದ ಆ ನಾಗಧನ್ವ ತೀರ್ಥವು ನಾಗರಾಜನಾದ ಮಹಾಕಾಂತಿಮಂತ ವಾಸುಕಿಯ ಆವಾಸಸ್ಥಾನವಾಗಿತ್ತು.
ಯತ್ರಾಸನ್ ಋಷಯಃ ಸಿದ್ಧಾಃ ಸಹಸ್ರಾಣಿ ಚತುರ್ದಶ ||33||
ಆ ಕ್ಷೇತ್ರದಲ್ಲಿ ಹದಿನಾಲ್ಕು ಸಾವಿರ ಋಷಿಗಳು ಮತ್ತು ಸಿದ್ಧರು ಇದ್ದರು.
ಯತ್ರ ದೇವಾಃ ಸಮಾಸಾದ್ಯ ವಾಸುಕಿಂ ಪನ್ನಗೋತ್ತಮಮ್ |
ಸರ್ವಪನ್ನಗರಾಜಾನಮಭ್ಯಷಿಂಚನ್ ಯಥಾವಿಧಿ ||34||
ಅಲ್ಲಿ ದೇವತೆಗಳು ಬಂದು ನಾಗಗಳಲ್ಲಿ ಉತ್ತಮನಾದ ವಾಸುಕಿಯನ್ನು ಸಕಲನಾಗಗಳಿಗೆ ರಾಜನನ್ನಾಗಿ ಪಟ್ಟಾಭಿಷೇಕ ಮಾಡಿದರು.
ಪನ್ನಗೇಭ್ಯೋ ಭಯಂ ತತ್ರ ನ ಚ ವಿದ್ಯೇತ ಭಾರತ ||35||
ಭರತಕುಲೋದ್ಭವನೇ! ಅಲ್ಲಿ ಸರ್ಪಗಳಿಂದ (ಸರ್ಪಗಳಿಗೆ) ಭಯವೇ ಇರುವುದಿಲ್ಲ.
ತತ್ರಾಪಿ ವಿಧಿವದ್ ದತ್ತ್ವಾ ವಿಪ್ರಾಣಾಂ ವಿತ್ತಸಂಚಯಾನ್ |
ಯಯೌ ಪ್ರಾಚೀಂ ದಿಶಂ ರಾಜನ್ ದೀಪ್ಯಮಾನಃ ಸ ವೀರ್ಯವಾನ್ ||
ಅಲ್ಲಿಯೂ ಬಲರಾಮನು ಸಂಪತ್ತಿನ ಸಂಗ್ರಹವನ್ನೇ ಬ್ರಾಹ್ಮಣರಿಗೆ ವಿಧಿಬದ್ಧವಾಗಿ ದಾನ ಮಾಡಿದನು. ಕಾಂತಿಯಿಂದ ಶೋಭಿಸುತ್ತಿರುವ ವೀರ ಬಲರಾಮನು ಅಲ್ಲಿಂದ ಪೂರ್ವದಿಕ್ಕಿಗೆ ಹೋದನು.
ಆಪ್ಲುತ್ಯ ಬಹುಶೋ ಹೃಷ್ಟಸ್ತೇಷು ತೀರ್ಥೇಷು ಲಾಂಗಲೀ |
ದತ್ತ್ವಾ ವಸು ದ್ವಿಜಾಗ್ರ್ಯೇಭ್ಯೋ ನಿರ್ಜಗಾಮ ಮಹಾಬಲಃ ||37||
ಬಲರಾಮನು ಆ ತೀರ್ಥಗಳಲ್ಲಿ ಅನೇಕಬಾರಿ ಸ್ನಾನವನ್ನು ಮಾಡಿ ಬಹಳವಾಗಿ ಸಂತೋಷವನ್ನು ಹೊಂದಿದನು. ಮಹಾಬಲನಾದ ಬಲರಾಮನು ಉತ್ತಮ ಬ್ರಾಹ್ಮಣರಿಗೆ ಸಂಪತ್ತನ್ನು ದಾನ ಮಾಡಿದನು.
ತತ್ರಸ್ಥಾನ್ ಋಷಿಸಂಘಾಂಸ್ತಾನಭಿವಾದ್ಯ ಹಲಾಯುಧಃ |
ತತೋ ರಾಮೋಽಗಮತ್ ತೀರ್ಥಂ ಋಷಿಭಿಃ ಸೇವಿತಂ ಮಹತ್ ||
ಹಲಾಯುಧನು ಅಲ್ಲಿದ್ದ ಋಷಿಸಮೂಹವನ್ನೂ ನಮಸ್ಕರಿಸಿ ಅಲ್ಲಿಂದ ಮುಂದೆ ಋಷಿಗಳು ಆಶ್ರಯಿಸಿರುವ ದೊಡ್ಡದಾದ ತೀರ್ಥಕ್ಷೇತ್ರಕ್ಕೆ ಹೋದನು.
ಯತ್ರ ಭೂಯೋ ನಿವವೃತೇ ಪ್ರಾಙ್ಮುಖಾ ವೈ ಸರಸ್ವತೀ |
ಋಷೀಣಾಂ ನೈಮಿಶೀಯಾನಾಮಪೇಕ್ಷಾರ್ಥಂ ಮಹಾತ್ಮನಾಮ್ ||39||
ಅಲ್ಲಿ ಮಹಾತ್ಮರಾದ ನೈಮಿಷಕ್ಷೇತ್ರದ ಋಷಿಗಳ ಅಪೇಕ್ಷೆಯಂತೆ ಸರಸ್ವತಿನದಿಯು ಮತ್ತೆ ಪೂರ್ವಾಭಿಮುಖವಾಗಿ ತಿರುಗಿದ್ದಾಳೆ.
ನಿವೃತ್ತಾಂ ತಾಂ ಸರಿಚ್ಛ್ರೇಷ್ಠಾಂ ತತ್ರ ಗತ್ವಾ ತು ಲಾಂಗಲೀ |
ಬಭೂವ ವಿಸ್ಮಿತೋ ರಾಜನ್ ಬಲಃ ಶ್ವೇತಾನುಲೇಪನಃ ||40||
ರಾಜನೇ! ಅಲ್ಲಿ ಹೀಗೆ ಮಾರ್ಗವನ್ನು ಬದಲಿಸಿದ ಸರಸ್ವತೀನದಿಗೆ ಹೋಗಿ, ಬೆಳ್ಳಗಿನ ಸುಗಂಧ ದ್ರವ್ಯಗಳನ್ನು ಲೇಪಿಸಿಕೊಂಡಿರುವ ಬಲರಾಮನು ಬಹಳ ಆಶ್ಚರ್ಯಪಟ್ಟನು.
ಜನಮೇಜಯಃ
ಕಸ್ಮಾತ್ ಸರಸ್ವತೀ ಬ್ರಹ್ಮನ್ ನಿವೃತ್ತಾ ಪ್ರಾಙ್ಮುಖೀ ತತಃ |
ಆಖ್ಯಾತುಮೇತದಿಚ್ಛಾಮಿ ಸರ್ವಮಧ್ವರ್ಯುಸತ್ತಮ ||41||
ಜನಮೇಜಯ ಸಕಲ ಅಧ್ವರ್ಯುಗಳಲ್ಲಿಯೇ ಶ್ರೇಷ್ಠನಾದ ಜ್ಞಾನಿಯೇ! ಸರಸ್ವತಿನದಿಯು ಆಲ್ಲಿಂದ ಮುಂದೆ ಯಾವ ಕಾರಣದಿಂದ ಪೂರ್ವದಿಕ್ಕಿಗೆ ತಿರುಗಿದಳು? ಇದರ ಬಗ್ಗೆ ನಿಮ್ಮಿಂದ ನಾನು ಕೇಳಲು ಇಚ್ಛಿಸುತ್ತೇನೆ.
ಕಸ್ಮಿಂಶ್ಚ ಕಾರಣೇ ತತ್ರ ವಿಸ್ಮಿತೋ ಯದುನಂದನಃ |
ನಿವೃತ್ತಾ ಚ ಸರಿಚ್ಛ್ರೇಷ್ಠಾ ಕಥಮೇತದ್ ದ್ವಿಜೋತ್ತಮ ||42||
ಯಾವ ಕಾರಣದಿಂದ ಬಲರಾಮನು ಆಶ್ಚರ್ಯಕ್ಕೆ ಒಳಗಾದನು? ದ್ವಿಜೋತ್ತಮನೇ ಉತ್ತಮನದಿಯಾದ ಸರಸ್ವತಿಯು ಯಾವ ರೀತಿಯಲ್ಲಿ ಮಾರ್ಗ ಬದಲಿದಳು?
ವೈಶಂಪಾಯನಃ
ಪೂರ್ವಂ ಕೃತಯುಗೇ ರಾಜನ್ ನೈಮಿಶೇಯಾಸ್ತಪೋಧನಾಃ |
ವರ್ತಮಾನೇ ಸುಬಹುಲೇ ಸತ್ರೇ ದ್ವಾದಶವಾರ್ಷಿಕೇ ||43||
ವೈಶಂಪಾಯನ ರಾಜನೇ! ಹಿಂದೆ ಕೃತಯುಗದಲ್ಲಿ ನೈಮಿಷಕ್ಷೇತ್ರದ ತಪಸ್ವಿಗಳು ಹನ್ನೆರಡು ವರ್ಷಗಳವರೆಗೆ ನಡೆಯುವ ಬಹುವಿಸ್ತಾರವಾದ ಯಾಗವನ್ನು ಮಾಡುತ್ತಿದ್ದರು.
ಋಷಯೋ ಬಹವೋ ರಾಜನ್ ತತ್ರ ಸಂಪ್ರತಿಪೇದಿರೇ |

ಉಷಿತ್ವಾ ಚ ಮಹಾಭಾಗಾಸ್ತತ್ರ ತೀರ್ಥೇ ಯಥಾವಿಧಿ ॥44॥
ಅಲ್ಲಿಗೆ ಅನೇಕ ಋಷಿಗಳು ಬಂದಿದ್ದರು. ಮಹಾಭಾಗ್ಯಶಾಲಿಗಳಾದ ಅವರೆಲ್ಲ ಅಲ್ಲಿ ಶಾಸ್ತ್ರೋಕ್ತರೀತಿಯಲ್ಲಿ ವಾಸ ಮಾಡಿದರು.
ನಿರ್ವೃತ್ತೇ ನೈಮಿಶೇಯೇ ವೈ ಸತ್ರೇ ದ್ವಾದಶವಾರ್ಷಿಕೇ |
ಆಜಗ್ಮುಃ ಋಷಯಸ್ತತ್ರ ಬಹವಸ್ತೀರ್ಥಕಾರಣಾತ್ ॥45॥
ಹನ್ನೆರಡು ವರ್ಷಗಳ ಯಾಗವು ಸಂಪೂರ್ಣಗೊಂಡಾಗ ತೀರ್ಥಯಾತ್ರೆಗಾಗಿ ಮತ್ತೆ ಬಹಳ ಋಷಿಗಳು ಬಂದರು.
ಋಷೀಣಾಂ ಬಹುಲತ್ವಾತ್ ತು ಸರಸ್ವತ್ಯಾ ವಿಶಾಂಪತೇ |
ತೀರ್ಥಾನಿ ನಗರಾಯಂತೇ ಕೂಲೇ ವೈ ದಕ್ಷಿಣೋತ್ತರೇ ॥46॥
ಹೀಗೆ ಬಹಳ ಋಷಿಗಳು ಬಂದಿದ್ದರಿಂದ ಸರಸ್ವತಿಯ ದಕ್ಷಿಣ ಮತ್ತು ಉತ್ತರ ತೀರದಲ್ಲಿದ್ದ ತೀರ್ಥಕ್ಷೇತ್ರಗಳು ನಗರಗಳ ಹಾಗೆ ಆದವು.
ಸಮಂತಪಂಚಕಂ ಯಾವತ್ ತಾವತ್ತೇ ದ್ವಿಜಸತ್ತಮಾಃ |
ತೀರ್ಥಲೋಭಾನ್ನರವ್ಯಾಘ್ರ ನದ್ಯಾಸ್ತೀರಂ ಸಮಾಶ್ರಿತಾಃ ॥47॥
ಶ್ರೇಷ್ಠರಾಜನೇ! ತೀರ್ಥಗಳಲ್ಲಿ ವಾಸಮಾಡುವ ಲೋಭದಿಂದಾಗಿ ಋಷಿಗಳು ಸಮಂತಕಪಂಚಕದ ವರೆಗೆ ನದಿಯ ತೀರದಲ್ಲಿಯೇ ಆಶ್ರಯವನ್ನು ಪಡೆದರು.
ಜುಹ್ವತಾಂ ತತ್ರ ತೇಷಾಂ ತು ಮುನೀನಾಂ ಭಾವಿತಾತ್ಮನಾಮ್ |
ಸ್ವಾಧ್ಯಾಯೇನಾಪಿ ಮಹತಾ ಬಭೂವುಃ ಪರಿತೋ ದಿಶಃ ॥48॥
ಪವಿತ್ರಮನಸ್ಸುಳ್ಳ ಆ ಮುನಿಗಳ ಯಾಗಾನುಷ್ಠಾನದಿಂದ ಮತ್ತು ಶಾಸ್ತ್ರಗಳ ಅಧ್ಯಯನದಿಂದ ಎಲ್ಲಾ ದಿಕ್ಕುಗಳು ತುಂಬಿದವು.
ಅಗ್ನಿಹೋತ್ರೈಸ್ತತಸ್ತೇಷಾಂ ಹೂಯಮಾನೈರ್ಮಹಾತ್ಮನಾಮ್ |
ಅಶೋಭತ ಸರಿಚ್ಛ್ರೇಷ್ಠಾ ದೀಪ್ಯಮಾನೈಃ ಸಮಂತತಃ ॥49॥
ಮಹಾತ್ಮರಾದ ಅವರು ಸುತ್ತಲೂ ಅಗ್ನಿಹೋತ್ರವನ್ನು ಮಾಡುತ್ತಿದ್ದುದರಿಂದ ಸರಸ್ವತಿನದಿಯು ಆ ಹೋಮಗಳಿಂದ ಕಂಗೊಳಿಸುತ್ತಿತ್ತು.
ವಾಲಖಿಲ್ಯಾ ಮಹಾರಾಜ ಅಶ್ಮಕುಟ್ಟಾಶ್ಚ ತಾಪಸಾಃ |
ದಂತೋಲೂಖಲಿನಶ್ಚಾನ್ಯೇ ಸಂಪ್ರಕ್ಷಾಲಾಸ್ತಥಾ ಪರೇ ॥50॥
ವಾಯುಭಕ್ಷಾಃ ಫಲಾಹಾರಾಃ ಪರ್ಣಭಕ್ಷಾಶ್ಚ ತಾಪಸಾಃ |
ನಾನಾನಿಯಮಧರ್ಮಾಶ್ಚ ತಥಾನ್ಯೇ ಸ್ಥಂಡಿಲೇಶಯಾಃ ॥51॥
ಅವಸನ್ ಮುನಯಸ್ತತ್ರ ಸರಸ್ವತ್ಯಾಃ ಸಮೀಪತಃ ॥52॥
ಮಹಾರಾಜನೇ! ಸರಸ್ವತಿನದಿಯ ಸಮೀಪದಲ್ಲಿ ವಾಲಖಿಲ್ಯರು, ಅಶ್ಮಕುಟ್ಟ ತಪಸ್ವಿಗಳು (ಕಲ್ಲುಗಳಿಂದ ಬೀಳಿಸಿದ ಸ್ವಲ್ಪ ಫಲವನ್ನು ಸ್ವೀಕರಿಸುವವರು), ದಂತೋಲೂಖಲಿಗಳೂ (ಹಲ್ಲುಗಳನ್ನೇ ಭತ್ತ ಕುಟ್ಟುವ ಕಲ್ಲುಗಳಂತೆ ಉಪಯೋಗಿಸುವವರು, ಕೇವಲ ಹಲ್ಲಿನಿಂದಲೇ ಜಗಿದು ತಿನ್ನುವವರು.) ಸಂಪ್ರಕ್ಷಾಲರು (ಕೆಳಗೆ ಬಿದ್ದ ಫಲಗಳನ್ನೇ ಸ್ವೀಕರಿಸುವವರು) ವಾಯುಭಕ್ಷರು, ಕೇವಲ ಫಲವನ್ನು ಆಹಾರವಾಗಿ ಸ್ವೀಕರಿಸುವವರು, ಎಲೆಯನ್ನು ತಿಂದು ಜೀವನಮಾಡುವವರು, ಹೀಗೆ ನಾನಾರೀತಿಯ ನಿಯಮಗಳನ್ನು ಪಾಲಿಸುವ ತಪಸ್ವಿಗಳು, ನೆಲದಲ್ಲಿಯೇ ಮಲಗುವ ನಿಯಮವುಳ್ಳವರು ಇವರೆಲ್ಲರೂ ವಾಸಮಾಡಿದ್ದರು.
ವ್ಯಶೋಭಯನ್ ಸರಿಚ್ಛ್ರೇಷ್ಠಾಂ ಗಂಗಾಮಿವ ದಿವೌಕಸಃ ॥53॥
ತತೋ ಯಜ್ಞಂ ಸಮಾಪೇತುರ್ಋಷಯಃ ಸತ್ರಯಾಜಿನಃ |
ತೇಽವಕಾಶಂ ಚ ದದೃಶುಃ ಕುರುಕ್ಷೇತ್ರೇ ಮಹಾಯಶಃ ॥54॥
ಗಂಗೆಯಂತೆ ಶೋಭಿಸುವ ಸರಸ್ವತಿನದಿಯನ್ನು ದೇವತೆಗಳು ನೋಡಿದರು. ಅನಂತರ ಸತ್ರಯಾಜಕರಾದ ಋಷಿಗಳು ಯಾಗಕ್ಕೆ ಬಂದರು. ಮಹಾಕೀರ್ತಿವಂತರಾದ ಅವರು ಕುರುಕ್ಷೇತ್ರದಲ್ಲಿ ತಮಗೆ ವಾಸಕ್ಕೆ ಅವಕಾಶವನ್ನು ಕಲ್ಪಿಸಿಕೊಂಡರು.
ತತೋ ಯಜ್ಞೋಪವೀತೈಸ್ತೈಃ ತತ್ತೀರ್ಥಂ ನಿರ್ವಿಮಾಯ ವೈ |
ಜುಹುವುಶ್ಚಾಗ್ನಿಹೋತ್ರಾಣಿ ಚಕ್ರುಶ್ಚ ವಿವಿಧಾಃ ಕ್ರಿಯಾಃ ॥55॥
ಅನಂತರ ತಮ್ಮ ಯಜ್ಞೋಪವೀತಗಳಿಂದಲೇ ನದಿಯ ನೀರನ್ನು ಅಲ್ಲಿಗೆ ತಂದುಕೊಂಡು ಬಂದು ಅಲ್ಲಿ ಅಗ್ನಿಹೋತ್ರವನ್ನು ಆಚರಿಸಿದರು ಮತ್ತು ಬೇರೆ ಬೇರೆ ನಿಯಮಾನುಷ್ಠಾನಗಳನ್ನು ನಡೆಸಿದರು.
ತತಸ್ತಮೃಷಿಸಂಘಾತಂ ನಿರಾಶಂ ಚಿಂತಯಾಽನ್ವಿತಮ್ |
ದರ್ಶಯಾಮಾಸ ರಾಜೇಂದ್ರ ತೇಷಾಮರ್ಥೇ ಸರಸ್ವತೀ ॥56॥
ಆ ಋಷಿಗಳು ಹೀಗೆ (ನದಿ ನೀರಿನ ವಿಷಯದಲ್ಲಿ) ಚಿಂತೆಗೊಳಗಾಗಿದ್ದನ್ನು ನೋಡಿದ ಸರಸ್ವತಿ ನದಿಯು ಅವರಿಗೋಸ್ಕರವಾಗಿ ಕಾಣಿಸಿಕೊಂಡಳು.
ತತಃ ಕುಡ್ಯಾನ್ (ಕುಂಜಾನ್) ಬಹೂನ್ ಕೃತ್ವಾ ಸನ್ನಿವೃತ್ತಾ ಸರಸ್ವತೀ |
ಋಷೀಣಾಂ ಪುಣ್ಯತಪಸಾಂ ಮಾನನಾರ್ಥಂ ಮಹಾತ್ಮನಾಮ್ ॥57॥
ಅದಕ್ಕಾಗಿ ಮಹಾತ್ಮರಾದ ಋಷಿಗಳಿಗೆ ಪ್ರತ್ಯೇಕವಾದ ಆಶ್ರಮವನ್ನು ಮಾಡಿಕೊಟ್ಟು ಅವರನ್ನು ಗೌರವಿಸುವುದಕ್ಕಾಗಿ ಸರಸ್ವತಿ ನದಿಯು ತನ್ನ ಹರಿಯುವ ಮಾರ್ಗದಲ್ಲಿ ಬಹಳವಾದ ಗಿಡಪೊದೆಗಳನ್ನು ಶೇಖರಿಸಿ ನೀರನ್ನು ತಡೆಹಿಡಿದುಕೊಂಡು ಪೂರ್ಣವಾಗಿ ಪೂರ್ವದಿಕ್ಕಿಗೆ ಮಾರ್ಗವನ್ನು ಬದಲಿಸಿಕೊಂಡಳು.
ತತೋ ನಿವೃತ್ತಾ ರಾಜೇಂದ್ರ ತೇಷಾಮರ್ಥೇ ಸರಸ್ವತೀ |
ಭೂಯಃ ಪ್ರತೀಚ್ಯಭಿಮುಖೀ ಸುಸ್ರಾವ ಸರಿತಾಂ ವರಾ ॥58॥
ರಾಜೇಂದ್ರನೇ! ಹೀಗೆ ಋಷಿಗಳಿಗಾಗಿ ಪೂರ್ವಕ್ಕೆ ತಿರುಗಿದ ಉತ್ತಮನದಿಯಾದ ಸರಸ್ವತಿಯು ಪುನಃ ಪಶ್ಚಿಮದಿಕ್ಕಿಗೆ ಅಭಿಮುಖವಾಗಿ

ಹರಿದಳು.
ಅಮೋಘಂ ಗಮನಂ ಕೃತ್ವಾ ತೇಷಾಂ ಭೂಯೋ ಜಗಾಮ ಹ |
ಅತ್ಯದ್ಭುತಂ ತದಾ ಚಕ್ರೇ ತತ್ರ ರಾಜನ್ ಮಹಾನದೀ ॥59॥
ಹೀಗೆ ಆ ಋಷಿಗಳ ಯಾತ್ರೆಯು ವ್ಯರ್ಥವಾಗದ ರೀತಿಯಲ್ಲಿ ಮಾಡಿ ಮತ್ತೆ ತನ್ನ ಮಾರ್ಗದಲ್ಲಿ ಹೋದಳು. ರಾಜನೇ! ಅಲ್ಲಿ ಸರಸ್ವತಿ ಮಹಾನದಿಯು ಅತ್ಯದ್ಭುತವಾದುದನ್ನು ಮಾಡಿ ತೋರಿಸಿದಳು.
ಏವಂ ಹಿ ಕುಂಜೋ ರಾಜೇಂದ್ರ ನೈಮಿಷೀಯ ಇತಿ ಶ್ರುತಿಃ |
ಕುರುಶ್ರೇಷ್ಠ ಕುರುಕ್ಷೇತ್ರೇ ಕುರುಷ್ವ ಮಹತೀ ಕ್ರಿಯಾಃ ॥60॥
ಹೀಗೆ ಆ ಸ್ಥಳವು ಕುಂಜನೈಮಿಷೀಯ ಎಂಬುದಾಗಿ ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧವಾಯಿತು. ಜನಮೇಜಯನೇ! ನೀನೂ ಕೂಡ ಈ ಕುರುಕ್ಷೇತ್ರದಲ್ಲಿ ಮಹತ್ತಾದ ಕಾರ್ಯಗಳನ್ನು ಮಾಡು.
ತತ್ರ ಕುಂಜಾನ್ ಬಹೂನ್ ದೃಷ್ಟ್ವಾ ಸನ್ನಿವೃತ್ತಾಂ ಚ ತಾಂ ನದೀಮ್ |
ಬಭೂವ ವಿಸ್ಮಯಸ್ತತ್ರ ರಾಮಸ್ಯಾಥ ಮಹಾತ್ಮನಃ ॥61॥
ಆ ಜಾಗದಲ್ಲಿ ಬಹಳವಾದ ಗಿಡಪೊದೆಗಳನ್ನು ಮತ್ತು ಅದರಿಂದಾಗಿ ಪೂರ್ಣವಾಗಿ ವಿರುದ್ಧ ದಿಕ್ಕಿಗೆ ಮಾರ್ಗಬದಲಿಸಿದ ಸರಸ್ವತಿಯನ್ನು ನೋಡಿ ಮಹಾತ್ಮನಾದ ಬಲರಾಮನಿಗೆ ಬಹಳ ಆಶ್ಚರ್ಯವು ಉಂಟಾಯಿತು.
ಉಪಸ್ಪೃಶ್ಯ ಚ ತತ್ರಾಪಿ ವಿಧಿವದ್ ಯದುನಂದನಃ |
ದತ್ತ್ವಾ ದೇಯಾನ್ ದ್ವಿಜಾತಿಭ್ಯೋ ಭಾಂಡಾನಿ ವಿವಿಧಾನಿ ಚ ॥62॥
ಅಲ್ಲಿ ಯದುಕುಮಾರನಾದ ಬಲರಾಮನು ಆಚಮನ-ಸ್ನಾನಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ವಿವಿಧ ರೀತಿಯ ಪೂರ್ಣಪಾತ್ರೆಗಳನ್ನು ದಾನ ಮಾಡಿದನು.
ಭಕ್ಷ್ಯಂ ಪೇಯಂ ಚ ವಿವಿಧಂ ಬ್ರಾಹ್ಮಣಾನ್ ಪ್ರತ್ಯಭೋಜಯತ್ ॥63॥
ವಿವಿಧ ಭಕ್ಷ್ಯ, ಪೇಯಗಳಿಂದ ಬ್ರಾಹ್ಮಣರಿಗೆ ಊಟ ಮಾಡಿಸಿದನು.
ತತಃ ಪ್ರಾಯಾದ್ ಬಲೋ ರಾಜನ್ ಪೂಜ್ಯಮಾನೋ ದ್ವಿಜಾತಿಭಿಃ |
ಸರಸ್ವತ್ಯಾಸ್ತೀರ್ಥವರಂ ನಾನಾದ್ವಿಜಗಣಾಯುತಮ್ ॥64॥
ರಾಜನೇ! ಬ್ರಾಹ್ಮಣರಿಂದ ಸತ್ಕೃತನಾದ ಬಲರಾಮನು ಅನೇಕ ದ್ವಿಜರಿಂದ ತುಂಬಿದ ಸರಸ್ವತಿಯ ಶ್ರೇಷ್ಠವಾದ ತೀರ್ಥಕ್ಕೆ ಹೋದನು.
ಬದರೇಂಗುದಶ್ಯಾಮಾಕಪ್ಲಕ್ಷಾಶ್ವತ್ಥವಿಭೀತಕೈಃ |
ಪನಸೈಶ್ಚ ಪಲಾಶೈಶ್ಚ ಕರವೀರೈಶ್ಚ ಪೀಲುಭಿಃ ॥65॥
ಸರಸ್ವತೀತೀರರುಹೈಶ್ಚಂದನೈಃ ಸ್ಪಂದನೈಸ್ತಥಾ |
ಕರೂಷಿಕವನೈಶ್ಚೈವ ಬಿಲ್ವೈರಾಮಲಕೈರಪಿ ॥66॥
ಅತಿಮುಕ್ತಕಷಂಡೈಶ್ಚ ಪಾರಿಜಾತೈಶ್ಚ ಶೋಭಿತಮ್ |
ಕದಲೀವನಭೂಯಿಷ್ಠಂ ದೃಷ್ಟಿಕಾಂತಂ ಮನೋಹರಮ್ ॥67॥
ಆ ತೀರ್ಥವು ಬದರ, ಇಂಗುದ, ಶ್ಯಾಮಾಕ, ಪ್ಲಕ್ಷ, ಅಶ್ವತ್ಥ, ವಿಭೀತಕ, ಹಲಸು, ಮುತ್ತುಗ, ಕರವೀರ, ಪೀಲು, ಕರೂಷಿಕ, ಬಿಲ್ವ, ಆಮಲಕ (ನೆಲ್ಲಿ), ಅತಿಮುಕ್ತ, ಕಷಂಡ, ಪಾರಿಜಾತ ಮೊದಲಾದ ಮರಗಳಿಂದ ಶೋಭಿಸುತ್ತಿತ್ತು. ಕದಲೀವನಗಳು ಬಹಳವಾಗಿದ್ದವು. ನೋಡಲು ಸುಂದರವಾಗಿತ್ತು ಮತ್ತು ಮನಸ್ಸಿಗೆ ಮುದವನ್ನುಂಟುಮಾಡುತ್ತಿತ್ತು.
ವಾಯ್ವಂಬುಫಲಪರ್ಣಾದ್ಯೈಃ ದಂತೋಲೂಖಲಿಕೈರಪಿ |
ತಥಾಽಶ್ಮಕುಟ್ಟೈರ್ವಾ ತೋಯೈರ್ಮುನಿಭಿರ್ಬಹುಭಿರ್ವೃತಮ್ ॥68॥
ಅಲ್ಲಿ ವಾಯುಭಕ್ಷರು, ಜಲಭಕ್ಷರು, ಫಲಭಕ್ಷರು, ಪರ್ಣಭಕ್ಷರು, ದಂತೋಲೂಖಲಿಕರು, ಆಶ್ಮಕುಟ್ಟರು, ತೋಯರು (ನೀರನ್ನೇ ಕುಡಿದು ಜೀವಿಸುವವರು) ಮೊದಲಾದ ಬಹಳ ಮುನಿಗಳು ಇದ್ದರು.
ಸ್ವಾಧ್ಯಾಯಘೋಷೈಃ ಸಂಘುಷ್ಟಂ ಮೃತಯೂಥಶತಾಕುಲಮ್ |
ಅಹಿಂಸ್ರೈಃ ಧರ್ಮಪರಮೈರ್ನೃಭಿರತ್ಯಂತಸೇವಿತಮ್ ॥69॥
ಆ ತೀರ್ಥವು ಋಷಿಗಳ ಅಧ್ಯಯನದ ಧ್ವನಿಯಿಂದ ತುಂಬಿಹೋಗಿತ್ತು. ಜಿಂಕೆಗಳ ಸಮೂಹವೇ ಅಲ್ಲಿತ್ತು. ಹಿಂಸೆಯನ್ನು ಮಾಡದ ಹಾಗು ಧಾರ್ಮಿಕರಾದ ಮುನಿಗಳು ಭಕ್ತಿಯಿಂದ ಬಹಳವಾಗಿ ಆ ತೀರ್ಥವನ್ನು ಸೇವಿಸುತ್ತಿದ್ದರು.
ಸಪ್ತಸಾರಸ್ವತಂ ತೀರ್ಥಮ್ ಆಜಗಾಮ ಹಲಾಯುಧಃ |
ಯತ್ರ ಮಂಕಣಕಃ ಸಿದ್ಧಸ್ತಪಸ್ತೇಪೇ ಮಹಾಮುನಿಃ ॥70॥
ಅಂತಹ ಸಪ್ತಸಾರಸ್ವತ ಎಂಬ ತೀರ್ಥಕ್ಕೆ ಬಲರಾಮನು ಬಂದನು. ಅಲ್ಲಿಯೇ ಮಂಕಣಕ ಎಂಬ ಮಹಾಮುನಿಯು ತಪಸ್ಸನ್ನು ಆಚರಿಸಿ ಜ್ಞಾನವನ್ನು ಪಡೆದಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಬಲಭದ್ರಸ್ಯ ತೀರ್ಥಯಾತ್ರಾವರ್ಣನಂ ನಾಮ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ಸರಸ್ವತಿಯು ಏಳು ಭಾಗವಾಗಿ ವಿಭಾಗಗೊಂಡಿರುವುದಕ್ಕೆ
ಕಾರಣನಿರೂಪಣೆ. ಏಳೂ ಭಾಗಗಳೂ ಒಂದು ತೀರ್ಥದಲ್ಲಿ ಒಟ್ಟು ಸೇರುವುದರಿಂದ ಆ ತೀರ್ಥಕ್ಕೆ ಸಪ್ತಸಾರಸ್ವತ ಎಂಬ ಹೆಸರು

ಬಂದಿರುವುದು. ಮಂಕಣಕಮುನಿಯ ಚರಿತ್ರೆಯ ಪ್ರತಿಪಾದನೆ.
ಜನಮೇಜಯಃ
ಸಪ್ತಸಾರಸ್ವತಂ ಕಸ್ಮಾತ್ ಕಶ್ಚ ಮಂಕಣಕೋ ಮುನಿಃ |
ಕಥಂ ಸಿದ್ಧಃ ಸ ಭಗವಾನ್ ಕಶ್ಚಾಸ್ಯ ನಿಯಮೋಽಭವತ್ ॥1॥
ಜನಮೇಜಯ ಸಪಸಾರಸ್ವತ ಎಂಬ ಹೆಸರು ಆ ತೀರ್ಥಕ್ಕೆ ಹೇಗೆ ಬಂತು? ಮಂಕಣಕ ಮುನಿಯು ಯಾರು? ಅವನು ಸಿದ್ಧಪುರುಷನು ಹೇಗಾದನು? ಅವನ ನಿಯಮವು ಯಾವುದು?
ಕಸ್ಯ ವಂಶೇ ಸಮುದ್ಭೂತಃ ಕಿಂ ವಾಽಧೀತಂ ಚ ವೈ ದ್ವಿಜ |
ಏತನ್ಮೇ ಸರ್ವಮಾಚಕ್ಷ್ವ ಯಥಾವೃತ್ತಂ ಮಹಾಮುನೇ ॥2॥
ಅವನು ಯಾವ ವಂಶದಲ್ಲಿ ಜನಿಸಿದನು? ದ್ವಿಜನೇ! ಅವನು ಏನೆಲ್ಲವನ್ನು ಅಧ್ಯಯನ ಮಾಡಿದ್ದನು? ಮಹಾಮುನಿಯೇ! ಇದೆಲ್ಲವನ್ನೂ ನನಗೆ ಹೇಳು.
ವೈಶಂಪಾಯನಃ
ಸಪ್ತ ನದ್ಯಃ ಸರಸ್ವತ್ಯೋ ಯಾಭಿರ್ವ್ಯಾಪ್ತಮಿದಂ ಜಗತ್ |
ಆಹೂತಾ ಬಲವದ್ಭಿಸ್ತು ತತ್ರ ತತ್ರ ಸರಸ್ವತೀ ॥3॥
ವೈಶಂಪಾಯನ ಸರಸ್ವತಿ ಎಂಬ ಹೆಸರಿನಿಂದ ಕರೆಯಲ್ಪಡುವ ಏಳು ನದಿಗಳು ಇಡೀ ಜಗತ್ತನ್ನೇ ವ್ಯಾಪಿಸಿವೆ. ಮಹಾತಪಸ್ವಿಗಳು ತಮ್ಮ ತಪಸ್ಸಿನ ಬಲದಿಂದ ಸರಸ್ವತಿಯನ್ನು ಅಲ್ಲಲ್ಲಿ ಕರೆದು ಆವಾಹಿಸಿದ್ದರಿಂದ ಏಳು ಸರಸ್ವತಿನದಿಗಳು ಉಂಟಾದವು.
ಸುಪ್ರಭಾ ಕಾಂಚನಾಕ್ಷೀ ಚ ವಿಶಾಲಾ ಚ ಮನೋಽವೃತಾ |
ಸರಸ್ವತ್ಯೋಘಮಾಲಾ ಚ ಸುವೇಣಿರ್ವಿಮಲೋದಕಾ ॥4॥
ಅವುಗಳ ಹೆಸರು ಹೀಗಿವೆ: ಸುಪ್ರಭಾ, ಕಾಂಚನಾಕ್ಷಿ, ವಿಶಾಲಾ, ಮನೋವೃತಾ, ಸರಸ್ವತೀ, ಓಘಮಾಲಾ (ಓಘವತಿ), ಸುವೇಣಿ, ವಿಮಲೋದಕಾ ಎಂದು.
ಪಿತಾಮಹಸ್ಯ ಮಹತೋ ವರ್ತಮಾನೇ ಮಹೀಪತೇ |
ವಿತತೇ ಯಜ್ಞವಾಟೇ ವೈ ಸಮೇತೇಷು ದ್ವಿಜಾತಿಷು ॥5॥
ರಾಜನೇ! ಒಂದು ಬಾರಿ ಮಹಾತ್ಮರಾದ ಬ್ರಹ್ಮದೇವರ ನೇತೃತ್ವದಲ್ಲಿ ಯಾಗವೊಂದು ನಡೆಯುತ್ತಿತ್ತು. ವಿಸ್ತಾರವಾದ ಯಜ್ಞಶಾಲೆಯಲ್ಲಿ ಬಹಳ ಬ್ರಾಹ್ಮಣರು ಸೇರಿದ್ದರು.
ಪುಣ್ಯಾಹಘೋಷೈರ್ವಿಮಲೈರ್ವೇದಾನಾಂ ನಿನದೈಸ್ತಥಾ |
ವೇದೇಷು ಚೈವ ತ್ರ್ಯಂಗೇಷು ತಸ್ಮಿನ್ ಯಜ್ಞವಿಧೌ ತತಃ ॥6॥
ಪುಣ್ಯಾಹದ ಮಂತ್ರಘೋಷಗಳು, ವೇದೋಚ್ಚಾರಣೆಯ ಶಬ್ದಗಳು, ಸಂಹಿತಾ- ಪದ-ಕ್ರಮ ಪಾಠಯುಕ್ತವಾದ ವೇದಗಳ ಪಠಣ, ಯಜ್ಞದ ವಿಧಿ-ವಿಧಾನಗಳು ಅಲ್ಲಿ ಕಂಡುಬರುತ್ತಿದ್ದವು.
ತತ್ರ ಚೈವಂ ಮಹಾರಾಜ ದೀಕ್ಷಿತೇ ಪ್ರಪಿತಾಮಹೇ |
ಯಜತಸ್ತತ್ರ ಸತ್ರೇಣ ಸರ್ವಕಾಮಸಮೃದ್ಧಿನಾ ॥7॥
ಮಹಾರಾಜನೇ! ಚತುರ್ಮುಖಬ್ರಹ್ಮನು ಯಜ್ಞದೀಕ್ಷೆಯಲ್ಲಿರಲು ಆ ಯಜ್ಞವು ಎಲ್ಲರ ಸರ್ವಕಾಮನೆಗಳನ್ನು ಪೂರ್ಣಗೊಳಿಸುತ್ತಿತ್ತು.
ಮನಸಾ ಚಿಂತಿತಾ ಹ್ಯರ್ಥಾ ಧರ್ಮಾರ್ಥಕುಶಲೈಸ್ತದಾ |
ಉಪತಿಷ್ಠಂತಿ ರಾಜೇಂದ್ರ ದ್ವಿಜಾತೀಂಸ್ತತ್ರ ತತ್ರ ಹ ॥8॥
ರಾಜೇಂದ್ರನೇ! ಆ ಯಾಗದಲ್ಲಿ ಧರ್ಮಾರ್ಥಕುಶಲರಾದವರು ಯಾವ ಪದಾರ್ಥಗಳನ್ನು ಮನಸ್ಸಿನಿಂದ ಚಿಂತಿಸುತ್ತಿದ್ದರೋ ಅವೆಲ್ಲವೂ ಅಲ್ಲಲ್ಲಿ ಬ್ರಾಹ್ಮಣರಿಗೆ ಸಿಗುತ್ತಿದ್ದವು.
ಜಗುಶ್ಚ ತತ್ರ ಗಂಧರ್ವಾ ನನೃತುಶ್ಚಾಪ್ಸರೋಗಣಾಃ |
ವಾದಿತ್ರಾಣಿ ಚ ದಿವ್ಯಾನಿ ವಾದಯಾಮಾಸುರಂಜಸಾ ॥9॥
ಅಲ್ಲಿ ಗಂಧರ್ವರು ಗಾನವನ್ನು ಮಾಡುತ್ತಿದ್ದರು. ಅಪ್ಸರಾಸ್ತ್ರೀಯರು ನೃತ್ಯವನ್ನು ಮಾಡುತ್ತಿದ್ದರು. ಜೊತೆಗೆ ದೇವಲೋಕದ ವಾದ್ಯಗಳನ್ನು ನುಡಿಸುತ್ತಿದ್ದರು.
ತಸ್ಯ ಯಜ್ಞಸ್ಯ ಸಂಪತ್ತ್ಯಾ ತುತುಷುರ್ದೇವತಾನ್ಯಪಿ |
ವಿಸ್ಮಯಂ ಚ ಪರಂ ಜಗ್ಮುಃ ಕಿಮು ಮಾನುಷಯೋನಯಃ ॥10॥
ಆ ಯಜ್ಞದ ಸಂಪತ್ತಿನಿಂದ ದೇವತೆಗಳೂ ಸಂತುಷ್ಟರಾಗಿದ್ದರು ಮತ್ತು ಬಹಳವಾಗಿ ಆಶ್ಚರ್ಯವನ್ನು ಹೊಂದಿದ್ದರು. ದೇವತೆಗಳೇ ಹೀಗಿರುವಾಗ ಮನುಷ್ಯರ ಬಗ್ಗೆ ಏನು ಹೇಳಬೇಕು?
ವರ್ತಮಾನೇ ತಥಾ ಯಜ್ಞೇ ಪುಷ್ಕರಸ್ಥೇ ಪಿತಾಮಹೇ |
ಅಬ್ರುವನ್ನೃಷಯೋ ರಾಜನ್ ನಾಯಂ ಯಜ್ಞೋ ಮಹಾಫಲಃ ॥11॥
ನ ದೃಶ್ಯತೇ ಸರಿಚ್ಛ್ರೇಷ್ಠಾ ಯಸ್ಮಾದಿಹ ಸರಸ್ವತೀ ॥12॥
ರಾಜನೇ! ಪುಷ್ಕರಕ್ಷೇತ್ರದಲ್ಲಿ ಬ್ರಹ್ಮನಿಂದ ದೀಕ್ಷಿತವಾದ ಯಜ್ಞವು ನಡೆಯುತ್ತಿರಲು ಋಷಿಗಳು ಹೀಗೆ ಹೇಳುತ್ತಾರೆ, ಈ ಯಜ್ಞವು ಮಹಾಫಲಕಾರಿಯಾಗುವುದಿಲ್ಲ. ಏಕೆಂದರೆ ನದಿಗಳಲ್ಲಿಯೇ ಉತ್ತಮವಾದ ಸರಸ್ವತಿನದಿಯು ಇಲ್ಲಿ ಹರಿಯುತ್ತಿಲ್ಲ. ಎಂದು.
ತಚ್ಛ್ರುತ್ವಾ ಭಗವಾನ್ ಪ್ರೀತಃ ಸಸ್ಮಾರಾಥ ಸರಸ್ವತೀಮ್ ॥13॥
ಪಿತಾಮಹಂ ಮಾನಯಂತೀ ಕ್ರತುಂ ತೇ ಬಹು ಮೇನಿರೇ ॥14॥
ಅದನ್ನು ಕೇಳಿದ ಬ್ರಹ್ಮನು ಸರಸ್ವತಿಯನ್ನು ಸ್ಮರಿಸಿಕೊಳ್ಳುವನು. ಪಿತಾಮಹನನ್ನು ಗೌರವಿಸಿ ಸರಸ್ವತಿಯು ಅಲ್ಲಿ ಬರುತ್ತಾಳೆ. ಆಗ

ಋಷಿಗಳು ಆ ಯಜ್ಞವನ್ನು ಬಹಳ ಉತ್ತಮವಾದದ್ದೆಂದು ತಿಳಿದರು.
ಏವಮೇಷಾ ಸರಿಚ್ಛ್ರೇಷ್ಠಾ ಪುಷ್ಕರೇಷು ಸರಸ್ವತೀ |
ಪಿತಾಮಹಾರ್ಥಂ ಸಂಭೂತಾ ತುಷ್ಟ್ಯರ್ಥಂ ಚ ಮನೀಷಿಣಾಮ್ ॥
ಹೀಗೆ ಪಿತಾಮಹ ಬ್ರಹ್ಮನ ಪ್ರೀತಿಗಾಗಿ ಮತ್ತು ಋಷಿಗಳ ತೃಪ್ತಿಗಾಗಿ ಉತ್ತಮನದಿಯಾದ ಸರಸ್ವತಿಯು ಪುಷ್ಕರಕ್ಷೇತ್ರದಲ್ಲಿ ಉದ್ಭವವಾದಳು.
ನೈಮಿಶೇ ಮುನಯೋ ರಾಜನ್ ಸಮಾಸಾದ್ಯ ಸಮಾಸತೇ |
ತತ್ರ ಚಿತ್ರಾಃ ಕಥಾ ಹ್ಯಾಸನ್ ವೇದಂ ಪ್ರತಿ ಜನೇಶ್ವರ ॥16॥
ರಾಜನೇ! ನೈಮಿಷಕ್ಷೇತ್ರದಲ್ಲಿ ಮುನಿಗಳು ಬಂದು ಸೇರಿದ್ದರು. ರಾಜನೇ! ಅಲ್ಲಿ ವೇದವಿಷಯದಲ್ಲಿ ಚಿತ್ರವಿಚಿತ್ರವಾದ ಕಥೆಗಳು ನಡೆದವು.
ಯತ್ರ ತೇ ಮುನಯೋ ಹ್ಯಾಸನ್ ನಾನಾಸ್ವಾಧ್ಯಾಯವಾದಿನಃ |
ತೇ ಸಮಾಗಮ್ಯ ಮುನಯಃ ಸಸ್ಮರುರ್ವೈ ಸರಸ್ವತೀಮ್ ॥17॥
ಯಾವ ನೈಮಿಷದಲ್ಲಿ ಬೇರೆ ಬೇರೆ ಶಾಖೆಗಳನ್ನು ಅಧ್ಯಯನ ಮಾಡುವ ಮುನಿಗಳು ಇದ್ದರೋ ಆ ಮುನಿಗಳೂ ಬಂದು ಸರಸ್ವತಿಯನ್ನು ಸ್ಮರಿಸಿಕೊಂಡರು.
ಸಾ ತು ಧ್ಯಾತಾ ಮಹಾರಾಜ ಋಷಿಭಿಃ ಸತ್ರಯಾಜಿಭಿಃ |
ಸಮಾಗತಾನಾಂ ರಾಜೇಂದ್ರ ಸಾಹಾಯ್ಯಾರ್ಥಂ ಮಹಾತ್ಮನಾಮ್ ॥18॥
ಆಜಗಾಮ ಮಹಾಭಾಗಾ ತತ್ರ ಪುಣ್ಯಾ ಸರಸ್ವತೀ ॥19॥
ಮಹಾರಾಜನೇ! ಸತ್ರಯಾಗದಲ್ಲಿ ತೊಡಗಿರುವ ಋಷಿಗಳಿಂದ ಧ್ಯಾನಿಸಲ್ಪಟ್ಟ ಪುಣ್ಯನದಿಯಾದ ಸರಸ್ವತಿಯು, ಅಲ್ಲಿಗೆ ಬಂದಿರುವ ಮಹಾತ್ಮರಿಗೆ ಸಹಾಯವನ್ನು ಮಾಡುವ ಉದ್ದೇಶದಿಂದ ಅಲ್ಲಿಗೆ ಬಂದಳು.
ನೈಮಿಶೇ ಕಾಂಚನಾಕ್ಷೀ ಚ ಮುನೀನಾಂ ಸತ್ರಯಾಜಿನಾಮ್ |
ಆಹೂತಾ ಸರಿತಾಂ ಶ್ರೇಷ್ಠಾ ತತ್ರ ಭಾರತ ಪೂಜಿತಾ ॥20॥
ಭರತಕುಲೋದ್ಭವನೇ! ನೈಮಿಷಕ್ಷೇತ್ರದಲ್ಲಿ ಸತ್ರಯಾಜಕರಾದ ಮುನಿಗಳು ಆಹ್ವಾನಿಸಿ ಉದ್ಭವಿಸಿದ ಉತ್ತಮ ನದಿ ಸರಸ್ವತಿಯು ಕಾಂಚನಾಕ್ಷಿ ಎಂದು ಕರೆಯಲ್ಪಡುತ್ತಾಳೆ.
ಗಯಸ್ಯ ಯಜಮಾನಸ್ಯ ಗಯೇಷ್ವೇವ ಮಹಾಕ್ರತುಮ್ |
ಆಹೂತಾ ಸರಿತಾಂ ಶ್ರೇಷ್ಠಾ ತತ್ರ ತೇನ ಸರಸ್ವತೀ ॥21॥
ವಿಶಾಲಾಂ ತು ಗಯೇಷ್ವಾಹುರ್ಮುನಯಃ ಸಂಶಿತವ್ರತಾಃ |
ಸರಿತ್ ಸಾ ಹಿಮವತ್ಪಾರ್ಶ್ವಾತ್ ಪ್ರಸೂತಾ ಶೀಘ್ರಗಾಮಿನೀ ॥22॥
ಗಯನ ಯಜಮಾನತ್ವದಲ್ಲಿ ಗಯಾಕ್ಷೇತ್ರದಲ್ಲಿ ನಡೆದ ಮಹಾಯಾಗದಲ್ಲಿ ಶ್ರೇಷ್ಠನದಿಯಾದ ಸರಸ್ವತಿಯು ಅಹ್ವಾನಿತಳಾಗಿ ಪ್ರಾದುರ್ಭವಿಸಿದಳು. ಕಠಿಣವ್ರತದಲ್ಲಿ ದೀಕ್ಷಿತರಾದ ಮುನಿಗಳು ಈ ಗಯಾಕ್ಷೇತ್ರದಲ್ಲಿ ಅವಳನ್ನು ವಿಶಾಲಾ ಎಂದು ಕರೆಯುತ್ತಾರೆ.
ಔದ್ದಾಲಕೇಸ್ತಥಾ ಯಜ್ಞಂ ಯಜತಸ್ತತ್ರ ಭಾರತ |
ಸಮೇತೇ ಸರ್ವತಃ ಸ್ಫೀತೇ ಮುನೀನಾಂ ಮಂಡಲೇ ತಥಾ ॥23॥
ಉತ್ತರೇ ಕೋಸಲೇ ಭಾಗೇ ಪುಣ್ಯೇ ರಾಜನ್ ಮಹಾತ್ಮನಾ |
ಔದ್ದಾಲಕೇನ ಯಜತಾ ಪೂರ್ವಂ ಧ್ಯಾತಾ ಸರಸ್ವತೀ ॥24॥
ಆಜಗಾಮ ಸರಿಚ್ಛ್ರೇಷ್ಠಾ ತಂ ದೇಶಂ ಮುನಿಕಾರಣಾತ್ |
ಪೂಜ್ಯಮಾನಾ ಮುನಿಗಣೈರ್ವಲ್ಕಲಾಜಿನಸಂವೃತೈಃ ॥25॥
ಮನೋವೃತೇತಿ ವಿಖ್ಯಾತಾ ಸಾ ಹಿ ತೈರ್ಮನಸಾ ವೃತಾ ॥26॥
ಅದೇ ಸರಸ್ವತಿನದಿಯು ಹಿಮಾಲಯಪರ್ವತದ ಬದಿಯಲ್ಲಿ ಹುಟ್ಟಿ ವೇಗವಾಗಿ ಹರಿಯುತ್ತಾ ಔದ್ದಾಲಕನ ಯಾಗದ ಸಮೀಪಬರುತ್ತಾಳೆ. ಭರತಕುಲೋದ್ಭವನೇ! ಔದ್ದಾಲಕನು ಯಜ್ಞವನ್ನು ನಡೆಸುತ್ತಿದ್ದಾಗ ಅವನ ಯಾಗಶಾಲೆಯು ಉತ್ತಮ ಮುನಿಗಳಿಂದ ಸಮೃದ್ಧವಾಗಿತ್ತು. ಉತ್ತರಕೋಸಲ ಭಾಗದ ಪುಣ್ಯಕ್ಷೇತ್ರದಲ್ಲಿ ನಡೆಯುತ್ತಿದ್ದ ಆ ಯಾಗದಲ್ಲಿ ಮೊದಲಿಗೆ ಯಜಮಾನನಾದ ಔದ್ದಾಲಕನು ಸರಸ್ವತಿಯನ್ನು ಧ್ಯಾನಿಸಿದನು. ಮುನಿಯ ಪ್ರಾರ್ಥನೆಯಂತೆ ಸರಸ್ವತಿಯು ಆ ಸ್ಥಳಕ್ಕೆ ಬಂದಳು. ನಾರುಮಡಿ ಮತ್ತು ಜಿಂಕೆಚರ್ಮವನ್ನು ಧರಿಸಿರುವ ಮುನಿಗಳಿಂದ ಅಲ್ಲಿ ಪೂಜಿತಳಾದಳು. ಮುನಿಗಳು ಮನಸ್ಸಿನಲ್ಲಿ ಧ್ಯಾನಿಸಿ ಬಂದ ಈ ಸರಸ್ವತಿಯು ಆ ಸ್ಥಳದಲ್ಲಿ ಮನೋವೃತಾ ಎಂಬ ಹೆಸರಿನಿಂದ ಪ್ರಸಿದ್ಧಳಾದಳು.
ಕುರೋಸ್ತು ಯಜಮಾನಸ್ಯ ಕುರುಕ್ಷೇತ್ರೇ ಮಹಾತ್ಮನಃ |
ಆಜಗಾಮ ಮಹಾಭಾಗಾ ಸರಿಚ್ಛ್ರೇಷ್ಠಾ ಸರಸ್ವತೀ ॥27॥
ಓಘವತ್ಯಪಿ ರಾಜರ್ಷೇ ವಸಿಷ್ಠೇನ ಮಹಾತ್ಮನಾ |
ಸಮಾಹೂತಾ ಕುರುಕ್ಷೇತ್ರೇ ದಿವ್ಯತೋಯಾ ಸರಸ್ವತೀ ॥28॥
ಮಹಾತ್ಮನಾದ ಕುರುಚಕ್ರವರ್ತಿಯು ಕುರುಕ್ಷೇತ್ರದಲ್ಲಿ ಯಾಗಮಾಡುತ್ತಿದ್ದಾಗ ಉತ್ತಮನದಿಯಾದ ಸರಸ್ವತಿಯು ಅಲ್ಲಿಗೆ ಬಂದಳು. ರಾಜೇಂದ್ರನೇ! ಮಹಾತ್ಮನಾದ ವಸಿಷ್ಠನು ಪ್ರಾರ್ಥಿಸಿದಾಗ ದಿವ್ಯಸಲಿಲವುಳ್ಳ ಸರಸ್ವತಿಯು ಕುರುಕ್ಷೇತ್ರದಲ್ಲಿ ಪ್ರಾದುರ್ಭೂತಳಾಗಿ ಓಘವತೀ (ಓಘಮಾಲಾ) ಎಂಬ ನಾಮವನ್ನು ಪಡೆದಳು.
ದಕ್ಷೇಣ ಯಜತಾ ಚೈವ ಗಂಗಾತೀರೇ ಸರಸ್ವತೀ |
ಸುವೇಣಿರಿತಿ ವಿಖ್ಯಾತಾ ಪ್ರಸ್ರುತಾ ಶೀಘ್ರಗಾಮಿನೀ ॥29॥

ಗಂಗಾತೀರದಲ್ಲಿ ದಕ್ಷಪ್ರಜಾಪತಿಯು ಯಾಗ ಮಾಡುತ್ತಾ ಆಹ್ವಾನಿಸಿದಾಗ ಶೀಘ್ರಗಾಮಿನಿಯಾಗಿ ಹರಿದ ಸರಸ್ವತಿಯು ಸುವೇಣಿ ಎಂಬ ಹೆಸರಿನಿಂದ ಪ್ರಸಿದ್ಧಳಾದಳು.
ವಿಮಲೋದಾ ಭಗವತೀ ಬ್ರಹ್ಮಣಾ ಯಜತಾ ಪುನಃ |
ಸಮಾಹೂತಾ ಯಯೌ ತತ್ರ ಪುಣ್ಯೇ ಹೈಮವತೇ ಗಿರೌ ||30||
ಪುಣ್ಯಪ್ರದವಾದ ಹಿಮವತ್ಪರ್ವತದಲ್ಲಿ ಬ್ರಹ್ಮನು ಪುನಃ ಯಾಗವನ್ನು ಮಾಡುತ್ತಿದ್ದಾಗ ಬ್ರಹ್ಮದೇವನ ಆಹ್ವಾನದ ಮೇರೆಗೆ ಬಂದ ಸರಸ್ವತಿಯು ವಿಮಲೋದಾ ಎಂಬ ಹೆಸರಿನಿಂದ ಪ್ರಸಿದ್ಧಳಾದಳು.
ಏಕೀಭೂತಾಸ್ತತಸ್ತಾಸ್ತು ತಸ್ಮಿಂಸ್ತೀರ್ಥೇ ಸಮಾಗತಾಃ |
ಸಪ್ತಸಾರಸ್ವತಂ ತೀರ್ಥಂ ತತಸ್ತತ್ ಪ್ರಥಿತಂ ಭುವಿ ||31||
ಈ ಎಲ್ಲಾ ನದಿಗಳೂ ಈ ಸಪ್ತಸಾರಸ್ವತ ತೀರ್ಥದಲ್ಲಿ ಒಟ್ಟಿಗೆ ಸೇರಿದವು. ಆದ್ದರಿಂದಲೇ ಈ ತೀರ್ಥವು ಅದೇ ಹೆಸರಿನಿಂದ ಪ್ರಸಿದ್ಧವಾಯಿತು.
ಇತಿ ಸಪ್ತ ಸರಸ್ವತ್ಯೋ ನಾಮತಃ ಪರಿಕೀರ್ತಿತಾಃ |
ಸಪ್ತಸಾರಸ್ವತಂ ಚೈವ ತೀರ್ಥಂ ಪುಣ್ಯತಮಂ ಸ್ಮೃತಮ್ ||32||
ಹೀಗೆ ಏಳು ಸರಸ್ವತಿನದಿಗಳ ಬಗೆಗೆ ಅವುಗಳ ಹೆಸರಿನಿಂದ ಮತ್ತು ಉಗಮ ಕ್ರಮದಿಂದ ವರ್ಣಿಸಲಾಗಿದೆ. ಈ ಸಪ್ತಸಾರಸ್ವತತೀರ್ಥವು ಅತ್ಯಂತ ಪುಣ್ಯದಾಯಕವೆಂದು ಪ್ರಸಿದ್ಧವಾಯಿತು.
ಶೃಣು ಮಂಕಣಕಸ್ಯಾಪಿ ಕೌಮಾರಬ್ರಹ್ಮಚಾರಿಣಃ |
ಆಪಗಾಮವಗಾಢಸ್ಯ ರಾಜನ್ ಪ್ರಕ್ರೀಡಿತಂ ಮಹತ್||33||
ರಾಜನೇ! ಕುಮಾರಾವಸ್ಥೆಯಿಂದಲೇ ಬ್ರಹ್ಮಚಾರಿಯಾಗಿ ವ್ರತಪಾಲನೆಮಾಡುತ್ತಿದ್ದ ಮಂಕಣಕಮುನಿಯ ಬಗ್ಗೆಯೂ ನಿನಗೆ ಹೇಳುತ್ತೇನೆ, ಕೇಳು. ನದಿಯಲ್ಲಿ ಅವಗಾಹನ ಸ್ನಾನವನ್ನು ಮಾಡುತ್ತಿದ್ದ ಅವನು ಮಾಡಿದ ಮಹತ್ಕಾರ್ಯಗಳನ್ನು ಕೇಳು.
ದೃಷ್ಟ್ವಾ ಯದೃಚ್ಛಯಾ ತತ್ರ ಸ್ತ್ರಿಯಮಂಭಸಿ ಭಾರತ |
ಸ್ನಾಯಂತೀಂ ರುಚಿರಾಕಾರಾಂ ದಿಗ್ವಾಸಸಮನಿಂದಿತಾಮ್ ||34||
ಒಂದು ಸಲ ಅಲ್ಲಿ ಅಕಸ್ಮಾತ್ತಾಗಿ (ಯದೃಚ್ಛಯಾ - ಭಗವದಿಚ್ಛೆಯಿಂದ) ನೀರಿನಲ್ಲಿ ಸ್ನಾನವನ್ನು ಮಾಡುತ್ತಿದ್ದ ಸುಂದರಿಯಾದ, ವಸ್ತ್ರರಹಿತಳಾದ ಸ್ತ್ರೀಯನ್ನು ನೋಡಿದನು.
ಸರಸ್ವತ್ಯಾಂ ಮಹಾರಾಜ ಚಸ್ಕಂದೇ ರೇತ ಅಂಭಸಿ ||35||
ಮಹಾರಾಜನೇ! ಅವಳನ್ನು ನೋಡಿದ ಮಂಕಣಕಮುನಿಯು ಸರಸ್ವತಿಯ ನೀರಿನಲ್ಲಿಯೇ ರೇತಸ್ಸನ್ನು ವಿಸರ್ಜಿಸಿದನು.
ತದ್ರೇತಃ ಸ ತು ಜಗ್ರಾಹ ಕಲಶೇನ ಮಹಾತಪಾಃ |
ಋಷಿಃ ಪರಮಧರ್ಮಾತ್ಮಾ ತದಾ ಪುರುಷಸತ್ತಮಃ ||36||
ಮಹಾತಪಸ್ವಿಯಾದ, ಪರಮಧಾರ್ಮಿಕನಾದ, ಪುರುಷೋತ್ತಮನಾದ ಮಂಕಣಕನು ಆ ರೇತಸ್ಸನ್ನು ಕಲಶದಲ್ಲಿ ಸಂಗ್ರಹಿಸಿ ಹಿಡಿದಿಟ್ಟುಕೊಂಡನು.
ಸಪ್ತಧಾ ಪ್ರವಿಭಕ್ತಂ ತತ್ ಕಲಶಸ್ಥಂ ಜಗಾಮ ಹ |
ತತ್ರರ್ಷಯಃ ಸಪ್ತ ಜಾತಾ ಜಜ್ಞುರೇಭ್ಯೋ ಮರುದ್ಗಣಾಃ ||37||
ಕಲಶದಲ್ಲಿ ಇದ್ದ ರೇತಸ್ಸು ಏಳು ಭಾಗವಾಗಿ ವಿಭಕ್ತವಾಯಿತು. ಅಲ್ಲಿ ಏಳು ಋಷಿಗಳು ಹುಟ್ಟಿದರು. ಅವರು ಮರುದ್ಗಣಗಳಿಗೆ ಮೂಲಭೂತರಾಗಿದ್ದರು.
ವಾಯುವೇಗೋ ವಾಯುಬಲೋ ವಾಯುಹಾ ವಾಯುಮಂಡಲಃ |
ವಾಯುಜಾಲೋ ವಾಯುರೇತಾ ವಾಯುಚಕ್ರಶ್ಚ ವೀರ್ಯವಾನ್ ||38||
ಆ ಏಳು ಋಷಿಗಳ ಹೆಸರುಗಳು ಹೀಗಿವೆ : ವಾಯುವೇಗ, ವಾಯುಬಲ, ವಾಯುಹಾ, ವಾಯುಮಂಡಲ, ವಾಯುಜಾಲ, ವಾಯುರೇತ ಮತ್ತು ವಾಯುಚಕ್ರ. ಇವರೆಲ್ಲರೂ ಮಹಾವೀರ್ಯವಂತರಾಗಿದ್ದರು.
ಏವಮೇತೇ ಸಮುತ್ಪನ್ನಾ ಮರುತಾಂ ಭಾವಯಿಷ್ಣವಃ ||39||
ಹೀಗೆ ಮರುತ್ತುಗಳ ಉತ್ಪತ್ತಿಗೆ ಕಾರಣರಾದ ಈ ಏಳು ಋಷಿಗಳು ಜನಿಸಿದರು.
ಇದಮನ್ಯಚ್ಚ ರಾಜೇಂದ್ರ ಶೃಣ್ವಾಶ್ಚರ್ಯತಮಂ ಭುವಿ |
ಮಹರ್ಷೇಶ್ಚರಿತಂ ಯಾದೃಕ್ ತ್ರಿಷು ಲೋಕೇಷು ವಿಶ್ರುತಮ್ ||40||
ರಾಜನೇ! ಆಶ್ಚರ್ಯಜನಕವಾದ ಇದನ್ನು ಮತ್ತು ಬೇರೆ ವಿಷಯವನ್ನೂ ಕೇಳು. ಭೂಮಿಯಲ್ಲಿ ಮಂಕಣಕ ಮುನಿಯ ಚರಿತ್ರೆಯನ್ನು ಕೇಳು. ಈ ಚರಿತ್ರೆಗಳು ಮೂರು ಲೋಕದಲ್ಲಿಯೂ ಸುಪ್ರಸಿದ್ಧವಾಗಿವೆ.
ಪುರಾ ಮಂಕಣಕಃ ಸಿದ್ಧಃ ಕುಶಾಗ್ರೇಣೇತಿ ವಿಶ್ರುತಃ ||41||
ಕ್ಷತಃ ಕಿಲ ಕರೇ ರಾಜನ್ ತಸ್ಯ ಶಾಕರಸೋಽಸ್ರವತ್ |
ತಂ ವೈ ಶಾಕರಸಂ ದೃಷ್ಟ್ವಾ ಹರ್ಷಾವಿಷ್ಟಃ ಪ್ರನೃತ್ತವಾನ್ ||42||
ಹಿಂದೆ ಇದೇ ಮಂಕಣಕನ ಕೈಯಲ್ಲಿನ ದರ್ಭೆಯ ತುದಿಯಿಂದ ಕೈಯಲ್ಲಿ ಗಾಯವಾದಾಗ ರಕ್ತದ ಬದಲಾಗಿ ಶಾಕರಸವು ಒಸರಿಬಂತು. ಆ ತರಕಾರಿಯ ರಸವನ್ನು ಕಂಡು ಮಂಕಣಕನು ಸಂತೋಷದಿಂದ ಕುಣಿದಾಡಿದನು.
ತತಸ್ತಸ್ಮಿನ್ ಪ್ರನೃತ್ತೇ ವೈ ಸ್ಥಾವರಂ ಜಂಗಮಂ ಚ ಯತ್ |
ಪ್ರನೃತ್ತಮುಭಯಂ ವೀರ ತೇಜಸಾ ತಸ್ಯ ಮೋಹಿತಮ್ ||43||
ವೀರನೇ! ಅವನು ನೃತ್ಯಮಾಡುತ್ತಿದ್ದಾಗ ಅವನ ತೇಜಸ್ಸಿನಿಂದ ಮೋಹಕ್ಕೊಳಗಾದ ಎಲ್ಲಾ ಸ್ಥಾವರಗಳು ಮತ್ತು ಜಂಗಮಪದಾರ್ಥಗಳು

ನೃತ್ಯವನ್ನು ಮಾಡಿದವು.
ಬ್ರಹ್ಮಾದಿಭಿಃ ಸುರೈ ರಾಜನ್ ಋಷಿಭಿಶ್ಚ ತಪೋಧನೈಃ |
ವಿಜ್ಞಪ್ತೋ ವೈ ಮಹಾದೇವ ಋಷೇರರ್ಥೇ ನರಾಧಿಪ ॥44॥
ರಾಜನೇ! ಬ್ರಹ್ಮಾದಿದೇವತೆಗಳು ಮತ್ತು ತಪೋಧನರಾದ ಋಷಿಗಳು ಈ ಮಂಕಣಕ ಋಷಿಗಾಗಿ ರುದ್ರದೇವರಲ್ಲಿ ಪ್ರಾರ್ಥಿಸಿದರು.
ನಾಯಂ ನೃತ್ಯೇದ್ ಯಥಾ ದೇವ ತಥಾ ತ್ವಂ ಕರ್ತುಮರ್ಹಸಿ ॥45॥
ದೇವನೇ! ಈ ಮಂಕಣಕನು ನೃತ್ಯವನ್ನು ಮಾಡದ ರೀತಿಯಲ್ಲಿ ನೀನು ಏನಾದರೂ ಮಾಡು.
ತತೋ ದೇವೋ ಮುನಿಂ ದೃಷ್ಟ್ವಾ ಹರ್ಷಾವಿಷ್ಟಮತೀವ ಹ |
ಸುರಾಣಾಂ ಹಿತಕಾಮಾರ್ಥಂ ತಂ ಶಿವಃ ಪ್ರತ್ಯಭಾಷತ ॥46॥
ಅನಂತರ ರುದ್ರದೇವನು ಅತ್ಯಂತ ಸಂತೋಷವನ್ನು ಪಡುತ್ತಿರುವ ಋಷಿಯನ್ನು ನೋಡಿ ದೇವತೆಗಳ ಹಿತಕ್ಕಾಗಿ ಆ ಮಂಕಣಕ ಋಷಿಗೆ ಹೇಳಿದನು.
ಶಿವಃ
ಹರ್ಷಾದ್ ಬ್ರಾಹ್ಮಣ ಧರ್ಮಜ್ಞ ಕಿಮರ್ಥಂ ತ್ವಂ ಪ್ರನೃತ್ಯಸಿ |
ಹರ್ಷಸ್ಥಾನಂ ಕಿಮರ್ಥಂ ವಾ ತವೇದಂ ಮುನಿಸತ್ತಮ ॥47॥
ಶಿವ ಧರ್ಮಾತ್ಮನಾದ ಮುನಿಯೇ! ಸಂತೋಷದಿಂದ ಇದ್ದ ನೀನು ಧರ್ಮಜ್ಞಾನಿಯಾಗಿದ್ದರೂ ಏಕೆ ನೃತ್ಯವನ್ನು ಮಾಡುತ್ತಿರುವೆ? ಮುನಿಶ್ರೇಷ್ಠನೇ! ಯಾವ ಕಾರಣದಿಂದ ಈ ಸ್ಥಳವು ನಿನ್ನ ಆನಂದಕ್ಕೆ ಕಾರಣವಾಯಿತು?
ಮಂಕಣಃ
ಕಿಂ ನ ಪಶ್ಯಸಿ ಮೇ ದೇವ ಕರಾಚ್ಛಾಕರಸಂ ಸ್ರುತಮ್ |
ಯಂ ದೃಷ್ಟ್ವಾ ವೈ ಪ್ರನೃತ್ತೋಽಹಂ ಹರ್ಷೇಣ ಮಹತಾ ವಿಭೋ ॥48॥
ಮಂಕಣ ರುದ್ರದೇವನೇ, ನನ್ನ ಶರೀರದಿಂದ ಶಾಕರಸವು ಹರಿಯುತ್ತಿರುವುದನ್ನು ನೀನು ನೋಡಲಿಲ್ಲವೇನು? ಅದನ್ನು ನೋಡಿಯೇ ಸಂತೋಷದಿಂದ ನಾನು ಬಹಳವಾಗಿ ನೃತ್ಯವನ್ನು ಮಾಡಿದೆನು.
ವೈಶಂಪಾಯನಃ
ತತಸ್ತಮಬ್ರವೀದ್ ದೇವೋ ಮುನಿಂ ರಾಗೇಣ ಮೋಹಿತಮ್ ॥49॥
ವೈಶಂಪಾಯನ ಅನುರಾಗದಿಂದ ಮೋಹಕ್ಕೆ ಒಳಗಾದ ಮಂಕಣನಿಗೆ ರುದ್ರದೇವನು ಈ ಮಾತನ್ನು ಹೇಳುತ್ತಾನೆ.
ಶಿವಃ
ಅಹಂ ವೈ ವಿಸ್ಮಯಂ ವಿಪ್ರ ನ ಗಚ್ಛಾಮೀಹ ಪಶ್ಯ ಮಾಮ್ ॥50॥
ಶಿವ ಬ್ರಾಹ್ಮಣನೇ! ಇಲ್ಲಿ ನಾನು ನಿನ್ನನ್ನು ನೋಡಿ ಆಶ್ಚರ್ಯವನ್ನು ಪಡುವುದಿಲ್ಲ ಎಂಬುದನ್ನು ನೋಡು.
ವೈಶಂಪಾಯನಃ
ಏವಮುಕ್ತ್ವಾ ಮುನಿಶ್ರೇಷ್ಠಂ ಮಹಾದೇವೇನ ಧೀಮತಾ |
ಅಂಗುಲ್ಯಗ್ರೇಣ ರಾಜೇಂದ್ರ ಸ್ವಾಂಗುಷ್ಠಸ್ತಾಡಿತೋ ಭೃಶಮ್ ॥51॥
ವೈಶಂಪಾಯನ ಹೀಗೆ ಮಂಕಣ ಋಷಿಗೆ ಹೇಳಿ ತನ್ನ ಬೆರಳಿನ ತುದಿಯಿಂದ ಹೆಬ್ಬೆರಳಿಗೆ ಚೆನ್ನಾಗಿ ಹೊಡೆದುಕೊಳ್ಳುತ್ತಾನೆ.
ತತೋ ಭಸ್ಮಕ್ಷತಾದ್ ರಾಜನ್ ನಿರ್ಗತಂ ಹಿಮಸನ್ನಿಭಮ್ |
ತದ್ ದೃಷ್ಟ್ವಾ ವ್ರೀಡಿತೋ ರಾಜನ್ ಸ ಮುನಿಃ ಪಾದಯೋರ್ನತಃ ॥
ಆ ಗಾಯದಿಂದ ಹಿಮಸದೃಶವಾದ ಭಸ್ಮವು ಹೊರಬಂತು. ಅದನ್ನು ನೋಡಿ ನಾಚಿಕೊಂಡ ಮಂಕಣಮುನಿಯು ಅವನ ಪಾದಗಳಿಗೆ ನಮಸ್ಕರಿಸಿದನು.
ಮಂಕಣಕಃ
ನಾನ್ಯಂ ದೈವಮಹಂ ಮನ್ಯೇ ರುದ್ರಾತ್ ಪರತರಂ ಮಹತ್ |
ಸುರಾಸುರೇಷು ಜಗತೋ ಗತಿಸ್ತ್ವಮಸಿ ಶೂಲಧೃಕ್ ॥53॥
ಮಂಕಣಕ ಹೇ ಶೂಲಧಾರಿಯಾದ ರುದ್ರನೇ! ರುದ್ರನಿಗಿಂತ ಬೇರೆಯಾದ ಅತ್ಯುತ್ತಮ ದೇವತೆಯನ್ನು ದೇವತೆಗಳು ಮತ್ತು ಅಸುರರ ಮಧ್ಯದಲ್ಲಿ ನಾನು ತಿಳಿದಿಲ್ಲ. (ರುದ್ರಾಂತರ್ಗತ ನಾರಾಯಣನನ್ನು ಸ್ತುತಿಸುತ್ತಿದ್ದಾನೆ).
ತ್ವಯಾ ಸೃಷ್ಟಮಿದಂ ಸರ್ವಂ ವದಂತೀಹ ಮನೀಷಿಣಃ |
ತ್ವಾಮೇವ ಸರ್ವಂ ವ್ರಜತಿ ಪುನರೇವ ಯುಗಕ್ಷಯೇ ॥54॥
ಇದೆಲ್ಲವೂ ನಿನ್ನಿಂದಲೇ ಸೃಷ್ಟವಾಯಿತು ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ಯುಗಾಂತದಲ್ಲಿ ಎಲ್ಲವೂ ನಿನ್ನನ್ನೇ ಸೇರುತ್ತವೆ.
ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ |
ತ್ವಯಿ ಸರ್ವೇಶ ದೃಶ್ಯಂತೇ ಸುರಾ ಬ್ರಹ್ಮಾದಯೋಽನಘ ॥55॥
ನಿನ್ನನ್ನು ತಿಳಿದುಕೊಳ್ಳಲು ದೇವತೆಗಳಿಗೂ ಸಾಧ್ಯವಿಲ್ಲ. ನಾನೆಲ್ಲಿ ನಿನ್ನನ್ನು ತಿಳಿಯಲು ಸಾಧ್ಯ? ಉಳಿದ ದೇವತೆಗಳು ಮತ್ತು ಬ್ರಹ್ಮಾದಿಗಳು ನಿನ್ನ ಆಶ್ರಯವನ್ನು ಪಡೆಯುತ್ತಾರೆ.
ಸರ್ವಸ್ತ್ವಮಸಿ ದೇವಾನಾಂ ಕರ್ತಾ ಕಾರಯಿತಾ ಚ ಹ |
ತ್ವತ್ಪ್ರಸಾದಾತ್ ಸುರಾಃ ಸರ್ವೇ ಮೋದಂತೇ ಹ್ಯಕುತೋಭಯಾಃ ॥56॥
ದೇವತೆಗಳಿಗೆ ಸೃಷ್ಟಿಕರ್ತನೂ ನೀನೆ. ಕರ್ಮಗಳನ್ನು ಅವರ ಮೂಲಕ ಮಾಡಿಸುವವನೂ ನೀನೆ. ನಿನ್ನ ಅನುಗ್ರಹದಿಂದಲೇ ಎಲ್ಲಾ ದೇವತೆಗಳು ಸಕಲ ಭಾಗಗಳಿಂದ ಭಯರಹಿತರಾಗಿ ಆನಂದವನ್ನು ಅನುಭವಿಸುತ್ತಾರೆ.

ತ್ವಂ ಪ್ರಭುಃ ಪರಮೈಶ್ವರ್ಯಾದ್ ಅಧಿಕಂ ಭಾಸಿ ಶಂಕರ |
ತ್ವಯಿ ಬ್ರಹ್ಮಾ ಚ ಶಕ್ರಶ್ಚ ಲೋಕಾನ್ ಸಂಧಾರ್ಯ ತಿಷ್ಠತಃ ॥57॥
ಶಂಕರನೇ! ನೀನು ನಿನ್ನ ಐಶ್ವರ್ಯದಿಂದಾಗಿ ಚೆನ್ನಾಗಿ ಶೋಭಿಸುತ್ತಿದ್ದಿ. ಬ್ರಹ್ಮನು ಮತ್ತು ಇಂದ್ರನು ನಿನ್ನನ್ನು ಆಶ್ರಯಿಸಿಕೊಂಡು ಲೋಕಗಳ ಧಾರಣೆಯನ್ನು ಮಾಡುತ್ತಿದ್ದಾರೆ.
ತ್ವನ್ಮೂಲಂ ಚ ಜಗತ್ ಸರ್ವಂ ತ್ವದಂತಂ ಚ ಮಹೇಶ್ವರ |
ತ್ವಯಾ ಹಿ ವಿತತಾ ಲೋಕಾಃ ಸಪ್ತೇಮೇ ಸರ್ವಸಂಭವ ॥58॥
ಇಡೀ ಜಗತ್ತಿಗೆ ಮೂಲಕಾರಣನು ನೀನು. ಮಹೇಶ್ವರನೇ! ಎಲ್ಲವೂ ನಿನ್ನಲ್ಲೇ ಲಯವನ್ನು ಹೊಂದುತ್ತವೆ. ಸರ್ವಸಂಭವನೇ! ನಿನ್ನಿಂದ ತಾನೆ ಏಳು ಲೋಕಗಳು ವಿಸ್ತಾರವಾಗಿವೆ.
ಸರ್ವಥಾ ಸರ್ವಭೂತೇಶ ತ್ವಾಮೇವಾರ್ಚಂತಿ ದೇವತಾಃ ॥59॥
ಸಕಲಪ್ರಾಣಿಗಳ ಒಡೆಯನೇ! ದೇವತೆಗಳು ಎಲ್ಲಾ ರೀತಿಯಿಂದಲೂ ನಿನ್ನನ್ನೇ ಪೂಜಿಸುತ್ತಾರೆ.
ತ್ವನ್ಮಯಂ ಹಿ ಜಗತ್ ಸರ್ವಂ ಭೂತಂ ಸ್ಥಾವರಜಂಗಮಮ್ ॥60॥
ಸ್ಥಾವರ-ಜಂಗಮಯುಕ್ತವಾದ ಈ ಜಗತ್ತು ನಿನ್ನಲ್ಲಿಯೇ ಇದೆ.
ಸ್ವರ್ಗಂ ಚ ಪರಮಂ ಸ್ಥಾನಂ ನೃಣಾಮಭ್ಯುದಯಾರ್ಥಿನಾಮ್ |
ದದಾಸಿ ಚ ಪ್ರಸನ್ನಸ್ತ್ವಂ ಭಕ್ತಾನಾಂ ಪರಮೇಶ್ವರ ॥61॥
ಪರಮೇಶ್ವರನೇ! ಜೀವನದ ಶ್ರೇಷ್ಠತೆಯನ್ನು ಪಡೆಯಲು ಇಚ್ಛಿಸುವ ವ್ಯಕ್ತಿಗಳಿಗೆ ಸ್ವರ್ಗವೆಂಬುದು ಉತ್ತಮವಾದ ಸ್ಥಾನ. ಪ್ರಸನ್ನನಾದ ನೀನೇ ಅದೆಲ್ಲವನ್ನೂ ಭಕ್ತರಿಗೆ ಕೊಡುವೆ.
ಅನಾವೃತ್ತಿಪದಂ ನೄಣಾಂ ನಿತ್ಯಂ ನಿಃಶ್ರೇಯಸಾರ್ಥಿನಾಮ್ |
ದದಾಸಿ ಕರ್ಮಿಣಾಂ ಕರ್ಮ ಭಾವಯನ್ ಧ್ಯಾನಯೋಗತಃ ॥62॥
ನಿತ್ಯವಾದ ಮೋಕ್ಷವನ್ನು ಇಚ್ಛಿಸುವ ಮನುಷ್ಯರಿಗೆ ಮತ್ತೆ ಹಿಂತಿರುಗಿ ಬರಲಿಕ್ಕೆ ಇಲ್ಲದ ಮೋಕ್ಷವನ್ನು ಕೊಡುವಿ. ಕರ್ಮಿಗಳ ಕರ್ಮವನ್ನು ಕೂಡ ಇದೇ ರೀತಿಯಲ್ಲಿ ಧ್ಯಾನವನ್ನು ಮಾಡಿಸಿ ಕರ್ಮವನ್ನು ಶ್ರೇಷ್ಠ ಕರ್ಮವನ್ನಾಗಿ ಮಾಡುವಿ.
ನ ವೃಥಾಽಸ್ತಿ ಮಹಾದೇವ ಪ್ರಸಾದಸ್ತೇ ಮಹೇಶ್ವರ |
ಯಸ್ಮಾತ್ ತ್ವಯೋಪಕರಣಾತ್ ಕರೋಮಿ ಕಮಲೇಕ್ಷಣ ॥63॥
ಮಹಾದೇವನೇ! ಮಹೇಶ್ವರನೇ! ನಿನ್ನ ಅನುಗ್ರಹವು ಯಾವತ್ತೂ ವ್ಯರ್ಥವಾಗುವುದಿಲ್ಲ. ಕಮಲನೇತ್ರನೇ! ನಿನ್ನ ಜೊತೆಗೆ ಸೇರಿಕೊಂಡೇ ಎಲ್ಲವನ್ನೂ ಮಾಡುತ್ತಿದ್ದೇನೆ.
ಪ್ರಪದ್ಯೇ ಶರಣಂ ಶಂಭುಂ ಸರ್ವದಾ ಸರ್ವತಃ ಸ್ಥಿತಮ್ ॥64॥
ಎಲ್ಲೆಡೆ ಇರುವ ಶಂಭುವನ್ನು ಶರಣು ಹೊಂದುತ್ತೇನೆ.
ಕರ್ಮಣಾ ಮನಸಾ ವಾಚಾ ತಮೇವಾಭಿಜಗಾಮ ಹ ॥65॥
ಕರ್ಮ, ಮನಸ್ಸು ಮತ್ತು ಮಾತುಗಳಿಂದ ಅವನನ್ನೇ ಸ್ತುತಿಸುತ್ತೇನೆ.
ವೈಶಂಪಾಯನಃ
ಏವಂ ಸ್ತುತ್ವಾ ಮಹಾದೇವಮೃಷಿಃ ಸ ಪ್ರಣತೋಽಬ್ರವೀತ್ ॥66॥
ವೈಶಂಪಾಯನ ರುದ್ರನಿಗೆ ಹೀಗೆ ಸ್ತುತಿಸಿ, ನಮಸ್ಕರಿಸುತ್ತಾ ಹೀಗೆ ಹೇಳಿದನು
ಮಂಕಣಃ
ಭಗವನ್ ತ್ವತ್ಪ್ರಸಾದಾದ್ವೈ ತಪೋ ಮೇ ನ ಕ್ಷರೇದಿತಿ ॥67॥
ಮಂಕಣ ಭಗವಂತನೇ! ನಿನ್ನ ಅನುಗ್ರಹದಿಂದ ನನ್ನ ತಪಸ್ಸು ನಾಶವಾಗದೇ ಹೋಗಲಿ.
ವೈಶಂಪಾಯನಃ
ತತೋ ದೇವಃ ಪ್ರೀಯಮಾಣಸ್ತಮೃಷಿಂ ಪುನರಬ್ರವೀತ್ ॥68॥
ವೈಶಂಪಾಯನ ಸಂತುಷ್ಟನಾದ ರುದ್ರನು ಮಂಕಣಮುನಿಗೆ ಪುನಃ ಹೀಗೆ ಹೇಳುತ್ತಾನೆ.
ಶಿವಃ
ತಪಸ್ತೇ ವರ್ಧತಾಂ ವಿಪ್ರ ಮತ್ಪ್ರಸಾದಾತ್ ಸಹಸ್ರಧಾ |
ಆಶ್ರಮೇ ಚೇಹ ವತ್ಸ್ಯಾಮಿ ತ್ವಯಾ ಸಾರ್ಧಮಹಂ ಸದಾ ॥69॥
ಶಿವ ಬ್ರಾಹ್ಮಣನೇ! ನನ್ನ ಅನುಗ್ರಹದಿಂದ ನಿನ್ನ ತಪಸ್ಸು ಸಾವಿರಪಟ್ಟು ಹೆಚ್ಚಾಗಲಿ. ನಾನು ಈ ಆಶ್ರಮದಲ್ಲಿ ನಿನ್ನ ಜೊತೆಗೆ ವಾಸಮಾಡುವೆನು.
ಸಪ್ತಸಾರಸ್ವತೇ ಚಾಸ್ಮಿನ್ನರ್ಚಯಿಷ್ಯಂತಿ ಯೇ ನರಾಃ |
ತೇಷಾಂ ನ ದುರ್ಲಭಂ ಕಿಂಚಿದ್ ಭವಿತೇಹ ಪರತ್ರ ಚ ॥70॥
ಸಪ್ತಸಾರಸ್ವತತೀರ್ಥದಲ್ಲಿ ಯಾರು ಪೂಜಿಸುತ್ತಾರೆಯೋ ಅಂತಹವರಿಗೆ ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಸಿಗದ ಪದಾರ್ಥಗಳು ಯಾವುದೂ ಇಲ್ಲ.
ಸಾರಸ್ವತಂ ಚ ಲೋಕಂ ತೇ ಗಮಿಷ್ಯಂತಿ ನ ಸಂಶಯಃ ॥71॥
ಅಂತಹವರು ಸಾರಸ್ವತಲೋಕಕ್ಕೆ ಹೋಗುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಏವಂ ಮಂಕಣಕಸ್ಯಾಪಿ ಚರಿತಂ ಭೂರಿಚೇತಸಃ |
ಸ ಹಿ ಪುತ್ರಃ ಸುಕನ್ಯಾಯಾಮುತ್ಪನ್ನೋ ಮಾತರಿಶ್ವನಾ ॥72॥

ಮಹಾಜ್ಞಾನಿಯಾದ ಮಂಕಣಕನ ಚರಿತ್ರೆಯು ಹೀಗಿದೆ. ಆ ಮಂಕಣಕನಾದರೂ ಮಾತರಿಶ್ವನಿಂದ ಸುಕನ್ಯೆಯಲ್ಲಿ ಹುಟ್ಟಿದ ಮಗ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಬಲರಾಮನು ಔಶನಸತೀರ್ಥಕ್ಕೆ ಹೋದುದು. ಆ ತೀರ್ಥಕ್ಕೆ ಕಪಾಲಮೋಚನತೀರ್ಥವೆಂಬ ಹೆಸರು ಬರಲು ಕಾರಣದ ನಿರೂಪಣೆ. ಬಲರಾಮನು ಉಶಂಗ್ವಾಶ್ರಮಕ್ಕೆ ಹೋದುದು. ಉಶಂಗುಚರಿತ್ರೆಯ ನಿರೂಪಣೆ. ಬಲರಾಮನು ಪೃಥೂದಕತೀರ್ಥದಲ್ಲಿ ಸ್ನಾನ-ದಾನಾದಿಗಳನ್ನು ಮಾಡಿದುದು.
ವೈಶಂಪಾಯನಃ
ಉಷಿತ್ವಾ ತತ್ರ ರಾಮಸ್ತು ಸಂಪೂಜ್ಯಾಶ್ರಮವಾಸಿನಃ |
ತದಾ ಮಂಕಣಕೇ ಪ್ರೀತಿಂ ಪರಾಂ ಚಕ್ರೇ ಹಲಾಯುಧಃ ॥1॥
ವೈಶಂಪಾಯನ ಬಲರಾಮನು ಆ ಮಂಕಣಕತೀರ್ಥದಲ್ಲಿ ವಾಸ ಮಾಡಿ ಅಲ್ಲಿ ವಾಸಮಾಡುವ ಬ್ರಾಹ್ಮಣರನ್ನು ಪೂಜಿಸಿದನು. ಬಲರಾಮನು ಮಂಕಣಕಮುನಿಯ ಮೇಲೆ ಬಹಳ ಪ್ರೀತಿಯನ್ನು ಮಾಡಿದನು.
ದತ್ತ್ವಾ ದಾನಂ ದ್ವಿಜಾತಿಭ್ಯೋ ರಜನೀಂ ತಾಮುಪೋಷ್ಯ ಚ |
ಪೂಜಿತೋ ಮುನಿಭಿಶ್ಚೈವ ಪ್ರಾತರುತ್ಥಾಯ ಲಾಂಗಲೀ ॥2॥
ಅನುಜ್ಞಾಪ್ಯ ಮುನೀನ್ ಸರ್ವಾನ್ ಸ್ಪೃಷ್ಟ್ವಾ ತೋಯಂ ಚ ಭಾರತ |
ಪ್ರಯಯೌ ತ್ವರಿತಂ ರಾಮಸ್ತೀರ್ಥಹೇತೋರ್ಮಹಾಬಲಃ ॥3॥
ಬ್ರಾಹ್ಮಣರಿಗೆ ದಾನವನ್ನು ಕೊಟ್ಟು, ಆ ರಾತ್ರಿಯಲ್ಲಿ ಅಲ್ಲಿಯೇ ವಾಸ ಮಾಡಿದನು. ಮರುದಿನ ಬೆಳಿಗ್ಗೆ ಎದ್ದು ಮುನಿಗಳಿಂದ ಪೂಜ್ಯನಾಗಿ, ಆ ಮುನಿಗಳ ಅನುಜ್ಞೆಯನ್ನು ಸ್ವೀಕರಿಸಿ, ಆಚಮನಾದಿಗಳನ್ನು ಮಾಡಿ ತೀರ್ಥಯಾತ್ರೆಗಾಗಿ ಬಲರಾಮನು ಬೇಗನೇ ಅಲ್ಲಿಂದ ಹೋದನು.
ತತಸ್ತ್ವೌಶನಸಂ ತೀರ್ಥಮಾಜಗಾಮ ಹಲಾಯುಧಃ ॥4॥
ಕಪಾಲಮೋಚನಂ ನಾಮ ಯತ್ರ ಮುಕ್ತೋ ಮಹಾಮುನಿಃ |
ಮಹತಾ ಶಿರಸಾ ರಾಜನ್ ಗ್ರಸ್ತಜಂಘೋ ಮಹೋದರಃ |
ರಾಕ್ಷಸಸ್ಯ ಮಹಾರಾಜ ರಾಮಕ್ಷಿಪ್ತಸ್ಯ ವೈ ಪುರಾ ॥5॥
ಬಲರಾಮನು ಅಲ್ಲಿಂದ ಔಶನಸತೀರ್ಥಕ್ಕೆ ಹೋದನು. ಆ ಕ್ಷೇತ್ರಕ್ಕೆ ಕಪಾಲಮೋಚನ ಎಂಬ ಹೆಸರಿದೆ. ಅಲ್ಲಿ ಮಹೋದರ ಎಂಬ ಬ್ರಾಹ್ಮಣನು ತನ್ನ ಮೊಣಕಾಲಿಗೆ ತಗಲಿಕೊಂಡಿದ್ದ ಕಪಾಲದಿಂದ ಮುಕ್ತನಾದನು. ಮಹಾರಾಜನೇ! ಹಿಂದೆ ಶ್ರೀರಾಮನ ಬಾಣದ ಹೊಡೆತದಿಂದ ಹಾರಿದ ರಾಕ್ಷಸನ ತಲೆಯು ಈ ಮಹೋದರ ಬ್ರಾಹ್ಮಣನ ಮೊಣಕಾಲಿಗೆ ತಗಲಿ ಅಂಟಿಕೊಂಡಿತ್ತು. ಈ ತೀರ್ಥದಲ್ಲಿ ಆ ಬ್ರಾಹ್ಮಣನು ಆ ಕಪಾಲದಿಂದ ಬಿಡುಗಡೆಯನ್ನು ಪಡೆದನು.
ತತ್ರ ಪೂರ್ವಂ ತಪಸ್ತಪ್ತಂ ಕಾವ್ಯೇನ ಸುಮಹಾತ್ಮನಾ ॥6॥
ಯತ್ರಾಸ್ಯ ನೀತಿರ್ನಿಖಿಲಾ ಪ್ರಾದುರ್ಭೂತಾ ಮಹಾತ್ಮನಃ |
ಯತ್ರ ಸಂಚಿಂತಯಾಮಾಸ ದೇವದಾನವವಿಗ್ರಹಮ್ ॥7॥
ಆ ತೀರ್ಥದಲ್ಲಿಯೇ ಹಿಂದೆ ದೈತ್ಯಗುರುವಾದ ಶುಕ್ರಾಚಾರ್ಯನು ಏಕಾಗ್ರಮನಸ್ಸಿನಿಂದ ತಪಸ್ಸನ್ನು ಆಚರಿಸಿದ್ದನು. ಅಲ್ಲಿಯೇ ಮಹಾತ್ಮನಾದ ಶುಕ್ರನ ಶುಕ್ರನೀತಿಯು ವ್ಯಕ್ತವಾಯಿತು. ಅಲ್ಲಿಯೇ ಮುಂದೆ ನಡೆಯಲಿದ್ದ ದೇವಾಸುರ ಯುದ್ಧವನ್ನು ಆಲೋಚಿಸಿದನು.
ತತ್ ಪ್ರಾಪ್ಯ ಚ ಬಲೋ ರಾಜನ್ ತೀರ್ಥಪ್ರವರಮುತ್ತಮಮ್ |
ವಿಧಿವದ್ಧಿ ದದೌ ವಿತ್ತಂ ಬ್ರಾಹ್ಮಣಾನಾಂ ಮಹಾತ್ಮನಾಮ್ ॥8॥
ರಾಜನೇ! ಬಲರಾಮನು ಆ ಉತ್ತಮವಾದ ತೀರ್ಥಕ್ಷೇತ್ರಕ್ಕೆ ಬಂದು ಮಹಾತ್ಮರಾದ ಬ್ರಾಹ್ಮಣರಿಗೆ ವಿಧಿಪ್ರಕಾರವಾಗಿ ದಾನಗಳನ್ನು ಮಾಡಿದನು.
ಜನಮೇಜಯಃ
ಕಪಾಲಮೋಚನಂ ಬ್ರಹ್ಮನ್ ಕಥಂ ಪ್ರಾಪ್ತೋ ಮಹಾಮುನಿಃ |
ಕಥಂ ಚಾಸ್ಯ ಶಿರೋ ಲಗ್ನಂ ಕೇನ ಚೈವ ತು ಹೇತುನಾ ॥9॥
ಜನಮೇಜಯ ಬ್ರಹ್ಮಜ್ಞಾನಿಯೇ! ಆ ಮಹಾಮುನಿಯು ಈ ತೀರ್ಥದಲ್ಲಿ ತನಗಂಟಿದ ಕಪಾಲದಿಂದ ಬಿಡುಗಡೆಯನ್ನು ಹೇಗೆ ಪಡೆದುಕೊಂಡನು? ಯಾವ ಕಾರಣದಿಂದಾಗಿ ಅವನಿಗೆ ಆ ಕಪಾಲವು ಅಂಟಿಕೊಂಡಿತು?
ವೈಶಂಪಾಯನಃ
ಪುರಾ ವೈ ದಂಡಕಾರಣ್ಯೇ ರಾಘವೇಣ ಮಹಾತ್ಮನಾ |
ವಸತಾ ರಾಜಶಾರ್ದೂಲ ರಾಕ್ಷಸಾಸ್ತತ್ರ ಹಿಂಸಿತಾಃ ॥10॥
ವೈಶಂಪಾಯನ ರಾಜಸಿಂಹನೇ! ಹಿಂದೆ ಮಹಾತ್ಮನಾದ ಶ್ರೀರಾಮನು ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದಾಗ ಅಲ್ಲಿ ಅನೇಕ ರಾಕ್ಷಸರನ್ನು ಕೊಂದುಹಾಕಿದ್ದನು.
ಜನಸ್ಥಾನೇ ಶಿರಶ್ಛಿನ್ನಂ ರಾಕ್ಷಸಸ್ಯ ದುರಾತ್ಮನಃ |
ಕ್ಷುರೇಣ ಶಿತಧಾರೇಣ ತತ್ ಪಪಾತ ಮಹಾವನೇ ॥11॥

ಜನಸ್ಥಾನದಲ್ಲಿ ದುಷ್ಟನಾದ ರಾಕ್ಷಸನ ತಲೆಯನ್ನು ಹರಿತವಾದ ಕತ್ತಿಯಿಂದ ತುಂಡರಿಸಿದ್ದನು. ಅದು ದೊಡ್ಡಕಾಡಿನಲ್ಲಿ ಬಿದ್ದಿತು.
ಮಹೋದರಸ್ಯ ತಲ್ಲಗ್ನಂ ಜಂಘಾಯಾಂ ವೈ ಯದೃಚ್ಛಯಾ |
ವನೇ ವಿಚರತೋ ರಾಜನ್ನಸ್ಥಿ ಭಿತ್ತ್ವಾಽಸ್ಫುರತ್ ತದಾ ॥12॥
ರಾಜನೇ! ಅಕಸ್ಮಾತ್ತಾಗಿ (ಭಗವದಿಚ್ಛೆಯಿಂದ) ಆ ತಲೆಯು ಕಾಡಿನಲ್ಲಿ ಸಂಚರಿಸುತ್ತಿದ್ದ ಮಹೋದರ ಎಂಬ ಮುನಿಯ ಮೊಣಕಾಲಿನ ಎಲುಬನ್ನು ಸೀಳಿ ತಗುಲಿಕೊಂಡಿತು.
ಸ ತೇನ ಲಗ್ನೇನ ತದಾ ದ್ವಿಜಾತಿರ್ನ ಶಶಾಕ ಹ |
ಅಭಿಗಂತುಂ ಮಹಾಪ್ರಾಜ್ಞ ತೀರ್ಥಾನ್ಯಾಯತನಾನಿ ಚ ॥13॥
ಬ್ರಾಹ್ಮಣಜಾತಿಯವನಾದ್ದರಿಂದ ಆ ಮಹಾಜ್ಞಾನಿಯಾದ ಮುನಿಯು, ಕಪಾಲವು ತನ್ನ ಮೊಣಕಾಲಿಗೆ ಅಂಟಿಕೊಂಡಿದ್ದರಿಂದ ತೀರ್ಥಕ್ಷೇತ್ರಗಳಿಗೆ ಮತ್ತು ದೇವಾಲಯಗಳಿಗೆ ಹೋಗಲು ಶಕ್ತನಾಗಲಿಲ್ಲ.
ಸಪೂತಿನಾ ವಿಸ್ರವತಾ ವೇದನಾರ್ತೋ ಮಹಾಮುನಿಃ |
ಜಗಾಮ ಸರ್ವತೀರ್ಥಾನಿ ಪೃಥಿವ್ಯಾಮಿತಿ ನಃ ಶ್ರುತಮ್ ॥14॥
ಮೊಣಕಾಲಲ್ಲಿ ದುರ್ಗಂಧಯುಕ್ತವಾದ ಕೀವು ಹೊರಸೂಸಲು ಆರಂಭಿಸಿತು. ಆ ಮಹಾಮುನಿಯು ಬಹಳವಾಗಿ ದುಃಖವನ್ನು ಅನುಭವಿಸುತ್ತಿದ್ದನು. ಆದರೂ ಪೃಥಿವಿಯಲ್ಲಿರುವ ಎಲ್ಲಾ ತೀರ್ಥಗಳನ್ನು ಸಂದರ್ಶಿಸಿದನು.
ಸ ಗತ್ವಾ ಸರಿತಃ ಸರ್ವಾಃ ಸಮುದ್ರಾಂಶ್ಚ ಮಹಾತಪಾಃ |
ಕಥಯಾಮಾಸ ತತ್ ಸರ್ವಮೃಷೀಣಾಂ ಭಾವಿತಾತ್ಮನಾಮ್ ॥15॥
ಆ ತಪಸ್ವಿಯಾದ ಮುನಿಯು ಎಲ್ಲಾ ನದಿಗಳಿಗೂ, ಎಲ್ಲಾ ಸಮುದ್ರಗಳಿಗೂ ಹೋಗಿ ತನಗೆ ನಡೆದ ಎಲ್ಲಾ ವಿಷಯಗಳನ್ನೂ ಅಲ್ಲಿ ಸಿದ್ಧಿಯನ್ನು ಪಡೆದುಕೊಂಡಿದ್ದ ಋಷಿಗಳಲ್ಲಿ ಹೇಳಿಕೊಂಡನು.
ಆಪ್ಲುತಃ ಸರ್ವತೀರ್ಥೇಷು ನ ಚ ಮೋಕ್ಷಮವಾಪ್ತವಾನ್ |
ಸ ತು ಶುಶ್ರಾವ ವಿಪ್ರೇಂದ್ರೋ ಮುನೀನಾಂ ವಚನಂ ಮಹತ್ ॥16॥
ಎಲ್ಲಾ ತೀರ್ಥಗಳಲ್ಲಿ ಅವಗಾಹಸ್ನಾನವನ್ನು ಮಾಡಿಯೂ ಕಪಾಲದಿಂದ ಬಿಡುಗಡೆ ಸಿಗಲಿಲ್ಲ. ಬ್ರಾಹ್ಮಣೋತ್ತಮನಾದ ಆತನು ಮುನಿಗಳ ವಿಶಿಷ್ಟವಾದ ಮಾತನ್ನು ಕೇಳಿಸಿಕೊಂಡನು.
ಸರಸ್ವತ್ಯಾಂ ತೀರ್ಥವರಂ ಖ್ಯಾತಮೌಶನಸಂ ತಥಾ |
ಸರ್ವಪಾಪಪ್ರಶಮನಂ ಸಿದ್ಧಿಕ್ಷೇತ್ರಮನುತ್ತಮಮ್ ॥17॥
ಸರಸ್ವತಿಯಲ್ಲಿ ಔಶನಸ ಎಂಬ ತೀರ್ಥವು ಶ್ರೇಷ್ಠ ತೀರ್ಥವೆಂದು ಪ್ರಸಿದ್ಧವಾಗಿದೆ. ಅದು ಎಲ್ಲಾ ಪಾಪಗಳನ್ನೂ ಕಳೆಯುವಂತಹದ್ದು. ಸರಿಸಾಟಿಯಿಲ್ಲದ ಸಿದ್ಧಿಕ್ಷೇತ್ರವಾಗಿದೆ.
ಸ ತು ಗತ್ವಾ ತತಃ ತತ್ರ ತೀರ್ಥಮೌಶನಸಂ ದ್ವಿಜಃ |
ತತಶ್ಚೌಶನಸಂ ತೀರ್ಥಂ ತಸ್ಯೋಪಸ್ಪೃಶತಸ್ತದಾ ॥18॥
ಅ ಮಹೋದರ ಬ್ರಾಹ್ಮಣನಾದರೂ ಔಶನಸತೀರ್ಥಕ್ಕೆ ಬರುತ್ತಾನೆ. ಆ ತೀರ್ಥದ ಜಲದಿಂದ ಆಚಮನಾದಿಗಳನ್ನು ಮಾಡುತ್ತಾನೆ.
ತಚ್ಛಿರಶ್ಚರಣಂ ಮುಕತ್ವ ಪಪಾತಾಂತರ್ಜಲೇ ತತಃ ॥19॥
ಅವನ ಕಾಲಿಗೆ ಅಂಟಿಕೊಂಡಿದ್ದ ತಲೆಯು ಕೆಳಗೆ ಬಿದ್ದು ನೀರಿನೊಳಗೆ ಸೇರಿಕೊಂಡಿತು.
ತತಃ ಸ ವಿರುಜೋ ಭೂತ್ವಾ ಪೂತಾತ್ಮಾ ವೀತಕಲ್ಮಷಃ |
ಆಜಗಮಾಶ್ರಮಂ ಪ್ರೀತಃ ಕೃತಕೃತ್ಯೋ ಮಹೋದರಃ ॥20॥
ಅನಂತರ ಅವನು ರೋಗರಹಿತನಾಗಿ ದುಃಖವನ್ನು ಕಳೆದುಕೊಂಡು ಪವಿತ್ರನಾಗಿ, ಮಹೋದರನು ಕೃತಕೃತ್ಯನಾಗಿ ಸಂತೋಷದಿಂದ ತನ್ನ ಆಶ್ರಮಕ್ಕೆ ಮರಳಿದನು.
ಸೋಽಥ ಗತ್ವಾಽಶ್ರಮಂ ಪುಣ್ಯಂ ವಿಪ್ರಮುಕ್ತೋ ಮಹಾತಪಾಃ |
ಕಥಯಾಮಾಸ ತತ್ಸರ್ವಮ್ ಋಷೀಣಾಂ ಭಾವಿತಾತ್ಮನಾಮ್ ॥21॥
ಹೀಗೆ ಕಷ್ಟವನ್ನು ಕಳೆದುಕೊಂಡ ಮಹಾತಪಸ್ವಿಯಾದ ಬ್ರಾಹ್ಮಣನು ಪುಣ್ಯಪ್ರದವಾದ ತನ್ನ ಆಶ್ರಮಕ್ಕೆ ಹೋಗಿ, ಜ್ಞಾನಿಗಳಾದ ಮುನಿಗಳಿಗೆ ನಡೆದಿದ್ದ ಎಲ್ಲಾ ವಿಷಯಗಳನ್ನು ನಿರೂಪಿಸಿದನು.
ತಚ್ಛ್ರುತ್ವಾ ವಚನಂ ತಸ್ಯ ತದಾ ತೀರ್ಥಸ್ಯ ಮಾನದ |
ಕಪಾಲಮೋಚನಮಿತಿ ನಾಮ ಚಕ್ರುಃ ಸಮಾಗತಾಃ ॥22॥
ಅವನ ಆ ಮಾತುಗಳನ್ನು ಕೇಳಿಸಿಕೊಂಡ ಮುನಿಗಳು ಆ ತೀರ್ಥಕ್ಕೆ ಕಪಾಲಮೋಚನ ಎಂಬ ಹೆಸರನ್ನು ಇಟ್ಟರು.
ತತ್ರ ದತ್ವಾ ಬಹೂನ್ ದೇಯಾನ್ ವಿಪ್ರಾನ್ ಸಂಪೂಜ್ಯ ಸಾದರಮ್ |
ಜಗಾಮ ತತ್ರ ರಾಜೇಂದ್ರ ಉಶಂಗೋರಾಶ್ರಮಂ ಪ್ರತಿ ॥23॥
ಅಲ್ಲಿ ಬಲರಾಮನು ದಾನಗಳನ್ನು ಮಾಡಿ ಬ್ರಾಹ್ಮಣರನ್ನು ಬಹಳ ಚೆನ್ನಾಗಿ ಪೂಜಿಸಿದನು. ರಾಜೇಂದ್ರನೇ! ಅಲ್ಲಿಂದ ಉಶಂಗುವಿನ ಆಶ್ರಮಕ್ಕೆ ಹೋದನು.
ಯತ್ರ ತಪ್ತಂ ತಪೋ ಘೋರಮಾರ್ಷ್ಟಿಷೇಣೇನ ಭಾರತ |
ಬ್ರಾಹ್ಮಣ್ಯಂ ಲಬ್ಧವಾನ್ ಯತ್ರ ವಿಶ್ವಾಮಿತ್ರೋ ಮಹಾತಪಾಃ ॥24॥
ಆರ್ಷ್ಟಿಶವಂಶದಲ್ಲಿ ಹುಟ್ಟಿದ ಒಬ್ಬ ಮುನಿಯು ಆ ತೀರ್ಥದಲ್ಲಿ ಮಹಾತಪಸ್ಸನ್ನು ಮಾಡಿದನು. ವಿಶ್ವಾಮಿತ್ರನು ಕೂಡ ಅಲ್ಲಿಯೇ ತಪಸ್ಸನ್ನು ಮಾಡಿ ಬ್ರಾಹ್ಮಣನಾದನು (ಬ್ರಹ್ಮರ್ಷಿಯಾದನು).
ತತೋ ಹಲಾಯುಧಃ ಶ್ರೀಮಾನ್ ಬ್ರಾಹ್ಮಣೈಃ ಪರಿವಾರಿತಃ |

ಜಗಾಮ ತತ್ರ ರಾಜೇಂದ್ರ ಉಶಂಗುಸ್ತನುಮತ್ಯಜತ್ ॥25॥
ಅಲ್ಲಿಂದ ಮುಂದೆ ಒಳ್ಳೆಯ ಕಾಂತಿಯುಳ್ಳ ಬಲರಾಮನು ಬ್ರಾಹ್ಮಣರನ್ನು ಸೇರಿಸಿಕೊಂಡು, ಉಶಂಗುಮುನಿಯು ತನ್ನ ಪ್ರಾಣವನ್ನು ಕಳೆದುಕೊಂಡ ತೀರ್ಥಕ್ಕೆ ಬರುತ್ತಾನೆ.
ಉಶಂಗುರ್ಬ್ರಾಹ್ಮಣೋ ವೃದ್ಧಃ ತಪೋನಿತ್ಯಶ್ಚ ಭಾರತ |
ದೇಹನ್ಯಾಸೇ ಕೃತಮನಾ ವಿಚಿಂತ್ಯ ಬಹುಧಾ ನೃಪ ॥26॥
ಉಶಂಗುವು ಒಬ್ಬ ವೃದ್ಧನಾದ ತಪೋನಿರತನಾದ ಬ್ರಾಹ್ಮಣ. ರಾಜನೇ! ಅನೇಕರೀತಿಯಲ್ಲಿ ಆಲೋಚನೆಮಾಡಿ ಕೊನೆಗೆ ದೇಹವನ್ನು ಬಿಟ್ಟುಬಿಡಲು ಮನಸ್ಸು ಮಾಡಿದನು.
ತತಃ ಸರ್ವಾನುಪಾದಾಯ ತನಯಾನ್ ವೈ ಮಹಾತಪಾಃ |
ಉಶಂಗುರಬ್ರವೀತ್ ತತ್ರ ನಯಧ್ವಂ ಮಾಂ ಪೃಥೂದಕಮ್ ॥27॥
ಮಹಾತಪಸ್ವಿಯಾದ ಉಶಂಗುವು ತನ್ನ ಎಲ್ಲಾ ಮಕ್ಕಳನ್ನೂ ಹತ್ತಿರ ಕರೆದು ಹೀಗೆ ಹೇಳುತ್ತಾನೆ- `ನನ್ನನ್ನು ತೀರ್ಥಕ್ಷೇತ್ರಕ್ಕೆ ಕರೆದೊಯ್ಯಿರಿ'.
ವಿಜ್ಞಾಯಾತೀತವಯಸಮುಶಂಗುಂ ತಂ ತಪೋಧನಾಃ |
ತದ್ವೈ ತೀರ್ಥಮುಪಾನಿನ್ಯುಃ ಸರಸ್ವತ್ಯಾಸ್ತಪೋಧನಮ್ ॥28॥
ತಪಸ್ವಿಗಳಾದ ಮುನಿಗಳು ಉಶಂಗುವಿನ ಆಯುಷ್ಯವು ಅತ್ಯಲ್ಪವಾಗಿರುವುದಾಗಿ ತಿಳಿದುಕೊಂಡರು. ತಪಸ್ವಿಯಾದ ಉಶಂಗುವನ್ನು ಸರಸ್ವತಿಯ ತೀರ್ಥಕ್ಕೆ ಕರೆದುಕೊಂಡು ಹೋದರು.
ಸ ತೈಃ ಪುತ್ರೈಸ್ತದಾ ಧೀಮಾನಾನೀತೋ ವೈ ಸರಸ್ವತೀಮ್ |
ಪುಣ್ಯಾಂ ತೀರ್ಥಶತೋಪೇತಾಂ ವಿದ್ವತ್ಸಂರ್ನಿಷೇವಿತಾಮ್ ॥29॥
ಬುದ್ಧಿವಂತನಾದ ಉಶಂಗುವು ಪುಣ್ಯಪ್ರದವಾದ, ವಿದ್ವಾಂಸರಿಂದ ನಿತ್ಯದಲ್ಲಿಯೂ ಸೇವಿತಳಾದ ಸರಸ್ವತಿ ನದಿ ಇರುವ ಈ ಕ್ಷೇತ್ರಕ್ಕೆ ಭೇಟಿಕೊಟ್ಟನು.
ಸ ತತ್ರ ವಿಧಿನಾ ರಾಜನ್ನಾಪ್ಲುತ್ಯ ಸುಮಹಾತಪಾಃ |
ಜ್ಞಾತ್ವಾ ತೀರ್ಥಗುಣಂ ಚೈವ ಪ್ರಾಹೇದಂ ಮುನಿಸತ್ತಮಃ ॥30॥
ಸುಪ್ರೀತಃ ಪುರುಷವ್ಯಾಘ್ರಃ ಸರ್ವಾನ್ ಪುತ್ರಾನಿದಂ ವಚಃ ॥31॥
ಮಹಾತಪಸ್ವಿಯಾದ ಉಶಂಗುವು ವಿಧಿಗಳಿಗನುಸಾರವಾಗಿ ಸ್ನಾನವನ್ನು ಮಾಡಿ, ತೀರ್ಥಗಳ ಮಹತ್ವವನ್ನು ತಿಳಿದು, ಬಹಳವಾದ ತೃಪ್ತಿಯನ್ನು ಪಡೆದು, ತನ್ನ ಮಕ್ಕಳಿಗೆ ಹೇಳಿದನು.
ಉಶಂಗುಃ
ಸರಸ್ವತ್ಯುತ್ತರೇ ತೀರೇ ಯಸ್ತ್ಯಜೇದಾತ್ಮನಸ್ತನುಮ್ |
ಪೃಥೂದಕೇ ಜಪ್ಯಪರೋ ನೈನಂ ಶ್ವೋ ಮರಣಂ ತಪೇತ್ ॥32॥
ಉಶಂಗು ಸರಸ್ವತಿಯ ಉತ್ತರತೀರದಲ್ಲಿ ಪೃಥೂದಕದಲ್ಲಿ ಜಪ ಮಾಡುತ್ತಾ, ಯಾವನು ತನ್ನ ದೇಹವನ್ನು ಬಿಡುತ್ತಾನೆಯೋ ಅವನಿಗೆ ಮರಣವು ದುಃಖದಾಯಕವಾಗುವುದಿಲ್ಲ.
ವೈಶಂಪಾಯನಃ
ತತ್ರಾಪ್ಲುತ್ಯ ಸ ಧರ್ಮಾತ್ಮಾ ಉಪಸ್ಪೃಶ್ಯ ಹಲಾಯುಧಃ |
ದತ್ತ್ವಾ ಚೈವ ಬಹೂನ್ ದೇಯಾನ್ ವಿಪ್ರಾಣಾಂ ವಿಪ್ರವತ್ಸಲಃ ॥33॥
ವೈಶಂಪಾಯನ ಧರ್ಮಾತ್ಮನಾದ ಬಲರಾಮನು ಅಲ್ಲಿ ಅವಗಾಹಸ್ನಾನವನ್ನು ಮಾಡಿ, ಆಚಮನಪುರಸ್ಸರವಾಗಿ ಮಾಡಬೇಕಾದ ದಾನಗಳನ್ನು ಬ್ರಾಹ್ಮಣರಿಗೆ ಮಾಡಿದನು. ಬಲರಾಮನು ಬ್ರಾಹ್ಮಣರ ಬಗ್ಗೆ ಬಹಳ ಪ್ರೀತಿವುಳ್ಳವನಾಗಿದ್ದನು.
ಸಸರ್ಜ ಯತ್ರ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ॥34॥
ಆ ತೀರ್ಥದಲ್ಲಿಯೇ ಚತುರ್ಮುಖನು ಸೃಷ್ಟಿಕಾರ್ಯವನ್ನು ಮಾಡಿದ್ದನು.
ಯತ್ರಾರ್ಷ್ಟಿಷೇಣಃ ಕೌರವ್ಯ ಬ್ರಾಹ್ಮಣಃ ಸಂಶಿತವ್ರತಃ |
ತಪಸಾ ಮಹತಾ ರಾಜನ್ ಪ್ರಾಪ್ತವಾನ್ ಸಿದ್ಧಿಮುತ್ತಮಾಮ್ ॥35॥
ಸಿಂಧುದ್ವೀಪಶ್ಚ ರಾಜರ್ಷಿರ್ದೇವಾಪಿಶ್ಚ ಮಹಾತಪಾಃ |
ಸಿಂಧುದ್ವೀಪಂ ಚ ಸಂಪ್ರಾಪ್ಯ ಬ್ರಾಹ್ಮಣ್ಯಂ ಲಬ್ಧವಾನ್ ಪುರಾ |
ಬ್ರಾಹ್ಮಣ್ಯಂ ಲಬ್ಧವಾನ್ ಯತ್ರ ವಿಶ್ವಾಮಿತ್ರೋ ಮಹಾತಪಾಃ ॥36॥
ತಪಸ್ವೀ ಭಗವಾನುಗ್ರ ಉರುತೇಜಾ ಮಹಾಯಶಾಃ |
ತತ್ರಾಜಗಾಮ ಬಲವಾನ್ ಬಲದೇವಃ ಪ್ರತಾಪವಾನ್ ॥37॥
ಕೌರವರಾಜನೇ! ಅದೇ ತೀರ್ಥದಲ್ಲಿ ಆರ್ಷ್ಟಿಷೇಣ ಎಂಬ ತೀಕ್ಷ್ಣತಪಸ್ಸುಳ್ಳ ಬ್ರಾಹ್ಮಣನು ಕಠಿಣ ತಪಸ್ಸಿನಿಂದ ಉತ್ತಮವಾದ ಸಿದ್ಧಿಯನ್ನು ಪಡೆದನು. ಅಲ್ಲಿಯೇ ರಾಜರ್ಷಿಯಾದ ಸಿಂಧುದ್ವೀಪ, ಮಹಾತಪಸ್ವಿಯಾದ ದೇವಾಪಿ- ಇವರೆಲ್ಲಾ ಸಿದ್ಧಿಯನ್ನು ಪಡೆದರು. ಬ್ರಾಹ್ಮಣ್ಯವನ್ನು ಹೊಂದಿದರು. ಮಹಾತಪಸ್ವಿಯಾದ ತೇಜೋಭರಿತನಾದ, ಕೀರ್ತಿವಂತ ವಿಶ್ವಾಮಿತ್ರನು ಇಲ್ಲಿಯೇ ಬ್ರಾಹ್ಮಣ್ಯವನ್ನು ಪಡೆದದ್ದು. ಆ ತೀರ್ಥಕ್ಕೆ ಪ್ರತಾಪಿಯಾದ ಬಲಶಾಲಿ ಬಲರಾಮನು ಬಂದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಬಲಭದ್ರಯಾತ್ರಾಯಾಂ ವೃಷಪ್ಸುಚರಿತಂ ನಾಮ ಏಕಾದಶೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.

* * * * *

## ಹನ್ನೆರಡನೆಯ ಅಧ್ಯಾಯ

ಆರ್ಷ್ಟಿಷೇಣನು ಪೃಥೂದಕದಲ್ಲಿ ತಪಸ್ಸನ್ನು ಮಾಡಿ ಎಲ್ಲಾ ವೇದಗಳ ಅಧ್ಯಯನವನ್ನು ಮಾಡಿದುದು. ವಿಶ್ವಾಮಿತ್ರಾದಿಗಳು ಆಯಾಯ ತೀರ್ಥಗಳಲ್ಲಿ ತಪಸ್ಸನ್ನು ಮಾಡಿ ಬ್ರಾಹ್ಮಣತ್ವವನ್ನು ಪಡೆದದ್ದು. ಬಲರಾಮನು ಅಲ್ಲಿ ಸ್ನಾನಾದಿಗಳನ್ನು ಮಾಡಿ ಬಕಾಶ್ರಮಕ್ಕೆ ಹೋದದ್ದು.

ಜನಮೇಜಯಃ

ಆರ್ಷ್ಟಿಷೇಣಃ ಕಥಂ ಬ್ರಹ್ಮನ್ ವಿಪುಲಂ ತಪ್ತವಾಂಸ್ತಪಃ |
ಸಿಂಧುದ್ವೀಪಃ ಕಥಂ ಚಾಪಿ ಬ್ರಾಹ್ಮಣ್ಯಂ ಲಬ್ಧವಾನ್ ಪುರಾ ॥1॥

ಜನಮೇಜಯ ಬ್ರಹ್ಮಜ್ಞಾನಿಯೇ! ಆರ್ಷ್ಟಿಷೇಣನು ಬಹಳ ತಪಸ್ಸನ್ನು ಹೇಗೆ ಮಾಡಿದನು? ಹಿಂದೆ ಸಿಂಧುದ್ವೀಪನು ಹೇಗೆ ಬ್ರಾಹ್ಮಣ್ಯವನ್ನು ಪಡೆದನು?

ದೇವಾಪಿಶ್ಚ ಕಥಂ ರಾಜನ್ ವಿಶ್ವಾಮಿತ್ರಶ್ಚ ಸತ್ತಮ ॥2॥

ದೇವಾಪಿಯೂ ಹೇಗೆ ಬ್ರಾಹ್ಮಣ್ಯವನ್ನು ಹೊಂದಿದನು? ವಿಶ್ವಾಮಿತ್ರನೂ ಹೇಗೆ ಬ್ರಾಹ್ಮಣ್ಯವನ್ನು ಪಡೆದುಕೊಂಡನು?

ತನ್ಮಮಾಚಕ್ಷ್ವ ಭಗವನ್ ಪರಂ ಕೌತೂಹಲಂ ಹಿ ಮೇ ॥3॥

ಪೂಜ್ಯರೆ! ಇದೆಲ್ಲವನ್ನೂ ನನಗೆ ಹೇಳಿ. ನನಗೆ ಬಹಳ ಕುತೂಹಲವು ಉಂಟಾಗಿದೆ.

ವೈಶಂಪಾಯನಃ

ಪುರಾ ಕೃತಯುಗೇ ರಾಜನ್ನಾರ್ಷ್ಟಿಷೇಣೋ ದ್ವಿಜೋತ್ತಮಃ |
ವಸನ್ ಗುರುಕುಲೇ ನಿತ್ಯಂ ನಿಯಮಾಧ್ಯಯನೇ ರತಃ ॥4॥

ವೈಶಂಪಾಯನ ರಾಜನೇ! ಹಿಂದೆ ಕೃತಯುಗದಲ್ಲಿ ಆರ್ಷ್ಟಿಷೇಣ ಎಂಬ ಉತ್ತಮಬ್ರಾಹ್ಮಣನು ಗುರುಕುಲದಲ್ಲಿ ವಾಸವನ್ನು ಮಾಡುತ್ತಾ ನಿತ್ಯವೂ ನಿಯಮಗಳನ್ನು ಆಸಕ್ತಿಯಿಂದ ಪಾಲಿಸುತ್ತಿದ್ದನು.

ತಸ್ಯ ರಾಜನ್ ಗುರುಕುಲೇ ವಸತೋ ನಿತ್ಯಮೇವ ಹಿ |
ಸಮಾಪ್ತಿಂ ನಾಗಮನ್ ವಿದ್ಯಾ ನಾಪಿ ವೇದಾ ವಿಶಾಂಪತೇ ॥5॥

ರಾಜನೇ! ಹೀಗೆ ಗುರುಕುಲವಾಸವನ್ನು ಮಾಡುತ್ತಿದ್ದ ಅವನ ಗುರುಕುಲವಾಸವು ಕೊನೆಗೊಳ್ಳಲಿಲ್ಲ. ವಿದ್ಯೆಯಾಗಲೀ, ವೇದಗಳಾಗಿ ಕಲಿತು ಮುಗಿಯಲಿಲ್ಲ.

ಸ ನಿರ್ವಿಣ್ಣಸ್ತತೋ ರಾಜನ್ ತಪಸ್ತೇಪೇ ಮಹಾತಪಾಃ ॥6॥

ರಾಜನೇ! ಇದರಿಂದ ವಿಷಾದಕ್ಕೊಳಗಾದ, ಮಹಾತಪಸ್ವಿಯಾದ ಅವನು ತಪಸ್ಸನ್ನಾಚರಿಸಿದನು.

ತತೋ ವೈ ತಪಸಾ ತೇನ ಪ್ರಾಪ್ಯ ವೇದಾನನುತ್ತಮಾನ್ |
ಸ ವಿದ್ವಾನ್ ವೇದಸಂಯುಕ್ತಃ ಸಿದ್ಧಶ್ಚಾಪ್ಯೃಷಿಸತ್ತಮಃ ॥7॥

ಅನಂತರ ತಪಸ್ಸಿನಿಂದಾಗಿ ಅವನು ಉತ್ತಮ ವೇದವಿದ್ಯೆಯನ್ನು ಪಡೆದನು. ಹೀಗೆ ವೇದಯುಕ್ತನಾಗಿ ಸಿದ್ಧಿಯನ್ನು ಪಡೆದುಕೊಂಡ ಅವನು ಉತ್ತಮ ಋಷಿ ಎಂದು ಪ್ರಸಿದ್ಧನಾದನು.

ತತ್ರ ತೀರ್ಥೇ ವರಾನ್ ಪ್ರಾದಾತ್ ತ್ರೀನೇವ ಸುಮಹಾತಪಾಃ ॥8॥

ಆ ತೀರ್ಥಕ್ಕೆ ಮೂರು ವರಗಳನ್ನು ಕೊಟ್ಟನು.

ಆರ್ಷ್ಟಿಷೇಣಃ

ಅಸ್ಮಿಂಸ್ತೀರ್ಥೇ ಮಹಾನದ್ಯಾ ಅದ್ಯಪ್ರಭೃತಿ ಮಾನವಃ |
ಆಪ್ಲುತೋ ವಾಜಪೇಯಸ್ಯ ಫಲಂ ಪ್ರಾಪ್ನೋತಿ ಪುಷ್ಕಲಮ್ ॥9॥

ಆರ್ಷ್ಟಿಷೇಣ ಮಹಾನದಿಯಾದ ಸರಸ್ವತಿಯ ಈ ತೀರ್ಥದಲ್ಲಿ ಇಂದಿನಿಂದ ಯಾವ ಮನುಷ್ಯನು ಸ್ನಾನಮಾಡುವನೋ ಅವನು ವಾಜಪೇಯಯಾಗದ ಉತ್ತಮವಾದ ಫಲವನ್ನು ಹೊಂದುವನು.

ಅದ್ಯಪ್ರಭೃತಿ ವ್ಯಾಲೇಭ್ಯೋ ನ ಭಯಂ ಭವಿತಾ ಪುನಃ |
ಅಪಿ ಚಾಲ್ಪೇನ ಯತ್ನೇನ ತಪಃ ಪ್ರಾಪ್ಸ್ಯತಿ ಪುಷ್ಕಲಮ್ ॥10॥

ಇಂದಿನಿಂದ ಅವನು ಸರ್ಪಭಯದಿಂದ ದೂರನಾಗುತ್ತಾನೆ. ಸ್ವಲ್ಪ ಪ್ರಯತ್ನದಿಂದಲೇ ಉತ್ತಮವಾದ ತಪಸ್ಸಿನ ಫಲವು ಲಭಿಸುವುದು.

ವೈಶಂಪಾಯನಃ

ಏವಮುಕತ್ವ ಮಹಾತೇಜಾ ಜಗಾಮ ತ್ರಿದಿವಂ ಮುನಿಃ |
ಏವಂ ಸ ಸಿದ್ಧೋ ಭಗವಾನ್ ಆರ್ಷ್ಟಿಷೇಣಃ ಪ್ರತಾಪವಾನ್ ॥11॥

ವೈಶಂಪಾಯನ ಮಹಾತೇಜೋವಂತನಾದ ಮುನಿಯು ಹೀಗೆ ಹೇಳಿ ಸ್ವರ್ಗಕ್ಕೆ ಹೋದನು. ಹೀಗೆ ಪ್ರತಾಪಿಯಾದ ಭಗವಾನ್ ಆರ್ಷ್ಟಿಷೇಣನು ಸಿದ್ಧಿಯನ್ನು ಪಡೆದುಕೊಂಡನು.

ತಸ್ಮಿನ್ನೇವ ತದಾ ತೀರ್ಥೇ ಸಿಂಧುದ್ವೀಪಃ ಪ್ರತಾಪವಾನ್ |
ದೇವಾಪಿಶ್ಚ ಮಹಾರಾಜ ಬ್ರಾಹ್ಮಣ್ಯಂ ಪ್ರಾಪತುರ್ಮಹತ್ ॥12॥

ಮಹಾರಾಜನೇ! ಅದೇ ತೀರ್ಥದಲ್ಲಿ ಪ್ರತಾಪಿಯಾದ ಸಿಂಧುದ್ವೀಪ ಮತ್ತು ದೇವಾಪಿ ಇವರು ಮಹತ್ತಾದ ಬ್ರಾಹ್ಮಣ್ಯವನ್ನು ಹೊಂದಿದರು.

ತಥಾ ಕುಶಿಕದಾಯಾದಸ್ತಪೋನಿತ್ಯೋ ಜಿತೇಂದ್ರಿಯಃ |
ತಪಸಾ ವೈ ಸುತಪ್ತೇನ ಬ್ರಾಹ್ಮಣತ್ವಮವಾಪ್ತವಾನ್ ॥13॥

ಹಾಗೆಯೇ, ನಿತ್ಯವೂ ತಪೋನಿರತನಾದ, ಜಿತೇಂದ್ರಿಯನಾದ ಕುಶಿಕನ ವಂಶದಲ್ಲಿ ಹುಟ್ಟಿದ ವಿಶ್ವಾಮಿತ್ರನು ಬ್ರಾಹ್ಮಣತ್ವವನ್ನು ಹೊಂದಿದನು.
ಗಾಧಿರ್ನಾಮ ಮಹಾನಾಸೀತ್ ಕ್ಷತ್ರಿಯಪ್ರವರೋ ಭುವಿ |
ತಸ್ಯ ಪುತ್ರಸ್ತ್ವಭೂದ್ ರಾಜನ್ ವಿಶ್ವಾಮಿತ್ರಃ ಪ್ರತಾಪವಾನ್ ॥14॥
ಭೂಲೋಕದಲ್ಲಿ ಗಾಧಿ ಎಂಬ ಹೆಸರಿನ ಶ್ರೇಷ್ಠನಾದ ಕ್ಷತ್ರಿಯನಿದ್ದನು. ರಾಜನೇ ಅವನ ಮಗನೇ ಪ್ರತಾಪಿಯಾದ ವಿಶ್ವಾಮಿತ್ರ.
ಸ ರಾಜಾ ಕೌಶಿಕಸ್ತಾತ ಮಹಾಯೋಗ್ಯಭವತ್ ಕಿಲ |
ಸ ಪುತ್ರಮಭಿಷಿಚ್ಯೈವ ವಿಶ್ವಾಮಿತ್ರಂ ಮಹಾತಪಾಃ ॥15॥
ಮಹಾತಪಸ್ವಿಯಾದ ಗಾಧಿರಾಜನು ತನ್ನ ಮಗ ವಿಶ್ವಾಮಿತ್ರನಿಗೆ ಪಟ್ಟಾಭಿಷೇಕವನ್ನು ಮಾಡಿ ತಾನು ದೊಡ್ಡ ಯೋಗಿಯಾದನು.
ದೇಹನ್ಯಾಸೇ ಮನಶ್ಚಕ್ರೇ ತಮೂಚುಃ ಪ್ರಣತಾಃ ಪ್ರಜಾಃ ॥16॥
ತಾನು ಶರೀರತ್ಯಾಗವನ್ನು ಮಾಡಿಕೊಳ್ಳಬೇಕೆಂದು ಗಾಧಿರಾಜನು ನಿರ್ಧಾರ ಮಾಡಿದಾಗ ಪ್ರಜೆಗಳು ನಮಸ್ಕರಿಸಿ ಹೀಗೆನ್ನುತ್ತಾರೆ.
ಪ್ರಜಾಃ
ನ ಗಂತವ್ಯಂ ಮಹಾಪ್ರಾಜ್ಞ ತ್ರಾಹಿ ಚಾಸ್ಮಾನ್ ಮಹಾಭಯಾತ್ ॥17॥
ಪ್ರಜೆಗಳು ಮಹಾಜ್ಞಾನಿಯೇ! ನೀನು ಹೋಗಬಾರದು. ದೊಡ್ಡಭಯದಿಂದ ನಮ್ಮನ್ನು ರಕ್ಷಿಸು.
ವೈಶಂಪಾಯನಃ
ಏವಮುಕ್ತಃ ಪ್ರತ್ಯುವಾಚ ತತೋ ಗಾಧಿಃ ಪ್ರಜಾಸ್ತತಃ ॥18॥
ವೈಶಂಪಾಯನ ಪ್ರಜೆಗಳು ಹೀಗೆ ಹೇಳಿದಾಗ ಗಾಧಿರಾಜನು ಅವರಿಗೆ ಉತ್ತರವನ್ನು ಕೊಡುತ್ತಾನೆ.
ಗಾಧಿಃ
ಕೃತ್ಸ್ನಸ್ಯ ಜಗತೋ ಗೋಪ್ತಾ ಭವಿಷ್ಯತಿ ಸುತೋ ಮಮ ॥19॥
ಗಾಧಿ ನನ್ನ ಮಗ ವಿಶ್ವಾಮಿತ್ರನು ಸಂಪೂರ್ಣ ಜಗತ್ತಿನ ರಕ್ಷಕನಾಗುತ್ತಾನೆ.
ವೈಶಂಪಾಯನಃ
ಇತ್ಯುಕತ್ವಽಥ ತತೋ ಗಾಧಿರ್ವಿಶ್ವಾಮಿತ್ರಂ ನಿವೇಶ್ಯ ಚ |
ಜಗಾಮ ಸ ತದಾ ರಾಜಾ ಪಥಿ ವೈ ಪುಣ್ಯಕರ್ಮಣಾಮ್ ॥20॥
ವೈಶಂಪಾಯನ ಹೀಗೆ ಹೇಳಿ ಗಾಧಿರಾಜನು ವಿಶ್ವಾಮಿತ್ರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ಪುಣ್ಯಕರ್ಮಮಾಡಿದವರು ಹೋದ ಮಾರ್ಗದಲ್ಲಿ ಹೊರಟುಹೋದನು. (ವೀರಕ್ಷತ್ರಿಯರು ಹೊಂದುವ ಲೋಕಕ್ಕೆ ಹೋದನು.)
ತದಾ ಗಾಧಿಸುತೋ ರಾಜಾ ವಿಶ್ವಾಮಿತ್ರೋಽಪ್ಯಭೂನ್ನೃಪಃ |
ನ ಚ ಶಕ್ನೋತಿ ಪೃಥಿವೀಂ ಯತ್ನವಾನಪಿ ರಕ್ಷಿತುಮ್ ॥21॥
ಆಗ ಗಾಧಿರಾಜನ ಮಗನಾದ ವಿಶ್ವಾಮಿತ್ರನು ರಾಜನಾದನು. ಅವನು ಬಹಳ ಪ್ರಯತ್ನಪಟ್ಟರೂ ಕೂಡ ಜಗತ್ತನ್ನು ರಕ್ಷಿಸಲು ಸಮರ್ಥನಾಗಲಿಲ್ಲ.
ತತಃ ಶುಶ್ರಾವ ರಾಜಾಽಸೌ ರಾಕ್ಷಸೇಭ್ಯೋ ಮಹದ್ ಭಯಮ್ |
ನಿರ್ಯಯೌ ನಗರಾಚ್ಚಾಪಿ ಚತುರಂಗಬಲಾನ್ವಿತಃ ॥22॥
ಆಗ ರಾಕ್ಷಸರಿಂದ ಬಹಳ ದೊಡ್ಡ ಭಯವುಂಟಾಗಿದೆ ಎಂಬುದನ್ನು ಅವನು ಕೇಳಿಸಿಕೊಂಡನು. ಚತುರಂಗಬಲಸಹಿತನಾಗಿ ನಗರದಿಂದ ಹೊರಟನು.
ಸ ಗತ್ವಾ ದೂರಮಧ್ವಾನಂ ವಸಿಷ್ಠಾಶ್ರಮಮುತ್ತಮಮ್ |
ತತಸ್ತೇ ಸೈನಿಕಾ ರಾಜನ್ ಜಘ್ನುಸ್ತತ್ರ ಬಹೂನ್ ಮೃಗಾನ್ ॥23॥
ಬಹಳ ದೂರ ಬಂದಾಗ ದಾರಿಯಲ್ಲಿ ವಸಿಷ್ಠರ ಉತ್ತಮವಾದ ಆಶ್ರಮವನ್ನು ನೋಡಿದನು. ವಿಶ್ವಾಮಿತ್ರನ ಸೈನಿಕರು ಅಲ್ಲಿ ಅನೇಕ ಜಿಂಕೆಗಳನ್ನು ಕೊಂದರು.
ತತಸ್ತು ಭಗವಾನ್ ವಿಪ್ರೋ ವಸಿಷ್ಠಸ್ತು ಸ್ವ ಆಶ್ರಮೇ |
ದದೃಶೇ ತು ತತಃ ಸರ್ವಂ ವಧ್ಯಮಾನಂ ಮಹಾವನಮ್ ॥24॥
ಆಗ ತನ್ನ ಆಶ್ರಮದಲ್ಲಿ ಇಡೀ ವನವು ನಾಶವಾಗುತ್ತಿರುವುದನ್ನು ಭಗವಾನ್ ವಸಿಷ್ಠರು ನೋಡಿದರು.
ತಸ್ಯ ಕ್ರುದ್ಧೋ ಮಹಾರಾಜ ವಸಿಷ್ಠೋ ಮುನಿಸತ್ತಮಃ |
ವಿಸೃಜಸ್ವ ಬಲಂ ಘೋರಮಿತಿ ಸ್ವಾಂ ಗಾಮುವಾಚ ಹ ॥25॥
ಮಹಾರಾಜನೇ! ಕೋಪಗೊಂಡ ಶ್ರೇಷ್ಠಮುನಿಗಳಾದ ವಸಿಷ್ಠರು ತನ್ನ ಬಳಿಯಿದ್ದ ಹಸುವಿಗೆ ``ಘೋರವಾದ ಬಲವನ್ನು ಪ್ರಯೋಗಿಸು'' ಎಂದು ಆದೇಶಿಸಿದರು.
ತಥೋಕ್ತಾ ಸಾಽಸೃಜದ್ ಧೇನುಃ ಪುರುಷಾನ್ ಘೋರದರ್ಶನಾನ್ |
ತೇ ಚ ತದ್ಬಲಮಾಸಾದ್ಯ ಬಭಂಜುಃ ಸರ್ವತೋದಿಶಮ್ ॥26॥
ವಸಿಷ್ಠರ ಆದೇಶವನ್ನು ಪಡೆದ ಧೇನುವು ನೋಡಲು ಭಯಂಕರವಾದ ಪುರುಷರನ್ನು ಸೃಷ್ಟಿಸಿತು. ಆ ಪುರುಷರು ಧೇನುವಿನಿಂದ ಶಕ್ತಿಯನ್ನು ಪಡೆದುಕೊಂಡು ಎಲ್ಲಾ ಕಡೆಯೂ ಶತ್ರುಗಳನ್ನು ನಾಶಮಾಡಿದರು.
ತದ್ ದೃಷ್ಟ್ವಾ ವಿದ್ರುತಂ ಸೈನ್ಯಂ ವಿಶ್ವಾಮಿತ್ರಸ್ತು ಗಾಧಿಜಃ |
ತಪಃ ಪರಂ ಮನ್ಯಮಾನಃ ತಪಸ್ಯೇವ ಮನೋ ದಧೇ ॥27॥
ಸೈನ್ಯವೆಲ್ಲವೂ ಓಡಿಹೋಗುತ್ತಿರುವುದನ್ನು ನೋಡಿದ ಗಾಧಿಪುತ್ರ ವಿಶ್ವಾಮಿತ್ರನು ವಸಿಷ್ಠರ ತಪಸ್ಸು ಶ್ರೇಷ್ಠವಾದುದೆಂದು ತಿಳಿದು

ತಾನೂ ಕೂಡ ತಪಸ್ಸು ಮಾಡಲು ನಿಶ್ಚಯಿಸಿದನು.
ಸೋಽಸ್ಮಿಂಸ್ತೀರ್ಥವರೇ ರಾಜನ್ ಸರಸ್ವತ್ಯಾಂ ಸಮಾಹಿತಃ |
ನಿಯಮೈಶ್ಚೋಪವಾಸೈಶ್ಚ ಕ್ಷಪಯನ್ ದೇಹಮಾತ್ಮನಃ ॥28॥
ರಾಜನೇ! ಆ ವಿಶ್ವಾಮಿತ್ರನು ಸರಸ್ವತಿನದಿಯಲ್ಲಿರುವ ಈ ತೀರ್ಥದಲ್ಲಿ ಮನೋನಿಗ್ರಹವನ್ನು ಸಂಪಾದಿಸಿ, ನಿಯಮ-ಉಪವಾಸಗಳಿಂದ ತನ್ನ ದೇಹವನ್ನು ದಂಡಿಸಿಕೊಂಡನು.
ಜಲಾಹಾರೋ ವಾಯುಭಕ್ಷಃ ಪರ್ಣಾಹಾರಶ್ಚ ಸೋಽಭವತ್ |
ತತಃ ಸ್ಥಂಡಿಲಶಾಯೀ ಚ ಯೇ ಚಾನ್ಯೇ ನಿಯಮಾಃ ಪೃಥಕ್ ॥29॥
ಕೇವಲ ನೀರನ್ನು ಸೇವಿಸುತ್ತಾ, ಕೇವಲ ಪ್ರಾಣಾಯಾಮದ ಗಾಳಿಯನ್ನು ಮಾತ್ರ ಸೇವಿಸುತ್ತಾ, ಎಲೆಗಳನ್ನಷ್ಟೇ ಸೇವಿಸುತ್ತಾ, ನೆಲದ ಮೇಲೆ ಮಲಗುತ್ತಾ, ಹೀಗೆ ಇನ್ನೂ ಅನೇಕ ನಿಯಮಗಳನ್ನು ಆಚರಿಸತೊಡಗಿದನು.
ಅಸಕೃತ್ ತಸ್ಯ ದೇವಾಶ್ಚ ವ್ರತವಿಘ್ನಂ ಪ್ರಚಕ್ರಿರೇ |
ನ ತಸ್ಯ ನಿಯಮಾದ್ ಬುದ್ಧಿರಪಯಾತಿ ಮಹಾತ್ಮನಃ ॥30॥
ದೇವತೆಗಳು ಅನೇಕ ಬಾರಿ ಅವನ ತಪಸ್ಸಿಗೆ ವಿಘ್ನವನ್ನುಂಟು ಮಾಡಿದರು. ಆದರೆ ಮಹಾತ್ಮನಾದ ವಿಶ್ವಾಮಿತ್ರನ ಬುದ್ಧಿಯು ನಿಯಮಗಳನ್ನು ಬಿಟ್ಟುಕೊಡಲಿಲ್ಲ.
ತತಃ ಪರೇಣ ಯತ್ನೇನ ತಪ್ತ್ವಾ ಬಹುವಿಧಂ ತಪಃ |
ತೇಜಸಾ ಭಾಸ್ಕರಾಕಾರೋ ಗಾಧಿಜಃ ಸಮಪದ್ಯತ ॥31॥
ಅನಂತರ ಉತ್ತಮವಾದ ಪ್ರಯತ್ನದಿಂದ ಅನೇಕ ರೀತಿಯಾಗಿ ತಪಸ್ಸನ್ನು ಆಚರಿಸಿ ವಿಶ್ವಾಮಿತ್ರನು ತೇಜಸ್ಸಿನಿಂದ ಸೂರ್ಯನಂತೆ ಕಾಣಿಸಿದನು.
ಘೃಣಯಾ ತು ತದಾ ಯುಕ್ತೋ ವಿಶ್ವಾಮಿತ್ರಂ ಪಿತಾಮಹಃ |
ಅಮನ್ಯತ ಮಹಾತೇಜಾ ವರದೋಽದರ್ಶಯತ್ ತದಾ ॥32॥
ಆಗ ಮಹಾತೇಜಸ್ಸುಳ್ಳ ಚತುರ್ಮುಖಬ್ರಹ್ಮನು ವಿಶ್ವಾಮಿತ್ರನ ಮೇಲೆ ಕರುಣೆಯನ್ನು ತೋರಿ ವರವನ್ನು ಕೊಡುವವನಾಗಿ ಪ್ರತ್ಯಕ್ಷನಾದನು.
ಸ ತು ವವ್ರೇ ವರಂ ರಾಜನ್ ಸ್ಯಾಮಹಂ ಬ್ರಾಹ್ಮಣಸ್ತ್ವಿತಿ |
ತಥೇತಿ ಚಾಬ್ರವೀದ್ ಬ್ರಹ್ಮಾ ಸರ್ವಲೋಕಪಿತಾಮಹಃ ॥33॥
ರಾಜನೇ! ವಿಶ್ವಾಮಿತ್ರನು ತಾನು ಬ್ರಾಹ್ಮಣನಾಗಬೇಕೆಂಬ ವರವನ್ನು ಕೇಳಿಕೊಂಡನು. ಸಕಲಲೋಕಕ್ಕೂ ಪಿತಾಮಹನಾದ ಚತುರ್ಮುಖಬ್ರಹ್ಮನು ತಥಾಸ್ತು ಎಂದು ಹೇಳಿದನು.
ಸ ಲಬ್ಧ್ವಾ ತಪಸೋಗ್ರೇಣ ಬ್ರಾಹ್ಮಣ್ಯಂ ಸುಮಹಾಯಶಾಃ |
ವಿಚಚಾರ ಮಹೀಂ ಕೃತ್ಸ್ನಾಂ ಕೃತಕಾಮಃ ಸುರೋಪಮಃ ॥34॥
ವಿಶ್ವಾಮಿತ್ರನು ಕಠಿಣತಪಸ್ಸಿನಿಂದ ಬ್ರಾಹ್ಮಣ್ಯವನ್ನು ಪಡೆದು, ಒಳ್ಳೆಯ ಕೀರ್ತಿವಂತನಾಗಿ, ದೇವತೆಗಳಿಂದಲೂ ಮಾನಿತನಾಗಿ, ಇಡೀ ಭೂಮಿಯಲ್ಲಿ ಸಂಚರಿಸಿದನು.
ತಸ್ಮಿಂಸ್ತೀರ್ಥವರೇ ರಾಮಃ ಪ್ರದಾಯ ವಿವಿಧಂ ವಸು |
ಪಯಸ್ವಿನೀಸ್ತಥಾ ಧೇನೂರ್ಯಾನಾನಿ ವಿವಿಧಾನಿ ಚ ॥35॥
ಬಲರಾಮನು ಆ ಉತ್ತಮ ತೀರ್ಥದಲ್ಲಿ ವಿವಿಧ ಸಂಪತ್ತನ್ನು ದಾನ ಮಾಡಿದನು. ಮತ್ತು ಹಾಲುಕರೆಯುವ ಹಸುಗಳನ್ನೂ, ವಿವಿಧ ವಾಹನಗಳನ್ನೂ ದಾನ ಮಾಡಿದನು.
ತಥಾ ವಸ್ತ್ರಾಣ್ಯಲಂಕಾರಂ ಭಕ್ಷ್ಯಂ ಪೇಯಂ ಚ ಶೋಭನಮ್ |
ಅದದಾನ್ಮುದಿತೋ ರಾಜನ್ ಪೂಜಯಿತ್ವಾ ದ್ವಿಜೋತ್ತಮಾನ್ ॥36॥
ರಾಜನೇ! ಹಾಗೆಯೇ ಉತ್ತಮಬ್ರಾಹ್ಮಣರನ್ನು ಸಂತೋಷದಿಂದ ಪೂಜಿಸಿ ಅವರಿಗೆ ವಸ್ತ್ರಗಳನ್ನು, ಅಲಂಕಾರಗಳನ್ನು, ಭಕ್ಷ್ಯಗಳನ್ನು, ಉತ್ತಮ ಪಾನೀಯಗಳನ್ನೂ ದಾನ ಮಾಡಿದನು.
ಯಯೌ ರಾಜಂಸ್ತತೋ ರಾಮೋ ಬಕಸ್ಯಾಶ್ರಮಮಂತಿಕಾತ್ |
ಯತ್ರ ತೇಪೇ ತಪಸ್ತೀವ್ರಂ ಬಕೋ ದಾಲ್ಭ್ಯ ಇತಿ ಶ್ರುತಿಃ ॥37॥
ರಾಜನೇ! ಅನಂತರ ಬಲರಾಮನು ಹತ್ತಿರದಲ್ಲಿಯೇ ಇದ್ದ ಬಕಾಶ್ರಮಕ್ಕೆ ಹೋದನು. ಆ ಆಶ್ರಮದಲ್ಲಿ ದಲ್ಭನ ಮಗ ಬಕನು ಕಠಿಣವಾದ ತಪಸ್ಸನ್ನು ಆಚರಿಸಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ವಿಶ್ವಾಮಿತ್ರಚರಿತಂ ನಾಮ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ಬಲರಾಮನು ಅವಾಕೀರ್ಣಕ್ಷೇತ್ರಕ್ಕೆ ಹೋದದ್ದು. ಬಕಮುನಿಯ ಚರಿತ್ರೆ. ಅನಂತರ ಬಲರಾಮನು ವಸಿಷ್ಠಾಪವಾಹತೀರ್ಥಕ್ಕೆ ಹೋದುದು.
ವೈಶಂಪಾಯನಃ
ಬ್ರಹ್ಮಯೋನಿಭಿರಾಕೀರ್ಣೋ ಜಗಾಮ ಯದುನಂದನಃ |

ಯತ್ರ ದಾಲ್ಭ್ಯೋ ಬಕೋ ರಾಜನ್ ಪಶ್ವರ್ಥಂ ಸುಮಹಾತಪಾಃ ॥1॥
ಜುಹಾವ ಧೃತರಾಷ್ಟ್ರಸ್ಯ ರಾಷ್ಟ್ರಂ ಕೋಪಸಮನ್ವಿತಃ ॥2॥
ವೈಶಂಪಾಯನ ಬ್ರಾಹ್ಮಣರನ್ನು ಜೊತೆಗಿರಿಸಿಕೊಂಡು ಬಲರಾಮನು ಬಕಾಶ್ರಮಕ್ಕೆ ಹೋದನು. ಅಲ್ಲಿ ದಲ್ಭನ ಮಗನಾದ ಬಕನು ತಪಸ್ಸನ್ನು ಮಾಡಿದ್ದನು. ಹಿಂದೆ ಬಕನೆಂಬ ಮುನಿಯು ಧೃತರಾಷ್ಟ್ರನೆಂಬ ರಾಜನಲ್ಲಿ ಪಶುಗಳನ್ನು ಯಾಚಿಸಿದ್ದನು. ಧೃತರಾಷ್ಟ್ರನು ಉದಾಸೀನನಾಗಿದ್ದಾಗ ಮಹಾತಪಸ್ವಿಯಾದ ಬಕಮುನಿಯು ಕೋಪಗೊಂಡು ಆ ಧೃತರಾಷ್ಟ್ರನ ರಾಷ್ಟ್ರನಾಶ ಮಾಡುವ ಮೂಲಕ ಶರಣಾಗತನಾದ ರಾಜನಿಂದ ಪಶುಗಳನ್ನು ಪಡೆಯುವ ಉದ್ದೇಶದಿಂದ ಹೋಮವನ್ನು ಮಾಡಿದನು.
ತಪಸಾ ಘೋರರೂಪೇಣ ಕರ್ಶಯನ್ ದೇಹಮಾತ್ಮನಃ |
ಕ್ರೋಧೇನ ಮಹತಾಽಽವಿಷ್ಟೋ ಧರ್ಮಾತ್ಮಾ ವೈ ಪ್ರತಾಪವಾನ್ ॥3॥
ಭಯಂಕರವಾದ ತಪಸ್ಸಿನಿಂದ ತನ್ನ ದೇಹವನ್ನು ತೆಳ್ಳಗೆ ಮಾಡಿಕೊಂಡಿರುವ ಮಹಾತ್ಮನಾದ ಪ್ರತಾಪಿ ಬಕಮುನಿಯು ಬಹಳವಾಗಿ ಕೋಪಕ್ಕೊಳಗಾದನು.
ಪುರಾ ಹಿ ನೈಮಿಶೇಯಾನಾಂ ಸತ್ರೇ ದ್ವಾದಶವಾರ್ಷಿಕೇ |
ವೃತ್ತೇ ವೈಶ್ವಜಿತೋಽಂತೇ ವೈ ಪಾಂಚಾಲಾನೃಷಯೋಽಗಮನ್ |
ತತ್ರೇಶ್ವರಮಯಾಚಂತ ದಕ್ಷಿಣಾರ್ಥೇ ಮನೀಷಿಣಃ ॥4॥
ಹಿಂದೆ ನೈಮಿಷಕ್ಷೇತ್ರವಾಸಿಗಳಾದ ಋಷಿಗಳಿಂದ ಹನ್ನೆರಡು ವರ್ಷಗಳಲ್ಲಿ ನಡೆಯುವ ಸತ್ರವೊಂದು ನಡೆಯುತ್ತಿತ್ತು. ಅದರ ಒಂದು ಯಾಗವಾದ ಸರ್ವಸ್ವವನ್ನೂ ದಕ್ಷಿಣೆಯನ್ನಾಗಿ ಕೊಡುವ ವಿಶ್ವಜಿತ್ ಎಂಬ ಹೆಸರಿನ ಯಾಗದ ಕೊನೆಯಲ್ಲ ಜ್ಞಾನಿಗಳಾದ ಋಷಿಗಳು ಪಾಂಚಾಲದೇಶದ ರಾಜನನ್ನು ದಕ್ಷಿಣೆಗಾಗಿ ಬೇಡಿದರು.
ಬಲಾನ್ವಿತಾನ್ ವತ್ಸತರಾನ್ ನಿರ್ವ್ಯಾಧೀನ್ ಸಪ್ತವಿಂಶತಿಮ್ |
ತಾನಬ್ರವೀದ್ ಬಕೋ ದಾಲ್ಭ್ಯೋ ವಿಭಜಧ್ವಂ ಪಶೂನಿತಿ ॥5॥
ಪಶೂನೇತಾನಹಂ ತ್ಯಕ್ತ್ವಾ ಭಿಕ್ಷಿಷೇ ರಾಜಸತ್ತಮಮ್ ॥6॥
ಬಲಶಾಲಿಗಳಾದ, ರೋಗರಹಿತವಾದ ಇಪ್ಪತ್ತೇಳು ಒಂದುವರ್ಷದ ಉತ್ತಮ ಕರುಗಳನ್ನು ಪಾಂಚಾಲರಾಜನಿಂದ ಪಡೆದರು. ಆಗ ಉಳಿದ ಋಷಿಗಳಿಗೆ ದಲ್ಭನ ಮಗ ಬಕನು- ಈ ಹಸುಗಳನ್ನು ನೀವು ನಿಮ್ಮಲ್ಲಿಯೇ ವಿಭಾಗ ಮಾಡಿಕೊಳ್ಳಿ. ನನಗೆ ಈ ಹಸುಗಳು ಬೇಡ. ನಾನು ಬೇರೆ ರಾಜನಲ್ಲಿ ಬೇಡಿಕೊಳ್ಳುವೆನು ಎಂದು ಹೇಳಿದನು.
ಏವಮುಕ್ತ್ವಾ ಬಕೋ ರಾಜನ್ನೃಷೀನ್ ಸರ್ವಾನ್ ಪ್ರತಾಪವಾನ್ |
ಜಗಾಮ ಧೃತರಾಷ್ಟ್ರಸ್ಯ ಭವನಂ ಬ್ರಾಹ್ಮಣೋತ್ತಮಃ ॥7॥
ಹೀಗೆ ಪ್ರತಾಪಿಯಾದ ಬಕನು ಎಲ್ಲಾ ಋಷಿಗಳಿಗೆ ಹೇಳಿ ತಾನು ಧೃತರಾಷ್ಟ್ರನ ಅರಮನೆಗೆ ಹೋದನು.
ಸ ಸಮೀಪಂ ಗತೋ ಭೂತ್ವಾ ಧೃತರಾಷ್ಟ್ರಂ ನರೇಶ್ವರಮ್ |
ಅಯಾಚತ ಪಶೂನ್ ದಾಲ್ಭ್ಯಃ ಸ ಚೈನಂ ರುಷಿತೋಽಬ್ರವೀತ್ ॥8॥
ಯದೃಚ್ಛಯಾ ಮೃತಾ ದೃಷ್ಟ್ವಾ ಗಾಸ್ತದಾ ನೃಪಸತ್ತಮ ॥9॥
ಏತಾನ್ ಪಶೂನ್ ನಯ ಕ್ಷಿಪ್ರಂ ಬ್ರಹ್ಮಬಂಧೋ ಯದಿಚ್ಛಸಿ ॥10॥
ರಾಜನಾದ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ಬಕನು ಪಶುಗಳನ್ನು ಕೇಳಿದನು. ರಾಜನಾದರೂ ಅಕಸ್ಮಾತ್ತಾಗಿ ಸತ್ತುಹೋದ ಹಸುಗಳನ್ನು ನೋಡಿ, ಕೋಪದಿಂದ ಇವನಿಗೆ ಹೀಗೆ ಹೇಳುತ್ತಾನೆ - ``ಬ್ರಾಹ್ಮಣಾಧಮನೇ! ನೀನು ಪಶುಗಳನ್ನು ಬಯಸುವೆಯಾದರೆ ಈ ಸತ್ತುಹೋದ ಹಸುಗಳನ್ನು ತೆಗೆದುಕೊಂಡು ಹೋಗು'' ಎಂದು.
ವೈಶಂಪಾಯನಃ
ಋಷಿಸ್ತ್ವಥ ಬಕಃ ಕ್ರುದ್ಧಃ ಚಿಂತಯಾಮಾಸ ಧರ್ಮವಿತ್ ॥11॥
ವೈಶಂಪಾಯನ ಧರ್ಮಜ್ಞಾನಿಯಾದ ಬಕನು ಕೋಪದಿಂದ ಆಲೋಚನಾ ಮಗ್ನನಾದನು.
ಬಕಃ
ಅಹೋ ಬತ ನೃಶಂಸಂ ವೈ ವಾಕ್ಯಮುಕ್ತೋಽಸ್ಮಿ ಸಂಸದಿ ॥12॥
ಬಕ ಅಯ್ಯೋ! ಸಭಾಮಧ್ಯದಲ್ಲಿ ಎಂತಹ ಕ್ರೂರವಾದ ಮಾತನ್ನು ಕೇಳುತ್ತಿದ್ದೇನೆ!
ವೈಶಂಪಾಯನಃ
ಚಿಂತಯಿತ್ವಾ ಮುಹೂರ್ತೇನ ರೋಷಾವಿಷ್ಟೋ ದ್ವಿಜೋತ್ತಮಃ |
ಮತಿಂ ಚಕ್ರೇ ವಿನಾಶಾಯ ಧೃತರಾಷ್ಟ್ರಸ್ಯ ಭಾರತ ॥13॥
ವೈಶಂಪಾಯನ ಭಾರತನೇ! ಬ್ರಾಹ್ಮಣೋತ್ತಮನಾದ ಬಕನು ಕೋಪಾವಿಷ್ಟನಾಗಿ ಧೃತರಾಷ್ಟ್ರನ ನಾಶಕ್ಕೆ ನಿರ್ಧಾರವನ್ನು ಮಾಡಿದನು.
ಉತ್ಕೃತ್ಯ ತು ಮೃತಾ ಗಾ ವೈ ಮಾಂಸಾನಿ ದ್ವಿಜಸತ್ತಮಃ |
ಜುಹಾವ ಧೃತರಾಷ್ಟ್ರಸ್ಯ ರಾಷ್ಟ್ರಂ ನರಪತೇಃ ಪರಮ್ ॥14॥
ಬ್ರಾಹ್ಮಣೋತ್ತಮನಾದ ಬಕನು ಸತ್ತ ಹಸುಗಳ ಮಾಂಸವನ್ನು ಕಿತ್ತುತೆಗೆದು ರಾಜ ಧೃತರಾಷ್ಟ್ರನ ಉತ್ತಮವಾದ ರಾಷ್ಟ್ರವನ್ನು ನಾಶಮಾಡಲಿಕ್ಕಾಗಿ ಹೋಮಿಸಿದನು.
ಅವತೀರ್ಣಃ ಸರಸ್ವತ್ಯಾಃ ತೀರ್ಥೇ ಪ್ರಜ್ವಾಲ್ಯ ಪಾವಕಮ್ |
ಬಕೋ ದಾಲ್ಭ್ಯೋ ಮಹಾರಾಜ ಪರಮಂ ನಿಯಮಂ ಸ್ಥಿತಃ ॥15॥
ಸರಸ್ವತಿಯ ತೀರ್ಥದಲ್ಲಿ ದಾಲ್ಭ್ಯ ಬಕನು ಉತ್ತಮ ನಿಯಮಗಳಲ್ಲಿ ಇದ್ದುಕೊಂಡು ಅಗ್ನಿಯನ್ನು ಪ್ರಜ್ವಲನಗೊಳಿಸಿಕೊಂಡನು.
ಸ ತೈರೇವ ಜುಹಾವಾಗ್ನೌ ರಾಷ್ಟ್ರಂ ಮಾಂಸೈರ್ಮಹಾತಪಾಃ ॥16॥

ಮಹಾತಪಸ್ವಿಯಾದ ಬಕನು ಅದೇ ಹೋಮಾಗ್ನಿಯಲ್ಲಿ ಧೃತರಾಷ್ಟ್ರನ ರಾಷ್ಟ್ರದ ನಾಶಕ್ಕಾಗಿ ಆ ಗೋಮಾಂಸದಿಂದ ಹೋಮವನ್ನು ಮಾಡಿದನು.
ತಸ್ಮಿಂಸ್ತು ವಿಧಿವತ್ ಸತ್ರೇ ವರ್ತಮಾನೇ ಸುದಾರುಣೇ |
ಅಕ್ಷೀಯತ ತತೋ ರಾಷ್ಟ್ರಂ ಧೃತರಾಷ್ಟ್ರಸ್ಯ ಪಾರ್ಥಿವ ॥17॥
ರಾಜನೇ! ವಿಧ್ಯುಕ್ತವಾಗಿ ಆ ಭಯಂಕರವಾದ ಯಾಗವು ನಡೆಯಲು ಧೃತರಾಷ್ಟ್ರನ ರಾಷ್ಟ್ರವು ಕ್ಷೀಣಗೊಂಡಿತು.
ಛಿದ್ಯಮಾನಂ ಯಥಾ ಕಾಂತಂ ವನಂ ಪರಶುನಾ ತಥಾ |
ಬಭೂವಾಪಹೃತಂ ತಚ್ಚ ವ್ಯವಕೀರ್ಣಮಚೇತನಮ್ ॥18॥
ಮನೋಹರವಾದ ಕಾಡನ್ನು ಕೊಡಲಿಯಿಂದ ಕಡಿದಾಗ ಆ ಕಾಡು ಹೇಗಿರುತ್ತದೆಯೋ ಆ ರೀತಿಯಲ್ಲಿ ಧೃತರಾಷ್ಟ್ರನ ರಾಜ್ಯದಲ್ಲಿಯೂ ಎಲ್ಲವೂ ನಾಶವಾಯಿತು.
ದೃಷ್ಟ್ವಾ ತದವಕೀರ್ಣಂ ತು ರಾಜ್ಯಂ ಸ ಮನುಜಾಧಿಪಃ |
ಬಭೂವ ದುರ್ಮನಾ ರಾಜನ್ ಚಿಂತಯಾ ಪರಯಾನ್ವಿತಃ ॥19॥
ರಾಜನಾದ ಧೃತರಾಷ್ಟ್ರನು ತನ್ನ ರಾಜ್ಯವು ನಾಶವಾಗುತ್ತಿರುವುದನ್ನು ನೋಡಿ ಬಹಳ ಚಿಂತೆಗೊಳಗಾದನು ಮತ್ತು ಅವನ ಮನಸ್ಸು ಬಹಳ ದುಃಖವನ್ನು ಪಟ್ಟಿತು.
ಮೋಕ್ಷಾರ್ಥಮಕರೋದ್ ಯತ್ನಂ ಬ್ರಾಹ್ಮಣೈಃ ಸಹಿತಃ ಪುರಾ |
ನ ಚ ಶ್ರೇಯೋಽಭ್ಯಗಚ್ಚತ್ತು ಕ್ಷೀಯತೇ ರಾಷ್ಟ್ರಮೇವ ಯತ್ ॥20॥
ಈ ಕಷ್ಟದಿಂದ ಪಾರಾಗಲು ಬ್ರಾಹ್ಮಣರೊಡನೆ ಬಹಳ ಪ್ರಯತ್ನವನ್ನು ಮಾಡಿದರೂ ಅದರಲ್ಲಿ ಯಶಸ್ಸನ್ನು ಕಾಣಲಿಲ್ಲ. ಬದಲಾಗಿ ರಾಜ್ಯವು ಮತ್ತೂ ಕ್ಷೀಣಿಸತೊಡಗಿತು.
ಅಥಾಸೌ ಪಾರ್ಥಿವಃ ಖಿನ್ನಃ ತೇ ಚ ವಿಪ್ರಾಸ್ತದಾ ನೃಪ ॥21॥
ರಾಜನೇ! ಆಗ ಆ ಧೃತರಾಷ್ಟ್ರರಾಜ ಮತ್ತು ಬ್ರಾಹ್ಮಣರು ತುಂಬ ದುಃಖಕ್ಕೆ ಒಳಗಾದರು.
ಯದಾ ಚಾಪಿ ನ ಶಕ್ನೋತಿ ರಾಷ್ಟ್ರಂ ಮೋಚಯಿತುಂ ನೃಪಃ |
ಅಥ ವಿಪ್ರಶ್ನಿಕಾಂಸ್ತತ್ರ ಪಪ್ರಚ್ಛ ಜನಮೇಜಯ ॥22॥
ಯಾವಾಗ ಅವನತಿಯ ಕಡೆಗೆ ಹೋಗುತ್ತಿರುವ ತನ್ನ ರಾಷ್ಟ್ರವನ್ನು ರಕ್ಷಿಸಲು ರಾಜನು ಸಮರ್ಥನಾಗಲಿಲ್ಲವೋ ಆಗ ಅವನು ಜ್ಞಾನಿಗಳ ಬಳಿ ಇದಕ್ಕೆ ಕಾರಣವನ್ನೂ, ಅದರ ಪರಿಹಾರವನ್ನು  ಕೇಳುತ್ತಾನೆ.
ತತೋ ವಿಪ್ರಶ್ನಿಕಾಃ ಪ್ರಾಹುಃ ಪಶುವಿಪ್ರಕೃತಸ್ತ್ವಯಾ |
ಮಾಂಸೈರಥ ಜುಹೋತೀದಂ ತವ ರಾಷ್ಟ್ರಂ ಮುನಿರ್ಬಕಃ ॥23॥
ತೇನ ತೇ ಹೂಯಮಾನಸ್ಯ ರಾಷ್ಟ್ರಸ್ಯಾಸೀತ್ ಕ್ಷಯೋ ಮಹಾನ್ |
ತಸ್ಯ ತತ್ತಪಸಃ ಕರ್ಮ ಯೇನ ತೇ ಹ್ಯನಯೋ ಮಹಾನ್ ॥24॥
ಯದೀಚ್ಛಸಿ ಮಹಾಬಾಹೋ ಶಾಂತಿಂ ರಾಷ್ಟ್ರಸ್ಯ ಭೂಮಿಪ |
ಅಪಾಂ ಕೂಲೇ ಸರಸ್ವತ್ಯಾಃ ತಂ ಪ್ರಸಾದಯ ಪಾರ್ಥಿವ ॥25॥
`ಅವರು ರಾಜನಿಗೆ ಹೀಗೆ ಹೇಳಿದರು ನೀನು ಸತ್ತ ಹಸುಗಳನ್ನು ತೆಗೆದುಕೊಂಡು ಹೋಗು' ಎಂದು ಹೇಳಿ ಪಶುಗಳಿಂದ ಶಾಸ್ತ್ರವಿರುದ್ಧಕರ್ಮಗಳನ್ನು ಮಾಡಿರುವಿ. ಅದರ ಮಾಂಸದಿಂದಲೇ ಬಕಮುನಿಯು ರಾಷ್ಟ್ರನಾಶಕ್ಕಾಗಿ ಹೋಮವನ್ನು ಮಾಡುತ್ತಿದ್ದಾನೆ. ಆ ಕಾರಣದಿಂದಲೇ ನಿನ್ನ ರಾಷ್ಟ್ರವು ಅವನತಿಯನ್ನು ಹೊಂದುತ್ತಿದೆ. ನೀನು ದೊಡ್ಡದಾದ ಅನ್ಯಾಯವನ್ನು ಮಾಡಿರುವಿ. ಇದೆಲ್ಲವೂ ಬಕಮುನಿಯ ತಪಸ್ಸಿನ ಕಾರ್ಯ. ಮಹಾಬಾಹುವೇ! ರಾಜನೇ! ಒಂದು ಪಕ್ಷದಲ್ಲಿ ನೀನು ರಾಷ್ಟ್ರನಾಶವನ್ನು ಉಪಶಮನಗೊಳಿಸಲು ಇಚ್ಛಿಸುವಿಯಾದರೆ ರಾಜನೇ! ಸರಸ್ವತೀ ನದೀತೀರದಲ್ಲಿ ಅವನನ್ನು ಸಮಾಧಾನಪಡಿಸಿ ಅವನ ಅನುಗ್ರಹವನ್ನು ಸಂಪಾದಿಸು''.
ಸರಸ್ವತೀಂ ತತೋ ಗತ್ವಾ ಸ ರಾಜಾ ಬಕಮಬ್ರವೀತ್ |
ನಿಪತ್ಯ ಶಿರಸಾ ಭೂಮೌ ಪ್ರಾಂಜಲಿರ್ಭರತರ್ಷಭ ॥26॥
ಅನಂತರ ಧೃತರಾಷ್ಟ್ರನು ಸರಸ್ವತೀತೀರ್ಥಕ್ಕೆ ಹೋಗಿ ಬಕಮುನಿಯ ಮುಂದೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಕೈಜೋಡಿಸಿ ಅವನಿಗೆ ಹೀಗೆ ಹೇಳುತ್ತಾನೆ.
ರಾಜಾ
ಪ್ರಸಾದಯೇ ತ್ವಾಂ ಭಗವನ್ನಪರಾಧಂ ಕ್ಷಮಸ್ವ ಮೇ |
ಮಮ ದೀನಸ್ಯ ಲುಬ್ಧಸ್ಯ ಮೌರ್ಖ್ಯೇಣ ಹತಚೇತಸಃ ॥27॥
ರಾಜ ಪೂಜ್ಯನೇ! ನಿನ್ನನ್ನು ಸ್ತುತಿಸುತ್ತೇನೆ. ಲೋಭಿಯಾದ, ದೀನನಾದ ನಾನು ಬುದ್ಧಿಕೆಟ್ಟು ಮೂರ್ಖತನದಿಂದ ಮಾಡಿದ ಅಪರಾಧವನ್ನು ಕ್ಷಮಿಸು.
ತ್ವಂ ಗತಿಸ್ತ್ವಂ ಚ ಮೇ ನಾಥಃ ಪ್ರಸಾದಂ ಕರ್ತುಮರ್ಹಸಿ ॥28॥
ನನಗೆ ಗತಿಯೂ ನೀನೆ. ಸ್ವಾಮಿಯೂ ನೀನೆ. ನನ್ನ ಮೇಲೆ ಅನುಗ್ರಹವನ್ನು ಮಾಡು.
ವೈಶಂಪಾಯನಃ
ತಂ ತಥಾ ವಿಲಪಂತಂ ತು ಶೋಕೋಪಹತಚೇತಸಮ್ |
ದೃಷ್ಟ್ವಾ ತಸ್ಯ ಕೃಪಾ ಜಜ್ಞೇ ರಾಷ್ಟ್ರಂ ತಸ್ಯ ವ್ಯಮೋಚಯತ್ ॥29॥
ವೈಶಂಪಾಯನ ದುಃಖದಿಂದ ಮನಸ್ಸನ್ನು ಹಾಳುಮಾಡಿಕೊಂಡು ಅಳುತ್ತಿರುವ ರಾಜನನ್ನು ನೋಡಿ ಬಕಮುನಿಗೆ ಅವನ ಮೇಲೆ

ಕರುಣೆಯು ಉಂಟಾಯಿತು. ಅವನ ರಾಷ್ಟ್ರವನ್ನು ಅನವನತಿಯಿಂದ ಪಾರು ಮಾಡಿದನು.
ಋಷಿಃ ಪ್ರಸನ್ನಸ್ತಸ್ಯಾಸೀತ್ ಸಂರಂಭಂ ಚ ವಿಹಾಯ ಸಃ |
ಮೋಕ್ಷಾರ್ಥಂ ತಸ್ಯ ರಾಷ್ಟ್ರಸ್ಯ ಜುಹಾವ ಪುನರಾಹುತಿಮ್ ॥30॥
ಋಷಿಯು ತನ್ನ ಕೋಪವನ್ನು ಬಿಟ್ಟು ರಾಜನ ಮೇಲೆ ಪ್ರಸನ್ನನಾದನು. ರಾಷ್ಟ್ರದ ಕಷ್ಟನಿವಾರಣೆಗಾಗಿ ಮತ್ತೆ ಹೋಮವನ್ನು ಮಾಡಿದನು.
ಮೋಕ್ಷಯಿತ್ವಾ ತದಾ ರಾಷ್ಟ್ರಂ ಪ್ರತಿಗೃಹ್ಯ ತಥಾ ಪಶೂನ್ |
ಹೃಷ್ಟಾತ್ಮಾ ನೈಮಿಷಾರಣ್ಯಂ ಜಗಾಮ ಪುನರೇವ ಹ ॥31॥
ಹೀಗೆ ಬಕಮುನಿಯು ರಾಷ್ಟ್ರವನ್ನು ನಾಶದಿಂದ ಬಿಡುಗಡೆಗೊಳಿಸಿ, ತನಗೆ ಬೇಕಾದ ಪಶುಗಳನ್ನು ಸಂಗ್ರಹಿಸಿ, ಸಂತೋಷದಿಂದ ಪುನಃ ನೈಮಿಷಾರಣ್ಯಕ್ಕೆ ಹೋದನು.
ಧೃತರಾಷ್ಟ್ರೋಽಪಿ ಧರ್ಮಾತ್ಮಾ ಸ್ವಸ್ಥಚೇತಾ ಮಹಾಮನಾಃ |
ಸ್ವಮೇವ ನಗರಂ ರಾಜನ್ ಪ್ರವಿವೇಶ ಮಹರ್ದ್ಧಿಮತ್ ॥32॥
ಧರ್ಮಾತ್ಮನಾದ ಧೃತರಾಷ್ಟ್ರನು ಕೂಡ ಮನಸ್ಸಿನ ದುಗುಡವನ್ನು ಕಳೆದುಕೊಂಡು ಸಂತೋಷದಿಂದ, ಸಂಪತ್ತಿನಿಂದ ಭರಿತವಾದ ತನ್ನ ರಾಷ್ಟ್ರವನ್ನು ಪ್ರವೇಶಿಸಿದನು.
ತತ್ರ ತೀರ್ಥೇ ಮಹಾರಾಜ ಬೃಹಸ್ಪತಿರುದಾರಧೀಃ |
ಅಸುರಾಣಾಮಭಾವಾಯ ಭವಾಯ ಚ ದಿವೌಕಸಾಮ್ ॥33॥
ಮಾಂಸೈರಭಿಜುಹಾವೇಷ್ಟಿಮಕ್ಷೀಯಂತ ತತೋಽಸುರಾಃ |
ದೈವತ್ತೈರಭಿಸಂಭಗ್ನಾ ಜಿತಕಾಶಿಭಿರಾಹವೇ ॥34॥
ಅದೇ ತೀರ್ಥದಲ್ಲಿ ಮಹಾಜ್ಞಾನಿಯಾದ ಬೃಹಸ್ಪತಿಯು ಅಸುರರ ನಾಶ ಮತ್ತು ದೇವತೆಗಳ ಕ್ಷೇಮಕ್ಕಾಗಿ ಮಾಂಸದಿಂದ ಯಾಗವನ್ನು ಮಾಡಿದನು. ಅದರಿಂದಾಗಿ ಅಸುರರು ಕ್ಷೀಣಿಸಿದರು. ಯುದ್ಧದಲ್ಲಿ ಜಯಾಕಾಂಕ್ಷಿಗಳಾದ ದೇವತೆಗಳಿಂದ ಆ ದೈತ್ಯರು ಸೋತು ಹೋದರು.
ತತ್ರಾಪಿ ವಿಧಿವದ್ ದತ್ತತ್ವ ಬ್ರಾಹ್ಮಣೇಭ್ಯೋ ಮಹಾಯಶಾಃ |
ವಾಜಿನಃ ಕುಂಜರಾಂಶ್ಚೈವ ರಥಾಂಶ್ಚಾಶ್ವತರೀಯುತಾನ್ ॥35॥
ರತ್ನಾನಿ ಚ ಮಹಾರ್ಹಾಣಿ ಧನಂ ಧಾನ್ಯಂ ಚ ಪುಷ್ಕಲಮ್ |
ಯಯೌ ತೀರ್ಥಂ ಮಹಾರಾಜ ಯಾಯಾತಂ ಪೃಥಿವೀಪತೇ ॥36॥
ಆ ತೀರ್ಥದಲ್ಲಿಯೂ ಬಲರಾಮನು ವಿಧಿಪ್ರಕಾರವಾಗಿ ಬ್ರಾಹ್ಮಣರಿಗೆ ಆನೆಗಳನ್ನು, ಕುದುರೆಗಳನ್ನು, ಒಳ್ಳೆಯ ಅಶ್ವಗಳ ಸಹಿತವಾಗಿ ರಥಗಳನ್ನು, ಬೆಲೆಬಾಳುವ ರತ್ನಗಳನ್ನು, ಯಥೇಷ್ಟವಾಗಿ ಧಾನ್ಯಗಳನ್ನು ದಾನ ಮಾಡಿದನು. ರಾಜನೇ ಮುಂದೆ ಅಲ್ಲಿಂದ ಯಾಯಾತ ಎಂಬ ಇನ್ನೊಂದು ತೀರ್ಥಕ್ಕೆ ಹೋದನು.
ಯತ್ರ ಯಜ್ಞೇ ಯಯಾತೇಸ್ತು ಮಹಾರಾಜ ಸರಸ್ವತೀ |
ಸರ್ಪಿಃ ಪಯಶ್ಚ ಸುಸ್ರಾವ ನಾಹುಷಸ್ಯ ಮಹಾತ್ಮನಃ ॥37॥
ಮಹಾರಾಜ, ಆ ತೀರ್ಥದಲ್ಲಿ ಮಹಾತ್ಮನಾದ ನಹುಷನ ವಂಶದಲ್ಲಿ ಬಂದ ಯಯಾತಿಯ ಯಜ್ಞದಲ್ಲಿ ಸರಸ್ವತಿಯು ಹಾಲು-ತುಪ್ಪಗಳನ್ನು ಸುರಿಸಿದ್ದಳು.
ಯತ್ರೇಷ್ಟ್ವಾ ಪುರುಷವ್ಯಾಘ್ರ ಯಯಾತಿಃ ಪೃಥಿವೀಪತಿಃ |
ಆಕ್ರಾಮದೂರ್ಧ್ವಂ ತ್ವರಿತೋ ಲೇಭೇ ಕಾಮಾಂಶ್ಚ ಪುಷ್ಕಲಾನ್ ॥38॥
ಪುರುಷಶ್ರೇಷ್ಠನೇ! ರಾಜನಾದ ಯಯಾತಿಯು ಅಲ್ಲಿ ಯಾಗವನ್ನು ಮಾಡಿ ಶೀಘ್ರದಲ್ಲಿಯೇ ಉತ್ತಮಲೋಕವನ್ನು ಹೊಂದಿದನು ಮತ್ತು ತನ್ನ ಎಲ್ಲಾ ಕಾಮನೆಗಳನ್ನು ಚೆನ್ನಾಗಿ ಅನುಭವಿಸಿದನು
ಯಯಾತೇರ್ಯಜಮಾನಸ್ಯ ಯತ್ರ ರಾಜನ್ ಸರಸ್ವತೀ |
ಸರ್ಪೃತಾ ಪ್ರಯಯೌ ರಾಜನ್ ಬ್ರಾಹ್ಮಣಾನಾಂ ಮಹಾತ್ಮನಾಮ್ ॥39॥
ರಾಜನೇ! ಯಯಾತಿಯು ಯಜಮಾನನಾಗಿದ್ದ ಆ ಯಾಗದಲ್ಲಿ ಮಹಾತ್ಮರಾದ ಬ್ರಾಹ್ಮಣರಿಗಾಗಿ ಸರಸ್ವತಿಯು ತುಪ್ಪದಿಂದ ತುಂಬಿಕೊಂಡು ಹರಿದಳು.
ಯತ್ರ ಯತ್ರ ಹಿ ಯೋ ವಿಪ್ರೋ ಯಾನ್ ಯಾನ್ ಕಾಮಾನಭೀಪ್ಸತಿ |
ತತ್ರ ತತ್ರ ಸರಿಚ್ಛ್ರೇಷ್ಠಾ ಸಸರ್ಜ ಸುಬಹೂನ್ ರಸಾನ್ ॥40॥
ಎಲ್ಲೆಲ್ಲಿ ಬ್ರಾಹ್ಮಣನು ಏನೇನು ಕಾಮನೆಗಳನ್ನು ಅಪೇಕ್ಷಿಸುತ್ತಾನೆಯೋ ಉತ್ತಮನದಿಯಾದ ಸರಸ್ವತಿಯು ಅಲ್ಲಲ್ಲಿ ಬಹಳ ರಸಗಳನ್ನು ಸೃಷ್ಟಿ ಮಾಡುತ್ತಾಳೆ.
ತತ್ರ ದೇವಾಃ ಸಗಂಧರ್ವಾಃ ಪ್ರೀತಾ ಯಜ್ಞಸ್ಯ ಸಂಪದಾ |
ವಿಸ್ಮಿತಾ ಮಾನುಷಾ ಹ್ಯಾಸನ್ ದೃಷ್ಟ್ವಾ ತಾಂ ಯಜ್ಞಸಂಪದಮ್ ॥41॥
ಅಲ್ಲಿ ಯಜ್ಞದಿಂದುಂಟಾದ ಸಂಪತ್ತನ್ನು ನೋಡಿ ದೇವತೆಗಳು, ಗಂಧರ್ವರು ಮತ್ತು ಮನುಷ್ಯರು ಆಶ್ಚರ್ಯಗೊಂಡರು.
ತತಸ್ತಾಲಕೇತುರ್ಮಹಾಧರ್ಮಸೇತುಃ
ಮಹಾತ್ಮಾ ಕೃತಾತ್ಮಾ ಮಹಾದಾನನಿತ್ಯಃ |
ವಸಿಷ್ಠಾಪವಾಹಂ ಮಹಾಭೀಮವೇಗಂ
ಧೃತಾತ್ಮಾ ಜಿತಾತ್ಮಾ ಸಮಭ್ಯಾಜಗಾಮ ॥42॥

ಅನಂತರ ತಾಲಚಿಹ್ನೆಯ ಧ್ವಜವನ್ನು ಹೊಂದಿರುವ ಧರ್ಮರಕ್ಷಕನಾದ, ಮಹಾತ್ಮ ಬಲರಾಮನು ಬಹಳವೇಗದಿಂದ ಹರಿಯುತ್ತಿದ್ದ ವಸಿಷ್ಠಾಪವಾಹತೀರ್ಥಕ್ಕೆ ಬಂದನು. ಲರಾಮನು ನಿತ್ಯವೂ ಮಹಾದಾನಗಳನ್ನು ಮಾಡುತ್ತಿದ್ದನು. ತನ್ನ ಮಹತ್ಕಾರ್ಯಗಳಿಂದ ಕೃತಕೃತ್ಯನಾಗಿದ್ದನು. ಧರ್ಮವನ್ನು ಆಚರಿಸುತ್ತ, ಇಂದ್ರಿಯನಿಗ್ರಹವನ್ನು ಹೊಂದಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಗದಾಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ವಸಿಷ್ಠಾಪವಾಹತೀರ್ಥಕ್ಕೆ ಆ ಹೆಸರು ಬಂದ ರೀತಿಯ ವರ್ಣನೆ.
ಜನಮೇಜಯಃ
ವಸಿಷ್ಠಾಪವಾಹೋ ಬ್ರಹ್ಮನ್ ವೈ ಭೀಮವೇಗಃ ಕಥಂ ನು ಸಃ ।
ಕಿಮರ್ಥಂ ಚ ಸರಿಚ್ಛ್ರೇಷ್ಠಾ ತಮೃಷಿಂ ಪ್ರತ್ಯವಾಹಯತ್ ॥1॥
ಜನಮೇಜಯ ಬ್ರಹ್ಮಜ್ಞಾನಿಯೆ! ವಸಿಷ್ಠಾಪವಾಹತೀರ್ಥಕ್ಕೆ ಬಹಳವೇಗವು ಹೇಗೆ ಉಂಟಾಯಿತು? ಉತ್ತಮನದಿಯಾದ ಸರಸ್ವತಿಯು ಏಕೆ ಆ ಋಷಿಯನ್ನು ಸೆಳೆದೊಯ್ದಳು?
ಕೇನ ಚಾಪ್ಯಭವದ್ವೈರಂ ಕಾರಣಂ ಕಿಂ ಚ ತತ್ ಪ್ರಭೋ ।
ವದ ಪೃಷ್ಟೋ ಮಹಾಪ್ರಾಜ್ಞ ನ ಹಿ ತೃಪ್ಯಾಮಿ ತೇ ವಚಃ ॥2॥
ಪ್ರಭುವೇ! ಯಾರ ಜೊತೆಗೆ ವೈರವು ಉಂಟಾಯಿತು? ವೈರ ಹುಟ್ಟಲು ಕಾರಣವೇನು? ಮಹಾಜ್ಞಾನಿಯೇ! ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಕೊಡು. ಇಲ್ಲದಿದ್ದರೆ ನನಗೆ ತೃಪ್ತಿಯು ಉಂಟಾಗದು.
ವೈಶಂಪಾಯನಃ
ವಿಶ್ವಾಮಿತ್ರಸ್ಯ ಚೈವರ್ಷೇರ್ವಸಿಷ್ಠಸ್ಯ ಚ ಭಾರತ ।
ಭೃಶಂ ವೈರಮಭೂದ್ ರಾಜನ್ ತಪಃಸ್ಪರ್ಧಾಕೃತಂ ಮಹತ್ ॥3॥
ವೈಶಂಪಾಯನ ಭರತಕುಲೋದ್ಭವನೇ! ವಿಶ್ವಾಮಿತ್ರನಿಗೂ, ವಸಿಷ್ಠನಿಗೂ ಬಹಳವಾದ ದ್ವೇಷವು ಉಂಟಾಯಿತು. ರಾಜನೇ! ಅವರಲ್ಲಿ ಪರಸ್ಪರವಾಗಿ ತಪಸ್ಸಿನ ವಿಷಯದಲ್ಲಿ ಸ್ಪರ್ಧೆಯುಂಟಾಯಿತು.
ಆಶ್ರಮೋ ವೈ ವಸಿಷ್ಠಸ್ಯ ಸ್ಥಾಣುತೀರ್ಥೇಽಭವನ್ಮಹಾನ್ ।
ಪೂರ್ವತಃ ಪಶ್ಚಿಮಶ್ಚಾಸೀದ್ ವಿಶ್ವಾಮಿತ್ರಸ್ಯ ಧೀಮತಃ ॥4॥
ಸ್ಥಾಣುತೀರ್ಥದ ಪೂರ್ವಭಾಗದಲ್ಲಿ ವಸಿಷ್ಠನ ದೊಡ್ಡದಾದ ಆಶ್ರಮವಿತ್ತು. ಪಶ್ಚಿಮಭಾಗದಲ್ಲಿ ಬುದ್ಧಿವಂತನಾದ ವಿಶ್ವಾಮಿತ್ರನ ಆಶ್ರಮವು ಇತ್ತು.
ಯತ್ರ ಸ್ಥಾಣುರ್ಮಹಾರಾಜ ತಪ್ತವಾನ್ ಸುಮಹತ್ ತಪಃ ।
ಯತ್ರಾಸ್ಯ ಕರ್ಮ ತದ್ಘೋರಂ ಪ್ರವದಂತಿ ಮನೀಷಿಣಃ ॥5॥
ಆ ತೀರ್ಥದಲ್ಲಿಯೇ ಸ್ಥಾಣುವು ಬಹಳವಾದ ತಪಸ್ಸನ್ನು ಆಚರಿಸಿದ್ದನು. ಆ ತೀರ್ಥದಲ್ಲಿ ಜ್ಞಾನಿಗಳು ಆ ಸ್ಥಾಣುವಿನ ಘೋರವಾದ ಕಾರ್ಯಗಳನ್ನೂ ಹೇಳುತ್ತಾರೆ.
ಯತ್ರೇಷ್ಟ್ವಾ ಭಗವಾನ್ ಸ್ಥಾಣುಃ ಪೂಜಯಿತ್ವಾ ಸರಸ್ವತೀಮ್ ।
ಸ್ಥಾಪಯಾಮಾಸ ತತ್ತೀರ್ಥಂ ಸ್ಥಾಣುತೀರ್ಥಮಿತಿ ಪ್ರಭುಃ ॥6॥
ಈ ತೀರ್ಥದಲ್ಲಿಯೇ ಪೂಜ್ಯನಾದ ಸ್ಥಾಣುವು ಯಾಗವನ್ನು ಮಾಡಿ ಸರಸ್ವತಿಯನ್ನು ಪೂಜಿಸಿದನು. ಸಮರ್ಥನಾದ ಆತನು ಆ ತೀರ್ಥವನ್ನು ಸ್ಥಾಣುತೀರ್ಥವೆಂದು ಪ್ರಸಿದ್ಧಿಗೆ ತಂದನು.
ಯತ್ರ ಸರ್ವೇ ಸುರಾಃ ಸ್ಕಂದಮಭ್ಯಷಿಂಚನ್ ನರಾಧಿಪ ।
ಸೈನಾಪತ್ಯೇನ ತಂ ಸ್ಕಂದಂ ಸುರಾರಿವಿನಿಬರ್ಹಣಮ್ ॥7॥
ರಾಜನೇ! ಈ ತೀರ್ಥದಲ್ಲಿಯೇ ಎಲ್ಲಾ ದೇವತೆಗಳು ಅಸುರಸಂಹಾರಕನಾದ ಸ್ಕಂದನನ್ನು ದೇವಸೇನಾಧಿಪತಿಯನ್ನಾಗಿ ಅಭಿಷೇಕ ಮಾಡಿದರು.
ತಸ್ಮಿನ್ ಸಾರಸ್ವತೇ ತೀರ್ಥೇ ವಿಶ್ವಾಮಿತ್ರೋ ಮಹಾತಪಾಃ ।
ವಸಿಷ್ಠಂ ಚಾಲಯಾಮಾಸ ತಪಸೋಗ್ರೇಣ ತಚ್ಛೃಣು ॥8॥
ಸರಸ್ವತಿಯ ಆ ತೀರ್ಥದಲ್ಲಿ ಮಹಾತಪಸ್ವಿಯಾದ ವಿಶ್ವಾಮಿತ್ರನು ತನ್ನ ಉಗ್ರತಪಸ್ಸಿನಿಂದ ವಸಿಷ್ಠನನ್ನು ಅಲುಗಾಡಿಸಿದನು. ಅದನ್ನು ಕೇಳು.
ವಿಶ್ವಾಮಿತ್ರವಸಿಷ್ಠೌ ತಾವಹನ್ಯಹನಿ ಭಾರತ ।
ಸ್ಪರ್ಧಾಂ ತಪೋನ್ವಿತಾಂ ತೀವ್ರಾಂ ಚಕ್ರತುಸ್ತೌ ತಪೋಧನೌ ॥9॥
ಭಾರತ! ತಪಸ್ಸೇ ಸಂಪತ್ತಾಗಿ ಉಳ್ಳ ಆ ವಿಶ್ವಾಮಿತ್ರ ಮತ್ತು ವಸಿಷ್ಠರು ಪ್ರತಿದಿನವೂ ತಪಸ್ಸಿನಿಂದ ಕೂಡಿದ ತೀವ್ರವಾದ ಸ್ಪರ್ಧೆಯನ್ನುಮಾಡಿದರು.
ತತ್ರಾಪ್ಯಧಿಕಸಂತಪ್ತೋ ವಿಶ್ವಾಮಿತ್ರೋ ಮಹಾಮುನಿಃ ।
ದೃಷ್ಟ್ವಾ ತೇಜೋ ವಸಿಷ್ಠಸ್ಯ ಚಿಂತಾಮಭಿಜಗಾಮ ಹ ॥10॥
ಅದರಲ್ಲಿಯೂ ಬಹಳವಾಗಿ ತಪಸ್ಸಿನಿಂದ ಬೆಂದುಹೋದ ಮಹಾಮುನಿ ವಿಶ್ವಾಮಿತ್ರನು ವಸಿಷ್ಠನ ತೇಜಸ್ಸನ್ನು ನೋಡಿ

ಚಿಂತೆಗೊಳಗಾದನು.
ತಸ್ಯ ಬುದ್ಧಿರಿಯಂ ಚಾಸೀದ್ ಧರ್ಮನಿತ್ಯಸ್ಯ ಭಾರತ ॥11॥
ಭಾರತ! ಧರ್ಮನಿಷ್ಠನಾದ ವಿಶ್ವಾಮಿತ್ರನ ಬುದ್ಧಿಯು ಹೀಗೆ ಚಿಂತಿಸತೊಡಗಿತು.
ವಿಶ್ವಾಮಿತ್ರಃ
ಇಯಂ ಸರಸ್ವತೀ ತೂರ್ಣಂ ಮತ್ಸಮೀಪಂ ತಪೋಧನಮ್ ।
ಆನಯಿಷ್ಯತಿ ವೇಗೇನ ಜಪಂತಂ ಜಪತಾಂ ವರಮ್ ॥12॥
ವಿಶ್ವಾಮಿತ್ರ ಈ ಸರಸ್ವತಿನದಿಯು ಜಾಪಕರಲ್ಲಿ ಶ್ರೇಷ್ಠನಾದ, ತಪೋಧನನಾದ ವಸಿಷ್ಠನನ್ನು ನನಗಾಗಿ ಶೀಘ್ರದಲ್ಲಿ ಕರೆದುತರುತ್ತಾಳೆ.
ಇಹಾಗತಂ ದ್ವಿಜಶ್ರೇಷ್ಠಂ ಹನಿಷ್ಯಾಮಿ ನ ಸಂಶಯಃ ॥13॥
ಇಲ್ಲಿಗೆ ಬಂದ ಬ್ರಾಹ್ಮಣೋತ್ತಮನನ್ನು ನಾನು ಕೊಲ್ಲುವೆನು.
ವೈಶಂಪಾಯನಃ
ಏವಂ ನಿಶ್ಚಿತ್ಯ ಮನಸಾ ವಿಶ್ವಾಮಿತ್ರೋ ಮಹಾಮುನಿಃ ।
ಸಸ್ಮಾರ ಸರಿತಾಂ ಶ್ರೇಷ್ಠಾಂ ಕ್ರೋಧಸಂರಕ್ತಲೋಚನಃ ॥14॥
ವೈಶಂಪಾಯುನ ಹೀಗೆ ವಿಶ್ವಾಮಿತ್ರನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ಕೋಪದಿಂದ ಕಣ್ಣುಗುಡ್ಡೆಗಳನ್ನೂ ಕೆಂಪಾಗಿಸಿಕೊಂಡು ಉತ್ತಮನದಿಯಾದ ಸರಸ್ವತಿಯನ್ನು ಸ್ಮರಿಸಿದನು.
ಸಾ ಧ್ಯಾತಾ ಮುನಿನಾ ತೇನ ವ್ಯಾಕುಲತ್ವಂ ಜಗಾಮ ಹ ।
ಗತ್ವಾ ಚೈವ ಮಹಾವೀರ್ಯಂ ಮಹಾಕೋಪಂ ಚ ಭಾಮಿನೀ ॥15॥
ವಿಶ್ವಾಮಿತ್ರಮುನಿಯು ಹೀಗೆ ಧ್ಯಾನಮಾಡಿದಾಗ ಸರಸ್ವತಿಯು ಅವನಿಂದಾಗಿ ದುಗುಡಕ್ಕೆ ಒಳಗಾದಳು. ಸರಸ್ವತಿಯು ಮಹಾವೀರನಾದ ಕೋಪಿಷ್ಠ ವಿಶ್ವಾಮಿತ್ರನನ್ನು ಭೇಟಿಯಾದಳು.
ತದಾ ತಂ ವೇಪಮಾನಾಂಗೀ ವಿವರ್ಣಾ ಪ್ರಾಂಜಲಿರ್ಭೃಶಮ್ ।
ಉಪತಸ್ಥೇ ಮುನಿವರಂ ವಿಶ್ವಾಮಿತ್ರಂ ಸರಸ್ವತೀ ॥16॥
ಕಳೆಗುಂದಿದ ಮುಖವುಳ್ಳ, ಮೈಯು ನಡುಗುತ್ತಿರುವ ಸರಸ್ವತಿಯು ಕೈಯನ್ನು ಮುಗಿದುಕೊಂಡು ಮುನಿಶ್ರೇಷ್ಠನಾದ ವಿಶ್ವಾಮಿತ್ರರನ್ನು ಸೇವಿಸಿದಳು.
ಹತವೀರಾ ಯಥಾ ನಾರೀ ದುಃಖಿತಾ ಸಾಽಭವದ್ ಭೃಶಮ್ ।
ಬ್ರೂಹಿ ಕಿಂ ಕರವಾಣೀತಿ ಪ್ರೋವಾಚ ಮುನಿಸತ್ತಮಮ್ ॥17॥
ವೀರನಾದ ಪತಿಯನ್ನು ಕಳೆದುಕೊಂಡ ಸ್ತ್ರೀಯ ಹಾಗೆ ಸರಸ್ವತಿಯು ಬಹಳವಾಗಿ ದುಃಖಿತಳಾದಳು. ಮುನಿಶ್ರೇಷ್ಠನಿಗೆ ``ನಾನೇನು ಮಾಡಲಿ?'' ಎಂದು ಕೇಳಿದಳು.
ತಾಮುವಾಚ ತತಃ ಕ್ರುದ್ಧೋ ವಸಿಷ್ಠಂ ಶೀಘ್ರಮಾನಯ ।
ಯಾವದೇನಂ ನಿಹನ್ಮ್ಯದ್ಯ ತಚ್ಛ್ರುತ್ವಾ ವ್ಯಥಿತಾ ನದೀ ॥18॥
ಕೋಪಗೊಂಡಿದ್ದ ವಿಶ್ವಾಮಿತ್ರನು ಅವಳಿಗೆ ಹೇಳುತ್ತಾನೆ, ``ನಾನು ವಸಿಷ್ಠನನ್ನು ಕೊಲ್ಲಬೇಕು. ಅದಕ್ಕಾಗಿ ವಸಿಷ್ಠನನ್ನು ಬೇಗನೇ ಕರೆದುಕೊಂಡು ಬಾ'' ಎಂದು. ಇದನ್ನು ಕೇಳಿದ ಸರಸ್ವತಿಯು ಬಹಳವಾಗಿ ಮರುಕಪಟ್ಟಳು.
ಸಾಽಂಜಲಿಂ ತು ತದಾ ಕೃತ್ವಾ ಪುಂಡರೀಕನಿಭೇಕ್ಷಣಾ ।
ಪ್ರಾಕಂಪತ ಭೃಶಂ ಭೀತಾ ವಾಯುನೇವಾಹತಾ ಲತಾ ॥19॥
ಕಮಲದ ಹಾಗೆ ಕಣ್ಣುಳ್ಳ ಸರಸ್ವತಿಯು ಕೈಗಳನ್ನು ಮುಗಿದುಕೊಂಡು, ಗಾಳಿಗೆ ನಡುಗುವ ಬಳ್ಳಿಯಂತೆ ಭಯದಿಂದಾಗಿ ತುಂಬಾ ನಡುಗಿಹೋದಳು.
ತಥಾಗತಾಂ ತು ತಾಂ ದೃಷ್ಟ್ವಾ ವೇಪಮಾನಾಂ ಕೃತಾಂಜಲಿಮ್ ।
ಅವಿಚಾರಂ ವಸಿಷ್ಠಂ ತ್ವಮಾನಯ ಸ್ವಾಂತಿಕಂ ಮಮ ॥20॥
ಹಾಗೆ ಬಂದು ನಡುಗುತ್ತಾ ಕೈಮುಗಿದುಕೊಂಡಿದ್ದ ಸರಸ್ವತಿಯನ್ನು ನೋಡಿದ ವಿಶ್ವಾಮಿತ್ರನು ``ಯಾವುದೇ ವಿಚಾರವನ್ನು ಮಾಡದೆ ನೀನು ವಸಿಷ್ಠನನ್ನು ಕರೆದುಕೊಂಡು ನನ್ನ ಬಳಿಗೆ ಬಾ'' ಎಂದು ಹೇಳಿದನು.
ಸಾ ತಸ್ಯ ವಚನಂ ಶ್ರುತ್ವಾ ಗತ್ವಾ ಪಾಪಂ ಚಿಕೀರ್ಷಿತಮ್ ।
ವಸಿಷ್ಠಸ್ಯ ಪ್ರಭಾವಂ ಚ ಜಾನಂತ್ಯಪ್ರತಿಮಂ ಭುವಿ ॥21॥
ವಿಶ್ವಾಮಿತ್ರನ ಮಾತನ್ನು ಕೇಳಿದ ಸರಸ್ವತಿಯು ತಾನು ಮಾಡಹೊರಟ ಪಾಪಕರ್ಮವನ್ನೂ, ಭೂಮಿಯಲ್ಲಿ ವಸಿಷ್ಠರ ಅಸದೃಶವಾದ ಪ್ರಭಾವವನ್ನೂ ತಿಳಿದಿದ್ದಳು. ಅಲ್ಲಿಂದ ಆಕೆ ಹೊರಟಳು.
ಸಾಽಭಿಗಮ್ಯ ವಸಿಷ್ಠಂ ಚ ಇಮಮರ್ಥಮಚೋದಯತ್ ।
ಯದುಕ್ತಾ ಸರಿತಾಂ ಶ್ರೇಷ್ಠಾ ವಿಶ್ವಾಮಿತ್ರೇಣ ಧೀಮತಾ ॥22॥
ವಸಿಷ್ಠರ ಮುಂದೆ ಬಂದ ಸರಸ್ವತಿಯು ಬುದ್ಧಿವಂತನಾದ ವಿಶ್ವಾಮಿತ್ರನು ಏನನ್ನು ಹೇಳಿದ್ದನೋ ಆ ವಿಷಯವನ್ನು ಹೇಳಿದಳು.
ಉಭಯೋಃ ಶಾಪಯೋರ್ಭೀತಾ ವೇಪಮಾನಾ ಪುನಃ ಪುನಃ ।
ಚಿಂತಯಿತ್ವಾ ಮಹಾಶಾಪಮೃಷಿಭ್ಯಾಂ ತ್ರಾಸಿತಾ ಭೃಶಮ್ ॥23॥
ವಸಿಷ್ಠ-ವಿಶ್ವಾಮಿತ್ರರ ಶಾಪಕ್ಕೆ ಹೆದರಿದ ಸರಸ್ವತಿಯು ಮತ್ತೆ ಮತ್ತೆ ನಡುಗತೊಡಗಿದಳು. ಋಷಿಗಳು ಕೊಡಬಹುದಾದ ಮಹಾಶಾಪಗಳನ್ನು ನೆನೆದು ನೆನೆದು ಬಹಳ ಆಯಾಸಗೊಂಡಳು.
ತಾಂ ಕೃಶಾಂ ಚ ವಿವರ್ಣಾಂ ಚ ದೃಷ್ಟ್ವಾ ಚಿಂತಾಸಮನ್ವಿತಾಮ್ ।

ಉವಾಚ ರಾಜನ್ ಧರ್ಮಾತ್ಮಾ ವಸಿಷ್ಠಃ ಸುಮಹಾತಪಾಃ ॥24॥
ರಾಜನೇ! ದುಃಖದಿಂದ ಕೃಶಳಾದ ಕಳೆಗುಂದಿದ ಮುಖವುಳ್ಳ ಹಾಗೂ ಚಿಂತೆಗೊಳಗಾದ ಸರಸ್ವತಿಯನ್ನು ನೋಡಿದ ಮಹಾತಪಸ್ವಿಯಾದ, ಧಾರ್ಮಿಕ ವ್ಯಕ್ತಿಯಾದ ವಸಿಷ್ಠನು ಹೀಗೆ ಹೇಳಿದನು.
ವಸಿಷ್ಠಃ
ತ್ರಾಹ್ಯಾತ್ಮಾನಂ ಸರಿಚ್ಛ್ರೇಷ್ಠೇ ವಹ ಮಾಂ ಶೀಘ್ರಗಾಮಿನೀ |
ವಿಶ್ವಾಮಿತ್ರಃ ಶಪೇದ್ಧಿ ತ್ವಾಂ ಮಾ ಕೃಥಾಸ್ತ್ವಂ ವಿಚಾರಣಾಮ್ ॥25॥
ವಸಿಷ್ಠ ಶ್ರೇಷ್ಠಳಾದ ನದಿಯೇ! ನೀನು ವೇಗವಾಗಿ ಹರಿಯುವವಳು. ನನ್ನನ್ನು ರಕ್ಷಿಸು. ನನ್ನನ್ನು ಕರೆದುಕೊಂಡು ಹೋಗು. ಇದರ ಬಗ್ಗೆ ವಿಚಾರ ಮಾಡಬೇಡ. ವಿಶ್ವಾಮಿತ್ರನು ನಿನ್ನನ್ನು ಶಪಿಸಿಯಾನು.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಕೃಪಾಶೀಲಸ್ಯ ವೈ ಸರಿತ್ |
ಚಿಂತಯಾಮಾಸ ಕೌರವ್ಯ ಕಿಂ ಕೃತ್ವಾ ಸುಕೃತಂ ಭವೇತ್ ॥26॥
ವೈಶಂಪಾಯನ ಕರುಣಾಸ್ವಭಾವನಾದ ವಸಿಷ್ಠನ ಮಾತನ್ನು ಕೇಳಿದ ಸರಸ್ವತಿ ನದಿಯು ಏನು ಮಾಡಿದರೆ ಒಳ್ಳೆಯದಾಗುವುದು ಎಂದು ವಿಚಾರ ಮಾಡಿದಳು.
ತಸ್ಯಾಶ್ಚಿಂತಾ ಸಮುತ್ಪನ್ನಾ ವಸಿಷ್ಠೋ ಮಯ್ಯತೀವ ಹಿ |
ಕೃತವಾನ್ ಹಿ ದಯಾ ನಿತ್ಯಂ ತಸ್ಯ ಕಾರ್ಯಂ ಹಿತಂ ಮಯಾ ॥27॥
ಅವಳು ಆಲೋಚಿಸತೊಡಗಿದಳು, ವಸಿಷ್ಠನು ನನ್ನಲ್ಲಿ ಬಹಳ ದಯೆಯನ್ನು ತೋರಿಸಿದ್ದಾನೆ. ಅವನಿಗೆ ನಾನು ಹಿತವನ್ನೇ ಮಾಡಬೇಕು.
ಅಥ ಕೂಲೇ ಸ್ವಕೇ ರಾಜನ್ ಜಪಂತಮೃಷಿಸತ್ತಮಮ್ |
ಜುಹ್ವಾನಂ ಕೌಶಿಕಂ ದೃಷ್ಟ್ವಾ ಸರಸ್ವತ್ಯಭ್ಯಚಿಂತಯತ್ ॥28॥
ರಾಜನೇ! ಅನಂತರ ತನ್ನ ತೀರದಲ್ಲಿ ಕುಳಿತು ಜಪಮಾಡುತ್ತಾ ಹೋಮಿಸುತ್ತಿದ್ದ ವಿಶ್ವಾಮಿತ್ರನನ್ನು ನೋಡಿ ಹೀಗೆ ಆಲೋಚಿಸಿದಳು.
ಇದಮಂತರಮಿತ್ಯೇವ ತತಃ ಸಾ ಸರಿತಾಂ ವರಾ |
ಕೂಲಾಪಹಾರಮಕರೋತ್ ಸ್ವೇನ ವೇಗೇನ ಭಾರತ ॥29॥
ಭಾರತ! ಇದೇ ಅವಕಾಶವೆಂದು ತಿಳಿದು ಆ ಸರಸ್ವತಿಯು ವೇಗವಾಗಿ ಹರಿದು ತನ್ನ ತೀರವನ್ನು ಕೊಚ್ಚಿಕೊಂಡು ಹೋದಳು.
ಕೂಲಾಪಹಾರೇಣ ತೇನ ಮೈತ್ರಾವರುಣಿರೌಹ್ಯತ |
ಉಹ್ಯಮಾನಶ್ಚ ತುಷ್ಟಾವ ತದಾ ರಾಜನ್ ಸರಸ್ವತೀಮ್ ॥30॥
ತೀರವನ್ನು ಕೊಚ್ಚಿಕೊಂಡು ಹೋದಾಗ ವಸಿಷ್ಠನು ಕೂಡ ಜೊತೆಗೆ ಹೋದನು. ರಾಜನೇ! ಪ್ರವಾಹದಲ್ಲಿ ಹೋಗುತ್ತಿದ್ದ ವಸಿಷ್ಠನು ಸರಸ್ವತಿಯನ್ನು ಸ್ತುತಿಸಿದನು.
ಪಿತಾಮಹಸ್ಯ ಸರಸಃ ಪ್ರವೃತ್ತಾಽಸಿ ಸರಸ್ವತಿ |
ವ್ಯಾಪ್ತಂ ಚೇದಂ ಜಗತ್ಸರ್ವಂ ತವೈವಾಂಭೋಭಿರುತ್ತಮೈಃ ॥31॥
ಪಿತಾಮಹ ಬ್ರಹ್ಮನ ಸರೋವರದಿಂದ ಹರಿದು ಬಂದವಳಾಗಿದ್ದೀಯ! ನಿನ್ನ ಉತ್ತಮವಾದ ನೀರಿನಿಂದ ಇಡಿ ಜಗತ್ತು ವ್ಯಾಪ್ತವಾಗಿದೆ.
ತ್ವಮೇವಾಕಾಶಗಾ ದೇವಿ ಮೇಘೇಷೂತ್ಸೃಜತೇ ಪಯಃ |
ಸರ್ವಾಶ್ಚಾಪಸ್ತ್ವಮೇವೇತಿ ಯಥಾ ವಯಮಧೀಮಹೇ ॥32॥
ದೇವಿಯೇ! ನೀನೇ ಆಕಾಶದಲ್ಲಿದ್ದುಕೊಂಡು ಮೇಘದ ಮೂಲಕ ನೀರನ್ನು ಸುರಿಸುವಿ. ಲೋಕದಲ್ಲಿ ಕಾಣಿಸುವ ಎಲ್ಲಾ ನೀರೂ ನಿನ್ನದೇ ಎಂದು ನಾವು ತಿಳಿದಿದ್ದೇವೆ.
ಬುದ್ಧಿಃ ಪುಷ್ಟಿಸ್ತಥಾ ಕೀರ್ತಿಃ ಸಿದ್ಧಿರ್ವೃದ್ಧಿರ್ಯಥಾ ತಥಾ |
ತ್ವಮೇವ ವಾಣೀ ತ್ವಂ ಸ್ವಾಹಾ ತ್ವಯ್ಯಾಯತ್ತಮಿದಂ ಜಗತ್ ॥33॥
ಬುದ್ಧಿ, ಪುಷ್ಟಿ, ಕೀರ್ತಿ, ಸಿದ್ಧಿ, ವೃದ್ಧಿ, ವಾಣಿ, ಸ್ವಾಹಾ ಹೀಗೆ ಎಲ್ಲಾ ಜಗತ್ತೂ ನಿನ್ನ ಅಧೀನ.
ತ್ವಮೇವ ಸರ್ವಭೂತೇಷು ವಸಸೀಹ ಚತುರ್ವಿಧಾ ॥34॥
ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ವಿಭಾಗಗಳಲ್ಲಿ ನೀನೇ ಎಲ್ಲಾ ಭೂತಗಳಲ್ಲಿ ವಾಸ ಮಾಡುತ್ತಿರುವಿ.
ವೈಶಂಪಾಯನಃ
ಏವಂ ಸರಸ್ವತೀ ರಾಜನ್ ಸ್ತುತಾ ತೇನ ಮಹಾತ್ಮನಾ |
ವೇಗೇನೋವಾಹ ತಂ ವಿಪ್ರಂ ವಿಶ್ವಾಮಿತ್ರಾಶ್ರಮಂ ಪ್ರತಿ ॥35॥
ವೈಶಂಪಾಯನ ರಾಜನೇ! ಮಹಾತ್ಮನಾದ ವಸಿಷ್ಠನು ಹೀಗೆ ಸ್ತುತಿಸುತ್ತಿರಲು ಸರಸ್ವತಿಯು ವೇಗವಾಗಿ ಅವನನ್ನು ವಿಶ್ವಾಮಿತ್ರನ ಆಶ್ರಮದ ಕಡೆಗೆ ಕರೆದೊಯ್ದಳು.
ನ್ಯವೇದಯತ ಚಾಭೀಕ್ಷ ್ಣಂ ವಿಶ್ವಾಮಿತ್ರಾಯ ತಂ ಮುನಿಮ್ ॥36॥
ಕೂಡಲೇ ವಸಿಷ್ಠಮುನಿಯನ್ನು ವಿಶ್ವಾಮಿತ್ರನಿಗೆ ನಿವೇದಿಸಿದಳು.
ತಮಾನೀತಂ ಸರಸ್ವತ್ಯಾ ದೃಷ್ಟ್ವಾ ಕೋಪಸಮನ್ವಿತಃ |
ಅಥಾನ್ವೇಷತ್ ಪ್ರಹರಣಂ ವಸಿಷ್ಠಾಂತಕರಂ ತದಾ ॥37॥
ಸರಸ್ವತಿಯು ವಸಿಷ್ಠನನ್ನು ಕರೆದುಕೊಂಡು ಬಂದಿದ್ದನ್ನು ನೋಡಿ ಕುಪಿತನಾದ ವಿಶ್ವಾಮಿತ್ರನು ವಸಿಷ್ಠನನ್ನು ಕೊಲ್ಲಲು ಆಯುಧವನ್ನು ಹುಡುಕಿದನು.

ತಂ ಚ ಕ್ರುದ್ಧಮಭಿಪ್ರೇಕ್ಷ್ಯ ಬ್ರಹ್ಮಹತ್ಯಾಭಯಾನ್ನದೀ |
ಅಪೋವಾಹ ವಸಿಷ್ಠಂ ತು ಪ್ರಾಚೀಂ ದಿಶಮತಂದ್ರಿತಾ ॥38॥
ಕುಪಿತನಾದ ವಿಶ್ವಾಮಿತ್ರನನ್ನು ನೋಡಿದ ಸರಸ್ವತಿಯು, ಅವನಿಗೆ ಬರಬಹುದಾದ ಬ್ರಹ್ಮಹತ್ಯಾದೋಷವನ್ನು ಗಮನಿಸಿ, ಯಾವುದೇ ಔದಾಸೀನ್ಯಕ್ಕೆ ಒಳಗಾಗದೆ ವಸಿಷ್ಠನನ್ನು ಪೂರ್ವದಿಕ್ಕಿಗೆ ಕರೆದೊಯ್ದಳು.
ಉಭಯೋಃ ಕುರ್ವತೀ ವಾಕ್ಯಂ ವಂಚಯಿತ್ವಾ ಚ ಗಾಧಿಜಮ್ ॥39॥
ಹೀಗೆ ಸರಸ್ವತಿಯು ವಸಿಷ್ಠ ಮತ್ತು ವಿಶ್ವಾಮಿತ್ರ ಇವರೀರ್ವರ ಮಾತನ್ನೂ ನಡೆಸಿದಳು. ಆದರೆ ಈ ಮೂಲಕ ವಿಶ್ವಾಮಿತ್ರನನ್ನು ವಂಚಿಸಿ ವಸಿಷ್ಠನನ್ನು ರಕ್ಷಿಸಿದಳು.
ತತೋಽಪವಾಹಿತಂ ದೃಷ್ಟ್ವಾ ವಸಿಷ್ಠಮೃಷಿಸತ್ತಮಮ್ |
ಅಬ್ರವೀದಥ ಸಂಕ್ರುದ್ಧೋ ವಿಶ್ವಾಮಿತ್ರಃ ಸರಸ್ವತೀಮ್ ॥40॥
ಪ್ರವಾಹದಲ್ಲಿ ತೇಲಿಹೋದ ಋಷಿಶ್ರೇಷ್ಠನಾದ ವಸಿಷ್ಠನನ್ನು ನೋಡಿ ಕೋಪಗೊಂಡ ವಿಶ್ವಾಮಿತ್ರನು ಸರಸ್ವತಿಗೆ ಹೀಗೆ ಹೇಳುತ್ತಾನೆ.
ವಿಶ್ವಾಮಿತ್ರಃ
ಯಸ್ಮಾತ್ ತ್ವಂ ಸರಿತಾಂ ಶ್ರೇಷ್ಠೇ ವಂಚಯಿತ್ವಾ ಪುನರ್ಗತಾ |
ಶೋಣಿತಂ ವಹ ಕಲ್ಯಾಣಿ ರಾಕ್ಷಸಾನಾಂ ಚ ಸಮ್ಮತಮ್ ॥41॥
ವಿಶ್ವಾಮಿತ್ರ ನದಿಗಳಲ್ಲಿಯೇ ಶ್ರೇಷ್ಠಳಾದ ಸರಸ್ವತಿಯೇ! ಮಂಗಳಕರಳೇ! ನೀನು ನನಗೆ ಮೋಸಮಾಡಿ ಹೋಗಿರುವುದರಿಂದ ನೀನು ರಾಕ್ಷಸರಿಗೆ ಇಷ್ಟವಾದ ರಕ್ತದ ಪ್ರವಾಹವನ್ನು ಹರಿಸು.
ತತಃ ಸರಸ್ವತೀ ಶಪ್ತಾ ವಿಶ್ವಾಮಿತ್ರೇಣ ಧೀಮತಾ |
ಅವಹಚ್ಚೋಣಿತೋನ್ಮಿಶ್ರಂ ತೋಯಂ ಸಂವತ್ಸರಂ ತದಾ ॥42॥
ಜ್ಞಾನಿಯಾದ ವಿಶ್ವಾಮಿತ್ರರು ಸರಸ್ವತಿಯನ್ನು ಶಪಿಸಿದಾಗ ಶಾಪಗ್ರಸ್ತಳಾದ ಸರಸ್ವತಿಯು ಒಂದು ವರ್ಷದ ಕಾಲ ರಕ್ತದಿಂದ ಕೂಡಿದ ನೀರನ್ನು ಹರಿಸಿದಳು.
ಅಥರ್ಷಯಶ್ಚ ದೇವಾಶ್ಚ ಗಂಧರ್ವಾಪ್ಸರಸಸ್ತದಾ |
ಸರಸ್ವತೀಂ ತಥಾ ದೃಷ್ಟ್ವಾ ಬಭೂವುರ್ಭೃಶದುಃಖಿತಾಃ ॥43॥
ಋಷಿಗಳು, ದೇವತೆಗಳು, ಗಂಧರ್ವರು, ಅಪ್ಸರೆಯರು ಇವರೆಲ್ಲಾ ಈ ರೀತಿಯಲ್ಲಿ ರಕ್ತವನ್ನು ಹರಿಸುವ ಸರಸ್ವತಿಯನ್ನು ನೋಡಿ ಬಹಳ ದುಃಖಪಟ್ಟರು.
ಏವಂ ವಸಿಷ್ಠೋಽಪಹೃತಃ ಶೀಘ್ರಾದ್ ಯಾತೋ ಜನಾಧಿಪ |
ಆಗಚ್ಛಚ್ಚ ತತೋ ಮಾರ್ಗಂ ಸ್ವಮೇವ ಸರಿತಾಂ ವರಾ ॥44॥
ರಾಜನೇ! ಹೀಗೆ ವಸಿಷ್ಠನು ತಕ್ಷಣ ಅಲ್ಲಿಂದ ಇನ್ನೊಂದೆಡೆ ತೆಗೆದು ಹೋಗಲ್ಪಟ್ಟನು. ಅನಂತರ ಸರಸ್ವತಿಯು ತನ್ನ ಮಾರ್ಗದಲ್ಲಿಯೇ ಹರಿಯತೊಡಗಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ವಸಿಷ್ಠಾಪವಾಹೋ ನಾಮ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ವಿಶ್ವಾಮಿತ್ರನ ಶಾಪದಿಂದ ರಕ್ತಸಿಕ್ತಳಾದ ಸರಸ್ವತಿಯನ್ನು ಋಷಿಗಳು ತಮ್ಮ ತಪಸ್ಸಿನ ಪ್ರಭಾವದಿಂದ ಶುದ್ಧಿಮಾಡಿದ್ದು. ಸರಸ್ವತಿ ಮತ್ತು ಅರುಣರ ಸಂಗಮಸ್ಥಳದಲ್ಲಿ ಯಾಗಮಾಡಿ ಇಂದ್ರನು ತನ್ನ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿಕೊಂಡಿದ್ದು. ಬಲರಾಮನು ಅಲ್ಲಿ ಸ್ನಾನಾದಿಗಳನ್ನು ಮಾಡಿ ಅಲ್ಲಿಂದ ಸೋಮತೀರ್ಥಕ್ಕೆ ಹೋದದ್ದು.
ವೈಶಂಪಾಯನಃ
ಸಾ ಶಪ್ತಾ ತೇನ ಕ್ರುದ್ಧೇನ ವಿಶ್ವಾಮಿತ್ರೇಣ ಧೀಮತಾ |
ತಸ್ಮಿಂಸ್ತೀರ್ಥವರೇ ಶುಭ್ರೇ ಶೋಣಿತಂ ಸಮುಪಾವಹತ್ ॥1॥
ವೈಶಂಪಾಯನ ಕೋಪಗೊಂಡ, ಜ್ಞಾನಿಯಾದ ವಿಶ್ವಾಮಿತ್ರನ ಶಾಪಕ್ಕೊಳಗಾದ ಸರಸ್ವತಿಯು ಪರಿಶುಭ್ರವಾದ ಆ ಉತ್ತಮತೀರ್ಥದಲ್ಲಿ ರಕ್ತವನ್ನು ಹರಿಸಿದಳು.
ಅಥಾಜಗ್ಮುಸ್ತತೋ ರಾಜನ್ ರಾಕ್ಷಸಾಸ್ತತ್ರ ಭಾರತ |
ತತಸ್ತೇ ಶೋಣಿತಂ ಸರ್ವೇ ಪಿಬಂತಃ ಸಮುಪಾಸತೇ ॥2॥
ಭಾರತನೇ! ರಾಜನೇ! ಅನಂತರ ಅಲ್ಲಿ ರಾಕ್ಷಸರು ಬಂದು ರಕ್ತವನ್ನು ಕುಡಿಯುತ್ತಾ ಸರಸ್ವತಿಯನ್ನು ಸೇವಿಸಿದರು.
ತೃಪ್ತಾಶ್ಚ ಸುಭೃಶಂ ತೇನ ಸುಖಿನೋ ವಿಗತಜ್ವರಾಃ |
ನೃತ್ಯಂತಶ್ಚ ಹಸಂತಶ್ಚ ಯಥಾ ಸ್ವರ್ಗಜಿತೋ ನರಾಃ ॥3॥
ಅದರಿಂದ ತುಂಬಾ ತೃಪ್ತಿಯನ್ನು ಹೊಂದಿದ ರಾಕ್ಷಸರು ಮನೋಕ್ಲೇಶವನ್ನು ಪರಿಹರಿಸಿಕೊಂಡು, ಸ್ವರ್ಗದಲ್ಲಿ ಸುಖವನ್ನು ಅನುಭವಿಸುವ ಮನುಷ್ಯರ ಹಾಗೆ ಆನಂದದಿಂದ ಕುಣಿದಾಡಿದರು. ಜೋರಾಗಿ ನಗುತ್ತಿದ್ದರು.
ಕಸ್ಯಚಿತ್ತ್ವಥ ಕಾಲಸ್ಯ ಋಷಯಃ ಸುತಪೋಧನಾಃ |
ತೀರ್ಥಯಾತ್ರಾಂ ಸಮಾಜಗ್ಮುಃ ಸರಸ್ವತ್ಯಾಂ ಮಹೀಪತೇ ॥4॥

ರಾಜನೇ! ಸ್ವಲ್ಪ ಕಾಲ ಕಳೆದುಹೋದ ನಂತರ ಮಹಾತಪಸ್ವಿಗಳಾದ ಋಷಿಗಳು ಸರಸ್ವತಿನದಿಗೆ ತೀರ್ಥಯಾತ್ರೆಗಾಗಿ ಬಂದರು.
ತೇಷು ಸರ್ವೇಷು ತೀರ್ಥೇಷು ಆಪ್ಲುತ್ಯ ಮುನಿಪುಂಗವಾಃ |
ಪ್ರಾಪ್ಯ ಪ್ರೀತಿಂ ಪರಾಂ ಚಾಪಿ ತಪೋಲುಬ್ಧಾ ವಿಶಾರದಾಃ ॥5॥
ನಿಪುಣರಾದ ಹಾಗೂ ತಪಸ್ಸನ್ನೇ ಅಪೇಕ್ಷಿಸುವ ಆ ಋಷಿಶ್ರೇಷ್ಠರು ಸರಸ್ವತಿಯ ಎಲ್ಲಾ ತೀರ್ಥಗಳಲ್ಲಿ
ಅವಗಾಹಸ್ನಾನಾದಿಗಳನ್ನುಮಾಡಿ ಉತ್ತಮವಾದ ಆನಂದವನ್ನು ಅನುಭವಿಸಿದರು.
ಪ್ರಯಯುರ್ಹಿ ತತೋ ರಾಜನ್ ಯೇನ ತೀರ್ಥಂ ತು ತತ್ ತದಾ ॥
ಅಲ್ಲಿಂದ ಆ ಋಷಿಗಳು ಹಿಂದೆ ವರ್ಣಿಸಿದ (ವಸಿಷ್ಠಾಪವಾಹ) ತೀರ್ಥಕ್ಕೆ ಬಂದರು.
ಅಥಾಗಮ್ಯ ಮಹಾಭಾಗಾಃ ತತ್ತೀರ್ಥಂ ದಾರುಣಂ ಪ್ರಭೋ |
ದೃಷ್ಟ್ವಾ ತೋಯಂ ಸರಸ್ವತ್ಯಾಃ ಶೋಣಿತೇನ ಸಮುತ್ಥಿತಮ್ ॥7॥
ಪೀಯಮಾನಂ ಚ ರಕ್ಷೋಭಿಃ ಬಹುಭೀ ರಾಜಸತ್ತಮ ॥8॥
ರಾಜರಲ್ಲಿಯೇ ಉತ್ತಮನೇ! ಮಹಾತ್ಮರಾದ ಅವರು ಆ ಘೋರವಾದ ತೀರ್ಥವನ್ನು ನೋಡಿದರು. ಅಲ್ಲಿ ರಕ್ತದಿಂದ ಮಿಶ್ರವಾದ
ಸರಸ್ವತಿಯ ನೀರನ್ನು ಅನೇಕ ರಾಕ್ಷಸರು ಕುಡಿಯುತ್ತಿರುವುದನ್ನೂ ನೋಡಿದರು.
ತಾನ್ ದೃಷ್ಟ್ವಾ ರಾಕ್ಷಸಾನ್ ರಾಜನ್ ಮುನಯಃ ಸಂಶಿತವ್ರತಾಃ |
ಪರಿತ್ರಾಣೇ ಸರಸ್ವತ್ಯಾಃ ಪರಂ ಯತ್ನಂ ಪ್ರಚಕ್ರಿರೇ ॥9॥
ಕಠಿಣವಾದ ತಪಸ್ಸನ್ನಾಚರಿಸುತ್ತಿದ್ದ ಆ ಋಷಿಗಳು ರಾಕ್ಷಸರನ್ನು ನೋಡಿ ಸರಸ್ವತಿಯನ್ನು ರಕ್ಷಿಸಲಿಕ್ಕಾಗಿ ಉತ್ತಮವಾದ
ಪ್ರಯತ್ನವನ್ನು ಮಾಡಿದರು.
ತೇ ತು ಸರ್ವೇ ಮಹಾಭಾಗಾಃ ಸಮಾಗಮ್ಯ ಮಹಾವ್ರತಾಃ |
ಆಹೂಯ ಸರಿತಾಂ ಶ್ರೇಷ್ಠಾಮಿದಂ ವಚನಮಬ್ರುವನ್ ॥10॥
ಮಹಾನಿಯಮಗಳನ್ನು ಆಚರಿಸುತ್ತಿದ್ದ ಮಹಾತ್ಮರಾದ ಆ ಋಷಿಗಳು ನದಿಗಳಲ್ಲಿಯೇ ಶ್ರೇಷ್ಠಳಾದ ಸರಸ್ವತಿಯನ್ನು ಕರೆದು ಹೀಗೆ
ಹೇಳುತ್ತಾರೆ.
ಋಷಯಃ
ಕಾರಣಂ ಬ್ರೂಹಿ ಕಲ್ಯಾಣಿ ಕಿಮರ್ಥಂ ತೇ ಹ್ರದೋ ಹ್ಯಯಮ್ |
ಏವಮಗ್ರಾಹ್ಯತಾಂ ಯಾತಃ ಶ್ರುತ್ವಾ ಧ್ಯಾಸ್ಯಾಮಹೇ ವಯಮ್ ॥11॥
ಋಷಿಗಳು ಮಂಗಳಕರಳೆ! ನಿನ್ನಲ್ಲಿರುವ ಈ ನೀರಿನ ಸರೋವರವು ಏಕೆ ಬಳಸಲು ಅಯೋಗ್ಯವಾಯಿತು? ಅದಕ್ಕೆ ಕಾರಣವನ್ನು ಹೇಳು.
ಅದನ್ನು ಕೇಳಿ ನಾವು ಏನು ಮಾಡಬೇಕೆಂಬುದನ್ನು ಚಿಂತಿಸುತ್ತೇವೆ.
ವೈಶಂಪಾಯನಃ
ತತಃ ಸಾ ಸರ್ವಮಾಚಷ್ಟ ಯಥಾವೃತ್ತಂ ಪ್ರವೇಪತೀ |
ದುಃಖಿತಾಮಥ ತಾಂ ದೃಷ್ಟ್ವಾ ತ ಊಚುರ್ವೈ ತಪೋಧನಾಃ ॥12॥
ವೈಶಂಪಾಯನ ಆಗ ಸರಸ್ವತಿಯು ನಡುಗುತ್ತಾ ಎಲ್ಲವನ್ನೂ ನಡೆದ ಹಾಗೆ ಹೇಳಿದಳು. ಅಳುತ್ತಿರುವ ಸರಸ್ವತಿಯನ್ನು ನೋಡಿ
ತಪಸ್ವಿಗಳು ಹೀಗೆ ಹೇಳುತ್ತಾರೆ.
ಋಷಯಃ
ಕಾರಣಂ ಶ್ರುತಮಸ್ಮಾಭಿಃ ಶಾಪಶ್ಚೈವ ಶ್ರುತೋಽನಘೇ |
ಕರಿಷ್ಯಾಮಸ್ತು ಯತ್ಪ್ರಾಪ್ತಂ ಸರ್ವ ಏವ ತಪೋಧನಾಃ ॥13॥
ಋಷಿಗಳು ಪಾಪದೂರಳೇ! ಹೀಗಾಗಿರುವುದಕ್ಕೆ ಕಾರಣವನ್ನು ನಾವು ತಿಳಿದುಕೊಂಡೆವು. ನಿನಗೆ ಬಂದಿರುವ ಶಾಪದ ಬಗ್ಗೆಯೂ
ತಿಳಿದುಕೊಂಡೆವು. ನಾವೆಲ್ಲಾ ತಪಸ್ವಿಗಳು ಏನನ್ನು ಮಾಡಬೇಕೋ ಅದನ್ನು ಮಾಡುತ್ತೇವೆ.
ವೈಶಂಪಾಯನಃ
ಏವಮುಕತ್ವ ಸರಿಚ್ಛ್ರೇಷ್ಠಾಮೂಚುಸ್ತೇಽಥ ಪರಸ್ಪರಮ್ ॥14॥
ವೈಶಂಪಾಯನ ಸರಸ್ವತಿನದಿಗೆ ಹೀಗೆ ಹೇಳಿ ಆ ಋಷಿಗಳು ಪರಸ್ಪರವಾಗಿ ಮಾತನಾಡಿಕೊಂಡರು.
ಋಷಯಃ
ವಿಮೋಕ್ಷಯಾಮಹೇ ಸರ್ವೇ ಶಾಪಾದೇನಾಂ ಸರಸ್ವತೀಮ್ ॥15॥
ಋಷಿಗಳು ಈ ಸರಸ್ವತಿಯನ್ನು ಶಾಪದಿಂದ ಬಿಡುಗಡೆಗೊಳಿಸೋಣ.
ವೈಶಂಪಾಯನಃ
ತೇ ಸರ್ವೇ ಬ್ರಾಹ್ಮಣಾ ರಾಜಂಸ್ತಪೋಭಿರ್ನಿಯಮೈಸ್ತಥಾ |
ಉಪವಾಸೈಶ್ಚ ವಿವಿಧೈರ್ಯಮೈಃ ಕಷ್ಟವ್ರತೈಸ್ತಥಾ ॥16॥
ಆರಾಧ್ಯ ಪಶುಭರ್ತಾರಂ ಮಹಾದೇವಂ ಜಗತ್ಪತಿಮ್ |
ಮೋಕ್ಷಯಾಮಾಸುಸ್ತಾಂ ದೇವೀಂ ಸರಿಚ್ಛ್ರೇಷ್ಠಾಂ ಸರಸ್ವತೀಮ್ ॥17॥
ವೈಶಂಪಾಯನ ರಾಜನೇ! ಆ ಬ್ರಾಹ್ಮಣರೆಲ್ಲರೂ ತಪಸ್ಸುಗಳಿಂದ, ನಿಯಮಗಳಿಂದ, ಉಪವಾಸಗಳಿಂದ, ಬೇರೆ ಬೇರೆ ರೀತಿಯ
ನಿಗ್ರಹಗಳಿಂದ, ಕಠಿಣವಾದ ವ್ರತಗಳಿಂದ ಜಗತ್ಸ್ವಾಮಿಯಾದ, ನಂದಿವಾಹನನಾದ ರುದ್ರನನ್ನು ಆರಾಧಿಸಿದರು.
ತನ್ಮೂಲಕವಾಗಿ ಉತ್ತಮನದಿಯಾದ ಸರಸ್ವತಿಯನ್ನು ಶಾಪದಿಂದ ಬಿಡುಗಡೆಗೊಳಿಸಿದರು.
ತೇಷಾಂ ತು ಸಾ ಪ್ರಭಾವೇಣ ಪ್ರಕೃತಿಸ್ಥಾ ಸರಸ್ವತೀ |

ಪ್ರಸನ್ನಸಲಿಲಾ ಜಜ್ಞೇ ಯಥಾ ಪೂರ್ವಂ ತಥೈವ ಹಿ |
ನಿರ್ಮುಕ್ತಾ ಚ ಸರಿಚ್ಛ್ರೇಷ್ಠಾ ವಿಬಭೌ ಸಾ ಯಥಾ ಪುರಾ ॥18॥
ಅವರ ಪ್ರಭಾವದಿಂದ ಸರಸ್ವತಿಯು ತನ್ನ ಮೂಲರೂಪವನ್ನು ಪಡೆದಳು. ಹಿಂದಿನ ಹಾಗೆಯೇ ಶುಭ್ರವಾದ ನೀರನ್ನು ಹರಿಸತೊಡಗಿದಳು. ರಕ್ತದಿಂದ ಮುಕ್ತಳಾದ ಸರಸ್ವತಿಯು ಹಿಂದಿನ ಹಾಗೆಯೇ ಶೋಭಿಸಿದಳು.
ದೃಷ್ಟ್ವಾ ತೋಯಂ ಸರಸ್ವತ್ಯಾ ಮುನಿಭಿಸ್ತೈಸ್ತಥಾ ಕೃತಮ್ |
ತಾನೇವ ಶರಣಂ ಜಗ್ಮೂ ರಾಕ್ಷಸಾಃ ಕ್ಷುಧಿತಾಸ್ತಥಾ ॥19॥
ಮುನಿಗಳು ಶುದ್ಧಗೊಳಿಸಿದ ಸರಸ್ವತಿಯ ನೀರನ್ನು ನೋಡಿದ ರಾಕ್ಷಸರು ಅದೇ ಋಷಿಗಳನ್ನು ಶರಣು ಹೊಂದಿದರು.
ಕೃತ್ವಾಂಜಲಿಂ ತತೋ ರಾಜನ್ ರಾಕ್ಷಸಾಃ ಕ್ಷುಧಯಾಽರ್ದಿತಾಃ |
ಊಚುಸ್ತಾನ್ ವೈ ಮುನೀನ್ ಸರ್ವಾನ್ ಕೃಪಾಯುಕ್ತಾನ್ ಪುನಃ ಪುನಃ ॥
ರಾಜನೇ! ಹಸಿವಿನಿಂದ ಕಂಗೆಟ್ಟ ರಾಕ್ಷಸರು ಕೈಮುಗಿದುಕೊಂಡು ಆ ದಯಾಮಯರಾದ ಆ ಎಲ್ಲಾ ಋಷಿಗಳಿಗೆ ಮತ್ತೆ ಮತ್ತೆ ಹೀಗೆ ಹೇಳುತ್ತಾರೆ.
ವಯಂ ಚ ಕ್ಷುಧಿತಾಶ್ಚೈವ ಧರ್ಮಾದ್ಧೀನಾಶ್ಚ ಶಾಶ್ವತಾತ್ |
ನ ಚ ನಃ ಕಾಮಕಾರೋಽಯಂ ಯದ್ವಯಂ ಪಾಪಕಾರಿಣಃ ॥21॥
ನಾವು ಹಸಿದಿದ್ದೇವೆ. ನಾವು ನಿತ್ಯವೂ ಧರ್ಮಬಾಹಿರರಾಗಿದ್ದೇವೆ. ಪಾಪಿಗಳಾದ ನಾವು ನಮ್ಮ ಹಸಿವನ್ನು ನಮ್ಮಿಷ್ಟದಂತೆ ಪರಿಹಾರಮಾಡಿಕೊಳ್ಳಲು ಸಮರ್ಥರಾಗುವುದಿಲ್ಲ.
ಯುಷ್ಮಾಕಂ ಚಾಪ್ರಸಾದೇನ ದುಷ್ಕೃತೇನ ಚ ಕರ್ಮಣಾ |
ಪಕ್ಷೋಽಯಂ ವರ್ಧತೇಽಸ್ಮಾಕಂ ಯತಃ ಸ್ಮೋ ಬ್ರಹ್ಮರಾಕ್ಷಸಾಃ ॥22॥
ನಾವು ಸ್ವಭಾವತಃ ಒಳ್ಳೆಯವರಾದರೂ ಬ್ರಾಹ್ಮಣರನ್ನು, ಬ್ರಹ್ಮಜ್ಞಾನಿಗಳನ್ನು ಧಿಕ್ಕರಿಸಿದ್ದರಿಂದ ಬ್ರಹ್ಮರಾಕ್ಷಸರಾಗಿದ್ದೇವೆ. ನಮ್ಮ ಕೆಟ್ಟ ಕೆಲಸಗಳಿಂದಾಗಿ ನೀವು ನಮ್ಮ ಮೇಲೆ ಕೋಪಿಸಿಕೊಂಡಿದ್ದರಿಂದ ನಮ್ಮ ಗುಂಪು ಬೆಳೆಯುತ್ತಲೇ ಇದೆ.
ಯೋಷಿತಾಂ ಚೈವ ಪಾಪೇನ ಯೋನಿದೋಷಕೃತೇನ ಚ ॥23॥
ಏವಂ ಹಿ ವೈಶ್ಯಶೂದ್ರಾಣಾಂ ಕ್ಷತ್ರಿಯಾಣಾಂ ತಥೈವ ಚ |
ಯೇ ಬ್ರಾಹ್ಮಣಾನ್ ಪ್ರದ್ವಿಷಂತಿ ತೇ ಭವಂತೀಹ ರಾಕ್ಷಸಾಃ ॥24॥
ಸ್ತ್ರೀಯರ ವಿಷಯದಲ್ಲಿ ಪಾಪಮಾಡುವುದರಿಂದ, ಯೋನಿಸಂಬಂಧಿ ತಪ್ಪುಗಳಿಂದ ನಾವು ಬ್ರಹ್ಮರಾಕ್ಷಸರಾಗಿದ್ದೇವೆ. ಹಾಗೆಯೇ ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿಯೂ ಯಾರು ಬ್ರಾಹ್ಮಣರನ್ನು ದ್ವೇಷ ಮಾಡುತ್ತಾರೆಯೋ ಅವರೆಲ್ಲರೂ ರಾಕ್ಷಸರಾಗುತ್ತಾರೆ.
ಶಕ್ತಿಮಂತೋಽಪಿ ಯೇ ಕೇಚಿದಾಶ್ರಿತಾನಾಂ ಚ ರಕ್ಷಣಮ್ |
ನ ಕುರ್ವಂತಿ ಮನುಷ್ಯಾಸ್ತೇ ಸಂಭವಂತೀಹ ರಾಕ್ಷಸಾಃ ॥25॥
ತಮ್ಮನ್ನು ಆಶ್ರಯಿಸಿಕೊಂಡಿರುವ ಹೆಂಡತಿ-ಮಕ್ಕಳು, ತಂದೆ-ತಾಯಿ ಮೊದಲಾದವರನ್ನು ಸಲಹುವ ಶಕ್ತಿಯು ತಮ್ಮಲ್ಲಿ ಇದ್ದರೂ ಯಾರು ಸಲಹುವುದಿಲ್ಲವೋ ಅಂತಹ ಮನುಷ್ಯರು ರಾಕ್ಷಸರಾಗುತ್ತಾರೆ.
ಆಚಾರ್ಯಮೃತ್ವಿಜಂ ಚೈವ ಗುರುಂ ವೃದ್ಧಜನಂ ತಥಾ |
ಪ್ರಾಣಿನೋ ಯೇಽವಮನ್ಯಂತೇ ತೇ ಭವಂತೀಹ ರಾಕ್ಷಸಾಃ ॥26॥
ಆಚಾರ್ಯರನ್ನು, ಪುರೋಹಿತರನ್ನು, ಗುರುಗಳನ್ನು, ಹಿರಿಯರನ್ನು ಯಾವ ಜೀವರು ಅವಮಾನ ಮಾಡುತ್ತಾರೆಯೋ ಅವರು ರಾಕ್ಷಸರಾಗುತ್ತಾರೆ..
ತತ್ಕುರುಧ್ವಮಿಹಾಸ್ಮಾಕಂ ತಾರಣಂ ದ್ವಿಜಸತ್ತಮಾಃ |
ಶಕ್ತಾ ಭವಂತಃ ಸರ್ವೇಷಾಂ ಲೋಕಾನಾಮಪಿ ತಾರಣೇ ॥27॥
ಬ್ರಾಹ್ಮಣೋತ್ತಮರೇ! ಆದ್ದರಿಂದ ನಮ್ಮನ್ನು ಈ ಕಷ್ಟಗಳಿಂದ ಪಾರು ಮಾಡಿಸಿ. ನೀವು ಎಲ್ಲಾ ಲೋಕಗಳನ್ನೂ ದಾಟಿಸಲು ಸಮರ್ಥರಾಗಿದ್ದೀರಿ.
ತೇಷಾಂ ತು ವಚನಂ ಶ್ರುತ್ವಾ ತುಷ್ಟುವುಸ್ತಾಂ ಮಹಾನದೀಮ್ |
ಮೋಕ್ಷಾರ್ಥಂ ರಕ್ಷಸಾಂ ತೇಷಾಮೂಚುಃ ಪ್ರಯತಮಾನಸಾಃ ॥28॥
ಅವರ ಮಾತನ್ನು ಕೇಳಿದ ಋಷಿಗಳು ರಾಕ್ಷಸರ ಬ್ರಹ್ಮರಾಕ್ಷಸತ್ವವು ಕಳೆಯಲಿಕ್ಕಾಗಿ ಮಹಾನದಿಸರಸ್ವತಿಯನ್ನು ಸ್ತುತಿಸಿದರು. ಭಕ್ತಿಯಿಂದ ಸರಸ್ವತಿಗೆ ಹೀಗೆ ಹೇಳಿದರು.
ಋಷಯಃ
ಹುತಂ ಕೀಟಾವಪನ್ನಂ ಚ ಯಚ್ಚೋಚ್ಛಿಷ್ಟಾಚಿತಂ ಭವೇತ್ |
ಸಕೇಶಮವಧೂತಂ ಚ ರುದಿತೋಪಹತಂ ಚ ಯತ್ ॥29॥
ಶ್ವಭಿಃ ಸಂಸೃಷ್ಟಮನ್ನಂ ಚ ಭಾಗೋಽಸೌ ರಕ್ಷಸಾಮಿಹ |
ತಸ್ಮಾಜ್ಜ್ಞಾತ್ವಾ ಸದಾ ವಿದ್ವಾನೇತಾನ್ ಯತ್ನಾದ್ ವಿವರ್ಜಯೇತ್ |
ರಾಕ್ಷಸಾನ್ನಮಸೌ ಭುಂಕ್ತೇ ಯೋ ಭುಂಕ್ತೇ ಹ್ಯನ್ನಮೀದೃಶಮ್ ॥30॥
ಋಷಿಗಳು ಬೆಂಕಿಯಿಂದ ಸುಟ್ಟುಹೋದ ಪದಾರ್ಥಗಳು, ಕೀಟಗಳು ಬಿದ್ದ ಪದಾರ್ಥಗಳು, ತಿಂದು ಉಗುಳಿದ ಪದಾರ್ಥಗಳು, ಯಾವ ಪದಾರ್ಥಗಳಲ್ಲಿ ತಲೆಗೂದಲು ಬಿದ್ದಿರುತ್ತದೆಯೋ, ಕಣ್ಣೀರು ಯಾವ ಪದಾರ್ಥಗಳಲ್ಲಿ ಬಿದ್ದಿರುತ್ತದೆಯೋ, ನಾಯಿ ಮುಟ್ಟಿದ ಪದಾರ್ಥಗಳು, ಇವೆಲ್ಲವೂ ರಾಕ್ಷಸರಿಗೆ ಸಲ್ಲುವ ಭಾಗವಾಗಲಿ. ಆದ್ದರಿಂದ ಜ್ಞಾನಿಯಾದವನು ಪ್ರಯತ್ನಪೂರ್ವಕವಾಗಿ ಇಂತಹ ಪದಾರ್ಥಗಳನ್ನು ಬಿಡಬೇಕು. ಇಂತಹ ಅನ್ನವನ್ನು ತಿನ್ನುವವನು ರಾಕ್ಷಸಾನ್ನವನ್ನು ತಿಂದವನಾಗುತ್ತಾನೆ.

ಶೋಧಯಿತ್ವಾ ತತಸ್ತೀರ್ಥಮೃಷಯಸ್ತೇ ತಪೋಧನಾಃ |
ಮೋಕ್ಷಾರ್ಥಂ ರಾಕ್ಷಸಾನಾಂ ಚ ನದೀಂ ತಾಂ ಪ್ರತ್ಯಚೋದಯನ್ ||
ತಪೋನಿಧಿಗಳಾದ ಋಷಿಗಳು ಆ ತೀರ್ಥವನ್ನು ಶುದ್ಧೀಕರಿಸಿ, ರಾಕ್ಷಸರ ಬ್ರಹ್ಮರಾಕ್ಷಸತ್ವದ ಮೋಚನೆಗಾಗಿ ನದಿಯನ್ನು ಪ್ರಾರ್ಥಿಸಿ ಪ್ರೇರೇಪಿಸುತ್ತಾರೆ.
ಮಹರ್ಷೀಣಾಂ ಮತಂ ಜ್ಞಾತ್ವಾ ತತಃ ಸಾ ಸರಿತಾಂ ವರಾ |
ಅರುಣಾಮಾನಯಾಮಾಸ ಸ್ವಾಂ ತನುಂ ಪುರುಷರ್ಷಭ ||32||
ಮಹರ್ಷಿಗಳ ಅಭಿಪ್ರಾಯವನ್ನು ತಿಳಿದ ಶ್ರೇಷ್ಠನದಿಯಾದ ಸರಸ್ವತಿಯು ಗೋದಾವರೀನದಿಯ ಸಮೀಪದಲ್ಲಿದ್ದ ಅರುಣಾ ಎಂಬ ನದಿಯನ್ನು ತನ್ನ ಕಡೆಗೆ ಕರೆತಂದಳು. (ಅರುಣಾನದಿಯೊಡನೆ ಸಂಗಮಗೊಂಡಳು. ಅರುಣಾ ಸಂಗಮದಿಂದಲೇ ತನಗೆ ಬ್ರಹ್ಮಹತ್ಯಾಪಾಪಪರಿಹಾರಕಶಕ್ತಿಯನ್ನು ತಂದುಕೊಂಡಳು.)
ತಸ್ಯಾಂತೇ ರಾಕ್ಷಸಾಃ ಸ್ನಾತ್ವಾ ತನೂಸ್ತ್ಯಕ್ತ್ವಾ ದಿವಂ ಗತಾಃ |
ಅರುಣಾಯಾಂ ಮಹಾರಾಜ ಬ್ರಹ್ಮವಧ್ಯಾಪಹಾ ಹಿ ಸಾ ||33||
ಆ ಅರುಣಾನದಿಯ ಸಂಗಮದಲ್ಲಿ ರಾಕ್ಷಸರು ಸ್ನಾನವನ್ನು ಮಾಡಿ, ತಮ್ಮ ರಾಕ್ಷಸಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋದರು. ಮಹಾರಾಜನೇ! ಆ ಅರುಣಾನದಿಯು ಬ್ರಹ್ಮಹತ್ಯಾದೋಷವನ್ನು ನಾಶಮಾಡುವವಳೆಂದು ಪ್ರಸಿದ್ಧಳಾಗಿದ್ದಾಳೆ.
ಏತಮರ್ಥಮಭಿಜ್ಞಾಯ ದೇವರಾಜಃ ಶತಕ್ರತುಃ |
ತಸ್ಮಿಂಸ್ತೀರ್ಥೇ ವರೇ ಸ್ನಾತ್ವಾ ವಿಮುಕ್ತಃ ಪಾಪ್ಮನಾ ಕಿಲ ||34||
ಈ ವಿಷಯವನ್ನು ತಿಳಿದ, ದೇವರಾಜನಾದ ಪುರಂದರನು ಆ ತೀರ್ಥದಲ್ಲಿ ಸ್ನಾನಮಾಡಿ ಬ್ರಹ್ಮಹತ್ಯಾಪಾಪದಿಂದ ಮುಕ್ತನಾದನು.
ಜನಮೇಜಯಃ
ಕಿಮರ್ಥಂ ಭಗವಾನ್ ಶಕ್ರೋ ಬ್ರಹ್ಮವಧ್ಯಾಮವಾಪ್ತವಾನ್ |
ಕಥಮಸ್ಮಿಂಶ್ಚ ತೀರ್ಥೇ ವೈ ಆಪ್ಲುತ್ಯಾಕಲ್ಮಷೋಽಭವತ್ ||35||
ಜನಮೇಜಯ ಪೂಜ್ಯನಾದ ಇಂದ್ರನು ಯಾವ ಕಾರಣದಿಂದ ಬ್ರಹ್ಮಹತ್ಯಾದೋಷವನ್ನು ಪಡೆದುಕೊಂಡನು? ಈ ತೀರ್ಥದಲ್ಲಿ ಸ್ನಾನಮಾಡಿ ಹೇಗೆ ಆ ಪಾಪವನ್ನು ಕಳೆದುಕೊಂಡು ಪರಿಶುದ್ಧನಾದನು?
ವೈಶಂಪಾಯನಃ
ಶೃಣುಷ್ವೈತದುಪಾಖ್ಯಾನಂ ಯಥಾವೃತ್ತಂ ಜನೇಶ್ವರ |
ಯಥಾ ಬಿಭೇದ ಸಮಯಂ ನಮುಚೇರ್ವಾಸವಃ ಪುರಾ ||36||
ವೈಶಂಪಾಯನ ಜನಾಧಿಪತಿಯೇ! ಈ ಘಟನೆಯನ್ನು ಹೇಗೆ ನಡೆದಿದೆಯೋ ಹಾಗೆ ಹೇಳುತ್ತೇನೆ, ಕೇಳು. ಹಿಂದೆ ನಮುಚಿಗೂ ಇಂದ್ರನಿಗೂ ಏರ್ಪಟ್ಟಿದ್ದ ನಿಬಂಧನೆಗಳು ಮುರಿದುಬಿದ್ದವು.
ನಮುಚಿರ್ವಾಸವಾದ್ ಭೀತಃ ಸೂರ್ಯರಶ್ಮಿಂ ಸಮಾವಿಶತ್ |
ತೇನೇಂದ್ರಃ ಸಖ್ಯಮಕರೋತ್ ಸಮಯಂ ಚೇದಮಬ್ರವೀತ್ ||37||
ಅದಕ್ಕಿಂತಲೂ ಹಿಂದೆ ನಮುಚಿಯು ಇಂದ್ರನಿಗೆ ಹೆದರಿ ಸೂರ್ಯರಶ್ಮಿಗಳ ಒಳಗೆ ಪ್ರವೇಶಿಸಿದನು. ಆಗ ಇಂದ್ರನು ಅವನೊಡನೆ ಸ್ನೇಹವನ್ನು ಮಾಡಿಕೊಂಡು ಒಂದು ಒಪ್ಪಂದನಿಯಮವನ್ನು ಹೇಳಿದನು.
ನ ಚಾರ್ದ್ರೇಣ ನ ಶುಷ್ಕೇಣ ನ ರಾತ್ರೌ ನಾಪಿ ಚಾಹನಿ |
ವಧಿಷ್ಯಾಮ್ಯಸುರಶ್ರೇಷ್ಠ ಸಖೇ ಸತ್ಯೇನ ತೇ ಶಪೇ ||38||
ಅಸುರೋತ್ತಮನೇ! ಗೆಳೆಯನೇ! ನಿನ್ನನ್ನು ನಾನು ಒದ್ದೆಯಾದ ಅಥವಾ ಒಣಗಿದ ಅಸ್ತ್ರದಿಂದ ಕೊಲ್ಲುವುದಿಲ್ಲ. ರಾತ್ರಿ ಅಥವಾ ಹಗಲು ಕೊಲ್ಲುವುದಿಲ್ಲ. ಇದು ನನ್ನ ಪ್ರತಿಜ್ಞೆ.
ಏವಂ ಸ ಕೃತ್ವಾ ಸಮಯಂ ಸೃ(ದೃ)ಷ್ಟ್ವಾ ನೀಹಾರಮೀಶ್ವರಃ |
ಚಿಚ್ಛೇದಾಸ್ಯ ಶಿರೋ ರಾಜನ್ನಪಾಂ ಫೇನೇನ ವಾಸವಃ ||39||
ರಾಜನೇ! ಹೀಗೆ ಪ್ರತಿಜ್ಞೆಯನ್ನು ಮಾಡಿಕೊಂಡು ಬಹಳವಾದ ಮಂಜನ್ನು ಸೃಷ್ಟಿಸಿದನು. ಆಗ ಸೂರ್ಯನ ಕಿರಣಗಳು ಮಂದವಾಗುವುದರಿಂದ ಹಗಲೂ ಅಲ್ಲ. ರಾತ್ರಿಯೂ ಆಗಿರುವುದಿಲ್ಲ. ಇಂದ್ರನು ನೀರಿನಿಂದ ಎದ್ದ ನೊರೆಯಿಂದ ನಮುಚಿಯ ತಲೆಯನ್ನು ಕಡಿದನು.
ತಚ್ಛಿರೋ ನಮುಚೇಶ್ಛಿನ್ನಂ ಪೃಷ್ಠತಃ ಶಕ್ರಮನ್ವಿಯಾತ್ |
ಭೋಭೋ ಮಿತ್ರಹ ಪಾಪೇತಿ ಬ್ರುವಾಣಂ ಶಕ್ರಮಂತಿಕಾತ್ ||40||
ತುಂಡಾದ ನಮುಚಿಯ ತಲೆಯು ಇಂದ್ರನನ್ನು ಹಿಂಬಾಲಿಸಿತು. ಎಲೈ ಮಿತ್ರದ್ರೋಹಿಯೇ! ಪಾಪಿಯೆ! ಎಂದು ಹೇಳುತ್ತಾ ಇಂದ್ರನ ಹತ್ತಿರ ಬಂದಿತು.
ಏವಂ ಸ ಶಿರಸಾ ತೇನ ಚೋದ್ಯಮಾನಃ ಪುನಃ ಪುನಃ |
ಪಿತಾಮಹಾಯ ಸಂತಪ್ತ ಏತಮರ್ಥಂ ನ್ಯವೇದಯತ್ ||41||
ಹೀಗೆ ನಮುಚಿಯ ತಲೆಯು ಪದೇ ಪದೇ ಇಂದ್ರನನ್ನು ಪ್ರಶ್ನಿಸುತ್ತಿದ್ದಾಗ ಬಹಳ ದುಃಖಕ್ಕೊಳಗಾದ ಇಂದ್ರನು ಈ ವಿಷಯವನ್ನು ಚತುರ್ಮುಖಬ್ರಹ್ಮನಲ್ಲಿ ಹೇಳಿಕೊಂಡನು.
ತಮಬ್ರವೀಲ್ಲೋಕಗುರುರರುಣಾಯಾಂ ಯಥಾವಿಧಿ |
ಇಷ್ಟ್ವೋಪಸ್ಪೃಹ ದೇವೇಂದ್ರ ತೀರ್ಥೇ ಪಾಪಭಯಾಪಹೇ ||42||
ಏಷಾ ಪುಣ್ಯಜಲಾ ಶಕ್ರ ಕೃತಾ ಮುನಿಭಿರೇವ ತು |

ನಿಗೂಢಮಸ್ಯಾಗಮನಮಿಹಾಸೀತ್ ಪೂರ್ವಮೇವ ತು ॥43॥
ತತೋಽಭ್ಯೇತ್ಯಾರುಣಾಂ ದೇವೀಂ ಪ್ಲಾವಯಾಮಾಸ ವಾರಿಣಾ |
ಸರಸ್ವತ್ಯಾರುಣಾಯಾಶ್ಚ ಪುಣ್ಯೋಽಯಂ ಸಂಗಮೋ ಮಹಾನ್ ॥44॥
ಇಹ ತ್ವಂ ಯಜ ದೇವೇಂದ್ರ ದದ ದಾನಾನ್ಯನೇಕಶಃ |
ಅತ್ರಾಪ್ಲುತ್ಯ ಸುಘೋರಾತ್ತ್ವಂ ಪಾತಕಾದ್ ವಿಪ್ರಮೋಕ್ಷ್ಯಸೇ ॥45॥
ಲೋಕಗುರುವಾದ ಚತುರ್ಮುಖನು, ಇಂದ್ರನಿಗೆ ದೇವೇಂದ್ರ! ಪಾಪಭಯವನ್ನು ಪರಿಹರಿಸುವ ಅರುಣಾನದಿಯ ತೀರ್ಥದಲ್ಲಿ ವಿಧಿವತ್ತಾಗಿ ಯಾಗವನ್ನು ಮಾಡಿ, ಆಚಮನ-ಸ್ನಾನಾದಿಗಳನ್ನು ಮಾಡು. ಇಂದ್ರನೇ! ಈ ಪುಣ್ಯಜಲವನ್ನು ಮುನಿಗಳೇ ಮಾಡಿದ್ದಾರೆ. ಅರುಣಾನದಿಯ ಆಗಮನವು ಗುಪ್ತವಾಗಿ ಹಿಂದೆಯೇ ಇಲ್ಲಿ ಇತ್ತು. ಅನಂತರ ಸರಸ್ವತಿಯು ಅರುಣಾದೇವಿಯನ್ನೂ ತನ್ನ ಪ್ರವಾಹದೊಡನೆ ಹರಿಸಿದಳು. ಹೀಗೆ ಅರುಣಾ-ಸರಸ್ವತಿಯರ ಈ ಸಂಗಮವು ಬಹಳ ಪುಣ್ಯಪ್ರದವಾದುದು. ದೇವೇಂದ್ರನೇ! ಇಲ್ಲಿ ನೀನು ಯಾಗವನ್ನು ಮಾಡು. ಅನೇಕ ದಾನಗಳನ್ನು ಮಾಡು. ಇಲ್ಲಿ ಸ್ನಾನವನ್ನು ಮಾಡಿ, ಬಹಳ ಭಯಾನಕವಾದ ಪಾಪದಿಂದ ಬಿಡುಗಡೆಯನ್ನು ಹೊಂದುವಿ.
ಇತ್ಯುಕ್ತಃ ಸ ಸರಸ್ವತ್ಯಾಃ ಕುಂಜೇ ವೈ ಜನಮೇಜಯ |
ಇಷ್ಟ್ವಾ ಯಥಾವದ್ ಬಲಭಿದರುಣಾಯಾಮುಪಾಸ್ಪೃಶತ್ ॥46॥
ಜನಮೇಜಯನೇ! ಬ್ರಹ್ಮದೇವನು ಹೀಗೆ ಹೇಳಿದಾಗ, ಇಂದ್ರನು ಸರಸ್ವತಿಯ ಈ ಕುಂಜದಲ್ಲಿ ಯಾಗವನ್ನು ಮಾಡಿ ಅರುಣಾನದಿಯಲ್ಲಿ ಸ್ನಾನವನ್ನು ಮಾಡಿದನು.
ಸ ಮುಕ್ತಃ ಪಾಪ್ಮನಾ ತೇನ ಬ್ರಹ್ಮವಧ್ಯಾಕೃತೇನ ಚ |
ಜಗಾಮ ಸಂಹೃಷ್ಟಮನಾಸ್ತ್ರಿದಿವಂ ತ್ರಿದಶೇಶ್ವರಃ ॥47॥
ದೇವೇಶನಾದ ಇಂದ್ರನು ಬ್ರಹ್ಮಹತ್ಯಾಪಾಪವನ್ನು ಕಳೆದುಕೊಂಡು ಮನಃಸಂತೋಷವನ್ನು ಪಡೆದುಕೊಂಡು ಸ್ವರ್ಗಕ್ಕೆ ಹೋದನು.
ಶಿರಸ್ತಚ್ಚಾಪಿ ನಮುಚೇಸ್ತತ್ರೈವಾಪ್ಲುತ್ಯ ಭಾರತ |
ಲೋಕಾನ್ ಕಾಮದುಘಾನ್ ಪ್ರಾಪ್ತಮಕ್ಷಯಾನ್ ರಾಜಸತ್ತಮ ॥48॥
ರಾಜೋತ್ತಮನೇ! ಭರತಕುಲೋದ್ಭವನೇ! ನಮುಚಿಯ ತಲೆಯಾದರೂ ಆ ತೀರ್ಥದಲ್ಲಿ ಮುಳುಗಿ ಕಾಮಿಸಿದ್ದನ್ನು ಕೊಡುವ ಶಾಶ್ವತವಾದ ಲೋಕಕ್ಕೆ ಹೋಯಿತು.
ವೈಶಂಪಾಯನಃ
ತತ್ರಾಪ್ಯುಪಸ್ಪೃಶ್ಯ ಬಲೋ ಮಹಾತ್ಮಾ
ದತ್ತ್ವಾ ಚ ದಾನಾನಿ ಪೃಥಗ್ವಿಧಾನಿ |
ಅವಾಪ್ಯ ಧರ್ಮಂ ಪರಮಾರ್ಯಕರ್ಮಾ
ಜಗಾಮ ಸೋಮಸ್ಯ ಮಹತ್ಸುತೀರ್ಥಮ್ ॥49॥
ವೈಶಂಪಾಯನ ಮಹಾತ್ಮನಾದ ಬಲರಾಮನು ಅಲ್ಲಿಯೂ ಸ್ನಾನ ಆಚಮನಾದಿಗಳನ್ನು ಮಾಡಿ ಅನೇಕ ರೀತಿಯ ದಾನಗಳನ್ನು ಮಾಡಿ, ಬಹಳ ಧರ್ಮ ಸಂಪಾದನೆಯನ್ನು ಮಾಡಿಕೊಂಡನು. ಉತ್ತಮವಾದ ಕಾರ್ಯವನ್ನು ಮಾಡುವ ಬಲರಾಮನು ಅಲ್ಲಿಂದ ಉತ್ತಮವಾದ ಸೋಮತೀರ್ಥಕ್ಕೆ ಹೋದನು.
ಯತ್ರಾಯಜದ್ ರಾಜಸೂಯೇನ ಸೋಮಃ
ಸಾಕ್ಷಾತ್ ಪುರಾ ವಿಧಿವತ್ ಪಾರ್ಥಿವೇಂದ್ರ |
ಅತ್ರಿರ್ಧೀಮಾನ್ ಬ್ರಹ್ಮಪುತ್ರೋ ಬಭೂವ
ಹೋತಾ ಯಸ್ಮಿನ್ ಕ್ರತುಮುಖ್ಯೇ ಮಹಾತ್ಮಾ ॥50॥
ರಾಜನೇ! ಆ ಸೋಮತೀರ್ಥದಲ್ಲಿ ಹಿಂದೆ ಸೋಮನು ತಾನೇ ಸ್ವತಃ ವಿಧಿಪ್ರಕಾರವಾಗಿ ರಾಜಸೂಯಯಾಗವನ್ನು ಮಾಡಿದ್ದನು. ಚತುರ್ಮುಖಬ್ರಹ್ಮನ ಮಗನಾದ ಮಹಾತ್ಮನಾದ ಜ್ಞಾನಿ ಅತ್ರಿಯು ಆ ಉತ್ತಮ ಯಾಗದಲ್ಲಿ ಹೋತೃವಾಗಿದ್ದನು.
ಯಸ್ಯಾಂತೇಽಭೂತ್ಸುಮಹದ್ ದಾನವಾನಾಂ
ದೈತೇಯಾನಾಂ ರಾಕ್ಷಸಾನಾಂ ಚ ದೇವೈಃ |
ಸಂಗ್ರಾಮೋ ವೈ ತಾರಕಾಖ್ಯಃ ಸುತೀವ್ರೋ
ಯತ್ರ ಸ್ಕಂದಸ್ತಾರಕಾಖ್ಯಂ ಜಘಾನ ॥51॥
ಈ ರಾಜಸೂಯಯಾಗದ ಕೊನೆಯಲ್ಲಿ ದಾನವರು, ದೈತ್ಯರು ಮತ್ತು ರಾಕ್ಷಸರು ಇವರಿಗೆ ದೇವತೆಗಳೊಡನೆ ದೊಡ್ಡದಾದ ಕಾದಾಟವು ಉಂಟಾಯಿತು. ಆ ಸಂಗ್ರಾಮಕ್ಕೆ ತಾರಕ ಎಂಬ ಹೆಸರು ಬಂತು. ಏಕೆಂದರೆ ಆ ಯುದ್ಧದಲ್ಲಿ ದೇವಸೇನಾನಿಯಾದ ಸ್ಕಂದನು ತಾರಕನೆಂಬ ಹೆಸರುಳ್ಳ ರಾಕ್ಷಸನನ್ನು ಕೊಂದನು.
ಸೈನಾಪತ್ಯಂ ಲಬ್ಧವಾನ್ ದೈವತಾನಾಂ
ಮಹಾಸೇನೋ ಯತ್ರ ದೈತ್ಯಾಂತಕರ್ತಾ |
ಸಾಕ್ಷಾಚ್ಚೈವಂ ನ್ಯವಸತ್ ಕಾರ್ತಿಕೇಯಃ
ಸದಾ ಕುಮಾರೋ ಯತ್ರ ಸ ಪ್ಲಕ್ಷರಾಜಃ ॥52॥
ದೈತ್ಯನಾಶಕನಾದ ಮಹಾಸೇನ ಸ್ಕಂದನು ಇಲ್ಲಿಯೇ ದೇವತೆಗಳ ಸೇನಾಧಿಪತಿಯಾಗಿ ನಿಯುಕ್ತನಾದನು. ಈ ಉತ್ತಮವಾದ ಗೋಳಿಮರ ಇರುವ ಸ್ಥಳದಲ್ಲಿ ಕೃತ್ತಿಕಾಸುತ ಸ್ಕಂದನು ಕುಮಾರನಾಗಿ ಯಾವಾಗಲೂ ವಾಸಿಸುತ್ತಿರುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಪಂಚದಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾರನೆಯ ಅಧ್ಯಾಯ
ಕುಮಾರನ ಉತ್ಪತ್ತಿಯ ವರ್ಣನೆ
ಜನಮೇಜಯಃ
ಸರಸ್ವತ್ಯಾಃ ಪ್ರಭಾವೋಽಯಮುಕ್ತಸ್ತೇ ದ್ವಿಜಸತ್ತಮ |
ಕುಮಾರಸ್ಯಾಭಿಷೇಕಂ ತು ಬ್ರಹ್ಮನ್ನಾಖ್ಯಾತುಮರ್ಹಸಿ ||1||
ಜನಮೇಜಯ ಬ್ರಾಹ್ಮಣೋತ್ತಮನೇ! ಸರಸ್ವತಿಯ ಪ್ರಭಾವವನ್ನು ನನಗೆ ಹೇಳಿರುವಿ. ಬ್ರಹ್ಮಜ್ಞಾನಿಯೇ! ಸ್ಕಂದನ ಪಟ್ಟಾಭಿಷೇಕದ ಬಗ್ಗೆ ನನಗೆ ಹೇಳು.
ಯಸ್ಮಿನ್ ದೇಶೇ ಚ ಕಾಲೇ ಚ ಯಥಾ ಚ ವದತಾಂ ವರ |
ಯೈಶ್ಚಾಭಿಷಿಕ್ತೋ ಭಗವಾನ್ ವಿಧಿನಾ ಯೇನ ಚ ಪ್ರಭುಃ ||2||
ವಕ್ತೃಗಳಲ್ಲಿಯೇ ಶ್ರೇಷ್ಠನಾದವನೇ! ಸಮರ್ಥನಾದ ಭಗವಾನ್ ಸ್ಕಂದನ ಪಟ್ಟಾಭಿಷೇಕವು ಯಾವ ದೇಶದಲ್ಲಿ ನಡೆಯಿತು? ಯಾವಾಗ ನಡೆಯಿತು? ಯಾರು ಮಾಡಿದರು? ಯಾವ ವಿಧಿ-ವಿಧಾನಗಳಿಂದ ನಡೆಯಿತು?
ಸ್ಕಂದೋ ಯಥಾ ಚ ದೈತ್ಯಾನಾಮಕರೋದ್ ಕದನಂ ಮಹತ್ |
ತಥಾ ಮೇ ಸರ್ವಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ||3||
ಸ್ಕಂದನು ದೈತ್ಯರೊಡನೆ ಹೇಗೆ ದೊಡ್ಡದಾದ ಕಾದಾಟವನ್ನು ಮಾಡಿದನು? ನಾನು ಇವುಗಳ ಬಗ್ಗೆ ತುಂಬಾ ಕುತೂಹಲವುಳ್ಳವನಾಗಿದ್ದೇನೆ. ಇದೆಲ್ಲವನ್ನೂ ಹೇಳು.
ವೈಶಂಪಾಯನಃ
ಕುರುವಂಶಸ್ಯ ಸದೃಶಂ ಕೌತೂಹಲಮಿದಂ ತವ |
ಹರ್ಷಮುತ್ಪಾದಯತ್ಯೇವ ವಚೋ ಮೇ ಜನಮೇಜಯ ||4||
ವೈಶಂಪಾಯನ ಜನಮೇಜಯನೇ! ಕುರುವಂಶದಲ್ಲಿ ಜನಿಸಿದ ನಿನಗೆ ಇಂತಹ ವಿಷಯಗಳಲ್ಲಿ ಕುತೂಹಲವು ಯೋಗ್ಯವಾಗಿದೆ. ನಿನ್ನ ಮಾತುಗಳು ನನಗೆ ಆನಂದವನ್ನೇ ಉಂಟುಮಾಡುತ್ತಿವೆ.
ಅಹಂ ತತ್ ಕಥಯಿಷ್ಯಾಮಿ ಶೃಣ್ವಾನಸ್ಯ ನರಾಧಿಪ |
ಅಭಿಷೇಕಂ ಕುಮಾರಸ್ಯ ಪ್ರಭಾವಂ ಚ ಮಹಾತ್ಮನಃ ||5||
ರಾಜನೇ! ಕೇಳುತ್ತಿರುವ ನಿನಗೆ ನಾನು ಎಲ್ಲವನ್ನೂ ಹೇಳುವೆನು. ಮಹಾತ್ಮನಾದ ಸ್ಕಂದನ ಪ್ರಭಾವವನ್ನೂ, ಅವನ ಪಟ್ಟಾಭಿಷೇಕವನ್ನೂ ಹೇಳುವೆನು.
ತೇಜೋ ಮಾಹೇಶ್ವರಂ ಸ್ಕನ್ನಮಗ್ನೌ ಪ್ರಪತಿತಂ ಪುರಾ |
ತತ್ಸರ್ವಂ ಭಗವಾನಗ್ನಿರ್ನಾಶಕದ್ ಧರ್ತುಮಕ್ಷಯಮ್ ||6||
ಹಿಂದೆ ರುದ್ರನ ತೇಜಸ್ಸು ವೀರ್ಯರೂಪದಲ್ಲಿ ಸ್ಖಲಿತವಾಗಿ ಅಗ್ನಿಯಲ್ಲಿ ಬಿದ್ದಿತು. ನಾಶರಹಿತವಾದ ಆ ವೀರ್ಯದಲ್ಲಿ ಪೂರ್ಣಭಾಗವನ್ನು ಹಿಡಿದಿಟ್ಟುಕೊಳ್ಳಲು ಅಗ್ನಿಗೆ ಸಾಧ್ಯವಾಗಲಿಲ್ಲ.
ತೇನ ಸೀದತಿ ತೇಜಸ್ವೀ ದೀಪ್ತಿಮಾನ್ ಹವ್ಯವಾಹನಃ |
ನ ಚೈವಂ ಧಾರಯಾಮಾಸ ಬ್ರಹ್ಮಣೇ ಚೋಕ್ತವಾನ್ ಪ್ರಭುಃ ||7||
ಕಾಂತಿಭರಿತವಾದ ಅಗ್ನಿಯೂ ಕೂಡ ಈ ವೀರ್ಯದಿಂದಾಗಿ ಆಯಾಸಗೊಂಡನು. ಆ ರುದ್ರತೇಜಸ್ಸನ್ನು ತಾನು ಧರಿಸಲಿಲ್ಲ ಮತ್ತು ಚತುರ್ಮುಖ ಬ್ರಹ್ಮನಲ್ಲಿ ನಿವೇದಿಸಿಕೊಂಡನು.
ಸ ಗಂಗಾಮುಪಸಂಗಮ್ಯ ನಿಯೋಗಾದ್ ಬ್ರಹ್ಮಣಃ ಪ್ರಭುಃ |
ಗರ್ಭಮಾಹಿತವಾನ್ ದಿವ್ಯಂ ಭಾಸ್ಕರೋಪಮತೇಜಸಮ್ ||8||
ಸಮರ್ಥನಾದ ಅಗ್ನಿಯು ಬ್ರಹ್ಮದೇವನ ಆದೇಶದಂತೆ ಗಂಗಾಸಂಗವನ್ನು ಮಾಡಿ ಅಲ್ಲಿ ಸೂರ್ಯಸದೃಶವಾದ ತೇಜಸ್ಸುಳ್ಳ ದಿವ್ಯವಾದ ಗರ್ಭವನ್ನು ಇರಿಸಿದನು.
ಅಥ ಗಂಗಾಪಿ ತಂ ಗರ್ಭಮಸಹಂತೀ ವಿಧಾರಣೇ |
ಉತ್ಸಸರ್ಜ ಗಿರೌ ರಮ್ಯೇ ಹಿಮವತ್ಯಮರಾರ್ಚಿತೇ ||9||
ಅನಂತರ ಗಂಗೆಯೂ ಕೂಡ ಆ ಗರ್ಭವನ್ನು ಧರಿಸಲು ಸಾಧ್ಯವಾಗದೆ ದೇವತೆಗಳಿಂದ ಪೂಜ್ಯವಾದ ಹಿಮಾಲಯ ಪರ್ವತದ ಸುಂದರವಾದ ಗಿರಿಯಲ್ಲಿ ವಿಸರ್ಜಿಸಿದಳು.
ಸ ತತ್ರ ವವೃಧೇ ಲೋಕಾನಾವೃತ್ಯ ಜ್ವಲನಾತ್ಮಜಃ |
ದದೃಶುರ್ಜ್ವಲನಾಕಾರಂ ತಂ ಗರ್ಭಮಥ ಕೃತ್ತಿಕಾಃ ||10||
ಅಗ್ನಿಯ ಪುತ್ರನು ಅಲ್ಲಿ ಲೋಕಗಳನ್ನೇ ಆವರಿಸಿಕೊಂಡು ಬೆಳೆದನು. ಬೆಂಕಿಯಂತಿರುವ ಆ ಗರ್ಭವನ್ನು ಕೃತ್ತಿಕಾದೇವಿಯರು ನೋಡಿದರು.
ಶರಸ್ತಂಭೇ ಮಹಾತ್ಮಾನಮನಲಾತ್ಮಜಮೀಶ್ವರಮ್ |
ಮಮಾಯಮಿತಿ ತಾಃ ಸರ್ವಾಃ ಪುತ್ರಾರ್ಥಿನ್ಯೋಽಭಿಚುಕ್ರುಶುಃ ||11||
ಶರವೆಂಬ ಹುಲ್ಲಿನ ಪೊದೆಯಲ್ಲಿ ಇದ್ದ ಮಹಾತ್ಮನಾದ ಅಗ್ನಿಪುತ್ರನನ್ನು ನೋಡಿದ ಕೃತ್ತಿಕೆಯರು ಇವನು ನನ್ನವನು, ಇವನು ನನ್ನವನು ಎಂದು ಜೋರಾಗಿ ಕೂಗಿಕೊಂಡರು. ಏಕೆಂದರೆ ಅವರೆಲ್ಲರೂ ಪುತ್ರನನ್ನು ಅಪೇಕ್ಷಿಸಿದ್ದರು.

ತಾಸಾಂ ವಿದಿತ್ವಾ ಭಾವಂ ತಂ ಮಾತೄಣಾಂ ಭಗವಾನ್ ಪ್ರಭುಃ |
ಪ್ರಸ್ನುತಾನಾಂ ಪಯಃ ಷಡ್ಭಿರ್ವದನೈರಪಿಬತ್ತದಾ ॥12॥
ಪೂಜ್ಯನಾದ, ಸಮರ್ಥನಾದ ಅಗ್ನಿಪುತ್ರನು ಅವರ ಅಭಿಪ್ರಾಯವನ್ನು ಅರಿತುಕೊಂಡು, ಆರು ಜನ ಕೃತ್ತಿಕಾದೇವಿಯರ ಸ್ತನಗಳ ಹಾಲನ್ನು ತನ್ನ ಆರು ಮುಖಗಳಿಂದ ಕುಡಿದನು.
ತಂ ಪ್ರಭಾವಂ ಸಮಾಲಕ್ಷ್ಯ ತಸ್ಯ ಬಾಲಸ್ಯ ಕೃತ್ತಿಕಾಃ |
ಪರಂ ವಿಸ್ಮಯಮಾಪನ್ನಾ ದೇವ್ಯೋ ದಿವ್ಯವಪುರ್ಧರಾಃ ॥13॥
ಅಲೌಕಿಕವಾದ ದೇಹವನ್ನು ಹೊಂದಿದ್ದ ಆ ಕೃತ್ತಿಕಾದೇವಿಯರು ಬಾಲಕನ ಆ ಸಾಮರ್ಥ್ಯವನ್ನು ನೋಡಿ ಬಹಳ ಆಶ್ಚರ್ಯಪಟ್ಟರು.
ಯತ್ರೋತ್ಸೃಷ್ಟಶ್ಚ ಗರ್ಭಃ ಸ ಗಂಗಯಾ ಗಿರಿಮೂರ್ಧನಿ |
ಸ ಶೈಲಃ ಕಾಂಚನಃ ಸರ್ವಃ ಸಂಬಭೌ ಮೇರುವತ್ ತದಾ ॥14॥
ಗಂಗೆಯು ತನ್ನಲ್ಲಿದ್ದ ಗರ್ಭವನ್ನು ಯಾವ ಪರ್ವತದಲ್ಲಿ ಹಾಕಿದ್ದಳೋ ಆ ಪರ್ವತವು ಬಂಗಾರಮಯವಾಗಿ ಮೇರುಪರ್ವತದಂತೆ ಶೋಭಿಸಿತು.
ವರ್ಧತಾ ಚೈವ ಗರ್ಭೇಣ ಪೃಥಿವೀ ತೇನ ರಂಜಿತಾ |
ಅತಶ್ಚ ಸರ್ವೇ ಸಂವೃತ್ತಾ ಗಿರಯಃ ಕಾಂಚನಾತ್ಮಕಾಃ ॥15॥
ಬೆಳೆಯುತ್ತಿದ್ದ ಆ ಗರ್ಭದಿಂದ ಪೃಥಿವಿಯೂ ಶೋಭಿಸುತ್ತಿತ್ತು. ಆದ್ದರಿಂದಲೇ ಅಲ್ಲಿದ್ದ ಎಲ್ಲಾ ಗಿರಿ-ಪರ್ವತಗಳೂ ಬಂಗಾರಮಯವಾದವು.
ಕುಮಾರಃ ಸುಮಹಾವೀರ್ಯಃ ಕಾರ್ತಿಕೇಯ ಇತಿ ಸ್ಮೃತಃ |
ಗಾಂಗೇಯಃ ಪೂರ್ವಮಭವನ್ಮಹಾಕಾಯೋ ಬಲಾನ್ವಿತಃ ॥16॥
ಮಹಾಶಕ್ತಿಶಾಲಿಯಾದ ಕುಮಾರನು ಕಾರ್ತಿಕೇಯ ಎಂದು ಪ್ರಸಿದ್ಧನಾದನು. ಬಲಶಾಲಿಯಾದ, ಬೃಹತ್ಕಾಯನಾದ ಅವನು ಮೊದಲು ಗಾಂಗೇಯನೆಂದು ಕರೆಯಿಸಿಕೊಂಡನು.
ಶಮೇನ ತಪಸಾ ಚೈವ ವೀರ್ಯೇಣ ಚ ಸಮನ್ವಿತಃ |
ವವೃಧೇಽತೀವ ರಾಜೇಂದ್ರ ಚಂದ್ರವತ್ ಪ್ರಿಯದರ್ಶನಃ ॥17॥
ರಾಜೇಂದ್ರನೇ! ಆ ಕುಮಾರನು ಇಂದ್ರಿಯನಿಗ್ರಹ, ತಪಸ್ಸು, ವೀರ್ಯಗಳಿಂದ ಕೂಡಿದವನಾಗಿ ನೋಡಲು ಚಂದ್ರನ ಹಾಗೆ ಸುಂದರನಾಗಿ ಚೆನ್ನಾಗಿ ಬೆಳೆದನು.
ಸ ತಸ್ಮಿನ್ ಕಾಂಚನೇ ದಿವ್ಯೇ ಶರಸ್ತಂಭೇ ಶ್ರಿಯಾ ವೃತಃ |
ಸ್ತೂಯಮಾನಃ ಸದಾ ಶೇತೇ ಗಂಧರ್ವೈರ್ಮುನಿಭಿಸ್ತಥಾ ॥18॥
ಕುಮಾರನು ಒಳ್ಳೆಯ ಕಾಂತಿಯಿಂದ ಯುಕ್ತನಾಗಿದ್ದುಕೊಂಡು ಬಂಗಾರಮಯವಾದ ಆ ಶರ (ಒಂದು ಜಾತಿಯ ದರ್ಭೆ) ಪುಂಜದಲ್ಲಿ, ಮಲಗಿದ್ದನು. ಯಾವಾಗಲೂ ಗಂಧರ್ವರು, ಮುನಿಗಳು ಅವನನ್ನು ಸ್ತುತಿಸುತ್ತಿದ್ದರು.
ತಥೈನಮನ್ವನೃತ್ಯಂತ ದೇವಕನ್ಯಾಃ ಸಹಸ್ರಶಃ |
ದಿವ್ಯವಾದಿತ್ರನೃತ್ಯಜ್ಞಾಃ ಸ್ತುವಂತ್ಯಶ್ಚಾರುದರ್ಶನಾಃ ॥19॥
ದೇವತಾಸ್ತ್ರೀಯರು ಅವನ ಮುಂದೆ ಸಾವಿರಾರು ಸಂಖ್ಯೆಯಲ್ಲಿ ಬಂದು ನೃತ್ಯ ಮಾಡುತ್ತಿದ್ದರು. ಅಲೌಕಿವಾದ ವಾದ್ಯ ಮತ್ತು ನೃತ್ಯವನ್ನು ತಿಳಿದಿದ್ದ ಸುಂದರಿಯರಾದ ಅವರು ಕುಮಾರನನ್ನು ಸ್ತುತಿಸುತ್ತಿದ್ದರು.
ಅನ್ವಯುಶ್ಚಾಗ್ನಯಃ ಸರ್ವೇ ಗಂಗಾ ಚ ಸರಿತಾಂ ವರಾ |
ದಧಾರ ಪೃಥಿವೀ ಚೈನಂ ಬಿಭ್ರತೀ ರೂಪಮುತ್ತಮಮ್ ॥20॥
ಎಲ್ಲಾ ಅಗ್ನಿಗಳೂ ಅವನ ಹತ್ತಿರ ಬಂದರು. ಗಂಗೆಯೂ ಹಾಗೂ ಪೃಥಿವಿಯೂ ಉತ್ತಮವಾದ ರೂಪವನ್ನು ಧರಿಸಿಕೊಂಡು ಬಂದರು.
ಜಾತಕರ್ಮಾದಿಕಾಸ್ತಸ್ಯ ಕ್ರಿಯಾಶ್ಚಕ್ರೇ ಬೃಹಸ್ಪತಿಃ |
ವೇದಶ್ಚೈನಂ ಚತುರ್ಮೂರ್ತಿರುಪತಸ್ಥೇ ಕೃತಾಂಜಲಿಃ ॥21॥
ದೇವಗುರು ಬೃಹಸ್ಪತಿಯು ಆ ಕುಮಾರನಿಗೆ ಜಾತಕರ್ಮ ಮೊದಲಾದ ಸಂಸ್ಕಾರಗಳನ್ನು ಮಾಡಿದನು. ಸ್ವಯಂ ವೇದಪುರುಷನು ನಾಲ್ಕುರೂಪಗಳನ್ನು ಧಾರಣೆ ಮಾಡಿಕೊಂಡು ಅವನ ಸಮೀಪದಲ್ಲಿ ಕೈಮುಗಿದುಕೊಂಡು ನಿಂತನು.
ಧನುರ್ವೇದಶ್ಚತುಷ್ಪಾದಃ ಶಾಸ್ತ್ರಗ್ರಾಮಃ ಸಸಂಗ್ರಹಃ |
ತತ್ರೈನಂ ಸಮುಪಾತಿಷ್ಠತ್ಸಾಕ್ಷಾದ್ ವಾಣೀ ಚ ಕೇವಲಾ ॥22॥
ನಾಲ್ಕು ಪ್ರಕಾರಗಳಿಂದ ಸಹಿತವಾದ ಧನುರ್ವೇದ, ಎಲ್ಲಾ ಅಸ್ತ್ರಗಳು ಅಲ್ಲಿ ಬಂದು ನಿಂತವು. ಸಾಕ್ಷಾತ್ ವಾಣಿಯು ಅಲ್ಲಿ ಬಂದು ಉಪಸ್ಥಿತಳಾದಳು.
ಸ ದದರ್ಶ ಮಹಾತ್ಮಾನಂ ದೇವದೇವಮುಮಾಪತಿಮ್ |
ಶೈಲಪುತ್ರ್ಯಾ ಸಮಾಗಮ್ಯ ಭೂತಸಂಘಶತೈರ್ವೃತಃ ॥23॥
ಕುಮಾರನು ಮಹಾತ್ಮನಾದ ದೇವತೆಗಳಿಗೇ ದೇವತೆಯಾದ ರುದ್ರನನ್ನು ನೋಡಿದನು. ರುದ್ರನ ಪಕ್ಕದಲ್ಲಿ ಪಾರ್ವತಿಯೂ ಬಂದಿದ್ದಳು. ಮತ್ತು ಎಲ್ಲಾ ಭೂತಗಣಗಳು ಸುತ್ತುವರಿದಿದ್ದವು. ಇದೆಲ್ಲವನ್ನೂ ಕುಮಾರನು ನೋಡಿದನು.
ನಿಕಾಯಾ ಭೂತಸಂಘಾನಾಂ ಪರಮಾದ್ಭುತದರ್ಶನಾಃ |
ವಿಕೃತಾ ವಿಕೃತಾಕಾರಾ ವಿಕೃತಾಭರಣಧ್ವಜಾಃ ॥24॥
ಭೂತಗಣಗಳ ಸಮೂಹಗಳು ನೋಡಲು ಬಹಳ ಅದ್ಭುತವಾಗಿದ್ದವು. ವಿಚಿತ್ರವಾಗಿದ್ದ ಆ ಭೂತಗಣಗಳು ವಿಕಾರವುಳ್ಳ ಆಕಾರಗಳನ್ನು ಹೊಂದಿದ್ದವು. ಅವುಗಳ ಆಭರಣ, ಧ್ವಜ ಇವೆಲ್ಲವೂ ವಿಕಾರವಾಗಿದ್ದವು.

ವ್ಯಾಘ್ರಸಿಂಹರ್ಕ್ಷವದನಾ ಬಿಡಾಲಮಕರಾನನಾಃ |
ವೃಷದಂಶಮುಖಾಶ್ಚಾನ್ಯೇ ಗಜೋಷ್ಟ್ರವದನಾಸ್ತಥಾ ॥25॥
ಹುಲಿ, ಸಿಂಹ, ಕರಡಿ, ಬೆಕ್ಕು, ಕೋತಿ, ಎತ್ತು ಮೊದಲಾದವುಗಳ ಹಾಗೆ ಮುಖವುಳ್ಳವುಗಳಾಗಿದ್ದವು. ಕೆಲವು ಭೂತಗಳ ಮುಖಗಳು ಕಾಡುಬೆಕ್ಕಿನ ಮುಖದಂತೆ ಇದ್ದವು. ಇನ್ನು ಕೆಲವು ಭೂತಗಳು ಆನೆಯಂತೆ, ಒಂಟೆಯಂತೆ ಮುಖವುಳ್ಳವಾಗಿದ್ದವು.
ಉಲೂಕವದನಾಃ ಕೇಚಿದ್ ಗೃಧ್ರಗೋಮಾಯುದರ್ಶನಾಃ |
ಕ್ರೌಂಚಪಾರಾವತನಿಭೈರ್ವದನ್ಯೈಃ ರಾಂಕವೈರಪಿ ॥26॥
ಕೆಲವು ಭೂತಗಳು ಗೂಬೆಯ ಮುಖವನ್ನು ಹೊಂದಿದ್ದವು. ಕೆಲವು ಗಿಡುಗನಂತೆಯೂ ಕೆಲವು ನರಿಯಂತೆಯೂ ಕಾಣಿಸುತ್ತಿದ್ದವು. ಕೆಲವು ಭೂತಗಳು ಕ್ರೌಂಚಪಕ್ಷಿಯ ಮುಖವನ್ನೂ, ಕೆಲವು ಪಾರಿವಾಳದ ಮುಖವನ್ನೂ ಹೊಂದಿದ್ದವು. ಕೆಲವು ರಂಕು ಮೃಗದ ಮುಖವನ್ನು ಧರಿಸಿದ್ದವು.
ಶ್ವಾವಿಚ್ಛಲ್ಯಕಗೋಧಾನಾಮಜೈಡಕಗವಾಂ ತಥಾ |
ಸದೃಶಾನಿ ವಪೂಂಷ್ಯನ್ಯೇ ತತ್ರ ತತ್ರ ವ್ಯಧಾರಯನ್ ॥27॥
ಅಲ್ಲಲ್ಲಿ ಭೂತಗಳು ನಾಯಿ, ಕುರಿ, ಶಲ್ಯ, ಉಡ, ಆಡು, ಚಿಗರೆ, ಹಸುಗಳ ಹಾಗೆ ಶರೀರವನ್ನು ಧರಿಸಿಕೊಂಡಿದ್ದವು.
ಕೇಚಿಚ್ಛೈಲಾಂಬುದಪ್ರಖ್ಯಾಶ್ಚಕ್ರಾಲಾತಗದಾಯುಧಾಃ |
ಕೇಚಿದಂಜನಪುಂಜಾಭಾಃ ಕೇಚಿಚ್ಛ್ವೇತಾಚಲಪ್ರಭಾಃ ॥28॥
ಕೆಲವು ಭೂತಗಳು ಪರ್ವತಾಕಾರದಲ್ಲಿ ಕಾಣಿಸುತ್ತಿದ್ದವು. ಕೆಲವು ನೀರುತುಂಬಿದ ಮೋಡದಂತಿದ್ದವು. ಕೈಯಲ್ಲಿ ಚಕ್ರ, ಬೆಂಕಿಯ ಕೊಳ್ಳಿ, ಗದೆ ಮೊದಲಾದ ಆಯುಧಗಳನ್ನು ಧರಿಸಿಕೊಂಡಿದ್ದವು. ಕೆಲವು ಕಪ್ಪು ಕಾಡಿಗೆಯ ರಾಶಿಯಂತೆ ಕಾಣಿಸುತ್ತಿದ್ದವು. ಕೆಲವು ಬೆಳ್ಳಗಿನ ಪರ್ವತದಂತಿದ್ದವು.
ಸಪ್ತಮಾತೃಗಣಾಶ್ಚೈವ ಸಮಾಜಗ್ಮುರ್ವಿಶಾಂಪತೇ |
ಸಾಧ್ಯಾ ವಿಶ್ವೇಽಥ ಮರುತೋ ವಸವಃ ಪಿತರಸ್ತಥಾ ॥29॥
ರುದ್ರಾದಿತ್ಯಾಸ್ತಥಾ ಸಿದ್ಧಾ ಭುಜಗಾ ದಾನವಾಃ ಖಗಾಃ |
ಬ್ರಹ್ಮಾ ಸ್ವಯಂಭೂರ್ಭಗವಾನ್ ಸಪುತ್ರಃ ಸಹವಿಷ್ಣುನಾ ॥30॥
ಶಕ್ರಸ್ತಥಾಽಭ್ಯಯಾದ್ ದ್ರಷ್ಟುಂ ಕುಮಾರಮಮಿತಪ್ರಭಮ್ |
ನಾರದಪ್ರಮುಖಾಶ್ಚಾಪಿ ದೇವಗಂಧರ್ವಸತ್ತಮಾಃ ॥31॥
ರಾಜನೇ, ಸಪ್ತಮಾತೃಗಣವೂ ಅಲ್ಲಿಗೆ ಬಂದಿತು. ಸಾಧ್ಯರು, ವಿಶ್ವೇದೇವತೆಗಳು, ಮರುದ್ಗಣಗಳು, ವಸುಗಳು, ಪಿತೃದೇವತೆಗಳು, ರುದ್ರರು, ಆದಿತ್ಯರು, ಸಿದ್ಧರು, ಸರ್ಪಗಳು, ದಾನವರು, ಪಕ್ಷಿಗಳು ಎಲ್ಲರೂ ಅಲ್ಲಿಗೆ ಬಂದರು. ಸ್ವಯಂಭೂ ಎನಿಸಿದ ಚತುರ್ಮುಖ ಬ್ರಹ್ಮ, ಅವನ ಮಕ್ಕಳು, ವಿಷ್ಣು, ಇಂದ್ರ ಇವರೂ ಅತಿಕಾಂತಿಯುಳ್ಳ ಕುಮಾರನನ್ನು ನೋಡಲು ಬಂದರು.
ದೇವರ್ಷಯಶ್ಚ ಸಿದ್ಧಾಶ್ಚ ಬೃಹಸ್ಪತಿಪುರೋಗಮಾಃ |
ಪಿತರೋ ಜಗತಃ ಶ್ರೇಷ್ಠಾ ದೇವಾನಾಮಪಿ ದೇವತಾಃ |
ತೇಽಪಿ ತತ್ರ ಸಮಾಜಗ್ಮುರ್ಯಾಮಾ ಧಾಮಾಶ್ಚ ಸರ್ವಶಃ ॥32॥
ನಾರದ ಮೊದಲಾದ ದೇವ-ಗಂಧರ್ವಶ್ರೇಷ್ಠರು, ದೇವರ್ಷಿಗಳು, ಸಿದ್ಧರು, ಬೃಹಸ್ಪತಿಮೊದಲಾದವರು, ಪಿತೃಗಳು, ಜಗತ್ತಿನಲ್ಲಿಯೇ ಉತ್ತಮರಾದ ದೇವಾಧಿದೇವತೆಗಳೂ, ಎಲ್ಲಾ ಯಾಮಾಭಿಮಾನಿದೇವತೆಗಳು, ಸಕಲಧಾಮಾಭಿಮಾನಿ ದೇವತೆಗಳೂ ಅಲ್ಲಿಗೆ ಬಂದರು.
ಸ ತು ಬಾಲೋಽಪಿ ಬಲವಾನ್ ಮಹಾಯೋಗಬಲಾನ್ವಿತಃ |
ಅಭ್ಯಾಜಗಾಮ ದೇವೇಶಂ ಶೂಲಹಸ್ತಂ ಪಿನಾಕಿನಮ್ ॥33॥
ಮಹಾಯೋಗಬಲವನ್ನು ಹೊಂದಿರುವ ಆ ಬಲಶಾಲಿಯಾದ ಬಾಲಕ ಕುಮಾರನು ಶೂಲಧಾರಿಯಾದ ಪಿನಾಕಿರುದ್ರನನ್ನು ಎದುರುಗೊಂಡನು.
ತಮಾವ್ರಜಂತಮಾಲಕ್ಷ್ಯ ಶಿವಸ್ಯಾಸೀನ್ಮನೋಗತಮ್ |
ಯುಗಪಚ್ಛೈಲಪುತ್ರ್ಯಾಶ್ಚ ಗಂಗಾಯಾಃ ಪಾವಕಸ್ಯ ಚ ॥34॥
ತನ್ನ ಮುಂದೆ ಬರುತ್ತಿರುವ ಕುಮಾರನನ್ನು ನೋಡಿ ಶಿವ-ಪಾರ್ವತಿಯರ ಹಾಗೂ ಅಗ್ನಿಯ, ಗಂಗೆಯ ಮನಸ್ಸಿನಲ್ಲಿ ಆಲೋಚನೆಯೊಂದು ಮೂಡಿಬಂತು.
ಕಂ ನು ಪೂರ್ವಮಯಂ ಬಾಲೋ ಗೌರವಾದಭ್ಯುಪೈಷ್ಯತಿ |
ಅಪಿ ಮಾಮಿತಿ ಸರ್ವೇಷಾಂ ತೇಷಾಮಾಸೀನ್ಮನೋಗತಮ್ ॥35॥
ಈ ಬಾಲಕನು ಯಾರನ್ನು ಮೊದಲು ಗೌರವಪೂರ್ವಕವಾಗಿ ಸ್ವೀಕರಿಸುತ್ತಾನೆ? ನನ್ನನ್ನೋ? ಎಂದು ಎಲ್ಲರ ಮನಸ್ಸಿನಲ್ಲಿಯೂ ಯೋಚನೆಯು ಮೂಡಿಬಂದಿತು.
ತೇಷಾಮೇತಮಭಿಪ್ರಾಯಂ ಚತುರ್ಣಾಮುಪಲಕ್ಷ್ಯ ಸಃ |
ಯುಗಪದ್ಯೋಗಮಾಸ್ಥಾಯ ಸಸರ್ಜ ವಿವಿಧಾಸ್ತನೂಃ ॥36॥
ಕುಮಾರನು ಈ ನಾಲ್ಕುಮಂದಿಯ ಅಭಿಪ್ರಾಯವನ್ನು ತಿಳಿದವನಾಗಿ ಏಕಕಾಲದಲ್ಲಿ ಅನೇಕ ಶರೀರಗಳನ್ನು ಸೃಷ್ಟಿಸಿಕೊಂಡನು.
ತತೋಽಭವಚ್ಚತುರ್ಮೂರ್ತಿಃ ಕ್ಷಣೇನ ಭಗವಾನ್ ಪ್ರಭುಃ |
ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠತಃ ॥37॥
ಆದ್ದರಿಂದಲೇ ಕ್ಷಣಮಾತ್ರದಲ್ಲಿ ಸಮರ್ಥನಾದ ಪೂಜ್ಯ ಕುಮಾರನು ನಾಲ್ಕುರೂಪವುಳ್ಳವನಾದನು. ಹೀಗೆ ಮೊದಲಿದ್ದ ಕುಮಾರರೂಪ, ನಂತರ ಉಂಟಾದ ಶಾಖ, ವಿಶಾಖ, ನೈಗಮೇಯ ಎಂಬ ಮೂರು ರೂಪ ಹೀಗೆ ಚತುರ್ಮೂರ್ತಿ ಉಳ್ಳವನಾದನು.

ಏವಂ ಸ ಕೃತ್ವಾ ಹ್ಯಾತ್ಮಾನಂ ಚತುರ್ಧಾ ಭಗವಾನ್ ಪ್ರಭುಃ |
ಯತೋ ರುದ್ರಸ್ತತಃ ಸ್ಕಂದೋ ಜಗಾಮಾದ್ಭುತದರ್ಶನಃ ॥38॥
ಸಮರ್ಥನಾದ ಕುಮಾರನು ತನ್ನನ್ನು ನಾಲ್ಕು ರೂಪಗಳಿಂದ ವ್ಯಕ್ತಗೊಳಿಸಿ ಎಲ್ಲಿ ರುದ್ರನಿದ್ದನೋ ಅಲ್ಲಿಗೆ ಅದ್ಭುತವಾದ ಸ್ಕಂದರೂಪದಿಂದ ಹೋದನು.
ವಿಶಾಖಸ್ತು ಯಯೌ ದೇವೀಂ ತತೋ ಗಿರಿವರಾತ್ಮಜಾಮ್ |
ಶಾಖೋ ಯಯೌ ಸ ಭಗವಾನ್ ದಿವ್ಯಮೂರ್ತಿರ್ವಿಭಾವಸುಮ್ ॥
ಅನಂತರ ವಿಶಾಖ ಎಂಬ ರೂಪದಿಂದ ಪರ್ವತಕುಮಾರಿಯಾದ ಪಾರ್ವತಿಯ ಹತ್ತಿರ ಹೋದನು. ಶಾಖ ಎಂಬ ಅಲೌಕಿಕ ರೂಪದಿಂದ ಅಗ್ನಿಯ ಕಡೆಗೆ ಹೋದನು.
ನೈಗಮೇಯೋಽಗಮದ್ ಗಂಗಾಂ ಕುಮಾರಃ ಪಾವಕಃ ಪ್ರಭುಃ ॥40॥
ಅಗ್ನಿಪುತ್ರಕುಮಾರ ನೈಗಮೇಯ(ಷ) ರೂಪದಿಂದ ಗಂಗೆಯ ಹತ್ತಿರಕ್ಕೆ ಹೋದನು.
ಸರ್ವೇ ಭಾಸ್ವರದೇಹಾಸ್ತೇ ಚತ್ವಾರಃ ಸಮರೂಪಿಣಃ |
ತಾನ್ ಸಮಭ್ಯಯುರವ್ಯಗ್ರಾಸ್ತದದ್ಭುತಮಿವಾಭವತ್ ॥41॥
ಹಾಹಾಕಾರೋ ಮಹಾನಾಸೀದ್ ದೇವದಾನವರಕ್ಷಸಾಮ್ |
ದೃಷ್ಟ್ವಾ ತನ್ಮಹದಾಶ್ಚರ್ಯಮದ್ಭುತಂ ರೋಮಹರ್ಷಣಮ್ ॥42॥
ಕಾಂತಿಯಿಂದ ಹೊಳೆಯುತ್ತಿದ್ದ ಆ ಎಲ್ಲಾ ನಾಲ್ಕು ಶರೀರಗಳೂ ಸಮಾನವಾಗಿದ್ದವು. ತಮ್ಮ ತಮ್ಮ ಕಡೆಗೆ ಬಂದ ಕುಮಾರನ ರೂಪಗಳನ್ನು ಅವರೆಲ್ಲರೂ ಯಾವುದೇ ವಿಕಾರ - ಗೊಂದಲಕ್ಕೊಳಗಾಗದೆ ಸ್ವೀಕರಿಸಿದರು. ಇದು ಬಹಳ ಅದ್ಭುತವಾಗಿತ್ತು.
ತತೋ ರುದ್ರಶ್ಚ ದೇವೀ ಚ ಪಾವಕಶ್ಚ ಪಿತಾಮಹಮ್ |
ಗಂಗಯಾ ಸಹಿತಾಃ ಸರ್ವೇ ಪ್ರಣಿಪೇತುರ್ಜಗತ್ಪತಿಮ್ ॥43॥
ಅನಂತರ ರುದ್ರ, ಪಾರ್ವತಿ, ಅಗ್ನಿ, ಮತ್ತು ಗಂಗೆಯರು ಜಗತ್ಪತಿಯಾದ ಬ್ರಹ್ಮನಿಗೆ ನಮಸ್ಕರಿಸಿದರು.
ಪ್ರಣಿಪತ್ಯ ತತಸ್ತೇ ತು ವಿಧಿವದ್ ರಾಜಪುಂಗವ |
ಇದಮೂಚುರ್ವಚೋ ರಾಜನ್ ಕಾರ್ತಿಕೇಯಪ್ರಿಯೇಪ್ಸಯಾ ॥44॥
ರಾಜಶ್ರೇಷ್ಠನೇ! ಅವರೆಲ್ಲರೂ ವಿಧ್ಯುಕ್ತವಾಗಿ ನಮಸ್ಕರಿಸಿ ಕಾರ್ತಿಕೇಯನಿಗೆ ಪ್ರಿಯವಾದುದನ್ನು ಮಾಡುವ ಇಚ್ಛೆಯಿಂದ ಈ ಮಾತನ್ನು ಹೇಳಿದರು.
ರುದ್ರಾದಯಃ
ಅಸ್ಯ ಬಾಲಸ್ಯ ಭಗವನ್ನಾಧಿಪತ್ಯಂ ಯಥೇಪ್ಸಿತಮ್ |
ಅಸ್ಮತ್ಪ್ರಿಯಾರ್ಥಂ ದೇವೇಶ ಸದೃಶಂ ದಾತುಮರ್ಹಸಿ ॥45॥
ರುದ್ರಾದಿಗಳು ದೇವೇಶನೇ! ಈ ಬಾಲಕನಿಗೆ ಯೋಗ್ಯವಾದ ಹಾಗೂ ನಮಗೂ ಇಷ್ಟವಾದ ಒಂದು ಆಧಿಪತ್ಯವನ್ನು ಇವನಿಗೆ ತಾವು ಕೊಡಬೇಕು.
ವೈಶಂಪಾಯನಃ
ತತಃ ಸ ಭಗವಾನ್ ಪ್ರೀತಃ ಸರ್ವಲೋಕಪಿತಾಮಹಃ |
ಮನಸಾ ಚಿಂತಯಾಮಾಸ ಕಿಮಯಂ ಲಭತಾಮಿತಿ ॥46॥
ವೈಶಂಪಾಯನ ಎಲ್ಲಾ ಲೋಕಗಳಿಗೂ ಪಿತಾಮಹನಾದ ಬ್ರಹ್ಮದೇವನು ಸಂತುಷ್ಟನಾಗಿ, ಇವನಿಗೆ ಏನನ್ನು ಕೊಡುವುದು ಎಂದು ಮನಸ್ಸಿನಿಂದ ಯೋಚಿಸಿದನು.
ಐಶ್ವರ್ಯಾಣಿ ಹಿ ಸರ್ವಾಣಿ ದೇವದಾನವರಕ್ಷಸಾಮ್ |
ಭೂತಯಕ್ಷಪಿಶಾಚಾನಾಂ ಪನ್ನಗಾನಾಂ ಚ ಸರ್ವಶಃ ॥47॥
ಪೂರ್ವಮೇವಾದಿದೇಶಾಸೌ ನಿಕಾಯೇಷು ಮಹಾತ್ಮನಾಮ್ ॥48॥
ಸಾಮರ್ಥ್ಯಂ ಚ ತಥೈಶ್ವರ್ಯಂ ಮಹಾಮತಿರಮನ್ಯತ ॥49॥
ದೇವತೆಗಳ, ದಾನವರ, ರಾಕ್ಷಸರ, ಭೂತಗಳ, ಪ್ರೇತಗಳ, ಪಿಶಾಚಗಳ, ಸರ್ಪಗಳ ಎಲ್ಲಾ ಐಶ್ವರ್ಯಗಳೂ ಮೊದಲೇ ನಿರ್ಧಾರಿತವಾಗಿತ್ತು. ಮತ್ತು ಆ ಗುಂಪುಗಳಲ್ಲಿ ಆಧಿಪತ್ಯವೂ ಒಬ್ಬೊಬ್ಬರಿಗೆ ಮೊದಲೇ ಕೊಡಲ್ಪಟ್ಟಿತ್ತು. ಈ ಎಲ್ಲಾ ವರ್ಗಗಳ ಆಧಿಪತ್ಯಸ್ವೀಕಾರಕ್ಕೆ ಬೇಕಾದ ಸಾಮರ್ಥ್ಯಮತ್ತು ಶಕ್ತಿಯು ಈ ಕುಮಾರನಲ್ಲಿದೆ ಎಂಬುದಾಗಿ ಮಹಾಜ್ಞಾನಿಯಾದ ಬ್ರಹ್ಮನು ತಿಳಿದುಕೊಂಡನು.
ತತೋ ಮುಹೂರ್ತಂ ಸ ಧ್ಯಾತ್ವಾ ದೇವಾನಾಂ ಶ್ರೇಯಸಿ ಸ್ಥಿತಃ |
ಸೈನಾಪತ್ಯಂ ದದೌ ತಸ್ಮೈ ಸರ್ವಭೂತೇಷು ಭಾರತ ॥50॥
ಭರತಕುಲೋದ್ಭವನೇ! ಅನಂತರ ಒಂದು ಮುಹೂರ್ತದಷ್ಟು ಕಾಲ ದೇವತೆಗಳ ಶ್ರೇಯಸ್ಸಿನ ಬಗ್ಗೆ ಧ್ಯಾನಮಗ್ನನಾಗಿ ಎಲ್ಲಾ ಜೀವರ ಸೇನಾಧಿಪತ್ಯವನ್ನು ಕುಮಾರನಿಗೆ ಕೊಟ್ಟನು.
ದಿವಿ ದೇವನಿಕಾಯಾನಾಂ ಯೇ ಚ ರಾಜನ್ ಪರಿಶ್ರುತಾಃ |
ತಾನ್ ಸರ್ವಾನ್ ವ್ಯಾದಿದೇಶಾಸ್ಮೈ ಸರ್ವಭೂತಪಿತಾಮಹಃ ॥51॥
ರಾಜನೇ! ಸಕಲಪ್ರಾಣಿಪ್ರಪಂಚಕ್ಕೆ ಪಿತಾಮಹನಾದ ಬ್ರಹ್ಮನು ಸ್ವರ್ಗಲೋಕದ ಎಲ್ಲಾ ದೇವತೆಗಳನ್ನು ಉದ್ದೇಶಿಸಿ ಆದೇಶವನ್ನು ಕೊಟ್ಟನು.
ತತಃ ಕುಮಾರಮಾದಾಯ ದೇವಾ ಬ್ರಹ್ಮಪುರೋಗಮಾಃ |
ಅಭಿಷೇಕಾರ್ಥಮಾಜಗ್ಮುಃ ಶೈಲೇಂದ್ರಂ ಸಹಿತಾಸ್ತತಃ ॥52॥

ಅನಂತರ ಚತುರ್ಮುಖಬ್ರಹ್ಮಮೊದಲಾದ ಎಲ್ಲಾ ದೇವತೆಗಳು ಕುಮಾರನನ್ನು ಕರೆತಂದು, ಅವನ ಪಟ್ಟಾಭಿಷೇಕಕ್ಕಾಗಿ ಎಲ್ಲರೂ ಸೇರಿ ಶ್ರೇಷ್ಠವಾದ ಹಿಮಾಲಯ ಪರ್ವತಕ್ಕೆ ಹೋದರು.
ಪುಣ್ಯಾಂ ಹೈಮವತೀಂ ದೇವೀಂ ಸರಿಚ್ಛ್ರೇಷ್ಠಾಂ ಸರಸ್ವತೀಮ್ |
ಸ್ಯಮಂತಪಂಚಕೇ ಯಾ ವೈ ಪಿತೃಲೋಕೇಷು ವಿಶ್ರುತಾ ॥53॥
ಹಿಮಾಲಯಪರ್ವತದಲ್ಲಿ ಹರಿಯುವ ಉತ್ತಮವಾದ ಪುಣ್ಯನದಿ ಸರಸ್ವತಿಯ ಸ್ಯಮಂತಪಂಚಕಕ್ಷೇತ್ರಕ್ಕೆ ಹೋದರು. ಆ ಸರಸ್ವತಿಯು ಪಿತೃಲೋಕಗಳಲ್ಲಿಯೂ ಪ್ರಸಿದ್ಧಳಾಗಿದ್ದಳು.
ತತ್ರ ತೀರೇ ಸರಸ್ವತ್ಯಾಃ ಪುಣ್ಯೇ ಸರ್ವಗುಣಾನ್ವಿತೇ |
ನಿಷೇದುರ್ದೇವಗಂಧರ್ವಾಃ ಸರ್ವೇ ಸಂಪೂರ್ಣಮಾನಸಾಃ ॥54॥
ಮನಸ್ಸಿನಲ್ಲಿ ಆನಂದವನ್ನು ತುಂಬಿಕೊಂಡಿರುವ ಎಲ್ಲಾ ದೇವ-ಗಂಧರ್ವರು ಸಕಲಗುಣಗಳನ್ನು ಹೊಂದಿದ್ದ ಸರಸ್ವತಿಯ ಪುಣ್ಯತೀರದಲ್ಲಿ ಕುಳಿತುಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಕುಮಾರಸ್ಯೈನಾಪತ್ಯವರ್ಣನಂ ನಾಮ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಸ್ಕಂದನ ಪಟ್ಟಾಭಿಷೇಕ. ಅವನ ಪರಿವಾರ ಗಣಗಳ
ಸ್ವರೂಪ ಮತ್ತು ಹೆಸರುಗಳ ವರ್ಣನೆ.
ವೈಶಂಪಾಯನಃ
ತತೋಽಭಿಷೇಕಸಂಭಾರಾನ್ ಸರ್ವಾನ್ ಸಂಭೃತ್ಯ ಶಾಸ್ತ್ರತಃ |
ಬೃಹಸ್ಪತಿಃ ಸಮಿದ್ಧೇಽಗ್ನೌ ಜುಹಾವಾಜ್ಯಂ ಯಥಾವಿಧಿ ॥1॥
ವೈಶಂಪಾಯನ ಅನಂತರ ಪಟ್ಟಾಭಿಷೇಕಕ್ಕೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ಶಾಸೊತ್ರೕಕ್ತರೀತಿಯಲ್ಲಿ ಸಂಗ್ರಹಿಸಿಕೊಂಡು ಬೃಹಸ್ಪತಿಯು ವಿಧ್ಯುಕ್ತವಾಗಿ ಪ್ರಜ್ವಲಿಸುವ ಅಗ್ನಿಯಲ್ಲಿ ತುಪ್ಪವನ್ನು ಹೋಮಿಸಿದನು.
ತತೋ ಹಿಮವತಾ ದತ್ತೇ ಮಣಿಪ್ರವರಶೋಭಿತೇ |
ದಿವ್ಯರತ್ನಯುತೇ ದಿವ್ಯೇ ನಿಷಣ್ಣಃ ಪರಮಾಸನೇ ॥2॥
ಹಿಮವಂತನು ಕೊಟ್ಟ ಒಳ್ಳೆಯ ಮಣಿಗಳಿಂದ ಶೋಭಿಸುತ್ತಿದ್ದ ದೇವಲೋಕದ ರತ್ನಗಳಿಂದ ಖಚಿತವಾದ ಉತ್ತಮ ಆಸನದಲ್ಲಿ ಕಾರ್ತಿಕೇಯನು ಕುಳಿತನು.
ಸರ್ವಮಂಗಲಸಂಭಾರೈರ್ವಿಧಿಮಂತ್ರಪುರಸ್ಕೃತಮ್ |
ಆಭಿಷೇಚನಿಕಂ ದ್ರವ್ಯಂ ಗೃಹೀತ್ವಾ ದೇವತಾಗಣಾಃ ॥3॥
ದೇವತಾಗಣಗಳು ಅಭಿಷೇಕಕ್ಕೆ ಬೇಕಾದ ಮಂಗಳದ್ರವ್ಯಗಳನ್ನು ಮಂತ್ರಪುರಸ್ಸರವಾಗಿ ಹಿಡಿದುಕೊಂಡು ವಿಧಿವತ್ತಾಗಿ ಅಲ್ಲಿ ಸೇರಿದ್ದವು.
ಇಂದ್ರಾವಿಷ್ಣೂ ಮಹಾವೀರ್ಯೌ ತಥಾ ಚಂದ್ರದಿವಾಕರೌ |
ಧಾತಾ ಚೈವ ವಿಧಾತಾ ಚ ತಥೋಭಾವನಿಲಾನಲೌ ॥4॥
ಪೂಷ್ಣಾ ಭಗೇನ ಚಾರ್ಯಮ್ಣಾ ಚಾಂಶೇನ ಚ ವಿವಸ್ವತಾ |
ರುದ್ರಶ್ಚ ಸಹಿತೋ ಧೀಮಾನ್ ಮಿತ್ರೇಣ ವರುಣೇನ ಚ ॥5॥
ರುದ್ರೈರ್ವಸುಭಿರಾದಿತ್ಯೈರಶ್ವಿಭ್ಯಾಂ ಚ ವೃತಃ ಪ್ರಭುಃ |
ವಿಶ್ವೈರ್ದೇವೈರ್ಮರುದ್ಭಿಶ್ಚ ಸಾಧ್ಯೈಶ್ಚ ಪಿತೃಭಿಃ ಸಹ ॥6॥
ಗಂಧರ್ವೈರಪ್ಸರೋಭಿಶ್ಚ ಯಕ್ಷರಾಕ್ಷಸಪನ್ನಗೈಃ |
ದೇವರ್ಷಿಭಿರಸಂಖ್ಯೇಯೈಸ್ತಥಾ ಬ್ರಹ್ಮರ್ಷಿಭಿರ್ವರೈಃ ॥7॥
ವೈಖಾನಸೈರ್ವಾಲಖಿಲ್ಯೈರ್ವಾಯ್ವಾಹಾರೈರ್ಮರೀಚಿಪೈಃ |
ಭೃಗುಭಿಶ್ಚಾಂಗಾರೋಭಿಶ್ಚ ಯತಿಭಿಶ್ಚ ಮಹಾತ್ಮಭಿಃ ॥8॥
ಸರ್ವೈರ್ವಿದ್ಯಾಧರೈಃ ಪುಣ್ಯೈರ್ಯೋಗಸಿದ್ಧೈಶ್ಚ ಸಂವೃತಃ |
ಪಿತಾಮಹಃ ಪುಲಸ್ತ್ಯಶ್ಚ ಪುಲಹಶ್ಚ ಮಹಾತಪಾಃ ॥9॥
ಮಹಾವೀರ್ಯವಂತರಾದ ಇಂದ್ರ ಮತ್ತು ವಿಷ್ಣು, ಚಂದ್ರ ಮತ್ತು ಸೂರ್ಯ, ಧಾತಾ, ವಿಧಾತಾ, ವಾಯು, ಅಗ್ನಿ, ಪೂಷ, ಭಗ, ಅರ್ಯಮಾ, ವಿವಸ್ವಂತನ ಅಂಶ, ಮಹಾಜ್ಞಾನಿಯಾದ ರುದ್ರ, ಮಿತ್ರ, ವರುಣ, ಏಕಾದಶ ರುದ್ರರು, ಅಷ್ಟವಸುಗಳು, ದ್ವಾದಶ ಆದಿತ್ಯರು, ಅಶ್ವಿನೀದೇವತೆಗಳು, ವಿಶ್ವೇದೇವತೆಗಳು, ಮರುತ್ತುಗಳು, ಸಾಧ್ಯರು, ಪಿತೃಗಳು, ಗಂಧರ್ವರು, ಅಪ್ಸರಾಸ್ತ್ರೀಯರು, ಯಕ್ಷರು, ರಾಕ್ಷಸರು, ಸರ್ಪಗಳು, ಅನೇಕ ದೇವರ್ಷಿಗಳು, ಉತ್ತಮ ಬ್ರಹ್ಮರ್ಷಿಗಳು, ವೈಖಾನಸರು, ವಾಲಖಿಲ್ಯರು, ವಾಯುಭಕ್ಷರು, ಮರೀಚಿಮುಖ್ಯರು, ಭೃಗು, ಅಂಗಿರಸ್ಸು, ಮಹಾತ್ಮರಾದ ಯತಿಗಳು, ಪುಣ್ಯವಂತ, ಯೋಗಸಿದ್ಧರಾದ ಎಲ್ಲಾ ವಿದ್ಯಾಧರರು ಇವರೆಲ್ಲರು ಕುಮಾರನ ಸುತ್ತ ಸೇರಿದ್ದರು.
ಅಂಗಿರಾಃ ಕಶ್ಯಪೋಽತ್ರಿಶ್ಚ ಮರೀಚಿರ್ಭೃಗುರೇವ ಚ |
ಕ್ರತುರ್ಹರಿಃ ಪ್ರಚೇತಾಶ್ಚ ಮನುರ್ದಕ್ಷಸ್ತಥೈವ ಚ ॥10॥
ಋತವಶ್ಚ ಗ್ರಹಾಶ್ಚೈವ ಜ್ಯೋತೀಂಷಿ ಚ ವಿಶಾಂಪತೇ |

ಮೂರ್ತಿಮತ್ಯಶ್ಚ ಸರಿತೋ ನದಾಶ್ಚೈವ ಸನಾತನಾಃ ॥11॥
ಸಮುದ್ರಾಶ್ಚ ಹ್ರದಾಶ್ಚೈವ ತೀರ್ಥಾನಿ ವಿವಿಧಾನಿ ಚ |
ಪೃಥಿವೀ ದ್ಯೌರ್ದಿಶಶ್ಚೈವ ಪಾದಪಾಶ್ಚ ಜನಾಧಿಪ ॥12॥
ಅದಿತಿರ್ದೇವಮಾತಾ ಚ ಹ್ರೀಃ ಶ್ರೀಃ ಸ್ವಾಹಾ ಸರಸ್ವತೀ |
ಉಮಾ ಶಚೀ ಸಿನೀವಾಲೀ ತಥಾ ಚಾನುಮತಿಃ ಕುಹೂಃ ॥13॥
ರಾಕಾ ಚ ಧಿಷಣಾ ಚೈವ ಪತ್ನ್ಯಶ್ಚಾನ್ಯಾ ದಿವೌಕಸಾಮ್ |
ಹಿಮವಾಂಶ್ಚೈವ ವಿಂಧ್ಯಶ್ಚ ಮೇರುಶ್ಚಾನೇಕಶೃಂಗವಾನ್ ॥14॥
ಐರಾವತಃ ಸಾನುಚರಃ ಕಲಾಃ ಕಾಷ್ಠಾಸ್ತಥೈವ ಚ |
ಮಾಸಾರ್ಧಮಾಸಾ ಋತವಸ್ತಥಾ ರಾತ್ರ್ಯಹನೀ ನೃಪ ॥15॥
ಉಚ್ಚೈಶ್ರವಾ ಹಯಶ್ರೇಷ್ಠೋ ನಾಗರಾಜಶ್ಚ ವಾಸುಕಿಃ |
ಅರುಣೋ ಗರುಡಶ್ಚೈವ ವೃಕ್ಷಾಶ್ಚೌಷಧಿಭಿಃ ಸಹ ॥16॥
ಧರ್ಮಶ್ಚ ಭಗವಾನ್ ದೇವಃ ಸಮಾಜಗ್ಮುರ್ಹಿ ಸಂಗತಾಃ |
ಕಾಲೋ ಯಮಶ್ಚ ಮೃತ್ಯುಶ್ಚ ಯಮಸ್ಯಾನುಚರಾಶ್ಚ ಯೇ ॥17॥
ರಾಜನೇ! ಚತುರ್ಮುಖ ಬ್ರಹ್ಮ, ಪುಲಸ್ತ್ಯ, ಮಹಾತಪಸ್ವಿಯಾದ ಪುಲಹ, ಅಂಗಿರಸ್ಸು, ಕಶ್ಯಪ, ಅತ್ರಿ, ಮರೀಚಿ, ಭೃಗು, ಕ್ರತು, ಹರಿ, ಪ್ರಚೇತಸ್ಸು, ಮನು, ದಕ್ಷ, ಋತುಗಳು, ಗ್ರಹಗಳು, ನಕ್ಷತ್ರಗಳು, ಅನಾದಿಕಾಲೀನರಾದ ಮನುಷ್ಯರೂಪದಲ್ಲಿ ಇದ್ದ ನದ್ಯಭಿಮಾನಿದೇವತೆಗಳು, ನದಾಭಿಮಾನಿದೇವತೆಗಳು, ಸಮುದ್ರಗಳು, ಸರೋವರಗಳು, ವಿವಿಧ ತೀರ್ಥಗಳು, ಪೃಥಿವೀ, ಅಂತರಿಕ್ಷ, ದಿಕ್ಕುಗಳು, ಮರಗಳು, ದೇವಮಾತೆಯಾದ ಅದಿತಿ, ಹ್ರೀ, ಶ್ರೀ, ಸ್ವಾಹಾ, ಸರಸ್ವತಿ, ಉಮಾ, ಶಚೀ, ಸಿನೀವಾಲೀ, ಅನುಮತಿ, ಕುಹೂ, ರಾಕಾ, ಧಿಷಣಾ, ಇತರ ದೇವತೆಗಳ ಪತ್ನಿಯರು, ಹಿಮವಂತ, ವಿಂಧ್ಯ, ಅನೇಕಶಿಖರಗಳುಳ್ಳ ಮೇರು, ಐರಾವತ, ಉಚ್ಚೈಶ್ರವಸ್ಸು, ಕಲಾ, ಕಾಷ್ಠಾ, ಮಾಸ, ಪಕ್ಷ, ಋತುಗಳು, ಹಗಲು-ರಾತ್ರಿಗಳು, ನಾಗರಾಜನಾದ ವಾಸುಕಿ, ಅರುಣ, ಗರುಡ, ವೃಕ್ಷಗಳು, ಓಷಧಿಗಿಡಗಳು, ಪೂಜ್ಯನಾದ ಧರ್ಮದೇವತೆ, ಕಾಲ, ಯಮ, ಮೃತ್ಯು, ಯಮನ ಅನುಚರರು ಇವರೆಲ್ಲಾ ಒಟ್ಟಾಗಿ ಪಟ್ಟಾಭಿಷೇಕಕ್ಕೆ ಬಂದರು.
ಬಹುಲತ್ವಾಚ್ಚ ಯೇ ನೋಕ್ತಾ ವಿವಿಧಾ ದೇವತಾಗಣಾಃ |
ತೇ ಕುಮಾರಾಭಿಷೇಕಾರ್ಥಂ ಸಮಾಜಗ್ಮುಸ್ತತಸ್ತತಃ ॥18॥
ಬಂದಿರುವ ದೇವತಾಗಣಗಳು ಬಹಳವಾಗಿದ್ದುದರಿಂದ ಅವರನ್ನೆಲ್ಲಾ ಇಲ್ಲಿ ಉಲ್ಲೇಖಿಸಲಿಲ್ಲ. ಬೇರೆ ಬೇರೆ ಕಡೆಯಿಂದ ಅವರೆಲ್ಲರೂ ಕುಮಾರನ ಪಟ್ಟಾಭಿಷೇಕಕ್ಕೆ ಬಂದರು.
ಜಗೃಹುಸ್ತೇ ತದಾ ರಾಜನ್ ಸರ್ವ ಏವ ದಿವೌಕಸಃ |
ಆಭಿಷೇಚನಿಕಂ ಭಾಂಡಂ ಮಂಗಲಾನಿ ಚ ಸರ್ವಶಃ ॥19॥
ರಾಜನೇ! ಬಂದ ಎಲ್ಲಾ ದೇವತೆಗಳು ಅಭಿಷೇಕದ ಪಾತ್ರೆಗಳನ್ನು ಮತ್ತು ಮಂಗಳದ್ರವ್ಯಗಳನ್ನು ಕೈಯಲ್ಲಿ ಹಿಡಿದುಕೊಂಡರು.
ದಿವ್ಯಸಂಭಾರಸಂಯುಕ್ತೈಃ ಕಲಶೈಃ ಕಾಂಚನೈರ್ನೃಪ |
ಸಮಿದ್ಭಿಃ ಪುಣ್ಯಗಂಧಾಭಿರದ್ಭಿಸ್ತಾಭಿರಲಂಕೃತೈಃ ॥20॥
ಅಭ್ಯಷಿಂಚನ್ ಕುಮಾರಂ ವೈ ಹೃಷ್ಟರೂಪಾ ದಿವೌಕಸಃ |
ಸೈನಾಪತ್ಯೇ ಮಹಾತ್ಮಾನಮಸುರಾಣಾಂ ಭಯಾವಹಮ್ ॥21॥
ರಾಜನೇ! ಸಂತುಷ್ಟರಾದ ದೇವತೆಗಳು ಅಸುರರಿಗೆ ಭಯವನ್ನು ತಂದುಕೊಡುವ ಮಹಾತ್ಮನಾದ ಕುಮಾರನನ್ನು ಅಲೌಕಿಕವಾದ ಪದಾರ್ಥಗಳನ್ನು ತುಂಬಿಕೊಂಡಿದ್ದ ಬಂಗಾರದ ಕಲಶಗಳಿಂದ ಹಾಗೂ ಸುಗಂಧಭರಿತವಾದ ಸಮಿದ್ದ್ರವ್ಯಗಳಿಂದ ಸೇನಾಧಿಪತಿಯನ್ನಾಗಿ ಪಟ್ಟಾಭಿಷೇಕ ಮಾಡಿದರು.
ಪುರಾ ಯಥಾ ಮಹಾರಾಜ ವರುಣಂ ವೈ ಜಲೇಶ್ವರಮ್ |
ತಥಾಽಭ್ಯಷಿಂಚದ್ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ॥22॥
ಕಾಶ್ಯಪಶ್ಚ ಮಹಾತೇಜಾ ಯೇ ಚಾನ್ಯೇ ನಾನುಕೀರ್ತಿತಾಃ ॥23॥
ಮಹಾರಾಜನೇ! ಹಿಂದೆ ಯಾವ ರೀತಿಯಲ್ಲಿ ಜಲಾಧಿಪತಿಯನ್ನಾಗಿ ವರುಣನನ್ನು ಅಭಿಷೇಕವನ್ನು ಮಾಡಿದರೋ ಹಾಗೆ ಪೂಜ್ಯನಾದ ಲೋಕಪಿತಾಮಹ ಬ್ರಹ್ಮ, ಮಹಾತೇಜೋವಂತನಾದ ಕಾಶ್ಯಪ ಮತ್ತು ಇಲ್ಲಿ ಹೇಳದಿರುವ ದೇವತೆಗಳೂ ಅಭಿಷೇಕವನ್ನು ಮಾಡಿದರು.
ತಸ್ಮೈ ಬ್ರಹ್ಮಾ ದದೌ ಪ್ರೀತೋ ಬಲಿನೋ ವಾತರಂಹಸಃ |
ಕಾಮವೀರ್ಯಧರಾನ್ ದಿವ್ಯಾನ್ ಮಹಾಪಾರಿಷದಾನ್ ಪ್ರಭುಃ ॥24॥
ಸಂತುಷ್ಟನಾದ ಸಕಲಸಾಮರ್ಥ್ಯವುಳ್ಳ ಚತುರ್ಮುಖನು ಕುಮಾರನಿಗೆ ವಾಯುವೇಗವುಳ್ಳ, ಬಲಶಾಲಿಗಳಾದ, ಬೇಕಾದ ರೂಪವನ್ನು ತಾಳುವ ಸಾಮರ್ಥ್ಯವುಳ್ಳ ನಾಲ್ಕುಮಂದಿ ಅಲೌಕಿಕ ಅನುಚರರನ್ನು ಕೊಟ್ಟನು.
ನಂದಿಸೇನಂ ಲೋಹಿತಾಕ್ಷಂ ಘಂಟಾಕರ್ಣಂ ಚ ಸಮ್ಮತಮ್ |
ಚತುರ್ಥಂ ಚಾಪ್ಯತಿಬಲಂ ಖ್ಯಾತಂ ಕುಮುದಮಾಲಿನಮ್ |
ತಥಾ ಸ್ಥಾಣುಂ ಮಹಾದೇವಂ ಮಹಾಪಾರಿಷದಂ ಕ್ರತುಮ್ ॥25॥
ಮಾಯಾಶತಧರಂ ವೀರಂ ಕಾಮವೀರ್ಯಬಲಾನ್ವಿತಮ್ |
ದದೌ ಸ್ಕಂದಾಯ ರಾಜೇಂದ್ರ ಸುರಾರಿವಿನಿಬರ್ಹಣಮ್ ॥26॥
ಸ ಹಿ ದೇವಾಸುರೇ ಯುದ್ಧೇ ದೈತ್ಯಾನಾಂ ಭೀಮಕರ್ಮಣಾಮ್ |
ಜಘಾನ ದೋರ್ಭ್ಯಾಂ ಸಂಕ್ರುದ್ಧಃ ಪ್ರಯುತಾನಿ ಚತುರ್ದಶ ॥27॥

ನಂದಿಸೇನ, ಲೋಹಿತಾಕ್ಷ, ಘಂಟಾಕರ್ಣ ಮತ್ತು ಮಹಾಬಲಶಾಲಿಯಾದ ಕುಮುದಮಾಲಿ ಎಂದು ಪ್ರಸಿದ್ಧರಾದವರು ಆ ನಾಲ್ಕು ಅನುಚರರು. ಸ್ಥಾಣು ಎನಿಸಿದ ಮಹಾರುದ್ರನು ಕುಮಾರನಿಗೆ ಕ್ರತು ಎಂಬ ಅನುಚರನನ್ನು ಕೊಟ್ಟನು. ಆ ಅನುಚರನು ಮಾಯಾವಿದ್ಯೆಗಳನ್ನು ಬಲ್ಲವನಾಗಿದ್ದನು. ವೀರನಾದ ಆತನು ಬಹಳವಾದ ಬಲವುಳ್ಳವನಾಗಿದ್ದನು. ದೇವತೆಗಳ ಶತ್ರುಗಳಾದ ದೈತ್ಯರನ್ನು ನಾಶಮಾಡುವವನು. ಹಿಂದೆ ದೇವಾಸುರಯುದ್ಧದಲ್ಲಿ ಈತನು ಭಯಂಕರಕರ್ಮವುಳ್ಳ ಹದಿನಾಲ್ಕು ದಶಲಕ್ಷದೈತ್ಯರನ್ನು ತನ್ನ ಬಾಹುಗಳಿಂದಲೇ ನಾಶ ಮಾಡಿದ್ದನು.

ತಥಾ ದೇವಾ ದದುಸ್ತಸ್ಮೈ ಶಕ್ತಿಂ ನೈರ್ಋತಸೂದನೀಮ್ |
ದೇವಶತ್ರುಕ್ಷಯಕರೀಮಜಯ್ಯಾಂ ವಿಶ್ವರೂಪಿಣೀಮ್ ॥28॥

ಅದೇ ರೀತಿಯಲ್ಲಿ ದೇವತೆಗಳು ಕುಮಾರನಿಗೆ ರಾಕ್ಷಸಸಂಹಾರಕವಾದ ಶಕ್ತಿ ಎಂಬ ಆಯುಧವನ್ನು ಕೊಟ್ಟರು. ಅದನ್ನು ಯಾರೂ ಜಯಿಸಲು ಸಾಧ್ಯವಿರಲಿಲ್ಲ. ಜಗತ್ತನ್ನೇ ವ್ಯಾಪಿಸಿಕೊಳ್ಳುವ ರೂಪವನ್ನದು ಹೊಂದಿತ್ತು.

ಜಯಶಬ್ದಂ ತಥಾ ಚಕ್ರುರ್ದೇವಾಃ ಸರ್ವೇ ಸವಾಸವಾಃ |
ಗಂಧರ್ವಯಕ್ಷರಕ್ಷಾಂಸಿ ಮುನಯಃ ಪಿತರಸ್ತಥಾ ॥29॥

ಅನಂತರ ಇಂದ್ರಮೊದಲಾದ ದೇವತೆಗಳು, ಗಂಧರ್ವರು, ಯಕ್ಷರು, ರಕ್ಷಸ್ಸುಗಳು, ಮುನಿಗಳು, ಪಿತೃಗಳು ಇವರೆಲ್ಲರೂ ಕುಮಾರನಿಗೆ ಜಯವಾಗಲಿ ಎಂದು ಹೇಳಿದರು.

ತತಃ ಪ್ರಾದಾದನುಚರೌ ಯಮಃ ಕಾಲೋಪಮಾವುಭೌ |
ಉನ್ಮಾಥಂ ಚ ಪ್ರಮಾಥಂ ಚ ಮಹಾವೀರ್ಯೌ ಮಹಾದ್ಯುತೀ ॥30॥

ಯಮನು ಕುಮಾರನಿಗೆ ಇಬ್ಬರು ಅನುಚರರನ್ನು ಕೊಟ್ಟನು. ಉನ್ಮಥ ಮತ್ತು ಪ್ರಮಾಥ ಎಂಬ ಹೆಸರಿನ ಅವರು ಮಹಾಕಾಂತಿಯುಳ್ಳವರಾಗಿದ್ದರು ಮತ್ತು ಬಹಳ ವೀರ್ಯವಂತರಾಗಿದ್ದರು. ಅವರಿಬ್ಬರೂ ಕಾಲನಿಗೆ ಸದೃಶರಾಗಿದ್ದರು.

ಸುಭ್ರಾಜೌ ಭಾಸ್ವರೌ ಚೈವ ಯೌ ತೌ ಸೂರ್ಯಾನುಯಾಯಿನೌ |
ತೌ ಸೂರ್ಯಃ ಕಾರ್ತಿಕೇಯಾಯ ದದೌ ಪ್ರೀತಃ ಪ್ರತಾಪವಾನ್ ॥31॥

ಪ್ರತಾಪಿಯಾದ ಸೂರ್ಯನು ಪ್ರೀತನಾಗಿ ಕುಮಾರನಿಗೆ ಸುಭ್ರಾಜ ಮತ್ತು ಭಾಸ್ವರ ಎಂಬ ಇಬ್ಬರು ಅನುಚರರನ್ನು ಕೊಟ್ಟನು. ಅವರಿಬ್ಬರೂ ಸೂರ್ಯನನ್ನು ಅನುಸರಿಸಿ ಹೋಗುತ್ತಿದ್ದರು.

ಕೈಲಾಸಶೃಂಗಸಂಕಾಶೌ ಶ್ವೇತಮಾಲ್ಯಾನುಲೇಪನೌ |
ಸೋಮೋಽಪ್ಯನುಚರೌ ಪ್ರಾದಾನ್ಮಣಿಂ ಸುಮಣಿಮೇವ ಚ ॥32॥

ಚಂದ್ರನೂ ಕೂಡ ಮಣಿ ಮತ್ತು ಸುಮಣಿ ಎಂಬ ಇಬ್ಬರು ಅನುಚರರನ್ನು ಕುಮಾರನಿಗೆ ಕೊಟ್ಟನು. ಬೆಳ್ಳಗಿನ ಹಾರ ಮತ್ತು ಲೇಪನಗಳನ್ನು ಧರಿಸಿದ ಅವರೀರ್ವರು ಬೆಳ್ಳಗಿನ ಕೈಲಾಸಪರ್ವತದ ಶಿಖರದಂತೆ ಕಾಣಿಸುತ್ತಿದ್ದರು.

ಜ್ವಾಲಾಜಿಹ್ವಂ ತಥಾ ಜ್ಯೋತಿಮಾತ್ಮಜಾಯ ಹುತಾಶನಃ |
ದದಾವನುಚರೌ ಶೂರೌ ಪರಸೈನ್ಯಪ್ರಮಾಥಿನೌ ॥33॥

ಅಗ್ನಿಯು ತನ್ನ ಮಗನಾದ ಕುಮಾರನಿಗೆ ಜ್ವಾಲಾಜಿಹ್ವ ಮತ್ತು ಜ್ಯೋತಿ ಎಂಬ ಇಬ್ಬರು ಅನುಚರರನ್ನು ಕೊಟ್ಟನು. ಶತ್ರುಸೈನ್ಯವನ್ನು ನಾಶಮಾಡಬಲ್ಲ ಅವರಿಬ್ಬರೂ ಶೂರರಾಗಿದ್ದರು.

ಪರಿಘಂ ವಿಕಟಂ ಚೈವ ಭೀಮಂ ಚ ಸುಮಹಾಬಲಮ್ |
ದಹತಿಂ ದಹನಂ ಚೈವ ಪ್ರಚಂಡೌ ವೀರ್ಯಸಮ್ಮತೌ ॥34॥
ಅಂಶೋಽಪ್ಯನುಚರಾನ್ ಪಂಚ ದದೌ ಸ್ಕಂದಾಯ ಧೀಮತೇ ॥35॥

ಅಂಶ ಎಂಬ ದೇವತೆಯು ಸ್ಕಂದನಿಗೆ ಪರಿಘ, ವಿಕಟ, ಬಲಶಾಲಿಯಾದ ಭೀಮ, ದಹತಿ ಮತ್ತು ದಹನ ಎಂಬ ಐವರು ಅನುಚರರನ್ನು ಕೊಟ್ಟನು. ಅವರಲ್ಲಿ ದಹತಿ ಮತ್ತು ದಹನರು ಬಹಳ ಸಮರ್ಥರು ಮತ್ತು ಬಲದ ವಿಷಯದಲ್ಲಿ ಎಲ್ಲರಿಂದಲೂ ಗೌರವಿಸಲ್ಪಟ್ಟವರಾಗಿದ್ದರು.

ಉತ್ಕ್ರೋಶಂ ಸಂಸ್ಕರಂ ಚೈವ ವಜ್ರದಂಡಧರಾವುಭೌ |
ದದಾವನಲಪುತ್ರಾಯ ವಾಸವಃ ಪರವೀರಹಾ ॥36॥

ಶತ್ರುವೀರರನ್ನು ಸದೆಬಡಿಯುವ ಇಂದ್ರನು ಸ್ಕಂದನಿಗೆ ಉತ್ಕ್ರೋಶ ಮತ್ತು ಸಂಸ್ಕರ ಎಂಬ ವಜ್ರಾಯುಧವನ್ನು ಧರಿಸಿರುವ ಅನುಚರರನ್ನು ಕೊಟ್ಟನು.

ತೌ ಹಿ ಶತ್ರೂನ್ ಮಹೇಂದ್ರಸ್ಯ ಜಘ್ನತುಃ ಸಮರೇ ಬಹೂನ್ ॥37॥

ಅವರಿಬ್ಬರೂ ಯುದ್ಧದಲ್ಲಿ ಇಂದ್ರನ ಅನೇಕ ಶತ್ರುಗಳನ್ನು ಸಂಹರಿಸಿದ್ದರು.

ಚಕ್ರಂ ವಿಕ್ರಮಕಂ ಚೈವ ಸಂಕ್ರಮಂ ಚ ಮಹಾಬಲಮ್ |
ಸ್ಕಂದಾಯ ತ್ರೀನನುಚರಾನ್ ದದೌ ವಿಷ್ಣುರ್ಮಹಾಯಶಾಃ ॥38॥

ಮಹಾಕೀರ್ತಿವಂತನಾದ ವಿಷ್ಣುವು ಚಕ್ರ, ವಿಕ್ರಮಕ ಮತ್ತು ಮಹಾಬಲಶಾಲಿಯಾದ ಸಂಕ್ರಮ ಎಂಬ ಮೂವರು ಅನುಚರರನ್ನು ಸ್ಕಂದನಿಗೆ ಕೊಟ್ಟನು.

ವರ್ಧನಂ ನಂದನಂ ಚೈವ ಸರ್ವವಿದ್ಯಾವಿಶಾರದೌ |
ಸ್ಕಂದಾಯ ದದತುಃ ಪ್ರೀತಾವಶ್ವಿನೌ ಭಿಷಜಾಂ ವರೌ ॥39॥

ಶ್ರೇಷ್ಠವೈದ್ಯರಾದ ಅಶ್ವಿನಿದೇವತೆಗಳು ಸ್ಕಂದನಿಗೆ ವರ್ಧನ ಮತ್ತು ನಂದನ ಎಂಬ ಅನುಚರರನ್ನು ಕೊಟ್ಟರು

ಕುಂದರಂ ಕ್ರಮುಕಂ ಚೈವ ಕುಮುದಂ ಚ ಮಹಾಯಶಾಃ |
ಡಂಬರಾಡಂಬರೌ ಚೈವ ದದೌ ಧಾತಾ ಮಹಾತ್ಮನೇ ॥40॥

ಚತುರ್ಮುಖನು ಮಹಾತ್ಮನಾದ ಸ್ಕಂದನಿಗೆ ಕುಂದರ, ಕ್ರಮುಕ, ಕುಮುದ, ಡಂಬರ, ಆಡಂಬರೆಂಬ ಈ ಅನುಚರರನ್ನು ಕೊಟ್ಟನು.
ವಕ್ರಾನುವಕ್ರೌ ಬಲಿನೌ ಮೇಷವಕ್ತ್ರೌ ಬಲೋತ್ಕಟೌ |
ದದೌ ತ್ವಷ್ಟಾ ಮಹಾಮಾಯೌ ಸ್ಕಂದಸ್ಯಾನುಚರೌ ವರೌ ||41||
ತ್ವಷ್ಟೃವು ಸ್ಕಂದನಿಗೆ ವಕ್ರ ಮತ್ತು ಅನುವಕ್ರ ಎಂಬ ಅನುಚರರನ್ನು ಕೊಟ್ಟನು. ಆಡಿನ ಮುಖವುಳ್ಳ ಅವರಿಬ್ಬರು ಬಲವುಳ್ಳವರಾಗಿದ್ದರು ಮತ್ತು ಬಲದಿಂದಾಗಿ ಉತ್ಸುಕರಾಗಿದ್ದರು, ಮಹಾ ಮಾಯಾವಿಗಳಾಗಿದ್ದರು.
ಸುವ್ರತಂ ಸತ್ಯಸಂಧಂ ಚ ದದೌ ಮಿತ್ರೋ ಮಹಾತ್ಮನೇ |
ಕುಮಾರಾಯ ಮಹಾತ್ಮಾನೌ ದದೌ ವಿದ್ಯಾಧರೌ ಪ್ರಭುಃ ||42||
ಸುದರ್ಶನೀಯೌ ವರದೌ ತ್ರಿಷು ಲೋಕೇಷು ವಿಶ್ರುತೌ |
ಸುಪ್ರಭಂ ಚ ಮಹಾತ್ಮಾನಂ ಶುಭಕರ್ಮಾಣಮೇವ ಚ ||43||
ಕಾರ್ತಿಕೇಯಾಯ ಸಂಪ್ರಾದಾದ್ ವಿಧಾತಾ ಲೋಕವಿಶ್ರುತೌ ||44||
ಮಹಾತ್ಮನಾದ ಸ್ಕಂದನಿಗೆ ಮಿತ್ರನು ಸುವ್ರತ ಮತ್ತು ಸತ್ಯಸಂಧರನ್ನು ಅನುಚರರನ್ನಾಗಿ ಕೊಟ್ಟನು. ವಿದ್ಯಾಧರಗಣಕ್ಕೆ ಸೇರಿದ ಇವರೀರ್ವರೂ ಮಹಾಸಾಮರ್ಥ್ಯ ಉಳ್ಳವರಾಗಿದ್ದರು. ಸುಂದರವಾದ ರೂಪವುಳ್ಳ ಹಾಗೂ ವರವನ್ನು ಕೊಡುವ ಇವರು ಮೂರು ಲೋಕಗಳಲ್ಲಿಯೇ ಪ್ರಸಿದ್ಧರಾಗಿದ್ದರು. ಮಹಾತ್ಮನಾದ ಸುಪ್ರಭ ಮತ್ತು ಶುಭಕರ್ಮ ಈ ಇಬ್ಬರನ್ನು ವಿಧಾತೃವು ಕಾರ್ತಿಕೇಯನಿಗೆ ಕೊಟ್ಟನು. ಇವರಿಬ್ಬರೂ ಲೋಕದಲ್ಲೆಲ್ಲ ಪ್ರಸಿದ್ಧರಾಗಿದ್ದರು.
ಪೂಷಾ ಪಾರಿಷದೌ ಪ್ರಾದಾತ್ ಕಾರ್ತಿಕೇಯಾಯ ಭಾರತ |
ಪಾಲಿತುಂಗಂ ಕಲಿಂಗಂ ಚ ಮಹಾಮಾಯಾವಹಾವುಭೌ ||45||
ಭರತಕುಲೋದ್ಭವನೇ! ಕಾರ್ತಿಕೇಯನಿಗೆ ಪೂಷನು ಪಾಲಿತುಂಗ ಮತ್ತು ಕಲಿಂಗ ಎಂಬ ಇಬ್ಬರು ಅನುಚರರನ್ನು ಕೊಟ್ಟನು. ಇವರಿಬ್ಬರೂ ಬಹಳವಾದ ಮಾಯೆಗಳನ್ನು ತಿಳಿದವರಾಗಿದ್ದರು.
ಸವಂ ಚಾತಿಸವಂ ಚೈವ ತಿಮಿವಕ್ತ್ರೌ ಮಹಾಬಲೌ |
ಪ್ರದದೌ ಕಾರ್ತಿಕೇಯಾಯ ವರುಣಃ ಸತ್ಯಸಂಗರಃ ||46||
ಯುದ್ಧನಿಪುಣನಾದ ವರುಣನು ಕಾರ್ತಿಕೇಯನಿಗೆ ಮಹಾಬಲಶಾಲಿಗಳಾದ, ತಿಮಿಂಗಿಲದ ಮುಖವುಳ್ಳ ಸವ ಮತ್ತ ಅತಿಸವ ಎಂಬ ಅನುಚರರನ್ನು ಕೊಟ್ಟನು.
ಬಲಂ ಚಾತಿಬಲಂ ಚೈವ ಮಹಾವಕ್ತ್ರೌ ಮಹಾಬಲೌ |
ಪ್ರದದೌ ಕಾರ್ತಿಕೇಯಾಯ ವಾಯುರ್ಭರತಸತ್ತಮ ||47||
ಭರತವಂಶದಲ್ಲಿ ಶ್ರೇಷ್ಠನಾದವನೇ! ವಾಯುವು ಕಾರ್ತಿಕೇಯನಿಗೆ ಬಲ ಮತ್ತು ಅತಿಬಲ ಎಂಬ ಮಹಾಬಲವುಳ್ಳ ಅನುಚರರನ್ನು ಕೊಟ್ಟನು.
ಸುವರ್ಚಸಂ ಮಹಾತ್ಮಾನಂ ತಥೈವಾಽಪ್ಯತಿವರ್ಚಸಮ್ |
ಹಿಮವಾನ್ ಪ್ರದದೌ ರಾಜನ್ ಹುತಾಶನ ಹುತಾಯ ವೈ ||48||
ರಾಜನೇ! ಅಗ್ನಿಪುತ್ರಕಾರ್ತಿಕೇಯನಿಗೆ ಹಿಮಾಲಯನು ಮಹಾತ್ಮನಾದ ಸುವರ್ಚಸ ಮತ್ತು ಅತಿವರ್ಚಸ ಎಂಬ ಅನುಚರರನ್ನು ಕೊಟ್ಟನು.
ಕಾಂಚನಂ ಚ ಮಹಾತ್ಮಾನಂ ಮೇಘಮಾಲಿನಮೇವ ಚ |
ದದಾವನುಚರೌ ಮೇರುಃ ಅಗ್ನಿಪುತ್ರಾಯ ಭಾರತ ||49||
ಮೇರುವು ಮಹಾತ್ಮನಾದ ಕಾಂಚನ ಮತ್ತು ಮೇಘಮಾಲಿ ಎಂಬ ಅನುಚರರನ್ನು ಕುಮಾರನಿಗೆ ಕೊಟ್ಟನು.
ಸ್ಥಿರಂ ಚಾತಿಸ್ಥಿರಂ ಚೈವ ಮೇರುರೇವಾಪರೌ ದದೌ |
ಮಹಾತ್ಮನೇಽಗ್ನಿಪುತ್ರಾಯ ಮಹಾಬಲಪರಾಕ್ರಮೌ ||50||
ಮಹಾಬಲ ಮತ್ತು ಪರಾಕ್ರಮವುಳ್ಳ ಸ್ಥಿರ ಮತ್ತಿ ಅತಿಸ್ಥಿರ ಎಂಬ ಇನ್ನಿಬ್ಬರನ್ನೂ ಹಿಮಾಲಯನು ಸ್ಕಂದನಿಗೆ ಕೊಟ್ಟನು.
ಉಚ್ಛ್ರಿತಂ ಚಾತಿಶೃಂಗಂ ಚ ಮೇಘಮಾಲಿನಮೇವ ಚ |
ಪ್ರದದಾವಗ್ನಿಪುತ್ರಾಯ ವಿಂಧ್ಯಃ ಪಾರಿಷದಾನ್ ಶುಭಾನ್ ||51||
ವಿಂಧ್ಯನು ಅಗ್ನಿಪುತ್ರಸ್ಕಂದನಿಗೆ ಉಚ್ಛ್ರಿತ, ಅತಿಶೃಂಗ ಮತ್ತು ಮೇಘಮಾಲಿಯನ್ನು ಅನುಚರರನ್ನಾಗಿ ಕೊಟ್ಟನು.
ಸಂಗ್ರಹಂ ವಿಗ್ರಹಂ ಚೈವ ಸಮುದ್ರೋಽಪಿ ಗದಾಧರೌ |
ಪ್ರದದಾವಗ್ನಿಪುತ್ರಾಯ ಮಹಾಪಾರಿಷದಾವುಭೌ ||52||
ಸಮುದ್ರನು ಗಧಾದಾರಿಗಳಾದ ಸಂಗ್ರಹ ಮತ್ತು ವಿಗ್ರಹ ಎಂಬ ಇಬ್ಬರು ಉತ್ತಮ ಅನುಚರರನ್ನು ಕೊಟ್ಟನು.
ಉನ್ಮಾದಂ ಪುಷ್ಪದಂತಂ ಚ ಶಂಕುಕರ್ಣಂ ತಥೈವ ಚ |
ಪ್ರದದಾವಗ್ನಿಪುತ್ರಾಯ ಪಾರ್ವತೀ ಶುಭದರ್ಶನಾ ||53||
ಮಂಗಳಸ್ವರೂಪಳಾದ ಪಾರ್ವತಿಯು ಸ್ಕಂದನಿಗೆ ಉನ್ಮಾದ, ಪುಷ್ಪದಂತ ಮತ್ತು ಶಂಕುಕರ್ಣ ಎಂಬ ಅನುಚರರನ್ನು ಕೊಟ್ಟಳು.
ಜಯಂ ಮಹಾಜಯಂ ಚೈವ ಗಂಗಾ ಜ್ವಲನಸೂನವೇ |
ಪ್ರದದೌ ಪುರುಷವ್ಯಾಘ್ರ ಮಹಾಬಲಪರಾಕ್ರಮೌ ||54||
ಪುರುಷಶ್ರೇಷ್ಠನೇ! ಗಂಗೆಯು ಕುಮಾರನಿಗೆ ಬಹಳವಾದ ಬಲ ಮತ್ತು ಪರಾಕ್ರಮವುಳ್ಳ ಜಯ ಮತ್ತು ಮಹಾಜಯರೆಂಬ ಇಬ್ಬರು ಅನುಚರರನ್ನು ಕೊಟ್ಟಳು.
ಏವಂ ಸಾಧ್ಯಾಶ್ಚ ಬಹವೋ ರುದ್ರಾಶ್ಚ ಪಿತರಸ್ತಥಾ |

ಸಾಗರಾಃ ಸರಿತಶ್ಚೈವ ಗಿರಯಶ್ಚ ಮಹಾಬಲಾನ್ ॥55॥
ದದುಃ ಸೇನಾಗಣಾಧ್ಯಕ್ಷಾನ್ ಶೂಲಪಟ್ಟಿಸಧಾರಿಣಃ।
ದಿವ್ಯಪ್ರಹರಣೋಪೇತಾನ್ ನಾನಾವೇಷವಿಭೂಷಿತಾನ್ ॥56॥
ಅದೇ ರೀತಿಯಲ್ಲಿ ಬಹಳ ಮಂದಿ ಸಾಧ್ಯರು, ರುದ್ರರು, ಪಿತೃಗಳು, ಸಾಗರಗಳು, ನದಿಗಳು, ಗಿರಿಗಳು ಇವರೆಲ್ಲರೂ ಸೇನಾಧ್ಯಕ್ಷರನ್ನು ಕೊಟ್ಟರು. ಆ ಸೇನಾಧ್ಯಕ್ಷರು ಕೈಯಲ್ಲಿ ಶೂಲ, ಪಟ್ಟಿಸ ಮೊದಲಾದ ಆಯುಧಗಳನ್ನು ಧರಿಸಿದ್ದರು. ಅಲೌಕಿಕವಾದ ಶಸ್ತ್ರಗಳನ್ನು ಹಿಡಿದಿದ್ದರು. ಅನೇಕ ವಿಧದ ವೇಷಗಳನ್ನು ಧರಿಸಿಕೊಂಡಿದ್ದರು.
ಶೃಣು ನಾಮಾನಿ ಚಾಪ್ಯೇಷಾಂ ಯೇ ಚಾನ್ಯೇ ಸ್ಕಂದಸೈನಿಕಾಃ।
ವಿವಿಧಾಯುಧಸಂಪನ್ನಾಃ ಚಿತ್ರಾವರಣವರ್ಮಿಣಃ ॥57॥
ವಿವಿಧ ರೀತಿಯ ಆಯುಧಗಳನ್ನು ಹಿಡಿದುಕೊಂಡಿರುವ, ಚಿತ್ರ-ವಿಚಿತ್ರವಾದ ಕವಚಗಳನ್ನು ಧರಿಸಿರುವ ಸ್ಕಂದಸೈನಿಕರ ಹೆಸರುಗಳನ್ನು ಹೇಳುತ್ತೇನೆ, ಕೇಳು.
ಗಜಕರ್ಣೋ ನಿಕುಂಭಶ್ಚ ಪದ್ಮಃ ಕುಮುದ ಏವ ಚ।
ಸುನಂದೋ ದ್ವಾದಶಭುಜಃ ತಥಾ ಕೃಷ್ಣೋಪಕೃಷ್ಣಕೌ ॥58॥
ದ್ರೋಣಶ್ರವಾಃ ಕಪಿಸ್ಕಂಧಃ (ಧ್ವಜಃ) ಕಾಂಚನಾಕ್ಷೋ ಜಲಂಧಮಃ ॥59॥
ಅಕ್ಷಿಸಂತರ್ಜನೋ ರಾಜನ್ ಕುನದೀಕಸ್ತಥಾಽಭ್ರಕೃತ್।
ಏಕಾಕ್ಷೋ ದ್ವಾದಶಭುಜಃ ತಥೈವೈಕಜಟಃ ಪ್ರಭುಃ ॥60॥
ಸಹಸ್ರಬಾಹುರ್ವಿಕಚೋ ವ್ಯಾಘ್ರಾಸ್ಯಃ ಕ್ಷಿತಿಕಂಪನಃ।
ಪುಣ್ಯನಾಮಾ ಸುನಾಮಾ ಚ ಸುವಕ್ತ್ರಃ ಪ್ರಿಯದರ್ಶನಃ ॥61॥
ಪರಿಸ್ರಾವಃ ಕೋಕನದಃ ಪ್ರಿಯಮಾಲ್ಯಾನುಲೇಪನಃ।
ಗಜೋದರೋ ಗಜಶಿರಾಃ ಸ್ಕಂಧಾಕ್ಷಃ ಶತಲೋಚನಃ॥62॥
ಜ್ವಾಲಾಜಿಹ್ವಃ ಕರಾಲಶ್ಚ ವಜ್ರನಾಭೋ ವಸುಪ್ರಭಃ।
ಚತುರ್ದಂಷ್ಟ್ರೋಽಷ್ಟಜಿಹ್ವಶ್ಚ ಮೇಘನಾದಃ ಪೃಥುಶ್ರವಾಃ ॥63॥
ವಿದ್ಯುದಕ್ಷೋ ಧನುರ್ವಕೊತ್ರೀ ಜಠರೋ ಮಾರುತಾಶನಃ।
ಉದಾರಾಕ್ಷೋ ಝುಷಾಕ್ಷಶ್ಚ ವಜ್ರನಾಭೋ ವಸುಪ್ರದಃ ॥64॥
ಸಮುದ್ರವೇಗೋ ರಾಜೇಂದ್ರ ಶೈಲಕಂಪೀ ತಥೈವ ಚ।
ಮಂತ್ರಮೇಷಃ ಪ್ರಭಾವಶ್ಚ ತಥಾ ನಂದೋಪನಂದಕೌ ॥65॥
ಧೂಮ್ರಃ ಶ್ವೇತಃ ಕಲಿಂಗಶ್ಚ ಸಿದ್ಧಾರ್ಥೋ ವರದಸ್ತಥಾ।
ಪ್ರಿಯಕಶ್ಚೈವ ನಂದಶ್ಚ ಗೋನಂದಶ್ಚ ಪ್ರತಾಪವಾನ್ ॥66॥
ಆನಂದಶ್ಚ ಪ್ರಮೋದಶ್ಚ ಸ್ವಸ್ತಿಕೋ ಧ್ರುವಕೃತ್ ತಥಾ।
ಕ್ಷೇಮಪಾಪಃ ಸುಜಾತಶ್ಚ ಚಿತ್ರಯಾತ್ರಶ್ಚ ಭಾರತ ॥67॥
ಗೋವ್ರಜಃ ಕನಕಾಪೀಡೋ ಮಹಾಪಾರಿಷದೇಶ್ವರಃ।
ಗಾಯನೋ ಹಾಯನಶ್ಚೈವ ಬಾಣಖಡ್ಗಶ್ಚ ವೀರ್ಯವಾನ್ ॥68॥
ವೈತಾಲೀ ಚಾತಿತಾಲೀ ಚ ತಥಾ ಕಾಲಿಕಪಾಲಿಕೌ।
ಮಾಂಸಾಲೀಕಂಕದಿಗ್ದಾಂಗಃ ಸಮುದ್ರೋ ಮಾನಸಶ್ಚ ಹ ॥69॥
ರಣೋತ್ಕಟಃ ಪ್ರಭಾಸಶ್ಚ ಶ್ವೇತಶೀರ್ಷಶ್ಚ ನಂದಕಃ।
ಕಾಲಃ ಕಾಂಡಶರೀರಶ್ಚ ತಥಾ ಕುಂಭಾಂಡಕೋಽಪರಃ ॥70॥
ಅಲಿಕಾಂಧಿಸ್ಥಿತಶ್ಚೈವ ಭೂತಲೋನ್ಮಾದನಸ್ತಥಾ।
ಯಜ್ಞವಾಹಃ ಸುವಾಹಶ್ಚ ದೇವಯಾಜೀ ಚ ಸೋಮಪಃ ॥71॥
ಜಾಲಕಶ್ಚ ಮಹಾತೇಜಾಃ ಕ್ರುದ್ಧಾಕ್ರುದ್ಧೌ ಚ ಭಾರತ।
ತುಹನಶ್ಚ ತುಹಾನಶ್ಚ ಚಿತ್ರಸೇನಶ್ಚ ವೀರ್ಯವಾನ್ ॥72॥
ಮಾತುರಃ ಸುಪ್ರಸಾದಶ್ಚ ಕಿರೀಟೀ ಚ ಮಹಾಬಲಃ।
ವಸಾನೋ ಮಧುಕರ್ಣಶ್ಚ ಕಲಶೋದರ ಏವ ಚ ॥73॥
ಯವಂತೋ ಮನ್ಮಥಕರಃ ಸೂಚೀವಕ್ತ್ರಶ್ಚ ವೀರ್ಯವಾನ್।
ಶ್ವೇತವಕೊತ್ರೀಽಶ್ವವಕ್ತ್ರಶ್ಚ ಪಾಂಡರಃ ಸುಮಹಾಬಲಃ ॥74॥
ಕುಂಡಬಾಹುಃ ಸುಬಾಹುಶ್ಚ ರಾಜನ್ ಕೋಕಿಲಕಸ್ತಥಾ।
ಆಢಕಃ ಕನಕಾಕ್ಷಶ್ಚ ಬಾಲೋ ಮಾನಾಧಿಕಃ ಪ್ರಭುಃ ॥75॥
ಸಂಚಾರಕಃ ಕೋಕನಕೋ ಗೃಧ್ರವಕ್ತ್ರಶ್ಚ ಚುಂಬುಕಃ।
ಲೋಪಾಶವಕೊತ್ರೀಽಜಫಲಃ ಶಾಖಾವಕ್ತ್ರಶ್ಚ ತುಂಡಕಃ ॥76॥
ಉಗ್ರಗ್ರೀವಶ್ಚ ಕೃಷ್ಣಶ್ಚ ಹಂಸವಕ್ತ್ರಶ್ಚ ಚಂದ್ರಮಾಃ।
ವಾಣಿಕರ್ಮಾ ಚ ಮಂಡೂಕಃ ಪಂಚವಕ್ತ್ರಶ್ಚ ಶಿಕ್ಷಕಃ ॥77॥
ಮೇಷವಕ್ತ್ರಶ್ಚ ಜಂಬೂಕಃ ಶಾಕವಕ್ತ್ರಶ್ಚ ತುಂಡಕಃ।

ಯೋಗಯುಕ್ತೋ ಮಹಾತ್ಮಾ ಚ ಸತತಂ ಬ್ರಾಹ್ಮಣಪ್ರಿಯಃ ॥78॥
ಗಜಕರ್ಣ, ನಿಕುಂಭ, ಪದ್ಮ, ಕುಮುದ, ಸುನಂದ, ದ್ವಾದಶಭುಜ, ಕೃಷ್ಣ, ಉಪಕೃಷ್ಣ, ದ್ರೋಣಶ್ರವಸ್ಸು, ಕಪಿಧ್ವಜ, ಕಾಂಚನಾಕ್ಷ, ಜಲಂಧಮ, ಅಕ್ಷಿಸಂತರ್ಜನ, ಕುನದೀಕ, ಅಭ್ರಕೃತ್, ಏಕಾಕ್ಷ, ದ್ವಾದಶಭುಜ, ಏಕಜಟ, ಪ್ರಭು, ಸಹಸ್ರಬಾಹುಃ, ವಿಕಚ, ವ್ಯಾಘ್ರಾಸ್ಯ, ಕ್ಷಿತಿಕಂಪನ, ಪುಣ್ಯನಾಮ, ಸುನಾಮ, ಸುವಕ್ತ್ರ, ಪ್ರಿಯದರ್ಶನ, ಪರಿಸ್ರಾವ, ಕೋಕನದ, ಪ್ರಿಯಮಾಲೀ, ಅನುಲೇಪನ, ಗಜೋದರ, ಗಜಶಿರ, ಸ್ಕಂಧಾಕ್ಷ, ಶತಲೋಚನ, ಜ್ವಾಲಾಜಿಹ್ವ, ಕರಾಲ, ವಜ್ರನಾಭ, ವಸುಪ್ರಭ, ಚತುರ್ದಂಷ್ಟ್ರ, ಅಷ್ಟಜಿಹ್ವ, ಮೇಘನಾದ, ಪೃಥುಶ್ರವಸ್ಸು, ವಿದ್ಯುದಕ್ಷ, ಧನುರ್ವಕ್ತ್ರ, ಜಠರ, ಮಾರುತಾಶನ, ಉದಾರಾಕ್ಷ, ಝಷಾಕ್ಷ, ವಜ್ರನಾಭ, ವಸುಪ್ರದ, ಸಮುದ್ರವೇಗ, ಶೈಲಕಂಪೀ, ಮಂತ್ರಮೇಷ, ಪ್ರಭಾವ, ನಂದ, ಉಪನಂದ, ಧೂಮ್ರ, ಶ್ವೇತ, ಕಲಿಂಗ, ಸಿದ್ಧಾರ್ಥ, ವರದ, ಪ್ರಿಯಕ, ನಂದ, ಗೋನಂದ, ಆನಂದ, ಪ್ರಮೋದ, ಸ್ವಸ್ತಿಕ, ಧ್ರುವಕೃತ್, ಕ್ಷೇಮಪಾಪ, ಸುಜಾತ, ಚಿತ್ರಯಾತ್ರ, ಗೋವ್ರಜ, ಕನಕಾಪೀಡ, ಮಹಾಪಾರಿಷದೇಶ್ವರ, ಗಾಯನ, ಹಾಯನ, ಬಾಣಖಡ್ಗ, ವೈತಾಲಿ, ಅತಿತಾಲಿ, ಕಾಲಿಕ, ಪಾಲಿಕ, ಮಾಂಸಾಲಿ, ಕಂಕದಿಗ್ಭಾಂಗ, ಸಮುದ್ರ, ಮಾನಸ, ರಣೋತ್ಕಟ, ಪ್ರಭಾಸ, ಶ್ವೇತಶೀರ್ಷ, ನಂದಕ, ಕಾಲ, ಕಾಂಡಶರೀರ, ಕುಂಭಾಂಡಕ, ಅಲಿಕಾಂಧಿ, ಭೂತಲೋನ್ಮಾದನ, ಯಜ್ಞವಾಹ, ಸುವಾಹ, ದೇವಯಾಜೀ, ಸೋಮಪ, ಜಾಲಕ, ಮಹಾತೇಜಸ್ಸು, ಕ್ರುದ್ಧ, ಅಕ್ರುದ್ಧ, ತುಹನ, ತುಹಾನ, ಚಿತ್ರಸೇನ, ಮಾತುರ, ಸುಪ್ರಸಾದ, ಕಿರೀಟೀ, ವಸಾನ, ಮಧುಕರ್ಣ, ಕಲಶೋದರ, ಯವಂತ, ಮನ್ಮಥಕರ, ಸೂಚೀವಕ್ತ್ರ, ಶ್ವೇತವಕ್ತ್ರ, ಅಶ್ವವಕ್ತ್ರ, ಪಾಂಡರ, ಸುಮಹಾಬಲ, ಕುಂಡಬಾಹು, ಸುಬಾಹು, ಕೋಕಿಲಕ, ಆಢಕ, ಕನಕಾಕ್ಷ, ಬಾಲ, ಮಾನಾಧಿಕ, ಸಂಚಾರಕ, ಕೋಕನಕ, ಗೃಧ್ರವಕ್ತ್ರ, ಚುಂಬುಕ, ಲೋಪಾಶವಕ್ತ್ರ, ಅಜಫಲ, ಶಾಖಾವಕ್ತ್ರ, ತುಂಡಕ, ಉಗ್ರಗ್ರೀವ, ಕೃಷ್ಣ, ಹಂಸವಕ್ತ್ರ, ಚಂದ್ರಮ, ವಾಣಿಕರ್ಮ, ಮಂಡೂಕ, ಪಂಚವಕ್ತ್ರ, ಶಿಕ್ಷಕ, ಮೇಷವಕ್ತ್ರ, ಜಂಬೂಕ, ಶಾಕವಕ್ತ್ರ, ತುಂಡಕ, ಯೋಗ - ಇವು ಅವರ ಹೆಸರುಗಳು. ಇವರೆಲ್ಲರೂ ಯೋಗವುಳ್ಳವರಾಗಿದ್ದರು. ಮಹಾತ್ಮರಾದ ಇವರು ಯಾವಾಗಲೂ ಬ್ರಾಹ್ಮಣರಿಗೆ ಪ್ರಿಯರಾಗಿದ್ದರು.
ಪೈತಾಮಹೋ ಮಹಾತ್ಮಾ ಚ ಮಹಾಪಾರಿಷದಶ್ಚ ಯಃ ।
ಯೌವನಸ್ಥಾಶ್ಚ ಬಾಲಾಶ್ಚ ವೃದ್ಧಾಶ್ಚ ಜನಮೇಜಯ ॥79॥
ಬ್ರಹ್ಮದೇವನು ಕೊಟ್ಟ ಅನುಚರನು ಮಹಾತ್ಮನಾಗಿದ್ದನು. ಜನಮೇಜಯನೇ! ಈ ಅನುಚರರಲ್ಲಿ ಯುವಕರು, ಬಾಲಕರು ಹಾಗೂ ವೃದ್ಧರಾದವರು ಇದ್ದರು.
ಸಹಸ್ರಶಃ ಪಾರಿಷದಾಃ ಕುಮಾರಮುಪತಸ್ಥಿರೇ ॥80॥
ಸಾವಿರಾರು ಸಂಖ್ಯೆಯಲ್ಲಿ ಅನುಚರರು ಸ್ಕಂದನ ಹತ್ತಿರ ಬಂದರು.
ವಕ್ತ್ರೈರ್ನಾನಾವಿಧೈರ್ಯೇ ತು ಶೃಣು ತಾನ್ ಜನಮೇಜಯ ॥81॥
ಜನಮೇಜಯನೇ! ಬೇರೆ ಬೇರೆ ರೀತಿಯ ಮುಖವುಳ್ಳ ಅನುಚರರ ಬಗ್ಗೆ ಹೇಳುತ್ತೇನೆ, ಕೇಳು.
ಕೂರ್ಮಕುಕ್ಕುಟವಕತ್ರಶ್ಚ ಶಶಗೋಧಾಮುಖಾಸ್ತಥಾ ।
ಖರೋಷ್ಟ್ರವದನಾಶ್ಚೈವ ವರಾಹವದನಾಸ್ತಥಾ ॥82॥
ಮನುಷ್ಯಮೇಷವಕತ್ರಶ್ಚ ಸೃಗಾಲವದನಾಸ್ತಥಾ ।
ಮಾರ್ಜಾರಶಶವಕತ್ರಶ್ಚ ದೀರ್ಘವಕತ್ರಶ್ಚ ಭಾರತ ॥83॥
ನಕುಲೋಲೂಕವಕತ್ರಶ್ಚ ಶ್ವವಕತ್ರಶ್ಚ ತಥಾ ಪರೇ ।
ಆಖುವಕತ್ರಶ್ಚಭ್ರುವಕತ್ರ ಮಯೂರವದನಾಸ್ತಥಾ ॥84॥
ಮತ್ಸ್ಯಮೇಷಾನನಾಶ್ಚಾನ್ಯೇ ಅಜಾವಿಮಹಿಷಾನನಾಃ ।
ಋಕ್ಷಶಾರ್ದೂಲವಕತ್ರಶ್ಚ ದ್ವೀಪಿಸಿಂಹಾನನಾಸ್ತಥಾ ॥85॥
ಭೀಮಾ ಗಜಾನನಾಶ್ಚೈವ ತರಕ್ಷುವದನಾಸ್ತಥಾ ।
ಗರುಡಾನನಾಃ ಖಡ್ಗಮುಖಾ ವೃಕಕಾಕಾಮುಖಾಸ್ತಥಾ ॥86॥
ಗೋಖರೋಷ್ಟ್ರಮುಖಾಶ್ಚಾನ್ಯೇ ವೃಷದಂಶಮುಖಾಸ್ತಥಾ ।
ಮಹಾಜಠರಪಾದಾಂಗಾಃ ಕಾಕಾಕ್ಷಾಶ್ಚಾಪಿ ಭಾರತ ॥87॥
ಆಮೆ-ಹುಂಜದ ಮುಖವುಳ್ಳವರು, ಮೊಲದ ಮುಖವುಳ್ಳವರು, ಉಡದ ಮುಖ ಉಳ್ಳವರು, ಕತ್ತೆಯ ಮುಖವುಳ್ಳವರು, ಒಂಟೆಯ ಮುಖವುಳ್ಳವರು, ಹಂದಿಯ ಮುಖವುಳ್ಳವರು, ಮನುಷ್ಯರ ಮುಖವುಳ್ಳವರು, ಆಡಿನ ಮುಖವುಳ್ಳವರು, ನರಿಯ ಮುಖವುಳ್ಳವರು, ಬೆಕ್ಕಿನ ಮುಖವುಳ್ಳವರು, ಮೊಲದ ಮುಖವುಳ್ಳವರು ಇದ್ದರು. ಉದ್ದವಾದ ಮುಖವುಳ್ಳವರು ಇದ್ದರು. ಮುಂಗುಸಿಯ ಮುಖವುಳ್ಳವರು, ಗೂಬೆಯ ಮುಖವುಳ್ಳವರು, ನಾಯಿಯ ಮುಖವುಳ್ಳವರು, ಇಲಿಯ ಮುಖವುಳ್ಳವರು, ಕುದುರೆಯ ಮುಖವುಳ್ಳವರು, ನವಿಲಿನ ಮುಖವುಳ್ಳವರು, ಮೀನಿನ ಮುಖವುಳ್ಳವರು, ಆಡಿನ ಮುಖವುಳ್ಳವರು, ಟಗರಿನ ಮುಖವುಳ್ಳವರು, ಕುರಿಯ ಮುಖವುಳ್ಳವರು, ಕೋಣದ ಮುಖವುಳ್ಳವರು, ಕರಡಿಯ ಮುಖವುಳ್ಳವರು, ಹುಲಿಯ ಮುಖವುಳ್ಳವರು, ಆನೆಯ ಮುಖವುಳ್ಳವರು, ಸಿಂಹದ ಮುಖವುಳ್ಳವರು, ಭಯಂಕರವಾದ ಆನೆಯ ಮುಖವುಳ್ಳವರು, ಚಿರತೆಯ ಮುಖವುಳ್ಳವರು, ಗಿಡುಗದ ಮುಖವುಳ್ಳವರು, ಖಡ್ಗಮೃಗದ ಮುಖವುಳ್ಳವರು, ತೋಳದ ಮುಖವುಳ್ಳವರು, ಕಾಗೆಯ ಮುಖವುಳ್ಳವರು, ಹಸುವಿನ ಮುಖವುಳ್ಳವರು, ಕೋತಿಯ ಮುಖವುಳ್ಳವರು, ಕಾಡುಬೆಕ್ಕಿನ ಮುಖವುಳ್ಳವರು ಇದ್ದರು. ದೊಡ್ಡದಾದ ಹೊಟ್ಟೆಯುಳ್ಳವರು, ದೊಡ್ಡದಾದ ಪಾದವುಳ್ಳವರು, ಕಾಗೆಯ ಕಣ್ಣುಳ್ಳವರು ಇದ್ದರು.
ಪಾರಾವತಮುಖಾಶ್ಚಾನ್ಯೇ ತಥಾ ವ್ಯಕ್ತಮುಖಾಃ ಪರೇ ।
ಕೋಕಿಲಾವದನಾಶ್ಚೈವ ಶ್ಯೇನತಿತ್ತಿರಿಕಾನನಾಃ ॥88॥
ಪಾರಿವಾಳದ ಮುಖವುಳ್ಳವರು, ಚೆನ್ನಾಗಿ ಕಾಣಿಸುವ ಮುಖವುಳ್ಳವರು, ಕೋಗಿಲೆಯ ಮುಖವುಳ್ಳವರು, ಗಿಡುಗದ ಮುಖವುಳ್ಳವರು, ತಿತ್ತಿರಿಪಕ್ಷಿಯ ಮುಖವುಳ್ಳವರು ಇದ್ದರು.
ಆಶೀವಿಷಾಸಕ್ತಕಂಠಾ ಗೋನಾಸಾಭರಣಾಸ್ತಥಾ ।

ಸ್ಥೂಲೋದರಾಃ ಕೃಶಾಂಗಾಶ್ಚ ಸ್ಥೂಲಾಂಗಾಶ್ಚ ಕೃಶೋದರಾಃ ॥89॥
ಹ್ರಸ್ವಗ್ರೀವಾ ಮಹಾಕಂಠಾ ನಾನಾವ್ಯಾಲವಿಭೂಷಿತಾಃ |
ಗಜೇಂದ್ರಚರ್ಮವಸನಾಸ್ತಥಾ ಕೃಷ್ಣಾಜಿನಾಂಬರಾಃ ॥90॥
ಕಂಠದಲ್ಲಿ ಸರ್ಪಗಳನ್ನು ಸುತ್ತಿಕೊಂಡವರು, ಹಸುವಿನ ಮೂಗಿನ ಆಭರಣಗಳನ್ನು ಧರಿಸಿದವರು ಇದ್ದರು. ದೊಡ್ಡಹೊಟ್ಟೆಯವರು, ತೆಳ್ಳಗಿನ ಅಂಗವುಳ್ಳವರು, ದಪ್ಪಗಿನ ಅಂಗವುಳ್ಳವರು, ತೆಳ್ಳಗಿನ ಹೊಟ್ಟೆಯುಳ್ಳವರು, ಗಿಡ್ಡದಾದ ಕುತ್ತಿಗೆಯುಳ್ಳವರು, ದಪ್ಪಗಿನ ಕುತ್ತಿಗೆಯುಳ್ಳವರು, ಅನೇಕ ಸರ್ಪಗಳಿಂದ ಅಲಂಕೃತರಾದವರು, ಆನೆಯ ಚರ್ಮವನ್ನು ಹೊದ್ದುಕೊಂಡವರು, ಕೃಷ್ಣಮೃಗದ ಚರ್ಮವನ್ನು ಹೊದ್ದುಕೊಂಡವರು ಇದ್ದರು.
ಸ್ಕಂದೇಮುಖಾ ಮಹಾರಾಜ ತಥಾ ಹ್ಯುದರತೋಮುಖಾಃ |
ಪೃಷ್ಠೇಮುಖಾಸ್ತಥಾ ಕಂಠೇಮುಖಾ ಜಂಘಾಮುಖಾ ಅಪಿ ॥91॥
ಪಾರ್ಶ್ವಾನನಾಶ್ಚ ಬಹವೋ ನಾನಾದೇಶಮುಖಾಃ ಪರೇ |
ತಥಾ ಕೀಟಪತಂಗಾನಾಂ ಸದೃಶಾಸ್ಯಾ ಗಣೇಶ್ವರಾಃ ॥92॥
ಮಹಾರಾಜನೇ! ಹೆಗಲಲ್ಲಿ ಮುಖವುಳ್ಳವರು, ಹೊಟ್ಟೆಯಲ್ಲಿ ಮುಖವುಳ್ಳವರು, ಬೆನ್ನಲ್ಲಿ ಮುಖವುಳ್ಳವರು, ಕುತ್ತಿಗೆಯಲ್ಲಿ ಮುಖವುಳ್ಳವರು, ಮೊಣಕಾಲಲ್ಲಿ ಮುಖವುಳ್ಳವರು, ದೇಹದ ಬದಿಯಲ್ಲಿ ಮುಖವುಳ್ಳವರು, ಬೇರೆ ಬೇರೆ ಕಡೆ ಮುಖವುಳ್ಳವರು ಇದ್ದರು. ಹಾಗೆಯೇ ಕೀಟಗಳ ಹಾಗೆ ಮುಖವುಳ್ಳವರು, ಚಿಟ್ಟೆಗಳ ಹಾಗೆ ಮುಖವುಳ್ಳವರು ಇದ್ದರು.
ನಾನಾವ್ಯಾಲಮುಖಾಶ್ಚಾನ್ಯೇ ಬಹುಬಾಹುಶಿರೋಧರಾಃ |
ನಾನಾಕೃತಿಮುಖಾಃ ಕೇಚಿದ್ ಬಾಹುಕರ್ಣಾಕ್ಷಿನಾಸಿಕಾಃ ॥93॥
ಅನೇಕ ಸರ್ಪಗಳ ಮುಖವುಳ್ಳವರು, ಅನೇಕ ಕೈ ಮತ್ತು ತಲೆಯುಳ್ಳವರು, ಅನೇಕ ಆಕಾರದ ಮುಖವುಳ್ಳವರು ಕೆಲವರು, ಬಾಹು, ಕರ್ಣ, ಅಕ್ಷಿ, ನಾಸವುಳ್ಳವರು ಇದ್ದರು.
ಭುಜಂಗಭೋಗವದನಾ ನಾನಾಗುಲ್ಮನಿವಾಸಿನಃ |
ಚೀರಸಂವೃತಗಾತ್ರಾಶ್ಚ ತಥಾ ವಲ್ಕಲವಾಸಸಃ ॥94॥
ಹಾವಿನ ಶರೀರದಂತೆ ಮುಖವುಳ್ಳವರು ಇದ್ದರು. ವಿವಿಧ ಪೊದೆಗಳಲ್ಲಿ ವಾಸಮಾಡುವವರು, ನಾರುಮಡಿಯನ್ನು ಸುತ್ತಿಕೊಂಡವರು, ಮರದ ತೊಗಟೆಗಳನ್ನು ಸುತ್ತಿಕೊಂಡವರು ಇದ್ದರು.
ನಾನಾವೇಷಧರಾಶ್ಚಾನ್ಯೇ ಚರ್ಮವಾಸಸ ಏವ ಚ |
ಉಷ್ಣೀಷಿಣೋ ಮಕುಟಿನಃ ಕಂಬುಗ್ರೀವಾಃ ಸುವರ್ಚಸಃ ॥95॥
ಅನೇಕವಿಧದ ವೇಷವನ್ನು ಹಾಕಿಕೊಂಡವರು ಇದ್ದರು. ಚರ್ಮದ ಬಟ್ಟೆ ಧರಿಸಿದವರು ಇದ್ದರು. ರುಮಾಲು (ಮುಂಡಾಸು) ಕಟ್ಟಿಕೊಂಡವರು, ಕಿರೀಟಧಾರಣೆ ಮಾಡಿದವರು ಇದ್ದರು. ಶಂಖದ ಹಾಗೆ ಕುತ್ತಿಗೆಯುಳ್ಳವರು ಇದ್ದರು. ಕಾಂತಿಮಂತರಾಗಿದ್ದರು.
ಕಿರೀಟಿನಃ ಪಂಚಶಿಖಾಸ್ತಥಾ ಕಠಿನಮೂರ್ಧಜಾಃ |
ತ್ರಿಶಿಖಾ ದ್ವಿಶಿಖಾಶ್ಚೈವ ತಥಾ ಸಪ್ತಶಿಖಾಃ ಪರೇ ॥96॥
ಕೆಲವರು ಕಿರೀಟವನ್ನು ಹಾಕಿಕೊಂಡಿದ್ದರು. ಕೆಲವರು ಐದು ಶಿಖೆಗಳನ್ನು ಧರಿಸಿಕೊಂಡಿದ್ದರು. ಕೆಲವರು ಜಟಾಧಾರಿಗಳಾಗಿದ್ದರು. ಕೆಲವರು ಎರಡು ಶಿಖೆಯುಳ್ಳವರು, ಕೆಲವರು ಒಂದು ಶಿಖೆ ಉಳ್ಳವರು, ಕೆಲವರು ಏಳು ಶಿಖೆಯುಳ್ಳವರು ಇದ್ದರು.
ಶಿಖಂಡಿನೋ ಮಕುಟಿನೋ ಮುಂಡಾಶ್ಚೈವ ಜಟಾಧರಾಃ |
ಚಿತ್ರಮಾಲಾಂಬರಧರಾಃ ಕೇಚಿದ್ ರೋಮಾನನಾಸ್ತಥಾ ॥97॥
ಕೆಲವರು ತಲೆಯಲ್ಲಿ ದೊಡ್ಡದಾದ ಜುಟ್ಟು (ಶಿಖೆ) ಉಳ್ಳವರು, ಕೆಲವರು ಕಿರೀಟವನ್ನು ಧರಿಸಿಕೊಂಡವರು, ಕೆಲವರು ತಲೆಯನ್ನು ಬೋಳಿಸಿಕೊಂಡವರು, ಕೆಲವರು ಜಟೆಯನ್ನು ಬಿಟ್ಟವರು ಇದ್ದರು. ಕೆಲವರು ಚಿತ್ರವಿಚಿತ್ರವಾದ ಮಾಲೆ ವತ್ತು ಬಟ್ಟೆಯನ್ನು ಹಾಕಿಕೊಂಡವರು ಇದ್ದರು. ಮುಖದಲ್ಲಿ ರೋಮವನ್ನು ಹೊಂದಿದವರು ಇದ್ದರು.
ವಿಗ್ರಹೈಕರಸಾ ನಿತ್ಯಮಜೇಯಾಃ ಸುರಸತ್ತಮೈಃ |
ಕೃಷ್ಣಾಃ ನಿರ್ಮಾಂಸವಕ್ತ್ರಾಶ್ಚ ದೀರ್ಘಪೃಷ್ಠೋದರೋರಸಃ ॥98॥
ಇವರೆಲ್ಲರೂ ಯುದ್ಧದಲ್ಲಿ ಪರಮಾಸಕ್ತಿಯುಳ್ಳವರಾಗಿದ್ದರು. ದೇವೋತ್ತಮರಿಂದಲೂ ಗೆಲ್ಲಲು ಅಸಾಧ್ಯರಾಗಿದ್ದರು. ಕೆಲವರು ಕಪ್ಪಗಿದ್ದರು. ಕೆಲವರ ಮುಖದಲ್ಲಿ ಮಾಂಸವೇ ಇರಲಿಲ್ಲ. ಉದ್ದವಾದ ಬೆನ್ನುಳ್ಳವರು ಕೆಲವರು, ಉದ್ದವಾದ ಹೊಟ್ಟೆಯುಳ್ಳವರು ಕೆಲವರು, ಉದ್ದವಾದ ಎದೆಯುಳ್ಳವರು ಕೆಲವರು ಇದ್ದರು.
ಸ್ಥೂಲಪೃಷ್ಠಾ ಹ್ರಸ್ವಪೃಷ್ಠಾಃ ಪ್ರಲಂಬೋದರಮೇಹನಾಃ |
ಮಹಾಭುಜಾ ಹ್ರಸ್ವಭುಜಾ ಹ್ರಸ್ವಗಾತ್ರಾಃ ಪ್ರಬಾಹವಃ ॥99॥
ದಪ್ಪಗಿನ ಬೆನ್ನುಳ್ಳವರು, ಗಿಡ್ಡದಾದ ಬೆನ್ನುಳ್ಳವರು, ಜೋತುಬಿದ್ದ ಉದ್ದವಾದ ಹೊಟ್ಟೆಯುಳ್ಳವರು, ಉದ್ದವಾದ ಮೂತ್ರವಿಸರ್ಜನಾಂಗವನ್ನು ಹೊಂದಿದವರು ಇದ್ದರು. ದೊಡ್ಡದಾದ ಭುಜವುಳ್ಳವರು, ಗಿಡ್ಡವಾದ ಭುಜವುಳ್ಳವರು, ಗಿಡ್ಡವಾದ ಶರೀರವುಳ್ಳವರು, ದೀರ್ಘವಾದ ಬಾಹುವುಳ್ಳವರು ಇದ್ದರು.
ಕುಬ್ಜಾಶ್ಚ ದೀರ್ಘಜಿಹ್ವಾಶ್ಚ ಹಸ್ತಿಕರ್ಣಶಿರೋಧರಾಃ |
ಹಸ್ತಿನಾಸಾಃ ಕೂರ್ಮನಾಸಾ ವೃಕವ್ಯಾಘ್ರನಖಾಸ್ತಥಾ ॥100॥
ಕೆಲವರು ಕಪ್ಪಗಿದ್ದರು. ಕೆಲವರು ಉದ್ದವಾದ ನಾಲಿಗೆಯುಳ್ಳವರಾಗಿದ್ದರು. ಆನೆಯ ಕಿವಿಯಂತಹ ಕಿವಿಯುಳ್ಳವರು, ಆನೆಯ ಕುತ್ತಿಗೆಯ ಹಾಗೆ ಕುತ್ತಿಗೆಯುಳ್ಳವರು ಕೆಲವರು ಇದ್ದರು. ಆನೆಯ ಸೊಂಡಿಲಿನ ಹಾಗೆ ಮೂಗು ಉಳ್ಳವರು, ಆಮೆಯ ಮೂಗಿನಂಥ ಮೂಗು ಉಳ್ಳವರು, ತೋಳದ ಉಗುರು ಉಳ್ಳವರು, ಹುಲಿಯ ಉಗುರು ಉಳ್ಳವರು ಇದ್ದರು.

ದೀರ್ಘೋಷ್ಠಾ ದೀರ್ಘಜಿಹ್ವಾಶ್ಚ ವಿಕರಾಳಾ ಹ್ಯಧೋಮುಖಾಃ |
ಮಹಾದಂಷ್ಟ್ರಾ ಹ್ರಸ್ವದಂಷ್ಟ್ರಾ ಚಿತ್ರದಂಷ್ಟ್ರಾಸ್ತಥಾ ಪರೇ ॥101॥
ಉದ್ದವಾದ ತುಟಿಯುಳ್ಳವರು, ಉದ್ದವಾದ ನಾಲಿಗೆಯುಳ್ಳವರು, ವಿಕಾರವಾದ ಆಕಾರವುಳ್ಳವರು, ಮುಖವನ್ನು ಕೆಳಗೆ ಹಾಕಿಕೊಂಡವರು, ದೊಡ್ಡದಾದ ಹಲ್ಲುಳ್ಳವರು, ಗಿಡ್ಡವಾದ ಹಲ್ಲುಳ್ಳವರು, ವಿಚಿತ್ರವಾದ ಹಲ್ಲುಳ್ಳವರು ಇದ್ದರು.
ವಾರಣೇಂದ್ರಮುಖಾಶ್ಚಾನ್ಯೇ ಭೀಮಾ ರಾಜನ್ ಸಹಸ್ರಶಃ |
ಸುವಿಭಕ್ತಶರೀರಾಶ್ಚ ದೀಪ್ತಿಮಂತಃ ಸ್ವಲಂಕೃತಾಃ ॥102॥
ರಾಜನೇ! ಆನೆಯ ಮುಖವುಳ್ಳ ಭಯಂಕರವಾದ ಸಾವಿರಾರು ಅನುಚರರು ಇದ್ದರು. ಒಳ್ಳೆಯ ರೀತಿಯಲ್ಲಿ ಹಂಚಿಹೋಗಿರುವ ಶರೀರವುಳ್ಳವರಾಗಿದ್ದರು. ಕಾಂತಿಯುಳ್ಳವರಾಗಿದ್ದರು. ಚೆನ್ನಾಗಿ ಅಲಂಕಾರವನ್ನು ಮಾಡಿಕೊಂಡಿದ್ದರು.
ಪಿಂಗಾಕ್ಷಾಃ ಶಂಕುಕರ್ಣಾಶ್ಚ ಚಕ್ರಪಾದಾಶ್ಚ ಭಾರತ |
ಪೃಥುದಂಷ್ಟ್ರಾ ಮಹಾದಂಷ್ಟ್ರಾಃ ಸ್ಥೂಲೋಷ್ಠಾ ಹರಿಮೂರ್ಧ್ವಜಾಃ ॥103॥
ಕಂದುಬಣ್ಣದ ಕಣ್ಣುಳ್ಳವರು, ಸುತ್ತಿದ ಕಿವಿಯುಳ್ಳವರು, ಚಕ್ರದಂತೆ ವರ್ತುಲವಾದ ಪಾದವುಳ್ಳವರು, ದಪ್ಪವಾದ ಹಲ್ಲುಳ್ಳವರು, ಗಿಡ್ಡವಾದ ಹಲ್ಲುಳ್ಳವರು, ದಪ್ಪವಾದ ತುಟಿಯುಳ್ಳವರು, ಕಪ್ಪಾದ ಕೂದಲು ಉಳ್ಳವರು ಇದ್ದರು.
ನಾನಾಪಾದೋಷ್ಠಪೃಷ್ಠಾಶ್ಚ ನಾನಾಹಸ್ತಶಿರೋಧರಾಃ |
ನಾನಾವರ್ಮಭಿರಾಚ್ಛನ್ನಾ ನಾನಾಭಾಷಾಶ್ಚ ಭಾರತ ॥104॥
ಅನೇಕ ಪಾದವುಳ್ಳವರು, ಅನೇಕ ಬೆನ್ನುಳ್ಳವರು, ಅನೇಕ ಕೈಯುಳ್ಳವರು, ಅನೇಕ ಕುತ್ತಿಗೆಯುಳ್ಳವರು ಇದ್ದರು. ಅನೇಕ ಕವಚಗಳಿಂದ ತಮ್ಮನ್ನು ಮುಚ್ಚಿಕೊಂಡಿದ್ದರು. ಅನೇಕ ಭಾಷೆಗಳನ್ನು ಮಾತನಾಡುತ್ತಿದ್ದರು.
ಕುಶಲಾ ದೇಶಭಾಷಾಸು ಜಲ್ಪಂತೋಽನ್ಯೋನ್ಯಮೀಶ್ವರಮ್ |
ಹೃಷ್ಟಾಃ ಪರಿಪತಂತಿ ಸ್ಮ ರಾಜನ್ ಪಾರಿಷದಾಃ ಸ್ಮೃತಾಃ ॥105॥
ಪ್ರಾದೇಶಿಕ ಭಾಷೆಗಳಲ್ಲಿ ನಿಪುಣರಾದ ಇವರು ತಮ್ಮ ತಮ್ಮಲ್ಲಿಯೇ ಹರಟೆ ಮಾಡುತ್ತಿದ್ದರು. ರಾಜನೇ! ಈ ಅನುಚರರು ಸಂತೋಷದಿಂದ ಕುಣಿದಾಡುತ್ತಿದ್ದರು.
ದೀರ್ಘಗ್ರೀವಾ ದೀರ್ಘನಖಾ ದೀರ್ಘಪಾದಶಿರೋರುಹಾಃ |
ಪಿಂಗಾಕ್ಷಾ ನೀಲಕಂಠಾಶ್ಚ ಲಂಬಕರ್ಣಾಶ್ಚ ಭಾರತ ॥106॥
ಉದ್ದವಾದ ಕುತ್ತಿಯುಳ್ಳವರು ಇದ್ದರು. ಉದ್ದವಾದ ಉಗುರುವುಳ್ಳವರು ಇದ್ದರು, ಉದ್ದವಾದ ಪಾದವುಳ್ಳವರು, ಉದ್ದವಾದ ಕೂದಲು ಉಳ್ಳವರು ಇದ್ದರು. ಕಂದುಬಣ್ಣದ ಕಣ್ಣುಳ್ಳವರು, ಕಪ್ಪಾದ ಕುತ್ತಿಗೆಯುಳ್ಳವರು, ಉದ್ದವಾದ ಕಿವಿಯುಳ್ಳವರು ಇದ್ದರು.
ಶುಕೋದರನಿಭಾಶ್ಚೈವ ಕೇಚಿದಂಜನಸನ್ನಿಭಾಃ |
ಶ್ವೇತಾಂಗಾ ಲೋಹಿತಗ್ರೀವಾಃ ಪಿಂಗಲಾಕ್ಷಾಸ್ತಥಾ ಪರೇ ॥107॥
ಗಿಳಿಯ ಹೊಟ್ಟೆಯ ಹಾಗೆ ಕಾಣಿಸುವವರು, ಕಾಡಿಗೆಯ ಬಣ್ಣವನ್ನು ಹೊಂದಿದವರು, ಬೆಳ್ಳಗಿನ ಅವಯವ ಉಳ್ಳವರು, ಕೆಂಪಾದ ಕುತ್ತಿಗೆಯುಳ್ಳವರು, ಕಂದು ಬಣ್ಣದ ಕಣ್ಣುಳ್ಳವರು ಇದ್ದರು.
ಕಲ್ಮಾಷಬಾಹವೋ ರಾಜನ್ ಚಿತ್ರಮಾಲಾಶ್ಚ ಭಾರತ |
ಚಾಮೀಕರಾಪೀಡನಿಭಾಃ ಶ್ವೇತಲೋಹಿತರಾಜಯಃ ॥108॥
ರಾಜನ್! ವಿಕಾರವಾದ ಬಾಹು ಉಳ್ಳವರು, ವಿಚಿತ್ರವಾದ ಮಾಲೆಯನ್ನು ಧರಿಸಿಕೊಂಡವರು, ಬಂಗಾರದ ಕಾಂತಿಯುಳ್ಳವರು, ಬೆಳ್ಳಗಿನ ಹಾಗೂ ಕೆಂಪಗಿನ ವರ್ಣದಿಂದ ಶೋಭಿಸುತ್ತಿರುವವರು ಇದ್ದರು.
ನಾನಾವರ್ಣಾಃ ಸುವರ್ಣಾಶ್ಚ ಮಯೂರಸದೃಶಪ್ರಭಾಃ ॥109॥
ಅನೇಕ ಬಣ್ಣದವರು, ಚೆನ್ನಾಗಿರುವ ಬಣ್ಣವುಳ್ಳವರು, ನವಿಲಿನ ಸೊಬಗನ್ನು ಹೊಂದಿದವರು ಇದ್ದರು.
ಪುನಃ ಪ್ರಹರಣಾನ್ಯೇಷಾಂ ಕೀರ್ತ್ಯಮಾನಾನಿ ಮೇ ಶೃಣು ॥110॥
ಆ ಅನುಚರರ ಕೈಯಲ್ಲಿದ್ದ ಆಯುಧಗಳನ್ನು ಹೇಳುತ್ತೇನೆ, ಕೇಳು.
ಶೇಷೈಃ ಕೃತಃ ಪಾರಿಷದೈರಾಯುಧಾನಾಂ ಪರಿಗ್ರಹಃ ॥111॥
ಉಳಿದೆಲ್ಲಾ ಅನುಚರರೂ ಆಯುಧಗಳನ್ನು ಹಿಡಿದುಕೊಂಡಿದ್ದರು.
ಪಾಶೋದ್ಯತಕರಾಶ್ಚೈವ ವ್ಯಾದಿತಾಸ್ಯಾಃ ಖರಾನನಾಃ |
ಪೃಥ್ವಕ್ಷಾ ನೀಲಕಂಠಾಶ್ಚ ತಥಾ ಪರಿಘಬಾಹವಃ ॥112॥
ಪಾಶಾಯುಧವನ್ನು ಧರಿಸಿಕೊಂಡು, ಮುಖ ತೆರೆದುಕೊಂಡು, ಕ್ರೂರವಾದ ಮುಖವುಳ್ಳವರು ಇದ್ದರು. ದೊಡ್ಡದಾದ ಕಣ್ಣುಳ್ಳವರು ಇದ್ದರು. ಉದ್ದವಾದ ಹಾಗೂ ನೀಲಿಯ ಕಂಠವುಳ್ಳವರು ಆಗಿದ್ದರು. ಪರಿಘಾಯುಧವನ್ನು ಹಿಡಿದುಕೊಂಡಿದ್ದರು.
ಶತಘ್ನೀಪಾಶಹಸ್ತಾಶ್ಚ ತಥಾ ಮುಸಲಪಾಣಯಃ |
ಅಸಿಪಟ್ಟಸಹಸ್ತಾಶ್ಚ ದಂಡಹಸ್ತಾಶ್ಚ ಭಾರತ ॥113॥
ಶತಘ್ನಿ ಆಯುಧವನ್ನು, ಪಾಶಾಯುಧವನ್ನು ಹಿಡಿದುಕೊಂಡಿದ್ದರು. ಕೈಯಲ್ಲಿ ಒನಕೆಯನ್ನು ಹಿಡಿದುಕೊಂಡಿದ್ದರು. ಕೆಲವರು ಅಸಿಪಟ್ಟವನ್ನು ಹಿಡಿದುಕೊಂಡಿದ್ದರು. ಕೆಲವರು ದಂಡವನ್ನು ಹಿಡಿದುಕೊಂಡಿದ್ದರು.
ಗದಾಮುಸುಂಠೀಹಸ್ತಾಶ್ಚ ತಥಾ ಮುದ್ಗರಪಾಣಯಃ |
ತೀಕ್ಷ್ಣಾಸಿಹಸ್ತಾಶ್ಚ ತಥಾ ದಂಡಹಸ್ತಾಶ್ಚ ಭಾರತ ॥114॥
ಗದೆಯನ್ನು ಹಿಡಿದುಕೊಂಡವರು, ಮುಸುಂಠಿ (ಆಯುಧ)ಯನ್ನು ಹಿಡಿದುಕೊಂಡವರು, ಒನಕೆಯನ್ನು ಹಿಡಿದುಕೊಂಡವರು, ಹರಿತವಾದ ಕತ್ತಿಯನ್ನು ಹಿಡಿದುಕೊಂಡವರು, ದಂಡವನ್ನು ಹಿಡಿದುಕೊಂಡವರು ಇದ್ದರು.

ಆಯುಧೈರ್ವಿವಿಧೈರ್ಘೋರೈರ್ಮಹಾತ್ಮಾನೋ ಮಹಾಜವಾಃ ॥115॥
ಬಹಳ ವೇಗವುಳ್ಳ ಆ ಮಹಾತ್ಮರಾದ ಅನುಚರರು ಭಯಂಕರವಾದ ವಿವಿಧ ಆಯುಧಗಳನ್ನು ಹಿಡಿದುಕೊಂಡಿದ್ದರು.
ಮಹಾಜವಾ ಮಹಾಭಾಗಾ ಮಹಾಪಾರಿಷದಾಸ್ತಥಾ ।
ಅಭಿಷೇಕಂ ಕುಮಾರಸ್ಯ ದೃಷ್ಟ್ವಾ ಹೃಷ್ಟಾ ರಣಪ್ರಿಯಾಃ ॥116॥
ಮಹಾನುಚರರು ಬಹಳ ವೇಗವುಳ್ಳವರಾಗಿದ್ದರು, ಮಹಾಭಾಗ್ಯಶಾಲಿಗಳಾಗಿದ್ದರು. ಯುದ್ಧಪ್ರಿಯರಾದ ಅವರು ಕುಮಾರನ ಪಟ್ಟಾಭಿಷೇಕವನ್ನು ನೋಡಿ ಸಂತೋಷಪಟ್ಟರು.
ಘಂಟಾಜಾಲಪಿನದ್ಧಾಂಗಾ ನನೃತುಸ್ತೇ ಮಹೌಜಸಃ ॥117॥
ಮಹಾಕಾಂತಿಯುಳ್ಳ ಅವರು ದೇಹವನ್ನು ಗಂಟೆಗಳ ಮಾಲೆಯಿಂದ ಮುಚ್ಚಿಕೊಂಡು ಕುಣಿಯುತ್ತಿದ್ದರು.
ಏತೇ ಚಾನ್ಯೇ ಚ ಬಹವೋ ಮಹಾಪಾರಿಷದಾ ನೃಪ ।
ಉಪತಸ್ಥುರ್ಮಹಾತ್ಮಾನಂ ಕಾರ್ತಿಕೇಯಂ ಯಶಸ್ವಿನಮ್ ॥118॥
ರಾಜನ್! ಇವರು ಮತ್ತು ಇನ್ನೂ ಬೇರೆ ಅನೇಕ ಅನುಚರರು ಯಶೋವಂತನಾದ ಕಾರ್ತಿಕೇಯನನ್ನು ಸಮೀಪಿಸಿ ಸೇವಿಸಿದರು.
ದಿವ್ಯಾಶ್ಚಾಪ್ಯಾಂತರಿಕ್ಷಾಶ್ಚ ಪಾರ್ಥಿವಾಶ್ಚಾನಲೋಪಮಾಃ ।
ವ್ಯಾದಿಷ್ಟಾ ದೈವತೈಃ ಶೂರೈಃ ಸ್ಕಂದಸ್ಯಾನುಚರಾ ಭವನ್ ॥119॥
ಶೂರರಾದ ದೇವತೆಗಳು ಕಳುಹಿಸಿಕೊಟ್ಟ ಈ ಅನುಚರರು ಅಸದೃಶರಾದ ದೇವಲೋಕವಾಸಿಗಳು, ಅಂತರಿಕ್ಷವಾಸಿಗಳು, ಭೂವಾಸಿಗಳು ಆಗಿದ್ದರು.
ತಾದೃಶಾನಾಂ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ಅಭಿಷಿಕ್ತಂ ಮಹಾತ್ಮಾನಂ ಪರಿವಾರ್ಯೋಪತಸ್ಥಿರೇ ॥120॥
ಅಂತಹ ಅನುಚರರು ಸಾವಿರ, ಹತ್ತುಸಾವಿರ, ಅರ್ಬುದ ಸಂಖ್ಯೆಯಲ್ಲಿ ಇದ್ದರು. ಅವರೆಲ್ಲರೂ ಸ್ಕಂದನ ಪಟ್ಟಾಭಿಷೇಕದಲ್ಲಿ ಸುತ್ತಲೂ ನೆರೆದಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಕುಮಾರಾಭಿಷೇಕೋ ನಾಮ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಕುಮಾರಮಾತೃಗಣದ ನಾಮಕೀರ್ತನವು, ಕುಮಾರನು ತಾರಕಾಸುರನನ್ನು ಸಂಹರಿಸಿದ್ದು ಮತ್ತು ಕ್ರೌಂಚಪರ್ವತವನ್ನು ಪುಡಿ ಮಾಡಿದ್ದು.
ವೈಶಂಪಾಯನಃ
ಶೃಣು ಮಾತೃಗಣಾನ್ ರಾಜನ್ ಕುಮಾರಾನುಚರಾನಿಮಾನ್ ।
ಕೀರ್ತ್ಯಮಾನಾನ್ ಮಹಾವೀರ್ಯಾನ್ ಸಪತ್ನಗಣಸೂದನಾನ್ ॥1॥
ವೈಶಂಪಾಯನ ರಾಜನೇ! ಕುಮಾರನ ಅನುಚರರಾಗಿದ್ದ ಮಾತೃಗಣಗಳ ಬಗ್ಗೆ ಹೇಳುತ್ತೇನೆ, ಕೇಳು. ಅವರೆಲ್ಲರೂ ಕೀರ್ತನೆಗೆ ಯೋಗ್ಯರಾಗಿದ್ದಾರೆ, ಮಹಾವೀರ್ಯವುಳ್ಳವರು, ತಮ್ಮ ದಾಯಾದಿಗಳನ್ನು ನಾಶ ಮಾಡುವವರು.
ಯಶಸ್ವಿನೀನಾಂ ಮಾತೄಣಾಂ ಶೃಣು ನಾಮಾನಿ ಭಾರತ ।
ಯಾಭಿರ್ವ್ಯಾಪ್ತಾಸ್ತ್ರಯೋ ಲೋಕಾಃ ಕಲ್ಯಾಣೀಭಿಶ್ಚರಾಚರಾಃ ॥2॥
ಭರತಕುಲೋದ್ಭವನೇ! ಯಶೋವತಿಯರಾದ ಮಾತೆಯರ ಹೆಸರುಗಳನ್ನು ಕೇಳು. ಮಂಗಳಸ್ವರೂಪರಾದ ಇವರು ಚರಾಚರಪ್ರಪಂಚವನ್ನು ವ್ಯಾಪಿಸಿಕೊಂಡು ಇದ್ದಾರೆ.
ಪ್ರಭಾವತೀ ವಿಶಾಲಾಕ್ಷೀ ಪಾಲಿಕಾ ಗೋನಸಾ ತಥಾ ।
ಶ್ರೀಮತೀ ಬಹುಲಾ ಚೈವ ತಥೈವ ಬಹುಪುತ್ರಿಕಾ ॥3॥
ಅಪ್ಸುಜಾತಾ ಚ ಗೋಪಾಲೀ ಬೃಹದಂಬಾಲಿಕಾ ತಥಾ ।
ಜಯಾವತೀ ಮಾಲಿನಿಕಾ ಧ್ರುವರತ್ನಾ ಭಯಂಕರೀ ॥4॥
ಬಹುದಾಮಾ ಸುದಾಮಾ ಚ ಪಿಶಂಗೀ ನಂದಿನೀ ತಥಾ ।
ಏಕಚೂಡಾ ಮಹಾಚೂಡಾ ಚಕ್ರನೇಮಿಶ್ಚ ಭಾರತ ॥5॥
ಅತೇಜಸ್ವೀ ಭವತ್ಸೇನಾ ಕಮಲಾಕ್ಷ್ಯಥ ಶೋಭನಾ ।
ಶತ್ರುಂಜಯಾ ತಥಾ ವಾಚೀ ಕ್ರೋಧನಾ ಶಲಭೀಮುಖಾ ॥6॥
ಮಾಧವೀ ಶುಭವಕತ್ರ ಚ ತೀರ್ಥನೇಮಿಶ್ಚ ಭಾರತ ।
ಗೀತಿಪ್ರಿಯಾ ಚ ಕಲ್ಯಾಣೀ ದ್ರುಮಮಾಲಾಽಮಿತೌಜಸಾ ॥7॥
ತೇಜಸ್ವಿನೀ ಭೋಗವತೀ ಸುಭ್ರೂಶ್ಚ ಕನಕಾವತೀ ।
ಅಲಾತಾಕ್ಷೀ ವೀರ್ಯವತೀ ವಿದ್ಯುಜ್ಜಿಹ್ವಾ ಚ ಭಾರತ ॥8॥
ಪದ್ಮಾವತೀ ಸುನಕ್ಷತ್ರಾ ಕಂದರಾ ಬಹುಲೋಚನಾ ।
ಸಂತಾನಿಕಾ ಚ ಕೌರವ್ಯ ಕಾಮಾ ಚ ಕಮಲಾವತೀ ॥9॥
ಮಾಲಿದಾ ಬಹುದಾಮಾ ಚ ಪ್ರಸೂನಾ ಚ ಯಶಸ್ವಿನೀ ।

ನೃತ್ಯಪ್ರಿಯಾ ಚ ರಾಜೇಂದ್ರ ತಥೋಲೂಖಲಮೇಖಲಾ ॥10॥
ಕುಕ್ಕುಟಿಕಾ ಶಂಖಿಣಿಕಾ ತಥಾ ಜರ್ಝರಿಕಾ ನೃಪ |
ಕುಂಡಲೀಕಾ ಕಲಾಲೀಲಾ ಕುಂಡಲಾಽಥ ಶತೋದರೀ ॥11॥
ಉಕ್ರಾಥಿಕಾ ಜರೇಂದ್ರಾದಾ ಮಹಾವೇಗಾ ಚ ಕಂಕಣಾ |
ಮನೋಜವಾ ಕಂಟಕಿನೀ ಪ್ರಘಸಾ ಪೂತನಾದಿನೀ ॥12॥
ಐಷಿಕಾ ಪುಚ್ಛದಾ ವಾಮಾ ಕೋಪನಾಽಥ ತಡಿತ್ಪ್ರಭಾ |
ಕುಂಡೋದರೀ ಪ್ರಚಂಡಾ ಚ ಕೋಟರಾ ಮೇಘವಾಸಿನೀ ॥13॥
ಸುತರಾ ತಂತ್ರಿಣೀ ಲಂಬಾ ವಾಸಚೂಡಾ ವಿಕರ್ತನಾ |
ಊರ್ಧ್ವವೇಣೀಧರಾ ಚೈವ ಪಿಂಗಾಕ್ಷೀ ಹೇಮಮೇಖಲಾ ॥14॥
ಆಮೋದಾ ಚೈವ ಕೌರವ್ಯ ತಥಾ ಲಂಬಪಯೋಧರಾ |
ಶಶೋಲೂಕಮುಖೀ ಕೃಷ್ಣಾ ಖರಜಂಘಾ ಮನೋಜವಾ ॥15॥
ಶಿಂಶುಮಾರಮುಖೀ ಶ್ವೇತಾ ಲೋಹಿತಾಕ್ಷೀ ವಿಭೀಷಣಾ |
ಜಟಾಲಿಕಾ ಕಾಮಚರೀ ದೀರ್ಘಜಿಹ್ವಾಽಥ ಲೋಭಗಾ ॥16॥
ಕಾನೇಲಿಕಾ ವಾಶತಿಕಾ ಕುಮುದಾ ಚೈವ ಭಾರತ |
ಶೋಣಿತಾಕ್ಷೀ ಮಹಾಕಾಯಾ ಗರದಾ ಚೈವ ಭಾರತ ॥17॥
ಏಕಾಲೀಕಾ ಕುಂಕುಸುಮಾ ಕೃಷ್ಣವರ್ಣಾ ಚ ಭಾರತ |
ಕ್ಷುರಕರ್ಣೀ ಚತುಷ್ಕರ್ಣಾ ಕರ್ಣಪ್ರಾವರಣಾ ತಥಾ ॥18॥
ಚತುಷ್ಪಥನಿಕೇತಾ ಚ ಗೋಕರ್ಣೀ ಮಹಿಷಾನನಾ |
ಖರಕರ್ಣೀ ಮಹಾಕರ್ಣೀ ಭೇರೀಸ್ವನಮಹಾಸ್ವನೇ ॥19॥
ಶಂಖಕುಂಭಸ್ವರಾ ಚೈವ ಭವದಾ ಚ ಮಹಾಬಲಾ |
ಗಣಾ ಚ ಸುಗಣಾ ಚೈವ ತಥಾ ಕಾಲೀ ಮದಾ ತಥಾ ॥20॥
ಚತುಷ್ಪಥರಥಾ ಚೈವ ಭೂತಿನೀ ಧಾನ್ಯಗೋಚರಾ |
ಪಶುದಾ ವಿತ್ತದಾ ಚೈವ ಮಹದಾ ಚ ಮಹಾಯಶಾಃ ॥21॥
ಪಯೋದಾ ಗೋಮಹಿಷದಾ ಸುವರ್ಣಾನೀ ಚ ಭಾರತ |
ಪ್ರತಿಷ್ಠಾ ಸುಪ್ರತಿಷ್ಠಾ ಚ ರೋಚಮಾನಾ ಸುರೋಚನಾ ॥22॥
ನೈಕಕರ್ಣೀ ಮುಖಕರ್ಣೀ ಚ ಶ್ವಾಸಿಕಾ ಸ್ವಾರಿಕಾ ತಥಾ |
ಸುರಚಕ್ರಾ ಮೇಘರವಾ ಮೇಘಮಾಲಾ ವಿರೋಚನಾ ॥23॥

ಪ್ರಭಾವತೀ, ವಿಶಾಲಾಕ್ಷೀ, ಪಾಲಿಕಾ, ಗೋನಸಾ, ಶ್ರೀಮತೀ, ಬಹುಲಾ, ಬಹುಪುತ್ರಿಕಾ, ಅಪ್ಸುಜಾತಾ, ಗೋಪಾಲೀ, ಬೃಹದಂಬಾಲಿಕಾ ಜಯಾವತೀ, ಮಾಲಿನಿಕಾ, ಧ್ರುವರತ್ನಾ, ಭಯಂಕರೀ, ಬಹುದಾಮಾ. ಸುದಾಮಾ, ಪಿಶಂಗೀ, ನಂದಿನೀ, ಏಕಚೂಡಾ, ಮಹಾಚೂಡಾ, ಚಕ್ರನೇಮಿ, ಅತೇಜಸ್ವೀ, ಭವತ್ಸೇನಾ, ಕಮಲಾಕ್ಷೀ, ಶೋಭನಾ, ಶತ್ರುಂಜಯಾ, ವಾಚೀ, ಕ್ರೋಧನಾ, ಶಲಭೀಮುಖಾ, ಮಾಧವೀ, ಶುಭವಕತ್ರ, ತೀರ್ಥನೇಮಿ, ಗೀತಿಪ್ರಿಯಾ, ಕಲ್ಯಾಣೀ, ದ್ರುಮಮಾಲಾ, ಅಮಿತೌಜಸಾ, ತೇಜಸ್ವಿನೀ, ಭೋಗವತೀ, ಸುಭ್ರೂ, ಕನಕಾವತೀ, ಅಲಾತಾಕ್ಷೀ, ವೀರ್ಯವತೀ, ವಿದ್ಯುಜ್ಜಿಹ್ವಾ, ಪದ್ಮಾವತೀ, ಸುನಕ್ಷತ್ರಾ, ಕಂದರಾ, ಬಹುಲೋಚನಾ, ಸಂತಾನಿಕಾ, ಕಾಮಾ, ಕಮಲಾವತೀ, ಮಾಲಿದಾ, ಬಹುದಾಮಾ, ಪ್ರಸೂನಾ, ಯಶಸ್ವಿನೀ, ನೃತ್ಯಪ್ರಿಯಾ, ಉಲೂಖಲಮೇಖಲಾ, ಕುಕ್ಕುಟಿಕಾ, ಶಂಖಿಣಿಕಾ, ಜರ್ಝರಿಕಾ, ಕುಂಡಲೀಕಾ, ಕಲಾಲೀಲಾ, ಕುಂಡಲಾ, ಶತೋದರೀ, ಉಕ್ರಾಥಿಕಾ, ಜರೇಂದ್ರಾದಾ, ಮಹಾವೇಗಾ, ಕಂಕಣಾ, ಮನೋಜವಾ, ಕಂಟಕಿನೀ, ಪ್ರಘಸಾ, ಪೂತನಾದಿನೀ, ಐಷಿಕಾ, ಪುಚ್ಛದಾ, ವಾಮಾ, ಕೋಪನಾ, ತಡಿತ್ಪ್ರಭಾ, ಕುಂಡೋದರೀ, ಪ್ರಚಂಡಾ, ಕೋಟರಾ, ಮೇಘವಾಸಿನೀ, ಸುತರಾ, ತಂತ್ರಿಣೀ, ಲಂಬಾ, ವಾಸಚೂಡಾ, ವಿಕರ್ತನಾ, ಊರ್ಧ್ವವೇಣೀಧರಾ, ಪಿಂಗಾಕ್ಷೀ, ಹೇಮಮೇಖಲಾ, ಆಮೋದಾ, ಲಂಬಪಯೋಧರಾ, ಶಶೋಲೂಕಮುಖೀ, ಕೃಷ್ಣಾ, ಖರಜಂಘಾ, ಮನೋಜವಾ, ಶಿಂಶುಮಾರಮುಖೀ, ಶ್ವೇತಾ, ಲೋಹಿತಾಕ್ಷೀ, ವಿಭೀಷಣಾ, ಜಟಾಲಿಕಾ, ಕಾಮಚರೀ, ದೀರ್ಘಜಿಹ್ವಾ, ಲೋಭಗಾ, ಕಾನೇಲಿಕಾ, ವಾಶತಿಕಾ, ಕುಮುದಾ, ಶೋಣಿತಾಕ್ಷೀ, ಮಹಾಕಾಯಾ, ಗರದಾ, ಏಕಾಲೀಕಾ, ಕುಂಕುಸುಮಾ, ಕೃಷ್ಣವರ್ಣಾ, ಕ್ಷುರಕರ್ಣೀ, ಚತುಷ್ಕರ್ಣಾ, ಕರ್ಣಪ್ರಾವರಣಾ, ಚತುಷ್ಪತನಿಕೇತಾ, ಗೋಕರ್ಣೀ, ಮಹಿಷಾಸನಾ, ಖರಕರ್ಣೀ, ಮಹಾಕರ್ಣೀ, ಭೇರೀಸ್ವನಾ, ಮಹಾಸ್ವನಾ, ಶಂಖಕುಂಭಸ್ವರಾ, ಭವದಾ, ಮಹಾಬಲಾ, ಗಣಾ, ಸುಗಣಾ, ಕಾಲೀ, ಮದಾ, ಚತುಷ್ಪಥರಥಾ, ಭೂತಿನೀ, ಧಾನ್ಯಗೋಚರಾ, ಪಶುದಾ, ವಿತ್ತದಾ, ಮಹದಾ, ಮಹಾಯಶಾ, ಪಯೋದಾ, ಗೋಮಹಿಷದಾ, ಸುವರ್ಣಾನೀ, ಪ್ರತಿಷ್ಠಾ, ಸುಪ್ರತಿಷ್ಠಾ, ರೋಚಮಾನಾ, ಸುರೋಚನಾ, ನೈಕಕರ್ಣೀ, ಮುಖಕರ್ಣೀ, ಶ್ವಾಸಿಕಾ, ಸ್ವಾರಿಕಾ, ಸುರಚಕ್ರಾ, ಮೇಘರವಾ, ಮೇಘಮಾಲಾ, ವಿರೋಚನಾ ಇವರೇ ಆ ಅನುಚರ ಮಾತೆಯರು.

ಏತಾಶ್ಚಾನ್ಯಾಶ್ಚ ಬಹುಲಾ ಮಾತರೋ ಭರತರ್ಷಭ |
ಕಾರ್ತಿಕೇಯಾನುಯಾಯಿನ್ಯೋ ನಾನಾರೂಪಾಃ ಸಹಸ್ರಶಃ ॥24॥

ಭರತಕುಲಶ್ರೇಷ್ಠನೇ! ಇವರು ಮತ್ತು ಇನ್ನೂ ಬೇರೆ ಬೇರೆ ರೂಪಗಳುಳ್ಳ ಸಾವಿರಾರು ಮಾತೆಯರು ಕಾರ್ತಿಕೇಯನಿಗೆ ಅನುಚರರಾಗಿದ್ದರು.

ದೀರ್ಘದಂತಾ ದೀರ್ಘನೇತ್ರಾ ದೀರ್ಘತುಂಡಾಶ್ಚ ಭಾರತ |
ಸರಲಾ ಮಧುರಾಶ್ಚೈವ ಯೌವನಸ್ಥಾಃ ಸ್ವಲಂಕೃತಾಃ ॥25॥
ಮಹತ್ವೇನ ಚ ಸಂಯುಕ್ತಾ ಕಾಮರೂಪಧರಾಸ್ತಥಾ ॥26॥

ಯಾಮ್ಯಾ ರೌದ್ರಾಸ್ತಥಾ ಸೌಮ್ಯಾ ನಾನಾರೂಪಾ ಮಹಾಬಲಾಃ ॥27॥
ನಿರ್ಮಾಂಸಗಾತ್ರಾಃ ಶ್ವೇತಾಶ್ಚ ತಥಾ ಕಾಂಚನಸನ್ನಿಭಾಃ ॥28॥
ಕೃಷ್ಣಮೇಘನಿಭಾಶ್ಚಾನ್ಯಾ ಧೂಮ್ರಾಶ್ಚ ಭರತರ್ಷಭ |
ಅರುಣಾಭಾ ಮಹಾಭಾಗಾ ದೀರ್ಘಕೇಶ್ಯಃ ಸಿತಾನನಾಃ ॥29॥
ಊರ್ಧ್ವವೇಣೀಧರಾಶ್ಚೈವ ಪಿಂಗಾಕ್ಷ್ಯೋ ಲೋಮಮೇಖಲಾಃ |
ಲಂಬೋದರಾ ಲಂಬಕರ್ಣಾಸ್ತಥಾ ಲಂಬಪಯೋಧರಾಃ ॥30॥
ತಾಮ್ರಾಕ್ಷ್ಯಸ್ತಾಮ್ರವರ್ಣಾಶ್ಚ ಹರ್ಯಕ್ಷ್ಯಾಶ್ಚ ತಥಾಽಪರಾಃ |
ವರದಾಃ ಕಾಮಚಾರಿಣ್ಯೋ ನಿತ್ಯಂ ಪ್ರಮುದಿತಾಸ್ತಥಾ ॥31॥
ವಾರುಣ್ಯೋಽಪ್ಯಥ ಮಾಹೇಂದ್ರ್ಯಸ್ತಥಾಽಽಗ್ನೇಯ್ಯಃ ಪರಂತಪ |
ವಾಯವ್ಯಾಶ್ಚಾಥ ಕೌಬೇರ್ಯೋ ಬ್ರಾಹ್ಮ್ಯಶ್ಚ ಭರತರ್ಷಭ ॥32॥
ಭರತಕುಲೋದ್ಭವನೇ! ಉದ್ದವಾದ ಹಲ್ಲುಳ್ಳವರು, ಉದ್ದವಾದ ಕಣ್ಣುಳ್ಳವರು, ಉದ್ದವಾದ ಮುಖವುಳ್ಳವರು, ಸರಳವಾದ ಆಕಾರವುಳ್ಳವರು, ಸುಂದರಿಯರು, ಯುವತಿಯರು, ಚೆನ್ನಾಗಿ ಅಲಂಕಾರ ಮಾಡಿಕೊಂಡವರು, ಮಹತ್ವವನ್ನು ಹೊಂದಿದವರು, ಇಷ್ಟಬಂದರೂಪವನ್ನು ಹೊಂದುವವರು, ಯಮನ ಸಂಬಂಧಿಗಳು, ರುದ್ರನ ಸಂಬಂಧಿಗಳು, ಸೋಮನ ಸಂಬಂಧಿಗಳು, ಬೇರೆ ಬೇರೆ ರೂಪವುಳ್ಳವರು, ಮಹಾಬಲಶಾಲಿಗಳು, ಮಾಂಸವಿಲ್ಲದ ಶರೀರವುಳ್ಳವರು, ಬೆಳ್ಳಗಿರುವವರು, ಬಂಗಾರದ ಬಣ್ಣವುಳ್ಳವರು, ಕಪ್ಪಗಿನ ಮೋಡದ ಹಾಗೆ ಕಾಂತಿಯುಳ್ಳವರು, ಕಂದುಬಣ್ಣದವರು, ಕೆಂಪಾದ ಕಾಂತಿಯುಳ್ಳವರು, ಮಹಾಭಾಗ್ಯವಂತರು, ಉದ್ದವಾದ ಕೂದಲುಳ್ಳವರು, ಬೆಳ್ಳಗಿನ ಮುಖವುಳ್ಳವರು, ಎತ್ತರವಿರುವ ಕೂದಲಿನ ಜಡೆಯನ್ನು ಹೊಂದಿದವರು, ಕಂದುಬಣ್ಣದ ಕಣ್ಣುಳ್ಳವರು, ರೋಮದ ಸೊಂಟಪಟ್ಟಿಯನ್ನು ಧರಿಸಿದವರು, ದೊಡ್ಡಹೊಟ್ಟೆಯವರು, ಉದ್ದವಾದ ಕಿವಿಯುಳ್ಳವರು, ಜೋತುಬಿದ್ದ ಸ್ತನವುಳ್ಳವರು, ಕೆಂಪುಬಣ್ಣದ ಕಣ್ಣುಳ್ಳವರು, ಕೆಂಪಾದ ಬಣ್ಣವುಳ್ಳವರು, ಸಿಂಹದ ಕಣ್ಣುಳ್ಳವರು, ವರವನ್ನು ಕೊಡುವವರು ಸ್ವೇಚ್ಛಾವಿಹಾರಿಗಳು, ನಿತ್ಯತೃಪ್ತರು, ವರುಣನ ಸಂಬಂಧಿಗಳು, ಮಹೇಂದ್ರನ ಸಂಬಂಧಿಗಳು, ಅಗ್ನಿಯ ಸಂಬಂಧಿಗಳು, ವಾಯುವಿನ ಸಂಬಂಧಿಗಳು, ಕುಬೇರನ ಸಂಬಂಧಿಗಳು, ಬ್ರಹ್ಮನ ಸಂಬಂಧಿಗಳು ಇದ್ದರು.
ರೂಪೇಣಾಪ್ಸರಸಾಂ ತುಲ್ಯಾ ಜವೇ ವಾಯುಸಮಾಶ್ಚ ತಾಃ ॥33॥
ಅವರು ರೂಪದಲ್ಲಿ ಅಪ್ಸರೆಯರಿಗೆ ಸಮಾನರಾಗಿದ್ದರು, ವೇಗದಲ್ಲಿ ವಾಯುವಿಗೆ ಸಮಾನರಾಗಿದ್ದರು.
ಶಕ್ರವೀರ್ಯೋಪಮಾ ಯುದ್ಧೇ ದೀಪ್ತವಹ್ನಿಸಮಪ್ರಭಾಃ |
ಪರಪುಷ್ಟೋಪಮಾ ವಾಕ್ಯೇ ಧನಾಢ್ಯಾ ಧನದೋಪಮಾಃ ॥34॥
ಯುದ್ಧದಲ್ಲಿ ದೇವೇಂದ್ರನಿಗೆ ಸದೃಶವಾದ ವೀರ್ಯವುಳ್ಳರಾಗಿದ್ದರು. ಪ್ರಕಾಶಿಸುತ್ತಿರುವ ಅಗ್ನಿಗೆ ಸಮಾನರಾಗಿದ್ದರು. ಕೋಗಿಲೆಯ ಧ್ವನಿಯುಳ್ಳವರಾಗಿದ್ದರು. ಕುಬೇರನಂತೆ ಸಂಪತ್ತುಳ್ಳವರಾಗಿದ್ದರು.
ವೃಕ್ಷಚತ್ವರವಾಸಿನ್ಯಃ ಚತುಷ್ಪಥನಿಕೇತನಾಃ |
ಶುಭ್ರಾಃ ಶ್ಮಶಾನವಾಸಿನ್ಯಃ ಶೈಲಪ್ರಸ್ರವಣಾಲಯಾಃ ॥35॥
ಮರದಲ್ಲಿ, ನಾಲ್ಕು ದಾರಿಗಳು ಸೇರುವಲ್ಲಿ, ದಾರಿಗಳಲ್ಲಿ ಮನೆಯನ್ನು ಮಾಡಿಕೊಂಡಿದ್ದರು. ಪರಿಶುದ್ಧರಾಗಿದ್ದರು, ಸ್ಮಶಾನವಾಸಿಗಳಾಗಿದ್ದರು. ಬೆಟ್ಟದ ತಪ್ಪಲಿನಲ್ಲಿ ವಾಸಿಸುತ್ತಿದ್ದರು.
ನಾನಾಭರಣಧಾರಿಣ್ಯೋ ನಾನಾಮಾಲ್ಯಾಂಬರಸ್ರಜಃ |
ನಾನಾವಿಚಿತ್ರವೇಷಾಶ್ಚ ನಾನಾಭಾಷಾಸ್ತಥಾ ಪರಾಃ ॥36॥
ವಿವಿಧ ಆಭರಣಗಳನ್ನು ಧರಿಸಿಕೊಂಡಿದ್ದರು. ವಿವಿಧ ಮಾಲೆಗಳನ್ನು ಸರಗಳನ್ನು ಹಾಕಿಕೊಂಡಿದ್ದರು. ವಿವಿಧವಿಚಿತ್ರವೇಷಗಳನ್ನು ತೊಟ್ಟುಕೊಂಡಿದ್ದರು. ಬೇರೆ ಬೇರೆ ಭಾಷೆಗಳನ್ನು ಮಾತಾಡುತ್ತಿದ್ದರು.
ಏತೇ ಚಾನ್ಯೇ ಚ ಮಾತೃಣಾಂ ಗಣಾಃ ಶತ್ರುಭಯಂಕರಾಃ |
ಅನುಜಗ್ಮುರ್ಮಹಾತ್ಮಾನಂ ತ್ರಿದಶೇಂದ್ರಸ್ಯ ಸಮ್ಮತೇ ॥37॥
ಇವರು ಮತ್ತು ಬೇರೆ ಮಾತೃಗಣಗಳು ಶತ್ರುಗಳಿಗೆ ಭಯವನ್ನು ಹುಟ್ಟಿಸುತ್ತಿದ್ದವು. ದೇವೇಂದ್ರನ ಒಪ್ಪಿಗೆಯನ್ನು ಪಡೆದು ಇವರೆಲ್ಲರೂ ಮಹಾತ್ಮನಾದ ಸ್ಕಂದನನ್ನು ಅನುಸರಿಸಿ ಹೋದರು.
ತತಃ ಶಕ್ತ್ಯಸ್ತ್ರಮದದಾದ್ ಭಗವಾನ್ ಪಾಕಶಾಸನಃ |
ಗುಹಾಯ ರಾಜಶಾರ್ದೂಲ ವಿನಾಶಾಯ ಸುರದ್ವಿಷಾಮ್ ॥38॥
ಮಹಾಸ್ವನಾಂ ಮಹಾಘಂಟಾಂ ದ್ಯೋತಮಾನಾಂ ಸಿತಪ್ರಭಾಮ್ |
ತರುಣಾದಿತ್ಯವರ್ಣಾಂ ಚ ಪತಾಕಾಂ ಭರತರ್ಷಭ ॥39॥
ರಾಜಶ್ರೇಷ್ಠನೇ! ಅನಂತರ ಪೂಜ್ಯನಾದ ಇಂದ್ರನು ದೇವತೆಗಳ ಶತ್ರುಗಳಾದ ಅಸುರರನ್ನು ಸಂಹರಿಸಲಿಕ್ಕಾಗಿ ಸ್ಕಂದನಿಗೆ ಶಕ್ತ್ಯಸ್ತ್ರವನ್ನು ಕೊಟ್ಟನು. ಹಾಗೆಯೇ ದೊಡ್ಡದಾದ ಧ್ವನಿಯನ್ನು ಉಂಟುಮಾಡುವ ದೊಡ್ಡದಾದ ಘಂಟೆ ಹಾಗೂ ತರುಣಸೂರ್ಯನ ಹಾಗೆ ಬೆಳ್ಳಗಿನ ವರ್ಣವುಳ್ಳ ಪತಾಕೆಯನ್ನು ಕೊಟ್ಟನು.
ದದೌ ಪಶುಪತಿಸ್ತಸ್ಮೈ ಸರ್ವಭೂತಮಹಾಚಮೂಮ್ ॥40॥
ಉಗ್ರಾಂ ನಾನಾಪ್ರಹರಣಾಂ ತಪೋವೀರ್ಯಬಲಾನ್ವಿತಾಮ್ |
ವಿಷ್ಣುರ್ದದೌ ವೈಜಯಂತೀಂ ಮಾಲಾಂ ಬಲವಿವರ್ಧಿ(ರ್ಧ)ನೀಮ್ ॥
ಭರತಕುಲಶ್ರೇಷ್ಠನೇ! ರುದ್ರನು ಸ್ಕಂದನಿಗೆ ಎಲ್ಲಾ ತರಹದ ವ್ಯಕ್ತಿಗಳುಳ್ಳ ದೊಡ್ಡ ಸೈನ್ಯವನ್ನು ಕೊಟ್ಟನು. ಅಲ್ಲಿದ್ದ ಯೋಧರು ವಿವಿಧ ಆಯುಧಗಳನ್ನು ಹಿಡಿದುಕೊಂಡಿದ್ದರು. ತಪಸ್ಸು, ವೀರ್ಯ ಹಾಗೂ ಬಲವನ್ನು ಹೊಂದಿದ್ದರು. ವಿಷ್ಣುವು ಬಲವನ್ನು

ಹೆಚ್ಚುಮಾಡುವ ವೈಜಯಂತೀಮಾಲೆಯನ್ನು ಕೊಟ್ಟನು.
ಉಮಾ ದದಾವರಜಸೀ ವಾಸಸೀ ಚಂದ್ರಸನ್ನಿಭೇ |
ಗಂಗಾ ಕಮಂಡಲುಂ ದಿವ್ಯಮಮೃತೋದ್ಭವಮುತ್ತಮಮ್ ॥42॥
ಪಾರ್ವತಿಯು ಚಂದ್ರನನ್ನು ಹೋಲುವ ಬೆಳ್ಳಗಿನ ಎರಡು ಬಟ್ಟೆಗಳನ್ನು ಕೊಟ್ಟಳು. ಗಂಗೆಯು ಅಮೃತವನ್ನು ಕೊಡುವ ದಿವ್ಯವಾದ ಕಮಂಡಲುವನ್ನು ಕೊಟ್ಟಳು.
ದದೌ ಪ್ರೀತ್ಯಾ ಕುಮಾರಾಯ ದಂಡಂ ಚೈವ ಬೃಹಸ್ಪತಿಃ ॥43॥
ಬೃಹಸ್ಪತಿಯು ಕುಮಾರನಿಗೆ ಪ್ರೀತಿಯಿಂದ ದಂಡವನ್ನು ಕೊಟ್ಟನು.
ಗರುಡೋ ದಯಿತಂ ಪುತ್ರಂ ಮಯೂರಂ ಚಿತ್ರಬರ್ಹಿಣಮ್ |
ಅರುಣಸ್ತಾಮ್ರಚೂಡಂ ಚ ಪ್ರದದೌ ಚರಣಾಯುಧಮ್ ॥44॥
ಗರುಡನು ಚಿತ್ರವುಳ್ಳ ಗರಿಗಳನ್ನು ಹೊಂದಿದ, ತನ್ನ ಮಗನಾದ ನವಿಲನ್ನುಕೊಟ್ಟನು. ಅರುಣನು ಕೋಳಿಯನ್ನು ಕೊಟ್ಟನು. ಅದರ ಕಾಲು ಆಯುಧವಾಗಿತ್ತು. (ಕೋಳಿಗಳು ಕಾಲಿನಿಂದ ಕಾದಾಡುತ್ತವೆ.)
ಛಾಗಂ ತು ವರುಣೋ ದೇವೋ ಬಲವೀರ್ಯಸಮನ್ವಿತಮ್ |
ಕೃಷ್ಣಾಜಿನಂ ದದೌ ಬ್ರಹ್ಮಾ ಬ್ರಹ್ಮಣ್ಯಾಯ ದದೌ ನೃಪ ॥45॥
ಸಮರೇಷು ಜಯಂ ಚೈವ ಪ್ರದದೌ ಲೋಕಭಾವನಃ॥46॥
ವರುಣನು ಬಲ ಮತ್ತು ವೀರ್ಯವುಳ್ಳ ಆಡನ್ನು ಕೊಟ್ಟನು. ಚತುರ್ಮುಖಬ್ರಹ್ಮನು ಬ್ರಾಹ್ಮಣರಿಗೆ
ಮಂಗಳವನ್ನುಂಟುಮಾಡುವುದರಿಂದ ಬ್ರಹ್ಮಣ್ಯನೆನಿಸಿದ ಸ್ಕಂದನಿಗೆ ಕೃಷ್ಣಾಜಿನವನ್ನು ಕೊಟ್ಟನು. ಲೋಕಪೂಜ್ಯನಾದ ಬ್ರಹ್ಮನು ಯುದ್ಧಗಳಲ್ಲಿ ಜಯವನ್ನೂ ಕೊಟ್ಟನು.
ಸೈನಾಪತ್ಯಮನುಪ್ರಾಪ್ಯ ಸ್ಕಂದೋ ದೇವಗಣಸ್ಯ ಹ |
ಶುಶುಭೇ ಜ್ವಲನಾರ್ಚಿಷ್ಮಾನ್ ದ್ವಿತೀಯ ಇವ ಪಾವಕಃ ॥47॥
ಸ್ಕಂದನು ದೇವಗಣದ ಸೇನಾಧಿಪತ್ಯವನ್ನು ಹೊಂದಿ, ಜ್ವಲಿಸುತ್ತಿರುವ ಅಗ್ನಿಯ ಕಾಂತಿಯನ್ನು ಹೊಂದಿ ಎರಡನೆಯ ಅಗ್ನಿಯಂತೆ ಶೋಭಿಸಿದನು.
ತತಃ ಪಾರಿಷದೈಶ್ಚೈವ ಮಾತೃಭಿಶ್ಚ ಸಮನ್ವಿತಃ |
ಯಯೌ ದೈತ್ಯವಿನಾಶಾಯ ಹ್ಲಾದಯನ್ ಸುರಪುಂಗವಾನ್ ॥48॥
ಅನಂತರ ಸ್ಕಂದನು ಅನುಚರರು ಮತ್ತು ಮಾತೆಯರಿಂದ ಕೂಡಿಕೊಂಡು, ದೇವಮುಖ್ಯರಿಗೆ ಆನಂದವನ್ನು ಉಂಟುಮಾಡುತ್ತಾ, ದೈತ್ಯನಾಶಕ್ಕಾಗಿ ಹೋದನು.
ಸಾ ಸೇನಾ ನೈರ್ಋತೀ ತತ್ರ ಸಘಂಟೋಚ್ಛ್ರಿತಕೇತನಾ |
ಸಭೇರೀಶಂಖಮುರಜಾ ಸಾಯುಧಾ ಸಪತಾಕಿನೀ ॥49॥
ಶಾರದೀ ದ್ಯೌರಿವ ಬಭೌ ಜ್ಯೋತಿರ್ಭಿರಿವ ಶೋಭಿತಾ ॥50॥
ಭೂತಗಣಗಳುಳ್ಳ ಆ ನೈರ್ಋತಿ ಸೇನೆಯು ಘಂಟೆ ಮತ್ತು ಪತಾಕೆಯನ್ನು ಹೊಂದಿತ್ತು. ಭೇರಿ, ಶಂಖ, ಮುರಜಮೊದಲಾದ ವಾದ್ಯಗಳು ಅದರಲ್ಲಿ ಇದ್ದವು. ಆಯುಧ, ಪತಾಕೆಯನ್ನು ಹೊಂದಿತ್ತು. ಶರತ್ಕಾಲದಲ್ಲಿ ನಕ್ಷತ್ರಗಳಿಂದ ಕೂಡಿದ ಆಕಾಶದಂತೆ ಈ ಸೈನ್ಯವು ಶೋಭಿಸುತ್ತಿತ್ತು.
ತತೋ ದೇವನಿಕಾಯಾಸ್ತೇ ಭೂತಸೇನಾಗಣಾಸ್ತಥಾ |
ವಾದಯಾಮಾಸುರವ್ಯಗ್ರಾ ಭೇರೀಃ ಶಂಖಾಂಶ್ಚ ಪುಷ್ಕಲಾನ್ ॥51॥
ಪಟಹಾನ್ ಝರ್ಝರಾಂಶ್ಚೈವ ಕಂಕಣಾನ್ ಗೋವಿಷಾಣಕಾನ್ |
ಆಡಂಬರಾನ್ ಗೋಮುಖಾಂಶ್ಚ ಡಿಂಡಿಮಾಂಶ್ಚ ಮಹಾಸ್ವನಾನ್ ॥52॥
ಅನಂತರ ದೇವತಾಗಣ ಮತ್ತು ಭೂತಗಣಗಳು ಶಾಂತಚಿತ್ತದಿಂದ ಬಹಳವಾದ ಭೇರಿ, ಶಂಖ, ಪಟಹ, ಝರ್ಝರ, ಕಂಕಣ, ಗೋವಿಷಾಣ, ಆಡಂಬರ, ಗೋಮುಖ ಮತ್ತು ಡಿಂಡಿಮ ಇವುಗಳನ್ನು ಬಾರಿಸಿದವು.
ತುಷ್ಟುವುಸ್ತೇ ಕುಮಾರಂ ಚ ಸರ್ವೇ ದೇವಾಃ ಸವಾಸವಾಃ |
ಜಗುಶ್ಚ ದೇವಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥53॥
ಇಂದ್ರಾದಿ ಸಕಲದೇವತೆಗಳು ಕುಮಾರನನ್ನು ಸ್ತುತಿಸಿದರು. ದೇವ-ಗಂಧರ್ವರು ಹಾಡಿದರು. ಅಪ್ಸರಗಣಗಳು ನರ್ತಿಸಿದವು.
ತತಃ ಪ್ರೀತೋ ಮಹಾಸೇನಃ ತ್ರಿದಶಾನಾಂ ವರಂ ದದೌ |
ರಿಪೂನ್ ಹಂತಾಸ್ಮಿ ಸಮರೇ ಯೇಷಾಂ ವಧಚಿಕೀರ್ಷವಃ ॥54॥
ಅವುಗಳಿಂದ ಪ್ರೀತನಾದ ಸ್ಕಂದನು ದೇವತೆಗಳಿಗೆ ವರವನ್ನು ಕೊಟ್ಟನು. ಯಾವ ದೈತ್ಯರ ವಧೆಯು ಆಗಬೇಕೆಂದು ನೀವು ಬಯಸಿರುವಿರೋ ಅಂತಹ ಶತ್ರುಗಳನ್ನು ಯುದ್ಧದಲ್ಲಿ ಕೊಲ್ಲುವೆನು ಎಂದು.
ಪ್ರತಿಗೃಹ್ಯ ವರಂ ದೇವಾಃ ತಸ್ಮಾದ್ ವಿಬುಧಸತ್ತಮಾತ್ |
ಪ್ರೀತಾತ್ಮಾನೋ ಮಹಾತ್ಮಾನೋ ಮೇನಿರೇ ನಿಹತಾನ್ ರಿಪೂನ್ ॥55॥
ದೇವತೆಗಳು ದೇವೋತ್ತಮನಾದ ಸ್ಕಂದನಿಂದ ವರವನ್ನು ಸ್ವೀಕರಿಸಿ, ಮನಃಪ್ರಸಾದವನ್ನು ಹೊಂದಿ, ಸಂತುಷ್ಟರಾಗಿ ಶತ್ರುಗಳು ಸತ್ತರು ಎಂಬುದಾಗಿ ಅಂದುಕೊಂಡರು.
ಸರ್ವೇಷಾಂ ಭೂತಸಂಘಾನಾಂ ಹರ್ಷಾನ್ನಾದಃ ಸಮುತ್ಥಿತಃ |
ಅಪೂರಯತ ಲೋಕಾಂಸ್ತ್ರೀನ್ ವರೇ ದತ್ತೇ ಮಹಾತ್ಮನಾ ॥56॥

ಮಹಾತ್ಮನಾದ ಸ್ಕಂದನು ವರವನ್ನು ಕೊಟ್ಟಾಗ ಎಲ್ಲಾ ಭೂತಗಣಗಳಿಂದ ಹೊರಬಂದ ಹರ್ಷೋದ್ಗಾರವು ಮೂರುಲೋಕಗಳಲ್ಲಿಯೂ ತುಂಬಿಹೋಯಿತು.
ಸ ನಿರ್ಯಯೌ ಮಹಾಸೇನೋ ಮಹತ್ಯಾ ಸೇನಯಾ ಸಹ |
ವಧಾಯ ಯುಧಿ ದೈತ್ಯಾನಾಂ ರಕ್ಷಸಾಂ ಭರತರ್ಷಭ ॥57॥
ಭರತವಂಶೋತ್ತಮನೇ! ಮಹಾಸೇನ ಸ್ಕಂದನು ಯುದ್ಧದಲ್ಲಿ ದೈತರು ಮತ್ತು ರಾಕ್ಷಸರನ್ನು ಕೊಲ್ಲಲಿಕ್ಕಾಗಿ ದೊಡ್ಡದಾದ ಸೈನ್ಯದೊಡನೆ ಹೊರಟನು.
ವ್ಯವಸಾಯೋ ಜಯೋ ಧರ್ಮಃ ಸಿದ್ಧಿರ್ಲಕ್ಷ್ಮೀರ್ಧೃತಿಃ ಸ್ಮೃತಿಃ |
ಮಹಾಸೇನಸ್ಯ ಸೈನ್ಯಾನಾಮಗ್ರೇ ಜಗ್ಮುರ್ನರಾಧಿಪ ॥58॥
ರಾಜನೇ! ಮಹಾಸೇನ ಕುಮಾರನ ಸೈನ್ಯದ ಮುಂಭಾಗದಲ್ಲಿ ವ್ಯವಸಾಯ, ಜಯ, ಧರ್ಮ, ಸಿದ್ಧಿ, ಲಕ್ಷ್ಮೀ, ಧೃತಿ ಮತ್ತು ಸ್ಮೃತಿ ಇವರು ಇದ್ದರು.
ಸ ತಯಾ ಭೀಮಯಾ ದೇವಃ ಶೂಲಮುದ್ಗರಹಸ್ತಯಾ |
ಗದಾಮುಸಲನಾರಾಚಶಕ್ತಿತೋಮರಹಸ್ತಯಾ ॥59॥
ವೃತಃ ಸಿಂಹನಿನಾದಿನ್ಯಾ ವಿನದ್ಯ ಪ್ರಯಯೌ ಗುಹಃ ॥60॥
ಸ್ಕಂದನ ಸೈನ್ಯದಲ್ಲಿ ಯೋಧರು ಶೂಲ, ಮುದ್ಗರ, ಗದಾ, ಮುಸಲ, ಬಾಣ, ಶಕ್ತಿ, ತೋಮರ ಮೊದಲಾದ ಆಯುಧಗಳನ್ನು ಧರಿಸಿದ್ದರು. ಸಿಂಹಗರ್ಜನೆಯನ್ನು ಮಾಡುತ್ತಿದ್ದರು. ಇಂತಹ ಭಯಂಕರವಾದ ಸೈನ್ಯದ ಜೊತೆಗೆ ಸ್ಕಂದನು ಗರ್ಜಿಸಿಕೊಂಡು ಹೊರಟನು.
ತಂ ದೃಷ್ಟ್ವಾ ಸರ್ವದೈತೇಯಾ ರಾಕ್ಷಸಾ ದಾನವಾಸ್ತಥಾ |
ವ್ಯದ್ರುವಂತ ದಿಶಃ ಸರ್ವಾ ಭಯೋದ್ವಿಗ್ನಾಃ ಸಮಂತತಃ ॥61॥
ಸ್ಕಂದನನ್ನು ನೋಡಿ ಎಲ್ಲಾ ದೈತ್ಯರು, ರಾಕ್ಷಸರು, ದಾನವರು ಭಯೋದ್ವೇಗಕ್ಕೆ ಒಳಗಾಗಿ ಎಲ್ಲಾ ಕಡೆಯಲ್ಲಿಯೂ ದಿಕ್ಕಾಪಾಲಾಗಿ ಓಡಿದರು.
ಅಭ್ಯದ್ರುವಂತ ದೇವಾಶ್ಚ ವಿವಿಧಾಯುಧಪಾಣಯಃ ॥62॥
ದೇವತೆಗಳೂ ವಿವಿಧ ಆಯುಧಗಳನ್ನು ಕೈಯಲ್ಲಿ ಧರಿಸಿಕೊಂಡು ಶತ್ರುಗಳನ್ನು ಅಟ್ಟಿಸಿಕೊಂಡು ಹೋದರು.
ದೃಷ್ಟ್ವಾ ಚಾಪತತಃ ಕ್ರುದ್ಧಃ ಸ್ಕಂದಸ್ತೇಜೋಬಲಾನ್ವಿತಃ |
ಶಕ್ತ್ಯಸ್ತ್ರಂ ಭಗವಾನ್ ದೇವಃ ಪುನಃ ಪುನರರಿಂದಮಃ ॥63॥
ಆದಧಚ್ಚಾತ್ಮನಸ್ತೇಜೋ ಹವಿಷೇವ ಯಥಾऽನಲಃ ॥64॥
ಓಡುತ್ತಿರುವ ಶತ್ರುಗಳನ್ನು ನೋಡಿದ ಶತ್ರುಸಂಹಾರಕನಾದ, ತೇಜಸ್ಸು ಮತ್ತು ಬಲದಿಂದ ಕೂಡಿದ ಸ್ಕಂದನು ಕೋಪಗೊಂಡು ಶಕ್ತ್ಯಸ್ತ್ರವನ್ನು ಪ್ರಯೋಗಿಸಿದನು. ಇದು ಅಗ್ನಿಯು ತನ್ನ ತೇಜಸ್ಸನ್ನು ಪ್ರಯೋಗಿಸಿದಂತೆ ಇತ್ತು.
ಅಭ್ಯಸ್ಯಮಾನೇ ಶಕ್ತ್ಯಸ್ತ್ರೇ ಸ್ಕಂದೇನಾಮಿತತೇಜಸಾ |
ಉಲ್ಕಾಜಾಲಂ ಮಹಾರಾಜ ಪಪಾತ ವಸುಧಾತಳೇ ॥65॥
ಮಹಾರಾಜನೇ! ಅಪರಿಮಿತ ತೇಜಸ್ಸುಳ್ಳ ಸ್ಕಂದನು ಶಕ್ತ್ಯಸ್ತ್ರವನ್ನು ಪ್ರಯೋಗಿಸಿದಾಗ ಭೂಮಿಯ ಮೇಲೆ ಉಲ್ಕೆಗಳ ಸಮೂಹವೇ ಬಿದ್ದಿತು.
ಸಂಹ್ರಾದಯಂತಃ ಶತಶೋ ನಿರ್ಘಾತಾಶ್ಚಾಪತನ್ ಕ್ಷಿತೌ |
ಯಥಾऽಂತಕಾಲಸಮಯೇ ಸುಘೋರಾಃ ಸ್ಯುಸ್ತಥಾ ನೃಪ ॥66॥
ಪ್ರಳಯಕಾಲದ ಹಾಗೆ ಜೋರಾಗಿ ಶಬ್ದವನ್ನುಂಟುಮಾಡುತ್ತಾ ಭೂಮಿಯ ಮೇಲೆ ವಜ್ರಪಾತಗಳು ಉಂಟಾದವು.
ಕ್ಷಿಪ್ತಾ ಹ್ಯೇಕಾ ಯದಾ ಶಕ್ತಿಃ ಸುಘೋರಾऽನಲಸೂನುನಾ |
ತದಾ ಕೋಟ್ಯೋ ವಿನಿಷ್ಪೇತುಃ ಶಕ್ತೀನಾಂ ಭರತರ್ಷಭ ॥67॥
ಭಾರತೋತ್ತಮನೇ! ಅಗ್ನಿಪುತ್ರ ಸ್ಕಂದನು ಒಂದು ಶಕ್ತ್ಯಸ್ತ್ರವನ್ನು ಪ್ರಯೋಗಿಸಿದಾಗ ಅನೇಕ ಕೋಟಿ ಶಕ್ತ್ಯಾಯುಧಗಳು ಬಿದ್ದವು.
ಸ ಶಕ್ತ್ಯಸ್ತ್ರೇಣ ದನುಜಾನ್ ಜಘಾನ ಭಗವಾನ್ ಪ್ರಭುಃ ॥68॥
ಸಮರ್ಥನಾದ ಪೂಜ್ಯ ಸ್ಕಂದನು ಆ ಶಕ್ತ್ಯಸ್ತ್ರದಿಂದ ದನುಪುತ್ರರನ್ನು ಸಂಹರಿಸಿದನು.
ದೈತ್ಯೇಂದ್ರಂ ತಾರಕಂ ನಾಮ ಮಹಾಬಲಪರಾಕ್ರಮಮ್ |
ವೃತಂ ದೈತ್ಯಾಯುತೈರ್ವೀರೈರ್ಬಲಿಭಿರ್ದಶಭಿಃ ಪ್ರಭುಃ ॥69॥
ಮಹಾಬಲ ಮತ್ತು ಪರಾಕ್ರಮವುಳ್ಳ ತಾರಕ ಎಂಬ ದೈತ್ಯೇಂದ್ರನಿಗೆ ಹೊಡೆದು ಅವನನ್ನು ಕೊಂದನು. ಆ ತಾರಕನ ಸುತ್ತಲೂ ಒಂದು ಲಕ್ಷಸಂಖ್ಯೆಯ ಬಲಶಾಲಿಗಳಾದ ವೀರ ದೈತ್ಯರು ಸುತ್ತುವರಿದಿದ್ದರು.
ಮಹಿಷಂ ಚಾಷ್ಟಭಿಃ ಪದ್ಮೈರ್ವೃತಂ ಸಂಖ್ಯೇ ಜಘಾನ ಹ ॥70॥
ಎಂಟು ಪದ್ಮಸಂಖ್ಯೆಯ (1015 ಅಥವಾ 109) ದೈತ್ಯರಿಂದ ಸುತ್ತುವರಿಯಲ್ಪಟ್ಟ ಮಹಿಷ ಎಂಬ ದೈತ್ಯನನ್ನೂ ಯುದ್ಧದಲ್ಲಿ ಸ್ಕಂದನು ಕೊಂದನು.
ತ್ರಿಪಾದಂ ಚಾಯುತಶತೈರ್ಜಘಾನ ದಶಭಿರ್ವೃತಮ್ ॥71॥
ಸಾವಿರ ಅಯುತ 10 ಸಂಖ್ಯೆಯ ದೈತ್ಯರಿಂದ ಆವೃತನಾದ ತ್ರಿಪಾದದೈತ್ಯನನ್ನೂ ಕೊಂದನು.
ಹ್ರದೋದರಂ ನಿಖರ್ವೈಶ್ಚ ವೃತಂ ದಶಭಿರೀಶ್ವರಃ |
ಜಘಾನಾನುಚರೈಃ ಸಾರ್ಧಂ ವಿವಿಧಾಯುಧಪಾಣಿಭಿಃ ॥72॥
ಹತ್ತು ನಿಖರ್ವ (1011) ಸಂಖ್ಯೆಯ ದೈತ್ಯರಿಂದ ಆವೃತನಾದ ಹ್ರದೋದರ ಎಂಬ ದೈತ್ಯನನ್ನು ಕೊಂದನು. ಜೊತೆಗೆ ಬೇರೆ ಬೇರೆ

ಆಯುಧಗಳನ್ನು ಹಿಡಿದುಕೊಂಡಿದ್ದ ದೈತ್ಯರ ಅನುಚರರನ್ನೂ ಕೊಂದನು.
ತತ್ರಾಕುರ್ವಂತ ತುಮುಲಂ ನಾದಂ ವಧ್ಯತ್ಸು ಶತ್ರುಷು |
ಕುಮಾರಾನುಚರಾ ರಾಜನ್ ಪೂರಯಂತೋ ದಿಶೋ ದಶ ॥73॥
ಸ್ಕಂದನು ಶತ್ರುಗಳನ್ನು ಕೊಲ್ಲುತ್ತಿದ್ದಾಗ ಸ್ಕಂದನ ಅನುಚರರು ಜೋರಾಗಿ ಶಬ್ದವನ್ನು ಮಾಡಿದರು. ಆ ಶಬ್ದವು ಎಲ್ಲಾ ದಿಕ್ಕುಗಳಲ್ಲಿಯೂ ತುಂಬಿಕೊಂಡಿತು.
ಶಕ್ತ್ಯಸ್ತ್ರಸ್ಯ ತು ರಾಜೇಂದ್ರ ತತೋಽರ್ಚಿಭಿರ್ವಿಶಾಂಪತೇ |
ತ್ರೈಲೋಕ್ಯಂ ತ್ರಾಸಿತಂ ಸರ್ವಂ ಜೃಂಭಮಾಣಾಭಿರೇವ ಚ ॥74॥
ರಾಜನೇ! ಅನಂತರ ಹಬ್ಬುತ್ತಿದ್ದ ಶಕ್ತ್ಯಸ್ತ್ರದ ಜ್ವಾಲೆಗಳಿಂದ ಮೂರುಲೋಕಗಳೂ ಸಂಕಟಕ್ಕೊಳಗಾದವು.
ದಗ್ಧಾಃ ಸಹಸ್ರಶೋ ದೈತ್ಯಾ ನಾದೈಃ ಸ್ಕಂದಸ್ಯ ಚಾಪರೇ ॥75॥
ಬೇರೆ ಸಾವಿರಾರು ದೈತ್ಯರು ಸ್ಕಂದನ ನಾದದಿಂದಲೇ ಸತ್ತುಹೋದರು.
ಪತಾಕಯಾ ಚಾವಧೂತಾ ಹತಾಃ ಕೇಚಿತ್ ಸುರದ್ವಿಷಃ |
ಕೇಚಿದ್ ಘಂಟಾರವತ್ರಸ್ತಾ ನಿಪೇತುರ್ಧರಣೀತಳೇ ॥76॥
ಸ್ಕಂದನ ಪತಾಕೆಯಿಂದ ಬೀಸುವ ಗಾಳಿಯಿಂದಲೇ ಕೆಲವು ದೈತ್ಯರು ನಾಶವಾದರು. ಕೆಲವರು ಘಂಟೆಯ ಧ್ವನಿಯಿಂದ ಪೀಡಿತರಾಗಿ ಭೂಮಿಗೆ ಬಿದ್ದರು.
ಕೇಚಿತ್ ಪ್ರಹರಣೈಶ್ಛಿನ್ನಾ ವಿನಿಷ್ಪೇತುರ್ಗತಾಸವಃ ॥77॥
ಕೆಲವರು ಆಯುಧಗಳ ಹೊಡೆತದಿಂದ ಪ್ರಾಣ ಕಳೆದುಕೊಂಡು ಬಿದ್ದರು.
ಏವಂ ಸುರದ್ವಿಷೋಽನೇಕಾನ್ ಸಬಲಾನಾತತಾಯಿನಃ |
ಜಿಗಾಯ ಸಮರೇ ವೀರಃ ಕಾರ್ತಿಕೇಯೋ ಜಘಾನ ಹ ॥78॥
ಹೀಗೆ ವೀರನಾದ ಸ್ಕಂದನು ಆತತಾಯಿಗಳಾದ, ಬಲಶಾಲಿಗಳಾದ ಅನೇಕ ದೈತ್ಯರನ್ನು ಯುದ್ಧದಲ್ಲಿ ಗೆದ್ದು ಕೊಂದು ಹಾಕಿದನು.
ಬಾಣೋ ನಾಮಾಥ ದೈತ್ಯೇಂದ್ರೋ ಬಲೇಃ ಪುತ್ರೋ ಮಹಾಬಲಃ |
ಕ್ರೌಂಚಪರ್ವತಮಾಸಾದ್ಯ ದೇವಸಂಘಾನಬಾಧತ ॥79॥
ಬಲಿಯ ಮಗನಾದ, ಬಲಶಾಲಿಯಾದ ಬಾಣ ಎಂಬ ದೈತ್ಯೇಂದ್ರನು ಕ್ರೌಂಚಪರ್ವತವನ್ನೇರಿ ದೇವಸಂಘವನ್ನು ಪೀಡಿಸತೊಡಗಿದನು.
ತಮಭ್ಯಯಾನ್ಮಹಾಸೇನಃ ಸುರಶತ್ರುಮುದಾರಧೀಃ |
ಸ ಕಾರ್ತಿಕೇಯಸ್ಯ ಭಯಾತ್ ಕ್ರೌಂಚಂ ಶರಣಮೇಯಿವಾನ್ ॥80॥
ಉತ್ಕೃಷ್ಟವಾದ ಜ್ಞಾನವುಳ್ಳ ಸ್ಕಂದನು ದೇವಶತ್ರುವಾದ ಆ ಬಾಣಾಸುರನನ್ನು ಎದುರಿಸಿದನು. ಆ ಅಸುರನು ಸ್ಕಂದನಿಗೆ ಹೆದರಿ ಕ್ರೌಂಚಪರ್ವತವನ್ನು ಆಶ್ರಯಿಸಿದನು.
ತತಃ ಕ್ರೌಂಚಮಭಿದ್ರುತ್ಯ ಕ್ರೌಂಚನಾದವಿನಾದಿತಮ್ |
ಶಕ್ತ್ಯಾ ಬಿಭೇದ ಭಗವಾನ್ ಕಾರ್ತಿಕೇಯೋಽಗ್ನಿದತ್ತಯಾ ॥81॥
ಕ್ರೌಂಚಪಕ್ಷಿಗಳ ಕಲರವದಿಂದ ಚೆನ್ನಾಗಿ ನಾದವನ್ನು ಹೊರಹಾಕುತ್ತಿದ್ದ ಕ್ರೌಂಚಪರ್ವತದ ಹತ್ತಿರ ಬಂದು ಸ್ಕಂದನು ಶಕ್ತ್ಯಸ್ತ್ರದಿಂದ ಆ ಕ್ರೌಂಚಪರ್ವತಕ್ಕೆ ಬೆಂಕಿ ಹಚ್ಚಿ ಪರ್ವತವನ್ನು ಸೀಳಿದನು.
ಸಸಾಲಸ್ಕಂಧತರಲಂ ತ್ರಸ್ತವಾನರವಾರಣಮ್ |
ಪುಲೀನತ್ರಸ್ತವಿಹಗಂ ವಿನಿಷ್ಪತಿತಪನ್ನಗಮ್ ॥82॥
ಸಾಲವೃಕ್ಷಗಳು ಬೀಳತೊಡಗಿದವು. ಕೋತಿಗಳು, ಆನೆಗಳು ಹೆದರಿದವು. ಹೆದರಿದ ಹಕ್ಕಿಗಳು ಹಾರಿಹೋದವು. ಬಿಲದೊಳಗಿದ್ದ ಹಾವುಗಳು ಹೊರಬಂದವು.
ಗೋಲಾಂಗೂಲರ್ಕ್ಷಚಮರೈರ್ದ್ರವದ್ಭಿರನುನಾದಿತಮ್ |
ಕುರಂಗಾರುತನಿರ್ಘೋಷಮುದ್ಭ್ರಾಂತಭ್ರಮರಾಚಿತಮ್ ॥83॥
ಗೋಲಾಂಗೂಲ ಜಾತಿಯ ಕಪಿಗಳು, ಕರಡಿಗಳು ಮತ್ತು ಚಮರೀಮೃಗಗಳು ಓಡತೊಡಗಿದಾಗ ಬಹಳವಾದ ಧ್ವನಿಯು ಉಂಟಾಯಿತು.
ವಿನಿಷ್ಪತದ್ಭಿಃ ಶರಭೈಃ ಸಿಂಹೈಶ್ಚ ಸಹಸಾ ದ್ರುತೈಃ |
ಶೋಚ್ಯಾಮಪಿ ದಶಾಂ ಪ್ರಾಪ್ತೋ ರರಾಸೇವ ಸ ಪರ್ವತಃ ॥84॥
ಶರಭಗಳು ಭಯದಿಂದ ಕುಪ್ಪಳಿಸಿದವು. ಸಿಂಹಗಳು ಭಯದಿಂದ ವೇಗವಾಗಿ ಓಡಿದವು. ಹೀಗೆ ದಯನೀಯವಾದ ಅವಸ್ಥೆಯನ್ನು ಹೊಂದಿದ ಪರ್ವತವು ಈ ರೀತಿಯಲ್ಲಿ ಶೋಭಿಸಿತು.
ವಿದ್ಯಾಧರಾಃ ಸಮುತ್ಪೇತುಸ್ತಸ್ಯ ಶೃಂಗನಿವಾಸಿನಃ |
ಕಿನ್ನರಾಶ್ಚ ಭಯೋದ್ವಿಗ್ನಾಃ ಶಕ್ತಿಪ್ರಾಸರವೋದ್ಧತಾಃ ॥85॥
ಆ ಪರ್ವತದ ಶಿಖರಗಳಲ್ಲಿ ವಾಸಮಾಡುತ್ತಿದ್ದ ವಿದ್ಯಾಧರರು ಅಲ್ಲಿಂದ ಹೊರಹೊರಟರು. ಶಕ್ತಿ ಮತ್ತು ಪ್ರಾಸ ಆಯುಧಗಳ ಶಬ್ದದಿಂದ ಭಯಕ್ಕೊಳಗಾಗಿ ಉದ್ವೇಗಗೊಂಡ ಕಿನ್ನರರೂ ಅಲ್ಲಿಂದ ಬೇರೆಡೆಗೆ ಹೋದರು.
ತತೋ ದೈತ್ಯಾ ವಿನಿಷ್ಪೇತುಃ ಶತಶೋಽಥ ಸಹಸ್ರಶಃ |
ಪ್ರದೀಪ್ತಾತ್ ಪರ್ವತಶ್ರೇಷ್ಠಾದ್ ವಿಚಿತ್ರಾಭರಣಸ್ರಜಃ ॥86॥
ಬೆಂಕಿಯಿಂದ ಸುಡುತ್ತಿದ್ದ ಆ ಶ್ರೇಷ್ಠಪರ್ವತದಿಂದ ವಿಚಿತ್ರವಾದ ಆಭರಣ ಮತ್ತು ಮಾಲೆಗಳನ್ನು ಧರಿಸಿದ್ದ ನೂರಾರು ಸಾವಿರಾರು ದೈತ್ಯರು ಹೊರಬಿದ್ದರು.
ತಾನ್ ನಿಜಘ್ನುರತಿಕ್ರಮ್ಯ ಕುಮಾರಾನುಚರಾ ಮೃಧೇ |

ಬಿಭೇದ ಶಕ್ತ್ಯಾ ಕ್ರೌಂಚಂ ಚ ಪಾವಕಿಃ ಪರವೀರಹಾ ॥87॥
ಆ ಯುದ್ಧದಲ್ಲಿ ಸ್ಕಂದನ ಅನುಚರರು ಆ ದೈತ್ಯರನ್ನು ಕೊಂದರು. ಶತ್ರುವೀರ್ಯವನ್ನು ನಾಶಮಾಡುವ ಸ್ಕಂದನು ಶಕ್ತ್ಯಸ್ತ್ರದಿಂದ ಕ್ರೌಂಚಪರ್ವತವನ್ನು ಪುಡಿ ಮಾಡಿದನು.
ಬಹುಧಾ ಚೈಕಧಾ ಚೈವ ಕೃತ್ವಾಽಽತ್ಮಾನಂ ಮಹಾತ್ಮನಾ |
ಶಕ್ತಿಃ ಕ್ಷಿಪ್ತಾ ರಣೇ ತೇನ ಪಾಣಿಮೇತಿ ಪುನಃ ಪುನಃ ॥88॥
ಸ್ಕಂದನು ತನ್ನನ್ನು ಒಂದುಸಲ ಅನೇಕ ರೂಪಗಳಲ್ಲಿ ವಿಭಾಗಿಸಿಕೊಂಡು, ಮತ್ತೊಮ್ಮೆ ಏಕರೂಪವನ್ನು ತಾಳಿ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಹೀಗೆ ಯುದ್ಧನಡೆಯುತ್ತಿದ್ದಾಗ ಸ್ಕಂದನ ಕೈಯಲ್ಲಿ ಶಕ್ತಿಯು ಪುನಃ ಬಂದು ಸೇರಿಕೊಳ್ಳುತ್ತಿತ್ತು.
ಏವಂಪ್ರಭಾವೋ ಭಗವಾನತೋ ಭೂಯಶ್ಚ ಪಾವಕಿಃ |
ಕ್ರೌಂಚಸ್ತೇನ ವಿನಿರ್ಭಿನ್ನೋ ದೈತ್ಯಾಶ್ಚ ಶತಶೋ ಹತಾಃ ॥89॥
ಪೂಜ್ಯನಾದ ಸ್ಕಂದನ ಪ್ರಭಾವ ಹೀಗಿತ್ತು. ಇದಕ್ಕಿಂತಲೂ ಅಧಿಕವಾಗಿ ಸ್ಕಂದನ ಪ್ರಭಾವ ವೃದ್ಧಿಸಿತು. ಕ್ರೌಂಚಪರ್ವತವು ಪುಡಿಯಾಯಿತು. ದೈತ್ಯರು ಹತರಾದರು.
ತತಃ ಸ ಭಗವಾನ್ ಕ್ರೌಂಚಂ ನಿಹತ್ಯ ವಿಬುಧದ್ವಿಷಃ(ಮ್) |
ಸಭಾಜ್ಯಮಾನೋ ವಿಬುಧೈಃ ಪರಂ ಹರ್ಷಮವಾಪ ಹ ॥90॥
ಅನಂತರ ಪೂಜ್ಯನಾದ ಸ್ಕಂದನು ಕ್ರೌಂಚಪರ್ವತವನ್ನು ಒಡೆದು ಹಾಕಿ, ದೇವಶತ್ರುಗಳಾದ ದೈತ್ಯರನ್ನು ಕೊಂದಾಗ ದೇವತೆಗಳು ಅವನನ್ನು ಕೊಂಡಾಡಿದರು. ಅವರೆಲ್ಲರೂ ತುಂಬಾ ಸಂತೋಷವನ್ನು ಹೊಂದಿದರು.
ತತೋ ದುಂದುಭಯೋ ನೇದುರ್ದಿವ್ಯಾಃ ಶಂಖಾಶ್ಚ ಭಾರತ |
ಮುಮುಚುರ್ದೇವಸೇನಾಶ್ಚ ಪುಷ್ಪವರ್ಷಮನುತ್ತಮಮ್ |
ಯೋಗಿನಾಮೀಶ್ವರಂ ದೇವಂ ಶತಶೋಽಥ ಸಹಸ್ರಶಃ ॥91॥
ಭರತಕುಲೋದ್ಭವನೇ! ಅನಂತರ ದೇವಲೋಕದ ದುಂದುಭಿಗಳು, ಶಂಖಗಳು ಮೊಳಗಿದವು. ಸಾವಿರಾರು ದೇವತೆಗಳು ದೇವಸೇನಾನಿಯಾದ ಸ್ಕಂದನ ಮೇಲೆ ಉತ್ತಮವಾದ ಪುಷ್ಪವೃಷ್ಟಿಯನ್ನು ಮಾಡಿದರು.
ದಿವ್ಯಗಂಧಮುಪಾದಾಯ ವವೌ ಪುಣ್ಯಶ್ಚ ಮಾರುತಃ ॥92॥
ಮಂಗಳವಾದ ವಾಯುವು ಪರಿಮಳಯುಕ್ತವಾಗಿ ಬೀಸಿತು.
ಗಂಧರ್ವಾಸ್ತುಷ್ಟುವುಶ್ಚೈನಂ ಯಜ್ವಾನಶ್ಚ ಮಹರ್ಷಯಃ ॥93॥
ಗಂಧರ್ವರು ಕುಮಾರನನ್ನು ಸ್ತುತಿಸಿದರು. ಮಹರ್ಷಿಗಳು ಯಾಗವನ್ನು ಮಾಡಿದರು.
ಕೇಚಿದೇನಂ ವ್ಯವಸ್ಯಂತಿ ಪಿತಾಮಹಸುತಂ ವಿಭುಮ್ |
ಸನತ್ಕುಮಾರಂ ಸರ್ವೇಷಾಂ ಬ್ರಹ್ಮಯೋನಿಂ ತಮಗ್ರಜಮ್ ॥94॥
ಕೆಲವರು ಹೀಗೆ ನಿಶ್ಚಯಿಸಿಕೊಂಡರು- ``ಈತನು ಬ್ರಹ್ಮಪುತ್ರನಾದ ಹಾಗೂ ಬ್ರಹ್ಮಪುತ್ರರಲ್ಲಿಯೇ ದೊಡ್ಡವನಾದ ಸನತ್ಕುಮಾರ'' ಎಂದು.
ಕೇಚಿನ್ಮಹೇಶ್ವರಸುತಂ ಕೇಚಿತ್ ಪುತ್ರಂ ವಿಭಾವಸೋಃ |
ಉಮಾಯಾಃ ಕೃತ್ತಿಕಾಯಾಶ್ಚ ಗಂಗಾಯಾಶ್ಚ ವದಂತ್ಯುತ ॥95॥
ಕೆಲವರು ಇವನನ್ನು ರುದ್ರನ ಪುತ್ರ ಎಂಬುದಾಗಿ ನಿಶ್ಚಯಿಸಿಕೊಂಡರು. ಕೆಲವರು ಅಗ್ನಿಯ ಪುತ್ರನೆಂಬುದಾಗಿ ಅಂದುಕೊಂಡರು. ಕೆಲವರು ಇವನನ್ನು ಪಾರ್ವತಿಯ ಮಗನನ್ನಾಗಿಯೂ, ಕೃತ್ತಿಕೆಯರ ಮಗನನ್ನಾಗಿಯೂ, ಗಂಗೆಯ ಮಗನನ್ನಾಗಿಯೂ ಹೇಳತೊಡಗಿದರು.
ಏಕಧಾ ಚ ದ್ವಿಧಾ ಚೈವ ಚತುರ್ಧಾ ಚ ಮಹಾಬಲಮ್ |
ಯೋಗಿನಾಮೀಶ್ವರಂ ದೇವಂ ಶತಶೋಽಥ ಸಹಸ್ರಶಃ ॥96॥
ಆ ಎಲ್ಲಾ ದೇವತೆಗಳು ಮತ್ತು ಗಂಧರ್ವಾದಿಗಳು ಒಬ್ಬೊಬ್ಬರಾಗಿ, ಇಬ್ಬರಿಬ್ಬರು ಸೇರಿಕೊಂಡು, ನಾಲ್ಕು ನಾಲ್ಕು ಮಂದಿ ಕೂಡಿಕೊಂಡು ಯೋಗೀಶ್ವರನಾದ ಸ್ಕಂದನನ್ನು ನೋಡಿದರು ಮತ್ತು ಅವನ ಬಗ್ಗೆ ಮಾತನಾಡಿಕೊಂಡರು.
ಏತತ್ ತೇ ಕಥಿತಂ ರಾಜನ್ ಕಾರ್ತಿಕೇಯಾಭಿಷೇಚನಮ್ |
ಶೃಣು ಚೇಮಾಂ ಸರಸ್ವತ್ಯಾಃ ತೀರ್ಥವಂಶಸ್ಯ ಪುಣ್ಯತಾಮ್ ॥97॥
ರಾಜನೇ! ಕಾರ್ತಿಕೇಯನ ಪಟ್ಟಾಭಿಷೇಕವನ್ನು ನಿನಗೆ ನಾನು ವರ್ಣಿಸಿರುವೆನು. ಈ ಸರಸ್ವತಿನದಿಯ ತೀರ್ಥಪರಂಪರೆಯ ಪುಣ್ಯಶಾಲಿತ್ವವನ್ನು ಹೇಳುವೆನು, ಕೇಳು.
ಬಭೂವ ತತ್ತೀರ್ಥವರಂ ಹತೇಷು ಸುರಶತ್ರುಷು |
ಕುಮಾರೇಣ ಮಹಾರಾಜ ತ್ರಿವಿಷ್ಟಪಮಿವಾಪರಮ್ ॥98॥
ಸ್ಕಂದನು ದೇವಶತ್ರುಗಳನ್ನು ಸಂಹರಿಸಿದ ನಂತರ ಸರಸ್ವತಿಯ ಆ ತೀರ್ಥವು ಸ್ವರ್ಗತುಲ್ಯವಾಯಿತು.
ಐಶ್ವರ್ಯಾಣಿ ಚ ತತ್ರಸ್ಥೋ ದದಾವೀಶಃ ಪೃಥಕ್ ಪೃಥಕ್ |
ತಥಾ ನೈರ್ಋತಮುಖ್ಯೇಷು ತ್ರೈಲೋಕ್ಯೇ ಪಾವಕಾತ್ಮಜಃ ॥99॥
ಸ್ವಾಮಿಯಾದ ಸ್ಕಂದನು ಅಲ್ಲಿದ್ದ ಸಂಪತ್ತನ್ನು ತನ್ನ ಸೇನೆಯ ಮುಖ್ಯಸ್ಥರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಹಂಚಿ ಕೊಟ್ಟನು.
ಏವಂ ಸ ಭಗವಾಂಸ್ತಸ್ಮಿನ್ ತೀರ್ಥೇ ದೈತ್ಯಕುಲಾಂತಕೃತ್ |
ಅಭಿಷಿಕ್ತೋ ಮಹಾರಾಜ ದೇವಸೇನಾಪತಿಃ ಸುರೈಃ ॥100॥
ಹೀಗೆ ಭಗವಾನ್ ಸ್ಕಂದನು ಆ ತೀರ್ಥದಲ್ಲಿ ದೇವತೆಗಳಿಂದ ದೇವಸೇನಾಧಿಪತಿಯಾಗಿ ಅಭಿಷಿಕ್ತನಾಗಿ ದೈತ್ಯಕುಲವನ್ನೇ ನಾಶ

ಮಾಡಿದನು.
ತೈಜಸಂ ನಾಮ ತತ್ ತೀರ್ಥಂ ಯತ್ರ ತೀರ್ಥೇ ಮಹಾಮತಿಃ |
ಅಭಿಷಿಕ್ತಃ ಸುರಗಣೈರ್ವರುಣೋ ಭರತರ್ಷಭ ||101||
ಭರತಕುಲಶ್ರೇಷ್ಠನೇ! ಎಲ್ಲಿ ಮಹಾಜ್ಞಾನಿಯಾದ ವರುಣನು ದೇವತೆಗಳಿಂದ ಅಭಿಷಿಕ್ತನಾದನೋ ಆ ತೀರ್ಥಕ್ಕೆ ತೈಜಸತೀರ್ಥ ಎಂಬುದಾಗಿ ಹೆಸರು ಬಂತು.
ತಸ್ಮಿಂಸ್ತೀರ್ಥವರೇ ಸ್ನಾತ್ವಾ ಸ್ಕಂದಮಭ್ಯರ್ಚ್ಯ ಲಾಂಗಲೀ |
ಬ್ರಾಹ್ಮಣೇಭ್ಯೋ ದದೌ ವಿತ್ತಂ ವಾಸಾಂಸ್ಯಾಭರಣಾನಿ ಚ ||102||
ಬಲರಾಮನು ಆ ಉತ್ತಮತೀರ್ಥದಲ್ಲಿ ಸ್ನಾನವನ್ನು ಮಾಡಿ, ಸ್ಕಂದನನ್ನು ಆರಾಧಿಸಿ ಬ್ರಾಹ್ಮಣರಿಗೆ ಹಣ, ವಸ್ತ್ರ, ಮತ್ತು ಆಭರಣಗಳನ್ನು ದಾನಮಾಡಿದನು.
ಉಷಿತ್ವಾ ರಜನೀಂ ತಾಂ ತು ಮಾಧವಃ ಪರವೀರಹಾ |
ಆದ್ಯಂ ತೀರ್ಥವರಂ ತಚ್ಚ ಸ್ಪೃಷ್ಟ್ವಾ ತೋಯಂ ಚ ಲಾಂಗಲೀ ||103||
ಶತ್ರುಸಂಹಾರಕನಾದ ಬಲರಾಮನು ಅಲ್ಲಿ ರಾತಿತ್ರಯ ಹೊತ್ತು ವಾಸಮಾಡಿ ಮರುದಿನ ಬೆಳಿಗ್ಗೆ ತೀರ್ಥವನ್ನು ಸ್ಪರ್ಶಿಸಿ ಸ್ನಾನಾದಿಗಳನ್ನು ಮಾಡಿದನು.
ಹೃಷ್ಟಃ ಪ್ರೀತಮನಾಶ್ಚೈವ ಹ್ಯಭವನ್ಮಾಧವೋತ್ತಮಃ ||104||
ಮಾಧವೋತ್ತಮನಾದ ಬಲರಾಮನು ಮನಸ್ಸಂತೋಷವನ್ನು ಹೊಂದಿ ಸಂತುಷ್ಟನಾದನು.
ಯತ್ರಾಽಭಿಷಿಕ್ತೋ ಭಗವಾನ್ ಸ್ಕಂದೋ ದೇವೈಃ ಸಮಾಗತೈಃ |
ಸೇನಾನೀಶ್ಚ ಕೃತೋ ರಾಜನ್ ಬಾಲ ಏವ ಮಹಾರಥಃ ||105||
ಆ ತೀರ್ಥದಲ್ಲಿಯೇ ಬಂದ ದೇವತೆಗಳು ಮಹಾರಥನಾದ ಬಾಲಕ ಸ್ಕಂದನಿಗೆ ಪಟ್ಟಾಭಿಷೇಕವನ್ನು ಮಾಡಿ ದೇವಸೇನಾಪತಿಯೆಂದು ಆರಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಕುಮಾರಾಭಿಷೇಕಪ್ರಕಾರವರ್ಣನಂ ನಾಮ ಅಷ್ಟಾದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
|| ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ||
ಮಹಾಭಾರತ
ಗದಾಪರ್ವ
ಹತ್ತೊಂಬತ್ತನೆಯ ಅಧ್ಯಾಯ
ದೇವತೆಗಳು ವರುಣನನ್ನು ಜಲಕ್ಕೆ ಅಧಿಪತಿಯನ್ನಾಗಿ ಅಭಿಷೇಕ ಮಾಡಿದ್ದು. ಬಲರಾಮನು ಅಗ್ನಿತೀರ್ಥ ಮತ್ತು ಕೌಬೇರತೀರ್ಥಕ್ಕೆ ಹೋದದ್ದು ಮತ್ತು ಅವುಗಳ ಮಹಿಮೆಯ ವರ್ಣನೆ. ಬಲರಾಮನು ಬದರಪಾಚನತೀರ್ಥಕ್ಕೆ ಹೋದದ್ದು. ಶ್ರುತಾವತೀ ಮತ್ತು ಅರುಂಧತಿಯರ ಮಹಿಮಾವರ್ಣನೆ.
ಜನಮೇಜಯಃ
ಅತ್ಯದ್ಭುತಮಿದಂ ಬ್ರಹ್ಮನ್ ಶ್ರುತವಾನಸ್ಮಿ ತತ್ತ್ವತಃ ||1||
ಜನಮೇಜಯ ಬ್ರಹ್ಮಜ್ಞಾನಿಯೇ! ನಾನು ಬಹಳ ಅದ್ಭುತವಾದ ವಿಷಯಗಳನ್ನು ಯಥಾರ್ಥವಾಗಿ ನಿನ್ನಿಂದ ಕೇಳಿ ತಿಳಿದೆನು.
ಅಭಿಷೇಕಂ ಕುಮಾರಸ್ಯ ದೈತ್ಯಾನಾಂ ಚ ವಧಂ ತಥಾ |
ಶ್ರುತ್ವಾ ಮೇ ಪರಮಾ ಪ್ರೀತಿರ್ಭೂಯಃ ಕೌತೂಹಲಂ ಹಿ ಮೇ ||2||
ಕುಮಾರನ ಪಟ್ಟಾಭಿಷೇಕ, ದೈತ್ಯರ ವಧೆ ಇವನ್ನು ಕೇಳಿ ನನಗೆ ಪುನಃ ಆನಂದ ಮತ್ತು ಕುತೂಹಲವು ಉಂಟಾಗಿದೆ.
ಅಪಾಂಪತಿಃ ಕಥಂ ಹ್ಯಸ್ಮಿನ್ನಭಿಷಿಕ್ತಃ ಕದಾ ಸುರೈಃ |
ತನ್ಮೇ ಬ್ರೂಹಿ ಮಹಾಪ್ರಾಜ್ಞ ಕುಶಲೋ ಹ್ಯಸಿ ಸತ್ತಮ ||3||
ಮಹಾಜ್ಞಾನಿಯೇ! ದೇವತೆಗಳು ನೀರಿನೊಡೆಯನಾದ ವರುಣನಿಗೆ ಇಲ್ಲಿ ಹೇಗೆ ಮತ್ತು ಯಾವಾಗ ಪಟ್ಟದಲ್ಲಿ ಅಭಿಷೇಕವನ್ನು ಮಾಡಿದರು? ನೀನು ಇದನ್ನು ಹೇಳಲು ಸಮರ್ಥನಾಗಿರುವಿ.
ವೈಶಂಪಾಯನಃ
ಶೃಣು ರಾಜನ್ನಿದಂ ಚಿತ್ರಂ ಪೂರ್ವಕಾಲೇ ಯಥಾಽಭವತ್ ||4||
ವೈಶಂಪಾಯನ ರಾಜನೇ! ಹಿಂದಿನ ಕಾಲದಲ್ಲಿ ನಡೆದ ವಿಚಿತ್ರವಾದ ಘಟನೆಯನ್ನು ಯಥಾವತ್ತಾಗಿ ಕೇಳು.
ಆದೌ ಕೃತಯುಗೇ ತಸ್ಮಿನ್ ವರ್ತಮಾನೇ ಯಥಾವಿಧಿ |
ವರುಣಂ ದೇವತಾಃ ಸರ್ವಾಃ ಸಮೇತ್ಯೇದಮಥಾಬ್ರುವನ್ ||5||
ಕೃತಯುಗದ ಪ್ರಾರಂಭದಲ್ಲಿ ಎಲ್ಲಾ ದೇವತೆಗಳು ಒಟ್ಟಾಗಿ ವರುಣನನ್ನು ಸಮೀಪಿಸಿ ಹೀಗೆ ಹೇಳಿದರು.
ದೇವಾಃ
ಯಥಾಽಸ್ಮಾನ್ ಸುರರಾಟ್ ಶಕ್ರೋ ಭಯೇಭ್ಯಸಶ್ತ್ರತಿ ಸರ್ವದಾ |
ತಥಾ ತ್ವಮಪಿ ಸರ್ವಾಸಾಂ ಸರಿತಾಂ ವೈ ಪತಿರ್ಭವ ||6||
ದೇವತೆಗಳು ಯಾವ ರೀತಿಯಲ್ಲಿ ದೇವೇಂದ್ರನಾದ ಇಂದ್ರನು ನಮ್ಮನ್ನು ಭಯದಿಂದ ರಕ್ಷಿಸುತ್ತಾನೆಯೋ ಹಾಗೆಯೇ ನೀನೂ ಕೂಡ

ಎಲ್ಲಾ ನದಿಗಳಿಗೆ ಅಧಿಪತಿಯಾಗು.
ವಾಸಶ್ಚ ತೇ ಸದಾ ದೇವ ಸಾಗರೇ ಮಕರಾಲಯೇ |
ಸಮುದ್ರೋಽಯಂ ತವ ವಶೇ ಭವಿಷ್ಯತಿ ನದೀಪತಿಃ ॥7॥
ನೀನು ಯಾವಾಗಲೂ ಮೊಸಳೆಗಳಿಂದ ತುಂಬಿದ ಸಾಗರದಲ್ಲಿ ಆಶ್ರಯವನ್ನು ಪಡೆ. ನದಿಗಳ ಪತಿಯಾದ ಸಮುದ್ರವು ನಿನ್ನ ಅಧೀನದಲ್ಲಿ ಇರುತ್ತದೆ.
ಸೋಮೇನ ಸಾರ್ಧಂ ತವ ಚ ಹಾನಿರ್ವೃದ್ಧಿರ್ಭವಿಷ್ಯತಿ ॥8॥
ಚಂದ್ರನ ವೃದ್ಧಿ ಮತ್ತು ಕ್ಷಯಕ್ಕೆ ಅನುಸಾರವಾಗಿ ನಿನ್ನಲ್ಲಿಯೂ ಉಬ್ಬರ - ಇಳಿತಗಳು ಉಂಟಾಗುವವು.
ವೈಶಂಪಾಯನಃ
ಏವಮಸ್ತ್ವಿತಿ ತಾನ್ ದೇವಾನ್ ವರುಣೋ ವಾಕ್ಯಮಬ್ರವೀತ್ ॥9॥
ವೈಶಂಪಾಯನ ಹಾಗೆಯೇ ಆಗಲಿ ಎಂದು ವರುಣನು ದೇವತೆಗಳಿಗೆ ಹೇಳುತ್ತಾನೆ.
ಸಮಾಗಮ್ಯ ತು ತೇ ಸರ್ವೇ ವರುಣಂ ಸಾಗರಾಲಯಮ್ |
ಅಪಾಂಪತಿಂ ಪ್ರಚಕ್ರುರ್ಹಿ ವಿಧಿದೃಷ್ಟೇನ ಕರ್ಮಣಾ ॥10॥
ಆ ಎಲ್ಲಾದೇವತೆಗಳು ಬಂದು ಸಾಗರದಲ್ಲಿದ್ದ ವರುಣನನ್ನು ಶಾಸ್ತ್ರೋಕ್ತ ಕ್ರಿಯೆಗಳಿಂದ ಜಲಾಧಿಪತಿಯನ್ನಾಗಿ ಅಭಿಷೇಕಮಾಡಿದರು.
ಅಭಿಷಿಚ್ಯ ತತೋ ದೇವಾ ವರುಣಂ ಪಯಸಾಂ ಪತಿಮ್ |
ಸ್ವಾನ್ಯೇವ ಜಗ್ಮುಃ ಸ್ಥಾನಾನಿ ಪೂಜಯಿತ್ವಾ ಜಲೇಶ್ವರಮ್ ॥11॥
ದೇವತೆಗಳು ವರುಣನನ್ನು ಜಲಾಧಿಪತಿಯನ್ನಾಗಿ ಅಭಿಷೇಕ ಮಾಡಿ, ಅವನನ್ನು ಪೂಜಿಸಿ ತಾವು ತಮ್ಮ ತಮ್ಮ ಸ್ಥಾನಗಳಿಗೆ ಹೋದರು.
ಅಭಿಷಿಕ್ತಸ್ತತೋ ದೇವೈಃ ವರುಣೋಽಪಿ ಮಹಾಯಶಾಃ |
ಸರಿತಃ ಸಾಗರಾಂಶ್ಚೈವ ನದಾಂಶ್ಚೈವ ಸರಾಂಸಿ ಚ ॥12॥
ಪಾಲಯಾಮಾಸ ವಿಧಿನಾ ಯಥಾ ದೇವಾನ್ ಶತಕ್ರತುಃ ॥13॥
ಅನಂತರ ದೇವತೆಗಳಿಂದ ಅಭಿಷಿಕ್ತನಾದ, ಮಹಾಕೀರ್ತಿವಂತನಾದ ವರುಣನು ನದಿಗಳನ್ನು, ಸಾಗರಗಳನ್ನು, ನದಗಳನ್ನು ಮತ್ತು ಸರೋವರಗಳನ್ನು, ಇಂದ್ರನು ದೇವತೆಗಳನ್ನು ಪಾಲಿಸಿದಂತೆ ಪಾಲಿಸಿದನು.
ತತಸ್ತತ್ರಾಪ್ಯುಪಸ್ಪೃಶ್ಯ ದತ್ತ್ವಾ ಚ ವಿವಿಧಂ ವಸು |
ಅಗ್ನಿತೀರ್ಥಂ ಮಹಾಪ್ರಾಜ್ಞೋ ಜಗಾಮಾಥ ಪ್ರಲಂಬಹಾ ॥14॥
ಪ್ರಲಂಬಾಸುರನನ್ನು ಕೊಂದ ಬಲರಾಮನು ಆ ತೀರ್ಥದಲ್ಲಿ ಆಚಮನಾದಿಗಳನ್ನು ಮಾಡಿ, ವಿವಿಧ ಸಂಪತ್ತನ್ನು ದಾನಮಾಡಿ ಅಲ್ಲಿಂದ ಅಗ್ನಿತೀರ್ಥಕ್ಕೆ ಹೋದನು.
ನಷ್ಟೋ ನ ದೃಶ್ಯತೇ ಯತ್ರ ಶಮೀಗರ್ಭೋ ಹುತಾಶನಃ |
ಲೋಕಾಲೋಕವಿನಾಶೇ ಚ ಪ್ರಾದುರ್ಭೂತೇ ತದಾ ನೃಪ ॥15॥
ಉಪತಸ್ಥುರ್ಮಹಾತ್ಮಾನಂ ಸರ್ವಲೋಕಪಿತಾಮಹಮ್ ॥16॥
ರಾಜನೇ ! ಹಿಂದೆ ಈ ಅಗ್ನಿತೀರ್ಥದಲ್ಲಿ ಶಮೀಗರ್ಭನಾದ ಅಗ್ನಿಯು ಕಳೆದುಹೋದನು. ಆಗ ಲೋಕಾಲೋಕಗಳು ನಾಶವಾಗಲು ಪ್ರಾರಂಭವಾದಾಗ ದೇವತೆಗಳು ಲೋಕಪಿತಾಮಹನಾದ ಬ್ರಹ್ಮನನ್ನು ಉಪಾಸನೆ ಮಾಡಿದರು.
ದೇವಾಃ
ಅಗ್ನಿಃ ಪ್ರನಷ್ಟೋ ಭಗವಾನ್ ಕಾರಣಂ ನ ಚ ವಿದ್ಮಹೇ |
ಸರ್ವಲೋಕಕ್ಷಯೋ ಮಾ ಭೂತ್ ಸಂಪಾದಯತು ನೋಽನಲಮ್ ॥
ದೇವತೆಗಳು ಪೂಜ್ಯನಾದ ಅಗ್ನಿಯು ಕಳೆದುಹೋಗಿದ್ದಾನೆ. ಕಾರಣವೇನೆಂದು ತಿಳಿಯುತ್ತಿಲ್ಲ. ಸರ್ವಲೋಕವು ನಾಶವಾಗದಿರಲಿ. ನಮಗೆ ಅಗ್ನಿಯನ್ನು ಸಂಪಾದಿಸಿಕೊಡು.
ಜನಮೇಜಯಃ
ಕಿಮರ್ಥಂ ಭಗವಾನಗ್ನಿಃ ಪ್ರನಷ್ಟೋ ಲೋಕಭಾವನಃ |
ವಿಜ್ಞಾತಶ್ಚ ಕಥಂ ದೇವೈಸ್ತನ್ಮಮಾಚಕ್ಷ್ವ ಪೃಚ್ಛತಃ ॥18॥
ಜನಮೇಜಯ ಲೋಕವನ್ನು ರಕ್ಷಿಸುವ ಅಗ್ನಿಯು ಯಾಕಾಗಿ ಕಳೆದುಹೋದನು? ದೇವತೆಗಳು ಅದನ್ನು ಹೇಗೆ ತಿಳಿದುಕೊಂಡರು? ಇದನ್ನೆಲ್ಲವನ್ನು ಪ್ರಶ್ನಿಸುತ್ತಿದ್ದೇನೆ. ನನಗೆ ಹೇಳು.
ವೈಶಂಪಾಯನಃ
ಭೃಗೋಃ ಶಾಪಭಯಾದ್ ಭೀತೋ ಜಾತವೇದಾಃ ಪ್ರತಾಪವಾನ್ |
ಶಮೀಗರ್ಭಮಥಾಸಾದ್ಯ ನನಾಶ ಭಗವಾಂಸ್ತತಃ ॥19॥
ವೈಶಂಪಾಯನ ಭೃಗುವಿನ ಶಾಪದ ಭಯದಿಂದಾಗಿ ಪ್ರತಾಪಿಯಾದ ಅಗ್ನಿಯು ಶಮೀವೃಕ್ಷದ ಒಳಗೆ ಸೇರಿಕೊಂಡು ಕಾಣದಾದನು.
ಪ್ರನಷ್ಟೇ ತು ತದಾ ವಹ್ನೌ ದೇವಾಃ ಸರ್ವೇ ಸವಾಸವಾಃ |
ಅನ್ವೇಷಯಂಸ್ತದಾ ಸರ್ವೇ ಜ್ವಲನಂ ಭೃಶದುಃಖಿತಾಃ ॥20॥
ಅಗ್ನಿಯು ಅದೃಶ್ಯನಾದಾಗ ಬಹಳದುಃಖಿತರಾದ ಎಲ್ಲಾ ಇಂದ್ರಾದಿದೇವತೆಗಳು ಅವನನ್ನು ಹುಡುಕಾಡಿದರು.
ತತೋಽಗ್ನಿತೀರ್ಥಮಾಗಮ್ಯ ಶಮೀಗರ್ಭಸ್ಥಮೇವ ಹಿ |
ದದೃಶುರ್ಜ್ವಲನಂ ತತ್ರ ವಸಮಾನಂ ಯಥಾವಿಧಿ ॥21॥
ಅನಂತರ ಅಗ್ನಿತೀರ್ಥಕ್ಕೆ ಬಂದು ಅಲ್ಲಿ ಶಮೀವೃಕ್ಷದ ಒಳಗೆ ವಾಸಿಸುತ್ತಿದ್ದ ಅಗ್ನಿಯನ್ನು ನೋಡಿದರು.

ದೇವಾಃ ಸರ್ವೇ ಮಹಾರಾಜ ಬೃಹಸ್ಪತಿಪುರೋಗಮಾಃ |
ಜ್ವಲನಂ ತೇ ಸಮಾಸಾದ್ಯ ಪ್ರೀತಾ ಭೂವನ್ ಸವಾಸವಾಃ ||22||
ಮಹಾರಾಜನೇ! ಇಂದ್ರಾದಿದೇವತೆಗಳು ಬೃಹಸ್ಪತಿಯನ್ನು ಮುಂದಿಟ್ಟುಕೊಂಡು ಅಗ್ನಿಯನ್ನು ಹೊಂದಿ ಸಂತುಷ್ಟರಾದರು.
ಪುನರ್ಯಥಾಗತಂ ಜಗ್ಮುಃ ಸರ್ವಭಕ್ಷಶ್ಚ ಸೋಽಭವತ್ ||23||
ಭೃಗೋಃ ಶಾಪಾನ್ಮಹೀಪಾಲ ಯದುಕ್ತಂ ಬ್ರಹ್ಮವಾದಿನಾ |
ತತ್ರೈವಾಪ್ಲುತ್ಯ ಮತಿಮಾನ್ ಬ್ರಹ್ಮಯೋನಿಂ ಜಗಾಮ ಹ ||24||
ಅವರೆಲ್ಲಾ ಪುನಃ ತಮ್ಮ ಸ್ಥಾನಕ್ಕೆ ಹೋದರು. ಅಗ್ನಿಯಾದರೂ ಭೃಗುವಿನ ಶಾಪದಿಂದಾಗಿ ಸರ್ವಭಕ್ಷಕ (ಎಲ್ಲವನ್ನೂ ತಿನ್ನುವವನು) ಆದನು. ರಾಜನೇ! ಬ್ರಹ್ಮಜ್ಞಾನಿಯಾದ ಮುನಿಯು ಏನು ಹೇಳಿದನೋ ಹಾಗೆಯೇ ಆಯಿತು.
ಸಸರ್ಜ ಭಗವಾನ್ ಯತ್ರ ಸರ್ವಲೋಕಪಿತಾಮಹಃ ||25||
ಬುದ್ಧಿವಂತನಾದ ಬಲರಾಮನು ಅಲ್ಲಿ ಅವಗಾಹಸ್ನಾನವನ್ನು ಮಾಡಿ ಬ್ರಹ್ಮಯೋನಿತೀರ್ಥಕ್ಕೆ ಹೋದನು. ಆ ಬ್ರಹ್ಮಯೋನಿತೀರ್ಥದಲ್ಲಿ ಸರ್ವಲೋಕ ಪಿತಾಮಹನಾದ ಚತುರ್ಮುಖಬ್ರಹ್ಮನು ಜಗತ್ತಿನ ಸೃಷ್ಟಿಯನ್ನು ಮಾಡಿದನು.
ತತ್ರಾಪ್ಲುತ್ಯ ತತೋ ಬ್ರಹ್ಮಾ ಸಹ ದೇವೈಃ ಪುರಾ ಪ್ರಭುಃ |
ಸಸರ್ಜ ಚಾನ್ನಾನಿ ತಥಾ ದೇವತಾನಾಂ ಯಥಾವಿಧಿ ||26||
ಹಿಂದೆ ಅಲ್ಲಿ ಚತುರ್ಮುಖನು ದೇವತೆಗಳೊಡನೆ ಸ್ನಾನವನ್ನು ಮಾಡಿ ದೇವತೆಗಳಿಗೆ ಯೋಗ್ಯವಾದ ಅನ್ನಗಳನ್ನು ಸೃಷ್ಟಿಸಿದನು.
ತತ್ರ ಸ್ನಾತ್ವಾ ಚ ದತ್ತ್ವಾ ಚ ವಸೂನಿ ವಿವಿಧಾನಿ ಚ |
ಕೌಬೇರಂ ಪ್ರಯಯೌ ತೀರ್ಥಂ ಯತ್ರ ತಪ್ತ್ವಾ ತಪೋ ಮಹತ್ ||27||
ಧನಾಧಿಪತ್ಯಂ ಸಂಪ್ರಾಪ್ತೋ ರಾಜನ್ನೈಲಬಿಲಃ ಪ್ರಭುಃ ||28||
ಬಲರಾಮನು ಅಲ್ಲಿ ಸ್ನಾನವನ್ನು ಮಾಡಿ, ವಿವಿಧ ಸಂಪತ್ತುಗಳನ್ನು ದಾನಮಾಡಿ ಕೌಬೇರತೀರ್ಥಕ್ಕೆ ಹೋದನು. ರಾಜನೇ! ಈ ಕೌಬೇರತೀರ್ಥದಲ್ಲಿ ಸಮರ್ಥನಾದ ಐಲಬಿಲ (ಕುಬೇರ)ನು ಬಹಳ ತಪಸ್ಸನ್ನು ಮಾಡಿ ಧನಾಧಿಪತ್ಯವನ್ನು ಪಡೆದನು.
ತತ್ರಸ್ಥಮೇವ ತಂ ರಾಜನ್ ಧನಾನಾಂ ನಿಧಯಸ್ತಥಾ |
ಉಪತಸ್ಥುರ್ನರಶ್ರೇಷ್ಠ ತತ್ತೀರ್ಥಂ ಲಾಂಗಲೀ ತದಾ ||29||
ಗತ್ವಾ ಸ್ನಾತ್ವಾ ಚ ವಿಧಿವದ್ ಬ್ರಾಹ್ಮಣಾನಾಂ ದದೌ ಧನಮ್ ||30||
ರಾಜನೇ! ಅಲ್ಲಿದ್ದ ಕುಬೇರನ ಬಳಿಗೆ ಎಲ್ಲಾ ಸಂಪತ್ತಿನ ನಿಧಿಗಳು ಬಂದು ಸೇರಿದವು. ನರೋತ್ತಮನೇ! ಬಲರಾಮನು ಆ ತೀರ್ಥಕ್ಕೆ ಹೋಗಿ, ಸ್ನಾನವನ್ನು ಮಾಡಿ ವಿಧ್ಯುಕ್ತರೀತಿಯಲ್ಲಿ ಬ್ರಾಹ್ಮಣರಿಗೆ ಸಂಪತ್ತನ್ನು ದಾನಮಾಡಿದನು.
ದದೃಶೇ ತತ್ರ ತತ್ಸ್ಥಾನಂ ಕೌಬೇರೇ ಕಾನನೇ ಪ್ರಭುಃ ||31||
ಪುರಾ ಯತ್ರ ತಪಸ್ತಪ್ತಂ ವಿಪುಲಂ ಸುಮಹಾತ್ಮನಾ |
ಯತ್ರ ರಾಜ್ಞಾ ಕುಬೇರೇಣ ವರಾ ಲಬ್ಧಾಶ್ಚ ಪುಷ್ಕಲಾಃ ||32||
ಅಲ್ಲಿ ಕುಬೇರನ ವನದಲ್ಲಿ ಬಲರಾಮನು ಕುಬೇರನ ತಪಸ್ಸಿನ ಸ್ಥಳವನ್ನು ಕಂಡನು. ಯಾವ ಸ್ಥಳದಲ್ಲಿ ಕುಬೇರನಿಗೆ ಯಥೇಷ್ಟವಾದ ವರಗಳು ಲಭಿಸಿದವೋ ಆ ಸ್ಥಳವನ್ನು ನೋಡಿದನು.
ಧನಾಧಿಪತ್ಯಂ ಸಖ್ಯಂ ಚ ರುದ್ರೇಣಾಮಿತತೇಜಸಾ |
ಸುರತ್ವಂ ಲೋಕಪಾಲತ್ವಂ ಪುತ್ರಂ ಚ ನಲಕೂಬರಮ್ ||33||
ಯತ್ರ ಲೇಭೇ ಮಹಾಬಾಹೋ ಧನಾಧಿಪತಿರಂಜಸಾ |
ಅಭಿಷಿಕ್ತಶ್ಚ ಯತ್ರೈವ ಸಮಾಗಮ್ಯ ಮರುದ್ಗಣೈಃ ||34||
ವಾಹನಂ ಚಾಸ್ಯ ತದ್ದತ್ತಂ ಹಂಸಯುಕ್ತಂ ಮನೋಜವಮ್ |
ವಿಮಾನಂ ಪುಷ್ಪಕಂ ದಿವ್ಯಂ ನೈರ್ಋತೈಶ್ವರ್ಯಮೇವ ಚ ||35||
ಮಹಾಬಾಹೋ! ಕುಬೇರನು ಆ ಸ್ಥಳದಲ್ಲಿಯೇ ಧನಾಧಿಪತ್ಯವನ್ನೂ, ಅಮಿತತೇಜೋವಂತನಾದ ರುದ್ರನ ಜೊತೆಗೆ ಸ್ನೇಹವನ್ನೂ, ದೇವತಾತ್ವವನ್ನೂ, ಲೋಕಾಧಿಪತ್ಯವನ್ನೂ ಮತ್ತು ನಲಕೂಬರ ಎಂಬ ಮಗನನ್ನೂ ಪಡೆದನು. ಮರುದ್ಗಣಗಳೂ ಅಲ್ಲಿಯೇ ಬಂದು ಕುಬೇರನಿಗೆ ಪಟ್ಟಾಭಿಷೇಕವನ್ನು ಮಾಡಿದ್ದು. ಕುಬೇರನಿಗೆ ಆ ಮರುತ್ತುಗಳು ಹಂಸಯುಕ್ತವಾದ, ಮನೋವೇಗವುಳ್ಳ, ದಿವ್ಯವಾದ ಪುಷ್ಪಕವಿಮಾನವನ್ನು ಕೊಟ್ಟರು. ಜೊತೆಗೆ ಕುಬೇರರನ್ನು ಯಕ್ಷರ ರಾಜನನ್ನಾಗಿ ಮಾಡಿದರು.
ತತ್ರಾಪ್ಲುತ್ಯ ಮಹಾರಾಜ ದತ್ತ್ವಾ ದೇಯಾನ್ ಸುಪುಷ್ಕಲಾನ್ |
ಜಗಾಮ ತ್ವರಿತೋ ರಾಮಸ್ತೀರ್ಥಂ ಶ್ವೇತಾನುಲೇಪನಃ ||36||
ನಿಷೇವಿತಂ ಮಹಾಸತ್ತ್ವೈರ್ನಾಮ್ನಾ ಬದರಪಾಚನಮ್ ||37||
ರಾಜನೇ! ಶ್ವೇತಬಣ್ಣದ ಅನುಲೇಪನವುಳ್ಳ ಬಲರಾಮನು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ, ವಿಧ್ಯುಕ್ತವಾಗಿ ಬಹಳವಾದ ದಾನವನ್ನು ಮಾಡಿ, ಅಲ್ಲಿಂದ ಕೂಡಲೇ ಬದರಪಾಚನತೀರ್ಥಕ್ಕೆ ಹೋದನು. ಆ ಬದರಪಾಚನ ತೀರ್ಥವನ್ನು ಅನೇಕ ಪ್ರಾಣಿಗಳು ಆಶ್ರಯಿಸಿದ್ದವು.
ತಪಸ್ವಿಸಿದ್ಧಚರಿತಂ ಯತ್ರ ಕನ್ಯಾ ಧೃತವ್ರತಾ ||38||
ಭರದ್ವಾಜಸ್ಯ ದುಹಿತಾ ರೂಪೇಣಾಪ್ರತಿಮಾ ಭುವಿ |
ಶ್ರುತಾವತೀ ನಾಮ ವಿಭೋ ಕೌಮಾರಬ್ರಹ್ಮಚಾರಿಣೀ ||39||
ತಪಶ್ಚಚಾರ ಸಾತ್ಯುಗ್ರಂ ನಿಯಮೈರ್ಬಹುಭಿಃ ಪ್ರಭೋ |
ಭರ್ತಾ ಮೇ ದೇವರಾಜಃ ಸ್ಯಾದಿತಿ ನಿಶ್ಚಿತ್ಯ ಭಾಮಿನೀ ||40||

ವಿಭುವೇ! ಪ್ರಭುವೇ! ತಪಸ್ವಿಗಳು ಮತ್ತು ಸಿದ್ಧಪುರುಷರು ಅಲ್ಲಿ ಸಂಚಾರಮಾಡುತ್ತಿದ್ದರು. ಅಲ್ಲಿಯೇ ಭರದ್ವಾಜನ ಮಗಳಾದ ಲೋಕಸುಂದರಿಯಾದ ಶ್ರುತಾವತಿಯು ಕುಮಾರಿಯಾಗಿರುವಾಗಲೇ ಬ್ರಹ್ಮಚಾರಿಣಿಯಾಗಿ ವ್ರತವನ್ನು ಕೈಗೊಂಡು ವ್ರತವನ್ನು ಆಚರಿಸಿದ್ದಳು. ಆ ಭಾಮಿನಿಯು, ತನಗೆ ದೇವರಾಜನಾದ ಇಂದ್ರನು ಪತಿಯಾಗಬೇಕೆಂದು ನಿಶ್ಚಯಿಸಿಕೊಂಡು ಅನೇಕ ನಿಯಮಗಳಿಂದ ತಪಸ್ಸನ್ನು ಆಚರಿಸಿದಳು.

ಸಮಾಸ್ತಸ್ಯಾ ವ್ಯತಿಕ್ರಾಂತಾ ಬಹ್ವ್ಯಃ ಕುರುಕುಲೋದ್ವಹ |
ಚರಂತ್ಯಾ ನಿಯಮಾಂಸ್ತಾಂಸ್ತಾನ್ ಸ್ತ್ರೀಭಿಸ್ತೀವ್ರಾನ್ ಸುದುಶ್ಚರಾನ್ ॥41॥

ಕುರುಕುಲಸಂಭೂತನೇ! ಸ್ತ್ರೀಯರಿಗೆ ಮಾಡಲು ಕಷ್ಟಸಾಧ್ಯವಾದ ಆ ನಿಯಮಗಳನ್ನು ಆಚರಿಸುತ್ತಾ ತಪಸ್ಸನ್ನು ಮಾಡುತ್ತಿರುವಾಗ ಅನೇಕ ವರ್ಷಗಳು ಕಳೆದವು.

ತಸ್ಯಾಸ್ತು ತೇನ ವೃತ್ತೇನ ತಪಸಾ ಚ ವಿಶಾಂಪತೇ |
ಭಕ್ತ್ಯಾ ಪರಮಯಾ ಪ್ರೀತೋ ಭಗವಾನ್ ಪಾಕಶಾಸನಃ ॥43॥
ಆಜಗಾಮಾಶ್ರಮಂ ತಸ್ಯಾಃ ತ್ರಿದಶಾಧಿಪತಿಸ್ತದಾ |
ಆಸ್ಥಾಯ ರೂಪಂ ಬ್ರಹ್ಮರ್ಷೇರ್ವಸಿಷ್ಠಸ್ಯ ಮಹಾತ್ಮನಃ ॥43॥

ರಾಜನೇ! ಅವಳ ಆ ಆಚರಣೆ, ತಪಸ್ಸು ಮತ್ತು ಉತ್ತಮವಾದ ಭಕ್ತಿಯಿಂದ ಪ್ರೀತನಾದ, ದೇವತೆಗಳ ಅಧಿಪತಿಯಾದ ಭಗವಾನ್ ಇಂದ್ರನು ಮಾಹಾತ್ಮನಾದ ಬ್ರಹ್ಮರ್ಷಿ ವಸಿಷ್ಠನ ರೂಪವನ್ನು ಧಾರಣೆ ಮಾಡಿಕೊಂಡು ಆ ಶ್ರುತಾವತಿಯ ಆಶ್ರಮಕ್ಕೆ ಬಂದನು.

ಸಾ ತಂ ದೃಷ್ಟ್ವೋಗ್ರತಪಸಂ ವಸಿಷ್ಠಂ ಜಪತಾಂ ವರಮ್ |
ಆಚಾರೈರ್ಬಹುಭಿರ್ಜುಷ್ಟಂ ಪೂಜಯಾಮಾಸ ಭಾರತ ॥44॥

ಭರತಕುಲೋದ್ಭವನೇ! ಬಂದಿರುವ ಉತ್ತಮಜಪಾನುಷ್ಠಾನವುಳ್ಳ, ಕಠಿಣವಾದ ತಪಸ್ಸುಳ್ಳ ವಸಿಷ್ಠರನ್ನು ನೋಡಿ, ಆ ಶ್ರುತಾವತಿಯು ಅನೇಕ ಉಪಚಾರಗಳಿಂದ ಪೂಜಿಸಿದಳು.

ಉವಾಚ ವಿನಯಜ್ಞಾ ಸಾ ಕಲ್ಯಾಣೀ ಚ ಪ್ರಿಯಂವದಾ ॥45॥

ನಯ-ವಿನಯವನ್ನು ತಿಳಿದ ಮಂಗಳಸ್ವರೂಪಿಯಾದ ಆಕೆಯು ಮಧುರವಾಗಿ ಮಾತನಾಡುತ್ತಾ ಹೇಳಿದಳು.

ಶ್ರುತಾವತೀ

ವದಸ್ವ ಮುನಿಶಾರ್ದೂಲ ಕಿಮಾಜ್ಞಾಪಯಸಿ ಪ್ರಭೋ |
ಸರ್ವಮದ್ಯ ಯಥಾಶಕ್ತಿ ತವ ದಾಸ್ಯಾಮಿ ಸುವ್ರತಾ ॥46॥
ಶಕ್ರಭಕ್ತ್ಯಾ ಚ ತೇ ಪಾಣಿಂ ನ ದಾಸ್ಯಾಮಿ ಕಥಂಚನ ॥47॥
ವೃತ್ತೈಶ್ಚ ನಿಯಮೈಶ್ಚೈವ ತಪಸಾ ಚ ತಪೋಧನ |
ಶಕ್ರಸ್ತೋಷಯಿತವ್ಯೋ ವೈ ಮಯಾ ತ್ರಿಭುವನೇಶ್ವರಃ ॥48॥

ಶ್ರುತಾವತೀ ಪ್ರಭುವೇ! ಮುನಿಗಳಲ್ಲಿಯೇ ಶ್ರೇಷ್ಠನಾದವನೇ! ನನಗೆ ಏನನ್ನು ಆಜ್ಞಾಪಿಸುತ್ತಿ? ಹೇಳು! ಒಳ್ಳೆಯ ವ್ರತವನ್ನು ಆಚರಿಸುವವನೇ! ಎಲ್ಲವನ್ನೂ ನನ್ನ ಶಕ್ತಿಗನುಸಾರವಾಗಿ ಇಂದು ಕೊಡುತ್ತೇನೆ. ಆದರೆ ನಿನ್ನನ್ನು ವಿವಾಹವಾಗಲಾರೆ. ಏಕೆಂದರೆ ನಾನು ಇಂದ್ರನ ಭಕ್ತಳಾಗಿದ್ದೇನೆ. ತಪೋಧನನೇ! ವ್ರತ-ನಿಯಮಗಳಿಂದ ಹಾಗೂ ತಪಸ್ಸಿನಿಂದ ನಾನು ತ್ರಿಲೋಕಾಧಿಪತಿಯಾದ ಇಂದ್ರನನ್ನೇ ಆರಾಧಿಸಬೇಕು.

ವೈಶಂಪಾಯನಃ

ಇತ್ಯುಕ್ತೋ ಭಗವಾನ್ ದೇವಃ ಸ್ಮಯನ್ನಿವ ನಿರೀಕ್ಷ್ಯ ತಾಮ್ |
ಉವಾಚ ನಿಯಮಂ ಜ್ಞಾತ್ವಾ ಸಾಂತ್ವಯನ್ನಿವ ಭಾರತ ॥49॥

ವೈಶಂಪಾಯನ ಭರತಕುಲೋದ್ಭವನೇ! ಅವಳ ಮಾತನ್ನು ಕೇಳಿದ ಇಂದ್ರದೇವನು ಮುಗುಳ್ನಗುತ್ತಾ, ಅವಳನ್ನು ನೋಡಿ, ಅವಳ ನಿಯಮಗಳನ್ನೂ ತಿಳಿದುಕೊಂಡು ಅವಳನ್ನು ಸಮಾಧಾನಪಡಿಸುತ್ತಾ ಹೀಗೆ ಹೇಳುತ್ತಾನೆ.

ಇಂದ್ರಃ

ಉಗ್ರಂ ತಪಶ್ಚರಸಿ ಹಿ ವಿದಿತಾ ಮೇಽಸಿ ಸುವ್ರತೇ |
ಯದರ್ಥಮಯಮಾರಂಭಸ್ತವ ಕಲ್ಯಾಣಿ ಹೃದ್ಗತಃ ॥50॥
ತತ್ಸರ್ವಂ ಚ ತಥಾಭೂತಂ ಭವಿಷ್ಯತಿ ವರಾನನೇ |
ತಪಸಾ ಲಭ್ಯತೇ ಸರ್ವಂ ಸರ್ವಂ ತಪಸಿ ತಿಷ್ಠತಿ ॥51॥

ಇಂದ್ರ ಉತ್ತಮವಾದ ವ್ರತವನ್ನು ಆಚರಿಸುವವಳೇ! ಉಗ್ರವಾದ ತಪಸ್ಸನ್ನು ಆಚರಿಸಿರುವೆ. ಇದು ನನಗೆ ಗೊತ್ತು. ಮಂಗಳಸ್ವರೂಪಳೇ! ಯಾವ ಪ್ರಯೋಜನಕ್ಕಾಗಿ ಈ ತಪಸ್ಸು-ನಿಯಮಾನುಷ್ಠಾನವನ್ನು ಆರಂಭಿಸಿಕೊಂಡಿರುವಿಯೋ ಅದೆಲ್ಲವೂ ಹಾಗೆಯೇ ಆಗುವುದು. ತಪಸ್ಸಿನಿಂದ ಎಲ್ಲವೂ ಸಿಗುತ್ತದೆ. ತಪಸ್ಸಿನಲ್ಲಿ ಎಲ್ಲವೂ ಇದೆ.

ಯಾನಿ ಸ್ಥಾನಾನಿ ಸರ್ವಾಣಿ ವಿಬುಧಾನಾಂ ಶುಭಾನನೇ |
ತಪಸಾ ತಾನಿ ಲಭ್ಯಂತೇ ತಪೋಮೂಲಂ ಮಹತ್ಸುಖಮ್ ॥52॥

ಶುಭಾನನೆಯೇ! ದೇವತೆಗಳ ಸ್ಥಾನಗಳೆಲ್ಲವೂ ತಪಸ್ಸಿನಿಂದಲೇ ಪ್ರಾಪ್ತವಾದವುಗಳು. ಎಲ್ಲಾ  ಸುಖಗಳಿಗೂ ತಪಸ್ಸೇ ಕಾರಣ.

ಇತಿ ಕೃತ್ವಾ ತಪೋ ಘೋರಂ ದೇಹಂ ಸಂತ್ಯಜ್ಯ ಮಾನವಾಃ |
ದೇವತ್ವಂ ಯಾಂತಿ ಕಲ್ಯಾಣಿ ಶೃಣು ಚೇದಂ ವಚೋ ಮಮ ॥53॥

ಮಾನವರು ಇಂತಹ ತಪಸ್ಸನ್ನು ಮಾಡಿ, ದೇಹವನ್ನು ಬಿಟ್ಟು ದೇವತ್ವವನ್ನು ಹೊಂದುತ್ತಾರೆ. ಕಲ್ಯಾಣಿಯೇ! ನನ್ನ ಈ ಮಾತನ್ನು ಕೇಳು.

ಪಚಸ್ವೈತಾನಿ ಸುಭಗೇ ಬದರಾಣಿ ಶುಭವ್ರತೇ ॥54॥
ಶುಭವ್ರತಳೇ! ಶುಭವಾದ ಭಾಗ್ಯವುಳ್ಳವಳೇ! ಈ ಬದರದ ಹಣ್ಣುಗಳನ್ನು ಬೇಯಿಸು.
ವೈಶಂಪಾಯನಃ
ಪಚೇತ್ಯುಕತ್ವ ಸ ಭಗವಾನ್ ಜಗಾಮ ಬಲಸೂದನಃ ॥55॥
ಆಮಂತ್ರ್ಯ ತಾಂ ತು ಕಲ್ಯಾಣೀಂ ತತೋ ಜಪ್ಯಂ ಜಜಾಪ ಸಾ |
ಅವಿದೂರೇ ತತಸ್ತಸ್ಮಾದ್ ಆಶ್ರಮಾತ್ ತೀರ್ಥ ಉತ್ತಮೇ ॥56॥
ವೈಶಂಪಾಯನ ಬೇಯಿಸು ಎಂದು ಹೇಳಿ ಭಗವಾನ್ ಇಂದ್ರನು ಕಲ್ಯಾಣಿಯಾದ ಅವಳ ಒಪ್ಪಿಗೆಯನ್ನು ಪಡೆದುಕೊಂಡು ಹೋದನು. ಅನಂತರ ಅವಳು ಅಲ್ಲಿಂದ ಸಮೀಪದಲ್ಲಿಯೇ ಇದ್ದ ಉತ್ತಮ ತೀರ್ಥಕ್ಷೇತ್ರದಲ್ಲಿ ಜಪಿಸಬೇಕಾದ ಮಂತ್ರಗಳನ್ನು ಜಪಿಸಿದಳು.
ತಚ್ಚ ತೀರ್ಥಂ ಮಹಾರಾಜ ಯತ್ರ ಜಪ್ಯಂ ಜಜಾಪ ಸಾ |
ಇಂದ್ರತೀರ್ಥಂ ಮಹಾರಾಜ ತ್ರಿಷು ಲೋಕೇಷು ವಿಶ್ರುತಮ್ ॥57॥
ಮಹಾರಾಜನೇ! ಯಾವ ತೀರ್ಥದಲ್ಲಿ ಶ್ರುತಾವತಿಯು ಜಪವನ್ನು ಜಪಿಸಿದಳೋ ಅದು ಇಂದ್ರತೀರ್ಥವೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಯಿತು.
ತಸ್ಯಾ ಜಿಜ್ಞಾಸನಾರ್ಥೇ ತು ಭಗವಾನ್ ಪಾಕಶಾಸನಃ |
ಬದರಾಣಾಮಪಚನಂ ಚಕಾರ ವಿಬುಧಾಧಿಪಃ ॥58॥
ದೇವತೆಗಳಿಗೆ ಒಡೆಯನಾದ ಭಗವಾನ್ ಇಂದ್ರನು ಅವಳ ಮನಸ್ಸಿನ ಭಾವವನ್ನು ತಿಳಿಯಲಿಕ್ಕಾಗಿ ಬದರಹಣ್ಣುಗಳು ಬೇಯದಂತೆ ಮಾಡಿದನು.
ತತಃ ಸಾ ಪ್ರಯತಾ ರಾಜನ್ ವಾಗ್ಯತಾ ವಿಗತಕ್ಲಮಾ |
ತತ್ಪರಾ ಶುಚಿಸಂವೀತಾ ಪಾವಕೇ ಸಮಧಿಶ್ರಯತ್ ॥59॥
ರಾಜನೇ! ಅನಂತರ ಅವಳು ವಾಂಗ್ನಿಯಮಕ್ಕೊಳಗಾಗಿ, ಉದ್ವೇಗಕ್ಕೊಳಗಾಗದೆ ಪ್ರಯತ್ನಪೂರ್ವಕವಾಗಿ ಬದರಫಲಗಳನ್ನು ಬೆಂಕಿಯಲ್ಲಿ ಬೇಯಲು ಇಟ್ಟಳು.
ಅಪಚತ್ ಪುರುಷವ್ಯಾಘ್ರ ಬದರಾಣಿ ಶುಭವ್ರತಾ ॥60॥
ಪುರುಷಶ್ರೇಷ್ಠನೇ! ಮಂಗಳಕರವಾದ ವ್ರತವನ್ನು ಆಚರಿಸುತ್ತಿದ್ದ ಆಕೆ ಬದರಫಲಗಳನ್ನು ಬೇಯಿಸಿದಳು.
ತಸ್ಯಾಃ ಪಚಂತ್ಯಾಃ ಸುಚಿರಂ ಕಾಲೋಽಗಾತ್ ಪುರುಷರ್ಷಭ |
ನ ಚ ಸ್ಮ ತಾನಿ ಪಚ್ಯಂತೇ ದಿನಂ ಚ ಕ್ಷಯಮಭ್ಯಯಾತ್ ॥61॥
ಪುರುಷವೃಷಭನೇ! ಹೀಗೆ ಅವಳು ಬೇಯಿಸುತ್ತಿದ್ದಾಗ ಬಹಳ ಸಮಯವು ಕಳೆದುಹೋಯಿತು. ಆದರೆ ಫಲಗಳು ಬೇಯಲಿಲ್ಲ. ದಿನಗಳು ಕಳೆದುಹೋಗುತ್ತಿದ್ದವು.
ಹುತಾಶನೇನ ದಗ್ಧಶ್ಚ ಯಸ್ತಸ್ಯಾಃ ಕಾಷ್ಠಸಂಚಯಃ |
ಅಕಾಷ್ಠಮಗ್ನಿಂ ಸಾ ದೃಷ್ಟ್ವಾ ಸ್ವಶರೀರಮಥಾಪಚತ್ ॥62॥
ಅವಳು ಸಂಗ್ರಹಿಸಿದ್ದ ಕಟ್ಟಿಗೆಯ ರಾಶಿಯು ಉರಿದು ಮುಗಿಯಿತು. ಕಟ್ಟಿಗೆ ಇಲ್ಲದ್ದನ್ನು ನೋಡಿ ಅವಳು ತನ್ನ ಶರೀರವನ್ನೇ ಕಟ್ಟಿಗೆಯನ್ನಾಗಿ ಉಪಯೋಗಿಸಿದಳು.
ಪಾದೌ ಪ್ರಕ್ಷಿಪ್ಯ ಸಾ ಪೂರ್ವಂ ಪಾವಕೇ ಚಾರುದರ್ಶನಾ |
ದಗ್ಧೌ ದಗ್ಧೌ ಪುನಃ ಪಾದಾವುಪಾವರ್ತಯತಾನಘ ॥63॥
ಸುಂದರಿಯಾದ ಆಕೆಯು ಮೊದಲಿಗೆ ತನ್ನ ಕಾಲಿನ ಪಾದಗಳನ್ನೇ ಬೆಂಕಿಯಲ್ಲಿ ಇರಿಸಿದಳು. ದೋಷರಹಿತನೇ! ಪಾದಗಳು ಉರಿಯುತ್ತಿದ್ದಂತೆಯೇ ಮತ್ತೆ ಅವುಗಳು ಬೆಳೆಯತೊಡಗಿದವು.
ಚರಣೌ ದಹ್ಯಮಾನೌ ಚ ನಾಚಿಂತಯದನಿಂದಿತಾ |
ದುಃಖಂ ಕಮಲಪತ್ರಾಕ್ಷೀ ಮಹರ್ಷೇಃ ಪ್ರಿಯಕಾಮ್ಯಯಾ ॥64॥
ಕಮಲದ ಕಣ್ಣುಗಳುಳ್ಳ, ಪರಿಶುದ್ಧಳಾದ ಅವಳು ತನ್ನ ಕಾಲುಗಳು ಸುಡುತ್ತಿದ್ದರೂ ಮಹರ್ಷಿಯ ಅನುಗ್ರಹವನ್ನು ಅಪೇಕ್ಷಿಸುವವಳಾಗಿ ತನಗೆ ಆಗುತ್ತಿರುವ ದುಃಖದ ಬಗ್ಗೆ ಚಿಂತಿಸುತ್ತಿರಲಿಲ್ಲ.
ನ ವೈಮನಸ್ಯಂ ತಸ್ಯಾಸ್ತು ಮುಖಭೇದೋಽಥವಾಽಭವತ್ |
ಶರೀರಮಗ್ನಿನಾ ದೀಪ್ಯ ಜಲಮಧ್ಯೇ ಯಥಾ ಸ್ಥಿತಾ ॥65॥
ಅವಳ ಮನಸ್ಸಿನಲ್ಲಿ ಯಾವುದೇ ವಿಕಾರವುಂಟಾಗಲಿಲ್ಲ. ಮುಖದಲ್ಲಿ ಯಾವುದೇ ವ್ಯತ್ಯಾಸವು ಕಾಣಿಸಲಿಲ್ಲ. ಅವಳ ಶರೀರವು ಅಗ್ನಿಯ ಮಧ್ಯದಲ್ಲಿ ಸುಡುತ್ತಿದ್ದರೂ ಅವಳು ನೀರಿನ ಮಧ್ಯದಲ್ಲಿ ಇದ್ದ ಹಾಗೆ ಇದ್ದಳು.
ತಚ್ಚಾಸ್ಯಾ ವಚನಂ ನಿತ್ಯಮಾವರ್ತದ್ ಹೃದಿ ಭಾರತ |
ಸರ್ವಥಾ ಬದರಾಣ್ಯೇವ ಪಕ್ತವ್ಯಾನೀತಿ ಕನ್ಯಕಾ ॥66॥
ಭರತಕುಲೋದ್ಭವನೇ! ಋಷಿರೂಪದಲ್ಲಿದ್ದ ಇಂದ್ರನು ಹೇಳಿದ್ದ ``ಹೇಗಾದರೂ ಬದರಫಲಗಳನ್ನು ಬೇಯಿಸು'' ಎಂಬ ಮಾತು ಅವಳ ಹೃದಯದಲ್ಲಿ ಯಾವಾಗಲೂ ಸುತ್ತುತ್ತಿತ್ತು.
ಸಾ ತದ್ ಹೃದಿ ದೃಢಂ ಕೃತ್ವಾ ಮಹರ್ಷೇರ್ವಚನಂ ಶುಭಾ |
ಅಪಚದ್ ಬದರಾಣ್ಯೇವ ನ ಚಾಪಚ್ಯಂತ ಭಾರತ ॥67॥
ಮಂಗಳಮಯಳಾದ ಆಕೆಯು ಋಷಿಯ ಮಾತನ್ನು ಹೃದಯದಲ್ಲಿ ದೃಢಗೊಳಿಸಿ ಬದರಗಳನ್ನು ಬೇಯಿಸಿದಳು. ಭಾರತನೇ! ಬದರಗಳು ಬೇಯಲಿಲ್ಲ.

ತಸ್ಯಾಶ್ಚ ಚರಣೌ ವಹ್ನಿರ್ದದಾಹ ಭಗವಾನ್ ಭೃಶಮ್ |
ನ ಚ ತಸ್ಯಾ ಮನೋದುಃಖಂ ಸ್ವಲ್ಪಮಪ್ಯಭವತ್ ತದಾ ॥68॥
ಭಗವಾನ್ ಅಗ್ನಿದೇವನು ಅವಳ ಕಾಲುಗಳನ್ನು ಸುಟ್ಟುಹಾಕಿದನು. ಆದರೆ ಆಗ ಅವಳಿಗೆ ಸ್ವಲ್ಪವೂ ಮನಸ್ಸಿಗೆ ಖೇದವು ಉಂಟಾಗಲಿಲ್ಲ.
ಅಥ ತತ್ ಕರ್ಮ ದೃಷ್ಟ್ವಾಸ್ಯಾಃ ಪ್ರೀತಸ್ತ್ರಿಭುವನೇಶ್ವರಃ |
ತತಃ ಸ ದರ್ಶಯಾಮಾಸ ಕನ್ಯಾಯೈ ರೂಪಮಾತ್ಮನಃ ॥69॥
ಹೀಗೆ ನಡೆದ ನಂತರ ಮೂರುಲೋಕಗಳ ಅಧಿಪತಿಯಾದ ದೇವೇಂದ್ರನು ಅವಳ ಈ ಕಾರ್ಯವನ್ನು ನೋಡಿ ಅವಳ ಬಗ್ಗೆ ಸಂತುಷ್ಟನಾದನು. ಕನ್ಯೆಗೆ ತನ್ನ ನಿಜವಾದ ರೂಪವನ್ನು ತೋರಿಸಿದನು.
ಉವಾಚ ಚ ಸುರಶ್ರೇಷ್ಠಃ ತಾಂ ಕನ್ಯಾಂ ಸುದೃಢವ್ರತಾಮ್ ॥70॥
ಬಹಳ ದೃಢವಾದ ವ್ರತವನ್ನು ಆಚರಿಸುತ್ತಿದ್ದ ಆ ಕನ್ಯೆಗೆ ಇಂದ್ರನು ಹೀಗೆ ಹೇಳಿದನು.
ಇಂದ್ರಃ
ಪ್ರೀತೋಽಸ್ಮಿ ತೇ ಶುಭೇ ಭಕ್ತ್ಯಾ ತಪಸಾ ವಿಪುಲೇನ ಚ |
ತಸ್ಮಾದ್ ಯೋಽಭಿಮತಃ ಕಾಮಃ ಸ ತೇ ಸಂಪತ್ಸ್ಯತೇ ಶುಭೇ ॥71॥
ಇಂದ್ರ ಮಂಗಳೆಯೇ! ನಿನ್ನ ಬಹಳವಾದ ಭಕ್ತಿಯಿಂದ, ಬಹಳವಾದ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ಶುಭಳೇ! ನಿನ್ನ ಯಾವ ಕಾಮನೆಯು ಇದೆಯೋ ಅದು ನಿನಗೆ ಲಭಿಸುವುದು.
ದೇಹಂ ತ್ಯಕತ್ವ ಮಹಾಭಾಗೇ ತ್ರಿದಿವೇ ಚ ನಿವತ್ಸ್ಯಸಿ ॥72॥
ಈ ದೇಹವನ್ನು ಬಿಟ್ಟ ಮೇಲೆ ಸ್ವರ್ಗದಲ್ಲಿ ವಾಸ ಮಾಡುವಿ.
ಇದಂ ಚ ತೇ ತೀರ್ಥವರಂ ಖ್ಯಾತಂ ಲೋಕೇ ಭವಿಷ್ಯತಿ |
ಸರ್ವಪಾಪಾಪಹಂ ಸುಭ್ರು ನಾಮ್ನಾ ಬದರಪಾಚನಮ್ ॥73॥
ಒಳ್ಳೆಯ ಕಣ್ಣಿನ ಹುಬ್ಬುಳ್ಳವಳೇ! ಈ ಉತ್ತಮವಾದ ತೀರ್ಥವು ಬದರಪಾಚನವೆಂಬ ಹೆಸರನ್ನು ಪಡೆಯುವುದು ಮತ್ತು ಸಕಲಪಾಪಪರಿಹಾರಕವೆಂದು ಲೋಕದಲ್ಲಿ ಪ್ರಸಿದ್ಧವಾಗುವುದು.
ವಿಖ್ಯಾತಂ ತ್ರಿಷು ಲೋಕೇಷು ಬ್ರಹ್ಮರ್ಷಿಭಿರಭಿಪ್ಲುತಮ್ ॥74॥
ಬ್ರಹ್ಮಜ್ಞಾನಿಗಳು ಬಂದು ನೆಲೆಸುವ ಈ ತೀರ್ಥವು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗುವುದು.
ಅಸ್ಮಿನ್ ಖಲು ಮಹಾಭಾಗೇ ಶುಭೇ ತೀರ್ಥವರೇ ಪುರಾ |
ನ್ಯಸ್ಯ ಸಪ್ತರ್ಷಯೋ ಯಾತಾ ಹಿಮವಂತಮರುಂಧತೀಮ್ ॥75॥
ಮಹಾಭಾಗ್ಯವಂತಳೇ! ಮಂಗಳೆಯೇ! ಈ ಉತ್ತಮವಾದ ತೀರ್ಥದಲ್ಲಿಯೇ ಹಿಂದೆ ಸಪ್ತರ್ಷಿಗಳು ಅರುಂಧತಿಯನ್ನು ಇರಿಸಿ ತಾವು ಹಿಮಾಲಯಕ್ಕೆ ಹೋದರು.
ತತಸ್ತೇ ಸುಮಹಾಭಾಗಾ ಗತ್ವಾ ತತ್ರ ಸುಸಂಶಿತಾಃ |
ವೃತ್ತ್ಯರ್ಥಂ ಫಲಮೂಲಾನಿ ಸಮಾಹರ್ತುಂ ಯಯುಃ ಕಿಲ ॥76॥
ಅನಂತರ ಕಠಿಣವಾದ ವ್ರತವನ್ನು ಆಚರಿಸುತ್ತಿದ್ದ ಅರುಂಧತಿಯು ತನ್ನ ಜೀವನಕ್ಕಾಗಿ ಹಣ್ಣು ಮತ್ತು ಗೆಡ್ಡೆಗಳನ್ನು ಸಂಗ್ರಹಿಸಲಿಕ್ಕಾಗಿ ಹೋದಳು.
ತೇಷಾಂ ವೃತ್ತ್ಯರ್ಥಿನಾಂ ತತ್ರ ವಸತಾಂ ಹಿಮವದ್ ವನೇ |
ಅನಾವೃಷ್ಟಿರನುಪ್ರಾಪ್ತಾ ತದಾ ದ್ವಾದಶವಾರ್ಷಿಕೀ ॥77॥
ಈ ಕಡೆ ಸಪ್ತರ್ಷಿಗಳು ಹಿಮಾಲಯದಲ್ಲಿ ಜೀವನವನ್ನು ಮಾಡುತ್ತಿದ್ದಾಗ ಹನ್ನೆರಡು ವರ್ಷಗಳ ಕಾಲ ಮಳೆಯು ಬರಲಿಲ್ಲ.
ತೇಽತ್ರ ಕೃತ್ವಾಽಽಶ್ರಮಂ ರಾಜನ್ ನ್ಯವಸಂತ ತಪಸ್ವಿನಃ |
ಅರುಂಧತ್ಯಪಿ ಕಲ್ಯಾಣೀ ತಪೋನಿತ್ಯಾಽಭವತ್ ತದಾ ॥78॥
ತಪಸ್ವಿಗಳು ಅಲ್ಲಿಯೇ ಆಶ್ರಮಗಳನ್ನು ನಿರ್ಮಿಸಿಕೊಂಡು ವಾಸಿಸತೊಡಗಿದರು. ಆಗ ಮಂಗಳಮಯಳಾದ ಅರುಂಧತಿಯೂ ಕೂಡ ತಪಸ್ಸಿನಲ್ಲಿ ತೊಡಗಿದಳು.
ಅರುಂಧತೀಂ ತತೋ ದೃಷ್ಟ್ವಾ ತೀರ್ಥೇ ನಿಯಮಮಾಸ್ಥಿತಾಮ್ |
ಅಥಾಗಮತ್ ತ್ರಿಣಯನಃ ಸಂಪ್ರೀತೋ ವರದಸ್ತದಾ ॥79॥
ಬ್ರಹ್ಮರೂಪಂ ತದಾ ಕೃತ್ವಾ ಮಹಾದೇವೋ ಮಹಾಯಶಾಃ |
ತಾಮಭ್ಯೇತ್ಯಾಬ್ರವೀದ್ ದೇವೋ ಭಿಕ್ಷಾಮಿಚ್ಛಾಮ್ಯಹಂ ಶುಭೇ ॥80॥
ತೀರ್ಥದಲ್ಲಿ ನಿಯಮವನ್ನು ಪಾಲಿಸುತ್ತಿದ್ದ ಅರುಂಧತಿಯನ್ನು ನೋಡಿ ಸಂತುಷ್ಟನಾದ, ಮಹಾಯಶೋವಂತನಾದ ರುದ್ರನು ಬ್ರಾಹ್ಮಣನ ರೂಪವನ್ನು ತಾಳಿ ವರವನ್ನು ಕೊಡಲಿಕ್ಕಾಗಿ ಅಲ್ಲಿಗೆ ಬಂದನು. ಅವಳ ಹತ್ತಿರ ಬಂದು ಮಹಾದೇವ ರುದ್ರನು ``ಶುಭಳೇ! ನಾನು ಭಿಕ್ಷೆಯನ್ನು ಬಯಸುತ್ತೇನೆ'' ಎಂದು ಹೇಳಿದನು.
ಪ್ರತ್ಯುವಾಚ ತತಃ ಸಾ ತು ಬ್ರಾಹ್ಮಣಂ ಚಾರುದರ್ಶನಾ ॥81॥
ಸುಂದರಿಯಾದ ಅರುಂಧತಿಯು ಆ ಬ್ರಾಹ್ಮಣನಿಗೆ ಹೀಗೆ ಉತ್ತರಿಸುತ್ತಾಳೆ.
ಅರುಂಧತೀ
ಕ್ಷೀಣೋಽನ್ನಸಂಚಯೋ ವಿಪ್ರ ಬದರಾಣೀಹ ಭಕ್ಷಯ ॥82॥
ಅರುಂಧತೀ ಬ್ರಾಹ್ಮಣನೇ! ಅನ್ನವೆಲ್ಲವೂ ಖಾಲಿಯಾಗಿದೆ. ಇಲ್ಲಿ ಬದರಫಲಗಳನ್ನು ತಿನ್ನು!

ಇಂದ್ರಃ
ತತೋಽಬ್ರವೀನ್ಮಹಾದೇವಃ ಪಚಸ್ವೈತಾನಿ ಭಾಮಿನಿ |
ಇತ್ಯುಕ್ತಾ ಸಾಽಪಚತ್ ತಾನಿ ಬ್ರಾಹ್ಮಣಪ್ರಿಯಕಾಮ್ಯಯಾ ॥83॥
ಇಂದ್ರ ಅನಂತರ ಮಹಾದೇವ ರುದ್ರನು ಅವಳಿಗೆ ``ಸುಂದರಿಯೇ! ಈ ಬದರಫಲಗಳನ್ನು ಬೇಯಿಸು'' ಎಂದು ಹೇಳಿದನು. ಬ್ರಾಹ್ಮಣನ ಅನುಗ್ರಹವನ್ನು ಬಯಸಿದವಳಾಗಿ ಅರುಂಧತಿಯು ಬದರಫಲಗಳನ್ನು ಬೇಯಿಸಿದಳು.
ಅಧಿಶ್ರಿತ್ಯ ಸಮಿದ್ಧೇಗ್ನೌ ಬದರಾಣಿ ಯಶಸ್ವಿನೀ ॥84॥
ಕೀರ್ತಿವಂತಳಾದ ಅರುಂಧತಿಯು ಉರಿಯುತ್ತಿದ್ದ ಬೆಂಕಿಯಲ್ಲಿ ಬದರಗಳನ್ನು ಬೇಯಿಸಿದಳು.
ದಿವ್ಯಾ ಮನೋರಮಾಃ ಪುಣ್ಯಾಃ ಕಥಾಃ ಶುಶ್ರಾವ ಸಾ ಶುಭಾ |
ಅತೀತಾ ಸಾ ತ್ವನಾವೃಷ್ಟಿರ್ಘೋರಾ ದ್ವಾದಶವಾರ್ಷಿಕೀ ॥85॥
ಮಂಗಳಮಯಳಾದ ಅರುಂಧತಿಯು ದಿವ್ಯವಾದ, ಮನೋಹಾರಿಯಾದ ಪುಣ್ಯಪ್ರದಕಥೆಗಳನ್ನು ಕೇಳಿಸಿಕೊಂಡಳು. ಭಯಂಕರವಾದ ಹನ್ನೆರಡು ವರ್ಷಗಳ ಬರಗಾಲವೂ ಕಳೆದುಹೋಯಿತು.
ಅನಶ್ನಂತ್ಯಾಃ ಪಚಂತ್ಯಾಶ್ಚ ಶೃಣ್ವಂತ್ಯಾಶ್ಚ ಕಥಾಃ ಶುಭಾಃ |
ಅಹ್ನಾ ಸಮಃ ಸ ತಸ್ಯಾಸ್ತು ಕಾಲೋಽತೀತಃ ಸುದಾರುಣಃ ॥86॥
ಊಟವನ್ನು ಬಿಟ್ಟು, ಮಂಗಳವಾದ ಕಥೆಗಳನ್ನು ಕೇಳುತ್ತಾ, ಬದರಗಳನ್ನು ಬೇಯಿಸುತ್ತಿದ್ದಾಗ ದಿನ-ವರ್ಷಲೆಕ್ಕದಲ್ಲಿ ದುಃಖದಾಯಕವಾದ ಬಹಳ ಕಾಲವು ಕಳೆದುಹೋಯಿತು.
ತತಸ್ತೇ ಮುನಯಃ ಪ್ರಾಪ್ತಾಃ ಫಲಾನ್ಯಾದಾಯ ಪರ್ವತಾತ್ |
ತತಃ ಸ ಭಗವಾನ್ ಪ್ರೀತಃ ಪ್ರೋವಾಚಾರುಂಧತೀಂ ತದಾ ॥87॥
ಅನಂತರ ಮುನಿಗಳು ಪರ್ವತದಿಂದ ಫಲಗಳನ್ನು ತೆಗೆದುಕೊಂಡು ಬಂದರು. ಭಗವಾನ್ ರುದ್ರನು ಸಂತುಷ್ಟನಾಗಿ ಅರುಂಧತಿಗೆ ಹೀಗೆ ಹೇಳುತ್ತಾನೆ.
ಮಹಾದೇವಃ
ಉಪಸರ್ಪಸ್ವ ಭದ್ರಂ ತೇ ಯಥಾಪೂರ್ವಂ ಹಿ ತಾನೃಷೀನ್ |
ಪ್ರೀತೋಽಸ್ಮಿ ತೇ ಮಹಾಭಾಗೇ ತಪಸಾ ನಿಯಮೇನ ಚ ॥88॥
ಮಹಾದೇವ ಮಹಾಭಾಗ್ಯವಂತಳೇ! ನಿನ್ನ ತಪಸ್ಸಿನಿಂದ ಮತ್ತು ನಿಯಮದಿಂದ ನಾನು ಸಂತುಷ್ಟನಾಗಿದ್ದೇನೆ. ಹಿಂದಿನ ರೀತಿಯಲ್ಲಿಯೇ ಆ ಋಷಿಗಳನ್ನು ಸೇವಿಸು. ನಿನಗೆ ಮಂಗಳವಾಗಲಿ.
ಇಂದ್ರಃ
ತತಸ್ತಾಂ ದರ್ಶಯಾಮಾಸ ಸ್ವರೂಪಂ ಭಗವಾನ್ ಹರಃ |
ತತೋಽಬ್ರವೀತ್ ತದಾ ತೇಭ್ಯಃ ತಸ್ಯಾಸ್ತಚ್ಚರಿತಂ ಮಹತ್ ॥89॥
ಇಂದ್ರ ಅನಂತರ ಭಗವಾನ್ ರುದ್ರನು ತನ್ನ ಮೂಲಸ್ವರೂಪವನ್ನು ತೋರಿಸಿದನು. ಅವನು ಋಷಿಗಳಿಗೆ ಅವಳು ಮಾಡಿದ ಮಹತ್ಕಾರ್ಯವನ್ನು ತಿಳಿಸಿದನು.
ಮಹಾದೇವಃ
ಭವದ್ಭಿರ್ಹಿಮವತ್ಪೃಷ್ಠೇ ಯತ್ತಪಃ ಸಮುಪಾರ್ಜಿತಮ್ |
ಅಸ್ಯಾಶ್ಚ ಯತ್ತಪೋ ವಿಪ್ರಾಃ ಸಮಮೇತನ್ಮತಂ ಮಮ ॥90॥
ಮಹಾದೇವ ವಿಪ್ರರೇ! ನೀವು ಹಿಮಾಲಯದಲ್ಲಿ ಯಾವ ತಪಸ್ಸನ್ನು ಆಚರಿಸಿದ್ದೀರೋ, ಇವಳು ಆಚರಿಸಿದ ತಪಸ್ಸು ಅದಕ್ಕೆ ಸಮಾನವಾಗಿದೆ.
ಅನಯಾ ಹಿ ತಪಸ್ವಿನ್ಯಾ ತಪಸ್ತಪ್ತಂ ಸುದುಶ್ಚರಮ್ |
ಅನಶ್ನಂತ್ಯಾ ಪಚಂತ್ಯಾ ಚ ಸಮಾ ದ್ವಾದಶ ವಾರಿತಾಃ ॥91॥
ಹನ್ನೆರಡುವರ್ಷಗಳ ಕಾಲ ಇವಳು ಆಹಾರವನ್ನು ಬಿಟ್ಟು ಕಠಿಣವಾದ ತಪಸ್ಸನ್ನು ಆಚರಿಸಿದ್ದಾಳೆ.
ಇಂದ್ರಃ
ತತಃ ಪ್ರೋವಾಚ ಭಗವಾನ್ ತಾಮೇವಾರುಂಧತೀಂ ಪುನಃ ॥92॥
ಇಂದ್ರ ಭಗವಾನ್ ರುದ್ರನು ಪುನಃ ಅರುಂಧತಿಗೆ ಹೀಗೆ ಹೇಳುತ್ತಾನೆ.
ಮಹಾದೇವಃ
ವರಂ ವೃಣೀಷ್ವ ಕಲ್ಯಾಣಿ ಯಸ್ತೇಽಭಿಲಷಿತೋ ಹೃದಿ ॥93॥
ಮಹಾದೇವ ಮಂಗಳಸ್ವರೂಪಳೇ! ನಿನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆ ಇದೆಯೋ ಅಂತಹ ವರವನ್ನು ಕೇಳು.
ಇಂದ್ರಃ
ಸಾಽಬ್ರವೀತ್ ಪೃಥುತಾಮ್ರಾಕ್ಷೀ ದೇವಂ ಸಪ್ತರ್ಷಿಸಂಸದಿ ॥94॥
ಇಂದ್ರ ವಿಶಾಲವಾದ ತಾಮ್ರವರ್ಣದ ಕಣ್ಣುಳ್ಳ ಅರುಂಧತಿಯು ಸಪ್ತರ್ಷಿಗಳ ಸಭೆಯಲ್ಲಿ ರುದ್ರನಿಗೆ ಹೀಗೆ ಹೇಳಿದಳು.
ಅರುಂಧತೀ
ಭಗವನ್ ಯದಿ ತುಷ್ಟೋ ಮೇ ತೀರ್ಥಂ ಸ್ಯಾದಿದಮುತ್ತಮಮ್ |
ಸಿದ್ಧದೇವರ್ಷಿಚರಿತಂ ನಾಮ್ನಾ ಬದರಪಾಚನಮ್ ॥95॥
ಅರುಂಧತೀ ಪೂಜ್ಯನೇ! ನೀನು ನನ್ನ ಮೇಲೆ ಸಂತುಷ್ಟನಾಗಿದ್ದರೆ ಈ ತೀರ್ಥವು ಉತ್ತಮತೀರ್ಥವಾಗಲಿ. ಸಿದ್ಧರು, ದೇವತೆಗಳು ಮತ್ತು

ಋಷಿಗಳಿಂದ ಸೇವಿತವಾಗಲಿ. ಇದರ ಹೆಸರು ಬದರಪಾಚನ ಎಂದು ಪ್ರಸಿದ್ಧವಾಗಲಿ.
ತಥಾಽಸ್ಮಿನ್ ದೇವದೇವೇಶ ತ್ರಿರಾತ್ರಮುಷಿತೋ ಶುಚಿಃ |
ಪ್ರಾಪ್ನುಯಾದುಪವಾಸೇನ ಫಲಂ ದ್ವಾದಶವಾರ್ಷಿಕಮ್ ॥96॥
ದೇವತೆಗಳಿಗೂ ಈಶನಾದ ರುದ್ರನೇ! ಹಾಗೆಯೇ ಇಲ್ಲಿ ಶುಚಿರ್ಭೂತನಾಗಿ ಉಪವಾಸವನ್ನು ಮಾಡುತ್ತ, ಮೂರು ದಿನಗಳ ಕಾಲ ಇಲ್ಲಿ ವಾಸವನ್ನು ಮಾಡಿದರೆ ಹನ್ನೆರಡು ವರ್ಷ ಉಪವಾಸ ಮಾಡಿದ್ದರ ಫಲವನ್ನು ಹೊಂದಲಿ.
ಇಂದ್ರಃ
ಏವಮಸ್ತ್ವಿತಿ ತಾಂ ದೇವಃ ಪ್ರತ್ಯುವಾಚ ತಪಸ್ವಿನೀಮ್ |
ಸಪ್ತರ್ಷಿಭಿಃ ಸ್ತುತೋ ದೇವಃ ತದಾ ಯಾತಸ್ತ್ರಿವಿಷ್ಟಪಮ್ ॥97॥
ಇಂದ್ರ ರುದ್ರನು ಆ ತಪಸ್ವಿನಿ ಹಾಗೆಯೇ ಆಗಲಿ ಎಂದು ಹೇಳಿದನು. ಸಪ್ತರ್ಷಿಗಳಿಂದ ಸ್ತುತಿಸಲ್ಪಟ್ಟ ರುದ್ರನು ಸ್ವರ್ಗಕ್ಕೆ ಹೋದನು.
ಋಷಯೋ ವಿಸ್ಮಯಂ ಜಗ್ಮುಸ್ತಾಂ ದೃಷ್ಟ್ವಾ ಚಾಪ್ಯರುಂಧತೀಮ್ |
ಅಶ್ರಾಂತಾಮವಿವರ್ಣಾಂ ಚ ಕ್ಷುತ್ಪಿಪಾಸಾಸಹಾಂ ಸತೀಮ್ ॥98॥
ಹಸಿವು-ನೀರಡಿಕೆಗಳನ್ನು ಸಹಿಸಿಕೊಂಡು, ಯಾವುದೇ ಆಯಾಸಕ್ಕೊಳಗಾಗದೆ, ಮುಖದಲ್ಲಿ ಕಳೆಗುಂದದೆ ಇದ್ದ ಅರುಂಧತಿಯನ್ನು ನೋಡಿ ಸಪ್ತರ್ಷಿಗಳು ಬಹಳವಾಗಿ ಆಶ್ಚರ್ಯಪಟ್ಟರು.
ಏವಂ ಸಿದ್ಧಿಃ ಪರಾ ಪ್ರಾಪ್ತಾ ಅರುಂಧತ್ಯಾ ವಿಶಿಷ್ಟಯಾ ॥99॥
ವಿಶಿಷ್ಟಳಾದ ಅರುಂಧತಿಯು ಹೀಗೆ ಉತ್ತಮವಾದ ಸಿದ್ಧಿಯನ್ನು ಪಡೆದುಕೊಂಡಳು.
ತ್ವಯಾ ತಥಾ ಮಹಾಭಾಗೇ ಮದರ್ಥಂ ಸಂಶಿತವ್ರತೇ |
ವಿಶೇಷೋ ಹಿ ತ್ವಯಾ ಭದ್ರೇ ವ್ರತೇ ಹ್ಯಸ್ಮಿನ್ ಸಮರ್ಪಿತಃ ॥100॥
ಮಹಾಭಾಗ್ಯವಂತಳೇ! ನೀನೂ ಕೂಡ ನನ್ನ ಅನುಗ್ರಹಕ್ಕಾಗಿ ಕಠಿಣವಾದ ತಪಸ್ಸನ್ನು ಆಚರಿಸಿರುವಿ. ಈ ವ್ರತದಲ್ಲಿ ಬಹಳ ವಿಶೇಷವಾಗಿ ನಿನ್ನನ್ನು ಅರ್ಪಿಸಿಕೊಂಡಿರುವಿ.
ಯಥಾ ತಥಾ ದದಾಮ್ಯದ್ಯ ನಿಯಮೇನ ಸುತೋಷಿತಃ ॥101॥
ನಿನ್ನ ನಿಯಮಗಳಿಂದ ಸಂತುಷ್ಟನಾದ ನಾನು ನಿನಗೆ ಬೇಕಾದ್ದನ್ನು ಕೊಡುವೆನು.
ವಿಶಿಷ್ಟಂ ತವ ಕಲ್ಯಾಣಿ ಪ್ರಯಚ್ಛಾಮಿ ಪರಂ ವರಮ್ |
ಅರುಂಧತ್ಯಾ ವರಸ್ತಸ್ಯಾ ಯೋ ದತ್ತೋ ವೈ ಮಹಾತ್ಮನಾ ॥102॥
ಮಂಗಳಸ್ವರೂಪಳೇ! ಮಹಾತ್ಮನಾದ ಶಂಕರನು ಅರುಂಧತಿಗೆ ಯಾವ ವರವನ್ನು ಕೊಟ್ಟಿದ್ದನೋ ಅದಕ್ಕಿಂತಲೂ ಉತ್ತಮವಾದ ವಿಶಿಷ್ಟ ವರವನ್ನು ನಿನಗೆ ಕೊಡುವೆನು.
ತಸ್ಯಾ ವರಪ್ರದಾನೇನ ತವ ಕಲ್ಯಾಣಿ ತೇಜಸಾ |
ಪ್ರವಕ್ಷ್ಯಾಮ್ಯಪರಂ ಭೂಯೋ ವರಮತ್ರ ಯಥಾವಿಧಿ ॥103॥
ಯಸ್ತ್ವೇಕಾಂ ರಜನೀಂ ತೀರ್ಥೇ ವತ್ಸ್ಯತೇ ಸುಸಮಾಹಿತಃ |
ಸ ಸ್ನಾತ್ವಾ ಪ್ರಾಪ್ನುಯಾಲ್ಲೋಕಾನ್ ದೇಹನ್ಯಾಸಾಚ್ಚ ದುರ್ಲಭಾನ್ ॥
ನಿನ್ನ ತಪಸ್ಸಿನ ಪ್ರಭಾವದಿಂದಾಗಿ ಇನ್ನೂ ಒಂದು ವರವನ್ನು ಕೊಡುವೆನು. ಯಾವನು ಶುದ್ಧ ಅಂತಃಕರಣದಿಂದ ವಿಧಿವತ್ತಾಗಿ ಈ ನಿನ್ನ ತೀರ್ಥದಲ್ಲಿ ಒಂದು ರಾತ್ರಿಯ ಕಾಲ ವಾಸಮಾಡಿ, ಮರುದಿನ ಇಲ್ಲಿ ಸ್ನಾನ ಮಾಡುತ್ತಾನೆಯೋ ಅವನು ದೇಹಾವಸಾನ ಹೊಂದಿದ, ಮೇಲೆ ಉತ್ತಮವಾದ ಲೋಕವನ್ನು ಹೊಂದುವನು.
ವೈಶಂಪಾಯನಃ
ಇತ್ಯುಕತ್ತ್ವ ಭಗವಾನ್ ದೇವಃ ಸಹಸ್ರಾಕ್ಷಃ ಪ್ರತಾಪವಾನ್ |
ಶ್ರುತಾವತೀಂ ತತೋ ಗೃಹ್ಯ ಜಗಾಮ ತ್ರಿದಿವಂ ಪುನಃ ॥105॥
ವೈಶಂಪಾಯನ ಪ್ರತಾಪಿಯಾದ ದೇವೇಂದ್ರನು ಹೀಗೆ ಹೇಳಿ ಶ್ರುತಾವತಿಯನ್ನು ಕರೆದುಕೊಂಡು ಪುನಃ ಸ್ವರ್ಗಕ್ಕೆ ಹೋದನು.
ಗತೇ ವಜ್ರಧರೇ ರಾಜನ್ ತತೋ ವರ್ಷಂ ಪಪಾತ ಹ |
ಪುಷ್ಪಾಣಾಂ ಭರತಶ್ರೇಷ್ಠ ದಿವ್ಯಾನಾಂ ದಿವ್ಯಗಂಧಿನಾಮ್ ॥106॥
ರಾಜನೇ! ಭರತೋತ್ತಮನೇ! ಇಂದ್ರನು ಹೋದಮೇಲೆ ಅಲ್ಲಿ ಅಲೌಕಿಕ ಪರಿಮಳವನ್ನು ಬೀರುವ ದೇವಲೋಕದ ಹೂಗಳ ಮಳೆಯು ಸುರಿಯಿತು.
ನೇದುರ್ದುಂದುಭಯಶ್ಚಾಪಿ ಸಮಂತಾತ್ ಸುಮಹಾಸ್ವನಾಃ |
ಮರುತಶ್ಚ ವವುರ್ಯುಕ್ತಾಃ ಪುಣ್ಯಗಂಧಾ ವಿಶಾಂಪತೇ ॥107॥
ಎಲ್ಲಾ ಕಡೆಯೂ ಒಳ್ಳೆಯ ಧ್ವನಿಯುಳ್ಳ ದೇವದುಂದುಭಿಗಳು ಮೊಳಗಿದವು. ರಾಜನೇ! ಪರಿಮಳವನ್ನು ಹೊತ್ತುಕೊಂಡ ಮಂದಮಾರುತವು ಬೀಸಿತು.
ಉತ್ಸೃಜ್ಯ ತು ಕೃಶಂ ದೇಹಂ ಜಗಾಮೇಂದ್ರಸ್ಯ ಭಾರ್ಯತಾಮ್ |
ತಪಸೋಗ್ರೇಣ ಸಾ ಲಬ್ಧ್ವಾ ರೇಮೇ ತೇನ ಸಹಾಚ್ಯುತ ॥108॥
ಚ್ಯುತಿರಹಿತನೇ! ಶ್ರುತಾವತಿಯು ಉಗ್ರವಾದ ತಪಸ್ಸಿನ ಪ್ರಭಾವದಿಂದ, ತನ್ನ ಕೃಶವಾದ ಶರೀರವನ್ನು ಬಿಟ್ಟು, ಇಂದ್ರನ ಮಡದಿಯಾಗಿ ಇಂದ್ರನೊಡನೆ ಉತ್ತಮ ಸುಖವನ್ನು ಅನುಭವಿಸಿದಳು.
ಜನಮೇಜಯಃ
ಕಾ ನು ತಸ್ಯಾಭವನ್ಮಾತಾ ಕ್ವ ಸಂವೃದ್ಧಾ ಚ ಶೋಭನಾ |

ಶ್ರೋತುಮಿಚ್ಛಾಮ್ಯಹಂ ಬ್ರಹ್ಮನ್ ಕೌತೂಹಲಮತೀವ ಮೇ ॥109॥
ಜನಮೇಜಯ ಶ್ರುತಾವತಿಯ ತಾಯಿ ಯಾರು? ಮಂಗಳಕರಳಾದ ಆಕೆ ಎಲ್ಲಿ ಬೆಳೆದಳು? ಬ್ರಹ್ಮಜ್ಞಾನಿಯೇ! ಇದನ್ನು ಕೇಳಿ ತಿಳಿದುಕೊಳ್ಳುವ ಕುತೂಹಲವು ಉಂಟಾಗಿದೆ. ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಭರದ್ವಾಜಸ್ಯ ವಿಪ್ರರ್ಷೇಃ ಸ್ಕನ್ನಂ ರೇತೋ ಮಹಾತ್ಮನಃ |
ದೃಷ್ಟ್ವಾಽಪ್ಸರಸಮಾಯಾಂತೀಂ ಘೃತಾಚೀಂ ಪೃಥುಲೋಚನಾಮ್ ॥
ಸ ತು ಜಗ್ರಾಹ ತದ್ರೇತಃ ಕರೇಣ ಜಪತಾಂ ವರಃ |
ತದಾಽಪತತ್ ಪರ್ಣಪುಟೇ ತತ್ರ ಸಾ ಸಂಭವಚ್ಛುಭಾ ॥111॥
ತಸ್ಯಾಃ ಸ ಜಾತಕರ್ಮಾದಿ ಕೃತ್ವಾ ಸರ್ವಂ ತಪೋಧನಃ |
ನಾಮ ತಸ್ಯಾಸ್ತು ಕೃತವಾನ್ ಭಾರದ್ವಾಜೋ ಮಹಾಮುನಿಃ ॥112॥
ಶ್ರುತಾವತೀತಿ ಧರ್ಮಾತ್ಮಾ ದೇವರ್ಷಿಗಣಸಂಸದಿ |
ಸ ಚ ತಾಮಾಶ್ರಮೇ ನ್ಯಸ್ಯ ಜಗಾಮ ಹಿಮವದ್ ವನಮ್ ॥113॥
ವಿಶಾಲನೇತ್ರಳಾದ ಘೃತಾಚೀ ಎಂಬ ಅಪ್ಸರೆಯು ಬರುತ್ತಿರುವುದನ್ನು ನೋಡಿ ಮಹಾತ್ಮನಾದ ಭರದ್ವಾಜನ ವೀರ್ಯವು ಸ್ಖಲಿಸಿತು. ಮಂತ್ರಜಾಪಕರಲ್ಲಿ ಶ್ರೇಷ್ಠನಾದ ಭರದ್ವಾಜನು ಆ ರೇತಸ್ಸನ್ನು ಕೈಯಲ್ಲಿ ಹಿಡಿದುಕೊಂಡನು. ಆಗ ಅದು ಒಂದು ಎಲೆಯ ಪಾತ್ರೆಯಲ್ಲಿ ಬಿದ್ದಿತು. ಅಲ್ಲಿ ಮಂಗಳಸ್ವರೂಪಳಾದ ಈ ಹೆಣ್ಣು ಜನಿಸಿದಳು. ತಪೋಧನನಾದ ಭರದ್ವಾಜನು ಆ ಹೆಣ್ಣುಮಗುವಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಪೂರೈಸಿ ಶ್ರುತಾವತೀಎಂಬುದಾಗಿ ನಾಮಕರಣವನ್ನು ಮಾಡಿದನು. ಧಾರ್ಮಿಕನಾದ ಭರದ್ವಾಜನು ದೇವರ್ಷಿಗಳ ಸಮೂಹದಲ್ಲಿ ಈ ಶ್ರುತಾವತಿಯನ್ನು ಒಪ್ಪಿಸಿ ತಾನು ತಪಸ್ಸಿಗಾಗಿ ಹಿಮವತ್ಪರ್ವತಕ್ಕೆ ಹೋದನು.
ತತ್ರಾಪ್ಯುಪಸ್ಪೃಶ್ಯ ಮಹಾನುಭಾವೋ
ವಸೂನಿ ದತ್ತ್ವಾ ಚ ಮಹಾದ್ವಿಜೇಭ್ಯಃ |
ಜಗಾಮ ತೀರ್ಥಂ ಸುಸಮಾಹಿತಾತ್ಮಾ
ಶಕ್ರಸ್ಯ ತತ್ ತೀರ್ಥವರಂ ತದಾನೀಮ್ ॥114॥
ಮಹಾನುಭಾವನಾದ ಬಲರಾಮನು ಅಲ್ಲಿ ಅವಗಾಹಸ್ನಾನವನ್ನು ಮಾಡಿ, ಉತ್ತಮ ಬ್ರಾಹ್ಮಣರಿಗೆ ಅನೇಕ ಸಂಪತ್ತನ್ನು ದಾನ ಮಾಡಿದನು. ಸಮಾಹಿತಮನಸ್ಕನಾದ ಬಲರಾಮನು ಅಲ್ಲಿಂದ ಇಂದ್ರತೀರ್ಥಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಶ್ರುತಾವತೀಮಾಹಾತ್ಮ್ಯಂ ನಾಮ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಬಲಭದ್ರನು ಇಂದ್ರತೀರ್ಥಕ್ಕೆ ಹೋದುದು. ಆ ತೀರ್ಥದ
ಮಹಿಮೆಯ ವರ್ಣನೆ
ವೈಶಂಪಾಯನಃ
ಇಂದ್ರತೀರ್ಥಂ ತತೋ ಗತ್ವಾ ಯದೂನಾಂ ಪ್ರವರೋ ಬಲೀ |
ವಿಪ್ರೇಭ್ಯೋ ಧನರತ್ನಾನಿ ಸ್ನಾತ್ವಾ ದತ್ತ್ವಾ ಯಥಾವಿಧಿ ॥1॥
ವೈಶಂಪಾಯನ ಅನಂತರ ಯದುಗಳಲ್ಲಿ ಶ್ರೇಷ್ಠನಾದ ಬಲರಾಮನು ಇಂದ್ರತೀರ್ಥಕ್ಕೆ ಹೋಗಿ, ಅಲ್ಲಿ ವಿಧ್ಯುಕ್ತರೀತಿಯಲ್ಲಿ ಸ್ನಾನವನ್ನು ಮಾಡಿ, ಬ್ರಾಹ್ಮಣರಿಗೆ ಧನ ಮತ್ತು ರತ್ನಗಳನ್ನು ದಾನ ಮಾಡಿದನು.
ತತ್ರ ಹ್ಯಮರರಾಜೋ ವೈ ಈಜೇ ಕ್ರತುಶತೇನ ಹ |
ಬೃಹಸ್ಪತೇಶ್ಚ ದೇವೇಶಃ ಪ್ರದದೌ ವಿಪುಲಂ ಧನಮ್ ॥2॥
ಆ ತೀರ್ಥದಲ್ಲಿ ದೇವೇಂದ್ರನು ನೂರು ಯಾಗಗಳನ್ನು ಮಾಡಿದ ತನ್ನ ಗುರುವಾದ ಬೃಹಸ್ಪತಿಗೆ ಬೇಕಾದಷ್ಟು ಸಂಪತ್ತನ್ನು ದಾನ ಮಾಡಿದ್ದನು.
ಅನರ್ಗಲಾನ್ ಸಜಾರೂಥ್ಯಾನ್ ಸರ್ವಾನ್ ವಿವಿಧದಕ್ಷಿಣಾನ್ |
ಆಜಹಾರ ಕ್ರತೂಂಸ್ತತ್ರ ಯಥೋಕ್ತಾನ್ ವೇದಪಾರಗೈಃ ॥3॥
ಇಂದ್ರನು ಅಲ್ಲಿ ವಿವಿಧದಕ್ಷಿಣೆಗಳುಳ್ಳ ಯಾಗಗಳನ್ನು ವೇದಜ್ಞರ ಮೂಲಕ ಶಾಸ್ತ್ರೋಕ್ತರೀತಿಯಲ್ಲಿ ಯಾವುದೇ ವಿಘ್ನಗಳಿಲ್ಲದೆ ಮಾಡಿದನು.
ಕ್ರತೂಂಸ್ತಾನ್ ಭರತಶ್ರೇಷ್ಠ ಶತಕೃತ್ವೋ ಮಹಾದ್ಯುತಿಃ |
ಪೂರಯಾಮಾಸ ವಿಧಿವದ್ ತತಃ ಖ್ಯಾತಃ ಶತಕ್ರತುಃ ॥4॥
ಭರತೋತ್ತಮನೇ! ಮಹಾಕಾಂತಿಮಂತನಾದ ಇಂದ್ರನು ಆ ಯಾಗಗಳನ್ನು ನೂರು ಬಾರಿ ವಿಧಿವತ್ತಾಗಿ ಮಾಡಿದನು. ಅದರಿಂದಾಗಿ ಅವನು ಶತಕ್ರತು ಎಂಬುದಾಗಿ ಪ್ರಸಿದ್ಧನಾದನು.
ತಸ್ಯ ನಾಮ್ನಾ ತು ತತ್ ತೀರ್ಥಂ ಶಿವಂ ಪುಣ್ಯಜಲಾವೃತಮ್ |
ಇಂದ್ರತೀರ್ಥಮಿತಿ ಖ್ಯಾತಂ ಸರ್ವಪಾಪಪ್ರಮೋಚನಮ್ ॥5॥
ಮಂಗಳಮಯವಾದ ಪುಣ್ಯಜಲವುಳ್ಳ ಆ ತೀರ್ಥವು ಅವನ ಹೆಸರಿನಿಂದಲೇ ಇಂದ್ರತೀರ್ಥ ಎಂಬುದಾಗಿ ಪ್ರಸಿದ್ಧವಾಯಿತು. ಅದು

ಸಕಲಪಾಪಗಳನ್ನು ಪರಿಹಾರ ಮಾಡುವಂತಹದ್ದು.
ಉಪಸ್ಪೃಶ್ಯ ತು ತತ್ರಾಪಿ ವಿಧಿವನ್ಮುಸಲಾಯುಧಃ |
ಬ್ರಾಹ್ಮಣಾನ್ ಪೂಜಯಿತ್ವಾ ಚ ಪಾನಾಚ್ಛಾದನಭೋಜನೈಃ ॥6॥
ಬಲರಾಮನು ಅಲ್ಲಿಯೂ ಆಚಮನಾದಿಗಳನ್ನು ಮಾಡಿ ಶಾಸೋಕ್ತರೀತಿಯಲ್ಲಿ ಬ್ರಾಹ್ಮಣರನ್ನು ಆರಾಧಿಸಿ ಜಲ, ಬಟ್ಟೆ ಮತ್ತು ಅನ್ನಗಳನ್ನು ದಾನ ಮಾಡಿದ್ದನು.
ಶುಭಂ ತೀರ್ಥವರಂ ತಸ್ಮಾದ್ ರಾಮತೀರ್ಥಂ ಜಗಾಮ ಹ ॥7॥
ಅಲ್ಲಿಂದ ಮುಂದೆ ಶುಭಕರವಾದ ರಾಮತೀರ್ಥಕ್ಕೆ ಹೋದನು.
ಯತ್ರ ರಾಮೋ ಮಹಾಭಾಗೋ ಭಾರ್ಗವಃ ಸುಮಹಾತಪಾಃ |
ಅಸಕೃತ್ ಪೃಥಿವೀಂ ಕೃತ್ವಾ ಹತಕ್ಷತ್ರಿಯಪುಂಗವಾಮ್ ॥8॥
ಆ ರಾಮತೀರ್ಥದಲ್ಲಿ ಮಹಾತಪಸ್ವಿಯಾದ ಪರಶುರಾಮನು ಅನೇಕ ಬಾರಿ ಕ್ಷತ್ರಿಯರನ್ನು ನಾಶಮಾಡಿ, ಪೃಥಿವಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿದನು.
ಉಪಾಧ್ಯಾಯಂ ಪುರಸ್ಕೃತ್ಯ ಕಾಶ್ಯಪಂ ಮುನಿಪುಂಗವಮ್ |
ಅಯಜದ್ ವಾಜಪೇಯೇನ ಸೋಽಶ್ವಮೇಧಶತೇನ ಚ ॥9॥
ಗುರುವಾದ, ಮುನಿಶ್ರೇಷ್ಠರಾದ ಕಾಶ್ಯಪರನ್ನು ಮುಂದಿಟ್ಟುಕೊಂಡು ವಾಜಪೇಯ ಯಾಗವನ್ನೂ, ನೂರು ಅಶ್ವಮೇಧಯಾಗಗಳನ್ನೂ ಮಾಡಿದನು.
ಪ್ರದದೌ ದಕ್ಷಿಣಾರ್ಥಂ ಚ ಪೃಥಿವೀಂ ಸಾಗರಾಂಬರಾಮ್ ॥10॥
ಯಾಗದ ದಕ್ಷಿಣೆಯಾಗಿ ಸಮುದ್ರಪರ್ಯಂತ ವ್ಯಾಪಿಸಿದ ಭೂಮಿಯನ್ನು ದಾನ ಮಾಡಿದನು.
ರಾಮೋ ದತ್ತ್ವಾ ಧನಂ ತತ್ರ ದ್ವಿಜೇಭ್ಯೋ ಜನಮೇಜಯ |
ಉಪಸ್ಪೃಶ್ಯ ಯಥಾನ್ಯಾಯಂ ಪೂಜಯಿತ್ವಾ ತಥಾ ದ್ವಿಜಾನ್ ॥11॥
ಜನಮೇಜಯನೇ! ಬಲರಾಮನು ಅಲ್ಲಿ ನ್ಯಾಯಬದ್ಧವಾಗಿ ಆಚಮನಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಸಂಪತ್ತನ್ನು ದಾನಮಾಡಿ ಅವರನ್ನು ಪೂಜಿಸಿದನು.
ಪುಣ್ಯತೀರ್ಥೇ ಶುಭೇ ದೇಶೇ ವಸು ದತ್ತ್ವಾ ಹಲಾಯುಧಃ |
ಮುನೀಂಶ್ಚೈವಾಭಿವಾದ್ಯಾಥ ಯಾಮುನಂ ತೀರ್ಥಮಾಗತಮ್ ॥12॥
ಹಲಾಯುಧನು ಶುಭಕರವಾದ ಆ ಪುಣ್ಯತೀರ್ಥದಲ್ಲಿ ಸಂಪತ್ತನ್ನು ದಾನಮಾಡಿ, ಮುನಿಗಳನ್ನು ನಮಿಸಿ ಯಾಮುನತೀರ್ಥಕ್ಕೆ ಹೋದನು.
ಯತ್ರಾನಯಾಮಾಸ ತದಾ ರಾಜಸೂಯಮಪಾಂಪತಿಃ ॥13॥
ದಿತೇಃ ಸುತಾನ್ ಮಹಾಭಾಗೋ ವರುಣೋ ವೈ ಸಿತಪ್ರಭಃ |
ಯತ್ರ ನಿರ್ಜಿತ್ಯ ಸಂಗ್ರಾಮೇ ಮಾನುಷಾನ್ ದಾನವಾಂಸ್ತಥಾ ॥14॥
ಗಂಧರ್ವಾನ್ ರಾಕ್ಷಸಾಂಶ್ಚೈವ ವರುಣಃ ಪರವೀರಹಾ ॥15॥
ಗೌರಬಣ್ಣವುಳ್ಳ ಭಾಗ್ಯಶಾಲಿಯಾದ ಹಾಗೂ ಜಲಾಭಿಮಾನಿಯಾದ ಶತ್ರುಸಂಹಾರಕ ವರುಣನು ಯುದ್ಧದಲ್ಲಿ ದೈತ್ಯರನ್ನೂ, ಮನುಷ್ಯರನ್ನೂ, ದಾನವರನ್ನೂ ಗಂದರ್ವರನ್ನೂ ಮತ್ತು ರಾಕ್ಷಸರನ್ನು ಸೋಲಿಸಿ ಈ ತೀರ್ಥದಲ್ಲಿ ರಾಜಸೂಯಯಾಗವನ್ನು ನಡೆಸಿದನು.
ತಸ್ಮಿನ್ ಕ್ರತುವರೇ ವೃತ್ತೇ ಸಂಗ್ರಾಮಃ ಸಮಜಾಯತ |
ದೇವಾನಾಮಸುರಾಣಾಂ ಚ ತ್ರೈಲೋಕ್ಯಸ್ಯ ಕ್ಷಯಾವಹಃ ॥16॥
ಆ ಉತ್ತಮಯಾಗವು ನಡೆಯುತ್ತಿದ್ದಾಗ ದೇವತೆಗಳಿಗೂ ಅಸುರರಿಗೂ ಲೋಕಕ್ಷಯಕಾರಿಯಾದ ಯುದ್ಧವು ನಡೆಯಿತು.
ರಾಜಸೂಯೇ ಕ್ರತುಶ್ರೇಷ್ಠೇ ನಿವೃತ್ತೇ ಜನಮೇಜಯ |
ಜಾಯತೇ ಸುಮಹಾಘೋರಃ ಸಂಕ್ಷಯಃ ಕ್ಷತ್ರಿಯಾನ್ ಪ್ರತಿ ॥17॥
ಜನಮೇಜಯನೇ! ಉತ್ತಮ ಯಜ್ಞವಾದ ರಾಜಸೂಯಯಾಗವು ಪೂರ್ಣಗೊಳ್ಳುತ್ತಿರಲು ಕ್ಷತ್ರಿಯಕುಲನಾಶಕವಾದ ಘೋರಯುದ್ಧವು ನಡೆಯುತ್ತದೆ.
ಹಲಾಯುಧಸ್ತದಾ ರಾಮಃ ತಸ್ಮಿಂಸ್ತೀರ್ಥವರೇ ಶುಭೇ |
ತತ್ರ ಸ್ನಾತ್ವಾ ಚ ದತ್ತ್ವಾ ಚ ದ್ವಿಜೇಭ್ಯೋ ವಸು ಮಾಧವಃ ॥18॥
ಹಲಾಯುಧನಾದ ಬಲರಾಮನು ಆಗ ಆ ಉತ್ತಮತೀರ್ಥದಲ್ಲಿ ಸ್ವತಃ ತಾನು ಸ್ನಾನಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಸಂಪತ್ತಿನ ದಾನವನ್ನು ಮಾಡಿದನು.
ವನಮಾಲೀ ತತೋ ಹೃಷ್ಟಃ ಸ್ತೂಯಮಾನೋ ದ್ವಿಜಾತಿಭಿಃ |
ತಸ್ಮಾದಾದಿತ್ಯತೀರ್ಥಂ ಚ ಜಗಾಮ ಕಮಲೇಕ್ಷಣಃ ॥19॥
ಕಮಲದಂತೆ ಕಣ್ಣುಗಳುಳ್ಳ, ವನಮಾಲಾಧಾರಿಯಾದ ಬಲರಾಮನನ್ನು ಬ್ರಾಹ್ಮಣರು ಕೊಂಡಾಡುತ್ತಾರೆ. ಬಲರಾಮನು ಅಲ್ಲಿಂದ ಆದಿತ್ಯತೀರ್ಥಕ್ಕೆ ಹೋಗುತ್ತಾನೆ.
ಯತ್ರೇಷ್ಟ್ವಾ ಭಗವಾನ್ ಜ್ಯೋತಿರ್ಭಾಸ್ಕರೋ ರಾಜಸತ್ತಮ |
ಜ್ಯೋತಿಷಾಮಾಧಿಪತ್ಯಂ ಚ ಪ್ರಭಾವಂ ಚಾಭ್ಯಪದ್ಯತ ॥20॥
ರಾಜಶೇಷ್ಠನೇ! ಭಗವಾನ್ ಭಾಸ್ಕರನು ಈ ತೀರ್ಥದಲ್ಲಿ ಯಾಗವನ್ನು ಮಾಡಿ ಜ್ಯೋತಿಷ್ಪತಿತ್ವವನ್ನು ಮತ್ತು ವಿಶಿಷ್ಟಸಾಮರ್ಥ್ಯವನ್ನು

ಹೊಂದಿದನು.
ತಸ್ಯಾ ನದ್ಯಾಸ್ತು ತೀರೇ ವೈ ಸರ್ವೇ ದೇವಾಃ ಸವಾಸವಾಃ |
ವಿಶ್ವೇ ತಥಾ ಸಮರುತೋ ಗಂಧರ್ವಾಪ್ಸರಸಶ್ಚ ಹ ॥21॥
ದ್ವೈಪಾಯನಃ ಶುಕಶ್ಚೈವ ಕೃಷ್ಣಶ್ಚ ಮಧುಸೂದನಃ |
ಯಕ್ಷಾಶ್ಚ ರಾಕ್ಷಸಾಶ್ಚೈವ ಪಿಶಾಚಾಶ್ಚ ವಿಶಾಂಪತೇ |
ಏತೇ ಚಾನ್ಯೇ ಚ ಬಹವೋ ಯೋಗಸಿದ್ಧಾಃ ಸಹಸ್ರಶಃ ॥22॥
ರಾಜನೇ! ಆ ನದಿಯ ತೀರದಲ್ಲಿ ಇಂದ್ರಾದಿ ಎಲ್ಲಾ ಜ್ಞಾನಿಗಳೂ, ವಿಶ್ವೇದೇವತೆಗಳು, ಮರುದ್ದೇವತೆಗಳು, ಗಂಧರ್ವರು, ಅಪ್ಸರೆಯರು, ವೇದವ್ಯಾಸ, ಶುಕ, ಮಧುಸೂದನನಾದ ಶ್ರೀಕೃಷ್ಣ, ಯಕ್ಷರು, ರಾಕ್ಷಸರು, ಪಿಶಾಚಗಳು, ಇವರು ಮತ್ತು ಇನ್ನೂ ಅನೇಕರು ಸಾವಿರಾರು ಸಂಖ್ಯೆಯಲ್ಲಿ ಯೋಗಸಿದ್ಧರಾದರು.
ತಸ್ಮಿಂಸ್ತೀರ್ಥೇ ಸರಸ್ವತ್ಯಾಃ ಶಿವೇ ಪುಣ್ಯೇ ಪರಂತಪ ॥23॥
ಯತ್ರ ಹತ್ವಾ ಪುರಾ ವಿಷ್ಣುಃ ಕೈಟಭಂ ಮಧುಮೇವ ಚ |
ಆಪ್ಲುತೋ ಭರತಶ್ರೇಷ್ಠ ತೀರ್ಥಪ್ರವರ ಉತ್ತಮೇ ॥24॥
ಶತ್ರುತಾಪಕನೇ! ಸರಸ್ವತಿನದಿಯ ಆ ಮಂಗಳಮಯವಾದ, ಪುಣ್ಯಪ್ರದವಾದ ತೀರ್ಥದಲ್ಲಿ ಹಿಂದೆ ವಿಷ್ಣುವು ಮಧು ಮತ್ತು ಕೈಟಭರನ್ನು ಸಂಹರಿಸಿ ಅವಗಾಹಸ್ನಾನವನ್ನು ಮಾಡಿದ್ದನು.
ದ್ವೈಪಾಯನಶ್ಚ ಧರ್ಮಾತ್ಮಾ ತತ್ರೈವಾಪ್ಲುತ್ಯ ಭಾರತ |
ಸಂಪ್ರಾಪ್ತಃ ಪರಮಂ ಯೋಗಂ ಸಿದ್ಧಿಂ ಚ ಪರಮಾಂ ಗತಃ ॥25॥
ಭರತಕುಲೋದ್ಭವನೇ! ಧರ್ಮಾತ್ಮನಾದ ವೇದವ್ಯಾಸನೂ ಕೂಡ ಆ ತೀರ್ಥದಲ್ಲಿಯೇ ಅವಗಾಹಸ್ನಾನವನ್ನು ಮಾಡಿ ಉತ್ತಮವಾದ ಯೋಗಸಿದ್ಧಿಯನ್ನು ಹೊಂದಿದನು.
ಅಸಿತೋ ದೇವಲಶ್ಚೈವ ತಸ್ಮಿನ್ನೇವ ಮಹಾತಪಾಃ |
ಪರಮಂ ಯೋಗಮಾಸ್ಥಾಯ ಯೋಗಯುಕ್ತೋಽಭವನ್ಮುನಿಃ ॥26॥
ಮಹಾತಪಸ್ವಿಯಾದ ಅಸಿತ ದೇವಲಮುನಿಯೂ ಕೂಡ ಆ ತೀರ್ಥದಲ್ಲಿಯೇ ಯೋಗವನ್ನು ಆಚರಿಸಿ ಯೋಗಯುಕ್ತನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಭಾರ್ಗವತೀರ್ಥವರ್ಣನಂ ನಾಮ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ದೇವಲ ಮತ್ತು ಜೈಗೀಷವ್ಯರ ಚರಿತ್ರೆಯ ವರ್ಣನೆ. ಬಲರಾಮನು ಆದಿತ್ಯತೀರ್ಥದಿಂದ ಸೋಮತೀರ್ಥಕ್ಕೆ ಹೋದುದು.
ವೈಶಂಪಾಯನಃ
ತಸ್ಮಿನ್ನೇವ ತು ಧರ್ಮಾತ್ಮಾ ವಸತಿ ಸ್ಮ ತಪೋಧನಃ |
ಗಾರ್ಹಸ್ಥ್ಯಂ ಧರ್ಮಮಾಸ್ಥಾಯ ಹ್ಯಸಿತೋ ದೇವಲಃ ಪುರಾ ॥1॥
ವೈಶಂಪಾಯನ ಹಿಂದೆ ಅಸಿತದೇವಲನು ಧಾರ್ಮಿಕನಾಗಿದ್ದುಕೊಂಡು, ತಪಸ್ಸನ್ನಾಚರಿಸುತ್ತಾ, ಗೃಹಸ್ಥಧರ್ಮವನ್ನು ಪರಿಪಾಲಿಸುತ್ತಾ ಆ ತೀರ್ಥದಲ್ಲಿ ವಾಸಮಾಡಿಕೊಂಡಿದ್ದನು.
ಧರ್ಮನಿತ್ಯಃ ಶುಚಿರ್ದಾಂತೋ ಯಜ್ಞಶೀಲೋ ಮಹಾತಪಾಃ |
ಕರ್ಮಣಾ ಮನಸಾ ವಾಚಾ ಸಮಃ ಸರ್ವೇಷು ಸಾಧುಷು ॥2॥
ಮಹಾತಪಸ್ವಿಯಾದ ಅಸಿತ ದೇವಲನು ಸದಾ ಧರ್ಮದಲ್ಲಿಯೇ ಇದ್ದುಕೊಂಡು, ಅಂತರಂಗ ಮತ್ತು ಬಹಿರಂಗ ಶುದ್ಧಿಗಳನ್ನು ಸಂಪಾದಿಸಿಕೊಂಡು ಯಾಗದಲ್ಲಿ ತೊಡಗಿಕೊಳ್ಳುತ್ತಿದ್ದನು. ಕರ್ಮಗಳಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ಎಲ್ಲಾ ಸಾಧು-ಸಜ್ಜನರನ್ನೂ ಸಮಾನವಾಗಿ ಕಾಣುತ್ತಿದ್ದನು.
ಅಕ್ರೋಧನೋ ಮಹಾರಾಜ ತುಲ್ಯನಿಂದಾಪ್ರಿಯಾಪ್ರಿಯಃ ॥3॥
ಮಹಾರಾಜನೇ! ಅವನು ಯಾರ ಮೇಲೆಯೂ ಕೋಪಿಸಿಕೊಳ್ಳುತ್ತಿರಲಿಲ್ಲ. ನಿಂದನೆ-ಸ್ತುತಿಗಳನ್ನು, ಇಷ್ಟಾನಿಷ್ಟಗಳನ್ನು ಸಮಾನವಾಗಿ ಕಾಣುತ್ತಿದ್ದನು.
ಕಾಂಚನೇ ಲೋಷ್ಟಕೇ ಚೈವ ಸಮದರ್ಶೀ ಮಹಾತಪಾಃ |
ದೇವಾನ್ ವೈ ಪೂಜಯನ್ನಿತ್ಯಮತಿಥೀಂಶ್ಚ ದ್ವಿಜೈಃ ಸಹ ॥4॥
ಮಹಾತಪಸ್ವಿಯಾದ ದೇವಲನು ಕಲ್ಲನ್ನೂ ಬಂಗಾರವನ್ನೂ ಸಮಾನವಾಗಿ ನೋಡುತ್ತಿದ್ದನು. ದೇವತೆಗಳನ್ನು, ಅತಿಥಿಗಳನ್ನು ಮತ್ತು ಬ್ರಾಹ್ಮಣರನ್ನು ಪೂಜಿಸುತ್ತಿದ್ದನು.
ಬ್ರಹ್ಮಚರ್ಯರತೋ ನಿತ್ಯಂ ಸದಾ ಧರ್ಮಪರಾಯಣಃ |
ತತಾಭ್ಯೇತ್ಯ ಮಹಾರಾಜ ಯೋಗಮಾಸ್ಥಾಯ ಭಿಕ್ಷುಕಃ ॥5॥
ಜೈಗೀಷವ್ಯೋ ಮುನಿರ್ಧೀಮಾನ್ ತಸ್ಮಿಂಸ್ತೀರ್ಥೇ ಸಮಾಹಿತಃ |
ದೇವಲಸ್ಯಾಶ್ರಮೇ ರಾಜನ್ ನ್ಯವಸತ್ ಸ ಮಹಾದ್ಯುತಿಃ ॥6॥
ಯಾವಾಗಲೂ ಬ್ರಹ್ಮಚರ್ಯವ್ರತದಲ್ಲಿ ಆಸಕ್ತನಾಗಿದ್ದನು. ನಿತ್ಯವೂ ಧರ್ಮದಲ್ಲಿಯೇ ಇರುತ್ತಿದ್ದನು. ಮಹಾರಾಜನೇ! ಜೈಗೀಷವ್ಯ ಎಂಬ ಒಬ್ಬ ಭಿಕ್ಷುಕನು ಯೋಗಾಚರಣೆಯನ್ನು ಮಾಡುತ್ತಾ ದೇವಲನ ಆಶ್ರಮಕ್ಕೆ ಬಂದನು. ಅಲ್ಲಿ ಬುದ್ಧಿವಂತನಾದ ಆ ಮುನಿಯು

ಮನೋನಿಗ್ರಹವನ್ನು ಸಂಪಾದಿಸಿಕೊಂಡು ಕಾಂತಿಯುಕ್ತನಾಗಿ ಅಲ್ಲಿಯೇ ದೇವಲನ ಆಶ್ರಮದಲ್ಲಿ ವಾಸಿಸತೊಡಗಿದನು.
ಯೋಗನಿತ್ಯೋ ಮಹಾರಾಜ ಸಿದ್ಧಿಂ ಪ್ರಾಪ್ತೋ ಮಹಾತಪಾಃ ॥7॥
ಮಹಾತಪಸ್ವಿಯಾದ ಆ ಜೈಗೀಷವ್ಯನು ನಿತ್ಯವೂ ಯೋಗಸಾಧನೆಯನ್ನು ಮಾಡುತ್ತಾ ಯೋಗಸಿದ್ಧಿಯನ್ನು ಸಂಪಾದಿಸಿಕೊಂಡನು.
ತಂ ತತ್ರ ವಸಮಾನಂ ತು ಜೈಗೀಷವ್ಯಂ ಮಹಾಮುನಿಮ್ ।
ನ ಜ್ಞಾತಸ್ತೇನ ಮುನಿನಾ ದೇವಲೇನ ಮಹಾತ್ಮನಾ ॥8॥
ಅಲ್ಲಿ ವಾಸಮಾಡುತ್ತಿದ್ದ ಮಹಾತಪಸ್ವಿ ಜೈಗೀಷವ್ಯನನ್ನು ಮಹಾತ್ಮನಾದ ದೇವಲಮುನಿಯು ನೋಡಿರಲಿಲ್ಲ.
ಏವಂ ತಯೋರ್ಮಹಾರಾಜ ದೀರ್ಘಕಾಲೋ ವ್ಯತಿಕ್ರಮತ್ ॥9॥
ಅವರಿಬ್ಬರೂ ಹೀಗಿರಲು ಬಹಳ ವರ್ಷಗಳ ದೀರ್ಘಕಾಲವು ಕಳೆದುಹೋಯಿತು.
ಜೈಗೀಷವ್ಯೋ ಮುನಿಸ್ತಂ ತು ದದರ್ಶಾಥ ಸ ದೇವಲಮ್ ।
ಆಹಾರಕಾಲೇ ಮತಿಮಾನ್ ಪರಿವ್ರಾಡ್ ಜನಮೇಜಯ ॥10॥
ಜನಮೇಜಯನೇ! ಅನಂತರ ನಿತ್ಯಸಂಚಾರಿಯಾದ, ಬುದ್ಧಿವಂತ ಜೈಗೀಷವ್ಯ ಮುನಿಯು ತನ್ನ ಭೋಜನಸಮಯದಲ್ಲಿ ದೇವಲನನ್ನು ನೋಡಿದನು.
ಉಪಾತಿಷ್ಠತ ಧರ್ಮಾತ್ಮಾ ಭೈಕ್ಷಕಾಲೇ ಸ್ಮ ದೇವಲಮ್ ॥11॥
ಧರ್ಮಾತ್ಮನಾದ ಜೈಗೀಷವ್ಯ ಮುನಿಯು ಭಿಕ್ಷಾಕಾಲದಲ್ಲಿ ದೇವಲಮುನಿಯ ಹತ್ತಿರ ಬಂದು ಅವನಿಗೆ ಸೇವೆಯನ್ನು ಸಲ್ಲಿಸಿದನು.
ಸ ದೃಷ್ಟ್ವಾ ಭಿಕ್ಷುರೂಪೇಣ ಪ್ರಾಪ್ತಂ ತಂ ತು ಮಹಾಮುನಿಮ್ ।
ಗೌರವಂ ಪರಮಂ ಚಕ್ರೇ ಪ್ರೀತಿಂ ಚ ಪರಮಾಂ ತದಾ ॥12॥
ಆ ದೇವಲನು ಭಿಕ್ಷುರೂಪದಿಂದ ಬಂದ ಜೈಗೀಷವ್ಯಮುನಿಯನ್ನು ಕಂಡು ಬಹಳವಾದ ಗೌರವನನ್ನು ತೋರಿದನು. ಬಹಳವಾದ ಪ್ರೇಮ (ಪ್ರೀತಿಯನ್ನು)ವನ್ನು ಮಾಡಿದನು.
ದೇವಲಸ್ತು ಯಥಾಶಕ್ತಿ ಪೂಜಯಾಮಾಸ ಭಾರತ ।
ಋಷಿದೃಷ್ಟೇನ ವಿಧಿನಾ ಸಮಾಹೂಯ ಸಮಾಹಿತಃ ॥13॥
ದೇವಲನು ಇಂದ್ರಿಯನಿಗ್ರಹವುಳ್ಳವನಾಗಿ, ತನ್ನ ಶಕ್ತಿಗೆ ಅನುಗುಣವಾಗಿ ಋಷಿ-ಮುನಿಗಳು ವೇದಾದಿಗಳ ಮೂಲಕ ತೋರಿಸಿಕೊಟ್ಟ ಸಂಪ್ರದಾಯಕ್ಕೆ ಅನುಸಾರವಾಗಿ ಪೂಜಿಸಿದನು.
ಕದಾಚಿತ್ ತಸ್ಯ ನೃಪತೇ ದೇವಲಸ್ಯ ಮಹಾತ್ಮನಃ ।
ಚಿಂತಾ ಸುಮಹತೀ ಜಾತಾ ಮುನಿಂ ದೃಷ್ಟ್ವಾ ಮಹಾದ್ಯುತಿಮ್ ॥14॥
ರಾಜನೇ! ಒಂದು ಬಾರಿ ಮಹಾಕಾಂತಿಯುಳ್ಳ ಆ ಮುನಿಯನ್ನು ನೋಡಿ ಮಹಾತ್ಮನಾದ ದೇವಲನಿಗೆ ಬಹಳವಾದ ಚಿಂತೆಯು ಉಂಟಾಯಿತು.
ಸಮಾಸ್ತು ಸಮತಿಕ್ರಾಂತಾ ಬಹ್ವ್ಯಃ ಪೂಜಯತೋ ಮಮ ।
ನ ಚಾಯಮಲಸೋ ಭಿಕ್ಷುರಭ್ಯಭಾಷತ ಕಿಂಚನ ॥15॥
ಇವನನ್ನು ಆರಾಧಿಸಲು ಆರಂಭಿಸಿ ಅನೇಕ ವರ್ಷಗಳೇ ಕಳೆದುಹೋದವು. ಆದರೆ ಈ ಸೋಮಾರಿಯಾದ ಮುನಿಯು ಏನನ್ನೂ ಮಾತನಾಡುತ್ತಿಲ್ಲ.
ಏವಂ ವಿಗಣಯನ್ನೇವ ಸ ಜಗಾಮ ಮಹೋದಧಿಮ್ ।
ಅಂತರಿಕ್ಷಗತಃ ಶ್ರೀಮಾನ್ ಕಲಶಂ ಗೃಹ್ಯ ದೇವಲಃ ॥16॥
ಹೀಗೆ ವಿಚಾರಮಾಡುತ್ತಾ ದೇವಲನು ಕಲಶವನ್ನು ಕೈಯಲ್ಲಿ ಹಿಡಿದುಕೊಂಡು ಆಕಾಶಮಾರ್ಗದಿಂದ ಸಮುದ್ರಕ್ಕೆ ಹೋದನು.
ಗಚ್ಛನ್ನೇವ ಚ ಧರ್ಮಾತ್ಮಾ ಸಮುದ್ರಂ ಸರಿತಾಂ ಪತಿಮ್ ।
ಜೈಗೀಷವ್ಯಂ ತತೋಽಪಶ್ಯದ್ ಗತಂ ಪ್ರಾಗೇವ ಭಾರತ ॥17॥
ಭರತಕುಲೋದ್ಭವನೇ! ನದಿಗಳ ಪತಿಯಾದ ಸಮುದ್ರದ ಕಡೆಗೆ ದೇವಲನು ಹೋಗುತ್ತಾ ಇರುವಾಗ ತನಗಿಂತ ಮೊದಲೇ ಹೋಗಿದ್ದ ಜೈಗೀಷವ್ಯಮುನಿಯನ್ನು ನೋಡಿದನು.
ತತಃ ಸವಿಸ್ಮಿತಶ್ಚಿಂತಾಂ ಜಗಾಮಾಥಾಸಿತಃ ಪ್ರಭುಃ ।
ಕಥಂ ಭಿಕ್ಷುರಯಂ ಪ್ರಾಪ್ತಃ ಸಮುದ್ರಂ ಸುಮಹಾತಪಾಃ ॥18॥
ಇತ್ಯೇವಂ ಚಿಂತಯಾಮಾಸ ಮಹರ್ಷಿರಸಿತಸ್ತದಾ ।
ಸ್ನಾತ್ವಾ ಸಮುದ್ರೇ ವೈ ತಿಷ್ಠನ್ ಅಥ ಜಪ್ಯಂ ಜಜಾಪ ಹ ॥19॥
ಇದನ್ನು ನೋಡಿದಾಗ ಅಸಿತ ದೇವಲನಿಗೆ ಬಹಳ ಆಶ್ಚರ್ಯವುಂಟಾಯಿತು. ಮಹಾತಪಸ್ವಿಯಾದ ಈ ಮುನಿಯು ಸಮುದ್ರಕ್ಕೆ ಹೇಗೆ ಬಂದನು ಎಂಬುದಾಗಿ ಚಿಂತೆಗೊಳಗಾದನು. ಸಮುದ್ರದಲ್ಲಿ ಸ್ನಾನವನ್ನು ಮಾಡಿ, ಮಂತ್ರಗಳನ್ನು ಜಪಿಸುತ್ತಾ ನಿಂತುಕೊಂಡನು.
ಕೃತಜಪ್ಯಾಹ್ನಿಕಃ ಶ್ರೀಮಾನಾಶ್ರಮಂ ಚ ಜಗಾಮ ಹ ।
ಕಲಶಂ ಜಲಪೂರ್ಣಂ ವೈ ಗೃಹೀತ್ವಾ ಜನಮೇಜಯ ॥20॥
ಜನಮೇಜಯನೇ! ಆಹ್ನಿಕಗಳನ್ನೂ, ಮಂತ್ರಜಪವನ್ನೂ ಮುಗಿಸಿಕೊಂಡ ದೇವಲನು ನೀರು ತುಂಬಿದ ಕಲಶವನ್ನು ಹಿಡಿದುಕೊಂಡು ಆಶ್ರಮಕ್ಕೆ ಹೋದನು.
ತತಃ ಸ ಪ್ರವಿಶನ್ನೇವ ಸ್ವಮಾಶ್ರಮಪದಂ ಮುನಿಃ ।
ಆಸೀನಮಾಶ್ರಮೇ ಪುಣ್ಯೇ ಜೈಗೀಷವ್ಯಮಪಶ್ಯತ ॥21॥
ಅನಂತರ ಅವನು ತನ್ನ ಆಶ್ರಮವನ್ನು ಪ್ರವೇಶಿಸುತ್ತಿರುವಾಗಲೇ ಆ ಪುಣ್ಯಾಶ್ರಮದಲ್ಲಿ ಕುಳಿತುಕೊಂಡಿದ್ದ ಜೈಗೀಷವ್ಯಮುನಿಯನ್ನು

ನೋಡಿದನು.
ನ ವ್ಯಾಹರತಿ ಚೈವೈನಂ ಜೈಗೀಷವ್ಯಃ ಕಥಂಚನ |
ಕಾಷ್ಠಭೂತೋ ಶ್ರಮಪದೇ ವಸತಿ ಸ್ಮ ಮಹಾತಪಾಃ ॥22॥
ಜೈಗೀಷವ್ಯಮುನಿಯು ಎಷ್ಟುಪ್ರಯತ್ನಪಟ್ಟರೂ ಸ್ವಲ್ಪವೂ ಮಾತನಾಡುತ್ತಿರಲಿಲ್ಲ. ಮಹಾತಪಸ್ವಿಯಾದ ಆತನು ಕಾಷ್ಠಮೌನವನ್ನು ಆಚರಿಸುತ್ತಾ, ಕಠಿಣವಾದ ಆಸನದಲ್ಲಿ ಕುಳಿತುಕೊಂಡು ತಪಸ್ಸನ್ನು ಆಚರಿಸುತ್ತಿದ್ದನು.
ತಂ ದೃಷ್ಟ್ವಾ ಚಾಪ್ಲುತಂ ತೋಯೇ ಸಾಗರೇ ಸಾಗರೋಪಮಮ್ |
ಪ್ರವಿಷ್ಟಮಾಶ್ರಮಪದಂ ಪೂರ್ವಮೇವ ದದರ್ಶ ಸಃ ॥23॥
ಅಸಿತೋ ದೇವಲಃ ಶ್ರೀಮಾನ್ ಚಿಂತಯಾಮಾಸ ಬುದ್ಧಿಮಾನ್ |
ದೃಷ್ಟ್ವಾ ಪ್ರಭಾವಂ ತಪಸೋ ಜೈಗೀಷವ್ಯಸ್ಯ ಯೋಗಜಮ್ ॥24॥
ಚಿಂತಯಾಮಾಸ ರಾಜೇಂದ್ರ ತಂ ತದಾ ಮುನಿಸತ್ತಮಃ |
ಮಯಾ ದೃಷ್ಟಃ ಸಮುದ್ರೇ ಚ ಆಶ್ರಮೇ ಚ ಕಥಂ ನ್ವಯಮ್ ॥25॥
ಸಮುದ್ರದ ಹಾಗೆ ಅಗಾಧವಾದ ಪ್ರಭಾವವನ್ನು ಹೊಂದಿದ ಜೈಗೀಷವ್ಯಮುನಿಯು ಸಮುದ್ರದ ನೀರಲ್ಲಿ ಸ್ನಾನವನ್ನು ಮಾಡಿ ತನಗಿಂತಲೂ ಮೊದಲೇ ಆಶ್ರಮಕ್ಕೆ ಬಂದಿದ್ದುದನ್ನು ಕಂಡನು. ಬುದ್ಧಿವಂತನಾದ ಅಸಿತ ದೇವಲನು ಮುನಿಯ ಯೋಗದಿಂದ ಉಂಟಾದ ತಪಸ್ಸಿನ ಸಾಮರ್ಥ್ಯವನ್ನು ಕಂಡು ಹೀಗೆ ಆಲೋಚಿಸಿದನು: ಈ ಮುನಿಯನ್ನು ಸಮುದ್ರದಲ್ಲಿಯೂ ಆಶ್ರಮದಲ್ಲಿಯೂ ನೋಡಿದೆನು. ಇದು ಹೇಗೆ ಸಾಧ್ಯವಾಯಿತು? ಎಂದು.
ಏವಂ ವಿಗಣಯನ್ನೇವ ಸ ಮುನಿರ್ಮಂತ್ರಪಾರಗಃ |
ಉತ್ಪಪಾತಾಶ್ರಮಾತ್ ತಸ್ಮಾದಂತರಿಕ್ಷಂ ವಿಶಾಂಪತೇ ॥26॥
ಜಿಜ್ಞಾಸಾರ್ಥಂ ತದಾ ಭಿಕ್ಷೋರ್ಜೈಗೀಷವ್ಯಸ್ಯ ದೇವಲಃ |
ಸೋಽಂತರಿಕ್ಷೇಣ ತಾನ್ ಸಿದ್ಧಾನ್ ಸಮಪಶ್ಯತ್ ಸಮಾಗತಾನ್ ॥27॥
ರಾಜನೇ! ಮಂತ್ರಸಿದ್ಧಿಯನ್ನು ಹೊಂದಿದ್ದ ದೇವಲಮುನಿಯು ಹೀಗೆ ಆಲೋಚಿಸಿ ಜೈಗೀಷವ್ಯಮುನಿಯ ಬಗ್ಗೆ ತಿಳಿದುಕೊಳ್ಳಲಿಕ್ಕಾಗಿ ಆಶ್ರಮದಿಂದ ಆಕಾಶಕ್ಕೆ ಜಿಗಿದನು. ಆಕಾಶದಲ್ಲಿ ಹೋಗುತ್ತಾ ಅಲ್ಲಿಗೆ ಬಂದ ಆ ಸಿದ್ಧಪುರುಷರನ್ನು ನೋಡಿದನು.
ಜೈಗೀಷವ್ಯಂ ಚ ತೈಃ ಸಿದ್ಧೈಃ ಪೂಜ್ಯಮಾನಮಪಶ್ಯತ |
ನ ವ್ಯಾಹರತ ಚೈವೈನಂ ಜೈಗೀಷವ್ಯಃ ಕಥಂಚನ ॥28॥
ಅಲ್ಲಿ ಸಿದ್ಧಪುರುಷರು ಜೈಗೀಷವ್ಯಮುನಿಯನ್ನು ಪೂಜಿಸುತ್ತಿರುವುದನ್ನು ಕಂಡನು. ಆದರೆ ಬಂದ ದೇವಲನನ್ನು ಜೈಗೀಷವ್ಯಮುನಿಯು ಸ್ವಲ್ಪವೂ ಮಾತನಾಡಿಸಲಿಲ್ಲ.
ತತೋಽಸಿತಃ ಸುಸಂರಬ್ಧೋ ವ್ಯವಸಾಯೀ ದೃಢವ್ರತಃ |
ಅಪಶ್ಯದ್ ವೈ ದಿವಂ ಯಾತಂ ಜೈಗೀಷವ್ಯಂ ಸ ದೇವಲಃ ॥29॥
ಅನಂತರ ಬಹಳ ವ್ರತಗಳನ್ನಾಚರಿಸುತ್ತಿದ್ದ ದೇವಲನು ದೃಢನಿಶ್ಚಯವನ್ನು ಮಾಡಿಕೊಂಡನು. ದೇವಲನು ಸ್ವರ್ಗಕ್ಕೆ ಹೋಗುತ್ತಿದ್ದ ಜೈಗೀಷವ್ಯಮುನಿಯನ್ನು ನೋಡಿದನು.
ತಸ್ಮಾಚ್ಚ ಪಿತೃಲೋಕಂ ತಂ ವ್ರಜಂತಂ ಸೋಽನ್ವಪಶ್ಯತ ॥30॥
ಅಲ್ಲಿಂದ ಪಿತೃಲೋಕಕ್ಕೆ ಹೋಗುತ್ತಿದ್ದ ಮುನಿಯನ್ನೂ ನೋಡಿದನು.
ತಸ್ಮಾದಾದಿತ್ಯಲೋಕಂ ಚ ವ್ರಜಂತಂ ಸೋಽನ್ವಪಶ್ಯತ ॥31॥
ಅಲ್ಲಿಂದ ಆದಿತ್ಯಲೋಕಕ್ಕೆ ಹೋಗುತ್ತಿದ್ದ ಜೈಗೀಷವ್ಯಮುನಿಯನ್ನು ನೋಡಿದನು.
ತಸ್ಮಾದಭಿಸಮುತ್ಪ್ಲುತ್ಯ ಸೋಮಲೋಕಮಭಿಷ್ಟುತಮ್ |
ವ್ರಜಂತಮನ್ವಪಶ್ಯತ್ ತಂ ಜೈಗೀಷವ್ಯಂ ಸ ದೇವಲಃ ॥32॥
ಅಲ್ಲಿಂದ ಜೈಗೀಷವ್ಯಮುನಿಯು ಸಮೃದ್ಧವಾದ ಸೋಮಲೋಕಕ್ಕೆ (ಚಂದ್ರಲೋಕ) ಹಾರಿ ಹೋಗುತ್ತಿದ್ದುದನ್ನು ನೋಡಿದನು.
ಲೋಕಾನ್ ಸಮುತ್ಪತಂತಂ ಚ ಶುಭಾನೇಕಾಗ್ನಿಯಾಜಿನಾಮ್ ॥33॥
ಅಗ್ನಿಯಲ್ಲಿ ಹೋಮಮಾಡಿ ಹೋಗುವವರ ಅನೇಕ ಶುಭಲೋಕಗಳಿಗೆ ಹಾರಿಹೋಗುತ್ತಿದ್ದುದನ್ನು ನೋಡಿದನು.
ಅಗ್ನಿಷ್ಟೋಮೇನ ಚ ತಥಾ ಯೇ ಯಜಂತಿ ತಪೋಧನಾಃ |
ತತ್ಸ್ಥಾನಮನುಸಂಪ್ರಾಪ್ತಮನ್ವಪಶ್ಯತ ದೇವಲಃ ॥34॥
ಅಗ್ನಿಷ್ಟೋಮಯಾಗದಿಂದ ತಪಸ್ವಿಗಳು ಯಜ್ಞವನ್ನು ಮಾಡಿ ಯಾವ ಲೋಕವನ್ನು ಹೊಂದುವರೋ ಆ ಲೋಕಗಳಿಗೆ ಹೋಗುತ್ತಿರುವುದನ್ನು ನೋಡಿದನು.
ವಾಜಪೇಯಂ ಕ್ರತುವರಂ ತಥಾ ಬಹುಸುವರ್ಣಕಮ್ |
ಆಹರನ್ ಯೇ ಮಹಾಪ್ರಾಜ್ಞಾಸ್ತೇಷಾಂ ಲೋಕೇಷ್ವಪಶ್ಯತ ॥35॥
ಬಹಳ ಸಂಪತ್ತನ್ನು ಸಂಗ್ರಹಿಸಿಕೊಂಡು ವಾಜಪೇಯ ಎಂಬ ಉತ್ತಮ ಯಾಗವನ್ನು ಯಾವ ಮಹಾಜ್ಞಾನಿಗಳು ಮಾಡುವರೋ ಅವರು ಹೋಗುವ ಲೋಕಗಳಲ್ಲಿ ಈ ಜೈಗೀಷವ್ಯಮುನಿಯನ್ನು ನೋಡಿದನು.
ಯಜಂತೇ ಪೌಂಡರೀಕೇಣ ರಾಜಸೂಯೇನ ಚೈವ ಯೇ |
ತೇಷಾಂ ಲೋಕೇಷ್ವಪಶ್ಯಚ್ಚ ಜೈಗೀಷವ್ಯಂ ಸ ದೇವಲಃ ॥36॥
ಪುಂಡರೀಕಯಾಗವನ್ನು ಮಾಡಿ, ರಾಜಸೂಯಯಾಗವನ್ನು ಮಾಡಿ ಯಾವ ಲೋಕವನ್ನು ಹೊಂದುವರೋ ಆ ಲೋಕಗಳಲ್ಲಿ ಜೈಗೀಷವ್ಯಮುನಿಯನ್ನು ದೇವಲನು ನೋಡಿದನು.

ದ್ವಾದಶಾಹೈಶ್ಚ ಸತ್ರೈಶ್ಚ ಯಜಂತೇ ವಿವಿಧೈರ್ನೃಪ |
ತೇಷಾಂ ಲೋಕೇಷ್ವಪಶ್ಯಚ್ಚ ಜೈಗೀಷವ್ಯಂ ಸ ದೇವಲಃ ॥37॥
ರಾಜನೇ! ಹನ್ನೆರಡು ದಿನಗಳಲ್ಲಿ ನಡೆಯುವ ವಿವಿಧ ಯಾಗಗಳನ್ನು ಮಾಡಿ ಯಾವ ಲೋಕವನ್ನು ಪಡೆಯುತ್ತಾರೆಯೋ ಆ ಲೋಕಗಳಲ್ಲಿ ಜೈಗೀಷವ್ಯಮುನಿಯನ್ನು ನೋಡಿದನು.
ಮೈತ್ರಾವರುಣಯೋರ್ಲೋಕಾನ್ ಆದಿತ್ಯಾನಾಂ ತಥೈವ ಚ |
ಸಲೋಕತಾಮನುಪ್ರಾಪ್ತಮಪಶ್ಯತ ತತೋಽಸಿತಃ ॥38॥
ಮೈತ್ರಾ-ವರುಣಿಗಳ ಲೋಕವನ್ನು, ಆದಿತ್ಯರ ಲೋಕವನ್ನು ಹೊಂದಿದ ಜೈಗೀಷವ್ಯಮುನಿಯನ್ನು ದೇವಲನು ನೋಡಿದನು.
ರುದ್ರಾಣಾಂ ಚ ವಸೂನಾಂ ಚ ಸ್ಥಾನಂ ಯಚ್ಚ ಬೃಹಸ್ಪತೇಃ |
ತಾನಿ ಸರ್ವಾಣ್ಯತೀತಂ ಚ ತಮಪಶ್ಯತ್ ತತೋಽಸಿತಃ ॥39॥
ಜೈಗೀಷವ್ಯಮುನಿಯು ರುದ್ರರ, ಆದಿತ್ಯರ ಹಾಗೂ ಬೃಹಸ್ಪತಿಯ ಲೋಕಗಳನ್ನೂ ದಾಟಿ ಮುಂದೆ ಹೋಗುತ್ತಿದ್ದುದನ್ನು ದೇವಲನು ನೋಡಿದನು.
ಆರುಹ್ಯ ಚ ಗವಾಂ ಲೋಕಂ ಪ್ರಶಾಂತಂ ಬ್ರಹ್ಮಸತ್ರಿಣಾಮ್ |
ಲೋಕಾನಪಶ್ಯದ್ ಗಚ್ಛಂತಂ ಜೈಗೀಷವ್ಯಂ ತತೋಽಸಿತಃ ॥40॥
ಅನಂತರ ಬ್ರಹ್ಮಯಾಗವನ್ನು ಮಾಡಿದವರು ಹೊಂದುವ ಪ್ರಶಾಂತವಾದ ಗೋಲೋಕಗಳಿಗೆ ಹೋಗುತ್ತಿದ್ದ ಜೈಗೀಷವ್ಯಮುನಿಯನ್ನು ಅಸಿತನು ನೋಡಿದನು.
ತ್ರೀಲ್ಲೋಕಾನ್ ಪ್ರವರಾನ್ ವಿಪ್ರಮುತ್ಪತಂತಂ ಸ್ವತೇಜಸಾ |
ಪತಿವ್ರತಾನಾಂ ಲೋಕಾಂಶ್ಚ ವ್ರಜಂತಂ ಸೋಽನ್ವಪಶ್ಯತ ॥41॥
ಜೈಗೀಷವ್ಯಮುನಿಯು ತನ್ನ ತಪಸ್ಸಿನ ಪ್ರಭಾವದಿಂದ ಮೂರು ಲೋಕಗಳಿಗೆ ಹೋಗುತ್ತಿರುವುದನ್ನು ನೋಡಿದನು.
ಪತಿವ್ರತಾಸ್ತ್ರೀಯರು ಹೊಂದುವ ಲೋಕಕ್ಕೆ ಜೈಗೀಷವ್ಯಮುನಿಯು ಹೋಗುವುದನ್ನೂ ನೋಡಿದನು.
ತದಾ ಮುನಿವರಂ ಭೂಯೋ ಜೈಗೀಷವ್ಯಂ ತಥಾಽಸಿತಃ |
ನಾನ್ವಪಶ್ಯತ ಯೋಗಸ್ಥಂ ಜೈಗೀಷವ್ಯಮರಿಂದಮ ॥42॥
ಶತ್ರುಸಂಹಾರಕನೇ! ಆಗ ಯೋಗಾರೂಢನಾದ ಜೈಗೀಷವ್ಯಮುನಿಯನ್ನು ದೇವಲನು ಕಾಣದಾದನು.
ಸೋಽಚಿಂತಯನ್ಮಹಾಭಾಗೋ ಜೈಗೀಷವ್ಯಸ್ಯ ದೇವಲಃ |
ಪ್ರಭಾವಂ ಸುವ್ರತತ್ವಂ ಚ ಸಿದ್ಧಿಂ ಯೋಗಸ್ಯ ಚಾತುಲಾಮ್ ॥43॥
ಮಹಾತ್ಮನಾದ ಅಸಿತ ದೇವಲನು ಜೈಗೀಷವ್ಯಮುನಿಯ ತಪಸ್ಸಿನ ಪ್ರಭಾವವನ್ನೂ, ಒಳ್ಳೆಯ ವ್ರತಾಚರಣೆಯನ್ನೂ, ಅಸದೃಶವಾದ ಯೋಗಸಿದ್ಧಿಯನ್ನೂ ಮನಗಂಡನು.
ಅಸಿತೋಽಪೃಚ್ಛತ ತದಾ ಸಿದ್ಧಾಲ್ಲೋಕೇಷು ಸತ್ತಮಾನ್ |
ಪ್ರಯತಃ ಪ್ರಾಂಜಲಿರ್ಭೂತ್ವಾ ಧೀರಸ್ತಾನ್ ಬ್ರಹ್ಮಚಾರಿಣಃ ॥44॥
ಆಗ ಧೀರನಾದ ಅಸಿತನು ಕೈಮುಗಿದುಕೊಂಡು, ಆ ಲೋಕಗಳಲ್ಲಿದ್ದ ಬ್ರಹ್ಮಚಾರಿಗಳಾದ ಸಿದ್ಧಪುರುಷರಲ್ಲಿ ಪ್ರಯತ್ನಪೂರ್ವಕವಾಗಿ ಕೇಳಿದನು.
ಜೈಗೀಷವ್ಯಂ ನ ಪಶ್ಯಾಮಿ ತಂ ಶಂಸಂತು ತಪೋಧನಾಃ |
ಏತದಿಚ್ಛಾಮ್ಯಹಂ ಶ್ರೋತುಂ ಪರಂ ಕೌತೂಹಲಂ ಹಿ ಮೇ ॥45॥
ತಪಸ್ವಿಗಳೇ! ಜೈಗೀಷವ್ಯಮುನಿಯು ಕಾಣಿಸುತ್ತಿಲ್ಲ. ಅವನು ಎಲ್ಲಿದ್ದಾನೆ ಎಂಬುದನ್ನು ಹೇಳಿರಿ. ಇದನ್ನು ಕೇಳಲು ನಾನು ತುಂಬಾ ಕುತೂಹಲಿಯಾಗಿದ್ದೇನೆ.
ಸಿದ್ಧಾಃ
ಶೃಣು ದೇವಲ ಭೂತಾರ್ಥಂ ಶಂಸತಾಂ ನೋ ದೃಢವ್ರತ |
ಜೈಗೀಷವ್ಯೋ ಗತೋ ಲೋಕಂ ಶಾಶ್ವತಂ ಬ್ರಹ್ಮಣೋಽಕ್ಷಯಮ್ ॥46॥
ಸಿದ್ಧರು ದೃಢವ್ರತವುಳ್ಳ ದೇವಲನೇ! ಲೋಕದ ಪ್ರಾಣಿಗಳ ಹಿತಕ್ಕಾಗಿ ಹೇಳುತ್ತಿರುವ ನಮ್ಮ ಮಾತನ್ನು ಕೇಳು. ಜೈಗೀಷವ್ಯಮುನಿಯು ನಾಶರಹಿತವಾದ, ಶಾಶ್ವತವಾದ ಬ್ರಹ್ಮಲೋಕಕ್ಕೆ ಹೋಗಿರುತ್ತಾನೆ.
ವೈಶಂಪಾಯನಃ
ಶ್ರುತ್ವಾ ತು ವಚನಂ ತೇಷಾಂ ಸಿದ್ಧಾನಾಂ ಬ್ರಹ್ಮಚಾರಿಣಾಮ್ |
ಅಸಿತೋ ದೇವಲಸ್ತೂರ್ಣಮುತ್ಪಪಾತ ದ್ರುತಂ ತದಾ ॥47॥
ವೈಶಂಪಾಯನ ಬ್ರಹ್ಮಚಾರಿಗಳಾದ ಸಿದ್ಧರ ಮಾತನ್ನು ಕೇಳಿದ ದೇವಲನು ತಕ್ಷಣವೇ ವೇಗವಾಗಿ ಮೇಲಕ್ಕೆ ಹಾರಿದನು.
ತತಃ ಸಿದ್ಧಾಸ್ತ ಊಚುಸ್ತಂ ದೇವಲಂ ಪುನರೇವ ಹ ॥48॥
ಆಗ ಸಿದ್ಧರು ದೇವಲನಿಗೆ ಮತ್ತೆ ಹೇಳುತ್ತಾರೆ.
ಸಿದ್ಧಾಃ
ನ ದೇವಲಗತಿಸ್ತತ್ರ ತವ ಗಂತುಂ ತಪೋಧನ |
ಬ್ರಹ್ಮಣಃ ಸದನಂ ವಿಪ್ರ ಜೈಗೀಷವ್ಯೋ ಯದಾಪ್ತವಾನ್ ॥49॥
ಸಿದ್ಧರು ತಪಸ್ವಿಯೇ! ಜೈಗೀಷವ್ಯಮುನಿಯು ಹೋದ ಬ್ರಹ್ಮನ ಲೋಕಕ್ಕೆ ಅಸಿತ ದೇವಲನು ಹೋಗಲು ಸಾಧ್ಯವಿಲ್ಲ. ಅದು ಅವನ ಗಮನಕ್ಕೆ ಯೋಗ್ಯವಲ್ಲ.

ವೈಶಂಪಾಯನಃ
ತೇಷಾಂ ತದ್ವಚನಂ ಶ್ರುತ್ವಾ ಸಿದ್ಧಾನಾಂ ದೇವಲಸ್ತದಾ |
ಆನುಪೂರ್ವ್ಯೇಣ ಲೋಕಾಂಸ್ತಾನ್ ಸರ್ವಾನವತತಾರ ಚ ॥50॥
ವೈಶಂಪಾಯನ ಆಗ ದೇವಲನು ಅವರ ಮಾತನ್ನು ಕೇಳಿ, ಎಲ್ಲಾ ಲೋಕಗಳಿಂದಲೂ ಕ್ರಮವಾಗಿ ಇಳಿದು ಬಂದನು.
ಸ್ವಂ ಚಾಶ್ರಮಪದಂ ಪುಣ್ಯಮಾಜಗಾಮ ಪತಂಗವತ್ |
ಪ್ರವಿಶನ್ನೇವ ಚಾಪಶ್ಯತ್ ಜೈಗೀಷವ್ಯಂ ಸ ದೇವಲಃ ॥51॥
ಚಿಟ್ಟೆಯ ಹಾಗೆ ಹಾರಿ ತನ್ನ ಪುಣ್ಯವಾದ ಆಶ್ರಮಕ್ಕೆ ಬಂದನು. ತನ್ನ ಆಶ್ರಮಕ್ಕೆ ಪ್ರವೇಶ ಮಾಡುತ್ತಲೇ ದೇವಲನು ಜೈಗೀಷವ್ಯ ಮುನಿಯನ್ನು ಕಂಡನು.
ತತೋ ಬುದ್ಧ್ಯಾ ವ್ಯಗಣಯದ್ ದೇವಲೋ ಧರ್ಮಯುಕ್ತಯಾ |
ದೃಷ್ಟ್ವಾ ಪ್ರಭಾವಂ ತಪಸೋ ಜೈಗೀಷವ್ಯಸ್ಯ ಯೋಗಜಮ್ ॥52॥
ಆಗ ದೇವಲನು ಜೈಗೀಷವ್ಯಮುನಿಯ ಯೋಗದಿಂದುಂಟಾದ ತಪಸ್ಸಿನ ಸಾಮರ್ಥ್ಯದ ಬಗ್ಗೆ ಧರ್ಮದ ಹಿನ್ನೆಲೆಯುಳ್ಳ ಬುದ್ಧಿಯಿಂದ ಆಲೋಚಿಸಿದನು.
ತತೋಽಬ್ರವೀನ್ಮಹಾತ್ಮಾನಂ ಜೈಗೀಷವ್ಯಂ ಸ ದೇವಲಃ |
ವಿನಯಾವನತೋ ರಾಜನ್ನುವಾಚ ಸುಮಹಾತಪಾಃ ॥53॥
ಅನಂತರ ಮಹಾತಪಸ್ವಿಯಾದ ದೇವಲನು ವಿನಯದಿಂದ ತಲೆಬಾಗಿ ಜೈಗೀಷವ್ಯಮುನಿಗೆ ಹೀಗೆ ಹೇಳುತ್ತಾನೆ.
ದೇವಲಃ
ಮೋಕ್ಷಧರ್ಮಂ ಸಮಾಸ್ಥಾತುಮಿಚ್ಛೇಯಂ ಭಗವನ್ನಹಮ್ ॥54॥
ದೇವಲ ಪೂಜ್ಯನೇ! ನಾನು ಮೋಕ್ಷಧರ್ಮವನ್ನು ಆಚರಿಸಲು ಇಷ್ಟಪಡುತ್ತೇನೆ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಉಪದೇಶಂ ಚಕಾರ ಸಃ |
ವಿಧಿಂ ಯೋಗಸ್ಯ ಪರಮಂ ಕಾರ್ಯಾಕಾರ್ಯಂ ಚ ಸರ್ವಶಃ ॥55॥
ಅವನ ಮಾತನ್ನು ಕೇಳಿದ ಆ ಜೈಗೀಷವ್ಯಮುನಿಯು ಅವನಿಗೆ ಯೋಗದ ವಿಧಿಯನ್ನು, ಮಾಡಬೇಕಾದ ಮತ್ತು ಮಾಡಬಾರದ ಕಾರ್ಯಗಳೆಲ್ಲವನ್ನೂ ಉಪದೇಶ ಮಾಡಿದನು.
ಸನ್ನ್ಯಾಸೇ ಕೃತಬುದ್ಧಿಂ ತಂ ತತೋ ದೃಷ್ಟ್ವಾ ಮಹಾತಪಾಃ |
ಸರ್ವಾಶ್ಚಾಸ್ಯ ಕ್ರಿಯಾಶ್ಚಕ್ರೇ ವಿಧಿದೃಷ್ಟೇನ ಕರ್ಮಣಾ ॥56॥
ಸನ್ಯಾಸಸ್ವೀಕರಿಸಲು ನಿಶ್ಚಯಿಸಿಕೊಂಡಿದ್ದ ದೇವಲನನ್ನು ನೋಡಿ ಮಹಾತಪಸ್ವಿಯಾದ ಜೈಗೀಷವ್ಯಮುನಿಯು ಅವನಿಗೆ ಶಾಸ್ತ್ರವಿಧಿಗಳು ವಿಧಿಸಿದ ಎಲ್ಲಾ ಕ್ರಿಯೆಗಳನ್ನು ಮಾಡಿದನು.
ಸನ್ನ್ಯಾಸೇ ಕೃತಬುದ್ಧಿಂ ತಂ ಭೂತಾನಿ ಪಿತೃಭಿಃ ಸಹ |
ತತೋ ದೃಷ್ಟ್ವಾ ಪ್ರರುರುದುಃ ಕೋಽಸ್ಮಾನ್ ಸಂವಿಭಜಿಷ್ಯತಿ ॥57॥
ಸನ್ಯಾಸವನ್ನು ಸ್ವೀಕರಿಸಲು ನಿಶ್ಚಯಿಸಿಕೊಂಡ ದೇವಲನನ್ನು ನೋಡಿ ಪಿತೃಗಳನ್ನೊಳಗೊಂಡ ಎಲ್ಲಾ ಜೀವರು ಜೋರಾಗಿ ಅಳತೊಡಗಿದರು. ಮುಂದೆ ದೇವ-ಪಿತೃಕಾರ್ಯಗಳಿಂದ ವಿಭಾಗಮಾಡಿ, ನಮ್ಮನ್ನು ಯಾರು ಪೂಜಿಸುತ್ತಾರೆ ಎಂಬುದಾಗಿ ಚಿಂತಾಮಗ್ನರಾದರು.
ತೇಷಾಮೇವ ತದಾ ಶ್ರುತ್ವಾ ದುಃಖಾರ್ತಾನಾಂ ಸ ದೇವಲಃ |
ದಿಶೋ ದಶ ವ್ಯಾಹರತಾಂ ಮೋಕ್ಷಂ ತ್ಯಕ್ತುಂ ಮನೋ ದಧೇ ॥58॥
ಆಗ ಹತ್ತುದಿಕ್ಕುಗಳಲ್ಲಿಯೂ ಹೀಗೆ ದುಃಖಿಸುತ್ತಾ ಮಾತನಾಡುತ್ತಿದ್ದ ಜೀವರನ್ನು ನೋಡಿದ ದೇವಲನು ಮೋಕ್ಷವನ್ನು ಬಿಡಲು ನಿಶ್ಚಯಿಸಿಕೊಂಡನು.
ತತಸ್ತು ಫಲಮೂಲಾನಿ ಪತಿತಾನಿ ಚ ಭಾರತ |
ಪುಷ್ಪಾಣ್ಯೋಷಧಯಶ್ಚೈವ ರೋರೂಯಂತೇ ಸಹಸ್ರಶಃ ॥59॥
ಪುನರ್ನೋ ದೇವಲಃ ಕ್ಷುದ್ರೋ ನೂನಂ ಛೇತ್ಸ್ಯತಿ ದುರ್ಮತಿಃ |
ಅಭಯಂ ಸರ್ವಭೂತೇಭ್ಯೋ ಯೋ ದತ್ತ್ವಾ ನಾವಬುಧ್ಯತೇ ॥60॥
ಭರತಕುಲೋದ್ಭವನೇ! ಆಗ ಕೆಳಗೆ ಬಿದ್ದ ಹಣ್ಣುಗಳು, ಗೆಡ್ಡೆಗಳು, ಪುಷ್ಪಗಳು ಎಲ್ಲವೂ ಸಾವಿರಾರು ಸಂಖ್ಯೆಯಲ್ಲಿ ಮತ್ತೆ ಮತ್ತೆ ಅಳತೊಡಗಿದವು. ಅಳುತ್ತಾ ಅವು ಹೀಗೆ ಮಾತನಾಡಿಕೊಳ್ಳುತ್ತಿದ್ದವು- ಕೆಟ್ಟ ಬುದ್ಧಿಯ ಈ ಕ್ಷುದ್ರ ದೇವಲನು ಎಲ್ಲಾ ಜೀವರಿಗೆ ಅಭಯದಾನವನ್ನು ಮಾಡಿ, ಈಗ ನಿಶ್ಚಯವಾಗಿ ನಮ್ಮನ್ನು ನಾಶಮಾಡುತ್ತಾನೆ. ತಾನು ಕೊಟ್ಟ ಅಭಯದಾನವನ್ನು ತಾನೇ ಸ್ಮರಿಸಿಕೊಳ್ಳುವುದಿಲ್ಲ.
ತತೋ ಭೂಯೋ ವ್ಯಗಣಯತ್ ಸ್ವಬುದ್ಧ್ಯಾ ಮುನಿಸತ್ತಮಃ |
ಮೋಕ್ಷೇ ಗಾರ್ಹಸ್ಥ್ಯಧರ್ಮೇ ವಾ ಕಿಂ ನು ಶ್ರೇಯಸ್ಕರಂ ಭವೇತ್ ॥
ಅನಂತರ ಮುನಿಶ್ರೇಷ್ಠನಾದ ದೇವಲನು ಮೋಕ್ಷ ಮತ್ತು ಗೃಹಸ್ಥಧರ್ಮಗಳಲ್ಲಿ ತನಗೆ ಶ್ರೇಯಸ್ಸನ್ನು ಉಂಟುಮಾಡುವಂತಹದ್ದು ಯಾವುದು ಎಂಬುದನ್ನು ವಿಚಾರ ಮಾಡಿದನು.
ಇತಿ ಸಂಚಿಂತ್ಯ ಬಹುಧಾ ದೇವಲೋ ರಾಜಸತ್ತಮ |
ತ್ಯಕ್ತ್ವಾ ಗಾರ್ಹಸ್ಥ್ಯಧರ್ಮಂ ತು ಮೋಕ್ಷಧರ್ಮಮರೋಚಯತ್ ॥62॥

ರಾಜಶ್ರೇಷ್ಠನೇ! ದೇವನು ಹೀಗೆ ಅನೇಕ ರೀತಿಯಲ್ಲಿ ಆಲೋಚಿಸಿ ಗೃಹಸ್ಥ ಧರ್ಮವನ್ನು ಪರಿತ್ಯಾಗಮಾಡಿ ಮೋಕ್ಷಧರ್ಮವನ್ನೇ ಇಷ್ಟಪಟ್ಟನು.
ಏವಮಾದೀನಿ ಸಂಚಿಂತ್ಯ ದೇವಲೋ ನಿಶ್ಚಯಾನ್ವಿತಃ |
ಪ್ರಾಪ್ತವಾನ್ ಪರಮಾಂ ಸಿದ್ಧಿಂ ಪರಂ ಯೋಗಂ ಚ ಭಾರತ ॥63॥
ಭರತಕುಲೋದ್ಭವನೇ! ಹೀಗೆ ಅನೇಕ ರೀತಿಯಲ್ಲಿ ವಿಚಾರಮಾಡಿ ನಿಶ್ಚಯಕ್ಕೊಳಗಾದ ದೇವಲನು ಉತ್ತಮವಾದ ಯೋಗವನ್ನೂ, ಉತ್ತಮವಾದ ಸಿದ್ಧಿಯನ್ನೂ ಪಡೆದನು.
ತತೋ ದೇವಾಃ ಸಮಾಗತ್ಯ ಬೃಹಸ್ಪತಿಪುರೋಗಮಾಃ |
ಜೈಗೀಷವ್ಯಂ ತಪಸ್ಯಂತಂ ಪ್ರಶಶಂಸುರ್ಮನೀಷಿಣಃ ॥64॥
ಆಗ ಬೃಹಸ್ಪತಿಮೊದಲಾದ ದೇವತೆಗಳು ಬಂದು ತಪಸ್ಸನಾಚರಿಸುತ್ತಿದ್ದ ಜೈಗೀಷವ್ಯ ಮುನಿಯನ್ನು ಹೊಗಳಿದರು.
ಅಥಾಬ್ರವೀದ್ ಋಷಿವರೋ ದೇವಾನ್ ವೈ ನಾರದಸ್ತಥಾ |
ಜೈಗೀಷವ್ಯೇ ತಪೋ ನಾಸ್ತಿ ವಿಸ್ಮಾಪಯತಿ ಸೋಽಸಿತಮ್ ॥65॥
ಆಗ ಜ್ಞಾನಿಶ್ರೇಷ್ಠನಾದ ನಾರದನು ಹೇಳುತ್ತಾನೆ : ಜೈಗೀಷವ್ಯನಲ್ಲಿ ತಪಸ್ಸೇ ಇಲ್ಲ! ತನ್ನ ತಪಸ್ಸಿನಿಂದ ಅಸಿತದೇವಲನನ್ನು ಆಶ್ಚರ್ಯಪಡುವಂತೆ ಮಾಡಿದನು ಎಂದು.
ತಮೇವಂವಾದಿನಂ ವೀರಂ ಪ್ರತ್ಯೂಚುಸ್ತ್ರಿದಿವೌಕಸಃ |
ಮೈವಮಿತ್ಯೇವ ಶಂಸಂತೋ ಜೈಗೀಷವ್ಯಂ ಮಹಾಮುನಿಮ್ ॥66॥
ಏವಂಪ್ರಭಾವೋ ಧರ್ಮಾತ್ಮಾ ಜೈಗೀಷವ್ಯಸ್ತಥಾಽಸಿತಃ |
ತಯೋರಿದಂ ಸ್ಥಾನವರಂ ತೀರ್ಥಂ ಚೈವ ಮಹಾತ್ಮನೋಃ ॥67॥
ದೇವತೆಗಳು ಜೈಗೀಷವ್ಯಮುನಿಯನ್ನು ಹೊಗಳುತ್ತಾ, ಹೀಗೆ ಹೇಳುತ್ತಿದ್ದ ನಾರದನಿಗೆ ಉತ್ತರಿಸುತ್ತಾರೆ: `` ಜೈಗೀಷವ್ಯಮುನಿ ಮತ್ತು ಅಸಿತದೇವಲರಿಬ್ಬರೂ ಧಾರ್ಮಿಕರು. ಅವರಿಬ್ಬರಿಗೂ ಸಂಬಂಧಿಸಿಕೊಂಡಿರುವ ಈ ತೀರ್ಥಕ್ಷೇತ್ರವು ಬಹಳ ಪ್ರಸಿದ್ಧವಾಗಿದೆ''.
ತತ್ರಾಪ್ಯುಪಸ್ಪೃಶ್ಯ ತತೋ ಮಹಾತ್ಮಾ
ದತ್ತ್ವಾ ಚ ವಿತ್ತಂ ಹಲಭೃತ್ ದ್ವಿಜೇಭ್ಯಃ |
ಅವಾಪ್ಯ ಧರ್ಮಂ ಪರಮಾರ್ಯಕರ್ಮಾ
ಜಗಾಮ ಸೋಮಸ್ಯ ಮಹತ್ ಸ ತೀರ್ಥಮ್ ॥68॥
ಆ ತೀರ್ಥದಲ್ಲಿಯೂ ಮಹಾತ್ಮನಾದ ಹಲಧಾರಿ ಬಲರಾಮನು ಸ್ನಾನಾದಿಗಳನ್ನು ಮಾಡಿ, ಬ್ರಾಹ್ಮಣರಿಗೆ ವಿಪುಲವಾದ ಸಂಪತ್ತನ್ನು ದಾನ ಮಾಡಿದನು. ಪಾರಮಾರ್ಥಿಕ ಕ್ರಿಯೆಗಳನ್ನು ಆಚರಿಸುತ್ತಾ ಇದ್ದ ಬಲರಾಮನು ಧರ್ಮವನ್ನು ಸಂಪಾದಿಸಿಕೊಂಡು ಅಲ್ಲಿಂದ ಉತ್ತಮವಾದ ಸೋಮತೀರ್ಥಕ್ಕೆ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಜೈಗೀಷವ್ಯಾಸಿತಚರಿತಂ ನಾಮ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ದಧೀಚಿ ಮತ್ತು ಸಾರಸ್ವತರ ಚರಿತ್ರೆಗಳ ವರ್ಣನೆ
ವೈಶಂಪಾಯನಃ
ಯತ್ರೇಜಿವಾನುಡುಪತೀ ರಾಜಸೂಯೇನ ಭಾರತ |
ತಸ್ಮಿನ್ ಸತ್ರೇ ಮಹಾನಾಸೀತ್ ಸಂಗ್ರಾಮಸ್ತಾರಕಾಮಯಃ ॥1॥
ವೈಶಂಪಾಯನ ಭರತಕುಲೋದ್ಭವನೇ! ಯಾವ ತೀರ್ಥದಲ್ಲಿ ಚಂದ್ರನು ರಾಜಸೂಯಯಾಗವನ್ನು ಮಾಡಿದ್ದನೋ, ಆ ತೀರ್ಥದಲ್ಲಿ ನಕ್ಷತ್ರಗಳಲ್ಲಿ ಬಹಳ ಮಹತ್ತರವಾದ ಸಂಗ್ರಾಮವು ನಡೆಯಿತು.
ತತಸ್ತತ್ರಾಪ್ಯುಪಸ್ಪೃಶ್ಯ ದತ್ತ್ವಾ ದಾನಾನಿ ಚಾತ್ಮವಾನ್ |
ಸಾರಸ್ವತಸ್ಯ ಧರ್ಮಾತ್ಮಾ ಮುನೇಸ್ತೀರ್ಥಂ ಜಗಾಮ ಸಃ ॥2॥
ಸ್ವರೂಪಬಲವುಳ್ಳ ಧಾರ್ಮಿಕನಾದ ಬಲರಾಮನು ಅಲ್ಲಿಯೂ ಸ್ನಾನಾದಿಗಳನ್ನು ಮಾಡಿ, ದಾನಾದಿಗಳನ್ನು ಕೊಟ್ಟು ಮುಂದೆ ಸಾರಸ್ವತ ತೀರ್ಥಕ್ಕೆ ಹೋದನು.
ಯತ್ರ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ಮಹಾಯಶಾಃ |
ವೇದಾನಧ್ಯಾಪಯಾಮಾಸ ತದಾ ಸಾರಸ್ವತೋ ಮುನಿಃ ॥3॥
ಆ ಸಾರಸ್ವತತೀರ್ಥದಲ್ಲಿ ಹನ್ನೆರಡು ವರ್ಷಗಳ ಕಾಲ ಮಳೆಬರದೆ ಇದ್ದ ಸಂದರ್ಭದಲ್ಲಿ ಮಹಾತ್ಮನಾದ ಸಾರಸ್ವತ ಮುನಿಯು ವೇದಗಳನ್ನು ಉಪದೇಶಿಸಿದನು.
ಜನಮೇಜಯಃ
ಕಥಂ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ದ್ವಿಜೋತ್ತಮಾನ್ |
ವೇದಾನಧ್ಯಾಪಯಾಮಾಸ ತದಾ ಸಾರಸ್ವತೋ ಮುನಿಃ ॥4॥
ಜನಮೇಜಯ ಹನ್ನೆರಡು ವರ್ಷಗಳ ಕಾಲ ಮಳೆ ಬರದಿರಬೇಕಾದರೆ ಆಗ ಸಾರಸ್ವತಮುನಿಯು ಹೇಗೆ ಬ್ರಾಹ್ಮಣರಿಗೆ ವೇದವನ್ನು ಹೇಳಿಕೊಟ್ಟನು?

ವೈಶಂಪಾಯನಃ
ಆಸೀತ್ ಪೂರ್ವಂ ಮಹಾರಾಜ ಮುನಿರ್ಧೀಮಾನ್ ದ್ವಿಜೋತ್ತಮಃ |
ದಧೀಚಿರಿತಿ ವಿಖ್ಯಾತೋ ಬ್ರಹ್ಮಚಾರೀ ಜಿತೇಂದ್ರಿಯಃ ॥5॥
ವೈಶಂಪಾಯನ ಮಹಾರಾಜನೇ! ಹಿಂದೆ ದಧೀಚಿ ಎಂದು ಪ್ರಸಿದ್ಧನಾದ ಬುದ್ಧಿವಂತನಾದ ಬ್ರಾಹ್ಮಣೋತ್ತಮನು ಇದ್ದನು. ಅವನು ಬ್ರಹ್ಮಚಾರಿಯಾಗಿದ್ದುಕೊಂಡು ಇಂದ್ರಿಯನಿಗ್ರಹವನ್ನು ಹೊಂದಿದ್ದನು.
ತಸ್ಯಾತಿತಪಸಃ ಶಕ್ರೋ ಬಿಭೇತಿ ಸತತಂ ವಿಭೋ |
ನ ಚ ಲೋಭಯಿತುಂ ಶಕ್ಯಃ ಫಲೈರ್ಬಹುವಿಧೈರಪಿ ॥6॥
ವಿಭುವೇ! ಅವನ ತೀವ್ರವಾದ ತಪಸ್ಸಿನಿಂದಾಗಿ ಇಂದ್ರನು ಯಾವಾಗಲೂ ಭಯಗ್ರಸ್ತನಾದನು. ಯಾವುದೇ ವಿಧದ ಫಲಗಳಿಂದಲೂ ದಧೀಚಿಮುನಿಯನ್ನು ಲೋಭಕ್ಕೊಳಪಡಿಸಲು ಇಂದ್ರನಿಗೆ ಸಾಧ್ಯವಾಗಲಿಲ್ಲ.
ಪ್ರಲೋಭನಾರ್ಥೇ ತಸ್ಯಾಥ ಪ್ರಾಹಿಣೋತ್ ಪಾಕಶಾಸನಃ |
ದಿವ್ಯಾಮಪ್ಸರಸಾಂ ಮುಖ್ಯಾಂ ದರ್ಶನೀಯಾಮಲಂಬುಸಾಮ್ ॥7॥
ಇಂದ್ರನು ಅವನನ್ನು ಪ್ರಲೋಭನೆಗೊಳಪಡಿಸಲಿಕ್ಕಾಗಿ ಅಲೌಕಿಕ ಸುಂದರಳಾದ ಅಲಂಬುಸಾ ಎಂಬ ಮುಖ್ಯ ಅಪ್ಸರಸ್ತ್ರೀಯನ್ನು ಕಳುಹಿಸಿದನು.
ತಸ್ಯ ತರ್ಪಯತೋ ದೇವಾನ್ ಸರಸ್ವತ್ಯಾಂ ಮಹಾತ್ಮನಃ |
ಸಮೀಪತೋ ಮಹಾರಾಜ ಸೋಪಾತಿಷ್ಠತ ಭಾಮಿನೀ ॥8॥
ಮಹಾತ್ಮನಾದ ದಧೀಚಿಮುನಿಯು ಸರಸ್ವತೀನದಿಯಲ್ಲಿ ದೇವತೆಗಳಿಗೆ ತರ್ಪಣಕೊಡುತ್ತಿದ್ದ ಸಂದರ್ಭದಲ್ಲಿ ಆ ಸುಂದರ ಅಪ್ಸರಸ್ತ್ರೀಯು ಅವನ ಸಮೀಪಕ್ಕೆ ಬಂದಳು.
ತಾಂ ದಿವ್ಯವಪುಷಂ ದೃಷ್ಟ್ವಾ ತಸ್ಯರ್ಷೇರ್ಭಾವಿತಾತ್ಮನಃ |
ರೇತಃ ಸ್ಕನ್ನಂ ಸರಸ್ವತ್ಯಾಂ ತತ್ ಸಾ ಜಗ್ರಾಹ ನಿಮ್ನಗಾ ॥9॥
ಅವಳ ಅಲೌಕಿಕಶರೀರವನ್ನು ನೋಡಿ ಪರಿಪಕ್ವಮನಸ್ಸುಳ್ಳ ಆ ಋಷಿಯ ರೇತಸ್ಸು ಸರಸ್ವತೀನದಿಯಲ್ಲಿ ಬಿದ್ದಿತು. ಅದನ್ನು ಆ ಸರಸ್ವತೀನದಿಯು ಸ್ವೀಕರಿಸಿದಳು.
ಕುಕ್ಷೌ ಚಾಪ್ಯದಧದ್ದೃಷ್ಟ್ವಾ ತದ್ರೇತಃ ಪುರುಷರ್ಷಭ |
ಸಾ ದಧಾರ ಚ ತಂ ಗರ್ಭಂ ಪುತ್ರಹೇತೋರ್ಮಹಾತ್ಮನಃ ॥10॥
ಪುರುಷಶ್ರೇಷ್ಠನೇ! ಬಿದ್ದ ಆ ರೇತಸ್ಸನ್ನು ನೋಡಿದ ಸರಸ್ವತಿಯು ಅದನ್ನು ತನ್ನ ಹೊಟ್ಟೆಯಲ್ಲಿ ಧರಿಸಿಕೊಂಡಳು. ಮಹಾತ್ಮನಾದ ದಧೀಚಿಗೆ ಪುತ್ರನನ್ನು ಹೊಂದುವುದಕ್ಕಾಗಿ ಸರಸ್ವತಿಯು ಗರ್ಭವತಿಯಾದಳು.
ಸುಷುವೇ ಚಾಪಿ ಸಮಯೇ ಪುತ್ರಂ ಸಾರಸ್ವತಂ ವರಮ್ |
ಜಗಾಮ ಪುತ್ರಮಾದಾಯ ತಮೃಷಿಂ ಪ್ರತಿ ಚ ಪ್ರಭೋ ॥11॥
ಯೋಗ್ಯವಾದ ಕಾಲದಲ್ಲ ಉತ್ತಮವಾದ ಸಾರಸ್ವತ ಎಂಬ ಮಗನನ್ನು ಹಡೆದಳು. ಪ್ರಭುವೇ! ಮಗುವನ್ನು ಹಿಡಿದುಕೊಂಡು ದಧೀಚಿಋಷಿಯ ಸಮೀಪಕ್ಕೆ ಬಂದಳು.
ಋಷಿಸಂಸದಿ ತಂ ದೃಷ್ಟ್ವಾ ದಧೀಚಿಮೃಷಿಸತ್ತಮಮ್ |
ತತಃ ಪ್ರೋವಾಚ ರಾಜೇಂದ್ರ ದದತೀ ಪುತ್ರಮಸ್ಯ ವೈ ॥12॥
ಋಷಿಗಳ ಸಭೆಯಲ್ಲಿ ಕುಳಿತಿದ್ದ, ಋಷಿಶ್ರೇಷ್ಠನಾದ ದಧೀಚಿಯನ್ನು ನೋಡಿ ಅವನಿಗೆ ಮಗನನ್ನು ಕೊಡುತ್ತಾ ಹೀಗೆ ಹೇಳಿದಳು.
ಸರಸ್ವತೀ ನದೀ
ಬ್ರಹ್ಮರ್ಷೇ ತವ ಪುತ್ರೋಽಯಂ ತ್ವದ್ಭಕ್ತ್ಯಾ ಧಾರಿತೋ ಮಯಾ ॥13॥
ಸರಸ್ವತೀನದಿ ಬ್ರಹ್ಮಜ್ಞಾನಿಯೇ! ಇವನು ನಿನ್ನ ಮಗ. ನಿನ್ನ ಮೇಲಿನ ಭಕ್ತಿಯಿಂದಾಗಿ ನಾನು ನನ್ನ ಗರ್ಭದಲ್ಲಿ ಧರಿಸಿಕೊಂಡಿದ್ದೆನು.
ದೃಷ್ಟ್ವಾ ತೇಽಪ್ಸರಸಂ ರೇತೋ ಯತ್ ಸ್ಕನ್ನಂ ಪ್ರಾಗಲಂಬುಸಾಮ್ |
ತತ್ ಕುಕ್ಷಿಣಾಽಹಂ ಬ್ರಹ್ಮರ್ಷೇ ಭಕ್ತ್ಯಾ ಧೃತವತೀ ತವ ॥14॥
ಅಲಂಬುಸಾ ಅಪ್ಸರಸ್ತ್ರೀಯನ್ನು ನೋಡಿ ನಿನ್ನಿಂದ ರೇತಸ್ಖಲನವಾದುದನ್ನು ನೋಡಿ ಆ ರೇತಸ್ಸನ್ನು ನಿನ್ನ ಮೇಲಿನ ಭಕ್ತಿಯಿಂದ ನಾನು ನನ್ನ ಹೊಟ್ಟೆಯಲ್ಲಿ ಧರಿಸಿದೆ.
ನ ವಿನಾಶಮಿದಂ ಗಚ್ಛೇತ್ ತ್ವತ್ತೇಜ ಇತಿ ನಿಶ್ಚಯಾತ್ ॥15॥
ನಿನ್ನ ತೇಜಸ್ಸು ನಾಶವಾಗಬಾರದು ಎಂಬುದೇ ನನ್ನ ನಿಶ್ಚಯವಾಗಿತ್ತು.
ಪ್ರತಿಗೃಹ್ಣೀಷ್ವ ಪುತ್ರಂ ಸ್ವಂ ಮಯಾ ದತ್ತಮನಿಂದಿತಮ್ ॥16॥
ಯಾವುದೇ ಕಳಂಕವಿಲ್ಲದ ಈ ಮಗನನ್ನು ನಾನು ಕೊಡುತ್ತಿದ್ದೇನೆ. ಸ್ವೀಕರಿಸು.
ವೈಶಂಪಾಯನಃ
ಇತ್ಯುಕ್ತಃ ಪ್ರತಿಜಗ್ರಾಹ ಪ್ರೀತಿಂ ಚಾವಹದುತ್ತಮಾಮ್ |
ಪಿತ್ರುವಚ್ಚೋಪಜಿಘ್ರತ್ ತಂ ಮೂರ್ಧ್ನಿ ಪ್ರೇಮ್ಣಾ ದ್ವಿಜೋತ್ತಮಃ ॥17॥
ವೈಶಂಪಾಯನ ಹೀಗೆ ಹೇಳಿದಾಗ ದಧೀಚಿಯು ಮಗನನ್ನು ಸ್ವೀಕರಿಸಿದನು ಮತ್ತು ಬಹಳ ಆನಂದವನ್ನು ಹೊಂದಿದನು. ಬ್ರಾಹ್ಮಣೋತ್ತಮನಾದ ಆ ಋಷಿಯು, ತಂದೆಯು ಮಗನ ನೆತ್ತಿಯನ್ನು ಆಘ್ರಾಣಿಸುವಂತೆ ತಾನೂ ಈ ಮಗನ ತಲೆಯನ್ನು ಮೂಸಿದನು.
ಪರಿಷ್ವಜ್ಯ ಚಿರಂ ಕಾಲಂ ತದಾ ಭರತಸತ್ತಮ |

ಸರಸ್ವತ್ಯೈ ವರಂ ಪ್ರಾದಾತ್ ಪ್ರೀಯಮಾಣೋ ದ್ವಿಜೋತ್ತಮಃ ॥18॥
ಭರತಕುಲಶ್ರೇಷ್ಠನೇ! ತುಂಬ ಹೊತ್ತಿನವರೆಗೆ ಆ ಮಗನನ್ನು ಆಲಿಂಗಿಸಿ, ಬಹಳವಾಗಿ ಸಂತೋಷಪಟ್ಟು ಸರಸ್ವತೀನದಿಗೆ ವರವನ್ನು ಕೊಟ್ಟನು.
ದಧೀಚಃ
ವಿಶ್ವೇ ದೇವಾಃ ಸಪಿತರೋ ಗಂಧರ್ವಾಪ್ಸರಸಾಂ ಗಣಾಃ ।
ತೃಪ್ತಿಂ ಯಾಸ್ಯಂತಿ ಸುಭಗೇ ತರ್ಪ್ಯಮಾಣಾಸ್ತ್ವದಂಭಸಾ ॥19॥
ದಧೀಚಿ ಭಾಗ್ಯವಂತಳೇ! ನಿನ್ನ ನೀರಿನಿಂದ ತರ್ಪಣವನ್ನು ಸ್ವೀಕರಿಸಿ ವಿಶ್ವೇದೇವತೆಗಳು, ಪಿತೃಗಳು, ಗಂಧರ್ವರು, ಅಪ್ಸರಸ್ತ್ರೀಯರು ಇವರೆಲ್ಲರೂ ತೃಪ್ತರಾಗಲಿ.
ವೈಶಂಪಾಯನಃ
ಇತ್ಯುಕ್ತ್ವಾ ಸ ತುಷ್ಟಾವ ವಚೋಭಿರ್ವಿವಿಧೈಸ್ತದಾ ।
ಪ್ರೀತಃ ಪರಮಹೃಷ್ಟಾತ್ಮಾ ಯಥಾವಚ್ಛೃಣು ಪಾರ್ಥಿವ ॥20॥
ವೈಶಂಪಾಯನ ಸರಸ್ವತಿಗೆ ಹೀಗೆ ಹೇಳಿ, ಮನಸ್ಸಿನಲ್ಲಿ ತುಂಬಾ ಸಂತೋಷವನ್ನು ಹೊಂದಿದ ಮುನಿಯು ವಿವಿಧ ಮಾತುಗಳಿಂದ ಅವಳನ್ನು ಸ್ತುತಿಸಿದನು.
ದಧೀಚಃ
ಪ್ರಸೃತಾಽಸಿ ಮಹಾಭಾಗೇ ಸರಸೋ ಬ್ರಹ್ಮಣಃ ಪುರಾ ।
ಜಾನಂತಿ ತ್ವಾಂ ಸರಿಚ್ಛ್ರೇಷ್ಠೇ ಮುನಯಃ ಸಂಶಿತವ್ರತಾಃ ॥21॥
ದಧೀಚಿ ಮಹಾಭಾಗ್ಯವಂತಳೇ! ನೀನು ಹಿಂದೆ ಬ್ರಹ್ಮಸರೋವರದಿಂದ ಹರಿದು ಬಂದವಳಾಗಿರುವಿ. ನದಿಗಳಲ್ಲಿ ಶ್ರೇಷ್ಠಳಾದವಳೇ, ಕಠಿಣವ್ರತದೀಕ್ಷಿತರಾದ ಮುನಿಗಳು ನಿನ್ನ ಬಗ್ಗೆ ತಿಳಿದುಕೊಂಡಿದ್ದಾರೆ.
ಮಮ ಪ್ರಿಯಕರೀ ಚಾಪಿ ಸತತಂ ಪ್ರಿಯದರ್ಶನೇ ।
ತಸ್ಮಾತ್ ಸಾರಸ್ವತಂ ಪುತ್ರಮದಧಾ ವರವರ್ಣಿನಿ ॥22॥
ಮನೋಹರದರ್ಶನವುಳ್ಳವಳೇ! ಯಾವಾಗಲೂ ನನಗೆ ಪ್ರಿಯವಾದುದನ್ನು ಮಾಡುತ್ತಿರುವಿ. ಉತ್ತಮವರ್ಣವುಳ್ಳವಳೇ (ಸುಂದರಿಯೇ)! ಆದುದರಿಂದಲೇ ನೀನು ನನಗೆ ಮಗನನ್ನು ಕೊಟ್ಟಿರುವಿ.
ತವೈವ ನಾಮ್ನಾ ಪ್ರಥಿತಃ ಪುತ್ರಸ್ತೇ ಲೋಕಭಾವನಃ ।
ಸಾರಸ್ವತ ಇತಿ ಖ್ಯಾತೋ ಭವಿಷ್ಯತಿ ಮಹಾತಪಾಃ ॥23॥
ಲೋಕಪ್ರಸಿದ್ಧನಾದ ನಿನ್ನ ಮಗನು ನಿನ್ನ ಹೆಸರಿನಿಂದಲೇ ಸಾರಸ್ವತ ಎಂಬ ಹೆಸರಿನಿಂದ ಪ್ರಸಿದ್ಧನಾಗುವನು ಮತ್ತು ಮಹಾತಪಸ್ವಿಯೂ ಆಗುವನು.
ಏಷ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ದ್ವಿಜೋತ್ತಮಾನ್ ।
ಸಾರಸ್ವತೋ ಮಹಾಭಾಗೇ ವೇದಾನಧ್ಯಾಪಯಿಷ್ಯತಿ ॥24॥
ಮಹಾಭಾಗ್ಯವಂತಳೇ! ಇವನು ಮುಂದೆ ಹನ್ನೆರಡುವರ್ಷಗಳ ಬರಗಾಲ ಬಂದಾಗ ಬ್ರಾಹ್ಮಣರಿಗೆ ವೇದಾಧ್ಯಯನವನ್ನು ಮಾಡಿಸುವನು.
ಪುಣ್ಯಾಭ್ಯಶ್ಚ ಸರಿದ್ಭ್ಯಸ್ತ್ವಂ ಮತಾ ಪುಣ್ಯತಮಾ ಶುಭೇ ।
ಭವಿಷ್ಯಸಿ ಮಹಾಭಾಗೇ ಮತ್ಪ್ರಸಾದಾತ್ ಸರಸ್ವತಿ ॥25॥
ಮಹಾಭಾಗಳೇ! ಸರಸ್ವತಿಯೇ! ನನ್ನ ಅನುಗ್ರಹದಿಂದ ನೀನು ಪುಣ್ಯನದಿಗಳಲ್ಲೆಲ್ಲಾ ಅತ್ಯಂತ ಪುಣ್ಯತಮಳು ಆಗುವಿ.
ವೈಶಂಪಾಯನಃ
ಏವಂ ಸಾ ಸಂಸ್ತುತಾ ತೇನ ವರಂ ಲಬ್ಧ್ವಾ ಮಹಾನದೀ ।
ಪುತ್ರಮಾದಾಯ ಮುದಿತಾ ಜಗಾಮ ಭರತರ್ಷಭ ॥26॥
ವೈಶಂಪಾಯನ ಭರತೋತ್ತಮನೇ! ಮುನಿಯು ಹೀಗೆ ಅವಳನ್ನು ಸ್ತುತಿಮಾಡಿ ವರವನ್ನು ಕೊಟ್ಟಾಗ, ಮಹಾನದಿಯಾದ ಸರಸ್ವತಿಯು ಮಗನನ್ನು ತೆಗೆದುಕೊಂಡು ಸಂತೋಷದಿಂದ ಹೋದಳು.
ಏತಸ್ಮಿನ್ನೇವ ಕಾಲೇ ತು ವಿರೋಧೇ ದೇವದಾನವೈಃ ।
ಶಕ್ರಃ ಪ್ರಹರಣಾನ್ವೇಷೀ ತ್ರೀನ್ ಲೋಕಾನ್ ವಿಚಚಾರ ಹ ॥27॥
ಇದೇ ಸಮಯದಲ್ಲಿ ದೇವತೆಗಳು ಮತ್ತು ದೈತ್ಯರಿಗೆ ವಿರೋಧವುಂಟಾದ್ದರಿಂದ ಇಂದ್ರನು ಯೋಗ್ಯವಾದ ಆಯುಧವನ್ನು ಹುಡುಕುತ್ತಾ, ಮೂರು ಲೋಕಗಳಲ್ಲಿ ಸಂಚರಿಸಿದನು.
ನ ಚೋಪಲೇಭೇ ಭಗವಾನ್ ಶಕ್ರಃ ಪ್ರಹರಣಂ ತದಾ ।
ಯದ್ವೈ ತೇಷಾಂ ಭವೇದ್ಯೋಗ್ಯಂ ವಧಾಯ ವಿಬುಧದ್ವಿಷಾಮ್ ॥28॥
ಭಗವಾನ್ ಇಂದ್ರನು ಆಯುಧವನ್ನು ಹೊಂದಲಿಲ್ಲ. ಆಯುಧವಿದ್ದರೇನೇ ಅವನಿಗೆ ತನ್ನ ಶತ್ರುಗಳನ್ನು ಸದೆಬಡಿಯಬಹುದಿತ್ತು.
ತತೋಽಬ್ರವೀತ್ ಸುರಾನ್ ಶಕ್ರೋ ನ ಮೇ ಶಕ್ಯಾಃ ಸುರಾರಯಃ ।
ಋತೇಽಸ್ಥಿಭಿರ್ದಧೀಚಸ್ಯ ನಿಹಂತುಂ ದೇವಸತ್ತಮಾಃ ॥29॥
ಆಗ ಇಂದ್ರನು ದೇವತೆಗಳನ್ನು ಕುರಿತು ಹೀಗೆ ಹೇಳುತ್ತಾನೆ: ``ದೇವೋತ್ತಮರೇ! ದಧೀಚಮುನಿಯ ಅಸ್ಥಿಗಳು ಸಿಕ್ಕಲಿಲ್ಲವಾದರೆ ನನಗೆ ದೈತ್ಯರನ್ನು ಕೊಲ್ಲಲು ಸಾಧ್ಯವಾಗುವುದಿಲ್ಲ.
ತಸ್ಮಾದ್ ಯತ್ನಾದ್ ಋಷಿಶ್ರೇಷ್ಠೋ ಯಾಚ್ಯತಾಂ ಕಾರ್ಯಸಿದ್ಧಯೇ ।

ದಧೀಚಾಸ್ಥೀನಿ ದೇಹೀತಿ ತೈರ್ವಧಿಷ್ಯೇ ರಣೇ ರಿಪೂನ್ ॥30॥
ಆದ್ದರಿಂದ ನಮ್ಮ ಕಾರ್ಯಸಾಧನೆಗಾಗಿ ಪ್ರಯತ್ನಪೂರ್ವಕವಾಗಿ ದಧೀಚಮುನಿಯನ್ನು ``ದಧೀಚಮುನಿಯೇ! ನಿನ್ನ ದೇಹದ ಎಲುಬುಗಳನ್ನು ಕೊಡು'' ಎಂದು ಬೇಡಬೇಕು. ಆ ಎಲುಬುಗಳಿಂದ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವೆನು''.
ಸ ದೇವೈರ್ಯಾಚಿತೋಽಸ್ಥೀನಿ ಯತ್ನಾದ್ ಋಷಿವರಸ್ತದಾ |
ಪ್ರಾಣತ್ಯಾಗಂ ಕುರುಶ್ರೇಷ್ಠ ಚಕಾರೈವಾವಿಚಾರಯನ್ ॥31॥
``ನಮಗೆ ಸಹಾಯವನ್ನು ಮಾಡು'' ಎಂದು ದೇವತೆಗಳು ಬೇಡಿಕೊಂಡಾಗ ದಧೀಚಮುನಿಯು ಯಾವುದೇ ವಿಚಾರವನ್ನು ಮಾಡದೆ ತನ್ನ ಪ್ರಾಣವನ್ನು ಬಿಟ್ಟನು.
ಸ ಲೋಕಾನಕ್ಷಯಾನ್ ಪ್ರಾಪ್ತೋ ದೇವಪ್ರಿಯಕರಸ್ತದಾ |
ತಸ್ಯಾಸ್ಥೀನಿ ತತಃ ಶಕ್ರಃ ಸಂಪ್ರಹೃಷ್ಟಮನಾಸ್ತದಾ ॥32॥
ಕಾರಯಾಮಾಸ ದಿವ್ಯಾನಿ ತದಾ ಪ್ರಹರಣಾನ್ಯುತ |
ವಜ್ರಾಣಿ ಚ ಗದಾಶ್ಚೈವ ಗುರೂನ್ ದಂಡಾಂಶ್ಚ ಪುಷ್ಕಲಾನ್ ॥33॥
ದೇವತೆಗಳಿಗೆ ಪ್ರಿಯವಾದುದನ್ನು ಮಾಡಿದುದರ ಫಲವಾಗಿ ಅವನು ನಾಶವಾಗದ ಅಕ್ಷಯಲೋಕಗಳನ್ನು ಹೊಂದುತ್ತಾನೆ. ಸಂತುಷ್ಟನಾದ ಇಂದ್ರನು ದಧೀಚಮುನಿಯ ಎಲುಬುಗಳಿಂದ ವಜ್ರ, ಭಾರವಾದ ಗದೆ, ಸಮೃದ್ಧವಾದ ದಂಡ ಮೊದಲಾದ ಆಯುಧಗಳನ್ನು ಮಾಡಿಸಿಕೊಳ್ಳುತ್ತಾನೆ.
ಸ ಹಿ ತೀವ್ರೇಣ ತಪಸಾ ಸಂವೃತ್ತಃ ಪರಮರ್ಷಿಣಾ |
ಪ್ರಜಾಪತಿಸುತೇನಾಥ ಭೃಗುಣಾ ಲೋಕಭಾವನಃ ॥34॥
ಅತಿಕಾಯಃ ಸ ತೇಜಸ್ವೀ ಲೋಕಸಾರೋ ವಿನಿರ್ಮಿತಃ |
ಜಜ್ಞೇ ಶೈಲಗುರುಃ ಪ್ರಾಂಶುರ್ಮಹಿಮ್ನಾ ಪ್ರಥಿತಃ ಪ್ರಭುಃ ॥35॥
ನಿತ್ಯಮುದ್ವಿಜತೇ ಚಾಸ್ಯ ತೇಜಸಾ ಪಾಕಶಾಸನಃ ॥36॥
ಆ ದಧೀಚನಾದರೂ ಮಹಾತಪಸ್ಸಿನಿಂದ ಕೂಡಿದ, ಬ್ರಹ್ಮಪುತ್ರನಾದ ಭೃಗುವಿನಿಂದ ಜನಿಸಿದವನು. ಲೋಕಕ್ಕೆ ಕ್ಷೇಮವನ್ನು ಉಂಟುಮಾಡುವವನಾಗಿದ್ದನು. ವಿಶಾಲವಾದ ಶರೀರವನ್ನು ಹೊಂದಿದ್ದನು. ಸಕಲಲೋಕಗಳ ಸಾರವು ಒಂದೆಡೆ ಸೇರಿ ಇವನು ಜನಿಸಿದಂತಿತ್ತು. ಪರ್ವತದಂತೆ ಭಾರವಾಗಿದ್ದನು ಮತ್ತು ಎತ್ತರವಾದ ಶರೀರವನ್ನು ಪಡೆದಿದ್ದನು. ತನ್ನ ಮಹಿಮೆಯಿಂದಾಗಿ ಲೋಕದಲ್ಲಿ ಪ್ರಸಿದ್ಧನಾಗಿದ್ದನು. ಅವನ ತೇಜಸ್ಸಿನಿಂದಾಗಿ ಇಂದ್ರನು ಯಾವಾಗಲೂ ಉದ್ವೇಗಕ್ಕೆ ಒಳಗಾಗುತ್ತಿದ್ದನು.
ತೇನ ವಜ್ರೇಣ ಭಗವಾನ್ ಮಂತ್ರಯುಕ್ತೇನ ಭಾರತ |
ವಿಚಕರ್ತ ವಿಸೃಷ್ಟೇನ ಬ್ರಹ್ಮತೇಜೋದ್ಭವೇನ ಚ ॥37॥
ದೈತ್ಯದಾನವವೀರಾಣಾಂ ಜಘಾನ ನವತೀರ್ನವ ॥38॥
ಹೀಗೆ ಬ್ರಹ್ಮತೇಜಸ್ಸಿನಿಂದ ಹುಟ್ಟಿದ ಹಾಗೂ ಇಂದ್ರನಿಂದ ಮಂತ್ರೋಚ್ಚಾರಣಪೂರ್ವಕವಾಗಿ ಪ್ರಯೋಗಿಸಲ್ಪಟ್ಟ ವಜ್ರಾಯುಧದಿಂದ ಎಂಟುನೂರ ಹತ್ತು ದೈತ್ಯ-ದಾನವವೀರರನ್ನು ಕೊಂದನು.
ಅಥ ಕಾಲೇ ವ್ಯತಿಕ್ರಾಂತೇ ಮಹತ್ಯತಿಭಯಂಕರೀ |
ಅನಾವೃಷ್ಟಿರನುಪ್ರಾಪ್ತಾ ರಾಜನ್ ದ್ವಾದಶವಾರ್ಷಿಕೀ ॥39॥
ರಾಜನೇ! ಹೀಗೆ ಕಾಲವು ಕಳೆದುಹೋದಾಗ ಅತಿಭಯಂಕರವಾದ ಹನ್ನೆರಡು ವರ್ಷಗಳ ಬರಗಾಲವು ಬಂದೊದಗಿತು.
ತಸ್ಯಾಂ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ಮಹರ್ಷಯಃ |
ವೃತ್ತ್ಯರ್ಥಂ ಪ್ರಾದ್ರವನ್ ರಾಜನ್ ಕ್ಷುಧಾರ್ತಾಃ ಸರ್ವತೋದಿಶಃ ॥40॥
ರಾಜನೇ! ಆ ಹನ್ನೆರಡುವರ್ಷಗಳ ಬರಗಾಲದಲ್ಲಿ ಹಸಿದ ಮಹರ್ಷಿಗಳು ತಮ್ಮ ಜೀವನೋಪಾಯವನ್ನು ಹುಡುಕುತ್ತಾ ಎಲ್ಲಾ ದಿಕ್ಕುಗಳಿಗೂ ಓಡತೊಡಗಿದರು.
ದಿಗ್ಭ್ಯಸ್ತಾನ್ ಪ್ರದ್ರುತಾನ್ ದೃಷ್ಟ್ವಾ ಮುನಿಃ ಸಾರಸ್ವತಸ್ತದಾ |
ಗಮನಾಯ ಮನಶ್ಚಕ್ರೇ ತಂ ಪ್ರೋವಾಚ ಸರಸ್ವತೀ ॥41॥
ಎಲ್ಲಾ ದಿಕ್ಕುಗಳಲ್ಲಿ ಓಡುತ್ತಿದ್ದ ಆ ಮುನಿಗಳನ್ನು ನೋಡಿದ ಸಾರಸ್ವತ ಮುನಿಯು ತಾನೂ ಕೂಡ ಹೋಗಲು ಇಚ್ಛಿಸಿದನು. ಆಗ ಸರಸ್ವತಿಯು ಅವನಿಗೆ ಹೀಗೆ ಹೇಳುತ್ತಾಳೆ.
ನ ಗಂತವ್ಯಮಿತಃ ಪುತ್ರ ತವಾಹಾರಮಹಂ ಸದಾ |
ದಾಸ್ಯಾಮಿ ಮತ್ಸ್ಯಪ್ರವರಾನ್ ಉಷ್ಯತಾಮಿತಿ ಭಾರತ ॥42॥
ಮಗನೇ! ನೀನು ಇಲ್ಲಿಂದ ಹೋಗುವುದು ಬೇಡ. ನಿನಗೆ ನಾನು ಆಹಾರವನ್ನು ಯಾವಾಗಲೂ ಕೊಡುವೆನು. ನಿನಗೆ ತಿನ್ನಲು ಒಳ್ಳೆಯ ಮೀನುಗಳನ್ನು ಕೊಡುವೆನು. ನೀನು ಇಲ್ಲಿಯೇ ವಾಸಮಾಡು, ಎಂದು.
ಇತ್ಯುಕ್ತಸ್ತರ್ಪಯಾಮಾಸ ಸ ಪಿತೄನ್ ದೇವತಾಸ್ತಥಾ |
ಆಹಾರಮಕರೋನ್ನಿತ್ಯಂ ಪ್ರಾಣಾನ್ ವೇದಾಂಶ್ಚ ಧಾರಯನ್ ॥43॥
ಹೀಗೆ ಹೇಳಿದಾಗ, ಸಾರಸ್ವತಮುನಿಯು ಪಿತೃದೇವತೆಗಳನ್ನು ನಿತ್ಯದಲ್ಲಿಯೂ ತೃಪ್ತಿಪಡಿಸುತ್ತಾ, ತನ್ನ ಆಹಾರವನ್ನು ಸಂಪಾದಿಸಿಕೊಂಡು ಪ್ರಾಣವನ್ನೂ, ವೇದಗಳನ್ನೂ ರಕ್ಷಿಸಿ ಧರಿಸಿಕೊಂಡನು.
ಅಥ ತಸ್ಯಾಮತೀತಾಯಾಮನಾವೃಷ್ಟ್ಯಾಂ ಮಹರ್ಷಯಃ |
ಅನ್ಯೋನ್ಯಂ ಪರಿಪಪ್ರಚ್ಛುಃ ಪುನಃ ಸ್ವಾಧ್ಯಾಯಕಾರಣಾತ್ ॥44॥
ಅನಂತರ ಆ ಬರಗಾಲವು ಮುಗಿದುಹೋಗಲು ದೇವತೆಗಳು ಪುನಃ ತಮ್ಮ ಅಧ್ಯಯನದ ಬಗ್ಗೆ ಪರಸ್ಪರವಾಗಿ ಕೇಳಿಕೊಂಡರು.

ತೇಷಾಂ ಕ್ಷುಧಾಪರೀತಾನಾಂ ನಷ್ಟಾ ವೇದಾ ವಿಧಾವತಾಮ್ |
ಸರ್ವೇಷಾಮೇವ ರಾಜೇಂದ್ರ ನ ಕಿಂಚಿತ್ ಪ್ರತಿಭಾತಿ ಹ ॥45॥
ರಾಜೇಂದ್ರನೇ! ಹಸಿವಿನಿಂದ ಕಂಗೆಟ್ಟು ಓಡುತ್ತಿದ್ದ ಅವರಲ್ಲಿ ಇದ್ದ ವೇದಗಳು ನಾಶವಾಗಿದ್ದವು. ಅವರಿಗೆ ಯಾವುದೂ ಸ್ಮರಣೆಗೆ ಬರಲಿಲ್ಲ.
ಅಥ ಕಶ್ಚಿದ್ ಋಷಿಸ್ತೇಷಾಂ ಸಾರಸ್ವತಮುಪೇಯಿವಾನ್ |
ಕುರ್ವಾಣಂ ಸಂಶಿತಾತ್ಮಾನಂ ಸ್ವಾಧ್ಯಾಯಂ ಮುನಿಪುಂಗವಮ್ ॥46॥
ಅನಂತರ ಯಾವನೋ ಒಬ್ಬ ಋಷಿಯು ಸಾರಸ್ವತಮುನಿಯ ಸಮೀಪಕ್ಕೆ ಬಂದನು. ಮುನಿಶ್ರೇಷ್ಠನಾದ ಸಾರಸ್ವತಮುನಿಯು ಆಗ ವ್ರತದೀಕ್ಷಿತನಾಗಿ ಸ್ವಾಧ್ಯಾಯವನ್ನು ಮಾಡುತ್ತಿದ್ದನು.
ಸ ಗತ್ವಾSSಚಷ್ಟ ತೇಭ್ಯಶ್ಚ ಸಾರಸ್ವತಮಿತಿ ಪ್ರಭುಮ್ |
ಸ್ವಾಧ್ಯಾಯಮಮರಪ್ರಖ್ಯಂ ಕುರ್ವಾಣಂ ವಿಜನೇ ವನೇ ॥47॥
ಆ ಋಷಿಯು ಉಳಿದ ಋಷಿಗಳಿಗೆ, ದೇವತುಲ್ಯವಾದ ಕಾಂತಿಯುಳ್ಳ ಸಾರಸ್ವತಮುನಿಯು ನಿರ್ಜನಪ್ರದೇಶದಲ್ಲಿ ಸ್ವಾಧ್ಯಾಯವನ್ನು ಮಾಡುತ್ತಿರುವ ಬಗ್ಗೆ ಹೇಳಿದನು.
ತತಃ ಸರ್ವೇ ಸಮಾಜಗ್ಮುಸ್ತತ್ರ ರಾಜನ್ ಮಹರ್ಷಯಃ |
ಸಾರಸ್ವತಂ ಮುನಿಶ್ರೇಷ್ಠಮಿದಮೂಚುಃ ಸಮಾಗತಾಃ ॥48॥
ಅಸ್ಮಾನಧ್ಯಾಪಯಸ್ವೇತಿ ತಾನುವಾಚ ತತೋ ಮುನಿಃ |
ಶಿಷ್ಯತ್ವಮುಪಗಚ್ಛಧ್ವಂ ವಿಧಿನಾ ಚ ಮಮೇತ್ಯುತ ॥49॥
ರಾಜನೇ! ಅನಂತರ ಎಲ್ಲಾ ಋಷಿಗಳು ಅಲ್ಲಿಗೆ ಬಂದರು. ಬಂದ ಎಲ್ಲಾ ಋಷಿಗಳು ಸಾರಸ್ವತಮುನಿಗೆ ನಮಗೂ `ಅಧ್ಯಯನವನ್ನು ಮಾಡಿಸು' ಎಂದು ಹೇಳಿದರು. ಆಗ ಸಾರಸ್ವತಮುನಿಯು ಅವರಿಗೆ `ವಿಧಿವಿಹಿತಕ್ರಮದಲ್ಲಿ ನನ್ನ ಶಿಷ್ಯತ್ವವನ್ನು ಸ್ವೀಕರಿಸಿ' ಎಂದು ಹೇಳಿದನು.
ತತೋSಬ್ರುವೀದ್ ಋಷಿಗಣೋ ಬಾಲಸ್ತ್ವಮಸಿ ಪುತ್ರಕ |
ಸ ತಾನಾಹ ನ ಮೇ ಧರ್ಮೋ ನಶ್ಯೇದಿತಿ ತತೋ ಮುನೀನ್ ॥50॥
ಆಗ ಋಷಿಗಳು ಅವನಿಗೆ `ಬಾಲಕನೇ! ನೀನು ಚಿಕ್ಕವನಾಗಿರುವಿ' ಎಂದು ಹೇಳಿದರು. ಆಗ ಸಾರಸ್ವತನು ತನ್ನ ಧರ್ಮವು ನಾಶವಾಗದಿರಲಿ ಎಂಬುದಕ್ಕಾಗಿ ಆ ಮುನಿಗಳಿಗೆ ಹೀಗೆ ಹೇಳುತ್ತಾನೆ.
ಸಾರಸ್ವತಃ
ಯೋ ಹ್ಯಧರ್ಮೇಣ ಗೃಹ್ಣೀಯಾತ್ ಪ್ರಬ್ರೂಯಾದ್ ವಾ ಹ್ಯಧರ್ಮತಃ|
ಮ್ರಿಯೇತೇ ತಾವುಭೌ ಕ್ಷಿಪ್ರಂ ಸ್ಯಾತಾಂ ವಾ ವೈರಿಣಾವುಭೌ ॥51॥
ಸಾರಸ್ವತ ಯಾರಾದರೂ ಧರ್ಮವಿರುದ್ಧವಾಗಿ ಪಾಠವನ್ನು ಸ್ವೀಕರಿಸುತ್ತಾರೋ, ಯಾರು ಧರ್ಮವಿರುದ್ಧವಾಗಿ ಪಾಠವನ್ನು ಹೇಳಿಕೊಡುತ್ತಾರೆಯೋ ಅವರಿಬ್ಬರು ಕೂಡ ಬೇಗದಲ್ಲಿಯೇ ಸಾಯುತ್ತಾರೆ ಅಥವಾ ಪರಸ್ಪರ ವೈರಿಗಳಾಗುತ್ತಾರೆ.
ನ ಹಾಯನೈರ್ನ ಪಲಿತೈರ್ನ ವಿತ್ತೈರ್ನ ಚ ಬಂಧುಭಿಃ |
ಋಷಯಶ್ಚಕ್ರಿರೇ ಧರ್ಮಂ ಯೋSನೂಚಾನಃ ಸ ನೋ ಮಹಾನ್ ॥
ವಯಸ್ಸು ಬೆಳೆಯುವುದರಿಂದಾಗಲೀ, ಕೂದಲು ಬೆಳ್ಳಗಾಗುವುದರಿಂದಾಗಲೀ, ಸಂಪತ್ತಿನಿಂದಾಗಲೀ ಅಥವಾ ಬಹಳ ಬಂಧು-ಬಾಂಧವರಿಂದಾಗಲೀ ಯಾರೂ ಉತ್ತಮರಾಗುವುದಿಲ್ಲ. ಋಷಿಗಳು ಮಾಡಿಕೊಟ್ಟ ಹಾಗೂ ಪರಂಪರಾಪ್ರಾಪ್ತವಾದದ್ದೇ ಶ್ರೇಷ್ಠವಾದ ಧರ್ಮವು.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ತಸ್ಯ ಮುನಯಸ್ತೇ ತಪೋಧನಾಃ |
ತತೋ ವೇದಾನನುಪ್ರಾಪ್ಯ ಪುನರ್ಧರ್ಮಂ ಪ್ರಚಕ್ರಿರೇ ॥53॥
ವೈಶಂಪಾಯನ ಅವನ ಮಾತನ್ನು ಕೇಳಿಸಿಕೊಂಡ ತಪಸ್ವಿಗಳಾದ ಆ ಮುನಿಗಳು ಸಾರಸ್ವತಮುನಿಯಿಂದ ವೇದಗಳ ಉಪದೇಶ ಪಡೆದು ಪುನಃ ಧರ್ಮಾಚರಣೆಯನ್ನು ಮಾಡಿದರು.
ಷಷ್ಟಿರ್ಮುನಿಸಹಸ್ರಾಣಿ ಶಿಷ್ಯತ್ವಂ ಪ್ರತಿಪೇದಿರೇ |
ಸಾರಸ್ವತಸ್ಯ ವಿಪ್ರರ್ಷೇರ್ವೇದಾಧ್ಯಯನಕಾರಣಾತ್ ॥54॥
ವೇದಾಧ್ಯಯನಕ್ಕಾಗಿ ಅರವತ್ತುಸಾವಿರ ಶಿಷ್ಯರು ಬ್ರಾಹ್ಮಣೋತ್ತಮನಾದ ಸಾರಸ್ವತಮುನಿಯ ಶಿಷ್ಯತ್ವವನ್ನು ಪಡೆದರು.
ಮುಷ್ಟಿಂ ಪೃಥಕ್ ಪೃಥಕ್ ಸರ್ವೇ ದರ್ಭಾಣಾಂ ಚಾಪ್ಯುಪಾಹರನ್ |
ತಸ್ಯಾಸನಾರ್ಥಂ ವಿಪ್ರರ್ಷೇಃ ಬಾಲಸ್ಯಾಪಿ ವಶೇ ಸ್ಥಿತಾಃ ॥55॥
ಅವರೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಕೈಯಲ್ಲಿ ಮುಷ್ಟಿಪರಿಮಿತವಾದ ದರ್ಭೆಗಳನ್ನು ಆ ಸಾರಸ್ವತಮುನಿಯ ಆಸನಕ್ಕಾಗಿ ತಂದುಕೊಟ್ಟರು. ಸಾರಸ್ವತಮುನಿಯು ಬಾಲಕನಾಗಿದ್ದರೂ ಎಲ್ಲರೂ ಅವನ ವಶಕ್ಕೊಳಗಾಗಿದ್ದರು.
ತತ್ರಾಪಿ ದತ್ತ್ವಾ ವಸು ರೌಹಿಣೇಯೋ
ಮಹಾಬಲಃ ಕೇಶವಪೂರ್ವಜನ್ಮಾ |
ಜಗಾಮ ತೀರ್ಥಂ ಮುದಿತಃ ಕ್ರಮೇಣ
ತಂ ವೃದ್ಧಕನ್ಯಾಶ್ರಮಮೇವ ಧೀರಃ ॥56॥
ಆ ಸಾರಸ್ವತತೀರ್ಥದಲ್ಲಿಯೂ ಮಹಾಬಲಶಾಲಿಯಾದ ಕೇಶವಾಗ್ರಜ ಬಲರಾಮನು ಸಂಪತ್ತನ್ನು ದಾನಮಾಡಿ, ಅಲ್ಲಿಂದ

ಧೈರ್ಯಶಾಲಿಯಾದ ಬಲರಾಮನು ಕ್ರಮವಾಗಿ  ವೃದ್ಧಕನ್ಯಾಶ್ರಮಕ್ಕೆ ಸಂತೋಷದಿಂದ ಬಂದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಸಾರಸ್ವತಮಾಹಾತ್ಮ್ಯಂ ನಾಮ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ಮೂರನೆಯ ಅಧ್ಯಾಯ
ವೃದ್ಧಕನ್ಯೆಯ ಚರಿತ್ರೆಯ ವರ್ಣನೆ
ಜನಮೇಜಯಃ
ಕಥಂ ಕುಮಾರೀ ಭಗವನ್ ತಪೋಯುಕ್ತಾ ಹ್ಯಭೂತ್ ಪುರಾ |
ಕಿಮರ್ಥಂ ಚ ತಪಸ್ತೇಪೇ ಕೋ ವಾಸ್ಯಾ ನಿಯಮೋಽಭವತ್       ॥1॥
ಜನಮೇಜಯ ಪೂಜ್ಯರೇ! ಹಿಂದೆ ಕುಮಾರಿಯು ಹೇಗೆ ತಪಸ್ಸನ್ನು ಮಾಡಿದಳು? ಯಾವ ಉದ್ದೇಶದಿಂದ ತಪಸ್ಸನ್ನಾಚರಿಸಿದಳು? ಅವಳ ನಿಯಮಗಳು ಯಾವುವು?
ಸುದುಷ್ಕರಮಿದಂ ಬ್ರಹ್ಮನ್ ತ್ವತ್ತಃ ಶ್ರುತಮನುತ್ತಮಮ್ |
ಆಖ್ಯಾಹಿ ತತ್ತ್ವಮಖಿಲಂ ಕಥಂ ಸಾ ತಪಸಿ ಸ್ಥಿತಾ     ॥2॥
ಬ್ರಹ್ಮಜ್ಞಾನಿಯೇ! ನೀನು ಹೇಳಿದ ವಿಷಯವು ಸರಿಸಾಟಿಯಿಲ್ಲದ್ದಾಗಿದೆ ಮತ್ತು ಮಾಡಲು ಬಹಳ ಕಷ್ಟಕರವಾದುದು. ಕನ್ಯೆಯು ತಪಸ್ಸಿನಲ್ಲಿ ಹೇಗೆ ನಿರತಳಾದಳು?
ವೈಶಂಪಾಯನಃ
ಋಷಿರಾಸೀನ್ಮಹಾವೀರ್ಯಃ ಕುಣಿರ್ಗಾರ್ಗ್ಯೋ ಮಹಾಯಶಾಃ |
ತಪಾತಪ್ಯ ತು ವಿಪುಲಂ ರಾಜನ್ ತಪಸ್ತು ತಪತಾಂ ವರಃ           ॥3॥
ವೈಶಂಪಾಯನ ಗರ್ಗವಂಶದಲ್ಲಿ ಬಂದ ಕುಣಿ ಎಂಬ ಬಹಳ ಕೀರ್ತಿಶಾಲಿಯಾದ ಋಷಿಯು ಇದ್ದನು. ರಾಜನೇ! ಅವನು ಬಹಳವಾದ ತಪಸ್ಸನ್ನು ಆಚರಿಸಿ ತಪಸ್ವಿಗಳಲ್ಲಿಯೇ ಶ್ರೇಷ್ಠನಾಗಿದ್ದನು.
ತಪಸಾ ಸಂಯುತಾ ಸುಭ್ರೂಃ ಸಮುತ್ಪನ್ನಾ ಮಹಾತ್ಮನಃ           ॥4॥
ಅಂತಹ ಮಹಾತ್ಮನಿಗೆ ತಪೋಯುಕ್ತಳಾದ, ಸುಂದರಹುಬ್ಬುಳ್ಳ ಒಬ್ಬಳು ಮಗಳು ಹುಟ್ಟಿದಳು.
ತಾಂ ಚ ದೃಷ್ಟ್ವಾ ಭೃಶಂ ಪ್ರೀತಃ ಕುಣಿರ್ಗಾರ್ಗ್ಯೋ ಮಹಾಯಶಾಃ |
ಜಗಾಮ ತ್ರಿದಿವಂ ರಾಜನ್ ಸಂತ್ಯಜ್ಯ ಸ್ವಕಲೇಬರಮ್           ॥5॥
ಮಹಾಯಶೋವಂತನಾದ, ಗರ್ಗಗೋತ್ರೋತ್ಪನ್ನನಾದ ಕುಣಿಯು ಅವಳನ್ನು ನೋಡಿ ಬಹಳ ಸಂತೋಷಪಟ್ಟನು. ರಾಜನೇ! ಅವನು ತನ್ನ ಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋದನು.
ಸುಭ್ರೂಃ ಸಾಽಪ್ಯಥ ಕಲ್ಯಾಣೀ ಪುಂಡರೀಕನಿಭೇಕ್ಷಣಾ |
ಮಹತಾ ತಪಸೋಗ್ರೇಣ ಕೃತ್ವಾಽಽಶ್ರಮಮನಿಂದಿತಾ           ॥6॥
ಉಪವಾಸೈಃ ಪೂಜಯಂತೀ ಪಿತೄನ್ ದೇವಾಂಶ್ಚ ಸಾ ಪುರಾ       ॥7॥
ಅನಂತರ ಕಮಲದ ಹಾಗೆ ನೇತ್ರವುಳ್ಳ ಕಲ್ಯಾಣಿಯಾದ ಆ ಸುಂದರಿಯು ಆಶ್ರಮವೊಂದನ್ನು ನಿರ್ಮಿಸಿಕೊಂಡು, ಬಹಳವಾದ ತಪಸ್ಸನ್ನಾಚರಿಸುತ್ತಾ, ಉಪವಾಸಗಳನ್ನು ನಡೆಸುತ್ತಾ ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸುತ್ತಿದ್ದಳು. ಪರಿಶುದ್ಧಳಾಗಿ ಜೀವಿಸುತ್ತಿದ್ದಳು.
ತಸ್ಯಾಸ್ತು ತಪಸೋಗ್ರೇಣ ಮಹಾನ್ ಕಾಲೋಽತ್ಯಗಾನ್ನೃಪ        ॥8॥
ರಾಜನೇ! ಅವಳು ತುಂಬಾ ಸಮಯದ ತನಕ ಆ ರೀತಿಯಲ್ಲಿ ಕಠಿಣ ತಪಸ್ಸನ್ನು ಆಚರಿಸಿದಳು.
ಸಾ ಪಿತ್ರಾ ದೀಯಮಾನಾಽಪಿ ಪತಿಂ ನೈಚ್ಛದನಿಂದಿತಾ |
ಆತ್ಮನಃ ಸದೃಶಂ ಸಾ ತು ಭರ್ತಾರಂ ನಾನ್ವಪದ್ಯತ  ॥9॥
ಹಿಂದೆ ತನ್ನ ತಂದೆಯು ತನಗೊಬ್ಬ ಪತಿಯನ್ನು ಮದುವೆ ಮಾಡಿಕೊಡುವವನಿದ್ದರೂ ದೋಷದೂರಳಾದ ಆ ಸುಂದರಿಯು ಪತಿಯನ್ನು ಅಪೇಕ್ಷಿಸಲಿಲ್ಲ. ತನಗೆ ಸಮಾನನಾದ ಗಂಡನನ್ನು ಹೊಂದಲಿಲ್ಲ.
ತತಃ ಸಾ ತಪಸೋಗ್ರೇಣ ಪೀಡಯಿತ್ವಾಽಽತ್ಮನಸ್ತನುಮ್ |
ಪಿತೃದೇವಾರ್ಚನರತಾ ಬಭೂವ ವಿಜನೇ ವನೇ      ॥10॥
ಅವಳು ನಿರ್ಜನ ಕಾಡಿನಲ್ಲಿ ಕಠಿಣ ತಪಸ್ಸನ್ನು ಆಚರಿಸುತ್ತಾ, ತನ್ನ ಶರೀರವನ್ನು ದಂಡಿಸುತ್ತಾ, ಪಿತೃದೇವತೆಗಳನ್ನು ಪೂಜಿಸುವುದರಲ್ಲಿಯೇ ನಿರತಳಾಗುತ್ತಿದ್ದಳು.
ಸಾತ್ಮಾನಂ ಮನ್ಯಮಾನಾ ತು ಕೃತಕೃತ್ಯಂ ಶ್ರಮಾನ್ವಿತಾ |
ಜಗಾಮ ವೃದ್ಧಭಾವಂ ಚ ಕೌಮಾರಬ್ರಹ್ಮಚಾರಿಣೀ ॥11॥
ಹೀಗೆ ತಪಸ್ಸಿನ ಶ್ರಮವನ್ನು ಹೊಂದಿ, ತಾನು ಕೃತಕೃತ್ಯಳಾದಳು. ಕುಮಾರಾವಸ್ಥೆಯಿಂದಲೇ ಬ್ರಹ್ಮಚಾರಿಣಿಯಾಗಿದ್ದು ಅವಳು ಮುದುಕಿಯಾದಳು.
ವಾರ್ಧಕ್ಯೇನ ಚ ರಾಜೇಂದ್ರ ತಪಸೈವ ಚ ಕರ್ಶಿತಾ  ॥12॥
ಸಾ ನಾಶಕದ್ ಯದಾ ಗಂತುಂ ಪದಾತ್ ಪದಮಪಿ ಸ್ವಯಮ್ |
ಚಕಾರ ಗಮನೇ ಬುದ್ಧಿಂ ಪರಲೋಕಾಯ ವೈ ತದಾ ॥13॥

ರಾಜೇಂದ್ರನೇ! ಮುಪ್ಪಿನ ಕಾರಣದಿಂದ ಮತ್ತು ಕಠಿಣತಪಸ್ಸಿನಿಂದಾಗಿ ಕೃಶಳಾದ ಅವಳು ಸ್ವಯಂ ಒಂದು ಹೆಜ್ಜೆಯನ್ನು ಮುಂದಿಟ್ಟು ನಡೆಯಲೂ ಅಶಕ್ತಳಾದಳು. ಆಗ ತಾನು ಪರಲೋಕಕ್ಕೆ ಹೋಗುವ ನಿಶ್ಚಯವನ್ನು ಮಾಡಿಕೊಂಡಳು.
ಮೋಕ್ತುಕಾಮಾಂ ತು ತಾಂ ದೃಷ್ಟ್ವಾ ಶರೀರಂ ನಾರದೋಽಬ್ರವೀತ್ ॥
ಹೀಗೆ ನಿಶ್ಚಯಿಸಿಕೊಂಡು ಶರೀರವನ್ನು ಬಿಡಲು ಅಪೇಕ್ಷೆಪಟ್ಟ ಆ ವೃದ್ಧಕನ್ಯೆಗೆ ನಾರದನು ಹೀಗೆ ಹೇಳುತ್ತಾನೆ
ನಾರದಃ
ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಸ್ತವಾನಘೇ |
ಏವಂ ಹಿ ಶ್ರುತಮಸ್ಮಾಭಿರ್ದೇವಲೋಕೇ ಮಹಾವ್ರತೇ ॥15॥
ತಪಃ ಪರಮಕಂ ಪ್ರಾಪ್ಯ ನ ತು ಲೋಕಾಸ್ತ್ವಯಾ ಜಿತಾಃ |
``ಪಾಪರಹಿತಳೇ! ಮಹಾವ್ರತವುಳ್ಳವಳೇ! ಸಂಸ್ಕಾರಹೊಂದದ ಕನ್ಯೆಗೆ ಪರಲೋಕಗಳು ಹೇಗೆ ಸಿಗಲು ಸಾಧ್ಯ? ಎಂಬುದಾಗಿ ಶಾಸ್ತ್ರಗಳು ಹೇಳುವುದನ್ನು ನಾವು ಲೋಕದಲ್ಲಿ ಕೇಳಿದ್ದೇವೆ. ನೀನು ಬಹಳ ತಪಸ್ಸನ್ನು ಆಚರಿಸಿದ್ದಿ. ಆದರೆ ಲೋಕಗಳನ್ನು ಪಡೆಯುವ ಸಾಮರ್ಥ್ಯವನ್ನು ಹೊಂದಲಿಲ್ಲ.'' ಎಂದು.
ವೈಶಂಪಾಯನಃ
ತನ್ನಾರದವಚಃ ಶ್ರುತ್ವಾ ಸಾಽಬ್ರವೀದ್ ಋಷಿಸಂಸದಿ ॥16॥
ವೈಶಂಪಾಯನ ನಾರದನ ಮಾತನ್ನು ಕೇಳಿ ಅವಳು ಋಷಿಗಳ ಸನ್ನಿಧಾನದಲ್ಲಿ ಹೀಗೆ ಹೇಳುತ್ತಾಳೆ.
ವೃದ್ಧಕನ್ಯಾ
ತಪಸೋಽರ್ಧಂ ಪ್ರಯಚ್ಛಾಮಿ ಪಾಣಿಗ್ರಾಹಸ್ಯ ಸತ್ತಮಾಃ ॥17॥
ವೃದ್ಧಕನ್ಯೆ ``ಸಜ್ಜನರೇ! ಯಾವನು ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೆಯೋ ಅವನಿಗೆ ನನ್ನ ತಪಸ್ಸಿನ ಅರ್ಧಭಾಗವನ್ನು ಕೊಡುತ್ತೇನೆ.'' ಎಂದು.
ವೈಶಂಪಾಯನಃ
ಇತ್ಯುಕ್ತೇಽಸ್ಯಾಸ್ತು ಜಗ್ರಾಹ ಪಾಣಿಂ ಗಾಲವಸಂಭವಃ |
ಋಷಿಃ ಪ್ರಾಕ್ ಶೃಂಗವಾನ್ನಾಮ ಸಮಯಂ ಚೇಮಮಬ್ರವೀತ್ ॥18॥
ವೈಶಂಪಾಯನ ಅವಳು ಹೀಗೆ ಹೇಳಿದಾಗ ಗಾಲವಋಷಿಯ ಮಗನಾದ ಶೃಂಗವಾನ್ ಎಂಬ ಋಷಿಯು ಅವಳನ್ನು ವಿವಾಹವಾಗುತ್ತಾನೆ. ಅದಕ್ಕಿಂತ ಪೂರ್ವಭಾವಿಯಾಗಿ ಒಂದು ನಿಯಮವನ್ನೂ ಹೇಳುತ್ತಾನೆ.
ಶೃಂಗವಾನ್
ಸಮಯೇನ ತವಾದ್ಯಾಹಂ ಪಾಣಿಂ ಸ್ಪ್ರಕ್ಷ್ಯಾಮಿ ಶೋಭನೇ |
ಯದ್ಯೇಕರಾತ್ರಂ ವಸ್ತವ್ಯಂ ತ್ವಯಾ ಸಹ ಮಮೇತಿ ಹ ॥19॥
ಶೃಂಗವಾನ್ ಮಂಗಳೆಯೇ! ಒಂದು ಶರತ್ತನ್ನು ವಿಧಿಸಿ, ನಾನು ನಿನ್ನನ್ನು ವಿವಾಹವಾಗಲು ಇಚ್ಛಿಸುತ್ತೇನೆ. ವಿವಾಹವಾದ ನಂತರ ಒಂದು ರಾತ್ರಿ ನನ್ನ ಜೊತೆಗೆ ನೀನು ವಾಸವನ್ನು ಮಾಡಬೇಕು.
ವೈಶಂಪಾಯನಃ
ತಥೇತಿ ಸಾ ಪ್ರತಿಶ್ರುತ್ಯ ತಸ್ಯ ಪಾಣಿಂ ದದೌ ತತಃ |
ಚಕ್ರೇ ಚ ಪಾಣಿಗ್ರಹಣಂ ತದುದ್ವಾಹ ಚ ಗಾಲವಃ ॥20॥
ವೈಶಂಪಾಯನ ಹಾಗೆ ಆಗಲಿ ಎಂದು ಪ್ರತಿಜ್ಞೆಗೈದು ಶೃಂಗವಾನನಿಗೆ ತನ್ನ ಕೈಯನ್ನು ನೀಡಿ ಅವನನ್ನು ವಿವಾಹವಾಗುತ್ತಾಳೆ. ಗಾಲವನು ಅವಳ ಕೈಯನ್ನು ಹಿಡಿದು ಮದುವೆ ಮಾಡಿಕೊಳ್ಳುತ್ತಾನೆ.
ಸಾ ರಾತ್ರಾವಭವದ್ ರಾಜನ್ ತರುಣೀ ದಿವ್ಯರೂಪಿಣೀ |
ದಿವ್ಯಾಭರಣವಸ್ತ್ರಾ ಚ ದಿವ್ಯಸ್ರಗನುಲೇಪನಾ ॥21॥
ರಾಜನೇ! ರಾತ್ರಿಯಲ್ಲಿ ಅವಳು ಅಲೌಕಿಕ ಸೌಂದರ್ಯವುಳ್ಳ ತರುಣಿಯಾಗಿ ಮಾರ್ಪಟ್ಟಳು. ಅಲೌಕಿಕವಾದ ಆಭರಣಗಳನ್ನೂ, ವಸ್ತ್ರಗಳನ್ನೂ, ಗಂಧಾದಿಲೇಪನಗಳನ್ನೂ ಹೊಂದಿದ್ದಳು.
ತಾಂ ದೃಷ್ಟ್ವಾ ಗಾಲವಃ ಪ್ರೀತೋ ದೀಪಯಂತೀಮಿವಾತ್ಮನಾ |
ಉವಾಸ ಚ ಕ್ಷಪಾಮೇಕಾಂ ಪ್ರಭಾತೇ ಸಾಽಬ್ರವೀಚ್ಚ ತಮ್ ॥22॥
ತನ್ನ ಸೌಂದರ್ಯದಿಂದ ಪ್ರಕಾಶಿಸುತ್ತಿದ್ದ ಅವಳನ್ನು ನೋಡಿದ ಗಾಲವನು ಸಂತುಷ್ಟನಾದನು. ಅವಳು ಒಂದು ರಾತ್ರಿ ಅವನೊಡನೆ ವಾಸಮಾಡಿ ಅವನಿಗೆ ಹೀಗೆ ಹೇಳುತ್ತಾಳೆ.
ವೃದ್ಧಕನ್ಯಾ
ಯಸ್ತ್ವಯಾ ಸಮಯೋ ಬ್ರಹ್ಮನ್ ಕೃತೋ ಬ್ರಹ್ಮರ್ಷಿಸಂಸದಿ |
ತೇನೋಷಿತಾಽಸ್ಮಿ ಭದ್ರಂ ತೇ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ॥23॥
ವೃದ್ಧಕನ್ಯಾ `ಬ್ರಹ್ಮಜ್ಞಾನಿಯೇ! ಬ್ರಹ್ಮಜ್ಞಾನಿಗಳ ಸಭೆಯಲ್ಲಿ ನೀನು ಯಾವ ನಿಯಮವನ್ನು ವಿಧಿಸಿದ್ದಿಯೋ ಅದಕ್ಕನುಗುಣವಾಗಿ ನಿನ್ನೊಡನೆ ವಾಸಮಾಡಿದ್ದೆ. ನಿನಗೆ ಮಂಗಳವಾಗಲಿ. ನಾನು ಹೊರಟುಹೋಗುತ್ತೇನೆ'.
ವೈಶಂಪಾಯನಃ
ಸಾ ತು ಧ್ಯಾತ್ವಾಽಬ್ರವೀದ್ ಭೂಯೋ ಯೋಽಸ್ಮಿಂಸ್ತೀರ್ಥೇ ಸಮಾಹಿತಃ |
ಉಷಿತ್ವಾ ರಜನೀಮೇಕಾಂ ತರ್ಪಯಿತ್ವಾ ದಿವೌಕಸಃ॥24॥
ಚತ್ವಾರಿಂಶತಮಷ್ಟೌ ಚ ದ್ವೌ ಚಾಷ್ಟೌ ಸಮ್ಯಗಾಚರೇತ್ |

ಬ್ರಹ್ಮಚರ್ಯಂ ಹಿ ಶಾಂತಾತ್ಮಾ ಫಲಂ ತಸ್ಯ ಲಭೇತ ಸಃ ॥25॥
ವೈಶಂಪಾಯನ ಅವಳು ಮತ್ತೆ ಧ್ಯಾನವನ್ನು ಮಾಡಿ ಹೀಗೆ ಹೇಳುತ್ತಾಳೆ - ಯಾವನು ಶುದ್ಧಮನಸ್ಸಿನಿಂದ ಮನೋನಿಗ್ರಹವನ್ನು ಸಂಪಾದಿಸಿಕೊಂಡು ಈ ತೀರ್ಥದಲ್ಲಿ ಒಂದು ರಾತ್ರಿಕಾಲ ವಾಸಮಾಡಿ, ದೇವತೆಗಳನ್ನು ತೃಪ್ತಿಪಡಿಸುತ್ತಾನೆಯೋ ಅಂತಹವನು ಐವತ್ತೆಂಟು ವರ್ಷಗಳ ಕಾಲ ಆಚರಿಸಿದ ಬ್ರಹ್ಮಚರ್ಯದ ಫಲವನ್ನು ಹೊಂದುತ್ತಾನೆ.
ಏವಮುಕ್ತ್ವಾ ತತಃ ಸಾಧ್ವೀ ದೇಹಂ ತ್ಯಕ್ತ್ವಾ ದಿವಂ ಗತಾ ॥26॥
ಹೀಗೆ ಹೇಳಿ ಸಾಧುಸ್ವಭಾವದ ಆಕೆ ದೇಹವನ್ನು ತ್ಯಜಿಸಿ ಸ್ವರ್ಗಕ್ಕೆ ಹೋದಳು.
ಋಷೇರಪ್ಯಭವದ್ ದೀನೋ ರೂಪಂ ತಸ್ಯಾ ವಿಚಿಂತಯನ್ |
ಸಮಯೇನ ತಪೋಽರ್ಧಂ ಚ ಕೃಚ್ಛ್ರಾತ್ ಪ್ರತಿಗೃಹೀತವಾನ್ ॥27॥
ಶೃಂಗವಾನ್ ಋಷಿಯಾದರೂ ಅವಳ ರೂಪವನ್ನು ಚಿಂತಿಸುತ್ತಾ, ತನ್ನ ನಿಯಮದಿಂದಾಗಿ ದುಃಖಿತನಾದನು. ಬಹಳ ಕಷ್ಟದಿಂದ ಅವಳ ತಪಸ್ಸಿನ ಅರ್ಧಭಾಗವನ್ನು ಸ್ವೀಕರಿಸಿದನು.
ಸಾಧಯಿತ್ವಾ ತದಾಽಽತ್ಮಾನಂ ತಸ್ಯಾಃ ಸಂಗತಿಮನ್ವಯಾತ್ |
ದುಃಖಿತೋ ಭರತಶ್ರೇಷ್ಠ ತಸ್ಯಾ ರೂಪಬಲಾತ್ಕೃತಃ ॥28॥
ಭರತಶ್ರೇಷ್ಠನೇ! ಆ ಗಾಲವನು ಆಕೆಯ ರೂಪದಿಂದ ಆಕರ್ಷಿತನಾಗಿ ದುಃಖಿತನಾಗಿದ್ದನು. ಆದ್ದರಿಂದ ಅವನು ತನ್ನ ದೇಹವನ್ನು ಪರಿತ್ಯಜಿಸಿ, ಅವಳನ್ನೇ ಅನುಸರಿಸಿಕೊಂಡು ಹೋದನು.
ಏತತ್ ತೇ ವೃದ್ಧಕನ್ಯಾಯಾ ವ್ಯಾಖ್ಯಾತಂ ಚರಿತಂ ಮಹತ್ |
ತಥೈವ ಬ್ರಹ್ಮಚರ್ಯಂ ಚ ಸ್ವರ್ಗಸ್ಯ ಚ ಮತಿಃ ಶುಭಾ ॥29॥
ಇದು ವೃದ್ಧಕನ್ಯೆಯ ವಿಶಿಷ್ಟವಾದ ಚರಿತ್ರೆ ಮತ್ತು ಅವಳ ಬ್ರಹ್ಮಚರ್ಯ, ಸ್ವರ್ಗಗಮನದ ನಿಶ್ಚಯ - ಇವುಗಳ ವಿವರಣೆ.
ತತ್ರಸ್ಥೋಽಪಿ ಚ ಶುಶ್ರಾವ ಹತಂ ಶಲ್ಯಂ ಹಲಾಯುಧಃ ॥30॥
ಬಲರಾಮನು ಅಲ್ಲಿದ್ದಾಗ ಇತ್ತಕಡೆ ಯುದ್ಧದಲ್ಲಿ ಶಲ್ಯನು ಮರಣ ಹೊಂದಿದ ವಾರ್ತೆಯನ್ನು ಕೇಳಿದನು.
ತತ್ರಾಪಿ ದತ್ತ್ವಾ ದಾನಾನಿ ದ್ವಿಜಾತಿಭ್ಯಃ ಪರಂತಪ |
ಶುಶೋಚ ಶಲ್ಯಂ ಸಂಗ್ರಾಮೇ ನಿಹತಂ ಪಾಂಡವೈಸ್ತದಾ ॥31॥
ಶತ್ರುನಾಶಕನೇ! ಬಲರಾಮನು ಅಲ್ಲಿಯೂ ಬ್ರಾಹ್ಮಣರಿಗೆ ದಾನಗಳನ್ನು ಮಾಡಿದನು. ಪಾಂಡವರು ಯುದ್ಧದಲ್ಲಿ ಶಲ್ಯನನ್ನು ಕೊಂದಿದ್ದನ್ನು ಕೇಳಿ ದುಃಖಿಸಿದನು.
ಸಮಂತಪಂಚಕದ್ವಾರಾತ್ ತತೋ ನಿಷ್ಕ್ರಮ್ಯ ಮಾಧವಃ |
ಪಪ್ರಚ್ಛರ್ಷಿಗಣಾನ್ ರಾಮಃ ಕುರುಕ್ಷೇತ್ರಸ್ಯ ಯತ್ ಫಲಮ್ ॥32॥
ಬಲರಾಮನು ಸ್ಯಮಂತಪಂಚಕ ದ್ವಾರದಿಂದ ಹೊರಟು ಕುರುಕ್ಷೇತ್ರದ ಪಲಗಳ ಬಗ್ಗೆ ಋಷಿಗಣಗಳಲ್ಲಿ ಪ್ರಶ್ನಿಸಿದನು.
ತೇ ಪೃಷ್ಟಾ ಯದುಸಿಂಹೇನ ಕುರುಕ್ಷೇತ್ರಫಲಂ ವಿಭೋ |
ಸಮಾಚಖ್ಯುರ್ಮಹಾತ್ಮಾನಸ್ತಸ್ಮೈ ಸರ್ವಂ ಯಥಾತಥಮ್ ॥33॥
ವಿಭುವೇ! ಅವನು ಪ್ರಶ್ನಿಸಿದಾಗ ಮಹಾತ್ಮರಾದ ಋಷಿಗಳು ಅವನಿಗೆ ಕುರುಕ್ಷೇತ್ರದ ಫಲವನ್ನು ಯಥಾವತ್ತಾಗಿ ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ವೃದ್ಧಕನ್ಯಾಚರಿತಂ ನಾಮ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಬಲರಾಮನಿಗೆ ಋಷಿಗಳಿಂದ ಕುರುಕ್ಷೇತ್ರದ ಬಗ್ಗೆ ವರ್ಣನೆ
ಋಷಯಃ
ಪ್ರಜಾಪತೇರುತ್ತರವೇದಿರುಚ್ಯತೇ
ಸನಾತನಂ ರಾಮ ಸಮಂತಪಂಚಕಮ್ |
ಸಮೀಜಿರೇ ಯತ್ರ ದಿವೌಕಸಃ ಪುರಾ
ಪರೇಣ ಸತ್ರೇಣ ಮಹಾವರಪ್ರದಾಃ ॥1॥
ಋಷಿಗಳು ಬಲರಾಮನೇ! ಈ ಸಮಂತಪಂಚಕಕ್ಷೇತ್ರವು ಸನಾತನವಾಗಿದೆ. ಇದನ್ನು ಪ್ರಜಾಪತಿಯ ಉತ್ತರಯಜ್ಞವೇದಿಕೆ ಎಂದು ಕರೆಯುತ್ತಾರೆ. ಮಹಾವರಗಳನ್ನು ಕೊಡುವ ದೇವತೆಗಳು ಹಿಂದೆ ಇಲ್ಲಿ ಉತ್ತಮ ಯಾಗವನ್ನು ಮಾಡಿದ್ದರು.
ಪುರಾ ಹಿ ರಾಜರ್ಷಿವರೇಣ ಧೀಮತಾ
ಬಹೂನಿ ವರ್ಷಾಣ್ಯಮಿತೇನ ತೇಜಸಾ |
ಪ್ರಕೃಷ್ಟಮೇತತ್ ಕುರುಣಾ ಮಹಾತ್ಮನಾ
ತತಃ ಕುರುಕ್ಷೇತ್ರಮಿಹೋಚ್ಯತೇ ಬುಧೈಃ ॥2॥
ಹಿಂದೆ ಅಪರಿಮಿತತೇಜಸ್ಸುಳ್ಳ, ಜ್ಞಾನಿಯಾದ, ಶ್ರೇಷ್ಠರಾಜರ್ಷಿಯಾದ ಕುರುವು ಈ ಕ್ಷೇತ್ರದಲ್ಲಿ ಅನೇಕ ವರ್ಷಗಳ ಕಾಲ ಕ್ಷೇತ್ರಕರ್ಷಣವನ್ನು (ಭೂಮಿಯನ್ನು ಉಳುವುದನ್ನು) ಮಾಡಿದ್ದನು. ಆದ್ದರಿಂದ ಇದನ್ನು ಜ್ಞಾನಿಗಳು ಕುರುಕ್ಷೇತ್ರವೆಂದು ಕರೆಯುತ್ತಾರೆ.
ರಾಮಃ

ಕಿಮರ್ಥಂ ಕುರುಣಾ ಕೃಷ್ಟಂ ಕ್ಷೇತ್ರಮೇತನ್ಮಹಾತ್ಮನಾ |
ಏತದಿಚ್ಛಾಮ್ಯಹಂ ಶ್ರೋತುಂ ಕಥ್ಯಮಾನಂ ತಪೋಧನಾಃ ॥3॥
ಬಲರಾಮ ಮಹಾತ್ಮನಾದ ಕುರುವು ಯಾವುದಕ್ಕಾಗಿ ಇಲ್ಲಿ ಕರ್ಷಣವನ್ನು ಮಾಡಿದ್ದನು? ಮಹಾತಪಸ್ವಿಗಳೇ, ಇದನ್ನು ಕೇಳಿತಿಳಿಯಲು ಬಯಸುತ್ತೇನೆ.
ಋಷಯಃ
ಪುರಾ ಕಿಲ ಕುರುಂ ರಾಮ ಕೃಷಂತಂ ಸಹಸೋತ್ಥಿತಮ್ |
ಅಭ್ಯೇತ್ಯ ಶಕ್ರಸ್ತ್ರಿದಿವಾತ್ ಪರ್ಯಪೃಚ್ಛತ ಕಾರಣಮ್ ॥4॥
ಋಷಿಗಳು ಹಿಂದೆ ಸದಾ ಪ್ರಯತ್ನಶೀಲನಾದ ಕುರುಮಹಾರಾಜನು ಕ್ಷೇತ್ರಕರ್ಷಣವನ್ನು ಮಾಡುತ್ತಿದ್ದಾಗ, ಇಂದ್ರನು ಸ್ವರ್ಗದಿಂದ ಬಂದು ಕರ್ಷಣಕ್ಕೆ ಕಾರಣವನ್ನು ಕೇಳಿದನು.
ಇಂದ್ರಃ
ಕಿಮಿದಂ ವರ್ತತೇ ಕರ್ಮ ಪ್ರಯತ್ನೇನ ಪರೇಣ ಹ |
ರಾಜರ್ಷೇ ಕಿಮಭಿಪ್ರೇತಂ ಯದಿಯಂ ಕೃಷ್ಯತೇ ಮಹೀ ॥5॥
ಇಂದ್ರ ರಾಜರ್ಷಿಯೇ! ಉತ್ತಮವಾದ ಪ್ರಯತ್ನಪೂರ್ವಕವಾಗಿ ಈ ಕರ್ಷಣಕ್ರಿಯೆಯನ್ನು ಏಕೆ ಮಾಡುತ್ತಿರುವಿ? ಭೂಮಿಯನ್ನು ಉಳುತ್ತಿರುವ ನಿನ್ನ ಅಭಿಪ್ರಾಯವು ಏನು?
ಕುರುಃ
ಇಹ ಯೇ ಪುರುಷವ್ಯಾಘ್ರಾ ಜನಿಷ್ಯಂತಿ ಶತಕ್ರತೋ |
ತೇ ಗಮಿಷ್ಯಂತಿ ಸುಕೃತಾಲ್ಲೋಕಾನ್ ಪಾಪವಿವರ್ಜಿತಾಃ ॥6॥
ಕುರು ಇಂದ್ರನೇ! ಇಲ್ಲಿ ಯಾವ ಪುರುಷಶ್ರೇಷ್ಠರು ಜನಿಸುತ್ತಾರೆಯೋ ಅವರು ಪಾಪಗಳನ್ನು ಕಳೆದುಕೊಂಡು ಶುಭಪುಣ್ಯದಿಂದ ಹೊಂದುವ ಲೋಕಗಳನ್ನು ಪಡೆಯುವರು.
ಋಷಯಃ
ಅಪಹಾಸ್ಯ ತು ತಂ ಶಕ್ರೋ ಜಗಾಮ ತ್ರಿದಿವಂ ಪುನಃ |
ರಾಜರ್ಷಿರಪ್ಯನಿರ್ವಿಣ್ಣಃ ಕೃಷತ್ಯೇವ ವಸುಂಧರಾಮ್ ॥7॥
ಋಷಿಗಳು ಇಂದ್ರನು ಅವನನ್ನು ಹಾಸ್ಯಮಾಡಿ ಸ್ವರ್ಗಕ್ಕೆ ಹೋದನು. ರಾಜರ್ಷಿ ಕುರುವು ಯಾವುದೇ ಉದ್ವೇಗಕ್ಕೊಳಗಾಗದೆ ಭೂಮಿಯನ್ನು ಉಳುತ್ತಲೇ ಇದ್ದನು.
ಆಗಮ್ಯಾಗಮ್ಯ ಚೈವೇಹ ಭೂಯೋ ಭೂಯೋಽಪಹಾಸ್ಯ ಚ |
ಶತಕ್ರತುರನಿರ್ವಿಣ್ಣಂ ದೃಷ್ಟ್ವಾ ದೃಷ್ಟ್ವಾ ಜಗಾಮ ಹ ॥8॥
ಇಂದ್ರನು ಮತ್ತೆ ಮತ್ತೆ ಬಂದು ಅಪಹಾಸ್ಯ ಮಾಡುತ್ತಿದ್ದನು ಮತ್ತು ಔದಾಸೀನ್ಯಕ್ಕೆ ಒಳಗಾಗದ ಕುರುವನ್ನು ನೋಡಿ ಮತ್ತೆ ಹೊರಟುಹೋಗುತ್ತಿದ್ದನು.
ಯದಾ ತು ತಪಸೋಗ್ರೇಣ ಚಕರ್ಷ ವಸುಧಾಂ ನೃಪಃ ॥9॥
ತತಃ ಶಕ್ರೋಽಬ್ರವೀದ್ ದೇವಾನ್ ರಾಜರ್ಷೇರ್ಯಚ್ಚಿಕೀರ್ಷಿತಮ್ |
ತಚ್ಛ್ರುತ್ವಾಥಾಬ್ರುವನ್ ದೇವಾಃ ಸಹಸ್ರಾಕ್ಷಮಿದಂ ವಚಃ ॥10॥
ಯಾವಾಗ ಕುರುಮಹಾರಾಜನು ತೀವ್ರವಾದ ತಪಸ್ಸಿನಿಂದ ಭೂಮಿಯನ್ನು ಉಳುಮೆ ಮಾಡಿದನೋ ಆಗ ಇಂದ್ರನು ಕುರುವಿನ ಕಾರ್ಯದ ಬಗ್ಗೆ ದೇವತೆಗಳಿಗೆ ಹೇಳಿದನು. ಅದನ್ನು ಕೇಳಿಸಿಕೊಂಡ ದೇವತೆಗಳು ಇಂದ್ರನಿಗೆ ಈ ಮಾತನ್ನು ಹೇಳಿದರು.
ದೇವಾಃ
ವರೇಣ ಚ್ಛಂದ್ಯತಾಂ ಶೀಘ್ರಂ ರಾಜರ್ಷಿರ್ಯದಿ ಶಕ್ಯತೇ ॥11॥
ದೇವತೆಗಳು ಸಾಧ್ಯವಾಗುವುದಾದರೆ ಬೇಗನೆ ರಾಜರ್ಷಿಗೆ ವರವನ್ನು ಕೊಟ್ಟು ನಮಗೆ ಅನುಕೂಲನನ್ನಾಗಿ ಮಾಡೋಣ.
ಯದಿ ಹ್ಯತ್ರ ಪ್ರಸೂತಾ ವೈ ಸ್ವರ್ಗಂ ಗಚ್ಛಂತಿ ಮಾನವಾಃ |
ಅಸ್ಮಾನನಿಷ್ಟ್ವಾ ಕ್ರತುಭಿರ್ಭಾಗೋ ನೋ ನ ಭವಿಷ್ಯತಿ ॥12॥
ಒಂದು ವೇಳೆ ಮಾನವರು ಯಾಗವನ್ನು ಮಾಡದೇ ಇಲ್ಲಿ ಹುಟ್ಟಿದಮಾತ್ರಕ್ಕೆ ಸ್ವರ್ಗಕ್ಕೆ ಹೋಗುವುದಾದರೆ ನಮಗೆ ಯಾಗದ ಹವಿರ್ಭಾಗಗಳು ಸಿಗಲಾರವು.
ಋಷಯಃ
ಆಗಮ್ಯ ತು ತತಃ ಶಕ್ರಃ ತದಾ ರಾಜರ್ಷಿಮಬ್ರವೀತ್ ॥13॥
ಋಷಿಗಳು ಅನಂತರ ಇಂದ್ರನು ಬಂದು ರಾಜರ್ಷಿಗೆ ಹೀಗೆ ಹೇಳುತ್ತಾನೆ.
ಇಂದ್ರಃ
ಅಲಂ ಖೇದೇನ ಭವತಃ ಕ್ರಿಯತಾಂ ವಚನಂ ಮಮ ॥14॥
ಇಂದ್ರ ನೀನು ಶ್ರಮಪಡುವುದನ್ನು ನಿಲ್ಲಿಸು. ನಾನು ಹೇಳಿದಂತೆ ಮಾಡು.
ಮಾನವಾ ಯೇ ನಿರಾಹಾರಾ ದೇಹಂ ತ್ಯಕ್ಷ್ಯಂತ್ಯತಂದ್ರಿತಾಃ |
ಯುದ್ಧೇ ವಾ ನಿಹತಾಃ ಸಮ್ಯಗ್ ಅಪಿ ತಿರ್ಯಗ್ಗತಾ ನೃಪ ॥15॥
ತೇ ಸ್ವರ್ಗಭಾಜೋ ರಾಜೇಂದ್ರ ಭವಂತ್ವಿಹ ಮಹಾಮತೇ ॥16॥
ಮಹಾಜ್ಞಾನಿಯಾದ ರಾಜನೇ! ಯಾವ ಮನುಷ್ಯರು ಇಲ್ಲಿ ಆಹಾರವನ್ನು ಪರಿತ್ಯಾಗಮಾಡಿ, ಆಲಸ್ಯಕ್ಕೊಳಗಾಗದೆ ದೇಹತ್ಯಾಗವನ್ನು

ಮಾಡುವರೋ ಅಥವಾ ಯಾರು ಯುದ್ಧದಲ್ಲಿ ಚೆನ್ನಾಗಿ ಹೋರಾಟವನ್ನು ಮಾಡಿ ಮಡಿಯುತ್ತಾರೋ ಅವರು ಸ್ವರ್ಗವನ್ನು ಪಡೆಯಲಿ.
ಋಷಯಃ
ತಥಾಽಸ್ತ್ವಿತಿ ತತೋ ರಾಜಾ ಕುರುಃ ಶಕ್ರಮುವಾಚ ಹ ॥17॥
ಋಷಿಗಳು ಹಾಗೆಯೇ ಆಗಲಿ ಎಂದು ಕುರುಮಹಾರಾಜನು ಇಂದ್ರನಿಗೆ ಹೇಳಿದನು.
ತತಸ್ತಮಭ್ಯನುಜ್ಞಾಯ ಪ್ರಹೃಷ್ಟೇನಾಂತರಾತ್ಮನಾ |
ಜಗಾಮ ತ್ರಿದಿವಂ ಭೂಯಃ ಕ್ಷಿಪ್ರಂ ಬಲಿ(ಲ)ನಿಷೂದನಃ ॥18॥
ಅನಂತರ ಬಲಿಯನ್ನು ಮಣಿಸಿದ ಇಂದ್ರನು ಕುರುವಿನ ಒಪ್ಪಿಗೆಯನ್ನು ಪಡೆದು, ಸಂತುಷ್ಟವಾದ ಮನಸ್ಸುಳ್ಳವನಾಗಿ ಕೂಡಲೇ ಸ್ವರ್ಗಕ್ಕೆ ಹೋದನು.
ಏವಮೇತದ್ ಯದುಶ್ರೇಷ್ಠ ಕೃಷ್ಟಂ ರಾಜರ್ಷಿಣಾ ಪುರಾ |
ಶಕ್ರೇಣ ಚಾಭ್ಯನುಜ್ಞಾತಃ ಪುಣ್ಯೇ ಪ್ರಾಣಾನ್ ಮುಮೋಚ ಹ ॥19॥
ಹೀಗೆ ಹಿಂದೆ ರಾಜರ್ಷಿಯಾದ ಕುರುವು ಇಲ್ಲಿ ಕ್ಷೇತ್ರಕರ್ಷಣವನ್ನು ಮಾಡಿದ್ದನು. ಶಕ್ರನ ಒಪ್ಪಿಗೆಯನ್ನು ಪಡೆದು ಈ ಪುಣ್ಯಕ್ಷೇತ್ರದಲ್ಲಿ ಪ್ರಾಣವನ್ನು ಬಿಟ್ಟನು.
ಅಪಿ ಚಾತ್ರ ಸ್ವಯಂ ಶಕ್ರೋ ಜಗೌ ಗಾಥಾಂ ಸುರೇಶ್ವರಃ |
ಕುರುಕ್ಷೇತ್ರನಿಬದ್ಧಾಂ ವೈ ತಾಂ ಶೃಣುಷ್ವ ಹಲಾಯುಧ ॥20॥
ಸುರೇಶ್ವರನಾದ ಇಂದ್ರನು ಸ್ವತಃ ತಾನೇ ಈ ಕ್ಷೇತ್ರದ ಬಗೆಗೆ ಕಥೆಯನ್ನು ಹೇಳಿದನು. ಬಲರಾಮನೇ! ಅದನ್ನು ಕೇಳು.
ಇಂದ್ರಃ
ಪಾಂಸವೋಽಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ |
ಅಪಿ ದುಷ್ಕೃತಕರ್ಮಾಣಃ ತೇ ಯಾಂತಿ ಪರಮಾಂ ಗತಿಮ್ ॥21॥
ಇಂದ್ರ ಈ ಕುರುಕ್ಷೇತ್ರದ ಧೂಳು ಕೂಡ ಗಾಳಿಯ ಮೂಲಕ ದುಷ್ಟಕರ್ಮವನ್ನು ಮಾಡಿದ ಪಾಪಿಗಳಿಗೆ ಸೋಂಕಿದಾಗ ಅಂತಹ ಪಾಪಿಗಳೂ ಕೂಡ ಉತ್ತಮ ಗತಿಯನ್ನು ಹೊಂದುವರು.
ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ |
ಇತ್ಯೇವಂ ನಿಶ್ಚಿತೋ ಭೂತ್ವಾ ತೇನ್ಯೈವ ಸ್ವರ್ಗಮೇಷ್ಯತಿ ॥22॥
ನಾನು ಕುರುಕ್ಷೇತ್ರಕ್ಕೆ ಹೋಗುವೆನು, ನಾನು ಕುರುಕ್ಷೇತ್ರದಲ್ಲಿ ವಾಸವನ್ನು ಮಾಡುವೆನು, ಎಂದು ನಿಶ್ಚಯವನ್ನು ಮಾಡಿಕೊಳ್ಳುವುದರಿಂದಲೇ ಸ್ವರ್ಗವನ್ನು ಹೊಂದುವರು.
ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ |
ತಥಾ ಸ್ನಾನಂ ಚ ಮೌನಂ ಚ ವೀರಾಸನಮುಪಾಸ್ಮಹೇ ॥23॥
ಏವಂ ಪ್ರಲಪಮಾನೋಽಪಿ ಚಿಂತಯಂಶ್ಚ ಮುಹುರ್ಮುಹುಃ |
ದೂರಸ್ಥೋ ಯದಿ ವಾ ತಿಷ್ಠಲ್ಲಭೇತ್ ಸ್ವರ್ಗಂ ಸುನಿಶ್ಚಿತಮ್ ॥24॥
ನಾನು ಕುರುಕ್ಷೇತ್ರಕ್ಕೆ ಹೋಗುವೆನು, ನಾನು ಕುರುಕ್ಷೇತ್ರದಲ್ಲಿ ವಾಸವನ್ನು ಮಾಡುವೆನು. ಹಾಗೆಯೇ ಆ ಕ್ಷೇತ್ರವನ್ನು ಗೌರವಿಸಿ, ಮೌನವ್ರತವನ್ನು ಆಚರಿಸಿ ವೀರಾಸನದಲ್ಲಿ ತಪಸ್ಸನ್ನಾಚರಿಸುವೆನು. ಹೀಗೆ ಬಾಯಿಯಲ್ಲಿ ಉಚ್ಚರಿಸುವವನೂ, ಮನಸ್ಸಿನಲ್ಲಿ ಮತ್ತೆ ಆಲೋಚಿಸುವವನೂ ಕೂಡ ದೂರದಲ್ಲಿರಲಿ ಅಥವಾ ಹತ್ತಿರದಲ್ಲಿರಲಿ, ಖಂಡಿತವಾಗಿಯೂ ಸ್ವರ್ಗವನ್ನು ಹೊಂದುತ್ತಾನೆ.
ಋಷಯಃ
ಸುರರ್ಷಯೋ ಬ್ರಾಹ್ಮಣಸತ್ತಮಾಶ್ಚ
ತಥಾ ನೃಗಾದ್ಯಾ ನರದೇವಮುಖ್ಯಾಃ |
ಇಷ್ಟ್ವಾ ಮಹಾರ್ಹೈಃ ಕ್ರತುಭಿರ್ನೃಸಿಂಹಾಃ
ಸನ್ನ್ಯಸ್ತದೇಹಾಃ ಸುಗತಿಂ ಪ್ರಪನ್ನಾಃ ॥25॥
ಋಷಿಗಳು ದೇವತೆಗಳು, ಮಾನವೋತ್ತಮರು, ನೃಗಮೊದಲಾದ ನರೋತ್ತಮ ರಾಜಶ್ರೇಷ್ಠರು ಬಹಳ ಮೌಲ್ಯವುಳ್ಳ ಯಾಗಗಳಿಂದ ಇಲ್ಲಿ ಯಾಗ ಮಾಡಿ, ದೇಹವನ್ನು ತ್ಯಾಗಮಾಡಿ ಉತ್ತಮಗತಿಯನ್ನು ಹೊಂದಿದರು.
ನರಂದುಕಾರಂದುಕಯೋರ್ಯದಂತರಂ
ರಾಮಹ್ರದಾನಾಂ ಚ ನರಂದುಕಸ್ಯ |
ಏತತ್ ಕುರುಕ್ಷೇತ್ರಸ್ಯಮಂತಪಂಚಕಂ
ಪಿತಾಮಹಸ್ಯೋತ್ತರವೇದಿರುಚ್ಯತೇ ॥26॥
ಒಂದು ದಿಕ್ಕಿನಲ್ಲಿ ನರಂದುಕ ಎಂಬ ಪ್ರದೇಶವು ಅವಧಿಯಾಗಿದೆ. ಇನ್ನೊಂದು ದಿಕ್ಕಿನಲ್ಲಿ ಅರಂದುಕ ಎಂಬ ಪ್ರದೇಶವು ಅವಧಿ (ಗಡಿ/ಸೀಮೆ) ಯಾಗಿದೆ. ಮತ್ತೊಂದು ದಿಕ್ಕಿನಲ್ಲಿ ರಾಮಸರೋವರವು ಅವಧಿಯಾಗಿದೆ. ನಾಲ್ಕನೆಯ ದಿಕ್ಕಿನಲ್ಲಿ ನರಂದುಕ(ಮಚಕ್ರುಕ) ಪ್ರದೇಶವು ಅವಧಿಯಾಗಿದೆ. ಹೀಗೆ ನಾಲ್ಕು ಅವಧಿಗಳ ಮಧ್ಯೆ ಇರುವ ಸ್ಯಮಂತಪಂಚಕವೆಂದು ಪ್ರಸಿದ್ಧವಾದ ಕುರುಕ್ಷೇತ್ರವು ಬ್ರಹ್ಮದೇವರ ಯಜ್ಞವೇದಿಕೆ ಎಂದು ಪ್ರಸಿದ್ಧವಾಗಿದೆ.
ಇದಂ ಶಿವಂ ಪುಣ್ಯತಮಂ ದಿವೌಕಸಾಂ
ಸುಸಮ್ಮತಂ ಸ್ವರ್ಗಗುಣೈಃ ಸಮನ್ವಿತಮ್ |
ಅತಶ್ಚ ಸರ್ವೇಽತ್ರ ವಸುಂಧರಾಧಿಪಾ

ಹತಾ ಗಮಿಷ್ಯಂತಿ ಮಹಾತ್ಮನಾಂ ಗತಿಮ್ ॥27॥
ಪುಣ್ಯಪ್ರದವಾದ ಈ ಮಂಗಳಕ್ಷೇತ್ರವು ದೇವತೆಗಳಿಗೂ ಸಮ್ಮತವಾಗಿದೆ. ಸಕಲಗುಣಗಳಿಂದ ಕೂಡಿದ್ದಾಗಿದೆ. ಆದ್ದರಿಂದಲೇ ಎಲ್ಲಾ ರಾಜರೂ ಇಲ್ಲಿ ಪ್ರಾಣಬಿಟ್ಟು ಮಹಾತ್ಮರು ಸೇರುವ ಸ್ಥಳಕ್ಕೆ ಹೋಗುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಕುರುಕ್ಷೇತ್ರಶಂಸನಂ ನಾಮ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಮಿತ್ರಾವರುಣಾಶ್ರಮದಲ್ಲಿ ಭೀಮ-ದುರ್ಯೋಧನರ
ಮಧ್ಯೆ ಗದಾಯುದ್ಧ ನಡೆಯುತ್ತಿರುವ ವಿಷಯವನ್ನು ನಾರದರಿಂದ
ಕೇಳಿ ತಿಳಿದ ಬಲರಾಮನು ಅದನ್ನು ನೋಡುವ ಇಚ್ಛೆಯಿಂದ
ಕುರುಕ್ಷೇತ್ರದ ಕಡೆಗೆ ಹೋಗುವುದು.
ವೈಶಂಪಾಯನಃ
ಕುರುಕ್ಷೇತ್ರಂ ತತೋ ಗತ್ವಾ ದತ್ತ್ವಾ ದಾಯಾಂಶ್ಚ ಸಾತ್ವತಃ |
ಆಶ್ರಮಂ ಸುಮಹದ್ ದಿವ್ಯಮಗಮಜ್ಜನಮೇಜಯ ॥1॥
ವೈಶಂಪಾಯನ ಜನಮೇಜಯನೇ! ಸಾತ್ವತವಂಶದಲ್ಲಿ ಬಂದ ಬಲರಾಮನು ಕುರುಕ್ಷೇತ್ರಕ್ಕೆ ಹೋಗಿ, ಅಲ್ಲಿ ಕೊಡಬೇಕಾದ ದಾನದ ಪದಾರ್ಥಗಳನ್ನು ದಾನಮಾಡಿ, ಅಲೌಕಿಕವಾದ, ಮಹತ್ವಪೂರ್ಣವಾದ ಆಶ್ರಮಕ್ಕೆ ಹೋದನು.
ಮಧೂಕಾಮ್ರವನೋಪೇತಂ ಪ್ಲಕ್ಷನ್ಯಗ್ರೋಧಸಂಕುಲಮ್ |
ಚಿರಬಿಲ್ವಯುತಂ ಪುಣ್ಯಂ ಪನಸಾರ್ಜುನಸಂಕುಲಮ್ ॥2॥
ತಂ ದೃಷ್ಟ್ವಾ ಯಾದವಶ್ರೇಷ್ಠಃ ಪ್ರವರಂ ಪುಣ್ಯಲಕ್ಷಣಮ್ |
ಪಪ್ರಚ್ಛ ತಾನೃಷೀನ್ ಸರ್ವಾನ್ ಕಸ್ಯಾಯಂ ಹ್ಯಾಶ್ರಮೋ ವರಃ ॥3॥
ಆ ಆಶ್ರಮವು ಮಧೂಕವೃಕ್ಷ ಮತ್ತು ಮಾವಿನ ವೃಕ್ಷಗಳ ವನಗಳಿಂದ ಕೂಡಿತ್ತು. ಗೋಳಿ, ಅಶ್ವತ್ಥ, ಚಿರಬಿಲ್ವ, ಹಲಸು, ಅರ್ಜುನ ವೃಕ್ಷಗಳಿಂದ ಕೂಡಿತ್ತು. ಇಂತಹ ಉತ್ತಮವಾದ, ಪುಣ್ಯಪ್ರದವಾದ ಆಶ್ರಮವನ್ನು ನೋಡಿ ಬಲರಾಮನು ಅಲ್ಲಿದ್ದ ಋಷಿಗಳನ್ನು `ಇದು ಯಾರ ಆಶ್ರಮ?' ಎಂಬುದಾಗಿ ಕೇಳಿದನು.
ತೇ ಚ ಸರ್ವೇ ಮಹಾತ್ಮಾನಮೂಚೂ ರಾಜನ್ ಹಲಾಯುಧಮ್ ॥4॥
ರಾಜನೇ! ಆ ಎಲ್ಲಾ ಋಷಿಗಳು ಮಹಾತ್ಮನಾದ ಬಲರಾಮನಿಗೆ ಹೇಳಿದರು
ಋಷಯಃ
ಶೃಣು ವಿಸ್ತರಶೋ ರಾಮ ಯಸ್ಯಾಯಂ ಪೂರ್ವಮಾಶ್ರಮಃ |
ಅತ್ರ ವಿಷ್ಣುಃ ಪುರಾ ದೇವಃ ತಪ್ತವಾಂಸ್ತಪ ಉತ್ತಮಮ್ ॥5॥
ಋಷಿಗಳು `ಬಲರಾಮನೇ! ಹಿಂದೆ ಇದು ಯಾರ ಆಶ್ರಮವಾಗಿತ್ತೆಂಬುದನ್ನು ಹೇಳುತ್ತೇವೆ. ಕೇಳು! ಹಿಂದೆ ಇಲ್ಲಿ ವಿಷ್ಣುವು ಉತ್ತಮವಾದ ತಪಸ್ಸನ್ನು ಮಾಡಿದನು.
ಅತ್ರಾಸ್ಯ ವಿಧಿವದ್ ಯಜ್ಞಾಃ ಸರ್ವೇ ವೃತ್ತಾಃ ಪುರಾತನಾಃ ॥6|
ಇಲ್ಲಿ ಅವನು ವಿಧಿವತ್ತಾಗಿ ಅನೇಕ ಸನಾತನ ಯಾಗಗಳನ್ನು ನಡೆಸಿದ್ದನು.
ಅತ್ರೈವ ಬ್ರಾಹ್ಮಣೀ ವೃದ್ಧಾ ಕೌಮಾರಬ್ರಹ್ಮಚಾರಿಣೀ |
ಯೋಗಯುಕ್ತಾ ದಿವಂ ಯಾತಾ ತಪೋಯುಕ್ತಾ ವಿಶಾಂಪತೇ ॥7॥
ರಾಜನೇ! ಇಲ್ಲಿಯೇ ಕೌಮಾರಾವಸ್ಥೆಯಿಂದಲೇ ಬ್ರಹ್ಮಚಾರಿಣಿಯಾಗಿದ್ದ, ತಪಸ್ಸಿನ ಸಿದ್ಧಿಯನ್ನು ಪಡೆದುಕೊಂಡಿದ್ದ ಒಬ್ಬ ತಪಸ್ವಿ ಬ್ರಾಹ್ಮಣಕನ್ಯೆಯು ಯೋಗ ಸಾಮರ್ಥ್ಯದಿಂದ ಸ್ವರ್ಗಕ್ಕೆ ಹೋದಳು.
ಬಭೂವ ಶ್ರೀಮತೀ ರಾಜನ್ ಶಾಂಡಿಲ್ಯಸ್ಯ ಮಹಾತ್ಮನಃ |
ಸುತಾ ಧೃತವ್ರತಾ ಸಾಧ್ವೀ ನಿಯತಾ ಬ್ರಹ್ಮಚಾರಿಣೀ ॥8॥
ರಾಜನೇ! ನಿಯಮಬದ್ಧವಾದ ಬ್ರಹ್ಮಚರ್ಯವ್ರತನಿಷ್ಠಳಾದ, ಸಾಧುಸ್ವಭಾವದ ಅವಳು ಮಹಾತ್ಮನಾದ ಶಾಂಡಿಲ್ಯಮುನಿಯ ಮಗಳಾಗಿದ್ದಳು.
ಸಾಽಪಿ ಪ್ರಾಪ್ಯ ಪರಂ ಯೋಗಂ ಗತ್ವಾ ಸ್ವರ್ಗಮನುತ್ತಮಮ್ |
ಭುಕ್ತ್ವಾಽಽಶ್ರಮೇಽಶ್ವಮೇಧಸ್ಯ ಫಲಂ ಫಲವತಃ ಶುಭಮ್ ॥9॥
ಅವಳು ಈ ಆಶ್ರಮದಲ್ಲಿ ದಿವ್ಯಫಲವನ್ನು ಕೊಡುವ ಅಶ್ವಮೇಧಯಾಗದ ಫಲವನ್ನು ಹೊಂದಿ, ಉತ್ತಮ ಯೋಗಶಕ್ತಿಯನ್ನು ಸಂಪಾದಿಸಿಕೊಂಡು ಅಸದೃಶವಾದ ಸ್ವರ್ಗವನ್ನು ಹೊಂದಿದಳು.
ಗತಾ ಸ್ವರ್ಗಂ ಮಹಾರಾಜ ಪೂಜಿತಾ ಚ ಮಹಾತ್ಮಭಿಃ ॥10॥
ಮಹಾರಾಜನೇ! ಸ್ವರ್ಗಕ್ಕೆ ಹೋದ ಆಕೆಯು ಅಲ್ಲಿ ಮಹಾತ್ಮರಿಂದ ಪೂಜ್ಯಳಾದಳು'.
ಋಷೀಣಾಂ ವಚನಂ ಶ್ರುತ್ವಾ ಜಗಾಮಾಶ್ರಮಮುತ್ತಮಮ್ ॥11॥
ಬಲರಾಮನು ಋಷಿಗಳ ಮಾತನ್ನು ಕೇಳಿ ಉತ್ತಮವಾದ ಆಶ್ರಮಕ್ಕೆ ಹೋದನು.
ಅಭಿಗಮ್ಯಾಶ್ರಮಂ ಪುಣ್ಯಂ ಸ ದೃಷ್ಟ್ವಾ ಯದುನಂದನಃ |

ಋಷೀಂಸ್ತಾನಭಿವಾದ್ಯಾಥ ಪಾರ್ಶ್ವೇ ಹಿಮವತೋಽಚ್ಯುತಃ ॥12॥
ಯದುವಂಶದ ಬಲರಾಮನು, ಹಿಮಾಲಯದ ಪಕ್ಕದಲ್ಲಿ ಇದ್ದ, ಪುಣ್ಯಕರವಾದ ಆಶ್ರಮವನ್ನು ನೋಡಿ ಋಷಿಗಳಿಗೆ ನಮಸ್ಕರಿಸಿದನು.
ಸಂಧ್ಯಾಕರ್ಮಾಣಿ ಸರ್ವಾಣಿ ನಿರ್ವರ್ತ್ಯಾರುರುಹೇಽಚಲಮ್ ॥13॥
ಸಂಧ್ಯಾಕರ್ಮಗಳನ್ನು ಪೂರೈಸಿ ಪರ್ವತವನ್ನು ಏರಿದನು.
ನಾತಿದೂರಂ ತತೋ ಗತ್ವಾ ರಾಮಸ್ತಾಲಧ್ವಜೋ ಬಲೀ |
ಪುಣ್ಯೇ ತೀರ್ಥವರೇ ಸ್ನಾತ್ವಾ ವಿಸ್ಮಯಂ ಪರಮಂ ಗತಃ ॥14॥
ತಾಲಧ್ವಜನಾದ ಬಲರಾಮನು ಸ್ವಲ್ಪದೂರ ಹೋಗಿ, ಪುಣ್ಯಪ್ರದವಾದ ಉತ್ತಮ ತೀರ್ಥದಲ್ಲಿ ಸ್ನಾನವನ್ನು ಮಾಡಿ ಬಹಳ ಆಶ್ಚರ್ಯವನ್ನು ಹೊಂದಿದನು.
ಪ್ರಭವಂ ಸ ಸರಸ್ವತ್ಯಾಃ ಪ್ಲಕ್ಷಪ್ರಸ್ರವಣಂ ಬಲಃ |
ಸಂಪ್ರಾಪ್ತಃ ಕಾರಪಚನಂ ತೀರ್ಥಪ್ರವರಮುತ್ತಮಮ್ ॥15॥
ಬಲರಾಮನು ಸರಸ್ವತಿಯ ಉಗಮಸ್ಥಾನವಾದ 'ಪ್ಲಕ್ಷಪ್ರಸ್ರವಣ' ಎಂಬ ತೀರ್ಥಕ್ಕೆ ಹೋದನು. ಅಲ್ಲಿಂದ ಮುಂದೆ ಉತ್ತಮತೀರ್ಥವಾದ ಕಾರಪಚನ ಎಂಬ ಹೆಸರಿನ ತೀರ್ಥವನ್ನು ಹೊಂದಿದನು.
ಹಲಾಯುಧಸ್ತು ತತ್ರಾಪಿ ದತ್ವಾ ದಾನಂ ಮಹಾಬಲಃ |
ಆಪ್ಲುತಃ ಸಲಿಲೇ ಶೀತೇ ತಸ್ಮಾಚ್ಚಾಪಿ ಜಗಾಮ ಹ ॥16॥
ಮಹಾಬಲಶಾಲಿಯಾದ ಬಲರಾಮನು ಅಲ್ಲಿಯೂ ದಾನವನ್ನು ಮಾಡಿ, ತಂಪಾದ ನೀರಿನಲ್ಲಿ ಅವಗಾಹ ಸ್ನಾನವನ್ನು ಮಾಡಿ ಅಲ್ಲಿಂದಲೂ ಮುಂದೆ ಹೋದನು.
ಆಶ್ರಮಂ ಪರಮಪ್ರೀತೋ ಮಿತ್ರಸ್ಯ ವರುಣಸ್ಯ ಚ ॥17॥
ಬಹಳ ಪ್ರೀತನಾಗಿ ಮಿತ್ರ ಮತ್ತು ವರುಣರ ಆಶ್ರಮಕ್ಕೆ ಹೋದನು.
ಇಂದ್ರಾಗ್ನೀ ಅರ್ಯಮಾ ಚೈವ ಯತ್ರ ಪ್ರಾಕ್ ಪ್ರೀತಿಮಾಪ್ನುವನ್ |
ತಂ ದೇಶಂ ಕಾರಪಚನಂ ಸ ತಸ್ಮಾದಾಜಗಾಮ ಹ ॥18॥
ಅಲ್ಲಿಂದ ಕಾರಪಚನ ತೀರ್ಥಕ್ಕೆ ಹೋದನು. ಆ ಕಾರಪಚನ ತೀರ್ಥದಲ್ಲಿ ಹಿಂದೆ ಇಂದ್ರ, ಅಗ್ನಿ ಮತ್ತು ಅರ್ಯಮರು ಬಹಳವಾದ ತೃಪ್ತಿಯನ್ನು ಹೊಂದಿದ್ದರು.
ಸ್ನಾತ್ವಾ ತತ್ರಾಪಿ ಧರ್ಮಾತ್ಮಾ ಪರಾಂ ತುಷ್ಟಿಮವಾಪ್ಯ ಚ |
ಋಷಿಭಿಶ್ಚೈವ ಸಿದ್ಧೈಶ್ಚ ಸಹಿತೋ ವೈ ಮಹಾಬಲಃ ॥19॥
ಅಲ್ಲಿಯೂ ಧರ್ಮಾತ್ಮನಾದ ಬಲರಾಮನು ಸ್ನಾನವನ್ನು ಮಾಡಿ, ಬಹಳ ಸಂತೋಷವನ್ನು ಹೊಂದಿದನು. ಅಲ್ಲಿ ಋಷಿಗಳ ಮತ್ತು ಸಿದ್ಧಪುರುಷರ ಸಮಾಗಮವನ್ನು ಮಾಡಿದನು.
ಉಪವಿಷ್ಟಃ ಕಥಾಃ ಶುಭ್ರಾಃ ಶುಶ್ರಾವ ಯದುನಂದನಃ ॥20॥
ಬಲರಾಮನು ಅಲ್ಲಿ ಕುಳಿತುಕೊಂಡು ಮಂಗಳವಾದ ಕಥೆಗಳನ್ನು ಕೇಳಿದನು.
ತಥಾ ತು ತಿಷ್ಠತಾಂ ತೇಷಾಂ ನಾರದೋ ಭಗವಾನ್ ಋಷಿಃ |
ಆಜಗಾಮಾಥ ತಂ ದೇಶಂ ಯತ್ರ ರಾಮೋ ವ್ಯವಸ್ಥಿತಃ ॥21॥
ಅವರೆಲ್ಲಾ ಅಲ್ಲಿ ಹಾಗಿರಲು ಭಗವಾನ್ ನಾರದ ಋಷಿಯು ಬಲರಾಮನಿದ್ದಲ್ಲಿಗೆ ಬಂದನು.
ಜಟಾಮಂಡಲಸಂವೀತಃ ಕುಶಚೀರೀ ಮಹಾಯಶಾಃ |
ಹೇಮದಂಡಧರೋ ರಾಜನ್ ಕಮಂಡಲುಧರಸ್ತಥಾ ॥22॥
ರಾಜನೇ! ಆ ಮಹಾತ್ಮನಾದ ನಾರದನು ಜಟಾಧಾರಿಯಾಗಿದ್ದನು. ಸೊಂಟದಲ್ಲಿ ದರ್ಭೆಯನ್ನೂ ಮೈಯಲ್ಲಿ ನಾರುಮಡಿಯನ್ನೂ ಧರಿಸಿದ್ದನು. ಬಂಗಾರದ ದಂಡವನ್ನು ಹಿಡಿದುಕೊಂಡಿದ್ದನು. ಹಾಗೆಯೇ ಕಮಂಡಲುವನ್ನು ಧರಿಸಿದ್ದನು.
ಕರ್ಣಪೀಯೂಷಶಬ್ದಾಂ ತಾಂ ಗೃಹ್ಯ ವೀಣಾಂ ಮನೋರಮಾಮ್ |
ನೃತ್ಯೇ ಗೀತೇ ಚ ಕುಶಲೋ ದೇವಬ್ರಾಹ್ಮಣಪೂಜಕಃ ॥23॥
ನೃತ್ಯ ಮತ್ತು ಗಾನದಲ್ಲಿ ನಿಷ್ಣಾತನಾದ, ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ಪೂಜಿಸುವ ನಾರದನು ಮನಸ್ಸಿಗೆ ಮುದವನ್ನೀಡುವ ವೀಣೆಯನ್ನು ಹಿಡಿದುಕೊಂಡು ಕಿವಿಗೆ ಅಮೃತದ ಹಾಗೆ ಆಪ್ಯಾಯಮಾನವಾದ ನಾದವನ್ನು ಹೊರಹೊಮ್ಮಿಸುತ್ತಿದ್ದನು.
ಪ್ರೇರಕಃ ಕಲಹಾನಾಂ ಚ ನಿತ್ಯಂ ಚ ಕಲಹಪ್ರಿಯಃ |
ತಂ ದೇಶಮಗಮಚ್ಛ್ರೀಮಾನ್ ಯತ್ರ ರಾಮೋ ಹಲಾಯುಧಃ ॥24॥
ಮೇಲ್ನೋಟಕ್ಕೆ ಸದಾ ಜಗಳವನ್ನು ಉಂಟುಮಾಡುತ್ತಿದ್ದ ನಾರದನು ಕಲಹಪ್ರಿಯ ಎಂದೆನಿಸಿಕೊಳ್ಳುತ್ತಿದ್ದನು. ಅಂತಹ ನಾರದನು ಬಲರಾಮನು ಇದ್ದ ಪ್ರದೇಶಕ್ಕೆ ಬಂದನು.
ಪ್ರತ್ಯುತ್ಥಾಯ ತು ತಂ ರಾಮಃ ಪೂಜಯಿತ್ವಾ ಯತವ್ರತಮ್ |
ದೇವರ್ಷಿಂ ಪರ್ಯಪೃಚ್ಛತ್ತಂ ಯಥಾವೃತ್ತಂ ಕುರೂನ್ ಪ್ರತಿ ॥25॥
ಬಲರಾಮನು ಎದ್ದುನಿಂತು ವ್ರತಧಾರಿಯಾದ ನಾರದನನ್ನು ಪೂಜಿಸಿ ದೇವರ್ಷಿಯಾದ ನಾರದಮಹರ್ಷಿಯಲ್ಲಿ ಕುರುಗಳ ಚರಿತ್ರೆಯ ಬಗ್ಗೆ ಪ್ರಶ್ನಿಸಿದನು.
ತದಾಽಸ್ಯಾಕಥಯದ್ ರಾಜನ್ ನಾರದಃ ಸರ್ವವೇದವಿತ್ |
ಸರ್ವಮೇವ ಯಥಾತತ್ತ್ವಮತೀತಂ ಕುರುಸಂಕ್ಷಯಮ್ ॥26॥
ರಾಜನೇ! ಸಕಲವೇದವನ್ನು ತಿಳಿದಿದ್ದ ನಾರದನು ನಡೆದುಹೋದ ಕೌರವನಾಶವನ್ನು ಯಥಾವತ್ತಾಗಿ ಬಲರಾಮನಿಗೆ ಹೇಳಿದನು.

ತತೋಽಬ್ರುವೀದ್ ರೌಹಿಣೇಯೋ ನಾರದಂ ದೀನಯಾ ಗಿರಾ ॥27॥
ಅನಂತರ ಬಲರಾಮನು ದುಃಖಭರಿತವಾದ ಮಾತುಗಳಿಂದ ನಾರದನಿಗೆ ಹೀಗೆ ಹೇಳಿದನು.
ರಾಮಃ
ಕಿಮವಸ್ಥಂ ತು ತತ್ ಕ್ಷತ್ರಂ ಯೇ ಚ ತತ್ರಾಭವನ್ ನೃಪಾಃ |
ಶ್ರುತಮೇತನ್ಮಯಾ ಪೂರ್ವಂ ಸರ್ವಮೇವ ತಪೋಧನ ॥28॥
ವಿಸ್ತರಶ್ರವಣೇ ಜಾತಂ ಕೌತೂಹಲಮತೀವ ಮೇ ॥29॥
ಬಲರಾಮ `ತಪೋಧನನೇ! ಅಲ್ಲಿ ಯಾವ ರಾಜರು ಇದ್ದರೋ ಅಂತಹ ಕ್ಷತ್ರಿಯರ ಪಾಡೇನು? ನಾನು ಇದನ್ನೆಲ್ಲಾ ಹಿಂದೆಯೇ ಕೇಳಿ ತಿಳಿದುಕೊಂಡಿದ್ದೆ. ಇದನ್ನು ಮತ್ತೂ ವಿಸ್ತಾರವಾಗಿ ಕೇಳುವ ಕುತೂಹಲವು ನನಗೆ ಉಂಟಾಗಿದೆ.'
ನಾರದಃ
ಪೂರ್ವಮೇವ ಹತೋ ಭೀಷ್ಮೋ ದ್ರೋಣಃ ಸೇನಾಪತಿಸ್ತಥಾ |
ಹತೋ ವೈಕರ್ತನಃ ಕರ್ಣಃ ಪುತ್ರಾಶ್ಚಾಸ್ಯ ಮಹಾಬಲಾಃ ॥30॥
ನಾರದ ಸೇನಾಧಿಪತಿಗಳಾದ ಭೀಷ್ಮ, ದ್ರೋಣ, ಕರ್ಣ ಮೊದಲಾದವರು ಹಿಂದೆಯೇ ಸತ್ತುಹೋಗಿದ್ದಾರೆ. ಮಹಾಬಲಶಾಲಿಗಳಾದ ಅವರ ಮಕ್ಕಳೂ ಸತ್ತಿದ್ದಾರೆ.
ಭೂರಿಶ್ರವಾ ರೌಹಿಣೇಯ ಮದ್ರರಾಜಶ್ಚ ವೀರ್ಯವಾನ್ |
ಏತೇ ಚಾನ್ಯೇ ಚ ಬಹವೋ ಹತಾಸ್ತತ್ರ ಮಹಾಬಲಾಃ ॥31॥
ರೋಹಿಣೀಪುತ್ರನೇ! ಭೂರಿಶ್ರವಸ್ಸು, ವೀರನಾದ ಮದ್ರರಾಜ ಶಲ್ಯ ಇವರೂ ಕೂಡ ಸತ್ತಿದ್ದಾರೆ.
ಪ್ರಿಯಾನ್ ಪ್ರಾಣಾನ್ ಪರಿತ್ಯಜ್ಯ ಪ್ರಿಯಾರ್ಥಂ ಕೌರವಸ್ಯ ವೈ |
ರಾಜಾನೋ ರಾಜಪುತ್ರಾಶ್ಚ ಸಮರೇಷ್ವನಿವರ್ತಿನಃ ॥32॥
ಯುದ್ಧದಲ್ಲಿ ಹಿಂತಿರುಗದ ರಾಜರು ಮತ್ತು ರಾಜಪುತ್ರರು ದುರ್ಯೋಧನನ ಸಂತೋಷಕ್ಕಾಗಿ ತಮಗೆ ಅತ್ಯಂತ ಪ್ರಿಯವಾದ ಪ್ರಾಣವನ್ನೇ ಬಿಟ್ಟಿದ್ದಾರೆ.
ಅಹತಾಸ್ತು ಮಹಾಬಾಹೋ ಶೃಣು ಯೇ ತತ್ರ ಮಾಧವ ॥33॥
ಬಲರಾಮನೇ! ಸಾಯದೆ ಉಳಿದಿರುವವರ ಬಗ್ಗೆ ಹೇಳುತ್ತೇನೆ, ಕೇಳು.
ಧಾರ್ತರಾಷ್ಟ್ರೇ ಬಲೇ ಶೇಷಾಃ ಕೃಪೋ ಭೋಜಶ್ಚ ವೀರ್ಯವಾನ್ |
ಅಶ್ವತ್ಥಾಮಾ ಚ ವಿಕ್ರಾಂತೋ ಭಗ್ನಸೈನ್ಯಾ ದಿಶೋ ಗತಾಃ ॥34॥
ಧೃತರಾಷ್ಟ್ರನ ಸೈನ್ಯದಲ್ಲಿ ಕೃಪ, ವೀರನಾದ ಕೃತವರ್ಮ, ಪರಾಕ್ರಮಿ ಅಶ್ವತ್ಥಾಮ ಇವರು ಉಳಿದುಕೊಂಡಿದ್ದಾರೆ. ಸೈನ್ಯವನ್ನೆಲ್ಲಾ ಕಳೆದುಕೊಂಡ ಇವರು ದಿಕ್ಕಾಪಾಲಾಗಿ ಹೋದರು.
ದುರ್ಯೋಧನೋ ಹತೇ ಸೈನ್ಯೇ ವಿದ್ರುತೇಷು ಪದಾತಿಷು |
ಹ್ರದಂ ದ್ವೈಪಾಯನಂ ನಾಮ ವಿವೇಶ ಭೃಶದುಃಖಿತಃ ॥35॥
ಸೈನ್ಯವು ನಾಶವಾಗಿ ಪದಾತಿಗಳೆಲ್ಲಾ ಓಡಿಹೋಗಲು, ದುರ್ಯೋಧನನು ಬಹಳ ದುಃಖದಿಂದ ದ್ವೈಪಾಯನ ಸರೋವರವನ್ನು ಪ್ರವೇಶಿಸಿದನು.
ಶಯಾನಂ ಧಾರ್ತರಾಷ್ಟ್ರಂ ತು ಸ್ತಂಭಿತೇ ಸಲಿಲೇ ತದಾ |
ಪಾಂಡವಾಃ ಸಹ ಕೃಷ್ಣೇನ ವಾಗ್ಭಿರುಗ್ರಾಭಿರಾರ್ದಯನ್ ॥36॥
ಜಲಸ್ತಂಭವನ್ನು ಮಾಡಿಕೊಂಡು ವಿಶ್ರಾಂತಿಗಾಗಿ ನೀರೊಳಗೆ ಮಲಗಿದ್ದ ದುರ್ಯೋಧನನನ್ನು ಪಾಂಡವರು ಕಠಿಣವಾದ ತೀಕ್ಷ್ಣಮಾತುಗಳಿಂದ ಪೀಡಿಸಿದರು.
ಸ ತುದ್ಯಮಾನೋ ಬಲವಾನ್ ವಾಗ್ಭೀ ರಾಮ ಸಮಂತತಃ |
ಉತ್ಥಿತೋಽಭೂದ್ ಹ್ರದಾದ್ ವೀರಃ ಪ್ರಗೃಹ್ಯ ಮಹತೀಂ ಗದಾಮ್ ॥
ಹೀಗೆ ಬಲಶಾಲಿಯಾದ ದುರ್ಯೋಧನನು ಚುಚ್ಚುಮಾತುಗಳಿಂದ ಘಾಸಿಗೊಂಡು, ಸರೋವರದಿಂದ ಎದ್ದು ಬಂದು, ಬೃಹತ್ತಾದ ಗದೆಯನ್ನು ಹಿಡಿದು ಯುದ್ಧಸನ್ನದ್ಧನಾದನು.
ಸ ಚಾಭ್ಯುಪಾಗತೋ ಯುದ್ಧಂ ಭೀಮಸೇನೇನ ಸಾಂಪ್ರತಮ್ |
ಭವಿಷ್ಯತಿ ಹಿ ತಯೋರದ್ಯ ಯುದ್ಧಂ ರಾಮ ಸುದಾರುಣಮ್ ॥38॥
ಈಗ ಅವನು ಭೀಮಸೇನನೊಡನೆ ಯುದ್ಧಕ್ಕೆ ತಯಾರಾಗಿ ನಿಂತಿದ್ದಾನೆ. ಬಲರಾಮನೇ! ಇವತ್ತು ಭೀಮ-ದುರ್ಯೋಧನರ ಮಧ್ಯೆ ಘೋರವಾದ ಗದಾಯುದ್ಧವು ನಡೆಯಲಿದೆ.
ಯದಿ ಕೌತೂಹಲಂ ತೇಽಸ್ತಿ ವ್ರಜ ಮಾಧವ ಮಾ ಚಿರಮ್ |
ಪಶ್ಯ ಯುದ್ಧಂ ಮಹಾಘೋರಂ ಶಿಷ್ಯಯೋರ್ಯದಿ ಮನ್ಯಸೇ ॥39॥
ಬಲರಾಮನೇ! ನಿನಗೆ ಕುತೂಹಲವು ಇರುವುದಾದರೆ ತಡಮಾಡದೆ ಅಲ್ಲಿಗೆ ಹೋಗು. ನೀನು ಇಷ್ಟಪಡುವುದಾದರೆ ನಿನ್ನ ಶಿಷ್ಯರ ಮಧ್ಯೆ ನಡೆಯುವ ಘೋರಯುದ್ಧವನ್ನು ನೋಡು.
ವೈಶಂಪಾಯನಃ
ಸ ನಾರದವಚಃ ಶ್ರುತ್ವಾ ತಾನಭ್ಯರ್ಚ್ಯ ದ್ವಿಜರ್ಷಭಾನ್ |
ಸರ್ವಾನ್ ವಿಸರ್ಜಯಾಮಾಸ ಯೇ ತೇನಾನುಗತಾಃ ಸಹ ॥40॥
ವೈಶಂಪಾಯನ ಬಲರಾಮನು ನಾರದನ ಮಾತನ್ನು ಕೇಳಿ ಅಲ್ಲಿದ್ದ ಬ್ರಾಹ್ಮಣೋತ್ತಮರನ್ನು ಪೂಜಿಸಿ, ತನ್ನೊಡನೆ ಬಂದಿದ್ದ

ಎಲ್ಲರನ್ನೂ ಕಳುಹಿಸಿಕೊಟ್ಟನು.
ಗಮ್ಯತಾಂ ದ್ವಾರಕಾಂ ಚೇತಿ ಸೋಽನ್ವಶಾದನುಯಾಯಿನಃ ||41||
ತನ್ನನ್ನು ಅನುಸರಿಸಿಕೊಂಡು ಬಂದವರನ್ನು `ನೀವೆಲ್ಲಾ ದ್ವಾರಕೆಗೆ ಹೋಗಿ' ಎಂದು ಆದೇಶಿಸಿದನು.
ಸೋಽವತೀರ್ಯಾಚಲಶ್ರೇಷ್ಠಾತ್ ಪ್ಲಕ್ಷಪ್ರಸ್ರವಣಾತ್ ತತಃ |
ಸ ತು ಪ್ರೀತಮನಾ ರಾಮಃ ಶ್ರುತ್ವಾ ತೀರ್ಥಫಲಂ ಮಹತ್ ||42||
ವಿಪ್ರಾಣಾಮಗ್ರತಃ ಶ್ಲೋಕಮಗಾಯದಮಿತದ್ಯುತಿಃ ||43||
ಅನಂತರ ತೀರ್ಥದ ಮಹಿಮೆಯನ್ನು ಕೇಳಿ ಸಂತುಷ್ಟನಾಗಿದ್ದ ಬಲರಾಮನು ಪ್ಲಕ್ಷ ಪ್ರಶ್ರವಣ ಪರ್ವತದಿಂದ ಕೆಳಗಿಳಿದು ಬ್ರಾಹ್ಮಣರ ಮುಂದೆ ಈ ಶ್ಲೋಕವನ್ನು ಹೇಳಿದನು.
ಸರಸ್ವತೀವಾಸಸಮಾ ಕುತೋ ರತಿಃ
ಸರಸ್ವತೀವಾಸಸಮಾಃ ಕುತೋ ಗುಣಾಃ |
ಸರಸ್ವತೀಹೀನವಿದೇಶವಾಸಿನಃ
ಸದಾ ಸ್ಮರಿಷ್ಯಂತಿ ನದೀಂ ಸರಸ್ವತೀಮ್ ||44||
`ಸರಸ್ವತಿಯ ತೀರ್ಥಕ್ಷೇತ್ರಗಳಲ್ಲಿ ವಾಸ ಮಾಡುವಾಗ ಸಿಗುವ ಸುಖವು ಬೇರೆ ಯಾವುದರಿಂದಲೂ ಉಂಟಾಗಲಾರದು. ಸರಸ್ವತಿವಾಸಕ್ಕೆ ಸವವಾದ ಗುಣಗಳು ಎಲ್ಲಿ ಇವೆ? ಸರಸ್ವತಿಯ ಸನ್ನಿಧಾನವಿಲ್ಲದ ಬೇರೆ ಪ್ರದೇಶಗಳಲ್ಲಿ ವಾಸಮಾಡುವ ಜನರು ಸದಾ ಸರಸ್ವತೀನದಿಯನ್ನು ಸ್ಮರಿಸಿಕೊಳ್ಳುತ್ತಾರೆ.
ಸರಸ್ವತೀ ಸರ್ವನದೀಷು ಪುಣ್ಯಾ
ಸರಸ್ವತೀ ಲೋಕಸುಖಾವಹಾ ಚ |
ಸರಸ್ವತೀಂ ಪ್ರಾಪ್ಯ ನರಾಃ ಸುದುಷ್ಕೃತಾಃ
ಸದಾ ನ ಶೋಚಂತಿ ಪರತ್ರ ಚೇಹ (ಚ) ||45||
ಸರಸ್ವತಿಯು ಎಲ್ಲಾ ನದಿಗಳಲ್ಲೂ ಬಹಳ ಪುಣ್ಯದಾಯಕವಾಗಿದೆ. ಸರಸ್ವತಿಯು ಲೋಕಕ್ಕೆ ಸುಖವನ್ನುಂಟುಮಾಡುವಂತಹದ್ದು. ಕೆಟ್ಟ ಕೆಲಸವನ್ನು ಮಾಡಿದ ಮನುಷ್ಯರು ಸರಸ್ವತಿಯನ್ನು ಹೊಂದಿ ಇಹದಲ್ಲಿಯೂ ಪರದಲ್ಲಿಯೂ ದುಃಖವನ್ನು ಅನುಭವಿಸುವುದಿಲ್ಲ.
ವೈಶಂಪಾಯನಃ
ತತೋ ಮುಹುರ್ಮುಹುರ್ಭಕ್ತ್ಯಾ ಪ್ರೇಕ್ಷಮಾಣಃ ಸರಸ್ವತೀಮ್ |
ಹಯೈರ್ಯುಕ್ತಂ ರಥಂ ಶೀಘ್ರಮಾರುರೋಹ ಪರಂತಪಃ ||46||
ವೈಶಂಪಾಯನ ಅನಂತರ ಭಕ್ತಿಯಿಂದ ಮತ್ತೆ ಮತ್ತೆ ಸರಸ್ವತಿಯನ್ನು ನೋಡುತ್ತಾ ಶತ್ರುತಾಪಕನಾದ ಬಲರಾಮನು ಕುದುರೆಗಳನ್ನು ಕಟ್ಟಿ ತಯಾರಾದ ರಥವನ್ನು ಏರಿದನು.
ಸ ಶೀಘ್ರಗಾಮಿನಾ ತೇನ ರಥೇನ ಯದುಪುಂಗವಃ |
ದಿದೃಕ್ಷುರಭಿಸಂಪ್ರಾಪ್ತಃ ಶಿಷ್ಯಯುದ್ಧಮುಪಸ್ಥಿತಮ್ ||47||
ಯದುಶ್ರೇಷ್ಠನಾದ ಬಲರಾಮನು ವೇಗವಾಗಿ ಸಾಗುವ ರಥದಿಂದ ಯುದ್ಧಸನ್ನದ್ಧನಾದ ತನ್ನ ಶಿಷ್ಯ ದುರ್ಯೋಧನನನ್ನು ನೋಡುವ ಇಚ್ಛೆಯಿಂದ ಅಲ್ಲಿಗೆ ಹೋದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಸರಸ್ವತೀಮಾಹಾತ್ಮ್ಯಂ ನಾಮ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಗದಾಯುದ್ಧಕ್ಕೆ ಸನ್ನದ್ಧರಾದ ಭೀಮ ಮತ್ತು ದುರ್ಯೋಧನರ ವರ್ಣನೆ.
ಭೀಮ ಮತ್ತು ದುರ್ಯೋಧನರ ಪೌರುಷದ ಮಾತುಗಳು.
ವೈಶಂಪಾಯನಃ
ಏವಂ ತದ್ಯುದ್ಧಮಭವತ್ ತುಮುಲಂ ಜನಮೇಜಯ |
ಯತ್ರ ದುಃಖಾನ್ವಿತೋ ರಾಜಾ ಧೃತರಾಷ್ಟ್ರೋಽಬ್ರವೀದಿದಮ್ ||1||
ವೈಶಂಪಾಯನ ಜನಮೇಜಯನೇ! ಈ ರೀತಿಯಾಗಿ ಕೋಲಾಹಲಕ್ಕೊಳಗಾದ ಘೋರ ಯುದ್ಧವು ನಡೆಯಿತು. ಚಿಂತಾಕ್ರಾಂತನಾದ ಧೃತರಾಷ್ಟ್ರನು ಈ ಮಾತನ್ನು ಹೇಳುತ್ತಾನೆ.
ಧೃತರಾಷ್ಟ್ರಃ
ರಾಮಂ ಸನ್ನಿಹಿತಂ ಶ್ರುತ್ವಾ ಗದಾಯುದ್ಧ ಉಪಸ್ಥಿತೇ |
ಮಮ ಪುತ್ರಃ ಕಥಂ ಭೀಮಂ ಪ್ರತ್ಯಯುಧ್ಯತ ಸಂಜಯ ||2||
ಧೃತರಾಷ್ಟ್ರ ಸಂಜಯನೇ! ಗದಾಯುದ್ಧವು ನಡೆಯಲು ಕಾಲ ಸಮೀಪಿಸುತ್ತಿದ್ದಾಗ ಬಲರಾಮನು ಬಂದಿದ್ದನ್ನು ತಿಳಿದು ನನ್ನ ಮಗ ದುರ್ಯೋಧನನು ಭೀಮನ ವಿರುದ್ಧವಾಗಿ ಮಾಡಿದ ಯುದ್ಧವು ಹೇಗಿತ್ತು?
ಸಂಜಯಃ
ರಾಮಸಾನ್ನಿಧ್ಯಮಾಗಮ್ಯ ಪುತ್ರೋ ದುರ್ಯೋಧನಸ್ತವ |

ಯೋದ್ಧುಕಾಮೋ ಮಹಾಬಾಹುಃ ಸಮಹೃಷ್ಯತ ವೀರ್ಯವಾನ್ ॥3॥
ಸಂಜಯ ಬಲರಾಮನು ಮುಂದೆ ಬಂದಾಗ ನಿನ್ನ ಮಗನಾದ ಮಹಾಬಾಹು ವೀರ ದುರ್ಯೋಧನನು ಯುದ್ಧದ ಇಚ್ಛೆಯಿಂದ ಸಂತೋಷಪಟ್ಟನು.
ದೃಷ್ಟ್ವಾ ಲಾಂಗಲಿನಂ ರಾಜಾ ಪ್ರತ್ಯುತ್ಥಾಯ ಚ ಭಾರತ |
ಪ್ರೀತ್ಯಾ ಪರಮಯಾ ಯುಕ್ತೋ ಯುಧಿಷ್ಠಿರಮಥಾಬ್ರವೀತ್ ॥4॥
ಧೃತರಾಷ್ಟ್ರನೇ! ಬಲರಾಮನು ಬಂದಿರುವುದನ್ನು ನೋಡಿದ ರಾಜ ದುರ್ಯೋಧನನು ಬಹಳ ಸಂತೋಷದಿಂದ ಕೂಡಿದವನಾಗಿ ಧರ್ಮರಾಜನಿಗೆ ಹೀಗೆ ಹೇಳಿದನು.
ದುರ್ಯೋಧನಃ
ಸಮಂತಪಂಚಕಂ ಪುಣ್ಯಮಿತೋ ಯಾಮ ವಿಶಾಂಪತೇ |
ಪ್ರಥಿತೋತ್ತರವೇದಿಃ ಸಾ ಬ್ರಹ್ಮಲೋಕೇ ಪ್ರಜಾಪತೇಃ ॥5॥
ದುರ್ಯೋಧನ ರಾಜನೇ! ನಾವು ಇಲ್ಲಿಂದ ಸಮಂತಪಂಚಕ ಕ್ಷೇತ್ರಕ್ಕೆ ಹೋಗೋಣ. ಅದು ಪ್ರಜಾಪತಿಯ ಉತ್ತರಯಜ್ಞವೇದಿಕೆ ಎಂಬುದಾಗಿ ಬ್ರಹ್ಮಲೋಕದಲ್ಲಿ ಪ್ರಸಿದ್ಧವಾಗಿದೆ.
ತಸ್ಮಿನ್ ಧ್ರುವೇ ಪುಣ್ಯತಮೇ ತ್ರೈಲೋಕ್ಯಸ್ಯ ಸನಾತನೇ |
ಸಂಗ್ರಾಮೇ ನಿಧನಂ ಪ್ರಾಪ್ಯ ಧ್ರುವಂ ಸ್ವರ್ಗಂ ಗಮಿಷ್ಯತಿ ॥6॥
ಮೂರು ಲೋಕಗಳಲ್ಲಿಯೂ ಸನಾತನ ಕ್ಷೇತ್ರವೆಂದು ಪ್ರಸಿದ್ಧವಾದ, ನಿಶ್ಚಯವಾಗಿಯೂ ಪುಣ್ಯಪ್ರದವಾದ ಆ ಕ್ಷೇತ್ರದಲ್ಲಿ ಯುದ್ಧಮಾಡಿ ಸತ್ತರೆ ನಿಶ್ಚಯವಾಗಿಯೂ ಸ್ವರ್ಗಕ್ಕೆ ಹೋಗುತ್ತಾನೆ.
ಸಂಜಯಃ
ತಥೇತ್ಯುಕ್ತ್ವಾ ಮಹಾರಾಜ ಕುಂತೀಪುತ್ರೋ ಯುಧಿಷ್ಠಿರಃ |
ಸಮಂತಪಂಚಕಂ ವೀರಃ ಪ್ರಾಯಾದಭಿಮುಖಃ ಪ್ರಭುಃ ॥7॥
ಸಂಜಯ ಮಹಾರಾಜನೇ! ವೀರನಾದ ಪ್ರಭುಯುಧಿಷ್ಠರನು `ಹಾಗೆಯೇ ಆಗಲಿ' ಎಂದು ಹೇಳಿ ಸಮಂತಪಂಚಕಕ್ಕೆ ಅಭಿಮುಖವಾಗಿ ಹೋದನು.
ತತೋ ದುರ್ಯೋಧನೋ ರಾಜನ್ ಪ್ರಗೃಹ್ಯ ಮಹತೀಂ ಗದಾಮ್ |
ಪದ್ಭ್ಯಾಮಮರ್ಷೀ ದ್ಯುತಿಮಾನ್ ಅಗಚ್ಛತ್ ಪಾಂಡವೈಃ ಸಹ ॥8॥
ರಾಜನೇ! ಅನಂತರ ಕಾಂತಿಮಂತನಾದ ದುರ್ಯೋಧನನು ದೊಡ್ಡದಾದ ಗದೆಯನ್ನು ಹಿಡಿದುಕೊಂಡು ಪಾದಚಾರಿಯಾಗಿ ನಡೆದುಕೊಂಡು ಪಾಂಡವರ ಜೊತೆಗೆ ಅಸಹನೆಯಿಂದ ಕೂಡಿದವನಾಗಿ ಹೋದನು.
ತಥಾ ಯಾಂತಂ ಗದಾಹಸ್ತಂ ವರ್ಮಿಣಂ ಚಾಪಿ ದಂಸಿತಮ್ |
ಅಂತರಿಕ್ಷಚರಾ ದೇವಾಃ ಸಾಧು ಸಾಧ್ವಿತ್ಯಪೂಜಯನ್ ॥9॥
ಹೀಗೆ ಗದೆಯನ್ನು ಹಿಡಿದುಕೊಂಡು, ಕವಚವನ್ನು ಧರಿಸಿಕೊಂಡು ಹೋಗುತ್ತಿದ್ದ ದುರ್ಯೋಧನನನ್ನು ಆಕಾಶದಲ್ಲಿ ಸಂಚರಿಸುತ್ತಿದ್ದ ದೇವತೆಗಳು ನೋಡಿ 'ಸಾಧು! ಚೆನ್ನಾಗಿದೆ' ಎಂದು ಕೊಂಡಾಡಿದರು.
ವಾರ್ತಿಕಾಶ್ಚ ನರವ್ಯಾಘ್ರಂ ದೃಷ್ಟ್ವಾ ತೇ ಹರ್ಷಮಾಗತಾಃ ॥10॥
ಲೋಕದ ಸಮಾಚಾರವನ್ನು ಮಾತನಾಡಿಕೊಳ್ಳುವವರೂ ಕೂಡ ನರಪತಿಯಾದ ದುರ್ಯೋಧನನನ್ನು ನೋಡಿ ಸಂತೋಷಪಟ್ಟರು.
ಸ ಪಾಂಡವೈಃ ಪರಿವೃತಃ ಕುರುರಾಜಸ್ತವಾತ್ಮಜಃ |
ಮತ್ತಸ್ಯೇವ ಗಜೇಂದ್ರಸ್ಯ ಗತಿಮಾಸ್ಥಾಯ ಸೋಽವ್ರಜತ್ ॥11॥
ಪಾಂಡವರಿಂದ ಸುತ್ತುವರಿಯಲ್ಪಟ್ಟ ನಿನ್ನ ಮಗ ಕುರುರಾಜ ದುರ್ಯೋಧನನು ಮದವೇರಿದ ಆನೆಯ ಗತಿಯನ್ನು ಅನುಸರಿಸಿಕೊಂಡು ನಡೆದನು.
ತತಃ ಶಂಖನಿನಾದೈಶ್ಚ ಭೇರೀಣಾಂ ಚ ಮಹಾಸ್ವನೈಃ |
ಸಿಂಹನಾದೈಶ್ಚ ಶೂರಾಣಾಂ ದಿಶಃ ಸರ್ವಾಃ ಪ್ರಪೂರಿತಾಃ ॥12॥
ಅನಂತರ ಶಂಖನಾದದಿಂದ, ಭೇರಿಯ ಜೋರಾದ ಶಬ್ದದಿಂದ ಹಾಗೂ ಶೂರಸಿಂಹನಾದದಿಂದ ಎಲ್ಲಾ ದಿಕ್ಕುಗಳೂ ತುಂಬಿದವು.
ಪ್ರತೀಚ್ಯಭಿಮುಖಂ ದೇಶಂ ಯಥೋದ್ದಿಷ್ಟಂ ಸುತೇನ ತೇ |
ಗತ್ವಾ ಚ ತೈಃ ಪರಿಕ್ಷಿಪ್ತಂ ಸಮಂತಾತ್ ಸರ್ವತೋದಿಶಮ್ ॥13॥
ನಿನ್ನ ಮಗನು ಇಚ್ಛಿಸಿ ಸೂಚಿಸಿದ ಪಶ್ಚಿಮಾಭಿಮುಖವಾದ ಆ ಸಮಂತಪಂಚಕ ದೇಶಕ್ಕೆ ಅವರೆಲ್ಲರೂ ಹೋದರು. ಆ ಕ್ಷೇತ್ರವು ಎಲ್ಲೆಡೆಯೂ ವ್ಯಾಪಿಸಿತ್ತು.
ದಕ್ಷಿಣೇನ ಸರಸ್ವತ್ಯಾಃ ಸ್ನಪನಂ ತೀರ್ಥಮುತ್ತಮಮ್ |
ತಸ್ಮಿನ್ ದೇಶೇ ತ್ವನಿರಣೇ ತೇ ತು ಯುದ್ಧಮರೋಚಯನ್ ॥14॥
ಯಾವ ಪ್ರದೇಶದಲ್ಲಿ ಸರಸ್ವತೀ ನದಿಯು ದಕ್ಷಿಣಾಭಿಮುಖವಾಗಿ ಹರಿದಾಗ ಸ್ನಾನಯೋಗ್ಯವಾದ ತೀರ್ಥವು ಇತ್ತೋ ಅದಕ್ಕಿಂತ ಪೂರ್ವಭಾಗದಲ್ಲಿ ಜೌಗುಪ್ರದೇಶವಲ್ಲದ ಗಟ್ಟಿಯಾದ ಪ್ರದೇಶದಲ್ಲಿ ಯುದ್ಧಮಾಡಲು ನಿಶ್ಚಯಿಸಿದರು.
ತತೋ ಭೀಮೋ ಮಹಾಕೋಟಿಂ ಗದಾಂ ಗೃಹ್ಯ ಚ ಧರ್ಮಭೃತ್ |
ಬಿಭ್ರದ್ರೂಪಂ ಮಹಾರಾಜ ಸದೃಶಂ ಹಿ ಗರುತ್ಮತಃ ॥15॥
ಮಹಾರಾಜನೇ! ಅನಂತರ ಧರ್ಮಾತ್ಮನಾದ ಭೀಮನು ಬೃಹತ್ತಾದ ತುದಿಭಾಗವುಳ್ಳ ಗದೆಯನ್ನು ಹಿಡಿದುಕೊಂಡು ಗರುಡನಿಗೆ ಸದೃಶವಾದ ರೂಪವನ್ನು ತಾಳಿದನು.

ಅವಬದ್ಧಶಿರಸ್ತ್ರಾಣಃ ಶುದ್ಧಕಾಂಚನವರ್ಮಧೃಕ್ |
ರರಾಜ ರಾಜನ್ ಪುತ್ರಸ್ತೇ ಕಾಂಚನಃ ಶೈರಾಡಿವ ॥16॥
ರಾಜನೇ! ತಲೆಗೆ ರಕ್ಷಣಾಕವಚವನ್ನು ಧರಿಸಿಕೊಂಡು, ಶುದ್ಧವಾದ ಬಂಗಾರದ ಕವಚವನ್ನು ಹಾಕಿಕೊಂಡು ನಿನ್ನ ಮಗ ದುರ್ಯೋಧನನು ಬಂಗಾರದ ಪರ್ವತದಂತೆ ಶೋಭಿಸಿದನು.
ತದ್ಯಥಾ ಸಂಗತೌ ವೀರೌ ಭೀಮದುರ್ಯೋಧನಾವುಭೌ |
ಸಂಯುಗೇ ಸಂಪ್ರಕಾಶೇತೇ ಸಂರಬ್ಧಾವಿವ ಕುಂಜರೌ ॥17॥
ಭೀಮ-ದುರ್ಯೋಧನರು ಯುದ್ಧಕ್ಕೆ ಸನ್ನದ್ಧರಾಗಿ ನಿಂತಾಗ ಕೋಪಗೊಂಡ ಎರಡು ಆನೆಗಳು ಎದುರುಬದಿರಾಗಿ ನಿಂತಂತೆ ಶೋಭಿಸುತ್ತಿದ್ದರು.
ರಥಮಂಡಲಮಧ್ಯಸ್ಥೌ ಭ್ರಾತರೌ ಭರತರ್ಷಭೌ |
ಅಶೋಭೇತಾಂ ಮಹಾರಾಜ ಚಂದ್ರಸೂರ್ಯಾವಿವೋದಿತೌ ॥18॥
ಮಹಾರಾಜನೇ! ಭರತಕುಲಶ್ರೇಷ್ಠರಾದ ಸಹೋದರರರು ರಥಸಮೂಹದ ಮಧ್ಯದಲ್ಲಿ ಇದ್ದುಕೊಂಡು ಒಟ್ಟಿಗೆ ಉದಿಸಿದ ಚಂದ್ರ-ಸೂರ್ಯರಂತೆ ಶೋಭಿಸಿದರು.
ತಾವನ್ಯೋನ್ಯಂ ನಿರೀಕ್ಷಂತೌ ಕ್ರುದ್ಧಾವಿವ ಮಹೋರಗೌ |
ದಹಂತೌ ಲೋಚನೈರ್ವೀರೌ ಪರಸ್ಪರವಧೈಷಿಣೌ ॥19॥
ಪರಸ್ಪರವಾಗಿ ಒಬ್ಬರನ್ನೊಬ್ಬರು ಸಾಯಿಸುವ ಇಚ್ಛೆಯುಳ್ಳ, ಆ ವೀರರಿಬ್ಬರೂ ಕುಪಿತವಾದ ಮಹಾಸರ್ಪಗಳಂತೆ ಕಣ್ಣುಗಳಿಂದಲೇ ಸುಡುವಂತೆ ದಿಟ್ಟಿಸಿ ನೋಡುತ್ತಿದ್ದರು.
ಸಂಪ್ರಹೃಷ್ಟಮನಾ ರಾಜನ್ ಗದಾಮಾದಾಯ ಪಾಂಡವಃ |
ಸೃಕ್ವಿಣೀ ಸಲ್ಲಿಹನ್ ರಾಜನ್ ಕ್ರೋಧತಾಮ್ರೇಕ್ಷಣಃ ಶ್ವಸನ್ ॥20॥
ರಾಜನೇ!  ಸಂತುಷ್ಟನಾದ ಭೀಮನು ಗದೆಯನ್ನು ಹಿಡಿದುಕೊಂಡು ಮುಂದುಟಿಗಳನ್ನು ನೆಕ್ಕುತ್ತಾ ಕೋಪದಿಂದ ಕಂಗಳನ್ನು ಕೆಂಪಾಗಿಸಿಕೊಂಡು ಜೋರಾಗಿ ಉಸಿರಾಡುತ್ತಿದ್ದನು.
ತತೋ ದುರ್ಯೋಧನೋ ರಾಜನ್ ಗದಾಮಾದಾಯ ಭಾರತ |
ಭೀಮೋ ಭೀಮಮಭಿಪ್ರೇಕ್ಷ್ಯ ಗಜೋ ಗಜಮಿವಾಹ್ವಯತ್ ॥21॥
ರಾಜನೇ! ಭರತಕುಲೋದ್ಭವನೇ! ಅನಂತರ ದುರ್ಯೋಧನನು ಗದೆಯನ್ನು ಹಿಡಿದುಕೊಂಡು ಭಯಂಕರನಾಗಿ ಕಾಣಿಸಿಕೊಂಡು, ಭೀಮನನ್ನು ದಿಟ್ಟಿಸಿನೋಡುತ್ತಾ ಒಂದು ಆನೆಯು ಇನ್ನೊಂದು ಆನೆಯನ್ನು ಕರೆಯುವಂತೆ ಯುದ್ಧಕ್ಕೆ ಆಹ್ವಾನಿಸಿದನು.
ಅದ್ರಿಸಾರಮಯೀಂ ವೀರಸ್ತಥೈವಾದಾಯ ವೇಗವಾನ್ |
ಆಹ್ವಯಾಮಾಸ ನೃಪತಿಂ ಸಿಂಹಂ ಸಿಂಹೋ ಯಥಾ ವನೇ ॥22॥
ವೀರನಾದ ಭೀಮನು ವೇಗವುಳ್ಳವನಾಗಿ, ಗಟ್ಟಿಯಾದ ಲೋಹದಿಂದ ಮಾಡಿದ ಗದೆಯನ್ನು ಹಿಡಿದುಕೊಂಡು ಸಿಂಹವು ಇನ್ನೊಂದು ಸಿಂಹವನ್ನು ಆಹ್ವಾನಿಸುವಂತೆ ರಾಜ ದುರ್ಯೋಧನನನ್ನು ಯುದ್ಧಕ್ಕೆ ಕರೆದನು.
ತಾವುದ್ಯತಗದಾಪಾಣೀ ದುರ್ಯೋಧನವೃಕೋದರೌ |
ಸಂಯುಗೇ ಸಂಪ್ರಕಾಶೇತೇ ಗಿರೀ ಸಶಿಖರಾವಿವ ॥23॥
ಆ ದುರ್ಯೋಧನ ಮತ್ತು ಭೀಮಸೇನರು ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಯುದ್ಧದಲ್ಲಿ ನಿಂತುಕೊಂಡಾಗ ಶಿಖರದಿಂದ ಸಹಿತವಾದ ಎರಡು ಪರ್ವತಗಳಂತೆ ಕಾಣಿಸಿಕೊಂಡರು.
ತಾವುಭಾವಪಿ ಸಂಕ್ರುದ್ಧಾವುಭೌ ಭೀಮಪರಾಕ್ರಮೌ |
ಉಭೌ ಶಿಷ್ಯೌ ಗದಾಯುದ್ಧೇ ರೌಹಿಣೇಯಸ್ಯ ಧೀಮತಃ ॥24॥
ಭಯಂಕರವಾದ ಪರಾಕ್ರಮವುಳ್ಳ ಅವರಿಬ್ಬರೂ ಕೋಪಗೊಂಡರು. ಅವರಿಬ್ಬರೂ ಗದಾವಿದ್ಯೆಯಲ್ಲಿ ಬುದ್ಧಿವಂತನಾದ ಬಲರಾಮನ ಶಿಷ್ಯರಾಗಿದ್ದರು.
ಉಭೌ ಸದೃಶಕರ್ಮಾಣೌ ವರುಣಸ್ಯ ಮಹಾಬಲೌ |
ವಾಸುದೇವಸ್ಯ ರಾಮಸ್ಯ ತಥಾ ವೈಶ್ರವಣಸ್ಯ ಚ ॥25॥
ಅವರಿಬ್ಬರೂ ಯಮ ಮತ್ತು ಇಂದ್ರನಿಗೆ ಸಮಾನವಾದ ಕಾರ್ಯವುಳ್ಳವರಾಗಿದ್ದರು. ಶ್ರೀಕೃಷ್ಣನಿಗೆ, ಬಲರಾಮನಿಗೆ, ಯಮನಿಗೆ ಸದೃಶರಾಗಿದ್ದರು.
ಸದೃಶೌ ತೌ ಮಹಾರಾಜ ಮಧುಕೈಟಭಯೋರಪಿ |
ಉಭೌ ಸದೃಶಕರ್ಮಾಣೌ ರಣೇ ಸುಂದೋಪಸುಂದಯೋಃ ॥26॥
ಮಹಾರಾಜನೇ! ಮಧು ಮತ್ತು ಕೈಟಭರಿಗೆ ಸಮಾನರಾಗಿದ್ದರು. ಯುದ್ಧದಲ್ಲಿ ಸುಂದೋಪಸುಂದರಿಗೆ ಸಮಾನವಾದ ಕರ್ಮವುಳ್ಳವರಾಗಿದ್ದರು.
ರಾಮರಾವಣಯೋಶ್ಚೈವ ವಾಲಿಸುಗ್ರೀವಯೋಸ್ತಥಾ |
ತಥೈವ ಕಾಲಸ್ಯ ಸದೃಶೌ ಮೃತ್ಯೋಶ್ಚೈವ ಪರಂತಪೌ |
ಅನ್ಯೋನ್ಯಮಭಿಗರ್ಜಂತೌ ಮತ್ತಾವಿವ ಮಹಾಗಜೌ ॥27॥
ಶ್ರೀರಾಮ-ರಾವಣರಂತೆ, ವಾಲಿ-ಸುಗ್ರೀವರಂತೆ ಇದ್ದರು. ಹಾಗೆಯೇ ಶತ್ರುಗಳಿಗೆ ತಾಪವನ್ನುಂಟುಮಾಡುವ ಅವರಿಬ್ಬರೂ ಕಾಲನಿಗೆ, ಮೃತ್ಯುವಿಗೆ ಸಮಾನರಾಗಿದ್ದರು. ಪರಸ್ಪರ ಗರ್ಜನೆ ಮಾಡುತ್ತಿರುವ ಮದೋನ್ಮತ್ತ ಆನೆಗಳಂತೆ ಇದ್ದರು.
ವಾಶಿತಾಸಂಗಮೇ ದೃಪ್ತೌ ಶರದೀವ ಮದೋತ್ಕಟೌ |

ಮತ್ತಾವಿವ ಜಿಗೀಷಂತೌ ಮಾತಂಗೌ ಭರತರ್ಷಭ ॥28॥
ಭರತಕುಲಶ್ರೇಷ್ಠನೇ! ಶರತ್ಕಾಲದಲ್ಲಿ ಮೈಥುನಸಂಗಮದ ಇಚ್ಛೆಯುಳ್ಳ ಮದವೇರಿದ ದರ್ಪಯುಕ್ತವಾದ ಆನೆಗಳು ಪರಸ್ಪರ ಜಯಾಪೇಕ್ಷೆಯಿಂದ ಇರುವಂತೆ ಇವರಿಬ್ಬರೂ ಇದ್ದರು.
ಉಭೌ ಕ್ರೋಧವಿಷಂ ತೀವ್ರಂ ವಮಂತಾವುರಗಾವಿವ।
ಅನ್ಯೋನ್ಯಮಭಿಸಂರಬ್ಧೌ ಪ್ರೇಕ್ಷಮಾಣಾವರಿಂದಮೌ ॥29॥
ಇಬ್ಬರೂ ಕೂಡ ಹಾವುಗಳು ವಿಷವನ್ನು ಕಾರುವಂತೆ ಕೋಪದ ವಿಷವನ್ನು ಕಕ್ಕುತ್ತಿದ್ದರು. ಶತ್ರುಗಳನ್ನು ದಮನಗೊಳಿಸುವ ಇಬ್ಬರೂ ಪರಸ್ಪರವಾಗಿ ಕ್ರುದ್ಧರಾಗಿ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡುತ್ತಿದ್ದರು.
ಉಭೌ ಭರತಶಾರ್ದೂಲೌ ವಿಕ್ರಮೇಣ ಸಮನ್ವಿತೌ।
ಸಿಂಹಾವಿವ ದುರಾಧರ್ಷೌ ಗದಾಯುದ್ಧೇ ಪರಂತಪೌ ॥30॥
ಗದಾಯುದ್ಧದಲ್ಲಿ ಶತ್ರುವನ್ನು ಪೀಡಿಸುವ ಸಾಮರ್ಥ್ಯವುಳ್ಳ ಇಬ್ಬರು ಭರತಕುಲಶ್ರೇಷ್ಠರೂ ಕೂಡ ಪರಾಕ್ರಮವುಳ್ಳವರಾಗಿ ಸಿಂಹಗಳಂತೆ ಎದುರಿಸಲು ಅಶಕ್ಯರಾಗಿದ್ದರು.
ನಖದಂಷ್ಟ್ರಾಯುಧೌ ವೀರೌ ಸಿಂಹಾವಿವ ದುರುತ್ಸಹೌ।
ಪ್ರಜಾಸಂಹರಣೇ ಕ್ಷುಬ್ಧೌ ಸಮುದ್ರಾವಿವ ದುಸ್ತರೌ ॥31॥
ದೊಡ್ಡದಾದ ಉಗುರುಗಳು ಮತ್ತು ಹಲ್ಲುಗಳೇ ಆಯುಧವಾಗಿ ಉಳ್ಳ ಎದುರಿಸಲು ಅಶಕ್ಯವಾದ ಸಿಂಹಗಳಂತೆ ಈ ವೀರರು ಇದ್ದರು. ಪ್ರಳಯಕಾಲದಲ್ಲಿ ಮನುಷ್ಯಕುಲವನ್ನು ನಾಶಮಾಡುವ, ದಾಟಿಹೋಗಲು ಅಶಕ್ಯವಾದ ಸಮುದ್ರಗಳಂತೆ ಕ್ಷೋಭೆಗೆ ಒಳಗಾಗಿದ್ದರು.
ಲೋಹಿತಾರ್ಕಾವಿವ ಕ್ರುದ್ಧೌ ಪ್ರತಪಂತೌ ಮಹಾರಥೌ ॥32॥
ಮಹಾರಥರಾದ ಇಬ್ಬರೂ ಕೆಂಪಾದ ಸೂರ್ಯನಂತೆ ಕೋಪದಿಂದ ಸುಡುತ್ತಿದ್ದರು.
ಪೂರ್ವಪಶ್ಚಿಮಜಾ ಮೇಘಾ ಪ್ರೇಕ್ಷಮಾಣಾವರಿಂದಮ್ ॥33॥
ಗರ್ಜಮಾನೌ ಸುವಿಷಮಂ ಕ್ಷರಂತೌ ಪ್ರಾವೃಷೀವ ಹಿ।
ರಶ್ಮಿಯುಕ್ತೌ ಮಹಾತ್ಮಾನೌ ದೀಪ್ತಿಮಂತೌ ಮಹಾಬಲೌ ॥34॥
ಮಳೆಗಾಲದಲ್ಲಿ ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ಹುಟ್ಟಿದ ಪರಸ್ಪರವಾಗಿ ದಿಟ್ಟಿಸುತ್ತಾ ನೀರನ್ನು ಸುರಿಸುವ ಮೇಘಗಳು ವಿಷಮವಾಗಿ ಗರ್ಜಿಸುವಂತೆ ಬೇರೆ ಬೇರೆ ರೀತಿಯಲ್ಲಿ ಗರ್ಜಿಸುತ್ತಿದ್ದರು.
ದದೃಶಾತೇ ಕುರುಶ್ರೇಷ್ಠೌ ಕಾಲಸೂರ್ಯಾವಿವೋದಿತೌ।
ವ್ಯಾಘ್ರಾವಿವ ಸುಸಂರಬ್ಧೌ ಗರ್ಜಂತಾವಿವ ತೋಯದೌ ॥35॥
ಕುರುಕುಲಶ್ರೇಷ್ಠರಾದ ಅವರಿಬ್ಬರೂ ಪ್ರಳಯಕಾಲದ ಸೂರ್ಯರಂತೆ ಕಾಣಿಸುತ್ತಿದ್ದರು. ಎರಡು ಹುಲಿಗಳಂತೆ ಬಹಳ ಕೋಪಗೊಂಡಿದ್ದರು. ಮಳೆಸುರಿಸುವ ಮೋಡಗಳಂತೆ ಗರ್ಜಿಸುತ್ತಿದ್ದರು.
ಜಹೃಷಾತೇ ಮಹಾಬಾಹೂ ಸಿಂಹಕೇಸರಿಣಾವಿವ।
ಗಜಾವಿವ ಸುಸಂರಬ್ಧೌ ಜ್ವಲಿತಾವಿವ ಪಾವಕೌ ॥36॥
ಎರಡು ಸಿಂಹಗಳಂತೆ ಮಹಾಬಾಹುಶಾಲಿಗಳಾದ ಅವರಿಬ್ಬರೂ ಸಂತೋಷವನ್ನು ಹೊಂದಿದರು. ಎರಡು ಆನೆಗಳಂತೆ ಪರಸ್ಪರವಾಗಿ ಬಹಳವಾಗಿ ಕೋಪಕ್ಕೊಳಗಾಗಿದ್ದರು. ಎರಡು ಅಗ್ನಿಗಳಂತೆ ಪ್ರಜ್ವಲಿಸುತ್ತಿದ್ದರು.
ದದೃಶಾತೇ ಮಹಾತ್ಮಾನೌ ಸಶೃಂಗಾವಿವ ಪರ್ವತೌ।
ರೋಷಾತ್ಪ್ರಸ್ಫುರಮಾಣೋಷ್ಠೌ ನಿರೀಕ್ಷಂತೌ ಪರಸ್ಪರಮ್ ॥37॥
ಮಹಾತ್ಮರಾದ ಅವರಿಬ್ಬರು ಶಿಖರಸಹಿತವಾದ ಪರ್ವತಗಳಂತೆ ಕಾಣಿಸುತ್ತಿದ್ದರು. ಕೋಪದಿಂದ ಪರಸ್ಪರವಾಗಿ ದಿಟ್ಟಿಸಿ ನೋಡುತ್ತಿದ್ದರು. ತುಟಿಗಳು ಅದುರುತ್ತಿದ್ದವು.
ತೌ ಸಮೇತೌ ಮಹಾತ್ಮಾನೌ ಗದಾಹಸ್ತೌ ನರೋತ್ತಮೌ।
ಉಭೌ ಪರಮಸಂಹೃಷ್ಟಾವುಭೌ ಪರಮಸಮ್ಮತೌ ॥38॥
ಮಹಾತ್ಮರಾದ ಆ ಇಬ್ಬರೂ ಮನುಷ್ಯೋತ್ತಮರೂ ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಬಹಳವಾದ ಆನಂದವನ್ನು ಅನುಭವಿಸುತ್ತಿದ್ದರು. ಎಲ್ಲರಿಂದಲೂ ಸಮ್ಮಾನಿತರಾಗಿದ್ದರು.
ಸದಶ್ವಾವಿವ ಹೇಷಂತೌ ಬೃಹಂತಾವಿವ ಕುಂಜರೌ।
ವೃಷಭಾವಿವ ಗರ್ಜಂತೌ ದುರ್ಯೋಧನವೃಕೋದರೌ।
ದೈತ್ಯಾವಿವ ಬಲೋನ್ಮತ್ತೌ ರೇಜತುಸ್ತೌ ನರೋತ್ತಮೌ ॥39॥
ಆ ದುರ್ಯೋಧನ ಮತ್ತು ಭೀಮಸೇನರು ಒಳ್ಳೆಯ ಕುದುರೆಗಳಂತೆ ಹೇಷಾರವವನ್ನು ಮಾಡುತ್ತಿದ್ದರು. ಆನೆಗಳಂತೆ ಬೃಹದಾಕಾರವನ್ನು ಹೊಂದಿದ್ದರು. ಎರಡು ಗೂಳಿಗಳಂತೆ ಗರ್ಜಿಸುತ್ತಿದ್ದರು. ಇಬ್ಬರು ದೈತ್ಯರಂತೆ ಬಲದ ಮದದಿಂದ ಉನ್ಮತ್ತರಾಗಿ ಶೋಭಿಸುತ್ತಿದ್ದರು.
ತತೋ ದುರ್ಯೋಧನೋ ರಾಜನ್ನಿದಮಾಹ ಯುಧಿಷ್ಠಿರಮ್।
ಸೃಂಜಯೈಃ ಸಹ ತಿಷ್ಠಂತಂ ತಪಂತಮಿವ ಭಾಸ್ಕರಮ್ ॥40॥
ರಾಜನೇ! ಅನಂತರ ದುರ್ಯೋಧನನು ಸೃಂಜಯಮೊದಲಾದವರೊಡನೆ, ಸುಡುತ್ತಿರುವ ಸೂರ್ಯನಂತೆ ನಿಂತಿದ್ದ ಯುಧಿಷ್ಠಿರನಿಗೆ ಈ ಮಾತನ್ನು ಹೇಳುತ್ತಾನೆ.
ಇದಂ ವ್ಯವಸಿತಂ ಯುದ್ಧಂ ಮಮ ಭೀಮಸ್ಯ ಚೋಭಯೋಃ।
ಉಪೋಪವಿಷ್ಟಾಃ ಪಶ್ಯಧ್ವಂ ವಿಮರ್ದಂ ನೃಪಸತ್ತಮಾಃ ॥41॥

`ನನ್ನ ಮತ್ತು ಭೀಮನ ಮಧ್ಯದಲ್ಲಿ ಈ ಯುದ್ಧವು ನಿಶ್ಚಿತವಾಗಿದೆ. ರಾಜರೇ! ನೀವೆಲ್ಲಾ ಹತ್ತಿರದಲ್ಲಿಯೇ ಕುಳಿತುಕೊಂಡು ಯುದ್ಧವನ್ನು ನೋಡಿ'.
ತತಃ ಸಮುಪವಿಷ್ಟಂ ತತ್ಸುಮಹದ್ ರಾಜಮಂಡಲಮ್ |
ವಿರಾಜಮಾನಂ ದದೃಶೇ ದಿವೀವಾದಿತ್ಯಮಂಡಲಮ್ ||42||
ಅವನ ಮಾತಿನಂತೆ ಆ ರಾಜಸಮೂಹವು ಅಲ್ಲಿ ಹತ್ತಿರದಲ್ಲಿಯೇ ಕುಳಿತುಕೊಂಡಿತು. ಆಕಾಶದಲ್ಲಿ ಅನೇಕ ಸೂರ್ಯರ ಸಮೂಹವು ಶೋಭಿಸುವಂತೆ ಈ ರಾಜರು ಕಾಣಿಸುತ್ತಿದ್ದರು.
ತೇಷಾಂ ಮಧ್ಯೇ ಮಹಾಬಾಹುಃ ಶ್ರೀಮಾನ್ ಕೇಶವಪೂರ್ವಜಃ |
ಉಪವಿಷ್ಟೋ ಮಹಾರಾಜ ಪೂಜ್ಯಮಾನಃ ಸಮಂತತಃ ||43||
ಮಹಾರಾಜನೇ! ಆ ರಾಜರ ಮಧ್ಯದಲ್ಲಿ ಶ್ರೀಕೃಷ್ಣನ ಅಣ್ಣ, ಮಹಾಬಾಹುವಾದ ಶ್ರೀಮಾನ್ ಬಲರಾಮನು ಕುಳಿತಿದ್ದನು. ಅವನನ್ನು ಸುತ್ತಲೂ ಎಲ್ಲರೂ ಆರಾಧಿಸುತ್ತಿದ್ದರು.
ಶುಶುಭೇ ರಾಜಮಧ್ಯಸ್ಥೋ ನೀಲವಾಸಾಃ ಸಿತಪ್ರಭಃ |
ನಕ್ಷತ್ರೈರಿವ ಸಂಪೂರ್ಣೋ ವೃತೋ ನಿಶಿ ನಿಶಾಕರಃ ||44||
ನೀಲವರ್ಣದ ಬಟ್ಟೆಯನ್ನು ಧರಿಸಿದ್ದ, ಬೆಳ್ಳಗಿನ ಬಲರಾಮನು ರಾಜರ ಮಧ್ಯದಲ್ಲಿದ್ದುಕೊಂಡು ರಾತ್ರಿಹೊತ್ತಿನಲ್ಲಿ ಆಗಸದಲ್ಲಿ ಚಂದ್ರನು ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟಂತೆ ಕಾಣಿಸುತ್ತಿದ್ದನು.
ತೌ ತಥಾ ತು ಮಹಾರಾಜ ಗದಾಹಸ್ತೌ ಸುದುಃಸಹೌ |
ಅನ್ಯೋನ್ಯಂ ವಾಗ್ಭಿರುಗ್ರಾಭಿಸ್ತಕ್ಷಮಾಣೌ ವ್ಯವಸ್ಥಿತೌ ||45||
ಮಹಾರಾಜನೇ! ಪರಾಕ್ರಮದಲ್ಲಿ ಸಹಿಸಲು ಅಸಾಧ್ಯರಾದ ಭೀಮ- ದುರ್ಯೋಧನರು ಗದೆಯನ್ನು ಹಿಡಿದುಕೊಂಡು ಪರಸ್ಪರವಾಗಿ ಕ್ರೂರವಾದ ಮಾತುಗಳಿಂದ ನಿಂದಿಸಿಕೊಳ್ಳುತ್ತಾ ಇದ್ದರು.
ಅಪ್ರಿಯಾಣಿ ತತೋಽನ್ಯೋನ್ಯಮುಕ್ತ್ವಾ ತೌ ಕುರುಸತ್ತಮೌ |
ಉದೀಕ್ಷಂತೌ ಸ್ಥಿತೌ ತತ್ರ ವೃತ್ರಶಕ್ರೌ ಯಥಾಽಽಹವೇ ||46||
ಕೇಳಲು ಇಷ್ಟವಾಗದ ಮಾತುಗಳನ್ನು ಆ ಕುರುವೀರರಿಬ್ಬರೂ ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು. ಹಿಂದೆ ಯುದ್ಧದಲ್ಲಿ ವೃತ್ರಾಸುರ ಮತ್ತು ದೇವೇಂದ್ರರು ಇದ್ದ ಹಾಗೆ ಇವರಿಬ್ಬರೂ ಇದ್ದರು.
ವೈಶಂಪಾಯನಃ
ತತೋ ವಾಗ್ಯುದ್ಧಮಭವತ್ ತುಮುಲಂ ಜನಮೇಜಯ |
ಯತ್ರ ದುಃಖಾನ್ವಿತೋ ರಾಜಾ ಧೃತರಾಷ್ಟ್ರೋಽಬ್ರವೀದಿದಮ್ ||47||
ವೈಶಂಪಾಯನ ಜನಮೇಜಯನೇ! ಅನಂತರ ಬಹಳ ಘೋರವಾದ ವಾಗ್ಯುದ್ಧವು ನಡೆಯಿತು. ಇದನ್ನು ಕೇಳಿದಾಗ ರಾಜ ಧೃತರಾಷ್ಟ್ರನು ಅಳುತ್ತಾ ಹೀಗೆ ಹೇಳಿದನು.
ಧೃತರಾಷ್ಟ್ರಃ
ಧಿಗಸ್ತು ಖಲು ಮಾನುಷ್ಯಂ ಯಸ್ಯ ನಿಷ್ಠೇಯಮೀದೃಶೀ |
ಏಕಾದಶಚಮೂಭರ್ತಾ ಯತ್ರ ಪುತ್ರೋ ಮಮಾಭಿಭೂಃ ||48||
ಆಜ್ಞಾಪ್ಯ ಸರ್ವಾನ್ ನೃಪತೀನ್ ಭುಕ್ತ್ವಾ ಚ ಪೃಥಿವೀಮಿಮಾಮ್ |
ಗದಾಮಾದಾಯ ಚೈಕಾಕೀ ಪದಾತಿಃ ಪ್ರಸ್ಥಿತೋ ರಣಮ್ ||49||
ಧೃತರಾಷ್ಟ್ರ ಮನುಷ್ಯನ ಇಂತಹ ದುರವಸ್ಥೆಗೆ ಧಿಕ್ಕಾರವಿರಲಿ. ಏಕೆಂದರೆ ಹಿಂದೆ ಹನ್ನೊಂದು ಅಕ್ಷೌಹಿಣೀ ಸೈನ್ಯಕ್ಕೆ ಒಡೆಯನಾದ ನನ್ನ ಮಗನು ಯಾರಿಂದಲೂ ಜಯಿಸಲು ಅಸಾಧ್ಯನಾಗಿದ್ದನು. ಎಲ್ಲಾ ಸಾಮಂತರಾಜರಿಗೂ ಆಜ್ಞೆಯನ್ನು ಮಾಡುತ್ತಾ ಈ ಪೃಥಿವಿಯನ್ನು ಅನುಭವಿಸಿದ್ದನು. ಅಂತಹ ದುರ್ಯೋಧನನು ಇಂದು ಒಬ್ಬಂಟಿಗನಾಗಿ ಗದೆಯನ್ನು ಧರಿಸಿಕೊಂಡು ನೆಲದಮೇಲೆ ನಡೆದಾಡುತ್ತಾ ಯುದ್ಧಕ್ಕೆ ಸನ್ನದ್ಧನಾಗಿದ್ದಾನೆ.
ಭೂತ್ವಾ ಹಿ ಜಗತೋ ನಾಥಃ ಸೋಽನಾಥ ಇವ ಮೇ ಸುತಃ |
ಗದಾಮಾದಾಯ ಯೋ ಯಾತಿ ಕಿಮನ್ಯದ್ ಭಾಗಧೇಯತಃ ||50||
ನನ್ನ ಮಗನು ಹಿಂದೆ ಇಡೀ ಜಗತ್ತಿಗೆನೇ ಸ್ವಾಮಿಯಾಗಿದ್ದನು. ಇಂದು ಗದೆಯನ್ನು ಹಿಡಿದುಕೊಂಡು ಯುದ್ಧಕ್ಕೆ ತೆರಳುತ್ತಿದ್ದಾನೆ. ಇದು ವಿಧಿಯಾಟವಲ್ಲದೆ ಬೇರೇನೂ ಅಲ್ಲ.
ಅಹೋ ದುಃಖಂ ಮಹತ್ ಪ್ರಾಪ್ತಂ ಪುತ್ರೇಣ ಮಮ ಸಂಜಯ ||51||
ಸಂಜಯನೇ! ಮಗನಿಂದಾಗಿ ನನಗೆ ಬಹಳ ದುಃಖವು ಉಂಟಾಗಿದೆ.
ವೈಶಂಪಾಯನಃ
ಏವಮುಕ್ತ್ವಾ ಸ ದುಃಖಾರ್ತೋ ವಿರರಾಮ ಜನಾಧಿಪಃ ||52||
ವೈಶಂಪಾಯನ ರಾಜನಾದ ಧೃತರಾಷ್ಟ್ರನು ಹೀಗೆ ಬಹಳ ದುಃಖಿತನಾಗಿದ್ದು ಸುಮ್ಮನಾದನು.
ಸಂಜಯಃ
ಸ ಮೇಘನಿಸ್ವನೋ ಹರ್ಷಾದ್ ವಿನದನ್ನಿವ ಗೋವೃಷಃ |
ಆಜುಹಾವ ತತಃ ಪಾರ್ಥಂ ಯುದ್ಧಾಯ ಯುಧಿ ವೀರ್ಯವಾನ್ ||53||
ಸಂಜಯ ಮೋಡದ ಗರ್ಜನೆಯಂತೆ ಧ್ವನಿಯುಳ್ಳ ಪರಾಕ್ರಮಿಯಾದ ದುರ್ಯೋಧನನು ಗೂಳಿಯು ಗರ್ಜಿಸುವಂತೆ ಸಂತೋಷದಿಂದ ಗರ್ಜಿಸುತ್ತಾ ಯುದ್ಧದಲ್ಲಿ ಭೀಮನನ್ನು ಆಹ್ವಾನಿಸಿದನು.

ಭೀಮಮಾಹ್ವಯಮಾನೇ ತು ಕುರುರಾಜೇ ಮಹಾತ್ಮನಿ |
ಪ್ರಾದುರಾಸನ್ ಸುಘೋರಾಣಿ ರೂಪಾಣಿ ವಿವಿಧಾನ್ಯುತ ॥54॥
ಮಹಾತ್ಮನಾದ ದುರ್ಯೋಧನನು ಭೀಮನನ್ನು ಆಹ್ವಾನಿಸುತ್ತಿರಲು ಅಲ್ಲಿ ವಿವಿಧರೂಪದ ಘೋರವಾದ ಶಕುನಗಳು ಕಾಣಿಸಿಕೊಂಡವು.
ವವುರ್ವಾತಾಃ ಸನಿರ್ಘಾತಾಃ ಪಾಂಸುವರ್ಷಂ ಪಪಾತ ಹ |
ಬಭೂವುಶ್ಚ ದಿಶಃ ಸರ್ವಾಸ್ತಿಮಿರೇಣ ಸಮಾವೃತಾಃ ॥55॥
ಜೋರಾಗಿ ಶಬ್ದವನ್ನುಂಟುಮಾಡುತ್ತಾ ಗಾಳಿಯು ಬೀಸತೊಡಗಿತು. ಎಲ್ಲೆಡೆ ಧೂಳಿನ ಮಳೆಯು ಸುರಿಯಿತು. ಎಲ್ಲಾ ದಿಕ್ಕುಗಳಲ್ಲಿಯೂ ಕತ್ತಲು ಆವರಿಸಿಕೊಂಡಿತು.
ಮಹಾಸ್ವನಾಃ ಸುನಿರ್ಘಾತಾಃ ತುಮುಲ ರೋಮಹರ್ಷಣಾಃ |
ಪೇತುಃ ಪೃಥಿವ್ಯಾಂ ಶತಶಃ ಸ್ಫೋಟಯಂತೋ ನಭಸ್ತಲಾತ್ ॥56॥
ಭಯದ ರೋಮಾಂಚನವನ್ನು ಉಂಟುಮಾಡುವ ಗುಡುಗುಗಳು ದೊಡ್ಡಶಬ್ದವನ್ನು ಉಂಟುಮಾಡುತ್ತಾ ಪೃಥಿವಿಯನ್ನು ನೂರು ಭಾಗಗಳಾಗಿ ಸೀಳುವ ರೀತಿಯಲ್ಲಿ ಆಕಾಶದಿಂದ ಕೆಳಬಿದ್ದವು.
ರಾಹುರಗ್ರಸದಾದಿತ್ಯಮ್ ಅಪರ್ವಣಿ ವಿಶಾಂಪತೇ |
ಚಕಂಪೇ ಚ ಮಹಾಕಂಪಂ ಪೃಥಿವೀ ಸವನದ್ರುಮಾ ॥57॥
ರಾಜನೇ! ಅಮಾವಾಸ್ಯೆಯಂತಹ ಪರ್ವಕಾಲವಿರದಿದ್ದರೂ ರಾಹುವು ಸೂರ್ಯನನ್ನು ನುಂಗಿದನು. ಕಾಡು-ಮರಗಳಿಂದ ಕೂಡಿದ ಭೂಮಿಯು ಕಂಪಿಸತೊಡಗಿತು.
ರೂಕ್ಷಾಶ್ಚ ವಾತಾಃ ಪ್ರವವುರ್ನೀಚೈಃ ಶರ್ಕರವರ್ಷಿಣಃ |
ಗಿರೀಣಾಂ ಶಿಖರಾಣ್ಯಾಶು ನ್ಯಪತಂತ ಮಹೀತಳೇ ॥58॥
ವೇಗದ ಬಿರುಗಾಳಿಗಳು ಬೀಸತೊಡಗಿದವು. ಮರಳಿನ ಮಳೆಯನ್ನು ಕೆಳಬೀಳಿಸುತ್ತಿದ್ದವು. ಪರ್ವತಗಳ ಶಿಖರಗಳು ಭೂಮಿಯಲ್ಲಿ ಬೀಳತೊಡಗಿದವು.
ಮೃಗಾ ಬಹುವಿಧಾಕಾರಾಃ ಸಂಪತಂತಿ ದಿಶೋ ದಶ |
ದೀಪ್ತಾಃ ಶಿವಾಶ್ಚ ಪ್ರಣದನ್ ದಾರುಣಂ ಭಯವೇದಿನಃ ॥59॥
ಬೇರೆ ಬೇರೆ ಆಕಾರದ ಪ್ರಾಣಿಗಳು ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸತೊಡಗಿದವು. ಪ್ರಕಾಶಿಸುವ ನರಿಗಳು ಕೆಟ್ಟರೀತಿಯಲ್ಲಿ ಕೂಗುತ್ತಾ ಭಯವನ್ನು ವ್ಯಕ್ತಪಡಿಸುತ್ತಿದ್ದವು.
ನಿರ್ಘಾತಾಶ್ಚ ಮಹಾಘೋರಾ ಬಭೂವೂ ರೋಮಹರ್ಷಣಾಃ |
ದೀಪ್ತಾಯಾಂ ದಿಶಿ ರಾಜೇಂದ್ರ ಮೃಗಾಶ್ಚಾಶುಭವಾದಿನಃ ॥60॥
ರೋಮಗಳು ಸೆಟೆದುನಿಲ್ಲುವ ರೀತಿಯಲ್ಲಿ ಗುಡುಗುಗಳು ಗರ್ಜಿಸುತ್ತಿದ್ದವು. ಮಿಂಚಿನಿಂದಾಗಿ ದಿಕ್ಕುಗಳಲ್ಲಿ ಬೆಳಕು ಹರಿಯುತ್ತಿತ್ತು. ರಾಜೇಂದ್ರನೇ! ಪ್ರಾಣಿಗಳು ಅಶುಭವನ್ನು ಸೂಚಿಸುತ್ತಿದ್ದವು.
ಉದಪಾನಗತಾಶ್ಚಾಪೋ ವ್ಯವರ್ಧಂತ ಸಮಂತತಃ |
ಅಶರೀರಾ ಮಹಾನಾದಾಃ ಶ್ರೂಯಂತೇ ಸ್ಮ ಭಯಾನಕಾಃ ॥61॥
ನೀರಿನ ಪಾತ್ರೆಯಲ್ಲಿ ಇದ್ದ ನೀರು ಎಲ್ಲಾಕಡೆಯೂ ವೃದ್ಧಿಸತೊಡಗಿತು. ಯಾವುದೇ ಪ್ರಾಣಿಗಳ ಶರೀರವಿಲ್ಲದೆಯೇ ಭಯವನ್ನು ಹುಟ್ಟಿಸುವ ದೊಡ್ಡ ಶಬ್ದಗಳು ಕೇಳಿಸುತ್ತಿದ್ದವು.
ಏವಮಾದೀನಿ ದೃಷ್ಟ್ವಾ ಸ ನಿಮಿತ್ತಾನಿ ವೃಕೋದರಃ |
ಉವಾಚ ಭ್ರಾತರಂ ಜ್ಯೇಷ್ಠಂ ಧರ್ಮರಾಜಂ ಯುಧಿಷ್ಠಿರಮ್ ॥62॥
ಇವೇ ಮೊದಲಾದ ಶಕುನಗಳನ್ನು ನೋಡಿದ ಭೀಮನು ತನ್ನ ದೊಡ್ಡ ಅಣ್ಣನಾದ ಯುಧಿಷ್ಠಿರನಿಗೆ ಹೇಳಿದನು.
ಭೀಮಃ
ಏಕ ಶಕ್ಯೋ ರಣೇ ಜೇತುಂ ಮಂದಾತ್ಮಾ ಚ ಸುಯೋಧನಃ ॥63॥
ಭೀಮ ಮಂದಬುದ್ಧಿಯ ದುರ್ಯೋಧನನು ಒಬ್ಬನೇ ಇದ್ದಾನೆ. ಅವನನ್ನು ಗೆಲ್ಲಬಹುದು.
ಅದ್ಯ ಕ್ರೋಧಂ ವಿಮೋಕ್ಷ್ಯಾಮಿ ನಿಗೂಢಂ ಹೃದಯೇ ಸ್ಥಿತಮ್ |
ಸುಯೋಧನೇ ಕೌರವೇಂದ್ರೇ ಖಾಂಡವೇಽಗ್ನಿಮಿವಾರ್ಜುನಃ ॥64॥
ಖಾಂಡವವನ ದಾಹ ಸಂದರ್ಭದಲ್ಲಿ ಅರ್ಜುನನು ಕೋಪವನ್ನು ಬಿಟ್ಟ ಹಾಗೆ ನಾನಿಂದು ದುರ್ಯೋಧನನ ವಿಷಯದಲ್ಲಿ ಮನಸ್ಸಿನಲ್ಲಿ ಹೆಪ್ಪುಗಟ್ಟಿದ್ದ ಕೋಪವನ್ನು ಬಿಟ್ಟುಬಿಡುತ್ತೇನೆ.
ಶಲ್ಯಮದ್ಯೋದ್ಧರಿಷ್ಯಾಮಿ ತವ ಪಾಂಡವ ಹೃದ್ಗತಮ್ |
ನಿಹತ್ಯ ಗದಯಾ ಪಾಪಮಿದಂ ಕುರುಕುಲಾಂತಕಮ್ ॥65॥
ಧರ್ಮರಾಜನೇ! ಇವತ್ತು ಪಾಪಿಯಾದ, ಈ ಕುರುಕುಲನಾಶಕನಾದ ದುರ್ಯೋಧನನನ್ನು ಕೊಂದು ನಿನ್ನ ಹೃದಯಕ್ಕೆ ನಾಟಿದ ಮುಳ್ಳನ್ನು ತೆಗೆದುಹಾಕುತ್ತೇನೆ.
ಅದ್ಯ ಕೀರ್ತಿಮಯೀಂ ಮಾಲಾಂ ಪ್ರತಿಮೋಕ್ಷ್ಯಾಮ್ಯಹಂ ತ್ವಯಿ |
ಹತ್ವೇಮಂ ಪಾಪಕರ್ಮಾಣಂ ಗದಯಾ ರಣಮೂರ್ಧನಿ ॥66॥
ಇವತ್ತಿನ ಯುದ್ಧದಲ್ಲಿ ಪಾಪಕಾರ್ಯಗಳನ್ನು ಮಾಡಿದ ಈ ದುರ್ಯೋಧನನನ್ನು ಗೆದ್ದು ಸಾಯಿಸಿ ನಿನ್ನ ಮೇಲೆ ಕೀರ್ತಿಯ ಮಾಲೆಯನ್ನು ಅರ್ಪಿಸುವೆನು.

ಅಸ್ಯೋರೂ ಗದಯಾ ರಾಜನ್ ಭೇತ್ತಾಸ್ಮಿ ಸಮರೇಽನಯಾ |
ನಾಯಂ ಪ್ರವೇಷ್ಟಾ ನಗರಂ ಪುನರ್ವಾರಣಸಾಹ್ವಯಮ್ ॥67॥
ಯುದ್ಧದಲ್ಲಿ ಈ ಗದೆಯಿಂದ ಇವನ ತೊಡೆಯನ್ನು ಮುರಿದುಹಾಕುತ್ತೇನೆ. ಇವನು ಇನ್ನು ಮುಂದೆ ವಾರಣಾವತ (ಹಸ್ತಿನಾವತಿ) ನಗರವನ್ನು ಪ್ರವೇಶಿಸಲಾರನು.
ಸರ್ಪೋತ್ಸರ್ಗಸ್ಯ ಶಯನೇ ವಿಷದಾನಸ್ಯ ಭೋಜನೇ |
ಪ್ರಮಾಣಕೋಟ್ಯಾಂ ಪಾತಸ್ಯ ದಾಹಸ್ಯ ಜತುವೇಶ್ಮನಿ ॥68॥
ಸಭಾಯಾಮಪಹಾಸಸ್ಯ ಸರ್ವಸ್ವಹರಣಸ್ಯ ಚ |
ವರ್ಷಮಜ್ಞಾತವಾಸಸ್ಯ ವನವಾಸಸ್ಯ ಚಾನಘ ॥69॥
ಅದ್ಯಾಂತಮೇಷಾಂ ದುಃಖಾನಾಂ ಗಂತಾ ಭರತಸತ್ತಮ ॥70॥
ಭರತಕುಲಶ್ರೇಷ್ಠನೇ! ನೀನು ಹಿಂದೆ ಅನುಭವಿಸಿದ ಎಲ್ಲಾ ದುಃಖಗಳಿಗೆ ಇವತ್ತು ಕೊನೆಯು ಸಿಗಲಿದೆ. ಹಾವಿನ ಮಧ್ಯದಲ್ಲಿ ಮಲಗಿಸಿದ್ದು, ಊಟದಲ್ಲಿ ವಿಷವನ್ನು ಹಾಕಿದ್ದು, ಪ್ರಮಾಣಕೋಟಿ ಮಡುವಿನಲ್ಲಿ ಬೀಳಿಸಿದ್ದು, ಅರಗಿನ ಮನೆಯಲ್ಲಿ ಸುಟ್ಟಿದ್ದು, ದ್ಯೂತದ ಸಭೆಯಲ್ಲಿ ಎಲ್ಲಾ ಸಂಪತ್ತನ್ನೂ ಅಪಹರಿಸಿ ನಮ್ಮನ್ನು ಅಪಹಾಸಮಾಡಿದ್ದು, ಹನ್ನೆರಡುವರ್ಷಗಳ ಕಾಲ ಕಾಡಿನಲ್ಲಿ ವಾಸ, ಒಂದು ವರ್ಷ ಕಾಲ ಅಜ್ಞಾತವಾಸ - ಈ ಎಲ್ಲಾ ದುಃಖಗಳನ್ನೂ ಇಂದು ನೀನು ಕಳೆದುಕೊಳ್ಳು.
ಏಕಾಹ್ನಾ ವಿನಿಹತ್ಯೇಮಂ ಭವಿಷ್ಯಾಮ್ಯಾತ್ಮನೋಽನೃಣಃ ॥71॥
ಒಂದೇ ಹಗಲಲ್ಲಿ ಇವನನ್ನು ಕೊಂದು ನಾನು ಋಣಮುಕ್ತನಾಗುತ್ತೇನೆ.
ಅದ್ಯಾಸ್ಯ ಧಾರ್ತರಾಷ್ಟ್ರಸ್ಯ ದುರ್ಮತೇರಕೃತಾತ್ಮನಃ |
ಸಮಾಪ್ತಂ ಭರತಶ್ರೇಷ್ಠ ಮಾತಾಪಿತ್ರೋಶ್ಚ ದರ್ಶನಮ್ ॥72॥
ಭರತಶ್ರೇಷ್ಠನೇ! ದುರ್ಬುದ್ಧಿಯ, ದುರಾಚಾರಿಯಾದ ದುರ್ಯೋಧನನು ಇನ್ನು ಮುಂದೆ ಅವನ ತಂದೆ-ತಾಯಿಯರನ್ನು ನೋಡಲಾರನು.
ಅದ್ಯಾಯಂ ಕುರುರಾಜಸ್ಯ ಶಂತನೋಃ ಕುಲಪಾಂಸನಃ |
ಪ್ರಾಣಾನ್ ಶ್ರಿಯಂ ಚ ರಾಜ್ಯಂ ಚ ತ್ಯಕ್ತ್ವಾ ಶೇಷ್ಯತಿ ಭೂತಳೇ ॥73॥
ಶಂತನುವಿನ ಕುಲಕ್ಕೆ ಕಳಂಕನಾದ ಈ ದುರ್ಯೋಧನನು ಇಂದು ತನ್ನ ಪ್ರಾಣ, ಸಂಪತ್ತು ಮತ್ತು ರಾಜ್ಯಗಳನ್ನು ಕಳೆದುಕೊಂಡು ನೆಲದ ಮೇಲೆ ಸತ್ತು ಮಲಗುತ್ತಾನೆ.
ಸ ರಾಜಾ ಧೃತರಾಷ್ಟ್ರೋಽದ್ಯ ಶ್ರುತ್ವಾ ಪುತ್ರಂ ಮಯಾ ಹತಮ್ |
ಸ್ಮರಿಷ್ಯತ್ಯಶುಭಂ ಕರ್ಮ ಯತ್ತಚ್ಛಕುನಿಬುದ್ಧಿಜಮ್ ॥74॥
ಇವನ ತಂದೆ ಧೃತರಾಷ್ಟ್ರನು ತನ್ನ ಮಗನನ್ನು ಭೀಮನು ಕೊಂದ ವಿಷಯವನ್ನು ಕೇಳಿ ಹಿಂದೆ ಶಕುನಿಯ ಬುದ್ಧಿಯಿಂದ ನಡೆಸಿದ ದ್ಯೂತ ಮೊದಲಾದ ಕೆಟ್ಟಕೆಲಸಗಳನ್ನು ಸ್ಮರಿಸಿಕೊಳ್ಳುವನು.
ಸಂಜಯಃ
ಇತ್ಯುಕ್ತ್ವಾ ರಾಜಶಾರ್ದೂಲ ಗದಾಮುದ್ಯಮ್ಯ ವೀರ್ಯವಾನ್ |
ಅವಾತಿಷ್ಠತ ಯುದ್ಧಾಯ ಶಕ್ರೋ ವೃತ್ರಮಿವಾಹ್ವಯನ್ ॥75॥
ಸಂಜಯ ರಾಜೋತ್ತಮನೇ! ವೀರನಾದ ಭೀಮನು ಹೀಗೆ ಹೇಳಿ ಗದೆಯನ್ನು ಹಿಡಿದುಕೊಂಡು ಇಂದ್ರನು ವೃತ್ರಾಸುರನನ್ನು ಯುದ್ಧಕ್ಕೆ ಕರೆದಂತೆ ದುರ್ಯೋಧನನನ್ನು ಆಹ್ವಾನಿಸುತ್ತ ನಿಂತನು.
ತಮುದ್ಯತಗದಂ ದೃಷ್ಟ್ವಾ ಕೈಲಾಸಮಿವ ಶೃಂಗಿಣಮ್ |
ಭೀಮಸೇನಃ ಪುನಃ ಕ್ರೋಧಾದ್ ದುರ್ಯೋಧನಮುವಾಚ ಹ ॥76॥
ಎದುರುಗಡೆಯಿಂದ ಶಿಖರದಿಂದ ಕೂಡಿದ ಕೈಲಾಸಪರ್ವತದಂತೆ ಗದೆಯನ್ನು ಹಿಡಿದ ದುರ್ಯೋಧನನಿಗೆ ಭೀಮಸೇನನು ಮತ್ತೆ ಹೇಳಿದನು.
ಭೀಮಃ
ರಾಜ್ಞಸ್ತು ಧೃತರಾಷ್ಟ್ರಸ್ಯ ತಥಾ ತ್ವಮಪಿ ಚಾತ್ಮನಃ |
ಸ್ಮರ ತದ್ದುಷ್ಕೃತಂ ಕರ್ಮ ಯದ್ವೃತ್ತಂ ವಾರಣಾವತೇ ॥77॥
ಭೀಮ ಹಸ್ತಿನಾವತಿಯಲ್ಲಿ ನೀನು ಮತ್ತು ನಿನ್ನ ತಂದೆ ಧೃತರಾಷ್ಟ್ರನು ನಮಗೆ ಮಾಡಿದ ದುಷ್ಕಾರ್ಯಗಳನ್ನು ನೆನಪಿಸಿಕೊಳ್ಳು.
ದ್ರೌಪದೀ ಚ ಪರಿಕ್ಲಿಷ್ಟಾ ಸಭಾಯಾಂ ಯದ್ರಜಸ್ವಲಾ |
ದ್ಯೂತೇನ ವಂಚಿತೋ ರಾಜಾ ಯತ್ತ್ವಯಾ ಸೌಬಲೇನ ಚ ॥78॥
ಸಭೆಯಲ್ಲಿ ರಜಸ್ವಲೆಯಾದ ದ್ರೌಪದಿಗೆ ಬಹಳ ದುಃಖವನ್ನು ಕೊಟ್ಟಿದ್ದಿ. ಶಕುನಿಯೊಡನೆ ಸೇರಿಕೊಂಡು ನಮ್ಮ ರಾಜ ಯುಧಿಷ್ಠಿರನಿಗೆ ದ್ಯೂತದಿಂದ ಮೋಸವನ್ನು ಮಾಡಿದ್ದಿ.
ವನೇ ದುಃಖಂ ಚ ಸಂಪ್ರಾಪ್ತಮಸ್ಮಾಭಿಸ್ತ್ವತ್ಕೃತಂ ಮಹತ್ |
ವಿರಾಟನಗರೇ ಚೈವ ಯೋನ್ಯಂತರಗತೈರಿವ ॥79॥
ನಿನ್ನಿಂದಾಗಿ ವನವಾಸಕಾಲದಲ್ಲಿ ಬಹಳವಾದ ದುಃಖವನ್ನು ಅನುಭವಿಸಿದೆವು. ಅಜ್ಞಾತವಾಸಕಾಲದಲ್ಲಿ ವಿರಾಟನಗರದಲ್ಲಿ ಬೇರೆಯವರ ಮಧ್ಯೆ ಇದ್ದು ದುಃಖವನ್ನು ಅನುಭವಿಸಿದೆವು.
ತತ್ಸರ್ವಂ ಯಾತಯಾಮ್ಯದ್ಯ ದಿಷ್ಟ್ಯಾ ದೃಷ್ಟೋಽಸಿ ದುರ್ಮತೇ ॥80॥
ದುರ್ಮತಿಯೇ! ಅದೃಷ್ಟವಶಾತ್ ನೀನು ನನಗೆ ಕಾಣಿಸಿಕೊಂಡಿರುವಿ. ಅಂದಿನ ಎಲ್ಲಾ ದುಃಖಗಳನ್ನೂ ಕಳೆದುಕೊಳ್ಳುವೆನು.

ತ್ವತ್ಕೃತೇಽಸೌ ಹತಃ ಶೇತೇ ಶರತಲ್ಪೇ ಪಿತಾಮಹಃ |
ಗಾಂಗೇಯೋ ರಥಿನಾಂ ಶ್ರೇಷ್ಠೋ ರಥಿನಾ ಯಾಜ್ಞಸೇನಿನಾ ॥81॥
ನಿನಗೋಸ್ಕರ ನಮ್ಮ ಪಿತಾಮಹನಾದ, ರಥಿಗಳಲ್ಲಿಯೇ ಶ್ರೇಷ್ಠನಾದ, ಗಂಗಾಪುತ್ರ ಭೀಷ್ಮನು ಯಜ್ಞದಲ್ಲಿ ಹುಟ್ಟಿದ ಧೃಷ್ಟದ್ಯುಮ್ನನಿಂದ ಪೆಟ್ಟು ತಿಂದು ಬಾಣಗಳ ಮಂಚದಲ್ಲಿ ಮಲಗಿದ್ದಾನೆ.
ಹತೋ ದ್ರೋಣಶ್ಚ ಕರ್ಣಶ್ಚ ತಥಾ ಶಲ್ಯಃ ಪ್ರತಾಪವಾನ್ |
ವೈರಾಗ್ನೇರಾದಿಕರ್ತಾ ಚ ಶಕುನಿಃ ಸೌಬಲೋ ಹತಃ ॥82॥
ಹಾಗೆಯೇ ನಿನಗಾಗಿ ದ್ರೋಣ, ಕರ್ಣ, ಪ್ರತಾಪಿಯಾದ ಶಲ್ಯ, ದ್ವೇಷದ ಬೆಂಕಿಯನ್ನು ಹಚ್ಚಿದ ಶಕುನಿ ಇವರೆಲ್ಲರೂ ಸತ್ತಿದ್ದಾರೆ.
ಪ್ರಾತಿಕಾಮೀ ತಥಾ ಪಾಪೋ ದ್ರೌಪದ್ಯಾಃ ಕ್ಲೇಶಕೃದ್ಧತಃ |
ಭ್ರಾತರಸ್ತೇ ಹತಾಃ ಶೂರಾಃ ಸರ್ವೇ ವಿಕ್ರಾಂತಯೋಧಿನಃ ॥83॥
ದ್ರೌಪದಿಗೆ ದುಃಖವನ್ನುಂಟುಮಾಡಿದ ಪ್ರಾತಿಕಾಮಿಯೂ ಸತ್ತಿದ್ದಾನೆ. ಪರಾಕ್ರಮದಿಂದ ಯುದ್ಧಮಾಡಿದ್ದ ನಿನ್ನ ಎಲ್ಲಾ ಶೂರರಾದ ಸಹೋದರರು ನಿನಗೋಸ್ಕರ ಸತ್ತಿದ್ದಾರೆ.
ಏತೇ ಚಾನ್ಯೇ ಚ ನಿಹತಾಃ ಬಹವಸ್ತ್ವತ್ಕೃತೇ ನೃಪಾಃ |
ತ್ವಾಮಪ್ಯದ್ಯ ಹನಿಷ್ಯಾಮಿ ಗದಯಾ ನಾತ್ರ ಸಂಶಯಃ ॥84॥
ನಿನಗೋಸ್ಕರ ಇವರು ಮತ್ತು ಇನ್ನೂ ಅನೇಕ ರಾಜರುಗಳು ನಮ್ಮ ಕೈಯಿಂದ ಸತ್ತಿದ್ದಾರೆ. ಇವತ್ತು ನಿನ್ನನ್ನೂ ಕೂಡ ಗದೆಯಿಂದ ಕೊಲ್ಲುತ್ತೇನೆ. ಇದರಲ್ಲಿ ಸಂಶಯವು ಇಲ್ಲ.
ಸಂಜಯಃ
ಇತ್ಯೇವಮುಚ್ಚೈ ರಾಜಾನಂ ಭಾಷಮಾಣಂ ವೃಕೋದರಮ್ |
ಉವಾಚ ವೀತಭೀ ರಾಜನ್ ಪುತ್ರಸ್ತೇ ಸತ್ಯವಿಕ್ರಮಃ ॥85॥
ಸಂಜಯ ರಾಜನೇ! ಹೀಗೆ ಜೋರಾಗಿ ಮಾತನಾಡುತ್ತಿದ್ದ ಭೀಮನಿಗೆ ಭಯವನ್ನು ಕಳೆದುಕೊಂಡ ಪರಾಕ್ರಮಿಯಾದ ನಿನ್ನ ಮಗನು ಹೀಗೆ ಹೇಳುತ್ತಾನೆ.
ದುರ್ಯೋಧನಃ
ಕಿಂ ಕತ್ಥನೇನ ಬಹುನಾ ಯುಧ್ಯಸ್ವೇಹ ವೃಕೋದರ |
ಅದ್ಯ ತೇಽಹಂ ವಿನೇಷ್ಯಾಮಿ ಯುದ್ಧಶ್ರದ್ಧಾಂ ವೃಕೋದರ ॥86॥
ದುರ್ಯೋಧನ ಭೀಮನೇ! ವ್ಯರ್ಥವಾದ ಪ್ರಲಾಪದಿಂದ ಏನು ಪ್ರಯೋಜನ? ಇಲ್ಲಿ ಯುದ್ಧವನ್ನು ಮಾಡು. ವೃಕೋದರ! ಇವತ್ತು ನಿನ್ನ ಯುದ್ಧದ ಉತ್ಸಾಹವನ್ನೇ ನಾಶ ಮಾಡುತ್ತೇನೆ.
ಇತಿ ದುರ್ಯೋಧನೋಽಕ್ಷುದ್ರಃ ತ್ವಯಾ ಕ್ಷುದ್ರಬಲೇನ ವೈ |
ಶಕ್ಯಸ್ತ್ರಾಸಯಿತುಂ ವಾಚಾ ನ ಚಾನ್ಯಃ ಪ್ರಾಕೃತೋ ಯಥಾ ॥87॥
ಸಾಮಾನ್ಯ ಮನುಷ್ಯರನ್ನು ಮಾತಿನಿಂದ ಪೀಡಿಸುವಂತೆ ಈ ಅಲ್ಪನಲ್ಲದ ದುರ್ಯೋಧನನನ್ನು ಅಲ್ಪಬಲವುಳ್ಳ ನೀನು ಪೀಡಿಸಲು ಸಾಧ್ಯವಿಲ್ಲ.
ಚಿರಕಾಲೇಪ್ಸಿತಂ ದಿಷ್ಟ್ಯಾ ಹೃದಯಸ್ಥಮಿದಂ ಮಮ |
ತ್ವಯಾ ಸಹ ಗದಾಯುದ್ಧಂ ತ್ರಿದಶೈರುಪಪಾದಿತಮ್ ॥88॥
ನಿನ್ನ ಜೊತೆಗೆ ಗದಾಯುದ್ಧವನ್ನು ಮಾಡಬೇಕೆಂದು ನಾನು ಬಹಳಕಾಲದಿಂದ ಮನಸ್ಸಿನಲ್ಲಿ ಇಟ್ಟುಕೊಂಡಿದ್ದೆ. ಅದೃಷ್ಟವಶಾತ್ ದೇವತೆಗಳು ಗೌರವಿಸುವ ಅಂತಹ ಗದಾಯುದ್ಧವು ಪ್ರಾಪ್ತವಾಗಿದೆ
ಕಿಂ ವಾಚಾ ಬಹುನೋಕ್ತೇನ ಕತ್ಥಿತೇನ ಚ ದುರ್ಮತೇ |
ವಾಣೀ ಸಂಕೋಚ್ಯತಾಮೇಷಾ ಕರ್ಮಣಾ ಮಾ ಚಿರಂ ಕೃಥಾಃ ॥89॥
ದುರ್ಬುದ್ಧಿಯವನೇ! ಬಹಳವಾದ ಮಾತುಗಳಿಂದಾಗಲೀ, ಬಹಳವಾಗಿ ಪ್ರಲಾಪ ಮಾಡುವುದರಿಂದಲಾಗಲೀ ಏನು ಪ್ರಯೋಜನ? ನಿನ್ನ ಮಾತನ್ನು ಕಡಿಮೆ ಮಾಡು. ತಡಮಾಡದೆ ಕೆಲಸವನ್ನು ಮಾಡು.
ಸಂಜಯಃ
ತಸ್ಯ ತದ್ವಚನಂ ಶ್ರುತ್ವಾ ಸರ್ವ ಏವಾಭ್ಯಪೂಜಯನ್ |
ರಾಜಾನಃ ಸೋಮಕಾಶ್ಚೈವ ಯೇ ತತ್ರಾಸನ್ ಸಮಾಗತಾಃ ॥90॥
ಸಂಜಯ ದುರ್ಯೋಧನನ ಆ ಮಾತನ್ನು ಕೇಳಿ ಅಲ್ಲಿ ಬಂದಿದ್ದ ಸೋಮಕರು ಮೊದಲಾದ ಎಲ್ಲಾ ರಾಜರು ಅವನನ್ನು ಕೊಂಡಾಡಿದರು.
ಸ ತೈಃ ಸಂಪೂಜಿತಃ ಸರ್ವೈಃ ಸಂಪ್ರಹೃಷ್ಟತನೂರುಹಃ ॥91॥
ಅವರು ದುರ್ಯೋಧನನನ್ನು ಪೂಜಿಸಿದಾಗ ಅವನು ಸಂತೋಷದಿಂದ ರೋಮಾಂಚನವನ್ನು ಹೊಂದಿದನು.
ತಂ ಮತ್ತಮಿವ ಮಾತಂಗಂ ತಳತಾಳೈರ್ನರಾಧಿಪಾಃ |
ಭೂಯಃ ಸಂಹರ್ಷಯಾಮಾಸುರ್ದುರ್ಯೋಧನಮಮರ್ಷಣಮ್ ॥
ಅಸಹನೆಗೊಳಗಾದ, ಮದವೇರಿದ ಆನೆಯಂತಿದ್ದ ದುರ್ಯೋಧನನನ್ನು ರಾಜರುಗಳು ತಮ್ಮ ಚಪ್ಪಾಳೆಗಳಿಂದ ಮತ್ತೂ ಸಂತೋಷಪಡಿಸಿದರು.
ಭೂಯೋ ಧೀರಂ ಮನಶ್ಚಕ್ರೇ ಯುದ್ಧಾಯ ಕೃತನಿಶ್ಚಯಃ ॥93॥
ಯುದ್ಧಕ್ಕೆ ದೃಢನಿಶ್ಚಯವನ್ನು ಮಾಡಿಕೊಂಡಿದ್ದ ದುರ್ಯೋಧನನು ಪುನಃ ಮನಸ್ಸನ್ನು ದೃಢಗೊಳಿಸಿದನು.

ತಂ ಮಹಾತ್ಮಾ ಮಹಾತ್ಮಾನಂ ಗದಾಮುದ್ಯಮ್ಯ ಪಾಂಡವಃ |
ಅಭಿದುದ್ರಾವ ವೇಗೇನ ತವ ಪುತ್ರಂ ವೃಕೋದರಃ ||94||
ಅಂತಹ ಮಹಾತ್ಮನಾದ ನಿನ್ನ ಮಗ ದುರ್ಯೋಧನನನ್ನು ಮಹಾತ್ಮನಾದ ಭೀಮನು ಗದೆಯನ್ನು ಹಿಡಿದುಕೊಂಡು ವೇಗದಿಂದ ಎದುರಿಸಿದನು.
ಬೃಹಂತಿ ಕುಂಜರಾಸ್ತತ್ರ ಹಯಾ ಹ್ರೇಷಂತಿ ಚಾಸಕೃತ್ |
ಶಸತತ್ರಣಿ ಚಾಪ್ಯದೀಪ್ಯಂತ ಪಾಂಡವಾನಾಂ ಜಯೈಷಿಣಾಮ್ ||95||
ಆಗ ಒಂದೇ ಕಾಲದಲ್ಲಿ ದೊಡ್ಡದಾದ ಅನೇಕ ಆನೆಗಳು ಗರ್ಜಿಸಿದವು. ಕುದುರೆಗಳು ಹೇಷಾರವವನ್ನು ಮಾಡಿದವು. ಯುದ್ಧದ ಜಯವನ್ನು ಅಪೇಕ್ಷಿಸಿದ್ದ ಪಾಂಡವರ ಶಸ್ತ್ರಗಳು ಪ್ರಕಾಶಿಸತೊಡಗಿದವು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಭೀಮದುರ್ಯೋಧನಯೋಃ ಪರಸ್ಪರಭರ್ತ್ಸನಂ ನಾಮ ಸಪ್ತವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಭೀಮ ಮತ್ತು ದುರ್ಯೋಧನರ ಗದಾಯುದ್ಧದ ವರ್ಣನೆ
ಸಂಜಯಃ
ತದಾ ದುರ್ಯೋಧನೋ ರಾಜಾ ದೃಷ್ಟ್ವಾ ಭೀಮಂ ತಥಾಽಽಗತಮ್ |
ಪ್ರತ್ಯುದ್ಯಯಾವದೀನಾತ್ಮಾ ವೇಗೇನ ಮಹತಾ ನದನ್ ||1||
ಸಂಜಯ ಆಗ ಆ ರೀತಿಯಲ್ಲಿ ಬರುತ್ತಿದ್ದ ಭೀಮನನ್ನು ದುರ್ಯೋಧನನೂ ಕೂಡ ಯಾವುದೇ ಕಳವಳಕ್ಕೆ ಒಳಗಾಗದೆ, ವೇಗದಿಂದ ಜೋರಾಗಿ ಕೂಗುತ್ತಾ ಎದುರಿಸಿ ಬಂದನು.
ಸಮಾಸೇದತುರಾಯತ್ತೌ ಶೃಂಗಿಣೌ ವೃಷಭಾವಿವ |
ಮಹಾನಿರ್ಘಾತಘೋಷಶ್ಚ ಸನ್ನಿಪಾತೇ ತಯೋರಭೂತ್ ||2||
ದೊಡ್ಡ ಕೊಂಬುಗಳನ್ನು ಹೊಂದಿರುವ ಗೂಳಿಗಳಂತೆ ಅವರಿಬ್ಬರೂ ಎದುರುಗೊಂಡರು. ಯುದ್ಧದಲ್ಲಿ ಅವರಿಬ್ಬರಲ್ಲಿ ಜೋರಾಗಿ ಗುಡುಗಿನ ಶಬ್ದವು ಉಂಟಾಯಿತು.
ಅಭವಚ್ಚ ತಯೋರ್ಯುದ್ಧಂ ತುಮುಲಂ ರೋಮಹರ್ಷಣಮ್ |
ಜಿಘೃಕ್ಷತೋರ್ಯಥಾನ್ಯೋನ್ಯಮಿಂದ್ರಪ್ರಹ್ಲಾದಯೋರಿವ ||3||
ಪರಸ್ಪರವಾಗಿ ಸೋಲಿಸಿ ಸಾಯಿಸುವ ಇಚ್ಛೆಯಿಂದ ಕಾದಾಡುತ್ತಿದ್ದ ಭೀಮ- ದುರ್ಯೋಧನರ ಗದಾಯುದ್ಧವು ದೇವೇಂದ್ರ ಮತ್ತು ಪ್ರಹ್ಲಾದರ ನಡುವೆ ನಡೆದ ಯುದ್ಧದ ಹಾಗೆ ಭಯಂಕರವಾಗಿತ್ತು ಮತ್ತು ರೋಮಾಂಚನವನ್ನುಂಟುಮಾಡುತ್ತಿತ್ತು.
ರುಧಿರೋಕ್ಷಿತಸರ್ವಾಂಗೌ ಗದಾಹಸ್ತೌ ಮನಸ್ವಿನೌ |
ದದೃಶಾತೇ ಮಹಾತ್ಮಾನೌ ಸುಪುಷ್ಪಾವಿವ ಕಿಂಶುಕೌ ||4||
ದೃಢಶ್ವಾಸದಿಂದ ಗದಾಧಾರಿಗಳಾಗಿ ಕಾದಾಡುತ್ತಿದ್ದಾಗ ಇಬ್ಬರಿಗೂ ಮೈಯೆಲ್ಲಾ ರಕ್ತದಿಂದ ತೊಯ್ದು ಹೋಗಿತ್ತು. ಮಹಾತ್ಮರಾದ ಅವರಿಬ್ಬರೂ ಹೂಬಿಟ್ಟ ಪಲಾಶವೃಕ್ಷದ (ಮುತ್ತುಗದ) ಹಾಗೆ ಕಾಣಿಸುತ್ತಿದ್ದರು.
ತದಾ ತಸ್ಮಿನ್ ವರ್ತಮಾನೇ ಗದಾಯುದ್ಧೇ ಸುದಾರುಣೇ |
ಖದ್ಯೋತಸ್ಯೆಂರಿವ ಖಂ ದರ್ಶನೀಯಂ ವ್ಯರೋಚತ ||5||
ಘೋರವಾದ ಗದಾಯುದ್ಧವು ನಡೆಯುತ್ತಿದ್ದಾಗ ಆಕಾಶವು ಮಿಂಚುಹುಳಗಳಿಂದ ಕೂಡಿದ ಹಾಗೆ ಸುಂದರವಾಗಿ ಕಾಣಿಸುತ್ತಿತ್ತು.
ತಸ್ಮಿಂಸ್ತದಾ ವರ್ತಮಾನೇ ಸಂಕುಲೇ ದಾರುಣೇ ಭೃಶಮ್ |
ಉಭಾವಪಿ ಪರಿಶ್ರಾಂತೌ ಯುಧ್ಯಮಾನಾವರಿಂದಮೌ ||6||
ಭಯಂಕರವಾದ ದ್ವಂದ್ವಯುದ್ಧವು ನಡೆಯುತ್ತಿದ್ದಾಗ ಶತ್ರುಸಂಹಾರಕರಾದ ಅವರಿಬ್ಬರೂ ಯುದ್ಧವನ್ನು ಮಾಡುತ್ತಾ ತುಂಬಾ ಆಯಾಸಪಟ್ಟರು.
ತೌ ಮುಹೂರ್ತಂ ಸಮಾಶ್ವಾಸ್ಯ ಪುನರೇವ ಪರಂತಪೌ |
ಸಂಪ್ರಹಾರಯತಾಂ ಚಿತ್ರೇ ಸಂಪ್ರಗೃಹ್ಯ ಗದೇ ಶುಭೇ ||7||
ಶತ್ರುಪೀಡಕರಾದ ಅವರಿಬ್ಬರೂ ಒಂದು ಮುಹೂರ್ತದ ಕಾಲ ವಿಶ್ರಾಂತಿಯನ್ನು ಪಡೆದು ಮತ್ತೆ ತಮ್ಮ ತಮ್ಮ ವಿಚಿತ್ರವಾದ ಮಂಗಳಮಯ ಗದೆಯನ್ನು ಹಿಡಿದುಕೊಂಡು ಹೊಡೆಯಲಾರಂಭಿಸಿದರು.
ತೌ ತು ದೃಷ್ಟ್ವಾ ಮಹಾಸತೌತ್ವ ಸಮಾಶ್ವಸ್ತೌ ನರಾಧಿಪ |
ಬಲಿನೌ ವಾರಣೌ ಯದ್ವದ್ ವಾಶಿತಾರ್ಥೇ ಮದೋತ್ಕಟೌ ||8||
ರಾಜನೇ! ಅವರಿಬ್ಬರೂ ಚೆನ್ನಾಗಿ ವಿಶ್ರಾಂತಿಯನ್ನು ಪಡೆದು, ಮಹಾಶಕ್ತಿಯನ್ನು ಪಡೆದುಕೊಂಡು ಮೈಥುನಕ್ಕಾಗಿ ಹಾತೊರೆಯುವ ಮದವೇರಿದ ಆನೆಗಳಂತೆ ಕಂಡರು.
ಅಪಾರವೀರ್ಯೌ ಸಂಪ್ರೇಕ್ಷ್ಯ ಪ್ರಗೃಹೀತಗದೌ ದೃಢೌ |
ಪ್ರಹರ್ಷಂ ಪರಮಂ ಜಗ್ಮುರ್ದೇವಗಂಧರ್ವದಾನವಾಃ ||9||
ಅಪರಿಮಿತವಾದ ಸಾಮರ್ಥ್ಯವುಳ್ಳ ಅವರಿಬ್ಬರೂ ಗದೆಯನ್ನು ಹಿಡಿದುಕೊಂಡು ಯುದ್ಧದಲ್ಲಿ ದೃಢವಾಗಿ ಇರುವುದನ್ನು ನೋಡಿ ದೇವತೆಗಳು, ಗಂಧರ್ವರು ಮತ್ತು ದಾನವರು ಸಂತೋಷಪಟ್ಟರು.

ಪ್ರಗೃಹೀತಗದೌ ದೃಷ್ಟ್ವಾ ದುರ್ಯೋಧನವೃಕೋದರೌ |
ಸಂಶಯಃ ಸರ್ವಭೂತಾನಾಂ ವಿಜಯೇ ಸಮಪದ್ಯತ ॥10॥
ಗದಾಧಾರಿಗಳಾದ ದುರ್ಯೋಧನ ಮತ್ತು ಭೀಮಸೇನರನ್ನು ನೋಡಿ ಎಲ್ಲರಿಗೂ ಜಯದ ವಿಷಯದಲ್ಲಿ ಸಂಶಯವು ಉಂಟಾಯಿತು.
ಸಮಾಗಮ್ಯ ತತೋ ಭೂಯೋ ಭ್ರಾತರೌ ಬಲಿನಾಂ ವರೌ |
ಅನ್ಯೋನ್ಯಸ್ಯಾಂತರಪ್ರೇಪ್ಸೂ ಪ್ರಚಕ್ರಾತೇಽಂತರಂ ಪ್ರತಿ ॥11॥
ಬಲಶಾಲಿಗಳಲ್ಲಿಯೇ ಶ್ರೇಷ್ಠರಾದ ಸಹೋದರರಿಬ್ಬರೂ ಮತ್ತೆ ಕಾದಾಟದಲ್ಲಿ ಒಟ್ಟಾಗಿ ಪರಸ್ಪರವಾಗಿ ಹೊಡೆಯಲು ಅವಕಾಶವನ್ನು ಅಪೇಕ್ಷಿಸಿಕೊಂಡು ಆ ಅವಕಾಶಕ್ಕಾಗಿ ವರಸೆಗಳನ್ನು ತೋರಿಸಿದರು.
ಯಮದಂಡೋಪಮಾಂ ಗುರ್ವೀಮಿಂದ್ರಾಶನಿಸಮಸ್ವನಾಮ್ |
ದದೃಶುಃ ಪ್ರೇಕ್ಷಕಾ ರಾಜನ್ ರೌದ್ರೀಂ ವಿಶಸನೀಂ ಗದಾಮ್ ॥12॥
ಅವಿದ್ಧ್ಯತೋ ಗದಾಂ ತಸ್ಯ ಭೀಮಸೇನಸ್ಯ ಶುಷ್ಮಿಣಃ |
ಶಬ್ದಃ ಸುತುಮುಲೋ ಘೋರೋ ಮುಹೂರ್ತಂ ಸಮಪದ್ಯತ ॥13॥
ರಾಜನ್! ಪರಾಕ್ರಮಿಯಾದ ಭೀಮನು ಗದೆಯನ್ನು ತಿರುಗಿಸುತ್ತಿರುವುದನ್ನು ಪ್ರೇಕ್ಷಕರೆಲ್ಲರೂ ನೋಡಿದರು. ಅವನ ಗದೆಯು ಯಮನ ದಂಡದಂತೆ ಬಹಳ ಭಾರವಾಗಿತ್ತು. ವಜ್ರಾಯುಧಕ್ಕೆ ಸದೃಶವಾಗಿ ಶಬ್ದವನ್ನು ಮಾಡುತ್ತಿತ್ತು. ಶತ್ರುಗಳನ್ನು ನಿಶ್ಶೇಷಗೊಳಿಸುವ ಘೋರವಾದ ಗದೆಯನ್ನು ಪ್ರೇಕ್ಷಕರು ನೋಡಿದರು. ಗದಾಪ್ರಹಾರ ಮಾಡುತ್ತಿದ್ದಾಗ ಒಂದು ಮುಹೂರ್ತದಷ್ಟು ಕಾಲ ಭಯಂಕರವಾದ ಶಬ್ದವು ಉಂಟಾಯಿತು.
ಆವಿದ್ಧ್ಯಂತಮಭಿಪ್ರೇಕ್ಷ್ಯ ಧಾರ್ತರಾಷ್ಟ್ರೋಽಥ ಪಾಂಡವಮ್ |
ಗದಾಮಲಘುವೇಗಾಂ ತಾಂ ವಿಸ್ಮಿತಃ ಸ ಬಭೂವ ಹ ॥14॥
ಅನಂತರ ಗದಾಪ್ರಹಾರವನ್ನು ಮಾಡುತ್ತಿದ್ದ ಭೀಮನನ್ನು ನೋಡಿ ದುರ್ಯೋಧನನು ಆಶ್ಚರ್ಯಗೊಂಡನು.
ಚರಂಶ್ಚ ವಿವಿಧಾನ್ ಮಾರ್ಗಾನ್ ಮಂಡಲಾನಿ ಚ ಭಾಗಶಃ |
ಅಶೋಭತ ತದಾ ವೀರೋ ಭೂಯ ಏವ ವೃಕೋದರಃ ॥15॥
ವೀರನಾದ ಭೀಮನು ಪುನಃ ಬೇರೆ ಬೇರೆ ಗದಾವರಸೆಗಳನ್ನು ಪ್ರಯೋಗಿಸುತ್ತಾ, ವಿವಿಧಭಾಗಗಳಿಂದ ಮಂಡಲಾಕಾರವಾಗಿ ಸುತ್ತುತ್ತಾ ಶೋಭಿಸಿದನು.
ತೌ ಪರಸ್ಪರಮಾಸಾದ್ಯ ಯತ್ತಾವನ್ಯೋನ್ಯರಕ್ಷಣೇ |
ಮಾರ್ಜಾರಾವಿವ ಭಕ್ಷಾರ್ಥೇ ವಿತಸ್ಥಾತೇ ಮುಹುರ್ಮುಹುಃ ॥16॥
ಅವರಿಬ್ಬರೂ ಪರಸ್ಪರ ಒಟ್ಟಾಗಿ ಕಾದಾಡುತ್ತಾ ತಮ್ಮನ್ನು ರಕ್ಷಿಸಿಕೊಳ್ಳಲಿಕ್ಕಾಗಿ, ಜೊತೆಗೆ ಎರುರಾಳಿಯನ್ನು ಹೊಡೆಯಲಿಕ್ಕಾಗಿ ಬೆಕ್ಕುಗಳಂತೆ ಮತ್ತೆ ಮತ್ತೆ ಪರಸ್ಪರ ಘಾಸಿ ಮಾಡಿಕೊಂಡರು.
ಅಚರದ್ ಭೀಮಸೇನಸ್ತು ಮಾರ್ಗಾನ್ ಬಹುವಿಧಾನ್ ರಣೇ |
ಮಂಡಲಾನಿ ವಿಚಿತ್ರಾಣಿ ಸ್ಥಾನಾನಿ ವಿವಿಧಾನಿ ಚ ॥17॥
ಯುದ್ಧದಲ್ಲಿ ಭೀಮಸೇನನು ಅನೇಕ ವರಸೆಗಳನ್ನು, ಮಂಡಲಾಕಾರಗಳನ್ನು, ವಿವಿಧ ಭಂಗಿಗಳನ್ನು ಪ್ರಯೋಗಿಸಿದನು.
ಗೋಮೂತ್ರಿಕಾಣಿ ಚಿತ್ರಾಣಿ ಗತಪ್ರತ್ಯಾಗತಾನಿ ಚ |
ಪರಿಮೋಕ್ಷಂ ಪ್ರಹಾರಾಣಾಂ ವರ್ಜನಂ ಪರಿಧಾವನಮ್ ॥18॥
ಅಭಿದ್ರವಣಮಾಕ್ಷೇಪಮವಸ್ಥಾನಮವಗ್ರಹಮ್ |
ಪರಾವೃತ್ತಂ ಸುಸಂವೃತ್ತಮುಪಪ್ಲುತಮುಪದ್ರುತಮ್ ॥19॥
ಉಪನ್ಯಸ್ತಮಪನ್ಯಸ್ತಂ ಗದಾಯುದ್ಧವಿಶಾರದೌ |
ಏವಂ ತೌ ವಿಚರಂತೌ ತು ಪರಸ್ಪರಮವಿಧ್ಯತಾಮ್ ॥20॥
ವಿಚಿತ್ರವಾದ ಗೋಮೂತ್ರಿಭಂಗಿ, ಯುದ್ಧದಲ್ಲಿ ಮುಂದೆ ಹೋಗಿ ಹಿಂದೆ ಬರುವುದು, ತನಗೆ ಬೀಳುತ್ತಿರುವ ಪೆಟ್ಟುಗಳನ್ನು ತಪ್ಪಿಸಿಕೊಂಡು ಓಡುವುದು, ಎದುರಾಳಿಗೆ ಮುಮ್ಮುಖವಾಗಿ ನುಗ್ಗುವುದು, ಎದುರಾಳಿಯನ್ನು ತಡೆದು ನಿಲ್ಲಿಸುವುದು, ಗಟ್ಟಿಯಾಗಿ ನಿಲ್ಲುವುದು, ಕೆಳಮುಖವಾಗಿ ಹಿಡಿದುಕೊಳ್ಳುವುದು, ಪ್ರದಕ್ಷಿಣಾಕಾರದಲ್ಲಿ ಮತ್ತು ಅಪ್ರದಕ್ಷಿಣಾಕಾರದಲ್ಲಿ ಸುತ್ತುವುದು, ಹತ್ತಿರಕ್ಕೆ ಹಾರಿ ನಿಲ್ಲುವುದು, ಹತ್ತಿರಕ್ಕೆ ಓಡುವುದು, ಹತ್ತಿರದಲ್ಲಿ ಇರುವುದು, ದೂರಕ್ಕೆ ಬಂದು ನಿಲ್ಲುವುದು ಇವೇ ಮೊದಲಾದ ಗದಾಯುದ್ಧದ ಪ್ರಕಾರಗಳನ್ನು ಪ್ರಯೋಗಿಸಿದನು. ಗದಾಯುದ್ಧದಲ್ಲಿ ನಿಷ್ಣಾತರಾದ ಇಬ್ಬರೂ ಕೂಡ ಪರಸ್ಪರವಾಗಿ ಪ್ರಹಾರ ಮಾಡಿಕೊಳ್ಳುತ್ತಾ ಸಂಚರಿಸತೊಡಗಿದರು.
ವಂಚಯಂತೌ ಪುನಶ್ಚೈವ ಚೇರತುಃ ಕುರುಪಾಂಡವೌ ॥21॥
ಕುರುವಂಶದ ದುರ್ಯೋಧನ ಹಾಗೂ ಪಾಂಡುಪುತ್ರನಾದ ಭೀಮ ಇವರಿಬ್ಬರೂ ಪರಸ್ಪರ ವಂಚಿಸಿ (ತಪ್ಪಿಸಿ)ಕೊಳ್ಳುತ್ತಾ ಯುದ್ಧದಲ್ಲಿ ಅತ್ತಿಂದಿತ್ತ ಸಂಚರಿಸಿದರು.
ವಿಕ್ರೀಡಂತೌ ಸುಬಲಿನೌ ಮಂಡಲಾನಿ ವಿಚೇರತುಃ ॥22॥
ಮಹಾಬಲಶಾಲಿಗಳಾದ ಅವರಿಬ್ಬರೂ ಕಾದಾಟವನ್ನು ಮಾಡುತ್ತಾ ಮಂಡಲಾಕಾರದಲ್ಲಿ ಸಂಚರಿಸಿದರು.
ಗದಾಹಸ್ತೌ ತತಸ್ತೌ ತು ಮಂಡಲಾವಸ್ಥಿತೌ ಯುಧಿ |
ದಕ್ಷಿಣಂ ಮಂಡಲಂ ರಾಜನ್ ಧಾರ್ತರಾಷ್ಟ್ರೋಽಭ್ಯವರ್ತತ ॥23॥
ರಾಜನ್! ಯುದ್ಧದಲ್ಲಿ ಗದಾಧಾರಿಗಳಾಗಿ ಮಂಡಲಾಕಾರದಲ್ಲಿ ಇದ್ದುಕೊಂಡು, ದುರ್ಯೋಧನನು ಮಂಡಲದ ದಕ್ಷಿಣದಿಗ್ಭಾಗ(ಬಲಭಾಗ)ಕ್ಕೆ ಬಂದನು.

ವಾಮಂ ತು ಮಂಡಲಂ ತತ್ರ ಭೀಮಸೇನೋಽಭ್ಯವರ್ತತ ॥24॥
ಭೀಮಸೇನನು ಮಂಡಲದ ಎಡಭಾಗಕ್ಕೆ ಬಂದನು.
ತಥಾ ವಿಚರತಸ್ತಸ್ಯ ಭೀಮಸ್ಯ ರಣಮೂರ್ಧನಿ |
ದುರ್ಯೋಧನೋ ಮಹಾರಾಜ ಪಾರ್ಶ್ವದೇಶೇಽಭ್ಯತಾಡಯತ್ ॥25॥
ಮಹಾರಾಜನೇ! ಹೀಗೆ ಯುದ್ಧದಲ್ಲಿ ಸಂಚರಿಸುತ್ತಿದ್ದ ಭೀಮನ ಶರೀರದ ಬದಿಯ ಭಾಗಕೆಕೆ ದುರ್ಯೋಧನನು ಚೆನ್ನಾಗಿ ಹೊಡೆದನು.
ಆಹತಸ್ತು ತತೋ ಭೀಮಃ ತವ ಪುತ್ರೇಣ ಭಾರತ |
ಆವಿಧ್ಯತ ಗದಾಂ ಗುರ್ವೀಂ ಪ್ರಹಾರಂ ತಮಚಿಂತಯನ್ ॥26॥
ಭರತಕುಲೋದ್ಭವನೇ! ನಿನ್ನ ಮಗನಿಂದ ಹೊಡೆತಕ್ಕೊಳಗಾದ ಭೀಮನು ಆ ಪೆಟ್ಟನ್ನು ಪರಿಗಣಿಸದೆ ಭಾರವಾದ ತನ್ನ ಗದೆಯನ್ನು ಚೆನ್ನಾಗಿ ಬೀಸಿ ಪ್ರಯೋಗಿಸಿದನು.
ಇಂದ್ರಾಶನಿಸಮಾಂ ಘೋರಾಂ ಯಮದಂಡಮಿವೋದ್ಯತಾಮ್ |
ದದೃಶುಸ್ತೇ ಮಹಾರಾಜ ಭೀಮಸೇನಸ್ಯ ತಾಂ ಗದಾಮ್ ॥27॥
ಮಹಾರಾಜನೇ! ಇಂದ್ರನ ವಜ್ರಾಯುಧದಂತೆ ಘೋರವಾದ ಹಾಗೂ ಯಮನ ದಂಡಕ್ಕೆ ಸದೃಶವಾದ ಭೀಮಸೇನನ ಆ ಗದೆಯನ್ನು ಅವರು ನೋಡಿದರು.
ಆವಿಧ್ಯಂತಂ ಗದಾಂ ದೃಷ್ಟ್ವಾ ಭೀಮಸೇನಂ ತವಾತ್ಮಜಃ |
ಸ್ವಾಮುದ್ಯಮ್ಯ ಗದಾಂ ಘೋರಾಂ ಪ್ರತ್ಯಯುಧ್ಯತ ಕೌರವಃ ॥28॥
ಭೀಮಸೇನನು ಗದೆಯನ್ನು ಪ್ರಯೋಗಿಸುವುದನ್ನು ನೋಡಿದ ನಿನ್ನ ಮಗ ದುರ್ಯೋಧನನು ತನ್ನ ಘೋರವಾದ ಗದೆಯನ್ನು ಪ್ರತಿಯಾಗಿ ಪ್ರಯೋಗಿಸಿದನು.
ಗದಾಮಾರುತವೇಗೇನ ತವ ಪುತ್ರಸ್ಯ ಭಾರತ |
ಶಬ್ದ ಆಸೀತ್ ಸುತುಮುಲಸ್ತೇಜಶ್ಚ ಸಮಜಾಯತ ॥29॥
ಭರತಕುಲೋದ್ಭವನೇ! ನಿನ್ನ ಮಗನ ಗದೆಯ ಗಾಳಿಯ ವೇಗದಿಂದ ಭಯಂಕರವಾದ ಶಬ್ದವು ಮತ್ತು ಕಾಂತಿಯೂ ಉಂಟಾಯಿತು.
ಸ ಚರನ್ ವಿವಿಧಾನ್ ಮಾರ್ಗಾನ್ ಮಂಡಲಾನಿ ಚ ಭಾರತ |
ಸಮಶೋಭತ ತೇಜಸ್ವೀ ಭೂಯೋ ಭೀಮಾತ್ ಸುಯೋಧನಃ ॥30॥
ಭಾರತ! ದುರ್ಯೋಧನನು ವಿವಿಧ ರೀತಿಯ ಗದಾಪ್ರಯೋಗಗಳನ್ನೂ ಮಂಡಲಾಕಾರದಲ್ಲಿ ಸುತ್ತುವುದನ್ನೂ ಮಾಡುತ್ತಾ ಮತ್ತೆ ಭೀಮನಿಗಿಂತ ಹೆಚ್ಚಿನ ತೇಜೋವಂತನಾಗಿ ತೋರಿದನು.
ಆವಿದ್ಧಾ ಭೀಮಸೇನೇನ ಸುಭೀಮಾ ಮಹತೀ ಗದಾ |
ಸಧೂಮಂ ಸಾರ್ಚಿಷಂ ಚಾಗ್ನಿಂ ಮುಮೋಚೋಗ್ರಂ ಮಹಾಸ್ವನಮ್ ॥
ಆಗ ಭೀಮಸೇನನು ಪ್ರಯೋಗಿಸಿದ ಬಹಳ ಭಯಂಕರವಾದ ದೊಡ್ಡದಾದ ಗದೆಯು ಹೊಗೆ-ಕಿಡಿಗಳನ್ನು ಕಾರುತ್ತಾ ದೊಡ್ಡದಾದ ಶಬ್ದವನ್ನುಂಟುಮಾಡಿತು.
ಆಧೂತಾಂ ಭೀಮಸೇನೇನ ಗದಾಂ ದೃಷ್ಟ್ವಾ ಸುಯೋಧನಃ |
ಅದ್ರಿಸಾರಮಯೀಂ ಗುರ್ವೀಮಾವಿಧ್ಯನ್ ಬಹ್ವಶೋಭತ ॥32॥
ಭೀಮಸೇನನು ಗದೆಯನ್ನು ಪ್ರಯೋಗಿಸಿದ್ದನ್ನು ನೋಡಿದ ದುರ್ಯೋಧನನು ಲೋಹದಿಂದ ನಿರ್ಮಿತವಾದ ಭಾರವಾದ ಗದೆಯನ್ನು ಪ್ರಯೋಗಿಸಿ ಬಹಳವಾಗಿ ಶೋಭಿಸಿದನು.
ಗದಾಂ ಮಾರುತವೇಗಾಂ ತಾಂ ದೃಷ್ಟ್ವಾ ತಸ್ಯ ಮಹಾತ್ಮನಃ |
ಭಯಂ ಪಾಂಡೂನಾವಿವೇಶ ಸರ್ವಾನೇವ ಸಸಾತ್ಯಕಾನ್ ॥33॥
ಮಹಾತ್ಮನಾದ ದುರ್ಯೋಧನನ ಗದೆಯ ವೇಗವನ್ನು ನೋಡಿ ಸಾತ್ಯಕನನ್ನೂ ಸೇರಿಸಿ ಎಲ್ಲಾ ಪಾಂಡವರಿಗೆ ಭಯವು ಆವರಿಸಿತು.
ತೌ ದರ್ಶಯಂತೌ ಸಮರೇ ಯುದ್ಧಕ್ರೀಡಾಂ ಸಮಂತತಃ |
ಗದಾಭ್ಯಾಂ ಸಹಸಾಽನ್ಯೋನ್ಯಮಾಜಘ್ನತುರರಿಂದಮೌ ॥34॥
ಶತ್ರುಸಂಹಾರಕರಾದ ಭೀಮ-ದುರ್ಯೋಧನರು ಎಲ್ಲಾ ಕಡೆಗಳಲ್ಲಿಯೂ ಯುದ್ಧದ ಆಟವನ್ನು ತೋರಿಸುತ್ತಾ ಕೂಡಲೇ ಒಬ್ಬರಿಗೊಬ್ಬರು ಗದೆಯಿಂದ ಹೊಡೆದುಕೊಂಡರು.
ತೌ ಪರಸ್ಪರಮಾಸಾದ್ಯ ದಂತಾಭ್ಯಾಂ ದ್ವಿರದೌ ಯಥಾ |
ಅಶೋಭೇತಾಂ ಮಹಾರಾಜ ಶೋಣಿತೇನ ಪರಿಪ್ಲುತೌ ॥35॥
ಮಹಾರಾಜನೇ! ರಕ್ತಸಿಕ್ತರಾದ ಅವರಿಬ್ಬರೂ ದಂತಗಳಿಂದ ಹೋರಾಡುತ್ತಿದ್ದ ಆನೆಗಳಂತೆ ಪರಸ್ಪರ ಎದುರಾಗಿ ಹೋರಾಡುತ್ತಾ ಶೋಭಿಸಿದರು.
ಏವಂ ತದಭವದ್ ಯುದ್ಧಂ ಘೋರರೂಪಮಸಂವೃತಮ್ |
ಪರಾವೃತ್ತೇಽಹನಿ ಕ್ರೂರಂ ವೃತ್ರವಾಸವಯೋರಿವ ॥36॥
ಹೀಗೆ ಹಗಲಿನ ಹೊತ್ತು ಮುಗಿದುಹೋದರೂ ಇಂದ್ರ-ವೃತ್ರರ ಮಧ್ಯೆ ನಡೆದ ಘೋರವಾದ ಯುದ್ಧದಂತೆ ಇದ್ದ ಆ ಘೋರರೂಪವಾದ ಗದಾಯುದ್ಧವು ಮುಗಿಯಲಿಲ್ಲ.
ದೃಷ್ಟ್ವಾ ವ್ಯವಸ್ಥಿತಂ ಭೀಮಂ ತವ ಪುತ್ರೋ ಮಹಾರಥಃ |
ಚರಂಶ್ಚಿತ್ರತರಾನ್ ಮಾರ್ಗಾನ್ ಕೌಂತೇಯಂ ಸಮಭಿದ್ರವತ್ ॥37॥
ಭೀಮಸೇನನ ಉತ್ತಮಸ್ಥಿತಿಯನ್ನು ಗಮನಿಸಿ ಮಹಾರಥನಾದ ನಿನ್ನ ಮಗನು ಚಿತ್ರ-ವಿಚಿತ್ರವಾದ ಗದಾವರಸೆಗಳನ್ನು ಪ್ರಯೋಗಿಸುತ್ತಾ

ಭೀಮನನ್ನು ಎದುರಿಸಿದನು.
ತಸ್ಯ ಭೀಮೋ ಮಹಾವೇಗಾಂ ಜಾಂಬೂನದವಿಭೂಷಿತಾಮ್ |
ಅಭಿಕ್ರುದ್ಧಸ್ಯ ಕ್ರುದ್ಧಸ್ತು ತಾಡಯಾಮಾಸ ತಾಂ ಗದಾಮ್ ॥38॥
ಕೋಪಗೊಂಡಿದ್ದ ಭೀಮನು ಬಂಗಾರದಿಂದ ಶೋಭಿಸುತ್ತಿದ್ದ ತನ್ನ ಗದೆಯಿಂದ ಬಹಳವಾಗಿ ಕೋಪಗೊಂಡಿದ್ದ ದುರ್ಯೋಧನನನ್ನು ಹೊಡೆದನು.
ಸವಿಷ್ಫುಲಿಂಗೋ ನಿರ್ಹ್ರಾದಸ್ತಯೋಸ್ತತ್ರಾಭಿಘಾತಜಃ |
ಪ್ರಾದುರಾಸೀನ್ಮಹಾರಾಜ ಘೃಷ್ಟಯೋರ್ವಜ್ರಯೋರಿವ ॥39॥
ಮಹಾರಾಜನೇ! ಪರಸ್ಪರ ಢಿಕ್ಕಿಹೊಡೆದ ವಜ್ರಾಯುಧಗಳಿಂದ ಹೊರಬರುವಂತೆ ಇವರಿಬ್ಬರ ಗದೆಗಳ ಹೊಡೆತದಿಂದ ಉಂಟಾದ ಬೆಂಕಿಯ ಕಿಡಿಗಳು ಮತ್ತು ದೊಡ್ಡ ಶಬ್ದವು ಅಲ್ಲಿ ಉಂಟಾಯಿತು.
ವೇಗವತ್ಯಾ ತಯಾ ತತ್ರ ಭೀಮಸೇನಪ್ರಮುಕ್ತಯಾ |
ನಿಪತಂತ್ಯಾ ಮಹಾರಾಜ ಪೃಥಿವೀ ಸಮಕಂಪತ ॥40॥
ಮಹಾರಾಜನೇ! ಭೀಮನು ಪ್ರಯೋಗಿಸಿದ ಬಹಳ ವೇಗದಿಂದ ನೆಲಕ್ಕೆ ಬೀಳುತ್ತಿದ್ದ ಗದೆಯಿಂದಾಗಿ ಭೂಮಿಯು ಕಂಪಿಸಿತು.
ತಾಂ ನಾಮೃಷ್ಯತ ಕೌರವ್ಯೋ ಗದಾಂ ಪ್ರತಿಹತಾಂ ರಣೇ |
ಮತ್ತೋ ದ್ವಿಪ ಇವ ಕ್ರುದ್ಧಃ ಪ್ರತಿಕುಂಜರದರ್ಶನಾತ್ ॥41॥
ಕೋಪಗೊಂಡ ಮದವೇರಿದ ಆನೆಯು ತನ್ನ ಸ್ಪರ್ಧಿಯಾದ ಇನ್ನೊಂದು ಆನೆಯನ್ನು ಸಹಿಸಿಕೊಳ್ಳದ ರೀತಿಯಲ್ಲಿ, ಯುದ್ಧದಲ್ಲಿ ತನ್ನ ಮೇಲೆ ಪ್ರಯೋಗಿಸಲ್ಪಟ್ಟ ಗದೆಯನ್ನು ದುರ್ಯೋಧನನು ಸಹಿಸಲಿಲ್ಲ.
ಸ ಸವ್ಯಂ ಮಂಡಲಂ ರಾಜನ್ನುದ್ಭ್ರಾಮ್ಯ ವಿಗತಕ್ಲಮಃ |
ಆಜಘ್ನೇ ಮೂರ್ಧ್ನಿ ಕೌಂತೇಯಂ ಗದಯಾ ಭೀಮವೇಗಯಾ ॥42॥
ರಾಜನೇ! ಕ್ಲೇಶದೂರನಾದ ದುರ್ಯೋಧನನು ಗದೆಯನ್ನು ಅಪ್ರದಕ್ಷಿಣಾಕಾರದಲ್ಲಿ ಮೇಲೆ ತಿರುಗಿಸಿ ಭಯಂಕರವೇಗವುಳ್ಳ ಆ ಗದೆಯಿಂದ ಭೀಮನ ತಲೆಗೆ ಹೊಡೆದನು.
ತಯಾ ತ್ವಭಿಹತೋ ಭೀಮಸ್ತವ ಪುತ್ರೇಣ ಪಾಂಡವಃ |
ನಾಕಂಪತ ಮಹಾರಾಜ ತದದ್ಭುತಮಿವಾಭವತ್ ॥43॥
ರಾಜನೇ! ನಿನ್ನ ಮಗನಿಂದ ಚೆನ್ನಾಗಿ ಗದಾಪ್ರಹಾರಕ್ಕೆ ಒಳಗಾದರೂ ಭೀಮನು ಸ್ವಲ್ಪವೂ ಅಲುಗಾಡಲಿಲ್ಲ. ಇದು ಬಹಳ ಅದ್ಭುತವಾಗಿತ್ತು.
ಆಶ್ಚರ್ಯಂ ಚಾಪಿ ತದ್ರಾಜನ್ ಸರ್ವಸೈನ್ಯಾನ್ಯಪೂಜಯನ್ |
ಯದ್ಗದಾಭಿಹತೋ ಭೀಮೋ ನಾಕಂಪತ ಪದಾತ್ ಪದಮ್ ॥44॥
ಗದೆಯ ಪ್ರಹಾರಕ್ಕೊಳಗಾದರೂ ಭೀಮನು ಒಂದು ಹೆಜ್ಜೆಯಷ್ಟೂ ಕೂಡ ಅಲುಗಾಡದೆ ಇದ್ದುದು ಬಹಳ ಆಶ್ಚರ್ಯಕರವಾಗಿತ್ತು. ರಾಜನೇ! ಎಲ್ಲಾ ಸೈನ್ಯಗಳೂ ಅದನ್ನು ಕೊಂಡಾಡಿದವು.
ತತೋ ಗುರುತರಾಂ ದೀಪ್ತಾಂ ಗದಾಂ ಹೇಮಪರಿಷ್ಕೃತಾಮ್ |
ದುರ್ಯೋಧನಾಯ ವ್ಯಸೃಜತ್ ತದದ್ಭುತಮಿವಾಭವತ್ ॥45॥
ಅನಂತರ ಭೀಮನು ಬಂಗಾರದ ಅಲಂಕಾರದಿಂದ ಶೋಭಿಸುತ್ತಿದ್ದ ಭಾರವಾದ ಗದೆಯನ್ನು ದುರ್ಯೋಧನನ ಮೇಲೆ ಪ್ರಯೋಗಿಸಿದನು. ಅದು ಅದ್ಭುತವಾಗಿತ್ತು.
ತಂ ಪ್ರಹಾರಮಸಂಭ್ರಾಂತೋ ಲಾಘವೇನ ಮಹಾಬಲಃ |
ಮೋಘಂ ದುರ್ಯೋಧನಶ್ಚಕ್ರೇ ತತ್ರಾಭೂದ್ ವಿಸ್ಮಯೋ ಮಹಾನ್ ॥
ಮಹಾಬಲಶಾಲಿಯಾದ ದುರ್ಯೋಧನನು ಸ್ವಲ್ಪವೂ ಹೆದರದೆ ಆ ಗದಾಪ್ರಹಾರವನ್ನು ನಿರರ್ಥಕವನ್ನಾಗಿ ಮಾಡಿದನು. ಆಗ ಅಲ್ಲಿ ಬಹಳ ಆಶ್ಚರ್ಯವು ಉಂಟಾಯಿತು.
ಸಾ ತು ಮೋಘಾ ಗದಾ ರಾಜನ್ ಪತಂತೀ ಭೀಮಚೋದಿತಾ |
ಚಾಲಯಾಮಾಸ ಪೃಥಿವೀಂ ಮಹಾನಿರ್ಘಾತನಿಃಸ್ವನಾ ॥47॥
ರಾಜನೇ! ವ್ಯರ್ಥವಾಗಿ ನೆಲಕ್ಕೆ ಬಿದ್ದ ಭೀಮನ ಗದೆಯು ದೊಡ್ಡ ಗುಡುಗಿನ ಶಬ್ದವನ್ನುಂಟುಮಾಡುತ್ತಾ ಭೂಮಿಯನ್ನು ಅಲುಗಾಡಿಸಿತು.
ಆಸ್ಥಾಯ ಕೈಶಿಕಾನ್ ಮಾರ್ಗಾನ್ ಉತ್ಪಪಾತ ಪುನಃ ಪುನಃ |
ಗದಾನಿಪಾತಂ ವಿಜ್ಞಾಯ ಭೀಮಸೇನಮವಂಚಯತ್ ॥48॥
ಗದೆಯು ಕೆಳಗೆ ಬಿದ್ದಿದ್ದನ್ನು ತಿಳಿದುಕೊಂಡ ದುರ್ಯೋಧನನು ಕೈಶಿಕಮಾರ್ಗದಿಂದ ಪುನಃ ಪುನಃ ಗದೆಯನ್ನು ಪ್ರಯೋಗಿಸುತ್ತಾ ಭೀಮಸೇನನನ್ನು ವಂಚನೆಗೊಳಪಡಿಸಿದನು.
ವಂಚಯಿತ್ವಾ ತತೋ ಭೀಮಂ ಗದಯಾ ಕುರುಸತ್ತಮಃ |
ಅತಾಡಯದಸಂಭ್ರಾಂತೋ ವಕ್ಷೋದೇಶೇ ಮಹಾಬಲಃ ॥49॥
ಕುರುಶ್ರೇಷ್ಠನಾದ ಬಲಶಾಲಿ ದುರ್ಯೋಧನನು ಉದ್ವೇಗಕ್ಕೊಳಗಾಗದೆ ಭೀಮನನ್ನು ಮೋಸಗೊಳಿಸಿ ಗದೆಯಿಂದ ಅವನ ಎದೆಗೆ ಹೊಡೆದನು.
ಗದಯಾಽಭಿಹತೋ ಭೀಮೋ ಮುಹ್ಯಮಾನೋ ಮಹಾರಣೇ |
ನಾಭಿಜಾನಾತಿ ಕರ್ತವ್ಯಂ ಪುತ್ರೇಣಾಭ್ಯಹತಸ್ತವ ॥50॥

ಆ ಮಹಾಯುದ್ಧದಲ್ಲಿ ಗದೆಯಿಂದ ನಿನ್ನ ಮಗ ದುರ್ಯೋಧನನಿಂದ ಚೆನ್ನಾಗಿ ಹೊಡೆತಕ್ಕೊಳಗಾದ ಭೀಮನು ಮೂರ್ಛೆಹೋಗುತ್ತಾ ಏನು ಮಾಡಬೇಕೆಂಬುದನ್ನೇ ತಿಳಿಯದಾದನು.
ತಸ್ಮಿಂಸ್ತಥಾ ಗತೇ ಭೀಮೇ ರಾಜನ್ ಸೋಮಕಪಾಂಡವಾಃ |
ಭೃಶೋಪಹತಸಂಕಲ್ಪಾ ನಾತಿಪ್ರಮನಸೋಽಭವನ್ ॥51॥
ರಾಜನ್! ಭೀಮನು ಈ ಅವಸ್ಥೆಯನ್ನು ಹೊಂದಿದಾಗ ಸೋಮಕರು ಮತ್ತು ಪಾಂಡವರು ತಮ್ಮ ಸಂಕಲ್ಪವು ಭಗ್ನವಾದುದನ್ನು ಕಂಡು ಮನಸ್ಸಿನಲ್ಲಿಯೇ ಬಹಳ ಅಸಮಾಧಾನವನ್ನು ಹೊಂದಿದರು.
ಸ ತು ತೇನ ಪ್ರಹಾರೇಣ ಮಾತಂಗ ಇವ ರೋಷಿತಃ |
ಹಸ್ತೀವ ಹಸ್ತಿಸಂಕಾಶಮಭಿದುದ್ರಾವ ತೇ ಸುತಮ್ ॥52॥
ಭೀಮನಾದರೂ ಆ ಹೊಡೆತದಿಂದ ಆನೆಯು ಕೋಪಗೊಳ್ಳುವಂತೆ ಕೋಪಗೊಂಡು, ಆನೆಯು ಎದುರಾಳಿ ಆನೆಯ ಹತ್ತಿರ ಬರುವಂತೆ ನಿನ್ನ ಮಗನ ವಿರುದ್ಧವಾಗಿ ಓಡಿಬಂದನು.
ತತಃ ಸರಭಸೋ ಭೀಮೋ ಗದಯಾ ತನಯಂ ತವ |
ಅಭಿದುದ್ರಾವ ವೇಗೇನ ಸಿಂಹೋ ವನಗಜಂ ಯಥಾ ॥53॥
ಅನಂತರ ಭೀಮನು ಸಿಂಹವು ಕಾಡಿನ ಆನೆಯನ್ನು ಆಕ್ರಮಿಸುವಂತೆ ವೇಗವುಳ್ಳ ತನ್ನ ಗದೆಯಿಂದ ನಿನ್ನ ಮಗನನ್ನು ರಭಸದಿಂದ ಎದುರಿಸಿದನು.
ಉಪಸೃತ್ಯ ತು ರಾಜಾನಂ ಗದಾಮೋಕ್ಷವಿಶಾರದಃ |
ಆವಿಧ್ಯತ ಗದಾಂ ಘೋರಾಂ ಸಮುದ್ದಿಶ್ಯ ಸುತಂ ತವ ॥54॥
ದುರ್ಯೋಧನನನ್ನು ಸಮೀಪಿಸಿದ ಗದಾಪ್ರಯೋಗದಲ್ಲಿ, ನಿಷ್ಣಾತನಾದ ಭೀಮನು ನಿನ್ನ ಮಗನ ಮೇಲೆ ಘೋರವಾದ ಗದೆಯನ್ನು ಬೀಸಿ ಒಗೆದನು.
ಅತಾಡಯದ್ ಭೀಮಸೇನಃ ಪಾರ್ಶ್ವೇ ದುರ್ಯೋಧನಂ ತದಾ |
ಸ ವಿಹ್ವಲಃ ಪ್ರಹಾರೇಣ ಜಾನುಭ್ಯಾಮವನಿಂ ಗತಃ ॥55॥
ಭೀಮಸೇನನು ದುರ್ಯೋಧನನ ಶರೀರದ ಬದಿಯ ಭಾಗಕ್ಕೆ ಹೊಡೆದನು. ನೋವಿನಿಂದ ದುಃಖಿತನಾದ ದುರ್ಯೋಧನನು ಮಂಡಿಯೂರಿ ನೆಲದ ಮೇಲೆ ಕುಸಿದನು.
ತಸ್ಮಿಂಸ್ತು ಭರತಶ್ರೇಷ್ಠೇ ಜಾನುಭ್ಯಾಮವನೀಂ ಗತೇ |
ಉದತಿಷ್ಠನ್ಮಹಾನಾದಃ ಸೃಂಜಯಾನಾಂ ಜಗತ್ಪತೇ ॥56॥
ಜಗತ್ಪತಿಯೇ! ಭರತೋತ್ತಮನಾದ ದುರ್ಯೋಧನನು ನೆಲಕ್ಕೆ ಬಿದ್ದಾಗ ಸೃಂಜಯರು ದೊಡ್ಡದಾದ ಸಂತೋಷದ ಧ್ವನಿಯನ್ನು ಮಾಡಿದರು.
ತೇಷಾಂ ತು ನಿನದಂ ಶ್ರುತ್ವಾ ಸೃಂಜಯಾನಾಂ ಜನಾಧಿಪಃ |
ಅಮರ್ಷಾದ್ ಭರತಶ್ರೇಷ್ಠಃ ಪುತ್ರಸ್ತೇ ಸಮಕುಪ್ಯತ ॥57॥
ಸೃಂಜಯರ ಧ್ವನಿಯನ್ನು ಕೇಳಿದ ನಿನ್ನ ಮಗ, ಭರತಶ್ರೇಷ್ಠ ದುರ್ಯೋಧನನು ಅಸಹನೆಯಿಂದ ಬಹಳವಾಗಿ ಕೋಪಗೊಂಡನು.
ಉತ್ಥಾಯ ತು ಮಹಾಬಾಹುಃ ಕ್ರುದ್ಧೋ ನಾಗ ಇವ ಶ್ವಸನ್ |
ದಿಧಕ್ಷನ್ನಿವ ನೇತ್ರಾಭ್ಯಾಂ ಭೀಮಸೇನಮವೈಕ್ಷತ ॥58॥
ಎದ್ದು ನಿಂತ ದುರ್ಯೋಧನನು ಕೋಪಗೊಂಡ ಹಾವಿನಂತೆ ಭುಸುಗುಡುತ್ತಾ ಕಣ್ಣುಗಳಿಂದ ಸುಡುತ್ತಿರುವ ಹಾಗೆ ಭೀಮನನ್ನು ದಿಟ್ಟಿಸಿ ನೋಡಿದನು.
ತತಃ ಸ ಭರತಶ್ರೇಷ್ಠೋ ಭೀಮಸೇನಮಭಿದ್ರುವತ್ |
ಪ್ರಮಥಿಷ್ಯನ್ನಿವ ಶಿರೋ ಭೀಮಸೇನಸ್ಯ ಸಂಯುಗೇ ॥59॥
ಅನಂತರ ಭರತಶ್ರೇಷ್ಠನಾದ ದುರ್ಯೋಧನನು ಯುದ್ಧದಲ್ಲಿ ಭೀಮನ ತಲೆಯನ್ನು ಪುಡಿಮಾಡುವ ರೀತಿಯಲ್ಲಿ ಭೀಮನ ಮೇಲೆ ಆಕ್ರಮಣವನ್ನು ಮಾಡಿದನು.
ಸ ಮಹಾತ್ಮಾ ಮಹಾತ್ಮಾನಂ ಭೀಮಸೇನಮರಿಂದಮಮ್ |
ಅತಾಡಯತ್ ಶಂಖದೇಶೇ ಚಚಾಲಾಚಲೋಪಮಃ ॥60॥
ಮಹಾತ್ಮನಾದ ದುರ್ಯೋಧನನು ಮಹಾತ್ಮನಾದ, ಶತ್ರುಸಂಹಾರಕನಾದ ಭೀಮನ ಶಂಖಸದೃಶವಾದ ಕುತ್ತಿಗೆಗೆ ಹೊಡೆದನು. ಯುದ್ಧದಲ್ಲಿ ಪರ್ವತದ ರೀತಿಯಲ್ಲಿ ಸಂಚರಿಸಿದನು.
ಭೂಯಃ ಸ ಶುಶುಭೇ ಪಾರ್ಥಸ್ತಾಡಿತೋ ಗದಯಾ ಭೃಶಮ್ |
ಉದ್ಭಿನ್ನರುಧಿರೋ ರಾಜನ್ ಪ್ರಭಿನ್ನ ಇವ ಕುಂಜರಃ ॥61॥
ರಾಜನ್! ದುರ್ಯೋಧನನ ಗದೆಯಿಂದ ಪೆಟ್ಟು ತಿಂದ ಭೀಮನು ಮೈಯಿಂದ ರಕ್ತವನ್ನು ಹೊರಸೂಸುತ್ತಾ ಪೆಟ್ಟುತಿಂದ ಆನೆಯಂತೆ ಪುನಃ ಶೋಭಿಸಿದನು.
ತತೋ ಗದಾಂ ವೀರಹಣೀಮಯಸ್ಮಯೀಂ
ಪ್ರಗೃಹ್ಯ ವಜ್ರಾಶನಿತುಲ್ಯನಿಃಸ್ವನಾಮ್ |
ಅತಾಡಯಚ್ಛತ್ರುಮಮಿತ್ರಕರ್ಶನೋ
ಬಲೇನ ವಿಕ್ರಮ್ಯ ಧನಂಜಯಾಗ್ರಜಃ ॥62॥
ಅನಂತರ ಅರ್ಜುನನ ಅಣ್ಣನಾದ ಶತ್ರುಸಂಹಾರಕ ಭೀಮನು ವೀರರನ್ನು ಸದೆಬಡಿಯುವ, ವಜ್ರಾಯುಧ ಮತ್ತು ಗುಡುಗಿನಂತೆ

ಶಬ್ದಮಾಡುವ ಲೋಹದ ಗದೆಯನ್ನು ಹಿಡಿದುಕೊಂಡು, ಬಲದಿಂದ ಪರಾಕ್ರಮವನ್ನು ತೋರಿಸುತ್ತಾ ಶತ್ರುವಾದ ದುರ್ಯೋಧನನನ್ನು ಹೊಡೆದನು.

ಸ ಭೀಮಸೇನಾಭಿಹತಸ್ತವಾತ್ಮಜಃ
ಪಪಾತ ಸಂಕಂಪಿತದೇಹಬಂಧನಃ |
ಸುಪುಷ್ಪಿತೋ ಮಾರುತವೇಗತಾಡಿತೋ
ವನೇ ಮಹಾಸಾಲ ಇವಾವಘೂರ್ಣಿತಃ ||63||

ಆಗ ಕಾಡಿನಲ್ಲಿ ಗಾಳಿಯ ವೇಗಕ್ಕೆ ಸಿಲುಕಿದ ಹೂಬಿಟ್ಟ ಮಹಾಸಾಲವೃಕ್ಷವು ಕೆಳಗೆ ಬೀಳುವಂತೆ ಭೀಮನಿಂದ ಪೆಟ್ಟುತಿಂದ ನಿನ್ನ ಮಗನು ಶರೀರದ ಸಂಧಿಗಳಲ್ಲಿ ನಡುಕವುಳ್ಳವನಾಗಿ ಕೆಳಗೆ ಬಿದ್ದನು.

ತತಃ ಪ್ರಣೇದುರ್ಜಹೃಷುಶ್ಚ ಪಾಂಡವಾಃ
ಸಮೀಕ್ಷ್ಯ ಪುತ್ರಂ ಪತಿತಂ ಕ್ಷಿತೌ ತವ |
ತತಃ ಸುತಸ್ತೇ ಪ್ರತಿಲಭ್ಯ ಚೇತನಾಂ
ಸಮುತ್ಪಪಾತ ದ್ವಿರದೋ ಹ್ರದಾವಿವ ||64||

ನಿನ್ನ ಮಗನು ನೆಲದಲ್ಲಿ ಬಿದ್ದಿದ್ದನ್ನು ನೋಡಿದ ಪಾಂಡವರು ಜೋರಾಗಿ ಕೇಕೆ ಹಾಕಿದರು ಮತ್ತು ಸಂತೋಷಪಟ್ಟರು. ಅನಂತರ ನಿನ್ನ ಮಗನು ಎಚ್ಚರಗೊಂಡು ಆನೆಯು ಸರೋವರದಿಂದ ಎದ್ದು ಬರುವಂತೆ ಮೇಲಕ್ಕೆ ನೆಗೆದನು.

ಸ ಪಾರ್ಥಿವೋ ನಿತ್ಯಮಮರ್ಷಿತಸ್ತದಾ
ಮಹಾರಥಃ ಶಿಕ್ಷಿತವತ್ ಪರಿಭ್ರಮನ್ |
ಅತಾಡಯತ್ ಪಾಂಡವಮಗ್ರತಃ ಸ್ಥಿತಂ
ಸ ವಿಹ್ವಲಾಂಗೋ ಜಗತೀಮುಪಾಸ್ಪೃಶತ್ ||65||

ಮಹಾರಥನಾದ ದುರ್ಯೋಧನನು ಸದಾ ಅಸಹನೆಯುಳ್ಳವನಾಗಿ, ಚೆನ್ನಾಗಿ ಅಭ್ಯಾಸಮಾಡಿದವರಂತೆ ಯುದ್ಧದಲ್ಲಿ ಸುತ್ತುತ್ತ ಎದುರಿಗೆ ನಿಂತಿದ್ದ ಭೀಮನಿಗೆ ಹೊಡೆದನು. ಭೀಮನು ಅಂಗಗಳಲ್ಲಿ ನೋವನ್ನು ಅನುಭವಿಸುತ್ತಾ ಭೂಮಿಗೆ ಬಿದ್ದನು.

ಸ ಸಿಂಹನಾದಾನ್ ವಿನನಾದ ಪಾರ್ಥಿವೋ
ನಿಪಾತ್ಯ ಭೂಮೌ ಯುಧಿ ಭೀಮಮೋಜಸಾ |
ಬಿಭೇದ ಚೇಂದ್ರಾಶನಿತುಲ್ಯತೇಜಸಾ
ಗದಾನಿಪಾತೇನ ಶರೀರರಕ್ಷಣಮ್ ||66||

ರಾಜ ದುರ್ಯೋಧನನು ಯುದ್ಧದಲ್ಲಿ ಭೀಮನನ್ನು ನೆಲಕ್ಕೆ ಬೀಳಿಸಿ, ಸಿಂಹನಾದವನ್ನು ಮಾಡಿದನು ಮತ್ತು ಇಂದ್ರನ ವಜ್ರಾಯುಧಸದೃಶತೇಜಸ್ಸುಳ್ಳ ಗದೆಯಿಂದ ಹೊಡೆದು ಭೀಮನ ಶರೀರದ ರಕ್ಷಾಕವಚವನ್ನು ಪುಡಿ ಮಾಡಿದನು.

ತತೋಽಂತರಿಕ್ಷೇ ನಿನದೋ ಮಹಾನಭೂದ್
ದಿವೌಕಸಾಮಪ್ಸರಸಾಂ ನಿಷೇದುಷಾಮ್ |
ಪಪಾತ ಚೋಚ್ಚೈರಮರಪ್ರಚೋದಿತಂ
ವಿಚಿತ್ರಪುಷ್ಪೋತ್ಕರವರ್ಷಮುತ್ತಮಮ್ ||67||

ಆಗ ಆಕಾಶದಲ್ಲಿ ನೋಡುತ್ತಿದ್ದ ದೇವತೆಗಳು, ಅಪ್ಸರಸ್ತ್ರೀಯರು ಜೋರಾಗಿ ಶಬ್ದವನ್ನು ಮಾಡಿದರು. ದೇವತೆಗಳು ವಿಚಿತ್ರವಾದ ಹೂವಿನ ಮಳೆಯನ್ನು ಮೇಲಿಂದ ಸುರಿಸಿದರು.

ತತಃ ಪರಾನಾವಿಶದುತ್ತಮಂ ಭಯಂ
ಸಮೀಕ್ಷ್ಯ ಭೀಮಂ ಪತಿತಂ ನರರ್ಷಭಮ್ |
ಅಹೀಯಮಾನಂ ಚ ಬಲೇನ ಕೌರವಂ
ನಿಶಾಮ್ಯ ಭೇದಂ ಚ ದೃಢಸ್ಯ ವರ್ಮಣಃ ||68||

ಸ್ವಲ್ಪವೂ ಶಕ್ತಿಯನ್ನು ಕಳೆದುಕೊಳ್ಳದ ಕೌರವನನ್ನು ಮತ್ತು ಭೀಮನ ದೃಢವಾದ ಕವಚವು ತುಂಡಾಗಿದ್ದನ್ನು ಮನುಷ್ಯೋತ್ತಮನಾದ ಭೀಮನು ಭೂಮಿಗೆ ಬಿದ್ದದ್ದನ್ನು ಗಮನಿಸಿ ಬಹಳವಾಗಿ ಭಯವನ್ನು ಹೊಂದಿದರು.

ತತೋ ಮುಹೂರ್ತಾತ್ ಪ್ರತಿಲಭ್ಯ ಚೇತನಾಂ
ಪ್ರಮೃಜ್ಯ ವಕ್ತ್ರಂ ರುಧಿರಾರ್ದ್ರಮಾತ್ಮನಃ |
ಧೃತಿಂ ಸಮಾಲಂಬ್ಯ ವಿವೃತ್ತಲೋಚನೋ
ಬಲೇನ ಸಂಸ್ತಭ್ಯ ವೃಕೋದರಃ ಸ್ಥಿತಃ ||69||

ಅನಂತರ ಕ್ಷಣಮಾತ್ರದಲ್ಲಿ ಎಚ್ಚರಗೊಂಡ ಭೀಮನು ರಕ್ತಸಿಕ್ತವಾದ ತನ್ನ ಮುಖವನ್ನು ಒರೆಸಿಕೊಂಡು, ಧೈರ್ಯವನ್ನು ಹೊಂದಿ, ಕಣ್ಣುಗಳನ್ನು ತಿರುಗಿಸುತ್ತಾ ಬಲದಿಂದ ದೃಢವಾಗಿ ನಿಂತನು.

|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಭೀಮಸೇನನಿಪಾತೋ ನಾಮ ಸಪ್ತವಿಂಶೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.

* * * * *

ಇಪ್ಪತ್ತೆಂಟನೆಯ ಅಧ್ಯಾಯ

ಭೀಮಸೇನನು ದುರ್ಯೋಧನನ ತೊಡೆಯನ್ನು ಮುರಿದನು.

ಸಂಜಯಃ
ಸಮುದೀರ್ಣಂ ತತೋ ದೃಷ್ಟ್ವಾ ಸಂಗ್ರಾಮಂ ಕುರುಮುಖ್ಯಯೋಃ |
ಅಬ್ರವೀದರ್ಜುನಸ್ತತ್ರ ವಾಸುದೇವಂ ಯಶಸ್ವಿನಮ್ ||1||
ಸಂಜಯ ಕುರುವಂಶದ ಮುಖ್ಯಸ್ಥರಾದ ಭೀಮ ಮತ್ತು ದುರ್ಯೋಧನರ ನಡುವೆ ಕಾದಾಟವು ಹೆಚ್ಚಾದುದನ್ನು ನೋಡಿ ಅರ್ಜುನನು ಕೀರ್ತಿವಂತನಾದ ಶ್ರೀಕೃಷ್ಣನಿಗೆ ಹೇಳಿದನು.
ಅನಯೋರ್ವೀರಯೋರ್ಯುದ್ಧೇ ಕೋ ಜ್ಯಾಯಾನ್ ಭವತೋ ಮತಃ |
ಕಸ್ಯ ಕೋ ವಾ ಗುಣೋ ಜ್ಯಾಯಾನ್ ಏತದ್ ವದ ಜನಾರ್ದನ ||2||
`ಇವರಿಬ್ಬರ ಯುದ್ಧದಲ್ಲಿ ಯಾರನ್ನು ಶ್ರೇಷ್ಠರು ಎಂಬುದಾಗಿ ನೀನು ಅಭಿಪ್ರಾಯಪಡುತ್ತಿ? ಯಾರ ಯಾವ ಗುಣವು ಉತ್ಕೃಷ್ಟವಾಗಿದೆ? ಜನಾರ್ದನನೇ! ಇದನ್ನು ಹೇಳು'.
ವಾಸುದೇವಃ
ಉಪದೇಶೋಽನಯೋಸ್ತುಲ್ಯೋ ಭೀಮಸ್ತು ಬಲವಾಂಸ್ತತಃ |
ಕೃತೀ ಯತ್ನಪರಸ್ತ್ವೇಷ ಧಾರ್ತರಾಷ್ಟ್ರೋ ವೃಕೋದರಾತ್ ||3||
ವಾಸುದೇವ ವಿದ್ಯೆಯ ಪಾಠದ ಉಪದೇಶವು ಇಬ್ಬರಿಗೂ ಸಮಾನವಾಗಿಯೆ ಆಗಿದೆ. ಭೀಮನಾದರೂ ಬಲದಲ್ಲಿ ಶ್ರೇಷ್ಠನಾಗಿದ್ದಾನೆ. ಆದರೆ ಈ ಅಭ್ಯಾಸನಿರತನಾದ ದುರ್ಯೋಧನನು ಪ್ರಯತ್ನ ವಿಷಯದಲ್ಲಿ ಭೀಮನಿಗಿಂತ ಜ್ಯೇಷ್ಠನಾಗಿದ್ದಾನೆ.
ಭೀಮಸೇನಸ್ತು ಧರ್ಮೇಣ ಯುಧ್ಯಮಾನೋ ನ ಜೇಷ್ಯತಿ |
ಅನ್ಯಾಯೇನ ತು ಯುಧ್ಯನ್ ವೈ ಹನ್ಯಾದೇಷ ಸುಯೋಧನಮ್ ||4||
ಭೀಮಸೇನನಾದರೂ ಧರ್ಮಕ್ಕೆ ಅನುಸಾರವಾಗಿ ಯುದ್ಧಮಾಡಿದರೆ ಯುದ್ಧದಲ್ಲಿ ಗೆಲ್ಲುವುದಿಲ್ಲ. ಅನ್ಯಾಯದಿಂದ ಯುದ್ಧ ಮಾಡಿದರೆ ದುರ್ಯೋಧನನನ್ನು ಈ ಭೀಮನು ಕೊಲ್ಲುವನು.
ಮಾಯಯಾ ವಿಜಿತಾ ದೇವೈರಸುರಾ ಇತಿ ನಃ ಶ್ರುತಮ್ |
ವೈರೋಚನಿಸ್ತು ಶಕ್ರೇಣ ಮಾಯಯಾ ವಿಜಿತಸ್ತು ವೈ ||5||
ಮಾಯೆಯಿಂದಲೇ ದೇವತೆಗಳು ಅಸುರರನ್ನು ಗೆದ್ದರು ಎಂಬುದಾಗಿ ಪುರಾಣಗಳಲ್ಲಿ ಹೇಳಿದ್ದನ್ನು ನಾವು ಕೇಳಿದ್ದೇವೆ. ಇಂದ್ರನು ಬಲಿಯನ್ನು ಗೆದ್ದಿದ್ದು ಮಾಯೆಯಿಂದಲೇ.
ಮಾಯಯಾ ಚಾಕ್ಷಿಪತ್ ತೇಜೋ ವೃತ್ರಸ್ಯ ಬಲಸೂದನಃ |
ತಸ್ಮಾನ್ಮಾಯಾಮಯಂ ವೀರ ಆತಿಷ್ಠತು ವೃಕೋದರಃ ||6||
ಬಲಸಂಹಾರಕನಾದ ಇಂದ್ರನು ವೃತ್ರಾಸುರನ ಸಾಮರ್ಥ್ಯವನ್ನು ನಾಶಮಾಡಿದ್ದು ಮಾಯೆಯಿಂದಲೇ. ಆದ್ದರಿಂದ ವೀರನಾದ ವೃಕೋದರನು ಮಾಯಾಯುಕ್ತವಾದ ಯುದ್ಧದಲ್ಲಿ ತೊಡಗಲಿ.
ಪ್ರತಿಜ್ಞಾತಂ ಹಿ ಭೀಮೇನ ದ್ಯೂತಕಾಲೇ ಧನಂಜಯ |
ಊರೂ ಭೇತ್ಸ್ಯಾಮಿ ತೇ ಯುದ್ಧೇ ಗದಯೇತಿ ಸುಯೋಧನಮ್ ||7||
ಅರ್ಜುನನೇ! ದ್ಯೂತಸಮಯದಲ್ಲಿ ಭೀಮನು ಸುಯೋಧನನನ್ನು ಕುರಿತು ಹೀಗೆ ಪ್ರತಿಜ್ಞೆ ಮಾಡಿದ್ದನು - `ಯುದ್ಧದಲ್ಲಿ ಗದೆಯಿಂದ ನಿನ್ನ ತೊಡೆಯನ್ನು ಮುರಿಯುವೆನು'. ಎಂದು.
ಸೋಽಯಂ ಪ್ರತಿಜ್ಞಾಂ ತಾಂ ಚಾಪಿ ಪಾರಯಿತ್ವಾಽರಿಕರ್ಶನಃ |
ಮಾಯಾವಿನಂ ಚ ರಾಜಾನಂ ಮಾಯಯೈವ ನಿಕೃಂತತು ||8||
ಶತ್ರುಸಂಹಾರಕನಾದ ಭೀಮನು ತನ್ನ ಪ್ರತಿಜ್ಞೆಯನ್ನು ತೀರಿಸಿಕೊಳ್ಳಲಿ. ಮೋಸಗಾರನಾದ ದುರ್ಯೋಧನನನ್ನು ಮೋಸದಿಂದಲೇ ಕೊಲ್ಲಲಿ.
ಯದ್ಯೇಷ ಬಲಮಾಸ್ಥಾಯ ನ್ಯಾಯೇನ ಪ್ರಹರಿಷ್ಯತಿ |
ವಿಷಮಸ್ಥಸ್ತತೋ ರಾಜಾ ಭವಿಷ್ಯತಿ ಯುಧಿಷ್ಠಿರಃ ||9||
ಒಂದು ವೇಳೆ ಭೀಮನು ಬಲವನ್ನೇ ನಂಬಿ, ನ್ಯಾಯಮಾರ್ಗದಲ್ಲಿಯೇ ಯುದ್ಧಮಾಡಿದರೆ ರಾಜ ಯುಧಿಷ್ಠಿರನು ದುಃಖಿತನಾಗುವನು.
ಪುನರುಕ್ತಂ ಚ ವಕ್ಷ್ಯಾಮಿ ಪಾಂಡವೈತನ್ನಿಬೋಧ ಮೇ |
ಧರ್ಮರಾಜಾಪರಾಧೇನ ಭಯಂ ನಃ ಸಮುಪಸ್ಥಿತಮ್ ||10||
ಅರ್ಜುನನೇ! ನಾನು ಮತ್ತೆ ಹೇಳುತ್ತೇನೆ! ಅದನ್ನು ತಿಳಿದುಕೊಳ್ಳು. ಹಿಂದೆ ಧರ್ಮರಾಜನ ತಪ್ಪಿನಿಂದ ನಮಗೆಲ್ಲ ಭಯವು ಉಂಟಾಯಿತು.
ಕೃತ್ವಾ ಹಿ ಸುಮಹತ್ ಕರ್ಮ ಹತ್ವಾ ಭೀಷ್ಮಮುಖಾನ್ ರಿಪೂನ್ |
ಜಯಃ ಪ್ರಾಪ್ತೋ ಯಶಶ್ಚಾಗ್ರ್ಯಂ ವೈರಂ ಚ ಪ್ರತಿಯಾತಿತಮ್ ||11||
ಇಲ್ಲಿಯ ತನಕ ಅನೇಕ ದೊಡ್ಡದಾದ ಕೆಲಸಗಳನ್ನು ಮಾಡಿ, ಭೀಷ್ಮಮೊದಲಾದ ಶತ್ರುಪಕ್ಷೀಯರನ್ನು ಸಾಯಿಸಿ ಉತ್ತಮವಾದ ಜಯ ಮತ್ತು ಕೀರ್ತಿಯು ನಮಗೆ ಪ್ರಾಪ್ತವಾಯಿತು. ದ್ವೇಷವೂ ಕೂಡ ನಾಶಮಾಡಲ್ಪಟ್ಟಿದೆ.
ತದೇವಂ ವಿಜಯಃ ಪ್ರಾಪ್ತಃ ಪುನಃಸಂಶಯಿತಃ ಕೃತಃ ||12||
ಈ ರೀತಿಯಲ್ಲಿ ಪಡೆದ ಜಯವು ಈಗ ಮತ್ತೆ ಸಂಶಯಕ್ಕೆ ಎಡೆಮಾಡುತ್ತಿದೆ.
ಅಬುದ್ಧಿರೇಷಾ ಮಹತೀ ಧರ್ಮರಾಜಸ್ಯ ಪಾಂಡವ |
ಯದೇಕವಿಜಯೇ ವೀರ ಪಣಿತಂ ಕೃತಮೀದೃಶಮ್ ||13||
ಅರ್ಜುನನೇ! `ಒಬ್ಬನನ್ನು ಗೆದ್ದರೂ ದುರ್ಯೋಧನನು ವೀರ' ಎಂಬುದಾಗಿ ಇಂತಹ ಪಣವನ್ನು ಇಟ್ಟಿದ್ದು ಧರ್ಮರಾಜನ

ಅಲ್ಪಬುದ್ಧಿಯನ್ನು ತೋರಿಸುತ್ತದೆ.
ಸುಯೋಧನಃ ಕೃತೀ ವೀರ ಏಕಾಯನಗತಸ್ತಥಾ |
ಅಪಿ ಚೋಶನಸಾ ಗೀತಃ ಶ್ರೂಯತೇ ಯಃ ಪುರಾತನಃ ॥14॥
ಶ್ಲೋಕಸ್ತತತ್ತ್ವಾರ್ಥಸಹಿತಃ ತನ್ಮೇ ನಿಗದತಃ ಶೃಣು ॥15॥
ಸುಯೋಧನನು ಪ್ರಯತ್ನಶೀಲನಾದ ವೀರ. ಒಂದು ನಿಶ್ಚಯಕ್ಕೆ ಸದಾ ದೃಢವಾಗಿ ಬದ್ಧನಾಗಿರುತ್ತಾನೆ. ಶುಕ್ರಾಚಾರ್ಯನು ಹಿಂದೆ ಹೇಳಿದ್ದು ಪುರಾಣಗಳಲ್ಲಿ ಶ್ರುತವಾಗಿದೆ. ಆ ನೀತಿತತ್ತ್ವವನ್ನು ಹೇಳುವ ಶ್ಲೋಕವನ್ನು ನಾನು ನಿನಗೆ ಹೇಳುತ್ತೇನೆ, ಕೇಳು.
ಪುನರಾವರ್ತಮಾನಾನಾಂ ಭಗ್ನಾನಾಂ ವಿಜಯೈಷಿಣಾಮ್ |
ಭೇತವ್ಯಮರಿಶೇಷಾಣಾಮೇಕಾಯನಗತಾ ಹಿ ತೇ ॥16॥
`ಅಳಿದುಳಿದ ಶತ್ರುಪಕ್ಷೀಯರು ಬದುಕುವ ಆಸೆಯನ್ನಿಟ್ಟುಕೊಂಡು ರಣರಂಗದಿಂದ ಓಡಿ ಹೋದವರು ಮತ್ತೆ ಯುದ್ಧಕ್ಕೆ ಬಂದರೆ ಅವರ ಬಗ್ಗೆ ತುಂಬಾ ಹೆದರಬೇಕು. ಏಕೆಂದರೆ ಅವರು ಗೆಲ್ಲುವ ದೃಢನಿಶ್ಚಯವನ್ನು ಮಾಡಿಯೇ ಬಂದಿರುತ್ತಾರೆ'.
ಸುಯೋಧನಮಿಮಂ ಭಗ್ನಂ ಹತಸೈನ್ಯಂ ಹ್ರದಂ ಗತಮ್ |
ಪರಾಜಿತಂ ವನಪ್ರೇಪ್ಸುಂ ನಿರಾಶಂ ರಾಜ್ಯಧಾರಣೇ ॥17॥
ಕೋಽನ್ವಿಷ್ಯ ಸಂಯುಗೇ ಪ್ರಾಜ್ಞಃ ಪುನರ್ದ್ವಂದ್ವೇ ಸಮಾಹ್ವಯೇತ್ ॥18॥
ಯುದ್ಧದಲ್ಲಿ ಪೆಟ್ಟುತಿಂದ ಈ ದುರ್ಯೋಧನನು ತನ್ನ ಸೈನ್ಯವನ್ನೆಲ್ಲ ಕಳೆದುಕೊಂಡು ಪರಾಜಿತನಾಗಿ ರಾಜ್ಯಪ್ರಾಪ್ತಿಯ ವಿಷಯದಲ್ಲಿ ನಿರಾಶೆಯನ್ನು ಹೊಂದಿ, ಕಾಡಿಗೆ ಹೋಗುವವನಾಗಿ ವಿಶ್ರಾಂತಿಗಾಗಿ ಸರೋವರವನ್ನು ಪ್ರವೇಶಿಸಿದ್ದ. ಅಂತಹ ದುರ್ಯೋಧನನನ್ನು ಯಾವ ಪ್ರಾಜ್ಞನು ತಾನೇ ಹುಡುಕಿ ದ್ವಂದ್ವಯುದ್ಧಕ್ಕೆ ಆಹ್ವಾನಿಸುತ್ತಾನೆ? (ಯುಧಿಷ್ಠಿರನು ಆಹ್ವಾನಿಸುವ ಮೂಲಕ ತಾನು ಮೂರ್ಖನಂತೆ ತೋರಿಸಿಕೊಂಡಿದ್ದಾನೆ ಎಂದು ಶ್ರೀಕೃಷ್ಣನ ಮಾತಿನ ಮೇಲ್ನೋಟದ ಅರ್ಥ.)
ಅಪಿ ವೋ ನಿರ್ಜಿತಂ ರಾಜ್ಯಂ ನ ಹರೇತ ಸುಯೋಧನಃ ॥19॥
ನಮ್ಮನ್ನು ಸೋಲಿಸಿ ದುರ್ಯೋಧನನು ರಾಜ್ಯವನ್ನು ಮತ್ತೆ ಅಪಹರಿಸುವುದಿಲ್ಲವೇನು?
ಯಸ್ತ್ರಯೋದಶವರ್ಷಾಣಿ ಗದಯಾ ಕೃತನಿಶ್ರಮಃ |
ಚರತ್ಯೂರ್ಧ್ವಂ ಚ ತಿರ್ಯಕ್ ಚ ಭೀಮಸೇನಜಿಘಾಂಸಯಾ ॥20॥
ಯಾವನು ಹದಿಮೂರುವರ್ಷಗಳ ಕಾಲ ಗದಾಯುದ್ಧದಲ್ಲಿ ಪರಿಶ್ರಮವನ್ನು ಪಟ್ಟಿದ್ದನೋ ಅಂತಹ ದುರ್ಯೋಧನನು ಭೀಮಸೇನನನ್ನು ಕೊಲ್ಲುವುದಕ್ಕಾಗಿ ಮೇಲ್ಮುಖವಾಗಿಯೂ, ಅಡ್ಡವಾಗಿಯೂ ಸಂಚರಿಸುತ್ತಿದ್ದಾನೆ.
ಏನಂ ಚೇನ್ನ ಮಹಾಬಾಹುರನ್ಯಾಯೇನ ಹನಿಷ್ಯತಿ |
ಏಷ ವಃ ಕೌರವೋ ರಾಜಾ ಧಾರ್ತರಾಷ್ಟ್ರೋ ಭವಿಷ್ಯತಿ ॥21॥
ಮಹಾಬಾಹುವಾದ ಭೀಮನು ಇವನನ್ನು ಅನ್ಯಾಯಮಾರ್ಗದಿಂದ ಕೊಲ್ಲದಿದ್ದರೆ ಧೃತರಾಷ್ಟ್ರಪುತ್ರನಾದ ಈ ದುರ್ಯೋಧನನೇ ನಮಗೆ ರಾಜನಾಗುವನು.
ಸಂಜಯಃ
ಧನಂಜಯಸ್ತು ಶ್ರುತ್ವೈವಂ ಕೇಶವಸ್ಯ ಮಹಾತ್ಮನಃ |
ಪ್ರೇಕ್ಷತೋ ಭೀಮಸೇನಸ್ಯ ಹಸ್ತೇನೋರುಮತಾಡಯತ್ ॥22॥
ಸಂಜಯ ಮಹಾತ್ಮನಾದ ಶ್ರೀಕೃಷ್ಣನ ಮಾತುಗಳನ್ನು ಕೇಳಿ ಅರ್ಜುನನು ಭೀಮಸೇನನು ನೋಡುತ್ತಿದ್ದ ಸಂದರ್ಭದಲ್ಲಿ ತನ್ನ ಕೈಯಿಂದ ತೊಡೆಯನ್ನು ತಟ್ಟಿದನು.
ಗೃಹ್ಯ ಸಂಜ್ಞಾಂ ತತೋ ಭೀಮೋ ಗದಯಾ ವ್ಯಚರದ್ ರಣೇ |
ಮಂಡಲಾನಿ ವಿಚಿತ್ರಾಣಿ ಯಮಕಾನೀತರಾಣಿ ಚ ॥23॥
ಅನಂತರ ಭೀಮನು ಅರ್ಜುನನು ಮಾಡಿದ ಸಂಜ್ಞೆಯನ್ನು ತಿಳಿದುಕೊಂಡು ಯುದ್ಧದಲ್ಲಿ ಗದೆಯಿಂದ ದ್ವಂದ್ವಕ್ರಮದ ಮತ್ತು ಪ್ರತ್ಯೇಕ ಕ್ರಮದ ವಿಚಿತ್ರವಾದ ಮಂಡಲಾಕಾರ ಪ್ರಯೋಗಗಳನ್ನು ಪ್ರಯೋಗಿಸಿದನು.
ದಕ್ಷಿಣಂ ಮಂಡಲಂ ಸವ್ಯಂ ಗೋಮೂತ್ರಿಕಮಥಾಪಿ ಚ |
ವ್ಯಚರತ್ ಪಾಂಡವೋ ರಾಜನ್ನರಿಂ ಸಮ್ಮೋಹಯನ್ನಿವ ॥24॥
ರಾಜನೇ! ಮಂಡಲಾಕಾರದ ಬಲಭಾಗದಲ್ಲಿ, ಮಂಡಲಾಕಾರದ ಎಡಭಾಗದಲ್ಲಿ, ಗೋಮೂತ್ರಿಕಾಕ್ರಮದಲ್ಲಿ ಸಂಚರಿಸುತ್ತಾ ಭೀಮನು ಶತ್ರುವನ್ನು ತಬ್ಬಿಬ್ಬುಗೊಳಿಸಿದನು.
ತಥೈವ ತವ ಪುತ್ರೋಽಪಿ ಗದಾಮಾರ್ಗವಿಶಾರದಃ |
ವ್ಯಚರಲ್ಲಘು ಚಿತ್ರಂ ಚ ಭೀಮಸೇನಜಿಘಾಂಸಯಾ ॥25॥
ಗದಾಪ್ರಯೋಗದಲ್ಲಿ ನಿಷ್ಣಾತನಾದ ನಿನ್ನ ಮಗನೂ ಕೂಡ ಭೀಮಸೇನನನ್ನು ಕೊಲ್ಲುವುದಕ್ಕಾಗಿ ಮಂದವಾಗಿ ಹಾಗೂ ವಿಚಿತ್ರವಾಗಿ ಸಂಚರಿಸಿದನು.
ಆಧುನ್ವಂತೌ ಗದೇ ಘೋರೇ ಚಂದನಾಗರುರೂಷಿತೇ |
ವೈರಸ್ಯಾಂತಂ ಪರೀಪ್ಸಂತೌ ರಣೇ ಕ್ರುದ್ಧಾವಿವಾಂತಕೌ ॥26॥
ಇಬ್ಬರೂ ಚಂದನ ಮತ್ತು ಅಗರುಗಳಿಂದ ಲೇಪಿತವಾದ ಭಯಂಕರವಾದ ಗದೆಗಳನ್ನು ಬೀಸುತ್ತಿದ್ದರು. ರಣರಂಗದಲ್ಲಿ ಹಗೆಯನ್ನು ಕೊನೆಗೊಳಿಸುವುದಕ್ಕಾಗಿ ಕೋಪಗೊಂಡ ಯಮರ ಹಾಗೆ ಯುದ್ಧ ಮಾಡಿದರು.
ಅನ್ಯೋನ್ಯಂ ತೌ ಜಿಘಾಂಸಂತೌ ಪ್ರವೀರೌ ಪುರುಷರ್ಷಭೌ |
ಯುಯುಧಾತೇ ಗರುತ್ಮಂತೌ ಯಥಾ ನಾಗಾಮಿಷೈಷಿಣೌ ॥27॥

ಮಹಾವೀರರಾದ ಪುರುಷಶ್ರೇಷ್ಠ ಭೀಮ ಮತ್ತು ದುರ್ಯೋಧನರು ಪರಸ್ಪರವಾಗಿ ಕೊಲ್ಲುವ ಇಚ್ಛೆಯಿಂದ ಹಾವಿನಮಾಂಸದ ಆಸೆಯಿಂದ ಹೋರಾಡುವ ಹದ್ದುಗಳಂತೆ ಹೋರಾಡಿದರು.
ಮಂಡಲಾನಿ ವಿಚಿತ್ರಾಣಿ ಚರತೋರ್ನೃಪಭೀಮಯೋಃ |
ಗದಾಸಂಪಾತಜಾಸ್ತತ್ರ ಜಜ್ಞಿರೇ ಪಾವಕಾರ್ಚಿಷಃ ॥28॥
ಚಿತ್ರಮಂಡಲಗಳಲ್ಲಿ ಸಂಚರಿಸುತ್ತಿದ್ದ ಭೀಮ ಮತ್ತು ದುರ್ಯೋಧನರ ಗದೆಗಳ ಹೊಡೆತದಿಂದ ಬೆಂಕಿಯ ಜ್ವಾಲೆಗಳು ಉದ್ಭವಿಸಿದವು.
ಸಮಂ ಪ್ರಹರತೋಸ್ತತ್ರ ಶೂರಯೋರ್ಬಲಿನೋರ್ಮೃಧೇ |
ಕ್ಷುಬ್ಧಯೋರ್ವಾಯುನಾ ರಾಜನ್ ದ್ವಯೋರಿವ ಸಮುದ್ರಯೋಃ ॥29॥
ರಾಜನೇ! ಯುದ್ಧದಲ್ಲಿ ಬಲಶಾಲಿಗಳಾದ ಹಾಗೂ ಶೂರರಾದ ಭೀಮ- ದುರ್ಯೋಧನರು ಸಮವಾಗಿ ಹೊಡೆದುಕೊಳ್ಳುತ್ತಿದ್ದರು. ಗಾಳಿಯಿಂದ ಕ್ಷೋಭೆಗೊಳಗಾದ ಎರಡು ಸಮುದ್ರಗಳಂತೆ ಮೇಲೇರಿ ಬರುತ್ತಿದ್ದರು.
ತಯೋಃ ಪ್ರಹರತೋಸ್ತುಲ್ಯಂ ಮತ್ತಕುಂಜರಯೋರಿವ |
ಮಹಾನಿರ್ಘಾತಸಂಹ್ರಾದಃ ಪ್ರಹಾರಾಣಾಮಜಾಯತ ॥30॥
ಮದವೇರಿದ ಆನೆಗಳಂತೆ ಸಮಾನವಾಗಿ ಅವರಿಬ್ಬರೂ ಹೋರಾಡುತ್ತಿದ್ದಾಗ ಗದಾಪ್ರಹಾರಗಳಿಂದಾಗಿ ದೊಡ್ಡದಾದ ಗುಡುಗಿನ ಶಬ್ದವು ಉಂಟಾಗುತ್ತಿತ್ತು.
ತಸ್ಮಿಂಸ್ತಥಾ ವರ್ತಮಾನೇ ದಾರುಣೇ ಸಂಕುಲೇ ಭೃಶಮ್ |
ಉಭಾವಪಿ ಪರಿಶ್ರಾಂತೌ ಯುಧ್ಯಮಾನಾವರಿಂದಮೌ ॥31॥
ಹೀಗೆ ದುಃಖದಾಯಕವಾದ ದ್ವಂದ್ವಯುದ್ಧವು ಚೆನ್ನಾಗಿ ನಡೆಯುತ್ತಿದ್ದಾಗ, ಶತ್ರುಸಂಹಾರಕರಾದ ಅವರಿಬ್ಬರೂ ಯುದ್ಧಮಾಡುತ್ತಾ ಆಯಾಸಗೊಂಡರು.
ತೌ ಮುಹೂರ್ತಂ ಸಮಾಶ್ವಸ್ಯ ಪುನರೇವ ಪರಂತಪೌ |
ಅಭ್ಯಹಾರಯತಾಂ ಕ್ರುದ್ಧೌ ಪ್ರಗೃಹ್ಯ ಮಹತೀಂ ಗದಾಮ್ ॥32॥
ಶತ್ರುತಾಪಕರಾದ ಅವರಿಬ್ಬರೂ ಮುಹೂರ್ತಕಾಲ ಸುಧಾರಿಸಿಕೊಂಡು, ಪುನಃ ದೊಡ್ಡದಾದ ಗದೆಯನ್ನು ಹಿಡಿದುಕೊಂಡು ಕೋಪದಿಂದ ಹೊಡೆಯಲಾರಂಭಿಸಿದರು.
ತಯೋಃ ಸಮಭವದ್ ಯುದ್ಧಂ ಘೋರರೂಪಮಸಂವೃತಮ್ |
ಗದಾನಿಪಾತೈ ರಾಜೇಂದ್ರ ತಕ್ಷತೋರ್ವೈ ಪರಸ್ಪರಮ್ ॥33॥
ರಾಜೇಂದ್ರನೇ! ಪರಸ್ಪರವಾಗಿ ಗದೆಯ ಪೆಟ್ಟುಗಳಿಂದ ಘಾಸಿಗೊಳಿಸುತ್ತಿದ್ದ ಅವರಿಬ್ಬರ ಯುದ್ಧವು ಘೋರರೂಪವನ್ನು ತಾಳಿತ್ತು ಮತ್ತು ಹಾಗೆಯೇ ಮುಂದುವರಿದಿತ್ತು.
ವ್ಯಾಯಾಮಪ್ರದ್ರುತೌ ತೌ ತು ವೃಷಭಾಕ್ಷೌ ತರಸ್ವಿನೌ |
ಅನ್ಯೋನ್ಯಂ ಜಘ್ನತುರ್ವೀರೌ ಪಂಕಸ್ಥೌ ಮಹಿಷಾವಿವ ॥34॥
ಶಿಷ್ಟವಾದ ವ್ಯಾಯಾಮಗಳಿಂದ ಓಡುತ್ತಾ ವೃಷಭದ ಕಣ್ಣುಗಳುಳ್ಳ ಹಾಗೂ ಬಹಳ ವೇಗವುಳ್ಳ ಆ ವೀರರಿಬ್ಬರೂ ಕೆಸರಲ್ಲಿ ಕಾದಾಡುವ ಎರಡು ಕೋಣಗಂತೆ ಪರಸ್ಪರವಾಗಿ ಹೊಡೆದುಕೊಂಡರು.
ಜರ್ಝರೀಕೃತಸರ್ವಾಂಗೌ ರುಧಿರೇಣ ಸಮುಕ್ಷಿತೌ |
ದದೃಶಾತೇ ಹಿಮವತಃ ಪುಷ್ಪಿತಾವಿವ ಕಿಂಶುಕೌ ॥35॥
ಅಂಗಗಳನ್ನೆಲ್ಲಾ ಜರ್ಝರಿತಗೊಳಿಸಿ ಮೈಯೆಲ್ಲಾ ರಕ್ತದ ಲೇಪನವನ್ನು ಹೊಂದಿದರು. ಅವರಿಬ್ಬರು ಹಿಮಾಲಯದ ಪರ್ವತದಲ್ಲಿ ಹೂಬಿಟ್ಟ ಪಲಾಶವೃಕ್ಷಗಳಂತೆ ಕಾಣಿಸಿಕೊಂಡರು.
ದುರ್ಯೋಧನಸ್ತು ಪಾರ್ಥೇನ ವಿವರೇ ಸಂಪ್ರದರ್ಶಿತೇ |
ಈಷದುತ್ಸ್ಮಯಮಾನಸ್ತು ಸಹಸೈವಾಭಿವಾರಿತಃ ॥36॥
ಭೀಮನು ಸ್ವಲ್ಪ ಅವಕಾಶವನ್ನು ಕೊಟ್ಟಾಗ ದುರ್ಯೋಧನನು ಸ್ವಲ್ಪ ಮುಗುಳ್ನಗುತ್ತಾ ಕೂಡಲೇ ಭೀಮನನ್ನು ಎದುರಿಸಿದನು.
ತಮಭ್ಯಾಶಗತಂ ಪ್ರಾಜ್ಞಃ ಕ್ಷಣೇ ಪ್ರೇಕ್ಷ್ಯ ವೃಕೋದರಃ |
ಅವಾಕ್ಷಿಪದ್ ಗದಾಂ ತಸ್ಮೈ ವೇಗೇನ ಮಹತಾ ಬಲೀ ॥37॥
ಪ್ರಾಜ್ಞನಾದ ಭೀಮನು ಕ್ಷಣಮಾತ್ರದಲ್ಲಿ ತನಗೆದುರಾಗಿ ಬಂದ ದುರ್ಯೋಧನನನ್ನು ನೋಡಿ ತನ್ನ ದೊಡ್ಡದಾದ ಗದೆಯನ್ನು ಅವನೆಡೆಗೆ ವೇಗವಾಗಿ ಬಿಸಾಡಿದನು.
ಅವಕ್ಷೇಪಂ ತು ತಂ ದೃಷ್ಟ್ವಾ ಪುತ್ರಸ್ತವ ವಿಶಾಂಪತೇ |
ಅಪಾಸರ್ಪತ್ ತತಃ ಸ್ಥಾನಾತ್ ಸಾ ಮೋಘಾ ನ್ಯಪತದ್ ಭುವಿ ॥38॥
ರಾಜನೇ! ಗದೆಯು ಬೀಳುವುದನ್ನು ನೋಡಿದ ನಿನ್ನ ಮಗ ದುರ್ಯೋಧನನು ಆ ಸ್ಥಾನದಿಂದ ಸರಿದುಬಿಟ್ಟನು. ಗದೆಯು ವ್ಯರ್ಥವಾಗಿ ಭೂಮಿಗೆ ಬಿದ್ದಿತು.
ಮೋಕ್ಷಯಿತ್ವಾ ಪ್ರಹಾರಂ ತಂ ಪುತ್ರಸ್ತವ ಸಸಂಭ್ರಮಮ್ |
ಭೀಮಸೇನಂ ತು ಗದಯಾ ಪ್ರಾಹರತ್ ಕುರುನಂದನಃ ॥39॥
ಭೀಮನ ಹೊಡೆತವನ್ನು ತಪ್ಪಿಸಿಕೊಂಡು ನಿನ್ನ ಮಗ ದುರ್ಯೋಧನನು ಕ್ರುದ್ಧನಾಗಿ ತನ್ನ ಗದೆಯಿಂದ ಭೀಮಸೇನನನ್ನು ಹೊಡೆದನು.
ತಸ್ಯ ವಿಸ್ಯಂದಮಾನೇನ ರುಧಿರೇಣಾಮಿತೌಜಸಃ |
ಪ್ರಹಾರಗುರುಘಾತಾಚ್ಚ ಮೂರ್ಚ್ಛೇವ ಸಮಜಾಯತ ॥40॥

ಗದಾಪ್ರಹಾರದಿಂದ ಅಮಿತಪರಾಕ್ರಮಿಯಾದ ಭೀಮನ ಮೈಯಿಂದ ರಕ್ತದ ಧಾರೆಯು ಹರಿಯಿತು. ಗದೆಯ ಪೆಟ್ಟಿನಿಂದಾಗಿ ಅವನು ಮೂರ್ಛೆತಪ್ಪಿದವನಂತೆ ಆದನು.
ತನ್ನಾಬುಧ್ಯತ ಪುತ್ರಸ್ತೇ ಪೀಡಿತಂ ಪಾಂಡವಂ ರಣೇ |
ಧಾರಯಾಮಾಸ ಭೀಮೋಽಪಿ ಶರೀರಮತಿಪೀಡಿತಮ್ ||41||
ಯುದ್ಧದಲ್ಲಿ ಭೀಮನು ಹೀಗೆ ಪೀಡಿತನಾದರೂ ದುರ್ಯೋಧನನು ಇದನ್ನು ಗುರುತಿಸಲಿಲ್ಲ. ಏಕೆಂದರೆ ಭೀಮನು ಬಹಳವಾಗಿ ಪೆಟ್ಟು ತಿಂದಿದ್ದರೂ ಹೇಗೋ ಸಂಭಾಳಿಸಿಕೊಂಡಿದ್ದನು.
ಅಮನ್ಯತ ಸ್ಥಿತಂ ವೀರಂ ಪ್ರಹರಿಷ್ಯಂತಮಾಹವೇ |
ಅತೋ ನ ಪ್ರಾಹರತ್ ತಸ್ಮೈ ಪುನರೇವ ತವಾತ್ಮಜಃ ||42||
ಭೀಮನು ಯುದ್ಧದಲ್ಲಿ ತನಗೆ ಹೊಡೆಯುವುದಕ್ಕಾಗಿ ನಿಂತಿದ್ದಾನೆ ಎಂಬುದಾಗಿ ದುರ್ಯೋಧನನು ತಿಳಿದುಕೊಂಡನು. ಆದ್ದರಿಂದ ನಿನ್ನ ಮಗನು ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಮತ್ತೆ ಭೀಮನಿಗೆ ಹೊಡೆಯಲಿಲ್ಲ.
ತತೋ ಭೀಮೋ ನ ಜೀವೇದ್ಧಿ ರಾಜಾ ತವ ಸುತೋ ಭವೇತ್ |
ತದವಸ್ಥಂ ಯದನೃಪೋ ಭೀಮಂ ತು ಪ್ರಹರೇದಪಿ ||43||
ಹಾಗಿದ್ದ ಭೀಮನನ್ನು ನಿನ್ನ ಮಗನು ಹೊಡೆದಿದ್ದರೆ ಭೀಮನು ಬದುಕಿ ಉಳಿಯುತ್ತಿರಲಿಲ್ಲ ಮತ್ತು ನಿನ್ನ ಮಗನೇ ರಾಜನಾಗುತ್ತಿದ್ದನು.
ತತೋ ಮುಹೂರ್ತಮಾಶ್ವಾಸ್ಯ ದುರ್ಯೋಧನಮವಸ್ಥಿತಮ್ |
ವೇಗೇನಾಭ್ಯದ್ರವದ್ ರಾಜನ್ ಗದಾಮಾದಾಯ ಪಾಂಡವಃ ||44||
ರಾಜನೇ! ಅನಂತರ ಭೀಮಸೇನನು ಮುಹೂರ್ತಕಾಲ ಸಂಭಾಳಿಸಿಕೊಂಡು, ಗದೆಯನ್ನು ಹಿಡಿದುಕೊಂಡು ಎದುರಿಗೆ ನಿಂತಿದ್ದ ದುರ್ಯೋಧನನ ಮೇಲೆ ಆಕ್ರಮಣ ಮಾಡಿದನು.
ತಮಾಪತಂತಂ ಸಂಪ್ರೇಕ್ಷ್ಯ ಸಂರಬ್ಧಮಮಿತೌಜಸಮ್ |
ಮೋಘಮಸ್ಯ ಪ್ರಹಾರಂ ತಂ ಚಿಕೀರ್ಷುರ್ಭರತರ್ಷಭ ||45||
ಅವಸ್ಥಾನೇ ಮತಿಂ ಕೃತ್ವಾ ಪುತ್ರಸ್ತವ ವಿಶಾಂಪತೇ |
ಇಯೇಷೋತ್ಪತಿತುಂ ರಾಜನ್ ವಂಚಯಿಷ್ಯನ್ ವೃಕೋದರಮ್ ||46||
ಭರತಕುಲಶ್ರೇಷ್ಠನೇ! ಅಮಿತಪರಾಕ್ರಮವುಳ್ಳ ಭೀಮನು ಕ್ರುದ್ಧನಾಗಿ ತನ್ನ ಮೇಲೆ ಏರಿ ಬರುತ್ತಿದ್ದುದನ್ನು ನೋಡಿ ದುರ್ಯೋಧನನು ಭೀಮನ ಹೊಡೆತವನ್ನು ವ್ಯರ್ಥಗೊಳಿಸುವುದಕ್ಕಾಗಿ ದೃಢವಾಗಿ ನಿಲ್ಲುವುದಕ್ಕಾಗಿ ಭೀಮನನ್ನು ಮೋಸಗೊಳಿಸುತ್ತಾ ಮೇಲ್ಗಡೆ ಹಾರಲು ಇಚ್ಛಿಸಿದನು.
ಅಬುಧ್ಯದ್ ಭೀಮಸೇನಸ್ತು ರಾಜ್ಞಸ್ತಸ್ಯ ಚಿಕೀರ್ಷಿತಮ್ |
ಅಥಾಸ್ಯ ಸಮಭಿದ್ರುತ್ಯ ಸಮುತ್ಪತ್ಯ ಚ ಸಿಂಹವತ್ ||47||
ಧೃತ್ಯಾ ವಂಚಯತೋ ರಾಜನ್ ಪುನರೇವೋತ್ಪತಿಷ್ಯತಃ |
ಊರೂಭ್ಯಾಂ ಪ್ರಾಹಿಣೋದ್ ವೀರ್ಯಾದ್ ಗದಾಂ ವೇಗೇನ ಪಾಂಡವಃ ||
ಭೀಮಸೇನನಾದರೂ ದುರ್ಯೋಧನನ ಮನೋ ಇಚ್ಛೆಯನ್ನು ತಿಳಿದುಕೊಂಡನು. ಅನಂತರ ಪುನಃ ದುರ್ಯೋಧನನು ಎದುರಿಗೆ ಬಂದು ಸಿಂಹದ ಹಾಗೆ ಮೇಲಕ್ಕೆ ಹಾರುತ್ತಾ ಧೈರ್ಯದಿಂದ ಭೀಮನನ್ನು ವಂಚಿಸುತ್ತಿದ್ದನು. ಇನ್ನೊಂದು ಬಾರಿ ಮೇಲಕ್ಕೆ ಹಾರಿದಾಗ ಭೀಮನು ದುರ್ಯೋಧನನ ತೊಡೆಯನ್ನು ಮುರಿಯುವ ಉದ್ದೇಶದಿಂದ ಗದೆಯನ್ನು ವೇಗವಾಗಿ ಬಿಸಾಡಿದನು.
ಸಾ ವಜ್ರನಿಷ್ಪೇಷಸಮಾ ಪ್ರಹಿತಾ ಭೀಮಕರ್ಮಣಾ |
ಊರೂ ದುರ್ಯೋಧನಸ್ಯಾಥ ಬಭಂಜ ಪ್ರಿಯದರ್ಶನೌ ||49||
ಭೀಮನು ಪ್ರಯೋಗಿಸಿದ ಆ ಗದೆಯು ವಜ್ರಾಘಾತಸದೃಶವಾಗಿತ್ತು. ಗದೆಯು ದುರ್ಯೋಧನನ ಬೆನ್ನಿನ ಬುಡಭಾಗಕ್ಕೆ ತಗುಲಿತು. ಆ ಹೊಡೆತದ ರಭಸಕ್ಕೆ ಅವನ ಸುಂದರವಾದ ಎರಡು ತೊಡೆಗಳೂ ಮುರಿದು ಬಿದ್ದವು.
ವ್ಯಾಖ್ಯಾನ ವಿಶೇಷ ಗದಾಯುದ್ಧದಲ್ಲಿ ನಾಭಿಯ ಕೆಳಗೆ ಹೊಡೆಯಬಾರದೆಂಬ ನಿಯಮವಿದ್ದುದರಿಂದ ಭೀಮನು ನೇರವಾಗಿ ಅವನ ತೊಡೆಗೆ ಹೊಡೆಯಲಿಲ್ಲ. ಆದರೆ ಅವನ ತೊಡೆಗಳನ್ನು ಮುರಿಯುತ್ತೇನೆಂಬ ತನ್ನ ಪ್ರತಿಜ್ಞೆಯನ್ನು ಪಾಲಿಸುವುದಕ್ಕಾಗಿ ಬಗ್ಗಿ ನಿಂತ ಅವನ ಬೆನ್ನಿನ ಮೂಲಕ್ಕೆ ಹೊಡೆದ. ಅದರ ಪರಿಣಾಮವಾಗಿ ದುರ್ಯೋಧನನ ತೊಡೆಗಳು ಮುರಿದುಬಿದ್ದವು - ಮ.ಭಾ.ತಾ.ನಿ.
ಸ ಪಪಾತ ನರವ್ಯಾಘ್ರೋ ವಸುಧಾಮನುನಾದಯನ್ |
ಭಗ್ನೋರುರ್ಭೀಮಸೇನೇನ ಪುತ್ರಸ್ತವ ವಿಶಾಂಪತೇ ||50||
ರಾಜನೇ! ಭೀಮನಿಂದಾಗಿ ತೊಡೆಮುರಿದುಕೊಂಡ ನಿನ್ನ ಮಗನಾದ ಮನುಷ್ಯಶ್ರೇಷ್ಠ ದುರ್ಯೋಧನನು ಜೋರಾಗಿ ಶಬ್ದವನ್ನುಂಟುಮಾಡುತ್ತಾ ನೆಲಕ್ಕೆ ಬಿದ್ದನು.
ವವುರ್ವಾತಾಃ ಸನಿರ್ಘಾತಾಃ ಪಾಂಸುವರ್ಷಂ ಪಪಾತ ಚ |
ಚಚಾಲ ಪೃಥಿವೀ ಚಾಪಿ ಸವೃಕ್ಷವನಪರ್ವತಾ ||51||
ತಸ್ಮಿನ್ ನಿಪತಿತೇ ವೀರೇ ಪತ್ಯೌ ಸರ್ವಮಹೀಕ್ಷಿತಾಮ್ |
ಮಹಾಸ್ವನಾ ಪುನರ್ದೀಪ್ತಾ ಸನಿರ್ಘಾತಾ ಭಯಂಕರೀ ||52||
ಎಲ್ಲಾ ರಾಜರುಗಳಿಗೆ ಸ್ವಾಮಿಯಾದ ವೀರನಾದ ದುರ್ಯೋಧನನು ಭೂಮಿಗೆ ಬಿದ್ದಾಗ ಗುಡುಗುಸಹಿತವಾದ ಬಿರುಗಾಳಿಯು ಬೀಸಿತು. ಧೂಳಿನ ಮಳೆಯೇ ಸುರಿಯಿತು. ಮರ-ಕಾಡು-ಪರ್ವತಗಳಿಂದ ಕೂಡಿದ ನೆಲವು ನಡುಗಿತು. ಮಿಂಚುಗಳು ಬೆಳಗಿ ಗುಡುಗುಗಳು ಪುನಃ ಜೋರಾಗಿ ಶಬ್ದವನ್ನು ಉಂಟುಮಾಡಿದವು.
ಪಪಾತ ಚೋಲ್ಕಾ ಮಹತೀ ಪತಿತೇ ಪೃಥಿವೀಪತೌ ||53||

ರಾಜನು ಬಿದ್ದಾಗ ದೊಡ್ಡದಾದ ಉಲ್ಕೆಯು ಕೆಳಗೆ ಬಿತ್ತು.
ಅಥ ಶೋಣಿತವರ್ಷಂ ಚ ಪಾಂಸುವರ್ಷಂ ಚ ಭಾರತ |
ವವರ್ಷ ಮಘವಾಂಸ್ತತ್ರ ತವ ಪುತ್ರೇ ನಿಪಾತಿತೇ ॥54॥
ಭರತಕುಲೋದ್ಭವನೇ! ನಿನ್ನ ಮಗ ಕೆಳಕ್ಕೆ ಬಿದ್ದಾಗ ಇಂದ್ರನು ರಕ್ತದ ಮಳೆಯನ್ನೂ, ಧೂಳಿನ ಮಳೆಯನ್ನೂ ಸುರಿಸಿದನು.
ಯಕ್ಷಾಣಾಂ ರಾಕ್ಷಸಾನಾಂ ಚ ಪಿಶಾಚಾನಾಂ ಪರಂತಪ |
ಅಂತರಿಕ್ಷೇ ಮಹಾನ್ ನಾದಸ್ತತ್ರ ಭಾರತ ಶುಶ್ರುವೇ ॥55॥
ಶತ್ರುಸಂಹಾರಕನೇ! ಭಾರತನೇ, ಆಕಾಶದಲ್ಲಿ ಯಕ್ಷರ, ರಾಕ್ಷಸರ, ಪಿಶಾಚಗಳ ಜೋರಾದ ನಾದವು ಉಂಟಾಗಿದ್ದು ಕೇಳಿಸಿತು.
ತೇನ ಶಬ್ದೇನ ಘೋರೇಣ ಮೃಗಾಣಾಮಥ ಪಕ್ಷಿಣಾಮ್ |
ಜಜ್ಞೇ ಘೋರತರಃ ಶಬ್ದೋ ಬಹೂನಾಂ ಸರ್ವತೋದಿಶಮ್ ॥56॥
ಆ ಭಯಂಕರವಾದ ಶಬ್ದದಿಂದಾಗಿ ಎಲ್ಲಾ ಪ್ರಾಣಿ-ಪಕ್ಷಿಗಳೂ ಎಲ್ಲಾ ಕಡೆಯಿಂದಲೂ ಶಬ್ದವನ್ನುಂಟುಮಾಡಿದವು.
ಯೇ ತತ್ರ ವಾಜಿನಃ ಶೇಷಾ ಗಜಾಶ್ಚ ಮನುಜೈಃ ಸಹ |
ಮುಮುಚುಸ್ತೇ ಮಹಾನಾದಂ ತವ ಪುತ್ರೇ ನಿಪಾತಿತೇ ॥57॥
ನಿನ್ನ ಮಗನು ಕೆಳಗೆ ಬಿದ್ದಾಗ ಅಲ್ಲಿ ಉಳಿದಿದ್ದ ಕುದುರೆಗಳು, ಆನೆಗಳು, ಮನುಷ್ಯರು ಇವರೆಲ್ಲರೂ ಜೋರಾಗಿ ಶಬ್ದವನ್ನು ಮಾಡಿದರು.
ಭೇರೀಶಂಖನಿನಾದಾನಾಮಭವಚ್ಚ ಸ್ವನೋ ಮಹಾನ್ |
ಅಂತರ್ಭೂಮಿಗತೋ ರಾಜನ್ ತವ ಪುತ್ರೇ ನಿಪಾತಿತೇ ॥58॥
ನಿನ್ನ ಮಗನು ಭೂಮಿಗೆ ಬಿದ್ದಾಗ ಭೇರಿಗಳು, ಶಂಖಗಳು ಜೋರಾಗಿ ಶಬ್ದವನ್ನು ಮಾಡಿದವು. ಆ ಶಬ್ದವು ಪಾತಾಳಕ್ಕೂ ಕೇಳಿಸಿತು.
ಹ್ರದಾಃ ಕೂಪಾಶ್ಚ ರುಧಿರಮುದ್ವಮನ್ನೃಪಸತ್ತಮ |
ನದ್ಯಶ್ಚ ಸುಮಹಾವೇಗಾಃ ಪ್ರತಿಸ್ರೋತೋವಹಾ ಭವನ್ ॥59॥
ಸರೋವರಗಳಲ್ಲಿ, ಬಾವಿಗಳಲ್ಲಿ ರಕ್ತವು ಉಕ್ಕಿಬಂದಿತು. ನದಿಗಳು ವಿರುದ್ಧ ದಿಕ್ಕುಗಳಲ್ಲಿ ವೇಗವಾಗಿ ಪ್ರವಹಿಸತೊಡಗಿದವು.
ಪುಲ್ಲಿಂಗಾ ಇವ ನಾರ್ಯಶ್ಚ ಸ್ತ್ರೀಲಿಂಗಾಃ ಪುರುಷಾ ಭವನ್ |
ದುರ್ಯೋಧನೇ ಮಹಾರಾಜ ಪತಿತೇ ತನಯೇ ತವ ॥60॥
ಮಹಾರಾಜನೇ! ನಿನ್ನ ಮಗ ದುರ್ಯೋಧನನು ಬಿದ್ದಾಗ ಸ್ತ್ರೀಯರು ಪುರುಷರಂತೆಯೂ, ಪುರುಷರು ಸ್ತ್ರೀಯರಂತೆಯೂ ಆದರು.
ದೃಷ್ಟ್ವಾ ತಾನದ್ಭುತೋತ್ಪಾತಾನ್ ಪಾಂಚಾಲಾಃ ಪಾಂಡವೈಃ ಸಹ |
ಆವಿಗ್ನಮನಸಃ ಸರ್ವೇ ಬಭೂವುರ್ನೃಪಸತ್ತಮ ॥61॥
ನೃಪೋತ್ತಮನೇ! ಪಾಂಚಾಲರು ಮತ್ತು ಪಾಂಡವರು ಈ ಎಲ್ಲಾ ಅದ್ಭುತಶಕುನಗಳನ್ನು ಕಂಡು ಮನೋದ್ವೇಗಕ್ಕೆ ಒಳಗಾದರು.
ಯಯುರ್ದೇವಾ ಯಥಾಕಾಮಂ ಗಂಧರ್ವಾಪ್ಸರಸಸ್ತಥಾ |
ಕಥಯಂತೋಽದ್ಭುತಂ ಯುದ್ಧಮುಭಯೋಸ್ತತ್ರ ಭಾರತ ॥62॥
ಭರತಕುಲೋದ್ಭವನೇ! ದೇವತೆಗಳು, ಗಂಧರ್ವರು, ಹಾಗೆಯೇ ಅಪ್ಸರಸ್ತ್ರೀಯರು ಭೀಮ-ದುರ್ಯೋಧನರ ಅದ್ಭುತವಾದ ಯುದ್ಧದ ಬಗ್ಗೆ ಮಾತನಾಡುತ್ತಾ ತಮ್ಮಿಷ್ಟದಂತೆ ಹೊರಟುಹೋದರು.
ತಥೈವ ಸಿದ್ಧಾ ರಾಜೇಂದ್ರ ತಥಾ ಯಕ್ಷಾಶ್ಚ ಚಾರಣಾಃ |
ನರಸಿಂಹೌ ಪ್ರಶಂಸಂತೌ ವಿಪ್ರಜಗ್ಮುರ್ಯಥಾಗತಮ್ ॥63॥
ಅದೇ ರೀತಿಯಲ್ಲಿ ಸಿದ್ಧರು, ಯಕ್ಷರು, ಚಾರಣರು ಕೂಡ ನರೋತ್ತಮರಾದ ಭೀಮ-ದುರ್ಯೋಧನರನ್ನು ಕೊಂಡಾಡುತ್ತಾ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದುರ್ಯೋಧನಪಾತೋ ನಾಮ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ದುರ್ಯೋಧನನ ಅನ್ಯಾಯವನ್ನು ಸ್ಮರಿಸುತ್ತಾ ಭೀಮನು ಎಡಗಾಲಿನಿಂದ ಅವನ ತಲೆಯನ್ನು ತುಳಿದದ್ದು. ಧರ್ಮರಾಜನು ದುರ್ಯೋಧನನನ್ನು ಸಮಾಧಾನಪಡಿಸಿದ್ದು.
ಸಂಜಯಃ
ಪಾತಿತಂ ತಂ ತದಾ ದೃಷ್ಟ್ವಾ ಮಹಾಸಾಲಮಿವ ಚ್ಯುತಮ್ |
ಪ್ರಹೃಷ್ಟಮನಸಃ ಸರ್ವೇ ಬಭೂವುಸ್ತತ್ರ ಪಾಂಡವಾಃ ॥1॥
ಸಂಜಯ ಮಹಾಸಾಲವೃಕ್ಷದಂತೆ ಕೆಳಕ್ಕೆ ಬಿದ್ದ ದುರ್ಯೋಧನನನ್ನು ಕಂಡು ಅಲ್ಲಿದ್ದ ಎಲ್ಲಾ ಪಾಂಡವರೂ ಸಂತುಷ್ಟವಾದ ಮನಸ್ಸುಳ್ಳವರಾದರು.
ತಂ ಮತ್ತಮಿವ ಮಾತಂಗಂ ಸಿಂಹೇನ ವಿನಿಪಾತಿತಮ್ |
ದದೃಶುರ್ಹೃಷ್ಟರೋಮಾಣಃ ಪಾಂಡವಾಃ ಸೃಂಜಯೈಃ ಸಹ ॥2॥
ಮದವೇರಿದ ಗಜದಂತಿದ್ದ ದುರ್ಯೋಧನನನ್ನು ಸಿಂಹದಂತಿದ್ದ ಭೀಮನು ಕೆಳಗೆ ಬೀಳಿಸಿದ್ದನ್ನು ರೊಮಾಂಚನಗೊಂಡ ಪಾಂಡವರು ಮತ್ತು ಸೃಂಜಯರು ನೋಡಿದರು.

ತತೋ ದುರ್ಯೋಧನಂ ಹತ್ವಾ ಭೀಮಸೇನಃ ಪ್ರತಾಪವಾನ್ |
ಪತಿತಂ ಕೌರವೇಂದ್ರಂ ತಮುಪಗಮ್ಯೇದಮಬ್ರವೀತ್ ||3||
ಪ್ರತಾಪಿಯಾದ ಭೀಮಸೇನನು ದುರ್ಯೋಧನನನ್ನು ಹೊಡೆದು ಕೆಳಬಿದ್ದ ಕೌರವೇಂದ್ರನ ಬಳಿಗೆ ಬಂದು ಹೀಗೆ ಹೇಳಿದನು.
ಭೀಮಃ
ಗೌರ್ಗೌರಿತಿ ಪುರಾ ಮೂಢ ದ್ರೌಪದೀಮೇಕವಾಸಸಾಮ್ |
ಯತ್ ಸಭಾಯಾಂ ಹಸನ್ನಸ್ಮಾನ್ ತದಾ ವದಸಿ ದುರ್ಮತೇ ||4||
ತಸ್ಯಾಪಹಾಸಸ್ಯ ಫಲಮದ್ಯ ತ್ವಂ ಸಮವಾಪ್ನುಹಿ ||5||
ಭೀಮ `ಕೆಟ್ಟಬುದ್ಧಿಯವನೇ! ಮೂರ್ಖನೇ! ಹಿಂದೆ ಏಕವಸ್ತ್ರಳಾದ ದ್ರೌಪದಿಯನ್ನು ಸಭೆಯಲ್ಲಿ `ಪಶು! ಪಶು!' ಎಂಬುದಾಗಿ ಹಾಸ್ಯಮಾಡುತ್ತಾ ಹೇಳುತ್ತಿದ್ದಿ. ಆ ಅಪಹಾಸದ ಫಲವನ್ನು ಇವತ್ತು ನೀನು ಅನುಭವಿಸು.'
ಸಂಜಯಃ
ಏವಮುಕತ್ವ ಸ ವಾಮೇನ ಪದಾ ಮೌಲಿಮವಾಕ್ಷಿಪತ್ |
ಶಿರಶ್ಚ ರಾಜಸಿಂಹಸ್ಯ ಪಾದೇನ ಸಮತಾಡಯತ್ ||6||
ಸಂಜಯ ಹೀಗೆ ಭೀಮನು ಹೇಳಿ, ಎಡಗಾಲಿನಿಂದ ರಾಜಸಿಂಹ ದುರ್ಯೋಧನನ ಹಣೆಯನ್ನೂ ತಲೆಯನ್ನೂ ಚೆನ್ನಾಗಿ ಒದ್ದನು.
ತಥೈವ ಕ್ರೋಧಸಂಯುಕ್ತೋ ಭೀಮಃ ಪರಬಲಾರ್ದನಃ |
ಪುನರೇವಾಬ್ರವೀದ್ ವಾಕ್ಯಂ ಯತ್ ತಚ್ಛೃಣು ನರಾಧಿಪ ||7||
ಅದೇ ರೀತಿಯಲ್ಲಿ ಶತ್ರುಗಳ ಬಲವನ್ನು ನಾಶಮಾಡುವ ಭೀಮನು ಬಹಳ ಕೋಪಗೊಂಡು ಮತ್ತೆ ಏನು ಹೇಳಿದನೋ ಅದನ್ನು ಹೇಳುತ್ತೇನೆ, ಕೇಳು.
ಭೀಮಃ
ಯೇಽಸ್ಮಾನ್ ಪುರಾ ಪ್ರನೃತ್ಯಂತಿ ಪುನರ್ಗೌರಿತಿ ಗೌರಿತಿ |
ತಾನ್ ವಯಂ ಪ್ರತಿನೃತ್ಯಾಮಃ ಪುನರ್ಗೌರಿತಿ ಗೌರಿತಿ ||8||
ಭೀಮ ಹಿಂದೆ ನಮ್ಮನ್ನುದ್ದೇಶಿಸಿ `ಪಶು! ಪಶು!' ಎಂಬುದಾಗಿ ಕುಣಿದಾಡಿದರೋ ಅವರನ್ನು ನಾವಿಂದು `ಪಶು! ಪಶು!' ಎಂದು ಕರೆಯುತ್ತಾ ಕುಣಿಯುತ್ತೇವೆ.
ನಾಸ್ಮಾಕಂ ನಿಕೃತಿರ್ದ್ಯೂತಂ ನಾಕ್ಷದ್ಯೂತಂ ನ ವಂಚನಾ |
ಸ್ವಬಾಹುಬಲಮಾಶ್ರಿತ್ಯ ಪ್ರಬಾಧಾಮ ವಯಂ ರಿಪೂನ್ ||9||
ಅದಕ್ಕಾಗಿ ನಾವು ಮೋಸದ ದ್ಯೂತವನ್ನಾಗಲೀ, ಪಗಡೆಯಾಟವನ್ನಾಗಲೀ, ವಂಚನೆಯನ್ನಾಗಲೀ ನಡೆಸುವುದಿಲ್ಲ. ನಮ್ಮ ಬಾಹುಬಲವನ್ನೇ ಆಶ್ರಯಿಸಿಕೊಂಡು ಶತ್ರುಗಳನ್ನು ಚೆನ್ನಾಗಿ ಪೀಡಿಸುತ್ತೇವೆ.
ಸಂಜಯಃ
ಸಮಾಪ್ಯ ವೈರಸ್ಯ ಪರಸ್ಯ ಪಾರಂ
ವೃಕೋದರಃ ಪ್ರಾಹ ತತಃ ಪ್ರಹಸ್ಯ |
ಯುಧಿಷ್ಠಿರಂ ಕೇಶವಸೃಂಜಯಾಂಶ್ಚ
ಧನಂಜಯಂ ಮಾದ್ರವತೀಸುತೌ ಚ ||10||
ಸಂಜಯ ಬಹಳವಾದ ದ್ವೇಷದ ಅಂತ್ಯವನ್ನು ಹೊಂದಿ ಭೀಮನು ಜೋರಾಗಿ ನಗುತ್ತಾ, ಮತ್ತೆ ಧರ್ಮರಾಜ, ಕೇಶವ, ಸೃಂಜಯರು, ಅರ್ಜುನ ಮತ್ತು ನಕುಲ- ಸಹದೇವರನ್ನು ಕುರಿತು ಹೀಗೆ ಹೇಳುತ್ತಾನೆ.
ಭೀಮಃ
ರಜಸ್ವಲಾಂ ದ್ರೌಪದೀಮಾನಯನ್ ಯೇ
ಯೇ ಚಾಪ್ಯಕುರ್ವಂತ ಸದಸ್ಯವಸತ್ರಮ್ |
ತಾನ್ ಪಶ್ಯಧ್ವಂ ಪಾಂಡವೈರ್ಧಾರ್ತರಾಷ್ಟ್ರಾನ್
ರಣೇ ಹತಾಂಸ್ತಪಸಾ ಯಾಜ್ಞಸೇನ್ಯಾಃ ||11||
ಭೀಮ ಯಾರು ರಜಸ್ವಲೆಯಾದ ದ್ರೌಪದಿಯನ್ನು ಸಭೆಗೆ ಎಳೆತಂದು ಸಭಾಮಧ್ಯದಲ್ಲಿ ವಿವಸ್ತ್ರಳನ್ನಾಗಿ ಮಾಡಿದರೋ, ದ್ರೌಪದಿಯ ತಪಸ್ಸಿನಿಂದಾಗಿ ಯುದ್ಧದಲ್ಲಿ ಪಾಂಡವರ ಕೈಯಿಂದ ಸತ್ತ ಅಂತಹ ಧೃತರಾಷ್ಟ್ರಪುತ್ರರನ್ನು ನೋಡಿರಿ.
ಯೇ ನಃ ಪುರಾ ಷಂಡತಿಲಾನವೋಚನ್
ಕ್ರೂರಾತ್ಮಾನೋ ಧೃತರಾಷ್ಟ್ರಸ್ಯ ಪುತ್ರಾಃ |
ತೇ ನೋ ಹತಾಃ ಸಗಣಾಃ ಸಾನುಬಂಧಾಃ
ಕಾಮಂ ಸ್ವರ್ಗಂ ನರಕಂ ವಾ ವ್ರಜಾಮಃ ||12||
ಯಾವ ಕ್ರೂರಿಗಳಾದ ಧೃತರಾಷ್ಟ್ರಪುತ್ರರು ಹಿಂದೆ ನಮ್ಮನ್ನು `ಷಂಡತಿಲರು' ಎಂದು ಕರೆದಿದ್ದರೋ ಅಂಥವರು ಸಪರಿವಾರರಾಗಿ ನಮ್ಮಿಂದ ಹತರಾಗಿದ್ದಾರೆ. ನಾವು ಸ್ವರ್ಗಕ್ಕೆ ಅಥವಾ ನರಕಕ್ಕೆ ಹೋಗೋಣ. ಎಲ್ಲಿ ಹೋದರೂ ಚಿಂತೆಯಿಲ್ಲ.
ಸಂಜಯಃ
ಪುನಶ್ಚ ರಾಜ್ಞಃ ಪತಿತಸ್ಯ ಭೂಮೌ
ಭೀಮೋ ಗದಾಂ ಸ್ಕಂಧಗತಾಂ ಪ್ರಗೃಹ್ಯ |
ವಾಮೇನ ಪಾದೇನ ಶಿರಃ ಪ್ರಮಥ್ಯ

ದುರ್ಯೋಧನಂ ನೈಕೃತಿಕೇತ್ಯವೋಚತ್ ॥13॥
ಸಂಜಯ ಪುನಃ ಭೀಮನು ಭುಜದ ಮೇಲೆ ಹೊತ್ತುಕೊಂಡಿದ್ದ ಗದೆಯನ್ನು ಹಿಡಿದುಕೊಂಡು ಕೆಳಬಿದ್ದಿದ್ದ ದುರ್ಯೋಧನನ ತಲೆಯನ್ನು ಎಡಗಾಲಿನಿಂದ ಚೆನ್ನಾಗಿ ಒದ್ದು ಮರ್ದಿಸಿ `ಮೋಸಗಾರ!' ಎಂದು ಹೇಳಿದನು.
ಹೃಷ್ಟೇನ ರಾಜನ್ ಕುರುಪಾರ್ಥಿವಸ್ಯ
ಕ್ಷುದ್ರಾತ್ಮನಾ ಭೀಮಸೇನೇನ ಪಾದಮ್ |
ದೃಷ್ಟ್ವಾ ಕೃತಂ ಮೂರ್ಧ್ನ್ಯಥ ನಾಭ್ಯನಂದನ್
ಧರ್ಮಾತ್ಮಾನಃ ಸೋಮಕಾನಾಂ ಪ್ರಬರ್ಹಾಃ ॥14॥
ರಾಜನೇ! ದುರ್ಯೋಧನನ ವಿಷಯದಲ್ಲಿ ಕ್ಷುದ್ರಬುದ್ಧಿಯ ಭೀಮನು ಸಂತೋಷದ ಭರದಲ್ಲಿ ತನ್ನ ಎಡಗಾಲನ್ನು ದುರ್ಯೋಧನನ ತಲೆಯ ಮೇಲಿರಿಸಿದ್ದನ್ನು ನೋಡಿ ಧರ್ಮಬುದ್ಧಿಯ ಸೋಮಕರ ಮುಖ್ಯಸ್ಥರು ಆ ಕಾರ್ಯವನ್ನು ಇಷ್ಟಪಡಲಿಲ್ಲ ಮತ್ತು ಅಭಿನಂದಿಸಲಿಲ್ಲ.
ತವ ಪುತ್ರಂ ತಥಾ ಹತ್ವಾ ಕತ್ಥಮಾನಂ ವೃಕೋದರಮ್ |
ನೃತ್ಯಮಾನಂ ಚ ಬಹುಶೋ ಧರ್ಮರಾಜೋಽಬ್ರವೀದಿದಮ್ ॥15॥
ನಿನ್ನ ಮಗನನ್ನು ಕೆಳಗೆ ಕೆಡವಿ, ಬೈಯುತ್ತ ಬಹಳವಾಗಿ ಕುಣಿದಾಡುತ್ತಿದ್ದ ಭೀಮನನ್ನು ಕುರಿತು ಧರ್ಮರಾಜನು ಹೀಗೆ ಹೇಳಿದನು.
ಗತೋಽಸಿ ವೈರಸ್ಯಾನೃಣ್ಯಂ ಪ್ರತಿಜ್ಞಾ ಪೂರಿತಾ ತ್ವಯಾ |
ಶುಭೇನಾಥಾಶುಭೇನೈವ ಕರ್ಮಣಾ ವಿರಮಾಧುನಾ ॥16॥
`ವೈರದ ಪ್ರತೀಕಾರವನ್ನು ಮಾಡಿ ಋಣಮುಕ್ತನಾಗಿರುವಿ, ನಿನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡಿರುವಿ, ಈಗ ಶುಭ ಹಾಗೂ ಅಶುಭಕಾರ್ಯಗಳನ್ನು ನಿಲ್ಲಿಸು.
ಮಾ ಶಿರೋಽಸ್ಯ ಪದಾಽಮರ್ದೀರ್ಮಾ ಧರ್ಮಸ್ತೇಽತಿಗೋ ಭವೇತ್ |
ರಾಜಾ ಜ್ಞಾತಿರ್ಹತಶ್ಚಾಯಂ ನೈತನ್ನ್ಯಾಯ್ಯಂ ತವಾನಘ ॥17॥
ಇವನ ತಲೆಯನ್ನು ತುಳಿದು ಮರ್ದಿಸಬೇಡ. ಆ ಮೂಲಕ ಧರ್ಮವನ್ನು ಮೀರಬೇಡ. ದೋಷದೂರನೇ! ರಾಜನೂ, ಸಂಬಂಧಿಯೂ ಆಗಿರುವ ದುರ್ಯೋಧನನನ್ನು ಹೊಡೆದು ಬೀಳಿಸಿರುವಿ. ಇದು ನ್ಯಾಯಸಮ್ಮತವಾದ ಕಾರ್ಯವಲ್ಲ.
ಏಕಾದಶಚಮೂನಾಥಂ ಕುರೂಣಾಮಧಿಪಂ ತಥಾ |
ಮಾಸ್ಪ್ರಾಕ್ಷೀರ್ಭೀಮ ಪಾದೇನ ರಾಜಾನಂ ಜ್ಞಾತಿಮೇವ ಚ ॥18॥
ಭೀಮನೇ! ಹನ್ನೊಂದು ಅಕ್ಷೌಹಿಣಿಸೈನ್ಯಕ್ಕೆ ಅಧಿಪತಿಯಾಗಿದ್ದ ಹಾಗೂ ಕುರುಗಳಿಗೆ ಒಡೆಯನಾಗಿದ್ದ, ನಮ್ಮ ಸಂಬಂಧಿಯೂ ರಾಜನೂ ಆಗಿರುವ ದುರ್ಯೋಧನನನ್ನು ಕಾಲಿನಿಂದ ಮುಟ್ಟಬೇಡ.
ಹತಬಂಧುರ್ಹತಾಮಾತ್ಯೋ ಭ್ರಷ್ಟಸೈನ್ಯೋ ಹತೋ ಮೃಧೇ |
ಸರ್ವಾಕಾರೇಣ ಶೋಚ್ಯೋಽಯಂ ನಾವಹಾಸ್ಯೋಽಯಮೀಶ್ವರಃ ॥19॥
ಇವನ ಬಂಧುಗಳೆಲ್ಲರೂ ಸತ್ತಿದ್ದಾರೆ. ಮಂತ್ರಿಗಳನ್ನು ಕಳೆದುಕೊಂಡಿದ್ದಾನೆ. ಸೈನ್ಯವು ಕಳೆದುಹೋಗಿದೆ. ಇವನೂ ಯುದ್ಧದಲ್ಲಿ ಪೆಟ್ಟು ತಿಂದು ಬಿದ್ದಿದ್ದಾನೆ. ಇಂತಹವನ ಬಗ್ಗೆ ಎಲ್ಲಾ ರೀತಿಯಲ್ಲಿಯೂ ದುಃಖಿಸಬೇಕು. ರಾಜನಾದ ಇವನನ್ನು ಅವಮಾನ ಪಡಿಸಬಾರದು.
ವಿಧ್ವಸ್ತೋಽಯಂ ಹತಾಮಾತ್ಯೋ ಹತಬಂಧುರ್ಹತಾತ್ಮಜಃ |
ಉತ್ಸನ್ನಪಿಂಡೋ ಭ್ರಾತಾ ಚ ನೈತನ್ನ್ಯಾಯ್ಯಂ ಕೃತಂ ತ್ವಯಾ ॥20॥
ಸರ್ವ ರೀತಿಯಲ್ಲಿ ದುರ್ಯೋಧನನನು ನಾಶಹೊಂದಿದ್ದಾನೆ. ಇವನ ಮಂತ್ರಿಗಳು ಸತ್ತಿದ್ದಾರೆ. ಬಂಧುಗಳು ಮತ್ತು ಮಕ್ಕಳು ಹತರಾಗಿದ್ದಾರೆ. ಇವನಿಗೆ ಸತ್ತ ಮೇಲೆ ಪಿಂಡ ಹಾಕುವವರೂ ಇಲ್ಲವಾಗಿದ್ದಾರೆ. ನಮಗೆ ಅಣ್ಣನಾಗಿದ್ದಾನೆ. ಅವನ ಬಗ್ಗೆ ನೀನು ಮಾಡಿದ್ದು ನ್ಯಾಯೋಚಿತವಾದುದಲ್ಲ.
ಧಾರ್ಮಿಕೋ ಭೀಮಸೇನೋಽಸಾವಿತ್ಯಾಹುಸ್ತ್ವಂ ಪುರಾ ಜನಾಃ |
ಸ ಕಸ್ಮಾದ್ ಭೀಮಸೇನ ತ್ವಂ ರಾಜಾನಮಧಿತಿಷ್ಠಸಿ ॥21॥
ಹಿಂದೆ ಜನರು `ಭೀಮನು ಧರ್ಮನಿಷ್ಠನಾದವನು!' ಎಂದು ನಿನ್ನ ಬಗ್ಗೆ ಹೇಳುತ್ತಿದ್ದರು. ಆದ್ದರಿಂದ ಹೇಗೆ ನೀನು ರಾಜನಾದ ದುರ್ಯೋಧನನನ್ನು ಕಾಲಿನಿಂದ ತುಳಿಯುತ್ತಾ ಮೀರಿ ನಿಂತಿರುವಿ?'
ಇತ್ಯುಕ್ತ್ವಾ ಭೀಮಸೇನಂ ತು ಸಾಶ್ರುಕಂಠೋ ಯುಧಿಷ್ಠಿರಃ |
ಉಪಸೃತ್ಯಾಬ್ರವೀದ್ ದೀನೋ ದುರ್ಯೋಧನಮರಿಂದಮಮ್ ॥22॥
ಹೀಗೆ ಭೀಮಸೇನನಿಗೆ ಹೇಳಿ, ಕಣ್ಣೀರಿನಿಂದ ಗಂಟಲುಕಟ್ಟಿದ ಧರ್ಮರಾಜನು ಶತ್ರುಸಂಹಾರಕನಾದ ದುರ್ಯೋಧನನ ಸಮೀಪಕ್ಕೆ ಬಂದು ದುಃಖದಿಂದ ಹೀಗೆ ಹೇಳಿದನು.
ಯುಧಿಷ್ಠಿರಃ
ನೂನಮೇತದ್ ಬಲವತಾ ಧಾತ್ರಾಽಽದಿಷ್ಟಂ ಮಹಾತ್ಮನಾ |
ಯದ್ವಯಂ ತ್ವಾಂ ಜಿಘಾಂಸಾಮಃ ತ್ವಂ ಚಾಸ್ಮಾನ್ ಕುರುನಂದನ ॥23॥
ಯುಧಿಷ್ಠರ ಕುರುನಂದನ! ನಾವೇನು ನಿನ್ನನ್ನು ಹೊಡೆದಿದ್ದೇವೆಯೋ, ಹಾಗೆಯೇ ನೀನು ನಮ್ಮನ್ನು ಹೊಡೆದಿರುವಿಯೋ ಇದೆಲ್ಲವೂ ಬಲಶಾಲಿಯಾದ ಮಹಾತ್ಮ ಬ್ರಹ್ಮನಿಂದ ಮೊದಲೇ ನಿರ್ದೇಶಿಸಲ್ಪಟ್ಟಿತ್ತು.
ಆತ್ಮನೋ ಹ್ಯಪರಾಧೇನ ಮಹದ್ ವ್ಯಸನಮೀದೃಶಮ್ |
ಪ್ರಾಪ್ತವಾನಸಿ ಲೋಭಾಚ್ಚ ಮದಾದ್ ಬಾಲ್ಯಾಚ್ಚ ಭಾರತ ॥24॥
ಭರತಕುಲೋದ್ಭವನೇ! ನಿನ್ನ ಅಪರಾದ, ಲೋಭ, ಮದ, ಬಾಲಿಶಬುದ್ಧಿ ಇವುಗಳಿಂದಾಗಿ ಇಷ್ಟೊಂದು ದೊಡ್ಡದಾದ ದುಃಖವನ್ನು

ಹೊಂದಿರುವಿ.
ಘಾತಯಿತ್ವಾ ವಯಸ್ಯಾಂಶ್ಚ ಭ್ರಾತೄನಪಿ ಪಿತೄಂಸ್ತಥಾ |
ಪುತ್ರಾನ್ ಪೌತ್ರಾಂಸ್ತಥಾಽಽಚಾರ್ಯಾನ್ ತತೋಽಸಿ ನಿಧನಂ ಗತಃ ||
ಸ್ನೇಹಿತರನ್ನು, ಸಹೋದರರನ್ನು, ಪಿತೃಗಳನ್ನು, ಮಕ್ಕಳನ್ನು, ಮೊಮ್ಮಕ್ಕಳನ್ನು ಹಾಗೂ ಗುರುಗಳನ್ನು ಕೊಂದು ಅದರಿಂದಾಗಿ ನೀನು ಸಾಯುತ್ತಿರುವಿ.
ತವಾಪರಾಧಾದಸ್ಮಾಭಿರ್ಭ್ರಾತರಸ್ತೇ ಮಹಾರಥಾಃ |
ನಿಹತಾ ಜ್ಞಾತಯಶ್ಚಾನ್ಯೇ ದಿಷ್ಟಂ ಮನ್ಯೇ ದುರತ್ಯಯಮ್ ||26||
ನಿನ್ನ ತಪ್ಪಿನಿಂದಾಗಿ ಮಹಾರಥರಾದ ನಿನ್ನ ಸಹೋದರರನ್ನೂ ಮತ್ತು ಬೇರೆ ನಿನ್ನ ಬಂಧುಗಳನ್ನೂ, ನಾವು ಕೊಂದಿದ್ದೇವೆ. ಅದೃಷ್ಟವನ್ನು ಮೀರಲಾಗದು ಎಂದು ಭಾವಿಸುತ್ತೇನೆ.
ಸ್ನುಷಾಶ್ಚ ಪ್ರಸ್ನುಷಾಶ್ಚೈವ ಧೃತರಾಷ್ಟ್ರಸ್ಯ ವಿಹ್ವಲಾಃ |
ಗರ್ಹಯಿಷ್ಯಂತಿ ನೋ ನೂನಂ ವಿಧವಾಃ ಶೋಕಕರ್ಶಿತಾಃ ||27||
ಧೃತರಾಷ್ಟ್ರನ ಸೊಸೆಯಂದಿರು ಮತ್ತು ಅವರ ಸೊಸೆಯಂದಿರು ವಿಧವೆಯರಾಗಿ ದುಃಖದಿಂದ ನಿಶ್ಚಯವಾಗಿಯೂ ನಮ್ಮನ್ನು ನಿಂದಿಸುವರು.
ಸಂಜಯಃ
ಏವಮುಕ್ತ್ವಾ ಸುದುಃಖಾರ್ತೋ ನಿಶಶ್ವಾಸ ಸ ಪಾರ್ಥಿವಃ |
ವಿಲಲಾಪ ಚಿರಂ ಚಾಪಿ ಧರ್ಮಸೂನುರ್ಯುಧಿಷ್ಠಿರಃ ||28||
ಸಂಜಯ ಹೀಗೆ ಹೇಳಿ ರಾಜ ಧರ್ಮರಾಜನು ಬಹಳವಾಗಿ ದುಃಖಿಸುತ್ತಾ ನಿಟ್ಟುಸಿರನ್ನು ಬಿಟ್ಟನು. ಧರ್ಮಪುತ್ರನಾದ ಯುಧಿಷ್ಠಿರನು ಬಹಳ ಸಮಯದವರೆಗೆ ಅತ್ತನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದುರ್ಯೋಧನಪ್ರಹರಣೇ ಯುಧಿಷ್ಠಿರಪ್ರಲಾಪೋ ನಾಮ ಏಕೋನತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಭೀಮನು ಅನ್ಯಾಯ ಮಾಡಿದ್ದಾನೆ ಎಂದು ಅಂದುಕೊಂಡು ಬಲರಾಮನು ನೇಗಿಲನ್ನು ಹಿಡಿದುಕೊಂಡು ಭೀಮನ ಕಡೆಗೆ ಬರುವುದು. ಕೃಷ್ಣನು ಅವನನ್ನು ಸಮಾಧಾನಪಡಿಸಿದ್ದು ಮತ್ತು ಬಲರಾಮನು ದ್ವಾರಕೆಗೆ ಹೋದದ್ದು. ಧರ್ಮರಾಜನು ಕೃಷ್ಣ ಮತ್ತು ಭೀಮರ ಜೊತೆಗೆ ಮಾತನಾಡಿದ್ದು.
ಧೃತರಾಷ್ಟ್ರಃ
ಅಧರ್ಮೇಣ ಹತಂ ದೃಷ್ಟ್ವಾ ರಾಜಾನಂ ಮಾಧವೋತ್ತಮಃ |
ಕಿಮಬ್ರವೀತ್ ತದಾ ಸೂತ ಬಲದೇವೋ ಮಹಾಬಲಃ ||1||
ಧೃತರಾಷ್ಟ್ರ ಸೂತನೇ! ರಾಜನಾದ ದುರ್ಯೋಧನನು ಅಧರ್ಮಮಾರ್ಗದಲ್ಲಿ ಹತನಾದುದನ್ನು ನೋಡಿ ಮಾಧವೋತ್ತಮನಾದ ಶ್ರೀಕೃಷ್ಣನು ಏನು ಹೇಳಿದನು? ಮಹಾಬಲಶಾಲಿಯಾದ ಬಲರಾಮನು ಏನು ಹೇಳಿದನು?
ಗದಾಯುದ್ಧವಿಶೇಷಜ್ಞೋ ಗದಾಯುದ್ಧಸ್ಯ ಪಾರಗಃ |
ಕೃತವಾನ್ ರೌಹಿಣೇಯೋ ಯತ್ ತನ್ಮಮಾಚಕ್ಷ್ವ ಸಂಜಯ ||2||
ಗದಾಯುದ್ಧದ ವಿಶೇಷವನ್ನು ತಿಳಿದಿರುವ ಹಾಗೂ ಗದಾಯುದ್ಧದಲ್ಲಿ ಪಾರಂಗತನಾದ ಬಲರಾಮನು ಏನು ಮಾಡಿದನು? ಅದನ್ನು ನನಗೆ ಹೇಳು.
ಸಂಜಯಃ
ಶಿರಸ್ಯಭಿಹತಂ ದೃಷ್ಟ್ವಾ ಭೀಮಸೇನೇನ ತೇ ಸುತಮ್ |
ರಾಮಃ ಪ್ರಹರತಾಂ ಶ್ರೇಷ್ಠಶ್ಚುಕೋಪ ಬಲವದ್ ಬಲೀ ||3||
ಸಂಜಯ ಭೀಮನು ನಿನ್ನ ಮಗನ ತಲೆಯನ್ನು ಮರ್ದಿಸಿದ್ದನ್ನು ನೋಡಿ ಯುದ್ಧ ಮಾಡುವವರಲ್ಲಿಯೇ ಶ್ರೇಷ್ಠನಾದ ಬಲಶಾಲಿಯಾದ ಬಲರಾಮನು ಕೋಪಗೊಂಡನು.
ತತೋ ಮಧ್ಯೇ ನರೇಂದ್ರಾಣಾಮೂರ್ಧ್ವಬಾಹುರ್ಹಲಾಯುಧಃ |
ಕುರ್ವನ್ನಾರ್ತಸ್ವರಂ ಘೋರಂ ಧಿಗ್ಧಿಗಿತಿ ಚಾಬ್ರವೀತ್ ||4||
ಊರ್ಧ್ವಬಾಹುವಾದ ಬಲರಾಮನು ಎಲ್ಲಾ ರಾಜರ ಮಧ್ಯದಲ್ಲಿ ಆರ್ತಸ್ವರವನ್ನು ಮಾಡುತ್ತಾ `ಧಿಕ್ಕಾರ! ಧಿಕ್ಕಾರ!' ಎಂದು ಹೇಳಿದನು.
ಬಲದೇವಃ
ಅಹೋ ಧಿಗ್ಧಿಗಧೋ ನಾಭೇಃ ಪ್ರಹೃತಂ ಸತ್ಯವಿಕ್ರಮೇ |
ನೈತದ್ ದೃಷ್ಟಂ ಗದಾಯುದ್ಧೇ ಕೃತವಾನ್ ಯದ್ ವೃಕೋದರಃ ||5||
ಬಲದೇವ `ಅಹೋ! ಧಿಕ್ಕಾರ! ಧಿಕ್ಕಾರ! ಸತ್ಯವಾದ ಪರಾಕ್ರಮ ತೋರಿಸುತ್ತಾ ಧರ್ಮದ ಚೌಕಟ್ಟಿನಲ್ಲಿ ನಡೆಯುವ ಯುದ್ಧದಲ್ಲಿ ನಾಭಿಯ ಕೆಳಭಾಗಕ್ಕೆ ಹೊಡೆದಿದ್ದಾನೆ. ಭೀಮನು ಮಾಡಿದ ಕಾರ್ಯವು ಯಾವ ಗದಾಯುದ್ಧದಲ್ಲಿಯೂ ನಡೆದದ್ದು ಕಾಣಿಸುವುದಿಲ್ಲ.
ಅಧೋ ನಾಭ್ಯಾ ನ ಹಂತವ್ಯಮಿತಿ ಶಾಸ್ತ್ರಸ್ಯ ನಿಶ್ಚಯಃ |
ಅಯಂ ತು ಶಾಸ್ತ್ರಮೂಢಸ್ತು ಸ್ವಚ್ಛಂದಾತ್ ಪರಿವರ್ತತೇ ||6||

`ಗದಾಯುದ್ಧದಲ್ಲಿ ನಾಭಿಗಿಂತ ಕೆಳಭಾಗಕ್ಕೆ ಹೊಡೆಯಬಾರದು' ಎಂಬುದು ಶಾಸ್ತ್ರವು ಮಾಡಿದ ನಿರ್ಣಯ. ಶಾಸ್ತ್ರದ ವಿಷಯದಲ್ಲಿ ಮೂರ್ಖನಾದ ಈ ಭೀಮನು ಸ್ವೇಚ್ಛೆಯಿಂದ ವರ್ತಿಸಿದ್ದಾನೆ.
ಸಂಜಯಃ
ತಸ್ಯ ತತ್ತದ್ ಬ್ರುವಾಣಸ್ಯ ರೋಷಃ ಸಮಭವನ್ಮಹಾನ್ |
ತತೋ ಲಾಂಗಲಮುದ್ಯಮ್ಯ ಭೀಮಮಭ್ಯದ್ರವದ್ ಬಲೀ ॥7॥
ಸಂಜಯ ಹೀಗೆ ಹೇಳುತ್ತಿದ್ದಾಗ ಬಲರಾಮನಿಗೆ ಬಹಳವಾದ ಕೋಪವು ಉಂಟಾಗಿತ್ತು. ಬಲರಾಮನು ತನ್ನ ಆಯುಧವಾದ ನೇಗಿಲನ್ನು ಹಿಡಿದುಕೊಂಡು ಭೀಮನ ಮೇಲೆ ಆಕ್ರಮಣ ಮಾಡಲು ಮುಂದಾದನು.
ತಸ್ಯೋರ್ಧ್ವಬಾಹೋಃ ಸದೃಶಂ ರೂಪಮಾಸೀನ್ಮಹಾತ್ಮನಃ |
ಬಹುಧಾತುವಿಚಿತ್ರಸ್ಯ ಶ್ವೇತಸ್ಯೇವ ಮಹಾಗಿರೇಃ ॥8॥
ಉದ್ದನೆಯ ಬಾಹುವುಳ್ಳ ಮಹಾತ್ಮನಾದ ಬಲರಾಮನ ಶರೀರವು ಅನೇಕ ಗೈರಿಕಾದಿ ಚಿತ್ರಧಾತುಗಳುಳ್ಳ ಬೆಳ್ಳಗಿನ ಮಹಾಪರ್ವತಕ್ಕೆ ಸದೃಶವಾದ ರೂಪವುಳ್ಳದ್ದಾಗಿತ್ತು.
ಭ್ರಾತೃಭಿಃ ಸಹಿತೋ ಭೀಮಃ ಸಾರ್ಜುನೈರಸ್ತ್ರಕೋವಿದೈಃ |
ನ ವಿವ್ಯಥೇ ಮಹಾರಾಜ ದೃಷ್ಟ್ವಾ ಹಲಧರಂ ಬಲೀ ॥9॥
ಮಹಾರಾಜನೇ! ಹಲಾಯುಧವನ್ನು ಹಿಡಿದುಕೊಂಡಿದ್ದ ಬಲರಾಮನನ್ನು ನೋಡಿ ಭೀಮನಾಗಲೀ, ಅಸ್ತ್ರಜ್ಞರಾದ ಅರ್ಜುನ ಮೊದಲಾದ ಅವನ ಸಹೋದರರಾಗಲೀ ದುಃಖಿತರಾಗಲಿಲ್ಲ.
ಅಥ ರಾಮಂ ನಿಜಗ್ರಾಹ ಕೇಶವೋ ವಿನಯಾನ್ವಿತಃ |
ಬಾಹುಭ್ಯಾಂ ಪೀನವೃತ್ತಾಭ್ಯಾಂ ಪ್ರಯತ್ನಾದ್ ಬಲಿನಂ ಬಲೀ ॥10॥
ಅನಂತರ ಮಹಾಬಲವುಳ್ಳ ಶ್ರೀಕೃಷ್ಣನು ನಯದಿಂದ ಬಲಶಾಲಿಯಾದ ಬಲರಾಮನನ್ನು ದಷ್ಟಪುಷ್ಟವಾದ ತನ್ನ ಬಾಹುಗಳಿಂದ ಪ್ರಯತ್ನಪೂರ್ವಕವಾಗಿ ಹಿಡಿದನು.
ಸಿತಾಸಿತೌ ಯದುವರೌ ಶುಶುಭಾತೇಽಧಿಕಂ ತತಃ |
ಸಂಗತಾವಿವ ರಾಜೇಂದ್ರ ಕೈಲಾಸಾಂಜನಪರ್ವತೌ ॥11॥
ರಾಜೇಂದ್ರನೇ! ಬೆಳ್ಳಗಿನ ಬಲರಾಮ ಮತ್ತು ಕೃಷ್ಣವರ್ಣದ ಶ್ರೀಕೃಷ್ಣ - ಈ ಯದುಶ್ರೇಷ್ಠರೀರ್ವರೂ ಕೈಲಾಸ ಮತ್ತು ಅಂಜನಪರ್ವತಗಳು ಒಟ್ಟು ಸೇರಿದಂತೆ ಬಹಳವಾಗಿ ಶೋಭಿಸಿದರು.
ನಭೋಗತೌ ಯಥಾ ರಾಜನ್ ಚಂದ್ರಸೂರ್ಯೌ ದಿನಕ್ಷಯೇ ॥12॥
ರಾಜನೇ! ಸಾಯಂಕಾಲದ ಹೊತ್ತಿಗೆ ಆಕಾಶದಲ್ಲಿ ಇರುವ ಚಂದ್ರ ಮತ್ತು ಸೂರ್ಯರಂತೆ ಕಾಣಿಸಿದರು.
ಉವಾಚ ಚೈನಂ ಸಂರಬ್ಧಂ ಶಮಯನ್ನಿವ ಕೇಶವಃ ॥13॥
ಬಹಳ ಕೋಪಕ್ಕೊಳಗಾದ ಬಲರಾಮನನ್ನು ಸಮಾಧಾನಪಡಿಸುವ ರೀತಿಯಲ್ಲಿ ಶ್ರೀಕೃಷ್ಣನು ಹೀಗೆ ಹೇಳುತ್ತಾನೆ.
ಶ್ರೀಭಗವಾನ್
ಆತ್ಮವೃದ್ಧಿರ್ಮಿತ್ರವೃದ್ಧಿರ್ಮಿತ್ರಮಿತ್ರೋದಯಸ್ತಥಾ |
ವಿಪರೀತಂ ದ್ವಿಷತ್ಸ್ವೇತತ್ ಷಡ್ವಿಧಾ ವೃದ್ಧಿರಾತ್ಮನಃ ॥14॥
ಶ್ರೀಭಗವಾನ್ ಒಬ್ಬನಿಗೆ ಆರು ವಿಧದ ಏಳಿಗೆಯು ಉಂಟಾಗುವವು. ಅದರಲ್ಲಿ ತನ್ನ ವೃದ್ಧಿ, ತನ್ನ ಮಿತ್ರರ ಶ್ರೇಯಸ್ಸು, ತನ್ನ ಮಿತ್ರರಿಗೆ ಮಿತ್ರರಾದವರ ಏಳಿಗೆ ಇವು ತನ್ನ ಪಕ್ಷಕ್ಕೆ ಸಂಬಂಧಿಸಿದ ವೃದ್ಧಿಗಳು. ಇನ್ನು ಶತ್ರುಪಕ್ಷದ ನಾಶವೂ ತನ್ನ ವೃದ್ಧಿ ಎಂದು ಪರಿಗಣಿಸಲ್ಪಡುತ್ತದೆ. ಅದರಲ್ಲಿ ತನ್ನ ನೇರಶತ್ರುವಿನ ನಾಶ, ಶತ್ರುವಿನ ಮಿತ್ರನ ನಾಶ, ತನ್ನ ಶತ್ರುವಿನ ಮಿತ್ರರ ಮಿತ್ರರ ನಾಶ ಎಂಬುದಾಗಿ ಮೂರು ವಿಧದ ಶತ್ರುನಾಶಗಳು ತನ್ನ ವೃದ್ಧಿ ಎಂದೆನಿಸುತ್ತವೆ. ಹೀಗೆ ಒಬ್ಬನಿಗೆ ಆರು ವಿಧದ ವೃದ್ಧಿಗಳು ಉಂಟಾಗುತ್ತವೆ.
ಆತ್ಮನ್ಯಪಿ ಚ ಮಿತ್ರೇ ಚ ವಿಪರೀತಂ ಯದಾ ಭವೇತ್ |
ತದಾ ವಿದ್ವಾನ್ ಮನೋಜ್ಞಾಭಿಸ್ತದಾ ಶಾಂತಿಕರೋ ಭವೇತ್ ॥15॥
ತನ್ನ ನಾಶ ಮತ್ತು ತನ್ನವರ ನಾಶವು ಯಾವಾಗ ಉಂಟಾಗುವುದೋ ಆಗ ಜ್ಞಾನಿಯಾದವನು ಮನೋಹಾರಿಗಳಾದ ಮಾತುಗಳಿಂದ ಮತ್ತು ಕೃತಿಗಳಿಂದ ನಾಶದಿಂದುಂಟಾದ ದುಃಖವನ್ನು ಶಮನ ಮಾಡಿಕೊಳ್ಳಬೇಕು.
ಅಸ್ಮಾಕಂ ಸಹಜಂ ಮಿತ್ರಂ ಪಾಂಡವಾಃ ಶುದ್ಧಪೌರುಷಾಃ |
ಸ್ವಕಾಃ ಪಿತೃಷ್ವಸುಃ ಪುತ್ರಾಃ ಪರೈಶ್ಚ ನಿಕೃತಾ ಭೃಶಮ್ ॥16॥
ವಂಚನೆಯಿಲ್ಲದ ಶುದ್ಧಪೌರುಷವುಳ್ಳ ಪಾಂಡವರು ನಮಗೆ ಸ್ವಾಭಾವಿಕವಾದ ಮಿತ್ರರು. ಇವರು ನಮ್ಮವರು, ನಮ್ಮ ಸೋದರತ್ತೆಯ ಮಕ್ಕಳು, ಹಾಗೆಯೇ ಕೌರವರ ಮೋಸಕ್ಕೆ ಬಹಳವಾಗಿ ಬಲಿಯಾದವರು.
ಪ್ರತಿಜ್ಞಾಪಾಲನಂ ಧರ್ಮಃ ಕ್ಷತ್ರಿಯಸ್ಯೇತಿ ವೇತ್ಥ ತತ್ ॥17॥
ಕ್ಷತ್ರಿಯನಾದವನು ತನ್ನ ಪ್ರತಿಜ್ಞಾಪಾಲನೆಯನ್ನು ಮಾಡಲೇಬೇಕೆಂಬುದನ್ನು ತಿಳಿದುಕೊಳ್ಳು.
ಸುಯೋಧನಸ್ಯ ಗದಯಾ ಭಕ್ತಾತ್ಸ್ಯೂರೂ ಮಹಾಹವೇ |
ಇತಿ ಪೂರ್ವಂ ಪ್ರತಿಜ್ಞಾತಂ ಭೀಮೇನ ಹಿ ಸಭಾತಳೇ ॥18॥
ಹಿಂದೆ ಸಭಾಮಧ್ಯದಲ್ಲಿ ಭೀಮನು ಹೀಗೆ ಪ್ರತಿಜ್ಞೆಯನ್ನು ಮಾಡಿದ್ದನು: `ಮಹಾಯುದ್ಧದಲ್ಲಿ ಗದೆಯಿಂದ ದುರ್ಯೋಧನನ ತೊಡೆಯನ್ನು ಮುರಿಯುತ್ತೇನೆ' ಎಂಬುದು ಭೀಮನ ಪ್ರತಿಜ್ಞೆಯಾಗಿತ್ತು.
ಮೈತ್ರೇಯೇಣಾಭಿಶಪ್ತಶ್ಚ ಪೂರ್ವಮೇವ ಮಹರ್ಷಿಣಾ |
ಊರೂ ಭಂಕ್ಷ್ಯತಿ ತೇ ವೀರೋ ಗದಯೇತಿ ಪರಂತಪ ॥19॥

ಶತ್ರುತಾಪಕನೇ! ಹಿಂದೆಯೇ ಮೈತ್ರೆಯನು ದುರ್ಯೋಧನನಿಗೆ `ವೀರನು ನಿನ್ನ ತೊಡೆಗಳನ್ನು ಗದೆಯಿಂದ ಮುರಿಯುವನು' ಎಂದು ಶಾಪವನ್ನು ಕೊಟ್ಟಿದ್ದನು.
ಅತೋ ದೋಷಂ ನ ಪಶ್ಯಾಮಿ ಮಾ ಕ್ರುಧಸ್ತ್ವಂ ಪ್ರಲಂಬಹನ್ ॥20॥
ಪ್ರಲಂಬಾಸುರನನ್ನು ಕೊಂದ ಬಲರಾಮನೇ! ಆದ್ದರಿಂದ ಇದರಲ್ಲಿ ದೋಷವೇನೂ ಕಾಣಿಸುತ್ತಿಲ್ಲ. ನೀನು ಕೋಪಗೊಳ್ಳಬೇಡ.
ಯೋನೈರ್ಹಾರ್ದೈಶ್ಚ ಸಂಬಂಧೈಃ ಸಂಬದ್ಧಾಃ ಸ್ಮೇಹ ಪಾಂಡವೈಃ |
ತೇಷಾಂ ವೃದ್ಧ್ಯಾ ಹಿ ವೃದ್ಧಿರ್ನೋ ಮಾ ಕ್ರುಧಸ್ತ್ವಂ ನರರ್ಷಭ ॥21॥
ಕುಂತಿ ಮತ್ತು ಸುಭದ್ರೆಯರ ವಿವಾಹಕನ್ಯಾದಾನದಿಂದಾಗಿ ಹುಟ್ಟಿನಿಂದಲೂ, ಮನಸ್ಸಿನಿಂದಲೂ ನಮಗೆ ಸಂಬಂಧವುಳ್ಳವರು ಈ ಪಾಂಡವರು. ಅವರ ಏಳಿಗೆಯೇ ನಮ್ಮ ಏಳಿಗೆ. ಆದ್ದರಿಂದ ಕೋಪಗೊಳ್ಳಬೇಡ.
ಸಂಜಯಃ
ವಾಸುದೇವವಚಃ ಶ್ರುತ್ವಾ ಸೀರಭೃತ್ ಪ್ರಾಹ ಧರ್ಮವಿತ್ ॥22॥
ಸಂಜಯ ಶ್ರೀಕೃಷ್ಣನ ಮಾತನ್ನು ಕೇಳಿ ಧರ್ಮಜ್ಞನಾದ ಬಲರಾಮನು ಹೇಳುತ್ತಾನೆ.
ಶ್ರೀರಾಮಃ (ಬಲರಾಮಃ)
ಧರ್ಮಶ್ಚ ಧಾರಿತಃ ಸದ್ಭಿಃ ಸಹ ದ್ವಾಭ್ಯಾಂ ನಿಯಚ್ಛತಿ |
ಅರ್ಥಶ್ಚಾಪ್ಯತಿಲುಬ್ಧಸ್ಯ ಕಾಮಶ್ಚಾತಿಪ್ರಸಂಗಿಣಃ ॥23॥
ಬಲರಾಮ ಸಜ್ಜನರು ಧರ್ಮವನ್ನು ಪಾಲಿಸುತ್ತಾರೆ. ಆದರೆ ಆ ಧರ್ಮವು ಅರ್ಥ ಮತು ಕಾಮದಿಂದ ನಿಯಂತ್ರಿಸಲ್ಪಡುತ್ತದೆ. ಜಿಪುಣನ ಅರ್ಥವು ಧರ್ಮವನ್ನು ಸಂಕೋಚಕ್ಕೆ ಒಳಪಡಿಸುತ್ತದೆ. ಅತಿಕಾಮಾಸಕ್ತನ ಕಾಮವು ಧರ್ಮವನ್ನು ಸಂಕೋಚಗೊಳಿಸುತ್ತದೆ.
ಧರ್ಮಾರ್ಥೌ ಧರ್ಮಕಾಮೌ ಚ ಕಾಮಾರ್ಥೌ ಚಾಪ್ಯಪೀಡಯನ್ |
ಧಮಾರ್ಥಕಾಮಾನ್ ಯೋಽಭ್ಯೇತಿ ಸೋಽತ್ಯಂತಂ ಸುಖಮೇಧತೇ ॥
ಯಾರು ಧರ್ಮದಿಂದ ಅರ್ಥವನ್ನು, ಕಾಮವನ್ನೂ ಹಾನಿಪಡಿಸುವುದಿಲ್ಲವೋ, ಅರ್ಥದಿಂದ ಧರ್ಮ ಮತು ಕಾಮವನ್ನು ಹಾನಿಗೊಳಿಸುವುದಿಲ್ಲವೋ, ಕಾಮದಿಂದ ಧರ್ಮ ಮತು ಅರ್ಥವನ್ನು ಸಂಕೋಚಪಡಿಸುವುದಿಲ್ಲವೋ, ಇದಕ್ಕೆ ಹೊರತಾಗಿ ಯಥೋಚಿತವಾಗಿ ಧರ್ಮ, ಅರ್ಥ ಮತ್ತು ಕಾಮಗಳನ್ನು ಉಪಯೋಗಿಸಿ- ಕೊಳ್ಳುತ್ತಾನೆಯೋ ಅವನು ಬಹಳವಾಗಿ ಸುಖವನ್ನು ಅನುಭವಿಸುತ್ತಾನೆ.
ತದಿದಂ ವ್ಯಾಕುಲಂ ಸರ್ವಂ ಕೃತಂ ಧರ್ಮಸ್ಯ ಪೀಡನಾತ್ |
ಭೀಮಸೇನೇನ ಗೋವಿಂದ ಕಾಮಂ ತ್ವಂ ತು ಯಥಾಽಽತ್ಥ ಮಾಮ್ ॥
ಭೀಮನು (ಅರ್ಥಕ್ಕಾಗಿ) ಧರ್ಮವನ್ನು ಉಲ್ಲಂಘಿಸಿ ಎಲ್ಲವನ್ನೂ ಹಾಳುಮಾಡಿದ್ದಾನೆ. ಗೋವಿಂದನೇ! ನೀನು ಹೇಳಿದ್ದೂ ಕೂಡ ಕಾಮವನ್ನಾಶ್ರಯಿಸಿಯೇ ಹೊರತು ಧರ್ಮಸಮ್ಮತವಾದುದಲ್ಲ.
ವಾಸುದೇವಃ
ಅರೋಷಣೋಽಥ ಧರ್ಮಾತ್ಮಾ ಸತತಂ ಧರ್ಮವತ್ಸಲಃ |
ಭವಾನ್ ಪ್ರಖ್ಯಾಯತೇ ಲೋಕೇ ತಸ್ಮಾತ್ ಸಂಶಾಮ್ಯ ಮಾ ಕ್ರುಧಃ ॥
ವಾಸುದೇವ ನೀನು ಲೋಕದಲ್ಲಿ `ಕೋಪವಿಲ್ಲದವನು', `ಧರ್ಮಿಷ್ಠ' `ಧರ್ಮವತ್ಸಲ' ಎಂಬುದಾಗಿ ಪ್ರಸಿದ್ಧನಾಗಿರುವಿ. ಆದ್ದರಿಂದ ಸಮಾಧಾನವನ್ನು ಹೊಂದು. ಕೋಪಿಸಿಕೊಳ್ಳಬೇಡ.
ಪ್ರಾಪ್ತಂ ಕಲಿಯುಗಂ ವಿದ್ಧಿ ಪ್ರತಿಜ್ಞಾಂ ಪಾಂಡವಸ್ಯ ಚ |
ಆನೃಣ್ಯಂ ಯಾತು ವೈರಸ್ಯ ಪ್ರತಿಜ್ಞಾಯಾಶ್ಚ ಪಾಂಡವಃ ॥27॥
ಕಲಿಯುಗವು ಪ್ರಾಪ್ತವಾಗಿರುವುದನ್ನು ತಿಳಿದುಕೊ. ಭೀಮನ ಪ್ರತಿಜ್ಞೆಯನ್ನೂ ತಿಳಿ. ಭೀಮನು ತನ್ನಲ್ಲಿದ್ದ ದ್ವೇಷವನ್ನು ಉಪಶಮನಗೊಳಿಸಲಿ. ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳಲಿ.
ಗತಃ ಪುರುಷಶಾರ್ದೂಲೋ ಹತ್ವಾ ನೈಕೃತಿಕಂ ರಣೇ ॥28॥
ನರಶ್ರೇಷ್ಠನಾದ ಭೀಮನು ಕಪಟಿಯಾದ ದುರ್ಯೋಧನನನ್ನು ಕೊಂದುಹಾಕಿದ್ದಾನೆ.
ನಿಕೃತ್ಯಾ ನಿಕೃತಿಪ್ರಜ್ಞಂ ಯೋ ಹನ್ಯಾದ್ ವೈರಿಣಂ ರಣೇ |
ಅಧರ್ಮೋ ವಿದ್ಯತೇ ನಾತ್ರ ಯದ್ ಭೀಮೋ ಹತವಾನ್ ರಿಪುಮ್ ॥
ಕಪಟಿಯಾದ ಶತ್ರುವನ್ನು ರಣರಂಗದಲ್ಲಿ ಯಾವನು ಕಪಟದಿಂದಲೇ ಸಾಯಿಸುತ್ತಾನೆಯೋ ಅವನಲ್ಲಿ ಅಧರ್ಮವು ಇರುವುದಿಲ್ಲ. ಭೀಮನು ಆ ರೀತಿಯಲ್ಲಿಯೇ ದುರ್ಯೋಧನನನ್ನು ಕೊಂದಿರುತ್ತಾನೆ.
ಯುಧ್ಯಂತಂ ಸಮರೇ ವೀರಂ ಕುರುವೃಷ್ಣಿಯಶಸ್ಕರಮ್ |
ಅನೇನ ಕರ್ಣಃ ಸಂದಿಷ್ಟಃ ಪೃಷ್ಠತೋ ಧನುರಚ್ಛಿನತ್ ॥30॥
ತತಃ ಸಂಛಿನ್ನಧನ್ವಾನಂ ವಿರಥಂ ಪೌರುಷೇ ಸ್ಥಿತಮ್ |
ವ್ಯಾಯುಧೀಕೃತ್ಯ ಹತವಾನ್ ಸೌಭದ್ರಮಪಲಾಯಿನಮ್ ॥31॥
ಜನ್ಮಪ್ರಭೃತಿ ಲುಬ್ಧಶ್ಚ ಪಾಪಶ್ಚೈಷ ದುರಾತ್ಮವಾನ್ |
ನಿಹತೋ ಭೀಮಸೇನೇನ ದುರ್ಬುದ್ಧಿಃ ಕುಲಪಾಂಸನಃ ॥32॥
ಕುರುವಂಶಕ್ಕೂ ವೃಷ್ಣಿವಂಶಕ್ಕೂ ಕೀರ್ತಿಯನ್ನು ತಂದುಕೊಟ್ಟಿರುವ ಅಭಿಮನ್ಯುವು ಯುದ್ಧ ಮಾಡುತ್ತಿದ್ದಾಗ ಈ ದುರ್ಯೋಧನನು ಕರ್ಣನಿಗೆ ಆದೇಶಿಸಿ ಹಿಂಬದಿಯಿಂದ ಬಿಲ್ಲನ್ನು ತುಂಡರಿಸಿದನು. ಬಿಲ್ಲು ಮುರಿದರೂ ಪೌರುಷವನ್ನು ತೋರಿಸುತ್ತಾ ಯುದ್ಧದಲ್ಲಿ ಓಡಿಹೋಗದೆ ಕಾದಾಟವನ್ನು ಮಾಡುತ್ತಿದ್ದ ಅಭಿಮನ್ಯುವನ್ನು ಆಯುಧಶೂನ್ಯನನ್ನಾಗಿ ಮಾಡಿ ಕೊಂದಿದ್ದಾನೆ.

ಪ್ರತಿಜ್ಞಾಂ ಭೀಮಸೇನಸ್ಯ ತ್ರಯೋದಶಸಮಾರ್ಜಿತಾಮ್ |
ಕಿಮರ್ಥಂ ನಾಭಿಜಾನಾತಿ ಯುಧ್ಯಮಾನೋ ಹಿ ವಿಶ್ರುತಾಮ್ ॥33॥
ಭೀಮನು ಪ್ರತಿಜ್ಞೆಯನ್ನು ಮಾಡಿ ಹದಿಮೂರುವರ್ಷಗಳೇ ಕಳೆದರೂ, ಯುದ್ಧಕ್ಕೆ ಹೊರಟ ದುರ್ಯೋಧನನು ಪ್ರಸಿದ್ಧವಾದ ಈ ಪ್ರತಿಜ್ಞೆಯನ್ನು ಯಾಕೆ ತಿಳಿದುಕೊಳ್ಳಲಿಲ್ಲ?
ಊರ್ಧ್ವಮುತ್ಕ್ರಮ್ಯ ವೇಗೇನ ಜಿಘಾಂಸಂತಂ ವೃಕೋದರಃ |
ಬಭಂಜ ಗದಯಾ ಚೋರೂ ನ ಸ್ಥಾನೇ ನ ಚ ಮಂಡಲೇ ॥34॥
ಭೀಮನು ತನ್ನನ್ನು ಹೊಡೆಯುವ ಉದ್ದೇಶದಿಂದ ದುರ್ಯೋಧನನು ವೇಗವಾಗಿ ಮೇಲಕ್ಕೆ ಹಾರುತ್ತಿದ್ದಾಗ ಅವನ ತೊಡೆಗಳನ್ನು ಮುರಿದನು. ತೊಡೆಯನ್ನು ಮುರಿಯುವುದಕ್ಕಾಗಿಯೇ ಯಾವ ವ್ಯೂಹವನ್ನಾಗಲೀ ಮಂಡಲವನ್ನಾಗಲೀ ಭೀಮನು ರಚಿಸಿಕೊಂಡಿರಲಿಲ್ಲ.
ಸಂಜಯಃ
ಧರ್ಮಚ್ಛಲಮಿಮಂ ಶ್ರುತ್ವಾ ಕೇಶವಾತ್ ಸ ವಿಶಾಂಪತೇ |
ನೈವ ಪ್ರೀತಮನಾ ರಾಮೋ ವಚನಂ ಪ್ರಾಹ ಸಂಸದಿ ॥35॥
ಸಂಜಯ ರಾಜನೇ! ಶ್ರೀಕೃಷ್ಣನು ಮಾಡಿದ ಧರ್ಮದ ಸಮರ್ಥನೆಯನ್ನು ಕೇಳಿ ಬಲರಾಮನು ಮನಸ್ಸಮಾಧಾನವನ್ನು ಹೊಂದಲಿಲ್ಲ. ಅವನು ಎಲ್ಲರು ಸೇರಿದ್ದ ಸಭೆಯಲ್ಲಿ ಹೀಗೆ ಹೇಳಿದನು.
ರಾಮಃ(ಬಲಭದ್ರಃ)
ಹತ್ವಾಽಧರ್ಮೇಣ ರಾಜಾನಂ ಧರ್ಮಾತ್ಮಾನಂ ಸುಯೋಧನಮ್ |
ಜಿಹ್ಮಯೋಧೀತಿ ಲೋಕೇಽಸ್ಮಿನ್ ಖ್ಯಾತಿಂ ಯಾಸ್ಯತಿ ಪಾಂಡವಃ ॥36॥
ಬಲರಾಮ ಧರ್ಮಿಷ್ಠನಾದ ಸುಯೋಧನನನ್ನು ಅಧರ್ಮದಿಂದ ಕೊಂದು ಭೀಮನು ಕಪಟವಾಗಿ ಯುದ್ಧ ಮಾಡುವವನು ಎಂಬುದಾಗಿ ಲೋಕದಲ್ಲಿ ಕುಖ್ಯಾತಿಯನ್ನು ಹೊಂದುವನು.
ದುರ್ಯೋಧನೋಽಪಿ ಧರ್ಮಜ್ಞೋ ಲೋಕಾನ್ ಯಾಸ್ಯತಿ ಶಾಶ್ವತಾನ್ |
ಋಜುಯೋಧೀ ಹತೋ ರಾಜಾ ಧಾರ್ತರಾಷ್ಟ್ರಃ ಸುದುರ್ಮದಃ ॥37॥
ಧರ್ಮಜ್ಞನಾದ ಕಾಪಟ್ಯವಿಲ್ಲದೆ ನೇರವಾಗಿ ಯುದ್ಧ ಮಾಡಿ ಸತ್ತ ರಾಜ ದುರ್ಯೋಧನನಾದರೂ ಶಾಶ್ವತವಾದ ಲೋಕಕ್ಕೆ ಹೋಗುವನು.
ಯುದ್ಧದೀಕ್ಷಾಂ ಪ್ರವಿಶ್ಯಾಜೌ ರಣಯಜ್ಞಂ ವಿತತ್ಯ ಚ |
ಹುತ್ವಾಽಽತ್ಮಾನಮಮಿತ್ರಾಗ್ನೌ ಪ್ರಾಪ್ತಶ್ಚಾವಭೃಥಂ ಯಶಃ ॥38॥
ಯುದ್ಧದ ದೀಕ್ಷೆಯನ್ನು ಮಾಡಿಕೊಂಡು, ಯುದ್ಧವೆಂಬ ಯಜ್ಞವನ್ನು ನಡೆಸಿ, ತನ್ನನ್ನೇ ಯುದ್ಧಾಗ್ನಿಯಲ್ಲಿ ಹೋಮಿಸಿಕೊಂಡು ಯಾಗದ ಅವಭೃಥಸ್ನಾನವನ್ನು ಮಾಡಿ ಯಶಸ್ಸನ್ನು ಹೊಂದಿರುವನು.
ಸ್ವರ್ಗಂ ಗಂತಾ ಮಹಾರಾಜಃ ಸಸುಹೃಜ್ಜ್ಞಾತಿಬಾಂಧವಃ ॥39॥
ಮಹಾರಾಜ ದುರ್ಯೋಧನನು ತನ್ನ ಮಿತ್ರರು ಬಂಧು-ಬಾಂಧವರೊಡನೆ ಸ್ವರ್ಗಕ್ಕೆ ಹೋಗುವನು.
ಸಂಜಯಃ
ಇತ್ಯುಕ್ತ್ವಾ ರಥಮಾಸ್ಥಾಯ ರೌಹಿಣೇಯಃ ಪ್ರತಾಪವಾನ್ |
ಶ್ವೇತಾಭ್ರಶಿಖರಪ್ರಖ್ಯಃ ಪ್ರಯಯೌ ದ್ವಾರಕಾಂ ಪ್ರತಿ ॥40॥
ಸಂಜಯ ಪ್ರತಾಪಿಯಾದ ಬಿಳಿಮೋಡಕ್ಕೆ ಸದೃಶನಾದ ಬಲರಾಮನು ಹೀಗೆ ಹೇಳಿ ದ್ವಾರಕೆಗೆ ತೆರಳಿದನು.
ಪಾಂಚಾಲಾಶ್ಚ ಸವಾರ್ಷ್ಣೇಯಾಃ ಪಾಂಡವಾಶ್ಚ ವಿಶಾಂಪತೇ |
ರಾಮೇ ದ್ವಾರವತೀಂ ಯಾತೇ ನಾತಿಪ್ರಮನಸೋಽಭವನ್ ॥41॥
ಬಲರಾಮನು ಅಲ್ಲಿಂದ ದ್ವಾರಕೆಗೆ ಹೋದಾಗ ಪಾಂಚಾಲರು, ಯಾದವರು ಮತ್ತು ಪಾಂಡವರು ಮನಸ್ಸಿನಲ್ಲಿ ಅಸಮಾಧಾನಪಟ್ಟರು.
ತತೋ ಯುಧಿಷ್ಠಿರಂ ದೀನಂ ಚಿಂತಾಪರಮಧೋಮುಖಮ್ |
ಶೋಕೋಪಹತಸಂತಪ್ತಂ ವಾಸುದೇವೋಽಬ್ರವೀದಿದಮ್ ॥42॥
ಅನಂತರ ಚಿಂತಾಮಗ್ನನಾಗಿ ದುಃಖದಿಂದ ಬೆಂದು ಮುಖವನ್ನು ಕೆಳಗೆ ಹಾಕಿಕೊಂಡಿದ್ದ ಯುಧಿಷ್ಠಿರನಿಗೆ ವಾಸುದೇವನು ಹೀಗೆ ಹೇಳಿದನು.
ವಾಸುದೇವಃ
ಧರ್ಮರಾಜ ಕಿಮರ್ಥಂ ತ್ವಮಧರ್ಮಮನುಪಶ್ಯಸಿ |
ಹತಬಂಧೋರ್ಯದೇತಸ್ಯ ಪತಿತಸ್ಯ ವಿಚೇತಸಃ ॥43॥
ವಾಸುದೇವ ನಿಶ್ಚೇಷ್ಟನಾಗಿ ಕೆಳಗೆ ಬಿದ್ದಿರುವ ಈ ದುರ್ಯೋಧನನ ಬಗ್ಗೆ ನೀನು ಏಕೆ ಅಧರ್ಮವನ್ನು ನೋಡುತ್ತಿರುವಿ?
ಸುಯೋಧನಸ್ಯ ಭೀಮೇನ ಮೃದ್ಯಮಾನಂ ಪದಾ ಶಿರಃ ॥44॥
ಉಪಪ್ರೇಕ್ಷಸಿ ಕಸ್ಮಾತ್ ತ್ವಂ ಧರ್ಮಜ್ಞಸ್ತ್ವಂ ನರಾಧಿಪ ॥45॥
ರಾಜನೇ! ಧರ್ಮವನ್ನು ತಿಳಿದಿರುವ ನೀನು ಭೀಮನು ದುರ್ಯೋಧನನ ತಲೆಯನ್ನು ತುಳಿಯುತ್ತಿರುವುದನ್ನು ಅಧರ್ಮವನ್ನಾಗಿ ಯಾಕೆ ನೋಡುತ್ತಿರುವಿ?
ಯುಧಿಷ್ಠಿರಃ
ನ ಮಮೈತತ್ ಪ್ರಿಯಂ ಕೃಷ್ಣ ಯದ್ ರಾಜಾನಂ ವೃಕೋದರಃ |

ಪದಾ ಮೂರ್ಧ್ನ್ಯಸ್ಪೃಶತ್ ಕ್ರೋಧಾನ್ನ ಚ ಹೃಷ್ಯೇ ಕುಲಕ್ಷಯೇ ॥46॥
ಯುಧಿಷ್ಠಿರ ಕೃಷ್ಣನೇ! ಭೀಮನು ದುರ್ಯೋಧನನ ತಲೆಯನ್ನು ತನ್ನ ಕಾಲುಗಳಿಂದ ಕೋಪದಿಂದ ತುಳಿಯುತ್ತಿರುವುದು ನನಗೆ ಇಷ್ಟವಾಗಲಿಲ್ಲ. ಕುರುಕುಲವೇ ನಾಶವಾಗುತ್ತಿರುವಾಗ ನಾನು ಸಂತೋಷಪಡಲಾರೆ.
ನಿಕೃತ್ಯಾ ನಿಕೃತಾ ನಿತ್ಯಂ ಧೃತರಾಷ್ಟ್ರಸುತೈರ್ವಯಮ್ |
ಬಹೂನಿ ಪರುಷಾಣ್ಯುಕ್ತ್ವಾ ವನಂ ಪ್ರಸ್ಥಾಪಿತಾ ವಯಮ್ ॥47॥
ಇಲ್ಲಿಯವರೆಗೆ ಧೃತರಾಷ್ಟ್ರನ ಮಕ್ಕಳೂ ಮೋಸದಿಂದ ನಮ್ಮನ್ನು ವಂಚನೆಗೊಳಪಡಿಸಿದ್ದರು. ಕ್ರೂರವಾದ ಕಠೋರಮಾತುಗಳನ್ನು ಆಡಿ ನಮ್ಮನ್ನು ಕಾಡಿಗೆ ಕಳುಹಿಸಿದ್ದರು.
ಭೀಮಸೇನಸ್ಯ ತದ್ ದುಃಖಮತೀವ ಹೃದಿ ವರ್ತತೇ |
ಇತಿ ಸಂಚಿಂತ್ಯ ವಾರ್ಷ್ಣೇಯ ಮಯ್ಯೈತತ್ ಸಮುಪೇಕ್ಷಿತಮ್ ॥48॥
ಆ ದುಃಖವು ಭೀಮಸೇನನ ಹೃದಯದಲ್ಲಿ ಬಹಳವಾಗಿ ಇತ್ತು. ಶ್ರೀಕೃಷ್ಣನೇ! ಹೀಗೆ ಆಲೋಚಿಸಿ ನಾನು ಅವನ ಈ ಕಾರ್ಯವನ್ನು ಉಪೇಕ್ಷಿಸಿರುವೆನು.
ತಸ್ಮಾದ್ಧತ್ವಾಽಕೃತಪ್ರಜ್ಞಂ ಲುಬ್ಧಂ ಕಾಮವಶಾನುಗಮ್ |
ಲಭತಾಂ ಪಾಂಡವಃ ಕಾಮಂ ಧರ್ಮೋಽಧರ್ಮೋಽಪಿ ವಾ ಕೃತಃ ॥
ಆದ್ದರಿಂದ ಲೋಭಿಯಾದ ಕಾಮಕ್ಕೊಳಗಾಗಿರುವ ಮೂರ್ಖ ದುರ್ಯೋಧನನನ್ನು ಕೊಂದು, ಭೀಮನು ಧರ್ಮವನ್ನಾಗಲೀ ಅಥವಾ ಅಧರ್ಮವನ್ನಾಗಲೀ ಮಾಡಿ ತನ್ನ ಮನೋಕಾಮನೆಯನ್ನು ಹೊಂದಲಿ.
ಸಂಜಯಃ
ಇತ್ಯುಕ್ತವತಿ ಕೌಂತೇಯೇ ವಾಸುದೇವೋಽಬ್ರವೀದಿದಮ್ ॥50॥
ಕಾಮಮಸ್ತ್ವೇವಮಿತಿ ವೈ ಕೃಚ್ಛ್ರಾತ್ ಕುರುಕುಲೋದ್ವಹಮ್ ॥51॥
ಸಂಜಯ ಯುಧಿಷ್ಠಿರನು ಹೀಗೆ ಹೇಳಿದಾಗ ವಾಸುದೇವನು ಧರ್ಮರಾಜನಿಗೆ ಬಹಳ ಕಷ್ಟದಿಂದ `ಸರಿ! ಹಾಗೆಯೇ ಆಗಲಿ' ಎಂದು ಹೇಳಿದನು.
ಇತ್ಯುಕ್ತ್ವಾ ವಾಸುದೇವೋಽಪಿ ಭೀಮಸೇನಪ್ರಿಯೇಪ್ಸಯಾ |
ಅನ್ವಮೋದತ ತತ್ಸರ್ವಂ ಯದ್ಭೀಮೇನ ಕೃತಂ ರಣೇ ॥52॥
ಹೀಗೆ ಹೇಳಿ ಶ್ರೀಕೃಷ್ಣನು ಭೀಮಸೇನನ ಮೇಲಿನ ಪ್ರೀತಿಯಿಂದ ಭೀಮನು ಮಾಡಿದ ಕಾರ್ಯಗಳನ್ನೆಲ್ಲವನ್ನೂ ಒಪ್ಪಿ ಅನುಮೋದಿಸಿದನು.
ಅರ್ಜುನೋಽಪಿ ಮಹಾಬಾಹುರಪ್ರೀತೇನಾಂತರಾತ್ಮನಾ |
ನೋವಾಚ ವಚನಂ ಕಿಂಚಿತ್ ಭ್ರಾತರಂ ಸಾಧ್ವಸಾಧು ವಾ ॥53॥
ಮಹಾಬಾಹುವಾದ ಅರ್ಜುನನಾದರೂ ಮನಸ್ಸಿನಲ್ಲಿ ಅಸಮಾಧಾನವನ್ನು ಹೊಂದಿದ್ದ ಕಾರಣದಿಂದ ಭೀಮನನ್ನು ಕುರಿತು `ಸರಿ' ಅಥವಾ `ಸರಿಯಲ್ಲ' ಎಂಬುದಾಗಿ ಏನನ್ನೂ ಹೇಳಲಿಲ್ಲ.
ಭೀಮಸೇನೋಽಪಿ ಹತ್ವಾಽಽಜೌ ತವ ಪುತ್ರಮಮರ್ಷಣಃ |
ಅಭಿವಾದ್ಯ ತತೋ ರಾಜನ್ ಸಂಪ್ರಹೃಷ್ಟಃ ಕೃತಾಂಜಲಿಃ ॥54॥
ಪ್ರೋವಾಚ ಸುಮಹಾತೇಜಾ ಧರ್ಮಪುತ್ರಂ ಯುಧಿಷ್ಠಿರಮ್ |
ಹರ್ಷಾದುತ್ಫುಲ್ಲನಯನೋ ಜಿತಕಾಶೀ ವಿಶಾಂಪತೇ ॥55॥
ರಾಜನೇ! ಭೀಮಸೇನನಾದರೂ ಯುದ್ಧದಲ್ಲಿ ಅಸಹನೆಯಿಂದ ನಿನ್ನ ಮಗನನ್ನು ಕೊಂದು ಸಂತುಷ್ಟನಾಗಿ ನಮಸ್ಕರಿಸಿ, ಕೈಮುಗಿದುಕೊಂಡು ಬಹಳವಾದ ತೇಜಸ್ಸಿನಿಂದ ಕೂಡಿದವನಾಗಿ, ಆನಂದದಿಂದ ಕಣ್ಣುಗಳನ್ನು ಅರಳಿಸುತ್ತಾ, ಜಯಕಾಂತಿಯಿಂದ ಶೋಭಿಸುತ್ತಾ, ಧರ್ಮಪುತ್ರ ಯುಧಿಷ್ಠಿರನಿಗೆ ಹೀಗೆ ಹೇಳಿದನು.
ಭೀಮಃ
ತವಾದ್ಯ ಪೃಥಿವೀ ರಾಜನ್ ಕ್ಷೇಮಾ ನಿಹತಕಂಟಕಾ |
ತಾಂ ಪ್ರಶಾಧಿ ನರವ್ಯಾಘ್ರ ಸ್ವಧರ್ಮಮನುಪಾಲಯನ್ ॥56॥
ಭೀಮ ರಾಜನೇ! ಎಲ್ಲಾ ಪ್ರತಿಬಂಧಕಗಳನ್ನೂ ಕಳೆದುಕೊಂಡಿರುವ ಈ ಭೂಮಿಯು ನಿನ್ನದಾಗಿದೆ. ನರಶ್ರೇಷ್ಠನೇ! ನಿನ್ನ ಧರ್ಮವನ್ನು ಪಾಲಿಸುತ್ತಾ ಈ ಭೂಮಿಯನ್ನು ಆಳುವವನಾಗು.
ಯಸ್ತು ಕರ್ತಾಽಸ್ಯ ವೈರಸ್ಯ ನಿಕೃತ್ಯಾ ನಿಕೃತಿಪ್ರಿಯಃ |
ಸೋಽಯಂ ವಿನಿಹತಃ ಶೇತೇ ಪೃಥಿವ್ಯಾಂ ಪೃಥಿವೀಪತೇ ॥57॥
ರಾಜನೇ! ಮೋಸಮಾಡುವುದರಲ್ಲಿಯೇ ಪ್ರೀತಿಯನ್ನು ತೋರಿಸುತ್ತಿದ್ದ, ಮೋಸದಿಂದ ನಮ್ಮೊಡನೆ ಈ ದ್ವೇಷವನ್ನು ಮಾಡುತ್ತಿದ್ದ ದುರ್ಯೋಧನನು ಸತ್ತು ಭೂಮಿಯಲ್ಲಿ ಮಲಗಿದ್ದಾನೆ.
ದುಃಶಾಸನಪ್ರಭೃತಯಃ ಸರ್ವೇ ತೇ ಚೋಗ್ರವಾದಿನಃ |
ರಾಧೇಯಃ ಶಕುನಿಶ್ಚೈವ ನಿಹತಾಸ್ತವ ಶತ್ರವಃ ॥58॥
ದುಶ್ಶಾಸನಮೊದಲಾದ ಕ್ರೂರವಾಗಿ ಮಾತನಾಡುವವರು, ಕರ್ಣ ಮತ್ತು ಶಕುನಿ - ಈ ಎಲ್ಲಾ ನಿನ್ನ ಶತ್ರುಗಳು ಸತ್ತಿದ್ದಾರೆ.
ಸೇಯಂ ರತ್ನಸಮಾಕೀರ್ಣಾ ಮಹೀ ಸವನಪರ್ವತಾ |
ಉಪಾವೃತ್ತಾ ಮಹಾರಾಜ ತ್ವಾಮದ್ಯ ನಿಹತದ್ವಿಷಮ್ ॥59॥
ಮಹಾರಾಜನೇ! ರತ್ನದಿಂದ ತುಂಬಿರುವ ವನ-ಪರ್ವತಗಳಿಂದ ಸಹಿತವಾದ ಈ ಪೃಥಿಯು ಇವತ್ತು ನಿನ್ನ ಬಳಿಗೆ ಬಂದಿದೆ.

ಯುಧಿಷ್ಠಿರಃ
ಗತೋ ವೈರಸ್ಯ ನಿಲಯಂ ಹತೋ ದುರ್ಯೋಧನಸ್ತ್ವಯಾ |
ಕೃಷ್ಣಸ್ಯ ಮತಮಾಜ್ಞಾಯ ವಿಜಿತೇಯಂ ವಸುಂಧರಾ ॥60॥
ಯುಧಿಷ್ಠಿರ `ನಿನ್ನಿಂದ ಈ ದುರ್ಯೋಧನನು ಸತ್ತುಹೋದ. ಆ ಮೂಲಕ ಅವನೊಂದಿಗಿದ್ದ ವೈರವು ನಾಶವಾಯಿತು. ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದುಕೊಂಡು ಈ ಪೃಥಿವಿಯು ಈಗ ನಮ್ಮ ವಶಕ್ಕೆ ಬಂದಿದೆ.
ದಿಷ್ಟ್ಯಾ ಗತಸ್ತ್ವಮಾನೃಣ್ಯಂ ಮಾತುಃ ಕೋಪಸ್ಯ ಚೋಭಯೋಃ |
ದಿಷ್ಟ್ಯಾ ಜಯಸಿ ದುರ್ಧರ್ಷ ದಿಷ್ಟ್ಯಾ ಶತ್ರುರ್ನಿಪಾತಿತಃ ॥61॥
ಸೌಭಾಗ್ಯದಿಂದಾಗಿ ನೀನು ತಾಯಿಯ ಋಣವನ್ನು ತೀರಿಸಿರುವೆ. ನಿನ್ನ ಕೋಪದ ಋಣವನ್ನೂ ಕಳೆದುಕೊಂಡಿರುವೆ. ಪರರಿಗೆ ಎದುರಿಸಲು ಅಶಕ್ಯನಾದ ಭೀಮನೇ! ನೀನು ನಮ್ಮ ಭಾಗ್ಯದಿಂದಾಗಿ ಗೆದ್ದಿರುವೆ. ನಮ್ಮ ಭಾಗ್ಯದಿಂದಾಗಿ ಶತ್ರುವಾದ ದುರ್ಯೋಧನನು ಸತ್ತಿದ್ದಾನೆ.'
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದುರ್ಯೋಧನಪ್ರಹರಣೋ ನಾಮ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಪಾಂಚಾಲರೇ ಮೊದಲಾದವರು ಭೀಮನನ್ನು ಸ್ತುತಿಸಿದ್ದು.
ಕೃಷ್ಣ ಮತ್ತು ದುರ್ಯೋಧನರು ಪರಸ್ಪರವಾಗಿ ಬೈದುಕೊಂಡಿದ್ದು. ದುರ್ಯೋಧನನು ತನ್ನ ತಾನೇ ಕೊಂಡಾಡುತ್ತಿದ್ದಾಗ ಅವನ ತಲೆಯ
ಮೇಲೆ ದೇವತೆಗಳಿಂದ ಪುಷ್ಪವೃಷ್ಟಿ. ಭೀಷ್ಮಾದಿಗಳ ಮರಣದಿಂದಾಗಿ ದುಃಖಿತರಾದ ಪಾಂಡವರನ್ನು ಕೃಷ್ಣನು ಸಮಾಧಾನಪಡಿಸುವುದು.
ಧೃತರಾಷ್ಟ್ರಃ
ಹತಂ ದುರ್ಯೋಧನಂ ದೃಷ್ಟ್ವಾ ಭೀಮಸೇನೇನ ಸಂಯುಗೇ |
ಪಾಂಡವಾಃ ಸೃಂಜಯಾಶ್ಚೈವ ಕಿಮಕುರ್ವತ ಸಂಜಯ ॥1॥
ಧೃತರಾಷ್ಟ್ರ ಸಂಜಯನೇ! ಯುದ್ಧದಲ್ಲಿ ದುರ್ಯೋಧನನು ಭೀಮನಿಂದ ಪೆಟ್ಟುತಿಂದು ಕೆಳಗೆಬಿದ್ದಾಗ ಪಾಂಡವರು ಮತ್ತು ಸೃಂಜಯರು ಏನು ಮಾಡಿದರು?
ಸಂಜಯಃ
ಹತಂ ದುರ್ಯೋಧನಂ ದೃಷ್ಟ್ವಾ ಭೀಮಸೇನೇನ ಸಂಯುಗೇ |
ಸಿಂಹೇನೇವ ಮಹಾರಾಜ ಮತ್ತಂ ವನಗಜಂ ವನೇ ॥2॥
ಪ್ರಹೃಷ್ಟಮನಸಃ ಸರ್ವೇ ಕೃಷ್ಣೇನ ಸಹ ಪಾಂಡವಾಃ |
ಪಾಂಚಾಲಾಃ ಸೃಂಜಯಾಶ್ಚೈವ ನಿಹತೇ ಕುರುನಂದನೇ ॥3॥
ಆವಿಧ್ಯನ್ನುತ್ತರೀಯಾಣಿ ಸಿಂಹನಾದಾಂಶ್ಚ ಚಕ್ರಿರೇ ॥4॥
ನೈತಾನ್ ಹರ್ಷಸಮಾವಿಷ್ಟಾನಿಯಂ ಸೇಹೇ ವಸುಂಧರಾ ॥5॥
ಸಂಜಯ ಕಾಡಿನಲ್ಲಿ ಮದವೇರಿದ ಆನೆಯನ್ನು ಸಿಂಹವು ಕೆಳಗುರುಳಿಸಿದಂತೆ ಯುದ್ಧದಲ್ಲಿ ಭೀಮನು ದುರ್ಯೋಧನನನ್ನು ಕೆಳಗೆ ಬೀಳಿಸಿದ್ದನ್ನು ನೋಡಿ ಶ್ರೀಕೃಷ್ಣನೂ ಹಾಗೂ ಎಲ್ಲಾ ಪಾಂಡವರೂ ಸಂತೋಷಪಟ್ಟರು. ಕುರುನಂದನ ಬಿದ್ದಾಗ ಪಾಂಚಾಲರೂ ಮತ್ತು ಸೃಂಜಯರೂ ಸಂತೋಷಪಟ್ಟರು. ತಮ್ಮ ಉತ್ತರೀಯವಸ್ತ್ರವನ್ನು ಹಾರಿಸುತ್ತಾ ಸಿಂಹನಾದವನ್ನು ಮಾಡಿದರು. ಅವರ ಆನಂದದ ಸಂಭ್ರಮವನ್ನು ತಾಳಲಾರದೆ ಭೂಮಿಯು ನಡುಗಿತು.
ಧನೂಂಷ್ಯೇಕೇ ವ್ಯಾಕ್ಷಿಪಂತಿ ಜ್ಯಾಶ್ಚಾಪ್ಯನ್ಯೇ ತಥಾಽಕ್ಷಿಪನ್ |
ದಧ್ಮುಶ್ಚಾನ್ಯೇ ಮಹಾಶಂಖಾನ್ ಅನ್ಯೇ ಜಘ್ನುಶ್ಚ ದುಂದುಭೀನ್ ॥6॥
ಕೆಲವರು ಬಿಲ್ಲುಗಳಿಂದ ಶಬ್ದ ಮಾಡುತ್ತಿದ್ದರು. ಕೆಲವರು ಬಿಲ್ಲಿನ ಹಗ್ಗವನ್ನು ಎಳೆದು ಠೇಂಕರಿಸುತ್ತಿದ್ದರು. ಇನ್ನು ಕೆಲವರು ದೊಡ್ಡಶಂಖಗಳನ್ನು ಊದಿದರು. ಬೇರೆ ಕೆಲವರು ದುಂದುಭಿಗಳನ್ನು ಬಾರಿಸಿದರು.
ಚಿಕ್ರೀಡುಶ್ಚ ತಥೈವಾನ್ಯೇ ಜಹಸುಶ್ಚ ತವಾಹಿತಾಃ |
ಅಬ್ರುವಂಶ್ಚಾಸಕೃದ್ ವೀರಂ ಭೀಮಸೇನಮಿದಂ ವಚಃ ॥7॥
ಹಾಗೆಯೇ ಕೆಲವರು ಕುಣಿದು ಆಡಿದರು. ನಿನ್ನ ಶತ್ರುಗಳು ಕೆಲವರು ಜೋರಾಗಿ ಕೇಕೆ ಹಾಕುತ್ತಾ ನಗುತ್ತಿದ್ದರು. `ಭೀಮಸೇನನು ದೊಡ್ಡ ವೀರ' ಎಂಬುದಾಗಿ ಮತ್ತೆ ಮತ್ತೆ ಹೇಳುತ್ತಿದ್ದರು.
ಪಾಂಚಾಲಸೃಂಜಯಾಃ
ದುಷ್ಕರಂ ಭವತಾ ಕರ್ಮ ರಣೇಽದ್ಯ ಸುಮಹತ್ ಕೃತಮ್ |
ಕೌರವೇಯಂ ರಣೇ ಹತ್ವಾ ಗದಯಾ ಕೃತನಿಶ್ರಮಮ್ ॥8॥
ಪಾಂಚಾಲ-ಸೃಂಜಯರು ಭೀಮಸೇನನೇ! ಇಂದು ಕಾದಾಟದಲ್ಲಿ ದೃಢನಿಶ್ಚಯಮಾಡಿಕೊಂಡಿದ್ದ ದುರ್ಯೋಧನನನ್ನು ಹೊಡೆದುರುಳಿಸುವ ಮೂಲಕ ಯುದ್ಧದಲ್ಲಿ ಬೇರೆಯವರಿಗೆ ಮಾಡಲಸಾಧ್ಯವಾದ ದೊಡ್ಡ ಕೆಲಸವನ್ನು ನೀನು ಮಾಡಿರುವೆ.
ಇಂದ್ರೇಣೇವ ಹಿ ವೃತ್ರಸ್ಯ ವಧಂ ಪರಮಸಂಯುಗೇ |

ತ್ವಯಾ ಕೃತಮಮನ್ಯಂತ ಶತ್ರೋರ್ವಧಮಿಮಂ ಜನಾಃ ॥9॥
ಮಹಾಯುದ್ಧದಲ್ಲಿ ಇಂದ್ರನು ವೃತ್ರಾಸುರನನ್ನು ಕೊಂದ ಹಾಗೆ ನೀನು ಮಾಡಿದ ಈ ಶತ್ರುಸಂಹಾರವನ್ನು ಜನರು ಬಹಳವಾಗಿ ತಿಳಿದುಕೊಂಡಿದ್ದಾರೆ.
ಚರಂತಂ ವಿವಿಧಾನ್ ಮಾರ್ಗಾನ್ ಮಂಡಲಾನಿ ಚ ಸರ್ವಶಃ।
ದುರ್ಯೋಧನಮಿಮಂ ಹನ್ಯಾತ್ ಕೋಽನ್ಯಃ ಶೂರಂ ವೃಕೋದರಾತ್ ॥
`ಬೇರೆ ಬೇರೆ ರೀತಿಯಲ್ಲಿ ಮಂಡಲಾಕಾರಗಳಲ್ಲಿ ಸಂಚರಿಸುತ್ತಿದ್ದ ಈ ದುರ್ಯೋಧನನನ್ನು ಭೀಮನಲ್ಲದೆ ಬೇರೆ ಯಾರು ಹೊಡೆದುರುಳಿಸಿಯಾರು' ಎಂಬುದಾಗಿ ಜನರು ಮಾತಾಡುತ್ತಿದ್ದಾರೆ.
ವೈರಸ್ಯ ಚ ಗತಃ ಪಾರಂ ತ್ವಮಿಹಾನ್ಯೈಃ ಸುದುರ್ಗಮಮ್।
ಅಶಕ್ಯಮೇತದನ್ಯೇನ ಸಂಪಾದಯಿತುಮೀದೃಶಮ್॥11॥
ಬೇರೆಯವರಿಗೆ ಮಾಡಲು ಸಾಧ್ಯವಿಲ್ಲದ ಬಹಳ ದುರ್ಗಮವಾದ ದ್ವೇಷದ ಅಂತ್ಯವನ್ನು ಸಂಪಾದಿಸಿಕೊಂಡಿರುವಿ.
ಕುಂಜರೇಣೇವ ಮತ್ತೇನ ವೀರಸಂಗ್ರಾಮಮೂರ್ಧನಿ।
ದುರ್ಯೋಧನಶಿರೋ ದಿಷ್ಟ್ಯಾ ಪಾದೇನ ಮೃದಿತಂ ತ್ವಯಾ ॥12॥
ವೀರನೊಡನೆ ನಡೆದ ಕಾದಾಟದ ಕೊನೆಯಲ್ಲಿ ಮದವೇರಿದ ಆನೆಯಂತೆ ಅದೃಷ್ಟವಶಾತ್ ದುರ್ಯೋಧನನ ತಲೆಯನ್ನು ಕಾಲಿನಿಂದ ಮರ್ದಿಸಿರುವಿ.
ಸಿಂಹೇನ ಮಹಿಷಸ್ಯೇವ ಕೃತ್ವಾ ಸಂಗರಮದ್ಭುತಮ್।
ದುಃಶಾಸನಸ್ಯ ರುಧಿರಂ ಪೀತಂ ದಿಷ್ಟ್ಯಾ ತ್ವಯಾಽನಘ ॥13॥
ಅದ್ಭುತವಾದ ಯುದ್ಧವನ್ನು ಮಾಡಿ ಸಿಂಹವು ಮಹಿಷದ ರಕ್ತವನ್ನು ಪಾನಮಾಡುವಂತೆ ಹಿಂದೆ ನೀನು ದುಃಶಾಸನನ ರಕ್ತವನ್ನು ಪಾನಮಾಡಿದ್ದಿ. (ದುಃಶಾಸನನ ರಕ್ತವು ಭೀಮನ ಹಲ್ಲಿನ ಆಚೆಗೆ ಹೋಗಿರಲಿಲ್ಲ. - ಮ.ಭಾ.ತಾ.ನಿ.)
ಯೇ ವಿಪ್ರಕುರ್ವನ್ ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್।
ಮೂರ್ಧ್ನಿ ತೇಷಾಂ ಕೃತಃ ಪಾದೋ ದಿಷ್ಟ್ಯಾ ತೇ ಸ್ವೇನ ಕರ್ಮಣಾ ॥
ಯಾವನು ರಾಜನಾದ ಧರ್ಮಿಷ್ಠ ಯುಧಿಷ್ಠಿರನಿಗೆ ಮೋಸಮಾಡಿದ್ದನೋ ಅವರ ತಲೆಯನ್ನು ಕಾಲಿನಿಂದ ಒದ್ದು ಅದ್ಭುತ ಕಾರ್ಯವನ್ನು ಮಾಡಿರುವಿ.
ಅಮಿತ್ರಾಣಾಮಧಿಷ್ಠಾನಾದ್ ವಧಾದ್ ದುರ್ಯೋಧನಸ್ಯ ಚ।
ಭೀಮ ದಿಷ್ಟ್ಯಾ ಪೃಥಿವ್ಯಾಂ ತೇ ಪ್ರಥಿತಂ ಸುಮಹದ್ಯಶಃ ॥15॥
ಭೀಮಸೇನನನೇ! ಶತ್ರುಗಳನ್ನು ಮೆಟ್ಟಿ ನಿಂತಿದ್ದರಿಂದ ಹಾಗೂ ದುರ್ಯೋಧನನನ್ನು ಕೆಳಗೆ ಬೀಳಿಸಿದ್ದರಿಂದ ನಿನ್ನ ಮಹತ್ಕೀರ್ತಿಯು ಭೂಮಿಯಲ್ಲೆಲ್ಲಾ ಹರಡಿದೆ.
ಏವಂ ನೂನಂ ಹತೇ ವೃತ್ರೇ ಶಕ್ರಂ ನಂದಂತಿ ವಂದಿನಃ।
ಯಥಾ ತ್ವಾಂ ನಿಹತಾಮಿತ್ರಂ ಸ್ವಯಂ ನಂದಾಮ ಭಾರತ ॥16॥
ಭರತಕುಲೋದ್ಭವನೇ! ಹಿಂದೆ ಇಂದ್ರನು ವೃತ್ರಾಸುರನನ್ನು ಕೊಂದಾಗ ವಂದಿ-ಮಾಗಧರು ಇಂದ್ರನನ್ನು ಹೇಗೆ ಹೊಗಳಿದ್ದರೋ ಹಾಗೆಯೇ ನಾವು ಶತ್ರುಸಂಹಾರಕನಾದ ನಿನ್ನನ್ನು ಕೊಂಡಾಡುತ್ತೇವೆ.
ದುರ್ಯೋಧನವಧೇ ಯಾನಿ ರೋಮಾಣಿ ಹೃಷಿತಾನಿ ನಃ।
ಅದ್ಯಾಪಿ ನ ವಿದೃಶ್ಯಂತೇ ತಾನಿ ತದ್ವಿದ್ಧಿ ಭಾರತ ॥17॥
ಭಾರತನೇ! ದುರ್ಯೋಧನನನ್ನು ಹೊಡೆದು ಕೆಳಗೆ ಬೀಳಿಸಿದಾಗ ಸೆಟೆದು ನಿಂತ ನಮ್ಮ ರೋಮಗಳು ಇನ್ನೂ ಹಾಗೆಯೇ ಇವೆ. ನೀನೂ ನೋಡು.
ಸಂಜಯಃ
ಇತ್ಯಬ್ರುವನ್ ಭೀಮಸೇನಂ ವಾದಿಕಾಸ್ತತ್ರ ಸಂಗತಾಃ।
ತಾನ್ ಹೃಷ್ಟಾನ್ ಪುರುಷವ್ಯಾಘ್ರಾನ್ ಪಾಂಚಾಲಾನ್ ಪಾಂಡವೈಃ ಸಹ।
ಬ್ರುವತಃ ಸದೃಶಂ ತತ್ತತ್ ಪ್ರೋವಾಚ ಮಧುಸೂದನಃ ॥18॥
ಸಂಜಯ ಹೀಗೆ ವಂದಿ-ಮಾಗಧರು ಸೇರಿ ಭೀಮಸೇನನನ್ನು ಹೊಗಳಿ ಹೇಳಿದರು. ಸಂತುಷ್ಟರಾದ ಪಾಂಚಾಲ ಮತ್ತು ಪಾಂಡವರ ಕಡೆಯ ನರಶ್ರೇಷ್ಠರು ಭೀಮನನ್ನು ಕುರಿತು ಯೋಗ್ಯವಾದ ಮಾತುಗಳನ್ನು ಹೇಳುತ್ತಿದ್ದಾಗ ಅವರಿಗೆ ಮಧುಸೂದನನು ಹೀಗೆ ಹೇಳುತ್ತಾನೆ.
ಶ್ರೀಭಗವಾನ್
ನಾನ್ಯಾಯಾನ್ನಿಹತಃ ಶತ್ರುರಿತಿ ವಕ್ತುಂ ಜನಾಧಿಪಾನ್।
ಅಸಕೃದ್ ವಾಗ್ಭಿರುಗ್ರಾಭಿರ್ನಿಹತೋ ಹ್ಯೇಷ ಮಂದಧೀಃ ॥19॥
ತದೇವೈಷ ಹತಃ ಕ್ಷುದ್ರೋ ಯದೈವ ನಿರಪತ್ರಪಃ।
ಲುಬ್ಧಃ ಪಾಪಸಹಾಯಶ್ಚ ಸುಹೃದಾಂ ಶಾಸನಾತಿಗಃ ॥20॥
ಶತ್ರುವಾದ ದುರ್ಯೋಧನನನ್ನು ಭೀಮನು ಅನ್ಯಾಯದಿಂದ ಕೊಲ್ಲಲಿಲ್ಲ ಎಂದು ಅಲ್ಲಿ ಸೇರಿದ ರಾಜರುಗಳೆಲ್ಲರಿಗೆ ತಿಳಿಸುವುದಕ್ಕಾಗಿ ಮಧುಸೂದನನು ಅವರಿಗೆ ಹೀಗೆ ಹೇಳಿದನು: `ಈ ಮಂದಬುದ್ಧಿಯ ದುರ್ಯೋಧನನು ಅನೇಕಬಾರಿ ಸಭಾಮಧ್ಯದಲ್ಲಿ ಕ್ರೂರವಾದ ಮಾತುಗಳನ್ನು ಆಡಿದ್ದರಿಂದ ಇವತ್ತು ಹತನಾಗಿದ್ದಾನೆ. ದುಷ್ಟನಾದ ಪಾಪಿಗಳ ಸಹಾಯವನ್ನು ಪಡೆಯುತ್ತಿದ್ದ ಲಜ್ಜೆಗೆಟ್ಟ ಲೋಭಿ ದುರ್ಯೋಧನನು ಯಾವಾಗ ಸಜ್ಜನರ ಶಾಸನವನ್ನು ಮೀರಿದನೋ ಆಗಲೇ ಸತ್ತುಹೋಗಿದ್ದನು.

ಬಹುಶೋ ವಿದುರದ್ರೋಣಕೃಪಗಾಂಗೇಯಸಂಜಯೈಃ |
ಪಾಂಡುಭ್ಯಃ ಪ್ರೋಚ್ಯಮಾನೋಽಪಿ ಪಿತ್ರ್ಯಮಂಶಂ ನ ದತ್ತವಾನ್ ॥21॥
ವಿದುರ, ದ್ರೋಣ, ಕೃಪ, ಭೀಷ್ಮ, ಸಂಜಯ ಇವರು ಇವನಿಗೆ ಅನೇಕ ಬಾರಿ ಹೇಳಿದರೂ ಪಾಂಡವರಿಗೆ ಸೇರಬೇಕಾದ ಭೂಭಾಗವನ್ನು ಕೊಡಲಿಲ್ಲ.
ನಾನೇನ ಕಾರ್ಯೇ ದುಷ್ಟೇನ ಶ್ರುತೇನೈವ ಕಥಾಸ್ವಪಿ |
ಈದೃಶೋ ಮಿತ್ರಮರ್ಯಾದೋ ಗತಿಂ ಯಾತಾ ಹಿ ತಾದೃಶೀಮ್ ॥
ಇವನನ್ನು ನೋಡುವುದರಿಂದಾಗಲೀ, ಕಥೆಗಳಲ್ಲಿ ಇವನ ಬಗ್ಗೆ ಶ್ರವಣ ಮಾಡುವುದರಿಂದಾಗಲೀ ಯಾವ ಕಾರ್ಯವೂ (ಪ್ರಯೋಜನವೂ) ಇಲ್ಲ. ಹೀಗೆ ಧರ್ಮದ ನಿಯಮ ಮೀರಿ ನಡೆಯುವವರು ಅದಕ್ಕೆ ಸರಿಯಾದ ಗತಿಯನ್ನೇ ಹೊಂದುತ್ತಾರೆ.
ಸಂಜಯಃ
ಶ್ರುತ್ವೈವಂ ವದತಸ್ತಸ್ಯ ಸಾಽಸೂಯಂ ವಚನಂ ತದಾ |
ಶಪನ್ನಿವ ಚ ರೋಷೇಣ ಸ್ಫುರನ್ನಿವ ಚ ಭೂಪತಿಃ ॥23॥
ಸಂಜಯ ಈ ರೀತಿಯಲ್ಲಿ ಶ್ರೀಕೃಷ್ಣನು ಹೇಳಿದ್ದ ಅಸೂಯಾಸಹಿತವಾದ ಮಾತನ್ನು ಕೇಳಿ ರಾಜ ದುರ್ಯೋಧನನು ಕೋಪದಿಂದ ನಡುಗುತ್ತಾ ಶಪಿಸುವ ರೀತಿಯಲ್ಲಿ ವರ್ತಿಸಿದನು.
ಶ್ರೀಭಗವಾನ್
ನೈಷ ಯೋಗ್ಯೋಽತ್ರ ಮಿತ್ರಂ ವಾ ಶತ್ರುರ್ವಾ ಪುರುಷಾಧಮಃ |
ಕಿಮನೇನಾತಿನುನ್ನೇನ ವಾಗ್ಭಿಃ ಕಾಷ್ಠಸಧರ್ಮಣಾ ॥24॥
ಶ್ರೀಭಗವಾನ್ ಈ ಪುರುಷಾಧಮನು ಮಿತ್ರ ಎಂಬುದಾಗಿ ಪರಿಗಣಿಸಲೂ ಯೋಗ್ಯನಲ್ಲ. ಶತ್ರು ಎಂಬುದಾಗಿ ಪರಿಗಣಿಸಲೂ ಯೋಗ್ಯನಲ್ಲ. ಮಾತುಗಳಿಂದ ಬಹಳವಾಗಿ ಪೀಡಿತನಾಗಿ ಕಟ್ಟಿಗೆತುಂಡಿಗೆ ಸಮಾನನಾದ ಇವನಿಂದ ಏನೂ ಆಗದು.
ರಥೇಷ್ವಾರೋಹತ ಕ್ಷಿಪ್ರಂ ಗಚ್ಛಾಮ ವಸುಧಾಧಿಪಾಃ |
ದಿಷ್ಟ್ಯಾ ಹತೋಽಯಂ ಪಾಪಾತ್ಮಾ ಸಾಮಾತ್ಯಜ್ಞಾತಿಬಾಂಧವಃ ॥25॥
ರಾಜರೇ! ನಾವೆಲ್ಲರೂ ಬೇಗನೇ ರಥಗಳನ್ನು ಏರಿ ಹೊರಟುಹೋಗೋಣ. ದೈವವಶಾತ್ ಪಾಪಿಸ್ವರೂಪಿಯಾದ ದುರ್ಯೋಧನನು ಮಂತ್ರಿ ಮತ್ತು ಬಾಂಧವರೊಡನೆ ನಾಶವಾಗಿದ್ದಾನೆ.
ಸಂಜಯಃ
ಇತಿ ಶ್ರುತ್ವಾಽಽತ್ಮನಿ ಕ್ಷೇಪಂ ಕೃಷ್ಣಾದ್ ದುರ್ಯೋಧನೋ ನೃಪಃ |
ಅಮರ್ಷವಶಮಾಪನ್ನ ಉದತಿಷ್ಠದ್ವಿಶಾಂಪತೇ ॥26॥
ಸಂಜಯ ರಾಜನೇ! ತನ್ನ ವಿಷಯದಲ್ಲಿ ತಿರಸ್ಕಾರದ ಮಾತುಗಳನ್ನು ಕೇಳಿಸಿಕೊಂಡ ರಾಜ ದುರ್ಯೋಧನನು ಅಸಹನೆಗೊಂಡು ಎದ್ದನು.
ಸ್ಫಿಗ್ದೇಶೇನೋಪವಿಷ್ಟಃ ಸನ್ ದೋರ್ಭ್ಯಾಂ ವಿಷ್ಟಭ್ಯ ಮೇದಿನೀಮ್ |
ದೃಷ್ಟಿಂ ಭ್ರೂಸಂಕಟಾಂ ಕೃತ್ವಾ ವಾಸುದೇವೇ ನ್ಯಪಾತಯತ್ ॥27॥
ಎರಡು ಕೈಗಳನ್ನು ನೆಲಕ್ಕೂರಿಕೊಂಡು ಸೊಂಟದ ಸಹಾಯದಿಂದ ಕುಳಿತುಕೊಂಡು ಹುಬ್ಬುಗಂಟಿಕ್ಕುತ್ತಾ ಶ್ರೀಕೃಷ್ಣನನ್ನು ದಿಟ್ಟಿಸಿ ನೋಡತೊಡಗಿದನು.
ಅರ್ಧೋನ್ನತಶರೀರಸ್ಯ ರೂಪಮಾಸೀನ್ನೃಪಸ್ಯ ತತ್ |
ಕ್ರುದ್ಧಸ್ಯಾಶೀವಿಷಸ್ಯೇವ ಚ್ಛಿನ್ನಪುಚ್ಛಸ್ಯ ಭೋಗಿನಃ ॥28॥
ಮೇಲ್ಭಾಗವು ಮೇಲಿದ್ದುದರಿಂದ ರಾಜನ ಆಕಾರವು ಅರ್ಧಭಾಗ ಮುರಿದ ಕುಪಿತವಾದ ಸರ್ಪದ ಆಕಾರದ ಹಾಗೆ ಇತ್ತು.
ಪ್ರಾಣಾಂತಕರಿಣೀಂ ಘೋರಾಂ ವೇದನಾಮವಿಚಿಂತಯನ್ |
ದುರ್ಯೋಧನೋ ವಾಸುದೇವಂ ವಾಗ್ಭಿರುಗ್ರಾಭಿರಾರ್ದಯತ್ ॥29॥
ಪ್ರಾಣಹೋಗುವ ರೀತಿಯಲ್ಲಿ ನೋವು ಉಂಟಾಗುತ್ತಿದ್ದರೂ ಅದನ್ನು ಪರಿಗಣಿಸದೆ ದುರ್ಯೋಧನನು ಶ್ರೀಕೃಷ್ಣನನ್ನು ಕ್ರೂರವಾದ ಮಾತುಗಳಿಂದ ತಿವಿಯತೊಡಗಿದನು.
ದುರ್ಯೋಧನಃ
ಕಂಸದಾಸಸ್ಯ ದಾಯಾದ ನ ತೇ ಲಜ್ಜಾಸ್ತ್ಯನೇನ ವೈ |
ಅಧರ್ಮೇಣ ಗದಾಯುದ್ಧೇ ಯದಹಂ ವಿನಿಪಾತಿತಃ ॥30॥
ದುರ್ಯೋಧನ ಕಂಸಸೇವಕರ ದ್ರವ್ಯವನ್ನು ತಿನ್ನುವವನೇ! ನಿನಗೆ ನಾಚಿಕೆಯೇ ಇಲ್ಲ. ಗದಾಯುದ್ಧದಲ್ಲಿ ಅಧರ್ಮರೀತಿಯಲ್ಲಿ ನಾನು ಕೆಳಬಿದ್ದಿದ್ದೇನೆ.
ಊರೂ ಭಿಂಧೀತಿ ಭೀಮಸ್ಯ ಸ್ಮೃತಿಂ ಮಿಥ್ಯಾ ಪ್ರಯಚ್ಛಸಿ |
ಕಿಂ ನ ವಿಜ್ಞಾತಮೇತನ್ಮೇ ಯದರ್ಜುನಮವೋಚಥಾಃ ॥31॥
`ದುರ್ಯೋಧನನ ತೊಡೆಗಳನ್ನು ಮುರಿ' ಎಂಬುದಾಗಿ ನೀನು ಭೀಮನಿಗೆ ಅನ್ಯಾಯದ ಮಾತನ್ನು ಹೇಳಿದೆ. ನೀನು ಅರ್ಜುನನಿಗೆ ಹೇಳಿದ ಮಾತುಗಳನ್ನು ನಾನು ತಿಳಿದುಕೊಂಡಿಲ್ಲವೇನು?
ಪಾತಯಿತ್ವಾ ಮಹೀಪಾಲಾನ್ ಋಜುಯುದ್ಧಾನ್ ಸಹಸ್ರಶಃ |
ಜಿಹ್ಮೈರುಪಾಯೈರ್ನಿಪುಣೈರ್ನ ತೇ ಲಜ್ಜಾ ನ ತೇ ಘೃಣಾ ॥32॥
ಋಜುಮಾರ್ಗದಲ್ಲಿ ಯುದ್ಧಮಾಡುತ್ತಿದ್ದ ಸಾವಿರಾರು ರಾಜರನ್ನು ಕಪಟ ಉಪಾಯಗಳಿಂದ ಸಾಯಿಸಿರುವಿ. ನಿನಗೆ ನಾಚಿಕೆಯಾಗಲೀ,

ಕರುಣೆಯಾಗಲೀ ಇಲ್ಲ.
ಅಹನ್ಯಹನಿ ಶೂರಾಣಾಂ ಕುರ್ವಾಣಃ ಕದನಂ ಮಹತ್ |
ಶಿಖಂಡಿನಂ ಪುರಸ್ಕೃತ್ಯ ಘಾತಿತಃ ಸ ಪಿತಾಮಹಃ ||33||
ಪ್ರತಿದಿನವೂ ಯೋಧರೊಡನೆ ಚೆನ್ನಾಗಿ ಯುದ್ಧ ಮಾಡುತ್ತಿದ್ದ ನಮ್ಮ ತಾತ ಭೀಷ್ಮನನ್ನು ಶಿಖಂಡಿಯ ದರ್ಶನದ ಮೂಲಕ ಕೆಳಹಾಕಿರುವಿ.
ಅಶ್ವತ್ಥಾಮ್ನಃ ಸನಾಮಾನಂ ಹತ್ವಾ ನಾಗಂ ಸುದುರ್ಮತೇ |
ಆಚಾರ್ಯಸ್ತ್ಯಾಜಿತಃ ಶಸ್ತ್ರಂ ಕಿಂ ತನ್ನ ವಿದಿತಂ ಮಮ ||34||
ದುಷ್ಟಬುದ್ಧಿಯವನೇ! ಅಶ್ವತ್ಥಾಮ ಎಂಬ ಹೆಸರುಳ್ಳ ಆನೆಯನ್ನು ಕೊಂದು ದ್ರೋಣಾಚಾರ್ಯನು ಶಸ್ತ್ರತ್ಯಾಗ ಮಾಡುವಂತೆ ಮಾಡಿರುವಿ. ಇದು ನನಗೆ ತಿಳಿದಿಲ್ಲವೇನು?
ಸ ಚಾನೇನ ನೃಶಂಸೇನ ಧೃಷ್ಟದ್ಯುಮ್ನೇನ ವೀರ್ಯವಾನ್ |
ಹನ್ಯಮಾನಸ್ತ್ವಯಾ ದೃಷ್ಟೋ ನ ಚೈನಂ ಸಮವಾರಯಃ ||35||
ಕ್ರೂರಿಯಾದ ಧೃಷ್ಟದ್ಯುಮ್ನನು ವೀರನಾದ ದ್ರೋಣನನ್ನು ಕೊಲ್ಲುತ್ತಿರುವುದನ್ನು ನೋಡುತ್ತಿದ್ದರೂ ನೀನು ಅವನನ್ನು ತಡೆಯಲಿಲ್ಲ.
ವಧಾರ್ಥಂ ಪಾಂಡುಪುತ್ರಸ್ಯ ಯಾಚಿತಾಂ ಶಕ್ತಿಮೇವ ಚ |
ಘಟೋತ್ಕಚೇ ವ್ಯಂಸಯೇಥಾಃ ಕಸ್ತ್ವತ್ತಃ ಪಾಪಕೃತ್ತಮಃ ||36||
ಪಾಂಡುವಿನ ಮಕ್ಕಳಲ್ಲಿ ಒಬ್ಬನನ್ನು ಕೊಲ್ಲಲು ಬೇಡಿ ಪಡೆದಿದ್ದ ಶಕ್ತ್ಯಾಯುಧವನ್ನು ಘಟೋತ್ಕಚನ ಮೇಲೆ ಪ್ರಯೋಗಿಸುವಂತೆ ಮಾಡಿದ್ದಿ. ನಿನಗಿಂತ ದೊಡ್ಡ ಪಾಪಿ ಯಾರಿದ್ದಾರೆ?
ಛಿನ್ನಬಾಹುಃ ಪ್ರಾಯಗತಸ್ತಥಾ ಭೂರಿಶ್ರವಾ ರಣೇ |
ತ್ವಯಾ ನಿಸೃಷ್ಟೇನ ಹತಃ ಶೈನೇಯೇನ ದುರಾತ್ಮನಾ ||37||
ಕೈಗಳನ್ನು ಕಳೆದುಕೊಂಡು ಪ್ರಾಯೋಪವೇಶವ್ರತವನ್ನು ಮಾಡುತ್ತಿದ್ದ ಭೂರಿಶ್ರವನನ್ನು ಯುದ್ಧದಲ್ಲಿ ದುಷ್ಟನಾದ ಸಾತ್ಯಕಿಯನ್ನು ಕಳುಹಿಸಿಕೊಟ್ಟು ಕೊಲ್ಲಿಸಿರುವಿ.
ಕುರ್ವಾಣಶ್ಚೋತ್ತಮಂ ಕರ್ಮ ಕರ್ಣಃ ಪಾರ್ಥಜಿಘಾಂಸಯಾ |
ವ್ಯಸನೇನಾಶ್ವಸೇನಸ್ಯ ಪನ್ನಗೇಂದ್ರಸುತಸ್ಯ ವೈ ||38||
ಅರ್ಜುನನನ್ನು ಕೊಲ್ಲಬೇಕೆಂದು ಕರ್ಣನು ಉತ್ತಮವಾದ ಕಾರ್ಯಮಾಡುತ್ತಾ ಕಾದಾಡುತ್ತಿದ್ದನು. ನಾಗರಾಜನಾದ ಅಶ್ವಸೇನನು ಕರ್ಣನ ಬಾಣದಲ್ಲಿ ಸೇರಿಕೊಂಡು ಅರ್ಜುನನನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದಾಗ ಪ್ರಯತ್ನಪೂರ್ವಕವಾಗಿ ಅದನ್ನು ತಪ್ಪಿಸಿದಿ.
ಪುನಶ್ಚ ಪತಿತೇ ಚಕ್ರೇ ವ್ಯಸನಾರ್ತಃ ಪರಾಜಿತಃ ||39||
ಪಾತಿತಶ್ಚ ರಣೇ ಕರ್ಣಶ್ಚಕ್ರವ್ಯಗ್ರೋಽಗ್ರಣೀರ್ನೃಣಾಮ್ ||40||
ಕರ್ಣನ ರಥದ ಚಕ್ರವು ಕೆಸರಿನಲ್ಲಿ ಹೂತುಹೋದಾಗ ಕರ್ಣನು ಚಕ್ರವನ್ನು ಎತ್ತುವ ಕಾರ್ಯದಲ್ಲಿ ಮಗ್ನನಾಗಿದ್ದಾಗ ಕ್ರೂರಿಯಾದ ನೀನು ಅವಕಾಶವನ್ನು ಕೊಡದೆ ಅವನನ್ನು ಅರ್ಜುನನ ಮೂಲಕ ಯುದ್ಧದಲ್ಲಿ ಬೀಳಿಸಿ ಸಾಯುವಂತೆ ಮಾಡಿದ್ದಿ.
ಯದಿ ಮಾಂ ಚೈವ ಕರ್ಣಂ ಚ ಭೀಷ್ಮದ್ರೋಣೌ ಚ ಸಂಯುಗೇ |
ನ್ಯಾಯೇನ ಪ್ರತಿಯುಧ್ಯೇಥಾ ನ ವಃ ಸ್ಯಾದ್ ವಿಜಯೋ ಧ್ರುವಃ ||41||
ಒಂದು ಪಕ್ಷದಲ್ಲಿ ನನ್ನನ್ನು, ಕರ್ಣನನ್ನು, ಭೀಷ್ಮ-ದ್ರೋಣರನ್ನು ನ್ಯಾಯ ಮಾರ್ಗದಿಂದ ಯುದ್ಧದಲ್ಲಿ ಎದುರಿಸಿದ್ದರೆ ನಿಮಗೆ ಜಯವು ನಿಶ್ಚಯವಾಗಿಯೂ ಸಿಗುತ್ತಿರಲಿಲ್ಲ.
ತ್ವಯಾ ಪುನರನಾರ್ಯೇಣ ಜಿಹ್ಮಮಾರ್ಗೇಣ ಪಾರ್ಥಿವಾಃ |
ಯೇ ಧರ್ಮಮನುತಿಷ್ಠಂತೋ ವಯಂ ಚಾನ್ಯೇ ನಿಪಾತಿತಾಃ ||42||
ನೀನಾದರೂ ಆರ್ಯಸಮ್ಮತವಲ್ಲದ ಕಪಟಮಾರ್ಗದಿಂದ ಧರ್ಮಾಚರಣೆಯನ್ನು ಮಾಡುತ್ತಾ ಇದ್ದ ನಮ್ಮನ್ನು ಮತ್ತು ಇತರ ರಾಜರುಗಳನ್ನು ಕೊಂದಿದ್ದಿ.
ತ್ವಯಾ ಮಾಯಾವಿನಾ ಕೃಷ್ಣ ಮಾಯಾಮರ್ಕಪ್ರಮೋಷಿಣೀಮ್ |
ಕೃತ್ವಾ ಹತಃ ಸಿಂಧುಪತಿಃ ಕಿಂ ತನ್ನ ವಿದಿತಂ ಮಮ ||43||
ಕೃಷ್ಣನೇ! ಮೋಸಗಾರನಾದ ನೀನು ಸುಳ್ಳಾಗಿ ಸೂರ್ಯಾಸ್ತವನ್ನು ನಿರ್ಮಾಣಮಾಡಿ ಸಿಂಧುಪತಿಯಾದ ಜಯದ್ರಥನನ್ನು ಕೊಂದಿದ್ದಿ. ಇದೂ ನನಗೆ ತಿಳಿದಿಲ್ಲವೇನು?
ಶ್ರೀಭಗವಾನ್
ಹತಸ್ತ್ವಮಸಿ ಗಾಂಧಾರೇ ಸಭ್ರಾತೃಸುತಬಾಂಧವಃ |
ಸಗಣಃ ಸಸುಹೃಚ್ಚೈವ ಪಾಪಮಾರ್ಗಮನುಷ್ಠಿತಃ ||44||
ಶ್ರೀಭಗವಾನ್ ಗಾಂಧಾರಿಯ ಮಗನೇ! ಪಾಪಮಾರ್ಗದಲ್ಲಿ ಇದ್ದುಕೊಂಡೆ ನೀನು ಸಹೋದರ-ಸುತ-ಬಾಂಧವರೊಡನೆ ಪರಿವಾರ ಸ್ನೇಹಿತರನ್ನು ಸೇರಿಸಿಕೊಂಡು ನಾಶವಾಗಿರುವಿ.
ತವೈವ ದುಷ್ಕೃತೈರ್ವೀರೌ ಭೀಷ್ಮದ್ರೋಣೌ ನಿಪಾತಿತೌ |
ಕರ್ಣಶ್ಚ ನಿಹತಃ ಸಂಖ್ಯೇ ತವ ಶೀಲಾನುವರ್ತಕಃ ||45||
ನಿನ್ನ ಕೆಟ್ಟ ಕೆಲಸಗಳಿಂದಲೇ ವೀರರಾದ ಭೀಷ್ಮ ಮತು ದ್ರೋಣರು ಸತ್ತರು. ನಿನ್ನ ಗುಣಸ್ವಭಾವಾನುಸಾರಿಯಾದ್ದರಿಂದಲೇ ಕರ್ಣನೂ ಯುದ್ಧದಲ್ಲಿ ಸತ್ತನು.
ಯಾಚ್ಯಮಾನೋ ಮಯಾ ಮೂಢಃ ಪಿತ್ರ್ಯಮಂಶಂ ನ ದಿತ್ಸಸಿ |

ಪಾಂಡವೇಭ್ಯಃ ಸ್ವರಾಜ್ಯಾರ್ಥಂ ಲೋಭಾಚ್ಚಕುನಿನಿಶ್ಚಯಾತ್ ॥46॥
ಶಕುನಿಯ ಪ್ರೇರಣೆಯಿಂದಾಗಿ ಲೋಭಿಯಾದ ನಿನ್ನಲ್ಲಿ ನಾನು ಬಂದು ಬೇಡಿದರೂ ಮೂರ್ಖನಾದ ನೀನು ಪಾಂಡವರಿಗೆ ಸಲ್ಲಬೇಕಾದ ಪಿತ್ರಾರ್ಜಿತ ಭಾಗವನ್ನು ಕೊಡಲಿಲ್ಲ.
ವಿಷಂ ತೇ ಭೀಮಸೇನಾಯ ದತ್ತಂ ಸರ್ವೇ ಚ ಪಾಂಡವಾಃ |
ಪ್ರದೀಪಿತಾ ಜತುಗೃಹೇ ಮಾತ್ರಾ ಸಹ ಸುದುರ್ಮತೇ ॥47॥
ದುಷ್ಟಬುದ್ಧಿಯವನೇ! ಭೀಮನಿಗೆ ನೀನು ವಿಷವನ್ನುಣಿಸಿದ್ದಿ. ಎಲ್ಲಾ ಪಾಂಡವರಿಗೂ ಅವರ ತಾಯಿಯಾದ ಕುಂತಿಗೂ ಅರಗಿನ ಮನೆಯಲ್ಲಿ ಬೆಂಕಿ ಹಚ್ಚಿದ್ದಿ.
ಸಭಾಯಾಂ ಯಾಜ್ಞಸೇನೀ ಚ ದ್ಯೂತೇ ಕ್ಲಿಷ್ಟಾ ರಜಸ್ವಲಾ |
ತದೈವ ತಾವದ್ ದುಷ್ಟಾತ್ಮಾ ವಧ್ಯಸ್ತ್ವಂ ನಿರಪತ್ರಪಃ ॥48॥
ದ್ಯೂತದ ಸಭೆಯಲ್ಲಿ ರಜಸ್ವಲೆಯಾದ ಯಾಜ್ಞಸೇನಿ ದ್ರೌಪದಿಗೆ ಕಷ್ಟವನ್ನು ಕೊಟ್ಟೆ. ಆಗಲೇ ಲಜ್ಜೆಗೆಟ್ಟ ದುಷ್ಟನಾದ ನಿನ್ನನ್ನು ಕೊಲ್ಲಬೇಕಿತ್ತು.
ಅನಕ್ಷಜ್ಞಂ ಚ ಧರ್ಮಜ್ಞಂ ಸೌಬಲೇನಾಕ್ಷದೇವಿನಾ |
ನಿಕೃತ್ಯಾ ವೈ ಪರಾಜೈಷೀಸ್ತಸ್ಮಾದಸಿ ರಣೇ ಹತಃ ॥49॥
ದ್ಯೂತವಿದ್ಯೆಯನ್ನು ಅರಿಯದ ಧರ್ಮರಾಜನನ್ನು ದ್ಯೂತಬಲ್ಲ ಶಕುನಿಯ ಮೂಲಕ ಮೋಸದಿಂದ ಪರಾಜಯಗೊಳಿಸಿದ್ದಿ. ಆ ಕಾರಣದಿಂದಲೇ ನೀನು ಯುದ್ಧದಲ್ಲಿ ನಾಶಹೊಂದಿರುವಿ.
ಜಯದ್ರಥೇನ ಪಾಪೇನ ಯತ್ ಕೃಷ್ಣಾ ಕ್ಲೇಶಿತಾ ವನೇ |
ಯಾತೇಷು ಮೃಗಯಾಮೇಷು ತೃಣಬಿನ್ದೋಸ್ತಥಾಽಽಶ್ರಮೇ ॥50॥
ತೃಣಬಿಂದುವಿನ ಆಶ್ರಮದಲ್ಲಿ ಬೇಟೆಗೆ ಹೋದ ಸಂದರ್ಭದಲ್ಲಿ ಕಾಡಿನಲ್ಲಿ ಪಾಪಿಯಾದ ಜಯದ್ರಥನು ದ್ರೌಪದಿಯನ್ನು ಪೀಡಿಸಿದ.
ಅಭಿಮನ್ಯುಶ್ಚ ಯದ್ಬಾಲ ಏಕೋ ಬಹುಭಿರಾಹವೇ |
ತ್ವದ್ದೋಷೈರ್ನಿಹತಃ ಪಾಪ ತಸ್ಮಾದಸಿ ರಣೇ ಹತಃ ॥51॥
ಪಾಪಿಯೇ! ಬಾಲಕನಾದ ಅಭಿಮನ್ಯುವು ಏಕಾಕಿಯಾಗಿ ಯುದ್ಧಮಾಡುತ್ತಿದ್ದಾಗ ನೀನು ಕಪಟತನದಿಂದ ಅವನನ್ನು ಕೊಂದಿದ್ದಿ. ಆದ್ದರಿಂದಲೇ ನೀನು ಯುದ್ಧದಲ್ಲಿ ಹತನಾಗಿರುವಿ.
ಕುರ್ವಾಣಂ ಕರ್ಮ ಸಮರೇ ಪಾಂಡವಾನರ್ಥಕಾಂಕ್ಷಿಣಮ್ |
ಯಚ್ಛಿಖಂಡ್ಯವಧೀದ್ ಭೀಷ್ಮಂ ಮಿತ್ರಾರ್ಥೇ ನ ವ್ಯತಿಕ್ರಮಃ ॥52॥
ಪಾಂಡವರಿಗೆ ಕೆಡುಕನ್ನು ಮಾಡಬೇಕೆಂಬ ಉದ್ದೇಶದಿಂದ ಭೀಷ್ಮನು ಯುದ್ಧದಲ್ಲಿ ಕರ್ಮವನ್ನು ನಿರ್ವಹಿಸುತ್ತಿದ್ದನು. ಅಂತಹ ಭೀಷ್ಮನನ್ನು ತನ್ನ ಮಿತ್ರರಿಗಾಗಿ ಶಿಖಂಡಿಯು ಕೊಂದನು. ಇದರಲ್ಲಿ ಧರ್ಮಬಾಹಿರವಾದುದು ಯಾವುದೂ ಇಲ್ಲ.
ಸ್ವಧರ್ಮಂ ಪೃಷ್ಠತಃ ಕೃತ್ವಾ ಆಚಾರ್ಯಸ್ತ್ವತ್ಪ್ರಿಯೇಪ್ಸಯಾ |
ಪಾರ್ಷತೇನ ಹತಃ ಸಂಖ್ಯೇ ವರ್ತಮಾನೋಽಸತಾಂ ಪಥಿ ॥53॥
ಆಚಾರ್ಯ ದ್ರೋಣನು ತನ್ನ ಬ್ರಾಹ್ಮಣಧರ್ಮವನ್ನು ಮೀರಿ ನಿನ್ನ ಮೇಲಿನ ಪ್ರೀತಿಯಿಂದ ಅಧರ್ಮಮಾರ್ಗದಲ್ಲಿದ್ದದ್ದರಿಂದಾಗಿ ಧೃಷ್ಟದ್ಯುಮ್ನನು ಅವನನ್ನು ಕೊಂದನು.
ಪ್ರತಿಜ್ಞಾಮಾತ್ಮನಃ ಸತ್ಯಾಂ ಚಿಕೀರ್ಷನ್ ಸಮರೇ ರಿಪುಮ್ |
ಹತವಾನ್ ಸಾತ್ವತೋ ವಿದ್ವಾನ್ ಸೌಮದತ್ತಿಂ ಮಹಾರಥಮ್ ॥54॥
ತನ್ನ ಪ್ರತಿಜ್ಞೆಯನ್ನು ಪೂರೈಸಲಿಕ್ಕಾಗಿ ಜ್ಞಾನಿಯಾದ ಸಾತ್ಯಕಿಯು ಶತ್ರುವಾದ ಮಹಾರಥಿ ಭೂರಿಶ್ರವಸ್ಸನ್ನು ಯುದ್ಧದಲ್ಲಿ ಕೊಂದನು.
ಅರ್ಜುನಃ ಸಮರೇ ರಾಜನ್ ಯುಧ್ಯಮಾನಃ ಕದಾಚನ |
ನಿಂದಿತಂ ಪುರುಷವ್ಯಾಘ್ರಃ ಕರೋತಿ ನ ಕಥಂಚನ ॥55॥
ರಾಜನೇ! ಪುರುಷಶ್ರೇಷ್ಠನಾದ ಅರ್ಜುನನು ಯುದ್ಧದಲ್ಲಿ ಕಾದಾಡುತ್ತಾ ಯಾವತ್ತೂ ಕೂಡ ಧರ್ಮನಿಂದಿತವಾದ ಕೆಲಸವನ್ನು ಮಾಡುವುದಿಲ್ಲ.
ಲಬ್ಧ್ವಾಽಪಿ ಬಹುಶಃ ಛಿದ್ರಂ ವೀರವೃತ್ತಮನುಸ್ಮರನ್ |
ನ ಜಘಾನ ರಣೇ ಕರ್ಣಂ ಮೈವಂ ವೋಚಃ ಸುದುರ್ಮತೇ ॥56॥
ಯುದ್ಧದಲ್ಲಿ ಅನೇಕ ಬಾರಿ ಅವಕಾಶವು ಸಿಕ್ಕಿದರೂ ಅರ್ಜುನನು ಕರ್ಣನನ್ನು ಹೊಡೆಯಲಿಲ್ಲ. ಆದ್ದರಿಂದ ದುಷ್ಟಬುದ್ಧಿಯೇ! ಹೀಗೆ ಹೇಳಬೇಡ.
ದೇವಾನಾಂ ಮತಮಾಜ್ಞಾಯ ತೇಷಾಂ ಪ್ರಿಯಹಿತೇಪ್ಸಯಾ |
ಅರ್ಜುನಸ್ಯ ನತೇ ನಾಗಂ ಮಯಾ ವ್ಯಂಸಿತಮಸ್ರುಜಮ್ ॥57॥
ದೇವತೆಗಳ ಅಭಿಪ್ರಾಯಕ್ಕನುಸಾರವಾಗಿ ಅವರಿಗೆ ಒಳ್ಳೆಯದನ್ನು ಮಾಡುವ ಉದ್ದೇಶದಿಂದ ನಾನು ಅರ್ಜುನನ ತಲೆಗೆ ನಾಗಾಸ್ತ್ರವು ತಗಲದಂತೆ ಮಾಡಿದ್ದೆನು.
ತ್ವಂ ಚ ಭೀಷ್ಮಶ್ಚ ಕರ್ಣಶ್ಚ ದ್ರೋಣೋ ದ್ರೌಣಿಸ್ತಥಾ ಕೃಪಃ |
ವಿರಾಟನಗರೇ ತಸ್ಯ ಆನೃಶಂಸ್ಯಾಚ್ಚ ಜೀವಿತಾಃ ॥58॥
ನೀನು, ಭೀಷ್ಮ, ಕರ್ಣ, ದ್ರೋಣ, ಅಶ್ವತ್ಥಾಮ ಮತ್ತು ಕೃಪ ಇವರೆಲ್ಲರೂ ವಿರಾಟನಗರದಲ್ಲಿ ಈ ಅರ್ಜುನನ ದಯೆಯಿಂದಾಗಿಯೇ ಬದುಕಿದವರು.
ಸ್ಮರ ಪಾರ್ಥಸ್ಯ ವಿಕ್ರಾಂತಂ ಗಂಧರ್ವೇಷು ಕೃತಂ ತದಾ |

ಅಧರ್ಮಃ ಕೋಽತ್ರ ಗಾಂಧಾರೇ ಪಾಂಡವೈರ್ಯತ್ ಕೃತಂ ತ್ವಯಿ ॥
ಗಾಂಧಾರಿಪುತ್ರನೇ! ಗಂಧರ್ವರು ನಿನ್ನನ್ನು ಬಂಧಿಸಿದಾಗ ಅರ್ಜುನನು ಮಾಡಿದ್ದನ್ನು ಸ್ಮರಿಸಿಕೊ. ನಿನ್ನ ವಿಷಯದಲ್ಲಿ ಪಾಂಡವರು ಮಾಡಿದ ವಿಷಯದಲ್ಲಿ ಯಾವುದು ಅಧರ್ಮ?
ಸ್ವಬಾಹುಬಲಮಾಸ್ಥಾಯ ಸ್ವಧರ್ಮೇಣ ಪರಂತಪಾಃ |
ಜಿತವಂತೋ ರಣೇ ವೀರಾಃ ಪಾಪೋಽಸಿ ನಿಧನಂ ಗತಃ ॥60॥
ಶತ್ರುಸಂತಾಪಕರ ವೀರರು ಯುದ್ಧದಲ್ಲಿ ತಮ್ಮ ತಮ್ಮ ಧರ್ಮವನ್ನು ಆಚರಿಸುತ್ತಾ ತಮ್ಮ ಬಾಹುಬಲವನ್ನು ಆಶ್ರಯಿಸಿಕೊಂಡು ಜಯವನ್ನು ಪಡೆದಿದ್ದಾರೆ. ನೀನು ಪಾಪಿಯಾದ್ದರಿಂದಲೇ ನಾಶವನ್ನು ಹೊಂದಿರುವೆ.
ದುರ್ಯೋಧನಃ
ಅಧೀತಂ ಸುಹುತಂ ದತ್ತಂ ಭೂಃ ಪ್ರಭುಕ್ತಾ ಸಸಾಗರಾ |
ಮೂರ್ಧ್ನಿ ಸ್ಥಿತಮಮಿತ್ರಾಣಾಂ ಕೋ ನು ಸ್ವಂತತರೋ ಮಯಾ ॥61॥
ದುರ್ಯೋಧನ ನಾನು ಎಲ್ಲವನ್ನೂ ಅಧ್ಯಯನ ಮಾಡಿರುವೆನು. ಯಾಗ-ಯಜ್ಞಗಳನ್ನು ಚೆನ್ನಾಗಿ ನೆರವೇರಿಸಿರುವೆನು. ಸಾಗರಪರ್ಯಂತ ಭೂಭಾಗವನ್ನು ಆಳಿರುವೆನು. ಶತ್ರುಗಳ ತಲೆಯನ್ನು ಮೆಟ್ಟಿ ನಿಂತಿದ್ದೆ. ನನ್ನ ಹಾಗೆ ಉತ್ತಮವಾದ ನಾಶವನ್ನು ಹೊಂದಿದವನು ಬೇರೆ ಯಾವನು ಇದ್ದಾನೆ?
ಸರ್ವೇಷಾಂ ಕ್ಷತ್ರಬಂಧೂನಾಂ ಸ್ವಧರ್ಮಮನುಪಶ್ಯತಾಮ್ |
ತದಿದಂ ನಿಧನಂ ಪ್ರಾಪ್ತಂ ಕೋ ನು ಸ್ವಂತತರೋ ಮಯಾ ॥62॥
ಸ್ವಧರ್ಮಾಚರಣೆಯನ್ನು ಮಾಡುವ ಕ್ಷತ್ರಿಯಬಂಧುಗಳು ಯಾವ ಸಾವನ್ನು ಅಪೇಕ್ಷಿಸುತ್ತಾರೆಯೋ ಅಂತಹ ಸಾವು ನನಗೆ ಬಂದಿದೆ. ನನ್ನ ಹಾಗೆ ಉತ್ತಮವಾದ ನಾಶವನ್ನು ಹೊಂದಿದವನು ಬೇರೆ ಯಾವನು ಇದ್ದಾನೆ?
ರಾಜಾರ್ಹಾ ಮಾನುಷಾ ಭೋಗಾಃ ಪ್ರಾಪ್ತಾಶ್ಚಾಸುಲಭಾ ನೃಪೈಃ |
ಐಶ್ವರ್ಯಂ ಚೋತ್ತಮಂ ಪ್ರಾಪ್ತಂ ಕೋ ನು ಸ್ವಂತತರೋ ಮಯಾ ॥
ಮನುಷ್ಯರಿಗೆ ಸಿಗದ ರಾಜಯೋಗ್ಯವಾದ ಮಾನುಷಭೋಗಗಳನ್ನೆಲ್ಲಾ ಅನುಭವಿಸಿರುವೆನು. ಉತ್ತಮವಾದ ಸಂಪತ್ತನ್ನು ಪಡೆದಿರುವೆನು. ನನ್ನ ಹಾಗೆ ಉತ್ತಮವಾದ ನಾಶವನ್ನು ಹೊಂದಿದವನು ಬೇರೆ ಯಾವನು ಇದ್ದಾನೆ?
ಸಸುಹೃತ್ ಸಾನುಬಂಧಶ್ಚ ಸ್ವರ್ಗಂ ಯಾತೋಽಹಮಚ್ಯುತ |
ಯೂಯಂ ಗರ್ಹಿತಸಂಕಲ್ಪಾಃ ಶೋಚಂತೋ ವರ್ತಯಿಷ್ಯಥ ॥64॥
ಅಚ್ಯುತನೇ! ನಾನು ಮಿತ್ರ-ಬಾಂಧವರೊಡನೆ ಸ್ವರ್ಗಕ್ಕೆ ಹೋಗುವೆನು. ನಿಂದಿತವಾದ ಸಂಕಲ್ಪವುಳ್ಳ ನೀವು ಭೂಮಿಯಲ್ಲಿಯೇ ದುಃಖಿತರಾಗಿ ಇರಿ.
ನ ಮೇ ವಿಷಾದೋ ಭೀಮೇನ ಪಾದೇನ ಶಿರ ಆಹತಮ್ |
ಕಾಕಾ ವಾ ಕಂಕಗೃಧ್ರಾ ವಾ ನಿಧಾಸ್ಯಂತಿ ಪದಂ ಕ್ಷಣಾತ್ ॥65॥
ಭೀಮನು ನನ್ನ ತಲೆಯ ಮೇಲೆ ಕಾಲಿಟ್ಟಿದ್ದಕ್ಕೆ ನನಗೆ ದುಃಖವಾಗುತ್ತಿಲ್ಲ. ಏಕೆಂದರೆ ನನ್ನ ಪ್ರಾಣಹೋದ ಕ್ಷಣಮಾತ್ರದಲ್ಲಿ ಕಾಗೆಗಳು, ಗಿಡುಗಗಳು ತಮ್ಮ ಪಾದಗಳನ್ನು ಇಡುತ್ತವೆ.
ಸಂಜಯಃ
ಅಸ್ಯ ವಾಕ್ಯಸ್ಯ ನಿಧನೇ ಕುರುರಾಜಸ್ಯ ಭಾರತ |
ಅಪತತ್ ಸುಮಹದ್ ವರ್ಷಂ ಪುಷ್ಪಾಣಾಂ ದಿವ್ಯಗಂಧಿನಾಮ್ ॥66॥
ಸಂಜಯ ಹೀಗೆ ದುರ್ಯೋಧನನ ಮಾತುಗಳು ಮುಗಿಯುತ್ತಿರಲು ಅಲೌಕಿಕ ಪರಿಮಳವುಳ್ಳ ಪುಷ್ಪಗಳ ಮಳೆಯು ಅವನ ತಲೆಯ ಮೇಲೆ ಸುರಿಯಿತು. (ದುರ್ಯೋಧನನು ಶ್ರೀಕೃಷ್ಣನನ್ನು ಅನೇಕ ರೀತಿಯಲ್ಲಿ ನಿಂದನೆ ಮಾಡುತ್ತಿದ್ದಾಗ ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದ್ದು ಅವನ ದುಷ್ಟಬುದ್ಧಿಯು ಸ್ಥಿರವಾಗಲಿ ಎಂಬ ಉದ್ದೇಶದಿಂದ.)
ಅವಾದ್ಯಂತ ಚ ತೂರ್ಯಾಣಿ ಜಗುಶ್ಚಾಪ್ಸರಸಾಂ ಗಣಾಃ ॥67॥
ತೂರ್ಯವಾದ್ಯಗಳು ನುಡಿಸಲ್ಪಟ್ಟವು. ಅಪ್ಸರಸ್ತ್ರೀಯರು ಗಾನ ಮಾಡಿದರು.
ಜಗುಶ್ಚಾಪ್ಸರಸೋ ರಾಜ್ಞೋ ಯಶಃ ಸಂಬದ್ಧಮೇವ ಚ |
ಸಿದ್ಧಾಶ್ಚ ಮುಮುಚುರ್ನಾದಂ ಸಾಧು ಸಾಧ್ವಿತಿ ಭಾರತ ॥68॥
ಭರತಕುಲೋದ್ಭವನೇ! ರಾಜ ದುರ್ಯೋಧನನ ಯಶಸ್ಸಿಗೆ ಸಂಬಂಧಿಸಿದಂತೆ ಅಪ್ಸರಸ್ತ್ರೀಯರು ಹಾಡಿದರು. ಸಿದ್ಧಪುರುಷರು `ಚೆನ್ನಾಗಿದೆ, ಚೆನ್ನಾಗಿದೆ' ಎಂದು ಹೇಳುತ್ತಾ ಶಬ್ದವನ್ನು ಮಾಡಿದರು.
ವವೌ ಚ ಸುರಭಿರ್ವಾತಃ ಪುಣ್ಯಗಂಧಃ ಶುಚಿರ್ಮೃದುಃ |
ವ್ಯರಾಜತಾಮಲಂ ಚೈವ ನಭೋ ವೈಡೂರ್ಯಸನ್ನಿಭಮ್ ॥69॥
ಸುಗಂಧವನ್ನು ಬೀರುತ್ತಾ ಪರಿಮಳಯುಕ್ತವಾದ ಪರಿಶುದ್ಧ ಗಾಳಿಯು ನಿಧಾನವಾಗಿ ಬೀಸಿತು. ವೈಡೂರ್ಯದ ಹಾಗೆ ಶುಭ್ರವಾದ ಆಕಾಶವು ಶೋಭಿಸಿತು.
ಇತ್ಯದ್ಭುತಾನಿ ತೇ ದೃಷ್ಟ್ವಾ ವಾಸುದೇವಪುರೋಗಮಾಃ |
ದುರ್ಯೋಧನಸ್ಯ ಪೂಜಾಂ ಚ ಕೃತಾಂ ವ್ರೀಡಾಮುಪಾಗಮನ್ ॥70॥
ಈ ರೀತಿಯಲ್ಲಿ ಅನೇಕ ಅದ್ಭುತಗಳನ್ನು ಹಾಗೂ ದುರ್ಯೋಧನನಿಗೆ ನಡೆದ ಪೂಜೆಯನ್ನು ನೋಡಿದ ಶ್ರೀಕೃಷ್ಣಮೊದಲಾದವರು ನಾಚಿಕೆ ಪಟ್ಟರು.
ಹತಾಂಶ್ಚಾಧರ್ಮತಃ ಶ್ರುತ್ವಾ ಶೋಕಾರ್ತಾಃ ಶುಶುಚುರ್ಹಿ ತೇ |

ಭೀಷ್ಮಂ ದ್ರೋಣಂ ತಥಾ ಕರ್ಣಂ ಭೂರಿಶ್ರವಸಮೇವ ಚ ॥71॥
ಭೀಷ್ಮ, ದ್ರೋಣ, ಕರ್ಣ, ಭೂರಿಶ್ರವಸ್ಸು ಮೊದಲಾದ ವೀರರು ಅಧರ್ಮ ಮಾರ್ಗದಿಂದ ಹತರಾದರು ಎಂಬುದನ್ನು ಕೇಳಿ ದುಃಖಕ್ಕೊಳಗಾದರು.
ತಾಂಸ್ತು ಚಿಂತಾಪರಾನ್ ದೃಷ್ಟ್ವಾ ಪಾಂಡವಾನ್ ದೀನಚೇತಸಃ।
ಪ್ರೋವಾಚೇದಂ ವಚಃ ಕೃಷ್ಣೋ ಮೇಘದುಂದುಭಿನಿಸ್ವನಃ ॥72॥
ಚಿಂತೆಗೊಳಗಾಗಿ ದುಃಖಿತವಾದ ಮನಸ್ಸುಳ್ಳವರಾದ ಪಾಂಡವರನ್ನು ನೋಡಿ ಮೇಘದುಂದುಭಿಯ ಹಾಗೆ ಧ್ವನಿಯುಳ್ಳ ಶ್ರೀಕೃಷ್ಣನು ಈ ಮಾತನ್ನು ಹೇಳಿದನು.
ಶ್ರೀಭಗವಾನ್
ನೈಷ ಶಕ್ಯೋಽತಿಶೀಘ್ರಾಸ್ತ್ರಃ ತೇ ಚ ಸರ್ವೇ ಮಹಾರಥಾಃ।
ಋಜುಯುದ್ಧೇನ ವಿಕ್ರಾಂತಾ ಹಂತುಂ ಯುಷ್ಮಾಭಿರಾಹವೇ ॥73॥
ಶ್ರೀಭಗವಾನ್ ಯುದ್ಧದಲ್ಲಿ ಶೀಘ್ರವಾಗಿ ಅಸ್ತ್ರಪ್ರಯೋಗವನ್ನು ಮಾಡುವ ಈ ದುರ್ಯೋಧನನನ್ನಾಗಲೀ, ಮಹಾರಥರಾದ ಭೀಷ್ಮಾದಿಗಳನ್ನಾಗಲೀ ಋಜು ಮಾರ್ಗದಿಂದ ಕೊಲ್ಲಲು ನೀವು ಸಮರ್ಥರಾಗುತ್ತಿರಲಿಲ್ಲ.
ಉಪಾಯಾನ್ನಿಹತಾ ಹ್ಯೇತೇ ಮಯಾ ತಸ್ಮಾನ್ನರಾಧಿಪಾಃ।
ಅನ್ಯಥಾ ಪಾಂಡವೇಯಾನಾಂ ನಾಭವಿಷ್ಯಜ್ಜಯಃ ಕ್ವಚಿತ್ ॥74॥
ಆ ಕಾರಣದಿಂದಲೇ ಈ ನರಪತಿಗಳನ್ನು ನಾನು ಉಪಾಯದಿಂದ ಕೊಲ್ಲಿಸಿದೆ. ಇಲ್ಲದೆ ಹೋಗಿದ್ದರೆ ಪಾಂಡವರಿಗೆ ಜಯವು ಉಂಟಾಗುತ್ತಿರಲಿಲ್ಲ.
ತೇ ಹಿ ಸರ್ವೇ ಮಹೇಷ್ವಾಸಾಃ ಚತ್ವಾರೋಽತಿರಥಾ ಭುವಿ।
ನ ಶಕ್ಯಾ ಧರ್ಮತೋ ಹಂತುಂ ಲೋಕಪಾಲೈರಪಿ ಸ್ವಯಮ್ ॥75॥
ಬಿಲ್ಗಾರರಾದ ಆ ನಾಲ್ಕು ಮಹಾರಥರನ್ನು ಧರ್ಮಮಾರ್ಗದಲ್ಲಿ ಕೊಲ್ಲಲು ಲೋಕಪಾಲದೇವತೆಗಳಿಗೂ ಸಾಧ್ಯವಿರಲಿಲ್ಲ.
ತಥೈವಾಯಂ ಗದಾಪಾಣಿರ್ಧಾರ್ತರಾಷ್ಟ್ರೋ ಗತಕ್ಲಮಃ।
ನ ಶಕ್ಯೋ ಧರ್ಮತೋ ಹಂತುಂ ಕಾಲೇನಾಪಿ ಹಿ ದಂಡಿನಾ ॥76॥
ಹಾಗೆಯೇ ಗದಾಧಾರಿಯಾದ ಈ ದುರ್ಯೋಧನನೂ ಯುದ್ಧದಲ್ಲಿ ಯಾವುದೇ ಕ್ಲೇಶವನ್ನು ಪಡೆದಿರಲಿಲ್ಲ. ಇವನನ್ನು ಧರ್ಮರೀತಿಯಲ್ಲಿ ಕೊಲ್ಲಲು ದಂಡಧಾರಿಯಾದ ಯಮನಿಗೂ ಸಾಧ್ಯವಾಗುತ್ತಿರಲಿಲ್ಲ.
ನ ಚ ವೋ ಹೃದಿ ಕರ್ತವ್ಯಂ ಯದಯಂ ನಿಹತೋ ನೃಪಃ।
ಮಿಥ್ಯಾವಧ್ಯಾಶ್ಚಲೋಪಾಯೈರ್ಬಹವಃ ಶತ್ರವೋ ಹತಾಃ ॥77॥
ಈ ದುರ್ಯೋಧನನು ಸತ್ತಿದ್ದನ್ನು ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಏಕೆಂದರೆ ಮಿಥ್ಯಾವಧೆಗೆ ಸಂಬಂಧಿಸಿದ ಕೂಟನೀತಿಗಳಿಂದ ಅನೇಕ ಶತ್ರುಗಳು ಸತ್ತಿದ್ದಾರೆ.
ಪೂರ್ವಂ ಹ್ಯನುಗತೋ ಮಾರ್ಗೋ ದೇವೈರಸುರಘಾತಿಭಿಃ।
ಸದ್ಭಿಶ್ಚಾನುಗತಃ ಪನ್ಥಾ ಸರ್ವೈರನುಗಮಿಷ್ಯತೇ ॥78॥
ಹಿಂದೆ ಅಸುರರನ್ನು ಸೋಲಿಸಲು ದೇವತೆಗಳೂ ಈ ಮಾರ್ಗವನ್ನೇ ಅನುಸರಿದ್ದರು. ಸಜ್ಜನರು ನಡೆದ ದಾರಿಯನ್ನು ಎಲ್ಲರೂ ಅನುಸರಿಸುತ್ತಾರೆ.
ಏವಂ ವಿಧಾತ್ರಾ ವಿಹಿತೋ ವಧ ಹ್ಯೇಷ ಮಹಾತ್ಮನಾ।
ದೈವಂ ಪುರುಷಕಾರೇಣ ನ ಶಕ್ಯಮತಿವರ್ತಿತುಮ್ ॥79॥
ಮಹಾತ್ಮನಾದ ಬ್ರಹ್ಮನು ಇವರ ಸಾವನ್ನು ಈ ರೀತಿಯಲ್ಲಿಯೇ ನಿರ್ಧರಿಸಿದ್ದನು. ದೇವನಿಶ್ಚಿತವಾದುದ್ದನ್ನು ಮನುಷ್ಯನ ಪ್ರಯತ್ನದಿಂದ ಮೀರಲು ಸಾಧ್ಯವಿಲ್ಲ.
ಭೂತಂ ಭವ್ಯಂ ಭವಿಷ್ಯಚ್ಚ ನಿಮೇಷಾದ್ ಯೋ ಹನಿಷ್ಯತಿ।
ಕೃತಾಂತಮನ್ಯಥಾ ಕರ್ತುಂ ನೇಚ್ಛೇತ್ ಸೋಽಯಂ ಧನಂಜಯ ॥80॥
ಅರ್ಜುನನೇ! ಯಾವ ಪರಮಾತ್ಮನು ಹಿಂದೆ ಇದ್ದದ್ದನ್ನು, ಈಗ ಇರುವುದನ್ನು, ಮುಂದೆ ಬರುವುದನ್ನು ಕ್ಷಣಮಾತ್ರದಲ್ಲಿ ನಾಶಮಾಡುವನೋ ಅವನೂ ಕೂಡ ಮಾಡಬೇಕಾದ್ದನ್ನು ವಿಪರೀತವಾಗಿ ಮಾಡಲು ಇಚ್ಛಿಸುವುದಿಲ್ಲ.
ಕೃತಕೃತ್ಯಾಃ ಸ್ಮ ಸಾಯಾಹ್ನೇ ನಿವಾಸಂ ರೋಚಯಾಮಹೇ।
ಸಾಶ್ವನಾಗರಥಾಃ ಸರ್ವೇ ವಿಶ್ರಾಮ್ಯಂತು ನರಾಧಿಪಾಃ ॥81॥
ಮಾಡಬೇಕಾದ ಕಾರ್ಯವನ್ನು ಮಾಡಿ ಕೃತಕೃತ್ಯರಾದ ನಾವು ಸಾಯಂಕಾಲದಲ್ಲಿ ನಮ್ಮ ವಾಸಸ್ಥಾನಕ್ಕೆ ಹೋಗಲು ಬಯಸುತ್ತೇವೆ. ಕುದುರೆ-ಆನೆ-ರಥಗಳಿಂದ ಸಹಿತವಾಗಿ ಎಲ್ಲ ರಾಜರೂ ವಿಶ್ರಾಂತಿಯನ್ನು ಪಡೆಯಲಿ.
ಸಂಜಯಃ
ವಾಸುದೇವವಚಃ ಶ್ರುತ್ವಾ ತದಾನೀಂ ಪಾಂಡವೈಃ ಸಹ।
ಪಾಂಚಾಲಾ ಭೃಶಸಂಹೃಷ್ಟಾ ವಿನೇದುಃ ಸಿಂಹಸಂಘವತ್ ॥82॥
ಸಂಜಯ ಆಗ ಶ್ರೀಕೃಷ್ಣನ ಮಾತನ್ನು ಕೇಳಿ ಪಾಂಡವರು ಮತ್ತು ಪಾಂಚಾಲರು ಬಹಳವಾಗಿ ಸಂತೋಷಗೊಂಡು ಸಿಂಹಗಳಂತೆ ಶಬ್ದ ಮಾಡಿದರು.
ತತಃ ಪ್ರಾಧ್ಮಾಪಯಚ್ಛಂಖಂ ಪಾಂಚಜನ್ಯಂ ಜನಾರ್ದನಃ।
ದೇವದತ್ತಂ ಪ್ರಹೃಷ್ಟಾತ್ಮಾ ಶಂಖಪ್ರವರಮರ್ಜುನಃ ॥83॥

ಅನಂತರ ಶ್ರೀಕೃಷ್ಣನು ಪಾಂಚಜನ್ಯಶಂಖವನ್ನು ಚೆನ್ನಾಗಿ ಊದಿದನು. ಅರ್ಜುನನು ತನ್ನ ಉತ್ತಮವಾದ ದೇವದತ್ತ ಶಂಖವನ್ನು ಊದಿದನು.
ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥84॥
ಕುಂತೀಪುತ್ರ ಧರ್ಮರಾಜನು ಅನಂತವಿಜಯ ಎಂಬ ಹೆಸರಿನ ತನ್ನ ಶಂಖವನ್ನು ಊದಿದನು. ಭಯಂಕರಕಾರ್ಯಗಳನ್ನು ಮಾಡುವ ಭೀಮನು ಪೌಂಡ್ರ ಎಂಬ ದೊಡ್ಡಶಂಖವನ್ನು ಊದಿದನು.
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ |
ಧೃಷ್ಟದ್ಯುಮ್ನಸ್ತಥಾ ಜೈತ್ರಂ ಸಾತ್ಯಕಿರ್ನಂದಿವರ್ಧನಮ್ ॥85॥
ನಕುಲ ಮತ್ತು ಸಹದೇವರು ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳನ್ನು ಊದಿದರು. ಧೃಷ್ಟದ್ಯುಮನು ಜೈತ್ರ ಎಂಬ ಶಂಖವನ್ನೂ, ಸಾತ್ಯಕಿಯು ನಂದಿವರ್ಧನ ಎಂಬ ಶಂಖವನ್ನೂ ಊದಿದರು.
ತೇಷಾಂ ನಾದೇನ ಮಹತಾ ಶಂಖಾನಾಂ ಭರತರ್ಷಭ |
ಆಪುಪೂರೇ ನಭಃ ಸರ್ವಂ ಪೃಥಿವೀ ಚ ಚಚಾಲ ಹ ॥86॥
ಭರತಕುಲಶ್ರೇಷ್ಠನೇ! ಅವರ ಶಂಖಗಳ ನಾದದಿಂದ ಆಕಾಶವು ಪೂರ್ಣ ಆಯಿತು. ನೆಲವು ನಡುಗಿತು.
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ |
ಪಾಂಡುಸೈನ್ಯೇಷ್ವವಾದ್ಯಂತ ಸ ಶಬ್ದಸ್ತುಮುಲೋಽಭವತ್ ॥87॥
ಅನಂತರ ಶಂಖಗಳು, ಭೇರಿಗಳು, ಪಣವಗಳು, ಆನಕಗಳು, ಗೋಮುಖಗಳು ಇವೆಲ್ಲವೂ ಪಾಂಡವರ ಸೈನ್ಯದಲ್ಲಿ ಧ್ವನಿಯನ್ನುಂಟುಮಾಡಿದವು. ಆ ಶಬ್ದವು ಬಹಳ ಭಯಂಕರವಾಗಿತ್ತು.
ಅಸ್ತುವನ್ ಪಾಂಡವಾನನ್ಯೇ ಗೀರ್ಭಿಶ್ಚ ಸ್ತುತಿಮಂಗಲೈಃ |
ಹೃಷ್ಟಾ ದುರ್ಯೋಧನಂ ದೃಷ್ಟ್ವಾ ನಿಹತಂ ಪುರುಷರ್ಷಭಾಃ ॥88॥
ದುರ್ಯೋಧನನು ಸತ್ತುಬಿದ್ದಿದ್ದನ್ನು ನೋಡಿ ಬೇರೆ ಎಲ್ಲ ನರಶ್ರೇಷ್ಠರು ಪಾಂಡವರನ್ನು ಮಂಗಳಸ್ತುತಿಗಳಿಂದ ಹಾಗೂ ಮಾತುಗಳಿಂದ ಸ್ತುತಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ಸಾಧುವಚನಂ ನಾಮ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆರಡನೆಯ ಅಧ್ಯಾಯ
ಪಾಂಚಾಲ ಮೊದಲಾದವರು ತಮ್ಮ ತಮ್ಮ ಶಿಬಿರಗಳಿಗೆ ಹೋದ ಮೇಲೆ ಪಾಂಡವರು ದುರ್ಯೋಧನನ ಶಿಬಿರಕ್ಕೆ ಹೋಗಿ, ತಮ್ಮ ರಥಗಳಿಂದ ಕೆಳಗಿಳಿದದ್ದು. ಶ್ರೀಕೃಷ್ಣನು ರಥದಿಂದ ಮೊದಲು ಅರ್ಜುನನನ್ನು ಇಳಿಸಿ ತಾನು ಇಳಿದ ಬಳಿಕ ಅಗ್ನಿಯು ಆ ರಥವನ್ನು ಸುಟ್ಟು ಭಸ್ಮ ಮಾಡಿದ್ದು. ರಥವು ಸುಟ್ಟುಹೋಗಿದ್ದಕ್ಕೆ ಕಾರಣವನ್ನು ಅರ್ಜುನನಿಗೆ ಶ್ರೀಕೃಷ್ಣನು ತಿಳಿಸಿದ್ದು.
ಶ್ರೀಕೃಷ್ಣನ ಮಾತಿನಂತೆ ಪಾಂಡವರು ಓಘವತೀತೀರದಲ್ಲಿ ರಾತ್ರಿಯಲ್ಲಿ ವಾಸಮಾಡಿದ್ದು. ಯುಧಿಷ್ಠಿರನು ಕೇಳಿಕೊಂಡ ಪ್ರಕಾರ ಶ್ರೀಕೃಷ್ಣನು ಗಾಂಧಾರಿಯನ್ನು ಸಮಾಧಾನಪಡಿಸಿದ್ದು.
ಸಂಜಯಃ
ತತಸ್ತೇ ಪ್ರಯಯುಃ ಸರ್ವೇ ನಿವೇಶಾಯ ಮಹೀಕ್ಷಿತಃ |
ಶಂಖಾನ್ ಪ್ರಧ್ಮಾಪಯಂತೋ ವೈ ಹೃಷ್ಟಾಃ ಪರಿಘಬಾಹವಃ ॥1॥
ಸಂಜಯ ಅನಂತರ ಎಲ್ಲಾ ರಾಜರುಗಳು ಶಂಖವನ್ನು ಊದುತ್ತಾ ಪರಿಘಾಯುಧವನ್ನು ಕೈಯಲ್ಲಿ ಎತ್ತಿಕೊಂಡು, ಸಂತೋಷದಿಂದ ತಮ್ಮ ಮನೆಗಳಿಗೆ ಹೋದರು.
ಪಾಂಡವಾನ್ ಗಚ್ಛತಶ್ಚಾಪಿ ಶಿಬಿರಂ ನೋ ವಿಶಾಂಪತೇ |
ಮಹೇಶ್ವಾಸೋಽನ್ವಗಾತ್ ಪಶ್ಚಾತ್ ಸಾತ್ಯಕಿಃ ಸತ್ಯವಿಕ್ರಮಃ ॥2॥
ರಾಜನೇ! ಪಾಂಡವರು ನಮ್ಮ (ಕೌರವರ) ಶಿಬಿರದೆಡೆಗೆ ಹೋಗುತ್ತಿದ್ದಾಗ ಮಹಾಬಿಲ್ಲಾರನಾದ ಪರಾಕ್ರಮಿ ಸಾತ್ಯಕಿಯು ಅವರನ್ನು ಹಿಂಬಾಲಿಸಿಕೊಂಡು ಹೋದನು.
ಧೃಷ್ಟದ್ಯುಮ್ನಃ ಶಿಖಂಡೀ ಚ ಸೃಂಜಯಶ್ಚಾಪಿ ಸರ್ವಶಃ |
ಸರ್ವೇ ಚಾನ್ಯೇ ಮಹೇಷ್ವಾಸಾ ಜಗ್ಮುಃ ಸ್ವಶಿಬಿರಾಣ್ಯುತ ॥3॥
ಧೃಷ್ಟದ್ಯುಮ್ನ, ಶಿಖಂಡಿ, ಸೃಂಜಯರೂ ಮತ್ತು ಬೇರೆ ಬಿಲ್ಲಾರ ಶೂರರೂ ಕೂಡ ತಮ್ಮ ಶಿಬಿರಗಳಿಗೆ ಹೋದರು.
ತತಸ್ತೇ ಪ್ರಾವಿಶನ್ ಪಾರ್ಥಾ ಹತತ್ವಿಷಂ ಹತೇಶ್ವರಮ್ |
ದುರ್ಯೋಧನಸ್ಯ ಶಿಬಿರಂ ರಂಗವನ್ನಿಃಸೃತೇ ಜನೇ ॥4॥
ಅನಂತರ ಪಾಂಡವರು ಕಾಂತಿಹೀನವಾದ, ಸ್ವಾಮಿಯನ್ನು ಕಳೆದುಕೊಂಡ ದುರ್ಯೋಧನನ ಶಿಬಿರಕ್ಕೆ ಹೋದರು. ರಂಗಸ್ಥಳದಿಂದ ಜನರು ಹೊರಟು ಹೋದಮೇಲೆ ಕಳಾಹೀನವಾದಂತೆ ದುರ್ಯೋಧನನ ಶಿಬಿರವು ಕಳಾಹೀನವಾಗಿತ್ತು.
ಗತೋತ್ಸವಂ ಪುರಮಿವ ಹೃತನಾಗಮಿವ ಹ್ರದಮ್ |
ಸ್ತ್ರೀವರ್ಷಧರಭೂಯಿಷ್ಠಂ ವೃದ್ಧಾಮಾತ್ಯೈರಧಿಷ್ಠಿತಮ್ ॥5॥
ಉತ್ಸವವು ಮುಗಿದ ನಂತರ ಪಟ್ಟಣವು ಕಳಾಹೀನವಾದಂತೆ, ಜಲಕ್ರೀಡೆ ಮಾಡುತಿದ್ದ ಆನೆಯು ಹೊರಟುಹೋದಮೇಲೆ ಇರುವ

ಸರೋವರದಂತೆ, ಸ್ತ್ರೀಜನರು ಮತ್ತು ಷಂಡಪುರುಷರು ತುಂಬಿದ್ದ, ವಯಸ್ಸಾದ ಮಂತ್ರಿಗಳಿದ್ದ ದುರ್ಯೋಧನನ ಶಿಬಿರಕ್ಕೆ ಹೋದರು.
ತತ್ರೈತಾನ್ ಪರ್ಯುಪಾತಿಷ್ಠನ್ ದುರ್ಯೋಧನಪುರಸ್ಸರಾಃ |
ಕೃತಾಂಜಲಿಪುಟಾ ರಾಜನ್ ಕಾಷಾಯಮಲಿನಾಂಬರಾಃ ||6||
ರಾಜನೇ! ಅಲ್ಲಿದ್ದ ದುರ್ಯೋಧನನ ಮುಂದೆ ಸಂಚಾರಮಾಡುತ್ತಿದ್ದ ವೃದ್ಧಾಮಾತ್ಯರು ಕೈಮುಗಿದುಕೊಂಡು, ಕೊಳೆಯಾದ ಬಟ್ಟೆಗಳನ್ನು ಧರಿಸಿಕೊಂಡು ಪಾಂಡವರನ್ನು ಗೌರವಿಸಿದರು.
ಶಿಬಿರಂ ಸಮನುಪ್ರಾಪ್ಯ ಕುರುರಾಜಸ್ಯ ಪಾಂಡವಾಃ |
ಅವತೇರುರ್ಮಹಾರಾಜ ರಥೇಭ್ಯೋ ರಥಸತ್ತಮಾಃ ||7||
ಕುರುರಾಜನ ಶಿಬಿರಕ್ಕೆ ಬಂದ ಪಾಂಡವರು ತಮ್ಮ ತಮ್ಮ ರಥದಿಂದ ಕೆಳಗಿಳಿದರು.
ತತೋ ಗಾಂಡೀವಧನ್ವಾನಮಭ್ಯಭಾಷತ ಕೇಶವಃ |
ಸ್ಥಿತಃ ಪ್ರಿಯಹಿತೇ ನಿತ್ಯಮತೀವ ಪುರುಷರ್ಷಭಃ ||8||
ಅನಂತರ ಅರ್ಜುನನ ಹಿತವನ್ನೇ ನಿತ್ಯವೂ ಬಯಸುತ್ತಿದ್ದ ಪುರುಷೋತ್ತಮನಾದ ಶ್ರೀಕೃಷ್ಣನು ಗಾಂಡೀವಧಾರಿಯಾದ ಅರ್ಜುನನಿಗೆ ಹೀಗೆ ಹೇಳಿದನು.
ಶ್ರೀಭಗವಾನ್
ಅವರೋಪಯ ಗಾಂಡೀವಮಕ್ಷಯೌ ಚ ಮಹೇಷುಧೀ |
ತತೋಽಹಮವರೋಕ್ಷ್ಯಾಮಿ ಪಶ್ಚಾದ್ ಭರತಸತ್ತಮ ||9||
ಸ್ವಯಂ ಚೈವಾವರೋಹ ತ್ವಮೇತಚ್ಛ್ರೇಯಸ್ತವಾನಘ ||10||
ಶ್ರೀಭಗವಾನ್ ಭರತೋತ್ತಮನಾದ ಅರ್ಜುನನೇ! ಗಾಂಡೀವದ ಹಗ್ಗವನ್ನು ಬಿಚ್ಚು. ಅಕ್ಷಯವಾದ ಬತ್ತಳಿಕೆಯನ್ನು ಕೆಳಗಿಳಿಸು. ಸ್ವಯಂ ನೀನೂ ಕೆಳಗಿಳಿ. ದೋಷರಹಿತನೇ! ಇದು ನಿನಗೆ ಶ್ರೇಯಸ್ಕರವಾದುದು. ಅದು ಆದ ಮೇಲೆ ನಾನು ಕೆಳಗಿಳಿಯುತ್ತೇನೆ.
ಸಂಜಯಃ
ಅವಾರೋಹತ್ ತದಾ ವೀರಃ ಪಾಂಡುಪುತ್ರೋ ಧನಂಜಯಃ ||11||
ಸಂಜಯ ಆಗ ವೀರನಾದ ಅರ್ಜುನನು ಗಾಂಡೀವ, ಬತ್ತಳಿಕೆಗಳನ್ನು ವಿಸರ್ಜಿಸಿ ತಾನು ಕೆಳಗಿಳಿದನು.
ಅಥ ಪಶ್ಚಾತ್ತತಃ ಕೃಷ್ಣೋ ರಶ್ಮೀನುತ್ಸೃಜ್ಯ ವಾಜಿನಾಮ್ |
ಅವಾರೋಹತ ಮೇಧಾವೀ ರಥಾದ್ ಗಾಂಡೀವಧನ್ವನಃ ||12||
ತದನಂತರ ಮಹಾಜ್ಞಾನಿಯಾದ ಶ್ರೀಕೃಷ್ಣನು ಕುದುರೆಗಳ ಹಗ್ಗಗಳನ್ನು ಬಿಚ್ಚಿ ಅರ್ಜುನನ ರಥದಿಂದ ಕೆಳಗಿಳಿದನು.
ಅಥಾವತೀರ್ಣೇ ಭೂತಾನಾಮೀಶ್ವರೋ ಪುರುಷೋತ್ತಮೇ |
ಕಪಿರಪ್ಯಾಶ್ವಪಾಕ್ರಾಮತ್ ಸಹ ದೇವೈರ್ಧ್ವಜಾಲಯೈಃ ||13||
ಸಕಲಲೋಕಕ್ಕೆ ಸ್ವಾಮಿಯಾದ ಪುರುಷೋತ್ತಮನು ಕೆಳಗಿಳಿದಾಗ ಧ್ವಜದಲ್ಲಿದ್ದ ಕಪಿಯೂ ಧ್ವಜದಲ್ಲಿದ್ದ ಇತರ ದೇವತೆಗಳೊಡನೆ ಬೇಗನೇ ಹೊರಟುಹೋದನು.
ಸ ದಗ್ಧೋ ದ್ರೋಣಕರ್ಣಾಭ್ಯಾಂ ದಿವ್ಯೈರಸ್ತ್ರೈರ್ಮಹಾರಥಃ |
ಅಥ ದೀಪ್ತೋಽಗ್ನಿನಾಪ್ಯಾಶು ಪ್ರಜಜ್ವಾಲ ಮಹಾದ್ಯುತಿಃ ||14||
ದ್ರೋಣನ ಮತ್ತು ಕರ್ಣನ ಅಸ್ತ್ರಗಳಿಂದಾಗಿ ಆ ಮಹಾರಥವು ಸುಟ್ಟುಹೋಗಿತ್ತು. ಬೆಂಕಿಯಿಂದ ಆ ಮಹಾಕಾಂತಿಯುಳ್ಳ ರಥವು ಚೆನ್ನಾಗಿ ಶೋಭಿಸುತ್ತಾ ಪ್ರಕಾಶಿಸಿತು.
ಸೋಪಾಸಂಗಃ ಸತೂಣೀರಃ ಸಾಶ್ವಃ ಸಯುಗಬಂಧನಃ |
ಭಸ್ಮೀಭೂತೋಽಭವದ್ ಭೂಮೌ ರಥೋ ಗಾಂಡೀವಧನ್ವನಃ ||15||
ರಥದ ಉಪಾಂಗಗಳು, ಬತ್ತಳಿಕೆ, ಕುದುರೆಗಳು, ನೊಗದ ಕಟ್ಟು ಇವುಗಳಿಂದ ಸತತವಾದ ಗಾಂಡೀವಧಾರಿಯಾದ ಅರ್ಜುನನ ಆ ರಥವು ಭಸ್ಮವಾಯಿತು.
ತಂ ದೃಷ್ಟ್ವಾ ಭಸ್ಮಸಾದ್ಭೂತಂ ತದಾ ಪಾಂಡುಸುತಾಃ ಪ್ರಭೋ |
ಅಭವನ್ ವಿಸ್ಮಿತಾ ರಾಜನ್ನರ್ಜುನಶ್ಚೇದಮಬ್ರವೀತ್ ||16||
ಕೃತಾಂಜಲಿಃ ಸಪ್ರಣಯಂ ಪ್ರಣಿಪತ್ಯಾಭಿವಾದ್ಯ ಚ ||17||
ಪ್ರಭುವೇ! ರಾಜನೇ! ಭಸ್ಮವಾದ ಆ ರಥವನ್ನು ನೋಡಿದ ಪಾಂಡವರು ಬಹಳ ಆಶ್ಚರ್ಯಚಕಿತರಾದರು. ಅರ್ಜುನನಾದರೂ ಕೈಮುಗಿದುಕೊಂಡು ವಿನಯದಿಂದ ಸಾಷ್ಟಾಂಗವಾಗಿ ನಮಸ್ಕರಿಸಿ ಇದನ್ನು ಹೇಳಿದನು.
ಅರ್ಜುನಃ
ಗೋವಿಂದ ಕಸ್ಮಾದ್ ಭಗವನ್ ರಥೋ ದಗ್ಧೋಽಯಮಗ್ನಿನಾ ||18||
ಕಿಮೇತನ್ಮಹದಾಶ್ಚರ್ಯಂ ಭಗವನ್ ಯದುನಂದನ |
ತನ್ಮೇ ಬ್ರೂಹಿ ಮಹಾಬಾಹೋ ಶ್ರೋತವ್ಯಂ ಯದಿ ಚೇನ್ಮಯಾ ||19||
ಅರ್ಜುನ `ಭಗವನ್! ಗೋವಿಂದ! ಈ ರಥವು ಬೆಂಕಿ ಬಿದ್ದು ಹೇಗೆ ಸುಟ್ಟು ಹೋಯಿತು? ಯದುನಂದನನೇ! ಇದೇನು ಬಹಳ ಆಶ್ಚರ್ಯಕರವಾಗಿದೆ? ನನಗೆ ತಿಳಿಯಲು ಯೋಗ್ಯವಾಗಿದ್ದರೆ, ಮಹಾಬಾಹೋ! ನನಗೆ ಅದನ್ನು ಹೇಳು.'
ಶ್ರೀಭಗವಾನ್
ದ್ರೋಣಕರ್ಣಾಸ್ತ್ರನಿರ್ದಗ್ಧಃ ಪೂರ್ವಮೇವಾಯಮರ್ಜುನ |
ಮದಾಸ್ಥಿತತ್ವಾತ್ ಸಮರೇ ನ ವಿಶೀರ್ಣಃ ಪರಂತಪ ||20||

ಶ್ರೀಭಗವಾನ್ ಶತ್ರುಸಂಹಾರಕ ಅರ್ಜುನನೇ! ಯುದ್ಧದಲ್ಲಿ  ದ್ರೋಣ ಮತ್ತು ಕರ್ಣರ ಅಸ್ತ್ರಗಳಿಂದ ಮೊದಲೇ ಸುಟ್ಟು ಹೋಗಿದ್ದ ರಥವು ನನ್ನ ಮತ್ತು ಹನುಮಂತನ ಉಪಸ್ಥಿತಿಯಿಂದಾಗಿ ಪುಡಿಯಾಗಲಿಲ್ಲ.
ಇದಾನೀಂ ತು ವಿಶೀರ್ಣೋಽಯಂ ದಗ್ಧೋ ಬ್ರಹ್ಮಾಸ್ತ್ರತೇಜಸಾ |
ಮಯಾ ವಿಮುಕ್ತಃ ಕೌಂತೇಯ ತ್ವಯ್ಯದ್ಯ ಕೃತಕರ್ಮಣಿ ॥21॥
ಕುಂತೀಪುತ್ರನೇ! ನೀನು ಈಗ ಸಕಲಕಾರ್ಯಗಳನ್ನೂ ಪೂರೈಸಿದವನಾಗಿರುವಿ. ಆದ್ದರಿಂದ ನಾನು ರಥದಿಂದ ಕೆಳಗಿಳಿದೆ. ಬ್ರಹ್ಮಾಸ್ತ್ರದ ತೇಜಸ್ಸಿಗೊಳಗಾದ ರಥವು ಈಗ ಪುಡಿಯಾಗಿ ಭಸ್ಮವಾಯಿತು.
ಸಂಜಯಃ
ಈಷದುತ್ಸ್ಮಯಮಾನಸ್ತು ಭಗವಾನ್ ಕೇಶವೋಽರಿಹಾ |
ಪರಿಷ್ವಜ್ಯ ತು ರಾಜಾನಂ ಯುಧಿಷ್ಠಿರಮಭಾಷತ ॥22॥
ಸಂಜಯ ಶತ್ರುಸಂಹಾರಕನಾದ ಭಗವಾನ್ ಕೇಶವನು ಮಂದಸ್ಮಿತನಾಗಿ ರಾಜ ಯುಧಿಷ್ಠಿರನನ್ನು ಆಲಿಂಗಿಸಿ ಅವನಿಗೆ ಹೇಳುತ್ತಾನೆ.
ಶ್ರೀಭಗವಾನ್
ದಿಷ್ಟ್ಯಾ ಜಯಸಿ ಕೌಂತೇಯ ದಿಷ್ಟ್ಯಾ ತೇ ಶತ್ರವೋ ಹತಾಃ ॥23॥
ಶ್ರೀಭಗವಾನ್ ಕುಂತೀಪುತ್ರನೇ! ಅದೃಷ್ಟದಿಂದ ನೀನು ಯುದ್ಧದಲ್ಲಿ ಜಯವನ್ನು ಸಂಪಾದಿಸಿರುವಿ. ಅದೃಷ್ಟದಿಂದಾಗಿ ನಿನ್ನ ಶತ್ರುಗಳೂ ಹತರಾಗಿದ್ದಾರೆ.
ದಿಷ್ಟ್ಯಾ ಗಾಂಡೀವಧನ್ವಾ ಚ ಭೀಮಸೇನಶ್ಚ ಪಾಂಡವಃ |
ತ್ವಂ ಚಾಪಿ ಕುಶಲೀ ರಾಜನ್ ಮಾದ್ರೀಪುತ್ರೌ ಚ ಪಾಂಡವೌ ॥24॥
ರಾಜನೇ! ಅದೃಷ್ಟವಶಾತ್ ಗಾಂಡೀವಧಾರಿಯಾದ ಅರ್ಜುನ, ಭೀಮಸೇನ, ನಕುಲ-ಸಹದೇವರು ಮತ್ತು ನೀನು ಎಲ್ಲರೂ ಕ್ಷೇಮವಾಗಿರುವಿರಿ.
ಮುಕ್ತ ವೀರಕ್ಷಯಾದಸ್ಮಾತ್ ಸಂಗ್ರಾಮಾನ್ನಿಹತದ್ವಿಷಃ ॥25॥
ಶತ್ರುಗಳ ನಾಶಕ್ಕೆ ಕಾರಣವಾದ ಈ ಮಹಾಯುದ್ಧವನ್ನು ಪೂರೈಸಿರುವಿ.
ಕ್ಷಿಪ್ರಮುತ್ತರಕಾಲಾನಿ ಕುರು ಕರ್ಮಾಣಿ ಭಾರತ ॥26॥
ಭರತಕುಲೋದ್ಭವನೇ! ಮುಂದೆ ಮಾಡಬೇಕಾದ ಕಾರ್ಯಗಳನ್ನು ಮಾಡು.
ಉಪಯಾತಮುಪಪ್ಲಾವ್ಯಂ ಸಹ ಗಾಂಡೀವಧನ್ವನಾ |
ಆನೀಯ ಮಧುಪರ್ಕಂ ಮಾಂ ಯತ್ಪುರಾ ತ್ವಮವೋಚಥಾಃ ॥27॥
ಹಿಂದೆ ನಾನು ಉಪಪ್ಲಾವ್ಯನಗರಕ್ಕೆ ಬಂದಾಗ ಅರ್ಜುನನನ್ನು ಕೂಡಿಕೊಂಡು ಮಧುಪರ್ಕಾದಿಗಳಿಂದ ಸತ್ಕರಿಸಿ ನನಗೆ ಏನನ್ನು ಹೇಳಿರುವಿಯೋ ಅದನ್ನು ಕೇಳು.
ಏಷ ಭ್ರಾತಾ ಸಖಾ ಚೈವ ತವ ಕೃಷ್ಣ ಧನಂಜಯಃ |
ರಕ್ಷಿತವ್ಯೋ ಮಹಾಬಾಹೋ ಸರ್ವಾಸ್ವಾಪತ್ಸ್ವಿತಿ ಪ್ರಭೋ ॥28॥
ತವ ಚೈವ ಬ್ರುವಾಣಸ್ಯ ತಥೇತ್ಯೇವಾಹಮಬ್ರುವಮ್ ॥29॥
`ಹೇ ಕೃಷ್ಣ! ನನ್ನ ಈ ಸಹೋದರ ಅರ್ಜುನನು ನಿನ್ನ ಸ್ನೇಹಿತ. ಮಹಾಬಾಹುವೇ! ಪ್ರಭುವೇ! ಎಲ್ಲಾ ಅವಸ್ಥೆಗಳಲ್ಲಿಯೂ ಇವನನ್ನು ರಕ್ಷಿಸು!' ಎಂದು ನೀನು ಹೇಳಿದಾಗ ನಾನು `ತಥಾಸ್ತು' ಎಂದು ಹೇಳಿದ್ದೆನು.
ಸ ಸವ್ಯಸಾಚೀ ಗುಪ್ತಸ್ತೇ ವಿಜಯೀ ಚ ನರೇಶ್ವರ |
ಭ್ರಾತೃಭಿಃ ಸಹ ರಾಜೇಂದ್ರ ಶೂರಃ ಸತ್ಯಪರಾಕ್ರಮಃ ॥30॥
ರಾಜನೇ! ಅಂತಹ ಸವ್ಯಸಾಚಿಯಾದ ಅರ್ಜುನನನ್ನು ರಕ್ಷಿಸಿರುವೆನು. ಶೂರನಾದ ಹಾಗೂ ಸತ್ಯಪರಾಕ್ರಮಿಯಾದ ಅವನಿಂದು ಸಹೋದರರ ಜೊತೆ ಸೇರಿ ಜಯಶಾಲಿಯಾಗಿದ್ದಾನೆ.
ಮುಕ್ತೋ ವೀರಕ್ಷಯಾದಸ್ಮಾತ್ ಸಂಗ್ರಾಮಾದ್ ರೋಮಹರ್ಷಣಾತ್ ॥
ರೋಮಾಂಚನಕಾರಿಯಾದ ವೀರರ ನಾಶವನ್ನು ಕಂಡ ಈ ಯುದ್ಧದಿಂದ ಮುಕ್ತನಾಗಿದ್ದಾನೆ.
ಸಂಜಯಃ
ಏವಮುಕ್ತಸ್ತು ಕೃಷ್ಣೇನ ಧರ್ಮಪುತ್ರೋ ಯುಧಿಷ್ಠಿರಃ |
ಹೃಷ್ಟರೋಮಾ ಮಹಾಬಾಹುಃ ಪ್ರತ್ಯುವಾಚ ಜನಾರ್ದನಮ್ ॥32॥
ಸಂಜಯ ಶ್ರೀಕೃಷ್ಣನು ಹೀಗೆ ಹೇಳಿದಾಗ ಮೈರೋಮಾಂಚನಗೊಂಡ ಮಹಾಬಾಹು ಯುಧಿಷ್ಠಿರನು ಜನಾರ್ದನನಿಗೆ ಉತ್ತರಿಸುತ್ತಾನೆ.
ಯುಧಿಷ್ಠಿರಃ
ಪ್ರಯುಕ್ತಂ ದ್ರೋಣಕರ್ಣಾಭ್ಯಾಂ ಬ್ರಹ್ಮಾಸ್ತ್ರಮರಿಸೂದನ |
ಕಸ್ತ್ವದನ್ಯಃ ಸಹೇತ್ ಸಾಕ್ಷಾದಪಿ ವಜ್ರೀ ಪುರಂದರಃ ॥33॥
ಯುಧಿಷ್ಠಿರ ಶತ್ರುನಾಶಕನೇ! ದ್ರೋಣ ಮತ್ತು ಕರ್ಣರು ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ನೀನಲ್ಲದೆ ಸಾಕ್ಷಾತ್ ದೇವೇಂದ್ರನಿಗೂ ಕೂಡ ಸಹಿಸಲು ಅಸಾಧ್ಯವಾಗಿತ್ತು.
ಭವತಸ್ತು ಪ್ರಸಾದಾಚ್ಚ ಸಂಗ್ರಾಮೇ ಬಹವೋ ಜಿತಾಃ |
ಮಹಾರಣಗತಃ ಪಾರ್ಥೋ ಯಚ್ಚ ನಾಸೀತ್ ಪರಾಙ್ಮುಖಃ ॥34॥
ನಿನ್ನ ಅನುಗ್ರಹದಿಂದಲೇ ಯುದ್ಧದಲ್ಲಿ ಅರ್ಜುನನು ಹಿಮ್ಮುಖನಾಗದೇ ಅನೇಕ ವೀರರನ್ನು ಗೆದ್ದಿರುತ್ತಾನೆ.
ತಥಾ ತವ ಮಹಾಬಾಹೋ ಪರ್ಯಾಯೈರ್ಬಹುಭಿರ್ಮಯಾ |

ಕರ್ಮಣಾಮನುಸಂಧಾನಾತ್ ತೇಜಸಶ್ಚ ಗತಿಃ ಶ್ರುತಾ ॥35॥
ಮಹಾಬಾಹುವೇ! ಅದೇ ರೀತಿಯಲ್ಲಿ ಅನೇಕ ಬಾರಿ ನಿನ್ನ ಮಾರ್ಗದರ್ಶನ- ದಿಂದಲೇ ನಮಗೆ ಕಾರ್ಯದಲ್ಲಿ ಸಿದ್ಧಿಯು ಪ್ರಾಪ್ತವಾಯಿತು ಹಾಗೂ ತೇಜಸ್ಸಿನ ಪ್ರಾಪ್ತಿಯೂ ಆಯಿತು.
ಉಪಪ್ಲಾವ್ಯೇ ಮಹರ್ಷಿರ್ಮಾಂ ಕೃಷ್ಣದ್ವೈಪಾಯನೋಽಬ್ರವೀತ್ |
ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ ॥36॥
ಉಪಪ್ಲಾವ್ಯದಲ್ಲಿ ಮಹರ್ಷಿ ವೇದವ್ಯಾಸರು ಹೇಳಿದ್ದರು : `ಎಲ್ಲಿ ಧರ್ಮವಿರುತ್ತದೆಯೋ ಅಲ್ಲಿ ಶ್ರೀಕೃಷ್ಣನಿರುತ್ತಾನೆ. ಎಲ್ಲಿ ಶ್ರೀಕೃಷ್ಣನಿರುತ್ತಾನೆಯೋ ಅಲ್ಲಿ ಜಯವಿರುತ್ತದೆ' ಎಂದು.
ಸಂಜಯಃ
ಏವಮುಕ್ತಸ್ತತಃ ಕೃಷ್ಣಃ ಪ್ರತ್ಯುವಾಚ ಯುಧಿಷ್ಠಿರಮ್ ॥37॥
ಸಂಜಯ ಧರ್ಮರಾಜನು ಹೀಗೆ ಹೇಳಿದಾಗ ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೀಗೆ ಹೇಳುತ್ತಾನೆ.
ಶ್ರೀಭಗವಾನ್
ಅಕ್ಷೌಹಿಣ್ಯೋ ದಶಾಷ್ಟೌ ಚ ತವ ತೇಷಾಂ ಚ ಭಾರತ |
ನ ತುಲ್ಯಾಶ್ಚಾರ್ಜುನಸ್ಯೇಹ ಬಲೇನ ಕುರುನಂದನ ॥38॥
ಶ್ರೀಭಗವಾನ್ ಕುರುನಂದನನೇ! ಭರತಕುಲೋದ್ಭವನೇ! ನಿನ್ನ ಮತ್ತು ಕೌರವರ ಹದಿನೆಂಟು ಅಕ್ಷೌಹಿಣಿ ಸೇನೆಯೂ ಬಲದ ವಿಷಯದಲ್ಲಿ ಅರ್ಜುನನಿಗೆ ಸಮವಾಗಿಲ್ಲ.
ಸ ಏಷ ಸರ್ವಾಣ್ಯಸ್ತ್ರಾಣಿ ದಿವ್ಯಾನಿ ಪ್ರಾಪ್ಯ ಶಂಕರಾತ್ |
ಮತ್ಸಮೋ ವಾ ವಿಶಿಷ್ಟೋ ವಾ ರಣೇ ತ್ವಮಿತಿ ಪಾಂಡವ ॥39॥
ಪಾಂಡುಪುತ್ರನೇ! ಅವನು ರುದ್ರನಿಂದ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ನರಾವೇಶದ ಪ್ರಯುಕ್ತವಾಗಿ ನನಗೆ ಸಮಾನನಾಗಿದ್ದಾನೆ. ಹರಿಯ ಆವೇಶವಿರುವುದರಿಂದ ಮದ್ವಿಶಿಷ್ಟನಾಗಿದ್ದಾನೆ.
ಅನುಜ್ಞಾತಃ ಪಾಂಡುಸುತಃ ಪುನಃ ಪ್ರತ್ಯಾಗಮನ್ಮಹೀಮ್ ॥40॥
ಕೈಲಾಸಕ್ಕೆ ಹೋಗಿದ್ದ ಅರ್ಜುನನು ರುದ್ರನ ಒಪ್ಪಿಗೆಯನ್ನು ಪಡೆದು ಪುನಃ ಭೂಮಿಗೆ ಬಂದಿದ್ದ.
ಭೂತಂ ಭವ್ಯಂ ಭವಿಷ್ಯಚ್ಚ ಅನುಜಾನಾಸಿ ಚೇತ್ ಪ್ರಭೋ |
ನಿಮೇಷಾರ್ಧಾನ್ನರವ್ಯಾಘ್ರೋ ನಯೇದಿತಿ ಮತಿರ್ಮಮ ॥41॥
ಪ್ರಭುವೇ! ನೀನು ಒಪ್ಪಿಗೆಯನ್ನು ಕೊಟ್ಟರೆ ಹಿಂದೆ ಇದ್ದದ್ದನ್ನು, ಈಗ ಇರುವುದನ್ನು, ಮುಂದೆ ಬರುವುದನ್ನು, ಎಲ್ಲವನ್ನೂ ಮನುಷ್ಯಸಿಂಹನಾದ ಅರ್ಜುನನು ಕ್ಷಣಾರ್ಧದಲ್ಲಿ ನಾಶಮಾಡಬಲ್ಲ ಎಂಬುದು ನನ್ನ ಅಭಿಪ್ರಾಯ.
ದ್ರೋಣಂ ಭೀಷ್ಮಂ ಕೃಪಂ ಕರ್ಣಂ ದ್ರೋಣಪುತ್ರಂ ಜಯದ್ರಥಮ್ |
ನಿಹಂತುಂ ಶಕ್ನುಯಾತ್ ಕ್ರುದ್ಧೋ ನಿಮೇಷಾರ್ಧಾದ್ಧನಂಜಯಃ ॥42॥
ಕ್ರುದ್ಧನಾದ ಧನಂಜಯನು ದ್ರೋಣನನ್ನು, ಭೀಷ್ಮನನ್ನು, ಕೃಪನನ್ನು, ಕರ್ಣನನ್ನು, ಅಶ್ವತ್ಥಾಮನನ್ನು, ಜಯದ್ರಥನನ್ನು ನಿಮಿಷಾರ್ಧದಲ್ಲಿ ಕೊಲ್ಲಲು ಸಮರ್ಥನಾಗಿದ್ದಾನೆ.
ಸದೇವಾಸುರಗಂಧರ್ವಾನ್ ಸಯಕ್ಷೋರಗರಾಕ್ಷಸಾನ್ |
ಜಿತ್ವಾ ಲೋಕಾನ್ ವಿಜೇತುಂ ಹಿ ಶಕ್ತಃ ಕಿಮಿಹ ಮಾನುಷಾನ್ ॥43॥
ಜಯಶೀಲನಾದ ಅರ್ಜುನನು ದೇವತೆಗಳು, ಗಂಧರ್ವರು, ಯಕ್ಷರು, ಸರ್ಪಗಳು, ರಾಕ್ಷಸರು ಇವರೆಲ್ಲರನ್ನೂ ಮತ್ತು ಮೂರು ಲೋಕಗಳನ್ನೂ ಗೆಲ್ಲುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಹೀಗಿರುವಾಗ ಮನುಷ್ಯರ ವಿಷಯದಲ್ಲಿ ಏನು ಹೇಳಬೇಕು?
ವಿಧಿನಾ ಮಹಿತಶ್ಚಾಸೌ ಮಯಾ ಸಂಚೋದಿತೋಽಪಿ ಸನ್ |
ನ ಚಕಾರ ಮತಿಂ ಹಂತುಂ ಕೃತಾಂತೋ ಬಲವತ್ತರಃ ॥44॥
`ಗುರುವನ್ನು ವಧಿಸಬಾರದು' ಎಂಬ ಬುದ್ಧಿಗೆ ಬದ್ಧನಾಗಿ ಮಹತ್ವವನ್ನು ಹೊಂದಿದ ಬಲಶಾಲಿ ಅರ್ಜುನನು ನಾನು ಹೇಳಿದರೂ ಕೂಡ 'ಗುರುಗಳನ್ನು ಕೊಲ್ಲಲಾರೆ' ಎಂಬ ನಿಶ್ಚಯವುಳ್ಳವನಾಗಿ ಅವರನ್ನು ಕೊಲ್ಲಲು ಮನಸ್ಸನ್ನು ಮಾಡಲಿಲ್ಲ.
ಅತ್ರ ಗೀತಾ ಮಯಾ ಸುಷ್ಠು ಗಿರಃ ಸತ್ಯಾ ಮಹೀಪತೇ |
ದರ್ಶಿತಂ ಮಯಿ ಸರ್ವಂ ಚ ತೇನಾಸೌ ಜಿತವಾನ್ ರಿಪೂನ್ ॥45॥
ಈ ವಿಷಯದಲ್ಲಿ ನಾನು ಭಗವದ್ಗೀತೆಯನ್ನು ಹೇಳಿರುತ್ತೇನೆ. ನನ್ನ ಸ್ವರೂಪವನ್ನು ತೋರಿಸುವ ಮೂಲಕ ನಾನು ಸರ್ವವ್ಯಾಪಿಯಾಗಿದ್ದೇನೆಂದು ಅವನಿಗೆ ತಿಳಿಸಿಕೊಟ್ಟಿದ್ದೆ. ಆದ್ದರಿಂದಲೇ ಅವನು ಎಲ್ಲರನ್ನೂ ಗೆದ್ದಿರುವನು.
ಅರ್ಜುನೋಽಪಿ ಮಹಾಬಾಹುರ್ಮಯಾ ತುಲ್ಯೋ ಮಹೀಪತೇ |
ಸ ಮಹೇಶ್ವರಲಬ್ಧಾಸ್ತ್ರಃ ಕಿಂ ನ ಕುರ್ಯಾದ್ ವಿಭುಃ ಪ್ರಭೋ ॥46॥
ರಾಜನೇ! ಮಹಾಬಾಹುವಾದ ಅರ್ಜುನನೂ ಕೂಡ ನನಗೆ ಸಮಾನನಾಗಿದ್ದಾನೆ. ರುದ್ರನಿಂದ ಅಸ್ತ್ರಗಳನ್ನು ಪಡೆದುಕೊಂಡಿರುವ ಈ ಅರ್ಜುನನು ಏನನ್ನು ಮಾಡಲು ಸಾಧ್ಯವಿಲ್ಲ? ಎಲ್ಲವನ್ನೂ ಮಾಡುವನು.
ಸಂಜಯಃ
ಇತ್ಯೇವಮುಕ್ತೇ ತೇ ವೀರಾಃ ಶಿಬಿರಂ ತವ ಭಾರತ |
ಪ್ರವಿಶ್ಯ ಪ್ರತ್ಯಪದ್ಯಂತ ಕೋಶರತ್ನರ್ಧಿಸಂಚಯಾನ್ ॥47॥
ಸಂಜಯ ಭರತಕುಲೋದ್ಭವನೇ! ಶ್ರೀಕೃಷ್ಣನು ಹೀಗೆ ಹೇಳಿದಾಗ ನಿನ್ನ ಕಡೆಯ ವೀರರು ಶಿಬಿರವನ್ನು ಪ್ರವೇಶಿಸಿ ಅಲ್ಲಿದ್ದ ಕೋಶ, ರತ್ನ, ಸಂಪತ್ತಿನ ರಾಶಿಗಳನ್ನು ನೋಡಿದರು.

ರಜತಂ ಜಾತರೂಪಂ ಚ ಮಣೀನಥ ಚ ಮೌಕ್ತಿಕಾನ್ |
ಭೂಷಣಾನ್ಯಥ ಮುಖ್ಯಾನಿ ಕಂಬಲಾನ್ಯಜಿನಾನಿ ಚ ||48||
ದಾಸೀದಾಸಮಸಂಖ್ಯೇಯಂ ರಾಜ್ಯೋಪಕರಣಾನಿ ಚ ||49||
ತೇ ಪ್ರಾಪ್ಯ ಧನಮಕ್ಷಯ್ಯಂ ತ್ವದೀಯಂ ಭರತರ್ಷಭ |
ಉದಕ್ರೋಶನ್ ಮಹೇಷ್ವಾಸಾ ನರೇಂದ್ರ ವಿಜಿತಾರಯಃ ||50||
ಬೆಳ್ಳಿ, ಬಂಗಾರ, ನಾನಾ ವಿಧದ ಮಣಿಗಳು, ಮುತ್ತುಗಳು, ಪ್ರಮುಖವಾದ ಆಭರಣಗಳು, ಕಂಬಳಿ, ವಸ್ತ್ರ, ಅಜಿನಗಳು, ಅಸಂಖ್ಯರಾದ ದಾಸರು, ದಾಸಿಯರು, ರಾಜ್ಯದ ವಿವಿಧ ಉಪಕರಣಗಳು - ಇವೆಲ್ಲವನ್ನೂ ಹೊಂದಿದರು. ಭರತಶ್ರೇಷ್ಠನೇ! ಇದೆಲ್ಲವೂ ನಿನಗೆ ವಶವಾದವುಗಳೂ ಎಂದು ತಿಳಿದು, ಶತ್ರುಗಳನ್ನು ಗೆದ್ದಿರುವ ಮಹಾಬಿಲ್ಗಾರರು ಜೋರಾಗಿ ಕೇಕೆ ಹಾಕಿ ಶಬ್ದ ಮಾಡಿದರು.
ತೇ ತು ವೀರಾಃ ಸಮಾಶ್ವಸ್ಯ ವಾಹನಾನ್ಯವಮುಚ್ಯ ಚ |
ಅತಿಷ್ಠಂತ ಮುಹುಃ ಸರ್ವೇ ಪಾಂಡವಾ ವಿಗತಜ್ವರಾಃ ||51||
ಆ ಪಾಂಡವ ವೀರರು ವಿಶ್ರಾಂತಿಯನ್ನು ಪಡೆದು ವಾಹನಗಳಿಂದ ಕುದುರೆಗಳನ್ನು ಬಿಡಿಸಿ ಸಕಲವ್ಯಥೆಗಳನ್ನು ಕಳೆದುಕೊಂಡು ಪುನಃ ಸನ್ನದ್ಧರಾದರು.
ಅಥಾಬ್ರವೀನ್ಮಹಾರಾಜ ವಾಸುದೇವೋ ಮಹಾಯಶಾಃ ||52||
ಮಹಾರಾಜನೇ! ಅನಂತರ ಮಹಾಕೀರ್ತಿಶಾಲಿಯಾದ ಶ್ರೀಕೃಷ್ಣನು ಹೇಳಿದನು.
ಶ್ರೀಭಗವಾನ್
ಅಸ್ಮಾಭಿರ್ಮಂಗಲಾರ್ಥಾಯ ವಸ್ತವ್ಯಂ ನಗರಾದ್ ಬಹಿಃ ||53||
ಜಯಂತೀ ಯತ್ರ ದೇವೀ ತು ತತ್ರ ವ್ರಜತ ಮಾಚಿರಮ್ |
ಉಪಪಾದಿತಮೇತನ್ಮೇ ಯುದ್ಧಾರಂಭೋಪಕಲ್ಪಿತಮ್ ||54||
ಶ್ರೀಭಗವಾನ್ ಮಂಗಳಸ್ನಾನವನ್ನು ಮಾಡಲಿಕ್ಕಾಗಿ ನಾವೆಲ್ಲರೂ ನಗರದಿಂದ ಹೊರಗಡೆ ಹೋಗಬೇಕು. ದೇವಿ ಜಯಂತಿಯು ಎಲ್ಲಿ ಇರುವಳೋ ಅಲ್ಲಿ ಬೇಗನೇ ಹೋಗಿರಿ. ಯಾವ ಸಂಕಲ್ಪದೊಡನೆ ಯುದ್ಧವು ಆರಂಭವಾಗಿತ್ತೋ ಅದು ಈಗ ಪ್ರಾಪ್ತವಾಗಿದೆ.
ಸಂಜಯಃ
ತಥೇತ್ಯುಕಕ್ತ್ವ ತು ತೇ ಸರ್ವೇ ಪಾಂಡವಾಃ ಸಾತ್ಯಕಿಸ್ತಥಾ |
ವಾಸುದೇವೇನ ಸಹಿತಾ ಮಂಗಲಾರ್ಥಂ ಯಯುರ್ಬಹಿಃ ||55||
ಸಂಜಯ `ಹಾಗೆಯೇ ಆಗಲಿ' ಎಂದು ಹೇಳುತ್ತಾ ಎಲ್ಲಾ ಪಾಂಡವರು ಮತ್ತು ಸಾತ್ಯಕಿಯು ಶ್ರೀಕೃಷ್ಣನನ್ನು ಕೂಡಿಕೊಂಡು ಮಂಗಳಸ್ನಾನಕ್ಕಾಗಿ ನಗರದಿಂದ ಹೊರಗೆ ಹೋದರು.
ತೇ ಸಮಾಸಾದ್ಯ ಸರಿತಂ ಪುಣ್ಯಾಮೋಘವತೀಂ ತದಾ |
ನ್ಯವಸನ್ನಥ ತಾಂ ರಾತ್ರಿಂ ಪಾಂಡವಾ ಜಿತಶತ್ರವಃ ||56||
ಶತ್ರುಗಳನ್ನು ಜಯಿಸಿದ್ದ ಪಾಂಡವರೆಲ್ಲರೂ ಪುಣ್ಯಪ್ರದವಾದ ಓಘವತೀನದಿಗೆ ಬಂದು ಆ ರಾತ್ರಿ ಅಲ್ಲಿಯೇ ವಾಸಮಾಡಿದರು.
ಯುಧಿಷ್ಠಿರಸ್ತತೋ ರಾಜಾ ಪ್ರಾಪ್ತಕಾಲಮಚಿಂತಯತ್ ||57||
ಅನಂತರ ರಾಜ ಯುಧಿಷ್ಠಿರನು ಸಮಯಕ್ಕೆ ಸರಿಯಾದ ಕಾರ್ಯವನ್ನು ವಿಚಾರ ಮಾಡಿದನು.
ತತ್ರ ತೇ(ಮೇ) ಗಮನಂ ಪ್ರಾಪ್ತಂ(ಯಃ) ರೋಚತೇ ತವ ಮಾಧವ |
ಗಾಂಧಾರ್ಯಾಃ ಕ್ರೋಧದೀಪ್ತಾಯಾಃ ಪ್ರಶಮಾರ್ಥಮರಿಂದಮ ||58||
`ಮಾಧವನೇ! ಶತ್ರುಸಂಹಾರಕನೇ! (ಮಕ್ಕಳನ್ನು ಕಳೆದುಕೊಂಡು ಅದಕ್ಕೆ ಕಾರಣರಾದ ಪಾಂಡವರ ಮೇಲಿನ) ಕೋಪದಿಂದ ಜ್ವಲಿಸುತ್ತಿರುವ ಗಾಂಧಾರಿಯನ್ನು ಸಮಾಧಾನಪಡಿಸಲಿಕ್ಕಾಗಿ ನಾನು ಹಸ್ತಿನಾಪುರಕ್ಕೆ ಹೋಗಲು ಬಯಸುತ್ತೇನೆ.
ಹೇತುಕಾರಣಯುಕ್ತೈಶ್ಚ(ಸ್ತೈ) ವಾಕ್ಯೈಃ ಕಾಲಸಮೀರಿತೈಃ |
ಕ್ಷಿಪ್ರಮೇವ ಮಹಾಭಾಗ ಗಾಂಧಾರೀಂ ಪ್ರಶಮಿಷ್ಯಸಿ ||59||
ಮಹಾಭಾಗ್ಯವಂತನೇ! ಎಲ್ಲದಕ್ಕೂ ಕಾರಣನಾದ ಶ್ರೀಹರಿಯ ಬಗ್ಗೆ, ಆಯಾ ಜೀವರಿಗೆ ಸಂಬಂಧಿಸಿದ ಪ್ರಾರಬ್ಧಕರ್ಮ, ಯೋಗ್ಯತೆ ಇವುಗಳ ಬಗ್ಗೆ ಇರುವ ಕಾಲೋಚಿತವಾದ ಮಾತುಗಳಿಂದ ಗಾಂಧಾರಿಯನ್ನು ಕೂಡಲೇ ಸಮಾಧಾನ ಪಡಿಸಬೇಕು.
ಪಿತಾಮಹಶ್ಚ ಭಗವಾನ್ ವ್ಯಾಸಸ್ತತ್ರ ಭವಿಷ್ಯತಿ ||60||
ಅಲ್ಲಿ ಪಿತಾಮಹನಾದ ವೇದವ್ಯಾಸರೂ ಇರುತ್ತಾರೆ.
ವೈಶಂಪಾಯನಃ
ತತಃ ಸಂಪ್ರೇಷಯಾಮಾಸುರ್ಯಾದವಂ ಗಜಸಾಹ್ವಯಮ್ |
ತತಃ ಪ್ರಾಯಾಜ್ಜವೇನಾಶು ವಾಸುದೇವಃ ಪ್ರತಾಪವಾನ್ ||61||
ದಾರುಕಂ ರಥಮಾಸ್ಥಾಯ ಯತ್ರ ರಾಜಾಂಬಿಕಾಸುತಃ |
ತಮೂಚುಃ ಸಂಪ್ರಯಾಸ್ಯಂತಂ ಶೈಬ್ಯಸುಗ್ರೀವವಾಹನಮ್ ||62||
ವೈಶಂಪಾಯನ ಅನಂತರ ವಾಸುದೇವನನ್ನು ಹಸ್ತಿನಾಪುರಕ್ಕೆ ಕಳುಹಿಸಿಕೊಡುತ್ತಾರೆ. ಪ್ರತಾಪಿಯಾದ ಶ್ರೀಕೃಷ್ಣನು ವೇಗವಾಗಿ ಧೃತರಾಷ್ಟ್ರನು ಇದ್ದ ಹಸ್ತಿನಾವತಿಗೆ ಹೊರಟನು. ಶೈಬ್ಯ, ಸುಗ್ರೀವಮೊದಲಾದ ಕುದುರೆಗಳುಳ್ಳ ದಾರುಕನ ರಥವನ್ನು ಹತ್ತಿ ಹೊರಡುತ್ತಿದ್ದ ಶ್ರೀಕೃಷ್ಣನಿಗೆ ಪಾಂಡವರು ಹೀಗೆ ಹೇಳುತ್ತಾರೆ.
ಪಾಂಡವಾಃ
ಪ್ರತ್ಯಾಶ್ವಾಸಯ ಗಾಂಧಾರೀಂ ಹತಪುತ್ರಾಂ ಯಶಸ್ವಿನೀಮ್ ||63||

ಪಾಂಡವರು ಮಕ್ಕಳನ್ನು ಕಳೆದುಕೊಂಡಿರುವ ಯಶೋವತಿಯಾದ ಗಾಂಧಾರಿಯನ್ನು ಸಮಾಧಾನಪಡಿಸು.
ವೈಶಂಪಾಯನಃ
ಸ ಪ್ರಾಯಾತ್ ಪಾಂಡವೈರುಕ್ತಸ್ತತ್ಪುರಂ ಸಾತ್ವತಾಂ ವರಃ |
ಆಸಿಸಾದಯಿಷುಃ ಕ್ಷಿಪ್ರಂ ಗಾಂಧಾರೀಂ ನಿಹತಾತ್ಮಜಾಮ್ ॥64॥
ವೈಶಂಪಾಯನ ಸಾತ್ವತರಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ಪಾಂಡವರ ಈ ಮಾತನ್ನು ಕೇಳಿ ಮಕ್ಕಳನ್ನು ಕಳೆದುಕೊಂಡಿರುವ ಗಾಂಧಾರಿಯನ್ನು ಚೆನ್ನಾಗಿ ಸಮಾಧಾನಪಡಿಸುವ ಇಚ್ಛೆಯಿಂದ ಬೇಗನೇ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ವಾಸುದೇವಪ್ರಯಾಣಂ ನಾಮ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ಗಾಂಧಾರಿಯನ್ನು ಸಮಾಧಾನಪಡಿಸಿದ ರೀತಿಯ ಬಗ್ಗೆ ಜನಮೇಜಯ ಪ್ರಶ್ನಿಸಿದಾಗ ವೈಶಂಪಾಯನರು ಅದನ್ನು ಹೇಳಿದ್ದು.
ಶ್ರೀಕೃಷ್ಣನು ಗಾಂಧಾರಿ ಮತ್ತು ಧೃತರಾಷ್ಟ್ರರನ್ನು ಸಮಾಧಾನಪಡಿಸಿ
ಪುನಃ ಪಾಂಡವರ ಸಮೀಪಕ್ಕೆ ಬಂದುದು.
ಜನಮೇಜಯಃ
ಕಿಮರ್ಥಂ ರಾಜಶಾರ್ದೂಲೋ ಧರ್ಮಪುತ್ರೋ ಯುಧಿಷ್ಠಿರಃ |
ಗಾಂಧಾರ್ಯೈ ಪ್ರೇಷಯಾಮಾಸ ವಾಸುದೇವಂ ಪರಂತಪಮ್ ॥1॥
ಜನಮೇಜಯ ರಾಜಶಾರ್ದೂಲನಾದ ಧರ್ಮಪುತ್ರ ಯುಧಿಷ್ಠಿರನು ಶತ್ರುಸಂಹಾರಕನಾದ ಶ್ರೀಕೃಷ್ಣನನ್ನು ಗಾಂಧಾರಿಯ ಬಳಿಗೆ ಏಕೆ ಕಳುಹಿಸಿದನು?
ಯದಾ ಪೂರ್ವಂ ಗತಃ ಕೃಷ್ಣಃ ಶಮಾರ್ಥಂ ಕೌರವಾನ್ ಪ್ರತಿ |
ನ ಚ ತಲ್ಲಬ್ಧವಾನ್ ಕಾಮಂ ತತೋ ಯುದ್ಧಮಭೂದಿದಮ್ ॥2॥
ಹಿಂದೆ ಶ್ರೀಕೃಷ್ಣನು ಯಾವಾಗ ಸಂಧಿಗಾಗಿ ಕೌರವರ ಬಳಿಗೆ ಹೋದನೋ ಆಗ ಅವನ ಇಷ್ಟಾರ್ಥವನ್ನು ಹೊಂದಲಿಲ್ಲ. ಆದ್ದರಿಂದ ಈ ಯುದ್ಧವು ನಡೆಯಿತು.
ನಿಹತೇಷು ತು ಯೋಧೇಷು ಹತೇ ದುರ್ಯೋಧನೇ ತದಾ |
ಪೃಥಿವ್ಯಾಂ ಪಾಂಡವೇಯಸ್ಯ ನಿಃಸಪತ್ನೇ ಕೃತೇ ಯುಧಿ ॥3॥
ವಿಶ್ರುತೇ ಶಿಬಿರೇ ಶೂನ್ಯೇ ಪ್ರಾಪ್ತೇ ಯಶಸಿ ಚೋತ್ತಮೇ |
ಕಿಂ ನು ತತ್ಕಾರಣಂ ಬ್ರಹ್ಮನ್ ಯೇನ ಕೃಷ್ಣೋ ಗತಃ ಪುರಮ್ ॥4॥
ಯುದ್ಧದಲ್ಲಿ ಯೋಧರೆಲ್ಲರೂ ನಾಶಹೊಂದಿದ್ದಾರೆ. ದುರ್ಯೋಧನನು ಸತ್ತಿದ್ದಾನೆ. ಪೃಥಿವಿಯಲ್ಲಿ ಧರ್ಮರಾಜನಿಗೆ ಪ್ರತಿಸ್ಪರ್ಧಿಗಳು ಯಾರೂ ಇಲ್ಲ. ದುರ್ಯೋಧನನ ಸಂಪದ್ಭರಿತವಾದ ಶಿಬಿರವೂ ಯುಧಿಷ್ಠಿರನ ಕೈವಶವಾಗಿದೆ. ಹೀಗಿರುವಾಗ ಶ್ರೀಕೃಷ್ಣನು ಹಸ್ತಿನಾವತಿಗೆ ಹೋಗಲು ಏನು ಕಾರಣ?
ನ ಚ ತತ್ಕಾರಣಂ ಬ್ರಹ್ಮನ್ನಲ್ಪಂ ವೈ ಪ್ರತಿಭಾತಿ ಮೇ |
ಯತ್ರಾಗಮದಮೇಯಾತ್ಮಾ ಸ್ವಯಮೇವ ಜನಾರ್ದನಃ ॥5॥
ಬ್ರಹ್ಮಜ್ಞಾನಿಯೇ! ಆ ಕಾರಣವು ಬಹಳ ದೊಡ್ಡದಿರಬೇಕೆಂದು ನಾನು ಭಾವಿಸುತ್ತೇನೆ. ಏಕೆಂದರೆ ತಿಳಿಯಲಸಾಧ್ಯವಾದ ಸ್ವರೂಪವುಳ್ಳ ಶ್ರೀಕೃಷ್ಣನೇ ಸ್ವಯಂ ಹೋಗಿದ್ದಾನೆ.
ತ್ವಮೇವೈತನ್ಮಮಾಚಕ್ಷ ್ವ ಸರ್ವಮೇತದ್ ದ್ವಿಜೋತ್ತಮ |
ಯಚ್ಚಾನ್ಯತ್ ಕಾರಣಂ ಬ್ರಹ್ಮನ್ ಕಾರ್ಯಸ್ಯಾಸ್ಯ ವಿನಿರ್ಣಯೇ ॥6॥
ಬ್ರಾಹ್ಮಣೋತ್ತಮನೇ! ಇದೆಲ್ಲವನ್ನೂ ನೀನೇ ನನಗೆ ಹೇಳು. ಈ ಕೆಲಸದ ನಿರ್ಣಯಕ್ಕೆ ಸಂಬಂಧಿಸಿದಂತೆ ಬೇರೆ ಏನಾದರೂ ಇದ್ದರೆ ಅದನ್ನೂ ಹೇಳು.
ವೈಶಂಪಾಯನಃ
ತ್ವದ್ಯುಕ್ತೋಽಯಮನುಪ್ರಶ್ನೋ ಯನ್ಮಾಂ ತ್ವಂ ಪರಿಪೃಚ್ಛಸಿ |
ತತ್ತೇಽಹಂ ಸಂಪ್ರವಕ್ಷ್ಯಾಮಿ ಯಥಾವದ್ ಭರತರ್ಷಭ ॥7॥
ವೈಶಂಪಾಯನ ನೀನು ಯಾವ ಪ್ರಶ್ನೆಯನ್ನು ಕೇಳಿರುವಿಯೋ ಅದು ಬಹಳ ಯುಕ್ತವಾದ ಪ್ರಶ್ನೆಯಾಗಿದೆ. ಭರತೋತ್ತಮನೇ! ಆದ್ದರಿಂದ ಅದನ್ನು ಯಥಾವತ್ತಾಗಿ ನಿನಗೆ ಹೇಳುವೆನು.
ಹತಂ ದುರ್ಯೋಧನಂ ದೃಷ್ಟ್ವಾ ಭೀಮಸೇನೇನ ಸಂಯುಗೇ |
ವ್ಯುತ್ಕ್ರಮ್ಯ ಸಮಯಂ ರಾಜನ್ ಧಾರ್ತರಾಷ್ಟ್ರಂ ಮಹಾಬಲಮ್ ॥8॥
ಅನ್ಯಾಯೇನ ಹತಂ ದೃಷ್ಟ್ವಾ ಗದಾಯುದ್ಧೇನ ಭಾರತ |
ಯುಧಿಷ್ಠಿರಂ ಮಹಾರಾಜ ಮಹದ್ ಭಯಮಥಾವಿಶತ್ ॥9॥
ರಾಜನೇ! ಯುದ್ಧದ ನಿಯಮಗಳನ್ನು ಮೀರಿ ರಣರಂಗದಲ್ಲಿ ಭೀಮಸೇನನ ಕೈಯಲ್ಲಿ ಅನ್ಯಾಯಮಾರ್ಗದಲ್ಲಿ ಸತ್ತ ಮಹಾಬಲಶಾಲಿಯಾದ ಧೃತರಾಷ್ಟ್ರನನ್ನು ನೋಡಿ ಯುಧಿಷ್ಠಿರನನ್ನು ಬಹಳವಾದ ಭಯವು ಆವರಿಸಿತು.
ಸೋಽಚಿಂತಯನ್ಮಹಾಭಾಗಾಂ ಗಾಂಧಾರೀಂ ತಪಸಾಽನ್ವಿತಾಮ್ |

ಘೋರೇಣ ಚಕ್ಷುಷಾ ಶಕ್ತಾಂ ತ್ರೈಲೋಕ್ಯಸ್ಯ ವಿನಾಶನೇ ॥10॥
ಧರ್ಮರಾಜನು ಮಹಾತಪಸ್ವಿಯಾದ, ಮಹಾಭಾಗ್ಯಶಾಲಿಯಾದ ಗಾಂಧಾರಿಯನ್ನು ನೆನೆಸಿಕೊಂಡನು. ಅವಳು ತನ್ನ ಭಯಂಕರವಾದ ದೃಷ್ಟಿಪಾತದಿಂದ ಮೂರುಲೋಕಗಳನ್ನು ಸುಡಲು ಸಮರ್ಥಳಾಗಿದ್ದಳು.
ತಸ್ಯ ಚಿಂತಯಮಾನಸ್ಯ ಬುದ್ಧಿಃ ಸಮಭವತ್ ತದಾ |
ಗಾಂಧಾರ್ಯಾಃ ಕ್ರೋಧದೀಪ್ತಾಯಾಃ ಪೂರ್ವಂ ಪ್ರಶಮನಂ ಭವೇತ್ ॥
ಸಾ ಹಿ ಪುತ್ರವಧಂ ಶ್ರುತ್ವಾ ಕೃತಮಸ್ಮಾಭಿರೀದೃಶಮ್ |
ಮಾನಸೇನಾಗ್ನಿನಾ ಕ್ರುದ್ಧಾ ಭಸ್ಮಸಾನ್ನಃ ಕರಿಷ್ಯತಿ ॥12॥
ಕಥಂ ದುಃಖಮಿದಂ ತೀವ್ರಂ ಗಾಂಧಾರೀ ಸಾ ಸಹಿಷ್ಯತಿ |
ಶ್ರುತ್ವಾ ವಿನಿಹತಂ ಪುತ್ರಂ ಛಲೇನಾಜಿಹ್ಮಯೋಧಿನಮ್ ॥13॥
ಹೀಗೆ ಚಿಂತಿಸಿದ ಧರ್ಮರಾಜನು ಹೀಗೆ ನಿಶ್ಚಯವನ್ನು ಮಾಡಿಕೊಂಡನು: `ಮೊದಲಿಗೆ ಕೋಪಾವಿಷ್ಟಳಾದ ಗಾಂಧಾರಿಯನ್ನು ಸಮಾಧಾನಪಡಿಸಬೇಕು. ನಾವು ಅವಳ ಮಗನನ್ನು ಈ ರೀತಿಯಲ್ಲಿ ಕೊಂದಿರುವುದನ್ನು ಕೇಳಿ ಕ್ರುದ್ಧಳಾಗಿ ಮನಸ್ಸಿನ ತಾಪದಿಂದ ನಮ್ಮನ್ನು ಸುಟ್ಟು ಭಸ್ಮಗೊಳಿಸುವಳು. ಋಜುಮಾರ್ಗದಲ್ಲಿಯೇ ಯುದ್ಧ ಮಾಡುತ್ತಿದ್ದ ತನ್ನ ಮಗನನ್ನು ಅನ್ಯಾಯದಿಂದ ಸಾಯಿಸಿದ್ದನ್ನು ಕೇಳಿ ಇದರಿಂದುಂಟಾದ ಬಹಳವಾದ ದುಃಖವನ್ನು ಅವಳು ಹೇಗೆ ಸಹಿಸಿಯಾಳು?' ಎಂದು
ವಧಂ ವಿಚಿಂತ್ಯ ಬಹುಧಾ ಭಯಶೋಕಸಮನ್ವಿತಃ |
ವಾಸುದೇವಮಿದಂ ವಾಕ್ಯಂ ಧರ್ಮರಾಜೋಽಭ್ಯಭಾಷತ ॥14॥
ಹೀಗೆ ದುರ್ಯೋಧನನ ವಧೆಯನ್ನು ಚಿಂತಿಸುತ್ತಾ ಅನೇಕ ರೀತಿಯ ಭಯ ಮತ್ತು ದುಃಖಕ್ಕೊಳಗಾದ ಯುಧಿಷ್ಠಿರನು ಶ್ರೀಕೃಷ್ಣನಿಗೆ ಈ ಮಾತನ್ನು ಹೇಳುತ್ತಾನೆ.
ಯುಧಿಷ್ಠಿರಃ
ತವ ಪ್ರಸಾದಾದ್ ಗೋವಿಂದ ರಾಜ್ಯಂ ನಿಹತಕಂಟಕಮ್ |
ಅಪ್ರಾಪ್ಯಂ ಮನಸಾಽಪೀಹ ಪ್ರಾಪ್ತಮಸ್ಮಾಭಿರಚ್ಯುತ ॥15॥
ಯುಧಿಷ್ಠಿರ ಗೋವಿಂದನೇ! ನಾವು ಮನಸ್ಸಿನಲ್ಲಿಯೂ ಪಡೆಯಲು ಅಶಕ್ಯವಾದ ಶತ್ರುಗಳಿಂದ ರಹಿತವಾದ ರಾಜ್ಯ ನಿನ್ನ ಅನುಗ್ರಹದಿಂದ ನಮಗಿಂದು ಪ್ರಾಪ್ತವಾಗಿದೆ.
ಪ್ರತ್ಯಕ್ಷಂ ತೇ ಮಹಾಬಾಹೋ ಸಂಗ್ರಾಮೇ ರೋಮಹರ್ಷಣೇ |
ವಿಮರ್ದಃ ಸುಮಹಾನ್ ಪ್ರಾಪ್ತಃ ತ್ವಯಾ ಯಾದವನಂದನ ॥16॥
ಮಹಾಬಾಹುವೇ! ಯಾದವನಂದನನೇ! ರೋಮಾಂಚನಕಾರಿಯಾದ ಯುದ್ಧದಲ್ಲಿ ನಡೆದ ಕಾದಾಟವನ್ನು ನೀನೂ ಪ್ರತ್ಯಕ್ಷವಾಗಿ ನೋಡಿರುವಿ.
ತ್ವಯಾ ದೇವಾಸುರೇ ಯುದ್ಧೇ ವಧಾರ್ಥಮಮರದ್ವಿಷಾಮ್ |
ಯಥಾ ಸಾಹ್ಯಂ ಪುರಾ ದತ್ತಂ ಹತಾಶ್ಚ ಸುರಶತ್ರವಃ ॥17॥
ಸಾಹ್ಯಂ ತಥಾ ಮಹಾಬಾಹೋ ದತ್ತಮಸ್ಮಾಕಮಚ್ಯುತ |
ಸಾರಥ್ಯೇನ ಚ ವಾರ್ಷ್ಣೇಯ ಭವತಾ ಯದ್ಧೃತಾ ವಯಮ್ ॥18॥
ಹಿಂದೆ ದೇವಾಸುರರ ಯುದ್ಧದಲ್ಲಿ ದೈತ್ಯರ ನಾಶಕ್ಕಾಗಿ ನೀನು ಯಾವ ರೀತಿಯಲ್ಲಿ ಸಹಾಯವನ್ನು ಮಾಡಿ ಅಮರಶತ್ರುಗಳು ನಾಶವಾದರೋ, ಮಹಾಬಾಹುವೇ, ಅದೇ ರೀತಿಯಲ್ಲಿ ನಾವು ಕೇಳಿಕೊಂಡಾಗ ನೀನು ನಮ್ಮ ಸಾರಥ್ಯವನ್ನು ವಹಿಸಿಕೊಂಡು ನಮಗೆ ಸಹಾಯವನ್ನು ಮಾಡಿರುವಿ.
ಯದಿ ನ ತ್ವಂ ಭವೇನ್ನಾಥಃ ಫಲ್ಗುನಸ್ಯ ಮಹಾರಣೇ |
ಕಥಂ ಶಕ್ಯಂ ರಣೇ ಜೇತುಂ ಭವೇದೇತದ್ ಬಲಾರ್ಣವಮ್ ॥19॥
ಮಹಾಯುದ್ಧದಲ್ಲಿ ಒಂದು ಪಕ್ಷ ನೀನು ಅರ್ಜುನನಿಗೆ ರಕ್ಷಕನಾಗಿ ಇರದಿದ್ದರೆ ಬಲವುಳ್ಳ ಯೋಧರು ಸಮುದ್ರದ ಹಾಗೆ ಭಾಗವಹಿಸಿದ್ದ ಈ ಯುದ್ಧದಲ್ಲಿ ಅರ್ಜುನನು ಗೆಲ್ಲಲು ಸಾಧ್ಯವಾಗುತ್ತಿರಲಿಲ್ಲ.
ಗದಾಪ್ರಹಾರಾ ವಿಪುಲಾಃ ಪರಿಘೈಶ್ಚಾಪಿ ತಾಡನಮ್ |
ಶಕ್ತಿಭಿರ್ಭಿಂಡಿಪಾಲೈಶ್ಚ ತೋಮರೈಃ ಸಪರಶ್ವಧೈಃ ॥20॥
ವಾಚಶ್ಚ ಪರುಷಾಃ ಪ್ರಾಪ್ತಾಃ ತ್ವಯಾ ಹ್ಯಸ್ಮಜ್ಜಯೈಷಿಣಾ ॥21॥
ತಾಶ್ಚ ತೇ ಸಫಲಾಃ ಸರ್ವಾ ಹತೇ ದುರ್ಯೋಧನೇಽಚ್ಯುತ |
ಗಾಂಧಾರ್ಯಾ ಹಿ ಮಹಾಬಾಹೋ ಕ್ರೋಧಂ ಶಮಯ ಮಾಧವ ॥
ನಮಗೆ ಗೆಲುವನ್ನು ತಂದುಕೊಡಬೇಕೆಂಬ ಇಚ್ಛೆಯಿಂದ ನೀನು ಬೇಕಾದಷ್ಟು ಬಾರಿ ಗದೆಯ ಪೆಟ್ಟುಗಳನ್ನು, ಪರಿಘಾಯುಧದ ಹೊಡೆತಗಳನ್ನು, ಶಕ್ತ್ಯಾಯುಧ, ಭಿಂಡಿಪಾಲ, ತೋಮರ, ಕೊಡಲಿ ಇವುಗಳ ಪೆಟ್ಟುಗಳನ್ನು ಸ್ವೀಕರಿಸಿರುವಿ. ಕ್ರೂರವಾದ ಮಾತುಗಳನ್ನು ನಮಗಾಗಿ ಕೇಳಿಸಿಕೊಂಡಿರುವಿ. ಅಚ್ಯುತನೇ! ದುರ್ಯೋಧನನು ಸತ್ತಾಗ ಇವೆಲ್ಲವೂ ಸಾರ್ಥಕವಾದವು. ಮಾಧವನೇ! ಗಾಂಧಾರಿಯ ಕೋಪವನ್ನು ಉಪಶಮನಗೊಳಿಸು.
ಸಾ ಹಿ ನಿತ್ಯಂ ಮಹಾಭಾಗ ತಪಸೋಗ್ರೇಣ ಕರ್ಶಿತಾ |
ಪುತ್ರಪೌತ್ರವಧಂ ಪ್ರಾಪ್ತಾ ಧ್ರುವಂ ನಃ ಪ್ರದಹಿಷ್ಯತಿ ॥23॥
ಉಗ್ರ ತಪಸ್ಸಿನಲ್ಲಿ ನಿರತಳಾದ ಆ ಮಹಾಭಾಗ್ಯವಂತೆಯಾದ ಗಾಂಧಾರಿಯು ಮಕ್ಕಳು ಮತ್ತು ಮೊಮ್ಮಕ್ಕಳ ಸಾವಿನ ಸುದ್ದಿಯನ್ನು ತಿಳಿದು ಖಂಡಿತವಾಗಿಯೂ ನಮ್ಮನ್ನು ಸುಟ್ಟುಹಾಕುವಳು.

ತಸ್ಯಾಃ ಪ್ರಸಾದನಂ ವೀರ ಪ್ರಾಪ್ತಕಾಲಮಿದಂ ಮಮ ॥24॥
ಅವಳನ್ನು ಸಮಾಧಾನಪಡಿಸುವುದು ನನಗೆ ಅತ್ಯಂತ ಅವಶ್ಯವಾದ ಸಮಯೋಚಿತ ಕಾರ್ಯವಾಗಿದೆ.
ಕಶ್ಚ ತಾಂ ಕ್ರೋಧಸಂದೀಪ್ತಾಂ ಪುತ್ರವ್ಯಸನಕರ್ಶಿತಾಮ್ |
ವೀಕ್ಷಿತುಂ ಪುರುಷಃ ಶಕ್ತಸ್ತ್ವಾಮೃತೇ ಪುರುಷೋತ್ತಮ ॥25॥
ಪುರುಷೋತ್ತಮನೇ! ಪುತ್ರಶೋಕದಿಂದ ಕೃಶಳಾದ, ಕೋಪದಿಂದ ಜ್ವಲಿಸುತ್ತಿರುವ ಆಕೆಯನ್ನು ಕಣ್ಣೆತ್ತಿ ನೋಡಲು ನೀನಲ್ಲದೆ ಬೇರೆ ಯಾರೂ ಸಮರ್ಥರಲ್ಲ.
ತತಸ್ತೇ ಗಮನಂ ಪ್ರಾಪ್ತಂ ತನ್ಮೇ ಮಾಧವ ರೋಚತೇ |
ಗಾಂಧಾರ್ಯಾಃ ಕ್ರೋಧದೀಪ್ತಾಯಾಃ ಪ್ರಶಮಾರ್ಥಮರಿಂದಮ ॥26॥
ಶತ್ರುಸಂಹಾರಕನೇ! ಮಾಧವನೇ! ಆದ ಕಾರಣ ಕೋಪಗೊಂಡಿರುವ ಗಾಂಧಾರಿಯನ್ನು ಸಮಧಾನಪಡಿಸಲು ನೀನೇ ಅಲ್ಲಿಗೆ ಹೋಗುವುದನ್ನು ನಾನು ಇಷ್ಟಪಡುತ್ತೇನೆ.
ತ್ವಂ ಹಿ ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವಾಪ್ಯಯಃ ॥27॥
ನೀನೇ ಎಲ್ಲದಕ್ಕೂ ಕರ್ತನಾಗಿರುವಿ. ಕಾರ್ಯಗಳನ್ನು ಅನ್ಯಥಾ ಮಾಡುವ ಕರ್ತನೂ ನೀನೇ. ಲೋಕಗಳ ಉತ್ಪತ್ತಿ ಮತ್ತು ಲಯಕ್ಕೂ ನೀನೇ ಕಾರಣ.
ಹೇತುಕಾರಣಸಂಯುಕ್ತೈರ್ವಚನೈಃ ಕಾಲಚೋದಿತೈಃ |
ಕ್ಷಿಪ್ರಮೇವ ಮಹಾಭಾಗಾಂ ಗಾಂಧಾರೀಂ ಶಮಯಿಷ್ಯಸಿ ॥28॥
ಎಲ್ಲದಕ್ಕೂ ಕಾರಣನಾದ ಪರಮಾತ್ಮ ಮತ್ತು ಆಯಾಯ ಜೀವರ ಪ್ರಾರಬ್ಧಕರ್ಮಗಳ ವಿಷಯದಲ್ಲಿ ಕಾಲೋಚಿತವಾದ ಮಾತುಗಳನ್ನು ಆಡಿ ಮಹಾತ್ಮಳಾದ ಗಾಂಧಾರಿಯನ್ನು ಕೂಡಲೆ ಸಮಾಧಾನಪಡಿಸು.
ಪಿತಾಮಹಶ್ಚ ಭಗವಾನ್ ತತ್ರ ಕೃಷ್ಣೋ ಭವಿಷ್ಯತಿ ॥29॥
ನಮ್ಮ ಪಿತಾಮಹನಾದ, ಪೂಜ್ಯನಾದ ವಾಸಿಷ್ಠಕೃಷ್ಣ ವೇದವ್ಯಾಸರೂ ಅಲ್ಲಿ ಇರುತ್ತಾರೆ.
ಸರ್ವಥಾ ತೇ ಮಹಾಬಾಹೋ ಗಾಂಧಾರ್ಯಾ ರೋಷನಾಶನಮ್ |
ಕರ್ತವ್ಯಂ ಸಾತ್ವತಶ್ರೇಷ್ಠ ಪಾಂಡವಾನಾಂ ಹಿತೈಷಿಣಾ ॥30॥
ಸಾತ್ವತಕುಲಶ್ರೇಷ್ಠನೇ! ಪಾಂಡವರ ಹಿತವನ್ನು ಬಯಸುವ ನೀನು ಗಾಂಧಾರಿಯ ಕೋಪವನ್ನು ಸರ್ವಥಾ ಉಪಶಮನಗೊಳಿಸು.
ವೈಶಂಪಾಯನಃ
ಧರ್ಮರಾಜಸ್ಯ ವಚನಂ ಶ್ರುತ್ವಾ ಯದುಕುಲೋದ್ವಹಃ |
ಆಮಂತ್ರ್ಯ ದಾರುಕಂ ಪ್ರಾಹ ರಥಃ ಸಜ್ಜೋ ವಿಧೀಯತಾಮ್ ॥31॥
ವೈಶಂಪಾಯನ ಧರ್ಮರಾಜನ ಮಾತನ್ನು ಕೇಳಿ ಯದುಕುಲಶ್ರೇಷ್ಠನಾದ ಶ್ರೀಕೃಷ್ಣನು ದಾರುಕನನ್ನು ಕರೆದು `ರಥವು ಸಿದ್ಧವಾಗಲಿ' ಎಂದು ಹೇಳಿದನು.
ಕೇಶವಸ್ಯ ವಚಃ ಶ್ರುತ್ವಾ ತ್ವರಮಾಣೋಽಥ ದಾರುಕಃ |
ನ್ಯವೇದಯದ್ ರಥಂ ಸಜ್ಜಂ ಕೇಶವಾಯ ಮಹಾತ್ಮನೇ ॥32॥
ಕೇಶವನ ಮಾತನ್ನು ಕೇಳಿದ ದಾರುಕನು ಕೂಡಲೇ `ರಥವು ಸಿದ್ಧವಾಗಿದೆ' ಎಂದು ಮಹಾತ್ಮನಾದ ಶ್ರೀಕೃಷ್ಣನಿಗೆ ಹೇಳಿದನು.
ತಂ ರಥಂ ಯಾದವಶ್ರೇಷ್ಠಃ ಸಮಾರುಹ್ಯ ಯದೂತ್ತಮಃ |
ಜಗಾಮ ಹಸ್ತಿನಪುರಂ ತ್ವರಿತಃ ಕೇಶವೋ ವಿಭುಃ ॥33॥
ಯದೂತ್ತಮನಾದ ಕೇಶವನು ಆ ರಥವನ್ನು ಏರಿ ಕೂಡಲೇ ಹಸ್ತಿನಾಪುರಕ್ಕೆ ಹೊರಟನು.
ತತಃ ಪ್ರಾಯಾನ್ಮಹಾಭಾಗಃ ಕೇಶವೋ ವೇಗವದ್ ದ್ರುತಮ್ |
ನಾಗಸಾಹ್ವಯಮಾಸಾದ್ಯ ಪ್ರವಿವೇಶ ಚ ವೀರ್ಯವಾನ್ ॥34॥
ಅನಂತರ ಮಹಾತ್ಮನಾದ ವೀರ ಕೇಶವನು ವೇಗವಾಗಿ ಸಾಗಿ ಹಸ್ತಿನಪುರವನ್ನು ಪ್ರವೇಶಿಸಿದನು.
ಪ್ರವಿಶ್ಯ ನಗರಂ ವೀರೋ ರಥಘೋಷೇಣ ನಾದಯನ್ |
ವಿದಿತೋ ಧೃತರಾಷ್ಟ್ರಸ್ಯ ಸೋಽವತೀರ್ಯ ರಥೋತ್ತಮಾತ್ ॥35॥
ಅಭ್ಯಗಚ್ಛದಮೇಯಾತ್ಮಾ ಧೃತರಾಷ್ಟ್ರನಿವೇಶನಮ್ ॥36॥
ವೀರಕೇಶವನು ರಥದ ಘೋಷದಿಂದ ಎಲ್ಲಾ ಕಡೆ ಶಬ್ದವನ್ನುಂಟುಮಾಡುತ್ತಾ ತನ್ನ ಬರುವಿಕೆಯನ್ನು ಧೃತರಾಷ್ಟ್ರನಿಗೆ ತಿಳಿಯುವಂತೆ ಮಾಡಿದನು. ತಾನು ರಥದಿಂದ ಇಳಿದು ಗಣನೆಗೆ ನಿಲುಕದ ಸ್ವರೂಪವುಳ್ಳ ಶ್ರೀಕೃಷ್ಣನು ಧೃತರಾಷ್ಟ್ರನ ಅರಮನೆಗೆ ಹೋದನು.
ಪೂರ್ವಂ ಚಾಭಿಗತಂ ತತ್ರ ಸೋಽಪಶ್ಯದೃಷಿಸತ್ತಮಮ್ ॥37॥
ತನಗಿಂತಲೂ ಮೊದಲೇ ಬಂದಿದ್ದ ವೇದವ್ಯಾಸಮುನಿಶ್ರೇಷ್ಠನನ್ನು ನೋಡಿದನು.
ಪಾದೌ ಪ್ರಪೀಡ್ಯ ಕೃಷ್ಣಸ್ಯ ರಾಜ್ಞಶ್ಚಾಪಿ ಜನಾರ್ದನಃ |
ಅಭ್ಯವಾದಯದವ್ಯಗ್ರೋ ಗಾಂಧಾರೀಂ ಚಾಪಿ ಕೇಶವಃ ॥38॥
ಯಾದವಕೃಷ್ಣನು ಯಾವುದೇ ಗಾಬರಿಗೊಳಗಾಗದೆ ವಾಸಿಷ್ಠಕೃಷ್ಣನ ಮತ್ತು ಧೃತರಾಷ್ಟ್ರನ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. ಹಾಗೆಯೇ ಗಾಂಧಾರಿಯನ್ನೂ ನಮಸ್ಕರಿಸಿದನು.
ತತಸ್ತು ಯಾದವಶ್ರೇಷ್ಠೋ ಧೃತರಾಷ್ಟ್ರಮಧೋಕ್ಷಜಃ |
ಪಾಣಿಮಾಲಂಬ್ಯ ರಾಜ್ಞಃ ಸ ಸಸ್ವನಂ ಪ್ರರುರೋದ ಹ ॥39॥
ಅನಂತರ ಯಾದವೋತ್ತಮನಾದ ಶ್ರೀಕೃಷ್ಣನು ಧೃತರಾಷ್ಟ್ರನ ಕೈಗಳನ್ನು ಹಿಡಿದುಕೊಂಡು ಸಶಬ್ದವಾಗಿ ಚೆನ್ನಾಗಿ ಅತ್ತನು.

ಸ ಮುಹೂರ್ತಮಿವೋತ್ಸೃಜ್ಯ ಬಾಷ್ಪಂ ಶೋಕಸಮುದ್ಭವಮ್ |
ಪ್ರಕ್ಷಾಲ್ಯ ವಾರಿಣಾ ನೇತ್ರೇ ಆಚಮ್ಯ ಚ ಯಥಾವಿಧಿ ॥40॥
ತಕ್ಷಣದಲ್ಲಿಯೇ ದುಃಖದಿಂದುಂಟಾದ ಕಣ್ಣೀರನ್ನು ಒರೆಸಿಕೊಂಡು ಕಣ್ಣುಗಳಿಗೆ ನೀರನ್ನು ಹಾಕಿ ತೊಳೆದುಕೊಂಡು ವಿಧ್ಯುಕ್ತ ರೀತಿಯಲ್ಲಿ ಆಚಮನವನ್ನು ಮಾಡಿದನು.
ಉವಾಚ ಪ್ರಶ್ರಿತಂ ವಾಕ್ಯಂ ಧೃತರಾಷ್ಟ್ರಮರಿಂದಮ ॥41॥
ಶತ್ರುಸಂಹಾರಕನಾದ ಶ್ರೀಕೃಷ್ಣನು ವಿನಯದಿಂದ ಧೃತರಾಷ್ಟ್ರನಿಗೆ ಈ ಮಾತನ್ನು ಹೇಳಿದನು.
ಶ್ರೀಭಗವಾನ್
ನ ತೇಽಸ್ತ್ಯವಿದಿತಂ ಕಿಂಚಿದ್ ಭೂತಂ ಭವ್ಯಂ ಚ ಭಾರತ |
ಕಾಲಸ್ಯ ಚ ಯಥಾವೃತ್ತಂ ತತ್ತೇ ಸುವಿದಿತಂ ಪ್ರಭೋ ॥42॥
ಶ್ರೀಭಗವಾನ್ ಭರತಕುಲೋದ್ಭವನೇ! ಹಿಂದೆ ನಡೆದಿದ್ದು, ಮುಂದೆ ನಡೆಯಲಿರುವುದು ಯಾವುದೂ ನಿನಗೆ ಗೊತ್ತಿಲ್ಲದೆ ಇಲ್ಲ. ಪ್ರಭುವೇ! ಕಾಲದ ಗತಿಯನ್ನು ಯಥಾವತ್ತಾಗಿ ತಿಳಿದಿರುವಿ.
ಯತಿ(ದಿ)ದಂ ಪಾಂಡವೈಃ ಸರ್ವೈಃ ತವ ಚಿತ್ತಾನುವರ್ತಿಭಿಃ |
ಕಥಂ ಕುಲಕ್ಷಯೋ ನ ಸ್ಯಾತ್ ತಥಾ ಕ್ಷತ್ರಸ್ಯ ಭಾರತ ॥43॥
ನೀನು ಹಿಂದೆ ನಿನ್ನ ಮನಸ್ಸಿಗೆ ಒಪ್ಪಿಗೆಯಾದ ನಡತೆಯುಳ್ಳ ಪಾಂಡವರಿಂದ ಕುಲನಾಶವಾಗಲೀ, ಕ್ಷತ್ರಿಯಕುಲದ ನಾಶವಾಗಲೀ ಆಗದಿರುವ ರೀತಿಯಲ್ಲಿ ಪ್ರಯತ್ನವನ್ನು ಮಾಡಿದ್ದಿ.
ಭ್ರಾತೃಭಿಃ ಸಮಯಂ ಕೃತ್ವಾ ಕ್ಷಾಂತವಾನ್ ಧರ್ಮವತ್ಸಲಃ |
ದ್ಯೂತೇಽಧರ್ಮಜಿತೈಃ ಶಕ್ತೈರ್ವನವಾಸೋಽಭ್ಯುಪಾಗತಃ ॥44॥
ಧರ್ಮವತ್ಸಲನಾದ ಯುಧಿಷ್ಠಿರನು ಸಹೋದರರೊಡನೆ ಒಪ್ಪಂದವನ್ನು ಮಾಡಿಕೊಂಡು ದ್ಯೂತದಲ್ಲಿ ಕೌರವರ ಅಧರ್ಮದಿಂದ ಸೋತು, ಸಮರ್ಥರಾಗಿದ್ದರೂ ವನವಾಸವನ್ನು ಸ್ವೀಕರಿಸಿದನು.
ಅಜ್ಞಾತವೇಷಚರ್ಯಾ ಚ ನಾನಾವೇಶಸಮಾಶ್ರಿತೈಃ |
ಅನ್ಯೇ ಚ ಬಹವಃ ಕ್ಲೇಶಾ ಅಶಕ್ತೈರಿವ ನಿತ್ಯದಾ ॥45॥
ಅಜ್ಞಾತವಾಸದಲ್ಲಿ ಬೇರೆ ಬೇರೆ ವೇಷಗಳನ್ನು ಧರಿಸಿಕೊಂಡು ಇನ್ನೂ ಬೇರೆ ಅನೇಕ ಕಷ್ಟಗಳನ್ನು ಅಶಕ್ತರಂತೆ ಅನುಭವಿಸಿದರು.
ಮಯಾ ಚ ಸ್ವಯಮಾಗಮ್ಯ ಯುದ್ಧಕಾ ಉಪಸ್ಥಿತೇ |
ಸರ್ವಲೋಕಸ್ಯ ಸಾನ್ನಿಧ್ಯೇ ಗ್ರಾಮಾಂಸ್ತ್ವಂ ಪಂಚ ಯಾಚಿತಃ ॥46॥
ಯುದ್ಧಕಾಲವು ಸಮೀಪಿಸಿದಾಗ ನಾನೇ ಸ್ವತಃ ಬಂದು ಎಲ್ಲರ ಎದುರಿಗೆ ಐದು ಗ್ರಾಮಗಳನ್ನು ಬೇಡಿದೆನು.
ತ್ವಯಾ ಕಾಲೋಪಸೃಷ್ಟೇನ ಲೋಭತೋ ನಾಪವರ್ಜಿತಾಃ |
ತವಾಪರಾಧಾನ್ನೃಪತೇ ಕ್ಷತ್ರಂ ಸರ್ವಂ ಕ್ಷಯಂ ಗತಮ್ ॥47॥
ಕಾಲದ ವಶಕ್ಕೆ ಒಳಗಾದ ನೀನು ಲೋಭದಿಂದ ಐದುಗ್ರಾಮಗಳನ್ನು ಕೊಡಲಿಲ್ಲ. ರಾಜನೇ! ನಿನ್ನ ಅಪರಾಧದಿಂದಾಗಿ ಎಲ್ಲ ಕ್ಷತ್ರಿಯವಂಶವೇ ನಾಶವಾಗಿದೆ.
ಭೀಷ್ಮೇಣ ಸೋಮದತ್ತೇನ ಬಾಹ್ಲೀಕೇನ ಕೃಪೇಣ ಚ |
ದ್ರೋಣೇನ ಸಹಪುತ್ರೇಣ ವಿದುರೇಣ ಚ ಧೀಮತಾ ॥48॥
ಯಾಚಿತಸ್ತ್ವಂ ಶಮಂ ನಿತ್ಯಂ ನ ಚ ತತ್ಕೃತವಾನಸಿ ॥49॥
ಭೀಷ್ಮ, ಸೋಮದತ್ತ, ಬಾಹ್ಲೀಕ, ಕೃಪ, ದ್ರೋಣ, ಅಶ್ವತ್ಥಾಮ, ಬುದ್ಧಿವಂತನಾದ ವಿದುರ ಇವರೆಲ್ಲರೂ ಸಂಧಿಗಾಗಿ ನಿತ್ಯವೂ ನಿನ್ನಲ್ಲಿ ಬೇಡಿಕೊಳ್ಳುತ್ತಿದ್ದರೂ ನೀನು ಸಂಧಿಯನ್ನು ಮಾಡಲಿಲ್ಲ.
ಕಾಲೋಪಹತಚಿತ್ತೋ ಹಿ ಸರ್ವೋ ಮುಹ್ಯತಿ ಭಾರತ |
ತಥಾ ಮೂಢೋ ಭವಾನ್ ಪೂರ್ವಮಸ್ಮಿನ್ನರ್ಥೇ ಸಮುದ್ಯತೇ ॥50॥
ಭರತಕುಲೋದ್ಭವನೇ! ಕಾಲದಿಂದ ಮನಸ್ಸು ಕೆಟ್ಟಾಗ ಎಲ್ಲರೂ ಮೋಹಕ್ಕೆ ಒಳಗಾಗುತ್ತಾರೆ. ಹಾಗೆಯೇ ನೀನೂ ಕೂಡ ಈ ಹಿಂದೆ ಸಂಧಿಯ ವಿಷಯದಲ್ಲಿ ಮೋಹಕ್ಕೆ ಒಳಗಾಗಿದ್ದಿ.
ಕಿಮನ್ಯತ್ ಕಾಲಯೋಗಾದ್ಧಿ ದ್ವಿಷ್ಟಮೇತತ್ ಪುರಾತನಮ್ |
ಮಾ ಚ ದ್ವೇಷಂ ಮಹಾರಾಜ ಪಾಂಡವೇಷು ನಿವೇಶಯ ॥51॥
ಕಾಲಕ್ಕನುಸಾರವಾಗಿ ಮೊದಲೇ ನಿಶ್ಚಿತವಾಗಿದ್ದು ಈಗ ನಡೆದಿದೆ. ಬೇರೇನಿದೆ? ಮಹಾರಾಜನೇ! ಪಾಂಡವರಲ್ಲಿ ದ್ವೇಷವನ್ನು ಇಟ್ಟುಕೊಳ್ಳಬೇಡ.
ಸ್ವಲ್ಪೋಽಪ್ಯತಿಕ್ರಮೋ ನಾಸ್ತಿ ಪಾಂಡವಾನಾಂ ಮಹಾತ್ಮನಾಮ್ |
ಧರ್ಮತೋ ನ್ಯಾಯತಶ್ಚೈವ ಸ್ನೇಹತಶ್ಚ ಪರಂತಪ ॥52॥
ಶತ್ರುತಾಪಕನೇ! ಮಹಾತ್ಮರಾದ ಪಾಂಡವರು ಧರ್ಮದ ವಿಷಯದಲ್ಲಾಗಲೀ, ನ್ಯಾಯದ ವಿಷಯದಲ್ಲಾಗಲೀ, ಸ್ನೇಹದ ವಿಷಯದಲ್ಲಾಗಲೀ ಸ್ವಲ್ಪವೂ ಮೀರಿನಡೆದಿಲ್ಲ.
ಏತತ್ ಸರ್ವಂ ತು ವಿಜ್ಞಾಯ ಹ್ಯಾತ್ಮದೋಷಕೃತಂ ಫಲಮ್ |
ತನ್ಮನ್ಯುಂ ಪಾಂಡುಪುತ್ರೇಷು ನ ಭವಾನ್ ಕರ್ತುಮರ್ಹತಿ ॥53॥
ಇದೆಲ್ಲವನ್ನೂ ಅವರವರ ದೋಷದ ಫಲವೆಂಬುದಾಗಿ ತಿಳಿದುಕೊಂಡು ನೀನು ಪಾಂಡುಪುತ್ರರಲ್ಲಿ ಕೋಪವನ್ನು ಮಾಡಬೇಡ.
ಕುಲಂ ವಂಶಶ್ಚ ಪಿಂಡಶ್ಚ ಯಚ್ಚ ಪುತ್ರಕೃತಂ ಫಲಮ್ |

ಗಾಂಧಾರ್ಯಾಸ್ತವ ಚೈವಾದ್ಯ ಪಾಂಡವೇಷು ಪ್ರತಿಷ್ಠಿತಮ್ ॥54॥
ನಿನ್ನ ಕುಲವಾಗಲೀ ವಂಶವಾಗಲೀ ಪಾಂಡವರಿಂದಲೇ ಮುಂದುವರಿಯಬೇಕು. ನಿನಗೆ ಮತ್ತು ಗಾಂಧಾರಿಗೆ ಮಕ್ಕಳು ಕೊಡಬೇಕಾದ ಪಿಂಡ, ತರ್ಪಣ ಎಲ್ಲವೂ ಇಂದು ಪಾಂಡವರಿಂದಲೇ ನಡೆಯಲಿದೆ.
ಏತತ್ ಸರ್ವಮನುಧ್ಯಾಯ ಆತ್ಮನಶ್ಚ ವ್ಯತಿಕ್ರಮಮ್ |
ಶಿವೇನ ಪಾಂಡವಾನ್ ಧ್ಯಾಹಿ ನಮಸ್ತೇ ಪುರುಷರ್ಷಭ ॥55॥
ಇದೆಲ್ಲವನ್ನೂ ಧ್ಯಾನದಲ್ಲಿಟ್ಟುಕೊಂಡು, ನೀನು ಮತ್ತು ನಿನ್ನವರು ಮಾಡಿದ ಧರ್ಮಾತಿಕ್ರಮವನ್ನು ಸ್ಮರಿಸಿಕೊಂಡು ಪಾಂಡವರನ್ನು ಮಂಗಳಮನಸ್ಸಿನಿಂದ ಚಿಂತಿಸು. ಪುರುಷಶ್ರೇಷ್ಠನೇ! ನಿನಗೆ ನಮಸ್ಕಾರ.
ಜಾನಾಸಿ ತ್ವಂ ಮಹಾಬಾಹೋ ಧರ್ಮರಾಜಸ್ಯ ಯಾ ತ್ವಯಿ |
ಭಕ್ತಿರ್ಭರತಶಾರ್ದೂಲ ಸ್ನೇಹಶ್ಚಾಪಿ ಸ್ವಭಾವತಃ ॥56॥
ಮಹಾಬಾಹುವೇ! ಧರ್ಮರಾಜನಿಗೆ ನಿನ್ನ ಮೇಲೆ ಇರುವ ಭಕ್ತಿಯನ್ನು ಮತ್ತು ಸ್ವಾಭಾವಿಕವಾದ ಪ್ರೀತಿಯನ್ನು ನೀನು ತಿಳಿದಿರುವಿ.
ಏತಚ್ಚ ಕದನಂ ಕೃತ್ವಾ ಶತ್ರೂಣಾಮಪಕಾರಿಣಾಮ್ |
ದಹ್ಯತೇ ಸ್ಮ ದಿವಾರಾತ್ರಂ ನ ಚ ಶರ್ಮಾಧಿಗಚ್ಛತಿ ॥57॥
ಈ ಅಪಕಾರಿಗಳಾದ ಶತ್ರುಗಳೊಡನೆ ಈ ಕಾದಾಟವನ್ನು ಮಾಡಿ ಹಗಲೂ ರಾತ್ರಿ ಮನಸ್ಸು ಸುಡುತ್ತಿದೆ. ನೆಮ್ಮದಿಯು ಇಲ್ಲವಾಗಿದೆ.
ತ್ವಾಂ ಚೈವ ನರಶಾರ್ದೂಲ ಗಾಂಧಾರೀಂ ಚ ಯಶಸ್ವಿನೀಮ್ |
ಸ ಶೋಚನ್ ಭರತಶ್ರೇಷ್ಠ ನ ಶಾಂತಿಮಧಿಗಚ್ಛತಿ ॥58॥
ನರೋತ್ತಮನೇ! ನಿನ್ನ ಬಗ್ಗೆ ಮತ್ತು ಯಶೋವತಿಯಾದ ಗಾಂಧಾರಿಯ ಬಗ್ಗೆ ಚಿಂತಿಸುತ್ತಾ ಧರ್ಮರಾಜನು ಮನಃಶಾಂತಿಯನ್ನು ಹೊಂದುತ್ತಿಲ್ಲ.
ಹ್ರಿಯಾ ಪರಮಯಾ ಯುಕ್ತೋ ಭವಂತಂ ನೋಪಸರ್ಪತಿ |
ಪುತ್ರಶೋಕಾಭಿಸಂತಪ್ತಂ ಬುದ್ಧ್ಯಾ ವ್ಯಾಕುಲಿತೇಂದ್ರಿಯಮ್ ॥59॥
ತುಂಬಾ ನಾಚಿಕೆಪಡುತ್ತಿರುವುದರಿಂದ, ಅವನು ಮಗನನ್ನು ಕಳೆದುಕೊಂಡು ದುಃಖಿಸುತ್ತಿರುವ ಹಾಗೂ ಎಲ್ಲಾ ಇಂದ್ರಿಯಗಳಲ್ಲಿಯೂ ದುಃಖಿಸುತ್ತಿರುವ ನಿನ್ನ ಹತ್ತಿರ ಬರುತ್ತಿಲ್ಲ.
ವೈಶಂಪಾಯನಃ
ಏವಮುಕತ್ವ ಮಹಾಬಾಹುರ್ಧೃತರಾಷ್ಟ್ರಂ ಯದೂತ್ತಮಃ |
ಉವಾಚ ಪರಮಂ ವಾಕ್ಯಂ ಗಾಂಧಾರೀಂ ಶೋಕಕರ್ಶಿತಾಮ್ ॥60॥
ವೈಶಂಪಾಯನ ಯದುಶ್ರೇಷ್ಠನಾದ ಮಹಾಬಾಹು ಶ್ರೀಕೃಷ್ಣನು ಧೃತರಾಷ್ಟ್ರನಿಗೆ ಹೀಗೆ ಹೇಳಿ, ದುಃಖದಿಂದ ಕ್ಷೀಣಿಸಿದ್ದ ಗಾಂಧಾರಿಗೆ ಈ ಮಾತುಗಳನ್ನು ಹೇಳುತ್ತಾನೆ.
ಶ್ರೀಭಗವಾನ್
ಸೌಬಲೇಯಿ ನಿಬೋಧಸ್ವ ಯತ್ ತ್ವಾಂ ವಕ್ಷ್ಯಾಮಿ ಸುವ್ರತೇ |
ತ್ವತ್ಸಮಾ ನಾಸ್ತಿ ಲೋಕೇಽಸ್ಮಿನ್ ಕಾಚಿತ್ ಸೀಮಂತಿನೀ ಶುಭೇ ॥61॥
ಶ್ರೀಭಗವಾನ್ ಒಳ್ಳೆಯ ಚರಿತ್ರೆಯುಳ್ಳವಳೇ! ಸುಬಲದೇಶದ ಗಾಂಧಾರಿಯೇ! ನಾನು ಹೇಳಲಿರುವುದನ್ನು ಕೇಳು. ನಿನ್ನಂತಹ ಸುಮಂಗಲಿಯು ಈ ಲೋಕದಲ್ಲಿ ಬೇರೆ ಯಾರೂ ಇಲ್ಲ.
ಜಾನಾಸಿ ಚ ಯಥಾ ರಾಜ್ಞಿ ಸಭಾಯಾಂ ಮಮ ಸನ್ನಿಧೌ |
ಧರ್ಮಾರ್ಥಸಹಿತಂ ವಾಕ್ಯಮುಭಯೋಃ ಪಕ್ಷಯೋರ್ಹಿತಮ್ ॥62॥
ಉಕ್ತವತ್ಯಸಿ ಕಲ್ಯಾಣಿ ನ ಚ ತೇ ತನಯೈಃ ಶ್ರುತಮ್ ॥63॥
ರಾಣಿಯೇ! ಸಭೆಯಲ್ಲಿ ನನ್ನ ಮುಂದೆ ನೀನು ಎರಡೂ ಪಕ್ಷದವರಿಗೆ ಹಿತಕಾರಿಯಾದ ಮಾತನ್ನು ಹಿಂದೆ ಹೇಳಿದ್ದಿ. ಇದು ನಿನಗೂ ಗೊತ್ತು. ಆದರೆ ನಿನ್ನ ಮಕ್ಕಳು ಅದನ್ನು ನಡೆಸಿಕೊಡಲಿಲ್ಲ.
ದುರ್ಯೋಧನಸ್ತ್ವಯಾ ಚೋಕ್ತೋ ಜಯಾರ್ಥೀ ಪರುಷಂ ವಚಃ |
ಶೃಣು ಮೂಢ ವಚೋ ಮೇ ತ್ವಂ ಯತೋ ಧರ್ಮಸ್ತತೋ ಜಯಃ ॥
ಜಯದ ಆಸೆ ಇಟ್ಟುಕೊಂಡಿದ್ದ ನಿನ್ನ ಮಗ ದುರ್ಯೋಧನನಿಗೆ ನೀನು `ಮೂರ್ಖನೇ, ನಾನಾಡುವ ಮಾತನ್ನು ಕೇಳು. ಎಲ್ಲಿ ಧರ್ಮವಿರುತ್ತದೆಯೋ ಅಲ್ಲಿ ಜಯವಿರುತ್ತದೆ' ಎಂಬ ಕಠಿಣವಾದ ಮಾತನ್ನು ಹೇಳಿದ್ದಿ.
ತದಿದಂ ಸಮನುಪ್ರಾಪ್ತಂ ತವ ವಾಕ್ಯಂ ನೃಪಾತ್ಮಜೇ ॥65॥
ರಾಜಕುಮಾರಿಯೇ! ನೀನು ಹೇಳಿದ ಆ ಮಾತು ಇವತ್ತು ಸತ್ಯವಾಗಿದೆ.
ಏವಂ ವಿದಿತ್ವಾ ಗಾಂಧಾರಿ ಮಾ ಸ್ಮ ಶೋಕೇ ಮನಃ ಕೃಥಾಃ |
ಪಾಂಡವಾನಾಂ ವಿನಾಶೇ ಚ ಮಾ ತೇ ಬುದ್ಧಿಃ ಕದಾಚನ ॥66॥
ಗಾಂಧಾರಿಯೇ! ನಡೆದ ವಿಷಯವನ್ನು ತಿಳಿದು ನೀನು ಮನಸ್ಸಿನಲ್ಲಿ ದುಃಖವನ್ನು ಅನುಭವಿಸಬೇಡ. ಪಾಂಡವರು ನಾಶವಾಗುವ ರೀತಿಯಲ್ಲಿ ಮನಸ್ಸಿನಲ್ಲಿ ಯಾವತ್ತೂ ಚಿಂತಿಸಬೇಡ.
ಶಕ್ತಾ ಚಾಸಿ ಮಹಾಭಾಗೇ ಪೃಥಿವೀಂ ಸಚರಾಚರಾಮ್ |
ಚಕ್ಷುಷಾ ಕ್ರೋಧದೀಪ್ತೇನ ನಿರ್ದಗ್ಧುಂ ತಪಸೋ ಬಲಾತ್ ॥67॥
ಮಹಾತ್ಮಳೇ! ನೀನು ನಿನ್ನ ತಪಸ್ಸಿನ ಪ್ರಭಾವದಿಂದಾಗಿ, ಕೋಪದಿಂದ ಪ್ರಜ್ವಲಿಸುವ ಕಣ್ಣುಗಳಿಂದ ಚರಾಚರಪದಾರ್ಥಗಳುಳ್ಳ ಭೂಮಿಯನ್ನು ಸುಟ್ಟುಹಾಕಲು ಸಮರ್ಥಳಾಗಿರುವಿ.

ವೈಶಂಪಾಯನಃ
ವಾಸುದೇವವಚಃ ಶ್ರುತ್ವಾ ಗಾಂಧಾರೀ ವಾಕ್ಯಮಬ್ರವೀತ್ ॥68॥
ವೈಶಂಪಾಯನ ವಾಸುದೇವನಾಡಿದ ಮಾತನ್ನು ಕೇಳಿ ಗಾಂಧಾರಿಯು ಈ ವಾಕ್ಯವನ್ನು ಹೇಳುತ್ತಾಳೆ.
ಗಾಂಧಾರೀ
ಏವಮೇತನ್ಮಹಾಭಾಗ ಯಥಾ ವದಸಿ ಕೇಶವ |
ಆಧಿಭಿರ್ದಹ್ಯಮಾನಾಯಾ ಮತಿಃ ಸಂಚಲಿತಾ ಮಮ ॥69॥
ಗಾಂಧಾರಿ ಮಹಾತ್ಮನಾದ ಕೇಶವನೇ! ನೀನು ಹೇಗೆ ಹೇಳುತ್ತಿಯೋ ಅದು ಹಾಗೆಯೇ ಇದೆ. ಮನಸ್ಸಿನ ದುಗುಡದಿಂದ ಬೇಯುತ್ತಿರುವ ನನ್ನ ಬುದ್ಧಿಯು ಚಂಚಲಿತವಾಗಿದೆ.
ಸಾ ಮೇ ವ್ಯವಸ್ಥಿತಾ ಶ್ರುತ್ವಾ ತವ ವಾಕ್ಯಂ ಜನಾರ್ದನ ॥70॥
ಜನಾರ್ದನನೇ! ನಿನ್ನ ಮಾತನ್ನು ಕೇಳಿ ನಾನಿಂದು ವ್ಯವಸ್ಥಿತಚಿತ್ತವುಳ್ಳವಳಾಗಿದ್ದೇನೆ.
ರಾಜ್ಞಸ್ತ್ವಂಧಸ್ಯ ವೃದ್ಧಸ್ಯ ಹತಪುತ್ರಸ್ಯ ಮಾಧವ |
ತ್ವಂ ಗತಿಃ ಸಹ ತೈಃ ಸರ್ವೈಃ ಪಾಂಡವೈರ್ವದತಾಂ ವರ ॥71॥
ಮಾತುಗಾರರಲ್ಲಿಯೇ ಉತ್ತಮನಾದವನೇ! ಮಾಧವನೇ! ವೃದ್ಧನಾದ, ಕುರುಡನಾದ ಹಾಗೂ ಮಕ್ಕಳನ್ನು ಕಳೆದುಕೊಂಡಿರುವ ಧೃತರಾಷ್ಟ್ರನಿಗೆ ನೀನು ಮತ್ತು ಸಕಲ ಪಾಂಡವರೇ ಗತಿ.
ವೈಶಂಪಾಯನಃ
ಏವಮುಕತ್ವ ತು ವಚನಂ ಮುಖಂ ಪ್ರಚ್ಛಾದ್ಯ ವಾಸಸಾ |
ಪುತ್ರಶೋಕಾಭಿಸಂತಪ್ತಾ ಗಾಂಧಾರೀ ಪ್ರರುರೋದ ಹ ॥72॥
ವೈಶಂಪಾಯನ ಹೀಗೆ ಹೇಳಿ ಪುತ್ರಶೋಕದಿಂದ ಬೆಂದುಹೋಗಿದ್ದ ಗಾಂಧಾರಿಯು ಮುಖವನ್ನು ವಸ್ತ್ರದಿಂದ ಮುಚ್ಚಿಕೊಂಡು ಬಹಳವಾಗಿ ಅಳತೊಡಗಿದಳು.
ತತ ಏನಾಂ ಮಹಾಬಾಹುಃ ಕೇಶವಃ ಶೋಕಕರ್ಶಿತಾಮ್ |
ಹೇತುಕಾರಣಸಂಯುಕ್ತೈರ್ವಾಕ್ಯೈರಾಶ್ವಾಸಯತ್ ಪ್ರಭುಃ ॥73॥
ಅನಂತರ ಮಹಾಬಾಹುವಾದ ಪ್ರಭು ಕೇಶವನು, ದುಃಖದಿಂದ ಕ್ಷೀಣಿಸಿದ್ದ ಗಾಂಧಾರಿಯನ್ನು ಸರ್ವಕಾರಣನಾದ ಭಗವಂತ ಮತ್ತು ಅವಾಂತರ ಕಾರಣಗಳಾದ ಆಯಾಯ ವ್ಯಕ್ತಿಗಳ ಪ್ರಾರಬ್ಧಕರ್ಮಗಳ ಬಗ್ಗೆ ತಿಳಿಸುವ ವಾಕ್ಯಗಳಿಂದ ಸಮಾಧಾನಪಡಿಸಿದನು.
ಸಮಾಶ್ವಾಸ್ಯ ಸ ಗಾಂಧಾರೀಂ ಧೃತರಾಷ್ಟ್ರಂ ಚ ಮಾಧವಃ |
ದ್ರೌಣೇಃ ಸಂಕಲ್ಪಿತಂ ಭಾವಮನ್ವಬುಧ್ಯತ ಭಾರತ ॥74॥
ಭರತಕುಲೋದ್ಭವನೇ! ಗಾಂಧಾರಿಯನ್ನು ಮತ್ತು ಧೃತರಾಷ್ಟ್ರನನ್ನು ಸಮಾಧಾನ ಪಡಿಸಿ ಶ್ರೀಕೃಷ್ಣನು ಅಶ್ವತ್ಥಾಮನು ಸಂಕಲ್ಪಿಸಿಕೊಂಡಿದ್ದ ಅಭಿಪ್ರಾಯವನ್ನು ತಿಳಿದುಕೊಂಡನು.
ತತಸ್ತ್ವರಿತ ಉತ್ಥಾಯ ಪಾದೌ ಮೂರ್ಧ್ನಾ ಪ್ರಣಮ್ಯ ಚ |
ದ್ವೈಪಾಯನಸ್ಯ ರಾಜೇಂದ್ರ ತತಃ ಕೌರವಮಬ್ರವೀತ್ ॥75॥
ರಾಜೇಂದ್ರನೇ! ಅನಂತರ ಶ್ರೀಕೃಷ್ಣನು ತಕ್ಷಣ ಎದ್ದು ವೇದವ್ಯಾಸರ ಪಾದಗಳನ್ನು ತಲೆಯಿಂದ ನಮಿಸಿ ಧೃತರಾಷ್ಟ್ರನಿಗೆ ಹೇಳುತ್ತಾನೆ.
ಶ್ರೀಭಗವಾನ್
ಆಪೃಚ್ಛೇ ತ್ವಾಂ ಕುರುಶ್ರೇಷ್ಠ ಮಾ ಚ ಶೋಕೇ ಮನಃ ಕೃಥಾಃ |
ದ್ರೌಣೇಃ ಪಾಪೋಽಸ್ತ್ಯಭಿಪ್ರಾಯಸ್ತತೋಽಸ್ಮಿ ಸಹಸೋತ್ಥಿತಃ ॥76॥
ಪಾಂಡವಾನಾಂ ವಧೇ ರಾತ್ರೌ ಬುದ್ಧಿಸ್ತೇನ ನಿದರ್ಶಿತಾ ॥77॥
ಶ್ರೀಭಗವಾನ್ ಕುರುಶ್ರೇಷ್ಠನೇ! ನಿನ್ನನ್ನು ನಾನು ಕೇಳಿಕೊಳ್ಳುತ್ತೇನೆ. ಮನಸ್ಸಿನಲ್ಲಿ ದುಃಖವನ್ನು ಪಡಬೇಡ. ಪಾಪಿಯಾದ ಆಶ್ವತ್ಥಾಮನ ಅಭಿಪ್ರಾಯವನ್ನು ತಿಳಿದು ಕೂಡಲೇ ಹೊರಡಲಿಕ್ಕಾಗಿ ಎದ್ದು ನಿಂತಿರುವೆನು. ರಾತ್ರಿಸಮಯದಲ್ಲಿ ಪಾಂಡವರನ್ನು ಕೊಲ್ಲುವ ನಿಶ್ಚಯವನ್ನು ಅವನು ಮಾಡಿಕೊಂಡಿದ್ದಾನೆ.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ಗಾಂಧಾರ್ಯಾ ಸಹಿತೋಽಬ್ರವೀತ್ |
ಧೃತರಾಷ್ಟ್ರೋ ಮಹಾರಾಜ ಕೇಶವಂ ಕೇಶಿಸೂದನಮ್ ॥78॥
ವೈಶಂಪಾಯನ ಮಹಾರಾಜನೇ! ಶ್ರೀಕೃಷ್ಣನ ಈ ಮಾತನ್ನು ಕೇಳಿ ಧೃತರಾಷ್ಟ್ರನು ಗಾಂಧಾರಿಯೊಂದಿಗೆ ಸೇರಿಕೊಂಡು ಕೇಶಿಸಂಹಾರಕನಾದ ಕೇಶವನಿಗೆ ಈ ಮಾತನ್ನು ಹೇಳುತ್ತಾನೆ.
ಧೃತರಾಷ್ಟ್ರ
ಶೀಘ್ರಂ ಗಚ್ಛ ಮಹಾಬಾಹೋ ಪಾಂಡವಾನ್ ಪರಿಪಾಲಯ |
ಭೂಯಸ್ತ್ವಯಾ ಸಮೇಷ್ಯಾಮಿ ಕ್ಷಿಪ್ರಮೇವ ಜನಾರ್ದನ ॥79॥
ಧೃತರಾಷ್ಟ್ರ ಮಹಾಬಾಹುವೇ! ಶ್ರೀಕೃಷ್ಣ! ಪಾಂಡವರ ಸಮೀಪಕ್ಕೆ ಬೇಗನೇ ಹೋಗು. ನಿನ್ನ ಜೊತೆಗೆ ಶೀಘ್ರದಲ್ಲಿ ಮತ್ತೆ ಸೇರುವೆನು.
ವೈಶಂಪಾಯನಃ
ಪ್ರಾಯಾತ್ ತತಸ್ತು ತ್ವರಿತೋ ದಾರುಕೇಣ ಸಹಾಚ್ಯುತಃ ॥80॥
ವೈಶಂಪಾಯನ ಅನಂತರ ಶ್ರೀಕೃಷ್ಣನು ಬೇಗನೇ ದಾರುಕನ ಜೊತೆಗೆ ಹೊರಟುಹೋದನು.
ವಾಸುದೇವೇ ಗತೇ ರಾಜನ್ ಧೃತರಾಷ್ಟ್ರಂ ಜನೇಶ್ವರಮ್ |

ಆಶ್ವಾಸಯದಮೇಯಾತ್ಮಾ ವ್ಯಾಸೋ ಲೋಕನಮಸ್ಕೃತಃ ॥81॥
ರಾಜನ್! ವಾಸುದೇವನು ಹೊರಟುಹೋದ ನಂತರ, ಲೋಕದ ಸಕಲರಿಂದಲೂ ನಮಸ್ಕರಿಸಲ್ಪಡುವ, ಅಪ್ರಮೇಯಸ್ವರೂಪರಾದ ಶ್ರೀವೇದವ್ಯಾಸರು ರಾಜನಾದ ಧೃತರಾಷ್ಟ್ರನನ್ನು ಕುರಿತು ಹೀಗೆ ಹೇಳುತ್ತಾರೆ.
ವಾಸುದೇವೋಽಪಿ ಧರ್ಮಾತ್ಮಾ ಕೃತಕೃತ್ಯೋ ಜಗಾಮ ಹ |
ಶಿಬಿರಂ ಹಸ್ತಿನಪುರಾದ್ ದಿದೃಕ್ಷುಃ ಪಾಂಡವಾನ್ ನೃಪ ॥82॥
ರಾಜನ್! ಧರ್ಮಾತ್ಮನಾದ ಶ್ರೀಕೃಷ್ಣನು ಕೃತಕೃತ್ಯನಾಗಿ ಹಸ್ತಿನಪುರದಿಂದ ಹೊರಟು ಪಾಂಡವರನ್ನು ನೋಡುವ ಇಚ್ಛೆಯಿಂದ ಅವರ ಶಿಬಿರಕ್ಕೆ ಹೋದನು.
ಆಗಮ್ಯ ಶಿಬಿರಂ ರಾತ್ರೌ ಸೋಽಭ್ಯಗಚ್ಛತ ಪಾಂಡವಾನ್ |
ತಚ್ಚ ತೇಭ್ಯಃ ಸಮಾಖ್ಯಾಯ ಸಹಿತೈಸ್ತೈಃ ಸಮಾವಿಶತ್ ॥83॥
ಶ್ರೀಕೃಷ್ಣನು ರಾತ್ರಿಯ ಹೊತ್ತಿನಲ್ಲಿ ಪಾಂಡವರ ಶಿಬಿರಕ್ಕೆ ಬಂದನು. ಹಸ್ತಿನಾಪುರದಲ್ಲಿ ನಡೆದ ವಿಷವನ್ನೆಲ್ಲವನ್ನೂ ಪಾಂಡವರಿಗೆ ಹೇಳಿ ಅವರೊಡನೆ ಅಲ್ಲಿಯೇ ಕುಳಿತನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ವಾಸುದೇವಪ್ರತ್ಯಾಗಮನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ನಾಲ್ಕನೆಯ ಅಧ್ಯಾಯ
ದುರ್ಯೋಧನನು ಪ್ರಲಾಪ ಮಾಡಿದ ರೀತಿಯನ್ನು ಸಂಜಯನು
ಧೃತರಾಷ್ಟ್ರನಿಗೆ ಹೇಳುವುದು. ವಾದಿಕರು ಅಶ್ವತ್ಥಾಮನಿಗೆ ದುರ್ಯೋಧನನು ಕೆಳಬಿದ್ದ ವಿಷಯವನ್ನು ತಿಳಿಸುವುದು.
ಧೃತರಾಷ್ಟ್ರಃ
ಅಧಿಷ್ಠಿತಃ ಪದಾ ಮೂರ್ಧ್ನಿ ಭಗ್ನಸಕ್ಥಿರ್ಮಹೀಂ ಗತಃ |
ಶೌಂಡೀರ್ಯಮಾನೀ ಪುತ್ರೋ ಮೇ ಕಾನ್ಯಭಾಷತ ಸಂಜಯ ॥1॥
ಧೃತರಾಷ್ಟ್ರ ಸಂಜಯನೇ! ಮದದಿಂದ ಉನ್ಮತ್ತನಾಗಿದ್ದ ನನ್ನ ಮಗನು ತೊಡೆಮುರಿಸಿಕೊಂಡು ಕೆಳಗೆ ಬಿದ್ದಾಗ ಭೀಮನು ಅವನ ತಲೆಯನ್ನು ಒದ್ದನು. ಆಗ ನನ್ನ ಮಗನು ಏನನ್ನು ಹೇಳಿದನು?
ಅತ್ಯರ್ಥಂ ಕೋಪನೋ ರಾಜಾ ಕೃತವೈರಶ್ಚ ಪಾಂಡುಷು |
ವ್ಯಸನಂ ಪರಮಂ ಪ್ರಾಪ್ತಃ ಕಿಮಾಹ ಪರಮಾಹವೇ ॥2॥
ಮಹಾಕೋಪಿಷ್ಟನಾದ ಪಾಂಡವರನ್ನು ಸದಾ ದ್ವೇಷಿಸುತ್ತಿದ್ದ ರಾಜಾ ದುರ್ಯೋಧನನು ಮಹಾಯುದ್ಧದಲ್ಲಿ ಬಹಳ ದುಃಖವನ್ನು ಅನುಭವಿಸಿ ಏನನ್ನು ಹೇಳಿದನು?
ಸಂಜಯಃ
ಶೃಣು ರಾಜನ್ ಯಥಾವೃತ್ತಂ ಪ್ರವಕ್ಷ್ಯಾಮಿ ಪರಂತಪ |
ರಾಜ್ಞಾ ಯದುಕ್ತಂ ಮಗ್ನೇನ ತಸ್ಮಿನ್ ವ್ಯಸನಸಾಗರೇ ॥3॥
ಸಂಜಯ ಶತ್ರುತಾಪಕನೇ! ರಾಜನೇ! ದುಃಖಸಾಗರದಲ್ಲಿ ಮುಳುಗಿದ ರಾಜನು ಏನು ಹೇಳಿದನೋ ಅದನ್ನು ಅಲ್ಲಿ ನಡೆದ ರೀತಿಯಲ್ಲಿಯೇ ಹೇಳುವೆನು. ಕೇಳು.
ಭಿನ್ನಸಕ್ಥೋ ನೃಪೋ ರಾಜನ್ ಪಾಂಸುನಾ ಪರಿಕುಂಠಿತಃ |
ಸಂಯಮ್ಯ ಮೂರ್ಧಜಾಂಸ್ತತ್ರ ವೀಕ್ಷ್ಯ ಚೈವ ದಿಶೋ ದಶ ॥4॥
ಕ್ರೋಧಂ ನಿಯಮ್ಯ ಯತ್ನೇನ ನಿಃಶ್ವಸನ್ನುರಗೋ ಯಥಾ |
ಸಂರಂಭಾಶ್ರುಪರೀತಾಭ್ಯಾಂ ನೇತ್ರಾಭ್ಯಾಮಭಿವೀಕ್ಷ್ಯ ಮಾಮ್ ॥5॥
ಬಾಹೂ ಧರಣ್ಯಾಂ ನಿಷ್ಪಿಷ್ಯ ಮುಹುರ್ಮತ್ತ ಇವ ದ್ವಿಪಃ |
ಪ್ರಕೀರ್ಣಾನ್ ಮೂರ್ಧಜಾನ್ ಧೂನ್ವನ್ ದಂತೈರ್ದಂತಾನುಪಸ್ಪೃಶನ್ ॥
ಗರ್ಹಯನ್ ಪಾಂಡವಶ್ರೇಷ್ಠಂ ವಿನಿಃಶ್ವಸ್ಯೇದಮಬ್ರವೀತ್ ॥7॥
ತೊಡೆಮುರಿದು ನೆಲಕ್ಕೆ ಬಿದ್ದ ದುರ್ಯೋಧನನು ಧೂಳಲ್ಲಿ ಮುಳುಗಿಹೋಗಿದ್ದನು. ಚದುರಿಹೋಗಿದ್ದ ತನ್ನ ತಲೆಗೂದಲನ್ನು ಒಟ್ಟುಸೇರಿಸಿ ಕಟ್ಟಿಕೊಂಡು, ಎಲ್ಲಾ ಹತ್ತು ದಿಕ್ಕುಗಳಲ್ಲಿಯೂ ನೋಡುತ್ತಿದ್ದನು. ಕೋಪವನ್ನು ಪ್ರಯತ್ನಪೂರ್ವಕವಾಗಿ ತಡೆ ಹಿಡಿದುಕೊಂಡು ಸರ್ಪದ ಹಾಗೆ ಭುಸುಗುಡುತ್ತಿದ್ದನು. ಕೋಪ ಮತ್ತು ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದ ನನ್ನನ್ನು ದಿಟ್ಟಿಸಿ ನೋಡುತ್ತಿದ್ದನು. ಮದವೇರಿದ ಆನೆಯಂತೆ ತನ್ನ ಕೈಗಳನ್ನು ನೆಲಕ್ಕೂರಿಕೊಂಡು, ಚದುರಿದ ತಲೆಗೂದಲನ್ನು ಕೊಡವಿಕೊಳ್ಳುತ್ತಾ ಹಲ್ಲುಗಳಿಂದ ಹಲ್ಲುಗಳನ್ನು ಮಸೆಯುತ್ತಿದ್ದನು. ಪಾಂಡವಶ್ರೇಷ್ಠನಾದ ಧರ್ಮರಾಜನನ್ನು ನಿಂದಿಸುತ್ತಾ, ನಿಟ್ಟುಸಿರನ್ನು ಬಿಡುತ್ತಾ ಹೀಗೆ ಹೇಳಿದನು.
ದುರ್ಯೋಧನಃ
ಭೀಷ್ಮೇ ಶಾಂತನವೇ ನಾಥೇ ದ್ರೋಣೇ ಚಾಚಾರ್ಯಸತ್ತಮೇ |
ಗೌತಮೇ ಶಕುನೌ ಚಾಪಿ ಕರ್ಣೇ ಶಸ್ತ್ರಭೃತಾಂ ವರೇ ॥8॥
ಅಶ್ವತ್ಥಾಮ್ನಿ ತಥಾ ಶೂರೇ ಶಲ್ಯೇ ಚ ಕೃತವರ್ಮಣಿ |
ಅನ್ಯೇಷ್ವಪಿ ಚ ಶೂರೇಷು ನ್ಯಸ್ತಭಾರೋ ಮಹಾತ್ಮಸು ॥9॥

ಇಮಾಮವಸ್ಥಾಂ ಪ್ರಾಪ್ತೋಽಸ್ಮಿ ಕಾಲೋ ಹಿ ದುರತಿಕ್ರಮಃ ॥10॥
ದುರ್ಯೋಧನ ಶಂತನುವಿನ ಮಗನಾದ ನಮ್ಮ ಸ್ವಾಮೀ ಭೀಷ್ಮ, ಉತ್ತಮ ಗುರುವಾದ ದ್ರೋಣ, ಕೃಪಾಚಾರ್ಯ, ಶಕುನಿ, ಶಸ್ತ್ರಧಾರಿಗಳಲ್ಲಿಯೇ ಉತ್ತಮನಾದ ಕರ್ಣ, ಅಶ್ವತ್ಥಾಮ, ಶೂರನಾದ ಶಲ್ಯ, ಕೃತವರ್ಮ, ಇನ್ನೂ ಅನೇಕ ಮಹಾತ್ಮರಾದ ಶೂರರಲ್ಲಿ ಯುದ್ಧದ ಜವಾಬ್ಧಾರಿಯನ್ನು ಹೊರಿಸಿಯೂ ಕೂಡ ನಾನಿಂದು ಇಂತಹ ದುರವಸ್ಥೆಯನ್ನು ಹೊಂದಿದ್ದೇನೆ. ಕಾಲವನ್ನು ಯಾರೂ ಮೀರಲೂ ಸಾಧ್ಯವಿಲ್ಲ.
ಏಕಾದಶಚಮೂಭರ್ತಾ ಸೋಽಹಮೇತಾಂ ದಶಾಂ ಗತಃ |
ಕಾಲಂ ಪ್ರಾಪ್ಯ ಮಹಾಬಾಹೋ ನ ಕಶ್ಚಿದತಿವರ್ತತೇ ॥11॥
ಹನ್ನೊಂದು ಅಕ್ಷೌಹಿಣಿ ಸೈನ್ಯಕ್ಕೆ ಒಡೆಯನಾದ ನಾನಿಂದು ಇಂತಹ ದೆಶೆಗೆ ಬಂದಿದ್ದೇನೆ. ಕಾಲದ ವಶಕ್ಕೊಳಗಾದ ಯಾವ ವ್ಯಕ್ತಿಯೂ ಕೂಡ ಅದನ್ನು ಮೀರಲಾರನು.
ಆಖ್ಯಾತವ್ಯಂ ಮದೀಯಾನಾಂ ಯೇ ತು ಜೀವಂತಿ ಸಂಗರೇ |
ಯಥಾಹಂ ಭೀಮಸೇನೇನ ವ್ಯುತ್ಕ್ರಮ್ಯ ಸಮಯಂ ಹತಃ ॥12॥
ಯುದ್ಧದಲ್ಲಿ ಯಾರು ನನ್ನ ಕಡೆಯವರು ಬದುಕಿದ್ದಾರೆಯೋ ಅವರಿಗೆ `ಭೀಮನು ನಿಯಮವನ್ನು ಮೀರಿ ನನ್ನನ್ನು ಕೊಂದಿದ್ದಾನೆ' ಎಂದು ಹೇಳಬೇಕು.
ಬಹೂನಿ ಸುನೃಶಂಸಾನಿ ಕೃತಾನಿ ಖಲು ಪಾಂಡವೈಃ |
ಭೂರಿಶ್ರವಸಿ ಕರ್ಣೇ ಚ ದ್ರೋಣೇ ಭೀಷ್ಮೇ ಚ ಶ್ರೀಮತಿ ॥13॥
ಭೂರಿಶ್ರವಸ್ಸು, ಕರ್ಣ, ದ್ರೋಣ, ಶ್ರೀಮಂತನಾದ ಭೀಷ್ಮ ಇವರೆಲ್ಲರ ವಿಷಯದಲ್ಲಿ ಪಾಂಡವರು ಅನೇಕ ಬಹಳ ಕ್ರೂರವಾದ ಕೆಲಸಗಳನ್ನು ಮಾಡಿದ್ದಾರೆ.
ಇದಂ ಚಾಕೀರ್ತಿದಂ ಕರ್ಮ ನೃಶಂಸಂ ಪಾಂಡವೈಃ ಕೃತಮ್ |
ವಾಚ್ಯತಾಂ ಯೇನ ತೇ ಸತ್ಸು ಗಮಿಷ್ಯಂತೀತಿ ಮೇ ಮತಿಃ ॥14॥
ಪಾಂಡವರು ಮಾಡಿರುವ ಈ ಅಪಕೀರ್ತಿಯನ್ನು ತಂದುಕೊಡುವ ಕೆಲಸಗಳನ್ನು ಹೇಳಬೇಕು. ಇದರಿಂದಾಗಿ ಈ ಸಂಗತಿಗಳು ಸಜ್ಜನರ ಹತ್ತಿರ ಹೋಗುವವು ಎಂದು ನಾನು ಅಂದುಕೊಂಡಿದ್ದೇನೆ.
ಕಾ ಪ್ರೀತಿಃ ಸತ್ತ್ವಯುಕ್ತಸ್ಯ ಕೃತ್ವೋಪಾಧಿಕೃತಂ ಜಯಮ್ |
ಕೋ ವಾ ಸಮಯಭೇತ್ತಾರಂ ಬುಧಃ ಸಮ್ಮಂತುಮರ್ಹತಿ ॥15॥
ಸಾಮರ್ಥ್ಯಯುಕ್ತನಾದ ನನ್ನನ್ನು ಯಾವುದೋ ನಿಮಿತ್ತದಿಂದ ಜಯಿಸಿ ಏನು ಆನಂದವನ್ನು ಪಡೆಯಬಹುದು? ಯುದ್ಧದ ನಿಯಮಗಳನ್ನು ಮೀರುವವನನ್ನು ಯಾವ ಜ್ಞಾನಿಯು ಸಮ್ಮಾನಿಸುವನು?
ಅಧರ್ಮೇಣ ಜಯಂ ಲಬ್ಧ್ವಾ ಕೋ ನು ಹೃಷ್ಯೇತ ಪಂಡಿತಃ |
ಯಥಾ ಸಂಹೃಷ್ಯತೇ ಪಾಪಃ ಪಾಂಡುಪುತ್ರೋ ವೃಕೋದರಃ ॥16॥
ಪಾಪಿಯಾದ ಭೀಮನು ಅಧರ್ಮದಿಂದ ಜಯವನ್ನು ಪಡೆದು ಯಾವ ರೀತಿ ಸಂತುಷ್ಟನಾಗಿದ್ದಾನೆಯೋ ಆ ರೀತಿಯಲ್ಲಿ ಯಾವ ಜ್ಞಾನಿಯೂ ಕೂಡ ಅಧರ್ಮಮಾರ್ಗದಿಂದ ಜಯವನ್ನು ಪಡೆದು ಸಂತೋಷವನ್ನು ಪಡೆಯುವುದಿಲ್ಲ.
ಕಿಂ ನು ಚಿತ್ರಮತಸ್ತ್ವನ್ಯತ್ ಭಗ್ನಸಕ್ಥಸ್ಯ ವೈ ಮಮ |
ಕ್ರುದ್ಧೇನ ಭೀಮಸೇನೇನ ಪದಾ ಯನ್ಮದಿತಂ ಶಿರಃ ॥17॥
ಸಂಜಯನೇ! ತೊಡೆಮುರಿದು ಕೆಳಗೆ ಬಿದ್ದಿರುವ ನನ್ನ ತಲೆಯನ್ನು ಕ್ರುದ್ಧನಾದ ಭೀಮಸೇನನು ಒದೆಯುತ್ತಿದ್ದಾನೆ. ಇದಕ್ಕಿಂತ ಬೇರೆ ಆಶ್ಚರ್ಯಜನಕವಾದುದು ಯಾವುದಿದೆ?
ಪ್ರತಪಂತಂ ಶ್ರಿಯಾ ಜುಷ್ಟಂ ವರ್ತಮಾನಂ ಚ ಬಂಧುಷು |
ನಿಗೃಹ್ಣೀಯಾದ್ ರಿಪುಂ ಯೋ ಹಿ ಸ ವೈ ಸಂಜಯ ಪೂರುಷಃ ॥18॥
ಸಂಜಯನೇ! ಬಂಧುಗಳ ಮಧ್ಯೆ ಇದ್ದುಕೊಂಡು ಸಂಪತ್ತಿನಿಂದ ಪ್ರಕಾಶಿಸುತ್ತಿರುವ ಶತ್ರುವನ್ನು ಯಾವನು ನಿಗ್ರಹಿಸುತ್ತಾನೆಯೊ ಅವನೇ ನಿಜವಾದ ಪುರುಷ. (ನನ್ನನ್ನೊಬ್ಬನನ್ನು ಕೊಲ್ಲುವುದು ಪೌರುಷವಲ್ಲ.)
ಅಭಿಜ್ಞೌ ಕ್ಷತ್ರಧರ್ಮಸ್ಯ ಮಮ ಮಾತಾ ಪಿತಾ ಚ ಯೌ |
ತೌ ಹಿ ಸಂಜಯ ದುಃಖಾರ್ತೌ ವಿಜ್ಞಾಪ್ಯೌ ವಚನಾನ್ಮಮ ॥19॥
ನನ್ನ ತಂದೆ ಮತ್ತು ತಾಯಿ ಇಬ್ಬರೂ ಕ್ಷತ್ರಿಯಧರ್ಮವನ್ನು ಚೆನ್ನಾಗಿ ತಿಳಿದಿರುತ್ತಾರೆ. ಸಂಜಯನೇ! ದುಃಖಪಡುತ್ತಿರುವ ಅವರಿಗೆ ನನ್ನ ನಡೆದ ವಿಷಯಗಳೆಲ್ಲವನ್ನು ಮಾತಿನ ಮೂಲಕ ತಿಳಿಸಬೇಕು.
ಇಷ್ಟಂ ಭೃತ್ಯಾ ಭೃತಾಃ ಸಮ್ಯಗ್ ಭೂಃ ಪ್ರಶಸ್ತಾ ಸಸಾಗರಾ |
ಮೂರ್ಧ್ನಿ ಸ್ಥಿತಮಮಿತ್ರಾಣಾಂ ಜೀವತಾಮೇವ ಸಂಜಯ ॥20॥
ದತ್ತಾ ದೇಯಾ ಯಥಾಶಕ್ತಿ ಮಿತ್ರಾಣಾಂ ಚ ಪ್ರಿಯಂ ಕೃತಮ್ |
ಅಮಿತ್ರಾ ಬಾಧಿತಾಃ ಸರ್ವೇ ಕೋ ನು ಸ್ವಂತತರೋ ಮಯಾ ॥21॥
ಸಂಜಯನೇ! ನಾನು ನನಗಿಷ್ಟರಾದ ಅನೇಕ ಸೇವಕರನ್ನು ಪಡೆದು ಸಲಹಿದ್ದೆ. ಸಾಗರಪರ್ಯಂತ ಭೂಮಿಯನ್ನು ಚೆನ್ನಾಗಿ ರಾಜ್ಯಭಾರ ಮಾಡಿದ್ದೆನು. ಶತ್ರುಗಳು ಬದುಕಿರುವಾಗಲೇ ಅವರ ತಲೆಗಳನ್ನು ಮಣಿಸಿದ್ದೆನು. ಸ್ನೇಹಿತರಿಗೆ ನನ್ನ ಕೈಲಾದಷ್ಟು ಒಳ್ಳೆಯದನ್ನು ಮಾಡಿರುವೆನು. ಎಲ್ಲಾ ಶತ್ರುಗಳನ್ನೂ ಗೆದ್ದಿರುವೆನು. ನನ್ನ ರೀತಿಯಲ್ಲಿ ಒಳ್ಳೆಯ ಅಂತ್ಯವನ್ನು ಕಂಡವನ್ನು ಇನ್ನೊಬ್ಬ ಯಾರಿದ್ದಾನೆ?
ನೃಪಮುಖ್ಯೇಷು ಮಾನಶ್ಚ ಮಯಾ ಪ್ರಾಪ್ತಃ ಸುದುರ್ಲಭಃ |
ಆಜಾನೇಯೈಸ್ತಥಾ ನೇಯಂ(ಯಾತಃ) ಕೋ ನು ಸ್ವಂತತರೋ ಮಯಾ ॥

ಮಹಾ ಮಹಾರಾಜರ ಮಧ್ಯದಲ್ಲಿ ನಾನು ಒಳ್ಳೆಯ ಗೌರವವನ್ನು ಪಡೆದಿದ್ದೇನೆ. ನನ್ನನ್ನು ಕುಲೀನವಾದ ಕುದುರೆಗಳು ಕರೆದೊಯ್ಯುತ್ತಿದ್ದವು. ನನ್ನ ರೀತಿಯಲ್ಲಿ ಒಳ್ಳೆಯ ಅಂತ್ಯವನ್ನು ಕಂಡವನು ಇನ್ನೊಬ್ಬ ಯಾರಿದ್ದಾನೆ?
ಯಾತಾನಿ ಪರರಾಷ್ಟ್ರಾಣಿ ನೃಪಾ ಭುಕ್ತಾಶ್ಚ ದಾಸವತ್ |
ಪ್ರಿಯೇಭ್ಯಶ್ಚ ಕೃತಂ ಸಾಧು ಕೋ ನು ಸ್ವಂತತರೋ ಮಯಾ ॥23॥
ಶತ್ರುಗಳ ರಾಷ್ಟ್ರಗಳನ್ನು ಆಕ್ರಮಿಸಿ ಅಲ್ಲಿದ್ದ ರಾಜರನ್ನು ಸೇವಕರನ್ನಾಗಿ ಮಾಡಿಕೊಂಡಿದ್ದೆ. ನನಗೆ ಪ್ರಿಯರಾದವರಿಗೆ ಒಳ್ಳೆಯದನ್ನು ಮಾಡಿದ್ದೆ. ನನ್ನ ರೀತಿಯಲ್ಲಿ ಒಳ್ಳೆಯ ಅಂತ್ಯವನ್ನು ಕಂಡವನು ಇನ್ನೊಬ್ಬ ಯಾವನಿದ್ದಾನೆ?
ಮಾನಿತಾ ಬಾಂಧವಾಃ ಸರ್ವೇ ಮಾನ್ಯಃ ಸಂಪೂಜಿತೋ ಜನಃ |
ತ್ರಿತಯಂ ಸೇವಿತಂ ಸರ್ವಂ ಕೋ ನು ಸ್ವಂತತರೋ ಮಯಾ ॥24॥
ಬಂಧುಗಳನ್ನು ಚೆನ್ನಾಗಿ ಗೌರವಿಸಿದ್ದೆ. ಮಾನ್ಯರಾದ ಜನರನ್ನು ಪೂಜಿಸಿದ್ದೆ. ಎಲ್ಲಾ ಧರ್ಮ-ಅರ್ಥ-ಕಾಮಗಳನ್ನು ನಾನು ಅನುಭವಿಸಿದ್ದೇನೆ. ನನ್ನ ರೀತಿಯಲ್ಲಿ ಒಳ್ಳೆಯ ಅಂತ್ಯವನ್ನು ಕಂಡವನು ಇನ್ನೊಬ್ಬ ಯಾವನಿದ್ದಾನೆ?
ಅಧೀತಂ ವಿಹೃತಂ ದತ್ತಂ ಪ್ರಾಪ್ತಮಾಯುರ್ನಿರಾಮಯಮ್ |
ಸ್ವಧರ್ಮೇಣ ಜಿತಾ ಲೋಕಾಃ ಕೋ ನು ಸ್ವಂತತರೋ ಮಯಾ ॥25॥
ಅಧ್ಯಯನವನ್ನು ಮಾಡಿದ್ದೆ. ವಿಹರಿಸಿದ್ದೆ. ದಾನವನ್ನು ಮಾಡಿದ್ದೆ. ಆರೋಗ್ಯಪೂರ್ಣವಾದ ಆಯುಷ್ಯವನ್ನು ಹೊಂದಿದ್ದೆ. ನನಗೆ ಹಿತವಾದ ಧರ್ಮಮಾರ್ಗದಲ್ಲಿಯೇ ಲೋಕವನ್ನೆಲ್ಲಾ ಗೆದ್ದಿದ್ದೆ. ನನ್ನ ರೀತಿಯಲ್ಲಿ ಒಳ್ಳೆಯ ಅಂತ್ಯವನ್ನು ಕಂಡವನು ಇನ್ನೊಬ್ಬ ಯಾವನಿದ್ದಾನೆ?
ದಿಷ್ಟ್ಯಾ ನಾಹಂ ಜಿತಃ ಸಂಖ್ಯೇ ಪರಾನ್ ಪ್ರೇಷ್ಯವದಾಶ್ರಿತಃ |
ದಿಷ್ಟ್ಯಾ ಮೇ ವಿಪುಲಾ ಲಕ್ಷ್ಮೀರ್ಮೃತೇ ತ್ವನ್ಯಂ ಗತಾ ಮಯಿ ॥26॥
ನನ್ನ ಸೌಭಾಗ್ಯದಿಂದಾಗಿ ನಾನು ಶತ್ರುಗಳಾದ ಪಾಂಡವರನ್ನು ದಾಸನಂತೆ ಆಶ್ರಯಿಸಿ ಜೀವಭಯದಿಂದ ಓಡಿಹೋಗಲಿಲ್ಲ. ನನ್ನ ಸೌಭಾಗ್ಯದಿಂದಾಗಿ ನನ್ನಲ್ಲಿ ಬೇಕಾದಷ್ಟು ಸಂಪತ್ತಿದೆ. ಅದೆಲ್ಲವೂ ನಾನು ಸತ್ತ ಮೇಲೆಯೇ ಬೇರೆಯವರ ಪಾಲಾಗುತ್ತದೆ.
ಯದಿಷ್ಟಂ ಕ್ಷತ್ರಬಂಧೂನಾಂ ಸ್ವಧರ್ಮಮನುತಿಷ್ಠತಾಮ್ |
ನಿಧನಂ ತನ್ಮಯಾ ಪ್ರಾಪ್ತಂ ಕೋ ನು ಸ್ವಂತತರೋ ಮಯಾ ॥27॥
ತಮ್ಮ ಧರ್ಮವನ್ನು ಆಚರಿಸುವ ಕ್ಷತ್ರಿಯಬಂಧುಗಳು ಯಾವ ಮರಣವನ್ನು ಅಪೇಕ್ಷಿಸುತ್ತಾರೆಯೋ ಅಂತಹ ಮರಣವು ನನಗಿಂದು ಲಭಿಸಿದೆ. ನನ್ನ ರೀತಿಯಲ್ಲಿ ಒಳ್ಳೆಯ ಅಂತ್ಯವನ್ನು ಕಂಡವನು ಇನ್ನೊಬ್ಬ ಯಾವನಿದ್ದಾನೆ?
ದಿಷ್ಟ್ಯಾ ನಾಹಂ ಪರಾವೃತ್ತೋ ವೈರಾತ್ ಪ್ರಾಕೃತವಜ್ಜಿತಃ |
ದಿಷ್ಟ್ಯಾ ನ ವಿಮತಿಂ ಕಂಚಿದ್ ಭಜಿತ್ವಾಽಹಂ ಪರಾಜಿತಃ ॥28॥
ನನ್ನ ಸೌಭಾಗ್ಯದಿಂದಲೇ ದ್ವೇಷದಿಂದ ಸಾಮಾನ್ಯನಂತೆ ಸೋತು ಹೋದರೂ ನಾನು ಯುದ್ಧದಿಂದ ಪಲಾಯನ ಮಾಡಲಿಲ್ಲ. ಶತ್ರುಗಳಿಗೆ ಶರಣಾಗುವಂತಹ ವಿರುದ್ಧ ಬುದ್ಧಿನ್ನಾಶ್ರಯಿಸಿ ನಾನು ಸೋತು ಹೋಗಲೂ ಇಲ್ಲ.
ಸುಪ್ತಂ ವಾಽಪಿ ಪ್ರಮತ್ತಂ ವಾ ಯಥಾ ಹನ್ಯಾದ್ ವಿಷೇಣ ವಾ |
ಏವಂ ವ್ಯುತ್ಕ್ರಾಂತಧರ್ಮೇಣ ವ್ಯುತ್ಕ್ರಮ್ಯ ಸಮಯಂ ಹತಃ ॥29॥
ಯಾವ ರೀತಿಯಲ್ಲಿ ಮಲಗಿದವನನ್ನು, ಹುಚ್ಚನಾದವನನ್ನು, ವಿಷಾದಿ ಪ್ರಯೋಗದಿಂದ ಕೊಲ್ಲುವುದು ಅಧರ್ಮವೋ ಅದೇ ರೀತಿಯಲ್ಲಿ ಧರ್ಮವನ್ನು ಮೀರಿ ನಡೆದ ಭೀಮಸೇನನು ಯುದ್ಧನಿಯಮವನ್ನು ಮೀರಿ ನನ್ನನ್ನು ಕೊಂದಿದ್ದಾನೆ.
ಅಶ್ವತ್ಥಾಮಾ ಮಹಾಬಾಹುಃ ಕೃತವರ್ಮಾ ಚ ಸಾತ್ವತಃ |
ಕೃಪಃ ಶಾರದ್ವತಶ್ಚಾಪಿ ವಕ್ತವ್ಯಾ ವಚನಾನ್ಮಮ ॥30॥
ಮಹಾಬಾಹುವಾದ ಆಶ್ವತ್ಥಾಮ, ಸಾತ್ವತಕುಲದ ಕೃತವರ್ಮ ಮತ್ತು ಶಾರದ್ವತಕುಲದ ಕೃಪ - ಇವರಿಗೆ ಈ ಎಲ್ಲಾ ವಿಷಯಗಳನ್ನು ನನ್ನ ಮಾತಿನಂತೆ ತಿಳಿಸು.
ಅಧರ್ಮೇಣ ಪ್ರವೃತ್ತಾನಾಂ ಪಾಂಡವಾನಾಮನೇಕಶಃ |
ವಿಶ್ವಾಸಂ ಸಮಯಘ್ನಾನಾಂ ನ ಯೂಯಂ ಗಂತುಮರ್ಹಥ ॥31॥
ಅನೇಕ ಬಾರಿ ಅಧರ್ಮದಲ್ಲಿ ನಡೆದ ಹಾಗೂ ಎಲ್ಲಾ ನಿಯಮಗಳನ್ನೂ ಮೀರಿ ನಡೆಯುವ ನಮ್ಮ ಶತ್ರುಗಳಾದ ಪಾಂಡವರಲ್ಲಿ ನೀವು ಯಾವ ವಿಶ್ವಾಸವನ್ನೂ ಇಡಬೇಡಿ.
ಸಂಜಯಃ
ವಾರ್ತಿಕಾನ್ ಚಾಬ್ರುವೀತ್ ಸರ್ವಾನ್ ಪುತ್ರಸ್ತೇ ಸತ್ಯವಿಕ್ರಮಃ ॥32॥
ಸಂಜಯ ಸತ್ಯಪರಾಕ್ರಮಿಯಾದ ನಿನ್ನ ಮಗನು ವಾರ್ತಾವಾಹಕರಾದ ದೂತರಿಗೆ ಎಲ್ಲವನ್ನೂ ಹೇಳಿದನು. (ಸಿದ್ಧ-ಗಂಧರ್ವಾದಿಗಳ ವಾರ್ತೆಯಿಂದ ಅರ್ಥಸಿದ್ಧಿ ಪಡೆದಿದ್ದ ದೂತರಿಗೆ ಹೇಳಿದನು.)
ದುರ್ಯೋಧನಃ
ಅಧರ್ಮಾದ್ ಭೀಮಸೇನೇನ ನಿಹತೋಽಹಂ ಯಥಾ ರಣೇ |
ಸೋಽಹಂ ದ್ರೋಣಂ ಸ್ವರ್ಗಗತಂ ಶಲ್ಯಕರ್ಣಾವುಭೌ ತಥಾ ॥33॥
ವೃಷಸೇನಂ ಮಹಾವೀರ್ಯಂ ಶಕುನಿಂ ಚಾಪಿ ಸೌಬಲಮ್ ॥34॥
ಜಲಸಂಧಂ ಮಹಾತ್ಮಾನಂ ಭಗದತ್ತಂ ಚ ಪಾರ್ಥಿವಮ್ |
ಸೋಮದತ್ತಂ ಮಹೇಷ್ವಾಸಂ ಸೈಂಧವಂ ಚ ಜಯದ್ರಥಮ್ ॥35॥
ದುಃಶಾಸನಪುರೋಗಾಂಶ್ಚ ಭ್ರಾತೄನಾತ್ಮಸಮಾನ್ ಮಮ |

ದೌಃಶಾಸನಿಂ ಚ ವಿಕ್ರಾಂತಂ ಲಕ್ಷ್ಮಣಂ ಚಾತ್ಮಜಾವುಭೌ ॥36॥
ಏತಾಂಶ್ಚಾನ್ಯಾಂಶ್ಚ ಸುಬಹೂನ್ ಅಸ್ಮದೀಯಾನ್ ಸಹಸ್ರಶಃ |
ಪೃಷ್ಠತೋಽನುಗಮಿಷ್ಯಾಮಿ ಸಾರ್ಥಹೀನ ಇವಾಽಧ್ವಗಃ ॥37॥
ದುರ್ಯೋಧನ ನನ್ನನ್ನು ಭೀಮಸೇನನು ಅಧರ್ಮಮಾರ್ಗದಿಂದ ಕೊಂದಿದ್ದಾನೆ. ಅಂತಹ ನಾನು ಈಗಾಗಲೇ ಸ್ವರ್ಗಕ್ಕೆ ಹೋಗಿರುವ ದ್ರೋಣನನ್ನು, ಶಲ್ಯನನ್ನು, ಕರ್ಣನನ್ನು, ಮಹಾವೀರನಾದ ವೃಷಸೇನನನ್ನು, ಶಕುನಿಯನ್ನು, ಮಹಾತ್ಮ ಜಲಸಂಧನನ್ನು, ರಾಜ ಭಗದತ್ತನನ್ನು, ಮಹಾಬಿಲ್ಗಾರನಾಗಿದ್ದ ಸೋಮದತ್ತನನ್ನು, ಸಿಂಧುದೇಶದ ಸೈಂಧವನನ್ನು, ದುಃಶಾಸನ ಮೊದಲಾದ ನನಗೆ ಸಮಾನರಾದ ಸಹೋದರರನ್ನು, ವಿಕ್ರಮಿಯಾದ ದುಃಶಾಸನಪುತ್ರ ಮತ್ತು ನನ್ನ ಮಗ ಲಕ್ಷ್ಮಣನನ್ನು, ಇವರನ್ನು ಮತ್ತು ಇನ್ನೂ ಅನೇಕ ಸಾವಿರಾರು ಸಂಖ್ಯೆಯ ನಮ್ಮವರನ್ನು ಅನುಸರಿಸಿಕೊಂಡು ಹೋಗುವೆನು. ದಾರಿಯಲ್ಲಿ ಸಹಾಯಕರನ್ನು ಕಳೆದುಕೊಂಡವನು ಹೋಗುವಂತೆ ನಾನು ಇವರು ಹೋದ ದಾರಿಯಲ್ಲಿಯೇ ಸ್ವರ್ಗಕ್ಕೆ ಹೋಗುವೆನು.
ನೂನಂ ಭ್ರಾತೄನ್ ಹತಾನ್ ಶ್ರುತ್ವಾ ಭರ್ತಾರಂ ಚ ಸ್ವಸಾ ಮಮ |
ರೋರೂಯಮಾಣಾ ದುಃಖಾರ್ತಾ ದುಃಶಲಾ ಸಾ ಭವಿಷ್ಯತಿ ॥38॥
ಸಹೋದರರನ್ನೂ, ಗಂಡನನ್ನೂ ಕಳೆದುಕೊಂಡ ನನ್ನ ತಂಗಿ ದುಃಶಲೆಯು ನಿಶ್ಚಯವಾಗಿಯೂ ದುಃಖದಿಂದ ಜೋರಾಗಿ ಅಳುವಳು.
ಸ್ನುಷಾಭಿಃ ಪ್ರಸ್ನುಷಾಭಿಶ್ಚ ವೃದ್ಧೋ ರಾಜಾ ಪಿತಾ ಮಮ |
ಗಾಂಧಾರೀಸಹಿತಃ ಕ್ರೋಶನ್ ಕಾಂ ಗತಿಂ ಪ್ರತಿಪತ್ಸ್ಯತೇ ॥39॥
ವೃದ್ಧನಾದ ನನ್ನ ತಂದೆ ಧೃತರಾಷ್ಟ್ರನು ಸೊಸೆಯಂದಿರು ಮತ್ತು ಅವರ ಸೊಸೆಯಂದಿರು- ಇವರೊಡನೆ ಸೇರಿಕೊಂಡು, ಗಾಂಧಾರಿಯನ್ನು ಕೂಡಿಕೊಂಡು ಬೊಬ್ಬಿಡುತ್ತಾ ಎಂತಹ ಅವಸ್ಥೆಯನ್ನು ಹೊಂದುವನೋ?
ನೂನಂ ಲಕ್ಷ್ಮಣಮಾತಾಽಪಿ ಹತಪುತ್ರಾ ಹತೇಶ್ವರಾ |
ವಿನಾಶಂ ಯಾಸ್ಯತಿ ಕ್ಷಿಪ್ರಂ ಕಲ್ಯಾಣೀ ಪೃಥುಲೋಚನಾ ॥40॥
ಕಲ್ಯಾಣಿಯಾದ ವಿಶಾಲನೇತ್ರವುಳ್ಳ ನನ್ನ ಮಡದಿ, ಲಕ್ಷ್ಮಣನ ತಾಯಿ ಮಗನನ್ನೂ, ಗಂಡನನ್ನೂ ಕಳೆದುಕೊಂಡು ತಾನೂ ಕೂಡ ಕೂಡಲೇ ನಾಶವನ್ನು ಹೊಂದುವಳು.
ಯದಿ ಜೀವತಿ ಚಾರ್ವಾಕಃ ಪರಿವ್ರಾಟ್ ವಾಗ್ವಿಶಾರದಃ |
ಕರಿಷ್ಯತಿ ಮಹಾಭಾಗೋ ಧ್ರುವಂ ಸೋಽಪಚಿತಿಂ ಮಮ ॥41॥
ಒಂದು ವೇಳೆ ನನಗೆ ಸಹಾಯಕನಾದ, ಚೆನ್ನಾಗಿ ಮಾತನಾಡುವ ಬುದ್ಧಿವಂತನಾದ ತ್ರಿದಂಡಿ ಸಂನ್ಯಾಸಿಯು ಬದುಕಿದ್ದಿದ್ದರೆ ಖಂಡಿತವಾಗಿಯೂ ಪ್ರತ್ಯುಪಕಾರ ಭಾವನೆಯಿಂದ ನನ್ನನ್ನು ಪೂಜಿಸುತ್ತಿದ್ದನು.
ಸಮಂತಪಂಚಕೇ ಪುಣ್ಯೇ ತ್ರಿಷು ಲೋಕೇಷು ವಿಶ್ರುತೇ |
ಅಹಂ ನಿಧನಮಾಪದ್ಯ ಲೋಕಾನ್ ಪ್ರಾಪ್ಸ್ಯಾಮಿ ಶಾಶ್ವತಾನ್ ॥42॥
ಮೂರು ಲೋಕಗಳಲ್ಲಿಯೂ ಚೆನ್ನಾಗಿ ಪ್ರಸಿದ್ಧವಾದ, ಪುಣ್ಯಪ್ರದವಾದ ಸಮಂತಪಂಚಕದಲ್ಲಿ ಪ್ರಾಣತ್ಯಾಗವನ್ನು ಮಾಡಿ, ಶಾಶ್ವತವಾದ ಲೋಕಗಳನ್ನು ಹೊಂದುವೆನು.
ಸಂಜಯಃ
ತತೋ ಜನಸಹಸ್ರಾಣಿ ಬಾಷ್ಪಪೂರ್ಣಾನಿ ಮಾರಿಷ |
ಪ್ರಲಾಪಂ ನೃಪತೇಃ ಶ್ರುತ್ವಾ ವಿದ್ರವಂತಿ ದಿಶೋ ದಶ ॥43॥
ಸಂಜಯ ಪೂಜ್ಯನೇ! ಅನಂತರ ಸಾವಿರಾರು ಜನರು ಕಣ್ಣುಗಳಲ್ಲಿ ಕಣ್ಣೀರನ್ನು ತುಂಬಿಕೊಂಡು ರಾಜನಾದ ದುರ್ಯೋಧನನು ಅಳುತ್ತಿರುವುದನ್ನು ಕೇಳಿ ಹತ್ತುದಿಕ್ಕುಗಳಿಗೂ ಓಡಿಹೋದರು.
ಸಸಾಗರವನಾ ಘೋರಾ ಪೃಥಿವೀ ಸಚರಾಚರಾ |
ಚಚಾಲಾಥ ಸನಿಹ್ರಾದಾ ದಿಶಶ್ಚೈವಾಖಿಲಾಭವನ್ ॥44॥
ಸಾಗರ-ವನಗಳನ್ನು ಹೊಂದಿರುವ ಘೋರವಾದ ಪೃಥಿಯು, ಚರಾಚರ ಪದಾರ್ಥಗಳೊಂದಿಗೆ ಶಬ್ದಸಹಿತವಾಗಿ ಕಂಪಿಸಿತು. ಎಲ್ಲ ದಿಕ್ಕುಗಳೂ ಕಂಪಿಸಿದವು.
ತೇ ದ್ರೋಣಪುತ್ರಮಾಸಾದ್ಯ ಯಥಾವೃತ್ತಂ ನ್ಯವೇದಯನ್ |
ವ್ಯವಹಾರಂ ಗದಾಯುದ್ಧೇ ಪಾರ್ಥಿವಸ್ಯ ಚ ಪಾತನಮ್ ॥45॥
ಆ ವಾರ್ತಾಹರ ದೂತರು ಅಶ್ವತ್ಥಾಮನ ಹತ್ತಿರ ಬಂದು ನಡೆದ ಘಟನೆಗಳನ್ನು ಯಥಾವತ್ತಾಗಿ ತಿಳಿಸಿದರು. ನಡೆದ ಗದಾಯುದ್ಧವನ್ನು ಮತ್ತು ಅದರಲ್ಲಿ ದುರ್ಯೋಧನನು ಕೆಳಗೆ ಬಿದ್ದಿದ್ದನ್ನೂ ತಿಳಿಸಿದರು.
ತದಾಖ್ಯಾಯ ತತಃ ಸರ್ವೇ ದ್ರೋಣಪುತ್ರಸ್ಯ ಮಾರಿಷ |
ವಾದಿಕಾ ದುಃಖಸಂತಪ್ತಾಃ ಶೋಕೋಪಹತಚೇತಸಃ॥46॥
ಧ್ಯಾತ್ವಾ ಚ ಸುಚಿರಂ ಕಾಲಂ ಜಗ್ಮುಶ್ಚಾರ್ತಾ ಯಥಾಗತಮ್ ॥47॥
ಅನಂತರ ಪೂಜ್ಯನೇ! ದುಃಖದಿಂದ ಬೆಂದುಹೋದ ಹಾಗೂ ಶೋಕದಿಂದ ಜರ್ಝರಿತವಾದ ಮನಸ್ಸುಳ್ಳ ಆ ವಾದಿಕರು ದ್ರೋಣಪುತ್ರ ಅಶ್ವತ್ಥಾಮನಿಗೆ ಎಲ್ಲವನ್ನೂ ಹೇಳಿದರು. ತುಂಬ ಸಮಯದವರೆಗೆ ಮನಸ್ಸಿನಲ್ಲಿಯೇ ವಿಚಾರಮಾಡಿ ದುಃಖಿತರಾಗಿದ್ದ ಅವರು ಬಂದ ಹಾಗೆಯೇ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದುರ್ಯೋಧನಪ್ರಲಾಪೋ ನಾಮ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *
मूवत्तैदनेय अध्याय

ಮೂವತ್ತೈದನೆಯ ಅಧ್ಯಾಯ
ಅಶ್ವತ್ಥಾಮ, ಕೃಪ ಮತ್ತು ಕೃತವರ್ಮರು ದುರ್ಯೋಧನನು ನೆಲಕ್ಕೆ ಬಿದ್ದುದನ್ನು ನೋಡಿ ದುಃಖಿಸಿದ್ದು. ಅಶ್ವತ್ಥಾಮ ಮತ್ತು ದುರ್ಯೋಧನರ ಮಾತುಕತೆ. ಅಶ್ವತ್ಥಾಮನು ರಾತ್ರಿಯಲ್ಲಿ ಪಾಂಡವರನ್ನು ಕೊಲ್ಲುವ ಪ್ರತಿಜ್ಞೆಯನ್ನು ಮಾಡಿದ್ದು. ದುರ್ಯೋಧನನ ಮಾತಿನಂತೆ ಕೃಪನು ಅಶ್ವತ್ಥಾಮನಿಗೆ ಸೇನಾದಿಪತಿಯನ್ನಾಗಿ ಅಭಿಷೇಕ ಮಾಡಿದ್ದು.
ಸಂಜಯಃ
ವಾದಿಕಾನಾಂ ಸಮೀಪಾತ್ ತು ಶ್ರುತ್ವಾ ದುರ್ಯೋಧನಂ ಹತಮ್ |
ಹತಶಿಷ್ಟಾಸ್ತತೋ ರಾಜನ್ ಕೌರವಾಣಾಂ ಮಹಾರಥಾಃ ॥1॥
ವಿನಿರ್ಭಿನ್ನಾಃ ಶಿತೈರ್ಬಾಣೈಃ ಶಕ್ತಿತೋಮರಕರ್ಷಣೈಃ |
ಅಶ್ವತ್ಥಾಮಾ ಕೃಪಶ್ಚೈವ ಕೃತವರ್ಮಾ ಚ ಭಾರತ ॥2॥
ತ್ವರಿತಾ ಜವನೈರಶ್ವೈರಾಯೋಧನಮುಪಾದ್ರವನ್ ॥3॥
ಸಂಜಯ ರಾಜನೇ! ವಾರ್ತಾಹರವಾದಿಕರು ಹೇಳಿದ್ದ ದುರ್ಯೋಧನನ ವಧೆಯ ವಿಷಯವನ್ನು ಕೇಳಿ ವಿನಾಶವಾದ ಕೌರವರ ಕಡೆಯಲ್ಲಿ ಉಳಿದುಕೊಂಡಿದ್ದ ಮಹಾರಥರಾದ ಅಶ್ವತ್ಥಾಮ, ಕೃಪ ಮತ್ತು ಕೃತವರ್ಮರು ಹರಿತವಾದ ಬಾಣಗಳು, ಶಕ್ತ್ಯಾಯುಧ, ತೋಮರಗಳು- ಇವುಗಳ ಹೊಡೆತದಿಂದ ತುಂಬಾ ಗಾಯಗೊಂಡಿದ್ದರು. ಅವರು ಶೀಘ್ರವಾಗಿ ವೇಗವಾಗಿ ಓಡುವ ಕುದುರೆಗಳನ್ನೇರಿ ರಣರಂಗಕ್ಕೆ ಬಂದರು.
ತತ್ರಾಪಶ್ಯನ್ ಮಹಾತ್ಮಾನಂ ಧಾರ್ತರಾಷ್ಟ್ರಂ ನಿಪಾತಿತಮ್ |
ಪ್ರಭಗ್ನಂ ವಾಯುವೇಗೇನ ಮಹಾಸಾಲಂ ಯಥಾ ವನೇ ॥4॥
ಅಲ್ಲಿ ಬಿರುಗಾಳಿಯ ವೇಗಕ್ಕೆ ಮಹಾಸಾಲವೃಕ್ಷವು ತುಂಡಾಗಿ ಬಿದ್ದ ಹಾಗೆ ಬಿದ್ದಿರುವ ಮಹಾತ್ಮನಾದ ದುರ್ಯೋಧನನನ್ನು ನೋಡಿದರು.
ಭೂಮೌ ವಿವೇಷ್ಟಮಾನಂ ತಂ ರುಧಿರೇಣ ಸಮುಕ್ಷಿತಮ್ |
ಮಹಾಗಜಮಿವಾರಣ್ಯೇ ವ್ಯಾಧೇನ ನಿಧನಂ ಗತಮ್ ॥5॥
ಕಾಡಿನಲ್ಲಿ ಬೇಟೆಗಾರನಿಂದ ಪೆಟ್ಟು ತಿಂದ ಪ್ರಾಣಿಯು ಹೊರಳಾಡುವಂತೆ ರಕ್ತಸಿಕ್ತವಾಗಿ ನೆಲದಲ್ಲಿ ಹೊರಳಾಡುತ್ತಿದ್ದ ದುರ್ಯೋಧನನನ್ನು ನೋಡಿದರು.
ವಿವರ್ತಮಾನಂ ಬಹುಶೋ ರುಧಿರೌಘಪರಿಪ್ಲುತಮ್ |
ಯದೃಚ್ಛಯಾ ನಿಪತಿತಂ ಚಂದ್ರಮಾದಿತ್ಯಗೋಚರಾತ್ ॥6॥
ಮುಂದುಮುಂದಾಗಿ ಹೊರಳಾಡುತ್ತಿದ್ದ ರಕ್ತದ ಮಡುವಿನಲ್ಲಿ ಮುಳುಗಿದ್ದ ದುರ್ಯೋಧನನು ಆಕಾಶದಿಂದ ಅಕಸ್ಮಾತ್ (ದೈವೇಚ್ಛೆಯಿಂದ) ಕೆಳಬಿದ್ದ ಚಂದ್ರನ ಹಾಗೆ ಕಾಣಿಸುತ್ತಿದ್ದನು.
ಮಹಾವಾತಸಮುತ್ಥೇನ ಸಂಕ್ಷುಬ್ಧಮಿವ ಸಾಗರಮ್ |
ಪೂರ್ಣಚಂದ್ರನಿಭಂ ವೀರಂ ತುಷಾರಾವೃತಮಂಡಲಮ್ ॥7॥
ದುರ್ಯೋಧನನು ಬಿರುಗಾಳಿಗೆ ಕ್ಷೋಭೆಗೊಂಡ ಸಮುದ್ರದ ಹಾಗಿದ್ದನು. ಮಂಜಿನಿಂದ ಕವಿದುಕೊಂಡ ಪೂರ್ಣಚಂದ್ರನಂತೆ ಕಾಣಿಸಿಕೊಂಡನು.
ರೇಣುಧ್ವಸ್ತಂ ದೀರ್ಘಭುಜಂ ಮಾತಂಗಸಮವಿಕ್ರಮಮ್ |
ವೃತಂ ಭೂತಗಣೈರ್ಘೋರೈಃ ಕ್ರವ್ಯಾದೈಶ್ಚ ಸಮಂತತಃ ॥8॥
ಯಥಾ ಧನಂ ಲಿಪ್ಸಮಾನೈರ್ಭೃತ್ಯೈರ್ನೃಪತಿಸತ್ತಮಮ್ |
ಭ್ರುಕುಟೀಕೃತವಕ್ತ್ರಾಂತಂ ಕ್ರೋಧಾದುದ್ವೃತ್ತಲೋಚನಮ್ ॥9॥
ಆನೆಗೆ ಸಮನಾದ ವಿಕ್ರಮವುಳ್ಳ ದೀರ್ಘಭುಜದ ದುರ್ಯೊಧನನು ಧೂಳಿನಿಂದ ಆವೃತನಾಗಿದ್ದನು. ಅವನ ಸುತ್ತಲೂ ಹಣದ ಆಸೆಯಿಂದ ಸೇವಕರು ರಾಜನನ್ನು ಸುತ್ತುವರಿಯುವಂತೆ, ಮಾಂಸಾಕಾಂಕ್ಷಿಗಳಾದ ಭಯಂಕರವಾದ ಪ್ರಾಣಿಗಳು ಸುತ್ತುವರಿದಿದ್ದವು. ದುರ್ಯೋಧನನು ಕೋಪದಿಂದ ಹುಬ್ಬುಗಂಟಿಕ್ಕುತ್ತಾ ಕಣ್ಣುಗುಡ್ಡೆಗಳನ್ನು ತಿರುಗಿಸುತ್ತಿದ್ದನು.
ಸಾಮರ್ಷಂ ತಂ ನರವ್ಯಾಘ್ರಂ ಭೌಮಂ ನಿಪತಿತಂ ತಥಾ |
ತಂ ದೃಷ್ಟ್ವಾಽಥ ಮಹೇಷ್ವಾಸಂ ಭೂತಲೇ ಪತಿತಂ ನೃಪಮ್ ॥10॥
ಮೋಹಮಭ್ಯಾಗಮನ್ ಸರ್ವೇ ಕೃಪಪ್ರಭೃತಯೋ ನೃಪ ॥11॥
ರಾಜನೇ! ನರಶ್ರೇಷ್ಠನಾದ, ಮಹಾಬಿಲ್ಲಾರನಾದ ದುರ್ಯೋಧನನು ಭೂಮಿಯಲ್ಲಿ ಅಸಹನೆಯಿಂದ ಬಿದ್ದಿದ್ದನ್ನು ನೋಡಿ ಕೃಪಮೊದಲಾದವರು ಮೂರ್ಛೆಹೋದರು.
ಅವತೀರ್ಯ ರಥೇಭ್ಯಸ್ತು ಪ್ರಾದ್ರವನ್ ರಾಜಸನ್ನಿಧೌ |
ದುರ್ಯೋಧನಂ ಚ ಸಂಪ್ರಾಪ್ಯ ಸರ್ವೇ ಭೂಮಾವುಪಾವಿಶನ್ ॥12॥
ರಥಗಳಿಂದ ಇಳಿದ ಅವರು ರಾಜನ ಸನ್ನಿಧಾನಕ್ಕೆ ಓಡಿದರು. ದುರ್ಯೋಧನನ ಸಮೀಪಕ್ಕೆ ಬಂದು ಅವನ ಮುಂದೆ ಕುಳಿತುಕೊಂಡರು.
ತತೋ ದ್ರೌಣಿರ್ಮಹಾರಾಜ ಬಾಷ್ಪಪೂರ್ಣೇಕ್ಷಣಃ ಶ್ವಸನ್ |
ಉವಾಚ ಭರತಶ್ರೇಷ್ಠಂ ಸರ್ವಲೋಕೇಶ್ವರೇಶ್ವರಮ್ ॥13॥
ಮಹಾರಾಜನೇ! ಅನಂತರ ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳ ಅಶ್ವತ್ಥಾಮನು ಜೋರಾಗಿ ಉಸಿರುಬಿಡುತ್ತಾ ಭರತೋತ್ತಮನಾದ

ಸಕಲ ಲೋಕಕ್ಕೆ ಸ್ವಾಮಿಯಾದ ದುರ್ಯೋಧನನಿಗೆ ಹೀಗೆ ಹೇಳಿದನು.
ಅಶ್ವತ್ಥಾಮಾ
ನೂನಂ ನ ವಿದ್ಯತೇ ಪುಣ್ಯಂ ಮನುಷ್ಯೇ ಕಿಂಚಿದೇವ ತು |
ಯತ್ರ ತ್ವಂ ಪುರುಷವ್ಯಾಘ್ರ ಶೇತೇ ಪಾಂಸುಷು ರೂಷಿತಃ ॥14॥
ಅಶ್ವತ್ಥಾಮ ಎಲ್ಲಿ ಪುರುಷಶ್ರೇಷ್ಠನಾದ ನೀನು ಧೂಳಿನಲ್ಲಿ ಹೊರಳಾಡುತ್ತಾ ಮಲಗಿದ್ದೀಯೋ ಖಂಡಿತವಾಗಿಯೂ ಅಲ್ಲಿ ಧರ್ಮವು ಸ್ವಲ್ಪವೂ ಉಳಿದಿಲ್ಲ.
ಭೂತ್ವಾ ಚ ನೃಪತಿಃ ಪೂರ್ವಂ ಸಮಾಜ್ಞಾಪ್ಯ ಚ ಮೇದಿನೀಮ್ |
ಕಥಮೇಕೋಽದ್ಯ ರಾಜೇಂದ್ರ ವನೇ ತಿಷ್ಠಸಿ ನಿರ್ಜನೇ ॥15॥
ರಾಜೇಂದ್ರನೇ! ಮೊದಲಿಗೆ ರಾಜನಾಗಿದ್ದು ಭೂಮಿಯನ್ನು ಆಳಿದ ನೀನು ನಿರ್ಜನ ಕಾಡಿನಲ್ಲಿ ಏಕಾಕಿಯಾಗಿ ಹೇಗೆ ಇರುವಿ?
ದುಃಶಾಸನಂ ನ ಪಶ್ಯಾಮಿ ನಾಪಿ ಕರ್ಣಂ ಮಹಾರಥಮ್ |
ನಾಪಿ ತಾನ್ ಸುಹೃದಃ ಸರ್ವಾನ್ ಕಿಮಿದಂ ಭರತರ್ಷಭ ॥16॥
ಭರತಕುಲಶ್ರೇಷ್ಠನೇ! ದುಃಶಾಸನನೂ ಕಾಣಿಸುತ್ತಿಲ್ಲ. ಮಹಾರಥನಾದ ಕರ್ಣನೂ ಕಾಣಿಸುತ್ತಿಲ್ಲ. ನಿನ್ನ ಎಲ್ಲಾ ಸ್ನೇಹಿತರೂ ಕಾಣಿಸುತ್ತಿಲ್ಲ. ಏನಿದು?
ದುಃಖಂ ನೂನಂ(ಶಕ್ಯಾ) ಕೃತಾಂತಸ್ಯ ಗತಿಂ ಜ್ಞಾತುಂ ಕಥಂಚನ |
ಲೋಕನಾಥೋ ಭವಾನದ್ಯ ಶೇತೇ ಪಾಂಸುಷು ರೂಷಿತಃ ॥17॥
ಮಾರಕನಾದ ಯಮನ (ಕಾಲದ) ಗತಿಯನ್ನು ತಿಳಿಯಲು ತುಂಬಾ ದುಃಖವಾಗುತ್ತಿದೆ. ಲೋಕನಾಥನಾಗಿದ್ದ ನೀನು ಇಂದು ಧೂಳು ಮೆತ್ತಿಕೊಂಡು ನೆಲದಲ್ಲಿ ಮಲಗಿರುವಿ.
ಅಯಂ ಮೂರ್ಧಾಭಿಷಿಕ್ತಾನಾಮಗ್ರೇ ಯಾತಿ ಪರಂತಪಃ |
ಸತೃಣಂ ಗ್ರಸತೇ ಪಾಂಸು ಪಶ್ಯ ಕಾಲಸ್ಯ ಪರ್ಯಯಮ್ ॥18॥
ಶತ್ರುತಾಪಕನಾದ ಇವನು ಶಿರದಲ್ಲಿ ಅಭಿಷಿಕ್ತರಾದ ರಾಜರಿಗೆ ಮುಂಚೂಣಿಯಲ್ಲಿರುತ್ತಿದ್ದ. ಈಗ ಧೂಳು ಮತ್ತು ಹುಲ್ಲನ್ನು ತಿನ್ನುತ್ತಿದ್ದಾನೆ. ಕಾಲದ ಗತಿಯು ವಿಪರೀತವಾಗಿದೆ.
ಕ್ವ ತೇ ತದಮಲಂ ಛತ್ರಂ ವ್ಯಜನಂ ಕ್ವ ಚ ಪಾರ್ಥಿವ |
ಸಾ ಚ ತೇ ಮಹತೀ ಸೇನಾ ಕ್ವ ಗತಾ ಪಾರ್ಥಿವೋತ್ತಮ ॥19॥
ರಾಜನೇ! ಪರಿಶುದ್ಧವಾದ ನಿನ್ನ ಛತ್ರ, ಚಾಮರಗಳು ಎಲ್ಲಿ ಹೋದವು? ರಾಜೋತ್ತಮನೇ! ನಿನ್ನ ದೊಡ್ಡದಾದ ಸೇನೆಯು ಎಲ್ಲಿ ಹೋಯಿತು?
ದುರ್ವಿಜ್ಞೇಯಾ ಗತಿರ್ನೂನಂ ಕಾರ್ಯಾಣಾಂ ಕಾರಣಾಂತರೇ |
ಯೋ ವೈ ಲೋಕಗುರುರ್ನಾಥೋ ಭವಾನೇತಾಂ ದಶಾಂ ಗತಃ ॥20॥
ವಿಪರೀತವಾದ ಕಾರ್ಯಕಾರಣಗಳ ಮಧ್ಯದಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತಿಳಿದುಕೊಳ್ಳುವುದು ಬಹಳ ಕಷ್ಟ. ಏಕೆಂದರೆ ಲೋಕಕ್ಕೆ ಆದೇಶಕನಾದ, ಒಡೆಯನಾದ ನೀನು ಈ ಅವಸ್ಥೆಯನ್ನು ತಲುಪಿರುವಿ.
ಅಧ್ರುವಾ ಸರ್ವಮರ್ತ್ಯೇಷು ಧ್ರುವೈವ ಶ್ರೀರ್ವಿಚಿಂತ್ಯತೇ |
ಭವತೋ ವ್ಯಸನಂ ದೃಷ್ಟ್ವಾ ಶಕ್ರವಿಸ್ಪರ್ಧಿನೋ ಭೃಶಮ್ ॥21॥
ಇಂದ್ರನೊಡನೆ ಸ್ಪರ್ಧಿಸುತ್ತಿದ್ದ ನಿನಗೆ ಬಂದಿರುವ ಈ ದುಃಖವನ್ನು ನೋಡಿದರೆ ಯಾವುದೇ ಮನುಷ್ಯರ ಕೀರ್ತಿಯೂ ಅಶಾಶ್ವತವೆಂದು ನಿಶ್ಚಯವಾಗುತ್ತದೆ.
ಸಂಜಯಃ
ತಸ್ಯ ತದ್ವಚನಂ ಶ್ರುತ್ವಾ ದುಃಖಿತಸ್ಯ ವಿಶೇಷತಃ |
ಉವಾಚ ರಾಜನ್ ಪುತ್ರಸ್ತೇ ಪ್ರಾಪ್ತಕಾಲಮಿದಂ ವಚಃ ॥22॥
ವಿಮೃಜ್ಯ ನೇತ್ರೇ ಪಾಣಿಭ್ಯಾಂ ಶೋಕಜಂ ವಾರಿ ಚೋತ್ಸೃಜತ್ |
ಸ ಕೃಪಪ್ರಭೃತೀನ್ ವೀರಾನ್ ಅಬ್ರವೀನ್ಮನುಜಾಧಿಪಃ ॥23॥
ಸಂಜಯ ರಾಜನೇ! ಅವನ ಆ ಮಾತನ್ನು ಕೇಳಿ ಮತ್ತೂ ದುಃಖಕ್ಕೊಳಗಾದ ನಿನ್ನ ಮಗ ದುರ್ಯೋಧನನು ಶೋಕದಿಂದ ಬಂದ ಕಣ್ಣೀರನ್ನು ಕೈಗಳಿಂದ ಒರೆಸಿಕೊಂಡು ಕೃಪಮೊದಲಾದ ವೀರರಿಗೆ ಕಾಲೋಚಿತವಾದ ಮಾತನ್ನು ಹೇಳುತ್ತಾನೆ.
ದುರ್ಯೋಧನಃ
ಈದೃಶೋ ಮರ್ತ್ಯಧರ್ಮೋಽಯಂ ಧಾತ್ರಾ ನಿರ್ದಿಷ್ಟ ಉಚ್ಯತೇ |
ವಿನಾಶಃ ಸರ್ವಭೂತಾನಾಂ ಕಾಲಪರ್ಯಾಯಕಾರಿತಃ ॥24॥
ಸೋಽಯಂ ಮಾಮನುಸಂಪ್ರಾಪ್ತಃ ಪ್ರತ್ಯಕ್ಷೋ ಭವತಾಂ ಹಿ ಸಃ |
ಪೃಥಿವೀಂ ಪಾಲಯಿತ್ವಾಹಮ್ ಏತಾಂ ನಿಷ್ಠಾಮುಪಾಗತಃ ॥25॥
ದುರ್ಯೋಧನ ಇಂತಹ ಮನುಷ್ಯನ ಧರ್ಮವು ವಿಧಿಯಿಂದ ಮೊದಲೇ ನಿಶ್ಚಿತವಾಗಿರುತ್ತದೆ ಎಂದು ಹೇಳುತ್ತಾರೆ. ಕಾಲಚಕ್ರವು ತಿರುಗಿದಾಗ ಎಲ್ಲ ಪ್ರಾಣಿಗಳೂ ನಾಶವಾಗುತ್ತವೆ. ಅಂತಹ ನಾಶವು ನಿಮ್ಮ ಮುಂದೆ ನನಗೆ ಬಂದಿದೆ. ಇಡೀ ಭೂಮಿಯನ್ನೇ ಆಳಿದ ನಾನು ಈ ರೀತಿಯ ನಾಶವನ್ನು ಹೊಂದಿರುವೆನು.
ದಿಷ್ಟ್ಯಾಽಹಂ ತ್ವಪರಾವೃತ್ತೋ ಯುದ್ಧೇ ಕಸ್ಯಾಂಚಿದಾಪದಿ |
ದಿಷ್ಟ್ಯಾಽಹಂ ನಿಹತಃ ಪಾಪೈಶ್ಛಲೇನೈವ ವಿಶೇಷತಃ ॥26॥

ಸೌಭಾಗ್ಯವಶಾತ್ ನಾನು ಎಂತಹ ಆಪತ್ತಿನಲ್ಲಿಯೂ ಯುದ್ಧದಿಂದ ಹಿಂತಿರುಗಲಿಲ್ಲ. ಸೌಭಾಗ್ಯವಶಾತ್ ಪಾಪಿಗಳಾದ ಪಾಂಡವರು ವಿಶೇಷ ಮೋಸದಿಂದ ನನ್ನನ್ನು ಕೊಂದಿರುತ್ತಾರೆ. (ಋಜುಮಾರ್ಗದಲ್ಲಿ ನನ್ನನ್ನು ಸಾಯಿಸಲಾಗಲಿಲ್ಲ.)
ಉತ್ಸಾಹಶ್ಚ ಕೃತೋ ನಿತ್ಯಂ ಮಯಾ ದಿಷ್ಟ್ಯಾ ಯುಯುತ್ಸಯಾ |
ದಿಷ್ಟ್ಯಾ ಚಾಸ್ಮಿ ಹತೋ ಯುದ್ಧೇ ಕ್ಷೀಣಸ್ವಜನಬಾಂಧವಃ ||27||
ಸೌಭಾಗ್ಯವಶಾತ್ ನಾನು ಯುದ್ಧಮಾಡಲಿಕ್ಕೆ ನಿತ್ಯವೂ ಉತ್ಸುಕನಾಗಿದ್ದೇನೆ. ಬಂಧು-ಬಾಂಧವರನ್ನೆಲ್ಲಾ ಕಳೆದುಕೊಂಡ ನಾನು ಯುದ್ಧದಲ್ಲಿ ಸಾಯುತ್ತಿದ್ದೇನೆ. ಇದು ನನ್ನ ಸೌಭಾಗ್ಯ.
ದಿಷ್ಟ್ಯಾ ಚ ವೋಽಹಂ ಪಶ್ಯಾಮಿ ಮುಕ್ತಾನಸ್ಮಾಜ್ಜನಕ್ಷಯಾತ್ |
ಸ್ವಸ್ತಿಮಂತಶ್ಚ ಕಲ್ಯಾಶ್ಚ ತನ್ಮೇ ಪ್ರಿಯಮನುತ್ತಮಮ್ ||28||
ನಾನು ನನ್ನ ಸೌಭಾಗ್ಯದಿಂದಾಗಿ ಎಲ್ಲರೂ ಸಾಯುತ್ತಿರುವ ಈ ಯುದ್ಧದಲ್ಲಿ ಸಾವಿನಿಂದ ತಪ್ಪಿಸಿಕೊಂಡಿರುವ ನಿಮ್ಮನ್ನು ನೋಡುತ್ತಿದ್ದೇನೆ. ಆರಾಮವಾಗಿರುವ ನೀವು ಸಮರ್ಥರಾಗಿರುವಿರಿ. ಇದು ನನಗೆ ಅತ್ಯಂತ ಪ್ರಿಯವಾದ ಸಂಗತಿಯಾಗಿದೆ.
ಮಾ ಭವಂತೋಽನುತಪ್ಯಂತಾಂ ಸೌಹೃದಾನ್ನಿಧನೇನ ಮೇ |
ಯದಿ ವೇದಾಃ ಪ್ರಮಾಣಂ ವೋ ಜಿತಾ ಲೋಕಾ ಮಯಾಽಕ್ಷಯಾಃ ||
ನನ್ನ ಮೇಲಿನ ಸ್ನೇಹದ ದೆಸೆಯಿಂದಾಗಿ ನನ್ನ ಸಾವಿನಿಂದ ನೀವು ದುಃಖಿಸಬೇಡಿ. ಒಂದು ವೇಳೆ ನಿಮಗೆ ದೇವತೆಗಳು (ವೇದಗಳು) ಪ್ರಾಮಾಣಿಕರಾಗಿ ಇರುವುದಾದರೆ ನನಗೆ ಅಕ್ಷಯಲೋಕಗಳು ಸಿಗುತ್ತವೆ.
ಜಾನಮಾನಃ ಪ್ರಭಾವಂ ಚ ಕೃಷ್ಣಸ್ಯಾಮಿತತೇಜಸಃ |
ತೇನ ನ ಚ್ಯಾವಿತಶ್ಚಾಹಂ ಕ್ಷತ್ರಧರ್ಮಾತ್ ಸ್ವನುಷ್ಠಿತಾತ್ ||30||
ಅಪರಿಮಿತ ತೇಜಸ್ಸುಳ್ಳ ಶ್ರೀಕೃಷ್ಣನ ಸಾಮರ್ಥ್ಯವನ್ನು ತಿಳಿದುಕೊಂಡಿದ್ದರೂ ನಾನು ಅವನ ದುಷ್ಪ್ರೇರಣೆಗೆ ಒಳಗಾಗಿ ನನ್ನ ಆಚರಣೆಯಲ್ಲಿದ್ದ ಕ್ಷತ್ರಿಯಧರ್ಮದಿಂದ ವಿಚಲಿತನಾಗಲಿಲ್ಲ.
ಸಮಯೋಽಯಮನುಪ್ರಾಪ್ತೋ ನಾಸ್ಮಿ ಶೋಚ್ಯಃ ಕಥಂಚನ |
ಕೃತಂ ಭವದ್ಭಿಃ ಸದೃಶಮನುಕೂಲಮಿಹಾತ್ಮನಃ ||31||
ಈ ಸಮಯದಲ್ಲಿ ನನ್ನ ಬಗ್ಗೆ ದುಃಖಿಸಬಾರದು. ನೀವೆಲ್ಲರೂ ನನಗೆ ಅನುಕೂಲವಾಗಿರುವುದನ್ನೇ ಮಾಡಿರುವಿರಿ.
ಯದಿ ತಂ ವಿಜಯೇ ಶಕ್ತ್ಯಾ ದೈವಂ ತು ಬಲವತ್ತರಮ್ ||32||
ಯದ್ಯಪಿ ನಾನು ನನ್ನ ಶಕ್ತಿಯಿಂದ ಭೀಮನನ್ನು ಜಯಿಸುತ್ತಿದ್ದೆ. ಆದರೂ ವಿಧಿಯೇ ಪ್ರಬಲವಾಗಿದೆ.
ಸಂಜಯಃ
ಏತಾವದುಕ್ತ್ವಾ ವಚನಂ ಬಾಷ್ಪವ್ಯಾಕುಲಲೋಚನಃ |
ತೂಷ್ಣೀಂ ಬಭೂವ ರಾಜೇಂದ್ರೋ ರುಜಯಾ ಭೃಶವಿಹ್ವಲಃ ||33||
ಸಂಜಯ ಇಷ್ಟು ಮಾತುಗಳನ್ನು ಹೇಳಿ ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳ ರಾಜೋತ್ತಮ ದುರ್ಯೋಧನನು ನೋವಿನಿಂದ ನರಳುತ್ತಾ ಸುಮ್ಮನಾದನು.
ತಥಾ ದೃಷ್ಟ್ವಾ ತು ರಾಜಾನಂ ಬಾಷ್ಪಶೋಕಸಮನ್ವಿತಮ್ |
ದ್ರೌಣಿಃ ಕ್ರೋಧೇನ ಜಜ್ವಾಲ ಯಥಾಽಗ್ನಿರ್ಜಗತಃ ಕ್ಷಯೇ ||34||
ಕಣ್ಣೀರು ಮತ್ತು ಶೋಕದಿಂದ ಯುಕ್ತನಾದ ರಾಜನನ್ನು ಆ ರೀತಿಯಲ್ಲಿ ನೋಡಿದ ಅಶ್ವತ್ಥಾಮನು ಕೋಪದಿಂದ ಪ್ರಳಯಕಾಲದ ಬೆಂಕಿಯಂತೆ ಉರಿದುಹೋದನು.
ಸ ತು ಕ್ರೋಧಸಮಾವಿಷ್ಟಃ ಪಾಣಿಂ ಪಾಣೌ ನಿಪೀಡ್ಯ ಚ |
ಬಾಷ್ಪವಿಹ್ವಲಯಾ ವಾಚಾ ರಾಜಾನಮಿದಮಬ್ರವೀತ್ ||35||
ಕ್ರೋಧಯುಕ್ತನಾದ ಅಶ್ವತ್ಥಾಮನು ದುರ್ಯೋಧನನ ಕೈಯನ್ನೂ ಕಾಲನ್ನೂ ಒತ್ತುತ್ತಾ ಕಣ್ಣೀರಿನಿಂದಾಗಿ ಗದ್ಗದಿತವಾದ ಮಾತಿನಿಂದ ರಾಜ ದುರ್ಯೋಧನನಿಗೆ ಹೀಗೆ ಹೇಳುತ್ತಾನೆ.
ಅಶ್ವತ್ಥಾಮಾ
ಪಿತಾ ಮೇ ನಿಹತಃ ಕ್ಷುದ್ರೈಃ ಸುನೃಶಂಸೇನ ಕರ್ಮಣಾ |
ನ ತಥಾ ತೇನ ತಪ್ಯಾಮಿ ಯಥಾ ರಾಜಂಸ್ತ್ವಯಾಽದ್ಯ ವೈ ||36||
ಅಶ್ವತ್ಥಾಮ ಅಲ್ಪರಾದ ಪಾಂಡವರು ನನ್ನ ತಂದೆಯನ್ನು ಕ್ರೂರವಾದ ರೀತಿಯಲ್ಲಿ ಸಾಯಿಸಿದರು. ನಿನ್ನ ಈ ಸ್ಥಿತಿಯನ್ನು ನೋಡಿ ನನಗೆ ಆದಷ್ಟು ದುಃಖವನ್ನು ಆಗಲೂ ನಾನು ಅನುಭವಿಸಿರಲಿಲ್ಲ.
ಶೃಣು ರಾಜನ್ ವಚೋ ಮೇಽದ್ಯ ಸತ್ಯೇನ ವದತಃ ಪ್ರಭೋ |
ಇಷ್ಟಾಪೂರ್ತೇನ ದಾನೇನ ಧರ್ಮೇಣ ಸುಕೃತೇನ ಚ ||37||
ರಾಜನೇ! ನಾನು ಮಾಡಿರುವ ಯಾಗ,ಯಜ್ಞ , ಲೋಕೋಪಕಾರ, ದಾನ, ಧರ್ಮ ಮತ್ತು ಪುಣ್ಯ ಇವುಗಳಿಂದಾಗಿ ಸತ್ಯವನ್ನೇ ಹೇಳುವ ನನ್ನ ಮಾತನ್ನು ಕೇಳಿಸಿಕೊಳ್ಳು.
ಅದ್ಯಾಹಂ ಸರ್ವಪಾಂಚಾಲಾನ್ ವಾಸುದೇವಸ್ಯ ಪಶ್ಯತಃ |
ಅದ್ಯ ರಾತ್ರೌ ಮಹಾರಾಜ ನಿಹನಿಷ್ಯಾಮಿ ಪಾಂಡವಾನ್ ||38||
ಮಹಾರಾಜನೇ! ಶ್ರೀಕೃಷ್ಣನು ನೋಡುತ್ತಿರುವಂತೆಯೇ ಎಲ್ಲ ಪಾಂಚಾಲರನ್ನು ಹಾಗೂ ಪಾಂಡವರನ್ನು ಇಂದು ರಾತ್ರಿ ಕೊಲ್ಲುವೆನು.
ಅನುಜ್ಞಾಂ ತು ಮಹಾರಾಜ ಭವಾನ್ ಮೇ ದಾತುಮರ್ಹಸಿ ||39||
ಮಹಾರಾಜನೇ! ಅದಕ್ಕಾಗಿ ನನಗೆ ನೀನು ಅಪ್ಪಣೆಯನ್ನು ಕೊಡು.

ಸಂಜಯಃ
ತಚ್ಛ್ರುತ್ವಾ ವಚನಂ ದ್ರೌಣೇರ್ಧೃತರಾಷ್ಟ್ರ ತವಾತ್ಮಜಃ |
ಮನಸಃ ಪ್ರೀತಿಜನನಂ ಕೃಪಂ ವಚನಮಬ್ರವೀತ್ ॥40॥
ಸಂಜಯ ಧೃತರಾಷ್ಟ್ರನೇ! ಮನಸ್ಸಿಗೆ ಮುದವನ್ನು ಕೊಡುವ ಅವನ ಆ ಮಾತನ್ನು ಕೇಳಿದ ನಿನ್ನ ಮಗನು ಕೃಪನಿಗೆ ಈ ಮಾತನ್ನು ಹೇಳುತ್ತಾನೆ.
ದುರ್ಯೋಧನಃ
ಆಚಾರ್ಯ ಶೀಘ್ರಂ ಕಲಶಂ ಜಲಪೂರ್ಣಮಿಹಾನಯ ॥41॥
ದುರ್ಯೋಧನ ಆಚಾರ್ಯನೇ! ಬೇಗನೇ ನೀರು ತುಂಬಿದ ಕಲಶವನ್ನು ತೆಗೆದುಕೊಂಡು ಇಲ್ಲಿಗೆ ಬಾ.
ಸಂಜಯಃ
ಸ ತದ್ವಚನಮಾಜ್ಞಾಯ ರಾಜ್ಞೋ ಬ್ರಾಹ್ಮಣಸತ್ತಮಃ |
ಕಲಶಂ ಪೂರ್ಣಮಾದಾಯ ರಾಜಾಂತಿಕಮುಪಾಗಮತ್ ॥42॥
ಸಂಜಯ ಬ್ರಾಹ್ಮಣೋತ್ತಮನಾದ ಕೃಪನು ರಾಜನ ಮಾತಿನ ಅಭಿಪ್ರಾಯವನ್ನು ತಿಳಿದುಕೊಂಡು ಪೂರ್ಣಕಲಶವನ್ನು ಹಿಡಿದುಕೊಂಡು ರಾಜನ ಸಮೀಪಕ್ಕೆ ಬಂದನು.
ತಮಬ್ರವೀನ್ಮಹಾರಾಜ ಪುತ್ರಸ್ತವ ವಿಶಾಂಪತೇ ॥43॥
ರಾಜನೇ! ಆ ಕೃಪನಿಗೆ ನಿನ್ನ ಮಗನು ಹೀಗೆ ಹೇಳುತ್ತಾನೆ.
ದುರ್ಯೋಧನಃ
ಮಮಾಜ್ಞಯಾ ದ್ವಿಜಶ್ರೇಷ್ಠ ದ್ರೋಣಪುತ್ರೋಽಭಿಷಿಚ್ಯತಾಮ್ |
ಸೈನಾಪತ್ಯೇನ ಭದ್ರಂ ತೇ ಮಮ ಚೇದಿಚ್ಛಸಿ ಪ್ರಿಯಮ್ ॥44॥
ದುರ್ಯೋಧನ ಬ್ರಾಹ್ಮಣೋತ್ತಮನೇ! ನನಗೆ ಪ್ರಿಯವಾದುದನ್ನು ಮಾಡಲು ಬಯಸುವುದಾದರೆ, ನನ್ನ ಅಪ್ಪಣೆಯಂತೆ ಅಶ್ವತ್ಥಾಮನನ್ನು ಸೇನಾಧಿಪತಿಯಾಗಿ ಪಟ್ಟಾಭಿಷೇಕ ಮಾಡು.
ರಾಜ್ಞೋ ನಿಯೋಗಾದ್ ಯೋದ್ಧವ್ಯಂ ಬ್ರಾಹ್ಮಣೇನ ವಿಶೇಷತಃ |
ವರ್ತತಾ ಕ್ಷತ್ರಧರ್ಮೇಣ ಏವಂ ಧರ್ಮವಿದೋ ವಿದುಃ ॥45॥
ರಾಜನ ಆಜ್ಞೆಯಂತೆ ಬ್ರಾಹ್ಮಣನೂ ಕೂಡ ವಿಶೇಷವಾಗಿ ಕ್ಷತ್ರಿಯಧರ್ಮವನ್ನು ಪಾಲಿಸುತ್ತಾ ಯುದ್ಧಮಾಡಬೇಕೆಂದು ಧರ್ಮವನ್ನು ತಿಳಿದ ಜ್ಞಾನಿಗಳು ತಿಳಿದುಕೊಂಡಿದ್ದಾರೆ.
ಸಂಜಯಃ
ರಾಜ್ಞಸ್ತು ವಚನಂ ಶ್ರುತ್ವಾ ಕೃಪಃ ಶಾರದ್ವತಸ್ತತಃ |
ದ್ರೌಣಿಂ ರಾಜನಿಯೋಗೇನ ಸೈನಾಪತ್ಯೇಽಭ್ಯಷೇಚಯತ್ ॥46॥
ಸಂಜಯ ಶಾರದ್ವತಕುಲದಲ್ಲಿ ಬಂದ ಕೃಪನು ರಾಜನ ಮಾತನ್ನು ಕೇಳಿ ರಾಜನ ಅಪ್ಪಣೆಯಿಂದ ಅಶ್ವತ್ಥಾಮನನ್ನು ಸೇನಾಧಿಪತಿಯನ್ನಾಗಿ ಪಟ್ಟಾಭಿಷೇಕ ಮಾಡಿದನು.
ಸೋಽಭಿಷಿಕ್ತೋ ಮಹಾರಾಜ ಪರಿಷ್ವಜ್ಯ ನೃಪೋತ್ತಮಮ್ |
ಪ್ರಯಯೌ ಸಿಂಹನಾದೇನ ದಿಶಃ ಸರ್ವಾ ವಿನಾದಯನ್ ॥47॥
ಮಹಾರಾಜನೇ! ಪಟ್ಟಾಭಿಷಿಕ್ತನಾದ ಅಶ್ವತ್ಥಾಮನು ದುರ್ಯೋಧನನನ್ನು ಆಲಿಂಗಿಸಿಕೊಂಡು ತನ್ನ ಸಿಂಹನಾದದಿಂದ ಎಲ್ಲಾ ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿ ಹೊರಟನು.
ದುರ್ಯೋಧನೋಽಪಿ ರಾಜೇಂದ್ರ ಶೋಣಿತೌಘಪರಿಪ್ಲುತಃ |
ತಾಂ ನಿಶಾಂ ಪ್ರತಿಸಂಪೇದೇ ಸರ್ವಭೂತಭಯಾವಹಾಮ್ ॥48॥
ರಾಜೇಂದ್ರನೇ! ದುರ್ಯೋಧನನಾದರೂ ರಕ್ತದಲ್ಲಿ ತೊಯ್ದುಕೊಂಡು ಎಲ್ಲಾ ಪ್ರಾಣಿಗಳಿಗೂ ಭಯವನ್ನು ಉಂಟುಮಾಡುವ ರೀತಿಯಲ್ಲಿ ಆ ರಾತ್ರಿಯನ್ನು ಕಳೆದನು.
ಅಪಕ್ರಮ್ಯ ತು ತೇ ತೂರ್ಣಂ ತಸ್ಮಾದಾಯೋಧನಾನ್ನೃಪ |
ಶೋಕಸಂತಪ್ತಮನಸಃ ಚಿಂತಾಮಾಪೇದಿರೇ ಭೃಶಮ್ ॥49॥
ಅವರೆಲ್ಲರೂ ದುಃಖದಿಂದ ತಾಪಗೊಂಡ ಮನಸ್ಸುಳ್ಳವರಾಗಿ ಆ ರಣರಂಗದಿಂದ ಹೊರಬಂದು ತುಂಬಾ ಚಿಂತೆಗೊಳಗಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಗದಾಪರ್ವಣಿ ದುರ್ಯೋಧನವಧೋ ನಾಮ ಪಂಚಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಗದಾಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
॥ ಇಲ್ಲಿಗೆ ಗದಾಪರ್ವವು ಮುಗಿಯಿತು ॥
* * * * *
॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಸೌಪ್ತಿಕಪರ್ವ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ - 28ನೇ ಅಧ್ಯಾಯ
ಉಚ್ಛಿದ್ಯ ಸಂತತಿಂ ಪಾಂಡೋಃ ಕೃತ್ವಾ ಸ್ವಕ್ಷೇತ್ರಸಂತತಿಮ್ |

ತಯಾ ಭೂರಕ್ಷಣಹೃದಾ ಸೋಽಭಿಷಿಕ್ತಸ್ತಥೇತ್ಯಗಾತ್ ॥
ಪಾಂಡುವಿನ ಸಂತತಿಯನ್ನು ಅಳಿಸಿ, ತನ್ನ ಹೆಂಡತಿಯಲ್ಲಿ ಸಂತತಿಯನ್ನು ಹುಟ್ಟಿಸಿ ಆ ಸಂತತಿಯಿಂದ ರಾಜ್ಯಭಾರ ಮಾಡಿಸಬೇಕೆನ್ನುವ ಅಭಿಪ್ರಾಯದಿಂದ ದುರ್ಯೋಧನನು ಅಶ್ವತ್ಥಾಮನಿಗೆ ಧೂಳಿನಿಂದ ಅಭಿಷೇಕ ಮಾಡಿದ. ಅಶ್ವತ್ಥಾಮ `ಹಾಗೇ ಆಗಲಿ' ಎಂದು ಹೇಳಿ ಹೊರಟು ಹೋದನು.
ಸ ಕೃಷ್ಣಭೀಮಪಾರ್ಥಾನಾಂ ಭಯಾದೇವ ಪುನರ್ವನಮ್ ।
ಕೃಪಸಾತ್ವತಸಂಯುಕ್ತೋ ವಿವೇಶ ಗಹನಂ ರಥೀ ॥
ಅಶ್ವತ್ಥಾಮನು ಶ್ರೀಕೃಷ್ಣ -ಭೀಮಾರ್ಜುನರ ಭಯದಿಂದಲೆ ಕೃಪ-ಕೃತವರ್ಮರಿಂದ ಒಡಗೂಡಿ  ರಥವೇರಿ ಪುನಃ ದಟ್ಟವಾದ ಅರಣ್ಯವನ್ನು ಪ್ರವೇಶಿಸಿದನು.
ತಸ್ಯ ಚಿಂತಯತೋ ದ್ರೋಣವಧಂ ದುರ್ಯೋಧನಸ್ಯ ಚ ।
ನಾಽಗಾನ್ನಿದ್ರಾ ನಿಶೀಥೇ ಚ ಧ್ವಾಕ್ಷಾನ್ ನ್ಯಗ್ರೋಧವಾಸಿನಃ ॥
ಹತಾನ್ ಸುಬಹುಸಾಹಸ್ರಾನೇಕೇನಾತಿಬಲೇನ ತು ।
ಕೌಶಿಕೇನ ನಿರೀಕ್ಷ್ಯೈವ ಪ್ರಾಹ ತೌ ಕೃಪಸಾತ್ವತೌ ॥
ನಿದರ್ಶನೇನ ಹ್ಯೇನೇನ ಪ್ರೇರಿತಃ ಪರಮಾತ್ಮನಾ ।
ಯಾಮಿ ಪಾಂಡುಸುತಾನ್ ಹಂತುಮಿತ್ಯುಕತ್ವಾಽಽರುರುಹೇ ರಥಮ್ ।
ನಿವಾರಿತೋಽಪಿ ತಾಸ್ಯಾಂ ಸ ಪ್ರಾದ್ರವಚ್ಛಿಬಿರಂ ಪ್ರತಿ ॥
ಅಶ್ವತ್ಥಾಮ ದ್ರೋಣರ ವಧವನ್ನೂ ದುರ್ಯೋಧನನ ವಧವನ್ನೂ ಆಲೋಚಿಸುತ್ತಿದ್ದುದರಿಂದ ರಾತ್ರಿಯಲ್ಲಿ ನಿದ್ದೆ ಬರಲಿಲ್ಲ. ಅತಿ ಬಲಿಷ್ಠವಾದ ಒಂದು ಗೂಬೆ ಅರ್ಧರಾತ್ರಿಯಲ್ಲಿ ಆಲದಮರದ ಮೇಲೆ ವಾಸಮಾಡುತ್ತಿದ್ದ ಅನೇಕ ಸಾವಿರ ಕಾಗೆಗಳನ್ನು ಕೊಂದುದನ್ನು ಕಂಡು ಅಶ್ವತ್ಥಾಮನು ಕೃಪ, ಕೃತವರ್ಮರಿಗೆ ಹೇಳಿದನು. `ಈ ನಿದರ್ಶನದ ಮೂಲಕ ಪರಮಾತ್ಮನಿಂದ ಪ್ರೇರಿತನಾದ ನಾನು ಪಾಂಡವರನ್ನು ಕೊಲ್ಲಲು ಹೋಗುತ್ತೇನೆ'. ಹೀಗೆ ಹೇಳಿ ಅಶ್ವತ್ಥಾಮನು ರಥವನ್ನೇರಿದನು. ಅವರು ತಡೆದರೂ ನಿಲ್ಲದೆ ಪಾಂಡವರ ಶಿಬಿರದ ಕಡೆಗೆ ತೆರಳಿದನು.
* * * * *
ಒಂದನೆಯ ಅಧ್ಯಾಯ
ಸಂಜಯ ಧೃತರಾಷ್ಟ್ರರ ಸಂವಾದ, ದ್ರೋಣಪುತ್ರ, ಕೃತವರ್ಮ,
ಕೃಪಾಚಾರ್ಯರು ವನವನ್ನು ಸೇರಿ  ಒಂದೆಡೆ ಕುಳಿತುಕೊಳ್ಳುವುದು,
ಅಲ್ಲಿ ರಾತ್ರಿಯಲ್ಲಿ ಗೂಬೆಯೊಂದು ಅನೇಕ ಕಾಗೆಗಳನ್ನು ಸಂಹರಿಸಿದ್ದನ್ನು
ಕಂಡ ಅಶ್ವತ್ಥಾಮನು ಪಾಂಡವರನ್ನು ಸಂಹರಿಸಲು ನಿರ್ಧರಿಸಿ,
ಆ ವಿಷಯವನ್ನು ಕೃಪ, ಕೃತವರ್ಮರಿಗೆ ತಿಳಿಸಿದನು.
ಸಂಜಯಃ
ತತಸ್ತೇ ಸಹಿತಾಃ ಸರ್ವೇ ಪ್ರಯಾತಾ ದಕ್ಷಿಣಾಮುಖಾಃ ।
ಉಪಾಸ್ತಮಯವೇಲಾಯಾಂ ಶಿಬಿರಾಭ್ಯಾಶಮಾಗತಾಃ ॥1॥
ಸಂಜಯ ಅನಂತರದಲ್ಲಿ ಅವರೆಲ್ಲರೂ ಕೂಡಿಕೊಂಡು ದಕ್ಷಿಣದಿಕ್ಕಿಗೆ  ಎದುರಾಗಿ ಸೂರ್ಯಾಸ್ತಮಯಸಂದರ್ಭದಲ್ಲಿ ಶಿಬಿರದ ಸಮೀಪಕ್ಕೆ ಆಗಮಿಸಿದರು.
ವಿಮುಚ್ಯ ವಾಹಾಂಸ್ತ್ವರಿತಾ ಭೀತಾಃ ಸಮನುಬೋಧನಾತ್ ।
ಗಹನಂ ದೇಶಮಾಗಮ್ಯ ಪ್ರಚ್ಛನ್ನಾ ನ್ಯವಿಶಂತ ತೇ ॥2॥
ವೇಗದಿಂದ ವಾಹನವನ್ನು ಬಿಟ್ಟು, ತಮ್ಮ ಇರುವಿಕೆಯು (ಶತ್ರುಗಳ) ಅರಿವಿಗೆ ಬಂದಲ್ಲಿ ಎಂಬ ಭಯದಿಂದ ಗುಟ್ಟಾದ ಸ್ಥಳಕ್ಕೆ ಆಗಮಿಸಿ ಅಡಗಿ ಕುಳಿತರು.
ಸೇನಾನಿವೇಶಮಭಿತೋ ನಾತಿದೂರಮವಸ್ಥಿತಾಃ ।
ನಿಕೃತ್ತಾ ನಿಶಿತೈಃ ಶಸ್ತ್ರೈಃ ಸಮಂತಾತ್ ಕ್ಷತವಿಕ್ಷತಾಃ ॥3॥
ದೀರ್ಘಮುಷ್ಣಂ ಚ ನಿಃಶ್ವಸ್ಯ ಪಾಂಡವಾನನ್ವಚಿಂತಯನ್ ॥4॥
ಸೇನೆಯ ಬೀಡಿನ ಸಮೀಪದಲ್ಲಿದ್ದ ಅವರು ಹರಿತವಾದ ಅಸ್ತ್ರಗಳ ಏಟಿನಿಂದ ಸಮಗ್ರದೇಹದಲ್ಲಿ ಗಾಯಗೊಂಡವರಾಗಿ, ದೀರ್ಘವಾದ ಬಿಸಿ ಉಸಿರನ್ನು ಬಿಡುವವರಾಗಿ ಪಾಂಡುಪುತ್ರರ ಬಗ್ಗೆ ಆಲೋಚಿಸಿದರು.
ಶ್ರುತ್ವಾ ಚ ನಿನದಂ ಘೋರಂ ಪಾಂಡವಾನಾಂ ಜಯೈಷಿಣಾಮ್ ।
ಅನುಸಾರಭಯಾದ್ ಭೀತಾಃ ಪ್ರಾಙ್ಮುಖಾಃ ಪ್ರಾದ್ರವನ್ ಭಯಾತ್ ॥5॥
ಜಯಾಕಾಂಕ್ಷಿಗಳಾದ ಪಾಂಡವರ ಸದ್ದನ್ನು ಕೇಳಿದ, ಭೀತರಾದ ಅವರು (ಪಾಂಡವರು ನಮ್ಮನ್ನು) ಅನುಸರಿಸಬಹುದು ಎಂಬ ಭಯದಿಂದ ಪೂರ್ವಕ್ಕೆ ಮುಖ ಮಾಡಿ ಓಡಿದರು.
ತೇ ಮುಹೂರ್ತಂ ತತೋ ಗತ್ವಾ ಶ್ರಾಂತಗಾತ್ರಾಃ ಪಿಪಾಸಿತಾಃ ।
ನಾದೃಶ್ಯಂತ ಮಹೇಷ್ವಾಸಾಃ ಕ್ರೋಧಾಮರ್ಷವಶಂಗತಾಃ ॥6॥
ಅನಂತರದಲ್ಲಿ ಕೋಪಾವೇಶಗಳಿಗೆ ಅಧೀನರಾದ, ಮಹಾಶೂರರಾದ ಅವರು ಸ್ವಲ್ಪಕಾಲ ಪರ್ಯಂತ ಹೋಗಿ (ಓಡಿ), ಆಯಾಸಗೊಂಡವರಾಗಿ, ಬಾಯಾರಿದವರಾಗಿ ಕಣ್ಣಿಗೆ ಕಾಣದಂತಾದರು.
ರಾಜ್ಞೋ ವಧೇನ ಸಂತಪ್ತಾ ಮುಹೂರ್ತಂ ಸಮವಸ್ಥಿತಾಃ ॥7॥

ರಾಜನ (ದುರ್ಯೋಧನನ) ಸಂಹಾರದಿಂದ ಅತಿಯಾಗಿ ಕೋಪಗೊಂಡಿದ್ದ ಅವರು ಸ್ವಲ್ಪಕಾಲ ಪರ್ಯಂತ ಮೌನವಾಗಿದ್ದರು.
ಧೃತರಾಷ್ಟ್ರಃ
ಅಶ್ರದ್ಧೇಯಮಿದಂ ಕರ್ಮ ಕೃತಂ ಭೀಮೇನ ಸಂಜಯ |
ಯತ್ರ ನಾಗಾಯುತಪ್ರಾಣಃ ಪುತ್ರೋ ಮಮ ನಿಪಾತಿತಃ ॥8॥
ಧೃತರಾಷ್ಟ್ರ `ಸಂಜಯ! ಹತ್ತು ಸಾವಿರ ಆನೆಯ ಬಲವನ್ನು ಹೊಂದಿದ ನನ್ನ ಪುತ್ರನು ಪತಿತನಾದನು, ಭೀಮನಿಂದ ಈ ಕರ್ಮವು ಮಾಡಲಾಯಿತು' ಎನ್ನುವುದು ನಂಬಿಕೆಗೆ ಬಾರದು.
ಅವಧ್ಯಃ ಸರ್ವಭೂತಾನಾಂ ವಜ್ರಸಂಹನನೋ ಯುವಾ |
ಪಾಂಡವೈಃ ಸಮರೇ ಪುತ್ರೋ ನಿಹತೋ ಮಮ ಸಂಜಯ ॥9॥
ಸಂಜಯ! ಯಾರಿಂದಲೂ ವಧಾರ್ಹನಲ್ಲದ, ವಜ್ರಕಾಯನಾದ, ಯುವಕನಾದ ನನ್ನ ಪುತ್ರನು ಪಾಂಡವರಿಂದ ಯುದ್ಧದಲ್ಲಿ ಹತನಾದ.
ನ ದಿಷ್ಟಮಪ್ಯತಿಕ್ರಾಂತುಂ ಶಕ್ಯಂ ಗಾವಲ್ಗಣೇ ನರೈಃ |
ಯತ್ ಸಮೇತ್ಯ ರಣೇ ಪಾರ್ಥೈಃ ಪುತ್ರೋ ಮಮ ನಿಪಾತಿತಃ ॥10॥
ಗವಲ್ಗನ ಪುತ್ರನೇ! ಮನುಷ್ಯರಿಂದ ಅದೃಷ್ಟವನ್ನು ಅತಿಕ್ರಮಿಸಲು ಶಕ್ಯವಿಲ್ಲ. ಅದೃಷ್ಟಶಾಲಿಯಾದ ಪೃಥೆಯ ಪುತ್ರರು ಯುದ್ಧದಲ್ಲಿ, ನನ್ನ ಪುತ್ರನನ್ನು ಕೆಡಹಿದರು.
ಅದ್ರಿಸಾರಮಯಂ ನೂನಂ ಹೃದಯಂ ಮಮ ಸಂಜಯ |
ಹತಂ ಪುತ್ರಶತಂ ಶ್ರುತ್ವಾ ಯನ್ನ ದೀರ್ಣಂ ಸಹಸ್ರಧಾ ॥11॥
ಸಂಜಯ! ನನ್ನ ಹೃದಯವು ನಿಶ್ಚಯವಾಗಿಯೂ ಉಕ್ಕಿನಿಂದಾದದ್ದು, `ನೂರು ಮಕ್ಕಳು ಹತರಾದರು' ಎನ್ನುವುದನ್ನು ಕೇಳಿಯೂ (ನನ್ನ ಹೃದಯವು) ಸಾವಿರ ಹೋಳಾಗಲಿಲ್ಲ.
ಕಥಂ ನು ವೃದ್ಧಮಿಥುನಂ ಹತಪುತ್ರಂ ಭವಿಷ್ಯತಿ |
ನ ಹ್ಯಹಂ ಪಾಂಡವೇಯಸ್ಯ ವಿಷಯೇ ವಸ್ತುಮುತ್ಸಹೇ ॥12॥
ಮಕ್ಕಳನ್ನು ಕಳೆದುಕೊಂಡ ಈ ಮುದಿಜೋಡಿಯ ಮುಂದಿನ ದಿನಗಳು ಹೇಗಿರುವನು? ನನಗೆ ಪಾಂಡವರ ಅಧೀನನಾಗಿ ಬಾಳಲು ಉತ್ಸಾಹವಿಲ್ಲ.
ಕಥಂ ರಾಜ್ಞಃ ಪಿತಾ ಭೂತ್ವಾ ಸ್ವಯಂ ರಾಜಾ ಚ ಸಂಜಯ |
ಪ್ರೇಷ್ಯಭೂತಃ ಪ್ರವರ್ತೇಯಂ ಪಾಂಡವೇಯಸ್ಯ ಶಾಸನಾತ್ ॥13॥
ಸಂಜಯ! ರಾಜನ ತಂದೆಯಾಗಿದ್ದ, ಸ್ವತಃ ರಾಜನೇ ಆಗಿದ್ದವನು, ಪಾಂಡುಪುತ್ರನ ಶಾಸನಕ್ಕೆ ಒಳಪಟ್ಟು ದಾಸನಾಗಿ ಹೇಗೆ ಬಾಳಲಿ?
ಪ್ರಭುಜ್ಯ ಪೃಥಿವೀಂ ಸರ್ವಾಂ ಸ್ಥಿತ್ವಾ ಮೂರ್ಧನಿ ಸಂಜಯ |
ಕಥಮದ್ಯ ಭವಿಷ್ಯಾಮಿ ಪ್ರೇಷ್ಯಭೂತಾಂ ದುರಂತಕೃತ್ ॥14॥
ಸಂಜಯ! ಸಮಗ್ರ ಭೂಮಿಯನ್ನು ಭೋಗಿಸಿ, (ಎಲ್ಲರ) ತಲೆಯ ಮೇಲೆ ಮೆರೆದು, ಈ ಅನರ್ಥಕ್ಕೆ ಕಾರಣನಾದ ನಾನು ದಾಸ್ಯಭಾವವನ್ನು ಹೊಂದಿ ಮುಂದೆ ಹೇಗೆ ಬಾಳಲಿ?
ಕಥಂ ಭೀಮಸ್ಯ ವಾಕ್ಯಾನಿ ಶ್ರೋತುಂ ಶಕ್ಷ್ಯಾಮಿ ಸಂಜಯ |
ಯೇನ ಪುತ್ರಶತಂ ಮಹ್ಯಮೇಕೇನ ನಿಹತಂ ಯುಧಿ ॥15॥
ಸಂಜಯ! ಯಾವ ಒಬ್ಬನೇ ಭೀಮನು ನನ್ನ ನೂರೂ ಮಕ್ಕಳನ್ನು ಯುದ್ಧದಲ್ಲಿ ಸಂಹರಿಸಿದನೋ ಆತನ ಮಾತುಗಳನ್ನು (ಮುಂದೆ) ಹೇಗೆ ಕೇಳಲಿ?
ಕೃತಂ ಸತ್ಯಂ ವಚಸ್ತಸ್ಯ ವಿದುರಸ್ಯ ಮಹಾತ್ಮನಃ |
ಅಕುರ್ವತಾ ವಚಸ್ತಸ್ಯ ಮಮ ಪುತ್ರೇಣ ಸಂಜಯ ॥16॥
ಸಂಜಯ! ಮಹಾತ್ಮನಾದ ಆ ವಿದುರನ ಮಾತನ್ನು ಅನುಸರಿಸದ ನನ್ನ ಪುತ್ರನು ಆತನ ಮಾತನ್ನು ಸತ್ಯಗೊಳಿಸಿದನು.
ಅಧರ್ಮೇಣ ಹತೇ ತಾತ ಪುತ್ರೇ ದುರ್ಯೋಧನೇ ಮಮ |
ಕೃತವರ್ಮಾ ಕೃಪೋ ದ್ರೌಣಿಃ ಕಿಮಕುರ್ವತ ಸಂಜಯ ॥17॥
ಅಪ್ಪ ಸಂಜಯ! ನನ್ನ ಪುತ್ರ ದುರ್ಯೋಧನನು ಅಧರ್ಮದಿಂದ ಸಂಹೃತನಾಗಲು, ಕೃತವರ್ಮ, ಕೃಪ, ದ್ರೋಣಪುತ್ರರು ಏನು ಮಾಡಿದರು?
ಸಂಜಯಃ
ಗತ್ವಾ ತು ತಾವಕಾ ರಾಜನ್ ನಾತಿದೂರಂ ಮನಸ್ವಿನಃ |
ಅಪಶ್ಯಂತ ವನಂ ಘೋರಂ ನಾನಾದ್ರುಮಲತಾಯುತಮ್ ॥18॥
ಸಂಜಯ ರಾಜನೆ! ಅಭಿಮಾನಿಗಳಾದ ನಿನ್ನವರು ಸ್ವಲ್ಪದೂರ ಸಾಗಿ, ನಾನಾ ಮರ, ಬಳ್ಳಿಗಳಿಂದ ಕೂಡಿದ ದಟ್ಟಡವಿಯನ್ನು ಕಂಡರು.
ತೇ ಮುಹೂರ್ತಂ ತು ವಿಶ್ರಮ್ಯ ಲಬ್ಧತೋಯೈರ್ಹಯೋತ್ತಮೈಃ |
ಸೂರ್ಯಾಸ್ತಮಯವೇಲಾಯಾಂ ಕೌರವೇಯಸ್ಯ ಶಾಸನಾತ್ ॥19॥
ನಾನಾಮೃಗಗಣಾಕೀರ್ಣಂ ನಾನಾಪಕ್ಷಿಸಮಾಕುಲಮ್ |
ನಾನಾದ್ರುಮಲತಾಚ್ಛನ್ನಂ ನಾನಾವ್ಯಾಲನಿಷೇವಿತಮ್ ॥20॥
ನಾನಾತೋಯಸಮಾಕೀರ್ಣೈಸ್ತಟಾಕೈರುಪಶೋಭಿತಮ್ |

ಪದ್ಮಿನೀಶತಸಂಛನ್ನಂ ನೀಲೋತ್ಪಲಸಮಾಕುಲಮ್ ॥21॥
ಪ್ರವಿಶ್ಯ ತದ್ವನಂ ಘೋರಂ ವೀಕ್ಷಮಾಣಾಃ ಸಮಂತತಃ।
ಶಾಖಾಸಹಸ್ರಸಂಛನ್ನಂ ನ್ಯಗ್ರೋಧಂ ದದೃಶುಸ್ತತಃ ॥22॥
ಉಪೇತ್ಯ ಚ ಮಹಾರಾಜ ನ್ಯಗ್ರೋಧಂ ತೇ ಮಹಾರಥಾಃ।
ದದೃಶುರ್ದ್ವಿಪದಾಂ ಶ್ರೇಷ್ಠಾಃ ಶ್ರೇಷ್ಠಂ ತಂ ವೈ ವನಸ್ಪತಿಮ್ ॥23॥
ಅವರು ಸ್ವಲ್ಪಹೊತ್ತು ವಿಶ್ರಾಂತಿಯನ್ನು ಹೊಂದಿ, ಶ್ರೇಷ್ಠಕುದುರೆಗಳೊಡನೆ ನೀರನ್ನು ಕುಡಿದು, ಕೌರವನ ಆಜ್ಞೆಯಂತೆ, ಸೂರ್ಯನು ಕಂತುವ ವೇಳೆಯಲ್ಲಿ, ನಾನಾವಿಧ ಪ್ರಾಣಿಸಮೂಹದಿಂದ ಕೂಡಿದ, ನಾನಾವಿಧಪಕ್ಷಿಸಮೂಹದಿಂದ ಕೂಡಿದ, ನಾನಾವಿಧ ಮರ, ಬಳ್ಳಿಗಳಿಂದ ಆವೃತವಾದ, ನಾನಾವಿಧ ವಿಷಜಂತುಗಳಿಂದ ಯುಕ್ತವಾದ, ನಾನಾವಿಧವಾದ ಜಲಾಶಯಗಳಿಂದ  ನೂರಾರು ಪದ್ಮಗಳಿಂದ ಆವೃತವಾದ, ಕನ್ನೈದಲೆಗಳಿಂದ ಕೂಡಿರುವ ಕೆರೆಕಟ್ಟೆಗಳಿಂದ ಯುಕ್ತವಾದ ದಟ್ಟಾರಣ್ಯವನ್ನು ಪ್ರವೇಶಿಸಿ, ಸುತ್ತಲೂ ಗಮನಿಸುವವರಾದರು, ಅನಂತರದಲ್ಲಿ ಸಾವಿರಾರು ಕವಲು ಕೊಂಬೆಗಳಿಂದ ಕೂಡಿದ ಆಲದ ಮರವನ್ನು ಕಂಡರು.
ತೇಽವತೀರ್ಯ ರಥೋಪಸ್ಥಾದ್ ವಿಪ್ರಮುಚ್ಯ ತು ವಾಜಿನಃ।
ಉಪಸ್ಪೃಶ್ಯ ಯಥಾನ್ಯಾಯಂ ಸಂಧ್ಯಾಮನ್ವಾಸತ ಪ್ರಭೋ ॥24॥
ಪ್ರಭುವೇ! ಅವರು ರಥದಿಂದ ಕೆಳಗಿಳಿದು, ಹೂಡಿದ ಕುದುರೆಗಳನ್ನು ಬಿಚ್ಚಿ, ನೀರನ್ನು ಸ್ಪರ್ಶಿಸಿ, ಯಥಾಕಾಲದಲ್ಲಿ  ಸಂಧ್ಯೆಯನ್ನು ಆಚರಿಸಿದರು.
ತತೋಽಸ್ತಂ ಪರ್ವತಶ್ರೇಷ್ಠಮನುಪ್ರಾಪ್ತೇ ದಿವಾಕರೇ।
ಸರ್ವಸ್ಯ ಜಗತೋ ಧಾತ್ರೀ ಶರ್ವರೀ ಪ್ರತ್ಯಪದ್ಯತ ॥25॥
ಅನಂತರದಲ್ಲಿ ಸೂರ್ಯನು ಶ್ರೇಷ್ಠವಾದ ಅಸ್ತಾಚಲವನ್ನು ಹೊಂದಲು, ಸಮಸ್ತ ಜಗಕೆ ಆಶ್ರಯಳಾದ ರಾತ್ರಿದೇವಿಯು ಆವರಿಸಿದಳು.
ಗ್ರಹನಕ್ಷತ್ರತಾರಾಭಿಃ ಪ್ರಕೀರ್ಣಾಭಿರಲಂಕೃತಮ್।
ನಭೋಂಶುಕಮಿವಾಭಾತಿ ಪ್ರೇಕ್ಷಣೀಯಂ ಸಮಂತತಃ ॥26॥
ಸುತ್ತಲೂ ಹರಡಿರುವ ಗ್ರಹ-ನಕ್ಷತ್ರ-ತಾರೆಗಳಿಂದ ಸುತ್ತಲೂ ಅಲಂಕೃತವಾದ ಆಕಾಶಮಂಡಲವು ಸುಂದರವಾಗಿ ಚಿತ್ರಿತವಾದ ವಸ್ತ್ರದಂತೆ ಶೋಭಿಸಿತು.
ಇಚ್ಛಯಾ ತೇ ಪ್ರವಲ್ಗಂತಿ ಸತ್ತ್ವಾ ಯೇ ರಾತ್ರಿಚಾರಿಣಃ।
ದಿವಾಚರಾಶ್ಚ ಯೇ ಸತ್ತ್ವಾಸ್ತೇ ನಿದ್ರಾವಶಮಾಗತಾಃ ॥27॥
ರಾತ್ರಿಕಾಲದಲ್ಲಿ ಸಂಚರಿಸುವ ಯಾವ ಪ್ರಾಣಿಗಳಿವೆಯೋ, ಅವು ಸ್ವೇಚ್ಛೆಯಿಂದ ಸಂಚರಿಸಲು ಆರಂಭಿಸಿದವು, ಹಗಲು ಸಂಚರಿಸುವ ಯಾವ ಪ್ರಾಣಿಗಳಿವೆಯೋ, ಅವು ನಿದ್ರಾವಶವಾದವು.
ರಾತ್ರಿಂಚರಾಣಾಂ ಸತ್ತ್ವಾನಾಂ ನಿನಾದೋಽಭೂತ್ ಸುದಾರುಣಃ।
ಕ್ರವ್ಯಾದಾಶ್ಚ ಪ್ರಮುದಿತಾ ಪ್ರಾಪ್ತಾ ಘೋರಾ ಚ ಶರ್ವರೀ ॥28॥
ಕತ್ತಲೆಯು ಕವಿಯಲು ರಾತ್ರಿ ಸಂಚರಿಸುವ ಪ್ರಾಣಿಗಳ ದಾರುಣಶಬ್ದವು ಆರಂಭವಾಯಿತು. ಮಾಂಸಭಕ್ಷಕಗಳು ಸಂತಸಗೊಂಡವು, ಕವಿಯಿತು ಘೋರ ಕತ್ತಲೆ.
ತಸ್ಮಿನ್ ರಾತ್ರಿಮುಖೇ ಘೋರೇ ದುಃಖಶೋಕಸಮನ್ವಿತಾಃ।
ಕೃತವರ್ಮಾ ಕೃಪೋ ದ್ರೌಣಿರುಪೋಪವಿವಿಶುಃ ಸಮಮ್ ॥29॥
ಆ ಘೋರ ರಾತ್ರಿಯಲ್ಲಿ ದುಃಖ-ಶೋಕಗಳಿಂದ ಕೂಡಿದ ಕೃತವರ್ಮ, ಕೃಪ ಮತ್ತು ಅಶ್ವತ್ಥಾಮರು ಒಂದೇ ಸಾಲಿನಲ್ಲಿ ಕೂತರು.
ಉಪೋಪವಿಷ್ಟಾಃ ಶೋಚಂತೋ ನ್ಯಗ್ರೋಧಸ್ಯ ಸಮೀಪತಃ।
ತಮೇವಾರ್ಥಮತಿಕ್ರಾಂತಂ ಕುರುಪಾಂಡವಯೋಃ ಕ್ಷಯಮ್ ॥30॥
ನಿದ್ರಯಾ ಚ ಪರೀತಾಂಗಾ ನಿಷೇದುರ್ಧರಣೀತಳೇ ॥31॥
ಶ್ರಮೇಣ ಸುದೃಢಂ ಯುಕ್ತಾ ವಿಕ್ಷತಾ ವಿವಿಧೈಃ ಶರೈಃ ॥32॥
ಸಂದುಹೋದ ಕುರು-ಪಾಂಡವರ ನಾಶದ ವಿಷಯದಲ್ಲಿ ದುಃಖಿಸುತ್ತಾ, ಆಲದಮರದ ಸಮೀಪದಲ್ಲಿ ಕುಳಿತಿದ್ದ, ಅನೇಕ ವಿಧವಾದ ಬಾಣಗಳಿಂದ ಘಾಸಿಗೊಂಡ, ತುಂಬ ಶ್ರಮದಿಂದ ಬಳಲಿದ, ಅವರು ನಿದ್ರೆಯಿಂದ ಆವೃತವಾದ ಅವಯವಗಳುಳ್ಳವರಾಗಿ ನೆಲದಲ್ಲಿ ಕುಳಿತರು.
ತತೋ ನಿದ್ರಾವಶಂ ಪ್ರಾಪ್ತೌ ಕೃಪಭೋಜೌ ಮಹಾಬಲೌ।
ಸುಖೋಚಿತಾವದುಃಖಾರ್ಹೌ ನಿಷಣ್ಣೌ ಧರಣೀತಳೇ ॥33॥
ಅನಂತರದಲ್ಲಿ ಸುಖವನ್ನು ಭೋಗಿಸಲು ಯೋಗ್ಯರಾದ, ಮಹಾಬಲಶಾಲಿಗಳಾದ, ಕೃಪ ಮತ್ತು ಕೃತವರ್ಮರು ಭೂಮಿಯಲ್ಲಿ ಕುಳಿತುಕೊಂಡೆ ನಿದ್ರಾವಶರಾದರು.
ತೌ ತು ಸುಪ್ತೌ ಮಹಾರಾಜ ತಸ್ಮಿನ್ ದೇಶೇ ಮಹಾರಥೌ।
ಮಹಾರ್ಹಶಯನೋಪೇತೌ ಭೂಮಾವೇವ ಹ್ಯನಾಥವತ್ ॥34॥
ಮಹಾರಾಜ! ಮಹಾರಥಿಕರಾದ, ಬಹುಬೆಲೆಬಾಳುವ ಶಯನದಲ್ಲಿ ಮಲಗಲು ಯೋಗ್ಯರಾದ ಅವರಿಬ್ಬರು ಆ ದೇಶದಲ್ಲಿ ಭೂಮಿಯಲ್ಲೇ ಅನಾಥರಂತೆ ಮಲಗಿದರು.
ಕ್ರೋಧಾಮರ್ಷವಶಂ ಪ್ರಾಪ್ತೋ ದ್ರೋಣಪುತ್ರಸ್ತು ಭಾರತ।
ನೈವ ಸ್ಮ ಸ ಜಗಾಮಾಥ ನಿದ್ರಾಂ ಸರ್ಪ ಇವ ಶ್ವಸನ್ ॥35॥
ಭರತಕುಲೋತ್ಪನ್ನನೆ! ಕೋಪ ಮತ್ತು ಅಮರ್ಷಗಳ ಅಧೀನನಾದ ದ್ರೋಣಪುತ್ರನಾದರೋ ನಿಟ್ಟುಸಿರನ್ನು ಬಿಡುವ ಸರ್ಪದಂತೆ

ನಿದ್ರೆಯನ್ನು ಹೊಂದಲಿಲ್ಲ.
ನಾಲಭತ್ ಸ ತು ನಿದ್ರಾಂ ವೈ ದಹ್ಯಮಾನೋಽತಿಮನ್ಯುನಾ |
ವೀಕ್ಷಾಂಚಕ್ರೇ ಮಹಾಬಾಹುಸ್ತದ್ವನಂ ಘೋರದರ್ಶನಮ್ ॥36॥
ನೀಳಬಾಹುವಾದ ಆತನು (ಅಶ್ವತ್ಥಾಮನು) ಅತಿ ಕ್ರೋಧದಿಂದ ಪರಿತಪಿಸುವವನಾಗಿ ನಿದ್ರೆಯನ್ನು ಹೊಂದಲೇ ಇಲ್ಲ, ಘೋರ ದೃಶ್ಯದಿಂದ ಕೂಡಿದ ವನವನ್ನು ಪರಿಶೀಲಿಸಿದನು.
ವೀಕ್ಷಮಾಣೋ ವನೋದ್ದೇಶಂ ನಾನಾಸತ್ತ್ವೈರ್ನಿಷೇವಿತಮ್ |
ಅಪಶ್ಯತ ಮಹಾಬಾಹುರ್ನ್ಯಗ್ರೋಧಂ ವಾಯಸಾನ್ವಿತಮ್ ॥37॥
ನಾನಾಪ್ರಾಣಿಗಳಿಂದ ಕೂಡಿದ ಕಾಡನ್ನು ಪರಿಶೀಲಿಸುತ್ತಿದ್ದ ನೀಳಬಾಹುವಾದ ಅಶ್ವತ್ಥಾಮನು ಕಾಗೆಗಳಿಂದ ಕೂಡಿದ ಆಲದ ಮರವನ್ನು ಗಮನಿಸಿದನು.
ತತ್ರ ಕಾಕಸಹಸ್ರಾಣಿ ತಾಂ ನಿಶಾಂ ಪರ್ಯಣಾಮಯನ್ |
ಸುಖಂ ಸ್ವಪಂತಃ ಕೌರವ್ಯ ಪೃಥಕ್ಪೃಥಗಪಾಶ್ರಯಾಃ ॥38॥
ಕುರುಕುಲೋತ್ಪನ್ನನೇ! ಅಲ್ಲಿ ಸಾವಿರಾರು ಕಾಗೆಗಳು ಆ ರಾತ್ರಿಯನ್ನು ಕಳೆಯುತ್ತಾ, ಪ್ರತ್ಯೇಕ ಪ್ರತ್ಯೇಕವಾಗಿ ಸುಖವಾಗಿ ಮಲಗಿದ್ದವು.
ಸುಪ್ತೇಷು ತೇಷು ಕಾಕೇಷು ವಿಸ್ರಬ್ಧೇಷು ಸಮಂತತಃ |
ಅಪಶ್ಯತ್ ಸಹಸಾ ಯಾಂತಮುಲೂಕಂ ಘೋರದರ್ಶನಮ್ ॥39॥
ಮಹಾಸ್ವನಂ ಮಹಾಕಾಯಂ ಹರ್ಯಕ್ಷಂ ಬಭ್ರುಪಿಂಗಲಮ್ |
ಸದೀರ್ಘಘೋಣನಖರಂ ಸುಪರ್ಣಮಿವ ವೇಗಿನಮ್ ॥40॥
ಸುತ್ತಲೂ ನಿರ್ಭಯದಿಂದ ಆ ಕಾಗೆಗಳು ಮಲಗಿರಲು, ನೋಡಲು ಭಯಂಕರವಾದ ಗರುಡನಂತೆ ವೇಗವನ್ನು ಹೊಂದಿದ ಭಾರೀ ಶಬ್ದವನ್ನು ಮಾಡುವ, ದೊಡ್ಡದೇಹವನ್ನು ಹೊಂದಿದ, ಹಳದಿ ಬಣ್ಣದ ಕಣ್ಣುಗಳನ್ನು ಹೊಂದಿದ, ಬೂದು ಮತ್ತು ಹಳದೀ ಮೈಬಣ್ಣವನ್ನು ಹೊಂದಿದ, ಉದ್ದನೆಯ ಕೊಕ್ಕು, ಉಗುರುಗಳನ್ನು ಹೊಂದಿರುವ ರಭಸದಿಂದ ಬಂದ ಗೂಬೆಯನ್ನು ಕಂಡನು.
ಸೋಽಥ ಶಬ್ದಂ ಮೃದುಂ ಕೃತ್ವಾ ಲೀಯಮಾನ ಇವಾಂಡಜಃ |
ನ್ಯಗ್ರೋಧಸ್ಯ ತತಃ ಶಾಖಾಂ ಪಾತಯಾಮಾಸ ಭಾರತ ॥41॥
ಭರತಕುಲೋತ್ಪನ್ನನೇ! ಅನಂತರದಲ್ಲಿ ಆ ಪಕ್ಷಿಯು ಮೆಲ್ಲನೆ ಶಬ್ದವನ್ನು ಮಾಡುತ್ತಾ, ಅಡಗಿದಂತೆ ಕುಳಿತು, ಅನಂತರದಲ್ಲಿ ಆಲದ ಮರದ ಕೊಂಬೆಯನ್ನು ಕೆಡವಿತು.
ಸನ್ನಿಪತ್ಯ ತು ಶಾಖಾಯಾಂ ನ್ಯಗ್ರೋಧಸ್ಯ ವಿಹಂಗಮಃ |
ಸುಪ್ತಾನ್ ಜಘಾನ ಸುಬಹೂನ್ ವಾಯಸಾನ್ ವಾಯಸಾಂತಕಃ ॥42॥
ಕಾಗೆಗಳ ನಾಶಕವಾದ ಆ ಹಕ್ಕಿಯು ಆಲದ ಮರದ ಕೊಂಬೆಯನ್ನು ಆಶ್ರಯಿಸಿ, ಮಲಗಿದ ಅನೇಕ ಕಾಗೆಗಳನ್ನು ಸಂಹರಿಸಿತು.
ಕೇಷಾಂಚಿದಚ್ಛಿನತ್ ಪಕ್ಷಾನ್ ಶಿರಾಂಸಿ ನಿಚಕರ್ತ ಹ |
ಚರಣಾಂಶ್ಚೈವ ಕೇಷಾಂಚಿದ್ ಬಭಂಜ ಚರಣಾಯುಧಃ ॥43॥
ಕಾಲೇ ಆಯುಧವಾದ ಆ ಗೂಬೆಯು, ಕೆಲವು ಕಾಗೆಗಳ ರೆಕ್ಕೆಯನ್ನು ತುಂಡರಿಸಿತು, ಮತ್ತೆ ಕೆಲವು ಕಾಗೆಗಳ ತಲೆಯನ್ನು ಕತ್ತರಿಸಿತು, ಮತ್ತೆ ಕೆಲವು ಕಾಗೆಗಳ ಕಾಲನ್ನು ತುಂಡರಿಸಿತು.
ಕ್ಷಣೇನಾಘ್ನತ್ ಸ ಬಲವಾನ್ ಯೇಽಸ್ಯ ದೃಷ್ಟಿಪಥೇ ಸ್ಥಿತಾಃ ॥44॥
ಆ ಬಲಿಷ್ಠವಾದ ಗೂಬೆಯು ಕ್ಷಣದಲ್ಲಿ ತನ್ನ ಕಾಣಿಗೆ ಎಷ್ಟು (ಕಾಗೆಗಳು) ಕಂಡವೋ ಅಷ್ಟನ್ನೂ ಸಂಹರಿಸಿತು.
ತೇಷಾಂ ಶರೀರಾವಯವೈಃ ಶರೀರೈಶ್ಚ ವಿಶಾಂಪತೇ |
ನ್ಯಗ್ರೋಧಮಂಡಲಂ ಸರ್ವಂ ಸಂಛನ್ನಂ ಸರ್ವತೋಽಭವತ್ ॥45॥
ರಾಜರ ಸ್ವಾಮಿಯೇ! ಆಲದ ಮರದ ಪೂರ್ಣ ಪರಿಸರವು ಆ ಕಾಗೆಗಳ ಅವಯವಗಳಿಂದ, ದೇಹಗಳಿಂದ ಆವೃತವಾಯಿತು.
ತಾಂಸ್ತು ಹತ್ವಾ ತತಃ ಕಾಕಾನ್ ಕೌಶಿಕೋ ಮುದಿತೋಽಭವತ್ |
ಪ್ರತಿಕೃತ್ಯ ಯಥಾಕಾಮಂ ಶತ್ರೂಣಾಂ ಶತ್ರುಸೂದನಃ ॥46॥
ಶತ್ರುನಾಶಕವಾದ ಆ ಕೌಶಿಕವು (ಗೂಬೆಯು) ಆ ಕಾಗೆಗಳನ್ನು ಸಂಹರಿಸಿ, ತನ್ನ ಇಚ್ಛಾನುಸಾರವಾಗಿ (ತನ್ನ) ಶತ್ರುಗಳಿಗೆ ಪ್ರತೀಕಾರವನ್ನು ಮಾಡಿ, ಅನಂತರದಲ್ಲಿ ಸಂತೋಷಗೊಂಡಿತು.
ತದ್ ದೃಷ್ಟ್ವಾ ತಾದೃಶಂ ಕರ್ಮ ಕೌಶಿಕೇನ ಕೃತಂ ನಿಶಿ |
ತದ್ಭಾವಕೃತಸಂಕಲ್ಪೋ ದ್ರೌಣಿರೇಕೋ ವ್ಯಚಿಂತಯತ್ ॥47॥
ರಾತ್ರಿಯಲ್ಲಿ ಕೌಶಿಕ ಹಕ್ಕಿಯಿಂದ ಮಾಡಿದ ಅಂತಹ ಕರ್ಮವನ್ನು ಕಂಡ ದ್ರೋಣಪುತ್ರನು ಅದರಂತೆ ಮಾಡಬೇಕು ಎಂದು ಸಂಕಲ್ಪಿಸಿ, ಒಬ್ಬನೇ ಚಿಂತಿಸಿದನು.
ದ್ರೌಣಿಃ
ಉಪದೇಶಃ ಕೃತೋಽನೇನ ಪಕ್ಷಿಣಾ ಮಮ ಸಂಯುಗೇ |
ಶತ್ರೂಣಾಂ ಕ್ಷಪಣೇ ಯುಕ್ತಃ ಪ್ರಾಪ್ತಕಾಲಶ್ಚ ಮೇ ಮತಃ ॥48॥
ಅಶ್ವತ್ಥಾಮ ನನಗೆ ಯುದ್ಧದ ವಿಷಯದಲ್ಲಿ ಈ ಪಕ್ಷಿಯು ಉಪದೇಶಿಸಿತು. ಶತ್ರುಗಳನ್ನು ನಾಶಪಡಿಸಲು ನನಗೆ ಇದೇ ಸೂಕ್ತ ಸಮಯ ಎಂದು ನನ್ನ ಅಭಿಪ್ರಾಯ.
ನಾದ್ಯ ಶಕ್ಯಾ ಮಯಾ ಹಂತುಂ ಪಾಂಡವಾ ಜಿತಕಾಶಿನಃ |
ಬಲವಂತಃ ಕೃತೋತ್ಸಾಹಾ ಲಬ್ಧಲಕ್ಷಾಃ ಪ್ರಹಾರಿಣಃ ॥49॥

ವಿಜಯದಿಂದ ಪ್ರಕಾಶಿಸುತ್ತಿರುವ ಬಲಿಷ್ಟರಾದ ಉತ್ಸಾಹಶಾಲಿಗಳಾದ ಸಿದ್ಧಗುರಿಗಾರರಾದ ಪ್ರಹಾರಕುಶಲರಾದ ಪಾಂಡವರನ್ನು ಸಂಹರಿಸಲು ಈಗ ನನ್ನಿಂದ ಸಾಧ್ಯವಿಲ್ಲ.
ರಾಜ್ಞಃ ಸಕಾಶೇ ತೇಷಾಂ ಚ ಪ್ರತಿಜ್ಞಾತೋ ವಧೋ ಮಯಾ ॥50॥
ರಾಜನ ಬಳಿ ಅವರನ್ನು ಸಂಹರಿಸುವುದಾಗಿ ನಾನು ಪ್ರತಿಜ್ಞೆಯನ್ನು ಮಾಡಿರುವೆ.
ಪತಂಗಾಗ್ನಿಸಮಾಂ ವೃತ್ತಿಮಾಸ್ಥಾಯಾತ್ಮವಿನಾಶಿನೀಮ್ |
ನ್ಯಾಯತೋ ಯುಧ್ಯಮಾನಸ್ಯ ಪ್ರಾಣತ್ಯಾಗೋ ನ ಸಂಶಯಃ ॥51॥
ಪಾಂಡವರೊಡನೆ ನ್ಯಾಯದಿಂದ ಯುದ್ಧವನ್ನಾಚರಿಸಿದಲ್ಲಿ, ಆತ್ಮನಾಶಕವಾದ ಪತಂಗಾಗ್ನಿ ಚರ್ಯೆಯನ್ನು ಅನುಸರಿಸಿದಂತಾಗುವುದು (ದೀಪದ ಚಿಟ್ಟೆಯು ಬೆಂಕಿಯನ್ನು ಹಣ್ಣು ಎಂದು ತಿಳಿದು ಬೆಂಕಿಯಲ್ಲಿ ಸ್ವತಃ ಬಿದ್ದು ಪ್ರಾಣವನ್ನು ಕಳೆದುಕೊಳ್ಳುವುದು), ನನಗೆ ಸಾವು ನಿಶ್ಚಯ.
ಛದ್ಮನಾ ತು ಭವೇತ್ ಸಿದ್ಧಿಃ ಶತ್ರೂಣಾಂ ಚ ಕ್ಷಯೋ ಮಹಾನ್ ॥52॥
ಶತ್ರುಗಳ ನಾಶವೆಂಬ ದೊಡ್ಡಸಿದ್ಧಿಯು ಕಪಟದಿಂದ ಸಿದ್ಧಿಸೀತು.
ತತ್ರ ಸಂಶಯಿತಾದರ್ಥಾದ್ ಯಸ್ತು ನಿಃಸಂಶಯೋ ಭವೇತ್ |
ತಂ ಜನಾ ಬಹುಮನ್ಯಂತೇ ಯೇಽರ್ಥಶಾಸ್ತ್ರವಿಶಾರದಾಃ ॥53॥
ಯಾರು ವ್ಯವಹರಣೀಯ ಶಾಸ್ತ್ರದಲ್ಲಿ ಪರಿಣಿತರೋ ಆ ಜನರು, ಫಲಸಿದ್ಧಿಯ ಸಂದೇಹದ ಮಾರ್ಗಕ್ಕಿಂತ ನಿಶ್ಚಿತಮಾರ್ಗವನ್ನೇ ಆದರಿಸುವರು.
ಯಚ್ಚಾಪ್ಯತ್ರ ಭವೇತ್ ವಾಚ್ಯಂ ಗರ್ಹಿತಂ ಲೋಕನಿಂದಿತಮ್ |
ಕರ್ತವ್ಯಂ ತನ್ಮನುಷ್ಯೇಣ ಕ್ಷತ್ರಧರ್ಮೇಣ ವರ್ತತಾ ॥54॥
ಯಾವುದು ಲೋಕನಿಂದಿತವಾಗಿದೆ ಎಂದು ಹೇಳುವರೋ ಹೇಯವಾಗಿದೆಯೋ ಅದನ್ನು ಕ್ಷತ್ರಧರ್ಮದಲ್ಲಿ ಇರುವ ಮನುಜನು ಆಚರಿಸಬೇಕಾಗುವುದು.
ನಿಂದಿತಾನಿ ಚ ಕರ್ಮಾಣಿ ಕುತ್ಸಿತಾನಿ ಪದೇ ಪದೇ |
ಸೋಪಧಾನಿ ಕೃತಾನ್ಯೇವ ಪಾಂಡವೈರಕೃತಾತ್ಮಭಿಃ ॥55॥
ನ್ಯಾಯಬಾಹಿರರಾದ ಪಾಂಡುಪುತ್ರರು, ಮತ್ತೆ ಮತ್ತೆ ನಿಂದಿತವಾದ ಹೇಯವಾದ ಕೃತ್ಯಗಳನ್ನು ಕಪಟದಿಂದ ಮಾಡಿರುವರಷ್ಟೆ?
ಅಸ್ಮಿನ್ನರ್ಥೇ ಪುರಾ ಗೀತಾಃ ಶ್ರೂಯಂತೇ ಧರ್ಮವಿತ್ತಮೈಃ |
ಶ್ಲೋಕಾ ನ್ಯಾಯಮವೇಕ್ಷದ್ಭಿಃ ತತ್ತತ್ವಾರ್ಥಾಸ್ತತ್ತ್ವದರ್ಶಿಭಿಃ ॥56॥
ಧರ್ಮಜ್ಞರು ತತ್ವಗಳನ್ನು ಕಂಡವರು ನ್ಯಾಯದೃಷ್ಟಿಯುಳ್ಳವರು ಈ ವಿಷಯದಲ್ಲಿ ಹೇಳಿದ ತತ್ವಾರ್ಥವನ್ನು ತಿಳಿಸುವ ಶ್ಲೋಕಗಳು ಶ್ರುತವಾಗಿವೆ.
ಪರಿಶ್ರಾಂತೇ ವಿಕೀರ್ಣೇ ಚ ಭುಂಜನೇ ವಾಽಪಿ ಶತ್ರುಭಿಃ |
ಪ್ರಸ್ಥಾನೇ ಚ ಪ್ರವೇಶೇ ಚ ಪ್ರಹರ್ತವ್ಯಂ ರಿಪೋರ್ಬಲಮ್ ॥57॥
ನಿದ್ರಾರ್ಥಮರ್ಧರಾತ್ರೇ ಚ ತಥಾ ನಷ್ಟಪ್ರಣಾಯಕಮ್ |
ಭಿನ್ನಯೋಧಬಲಂ ಯಚ್ಚ ದ್ವೈಧೀಭೂತಂ ತು ಯದ್ಭವೇತ್ ॥58॥
ಶತ್ರು ಬಲವು ಆಯಾಸಗೊಂಡಾಗ, ಚದುರಿದಾಗ, ಊಟಮಾಡುತ್ತಿರುವಾಗ, ಹೊರಡಲು ಉದ್ಯುಕ್ತವಾದಾಗ, ಪ್ರವೇಶಿಸಲು ಹವಣಿಸುತ್ತಿರುವಾಗ, ಮಧ್ಯರಾತ್ರಿಯಲ್ಲಿ ನಿದ್ರಾವಶವಾದಾಗ, ಹಾಗೆಯೇ ನಾಯಕನನ್ನು ಕಳೆದುಕೊಂಡಾಗ, ಯಾವಾಗ ಮುಖ್ಯಯೋಧನು ಸಾವನ್ನು ಅಪ್ಪಿರುವಾಗ, ಯೋಧರಲ್ಲಿ ಭಿನ್ನಾಭಿಪ್ರಾಯವು ಮೂಡಿದಾಗ (ಶತ್ರುಗಳನ್ನು) ಸದೆಬಡಿಯಬೇಕು.
ಸಂಜಯಃ
ಇತ್ಯೇವಂ ನಿಶ್ಚಯಂ ಕೃತ್ವಾ ಸುಪ್ತಾನಾಂ ನಿಶಿ ಮಾರಣೇ |
ಪಾಂಡೂನಾಂ ಸಹ ಪಾಂಚಾಲ್ಯೈರ್ದ್ರೋಣಪುತ್ರಃ ಪ್ರತಾಪವಾನ್ ॥59॥
ಸ ಕ್ರೂರಾಂ ಮತಿಮಾಸ್ಥಾಯ ವಿನಿಶ್ಚಿತ್ಯ ಪುನಃ ಪುನಃ |
ಸುಪ್ತೌ ಪ್ರಾಬೋಧಯತ್ತೌ ತು ಮಾತುಲಂ ಭೋಜಮೇವ ಚ ॥60॥
ಸಂಜಯ ಪ್ರತಾಪಶಾಲಿಯಾದ ದ್ರೋಣಪುತ್ರನು ಪಾಂಚಾಲರಿಂದ ಒಡಗೂಡಿ ಮಲಗಿರುವ ಪಾಂಡುಪುತ್ರರನ್ನು ರಾತ್ರಿಯಲ್ಲೇ ಸಂಹರಿಸಲು ನಿಶ್ಚಯಿಸಿ, ಆತನು ಕ್ರೂರ ಬುದ್ಧಿಯನ್ನಾಶ್ರಯಿಸಿ, ಪುನಃ ಪುನಃ ನಿಶ್ಚಯಮಾಡಿಕೊಂಡು, ಮಲಗಿದ ಆ ಈರ್ವರನ್ನು ಸೋದರಮಾವ ಮತ್ತು ಭೋಜಕುಲೋತ್ಪನ್ನನನ್ನು ಎಚ್ಚರಿಸಿದನು.
ತೌ ಪ್ರಬುದ್ಧೌ ಮಹಾತ್ಮಾನೌ ಕೃಪಭೋಜೌ ಮಹಾಬಲೌ |
ನೋತ್ತರಂ ಪ್ರತಿಪದ್ಯೇತಾಂ ತತ್ರ ಯುಕ್ತಂ ಹ್ರಿಯಾ ವೃತೌ ॥61॥
ಮಹಾಬಲಿಷ್ಟರಾದ ಮಹಾತ್ಮರಾದ ಎಚ್ಚರಗೊಂಡ ಆ ಈರ್ವರು ಕೃಪ ಭೋಜರು, ಮುಂದೆ ಏನು ಮಾಡಬೇಕು ಎಂಬುವುದನ್ನು ತಿಳಿಯದೆ ನಾಚಿಕೆಗೆ ಒಳಗಾದರು.
ಮುಹೂರ್ತಮಿವ ಸ ಧ್ಯಾತ್ವಾ ತಾವುಭೌ ವಾಕ್ಯಮಬ್ರವೀತ್ ॥62॥
ಸ್ವಲ್ಪಹೊತ್ತಿನ ಪರ್ಯಂತ ಚಿಂತಿಸಿದ ಆತನು (ಅಶ್ವತ್ಥಾಮನು) ಅವರೀರ್ವರನ್ನು ಉದ್ದೇಶಿಸಿ ಈ ಮಾತನ್ನು ನುಡಿದನು.
ಅಶ್ವತ್ಥಾಮಾ
ಹತೋ ದುರ್ಯೋಧನೋ ರಾಜಾ ಏಕವೀರೋ ಮಹಾಬಲಃ |
ಯಸ್ಯಾರ್ಥೇ ವೈರಮಾಸಕ್ತಮಸ್ಮಾಭಿಃ ಪಾಂಡವೈಃ ಸಹ ॥63॥

ಅಶ್ವತ್ಥಾಮ ಯಾರಿಗಾಗಿ ನಾವು ಪಾಂಡವರೊಡನೆ ದ್ವೇಷವನ್ನು ಹೊಂದಿದೆವೋ, ಆ ಮಹಾಬಲಿ, ಶೂರರಲ್ಲಿ ಮುಖ್ಯನು ರಾಜ ದುರ್ಯೋಧನನು ಮತನಾದನು.
ಏಕಾಕೀ ಬಹುಭಿಃ ಕ್ಷುದ್ರೈರಾಹವೇ ಶುದ್ಧವಿಕ್ರಮಃ |
ಪಾತಿತೋ ಭೀಮಸೇನೇನ ಏಕಾದಶಚಮೂಪತಿಃ ॥64॥
ಯುದ್ಧದಲ್ಲಿ ಅನೇಕ ಕ್ಷುದ್ರರಿಂದ ಸುತ್ತುವರೆಯಲ್ಪಟ್ಟ ಶುದ್ಧವಿಕ್ರಮಶಾಲಿಯಾದ ಒಬ್ಬಂಟಿಗನಾದ ಹನ್ನೊಂದು ಅಕ್ಷೋಹಿಣೀ ಸೇನಾನಾಯಕನಾದ ದುರ್ಯೋಧನನು ಭೀಮನಿಂದ ಪತಿತನಾದನು.
ವೃಕೋದರೇಣ ಕ್ಷುದ್ರೇಣ ಸುನೃಶಂಸಮಿದಂ ಕೃತಮ್ |
ಮೂರ್ಧಾಭಿಷಿಕ್ತಸ್ಯ ಶಿರಃ ಪಾದೇನ ಪರಿಮರ್ದಿತಮ್ ॥65॥
ಮೂರ್ಧಾಭಿಷಿಕ್ತನಾದ ದುರ್ಯೋಧನನ ತಲೆಯನ್ನು ಕ್ಷುದ್ರನಾದ ಭೀಮಸೇನನು ಕಾಲಿನಿಂದ ತುಳಿದನು, ಇದು ಅತ್ಯಂತ ಹೇಯವಾದ ಕೃತ್ಯ.
ನರ್ದಂತಿ ಸ್ಮ ಚ ಪಾಂಚಾಲಾಃ ಕ್ಷ್ವೇಲಂತಿ ಚ ಹಸಂತಿ ಚ |
ದಧ್ಮುಃ ಶಂಖಾಂಶ್ಚ ಶತಶೋ ಹೃಷ್ಟಾ ಘ್ನಂತಿ ಚ ದುಂದುಭೀನ್ ॥66॥
(ಆಗ) ಪಾಂಚಾಲರು ಕುಣಿಯುತ್ತಿದ್ದರು, ಅಟ್ಟಹಾಸಗೈದರು, ಗಹಗಹಿಸಿ ನಕ್ಕರು, ಶಂಖಗಳನ್ನು ಊದಿದರು ಮತ್ತು ಸಂತಸಗೊಂಡು ನೂರಾರು ಭೇರಿಗಳನ್ನು ಬಾರಿಸಿದರು.
ವಾದಿತ್ರಘೋಷಸ್ತುಮುಲೋ ವಿಮಿಶ್ರಃ ಶಂಖನಿಃಸ್ವನೈಃ |
ಅನಿಲೇನೇರಿತೋ ಘೋರೋ ದಿಶಃ ಪೂರಯತೀವ ಹಿ ॥67॥
ಗಾಳಿಯಿಂದ ಒಯ್ಯಲ್ಪಟ್ಟ ಭಯಂಕರವಾದ ವಾದ್ಯಗಳ ಘೋರ ಶಬ್ದವು ಶಂಖಧ್ವನಿಯಿಂದ ಕೂಡಿದ್ದಾಗಿ ದಿಗಂತವನ್ನು ಮುಟ್ಟಿತು.
ಅಶ್ವಾನಾಂ ಹೇಷಮಾಣಾನಾಂ ಗಜಾನಾಂ ಚೈವ ಬೃಂಹತಾಮ್ |
ಸಿಂಹನಾದಶ್ಚ ಶೂರಾಣಾಂ ಶ್ರೂಯತೇ ಸುಮಹಾನಯಮ್ ॥68॥
ಕುದುರೆಗಳ ಕೆನೆಯುವಿಕೆ, ಆನೆಗಳ ಘೀಳಿಡುವಿಕೆ, ಶೂರರ ಸಿಂಹನಾದ ಈ ಭಾರೀ ಶಬ್ದಗಳು ಕೇಳಿಸಿದವು.
ದಿಶಂ ಪ್ರತೀಚೀಮಾಶ್ರಿತ್ಯ ಹೃಷ್ಟಾನಾಂ ಗರ್ಜಿತಂ ಬಹು ॥69॥
ಪಶಿಮದಿಕ್ಕನ್ನು ಉದ್ದೇಶಿಸಿ ಸಂತಸಗೊಂಡ ಅವರು ಬಹುವಾಗಿ ಗರ್ಜಿಸಿದರು.
ರಥನೇಮಿಸ್ವನಾಶ್ಚೈವ ಶ್ರೂಯಂತೇ ರೋಮಹರ್ಷಣಾಃ ॥70॥
ರೋಮಾಂಚಕಗಳಾದ ರಥಚಕ್ರದ ಗುಂಭದ ಸದ್ದುಗಳು ಕೇಳುತ್ತಿವೆ.
ಪಾಂಡವೈರ್ಧಾರ್ತರಾಷ್ಟ್ರಾಣಾಂ ಯದಿದಂ ದುಷ್ಕೃತಂ ಕೃತಮ್ |
ವಯಮೇವ ತ್ರಯಃ ಶಿಷ್ಟಾ ಯಸ್ಮಿನ್ ಮಹತಿ ವೈಶಸೇ ॥71॥
ಪಾಂಡುಪುತ್ರರು ಕೌರವರನ್ನು ಉದ್ದೇಶಿಸಿ ಯಾವ ಈ ದುಷ್ಟತನವನ್ನು ಎಸಗಿದರೋ ಈ ಭಾರೀ ಯುದ್ಧದಲ್ಲಿ ನಾವು ಮೂವರು ಮಾತ್ರ ಉಳಿದೆವು.
ಕೇಚಿನ್ನಾಗಶತಪ್ರಾಣಾಃ ಕೇಚಿತ್ ಸರ್ವಾಸ್ತ್ರಕೋವಿದಾಃ |
ನಿಹತಾಃ ಪಾಂಡವೈರಸ್ಮಾನ್ ಮನ್ಯೇ ಕಾಲಸ್ಯ ಪರ್ಯಯಮ್ ॥72॥
ನಮ್ಮಲ್ಲಿ ಕೆಲವರು ಹತ್ತು ಸಾವಿರ ಆನೆಯ ಬಲದವರು, ಮತ್ತೆ ಕೆಲವರು ಸಕಲ ಅಸ್ತ್ರಗಳನ್ನು ಬಲ್ಲವರಾಗಿದ್ದರು, ಆದರೂ ಎಲ್ಲರೂ ಪಾಂಡವರಿಂದ ಮೃತರಾದರು, ಕಾಲವು (ಎಲ್ಲವನ್ನು) ಬುಡಮೇಲು ಮಾಡಿತು ಎಂದು ಭಾವಿಸುವೆನು.
ಏವಮೇತೇನ ಭಾವ್ಯಂ ಹಿ ನೂನಂ ಕಾರ್ಯೇಣ ತತ್ತ್ವತಃ |
ಯಥಾ ಯಸ್ಯೇದೃಶೀ ನಿಷ್ಠಾ ಕೃತೇ ಯತ್ನೇಽಪಿ ದುಷ್ಕರೇ ॥73॥
(ನಾವು) ದುಷ್ಕರವಾದ ಕಾರ್ಯಗಳನ್ನು ಯತ್ನಪೂರ್ವಕವಾಗಿ ಮಾಡಿದರೂ ಫಲವು ಎಂತಹ ಘೋರವಾಗಿ ಪರಿಣಮಿಸಿತು, ವಿಧಿಯು ಹೀಗೆಯೇ ಆಗಬೇಕೆಂದು ನಿಶ್ಚಯಿಸಿತ್ತು ಎಂದು ತೋರುವುದು.
ಭವತೋಸ್ತು ಯದಿ ಪ್ರಜ್ಞಾ ನ ಮೋಹಾದಪಚೀಯತೇ |
ವ್ಯಸನೇಽಸ್ಮಿನ್ ಮಹತ್ಯರ್ಥೇ ಶ್ರೇಯೋ ಯನ್ನಸ್ತದುಚ್ಯತಾಮ್ ॥74॥
ನಿಮ್ಮ ತಿಳುವಳಿಕೆಯು ಮೋಹದಿಂದ ಒಂದು ವೇಳೆ ಹಾನಿಗೊಂಡಿಲ್ಲವೆಂದಾದಲ್ಲಿ, ಭಾರೀ ಅನರ್ಥದ ಈ ಸಂದರ್ಭದಲ್ಲಿ ಶ್ರೇಯಸ್ಸು ಯಾವುದರಿಂದ ಎನ್ನುವುದನ್ನು ತಿಳಿಹೇಳಿರಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ಅಶ್ವತ್ಥಾಮ್ನಃ ಕೌಶಿಕದರ್ಶನಚಿಂತಾ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಒಂದನೆಯ ಅಧ್ಯಾಯವು ಸಮಾಪ್ತವಾಯಿತು.
* * * * *
ಎರಡನೆಯ ಅಧ್ಯಾಯ
ಕೃಪರಿಂದ ಅಶ್ವತ್ಥಾಮನಿಗೆ ಕರ್ತವ್ಯಕರ್ಮದ ಉಪದೇಶ.
ಕೃಪಃ
ಶ್ರುತಂ ತೇ ವಚನಂ ಸರ್ವಂ ಹೇತುಯುಕ್ತಂ ಮಯಾ ವಿಭೋ |
ಮಮಾಪಿ ತು ವಚಃ ಕಿಂಚಿತ್ ಶೃಣುಷ್ವ ಚ ಮಹಾಭುಜ ॥1॥
ಕೃಪಾಚಾರ್ಯರು ನೀಳಬಾಹುವೆ, ಪ್ರಭು! ಯುಕ್ತಿಯುಕ್ತವಾದ ನಿನ್ನ ಎಲ್ಲ ಮಾತನ್ನು ನಾನು ಕೇಳಿರುವೆ. ಸ್ವಲ್ಪ ನನ್ನ ಮಾತನ್ನೂ

ಆಲಿಸು.
ಆರಂಭಾ ಮಾನುಷಾಃ ಸರ್ವೇ ನಿಬದ್ಧಾಃ ಕರ್ಮಣೋರ್ದ್ವಯೋಃ |
ದೈವೇ ಪುರುಷಕಾರೇ ಚ ಪರಂ ತಾಭ್ಯಾಂ ನ ವಿದ್ಯತೇ ||2||
ಎಲ್ಲ ಮನುಷ್ಯರೂ ಅದೃಷ್ಟ ಮತ್ತು ಮನುಷ್ಯಪ್ರಯತ್ನ ಎಂಬ ಎರಡು ಕರ್ಮಗಳಿಂದ ನಿಬದ್ಧರಾಗಿರುವರು. ಇವೆರಡಿಲ್ಲದೆ ಬೇರೆ ಯಾವುದೂ (ಕಾರ್ಯಸಾಧಕವಾದದ್ದು) ಇಲ್ಲ.
ನ ಹಿ ದೈವೇನ ಸಿದ್ಧ್ಯಂತಿ ಕಾರ್ಯಾಣ್ಯೇಕೇನ ಸತ್ತಮ |
ನ ಚಾಪಿ ಕರ್ಮಣೈಕೇನ ದ್ವಾಭ್ಯಾಂ ಸಿದ್ಧ್ಯಂತಿ ಯೋಗತಃ ||3||
ಸಜ್ಜನನೆ! ಕೇವಲ ಅದೃಷ್ಟ ಒಂದರಿಂದಲೇ ಕಾರ್ಯಗಳು ಸಿದ್ಧವಾಗವು, ಹಾಗೆಯೇ ಕೇವಲ ಮನುಷ್ಯ ಪ್ರಯತ್ನ ಒಂದರಿಂದಲೇ ಸಿದ್ಧಿಯು ಆಗದು. ಈ ಎರಡರ ಯೋಗದಿಂದಲೇ ಸಿದ್ಧಿಸುವವು.
ಆಭ್ಯಾಮುಭಾಭ್ಯಾಂ ಸರ್ವಾರ್ಥಾ ನಿಬದ್ಧಾ ಹ್ಯಧಮೋತ್ತಮಾಃ |
ಪ್ರವೃತ್ತಾಶ್ಚೈವ ದೃಶ್ಯಂತೇ ನಿವೃತ್ತಾಶ್ಚೈವ ಸರ್ವಶಃ ||4||
ನಿಶ್ಚಯವಾಗಿಯೂ ಈ ಎರಡರಿಂದಲೇ ಎಲ್ಲ ಸಣ್ಣ ಪುಟ್ಟಕಾರ್ಯಗಳು ನಿಬದ್ಧವಾಗಿವೆ. ಎಲ್ಲ ಪ್ರವೃತ್ತ ಕರ್ಮಗಳು, ನಿವೃತ್ತಕರ್ಮಗಳು (ಇವೆರಡರಿಂದಲೇ ನಿಯಂತ್ರಿತವಾದದ್ದು) ಕಂಡಿವೆ.
ಪರ್ಜನ್ಯಃ ಪರ್ವತೇ ವರ್ಷನ್ ಕಿಂ ನು ಸಾಧಯತೇ ಫಲಮ್ |
ಕೃಷ್ಟೇ ಕ್ಷೇತ್ರೇ ಚಾಪ್ಯವರ್ಷನ್ ಕಿಂ ನು ಸಾಧಯತೇ ಫಲಮ್ ||5||
ಮಳೆಯು ಬೆಟ್ಟದಲ್ಲಿ ಬೀಳಲು ಏನು ಸಾಧನೆಯಾಗುವುದು? ವ್ಯವಸಾಯವನ್ನು ಮಾಡಿಯೂ ಸಹ ಮಳೆ ಬೀಳದ ಪಕ್ಷದಲ್ಲಿ ಯಾವ ಫಲವನ್ನು ಸಾಧಿಸಲಾದೀತು?
ಉತ್ಥಾನಂ ಚಾಪಿ ಸರ್ವಸ್ಯ ಅನುತ್ಥಾನಂ ಚ ದೈವತಮ್ |
ವ್ಯರ್ಥಂ ಭವತಿ ಸರ್ವತ್ರ ಪೂರ್ವಸ್ತತ್ರ ವಿನಿಶ್ಚಯಃ ||6||
ಎಲ್ಲ ಕರ್ಮಗಳ ಸಿದ್ಧಿ ಮತ್ತು ಅಸಿದ್ಧಿಗಳನ್ನು ದೇವತೆಗಳೇ ನಿಶ್ಚಯಿಸಿರುತ್ತಾರೆ. ಎಲ್ಲೆಡೆಯೂ ಮೊದಲೆಯದು (ಮನುಷ್ಯಪ್ರಯತ್ನವಿದ್ದೂ ದೈವದ ಬಲವಿಲ್ಲದ ಪಕ್ಷದಲ್ಲಿ) ಸಿದ್ಧಿಸದು ಎನ್ನುವ ಪಕ್ಷವು ನಿಶ್ಚಿತವಾಗಿದೆ.
ಸುಕೃಷ್ಟೇ ಚ ಯಥಾ ಕ್ಷೇತ್ರೇ ಸಮ್ಯಗ್ದೈವೇ ಚ ವರ್ಷತಿ |
ಬೀಜಂ ಮಹಾಗುಣಂ ಭೂಯಾತ್ ತಥಾ ಸಿದ್ಧಿಶ್ಚ ಮಾನುಷೀ ||7||
ಹೇಗೆ ಅದೃಷ್ಟವು ಚೆನ್ನಾಗಿದ್ದಲ್ಲಿ ಕೃಷಿಮಾಡಿದ ಭೂಮಿಯಲ್ಲಿ ಮಳೆ ಬೀಳುವುದೋ, (ಬಿತ್ತಿದ) ಬೀಜವು ಮಹಾಗುಣವನ್ನು ಹೊಂದುವುದೋ, ಹಾಗೆಯೇ ಮನುಷ್ಯನ ಸಿದ್ಧಿಗಳೂ ಸಹ.
ತಯೋರ್ದೈವಂ ಹಿ ನಿಶ್ಚಿತ್ಯ ಸ್ವವಶೇನೈವ ವರ್ತತೇ |
ಪ್ರಾಜ್ಞಾಃ ಪುರುಷಕಾರೇಣ ವರ್ತಂತೇ ದೈವಮಾಸ್ಥಿತಾಃ ||8||
ದೈವವು ತಾನು ಸ್ವತಂತ್ರವಾಗಿ ಅನುಗ್ರಹಿಸದೆ, ಮನುಷ್ಯಪ್ರಯತ್ನ ಮತ್ತು ಅದೃಷ್ಟಗಳ ಅನುಗುಣವಾಗಿ ಅನುಗ್ರಹಿಸುವುದು. ಜ್ಞಾನಿಗಳು ದೈವವನ್ನು ನಂಬಿ ಮನುಷ್ಯಪ್ರಯತ್ನದಲ್ಲಿರುವರು.
ತಾಭ್ಯಾಂ ಸರ್ವೇಽಪಿ ಕಾರ್ಯಾರ್ಥಾ ಮನುಷ್ಯಾಣಾಂ ನರರ್ಷಭ |
ವಿಚೇಷ್ಟಂತಃ ಪ್ರದೃಶ್ಯಂತೇ ನಿವೃತ್ತಾಶ್ಚ ತಥೈವ ತು ||9||
ಪುರುಷಶ್ರೇಷ್ಠನೆ! ಮನುಜರ ಎಲ್ಲ ಕಾರ್ಯಗಳು ಇವೆರಡರಿಂದ (ಅದೃಷ್ಟ ಮತ್ತು ಮನುಷ್ಯಪ್ರಯತ್ನಗಳಿಂದ) ಸಿದ್ಧಿಸಿದ್ದೂ ಹಾಗೆಯೇ ಅಸಿದ್ಧವಾದದ್ದೂ ಕಂಡಿವೆ.
ಕೃತಃ ಪುರುಷಕಾರೋ ಹಿ ಸೋ ಹಿ ದೈವೇನ ಸಿದ್ಧ್ಯತಿ |
ತಥಾಽಸ್ಯ ಕರ್ಮಣಃ ಕರ್ತುರಭಿನಿರ್ವರ್ತತೇ ಫಲಮ್ ||10||
ಪ್ರಯತ್ನಶೀಲನಾದ ಮನುಷ್ಯನು ಅದೃಷ್ಟದಿಂದ ಸಿದ್ಧಿಯನ್ನು ಹೊಂದುವನು. ಹಾಗೆಯೇ ದೈವೇಚ್ಛಾನುಸಾರವಾಗಿ ಪ್ರಯತ್ನಿಸಿದಲ್ಲಿ ಫಲವು ಸಿದ್ಧಿಸುವುದು.
ಉತ್ಥಾನಂ ಹಿ ಮನುಷ್ಯಾಣಾಂ ದಕ್ಷಾಣಾಂ ದೈವವರ್ಜಿತಮ್ |
ಅಫಲಂ ದೃಶ್ಯತೇ ಲೋಕೇ ಸಮ್ಯಗಭ್ಯುಪಪಾದಿತಮ್ ||11||
ದಕ್ಷರಾದ ಮನುಷ್ಯರು ಅದೃಷ್ಟಹೀನರಾಗಿದ್ದಲ್ಲಿ, ಪ್ರಯತ್ನಶೀಲರಾಗಿದ್ದರೂ ವಿಫಲರಾಗಿರುವುದು ಈ ಲೋಕದಲ್ಲಿ ಕಂಡಿದೆ. ( ಈ ವಿಚಾರವನ್ನು ನಾನು) ಚೆನ್ನಾಗಿ ಉಪಪಾದಿಸಿರುವೆ.
ತತ್ರಾಲಸಾ ಮನುಷ್ಯಾಣಾಂ ಯೇ ಭವಂತ್ಯಮನಸ್ವಿನಃ |
ಉತ್ಥಾನಂ ತೇ ಹಿ ಗರ್ಹಂತೇ ಪ್ರಾಜ್ಞಾನಾಂ ತನ್ನ ರೋಚತೇ ||12||
ಮನುಷ್ಯರಲ್ಲಿ ಯಾರು (ಕಾರ್ಯದಲ್ಲಿ) ಅಭಿಮಾನಹೀನರೋ, ಸೋಮಾರಿಗಳೋ ಅವರು ಪ್ರಯತ್ನವನ್ನೇ ನಿಂದಿಸುವುರು (ಕಾರ್ಯೋನ್ಮುಖ- ರಾಗುವುದಿಲ್ಲ), ಪ್ರಾಜ್ಞರು ಹಾಗೆ ಮಾಡರು.
ಪ್ರಾಯಶೋ ಹಿ ಕೃತಂ ಕರ್ಮ ನಾಫಲಂ ದೃಶ್ಯತೇ ಭುವಿ |
ಅಕೃತ್ವಾ ಚ ಪುನರ್ದುಃಖಂ ಕರ್ಮ ದೃಶ್ಯೇತ್ ಮಹತ್ಫಲಮ್ ||13||
ಪ್ರಾಯಶಃ ಪ್ರಯತ್ನ ಪೂರ್ವಕವಾಗಿ ಕರ್ಮವನ್ನು ಆಚರಿಸಿದಲ್ಲಿ ಭೂಮಿಯಲ್ಲಿ ಫಲಪ್ರಾಪ್ತಿಯು ಆಗದಿರುವುದು ಕಂಡಿಲ್ಲ. (ಸ್ವಲ್ಪ ವಿಳಂಬವಾಗಬಹುದು). ಪ್ರಯತ್ನವನ್ನೇ ಮಾಡದಿದ್ದಲ್ಲಿ ದುಃಖವು ಮರುಕಳಿಸುವುದು, ಪ್ರಯತ್ನಶೀಲನು ಮಹಾಫಲವನ್ನು ಹೊಂದಿರುವುದು ಕಂಡಿದೆ.

ಚೇಷ್ಟಾಮಕುರ್ವನ್ ಲಭತೇ ಯದಿ ಕಶ್ಚಿದ್ಯದೃಚ್ಛಯಾ |
ಯೋ ವಾ ನ ಲಭತೇ ಕೃತ್ವಾ ದುರ್ದರ್ಶೌ ತಾವುಭಾವಪಿ ॥14॥
ಒಂದು ವೇಳೆ ಪ್ರಯತ್ನಿಸದೇ ಅದೃಷ್ಟದಿಂದಲೇ ಪಲವನ್ನು ಹೊಂದಿದವನು, ಯಾರು ಪ್ರಯತ್ನಿಸಿಯೂ ಫಲವನ್ನು ಹೊಂದದವನು, ಈ ಎರಡಕ್ಕೂ ಕಾರಣವನ್ನು ತಿಳಿಯಲಾಗದು.
ವ್ಯಾಖ್ಯಾನ ವಿಶೇಷ ಮೇಲಿನ ಸಂದರ್ಭಗಳಲ್ಲಿ ಅವಿವೇಕಿಯಾದ ಮನುಜನು ಕಾರಣವನ್ನು ತಿಳಿಯದೇ ವ್ಯಥೆಗೆ ಒಳಗಾಗುವನು. ವಿವೇಕಿಯಾದ ಮನುಷ್ಯನು `ಪ್ರಯತ್ನಿಸದೇ ಪ್ರಾಪ್ತವಾದದ್ದು ಪ್ರಾಚೀನ ಕರ್ಮಾನುಸಾರಿಯಾದದ್ದು, ಪ್ರಯತ್ನಿಸಿಯೂ ಫಲಪ್ರಾಪ್ತವಾಗದಿರುವುದು, ಮುಂದಿನ ಜನ್ಮದಲ್ಲಿ ಫಲವು ಪ್ರಾಪ್ತವಾಗಲಿದೆ' ಎಂದು ತಿಳಿಯುವನು ಎಂದು ಭಾವ (ಲಕ್ಷ್ಮಾಲಂಕಾರ).
ಶಕ್ನೋತಿ ಜೀವಿತುಂ ದಕ್ಷೋ ನಾಲಸಃ ಸುಖಮೇಧತೇ |
ದೃಶ್ಯಂತೇ ಜೀವಲೋಕೇಽಸ್ಮಿನ್ ದಕ್ಷಾಃ ಪ್ರಾಯೋ ಹಿತೈಷಿಣಃ ॥15॥
ಪ್ರಯತ್ನಶೀಲನಾದವನು (ಸುಖದಿಂದ) ಬಾಳುವುದು ಶಕ್ಯವಾಗಿದೆ, ಸೋಮಾರಿಯು ಸುಖವನ್ನು ಹೊಂದಲಾರ. ಈ ಮನುಷ್ಯಪ್ರಪಂಚದಲ್ಲಿ ಪ್ರಾಯಶಃ ಪ್ರಯತ್ನಶೀಲರಾದ ಮನುಜರು ಹಿತವನ್ನು ಹೊಂದುವರು.
ಯದಿ ದಕ್ಷಃ ಸಮಾರಭ್ಯ ಕರ್ಮಣೋ ನಾಶ್ನುತೇ ಫಲಮ್ |
ನಾಸ್ಯ ವಾಚ್ಯಂ ಭವೇತ್ ಕಿಂಚಿತ್ ಸ್ಪರ್ಶಂ ಚಾಸ್ಯಾಧಿಗಚ್ಛತಿ ॥16॥
ಒಂದು ವೇಳೆ ಪ್ರಯತ್ನಶೀಲನು (ಸ್ವವಿಹಿತ) ಕರ್ಮವನ್ನು ಆರಂಭಿಸಿ, ಅದರ ಫಲವನ್ನು ಹೊಂದುವುದಿಲ್ಲವೋ ಆತನು (ಲೋಕದಲ್ಲಿ) ನಿಂದೆಗೆ ಒಳಗಾಗುವದಿಲ್ಲ, ಆದರೆ ಆತನಿಗೆ ಸ್ವಲ್ಪವೂ ಪಾಪದ ಲೇಪವಿಲ್ಲ. (ಸ್ವವಿಹಿತಕರ್ಮವನ್ನು ಫಲಾಪೇಕ್ಷೆಯಿಲ್ಲದೇ ಆಚರಿಸಿರುವನು, ಎಂದು ಭಾವ)
ಅಕೃತ್ವಾ ಕರ್ಮ ಯೋ ಲೋಕೇ ಫಲಂ ವಿಂದತಿ ಕರ್ಹಿಚಿತ್ |
ಸ ವೈ ವಕ್ತವ್ಯತಾಂ ಯಾತಿ ದ್ವೇಷ್ಯೋ ಭವತಿ ಪ್ರಾಯಶಃ ॥17॥
ಈ ಲೋಕದಲ್ಲಿ ಯಾವನು ಸ್ವವಿಹಿತವಾದ ನಿತ್ಯಾನಿತ್ಯಕರ್ಮವನ್ನು ಆಚರಿಸದೇ ತನ್ನ ವೃತ್ತಿಯಿಂದ ಲಾಭವನ್ನು ಪಡೆಯುವನೋ, ಆತನು ಲೋಕದಲ್ಲಿ ನಿಂದೆಗೆ ಒಳಗಾಗುವನು, ಪ್ರಾಯಶಃ ಎಲ್ಲರ ದ್ವೇಷಕ್ಕೆ ಪಾತ್ರನಾಗುವನು.
ಏವಮೇತದನಾದೃತ್ಯ ವರ್ತತೇ ಯಸ್ತ್ವತೋಽನ್ಯಥಾ |
ಸ ಕುರ್ಯಾದಾತ್ಮನೋಽನರ್ಥಾನ್ ಏಷ ಬುದ್ಧಿಮತಾಂ ನಯಃ ॥18॥
ಯಾವನು ಈ ರೀತಿಯಾದ ನಿಯಮವನ್ನು ಅನಾದರಿಸಿ, ಬೇರೆಯೇ ಹಾದಿಯಲ್ಲಿ ಸಾಗುವನೋ, ಆತನು ತನಗೆ ಅನಿಷ್ಟವನ್ನು ಮಾಡಿಕೊಂಡಂತೆ, ಇದು ಜ್ಞಾನಿಗಳ ನೀತಿ.
ಹೀನಃ ಪುರುಷಕಾರೇಣ ತಥಾ ದೈವೇನ ವಾ ಪುನಃ |
ಕಾರಣಾಭ್ಯಾಮಥೋಭಾಭ್ಯಾಮ್ ಉತ್ಥಾನಮಫಲಂ ಭವೇತ್ ॥19॥
ಸರಿಯಾದ ಪ್ರಯತ್ನವಿಲ್ಲದೆ, ಮತ್ತೆ ಅದೃಷ್ಟಹೀನನಾಗುವುದರಿಂದ, ಈ ಎರಡು ಕಾರಣಗಳಿಂದ ಮನುಷ್ಯನ ಕರ್ಮಗಳು ನಿಷ್ಫಲವಾಗುವವು.
ಹೀನಂ ಪುರುಷಕಾರೇಣ ಕರ್ಮ ತ್ವಿಹ ನ ಸಿದ್ಧ್ಯತಿ ॥20॥
ಪುರುಷಪ್ರಯತ್ನದಿಂದ ಹೀನನಾದವನು ಕರ್ಮದ ಫಲವನ್ನು ಹೊಂದಲಾರ.
ದೈವತೇಭ್ಯೋ ನಮಸ್ಕೃತ್ಯ ಯಸ್ತ್ವರ್ಥಾನ್ ಸಮ್ಯಗೀಹತೇ |
ದಕ್ಷೋ ದಾಕ್ಷಿಣ್ಯಸಂಪನ್ನೋ ನ ಸ ಮೋಘೈರ್ವಿಹನ್ಯತೇ ॥21॥
ದೇವತೆಗಳಿಗೆ ನಮಸ್ಕರಿಸಿ, ದಕ್ಷನಾದವನು, ದಾಕ್ಷಿಣ್ಯದಿಂದ ಕೂಡಿದ ಯಾವನು (ಕೆಟ್ಟ ಕೆಲಸವನ್ನು ಮಾಡಲು ಹೇಸುವವನು) ಸಿದ್ಧಿಗಾಗಿ ಸರಿಯಾಗಿ ಪ್ರಯತ್ನಿಸುವನೋ, ಆತನ ಯತ್ನವು ಎಂದೂ ವ್ಯರ್ಥವಾಗದು.
ಸಮ್ಯಗೀಹಾ ಪುನರಿಯಂ ಯೋ ವೃದ್ಧಾನುಪಸೇವತೇ |
ಆಪೃಚ್ಛತಿ ಚ ಯಚ್ಛ್ರೇಯಃ ಕರೋತಿ ಚ ಹಿತಂ ವಚಃ ॥22॥
ಮತ್ತೆ ಯಾವನು ಹಿರಿಯರನ್ನು ಸೇವಿಸಿರುವನೋ, ಶ್ರೇಯೋಮಾರ್ಗವನ್ನು ಹಿರಿಯರಲ್ಲಿ ಪ್ರಶ್ನಿಸಿ ತಿಳಿದುಕೊಳ್ಳುವನೊ, ಅವರ ಮಾತನ್ನು ಅನುಸರಿಸುವನೋ ಆತನು ಸರಿಯಾಗಿ ಪ್ರಯತ್ನಶೀಲನಾಗುವನು.
ಉತ್ಥಾಯೋತ್ಥಾಯ ಹಿ ಸದಾ ಪ್ರಷ್ಟವ್ಯಾ ವೃದ್ಧಸಮ್ಮತಾಃ |
ಯಸ್ಯ ಯೋಗೇ ಪರಂ ಮೂಲಂ ತನ್ಮೂಲಂ ಸಿದ್ಧಿರಿಷ್ಯತೇ ॥23॥
ಮತ್ತೆ ಮತ್ತೆ ನಿರಂತರ `ವೃದ್ಧರಿಗೆ ಸಂಮತವಾದದ್ದು ಯಾವುದು?' ಎಂದು ಪ್ರಶ್ನಿಸಬೇಕು. ವೃದ್ಧರ ಉಪದೇಶವೇ ಸಿದ್ಧಿಗೆ ಮೂಲ, ಅವರ ಉಪಾಯಗಳೇ ಸಿದ್ಧಿಗೆ ಮುಖ್ಯಕಾರಣ.
ವೃದ್ಧಾನಾಂ ವಚನಂ ಶ್ರುತ್ವಾ ಯೋ ಹ್ಯುತ್ಥಾನಂ ಪ್ರಯೋಜಯೇತ್ |
ಉತ್ಥಾನಸ್ಯ ಫಲಂ ಸಮ್ಯಕ್ ತದಾ ಸ ಲಭತೇಽಚಿರಾತ್ ॥24॥
ಯಾವನು ಹಿರಿಯರ ಮಾತನ್ನು ಕೇಳಿ, ಕರ್ಮಗಳನ್ನು ಅದರ ಅನುಸಾರವಾಗಿ ಆಚರಿಸುವನೋ, ಆತನು ಆಗ ಕರ್ಮದ ಸರಿಯಾದ ಫಲವನ್ನು ಶೀಘ್ರವಾಗಿ ಹೊಂದುವನು.
ರಾಗಾತ್ ಕ್ರೋಧಾದ್ ಭಯಾಲ್ಲೋಭಾದ್ ಯೋಽರ್ಥಾನೀಹೇತ ಮಾನವಃ|
ಅನೀಶಶ್ಚಾವಮಾನೀ ಚ ಸ ಶೀಘ್ರಂ ಭ್ರಶ್ಯತೇ ಶ್ರಿಯಃ ॥25॥
ಯಾವ ಮನುಷ್ಯನು ರಾಗದಿಂದಲೋ, ಕೋಪದಿಂದಲೋ, ಭಯದಿಂದಲೋ, ಲೋಭದಿಂದಲೋ ಅಭೀಷ್ಟವನ್ನು ಹೊಂದಲು ಬಯಸುವನೊ, ಆತನು (ಅದನ್ನು) ಹೊಂದದೇ ಅವಮಾನಕ್ಕೆ ಈಡಾಗುವನು ಮತ್ತು ಐಶ್ವರ್ಯದಿಂದ ಭ್ರಷ್ಟನಾಗುವನು.

ಸೋಽಯಂ ದುರ್ಯೋಧನೇನಾರ್ಥೋ ಲುಬ್ಧೇನಾದೀರ್ಘದರ್ಶಿನಾ |
ಅಸಮರ್ಥಃ ಸಮಾರಬ್ಧೋ ಮೂಢತ್ವಾದವಿಚಿಂತಿತಃ ॥26॥
ಲೋಭಿಯಾದ ದುರ್ಯೋಧನನು ಮುಂದಾಲೋಚನೆಯಿಲ್ಲದವನು. ಆ ಈ ಅಸಮರ್ಥನಾದ ದುರ್ಯೋಧನನು ಮೂರ್ಖನಾದ್ದರಿಂದ (ಯುಕ್ತಾಯುಕ್ತತೆಗಳನ್ನು) ವಿಚಾರಿಸದೆ ಕಾರ್ಯವನ್ನು (ಯುದ್ಧಕಾರ್ಯವನ್ನು) ಆರಂಭಿಸಿದನು.
ಹೀನಬುದ್ಧಿರನಾದೃತ್ಯ ಸಮ್ಮಂತ್ರ್ಯಾಸಾಧುಭಿಃ ಸಹ |
ವಾರ್ಯಮಾಣೋಽಕರೋದ್ ವೈರಂ ಪಾಂಡವೈರ್ಗುಣವತ್ತರೈಃ ॥27॥
ಬುದ್ಧಿಹೀನನಾದ ಆತನು ಮೂರ್ಖರ ಮಾತಿನಿಂದ (ತಿಳಿದವರ ಮಾತನ್ನು ಅನಾದರಿಸಿ), ತಿಳಿದವರು ತಡೆದರೂ ಗುಣವಂತರಾದ ಪಾಂಡುಪುತ್ರರೊಡನೆ ದ್ವೇಷವನ್ನು ಮಾಡಿದನು.
ಪೂರ್ವಮಪ್ಯತಿದುಃಶೀಲೋ ನ ದೈನ್ಯಂ ಕರ್ತುಮರ್ಹತಿ |
ತಾವತ್ಯರ್ಥೇ ವಿಪನ್ನೇ ಹಿ ಮಿತ್ರಾಣಾಂ ನ ಕೃತಂ ವಚಃ ॥28॥
ಹಿಂದೆಯೂ ಸಹ ದುಷ್ಟವರ್ತನೆಯವನು, (ಎಂದೂ) ಕಾರುಣ್ಯಕ್ಕೆ ಪಾತ್ರನಲ್ಲ, ಭಾರೀ ಅನರ್ಥವು ಒದಗಿದಾಗಲೂ ಸಹ ಹಿತೈಷಿಗಳ ಮಾತನ್ನೂ ಕೇಳುತ್ತಿರಲಿಲ್ಲ, (ಅದರಿಂದಲೇ ಇಂತಹ ಅನರ್ಥಕ್ಕೆ  ಪಾತ್ರನಾದನು).
ಅನುವರ್ತಾಮಹೇ ಯತ್ ತು ಭಜಂತಃ ಪಾಪಪೂರುಷಮ್ |
ಅಸ್ಮಾನಪ್ಯನಯಸ್ತಸ್ಮಾತ್ ಪ್ರಾಪ್ತೋಯಂ ದಾರುಣೋ ಮಹಾನ್ ॥29॥
(ಇಂತಹ) ಪಾಪಿಯನ್ನು ಆಶ್ರಯಿಸಿ, (ಆತನ ಹಾದಿಯನ್ನೇ) ಅನುಸರಿಸಿದೆವು. ನಮ್ಮನ್ನೂ (ಆತನು ಅನೀತಿಯ ಹಾದಿಗೆ) ಸೆಳದು ತಂದನು. ಆದ್ದರಿಂದಲೇ ಈ ಭಾರೀ ಭೀಕರ ಅವಸ್ಥೆಯನ್ನು ಹೊಂದಿದೆವು.
ಅನೇನ ತು ಮಮಾದ್ಯಾಪಿ ವ್ಯಸನೇನೋಪಪಾದಿತಾ |
ಬುದ್ಧಿಶ್ಚಿಂತಯತಃ ಕಿಂಚಿತ್ ಸ್ವಂ ಶ್ರೇಯೋ ನಾವಬುದ್ಧ್ಯತೇ ॥30॥
ಈಗಲೂ ಸಹ ಈ ವ್ಯಸನದಿಂದ ಪೀಡಿತನಾಗಿ, ಬುದ್ಧಿಯಿಂದ ಆಲೋಚಿಸಿದರೂ ಸಹ ನಮಗೆ ಶ್ರೇಯಃಕರವಾದದ್ದು ಯಾವುದು ಎಂದು ತಿಳಿಯದಾಗಿದೆ.
ಮುಹ್ಯತಾ ತು ಮನುಷ್ಯೇಣ ಪ್ರಷ್ಟವ್ಯಾಃ ಸುಹೃದೋ ಬುಧಾಃ |
ತತ್ರಾಸ್ಯ ಬುದ್ಧಿರ್ವಿನಯಸ್ತತ್ರ ಶ್ರೇಯಶ್ಚ ಪಶ್ಯತಿ ॥31॥
ಮೋಹಗೊಂಡ ಮನುಜನು ಸ್ನೇಹಿತರಲ್ಲಿ, ಜ್ಞಾನಿಗಳಲ್ಲಿ (ಸಮಸ್ಯೆಯ ಪರಿಹಾರೋಪಾಯಕ್ಕಾಗಿ) ಪ್ರಶ್ನಿಸಬೇಕು. ಆಗ ಬುದ್ಧಿಯು ಶುದ್ಧವಾಗುವುದು, ನೀತಿಯು ಪ್ರಾಪ್ತವಾಗುವುದು. ಆಗ ಶ್ರೇಯಸ್ಸನ್ನು ಹೊಂದುವನು.
ತತೋಽಸ್ಯ ಮೂಲಂ ಕಾರ್ಯಾಣಾಂ ಬುದ್ಧ್ಯಾ ನಿಶ್ಚಿತ್ಯ ವೈ ಬುಧಾಃ |
ತೇ ಸಂಸ್ಪೃಷ್ಟಾ ಯಥಾ ಬ್ರೂಯುಸ್ತತ್ ಕರ್ತವ್ಯಂ ತಥಾ ಭವೇತ್ ॥32॥
ಹೀಗೆ ಕೇಳಿದಾಗ ಅವರು ಕಾರ್ಯದ ಮೂಲವನ್ನು ಬುದ್ಧಿಯಿಂದ ವಿಮರ್ಶಿಸಿ, (ಹೀಗೆ ಮಾಡು ಎಂದು) ಹೇಳುವರು, (ಅವರು ಹೇಳಿದಂತೆ) ನಡೆದುಕೊಂಡಲ್ಲಿ ಕಾರ್ಯದ ಸಿದ್ಧಿಯು ಪ್ರಾಪ್ತವಾಗುವುದು.
ತೇ ವಯಂ ಧೃತರಾಷ್ಟ್ರಂ ಚ ಗಾಂಧಾರೀಂ ಚ ಯಶಸ್ವಿನೀಮ್ |
ಉಪಪೃಚ್ಛಾಮಹೇ ಗತ್ವಾ ವಿದುರಂ ಚ ಮಹಾಮತಿಮ್ ॥33॥
ಇಂತಹ ನಾವು ಕೀರ್ತಿವತಿಯಾದ ಗಾಂಧಾರಿ, ಧೃತರಾಷ್ಟ್ರ, ಮಹಾಜ್ಞಾನಿಯಾದ ವಿದುರ ಇವರಲ್ಲಿ  ಸಾಗಿ, ಚರ್ಚಿಸೋಣ.
ತೇ ಪೃಷ್ಟಾಸ್ತು ವದೇಯುರ್ಯತ್ ಶ್ರೇಯಸ್ಕರಮನಂತರಮ್ |
ತದಸ್ಮಾಭಿಃ ಪುನಃ ಕಾರ್ಯಮಿತಿ ಮೇ ನೈಷ್ಠಿಕೀ ಮತಿಃ ॥34॥
(ನಾವು) ಪ್ರಶ್ನಿಸಿದಲ್ಲಿ ಅವರು ಶ್ರೇಯಸ್ಕರವಾದದ್ದನ್ನು ತಿಳಿಸಿಯಾರು, ಅನಂತರದಲ್ಲಿ ನಾವು ಅದನ್ನು ಮಾಡುವುದು ಯುಕ್ತ ಎಂದು ನನ್ನ ನಿಶ್ಚಿತವಾದ ಬುದ್ಧಿ.
ಅನಾರಂಭಾತ್ತು ಕಾರ್ಯಾಣಾಂ ನಾರ್ಥಃ ಸಂಪದ್ಯತೇ ಕ್ವಚಿತ್ ॥35॥
ಕೃತಃ ಪುರುಷಕಾರಸ್ತು ಯೇಷು ಕಾರ್ಯಂ ನ ಸಿದ್ಧ್ಯತಿ |
ದೈವೇನೋಪಹತಾಸ್ತೇ ತು ನಾತ್ರ ಕಾರ್ಯಾ ವಿಚಾರಣಾ ॥36॥
ಕಾರ್ಯವನ್ನು ಆರಂಭಿಸದೇ ಎಲ್ಲೂ ಅರ್ಥದ ಸಿದ್ಧಿಯು ಇಲ್ಲ, ಪುರುಷಪ್ರಯತ್ನ ಮಾಡಿಯೂ ಯಾರು ಸಿದ್ಧಿಯನ್ನು ಹೊಂದುವುದಿಲ್ಲವೋ, ಅವರು ಅದೃಷ್ಟಹೀನರು, ಆಗ ಚರ್ಚೆಗೆ ಅವಕಾಶವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸೌಪ್ತಿಕಪರ್ವಣಿ ಕೃಪವಾಕ್ಯಂ ನಾಮ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಕೃಪರ ಮಾತನ್ನು ಕೇಳಿದ ಅಶ್ವತ್ಥಾಮನು ಕೃಪ-ಕೃತವರ್ಮರಿಗೆ ತನ್ನ ಅಭಿಪ್ರಾಯವನ್ನು ತಿಳಿಸಿದನು.
ಸಂಜಯಃ
ಕೃಪಸ್ಯ ವಚನಂ ಶ್ರುತ್ವಾ ಧರ್ಮಾರ್ಥಸಹಿತಂ ಹಿತಮ್ |
ಅಶ್ವತ್ಥಾಮಾ ಮಹಾರಾಜ ದುಃಖಶೋಕಸಮನ್ವಿತಃ ॥1॥

ಸಂಜಯ ಮಹಾರಾಜ! ಅಶ್ವತ್ಥಾಮನು ಹಿತಕರವಾದ, ಧರ್ಮಾರ್ಥಸಹಿತವಾದ ಕೃಪರ ಮಾತನ್ನು ಕೇಳಿ, ದುಃಖ-ಶೋಕಗಳಿಂದ ಕೂಡಿದವನಾದನು.
ದಹ್ಯಮಾನಶ್ಚ ಶೋಕೇನ ಪ್ರದೀಪ್ತೇನಾಗ್ನಿನಾ ಯಥಾ |
ಕ್ರೂರಂ ಮನಸ್ತಥಾ ಕೃತ್ವಾ ತಾವುಭೌ ಪ್ರತ್ಯಭಾಷತ ॥2॥
ಉರಿಯುವ ಬೆಂಕಿಯಿಂದ ದಹಿಸುವಂತೆ, ಶೋಕದಿಂದ ಪರಿತಪ್ತನಾದ ಅಶ್ವತ್ಥಾಮನು ಕ್ರೂರವಾದ ಮನವನ್ನು ಮಾಡಿ, ಆ ಈರ್ವರಿಗೆ (ಕೃಪ-ಕೃತವರ್ಮರಿಗೆ) ಉದ್ದೇಶಿಸಿ ಹೇಳಿದನು.
ದ್ರೌಣಿಃ
ಪುರುಷೇ ಪುರುಷೇ ಬುದ್ಧಿಃ ಸಾ ಸಾ ಭವತಿ ಶೋಭನಾ |
ತುಷ್ಯಂತಿ ಚ ಪೃಥಕ್ ಸರ್ವೇ ಪ್ರಜ್ಞಯಾ ತು ಸ್ವಯಾ ಸ್ವಯಾ ॥3॥
ಅಶ್ವತ್ಥಾಮ ಪ್ರತಿ ಮನುಷ್ಯರು ತಮ್ಮಲ್ಲಿಯ ಆ ಆ ಬುದ್ಧಿಯು ಮಂಗಳವೆಂದೇ ತಿಳಿಯುವರು. ತಮ್ಮ ತಮ್ಮ ಬುದ್ಧಿಯಿಂದ ಎಲ್ಲರೂ ಸಂತಸಗೊಳ್ಳುವರು.
ಸರ್ವೋ ಹಿ ಮನ್ಯತೇ ಲೋಕ ಆತ್ಮಾನಂ ಬುದ್ಧಿಮತ್ತರಮ್ |
ಸರ್ವಸ್ಯಾತ್ಮಾ ಬಹುಮತಃ ಸರ್ವೋ ತ್ಮಾನಂ ಪ್ರಶಂಸತಿ ॥4॥
ಎಲ್ಲರೂ ತಮ್ಮನ್ನು `ಅತಿಬುದ್ಧಿವಂತ' ಎಂದು ಭಾವಿಸುವರು. ಎಲ್ಲರೂ `ತಾನು ದೊಡ್ಡವ' ಎಂದೇ ಭಾವಿಸುವರು, (ಅಂತೆಯೇ) ಎಲ್ಲರೂ ತಮ್ಮನ್ನು ಪ್ರಶಂಸಿಸಿಕೊಳ್ಳುವರು.
ಸರ್ವಸ್ಯ ತು ಸ್ವಕಾ ಪ್ರಜ್ಞಾ ಸಾಧುವಾದೇ ಪ್ರತಿಷ್ಠಿತಾ |
ಪರಬುದ್ಧಿಂ ಚ ನಿಂದಂತಿ ಸ್ವಾಂ ಪ್ರಶಂಸಂತಿ ಚಾಸಕೃತ್ ॥5॥
ಎಲ್ಲರೂ ತಮ್ಮ ವಿಚಾರವು ಸರಿ ಮಾರ್ಗದಲ್ಲಿದೆ ಎಂದು ಭಾವಿಸುವರು, ಅನ್ಯರ ಬುದ್ಧಿಯನ್ನು ನಿಂದಿಸುವರು, ತಮ್ಮನ್ನು ಮತ್ತೆ ಮತ್ತೆ ಹೊಗಳಿಕೊಳ್ಳುವರು.
ಕಾರಣಾಂತರಯೋಗೇನ ಯೇಷಾಂ ಸಂವದತೇ ಮತಿಃ |
ತೇಽನ್ಯೋನ್ಯೇನ ಚ ತುಷ್ಯಂತಿ ಬಹುಮನ್ಯಂತಿ ಚಾಸಕೃತ್ ॥6॥
ಕಾರಣಾಂತರದಿಂದ ಯಾರ ವಿಚಾರವು (ಇನ್ನೊಬ್ಬರ ವಿಚಾರದಿಂದ) ತಾಳೆ ಹೊಂದುವುದೊ, ಅವರು ಪರಸ್ಪರವಾಗಿ ಪ್ರಶಂಸಿಸಿಕೊಳ್ಳುವರು, ಮತ್ತೆ ಮತ್ತೆ ಹೆಮ್ಮೆಪಟ್ಟುಕೊಳ್ಳುವರು.
ತಸ್ಯೈವ ತು ಮನುಷ್ಯಸ್ಯ ಸಾ ಸಾ ಬುದ್ಧಿಸ್ತಥಾ ತಥಾ |
ಕಾಲಯೋಗವಿಪರ್ಯಾಸಂ ಪ್ರಾಪ್ಯಾನ್ಯೋನ್ಯಂ ವಿಪದ್ಯತೇ ॥7॥
ಆ ಎಲ್ಲ ಮನುಜರ ಬುದ್ಧಿಯೂ ಹಾಗೆ ಹಾಗೆ ಇರುವುದು, ಕಾಲದ ಮಹಿಮೆಯಿಂದ ವಿರುದ್ಧವಾದಾಗ ಪರಸ್ಪರ ನಾಶವನ್ನು ಹೊಂದುವರು.
ವಿಚಿತ್ರತ್ವಾತ್ತು ಚಿತ್ತಾನಾಂ ಮನುಷ್ಯಾಣಾಂ ವಿಶೇಷತಃ |
ಚಿತ್ತವೈಕಲ್ಯಮಾಸಾದ್ಯ ಸಾ ಸಾ ಮತಿರಜಾಯತ ॥8॥
ವಿಶೇಷವಾಗಿ ಮನುಜರ ಚಿತ್ತವು ವಿಚಿತ್ರ, ಬುದ್ಧಿಕಲುಷಿತಗೊಂಡಾಗ ಆ ಆ ಬುದ್ಧಿಯು ಉಂಟಾಗುವುದು.
ಯಥಾ ಹಿ ವೈದ್ಯಃ ಕುಶಲೋ ವ್ಯಾಧಿಂ ಜ್ಞಾತ್ವಾ ಯಥಾವಿಧಿ |
ಭೇಷಜಂ ಕುರುತೇ ಯೋಗಾತ್ ಪ್ರಶಮಾರ್ಥಮಿಹಾಭಿಭೋ ॥9॥
ಮಾನ್ಯರೆ! ಹೇಗೆ ವೈದ್ಯನು ಬುದ್ಧಿವಂತನಾದಲ್ಲಿ ರೋಗವನ್ನು ತಿಳಿದು ಯೊಗ್ಯವಾದ ಔಷಧವನ್ನು ಮಾಡುವನೋ, ಅಗ ಅದೃಷ್ಟದಿಂದ ಅದು ಶಮನಕ್ಕೆ ಕಾರಣವಾಗುವುದು.
ಏವಂ ಕಾರ್ಯಸ್ಯ ಯೋಗಾರ್ಥಂ ಬುದ್ಧಿಂ ಕುರ್ವಂತಿ ಮಾನವಾಃ |
ಪ್ರಜ್ಞಯಾ ಚ ಸ್ವಯಾ ಯುಕ್ತ್ಯಾ ತಾಂ ಚ ಗೃಹ್ಣಂತಿ ವೈ ಬುಧಾಃ ॥10॥
ಇದೇ ರೀತಿಯಲ್ಲಿ ಕಾರ್ಯದ ಸಿದ್ಧಿಗಾಗಿ ಮನುಷ್ಯರು ವಿಚಾರವನ್ನು ಮಾಡುವರು, ಜ್ಞಾನಿಗಳು ತಮ್ಮ ಸ್ವಂತ ಬುದ್ಧಿಯಿಂದ, ಯುಕ್ತಿಯಿಂದ ಆ ಸಿದ್ಧಿಯನ್ನು ಹೊಂದುವರು.
ಅನ್ಯಥಾ ಯೌವನೇ ಬಾಲ್ಯೇ ಬುದ್ಧ್ಯಾ ಭವತಿ ಮೋಹಿತಃ |
ಮಧ್ಯೇಽನ್ಯಥಾ ಜರಾಯಾಂ ತು ಸೋಽನ್ಯಾಂ ರೋಚಯತೇ ಮತಿಮ್ ॥
ಮೋಹಿತನಾದ ಆತನಿಗೆ ಯೌವನಾವಸ್ಥೆಯಲ್ಲಿ (ಹೆಣ್ಣು, ಹಣ ಮುಂತಾದವು) ಬೇರೆಯದೇ ರುಚಿಸುವುದು, ಬಾಲ್ಯದಲ್ಲಿ (ತಿಳಿವಳಿಕೆಯಿಲ್ಲದೇ ಶ್ರೆಯೋ ಮಾರ್ಗದಿಂದ) ಬೇರೆಯದೇ ರುಚಿಸುವುದು, ಮಧ್ಯಾವಸ್ಥೆಯಲ್ಲಿ ಬೇರೆ, ಮುಪ್ಪಿನಲ್ಲಿ ಬೇರೇ ವಿಚಾರವೇ ರುಚಿಸುವುದು.
ವ್ಯಸನಂ ವಾ ಮಹಾಘೋರಂ ಸಮೃದ್ಧಿಂ ವಾಽಪಿ ತಾದೃಶೀಮ್ |
ಅವಾಪ್ಯ ಪುರುಷೋ ಭೋಜ ಕುರುತೇ ಬುದ್ಧಿವೈಕೃತಮ್ ॥12॥
ಭೋಜಕುಲಜನೆ! ಘೋರವಾದ ಅನರ್ಥವನ್ನಾಗಲಿ, ಸಂಪತ್ತನ್ನಾಗಲಿ ಹೊಂದಿ, ಮನುಜನು ವಿಚಾರದಲ್ಲಿ ವೈಚಿತ್ರ್ಯವನ್ನು ಕಾಣುವನು.
ಏಕಸ್ಮಿನ್ನೇವ ಪುರುಷೇ ಸಾ ಸಾ ಬುದ್ಧಿಸ್ತಥಾ ತಥಾ |
ಭವತ್ಯನಿತ್ಯಾ ಪ್ರಜ್ಞಾ ಹಿ ಸಾ ತಸ್ಯೈವ ನ ರೋಚತೇ ॥13॥
ಒಬ್ಬನೇ ಮನುಜನಲ್ಲಿ ಆ ಆ ಬುದ್ಧಿಯು ಹಾಗೆ ಹಾಗೇ ಉಂಟಾಗುವುದು, ಅನಿತ್ಯವಾದ ಆತನ ವಿಚಾರವು (ಮತ್ತೊಂದು

ಸಂದರ್ಭದಲ್ಲಿ) ಆತನಿಗೇ ರುಚಿಸುವುದಿಲ್ಲ.
ನಿಶ್ಚಿತ್ಯ ತು ತಥಾ ಪ್ರಾಜ್ಞಃ ಸ್ವಾಂ ಮತಿಂ ಸಾಧು ಪಶ್ಯತಿ |
ತಸ್ಯಾಂ ಪ್ರಕುರುತೇ ಭಾವಂ ಸಾ ಚಾಸ್ಯೋದ್ಯೋಗಕಾರಿಕಾ ॥14॥
ಪ್ರಾಜ್ಞನಾದರೋ ತನ್ನ ವಿಚಾರವನ್ನು (ಮಥಿಸಿ) ನಿಶ್ಚಯಿಸಿ, ಸರಿಯಾದ ಮಾರ್ಗವನ್ನು ಕಾಣುವನು. ಅಂತಹ ಮಾರ್ಗದಲ್ಲಿ ಭಾವವನ್ನು ಮಾಡುವನು, ಆ ಮತಿಯು ಆತನಿಗೆ ಸಿದ್ಧಿಕಾರಕವಾಗುವುದು.
ಸರ್ವೋ ಹಿ ಪುರುಷೋ ಭೋಜ ಸಾಧುರಿತ್ಯೇವ ನಿಶ್ಚಿತಃ |
ಕರ್ತುಮಾರಭತೇ ಪ್ರೀತಿಂ ಮರಣಾದಿಷು ಕರ್ಮಸು ॥15॥
ಭೋಜಕುಲಜನೆ! ಎಲ್ಲ ಮನುಜರು `ಇದು ಸರಿಯಾದದ್ದು' ಎಂದು ನಿಶ್ಚಯಿಸಿಯೇ ಕೆಲಸವನ್ನು ಆರಂಭಿಸುವರು, (ಆದ್ದರಿಂದಲೇ) ಆತ್ಮಹತ್ಯೆ ಮುಂತಾದವುಗಳನ್ನು ಪ್ರೀತಿಸುವರು.
ಸರ್ವೋ ಹಿ ಯುಕ್ತಿಂ ವಿಜ್ಞಾಯ ಪ್ರಜ್ಞಾಂ ವಾಽಪಿ ಸ್ವಕಾಂ ನರಃ |
ಚೇಷ್ಟತೇ ವಿವಿಧಾಂ ಚೇಷ್ಟಾಂ ಹಿತಮಿತ್ಯೇವ ಚಿಂತಯನ್ ॥16॥
ಎಲ್ಲ ಮನುಜನೂ ತನ್ನ ಬುದ್ಧಿಯಿಂದ, ಯುಕ್ತಿಯಿಂದ ವಿಚಾರಿಸಿ, ಇದು ಹಿತ ಎಂದು ನಿಶ್ಚಯಿಸಿಯೇ ವಿವಿಧ ವ್ಯಾಪಾರಗಳನ್ನು ಮಾಡುವರು.
ಉಪಜಾತಾ ವ್ಯಸನಜಾ ಯೇಯಮದ್ಯ ಮತಿರ್ಮಮ |
ಯುವಯೋಸ್ತಾಂ ಪ್ರವಕ್ಷ್ಯಾಮಿ ಸರ್ವೇಷಾಂ ಶೋಕನಾಶಿನೀಮ್ ॥17॥
ನನ್ನ ದುಃಖವನ್ನು ನಾಶಗೊಳಿಸುವ ಯಾವ ಉಪಾಯವು ನನಗೆ ಈ ವ್ಯಸನಸಂದರ್ಭದಲ್ಲಿ ಪ್ರತಿಭಾತವಾಗಿದೆಯೋ ಎಲ್ಲರ ದುಃಖವನ್ನು ಶಮನಗೊಳಿಸುವ ಅದನ್ನು ನಿಮ್ಮೀರ್ವರಿಗೆ ತಿಳಿಸುವೆನು.
ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ಕರ್ಮ ತಾಸಾಂ ವಿಧಾಯ ಚ |
ವರ್ಣೇ ವರ್ಣೇ ಸಮಾಧತ್ತ ಏಕೈಕಂ ಗುಣವತ್ತರಮ್ ॥18॥
ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ಅವರಿಗೆ ಕರ್ಮಗಳನ್ನು ವಿಧಿಸಿರುವನು, ಪ್ರತಿವರ್ಣದವರಿಗೂ ಒಂದೊಂದು ಶ್ರೇಷ್ಠಗುಣವನ್ನು ನೀಡಿರುವನು.
ಬ್ರಾಹ್ಮಣೇ ದಮಮವ್ಯಗ್ರಂ ಕ್ಷತ್ರಿಯೇ ತೇಜ ಉತ್ತಮಮ್ |
ದಾಕ್ಷ್ಯಂ ವೈಶ್ಯೇ ಚ ಶೂದ್ರೇ ಚ ಸರ್ವವರ್ಣಾನುಕೂಲತಾಮ್ ॥19॥
ವಿಪ್ರರಿಗೆ ಏಕಾಗ್ರತೆಯನ್ನು, ಕ್ಷತ್ರಿಯರಿಗೆ ಶ್ರೇಷ್ಠವಾದ ತೇಜಸ್ಸನ್ನು, ವೈಶ್ಯರಿಗೆ ದಕ್ಷತೆಯನ್ನು, ಶೂದ್ರರಿಗೆ ಎಲ್ಲರಿಗೂ ಅನುವರ್ತಿಗಳಾಗಿರುವಿಕೆಯನ್ನು ನೀಡಿರುವನು.
ಅದಾಂತೋ ಬ್ರಾಹ್ಮಣೋಽಸಾಧುರ್ನಿಸ್ತೇಜಾಃ ಕ್ಷತ್ರಿಯೋ ಮೃತಃ |
ಅದಕ್ಷೋ ನಿಂದ್ಯತೇ ವೈಶ್ಯಃ ಶೂದ್ರಶ್ಚ ಪ್ರತಿಕೂಲವಾನ್ ॥20॥
ಇಂದ್ರಿಯ ನಿಗ್ರಹವಿಲ್ಲದ ಬ್ರಾಹ್ಮಣನು ದುಷ್ಟ, ಬಲಹೀನನಾದ ಕ್ಷತ್ರಿಯನು ಮೃತನಾದಂತೆ, ದಕ್ಷತೆಯು ಇಲ್ಲದ ವೈಶ್ಯನು ನಿಂದ್ಯ, ಹಾಗೆ ಪ್ರತಿಕೂಲನಾದ ಶೂದ್ರನೂ ನಿಂದ್ಯ.
ಸೋಽಸ್ಮಿ ಜಾತಃ ಕುಲೇ ಶ್ರೇಷ್ಠೇ ಬ್ರಾಹ್ಮಣೈರಭಿಪೂಜಿತೇ |
ಮಂದಭಾಗ್ಯತಯಾಽಸ್ಮೀಮಂ ಕ್ಷತ್ರಧರ್ಮಮನುಷ್ಠಿತಃ ॥21॥
ಬ್ರಾಹ್ಮಣರಿಂದ ಪೂಜಿತವಾದ ಶ್ರೇಷ್ಠ ಕುಲದಲ್ಲಿ ಜನ್ಮತಳೆದಿರುವೆನು. ಮಂದಭಾಗ್ಯನಾದುದರಿಂದ ಈ ಕ್ಷತ್ರಿಯ ಧರ್ಮವನ್ನು ಅನುಸರಿಸುತ್ತಿರುವೆ.
ಕ್ಷತ್ರಧರ್ಮಂ ವಿದಿತ್ವಾಽಹಂ ಯದಿ ಬ್ರಾಹ್ಮಣಸಂಶ್ರಿತಮ್ |
ಪ್ರಕರಿಷ್ಯೇ ಮಹತ್ ಕರ್ಮ ನ ಮೇ ತತ್ ಸಾಧುಸಮ್ಮತಮ್ ॥22॥
ಕ್ಷತ್ರಧರ್ಮವನ್ನು ತಿಳಿದ ನಾನು, ಒಂದು ವೇಳೆ ಬ್ರಾಹ್ಮಣ್ಯವನ್ನು ಆಶ್ರಯಿಸಿ, ಉತ್ತಮವಾದ ಕರ್ಮಗಳನ್ನು ಆಚರಿಸಿದರೂ ಆ ನನ್ನ ಕರ್ಮವು ಸಜ್ಜನರ ಮಾನ್ಯತೆಗೆ ಅರ್ಹವಾಗದು.
ಧಾರಯಿತ್ವಾ ಧನುರ್ದಿವ್ಯಂ ದಿವ್ಯಾನ್ಯಸ್ತ್ರಾಣಿ ಚಾಹವೇ |
ಪಿತರಂ ನಿಹತಂ ದೃಷ್ಟ್ವಾ ಕಿಂ ನು ವಕ್ಷ್ಯಾಮಿ ಸಂಸದಿ ॥23॥
ದಿವ್ಯವಾದ ಧನುಸ್ಸನ್ನು ಹೊಂದಿ, ದಿವ್ಯಾಸ್ತ್ರಗಳನ್ನು ಹೊಂದಿಯೂ ಯುದ್ಧದಲ್ಲಿ (ನನ್ನ) ತಂದೆಯು ಸಂಹೃತನಾದದ್ದನ್ನು ಕಂಡು (ಶತ್ರುಗಳಿಗೆ ಪ್ರತೀಕಾರವನ್ನು ಮಾಡದಿರುವ ನಾನು) ಜನಗಳ ಮುಂದೆ ಏನೆಂದು ಹೇಳಲಿ?
ಸೋಽಹಮದ್ಯ ಯಥಾಕಾಮಂ ಕ್ಷತ್ರಧರ್ಮಮವಾಪ್ಯ ಚ |
ಯಾಸ್ಯಾಮಿ ಪದವೀಂ ರಾಜ್ಞಃ ಪಿತುಶ್ಚೈವ ಮಹಾದ್ಯುತೇಃ ॥24॥
ಅಂತಹ ನಾನು ಈಗ ನನಗೆ ಸರಿತೋರಿದಂತೆ ಕ್ಷತ್ರಧರ್ಮವನ್ನೇ ಆಶ್ರಯಿಸಿ, ರಾಜನ (ದುರ್ಯೋಧನನ) ಮಹಾಕಾಂತಿಮಂತನಾದ ತಂದೆಯ ಸ್ಥಾನವನ್ನು (ಸ್ವರ್ಗವನ್ನು) ಸೇರುವೆನು.
ಅದ್ಯ ಸ್ವಪ್ಸ್ಯಂತಿ ಪಾಂಚಾಲಾ ವಿಶ್ವಸ್ತಾ ಜಿತಕಾಶಿನಃ |
ವಿಮುಕ್ತಯುಗ್ಯಕವಚಾ ಹರ್ಷೇಣ ಚ ಸಮನ್ವಿತಾಃ ॥25॥
ಈಗ ಗೆದ್ದಿರುವೆವು ಎಂಬ ವಿಶ್ವಾಸದಿಂದ, ಹರ್ಷದಿಂದ ಕೂಡಿದವರಾಗಿ, ಕುದುರೆಗಳನ್ನು ಕವಚಗಳನ್ನು ಕಳಚಿದವರಾಗಿ ಪಾಂಚಾಲರು ಮಲಗಿರುವರು.
ವಯಂ ಜಿತಾ ಮತಾಶ್ಚೈತೇ ಶ್ರಾಂತಾ ವ್ಯಾಯಾಮನೇನ ಚ ॥26॥

ವ್ಯಾಯಾಮದಿಂದ ಬಳಲಿದ ಅವರು `ನಾವು ಗೆದ್ದಿರುವೆವು' ಎಂದು ಭಾವಿಸಿರುವರು (ವ್ಯಾಯಾಮಾನಂ- ವ್ಯಾಯಾಮ).
ತೇಷಾಂ ನಿಶಿ ಪ್ರಸುಪ್ತಾನಾಂ ಸ್ವಸ್ಥಾನೇ ಶಿಬಿರೇ ಸ್ವಕೇ |
ಅವಸ್ಕಂದಂ ಕರಿಷ್ಯಾಮಿ ಶಿಬಿರಸ್ಯಾತಿದುಷ್ಕರಮ್ ||27||
ತಮ್ಮ ಶಿಬಿರದಲ್ಲಿ ತಮ್ಮ ತಮ್ಮ ಸ್ಥಾನಗಳಲ್ಲಿ, ಮಲಗಿರುವ ಅವರ (ಪಾಂಚಾಲರ) ಶಿಬಿರದ ಮೇಲೆ ಅತಿ ಭಯಂಕರವಾದ ಆಕ್ರಮಣವನ್ನು ಮಾಡುವೆನು.
ತಾನವಸ್ಕಂದ್ಯ ಶಿಬಿರೇ ಪ್ರೇತಭೂತಾನಚೇತಸಃ ||28||
ಎಚ್ಚರವಿರದ ಹೆಣದಂತಾಗಿರುವ (ಗಾಢನಿದ್ರೆಯಲ್ಲಿರುವ) ಅವರನ್ನು ಶಿಬಿರದಲ್ಲಿ ಆಕ್ರಮಿಸುವೆನು.
ಪಾಂಚಾಲೇಷು ಚರಿಷ್ಯಾಮಿ ಸೂದಯನ್ನದ್ಯ ಸಂಯುಗೇ |
ಪಿನಾಕಪಾಣಿಃ ಸಂಕ್ರುದ್ಧಃ ಸ್ವಯಂ ರುದ್ರಃ ಪಶೂನಿವ ||29||
ಶೂಲಪಾಣಿಯಾದ ಕ್ರುದ್ಧನಾದ ಸ್ವಯಂ ರುದ್ರದೇವನು ಪಶುಗಳನ್ನು ನಾಶಗೊಳಿಸಿದಂತೆ, ಪಾಂಚಾಲರ ಮಧ್ಯದಲ್ಲಿ , ಯುದ್ಧದಲ್ಲಿ ಸಂಹರಿಸುತ್ತಾ ತಿರುಗುವೆನು.
ಅದ್ಯಾಹಂ ಸರ್ವಪಾಂಚಾಲಾನ್ ನಿಕೃತ್ಯಾ ಚ ನಿಹತ್ಯ ಚ |
ಅರ್ದಯಿಷ್ಯಾಮಿ ಸಂಕ್ರುದ್ಧೋ ರಣೇ ಪಾಂಡುಸುತಾಂಸ್ತಥಾ ||30||
ಇಂದು ಕೋಪಗೊಂಡ ನಾನು ಕವಚದಿಂದ ರಣದಲ್ಲಿ ಎಲ್ಲ ಪಾಂಚಾಲರನ್ನು ಸಂಹರಿಸಿ, ಹಾಗೆಯೇ ಪಾಂಡವರ ಪುತ್ರರನ್ನು ನಾಶಗೊಳಿಸುವೆನು.
ಅದ್ಯಾಹಂ ಸರ್ವಪಾಂಚಾಲೈಃ ಕೃತ್ವಾ ಭೂಮಿಂ ಶರೀರಿಣೀಮ್ |
ಪ್ರಹೃತ್ಯೈಕೇನ ಶಸ್ತ್ರೇಣ ಭವಿಷ್ಯಾಮ್ಯನೃಣಃ ಪಿತುಃ ||31||
ಒಂದೇ ಶಸ್ತ್ರದಿಂದ ಇಂದು ಎಲ್ಲ ಪಾಂಚಾಲರನ್ನು ಸಂಹರಿಸಿ, ಭೂಮಿಯನ್ನು ಶರೀರಧಾರಣೆಯನ್ನಾಗಿಸಿ, ತಂದೆಯ ಸಾಲದಿಂದ ಮುಕ್ತನಾಗುವೆನು.
ದುರ್ಯೋಧನಸ್ಯ ಕರ್ಣಸ್ಯ ಭೀಷ್ಮಸೈಂಧವಯೋರಪಿ |
ಗಮಯಿಷ್ಯಾಮಿ ಪಾಂಚಾಲಾನ್ ಪದವೀಮದ್ಯ ದುರ್ಗಮಾಮ್ ||32||
ದುರ್ಯೋಧನನ, ಕರ್ಣನ, ಭೀಷ್ಮ, ಸೈಂಧವರ ದುರ್ಗಮವಾದ ಸ್ಥಾನಕ್ಕೆ ಪಾಂಚಾಲರನ್ನು ಇಂದು ಕಳುಹಿಸುವೆನು.
ಅದ್ಯ ಪಾಂಚಾಲರಾಜಸ್ಯ ಧೃಷ್ಟದ್ಯುಮ್ನಸ್ಯ ವೈ ನಿಶಿ |
ವಿರಾತ್ರೇ ಪ್ರಮಥಿಷ್ಯಾಮಿ ಪಶೋರಿವ ಶಿರೋ ಬಲಾತ್ ||33||
ಈಗ ಕತ್ತಲೆಯ ಮಧ್ಯರಾತ್ರಿಯಲ್ಲಿ ಪಾಂಚಾಲರಾಜನಾದ ಧೃಷ್ಟದ್ಯುಮ್ನನ ತಲೆಯನ್ನು (ಯಜ್ಞದ) ಪಶುವಿನ ತಲೆಯಂತೆ ಬಲವಾಗಿ ನಾಶಗೊಳಿಸುವೆನು.
ಅದ್ಯ ಪಾಂಚಾಲಪಾಂಡೂನಾಂ ಶಯಿತಾನಾಂ ಸುಖಂ ನಿಶಿ |
ಖಡ್ಗೇನ ನಿಶಿತಾಗ್ರೇಣ ಪ್ರಮಥಿಷ್ಯಾಮಿ ಗೌತಮ ||34||
ಗೌತಮಗೋತ್ರೋತ್ಪನ್ನನೆ! ರಾತ್ರಿಯಲ್ಲಿ ಸುಖವಾಗಿ ಮಲಗಿದ ಪಾಂಚಾಲರನ್ನು, ಪಾಂಡವರ ಪುತ್ರರನ್ನು ಇಂದು ಹರಿತವಾದ ಖಡ್ಗದಿಂದ ನಾಶಗೊಳಿಸುವೆನು.
ಅದ್ಯ ಪಾಂಚಾಲಸೇನಾಂ ತಾಂ ನಿಹತ್ಯ ನಿಶಿ ಸೌಪ್ತಿಕೇ |
ಕೃತ್ಯಕೃತ್ಯಃ ಸುಖೀ ಚೈವ ಭವಿಷ್ಯಾಮಿ ಮಹಾಮತೇ ||35||
ಮಹಾಜ್ಞಾನಿಯೆ! ರಾತ್ರಿಯಲ್ಲಿ ನಿದ್ರಿಸುತ್ತಿರುವ ಆ ಪಾಂಚಾಲರ ಸೇನೆಯನ್ನು ಇಂದು ನಾಶಗೊಳಿಸಿ ಕೃತಕೃತ್ಯನಾಗಿ ಸುಖಿಸುವೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ದ್ರೌಣಿನಾ ಪಾಂಚಾಲಹನನಂ ನಾಮ ತೃತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ಅಶ್ವತ್ಥಾಮ-ಕೃಪರ ಸಂವಾದ
ಕೃಪಃ
ದಿಷ್ಟ್ಯಾ ತೇ ಪ್ರತಿಕರ್ತವ್ಯೇ ಬುದ್ಧಿರ್ಜಾತೇಯಮಚ್ಯುತ |
ನ ತ್ವಾಂ ವಾರಯಿತುಂ ಶಕ್ತೋ ವಜ್ರಪಾಣಿರಪಿ ಸ್ವಯಮ್ ||1||
ಕೃಪ ನಾಶರಹಿತನೆ! ನೋಡಿದೆಯಾ? ಪ್ರತೀಕಾರವನ್ನು ಮಾಡಬೇಕೆಂಬ ಈ ಬುದ್ಧಿಯು ಉಂಟಾಯಿತು. ಸ್ವತಃ ವಜ್ರಪಾಣಿಯೂ ನಿನ್ನನ್ನು ತಡೆಯಲು ಸಮರ್ಥನಲ್ಲ.
ಅನುಯಾಸ್ಯಾವಹೇ ತ್ವಾಂ ಹಿ ಪ್ರಭಾತೇ ಸಹಿತಾವುಭೌ |
ಅದ್ಯ ರಾತ್ರೌ ವಿಶ್ರಮಸ್ವ ವಿಮುಕ್ತಕವಚಧ್ವಜಃ ||2||
ಬೆಳಗಾದ ಮೇಲೆ ನಾವೀರ್ವರು ನಿನ್ನನ್ನು ಅನುಸರಿಸುವೆವು , ಈ ರಾತ್ರಿಯಲ್ಲಿ ಕವಚ ಚಿಹ್ನೆಗಳನ್ನು ಕಳಚಿ ವಿಶ್ರಮಿಸು.
ಅಹಂ ತ್ವಾಮನುಯಾಸ್ಯಾಮಿ ಕೃತವರ್ಮಾ ಚ ಸಾತ್ವತಃ |
ಪರಾನಭಿಮುಖಂ ಯಾಂತಂ ರಥಮಾಸ್ಥಾಯ ದಂಸಿತೌ ||3||
ಶತ್ರುಗಳನ್ನು ನಾಶಗೊಳಿಸಲು ರಥವನ್ನೇರಿ ಹೊರಟ ನಿನ್ನನ್ನು ಮುಂದೆ ಮಾಡಿಕೊಂಡು, ನಾನು ಮತ್ತು ಸಾತ್ವತಕುಲದಲ್ಲಿ

ಉತ್ಪನ್ನನಾದ ಕೃತವರ್ಮನೂ ಅನುಸರಿಸುವೆವು.
ಆವಾಭ್ಯಾಂ ಸಹಿತಃ ಶತ್ರೂನ್ ಶ್ವೋ ನಿಹಂತಾ ಸಮಾಗಮೇ |
ವಿಕ್ರಮ್ಯ ರಥಿನಾಂ ಶ್ರೇಷ್ಠ ಪಾಂಚಾಲಾನ್ ಸಪದಾನುಗಾನ್ ॥4॥
ರಥಿಕರಲ್ಲಿ ಹಿರಿಯನೇ! ನಮ್ಮಿರ್ವರಿಂದ ಸಹಿತನಾದ ನೀನು ಶತ್ರುಗಳಾದ ಪರಿವಾರ ಸಹಿತರಾದ ಪಾಂಚಾಲರನ್ನು ಯುದ್ಧದಲ್ಲಿ ಗೆದ್ದು, ನಾಳೆ ಸಂಹರಿಸುವವನಾಗು.
ಶಕ್ತಸ್ತ್ವಮಸಿ ವಿಕ್ರಮ್ಯ ವಿಶ್ರಮಸ್ವ ನಿಶಾಮಿಮಾಮ್ |
ಚರಂಚರೇ ಜಾಗರಿತಂ ಸ್ವಪ ತಾತ ನಿಶಾಮಿಮಾಮ್ ॥5॥
ಪುತ್ರನೇ! ಶತ್ರುಗಳನ್ನು ಜಯಿಸಲು ಸಮರ್ಥನಿರುವಿ, ಅತ್ತ ಇತ್ತ ತಿರುಗುತ್ತಾ ಈ ರಾತ್ರಿಯಿಲ್ಲ ಎಚ್ಚರದಿಂದಿರುವಿ, ಈ ರಾತ್ರಿಯಲ್ಲಿ ಮಲಗು.
ವಿಶ್ರಾಂತಶ್ಚ ಸನಿದ್ರಶ್ಚ ಸ್ವಸ್ಥಚಿತ್ತಶ್ಚ ಮಾನದ |
ಸಮೇತ್ಯ ಸಮರೇ ಶತ್ರೂನ್ ವಧಿಷ್ಯಸಿ ನ ಸಂಶಯಃ ॥6॥
ಸ್ವಾಭಿಮಾನಿಯೇ! ನಿದ್ರಿಸಿ ದಣಿವಾರಿಸಿಕೊ, ಮನಸಿಗೆ ಸ್ವಾಸ್ಥ್ಯವನ್ನು ಪಡಿ, ಯುದ್ಧದಲ್ಲಿ ಶತ್ರುಗಳನ್ನು ಸಂಧಿಸಿ ಸಂಹರಿಸುವಿ, ಇದಕ್ಕೆ ಸಂಶಯವಿಲ್ಲ.
ನ ಹಿ ತ್ವಾಂ ರಥಿನಾಂ ಶ್ರೇಷ್ಠಂ ಪ್ರಗೃಹೀತವರಾಯುಧಮ್ |
ಜೇತುಮುತ್ಸಹತೇ ಕಶ್ಚಿದ್ ದಿವಿ ದೇವೇಷು ಪಾವಕಿಃ ॥7॥
ಶ್ರೇಷ್ಠವಾದ ಆಯುಧವನ್ನು ಧರಿಸಿದ, ರಥಿಕರಲ್ಲಿ ಹಿರಿಯನಾದ ನಿನ್ನನ್ನು, ಸ್ವರ್ಗದಲ್ಲಿರುವ ದೇವತೆಗಳಲ್ಲಿ ಯಾವ ಅಗ್ನಿಯೂ ಗೆಲ್ಲಲು ಉತ್ಸಾಹವನ್ನು ತೋರಲಾರನು.
ಕೃಪೇಣ ಸಹಿತಂ ಯಾಂತಂ ಯುಕ್ತಂ ವೈ ಕೃತವರ್ಮಣಾ |
ಕೋ ದ್ರೌಣಿಂ ಯುಧಿ ಸಂರಬ್ಧಂ ಯೋಧಯೇದಪಿ ದೇವರಾಟ್ ॥8॥
ಕೃಪನಿಂದ ಸಹಿತನಾದ, ಕೃತವರ್ಮನಿಂದ ಯುಕ್ತನಾದ ದ್ರೋಣಪುತ್ರನಿಂದ ಪ್ರಾರಂಭವಾದ ಯುದ್ಧದಲ್ಲಿ ಯಾವ ದೇವತೆಗಳ ರಾಜನು ಜೊತೆಗೆ ಕಾದಾಡಲು ಸಮರ್ಥನಾಗುವನು?
ತೇ ವಯಂ ಪರಿವಿಶ್ರಾಂತಾಃ ಸನಿದ್ರಾ ವಿಗತಜ್ವರಾಃ |
ಪ್ರಭಾತಾಯಾಂ ರಜನ್ಯಾಂ ತು ನಿಹನಿಷ್ಯಾಮ ಶಾತ್ರವಾನ್ ॥9॥
ಈಗ ನಾವು ಬಳಲಿರುವೆವು, ರಾತ್ರಿಯಲ್ಲಿ ನಿದ್ರೆಯಿಂದ ಆಯಾಸದಿಂದ ದೂರವಾಗೋಣ, ಬೆಳಗಿನಲ್ಲಿ ಶತ್ರುಗಳನ್ನು ಸಂಹರಿಸೋಣ.
ತವ ಹ್ಯಸತ್ರಣಿ ದಿವ್ಯಾನಿ ಮಮ ಚೈವ ನ ಸಂಶಯಃ |
ಸಾತ್ವತೋಽಪಿ ಮಹೇಷ್ವಾಸೋ ನಿತ್ಯಂ ಯುದ್ಧೇಷು ಕೋವಿದಃ ॥10॥
ನಿನ್ನಲ್ಲಿ ದಿವ್ಯವಾದ ಅಸ್ತ್ರಗಳಿವೆ, ನನ್ನಲ್ಲಿಯೂ ಇವೆ, ಸಂದೇಹವಿಲ್ಲ. ಯುದ್ಧದಲ್ಲಿ ಎಂದೂ ನಿಪುಣನಾದ ಸಾತ್ವತಕುಲೋತ್ಪನ್ನನೂ ಸಹ (ಕೃತವರ್ಮನೂ) ಒಳ್ಳೆಯ ಬಿಲ್ಲಾಳು.
ತೇ ವಯಂ ಸಹಿತಾಸ್ತಾತ ಸರ್ವಾನ್ ಶತ್ರೂನ್ ಸಮಾಗತಾನ್ |
ಪ್ರಸಹ್ಯ ಸಮರೇ ಹತ್ವಾ ಪ್ರೀತಿಂ ಯಾಸ್ಯಾಮ ಪುಷ್ಕಲಾಮ್ ॥11॥
ಪುತ್ರನೇ! ಒಟ್ಟಾದ ಆ ನಾವು ಎದುರಾದ ಎಲ್ಲ ಶತ್ರುಗಳನ್ನು ಯುದ್ಧದಲ್ಲಿ ಹಿಡಿದು ಸಂಹರಿಸಿ, ಪೂರ್ಣ ಸಂತಸವನ್ನು ಹೊಂದೋಣ.
ವಿಶ್ರಮಸ್ವ ತ್ವಮಪ್ಯದ್ಯ ಸ್ವಪ ಚೇಮಾಂ ನಿಶಾಂ ಸುಖಮ್ ॥12॥
ನೀನೂ ಸಹ ಈಗ ಈ ರಾತ್ರಿಯಲ್ಲಿ ಸುಖವಾಗಿ ಮಲಗಿ ವಿಶ್ರಾಂತಿಯನ್ನು ಪಡೆ.
ಅಹಂ ಚ ಕೃತವರ್ಮಾ ಚ ಪ್ರಭಾತೇ ತ್ವಾಂ ನರೋತ್ತಮ |
ಅನುಯಾಸ್ಯಾವ ಸಹಿತೌ ಧನ್ವಿನೌ ಪರತಾಪನೌ ॥13॥
ರಥಿನಂ ತರಸಾ ಯಾಂತಂ ರಥಾವಾಸ್ಥಾಯ ದಂಸಿತೌ ॥14॥
ನರಶ್ರೇಷ್ಠನೇ! ಬೆಳಗಿನಲ್ಲಿ ರಥದಲ್ಲಿ ಕುಳಿತುಕೊಂಡು ವೇಗವಾಗಿ ಸಾಗುತ್ತಿರುವ ರಥಿಕನಾದ ನಿನ್ನನ್ನು, ಶತ್ರುತಾಪಕರಾದ ಧನುರ್ಧಾರಿಗಳಾದ, ತುಟಿಯನ್ನು ಕಚ್ಚಿರುವ ನಾನು ಮತ್ತು ಕೃತವರ್ಮನು ಸೇರಿಕೊಂಡು ನಿನ್ನನ್ನು ಅನುಸರಿಸುತ್ತೇವೆ.
ಸ ಗತ್ವಾ ಶಿಬಿರಂ ತೇಷಾಂ ನಾಮ ವಿಶ್ರಾವ್ಯ ಚಾಹವೇ |
ತತಃ ಕರ್ತಾಸಿ ಶತ್ರೂಣಾಂ ಯುಧ್ಯತಾಂ ಕದನಂ ಮಹತ್ ॥15॥
ಅಂತಹ ನೀನು ಅವರ (ಪಾಂಡವರ) ಶಿಬಿರಕ್ಕೆ ಹೋಗಿ, ಯುದ್ಧದಲ್ಲಿ (ನಿನ್ನ) ಹೆಸರನ್ನು ಉದ್ಘೋಷಿಸಿ, ಆನಂತರದಲ್ಲಿ ಹೋರಾಡುವ ಶತ್ರುಗಳೊಡನೆ ಭಾರೀ ಯುದ್ಧವನ್ನು ಮಾಡುವವನಾಗು.
ಕೃತ್ವಾ ಚ ಕದನಂ ತೇಷಾಂ ಪ್ರಭಾತೇ ವಿಮಲೇಽಹನಿ |
ವಿಹರಸ್ವ ಯಥಾ ಶಕ್ರಃ ಸೂದಯಿತ್ವಾ ಮಹಾರಥಾನ್ ॥16॥
ಪ್ರಾತಃಕಾಲದಲ್ಲಿ ನಿರ್ಮಲವಾದ ಬೆಳಕಿನಲ್ಲಿ ಅವರೊಡನೆ ಯುದ್ಧವನ್ನು ಮಾಡಿ, ಮಹಾರಥಿಕರನ್ನು ಸಂಹರಿಸಿ, ಇಂದ್ರನಂತೆ (ಯುದ್ಧದಲ್ಲಿ) ವಿಹರಿಸು.
ತ್ವಂ ಹಿ ಶಕ್ತೋ ರಣೇ ಜೇತುಂ ಪಾಂಚಾಲಾನಾಂ ವರೂಥಿನೀಮ್ |
ದೈತ್ಯಸೇನಾಮಿವ ಕ್ರುದ್ಧಃ ಸರ್ವದಾನವಸೂದನಃ ॥17॥
ಕೋಪಗೊಂಡ, ಎಲ್ಲ ದೈತ್ಯರ ನಾಶಕನಾದ ಇಂದ್ರನು ದೈತ್ಯರ ಸೇನೆಯನ್ನು ಜಯಿಸಲು ಹೇಗೆ ಸಮರ್ಥನೊ, ಹಾಗೆ ನೀನೂ ಸಹ ಪಾಂಚಾಲರ ಭಾರೀ ಸೇನೆಯನ್ನು ಜಯಿಸಲು ಸಮರ್ಥನಿರುವಿ.

ಮಯಾ ತ್ವಾಂ ಸಹಿತಂ ಸಂಖ್ಯೇ ಗುಪ್ತಂ ಚ ಕೃತವರ್ಮಣಾ |
ನ ಸಹೇತ ವಿಭುಃ ಸಾಕ್ಷಾದ್ ವಜ್ರಪಾಣಿರಪಿ ಸ್ವಯಮ್ ॥18॥
ನನ್ನಿಂದ ಒಡಗೂಡಿದ, ಕೃತವರ್ಮನಿಂದ ರಕ್ಷಿತನಾದ ನಿನ್ನನ್ನು ಯುದ್ಧದಲ್ಲಿ ಸ್ವತಃ ವಜ್ರಪಾಣಿಯಾದ ಪ್ರಭುವಾದ ಸಾಕ್ಷಾತ್ ಇಂದ್ರನೂ ಎದುರಿಸಲಾರನು.
ನ ಚಾಹಂ ಸಮರೇ ತಾತ ಕೃತವರ್ಮಾ ತಥೈವ ಚ |
ಅನಿರ್ಜಿತ್ಯ ರಣೇ ಪಾಂಡೂನ್ ಅಪಯಾಸ್ಯಾಮ ಕರ್ಹಿಚಿತ್ ॥19॥
ಪುತ್ರನೇ! ನಾನಾಗಲಿ, ಕೃತವರ್ಮನಾಗಲಿ ಯುದ್ಧದಲ್ಲಿ ಎಂದೂ ಪಾಂಡವರನ್ನು ಸೋಲಿಸದೆ ಹಿಂದಿರುಗಿರುವುದಿಲ್ಲ.
ಹತ್ವಾ ಚ ಸಮರೇ ಕ್ಷುದ್ರಾನ್ ಪಾಂಚಾಲಾನ್ ಸಹ ಪಾಂಡವೈಃ |
ನಿವರ್ತಯಿಷ್ಯಾಮಹೇ ಸರ್ವೇ ಹತಾ ವಾ ಸ್ವರ್ಗಗಾ ವಯಮ್ ॥20॥
ಪಾಂಡವರಿಂದ ಕೂಡಿರುವ ಕ್ಷುದ್ರರಾದ ಪಾಂಚಾಲರನ್ನು ಯುದ್ಧದಲ್ಲಿ ಸಂಹರಿಸಿಯೇ ಹಿಂದಿರುಗೋಣ ಅಥವಾ ಎಲ್ಲರೂ (ನಾವು) ಮೃತರಾದಲ್ಲಿ ಸ್ವರ್ಗವನ್ನಾದರೂ ಸೇರೋಣ.
ಸರ್ವೋಪಾಯಸಹಾಯಾಸ್ತೇ ಪ್ರಭಾತೇ ವಯಮಾಹವೇ |
ಸತ್ಯಮೇತನ್ಮಹಾಬಾಹೋ ಪ್ರಬ್ರವೀಮಿ ತವಾನಘ ॥21॥
ಪಾಪರಹಿತನೇ! ನಾವು ನಿನಗೆ ಬೆಳಗಿನಲ್ಲಿ ಯುದ್ಧದಲ್ಲಿ ಎಲ್ಲ ವಿಧದಿಂದಲೂ ಸಹಕರಿಸುವೆವು. ನೀಳ ಬಾಹುವೆ! ನಿನಗೆ ಸತ್ಯವನ್ನೇ ಹೇಳುತ್ತಿರುವೆನು.
ಸಂಜಯಃ
ಏವಮುಕ್ತಸ್ತತೋ ದ್ರೌಣಿರ್ಮಾತುಲೇನ ಹಿತಂ ವಚಃ |
ಅಬ್ರವೀನ್ಮಾತುಲಂ ರಾಜನ್ ಕ್ರೋಧಾದುದ್ವೃತ್ಯ ಲೋಚನೇ ॥22॥
ಸಂಜಯ ರಾಜನೇ! ಅನಂತರದಲ್ಲಿ ಈರೀತಿಯಾಗಿ ಸೋದರಮಾವನಿಂದ ಹಿತಕಾರಕ ಮಾತುಗಳ ಉಪದೇಶವನ್ನು ಕೇಳಿದ ದ್ರೋಣಪುತ್ರನು ಕ್ರೋಧದಿಂದ ಕಣ್ಣುಗಳನ್ನು ಸುತ್ತಿಸುತ್ತಾ (ತನ್ನ) ಸೋದರಮಾವನನ್ನು ಉದ್ದೇಶಿಸಿ ಹೇಳಿದನು.
ದ್ರೌಣಿಃ
ಆತುರಸ್ಯ ಕುತೋ ನಿದ್ರಾ ನರಸ್ಯಾಮರ್ಷಿತಸ್ಯ ವಾ |
ಅರ್ಥಾಂಶ್ಚಿಂತಯತಶ್ಚಾಪಿ ಕಾಮಯಾನಸ್ಯ ವಾ ಪುನಃ ॥23॥
ಅಶ್ವತ್ಥಾಮ ಮರಣ ಸನ್ನಿಹಿತನಾದ ಮನುಷ್ಯನಿಗೆ ಅಥವಾ ಕ್ರೋಧಾವಿಷ್ಟನಾದವಗೆ, ಸಂಪತ್ತನ್ನು ಕಳೆದುಕೊಂಡು ಚಿಂತಿತನಾದವಗೂ ಸಹ, ಮತ್ತೆ (ಪ್ರೇಯಸಿಯನ್ನು) ಬಯಸುವವಗೆ ಎಲ್ಲಿಂದ ನಿದ್ರೆ?
ತದಿದಂ ಸಮನುಪ್ರಾಪ್ತಂ ಪಶ್ಯ ಮೇಽದ್ಯ ಚತುಷ್ಟಯಮ್ |
ಯಸ್ಯ ಭಾಗಶ್ಚತುರ್ಥೋ ವೈ ಸ್ವಪ್ನಮಹ್ನಾಯ ನಾಶಯೇತ್ ॥24॥
ನೋಡು, ಈ ನಾಲ್ಕರಲ್ಲಿ ಯಾವ ಒಂದೂ ಸಹ ಕೂಡಲೇ ನಿದ್ರೆಯನ್ನು ನಾಶಗೊಳಿಸುವುದೋ, ಆ ಈ ನಾಲ್ಕೂ ಸಹ ಈಗ ನನಗೆ ಬಂದೊದಗಿದೆ.
ಕಿಂ ನಾಮ ದುಃಖಂ ಲೋಕೇಽಸ್ಮಿನ್ ಪಿತುರ್ವಧಮನುಸ್ಮರನ್ |
ಹೃದಯಂ ನಿಹತಂ ಯನ್ಮೇ ರಾತ್ರ್ಯಹಾನಿ ನ ಶಾಮ್ಯತಿ ॥25॥
ಈ ಲೋಕದಲ್ಲಿ ತಂದೆಯ ಸಂಹಾರವನ್ನು ಸ್ಮರಿಸುತ್ತಿರುವ ವ್ಯಕ್ತಿಯ ದುಃಖ ಎಂತಹದು? ಯಾವ ದುಃಖವು ನನ್ನ ಹೃದಯದಲ್ಲಿ ಇದ್ದು ಹಗಲೂ ರಾತ್ರಿಯಲ್ಲಿ (ದಹಿಸುತ್ತಿದೆ, ಇನ್ನೂ) ಶಮನವಾಗಿಲ್ಲ.
ಯಥಾ ಚ ನಿಹತಃ ಪಾಪೈಃ ಪಿತಾ ಮಮ ವಿಶೇಷತಃ |
ಪ್ರತ್ಯಕ್ಷಮಪಿ ತೇ ಸರ್ವಂ ತನ್ಮೇ ಮರ್ಮಾಣಿ ಕೃಂತತಿ ॥26॥
ನನ್ನ ತಂದೆಯು ಪಾಪಿಗಳಿಂದ ಹೇಗೆ ನಿಹಿತನಾದನು, ಅದೂ ವಿಶೇಷವಾಗಿ ನಿನ್ನ ಸಮಕ್ಷಮದಲ್ಲಿಯೇ, ಈ ಎಲ್ಲವೂ ನನ್ನ ಮರ್ಮವನ್ನು ಕತ್ತರಿಸುತ್ತಿವೆ.
ಕಥಂ ಹಿ ಮಾದೃಶೋ ಲೋಕೇ ಮುಹೂರ್ತಮಪಿ ಜೀವತಿ |
ದ್ರೋಣಹಂತೇತಿ ಯದ್ವಾಚಃ ಪಾಂಚಾಲಾನಾಂ ಶೃಣೋಮ್ಯಹಮ್ ॥
`(ಈತನು) ದ್ರೋಣಹಂತಕ' ಎಂಬ ಪಾಂಚಾಲರ ಮಾತನ್ನು ಕೇಳಿದವನಾಗಿ, ನನ್ನಂಥವನು (ಪರಾಕ್ರಮಶಾಲಿಯು) ಈ ಲೊಕದಲ್ಲಿ ಒಂದು ಮೂಹೂರ್ತವಾದರೂ ಹೇಗೆ ತಾನೆ ಬದುಕಲಾದೀತು?
ಧೃಷ್ಟದ್ಯುಮ್ನಮಹತ್ವಾಽಽಜೌ ನಾಹಂ ಜೀವಿತುಮುತ್ಸಹೇ |
ಸ ಮೇ ಪಿತುರ್ವಧಾದ್ವಧ್ಯಃ ಪಾಂಚಾಲಾ ಯೇ ಚ ಸಂಗತಾಃ ॥28॥
ಧೃಷ್ಟದ್ಯುಮ್ನನನ್ನು ಯುದ್ಧದಲ್ಲಿ ಸಂಹರಿಸದೆ ನಾನು ಬದುಕಲು ಇಚ್ಛಿಸುವದಿಲ್ಲ. ಆತನು (ಧೃಷ್ಟದ್ಯುಮ್ನನು) ನನ್ನ ತಂದೆಯನ್ನು ಸಂಹರಿಸಿದ್ದರಿಂದ, ಆತನು ನನ್ನಿಂದ ವಧ್ಯನಾಗಿರುವನು, ಹಾಗೆಯೇ ಆತನೊಡನೆ ಸಹಕರಿಸಿದ ಎಲ್ಲ ಪಾಂಚಾಲರೂ ಸಹ.
ವಿಲಾಪೋ ಭಗ್ನಸಕ್ಥಸ್ಯ ಯಸ್ತು ರಾಜ್ಞೋ ಮಯಾ ಶ್ರುತಃ |
ಸ ಪುನರ್ಹೃದಯಂ ಕಸ್ಯ ಕ್ರೂರಸ್ಯಾಪಿ ನ ನಿರ್ದಹೇತ್ ॥29॥
ತೊಡೆಮುರಿದುಕೊಂಡ ರಾಜನ (ದುರ್ಯೋಧನನ) ರೋದನವನ್ನು ನಾನು ಕೇಳಿರುವೆನು. ಯಾವ ಕಠೋರಿಯ ಹೃದಯವು ( ಆ ರೋದನದಿಂದ ) ದಹಿಸದೇ ಇದ್ದೀತು?
ಕಸ್ಯ ನಾಕರುಣಸ್ಯಾಪಿ ನೇತ್ರಾಭ್ಯಾಮಾಸ್ರಮಾಸ್ರವೇತ್ |

ನೃಪತೇರ್ಭಿನ್ನಸಕ್ಥಸ್ಯ ಶ್ರುತ್ವಾ ತಾದೃಗ್ವಚಃ ಪುನಃ ॥30॥
ತೊಡೆಮುರಿದುಕೊಂಡ ರಾಜನ ಅಂತಹ ಮಾತುಗಳನ್ನು ಕೇಳಿ, ಯಾವ ನಿಷ್ಠುರಿಯ ಕಣ್ಣಲ್ಲಿ ನೀರೂರದೆ ಇದ್ದೀತು?
ಅಯಂ ಚ ಮಿತ್ರಪಕ್ಷೋ ಮೇ ಮಯಿ ಜೀವತಿ ನಿರ್ಜಿತಃ |
ಶೋಕಂ ಮೇ ವರ್ಧಯತ್ಯೇಷ ವಾರಿವೇಗ ಇವಾರ್ಣವಮ್ ॥31॥
`ನನ್ನ ಮಿತ್ರನ ಪಕ್ಷವು ನಾನು ಬದುಕಿರುವಾಗಲೇ ಸೋತಿತು' ಇದೂ ಸಹ, ನೀರಿನ ಪ್ರವಾಹವು ಸಮುದ್ರವನ್ನು ಹೆಚ್ಚಿಸುವಂತೆ ನನ್ನ ಶೋಕವನ್ನು ಹೆಚ್ಚಿಸುತ್ತಿದೆ.
ಅನೇಕಾಗ್ರಸ್ಯ ಮೇ ತಸ್ಯ ಕುತೋ ನಿದ್ರಾ ಕುತಃಸುಖಮ್ ॥32॥
ಒಂದೆಡೆ ಮನಸಿಲ್ಲದ ಆ ನನಗೆ ಎಲ್ಲಿಯ ನಿದ್ರೆ, ಎಲ್ಲಿಯ ಸುಖ?
ವಾಸುದೇವಾರ್ಜುನಾಭ್ಯಾಂ ಹಿ ತಾನಹಂ ಪರಿರಕ್ಷಿತಾನ್ |
ಅವಿಷಹ್ಯತಮಾನ್ ಮನ್ಯೇ ಮಹೇಂದ್ರೇಣಾಪಿ ಮಾತುಲ ॥33॥
ಸೋದರಮಾವ! `ಕೃಷ್ಣ ,ಅರ್ಜುನರಿಂದ ಸಂರಕ್ಷಿತರಾದ ಅವರು (ಪಾಂಚಾಲರು) ಮಹೇಂದ್ರನಿಂದಲೂ ಸೋಲನ್ನು ಕಾಣಲಾರರು' ಎಂದು ನಾನು ತಿಳಿದಿರುವೆ.
ನ ಚಾಸ್ಮಿ ಶಕ್ಯಃ ಸಂಯಂತುಮಸ್ಮಾತ್ ಕಾರ್ಯಾತ್ ಕಥಂಚನ |
ತಂ ನ ಪಶ್ಯಾಮಿ ಲೋಕೇ ಮಾಂ ಯೋऽಸ್ಮಾತ್ಕಾರ್ಯಾದ್ ವಿಚಾಲಯೇತ್ ॥34॥
(ಆದರೆ ನಾನು) ಈ ಕಾರ್ಯದಿಂದ ಯಾವುದೇ ಕಾರಣದಿಂದಲೂ ವಿಮುಖನಾಗಲೂ ಶಕ್ಯವಿಲ್ಲ. ನನ್ನನ್ನು ಈ ಕಾರ್ಯದಿಂದ ವಿಮುಖನನ್ನಾಗಿಸುವ ಅಂತಹ ಯಾವ ವ್ಯಕ್ತಿಯನ್ನೂ ನಾನು ಈ ಲೋಕದಲ್ಲಿ ಕಾಣುತ್ತಿಲ್ಲ.
ಇತಿ ಮೇ ನಿಶ್ಚಿತಾ ಬುದ್ಧಿರೇಷಾ ಸಾಧುತಮಾ ಚ ಮೇ ॥35॥
ಈ ರೀತಿಯಾಗಿ ನನ್ನ ವಿಚಾರವು ನಿಶ್ಚಿತವಾಗಿದೆ, ನನಗೆ ಇದೇ ಸರಿಯಾದದ್ದು ಎಂದು ತೋರುತ್ತಿದೆ.
ವಾದಿಕೈಃ ಕಥ್ಯಮಾನಸ್ತು ಮಿತ್ರಾಣಾಂ ಮೇ ಪರಾಭವಃ |
ಪಾಂಡವಾನಾಂ ಚ ವಿಜಯೋ ಹೃದಯಂ ದಹತೀವ ಮೇ ॥36॥
ನನ್ನ ಮಿತ್ರರು ಸೋತರು, ಪಾಂಡವರು ಗೆದ್ದರು ಎಂದು ಸುದ್ದಿಗಾರರು ಹೇಳುತ್ತಿರಲಾಗಿ ನನ್ನ ಹೃದಯವನ್ನು ಸುಟ್ಟಂತಾಯಿತು.
ಅಹಂ ತು ಕದನಂ ಕೃತ್ವಾ ಶತ್ರೂಣಾಮದ್ಯ ಸೌಪ್ತಿಕೇ |
ತತೋ ವಿಶ್ರಮಿತಾ ಚೈವ ಸ್ವಪ್ತಾ ಚ ವಿಗತಜ್ವರಃ ॥37॥
ನಾನಂತು ಈಗಲೆ ಯುದ್ಧವನ್ನು ಮಾಡಿ, ಸುಪ್ತಿಯಲ್ಲಿರುವಾಗಲೇ ಶತ್ರುಗಳನ್ನು ಸಂಹರಿಸಿ, ತದನಂತರದಲ್ಲಿ ಉದ್ವೇಗವನ್ನು ಪರಿಹರಿಸಿಕೊಂಡು ಮಲಗುವೆನು, ವಿಶ್ರಾಂತಿಯನ್ನು ಹೊಂದುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ಅಶ್ವತ್ಥಾಮಕೃಪಸಂವಾದೋ ನಾಮ ಚತುರ್ಥೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯಃ
ಅನುಜಗ್ಮತುಸ್ತಾವಪಿ ತಂ ಶಿಬಿರದ್ವಾರಿ ಚೈಕ್ಷತ |
ಉಗ್ರರೂಪಧರಂ ರುದ್ರ ಸ್ವಕೀಯಾಂ ತನುಮೇವ ಸಃ ॥
ಕೃಪ ಕೃತವರ್ಮರೂ ಅಶ್ವತ್ಥಾಮನನ್ನು ಹಿಂಬಾಲಿಸಿದರು. ಅಶ್ವತ್ಥಾಮನು ಶಿಬಿರದ ದ್ವಾರದಲ್ಲಿ ತನ್ನ ಸ್ವರೂಪನೇ ಆದ ರುದ್ರನನ್ನು ಕಂಡನು.
* * * * *
ಐದನೆಯ ಅಧ್ಯಾಯ
ಮಲಗಿದವರನ್ನು ಸಂಹರಿಸುವುದು ಅಧರ್ಮ ಎಂದು ಕೃಪರು ತಿಳಿಹೇಳಿದರೂ, ತಂದೆಯ ಮರಣದಿಂದ ಕುಪಿತನಾದ ಅಶ್ವತ್ಥಾಮನು ಶತ್ರುಗಳನ್ನು ಸಂಹರಿಸಬೇಕೆಂಬ ಬಯಕೆಯಿಂದ ಶತ್ರುಗಳ ಶಿಬಿರದೆಡೆಗೆ ಸಾಗಿದನು ಸ್ನೇಹದಿಂದ ಕೃಪ-ಕೃತವರ್ಮರೂ ಆತನನ್ನು ಹಿಂಬಾಲಿಸಿದರು.
ಕೃಪಃ
ಅಶಿಶ್ರೂಷುಃ ಸುದುರ್ಮೇಧಾಃ ಪುರುಷೋऽನಿಯತೇಂದ್ರಿಯಃ |
ನಾಲಂ ವೇದಯಿತುಂ ಕೃತ್ಸ್ನೌ ಧರ್ಮಾರ್ಥಾವಿತಿ ಮೇ ಮತಿಃ ॥1॥
ಕೃಪ ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳದವನು, ಕೆಟ್ಟವಿಚಾರವನ್ನು ಹೊಂದಿದವನು, ಉಪದೇಶವನ್ನು ಕೇಳಲು ಮನವಿಲ್ಲದವನು ಸರಿಯಾದ ಧರ್ಮಾರ್ಥಗಳನ್ನು ತಿಳಿಯಲು ಸಮರ್ಥನಾಗುವದಿಲ್ಲ ಎಂದು ನನ್ನ ಭಾವನೆ.
ತಥೈವ ತಾವನ್ಮೇಧಾವೀ ವಿನಯಂ ಯೋ ನ ಶಿಕ್ಷತಿ |
ನ ಕಥಂಚನ ಜಾನಾತಿ ಸೋऽಪಿ ಧರ್ಮಾರ್ಥನಿಶ್ಚಯಮ್ ॥2॥
ಅದೇರೀತಿಯಲ್ಲಿ ಮೇಧಾವಿಯಾಗಿದ್ದರೂ ಯಾವಾತನು ವಿನಯವನ್ನು ಅರಿತಿಲ್ಲವೋ ಅಂತಹವನೂ ಸಹ ಯಾವ ರೀತಿಯಲ್ಲೂ ಧರ್ಮಾರ್ಥಗಳನ್ನು ತಿಳಿಯಲಾರ.
ಮುಹೂರ್ತಮಪಿ ತಂ ಪ್ರಾಜ್ಞಃ ಪಂಡಿತಂ ಪರ್ಯುಪಾಸ್ಯ ಹಿ |
ಕ್ಷಿಪ್ರಂ ಧರ್ಮಂ ವಿಜಾನಾತಿ ಜಿಹ್ವಾ ಸೂಪರಸಾನಿವ ॥3॥

ತಿಳಿದವನು (ತನ್ನ ಜೀವಮಾನದಲ್ಲಿ) ಒಂದು ಮುಹೂರ್ತವಾದರೂ ಆ ಪಂಡಿತರನ್ನು ಸೇವಿಸಿದಲ್ಲಿ, ಅಂತಹ ವ್ಯಕ್ತಿಯು ನಾಲಿಗೆಯು ತೊವ್ವೆಯ ರಸವನ್ನು ಗ್ರಹಿಸಿದಂತೆ, ಕೂಡಲೇ ಧರ್ಮವನ್ನು ಅರಿಯುವನು.
ವ್ಯಾಖ್ಯಾನ ವಿಶೇಷ
ಚಿರಂಚಾಪಿ ಜಡಃ ಶೂರಃ ಪಂಡಿತಂ ಪರ್ಯುಪಾಸ್ಯಹಿ |
ನ ಸ ಧರ್ಮಾನ್ವಿಜಾತಾನಿ ದರ್ವೀ ಸೂಪರಸಾನಿವ || (ನೀಲಕಂಠೀಯ ಪಾಠ)
ಸೌಟು ತೊವ್ವೆಯ ರಸವನ್ನು ಹೇಗೆ ತಿಳುಯಲಾರದೋ ಹಾಗೆ, ಶೂರನಾಗಿದ್ದರೂ, ಯಾವಾತನು ಜಡನೋ ಆತನು ಪಂಡಿತರನ್ನು ಹೆಚ್ಚಾಗಿ ಸೇವಿಸಿದರೂ ಧರ್ಮವನ್ನು ತಿಳಿಯಲಾರ.
ಶುಶ್ರೂಷುಸ್ತ್ವೇವ ಮೇಧಾವೀ ಪುರುಷೋ ನಿಯತೇಂದ್ರಿಯಃ |
ಜಾನೀಯಾದಾಗಮಾನ್ ಸರ್ವಾನ್ ಗ್ರಾಹ್ಯಂ ಚ ನ ವಿರೋಧಯೇತ್ ||
ಜಿತೇಂದ್ರಿಯನಾದ, ಉಪದೇಶವನ್ನು ಕೇಳಲು ಬಯಸುವ ಮೇಧಾವಿಯೇ ಎಲ್ಲ ಉಪದೇಶಗಳನ್ನು ತಿಳಿಯುವನು, ಮತ್ತು ತಿಳಿದಿದ್ದನ್ನು ವಿರೋಧಿಸಲಾರನು.
ಅನೇಯಸ್ತ್ವತಿಮಾನೀ ಚ ದುರಾತ್ಮಾ ಪಾಪಪೂರುಷಃ |
ಧೃಷ್ಟಮುತ್ಸೃಜ್ಯ ಕಲ್ಯಾಣಂ ಕರೋತಿ ಬಹುಪಾತಕಮ್ ||5||
ನೀತಿಮಾರ್ಗದಲ್ಲಿರದ ದುರಭಿಮಾನಿಯಾದ ದುಷ್ಟಸ್ವಭಾವದ ಪಾಪಿ ಮನುಜನು ಸದುಪದೇಶವನ್ನು, ಸನ್ಮಾರ್ಗವನ್ನು ಬಿಟ್ಟು, ಭಾರೀ ಪಾಪವನ್ನು ಆಚರಿಸುವನು.
ನಾಥವಂತಂ ತು ಸುಹೃದಂ ಪ್ರತಿಷೇಧತಿ ಪಾತಕಾನ್ |
ನಿವರ್ತತೇ ಚ ಲಕ್ಷ್ಮೀವಾನ್ ನಾಲಕ್ಷ್ಮೀವಾನ್ ನಿವರ್ತತೇ ||6||
ನಿಯಮನಕ್ಕೆ ಒಳಗಾಗುವ (ತಿಳಿಹೇಳಿದ ಮಾತನ್ನು ಕೇಳುವ) ಮಿತ್ರನನ್ನು (ಹಿತೈಷಿಯು) ಪಾತಕದಿಂದ ತಡೆಯುತ್ತಾನೆ, ಅದೃಷ್ಟಶಾಲಿಯು ನಿವೃತ್ತನಾಗುವನು, ಅದೃಷ್ಟಹೀನನು ಹಿಂತಿರುಗುವುದಿಲ್ಲ.
ಯಥಾ ಹ್ಯುಚ್ಚಾವಚೈರ್ವಾಕ್ಯೈಃ ಕ್ಷಿಪ್ತಚಿತ್ತೋ ನಿಯಮ್ಯತೇ |
ತಥೈವ ಸುಹೃದಾ ಶಕ್ಯಸ್ತ್ವಶಕ್ಯಸ್ತ್ವವಸೀದತಿ ||7||
ಗೊಂದಲಕ್ಕೆ ಒಳಗಾದವನನ್ನು (ಆತನ ಸ್ನೇಹಿತರು) ಮೃದುಮಾತಿನಿಂದ ಕಠಿನಮಾತುಗಳಿಂದ ನಿಯಮಿಸುವರು, (ಅದೃಷ್ಟಶಾಲಿಯಾದವನು) ಸ್ನೇಹಿತರಿಂದ ನಿಯಂತ್ರಣಕ್ಕೆ ಒಳಗಾಗುವನು, (ಅದೃಷ್ಟಹೀನನು) ನಿಯಂತ್ರಣಕ್ಕೆ ಒಳಗಾಗದೆ ನಾಶವಾಗುವನು.
ತಥೈವ ಸುಹೃದೋಽಪ್ರಾಜ್ಞಾನ್ ಕುರ್ವಾಣಾನ್ ಕರ್ಮ ಪಾಪಕಮ್ |
ಪ್ರಾಜ್ಞಾಃ ಸಂಪ್ರತಿಷೇಧಂತೇ ಯಥಾಶಕ್ತಿ ಪುನಃ ಪುನಃ ||8||
ಇದೇ ರೀತಿಯಲ್ಲಿ ಮೂರ್ಖತನದಿಂದ ಪಾಪಕರ್ಮವನ್ನು ಮಾಡುವ ಸ್ನೇಹಿತರನ್ನು ಪ್ರಾಜ್ಞರಾದವರು ಶಕ್ತಿಮೀರಿ ಪುನಃ ಪುನಃ ತಡೆಯುವರು.
ಸ ಕಲ್ಯಾಣಂ ಮನಃ ಕೃತ್ವಾ ನಿಯಮ್ಯಾತ್ಮಾನಮಾತ್ಮನಾ |
ಕುರು ಮೇ ವಚನಂ ತಾತ ಯೇನ ಪಶ್ಚಾನ್ನ ತಪ್ಸ್ಯಸೇ ||9||
ಪುತ್ರನೆ! ಬುದ್ಧಿಯಿಂದ ಮನವನ್ನು ನಿಯಂತ್ರಿಸು, ಮನವನ್ನು ಮಂಗಳದೆಡೆಗೆ ಮಾಡು, ನನ್ನ ಮಾತನ್ನು ಅನುಸರಿಸು, ಇದರಿಂದ ಮುಂದೆ ಪರಿತಪಿಸಲಾರಿ.
ನ ವಧಃ ಪೂಜ್ಯತೇ ಲೋಕೇ ಸುಪ್ತಾನಾಮಿಹ ಧರ್ಮತಃ |
ತಥೈವ ನ್ಯಸ್ತಶಸ್ತ್ರಾಣಾಂ ವಿಮುಕ್ತರಥವಾಜಿನಾಮ್ ||10||
ಯೇ ಚ ಬ್ರೂಯುಸ್ತವಾಸ್ಮೀತಿ ಯೇ ಚ ಸ್ಯುಃ ಶರಣಾಗತಾಃ |
ವಿಮುಕ್ತಮೂರ್ಧಜಾ ಯೇ ಚ ಯೇ ಚಾಪಿ ಹತವಾಹನಾಃ ||11||
ಮಲಗಿದವರನ್ನು, ಹಾಗೆ ಅಸ್ತ್ರವನ್ನು ಕೆಳಗಿಟ್ಟವರನ್ನು, ರಥದಿಂದ ಕುದುರೆಯನ್ನು ಬಿಚ್ಚಿದವರನ್ನು, `ನಾನು ನಿನ್ನವ' ಎಂದು ಹೇಳುವವರನ್ನು, ಶರಣಾದವರನ್ನು ತಲೆಯ ಕೂದಲನ್ನು ಹರಡಿಕೊಂಡವರನ್ನು, ವಾಹನವನ್ನು ಕಳೆದುಕೊಂಡವರನ್ನು ಸಂಹರಿಸುವುದು ಧರ್ಮದ ದೃಷ್ಟಿಯಲ್ಲಿ ಈ ಲೋಕದಲ್ಲಿ ಯೋಗ್ಯವಾಗಲಾರದು.
ಅದ್ಯ ಸ್ವಪ್ಸ್ಯಂತಿ ಪಾಂಚಾಲಾ ವಿಮುಕ್ತಕವಚಾಃ ಪ್ರಭೋ |
ವಿಶ್ವಸ್ತಾ ರಜನೀಂ ಸರ್ವೇ ಪ್ರೇತಾ ಇವ ವಿಚೇತಸಃ ||12||
ನಾಯಕನೆ! ಈಗ, ರಾತ್ರಿಯಾದುದರಿಂದ ನಿಶ್ಚಿಂತೆಯಿಂದ ಕವಚವನ್ನು ಕಳಚಿ ಪಾಂಚಾಲರು, ಜೀವರಹಿತವಾದ ಶವಗಳಂತೆ (ಮೈಮರೆತು) ನಿದ್ರಿಸಿರುತ್ತಾರೆ.
ಯಸ್ತೇಷಾಂ ತದವಸ್ಥಾನಾಂ ದ್ರುಹ್ಯತೇ ಪುರುಷೋಽನೃಜುಃ |
ವ್ಯಕ್ತಂ ಸ ನರಕೇ ಮಜ್ಜೇದ್ ಅಗಾಧೇ ವಿಪುಲೇಽಪ್ಲವೇ ||13||
ನೇರ ವರ್ತನೆಯಿಲ್ಲದ ಯಾವ ವ್ಯಕ್ತಿಯು, ಆ ಅವಸ್ಥೆಯಲ್ಲಿರುವ ಅವರಿಗೆ (ಪಾಂಚಾಲರಿಗೆ)ದ್ರೋಹವನ್ನು ಬಗೆಯುವನೋ, ಆತನು ನಿಶ್ಚಯವಾಗಿಯೂ ಮೇಲೇಳಲು ಶಕ್ಯವಿಲ್ಲದ ವಿಶಾಲವಾದ ಭೀಕರವಾದ ನರಕದಲ್ಲಿ ಬೀಳುವನು.
ಸರ್ವಾಸ್ತ್ರವಿದುಷಾಂ ಲೋಕೇ ಶ್ರೇಷ್ಠಸ್ತ್ವಮಸಿ ವಿಶ್ರುತಃ |
ನ ಚ ತೇ ಜಾತು ಲೋಕೇಽಸ್ಮಿನ್ ಸುಸೂಕ್ಷ್ಮಮಪಿ ಕಿಲ್ಬಿಷಮ್ ||14||
ಲೋಕದಲ್ಲಿ `ಎಲ್ಲ ಅಸ್ತ್ರಗಳನ್ನು ಬಲ್ಲವರಲ್ಲಿ ಹಿರಿಯ' ಎಂದು ನೀನು ಖ್ಯಾತನಾಗಿರುವಿ. ನೀನೂ ಎಂದೂ ಸಣ್ಣದಾದ ಪಾಪವನ್ನೂ

ಸಹ ಈ ಜನ್ಮದಲ್ಲಿ ಮಾಡಿಲ್ಲ.
ತ್ವಂ ಪುನಃ ಸೂರ್ಯಸಂಕಾಶಃ ಶ್ವೋಭೂತ ಉದಿತೇ ರವೌ |
ಪ್ರಕಾಶೇ ಸರ್ವಭೂತಾನಾಂ ವಿಜೇತಾ ಯುಧಿ ಶಾತ್ರವಾನ್ ||15||
ಸೂರ್ಯನಂತಿರುವ ನೀನು ಬೆಳಗಾಗುತ್ತಿರಲು ಸೂರ್ಯನು ಉದಯಿಸಲು ಬೆಳಕಿನಲ್ಲಿ ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿ ಎಲ್ಲ ಶತ್ರುಗಳನ್ನು ಗೆಲ್ಲುವವನಾಗು.
ಅಸಂಭಾವಿತರೂಪಂ ಹಿ ತ್ವಯಿ ಕರ್ಮ ವಿಗರ಼್ಹಿತಮ್ |
ಶುಕ್ಲೇ ರಕ್ತಮಿವ ನ್ಯಸ್ತಂ ಭವೇದಿತಿ ಮತಿರ್ಮಮ ||16||
ಅದರಂತೆ ನಿಂದ್ಯವಾದ ಕರ್ಮವು ನಿನ್ನಲ್ಲಿ ಸಂಭಾವಿತವಲ್ಲ ಎಂದೇ ನನ್ನ ಅಭಿಮತ. (ಒಂದು ವೇಳೆ ನೀನು ಈ ಕುಕರ್ಮವನ್ನು ಮಾಡಿದಲ್ಲಿ) ಬಿಳಿಯ ವಸ್ತ್ರದಲ್ಲಿ ಕೆಂಪು ಚುಕ್ಕೆ ಇಟ್ಟಂತಾದೀತು!
ಅಶ್ವತ್ಥಾಮಾ
ಏವಮೇತದ್ ಯಥಾಽಽತ್ಥ ತ್ವಮನುಶಾಸಸಿ ಮಾತುಲ |
ತೈಸ್ತು ಧರ್ಮೋ ಹ್ಯಯಂ ಸೇತುಃ ಶತಧಾ ವಿದಳೀಕೃತಃ ||17||
ಅಶ್ವತ್ಥಾಮ ಸೋದರಮಾವ! ನೀನು ನಿಯಂತ್ರಿಸುತ್ತಿರುವಿ, ನೀನು ಏನು ಹೇಳುತ್ತಿರುವಿಯೋ ಅದೆಲ್ಲವು ಸತ್ಯ. ಆದರೆ ಅವರು (ಪಾಂಡವರು) ಈ ಧರ್ಮದ ಮರ್ಯಾದೆಯನ್ನು ನೂರಾರು ಚೂರನ್ನಾಗಿಸಿರುವರು (ಎಲ್ಲ ಯುದ್ಧನಿಯಮಗಳನ್ನು ಮೀರಿದಿರುವರು).
ಪ್ರತ್ಯಕ್ಷಂ ಭೂಮಿಪಾಲಾನಾಂ ಭವತಾಂ ಚಾಪಿ ಸನ್ನಿಧೌ |
ನ್ಯಸ್ತಶಸ್ತ್ರೋ ಮಮ ಪಿತಾ ಧೃಷ್ಟದ್ಯುಮ್ನೇನ ಪಾತಿತಃ ||18||
ರಾಜರ ಮತ್ತು ನಿಮ್ಮ ಸಮಕ್ಷಮದಲ್ಲಿಯೇ ಅಸ್ತ್ರವನ್ನು ತ್ಯಜಿಸಿದ ನನ್ನ ತಂದೆಯನ್ನು ಧೃಷ್ಟದ್ಯುಮ್ನನು ಕೆಡಹಿದನು.
ಕರ್ಣಶ್ಚ ಪತಿತೇ ಚಕ್ರೇ ಉತ್ತಾರ್ಯನ್ ರಥಿನಾಂ ವರಃ |
ಉತ್ತಮೇ ವ್ಯಸನೇ ಮಗ್ನೋ ಹತೋ ಗಾಂಡೀವಧನ್ವನಾ ||19||
ರಥಿಕರಲ್ಲಿ ಶ್ರೇಷ್ಠನಾದ ಕರ್ಣನಾದರೋ ಚಕ್ರಗಳನ್ನು ಮೇಲೆತ್ತುತ್ತಿರಲಾಗಿ, ದೊಡ್ಡ ಆಪತ್ತಿನಲ್ಲಿರುವಾಗ ಗಾಂಡೀವ ಧನುರ್ಧಾರಿಯಾದ ಅರ್ಜುನನು ಸಂಹರಿಸಿದನು.
ತಥಾ ಶಾಂತನವೋ ಭೀಷ್ಮೋ ನ್ಯಸ್ತಶಸ್ತ್ರೋ ನಿರಾಯುಧಃ |
ಶಿಖಂಡಿನಂ ಪುರಸ್ಕೃತ್ಯ ಹತೋ ಗಾಂಡೀವಧನ್ವನಾ ||20||
ಹಾಗೆಯೇ ಶಸ್ತ್ರವನ್ನು ಕೆಳಗೆ ಇಟ್ಟ ಆಯುಧರಹಿತನಾದ ಭೀಷ್ಮನನ್ನು ಶಿಖಂಡಿಯನ್ನು ಮುಂದೆಮಾಡಿಕೊಂಡು ಗಾಂಡೀವ ಧನುರ್ಧಾರಿಯು ಸಂಹರಿಸಿದನು.
ಭೂರಿಶ್ರವಾ ಮಹೇಷ್ವಾಸಃ ತಥಾ ಪ್ರಾಯಗತೋ ರಣೇ |
ಕ್ರೋಶತಾಂ ಭೂಮಿಪಾಲಾನಾಂ ಯುಯುಧಾನೇನ ಪಾತಿತಃ ||21||
ಹಾಗೆಯೇ (ಕೂಡದು ಕೂಡದು ಎಂದು) ಭೂಮಿಪಾಲರು ಅರಚುತ್ತಿದ್ದರೂ ಸಹ ಒಳ್ಳೆ ಬಿಲ್ಗಾರನಾದ, ಪ್ರಾಯೋಪವೇಶಕ್ಕೆ ಕುಳಿತ ಭೂರಿಶ್ರವನನ್ನು, ಸಾತ್ಯಕಿಯು ಸಂಹರಿಸಿದನು.
ಏಕಾಕೀ ಬಹುಭಿಸ್ತತ್ರ ಪರಿವಾರ್ಯ ಮಹಾರಥೈಃ |
ಅಧರ್ಮೇಣ ನರವ್ಯಾಘ್ರೋ ಭೀಮಸೇನೇನ ಪಾತಿತಃ ||22||
ಅನೇಕ ಮಹಾರಥಿಕರಿಂದ ಸುತ್ತುವರೆದ ಒಬ್ಬಂಟಿಗನಾದ ಪುರುಷಶ್ರೇಷ್ಠನನ್ನು (ದುರ್ಯೋಧನನನ್ನು) ಭೀಮಸೇನನಿಂದ ಅಧರ್ಮದಿಂದ ಕೆಡಹಲಾಯಿತು.
ವಿಲಾಪೋ ಭಗ್ನಸಕ್ಥಸ್ಯ ಯೋ ಮೇ ರಾಜ್ಞಃ ಪರಿಶ್ರುತಃ |
ವಾದಿಕಾನಾಂ ಕಥಯತಾಂ ಸ ಮೇ ಮರ್ಮಾಣಿ ಕೃಂತತಿ ||23||
`ತೊಡೆಮುರಿದುಕೊಂಡಿರುವ ರಾಜನ (ದುರ್ಯೋಧನನ) ರೋದನವನ್ನು ನಾನು ಕೇಳಿದೆನು' ಎಂದು ವಾರ್ತಾಹಾರಕರು ಹೇಳುತ್ತಿರಲಾಗಿ ಅದು ನನ್ನ ಮರ್ಮವನ್ನು ಕತ್ತರಿಸುವುದು.
ಏವಂ ಚಾಧಾರ್ಮಿಕಾಃ ಪಾಪಾಃ ಪಾಂಚಾಲಾ ಭಿನ್ನಸೇತವಃ |
ತಾನೇವಂ ಭಿನ್ನಮರ್ಯಾದಾನ್ ಕಿಂ ಭವಾನ್ ನ ವಿಗರ್ಹತಿ ||24||
ಈ ರೀತಿಯಾಗಿ ಅಧಾರ್ಮಿಕರಾದ, ಧರ್ಮದ ಎಲ್ಲೆಯನ್ನು ಮೀರಿದ ಪಾಪಿಗಳಾದವರು ಪಾಂಚಾಲರು, ಈ ರೀತಿಯಾಗಿ ಧರ್ಮದ ಎಲ್ಲೆಯನ್ನು ಮೀರಿದ ಅವರನ್ನು ನೀನು ಏಕೆ ನಿಂದಿಸುವುದಿಲ್ಲ?
ಪಿತೃಹಂತೄನಹಂ ಹತ್ವಾ ಪಾಂಚಾಲಾನ್ ನಿಶಿ ಸೌಪ್ತಿಕೇ |
ಕಾಮಂ ಕೀಟಃ ಪತಂಗೋ ವಾ ಜನ್ಮ ಪ್ರಾಪ್ಯ ಭವಾಮಿ ವೈ ||25||
(ಎಲ್ಲರೂ) ಮಲಗಿರುವ ಈ ರಾತ್ರಿಯಲ್ಲಿ ತಂದೆಯನ್ನು ಸಂಹರಿಸಿದ ಪಾಂಚಾಲರನ್ನು ಸಂಹರಿಸಿ, ಬೇಕಾದಲ್ಲಿ (ಅದರ ಫಲವಾಗಿ) ಹುಳವೋ ದುಂಬಿಯೋ ಆಗಿ ಜನ್ಮವನ್ನು ತಾಳುವೆ.
ತ್ವರೇ ಚಾಹಮನೇನಾದ್ಯ ಯದಿದಂ ಮೇ ಚಿಕೀರ್ಷಿತಮ್ |
ತಸ್ಯ ಮೇ ತ್ವರಮಾಣಸ್ಯ ಕುತೋ ನಿದ್ರಾ ಕುತಃ ಸುಖಮ್ ||26||
ಈಗ ಯಾವುದನ್ನೋ ಮಾಡಬೇಕೆಂದು ನಾನು ಅವಸರಿಸುತ್ತಿರುವೆ. ಹೀಗೆ ಅವಸರಿಸುತ್ತಿರುವ ನನಗೆ ನಿದ್ರೆ ಎಲ್ಲಿ ? ಸುಖ ಎಲ್ಲಿ?
ನ ಸ ಜಾತಃ ಪುಮಾನ್ ಲೋಕೇ ಕಶ್ಚಿನ್ನ ಚ ಭವಿಷ್ಯತಿ |
ಯೋ ಮೇ ವ್ಯಾವರ್ತಯೇದೇತಾಂ ವಧೇ ತೇಷಾಂ ಕೃತಾಂ ಮತಿಮ್ ||

ಅವರ (ಪಾಂಚಾಲರ) ಸಂಹಾರವನ್ನು ಮಾಡಲು ನಿಶ್ಚಯಿಸಿರುವ, ನನ್ನ ನಿರ್ಧಾರವನ್ನು ಬದಲಿಸುವ ಯಾವ ಮನುಜನು ಈ ಲೋಕದಲ್ಲಿ ಈ ಹಿಂದೆ ಹುಟ್ಟಿಲ್ಲ, ಇನ್ನು ಮುಂದೆ ಹುಟ್ಟಲಾರನು.
ಸಂಜಯಃ
ಏವಮುಕ್ತ್ವಾ ಮಹಾರಾಜ ದ್ರೋಣಪುತ್ರಃ ಪ್ರತಾಪವಾನ್ |
ಏಕಾಂತೇ ಯೋಜಯಿತ್ವಾಽಶ್ವಾನ್ ಪ್ರಾಯಾದಭಿಮುಖಃ ಪರಾನ್ ||
ಸಂಜಯ ಮಹಾರಾಜ! ಪ್ರತಾಪಶಾಲಿಯಾದ ದ್ರೋಣಪುತ್ರನು ಹೀಗೆ ಹೇಳಿ ರಹಸ್ಯವಾಗಿ ಕುದುರೆಗಳನ್ನು (ರಥಕ್ಕೆ) ಹೂಡಿ, ಶತ್ರುಗಳೆಡೆಗೆ ಸಾಗಿದನು.
ತಮಬ್ರೂತಾಂ ಮಹಾಭಾಗೌ ಭೋಜಶಾರದ್ವತಾವುಭೌ ||29||
ಮಹಾತ್ಮರಾದ ಭೋಜವಂಶಜನು (ಕೃತವರ್ಮನು) ಶಾರದ್ವತನು (ಕೃಪನು) ಆತನನ್ನು ಉದ್ದೇಶಿಸಿ ಹೇಳಿದರು.
ಕೃಪಕೃತವರ್ಮಾಣೌ
ಕಿಮಯಂ ಸ್ಯಂದನೋ ಯುಕ್ತಃ ಕಿಂ ಚ ಕಾರ್ಯಂ ಚಿಕೀರ್ಷಿತಮ್ ||
ಕೃಪ ಕೃತವರ್ಮರು ಈ ರಥವನ್ನು ಏರಿ ಯಾವ ಕಾರ್ಯವನ್ನು ಮಾಡಬೇಕೆಂದು ಬಯಸಿರುವಿ?
ಏಕಸಾರ್ಥಂ ಪ್ರಯಾತಾಃ ಸ್ಮ ತ್ವಯಾ ಸಹ ನರರ್ಷಭ |
ಸಮದುಃಖಸುಖಾಶ್ಚೈವ ತಸ್ಮಾನ್ನಾಶಂಕಿತುಮರ್ಹಸಿ ||31||
ಪುರುಷಶ್ರೇಷ್ಠನೇ! ನಿನ್ನಿಂದ ಒಡಗೂಡಿಕೊಂಡು ಒಂದೇ ವಾಹನದಲ್ಲಿ ಪ್ರಯಾಣಿಸುತ್ತಿರುವೆವು. ಸುಖದುಃಖದಲ್ಲಿ ನಿನಗೆ ನಾವೂ ಸಮಾನರು, ಆದ್ದರಿಂದ ನಮ್ಮ ಮಾತನ್ನು ಆಲಿಸುವವನಾಗು.
ಸಂಜಯಃ
ಅಶ್ವತ್ಥಾಮಾ ತು ಸಂಕ್ರುದ್ಧಃ ಪಿತುರ್ವಧಮನುಸ್ಮರನ್ |
ತಾಭ್ಯಾಂ ತಥ್ಯಂ ತಥಾಽಽಚಖ್ಯೌ ಯದಸ್ಯಾತ್ಮಚಿಕೀರ್ಷಿತಮ್ ||32||
ಸಂಜಯ ಅಶ್ವತ್ಥಾಮನಾದರೋ ತಂದೆಯ ಮರಣವನ್ನು ಸ್ಮರಿಸುತ್ತಾ ಕೋಪಗೊಂಡವನಾಗಿ ಅವರೀರ್ವರಿಗೆ ತಾನು ಮಾಡಲು ಬಯಸಿದ ಸತ್ಯವನ್ನು ಹಾಗೆಯೇ ಹೇಳಿದನು.
ದ್ರೌಣಿಃ
ಹತ್ವಾ ಶತಸಹಸ್ರಾಣಿ ಯೋಧಾನಾಂ ನಿಶಿತೈಃ ಶರೈಃ |
ನ್ಯಸ್ತಶಸ್ತ್ರೋ ಮಮ ಪಿತಾ ಧೃಷ್ಟದ್ಯುಮ್ನೇನ ಪಾತಿತಃ ||33||
ಅಶ್ವತ್ಥಾಮ ಲಕ್ಷಾಂತರ ಯೋಧರನ್ನು ನಿಶಿತವಾದ ಬಾಣಗಳಿಂದ ಸಂಹರಿಸಿ, ಶಸ್ತ್ರವನ್ನು ತ್ಯಜಿಸಿದ್ದನು, ಅಂತಹ ನನ್ನ ತಂದೆಯನ್ನು ಧೃಷ್ಟದ್ಯುಮ್ನನು ಸಂಹರಿಸಿದನು.
ತಂ ತಥೈವ ಹನಿಷ್ಯಾಮಿ ನ್ಯಸ್ತವರ್ಮಾಣಮಾಹವೇ |
ಪುತ್ರಂ ಪಾಂಚಾಲರಾಜಸ್ಯ ಪಾಪಂ ಪಾಪೇನ ಕರ್ಮಣಾ ||34||
ಪಾಂಚಾಲರಾಜನ ಪುತ್ರನಾದ ಆ ಪಾಪಿಯನ್ನು ಪಾಪಕರ್ಮದಿಂದಲೇ ಕವಚವನ್ನು ಪರಿತ್ಯಜಿಸಿದ ಸಂದರ್ಭದಲ್ಲಿಯೇ ಹಾಗೆಯೇ (ನನ್ನ ತಂದೆಯನ್ನು ಸಂಹರಿಸಿದಂತೆ) ಸಂಹರಿಸುವೆನು.
ಕಥಂ ವಿನಿಹತಃ ಪಾಪಃ ಪಾಂಚಾಲ್ಯಃ ಪಶುವನ್ಮಯಾ |
ಶಸ್ತ್ರಾಗ್ನಿವಿಜಿತಾನ್ ಲೋಕಾನ್ ಪ್ರಾಪ್ನುಯಾದಿತಿ ಮೇ ಮತಿಃ ||35||
ಪಾಪಿಯಾದ ಪಾಂಚಾಲಪುತ್ರನು ಪಶುವಿನಂತೆ ನನ್ನಿಂದ ಮೃತನಾಗಿ, ಹೇಗೆತಾನೆ ಶಸ್ತ್ರವೆಂಬ ಅಗ್ನಿಯಿಂದ ಪ್ರಾಪ್ತವಾಗುವ ಲೋಕಗಳನ್ನು ಹೊಂದುವನು? ಎಂದು ನನ್ನ ಭಾವನೆ. (ಆತನಿಗೆ ಅಪಮೃತ್ಯುವಿನಿಂದ ನರಕವಾಗಲಿ ಎಂದು ಭಾವ).
ಕ್ಷಿಪ್ರಂ ಸನ್ನದ್ಧಕವಚೌ ಸಖೌ ಸಹಕಾರ್ಮುಕೌ |
ಮಾಮಾಸ್ಥಾಯ ಪ್ರತೀಕ್ಷೇತಾಂ ರಥಸ್ಥೌ ಚ ಪರಂತಪೌ ||36||
ಶತ್ರುತಾಪಕರಾದ ರಥಿಕರಾದ ನೀವೀರ್ವರು ಕೂಡಲೆ ಕವಚವನ್ನು ಧರಿಸಿ, ಖಡ್ಗಸಹಿತರಾಗಿ ಬಿಲ್ಲನ್ನು ಹಿಡಿದವರಾಗಿ ನನ್ನೊಡನೆ ಇದ್ದು, ನನ್ನನ್ನು ನಿರೀಕ್ಷಿಸಿರಿ
ಸಂಜಯಃ
ಇತ್ಯುಕ್ತ್ವಾ ರಥಮಾಸ್ಥಾಯ ಪ್ರಾಯಾದಭಿಮುಖಃ ಪರಾನ್ |
ತಮನ್ವಗಾತ್ ಕೃಪೋ ರಾಜನ್ ಕೃತವರ್ಮಾ ಚ ಸಾತ್ವತಃ ||37||
ಸಂಜಯ ರಾಜನೆ! (ಅಶ್ವತ್ಥಾಮನು) ಈ ರೀತಿಯಾಗಿ ಹೇಳಿ ರಥವನ್ನೇರಿ ಶತ್ರುಗಳಿಗೆ ಅಭಿಮುಖವಾಗಿ ಹೊರಟನು. ಸಾತ್ವತಕುಲೋತ್ಪನ್ನನಾದ ಕೃತವರ್ಮನು ಮತ್ತು ಕೃಪನು ಆತನನ್ನು ಅನುಸರಿಸಿದರು.
ತೇ ಪ್ರಯಾತಾ ವ್ಯರೋಚಂತ ಪರಾನಭಿಮುಖಾಸ್ತ್ರಯಃ |
ಹೂಯಮಾನಾ ಯಥಾ ಯಜ್ಞೇ ಸಮಿದ್ಧಾ ಹವ್ಯವಾಹನಾಃ ||38||
ಶತ್ರುಗಳಿಗೆ ಅಭಿಮುಖವಾಗಿ ಹೊರಟ ಆ ಮೂವರು, ಯಜ್ಞದಲ್ಲಿ ಸಮಿಧೆಗಳಿಂದ ಹೋಮಿಸಿರುವ ಅಗ್ನಿಯಂತೆ ಪ್ರಕಾಶಿಸಿದರು.
ಯಯುಶ್ಚ ಶಿಬಿರಂ ತೇಷಾಂ ಸಂಪ್ರಸುಪ್ತಜನಂ ವಿಭೋ |
ದ್ವಾರದೇಶಂ ಸಮಾಸಾದ್ಯ ದ್ರೌಣಿಸ್ತಸ್ಥೌ ರಥೋತ್ತಮೇ ||39||
ಪ್ರಭುವೆ! ಅವರು ಗಾಢನಿದ್ರೆಯಲ್ಲಿ ಮಲಗಿದ ಜನರ ಆ ಶಿಬಿರಕ್ಕೆ ಹೋದರು. ದ್ವಾರದ ಭಾಗಕ್ಕೆ ಬಂದ ದ್ರೋಣಪುತ್ರನು ಶ್ರೇಷ್ಠರಥದಲ್ಲಿ ನಿಂತನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ಅಶ್ವತ್ಥಾಮ್ನಃ ಶಿಬಿರಪ್ರವೇಶಂ ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *

ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಪರೀತಂ ವಾಸುದೇವೇನ ಬಹುಕೋಟಿಸ್ವರೂಪಿಣಾ |
ದೃಷ್ಟ್ವೈವ ವಾಸುದೇವಂ ತಮತ್ರಸದ್ ಗೌತಮೀಸುತಃ ॥
ರುದ್ರ ಆಗ ಉಗ್ರರೂಪ ಧರಿಸಿದ್ದನು. ಬಹುಕೋಟಿ ರೂಪನಾದ ಕೃಷ್ಣನಿಂದ ಸುತ್ತುವರಿಯಲ್ಪಟ್ಟಿದ್ದನು. ಅಶ್ವತ್ಥಾಮ ಕೃಷ್ಣನನ್ನು ಕಂಡೇ ಭಯಗ್ರಸ್ಥನಾದನು.
ವಾಸುದೇವಾಜ್ಞಯೈವಾತ್ರ ಸ್ವಾತ್ಮನಾಽಪಿ ಸದಾಶಿವಃ |
ಅಯುದ್ಧ್ಯದಗ್ರಸಚ್ಚಾಽಶು ದ್ರೌಣೇಃ ಸರ್ವಾಯುಧಾನ್ಯಪಿ |
ಅಚಿಂತ್ಯಾ ಹರಿಶಕ್ತಿರ್ಯದ್ ದೃಶ್ಯಂತೇಽತ್ಮಹನೋಽಪಿ ಹಿ ॥
ಶ್ರೀಕೃಷ್ಣನ ಸಂಕಲ್ಪದಿಂದಲೆ ಸದಾಶಿವ ತನ್ನ ಸ್ವರೂಪನೆ ಆದ ಅಶ್ವತ್ಥಾಮನೊಡನೆ ಕಾದಿದ. ಅಶ್ವತ್ಥಾಮನ ಎಲ್ಲ ಆಯುಧಗಳನ್ನೂ ಬೇಗನೆ ನುಂಗಿದನು. ಹರಿಯ ಶಕ್ತಿ ಅಚಿಂತ್ಯ. ಏಕೆಂದರೆ ಅದರಿಂದ ಪ್ರೇರಿತರಾಗಿ ಆತ್ಮಹತ್ಯೆಯನ್ನೂ ಮಾಡಿಕೊಳ್ಳುವವರು ಕಂಡುಬರುತ್ತಾರೆ.
* * * * *
ಆರನೆಯ ಅಧ್ಯಾಯ
ಶಿಬಿರದ ದ್ವಾರದಲ್ಲಿ ಮಹಾಭೂತವನ್ನು ಅಶ್ವತ್ಥಾಮನು ಕಂಡನು, ಅದನ್ನು ಗೆಲ್ಲಲು ಅಶ್ವತ್ಥಾಮನಿಂದ ಪ್ರಯುಕ್ತವಾದ ಎಲ್ಲ ಅಸ್ತ್ರಗಳನ್ನು ಆ ಭೂತವು ನುಂಗಿತು. ಚಿಂತೆಗೆ ಒಳಗಾದ ಅಶ್ವತ್ಥಾಮನು ಮಹಾದೇವನನ್ನು ಉಪಾಸಿಸಿದನು.
ಧೃತರಾಷ್ಟ್ರಃ
ದ್ವಾರದೇಶೇ ತತೋ ದ್ರೌಣಿಮವಸ್ಥಿತಮವೇಕ್ಷ್ಯ ತೌ |
ಅಕುರ್ವತಾಂ ಭೋಜಕೃಪೌ ಕಿಂ ಸಂಜಯ ವದಸ್ವ ಮೇ ॥1॥
ಧೃತರಾಷ್ಟ್ರ ಸಂಜಯ! ಅನಂತರದಲ್ಲಿ (ಶಿಬಿರಿದ) ಬಾಗಿಲ ಬಳಿ ನಿಂತ ದ್ರೋಣ ಪುತ್ರನನ್ನು ಕಂಡ ಆ ಕೃಪ-ಕೃತವರ್ಮರು ಏನು ಮಾಡಿದರು? ಹೇಳು.
ಸಂಜಯಃ
ಕೃತವರ್ಮಾಣಮಾಮಂತ್ರ್ಯ ಕೃಪಂ ಚ ಸ ಮಹಾರಥಃ |
ದ್ರೌಣಿರ್ಮನ್ಯುಪರೀತಾತ್ಮಾ ಶಿಬಿರದ್ವಾರಮಾಸದತ್ ॥2॥
ಸಂಜಯ ಆ ಮಹಾರಥಿಕನಾದ, ಮೈಯೆಲ್ಲ ಕೋಪಗೊಂಡಿರುವ ದ್ರೋಣಪುತ್ರನು ಕೃಪ-ಕೃತವರ್ಮನನ್ನು ಕರೆದುಕೊಂಡು ಶಿಬಿರದ್ವಾರವನ್ನು ಸೇರಿದನು.
ತತ್ರ ಭೂತಂ ಮಹಾಕಾಯಂ ಚಂದ್ರಾಗ್ನಿಸಮವರ್ಚಸಮ್ |
ಸೋಽಪಶ್ಯದ್ ದ್ವಾರಮಾವೃತ್ಯ ತಿಷ್ಠಂತಂ ರೋಮಹರ್ಷಣಮ್ ॥3॥
ವಸಾನಂ ಚರ್ಮ ವೈಯಾಘ್ರಂ ವಸಾರುಧಿರವಿಸ್ರವಮ್ |
ಕೃಷ್ಣಾಜಿನೋತ್ತರಾಸಂಗಂ ನಾಗಯಜ್ಞೋಪವೀತಿನಮ್ ॥4॥
ಬಾಹುಭಿಃ ಸ್ವಾಯತೈರ್ಭೀಮೈಃ ನಾನಾಪ್ರಹರಣೋದ್ಯತೈಃ |
ಬದ್ಧಾಂಗದಮಹಾಸರ್ಪಂ ಜ್ವಾಲಾಮಾಲಾಕುಲಾನನಮ್ ॥5॥
ದಂಷ್ಟ್ರಾಕರಾಲವದನಂ ವ್ಯಾದಿತಾಸ್ಯಂ ಭಯಾವಹಮ್ |
ನಯನಾನಾಂ ಸಹಸ್ರೈಶ್ಚ ವಿವಿಧೈರಭಿಭೂಷಿತಮ್ ॥6॥
ಭರತಕುಲೋತ್ಪನ್ನನೇ! ಅಲ್ಲಿ ಚಂದ್ರ-ಅಗ್ನಿಗಳಂತೆ ಕಾಂತಿಯುಕ್ತನಾದ, ಭಾರೀ ಶರೀರದ ರೋಮಾಂಚಕಾರಿಯಾದ, ವಸೆಯನ್ನು ರಕ್ತವನ್ನು ಸುರಿಸುತ್ತಿರುವ, ವ್ಯಾಘ್ರದ ಚರ್ಮವನ್ನು ಉಟ್ಟಿರುವ, ಜಿಂಕೆಯ ಚರ್ಮವನ್ನು ಉತ್ತರೀಯವಾಗಿ ಧರಿಸಿರುವ, ನಾಗವನ್ನೇ ಯಜ್ಞೋಪವೀತವನ್ನಾಗಿ ಮಾಡಿಕೊಂಡಿರುವ ವಿಶಾಲವಾದ ಬಾಹುಗಳಿಂದ ಕೂಡಿರುವ, ಮೇಲೆತ್ತಿರುವ ಭಯಂಕರವಾದ ನಾನಾ ಬಗೆಯ ಆಯುಧಗಳನ್ನು ಹೊಂದಿರುವ, ಆಭರಣದ ಸ್ಥಾನದಲ್ಲಿ ಸರ್ಪವನ್ನೇ ಧರಿಸಿರುವ, ಜ್ವಾಲೆಗಳ ಸಾಲನ್ನು ಮುಖದಲ್ಲಿ ಹೊಂದಿರುವ, ಭಯಂಕರವಾದ ಕೋರೇ ಹಲ್ಲಿನಿಂದ ಕೂಡಿರುವ ಮುಖವುಳ್ಳ, ಬಾಯಿತೆರೆದು ನಿಂತಿರುವ, ಭಯಂಕರನಾದ, ನಾನಾಬಗೆಯ ಸಾವಿರಾರು ನಯನಗಳಿಂದ ಅಲಂಕೃತನಾದ, ದ್ವಾರವನ್ನು ಆವರಿಸಿ ನಿಂತ ಭೂತನಾಥನಾದ ರುದ್ರದೇವನನ್ನು ಆತನು (ಅಶ್ವತ್ಥಾಮನು) ಕಂಡನು.
ನೈವ ತಸ್ಯ ವಪುಃ ಶಕ್ಯಂ ಪ್ರವಕ್ತುಂ ವೇಷ ಏವ ವಾ |
ಸರ್ವಥಾ ತು ತದಾಲೋಕ್ಯ ಸ್ಫುಟೇಯುರಪಿ ಪರ್ವತಾಃ ॥7॥
ಆ ವ್ಯಕ್ತಿಯ ದೇಹವನ್ನು, ವೇಷವನ್ನು ವರ್ಣಿಸಲು ಶಕ್ಯವಿಲ್ಲ, ನಿಶ್ಚಿತವಾಗಿಯೂ ಆ ವ್ಯಕ್ತಿಯನ್ನು ಕಂಡಲ್ಲಿ ಪರ್ವತಗಳೇ ಸಿಡಿದುಹೋಗುವವು.
ತಸ್ಯಾಸ್ಯ ನಾಸಿಕಾಯಾಶ್ಚ ಶ್ರವಣಾಭ್ಯಾಂ ಚ ಭಾರತ |

ತೇಭ್ಯಶ್ಚಾಕ್ಷಿಸಹಸ್ರೇಭ್ಯಃ ಪ್ರಾದುರಾಸನ್ ಮಹಾರ್ಚಿಷಃ ॥8॥
ಆತನ ಮುಖ ಮೂಗು ಕಿವಿಗಳಿಂದ ಆ ಸಾವಿರಾರು ಕಣ್ಣುಗಳಿಂದ ಭಾರೀ ಬೆಂಕಿಯ ಜ್ವಾಲೆಯು ಪ್ರಾದುರ್ಭವಿಸಿತು.
ತಥಾ ತೇಜೋಮರೀಚಿಭ್ಯಃ ಶಂಖಚಕ್ರಗದಾಯುಧಾಃ |
ಪ್ರಾದುರಾಸನ್ ಹೃಷೀಕೇಶಾಃ ಶತಶೋಽಥ ಸಹಸ್ರಶಃ ॥9॥
ಹಾಗೆಯೇ ತೇಜೋಕಿರಣಗಳಿಂದ ಲಕ್ಷಾವಧಿ ವಿಷ್ಣುಗಣಗಳು ಶಂಖ ಚಕ್ರ ಗದಾ ಮುಂತಾದ ಆಯುಧಗಳು ಪ್ರಕಟಗೊಂಡವು.
ತದತ್ಯದ್ಭುತಮಾಲೋಕ್ಯ ಸರ್ವಭೂತಭಯಂಕರಮ್ |
ದ್ರೌಣಿರವ್ಯಥಿತೋ ದಿವ್ಯೈರಸ್ತ್ರಶಸ್ತ್ರೈರವಾಕಿರತ್ ॥10॥
ಪ್ರಾಣಿಸಾಮಾನ್ಯಕ್ಕೆ ಭೀತಿಗೆ ಕಾರಣವಾದ ಆ ಅದ್ಭುತವನ್ನು ಕಂಡು ವ್ಯಥೆಗೊಳ್ಳದ ದ್ರೋಣಪುತ್ರನು, ದಿವ್ಯ ಅಸ್ತ್ರಗಳನ್ನು (ಆತನ ಮೇಲೆ) ಎಸೆದನು.
ದ್ರೌಣಿಮುಕ್ತಾನ್ ಶಿತಾನ್ ಬಾಣಾನ್ ತದ್ಭೂತಂ ಮಹದಗ್ರಸತ್ |
ಉದಧೇರಿವ ವಾರ್ಯೋಘಾನ್ ಪಾವಕೋ ಬಡವಾಮುಖಃ ॥11॥
ಸಮುದ್ರದ ಜಲಸಮೂಹವನ್ನು ವಡವಾಗ್ನಿಯು ನುಂಗುವಂತೆ, ಆ ಮಹಾಭೂತವು ದ್ರೋಣಪುತ್ರನು ಎಸೆದ ನಿಶಿತವಾದ ಬಾಣಗಳನ್ನು ನುಂಗಿತು.
ಅಗ್ರಸತ್ ತಾಂಸ್ತಥಾಭೂತಾನ್ ದ್ರೌಣಿನಾ ಪ್ರಹಿತಾನ್ ಶರಾನ್ ॥12॥
ಮತ್ತೂ ದ್ರೋಣಪುತ್ರನು ಎಸೆದ ಅಂತಹವೇ ಬಾಣಗಳನ್ನು ನುಂಗಿತು.
ಅಶ್ವತ್ಥಾಮಾ ಚ ಸಂಪ್ರೇಕ್ಷ್ಯ ತಾನ್ ಶರೌಘಾನ್ ನಿರರ್ಥಕಾನ್ |
ರಥಶಕ್ತಿಂ ಮುಮೋಚಾಸ್ಮೈ ದೀಪ್ತಾಮಗ್ನಿಶಿಖೋಪಮಾಮ್ ॥13॥
ಅಶ್ವತ್ಥಾಮನಾದರೋ ವ್ಯರ್ಥವಾದ ಆ ಬಾಣಸಮೂಹವನ್ನು ಕಂಡು, ಬೆಂಕಿಯ ಜ್ವಾಲೆಯಂತೆ ಬೆಳಗುವ ರಥಶಕ್ತಿಯನ್ನು ಆತನ ಮೇಲೆ ಎಸೆದನು.
ಸಾ ತದಾಹತ್ಯ ದೀಪ್ತಾಗ್ರ್ಯಾ ರಥಶಕ್ತಿರದೀರ್ಯತ |
ಯುಗಾಂತೇ ಸೂರ್ಯಮಾಹತ್ಯ ಮಹೋಲ್ಕೇವ ದಿವಶ್ಚ್ಯುತಾ ॥14॥
ಯುಗಾಂತದಲ್ಲಿ ಸೂರ್ಯನಿಗೆ ಬಡಿದು ಆಕಾಶದಿಂದ ಕೆಳಗೆ ಬೀಳುವ ಮಹೋಲ್ಕೆಯಂತೆ, ಆ ರಥಶಕ್ತಿಯು ಬೆಳಗುತ್ತಾ ಆ ಭೂತವನ್ನು ಸಮೀಪಿಸಿ ಪುಡಿಯಾಯಿತು.
ಅಥ ಹೇಮಪ್ರಭಂ ದಿವ್ಯಂ ಖಡ್ಗಮಾಕಾಶವರ್ಚಸಮ್ |
ಕೋಶಾತ್ ಸಮುದ್ವಬರ್ಹಾಶು ಬಿಲಾದ್ದೀಪ್ತಮಿವೋರಗಮ್ ॥15॥
ಅನಂತರದಲ್ಲಿ, ಪ್ರಕಾಶಮಾನವಾದ ಸರ್ಪವು ಬಿಲದಿಂದ ಹೊರಬರುವಂತೆ, ಚಿನ್ನದ ಕಾಂತಿಯನ್ನು ಹೊಂದಿರುವ ಆಕಾಶದಂತೆ ನಿರ್ಮಲವಾದ ದಿವ್ಯವಾದ ಖಡ್ಗವನ್ನು ಅಶ್ವತ್ಥಾಮನು ಒರೆಯಿಂದ ಹೊರತೆಗೆದನು.
ಸ ತಂ ಖಡ್ಗವರಂ ಧೀಮಾನ್ ಭೂತಾಯ ಪ್ರಾಹಿಣೋತ್ ತದಾ |
ಸ ತದಾಸಾದ್ಯ ವೈ ಭೂತಂ ಬಿಲಂ ನಕುಲವದ್ ಯಯೌ ॥16॥
ಆ ಧೈರ್ಯಶಾಲಿಯು ಆ ಖಡ್ಗಶ್ರೇಷ್ಠವನ್ನು ಆ ಭೂತವನ್ನು ಉದ್ದೇಶಿಸಿ ಎಸೆದನು, ಆಗ ಆ ಖಡ್ಗವು ಆತನನ್ನು ಸಮೀಪಿಸಿ ಮುಂಗಸಿಯು ಬಿಲವನ್ನು ಪ್ರವೇಶಿಸಿದಂತೆ ಆತನನ್ನು ಪ್ರವೇಶಿಸಿತು.
ತತಃ ಸ ಕುಪಿತೋ ದ್ರೌಣಿರಿಂದ್ರಕೇತುನಿಭಾಂ ಗದಾಮ್ |
ಜ್ವಲಂತೀಂ ಪ್ರಾಹಿಣೋತ್ ತಸ್ಮೈ ಭೂತಂ ತಾಮಪಿ ಚಾಗ್ರಸತ್ ॥17॥
ಅನಂತರದಲ್ಲಿ ಕುಪಿತನಾದ ಆ ದ್ರೋಣಪುತ್ರನು ಇಂದ್ರನ ಧ್ವಜದಂತೆ ಪ್ರಜ್ವಲಿಸುವ ಗದೆಯನ್ನು ಆತನನ್ನು ಉದ್ದೇಶಿಸಿ ಎಸೆದನು, ಅದನ್ನೂ ಸಹ ಆ ಭೂತವು ನುಂಗಿತು.
ತತಃ ಸರ್ವಾಯುಧಾಭಾವೇ ವೀಕ್ಷಮಾಣಸ್ತತಸ್ತತಃ |
ಅಪಶ್ಯತ್ ಕೃತಮಾಕಾಶಮ್ ಅನಾಕಾಶಂ ಜನಾರ್ದನೈಃ ॥18॥
ಅನಂತರದಲ್ಲಿ ಎಲ್ಲ ಆಯುಧಗಳು ಇಲ್ಲವಾಗಲು, ಅತ್ತ ಇತ್ತ ನೊಡುತ್ತಾ, ಜನಾರ್ದನನ ರೂಪಗಳಿಂದ ತೆರವಿಲ್ಲದ ಆಕಾಶವನ್ನು ನೋಡಿದನು.
ತದದ್ಭುತಮಿದಂ ದೃಷ್ಟ್ವಾ ದ್ರೋಣಪುತ್ರೋ ನಿರಾಯುಧಃ |
ಅಚಿಂತಯತ್ ಸುಸಂತ್ರಸ್ತಃ ಕೃಪಭೋಜವಚಃ ಸ್ಮರನ್ ॥19॥
ನಿರಾಯುಧನಾದ ದ್ರೋಣಪುತ್ರನು ಆಶ್ಚರ್ಯಕರವಾದದ್ದನ್ನು ಕಂಡು, ಕೃಪ, ಭೋಜಕುಲೋತ್ಪನ್ನರ ಮಾತನ್ನು ಸ್ಮರಿಸಿಕೊಳ್ಳುತ್ತಾ, ತುಂಬ ಭೀತನಾದವನಾಗಿ ಆಲೋಚಿಸಿದನು.
ದ್ರೌಣಿಃ
ಬ್ರುವತಾಮಪ್ರಿಯಂ ಪಥ್ಯಂ ಸುಹೃದಾಂ ನ ಶೃಣೋತಿ ಯಃ |
ಸ ಶೋಚತ್ಯಾಪದಂ ಪ್ರಾಪ್ಯ ಯಥಾಽಹಮವಮತ್ಯ ತೌ ॥20॥
ಅಶ್ವತ್ಥಾಮ ಯಾರು, ಶ್ರೇಯಸ್ಕರವಾದ ಅದರೆ ಮನಸ್ಸಿಗೆ ರುಚಿಸದ ಸ್ನೇಹಿತನ ಮಾತನ್ನು ಕೇಳುವದಿಲ್ಲವೊ ಆತನು, ಅವರೀರ್ವರನ್ನು (ಕೃಪ, ಕೃತವರ್ಮರನ್ನು) ಅವಮಾನಿಸಿದ ನನ್ನಂತೆ, ಅನರ್ಥವನ್ನು ಹೊಂದಿ ದುಃಖಿಸುವನು.
ಶಾಸ್ತ್ರದೃಷ್ಟಮವಜ್ಞಾಯ ಸಮತೀತ್ಯ ಜಿಘಾಂಸತಿ |
ಸ ಪಥಃ ಪ್ರಚ್ಯುತೋ ಧರ್ಮ್ಯಾದ್ ವಿಪಥೇ ಪ್ರತಿಹನ್ಯತೇ ॥21॥

ಶಾಸ್ತ್ರಸಂಮತವಾದದ್ದನ್ನು ಅವಗಣಿಸಿ, (ಎಲ್ಲೆಯನ್ನು) ಮೀರಿ ಕೊಲ್ಲಲು ಬಯಸುವನೋ ಆತನು ಧರ್ಮಪಥದಿಂದ ಚ್ಯುತನಾಗುವನು, ಅಪಮಾರ್ಗದಲ್ಲಿ ಸಾಗಿ ನಾಶವನ್ನು ಹೊಂದುವನು.
ಗೋಬ್ರಾಹ್ಮಣನೃಪಸ್ತ್ರೀಷು ಸಖ್ಯುರ್ಭ್ರಾತುರ್ಗುರೋಸ್ತಥಾ |
ವೃದ್ಧಬಾಲಜಡಾನ್ಧೇಷು ಸುಪ್ತಭೀತೋತ್ಥಿತೇಷು ಚ ||22||
ಮತ್ತೋನ್ಮತ್ತಪ್ರಮತ್ತೇಷು ನ ಚ ಶಸ್ತ್ರಂ ಪ್ರಯೋಜಯೇತ್ ||23||
ಹಸು, ಬ್ರಾಹ್ಮಣ, ರಾಜ, ಹೆಣ್ಣು, ಸ್ನೇಹಿತ, ಸಹೋದರ, ಗುರು, ವದ್ಧ, ಬಾಲಕ, ಹುಚ್ಚ, ಕುರುಡ, ಮಲಗಿದವ, ಹೆದರಿದವ ಮತ್ತು ಆಗಿನ್ನೂ ಎಚ್ಚರಗೊಂಡವ ಇಂತಹವರನ್ನು ಉದ್ದೇಶಿಸಿ ಶಸ್ತ್ರವನ್ನು ಪ್ರಯೋಗಿಸಬಾರದು.
ಇತ್ಯೇವಂ ಗುರುಭಿಃ ಪೂರ್ವಮುಪದಿಷ್ಟಂ ನೃಣಾಂ ಸದಾ ||24||
ಈರೀತಿಯಾಗಿ ಗುರುಗಳು ಮನುಜರಿಗೆ ಈ ಹಿಂದೆಯೇ ಉಪದೇಶಿಸಿರುವರು.
ಸೋಽಹಮುತ್ಕ್ರಮ್ಯ ಪಂಥಾನಂ ಶಾಸ್ತ್ರದೃಷ್ಟಂ ಸನಾತನಮ್ |
ಅಮಾರ್ಗೇಣೈವಮಾರಬ್ಧೋ ಘೋರಾಂ ತರಿತುಮಾಪದಮ್ ||25||
ಅಂತಹ ನಾನು ಶಾಸ್ತ್ರಸಂಮತವಾದ ಪ್ರಾಚೀನವಾದ ಮಾರ್ಗವನ್ನು ಅತಿಕ್ರಮಿಸಿ, ಭಯಂಕರವಾದ ಆಪತ್ತನ್ನು ದಾಟಲು ಅಡ್ಡಹಾದಿಯನ್ನು ತುಳಿದೆನು.
ತಾಂ ಚಾಪದಂ ಘೋರತರಾಂ ಪ್ರವದಂತಿ ಮನೀಷಿಣಃ |
ಯದುದ್ಯಮ್ಯ ಮಹತ್ಕೃತ್ಯಂ ಭಯಾದಿಹ ನಿವರ್ತತೇ ||26||
ದೊಡ್ಡಕಾರ್ಯವನ್ನು ಆರಂಭಿಸಿ ಭಯದಿಂದ ಹಿಂತಿರುಗಿದಲ್ಲಿ, ಅದನ್ನು ಘೋರತರವಾದ ಆಪತ್ತು ಎಂದು ಜ್ಞಾನಿಗಳು ಹೇಳುತ್ತಾರೆ.
ಅಶಕ್ಯಂ ಚೈವ ಕಃ ಕರ್ತುಂ ಶಕ್ತಃ ಶಕ್ತಿಬಲಾದಿಹ |
ನ ಹಿ ದೈವಾದ್ ಗರೀಯೋ ವೈ ಮಾನುಷ್ಯಂ ಕಿಂಚಿದಿಷ್ಯತೇ ||27||
ಈ ಲೋಕದಲ್ಲಿ ಶಕ್ತಿಯ ಬಲದಿಂದಲೇ ಅಶಕ್ಯವಾದದ್ದನ್ನು ಮಾಡಲು ಯಾರು ಸಮರ್ಥರಾಗುವರು? ಮನುಜನಿಗೆ ಅದೃಷ್ಟಕ್ಕಿಂತಲೂ ಹಿರಿದಾದದ್ದು ಯಾವುದೂ ಇಲ್ಲ.
ಮಾನುಷ್ಯಂ ಕುರ್ವತಃ ಕರ್ಮ ಯದಿ ದೈವಾನ್ನ ಸಿದ್ಧ್ಯತಿ |
ಸ ಪಥಃ ಪ್ರಚ್ಯುತೋ ಧರ್ಮ್ಯಾದ್ ವಿಪಥೇ ಪ್ರತಿಹನ್ಯತೇ ||28||
ಮನುಷ್ಯನು ಕರ್ಮವೊಂದನ್ನು ಆರಂಭಿಸಿ, ಅದೃಷ್ಟದಿಂದ ಸಿದ್ಧಿಯನ್ನು ಹೊಂದದ ಪಕ್ಷದಲ್ಲಿ ಆತನು ಧರ್ಮಮಾರ್ಗದಿಂದ ಚ್ಯುತನಾಗುವನು, ಅನ್ಯಾಯದ ಮಾರ್ಗದಲ್ಲಿ (ಸಾಗಿ) ನಾಶವನ್ನು ಹೊಂದುವನು.
ಪ್ರತಿಜ್ಞಾತಂ ಹ್ಯವಿಜ್ಞಾನಂ ಪ್ರವದಂತಿ ಮನೀಷಿಣಃ ||29||
ಯದಾರಭ್ಯ ಕ್ರಿಯಾಂ ಕಾಂಚಿದ್ ಭಯಾದಿಹ ನಿವರ್ತತೇ |
ತದಿದಂ ದುಷ್ಪ್ರಣೀತೇನ ಭಯಂ ಮಾಂ ಸಮುಪಸ್ಥಿತಮ್ ||30||
ಕಾರ್ಯವೊಂದನ್ನು ಆರಂಭಿಸಿ ಯಾವುದೋ ಭಯದಿಂದ (ಆ ಕಾರ್ಯದಿಂದ) ನಿವೃತ್ತನಾದಲ್ಲಿ ಆಗ ಪ್ರಾಜ್ಞರು `ತಿಳುವಳಿಕೆಯಿಲ್ಲದೇ ಪ್ರತಿಜ್ಞೆಯನ್ನು ಮಾಡಿರುವನು' ಎಂದು ಹೇಳುವರು . ಆ ಯಾವ ಭಯವು ಅವಿನೀತನಾದ ನನಗೆ ಈಗ ಪ್ರಾಪ್ತವಾಗಿದೆ,
ನ ಹಿ ದ್ರೋಣಸುತಃ ಸಂಖ್ಯೇ ನಿವರ್ತೇತ ಕಥಂಚನ |
ಇದಂ ಚ ಸುಮಹದ್ಭೂತಂ ದೈವದಂಡಮಿವೋದ್ಯತಮ್ ||31||
ದ್ರೋಣಪುತ್ರನು ಎಂದೂ ಯುದ್ಧದಿಂದ ಹಿಂದಿರುಗಿದವನಲ್ಲ, ಆದರೆ ದೈವದಂಡದಂತೆ ಈ ಭಾರೀ ಭೂತವು ಎದ್ದು ನಿಂತಿದೆ.
ನ ಚೈತದಭಿಜಾನಾಮಿ ಚಿಂತಯನ್ನಪಿ ಸರ್ವಥಾ ||32||
ಆಲೋಚಿಸಿದರೂ ಸರ್ವಥಾ ನಾನು ಇದನ್ನು ತಿಳಿಯಲಾರೆ.
ಧ್ರುವಂ ಯೇಯಮಧರ್ಮೇಣ ಪ್ರಹಿತಾ ಕಲುಷಾ ಮತಿಃ |
ತಸ್ಯಾಃ ಫಲಮಿದಂ ಘೋರಂ ಪ್ರತಿಘಾತಾಯ ದೃಶ್ಯತೇ ||33||
ನಿಶ್ಚಯವಾಗಿಯೂ, ಅಧರ್ಮದಿಂದ ಆಘಾತವಾಗಿ ಈ ಬುದ್ಧಿಯು ಕಲುಷಿತವಾಯಿತು, ಅದರ ಫಲವೆಂಬಂತೆ ಇದು ಘೋರ ಪ್ರತಿಘಾತಕ್ಕಾಗಿ ಬಂದಿದೆ.
ತದಿದಂ ದೈವವಿಹಿತಂ ಮಮ ಸಂಖ್ಯೇ ನಿವರ್ತನಮ್ |
ನಾನ್ಯತ್ರ ದೈವಾದುದ್ಯಂತುಮ್ ಇಹ ಶಕ್ಯಂ ಕಥಂಚನ ||34||
ನಾನು ಯುದ್ಧದಿಂದ ನಿವೃತ್ತನಾಗುವ ಈ ಪ್ರಸಂಗವು ದೈವದಿಂದ ವಿಹಿತವಾದದ್ದು. ದೈವದ ಹೊರತಾಗಿ ಬೇರೆ ಯಾರಿಗೂ ಉದ್ಯುಕ್ತನಾದ ನನ್ನನ್ನು ತಡೆಯಲು ಶಕ್ಯವಿಲ್ಲ.
ಸೋಽಹಮದ್ಯ ಮಹಾದೇವಂ ಪ್ರಪದ್ಯೇ ಶರಣಂ ಪ್ರಭುಮ್ |
ದೈವದಂಡಮಿದಂ ಘೋರಂ ಸ ಹಿ ಮೇ ನಾಶಯಿಷ್ಯತಿ ||35||
ಅಂತಹ ನಾನು ಪ್ರಭುವಾದ ಮಹಾದೇವನನ್ನು ಶರಣು ಹೊಂದುವೆನು. ಆತನು ನನ್ನ ಪಾಲಿನ ಈ ಘೋರವಾದ ದೈವದಂಡವನ್ನು ನಾಶಗೊಳಿಸುವನು.
ಕಪರ್ದಿನಂ ಪ್ರಪದ್ಯೇಽಹಂ ದೇವದೇವಮ್ ಉಮಾಪತಿಮ್ |
ಕಪಾಲಮಾಲಿನಂ ರುದ್ರಂ ಭಗನೇತ್ರಹರಂ ಹರಮ್ ||36||
ನಾನು ಜಟಾಧಾರಿಯನ್ನು, ದೇವದೇವನನ್ನು, ಉಮಾಪತಿಯನ್ನು, ಕಪಾಲಮಾಲಿಯನ್ನು, ರುದ್ರನನ್ನು, ಭಗನಾಮಕ ಸೂರ್ಯನ ನೇತ್ರವನ್ನು ನಾಶಗೊಳಿಸಿದವನನ್ನು, ಹರನನ್ನು ಶರಣು ಹೊಂದುವೆನು.

ಸ ಹಿ ದೇವೋಽತ್ಯಗಾದ್ ದೇವಾಂಸ್ತಪಸಾ ನಿಯಮೇನ ತು |
ತಸ್ಮಾಚ್ಛರಣಮಭ್ಯೇಷ್ಯೇ ಗಿರೀಶಂ ಶೂಲಪಾಣಿನಮ್ ॥37॥
ಆ ದೇವನು ಎಲ್ಲ ದೇವತೆಗಳನ್ನು ತಪದಿಂದ ನಿಯಮಗಳಿಂದ ಮೀರಿದವ, ಆದ್ದರಿಂದ ಶೂಲಪಾಣಿಯಾದ ಗಿರೀಶನನ್ನು ಶರಣು ಹೊಂದುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ದ್ರೋಣೇರ್ಮಹದ್ಭೂತದರ್ಶನಂ ನಾಮ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಅತಸ್ತಯಾ ಪ್ರೇರಿತೇನ ಸ್ವಾತ್ಮನೈವಾಖಿಲೇಷ್ವಪಿ |
ಆಯುಧೇಷು ನಿಗೀರ್ಣೇಷು ದ್ರೌಣಿರ್ಯಜ್ಞಂ ತು ಮಾನಸಮ್ |
ಚಕ್ರೇಽತ್ಮಾನಂ ಪಶುಂ ಕೃತ್ವಾ ಸ್ವಾತ್ಮಸ್ಥಾಯೈವ ವಿಷ್ಣವೇ ॥
ಅದರಿಂದ ಹರಿಶಕ್ತಿಯಿಂದ ಪ್ರೇರಿತನಾದ, ತನ್ನ ಸ್ವರೂಪನೇ ಆದ ರುದ್ರ ತನ್ನೆಲ್ಲ ಆಯುಧಗಳನ್ನೂ ನುಂಗಿದಾಗ ಅಶ್ವತ್ಥಾಮನು ತನ್ನೊಳಗಿರುವ ವಿಷ್ಣುವಿಗೆ ತನ್ನನ್ನು ಪಶುವೆಂದು ಚಿಂತಿಸಿ ಮಾನಸಯಜ್ಞ ನಡೆಸಿದನು.
ಯಜ್ಞತುಷ್ಟೇನ ಹರಿಣಾ ಪ್ರೇರಿತಃ ಶಂಕರಃ ಸ್ವಯಮ್ |
ಆತ್ಮನೇ ದ್ರೋಣಪುತ್ರಾಯ ದದೌ ಸರ್ವಾಯುಧಾನಿ ಚ ॥
ಉವಾಚ ಚಾಹಮಾದಿಷ್ಟೋ ವಿಷ್ಣುನಾ ಪ್ರಭವಿಷ್ಣುನಾ |
ಅರಕ್ಷಂ ಪಾರ್ಥಶಿಬಿರಮಿಯಂತಂ ಕಾಲಮೇವ ತು ॥
ತದಿಚ್ಛಯೈವ ನಿರ್ದಿಷ್ಟೋ ದಾಸ್ಯೇ ಮಾರ್ಗಂ ತವಾದ್ಯ ಚ |
ಆಯುಧಾನಿ ಚ ಸರ್ವಾಣಿ ಹಂತುಂ ಸರ್ವಾನಿಮಾನ್ ಜನಾನ್ ॥
ಯಜ್ಞದಿಂದ ಸಂತುಷ್ಟನಾದ ಹರಿಯ ಪ್ರೇರಣೆಯಿಂದ ರುದ್ರ ತನ್ನ ಸ್ವರೂಪ ಭೂತನಾದ ಅಶ್ವತ್ಥಾಮನಿಗೆ ಎಲ್ಲ ಆಯುಧಗಳನ್ನೂ ಹಿಂತಿರುಗಿಸಿದನು ಮತ್ತು ಹೇಳಿದನು `ನಾನು ಇಷ್ಟು ಕಾಲದವರೆಗೆ ಸರ್ವರಕ್ಷಕನಾದ ಹರಿಯ ಆಜ್ಞೆಯಿಂದ ಪಾಂಡವರ ಶಿಬಿರವನ್ನು ರಕ್ಷಿಸಿದ್ದೇನೆ. ಈಗ ಅವನ ಆಜ್ಞೆಯಿಂದಲೆ ಪ್ರೇರಿತನಾಗಿ ನಾನು ನಿನಗೆ ಮಾರ್ಗ ಕೊಡುತ್ತೇನೆ. ಈ ಎಲ್ಲ ಜನರನ್ನು ಕೊಲ್ಲಲು ಎಲ್ಲ ಆಯುಧಗಳನ್ನೂ ಕೊಡುತ್ತೇನೆ'.
ಇತ್ಯುದೀರ್ಯ ಪ್ರದಾಯಾಽಶು ಸರ್ವಾ ಹೇತೀರ್ವೃಷಧ್ವಜಃ |
ತತ್ರೈವಾಂತರ್ದಧೇ ಸೋಽಪಿ ಪ್ರೋವಾಚ ಕೃಪಸಾತ್ವತೌ ॥
ರುದ್ರನು ಹೀಗೆ ಹೇಳಿ ಬೇಗನೆ ಎಲ್ಲ ಆಯುಧಗಳನ್ನೂ ಅಶ್ವತ್ಥಾಮನಿಗೆ ಕೊಟ್ಟು ಅಲ್ಲಿಯೇ ಅದೃಶ್ಯನಾದನು. ಬಳಿಕ ಅಶ್ವತ್ಥಾಮನು ಕೃಪ-ಕೃತವರ್ಮರಿಗೆ ಹೇಳಿದನು.
ಯೇ ನಿರ್ಯಾಸ್ಯಂತಿ ಶಿಬಿರಾಜ್ಜಹಿತಂ ತಾಂಸ್ತು ಸರ್ವಶಃ |
ಇತ್ಯುಕತ್ವ ಪ್ರವಿವೇಶಾಂತರ್ಧನ್ವೀ ಖಡ್ಗೀ ಕೃತಾಂತವತ್ ॥
`ಯಾರು ಶಿಬಿರದಿಂದ ಹೊರಗೆ ಹೋಗುವರೋ ಅವರೆಲ್ಲರನ್ನೂ ಕೊಲ್ಲಿರಿ'. ಅಶ್ವತ್ಥಾಮನು ಹೀಗೆ ಹೇಳಿ ಬಿಲ್ಲು, ಖಡ್ಗಗಳನ್ನು ಹಿಡಿದು ಯಮನಂತೆ ಶಿಬಿರದೊಳಗೆ ಪ್ರವೇಶಿಸಿದನು.
* * * * *
ಏಳನೆಯ ಅಧ್ಯಾಯ
ಅಶ್ವತ್ಥಾಮನಿಂದ ಶಿವನ ಸ್ತುತಿ, ಆತನ ಮುಂಭಾಗದಲ್ಲಿ ಅಗ್ನಿಯ ಪ್ರಾದುರ್ಭಾವ, ಆತನ ಸಮೀಪಕ್ಕೆ ನಾನಾವಿಧಗಳಾದ ಭಯಂಕರಗಳಾದ ಭೂತಗಳ ಆಗಮನ, ರುದ್ರಾಂತರ್ಯಾಮಿಗೆ ತನ್ನನ್ನೇ ಹವಿಸ್ಸನ್ನಾಗಿಸಿಕೊಂಡು ಕುಂಡವನ್ನು ಪ್ರವೇಶಿಸಿದನು.
ಅಶ್ವತ್ಥಾಮನಿಗೆ ರುದ್ರದೇವನು ಖಡ್ಗವನ್ನು ನೀಡಿ
ಅಶ್ವತ್ಥಾಮನಲ್ಲಿ ಲೀನನಾಗುವನು, ಅನಂತರದಲ್ಲಿ ಅಶ್ವತ್ಥಾಮನು
ಪಾಂಡವರ ಶಿಬಿರವನ್ನು ಪ್ರವೇಶಿಸುವುದು.
ಸಂಜಯಃ
ಏವಂ ಸಂಚಿಂತಯಿತ್ವಾ ತು ದ್ರೋಣಪುತ್ರೋ ವಿಶಾಂಪತೇ |
ಅವತೀರ್ಯ ರಥೋಪಸ್ಥಾದ್ ದಧ್ಯೌ ಸಂಪ್ರಯತಃ ಸ್ಥಿತಃ ॥1॥
ಸಂಜಯ ಮಹಾರಾಜನೇ! ದ್ರೋಣಪುತ್ರನು ಈ ರೀತಿಯಾಗಿ ಆಲೋಚಿಸಿ, ರಥದಿಂದ ಕೆಳಗಿಳಿದು ಮನದಲ್ಲಿ ಧ್ಯಾನಿಸುತ್ತಾ, ಕೈಜೋಡಿಸಿ ನಿಂತನು
ದ್ರೌಣಿಃ
ಉಗ್ರಂ ಸ್ಥಾಣುಂ ಶಿವಂ ರುದ್ರಂ ಶರ್ವಮೀಶಾನಮೀಶ್ವರಮ್ |
ಗಿರೀಶಂ ವರದಂ ದೇವಂ ಭವಂ ಭಾವನಮವ್ಯಯಮ್ ॥2॥
ಶಿತಿಕಂಠಮಜಂ ರುದ್ರಂ ದಕ್ಷಕ್ರತುಹರಂ ಹರಮ್ |
ವಿಶ್ವರೂಪಂ ವಿರೂಪಾಕ್ಷಂ ಬಹುರೂಪಮುಮಾಪತಿಮ್ ॥3॥
ಶ್ಮಶಾನನಿಲಯಂ ದೃಪ್ತಂ ಮಹಾಗಣಪತಿಂ ವಿಭುಮ್ |

ಖಟ್ವಾಂಗಧಾರಿಣಂ ಮುಂಡಂ ಜಟಿಲಂ ಬ್ರಹ್ಮಚಾರಿಣಮ್ ॥4॥
ಮನಸಾ ಹ್ಯನುಚಿಂತ್ಯೈನಂ ದುಷ್ಕರೇಣಾಲ್ಪತೇಜಸಾ |
ಸೋಽಹಮಾತ್ಮೋಪಹಾರೇಣ ಯಕ್ಷ್ಯೇ ತ್ರಿಪುರಘಾತಿನಮ್ ॥5॥
ಅಶ್ವತ್ಥಾಮ (ದುಷ್ಟರಿಗೆ) ಕ್ರೂರನಾದ, ಅಚಲನಾಗಿರುವ, (ದುಷ್ಟರಿಗೆ) ಭೀಕರನಾಗಿರುವ, ಮಂಗಳಕರನಾದ, ಈಶಾನ್ಯದಿಕ್ಪಾಲನಾದ, ಸರ್ವಸ್ವಾಮಿಯಾದ, ಗಿರಿಗೊಡೆಯನಾದ, ವರವನ್ನು ನೀಡುವ, ಕ್ರೀಡಾದಿ ಗುಣಗಳಿಂದ ಕೂಡಿದ, (ಜಗದ) ಉತ್ಪತ್ತಿಗೆ ಕಾರಣನಾದ, (ಈ ಜಗದ) ಅಸ್ತಿತ್ವಕ್ಕೆ ಕಾರಣನಾದ, ನೀಲಕಂಠನಾದ, ಹುಟ್ಟಿಲ್ಲದ, (ಪಾಪಿಗಳನ್ನು) ರೋದಿಸುವಂತೆ ಮಾಡುವ, ದಕ್ಷಪ್ರಜಾಪತಿಯ ಯಜ್ಞವನ್ನು ನಾಶಗೊಳಿಸಿದ, ಪಾಪಗಳನ್ನು ಪರಿಹರಿಸುವ, ಎಲ್ಲ ವಿಧದ ರೂಪಗಳನ್ನು ಹೊಂದಿದ, ಮೂರುಕಣ್ಣುಗಳನ್ನು ಹೊಂದಿದ, ನಾನಾರೂಪಗಳನ್ನು ಧರಿಸಿದ, ಉಮಾದೇವಿಯ ಸ್ವಾಮಿಯಾದ, ಶ್ಮಶಾನದಲ್ಲಿ ವಾಸಿಸುವ, ಭಯರಹಿತನಾದ, ಮಹಾಗಣಕ್ಕೆ ಅಧಿಪತಿಯಾದ, ಸ್ವಾಮಿಯಾದ, ಖಟ್ವಾಂಗವನ್ನು (ಆಯುಧ ವಿಶೇಷವನ್ನು) ಧರಿಸಿದ, (ತಲೆಯಲ್ಲಿ) ಕೂದಲನ್ನು ಹೊಂದಿದ, ಜಟಾಧಾರಿಯಾದ, ಬ್ರಹ್ಮಚರ್ಯವ್ರತವನ್ನು ಆಚರಿಸುವವ, ತ್ರಿಪುರಾಂತಕನಾದ ಈತನನ್ನು ಮನಸ್ಸಿನಿಂದ ಸ್ಮರಿಸುತ್ತಾ, ಅಲ್ಪರಿಂದ ಆಚರಿಸಲು ಆಗದ ಅತ್ಮಾರ್ಪಣದಿಂದ ಈಗ ನಾನು ಹೋಮಿಸುವೆನು.
ಸ್ತುತಂ ಸ್ತುತ್ಯಂ ಸ್ತೂಯಮಾನಮ್ ಅಮೋಘಂ ಚರ್ಮವಾಸಸಮ್ |
ವಿಲೋಹಿತಂ ನೀಲಕಂಠಂ ಸುಸೂಕ್ಷ್ಮಮಂ ದುರ್ನಿವಾರಣಮ್ ॥6॥
ಶುಕ್ರಂ ವಿಶ್ವಸೃಜಂ ಬ್ರಹ್ಮ ಬ್ರಹ್ಮಚಾರಿಣಮೇವ ಚ |
ವ್ರತವಂತಂ ತಪೋ ನಿತ್ಯಮನಂತಂ ತಪಸಾಂ ಪತಿಮ್ ॥7॥
ಬಹುರೂಪಂ ಗಣಾಧ್ಯಕ್ಷಂ ತ್ರ್ಯಕ್ಷಂ ಪಾರಿಷದಪ್ರಿಯಮ್ |
ಧನಾಧ್ಯಕ್ಷಪ್ರಿಯಸಖಂ ಗೌರೀಹೃದಯನಂದನಮ್ ॥8॥
ಕುಮಾರಪಿತರಂ ಪಿಂಗಂ ಗೋವೃಷೋತ್ತಮವಾಹನಮ್ |
ಕೃತ್ತಿವಾಸಸಮತ್ಯುಗ್ರಮ್ ಉಮಾಭೂಷಣತತ್ಪರಮ್ ॥9॥
ಪರಂ ಪರೇಭ್ಯಃ ಪರಮಂ ಪರಂ ಯಸ್ಮಾನ್ನ ವಿದ್ಯತೇ |
ಇಷ್ವಸೊತ್ರೋತ್ತಮಭರ್ತಾರಂ ದಿಗಂತಂ ದೇಶರಕ್ಷಣಮ್ ॥10॥
ಹಿರಣ್ಯಕವಚಂ ದೇವಂ ಚಾರುಮೌಲಿವಿಭೂಷಣಮ್ |
ಪ್ರಪದ್ಯೇ ಶರಣಂ ದೇವಂ ಪರಮೇಣ ಸಮಾಧಿನಾ ॥11॥
ಭೂತ-ವರ್ತಮಾನ-ಭವಿಷ್ಯಕಾಲಗಳಲ್ಲಿ ಸ್ತುತ್ಯನಾದ, ಹುಸಿಯಿಲ್ಲದವ, ಚರ್ಮವನ್ನು ವಸ್ತ್ರವನ್ನಾಗಿಸಿಕೊಂಡ, ಹಳದಿಯಲ್ಲದ ಬಣ್ಣವನ್ನು (ತಿಳಿಹಳದಿ ಬಣ್ಣವನ್ನು) ಹೊಂದಿದ, ಕಪ್ಪಾದ ಕಂಠದವನಾದ, ಅತಿಸೂಕ್ಷ್ಮನಾದ, ತಡೆಯಿಲ್ಲದ, ಶುಭ್ರನಾದ, ಜಗದ ಸೃಷ್ಟಿಕರ್ತನಾದ, ವೇದಪ್ರತಿಪಾದ್ಯನಾದ, ಬ್ರಹ್ಮಚಾರಿಯಾದ, ತಪವನ್ನು ಆಚರಿಸುತ್ತಿರುವ, ಶಾಶ್ವತನಾದ, ನಾಶರಹಿತನಾದ, ತಪಸ್ವಿಗಳ ಸ್ವಾಮಿಯಾದ, ನಾನಾ ರೂಪಗಳನ್ನು ಹೊಂದಿರುವ, (ಭೂತ)ಗಣದ ಸ್ವಾಮಿಯಾದ, ಮುಕ್ಕಣ್ಣನಾದ, ಸೇವಕಜನಪ್ರಿಯನಾದ, ಕುಬೇರನ ಪ್ರಿಯಮಿತ್ರನಾದ, ಗೌರೀಮನಕ್ಕೆ ಮುದ ನೀಡುವ, ಷಣ್ಮುಖನ ತಂದೆಯಾದ, ಹಳದಿ ಮೈಬಣ್ಣವನ್ನು ಹೊಂದಿದ, ಶ್ರೇಷ್ಠ ವೃಷಭವನ್ನು ವಾಹನವನ್ನಾಗಿಸಿಕೊಂಡ, ಆನೆಯ ಚರ್ಮವನ್ನು ವಸ್ತ್ರವನ್ನಾಗಿಸಿಕೊಂಡ, (ಪಾಪಿಗಳಿಗೆ) ಅತಿ ಉಗ್ರನಾದ, ಉಮಾದೇವಿಗೆ ಇಷ್ಟವನ್ನು ಉಂಟುಮಾಡುವುದರಲ್ಲಿ ಆಸಕ್ತನಾದ, ಉತ್ತಮರಿಗೆ ಉತ್ತಮನಾದ, ಶ್ರೇಷ್ಠನಾದ, ಆತನಿಂದ ಉತ್ತಮರು ಮತ್ತೊಬ್ಬರು ಇಲ್ಲದ, ಶ್ರೇಷ್ಠವಾದ ಬಾಣ ಎಂಬ ಅಸ್ತ್ರವನ್ನು ಧರಿಸಿದ, ತುದಿವರೆಗೂ ಭೂಮಿಯನ್ನು ಕಾಯುವ, ಹೊನ್ನಿನ ಕವಚವನ್ನು ತೊಟ್ಟ, ದೇವನಾದ, ಸುಂದರವಾದ ಶಿರಾಭರಣ (ಕಿರೀಟ)ವನ್ನು ತೊಟ್ಟ, ಮಹಾರುದ್ರದೇವನಲ್ಲಿ ಅತಿ ಭಕ್ತಿಯಿಂದ ಶರಣಾಗುವೆನು.
ಇಮಾಂ ಚೇದಾಪದಂ ಘೋರಾಂ ತರಾಮ್ಯದ್ಯ ಸುದುಸ್ತರಾಮ್ |
ಸರ್ವಭೂತೋಪಹಾರೇಣ ಯಕ್ಷ್ಯೇಯೇಽಹಂ ಶುಚಿನಾ ಶುಚಿಮ್ ॥12॥
ಶುಭ್ರನಾದ ದೇವನನ್ನು ಎಲ್ಲ ಸಮರ್ಪಣೀಯ ದ್ರವ್ಯಗಳಿಂದ ಶುಭ್ರನಾಗಿ ಪೂಜಿಸುವೆನು, ದಾಟಲು ಅಸದಳವಾದ ಈ ಘೋರವಾದ ಆಪತ್ತನ್ನು ದಾಟುವೆನು.
ಸಂಜಯಃ
ಇತಿ ತಸ್ಯ ವ್ಯವಸಿತಂ ಜ್ಞಾತ್ವಾ ಯೋಗಾತ್ ಸುಕರ್ಮಣಃ |
ಪುರಸ್ತಾತ್ ಕಾಂಚನೀ ವೇದೀ ಪ್ರಾದುರಾಸೀನ್ಮಹಾತ್ಮನಃ ॥13॥
ಸಂಜಯ ಈ ರೀತಿಯಾದ ಆತನ (ಅಶ್ವತ್ಥಾಮನ) ವಿಚಾರವನ್ನು ತಿಳಿದು, ಮಹಾತ್ಮನ (ಅಶ್ವತ್ಥಾಮನ) ಮುಂಭಾಗದಲ್ಲಿ (ಆತನ) ಸತ್ಕರ್ಮದ ಯೋಗದಿಂದ ಸುವರ್ಣಮಯವಾದ ವೇದಿಯು (ಯಜ್ಞಕುಂಡ) ಪ್ರಕಟವಾಯಿತು.
ತಸ್ಯಾಂ ವೇದ್ಯಾಂ ತದಾ ರಾಜನ್ ಚಿತ್ರಭಾನುರಜಾಯತ |
ಗಾಂ ದಿಶೋ ವಿದಿಶಃ ಖಂ ಚ ಜ್ವಾಲಾಭಿರಭಿಪೂರಯನ್ ॥14॥
ಆಗ ಆದಿ ವೇದಿಯಲ್ಲಿ ದಿಕ್ಕುವಿದಿಕ್ಕುಗಳನ್ನು, ಭೂಮಿ-ಆಕಾಶಗಳನ್ನು ಬೆಳಗುವ ಜ್ವಾಲೆಗಳ ಸಮೂಹವನ್ನು ಹೊಂದಿರುವ ಅಗ್ನಿಯು ಪ್ರಾದುರ್ಭೂತವಾಯಿತು.
ದೀಪ್ತಾಸ್ಯನಯನಾಶ್ಚಾಸನ್ ನೈಕಪಾದಶಿರೋಭುಜಾಃ |
ದ್ವಿಪಶೈಲಪ್ರತೀಕಾಶಾಃ ಪ್ರಾದುರಾಸನ್ ಮಹಾರಥಾಃ ॥15॥
(ಆ ಅಗ್ನಿಯಿಂದ) ಹೊಳೆಯುವ ಮುಖ, ಕಣ್ಣುಗಳನ್ನು ಹೊಂದಿರುವ ಅನೇಕ ಕಾಲು ತಲೆ ಕೈಗಳನ್ನು ಹೊಂದಿರುವ , ಬೆಟ್ಟದ ಆನೆಗಳಂತೆ ತೋರುವ ಮಹಾರಥಿಕರು ಪ್ರಾದುರ್ಭೂತರಾದರು.

ಶ್ವವರಾಹೋಷ್ಟ್ರರೂಪಾಶ್ಚ ಹಯಗೋಮಾಯುಗೋಮುಖಾಃ |
ಋಕ್ಷಮಾರ್ಜಾರವದನಾ ದ್ವಿಪವ್ಯಾಘ್ರಮುಖಾಸ್ತಥಾ ॥16॥
ಕಾಕವಕತ್ರಃ ಪ್ಲವಮುಖಾಃ ಶುಕವಕತ್ರಸ್ತಥೈವ ಚ |
ಮಹಾಜಗರವಕತ್ರಶ್ಚ ಹಂಸವಕತ್ರಃ ಸಿತಪ್ರಭಾಃ ॥17॥
ದಾರ್ವಾಘಾಟಮುಖಾಶ್ಚಾಪಿ ಚಾಪವಕತ್ರಸ್ತಥೈವ ಚ |
ಕೂರ್ಮನಕ್ರಮುಖಾಶ್ಚೈವ ಶಿಂಶುಮಾರಮುಖಾಸ್ತಥಾ ॥18॥
ಮಹಾಮಕರವಕತ್ರಶ್ಚ ತಿಮಿವಕತ್ರಶ್ಚ ಭಾರತ |
ಹರಿವಕತ್ರಃ ಕ್ರೌಂಚಮುಖಾಃ ಕಪೋತಾಹಿಮುಖಾಸ್ತಥಾ ॥19॥
ಪಾರಾವತಮುಖಾಶ್ಚೈವ ಕಂಕವಕತ್ರಸ್ತಥೈವ ಚ |
ಫಣಿವಕತ್ರಃ ಸಹಸ್ರಾಕ್ಷಾಸ್ತಥೈವ ಚ ಶತೋದರಾಃ ॥20॥
ಭರತಕುಲೋತ್ಪನ್ನನೆ, ರಾಜನ್! (ಪ್ರಾದುರ್ಭೂತರಾದವರಲ್ಲಿ ಕೆಲವರು) ನಾಯಿ ಹಂದಿ ಒಂಟೆ ರೂಪಗಳನ್ನು, ಕುದುರೆ ನರಿ ಹಸುಗಳ ಮುಖವನ್ನು, ಕರಡಿ ಬೆಕ್ಕುಗಳ ಮುಖವನ್ನು, ಆನೆ ಹುಲಿಗಳಂತೆ ಮುಖಗಳನ್ನು, ಕಾಗೆಯ ಮುಖವನ್ನು, ಕೋತಿಯ ಮುಖವನ್ನು, ಗಿಳಿಯ ಮುಖವನ್ನು, ಹಾಗೆಯೇ ಭಾರೀ ಹೆಬ್ಬಾವಿನಂತೆ ಮುಖವನ್ನು, ಬಿಳಿಯ ಹಂಸದ ಮುಖವನ್ನು, ಮರಕುಕ್ಕುಟಹಕ್ಕಿಯ ಮುಖವನ್ನು, ಹಾಗೆಯೆ ನವಿಲಿನ ಮುಖವನ್ನು, ಆಮೆಯ ಮುಖವನ್ನು, ಚೇಳಿನ ಮುಖವನ್ನು, ದೊಡ್ಡಮೊಸಳೆಯ ಮುಖವನ್ನು, ತಿಮಿಂಗಿಲದ ಮುಖವನ್ನು, ಮುಷ್ಯದ ಮುಖವನ್ನು, ಕ್ರೌಂಚಪಕ್ಷಿಯ ಮುಖವನ್ನು, ಪಾರಿವಾಳದ ಮುಖವನ್ನು, ಕೋಗಿಲೆಯ ಮುಖವನ್ನು, ಕುರವಂಕಪಕ್ಷಿಯ ಮುಖವನ್ನು, ಸರ್ಪಗಳ ಮುಖವನ್ನು, ಸಾವಿರಾರು ಕಣ್ಣುಗಳನ್ನು, ನೂರಾರು ಹೊಟ್ಟೆಗಳನ್ನು ಹೊಂದಿದ್ದರು.
ನಿರ್ಮಾಂಸಾಃ ಕಾಕವಕತ್ರಶ್ಚ ಶ್ಯೇನವಕತ್ರಶ್ಚ ಭಾರತ |
ತಥೈವಾಶಿರಸೋ ರಾಜನ್ ಋಕ್ಷವಕತ್ರಶ್ಚ ಭೀಷಣಾಃ ॥21॥
ಪ್ರದೀಪ್ತಜಿಹ್ವಾನೇತ್ರಾಸ್ಯಾ ಜ್ವಾಲಾವಕತ್ರಸ್ತಥೈವ ಚ ॥22॥
ಶಂಖಮಾಲಾಪರಿಕರಾಃ ಶಂಖಧ್ವನಿಸಮಸ್ವನಾಃ |
ಜಟಾಧರಾಃ ಪಂಚಶಿಖಾಸ್ತಥಾ ಮುಂಡಾಃ ಕೃಶೋದರಾಃ ॥23॥
ಚತುರ್ದಂಷ್ಟ್ರಾಶ್ಚತುರ್ಜಿಹ್ವಾಃ ಶಂಕುಕರ್ಣಾಃ ಕಿರೀಟಿನಃ |
ಮೌಂಜೀಧರಾಶ್ಚ ರಾಜೇಂದ್ರ ತಥಾ ಕುಂಚಿತಮೂರ್ಧಜಾಃ ॥24॥
ಮಾಂಸವಿಲ್ಲದ ಶರೀರವನ್ನು, ಕರಿಹಕ್ಕಿಗಳ ಮುಖವನ್ನು, ಗಿಡಗದ ಮುಖವನ್ನು ಹೊಂದಿದ್ದರು. ಹಾಗೆಯೆ ತಲೆಯೇ ಇಲ್ಲದವರು, ಭಯಂಕರವಾದ ರಾಕ್ಷಸರ ಮುಖವನ್ನು ಹೊಂದಿದವರು, ಅತ್ಯಂತ ಪ್ರಕಾಶಮಾನವಾದ ನಾಲಿಗೆ ಕಣ್ಣು ಮುಖಗಳನ್ನು ಹೊಂದಿದವರು, ಹಾಗೆಯೇ ಬೆಂಕಿಯಂತಹ ಮುಖವನ್ನು ಹೊಂದಿದವರು, ಶಂಖಗಳನ್ನು ಮಾಲೆಯನ್ನಾಗಿ ಮಾಡಿಕೊಂಡವರು, ಶಂಖವನ್ನೇ ಪರಿಕರವನ್ನಾಗಿಸಿಕೊಂಡವರು, ಶಂಖದ ಧ್ವನಿಗೆ ಸದೃಶವಾದ ಧ್ವನಿಯನ್ನು ಹೊಂದಿದವರು, ಜಟಾಧಾರಿಗಳು, ಪಂಚಶಿಖಿಗಳು, ತಲೆಯನ್ನು ಬೋಳಿಸಿಕೊಂಡವರು, ತೆಳುವಾದ ಹೊಟ್ಟೆಯನ್ನು ಹೊಂದಿದವರು, ನಾಲ್ಕುಕೋರೆ ಹಲ್ಲುಗಳನ್ನು ಹೊಂದಿದವರು, ನಾಲ್ಕು ನಾಲಿಗೆಗಳನ್ನು ಹೊಂದಿದವರು, ನಿಮಿರಿನಿಂತ ಕಿವಿಗಳನ್ನು ಹೊಂದಿದವರು, ಕಿರೀಟಗಳನ್ನು ಧರಿಸಿದವರು, ಮುಂಜಾಹುಲ್ಲಿನ ಕಟಿಬಂಧವನ್ನು ಹೊಂದಿದವರು, ವಕ್ರವಾದ ಕೂದಲು ಹೊಂದಿದವರು ಆಗಿದ್ದರು.
ಉಷ್ಣೀಷಿಣೋ ಮಕುಟಿನಃ ಚಾರುವಕತ್ರಃ ಸ್ವಲಂಕೃತಾಃ |
ಪದ್ಮೋತ್ಪಲಪೀಡಧರಾಃ ತಥಾ ಕುಮುದಧಾರಿಣಃ ॥25॥
ಮಾಹಾತ್ಮ್ಯೇನ ಚ ಸಂಯುಕ್ತಾಃ ಶತಶೋಽಥ ಸಹಸ್ರಶಃ |
ಶತಘ್ನೀಚಕ್ರಹಸ್ತಾಶ್ಚ ತಥಾ ಮುಸಲಪಾಣಯಃ ॥26॥
ಭುಷಂಡೀಪಾಶಹಸ್ತಾಶ್ಚ ಗದಾಹಸ್ತಾಶ್ಚ ಭಾರತ |
ಪೃಷ್ಠೇಷು ಬದ್ಧೇಷುಧಯೋ ಚಿತ್ರಚಾಪಾ ರಣೋತ್ಕಟಾಃ ॥27॥
ಸಧ್ವಜಾಃ ಸಪಾತಾಕಾಶ್ಚ ಸಘಂಟಾಃ ಸಪರಶ್ವಧಾಃ |
ಮಹಾಪಾಶೋದ್ಯತಕರಾಃ ತಥಾ ಲಗುಡಪಾಣಯಃ ॥28॥
ಶೂಲಹಸ್ತಾಃ ಖಡ್ಗಹಸ್ತಾಃ ಸರ್ಪೋಚ್ಛ್ರಿತಕಿರೀಟಿನಃ |
ಮಹಾಸರ್ಪಾಂಗದಧರಾಃ ಚಿತ್ರಾಭರಣಧಾರಿಣಃ ॥29॥
ರಾಜರಲ್ಲಿ ಹಿರಿಯನೆ! ಹಾಗೆಯೇ ಕೆಲವರ ತಲೆಕೂದಲು ನಿಮಿರಿನಿಂತಿವೆ, ತಲೆಗೆ ರುಮಾಲನ್ನು ಕೆಲವರು ಸುತ್ತಿದ್ದಾರೆ, ಕಿರೀಟವನ್ನು ಧರಿಸಿದ್ದಾರೆ, ಸುಂದರ ಮುಖಗಳನ್ನು ಹೊಂದಿದವರು, ಅಲಂಕಾರವನ್ನು ಮಾಡಿಕೊಂಡವರು, ಕಮಲ-ನೈದಿಲೆಗಳನ್ನು ಧರಿಸಿದವರು, ಕುಮುದಪುಷ್ಪಗಳನ್ನು ಧರಿಸಿದವರು, ಮಹಿಮೋಪೇತರು, ನೂರಾರು ಚಕ್ರಗಳನ್ನು, ಸಾವಿರಾರು ಶತಘ್ನಿಗಳನ್ನು ಕೈಯಲ್ಲಿ ಹಿಡಿದವರು, ಒನಕೆಗಳನ್ನು ಹಿಡಿದವರು, ಭುಷಂಡಿಗಳನ್ನು (ಆಯುಧವಿಶೇಷ) ಪಾಶಗಳನ್ನು ಕೈಯಲ್ಲಿ ಹೊಂದಿದವರು, ಭರತಕುಲೋತ್ಪನ್ನನೆ! ಮತ್ತೆ ಕೆಲವರು ಗದೆಗಳನ್ನು ಹಸ್ತಗಳಲ್ಲಿ ಧರಿಸಿದ್ದರು, ಹಿಂಭಾಗದಲ್ಲಿ ಬಾಣಗಳನ್ನು ಬಿಗಿದುಕೊಂಡಿದ್ದರು, ರಣರಂಗದಲ್ಲಿ ಉತ್ಸಾಹಿಶಾಲಿಗಳಾದ ಅವರು ವಿಚಿತ್ರವಾದ ಬಿಲ್ಲುಗಳನ್ನು ಹೊಂದಿದ್ದರು, ಧ್ವಜಗಳನ್ನು ಪತಾಕೆಗಳನ್ನು ಘಂಟೆಗಳನ್ನು ಕೊಡಲಿಗಳನ್ನು ಹೊಂದಿದ್ದರು, ಮೇಲೆತ್ತಿದ ಕೈಗಳಲ್ಲಿ ಮಹಾಪಾಶಗಳನ್ನು ಹೊಂದಿದ್ದರು, ಹಾಗೆಯೆ ಬಡಿಗೆಗಳನ್ನು ಹೊಂದಿದ್ದರು, ಕೈಗಳಲ್ಲಿ ಶೂಲಗಳನ್ನು ಖಡ್ಗಗಳನ್ನು ಹೊಂದಿದ್ದರು, ಕಿರೀಟಗಳು ಸರ್ಪಗಳಿಂದ ಅಲಂಕೃತವಾಗಿದ್ದವು, ಬಾಹುಗಳಲ್ಲಿ ಅಂಗದಾಭರಣಗಳ ಸ್ಥಾನದಲ್ಲಿ ಸರ್ಪಗಳನ್ನು ಧರಿಸಿದ್ದರು, ಚಿತ್ರವಿಚಿತ್ರ ಆಭರಣಗಳನ್ನು ಧರಿಸಿದ್ದರು,

ರಜೋಧ್ವಸ್ತಾಃ ಪಂಕದಿಗ್ಧಾಃ ಸರ್ವೇ ಚಿತ್ರಾಂಬರಸ್ರಜಃ |
ನೀಲಾಂಗಾಃ ಕಮಲಾಂಗಾಶ್ಚ ಮುಂಡವಕ್ತ್ರಾಸ್ತಥೈವ ಚ ॥30॥
ಭೇರೀಶಂಖಮೃದಂಗಾಸ್ತೇ ಝರ್ಝರಾನಕಗೋಮುಖಾನ್ |
ಅವಾದಯನ್ ಪಾರಿಷದಾಃ ಸಂಹೃಷ್ಟಾಃ ಕನಕಪ್ರಭಾಃ ॥31॥
ಗಾಯಮಾನಾಸ್ತಥೈವಾನ್ಯೇ ಸಂಹೃಷ್ಟಾಃ ಪುರುಷರ್ಷಭಾಃ |
ಲಂಘಯಂತಃ ಪ್ಲವಂತಶ್ಚ ವಲ್ಗಂತಶ್ಚ ಮಹಾರಥಾಃ ॥32॥
ಧಾವಂತೋ ಜವನಾಶ್ಚಂಡಾಃ ಪವನೋದ್ಧೂತಮೂರ್ಧಜಾಃ |
ಮತ್ತಾ ಇವ ಮಹಾನಾಗಾ ವಿನದಂತೋ ಮುಹುರ್ಮುಹುಃ ॥33॥
ಸುಭೀಮಾ ಘೋರರೂಪಾಶ್ಚ ಶೂಲಪಟ್ಟಿಶಪಾಣಯಃ |
ವಿರಾಗಚಿತ್ರವಸನಾಃ ಚಿತ್ರಮಾಲ್ಯಾನುಲೇಪನಾಃ ॥34॥
ರತ್ನಚಿತ್ರಾಂಗದಧರಾಃ ಸಮುದ್ಯತಕರಾಸ್ತಥಾ |
ಹಂತಾರೋ ದ್ವಿಷತಾಂ ಶೂರಾಃ ಪ್ರಸಹ್ಯಾಸಹ್ಯವಿಕ್ರಮಾಃ ॥35॥
ಧೂಳುಮೆತ್ತಿಕೊಂಡಿರುವ, ಕೆಸರನ್ನು ಮೆತ್ತಿಕೊಂಡಿರುವ, ಚಿತ್ರವಿಚಿತ್ರ ಬಟ್ಟೆ, ಮಾಲೆಗಳನ್ನು ಧರಿಸಿರುವ, ಕರಿಯ ಮೈಬಣ್ಣವನ್ನು ಹೊಂದಿರುವ, ಕಮಲದಂತೆ ಕೆಂಪಾದ ಬಣ್ಣವನ್ನು ಹೊಂದಿರುವ, ಹಾಗೆಯೇ ಮೀಸೆಗಳನ್ನು ಬೋಳಿಸಿಕೊಂಡಿರುವ, ನಗಾರಿ ಶಂಖ ಮೃದಂಗಗಳನ್ನು ಹೊಂದಿರುವ, ಝರ್ಝರ ಆನಕ ಗೋಮುಖಗಳನ್ನು ನುಡಿಸುತ್ತಿರುವ ಆ ಪರಿವಾರದವರು ಹೊಂಬಣ್ಣದವರಾಗಿದ್ದರು, ಅತ್ಯಂತ ಸಂತಸದಿಂದ ಕೂಡಿದವರಾಗಿದ್ದರು. ಹಾಗೆಯೇ ಕೆಲವು ಪುರುಷಶ್ರೇಷ್ಠರು ಸಂತಸದಿಂದ ಹಾಡುತ್ತಿದ್ದರು, ಮಹಾರಥಿಕರಾದ ಕೆಲವರು ಓಡುತ್ತಿದ್ದರು, ಹಾರುತ್ತಿದ್ದರು, ಏನನ್ನೋ ಕೂಗಿ ಹೇಳುತ್ತಿದ್ದರು, ಮದಿಸಿದ ಆನೆಗಳಂತೆ ಮತ್ತೆ ಮತ್ತೆ ಮಹಾನಾದವನ್ನು ಮಾಡುತ್ತಿದ್ದರು. ಭಯಂಕರರಾದ ಅವರು ಘೋರರೂಪಗಳನ್ನು ಹೊಂದಿದ್ದರು, ಶೂಲವನ್ನು ಪಟ್ಟಿಶವನ್ನು ಕೈಯಲ್ಲಿ ಹಿಡಿದಿದ್ದರು, ಬಣ್ಣಕುಂದಿದ ವಿಚಿತ್ರವಾದ ಬಟ್ಟೆಗಳನ್ನು ಧರಿಸಿದ್ದರು, ಚಿತ್ರವಾದ ಮಾಲೆ ಗಂಧವನ್ನು ಲೇಪಿಸಿಕೊಂಡಿದ್ದರು. ರತ್ನಖಚಿತವಾದ ಭುಜಕೀರ್ತಿಯನ್ನು ಧರಿಸಿದ್ದರು, ಕೈಗಳನ್ನು ಮೇಲೆ ಎತ್ತಿದ್ದರು, ಬೇರೆಯವರು ಸಹಿಸಲಾಗದ ಪರಾಕ್ರಮಿಗಳಾದ ಶೂರರಾದ ದ್ವೇಷಿಗಳನ್ನು ಸಂಹರಿಸುವರಾಗಿದ್ದರು.
ಪಾತಾರೋಽಸೃಗ್ವಸೌಘಾನಾಂ ಮಾಂಸಾಂತ್ರಕೃತಭೋಜನಾಃ |
ಚೂಡಾಲಾಃ ಕರ್ಣಿಕಾರಾಶ್ಚ ಪ್ರಹೃಷ್ಟಾ ಮಂಥರೋದರಾಃ |
ಅತಿಹ್ರಸ್ವಾತಿದೀರ್ಘಾಶ್ಚ ಪ್ರಲಂಬಾಶ್ಚಾತಿಭೈರವಾಃ ॥36॥
ವಿಕಟಾಃ ಕಾಲಲಂಬೋಷ್ಠಾ ಬೃಹಚ್ಛೇಫಾಂಡಪಿಂಡಕಾಃ ॥37॥
ಮಹಾರ್ಹನಾನಾಮುಕುಟಾ ಮುಂಡಾಶ್ಚ ಜಟಿಲಾಃ ಪರೇ |
ಸಾರ್ಕೇಂದುಗ್ರಹನಕ್ಷತ್ರಾಂ ದ್ಯಾಂ ಕುರ್ವಂಸ್ತೇ ಮಹೀತಳೇ ॥38॥
ಉತ್ಸಹೇರಂಶ್ಚ ಯೇ ಹಂತುಂ ಭೂತಗ್ರಾಮಂ ಚತುರ್ವಿಧಮ್ |
ಯೇ ಚ ವೀತಭಯಾ ನಿತ್ಯಂ ಹರಸ್ಯ ಭ್ರುಕುಟೀತಟಾಃ ॥39॥
ರಕ್ತ ವಸಾ ಮುಂತಾದವುಗಳನ್ನು ಪಾನಮಾಡುತ್ತಾ ಮಾಂಸ ಕರಳುಗಳನ್ನು ತಿನ್ನುತ್ತಿದ್ದರು. ಜುಟ್ಟನ್ನು ಹೊಂದಿದವರು, ಕಣಗಿಲೆ ಪುಷ್ಪವನ್ನು ಮುಡಿದವರು, ಅತಿಹರ್ಷಗೊಂಡವರು, ಅತಿದಪ್ಪನೆಯ ಹೊಟ್ಟೆಯನ್ನು ಹೊಂದಿದವರು, ಅತಿಕುಳ್ಳಾಗಿರುವವರು, ಅತಿಎತ್ತರವಾಗಿದ್ದು ಜೋತಾಡುವ ಅವಯವಗಳನ್ನು ಹೊಂದಿದವರು, ಅತಿಭೀಕರವಾದ ರೂಪಗಳನ್ನು ಹೊಂದಿದವರು, ಅತಿಕುರೂಪಿಗಳಾದವರು, ಕರಿಯದಾದ ಉದ್ದನೆಯ ತುಟಿಗಳನ್ನು ಹೊಂದಿದವರು, ದೊಡ್ಡದಾದ ಲಿಂಗವನ್ನು ವೃಷಣವನ್ನು ಹೊಂದಿದ್ದರು, ಬೆಲೆಬಾಳುವ ನಾನಾ ಕಿರೀಟಗಳನ್ನು ಹೊಂದಿದವರು, ಮತ್ತೆ ಕೆಲವರು ತಲೆಬೋಳಿಸಿಕೊಂಡವರು, ಜುಟ್ಟನ್ನು ಬೆಳೆಸಿಕೊಂಡವರು, ಭೂಮಿಗೆ ಸೂರ್ಯ ಚಂದ್ರ ಗ್ರಹ ನಕ್ಷತ್ರಗಳನ್ನು ತರುವ ಸಾಮರ್ಥ್ಯವನ್ನು ಹೊಂದಿದವರು ಕೆಲವರು, ಭೂಮಿಯ ನಾಲ್ಕುವಿಧವಾದ ಪ್ರಾಣಿಗಳನ್ನು ಸಂಹರಿಸಲು ಉತ್ಸುಕರಾದವರು, ಯಾರು ರುದ್ರದೇವರ ಹುಬ್ಬಿನ ಸಮೀಪದಿಂದ ಬಂದವರೋ ಅವರು ನಿತ್ಯ ಭಯರಹಿತರು (ಕೋಪಾಭಿಮಾನಿ ರುದ್ರದೇವ, ಹುಬ್ಬು ಕೋಪದ ಕೇಂದ್ರ, ಅಲ್ಲಿಂದಲೇ ಉತ್ಪನ್ನರಾದ ಈ ಭೂತನಾಥರು ಭಯರಹಿತರು ಎಂಬ ಭಾವ.).
ಕಾಮಕಾರಕರಾಃ ಸಿದ್ಧಾಃ ತ್ರೈಲೋಕ್ಯಸ್ಯೇಶ್ವರೇಶ್ವರಾಃ |
ನಿತ್ಯಾನಂದಾಃ ಪ್ರಮುದಿತಾ ವಾಗೀಶಾ ವೀತಮತ್ಸರಾಃ ॥40॥
ಪ್ರಾಪ್ಯಾಪ್ಯಷ್ಟಗುಣಮೈಶ್ವರ್ಯಂ ಯೇ ನ ಯಾಂತಿ ಚ ವಿಸ್ಮಯಮ್ |
ಯೇಷಾಂ ವಿಸ್ಮಯತೇ ನಿತ್ಯಂ ಕರ್ಮಭಿರ್ಭಗವಾನ್ ಭವಃ ॥41॥
ಸ್ವೇಚ್ಛಾನುಸಾರಿಯಾಗಿ ಕರ್ಮಗಳನ್ನು ಮಾಡುವವರು, ಸಿದ್ಧರು, ಮೂರು ಲೋಕಗಳ ಒಡೆಯರ ಒಡೆಯರು, ನಿತ್ಯ ಆನಂದ ನಿರ್ಭರರು, ಒಳ್ಳೆಯ ವಾಗ್ಮಿಗಳು, ಮಾತ್ಸರ್ಯರಹಿತರು, ಯಾರು ಅಷ್ಟೈಶ್ವರ್ಯವು ಎಂಟು ಮಡಿಯಾಗಿ ಪ್ರಾಪ್ತವಾದರೂ ಸಂಭ್ರಮಕ್ಕೆ ಒಳಗಾಗರೋ, ಅಂತಹ ಇವರ ನಿತ್ಯ ಕರ್ಮಗಳಿಂದ ಪೂಜ್ಯನಾದ ಭವನೇ ಆಶ್ಚರ್ಯವಂತನಾಗುವನು.
ಮನೋವಾಕ್ಕರ್ಮಭಿರ್ಯುಕ್ತೈರ್ನಿತ್ಯಮಾರಾಧಿತಶ್ಚ ಯೈಃ |
ಮನೋವಾಕ್ಕರ್ಮಭಿರ್ಭಕ್ತಾನ್ ಪಾತಿ ಪುತ್ರಾನಿವೌರಸಾನ್ ॥42॥
ಮಾನಸಿಕ ವಾಚನಿಕ ಕಾಯಿಕ ಕರ್ಮಗಳಿಂದ ನಿತ್ಯ ಆರಾಧಿತನಾದ ಶಿವನು ಮನೋವಾಕ್ಕರ್ಮಗಳಿಂದ ಸ್ವಂತ ಪುತ್ರರಂತೆ ತನ್ನ ಭಕ್ತರನ್ನು ಸಲಹುವನು.
ಪಿಬಂತೋಽಸೃಗ್ವಸಾಶ್ಚಾನ್ಯೇ ಕ್ರುದ್ಧಾ ಬ್ರಹ್ಮದ್ವಿಷಾಂ ಸದಾ |

ಚತುರ್ವಿಧಾತ್ಮಕಂ ಸೋಮಂ ಯೇ ಪಿಬಂತಿ ಚ ನಿತ್ಯದಾ ॥43॥
ಶ್ರುತೇನ ಬ್ರಹ್ಮಚರ್ಯೇಣ ತಪಸಾ ಚ ದಮೇನ ಚ |
ಯೇ ಸಮಾರಾಧ್ಯ ಶೂಲಾಂಕಂ ಭವಸಾಯುಜ್ಯಮಾಗತಾಃ ॥44॥
ಯೈರಾತ್ಮಭೂತೈರ್ಭಗವಾನ್ ಪಾರ್ವತ್ಯಾ ಚ ಮಹೇಶ್ವರಃ |
ಸಹ ಭೂತಗಣೈರ್ಭುಂಕ್ತೇ ಭೂತಭವ್ಯಭವತ್ಪ್ರಭುಃ ॥45॥
ನಾನಾವಿಚಿತ್ರಹಸಿತೈಃ ಕ್ಷ್ವೇಲಿತೋತ್ಕೃಷ್ಟಗರ್ಜಿತೈಃ |
ಸಂನಾದಯಂತಸ್ತೇ ವಿಶ್ವಮ್ ಅಶ್ವತ್ಥಾಮಾನಮಭ್ಯಯುಃ ॥46॥
ರಕ್ತವಸಾದಿಗಳನ್ನು ಮತ್ತೆ ಮತ್ತೆ ಪಾನ ಮಾಡುವವರು ಕೆಲವರು, ಬ್ರಹ್ಮದ್ವೇಷಿಗಳಲ್ಲಿ ಕುಪಿತರಾದವರು, ನಿರಂತರ ನಾಲ್ಕುವಿಧವಾದ ಸೋಮರಸವನ್ನು ಪಾನಮಾಡುವವರು (ಅನ್ನಜನ್ಯ, ಲತಾಜನ್ಯ, ಚಂದ್ರಮಂಡಲಜನ್ಯ ಮತ್ತು ಅಮೃತರೂಪವಾದ ನಾಲ್ಕು ಸೋಮರಸಗಳು), ಯಾರು (ಶಾಸ್ತ್ರ)ಶ್ರವಣದಿಂದ, ಬ್ರಹ್ಮಚರ್ಯದಿಂದ, ತಪದಿಂದ, ಇಂದ್ರಿಯನಿಗ್ರಹದಿಂದ, ಶೂಲಧಾರಿಯನ್ನು ಆರಾಧಿಸಿ ಭವಸಾಯುಜ್ಯವನ್ನು ಹೊಂದಿರುವರೊ, ತನ್ನಂತೆ ಇರುವ ಭೂತಗಣಗಳಿಂದ ಮತ್ತು ಪಾರ್ವತೀ ದೇವಿಯಿಂದ ಸಹಿತನಾದ ಭಗವಂತನಾದ, ಹಿಂದಿನ ಇಂದಿನ ಮುಂದೆ ಬರಲಿರುವ ಜಗದ ಒಡೆಯನಾದ ಶಿವನು (ಹವಿಸ್ಸನ್ನು) ಉಣ್ಣುವನೋ, ಅವರು ವಿವಿಧವಾಗಿ ನಗುತ್ತಾ, ವಿವಿಧ ಕ್ರೀಡೆಯ ಮುಖಾಂತರ ಗರ್ಜಿಸುತ್ತಾ, ವಿಶ್ವವನ್ನೇ ಶಬ್ದಮಯಗೊಳಿಸುತ್ತಾ ಅಶ್ವತ್ಥಾಮನ ಬಳಿ ಆಗಮಿಸಿದರು.
ಸಂಸ್ತುವಂತೋ ಮಹಾದೇವಂ ಹಾಕುರ್ವಾಣಾಃ ಸುವರ್ಚಸಃ |
ವಿವರ್ಧಯಿಷವೋ ದ್ರೌಣೇರ್ಮಹಿಮಾನಂ ಮಹಾತ್ಮನಃ ॥47॥
ಜಿಜ್ಞಾಸಮಾನಾಸ್ತತ್ ತೇಜಃ ಸೌಪ್ತಿಕಂ ಚ ದಿದೃಕ್ಷವಃ |
ಭೀಮೋಗ್ರಪರಿಘಾಲಾತಶೂಲಪಟ್ಟಿಶಪಾಣಯಃ ॥48॥
ಘೋರರೂಪಾಃ ಸಮಾಜಗ್ಮುಃ ಭೂತಸಂಘಾಃ ಸಹಸ್ರಶಃ ॥49॥
ಮಹದೇವನನ್ನು ಸ್ತುತಿಸುತ್ತಾ, ಹುಂಕಾರವನ್ನು ಮಾಡುತ್ತಾ, ಒಳ್ಳೆಯ ಕಾಂತಿಯನ್ನು ಹೊಂದಿರುವ, ಮಹಾತ್ಮನಾದ ದ್ರೋಣಪುತ್ರನ ಮಹಿಮೆಯನ್ನು ವೃದ್ಧಿಗೊಳಿಸಲು ಬಯಸುವವರಾಗಿ, ಆತನ ಬಲವನ್ನು ತಿಳಿಯಲು ಬಯಸಿದವರಾಗಿ, ಮಲಗಿದವರನ್ನು (ಸಂಹಾರಕ್ರಿಯೆಯನ್ನು) ನೋಡುವ ಇಚ್ಛೆಯುಳ್ಳವರಾಗಿ, ಭಯಂಕರವಾದ ಭೀಕರವಾದ ಪರಿಘ ಅಲಾತ ಶೂಲ ಪಟ್ಟಿಶಗಳನ್ನು ಕರದಲ್ಲಿ ಧರಿಸಿರುವ, ಘೋರವಾದ ರೂಪಗಳನ್ನು ಧರಿಸಿರುವ, ಸಾವಿರಾರು ಭೂತಗಳ ಗುಂಪುಗಳು ಬಂದವು.
ಜನಯೇಯುರ್ಭಯಂ ಯೇ ಹಿ ತ್ರೈಲೋಕ್ಯಸ್ಯಾಪಿ ದರ್ಶನಾತ್ |
ನ ತು ತಾನ್ ಪ್ರೇಕ್ಷಮಾಣೋಽಪಿ ವ್ಯಥಾಮುಪಜಗಾಮ ಹ ॥50॥
ಯಾರ ದರ್ಶನದಿಂದಲೇ ಮೂಲೋರ್ಕಕ್ಕೆ ಭೀತಿಯು ಉಂಟಾಗುವುದೊ ಅವರನ್ನು ಕಂಡರೂ ಸಹ (ಅಶ್ವತ್ಥಾಮನು) ವ್ಯಥಿತನಾಗಲಿಲ್ಲ.
ಅಥ ದ್ರೌಣಿರ್ಧನುಷ್ಪಾಣಿರ್ಬದ್ಧಗೋಧಾಂಗುಲಿತ್ರವಾನ್ |
ಸ್ವಯಮೇವಾತ್ಮನಾಽಽತ್ಮಾನಮುಪಾಹಾರಮುಪಾಹರತ್ ॥51॥
ಅನಂತರದಲ್ಲಿ ದ್ರೋಣಪುತ್ರನು ಬಿಲ್ಲನ್ನು ಕರದಲ್ಲಿ ಪಿಡಿದವನಾಗಿ, ಚರ್ಮದ ಬೆರಳುರಕ್ಷಕಗಳನ್ನು ಧರಿಸಿದವನಾಗಿ, ಸ್ವೇಚ್ಛೆಯಿಂದಲೇ ತನ್ನನ್ನೇ ಹವಿಸ್ಸನ್ನಾಗಿ ಕಲ್ಪಿಸಿದನು.
ಧನೂಂಷಿ ಸಮಿಧಸ್ತತ್ರ ಪವಿತ್ರಾಣಿ ಸಿತಾಃ ಶರಾಃ |
ಹವಿರಾತ್ಮವತಶ್ಚಾತ್ಮಾ ತಸ್ಮಿನ್ ಭಾರತ ಕರ್ಮಣಿ ॥52॥
ಭರತಕುಲೋತ್ಪನ್ನನೇ! (ಅಶ್ವತ್ಥಾಮನು) ಆ ಯಜ್ಞದಲ್ಲಿ ಬಿಲ್ಲನ್ನೇ ಸಮಿಧೆಯನ್ನಾಗಿ, ಬಾಣಗಳನ್ನೇ ಬಿಳಿಯ ದರ್ಭೆಯನ್ನಾಗಿ, ತನ್ನನ್ನೇ ಬಲಿಯನ್ನಾಗಿ ಕಲ್ಪಿಸಿದನು.
ತತಃ ಸೋಮೇನ ಮಂತ್ರೇಣ ದ್ರೋಣಪುತ್ರಃ ಪ್ರತಾಪವಾನ್ |
ಉಪಹಾರಂ ಮಹಾಮನ್ಯುರಥಾತ್ಮಾನಮುಪಾಹರತ್ ॥53॥
ಅನಂತರದಲ್ಲಿ ಮಹಾಕೋಪಿಷ್ಟನಾದ ಪ್ರತಾಪಶಾಲಿಯಾದ ದ್ರೋಣಪುತ್ರನು, ಸೋಮಮಂತ್ರದಿಂದ ತನ್ನನ್ನೇ ಉಪಹಾರವನ್ನಾಗಿ ಕಲ್ಪಿಸಿದನು.
ತಂ ರುದ್ರಂ ರೌದ್ರಕರ್ಮಾಣಂ ರೌದ್ರೈಃ ಕರ್ಮಭಿರಚ್ಯುತಮ್ |
ಅಭಿಷ್ಟೂಯ ಮಹಾತ್ಮಾನಮಿತ್ಯುವಾಚ ಕೃತಾಂಜಲಿಃ ॥54॥
ಭೀಕರ ಕರ್ಮಗಳಿಂದ ಭೀಕರಕರ್ಮಿಯಾದ ಮಹಾತ್ಮನಾದ ನಾಶರಹಿತನಾದ ಆ ರುದ್ರದೇವನನ್ನು ಸ್ತುತಿಸುತ್ತಾ ಕೈಮುಗಿದವನಾಗಿ ಹೀಗೆ ನುಡಿದನು.
ದ್ರೌಣಿಃ
ಇಮಮಾತ್ಮಾನಮದ್ಯಾಹಂ ಜಾತಮಾಂಗಿರಸೇ ಕುಲೇ |
ಅಗ್ನೌ ಜುಹೋಮಿ ಭಗವನ್ ಪ್ರತಿಗೃಹ್ಣೀಷ್ವ ಮೇ ಬಲಿಮ್ ॥55॥
ಅಶ್ವತ್ಥಾಮ ಅಂಗಿರಸಕುಲದಲ್ಲಿ ಹುಟ್ಟಿದ ಈ ದೇಹವನ್ನು ನಾನು ಅಗ್ನಿಯಲ್ಲಿ ಹೋಮಿಸುವೆನು, ಪೂಜ್ಯನೇ! ನನ್ನ ಬಲಿಯನ್ನು ಪರಿಗ್ರಹಿಸು.
ತವ ಭಕ್ತ್ಯಾ ಮಹಾದೇವ ಪರಮೇಣ ಸಮಾಧಿನಾ |
ಅಸ್ಯಾಮಾಪದಿ ವಿಶ್ವಾತ್ಮನ್ನುಪಾಕುರ್ಮಿ ಮಹಾವ್ರತಃ ॥56॥

ಸರ್ವಸ್ವಾಮಿಯೆ, ಮಹಾದೇವನೇ! ಏಕಾಗ್ರತೆಯಿಂದ ಭಕ್ತಿಯಿಂದ ಮಹಾವ್ರತಿಯಾಗಿ ಈ ಆಪತ್‌ಸಂದರ್ಭದಲ್ಲಿ (ಈ ಬಲಿಯನ್ನು) ಸಮರ್ಪಿಸುತ್ತಿರುವೆ.
ತ್ವಯಿ ಸರ್ವಾಣಿ ಭೂತಾನಿ ಸರ್ವಭೂತೇಷು ಚಾಸಿ ವೈ |
ಗುಣಾನಾಂ ತು ಪ್ರಧಾನಾನಾಮೇಕತ್ವಂ ತ್ವಯಿ ತಿಷ್ಠತಿ ॥57॥
ನಿನ್ನಲ್ಲಿ ಎಲ್ಲ ಭೂತಗಳು ಆಶ್ರಯವನ್ನು ಹೊಂದಿವೆ, ನೀನು ಎಲ್ಲ ಭೂತಗಳಲ್ಲೂ ಸನ್ನಿಹಿತನಾಗಿರುವಿ, ಪ್ರಧಾನವಾದ ಎಲ್ಲ ಗುಣಗಳು ಒಂದಾಗಿ ನಿನ್ನಲ್ಲಿ ಮೇಳೈಸಿವೆ.
ಸರ್ವಭೂತಾಶ್ರಯ ವಿಭೋ ಹವಿರ್ಭೂತಮವಸ್ಥಿತಮ್ |
ಪ್ರತಿಗೃಹಾಣ ಮಾಂ ದೇವ ಯದ್ಯಶಕ್ಯಾಃ ಪರೇ ಮಯಾ ॥58॥
ಎಲ್ಲ ಪ್ರಾಣಿಗಳಿಗೆ ಆಶ್ರಯದಾತಾನೆ, ಸ್ವಾಮಿಯೆ! ಶತ್ರುಗಳು ನನ್ನಿಂದ ಪರಾಭೂತರಾಗದ ಪಕ್ಷದಲ್ಲಿ ಹವಿಸ್ಸಾಗಿ ನಿನ್ನ ಬಳಿ ನಿಂತ ನನ್ನನ್ನೇ ಪರಿಗ್ರಹಿಸು.
ಸಂಜಯಃ
ಇತ್ಯುಕ್ತ್ವಾ ದ್ರೌಣಿರಾಸ್ಥಾಯ ತಾಂ ವೇದೀಂ ದೀಪ್ತಪಾವಕಾಮ್ |
ಸಂತ್ಯಜ್ಯಾತ್ಮಾನಮಾರುಹ್ಯ ಕೃಷ್ಣವರ್ತ್ಮನ್ಯುಪಾವಿಶತ್ ॥59॥
ದ್ರೋಣಪುತ್ರನು ಈ ರೀತಿಯಾಗಿ ಹೇಳಿ, ಬೆಂಕಿಯಿಂದ ಪ್ರಜ್ವಲಿಸುತ್ತಿರುವ ಆ ವೇದಿಕೆಯನ್ನು ಸಮೀಪಿಸಿ, ಏರಿ, ತನ್ನಲ್ಲಿಯ ಅಭಿಮಾನವನ್ನು ತೊರೆದು, ಬೆಂಕಿಯ ಮಧ್ಯೆ ಕುಳಿತನು.
ತಮೂರ್ಧ್ವಬಾಹುಂ ನಿಶ್ಚೇಷ್ಟಂ ದೃಷ್ಟ್ವಾ ಹವಿರುಪಸ್ಥಿತಮ್ |
ಅಬ್ರುವೀದ್ ಭಗವಾನ್ ಸಾಕ್ಷಾನ್ಮಹಾದೇವೋ ಹಸನ್ನಿವ ॥60॥
ಕೈಗಳನ್ನು ಮೇಲೆತ್ತಿರುವ ನಿಶ್ಚೇಷ್ಟನಾಗಿ ಹವಿಸ್ಸನ್ನಾಗಿ ಸಮರ್ಪಿಸಿಕೊಂಡ ಆ ಅಶ್ವತ್ಥಾಮನನ್ನು ಉದ್ದೇಶಿಸಿ ಪೂಜ್ಯನಾದ ಮಹಾದೇವನು ಮುಗುಳುನಗುತ್ತಾ ಸಾಕ್ಷಾತ್ತಾಗಿ ನುಡಿದನು.
ಮಹೇಶ್ವರಃ
ಸತ್ಯಶೌಚಾರ್ಜವತ್ಯಾಗೈಃ ತಪಸಾ ನಿಯಮೇನ ಚ |
ಕ್ಷಾಂತ್ಯಾ ಭಕ್ತ್ಯಾ ಚ ಧೃತ್ಯಾ ಚ ಕರ್ಮಣಾ ಮನಸಾ ಗಿರಾ ॥61॥
ಯಥಾವದಹಮಾರಾಧ್ಯಃ ಕೃಷ್ಣೇನಾಕ್ಲಿಷ್ಟಕರ್ಮಣಾ |
ತಸ್ಮಾದಿಷ್ಟತಮಃ ಕೃಷ್ಣಾದ್ ಅನ್ಯೋ ಮಮ ನ ವಿದ್ಯತೇ ॥62॥
ಮಹಾದೇವ ಸತ್ಯ ಶೌಚ ನೇರನಡೆ ತ್ಯಾಗ ತಪಸು ನಿಯಮಸಹಿಷ್ಣುತೆ ಭಕ್ತಿ ಧೃತಿ ಈ ಗುಣಗಳಿಂದ ಯುಕ್ತನಾಗಿ, ಕಾಯಿಕವಾಗಿ ವಾಚನಿಕವಾಗಿ ಮಾನಸಿಕವಾಗಿ ಕಷ್ಟಸಾಧ್ಯವಾದ ಕರ್ಮಗಳನ್ನು ಮಾಡುವ ಅರ್ಜುನನಿಂದ ಯಥಾವತ್ತಾಗಿ ನಾನು ಪೂಜಿತನಾದೆನು, ಆದ್ದರಿಂದ ಅರ್ಜುನನಿಂದ ಬೇರೆ ಅತ್ಯಂತ ಇಷ್ಟರು ನನಗೆ ಇಲ್ಲ.
ಕುರ್ವತಾ ತಸ್ಯ ಸಮ್ಮಾನಂ ತ್ವಾಂ ಚ ಜಿಜ್ಞಾಸತಾ ಮಯಾ |
ಪಾಂಚಾಲಃ ಸರ್ವದಾ ಗುಪ್ತಾ ಮಾಯಾಶ್ಚ ಬಹುಶಃ ಕೃತಾಃ ॥63॥
ಅರ್ಜುನನ ಮೇಲಿನ ಪ್ರೀತಿಯಿಂದಲೂ ನಿನ್ನನ್ನು ಪರೀಕ್ಷಿಸುವ ಸಲುವಾಗಿಯೂ ನಾನು ಪಾಂಚಾಲರನ್ನು ಹೆಚ್ಚು ಸಂರಕ್ಷಿಸಿದೆನು, ಅನೇಕ ಪವಾಡಗಳನ್ನು ನಡೆಸಿದನು.
ತತಸ್ತಸ್ಯೈವ ಮಾನಾರ್ಥಂ ಪಾಂಚಾಲಾ ರಕ್ಷಿತಾ ಮಯಾ |
ಅಭಿಭೂತಾಸ್ತು ಕಾಲೇನ ನೈಷಾಮದ್ಯಾಸ್ತಿ ಜೀವಿತಮ್ ॥64॥
ಪಾಂಚಾಲರನ್ನು ರಕ್ಷಿಸುವ ಮುಖಾಂತರ ಆತನ (ಅರ್ಜುನನ) ಸಂಮಾನವನ್ನು ಮಾಡಿದಂತಾಯಿತು. ಕಾಲನಿಂದ ಮೃತರಾದ ಅವರ ಜೀವಿತವು ಈಗ ಮುಗಿಯಿತು.
ಸಂಜಯಃ
ಏವಮುಕ್ತ್ವಾ ಮಹೇಷ್ವಾಸಂ ಭಗವಾನಾತ್ಮನಸ್ತನುಮ್ |
ಆವಿವೇಶ ದದೌ ಚಾಸ್ಮೈ ವಿಮಲಂ ಖಡ್ಗಮುತ್ತಮಮ್ ॥65॥
ಸಂಜಯ ಒಳ್ಳೆಯ ಬಿಲ್ಲಾಳಾದ ತನ್ನದೇ ಒಂದಂಶನಾದ ಅಶ್ವತ್ಥಾಮನನ್ನು ಉದ್ದೇಶಿಸಿ ಈರೀತಿಯಾಗಿ ಹೇಳಿ, ಪೂಜ್ಯನಾದ ಮಹಾದೇವನು ಶ್ರೇಷ್ಠವಾದ ಶುಭ್ರವಾದ ಖಡ್ಗವನ್ನು ಆತನಿಗೆ ಕೊಟ್ಟನು ಮತ್ತು ಆತನಲ್ಲಿ ಪ್ರವೇಶಿಸಿದನು.
ವ್ಯಾಖ್ಯಾನ ವಿಶೇಷ `ಆತ್ಮನಸ್ತನುಮ್' ಎಂದಿದೆ, ಇದರಿಂದ ಅಶ್ವತ್ಥಾಮ ಮತ್ತು ಮಹಾದೇವನು ಅಭಿನ್ನರು ಎಂದು ತಿಳಿಯುವುದು. ಹಾಗಾಗಿ ಅವರಲ್ಲಿ ಪರಸ್ಪರ ಪೂಜ್ಯ-ಪೂಜಕಭಾವವು ಇಲ್ಲ. ಹಾಗಾದಲ್ಲಿ ಅಶ್ವತ್ಥಾಮನು ಮಾಡಿದ ಪೂಜಾದಿಗಳೆಲ್ಲವು ರುದ್ರಾಂತರ್ಗತ ಮಹಾವಿಷ್ಣುವಿಗೆ ಎಂದು ತಿಳಿಯುವುದು. ಆದ್ದರಿಂದಲೇ ಮಹಾಭಾರತತಾತ್ಪರ್ಯನಿರ್ಣಯದಲ್ಲಿ `ಆತ್ಮಸ್ಥಾಯೈವ ವಿಷ್ಣವೇ' (28.133) ಎಂದು ಉಪದೇಶಿಸಲಾಗಿದೆ. ಸ್ವತಃ ರುದ್ರದೇವನೇ ಶ್ರೀಮದ್ಭಾಗವತದಲ್ಲಿ `ಗುಹಾಶಯಾಯೈವ ನ ದೇಹಮಾನಿನೇ' (4.4.22). ಎಂದು ಉಪದೇಶಿಸಿರುವನು.
ಅಥಾವಿಷ್ಟೋ ಭಗವತಾ ಭೂಯೋ ಜಜ್ವಾಲ ತೇಜಸಾ |
ವೇಗವಾಂಶ್ಚಾಭವದ್ ಯುದ್ಧೇ ದೇವಸೃಷ್ಟೇನ ತೇಜಸಾ ॥66॥
ಭಗವಂತನಿಂದ ಆವಿಷ್ಟನಾದ ಅಶ್ವತ್ಥಾಮನು ತೇಜಸ್ಸಿನಿಂದ ಪ್ರಜ್ವಲಿಸಿದನು, ದೈವ ನೀಡಿದ ತೇಜಸ್ಸಿನಿಂದ ಅತಿವೇಗವನ್ನು ಹೊಂದಿದನು.
ತಂ ದೃಷ್ಟ್ವಾ ಸರ್ವಭೂತಾನಿ ರಕ್ಷಾಂಸಿ ಚ ಸಮಾದ್ರವನ್ ॥67॥

ಅಭಿತಃ ಶಿಬಿರಂ ಯಾಂತಂ ದ್ರೋಣಪುತ್ರಂ ಮಹಾರಥಮ್ |
ದೇವದೇವಂ ಹರಂ ಸ್ಥಾಣುಂ ಯಾಂತಂ ಸಾಕ್ಷಾದಿವೇಶ್ವರಮ್ ॥68॥
ಸಾಕ್ಷಾತ್ ದೇವದೇವನಾದ ಅಚಲನಾದ ಈಶ್ವರನಂತಿರುವ, ಶಿಬಿರದೆಡೆಗೆ ಸಾಗುತ್ತಿರುವ ಮಹಾರಥಿಕನಾದ ಆ ದ್ರೋಣಪುತ್ರನನ್ನು ಕಂಡು ಎಲ್ಲ ಭೂತಗಳು, ರಾಕ್ಷಸರು ಸುತ್ತುವರೆದು ಅನುಸರಿಸಿ ಸಾಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸೌಪ್ತಿಕಪರ್ವಣಿ ಅಶ್ವತ್ಥಾಮ್ನಃ ಖಡ್ಗಲಾಭ-ಶಿಬಿರಪ್ರವೇಶೋ ನಾಮ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಪಾರಾವತಾಶ್ವಂ ಸ ತದಾ ಶಯಾನ-
ಮುಪೇತ್ಯ ಪದ್ಭ್ಯಾಂ ಸಮತಾಡಯಚ್ಚ |
ವಕ್ಷಸ್ಯಸಾವವದದ್ ವೀತನಿದ್ರೋ
ಜಾನೇ ಭವಂತಂ ಹಿ ಗುರೋಸ್ತನೂಜಮ್ ॥
ಸಮುತ್ಥಿತಂ ಮಾಂ ಜಹಿ ಶಸ್ತ್ರಪಾಣಿಂ
ಶಸ್ತ್ರೇಣ ವೀರೋಽಸಿ ಸ ವೀರಧರ್ಮಃ |
ಲೋಕಾಶ್ಚ ಮೇ ಸಂತ್ವಥ ಶಸ್ತ್ರಪೂತಾ
ಇತಿ ಬ್ರುವಾಣಂ ಸ ರುಷಾ ಜಗಾದ ॥
ಅಶ್ವತ್ಥಾಮನು ಆಗ ಮಲಗಿದ ಧೃಷ್ಟದ್ಯುಮ್ನನ ಬಳಿಗೆ ಹೋಗಿ ಅವನೆದೆಗೆ ಕಾಲುಗಳಿಂದ ಒದ್ದ. ಧೃಷ್ಟದ್ಯುಮ್ನನು ಎಚ್ಚೆತ್ತು ನುಡಿದನು- `ನನಗೆ ಗೊತ್ತು ನೀನು ಗುರುಪುತ್ರನೆಂದು. ನಾನು ಎದ್ದು ಶಸ್ತ್ರವನ್ನು ಕೈಗೆತ್ತಿಕೊಂಡ ಬಳಿಕ, ಶಸ್ತ್ರದಿಂದ ನನ್ನನ್ನು ಕೊಲ್ಲು, ನೀನು ವೀರನಾಗಿರುವಿ. ವೀರನ ಧರ್ಮವಿದು. ಶಸ್ತ್ರದಿಂದ ಪವಿತ್ರರಾಗಿ ಹತರಾಗುವವರ ಪುಣ್ಯಲೋಕಗಳು ನನಗಾಗಲಿ'. ಹೀಗೆ ಧೃಷ್ಟದ್ಯುಮ್ನನು ಹೇಳಿದಾಗ ಅಶ್ವತ್ಥಾಮನು ಕೋಪದಿಂದ ನುಡಿದನು.
ನ ಸಂತಿ ಹಿ ಬ್ರಹ್ಮಹಣಾಂ ಸುಲೋಕಾಃ
ವಿಶೇಷತಶ್ಚೈವ ಗುರುದ್ರುಹಾಂ ಪುನಃ |
ನ ಧರ್ಮಯುದ್ಧೇನ ವಧಾರ್ಹಕಾಶ್ಚ
ಯೇ ತ್ವದ್ವಿಧಾಃ ಪಾಪತಮಾಃ ಸುಪಾಪ ॥
`ಮಹಾಪಾಪಿಯೆ, ಬ್ರಹ್ಮಹತ್ಯೆ ಮಾಡಿದವವರಿಗೆ ಪುಣ್ಯಲೋಕಗಳಿಲ್ಲ. ವಿಶೇಷವಾಗಿ ಗುರುದ್ರೋಹಿಗಳಿಗೆ ಸರ್ವಥಾ ಇಲ್ಲ. ಅದರಿಂದ ನಿನ್ನಂಥ ಮಹಾಪಾಪಿಗಳು ಧರ್ಮಯುದ್ಧದಿಂದ ವಧಾರ್ಹರಲ್ಲ.
ಅವಶ್ಯಭಾವಿನಂ ಮೃತ್ಯುಂ ಧೃಷ್ಟದ್ಯುಮ್ನೋ ವಿಚಿಂತ್ಯ ತಮ್ |
ತೂಷ್ಣೀಂ ಬಭೂವ ಸ್ವಪ್ನೇಽಪಿ ನಿತ್ಯಂ ಪಶ್ಯತಿ ತಾಂ ಮೃತಿಮ್ ॥
ಇದು ಅವಶ್ಯ ಉಂಟಾಗಲಿರುವ ಮರಣವೆಂದು ಧೃಷ್ಟದ್ಯುಮ್ನ ಆಲೋಚಿಸಿ ಸುಮ್ಮನಾದನು. ಏಕೆಂದರೆ ಆ ಮರಣವನ್ನು ಆತ ನಿತ್ಯವೂ ಸ್ವಪ್ನದಲ್ಲಿ ಕಾಣುತ್ತಿದ್ದನು.
ದ್ರೌಣಿಂ ಚ ಕಾಳರಾತ್ರಿಂ ಚ ದ್ರೋಣಪಾತಾದನಂತರಮ್ |
ವಿಶಸಂತಂ ಕೃಷಂತೀಂ ಚ ಸ್ವಪ್ನೇಽಪಶ್ಯದ್ಧಿ ಪಾರ್ಷತಃ ॥
ದ್ರೋಣನ ಪತನವಾದ ಬಳಿಕ ಧೃಷ್ಟದ್ಯುಮ್ನನು ತನ್ನನ್ನು ಅಶ್ವತ್ಥಾಮನು ಕೊಲ್ಲುವಂತೆ, ಕಾಲ ರಾತ್ರಿ ದುರ್ಗೆ ಸೆಳೆಯುವಂತೆ ಸ್ವಪ್ನದಲ್ಲಿ ಕಾಣುತ್ತಿದ್ದನು.
ಸಮಾಕ್ಷಿಪದ್ ದ್ರೋಣಸುತೋಽಸ್ಯ ಕಂಠೇ
ನಿಬಧ್ಯ ಮೌರ್ವೀಂ ಧನುಷೋಽಪ್ಯುರಸ್ಥಃ |
ಮಮಂಥ ಕೃಚ್ಛ್ರೇಣ ವಿಹಾಯ ದೇಹಂ
ಯಯೌ ನಿಜಸ್ಥಾನಮಸೌ ಚ ವಹ್ನಿಃ ॥
ಅಶ್ವತ್ಥಾಮನು ಧೃಷ್ಟದ್ಯುಮ್ನನ ಎದೆಯಲ್ಲಿ ಕುಳಿತು ಕೊರಳಿಗೆ ಬಿಲ್ಲಿನ ಹಗ್ಗವನ್ನು ಕಟ್ಟಿ ಸೆಳೆದು ಮಥನ ಮಾಡಿದನು. ಅಗ್ನಿಯ ಅವತಾರನಾದ ಆ ಧೃಷ್ಟದ್ಯುಮ್ನನು ಕಷ್ಟದಿಂದ ಶರೀರವನ್ನು ತೊರೆದು ತನ್ನ ಲೋಕಕ್ಕೆ ತೆರಳಿದನು.
ತತಃ ಶಿಖಂಡಿನಂ ಹತ್ವಾ ಯುಧಾಮನ್ಯೂತ್ತಮೋಜಸೌ |
ಜನಮೇಜಯಂ ಚ ಪಾಂಚಾಲೀಸುತಾನಭಿಯಯೌ ಜ್ವಲನ್ ॥
ಬಳಿಕ ಅಶ್ವತ್ಥಾಮನು ಶಿಖಂಡಿಯನ್ನೂ ಯುಧಾಮನ್ಯು ಉತ್ತಮೌಜರನ್ನೂ ಜನಮೇಜಯನನ್ನೂ ಕೊಂದು ದ್ರೌಪದಿಯ ಮಕ್ಕಳ ಬಳಿಗೂ ಜ್ವಲಿಸುತ್ತ ನಡೆದನು.
ತೈರುತ್ಥಿತೈರಸ್ಯಮಾನಃ ಶರೈಃ ಖಡ್ಗೇನ ಜಘ್ನಿವಾನ್ |
ಸರ್ವಾನ್ ಸವ್ಯಾಪಸವ್ಯೇನ ತಥಾಽನ್ಯಾನ್ ಪಾಂಡವಾತ್ಮಜಾನ್ ॥
ಋತ ಏಕಂ ಭೈಮಸೇನಿಂ ಕಾಶಿರಾಜಾತ್ಮಜಾತ್ಮಜಮ್ |
ತಂ ತದಾಽಂತರ್ಹಿತಃ ಶರ್ವಃ ಕೈಲಾಸಮನಯತ್ ಕ್ಷಣಾತ್ ॥
ಸ ಶರ್ವತ್ರಾತನಾಮಾಽಽಸೀದತಸ್ತತ್ರೈವ ಸೋಽವಸತ್ |

ಪುರಾಽರ್ಥಿತಃ ಸ್ವದೌಹಿತ್ರಸ್ಯಾಮರತ್ವಾಯ ಶಂಕರಃ |
ಕಾಶಿರಾಜೇನ ತೇನಾಸೌ ಜುಗೋಪೈನಂ ಕೃಪಾಯುತಃ ॥
ದ್ರೌಪದೀ ಪುತ್ರರು ಎದ್ದು ಬಾಣಗಳಿಂದ ಅಶ್ವತ್ಥಾಮನನ್ನು ತಡೆದರೂ ಅವನು ಎಲ್ಲರನ್ನೂ ಖಡ್ಗದಿಂದ ಸಂಹರಿಸಿದನು.
ಭೀಮಸೇನನಿಂದ ಕಾಶಿರಾಜನ ಮಗಳಾದ ಕಾಳಿದೇವಿಯಲ್ಲಿ ಹುಟ್ಟಿದ ಒಬ್ಬ ಮಗನನ್ನು ಹೊರತುಪಡಿಸಿ ಇನ್ನೆಲ್ಲ
ಪಾಂಡವಪುತ್ರರನ್ನೂ ಎಡಕ್ಕೂ ಬಲಕ್ಕೂ ಹೊಡೆದು ಕೊಂದನು. ಆಗ ಅದೃಶ್ಯನಾಗಿ ನಿಂತಿದ್ದ ರುದ್ರದೇವ ಕ್ಷಣದಲ್ಲಿ ಕೈಲಾಸಕ್ಕೆ
ಆತನನ್ನು ಒಯ್ದನು. ಅದರಿಂದ ಆತನಿಗೆ ಶರ್ವತ್ರಾತ ಎಂಬ ಹೆಸರು ಅನ್ವರ್ಥಕವಾಯಿತು. ಬಳಿಕ ಅವನು ಕೈಲಾಸದಲ್ಲಿಯೆ ವಾಸ
ಮಾಡಿದನು. ಹಿಂದೆ ಕಾಶಿರಾಜ ತನ್ನ ಮಗಳ ಮಗ ಅಮರನಾಗಬೇಕೆಂದು ರುದ್ರನನ್ನು ಬೇಡಿದ್ದನು. ಅದರಿಂದ ರುದ್ರನು ಈಗ
ಕೃಪಾಯುಕ್ತನಾಗಿ ಶರ್ವತ್ರಾತನನ್ನು ರಕ್ಷಿಸಿದನು.
ವಾಸುದೇವಮತಂ ಜ್ಞಾತ್ವಾ ಸಾಮ್ರಾಜ್ಯಾಯ ಪರೀಕ್ಷಿತಃ |
ವಾರಯಾಮಾಸ ಭೂಲೋಕಂ ನೈವ ಯಾಹೀತ್ಯಮುಂ ಶಿವಃ ॥
ಪರೀಕ್ಷಿತನಿಗೇ ಸಾಮ್ರಾಜ್ಯ ನೀಡಬೇಕೆನ್ನುವ ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದು ರುದ್ರದೇವನು `ನೀನು ಭೂಲೋಕಕ್ಕೆ
ಹೋಗಲೇಬೇಡವೆಂದು' ಶರ್ವತ್ರಾತನನ್ನು ತಡೆದನು.
ಸಾಮಾನ್ಯತೋಽಪಾಂಡವಾಯ ದ್ರೌಣಿನಾಽಪ್ಯಭಿಸಂಹಿತಮ್ |
ತದ್ರೂಪೇಣೈವ ರುದ್ರೇಣ ವಿನ್ನೈನಮಿತಿ ಚಿಂತಿತಮ್ ॥
ಬ್ರಹ್ಮಾಸ್ತ್ರ ಪ್ರಯೋಗಕಾಲದಲ್ಲಿ ಸಾಮಾನ್ಯವಾಗಿ `ಪಾಂಡವರ ಸಂತತಿ ನಾಶವಾಗಲಿ' ಎಂದು ಅಶ್ವತ್ಥಾಮ ಬಯಸಿದ್ದನು. ಆದರೂ
ಅಶ್ವತ್ಥಾಮನ ಸ್ವರೂಪಭೂತನಾದ ರುದ್ರನು `ಶರ್ವತ್ರಾತನನ್ನು ಹೊರತುಪಡಿಸಿ' ಎಂದು ಸಂಕಲ್ಪಿಸಿದ್ದನು.
ಅಸ್ತ್ರಂ ಬ್ರಹ್ಮಶಿರಶ್ಚೈನಂ ನ ಜಘಾನೈಕ್ಯತಸ್ತಯೋಃ |
ಚೇಕಿತಾನಾದಿಕಾಂಶ್ಚೈವ ಜಘಾನಾನ್ಯಾನ್ ಸ ಸರ್ವಶಃ ॥
ಅಶ್ವತ್ಥಾಮ-ರುದ್ರರು ಒಬ್ಬರೆ ಆದ್ದರಿಂದ ಬ್ರಹ್ಮಾಸ್ತ್ರವೂ ಶರ್ವತ್ರಾತನನ್ನು ಕೊಲ್ಲಲಿಲ್ಲ. ಅಶ್ವತ್ಥಾಮ ಈಗ ಶಿಬಿರದಲ್ಲಿ ಚೇಕಿತಾನ
ಮುಂತಾದ ಎಲ್ಲರನ್ನೂ ಕೊಂದನು.
ಸ ಚೇದಿಪಾಂಚಾಲಕರೂಶಕಾಶೀನ-
ನ್ಯಾಂಶ್ಚ ಸರ್ವಾನ್ ವಿನಿಹತ್ಯ ವೀರಃ |
ಶಿಶೂನ್ ಸ್ತ್ರಿಯಶ್ಚೈವ ನಿಹಂತುಮುಗ್ರಃ
ಪ್ರಾಜ್ವಾಲಯತ್ ತಚ್ಛಿಬಿರಂ ಸಮಂತಾತ್ ॥
ಚೇದಿ, ಪಾಂಚಾಲ, ಕರೂಶ, ಕಾಶಿ ರಾಜರುಗಳ ಸಂಬಂಧಿಗಳನ್ನೂ ಇತರ ಎಲ್ಲರನ್ನೂ ಸಂಹಾರ ಮಾಡಿ ಕ್ರೂರನಾದ ವೀರ ಅಶ್ವತ್ಥಾಮ
ಮಕ್ಕಳನ್ನೂ, ಹೆಂಗಸರನ್ನೂ ಕೊಲ್ಲಲು ಶಿಬಿರವನ್ನು ಎಲ್ಲ ಕಡೆ ಸುಟ್ಟುಬಿಟ್ಟನು.
ಜಿಜೀವಿಷೂಂಸ್ತತ್ರ ಪಲಾಯಮಾನಾನ್
ದ್ವಾರಿ ಸ್ಥಿತೌ ಗೌತಮಃ ಸಾತ್ವತಶ್ಚ |
ನಿಜಘ್ನತುಃ ಸರ್ವಶಃ ಪಾರ್ಷತಸ್ಯ
ಸೂತಸ್ತ್ವೇಕಃ ಶೇಷಿತೋ ದೈವಯೋಗಾತ್ ॥
ಬದುಕುವಾಸೆಯಿಂದ ಪಲಾಯನ ಮಾಡತೊಡಗಿದವರನ್ನು ಎಲ್ಲರನ್ನೂ ಶಿಬಿರದ್ವಾರದಲ್ಲಿ ನಿಂತಿದ್ದ ಕೃಪ-ಕೃತವರ್ಮರು ಕೊಂದರು.
ಧೃಷ್ಟದ್ಯುಮ್ನನ ಸಾರಥಿಯೊಬ್ಬನೆ ದೈವಯೋಗದಿಂದ ಉಳಿದುಕೊಂಡನು.
ಖಡ್ಗೇನ ಪ್ರಹೃತಂ ದೃಷ್ಟ್ವಾ ಹಾರ್ದಿಕ್ಯೇನ ಪಪಾತ ಹ |
ಭೂಮೌ ಪ್ರಾಗೇವ ಸಂಸ್ಪರ್ಶಾನ್ನ ಜ್ಞಾತಸ್ತಮಸಾಽಮುನಾ ॥
ಕೃತವರ್ಮ ಖಡ್ಗವನ್ನು ಬೀಸಿದಾಗ ಅದನ್ನು ಕಂಡು ಖಡ್ಗ ಮೈಗೆ ತಗಲುವ ಮುನ್ನವೆ ಧೃಷ್ಟದ್ಯುಮ್ನನ ಸಾರಥಿ ನೆಲಕ್ಕೆ ಬಿದ್ದನು.
ಕತ್ತಲು ಇದ್ದುದರಿಂದ ಕೃತವರ್ಮನಿಗೆ ಇದು ತಿಳಿಯಲಿಲ್ಲ.
ಅನ್ಯಾಸಕ್ತೇ ಸಮುತ್ಥಾಯ ಪ್ರಾದ್ರವದ್ಯತ್ರ ಪಾರ್ಷತೀ |
ತಸ್ಯಾ ಅಕಥಯತ್ ಸರ್ವಂ ಸಾ ಭೀಮಾಯಾಹ ದುಃಖಿತಾ |
ಪ್ರಾದ್ರವದ್ ರಥಮಾರುಹ್ಯ ಸ ಧನ್ವೀ ಗೌತಮೀಸುತಮ್ ॥
ಕೃತವರ್ಮ ಅನ್ಯರನ್ನು ಕೊಲ್ಲುವುದರಲ್ಲಿ ಉದ್ಯುಕ್ತನಾಗಿದ್ದಾಗ ಧೃಷ್ಟದ್ಯುಮ್ನನ ಸಾರಥಿ ಎದ್ದು ಉಪಪ್ಲಾವ್ಯನಗರದಲ್ಲಿ ದ್ರೌಪದಿ
ಇದ್ದಲ್ಲಿಗೆ ಧಾವಿಸಿದನು. ಅವಳಿಗೆ ಎಲ್ಲವನ್ನೂ ಹೇಳಿದನು. ಅವಳು ದುಃಖಿತಳಾಗಿ ಕೌರವ ಶಿಬಿರಕ್ಕೆ ಬಂದು ಭೀಮನಿಗೆ ಹೇಳಿದಳು.
ಭೀಮ ಬಿಲ್ಲು ಹಿಡಿದು ರಥವೇರಿ ಅಶ್ವತ್ಥಾಮನ ಕಡೆಗೆ ಧಾವಿಸಿದನು.
* * * * *
ಎಂಟನೆಯ ಅಧ್ಯಾಯ
ಶಿಬಿರದ ದ್ವಾರದಲ್ಲಿ ಕೃಪ-ಕೃತವರ್ಮರನ್ನು ನಿಲ್ಲಿಸಿ ಶಿಬಿರವನ್ನು
ಪ್ರವೇಶಿಸಿದ ಅಶ್ವತ್ಥಾಮನಿಂದ ಧೃಷ್ಟದ್ಯುಮ್ನ ಮುಂತಾದ ಪಾಂಚಾಲರ
ಮತ್ತು ದ್ರೌಪದಿಯ ಪುತ್ರರ ಸಂಹಾರ, ಹೆದರಿ ಹೊರಬರುವವರನ್ನು ಕೃಪ-ಕೃತವರ್ಮರು ಸಂಹರಿಸಿದರು.
ಧೃತರಾಷ್ಟ್ರಃ
ತಥಾ ಪ್ರಯಾತೇ ಶಿಬಿರಂ ದ್ರೋಣಪುತ್ರೇ ಮಹಾರಥೇ |
ಕಚ್ಚಿತ್ ಕೃಪಶ್ಚ ಭೋಜಶ್ಚ ಭಯಾರ್ತೌ ನ ವ್ಯವರ್ತತಾಮ್ ॥1॥

ಧೃತರಾಷ್ಟ್ರ, ಮಹಾರಥಿಕನಾದ ದ್ರೋಣಪುತ್ರನು ಆ ರೀತಿಯಾಗಿ ಶಿಬಿರವನ್ನು ಉದ್ದೇಶಿಸಿ ಹೊರಡಲು ಭಯಗ್ರಸ್ಥರಾದ ಕೃಪನಾಗಲಿ, ಕೃತವರ್ಮನಾಗಲಿ ತಡೆಯಲಿಲ್ಲವೆ?
ಕಚ್ಚಿನ್ನ ವಾರಿತೌ ಕ್ಷುದ್ರೈ ರಕ್ಷಿಭಿರ್ನೋಪಲಕ್ಷಿತೌ |
ಅಸಹ್ಯಮಿತಿ ಮನ್ವಾನೌ ನ ನಿವೃತ್ತೌ ಮಹಾರಥೌ ॥2॥
ಕ್ಷುದ್ರರಾದ ರಕ್ಷಕರು ಯಾರೂ ನೋಡಲಿಲ್ಲವೆ? ತಡೆಯಲಿಲ್ಲವೆ? ಈ ಕೃತ್ಯವು (ಮಲಗಿದವರನ್ನು ಸಂಹರಿಸುವುದು) ಅಸಹ್ಯ ಎಂದು ಮಹಾರಥಿಕರೀರ್ವರು (ಕೃಪ ಕೃತವರ್ಮರು) ಹಿಂತಿರುಗಲಿಲ್ಲವೇ?
ಪ್ರಮಥ್ಯ ಶಿಬಿರಂ ಕಚ್ಚಿದ್ಧತ್ವಾ ಸೋಮಕಪಾಂಡವಾನ್ |
ಕೃತಾ ಪ್ರತಿಜ್ಞಾ ಸಫಲಾ ಕಚ್ಚಿತ್ ಸಂಜಯ ಸಾ ನಿಶಿ ॥3॥
ಸಂಜಯನೇ, ಆ ರಾತ್ರಿಯಲ್ಲಿ ಶಿಬಿರವನ್ನು ನಾಶಗೊಳಿಸಿ, ಪಾಂಚಾಲರನ್ನು ಪಾಂಡವರ ಪುತ್ರರನ್ನು ಸಂಹರಿಸಿ, ಮಾಡಿದ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದನೆ?
ದುರ್ಯೋಧನಸ್ಯ ಪದವೀಂ ಕಚ್ಚಿತ್ ಪರಮಕಾಂ ರಣೇ |
ಗತ್ವಾ ತಿಷ್ಠತ್ಯಸೌ ದ್ರೌಣಿಃ ಕೃತ್ವಾ ಕರ್ಮ ಸುದುಷ್ಕರಮ್ ॥4॥
ಧೃಷ್ಟದ್ಯುಮ್ನಶಿಖಂಡಿಭ್ಯಾಂ ದ್ರೌಪದ್ಯಾಶ್ಚ ಸುತೈಃ ಕಿಲ |
ಸಂಛನ್ನಾ ಮೇದಿನೀ ಸುಪ್ತೈರ್ನಿಹತೈಃ ಪಾಂಡುಸೈನಿಕೈಃ ॥5॥
(ಪಾಂಚಾಲರು ಸಂಹೃತರಾಗಿ) ಶ್ರೇಷ್ಠವಾದ, ದುರ್ಯೋಧನನ ಗತಿಯನ್ನೇ ಹೊಂದಿದರೆ? ಅಥವಾ ದ್ರೋಣಪುತ್ರನು ಅಲ್ಲಿಗೆ ಹೋಗಿ ಅತ್ಯಸಾಧ್ಯವಾದ ಕರ್ಮಮಾಡಿ ನಿಲ್ಲಲು, ಮಲಗಿರುವ ಪಾಂಡವರ ಸೇನೆ, ಧೃಷ್ಟದ್ಯುಮ್ನ ಶಿಖಂಡಿ ದ್ರೌಪದಿಯ ಮಕ್ಕಳು ಮೃತರಾಗಿ ಇವರಿಂದ (ಇವರ ಶರೀರಗಳಿಂದ) ಭೂಮಿಯು ಆವೃತವಾಯಿತೊ?
ಪಾಂಚಾಲ್ಯೈರ್ವಾ ವಿನಿಹತೈರ್ಶಯಾನೈ ರುಧಿರೋಕ್ಷಿತೈಃ |
ಕಚ್ಚಿನ್ಮಹೀತಳಂ ಛನ್ನಂ ತನ್ಮಮಾಚಕ್ಷ್ವ ಸಂಜಯ ॥6॥
ಸಂಜಯನೇ! ಅಥವಾ ಮಲಗಿದಾಗ ಸಂಹೃತರಾದ ಪಾಂಚಾಲರ ರಕ್ತದಿಂದ ಭೂಮಿಯು ಆವೃತವಾಯಿತೇ? ಆ ವಿಷಯವನ್ನು ನನಗೆ ತಿಳಿಸು.
ಸಂಜಯ
ತಸ್ಮಿನ್ ಪ್ರಯಾತೇ ಶಿಬಿರಂ ದ್ರೋಣಪುತ್ರೇ ಮಹಾತ್ಮನಿ |
ಕೃಪಶ್ಚ ಕೃತವರ್ಮಾ ಚ ದ್ರೌಣಿಮೇವಾಭ್ಯವರ್ತತಾಮ್ ॥7॥
ಸಂಜಯ ಮಹಾತ್ಮನಾದ ಆ ದ್ರೋಣಪುತ್ರನು ಹೊರಡಲು ಕೃಪ ಕೃತವರ್ಮರೂ ಸಹ ದ್ರೋಣಪುತ್ರನನ್ನೇ ಅನುಸರಿಸಿದರು.
ಅಶ್ವತ್ಥಾಮಾ ತು ತೌ ದೃಷ್ಟ್ವಾ ಯತ್ನವಂತೌ ಮಹಾರಥೌ |
ಪ್ರಹೃಷ್ಟಃ ಶನಕೈಃ ರಾಜನ್ನಿದಂ ವಚನಮಬ್ರವೀತ್ ॥8॥
ರಾಜನೆ! ಅಶ್ವತ್ಥಾಮನಾದರೋ ಜೊತೆಗೂಡಿ ಬಂದ ಆ ಮಹಾರಥರೀರ್ವರನ್ನು ನೋಡಿ ಸಂತೋಷಗೊಂಡು ಮೆಲ್ಲಗೆ ಈ ಮಾತನ್ನು ನುಡಿದನು.
ಅಶ್ವತ್ಥಾಮಾ
ಯತ್ತೌ ಭವಂತೌ ಪರ್ಯಾಪ್ತೌ ಸರ್ವಕ್ಷತ್ರಸ್ಯ ನಾಶನೇ |
ಕಿಂಪುನರ್ಯೋಧಶೇಷಸ್ಯ ಪ್ರಸುಪ್ತಸ್ಯ ವಿಶೇಷತಃ ॥9॥
ಅಶ್ವತ್ಥಾಮ ಎಲ್ಲ ಕ್ಷತ್ರಿಯರನ್ನು ನಾಶಮಾಡಲು ನೀವೀರ್ವರೇ ಸಾಕು, ಹೀಗಿರುವಾಗ ವಿಶೇಷವಾಗಿ ಮಲಗಿರುವ (ಅಳಿದು) ಉಳಿದ ಯೋಧರ ನಾಶವು ಸುಲಭ' ಎಂದು ಮತ್ತೇನು ಹೇಳುವುದು?
ಅಹಂ ಪ್ರವಿಶ್ಯ ಶಿಬಿರಂ ಪ್ರಚರಿಷ್ಯಾಮಿ ಕಾಲವತ್ |
ಯಥಾ ನ ಕಶ್ಚಿದೇತೇಷಾಂ ಜೀವನ್ ಮುಚ್ಯೇತ ಮಾನವಃ ॥10॥
ತಥಾ ಭವದ್ಭ್ಯಾಂ ಕಾರ್ಯಂ ಸ್ಯಾದ್ ಇತಿ ಮೇ ನಿಶ್ಚಿತಾ ಮತಿಃ ॥11॥
ನಾನು ಶಿಬಿರವನ್ನು ಹೊಕ್ಕು ಮೃತ್ಯುವಿನಂತೆ ಸಂಚರಿಸುವೆನು, ಅವರಲ್ಲಿ ಯಾವೊಬ್ಬ ಮನುಜನು ಜೀವಂತವಾಗಿ ಹೊರಬರಬಾರದ ಹಾಗೆ ನೀವು ಮಾಡಬೇಕು, ಎನ್ನುವುದೇ ನನ್ನ ನಿಶ್ಚಿತವಾದ ತೀರ್ಮಾನ.
ಸಂಜಯಃ
ಇತ್ಯುಕತ್ವ ಪ್ರಾವಿಶದ್ ದ್ರೌಣಿಃ ಪಾರ್ಥಾನಾಂ ಶಿಬಿರಂ ಮಹತ್ |
ಅದ್ವಾರೇಣಾಭ್ಯವಸ್ಕಂದ್ಯ ವಿನೀಯ ಭಯಮಾತ್ಮನಃ ॥12॥
ಸಂಜಯ ಈರೀತಿಯಾಗಿ ಹೇಳಿ, ಭಯವನ್ನು ತೊರೆದು ದ್ರೋಣಪುತ್ರನು ಪಾಂಡವರ ದೊಡ್ಡ ಶಿಬಿರವನ್ನು ಹಿಂಬದಿಯಿಂದ ಪ್ರವೇಶಿಸಿದನು.
ಸ ಪ್ರವಿಶ್ಯ ಮಹಾಬಾಹುಃ ಉದ್ದೇಶಜ್ಞಶ್ಚ ತಸ್ಯ ಹಿ |
ದ್ರೌಣಿಃ ಪರಮಸಂಕ್ರುದ್ಧಃ ತೇಜಸಾ ಪ್ರಜ್ವಲನ್ನಿವ ॥13॥
ತತಃ ಪರ್ಯಚರತ್ ಸರ್ವಂ ಸಂಪ್ರಸುಪ್ತಜನಂ ನಿಶಿ ॥14॥
ಧೃಷ್ಟದ್ಯುಮ್ನಸ್ಯ ನಿಲಯಂ ಶನಕೈರಭ್ಯುಪಾಗಮತ್ ॥15॥
ತೇಜಸ್ಸಿನಿಂದ ಬೆಂಕಿಯಂತೆ ಇರುವ, ತುಂಬ ಕೋಪಗೊಂಡ, ಅಲ್ಲಿ (ಶಿಬಿರದಲ್ಲಿ) ಗುರಿಯ ಅರಿವಿರುವ (ಯಾರು ಯಾರು ಎಲ್ಲಿ ಎಲ್ಲಿ ಮಲಗಿರುವರು ಎಂದು ತಿಳಿದಿರುವ) ನೀಳಬಾಹುವಾದ, ಆ ದ್ರೋಣಪುತ್ರನು (ಶಿಬಿರವನ್ನು) ಪ್ರವೇಶಿಸಿ, ರಾತ್ರಿಯಲ್ಲಿ ಎಲ್ಲ ಮಲಗಿದ

ಜನರನ್ನು ಸುತ್ತಿದನು, ಧೃಷ್ಟದ್ಯುಮ್ನನ ಶಿಬಿರವನ್ನು ನಿಧಾನವಾಗಿ ಸಮೀಪಿಸಿದನು.
ತೇ ತು ಕೃತ್ವಾ ಮಹತ್ಕರ್ಮ ಶ್ರಾಂತಾಶ್ಚ ಬಲವದ್ ರಣೇ |
ಪ್ರಸುಪ್ತಾ ವೈ ಸುವಿಶ್ವಸ್ತಾಃ ಸ್ವಸೈನ್ಯಪರಿವಾರಿತಾಃ ॥16॥
ಅವರಾದರೋ (ಪಾಂಚಾಲರು ಪಾಂಡವರ ಸೈನ್ಯಕರಾದರೊ) ದೊಡ್ಡ ರಣರಂಗದಲ್ಲಿ ಮಹತ್ತರವಾದ ಕರ್ಮವನ್ನು ಮಾಡಿ ಬಳಲಿದ್ದರು. ತಮ್ಮ ಸೈನ್ಯ ಪರಿವಾರಗಳಿಂದ ಕೂಡಿಕೊಂಡು (ಅಪಾಯವಿಲ್ಲ ಎಂಬ) ಪೂರ್ಣವಿಶ್ವಾಸದಿಂದ ಮಲಗಿದ್ದರು.
ಅನುಪ್ರವಿಶ್ಯ ತದ್ವೇಶ್ಮ ಧೃಷ್ಟದ್ಯುಮ್ನಸ್ಯ ಭಾರತ |
ಪಾಂಚಾಲ್ಯಂ ಶಯನೇ ದ್ರೌಣಿರಪಶ್ಯತ್ ಸುಪ್ತಮಂತಿಕಾತ್ ॥17॥
ಕ್ಷೌಮಾವದಾತೇ ಮಹತಿ ಸ್ಪರ್ಧ್ಯಾಸ್ತರಣಸಂವೃತೇ |
ಮಾಲ್ಯಪ್ರವರಸಂಯುಕ್ತೈಃ ಧೂಪೈರ್ಗಂಧೈಶ್ಚ ವಾಸಿತೇ ॥18॥
ಭರತಕುಲೋತ್ಪನ್ನನೇ! ಧೃಷ್ಟದ್ಯುಮ್ನನ ವಸತಿಯನ್ನು ಪ್ರವೇಶಿಸಿದ ದ್ರೋಣಪುತ್ರನು, ರೇಷ್ಮೆಯ ಹೊದಿಕೆಯಿಂದ ಆಚ್ಛಾದಿತವಾದ ವಿಸ್ತಾರವಾದ ಅಮೂಲ್ಯವಾದ ಮೇಲಿನ ಹಚ್ಚಡದಿಂದ ಆವೃತವಾದ ಶ್ರೇಷ್ಠವಾದ ಮಾಲೆಗಳಿಂದ ಅಲಂಕೃತವಾದ ಧೂಪದ ಸುಗಂಧದಿಂದ ಸುವಾಸಿತವಾದ (ಶಿಬಿರದಲ್ಲಿನ) ಹಾಸಿಗೆಯಲ್ಲಿ ಮಲಗಿದ ಪಾಂಚಾಲನನ್ನು ಸಮೀಪದಿಂದ ನೋಡಿದನು.
ತಂ ಶಯಾನಂ ಮಹಾತ್ಮಾನಂ ವಿಶ್ವಸ್ತಮಕುತೋಭಯಮ್ |
ಅಪ್ರೋಥಯತ ಪಾದೇನ ಶಯನಸ್ಥಂ ಮಹೀಪತೇ ॥19॥
ಮಹಾರಾಜನೇ! ವಿಶ್ವಾಸದಿಂದ ಭಯರಹಿತನಾಗಿ ಮಲಗಿರುವ, ಹಾಸಿಗೆಯಲ್ಲಿರುವ ಆ ಮಹಾತ್ಮನನ್ನು ಕಾಲಿನಿಂದ ತಿವಿದನು.
ಸ ಬುದ್ಧ್ವಾ ಚರಣಸ್ಪರ್ಶಾದ್ ಉತ್ಥಾಯ ರಣದುರ್ಮದಃ |
ಅಭ್ಯಜಾನಾದದೀನಾತ್ಮಾ ದ್ರೋಣಪುತ್ರಂ ಮಹಾರಥಮ್ ॥20॥
ರಣದಲ್ಲಿ ಅತಿಬಲಿಷ್ಟನಾದ ಆತನು (ಧೃಷ್ಟದ್ಯುಮ್ನನು) ಕಾಲುಸೋಕಿದ್ದರಿಂದ ಎಚ್ಚರಗೊಂಡನು, ಎಚ್ಚರಗೊಂಡ ಧೈರ್ಯಶಾಲಿಯಾದ ಆತನು ಮಹಾರಥಿಕನಾದ ದ್ರೋಣಪುತ್ರನನ್ನು ತಿಳಿದನು (ದ್ರೋಣಪುತ್ರನು ತನ್ನನ್ನು ಆಕ್ರಮಿಸಲು ಬಂದಿರುವನು ಎಂದು ತಿಳಿದುಕೊಂಡನು)
ತಮುತ್ಪತಂತಂ ಶಯನಾದ್ ಅಶ್ವತ್ಥಾಮಾ ಮಹಾಬಲಃ |
ಕೇಶೇಷ್ವಾಲಭ್ಯ ಪಾಣಿಭ್ಯಾಂ ನಿಷ್ಪಿಪೇಷ ಮಹೀತಳೇ ॥21॥
ಹಾಸಿಗೆಯಿಂದ ಮೇಲೇಳಲು ಯತ್ನಿಸುತ್ತಿದ್ದ ಆತನನ್ನು ಮಹಾಬಲಿಷ್ಟನಾದ ಅಶ್ವತ್ಥಾಮನು ಕೈಗಳಿಂದ ಕೇಶವನ್ನು ಹಿಡಿದು ಭೂಮಿಯಲ್ಲಿ ಕೆಡವಿ ತಿಕ್ಕಿದನು.
ಸ ಬಲಾತ್ ತೇನ ನಿಷ್ಪಿಷ್ಟಃ ಸಾಧ್ವಸೇನ ಚ ಭಾರತ |
ಅಭ್ಯಾಕ್ರಾಂತಶ್ಚ ನಿದ್ರಾಂಧೋ ನ ಶಶಾಕ ವಿಚೇಷ್ಟಿತುಮ್ ॥22॥
ಭರತಕುಲೋತ್ಪನ್ನನೇ! ಆತನನ್ನು (ಧೃಷ್ಟದ್ಯುಮ್ನನನ್ನು) ಆತನು ( ಅಶ್ವತ್ಥಾಮನು) ಲಗುಬಗೆಯಿಂದ ಬಲಾತ್ಕಾರವಾಗಿ ಒರೆಯಲಾಗಿ, ಅರೆನಿದ್ರೆಯಲ್ಲಿರುವುದರಿಂದಲೂ, (ಅಶ್ವತ್ಥಾಮನಿಂದ ) ಆಕ್ರಾಂತನಾಗಿದ್ದರಿಂದಲೂ (ಧೃಷ್ಟದ್ಯುಮ್ನನು) ಮಿಸುಕಾಡಲೂ ಸಮರ್ಥನಾಗಲಿಲ್ಲ.
ನಿಷ್ಪಿಷ್ಯ ತು ತತೋ ಭೂಮೌ ಪಾಂಚಾಲ್ಯಂ ದ್ರೌಣಿರಂಜಸಾ |
ಧನುಷೋ ಜ್ಯಾಂ ವಿಮುಚ್ಯಾಶು ಕ್ರೂರಬುದ್ಧಿರಮರ್ಷಣಃ ॥23॥
ತಸ್ಯ ಕಂಠೇಽಥ ಬದ್ಧ್ವಾ ತಾಂ ತ್ವರಿತಃ ಕ್ರೋಧಮೂರ್ಚ್ಛಿತಃ |
ದ್ರೌಣಿಃ ಕ್ರೂರಂ ಮನಃ ಕೃತ್ವಾ ಪಾಂಚಾಲ್ಯಮವಧೀತ್ ತದಾ ॥24॥
ಅನಂತರದಲ್ಲಿ ದ್ರೋಣಪುತ್ರನು ಪಾಂಚಾಲರಾಜಪುತ್ರನನ್ನು ಭೂಮಿಯಲ್ಲಿ ಕೆಡವಿ ಚೆನ್ನಾಗಿ ತಿಕ್ಕಿದನು. ಅನಂತರದಲ್ಲಿ ಕೋಪದಿಂದ ಕೂಡಿರುವ ಕಠೋರ ಬುದ್ಧಿಯವನಾದ ಕ್ರೋಧಾವಿಷ್ಟನಾದ ದ್ರೋಣಪುತ್ರನು ಆಗ ಆ ಕೂಡಲೇ ಬಿಲ್ಲಿನ ಹಗ್ಗವನ್ನು ಬಿಚ್ಚಿ, ಆ ಹಗ್ಗವನ್ನು ಆತನ (ಧೃಷ್ಟದ್ಯುಮ್ನನ) ಕಂಠದಲ್ಲಿ ಬೇಗದಲ್ಲಿ ಬಿಗಿದು, ಕೆಟ್ಟಸಂಕಲ್ಪವನ್ನು ಮಾಡಿ ಪಾಂಚಾಲರಾಜಕುಮಾರನನ್ನು ಹಿಂಸಿಸಿದನು.
ತಮಾಕ್ರಮ್ಯ ಪದಾ ರಾಜನ್ ಕಂಠೇ ಚೋರಸಿ ಚೋಭಯೋಃ |
ನದಂತಂ ವಿಸ್ಫುರಂತಂ ಚ ಪಶುಮಾರಮಮಾರಯತ್ ॥25॥
ರಾಜನೇ! ಆತನ ಕುತ್ತಿಗೆ ಮತ್ತು ಎದೆ ಎರಡೂ ಭಾಗಗಳಲ್ಲಿ ಕಾಲಿನಿಂದ ಮೆಟ್ಟಿ ಭುಸುಗುಟ್ಟುತ್ತಿರುವ ಹೊರಳಾಡುತ್ತಿರುವ (ರಣರಂಗದಲ್ಲಿ ಕೌರವರಸೇನೆಯನ್ನು ರುದ್ರನು ಪಶುಗಳನ್ನು ಸಂಹರಿಸುವಂತೆ ಸಂಹರಿಸುತ್ತಿದ್ದ. ಆದ್ದರಿಂದ ಪಶುಮಾರಕ ಎಂಬ ಬಿರುದಾಂಕಿತನಾದ ಧೃಷ್ಟದ್ಯುಮ್ನನನ್ನು ) ಪಶುಮಾರಕನನ್ನು ಪ್ರಹರಿಸಿದನು.
ಸ ವಾರ್ಯಮಾಣಸ್ತರಸಾ ಬಲಾದ್ ಬಲವತಾಂ ಬಲೀ |
ತುದನ್ ನಖೈಸ್ತಥಾ ದ್ರೌಣಿಂ ನಾತಿವ್ಯಕ್ತಮುದಾಹರನ್ ॥26॥
ಬಲಿಷ್ಟರಿಗೂ ಬಲಶಾಲಿಯಾದ ಆ ಧೃಷ್ಟದ್ಯುಮ್ನನು ಪ್ರಬಲವಾಗಿ ವಿರೋಧಿಸಿದನು, ಉಗುರುಗಳಿಂದ ತಿವಿದನು, ಹಾಗೆಯೇ ದ್ರೋಣಪುತ್ರನನ್ನು ಉದ್ದೇಶಿಸಿ ಅಸ್ಪಷ್ಟವಾಗಿ ನುಡಿದನು.
ಧೃಷ್ಟದ್ಯುಮ್ನಃ
ಆಚಾರ್ಯಪುತ್ರ ಶಸ್ತ್ರೇಣ ಜಹಿ ಮಾಂ ಮಾಚಿರಂ ಕೃಥಾಃ |
ತ್ವತ್ಕೃತೇ ಸುಕೃತಾನ್ ಲೋಕಾನ್ ಗಚ್ಛೇಯಂ ದ್ವಿಪದಾಂ ವರ ॥27॥
ಧೃಷ್ಟದ್ಯುಮ್ನ ಮಾನವಶ್ರೇಷ್ಠನೆ ಆಚಾರ್ಯರ ಪುತ್ರನೇ! ಶಸ್ತ್ರದಿಂದ ನನ್ನನ್ನು ಗೆಲ್ಲು, ವಿಲಂಬ ಮಾಡಬೇಡ, ನಿನ್ನಿಂದ

ಶ್ರೇಷ್ಠಲೋಕಗಳನ್ನು ಹೊಂದುವೆನು.
ಸಂಜಯಃ
ತಸ್ಯಾವ್ಯಕ್ತಾಂ ತು ತಾಂ ವಾಚಂ ಸಂಶ್ರುತ್ಯ ದ್ರೌಣಿರಬ್ರವೀತ್ ॥28॥
ಆತನ ಅಸ್ಪಷ್ಟವಾದ ಆ ಮಾತನ್ನು ಕೇಳಿ ದ್ರೋಣಪುತ್ರನು ನುಡಿದನು
ದ್ರೌಣಿಃ
ಆಚಾರ್ಯಘಾತಿನಾಂ ಲೋಕಾ ನ ಸಂತಿ ಕುಲಪಾಂಸನ |
ತಸ್ಮಾಚ್ಛಸ್ತ್ರೇಣ ನಿಧನಂ ನ ತ್ವಮರ್ಹತಿ ದುರ್ಮತೇ ॥29॥
ಅಶ್ವತ್ಥಾಮ ಕುಲಗೆಡಕ, ದುರ್ಬುದ್ಧಿಯವನೇ! ಆಚಾರ್ಯರನ್ನು ಕೊಲೆಮಾಡಿದವರಿಗೆ (ಉತ್ತಮ) ಲೋಕಗಳು ಇಲ್ಲ, ಆದ್ದರಿಂದ ನೀನು ಶಸ್ತ್ರದಿಂದ ಸಾವನ್ನು ಹೊಂದಲು ಅನರ್ಹನಾಗಿರುವಿ.
ನೃಶಂಸೇನಾತಿವೃತ್ತೇನ ತ್ವಯಾ ಮೇ ನಿಹತಃ ಪಿತಾ |
ತಸ್ಮಾತ್ ತ್ವಮಪಿ ವಧ್ಯಸ್ತು ನೃಶಂಸೇನ ನೃಶಂಸವತ್ ॥30॥
ರಾಕ್ಷಸನಂತೆ ಮರ್ಯಾದೆಯನ್ನು ಮೀರಿ ನೀನು ನನ್ನ ತಂದೆಯನ್ನು ಸಂಹರಿಸಿದಿ, ಆದ್ದರಿಂದ ನೀನೂ ಸಹ ರಕ್ಕಸನಿಂದ ರಕ್ಕಸನಂತೆ ಮೃತನಾಗಲು ಯೋಗ್ಯನಾಗಿದ್ದೀಯ.
ಸಂಜಯಃ
ಏವಮುಕತ್ವ ತು ತಂ ವೀರಂ ಸಿಂಹೋ ಮತ್ತಮಿವ ದ್ವಿಪಮ್ |
ಮರ್ಮಸ್ವಭ್ಯಹನದ್ ಕ್ರುದ್ಧಃ ಪಾದಘಾತೈಃ ಸುದಾರುಣೈಃ ॥31॥
ಸಂಜಯ ಈ ರೀತಿಯಾಗಿ ಹೇಳಿ, ಸಿಂಹವು ಮದಿಸಿದ ಆನೆಯನ್ನು ಹಿಂಸಿಸುವಂತೆ, ಆ ವೀರನನ್ನು ಭೀಕರವಾಗಿ ಕಾಲಿನಿಂದ ಮರ್ಮಸ್ಥಲದಲ್ಲಿ ಮೆಟ್ಟುವುದರಿಂದ ಕ್ರುದ್ಧನಾದ ಅಶ್ವತ್ಥಾಮನು ಹಿಂಸಿಸಿದನು.
ತಸ್ಯ ವೀರಸ್ಯ ಶಬ್ದೇನ ಮಾರ್ಯಮಾಣಸ್ಯ ವೇಶ್ಮನಿ |
ಅಬುಧ್ಯನ್ನಥ ರಾಜೇಂದ್ರ ದ್ವಾರೇ ಯೇ ಚಾಸ್ಯ ರಕ್ಷಿಣಃ ॥32॥
ರಾಜಶ್ರೇಷ್ಠನೇ! ಅನಂತರದಲ್ಲಿ ಆ ವೀರನ ಕೂಗುವಿಕೆಯಿಂದ ಆ ಸಂಹಾರವಾಗುತ್ತಿರುವ ಮನೆಯ ದ್ವಾರದಲ್ಲಿ ಯಾರು ರಕ್ಷಕರೋ ಅವರು ಎಚ್ಚರಗೊಂಡರು.
ತೇ ದೃಷ್ಟ್ವಾ ಧರ್ಷಯಂತಂ ತು ಅತಿಮಾನುಷವಿಗ್ರಹಮ್ |
ಭೂತಮಿತ್ಯಧ್ಯವಸ್ಯಂತಃ ತಸ್ಮಾನ್ನ ವ್ಯಾಹರನ್ ಭಯಾತ್ ॥33॥
ಧರ್ಷಣಮಾಡುತ್ತಿರುವ ಮನುಷ್ಯದೇಹದಂತಿರದ ಆ ಪ್ರಾಣಿಯನ್ನು ಕಂಡು ಭೂತ ಎಂದು ಭಾವಿಸಿ, ಆದ್ದರಿಂದ ಭಯದಿಂದ ಏನೂ ವ್ಯವಹರಿಸಲಿಲ್ಲ (ಏನು ಮಾಡಬೇಕೆಂದು ತಿಳಿಯದವರಾದರು).
ತಂ ತು ತೇನಾಭ್ಯುಪಾಯೇನ ಗಮಯಿತ್ವಾ ಯಮಕ್ಷಯಮ್ |
ಸೋಽಧ್ಯತಿಷ್ಠತ ತೇಜಸ್ವೀ ರಥಂ ಪ್ರಾಪ್ಯ ಸುದರ್ಶನಮ್ ॥34॥
ಆತನು (ಅಶ್ವತ್ಥಾಮನು) ಉಪಾಯದಿಂದ ಆತನನ್ನು (ಧೃಷ್ಟದ್ಯುಮ್ನನನ್ನು) ಯಮನ ಬಳಿಗೆ ಕಳುಹಿಸಿ, ಆ ತೇಜಸ್ವಿಯು (ಅಶ್ವತ್ಥಾಮನು) ಮೇಲೆದ್ದು ಅಂದವಾದ ರಥವನ್ನು ಸಮೀಪಿಸಿ ಏರಿದನು.
ಸ ತಸ್ಯ ಭವನಾದ್ ರಾಜನ್ ನಿಷ್ಕ್ರಮ್ಯಾನಾದಯನ್ ದಿಶಃ |
ರಥೇನ ಶಿಬಿರಂ ಪ್ರಾಯಾದ್ ಜಿಘಾಂಸುರ್ದ್ವಿಷತೋ ಬಲೀ ॥35॥
ರಾಜನೆ! ಆತನು ಅತನ (ಧೃಷ್ಟದ್ಯುಮ್ನನ) ಮನೆಯಿಂದ ಹೊರಬಂದು ದಿಕ್ಕು- ದಿಕ್ಕುಗಳಲ್ಲಿ ಶಬ್ದವನ್ನು ಮಾಡುತ್ತಾ, ದ್ವೇಷಿಗಳನ್ನು ಸಂಹರಿಸುವ ಇಚ್ಛೆಯಿರುವ ಬಲಿಷ್ಟನಾದ ಅಶ್ವತ್ಥಾಮನು ರಥವನ್ನೇರಿ (ಮತ್ತೊಂದು) ಶಿಬಿರಕ್ಕೆ ಹೊರಟನು.
ಅಪಕ್ರಾಂತೇ ತತಸ್ತಸ್ಮಿನ್ ದ್ರೋಣಪುತ್ರೇ ಮಹಾರಥೇ |
ಸಹಿತಾ ರಕ್ಷಿಭಿಸ್ಸೈಸ್ತು ಪ್ರಣೇದುರ್ಯೋಷಿತಸ್ತದಾ ॥36॥
ಅನಂತರದಲ್ಲಿ ಮಹಾರಥಿಕನಾದ ಆ ದ್ರೋಣಪುತ್ರನು ಹೋಗುತ್ತಿರಲಾಗಿ, ಆ ರಕ್ಷಕರಿಂದ ಕೂಡಿಕೊಂಡು ಸ್ತ್ರೀಯರು ರೋದಿಸಿದರು.
ರಾಜಾನಂ ನಿಹತಂ ದೃಷ್ಟ್ವಾ ಭೃಶಂ ಶೋಕಪರಾಯಣಾಃ |
ವ್ಯಾಕ್ರೋಶನ್ ಕ್ಷತ್ರಿಯಾಃ ಸರ್ವೇ ಧೃಷ್ಟದ್ಯುಮ್ನಸ್ಯ ಭಾರತ ॥37॥
ಭರತಕುಲೋತ್ಪನ್ನನೇ! ರಾಜನು ಮೃತನಾದದ್ದನ್ನು ಕಂಡು ಧೃಷ್ಟದ್ಯುಮ್ನನ ಅನುಬಂಧಿಗಳಾದ ಎಲ್ಲ ಕ್ಷತ್ರಿಯರು ಅತ್ಯಂತ ಶೋಕಪರಾಯಣರಾಗಿ ರೋದಿಸಿದರು.
ತಾಸಾಂ ತೇನ ತು ಶಬ್ದೇನ ಸಮೀಪೇ ಕ್ಷತ್ರಿಯರ್ಷಭಾಃ |
ಸಮನಹ್ಯಂತ ಸಂಭ್ರಾಂತಾ ಕಿಮೇತದಿತಿ ಚಾಬ್ರುವನ್ ॥38॥
ಆ ಹೆಣ್ಣುಮಕ್ಕಳ ಆ ಶಬ್ದದಿಂದ ಸಮೀಪದಲ್ಲಿದ್ದ ಕ್ಷತ್ರಿಯಶ್ರೇಷ್ಠರು ಎಚ್ಚರಗೊಂಡು ಭೀತರಾಗಿ ಏನಿದು? ಎಂದು ಪ್ರಶ್ನಿಸಿದರು.
ಸ್ತ್ರಿಯಸ್ತು ರಾಜನ್ ವಿತ್ರಸ್ತಾ ಭಾರದ್ವಾಜಂ ನಿರೀಕ್ಷ್ಯ ತಾಃ |
ಅಬ್ರುವನ್ ದೀನಕಂಠೇನ ಕ್ಷಿಪ್ರಮಾಗಮ್ಯತಾಮಿತಿ ॥39॥
ರಾಜನೆ! ಭರದ್ವಾಜಗೋತ್ರೋತ್ಪನ್ನನಾದ ಅಶ್ವತ್ಥಾಮನನ್ನು ಕಂಡು ಹೆದರಿದ ಆ ಸ್ತ್ರೀಯರು ದೈನ್ಯಸ್ವರದಿಂದ `ಬೇಗ ಬನ್ನಿ' ಎಂದು ಹೇಳಿದರು.
ಸ್ತ್ರಿಯಃ
ರಾಕ್ಷಸೋ ವಾ ಮನುಷ್ಯೋ ವಾ ನೈನಂ ಜಾನೀಮ ಕೋ ನ್ವಯಮ್ |

ಹತ್ವಾ ಪಾಂಚಾಲದಾಯಾದಂ ರಥಮಾರುಹ್ಯ ತಿಷ್ಠತಿ ॥40॥
ಸ್ತ್ರೀಯರು ರಾಕ್ಷಸನೋ ಮನುಷ್ಯನೋ ಯಾವ ಜಾತಿಯವ ಎಂದು ನಾವು ತಿಳಿಯೆವು, ಪಾಂಚಾಲರಾಜನ ಪುತ್ರನನ್ನು ಸಂಹರಿಸಿ ರಥವನ್ನೇರಿ ನಿಂತಿರುವನು.
ಸಂಜಯಃ
ತತಸ್ತೇ ಯೋಧಮುಖ್ಯಾಸ್ತಂ ಸಹಸಾ ಪರ್ಯವಾರಯನ್ |
ಸ ತಾನಾಪತತಃ ಸರ್ವಾನ್ ರುದ್ರಾಸ್ತ್ರೇಣಾವಪೋಥಯತ್ ॥41॥
ಸಂಜಯ- ಅನಂತರದಲ್ಲಿ ಆ ಯೋಧಮುಖ್ಯಸ್ಥರು ಆತನನ್ನು (ಅಶ್ವತ್ಥಾಮನನ್ನು) ಸುತ್ತುವರೆದರು, ಆತನು (ಅಶ್ವತ್ಥಾಮನು ) ರೌದ್ರಾಸ್ತ್ರದಿಂದ ಮೇಲೆಬಿದ್ದ ಆ ಎಲ್ಲರನ್ನೂ ನಾಶಗೊಳಿಸಿದನು.
ಧೃಷ್ಟದ್ಯುಮ್ನಂ ಚ ಹತ್ವಾ ಸ ತಾಂಶ್ಚೈವಾಸ್ಯ ಪದಾನುಗಾನ್ |
ಅಪಶ್ಯಚ್ಛಯನೇ ಸುಪ್ತಮ್ ಉತ್ತಮೌಜಸಮಂತಿಕೇ ॥42॥
ಆತನು ಧೃಷ್ಟದ್ಯುಮ್ನನನ್ನು ಆತನ ಅನುಚರರನ್ನು ಸಂಹರಿಸಿ, ಸಮೀಪದಲ್ಲಿಯೇ ಮಲಗಿದ್ದ ಉತ್ತಮೌಜಸನನ್ನು (ದ್ರುಪದನ ಮತ್ತೊಬ್ಬ ಮಗನನ್ನು) ಕಂಡನು.
ತಮಪ್ಯಾಕ್ರಮ್ಯ ಪಾದೇನ ಕಂಠೇ ಚೋರಸಿ ತೇಜಸಾ |
ತಥೈವ ಮಾರಯಾಮಾಸ ವಿಚೇಷ್ಟಂತಮರಿಂದಮಮ್ ॥43॥
ಶತ್ರುಸಂಹಾರಕನಾದ ಹೊರಳಾಡುತ್ತಿರುವ ಆತನನ್ನೂ (ಉತ್ತಮೌಜಸನನ್ನು) ಸಹ ಆಕ್ರಮಿಸಿ, ಕಾಲಿನಿಂದ (ಆತನ) ಎದೆ ಮತ್ತು ಕತ್ತನ್ನು ಬಲವಾಗಿ ತುಳಿದು, ಅದೇ ರೀತಿಯಲ್ಲಿ ಸಂಹರಿಸಿದನು.
ಯುಧಾಮನ್ಯುಸ್ತು ವಿಕ್ರಾಂತೋ ಮತ್ವಾ ತಂ ರಾಕ್ಷಸಂ ಸ್ಮ ಸಃ |
ಗದಾಮುದ್ಯಮ್ಯ ವೇಗೇನ ವಕ್ಷಸ್ಯೇನಮತಾಡಯತ್ ॥44॥
ಪರಾಕ್ರಮಶಾಲಿಯಾದ ಆ ಯುಧಾಮನ್ಯುವು (ಮತ್ತೊಬ್ಬ ಪಾಂಚಾಲಕುವರ) ಈತನನ್ನು (ಅಶ್ವತ್ಥಾಮನನ್ನು) ರಾಕ್ಷಸ ಎಂದು ಭಾವಿಸಿ ವೇಗವಾಗಿ ಗದೆಯಿಂದ ಪ್ರಹರಿಸಿದನು.
ಗದಾಪ್ರಹಾರಾಭಿಹತೋ ನಾಚಲದ್ ದ್ರೌಣಿರಾಹವೇ |
ತಮಭಿದ್ರುತ್ಯ ವೇಗೇನ ಕ್ಷಿತೌ ಚೇನಮಪಾತಯತ್ ॥45॥
ಗದೆಯಿಂದ ಪೆಟ್ಟುಬಿದ್ದರೂ ದ್ರೋಣಪುತ್ರನು ಯುದ್ಧದಲ್ಲಿ ಮಿಸಕಾಡಲಿಲ್ಲ, ವೇಗದಿಂದ ಧಾವಿಸುತ್ತಿದ್ದ ಆತನನ್ನು  ನೆಲದಲ್ಲಿ ಕೆಡವಿದನು.
ವಿಸ್ಫುರಂತಂ ಚ ಪಶುವತ್ ತಥೈವೈನಮಮಾರಯತ್ |
ತಥಾ ಸ ವೀರೋ ಹತ್ವಾ ತಂ ತತೋಽನ್ಯಾನ್ ಸಮುಪಾದ್ರವತ್ ॥46॥
ಮೇಲುಸಿರು ಬಿಡುತ್ತಿದ್ದ ಆತನನ್ನು ಪಶುವಿನಂತೆ ಸಂಹರಿಸಿದನು, ಆತನನ್ನು ಸಂಹರಿಸಿ ಆ ವೀರನು ಹಾಗೆಯೇ ಆನಂತರದಲ್ಲಿ ಬೇರೆಯವರನ್ನು ಸಮೀಪಿಸಿದನು.
ಸಂಸುಪ್ತಾನೇವ ರಾಜೇಂದ್ರ ತತ್ರ ತತ್ರ ಮಹಾರಥಾನ್ |
ಪಾಂಚಾಲವೀರಾನಾಕ್ರಮ್ಯ ಕ್ರುದ್ಧೋ ನ್ಯಹನದಂತಿಕೇ ॥47॥
ಪುರತಃ ಸ್ಫುರಮಾಣಾಂಶ್ಚ ಶಮಿತೇವ ಪಶೂನ್ ಮಖೇ ॥48॥
ರಾಜಶ್ರೇಷ್ಠನೇ! ಅಲ್ಲಿ ಅಲ್ಲಿ ಮಲಗಿದ್ದ ಮುಂಭಾಗದಲ್ಲಿ ಕಾಣುತ್ತಿರುವ ಪಾಂಚಾಲರ ವೀರರನ್ನು ಆಕ್ರಮಿಸಿ ಕೋಪಗೊಂಡ ಅಶ್ವತ್ಥಾಮನು, ಯಜ್ಞದಲ್ಲಿ ಪಶುಗಳನ್ನು ಸಂಹರಿಸುವ ಪಶುಮಾರಕನಂತೆ ಸಂಹರಿಸಿದನು.
ತತೋ ನಿಸ್ತ್ರಿಂಶಮಾದಾಯ ಜಘಾನಾನ್ಯಾನ್ ಪೃಥಗ್ಜನಾನ್ |
ಭಾಗಶೋ ವಿಚರನ್ ಮಾರ್ಗಾನ್ ಅಸಿಯುದ್ಧವಿಶಾರದಃ ॥49॥
ಅನಂತರದಲ್ಲಿ ಖಡ್ಗಯುದ್ಧದಲ್ಲಿ ನಿಪುಣನಾದ ಅಶ್ವತ್ಥಾಮನು ಖಡ್ಗವನ್ನು ಪರಿಗ್ರಹಿಸಿ, ಆ ಮಾರ್ಗಗಳಲ್ಲಿ ಸ್ವಲ್ಪಸ್ವಲ್ಪ ಸಾಗುತ್ತಾ ಬೇರೇ ಬೇರೇ ಸೈನ್ಯಕರನ್ನು ಸಂಹರಿಸಿದನು.
ತಥೈವ ಗುಲ್ಮಾನ್ ಸಂಪ್ರೇಕ್ಷ್ಯ ಶಯಾನಾನ್ ಮಧ್ಯಗೌಲ್ಮಿಕಾನ್ |
ಶ್ರಾಂತಾನ್ ವ್ಯಸ್ತಾಯುಧಾನ್ ಸರ್ವಾನ್ ಅಸಿನೈವ ವ್ಯಪೋಥಯತ್ ॥
ಹಾಗೆಯೇ ವಸತಿ ಸ್ಥಾನಗಳನ್ನು ಕಂಡನು, ವಸತಿಸ್ಥಾನಗಳ ಮಧ್ಯದಲ್ಲಿ ಮಲಗಿದ, ಆಯುಧಗಳನ್ನು  ದೂರದಲ್ಲಿಟ್ಟಿರುವ, ಆಯಾಸಗೊಂಡ ಆ ಎಲ್ಲರನ್ನು ಖಡ್ಗದಿಂದಲೇ ಸಂಹರಿಸಿದನು.
ಯೋಧಾನಶ್ವಾನ್ ದ್ವಿಪಾಂಶ್ಚೈವ ಪ್ರಾಚ್ಛಿನತ್ ಸ ವರಾಸಿನಾ |
ರುಧಿರೋಕ್ಷಿತಸರ್ವಾಂಗಃ ಕಾಲಸೃಷ್ಟ ಇವಾಂತಕಃ ॥51॥
ರಕ್ತದಿಂದ ಒದ್ದೆಯಾದ ಅವಯವಿಯಾದ ಕಾಲವು ಸೃಷ್ಟಿಸಿದ ಅಂತಕನಂತೆ ಆತನು  ಯೋಧರನ್ನು ಕುದುರೆಗಳನ್ನು ಆನೆಗಳನ್ನು ಸಹ ಶ್ರೇಷ್ಠ ಕತ್ತಿಯಿಂದಲೇ ಕತ್ತರಿಸಿದನು.
ವಿಸ್ಫುರದ್ಭಿಶ್ಚ ತೈರ್ದ್ರೌಣಿಃ ನಿಸ್ತ್ರಿಂಶಸ್ಯೋದ್ಯಮೇನ ಚ |
ಅವಕ್ಷೇಪೇಣ ಚೈವಾಂಸೇ ತ್ರ್ವಥ ರಕ್ತೋಕ್ಷಿತೋಽಭವತ್ ॥52॥
ಅವರು (ಅಶ್ವತ್ಥಾಮನ ಪ್ರಹಾರದಿಂದ ಸೈನಿಕರ ಕೈ-ಕಾಲು ತುಂಡಾದ್ದರಿಂದ) ಹೊರಳಾಡುತ್ತಿದ್ದರಿಂದ, ಖಡ್ಗವನ್ನು ಮೇಲೆ ಎತ್ತಿ ಹಿಡಿದಿದ್ದರಿಂದ, ಹೆಗಲಮೇಲೆ ಎತ್ತಿ ಹಿಡಿದಿಟ್ಟುಕೊಂಡಿದ್ದರಿಂದ (ಈ ಮೂರೂಕಾರಣಗಳಿಂದ) ರಕ್ತದಿಂದ ಅಭಿಷಿಕ್ತನಾಗಿದ್ದನು.
ತಸ್ಯ ಲೋಹಿತಹಸ್ತಸ್ಯ ದೀಪ್ತಖಡ್ಗಸ್ಯ ಯುಧ್ಯತಃ |

ಅಮಾನುಷ ಇವಾಕಾರೋ ಬಭೌ ಪರಮಭೀಷಣಃ ॥53॥
ಆ ಕೆಂಪಾದ ಕರದ, ಪ್ರಜ್ವಲಿಸುವ ಖಡ್ಗವನ್ನು ಧರಿಸಿದ, ಯುದ್ಧಮಾಡುವ (ಆ ಅಶ್ವತ್ಥಾಮನ) ಆಕಾರವು ಮನುಷ್ಯೋತ್ತರನಂತೆ (ದೈತ್ಯಾಕಾರದಂತೆ) ತುಂಬ ಭಯಂಕರವಾಗಿ ತೋರುತ್ತಿತ್ತು.
ಯೇ ತ್ವಜಾನಂತ ಕೌರವ್ಯ ತೇನ ಶಬ್ದೇನ ಮೋಹಿತಾಃ ।
ವೀಕ್ಷಮಾಣಾಸ್ತು ತೇ ತತ್ರ ದ್ರೌಣಿಂ ದೃಷ್ಟ್ವಾ ಪ್ರವಿವ್ಯಥುಃ ॥54॥
ಕುರುವಂಶೋತ್ಪನ್ನನೇ! ಯಾರು ಆ ಶಬ್ದದಿಂದ ಮೋಹಿತರಾಗಿದ್ದರೋ ಅವರು ಮುಂದೇನು ಮಾಡಬೇಕೆಂದು ತಿಳಿಯದವರಾದರು, ಅಲ್ಲಿ ದ್ರೋಣಪುತ್ರನನ್ನು ನೋಡುತ್ತಾ ಭಯಭೀತರಾದರು.
ತದ್ರೂಪಂ ತಸ್ಯ ತೇ ದೃಷ್ಟ್ವಾ ಕ್ಷತ್ರಿಯಾಃ ಶತ್ರುಕರ್ಶನಾಃ ।
ರಾಕ್ಷಸಂ ಶಂಕಮಾನಾಸ್ತು ನಯನಾನಿ ನ್ಯಮೀಲಯನ್ ॥55॥
ಶತ್ರುಗಳಿಗೆ ದುಃಖಕಾರಕರಾದ ಆ ಕ್ಷತ್ರಿಯರು ಆತನ (ಅಶ್ವತ್ಥಾಮನ) ಆ ರೂಪವನ್ನು ಕಂಡು, ರಾಕ್ಷಸ ಎಂದು ಸಂದೇಹಿಸಿ ಕಣ್ಣುಗಳನ್ನು ಮುಚ್ಚಿಕೊಂಡರು.
ಅಘೋರರೂಪೋ ವ್ಯಚರತ್ ಕಾಲವಚ್ಛಿಬಿರೇ ತದಾ ।
ಅಪಶ್ಯದ್ ದ್ರೌಪದೀಪುತ್ರಾನ್ ಅವಶಿಷ್ಟಾನ್ ಸಸೋಮಕಾನ್ ॥56॥
ಆಗ ಅಘೋರ ಎಂಬ ರುದ್ರನ ಅಂಶಸಂಜಾತನಾದ ಅಶ್ವತ್ಥಾಮನು ಕಾಲನಂತೆ ಶಿಬಿರದಲ್ಲಿ ಸಂಚರಿಸಿದನು, ಉಳಿದ ಪಾಂಚಾಲರನ್ನು ದ್ರೌಪದಿಯ ಪುತ್ರರನ್ನು ಕಂಡನು.
ತೇನ ಶಬ್ದೇನ ವಿತ್ರಸ್ತಾ ಧನುರ್ಹಸ್ತಾ ಮಹಾರಥಾಃ ।
ಧೃಷ್ಟದ್ಯುಮ್ನಂ ಹತಂ ಶ್ರುತ್ವಾ ದ್ರೌಪದೇಯಾ ವಿಶಾಂಪತೇ ॥57॥
ಅವಾಕಿರತ್ ಶರವ್ರಾತೈರ್ಭಾರದ್ವಾಜಂ ಸಮಂತತಃ ॥58॥
ರಾಜರ ಒಡೆಯನೇ! ಧೃಷ್ಟದ್ಯುಮ್ನನು ಮೃತನಾದ ಸುದ್ದಿಯನ್ನು ಕೇಳಿದ, ಆ ಶಬ್ದದಿಂದ ಹೆದರಿದ, ಮಹಾರಥಿಕರಾದ, ದ್ರೌಪದಿಯ ಪುತ್ರರು ಬಿಲ್ಲನ್ನು ಪಿಡಿದವರಾಗಿ, ಭರದ್ವಾಜಕುಲೋತ್ಪನ್ನನಾದ ಅಶ್ವತ್ಥಾಮನನ್ನು ಗುರಿಯಾಗಿಸಿ ಬಾಣಗಳ ಸಮೂಹವನ್ನು ಎಸೆದರು.
ತತಸ್ತೇನ ನಿನಾದೇನ ಸಂಪ್ರಬುದ್ಧಾಃ ಪ್ರಭದ್ರಕಾಃ ।
ಶಿಲೀಮುಖೈಃ ಶಿಖಂಡೀ ಚ ದ್ರೋಣಪುತ್ರಮದಾರಯನ್ ॥59॥
ಅನಂತರದಲ್ಲಿ ಆ ಶಬ್ದದಿಂದ ಎಚ್ಚರಗೊಂಡ ಕಾವಲುಗಾರರು, ಶಿಖಂಡಿಯೂ ಸಹ ದ್ರೋಣಪುತ್ರನನ್ನು ಬಾಣಗಳಿಂದ ಘಾಸಿಗೊಳಿಸಿದರು.
ಭಾರದ್ವಾಜಸ್ತು ತಾನ್ ದೃಷ್ಟ್ವಾ ಶರವರ್ಷಾಣಿ ವರ್ಷತಃ ।
ನನಾದ ಬಲವನ್ನಾದಂ ಜಿಘಾಂಸುಸ್ತಾನ್ ಸುದುರ್ಜಯಾನ್ ॥60॥
ಬಾಣಗಳ ಸರತಿಯನ್ನೇ ಸುರಿಸುತ್ತಿರುವ ಅವರನ್ನು ಕಂಡ ಭರದ್ವಾಜ ಕುಲೋತ್ಪನ್ನನಾದ ಅಶ್ವತ್ಥಾಮನು , ಅತಿ ಕಷ್ಟದಿಂದ ಗೆಲ್ಲಲು ಯೋಗ್ಯರಾದ ಅವರನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಜೋರಾಗಿ ಅರಚಿದನು.
ತತಃ ಪರಮಸಂಕ್ರುದ್ಧಃ ಪಿತುರ್ವಧಮನುಸ್ಮರನ್ ।
ಅವತೀರ್ಯ ರಥೋಪಸ್ಥಾತ್ ತ್ವರಮಾಣೋಽಭಿದುದ್ರುವೇ ॥61॥
ಅನಂತರದಲ್ಲಿ ತಂದೆಯ ಸಂಹಾರವನ್ನು ಸ್ಮರಿಸಿಕೊಂಡ ಅತಿ ಕೋಪಗೊಂಡ ಅಶ್ವತ್ಥಾಮನು ರಥದಿಂದ ಕೆಳಗಿಳಿದು ವೇಗದಿಂದ ಅವರೆಡೆಗೆ ನುಗ್ಗಿಬಂದನು.
ಸಹಸ್ರಚಂದ್ರವಿಮಲಂ ಗೃಹೀತ್ವಾ ಚರ್ಮ ಸಂಯುಗೇ ।
ಖಡ್ಗಂ ಚ ವಿಮಲಂ ದಿವ್ಯಂ ಜಾತರೂಪಪರಿಷ್ಕೃತಮ್ ॥62॥
ದ್ರೌಪದೇಯಾನಭಿದ್ರುತ್ಯ ಖಡ್ಗೇನ ವ್ಯಧಮದ್ ಬಲೀ ॥63॥
ಸಾವಿರಚಂದ್ರದಂತೆ ಶುಭ್ರವಾದ ಗುರಾಣಿಯನ್ನು, ಚಿನ್ನದಿಂದ ಅಲಂಕೃತವಾದ ಶುದ್ದವಾದ ದಿವ್ಯವಾದ ಖಡ್ಗವನ್ನು ಹಿಡಿದು, ಬಲಿಷ್ಠನಾದ ಅಶ್ವತ್ಥಾಮನು ದ್ರೌಪದಿಯ ಪುತ್ರರನ್ನು ಸಮೀಪಿಸಿ ಖಡ್ಗದಿಂದ ಯುದ್ಧದಲ್ಲಿ ಪ್ರಹರಿಸಿದನು.
ತತಃ ಸ ನರಶಾರ್ದೂಲಂ ಪ್ರತಿವಿಂಧ್ಯಂ ತಮಾಹವೇ ।
ಕುಕ್ಷಿದೇಶೇಽಹನದ್ ರಾಜನ್ ಸ ಹತೋ ನ್ಯಪತದ್ ಭುವಿ ॥64॥
ರಾಜನೆ! ಅನಂತರದಲ್ಲಿ ಯುದ್ಧದಲ್ಲಿ ಆತನು (ಅಶ್ವತ್ಥಾಮನು) ಆ ನರಶ್ರೇಷ್ಠನಾದ ಪ್ರತಿವಿಂಧ್ಯನಿಗೆ (ದ್ರೌಪದಿಯ ಪುತ್ರರಲ್ಲಿ ಓರ್ವನನ್ನು) ಹೊಟ್ಟೆಗೆ ತಿವಿದನು, ಮೃತನಾದ ಆತನು ನೆಲದಲ್ಲಿ ಬಿದ್ದನು.
ಪ್ರಾಸೇನ ತು ತತೋ ದ್ರೌಣಿಂ ಸುತಸೋಮೋ ಹ್ಯತಾಡಯತ್ ॥65॥
ಅನಂತರದಲ್ಲಿ ಸುತಸೋಮನು (ದ್ರೌಪದಿಯ ಪುತ್ರರಲ್ಲಿ ಓರ್ವ) ದ್ರೋಣಪುತ್ರನನ್ನು ಪ್ರಾಸದಿಂದ ಬಡಿದನು.
ಪ್ರಾಸಪ್ರಹಾರಂ ತು ತದಾ ವಿಗೃಹ್ಯ ದ್ರೌಣಿರಾಹವೇ ।
ಸುತಸೋಮಸ್ಯ ಸಾಸಿಂ ತು ಬಾಹುಂ ಚಿಚ್ಛೇದ ಮಾರಿಷ ॥66॥
ಮಾರಿಷನೇ! ದ್ರೋಣಪುತ್ರನಾದರೂ ಆಗ ಪ್ರಾಸದ ಪ್ರಹಾರವನ್ನು ಸಹಿಸಿಕೊಂಡು, ಸುತಸೋಮನ ಬಾಹುವನ್ನು ಕತ್ತಿಯನ್ನು ಕತ್ತರಿಸಿದನು.
ಪುನಶ್ಚಾಪ್ಯಹನತ್ ಪಾರ್ಶ್ವೇ ಸ ಭಿನ್ನಹೃದಯೋಽಪತತ್ ॥67॥
ಮತ್ತೆ ಆತನ ಪಕ್ಕೆಲುಬಿಗೆ ಪ್ರಹರಿಸಿದನು, ಆತನು ಎದೆಸೀಳಿ ನೆಲಕ್ಕೆ ಉರುಳಿದನು.

ನಾಕುಲಿಸ್ತು ಶತಾನೀಕೋ ರಥಚಕ್ರೇಣ ವೀರ್ಯವಾನ್ |
ದೋರ್ಭ್ಯಾಮುತ್ಕ್ಷಿಪ್ಯ ವೇಗೇನ ವಕ್ಷಸ್ಯೇನಮತಾಡಯತ್ ॥68॥
ನಕುಲನ ಪುತ್ರನಾದ ಬಲಿಷ್ಟನಾದ ಶತಾನೀಕನು ರಥದ ಚಕ್ರವನ್ನು ಎರಡು ಕೈಗಳಿಂದ ಮೇಲೆತ್ತಿ ವೇಗವಾಗಿ ಆತನ ಎದೆಗೆ ಪ್ರಹರಿಸಿದನು.
ಅತಾಡಯಚ್ಛತಾನೀಕಂ ಮುಕ್ತಚಕ್ರಂ ದ್ವಿಜಸ್ತು ಸಃ |
ಸ ವಿಹ್ವಲೋ ಯಯೌ ಭೂಮಿಂ ತತೋಽಸ್ಯಾಪಹರಚ್ಛಿರಃ ॥69॥
ಚಕ್ರದಿಂದ ತಪ್ಪಿಸಿಕೊಂಡ ಆ ಬ್ರಾಹ್ಮಣನಾದರೋ (ಅಶ್ವತ್ಥಾಮನು) ಚಕ್ರವನ್ನು ಪ್ರಯೋಗಿಸಿದ ಶತಾನೀಕನನ್ನು ಪ್ರಹರಿಸಿದನು, ಅನಂತರದಲ್ಲಿ ಆತನು ಬಳಲಿ ನೆಲಕ್ಕೆ ಉರುಳಿದನು, ಆತನ ತಲೆಯನ್ನು ಕತ್ತರಿಸಿದನು.
ಶ್ರುತವರ್ಮಾ ತು ಪರಿಘಂ ಘೋರಂ ಗೃಹ್ಯ ದುರಾಸದಮ್ |
ಅತಾಡಯತ್ ಸಮುದ್ಯಮ್ಯ ವೇಗೇನ ದ್ರೌಣಿಮುತ್ಸ್ಮಯನ್ ॥70॥
ಶ್ರುತವರ್ಮನಾದರೋ (ದ್ರೌಪದಿಯ ಪುತ್ರರಲ್ಲಿ ಓರ್ವನು) ಘೋರವಾದ ವಿಫಲವಾಗದ ಪರಿಘವನ್ನು ತೆಗೆದುಕೊಂಡು, ವೇಗದಿಂದ ಮೇಲೆತ್ತಿ ಉತ್ಸಾಹವನ್ನು ತುಂಬಿಕೊಂಡು ದ್ರೋಣಪುತ್ರನನ್ನು ಪ್ರಹರಿಸಿದನು.
ಸ ತು ತಂ ಶ್ರುತವರ್ಮಾಣಮ್ ಆಸ್ಯೇಽಭ್ಯಘ್ನದ್ ವರಾಸಿನಾ |
ಸ ಹತೋ ನ್ಯಪತದ್ ಭೂಮೌ ವಿಮೂರ್ಧಾ ವಿಕೃತಾನನಃ ॥71॥
ಆತನಾದರೋ (ಅಶ್ವತ್ಥಾಮನಾದರೋ) ಶ್ರುತವರ್ಮನ ಮುಖವನ್ನು ಶ್ರೇಷ್ಠ ಖಡ್ಗದಿಂದ ಪ್ರಹರಿಸಿದನು. ಮೃತನಾದ ಆತನು ತಲೆ ಇಲ್ಲದವನಾಗಿ ವಿಕೃತ ಮುಖದವನಾಗಿ ನೆಲಕ್ಕೆ ಉರುಳಿದನು.
ತೇನ ಶಬ್ದೇನ ವೀರಸ್ತು ಶ್ರುತಕೀರ್ತಿರ್ಮಹದ್ಧನುಃ |
ಅಶ್ವತ್ಥಾಮಾನಮಾಸಾದ್ಯ ಶರವರ್ಷೈರವಾಕಿರತ್ ॥72॥
ಆ ಶಬ್ದದಿಂದ (ಎಚ್ಚೆತ್ತ) ವೀರನಾದ ದೊಡ್ಡಬಿಲ್ಲಾಳಾದ ಶ್ರುತಕೀರ್ತಿಯು (ದ್ರೌಪದಿಯ ಮಕ್ಕಳಲ್ಲಿ ಓರ್ವ) ಅಶ್ವತ್ಥಾಮನ ಬಳಿ ಸಾಗಿ ಬಾಣದ ಮಳೆಗರೆದನು.
ತಸ್ಯಾಪಿ ಶರವರ್ಷಾಣಿ ಚರ್ಮಣಾ ಪ್ರತಿವಾರ್ಯ ಸಃ |
ಸಕುಂಡಲಂ ಶಿರಃ ಕಾಯಾದ್ ಭ್ರಾಜಮಾನಮಪಾಹರತ್ ॥73॥
ಆತನ ಬಾಣದ ಮಳೆಯನ್ನು ಆತನಾದರೊ (ಅಶ್ವತ್ಥಾಮನಾದರೋ) ಗುರಾಣಿಯಿಂದ ತಡೆದು ಕುಂಡಲದಿಂದ ಪ್ರಕಾಶಮಾನವಾದ ತಲೆಯನ್ನು ದೇಹದಿಂದ ತೆಗೆದನು.
ತತೋ ಭೀಷ್ಮನಿಹಂತಾರಂ ಸಹ ಸರ್ವೈಃ ಪ್ರಭದ್ರಕೈಃ |
ಅಭ್ಯಘ್ನತ್ ಸರ್ವತೋ ವೀರಂ ನಾನಾಪ್ರಹರಣೈರ್ಬಲಾತ್ ॥74॥
ಅನಂತರದಲ್ಲಿ ಭೀಷ್ಮಸಂಹಾರಕನು (ಶಿಖಂಡಿಯು) ಎಲ್ಲ ಸಹಯೋಧರಿಂದ ಕೂಡಿಕೊಂಡು ಎಲ್ಲ ದಿಕ್ಕುಗಳಿಂದಲೂ ನಾನಾವಿಧವಾದ ಆಯುಧಗಳಿಂದ ವೀರನನ್ನು (ಅಶ್ವತ್ಥಾಮನನ್ನು) ಪ್ರಹರಿಸಿದನು.
ಶಿಲೀಮುಖೇನ ಚಾಪ್ಯೇನಂ ಭ್ರುವೋರ್ಮಧ್ಯೇ ಸಮಾರ್ಪಯತ್ ॥75॥
ಬಾಣದಿಂದ ಈತನ (ಅಶ್ವತ್ಥಾಮನ) ಹುಬ್ಬುಗಳ ಮಧ್ಯೆ ಪ್ರಹರಿಸಿದನು.
ಸ ತು ಕ್ರೋಧಸಮಾವಿಷ್ಟೋ ದ್ರೋಣಪುತ್ರೋ ಮಹಾರಥಃ |
ಶಿಖಂಡಿನಂ ಸಮಾಸಾದ್ಯ ದ್ವಿಧಾ ಚಿಚ್ಛೇದ ಸೋಽಸಿನಾ ॥76॥
ಮಹಾರಥಿಕನಾದ ಕೋಪಯುಕ್ತನಾದ ಆ ದ್ರೋಣಪುತ್ರನಾದರೋ (ಶಿಖಂಡಿಯ) ಬಳಿಗೆ ಸಾರಿಬಂದು ಕತ್ತಿಯಿಂದ ಶಿಖಂಡಿಯನ್ನು ಎರಡು ಹೋಳಾಗಿ ಸೀಳಿದನು.
ಶಿಖಂಡಿನಂ ತತೋ ಹತ್ವಾ ಕ್ರೋಧಾವಿಷ್ಟಃ ಪರಂತಪಃ |
ಪ್ರಭದ್ರಕಗಣಾನ್ ಸರ್ವಾನ್ ಅಭಿದುದ್ರಾವ ವೇಗವಾನ್ ॥77॥
ಶಿಖಂಡಿಯನ್ನು ಸಂಹರಿಸಿ ಅನಂತರದಲ್ಲಿ ಶತ್ರುತಾಪಕನಾದ ಕುಪಿತನಾದ ಅಶ್ವತ್ಥಾಮನು ವೇಗದಿಂದ ಸಹಾಯಕ ಯೋಧರನ್ನು ಸಮೀಪಿಸಿದನು.
ಯಚ್ಚ ಶಿಷ್ಟಂ ವಿರಾಟಸ್ಯ ಬಲಂ ತಚ್ಚ ಸಮಾದ್ರವತ್ |
ದ್ರುಪದಸ್ಯ ಚ ಪುತ್ರಾಣಾಂ ಪೌತ್ರಾಣಾಂ ಸುಹೃದಾಂ ತಥಾ ॥78॥
ಯಾರು ಉಳಿದಿದ್ದರೋ ವಿರಾಟರಾಜನ ಸೇನೆಯವರು, ದ್ರುಪದನ ಪುತ್ರರು, ಮೊಮ್ಮಕ್ಕಳು ಹಾಗೂ ಸ್ನೇಹಿತರ ಮಕ್ಕಳು ಮೊಮ್ಮಕ್ಕಳು, ಅವರ ಬಳಿ (ಅಶ್ವತ್ಥಾಮನು) ಧಾವಿಸಿದನು.
ಚಕಾರ ಕದನಂ ಘೋರಂ ದೃಷ್ಟ್ವಾ ತತ್ರ ಮಹಾಬಲಃ ॥79॥
ಮಹಾಬಲಶಾಲಿಯಾದ (ಅಶ್ವತ್ಥಾಮನು) ಅಲ್ಲಿ (ಅವರನ್ನು) ಕಂಡು ಘೋರವಾದ ಯುದ್ಧವನ್ನು ಸಾರಿದನು.
ಅನ್ಯಾನನ್ಯಾಂಶ್ಚ ಪುರುಷಾನ್ ಅಭಿಸೃತ್ಯಾಭಿಸೃತ್ಯ ಚ |
ನ್ಯಕೃಂತದಸಿನಾ ದ್ರೌಣಿರಸಿಮಾರ್ಗವಿಶಾರದಃ ॥80॥
ಕತ್ತಿಯುದ್ಧದಲ್ಲಿ ನಿಪುಣನಾದ ದ್ರೋಣಪುತ್ರನು ಬೇರೆ ಬೇರೆಯವರ ಬಳಿ ಸಾಗಿ ಸಾಗಿ (ಆ ಆ) ಪುರುಷರನ್ನು ಕತ್ತಿಯಿಂದ ಸೀಳಿದನು.
ಕಾಲೀಂ ರಕ್ತಾಸ್ಯನಯನಾಂ ರಕ್ತಮಾಲ್ಯಾನುಲೇಪನಾಮ್ |
ರಕ್ತಾಂಬರಧರಾಂ ಘೋರಾಂ ಪಾಶಹಸ್ತಾಂ ಶಿಖಂಡಿನೀಮ್ ॥81॥
ದದೃಶುಃ ಕಾಲರಾತ್ರಿಂ ತೇ ಸ್ಮಯಮಾನಾಮಿವ ಸ್ಥಿತಾಮ್ ॥82॥

ಕಪ್ಪುಬಣ್ಣದ, ಕೆಂಪಾದ ಮುಖ ಮತ್ತು ಕಣ್ಣನ್ನು ಹೊಂದಿರುವ, ಕೆಂಪಾದ ಮಾಲೆಯನ್ನು ಕೆಂಪುಲೇಪನವನ್ನು ಹೊಂದಿರುವ, ಕೆಂಪಾದ ವಸ್ತ್ರವನ್ನು ತೊಟ್ಟಿರುವ, ಘೋರವಾದ ಪಾಶವನ್ನು ಕೈಯಲ್ಲಿ ಧರಿಸಿರುವ, ನೀಳವಾದ ಕೂದಲನ್ನು ಹೊಂದಿರುವ ನಸುನಗುತ್ತಾ ನಿಂತಿರುವಂತಿರುವ ಕಾಲಿಯನ್ನು ಅವರು (ಪಾಂಡವರ ಪಕ್ಷದವರು) ನೋಡಿದರು.

ನರಾಶ್ವಕುಂಜರಾನ್ ಪಾಶೈರ್ಬದ್ಧ್ವಾ ಘೋರೈಶ್ಚ ತಿಷ್ಠತೀಮ್ ॥83॥
ಹರಂತೀಂ ವಿವಿಧಾನ್ ಪ್ರೇತಾನ್ ಪಾಶಹಸ್ತಾನ್ ವಿಮೂರ್ಧಜಾನ್ ।
ತಥೈವ ಚ ಮಹಾರಾಜ ನ್ಯಸ್ತಶಸತ್ರನ್ ಮಹಾರಥಾನ್ ॥84॥
ಸ್ವಪ್ನೇ ಸುಪ್ತಾನ್ ನಯಂತೀಂ ತಾಂ ರಾತ್ರಿಷ್ವನ್ಯಾಸು ಮಾರಿಷ ।
ದದೃಶುರ್ಯೋಧಮುಖ್ಯಾಸ್ತೇ ಘ್ನಂತಂ ದ್ರೌಣಿಂ ತು ನಿತ್ಯದಾ ॥85॥

ಮಹಾರಾಜ, ಮಾರಿಷ! ಆಕೆಯು (ಕಾಲರಾತ್ರಿಯು) ಮನುಷ್ಯರನ್ನು ಕುದುರೆಗಳನ್ನು ಆನೆಗಳನ್ನು ಘೋರವಾದ ಪಾಶಗಳಿಂದ ಬಿಗಿಯುತ್ತಾ ನಿಂತಿರುವಹಾಗೆ, ಪಾಶಗಳನ್ನು ಕೈಯಲ್ಲಿ ಧರಿಸಿರುವ ತಲೆಯಿಲ್ಲದ ವಿವಿಧಪ್ರೇತಗಳನ್ನು ಹಾಗೆಯೆ ಶಸ್ತ್ರವನ್ನು ಪರಿತ್ಯಜಿಸಿದ ಮಹಾರಥಿಕರನ್ನು ಅಪಹರಿಸುತ್ತಿರುವ ಹಾಗೆ, ಮತ್ತು ದ್ರೋಣಪುತ್ರನು (ತಮ್ಮನ್ನು) ಸಂಹರಿಸುತ್ತಿರುವ ಹಾಗೆಯೇ ನಿತ್ಯದಲ್ಲಿ ಬೇರೆ ಬೇರೆ ರಾತ್ರಿಗಳಲ್ಲಿ ಸ್ವಪ್ನದಲ್ಲಿ ಆ ಕಾಲರಾತ್ರಿಯನ್ನು ಪಾಂಡವರ ಸೈನಿಕರ ಮುಖ್ಯಸ್ಥರು ಕಾಣುತ್ತಿದ್ದರು.

ಯತಃ ಪ್ರವೃತ್ತಃ ಸಂಗ್ರಾಮಃ ಕುರುಪಾಂಡವಸೇನಯೋಃ ।
ತತಃಪ್ರಭೃತಿ ತಾಂ ಕನ್ಯಾಮಪಶ್ಯನ್ ದ್ರೌಣಿಮೇವ ಚ ॥86॥

ಎಂದಿನಿಂದ ಕುರು-ಪಾಂಡವರ ಸೇನೆಯೊಡನೆ ಯುದ್ಧವು ಆರಂಭವಾಯಿತೋ ಅಂದಿನಿಂದ ಆರಂಭಿಸಿ ದ್ರೋಣಪುತ್ರನನ್ನೂ ಆ ಕನ್ಯೆಯನ್ನೂ ನೋಡುತ್ತಿದ್ದರು.

ತತೋ ದೈವಹತಾನ್ ಪೂರ್ವಂ ಪಶ್ಚಾದ್ ದ್ರೌಣಿರ್ನ್ಯಪಾತಯತ್ ।
ತ್ರಾಸಯನ್ ಸರ್ವಭೂತಾನಿ ವ್ಯನದದ್ ಭೈರವಂ ರವಮ್ ॥87॥

ಈ ಮುಂಚೆಯೇ ದೈವದಿಂದ ಸಂಹೃತರಾದವರನ್ನು ಅನಂತರದಲ್ಲಿ ದ್ರೋಣಪುತ್ರನು ಕೆಡವಿದನು, ಪ್ರಾಣಿಗಳಿಗೆ ಭಯವನ್ನು ಉಂಟುಮಾಡುವ ಭೀಕರವಾದ ಶಬ್ದವನ್ನು ಮಾಡಿದನು.

ತದನುಸ್ಮೃತ್ಯ ತೇ ವೀರಾ ದರ್ಶನಂ ಪೌರ್ವಕಾಲಿಕಮ್ ।
ಇದಂ ತದಿತ್ಯಮನ್ಯಂತ ದೈವೇನೋಪನಿಪೀಡಿತಾಃ ॥88॥

ದೈವದಿಂದ ಪೀಡಿತರಾದ ಆ ವೀರರು ಹಿಂದಿನ ದಿನಗಳಲ್ಲಿ (ಸ್ವಪ್ನದಲ್ಲಿ) ಕಂಡಿರುವುದನ್ನು ಸ್ಮರಿಸಿಕೊಳ್ಳುತ್ತಾ, ಅದೇ ಇದು ಎಂದು ಭಾವಿಸಿದರು.

ತತಸ್ತೇನ ನಿನಾದೇನ ಪ್ರತ್ಯಬುಧ್ಯಂತ ಧನ್ವಿನಃ ।
ಶಿಬಿರೇ ಪಾಂಡವೇಯಾನಾಂ ಶತಶೋಽಥ ಸಹಸ್ರಶಃ ॥89॥

ಅನಂತರ ಆ ಶಿಬಿರದಲ್ಲಿ, ಶಬ್ದದಿಂದ ಪಾಂಡವರಿಗೆ ಸಂಬಂಧಿಸಿದ ಸಾವಿರಾರು ಧನುರ್ಧಾರಿಗಳು ಎಚ್ಚರಗೊಂಡರು.

ಸೋಽಚ್ಛಿನತ್ ಕಸ್ಯಚಿತ್ ಪಾದೌ ಜಘನಂ ಚಾಪಿ ಕಸ್ಯಚಿತ್ ।
ಕಾಂಶ್ಚಿದ್ ಬಿಭೇದ ಪಾರ್ಶ್ವೇಷು ಕಾಲಸೃಷ್ಟ ಇವಾಂತಕಃ ॥90॥

ಆತನು (ದ್ರೋಣಪುತ್ರನು) ಕಾಲವು ನಿರ್ಮಿಸಿದ ಅಂತಕನಂತೆ ಕೆಲವರ ಕಾಲನ್ನು, ಮತ್ತೆ ಕೆಲವರ ತೊಡೆಯನ್ನು , ಕೆಲವರ ಪಕ್ಕೆಲುಬನ್ನು ಕತ್ತರಿಸಿದನು.

ಅತ್ಯುಗ್ರಪ್ರತಿಪಿಷ್ಟೈಶ್ಚ ವಿನದದ್ಭಿರ್ಭೃಶಾತುರೈಃ ।
ಗಜಾಶ್ವಮನುಜೈಶ್ಚಾತ್ರ್ಯೈರ್ಮಹೀ ಕೀರ್ಣಾಽಭವತ್ ಪ್ರಭೋ ॥91॥

ಪ್ರಭುವೇ! ಅತಿ ಭೀಕರವಾಗಿ ಉಂಡೆ ಮಾಡಿ ಎಸೆದ, ಅತ್ಯಂತಭೀತರಾಗಿ ಬೊಬ್ಬೆ ಹಾಕುತ್ತಿರುವ ಆನೆ-ಕುದುರೆ-ಮನುಷ್ಯರಿಂದ ಆ ಭೂಭಾಗವು ತುಂಬಿ ಹೋಗಿದ್ದಿತು.

ಕ್ರೋಶತಾಂ ಕಿಮಿದಂ ಕೋಽಯಂ ಕಿಂ ಶಬ್ದಃ ಕಿಂ ನು ಕಿಂ ಕೃತಮ್ ।
ಪಾಂಚಾಲಾನಾಂ ತಥಾ ದ್ರೌಣಿರಂತಕಃ ಸಮಪದ್ಯತ ॥92॥

ಅರಚುತ್ತಿರುವ ಪಾಂಚಾಲರಿಗೆ ಏನಿದು, ಯಾರಿವ, ಏನು ಮಾಡುತ್ತಿರುವನು ಎಂಬ ವ್ಯಾಕುಲತೆಯನ್ನು ಕೊಲೆಗಡಕನಾದ ದ್ರೋಣಪುತ್ರನು ಉಂಟುಮಾಡಿದನು.

ಅಪೇತಶಸ್ತ್ರಸನ್ನಾಹಾನ್ ಸಂರಬ್ಧಾನ್ ಪಾಂಡುಸೈನಿಕಾನ್ ।
ಪ್ರಾಹಿಣೋನ್ಮೃತ್ಯುಲೋಕಾಯ ದ್ರೌಣಿಃ ಪ್ರಹರತಾಂ ವರಃ ॥93॥

ಸಂಹರಿಸುವವರಲ್ಲಿ ಹಿರಿಯನಾದ ದ್ರೋಣಪುತ್ರನು ಶಸ್ತ್ರರಹಿತರಾಗಿ ಒಟ್ಟಾಗಿ ಬಂದೊದಗಿದ ಪಾಂಡವರ ಸೈನ್ನಿಕರನ್ನು ಮೃತ್ಯುಲೋಕಕ್ಕೆ ಅಟ್ಟಿದನು.

ತತಸ್ತಚ್ಛಸ್ತ್ರವಿತ್ರಸ್ತಾ ಭಯಾದಭ್ಯಪತನ್ ನರಾಃ ।
ನಿದ್ರಾಂಧಾ ನಷ್ಟಸಂಜ್ಞಾಶ್ಚ ತತ್ರ ತತ್ರ ನಿಪೇತಿರೇ ॥94॥

ಅನಂತರದಲ್ಲಿ ಶಸ್ತ್ರದಿಂದ ಗಾಯಗೊಂಡ ಆ ಮನುಜರು ಹೆದರಿ ಚದುರಿದರು, ನಿದ್ರೆಯ ಮಂಪರಿಂದ ಸಂಪೂರ್ಣ ಎಚ್ಚರವಿಲ್ಲದ ಅವರು ಅಲ್ಲಲ್ಲಿ ಬಿದ್ದರು.

ಊರುಸ್ತಂಭಗೃಹೀತಾಶ್ಚ ಕಶ್ಮಲಾಭಿಹತೌಜಸಃ ।
ವಿನದಂತೋ ಭೃಶಂ ತ್ರಸ್ತಾ ನಿರೈಕ್ಷಂತ ಪರಸ್ಪರಮ್ ॥95॥

ಜಂಘಾಬಲವೇ ಉಡುಗಿ, ಭಯದಿಂದ ದೇಹದಲ್ಲಿ ಬಲವೇ ಇಲ್ಲದಂತಾದ, ತುಂಬಾ ಹೆದರಿ ಅರಚುತ್ತಾ ಪರಸ್ಪರ ಒಬ್ಬರನ್ನು

ಮತ್ತೊಬ್ಬರು ನೋಡುತ್ತಿದ್ದರು.
ತತೋ ರಥಂ ಪುನರ್ದ್ರೌಣಿರಾಸ್ಥಿತೋ ಭೀಮದರ್ಶನಃ |
ಧನುಷ್ಪಾಣಿಃ ಶರೈರನ್ಯಾನ್ ಪ್ರೈಷಯದ್ ಯಮಸಾದನಮ್ ॥96॥
ಅನಂತರದಲ್ಲಿ ಧನುರ್ಧಾರಿಯಾದ ನೋಡಲು ಭಯಂಕರನಾದ ದ್ರೋಣಪುತ್ರನು ಪುನಃ ರಥವನ್ನು ಏರಿ ಉಳಿದವರನ್ನು ಬಾಣಗಳಿಂದ (ಪ್ರಹರಿಸಿ) ಯಮಸದನಕ್ಕೆ ಕಳುಹಿಸಿದನು.
ಪುನರುತ್ಪತಿತಃ ಕಾಂಶ್ಚಿದ್ ದೂರಾದಾಪತತೋ ನರಾನ್ |
ಶೂರಾನುತ್ಪತತಶ್ಚಾನ್ಯಾನ್ ಕಾಲರಾತ್ರ್ಯೈ ನ್ಯವೇದಯತ್ ॥97॥
ಮತ್ತೆ ಆಕ್ರಮಿಸಲು ಸಿದ್ಧರಾದ ಶೂರರಾದ ದೂರದಲ್ಲಿರುವವರನ್ನು, ಮತ್ತೆ ಮೇಲೆ ಬೀಳುತ್ತಿರುವ ಬೇರೇ ಮನುಜರನ್ನು ಕಾಲರಾತ್ರಿಗೆ ಒಪ್ಪಿಸಿದನು.
ತಥೈವ ಸ್ಯಂದನಾಗ್ರೇಣ ಪ್ರಮಥನ್ ಸ ವ್ಯರೋಚತ |
ಶರವರ್ಷೈಶ್ಚ ವಿವಿಧೈರಭ್ಯವರ್ಷಚ್ಚಾತ್ರವಾಂಸ್ತತಃ ॥98॥
ಹಾಗೆಯೇ ರಥದ ಮುಂಭಾಗದಲ್ಲಿರುವವರನ್ನು ಸಂಹರಿಸುತ್ತಾ, ಶತ್ರುಗಳ ಮೇಲೆ ವಿವಿಧ ಬಾಣಗಳ ಮಳೆಗರೆದನು.
ಪುನಶ್ಚ ಸುವಿಚಿತ್ರೇಣ ಶತಚಂದ್ರೇಣ ಚರ್ಮಣಾ |
ತೇನ ಚಾಕಾಶವರ್ಣೇನ ತದಾಚರತ ಸೋಽಸಿನಾ ॥99॥
ಮತ್ತೆ ನೂರಾರು ಚಂದಿರಗಳಿಂದ ವಿಶಿಷ್ಟವಾಗಿ ಚಿತ್ರಿತವಾದ ಗುರಾಣಿಯಿಂದ, ಆಕಾಶದಂತೆ ಥಳಥಳಿಸುವ ಆ ಖಡ್ಗದಿಂದ ಆತನು (ಅಶ್ವತ್ಥಾಮನು) ಅದನ್ನು (ಶತ್ರುಸಂಹಾರವನ್ನು) ಮಾಡಿದನು.
ಸ ತಥಾ ಶಿಬಿರಂ ತೇಷಾಂ ದ್ರೌಣಿರಾಹವದುರ್ಮದಃ |
ವ್ಯಕ್ಷೋಭಯತ ರಾಜೇಂದ್ರ ಮಹಾಹ್ರದಮಿವ ದ್ವಿಪಃ ॥100॥
ರಾಜರಾಜನೆ! ಯುದ್ಧದುರ್ಮದನಾದ ಆ ದ್ರೋಣಪುತ್ರನು ಅವರ (ಪಾಂಡವರ) ಶಿಬಿರವನ್ನು, ದೊಡ್ಡ ನೀರಿನ ಮಡುವನ್ನು ಆನೆಯಂತೆ ಕ್ಷೋಭೆಗೊಳಿಸಿದನು.
ಉತ್ಪೇತುಸ್ತೇನ ಶಬ್ದೇನ ಯೋಧಾ ರಾಜನ್ ಸಹಸ್ರಶಃ |
ನಿದ್ರಾಂಧಾಶ್ಚ ಭಯಾರ್ತಾಶ್ಚ ವ್ಯಧಾವಂತ ತತಸ್ತತಃ ॥101॥
ರಾಜನೆ! ನಿದ್ರೆಯಿಂದ ಕಣ್ಣು ಕಾಣದಂತಾದ, ಭಯದಿಂದ ದುಃಖಿತರಾದ, ಅತ್ತಿಂದಿತ್ತ ಓಡುತ್ತಿರುವ ಸಾವಿರಾರು ಯೋಧರು ಆ ಶಬ್ದದಿಂದ ಜಾರಿಬಿದ್ದರು.
ವಿಸ್ವರಂ ಚುಕ್ರುಶುಶ್ಚಾನ್ಯೇ ಬಹ್ವಬದ್ಧಮಥಾಬ್ರುವನ್ |
ನ ಚ ಸ್ಮ ಪ್ರತ್ಯಪದ್ಯಂತ ಶಸಾತ್ರಣಿ ವಸನಾನಿ ಚ ॥102॥
ವಿಚಿತ್ರವಾಗಿ ಕೆಲವರು ಕೂಗಿಕೊಂಡರು, ಕೆಲವರು ಬಾಯಿಗೆ ಬಂದಂತೆ ಅರಚಿದರು. ಯಾರೂ ಸಹ ಯುದ್ಧದ ಉಡುಗೆಯನ್ನಾಗಲಿ, ಶಸ್ತ್ರವನ್ನಾಗಲಿ ಪಡೆಯಲಾಗಲಿಲ್ಲ.
ವಿಮುಕ್ತಕೇಶಾಶ್ಚಾಪ್ಯನ್ಯೇ ನಾಭ್ಯಜಾನನ್ ಪರಸ್ಪರಮ್ |
ಉತ್ಪತಂತಃ ಪರೇ ಭೀತಾಃ ಕೇಚಿತ್ ತತ್ರ ಪರಿಭ್ರಮನ್ ॥103॥
ಕೆಲವರು ಹರಡಿಕೊಂಡ ಕೂದಲಿನಿಂದ ಒಬ್ಬರಿಗೊಬ್ಬರು ಯಾರು ಎಂದು ತಿಳಿಯದವರಾದರು, ಮತ್ತೆ ಕೆಲವರು ಹೆದರಿ ಮತೊಬ್ಬರ ಮೇಲೆ ಬೀಳುತ್ತಾ ಅಲ್ಲಿಯೇ ಸುತ್ತಾಡಿದರು.
ಪುರೀಷಾಣ್ಯುತ್ಸೃಜನ್ ಕೇಚಿತ್ ಕೇಚಿನ್ಮೂತ್ರಂ ಪ್ರಸುಸ್ರುವುಃ |
ಬಂಧನಾನಿ ತು ರಾಜೇಂದ್ರ ಸಂಛಿದ್ಯ ತುರಗದ್ವಿಪಾಃ ॥104॥
ರಾಜರ ರಾಜನೆ! ಕುದುರೆ ಆನೆಗಳು ತಮ್ಮ ಕಟ್ಟನ್ನು ಕಿತ್ತುಕೊಂಡು ಮೂತ್ರವನ್ನು ಸುರಿಸಿದವು, ಮತ್ತೆ ಕೆಲವು ಮಲವನ್ನು ವಿಸರ್ಜಿಸಿದವು.
ಸರ್ವೇ ಪರ್ಯಪತಂಶ್ಚಾನ್ಯೇ ಕುರ್ವಂತೋ ಮಹದಾಕುಲಮ್ ॥105॥
ಎಲ್ಲರೂ ಸುತ್ತಲೂ ಬೀಳುತ್ತಾ ಕೋಲಾಹಲವನ್ನು ಮಾಡುತ್ತಾ ದುಃಖಿಸಿದರು.
ತತ್ರ ಕೇಚಿನ್ನರಾ ಭೀತಾ ನ್ಯಪತಂತ ಮಹೀತಳೇ |
ತಥೈವ ಪತಿತಾ ಭೂಮೌ ನ್ಯಷೀದನ್ ಗಜವಾಜಿನಃ ॥106॥
ಅಲ್ಲಿ ಕೆಲವರು ಹೆದರಿ ನೆಲಕ್ಕೆ ಉರುಳಿದರು, ಹಾಗೆಯೆ ಭೂಮಿಯಲ್ಲಿ ಬಿದ್ದ ಆನೆ ಕುದುರೆಗಳು ಮರಣವನ್ನು ಹೊಂದಿದವು.
ತಸ್ಮಿಂಸ್ತಥಾ ವರ್ತಮಾನೇ ರಕ್ಷಾಂಸಿ ಭರತರ್ಷಭ |
ದೃಪ್ತಾನಿ ವ್ಯನದನ್ನುಚ್ಚೈರ್ಮುದಾ ಯುಕ್ತಾನಿ ಸತ್ತಮ ॥107॥
ಸದ್ಗುಣಿಯೆ, ಭರತಕುಲೋತ್ಪನ್ನರಲ್ಲಿ ಶ್ರೇಷ್ಠನೆ! ಆಲ್ಲಿ ಹಾಗೆ ಸಂಭವಿಸುತ್ತಿರಲು, ಕೊಬ್ಬಿದ ರಕ್ಕಸರು ಅತಿ ಸಂತಸದಿಂದ ಕೂಡಿದವರಾಗಿ ಗಟ್ಟಿಯಾಗಿ ಕೂಗಿದರು.
ಸ ಶಬ್ದಃ ಪ್ರೇರಿತೋ ರಾಜನ್ ಭೂತಸ್ಯೆಂರ್ಮುದಾ ಯುತೈಃ |
ಅಪೂರಯದ್ ದಿಶಃ ಸರ್ವಾ ದಿವಂ ಚಾತಿಮಹಾಸ್ವನಃ ॥108॥
ಆ ಶಬ್ದದಿಂದ ಪ್ರೇರಿತವಾದ ಭೂತಸಮುದಾಯವು ಸಂತಸದಿಂದ ಒಟ್ಟುಗೂಡಿತು ( ಗರ್ಜಿಸಿದ) ಆ ಶಬ್ದವು ದೇವಲೋಕಕ್ಕೂ ಎಲ್ಲ ದಿಕ್ಕುವಿದಿಕ್ಕುಗಳಿಗೂ ಪಸರಿಸಿತು.
ತೇಷಾಮಾರ್ತಸ್ವರಂ ಶ್ರುತ್ವಾ ವಿತ್ರಸ್ತಾ ಗಜವಾಜಿನಃ |

ಮುಕ್ತಾಃ ಪರ್ಯಪತನ್ ರಾಜನ್ ಮೃದಂತಃ ಶಿಬಿರೇ ಜನಮ್ ॥
ರಾಜನೆ! ಅವರ ದುಃಖದ ಧ್ವನಿಯನ್ನು ಕೇಳಿದ ಆನೆ, ಕುದುರೆಗಳು ಹೆದರಿದವುಗಳಾಗಿ ಕಟ್ಟನ್ನು ಬಿಚ್ಚಿಕೊಂಡು , ಶಿಬಿರದಲ್ಲಿ ಜನರನ್ನು ತುಳಿಯುತ್ತಾ ಸುತ್ತಾಡಿದವು.
ತೈಸ್ತಥಾ ಪರಿಧಾವದ್ಭಿಶ್ಚರಣೋದೀರಿತಂ ರಜಃ |
ಅಕರೋಚ್ಛಿಬಿರಂ ತೇಷಾಂ ರಜನ್ಯಾಂ ದ್ವಿಗುಣಂ ತಮಃ ॥110॥
ಅವುಗಳು ಆ ರೀತಿಯಲ್ಲಿ ಸುತ್ತುತ್ತಿರಲು ಆ ಕತ್ತಲೆಯಲ್ಲಿ (ಅವುಗಳ) ಕಾಲಿನಿಂದ ಮೇಲೆದ್ದ ಧೂಳು ಅವರ ಶಿಬಿರವನ್ನು ಇಮ್ಮಡಿಯಾಗಿ ಕತ್ತಲೆಗೊಳಿಸಿತು.
ತಸ್ಮಿಂಸ್ತಮಸಿ ಸಂಜಾತೇ ಪ್ರಮೂಢಾಃ ಸರ್ವತೋ ಜನಾಃ |
ನಾಜಾನನ್ ಪಿತರಃ ಪುತ್ರಾನ್ ಭ್ರಾತೃನ್ ಭ್ರಾತರ ಏವ ಚ ॥111॥
ಆ ಕಗ್ಗತ್ತಲೆಯು ಉಂಟಾಗಲು ಎಲ್ಲರೂ ಬುದ್ಧಿಹೀನರಾಗಿ, ತಂದೆಯಂದಿರು ಮಕ್ಕಳನ್ನು, ಅಣ್ಣಂದಿರು ಸಹೋದರರನ್ನು ತಿಳಿಯದವರಾದರು.
ಗಜೋ ಗಜಮತಿಕ್ರಮ್ಯ ನಿರ್ಮನುಷ್ಯಾ ಹಯೋ ಹಯಮ್ |
ಅತಾಡಯಂಸ್ತಥಾಽಮೃದ್ನನ್ ತಥಾಽಭಂಜಂಶ್ಚ ಭಾರತ ॥112॥
ಭರತಕುಲೋತ್ಪನ್ನನೆ! ಮನುಷ್ಯರ ಹತೋಟಿಯಲ್ಲಿರದ (ಆ) ಆನೆಯು ಆನೆಯ ಮೇಲೆ, ಕುದುರೆಯು ಕುದುರೆಯನ್ನು ಆಕ್ರಮಿಸಿ, ನಾಶಗೊಳಿಸಿತು, (ಎದುರಾದ ಪ್ರಾಣಿಯ ಅವಯವಗಳನ್ನು) ಮುರಿದಿಟ್ಟವು.
ತೇ ಭಗ್ನಾಃ ಪ್ರಪತಂತಿ ಸ್ಮ ಮೃದ್ನಂತಶ್ಚ ಪರಸ್ಪರಮ್ |
ನ್ಯಪಾತಯಂಸ್ತ್ವಥ ರಥಾನ್ ಪಾತಯಿತ್ವಾಽಪ್ಯಪೀಪಿಷನ್ ॥113॥
ಅವುಗಳು (ಅವಯವಗಳನ್ನು) ಮುರಿಸಿಕೊಂಡು ಬೀಳುತ್ತಿದ್ದವು, ಅವು ಪರಸ್ಪರ ಮತ್ತೊಂದರ ಅವಯವವನ್ನು ಮುರಿಯುತ್ತಿದ್ದವು. ಅನಂತರದಲ್ಲಿ ರಥಗಳನ್ನು ಕೆಡಹುತ್ತಿದ್ದವು, ಕೆಡವಿದ ರಥಗಳನ್ನು ಪುಡಿಗಟ್ಟುತ್ತಿದ್ದವು.
ವಿಚೇತಸಃ ಸನಿದ್ರಾಶ್ಚ ತಮಸಾ ಚಾವೃತಾ ನರಾಃ |
ಸ್ವಾನೇವ ಜಘ್ನಿರೇ ಮೂಢಾಃ ಕಾಲೇನಾಭಿಪ್ರಚೋದಿತಾಃ ॥114॥
ಪೂರ್ಣ ಎಚ್ಚರವಿಲ್ಲದ, ಅರೆನಿದ್ರಾವಸ್ಥೆಯಲ್ಲಿರುವ, ಕಾಲದಿಂದ ಪ್ರಚೋದಿತರಾದ, ಮೌಢ್ಯ ಆವರಿಸಿದ ಆ ಜನರು ಕಗ್ಗತ್ತಲೆಯಲ್ಲಿ ತಮ್ಮವರನ್ನೇ ಸಂಹರಿಸಿದರು.
ತ್ಯಕ್ತ್ವಾ ದ್ವಾರಾಣಿ ಚ ದ್ವಾಃಸ್ಥಾಸ್ತಥಾ ಗುಲ್ಮಾನಿ ಗೌಲ್ಮಿಕಾಃ |
ಪ್ರಾದ್ರವಂತ ಯಥಾಶಕ್ತಿ ತೇ ತತ್ರೈವ ವಿಚೇತಸಃ ॥115॥
ದ್ವಾರಪಾಲಕರು ದ್ವಾರವನ್ನು ಪರಿತ್ಯಜಿಸಿ, ರಕ್ಷಣಾಸ್ಥಾನಿಗಳು ರಕ್ಷಣೆಯ ಸ್ಥಾನವನ್ನು ಪರಿತ್ಯಜಿಸಿ ಮೈಮೇಲೆ ಎಚ್ಚರವಿಲ್ಲದಂತವರಾಗಿ ಶಕ್ತಿಮೀರಿ ಪಲಾಯನಮಾಡಿದರು.
ವಿಪ್ರನಷ್ಟಾಶ್ಚ ತೇಽನ್ಯೋನ್ಯಮ್ ಅಜಾನಂತ ತಥಾ ವಿಭೋ |
ಕ್ರೋಶಂತಸ್ತಾತ ಪುತ್ರೇತಿ ದೈವೋಪಹತಚೇತಸಃ ॥116॥
ಪ್ರಭುವೆ! ಅದೃಷ್ಟಹೀನರಾದ ಅವರು `ತಂದೆ, ಮಗನೆ' ಎಂದು ಅರಚುತ್ತಾ ಹಾಗೆಯೇ ಒಬ್ಬರನ್ನು ಮತ್ತೊಬ್ಬರು ತಿಳಿಯದೇ ನಾಶಹೊಂದಿದರು.
ಪಲಾಯಂತ ದಿಶಸ್ತ್ವೇ ವೈ ತಾನಪ್ಯುತ್ಸೃಜ್ಯ ಬಾಂಧವಾನ್ |
ಗೋತ್ರನಾಮಭಿರನ್ಯೋನ್ಯಮ್ ಆಕ್ರಂದಂತಸ್ತತೋ ಜನಾಃ ॥117॥
ಅನಂತರದಲ್ಲಿ ಪರಸ್ಪರವಾಗಿ (ತಮ್ಮ ತಮ್ಮ) ಗೋತ್ರ, ಹೆಸರುಗಳನ್ನು ಹೇಳಿಕೊಳ್ಳುತ್ತಾ ಬಂಧುಗಳನ್ನು ತೊರೆದು ದಿಕ್ಕುದಿಕ್ಕಿಗೆ ಆ ಜನರು ಓಡಿದರು. (ಹೆದರಿ ಪಲಾಯನ ಮಾಡುತ್ತಿದ್ದ ಆ ಸೈನಿಕರು ಸಮೀಪದಲ್ಲಿರುವ ವ್ಯಕ್ತಿಯನ್ನು ಪರಿಚಯಿಸಲಾರದೆ ತಮ್ಮ ಹೆಸರು, ಗೋತ್ರ ಮುಂತಾದವುಗಳನ್ನು ತಿಳಿಸಿ ಪರಸ್ಪರ ಹೊಡೆದಾಟದಿಂದ ಪಾರಾಗಲು ಯತ್ನಿಸಿದರು ಎಂದು ಭಾವ).
ಹಾಹಾರವಂಸ್ತು ಕುರ್ವಾಣಾಃ ಪೃಥಿವ್ಯಾಂ ಶೇರತೇ ಪರೇ |
ತಾನ್ ಬುದ್ಧ್ವಾ ರಣಮಧ್ಯೇಽಸೌ ದ್ರೋಣಪುತ್ರೋ ವ್ಯಪೋಥಯತ್ ॥
ಅಯ್ಯೋ ಅಯ್ಯೋ ಎಂದು ಅರಚುತ್ತಾ ಕೆಲವರು ಭೂಮಿಯಲ್ಲಿ ಅಡಗಿದರು, ರಣಮಧ್ಯದಲ್ಲಿ ಅವರನ್ನು ಪತ್ತೆಹಿಡಿದು ಆ ದ್ರೋಣಪುತ್ರನು ಸಂಹರಿಸಿದನು.
ಅಪರೇ ತತ್ರ ವಧ್ಯಂತೋ ಮುಹುರ್ಮುಹುರಚೇತಸಃ |
ಶಿಬಿರಾನ್ನಿಷ್ಪತಂತಿ ಸ್ಮ ಕ್ಷತ್ರಿಯಾ ಭಯಪೀಡಿತಾಃ ॥119॥
ಅಲ್ಲಿ ಮತ್ತೆ ಮತ್ತೆ ಪೆಟ್ಟಿನಿಂದ ನಿತ್ರಾಣರಾದ ಕೆಲವು ಕ್ಷತ್ರಿಯರು ಭಯಗ್ರಸ್ಥರಾಗಿ ಶಿಬಿರದಿಂದ ಹೊರಹೋಗಲು ಯತ್ನಿಸಿದರು.
ತಾಂಸ್ತು ನಿಷ್ಪತಿತಾಂಸ್ತ್ರಸ್ತಾನ್ ಶಿಬಿರಾಜ್ಜೀವಿತೈಷಿಣಃ |
ಕೃತವರ್ಮಾ ಕೃಪಶ್ಚೈವ ದ್ವಾರದೇಶೇ ನಿಜಘ್ನತುಃ ॥120॥
ಹೆದರಿದ ಜೀವವನ್ನು ಉಳಿಸಿಕೊಳ್ಳಬೇಕೆಂಬ ಬಯಕೆಯಿಂದ ಶಿಬಿರದಿಂದ ಹೊರಬರುತ್ತಿದ್ದ ಅವರನ್ನು ಕೃಪ, ಕೃತವರ್ಮರು ದ್ವಾರದಲ್ಲಿ ಸಂಹರಿಸಿದರು.
ವಿಸ್ರಸ್ತಶಸ್ತ್ರಕವಚಾನ್ ಮುಕ್ತಕೇಶಾನ್ ಕೃತಾಂಜಲೀನ್ |
ವೇಪಮಾನಾನ್ ಕ್ಷಿತೌ ಭೀತಾನ್ ನೈವ ಕಾಂಶ್ಚಿದ್ ವ್ಯಮುಂಚತಾಮ್ ॥
ಕವಚ-ಅಸ್ತ್ರರಹಿತರಾದ ತಲೆಕೂದಲನ್ನು ಹರಡಿಕೊಂಡಿರುವ ಕೈಜೋಡಿಸಿ ನಮಿಸುತ್ತಿರುವ ಹೆದರಿರುವ ಭೂಮಿಯಲ್ಲಿ

ಹೊರಳಾಡುತ್ತಿರುವ ಯಾವ ಒಬ್ಬನನ್ನೂ ಬಿಡಲಿಲ್ಲ (ಎಲ್ಲರನ್ನೂ ಸಂಹರಿಸಿದರು).
ನಾಮುಚ್ಯತ ತದಾ ಕಶ್ಚಿನ್ನಿಷ್ಕ್ರಾಂತಃ ಶಿಬಿರಾದ್ ಬಹಿಃ |
ಕೃಪಸ್ಯ ಚ ಮಹಾರಾಜ ಹಾರ್ದಿಕ್ಯಶ್ಚೈವ ದುರ್ಮತಿಃ ॥122॥
ಮಹಾರಾಜ! ಆಗ ದುರ್ಬುದ್ಧಿಯಾದ ಹೃದಿಕನ ಪುತ್ರನಾದ ಕೃತವರ್ಮನು ಮತ್ತು ಕೃಪನು ಶಿಬಿರದಿಂದ ಹೊರಬಂದ ಯಾರನ್ನೂ ಶಿಬಿರದಿಂದ ಹೊರಗೆ ಬಿಡಲಿಲ್ಲ.
ಭೂಯಶ್ಚೈವ ಚಿಕೀರ್ಷನ್ತೌ ದ್ರೋಣಪುತ್ರಸ್ಯ ತೌ ಪ್ರಿಯಮ್ |
ತ್ರಿಷು ದೇಶೇಷು ದದತುಃ ಶಿಬಿರಸ್ಯ ಹುತಾಶನಮ್ ॥123॥
ಮತ್ತೂ ಕೂಡ ದ್ರೋಣಪುತ್ರನಿಗೆ ಖುಷಿಯನ್ನು ಉಂಟುಮಾಡಬೇಕೆಂದು ಬಗೆದು ಅವರೀರ್ವರು ಶಿಬಿರದ ಮೂರುಭಾಗಗಳಲ್ಲಿ ಬೆಂಕಿಯನ್ನಿಟ್ಟರು.
ತತಃ ಪ್ರಕಾಶೇ ಶಿಬಿರೇ ಖಡ್ಗೇನ ಪಿತೃನಂದನಃ |
ಅಶ್ವತ್ಥಾಮಾ ಮಹಾರಾಜ ವ್ಯಚರತ್ ಕೃತಹಸ್ತವತ್ ॥124॥
ಮಹಾರಾಜ! ಶಿಬಿರವು ಪ್ರಕಾಶಮಾನವಾಗುತ್ತಿರಲಾಗಿ, ತಂದೆಗೆ ಸಂತಸವನ್ನು ಮಾಡಬೇಕೆಂಬ ಬಯಕೆಯಿರುವ ಅಶ್ವತ್ಥಾಮನು (ಖಡ್ಗಯುದ್ಧದಲ್ಲಿ) ಸಿದ್ಧಹಸ್ತನಂತೆ ಖಡ್ಗವನ್ನು ಧರಿಸಿ ಸಂಚರಿಸಿದನು.
ಕಾಂಶ್ಚಿದ್ ಯೋಧಾನ್ ಸ ಖಡ್ಗೇನ ಮಧ್ಯೇ ಸಂಛಿದ್ಯ ವೀರ್ಯವಾನ್ |
ಅಪಾತಯದ್ ದ್ರೋಣಸುತೋ ಸಂಛಿಂದಂಸ್ತಿಲಕಾಂಡವತ್ ॥125॥
ವೀರನಾದ ದ್ರೋಣಪುತ್ರನು ಆ ಖಡ್ಗದಿಂದ ಕೆಲವರನ್ನು (ದೇಹದ) ಮಧ್ಯದಲ್ಲಿ ಸೀಳಿ, ಸೀಳಿದ ತಿಲಕಾಷ್ಠದಂತೆ ಕೆಡಹಿದನು.
ಕಾಂಶ್ಚಿದಾಪತತೋ ವೀರಾನ್ ಅಪರಾಂಶ್ಚ ಪ್ರಧಾವತಃ |
ವ್ಯಯೋಜಯತ ಖಡ್ಗೇನ ಪ್ರಾಣೈರ್ದ್ರೌಣಿಃ ಕೃತಾಂತವತ್ ॥126॥
ದ್ರೋಣಪುತ್ರನು ಯಮನಂತೆ, ಮೇಲೆರಗಿದ ಕೆಲವರನ್ನು, ಮತ್ತೆ ಪಲಾಯನ ಮಾಡುತ್ತಿದ್ದ ಕೆಲವರನ್ನು ಪ್ರಾಣದಿಂದ ಮುಕ್ತರನ್ನಾಗಿಸಿದನು.
ವಿನದದ್ಭಿರ್ಭೃಶಾಯಸ್ತೈಃ ನರಾಶ್ವದ್ವಿಪಸತ್ತಮೈಃ |
ಪತಿತೈರಭವತ್ ಕೀರ್ಣಾ ಮೇದಿನೀ ಭರತರ್ಷಭ ॥127॥
ಭರತಕುಲೋತ್ಪನ್ನರಲ್ಲಿ ಹಿರಿಯನೆ! ತುಂಬಾ ಗಾಯಗೊಂಡು ಅರಚುತ್ತಿರುವ ಕೆಳಗೆ ಬಿದ್ದಿರುವ ಹಿರಿಯರಾದ ಮನುಷ್ಯರು ಕುದುರೆಗಳು ಆನೆಗಳು ಭೂಮಿಯಲ್ಲಿ ಹರಡಿಬಿದ್ದಿದ್ದವು.
ಮಾನುಷಾಣಾಂ ಸಹಸ್ರೇಷು ಹತೇಷು ಪತಿತೇಷು ಚ |
ಉದತಿಷ್ಠನ್ ಕಬಂಧಾನಿ ಬಹೂನ್ಯುತ್ಥಾಯ ಚಾಪತನ್ ॥128॥
ಸಾವಿರಾರು ಮನುಷ್ಯರು ಮೃತರಾಗಿ ಬೀಳಲು, ಅನೇಕ ಮುಂಡಗಳು ಮೇಲೆದ್ದು ನಿಂತವು ಮತ್ತೆ ಬಿದ್ದವು.
ಸಾಂಗದಾನ್ ಸಾಯುಧಾನ್ ಬಾಹೂನ್ ವಿಚಕರ್ತ ಶಿರಾಂಸಿ ಚ |
ಹಸ್ತಿಹಸ್ತೋಪಮಾನೂರೂನ್ ಹಸ್ತಾನ್ ಪಾದಾಂಶ್ಚ ಭಾರತ ॥129॥
ಭರತಕುಲೋತ್ಪನ್ನನೇ! ಕವಚ ಸಹಿತವಾದ ಆಯುಧಸಹಿತವಾದ ಬಾಹುಗಳನ್ನು, ತಲೆಗಳನ್ನು, ಆನೆಯ ಸೊಂಡಿಲಿನಂತಿರುವ ತೊಡೆಗಳನ್ನು, ಹಸ್ತಗಳನ್ನು ಕಾಲುಗಳನ್ನು ಅಶ್ವತ್ಥಾಮನು ಕತ್ತರಿಸಿದನು.
ಪೃಷ್ಠಚ್ಛಿನ್ನಾನ್ ಶಿರಃ ಚ್ಛಿನ್ನಾನ್ ಪಾರ್ಶ್ವಛಿನ್ನಾಂಸ್ತಥಾಽಪರಾನ್ |
ಸಮಾಸಾದ್ಯಾಕರೋದ್ ದ್ರೌಣಿಃ ಕಾಂಶ್ಚಿಚ್ಚಾಪಿ ಪರಾಙ್ಮುಖಾನ್ ॥130॥
ದ್ರೋಣಪುತ್ರನು, ಬೆನ್ನಿನಲ್ಲಿ ಘಾಸಿಗೊಂಡ ತಲೆಯಲ್ಲಿ ಘಾಸಿಗೊಂಡ ಹಾಗೆಯೇ ಮತ್ತೆ ಕೆಲವರು ಪಾರ್ಶ್ವಭಾಗದಲ್ಲಿ ಘಾಸಿಗೊಂಡ ಮತ್ತೆ ಕೆಲವರು ಬೆನ್ನುಮಾಡಿ ಓಡುತ್ತಿರುವವರನ್ನು ಸಮೀಪಿಸಿ ಅವರ ದೇಹಗಳನ್ನು ಸೀಳಿದನು.
ಮಧ್ಯಕಾಯೇ ನರಾಂಶ್ಚಿನ್ನಾನ್ ಚಿಚ್ಛೇದಾನ್ಯಾಂಶ್ಚ ಕಂಠತಃ |
ಅಂಸದೇಶೇ ಚ ತತ್ರಾನ್ಯಾನ್ ಕಾಯೇ ಪ್ರಾವೇಶಯಚ್ಛಿರಃ ॥131॥
ಘಾಸಿಗೊಂಡ ಮನುಜರನ್ನು ದೇಹಮಧ್ಯದಲ್ಲಿ ಸೀಳಿದನು, ಮತ್ತೆ ಕೆಲವರನ್ನು ಕಂಠದಲ್ಲಿ ಸೀಳಿದನು, ಮತ್ತೆ ಬೇರೆಯವರನ್ನು ಹೆಗಲಿನಲ್ಲಿ ಸೀಳಿದನು, ಮತ್ತೆ ಕೆಲವರನ್ನು ಅವರ ದೇಹದಲ್ಲಿ ತಲೆಯನ್ನು ತೂರಿಸಿದನು.
ಏವಂ ಹಿ ಬಹುಶಸ್ತತ್ರ ನಿಘ್ನತೋ ಬಲವತ್ತರಾನ್ |
ತಮಸಾ ರಜನೀ ಘೋರಾ ಬಭೌ ದಾರುಣದರ್ಶನಾ ॥132॥
ಈ ರೀತಿಯಾಗಿ ಅಲ್ಲಿ ಪ್ರಾಯಶಃ ಬಲಿಷ್ಠರನ್ನು ಸಂಹರಿಸುತ್ತಿರಲು, ಘೋರವಾದ ರಾತ್ರಿಯು ಕತ್ತಲೆಯಿಂದ ಕವಿದಿದ್ದಾಗಿ ಭೀಕರ ದೃಶ್ಯವಾಗಿ ಕಾಣಿಸಿತು.
ಕಿಂಚಿತ್ ಪ್ರಾಣೈಶ್ಚ ಪುರುಷೈರ್ಹತೈಶ್ಚಾನ್ಯೈಃ ಸಹಸ್ರಶಃ |
ಬಹುನಾ ಚ ಗಜಾಶ್ವೇನ ಭೂರಭೂದ್ ಭೀಮದರ್ಶನಾ ॥133॥
ಅಲ್ಪಪ್ರಾಣವಂತರಾಗಿದ್ದ ಸಾವಿರಾರು ಮಂದಿಗಳಿಂದ, ಮತ್ತೆ ಕೆಲವರು ಗತಪ್ರಾಣರಿಂದ, ಭಾರೀ ಸಂಖ್ಯೆಯಲ್ಲಿ ಆನೆ ಕುದುರೆಗಳಿಂದ ತುಂಬಿದ ಭೂಮಿಯು ನೋಡಲು ಭೀಕರವಾಗಿದ್ದಿತು.
ವರ್ಧಯಂತೋ ಭಯಂ ಘೋರಂ ನರಾಶ್ವದ್ವಿರದಾ ರಣೇ |
ಕ್ರುದ್ಧೇನ ದ್ರೋಣಪುತ್ರೇಣ ಸಂಛಿನ್ನಾಃ ಪ್ರಾಪತನ್ ಭುವಿ ॥134॥
ರಣರಂಗದ ಭೂಮಿಯಲ್ಲಿ ಭಾರೀ ಭೀತಿಯನ್ನು ಹೆಚ್ಚಿಸುವ, ಕೋಪಿಷ್ಟನಾದ ದ್ರೋಣಪುತ್ರನಿಂದ ತುಂಡರಿಸಲಾದ ಮನುಜರು

ಕುದುರೆಗಳು ಆನೆಗಳು ಬಿದ್ದವು.
ಮಾತೄಂಶ್ಚಾನ್ಯೇ ಪಿತೄಂಶ್ಚಾನ್ಯೇ ಭ್ರಾತೄಂಶ್ಚಾನ್ಯೇ ಚ ಚುಕ್ರುಶುಃ |
ಕೇಚಿದೂಚುರ್ನರಾಃ ಕ್ರುದ್ಧೈರ್ಧಾರ್ತರಾಷ್ಟೈಃ ಕೃತಂ ರಣೇ ॥135॥
ಕೆಲವರು ತಾಯಿಯರನ್ನು, ಮತ್ತೆ ಕೆಲವರು ತಂದೆಯರನ್ನು, ಮತ್ತೆ ಕೆಲವರು ಸಹೋದರರನ್ನು (ಆರ್ತಸ್ವರದಿಂದ) ಕೂಗಿದರು. ಮತ್ತೆ ಕೆಲವರು ಹೇಳಿದರು: `ಕುಪಿತರಾದ ಧೃತರಾಷ್ಟ್ರನ ಪುತ್ರರು ರಣದಲ್ಲಿ ಹೀಗೆ ಮಾಡಿರಬಹುದು' ಎಂದು.
ನರಾಃ
ಯತ್ನಃ ಕೃತಃ ಪ್ರಸುಪ್ತಾನಾಂ ರಕ್ಷೋಭಿರ್ಭೀಮಕರ್ಮಭಿಃ |
ಅಸಾನ್ನಿಧ್ಯಾತ್ತು ಪಾರ್ಥಾನಾಮಿದಂ ನಃ ಕದನಂ ಕೃತಮ್ ॥136॥
ಮನುಜರು ಕುಂತೀಪುತ್ರರು ದೂರದಲ್ಲಿರುವುದರಿಂದ ಗಾಢವಾಗಿ ನಿದ್ರಿಸುತ್ತಿರುವ ನಮ್ಮ ಮೇಲೆ ಹೊಂಚುಹಾಕಿ ಕ್ರೂರಕರ್ಮಿಗಳಾದ ರಕ್ಕಸರು ಯುದ್ಧವನ್ನು ಸಾರಿರಬಹುದು.
ನ ದೇವಾಸುರಗಂಧರ್ವೈಃ ನ ಯಕ್ಷೈರ್ನ ಚ ರಾಕ್ಷಸೈಃ |
ಶಕ್ಯೋ ಜೇತುಂ ಹಿ ಕೌಂತೇಯೋ ನೇತಾ ಯಸ್ಯ ಜನಾರ್ದನಃ |
ಬ್ರಹ್ಮಣ್ಯಃ ಸತ್ಯವಾಗ್ ದಾಂತಃ ಸರ್ವಭೂತಾನುಕಂಪನಃ ॥138॥
ಯಾರಿಗೆ ಜನಾರ್ದನನು ನೇತಾ ಆಗಿರುವನೋ, ಬ್ರಾಹ್ಮಣರ ರಕ್ಷಕನಾಗಿ, ಸತ್ಯವನ್ನೇ ನುಡಿಯುವನೊ, ಇಂದ್ರಿಯ ನಿಗ್ರಹಿಯಾದವನೊ, ಎಲ್ಲ ಪ್ರಾಣಿಗಳಲ್ಲಿ ದಯಾಪರನಾದವನೊ, ಅಂತಹ ಕುಂತೀಪುತ್ರನನ್ನು ದೇವತೆಗಳು, ಅಸುರರು ಗಂಧರ್ವರು , ಯಕ್ಷರು, ರಾಕ್ಷಸರು ಯಾರೂ ಗೆಲ್ಲಲು ಶಕ್ಯವಿಲ್ಲ.
ನ ಚ ಸುಪ್ತಂ ಪ್ರಮತ್ತಂ ವಾ ನ್ಯಸ್ತಶಸ್ತ್ರಂ ಕೃತಾಂಜಲಿಮ್ |
ಧಾವಂತಂ ಮುಕ್ತಕೇಶಂ ಚ ಹನ್ಯಾತ್ ಪಾರ್ಥೋ ಧನಂಜಯಃ ॥139॥
ಕುಂತೀಪುತ್ರನಾದ ಧನಂಜಯನು ಮಲಗಿದವನನ್ನು, ಉನ್ಮಾದಾವಸ್ಥೆಯಲ್ಲಿ ಇರುವವನನ್ನು, ಶಸ್ತ್ರವನ್ನು ಪರಿತ್ಯಜಿಸಿದವನನ್ನು, ಕೈಜೋಡಿಸಿದವನನ್ನು, ಪಲಾಯನ ಮಾಡುತ್ತಿರುವವನನ್ನು, ತಲೆಯನ್ನು ಕೆದರಿಕೊಂಡವನನ್ನೂ ಕೊಲ್ಲಲಾರನು.
ತದಿದಂ ನಃ ಕೃತಂ ಘೋರಂ ರಕ್ಷೋಭಿಃ ಕ್ರೂರಕರ್ಮಭಿಃ ॥140॥
ಕ್ರೂರಕರ್ಮಿಗಳಾದ ರಕ್ಕಸರು ನಮ್ಮ ಮೇಲೆ ಇಂತಹ ಭೀಕರಕೃತ್ಯವನ್ನು ಮಾಡಿರುವರು.
ಸಂಜಯಃ
ಇತಿ ಲಾಲಪ್ಯಮಾನಾಸ್ತು ಶೇರತೇ ಬಹವೋ ಜನಾಃ ॥141॥
ಸಂಜಯ ಈ ರೀತಿಯಾಗಿ ಹೇಳುತ್ತಾ ಅನೇಕ ಜನರು ಒಟ್ಟಾದರು.
ಸ್ತನತಾಂ ಚ ಮನುಷ್ಯಾಣಾಮಪರೇಷಾಂ ಚ ಕೂಜತಾಮ್ |
ತತೋ ಮುಹೂರ್ತಾತ್ ಪ್ರಾಶಾಮ್ಯತ್ ಸ ಶಬ್ದಸ್ತುಮುಲೋ ಮಹಾನ್ ॥
ಹೀಗೆ ವಿಲಪಿಸುತ್ತಿರುವ, ಮತ್ತೆ ಕೆಲವರು ರೋದಿಸುತ್ತಿರುವ ಮನುಜರ ಭಾರೀ ಶಬ್ದವು ಒಂದು ಮುಹೂರ್ತದ ನಂತರದಲ್ಲಿ ನಿಂತುಹೋಯಿತು.
ಶೋಣಿತವ್ಯತಿಷಿಕ್ತಾಯಾಂ ವಸುಧಾಯಾಂ ನರಾಧಿಪ |
ತದ್ರಜಸ್ತುಮುಲಂ ರಾಜನ್ ಕ್ಷಣೇನಾಂತರಧೀಯತ ॥143॥
ಮನುಜರ ಒಡೆಯನೆ, ರಾಜನೆ! ಭೂಮಿಯಲ್ಲಿ ರಕ್ತದ ಕೋಡಿಯು ಹರಿಯಲು, ದಟ್ಟವಾದ ಧೂಳು ಒಂದೇ ಕ್ಷಣದಲ್ಲಿ ಅಡಗಿತು.
ಸಂವೇಷ್ಟಮಾನಾನುದ್ವಿಗ್ನಾನ್ ನಿರುತ್ಸಾಹಾನ್ ಸಹಸ್ರಶಃ |
ನ್ಯಪಾತಯನ್ನರಾನ್ ಕ್ರುದ್ಧಃ ಪಶೂನ್ ಪಶುಪತಿರ್ಯಥಾ ॥144॥
ಒಬ್ಬರನ್ನೊಬ್ಬರು ತೆಕ್ಕಿ ನಿಂತಿರುವ, ಉದ್ವೇಗಕ್ಕೆ ಒಳಗಾಗಿರುವ, ಉತ್ಸಾಹರಹಿತರಾದ, ಸಾವಿರಾರು ಮನುಷ್ಯರನ್ನು, ಪಶುಪತಿಯು ಪಶುಗಳನ್ನು ಸಂಹರಿಸಿದಂತೆ ಅಶ್ವತ್ಥಾಮನು ಸಂಹರಿಸಿದನು.
ಅನ್ಯೋನ್ಯಂ ಸಂಪರಿಷ್ವಜ್ಯ ಶಯಾನಾನ್ ಜೀವತೋಽಪರಾನ್ |
ಸಂಲೀನಾನ್ ದ್ರುವತಶ್ಚಾಪಿ ಸರ್ವಾನ್ ದ್ರೌಣಿರಪೋಥಯತ್ ॥145॥
ಬದುಕಿರುವ ಕೆಲವರು ಒಬ್ಬರನ್ನು ಒಬ್ಬರು ತೆಕ್ಕೆಹಾಕಿಕೊಂಡು ಮಲಗಿರುವ, ಅಡಗಿ ಕುಳಿತಿರುವ, ಪಲಾಯನ ಮಾಡುತ್ತಿರುವ ಎಲ್ಲರನ್ನೂ ಸಹ ದ್ರೋಣಪುತ್ರನು ಸಂಹರಿಸಿದನು.
ಹುತಾಶನೇನ ದಹ್ಯಂತೇ ವಧ್ಯಂತೇ ದ್ರೌಣಿನಾ ಪರೇ |
ಪರಸ್ಪರಂ ತದಾ ಯೋಧಾ ಗಮಯನ್ ಯಮಸಾದನಮ್ ॥146॥
ದ್ರೋಣಪುತ್ರನು ಕೆಲವರನ್ನು ಸಂಹರಿಸಿದನು, ಮತ್ತೆ ಕೆಲವರನ್ನು ಅಗ್ನಿಯಿಂದ ದಹಿಸಿದನು, ಯೋಧರೇ ಪರಸ್ಪರವಾಗಿ ಯಮಸದನಕ್ಕೆ ಅಟ್ಟಿದರು (ಶಿಬಿರಕ್ಕೆ ಬೆಂಕಿಯನ್ನು ಹಚ್ಚಿದ್ದರಿಂದ ಗಾಢವಾದ ಧೂಮವು ಆವರಿಸಿ, ಶಿಬಿರವಾಸಿಗಳು ಏನೂ ತಿಳಿಯದವರಾಗಿ ಪರಸ್ಪರ ಖಡ್ಗಾದಿ ಆಯುಧಗಳಿಂದ ಇರಿದುಕೊಂಡು ಮೃತರಾದರು ಎಂದು ಭಾವ.)
ತಸ್ಯಾ ರಜನ್ಯಾಸ್ತ್ವರ್ಧೇನ ಪಾಂಡವಾನಾಂ ಮಹದ್ಬಲಮ್ |
ಗಮಯಾಮಾಸ ರಾಜೇಂದ್ರ ದ್ರೌಣಿರ್ಯಮನಿವೇಶನಮ್ ॥147॥
ರಾಜರ ಒಡೆಯನೆ! ಆ ಅರ್ಧರಾತ್ರಿಯಲ್ಲಿ ಪಾಂಡವರ ಭಾರೀ ಬಲವನ್ನು (ಸೇನಾಬಲವನ್ನು) ಯಮಸದನಕ್ಕೆ ದ್ರೋಣಪುತ್ರನು ಕಳುಹಿಸಿದನು.
ನಿಶಾಚರಾಣಾಂ ಸತ್ತ್ವಾನಾಂ ರಾತ್ರಿಃ ಸಾ ಹರ್ಷವರ್ಧಿನೀ |

ಆಸೀನ್ನರಗಜಾಶ್ವಾನಾಂ ರೌದ್ರಾ ಕ್ಷಯಕರೀ ಭೃಶಮ್ ॥148॥
ಆ ರಾತ್ರಿಯು ರಾತ್ರಿಸಂಚಾರಿಗಳಾದ ಪ್ರಾಣಿಗಳಿಗೆ (ವಿಶೇಷವಾಗಿ ಮಾಂಸಾಹಾರಿ ಪ್ರಾಣಿಗಳಿಗೆ) ಸಂತಸವನ್ನು ಹೆಚ್ಚಿಸುವದಾಗಿಯೂ, ಮನುಷ್ಯರು ಆನೆಗಳು ಕುದುರೆಗಳು ಇವುಗಳಿಗೆ ಅತ್ಯಂತ ಭೀಕರವೂ, ನಾಶಕಾರಿಯೂ ಆಗಿತ್ತು.
ತತ್ರಾದೃಶ್ಯಂತ ರಕ್ಷಾಂಸಿ ಪಿಶಾಚಾಶ್ಚ ಪೃಥಗ್ವಿಧಾಃ |
ಖಾದಂತೇ ಪರಮಾಂಸಾನಿ ಪಿಬಂತಃ ಶೋಣಿತಾನಿ ಚ ॥149॥
ಅಲ್ಲಿ ಅನ್ಯರ ಮಾಂಸವನ್ನು ತಿನ್ನುತ್ತಿರುವ, ರಕ್ತವನ್ನು ಕುಡಿಯುತ್ತಿರುವ. ನಾನಾವಿಧಗಳಾದ ರಾಕ್ಷಸರು ಪಿಶಾಚಿಗಳು ಕಂಡವು.
ಕರಾಲಾಃ ಪಿಂಗಲಾ ರೌದ್ರಾಃ ಶೈಲದಂತಾ ರಜಸ್ವಲಾಃ |
ಜಟಿಲಾ ಭೀಮವಕತ್ರಶ್ಚ ಪಂಚಪಾದಾ ಮಹೋದರಾಃ ॥150॥
ಪಶ್ಚಾದಂಗುಲಯೋ ರೂಕ್ಷಾ ವಿರೂಪಾ ಭೈರವಸ್ವನಾಃ |
ಗಜಾನನಾತಿಹ್ರಸ್ವಾಶ್ಚ ನೀಲವರ್ಣಾ ವಿಭೀಷಣಾಃ ॥151॥
ಸ್ವಪುತ್ರದಾರಾಃ ಸುಕ್ರೂರಾಃ ಕಾಂದಿಶೀಕಾಃ ಸುನಿರ್ಘೃಣಾಃ ॥152॥
ವಿವಿಧಾನಿ ಚ ರೂಪಾಣಿ ತತ್ರಾದೃಶ್ಯಂತ ರಕ್ಷಸಾಮ್ ॥153॥
ವಿಕಾರದೇಹವನ್ನು ಹೊಂದಿರುವ, ತಿಳಿಹಳದಿಬಣ್ಣವನ್ನು ಹೊಂದಿರುವ, ಭೀಕರಗಳಾದ ಕಲ್ಲುಬಂಡೆಯಂತೆ (ದೊಡ್ಡ ದೊಡ್ಡ) ಹಲ್ಲುಗಳನ್ನು ಹೊಂದಿರುವ, ಧೂಳಿನಿಂದ ಮುಚ್ಚಿಹೋಗಿರುವ, ತಲೆಯಲ್ಲಿ ಜಟೆಯನ್ನು ಧರಿಸಿರುವ, ಭೀಕರವಾದ ಮುಖಗಳನ್ನು ಹೊಂದಿರುವ, ಐದು ಕಾಲುಗಳನ್ನು ಹೊಂದಿರುವ, ಭಾರೀಗಾತ್ರದ ಹೊಟ್ಟೆಯನ್ನು ಹೊಂದಿರುವ, ತಿರುವುಮುರುವಾಗಿರುವ ಬೆರಳುಗಳನ್ನು ಹೊಂದಿರುವ, (ಬೆರಳಿನ ತುದಿಯು ದಪ್ಪ ಬುಡವು ತೆಳು ಎಂದು ಭಾವ) ಭೀಕರಗಳಾದ ವಿಕಾರರೂಪಿಗಳಾದ ಭಯಂಕರವಾದ ಧ್ವನಿಯನ್ನು ಹೊರಹೊಮ್ಮಿಸುವ ಅತಿಕುಳ್ಳಾಗಿರುವ, ಮುಖವು ಆನೆಯ ಸದೃಶವಾಗಿರುವ ಮಕ್ಕಳು ಹೆಂಡಂದಿರಿಂದ ಒಡಗೂಡಿರುವ ಯಾವ ದೇಶದವರು ಎಂದು ತಿಳಿಯದ ತುಂಬ ಕ್ರೂರಿಗಳಾದ ದಯಾರಹಿತರಾದ ಅನೇಕ ರೂಪಗಳನ್ನು ಹೊಂದಿರುವ ರಕ್ಕಸರು ಪಿಶಾಚಗಳು ಅಲ್ಲಿ ಕಂಡವು.
ಪೀತ್ವಾ ಚ ಶೋಣಿತಂ ಹೃಷ್ಟಾಃ ಪ್ರಾನೃತ್ಯನ್ ಗಣಶೋಽಪರೇ |
ಇದಂ ಪರಮಿದಂ ಮೇಧ್ಯಮ್ ಇದಂ ಸ್ವಾದ್ವಿತಿ ಚಾಬ್ರುವನ್ ॥154॥
ರಕ್ತವನ್ನು ಕುಡಿದು ಸಂತಸಗೊಂಡ ಒಂದು ಗುಂಪು ಕುಪ್ಪಳಿಸಿ ಕುಣಿಯಿತು, ಇದು ಉತ್ತಮವಾಗಿದೆ, ಈ ಮಾಂಸವು ಅತಿರುಚಿಯಾಗಿದೆ ಎಂದು ಹೇಳಿತೊಡಗಿದವು.
ಮೇದೋಮಜ್ಜಾಸ್ಥಿರಕ್ತಾನಾಂ ಮಾಂಸಾನಾಂ ಭೃಶಮಾಶಿತಾಃ |
ವರಮಾಂಸಾನಿ ಖಾದಂತಃ ಕ್ರವ್ಯಾದಾ ಮಾಂಸಗರ್ಧಿನಃ ॥155॥
ವಸಾಶ್ಚಾಪ್ಯಪರೇ ಪೀತ್ವಾ ಪರ್ಯಧಾವನ್ ವಿಕುಕ್ಷಿಕಾಃ |
ನಾನಾವಕತ್ರಸ್ತಥಾ ರೌದ್ರಾಃ ಕ್ರವ್ಯಾದಾಃ ಪಿಶಿತಾಶನಾಃ ॥156॥
ಅಯುತಾನಿ ಚ ತತ್ರಾಸನ್ ಪ್ರಯುತಾನ್ಯರ್ಬುದಾನಿ ಚ |
ರಕ್ಷಸಾಂ ಘೋರರೂಪಾಣಾಂ ಮಹತಾಂ ಕ್ರೂರಕರ್ಮಣಾಮ್ ॥157॥
ಮುದಿತಾನಾಂ ವಿತೃಪ್ತಾನಾಂ ತಸ್ಮಿನ್ ಮಹತಿ ವೈಶಸೇ |
ಸಮೇತಾನಿ ಬಹೂನ್ಯಾಸನ್ ಭೂತಾನಿ ಚ ಜನಾಧಿಪ ॥158॥
ಜನನಾಯಕನೆ! ಮೇದಸ್ಸು ಮಜ್ಜಾ ಎಲವು ರಕ್ತವನ್ನು ಯಥೇಚ್ಛವಾಗಿ ಉಂಡವು, ಮಾಂಸವನ್ನು ಅತಿಯಾಗಿ ಬಯಸುವ ಮಾಂಸಭಕ್ಷಿಗಳು (ರಾಕ್ಷಸರು) ಶ್ರೇಷ್ಠ ಮಾಂಸವನ್ನು ತಿನ್ನುತ್ತಾ, ಮತ್ತೆ ಕೆಲವರು ವಸೆಯನ್ನು ಕುಡಿದವು, ಡೊಳ್ಳುಹೊಟ್ಟೆಗಳನ್ನು ಹೊತ್ತು ತಿರುಗಾಡಿದವು, ಹಾಗೆಯೇ ಮಾಂಸಭಕ್ಷಿಗಳಾದ ಭಯಂಕರರಾದ ರಾಕ್ಷಸರು ನಾನಾವಿಧವಾದ ಮುಖಚಹರೆಗಳನ್ನು ಹೊಂದಿದ್ದರು. ಅಲ್ಲಿ ನೆರದಿದ್ದ ಗುಂಪುಗಳಲ್ಲಿ ಕೆಲವು ಗುಂಪಿನಲ್ಲಿ ಹತ್ತಾರು ಸಾವಿರ, ಮತ್ತೆ ಕೆಲವು ಗುಂಪಿನಲ್ಲಿ ಹತ್ತಾರು ಲಕ್ಷ, ಮತ್ತೆ ಕೆಲವು ಗುಂಪುಗಳಲ್ಲಿ ಕೋಟಿಗೂ ಹೆಚ್ಚು ಸಂಖೆಯಲ್ಲಿ ಮಿಲಿತರಾದ ಭಾರೀಕ್ರೂರಕರ್ಮಿಗಳಾದ ಭಯಂಕರರೂಪಗಳನ್ನು ಹೊಂದಿರುವ ತುಂಬಾತೃಪ್ತರಾದ ಸಂತಸಗೊಂಡ ರಾಕ್ಷಸರ ಗುಂಪು , ಬೇರೆ ತುಂಬಾಪ್ರಾಣಿಗಳೂ ಆ ವಿಸ್ತಾರವಾದ ರಣರಂಗದಲ್ಲಿ ಇದ್ದವು.
ಏವಂವಿಧಾ ಹಿ ಸಾ ರಾತ್ರಿಃ ಸೋಮಕಾನಾಂ ಜನಕ್ಷಯೇ |
ಪ್ರಸುಪ್ತಾನಾಂ ಪ್ರಮತ್ತಾನಾಮಾಸೀತ್ ಸುಭೃಶದಾರುಣಾ ॥159॥
ಈ ರೀತಿಯಾಗಿ ಮನುಜಕ್ಷಯವು ಉಂಟಾಗಿ, ಮೈಮರೆತು ಗಾಢವಾಗಿ ಮಲಗಿದ ಸೋಮಕವಂಶೀಯರಿಗೆ ಅತ್ಯಂತ ದಾರುಣದಿನವಾಯಿತು.
ಅಸಂಶಯಂ ಚ ಕಾಲಸ್ಯ ಪರ್ಯಾಯೋ ದುರತಿಕ್ರಮಃ |
ತಾದೃಶಾ ನಿಹತಾ ಯತ್ರ ಕೃತ್ವಾಽಸ್ಮಾಕಂ ಜನಕ್ಷಯಮ್ ॥160॥
ನಮ್ಮ ಜನರ ಸಂಹಾರವನ್ನು ಮಾಡಿದ ಅವರು, ಆ ರೀತಿಯಾಗಿ ಸಂಹೃತರಾದದ್ದು ನಿಃಸಂದೇಹವಾಗಿಯೂ ಕಾಲದ ವಿಪರ್ಯಯವನ್ನು ಯಾರೂ ಮೀರಲಾರರು.
ಧೃತರಾಷ್ಟ್ರಃ
ಪ್ರಾಗೇವ ಸುಮಹತ್ ಕರ್ಮ ದ್ರೌಣಿರೇವ ಮಹಾಬಲಃ |
ನಾಕರೋದೀದೃಶಂ ಕಸ್ಮಾನ್ಮತ್ಪುತ್ರವಿಜಯೇ ಧೃತಃ ॥161॥
ಧೃತರಾಷ್ಟ್ರ, ನನ್ನ ಮಗನ ವಿಷಯದಲ್ಲಿ ಬದ್ಧಾದರನಾದ ಮಹಾಬಲಿಷ್ಟನಾದ ದ್ರೋಣಪುತ್ರನು ಈ ಮಹತ್ತರವಾದ ಕರ್ಮವನ್ನು ಈ

ಮೊದಲೇ ಏಕೆ ಮಾಡಲಿಲ್ಲ?
ಅಥ ಕಸ್ಮಾದ್ದ್ವತೇ ಕ್ಷತ್ರೇ ಕರ್ಮೇದಂ ಕೃತವಾನಸೌ |
ದ್ರೋಣಪುತ್ರೋ ಮಹೇಷ್ವಾಸಸ್ತನ್ಮೇ ಶಂಸಿತುಮರ್ಹಸಿ ॥162॥
ದೊಡ್ಡಬಿಲ್ಲಾಳಾದ ಈ ದ್ರೋಣಪುತ್ರನು ಕ್ಷತ್ರಿಯರ ನಾಶವಾದ ಅನಂತರದಲ್ಲಿ ಹೀಗೇಕೆ ಮಾಡಿದನು? ನನ್ನ ಈ ಸಂದೇಹವನ್ನು ನಿವಾರಿಸು.
ಸಂಜಯಃ
ತೇಷಾಂ ನೂನಂ ಭಯಾನ್ನಾಸೌ ಕೃತವಾನ್ ಕುರುಸತ್ತಮ |
ಅಸಾನ್ನಿಧ್ಯೇ ತು ಪಾರ್ಥಾನಾಂ ಕೇಶವಸ್ಯ ಚ ಧೀಮತಃ ॥163॥
ಸಾತ್ಯಕೇಶ್ಚಾಪಿ ಕರ್ಮೇದಂ ದ್ರೋಣಪುತ್ರೇಣ ಸಾಧಿತಮ್ ॥164॥
ಸಂಜಯ ಕುರುಕುಲದ ಹಿರಿಯ! ನಿಶ್ಚಯವಾಗಿಯೂ ಅವರ (ಪಾಂಡವರ) ಭಯದಿಂದ ಈತನು (ಈ ಕರ್ಮವನ್ನು) ಮಾಡಲಿಲ್ಲ, ಧೀಮಂತನಾದ ಕೇಶವನು ಮತ್ತು ಕುಂತೀಪುತ್ರರು ಹಾಗೂ ಸಾತ್ಯಕಿಯು ಇಲ್ಲದಿರುವ ಸಂದರ್ಭದಲ್ಲಿ ದ್ರೋಣಪುತ್ರನಿಂದ ಈ ಕರ್ಮವು ಸಾಧಿಸಲಾಗಿದೆ.
ಕೋ ಹಿ ತೇಷಾಂ ಸಮಕ್ಷಂ ತಾನ್ ಹನ್ಯಾದಪಿ ಮರುತ್ಪತಿಃ |
ಏತದೀದೃಶಕಂ ರಾಜನ್ ವೃತ್ತಂ ಸುಪ್ತಜನೇ ನಿಶಿ ॥165॥
ರಾಜನೆ! ಯಾವ ವಾಯುದೇವನು ಅವರ (ಪಾಂಡವರ) ಸನ್ನಿಧಿಯಲ್ಲಿ ಅವರನ್ನು (ಅವರ ಪುತ್ರರನ್ನು ಮತ್ತು ಪಾಂಚಾಲದ ರಾಜಕುವರರನ್ನು) ಸಂಹರಿಸಲು ಶಕ್ತನಾದಾನು? ರಾತ್ರಿಯಲ್ಲಿ ಜನರು ಮಲಗಿರಲು ಇಂತಹ ಘಟನೆಯು ನಡೆಯಿತು.
ತತೋ ಜನಕ್ಷಯಂ ಕೃತ್ವಾ ಪಾಂಡವಾನಾಂ ಮಹಾತ್ಯಯಮ್ |
ಪ್ರತ್ಯೂಷಕಾಲೇ ಶಿಬಿರಾನ್ ಪ್ರತಿಗಂತುಮಿಯೇಷ ಸಃ ॥166॥
ಆತನು ಪಾಂಡವರಿಗೆ ಭಾರೀ ಹಾನಿಕಾರಕವಾದ ಜನನಾಶವನ್ನು ಮಾಡಿ, ಉಷಃಕಾಲಕ್ಕೂ ಮುನ್ನ ಶಿಬಿರದಿಂದ ಹೊರಡಲು ಇಚ್ಛಿಸಿದನು
ನೃಶೋಣಿತಾವಸಿಕ್ತಸ್ಯ ದ್ರೌಣೇರಾಸೀದಸಿತ್ಸರುಃ |
ಪಾಣಿನಾ ಸಹ ಸಂಶ್ಲಿಷ್ಟ ಏಕೀಭೂತ ಇವ ಪ್ರಭೋ ॥167॥
ರಾಜನೆ! ರಕ್ತದಿಂದ ತೊಯ್ದುಹೋಗಿದ್ದ ದ್ರೋಣಪುತ್ರನ ಕರದಿಂದ ಕೂಡಿದ ಖಡ್ಗದ ಅಲಗು (ಕೈ ಮತ್ತು ಕತ್ತಿಯು) ಒಂದೇ ಎನ್ನುವಂತೆ ಆಗಿತ್ತು.
ಸ ನಿಃಶೇಷಾನರೀನ್ ಕೃತ್ವಾ ವಿರರಾಮ ನಿಶಾಕ್ಷಯೇ |
ಯುಗಾಂತೇ ಸರ್ವಭೂತಾನಿ ಭಸ್ಮ ಕೃತ್ವೇವ ಪಾವಕಃ ॥168॥
ಯುಗದ ಪರ್ಯವಸಾನದಲ್ಲಿ ಎಲ್ಲ ಪ್ರಾಣಿಗಳನ್ನು ಬೂದಿ ಎಗರಿಸಿದ ಅಗ್ನಿಯಂತೆ, ಆತನು (ಅಶ್ವತ್ಥಾಮನು) ಕತ್ತಲೆಯ ಪರಿಸಮಾಪನದ ಸಂದರ್ಭದಲ್ಲಿ ಶತ್ರುಗಳನ್ನು ನಿಃಶೇಷಗೊಳಿಸಿ ವಿಶ್ರಮಿಸಿದನು.
ಯಥಾಪ್ರತಿಜ್ಞಂ ತತ್ಕರ್ಮ ಕೃತ್ವಾ ದ್ರೌಣಾಯನಿಃ ಪ್ರಭೋ |
ದುರ್ಗಮಾಂ ಪದವೀಂ ಕೃತ್ವಾ ಪಿತುರಾಸೀದ್ ಗತವ್ಯಥಃ ॥169॥
ಒಡೆಯನೆ! ಪ್ರತಿಜ್ಞೆಯಂತೆ ಕರ್ಮವನ್ನು ಪರ್ಯವಸಾನಗೊಳಿಸಿದ ದ್ರೋಣಪುತ್ರನು ಪ್ರದೇಶವನ್ನು ಓಡಾಡಲು ಅಶಕ್ಯವಾಗುವಂತೆ (ಅಸಂಖ್ಯಾಕ ಶವಗಳು ಹರಡಿದ್ದರಿಂದ) ಮಾಡಿ, ತಂದೆಯ ವಿಷಯಕವಾದ ದುಃಖವನ್ನು ಕಳೆದುಕೊಂಡನು.
ಯಥೈವ ಸಂಸುಪ್ತಜನೇ ಶಿಬಿರೇ ಪ್ರಾವಿಶನ್ನಿಶಿ |
ತಥೈವ ಹತ್ವಾ ನಿಃಶಬ್ದಂ ನಿಶ್ಚಕ್ರಾಮ ಮಹಾರಥಃ ॥170॥
ಹೇಗೆ ಜನರು ಗಾಢನಿದ್ರೆಯಲ್ಲಿದ್ದ (ಶಬ್ದರಹಿತವಾದ) ಶಿಬಿರವನ್ನು ರಾತ್ರಿಯಲ್ಲಿ ಪ್ರವೇಶಿಸಿದ್ದನೋ, ಹಾಗೆಯೇ ಮಹಾರಥಿಕನಾದ ಆತನು (ಶಿಬಿರವನ್ನು) ನಿಃಶಬ್ದಗೊಳಿಸಿ ಹೊರಟನು.
ನಿಷ್ಕ್ರಮ್ಯ ಶಿಬಿರಾತ್ ತಸ್ಮಾತ್ ತಾಭ್ಯಾಂ ಸಮ್ಮಂತ್ರ್ಯ ವೀರ್ಯವಾನ್ |
ಆಚಖ್ಯೌ ಕರ್ಮ ತತ್ತಾಭ್ಯಾಂ ಹೃಷ್ಟಃ ಸಂಹರ್ಷಯನ್ ವಿಭೋ ॥171॥
ಪ್ರಭುವೆ! ಬಲಶಾಲಿಯಾದ ಅಶ್ವತ್ಥಾಮನು ಆ ಶಿಬಿರದಿಂದ ಹೊರಬಂದು ಅವರೀರ್ವರೊಡನೆ ಸಮಾಲೋಚಿಸಿ, ಆ ಕರ್ಮವನ್ನು ತಿಳಿಸಿ, ಅವರೀರ್ವರಿಗೆ ಸಂತೋಷಗೊಳಿಸಿ, ಸ್ವತಃ ತಾನೂ ಸಂತಸಗೊಂಡನು.
ತೌ ಸ್ಮ ವ್ಯಾಚಖ್ಯತುಸ್ತಸ್ಮೈ ಪ್ರಿಯಂ ಪ್ರಿಯಕರೌ ತದಾ |
ಪಾಂಚಾಲಾನ್ ಸೃಂಜಯಾಂಶ್ಚೈವ ವಿನಿಕೃತ್ತಾನ್ ಸಹಸ್ರಶಃ ॥172॥
ಆಗ (ಅಶ್ವತ್ಥಾಮನಿಗೆ) ಪ್ರಿಯಕರರಾದ ಅವರೀರ್ವರು (ಕೃಪ-ಕೃತವರ್ಮರು) `ಸಹಸ್ರಾರು ಸಂಖ್ಯೆಯಲ್ಲಿ ಪಾಂಚಾಲರನ್ನು ಮತ್ಸ್ಯದೇಶೀಯರನ್ನು ಸೀಳಿಹಾಕಿದ ಕರ್ತವ್ಯವನ್ನು ಸಂತಸದಾಯಕವಾದದ್ದು' ಎಂದು ಹೇಳಿದರು.
ಪ್ರೀತ್ಯಾ ಚೋಚ್ಚೈರುದಕ್ರೋಶನ್ ತಥೈವಾಸ್ಫೋಟಯಂಸ್ತಳಾನ್ |
ದಿಷ್ಟ್ಯಾ ದಿಷ್ಟ್ಯೇತಿ ಚಾನ್ಯೋನ್ಯಂ ಸಮೇತ್ಯೋಚುರ್ಮಹಾರಥಾಃ ॥
ಮಹಾರಥಿಕರಾದ ಅವರು, ಹರ್ಷದಿಂದ ಗಟ್ಟಿಯಾಗಿ ಅರಚಿದರು, ಹಾಗೆಯೇ ಕೈತಟ್ಟಿ ಶಬ್ದವನ್ನು ಮಾಡಿದರು, ಪರಸ್ಪರ ಒಟ್ಟಾಗಿ `ಕಂಡೆಯಾ, ಕಂಡೆಯಾ' ಎಂದು ಹೇಳಿಕೊಂಡರು.
ಪರಿಷ್ವಜ್ಯ ತತೋ ದ್ರೌಣಿಸ್ತಾಭ್ಯಾಂ ಚ ಪ್ರತಿನಂದಿತಃ |
ಇದಂ ಹರ್ಷಾಚ್ಚ ಸುಮಹದ್ ಆದದೇ ವಾಕ್ಯಮುತ್ತಮಮ್ ॥174॥

ಅನಂತರದಲ್ಲಿ ದ್ರೌಣಿಯು ಅವರೀರ್ವರನ್ನು ಆಲಿಂಗಿಸಿಕೊಂಡನು, ಅವರೀರ್ವರು ಅತನನ್ನು ಅಭಿನಂದಿಸಿದರು, ತುಂಬು ಸಂತಸದಿಂದ ಈ ಮಹತ್ತರವಾದ ಮಾತನ್ನು ಹೇಳಿದನು.
ದ್ರೌಣಿಃ
ಪಾಂಚಾಲಾ ನಿಹತಾಃ ಸರ್ವೇ ದ್ರೌಪದೇಯಾಶ್ಚ ಸರ್ವಶಃ |
ಸೋಮಕಾ ಮತ್ಸ್ಯಶೇಷಾಶ್ಚ ಸರ್ವೇ ವಿನಿಹತಾ ಮಯಾ ॥175॥
ಇದಾನೀಂ ಕೃತಕೃತ್ಯಾಃ ಸ್ಮ ಯಾಮ ತತ್ರೈವ ಮಾ ಚಿರಮ್ |
ಯದಿ ಜೀವತಿ ನೋ ರಾಜಾ ತಸ್ಮೈ ಶಂಸಾಮಹೇ ಪ್ರಿಯಮ್ ॥176॥
ಅಶ್ವತ್ಥಾಮ ಎಲ್ಲ ಪಾಂಚಾಲರಾಜಕುವರರು ಸಂಹೃತರಾದರು, ಮತ್ತು ದ್ರೌಪದಿಯ ಎಲ್ಲ ಪುತ್ರರು, ಉಳಿದಿದ್ದ ಎಲ್ಲ ಸೋಮವಂಶೀಯರು, ಮತ್ಸ್ಯ ದೇಶೀಯರೂ ನನ್ನಿಂದ ಮೃತರಾದರು. ಈಗ ನಾವು ಕೃತಕೃತ್ಯರಾದೆವು, ವಿಲಂಬ ಮಾಡದಂತೆ ಅಲ್ಲಿಗೆ ಹೋಗುವ, ನಮ್ಮ ರಾಜನು ಒಂದು ವೇಳೆ ಜೀವದಿಂದ ಇದ್ದಲ್ಲಿ ಆತನಿಗೆ ಪ್ರಿಯವಾದ ಸುದ್ದಿಯನ್ನು ತಿಳಿಸುವ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ಪಾಂಚಾಲವಧೋ ನಾಮ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ತದಂತರೇ ದ್ರೌಣಿರಪಿ ಪ್ರಯಾತಃ
ಕೃಷ್ಣಾಸುತಾನಾಂ ಮುದಿತಃ ಶಿರಾಂಸಿ |
ಆದಾಯ ಹಾರ್ದಿಕ್ಯಕೃಪಾನುಯಾತೋ
ದುರ್ಯೋಧನಂ ಸನ್ನಿಕೃಷ್ಟಪ್ರಯಾಣಮ್ ॥
ಅಷ್ಟರಲ್ಲಿ ಅಶ್ವತ್ಥಾಮನು ದ್ರೌಪದೀ ಪುತ್ರರ ತಲೆಗಳನ್ನು ಎತ್ತಿಕೊಂಡು ಆನಂದದಿಂದ ದುರ್ಯೋಧನನ ಬಳಿಗೆ ನಡೆದಿದ್ದನು. ಕೃಪ-ಕೃತವರ್ಮರೂ ಅವನನ್ನು ಹಿಂಬಾಲಿಸಿದ್ದರು. ದುರ್ಯೋಧನನು ಆಗ ಮರಣವನ್ನು ಸಮೀಪಿಸಿದ್ದನು.
ದೃಷ್ಟ್ವಾ ತದುಕ್ತಂ ಚ ನಿಶಮ್ಯ ಪಾಪಃ
ತುಷ್ಟೋಽತ್ಯಜತ್ ಸಾಧ್ವಿತಿ ದೇಹಮಾಶು |
ಭೀಮಾರ್ಜುನಾಭ್ಯಾಮಥ ಕೇಶವಾಚ್ಚ
ಭೀತಾಃ ಪೃಥಕ್ ದ್ರೌಣಿಮುಖಾಃ ಪ್ರಯಾತಾಃ ॥
ಪಾಪಿ ದುರ್ಯೋಧನನು ದ್ರೌಪದೀ ಪುತ್ರರ ತಲೆಗಳನ್ನು ನೋಡಿ ಅಶ್ವತ್ಥಾಮನ ಮಾತನ್ನೂ ಕೇಳಿ ಸಂತೋಷಪಟ್ಟು ಒಳ್ಳೆಯದನ್ನೇ ಮಾಡಿರುವೆ ಎಂದು ಹೇಳಿ ಬೇಗನೆ ಶರೀರವನ್ನು ತೊರೆದನು. ಒಡನೆ ಭೀಮಾರ್ಜುನರಿಗೂ ಕೃಷ್ಣನಿಗೂ ಹೆದರಿ ಅಶ್ವತ್ಥಾಮ ಮುಂತಾದ ಮೂವರೂ ಬೇರೆ ಬೇರೆಯಾಗಿ ಹೊರಟು ಹೋದರು.
* * * * *
ಒಂಬತ್ತನೆಯ ಅಧ್ಯಾಯ
ಅಶ್ವತ್ಥಾಮಾದಿಗಳು ದುರ್ಯೋಧನನಿಗಾಗಿ ಶೋಕಿಸಿದರು,
ಮಲಗಿದ ಪಾಂಡವಪುತ್ರರು ಮುಂತಾದವರನ್ನು ಸಂಹಾರಮಾಡಿದ್ದನ್ನು ಅಶ್ವತ್ಥಾಮನು ದುರ್ಯೋಧನನಿಗೆ ತಿಳಿಸಿದನು.
ಅಶ್ವತ್ಥಾಮಾದಿಗಳು ನಗರಕ್ಕೆ ತೆರಳಿದರು. ವ್ಯಾಸಾನುಗ್ರಹದಿಂದ ಪ್ರಾಪ್ತವಾದ ದಿವ್ಯಜ್ಞಾನವು
ಸಂಜಯನಿಗೆ ಪರಿಸಮಾಪ್ತವಾಯಿತು.
ಸಂಜಯಃ
ತೇ ಹತ್ವಾ ಸರ್ವಪಾಂಚಾಲಾನ್ ದ್ರೌಪದೇಯಾಂಶ್ಚ ಸರ್ವಶಃ |
ಆಗಚ್ಛನ್ ಸಹಿತಾಃ ಸರ್ವೇ ಯತ್ರ ದುರ್ಯೋಧನೋ ಹತಃ ॥1॥
ಸಂಜಯ (ಅಶ್ವತ್ಥಾಮಾದಿಗಳು) ಎಲ್ಲ ಪಾಂಚಾಲರನ್ನು ದ್ರೌಪದಿಯ ಪುತ್ರರನ್ನೂ ಸಂಹರಿಸಿ, ಅವರು ಎಲ್ಲರೂ ಒಟ್ಟಾಗಿ ಎಲ್ಲಿ ದುರ್ಯೋಧನನು ಹತನಾಗಿ ಬಿದ್ದಿದ್ದನೋ ಅಲ್ಲಿಗೆ ಬಂದರು.
ಗತ್ವಾ ಚೈನಮಪಶ್ಯಂತ ಕಿಂಚಿತ್ಪ್ರಾಣಂ ನರಾಧಿಪಮ್ |
ತತೋ ರಥೇಭ್ಯಃ ಪ್ರಸ್ಕಂದ್ಯ ಪರಿವವ್ರುಃ ತವಾತ್ಮಜಮ್ ॥2॥
ಹೋಗಿ, ತುಂಬಾದುರ್ಬಲನಾಗಿದ್ದ ರಾಜನಾದ ನಿನ್ನ ಪುತ್ರನನ್ನು ಕಂಡರು, ಅನಂತರದಲ್ಲಿ ರಥದಿಂದ ಇಳಿದು ಆತನನ್ನು ಸುತ್ತುವರೆದರು.
ತಂ ಭಗ್ನಸಕ್ಥಂ ರಾಜಾನಂ ಕೃಚ್ಛ್ರಪ್ರಾಣಮಚೇತಸಮ್ |
ವಮಂತಂ ರುಧಿರಂ ವಕ್ತ್ರಾದ್ ಅಪಶ್ಯನ್ ವಸುಧಾತಳೇ ॥3॥
ವೃತಂ ಸಮಂತಾದ್ ಬಹುಭಿಃ ಶ್ವಾಪದೈರ್ಘೋರರೂಪಿಭಿಃ |
ಸಾಲಾವೃಕಗಣೈಶ್ಚೈವ ಭಕ್ಷಯಿಷ್ಯದ್ಭಿರಂತಿಕಾತ್ ॥4॥
ನಿವಾರಯಂತಂ ತಾನ್ ಕೃಚ್ಛ್ರಾತ್ ಶ್ವಾಪದಾನ್ ಸಂಚಿಖಾದಿಷೂನ್ |
ವಿವೇಷ್ಟಮಾನಮೂರುಭ್ಯಾಂ ಸುಭೃಶಂ ಗಾಢವೇದನಮ್ ॥5॥
ತಂ ಶಯಾನಂ ತಥಾ ದೃಷ್ಟ್ವಾ ಭೂಮೌ ಸ್ವರುಧಿರೋಕ್ಷಿತಮ್ |

ಹತಶಿಷ್ಟಾಸ್ತ್ರಯೋ ರಾಜನ್ ಶೋಕಾರ್ತಾಃ ಪರ್ಯವಾರಯನ್ ॥6॥
ರಾಜನೆ! ತೊಡೆಮುರಿದುಕೊಂಡಿರುವ ಬುದ್ಧಿಸ್ವಾಸ್ಥ್ಯವಿಲ್ಲದಿರುವ ಕಷ್ಟದಿಂದ ಉಸಿರಾಡುತ್ತಿರುವ ಮುಖದಿಂದ ರಕ್ತವನ್ನು ಕಾರುತ್ತಿರುವ ನೆಲದಲ್ಲಿ ಬಿದ್ದಿರುವ, ಭಯಂಕರವಾದ ಅನೇಕ ನಾಯಿಗಳಿಂದ ಮತ್ತು ತೋಳ-ನರಿಗಳಿಂದ ಸಮೀಪದಲ್ಲಿ ಸುತ್ತುವರೆದಿರುವ, ಮಾಂಸವನ್ನು ತಿನ್ನಲು ಬಯಸುತ್ತಿರುವ ಅವುಗಳನ್ನು ಅತಿ ಕಷ್ಟದಿಂದ ಓಡಿಸುತ್ತಿರುವ, ತೊಡೆಗಳಿಂದ ಹೊರಳಾಡುತ್ತಿರುವ ತುಂಬಾ ವೇದನೆಯಿಂದ ನರಳುತ್ತಿರುವ ಭೂಮಿಯಲ್ಲಿ ಬಿದ್ದಿರುವ ತನ್ನ ರಕ್ತದಿಂದ ನೆನೆದುಹೋದ ಆತನನ್ನು (ದುರ್ಯೋಧನನನ್ನು) ದುಃಖಿತರಾದ ಮೃತರಾಗದೆ ಉಳಿದ ಮೂವರು (ಅಶ್ವತ್ಥಾಮ-ಕೃಪ-ಕೃತವರ್ಮರು ರಾಜನನ್ನು) ಸುತ್ತುವರೆದರು.
ತೈಸ್ತ್ರಿಭಿಃ ಶೋಣಿತಾದಿಗ್ಧೈಃ ನಿಃಶ್ವಸದ್ಭಿರ್ಮಹಾರಥೈಃ |
ಶುಶುಭೇ ಸಂವೃತೋ ರಾಜಾ ವೇದಿಸ್ತ್ರಿಭಿರಿವಾಗ್ನಿಭಿಃ ॥7॥
ಕೆಂಪುನೆತ್ತರಿಂದ ನೆನೆದಿರುವ ನಿಟ್ಟುಸಿರನ್ನು ಬಿಡುತ್ತಿರುವ ಆ ಮೂವರಿಂದ ಒಡಗೂಡಿರುವ ರಾಜನು ಮೂರು ಅಗ್ನಿಯುಕ್ತನಾದಂತೆ ಭಾಸನಾದನು.
ತೇ ತಂ ಶಯಾನಂ ಸಂಪ್ರೇಕ್ಷ್ಯ ರಾಜಾನಮತಥೋಚಿತಮ್ |
ಅವಿಷಹ್ಯೇನ ದುಃಖೇನ ಸರ್ವೇ ಪ್ರರುರುದುಸ್ತ್ರಿಯಃ ॥8॥
ಹಾಗೆ ಇರಲು ಯೋಗ್ಯವಲ್ಲದ ಅವಸ್ಥೆಯಲ್ಲಿ ಬಿದ್ದಿರುವ ಆ ರಾಜನನ್ನು ಅವರು ಕಂಡು, ಆ ಮೂವರೂ ತಡೆಯಲಾರದ ದುಃಖದಿಂದ ಗಟ್ಟಿಯಾಗಿ ರೋದಿಸಿದರು.
ತತಸ್ತೇ ರುಧಿರಂ ಹಸ್ತೈರ್ಮುಖಾನ್ನಿರ್ಮೃಜ್ಯ ತಸ್ಯ ಹ |
ರಣೇ ರಾಜ್ಞಃ ಶಯಾನಸ್ಯ ಕೃಪಣಂ ಪರ್ಯದೇವಯನ್ ॥9॥
ಅನಂತರದಲ್ಲಿ ಅವರು ಆತನ ಮುಖದಲ್ಲಿನ ರಕ್ತವನ್ನು ಕರಗಳಿಂದ ಒರೆಸುತ್ತಾ, ರಣರಂಗದಲ್ಲಿ ಮಲಗಿರುವ ರಾಜನ ದುರವಸ್ಥೆಯನ್ನು ಕಂಡು ಪರಿತಪಿಸಿದರು.
ಕೃಪಃ
ನ ದೈವಸ್ಯಾತಿಭಾರೋಽಸ್ತಿ ಯದಯಂ ರುಧಿರೋಕ್ಷಿತಃ |
ಏಕಾದಶಚಮೂಭರ್ತಾ ಶೇತೇ ದುರ್ಯೋಧನೋ ಹತಃ ॥10॥
ಕೃಪ- ದೈವಕ್ಕೆ ಯಾವುದೂ ಕಷ್ಟವಲ್ಲ, ಹನ್ನೊಂದು ಅಕ್ಷೋಹಿಣೀಸೇನೆಯ ಒಡೆಯನಾದ ಈತನು ರಕ್ತದಿಂದ ತೊಪ್ಪೆಯಾಗಿ (ಶತ್ರುಗಳಿಂದ) ಹತನಾಗಿ ಇಗೋ ಬಿದ್ದಿರುವನು.
ಪಶ್ಯ ಚಾಮೀಕರಾಭಸ್ಯ ಚಾಮೀಕರವಿಭೂಷಿತಾಮ್ |
ಗದಾಂ ಗದಾಪ್ರಿಯಸ್ಯೇಮಾಂ ಸಮೀಪೇ ಪತಿತಾಂ ಭುವಿ ॥11॥
ಹೊಂಬಣ್ಣವನ್ನು ಹೊಂದಿರುವ, ಹೊನ್ನಿನಿಂದ ಅಲಂಕೃತವಾಗಿರುವ ಗದೆಯನ್ನು ಪ್ರೀತಿಸುವ, ಆತನ (ದುರ್ಯೋಧನನ) ಸಮೀಪದಲ್ಲೇ ಭೂಮಿಯಲ್ಲಿ ಬಿದ್ದಿರುವ ಗದೆಯನ್ನು ನೋಡು.
ಇಯಮೇನಂ ಸದಾ ಶೂರಂ ನ ಜಹಾತಿ ರಣೇ ರಣೇ |
ಸ್ವರ್ಗಮಾಯಾಪಿ ವ್ರಜಂತಂ ಹಿ ನ ಜಹಾತಿ ಯಶಸ್ವಿನಮ್ ॥12॥
ಈ ಗದೆಯು ಪ್ರತಿ ರಣರಂಗದಲ್ಲೂ ಈ ಶೂರನನ್ನು ಬಿಟ್ಟಿರದು, ಸ್ವರ್ಗಕ್ಕೆ ಸಾಗುತ್ತಿದ್ದರೂ ಸಹ ಕೀರ್ತಿವಂತನಾದ ಆತನನ್ನು ಬಿಡುತ್ತಿಲ್ಲ.
ಪಶ್ಯೇಮಾಂ ಸಹ ವೀರೇಣ ಜಾಂಬೂನದವಿಭೂಷಿತಾಮ್ |
ಶಯಾನಾಂ ಶಯನೇ ಧರ್ಮ್ಯಾಂ ಭಾರ್ಯಾಂ ಪ್ರೀತಿಮತೀಮಿವ ॥13॥
ಹಾಸಿಗೆಯಲ್ಲಿ ಮಲಗಿರುವ ಅತಿಪ್ರೀತಿಪಾತ್ರಳಾದ ಧರ್ಮಪತ್ನಿಯಂತೆ ಈ ವೀರನ ಜೊತೆಯಲ್ಲಿರುವ, ಚಿನ್ನದಿಂದ ಅಲಂಕೃತವಾದ ಈ ಗದೆಯನ್ನು ನೋಡು.
ಯೋ ವೈ ಮೂರ್ಧಾಭಿಷಿಕ್ತಾನಾಮಗ್ರೇ ಯಾತಿ ಪರಂತಪಃ |
ಸ ಹತೋ ಗ್ರಸತೇ ಪಾಂಸುಂ ಪಶ್ಯ ಕಾಲಸ್ಯ ಪರ್ಯಯಮ್ ॥14॥
ಶತ್ರುಗಳಿಗೆ ದುಃಖಕಾರಕನಾದ ಯಾವನು ಪಟ್ಟಾಭಿಷಿಕ್ತರ ಮುಂದೆ ಸಾಗುತ್ತಿದ್ದನೋ, ಆತನು ಸಂಹೃತನಾಗಿ ಮಣ್ಣನ್ನು ಮುಕ್ಕುತ್ತಿರುವನು , ಕಾಲದ ವಿಪರ್ಯಯವನ್ನು ನೋಡು.
ಯೇನ ಸ್ಮ ನಿಹತಾ ಭೂಮೌ ಶೇರತೇ ಕ್ಷತ್ರಿಯರ್ಷಭಾಃ |
ಸ ಭೂಮೌ ನಿಹತಃ ಶೇತೇ ಕುರುರಾಜಃ ಪರೈರಯಮ್ ॥15॥
ಯಾವನಿಂದ ಮೃತರಾಗಿ ಕ್ಷತ್ರಿಯಶ್ರೇಷ್ಠರು ನೆಲಕ್ಕೆ ಉರುಳುತ್ತಿದ್ದರೋ, ಅಂತಹ ಈ ಕುರುರಾಜನು ಶತ್ರುಗಳಿಂದ ಹತನಾಗಿ ನೆಲಕ್ಕೆ ಉರುಳಿರುವನು.
ಭಯಾನ್ನಮಂತೋ ರಾಜಾನೋ ಯಸ್ಯಾಥ ಶತಸಂಘಶಃ |
ಸ ವೀರಶಯನೇ ಶೇತೇ ಕ್ರವ್ಯಾದ್ಯೈಃ ಪರಿವಾರಿತಃ ॥16॥
ನೂರಾರು ಸಂಖ್ಯೆಯಲ್ಲಿ ರಾಜರು ಯಾರಿಗೆ ಹೆದರಿ ನಮಿಸುತ್ತಿದ್ದರೋ ಆತನು ವೀರಶಯನದಲ್ಲಿ ಮಾಂಸಾಂಕಾಕ್ಷಿಗಳಿಂದ (ನರಿ ಮುಂತಾದ ಪ್ರಾಣಿಗಳಿಂದ) ಸುತ್ತುವರೆದವನಾಗಿ ಬಿದ್ದಿರುವನು.
ಯಮುಪಾಸನ್ನೃಪಾಃ ಪೂರ್ವಮರ್ಥಹೇತೋರ್ಮಹೀಪತಿಮ್ |
ಉಪಾಸತೇ ಚ ತಂ ಹ್ಯದ್ಯ ಕ್ರವ್ಯಾದಾ ಮಾಂಸಗೃದ್ಧಿನಃ ॥17॥

ಯಾವ ಮಹಾರಾಜನನ್ನು ಹಣಕ್ಕಾಗಿ ಹಿಂದೆ ರಾಜರು ಆಶ್ರಯಿಸುತ್ತಿದ್ದರೋ, ಅಂತಹ ಕುರುರಾಜನನ್ನು ಈಗ ಮಾಂಸಾಂಕಾಕ್ಷಿಗಳಾದ ಮಾಂಸಭಕ್ಷಿಗಳು (ಪ್ರಾಣಿಗಳು) ಸುತ್ತುವರೆದು ನಿಂತಿವೆ.
ಸಂಜಯಃ
ತಂ ಶಯಾನಂ ಕುರುಶ್ರೇಷ್ಠಂ ಭೂಮೌ ಭರತಸತ್ತಮಮ್ |
ಅಶ್ವತ್ಥಾಮಾ ಸಮಾಲಿಂಗ್ಯ ಕೃಪಣಂ ಪರ್ಯದೇವಯತ್ ||18||
ಸಂಜಯ ಭೂಮಿಯಲ್ಲಿ ಬಿದ್ದಿರುವ ಭರತಕುಲಶ್ರೇಷ್ಠನಾದ, ಕುರುಕುಲ ಶ್ರೇಷ್ಠನಾದ ಆತನನ್ನು ಅಶ್ವತ್ಥಾಮನು ಆಲಿಂಗಿಸಿಕೊಂಡು ಪರಿಪರಿಯಿಂದ ದುಃಖಿಸಿದನು.
ದ್ರೌಣಿಃ
ಆಹುಸ್ತ್ವಾಂ ನರಶಾರ್ದೂಲ ಮುಖ್ಯಂ ಸರ್ವಧನುಷ್ಮತಾಮ್ |
ಧನಾಧ್ಯಕ್ಷೋಪಮಂ ಯುದ್ಧೇ ಶಿಷ್ಯಂ ಸಂಕರ್ಷಣಸ್ಯ ಹ ||19||
ಕಥಂ ವಿವರಮದ್ರಾಕ್ಷೀದ್ ಭೀಮಸೇನಸ್ತವಾನಘ |
ಬಲಿನಃ ಕೃತಿನೋ ನಿತ್ಯಂ ಸೂದಃ ಪಾಪಾತ್ಮವಾನ್ ನೃಪ ||20||
ಅಶ್ವತ್ಥಾಮ ಪಾಪರಹಿತನೆ, ರಾಜನೆ, ಮಾನವಶ್ರೇಷ್ಠನೆ! ಎಲ್ಲ ಬಿಲ್ಗಾರರುಗಳಲ್ಲಿ ನಿನ್ನನ್ನು ಹಿರಿಯ ಎಂದು ಹೇಳುವರು, ಯುದ್ಧದಲ್ಲಿ ಕುಬೇರನಿಗೆ ಸಮನು, ಬಲರಾಮನ ಶಿಷ್ಯನು, ಬಲಿಷ್ಠನು, ನಿತ್ಯ ಯತ್ನಶೀಲನೂ ಆದ ನಿನ್ನಲ್ಲಿಯ ನ್ಯೂನತೆಯನ್ನು, ಪಾಪಿಯಾದ ಶೂದ್ರಸದೃಶನಾದ ಭೀಮನು ಹೇಗೆ ಕಂಡನು?
ಕಾಲೋ ನೂನಂ ಮಹಾರಾಜ ಲೋಕೇಽಸ್ಮಿನ್ ಬಲವತ್ತರಃ |
ತ್ವಾಂ ಚೇತ್ ಪಶ್ಯಾಮ ನಿಹತಂ ಭೀಮಸೇನೇನ ಸಂಯುಗೇ ||21||
ಮಹಾರಾಜ! ಭೀಮಸೇನನಿಂದ ಯುದ್ಧದಲ್ಲಿ ನೀನು ನಿಹತನಾದಿಯೆಂದಾದ ಮೇಲೆ, ನಿಶ್ಚಯವಾಗಿಯೂ ಈ ಲೋಕದಲ್ಲಿ ಕಾಲವೇ ಬಲವತ್ತರವಾದದ್ದು.
ಕಥಂ ತ್ವಾಂ ಸರ್ವಧರ್ಮಜ್ಞಂ ಕ್ಷುದ್ರಃ ಪಾಪೋ ವೃಕೋದರಃ |
ನಿಕೃತ್ಯಾ ಹತವಾನ್ ಮಂದೋ ನೂನಂ ಕಾಲೋ ದುರತ್ಯಯಃ ||22||
ಸರ್ವಧರ್ಮಜ್ಞನಾದ ನಿನ್ನನ್ನು ಕ್ಷುದ್ರನಾದ ದುರ್ಬಲನಾದ ಪಾಪಿ ವೃಕೋದರನು ಮೋಸದಿಂದ ಕೊಂದನು ಎಂದ ಮೇಲೆ ನಿಶ್ಚಯವಾಗಿಯೂ ಕಾಲವನ್ನು ಮೀರಲು ಆಗದು.
ಧರ್ಮಯುದ್ಧೇ ಹ್ಯಧರ್ಮೇಣ ಸಮಾಹೂಯೌಜಸಾ ಮೃಧೇ |
ಗದಯಾ ಭೀಮಸೇನೇನ ಸಕ್ಥಿನೀ ತೇ ವಿನಾಶಿತೇ ||23||
ಧರ್ಮಯುದ್ಧವೆಂದು ಆಹ್ವಾನಿಸಿ, ಭೀಮಸೇನನು ಅಧರ್ಮದಿಂದ ಮೋಸದಿಂದ ಗದೆಯಿಂದ ನಿನ್ನ ತೊಡೆಗಳನ್ನು ಮುರಿದನು.
ಅಧರ್ಮೇಣ ಹತಸ್ಯಾಜೌ ಮೃದ್ಯಮಾನಂ ಪದಾ ಶಿರಃ |
ಯದುಪೇಕ್ಷಿತವಾನ್ ಕ್ಷುದ್ರೋ ಧಿಕ್ ತಮಸ್ತು ಯುಧಿಷ್ಠಿರಮ್ ||24||
ಯುದ್ಧದಲ್ಲಿ ಅಧರ್ಮದಿಂದ (ನಿನ್ನ ತೊಡೆಯನ್ನು) ತುಂಡರಿಸಿ, ಕ್ಷುದ್ರನು (ಭೀಮಸೇನನು) ಆ ಯುಧಿಷ್ಠಿರನನ್ನು ಉಪೇಕ್ಷಿಸಿ, ಕಾಲಿನಿಂದ ನಿನ್ನ ತಲೆಯನ್ನು ತುಳಿದನು. ಆತನಿಗೆ ಧಿಕ್ಕಾರವಿರಲಿ.
ಯುದ್ಧೇಷ್ವಪವದಿಷ್ಯಂತಿ ಯೋಧಾ ನೂನಂ ವೃಕೋದರಮ್ |
ಯಾವತ್ ಸ್ಥಾಸ್ಯಂತಿ ಭೂತಾನಿ ನಿಕೃತ್ಯಾ ಹ್ಯಸಿ ಪಾತಿತಃ ||25||
ಎಲ್ಲಿಯವರೆಗೆ ಜೀವರು ಇರುವರೋ (ಅಲ್ಲಿಯವರೆಗೆ) `ಯುದ್ಧದಲ್ಲಿ ಮೋಸದಿಂದ ನಿನ್ನನ್ನು ಕೆಡವಲಾಯಿತು' ಎಂದು ಯುದ್ಧದಲ್ಲಿ ಯೋಧರು ವೃಕೋದರನನ್ನು ನಿಂದಿಸುವರು.
ನನು ರಾಮೋಽಬ್ರವೀದ್ ರಾಜನ್ ತ್ವಾಂ ಸದಾ ಯದುನಂದನಃ |
ದುರ್ಯೋಧನಸಮೋ ನಾಸ್ತಿ ಗದಾಯಾಮಿತಿ ವೀರ್ಯವಾನ್ ||26||
ರಾಜನೆ! ಯದುನಂದನನಾದ ಬಲರಾಮನು ಯಾವಾಗಲೂ ನಿನ್ನನ್ನು ಉದ್ದೇಶಿಸಿ ಹೇಳುತ್ತಿದ್ದನು- `ಗದಾಯುದ್ಧದಲ್ಲಿ ದುರ್ಯೋಧನನಿಗೆ ಸಮನಾದ ವೀರನು ಇಲ್ಲ' ಎಂದು.
ಶ್ಲಾಘತೇ ತ್ವಾಂ ಹಿ ವಾರ್ಷ್ಣೇಯೋ ರಾಜನ್ ಸಂಸತ್ಸು ಭಾರತ |
ಸ ಶಿಷ್ಯೋ ಮಮ ಕೌರವ್ಯೋ ಗದಾಯುದ್ಧ ಇತಿ ಪ್ರಭೋ ||27||
ಭರತಕುಲೋತ್ಪನ್ನನೆ, ಪ್ರಭುವೆ, ರಾಜನೆ! ನಿನ್ನನ್ನು, ` ಕುರುಕುಲೋತ್ಪನ್ನನು ಗದಾಯುದ್ಧದಲ್ಲಿ ನನ್ನ ಶಿಷ್ಯನು' ಎಂದು ವೃಷ್ಣಿಕುಲೋತ್ಪನ್ನನಾದ ಬಲಭದ್ರನು ಪ್ರಶಂಸಿಸುತ್ತಿದ್ದನು.
ಯಾಂ ಗತಿಂ ಕ್ಷತ್ರಿಯಸ್ಯಾಹುಃ ಪ್ರಶಸ್ತಾಂ ಪರಮರ್ಷಯಃ |
ಹತಸ್ಯಾಭಿಮುಖಸ್ಯಾಜೌ ಪ್ರಾಪ್ತಸ್ತ್ವಮಸಿ ತಾಂ ಗತಿಮ್ ||28||
ಮಹರ್ಷಿಗಳು ಯುದ್ಧದಲ್ಲಿ ಶತ್ರುವಿನ ಎದುರಿನಲ್ಲಿ ಮೃತನಾದ ಕ್ಷತ್ರಿಯನಿಗೆ ಯಾವ ಗತಿಯನ್ನು ಪ್ರಶಸ್ತ ಎಂದು ಹೇಳಿರುವರೋ, ಅಂತಹ ಗತಿಯನ್ನು ಹೊಂದುವಿ.
ದುರ್ಯೋಧನ ನ ಶೋಚಾಮಿ ತ್ವಾಮಹಂ ಭರತರ್ಷಭ |
ಹತಪುತ್ರೌ ತು ಶೋಚಾಮಿ ಗಾಂಧಾರೀಂ ಪಿತರಂ ಚ ತೇ ||29||
ಭರತಕುಲೋತ್ಪನ್ನನೆ, ದುರ್ಯೋಧನ! ನಿನ್ನ ಬಗ್ಗೆ ನಾನು ಯೋಚಿಸುವುದಿಲ್ಲ, ಮಕ್ಕಳನ್ನು ಕಳೆದುಕೊಂಡ ಗಾಂಧಾರಿ ಮತ್ತು ನಿನ್ನ ತಂದೆಯ ಬಗ್ಗೆ ಯೋಚಿಸುವೆನು.

ದ್ವಾವನಾಥೌ ಕೃತೌ ವೀರ ತ್ವಯಾ ನಾಥೇನ ವರ್ಧಿತೌ |
ಭಿಕ್ಷಾಂ ತೌ ವಿಚರಿಷ್ಯೇತೇ ಶೋಚಂತೌ ಪೃಥಿವೀಮಿಮಾಮ್ ॥30॥
ವೀರನೇ! ನಿನ್ನಂತಹ ನಾಥನನ್ನು ಬೆಳೆಸಿದ ಅವರೀರ್ವರು ಅನಾಥರಾದರು, ಈ ಭೂಮಿಯನ್ನು (ಸಮದ್ಧವಾದ ಮಹದೈಶ್ವರ್ಯವನ್ನು) ಯೋಚಿಸುತ್ತಾ ಭಿಕ್ಷೆಯನ್ನು ಯಾಚಿಸಬೇಕು.
ಧಿಗಸ್ತು ಕೃಷ್ಣಂ ವಾರ್ಷ್ಣೇಯಮರ್ಜುನಂ ಚಾಪಿ ದುರ್ಮತಿಮ್ |
ಧರ್ಮಜ್ಞಮಾನಿನೌ ಯೌ ತ್ವಾ ವಧ್ಯಮಾನಮುಪೇಕ್ಷತಾಮ್ ॥31॥
ನಿನ್ನನ್ನು ಸಂಹರಿಸುತ್ತಿರುವುದನ್ನು ಯಾರು ಉಪೇಕ್ಷಿಸಿದರೋ, ಧಾರ್ಮಿಕರು ಎಂದು ಭಾವಿಸಿರುವರೊ ಆ ವೃಷ್ಣಿಕುಲೋತ್ಪನ್ನನಾದ ಕೃಷ್ಣನನ್ನು ಮತ್ತು ದುರ್ಮತಿಯಾದ ಅರ್ಜುನನನ್ನು ಧಿಕ್ಕರಿಸುವೆನು.
ಪಾಂಡವಾಶ್ಚಾಪಿ ತೇ ಸರ್ವೇ ಕಿಂ ವಕ್ಷ್ಯಂತಿ ನರಾಧಿಪಾನ್ |
ಕಥಂ ದುರ್ಯೋಧನೋಽಸ್ಮಾಭಿರ್ಹತ ಇತ್ಯನಪತ್ರಪಾಃ ॥32॥
`ನಮ್ಮಿಂದ ದುರ್ಯೋಧನನು ಹೇಗೆ ಸಂಹೃತನಾದ?' ಎಂಬುವುದನ್ನು ನಾಚಿಕೆಯಿಲ್ಲದ ಪಾಂಡವರು ರಾಜರನ್ನು ಉದ್ದೇಶಿಸಿ ಹೇಗೆ ಹೇಳಿಕೊಳ್ಳುತ್ತಾರೆ?
ಧನ್ಯಸ್ತ್ವಮಸಿ ಗಾಂಧಾರೇ ಯಸ್ತ್ವಮಾಯೋಧನೇ ಹತಃ |
ಪ್ರಯಾತೋಽಭಿಮುಖಃ ಶತ್ರೂನ್ ಧರ್ಮೇಣ ಭರತರ್ಷಭ ॥33॥
ಗಾಂಧಾರೀಪುತ್ರನೆ! ಯುದ್ಧದಲ್ಲಿ ಮೃತನಾಗಿರುವಿ, ಆದ್ದರಿಂದ ನೀನು ಧನ್ಯನಾಗಿರುವಿ, ಭರತಶ್ರೇಷ್ಠನೆ! ಧರ್ಮದಿಂದ ಶತ್ರುಗಳ ಎದುರಿನಲ್ಲಿ (ಉತ್ತಮ ಲೋಕವನ್ನು ಉದ್ದೇಶಿಸಿ) ಹೊರಟಿರುವಿ.
ಹತಪುತ್ರಾ ಹಿ ಗಾಂಧಾರೀ ನಿಹತಜ್ಞಾತಿಬಾಂಧವಾ |
ಪ್ರಜ್ಞಾಚಕ್ಷುಶ್ಚ ದುರ್ಧರ್ಷಃ ಕಾಂ ದಶಾಂ ಪ್ರತಿಪತ್ಸ್ಯತೇ ॥34॥
ಮಕ್ಕಳನ್ನು ಕಳೆದುಕೊಂಡ ಜ್ಞಾತಿಬಾಂಧವರನ್ನು ಕಳೆದುಕೊಂಡ ಗಾಂಧಾರಿಯು, ಜ್ಞಾನನೇತ್ರನಾದ (ಅಂಧನಾದ) ಶತ್ರುಗಳಿಂದ ಧರ್ಷಣೆಗೆ ಒಳಗಾಗದ ಧೃತರಾಷ್ಟ್ರನು (ಅವರೀರ್ವರು) ಎಂತಹ ಅವಸ್ಥೆಯನ್ನು ಹೊಂದುವರೊ?
ಧಿಗಸ್ತು ಕೃತವರ್ಮಾಣಂ ಮಾಂ ಕೃಪಂ ಚ ಮಹಾರಥಮ್ |
ಯೇ ವಯಂ ನ ಗತಾಃ ಸ್ವರ್ಗಂ ತ್ವಾಂ ಪುರಸ್ಕೃತ್ಯ ಭಾರತ ॥35॥
ಭರತಕುಲೋತ್ಪನ್ನನೆ! ಯಾವ ನಾವು ನಿನ್ನನ್ನು ಮುಂದೆ ಮಾಡಿಕೊಂಡು ಸ್ವರ್ಗಕ್ಕೆ ಹೋಗಲಿಲ್ಲವೋ ಅಂಥ ಮಹಾರಥನಾದ ಕೃತವರ್ಮನನ್ನು, ಕೃಪನನ್ನು ಮತ್ತು ನನ್ನನ್ನು ಧಿಕ್ಕರಿಸಿಕೊಳ್ಳುವೆವು.
ದಾತಾರಂ ಸರ್ವಕಾಮಾನಾಂ ರಕ್ಷಿತಾರಂ ಪ್ರಜಾಹಿತಮ್ |
ಯದ್ವಯಂ ನಾಧಿಗಚ್ಛಾಮ ತ್ವಾಂ ಧಿಗಸ್ಮಾನ್ ನರಾಧಮಾನ್ ॥36॥
ಎಲ್ಲ ಕಾಮನೆಗಳನ್ನು ಪೂರ್ಣಗೊಳುಸುತ್ತಿದ್ದ, ಪ್ರಜೆಗಳ ಹಿತವನ್ನು ಕಾಪಾಡುತ್ತಿದ್ದ ನಿನ್ನನ್ನು ಅನುಸರಿಸದ ಕೀಳು ಮನುಜರಾದ ಈ ನಮಗೆ ಧಿಕ್ಕಾರವಿರಲಿ.
ಕೃಪಸ್ಯ ತವ ವೀರ್ಯೇಣ ಮಮ ಚೈವ ಪಿತುಶ್ಚ ಮೇ |
ಸಭೃತ್ಯಾನಾಂ ನರವ್ಯಾಘ್ರ ರತ್ನವಂತಿ ಗೃಹಾಣಿ ನಃ ॥37॥
ಮನುಜಶ್ರೇಷ್ಠನೆ! ನಿನ್ನ ಅನುಗ್ರಹದಿಂದ ಕೃಪನಿಗೆ, ನನ್ನ ತಂದೆಗೂ ಸಹ ಹಾಗು ನಮ್ಮ ಭೃತ್ಯವರ್ಗಕ್ಕೂ ರತ್ನಯುಕ್ತವಾದ ಮನೆಗಳು ಲಭ್ಯವಾಗಿದ್ದವು.
ತವ ಪ್ರಸಾದಾದಸ್ಮಾಭಿಃ ಸಹಪುತ್ರೈಃ ಸಬಾಂಧವೈಃ |
ಅವಾಪ್ತಾಃ ಕ್ರತವೋ ಮುಖ್ಯಾ ಬಹವೋ ಭೂರಿದಕ್ಷಿಣಾಃ ॥38॥
ನಿನ್ನ ಅನುಗ್ರಹದಿಂದ ಪುತ್ರಸಹಿತರಾದ, ಬಂಧುಸಹಿತರಾದ ನಾವು ಭಾರೀ ದಕ್ಷಿಣಾಸಹಿತವಾದ ಅತಿಮುಖ್ಯವಾದ ಅನೇಕ ಯಜ್ಞಗಳನ್ನು ನಡೆಸಿದೆವು.
ಕುತಶ್ಚಾಪೀದೃಶಂ ಸೌಖ್ಯಮುಪಲಪ್ಸ್ಯಾಮಹೇ ವಯಮ್ |
ಯಾದೃಶಂ ತು ಗತಾ ಸೌಖ್ಯಂ ತ್ವಾಂ ಪುರಸ್ಕೃತ್ಯ ಭೂಮಿಪ ॥39॥
ಭೂಮಿಪಾಲನೆ! ನಿನ್ನ ಮುಂದಾಳುತನದಲ್ಲಿ ನಾವು ಯಾವ ರೀತಿಯಾದ ಸೌಖ್ಯವನ್ನು ಹೊಂದಿದ್ದೆವೋ, ಇನ್ನು ಅಂತಹ ಸೌಖ್ಯವನ್ನು ಹೊಂದಲು ಹೇಗೆ ಶಕ್ಯ?
ವಯಮೇವ ತ್ರಯೋ ರಾಜನ್ ಗಚ್ಛಂತಂ ಪರಮಾಂ ಗತಿಮ್ |
ಯದ್ವೈ ತ್ವಾಂ ನಾನುಗಚ್ಛಾಮ ತೇನ ತಪ್ಸ್ಯಾಮಹೇ ವಯಮ್ ॥40॥
ರಾಜನೆ! ಶ್ರೇಷ್ಠಗತಿಯನ್ನು ಹೊಂದುತ್ತಿರುವ ನಿನ್ನನ್ನು, ನಾವು ಮೂವರು ಮಾತ್ರ ಅನುಸರಿಸಲಾರೆವು, ಆದ್ದರಿಂದ ನಾವು ಪರಿತಪಿಸುತ್ತಿರುವೆವು.
ಯಾದೃಶಾ ನೋ ಗತಾಃ ಸ್ವರ್ಗಂ ತ್ವಾಂ ಪುರಸ್ಕೃತ್ಯ ಭೂಮಿಪ |
ತತ್ಸ್ವರ್ಗಹೀನಾ ಹೀನಾರ್ಥಾಃ ಸ್ಮರಂತಃ ಸುಕೃತಾನಿ ಚ ॥41॥
ಭೂಮಿಯ ಒಡೆಯನೆ! ನಿನ್ನನ್ನು ಮುಂದೆ ಮಾಡಿಕೊಂಡು ಅಂತಹ ಸ್ವರ್ಗಕ್ಕೆ ನಾವು ಹೊಗಲಿಲ್ಲ, ಹೀಗೆ ಸ್ವರ್ಗದಿಂದ ವಂಚಿತರಾದ ನಾವು (ಇನ್ನು ಮುಂದೆ) ನಿನ್ನ ಸತ್ಕರ್ಮಗಳನ್ನು ನೆನೆಯುತ್ತಾ ಸಂಪತ್ತಿನಿಂದಲೂ ಹೀನರಾಗುವೆವು.
ಕಿಂ ನಾಮ ತದ್ಭವೇತ್ ಕರ್ಮ ಯೇನ ತ್ವಾಽನು ವ್ರಜಾಮಹೇ ॥42॥
ದುಃಖಂ ನೂನಂ ಕುರುಶ್ರೇಷ್ಠ ಚರಿಷ್ಯಾಮ ಮಹೀಮಿಮಾಮ್ |

ತ್ವದ್ವಿನಾನಾಂ ಹಿ ನೋ ರಾಜನ್ ಕುತಃ ಶಾಂತಿಃ ಕುತಃ ಸುಖಮ್ ॥
ರಾಜನೆ! ಕುರುಶ್ರೇಷ್ಠನೆ! ಯಾವ ಕರ್ಮವನ್ನು ಆಚರಿಸಿದಲ್ಲಿ ನಾವು ನಿನ್ನನ್ನು ಅನುಸರಿಸುವೆವು? ನಿನ್ನಿಂದ ವಿರಹಿತರಾದ ಈ ಭೂಮಿಯಲ್ಲಿ ಸಂಚರಿಸುವ (ನಮಗೆ) ನಿಶ್ಚಯವಾಗಿಯೂ ಬಹುದುಃಖ, (ಇನ್ನು) ಎಲ್ಲಿಯ ಶಾಂತಿ? ಎಲ್ಲಿಯ ಸುಖ?
ಗತ್ವೈನಾಂಸ್ತು ಮಹಾರಾಜ ಸಮೇತ್ಯ ತ್ವಂ ಮಹಾರಥಾನ್ |
ಯಥಾಶ್ರೇಷ್ಠಂ ಯಥಾಜ್ಯೇಷ್ಠಂ ಸಂಪೂಜ್ಯ ವಚನಾನ್ಮಮ ॥44॥
ಆಚಾರ್ಯಂ ಪೂಜಯಿತ್ವಾ ಚ ಕೇತುಂ ಸರ್ವಧನುರ್ಭೃತಾಮ್ |
ಹತಂ ಮಯಾ ತ್ವಂ ಶಂಸೇಥಾ ಧೃಷ್ಟದ್ಯುಮ್ನಂ ಮಹಾರಥಮ್ ॥45॥
ಮಹಾರಾಜನೆ! ಈ ಮಹಾರಾಜರನ್ನು (ಸ್ವರ್ಗದಲ್ಲಿ) ಹೊಂದಿ ನನ್ನ ಮಾತಿನಂತೆ ಹಿರಿತನಕ್ಕೆ ಅನುಸಾರವಾಗಿ (ಅವರುಗಳನ್ನು) ಸನ್ಮಾನಿಸಿ, ನೀನು ಎಲ್ಲ ಬಿಲ್ಗಾರರುಗಳಲ್ಲಿ ಹಿರಿಯನಾದ ಆಚಾರ್ಯನನ್ನು (ದ್ರೋಣರನ್ನು) ಪೂಜಿಸಿ, `ನಾನು ಮಹಾರಥಿಕನಾದ ಧೃಷ್ಟದ್ಯುಮ್ನನನ್ನು ಸಂಹರಿಸಿರುವೆನು' ಎಂದು ತಿಳಿಸುವವನಾಗು.
ಪರಿಷ್ವಜೇಥಾ ರಾಜಾನಂ ಬಾಹ್ಲಿಕಂ ಚ ಮಹಾರಥಮ್ |
ಸೈಂಧವಂ ಸೋಮದತ್ತಂ ಚ ಭೂರಿಶ್ರವಸಮೇವ ಚ ॥46॥
ತಥಾ ಪೂರ್ವಗತಾನ್ ಸರ್ವಾನ್ ಸ್ವರ್ಗೇ ಪಾರ್ಥಿವಸತ್ತಮಾನ್ |
ಅಸ್ಮಾದ್ವಾಕ್ಯಾತ್ ಪರಿಷ್ವಜ್ಯ ಪೃಚ್ಛೇಥಾಸ್ತಾನನಾಮಯಮ್ ॥47॥
ಮಹಾರಥಿಕನಾದ ರಾಜನಾದ ಬಾಹ್ಲೀಕನನ್ನು ಹಾಗೂ ಸೈಂಧವನನ್ನು ಸೋಮದತ್ತನನ್ನು ಮತ್ತು ಭೂರಿಶ್ರವನನ್ನು ಆಲಿಂಗಿಸಿ, ಹಾಗೆ ಈ ಮೊದಲೇ ಸ್ವರ್ಗಕ್ಕೆ ಹೋಗಿರುವ ಎಲ್ಲ ರಾಜಶ್ರೇಷ್ಠರನ್ನು ಆಲಿಂಗಿಸಿಕೊಂಡು ನನ್ನ ಮಾತಿನಿಂದ ಅವರ ಆರೋಗ್ಯವನ್ನು ಪ್ರಶ್ನಿಸುವುದು.
ಸಂಜಯಃ
ಇತ್ಯೇವಮುಕತ್ವ ರಾಜಾನಂ ಭಗ್ನಸಕ್ಥಮಚೇತಸಮ್ |
ಅಶ್ವತ್ಥಾಮಾ ಲಘುಪ್ರಾಣಮ್ ಇದಂ ವಚನಮಬ್ರವೀತ್ ॥48॥
ಸಂಜಯ ತೊಡೆಮುರಿದುಕೊಂಡಿರುವ, ನಿಶ್ಶೇಷನಾದ ರಾಜನನ್ನು ಉದ್ದೇಶಿಸಿ ಹೀಗೆ ಹೇಳಿ, ಕುಟುಕುಜೀವಿಯನ್ನು ಉದ್ದೇಶಿಸಿ ಈ ಮಾತುಗಳನ್ನು ಹೇಳಿದನು.
ದ್ರೌಣಿಃ
ದುರ್ಯೋಧನ ಜೀವಸಿ ಚೇದ್ ವಾಚಃ ಕರ್ಣಸುಖಾಃ ಶೃಣು |
ಸಪ್ತ ಪಾಂಡವತಃ ಶಿಷ್ಟಾ ಧಾರ್ತರಾಷ್ಟ್ರಾಸ್ತ್ರಯೋ ವಯಮ್ ॥49॥
ತೇ ಚೈವ ಭ್ರಾತರಃ ಪಂಚ ವಾಸುದೇವೋಽಥ ಸಾತ್ಯಕಿಃ |
ಅಹಂ ಚ ಕೃತವರ್ಮಾ ಚ ಕೃಪಃ ಶಾರದ್ವತಸ್ತಥಾ ॥50॥
ಅಶ್ವತ್ಥಾಮ ದುರ್ಯೋಧನ! ಬದುಕಿದ್ದಿಯಾದಲ್ಲಿ ಕಿವಿಗೆ ಸುಖಕರವಾದ ಮಾತುಗಳನ್ನು ಕೇಳು. ಪಾಂಡವರಲ್ಲಿ ಏಳು ಮಂದಿ ಆ ಐವರು ಸಹೋದರರು, ವಾಸುದೇವ ಮತ್ತು ಸಾತ್ಯಕಿ, ಕೌರವರಲ್ಲಿ ನಾವು ಮೂವರು, ನಾನು, ಕೃತವರ್ಮ ಶರದ್ವತರ ಪುತ್ರನಾದ ಕೃಪ ಮಾತ್ರ ಉಳಿದುಕೊಂಡಿರುವುದು.
ದ್ರೌಪದೇಯಾ ಹತಾಃ ಸರ್ವೇ ಧೃಷ್ಟದ್ಯುಮ್ನಶ್ಚ ಚಾತ್ಮಜಾಃ |
ಪಾಂಚಾಲ್ಯೈಃ ಸಹಿತಾ ರಾಜನ್ ಮತ್ಸ್ಯಶೇಷಾಶ್ಚ ಭಾರತ ॥51॥
ಭರತಕುಲೋತ್ಪನ್ನನೆ, ರಾಜನೆ! ಎಲ್ಲ ದ್ರೌಪದಿಯ ಪುತ್ರರು, ಧೃಷ್ಟದ್ಯುಮ್ನನು, ಆತನ ಪುತ್ರರು, ಪಾಂಚಾಲರಿಂದ ಸಹಿತರಾದ ಉಳಿದ ಮತ್ಸ್ಯದೇಶೀಯರೂ ಸಹ ಮೃತರಾದರು.
ಕೃತಪ್ರತಿಕೃತಂ ಪಶ್ಯ ಹತಪುತ್ರಾಶ್ಚ ಪಾಂಡವಾಃ |
ಸೌಪ್ತಿಕೇ ಶಿಬಿರಂ ರಾಜನ್ ಹತಂ ಸನರವಾಹನಮ್ ॥52॥
ನೋಡು, ಕ್ರಿಯೆಗೆ ಪ್ರತಿಕ್ರಿಯೆಯನ್ನು ಮಾಡಿರುವೆ, ಪಾಂಡವರು ಮಕ್ಕಳನ್ನು ಕಳೆದುಕೊಂಡರು, ರಾಜನೆ! ಅವರೆಲ್ಲರು ಮಲಗಿದ ಸಂದರ್ಭದಲ್ಲಿ ಮನುಷ್ಯರು ವಾಹನಗಳು ಇವುಗಳಿಂದ ಸಹಿತವಾದ ಶಿಬಿರವನ್ನು ನಾಶಮಾಡಲಾಯಿತು.
ಮಯಾ ಚ ಪಾಪಕರ್ಮಾಽಸೌ ಧೃಷ್ಟದ್ಯುಮ್ನೋ ಮಹೀಪತೇ |
ಪ್ರವಿಶ್ಯ ಶಿಬಿರಂ ರಾತ್ರೌ ಪಶುಮಾರೇಣ ಮಾರಿತಃ ॥53॥
ಭೂಮಿಯ ಒಡೆಯನೆ! ಪಾಪಕರ್ಮಿಯಾದ ಆ ಧೃಷ್ಟದ್ಯುಮ್ನನನ್ನು ರಾತ್ರಿಯಲ್ಲಿ ಶಿಬಿರವನ್ನು ಪ್ರವೇಶಿಸಿ, ಪಶುವನ್ನು ಸಂಹರಿಸುವಂತೆ ನಾನು ಸಂಹರಿಸಿರುವೆನು.
ಸಂಜಯಃ
ದುರ್ಯೋಧನಸ್ತು ತಾ ವಾಚೋ ನಿಶಮ್ಯ ಮನಸಃ ಪ್ರಿಯಾಃ |
ಪ್ರತಿಲಭ್ಯ ತತಶ್ಚೇತ ಇದಂ ವಚನಮಬ್ರವೀತ್ ॥54॥
ಸಂಜಯ ಮನಸಿಗೆ ಮುದನೀಡುವ ಆ ಮಾತುಗಳನ್ನು ದುರ್ಯೋಧನನು ಕೇಳಿ, ಸ್ವಲ್ಪ ಜೀವವನ್ನು ಹೊಂದಿದವನಾಗಿ ಈ ಮಾತನ್ನು ಹೇಳಿದನು.
ದುರ್ಯೋಧನಃ
ನ ಮೇಽಕರೋತ್ ತದ್ ಗಾಂಗೇಯೋ ನ ಮೇ ಕರ್ಣೋ ನ ತೇ ಪಿತಾ |
ಯತ್ ತ್ವಯಾ ಕೃಪಭೋಜಾಭ್ಯಾಂ ಸಹಿತೇನ ಕೃತಂ ಮಮ ॥55॥

ದುರ್ಯೋಧನ ಕೃಪ ಮತ್ತು ಭೋಜವಂಶಜನೊಂದಿಗೆ ಸೇರಿಕೊಂಡು ನನಗಾಗಿ ಯಾವ ಕರ್ಮವನ್ನು ಮಾಡಿದೆಯೋ, ಆ ಕರ್ಮವನ್ನು ಗಂಗಾಪುತ್ರನೂ ಮಾಡಲಿಲ್ಲ, ಕರ್ಣನೂ ಮಾಡಲಿಲ್ಲ, ನಿನ್ನ ತಂದೆಯೂ ಮಾಡಲಿಲ್ಲ.
ಸ ಚೇತ್ ಸೇನಾಪತಿಃ ಕ್ಷುದ್ರೋ ಹತಃ ಸಾರ್ಧಂ ಶಿಖಂಡಿನಾ |
ತೇನ ಮನ್ಯೇ ಮಘವತಾ ಸಮಮಾತ್ಮಾನಮದ್ಯ ವೈ ||56||
`ಶಿಖಂಡಿಯಿಂದ ಸಹಿತನಾದ ಕ್ಷುದ್ರನಾದ ಆ ಸೇನಾಪತಿಯು ಹತನಾದದ್ದೇ ಆದಲ್ಲಿ, ಅದರಿಂದ ನಾನು ಇಂದು ಇಂದ್ರನಿಗೆ ಸಮನು' ಎಂದು ಭಾವಿಸುವೆನು.
ಸ್ವಸ್ತಿ ಪ್ರಾಪ್ನುತ ಭದ್ರಂ ವಃ ಸ್ವರ್ಗೇ ನಃ ಸಂಗಮಃ ಪುನಃ ||57||
ನಿಮಗೆ ಮಂಗಲವಾಗಲಿ, ಪುನಃ ನಮ್ಮ ಸಮಾಗಮವು ಸ್ವರ್ಗದಲ್ಲಾಗಲಿ.
ಸಂಜಯಃ
ಇತ್ಯೇವಮುಕ್ತ್ವಾ ಪುತ್ರಸ್ತೇ ಕುರುರಾಜೋ ಮಹಾಮನಾಃ |
ಪ್ರಾಣಾನವಾಸೃಜದ್ ವೀರಃ ಸುಹೃದಾಂ ದುಃಖಮಾದಧತ್ ||58||
ಸಂಜಯ ನಿನ್ನ ಪುತ್ರನಾದ ವೀರನಾದ ಸ್ವಾಭಿಮಾನಿಯಾದ ಕುರುರಾಜನು ಹೀಗೆ ಹೇಳುತ್ತಾ, ಸ್ನೇಹಿತರಿಗೆ ದುಃಖವನ್ನು ಉಂಟುಮಾಡುತ್ತಾ ಪ್ರಾಣವನ್ನು ಬಿಟ್ಟನು.
ತತಸ್ತೇ ಸಂಪರಿಷ್ವಜ್ಯ ಪರಿಮೃಜ್ಯ ಚ ತಂ ಭೃಶಮ್ |
ಪುನಃ ಪುನಃ ಪ್ರೇಕ್ಷಮಾಣಾಃ ಸ್ವಕಾನಾರುರುಹೂ ರಥಾನ್ ||59||
ಅನಂತರದಲ್ಲಿ ಅವರು ಆತನನ್ನು ಗಾಢವಾಗಿ ಆಲಿಂಗನ ಮಾಡಿಕೊಂಡು, ದುಃಖಿಸುತ್ತಾ, ಮತ್ತೆ ಮತ್ತೆ (ಆತನನ್ನೇ) ನೋಡುತ್ತಾ ತಮ್ಮ ರಥಗಳನ್ನು ಏರಿದರು.
ಇತ್ಯೇವಂ ದ್ರೋಣಪುತ್ರಸ್ಯ ನಿಶಮ್ಯ ಕರುಣಾ ಗಿರಃ |
ಪ್ರತ್ಯೂಷಕಾಲೇ ಶೋಕಾರ್ತಾಃ ಪ್ರಾದ್ರವನ್ ನಗರಂ ಪ್ರತಿ ||60||
ಈ ರೀತಿಯಾಗಿ ದ್ರೋಣಪುತ್ರನ ಕರುಣಾಪೂರ್ಣವಾದ ಮಾತನ್ನು ಕೇಳುತ್ತಾ ದುಃಖದಿಂದ ಶೋಕಿಸುವವರಾಗಿ, ಬೆಳಗಿನಮುಂಚೆ (ಆ ಮೂವರು) ನಗರದ ಕಡೆಗೆ ಧಾವಿಸಿದರು.
ಏವಮೇಷ ಕ್ಷಯೋ ವೃತ್ತಃ ಕುರುಪಾಂಡವಸೇನಯೋಃ |
ಘೋರೋ ವಿಶಸನೋ ರೌದ್ರೋ ರಾಜನ್ ದುರ್ಮಂತ್ರಿತೇ ತವ ||61||
ರಾಜನೆ! ನಿನ್ನ ಕೆಟ್ಟ ವಿಚಾರದಿಂದ ಈ ರೀತಿಯಾಗಿ ಕುರುಪಾಂಡವರ ಸೇನೆಯ ಭಯಂಕರವಾದ ಘೋರವಾದ ನಾಶವು ಸಂಭವಿಸಿತು.
ತವ ಪುತ್ರೇ ಗತೇ ಸ್ವರ್ಗಂ ಭಾರತೇ ಭರತರ್ಷಭ |
ಋಷಿದತ್ತಂ ಪ್ರನಷ್ಟಂ ತದ್ ದಿವ್ಯದರ್ಶಿತ್ವಮದ್ಯ ವೈ ||62||
ಭರತವಂಶದ ಹಿರಿಯನೆ! ಭರತಕುಲೋತ್ಪನ್ನನಾದ ನಿನ್ನ ಪುತ್ರನು ಸ್ವರ್ಗಕ್ಕೆ ಸಾಗಲು, ಋಷಿಗಳು ನನಗೆ ಅನುಗ್ರಹಿಸಿದ ಆ ದಿವ್ಯ ದೃಷ್ಟಿಯು ನಷ್ಟವಾಯಿತು.
ವೈಶಂಪಾಯನಃ
ಇತಿ ಶ್ರುತ್ವಾ ಸ ನೃಪತಿಃ ಜ್ಞಾತಿಪುತ್ರವಧಂ ತದಾ |
ನಿಃಶ್ವಸ್ಯ ದೀರ್ಘಮುಷ್ಣಂ ಚ ತತಶ್ಚಿಂತಾಪರೋಽಭವತ್ ||63||
ವೈಶಂಪಾಯನ ಆ ರಾಜನು ಈರೀತಿಯಾದ ಜ್ಞಾತಿಗಳ ಮಕ್ಕಳ ನಾಶವನ್ನು ಕೇಳಿ, ಆಗ ದೀರ್ಘವಾಗಿ ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ, ಅನಂತರದಲ್ಲಿ ಚಿಂತಾಕ್ರಾಂತನಾದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸೌಪ್ತಿಕಪರ್ವಣಿ ದುರ್ಯೋಧನಮರಣೋ ನಾಮ ನವಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸೌಪ್ತಿಕಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
|| ಸಮಾಪ್ತಂ ಸೌಪ್ತಿಕಪರ್ವ ||
* * * * *
ಐಷೀಕಪರ್ವ
ಒಂದನೆಯ ಅಧ್ಯಾಯ
ಅದೃಷ್ಟವಶಾತ್ ಬದುಕುಳಿದ ಧೃಷ್ಟದ್ಯುಮ್ನನ ಸಾರಥಿಯು
ಆ ರಾತ್ರಿಯಲ್ಲಿ ಸೇನಾಶಿಬಿರದ ಸುದ್ದಿಯನ್ನು ಧರ್ಮರಾಜನಿಗೆ ಅರುಹಿದನು. ಕೇಳಿದ ಧರ್ಮರಾಜನು ಶಿಬಿರಕ್ಕೆ ಆಗಮಿಸಿದನು.
ಮೃತರಾದವರನ್ನು
ಕಂಡು ದುಃಖಿಸಿದನು. ದ್ರೌಪದಿಯನ್ನು ಅಲ್ಲಿಗೆ ಕರೆದುತರಲು
ನಕುಲನಿಗೆ ಆದೇಶಿಸಿದನು.
ವೈಶಂಪಾಯನಃ
ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಧೃಷ್ಟದ್ಯುಮ್ನಸ್ಯ ಸಾರಥಿಃ |
ಶಶಂಸ ಧರ್ಮರಾಜಾಯ ಸೌಪ್ತಿಕೇ ಕದನಂ ಕೃತಮ್ ||1||
ವೈಶಂಪಾಯನರು ಆ ರಾತ್ರಿಯು ಕಳೆಯಲು ಧೃಷ್ಟದ್ಯುಮ್ನನ ಸಾರಥಿಯು ಮಲಗಿದಾಗ ಶಿಬಿರದಲ್ಲಿ ನಡೆದ ಕದನದ ವಾರ್ತೆಯನ್ನು ಧರ್ಮರಾಜನಿಗೆ ತಿಳಿಸಿದನು.

ಸೂತಃ
ದ್ರೌಪದೇಯಾ ಹತಾ ರಾಜನ್ ದ್ರುಪದಸ್ಯಾತ್ಮಜೈಃ ಸಹ |
ಪ್ರಮತ್ತಾ ನಿಶಿ ವಿಶ್ವಸ್ತಾಃ ಸ್ವಪಂತಃ ಶಿಬಿರೇ ಸ್ವಕೇ ||2||
ಸೂತನು ನಿಶ್ಚಿಂತರಾಗಿ ಮೈಮರೆತು ತಮ್ಮ ತಮ್ಮ ಶಿಬಿರದಲ್ಲಿ ಮಲಗಿದ್ದ ದ್ರೌಪದಿಯ ಪುತ್ರರು, ದ್ರುಪದರಾಜ, ಆತನ ಪುತ್ರರೂ ಸಂಹೃತರಾದರು.
ಗೌತಮೇನ ನೃಶಂಸೇನ ಭೋಜೇನ ಕೃತವರ್ಮಣಾ |
ಅಶ್ವತ್ಥಾಮ್ನಾ ಚ ಪಾಪೇನ ಹತಂ ವಃ ಶಿಬಿರಂ ನಿಶಿ ||3||
ಕ್ರೂರನಾದ ಗೌತಮಗೋತ್ರೋತ್ಪನ್ನನಿಂದ (ಕೃಪಾಚಾರ್ಯನಿಂದ), ಭೋಜವಂಶೀಯನಾದ ಕೃತವರ್ಮನಿಂದ ಮತ್ತು ಪಾಪಿಯಾದ ಅಶ್ವತ್ಥಾಮನಿಂದ ರಾತ್ರಿಯಲ್ಲಿ ನಿನ್ನ ಶಿಬಿರವು ನಾಶವಾಯಿತು.
ಏತೈರ್ನರಗಜಾಶ್ವಾನಾಂ ಪ್ರಾಸಶಕ್ತಿಪರಶ್ವಧೈಃ |
ಸಹಸ್ರಾಣಿ ನಿಕೃಂತದ್ಭಿರ್ನಿಃಶೇಷಂ ಶಿಬಿರಂ ಕೃತಮ್||4||
ಈ ಮೂವರು (ಅಶ್ವತ್ಥಾಮಾದಿಗಳು) ಸಾವಿರಾರು ಆನೆ-ಕುದುರೆಗಳನ್ನು ಪ್ರಾಸ-ಶಕ್ತಿ-ಕುಡಗೋಲುಗಳಿಂದ ಕತ್ತರಿಸುತ್ತಾ, ಶಿಬಿರವನ್ನು ನಿಶ್ಶೇಷಗೊಳಿಸಿದರು.
ಛಿದ್ಯಮಾನಸ್ಯ ಮಹತೋ ವನಸ್ಯೇವ ಪರಶ್ವಧೈಃ |
ಶುಶ್ರುವೇ ಸುಮಹಾನ್ ಶಬ್ಡೋ ಬಲಸ್ಯ ತವ ಭಾರತ ||5||
ಭರತವಂಶದಲ್ಲಿ ಹುಟ್ಟಿದವನೆ! ಕೊಡಲಿಯಿಂದ ವನವನ್ನು ಕತ್ತರಿಸಿದಂತೆ ಶಿಬಿರವು ನಾಶವಾಗುತ್ತಿರಲು, ನಿನ್ನ ಸೇನೆಯಿಂದ ಭಾರೀಶಬ್ಧವನ್ನು ಕೇಳಿದೆ.
ಅಹಮೇವಾವಶಿಷ್ಟಸ್ತು ತಸ್ಮಾತ್ ಸೈನ್ಯಾನ್ಮಹೀಪತೇ |
ಮುಕ್ತಃ ಕಥಂಚಿದ್ ಧರ್ಮಾತ್ಮನ್ ವ್ಯಗ್ರೇಣ ಕೃತವರ್ಮಣಾ ||6||
ಧರ್ಮಾತ್ಮನಾದ ಹೇ ಮಹಾರಾಜನೆ! ಆದರೆ, ಆ ಸೇನೆಯಿಂದ ನಾನು ಮಾತ್ರ ಬೇರೆಡೆಯಲ್ಲಿ ಲಕ್ಷ್ಯವಿರುವ ಕೃತವರ್ಮನಿಂದ ಹೇಗೋ ಮುಕ್ತನಾದೆ.
ವೈಶಂಪಾಯನಃ
ತಚ್ಛ್ರುತ್ವಾ ವಾಕ್ಯಮಶಿವಂ ಕುಂತೀಪುತ್ರೋ ಯುಧಿಷ್ಠಿರಃ |
ಪಪಾತ ಮಹ್ಯಾನ್ ದುರ್ಧರ್ಷಃ ಪುತ್ರಶೋಕಸಮನ್ವಿತಃ ||7||
ವೈಶಂಪಾಯನರು ಅನ್ಯರಿಂದ ಧರ್ಷಣಕ್ಕೆ ಒಳಗಾಗದ ಕುಂತೀಪುತ್ರನಾದ ಯುಧಿಷ್ಠಿರನು ಅಮಂಗಳಕರವಾದ ಆ ಮಾತನ್ನು ಕೇಳಿ, ಪುತ್ರಶೋಕದಿಂದ ಪರಿತಪ್ತನಾಗಿ ಮೂರ್ಛಿತನಾಗಿ ಬಿದ್ದನು.
ಪತಂತಂ ತಮತಿಕ್ರಮ್ಯ ಪರಿಜಗ್ರಾಹ ಸಾತ್ಯಕಿಃ |
ಭೀಮಸೇನೋಽರ್ಜುನಶ್ಚೈವ ಮಾದ್ರೀಪುತ್ರೌ ಚ ಪಾಂಡವೌ ||8||
ಬೀಳುತ್ತಿರುವ ಆತನನ್ನು ಪಾಂಡುಪುತ್ರರಾದ ನಕುಲ-ಸಹದೇವರು, ಭೀಮಸೇನ, ಅರ್ಜುನ ಮತ್ತು ಸಾತ್ಯಕಿಯರು ಮುನ್ನುಗ್ಗಿ ಹಿಡಿದುಕೊಂಡರು.
ಲಬ್ಧಚೇತಾಸ್ತು ಕೌಂತೇಯಃ ಶೋಕವಿಹ್ವಲಯಾ ಗಿರಾ |
ಜಿತ್ವಾ ಶತ್ರೂನ್ ಜಿತಃ ಪಶ್ಚಾತ್ ಪರ್ಯದೇವಯದಾರ್ತವಮ್ ||9||
ಎಚ್ಚರಗೊಂಡ ಕುಂತೀಪುತ್ರನು (ಧರ್ಮರಾಜನು) ಶತ್ರುಗಳನ್ನು ಜಯಿಸಿ, ನಂತರ ಸೋತೆನು ಎಂದು ಆರ್ತನಾಗಿ ದುಃಖದಿಂದ ನಡುಗು ಧ್ವನಿಯಿಂದ ರೋದಿಸಿದನು.
ಯುಧಿಷ್ಠಿರಃ
ಅಗಮ್ಯಾ ಗತಿರರ್ಥಾನಾಂ ಕರ್ಮಣಾಮೀಶ್ವರಸ್ಯ ಚ |
ದುರ್ವಿಜ್ಞೇಯಾ ಗತಿರ್ಹ್ಯೇಷಾಮಪಿ ಯೇ ದಿವ್ಯಚಕ್ಷುಷಃ ||10||
ಯುಧಿಷ್ಠಿರ ಯಾರು ದಿವ್ಯಜ್ಞಾನಿಗಳೋ ಅವರಿಗೂ ಸಹ ಅರ್ಥದ (ಪ್ರಯೋಜನದ) ಹಾದಿಯು ತಿಳಿಯಲು ಅಸದಳ. ಈಶ್ವರನ ಈ ಕರ್ಮಗಳ ರಹಸ್ಯವನ್ನು ತಿಳಿಯುವುದು ಅಸದಳ.
ಜೀಯಮಾನಾ ಜಯಂತ್ಯನ್ಯೇ ಜಯಮಾನಾ ವಯಂ ಜಿತಾಃ ||11||
ಬೇರೆಯವರು (ಶತ್ರುಗಳು) ಸೋತಿದ್ದರೂ ಗೆದ್ದರು, ನಾವು ಗೆದ್ದಿದ್ದರೂ ಸೋತೆವು.
ಹತ್ವಾ ಭ್ರಾತೄನ್ ವಯಸ್ಯಾಂಶ್ಚ ಪಿತೄನ್ ಭೃತ್ಯಾನ್ ಸುಹೃದ್ಗಣಾನ್ |
ಬಂಧೂನಮಾತ್ಯಾನ್ ಪೌತ್ರಾಂಶ್ಚ ಜಿತ್ವಾ ಸರ್ವಾನ್ ಜಿತಾ ವಯಮ್ ||
ಅಣ್ಣಂದಿರನ್ನು, ಸ್ನೇಹಿತರನ್ನು, ಪಿತೃಸಮಾನರನ್ನು, ಭೃತ್ಯರನ್ನು, ಮಿತ್ರಸಮೂಹವನ್ನು, ಬಂಧುಗಳನ್ನು, ಮಂತ್ರಿಗಳನ್ನು, ಮೊಮ್ಮಕ್ಕಳನ್ನು ಮತ್ತು ಎಲ್ಲರನ್ನು ಸಂಹರಿಸಿ ಗೆದ್ದ ನಾವು (ಈಗ) ಸೋತೆವು.
ಅನರ್ಥಾ ಹ್ಯರ್ಥಸಂಕಾಶಾಃ ತಥಾಽನರ್ಥೋಽರ್ಥದರ್ಶನಃ |
ಜಯೋಽಯಮಜಯಾಕಾರೋ ಜಯಸ್ತಸ್ಮಾತ್ ಪರಾಜಯಃ ||13||
ಹಲವು ಸಂದರ್ಭಗಳಲ್ಲಿ ಸಂಪತ್ತು ಅನರ್ಥರೂಪದ್ದಾಗಿರುವುದು, ಹಾಗೆಯೇ ಅನರ್ಥವು ಸಂಪತ್ತಿನಂತಾಗಿರುವುದು, ಜಯವು ಪರಾಜಯದಂತಿರುವುದು, ಆದ್ದರಿಂದ ಈ ನಮ್ಮ ಜಯವು ಪರಾಜಯವೇ ಆಗಿದೆ.
ಯೋ ಜಿತ್ವಾ ತಪ್ಯತೇ ಪಶ್ಚಾದ್ ಆಪನ್ನ ಇವ ದುರ್ಮತಿಃ |

ಕಥಂ ಮನ್ಯೇತ ವಿಜಯಂ ಯಃ ಸ್ಯಾಜ್ಜಿತತರಃ ಪರೈಃ ॥14॥
ದುರ್ಮತಿಯಾದವನು ಜಯದ ನಂತರವೂ ಅನರ್ಥದಲ್ಲಿ ಸಿಲುಕಿದಂತೆ ದುಃಖಿಸುವದಾದಲ್ಲಿ, ಅಂತಹದನ್ನು ವಿಜಯ ಎಂದು ಹೇಗೆ ಭಾವಿಸಲಾಗುವುದು? ಆದ್ದರಿಂದ ಶತ್ರುಗಳಿಂದ ಭಾರೀ ಸೋಲನ್ನು ಕಂಡೆನು.
ಯೇಷಾಮರ್ಥೇ ಜಯೋಽಯಂ ಸ್ಯಾದ್ ವಿಜಯಃ ಸ್ಯಾತ್ ಸುಹೃದ್ವಧೇ |
ತೈರ್ಜಿತ್ಯೈರಪ್ರಮತ್ತೈರ್ಹಿ ನಿರ್ಜಿತಾ ಜಿತಕಾಶಿನಃ ॥15॥
ಯಾರಿಗಾಗಿ ಈ ವಿಜಯವನ್ನು ಹೊಂದಿದ್ದೆವೋ, ಆಪ್ತಸ್ನೇಹಿತರ ಸಂಹಾರದಿಂದ ಜಯವು ಪ್ರಾಪ್ತವಾಗಿತ್ತೋ, ಅಂತಹ ಜಯಶಾಲಿಗಳು, ಎಚ್ಚರದಿಂದಿದ್ದ (ಹೊಂಚುಹಾಕುತ್ತಿದ್ದ) ಅವರಿಂದ (ಶತ್ರುಗಳಿಂದ) ಸೋತರು.
ಕರ್ಣಿನಾಲೀಕದಂಷ್ಟ್ರಸ್ಯ ಖಡ್ಗಜಿಹ್ವಸ್ಯ ಸಂಯುಗೇ |
ಚಾಪವ್ಯಾಪ್ತಸ್ಯ ರೌದ್ರಸ್ಯ ಜ್ಯಾತಳತ್ರವಿನಾದಿನಃ ॥16॥
ಕ್ರುದ್ಧಸ್ಯ ನರಸಿಂಹಸ್ಯ ಸಂಗ್ರಾಮೇಷ್ವಪಲಾಯಿನಃ |
ಯೇ ವ್ಯಮುಚ್ಯಂತ ಕರ್ಣಸ್ಯ ಪ್ರಮಾದಾತ್ ತ ಇಮೇ ಹತಾಃ ॥17॥
ಕರ್ಣಿ-ನಾಲೀಕಗಳೆಂಬ ಕೋರೇಹಲ್ಲನ್ನು, ಖಡ್ಗವೆಂಬ ನಾಲಿಗೆಯನ್ನು, ಬಾಗಿದ ಬಿಲ್ಲೆಂಬ ಭೀಕರವಾದ ಬಾಯಿಯನ್ನು, ಬಿಲ್ಲಿನ ಹಗ್ಗದ ಝೇಂಕಾರವೆಂಬ ಶಬ್ಧವನ್ನು ಹೊಂದಿದ ಕರ್ಣನೆಂಬ ಕುಪಿತನಾದ ಸಿಂಹದಿಂದ ಯುದ್ದದಲ್ಲಿ ಯಾರು ಮುಕ್ತರಾದರೋ (ಆ)ಯುದ್ಧದಲ್ಲಿ ಹಿಂದಿರುಗದ ಅವರು ಮೈಮರೆವಿನಿಂದ (ಈಗ) ಮೃತರಾದರು.
ರಥಹ್ರದಂ ಶರವರ್ಷೋರ್ಮಿಮಂತಂ
ರತ್ನಾಚಿತಂ ವಾಜಿಸಮಾಜಯುಕ್ತಮ್ |
ಶಕ್ತ್ಯೃಷ್ಟಿಶೂಲಧ್ವಜನಾಗನಕ್ರ-
ಶರಾಸನಾವರ್ತಮಹೌಘಫೇನಮ್ ॥18॥
ಸಂಗ್ರಾಮಚಂದ್ರೋದಯವೇಗವೇಲಂ
ದ್ರೋಣಾರ್ಣವಂ ಜ್ಯಾತಳನೇಮಿಘೋಷಮ್ |
ಯೇ ತೇರುರುಚ್ಚಾವಚಶಸ್ತ್ರನೌಭಿಃ
ತೇ ರಾಜಪುತ್ರಾ ನಿಹತಾಃ ಪ್ರಮಾದಾತ್ ॥19॥
ರಥವೆಂಬ ಮಹಾಮಡುವಿನಿಂದ ಕೂಡಿರುವ, ಬಾಣಧಾರೆಗಳೆಂಬ ತೆರೆಗಳನ್ನು ಹೊಂದಿದ, (ವೇಷಭೂಷಣ-ಆಭರಣಗಳೆಂಬ) ರತ್ನಯುಕ್ತವಾದ ಸಮುದ್ರ ಕುದುರೆಗಳ ಗುಂಪನ್ನು ಹೊಂದಿದ, ಶಕ್ತಿ, ಋಷ್ಟಿ, ಶೂಲ, ಧ್ವಜ, ಆನೆ ಮೊಸಳೆಯಿಂದ ಕೂಡಿದ, ಧನುಸೆಂಬ ದೊಡ್ಡಸುಳಿಯಿಂದ ಕೂಡಿರುವ, ಬಾಣಗಳೆಂಬ ನೊರೆಯಿಂದ ಕೂಡಿದ, ಯುದ್ಧವೆಂಬ ಚಂದ್ರೋದಯದಿಂದ ತನ್ನ ವೇಗವನ್ನು ಹೆಚ್ಚಿಸಿಕೊಳ್ಳುವ, ಬಿಲ್ಲಿನ ಹಗ್ಗದ ಝೇಂಕಾರ ಮತ್ತು ರಥದ ತಿದಿಯ ಶಬ್ಧಗಳಿಂದ ಕೂಡಿದ ದ್ರೋಣನೆಂಬ ಶರಧಿಯನ್ನು ಹಿರಿದಾದ ಕಿರಿದಾದ ಶಸ್ತ್ರಗಳೆಂಬ ನಾವೆಯಿಂದ ಯಾರು ದಾಟಿದರೋ, ಆ ರಾಜಪುತ್ರರು ಅಜಾಗರೂಕತೆಯಿಂದ (ಈಗ) ಮೃತರಾದರು.
ನ ಹಿ ಪ್ರಮಾದಾತ್ ಪರಮಸ್ತಿ ಕಶ್ಚಿದ್
ವಧೋ ನರಾಣಾಮಿಹ ಜೀವಲೋಕೇ |
ಪ್ರಮತ್ತಮರ್ಥಾ ಹಿ ನರಂ ಸಮಂತಾತ್
ತ್ಯಜಂತ್ಯನರ್ಥಾಶ್ಚ ಸಮಾವಿಶಂತಿ ॥20॥
ಈ ಮನುಜಲೋಕದಲ್ಲಿ ಅಜಾಗರೂಕತೆಗಿಂತಲೂ ದೊಡ್ಡದಾದ ಮೃತ್ಯುವು ಮತ್ತೊಂದಿಲ್ಲ, ಪ್ರಮತ್ತನಾದ ಮನುಜನ ಸಮಸ್ತ ಅರ್ಥವು ನಾಶವಾಗುವುದು, ಅನರ್ಥಗಳು (ಪ್ರಮತ್ತನನ್ನು) ಮುತ್ತುವವು.
ಧ್ವಜೋತ್ತಮಾಗ್ರೋಚ್ಛ್ರಿತಧೂಮಕೇತುಂ
ಶರಾರ್ಚಿಷಂ ಕೋಪಮಹಾಸಮೀರಮ್ |
ಮಹಾಧನುರ್ಜ್ಯಾತಳನೇಮಿಘೋಷಂ
ತನುತ್ರನಾನಾವಿಧಶಸ್ತ್ರಹೋಮಮ್ ॥21॥
ಮಹಾಚಮೂಕಕ್ಷದವಾಗ್ನಿಭೂತಂ
ಮಹಾಹವೇ ಭೀಷ್ಮಮಹಾದವಾಗ್ನಿಮ್ |
ಯೋಽತೀತ್ಯ ಭೀಮಾಯುಧತೀಕ್ಷ್ಣವೇಗಂ
ತೇ ರಾಜಪುತ್ರಾ ನಿಹತಾಃ ಪ್ರಮಾದಾತ್ ॥22॥
ಎತ್ತರದಲ್ಲಿರುವ ಶ್ರೇಷ್ಠವಾದ ಧ್ವಜ ಎಂಬ ಹೊಗೆಯಿಂದ ಕೂಡಿದ, ಬಾಣವೆಂಬ ಜ್ವಾಲೆಯನ್ನು ಹೊಂದಿದ, ಕೋಪವೆಂಬ ಗಾಳಿಯಿಂದ ಕೂಡಿದ, ಭಾರೀಧನುವಿನ ಜ್ಯಾದ ಝೇಂಕಾರ, ಚಪ್ಪಾಳೆಯ ಸದ್ದು, ರಥದ ನೇಮಿಯ (ಚಟಚಟ) ಶಬ್ಧದಿಂದ ಯುಕ್ತವಾದ, ಕವಚ, ನಾನಾವಿಧ ಶಸ್ತ್ರಗಳೆಂಬ ಆಹುತಿಯಿಂದ ಕೂಡಿರುವ, ದೊಡ್ಡಸೇನೆಯಂಬ ಪೊದೆಗೆ ಬೆಂಕಿಯಂತಿರುವ, ಭೀಷ್ಮನೆಂಬ ಕಾಡುಕಿಚ್ಚಿನ ಭೀಕರವಾದ ಆಯುಧಗಳ ಭಾರೀವೇಗವನ್ನು ಯಾರು ದಾಟಿದರೋ ಆ ರಾಜಪುತ್ರರು ಅಜಾಗರೂಕತೆಯಿಂದ ಮೃತರಾದರು.
ನ ಹಿ ಪ್ರಮತ್ತೇನ ನರೇಣ ಶಕ್ಯಮ್
ಆಪ್ತುಂ ವಸುಂ ಶ್ರೀರ್ವಿಪುಲಂ ಯಶೋ ವಾ ॥23॥
ಅಜಾಗರೂಕನಾದ ಮನುಜನಿಂದ ಧನವನ್ನು, ಮಹದೈಶ್ವರ್ಯವನ್ನು ಅಥವಾ ಯಶಸ್ಸನ್ನು ಹೊಂದಲು ಶಕ್ಯವಿಲ್ಲ.
ಪಶ್ಯಾಪ್ರಮಾದೇನ ವಿನಿಹತ್ಯ ಶತ್ರೂನ್

ಸರ್ವಾನ್ ಮಹೇಂದ್ರಂ ಸುಸಮೇಧಮಾನಮ್ |
ಇಂದ್ರೋಪಮಾನ್ ಪಾರ್ಥಿವಪುತ್ರಪೌತ್ರಾನ್
ಪಶ್ಯಾವಿಶೇಷೇಣ ಹತಾನ್ ಪ್ರಮಾದಾತ್ ॥24॥
ಜಾಗರೂಕತೆಯಿಂದ ಎಲ್ಲ ಶತ್ರುಗಳನ್ನು ಸಂಹರಿಸಿ, ಏಳಿಗೆಯನ್ನು ಹೊಂದಿದ ಇಂದ್ರನನ್ನು ನೋಡು. (ಪ್ರಕೃತ) ಇಂದ್ರಸಮಾನರಾದ ರಾಜಕುಮಾರರು, ಮೊಮ್ಮಕ್ಕಳು ಅಜಾಗರೂಕತೆಯಿಂದ ಮೃತರಾದದ್ದನ್ನು ನೋಡು.
ತೀರ್ತ್ವಾ ಸಮುದ್ರಂ ವಣಿಜಃ ಸಮೃದ್ಧಾ
ಮಗ್ನಾಃ ಕುನದ್ಯಾಮಿವ ಸೀದಮಾನಾಃ ॥25॥
ಪ್ರವರ್ಧಮಾನರಾದ ವ್ಯಾಪಾರಿಗಳು ಸಮುದ್ರವನ್ನು ದಾಟಿ, (ಅಜಾಗರೂಕತೆಯಿಂದ) ಸಣ್ಣನದಿಯಲ್ಲಿ ಮುಳುಗಿ ದುಃಖಿಸುವಂತೆ ನಾವಾದೆವು.
ಅಮರ್ಷಿತೈರ್ಯೇ ನಿಹತಾ ನರೇಂದ್ರಾ
ನಿಃಸಂಶಯಂ ತೇ ತ್ರಿದಿವಂ ಪ್ರಪನ್ನಾಃ |
ಕೃಷ್ಣಾಂ ತು ಶೋಚಾಮಿ ಕಥಂ ನು ಸಾಧ್ವೀ
ಶೋಕಾರ್ಣವಂ ಸಾದ್ಯ ವಿಶಕ್ಷ್ಯತೀತಿ ॥26॥
ಕೋಪಾವಿಷ್ಟರಾದ ಶತ್ರುಗಳಿಂದ ಮೃತರಾದ ಆ ರಾಜಕುಮಾರರು ನಿಶ್ಚಿತವಾಗಿಯೂ ಸ್ವರ್ಗವನ್ನು ಹೊಂದುವರು, ಆದರೆ ದ್ರೌಪದಿಯ ವಿಷಯದಲ್ಲಿ ದುಃಖಿಸುವೆನು, ಈಗ ಆ ಸಾಧ್ವಿಯು ದುಃಖಸಾಗರದಲ್ಲಿ ಮುಳುಗುವಳು (ಈ ಪುತ್ರಶೋಕವನ್ನು ಹೇಗೆ ಸಹಿಸುವಳು?) ಎಂದು ಯೋಚಿಸುತ್ತಿರುವೆನು.
ಭ್ರಾತೄಂಶ್ಚ ಪುತ್ರಾಂಶ್ಚ ಹತಾನ್ ನಿಶಮ್ಯ
ಪಾಂಚಾಲರಾಜಂ ಪಿತರಂ ಚ ವೃದ್ಧಮ್ |
ಧ್ರುವಂ ವಿಸಂಜ್ಞಾ ಪತಿತಾ ಪೃಥಿವ್ಯಾಂ
ಸಾ ಶೋಚತೇ ಶೋಕಕೃಶಾಂಗಯಷ್ಟಿಃ ॥27॥
ಮಕ್ಕಳು, ಅಣ್ಣಂದಿರು ಹಿರಿಯನಾದ (ಆಕೆಯ) ತಂದೆ ಪಾಂಚಾಲರಾಜ ಇವರು ಮೃತರಾದದ್ದನ್ನು ಕೇಳಿ, ನಿಶ್ಚಯವಾಗಿಯೂ ಎಚ್ಚರತಪ್ಪಿ ನೆಲದಲ್ಲಿ ಬೀಳುವಳು, (ಹಿಂದಿನ ಅನೇಕವಿಧದ) ಶೋಕಗಳಿಂದ ಒಣಗಿದ ತೆಳುಕಟ್ಟಿಗೆಯಂತಿರುವ ಆಕೆಯು ದುಃಖಿಸುವಳು.
ತಚ್ಛೋಕಜಂ ದುಃಖಮಪಾರಯಂತೀ
ಕಥಂ ಭವಿಷ್ಯತ್ಯುಚಿತಾ ಸುಖಾನಾಮ್ |
ಪುತ್ರಕ್ಷಯಂ ಭ್ರಾತೃವಧಂ ಪ್ರಪನ್ನಾ
ಪ್ರದಹ್ಯಮಾನೇವ ಹುತಾಶನೇನ ॥28॥
ಸುಖದಿಂದಿರಬೇಕಾದ ಆಕೆ ಈ ಶೋಕದಿಂದಾದ ದುಃಖವನ್ನು ದಾಟಲಾರದೆ ಹೇಗೆ ಬಾಳುವಳೋ? ಮಕ್ಕಳ ಸಾವನ್ನು, ಅಣ್ಣಂದಿರ ಸಾವನ್ನು ತಿಳಿದ ಆಕೆಯು (ದುಃಖವೆಂಬ) ಬೆಂಕಿಯಿಂದ ಬೇಯುವಳು.
ವೈಶಂಪಾಯನಃ
ಇತ್ಯೇವಮಾರ್ತಃ ಪರಿದೇವಯನ್ ಸ
ರಾಜಾ ಕುರೂಣಾಂ ನಕುಲಂ ಬಭಾಷೇ ॥29॥
ವೈಶಂಪಾಯನರು ಈ ರೀತಿಯಾಗಿ ದುಃಖಭಾಜನನಾದ ಆ ಕುರುಗಳ ರಾಜನು ದುಃಖಿಸುತ್ತಾ ನಕುಲನನ್ನು ಉದ್ದೇಶಿಸಿ ಹೇಳಿದನು.
ಯುಧಿಷ್ಠಿರಃ
ಗಚ್ಛಾನಯೈನಾಮಿಹ ಮಂದಭಾಗ್ಯಾಮ್
ಅಮಾತ್ಯಪಕ್ಷಾಮಿತಿ ರಾಜಪುತ್ರೀಮ್ ॥30॥
ಯುಧಿಷ್ಠಿರ ಹೋಗು, ಮಂತ್ರಿಗಳ ಕಾವಲಿನಲ್ಲಿರುವ ಅದೃಷ್ಟಹೀನಳಾದ ರಾಜಪುತ್ರಿಯನ್ನು ಇಲ್ಲಿಗೆ ಕರೆದುಕೊಂಡು ಬಾ.
ವೈಶಂಪಾಯನಃ
ಮಾದ್ರೀಸುತಸ್ತತ್ ಪರಿಗೃಹ್ಯ ವಾಕ್ಯಂ
ಧರ್ಮೇಣ ಧರ್ಮಪ್ರತಿಮಸ್ಯ ರಾಜ್ಞಃ |
ಯಯೌ ರಥೇನಾಲಯಮಾಶು ದೇವ್ಯಾಃ
ಪಾಂಚಾಲರಾಜಸ್ಯ ಚ ಯತ್ರ ದಾರಾಃ ॥31॥
ವೈಶಂಪಾಯನರು ಧರ್ಮಾಚರಣದಿಂದ ಯಮಧರ್ಮನಿಗೆ ಸಮಾನನಾದ ರಾಜನಾದ ಯುಧಿಷ್ಠಿರನ ಆ ಮಾತನ್ನನುಸರಿಸಿ, ಎಲ್ಲಿ ಪಾಂಚಾಲರಾಜನ ಪತ್ನಿಯರು ಇರುವರೋ, ಆ ದೇವಿಯ ಮನೆಗೆ ಶೀಘ್ರವಾಗಿ ಹೊರಟನು.
ಪ್ರಸ್ಥಾಪ್ಯ ಮಾದ್ರೀಸುತಮಾಜಮೀಢಃ
ಶೋಕಾರ್ದಿತಸ್ತೈಃ ಸಹಿತಃ ಸುಹೃದ್ಭಿಃ |
ರೋರೂಯಮಾಣಃ ಪ್ರಯಯೌ ಸುತಾನಾಮ್
ಆಯೋಧನಂ ಭೂತಗಣಾನುಕೀರ್ಣಮ್ ॥32॥
ಮಾದ್ರೀಪುತ್ರನನ್ನು ಕಳುಹಿಸಿ, ಶೋಕತಪ್ತನಾದ ಯುದ್ಧಭಯಂಕರನಾದ ಸ್ನೇಹಿತರಿಂದ ಒಡಗೂಡಿದ ಧರ್ಮರಾಜನು ರಥವನ್ನೇರಿ ಭೂತಗಣದಿಂದ ಕೂಡಿದ ತನ್ನ ಮಕ್ಕಳು ಮೃತರಾದ (ರಣರಂಗಕ್ಕೆ) ತೆರಳಿದನು.

ಸ ತತ್ ಪ್ರವಿಶ್ಯಾಶಿವಮುಗ್ರರೂಪಂ
ದದರ್ಶ ಪುತ್ರಾನ್ ಸುಹೃದಃ ಸಖೀಂಶ್ಚ |
ಭೂಮೌ ಶಯಾನಾನ್ ರುಧಿರಾರ್ದ್ರಗಾತ್ರಾನ್
ವಿಭಿನ್ನಗಾತ್ರೋಪಹೃತೋತ್ತಮಾಂಗಾನ್ ॥33॥
ನೆಲದಲ್ಲಿ ಬಿದ್ದ, ರಕ್ತದಿಂದ ತೊಯ್ದ, ಕತ್ತರಿಸಿದ ದೇಹವನ್ನು ಹೊಂದಿದ್ದ, ತಲೆಗಳನ್ನು ಕಳೆದುಕೊಂಡಿದ್ದ ಮಕ್ಕಳನ್ನು, ಆಪ್ತರನ್ನು, ಮಿತ್ರರನ್ನು ಅಂತಹ ಭೀಕರವಾದ ಅಮಂಗಳವನ್ನು ಆತನು (ಧರ್ಮರಾಜನು) ಶಿಬಿರವನ್ನು ಪ್ರವೇಶಿಸಿ ಕಂಡನು.
ಸ ತಾಂಸ್ತು ದೃಷ್ಟ್ವಾ ಭೃಶಮಾರ್ತರೂಪೋ
ಯುಧಿಷ್ಠಿರೋ ಧರ್ಮಭೃತಾಂ ವರಿಷ್ಠಃ |
ಉಚ್ಚೈಃ ಪ್ರಚುಕ್ರೋಶ ಚ ಕೌರವಾಗ್ರ್ಯಃ
ಪಪಾತ ಚೋರ್ವ್ಯಾಂ ಸಗಣೋ ವಿಸಂಜ್ಞಃ ॥34॥
ಪ್ರಿಯಜನರಿಂದ ಕೂಡಿದ, ಧರ್ಮಧಾರಿಗಳಲ್ಲಿ ಹಿರಿಯನಾದ, ಕೌರವರಿಗೆ ಹಿರಿಯನಾದ ಅತ್ಯಂತದುಃಖಿತನಾದ ಆ ಯುಧಿಷ್ಠಿರನು ಅವರನ್ನು ಕಂಡು, ಗಟ್ಟಿಯಾಗಿ ರೋದಿಸಿದನು, ಎಚ್ಚರತಪ್ಪಿ ನೆಲದಲ್ಲಿ ಬಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ಯುಧಿಷ್ಠಿರಪ್ರಲಾಪೋ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ತತ್ರೈಕಲಂ ದ್ರೋಣಸುತಂ ರಥೇನ
ಯಾಂತಂ ರಥೀ ಮಾರುತಿರನ್ವಧಾವತ್ |
ತಮಾದ್ರವಂತಂ ಪ್ರಸಮೀಕ್ಷ್ಯ ಭೀತಃ
ಪರಾದ್ರವದ್ ದ್ರೌಣಿರತಿದ್ರುತಾಶ್ವೈಃ ॥
ಅಶ್ವತ್ಥಾಮನು ಏಕಾಕಿಯಾಗಿ ರಥದಿಂದ ಹೋಗುತ್ತಿದ್ದುದನ್ನು ಕಂಡು ಭೀಮಸೇನ ರಥದಿಂದ ಬೆನ್ನಟ್ಟಿದ. ಅವನು ಅಟ್ಟಿಸಿಕೊಂಡು ಬರುವುದನ್ನು ಕಂಡು ಹೆದರಿದ ಅಶ್ವತ್ಥಾಮನು ಬಲು ವೇಗವಾಗಿ ಓಡುವ ಕುದುರೆಗಳಿದ್ದ ಆ ರಥದಿಂದ ಪಲಾಯನ ಮಾಡಿದನು.
* * * * *
ಎರಡನೆಯ ಅಧ್ಯಾಯ
ನಕುಲನು ದ್ರೌಪದಿಯನ್ನು ಶಿಬಿರಕ್ಕೆ ಕರೆದುತಂದನು.
ಅಶ್ವತ್ಥಾಮನ ಶಿರೋಮಣಿಯನ್ನು ಕಿತ್ತುತರಲು ದ್ರೌಪದಿಯಿಂದ ಪ್ರಚೋದಿತನಾದ ಭೀಮಸೇನನು ನಕುಲನನ್ನು ಸಾರಥಿಯನ್ನಾಗಿ ಮಾಡಿಕೊಂಡು ಅಶ್ವತ್ಥಾಮನಲ್ಲಿಗೆ ಹೊರಟನು.
ವೈಶಂಪಾಯನಃ
ಸ ದೃಷ್ಟ್ವಾ ನಿಹತಾನ್ ಸಂಖ್ಯೇ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ |
ಮಹಾದುಃಖಪರೀತಾತ್ಮಾ ಬಭೂವ ಜನಮೇಜಯ ॥1॥
ಜನಮೇಜಯನೆ! ಆ ಧರ್ಮನಂದನನು ಯುದ್ಧದಲ್ಲಿ ಮಡಿದ ಮಕ್ಕಳನ್ನು, ಮೊಮ್ಮಕ್ಕಳನ್ನು ಹಾಗೂ ಸ್ನೇಹಿತರನ್ನು ಕಂಡು ಭಾರೀ ದುಃಖದಿಂದ ಪರಿತಪಿಸಿದನು.
ತತಸ್ತಸ್ಯ ಮಹಾನ್ ಶೋಕಃ ಪ್ರಾದುರಾಸೀನ್ಮಹಾತ್ಮನಃ |
ಸ್ಮರತಃ ಪುತ್ರಪೌತ್ರಾಂಸ್ತಾನ್ ಭ್ರಾತ್ರೂನ್ ಸುಹೃದ ಏವ ಚ ॥2॥
ನಂತರದಲ್ಲಿ ಮಕ್ಕಳು, ಮೊಮ್ಮಕ್ಕಳು, ಸಹೋದರರು ಮತ್ತು ಸ್ನೇಹಿತರನ್ನು ಸ್ಮರಿಸಿಕೊಂಡ ಆ ಮಹಾತ್ಮನಿಗೆ ಭಾರೀಶೋಕವು ಉಂಟಾಯಿತು.
ತಮಶ್ರುಪರಿಪೂರ್ಣಾಕ್ಷಂ ವೇಪಮಾನಮಚೇತಸಮ್ |
ಸುಹೃದೋ ಭೃಶಸಂವಿಗ್ನಾಃ ಸಾಂತ್ವಯಾಂಚಕ್ರಿರೇ ತದಾ ॥3॥
ಕಣ್ಣೀರಿನಿಂದ ಕೂಡಿರುವ, ಚೈತನ್ಯವಿಲ್ಲದೇ ನಡುಗುತ್ತಿದ್ದ ಆತನನ್ನು (ಧರ್ಮರಾಜನನ್ನು) ಅಗ ಅತ್ಯಂತ ಉದ್ವಿಗ್ನರಾದ ಸ್ನೇಹಿತರು ಸಮಾಧಾನಪಡಿಸಿದರು.
ಕೃತ್ವಾ ತು ವಿಧಿವತ್ ತೇಷಾಂ ಪುತ್ರಾಣಾಮಮಿತೌಜಸಾಮ್ |
ಪ್ರೇತಕಾರ್ಯಾಣಿ ಸರ್ವೇಷಾಂ ಬಭೂವ ಭೃಶದುಃಖಿತಃ ॥4॥
ಮಹಾಪರಾಕ್ರಮಿಗಳಾದ ಆ ಎಲ್ಲ ಮಕ್ಕಳಿಗೆ ವಿಧಿಪೂರ್ವಕವಾಗಿ ಪ್ರೇತಕಾರ್ಯವನ್ನು ನೆರವೇರಿಸಿ, ಅತ್ಯಂತ ದುಃಖಿತನಾದನು.
ತಸ್ಮಿನ್ ಮುಹೂರ್ತೇ ಜವನೈಃ ವಾಜಿಭಿರ್ಹೇಮಮಾಲಿಭಿಃ ॥5॥
ತತಃ ತಸ್ಮಿನ್ ಕ್ಷಣೇ ಕಾಲೇ ರಥೇನಾದಿತ್ಯವರ್ಚಸಾ |
ನಕುಲಃ ಕೃಷ್ಣಯಾ ಸಾರ್ಧಮುಪಾಯಾತ್ ಪರಮಾರ್ತವತ್ ॥6॥
ಆನಂತರದಲ್ಲಿ ಆ ಕಾಲಕ್ಕೆ ಸರಿಯಾಗಿ ಹೊನ್ನಿನ ಮಾಲೆಗಳಿಂದ ಅಲಂಕೃತವಾದ ವೇಗವಾಗಿ ಓಡುವ ಕುದುರೆಗಳಿಂದ ಕೂಡಿದ ಸೂರ್ಯನಂತೆ ಪ್ರಕಾಶಮಾನವಾದ ರಥವನ್ನೇರಿದ ನಕುಲನು ಅತ್ಯಂತ ದುಃಖಿತನಾದವನಾಗಿ ದ್ರೌಪದಿಯಿಂದ ಕೂಡಿದವನಾಗಿ ಸರಿಯಾಗಿ ಆ ಹೊತ್ತಿಗೆ ಅಲ್ಲಿಗೆ ಬಂದನು.

ಉಪಪ್ಲಾವ್ಯಗತಾ ಸಾ ತು ಶ್ರುತ್ವಾ ಸುಮಹದಪ್ರಿಯಮ್ |
ಮಹಾವಿನಾಶಂ ಪುತ್ರಾಣಾಂ ಸರ್ವೇಷಾಂ ವ್ಯಥಿತೇಂದ್ರಿಯಾ ॥7॥
ಕಂಪಮಾನೇವ ಕದಳೀ ವಾತೇನಾಭಿಸಮಾಹತಾ |
ಕೃಷ್ಣಾ ರಾಜಾನಮಾಸಾದ್ಯ ಶೋಕಾರ್ತಾ ನ್ಯಪತದ್ ಭುವಿ ॥8॥
ಉಪಪ್ಲಾವ್ಯ ನಗರಕ್ಕೆ ಆಗಮಿಸಿದ ಆ ದ್ರೌಪದಿಯು ಎಲ್ಲ ಮಕ್ಕಳ ಸಾವೆಂಬ ಅತ್ಯಂತ ಅಪ್ರಿಯವಾದ ಸುದ್ದಿಯನ್ನು ಕೇಳಿ, ದುಃಖಿತಳಾಗಿ ಇಂದ್ರಿಯಸ್ವಾಸ್ಥ್ಯವನ್ನು ಕಳೆದುಕೊಂಡು ರಾಜನನ್ನು ಸೇರಿದೊಡನೆ, ಬಿರುಗಾಳಿಗೆ ಸಿಲುಕಿದ ಬಾಳೆಕಂಬದಂತೆ ನಡುಗುತ್ತಾ ನೆಲಕ್ಕೆ ಉರುಳಿದಳು.
ವಿಬಭೌ ವದನಂ ತಸ್ಯಾ ರುದಂತ್ಯಾಃ ಶೋಕಕರ್ಶಿತಮ್ |
ಫುಲ್ಲಪದ್ಮಪಲಾಶಾಕ್ಷಂ ತಮೋಗ್ರಸ್ತ ಇವಾಂಶುಮಾನ್ ॥9॥
ಅರಳಿದ ಕಮಲದ ದಳದಂತಹ ಕಣ್ಣನ್ನು ಹೊಂದಿರುವ, ದುಃಖದಿಂದ ಬಳಲಿದ ಆಕೆಯ (ದ್ರೌಪದಿಯ) ಮುಖವು ಮೋಡಕವಿದ ಚಂದ್ರನಂತೆ ಕಂಗೊಳಿಸಿತು.
ಹಾ ಪುತ್ರಬಾಂಧವಾಶ್ಚೈವ ಇತ್ಯೇವಂ ವಿಲಲಾಪ ಸಾ |
ತತೋ ಭೀಮೋ ತಾಮುತ್ಥಾಪ್ಯ ವಚನಂ ಚೇದಮಬ್ರವೀತ್ ॥10॥
ಆ ದ್ರೌಪದಿಯು `ಅಯ್ಯೋ ಮಕ್ಕಳೆ, ಬಂಧುಗಳೆ' ಎಂದು ರೋದಿಸಿದಳು. ಆನಂತರದಲ್ಲಿ ಆಕೆಯನ್ನು ಮೇಲೆತ್ತಿ ಭೀಮಸೇನನು ಈ ಮಾತನ್ನು ನುಡಿದನು.
ನಿವರ್ತಯ ತ್ವಂ ಕಲ್ಯಾಣಿ ಮಾ ಚ ಶೋಕಮನಃಕೃಥಾಃ |
ಅಶ್ವತ್ಥಾಮಾನಮದ್ಯೇಹ ಹನಿಷ್ಯಾಮಿ ನ ಸಂಶಯಃ ॥11॥
ಮಂಗಳಕರಳೆ, ನೀನು (ಈ ದುಃಖದಿಂದ) ನಿವೃತ್ತಳಾಗು, ಮನದಲ್ಲಿ ದುಃಖಿಸದಿರು, ಈಗಲೇ ಅಶ್ವತ್ಥಾಮನನ್ನು ಸಂಹರಿಸುವೆನು, ಇದರಲ್ಲಿ ಸಂದೇಹಿಸದಿರು.
ಯದಿ ಮೇ ದೃಷ್ಟಿಪ್ರಾಪ್ತೋಽಸೌ ಜೀವಿತಂ ನ ಭವಿಷ್ಯತಿ |
ತಸ್ಯ ಶಿರಸ್ತ್ವದಗ್ರೇ ಚ ಪಾತಯಿಷ್ಯಾಮ್ಯಹಂ ಧ್ರುವಮ್ ॥12॥
ನನ್ನ ಕಣ್ಣಿಗೆ ಕಂಡಲ್ಲಿ ಆತನು ಜೀವಿತದಿಂದ ಉಳಿಯಲಾರ. ನಾನು ನಿಶ್ಚಯವಾಗಿಯೂ ಆತನ ತಲೆಯನ್ನು ನಿನ್ನ ಮುಂದೆ ತಂದುರುಳಿಸುವೆ.
ಕೃಪಂ ಚ ಕೃತವರ್ಮಾಣಂ ತಂ ಹನಿಷ್ಯಾಮಿ ಚಾದ್ಯ ವೈ |
ಯಾ ಮಯಾತ್ರ ತ್ವದಗ್ರೇ ಚ ಉಕ್ತಾ ವಾಚಸ್ತ್ವಯಾ ಕೃತೇ ॥13॥
ತಾಃ ಸರ್ವಾಃ ಸಫಲಾ ಕೃತ್ವಾ ನ ಹಿ ಶೋಕೇ ಮನಃ ಕೃಥಾಃ |
ಇತ್ಯೇವಮುಕತ್ತ್ವ ತಾಂ ವಾಕ್ಯಂ ಭೀಮಸೇನೋ ನ್ಯವರ್ತತ ॥14॥
ಈಗಲೇ ಕೃಪನನ್ನು, ಆ ಕೃತವರ್ಮನನ್ನು ಸಂಹರಿಸುತ್ತೇನೆ. ನಿನಗಾಗಿ ನಿನ್ನ ಮುಂದೆ ಈಗ ಹೇಳಿದ ಆ ಎಲ್ಲವನ್ನು ಸತ್ಯಗೊಳಿಸುವೆನು, ಮನದಲ್ಲಿ ಶೋಕಿಸದಿರು. ಆಕೆಗೆ ಈ ರೀತಿಯಲ್ಲಿ ಹೇಳಿ ಭೀಮಸೇನನು ಉಪರಮಿಸಿದನು.
ತತೋ ಯುಧಿಷ್ಠಿರೋ ಬ್ರೂಯಾದ್ ವಾಕ್ಯಂ ತಸ್ಯಾ ಹಿತಂ ಪ್ರಿಯಮ್ |
ನ ಹಿ ತ್ವಂ ದೇವಿ ಜಾನೀಷೇ ಮಮ ವಾಕ್ಯಂ ನಿಬೋಧ ವೈ ॥15॥
ಆನಂತರದಲ್ಲಿ ಯುಧಿಷ್ಠಿರನು ಆಕೆಗೆ ಹಿತಕರವಾದ ಮಾತನ್ನು ಹೇಳಿದನು. ದೇವಿ! ನೀನು ತಿಳಿದಿಲ್ಲವೆ? ನನ್ನ ಮಾತನ್ನು ಕೇಳು.
ದ್ರೋಣೋ ಹತೋ ಚ ಗಾಂಗೇಯಃ ಕರ್ಣಶ್ಚಾಪಿ ತಥೈವ ಚ |
ಶಲ್ಯೋ ಜಯದ್ರಥಶ್ಚೈವ ಯೇ ಚಾನ್ಯೇ ಕ್ಷತ್ರಿಯಾ ರಣೇ ॥16॥
ದ್ರೋಣನು ಮತ್ತು ಗಂಗೆಯ ಪುತ್ರನು (ಭೀಷ್ಮನು), ಹಾಗೆಯೇ ಕರ್ಣ, ಶಲ್ಯ, ಜಯದ್ರಥ ಹಾಗೆಯೇ ಬೇರೆ ಕ್ಷತ್ರಿಯರು ರಣರಂಗದಲ್ಲಿ ಸಂಹೃತರಾದರು.
ಹತೋ ದುರ್ಯೋಧನೋ ರಾಜಾ ಭ್ರಾತೃಭಿಃ ಪರಿವಾರಿತಃ |
ತಸ್ಯ ಪುತ್ರಾಶ್ಚ ಪೌತ್ರಾಶ್ಚ ತೇ ಚ ಸರ್ವೇ ನಿಪಾತಿತಾಃ ॥17॥
ಸಹೋದರರಿಂದ ಪರಿವಾರದಿಂದ ಕೂಡಿದ ರಾಜನಾದ ದುರ್ಯೋಧನನು ಸಂಹೃತನಾದ. ಆತನ ಆ ಎಲ್ಲ ಮಕ್ಕಳು, ಮೊಮ್ಮಕ್ಕಳೂ ಸಹ ಸಂಹೃತರಾದರು.
ಸುಯೋಧನಬಲಂ ಕ್ಷೀಣಂ ಮಮ ಚೈವ ನ ಸಂಶಯಃ |
ಕಾಲೇನ ಹೀಯತೇ ಸರ್ವಂ ಜಗದ್ವೈ ಸಚರಾಚರಮ್ ॥18॥
ದುರ್ಯೋಧನನ ಬಲವೂ ಕ್ಷೀಣವಾಯಿತು, ಸಂದೇಹವಿಲ್ಲ. ನನ್ನದೂ ಸಹ (ಕ್ಷೀಣವಾಯಿತು). ಕಾಲಕಳೆದಂತೆ ಚೇತನಾಚೇತನಾತ್ಮಕವಾದ ಈ ಎಲ್ಲ ಜಗವೇ ನಾಶವಾಗುವುದು.
ದಶರಥಸುತೋ ರಾಮೋ ರಾವಣಸ್ಯ ಭಯಂಕರಾಮ್ |
ಹತ್ವಾ ಸೇನಾಂ ಬಭೌ ತಸ್ಯ ಧ್ವಸ್ತಮೇಷ ಇವಾಂಶುಮಾನ್ ॥19॥
ದಶರಥನ ಪುತ್ರನಾದ ರಾಮನು ಆ ರಾವಣನ ಭಯಂಕರವಾದ ಸೇನೆಯನ್ನು ಸಂಹರಿಸಿ, ಮೋಡಸರಿದ ಚಂದ್ರನಂತೆ ಪ್ರಕಾಶಿಸಿದನು.
ತತಸ್ತಾಂ ಪತಿತಾಂ ದೃಷ್ಟ್ವಾ ಸಂರಭೀ ಸತ್ಯವಿಕ್ರಮಃ |
ಬಾಹುಭ್ಯಾಂ ಪ್ರತಿಜಗ್ರಾಹ ಸಮುಪೇತ್ಯ ವೃಕೋದರಃ ॥20॥
(ಈರೀತಿಯಲ್ಲಿ ಧರ್ಮನಂದನನು ಹೇಳುತ್ತಿರಲು) ಆನಂತರದಲ್ಲಿ ದುಃಖಿತಳಾದ ಆ ದ್ರೌಪದಿಯು ಬೀಳುವುದನ್ನು ಕಂಡ

ಸತ್ಯವಿಕ್ರಮನಾದ ವೃಕೋದರನು ಧಾವಿಸಿ ಬಂದು (ದ್ರೌಪದಿಯನ್ನು) ಕೈಗಳಿಂದ ಹಿಡಿದನು.
ತಾಂ ದೃಷ್ಟ್ವಾ ಸಂಪರಿಷ್ವಜ್ಯ ಸಂರಂಭಾತ್ ಸತ್ಯವಿಕ್ರಮಃ |
ಬಾಹುಭ್ಯಾಂ ಪರಿಜಗ್ರಾಹ ಸಮುಪೇತ್ಯ ವೃಕೋದರಃ ॥21॥
ಆಕೆಯನ್ನು ಕಂಡ ಸತ್ಯವಿಕ್ರಮನಾದ ವೃಕೋದರನು ಲಗುಬಗೆಯಿಂದ ಬಂದು ಕೈಗಳಿಂದ ಹಿಡಿದುಕೊಂಡು ಆಲಿಂಗಿಸಿಕೊಂಡನು.
ಸಾ ಸಮಾಶ್ವಾಸಿತಾ ತೇನ ಭೀಮಸೇನೇನ ಭಾಮಿನೀ |
ರುದತೀ ಪಾಂಡವಜ್ಯೇಷ್ಠಮಿದಂ ವಚನಮಬ್ರವೀತ್ ॥22॥
ಆ ಭೀಮನಿಂದ ಸಮಾಧಾನವನ್ನು ಹೊಂದಿದ ಆ ಭಾಮಿನಿಯು ಅಳುತ್ತಾ ಪಾಂಡವರ ಹಿರಿಯನಿಗೆ ಈ ಮಾತನ್ನು ತಿಳಿಸಿದಳು.
ದ್ರೌಪದೀ
ದಿಷ್ಟ್ಯಾ ರಾಜನ್ನವಾಪ್ಯೇಮಾಮಖಿಲಾಂ ಭೋಕ್ಷ್ಯಸೇ ಮಹೀಮ್ |
ಆತ್ಮಜಾನ್ ಕ್ಷತ್ರಧರ್ಮೇಣ ಶ್ರುತ್ವಾ ಸಂಖೇ ನಿಪಾತಿತಾನ್ ॥23॥
ದ್ರೌಪದಿ `ಕಂಡೆಯಾ ರಾಜನೆ! ಕ್ಷಾತ್ರಧರ್ಮದಿಂದ ಯುದ್ಧದಲ್ಲಿ ಪುತ್ರರು ಮೃತರಾದದ್ದನ್ನು ಕೇಳಿ, ಈ ಸಮಸ್ತ ಭೂಮಿಯನ್ನು ಹೊಂದಿದರೂ ಭೋಗಿಸಲಾದೀತೆ?
ದಿಷ್ಟ್ಯಾ ಸರ್ವಾಸ್ತ್ರಕುಶಲಂ ಮತ್ತಮಾತಂಗಗಾಮಿನಮ್ |
ಅವಾಪ್ಯ ಪೃಥಿವೀಂ ಕೃತ್ಸ್ನಾಂ ಸೌಭದ್ರಂ ನ ಸ್ಮರಿಷ್ಯಸಿ ॥24॥
ಕಂಡೆಯಾ, ಈ ಎಲ್ಲ ಪಥ್ವಿಯನ್ನು ಹೊಂದಿ, ಸಕಲ ಅಸ್ತ್ರಗಳಲ್ಲಿ ನಿಪುಣನಾದ, (ರಣರಂಗದಲ್ಲಿ) ಮದಿಸಿದ ಆನೆಯಂತೆ ನುಗ್ಗುವ, ಸುಭದ್ರೆಯ ಪುತ್ರನನ್ನು (ಅಭಿಮನ್ಯುವನ್ನು) ಸ್ಮರಿಸದೇ ಇರಲಾದೀತೆ?
ಆತ್ಮಜಾಂಸ್ತೇರಧರ್ಮೇಣ ಶ್ರುತ್ವಾ ಶೂರಾನ್ ನಿಪಾತಿತಾನ್ |
ಸ್ಥಿತೋ ರಾಜ್ಯೇ ಮಯಾ ಸಾರ್ಧಂ ವಿಹರನ್ ನ ಸ್ಮರಿಷ್ಯಸಿ ॥25॥
ಅವರು (ಶತ್ರುಗಳು) ಅನ್ಯಾಯದಿಂದ ಶೂರರಾದ (ನನ್ನ) ಪುತ್ರರನ್ನು ಸಂಹರಿಸಿದ್ದನ್ನು ಕೇಳಿ, ರಾಜ್ಯವನ್ನು ಶಾಸಿಸುವಾಗ, ನನ್ನೊಡನೆ ವಿಹರಿಸುವಾಗ (ಅವರುಗಳ) ಸ್ಮರಣೆಯು ಬಾರದೆ?
ಪ್ರಸುಪ್ತಾನಾಂ ವಧಂ ಶ್ರುತ್ವಾ ದ್ರೌಣಿನಾ ಪಾಪಕರ್ಮಣಾ |
ಶೋಕೋ ಮಾಂ ದಹತೇ ಗಾಢಂ ಹುತಾಶನ ಇವಾಶ್ರಯಮ್ ॥26॥
`ಮಲಗಿದವರ (ನನ್ನ ಮಕ್ಕಳ) ಹತ್ಯೆಯು ಪಾಪಿಯಾದ ಅಶ್ವತ್ಥಾಮನಿಂದಾಯಿತು' ಎಂದು ಕೇಳಿದ ನನ್ನನ್ನು ಶೋಕವು ಬೆಂಕಿಯಂತೆ ಅತಿಯಾಗಿ ಸುಡುತ್ತಿದೆ.
ತಸ್ಯ ಪಾಪಕೃತೋ ದ್ರೌಣೇಃ ನ ಚೇದದ್ಯ ದುರಾತ್ಮನಃ |
ಹ್ರಿಯತೇ ಸಾನುಬಂಧಸ್ಯ ಯುಧಿ ವಿಕ್ರಮ್ಯ ಜೀವಿತಮ್ ॥27॥
ಇಹೈವ ಪ್ರಾಯಮಾಸಿಷ್ಯೇ ತನ್ನಿಬೋಧತ ಪಾಂಡವಾಃ |
ನ ಚೇತ್ ಫಲಮವಾಪ್ನೋತಿ ದ್ರೌಣಿಃ ಪಾಪಸ್ಯ ಕರ್ಮಣಃ ॥28॥
`ದುಃಷ್ಟನಾದ ಪಾಪಿಯಾದ ಅನುಬಂಧಿಗಳಿಂದ ಯುಕ್ತನಾದ ಆ ಅಶ್ವತ್ಥಾಮನನ್ನು ಯುದ್ಧದಲ್ಲಿ ಸೋಲಿಸಿ, ಆತನ ಜೀವವನ್ನು ತೆಗೆಯದ ಪಕ್ಷದಲ್ಲಿ, ದ್ರೋಣಪುತ್ರನು ತನ್ನ ಪಾಪಕರ್ಮದ ಫಲವನ್ನು ಅನುಭವಿಸದ ಪಕ್ಷದಲ್ಲಿ, ನಾನು ಇಲ್ಲಿಯೇ ಪ್ರಾಯೋಪವೇಶವನ್ನು ಆಚರಿಸುವೆನು' ಎನ್ನುವುದನ್ನು ಪಾಂಡುಪುತ್ರರು ತಿಳಿಯುವವರಾಗಿರಿ.
ವೈಶಂಪಾಯನಃ
ಏವಮುಕತ್ವ ತತಃ ಕೃಷ್ಣಾ ಪಾಂಡವಂ ಸಮುಪಾವಿಶತ್ |
ಯುಧಿಷ್ಠಿರಂ ಧರ್ಮಪತ್ನೀ ಯಾಜ್ಞಸೇನೀ ಯಶಸ್ವಿನೀ ॥29॥
ವೈಶಂಪಾಯನರು ಕೀರ್ತಿಶಾಲಿನಿಯಾದ, ಯಜ್ಞಕುಂಡದಿಂದ ಪ್ರಾದುರ್ಭವಿಸಿದ, (ಪಾಂಡವರ) ಧರ್ಮಪತ್ನಿಯಾದ ಕೃಷ್ಣೆಯು ಈ ರೀತಿಯಾಗಿ ಪಾಂಡುಪುತ್ರನಾದ ಯುಧಿಷ್ಠಿರನನ್ನು ಉದ್ದೇಶಿಸಿ ಹೇಳಿ (ಪ್ರಾಯೋಪವೇಶಕ್ಕೆ) ಕುಳಿತಳು.
ದೃಷ್ಟ್ವೋಪವಿಷ್ಟಾಂ ರಾಜಾ ತು ಪಾಂಡವೋ ಮಹಿಷೀಂ ಪ್ರಿಯಾಮ್ |
ಪ್ರತ್ಯುವಾಚ ಸ ಧರ್ಮಾತ್ಮಾ ದ್ರೌಪದೀಂ ಚಾರುದರ್ಶನಾಮ್ ॥30॥
ಸುಂದರಳಾದ, ಮಹಾರಾಣಿಯಾದ, ಪ್ರಿಯಳಾದ (ಪ್ರಾಯೋಪವೇಶಕ್ಕಾಗಿ) ಕುಳಿತ ದ್ರೌಪದಿಯನ್ನು ಉದ್ದೇಶಿಸಿ ಧರ್ಮಾತ್ಮನಾದ ರಾಜನಾದ ಪಾಂಡುಪುತ್ರನು ಹೇಳಿದನು.
ಯುಧಿಷ್ಠಿರಃ
ಕ್ಷತ್ರಧರ್ಮೇಣ ಧರ್ಮಜ್ಞೇ ಪ್ರಾಪ್ತಾಸ್ತೇ ನಿಧನಂ ಶುಭೇ |
ಪುತ್ರಾಸ್ತೇ ಭ್ರಾತರಶ್ಚೈವ ತಾನ್ ನ ಶೋಚಿತುಮರ್ಹಸಿ ॥31॥
ಯುಧಿಷ್ಠಿರ ಮಂಗಳಕರಳೆ, ಧರ್ಮವನ್ನು ಅರಿತವಳೇ! ನಿನ್ನ ಮಕ್ಕಳು ಮತ್ತು ಸಹೋದರರು ಕ್ಷತ್ರಧರ್ಮದಿಂದ ಸಾವನ್ನು ಹೊಂದಿರುವರು, (ಆದ್ದರಿಂದ) ಅವರನ್ನುದ್ದೇಶಿಸಿ ಶೋಕಿಸುವ ಅಗತ್ಯವಿಲ್ಲ.
ದ್ರೋಣಪುತ್ರಸ್ತು ಕಲ್ಯಾಣಿ ವನದುರ್ಗಂ ಗತೋ ಧ್ರುವಮ್ |
ತಸ್ಯ ತ್ವಂ ಪಾತನಂ ಸಂಖೇ ಕಥಂ ಜ್ಞಾಸ್ಯಸಿ ಶೋಭನೇ ॥32॥
ಮಂಗಳಕರಳೇ! ದ್ರೋಣಪುತ್ರನು ನಿಶ್ಚಯವಾಗಿಯೂ ಹೆಗ್ಗಾಡನ್ನು ಸೇರಿರುವನು, ಮಂಗಳಕರಳೇ! ಯುದ್ಧದಲ್ಲಿ ಆತನು (ನೆಲಕ್ಕೆ) ಉರುಳಿದ್ದನ್ನು ನೀನು ಹೇಗೆ ತಿಳಿಯುವಿ?
ದ್ರೌಪದೀ

ದ್ರೋಣಪುತ್ರಸ್ಯ ಸಹಜೋ ಮಣಿಃ ಶಿರಸಿ ಮೇ ಶ್ರುತಃ |
ನಿಹತ್ಯ ಸಂಖ್ಯೇ ತಂ ಪಾಪಂ ಪಶ್ಯೇಯಂ ಮಣಿಮಾಹೃತಮ್ ||33||
ದ್ರೌಣೇಃ ಶಿರಸ ಉತ್ಕೃತ್ತಂ ಜೀವೇಯಮಿತಿ ಮೇ ಮತಿಃ ||34||
ದ್ರೌಪದಿ `ದ್ರೋಣಪುತ್ರನ ತಲೆಯಲ್ಲಿ ಆತನೊಡನೆ ಹುಟ್ಟಿದ ಮಣಿಯು ಇದೆ' ಎಂದು ನಾನು ಕೇಳಿರುವೆ. `ಆ ಪಾಪಿಯನ್ನು ಯುದ್ಧದಲ್ಲಿ ಸಂಹರಿಸಿ ದ್ರೋಣಪುತ್ರನ ತಲೆಯಿಂದ ಕಿತ್ತಿ ತಂದ ಮಣಿಯನ್ನು ಕಂಡು ಬದುಕುವೆ' ಎಂದು ನಾನು ನಿಶ್ಚಯಿಸಿರುವೆ.
ವೈಶಂಪಾಯನಃ
ಇತ್ಯುಕ್ತ್ವಾ ಪಾಂಡವಂ ಕೃಷ್ಣಾ ರಾಜಾನಂ ಚಾರುದರ್ಶನಾ |
ಭೀಮಸೇನಂ ಕರೇ ಸ್ಪೃಷ್ಟ್ವಾ ಕುಪಿತಾ ವಾಕ್ಯಮಬ್ರವೀತ್ ||35||
ವೈಶಂಪಾಯನ ನೋಡಲು ಚೆಲುವೆಯಾದ ದ್ರೌಪದಿಯು, ಪಾಂಡುಪುತ್ರನಾದ ರಾಜನನ್ನು ಉದ್ದೇಶಿಸಿ ಈ ರೀತಿಯಾಗಿ ಹೇಳಿ, ಕುಪಿತಳಾದ (ಆಕೆಯು), ಭೀಮಸೇನನನ್ನು ಉದ್ದೇಶಿಸಿ ಕರವನ್ನು ಪಿಡಿದವಳಾಗಿ ನುಡಿದಳು.
ದ್ರೌಪದೀ
ತ್ರಾತುಮರ್ಹಸಿ ಮಾಂ ಭೀಮ ಕ್ಷತ್ರಧರ್ಮಮನುಸ್ಮರನ್ |
ಜಹಿ ತಂ ಪಾಪಕರ್ಮಾಣಂ ಶಂಬರಂ ಮಘವಾನಿವ ||36||
ದ್ರೌಪದಿ ಭೀಮನೇ! ಕ್ಷತ್ರಧರ್ಮವನ್ನು ಸ್ಮರಿಸುತ್ತಾ, ನನ್ನನ್ನು ಸಂರಕ್ಷಿಸಲು (ನೀನೇ) ಅರ್ಹನಾಗಿರುವಿ, ಶಂಬರನನ್ನು ಇಂದ್ರನು ಗೆದ್ದಂತೆ ಪಾಪಕರ್ಮಿಯನ್ನು ಗೆಲ್ಲುವವನಾಗು.
ನ ಹಿ ತೇ ವಿಕ್ರಮೇ ತುಲ್ಯಃ ಪುಮಾನಸ್ತೀಹ ಕಶ್ಚನ |
ಶ್ರುತಂ ತತ್ ಸರ್ವಲೋಕೇಷು ಪರಮವ್ಯಸನೇ ತಥಾ ||37||
`ವಿಕ್ರಮದಲ್ಲಿ ನಿನ್ನ ಸಮಾನನಾದವ ಯಾವ ಪುರುಷನೂ ಈ ಭೂಮಿಯಲ್ಲಿ ಇಲ್ಲ' ಎನ್ನುವುದು ಎಲ್ಲ ಲೋಕದಲ್ಲೂ ಶ್ರುತವಾಗಿದೆ, ಹಾಗೆಯೇ ದೊಡ್ಡ ಆಪತ್ತಿನಲ್ಲಿ (ರಕ್ಷಿಸುವವರು) ನಿನಗಿಂತ ಮಿಗಿಲಾದವರು ಯಾರೂ ಇಲ್ಲ.
ದ್ವೀಪೋಽಭೂಸ್ತ್ವಂ ಹಿ ಪಾರ್ಥಾನಾಂ ನಗರೇ ವಾರಣಾವತೇ |
ಹಿಡಿಂಬದರ್ಶನೇ ಚೈವ ತಥಾ ತ್ವಮಭವೋ ಗತಿಃ ||38||
ವಾರಣಾವತನಗರದಲ್ಲಿ ಕುಂತಿಯ ಮಕ್ಕಳಿಗೆ ನೀನೇ ದ್ವೀಪದಂತಿದ್ದಿ ತಾನೆ? ಹಿಡಿಂಬನನ್ನು ಕಂಡಾಗಲೂ ನೀನೇ ಗತಿಯಾಗಿದ್ದಿ.
ತಥಾ ವಿರಾಟನಗರೇ ಕೀಚಕೇನ ಭೃಶಾರ್ದಿತಾಮ್ |
ಮಾಮಪ್ಯುದ್ಧೃತವಾನ್ ಕೃಚ್ಛ್ರಾತ್ ಪೌಲೋಮೀಂ ಮಘವಾನಿವ ||39||
ಹಾಗೆಯೇ ಪುಲೋಮನ ಪುತ್ರಿಯನ್ನು (ಶಚೀದೇವಿಯನ್ನು) ಸಂರಕ್ಷಿಸಿದ ಇಂದ್ರನಂತೆ, ವಿರಾಟನಗರದಲ್ಲಿದ್ದಾಗ ಕೀಚಕನಿಂದ ಅತ್ಯಂತವಾಗಿ ಪೀಡಿತಳಾದ ನನ್ನನ್ನು ಆಪತ್ತಿನಿಂದ ಮೇಲೆತ್ತಿದ್ದಿ.
ಯಥೈತಾನ್ಯಕೃಥಾಃ ಪಾರ್ಥ ಮಹಾಕರ್ಮಾಣಿ ವೈ ಪುರಾ |
ತಥಾ ದ್ರೌಣಿಮಮಿತ್ರಘ್ನಂ ವಿನಿಹತ್ಯ ಸುಖೀ ಭವ ||40||
ಪೃಥೆಯ ಪುತ್ರನೆ! ಹಿಂದೆ ಹೇಗೆ ಭಾರೀ ಕರ್ಮಗಳನ್ನು ನೆರವೇರಿಸಿರುವಿಯೋ ಹಾಗೆಯೇ ಶತ್ರುಸಂಹಾರಕನಾದ ದ್ರೋಣಪುತ್ರನನ್ನು ಸಂಹರಿಸಿ, ಸುಖದಿಂದ ಬಾಳು.
ವೈಶಂಪಾಯನಃ
ತಸ್ಯಾ ಬಹುವಿಧಂ ದುಃಖಂ ನಿಶಮ್ಯ ಪರಿದೇವಿತುಮ್ |
ನಾಮರ್ಷಯತ ಕೌಂತೇಯೋ ಭೀಮಸೇನೋ ಮಹಾಬಲಃ ||41||
ವೈಶಂಪಾಯನರು ಆಕೆಯ ದುಃಖದಿಂದ ಬಹುವಿಧವಾದ ರೋದನವನ್ನು ಕೇಳಿದ ಮಹಾಬಲಶಾಲಿಯಾದ ಕುಂತೀಪುತ್ರನಾದ ಭೀಮಸೇನನು ಸಹಿಸದವನಾದನು.
ಸ ಕಾಂಚನವಿಚಿತ್ರಾಂಗಮಾರುರೋಹ ರಥೋತ್ತಮಮ್ |
ಆದಾಯ ರುಚಿರಂ ಚಿತ್ರಂ ಸಮಾರ್ಗಣಗುಣಂ ಧನುಃ ||42||
ಆತನು ಸುಂದರವಾದ ಆಶ್ಚರ್ಯಕರವಾದ ಬಾಣ ಶಿಂಜಿನಿಗಳಿಂದ (ಬಿಲ್ಲಿನ ಅಲಂಕಾರಸಾಮಗ್ರಿ ವಿಶೇಷ) ಕೂಡಿದ ಬಿಲ್ಲನ್ನು ಎತ್ತಿಕೊಂಡು, ಹೊನ್ನಿನಿಂದ ವಿಶೇಷವಾಗಿ ಅಲಂಕತವಾದ ಶ್ರೇಷ್ಠರಥವನ್ನು ಏರಿದನು.
ನಕುಲಂ ಸಾರಥಿಂ ಕೃತ್ವಾ ದ್ರೋಣಪುತ್ರವಧೇ ಧೃತಃ |
ವಿಸ್ಫಾರ್ಯ ಸಶರಂ ಚಾಪಂ ತೂರ್ಣಮಶ್ವಾನಚೋದಯತ್ ||43||
ದ್ರೋಣಪುತ್ರನನ್ನು ಸಂಹರಿಸಲು ನಿಶ್ಚಯಿಸಿದ ಭೀಮಸೇನನು ನಕುಲನನ್ನು ಸಾರಥಿಯನ್ನಾಗಿಸಿಕೊಂಡು, ಬಾಣದಿಂದ ಯುಕ್ತವಾದ ಬಿಲ್ಲನ್ನು ಝೇಂಕರಿಸುತ್ತಾ, ವೇಗವಾಗಿ ಓಡುವಂತೆ ಕುದುರೆಗಳನ್ನು ಪ್ರಚೋದಿಸಿದನು.
ತೇ ಹಯಾಃ ಪುರುಷವ್ಯಾಘ್ರ ಚೋದಿತಾ ವಾತರಂಹಸಃ |
ವೇಗೇನ ಸಹಸಾ ಜಗ್ಮುರ್ಹರಯಃ ಶೀಘ್ರಗಾಮಿನಃ ||44||
ಪುರುಷಶ್ರೇಷ್ಠನೆ! ಗಾಳಿಯಂತೆ ವೇಗವನ್ನು ಹೊಂದಿದ ಆ ಕುದುರೆಗಳು (ಅವನಿಂದ) ಪ್ರೇರಿತನಾದ. ಶೀಘ್ರವಾಗಿ ಓಡುವ ಆ ಕುದುರೆಗಳು ಕೂಡಲೇ ವೇಗದಿಂದ ಹೊರಟವು.
ಶಿಬಿರಾತ್ ಸ ಗೃಹೀತ್ವಾ ತು ರಥಸ್ಯ ಪದಮಚ್ಯುತಃ |
ದ್ರೋಣಪುತ್ರಗತೇನಾಶು ಯಯೌ ಮಾರ್ಗೇಣ ಭಾರತ ||45||
ಭರತಕುಲೋತ್ಪನ್ನನೇ! (ಮಾತಿನಿಂದ) ಚ್ಯುತನಾಗದ ಆತನು (ಭೀಮಸೇನನು, ಅಶ್ವತ್ಥಾಮನ) ರಥದ ಜಾಡನ್ನು ತಿಳಿದು, ಶಿಬಿರದಿಂದ

ದ್ರೋಣಪುತ್ರನು ಹೋದ ಮಾರ್ಗದಲ್ಲಿ ಶೀಘ್ರವಾಗಿ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ದ್ರೌಪದೀಪ್ರಾಯೋಪವೇಶೋ ನಾಮ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ದ್ರೋಣಪುತ್ರನನ್ನು ಕೊಲ್ಲಲು ಭೀಮಸೇನನು ಹೊರಡಲು,
ಕೃಷ್ಣನು ಅಶ್ವತ್ಥಾಮನ ದುರ್ವರ್ತನೆಗಳನ್ನು ಧರ್ಮನಂದನನಿಗೆ ತಿಳಿಸಿ, ಭೀಮನನ್ನು ಆತನಿಂದ ಸಂರಕ್ಷಿಸಬೇಕು ಎಂದೂ ತಿಳಿಸಿದನು.
ವೈಶಂಪಾಯನಃ
ತಸ್ಮಿನ್ ಪ್ರಯಾತೇ ದುರ್ಧರ್ಷೇ ಯದೂನಾಮೃಷಭಸ್ತತಃ |
ಅಬ್ರವೀತ್ ಪುಂಡರೀಕಾಕ್ಷಃ ಕುಂತೀಪುತ್ರಂ ಯುಧಿಷ್ಠಿರಮ್ ॥1॥
ವೈಶಂಪಾಯನ ಇನ್ನೊಬ್ಬರಿಂದ ಧರ್ಷಣಕ್ಕೆ ಒಳಗಾಗದ ಆತನು (ಭೀಮಸೇನನು) ಹೊರಡಲು, ಆನಂತರ, ಯಾದವರಲ್ಲಿ ಶ್ರೇಷ್ಠನಾದ, ಕಮಲದಂತೆ ಕಣ್ಣುಗಳನ್ನು ಹೊಂದಿರುವ ಕೃಷ್ಣನು ಕುಂತೀಪುತ್ರನಾದ ಯುಧಿಷ್ಠಿರನನ್ನು ಉದ್ದೇಶಿಸಿ ನುಡಿದನು.
ಶ್ರೀಭಗವಾನ್
ಏಷ ತೇ ಪಾಂಡವೋ ಭ್ರಾತಾ ಪುತ್ರಶೋಕಮಪಾರಯನ್ |
ಜಿಘಾಂಸುರ್ದ್ರೌಣಿಮಾಕ್ರಂದೇ ಏಕ ಏವಾಭಿಧಾವತಿ ॥2॥
ಕೃಷ್ಣ ಈ ನಿನ್ನ ಸಹೋದರನಾದ ಪಾಂಡುಪುತ್ರನು (ಭೀಮಸೇನನು) ಪುತ್ರಶೋಕವನ್ನು ತಾಳಲಾರದೆ ಯುದ್ಧದಲ್ಲಿ ದ್ರೋಣಪುತ್ರನನ್ನು ಸಂಹರಿಸಲು ಒಬ್ಬನೇ ಹೊರಟಿರುವನು.
ಭೀಮಃ ಪ್ರಿಯಸ್ತೇ ಸರ್ವೇಭ್ಯೋ ಭ್ರಾತೃಭ್ಯೋ ಭರತರ್ಷಭ |
ತಂ ಕೃಚ್ಛ್ರಗತಮದ್ಯ ತ್ವಂ ಕಸ್ಮಾನ್ನಾಭ್ಯವಪದ್ಯಸೇ ॥3॥
ಭರತಕುಲೋತ್ಪನ್ನನೇ! ಎಲ್ಲ ಸಹೋದರರಿಗಿಂತಲೂ ಭೀಮನು ನಿನಗೆ ಹೆಚ್ಚು ಪ್ರಿಯ. ಈಗ ಆಪತ್ತಿನಲ್ಲಿರುವ ಆತನ ಸಹಾಯಕ್ಕಾಗಿ ಏತಕ್ಕಾಗಿ ಧಾವಿಸುತ್ತಿಲ್ಲ?
ಯತ್ತದಾಚಷ್ಟ ಪುತ್ರಾಯ ದ್ರೋಣಃ ಪ್ರಹರತಾಂ ವರಃ |
ಅಸ್ತ್ರಂ ಬ್ರಹ್ಮಶಿರೋ ನಾಮ ತದ್ದಹೇತ್ ಪೃಥಿವೀಮಪಿ ॥4॥
ಯುದ್ಧಾಳುಗಳಲ್ಲಿ ಹಿರಿಯನಾದ ದ್ರೋಣನು ಪುತ್ರನಿಗೆ (ಅಶ್ವತ್ಥಾಮನಿಗೆ) ಯಾವುದನ್ನು ಉಪದೇಶಿಸಿರುವನೋ ಆ ಬ್ರಹ್ಮಶಿರ ಎಂಬ ಅಸ್ತ್ರವು ಭೂಮಿಯನ್ನೇ ದಹಿಸೀತು.
ತನ್ಮಹಾತ್ಮಾ ಮಹಾಭಾಗಃ ಕೇತುಃ ಸರ್ವಧನುಷ್ಮತಾಮ್ |
ಪ್ರತ್ಯಪಾದಯದಾಚಾರ್ಯಃ ಪ್ರೀಯಮಾಣೋ ಧನಂಜಯಮ್ ॥5॥
ಮಹಾತ್ಮನಾದ ಎಲ್ಲ ಬಿಲ್ಲಾಳುಗಳಿಗೆ ಧ್ವಜದಂತಿರುವ ಮಹಾಭಾಗನಾದ ಆಚಾರ್ಯನು (ದ್ರೋಣನು) ಅರ್ಜುನನಲ್ಲಿ ಪ್ರೀತಿಯುಳ್ಳವನಾಗಿ ಅದನ್ನು (ಆ ಬ್ರಹ್ಮಾಸ್ತ್ರವನ್ನು ಅರ್ಜುನನಿಗೆ) ಉಪದೇಶಿಸಿರುವನು.
ತಂ ಪುತ್ರೋಽಪ್ಯೇಕ ಏವೈನಮ್ ಅನ್ವಯಾಚದಮರ್ಷಣಃ |
ತತಃ ಪ್ರೋವಾಚ ಪುತ್ರಾಯ ನಾತಿಹೃಷ್ಟಮನಾ ಇವ ॥6॥
ಇದನ್ನು ( ಅರ್ಜುನನಿಗೆ ಉಪದೇಶಿಸಿ ತನಗೆ ಉಪದೇಶಿಸದೇ ಇರುವದನ್ನು) ಸಹಿಸದ ಒಬ್ಬನೇ ಪುತ್ರನಾದ ಅಶ್ವತ್ಥಾಮನು (ಅಸ್ತ್ರವನ್ನು ದ್ರೋಣರಲ್ಲಿ) ಯಾಚಿಸಿದನು. ಆನಂತರದಲ್ಲಿ ಮನಸ್ಸಿಲ್ಲದಿದ್ದರೂ (ದ್ರೋಣರು) ಮಗನಿಗೆ ಉಪದೇಶಿಸಿದರು.
ವಿದಿತಂ ಚಾಪಲಂ ಹ್ಯಾಸೀದ್ ಆತ್ಮಜಸ್ಯ ಮಹಾತ್ಮನಃ |
ಸರ್ವಧರ್ಮವಿದಾಚಾರ್ಯಃ ಸೋಽನ್ವಶಾಸತ್ ಸುತಂ ತತಃ ॥7॥
ಮಹಾತ್ಮನಾದ ಪುತ್ರನಿಗೆ ಚಾಂಚಲ್ಯವು ಇದೆ ಎಂದು ತಿಳಿದಿತ್ತು, ಎಲ್ಲ ಧರ್ಮಗಳನ್ನು ತಿಳಿದಿದ್ದ ಆ ಆಚಾರ್ಯನು ಆನಂತರದಲ್ಲಿ ಮಗನನ್ನು ನಿಯಮಿಸಿದ್ದನು.
ದ್ರೋಣಃ
ಪರಮಾಪದ್ಗತೇನಾಪಿ ನ ಸ್ಮ ತಾತ ತ್ವಯಾ ರಣೇ |
ಇದಮಸ್ತ್ರಂ ಪ್ರಯೋಕ್ತವ್ಯಂ ಮಾನುಷೇಷು ವಿಶೇಷತಃ ॥8॥
ದ್ರೋಣ ಪುತ್ರನೇ! ಭಾರೀ ಆಪತ್ತಿನಲ್ಲಿದ್ದರೂ ನೀನು ಈ ಅಸ್ತ್ರವನ್ನು ರಣದಲ್ಲಿ ಪ್ರಯೋಗಿಸಬಾರದು, ವಿಶೇಷವಾಗಿ ಮನುಷ್ಯರಲ್ಲಿ ಪ್ರಯೋಗಿಸಲೇ ಬಾರದು.
ಶ್ರೀಭಗವಾನ್
ಇತ್ಯುಕ್ತವಾನ್ ಗುರುಃ ಪುತ್ರಂ ದ್ರೋಣಃ ಪಶ್ಚಾದಥೋಕ್ತವಾನ್ |
ನ ತ್ವಂ ಜಾತು ಸತಾಂ ಮಾರ್ಗೇ ಸ್ಥಾತೇತಿ ಪುರುಷರ್ಷಭ ॥9॥
ಕೃಷ್ಣ ಗುರುಗಳಾದ ದ್ರೋಣರು ಅನಂತರದಲ್ಲಿ ಈ ರೀತಿಯಾಗಿ ಹೇಳಿದರು: `ಪುರುಷ ಶ್ರೇಷ್ಠನೆ! ನೀನು ಎಂದೂ ಸಜ್ಜನರ ಮಾರ್ಗದಲ್ಲಿ ಇದ್ದವನಲ್ಲ' ಎಂದು.
ಸ ತದಾಜ್ಞಾಯ ದುಷ್ಟಾತ್ಮಾ ಪಿತುರ್ವಚನಮಪ್ರಿಯಮ್ |

ನಿರಾಶಃ ಸರ್ವಕಲ್ಯಾಣೇ ಶೋಚನ್ ಪರ್ಯಪತನ್ಮಹೀಮ್ ॥10॥
ದುಷ್ಟಸ್ವಭಾವದವನಾದ ಆತನು ಅಪ್ರಿಯವಾದ ತಂದೆಯ ಮಾತನ್ನು ಕೇಳಿ, ಎಲ್ಲ ವಿಧವಾದ ಮಂಗಳದಿಂದ ನಿರಾಶನಾಗಿ, ದುಃಖಿಸುತ್ತಾ ಭೂಮಿಯನ್ನು ಸುತ್ತುತ್ತಿದ್ದನು.
ಅಶ್ವತ್ಥಾಮಾ ಕುರುಶ್ರೇಷ್ಠ ವನಸ್ಥೇ ತ್ವಯಿ ಭಾರತ |
ಅವಸದ್ ದ್ವಾರಕಾಮೇತ್ಯ ವೃಷ್ಣಿಭಿಃ ಪರಮಾರ್ಚಿತಃ ॥11॥
ಭರತಕುಲೋತ್ಪನ್ನನೇ! ಆ ನರಶ್ರೇಷ್ಠನು ನೀನು ವನದಲ್ಲಿರುವಾಗ, ಒಮ್ಮೆ ಯಾದವರಿಂದ ಪೂಜಿತನಾಗಿ ದ್ವಾರಕೆಯಲ್ಲಿ ವಾಸಿಸಿದ್ದನು.
ಸ ಕದಾಚಿತ್ ಸಮುದ್ರಾಂತೇ ವಸನ್ ದ್ವಾರವತೀಮನು |
ಏಕ ಏಕಂ ಸಮಾಗಮ್ಯ ಮಾಮುವಾಚ ಹಸನ್ನಿವ ॥12॥
ಆತನು ಒಮ್ಮೆ ದ್ವಾರಾವತಿಯ ಸಮುದ್ರತೀರದಲ್ಲಿ ಒಬ್ಬನೇ ನಾನಿರುವಾಗ ಆತನೊಬ್ಬನೇ ನನ್ನ ಬಳಿ ಬಂದು ಹುಸಿಯಾಗಿ ನಗುತ್ತಾ ನನ್ನನ್ನು ಉದ್ದೇಶಿಸಿ ಹೇಳಿದನು.
ಯತ್ ತದುಗ್ರಂ ತಪಃ ಕೃಷ್ಣ ಚರನ್ನಮಿತವಿಕ್ರಮಃ |
ಅಗಸ್ತ್ಯಾದ್ ಭಾರತಾಚಾರ್ಯಃ ಪ್ರತ್ಯಪದ್ಯತ ಮೇ ಪಿತಾ ॥13॥
ಅಸ್ತ್ರಂ ಬ್ರಹ್ಮಶಿರೋ ನಾಮ ದೇವಗಂಧರ್ವಪೂಜಿತಮ್ |
ತದದ್ಯ ಮಯಿ ದಾಶಾರ್ಹ ಯಥಾ ಪಿತರಿ ಮೇ ತಥಾ ॥14॥
ದಶಾರ್ಹಕುಲೋತ್ಪನ್ನ ಕೃಷ್ಣ! ಅತಿಪರಾಕ್ರಮಿಯಾದ ಭರತಕುಲದ ಆಚಾರ್ಯನಾದ ನನ್ನ ತಂದೆಯು ಉಗ್ರವಾದ ತಪಸ್ಸನ್ನಾಚರಿಸಿ, ದೇವತೆಗಳಿಂದ ಗಂಧರ್ವರಿಂದ ಪೂಜಿತವಾದ ಬ್ರಹ್ಮಶಿರಾಸ್ತ್ರವನ್ನು ಅಗಸ್ತ್ಯಮುನಿಗಳಿಂದ ಪಡೆದನು, ಅದು ನನ್ನ ತಂದೆಯಲ್ಲಿ ಹೇಗಿದ್ದಿತೋ ಹಾಗೆ ಈಗ ನನ್ನಲ್ಲಿದೆ.
ಅಸ್ಮತ್ತಸ್ತದುಪಾದಾಯ ದಿವ್ಯಮಸ್ತ್ರವಿದಾಂ ವರ |
ಮಮಾಪ್ಯಸ್ತ್ರಂ ಪ್ರಯಚ್ಛ ತ್ವಂ ಚಕ್ರಂ ರಿಪುಹರಂ ರಣೇ ॥15॥
ಅಸ್ತ್ರಜ್ಞರಲ್ಲಿ ಹಿರಿಯನಾದವನೇ! ನನ್ನಿಂದ ದಿವ್ಯವಾದ ಅದನ್ನು (ಬ್ರಹ್ಮಶಿರಾಸ್ತ್ರವನ್ನು) ಪಡೆದು, ನನಗಾದರೂ ರಣದಲ್ಲಿ ಶತ್ರುಗಳನ್ನು ಸಂಹರಿಸುವ ಚಕ್ರಾಯುಧವನ್ನು ನೀನು ಕೊಡು.
ಸ ರಾಜನ್ ಪ್ರೀಯಮಾಣೇನ ಮಯಾಽಪ್ಯುಕ್ತಃ ಕೃತಾಂಜಲಿಃ |
ಯಾಚಮಾನಃ ಪ್ರಯತ್ನೇನ ಮತ್ತೋಽಸ್ತ್ರಂ ಭರತರ್ಷಭ ॥16॥
ಭರತಕುಲೋತ್ಪನ್ನ ರಾಜನೆ! ನನ್ನಿಂದ ಅಸ್ತ್ರವನ್ನು ಪಡೆಯಲು, ಕೈಮುಗಿದು ಪ್ರಯತ್ನಪೂರ್ವಕವಾಗಿ ಯಾಚಿಸುತ್ತಿದ್ದ ಆತನನ್ನು ಉದ್ದೇಶಿಸಿ ನಾನು ಸಂತಸಗೊಳಿಸಲೆಂದೇ ಹೇಳಿದೆನು.
ದೇವದಾನವಗಂಧರ್ವಮನುಷ್ಯಪತಗೋರಗಾಃ |
ನ ಸಮಾ ಮಮ ವೀರ್ಯಸ್ಯ ಶತಾಂಶೇನಾಪಿ ಪಿಂಡಿತಾಃ ॥17॥
ದೇವತೆಗಳು, ದಾನವರು, ಗಂಧರ್ವರು, ಮನುಷ್ಯರು, ಪಕ್ಷಿಗಳು, ಸರ್ಪಗಳು ಇವರೆಲ್ಲರೂ ಒಟ್ಟಾದರೂ ನನ್ನ ವೀರ್ಯದ (ಪರಾಕ್ರಮದ) ನೂರನೇ ಒಂದು ಅಂಶಕ್ಕೆ ಸಮರಾಗರು.
ಇದಂ ಧನುರಿಯಂ ಶಕ್ತಿರಿದಂ ಚಕ್ರಮಿಯಂ ಗದಾ |
ಯದ್ಯದಿಚ್ಛಸಿ ಚೇದಸ್ತ್ರಂ ಮತ್ತಸ್ತತ್ತದ್ ದದಾಮಿ ತೇ ॥18॥
ಈ ಧನು, ಈ ಶಕ್ತಿ, ಈ ಚಕ್ರ, ಯಾವ ಯಾವ ಅಸ್ತ್ರವನ್ನು ನನ್ನಿಂದ ಬಯಸುವಿಯೋ ಅದನ್ನು ನಾನು ನಿನಗೆ ನೀಡುವೆನು.
ಯಚ್ಛಕ್ನೋಷಿ ಸಮುದ್ಯಂತುಂ ಪ್ರಯೋಕ್ತುಮಪಿ ವಾ ರಣೇ |
ತದ್ ಗೃಹಾಣ ವಿನಾಽಸ್ತ್ರೇಣ ಯನ್ಮೇ ದಾತುಮಿಹೇಚ್ಛಸಿ ॥19॥
ನನಗೆ ಯಾವ ಅಸ್ತ್ರವನ್ನು ಕೊಡಲು ಈಗ ಇಚ್ಛಿಸಿರುವಿಯೋ, ಅದರ ವಿನಿಮಯವಿಲ್ಲದೇ, ಯಾವ ಶಸ್ತ್ರವನ್ನು ಮೇಲೆ ಎತ್ತಲು ಶಕ್ಯವಿದೆಯೋ, ರಣರಂಗದಲ್ಲಿ ಪ್ರಯೋಗಿಸಲು ಶಕ್ಯವಿದೆಯೋ ಅದನ್ನು ಸ್ವೀಕರಿಸು.
ಸ ಸುನಾಭಂ ಸಹಸ್ರಾರಂ ವಜ್ರನಾಭಮಯಸ್ಮಯಮ್ |
ವವ್ರೇ ಚಕ್ರಂ ಮಹಾಭಾಗೋ ಮತ್ತಃ ಸ್ಪರ್ಧನ್ ಮಯಾ ಸಹ ॥20॥
ನನ್ನೊಡನೆ ಸ್ಪರ್ಧಿಸುತ್ತಿದ್ದ ಆ ಮಹಾಭಾಗನು, ಸುಂದರಗುಂಬದಲ್ಲಿ ಸಾವಿರ ಅರಗಳಿಂದ ಕೂಡಿದ ವಜ್ರಮಯವಾದ ಗುಂಬದಿಂದ ಅತ್ಯಾಶ್ಚರ್ಯಕರವಾದ ಚಕ್ರವನ್ನು ನನ್ನಿಂದ ಬಯಸಿದನು.
ಗೃಹಾಣ ಚಕ್ರಮಿತ್ಯುಕ್ತೋ ಮಯಾ ತು ತದನಂತರಮ್ |
ಜಗ್ರಾಹೋಪೇತ್ಯ ಸಹಸಾ ಚಕ್ರಂ ಸವ್ಯೇನ ಪಾಣಿನಾ ॥21॥
`ಚಕ್ರವನ್ನು ಸ್ವೀಕರಿಸು' ಎಂದು ನಾನು ಹೇಳಲು, ಆನಂತರ ವೇಗವಾಗಿ ಬಂದು ಎಡದ ಕೈಯಿಂದ ಚಕ್ರವನ್ನು ಹಿಡಿದನು.
ನ ಚೈನಮಶಕತ್ ಸ್ಥಾನಾತ್ ಪ್ರಚಾಲಯಿತುಮಪ್ಯುತ ॥22॥
ಅಥೈನಂ ದಕ್ಷಿಣೇನಾಪಿ ಗ್ರಹೀತುಮುಪಚಕ್ರಮೇ |
ಸರ್ವಯತ್ನೇನ ತೇನಾಪಿ ಗೃಹ್ಯ ನೈನಮಕಂಪಯತ್ ॥23॥
ಅದನ್ನು ಆ ಜಾಗದಿಂದ ಕದಲಿಸಲೂ ಸಮರ್ಥನಾಗಲಿಲ್ಲ. ಅನಂತರ ಬಲ ಕೈಯಿಂದ ಹಿಡಿದುಕೊಂಡನು, ಎಲ್ಲ ವಿಧದ ಪ್ರಯತ್ನವನ್ನು ಮಾಡಿದರೂ ಅದನ್ನು ಅಲುಗಾಡಿಸಲೂ ಆಗಲಿಲ್ಲ.
ತತಃ ಸರ್ವಬಲೇನಾಪಿ ಯದ್ಯೈನಂ ನ ಶಶಾಕ ಹ |
ಉದ್ಯಂತುಂ ವಾ ಚಾಲಯಿತುಂ ದ್ರೌಣಿಃ ಪರಮದುರ್ಮನಾಃ ॥24॥

ಕೃತ್ವಾ ಯತ್ನಂ ಪರಂ ಶ್ರಾಂತಃ ಸ ನ್ಯವರ್ತತ ಭಾರತ ॥25॥
ಭರತಕುಲೋತ್ಪನ್ನನೇ! ಆನಂತರದಲ್ಲಿ ದ್ರೋಣಪುತ್ರನು ಸಂಪೂರ್ಣ ಬಲದಿಂದಲೂ ಸಹ ಅದನ್ನು ಎತ್ತಲು ಅಥವಾ ಹಂದಾಡಿಸಲೂ ಸಮರ್ಥ- ನಾಗಲಿಲ್ಲವೋ, ಪೂರ್ಣಯತ್ನಿಸಿ ಆಯಾಸಗೊಂಡು ಬೇಸರದಿಂದ ಹಿಂತಿರುಗಿದನು.
ನಿವೃತ್ತಮನಸಂ ತಸ್ಮಾದಭಿಪ್ರಾಯಾದ್ ವಿಚೇತಸಮ್ |
ಅಹಮಾಮಂತ್ರ್ಯ ಸಂವಿಗ್ನಮಶ್ವತ್ಥಾಮಾನಮಬ್ರುವಮ್ ॥26॥
ಆ ಅಭಿಪ್ರಾಯದಿಂದ (ಚಕ್ರವನ್ನು ಪಡೆಯಬೇಕೆಂಬ ಅಭಿಪ್ರಾಯದಿಂದ) ನಿವೃತ್ತಮನಸ್ಕನಾದ, ವ್ಯಗ್ರನಾದ, ಉದ್ವೇಗಕ್ಕೆ ಒಳಗಾದ ಅಶ್ವತ್ಥಾಮನನ್ನು ನಾನು ಕರೆದು ಹೇಳಿದೆನು.
ಯಃ ಸ ದೈವಮನುಷ್ಯೇಷು ಪ್ರಮಾಣಂ ಪರಮಂ ಗತಃ |
ಗಾಂಡೀವಧನ್ವಾ ಶ್ವೇತಾಶ್ವಃ ಕಪಿಪ್ರವರಕೇತನಃ ॥27॥
ಯಃ ಸಾಕ್ಷಾದ್ದೇವದೇವೇಶಂ ಶಿತಿಕಂಠಮುಮಾಪತಿಮ್ |
ದ್ವಂದ್ವಯುದ್ಧೇ ಪುರಾ ಜಿಷ್ಣುಸ್ತೋಷಯಾಮಾಸ ಶಂಕರಮ್ ॥28॥
ಯಸ್ಮಾತ್ ಪ್ರಿಯತರೋ ನಾಸ್ತಿ ಮಮಾನ್ಯಃ ಪುರುಷೋ ಭುವಿ |
ನಾದೇಯಂ ತಸ್ಯ ಮೇ ಕಿಂಚಿದಪಿ ಪ್ರಾಣಾನ್ಮಹಾತ್ಮನಃ ॥29॥
ಯಾವನು ದೇವ-ಮನುಷ್ಯರಲ್ಲಿ ಪರಮಪ್ರಮಾಣನಾಗಿರುವನೋ, ಗಾಂಡೀವಧನುವನ್ನು ಧರಿಸಿರುವನೋ, ಬಿಳಿಯ ಅಶ್ವಗಳನ್ನು ಹೊಂದಿರುವನೋ, ಕಪಿಶ್ರೇಷ್ಠನನ್ನು ಧ್ವಜದಲ್ಲಿ ಹೊಂದಿರುವನೋ, ಯಾವ ಜಯಶಾಲಿಯಾದ ಅರ್ಜುನನು ಹಿಂದೆ ದೇವದೇವೇಶನಾದ ವಿಷಕಂಠನಾದ ಉಮಾಪತಿಯಾದ ಶಂಕರನನ್ನು ಸಾಕ್ಷಾತ್ತಾಗಿ ದ್ವಂದಯುದ್ಧದಲ್ಲಿ ಸಂತೋಷಪಡಿಸಿದನೋ, ನನಗೆ ಯಾವ ಅರ್ಜುನನಿಂದ ಪ್ರಿಯತರರಾದ ಯಾವ ಪುರುಷರೂ ಈ ಭೂಮಿಯಲ್ಲಿ ಮತ್ತೊಬ್ಬರು ಇಲ್ಲವೋ, ನನ್ನ ಪ್ರಾಣಕ್ಕಿಂತಲೂ ಹೆಚ್ಚಿನವನಾದ ಆತನಿಗೆ ಕೊಡದೇ ಇರುವುದು ಯಾವುದೂ (ಯಾವ ವಸ್ತುವೂ) ನನ್ನಲ್ಲಿ ಇಲ್ಲ.
ತೇನಾಪಿ ಸುಹೃದಾ ಬ್ರಹ್ಮನ್ ಪಾರ್ಥೇನಾಕ್ಲಿಷ್ಟಕರ್ಮಣಾ |
ನೋಕ್ತಪೂರ್ವಮಿದಂ ವಾಕ್ಯಂ ಯಸ್ತ್ವಂ ಮಾಮಭಿಭಾಷಸೇ ॥30॥
ಬ್ರಾಹ್ಮಣನೇ! ನೀನು ನನಗೆ ಏನನ್ನು ಹೇಳಿದೆಯೋ ಈ ಮಾತನ್ನು, ಕ್ಲಿಷ್ಟಕರ್ಮಗಳನ್ನು ಸುಲಭದಲ್ಲಿ ನೆರವೇರಿಸುವ, ಅತ್ಯಂತ ಸ್ನೇಹಿತನಾದ ಆ ಕುಂತೀಪುತ್ರನೂ ಸಹ,  ಈ ಮೊದಲು ಹೇಳಿಲ್ಲ.
ಬ್ರಹ್ಮಚರ್ಯಂ ಮಹದ್ಘೋರಂ ಚರಿತ್ವಾ ದ್ವಾದಶವಾರ್ಷಿಕೀಮ್ |
ಹಿಮವತ್ಪಾದಮಭ್ಯೇತ್ಯ ಯೋ ಮಯಾ ತಪಸಾಽಽರ್ಜಿತಃ ॥31॥
ಸಮಾನವ್ರತಚಾರಿಣ್ಯಾಂ ರುಗ್ಮಿಣ್ಯಾಂ ಯೋ ವ್ಯಜಾಯತ |
ಸನತ್ಕುಮಾರಸ್ತೇಜಸ್ವೀ ಪ್ರದ್ಯುಮ್ನೋ ನಾಮ ಮೇ ಸುತಃ ॥32॥
ತೇನಾಪ್ಯೇತನ್ಮಹದ್ದಿವ್ಯಂ ಚಕ್ರಮಪ್ರತಿಮಂ ರಣೇ |
ನ ಪ್ರಾರ್ಥಿತಮಭೂನ್ ಮೂಢ ತದಿದಂ ಪ್ರಾರ್ಥಿತಂ ತ್ವಯಾ ॥33॥
ಮೂರ್ಖನೇ! ಹಿಮವತ್‌ಪರ್ವತವನ್ನು ಏರಿ, ಭಾರೀಘೋರವಾದ ಬ್ರಹ್ಮಚರ್ಯದಿಂದ ಹನ್ನೆರಡುವರ್ಷ ತಪಸ್ಸನ್ನು ಆಚರಿಸಿ, ನಾನು ಯಾರನ್ನು ಪಡೆದೆನೋ, ನನ್ನಂತೆ ತಪವನ್ನು ಆಚರಿಸಿದ ರುಕ್ಮಿಣಿಯಲ್ಲಿ ಯಾರು ಅವತರಿಸಿದನೋ, ಆತನೇ ಸನತ್‌ಕುಮಾರನ ಅವತಾರನಾದ ತೇಜಸ್ವಿಯಾದ ಪ್ರದ್ಯುಮ್ನ ಎಂಬ ಹೆಸರಿನ ನನ್ನ ಪುತ್ರನು. ಆತನೂ ಸಹ ಮಹತ್ತಾದ ದೇವಸಂಬಂಧಿಯಾದ ಯುದ್ಧಭೂಮಿಯಲ್ಲಿ ಅಸದೃಶವಾದ ಈ ಚಕ್ರವನ್ನು ಯಾಚಿಸಿರುವುದಿಲ್ಲ, ಅಂತಹದನ್ನು ನೀನು ಪ್ರಾರ್ಥಿಸಿರುವಿ.
ರಾಮೇಣಾತಿಬಲೇನೈವ ನೋಕ್ತಪೂರ್ವಂ ಕದಾಚನ |
ನ ಗದೇನ ನ ಸಾಂಬೇನ ಯದಿದಂ ಪ್ರಾರ್ಥಿತಂ ತ್ವಯಾ ॥34॥
ಅತಿ ಬಲಿಷ್ಠನಾದ ಬಲರಾಮನೂ ಈ ಹಿಂದೆ ಈ ರೀತಿಯಾಗಿ ಯಾಚಿಸಿರುವುದಿಲ್ಲ. ಯಾವುದನ್ನು ನೀನು ಯಾಚಿಸಿರುವಿಯೋ ಅದನ್ನು (ನನ್ನ ಸಹೋದರರನಾದ) ಗದನೂ ಕೇಳಿರುವುದಿಲ್ಲ, (ಪುತ್ರನಾದ) ಸಾಂಬನೂ ಕೇಳಿಲ್ಲ.
ದ್ವಾರಕಾವಾಸಿಭಿಶ್ಚೈವ ವೃಷ್ಣ್ಯಂಧಕಮಹಾರಥೈಃ |
ನೋಕ್ತಪೂರ್ವಮಿದಂ ಕ್ಷುದ್ರಂ ಯದಿದಂ ಪ್ರಾರ್ಥಿತಂ ತ್ವಯಾ ॥35॥
ನೀನು ಯಾವ ಕ್ಷುದ್ರವಾದದ್ದನ್ನು ಯಾಚಿಸಿರುವೆಯೋ ಇಂತಹದನ್ನು ಈ ಮೊದಲು ದ್ವಾರಕಾವಾಸಿಗಳಾದ ವೃಷ್ಣಿಗಳಾಗಲಿ, ಅಂಧಕವಂಶಜರಾಗಲಿ ಯಾಚಿಸಿರುವುದಿಲ್ಲ.
ಭಾರತಾಚಾರ್ಯಪುತ್ರಃ ಸನ್ ಮಾನಿತಸ್ತ್ವಂ ಮಯಾ ದ್ವಿಜಃ |
ಚಕ್ರೇಣ ರಥಿನಾಂ ಶ್ರೇಷ್ಠ ಯನ್ನುಸ್ತಾತ ಯುಯುತ್ಸಸೇ ॥36॥
ಭರತಕುಲೋತ್ಪನ್ನರ ಗುರುಗಳ ಪುತ್ರನಾದ ಬ್ರಾಹ್ಮಣನಾದ ನೀನು ನನ್ನಿಂದ ಪೂಜಿತನಾಗಿರುವಿ, ರಥಿಗಳಲ್ಲಿ ಹಿರಿಯನಾದವನೇ, ಪೂಜ್ಯನೇ! ಚಕ್ರದಿಂದ ಯಾರೊಡನೆ ಕಾದಾಡಲು ಬಯಸಿರುವಿ?
ಏವಮುಕ್ತೋ ಮಯಾ ದ್ರೌಣಿರ್ಮಾಮಿದಂ ಪ್ರತ್ಯುವಾಚ ಹ ॥37॥
ಈ ರೀತಿಯಾಗಿ ಪ್ರಶ್ನಿತನಾದ ದ್ರೋಣಪುತ್ರನು ಈ ರೀತಿಯಾಗಿ ನನಗೆ ಉತ್ತರಿಸಿದನು.
ದ್ರೌಣಿಃ
ಪ್ರಯುಜ್ಯ ಭವತೇ ಪೂಜಾಂ ಯೋತ್ಸ್ಯೇ ಕೃಷ್ಣ ತ್ವಯಾ ಸಹ ॥38॥
ಪ್ರಾರ್ಥಿತಂ ತೇ ಮಯಾ ಚಕ್ರಂ ದೇವದಾನವಪೂಜಿತಮ್ |
ಅಜೇಯಃ ಸ್ಯಾಮಿತಿ ವಿಭೋ ಸತ್ಯಮೇತದ್ ಬ್ರವೀಮಿ ತೇ ॥39॥

ಅಶ್ವತ್ಥಾಮ ಸ್ವಾಮಿಯೇ ಕೃಷ್ಣ! ನಿನಗೆ ಸತ್ಯವನ್ನು ಹೇಳುತ್ತಿರುವೆ, ಅಜೇಯನಾಗಬೇಕು ಎಂದು ದೇವ-ದಾನವರಿಂದ ಪೂಜಿತವಾದ ಚಕ್ರವನ್ನು ನಾನು ನಿನ್ನಲ್ಲಿ ಯಾಚಿಸಿದೆನು, ನಿನಗೆ ಪೂಜೆಯನ್ನು ಸಲ್ಲಿಸಿ, ನಿನ್ನೊಡನೆ ಯುದ್ಧವನ್ನು ಬಯಸಿದ್ದೆನು.
ಸೋಽಹಂ ತದ್ ದುರ್ಲಭಂ ಚಕ್ರಮನವಾಪ್ಯೈವ ಕೇಶವ |
ಪ್ರತಿಯಾಸ್ಯಾಮಿ ಗೋವಿಂದ ಶಿವೇನಾಭಿವದಸ್ವ ಮಾಮ್ ॥40॥
ಕೇಶವ! ಅಂತಹ ನಾನು ದುರ್ಲಭವಾದ ಚಕ್ರವನ್ನು ಪಡೆಯದೇ ಹಿಂತಿರುಗುತ್ತಿರುವೆ. ಕೇಶವ! ನನಗೆ ಮಂಗಳವಾಗಲಿ ಎಂದು ಹರಸು.
ಏತತ್ಸುನಾಭಂ ಭೋಜಾನಾಮೃಷಭೇಣ ತ್ವಯಾ ಧೃತಮ್ |
ಚಕ್ರಮಪ್ರತಿಚಕ್ರೇಣ ಭುವಿ ನಾನ್ಯೋಽಭಿಪದ್ಯತೇ ॥41॥
ಭೋಜವಂಶೀಯರಲ್ಲಿ ಶ್ರೇಷ್ಠನೇ! ಸುಂದರ ಗುಂಬವನ್ನು ಹೊಂದಿರುವ ಈ ಚಕ್ರವನ್ನು ಧರಿಸಿರುವಿ. ಭೂಮಿಯಲ್ಲಿ ಬೇರಾರೂ ಪ್ರತಿಚಕ್ರವನ್ನು ಹೊಂದಿರುವುದಿಲ್ಲ.
ಶ್ರೀಭಗವಾನ್
ಏತಾವದುಕ್ತ್ವಾ ದ್ರೌಣಿರ್ಮಾಂ ಯುಗ್ಯಾನಶ್ವಾನ್ ಧನಾನಿ ಚ |
ಆದಾಯೋಪಯಯೌ ಕಾಲೇ ರತ್ನಾನಿ ವಿವಿಧಾನಿ ಚ ॥42॥
ಕೃಷ್ಣ ದ್ರೋಣಪುತ್ರನು ಈ ರೀತಿಯಾಗಿ ಹೇಳಿ, ಹೊರಡುವ ಕಾಲದಲ್ಲಿ ಹೂಡಲು ಯೋಗ್ಯವಾದ ಕುದುರೆಗಳನ್ನು, ಧನವನ್ನು ಮತ್ತು ವಿವಿಧರತ್ನಗಳನ್ನು ಸ್ವೀಕರಿಸಿ ಹೊರಟನು.
ಸ ಸಂರಬ್ಧೋ ದುರಾತ್ಮಾ ಚ ಚಪಲಃ ಕ್ರೂರ ಏವ ಚ |
ವೇದ ಚಾಸ್ತ್ರಂ ಬ್ರಹ್ಮಶಿರಸ್ತಸ್ಮಾದ್ ರಕ್ಷ್ಯೋ ವೃಕೋದರಃ ॥43॥
ಆತನು (ಅಶ್ವತ್ಥಾಮನು) ಕೋಪಿಷ್ಠನು, ದುಷ್ಟನು, ಚಪಲನು, ಕ್ರೂರನೂ ಸಹ, ಬ್ರಹ್ಮಶಿರಾಸ್ತ್ರವನ್ನು ಹೊಂದಿರುವನು. ಆದ್ದರಿಂದ ವೃಕೋದರನು (ಆತನಿಂದ) ರಕ್ಷ್ಯನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ವಾಸುದೇವವಚನಂ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಆದ್ರುವಂತಂ ಪುನರ್ದೃಷ್ಟ್ವಾ ಭೀಮಂ ದ್ರೋಣಾತ್ಮಜೋ ರುಷಾ |
ಆವೃತ್ಯ ಯುಧ್ಯನ್ ವಿಜಿತೋಽಸ್ತ್ರಂ ಬ್ರಹ್ಮಶಿರ ಆದದೇ ॥156॥
ಭೀಮನು ಪುನಃ ಅಟ್ಟಿಸಿಕೊಂಡು ಬರುವುದನ್ನು ಕಂಡು ಅಶ್ವತ್ಥಾಮನು ಕೋಪದಿಂದ ಹಿಂತಿರುಗಿ ನಿಂತು ಯುದ್ಧಮಾಡಿ ಸೋತು ಬ್ರಹ್ಮಾಸ್ತ್ರವನ್ನು ಎತ್ತಿಕೊಂಡನು.
* * * * *
ನಾಲ್ಕನೆಯ ಅಧ್ಯಾಯ
ಕೃಷ್ಣ ಮುಂತಾದವರು ವೇದವ್ಯಾಸರ ಸಮೀಪದಲ್ಲಿದ್ದ ದ್ರೋಣಪುತ್ರನನ್ನು ಕಂಡರು. ಕೃಷ್ಣಾದಿಗಳನ್ನು ಕಂಡ ಅಶ್ವತ್ಥಾಮನು ಪಾಂಡವರ ನಾಶಕ್ಕಾಗಿ ಬ್ರಹ್ಮಶಿರಾಸ್ತ್ರವನ್ನು ಪ್ರಯೋಗಿಸಿದನು.
ವೈಶಂಪಾಯನಃ
ಏವಮುಕ್ತ್ವಾ ಕುರುಶ್ರೇಷ್ಠಂ ಸರ್ವಯಾದವನಂದನಃ |
ಸರ್ವಾಯುಧವರೋಪೇತಮಾರುರೋಹ ರಥೋತ್ತಮಮ್ ॥1॥
ವೈಶಂಪಾಯನ ಎಲ್ಲ ಯದುಕುಲೋತ್ಪನ್ನರಿಗೆ ಆನಂದದಾಯಕನಾದ ಕೃಷ್ಣನು ಕುರುಶ್ರೇಷ್ಠನನ್ನು ಉದ್ದೇಶಿಸಿ ಈ ರೀತಿಯಾಗಿ ತಿಳಿಸಿ, ಎಲ್ಲ ಆಯುಧಗಳನ್ನು ಹೇರಿದ ಶ್ರೇಷ್ಠರಥವನ್ನು ಏರಿದನು.
ಯುಕ್ತಂ ಪರಮಕಾಂಭೋಜೈಃ ತುರಗೈರ್ಹೇಮಮಾಲಿಭಿಃ |
ಉದಿತಾದಿತ್ಯಸಂಕಾಶಂ ಸರ್ವರತ್ನವಿಭೂಷಿತಮ್ ॥2॥
ದಕ್ಷಿಣೇಽಸ್ಯಾವಹತ್ ಶೈಬ್ಯಃ ಸುಗ್ರೀವಃ ಸವ್ಯತೋ ಧುರಮ್ |
ಪಾರ್ಷ್ಣಿವಾಹೌ ಚ ತಸ್ಯಾಸ್ತಾಂ ಮೇಘಪುಷ್ಪಬಲಾಹಕೌ ॥3॥
ಎಲ್ಲ ಬಗೆಯ ರತ್ನಗಳಿಂದ ಅಲಂಕೃತವಾದ, ಉದಿಸುವ ಸೂರ್ಯನಂತಿರುವ, ಶ್ರೇಷ್ಠವಾದ ಕಾಂಭೋಜದೇಶದಲ್ಲಿ ಉತ್ಪನ್ನವಾದ, ಚಿನ್ನದ ಸರಗಳಿಂದ ಅಲಂಕೃತವಾದ ಕುದುರೆಗಳಿಂದ ಸನ್ನದ್ಧವಾದ ರಥವನ್ನು, ಆ ರಥದ ಬಲಭಾಗದಲ್ಲಿ ಶೈಬ್ಯ ಎಂಬ ಅಶ್ವವು, ಎಡಭಾಗದಲ್ಲಿ ಸುಗ್ರೀವ ಎಂಬ ಅಶ್ವವು ನೊಗವನ್ನು ಹೊತ್ತಿದ್ದವು. ಮೇಘಪುಷ್ಪ ಬಲಾಹಕ ಎಂಬ ಕುದುರೆಗಳು ಜೊತೆಯಲ್ಲಿ ಹೊತ್ತಿದ್ದವು.
ವಿಶ್ವಕರ್ಮಕೃತಾ ದಿವ್ಯಾ ನಾನಾರತ್ನವಿಭೂಷಿತಾ |
ಉಚ್ಛ್ರಿತಾ ಚ ರಥೇ ತಸ್ಮಿನ್ ಧ್ವಜಯಷ್ಟಿರದೃಶ್ಯತ ॥4॥
ವಿಶ್ವಕರ್ಮನಿಂದ ನಿರ್ಮಿತವಾದ ನಾನಾಬಗೆಯ ರತ್ನಗಳಿಂದ ಅಲಂಕೃತವಾದ ಎತ್ತರದ ಧ್ವಜಸ್ತಂಭವು ಅಲ್ಲಿ (ಆ ರಥದಲ್ಲಿ) ಕಾಣುತ್ತಿತ್ತು.`
ವೈನತೇಯಃ ಸ್ಥಿತಸ್ತಸ್ಯಾಂ ಪ್ರಭಾಮಂಡಲರಶ್ಮಿವಾನ್ |
ತಸ್ಯ ಸತ್ಯವತಃ ಕೇತುರ್ಭುಜಂಗಾರಿರದೃಶ್ಯತ ॥5॥

ಪ್ರಭಾಮಂಡಲದ ಕಿರಣಗಳಿಂದ ಯುಕ್ತನಾದ, ಸತ್ಯವಂತರಿಗೆ ಕೇತುಪ್ರಾಯನಾದ, ಸರ್ಪಗಳಿಗೆ ಶತ್ರುವಾದ ವಿನತಾಪುತ್ರನು ಅಲ್ಲಿ (ಆ ಧ್ವಜಸ್ತಂಭದಲ್ಲಿ) ಕಂಡನು.
ಅನ್ವಾರೋಹದ್ ಹೃಷೀಕೇಶಃ ಕೇತುಃ ಸರ್ವಧನುಷ್ಮತಾಮ್ |
ಅರ್ಜುನಃ ಸತ್ಯಕರ್ಮಾ ಚ ಕುರುರಾಜೋ ಯುಧಿಷ್ಠಿರಃ ॥6॥
ಹೃಷೀಕೇಶನು (ಆ ರಥವನ್ನು) ಏರಿದನು, ಎಲ್ಲ ಬಿಲ್ಲಾಳುಗಳಿಗೆ ಧ್ವಜಪ್ರಾಯನಾದ ಅರ್ಜುನನು ಮತ್ತು ಸತ್ಯಕರ್ಮಿಯಾದ ಯುಧಿಷ್ಠಿರನು (ಕೃಷ್ಣನನ್ನು) ಅನುಸರಿಸಿ (ಆ ರಥವನ್ನು) ಏರಿದರು.
ಶುಶುಭಾತೇ ತು ತೌ ವೀರೌ ದಾಶಾರ್ಹಮಭಿತಃ ಸ್ಥಿತೌ |
ರಥಸ್ಥಂ ಶಾರ್ಙ್ಗಧನ್ವಾನಮ್ ಅಶ್ವಿನಾವಿವ ವಾಸವಮ್ ॥7॥
ಶಾರ್ಙ್ಗಧನುರ್ಧಾರಿಯಾದ ದಶಾರ್ಹಕುಲೋತ್ಪನ್ನನಾದ ರಥದಲ್ಲಿರುವ ಕೃಷ್ಣನ ಪಕ್ಕದಲ್ಲಿ ಕುಳಿತ ಆ ಈರ್ವರು ವೀರರು (ಯುಧಿಷ್ಠಿರ, ಅರ್ಜುನನು) ಇಂದ್ರನನ್ನು ಅನುಸರಿಸಿರುವ ಅಶ್ವಿನಿ ದೇವತೆಗಳಂತೆ ಶೋಭಿಸಿದರು.
ಉಭಾವಾರೋಪ್ಯ ದಾಶಾರ್ಹಃ ಸ್ಯಂದನಂ ಲೋಕಪೂಜಿತಮ್ |
ಪ್ರತೋದೇನ ಜವೋಪೇತಾನ್ ಪರಮಾಶ್ವಾನಚೋದಯತ್ ॥8॥
ಲೋಕಪೂಜಿತವಾದ ರಥದಲ್ಲಿ ಈರ್ವರನ್ನು (ಯುಧಿಷ್ಠಿರ, ಅರ್ಜುನನನ್ನು) ಏರಿಸಿಕೊಂಡು, ಅತಿವೇಗವಾಗಿ ಸಾಗುವ ಕುದುರೆಗಳನ್ನು ಬಾರಕೋಲಿನಿಂದ ದಶಾರ್ಹಕುಲೋತ್ಪನ್ನನು ಪ್ರೇರೇಪಿಸಿದನು.
ತೇ ಹಯಾಃ ಸಹಸೋತ್ಪೇತುಃ ಗೃಹೀತ್ವಾ ಸ್ಯಂದನೋತ್ತಮಮ್ |
ಆಸ್ಥಿತಂ ಪಾಂಡವೇಯಾಭ್ಯಾಂ ಯದೂನಾಮೃಷಭೇಣ ಚ ॥9॥
ಯದುಗಳಿಗೆ ಶ್ರೇಷ್ಠನಾದ ಕೃಷ್ಣನು, ಈರ್ವರು ಪಾಂಡುಪುತ್ರರು ಕುಳಿತಿರುವ ರಥೋತ್ತಮವನ್ನು ಎಳೆಯುತ್ತಾ ಆ ಕುದುರೆಗಳು ವೇಗವಾಗಿ ನೆಗೆದವು.
ವಹತಾಂ ಶಾರ್ಙ್ಗಧನ್ವಾನಮ್ ಅಶ್ವಾನಾಂ ಶೀಘ್ರಗಾಮಿನಾಮ್ |
ಪ್ರಾದುರಾಸೀನ್ಮಹಾನ್ ಶಬ್ದಃ ಪಕ್ಷಿಣಾಂ ಪತತಾಮಿವ ॥10॥
ಶಾರ್ಙ್ಗಧನುರ್ಧಾರಿಯನ್ನು ಹೊತ್ತ ಶೀಘ್ರವಾಗಿ ಸಾಗುವ ಕುದುರೆಗಳಿಂದ, ಹಾರುವ ಪಕ್ಷಿಗಳಿಂದ ಉಂಟಾಗುವ ಭಾರೀ ಶಬ್ದದಂತೆ ಶಬ್ದವು ಉಂಟಾಯಿತು.
ತೇ ಸಮರ್ಥಂ ಮಹಾಬಾಹುಂ ಕ್ಷಣೇನ ಭರತರ್ಷಭ |
ಭೀಮಸೇನಂ ಮಹಾತ್ಮಾನಮನುಸೃತ್ಯ ಸುವೇಗಿತಾಃ ॥11॥
ಭರತಕುಲೋತ್ಪನ್ನರಲ್ಲಿ ಶ್ರೇಷ್ಠನೇ! ಅತಿವೇಗವನ್ನು ಹೊಂದಿರುವ ಅವರು (ಕೃಷ್ಣಾದಿಗಳು) ಮಹಾತ್ಮನಾದ ನೀಳಬಾಹುವಾದ ಸಮರ್ಥನಾದ ಭೀಮಸೇನನನ್ನು ಅನುಸರಿಸಿದರು.
ಕ್ರೋಧದೀಪ್ತಂ ತು ಕೌಂತೇಯಂ ದ್ವಿಷದರ್ಥೇ ಸಮುದ್ಯತಮ್ |
ನಾಶಕ್ನುವನ್ ವಾರಯಿತುಂ ಸಮೇತ್ಯಾಪಿ ಮಹಾರಥಾಃ ॥12॥
ಆದರೆ ಕೋಪದಿಂದ ಬೇಂಕಿಯಂತಾಗಿದ್ದ ದ್ವೇಷಿಯ ನಾಶಕ್ಕಾಗಿ ಉದ್ಯುಕ್ತನಾದ ಕುಂತಿಯ ಪುತ್ರನನ್ನು (ಭೀಮಸೇನನನ್ನು) ಸಮೀಪಿಸಿದರೂ ಆ ಮಹಾರಥರು (ಕೃಷ್ಣಾದಿಗಳು) ತಡೆಯಲು ಸಮರ್ಥರಾಗಲಿಲ್ಲ.
ಸ ತೇಷಾಮಗ್ರತಃ ಶೂರಃ ಶ್ರೀಮತಾಂ ದೃಢಧನ್ವಿನಾಮ್ |
ಯಯೌ ಭಾಗೀರಥೀಕಚ್ಛಂ ಹರಿಭಿರ್ಹೇಮಮಾಲಿಭಿಃ ॥13॥
ಯತ್ರ ಸ ಶ್ರೂಯತೇ ದ್ರೌಣಿಃ ಪುತ್ರಹಂತಾ ದುರಾತ್ಮವಾನ್ ॥14॥
ಧನುರ್ಧಾರಿಗಳಲ್ಲಿ ಗಟ್ಟಿಗರಾದ ಕಾಂತಿಯುಕ್ತರಾದ ಅವರ (ಕೃಷ್ಣಾದಿಗಳ) ಸಮಕ್ಷಮದಲ್ಲಿಯೇ ಶೂರನಾದ ಅತನು (ಭೀಮಸೇನನು) ಚಿನ್ನದ ಆಭರಣಗಳಿಂದ ಭೂಷಿತವಾದ ಅಶ್ವಗಳ ಸಹಾಯದಿಂದ, ದುಷ್ಟನಾದ (ತನ್ನ) ಪುತ್ರರನ್ನು ಸಂಹರಿಸಿದ ಆ ದ್ರೋಣಪುತ್ರನು ಎಲ್ಲಿರುವನು ಎಂದು ಕೇಳಿದ್ದನೋ, (ಆ) ಗಂಗಾನದಿಯ ತೀರಕ್ಕೆ ತೆರಳಿದನು.
ಸ ದದರ್ಶ ಮಹಾತ್ಮಾನಮುದಕಾಂತೇ ಯಶಸ್ವಿನಮ್ |
ಕೃಷ್ಣದ್ವೈಪಾಯನಂ ವ್ಯಾಸಮಾಸೀನಮೃಷಿಭಿಃ ಸಹ ॥15॥
ನದಿಯ ಸಮೀಪದಲ್ಲಿ ಋಷಿಗಳೊಡನೆ ಕುಳಿತಿರುವ, ಮಹಾತ್ಮನಾದ ಕೀರ್ತಿಶಾಲಿಯಾದ ಕೃಷ್ಣದ್ವೈಪಾಯನ ಎಂಬ ಹೆಸರನ್ನು ಹೊಂದಿರುವ ವ್ಯಾಸರನ್ನು ಆತನು ಕಂಡನು.
ತಂ ಚೈವ ಕ್ರೂರಕರ್ಮಾಣಂ ಘೃತಾಕ್ತಂ ಕುಶಚೀರಿಣಮ್ |
ರಜಸಾ ಧ್ವಸ್ತಮಾಸೀನಂ ದದರ್ಶ ದ್ರೌಣಿಮಂತಿಕೇ ॥16॥
ಅಲ್ಲಿಯೇ ಸಮೀಪದಲ್ಲಿ ತುಪ್ಪದಲ್ಲಿ ಅದ್ದಿದ ದರ್ಭೆಯ ಉಡುಪನ್ನು ತೊಟ್ಟ (ದೇಹದಲ್ಲಿ ಉಂಟಾದ ಘಾಸಿಗೆ ಔಷಧೋಪಚಾರಕ್ಕಾಗಿ ತೊಡಿಗೆಯನ್ನು ತುಪ್ಪದಲ್ಲಿ ನೆನೆಸಲಾಗಿದೆ ಎಂದು ತಿಳಿಯುವುದು) ನೀಚಕರ್ಮಿಯಾದ ಧೂಳಿನಿಂದ ಮಲಿನಗೊಂಡು ಕುಳಿತಿರುವ ಆ ದ್ರೋಣಪುತ್ರನನ್ನೂ ಕಂಡನು.
ತಮಭ್ಯಧಾವತ್ ಕೌಂತೇಯಃ ಪ್ರಗೃಹ್ಯ ಸಶರಂ ಧನುಃ |
ಭೀಮಸೇನೋ ಮಹಾಬಾಹುಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥17॥
ನೀಳಬಾಹುವಾದ ಬಿಲ್ಲು-ಬಾಣಗಳಿಂದ ಕೂಡಿರುವ ಕುಂತಿಪುತ್ರನಾದ ಭೀಮಸೇನನು `ನಿಲ್ಲು ನಿಲ್ಲು' ಎಂದು ಹೇಳುತ್ತಾ ಆತನನ್ನು (ಅಶ್ವತ್ಥಾಮನನ್ನು) ಉದ್ದೇಶಿಸಿ ಹೇಳಿದನು.
ತಂ ದೃಷ್ಟ್ವಾ ಭೀಮಕರ್ಮಾಣಂ ಪ್ರಗೃಹೀತಶರಾಸನಮ್ |

ಭ್ರಾತರೌ ಪೃಷ್ಠತಶ್ಚಾಸ್ಯ ಜನಾರ್ದನರಥಸ್ಥಿತೌ ॥18॥
ವ್ಯಥಿತಾತ್ಮಾSಭವದ್ ದ್ರೌಣಿಃ ಪ್ರಾಪ್ತಂ ಚೇದಮಮನ್ಯತ ॥19॥
ಭಯಂಕರ ಕರ್ಮಗಳನ್ನು ಆಚರಿಸುವ ಬಿಲ್ಲು ಬಾಣಗಳನ್ನು ಧರಿಸಿರುವ ಆತನನ್ನು (ಭೀಮಸೇನನನ್ನು), ಹಿಂಬದಿಯಲ್ಲಿ ಕೃಷ್ಣನ ರಥದಲ್ಲಿ ಕುಳಿತಿರುವ ಆತನ ಸಹೋದರರನ್ನು (ಧರ್ಮಾರ್ಜುನರನ್ನು) ನೋಡಿ, ದ್ರೋಣಪುತ್ರನು ದುಃಖಿತನಾದನು ಮತ್ತು ಇದು ಪ್ರಾಪ್ತವಾಯಿತು (ಬ್ರಹ್ಮಶಿರಾಸ್ತ್ರವನ್ನು ಪ್ರಯೋಗಿಸುವ ಕಾಲವು ಪ್ರಾಪ್ತವಾಯಿತು) ಎಂದು ಆಲೋಚಿಸಿದನು.
ಸ ತದ್ದಿವ್ಯಮದೀನಾತ್ಮಾ ಪರಮಾಸ್ತ್ರಮಚಿಂತಯತ್ ।
ಜಗ್ರಾಹ ಚ ಶರ್ಯೆಷೀಕಾಂ ದ್ರೌಣಿಃ ಸವ್ಯೇನ ಪಾಣಿನಾ ॥20॥
ದೈನ್ಯದಿಂದ ಬಾಳದ ಆ ದ್ರೋಣಪುತ್ರನು ಆ ದಿವ್ಯವಾದ ಪರಮಾಸ್ತ್ರವನ್ನು ಸ್ಮರಿಸಿದನು, ಎಡದ ಕರದಿಂದ ಜೊಂಡುಹುಲ್ಲಿನಿಂದಾದ ಬಾಣವನ್ನು ಸಹ ಪ್ರತಿಗ್ರಹಿಸಿದನು.
ಸ ತಾಮಾಪದಮಾಸಾದ್ಯ ದಿವ್ಯಮಸ್ತ್ರಮುದೀರಯನ್ ॥21॥
ಅಮೃಷ್ಯಮಾಣಸ್ತಾನ್ ಶೂರಾನ್ ದಿವ್ಯಾಯುಧಧರಾನ್ ಸ್ಥಿತಾನ್ ।
ಅಪಾಂಡವಾಯೇತಿ ರುಷಾ ವಾಚಮುತ್ಸೃಜ್ಯ ದಾರುಣಮ್ ॥22॥
ಇತ್ಯುಕ್ತ್ವಾ ರಾಜಶಾರ್ದೂಲ ದ್ರೋಣಪುತ್ರಃ ಪ್ರತಾಪವಾನ್ ।
ಸರ್ವಲೋಕಪ್ರಮೋಹಾರ್ಥಂ ತದಸ್ತ್ರಂ ಪ್ರಮುಮೋಚ ಹ ॥23॥
ರಾಜಶ್ರೇಷ್ಠನೆ! ದಿವ್ಯಾಸ್ತ್ರಗಳನ್ನು ಧರಿಸಿ (ತನ್ನ ಎದುರಿನಲ್ಲಿ) ನಿಂತಿರುವ ಆ ಶೂರರನ್ನು (ಕೃಷ್ಣಾದಿಗಳನ್ನು) ಸಹಿಸದ ಪರಾಕ್ರಮಶಾಲಿಯಾದ ಆ ದ್ರೋಣಪುತ್ರನು ಅಂತಹ ಆಪತ್ತನ್ನು ಹೊಂದಿದವನಾಗಿ, ಕೋಪದಿಂದ ಕೂಡಿದವನಾಗಿ (ಈ ಭೂಮಿಯಲ್ಲಿ) `ಪಾಂಡುಪುತ್ರರು ಇಲ್ಲದಂತಾಗಲಿ' ಎಂಬ ಭೀಕರವಾದ ಮಾತನ್ನು ನುಡಿಯುತ್ತಾ, ದಿವ್ಯವಾದ (ಬ್ರಹ್ಮಶಿರ) ಅಸ್ತ್ರಮಂತ್ರವನ್ನು ಉಚ್ಚರಿಸುತ್ತಾ ಸರ್ವಲೋಕನಾಶಕವಾದ ಆ ಅಸ್ತ್ರವನ್ನು ಪ್ರಯೋಗಿಸಿದನು. (22ನೇ ಶ್ಲೋಕದಲ್ಲಿ `ಅಪಾಂಡವಾಯ' ಎಂದಿದೆ. ಶಬ್ದತಾಡಿತ ಅರ್ಥವು `ಪಾಂಡುಪುತ್ರನ ನಾಶಕ್ಕಾಗಿ' ಎಂದಾಗುವುದು. ಪ್ರಕೃತಕ್ಕೆ `ಎಲ್ಲ ಪಾಂಡವರ ನಾಶಕ್ಕಾಗಿ' ಎಂಬ ಅರ್ಥದ ಅಗತ್ಯವಿರುವುದರಿಂದ ಲಕ್ಷ್ಯಾಲಂಕಾರದಲ್ಲಿ ಇದು ಭಾವಪ್ರಧಾನ ನಿರ್ದೇಶ ಎಂದು ತಿಳಿಸಿರುವರು. ಆಗ ಅಭಿಪ್ರೇತಾರ್ಥವು ಲಭ್ಯವಾಗುವುದು.)
ತತಸ್ತಸ್ಯಾಮಿಷೀಕಾಯಾಂ ಪಾವಕಃ ಸಮಜಾಯತ ।
ನಾಶಯತ್ಯೇವ ಲೋಕಾಂಸ್ತ್ರೀನ್ ಕಾಲಾಂತಕಯಮೋಪಮಃ ॥24॥
ಆನಂತರದಲ್ಲಿ ಆ ಜೊಂಡುಹುಲ್ಲಿನಲ್ಲಿ ಮೂರು ಲೋಕವನ್ನು ನಾಶಮಾಡಲು ಸಮರ್ಥವಾದ ಕಾಲನಾಮಕನಾದ ಅಂತಕನಾದ ಯಮನಂತಿರುವ ಬೆಂಕಿಯು ಪ್ರಕಟವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ಐಷಿಕಾಸ್ತ್ರಮೋಚನಂ ನಾಮ ಚತುರ್ಥೋSಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಏತಸ್ಮಿನ್ನಂತರೇ ಕೃಷ್ಣೋ ಧರ್ಮಜೇನಾರ್ಜುನೇನ ಚ ।
ತತ್ರಾಗಮತ್ ತದಸ್ತ್ರಂ ಚ ಭೀಮಂ ಚಾವ್ಯರ್ಥತಾಂ ನಯನ್ ॥
ಅಷ್ಟರಲ್ಲಿ ಬ್ರಹ್ಮಾಸ್ತ್ರವನ್ನೂ ಭೀಮನ ಬಲವನ್ನೂ ವ್ಯರ್ಥಗೊಳಿಸಬಾರದು ಎಂಬ ಉದ್ದೇಶದಿಂದ ಶ್ರೀಕೃಷ್ಣನು ಧರ್ಮರಾಜ, ಅರ್ಜುನರೊಂದಿಗೆ ಅಲ್ಲಿಗೆ ಬಂದನು.
ಅವಧ್ಯೋ ಭೀಮಸೇನಸ್ತದಸ್ತ್ರಂ ಚಾಮೋಘಮೇವ ಯತ್ ।
ವಿಷ್ಣುನೈವೋಭಯಂ ಯಸ್ಮಾತ್ ಕ್ಲೃಪ್ತಂ ಭೀಮೋSಸ್ತ್ರಮೇವ ತತ್ ॥
ಗಾಯತ್ರೀ ತತ್ರ ಮಂತ್ರೋ ಯದ್ ಬ್ರಹ್ಮಾ ತದ್ಧ್ಯಾನದೇವತಾ ।
ಧ್ಯೇಯೋ ನಾರಾಯಣೋ ದೇವೋ ಜಗತ್ಪ್ರಸವಿತಾ ಸ್ವಯಮ್ ॥
ಏಕೆಂದರೆ ಭೀಮಸೇನನು ಅವಧ್ಯ. ಬ್ರಹ್ಮಾಸ್ತ್ರವೂ ಅಮೋಘ. ವಿಷ್ಣುವೆ ಹಾಗೆ ಎರಡನ್ನೂ ಸಂಕಲ್ಪಿಸಿದ್ದಾನೆ ಮತ್ತು ಭಾವಿ ಬ್ರಹ್ಮನಾದ ಭೀಮಸೇನನು ಬ್ರಹ್ಮಾಸ್ತ್ರಕ್ಕೆ ಅಭಿಮಾನಿಯೂ ಹೌದು. ಏಕೆಂದರೆ ಅದಕ್ಕೆ ಗಾಯತ್ರಿಯೆ ಮಂತ್ರ. ಬ್ರಹ್ಮ ಅದನ್ನು ಧ್ಯಾನ ಮಾಡುವ ದೇವತೆ. ದೇವನಾದ ಸ್ವತಃ ಜಗತ್ತಿನ ಸೃಷ್ಟಿಕರ್ತನಾದ ಸವಿತೃನಾಮಕ ನಾರಾಯಣ ಧ್ಯೇಯ, ಸೂರ್ಯನಲ್ಲ.
ಊಚೇ ಚ ಪಾರ್ಥಯೋಃ ಕೃಷ್ಣೋ ಯತ್ ಕೃತಂ ದ್ರೌಣಿನಾ ಪುರಾ ।
ಸ್ವಾಯುಧಾನಾಂ ಯಾಚನಂ ಚಾಪ್ಯಶಕ್ತೇನ ತದುದ್ಧೃತೌ ॥
ಪೃಷ್ಟೇನೋಕ್ತಂ ತ್ವಯಾ ಹೀನಾಂ ಕೃತ್ವಾ ದುರ್ಯೋಧನಾಯ ಗಾಮ್ ।
ದಾತುಂ ತ್ವದಾಯುಧಂ ಮೇSದ್ಯೇತ್ಯೇವಮುಕ್ತ್ವೇತ್ಮನೋದಿತಮ್ ।
ಮೈವಂ ಕಾರ್ಷೀಃ ಪುನರಿತಿ ಧ್ಯಾಯತಾSಬ್ಧೇಸ್ತಟೇ ಸ್ವಮು ॥
ಹಿಂದೊಮ್ಮೆ ಅಶ್ವತ್ಥಾಮ ಏನು ಮಾಡಿದ್ದನೆಂಬುದನ್ನು ಶ್ರೀಕೃಷ್ಣನು ಧರ್ಮರಾಜ, ಅರ್ಜುನರಿಗೆ ಹೇಳಿದನು. ಅಶ್ವತ್ಥಾಮನು ಸಮುದ್ರತೀರದಲ್ಲಿ ತನ್ನನ್ನು ಧ್ಯಾನ ಮಾಡುತ್ತ ನನ್ನ ಆಯುಧಗಳನ್ನು ಎತ್ತಲು ಅಶಕ್ತನಾಗಿದ್ದರೂ ಅವುಗಳನ್ನು ಬೇಡಿದ. ಈ ಆಯುಧಗಳು ನಿನಗೇಕೆ ಎಂದು ಕೇಳಿದಾಗ, ಅವನು ಭೂಮಿಯಲ್ಲಿ ನಿನ್ನನ್ನು ಇಲ್ಲದಂತೆ ಮಾಡಿ ದುರ್ಯೋಧನನಿಗೆ ರಾಜ್ಯವನ್ನು ಕೊಡಲು ನಿನ್ನ ಆಯುಧ ನನಗೆ ಈಗ ಬೇಕು ಎಂದನು. ಆಗ ನಾನು ಹೇಳಿದೆ `ಇನ್ನು ಮುಂದೆ ಹೀಗೆ ಮಾಡಬೇಡ' ಎಂದು.

ತದಸ್ತ್ರಂ ಪ್ರಜ್ವಲದ್ ದೃಷ್ಟ್ವಾಽಪಾಂಡವತ್ವವಿಧಿತ್ಸಯಾ |
ಧರಾಯಾಂ ದ್ರೌಣಿನಾ ಮುಕ್ತಂ ಕೃಷ್ಣೇನ ಪ್ರೇರಿತೋಽರ್ಜುನಃ ||
ಸ್ವಸ್ತ್ಯಸ್ತು ದ್ರೋಣಪುತ್ರಾಯ ಭೂತೇಭ್ಯೋ ಮಹ್ಯಮೇವ ಚ |
ಇತಿ ಬ್ರುವಂಸ್ತದೇವಾಸ್ತ್ರಮಸ್ತ್ರಶಾಂತ್ಯೈ ವ್ಯಸರ್ಜಯತ್ ||
ಭೂಮಿಯಲ್ಲಿ ಪಾಂಡುವಿನ ಸಂತತಿಯನ್ನು ಇಲ್ಲದಂತೆ ಮಾಡುವ ಉದ್ದೇಶದಿಂದ ಅಶ್ವತ್ಥಾಮ ಪ್ರಯೋಗಿಸಿದ ಬ್ರಹ್ಮಾಸ್ತ್ರ ಜ್ವಲಿಸುವುದನ್ನು ಕಂಡು ಅರ್ಜುನನು ಅಶ್ವತ್ಥಾಮನಿಗೂ ಎಲ್ಲ ಪ್ರಾಣಿಗಳಿಗೂ, ನನಗೂ ಕ್ಷೇಮವಾಗಲಿ ಎಂದು ಹೇಳುತ್ತಾ ಬ್ರಹ್ಮಾಸ್ತ್ರ ಶಾಂತಿಗಾಗಿ ಬ್ರಹ್ಮಾಸ್ತ್ರವನ್ನೇ ಶ್ರೀಕೃಷ್ಣನ ಆದೇಶದಂತೆ ಪ್ರಯೋಗಿಸಿದನು.
ಅನಸ್ತ್ರಜ್ಞೇಷು ಮುಕ್ತಂ ತದ್ವನ್ಯಾದಸ್ತ್ರಮುಚಂ ಯತಃ |
ಗುರುಭಕ್ತ್ಯಾ ತತೋ ದ್ರೌಣೇಃ ಸ್ವಸ್ತ್ಯಸ್ತ್ವಿತ್ಯಾಹ ವಾಸವಿಃ |
ಅಸ್ತ್ರಜ್ಞಾನವಿಲ್ಲದವರ ಮೇಲೆ ಮತ್ತು ಅಸಶತ್ರಭಿಮಾನಿಯ ಮೇಲೆ ಪ್ರಯೋಗಿಸಿದ ಬ್ರಹ್ಮಾಸ್ತ್ರ ಪ್ರಯೋಗಿಸಿದವನನ್ನೇ ಕೊಂದೀತು. ಅದರಿಂದಲೂ ಗುರುಭಕ್ತಿಯಿಂದ ಅಶ್ವತ್ಥಾಮನಿಗೆ ಕ್ಷೇಮವಾಗಲಿ ಎಂದ ಅರ್ಜುನ.
ತದಾಽಸ್ತ್ರಯೋಸ್ತು ಸಂಯೋಗೇ ಭೂತಾನಾಂ ಸಂಹೃತಿರ್ಭವೇತ್ |
ಭೂತಾನಾಂ ಸ್ವಸ್ತಿರಪ್ಯತ್ರ ಕಾಂಕ್ಷಿತಾ ಕರುಣಾತ್ಮನಾ ||
ಆ ಎರಡು ಬ್ರಹ್ಮಾಸ್ತ್ರಗಳು ಜೊತೆಗೆ ಸೇರಿದರೆ ಪ್ರಾಣಿಗಳ ನಾಶವಾದೀತು. ಅದರಿಂದ ಕೃಪಾಳುವಾದ ಅರ್ಜುನ ಪ್ರಾಣಿಗಳಿಗೂ ಕ್ಷೇಮವನ್ನು ಬಯಸಿದನು.
* * * * *

ಐದನೆಯ ಅಧ್ಯಾಯ

ಕೃಷ್ಣನ ಆದೇಶದಂತೆ ಅರ್ಜುನನು ದ್ರೋಣರು ಉಪದೇಶಿಸಿದ
ಅಸ್ತ್ರವನ್ನು ಪ್ರಯೋಗಿಸಿದನು. ನಾರದ ಮತ್ತು ವ್ಯಾಸರು ಅಲ್ಲಿಗೆ ಆಗಮಿಸಿದರು.

ವೈಶಂಪಾಯನಃ
ಇಂಗಿತೇನೈವ ದಾಶಾರ್ಹಸ್ತಸ್ಯಾಭಿಪ್ರಾಯಮಾದಿತಃ |
ದ್ರೌಣೇರ್ಬುದ್ಧ್ವಾ ಮಹಾಬಾಹುರಭ್ಯಭಾಷತ ಫಲ್ಗುನಮ್ ||1||
ವೈಶಂಪಾಯನರು ದಶಾರ್ಹಕುಲೋತ್ಪನ್ನನಾದ ನೀಳಬಾಹುವಾದ, ಕೃಷ್ಣನು, ದ್ರೋಣಪುತ್ರನ ಮುಖಭಾವದಿಂದಲೇ ಆತನ ಅಭಿಪ್ರಾಯವನ್ನು ತಿಳಿದವನಾಗಿ ಅರ್ಜುನನನ್ನು ಉದ್ದೇಶಿಸಿ ಹೇಳಿದನು.

ಶ್ರೀಭಗವಾನ್
ಅರ್ಜುನಾರ್ಜುನ ಯದ್ದಿವ್ಯಮಸ್ತ್ರಂ ತೇ ಹೃದಿ ವರ್ತತೇ |
ದ್ರೋಣೋಪದಿಷ್ಟಂ ತಸ್ಯಾಯಂ ಕಾಲಃ ಸಂಪರಿವರ್ತತೇ ||2||
ಶ್ರೀಕೃಷ್ಣ ಅರ್ಜುನ ಅರ್ಜುನ! ದ್ರೋಣರಿಂದ ಉಪದಿಷ್ಟವಾದ ಯಾವ ದಿವ್ಯವಾದ ಅಸ್ತ್ರವು ನಿನ್ನ ಮನದಲ್ಲಿದೆಯೋ, ಅದರ (ಪ್ರಯೋಗದ) ಕಾಲವು ಈಗ ಬಂದಿದೆ.
ಭ್ರಾತೄಣಾಮಾತ್ಮನಶ್ಚೈವ ಪರಿತ್ರಾಣಾಯ ಭಾರತ |
ವಿಸೃಜೈತತ್ ತ್ವಮಪ್ಯಾಜಾವಸ್ತ್ರಮಸ್ತ್ರನಿವಾರಣಮ್ ||3||
ಭರತಕುಲೋತ್ಪನ್ನನೇ! ನಿನ್ನ ಮತ್ತು ಸಹೋದರರ ರಕ್ಷಣೆಗಾಗಿ ನೀನೂ ಸಹ ಯುದ್ಧದಲ್ಲಿ ಈ ಅಸ್ತ್ರವನ್ನು ತಡೆಯುವ ಅಸ್ತ್ರವನ್ನು ಪ್ರಯೋಗಿಸು.

ವೈಶಂಪಾಯನಃ
ಕೇಶವೇನೈವಮುಕ್ತಸ್ತು ಪಾಂಡವಃ ಪರವೀರಹಾ |
ರಥಾದವಾತರತ್ ತೂರ್ಣಂ ಪ್ರಗೃಹ್ಯ ಸಶರಂ ಧನುಃ ||4||
ವೈಶಂಪಾಯನರು ಕೇಶವನಿಂದ ಈ ರೀತಿಯಲ್ಲಿ ಪ್ರೇರೇಪಿತನಾದ ಶತ್ರುಗಳ ಬಲವನ್ನು ಮರ್ದನಗೊಳಿಸುವ ಪಾಂಡುಪುತ್ರನು (ಅರ್ಜುನನು) ಬಾಣಸಹಿತವಾದ ಬಿಲ್ಲನ್ನು ತೆಗೆದುಕೊಂಡು ರಥದಿಂದ ಕೆಳಗಿಳಿದನು.
ಪೂರ್ವಮಾಚಾರ್ಯಪುತ್ರಾಯ ತತೋಽನಂತರಮಾತ್ಮನೇ |
ಭ್ರಾತೄಣಾಂ ಚೈವ ಸರ್ವೇಷಾಂ ಸ್ವಸ್ತೀತ್ಯುಕ್ತ್ವಾ ಪರಂತಪಃ ||5||
ದೇವತಾಭ್ಯೋ ನಮಸ್ಕೃತ್ಯ ಗುರುಭ್ಯಶ್ಚೈವ ಸರ್ವಶಃ |
ಉತ್ಸಸರ್ಜ ಶಿವಂ ಧ್ಯಾಯನ್ನಸ್ತ್ರಮಸ್ತ್ರೇಣ ಶಾಮ್ಯತಾಮ್ ||6||
ಆನಂತರದಲ್ಲಿ ಶತ್ರುಗಳಿಗೆ ತಾಪಕನಾದ ಅರ್ಜುನನು ಮೊದಲು ಆಚಾರ್ಯಪುತ್ರನಿಗೆ (ಅಶ್ವತ್ಥಾಮನಿಗೆ) ಆನಂತರದಲ್ಲಿ ತನಗೂ ಹಾಗೂ ಸಹೋದರರಿಗೂ ಎಲ್ಲರಿಗೂ ಮಂಗಳವಾಗಲಿ ಎಂದು ಹೇಳುತ್ತಾ, ಎಲ್ಲ ದೇವತೆಗಳಿಗೆ ಹಾಗೂ ಗುರುಗಳಿಗೆ ನಮಸ್ಕರಿಸಿ, (ಜಗಕೆ) ಮಂಗಳವನ್ನು ಬಯಸುತ್ತಾ, ಈ ಅಸ್ತ್ರದಿಂದ ಆ ಅಸ್ತ್ರವು ಶಮನಗೊಳ್ಳಲಿ ಎಂದು ಬಯಸುತ್ತಾ ಅಸ್ತ್ರವನ್ನು ಹೂಡಿದನು.
ತತಸ್ತದಸ್ತ್ರಂ ಸಹಸಾ ಸೃಷ್ಟಂ ಗಾಂಡೀವಧನ್ವನಾ |
ಪ್ರಜಜ್ವಾಲ ಮಹಾಜ್ವಾಲಂ ಯುಗಾಂತಾನಲವರ್ಚಸಮ್ ||7||
ಆನಂತರದಲ್ಲಿ ಗಾಂಡೀವಧನುರ್ಧಾರಿಯು ಆ ಅಸ್ತ್ರವನ್ನು ಹೂಡಲು, ಆ ಅಸ್ತ್ರವು ಯುಗಾಂತಕಾಲದ ಅಗ್ನಿಯ ತೇಜಸ್ಸಿನಂತೆ ಭಾರೀ ಪ್ರಕಾಶವನ್ನು ಹೊಂದಿತು.
ತಥೈವ ದ್ರೋಣಪುತ್ರಸ್ಯ ತದಸ್ತ್ರಂ ತಿಗ್ಮತೇಜಸಃ |

ಪ್ರಜಜ್ವಾಲ ಮಹಾಜ್ವಾಲಂ ತೇಜೋಮಂಡಲಸಂವೃತಮ್ ॥8॥
ಹಾಗೆಯೇ ಪ್ರಚಂಡತೇಜಸ್ವಿಯಾದ ದ್ರೋಣಪುತ್ರನ ಆ ಅಸ್ತ್ರವೂ ಸಹ ಭಾರೀಪ್ರಕಾಶದಿಂದ ಬೆಳಗಿತು.
ನಿರ್ಘಾತಾ ಬಹವಶ್ಚಾಸನ್ ಪೇತುರುಲ್ಕಾಃ ಸಹಸ್ರಶಃ |
ಮಹದ್ಭಯಂ ಚ ಭೂತಾನಾಂ ಸರ್ವೇಷಾಂ ಸಮಜಾಯತ ॥9॥
ಸಾವಿರಾರು ಉಲ್ಕೆಗಳು ಬಿದ್ದವು, ಭಾರೀ ಅನಿಷ್ಟಸೂಚಕಗಳು ಉಂಟಾದವು, ಎಲ್ಲ ಪ್ರಾಣಿಗಳಿಗೂ ಭಾರೀ ಭಯವು ಉಂಟಾಯಿತು.
ಸಶಬ್ದಮಭವದ್ವ್ಯೋಮ ಜ್ವಾಲಾಮಾಲಾಕುಲಂ ಭೃಶಮ್ |
ಚಚಾಲ ಚ ಮಹೀ ಕೃತ್ಸ್ನಾ ಸಪರ್ವತವನದ್ರುಮಾ ॥10॥
ಆಕಾಶವು ಶಬ್ದದಿಂದ ವ್ಯಾಪ್ತವಾಯಿತು, ಅಗ್ನಿಯ ಜ್ವಾಲೆಯ ಸಾಲುಸಾಲುಗಳಿಂದ ಗಾಬರಿಗೊಳಿಸಿತು. ಪರ್ವತ ಕಾಡು ಮರಗಳಿಂದ ಕೂಡಿದ ಸಮಗ್ರ ಭೂಮಿಯೇ ನಡುಗಿತು.
ತಾವಸ್ತ್ರತೇಜಸಾ ಲೋಕಾನ್ ತ್ರಾಸಯಂತೌ ತತಃ ಸ್ಥಿತೌ ॥11॥
ಆನಂತರದಲ್ಲಿ ತೇಜದಿಂದ ಲೋಕವನ್ನು ಭಯಗೊಳಿಸುವ ಆ ಅಸ್ತ್ರಗಳು ಕಂಗೊಳಿಸಿದವು.
ಮಹರ್ಷೀ ಸಹಿತೌ ತತ್ರ ದರ್ಶಯಾಮಾಸತುಸ್ತದಾ |
ನಾರದಃ ಸರ್ವಧರ್ಮಾತ್ಮಾ ಭರತಾನಾಂ ಪಿತಾಮಹಃ ॥12॥
ಎಲ್ಲ ಧರ್ಮಗಳ ಮೂರ್ತಿಯಂತಿರುವ ನಾರದರು, ಭರತಕುಲದವರಿಗೆ ಪಿತಾಮಹರಾದ ವ್ಯಾಸರು, ಈ ಮಹರ್ಷಿಗಳಿರ್ವರು ಒಟ್ಟಿಗೆ ಅಲ್ಲಿ ಆಗ ಕಾಣಿಸಿಕೊಂಡರು.
ಉಭೌ ಶಮಯಿತುಂ ವೀರೌ ಭಾರದ್ವಾಜಧನಂಜಯೌ ॥13॥
ತೌ ಮುನೀ ಸರ್ವಧರ್ಮಜ್ಞೌ ಸರ್ವಭೂತಹಿತೈಷಿಣೌ |
ದೀಪ್ತಯೋರಸ್ತ್ರಯೋರ್ಮಧ್ಯೇ ಸ್ಥಿತೌ ಪರಮತೇಜಸೌ ॥14॥
ಭರದ್ವಾಜಗೋತ್ರೋತ್ಪನ್ನ ಅಶ್ವತ್ಥಾಮ, ಧನಂಜಯ, ಆ ಈರ್ವರು ವೀರರನ್ನು ಸಮಾಧಾನಪಡಿಸಲು, ಎಲ್ಲ ಧರ್ಮಗಳನ್ನು ತಿಳಿದ, ಎಲ್ಲ ಪ್ರಾಣಿಗಳ ಹಿತವನ್ನು ಬಯಸುವವರಾದ, ಆ ಈರ್ವರು ಮುನಿಗಳು (ನಾರದ-ವ್ಯಾಸರು) ಭಾರೀ ಪ್ರತಾಪಶಾಲಿಗಳಾದ ಪ್ರಜ್ವಲಿಸುವ ಅಸ್ತ್ರಗಳ ಮಧ್ಯೆ ನಿಂತರು.
ತದಂತರಮನಾಧೃಷ್ಯಾವುಪಗಮ್ಯ ಯಶಸ್ವಿನೌ |
ಆಸ್ತಾಮೃಷಿವರೌ ತತ್ರ ಜ್ವಲಿತಾವಿವ ಪಾವಕೌ ॥15॥
ಆನಂತರದಲ್ಲಿ ಅಲ್ಲಿಗೆ ಬಂದ, ಅನ್ಯರಿಂದ ಧರ್ಷಣೆಗೆ ಒಳಗಾಗದ, ಕೀರ್ತಿಶಾಲಿಗಳಾದ ಆ ಋಷಿವರ್ಯರೀರ್ವರು ಪ್ರಜ್ವಲಿಸುವ ಅಗ್ನಿಯಂತೆ ಅಲ್ಲಿ ನಿಂತರು.
ಪ್ರಾಣಭೃದ್ಭಿರನಾಧೃಷ್ಯೌ ದೇವದಾನವಸಮ್ಮತೌ |
ಅಸ್ತ್ರತೇಜಃ ಶಮಯಿತುಂ ಲೋಕಾನಾಂ ಹಿತಕಾಮ್ಯಯಾ ॥16॥
ದೇವ-ದಾನವರಿಂದ ಮಾನಿತರಾದ ಯಾವ ಪ್ರಾಣಿಗಳಿಂದಲೂ ಧರ್ಷಣೆಗೆ ಒಳಗಾಗದ ಆ ಮುನಿಗಳು, ಲೋಕದ ಹಿತಕ್ಕಾಗಿ ಅಸ್ತ್ರದ ಪ್ರಭಾವವನ್ನು ಶಮನಗೊಳಿಸಲು ಅಲ್ಲಿ ನಿಂತರು.
ಋಷೀ
ನಾನಾಶಸ್ತ್ರವಿದಃ ಪೂರ್ವೇ ಯೇ ವ್ಯತೀತಾ ಮಹಾರಥಾಃ |
ನೈತದಸ್ತ್ರಂ ಮನುಷ್ಯೇಷು ತೈಃ ಪ್ರಯುಕ್ತಂ ಕಥಂಚನ ॥17॥
ಕಿಮಿದಂ ಸಾಹಸಂ ವೀರೌ ಕೃತವಂತೌ ಮಹಾತ್ಯಯಮ್ ॥18॥
ಋಷಿಗಳು ನಾನಾ ಅಸ್ತ್ರಗಳನ್ನು ಬಲ್ಲ ಮನುಷ್ಯರಲ್ಲಿ ಹಿಂದೆ ಗತಿಸಿದ, ಯಾವ ಮಹಾರಥಿಗಳೂ ಸಹ ಯಾವ ಸಂದರ್ಭದಲ್ಲೂ ಸಹ ಈ ಅಸ್ತ್ರವನ್ನು ಬಳಸಿರಲಿಲ್ಲ. ವೀರರಾದ ನೀವು, ಭಾರೀ ಹಾನಿಕಾರಕವಾದ ಈ ದುಃಸಾಹಸವನ್ನು ಏಕೆ ಮಾಡಿದಿರಿ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ತಥಾಽಽಪ್ಯಸ್ತ್ರದ್ವಯಂ ಯುಕ್ತಂ ಭೂತಾನಾಂ ನಾಶಕೃದ್ ಧ್ರುವಮ್ |
ತಸ್ಮಾನ್ನಿವಾರಯನ್ ಯೋಗಂ ತಯೋರ್ಮಧ್ಯೇಽಭವತ್ ಕ್ಷಣಾತ್ ॥
ಅರ್ಜುನನು ಕ್ಷೇಮ ಪ್ರಾರ್ಥನೆ ಮಾಡಿದರೂ ಎರಡು ಬ್ರಹ್ಮಾಸ್ತ್ರಗಳು ಜೊತೆಗೆ ಸೇರಿದುವೆಂದರೆ ಅದು ಪ್ರಾಣಿಗಳಿಗೆ ನಾಶಕವಾಗುವುದು ನಿಶ್ಚಿತ. ಆದರಿಂದ ಅಸ್ತ್ರಗಳು ಜೊತೆ ಸೇರುವುದನ್ನು ತಡೆಯಲು ಅವುಗಳ ನಡುವೆ ವೇದವ್ಯಾಸರು ಕ್ಷಣದಲ್ಲಿ ಬಂದು ನಿಂತರು.
ನಿಸ್ಸೀಮಶಕ್ತಿಃ ಪರಮಃ ಕೃಷ್ಣಃ ಸತ್ಯವತೀಸುತಃ |
ಸಂಸ್ಥಾಪ್ಯಾಸ್ತ್ರದ್ವಯಂ ದೂರೇ ತಾವಾಹ ಪುರುಷೋತ್ತಮಃ ॥
ಅನಂತಶಕ್ತಿಯುಳ್ಳ ಸರ್ವೋತ್ತಮರಾದ ಪುರುಷೋತ್ತಮ ಶ್ರೀವೇದವ್ಯಾಸರು ಎರಡು ಅಸ್ತ್ರಗಳನ್ನೂ ದೂರದಲ್ಲಿ ನಿಲ್ಲಿಸಿ ಅಶ್ವತ್ಥಾಮ, ಅರ್ಜುನರಿಗೆ ಹೀಗೆ ಹೇಳಿದರು.
ಸಂತಿ ಹ್ಯಸ್ತ್ರವಿದಃ ಪೂರ್ವಂ ಪ್ರಾಯಶ್ಚೈತನ್ನ ತೈಃ ಕೃತಮ್ |
ಲೋಕೋಪದ್ರವಕೃತ್ ಕರ್ಮ ಸಂತಃ ಕುರ್ಯುಃ ಕಥಂ ಕ್ವಚಿತ್ ॥

ಬ್ರಹ್ಮಾಸ್ತ್ರ ಬಲ್ಲವರು ಹಿಂದೆಯೂ ಇದ್ದರು. ಈ ಕೆಲಸ ಪ್ರಾಯಃ ಅವರು ಯಾರೂ ಮಾಡಲಿಲ್ಲ. ಲೋಕಕ್ಕೆ ಉಪದ್ರವಕಾರಿಯಾದ ಇಂಥ ಕೆಲಸವನ್ನು ಸಜ್ಜನರು ಎಲ್ಲಿಯಾದರೂ ಹೇಗೆ ಮಾಡಬಲ್ಲರು?
ಇತ್ಯುಕ್ತೇ ಫಲ್ಗುನಃ ಪ್ರಾಹ ಮಯಾ ಮುಕ್ತಂ ಮಹಾಪದಿ |
ಶಾಂತ್ಯರ್ಥಮೇವ ಚ ವಿಭೋ ಕ್ಷಂತವ್ಯಂ ಭವತಾ ತತಃ ||
ವೇದವ್ಯಾಸರು ಹೀಗೆ ಹೇಳಿದಾಗ ಅರ್ಜುನನೆಂದ: `ಪ್ರಭು, ಮಹಾ ಆಪತ್ತಿನಲ್ಲಿ ಕೇವಲ ಶಾಂತಿಗಾಗಿ ನಾನು ಅಸ್ತ್ರವನ್ನು ಪ್ರಯೋಗಿಸಿದೆನು. ಅದರಿಂದ ತಾವು ನನ್ನನ್ನು ಕ್ಷಮಿಸಬೇಕು'.
ದ್ರೌಣಿರಪ್ಯೇವಮೇವಾಹ ತೌ ವೇದಪತಿರಬ್ರವೀತ್ |
ನಿವರ್ತ್ಯತಾಮಸ್ತ್ರಮಿತಿ ಶಕ್ರಸೂನುಸ್ತಥಾऽಕರೋತ್ |
ನಿವರ್ತನಾಪ್ರಭುಂ ದ್ರೌಣಿಂ ವಾಸುದೇವೋऽಭ್ಯಭಾಷತ ||
ಅಶ್ವತ್ಥಾಮನೂ ಹೀಗೆ ಹೇಳಿದನು. ಆಗ ವೇದವ್ಯಾಸರು ಇಬ್ಬರಿಗೂ ಹೇಳಿದರು: `ನಿಮ್ಮ ನಿಮ್ಮ ಅಸ್ತ್ರಗಳನ್ನು ನೀವು ಹಿಂದೆ ತೆಗೆದುಕೊಳ್ಳಿರಿ'. ಒಡನೆ ಅರ್ಜುನ ಹಾಗೆ ಮಾಡಿದನು. ಆದರೆ ಅಶ್ವತ್ಥಾಮ ಬ್ರಹ್ಮಾಸ್ತ್ರವನ್ನು ಹಿಂದೆ ತಿರುಗಿಸಲು ಅಸಮರ್ಥ-ನಾಗಿದ್ದುದನ್ನು ಕಂಡು ಶ್ರೀಕೃಷ್ಣನು ಹೇಳಿದನು.
ಕ್ಷತ್ರತೇಜಾ ಬ್ರಹ್ಮಚಾರೀ ಕೌಮಾರಾದಪಿ ಪಾಂಡವಃ |
ನಿವರ್ತನೇ ತತಃ ಶಕ್ತೋ ನಾಯಂ ದ್ರೋಣಾತ್ಮಜೋऽಪಿ ಸನ್ ||
ಅಬ್ರಹ್ಮಚರ್ಯಾದಿತ್ಯುಕ್ತೇ ವ್ಯಾಸೋ ದ್ರೌಣಿಮಭಾಷತ |
ನಿವರ್ತನಾಸಮರ್ಥಸ್ತ್ವಂ ದೇಹಿ ನೈಸರ್ಗಿಕಂ ಮಣಿಮ್ ||
`ಕ್ಷಾತ್ರ ತೇಜಸ್ಸುಳ್ಳ ಅರ್ಜುನ ಬಾಲ್ಯದಿಂದಲೂ ಬ್ರಹ್ಮಚಾರಿ, ಅದರಿಂದ ಬ್ರಹ್ಮಾಸ್ತ್ರವನ್ನು ಉಪಸಂಹರಿಸಲು ಶಕ್ತನಾಗಿದ್ದಾನೆ. ಅಶ್ವತ್ಥಾಮ ದ್ರೋಣಪುತ್ರನಾದರೂ ಬ್ರಹ್ಮಚರ್ಯವಿಲ್ಲದುದರಿಂದ ಅಸ್ತ್ರವನ್ನು ಹಿಂದಿರುಗಿಸಲು ಶಕ್ತನಾಗಲಿಲ್ಲ'. ಶ್ರೀಕೃಷ್ಣ ಹೀಗೆ ಹೇಳಿದಾಗ ವೇದವ್ಯಾಸರು ಅಶ್ವತ್ಥಾಮನಿಗೆ ಹೇಳಿದರು: `ಬ್ರಹ್ಮಾಸ್ತ್ರವನ್ನು ತಿರುಗಿಸಲು ಅಸಮರ್ಥನಾದ ನೀನು ನಿನ್ನಲ್ಲಿ ಸ್ವಾಭಾವಿಕವಾಗಿರುವ ಮಣಿಯನ್ನು ಕೊಡು'.
ಜಿತಃ ಪ್ರಾಗೇವ ಭೀಮೇನ ಭೀಮಾಯೈವ ಮಹಾಪ್ರಭಮ್ |
ಅಪಿ ಕೇವಲಯಾ ವಾಚಾ ಪಾರ್ಥೇಭ್ಯೋऽಸ್ತ್ರಂ ನಿವರ್ತಯ ||
ಇತ್ಯುಕ್ತೋ ಮೂರ್ಧಜಂ ರತ್ನಂ ಜರಾಮರಣನಾಶನಮ್ |
ಕ್ಷುತ್ತೃಟ್ಶ್ರಮಾಪಹಂ ದಿವ್ಯಗಂಧಂ ಧ್ವಾಂತಹರಂ ಶುಭಮ್ ||
ಉತ್ಕೃತ್ಯ ಭೀಮಾಯ ದದೌ ಮುಕ್ತಾಃ ಪಂಚೈವ ಪಾಂಡವಾಃ |
ಅಸತ್ಶತ್ರುದಿತಿ ತತೋ ವೇದಭರ್ತಾ ವಾಸವಿಮಬ್ರವೀತ್ ||
`ಮೊದಲೇ ಭೀಮನಿಂದ ಪರಾಭವಗೊಂಡಿರುವಿ. ಅದರಿಂದ ಭೀಮನಿಗೇ ಮಹಾಪ್ರಕಾಶವುಳ್ಳ ಆ ಮಣಿಯನ್ನು ಕೊಡು. ಕೇವಲ ಮಾತಿನಿಂದಲಾದರೂ ಪಾಂಡವರಿಗೆ ಆ ಅಸ್ತ್ರವನ್ನು ಹಿಂದಿರುಗಿಸು' ಎಂದು ವೇದವ್ಯಾಸರು ಹೇಳಿದಾಗ ಅಶ್ವತ್ಥಾಮ ತಲೆಯಲ್ಲಿ ಬೆಳೆದಿದ್ದ ರತ್ನವನ್ನು ಕಿತ್ತು ಭೀಮನಿಗೆ ಕೊಟ್ಟ ಆ ರತ್ನವು ಜರಾಮರಣ ನಾಶಕ. ಹಸಿವು, ಬಾಯಾರಿಕೆ ಆಯಾಸಗಳನ್ನು ಕಳೆಯುವುದು. ದಿವ್ಯಪರಿಮಳಯುಕ್ತ, ಕತ್ತಲನ್ನು ಓಡಿಸುವಂಥದ್ದು ಮತ್ತು ಮಂಗಳಕರ. `ಐದು ಮಂದಿ ಪಾಂಡವರನ್ನು ಬಿಟ್ಟು ಬಿಡಲಿ ಅಸ್ತ್ರ' ಎಂದನು. ಆಗ ವೇದವ್ಯಾಸರು ಅರ್ಜುನನಿಗೆ ಹೇಳಿದರು.
ತಾತ ಮುಕ್ತಂ ದ್ರೌಣಿನಾऽಪಿ ತ್ವಮೇವಾಸ್ತ್ರಂ ನಿವರ್ತಯ |
ಇತ್ಯುಕ್ತಸ್ತಂ ಪ್ರಣಮ್ಯಾಶು ಸಂಜಹಾರಾರ್ಜುನೋऽಪಿ ತತ್ ||
`ಅರ್ಜುನನೆ, ಅಶ್ವತ್ಥಾಮ ಪ್ರಯೋಗಿಸಿದ ಅಸ್ತ್ರವನ್ನೂ ನೀನೆ ಉಪಸಂಹರಿಸು'. ಹೀಗೆ ವೇದವ್ಯಾಸರು ಹೇಳಿದಾಗ ಅರ್ಜುನನು ಅವರನ್ನು ನಮಿಸಿ ಬೇಗನೆ ಆ ಅಸ್ತ್ರವನ್ನೂ ಉಪಸಂಹರಿಸಿದನು.
* * * * *
ಆರನೆಯ ಅಧ್ಯಾಯ
ಅರ್ಜುನನು ವ್ಯಾಸರ, ನಾರದರ ಆಜ್ಞೆಯಂತೆ ತಾನು ಪ್ರಯೋಗಿಸಿದ ಬ್ರಹ್ಮಶಿರಾಸ್ತ್ರವನ್ನು ಉಪಸಂಹಾರಗೊಳಿಸಿದನು. ಈ ದರ್ಭಾಸ್ತ್ರವು ಉತ್ತರೆಯ ಗರ್ಭವನ್ನು ಪ್ರವೇಶಿಸಿ ಗರ್ಭವನ್ನು ಸಂಹರಿಸಿದರೂ ತನ್ನಿಂದ ಆ ಗರ್ಭವನ್ನು ಪುನರುಜ್ಜೀವನಗೊಳಿಸುವುದಾಗಿ ಕೃಷ್ಣನಿಂದ ಪ್ರತಿಜ್ಞೆ, ಬ್ರಹ್ಮಚರ್ಯೆಯ ಸ್ಖಾಲಿತ್ಯದಿಂದ ಆ ಅಸ್ತ್ರವನ್ನು ಉಪಸಂಹರಿಸಲು ಅಸಮರ್ಥನಾದ ದ್ರೋಣಪುತ್ರನು ವ್ಯಾಸರನ್ನು ಕೃಷ್ಣನನ್ನೂ ತಿರಸ್ಕರಿಸುತ್ತಾ
ಉತ್ತರೆಯ ಗರ್ಭದಲ್ಲಿ ದರ್ಭಾಸ್ತ್ರವನ್ನು ಗುರಿಯಾಗಿಸಿದನು.
ವೈಶಂಪಾಯನಃ
ದೃಷ್ಟ್ವೈವ ಮುನಿಶಾರ್ದೂಲೌ ತಾವಗ್ನಿಸಮತೇಜಸೌ |
ಗಾಂಡೀವಧನ್ವಾ ಸಂಚಿಂತ್ಯ ಪ್ರಾಪ್ತಕಾಲಂ ಮಹಾರಥಃ ||1||
ಸಂಜಹಾರ ಶರಂ ದಿವ್ಯಂ ತ್ವರಮಾಣೋ ಧನಂಜಯಃ ||2||
ಉವಾಚ ಸ ನರಶ್ರೇಷ್ಠಃ ಪ್ರಾಂಜಲಿಸ್ತಾವುಭಾವೃಷೀ ||3||
ವೈಶಂಪಾಯನರು ಅಗ್ನಿಗೆ ಸಮಾನವಾದ ತೇಜಸ್ವಿಗಳಾದ ಮುನಿವರರನ್ನು ಕಂಡೊಡನೆ ಮಹಾರಥಿಕನಾದ ಗಾಂಡೀವಧಾರಿಯಾದ ಧನಂಜಯನು (ಈ ಅಸ್ತ್ರವನ್ನು ಉಪಸಂಹರಿಸುವ) ಕಾಲವು ಪ್ರಾಪ್ತವಾಯಿತು ಎಂದು ಆಲೋಚಿಸಿ, ಲಗುಬಗೆಯಿಂದ ಆ ದಿವ್ಯವಾದ ಅಸ್ತ್ರವನ್ನು ಉಪಸಂಹರಿಸಿದನು. ಆ ನರಶ್ರೇಷ್ಠನಾದ ಅರ್ಜುನನು ಕೈಮುಗಿದವನಾಗಿ ಆ ಈರ್ವರು ಋಷಿಗಳನ್ನು ಉದ್ದೇಶಿಸಿ

ಹೇಳಿದನು.
ಅರ್ಜುನಃ
ಪ್ರಮುಕ್ತಮಸ್ತ್ರಮಸ್ತ್ರೇಣ ಶಾಮ್ಯತಾಮಿತಿ ವೈ ಮಯಾ ॥4॥
ಸಂಹೃತೇ ಪರಮಾಸ್ತ್ರೇಽಸ್ಮಿನ್ ಸರ್ವಾನಸ್ಮಾನಶೇಷತಃ |
ಪಾಪಕರ್ಮಾ ಧ್ರುವಂ ದ್ರೌಣಿಃ ಪ್ರಧಕ್ಷ್ಯತ್ಯಸ್ತ್ರತೇಜಸಾ ॥5॥
ಅರ್ಜುನ ನಾನು `ಈ ಅಸ್ತ್ರದಿಂದ ಆ ಅಸ್ತ್ರವು ಶಮನವನ್ನು ಹೊಂದಲಿ' ಎಂದು ಪ್ರಯೋಗಿಸಿದ್ದೆನು. ಈ ಅಸ್ತ್ರವು ಉಪಸಂಹೃತವಾಗಲು, ಪಾಪಕರ್ಮಿಯಾದ ಈ ದ್ರೋಣಪುತ್ರನು ಸಂಪೂರ್ಣವಾಗಿ ನಮ್ಮೆಲ್ಲರನ್ನು ಅಸ್ತ್ರದ ತೇಜಸ್ಸಿನಿಂದ ನಿಶ್ಚಿತವಾಗಿಯೂ ದಹಿಸುವನು.
ಯದತ್ರ ಹಿತಮಸ್ಮಾಕಂ ಲೋಕಾನಾಂ ಚೈವ ಸರ್ವಥಾ |
ಭವಂತೌ ದೇವಸಂಕಾಶೌ ತಥಾ ಸಮ್ಮಂತುಮರ್ಹತಃ ॥6॥
ದೇವಸಮಾನರಾದ ನೀವೀರ್ವರು ಈ ವಿಷಯದಲ್ಲಿ ನಮಗೂ ಲೋಕಕ್ಕೂ ಯಾವುದು ಹಿತವೋ ಹಾಗೆ ಅನುಮೋದಿಸಲು ಯೋಗ್ಯರಾಗಿದ್ದೀರಿ.
ವೈಶಂಪಾಯನಃ
ಇತ್ಯುಕ್ತ್ವಾ ಸಂಜಹಾರಾಸ್ತ್ರಂ ಪುನರೇವ ಧನಂಜಯಃ ॥7॥
ವೈಶಂಪಾಯನರು ಮತ್ತೆ ಧನಂಜಯನು ಈ ರೀತಿಯಾಗಿ ಹೇಳಿ ಅಸ್ತ್ರವನ್ನು ಉಪಸಂಹರಿಸಿದನು.
ಸಂಹಾರೋ ದುಷ್ಕರಸ್ತಸ್ಯ ದೇವೈರಪಿ ಚ ಸಂಯುಗೇ |
ವಿಸೃಷ್ಟಸ್ಯ ರಣೇ ತಸ್ಯ ಪರಮಾಸ್ತ್ರಸ್ಯ ಸಂಗ್ರಹೇ ॥8॥
ಅಶಕ್ತಃ ಪಾಂಡವಾದನ್ಯಃ ಸಾಕ್ಷಾದಪಿ ಶತಕ್ರತುಃ ॥9॥
ಯುದ್ಧದಲ್ಲಿ ಪ್ರಯೋಗಿಸಿದ ಆ ಅಸ್ತ್ರದ ಪುನರುಪಸಂಹಾರವು ದೇವತೆಗಳಿಗೂ ದುಷ್ಕರವಾಗಿದೆ. ರಣರಂಗದಲ್ಲಿ ಪ್ರಯೋಗಿಸಿದ್ದ ಆ ಪರಮಾಸ್ತ್ರವನ್ನು ಅರ್ಜುನನು ಉಪಸಂಹರಿಸಿದನು. ಪಾಂಡುಪುತ್ರನಿಂದ ಬೇರೆಯಾದ ಸಾಕ್ಷಾತ್ ಇಂದ್ರನೂ ಸಹ (ಆ ಅಸ್ತ್ರವನ್ನು ಉಪಸಂಹರಿಸಲು) ಸಮರ್ಥನಾಗನು.
ಬ್ರಹ್ಮತೇಜೋದ್ಭವಂ ತದ್ಧಿ ವಿಸೃಷ್ಟಮಕೃತಾತ್ಮನಾ |
ನ ಶಕ್ಯಮಾವರ್ತಯಿತುಂ ಬ್ರಹ್ಮಚಾರಿವ್ರತಾದೃತೇ ॥10॥
ಬ್ರಹ್ಮತೇಜಸ್ಸಿನಿಂದ ಉತ್ಪನ್ನವಾದ ಅದನ್ನು ಜಿತೇಂದ್ರಿಯನಲ್ಲದವನಿಂದ (ಅಶ್ವತ್ಥಾಮನಿಂದ) ಪ್ರಯೋಗಿಸಲಾಗಿದೆ.
ಬ್ರಹ್ಮಚರ್ಯವ್ರತಿಯ ಹೊರತಾಗಿ (ಬೇರೆಯವರಿಂದ ಈ ಅಸ್ತ್ರವು) ಉಪಸಂಹರಿಸಲು ಅಶಕ್ಯವಾಗಿದೆ.
ಅಚೀರ್ಣಬ್ರಹ್ಮಚರ್ಯೋ ಯಃ ಸೃಷ್ಟ್ವಾಽಽವರ್ತಯತೇ ಪುನಃ |
ತದಸ್ತ್ರಂ ಸಾನುಬಂಧಸ್ಯ ಮೂರ್ಧಾನಂ ತಸ್ಯ ಕೃಂತತಿ ॥11॥
ಯಾವನು ಬ್ರಹ್ಮಚರ್ಯವನ್ನು ಆಚರಿಸದೇ (ಈ ಅಸ್ತ್ರವನ್ನು) ಪ್ರಯೋಗಿಸಿ ಮತ್ತೆ ಉಪಸಂಹರಿಸಲು ಯತ್ನಿಸುವನೋ, ಆ ಅಸ್ತ್ರವು ಸಂಬಂಧಿಸಹಿತನಾದ ಆತನ ತಲೆಯನ್ನೇ (ಅಸ್ತ್ರವನ್ನು ಪ್ರಯೋಗಿಸಿದವನ ತಲೆಯನ್ನೇ) ತೆಗೆಯುವುದು.
ಬ್ರಹ್ಮಚಾರೀ ವ್ರತೀ ಚಾಪಿ ದುರವಾಪಮವಾಪ್ಯ ತತ್ |
ಪರಮವ್ಯಸನಾರ್ತೋಽಪಿ ನಾರ್ಜುನೋಽಸ್ತ್ರಂ ವ್ಯಮುಂಚತ ॥12॥
ಬ್ರಹ್ಮಚರ್ಯವ್ರತವನ್ನು ಆಚರಿಸಿದವನಿಂದಲೂ ಸಹ ಹೊಂದಲು ಅಶಕ್ಯವಾದ ಆ ಅಸ್ತ್ರವನ್ನು ಹೊಂದಿ, ಭಾರೀ ದುಃಖಿತನಾಗಿದ್ದರೂ ಸಹ ಅರ್ಜುನನು ಅಸ್ತ್ರವನ್ನು ಪ್ರಯೋಗಿಸಲಿಲ್ಲ.
ಸತ್ಯವ್ರತಧರಃ ಶೂರೋ ಬ್ರಹ್ಮಚಾರೀ ಚ ಪಾಂಡವಃ |
ಗುರುವರ್ತೀ ಚ ತೇನಾಸ್ತ್ರಂ ಸಂಜಹಾರಾರ್ಜುನಃ ಪುನಃ ॥13॥
ಸತ್ಯವ್ರತಿಯು, ಶೂರನು, ಬ್ರಹ್ಮಚಾರಿಯು, ಪಾಂಡುಪುತ್ರನು, ಗುರುಗಳನ್ನು ಅನುಸರಿಸಿರುವನಾದ್ದರಿಂದ ಅರ್ಜುನನು ಮತ್ತೆ ಅಸ್ತ್ರವನ್ನು ಉಪಸಂಹರಿಸಿದನು.
ದ್ರೌಣಿರಪ್ಯಥ ಸಂಪ್ರೇಕ್ಷ್ಯ ಸೋಽಂತರಾ ತಾವೃಷೀ ಸ್ಥಿತೌ |
ನ ಶಶಾಕ ಪುನರ್ಘೋರಮಸ್ತ್ರಂ ಸಂಹರ್ತುಮೋಜಸಾ ॥14॥
ದ್ರೋಣಪುತ್ರನಾದರೋ ಅಸ್ತ್ರದ ಮಧ್ಯದಲ್ಲಿ ನಿಂತ ಆ ಈರ್ವರು ಋಷಿಗಳನ್ನು ಕಂಡರೂ (ಅವರ ವಚನವನ್ನು ಆಲಿಸಿದರೂ) ಪ್ರಯತ್ನಿಸಿದರೂ ಘೋರವಾದ ಆ ಅಸ್ತ್ರವನ್ನು ಮತ್ತೆ ಉಪಸಂಹರಿಸಲು ಸಮರ್ಥನಾಗಲಿಲ್ಲ.
ಅಶಕ್ತಃ ಪ್ರತಿಸಂಹಾರೇ ಪರಮಾಸ್ತ್ರಸ್ಯ ಸಂಯುಗೇ |
ದ್ರೌಣಿರ್ದೀನಮನಾ ರಾಜನ್ ದ್ವೈಪಾಯನಮಭಾಷತ ॥15॥
ಯುದ್ಧದಲ್ಲಿ ಶ್ರೇಷ್ಠವಾದ ಅಸ್ತ್ರವನ್ನು ಉಪಸಂಹರಿಸಲು ಅಸಮರ್ಥನಾದ ದ್ರೋಣಪುತ್ರನು ದೀನಮನಸ್ಕನಾಗಿ ವೇದವ್ಯಾಸರನ್ನು ಉದ್ದೇಶಿಸಿ ಹೇಳಿದನು.
ದ್ರೌಣಿಃ
ಉತ್ತಮವ್ಯಸನಾರ್ತೇನ ಪ್ರಾಣತ್ರಾಣಮಭೀಪ್ಸುನಾ |
ಮಯೇದಮಸ್ತ್ರಮುತ್ಸೃಷ್ಟಂ ಭೀಮಸೇನಭಯಾನ್ಮುನೇ ॥16॥
ಅಶ್ವತ್ಥಾಮ ಮುನಿಗಳೇ! ಭಾರೀ ಭಯದಿಂದ ದುಃಖಿತನಾಗಿ, ಪ್ರಾಣವನ್ನು ಸಂರಕ್ಷಿಸಿಕೊಳ್ಳಬೇಕೆಂಬ ಆಸೆಯಿಂದ ಭೀಮಸೇನನ ಭಯದಿಂದ ನಾನು ಈ ಅಸ್ತ್ರವನ್ನು ಪ್ರಯೋಗಿಸಿರುವೆ.

ಅಧರ್ಮಶ್ಚ ಕೃತೋಽನೇನ ಧಾರ್ತರಾಷ್ಟ್ರಂ ಜಿಘಾಂಸತಾ |
ಮಿಥ್ಯಾಚಾರೇಣ ಭಗವನ್ ಭೀಮಸೇನೇನ ಸಂಯುಗೇ ॥17॥
ಪೂಜ್ಯರೆ! ಧೃರಾಷ್ಟ್ರಪುತ್ರರನ್ನು ಸಂಹರಿಸಬೇಕೆಂಬ ಇಚ್ಛೆಯಿರುವ, ಮಿಥ್ಯಾಚಾರಿಯಾದ ಈ ಭೀಮಸೇನನಿಂದ ಅಧರ್ಮವನ್ನಾಚರಿಸಲಾಗಿದೆ.
ಅತಃ ಸೃಷ್ಟಮಿದಂ ಬ್ರಹ್ಮನ್ ಮಯಾಽಸ್ತ್ರಮಕೃತಾತ್ಮನಾ |
ತಸ್ಯ ಭೂಯೋಽಪಿ ಸಂಹಾರಂ ಕರ್ತುಂ ನಾಹಮಿಹೋತ್ಸಹೇ ॥18॥
ಬ್ರಹ್ಮನ್! ಆದ್ದರಿಂದ (ಭೀಮನ ವಿಷಯದಲ್ಲಿ ಕೋಪವನ್ನು ಹೊಂದಿದ್ದರಿಂದ) ಜಿತೇಂದ್ರಿಯನಲ್ಲದ ನಾನು ಅಸ್ತ್ರವನ್ನು ಪ್ರಯೋಗಿಸಿರುವೆನು. ಮತ್ತೆ ಆ ಅಸ್ತ್ರವನ್ನು ಉಪಸಂಹರಿಸಲು ನಾನು ಅಸಮರ್ಥನಾಗಿರುವೆನು.
ನಿಸೃಷ್ಟಂ ಹಿ ಮಯಾ ದಿವ್ಯಮೇತದಸ್ತ್ರಂ ದುರಾಸದಮ್ |
ಅಪಾಂಡವಾಯೇತಿ ಮುನೇ ವಹ್ನಿತೇಜೋಽನುಮಂತ್ರ್ಯ ವೈ ॥19॥
ಮುನಿಗಳೇ! ಅಪರೂಪದ ಈ ಶ್ರೇಷ್ಠವಾದ ಅಸ್ತ್ರವನ್ನು ಅಗ್ನಿಯ ತೇಜಸ್ಸನ್ನೂ ಅಭಿಮಂತ್ರಿಸಿ, ಪಾಂಡವರ ನಾಶಕ್ಕಾಗಿ ಪ್ರಯೋಗಿಸಿರುವೆನು.
ತದಿದಂ ಪಾಂಡುಪುತ್ರಾಣಾಮಂತಾಯೈವ ಸುಸಂಹಿತಮ್ |
ಅದ್ಯ ಪಾಂಡುಸುತಾನ್ ಸರ್ವಾನ್ ಜೀವಿತಾದ್ ಭ್ರಂಶಯಿಷ್ಯತಿ ॥20॥
ಆ ಈ ಅಸ್ತ್ರವು ಪಾಂಡವರ ನಾಶಕ್ಕಾಗಿಯೇ ಸನ್ನದ್ಧವಾಗಿದೆ, ಈಗಲೇ ಎಲ್ಲ ಪಾಂಡುಪುತ್ರರು ಜೀವಿತವನ್ನು ಕಳೆದುಕೊಳ್ಳುವರು.
ಕೃತಂ ಪಾಪಮಿದಂ ಬ್ರಹ್ಮನ್ ಕ್ರೋಧೇನಾವಿಷ್ಟಚೇತಸಾ |
ವಧಮಾಶಾಸ್ಯ ಪಾರ್ಥಾನಾಂ ಮಯಾಽಸ್ತ್ರಂ ಸೃಜತಾ ಪ್ರಭೋ ॥21॥
ಬ್ರಾಹ್ಮಣನೇ! ಕುಪಿತನಾದ ನಾನು ಕುಂತಿಯ ಮಕ್ಕಳ ಸಾವನ್ನು ಬಯಸಿ ಅಸ್ತ್ರವನ್ನು ಪ್ರಯೋಗಿಸಿರುವೆನು, ಪ್ರಭುವೆ! ನಾನು ಪಾಪವನ್ನು ಮಾಡಿದೆನು.
ವ್ಯಾಸಃ
ಅಸ್ತ್ರಂ ಬ್ರಹ್ಮಶಿರಸ್ತಾತ ವಿದ್ವಾನ್ ಪಾರ್ಥೋ ಧನಂಜಯಃ |
ಉತ್ಸೃಷ್ಟವಾನಹಿಂಸಾರ್ಥಂ ನ ರೋಷೇಣ ತವಾಹವೇ ॥22॥
ವ್ಯಾಸರು ಪುತ್ರನೇ! ಜ್ಞಾನಿಯಾದ ಕುಂತಿಯ ಪುತ್ರನಾದ ಧನಂಜಯನು ನಿನ್ನನ್ನು ಉದ್ದೇಶಿಸಿ ಯುದ್ಧದಲ್ಲಿ ಬ್ರಹ್ಮಶಿರಾಸ್ತ್ರವನ್ನು ಪ್ರಯೋಗಿಸಿರುವನು. ಆದರೆ ರೋಷದಿಂದಲ್ಲ, ಶಾಂತಿಗಾಗಿ.
ಅಸ್ತ್ರಮಸ್ತ್ರೇಣ ತು ರಣೇ ತವ ಸಂಶಮಯಿಷ್ಯತಾ |
ವಿಸೃಷ್ಟಮರ್ಜುನೇನೇದಂ ಪುನಶ್ಚ ಪ್ರತಿಸಂಹೃತಮ್ ॥23॥
ಅರ್ಜುನನಾದರೋ ಯುದ್ಧದಲ್ಲಿ ನಿನ್ನ ಅಸ್ತ್ರವನ್ನು (ತನ್ನ) ಅಸ್ತ್ರದಿಂದ ಪ್ರಶಮನಗೊಳಿಸಬೇಕೆಂಬ ಇಚ್ಛೆಯಿಂದ ಪ್ರಯೋಗಿಸಿದನು, ಪುನಃ ಅದನ್ನು ಉಪಸಂಹರಿಸಿದನು.
ಬ್ರಹ್ಮಾಸ್ತ್ರಮಪ್ಯವಾಪ್ಯೈತದ್ ಉಪದೇಶಾತ್ ಪಿತುಸ್ತವ |
ಕ್ಷತ್ರಧರ್ಮಾನ್ಮಹಾಬುದ್ಧಿರ್ನಾಕಂಪತ ಧನಂಜಯಃ ॥24॥
ಮೇಧಾವಿಯಾದ ಧನಂಜಯನು ನಿನ್ನ ತಂದೆಯ (ದ್ರೋಣಾಚಾರ್ಯರ) ಉಪದೇಶದಿಂದ ಈ ಬ್ರಹ್ಮಾಸ್ತ್ರವನ್ನು ಹೊಂದಿಯೂ ಸಹ ಕ್ಷತ್ರಧರ್ಮದಿಂದ ವಿಚಲಿತನಾಗಲಿಲ್ಲ.
ಏವಂ ಧೃತಿಮತಃ ಸಾಧೋಃ ಸರ್ವಾಸ್ತ್ರವಿದುಷಃ ಸತಃ |
ಸಭ್ರಾತೃಬಂಧೋಃ ಕಸ್ಮಾತ್ ತ್ವಂ ವಧಮಸ್ಯ ಚಿಕೀರ್ಷಸಿ ॥25॥
ಈ ರೀತಿಯಾಗಿ ಮೇಧಾವಿಯಾದ, ಸಜ್ಜನನಾದ, ಎಲ್ಲ ಅಸ್ತ್ರಗಳನ್ನೂ ಬಲ್ಲ, ಸಂಪನ್ನನಾದ, ಸಹೋದರ, ಬಂಧುಗಳಿಂದ ಯುಕ್ತನಾದ ಅತನ (ಅರ್ಜುನನ) ಸಾವನ್ನು ಏತಕ್ಕಾಗಿ ಬಯಸುತ್ತಿರುವಿ?
ಅಸ್ತ್ರಂ ಬ್ರಹ್ಮಶಿರೋ ಯತ್ರ ಪರಮಾಸ್ತ್ರೇಣ ಬಾಧ್ಯತೇ |
ಸಮಾ ದ್ವಾದಶ ಪರ್ಜನ್ಯಸ್ತದ್ರಾಷ್ಟ್ರೇ ನಾಭಿವರ್ಷತಿ ॥26॥
ಎಲ್ಲಿ ಬ್ರಹ್ಮಶಿರಾಸ್ತ್ರವು ಪರಮಾಸ್ತ್ರದಿಂದ ಪ್ರತಿಹತವಾಗುವುದೋ, ಆ ರಾಷ್ಟ್ರದಲ್ಲಿ ಹನ್ನೆರಡುವರ್ಷಗಳ ಪರ್ಯಂತ ಮಳೆಯು ಆಗದು.
ಏತದರ್ಥಂ ಮಹಾಬಾಹುಃ ಶಕ್ತಿಮಾನಪಿ ಪಾಂಡವಃ |
ಉಪಸಂಹೃತವಾನಸ್ತ್ರಂ ಪ್ರಜಾಹಿತಚಿಕೀರ್ಷಯಾ ॥27॥
ಇದಕ್ಕಾಗಿಯೇ ಮಹಾಬಾಹುವಾದ ಪಾಂಡುಪುತ್ರನು ಶಕ್ತಿವಂತನಾಗಿದ್ದರೂ ಸಹ ಪ್ರಜೆಗಳ ಹಿತವನ್ನು ಬಯಸಿ, ಅಸ್ತ್ರವನ್ನು ಉಪಸಂಹರಿಸಿರುವನು.
ಪಾಂಡವಾಸ್ತ್ವಂ ಚ ರಾಷ್ಟ್ರಂ ಚ ಸದಾ ಸಂರಕ್ಷ್ಯಮೇವ ನಃ |
ತಸ್ಮಾತ್ ಸಂಹರ ದಿವ್ಯಂ ತ್ವಮಸ್ತ್ರಮೇತನ್ಮಹಾಭುಜ ॥28॥
ನಮಗೆ ಪಾಂಡವರು ಹಾಗು ನೀನು ಮತ್ತು ರಾಷ್ಟ್ರವು ರಕ್ಷಣೀಯಗಳಾಗಿವೆ, ಮಹಾಪರಾಕ್ರಮಿಯೆ! ಆದ್ದರಿಂದ ನೀನು ಈ ದಿವ್ಯವಾದ ಅಸ್ತ್ರವನ್ನು ಉಪಸಂಹರಿಸು.
ಅರೋಷಸ್ತವ ಚೈವಾಸ್ತು ಪಾರ್ಥಾಃ ಸಂತು ನಿರಾಮಯಾಃ |
ನ ಹ್ಯಧರ್ಮೇಣ ರಾಜರ್ಷಿಃ ಪಾಂಡವೋ ಜೇತುಮಿಚ್ಛತಿ ॥29॥

ನಿನ್ನಲ್ಲಿ ಕೋಪವು ಶಾಂತವಾಗಲಿ, ಪಾಂಡವರು ಆಪತ್ತಿನಿಂದ ಪಾರಾಗಲಿ, ರಾಜರ್ಷಿಯಾದ ಪಾಂಡುಪುತ್ರನು (ಭೀಮಸೇನನು) ಅಧರ್ಮದಿಂದ ಜಯಿಸಲು ಅಪೇಕ್ಷಿಸುವುದಿಲ್ಲ.
ಮಣಿಂ ಚೈನಂ ಪ್ರಯಚ್ಛೈಭ್ಯೋ ಯಸ್ತೇ ಶಿರಸಿ ತಿಷ್ಠತಿ |
ಏತದಾದಾಯ ತೇ ಪ್ರಾಣಾನ್ ಪ್ರತಿದಾಸ್ಯಂತಿ ಪಾಂಡವಾಃ ॥30॥
ಯಾವ ಮಣಿಯು ನಿನ್ನ ತಲೆಯಲ್ಲಿರುವುದೋ ಅದನ್ನು ಪಾಂಡುಪುತ್ರರಿಗೆ ನೀಡು, ಪಾಂಡುಪುತ್ರರು ಇದನ್ನು ಸ್ವೀಕರಿಸಿ ನಿನಗೆ ಪ್ರಾಣವನ್ನು ಪ್ರತಿಯಾಗಿ ನೀಡುವರು.
ದ್ರೌಣಿಃ
ಪಾಂಡವೈರ್ಯಾನಿ ರತ್ನಾನಿ ಯದ್ವಾಽನ್ಯತ್ ಕೌರವೈರ್ಧನಮ್ |
ಅವಾಪ್ತಾನೀಹ ತೇಭ್ಯೋಽಯಂ ಮಣಿರ್ಮಮ ವಿಶಿಷ್ಯತೇ ॥31॥
ಅಶ್ವತ್ಥಾಮ ಪಾಂಡವರು ಈವರೆಗೆ ಯಾವ ರತ್ನಗಳನ್ನು ಅಥವಾ ಕೌರವರಿಂದ ಬೇರೆ ಯಾವ ಧನವನ್ನು ಪಡೆದಿರುವರೋ ಆ ಎಲ್ಲವುಗಳಿಂದ ನನ್ನ ಮಣಿಯು ವಿಶಿಷ್ಟವಾಗಿದೆ.
ಯಮಾಬಧ್ಯ ಭಯಂ ನಾಸ್ತಿ ಶಸ್ತ್ರವ್ಯಾಧಿಕ್ಷುಧಾಶ್ರಯಮ್ |
ದೇವೇಭ್ಯೋ ದಾನವೇಭ್ಯೋ ವಾ ನಾಗೇಭ್ಯೋ ವಾ ಕದಾಚನ ॥32॥
ಶಸ್ತ್ರಗಳ, ವ್ಯಾಧಿಗಳ, ಹಸಿವೆ-ಬಾಯಾರಿಕೆಗಳ, ದೇವತೆಗಳ, ದಾನವರ, ನಾಗಗಳ ನಿಮಿತ್ತವಾದ ಯಾವ ಭಯವು ಈ ಮಣಿಯನ್ನು ಧರಿಸುವುದರಿಂದ ಯಾವಾಗಲೂ ಇರುವದಿಲ್ಲ.
ನ ಚ ರಕ್ಷೋಗಣಭಯಂ ನ ತಸ್ಕರಭಯಂ ತಥಾ |
ಏವಂ ವೀರ್ಯೋ ಮಣಿರಯಂ ನ ಮೇ ತ್ಯಾಜ್ಯಃ ಕಥಂಚನ ॥33॥
ರಕ್ಕಸರ ಭಯವಿಲ್ಲ ಹಾಗೆಯೇ ಕಳ್ಳರ ಭಯವಿಲ್ಲ. ಇಂತಹ ಪ್ರಭಾವಯುಕ್ತವಾದ ಈ ಮಣಿಯು ಸರ್ವಥಾ ತ್ಯಾಜ್ಯವಲ್ಲ.
ಯತ್ ತು ಮೇ ಭಗವಾನಾಹ ತನ್ಮೇ ಕಾರ್ಯಮನಂತರಮ್ |
ಅಯಂ ಮಣಿರಯಂ ಚಾಹಮಿಷೀಕಾ ತು ಪತಿಷ್ಯತಿ ॥34॥
ಗರ್ಭೇಷು ಪಾಂಡವೇಯಾನಾಮಮೋಘಂ ಚೈತದುತ್ತಮಮ್ ॥35॥
ನ ಚ ಶಕ್ನೋಮಿ ಭಗವನ್ ಸಂಹರ್ತುಂ ಪುನರುದ್ಯತಮ್ |
ನ ಚ ವಾಕ್ಯಂ ಭಗವತೋ ನ ಕರಿಷ್ಯೇ ಮಹಾಮುನೇ ॥36॥
ಮಹಾಮುನಿಯೇ! ಯಾವುದನ್ನು ತಾವು ಹೇಳಿರುವಿರೋ ಅದು ಕಾರ್ಯವೇ ಆಗಿದೆ, ನಾನು ಎಂದೂ ನಿಮ್ಮ ಆದೇಶವನ್ನು ಮೀರಿದವನಲ್ಲ. ಆದರೆ ಈ ಮಣಿಯು ಬೇರಲ್ಲ, ನಾನು ಬೇರಲ್ಲ. ಈ ದರ್ಭಮಯವಾದ ಅಸ್ತ್ರವು ಪಾಂಡವರ ಸಂತತಿಯ ಮೇಲೇ ಎರಗುವುದು. ಗುರಿತಪ್ಪದ ಶ್ರೇಷ್ಠವಾದ ಹೂಡಿದ ಈ ಅಸ್ತ್ರವನ್ನು ಉಪಸಂಹರಿಸಲು ಅಸಮರ್ಥನಾಗಿರುವೆ.
ವ್ಯಾಖ್ಯಾನ ವಿಶೇಷ `ಅಯಂ ಮಣಿರಯಂ ಚಾಹಮ್' ಎನ್ನುವಲ್ಲಿರುವ `ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಹೀಗೆ ಅವಧಾರಣಾರ್ಥವನ್ನು ಪರಿಗ್ರಹಿಸಿದ್ದರಿಂದ ` ನಾನು ಬೇರಲ್ಲ ಈ ಮಣಿಯು ಬೇರಲ್ಲ, ಅದ್ದರಿಂದ ಈ ಮಣಿಯನ್ನು ನೀಡಲಾರೆ' ಎಂಬ ಭಾವವು ಹೊರಹೊಮ್ಮುವುದು - ಲಕ್ಷಾಲಂಕಾರ.
ವೈಶಂಪಾಯನಃ
ಪ್ರಾಹ ದ್ರೋಣಸುತಂ ತತ್ರ ವ್ಯಾಸಃ ಪರಮದುರ್ಮನಾಃ ॥37॥
ವೈಶಂಪಾಯನರು ಆಗ ತುಂಬ ಬೇಸರಿಸಿಕೊಂಡ ವ್ಯಾಸರು ದ್ರೋಣಪುತ್ರನನ್ನು ಉದ್ದೇಶಿಸಿ ಹೇಳಿದರು.
ವ್ಯಾಸಃ
ಏವಂ ಕುರು ನ ಚಾನ್ಯತ್ರ ಬುದ್ಧಿಃ ಕಾರ್ಯಾ ಕಥಂಚನ |
ಗರ್ಭೇಷು ಪಾಂಡವೇಯಾನಾಂ ವಿಸೃಜ್ಯೈತದುಪಾರಮ ॥38॥
ವ್ಯಾಸರು ಹಾಗೆಯೇ ಮಾಡು, ಮತ್ತೆ ಬುದ್ಧಿಯನ್ನು ಬದಲಿಸದಿರು, ಪಾಂಡವರ ಸಂತತಿಯ ಮೇಲೆ (ಈ ಅಸ್ತ್ರವನ್ನು) ಹೂಡಿ ಅನಂತದಲ್ಲಿ ಉಪರತನಾಗು.
ವೈಶಂಪಾಯನಃ
ತಮುವಾಚ ಹೃಷೀಕೇಶಃ ಪಾಂಡವಾನಾಂ ಹಿತೇ ರತಃ ॥39॥
ವೈಶಂಪಾಯನ ಪಾಂಡವರ ಹಿತದಲ್ಲಿ ನಿರತನಾದ ಹೃಷೀಕೇಶನು ಆತನನ್ನು (ಅಶ್ವತ್ಥಾಮನನ್ನು) ಉದ್ದೇಶಿಸಿ ನುಡಿದನು.
ಶ್ರೀಭಗವಾನ್
ಭವಿಷ್ಯಮೇಕಮುತ್ಸೃಜ್ಯ ಗರ್ಭೇಷ್ವಸ್ತ್ರಂ ನಿಪಾತ್ಯತಾಮ್ |
ಅಹಮೇಕಂ ದದಾಮ್ಯೇಷಾಂ ಪಿಂಡದಂ ಕೀರ್ತಿವರ್ಧನಮ್ ॥40॥
ರಾಜರ್ಷಿಂ ಪುಣ್ಯಕರ್ಮಾಣಮನೇಕಕ್ರತುಯಾಜಿನಮ್ ॥41॥
ಕೃಷ್ಣ ಮುಂದೆ ಹುಟ್ಟಲಿರುವ ಗರ್ಭವೊಂದನ್ನು ಹೊರತು ಪಡಿಸಿ, (ಪಾಂಡವರ ಉಳಿದ) ಸಂತತಿಯ ಮೇಲೆ ನಿನ್ನ ಅಸ್ತ್ರವು ಎರಗಲಿ, ನಾನು ಇವರಿಗೆ (ಪಾಂಡವರಿಗೆ) ಕೀರ್ತಿಕಾರಕನಾದ, ಉತ್ತರಕ್ರಿಯೆಯನ್ನು ಆಚರಿಸುವ, ರಾಜರ್ಷಿಯಾದ, ಮಂಗಳಕರ್ಮಗಳನ್ನು ಆಚರಿಸುವ, ಅನೇಕ ಯಜ್ಞಗಳನ್ನು ಮಾಡಲಿರುವ ಓರ್ವನನ್ನು ನೀಡುವೆನು.
ಏವಂ ಕುರು ನ ಚಾನ್ಯಾ ತೇ ಬುದ್ಧಿಃ ಕಾರ್ಯಾ ಕಥಂಚನ |
ಆಗರ್ಭಾತ್ ಪಾಂಡವೇಯಾನಾಂ ಕೃತ್ವಾ ಪಾತಂ ವಿನಂಕ್ಷ್ಯತಿ ॥42॥
ಈ ರೀತಿಯಾಗಿ (ವ್ಯಾಸರು ತಿಳಿಸಿದಂತೆ) ಆಚರಿಸು. ಬೇರೆ ಯಾವ ರೀತಿಯಲ್ಲಿಯೂ ಆಲೋಚಿಸದಿರು. ಪಾಂಡವರ ಎಲ್ಲ ಸಂತತಿಯನ್ನು

ನಾಶಗೊಳಿಸಿ, ಆ ಅಸ್ತ್ರವು ಶಮನಗೊಳ್ಳುವುದು.
ವೈಶಂಪಾಯನಃ
ಏವಂ ಬ್ರುವಾಣಂ ಗೋವಿಂದಂ ವೃಷಭಂ ಸರ್ವಸಾತ್ವತಾಮ್ |
ದ್ರೌಣಿಃ ಪರಮಸಂಕ್ರುದ್ಧಃ ಪ್ರತ್ಯುವಾಚೇದಮುತ್ತರಮ್ ॥43॥
ವೈಶಂಪಾಯನರು ಈ ರೀತಿಯಾಗಿ ಹೇಳುತ್ತಿರುವ ಎಲ್ಲ ಸಾತ್ವತರಲ್ಲಿ ಮೂರ್ಧನ್ಯನಾದ ಗೋವಿಂದನನ್ನು ಉದ್ದೇಶಿಸಿ, ಅತಿಯಾಗಿ ಕೋಪಗೊಂಡ ದ್ರೋಣಪುತ್ರನು ಪ್ರತಿಯಾಗಿ ಉತ್ತರಿಸಿದನು.
ದ್ರೌಣಿಃ
ನೈತದೇವಂ ಯದಾತ್ಥ ತ್ವಂ ಪಕ್ಷಪಾತೇನ ಕೇಶವ |
ವಚನಾತ್ ಪುಂಡರೀಕಾಕ್ಷ ತವ ಮದ್ವಾಕ್ಯಮನ್ಯಥಾ ॥44॥
ಅಶ್ವತ್ಥಾಮ ಕೇಶವ, ಪುಂಡರೀಕಾಕ್ಷ! ಪಕ್ಷಪಾತದಿಂದ ನೀನು ಏನು ಹೇಳಿದೆಯೋ, ನಿನ್ನ ಮಾತಿನಿಂದ ನನ್ನ ಮಾತನ್ನು ಅನ್ಯಥಾ ಮಾಡಲು ಇಚ್ಛಿಸಿರುವೆಯೋ ಅದು ಹಾಗಾಗದು.
ಪತಿಷ್ಯತ್ಯೇತದಸ್ತ್ರಂ ವೈ ಗರ್ಭೇ ತಸ್ಯಾ ಮಯೋದ್ಯತಮ್ |
ವಿರಾಟದುಹಿತುಃ ಕೃಷ್ಣ ಯಂ ತ್ವಂ ರಕ್ಷಿತುಮಿಚ್ಛಸಿ ॥45॥
ಕೃಷ್ಣ! ಯಾರನ್ನು ನೀನು ರಕ್ಷಿಸಲು ಬಯಸಿರುವೆಯೋ ಆ ವಿರಾಟರಾಜನ ಪುತ್ರಿಯ ಗರ್ಭದಲ್ಲಿಯೂ ನನ್ನಿಂದ ಹೂಡಲಾದ ಅಸ್ತ್ರವು ಬೀಳಲಿದೆ.
ಶ್ರೀಭಗವಾನ್
ಅಮೋಘಃ ಪರಮಾಸ್ತ್ರಸ್ಯ ಪಾತಸ್ತ್ವದ್ಯ ಭವಿಷ್ಯತಿ |
ಅಭಿಮನ್ಯೋಃ ಸ್ನುಷೈಷೀಕಾಂ ಗರ್ಭಸ್ಥಃ ಶಾಮ್ಯತಾಂ ಶಿಶುಃ ॥46॥
ಅಹಮೇನಂ ಮೃತಂ ಜಾತಂ ಜೀವಯಿಷ್ಯಾಮಿ ಬಾಲಕಮ್ |
ಸ ತು ಗರ್ಭೋ ಮೃತೋ ಜಾತೋ ದೀರ್ಘಮಾಯುರವಾಪ್ಸ್ಯತಿ ॥
ಕೃಷ್ಣ ಗುರಿತಪ್ಪದ ಶ್ರೇಷ್ಠವಾದ ಅಸ್ತ್ರವು (ನೀನು ಬಯಸಿದಂತೆ ಉತ್ತರೆಯ ಗರ್ಭದ ಮೇಲೆ) ಬೀಳಲಿದೆ, ನಾನು ಮೃತನಾಗಿ ಹುಟ್ಟಿದ ಈ ಬಾಲಕನನ್ನು ಪುನಃ ಬದುಕಿಸುತ್ತೇನೆ. ಮೃತವಾಗಿ ಪುನಃ ಜೀವಿತವಾದ ಗರ್ಭವಾದರೋ ದೀರ್ಘವಾದ ಆಯುಷ್ಯವನ್ನು ಹೊಂದುವುದು.
ವೈಶಂಪಾಯನಃ
ಇತ್ಯುಕ್ತಂ ಪ್ರತ್ಯುವಾಚೈನಂ ದ್ರೋಣಪುತ್ರಃ ಸ್ಮಯನ್ನಿವ ॥48॥
ವೈಶಂಪಾಯನರು ಈ ರೀತಿಯಾಗಿ ಹೇಳಿದ ಈತನನ್ನು (ಕೃಷ್ಣನನ್ನು) ಉದ್ದೇಶಿಸಿ ದ್ರೋಣಪುತ್ರನು ಮುಗುಳು ನಗುತ್ತಾ ಪ್ರತಿಯಾಗಿ ಉತ್ತರಿಸಿದನು.
ದ್ರೌಣಿಃ
ಯದ್ಯಸ್ತ್ರದಗ್ಧಂ ಗೋವಿಂದ ಜೀವಯಸ್ಯೇವಮತ್ರಿವ್ವತಿ ॥49॥
ಗೋವಿಂದ! ಒಂದು ವೇಳೆ ಅಸ್ತ್ರದಿಂದ ದಹಿಸಿದ ಗರ್ಭವನ್ನು ಪುನಃ ಉಜ್ಜೀವಿಸುವದಾದಲ್ಲಿ ಹಾಗೇ ಆಗಲಿ.
ವೈಶಂಪಾಯನಃ
ತತಃ ಪರಮಮಸ್ತ್ರಂ ತು ದ್ರೌಣಿರುದ್ಯತಮಾಹವೇ |
ದ್ವೈಪಾಯನಮನಾದೃತ್ಯ ಗರ್ಭೇಷು ಪ್ರಮುಮೋಚ ಹ ॥50॥
ವೈಶಂಪಾಯನರು ಆನಂತರದಲ್ಲಿ ದ್ರೋಣಪುತ್ರನು ವೇದವ್ಯಾಸರ ಮಾತನ್ನು ಅಲಕ್ಷಿಸಿ, ಯುದ್ಧದಲ್ಲಿ ಮೇಲೆತ್ತಿದ ಪರಮಾಸ್ತ್ರವನ್ನು ಪಾಂಡವರ ಸಂತತಿಯ ಮೇಲೆ ಪ್ರಯೋಗಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ವ್ಯಾಸವಾಕ್ಯಂ ನಾಮ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಯಾದವೇಶೋಽಥ ಗೌತಮ್ಯಾಃ ಸುತಮಾಹೈಕಸಂತತೇಃ |
ವಾಚಾ ನಿವಾರಯಾಸ್ತ್ರಂ ತೇ ಇತ್ಯುಕ್ತೋ ದ್ರೌಣಿರಬ್ರವೀತ್ ॥
ಶ್ರೀಕೃಷ್ಣನು ಅಶ್ವತ್ಥಾಮನಿಗೆ ಹೇಳಿದ `ಪಾಂಡವರ ಒಂದು ಸಂತತಿಯಿಂದ ನಿನ್ನ ಅಸ್ತ್ರವನ್ನು ಮಾತಿನಿಂದ ಹಿಂದಿರುಗಿಸು'. ಕೃಷ್ಣನು ಹೀಗೆ ಹೇಳಿದಾಗ ಅಶ್ವತ್ಥಾಮನು ಹೀಗೆ ಹೇಳಿದನು.
ಪಕ್ಷಪಾತಾದಿಚ್ಛಸಿ ತ್ವಂ ಭಾಗಿನೇಯಸ್ಯ ಸಂತತಿಮ್ |
ತತ್ರೈವ ಪಾತಯಾಮ್ಯಸ್ತ್ರಮುತ್ತರಾಗರ್ಭಕೃಂತನೇ ॥
`ನೀನು ಪಕ್ಷಪಾತದಿಂದ ನಿನ್ನ ತಂಗಿಯ ಮಗನ ಸಂತತಿಯನ್ನು ಉಳಿಸಲು ಬಯಸುತ್ತಿರುವಿ. ನಾನು ಆ ಸಂತತಿಯ ಮೇಲೆಯೆ ಉತ್ತರೆಯ ಗರ್ಭವನ್ನು ನಾಶಪಡಿಸುವುದಕ್ಕಾಗಿ ಅಸ್ತ್ರವನ್ನು ಬೀಳಿಸುತ್ತೇನೆ'.
ವಾಸುದೇವಃ ಪುನಃ ಪ್ರಾಹ ಯದಿ ಹಂತವ್ಯ ಏವ ತೇ |
ಗರ್ಭಸ್ತಥಾಽಪಿ ನೈವಾಸ್ತ್ರಂ ಪಾತಯಾಸ್ಮಿನ್ ಕಥಂಚನ ॥

ಅಶ್ವತ್ಥಾಮನು ಹೀಗೆ ಹೇಳಿದಾಗ ಶ್ರೀಕೃಷ್ಣನೆಂದ- `ನಿನಗೆ ಆ ಗರ್ಭವನ್ನು ಕೊಲ್ಲಬೇಕೆಂದೇ ಸಂಕಲ್ಪವಿರಬಹುದು. ಆದರೂ ಅದರ ಮೇಲೆ ಅಸ್ತ್ರವನ್ನು ಸರ್ವಥಾ ಬೀಳಿಸಬೇಡ'.
ಅಭಿಮನ್ಯೋರ್ಮೃತಸ್ಯೈವ ದೇಹೇ ಪಾತಯ ಮಾನದ |
ಏವಂ ತ್ವದಸ್ತ್ರನಿಹತಂ ಗರ್ಭಮುಜ್ಜೀವಯಾಮ್ಯಹಮ್ ॥
`ಅಭಿಮಾನಿಯಾದ ಅಶ್ವತ್ಥಾಮನೆ, ನೀನು ಅಭಿಮನ್ಯುವಿನ ಮೃತದೇಹದಲ್ಲಿಯೆ ಅಸ್ತ್ರವನ್ನು ಬೀಳಿಸು. ನಿನ್ನ ಅಸ್ತ್ರದಿಂದ ಹೀಗೆ ಉತ್ತರೆಯ ಗರ್ಭ ಹತವಾದರೂ ನಾನು ಅದನ್ನು ತಿರುಗಿ ಬದುಕಿಸುತ್ತೇನೆ'.
ಪಾತಯೇ ಗರ್ಭ ಏವಾಹಮಿತ್ಯೂಚೇ ಗೌತಮೀಸುತಃ |
ಅಥಾಹ ವಾಸುದೇವಸ್ತಮೀಷತ್ಕ್ರುದ್ಧ ಇವ ಪ್ರಭುಃ ॥
`ಆದರೂ ಗರ್ಭದ ಮೇಲೆಯೇ ಅಸ್ತ್ರವನ್ನು ಬೀಳಿಸುತ್ತೇನೆ' ಎಂದ ಅಶ್ವತ್ಥಾಮ. ಆಗ ಸರ್ವಶಕ್ತನಾದ ಶ್ರೀಕೃಷ್ಣನು ಸ್ವಲ್ಪ ಕೋಪಗೊಂಡವನಂತೆ ತೋರಿಸಿಕೊಂಡು ಅವನಿಗೆ ನುಡಿದನು.
ದುರ್ಮತೇ ಪಶ್ಯ ಮೇ ವೀರ್ಯಂ ಯತ್ ತೇ ಶಕ್ಯಂ ಕುರುಷ್ವ ತತ್ |
ಉಜ್ಜೀವಯಾಮ್ಯಹಂ ಗರ್ಭಂ ಯತತಃ ಶಕ್ತಿತೋऽಪಿ ತೇ ॥
`ದುರ್ಬುದ್ಧಿಯೆ, ನನ್ನ ಶಕ್ತಿಯನ್ನು ನೋಡು. ನಿನಗೇನು ಶಕ್ಯವೋ ಅದನ್ನು ನೀನು ಮಾಡು. ನೀನು ಶಕ್ತಿ ಇದ್ದಷ್ಟೂ ಗರ್ಭವನ್ನು ಕೊಲ್ಲಲು ಯತ್ನಿಸಿದರೂ ನಾನು ಬದುಕಿಸುತ್ತೇನೆ'.
ಸಂತತಿರ್ವರ್ಷಸಾಹಸ್ರಂ ಪಾಂಡವಾನಾಂ ಭವೇದ್ ಭುವಿ |
ಮತ್ಪಾಲಿತಾಂ ನ ಕಶ್ಚಿತ್ ತಾಂ ತಾವದ್ಧಂತುಂ ಕ್ಷಮಃ ಕ್ವಚಿತ್ ॥
`ಒಂದು ಸಾವಿರ ವರ್ಷಕಾಲ ಭೂಮಿಯಲ್ಲಿ ಪಾಂಡವರ ಸಂತತಿ ಇರುತ್ತದೆ. ಅಷ್ಟರವರೆಗೆ ನಾನು ರಕ್ಷಿಸುವ ಆ ಸಂತತಿಯನ್ನು ಯಾವನೂ ಯಾವ ಕಾಲಕ್ಕೂ ನಾಶಮಾಡಲು ಶಕ್ತನಾಗುವುದಿಲ್ಲ.
ಜಾನಾಮಿ ತೇ ಮತಿಂ ದುಷ್ಟಾಂ ಜಿಘಾಂಸೋಃ ಪಾರ್ಥಸಂತತಿಮ್ |
ಚಿಕೀರ್ಷೋರ್ಧಾರ್ತರಾಷ್ಟ್ರಸ್ಯ ತಂತುಂ ಭೂಯಃ ಸುದುಷ್ಕರಮ್ ॥
`ನಿನ್ನ ದುಷ್ಟ ಸಂಕಲ್ಪವನ್ನು ನಾನು ಬಲ್ಲೆ. ಪಾಂಡವ ಸಂತತಿಯನ್ನು ನಾಶಪಡಿಸಲು ಬಯಸುತ್ತಿರುವಿ ಮತ್ತು ದುರ್ಯೋಧನನ ಸಂತತಿಯನ್ನು ಪುನಃ ಬೆಳೆಸಲು ಬಯಸುತ್ತಿರುವಿ. ಆದರೆ ಅದು ಅತ್ಯಂತ ದುಷ್ಕರ.
ಮದಾಜ್ಞಯಾ ಸಾ ವಿಫಲಾ ಭವಿತ್ರೀ
ವಾಂಛಾ ಮುಮುಕ್ಷಾ ವಿಮುಖಸ್ಯ ವಿಷ್ಣೋಃ |
ಯಥೈವ ತೇನೈವ ನರಾಧಿರೂಢೋ
ಗಮ್ಯಸ್ತವ ಸ್ಯಾನ್ನ ಚ ಭೂಮಿಭಾಗಃ ॥
`ವಿಷ್ಣುವಿಗೆ ವಿಮುಖನಾದವನ ಮೋಕ್ಷೇಚ್ಛೆಯೂ ವಿಫಲವಾಗುವಂತೆ ನಿನ್ನ ಬಯಕೆಯೂ ನನ್ನ ಸಂಕಲ್ಪದಿಂದ ವಿಫಲವಾಗುವುದು. ಅದರಿಂದಲೆ ನೀನು ನರಾರೂಢನಾಗುವಿ ಹೊರತು ಭೂಭಾಗ ಯಾವುದೂ ನಿನಗೆ ಗಮ್ಯವಾಗುವುದಿಲ್ಲ'.
ದುರ್ಗಂಧಯುಕ್ತೋ ವ್ರಣಸಂಚಿತಾಂಗಃ
ಸದಾ ಚರಃ ಸ್ಯಾ ವಿಪಿನೇಷು ಮಂದ |
ಯಾವದ್ ಭುವಿ ಸ್ಯಾದಿಹ ಪಾರ್ಥತಂತು-
ರ್ವ್ಯಾಸೋऽಪಿ ತಂ ಪ್ರಾಹ ತಥೇತಿ ದೇವಃ ॥
`ಅಜ್ಞನೆ, ನೀನು ಭೂಮಿಯ ಮೇಲೆ ಪಾಂಡವ ಸಂತತಿ ಇರುವಷ್ಟು ಕಾಲ ಮೈಯಲ್ಲಿ ಹುಣ್ಣಿಂದ ಕೂಡಿ, ದುರ್ಗಂಧಯುಕ್ತನಾಗಿ ಕಾಡುಗಳಲ್ಲಿ ಸದಾ ಸಂಚರಿಸುವವನಾಗುವಿ'. ಹೀಗೆ ಶ್ರೀಕೃಷ್ಣನು ಹೇಳಿದಾಗ ವೇದವ್ಯಾಸರೂ `ಹಾಗೇ ಆಗಲಿ' ಎಂದರು.
ರೂಪದ್ವಯೇನಾಪಿ ಹರೇಸ್ತಥೋಕ್ತೋ
ಜಗಾದ ಕಾಳೀತನಯಂ ಸ ಕೃಷ್ಣಮ್ |
ತ್ವಯಾ ಸಹ ಸ್ಯಾನ್ಮಮ ಸಂಗಮೋ ವಿಭೋ
ಯಥೇಷ್ಟತಃ ಸ್ಯಾನ್ನ ಚ ಮೇऽತ್ರ ವಿಘ್ನಃ ॥
ಶ್ರೀಹರಿಯ ವೇದವ್ಯಾಸ-ಕೃಷ್ಣ ಎಂಬ ಎರಡೂ ರೂಪಗಳು ಹೀಗೆ ಹೇಳಿದಾಗ ಅಶ್ವತ್ಥಾಮ ವೇದವ್ಯಾಸರಿಗೆ ಹೇಳಿದನು- `ಪ್ರಭು: ನಿನ್ನೊಡನೆ ನನಗೆ ಬಯಸಿದಾಗಲೆಲ್ಲ ಸಮಾಗಮವಾಗುತ್ತಿರಲಿ. ಅದಕ್ಕೆ ವಿಘ್ನ ಬಾರದಿರಲಿ'.
ಇತ್ಯುಕ್ತ ಓಮಿತಿ ಪ್ರಾಹ ಭಗವಾನ್ ಬಾದರಾಯಣಃ |
ತಂ ಪ್ರಣಮ್ಯ ಯಯೌ ಸೋऽಪಿ ಸ್ವಪ್ನದೃಷ್ಟಮನುಸ್ಮರನ್ ॥
ಸ್ವಪ್ನೇ ಹಿ ದ್ರೌಪದೇಯಾನಾಂ ವಧೋ ದೃಷ್ಟೋऽತ್ಮನಾ ನಿಶಿ |
ಅರ್ಜುನೇನ ಪ್ರತಿಜ್ಞಾನಂ ದ್ರೌಪದ್ಯೈ ಸ್ವವಧಂ ಪ್ರತಿ ॥
ನಿಬಧ್ಯಾऽನಯನಂ ಚೈವ ತೇನೈವ ಶಿಬಿರಂ ಪ್ರತಿ |
ಮುಂಚೇತಿ ದ್ರೌಪದೀವಾಕ್ಯಂ ನೇತಿ ಭೀಮವಚಸ್ತಥಾ ॥
ಕೃಷ್ಣವಾಕ್ಯಾನ್ಮಣಿಂ ಹೃತ್ವಾ ದೇಶಾನ್ನಿರ್ಯಾತನಂ ತಥಾ |
ಇತ್ಯಾದಿ ಸ್ವಪ್ನದೃಷ್ಟಂ ಯತ್ ಪ್ರಾಯಃ ಸತ್ಯಮಭೂದಿತಿ |
ಚಿಂತಯನ್ ಪ್ರಯಯೌ ದೇವಂ ದ್ರೌಣಿಃ ಶಸ್ತ್ರಭೃತಾಂ ವರಃ ॥
ಅಶ್ವತ್ಥಾಮನು ಹೀಗೆ ಹೇಳಿದಾಗ ಭಗವಾನ್ ಬಾದರಾಯಣರು `ಆಗಲಿ' ಎಂದರು. ಅಶ್ವತ್ಥಾಮನು ಅವರನ್ನು ನಮಿಸಿ ಹೊರಟು

ಹೋದರು. ಹೋಗುವಾಗ ತಾನು ಸ್ವಪ್ನದಲ್ಲಿ ಕಂಡುದನ್ನು ನೆನೆದುಕೊಂಡನು. ಸ್ವಪ್ನದಲ್ಲಿ ಅಶ್ವತ್ಥಾಮನು ತಾನು ರಾತ್ರಿ ಕಾಲದಲ್ಲಿ ದ್ರೌಪದೀಪುತ್ರರನ್ನು ಕೊಂದಂತೆ, ಅದಕ್ಕೆ ಅರ್ಜುನ ತನ್ನನ್ನು ಕೊಲ್ಲಲು ದ್ರೌಪದಿಯ ಮುಂದೆ ಪ್ರತಿಜ್ಞೆ ಮಾಡಿದಂತೆ, ತನ್ನನ್ನು ಬಂಧಿಸಿ ಶಿಬಿರಕ್ಕೆ ಒಯ್ದಂತೆ, ಅಲ್ಲಿ ದ್ರೌಪದಿ ತನ್ನನ್ನು ಬಿಟ್ಟುಬಿಡಲು ಹೇಳಿದಂತೆ, ಬಿಡಬೇಡವೆಂದು ಭೀಮನು ಹೇಳಿದಂತೆ, ಕೃಷ್ಣನ ಮಾತನ್ನು ಕೇಳಿ ಮಣಿಯನ್ನು ಅಪಹರಿಸಿ, ತನ್ನನ್ನು ದೇಶದಿಂದ ಗಡಿಪಾರು ಮಾಡಿದಂತೆ ಇತ್ಯಾದಿ ಸ್ವಪ್ನದಲ್ಲಿ ತಾನು ಏನೇನು ನೋಡಿದನೋ ಪ್ರಾಯಃ ಅದೆಲ್ಲ ನಿಜವಾಯಿತೆಂದು ಚಿಂತಿಸುತ್ತ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಅರಣ್ಯಕ್ಕೆ ನಡೆದನು.
ಸ ಕೃಷ್ಣೋಕ್ತಮಪಿ ಪ್ರಾಪ್ಯ ಬಾದರಾಯಣಶಿಷ್ಯತಾಮ್ |
ಪ್ರಾಪ್ಯೋತ್ತರದ್ವಾಪರೇ ಚ ವೇದಾನ್ ಸಂವಿಭಜಿಷ್ಯತಿ ॥
ಒಂದು ಸಾವಿರ ವರ್ಷಕಾಲವಿರುವ ಶ್ರೀಕೃಷ್ಣನ ಶಾಪವನ್ನು ಪಡೆದು, ಬಳಿಕ ಬಾದರಾಯಣರ ಶಿಷ್ಯತ್ವವನ್ನು ಹೊಂದಿ ಮುಂದಿನ ದ್ವಾಪರದಲ್ಲಿ ವೇದಗಳನ್ನು ವಿಭಾಗ ಮಾಡುತ್ತಾನೆ ಅಶ್ವತ್ಥಾಮ.
ತತಃ ಸಪ್ತರ್ಷಿರ್ಭೂತ್ವಾ ಪಾರಾಶರ್ಯಪ್ರಸಾದತಃ |
ಏಕೀಭಾವಂ ಸ್ವರೂಪೇಣ ಯಾಸ್ಯತ್ಯಚ್ಯುತನಿಷ್ಠಯಾ ॥
ಬಳಿಕ ವೇದವ್ಯಾಸರ ಅನುಗ್ರಹದಿಂದ ಅಶ್ವತ್ಥಾಮನು ಸಪ್ತರ್ಷಿಗಳಲ್ಲಿ ಒಬ್ಬನಾಗಿ ಹರಿಭಕ್ತಿಯ ಬಲದಿಂದ ತನ್ನದೆ ಆದ ರುದ್ರಸ್ವರೂಪದಲ್ಲಿ ಏಕೀಭಾವವನ್ನು ಹೊಂದುತ್ತಾನೆ.
ಕೃಪೋಽಥ ಪಾಂಡವಾನ್ ಪ್ರಾಪ್ಯ ಗೌರವಾತ್ ಪೂಜಿತಶ್ಚ ತೈಃ |
ಅಭೂದಾಚಾರ್ಯ ಏವಾಸೌ ರಾಜ್ಞಾಂ ತತ್ತಂತುಭಾವಿನಾಮ್ ॥
ಕೃಪ ಪಾಂಡವರ ಬಳಿಗೆ ಬಂದು ಗೌರವದಿಂದ ಸತ್ಕೃತನಾಗಿ ಅವರ ವಂಶದಲ್ಲಿ ಹುಟ್ಟುವ ಕ್ಷೇಮಕ ಪರ್ಯಂತ ರಾಜರಿಗೆ ಆಚಾರ್ಯನೇ ಆದನು.
ಬಾದರಾಯಣಶಿಷ್ಯತ್ವಂ ಪುನಃ ಪ್ರಾಪ್ಯ ಭಜನ್ನಮುಮ್ |
ಸಾಕಂ ಸ್ವಭಾಗಿನೇಯೇನ ಭಾವ್ಯೇಕೋ ಮುನಿಸಪ್ತಕೇ |
ಕೃತವರ್ಮಾ ದ್ವಾರವತೀಂ ಯಯೌ ಕೃಷ್ಣಾನುಮೋದಿತಃ ॥
ಪಾಂಡವರ ವಂಶ ಅಳಿದಾಗ ಬಾದರಾಯಣರ ಶಿಷ್ಯತ್ವವನ್ನು ಹೊಂದಿ ಅವರನ್ನು ಸೇವಿಸಿ ಕೃಪ ಮುಂದೆ ತಾನೂ ಅಶ್ವತ್ಥಾಮನೊಂದಿಗೆ ಸಪ್ತರ್ಷಿಗಳಲ್ಲಿ ಒಬ್ಬನೆನಿಸುತ್ತಾನೆ. ಕೃತವರ್ಮನು ಕೃಷ್ಣನ ಅನುಮತಿಯಿಂದ ದ್ವಾರಕೆಗೆ ತೆರಳಿದನು.
ಕೃಷ್ಣಾಯೈ ತಂ ಮಣಿಂ ದತ್ವಾ ಭೀಮಸ್ತಾಂ ಪರ್ಯಸಾಂತ್ವಯತ್ |
ವಿಕೋಪಾ ಭೀಮವಾಕ್ಯೇನ ರಾಜ್ಞೇ ಸಾ ಚ ಮಣಿಂ ದದೌ ॥
ರಾಜಾರ್ಹೇ ಹಿ ಮಣೌ ದತ್ತೇ ಮಹ್ಯಂ ಭೀಮೇನ ಲೌಕಿಕಾಃ |
ಸ್ತ್ರೀಪಕ್ಷಪಾತಂ ರಾಜಾ ಚ ಶಂಕೇಯುರ್ಮಾರುತೇರಿತಿ ॥
ಮಣಿಂ ರಾಜ್ಞೇ ದದೌ ಕೃಷ್ಣಾ ಭರ್ತೃಪ್ರಿಯಹಿತೇ ರತಾ |
ಸೋಽಪ್ಯಾಬಧ್ಯ ಮಣಿಂ ಮೂರ್ಧ್ನಿ ರೇಜೇ ರಾಜಾ ಗವಾಮಿವ ॥
ಭೀಮನು ಅಶ್ವತ್ಥಾಮನ ಶಿರೋರತ್ನವನ್ನು ದ್ರೌಪದಿಗೆ ಕೊಟ್ಟು ಅವಳನ್ನು ಸಂತೈಸಿದನು. ದ್ರೌಪದಿ ಭೀಮನ ಮಾತಿನಿಂದ ಕೋಪವನ್ನು ಬಿಟ್ಟಳು. ಅವಳು ರಾಜನಿಗೆ ಯೋಗ್ಯವಾದ ರತ್ನವನ್ನು ಭೀಮನು ತನಗೆ ಕೊಟ್ಟಾಗ ಲೌಕಿಕರೂ ಧರ್ಮರಾಜನೂ ಭೀಮನಲ್ಲಿ ಸ್ತ್ರೀಪಕ್ಷಪಾತ ಬುದ್ಧಿ ಇದೆ ಎಂದು ತಿಳಿಯಬಹುದೆಂದು ಕೊಂಡು ಆ ರತ್ನವನ್ನು ಧರ್ಮರಾಜನಿಗೆ ನೀಡಿದಳು. ಏಕೆಂದರೆ ಅವಳು ಪತಿಗಳಿಗೆ ಪ್ರಿಯವನ್ನೂ, ಹಿತವನ್ನೂ ಮಾಡುವವಳು. ಧರ್ಮರಾಜ ರತ್ನವನ್ನು ತಲೆಯ ಮೇಲೆ ಧರಿಸಿ ಸೂರ್ಯನಂತೆ ಬೆಳಗಿದನು.
* * * * *

ಏಳನೆಯ ಅಧ್ಯಾಯ

ತನ್ನ ಮಾತನ್ನು ಅತಿಕ್ರಮಿಸಿ ಅಸ್ತ್ರವನ್ನು ಪ್ರಯೋಗಿಸಿದ ಅಶ್ವತ್ಥಾಮನಿಗೆ ಕೃಷ್ಣನು ಶಾಪವಿತ್ತನು. ಅದನ್ನು ವ್ಯಾಸರು ಅನುಮೋದಿಸಿದರು. ಭೀಮಸೇನನು ಅಶ್ವತ್ಥಾಮನ ಶಿರೋಮಣಿಯನ್ನು ದ್ರೌಪದಿಗೆ ನೀಡಿ ಸಮಾಧಾನಪಡಿಸಿದನು.
ವೈಶಂಪಾಯನಃ
ತದಾಜ್ಞಾಯ ಹೃಷೀಕೇಶೋ ವಿಸೃಷ್ಟಂ ಪಾಪಕರ್ಮಣಾ |
ಹೃಷ್ಯಮಾಣ ಇದಂ ವಾಕ್ಯಂ ದ್ರೌಣಿಂ ಪ್ರತ್ಯಾದಿಶತ್ ತದಾ ॥1॥
ವೈಶಂಪಾಯನರು ಪಾಪಕರ್ಮಿಯಾದ ಅಶ್ವತ್ಥಾಮನು ಅಸ್ತ್ರವನ್ನು ಹೂಡಿದ್ದನ್ನು ತಿಳಿದ ಹೃಷೀಕೇಶನು ಸಂತಸಗೊಂಡವನಾಗಿ ಆಗ ದ್ರೋಣಪುತ್ರನನ್ನು ಉದ್ದೇಶಿಸಿ ಈ ವಾಕ್ಯವನ್ನು ಹೇಳಿದನು.
ಶ್ರೀಭಗವಾನ್
ವಿರಾಟಸ್ಯ ಸುತಾಂ ಪೂರ್ವಂ ಸ್ನುಷಾಂ ಗಾಂಡೀವಧನ್ವನಃ |
ಉಪಪ್ಲಾವ್ಯಗತಾಂ ದೃಷ್ಟ್ವಾ ಉತ್ತರಾಂ ಬ್ರಾಹ್ಮಣೋಽಬ್ರವೀತ್ ॥2॥
ಕೃಷ್ಣ ವಿರಾಟರಾಜನ ಪುತ್ರಿಯಾದ, ಗಾಂಡೀವಧನುವನ್ನು ಧರಿಸಿದ ಅರ್ಜುನನ ಸೊಸೆಯಾದ, ಉಪಪ್ಲಾವ್ಯದಲ್ಲಿರುವ ಉತ್ತರೆಯನ್ನು ಕಂಡು ಬ್ರಾಹ್ಮಣನು (ಈ ರೀತಿಯಾಗಿ) ಹೇಳಿದ್ದನು.
ಬ್ರಾಹ್ಮಣಃ
ಪರಿಕ್ಷೀಣೇಷು ಕುರುಷು ಪುತ್ರಸ್ತವ ಜನಿಷ್ಯತೇ |
ಏತದಸ್ಯ ಪರಿಕ್ಷಿತ್ತ್ವಂ ಗರ್ಭಸ್ಥಸ್ಯ ಭವಿಷ್ಯತಿ ॥3॥

ಬ್ರಾಹ್ಮಣನು ಕುರುವಂಶವು ಕ್ಷೀಣವಾಗುತ್ತಿರಲು, ನಿನ್ನ ಮಗನು ಹುಟ್ಟುವನು. ಗರ್ಭದಲ್ಲಿರುವ ಈತನಿಗೆ `ಪರಿಕ್ಷಿತ' ಎಂಬ ನಾಮವು ಪ್ರಾಪ್ತವಾಗುವುದು.
ಶ್ರೀಭಗವಾನ್
ತಸ್ಯ ತದ್ವಚನಂ ಸಾಧೋಃ ಸತ್ಯಮೇವ ಭವಿಷ್ಯತಿ |
ಪರಿಕ್ಷಿದ್ಭವಿತೈತೇಷಾಂ ಪುನರ್ವಂಶಕರಃ ಸುತಃ ॥4॥
ಕೃಷ್ಣ ಆ ಸಜ್ಜನನ ಆ ಮಾತು ಸತ್ಯವೇ ಆಗುವುದು. ಪರಿಕ್ಷಿತನು ಇವರ (ಪಾಂಡವರ) ವಂಶವನ್ನು ಬೆಳಸುವ ಪುತ್ರನಾಗುವನು.
ತ್ವಾಂ ತು ಕಾಪುರುಷಂ ಪಾಪಂ ವಿದುಃ ಸರ್ವೇ ಮನೀಷಿಣಃ |
ಅಸಕೃತ್ ಪಾಪಕರ್ಮಾಣಂ ಬಾಲಜೀವಿತಘಾತಕಮ್ ॥5॥
ಆದರೆ ಎಲ್ಲ ಜ್ಞಾನಿಗಳು ನಿನ್ನನ್ನು ಕೆಟ್ಟಮನುಷ್ಯ , ಪಾಪಿ, ಮತ್ತೆ ಮತ್ತೆ ಪಾಪವನ್ನು ಆಚರಿಸುವವ, ಮಕ್ಕಳನ್ನು ಕೊಲ್ಲುವವ ಎಂದು ಭಾವಿಸುವರು.
ತಸ್ಮಾತ್ ತ್ವಮಸ್ಯ ಪಾಪಸ್ಯ ಕರ್ಮಣಃ ಫಲಮಾಪ್ನುಹಿ |
ತ್ರೀಣಿ ವರ್ಷಸಹಸ್ರಾಣಿ ಚರಿಷ್ಯಸಿ ಮಹೀಮಿಮಾಮ್ ॥6॥
ಆದ್ದರಿಂದ ನೀನು ಈ ಪಾಪ ಕರ್ಮದ ಫಲವನ್ನು ಹೊಂದುವಿ. ಈ ಭೂಮಿಯಲ್ಲಿ ಮೂರುಸಾವಿರ ವರ್ಷ ತಿರುಗುವಿ.
ಅಪ್ರಾಪ್ನುವನ್ ಕ್ವಚಿತ್ ಕಾಂಚಿತ್ ಸಂವಿದಂ ಜಾತು ಕೇನಚಿತ್ |
ನಿರ್ಜನಾನಸಹಾಯಸ್ತ್ವಂ ದೇಶಾನ್ ಪ್ರತಿ ಚರಿಷ್ಯಸಿ ॥7॥
ಎಲ್ಲೂ ಏನೂ ಸಿಗದೆ, ಯಾರಿಂದಲೂ ಪರಿಚಯಿಸದೆ, ಜನರಹಿತವಾದ ದೇಶಗಳಲ್ಲಿ ನಿಃಸಹಾಯಕನಾಗಿ ತಿರುಗುವಿ.
ಭವಿತ್ರೀ ನ ಹಿ ತೇ ಕ್ಷುದ್ರ ಜನಮಧ್ಯೇಷು ಸಂಸ್ಥಿತಿಃ |
ಪೂಯಶೋಣಿತಗಂಧೀ ಚ ದುರ್ಗಕಾಂತಾರಸಂಶ್ರಯಃ ॥8॥
ವಿಚರಿಷ್ಯಸಿ ಪಾಪಾತ್ಮನ್ ಚಿರಮೇಕೋ ವಸುಂಧರಾಮ್ ॥9॥
ಕ್ಷುದ್ರನೇ, ಪಾಪಿಯೇ! ಜನಮಧ್ಯದಲ್ಲಿ ವಾಸವನ್ನು ಹೊಂದಲಾರಿ, ರಕ್ತ-ಮಾಂಸದ ದುರ್ಗಂಧವನ್ನು ಹೊಂದಿದವನಾಗಿ ಬೆಟ್ಟ-ಕಾಡುಗಳಲ್ಲಿ ವಾಸಿಸುವಿ, ಒಂಟಿಯಾದ ನೀನು ಬಹುದಿನಗಳ ಪರ್ಯಂತವಾಗಿ ಭೂಮಿಯಲ್ಲಿ ಸುತ್ತುವಿ.
ವಯಃ ಪ್ರಾಪ್ಯ ಪರಿಕ್ಷಿತ್ತು ದೇವವ್ರತಮವಾಪ್ಯ ಚ |
ಕೃಪಾಚ್ಛಾರದ್ವತಾಚ್ಛೂರಃ ಸರ್ವಾಸತ್ರಣ್ಯುಪಲಪ್ಸ್ಯತೇ ॥10॥
ವಿದಿತ್ವಾ ಪರಮಾಸತ್ರಣಿ ಕ್ಷತ್ರಧರ್ಮವ್ರತೇ ಸ್ಥಿತಃ |
ಷಷ್ಟಿವರ್ಷಾಣಿ ಧರ್ಮಾತ್ಮಾ ವಸುಧಾಂ ಪಾಲಯಿಷ್ಯತಿ ॥11॥
ಪರಿಕ್ಷಿತನಾದರೋ ಪ್ರಾಪ್ತವಯಸ್ಕನಾಗಿ, ದೇವವ್ರತವನ್ನು ಪೂರ್ಣಗೊಳಿಸಿ, ಶರದ್ವತರ ಪುತ್ರನಾದ ಕೃಪನಿಂದ ಎಲ್ಲ ಅಸ್ತ್ರಗಳನ್ನು ಹೊಂದುವನು. ಶ್ರೇಷ್ಠ ಅಸ್ತ್ರಗಳನ್ನು ತಿಳಿದು, ಕ್ಷತ್ರಧರ್ಮದಲ್ಲಿ ಇರುವ ಧರ್ಮಾತ್ಮನಾದ ಪರಿಕ್ಷಿತನು ಅರವತ್ತು ವರ್ಷ ಪರ್ಯಂತ ಭೂಮಿಯನ್ನು ಶಾಸಿಸುವನು.
ತತಶ್ಚೋರ್ಧ್ವಂ ಮಹಾಬಾಹುಃ ಕುರುರಾಜೋ ಭವಿಷ್ಯತಿ |
ಪರಿಕ್ಷಿನ್ನಾಮ ನೃಪತಿರ್ಮಿಷತಸ್ತೇ ಸುದುರ್ಮತೇ ॥12॥
ಅಹಂ ತಂ ಜೀವಯಿಷ್ಯಾಮಿ ದಗ್ಧಂ ಶಸತ್ರಗ್ನಿತೇಜಸಾ|
ಪಶ್ಯ ಮೇ ತಪಸೋ ವೀರ್ಯಂ ಸತ್ಯಸ್ಯ ಚ ನರಾಧಮ ॥13॥
ದುಷ್ಟಬುದ್ಧಿಯವನೆ! ನೀನು ನೊಡುತ್ತಿರುವಂತೆ, ಇಲ್ಲಿಂದ ಮುಂದೆ ಮಹಾಬಾಹುವಾದ ಪರೀಕ್ಷಿತನೆಂಬ ರಾಜನು ಕುರುರಾಜನಾಗುವನು. ನರಾಧಮನೆ! ಶಸತ್ರಗ್ನಿಯಿಂದ ದಗ್ಧನಾದ ಆತನನ್ನು ನಾನು ಬದುಕಿಸುವೆನು, ನನ್ನ ತಪದ ಸತ್ಯದ ಪ್ರಭಾವವನ್ನು ನೋಡು.
ವ್ಯಾಸಃ
ಯಸ್ಮಾದನಾದೃತ್ಯ ಕೃತಂ ತ್ವಯಾಽಸ್ಮಾನ್ ಕರ್ಮ ದಾರುಣಮ್ |
ಬ್ರಾಹ್ಮಣಸ್ಯ ಸತಶ್ಚೇದಂ ವೃತ್ತಮನ್ಯಾಯವರ್ತಿನಃ ॥14॥
ತಸ್ಮಾದ್ಯದ್ ದೇವಕೀಪುತ್ರ ಉಕ್ತವಾನುತ್ತಮಂ ವಚಃ |
ಅಸಂಶಯಂ ತೇ ತದ್ಭಾವಿ ಕ್ಷುದ್ರಕರ್ಮನ್ ವ್ರಜೇತಿ ಹ ॥15॥
ವ್ಯಾಸರು ನೀಚಕರ್ಮಿ! ಯಾವಕಾರಣದಿಂದ ನೀನು ನಮ್ಮನ್ನು ಅತಿಕ್ರಮಿಸಿ ಭೀಕರವಾದ ಕರ್ಮವನ್ನು ಮಾಡಿರುವಿಯೋ, ಆದ್ದರಿಂದ ದೇವಕೀಪುತ್ರನು ಉತ್ತಮವಚನವನ್ನು ಹೇಳಿರುವನೋ ಅದು ನಿಸ್ಸಂಶಯವಾಗಿಯೂ ಸದ್ಬ್ರಾಹ್ಮಣ ವಂಶದಲ್ಲಿ ಉತ್ಪನ್ನನಾಗಿಯೂ ಅನ್ಯಾಯವನ್ನಾಚರಿಸಿರುವ ನಿನಗೆ ಸಂಭವಿಸುವುದು, ಇಲ್ಲಿಂದ ತೆರಳು.
ಅಶ್ವತ್ಥಾಮಾ
ಸಹೈವ ಭವತಾ ಬ್ರಹ್ಮನ್ ಸ್ಥಾಸ್ಯಾಮಿ ಮನುಜೇಷ್ವಿಹ |
ಸತ್ಯವಾಗಸ್ತು ಭಗವಾನ್ ಅಯಂ ಚ ಪುರುಷೋತ್ತಮಃ ॥16॥
ಅಶ್ವತ್ಥಾಮ ಬ್ರಹ್ಮಜ್ಞಾನಿಯೆ! ಈ ಪುರುಷೋತ್ತಮನಾದರೋ ಸತ್ಯವಕ್ತಾರನಾಗಲಿ, ಈ ಭೂಮಿಯಲ್ಲಿ ಇರುವ ಪರ್ಯಂತ ನಾನು ನಿಮ್ಮೊಡನೆ (ನಿಮ್ಮನ್ನು ಸ್ಮರಿಸುತ್ತಾ ಹೆದಯದಲ್ಲಿರುವ ನಿಮ್ಮೊಡನೆ) ಬದುಕುವೆನು.
ವೈಶಂಪಾಯನಃ
ಪ್ರದಾಯಾಥ ಮಣಿಂ ದ್ರೌಣಿಃ ಪಾಂಡವಾನಾಂ ಯಶಸ್ವಿನಾಮ್ |

ಜಗಾಮ ವಿಮನಾಸ್ತೇಷಾಂ ಸರ್ವೇಷಾಂ ಪಶ್ಯತಾಂ ರಣೇ ॥17॥
ವೈಶಂಪಾಯನರು ಅನಂತರದಲ್ಲಿ ದ್ರೋಣಪುತ್ರನು ಕೀರ್ತಿಶಾಲಿಗಳಾದ ಪಾಂಡುಪುತ್ರರಿಗೆ ಮಣಿಯನ್ನು ನೀಡಿದನು. ಆ ಎಲ್ಲರೂ ನೋಡುತ್ತಿರುವಾಗಲೇ ರಣರಂಗದಿಂದ ಬೇಸರಗೊಂಡವನಾಗಿ ತೆರಳಿದನು.
ಪಾಂಡವಾಶ್ಚೈವ ಗೋವಿಂದಂ ಪುರಸ್ಕೃತ್ಯ ಹತದ್ವಿಷಃ ।
ಕೃಷ್ಣದ್ವೈಪಾಯನಂ ಚೈವ ಪರ್ವತಂ ನಾರದಂ ತಥಾ ॥18॥
ದ್ರೋಣಪುತ್ರಸ್ಯ ಸಹಜಂ ಮಣಿಮಾದಾಯ ಸತ್ವರಾಃ ।
ದ್ರೌಪದೀಮಭ್ಯಧಾವಂತ ಪ್ರಾಯೋಪೇತಾಂ ಯಶಸ್ವಿನೀಮ್ ॥19॥
ಶತ್ರುಗಳನ್ನು ವಿಜಯಿಸಿದ ಪಾಂಡುಪುತ್ರರು ದ್ರೋಣಪುತ್ರನೊಡನೆ ಹುಟ್ಟಿದ ಮಣಿಯನ್ನು ತೆಗೆದುಕೊಂಡು, ಕೃಷ್ಣ, ವ್ಯಾಸ, ನಾರದ, ಪರ್ವತ ಇವರೆಲ್ಲರನ್ನು ಮುಂದಿಟ್ಟುಕೊಂಡು, ಲಗುಬಗೆಯಿಂದ ಕೀರ್ತಿಶಾಲಿನಿಯಾದ ಪ್ರಾಯೋಪವೇಶದಲ್ಲಿ ನಿರತಳಾದ ದ್ರೌಪದಿಯನ್ನು ಉದ್ದೇಶಿಸಿ ಧಾವಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ಮಣಿಲಾಭೋ ನಾಮ ಸಪ್ತಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ದ್ರೌಪದಿಯ ಸೂಚನೆಯಂತೆ ಧರ್ಮರಾಜನು ಮಣಿಯನ್ನು ಶಿರದಲ್ಲಿ ಧರಿಸುವುದು.
ವೈಶಂಪಾಯನಃ
ತತಸ್ತೇ ಪುರುಷವ್ಯಾಘ್ರಾಃ ಸದಶ್ವೈರನಿಲೋಪಮೈಃ ।
ಪ್ರಯಯೂ ರಾಜಶಾರ್ದೂಲ ಶಿಬಿರಂ ಪುನರೇವ ಹ ॥1॥
ವೈಶಂಪಾಯನರು ರಾಜಸಿಂಹನೆ! ಅನಂತರದಲ್ಲಿ ಆ ಪುರುಷಸಿಂಹರು ವಾಯುವಿನಂತೆ ವೇಗವನ್ನು ಹೊಂದಿದ ಒಳ್ಳೆಯ ಕುದುರೆಗಳ ನೆರವಿನಿಂದ, ಮತ್ತೆ ಶಿಬಿರದೆಡೆಗೆ ತೆರಳಿದರು.
ಅವತೀರ್ಯ ರಥೇಭ್ಯಸ್ತು ತ್ವರಮಾಣಾ ಮಹಾರಥಾಃ ।
ದದೃಶುರ್ದ್ರೌಪದೀಂ ಕೃಷ್ಣಾಮಾರ್ತಾಮಾರ್ತತರಾಃ ಸ್ವಯಮ್ ॥2॥
ಮಹಾರಥಿಕರಾದ ಸ್ವತಃ ಅತ್ಯಂತ ದುಃಖಿತರಾದ ಪಾಂಡವರು ಲಗುಬಗೆಯಿಂದ ರಥದಿಂದ ಇಳಿದು, ದುಃಖಿತಳಾದ ದ್ರುಪದಪುತ್ರಿಯಾದ ಕೃಷ್ಣೆಯನ್ನು ಕಂಡರು.
ತಾಮುಪೇತ್ಯ ನಿರಾನಂದಾಂ ದುಃಖಶೋಕಪರಾಯಣಾಮ್ ।
ಪರಿವಾರ್ಯೋಪತಿಷ್ಠಂತ ಪಾಂಡವಾಃ ಸಹಕೇಶವಾಃ ॥3॥
ಕೇಶವಸಹಿತರಾದ ಪಾಂಡುಪುತ್ರರು ಸುಖರಹಿತಳಾದ, ದುಃಖ ಶೋಕಮಗ್ನಳಾದ ಆ ದ್ರೌಪದಿಯ ಸಮೀಪದಲ್ಲಿ ಸುತ್ತಲೂ ಕುಳಿತರು.
ತತೋ ರಾಜ್ಞಾಽಭ್ಯನುಜ್ಞಾತೋ ಭೀಮಸೇನೋ ಮಹಾಬಲಃ ।
ಪ್ರದದೌ ತಂ ಮಣಿಂ ದಿವ್ಯಂ ವಚನಂ ಚೇದಮಬ್ರವೀತ್ ॥4॥
ಅನಂತರದಲ್ಲಿ ರಾಜನ ಆದೇಶದಂತೆ ದ್ರೌಪದಿಗೆ ಮಹಾಬಲಶಾಲಿಯಾದ ಭೀಮಸೇನನು ಆ ದಿವ್ಯ ಮಣಿಯನ್ನು ನೀಡಿದನು ಮತ್ತು ಹೀಗೆ ನುಡಿದನು.
ಭೀಮಃ
ಅಯಂ ಭದ್ರೇ ತವ ಮಣಿಃ ಪುತ್ರಹಂತಾ ಜಿತಶ್ಚ ತೇ ।
ಉತ್ತಿಷ್ಠ ಶೋಕಮುತ್ಸೃಜ್ಯ ಕ್ಷತ್ರಧರ್ಮಮನುಸ್ಮರ ॥5॥
ಭೀಮಸೇನ ಮಂಗಳಕರಳೆ! ನಿನ್ನ ಪುತ್ರರನ್ನು ಸಂಹರಿಸಿದವನ ಈ ಮಣಿಯು ನಿನ್ನದು. ಕ್ಷತ್ರಿಯಧರ್ಮವನ್ನು ಸ್ಮರಿಸುತ್ತಾ ದುಃಖವನ್ನು ತೊರೆದು ಮೇಲೇಳು.
ಪ್ರಯಾಣೇ ವಾಸುದೇವಸ್ಯ ಶಮಾರ್ಥಮಸಿತೇಕ್ಷಣೇ ।
ಯಾನ್ಯುಕ್ತಾನಿ ತ್ವಯಾ ಭೀರು ವಾಕ್ಯಾನಿ ಮಧುಸೂದನೇ ॥6॥
ಕಪ್ಪುಕಂಗಳನ್ನು ಹೊಂದಿದವಳೆ, ಭಯಭೀತಳೆ! ಸಂಧಿಗಾಗಿ ವಾಸುದೇವ ಪ್ರಯಾಣಿಸಿದ ಸಂದರ್ಭದಲ್ಲಿ ಮಧುಸೂದನನಿಗೆ ನೀನು ಯಾವ ಮಾತುಗಳನ್ನು ಹೇಳಿದ್ದಿ?
ನೈವ ಮೇ ಪತಯಃ ಸಂತಿ ನ ಪುತ್ರಾ ಭ್ರಾತರೋ ನ ಮೇ ।
ನೈವ ತ್ವಮಸಿ ಗೋವಿಂದ ಶಮಮಿಚ್ಛತಿ ರಾಜನಿ ॥7॥
ಗೋವಿಂದ! ರಾಜನು ಶಾಂತಿಯನ್ನು ಬಯಸುವದಾದಲ್ಲಿ ನನಗೆ ಗಂಡಂದಿರು ಇಲ್ಲ, ಮಕ್ಕಳಿಲ್ಲ, ಸಹೋದರರು ಇಲ್ಲ, ನೀನೂ ಇಲ್ಲ.
ಉಕ್ತವತ್ಯಸಿ ವಾಕ್ಯಾನಿ ಧೀರಾಣಿ ಪುರುಷೋತ್ತಮೇ ।
ಕ್ಷತ್ರಧರ್ಮಾನುರೂಪಾಣಿ ತಾನಿ ಸಂಸ್ಮರ್ತುಮರ್ಹಸಿ ॥8॥
ಪುರುಷೋತ್ತಮನಲ್ಲಿ ಕ್ಷತ್ರಧರ್ಮಕ್ಕೆ ಯೋಗ್ಯವಾದ ಧೈರ್ಯಪೂರಕವಾದ ಮಾತುಗಳನ್ನು ಹೇಳಿದ್ದಿ. ಅವುಗಳನ್ನು ಈಗ ಸ್ಮರಿಸಿಕೊ.
ಹತೋ ದುರ್ಯೋಧನಃ ಪಾಪೋ ರಾಜ್ಯಸ್ಯ ಪರಿಪಂಥ್ಯಸೌ ।
ದುಃಶಾಸನಸ್ಯ ರುಧಿರಂ ಪ್ರಾಶಿತಂ ತು ರಣೇ ಮಯಾ ॥9॥
ರಾಜ್ಯಕ್ಕೆ ಶತ್ರುವಾಗಿದ್ದ ಪಾಪಿ ದುರ್ಯೋಧನನು ಮೃತನಾದನು, ರಣರಂಗದಲ್ಲಿ ನಾನು ದುಶ್ಶಾಸನನ ರಕ್ತವನ್ನು ಪಾನ ಮಾಡಿದೆನು.

ವೈರಸ್ಯ ಗತಮಾನೃಣ್ಯಂ ನ ಸ್ಮ ವಾಚ್ಯಾ ವಿವಕ್ಷತಾ |
ಜಿತ್ವಾ ದ್ರೋಣಸುತೋ ಮುಕ್ತೋ ಬ್ರಾಹ್ಮಣ್ಯಾದ್ ಗೌರವೇಣ ಚ ॥10॥
ವೈರದ ಋಣವು ತೀರಿತು, ಚುರುಕು ಮಾತನಾಡುವ ನೀನು ನಮ್ಮನ್ನು ನಿಂದಿಸುವಂತಿಲ್ಲ. ದ್ರೋಣಪುತ್ರನನ್ನು ಗೆದ್ದೆವು, ಬ್ರಾಹ್ಮಣ ಎಂಬ ಗೌರವದಿಂದ ಅವನು ಮುಕ್ತನಾದನು (ನಮ್ಮಿಂದ ಸಂಹೃತನಾಗಲಿಲ್ಲ).
ಯಶೋಽಸ್ಯ ಪತಿತಂ ದೇವಿ ಶರೀರಂ ತ್ವವಶೇಷಿತಮ್ |
ಮಣಿನಾ ವಿಪ್ರಮುಕ್ತಶ್ಚ ನ್ಯಾಸಿತಶ್ಚಾಯುಧಾನಿ ಚ ॥11॥
ದೇವಿಯೆ! ಆತನ (ಅಶ್ವತ್ಥಾಮನ) ಕೀರ್ತಿಯು ಮಣ್ಣುಪಾಲಾಯಿತು, ಶರೀರವು ಮಾತ್ರ ಉಳಿದಿದೆ, ಆಯುಧಗಳನ್ನು ಪರಿತ್ಯಜಿಸಿರುವನು, ಮಣಿಯನ್ನು ನೀಡಿದ್ದರಿಂದ ಮುಕ್ತನಾದನು.
ದ್ರೌಪದೀ
ಕೇವಲಾನೃಣ್ಯಮಾಪ್ತಾಽಸ್ಮಿ ಗುರುಪುತ್ರೋ ಗುರುರ್ಮಮ |
ಶಿರಸ್ಯೇನಂ ಮಣಿಂ ರಾಜಾ ಗೃಹೀತುಮನಘೋಽರ್ಹತಿ ॥12॥
ದ್ರೌಪದಿ ಕೇವಲ ಈ ಮಣಿಯಿಂದ ನಾನು ಪುತ್ರಋಣದಿಂದ ಮುಕ್ತಳಾಗಿರುವೆನು. ಗುರುಪುತ್ರನು ನನಗೂ ಗುರುವೇ ಆಗಿರುವನು. ಪಾಪರಹಿತನೆ! ರಾಜನು ತಲೆಯಲ್ಲಿ ಈ ಮಣಿಯನ್ನು ಧರಿಸಲು ಯೋಗ್ಯನಾಗಿದ್ದಾನೆ.
ವೈಶಂಪಾಯನಃ
ತಂ ಗೃಹೀತ್ವಾ ತತೋ ರಾಜಾ ಶಿರಸ್ಯೇವಾಕರೋತ್ ತದಾ |
ಗುರೋರುಚ್ಛಿಷ್ಟಮಿತ್ಯೇವ ದ್ರೌಪದೀವಚನಾದಪಿ ॥13॥
ವೈಶಂಪಾಯನರು ಅನಂತರದಲ್ಲಿ ಅದನ್ನು (ಮಣಿಯನ್ನು) ಧರ್ಮರಾಜನು ಪರಿಗ್ರಹಿಸಿ, ಗುರುಗಳ ಪ್ರಸಾದ ಎಂದು, ದ್ರೌಪದಿಯ ಮಾತಿನಂತೆಯೂ ಆ ಕೂಡಲೇ ತಲೆಯಲ್ಲಿ ಧರಿಸಿದನು.
ತತೋ ದಿವ್ಯಂ ಮಣಿವರಂ ಶಿರಸಾ ಧಾರಯನ್ ಪ್ರಭುಃ |
ಶುಶುಭೇ ಚ ಮಹಾರಾಜಃ ಸಚಂದ್ರ ಇವ ಪರ್ವತಃ ॥14॥
ಅನಂತರದಲ್ಲಿ ಪ್ರಭುವಾದ ಮಹಾರಾಜನು ದಿವ್ಯವಾದ ಶ್ರೇಷ್ಠಮಣಿಯನ್ನು ಶಿರಸ್ಸಿನಲ್ಲಿ ಧರಿಸಿದವನಾಗಿ ಚಂದ್ರನಿಂದ ಕೂಡಿದ ಪರ್ವತದಂತೆ ಪ್ರಕಾಶಿಸಿದನು.
ಉತ್ತಸ್ಥೌ ಪುತ್ರಶೋಕಾರ್ತಾ ತತಃ ಕೃಷ್ಣಾ ಮನಸ್ವಿನೀ |
ಕೃಷ್ಣಂ ಚಾಪಿ ಮಹಾಬಾಹುರನ್ವಪೃಚ್ಛದ್ ಯುಧಿಷ್ಠಿರಃ ॥15॥
ಅನಂತರದಲ್ಲಿ ಸ್ವಾಭಿಮಾನಿನಿಯಾದ ಪುತ್ರಶೋಕದಿಂದ ಆರ್ತಳಾದ ದ್ರೌಪದಿಯು ಮೇಲೆದ್ದಳು. ಮಹಾಬಾಹುವಾದ ಯುಧಿಷ್ಠಿರನು ಕೃಷ್ಣನನ್ನು ಪ್ರಶ್ನಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ದ್ರೌಪದೀಸಾಂತ್ವನಂ ನಾಮ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ವೇದೇಶ್ವರೇಣಾಪಿ ಯದೂತ್ತಮೇನ
ಕೃಷ್ಣೇನ ಯುಕ್ತಾಸ್ತತ ಆಶು ಪಾರ್ಥಾಃ |
ಯಯುಃ ಸಭಾರ್ಯಾ ನಿಜರಾಜಧಾನೀಂ
ಹತ್ವೈವ ಸಂತೋಽಂತರರೀನ್ ಸ್ವರಾಜ್ಯಮ್ ॥
ಸಜ್ಜನರು ಕಾಮ-ಕ್ರೋಧಾದಿ ಮನದೊಳಗಿನ ಶತ್ರುಗಳನ್ನು ನಾಶಪಡಿಸಿ ಮೋಕ್ಷಮಂದಿರವನ್ನು ಸೇರುವಂತೆ ಪಾಂಡವರು ತಮ್ಮ ಮನೆಯೊಳಗಿನ ಶತ್ರುಗಳನ್ನು ಸಂಹರಿಸಿ ವೇದವ್ಯಾಸರಿಂದಲೂ ಕೃಷ್ಣನಿಂದಲೂ ಕೂಡಿ ಪತ್ನಿಯರೊಂದಿಗೆ ಬೇಗನೆ ತಮ್ಮ ರಾಜಧಾನಿಯಾದ ಹಸ್ತಿನಾವತಿಯನ್ನು ಸೇರಿದರು.
* * * * *
ಒಂಬತ್ತನೆಯ ಅಧ್ಯಾಯ
ಒಬ್ಬನೇ ದ್ರೋಣಪುತ್ರನು ಅನೇಕರನ್ನು ಹೇಗೆ ಸಂಹರಿಸಿದನು ಎಂದು ಕೃಷ್ಣನಲ್ಲಿ ಯುಧಿಷ್ಠಿರನು ಪ್ರಶ್ನಿಸಲು, ರುದ್ರದೇವನ ಅನುಗ್ರಹದಿಂದ ಎಂದು ಉತ್ತರಿಸಿದ ಕೃಷ್ಣನು, ರುದ್ರದೇವನ ಮಹಿಮೆಯನ್ನು ತಿಳಿಸಿದನು.
ವೈಶಂಪಾಯನಃ
ಹತೇಷು ಸರ್ವಸೈನ್ಯೇಷು ಸೌಪ್ತಿಕೇ ತ್ರೈ ರಥೈಸ್ತ್ರಿಭಿಃ |
ಶೋಚಮಾನೋಽಬ್ರವೀದ್ ರಾಜಾ ಪಾಂಡವೋ ಯದುನಂದನಮ್ ॥
ವೈಶಂಪಾಯನರು ಮಲಗಿದ ಸಮಸ್ತ ಸೇನೆಯು ರಥಿಕರಾದ ಆ ಮೂವರಿಂದ ಸಂಹೃತವಾಗಲು ಶೋಚಿಸುತ್ತಿರುವ ಪಾಂಡುಪುತ್ರನಾದ ರಾಜನು ಯದುನಂದನನಲ್ಲಿ ಪ್ರಶ್ನಿಸಿದನು.
ಯುಧಿಷ್ಠಿರಃ
ಕಥಂ ನು ಕೃಷ್ಣ ಪಾಪೇನ ಕ್ಷುದ್ರೇಣ ಶಠಬುದ್ಧಿನಾ |
ದ್ರೌಣಿನಾ ನಿಹತಾಃ ಸರ್ವೇ ಮಮ ಪುತ್ರಾ ಮಹಾರಥಾಃ ॥2॥

ಧರ್ಮರಾಜ ಕೃಷ್ಣ! ಅವಿನೀತ ಬುದ್ಧಿಯವನಾದ ಕ್ಷುದ್ರನಾದ ಪಾಪಿಯಾದ (ಒಬ್ಬನೇ) ದ್ರೋಣಪುತ್ರನಿಂದ ಮಹಾರಥಿಕರಾದ ಎಲ್ಲ ನನ್ನ ಪುತ್ರರು ಹೇಗೆ ಸಂಹೃತರಾದರು?
ತಥಾ ಕೃತಾಸ್ತ್ರವಿಕ್ರಾಂತಾಃ ಸಂಗ್ರಾಮೇಷ್ವಪಲಾಯಿನಃ |
ದ್ರುಪದಸ್ಯಾತ್ಮಜಾಃ ಸರ್ವೇ ದ್ರೌಣಿನಾ ನಿಹತಾಃ ಕಥಮ್ ॥3॥
ಹಾಗೆಯೆ ಅಸ್ತ್ರವಿದ್ಯಾವಿಶಾರದರಾದ ಯುದ್ಧದಲ್ಲಿ ಎಂದೂ ಪಲಾಯನವನ್ನು ಮಾಡದ ದ್ರುಪದನ ಎಲ್ಲ ಪುತ್ರರು (ಒಬ್ಬನೇ) ದ್ರೋಣಪುತ್ರನಿಂದ ಹೇಗೆ ಸಂಹೃತರಾದರು?
ಯಸ್ಯ ದ್ರೋಣೋ ಮಹೇಷ್ವಾಸೋ ನ ಪ್ರಾದಾದಾಹವೇ ಮುಖಮ್ |
ನಿಜಘ್ನೇ ರಥಿನಾಂ ಶ್ರೇಷ್ಠಂ ಧೃಷ್ಟದ್ಯುಮ್ನಂ ಕಥಂ ನು ಸಃ ॥4॥
ದೊಡ್ಡಬಿಲ್ಲಾಳಾದ ದ್ರೋಣರೂ ಸಹ ಯುದ್ಧದಲ್ಲಿ ಯಾರೆಡೆಗೆ ಮುಖವನ್ನೂ ಮಾಡುತ್ತಿರಲಿಲ್ಲವೋ, ರಥಿಕರಲ್ಲಿ ಹಿರಿಯನಾದ ಧೃಷ್ಟದ್ಯುಮ್ನನನ್ನು ಆತನು ಹೇಗೆ ಸಂಹರಿಸಿದನು?
ಕಿಂ ನು ತೇನ ಕೃತಂ ಕರ್ಮ ತಥಾಯುಕ್ತಂ ನರರ್ಷಭ |
ಯದೇಕಃ ಸಮರೇ ಸರ್ವಾನ್ ಅವಧೀದ್ ವೈ ಗುರೋಃ ಸುತಃ ॥5॥
ಪುರುಷಶ್ರೇಷ್ಠನೆ! ಏಕಾಕಿಯಾದ ಗುರುಪುತ್ರನು ಯುದ್ಧದಲ್ಲಿ ಸರ್ವರನ್ನೂ ಸಂಹರಿಸಿದನು, ಆತನು ಅಂತಹ ಅಸದೃಶವಾದ ಯಾವ ಕರ್ಮವನ್ನು ಆಚರಿಸಿರುವನು?
ಶ್ರೀಭಗವಾನ್
ನೂನಂ ಸ ದೇವದೇವಾನಾಮ್ ಈಶ್ವರೇಶ್ವರಮವ್ಯಯಮ್ |
ಜಗಾಮ ಶರಣಂ ದ್ರೌಣಿರೇಕಸ್ತೇನಾವಧೀದ್ ಬಹೂನ್ ॥6॥
ಕೃಷ್ಣ ಆ ದ್ರೋಣಪುತ್ರನು ನಿಶ್ಚಯವಾಗಿಯೂ ದೇವಾನುದೇವತೆಗಳಿಗೆ ದೇವದೇವನಾದ ಮಹಾದೇವನಲ್ಲಿ ಶರಣಾಗತನಾಗಿರುವನು. ಆದ್ದರಿಂದ ಓರ್ವನೇ ಬಹುಜನರನ್ನು ಸಂಹರಿಸಿದನು.
ಪ್ರಸನ್ನೋ ಹಿ ಮಹಾದೇವೋ ದದ್ಯಾದಮರತಾಮಪಿ |
ವೀರ್ಯಂ ಹಿ ಗಿರಿಶೋ ದದ್ಯಾದ್ ಯೇನೇಂದ್ರಮಪಿ ಶಾತಯೇತ್ ॥
ಮಹಾದೇವನು ಪ್ರಸನ್ನನಾದಲ್ಲಿ ದೇವತ್ವವನ್ನೂ ನೀಡುವನು. ಗಿರೀಶನು ವೀರ್ಯವನ್ನು ನೀಡಿದಲ್ಲಿ, ಅದರಿಂದ ಇಂದ್ರನನ್ನೂ ನಿಗ್ರಹಿಸಬಹುದು.
ವೇದಾಹಂ ಹಿ ಮಹಾದೇವಂ ತತ್ತ್ವೇನ ಭರತರ್ಷಭ |
ಯಾನಿ ಚಾಸ್ಯ ಪುರಾಣಾನಿ ಕರ್ಮಾಣಿ ವಿವಿಧಾನಿ ಚ ॥8॥
ಭರತವಂಶೀಯರಲ್ಲಿ ಶ್ರೇಷ್ಠನೆ! ಮಹದೇವನನ್ನು ಯಥಾರ್ಥವಾಗಿ ತಿಳಿದಿರುವೆನು. ಆತನ ಪುರಾತನವಾದ ಕಾರ್ಯಗಳನ್ನು ಚರಿತ್ರೆಗಳನ್ನೂ ಸಹ ಬಲ್ಲೆ.
ಆದಿರೇಷ ಹಿ ಭೂತಾನಾಂ ಮಧ್ಯಮಂತಶ್ಚ ಭಾರತ |
ವಿಚೇಷ್ಟತೇ ಜಗಚ್ಚೇದಂ ಸರ್ವಮಸ್ಯೈವ ಕರ್ಮಣಾ ॥9॥
ಭರತಕುಲೋತ್ಪನ್ನನೆ! ಎಲ್ಲ ಪ್ರಾಣಿಗಳಿಗೆ ಆದಿಯು , ಮಧ್ಯನು, ಅಂತ್ಯನೂ ಆಗಿರುವನು. ಈ ಎಲ್ಲ ಪ್ರಪಂಚವು ಆತನ ಕ್ರಿಯೆಯಿಂದ ಚೇಷ್ಟೆ ಮಾಡುವುದು.
ಏವಂ ಸಿಸೃಕ್ಷುರ್ಭೂತಾನಿ ದದರ್ಶ ಪ್ರಥಮಂ ವಿಭುಃ |
ಪಿತಾಮಹೋಽಬ್ರವೀಚ್ಚೈನಂ ಭೂತಾನಿ ಸೃಜ ಮಾಚಿರಮ್ ॥10॥
ಸ್ವಾಮಿಯಾದ ಪಿತಾಮಹನು ಪ್ರಾಣಿಗಳನ್ನು ಸೃಷ್ಟಿಸಬೇಕೆಂಬ ಇಚ್ಛೆಯನ್ನು ಹೊಂದಿದವನಾಗಿ ಮೊದಲು ಈತನನ್ನು ನೋಡಿದನು, ವಿಲಂಬವಿಲ್ಲದಂತೆ ಸೃಷ್ಟಿಸು ಎಂದು ಹೇಳಿದನು.
ಹರಿಕೇಶಸ್ತಥೇತ್ಯುಕ್ತ್ವಾ ದೀರ್ಘದರ್ಶೀ ತದಾ ಪ್ರಭುಃ |
ದೀರ್ಘಕಾಲಂ ತಪಸ್ತೇಪೇ ಮಗ್ನೋಽಂಭಸಿ ಮಹಾತಪಾಃ ॥11॥
ಮಹಾತಪಸ್ವಿಯಾದ ದೂರದರ್ಶಿಯಾದ ಸ್ವಾಮಿಯಾದ ಹರಿಕೇಶನು (ಮಹಾದೇವನು) ಹಾಗೆಯೇ ಆಗಲಿ ಎಂದು ಹೇಳಿ, ಆಗ ನೀರಿನಲ್ಲಿ ಮುಳುಗಿ ದೀರ್ಘಕಾಲದ ಪರ್ಯಂತ ತಪವನ್ನು ಆಚರಿಸಿದನು.
ವ್ಯಾಖ್ಯಾನ ವಿಶೇಷ ಈ ಶ್ಲೋಕದ ದ್ವಿತೀಯ ಪಾದದಲ್ಲಿ ಈ ರೀತಿಯಾದ ಪಾಠಾಂತರವೂ ಇದೆ- `ಭೂತಾನಾಂ ದೋಷದರ್ಶಿವಾನ್' - ತಾನು ಸೃಷ್ಟಿಸಿದ ಪ್ರಾಣಿಗಳಲ್ಲಿ ಕೊರತೆಯನ್ನು ಕಂಡು ಎಂದು.
ಸುಮಹಾಂತಂ ತತಃ ಕಾಲಂ ಪ್ರತೀಕ್ಷ್ಯೈನಂ ಪಿತಾಮಹಃ |
ಸ್ರಷ್ಟಾರಂ ಸರ್ವಭೂತಾನಾಂ ಸಸರ್ಜ ಮನಸಾಽಪರಮ್ ॥12॥
ಅನಂತರದಲ್ಲಿ ಪಿತಾಮಹನು ಆತನನ್ನು ಬಹಳ ದಿನಗಳ ಪರ್ಯಂತ ನಿರೀಕ್ಷಿಸಿ ( ಆತನು ಸೃಷ್ಟಿಸಲು ಉದ್ಯುಕ್ತನಾಗದಿರುವುದನ್ನು ಕಂಡು) ಎಲ್ಲ ಪ್ರಾಣಿಗಳನ್ನು ಸೃಷ್ಟಿಸುವ ಮತ್ತೊಬ್ಬನನ್ನು ಮನಸಾ ಸೃಷ್ಟಿಸಿದನು.
ಸೋಽಬ್ರವೀದ್ ಭ್ರಾತರಂ ದೃಷ್ಟ್ವಾ ಗಿರಿಶಂ ಸುಪ್ತಮಂಭಸಿ |
ಯದಿ ಮೇ ನಾಗ್ರಜೋಽಸ್ತ್ಯನ್ಯಸ್ತತಃ ಸ್ರಕ್ಷ್ಯಾಮ್ಯಹಂ ಪ್ರಜಾಃ ॥13॥
ಆತನು (ಬ್ರಹ್ಮನಿಂದ ಸೃಷ್ಟನಾದ ವಿರಾಟ್ಪುರುಷನು) ನೀರಿನಲ್ಲಿ ಮಲಗಿದ ಅಣ್ಣನಾದ ಗಿರೀಶನನ್ನು ನೋಡಿ ಹೀಗೆ ಹೇಳಿದನು- `ಒಂದು ವೇಳೆ ನನಗೆ ಬೇರೆ ಅಣ್ಣನು ಇಲ್ಲ ಎಂದಾದಲ್ಲಿ ನಾನು ಪ್ರಜೆಗಳನ್ನು ಸೃಷ್ಟಿಸುವೆನು' ಎಂದು.
ತಮಬ್ರವೀತ್ ಪಿತಾ ನಾಸ್ತಿ ತ್ವದನ್ಯಃ ಪುರುಷೋಽಗ್ರಜಃ |

ಸ್ಥಾಣುರೇಷ ಜಲೇ ಮಗ್ನೋ ವಿಸೃಬ್ಧಃ ಕುರು ವೈ ಪ್ರಜಾಃ ॥14॥
ತಂದೆಯಾದ ಬ್ರಹ್ಮನು ಹೇಳಿದನು- ನಿನ್ನಿಂದ ಮೊದಲು ಹುಟ್ಟಿದ ಬೇರೆ ಪುರುಷನು ಇಲ್ಲ. ಅಣ್ಣನಾದ ಈ ಸ್ಥಾಣುವು ನೀರಿನಲ್ಲಿ ಮುಳುಗಿರುವನು, ನಿಶ್ಚಿಂತನಾಗಿ ಸೃಷ್ಟಿಯ ಕಾರ್ಯವನ್ನು ನಡೆಸು.
ಸ ಸರ್ವಭೂತಾನ್ಯಸೃಜದ್ ದಕ್ಷಾದೀಂಸ್ತು ಪ್ರಜಾಪತೀನ್ |
ಯೈರಿಮಂ ವ್ಯಕರೋತ್ ಸರ್ವಂ ಭೂತಗ್ರಾಮಂ ಚತುರ್ವಿಧಮ್ ॥
ಆತನು ಎಲ್ಲ ವಿಧವಾದ ಪ್ರಾಣಿಗಳನ್ನು ದಕ್ಷಾದಿ ಪ್ರಜಾಪತಿಗಳನ್ನು ಸೃಷ್ಟಿಸಿದನು. ಈ ಪ್ರಜಾಪತಿಗಳು ಎಲ್ಲ ನಾಲ್ಕುವಿಧವಾದ ಪ್ರಾಣಿಸಮೂಹವನ್ನು ಸೃಷ್ಟಿಸಿದರು.
ತಾಃ ಸೃಷ್ಟಮಾತ್ರಾಃ ಕ್ಷುಧಿತಾಃ ಪ್ರಜಾಃ ಸರ್ವಾಃ ಪ್ರಜಾಪತಿಮ್ |
ಬಿಭಕ್ಷಯಿಷವೋ ರಾಜನ್ ಸಹಸಾಽಭ್ಯದ್ರವಂಸ್ತದಾ ॥16॥
ರಾಜನೇ! ಸೃಷ್ಟವಾದ ಕೂಡಲೇ ಹಸಿದ ಆ ಎಲ್ಲ ಪ್ರಜೆಗಳು ಪ್ರಜಾಪತಿಯನ್ನೇ ತಿನ್ನಬೇಕೆಂಬ ಇಚ್ಛೆಯಿಂದ ವೇಗದಿಂದ ಮುತ್ತಿದವು.
ಸ ಭಕ್ಷ್ಯಮಾಣಃ ಪ್ರಾಣಾರ್ಥೀ ಪಿತಾಮಹಮುಪಾದ್ರವತ್ |
ಆಭ್ಯೋ ಮಾಂ ರಕ್ಷತು ಭವಾನ್ ವೃತ್ತಿರಾಸಾಂ ವಿಧೀಯತಾಮ್ ॥17॥
(ಅವುಗಳಿಂದ) ಮುತ್ತಲ್ಪಟ್ಟ ಪ್ರಾಣಾರ್ಥಿಯಾದ ಆತನು (ಪ್ರಜಾಪತಿಯು) ಪಿತಾಮಹನ ಬಳಿ ಸಾಗಿದನು. (ಮತ್ತು ಆತನಲ್ಲಿ ನಿವೇದಿಸಿಕೊಂಡನು) `ನೀನು ಇವುಗಳಿಂದ ನನ್ನನ್ನು ಸಂರಕ್ಷಿಸು. ಇವುಗಳಿಗೆ ಜೀವಿಕೆಯನ್ನು ಕಲ್ಪಿಸು' ಎಂದು.
ತತಸ್ತಾಭ್ಯೋ ದದಾವನ್ನಮೋಷಧೀಃ ಸ್ಥಾವರಾಣಿ ಚ |
ಜಂಗಮಾನಿ ಚ ಭೂತಾನಿ ದುರ್ಬಲಾನಿ ಬಲೀಯಸಾಮ್ ॥18॥
ಅನಂತರದಲ್ಲಿ ಅವುಗಳಿಗೆ ಚಲಿಸದ ಔಷಧಗಳನ್ನು (ಗಿಡ-ಬಳ್ಳಿಗಳನ್ನು) ಅನ್ನವನ್ನಾಗಿ ನೀಡಿದನು. ಬಲಿಷ್ಟವಾದ ಪ್ರಾಣಿಗಳಿಗೆ ದುರ್ಬಲವಾದ ತಿರುಗಾಡುವ ಪ್ರಾಣಿಗಳನ್ನು ಆಹಾರವನ್ನಾಗಿ ಕಲ್ಪಿಸಿದನು.
ವಿಹಿತಾನ್ನಾಃ ಪ್ರಜಾಸ್ತಾಸ್ತು ಜಗ್ಮುಸ್ತುಷ್ಟಾ ಯಥಾಗತಮ್ |
ತತೋ ವವೃಧಿರೇ ರಾಜನ್ ಪ್ರೀತಿಮತ್ಯಃ ಸ್ವಯೋನಿಷು ॥19॥
ಅನ್ನವನ್ನು ಹೊಂದಿದ ಪ್ರಜೆಗಳು ಸಂತುಷ್ಟರಾಗಿ ತಮ್ಮ ಸ್ಥಾನಗಳಿಗೆ ತೆರಳಿದರು. ರಾಜನೇ! ಅನಂತರದಲ್ಲಿ ತಮ್ಮ ತಮ್ಮ ಯೋನಿಗಳಲ್ಲಿ ಪ್ರಸನ್ನಗಳಾದ ಆ ಪ್ರಜೆಗಳು ಸಂತತಿಯನ್ನು ಬೆಳೆಸಿದವು.
ಭೂತಗ್ರಾಮೇ ವಿವೃದ್ಧೇ ತು ಸೃಷ್ಟೇ ದೇವಾಸುರೇ ತದಾ |
ಉದತಿಷ್ಠಜ್ಜಲಾಜ್ಜ್ಯೇಷ್ಠಃ ಪ್ರಜಾಶ್ಚೇಮಾ ದದರ್ಶ ಸಃ ॥20॥
ಪ್ರಜಾಸಮೂಹವು ಬೆಳೆಯಲು, ದೇವ-ದಾನವರು ಸೃಷ್ಟವಾಗಲು, ಆಗ ಜ್ಯೇಷ್ಠನಾದ ಹರಿಕೇಶನು ನೀರಿನಿಂದ ಮೇಲೆದ್ದನು. ಈ ಎಲ್ಲ ಪ್ರಜೆಗಳನ್ನು ಆತನು ಕಂಡನು.
ಬಹುರೂಪಾಃ ಪ್ರಜಾಃ ಸೃಷ್ಟಾ ವಿವೃದ್ಧಾಶ್ಚ ಸ್ವತೇಜಸಾ |
ಚುಕ್ರೋಧ ಬಲವದ್ ದೃಷ್ಟಾ ಲಿಂಗಂ ಸ್ವಂ ಪ್ರತ್ಯವಿಧ್ಯತ ॥21॥
ತನ್ನ (ಚತುರ್ಮುಖನ) ತೇಜಸ್ಸಿನಿಂದಲೇ ಸೃಷ್ಟವಾಗಿ ಬೆಳೆದ ಬಹುರೂಪದ ಪ್ರಜೆಗಳನ್ನು ನೋಡಿ ಕೋಪಗೊಂಡನು (ಮಹದೇವನು), ತನ್ನ ಕೊರಳಲ್ಲಿದ್ದ ಬಾಣರೂಪದ ಲಿಂಗವನ್ನು ಭೂಮಿಯಲ್ಲಿ ಎಸೆದನು.
ತತ್ ಪ್ರವಿದ್ಧಂ ತಥಾ ಭೂಮೌ ತಥೈವ ಪ್ರತ್ಯತಿಷ್ಠತ |
ತಮುವಾಚಾವ್ಯಯೋ ಬ್ರಹ್ಮಾ ವಚೋಭಿಃ ಶಮಯನ್ನಿವ ॥22॥
ಭೂಮಿಯಲ್ಲಿ ಹೂತಿದ್ದ ಅದು ( ಆ ಲಿಂಗವು) ಹಾಗೆಯೇ ಪ್ರತಿಷ್ಠಿತವಾಯಿತು. ನಾಶರಹಿತನಾದ ಬ್ರಹ್ಮನು ಮಾತಿನಿಂದ ಸಮಾಧಾನ ಪಡಿಸುತ್ತಾ ಆತನನ್ನು ಉದ್ದೇಶಿಸಿ ಹೇಳಿದನು.
ಬ್ರಹ್ಮಾ
ಕಿಂ ಕೃತಂ ಸಲಿಲೇ ಶರ್ವ ಚಿರಕಾಲಸ್ಥಿತೇನ ತೇ |
ಕಿಮರ್ಥಂ ಚೇದಮುತ್ಪಾದ್ಯ ಲಿಂಗಂ ಭೂಮೌ ಪ್ರವೇಶಿತಮ್ ॥23॥
ಬ್ರಹ್ಮ ಶಿವನೇ! ಬಹುಕಾಲ ನೀರಿನಲ್ಲಿ ನಿಂತು ಏನನ್ನು ಮಾಡಿದಿ? ಏತಕ್ಕಾಗಿ ಈ ಲಿಂಗವನ್ನು ಮೇಲೆತ್ತಿ ಭೂಮಿಯಲ್ಲಿ ಎಸೆದಿರುವಿ?
ಶ್ರೀಭಗವಾನ್
ಸೋಽಬ್ರವೀಜ್ಜಾತಸಂರಂಭಸ್ತಥಾ ಲೋಕಗುರುರ್ಗುರುಮ್ ॥24॥
ಕೃಷ್ಣ ಆ ಲೋಕಗುರುವು ಕೋಪಗೊಂಡವನಾಗಿ ಗುರುವನ್ನು (ಬ್ರಹ್ಮನನ್ನು) ಉದ್ದೇಶಿಸಿ ಹೇಳಿದನು.
ರುದ್ರಃ
ಸೃಷ್ಟಾಃ ಪ್ರಜಾಃ ಪರೇಣೇಮಾಃ ಕಿಂ ಕರಿಷ್ಯಾಮ್ಯನೇನ ವೈ ॥25॥
ರುದ್ರ ಈ ಅನ್ಯನಿಂದ ಪ್ರಜೆಗಳು ಸೃಷ್ಟರಾದರು, ಇದರಿಂದ (ಈ ಲಿಂಗದಿಂದ) ಏನು ಮಾಡಲಿ?
ತಪಸಾಧಿಗತತ್ಚಾನ್ನಃ ಪ್ರಜಾರ್ಥಂ ಹಿ ಪಿತಾಮಹ |
ಓಷಧ್ಯಃ ಪರಿವರ್ಧಂತೇ ಯಥೈವಂ ಸತತಂ ಪ್ರಜಾಃ ॥26॥
ಪಿತಾಮಹನೇ! ತಪಸ್ಸಿನಿಂದ, ನಮ್ಮ ಪ್ರಜೆಗಳಿಗಾಗಿ ( ಅನ್ನವನ್ನು ಪಡೆದಿದ್ದರಿಂದ) ಹೇಗೆ ನಿರಂತರವಾಗಿ ಪ್ರಜೆಗಳು ವೃದ್ಧಿಸುವರೋ ಹಾಗೇ ಔಷಧಿಗಳೂ ವೃದ್ಧಿಸುವವು.
ಶ್ರೀಭಗವಾನ್
ಏವಮುಕತತ್ವ ಸ ಸಕ್ರೋಧೋ ಜಗಾಮ ವಿಮನಾ ಭವಃ |

ಗಿರೇರ್ಮುಂಜವತಃ ಪಾದಂ ತಪಸ್ತಪ್ತುಂ ಮಹಾತಪಾಃ ॥27॥
ಕೃಷ್ಣ ಮಹಾತಪಸ್ವಿಯಾದ ಆ ಭವನು ಕ್ರೋಧದಿಂದ ಕೂಡಿದವನಾಗಿ, ಈ ರೀತಿ ಹೇಳಿ, ವಿಮನಸ್ಕನಾಗಿ, ಹಿಮಾಲಯದ ತಪ್ಪಲನ್ನು ಉದ್ದೇಶಿಸಿ ತಪವನ್ನು ಆಚರಿಸಲು ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

## ಹತ್ತನೆಯ ಅಧ್ಯಾಯ

ಕೃಷ್ಣನು ಧರ್ಮನಂದನನಿಗೆ ರುದ್ರದೇವನ ಕೋಪದಿಂದ ದೇವತೆಗಳ
ಯಜ್ಞದ ನಾಶ ಮತ್ತು ಆತನ ಅನುಗ್ರಹದಿಂದ ದೇವತೆಗಳಿಗೆ ಸಮೃದ್ಧಿ ಈ ಮುಂತಾದವುಗಳನ್ನು ತಿಳಿಸಿ, ಈ ಮಹದೇವನ
ಬಲದಿಂದಲೇ ಅಶ್ವತ್ಥಾಮನು ನಿನ್ನ ಪುತ್ರರನ್ನು ಸಂಹರಿಸಿದನು ಎಂದು ತಿಳಿಸಿದನು
ಶ್ರೀಭಗವಾನ್
ತತೋ ದೇವಯುಗೇಽತೀತೇ ದೇವಾ ವೈ ಸಮಕಲ್ಪಯನ್ |
ಯಜ್ಞಂ ವೇದಪ್ರಮಾಣೇನ ವಿಧಿವದ್ ಯಷ್ಟುಮೀಪ್ಸವಃ ॥1॥
ಕೃಷ್ಣ ಅನಂತರದಲ್ಲಿ ದೇವಯುಗವು ಗತಿಸಲು, ವೇದೋಕ್ತವಿಧದಲ್ಲಿ ಯಜ್ಞವನ್ನು ಆಚರಿಸಬೇಕೆಂಬ ಇಚ್ಛೆಯಿಂದ ದೇವತೆಗಳು ಯಜ್ಞವನ್ನು ಸಿದ್ಧಗೊಳಿಸಿದರು.
ಕಲ್ಪಯಾಮಾಸುರಥ ತೇ ಸಾಧನಾನಿ ಹವೀಂಷಿ ಚ |
ಭಾಗಾರ್ಹಾ ದೇವತಾಶ್ಚೈವ ಯಜ್ಞಿಯಂ ದ್ರವ್ಯಮೇವ ಚ ॥2॥
ಅನಂತರದಲ್ಲಿ ಅವರು ಯಜ್ಞೀಯ ದ್ರವ್ಯಗಳನ್ನು, ಹವಿಃಪದಾರ್ಥಗಳನ್ನು, ಸಾಧನಗಳನ್ನು, ಯಜ್ಞಭಾಗಿಗಳಾದ ದೇವತೆಗಳನ್ನು ಕಲ್ಪಿಸಿದರು.
ತೇ ವೈ ರುದ್ರಮಜಾನಂತೋ ಯಾಥಾತಥ್ಯೇನ ಭಾರತ |
ನಾಕಲ್ಪಯಂತ ದೇವಸ್ಯ ಸ್ಥಾಣೋರ್ಭಾಗಂ ನರಾಧಿಪ ॥3॥
ಭರತಕುಲೋತ್ಪನ್ನನಾದ ರಾಜನೆ! ಅವರು ರುದ್ರದೇವನನ್ನು ಸರಿಯಾಗಿ ತಿಳಿಯದೆ, ಸ್ಥಾಣುದೇವನಿಗೆ ಭಾಗವನ್ನು ಕಲ್ಪಿಸಲಿಲ್ಲ.
ಸೋಽಕಲ್ಪ್ಯಮಾನೇ ಭಾಗೇ ತು ಕೃತ್ತಿವಾಸಾ ಮಖೇಽಮರೈಃ |
ತತಃ ಸಾಧನಮನ್ವಿಚ್ಛನ್ ಧನುರಗ್ರೇ ಸಸರ್ಜ ಹ ॥4॥
ದೇವತೆಗಳು ಯಜ್ಞದಲ್ಲಿ ಭಾಗವನ್ನು ಕಲ್ಪಿಸದೇ ಇರಲು, ಆ ಕೃತ್ತಿವಾಸನಾದರೋ (ದೇವತೆಗಳನ್ನು ಶಿಕ್ಷಿಸಲು) ಸಾಧನವೊಂದನ್ನು ಇಚ್ಛಿಸಿದವನಾಗಿ ಮೊದಲು ಧನುಸ್ಸೊಂದನ್ನು ಸೃಷ್ಟಿಸಿದನು.
ಲೋಕಯಜ್ಞಃ ಕ್ರಿಯಾಯಜ್ಞೋ ಗೃಹಯಜ್ಞಃ ಸನಾತನಃ |
ಪಂಚಭೂತನೃಯಜ್ಞಶ್ಚ ಯಜ್ಞೇ ಸರ್ವಮಿದಂ ಜಗತ್ ॥5॥
ಲೋಕವು ಯಜ್ಞದಿಂದ, ಕ್ರಿಯೆಗಳು ಯಜ್ಞದಿಂದ, ಮನೆ ಮುಂತಾದ ಸಂಪತ್ತು ಯಜ್ಞದಿಂದ, ಪಂಚಭೂತಗಳು ಯಜ್ಞದಿಂದ, ಮನುಜ ಮುಂತಾದ ಪ್ರಾಣಿಗಳು ಯಜ್ಞದಿಂದ, ಈ ಸಮಸ್ತ ಜಗವೇ ಯಜ್ಞದಿಂದ ಪ್ರವೃತ್ತವಾಗಿದೆ.
ಲೋಕಯಜ್ಞನೃಯಜ್ಞೈಶ್ಚ ಕಪರ್ದೀ ವಿದಧೇ ಧನುಃ |
ಧನುಃ ಸೃಷ್ಟಮಭೂತ್ ತಸ್ಯ ಷಷ್ಟಿಕಿಷ್ಕುಪ್ರಮಾಣತಃ ॥6॥
ಕಪರ್ದಿಯು ಲೋಕಯಜ್ಞ, ಮನುಷ್ಯಯಜ್ಞಗಳಿಂದ ಬಿಲ್ಲನ್ನು ನಿರ್ಮಿಸಿದನು. ಸೃಷ್ಟಿಸಿದ ಅವನ ಧನುಸ್ಸು ಅರವತ್ತು ಮೊಳ ಉದ್ದವಾಯಿತು.
ವಷಟ್ಕಾರೋಽಭವಜ್ಜ್ಯಾ ತು ಧನುಷಸ್ತಸ್ಯ ಭಾರತ |
ಯಜ್ಞಾಂಗಾನಿ ಚ ಚತ್ವಾರಿ ತಸ್ಯ ಸಂನಹನೇಽಭವನ್ ॥7॥
ಭರತಕುಲೋತ್ಪನ್ನನೆ! ವಷಟ್ಕಾರವು ಆ ಬಿಲ್ಲಿನ ಹಗ್ಗವಾಯಿತು, ನಾಲ್ಕು ಯಜ್ಞಾಂಗಗಳು (ಸ್ನಾನ, ದಾನಾದಿಗಳು) ಆತನ ಕವಚವಾದವು. (ಯಜ್ಞಸ್ವರೂಪನು, ಯಜ್ಞಸ್ವಾಮಿಯೂ ರುದ್ರದೇವನು. ಆತನನ್ನು ದೇವತೆಗಳೇ ಸರಿಯಾಗಿ ಅರಿಯಲಿಲ್ಲ ಎಂದು ಭಾವ).
ತತಃ ಕ್ರುದ್ಧೋ ಮಹಾದೇವಸ್ತದುಪಾದಾಯ ಕಾರ್ಮುಕಮ್ |
ಆಜಗಾಮಾಥ ತತ್ರೈವ ಯತ್ರ ದೇವಾಃ ಸಮೀಜಿರೇ ॥8॥
ಅನಂತರದಲ್ಲಿ ಕೋಪಗೊಂಡ ಮಹಾದೇವನು ಆ ಬಿಲ್ಲನ್ನು ಪರಿಗ್ರಹಿಸಿ, ಎಲ್ಲಿ ದೇವತೆಗಳು ಯಜ್ಞವನ್ನು ಆಚರಿಸುತ್ತಿದ್ದರೊ ಅಲ್ಲಿಗೆ ಆಗಮಿಸಿದನು.
ತಮಾತ್ತಕಾರ್ಮುಕಂ ದೃಷ್ಟ್ವಾ ಬ್ರಹ್ಮಚಾರಿಣಮವ್ಯಯಮ್ |
ವಿವ್ಯಥೇ ಪೃಥಿವೀ ದೇವೀ ಪರ್ವತಾಶ್ಚ ಚಕಂಪಿರೇ ॥9॥
ಬ್ರಹ್ಮಚಾರಿಯಾದ ನಾಶರಹಿತನಾದ, ಧನುಸ್ಸನ್ನು ಧರಿಸಿದ ಆತನನ್ನು ಕಂಡು ಭೂದೇವಿಯು ವ್ಯಥಿತಳಾದಳು, ಪರ್ವತಗಳೂ ನಡುಗಿದವು.
ನ ವವೌ ಪವನಶ್ಚೈವ ನಾಗ್ನಿರ್ಜಜ್ವಾಲ ವೈಧಿತಃ |
ವ್ಯಭ್ರಮಚ್ಚಾಪಿ ಸಂವಿಗ್ನಂ ದಿವಿ ನಕ್ಷತ್ರಮಂಡಲಮ್ ॥10॥

ಗಾಳಿಯು ಬೀಸಲಿಲ್ಲ, ಘೃತಾದಿ ಹವಿಸ್ಸನ್ನು ನೀಡಿದರೂ ಅಗ್ನಿಯು ಪ್ರಜ್ವಲಿಸಲಿಲ್ಲ, ನಕ್ಷತ್ರಗಳು ವ್ಯತ್ಯಸ್ಥಗೊಂಡವು.
ನ ಬಭೌ ಭಾಸ್ಕರಶ್ಚಾಪಿ ಸೋಮಃ ಶ್ರೀಮುಕ್ತಮಂಡಲಃ |
ತಿಮಿರೇಣಾವೃತಂ ಸರ್ವಮಾಕಾಶಂ ಚಾಭವತ್ ತದಾ ॥11॥
ಸೂರ್ಯನು ಪ್ರಕಾಶಿಸಲಿಲ್ಲ, ಚಂದ್ರಮಂಡಲವು ಕಾಂತಿಹೀನವಾಯಿತು. ಸಮಸ್ತ ನಭೋ ಮಂಡಲವು ಕಗ್ಗತ್ತಲೆಯಿಂದ ಆವೃತವಾಯಿತು.
ಅಭಿಭೂತಾಸ್ತತೋ ದೇವಾ ವಿಷಯಾನ್ ನ ಪ್ರಜಜ್ಞಿರೇ |
ನ ಪ್ರತ್ಯಭಾಚ್ಚ ಯಜ್ಞಃ ಸ ದೇವತಾಸ್ತ್ರೇಸಿರೇ ತಥಾ ॥12॥
ಅನಂತರದಲ್ಲಿ ಅವಮಾನಿತರಾದ ದೇವತೆಗಳು, ಏನು ಸಂಭವಿಸಿತು ಎನ್ನುವದನ್ನು ತಿಳಿಯಲಿಲ್ಲ, ದೇವತೆಗಳು (ಮುಂದೆ) ಏನು (ಮಾಡಬೇಕೆಂದು) ತಿಳಿಯದಂತಾದರು, ಆ ಯಜ್ಞವು ಮಾರ್ಗದಿಂದ ಜಾರಿತು.
ತತಃ ಸ ಯಜ್ಞಂ ವಿವ್ಯಾಧ ರೌದ್ರೇಣ ಹೃದಿ ಪತ್ರಿಣಾ |
ಅಪಕ್ರಾಂತಸ್ತತೋ ಯಜ್ಞೋ ಮೃಗೋ ಭೂತ್ವಾ ಸಪಾವಕಃ ॥13॥
ಅನಂತರದಲ್ಲಿ ರುದ್ರದೇವನು ಬಾಣದಿಂದ ಯಜ್ಞಪುರುಷನ ಎದೆಗೆ ಹೊಡೆದನು, ಯಜ್ಞಪುರುಷನು ಜಿಂಕೆರೂಪವನ್ನು ಧರಿಸಿ, ಅಗ್ನಿಸಹಿತನಾಗಿ ಮರೆ ಆದನು.
ಸ ತು ತೇನೈವ ರೂಪೇಣ ದಿವಿಸ್ಥೋ ವೈ ವ್ಯರಾಜತ |
ಅನ್ವೀಯಮಾನೋ ರುದ್ರೇಣ ಯುಧಿಷ್ಠಿರ ನಭಸ್ತಲೇ ॥14॥
ಯುಧಿಷ್ಠಿರ! ಅವನಾದರೋ (ಯಜ್ಞದೇವನಾದರೋ) ಅದೇ ರೂಪದಿಂದ (ಮೃಗಶಿರ ಎಂಬ ನಕ್ಷತ್ರದ ರೂಪದಿಂದ) ಆಕಾಶದಲ್ಲಿ ನಿಂತು ವಿರಾಜಿಸಿದನು, ಆಕಾಶದಲ್ಲಿ ಮಹಾದೇವನು ( ಆರ್ದ್ರಾ ನಕ್ಷತ್ರ ರೂಪದಿಂದ ಯಜ್ಞಪುರುಷನನ್ನು ) ಹಿಂಬಾಲಿಸಿದನು.
ಅಪಕ್ರಾಂತೇ ತತೋ ಯಜ್ಞೇ ಸಂಜ್ಞಾ ನ ಪ್ರತ್ಯಭಾತ್ ಸುರಾನ್ |
ನಷ್ಟಸಂಜ್ಞೇಷು ದೇವೇಷು ನ ಪ್ರಾಜ್ಞಾಯತ ಕಿಂಚನ ॥15॥
ಯಜ್ಞಪುರುಷನು ಮರೆಯಾದ ಅನಂತರದಲ್ಲಿ ದೇವತೆಗಳು ಜ್ಞಾನಹೀನರಾದರು. ದೇವತೆಗಳು ಪ್ರಜ್ಞಾಹೀನರಾಗಲು ಮುಂದಿನ ಕರ್ಮವನ್ನು ತಿಳಿಯದವರಾದರು.
ತ್ರ್ಯಂಬಕಃ ಸವಿತುರ್ಬಾಹೂ ಭಗಸ್ಯ ನಯನೇ ತಥಾ |
ಪೂಷ್ಣಶ್ಚ ದಶನಾನ್ ಸರ್ವಾನ್ ಧನುಷ್ಕೋಟ್ಯಾ ವ್ಯಶಾತಯತ್ ॥16॥
ತ್ರಿನಯನನು ಧನುಸ್ಸಿನ ತುದಿಯಿಂದ ಸೂರ್ಯನ ಬಾಹುಗಳನ್ನು, ಭಗನ ಕಣ್ಣನ್ನು, ಪೂಷಾದೇವತೆಯ ಎಲ್ಲ ಹಲ್ಲುಗಳನ್ನು ನಾಶಗೊಳಿಸಿದನು.
ಪ್ರಾದ್ರವಂತ ತತೋ ದೇವಾ ಯಜ್ಞಾಂಗಾನಿ ಚ ಸರ್ವಶಃ |
ಕೇಚಿತ್ ತತ್ರೈವ ಘೂರ್ಣಂತೋ ಗತಾಸವ ಇವಾಭವನ್ ॥17॥
ಅನಂತರದಲ್ಲಿ ಎಲ್ಲ ದೇವತೆಗಳು ಎಲ್ಲ ಯಜ್ಞಾಂಗಗಳು ಓಡಿಹೋದರು. ಕೆಲವರು ಅಲ್ಲೇ ಮೇಲ್ಉಸಿರನ್ನು ಬಿಡುತ್ತಾ ಗತಜೀವಿಗಳಂತಾದರು.
ಸ ತು ವಿದ್ರಾವ್ಯ ತತ್ ಸರ್ವಂ ಶಿತಿಕಂಠೋಽಪಹಸ್ಯ ತು |
ಅವಷ್ಟಭ್ಯ ಧನುಷ್ಕೋಟಿಂ ರುರೋಧ ವಿಬುಧಾಂಸ್ತತಃ ॥18॥
ಆ ನೀಲಕಂಠನು ಆ ಎಲ್ಲರನ್ನೂ ಓಡಿಸಿ, ಅಪಹಾಸ್ಯವನ್ನು ಮಾಡುತ್ತಾ, ಅನಂತರದಲ್ಲಿ ಬಿಲ್ಲಿನ ತುದಿಯಿಂದ ದೇವತೆಗಳನ್ನು ತಡೆದನು.
ತತೋ ವಾಗಮರೈರುಕ್ತಾ ಜ್ಯಾಂ ತಸ್ಯ ಧನುಷೋಽಚ್ಛಿನತ್ |
ಅಥ ತತ್ ಸಹಸಾ ರಾಜನ್ ಛಿನ್ನಜ್ಯಾಂ ವಿಸ್ಫುರದ್ಧನುಃ ॥19॥
ಅನಂತರದಲ್ಲಿ ವಾಗಭಿಮಾನಿದೇವತೆಯು ದೇವತೆಗಳಿಂದ ಪ್ರೇರೇಪಿತಳಾಗಿ ಆ ಬಿಲ್ಲಿನ ಹಗ್ಗವನ್ನು ಕತ್ತರಿಸಿದಳು. ರಾಜನೆ! ಆ ಕೂಡಲೇ ಹಗ್ಗವು ತುಂಡಾಗಲು ಆ ಬಿಲ್ಲು ಮೇಲೆ ಚಿಮ್ಮಿತು.
ತತೋ ವಿಧನುಷಂ ದೇವಾ ದೇವಶ್ರೇಷ್ಠಮುಪಾಗಮನ್ |
ಶರಣಂ ಸಹ ಯಜ್ಞೇನ ಪ್ರಸಾದಂ ಚಾಕರೋತ್ ಪ್ರಭುಃ ॥20॥
ಅನಂತರದಲ್ಲಿ ಬಿಲ್ಲಿಲ್ಲದ ದೇವಶ್ರೇಷ್ಠನನ್ನು ದೇವತೆಗಳು ಸಮೀಪಿಸಿದರು. ಯಜ್ಞಪುರುಷನೊಡನೆ ಶರಣಾದ ದೇವತೆಗಳಿಗೆ ಸ್ವಾಮಿಯು ಅನುಗ್ರಹಿಸಿದನು.
ತತಃ ಪ್ರಸನ್ನೋ ಭಗವಾನ್ ಪ್ರಾಸ್ಯತ್ ಕೋಪಂ ಜಲಾಶಯೇ |
ಸ ಜಲಂ ಪಾವಕೋ ಭೂತ್ವಾ ಶೋಷಯತ್ಯಖಿಲಂ ವಿಭೋ ॥21॥
ಪ್ರಭುವೆ! ಅನಂತರದಲ್ಲಿ ಷಡ್ಗುಣಪೂರ್ಣನಾದ ಪ್ರಸನ್ನನಾದ ಮಹಾದೇವನು ಕೋಪವನ್ನು ಸಮುದ್ರದಲ್ಲಿ ವಿಸರ್ಜಿಸಿದನು. ಅದು (ಕೋಪವು) ಅಗ್ನಿಯಾಗಿ ಎಲ್ಲ ನೀರನ್ನು (ನಿರಂತರ) ಪಾನ ಮಾಡುವುದು.
ಭಗಸ್ಯ ನಯನೇ ಚೈವ ಬಾಹೂ ಚ ಸವಿತುಸ್ತಥಾ |
ಪ್ರಾದಾತ್ ಪೂಷ್ಣಶ್ಚ ದಶನಾನ್ ಪುನರ್ಯಜ್ಞಂ ಚ ಪಾಂಡವ ॥22॥
ಪಾಂಡುಪುತ್ರನೆ! ಭಗನ ಕಣ್ಣುಗಳನ್ನು, ಸೂರ್ಯನ ಕೈಗಳನ್ನು, ಪೂಷಾದೇವತೆಯ ಹಲ್ಲುಗಳನ್ನು, ಯಜ್ಞಪುರುಷನನ್ನು ನೀಡಿದನು.
ತತಃ ಸ್ವಸ್ಥಮಿದಂ ಸರ್ವಂ ಬಭೂವ ಪುನರೇವ ಹಿ |
ಸರ್ವಾಣಿ ಚ ಹವೀಂಷ್ಯಸ್ಯ ದೇವಾ ಭಾಗಮಕಲ್ಪಯನ್ ॥23॥

ಅನಂತರದಲ್ಲಿ ಈ ಎಲ್ಲರು ಸ್ವಸ್ಥರಾದರು. ದೇವತೆಗಳು ಎಲ್ಲ ಹವಿಃಪದಾರ್ಥಗಳು ಆತನ ಪಾಲು ಎಂದು ಕಲ್ಪಿಸಿದರು.
ತಸ್ಮಿನ್ ಕ್ರುದ್ಧೇಽಭವತ್ ಸರ್ವಮಸ್ವಸ್ಥಂ ಭುವನಂ ಪ್ರಭೋ |
ಪ್ರಸನ್ನೇ ಚ ಪುನಃಸ್ವಸ್ಥಂ ಜಗದ್ಭವತಿ ಭಾರತ ॥24॥
ಭರತಕುಲೋತ್ಪನ್ನನೇ! ಆತನು ಕುಪಿತನಾಗಲು ಈ ಎಲ್ಲ ಜಗವು ಅಸ್ವಸ್ಥವಾಗುವುದು, ಆತನು ಸ್ವಸ್ಥನಾಗಲು ಈ ಜಗವೇ ಸ್ವಾಸ್ಥ್ಯವನ್ನು ಹೊಂದುವುದು.
ತತಸ್ತೇ ನಿಹತಾ ತೇನ ತವ ಪುತ್ರಾ ಮಹಾರಥಾಃ |
ಅನ್ಯೇ ಚ ಬಹವಃ ಶೂರಾಃ ಪಾಂಚಾಲಾಃ ಸಪದಾನುಗಾಃ ॥25॥
ಆದ್ದರಿಂದ (ರುದ್ರದೇವನ ಅನುಗ್ರಹದಿಂದ) ಆತನಿಂದ (ಅಶ್ವತ್ಥಾಮನಿಂದ) ಮಹಾರಥರಾದ ನಿನ್ನ ಪುತ್ರರು, ಬೇರೇ ಅನೇಕ ಶೂರರು ಪದಾತಿಗಳಿಂದ ಯುಕ್ತರಾದ ಪಾಂಚಾಲ ಪುತ್ರರು ಮರಣವನ್ನು ಹೊಂದಿದರು
ನ ತನ್ಮನಸಿ ಕರ್ತವ್ಯಂ ನ ಹಿ ತದ್ ದ್ರೌಣಿನಾ ಕೃತಮ್ |
ಮಹಾದೇವಪ್ರಸಾದಃ ಸ ಕುರು ಕಾರ್ಯಮನಂತರಮ್ ॥26॥
ಅದನ್ನು ಮನಸಿನಲ್ಲಿ ಸ್ಮರಿಸದಿರು, ಅದನ್ನು ದ್ರೋಣಪುತ್ರನು ಮಾಡಿದ್ದಲ್ಲ, ಅದು ಮಹಾದೇವನ ಪ್ರಸಾದ, ಮುಂದಿನ ಕರ್ತವ್ಯವನ್ನು ಆಚರಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಐಷೀಕಪರ್ವಣಿ ಈಶ್ವರಮಾಹಾತ್ಮ್ಯಂ ನಾಮ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಐಷೀಕಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಮ್ ಐಷೀಕಪರ್ವ ॥
* * * *
॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಸ್ತ್ರೀಪರ್ವ
1. ಜಲಪ್ರದಾನಪರ್ವ
ಒಂದನೆಯ ಅಧ್ಯಾಯ
ತನ್ನ ಮಕ್ಕಳು, ಮೊಮ್ಮಕ್ಕಳನ್ನು ಉದ್ದೇಶಿಸಿ ರೋದಿಸುತ್ತಿರುವ ಧೃತರಾಷ್ಟ್ರನಿಗೆ ಸಂಜಯನಿಂದ ಸಾಂತ್ವನದ ನುಡಿಗಳು.
ಜನಮೇಜಯಃ
ಹತೇ ದುರ್ಯೋಧನೇ ಚೈವ ಹತೇ ಸೈನ್ಯೇ ಚ ಸರ್ವಶಃ |
ಧೃತರಾಷ್ಟ್ರೋ ಮಹಾರಾಜಃ ಶ್ರುತ್ವಾ ಕಿಮಕರೋನ್ಮುನೇ ॥1॥
ಜನಮೇಜಯ ಮುನಿಯೆ! ಎಲ್ಲ ಸೈನ್ಯವು ಮೃತವಾಗಲು, ದುರ್ಯೋಧನನು ಮೃತನಾಗಲು, ಮಹಾರಾಜನಾದ ಧೃತರಾಷ್ಟ್ರನು ಆ ಸುದ್ದಿಯನ್ನು ಕೇಳಿ ಏನು ಮಾಡಿದನು?
ತಥೈವ ಕೌರವೋ ರಾಜಾ ಧರ್ಮಪುತ್ರೋ ಮಹಾಮನಾಃ |
ಕೃಪಪ್ರಭೃತಯಶ್ಚೈವ ಕಿಮಕುರ್ವತ ತೇ ತ್ರಯಃ ॥2॥
ಹಾಗೆಯೇ ಕುರುವಂಶಸಂಜಾತನಾದ ರಾಜನಾದ ಉದಾರಮನಸ್ಕನಾದ ಧರ್ಮಪುತ್ರನು, ಕೃಪನೇ ಮುಂತಾದ ಮೂವರು ಏನು ಮಾಡಿದರು?
ಅಶ್ವತ್ಥಾಮ್ನಃ ಶ್ರುತಂ ಕರ್ಮ ಶಾಪಶ್ಚಾನ್ಯೋನ್ಯಕಾರಿತಃ |
ವೃತ್ತಾಂತಮುತ್ತರಂ ಬ್ರೂಹಿ ಯದಭಾಷತ ಸಂಜಯಃ ॥3॥
ಅಶ್ವತ್ಥಾಮನ ಕೆಲಸವನ್ನು, ಕೃಷ್ಣ-ವೇದವ್ಯಾಸಾದಿಗಳು ಪರಸ್ಪರ ಚರ್ಚಿಸಿ ಮಾಡಿದ ಕರ್ಮ ಮತ್ತು ಶಾಪ ಇವುಗಳನ್ನು ಕೇಳಿರುವೆನು. (ಅಶ್ವತ್ಥಾಮನು ಉತ್ತರಾದೇವಿಯ ಗರ್ಭದ ಮೇಲೆ ಬ್ರಹ್ಮಾಸ್ತ್ರವನ್ನು ಎಸೆದಿದ್ದು, ಕೃಷ್ಣನು ಉತ್ತರೆಯ ಗರ್ಭವನ್ನು ಸಂರಕ್ಷಿಸಿದ್ದು, ಅಶ್ವತ್ಥಾಮನು ಮೂರುಸಾವಿರ ವರ್ಷಪರ್ಯಂತ ಕುಷ್ಟರೋಗದಿಂದ ಬಳಲಬೇಕೆಂದು ಶಾಪವನ್ನು ಇತ್ತಿದ್ದು ಈ ಮುಂತಾದವುಗಳನ್ನು ಕೇಳಿಯಾಗಿದೆ ಎಂದು ಭಾವ.) ಮುಂದಿನ ವೃತ್ತಾಂತವನ್ನು, ಸಂಜಯನು ಏನು ಹೇಳಿದನು ಎನ್ನುವುದನ್ನು ಹೇಳು.
ವೈಶಂಪಾಯನಃ
ಹತೇ ಪುತ್ರಶತೇ ದೀನಂ ಛಿನ್ನಶಾಖಮಿವ ದ್ರುಮಮ್ |
ಪುತ್ರಶೋಕಾಭಿಸಂತಪ್ತಂ ಧೃತರಾಷ್ಟ್ರಂ ಮಹೀಪತಿಮ್ ॥4॥
ಧ್ಯಾನಮೂಕತ್ವಮಾಪನ್ನಂ ಚಿಂತಯಾ ಸಮಭಿಪ್ಲುತಮ್ |
ಸಂಜಯೋ ಜಯತಾಂ ಶ್ರೇಷ್ಠ ರಾಜಾನಂ ವಾಕ್ಯಮಬ್ರವೀತ್ ॥5॥
ನೂರು ಪುತ್ರರು ಸಂಹೃತರಾಗಲು, ಕೊಂಬೆಗಳನ್ನು ಕತ್ತರಿಸಿದ ವೃಕ್ಷದಂತಾದ, ಮಕ್ಕಳ ಶೋಕದಿಂದ ತಪ್ತನಾದ ರಾಜನಾದ ಧೃತರಾಷ್ಟ್ರನು ಧ್ಯಾನದಿಂದ ಮೌನವನ್ನು ಆಶ್ರಯಿಸಲು, ಚಿಂತೆಯಿಂದ ಪರಿತಪ್ತನಾದ ರಾಜನನ್ನು ಕುರಿತು ದಿಗ್ವಿಜಯಶಾಲಿಗಳಲ್ಲಿ ಮೂರ್ಧನ್ಯನಾದ ಸಂಜಯನು ಮಾತುಗಳನ್ನಾಡಿದನು.
ಸಂಜಯಃ
ಕಿಂ ಶೋಚಸಿ ಮಹಾಪ್ರಾಜ್ಞ ನಾಸ್ತಿ ಶೋಕೇ ಸಹಾಯತಾ |

ಅಕ್ಷೌಹಿಣ್ಯೋ ಹತಾ ಹ್ಯಷ್ಟೌ ದಶ ಚೈವ ವಿಶಾಂಪತೇ ॥6॥
ಸಂಪತ್ತಿನ ಒಡೆಯ, ಮಹಾಧೀಮಂತನೇ! ಹದಿನೆಂಟು ಅಕ್ಷೌಹಿಣೀ ಸೇನೆಯು ನಾಶವಾಯಿತು. ಏಕೆ ದುಃಖಿಸುವಿ? ದುಃಖಿಸುವುದರಿಂದ ಯಾವ ಪ್ರಯೋಜನವೂ ಇಲ್ಲ.
ನಿರ್ಜಿತೇಯಂ ವಸುಮತೀ ಶೂನ್ಯಾ ಸ್ವಾಸ್ಯತಿ ಕೇವಲಮ್ |
ನಾನಾದಿಗ್ಭ್ಯಃ ಸಮಾಗಮ್ಯ ನಾನಾಜಾತ್ಯಾ ನರಾಧಿಪಾಃ ॥7॥
ಸಹಿತಾಸ್ತವ ಪುತ್ರೇಣ ಸರ್ವೇ ವೈ ನಿಧನಂ ಗತಾಃ ॥8॥
ಈ ಭೂಮಿಯು ಸೋತಿತು, ಕೇವಲ ಶೂನ್ಯವಾಗಿ ನಿಂತಿದೆ, ನಾನಾ ದಿಕ್ಕುಗಳಿಂದ ಆಗಮಿಸಿದ ನಾನಾ ಜಾತಿಯ ಎಲ್ಲ ರಾಜರು ನಿನ್ನ ಪುತ್ರನಿಂದ ಸಹಿತರಾಗಿ ಸಾವನ್ನು ಹೊಂದಿರುವರು.
ಪಿತೄಣಾಂ ಪುತ್ರಪೌತ್ರಾಣಾಂ ಜ್ಞಾತೀನಾಂ ಸುಹೃದಾಂ ತಥಾ |
ಗುರೂಣಾಂ ಚಾನುಪೂರ್ವ್ಯೇಣ ಯೇ ಚಾನ್ಯೇಽನುಚರಾ ಹತಾಃ ॥9॥
ಪ್ರೇತಕಾರ್ಯಾಣಿ ಸರ್ವಾಣಿ ಕಾರಯಸ್ವ ನರಾಧಿಪ ॥10॥
ಮನುಜರ ಒಡೆಯನೇ! ಪಿತೃ ಸ್ಥಾನೀಯರಿಗೆ ಮಕ್ಕಳಿಗೆ ಮೊಮ್ಮಕ್ಕಳಿಗೆ ಜ್ಞಾತಿಗಳಿಗೆ ಸ್ನೇಹಿತರಿಗೆ ಹಾಗು ಗುರುಗಳಿಗೆ ಮತ್ತೆ ಹಾಗೆ ಯಾವ ಅನುಚರರು ಮೃತರಾಗಿರುವರೋ ಅವರೆಲ್ಲರಿಗೂ ಪ್ರೇತಕಾರ್ಯವನ್ನು ಮಾಡಿಸು.
ವೈಶಂಪಾಯನಃ
ತಚ್ಛ್ರುತ್ವಾ ಕರುಣಂ ವಾಕ್ಯಂ ಪುತ್ರಪೌತ್ರವಧಾರ್ದಿತಃ |
ಪಪಾತ ಭುವಿ ದುರ್ಧರ್ಷೋ ವಾತಾಹತ ಇವ ದ್ರುಮಃ ॥11॥
ವೈಶಂಪಾಯನ ಕರುಣಾಜನಕವಾದ ಆ ವಾಕ್ಯವನ್ನು ಕೇಳಿ, ಮಕ್ಕಳ ಮೊಮ್ಮಕ್ಕಳ ಮರಣದಿಂದ ದುಃಖಿತನಾದ, ಮತ್ತೊಬ್ಬರಿಂದ ಧರ್ಷಣಕ್ಕೆ ಒಳಗಾಗದ ಧೃತರಾಷ್ಟ್ರನು ಬಿರುಗಾಳಿಯಿಂದ ಮುರಿದ ಮರದಂತೆ ನೆಲದಲ್ಲಿ ಬಿದ್ದನು.
ಧೃತರಾಷ್ಟ್ರಃ
ಹತಪುತ್ರೋ ಹತಾಮಾತ್ಯೋ ಹತಸರ್ವಸುಹೃಜ್ಜನಃ |
ದುಃಖಂ ನೂನಂ ಗಮಿಷ್ಯಾಮಿ ವಿಚರನ್ ಪೃಥಿವೀಮಿಮಾಮ್ ॥12॥
ಧೃತರಾಷ್ಟ್ರ ಮಕ್ಕಳನ್ನು ಕಳೆದುಕೊಂಡ, ಮಂತ್ರಿಗಳನ್ನು ಕಳೆದುಕೊಂಡ, ಎಲ್ಲ ಸ್ನೇಹಿತರನ್ನು ಕಳೆದುಕೊಂಡ ನಾನು ಈ ಭೂಮಿಯಲ್ಲಿ ತಿರುಗುತ್ತಾ ನಿಶ್ಚಯವಾಗಿಯೂ ತುಂಬ ದುಃಖವನ್ನು ಹೊಂದಲಿರುವೆನು.
ಕಿಂ ನು ಬಂಧುವಿಹೀನಸ್ಯ ಜೀವಿತೇನ ಮಮಾದ್ಯ ವೈ |
ಲೂನಪಕ್ಷಸ್ಯ ಇವ ಮೇ ವೈನತೇಯಸ್ಯ ಸಂಜಯ ॥13॥
ಸಂಜಯ! ರೆಕ್ಕೆ ಕಳೆದುಕೊಂಡ ಗರುಡಪಕ್ಷಿಯಂತಾದ ಬಂಧುವಿಹೀನನಾದ ನನಗೆ ಬದುಕಿನಿಂದ ಏನು ಪ್ರಯೋಜನ?
ಹೃತರಾಜ್ಯೋ ಹತಸುಹೃದ್ಧತಪುತ್ರಶ್ಚ ವೈ ತಥಾ |
ನ ಭ್ರಾಜಾಮಿ ಮಹಾಪ್ರಾಜ್ಞ ಕ್ಷೀಣರಶ್ಮಿರಿವಾಂಶುಮಾನ್ ॥14॥
ಮಹಾಪ್ರಾಜ್ಞನೇ! ರಾಜ್ಯವನ್ನು ಕಳೆದುಕೊಂಡಿರುವೆನು, ಹಾಗೆಯೇ ಸ್ನೇಹಿತರನ್ನು ಕಳೆದುಕೊಂಡಿರುವೆನು, ಮಕ್ಕಳನ್ನು ಕಳೆದುಕೊಂಡಿರುವೆನು, ಕಲೆಗಳಿಂದ ಕ್ಷೀಣಿಸಿರುವ ಚಂದ್ರನಂತೆ ಕಾಂತಿಹೀನನಾಗಿರುವೆನು.
ನ ಕೃತಂ ಸುಹೃದಾಂ ವಾಕ್ಯಂ ಜಾಮದಗ್ನ್ಯಸ್ಯ ಜಲ್ಪಿತಮ್ |
ನಾರದಸ್ಯ ಚ ದೇವರ್ಷೇಃ ಕೃಷ್ಣದ್ವೈಪಾಯನಸ್ಯ ಚ ॥15॥
ತಿಳಿಹೇಳಿದ ಜಮದಗ್ನಿಗಳ, ದೇವರ್ಷಿಗಳಾದ ನಾರದರ ಮತ್ತು ಕೃಷ್ಣದ್ವೈಪಾಯನರ, ಸ್ನೇಹಿತರ ಮಾತನ್ನು ಅನುಸರಿಸಲಿಲ್ಲ.
ಸಭಾಮಧ್ಯೇ ತು ಕೃಷ್ಣೇನ ಯಚ್ಛ್ರೇಯೋಽಭಿಹಿತಂ ಮಮ |
ಅಲಂ ವೈರೇಣ ತೇ ರಾಜನ್ ಪುತ್ರಃ ಸಂಗೃಹ್ಯತಾಮಿತಿ ॥16॥
ತಚ್ಚ ತೇಷಾಮಕೃತ್ವಾಽದ್ಯ ಭೃಶಂ ತಪ್ಸ್ಯಾಮಿ ದುರ್ಮತಿಃ |
ನ ಹಿ ಶ್ರೋಷ್ಯಾಮಿ ಭೀಷ್ಮಸ್ಯ ಧರ್ಮಯುಕ್ತಂ ಪ್ರಭಾಷಿತಮ್ ॥17॥
ನನಗೆ ಸಭೆಯ ಮಧ್ಯದಲ್ಲಿ ಕೃಷ್ಣನು ಶ್ರೇಯಸ್ಕರವಾದದನ್ನು ಹೇಳಿದನು: `ರಾಜನೇ! ದ್ವೇಷವು ಸಾಕು, ನಿನ್ನ ಮಗನನ್ನು ಹತೋಟಿಯಲ್ಲಿ ಇಟ್ಟುಕೊ' ಎಂದು. ಅವನ ಆ ವಚನಗಳನ್ನು ಅನುಸರಿಸದೇ ದುರ್ಮತಿಯಾದ ನಾನು ಈಗ ದುಃಖಿಸುತ್ತಿರುವೆನು, ಭೀಷ್ಮನ ಧರ್ಮಯುಕ್ತವಾದ ವಚನವನ್ನೂ ಕೇಳಲಿಲ್ಲ.
ದುರ್ಯೋಧನಸ್ಯ ಚ ತಥಾ ವೃಷಭಸ್ಯೇವ ನರ್ದತಃ |
ದುಃಶಾಸನವಧಂ ಶ್ರುತ್ವಾ ಕರ್ಣಸ್ಯ ಚ ವಿಪರ್ಯಯಮ್ ॥18॥
ದ್ರೋಣಸೂರ್ಯೋಪರಾಗಂ ಚ ಹೃದಯಂ ಮೇ ವಿದೀರ್ಯತೇ ॥19॥
ಹೋರಿಯಂತೆ ಕುಣಿಯುತ್ತಿದ್ದ ದುರ್ಯೋಧನನ ಹಾಗೂ ದುಃಶಾಸನನ ಸಾವನ್ನು ಕೇಳಿ, ಹಾಗೂ ಕರ್ಣನ ಸಾವನ್ನು, ದ್ರೋಣನೆಂಬ ಸೂರ್ಯನ ಗ್ರಹಣವನ್ನು ಕೇಳಿ ನನ್ನ ಹೃದಯವು ಸೀಳಿಹೋಗಿದೆ.
ನ ಸ್ಮರಾಮ್ಯಾತ್ಮನಃ ಕಿಂಚಿತ್ ಪುರಾ ಸಂಜಯ ದುಷ್ಕೃತಮ್ |
ಯಸ್ಯೈವಂ ಫಲಮದ್ಯೇಹ ಮಯಾ ಮೂಢೇನ ಭುಜ್ಯತೇ ॥20॥
ಸಂಜಯ! ಮೂರ್ಖನಾದ ನಾನು ಈಗ ಯಾವುದರ ಫಲವನ್ನು ಉಣ್ಣುತ್ತಿರುವೆನೋ ಅದು ಈಗ ನನಗೆ ಹಿಂದೆ ಮಾಡಿದ ದುಷ್ಕರ್ಮಗಳು ಸ್ಮರಣೆಗೆ ಬಾರದು.
ನೂನಂ ಹ್ಯಪಕೃತಂ ಕಿಂಚಿನ್ಮಯಾ ಪೂರ್ವೇಷು ಜನ್ಮಸು |

ಯೇನ ಮಾಂ ದುಃಖಭಾಗೇಷು ಧಾತಾ ಕರ್ಮಸು ಯುಕ್ತವಾನ್ ॥21॥
ಹಿಂದಿನ ಜನ್ಮಗಳಲ್ಲಿ ನಾನು ನಿಶ್ಚಯವಾಗಿಯೂ ಸ್ವಲ್ಪವಾದರೂ ಅಪಕಾರವನ್ನು ಮಾಡಿರಬೇಕು, ಆದ್ದರಿಂದಲೇ ಬ್ರಹ್ಮನು ನನ್ನನ್ನು ದುಃಖಕಾರಕಗಳಾದ ಕರ್ಮಗಳಲ್ಲಿ ತೊಡಗಿಸಿರುವನು.
ಪರಿಣಾಮಶ್ಚ ವಯಸಃ ಸರ್ವಬಂಧುಕ್ಷಯಶ್ಚ ಮೇ |
ಸುಹೃನ್ಮಿತ್ರವಿನಾಶಶ್ಚ ದೈವಯೋಗಾದುಪಾಗತಃ ॥22॥
ಈ ಕೊನೆಯ ವಯಸ್ಸಿನಲ್ಲಿ ಎಲ್ಲ ಬಂಧುಗಳ ನಾಶ, ಆಪ್ತರ, ಮಿತ್ರರ ನಾಶ ದೈವಯೋಗದಿಂದ ಪ್ರಾಪ್ತವಾಗಿದೆ.
ಕೋ ನ್ವಸ್ತಿ ದುಃಖಿತತರೋ ಲೋಕೇ ಮತ್ತಃ ಪುಮಾನಿಹ ॥23॥
ಈ ಲೋಕದಲ್ಲಿ ನನಗಿಂತಲೂ ದುಃಖಿತರಾದವರು ಮತ್ತೆ ಬೇರೆ ಯಾರಿರುವರು?
ತಂ ಮಾಮದ್ಯೈವ ಪಶ್ಯಂತು ಪಾಂಡವಾಃ ಸಂಶಿತವ್ರತಾಃ |
ವಿಸ್ತೃತಂ ಬ್ರಹ್ಮಲೋಕಸ್ಯ ದೀರ್ಘಮಧ್ವಾನಮಾಸ್ಥಿತಮ್ ॥24॥
ಬ್ರಹ್ಮಲೋಕದ ವಿಸ್ತೃತವಾದ ದೀರ್ಘವಾದ ಮಾರ್ಗವನ್ನು ಆಶ್ರಯಿಸಿರುವ ನನ್ನನ್ನು, ವ್ರತಾನುಷ್ಠಾತೃಗಳಾದ ಪಾಂಡವರು ಇಂದೇ ಕಾಣಲಿ (ಇಂದೇ ಜೀವವನ್ನು ಪರಿತ್ಯಜಿಸುವೆ ಎಂದು ನುಡಿಯುತ್ತಿರುವನು ಎಂಬ ಭಾವ).
ವೈಶಂಪಾಯನಃ
ತಸ್ಯ ಲಾಲಪ್ಯಮಾನಸ್ಯ ಬಹುಶೋಕಂ ವಿಚಿನ್ವತಃ |
ಶೋಕಾಪಹಂ ನರೇಂದ್ರಸ್ಯ ಸಂಜಯೋ ವಾಕ್ಯಮಬ್ರವೀತ್ ॥25॥
ಭಾರೀ ಶೋಕದಿಂದ ಚಿಂತಿಸುತ್ತಿರುವ, ಮತ್ತೆ ಮತ್ತೆ ರೋದಿಸುತ್ತಿರುವ ಆ ಮನುಜರೋಡೆಯನಿಗೆ ಶೋಕವನ್ನು ಕಳೆಯುವ ಮಾತುಗಳನ್ನು ಸಂಜಯನು ನುಡಿದನು.
ಸಂಜಯಃ
ಶೋಕಂ ರಾಜನ್ ವ್ಯಪನುದ ಶ್ರುತಾಸ್ತೇ ವೇದನಿಶ್ಚಯಾಃ |
ಶಾಸ್ತ್ರಾಗಮಾಶ್ಚ ವಿವಿಧಾ ವೃದ್ಧೇಭ್ಯೋ ನೃಪಸತ್ತಮ ॥26॥
ಸಂಜಯ ಮನುಜಶ್ರೇಷ್ಠನೇ! ನೀನು ಹಿರಿಯರಿಂದ ವಿವಿಧ ಶಾಸ್ತ್ರಗಳನ್ನು ಆಗಮಗಳನ್ನು ವೇದಗಳ ನಿರ್ಣಯಗಳನ್ನು ಕೇಳಿರುವಿ, ರಾಜನೆ! ಶೋಕವನ್ನು ತ್ಯಜಿಸು.
ಸೃಂಜಯೇ ಪುತ್ರಶೋಕಾರ್ತೇ ಯದೂಚುರ್ಮುನಯಃ ಪುರಾ |
ತಥಾ ಯೌವನಕಂದರ್ಪಮಾಸ್ಥಿತೇ ತೇ ಸುತೇ ನೃಪ ॥27॥
ನ ತ್ವಯಾ ಸುಹೃದಾಂ ವಾಕ್ಯಂ ಬ್ರುವತಾಮವಧಾರಿತಮ್ |
ಸ್ವಾರ್ಥೋ ನ ಚ ಕೃತಃ ಕಶ್ಚಿಲ್ಲುಬ್ಧೇನ ಫಲಗೃಧ್ನುನಾ ॥28॥
ಹಿಂದೆ ಸೃಂಜಯನು ಪುತ್ರಶೋಕದಿಂದ ಪರಿತಪಿಸಿದಾಗ ಮುನಿಗಳು ಯಾವುದನ್ನು ಹೇಳಿದರು ಎನ್ನುವುದನ್ನು ಸ್ಮರಿಸಿಕೊ, ಹಾಗೆಯೇ ರಾಜನೆ! ನಿನ್ನ ಮಗನು ಯೌವನದ ಮದದಿಂದಿರಲು, ಸ್ನೇಹಿತರು ಹೇಳಿದ ಮಾತನ್ನು ನೀನು ಗಮನಿಸಲಿಲ್ಲ, (ಸಂಪೂರ್ಣ ರಾಜ್ಯದ) ಲೋಭಿಯಾದ ಫಲದ ಲೋಭದಿಂದ ನಿನ್ನ ಶ್ರೇಯಸ್ಸನ್ನು ಮಾಡಿಕೊಳ್ಳಲಿಲ್ಲ.
ಅಸಿನ್ಯೈವೈಕಧಾರೇಣ ಸ್ವಬುದ್ಧ್ಯಾ ಭುವಿ ಚೇಷ್ಟಿತಮ್ |
ಪ್ರಾಯಶೋ ವೃತ್ತಸಂಪನ್ನಾಃ ಸತತಂ ಪರ್ಯುಪಾಸಿತಾಃ ॥29॥
(ನಿನ್ನ ಪುತ್ರನು) ಒಂದು ಅಲುಗಿನ ಕತ್ತಿಯಂತೆ ಕೇವಲ ತನ್ನ ಬುದ್ಧಿಯಿಂದಲೇ ನಿರ್ಣಯಿಸಿ ವ್ಯವಹರಿಸುತ್ತಿದ್ದನು, ಪ್ರಾಯಶಃ ನಿರಂತರ ದುರಾಚಾರಿಗಳೊಡನೆ ಬೆರೆಯುತ್ತಿದ್ದನು.
ತವ ದುಃಶಾಸನೋ ಮಂತ್ರೀ ರಾಧೇಯಶ್ಚ ದುರಾತ್ಮವಾನ್ |
ಶಕುನಿಶ್ಚೈವ ದುಷ್ಟಾತ್ಮಾ ಚಿತ್ರಸೇನಶ್ಚ ದುರ್ಮತಿಃ ॥30॥
ಅನಲ್ಪಂ ಯೇನ ವೈ ಸರ್ವಂ ಶಲ್ಯಭೂತಮಿದಂ ಜಗತ್ ॥31॥
ನಿನ್ನ ಮಗ, ದುಶ್ಶಾಸನ, ದುಷ್ಟನಾದ ರಾಧೇಯ, ದುಷ್ಟನಾದ ಶಕುನಿ, ದುರ್ಬುದ್ಧಿಯ ಚಿತ್ರಸೇನ ಇವರೆಲ್ಲರೇ (ನಿನ್ನ ಮಗನಿಗೆ) ಮಂತ್ರಿಗಳು, ಇವರೆಲ್ಲರೂ ಸಾಮಾನ್ಯರಲ್ಲ, ಸಮಸ್ತ ಜಗಕೇ ಕಂಟಕಪ್ರಾಯರಾಗಿದ್ದರು.
ಕುರುವೃದ್ಧಸ್ಯ ಭೀಷ್ಮಸ್ಯ ಗಾಂಧಾರ್ಯಾ ವಿದುರಸ್ಯ ಚ |
ದ್ರೋಣಸ್ಯ ಚ ಮಹಾರಾಜ ಕೃಪಸ್ಯ ಚ ಶರದ್ವತಃ ॥32॥
ಕೃಷ್ಣಸ್ಯ ಚ ಮಹಾಬಾಹೋ ನಾರದಸ್ಯ ಚ ಧೀಮತಃ |
ಋಷೀಣಾಂ ಚ ತಥಾಽನ್ಯೇಷಾಂ ವ್ಯಾಸಸ್ಯಾಮಿತತೇಜಸಃ ॥33॥
ನ ಕೃತಂ ತೇನ ವಚನಂ ಪುತ್ರೇಣ ತವ ಭಾರತ ॥34॥
ಭರತಕುಲೋತ್ಪನ್ನನೆ, ಮಹಾರಾಜನೆ! ಕುರುವೃದ್ಧನಾದ ಭೀಷ್ಮನ, ಗಾಂಧಾರಿಯ, ವಿದುರನ, ದ್ರೋಣಾಚಾರ್ಯರ, ಶರದ್ವತನ ಪುತ್ರನಾದ ಕೃಪನ, ನೀಳಬಾಹುವಾದ ಕೃಷ್ಣನ, ಧೀಮಂತರಾದ ನಾರದರ, ಹಾಗೆಯೇ ಬೇರೆ ಋಷಿಗಳ, ಅಮಿತತೇಜಸ್ವಿಯಾದ ವ್ಯಾಸರ ಮಾತುಗಳನ್ನು ನಿನ್ನ ಪುತ್ರನು ಆದರಿಸಲಿಲ್ಲ.
ನ ಧರ್ಮಃ ಸತ್ಕೃತಃ ಕಶ್ಚಿತ್ ನಿತ್ಯಂ ಯುದ್ಧಮಭೀಪ್ಸಯಾ ॥35॥
ಯಾವುದೇ ಧರ್ಮಕಾರ್ಯವನ್ನು ಆತನು ಆದರಿಸಲಿಲ್ಲ, ನಿತ್ಯವೂ ಯುದ್ಧವನ್ನೇ ಬಯಸುತ್ತಿದ್ದ.
ಕ್ಷಪಿತಾಃ ಕ್ಷತ್ರಿಯಾಃ ಸರ್ವೇ ಶತ್ರೂಣಾಂ ವರ್ಧಿತಂ ಯಶಃ |
ಮಧ್ಯಸ್ಥೋಽಪಿ ತ್ವಮಪ್ಯಾಸೀರ್ನ ಕ್ಷಮಂ ಕಿಂಚಿದುಕ್ತವಾನ್ ॥36॥

ಎಲ್ಲ ಕ್ಷತ್ರಿಯರನ್ನು ನಾಶಗೊಳಿಸಿದನು, ಶತ್ರುಗಳ ಕೀರ್ತಿಯನ್ನು ಬೆಳೆಸಿದನು, ಮಧ್ಯಸ್ಥನಾಗಿದ್ದ ನೀನಾದರೋ ಶಾಂತಿಯ ಬಗ್ಗೆ ಏನೂ ಹೇಳಲಿಲ್ಲ.
ದುರ್ಧರೇಣ ತ್ವಯಾ ಭಾರಃ ತುಲಯಾ ನ ಸಮೋ ಧೃತಃ |
ಆದಾವೇವ ಮನುಷ್ಯೇಣ ವರ್ತಿತವ್ಯಂ ಯಥಾಕ್ರಮಮ್ ॥37॥
ಯಥಾ ನಾತೀತಮರ್ಥಂ ವೈ ಪಶ್ಚಾತ್ ತಾಪೇನ ಯುಜ್ಯತೇ |
ಪುತ್ರಗೃದ್ಧ್ಯಾ ತ್ವಯಾ ರಾಜನ್ ಪ್ರಿಯಂ ತಸ್ಯ ಚಿಕೀರ್ಷಿತಮ್ ॥38॥
ರಾಜನೆ! ಮಗನ ಮೇಲಿನ ಮೋಹದಿಂದ, ಮಗನಿಗೆ ಕುಶಿಯನ್ನು ಉಂಟುಮಾಡಬೇಕೆಂದು, ದುರ್ಧರನಾದ ನೀನು ತಕ್ಕಡಿಯನ್ನು ಸರಿಯಾಗಿ ತೂಗಲಿಲ್ಲ. ಮನುಷ್ಯನಾದವನು ಮೊದಲೇ ಸರಿಯಾದ ರೀತಿಯಲ್ಲಿ ವ್ಯವಹರಿಸುವುದು, ಮಾಡಿ ಮುಗಿಸಿದ ನಂತರದಲ್ಲಿ ಪರಿತಪಿಸುವಂತೆ ಇರಬಾರದು.
ಪಶ್ಚಾತ್ ತಾಪಮಿಮಂ ಪ್ರಾಪ್ತಂ ನ ತ್ವಂ ಶೋಚಿತುಮರ್ಹಸಿ ॥39॥
ಗತಿಸಿದ ನಂತರದಲ್ಲಿ ನೀನು ದುಃಖಿಸುವುದು ಯೋಗ್ಯವಾಗದು.
ಮಧು ಯಃ ಕೇವಲಂ ದೃಷ್ಟ್ವಾ ಪ್ರಪಾತಂ ನಾನುಪಶ್ಯತಿ |
ಸ ಭ್ರಷ್ಟೋ ಮಧುಲೋಭೇನ ಶೋಚತ್ಯೇವ ಯಥಾ ಭವಾನ್ ॥40॥
ಕೇವಲ ಜೇನನ್ನು ಮಾತ್ರ ನೋಡಿ, ಸನಿಹದಲ್ಲಿರುವ ಪ್ರಪಾತವನ್ನು ಕಾಣದಿರುವವನು ಮಧುವಿನ ಲೋಭದಿಂದ ಹೇಗೆ ನಾಶವನ್ನು ಹೊಂದುವನೋ ಹಾಗೆಯೇ ನೀನೂ ಸಹ ದುಃಖಿಸುತ್ತಿರುವಿ.
ಅರ್ಥಂ ನ ಶೋಚನ್ ಪ್ರಾಪ್ನೋತಿ ನ ಶೋಚನ್ ವಿಂದತೇ ಸುಖಮ್ |
ನ ಶೋಚನ್ ಶ್ರಿಯಮಾಪ್ನೋತಿ ನ ಶೋಚನ್ ವಿಂದತೇ ಜಯಮ್ ॥
ದುಃಖಿಸುತ್ತಿರುವವ ಅರ್ಥವನ್ನು ಹೊಂದಲಾರ, ದುಃಖಿಸುವವ ಸುಖವನ್ನು ಹೊಂದಲಾರ, ದುಃಖಿಸುತ್ತಾ ಇರುವವ ಐಶ್ವರ್ಯವನ್ನು ಹೊಂದಲಾರ, ದುಃಖಿಸುತ್ತಾ ಇರುವವ ಜಯವನ್ನು ಹೊಂದಲಾರ.
ಸ್ವಯಮುತ್ಪಾದಯಿತ್ವಾಽಗ್ನಿಂ ಪರೀತಸ್ತೇನ ಯೋಽಗ್ನಿನಾ |
ದಹ್ಯಮಾನಃ ಪುನಸ್ತಾಪಂ ಭಜತೇ ನ ಸ ಪಂಡಿತಃ ॥42॥
ತಾನೇ ಬೆಂಕಿಯನ್ನು ಬೆಳಗಿಸಿ, ಆ ಅಗ್ನಿಯು ತನ್ನ ಸುತ್ತಲೂ ಆವರಿಸಿದಾಗ, ದಹ್ಯನಾಗಿ ದುಃಖವನ್ನು ಹೊಂದುವ, ಆತನನ್ನು ತಿಳಿದವ ಎನ್ನಲಾರರು.
ತ್ವಯೈವ ಸಸುತೇನಾಯಂ ವಾಕ್ಯವಾಯುಸಮೀರಿತಃ |
ಲೋಭಾಜ್ಯೇನ ಚ ಸಂಯುಕ್ತೋ ಜ್ವಲಿತಃ ಪಾರ್ಥಪಾವಕಃ ॥43॥
ಪುತ್ರಸಹಿತನಾದ ನೀನೇ ಕುಂತೀಪುತ್ರರೆಂಬ ಬೆಂಕಿಯನ್ನು ಬೆಳಗಿಸಿದಿ, (ನಿನ್ನ) ಲೋಭ ಎಂಬ ತುಪ್ಪದಿಂದ ಕೂಡಿದ ಆ ಬೆಂಕಿಯು (ಉದ್ವೇಗಕಾರಕವಾದ ನಿಮ್ಮ) ಮಾತುಗಳೆಂಬ ಗಾಳಿಯಿಂದ ಪ್ರವರ್ಧನವಾಯಿತು.
ತಸ್ಮಿನ್ ಸಮಿದ್ಧೇ ಪತಿತಾಃ ಶಲಭಾ ಇವ ತೇ ಸುತಾಃ |
ತಾನ್ ವೈ ಶರಾಗ್ನಿನಿರ್ದಗ್ಧಾನ್ ನ ತ್ವಂ ಶೋಚಿತುಮರ್ಹಸಿ ॥44॥
ಆ ಬೆಂಕಿಯಲ್ಲಿ ದೀಪದ ಹುಳುಗಳಂತೆ ನಿನ್ನ ಪುತ್ರರು ಬಿದ್ದರು. ಬಾಣವೆಂಬ ಬೆಂಕಿಯಿಂದ ದಹಿಸಿದ ಮಕ್ಕಳನ್ನು ಉದ್ದೇಶಿಸಿ ದುಃಖಿಸುವುದು ತರವಲ್ಲ.
ಯಚ್ಚಾಶ್ರುಪಾತಕಲಿಲಂ ವದನಂ ವಹಸೇ ನೃಪ |
ಅಶಾಸ್ತ್ರದೃಷ್ಟಮೇತದ್ಧಿ ನ ಪ್ರಶಂಸಂತಿ ಪಂಡಿತಾಃ ॥45॥
ರಾಜನೆ! ಕಣ್ಣೀರಿನಿಂದ ಕಲುಷಿತವಾದ ಮುಖವನ್ನು ಧರಿಸಿರುವಿ, ಇದು ಶಾಸ್ತ್ರಸಂಮತವಾದದ್ದಲ್ಲ, (ಈ ವರ್ತನೆಯನ್ನು) ತಿಳಿದವರು ಹೊಗಳಲಾರರು.
ವಿಸ್ಫುಲಿಂಗಾ ಇವಾಗ್ನೇಸ್ತು ದಹಂತಿ ಕಿಲ ಮಾನವಾನ್ |
ಜಹಿ ಮನ್ಯುಂ ಸ್ವಬುದ್ಧ್ಯಾ ವೈ ಧಾರಯಾತ್ಮಾನಮಾತ್ಮನಾ ॥46॥
ಕೋಪವು ಮನುಷ್ಯನನ್ನು ಬೆಂಕಿಯ ಕಿಡಿಯಂತೆ ಸುಡುವುದು, ಆದ್ದರಿಂದ ಸಿಟ್ಟನ್ನು ಜಯಿಸು, ನಿನ್ನಿಂದಲೇ ನಿನ್ನ ಉದ್ಧಾರ ಮಾಡಿಕೊ.
ಏಷಾ ವೈ ಸರ್ವಸತ್ತ್ವಾನಾಂ ಲೋಕೇಶ್ವರ ಪರಾ ಗತಿಃ ॥47॥
ಲೋಕದೊಡೆಯನೆ! ಎಲ್ಲ ಜೀವಿಗಳಿಗೂ ಇದೇ (ಸಾವೇ) ಮುಖ್ಯ ಗತಿ.
ವೈಶಂಪಾಯನಃ
ತಂ ಸಮಾಶ್ವಾಸಿತಂ ತೇನ ಸಂಜಯೇನ ಮಹಾತ್ಮನಾ |
ವಿದುರೋ ಭೂಯ ಏವಾಹ ಬುದ್ಧಿಪೂರ್ವಂ ಪರಂತಪ ॥48॥
ವೈಶಂಪಾಯನ ಆ ಸಂಜಯನೆಂಬ ಮಹಾಮಹಿಮನು ಸಮಾಧಾನ ಮಾಡಿದನು, ಶತ್ರುಗಳಿಗೆ ತಾಪಕನೆ! ವಿವೇಕಪೂರ್ವಕವಾಗಿ ವಿದುರನು ಅನಂತರದಲ್ಲಿ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೋ ನಾಮ ಪ್ರಥಮೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.

* * * * *

ಎರಡನೆಯ ಅಧ್ಯಾಯ

ವಿದುರನು ಶಾಸ್ತ್ರಾರ್ಥವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸಲು
ದುಃಖವು ಶಮನವಾಗುವುದು.

ವೈಶಂಪಾಯನಃ

ತತೋಽಮೃತರಸೈರ್ವಾಕ್ಯೈರ್ಹ್ಲಾದಯನ್ ಪುರುಷರ್ಷಭಮ್ |
ವೈಚಿತ್ರವೀರ್ಯಂ ವಿದುರೋ ಯದುವಾಚ ನಿಬೋಧ ತತ್ ॥1॥

ವೈಶಂಪಾಯನ ಅನಂತರದಲ್ಲಿ ವಿದುರನು ವಿಚಿತ್ರವೀರ್ಯನ ಪುತ್ರನಾದ ಪುರುಷಶ್ರೇಷ್ಠನನ್ನು ಉದ್ದೇಶಿಸಿ ಅಮೃತಸದೃಶವಾದ ವಾಕ್ಯಗಳಿಂದ ಸಂತಸಗೊಳಿಸುತ್ತಾ ಏನನ್ನು ಹೇಳಿದನೋ ಅದನ್ನು ತಿಳಿಯುವವನಾಗು.

ವಿದುರಃ

ಉತ್ತಿಷ್ಠ ರಾಜನ್ ಕಿಂ ಶೇಷೇ ಧಾರಯಾತ್ಮಾನಮಾತ್ಮನಾ |
ಏಷಾ ವೈ ಸರ್ವಸತ್ತ್ವಾನಾಂ ಲೋಕೇಶ್ವರ ಪರಾ ಗತಿಃ ॥2॥

ವಿದುರ ರಾಜನೆ! ಮೇಲೇಳು, ಏಕೆ ಮಲಗಿರುವಿ? ಬುದ್ಧಿಯಿಂದ ಮನಸ್ಸನ್ನು ನಿಗ್ರಹಿಸು. ಲೋಕದೊಡೆಯ! ಎಲ್ಲ ಪ್ರಾಣಿಗಳಿಗೂ ಇದುವೇ (ಸಾವೇ) ಕೊನೆಯ ಗತಿ.

ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ |
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಚ ಜೀವಿತಮ್ ॥3॥

ಸಂಪಾದಿಸಿದ ಎಲ್ಲ ಸಂಪತ್ತು ನಾಶದಲ್ಲಿಯೇ ಅಂತ್ಯ ಕಾಣುವುದು, ಎಲ್ಲ ಉನ್ನತಿಯೂ ಸಹ ಪತನದಲ್ಲಿಯೇ ಅಂತ್ಯ ಕಾಣುವುದು, ಎಲ್ಲ ಕೂಡುವಿಕೆಯು ವಿಯೋಗದಲ್ಲಿಯೇ ಕೊನೆಗಾಣುವುದು, ಹಾಗೆ ಜೀವಿಕೆಯು ಮರಣದಿಂದ ಕೊನೆಗೊಳ್ಳುವುದು.

ಯಥಾ ಶೂರಂ ಚ ಭೀರುಂ ಚ ಯಮಃ ಕರ್ಷತಿ ಭಾರತ |
ತತ್ ಕಿಂ ನ ಯೋತ್ಸ್ಯಂತಿ ಹಿ ತೇ ಕ್ಷತ್ರಿಯಾಃ ಕ್ಷತ್ರಿಯರ್ಷಭ ॥4॥

ಭರತಕುಲೋತ್ಪನ್ನನೆ! ಯಮನು ಶೂರನನ್ನು ಹೇಡಿಯನ್ನೂ ಸೆಳೆದೊಯ್ಯುವನು. ಕ್ಷತ್ರಿಯಶ್ರೇಷ್ಠನೆ! (ಆದರೆ) ಆ ಕ್ಷತ್ರಿಯರು ಯುದ್ಧವನ್ನು ಮಾಡದಿರುವರೆ?

ಅಯುಧ್ಯಮಾನೋ ಮ್ರಿಯತೇ ಯುಧ್ಯಮಾನಶ್ಚ ಜೀವತಿ |
ಕಾಲಂ ಪ್ರಾಪ್ಯ ಮಹಾರಾಜ ನ ಕಶ್ಚಿದತಿವರ್ತತೇ ॥5॥

ಮಹಾರಾಜ! ಯುದ್ಧಮಾಡದವನು ಸಾವನ್ನು ಹೊಂದುವನು, ಮತ್ತೆ ಕೆಲವರು ಯುದ್ಧಮಾಡಿದರೂ ಜೀವಿತದಿಂದಿರುವರು, (ಅರ್ಥ್ಯ) ಕಾಲವನ್ನು ಹೊಂದಿದ್ದು, ಯಾರೂ (ಸಾವನ್ನು) ಅತಿಕ್ರಮಿಸಲಾರರು.

ಅಭಾವಾದೀನಿ ಭೂತಾನಿ ಭಾವಮಧ್ಯಾನಿ ಭಾರತ |
ಅಭಾವನಿಧನಾನ್ಯೇವ ತತ್ರ ಕಾ ಪರಿದೇವನಾ ॥6॥

ಭರತಕುಲೋತ್ಪನ್ನನೆ! ಎಲ್ಲ ಜೀವರು ಹುಟ್ಟುವ ಮೊದಲು ಕಾಣರು, ಮಧ್ಯದಲ್ಲಿ(ಜನ್ಮವನ್ನು ತಳೆದಾಗ) ಕಾಣುವವರು, ನಿಧನಾನಂತರ ಮತ್ತೆ ಕಾಣರು, ಈ ವಿಷಯದಲ್ಲಿ ದುಃಖಕ್ಕೆ ಎಲ್ಲಿ ಎಡೆ?

ವ್ಯಾಖ್ಯಾನ ವಿಶೇಷ ಈ ಶ್ಲೋಕದಲ್ಲಿನ ಮೊದಲ ಅಭಾವ ಶಬ್ದಕ್ಕೆ ಪ್ರಾಗಭಾವ ಎಂದು, ನಂತರದ ಅಭಾವ ಶಬ್ದಕ್ಕೆ ಪ್ರಧ್ವಂಸಾಭಾವ ಎಂದು ಅರ್ಥೈಸಲಾಗಿದೆ. ಜೀವಿಯು ಹುಟ್ಟುವಮೊದಲು ಆತನ ಪ್ರಾಗಭಾವ, ಆ ಅವಸ್ಥೆಯಲ್ಲೂ ಆತನು ಕಾಣನು, ಮರಣಾನಂತರ ಪ್ರಧ್ವಂಸಾಭಾವಾವಸ್ಥೆಯಲ್ಲೂ ಜೀವನು ಕಾಣನು ಎಂದು ಭಾವ.

ನ ಶೋಚನ್ ಮೃತಿಮನ್ವೇತಿ ನ ಶೋಚನ್ ಮ್ರಿಯತೇ ನರಃ |
ಏವಂ ಸಂಸಾಧಿತೇ ಲೋಕೇ ಕಿಮರ್ಥಮನುಶೋಚಸಿ ॥7॥

ದುಃಖಿಸುವುದರಿಂದ ಮೃತನನ್ನು ಅನುಸರಿಸಿ ಹೋಗಲಾಗುವದಿಲ್ಲ, ಶೋಕಿಸುವುದರಿಂದಲೇ ಮರಣವೂ ಪ್ರಾಪ್ತವಾಗದು, ಈ ನಿಯಮವು ಲೋಕದಲ್ಲಿ ಸಿದ್ಧವಾಗಿದೆ, ಹೀಗಿರುವಾಗ ಏತಕ್ಕಾಗಿ ಶೋಕಿಸುವಿ?

ಕಾಲಃ ಕರ್ಷತಿ ಭೂತಾನಿ ಸರ್ವಾಣಿ ವಿವಿಧಾನ್ಯುತ ॥8॥
ಯಥಾ ವಾಯುಸ್ತೃಣಾಗ್ರಾಣಿ ಸಂವರ್ತಯತಿ ಸರ್ವಶಃ |
ತಥಾ ಕಾಲವಶಂ ಯಾಂತಿ ಭೂತಾನಿ ಭರತರ್ಷಭ ॥9॥

ಭರತಕುಲದ ಹಿರಿಯನೆ! ಎಲ್ಲ ವಿಧವಾದ ಜೀವರನ್ನು ಕಾಲನು ಸೆಳೆಯುವನು, ಹೇಗೆ ವಾಯುವು ಹುಲ್ಲಿನ ತುದಿಭಾಗವನ್ನು ಎಲ್ಲೆಡೆಗೆ ಸುತ್ತಿಸುವುದೋ, ಹಾಗೆಯೇ ಪ್ರಾಣಿಗಳು ಕಾಲದ ಅಧೀನವಾಗಿವೆ.

ಏಕಸಾರ್ಥಪ್ರಯಾತಾನಾಂ ಸರ್ವೇಷಾಂ ತತ್ರ ಗಾಮಿನಾಮ್ |
ಯಸ್ಯ ಕಾಲಃ ಪ್ರಯಾತ್ಯಗ್ರೇ ತತ್ರ ಕಾ ಪರಿದೇವನಾ ॥10॥

ಒಂದೇ ಯಾತ್ರೆಯಲ್ಲಿ ಹೊರಟಿರುವ ಎಲ್ಲರೂ ಅಲ್ಲಿಗೇ ಹೋಗುವರು, ಆದರೆ ಯಾರ ಕಾಲವು ಪ್ರಾಪ್ತವಾಗಿದೆಯೋ ಆತನು ಮೊದಲು ಹೋಗುವನು (ಉಳಿದವರು ಅವರವರ ಕಾಲವು ಪ್ರಾಪ್ತವಾದಾಗ ಸಾಗುವರು). ಅಲ್ಲಿ ದುಃಖಿಸಲು ಕಾರಣವೇನು?

ನ ಚಾಪ್ಯೇತಾನ್ ಮೃತಾನ್ ಯುದ್ಧೇ ರಾಜನ್ ಶೋಚಿತುಮರ್ಹಸಿ |
ಪ್ರಮಾಣಂ ಯದಿ ಶಾಸ್ತ್ರಾಣಿ ಗತಾಸ್ತೇ ಪರಮಾಂ ಗತಿಮ್ ॥11॥

ರಾಜನೆ! ಯುದ್ಧದಲ್ಲಿ ಮೃತರಾದ ಇವರನ್ನು ಉದ್ದೇಶಿಸಿ ದುಃಖಿಸುವುದು ತರವಲ್ಲ, ಶಾಸ್ತ್ರವು ಪ್ರಮಾಣ ಎಂದಾದಲ್ಲಿ ಅವರು ಶ್ರೇಷ್ಠಗತಿಯನ್ನು ಹೊಂದಿರುವರು.

ಸರ್ವೇ ಸ್ವಾಧ್ಯಾಯವಂತೋ ಹಿ ಸರ್ವೇ ಚ ಚರಿತವ್ರತಾಃ |
ಸರ್ವೇ ಚಾಭಿಮುಖಾಃ ಕ್ಷೀಣಾಃ ತತ್ರ ಕಾ ಪರಿದೇವನಾ ||12||
ಎಲ್ಲರೂ ತಮ್ಮ ತಮ್ಮ ಶಾಖೆಗಳನ್ನು ಅಭ್ಯಸಿಸಿದವರು, ಎಲ್ಲರೂ ವ್ರತಗಳನ್ನು ಆಚರಿಸಿದವರು, ಎಲ್ಲರೂ (ಯುದ್ಧದಲ್ಲಿ ಶತ್ರುವಿನ) ಅಭಿಮುಖದಲ್ಲಿಯೇ ಮರಣವನ್ನು ಹೊಂದಿರುವರು, ಇಲ್ಲಿ ದುಃಖಿಸಲು ಕಾರಣವೇನು?
ಅದರ್ಶನಾದಾಪತಿತಾಃ ಪುನಶ್ಚಾದರ್ಶನಂ ಗತಾಃ |
ನ ತೇ ತವ ನ ತೇಷಾಂ ತ್ವಂ ತತ್ರ ಕಾ ಪರಿದೇವನಾ ||13||
ಕಾಣದ ಸ್ಥಳದಿಂದ (ತಾಯಿಯ ಗರ್ಭವನ್ನು) ಸೇರಿದರು, ಪುನಃ ಈಗ ಕಾಣದಂತೆ ಹೋದರೂ ಅವರು ನಿನ್ನವರಲ್ಲ, ನೀನು ಅವರವನಲ್ಲ, ಆದ್ದರಿಂದ ದುಃಖಿಸಲು ಕಾರಣವೇನು?
ಹತೋ ಹಿ ಲಭತೇ ಸ್ವರ್ಗಂ ಜಿತ್ವಾ ವಾ ಲಭತೇ ಯಶಃ |
ಉಭಯಂ ನೋ ಬಹುಗುಣಂ ನಾಸ್ತಿ ನಿಷ್ಫಲತಾ ರಣೇ ||14||
ಮರಣವನ್ನು ಹೊಂದಿದಲ್ಲಿ ಸ್ವರ್ಗವನ್ನು ಸೇರುವನು ಅಥವಾ (ಶತ್ರುವನ್ನು) ಗೆದ್ದಲ್ಲಿ ಕೀರ್ತಿಯನ್ನು ಹೊಂದುವನು, ನಮಗೆ ಎರಡೂ ಲಾಭದಾಯಕವೇ ಆಗಿದೆ, ರಣರಂಗವು ಹೇಗೂ ನಿಷ್ಫಲವಲ್ಲ.
ತೇಷಾಂ ಕಾಮದುಘಾನ್ ಲೋಕಾನ್ ಇಂದ್ರಃ ಸಂಕಲ್ಪಯಿಷ್ಯತಿ |
ಇಂದ್ರಸ್ಯಾತಿಥಯೋ ಹ್ಯೇತೇ ಭವಂತಿ ಪುರುಷರ್ಷಭ ||15||
ಪುರುಷಶ್ರೇಷ್ಠನೆ! ಅವರುಗಳಿಗೆ ಇಂದ್ರನು ಅಪೇಕ್ಷಿತವನ್ನು ನೀಡುವ ಲೋಕಗಳನ್ನು (ನೀಡಲು) ಸಂಕಲ್ಪಿಸುವನು, ಇವರು ಇಂದ್ರನ ಅತಿಥಿಗಳಾಗಿರುವರು.
ನ ಯಜ್ಞೈರ್ದಕ್ಷಿಣಾವದ್ಭಿರ್ನ ತಪೋಭಿರ್ನ ವಿದ್ಯಯಾ |
ಸ್ವರ್ಗಂ ಯಾತಿ ತಥಾ ಮರ್ತ್ಯೋ ಯಥಾ ಶೂರೋ ರಣೇ ಹತಃ ||
ಶೂರನು ರಣರಂಗದಲ್ಲಿ ಮೃತನಾದಲ್ಲಿ ಎಂತಹ ಸ್ವರ್ಗವನ್ನು ಹೊಂದುವನೋ ಅಂತಹ ಸ್ಥಾನವನ್ನು ಹೊಂದಲು ಯಜ್ಞಗಳಿಂದ ಶಕ್ಯವಿಲ್ಲ, ದಕ್ಷಿಣೆಯನ್ನು ನೀಡುವುದರಿಂದ ಶಕ್ಯವಿಲ್ಲ, ತಪಸ್ಸಿನಿಂದ ಶಕ್ಯವಿಲ್ಲ, ವಿದ್ಯೆಯಿಂದಲೂ ಶಕ್ಯವಿಲ್ಲ .
ಶರೀರಾಗ್ನಿಷು ತೇ ಶೂರಾ ಜುಹುವುರ್ವೈ ಶರಾಹುತೀಃ |
ಹೂಯಮಾನಾನ್ ಶರಾಂಶ್ಚೈವ ಸೇಹುಸ್ತೇಜಸ್ವಿನೋ ಮಿಥಃ ||17||
ತೇಜಸ್ವಿಗಳಾದ ಆ ಶೂರರು ಅನ್ಯೋನ್ಯವಾಗಿ ಶರೀರ ಎಂಬ ಅಗ್ನಿಯಲ್ಲಿ ಬಾಣಗಳೆಂಬ ಆಹುತಿಗಳನ್ನು ಹೋಮಿಸುವರು, ಹೋಮಿಸುವ (ಪ್ರಹರಿಸುವ) ಬಾಣಗಳನ್ನು ಸಹಿಸಿಕೊಳ್ಳುವರು.
ಏತದ್ರಾಜಂಸ್ತವಾಽಚಕ್ಷೇ ಸ್ವರ್ಗಂ ಪಂಥಾನಮುತ್ತಮಮ್ |
ನ ಯುದ್ಧಾದಧಿಕಂ ಕಿಂಚಿತ್ ಕ್ಷತ್ರಿಯಸ್ಯೇಹ ವಿದ್ಯತೇ ||18||
ರಾಜನೆ! ನಿನಗೆ ಇದನ್ನು ಹೇಳುವೆನು (ಕೇಳು), ಕ್ಷತ್ರಿಯನಿಗೆ ಈ ಲೋಕದಲ್ಲಿ ಯುದ್ಧಕ್ಕಿಂತ ಉತ್ತಮವಾದ ಸ್ವರ್ಗಮಾರ್ಗವು ಮತ್ತೊಂದು ಇಲ್ಲ.
ಕ್ಷತ್ರಿಯಾಸ್ತೇ ಮಹಾತ್ಮಾನಃ ಶೂರಾಃ ಸಮಿತಿಶೋಭನಾಃ |
ಅಮೃತಂ ಪರಮಂ ಪ್ರಾಪ್ತಾ ನ ಶೋಚ್ಯಾಃ ಸರ್ವ ಏವ ಹಿ ||19||
ಮಹಾಮಹಿಮರು ಶೂರರು ಸಭೆಗೆ ಭೂಷಣರು, ಆ ಕ್ಷತ್ರಿಯರು ಉತ್ತಮವಾದ ಅಮೃತವನ್ನು (ಸದ್ಗತಿಯನ್ನು) ಹೊಂದಿದರು, ಅವರು ಯಾರೂ ಶೋಚ್ಯರಲ್ಲ.
ಆತ್ಮಾನಮಾತ್ಮನಾಽಽಶ್ವಾಸ್ಯ ಮಾ ಶುಚಃ ಪುರುಷರ್ಷಭ |
ನಾದ್ಯ ಶೋಕಾಭಿಭೂತಸ್ತ್ವಂ ಕಾರ್ಯಮುತ್ಸ್ರಷ್ಟುಮರ್ಹಸಿ ||20||
ಪುರುಷಶ್ರೇಷ್ಠನೆ! ನಿನ್ನಿಂದಲೇ ನಿನ್ನನ್ನು ಸಮಾಧಾನಿಸಿಕೊಂಡು, ದುಃಖಿಸದಿರು. ಈಗ ಶೋಕಾಭಿಭೂತನಾಗಿ ನೀನು ಕರ್ತವ್ಯಕರ್ಮವನ್ನು ತ್ಯಜಿಸುವುದು ಯೋಗ್ಯವಲ್ಲ.
ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ |
ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ||21||
ಸಂಸಾರದಲ್ಲಿ ಸಾವಿರಾರು ತಂದೆ-ತಾಯಿಗಳನ್ನು, ನೂರಾರು ಮಕ್ಕಳನ್ನು ಹೆಂಡಂದಿರನ್ನು ಅನುಭವಿಸಿರುವೆವು, ಅವರು ಯಾರಿಗೆ ಸಂಬಂಧಿಸಿದವರು? ನಾವು ಯಾರಿಗೆ ಸಂಬಂಧಿಸಿರುವೆವು? (ಈ ಸಂಸಾರದ ಪ್ರವಾಹದಲ್ಲಿ ಸಾವಿರಾರು ಜೀವಿಗಳೊಡನೆ ಬೆರೆಯುವೆವು, ತೊರೆಯುವೆವು. ತೊರೆಯುವ ತನಕ ಮಾತ್ರ ಆ ಸಂಬಂಧಗಳು. ನಂತರದಲ್ಲಿ ಆ ದೇಹದೊಡನೆ ಆ ಸಂಬಂಧವೂ ನಷ್ಟವಾಗುವುದು, ಅದರ ಬಗ್ಗೆ ಚಿಂತಿಸಿ ಫಲವಿಲ್ಲ ಎಂದು ಭಾವ.)
ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ||22||
ಶೋಕಕ್ಕೆ ಸಾವಿರಾರು ಕಾರಣಗಳು, ಭಯಕ್ಕೆ ನೂರಾರು ಕಾರಣಗಳು ಪ್ರತಿನಿತ್ಯವೂ ಮೂಢನಿಗೆ ಪ್ರಾಪ್ತವಾಗುವವು, ಪಂಡಿತನಿಗೆ ಅಲ್ಲ.
ನ ಕಾಲಸ್ಯ ಪ್ರಿಯಃ ಕಶ್ಚಿನ್ನ ದ್ವೇಷ್ಯಃ ಕುರುಸತ್ತಮ |
ನ ಮಧ್ಯಸ್ಥಃ ಕ್ವಚಿತ್ ಕಾಲಃ ಸರ್ವಂ ಕಾಲಃ ಪ್ರಕರ್ಷತಿ ||23||
ಯಾವನೂ ಕಾಲಕ್ಕೆ ಪ್ರಿಯನಾದವನು ಇಲ್ಲ, ಯಾವನೂ ಕಾಲಕ್ಕೆ ದ್ವೇಷಿಯಾದವನೂ ಇಲ್ಲ, ಯಾರಿಗೂ ಕಾಲವು ಮಧ್ಯಸ್ಥನೂ ಅಲ್ಲ, ಎಲ್ಲರನ್ನೂ ಕಾಲನು (ಯೋಗ್ಯ ಕಾಲದಲ್ಲಿ) ಸೆಳೆಯುವನು.
ಕಾಲಃ ಪಚತಿ ಭೂತಾನಿ ಕಾಲಃ ಸಂಹರತೇ ಪ್ರಜಾಃ |

ಕಾಲಃ ಸುಪ್ತೇಷು ಜಾಗರ್ತಿ ಕಾಲೋ ಹಿ ದುರತಿಕ್ರಮಃ ॥24॥
ಪ್ರಾಣಿಗಳನ್ನು ಕಾಲನು ಪಕ್ವಗೊಳಿಸುವನು, ಎಲ್ಲ ಪ್ರಜೆಗಳನ್ನು ಕಾಲನೇ ಸಂಹರಿಸುವನು, (ಎಲ್ಲರೂ) ಮಲಗಿದಾಗ ಎಚ್ಚರದಿಂದಿರುವನು, ಕಾಲವನ್ನು ಯಾರೂ ಅತಿಕ್ರಮಿಸಲಾರರು.
ಅನಿತ್ಯಂ ಜೀವಿತಂ ರೂಪಂ ಯೌವನಂ ದ್ರವ್ಯಸಂಚಯಃ |
ಆರೋಗ್ಯಂ ಪ್ರಿಯಸಂವಾದೋ ಗೃಧ್ಯೇನ್ನ ಹ್ಯೇಷು ಪಂಡಿತಃ ॥25॥
ಜೀವಿತ, ರೂಪ, ಯೌವನ, ಹಣದ ಸಂಗ್ರಹ, ಆರೋಗ್ಯ, ಪ್ರಿಯರ ಸಂಗ (ಇವೆಲ್ಲವೂ) ಅನಿತ್ಯ. (ಆದ್ದರಿಂದ) ಪಂಡಿತನು ಇವುಗಳನ್ನು ಅಪೇಕ್ಷಿಸುವುದಿಲ್ಲ.
ನ ಹಿ ಜಾನಪದಂ ದುಃಖಮೇಕಃ ಶೋಚಿತುಮರ್ಹಸಿ |
ಅಪ್ಯಭಾವೇನ ಯುಜ್ಯೇತ ತಚ್ಚಾಸ್ಯ ನ ನಿವರ್ತತೇ ॥26॥
ಇಡೀ ದೇಶಕ್ಕೆ ಒದಗಿದ ದುಃಖವನ್ನು ನಿನ್ನೊರ್ವನ ದುಃಖವೆಂದು ದುಃಖಿಸುವುದು ತರವಲ್ಲ, ಸಾಯುವತನಕ ದುಃಖಿಸಿದರೂ ಆ ದುಃಖವು ನಿನ್ನನ್ನು ಬಿಡುವುದಿಲ್ಲ.
ಅಶೋಚನ್ ಪ್ರತಿಕುರ್ವೀತ ಯದಿ ಪಶ್ಯೇತ್ ಪರಾಕ್ರಮಮ್ |
ಭೈಷಜ್ಯಮೇತದ್ ದುಃಖಸ್ಯ ಯದೇವಂ ನಾನುಚಿಂತಯೇತ್ ॥27॥
ಒಂದು ವೇಳೆ ಪರಾಕ್ರಮವು ನಿನ್ನಲ್ಲಿ ಇರುವುದಾದಲ್ಲಿ, ದುಃಖಿಸದೇ ಪ್ರತೀಕಾರವನ್ನು ಮಾಡುವುದು, ದುಃಖಕ್ಕೆ ಇದುವೇ ಔಷಧ, ಈರೀತಿಯಲ್ಲಿ ಚಿಂತಿಸುವುದಲ್ಲ.
ಚಿಂತ್ಯಮಾನಂ ಹಿ ನಾಪೈತಿ ಭೂಯಶ್ಚಾಪಿ ವಿವರ್ಧತೇ |
ಅನಿಷ್ಟಸಂಪ್ರಯೋಗಾಚ್ಚ ವಿಪ್ರಯೋಗಾತ್ ಪ್ರಿಯಸ್ಯ ಚ ॥28॥
ಅನಪೇಕ್ಷಿತವಾದದ್ದು ಪ್ರಾಪ್ತಿಯಾಗಿರುವುದರಿಂದ, ಅಪೇಕ್ಷಿತವಾದದ್ದರ ವಿಯೋಗವೂ ಆಗಿರುವುದರಿಂದ ಚಿಂತಿಸುತ್ತಿರುವವನ ದುಃಖವು ಶಮನವಾಗುವುದಿಲ್ಲ, ಮತ್ತೂ ಹೆಚ್ಚುವುದು.
ಅಲಬ್ಧಲಾಭಾಃ ಕ್ಲಿಶ್ಯಂತೇ ಲಬ್ಧಲಾಭಾನುಪಾತಿನಃ ॥29॥
ಸಿಗಬೇಕಾದದ್ದು ಸಿಗದಿದ್ದಲ್ಲಿ ದುಃಖಿಸುವರು, ಅಪೇಕ್ಷಿತವಾದದ್ದನ್ನು ಹೊಂದಿದವರು ಹೆಚ್ಚಿನ ಪ್ರಾಪ್ತಿಯನ್ನು ಬಯಸುವರು.
ಮನುಷ್ಯಾಃ ಮಾನಸೈರ್ದುಃಖೈರ್ಯುಜ್ಯಂತೇ ಯೇಽಲ್ಪಬುದ್ಧಯಃ |
ನಾರ್ಥೋ ನ ಧರ್ಮೋ ನ ಸುಖಂ ಯದೇತದನುಶೋಚಸಿ ॥30॥
ಯಾವನು ಅಲ್ಪಬುದ್ಧಿಯ ಮನುಜನೊ ಆತನು ಮನದಲ್ಲಿಯೇ ದುಃಖಿಸುವನು, ನೀನು ಯಾವುದನ್ನು ಉದ್ದೇಶಿಸಿ ದುಃಖಿಸುತ್ತಿರುವಿಯೋ ಅದು ಯಾವ ಪ್ರಯೋಜನಕಾರಕವೂ ಅಲ್ಲ, ಧರ್ಮಕಾರಕವೂ ಅಲ್ಲ, ಸುಖಕಾರಕವೂ ಅಲ್ಲ.
ತಚ್ಚ ನಾಪ್ನೋತಿ ಕಾರ್ಯಾರ್ಥಂ ತ್ರಿವರ್ಗಾಚ್ಚೈವ ಭ್ರಶ್ಯತೇ ॥31॥
ಆ ದುಃಖವು ಯಾವ ಪ್ರಯೋಜನವನ್ನೂ ಹೊಂದಿಸುವುದಿಲ್ಲ, ತ್ರಿವರ್ಗದಿಂದಲೂ (ಧರ್ಮ-ಅರ್ಥ-ಕಾಮಗಳಿಂದಲೂ) ದೂರಗೊಳಿಸುವುದು.
ಅನ್ಯೋನ್ಯಬಾಧನಾವಸ್ಥಾಂ ಪ್ರಾಪ್ಯ ವೈಷಯಿಕಾ ನರಾಃ |
ಅಸಂತುಷ್ಟಾಃ ಪ್ರಮುಹ್ಯಂತಿ ಸಂತೋಷಂ ಯಾಂತಿ ಪಂಡಿತಾಃ ॥32॥
ಪರಸ್ಪರ ಕಿತ್ತಾಡುವ ಸಂದರ್ಭವನ್ನು ಹೊಂದಿ ವಿಷಯಾಸಕ್ತ ಮನುಜರು ಅಸಹನೆಯಿಂದ ಮೋಹಕ್ಕೆ ಒಳಗಾಗುವರು, ಆದರೆ ಜ್ಞಾನಿಗಳು ಸಂತೋಷಗೊಳ್ಳುವರು ( ಲಾಭಾಲಾಭಾದಿಗಳನ್ನು ಸಮನಾಗಿ ಕಾಣುವ ಅವರು ಹಿಗ್ಗಲಾರರು, ಕುಗ್ಗಲಾರರು ಎಂದು ಭಾವ).
ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರಮೌಷಧೈಃ |
ಏತಜ್ಜ್ಞಾನಸ್ಯ ಸಾಮರ್ಥ್ಯಂ ನ ಬಾಲೈಃ ಸಮತಾಮಿಯಾತ್ ॥33॥
ಬುದ್ಧಿಯಿಂದ ಮನದ ದುಃಖವನ್ನು, ಔಷಧದಿಂದ ಶರೀರದ ದುಃಖವನ್ನು ಪರಿಹರಿಸಿಕೊಳ್ಳಬೇಕು, ಇದು ಜ್ಞಾನದ ಸಾಮರ್ಥ್ಯ. (ಹಾಗೆ ಜೀವನವನ್ನು ನಿಯಂತ್ರಿಸದವನು) ಬಾಲಕರಿಗೆ (ಅಜ್ಞರಿಗೆ) ಸಮನಾಗುವನು, ನೀನು ಹಾಗಾಗದಿರು.
ಶಯಾನಂ ಚಾನುಶಯತಿ ತಿಷ್ಠಂತಂ ಚಾನುತಿಷ್ಠತಿ |
ಅನುಧಾವತಿ ಧಾವಂತಂ ಕರ್ಮ ಪೂರ್ವಕೃತಂ ನರಮ್ ॥34॥
ಮನುಜನು ಮಾಡಿದ ಪೂರ್ವಕರ್ಮವು ಮಲಗಿದ ಮನುಷ್ಯನನ್ನು ಅನುಸರಿಸಿ ಮಲಗುವುದು, ನಿಂತ ಮನುಷ್ಯನನ್ನು ಅನುಸರಿಸಿ ನಿಲ್ಲುವುದು, ಓಡುವ ಮನುಷ್ಯನನ್ನು ಅನುಸರಿಸಿ ಓಡುವುದು.
ಯಸ್ಯಾಂ ಯಸ್ಯಾಮವಸ್ಥಾಯಾಂ ಯತ್ ಕರೋತಿ ಶುಭಾಶುಭಮ್ |
ತಸ್ಯಾಂ ತಸ್ಯಾಮವಸ್ಥಾಯಾಂ ತತ್ತತ್ ಫಲಮವಾಪ್ನುಯಾತ್ ॥35॥
ಯಾವ ಯಾವ ಅವಸ್ಥೆಯಲ್ಲಿ ಶುಭಾಶುಭಕರವಾದ ಯಾವ ಕರ್ಮವನ್ನು ಮಾಡಿರುವನೋ, ಆ ಆ ಅವಸ್ಥೆಯಲ್ಲಿ ಆ ಆ ಫಲವನ್ನು ಹೊಂದುವನು.
ಯೇನ ಯೇನ ಶರೀರೇಣ ಯದ್ಯತ್ ಕರ್ಮ ಕರೋತಿ ಯಃ |
ತೇನ ತೇನ ಶರೀರೇಣ ತತ್ಫಲಂ ಸಮುಪಾಶ್ನುತೇ ॥36॥
ಯಾವ ಯಾವ ಅವಯವದಿಂದ ಯಾವ ಯಾವ ಕರ್ಮವನ್ನು ಮಾಡಿರುತ್ತಾನೊ, ಆ ಆ ಅವಯಗಳಿಂದ ಆ ಫಲವನ್ನು ಉಣ್ಣುವನು.
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ |
ಆತ್ಮೈವ ಹ್ಯಾತ್ಮನಃ ಸಾಕ್ಷೀ ಕೃತಸ್ಯಾಪ್ಯಕೃತಸ್ಯ ಚ ॥37॥

ತನಗೆ ತಾನೇ ಬಂಧು, ತನಗೆ ತಾನೇ ಶತ್ರು, ತಾನು ಮಾಡಿದ ಮಾಡದಿರದ ಕರ್ಮಗಳಿಗೆ ತನಗೆ ತಾನೇ ಸಾಕ್ಷಿ .
ಶುಭೇನ ಕರ್ಮಣಾ ಸೌಖ್ಯಂ ದುಃಖಂ ಪಾಪೇನ ಕರ್ಮಣಾ |
ಕೃತಂ ಲಭೇತ ಸರ್ವತ್ರ ನಾಕೃತಂ ವಿಂದತೇ ಕ್ವಚಿತ್ ||38||
ಪುಣ್ಯಕರ್ಮದಿಂದ ಸುಖವನ್ನು, ಪಾಪಕರ್ಮದಿಂದ ದುಃಖವನ್ನು ಹೊಂದುವರು. ಎಂದೂ ಮಾಡಿದ ಕರ್ಮದ ಫಲವನ್ನು ಹೊಂದುವರು, ಮಾಡದ ಕರ್ಮದ ಫಲವನ್ನು ಹೊಂದಲಾರರು.
ನ ಹಿ ಜ್ಞಾನವಿರುದ್ಧೇಷು ಬಹುಪಾಪೇಷು ಕರ್ಮಸು |
ಮೂಲಘಾತಿಷು ಸಜ್ಜಂತೆ ಬುದ್ಧಿಮಂತೋ ಭವದ್ವಿಧಾಃ ||39||
ಜ್ಞಾನವಿರುದ್ಧವಾದ (ಅತ್ಮಸಾಕ್ಷಿಗೆ ವಿರುದ್ಧವಾದ), ತನಗೇ ಅನರ್ಥಕಾರಕವಾದ ಬಹು ಪಾಪಕರ್ಮಗಳಲ್ಲಿ ನಿನ್ನಂತಹ ಅರಿವು ಇರುವವರು ಪವೃತ್ತರಾಗರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರಶೋಕೋತ್ಪತ್ತಿರ್ನಾಮ ದ್ವಿತೀಯೋಽಧ್ಯಾಯಃ ||
|| ಜಲಪ್ರದಾನಪರ್ವಣಿ ದ್ವಿತೀಯೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ವಿದುರನಿಂದ ಧೃತರಾಷ್ಟ್ರನಿಗೆ ಶೋಕಪರಿಹಾರಕ್ಕಾಗಿ ಶಾಸ್ತ್ರಾರ್ಥಕಥನ
ಧೃತರಾಷ್ಟ್ರಃ
ಸುಭಾಷಿತೈರ್ಮಹಾಪ್ರಾಜ್ಞ ಶೋಕೋ ಮೇಽಪಗತಃ ಪ್ರಭೋ |
ಭೂಯ ಏವ ತು ವಾಕ್ಯಾನಿ ಶ್ರೋತುಮಿಚ್ಛಾಮಿ ತತ್ತ್ವತಃ ||1||
ಧೃತರಾಷ್ಟ್ರ ಮಹಾ ಮೇಧಾವಿಯೆ, ನಾಯಕನೆ! ಹಿತ ನುಡಿಗಳಿಂದ ನನ್ನ ಶೋಕವು ನಿರಸಿತವಾಯಿತು. ನಿಶ್ಚಿತವಾಗಿಯೂ ಇನ್ನೂ ಕೆಲವು ಹಿತನುಡಿಗಳನ್ನು ಕೇಳಲು ಬಯಸುವೆನು.
ಅನಿಷ್ಟಾನಾಂ ಚ ಸಂಸರ್ಗಾದ್ ಇಷ್ಟಾನಾಂ ಚ ನಿವರ್ತನಾತ್ |
ಕಥಂ ವೈ ಮಾನಸಂ ದುಃಖಂ ವಿಪ್ರಯುಜ್ಯಂತಿ ಪಂಡಿತಾಃ ||2||
ಅನಪೇಕ್ಷಿತರ ಸಂಪರ್ಕದಿಂದ , ಅಪೇಕ್ಷಿತರ ವಿಯೋಗದಿಂದ ಪಂಡಿತರು ಮಾನಸ ದುಃಖವನ್ನು ಹೇಗೆ ಪರಿಹರಿಸಿಕೊಳ್ಳುವರು?
ವಿದುರಃ
ಯತೋ ಯತೋ ಮನೋ ದುಃಖಾದ್ ಸುಖಾದ್ ವಾ ವಿಪ್ರಮುಚ್ಯತೇ |
ತತಸ್ತತಃ ಶಮಂ ಲಬ್ಧ್ವಾ ಸುಗತಿಂ ವಿಂದತೇ ಬುಧಃ ||3||
ವಿದುರ ಯಾವ ಯಾವ ಸಾಧನಗಳಿಂದ ಸುಖ ಅಥವಾ ದುಃಖಗಳಿಂದ ಮನವು ಬಿಡುಗಡೆಯನ್ನು ಹೊಂದುವುದೋ, ಆ ಆ ಸಾಧನಗಳಿಂದ ಶಾಂತಿಯನ್ನು ಹೊಂದಿ, ಜ್ಞಾನಿಗಳು ಸದ್ಗತಿಯನ್ನು ಹೊಂದುವರು.
ಅಶಾಶ್ವತಮಿದಂ ಸರ್ವಂ ಚಿಂತ್ಯಮಾನಂ ನರರ್ಷಭ |
ಕದಳೀಸನ್ನಿಭೋ ಲೋಕಃ ಸಾರೋ ಹ್ಯಸ್ಯ ನ ವಿದ್ಯತೇ ||4||
ರಾಜಶ್ರೇಷ್ಠನೇ! ಇದೆಲ್ಲವು ಅಶಾಶ್ವತವಾದದ್ದು, ಈ ಲೋಕವು ಬಾಳೆಯ ಕಂಬದಂತೆ ಸಾರರಹಿತವಾದದ್ದು ಎಂದು ಜ್ಞಾನಿಗಳು ಆಲೋಚಿಸುವರು.
ಯದಾ ಪ್ರಾಜ್ಞಾಶ್ಚ ಮೂಢಾಶ್ಚ ಧನವಂತೋಽಥ ನಿರ್ಧನಾಃ |
ಸರ್ವೇ ಪಿತೃವನಂ ಪ್ರಾಪ್ಯ ಸ್ವಪಂತಿ ವಿಗತಜ್ವರಾಃ ||5||
ಪ್ರಾಜ್ಞರಾಗಲಿ, ಮೂರ್ಖರಾಗಲಿ, ಧನವಂತರಾಗಲಿ, ನಿರ್ಧನರಾಗಲಿ, ಎಲ್ಲರೂ ಯಾವಾಗ ಶ್ಮಶಾನವನ್ನು ಸೇರಿದಾಗ ವೈಷಮ್ಯದಿಂದ ದೂರರಾಗಿ (ನೆಲದಲ್ಲಿ ) ಮಲಗುವರು.
ನಿರ್ಮಾಂಸೈರಸ್ಥಿಭೂಯಿಷ್ಠೈರ್ಗಾತ್ರೈಃ ಸ್ನಾಯುನಿಬಂಧಿಭಿಃ |
ಕಿಂ ವಿಶೇಷಂ ಪ್ರಪಶ್ಯಂತಿ ತತ್ರ ತೇಷಾಂ ಪರೇ ಜನಾಃ ||6||
ಮಾಂಸರಹಿತವಾದ, ಅಸ್ಥಿಗಳೇ ಹೆಚ್ಚಾಗಿರುವ, ಸ್ನಾಯುಗಳಿಂದ ಬಂಧಿತವಾದ ದೇಹಗಳನ್ನು ಕಾಣುವ ಬೇರೆ ಜನರು ಆ ದೇಹಗಳಲ್ಲಿ ಯಾವ ವಿಶೇಷವನ್ನು ಕಾಣುವರು?
ಯೇನ ಪ್ರತ್ಯವಗಚ್ಛೇಯುಃ ಕುಲರೂಪವಿಶೇಷಣಮ್ |
ಕಸ್ಮಾದನ್ಯೋನ್ಯಮಿಚ್ಛಂತಿ ವಿಪ್ರಲಬ್ಧಧಿಯೋ ನರಾಃ ||7||
ಕುಲ, ರೂಪ ಮುಂತಾದ ಯಾವ ವಿಶೇಷವನ್ನು ಕಾಣುವರು? (ಎಲ್ಲವೂ ಪಾಂಚಭೌತಿಕ ಶರೀರ ಮಾತ್ರ ಎಂದು ಭಾವ.) ಮನುಷ್ಯರು (ಬದುಕಿದಾಗ) ಪರಸ್ಪರವಾಗಿ ಮೋಸಗೊಳಿಸಬೇಕೆಂದು ಏಕೆ ಇಚ್ಛಿಸುವರು? (ಮರಣಾನಂತರದಲ್ಲಿ ಎಲ್ಲವನ್ನೂ ಇಲ್ಲೇ ಬಿಟ್ಟು ಹೋಗುವರು, ಬದುಕಿದಾಗ ಅನೇಕ ಕುಟಿಲ ಮಾರ್ಗದಿಂದ ಹಣಸಂಪಾದನೆಗೆ ಯತ್ನಿಸುವುದು ತರವಲ್ಲ ಎಂದು ಭಾವ.)
ಗೃಹಾಣ್ಯೇವ ಹಿ ಮರ್ತ್ಯಾನಾಮಾಹುರ್ದೇಹಾನ್ ಹಿ ಪಂಡಿತಾಃ |
ಕಾಲೇನ ವಿನಿಯುಜ್ಯಂತೇ ಸತ್ತ್ವಮೇಷಾಂ ತು ಶೋಭನಮ್ ||8||
ಪಂಡಿತರು ಮನುಜರ ದೇಹಗಳನ್ನು ಮನೆಗಳಂತೆ ಎನ್ನುವರು, ಕಾಲ ಗತಿಸಿದಂತೆ ನಾಶವನ್ನು ಹೊಂದುವುದು. ಈ ದೇಹಗಳಲ್ಲಿ ಜೀವ ಮಾತ್ರ ಶಾಶ್ವತ ಮತ್ತು ಸುಂದರ.

ಯಥಾ ಜೀರ್ಣಮಜೀರ್ಣಂ ವಾ ವಸ್ತ್ರಂ ತ್ಯಕ್ತ್ವಾಽಥ ಪೂರುಷಃ |
ಅನ್ಯದ್ ರೋಚಯತೇ ವಸ್ತ್ರಮ್ ಏವಂ ದೇಹಃ ಶರೀರಿಣಾಮ್ ॥9॥
ಹಳತಾದ್ದಾಗಲಿ ಹೊಸತಾದದ್ದಾಗಲಿ ಹೇಗೆ ವಸ್ತ್ರವನ್ನು ಮನುಜನು ಪರಿತ್ಯಜಿಸಿ ಬೇರೆಯದನ್ನು ಬಯಸುವನೊ, ಇದೇ ರೀತಿಯದು ಜೀವರಿಗೆ ಈ ಶರೀರವು.
ವೈಚಿತ್ರವೀರ್ಯ ಸತ್ಯಂ ಹಿ ದುಃಖಂ ವಾ ಯದಿ ವಾ ಸುಖಮ್ |
ಪ್ರಾಪ್ನುವಂತಿ ಹಿ ಭೂತಾನಿ ಸ್ವಕೃತೇನೈವ ಕರ್ಮಣಾ ॥10॥
ವಿಚಿತ್ರವೀರ್ಯನ ಪುತ್ರನೆ! ಜೀವರು ಸುಖವನ್ನಾಗಲಿ, ದುಃಖವನ್ನಾಗಲಿ ತಾವು ಮಾಡಿದ ಕರ್ಮಾನುಸಾರವಾಗಿಯೇ ಹೊಂದುವರು ಇದು ಸತ್ಯ.
ಕರ್ಮಣಾ ಪ್ರಾಪ್ಯತೇ ಸ್ವರ್ಗಃ ಸುಖಂ ದುಃಖಂ ಚ ಭಾರತ |
ತತೋ ವಹತಿ ತಂ ಭಾರಮವಶಃ ಸ್ವವಶೋಽಪಿ ವಾ ॥11॥
ಭರತಕುಲೋತ್ಪನ್ನನೆ! ಸ್ವರ್ಗವನ್ನಾಗಲಿ, ಸುಖವನ್ನಾಗಲಿ, ದುಃಖವನ್ನಾಗಲಿ ತನ್ನ ಕರ್ಮಾನುಸಾರವಾಗಿಯೇ ಹೊಂದುವನು, ಆ ಕರ್ಮದ ಭಾರವನ್ನು ಸ್ವಾಧೀನವಾಗಿಯೋ ಪರಾಧೀನವಾಗಿಯೋ ಹೊರುವನು.
ಯಥಾ ಚ ಮೃಣ್ಮಯಂ ಭಾಂಡಂ ಚಕ್ರಾರೂಢಂ ವಿಪದ್ಯತೇ |
ಕಿಂಚಿತ್ ಪ್ರಕ್ರಿಯಮಾಣಂ ವಾ ಕೃತಮಾತ್ರಮಥಾಪಿ ವಾ |
ಭಿನ್ನಂ ವಾಽಪ್ಯವರೋಪ್ಯಂ ವಾವತೀರ್ಣಮಥಾಪಿ ವಾ ॥12॥
ಆರ್ದ್ರಂ ವಾಽಪ್ಯಥವಾ ಶುಷ್ಕಂ ಪಚ್ಯಮಾನಮಥಾಪಿ ವಾ |
ಅವತಾರ್ಯಂತಮಾಪಾಕಾದ್ ಉದ್ಧೃತಂ ವಾಽಪಿ ಭಾರತ ॥13॥
ಅಥವಾ ಪರಿಭಜ್ಯಂತೇ ಏವಂ ದೇಹಃ ಶರೀರಿಣಾಮ್ ॥14॥
ಭರತಕುಲೋತ್ಪನ್ನನೆ! ಮಣ್ಣಿನ ಗಡಿಗೆಯು ಚಕ್ರದ ಮೇಲೆ ಇರುವಾಗಲೇ (ನಿರ್ಮಾಣ ಹಂತದಲ್ಲಿರುವಾಗಲೇ) ಮುರಿಯ ಬಹುದು, ಸ್ವಲ್ಪ ಆಕಾರವನ್ನು ಹೊಂದುವಾಗಲೋ ಅಥವಾ ಗಡಿಗೆಯ ಆಕಾರವನ್ನು ಪೂರ್ಣ ಹೊಂದಿದ ಮೇಲೋ, (ಚಕ್ರದಿಂದ ) ಕೆಳಗೆ ಇಳಿಸುವಾಗಲೋ ಅಥವಾ ಇಳಿಸಿದ ಮೇಲೋ ಅಥವಾ ಇನ್ನೂ ಹಸಿಯಾಗಿರುವಾಲೋ ಅಥವಾ ಒಣಗಿದಮೇಲೋ ಅಥವಾ ಬೇಯಿಸುವಾಗಲೋ, ಬೇಯಿಸದ ಮೇಲೋ ಮೇಲೆ ಎತ್ತುವಾಗಲೋ ಒಡೆದು ಹೋಗಬಹುದು, ಹಾಗೆಯೇ ಈ ಮನುಜನ ದೇಹವೂ ಸಹ (ಯಾವಾಗಲಾದರೂ ನಾಶವನ್ನು ಹೊಂದಬಹುದು).
ಗರ್ಭಸ್ಥೋ ವಾ ಪ್ರಸೂತೋ ವಾಪ್ಯಥವಾ ದಶರಾತ್ರಿಕಃ |
ಅರ್ಧಮಾಸಗತೋ ವಾಽಪಿ ಮಾಸತ್ರಯಗತೋಽಪಿ ವಾ ॥15॥
ಸಂವತ್ಸರಗತೋ ವಾಽಪಿ ದ್ವಿಸಂವತ್ಸರ ಏವ ವಾ |
ಯೌವನಸ್ಥೋ ವಿಮಧ್ಯಸ್ಥೋ ವೃದ್ಧೋ ವಾಽಪಿ ವಿಪದ್ಯತೇ ॥16॥
ಗರ್ಭದಲ್ಲಿರುವಾಗಲೋ, ಜನನವನ್ನು ಹೊಂದುವಾಗಲೋ, ಹತ್ತನೇ ದಿನವೋ, ಹದಿನೈದನೇ ದಿನದಂದೊ ಅಥವಾ ಎರಡುತಿಂಗಳಿನಲ್ಲೋ, ಯೌವನಾವಸ್ಥೆಯಲ್ಲೋ, ಮಧ್ಯವಯಸ್ಸಿನಲ್ಲಿಯೋ ಅಥವಾ ಮುದಿತನದಲ್ಲೋ ಸಾವನ್ನು ಹೊಂದುವನು.
ಪ್ರಾಕ್ಕರ್ಮಭಿಸ್ತು ಭೂತಾನಿ ವಿಪದ್ಯಂತೇ ಭವಂತಿ ಚ |
ಏವಂ ಸಂವರ್ಧಿತೇ ಲೋಕೇ ಕಿಮರ್ಥಮನುತಪ್ಯಸೇ ॥17॥
ಜೀವರು ಪೂರ್ವಕರ್ಮಾನುಸಾರವಾಗಿ ಹುಟ್ಟುವರು, ಸಾವನ್ನು ಹೊಂದುವರು, ಲೋಕವು ಈ ರೀತಿಯಾಗಿ ಬೆಳೆಯುತ್ತಿರಲು ಏತಕ್ಕಾಗಿ ದುಃಖಿಸುವಿ?
ಯಥಾ ತು ಸಲಿಲೇ ರಾಜನ್ ಕ್ರೀಡಾರ್ಥಮನುಸಂಚರನ್ |
ಉನ್ಮಜ್ಜೇಚ್ಚ ನಿಮಜ್ಜೇಚ್ಚ ಚೇಷ್ಟತೇ ಹಿ ನರಾಧಿಪ ॥18॥
ಏವಂ ಸಂಸಾರಗಹನಾದ್ ಉನ್ಮಜ್ಜನನಿಮಜ್ಜನಾತ್ |
ಕರ್ಮಯೋಗೇನ ಬಧ್ಯಂತೇ ಕ್ಲಿಶ್ಯಂತೇ ಸ್ವಲ್ಪಬುದ್ಧಯಃ ॥19॥
ರಾಜನೆ, ಮನುಜರೊಡೆಯನೆ! ಹೇಗೆ ನೀರಿನಲ್ಲಿ ಕ್ರೀಡೆಗಾಗಿ ಇಳಿದವನು ಮುಳುಗುತ್ತಾ ತೇಲುತ್ತಾ ಕ್ರೀಡಿಸುವನೊ, ಹಾಗೆಯೇ ಈ ಆಳವಾದ ಸಂಸಾರ ಸಾಗರದಲ್ಲಿ ಮುಳುಗುತ್ತಾ ತೇಲುತ್ತಾ ಅಜ್ಞರು ಕರ್ಮದಿಂದ ಬದ್ಧರಾಗಿ ದುಃಖಕ್ಕೆ ಈಡಾಗುವರು.
ಯೇ ತು ಪ್ರಾಜ್ಞಾಃ ಸ್ಥಿತಾ ಮಧ್ಯೇ ಸಂಸಾರಾಂತರ್ಗತೈಷಿಣಃ |
ಸಮಾಗಮಜ್ಞಾ ಭೂತಾನಾಂ ತೇ ಯಾಂತಿ ಪರಮಾಂ ಗತಿಮ್ ॥20॥
ಯಾರು ಪ್ರಾಜ್ಞರು ಆಗಿರುವರೋ ಅವರು ಸಂಸಾರದಲ್ಲಿ ವಿರಕ್ತರಾಗಿ, ಜೀವಿಗಳ ಸಮಾಗಮದ ಗುಟ್ಟನ್ನು ತಿಳಿದವರಾಗಿ ಉತ್ತಮಗತಿಯನ್ನು ಹೊಂದುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ತೃತೀಯೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ವಿದುರನಿಂದ ಧೃತರಾಷ್ಟ್ರನಿಗೆ ಶೋಕವು ಪರಿಹಾರವಾಗಲು ಶಾಸ್ತ್ರೋಪದೇಶ.
ಧೃತರಾಷ್ಟ್ರಃ

ಕಥಂ ಸಂಸಾರಗಹನಂ ವಿಜ್ಞೇಯಂ ವದತಾಂ ವರ |
ಏತದಿಚ್ಛಾಮ್ಯಹಂ ಶ್ರೋತುಂ ತತ್ತ್ವಮಾಖ್ಯಾಹಿ ಪೃಚ್ಛತೇ ॥1॥
ಧೃತರಾಷ್ಟ್ರ ಉಪನ್ಯಾಸಕರಲ್ಲಿ ಶ್ರೇಷ್ಠನೇ! ಗಹನವಾದ ಸಂಸಾರವನ್ನು ಹೇಗೆ ತಿಳಿಯುವುದು? ಇದನ್ನು ಕೇಳಲು ಇಚ್ಛಿಸುವೆನು, ಪ್ರಶ್ನಿಸುತ್ತಿರುವ ನನಗೆ ರಹಸ್ಯವನ್ನು ಹೇಳು.
ವಿದುರಃ
ಜನ್ಮಪ್ರಭೃತಿ ಭೂತಾನಾಂ ಕ್ರಿಯಾಃ ಸರ್ವಾಸ್ತು ಲಕ್ಷಯೇತ್ |
ಪೂರ್ವಮೇವೇಹ ಕಲಿಲೇ ವಸತೇ ಕಿಂಚಿದನಂತರಮ್ ॥2॥
ವಿದುರ ಹುಟ್ಟಿನಿಂದ ಮೊದಲುಗೊಂಡು ಜೀವಿಗಳ ಎಲ್ಲ ವಿಧವಾದ ಕ್ರಿಯೆಗಳನ್ನು ಶಾಸ್ತ್ರಗಳಲ್ಲಿ ತಿಳಿಸಿರುವರು. ಮೊದಲು ಕಲಿಲದಲ್ಲಿ (ಪುರುಷಶುಕ್ರ ಸ್ತ್ರೀಶೋಣಿತವು ಬೆರೆತದ್ದನ್ನು ಮೊದಲದಿನದಲ್ಲಿ ಕಲಿಲ ಎಂದು ಕರೆಯುವರು) ವಾಸಿಸುವನು.
ತತಃ ಸ ಪಂಚಮೇಽತೀತೇ ಮಾಂಸೇ ವಾಸಮಕಲ್ಪಯತ್ |
ತತಃ ಸರ್ವಾಂಗಸಂಪೂರ್ಣೋ ಗರ್ಭೋ ಮಾಸೇ ಚ ಜಾಯತೇ ॥3॥
ಆನಂತರದಲ್ಲಿ ಮಾಂಸದಲ್ಲಿ ವಾಸವನ್ನು ಹೊಂದುವನು, ಐದುತಿಂಗಳು ಕಳೆಯಲು ಗರ್ಭವು ಸರ್ವಾಂಗಪೂರ್ಣವಾಗುವುದು.
ಅಮೇಧ್ಯಮಧ್ಯೇ ವಸತಿ ಮಾಂಸಶೋಣಿತಲೇಪನೇ |
ತತಸ್ತು ವಾಯುವೇಗೇನ ಹ್ಯೂರ್ಧ್ವಪಾದೋ ಹ್ಯಧೋಮುಖಃ ॥4॥
ಮಾಂಸ, ರಕ್ತಗಳಿಂದ ಲಿಪ್ತವಾದ ಹೊಲಸಿನ ಮಧ್ಯದಲ್ಲಿ ವಾಸಿಸುವನು, ಅನಂತರದಲ್ಲಿ ವಾಯುವಿನಿಂದ ಪ್ರೇರಿತನಾದ ಜೀವಿಯು ಕಾಲುಮೇಲಾಗಿಯೂ ತಲೆಕೆಳಗಾಗಿಯೂ ನಿಲ್ಲುವನು.
ಯೋನಿದ್ವಾರಮುಪಾಗಮ್ಯ ಬಹೂನ್ ಕ್ಲೇಶಾನ್ ಸಮೃಚ್ಛತಿ |
ಯೋನಿಸಂಪೀಡನಾಚ್ಚೈವ ಪೂರ್ವಕರ್ಮಪದಾನುಗಃ ॥5॥
ಯೋನಿಯ ಮುಖದಲ್ಲಿರುವ ಜೀವಿಯು ಯೋನಿಪೀಡನದಿಂದ ಪೂರ್ವಕರ್ಮಗಳನ್ನು ಅನುಸರಿಸಿಯೂ ಅನೇಕ ದುಃಖಗಳನ್ನು ಅನುಭವಿಸುವನು.
ತಸ್ಮಾನ್ಮುಕ್ತಃ ಸ ಸಂಸಾರಾದನ್ಯಾನ್ ಪಶ್ಯತ್ಯುಪದ್ರವಾನ್ |
ಗ್ರಹಾಸ್ತಮುಪಸರ್ಪಂತಿ ಸಾರಮೇಯಾ ಇವಾಮಿಷಮ್ ॥6॥
ಗರ್ಭದಿಂದ ಮುಕ್ತನಾದವನು ಈ ಸಂಸಾರದಲ್ಲಿ ಬೇರೆ ದುಃಖಗಳನ್ನು ಕಾಣುವನು, ಮಾಂಸವನ್ನು ನಾಯಿಗಳು ಸಮೀಪಿಸುವಂತೆ ಬಾಲಗ್ರಹಗಳು ಈತನನ್ನು ಮುತ್ತುವವು.
ತತಃ ಕಾಲಾಂತರೇ ಪ್ರಾಪ್ತೇ ವ್ಯಾಧಯಶ್ಚಾಪಿ ತಂ ತಥಾ |
ಉಪಸರ್ಪಂತಿ ಜೀವಂತಂ ಬಧ್ಯಮಾನಂ ಸ್ವಕರ್ಮಭಿಃ ॥7॥
ತನ್ನ ಕರ್ಮಗಳಿಂದ ಪೀಡಿತನಾದ ಜೀವಂತವಾಗಿರುವ ಆತನನ್ನು ಕಾಲಾಂತರವು ಪ್ರಾಪ್ತವಾಗಲು ಹಾಗೆಯೇ (ನಾಯಿಗಳಂತೆ) ವ್ಯಾಧಿಯೇ ಮುಂತಾದವುಗಳು ಮುತ್ತುವವು.
ಬದ್ಧಮಿಂದ್ರಿಯಪಾಶೈಸ್ತಂ ಸಂಗಕಾಮುಕಮಾತುರಮ್ |
ವ್ಯಸನಾನ್ಯನುವರ್ತಂತೇ ವಿವಿಧಾನಿ ನರಾಧಿಪ ॥8॥
ರಾಜನೆ! ಇಂದ್ರಿಯಗಳೆಂಬ ಪಾಶದಿಂದ ಬಂಧಿತನಾದ, (ಸ್ತ್ರೀ ಮುಂತಾದ) ಸಂಗವನ್ನು ಬಯಸುವ, ಅತುರನಾದ ಆತನನ್ನು ವಿವಿಧ ವ್ಯಸನಗಳು ಬೆನ್ನಹತ್ತುವವು.
ಮಥ್ಯಮಾನಶ್ಚ ತೈರ್ಭೂಯೋ ನೈವ ತೃಪ್ತಿಮುಪೈತಿ ಸಃ |
ಅಯಂ ನ ಬುದ್ಧ್ಯತೇ ತಾವದ್ ಯಮಲೋಕಾದಿಹಾಗಮಮ್ ॥9॥
ಮತ್ತು ಆ ವ್ಯಸನಗಳಿಂದ ಹೊಯ್ದಾಡುವ ಆತನು ಅವುಗಳಿಂದ (ವ್ಯಸನಗಳ ಭೋಗದಿಂದ) ತೃಪ್ತಿಯನ್ನು ಹೊಂದುವುದಿಲ್ಲ. ಆದರೆ ಆತನು `ತಾನು ಯಮಸದನದಿಂದ ಇಲ್ಲಿಗೆ ಬಂದಿರುವೆನು' ಎಂಬುವುದನ್ನು ತಿಳಿದಿರುವುದಿಲ್ಲ .
ಯಮದೂತೈರ್ವಿಕೃಷ್ಟಶ್ಚ ಮೃತ್ಯುಂ ಕಾಲೇನ ಗಚ್ಛತಿ ॥10॥
ಯಮದೂತರಿಂದ ಸೆಳೆಯುವವನಾಗಿ ಕಾಲಾನಂತರದಲ್ಲಿ ಸಾವನ್ನು ಹೊಂದುವನು.
ವಾಗ್ಘೀನಸ್ಯ ಚ ಯಾ ಮಾತ್ರಾ ಇಷ್ಟಾನಿಷ್ಟಕೃತಾಽಸ್ಯ ವೈ |
ಭೂಯ ಏವಾತ್ಮನಾಽಽತ್ಮಾನಂ ಬಧ್ಯಮಾನಮುಪೈತಿ ಸಃ ॥11॥
(ಮರಣಕಾಲದಲ್ಲಿ) ವಾಗಿಂದ್ರಿಯರಹಿತನಾದ ಅವನಿಗೆ (ತಾನು) ಏನೆಲ್ಲ ಇಷ್ಟಾನಿಷ್ಟಗಳನ್ನು ಆಚರಿಸಿದ್ದನೋ ಅದೆಲ್ಲವೂ ಸ್ಮರಣೆಗೆ ಬರುವುದು. ಆದರೂ ಸಹ ತನ್ನ ತಪ್ಪಿನಿಂದಲೇ ತಾನು ಬದ್ಧನಾಗುತ್ತಿರುವೆನು ಎಂಬುವುದನ್ನು ತಿಳಿಯಲಾರನು.
ತತ್ರೈನಂ ಪರಿಪಶ್ಯಂತಿ ಯೇ ಧ್ಯಾನಪರಿನಿಷ್ಠಿತಾಃ ॥12॥
ಅಹೋ ವಿನಿಕೃತೋ ಲೋಕೋ ಲೋಭೇನ ಚ ವಶೀಕೃತಃ |
ಲೋಭಕ್ರೋಧಮದೋನ್ಮತ್ತೋ ನಾತ್ಮಾನಮವಬುದ್ಧ್ಯತೇ ॥13॥
ಯಾರು ಧ್ಯಾನ ಪರಿಪಾಕವನ್ನು ಹೊಂದಿರುವರೋ ಅವರು ಈ ಜಗವನ್ನು `ಲೋಭವಶವಾದ ಈ ಜನರು ಮೋಸಹೊಗುತ್ತಿರುವರು, ಲೋಭ- ಕ್ರೋಧ-ಮದಗಳಿಂದ ಉನ್ಮತ್ತವಾದ ಲೋಕವು (ಜನರು) ತನ್ನನ್ನು ತಾನು ಅರಿಯಲಾರದು, ಆಶ್ಚರ್ಯ!' ಎಂದು ನೋಡುವರು.
ಕುಲೀನತ್ವೇ ಚ ರಮತೇ ದುಷ್ಕುಲೀನಾನ್ ವಿಕುತ್ಸಯನ್ |
ಧನದರ್ಪೇಣ ದೃಪ್ತಶ್ಚ ದಾರಿದ್ರ್ಯಂ ಪರಿಕುತ್ಸಯನ್ ॥14॥

ಶ್ರೇಷ್ಠಕುಲದಲ್ಲಿ ಹುಟ್ಟಿದರೆ ದುಷ್ಕುಲದಲ್ಲಿ ಹುಟ್ಟಿದವರನ್ನು ನಿಂದಿಸುವನು, ಧನದ ಮದದಿಂದ ಉನ್ಮತ್ತನಾದವನು ದರಿದ್ರರನ್ನು ಅವಮಾನಿಸುವನು.
ಮೂರ್ಖಾನಿತಿ ಪರಾನಾಹ ನಾತ್ಮಾನಂ ಸಮವೇಕ್ಷತೇ |
ದೋಷಾನ್ ಕ್ಷಿಪತಿ ಚಾನ್ಯೇಷಾಂ ನಾತ್ಮಾನಂ ಶಾಸ್ತುಮರ್ಹತಿ ॥15॥
ಪರರನ್ನು ಮೂರ್ಖ ಎಂದು ಜರೆಯುವನು, ಆದರೆ ತನ್ನನ್ನು ಪರಿಶೀಲಿಸಿ- ಕೊಳ್ಳುವುದಿಲ್ಲ. ಅನ್ಯರ ಮೇಲೆ ದೋಷಗಳನ್ನು ಆರೋಪಿಸುವನು, ಆದರೆ ತನ್ನನ್ನು ನಿಯಂತ್ರಿಸಿಕೊಳ್ಳಲಾರ.
ಯಥಾ ಪ್ರಾಜ್ಞಾಶ್ಚ ಮೂಢಾಶ್ಚ ಧನವಂತೋಽಥ ನಿರ್ಧನಾಃ |
ಕುಲೀನಾಶ್ಚಾಕುಲೀನಾಶ್ಚ ಮಾನಿನೋಽಥಾಪ್ಯಮಾನಿನಃ ॥16॥
ಸರ್ವೇ ಪಿತೃವನಂ ಪ್ರಾಪ್ತಾಃ ಸ್ವಪಂತಿ ವಿಗತತ್ವಚಃ ॥17॥
ನಿರ್ಮಾಂಸೈರಸ್ಥಿಭೂಯಿಷ್ಠೈಃ ಗಾತ್ರೈಶ್ಚ ಸ್ನಾಯುಬಂಧನೈಃ ॥18॥
ಕಿಂ ವಿಶೇಷಂ ಪ್ರಪಶ್ಯಂತಿ ತತ್ರ ತೇಷಾಂ ಪರೇ ಜನಾಃ |
ಯೇನ ಪ್ರತ್ಯವಗಚ್ಛೇಯುಃ ಕುಲರೂಪವಿಶೇಷಣಮ್ ॥19॥
ಪ್ರಾಜ್ಞರು, ಮೂರ್ಖರು, ಧನವಂತರು, ನಿರ್ಧನಿಗಳು, ಶ್ರೇಷ್ಠಕುಲೋತ್ಪನ್ನರು, ದುಷ್ಕುಲೋತ್ಪನ್ನರು, ಸ್ವಾಭಿಮಾನಿಗಳು ನಿರಭಿಮಾನಿಗಳು ಎಲ್ಲರು ಶ್ಮಶಾನಕ್ಕೆ ತೆರಳಿದಾಗ ಚರ್ಮವೂ ಇಲ್ಲದವರಾದ ಅವರು ಮಾಂಸರಹಿತವಾದ ಅಸ್ಥಿಯೇ ಹೆಚ್ಚಾಗಿರುವ ಸ್ನಾಯುಗಳಿಂದ ಬಂಧಿತವಾದ ದೇಹಗಳಿಂದ ಮಲಗುವರು, ಅನ್ಯರು ಆ ದೇಹಗಳಲ್ಲಿ ಏನು ವಿಶೇಷವನ್ನು ಕಾಣುವರು? ಯಾವುದರಿಂದ ಕುಲ, ರೂಪ, ವಿಶೇಷಗಳನ್ನು ಆಗ ತಿಳಿಯುವರು?
ಯದಾ ಸರ್ವೇ ಸಮಂ ನ್ಯಸ್ತಾಃ ಸ್ವಪಂತಿ ಧರಣೀತಳೇ |
ತಸ್ಮಾದನ್ಯೋನ್ಯಮಿಚ್ಛಂತಿ ವಿಪ್ರಲಬ್ಧುಮಿಹಾಬುಧಾಃ ॥20॥
ಯಾವಾಗ ಎಲ್ಲರೂ ಸಮಾನವಾಗಿ ಎಲ್ಲವನ್ನು ತೊರೆದು, ಭೂಮಿಯಲ್ಲಿ ಮಲಗಿ ಇರುವರೋ, ಆದ್ದರಿಂದ ಇಲ್ಲಿ ಅಜ್ಞರು ಪರಸ್ಪರವಾಗಿ ಒಬ್ಬರನ್ನು ಮತ್ತೊಬ್ಬರು ಮೋಸಗೊಳಿಸಲು ಬಯಸುವರು. (ಮರಣಾನಂತರದಲ್ಲಿ ಇದಾವುದನ್ನು ನಾವು ಕೊಂಡೊಯ್ಯಲು ಶಕ್ಯವಿಲ್ಲ ಎಂಬ ಅರಿವು ಇಲ್ಲದ ಮನುಜರು ಬದುಕಿದಾಗ ಪರಸ್ಪರ ಕಿತ್ತಾಡುವರು ಎಂಬ ಭಾವ.)
ಪ್ರತ್ಯಕ್ಷಂ ಚ ಪರೋಕ್ಷಂ ಚ ಯೋ ನಿಶಾಮ್ಯ ಶ್ರುತಿಂ ತ್ವಿಮಾಮ್ |
ಜನ್ಮಪ್ರಭೃತಿ ವರ್ತೇತ ಪ್ರಾಪ್ನುಯಾತ್ ಪರಮಾಂ ಗತಿಮ್ ॥21॥
ನೇರವಾಗಿಯೋ ಅಪರೋಕ್ಷವಾಗಿಯೋ ಈ ಶ್ರುತಿಯನ್ನು ಯಾರು ಕೇಳುವರೊ, ಹುಟ್ಟಿನಿಂದಾರಂಭಿಸಿ ಈ ಮಾರ್ಗದಲ್ಲಿಯೇ ಇರುವರೋ ಅವರು ಪರಮಗತಿಯನ್ನು ಹೊಂದುವರು.
ಏವಂ ಸರ್ವಂ ವಿದಿತ್ವಾ ವೈ ಯಸ್ತತ್ತ್ವಮನುವರ್ತತೇ |
ಸ ವೈ ಮೋಕ್ಷಯತೇ ಚೈವ ಪಂಥಾನಂ ಮನುಜಾಧಿಪ ॥22॥
ಮನುಜರ ಒಡೆಯನೆ! ಈ ರೀತಿಯಾಗಿ ಎಲ್ಲವನ್ನು ತಿಳಿದು ಯಾವನು ತತ್ವಮಾರ್ಗವನ್ನೇ ಅನುಸರಿಸುವನೋ, ಆ ಹಾದಿಯು ಆತನನ್ನು ಮೋಕ್ಷದೆಡೆಗೆ ಕೊಂಡೊಯ್ಯುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೇ ಚತುರ್ಥೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ಧೃತರಾಷ್ಟ್ರನಿಗೆ ವಿದುರನಿಂದ ಸಂಸಾರಾಟವಿಯ ವರ್ಣನೆ.
ಧೃತರಾಷ್ಟ್ರಃ
ಯದಿದಂ ಧರ್ಮಗಹನಂ ಬುದ್ಧ್ಯಾ ಸಮನುಬುದ್ಧ್ಯಸೇ |
ಏತದ್ ವಿಸ್ತರತಃ ಸರ್ವಂ ಬುದ್ಧಿಮಾರ್ಗಂ ಪ್ರಶಂಸ ಮೇ ॥1॥
ಧೃತರಾಷ್ಟ್ರ ಯಾವ ಈ ಧರ್ಮವು ಗಹನವಾಗಿದೆಯೊ, ಬುದ್ಧಿಯಿಂದ ತಿಳಿಯಲು ನನಗೆ ಶಕ್ಯವಾದಲ್ಲಿ ವಿಸ್ತಾರವಾಗಿ ಸಮಸ್ತ ಬುದ್ಧಿಮಾರ್ಗವನ್ನು ತಿಳಿಸು.
ವಿದುರಃ
ಅತ್ರ ತೇ ವರ್ತಯಿಷ್ಯಾಮಿ ನಮಸ್ಕೃತ್ವಾ ಸ್ವಯಂಭುವೇ |
ಯಥಾ ಸಂಸಾರಗಹನಂ ವದಂತಿ ಪರಮರ್ಷಯಃ ॥2॥
ವಿದುರ ಬ್ರಹ್ಮದೇವನಿಗೆ ನಮಸ್ಕರಿಸಿ, ಸಂಸಾರವು ಗಹನವೆಂದು ಮಹರ್ಷಿಗಳು ಹೇಗೆ ಉಪದೇಶಿಸಿರುವರೋ ಅದನ್ನು ನಿನಗೆ ತಿಳಿಸುವೆನು.
ಕಶ್ಚಿನ್ಮಹತಿ ಸಂಸಾರೇ ವರ್ತಮಾನೋ ದ್ವಿಜಃ ಕಿಲ |
ವನಂ ದುರ್ಗಮನುಪ್ರಾಪ್ತೋ ಮಹತ್ ಕ್ರವ್ಯಾದಸಂಕುಲಮ್ ॥3॥
ಭೀಕರಸಂಸಾರದಲ್ಲಿ ಇರುವ ಓರ್ವ ಬ್ರಾಹ್ಮಣನು ಮಾಂಸಾಹಾರಿಗಳಿಂದ ಕೂಡಿರುವ ದುರ್ಗಮ್ಯವಾದ ವನವೊಂದನ್ನು ಸೇರಿದನು.
ಸಿಂಹವ್ಯಾಘ್ರಗಜಕ್ಷೌಘೈರತಿಘೋರೈರ್ಮಹಾಸ್ವನೈಃ |

ಸಮಂತಾತ್ ಸಂಪರಿಕ್ಷಿಪ್ತಂ ಯಸ್ಮಾದ್ ದೃಷ್ಟ್ವಾರ್ಮಹದ್ಭಯಮ್ ॥4॥
ಯಾವುದು ನೋಡುವುದಕ್ಕೇ ಭಯಂಕರವೋ ಅಂತಹ ಸಿಂಹ ಹುಲಿ ಆನೆ ಚಿರತೆಗಳು ಭಯಂಕರವಾಗಿ ಅರಚುತ್ತಾ ಸುತ್ತಲು ಸುತ್ತುವರೆದು ನಿಂತಿದ್ದವು.
ತದಸ್ಯ ದೃಷ್ಟ್ವಾ ಹೃದಯಮುದ್ವೇಗಮುಗಮತ್ ಪರಮ್ |
ಅತ್ಯುಚ್ಛ್ರಯಾಶ್ಚ ರೋಮಾಣಾಂ ವಿಕ್ರಿಯಾಶ್ಚ ಭವಂತಿ ವೈ ॥5॥
ಅದರ ದರ್ಶನದಿಂದ ಹೃದಯದ ಬಡಿತವು ಅತಿ ಹೆಚ್ಚಾಯಿತು. ರೋಮಗಳು ನಿಮಿರಿ ನಿಂತವು (ದೇಹದಲ್ಲಿ ಇಂತಹ) ಅನೇಕ ವಿಕಾರಗಳಾಗುತ್ತವೆ ತಾನೆ?
ಸ ತದ್ ವನಂ ವ್ಯತಿಸರನ್ ನೃಪ ಧಾವನ್ನಿತಸ್ತತಃ |
ವೀಕ್ಷಮಾಣೋ ದಿಶಃ ಸರ್ವಾಃ ಶರಣಂ ಕ್ವ ಭವೇದಿತಿ ॥6॥
ರಾಜನೆ! ಧನವಂತನಾದ ಆತನು ಅಂತಹ ವನದಲ್ಲಿ ಅತ್ತಿಂದಿತ್ತಾ ಸಂಚರಿಸುತ್ತಾ ಎಲ್ಲಿ ಆಶ್ರಯವನ್ನು ಹೊಂದಬಹುದು ಎಂದು ಎಲ್ಲೆಡೆಯೂ ಗಮನಿಸಿದನು.
ಸ ತೇಷಾಂ ಛಿದ್ರಮನ್ವಿಚ್ಛನ್ ಪ್ರದ್ರುತೋ ಭಯಪೀಡಿತಃ |
ನ ಚ ನಿರ್ಯಾತಿ ವೈ ದೂರಂ ನ ಚ ತೈರ್ವಿಪ್ರಯುಜ್ಯತೇ ॥7॥
ಅವುಗಳಿಂದ (ಮಾಂಸಾಹಾರಿ ಪ್ರಾಣಿಗಳಿಂದ) ಅವಕಾಶವನ್ನು ಗಮನಿಸಿ, ಭಯಗ್ರಸ್ಥನಾಗಿ ಓಡಿದನು, ಆದರೆ ಹೆಚ್ಚು ದೂರ ಹೋಗಲಾಗಲಿಲ್ಲ, ಅವುಗಳಿಂದ ಮುಕ್ತನೂ ಆಗಲಿಲ್ಲ.
ಅಥಾಪಶ್ಯದ್ ವನಂ ಗೂಢಂ ಸಮಂತಾದ್ ವಾಗುರಾವೃತಮ್ |
ಬಾಹುಭ್ಯಾಂ ಸಂಪರಿಷ್ವಕ್ತಃ ಸ್ತ್ರಿಯಾ ಪರಮಘೋರಯಾ ॥8॥
ಅನಂತರದಲ್ಲಿ ಅಗಮ್ಯವಾದ ವನವು ಸುತ್ತಲೂ ಬಲೆಯಿಂದ ಆವೃತವಾದದ್ದನ್ನು ಕಂಡನು. ಭಾರೀ ಭಯಂಕರಳಾದ ನಾರಿಯೋರ್ವಳು ತನ್ನ ಕರಗಳಿಂದ ಬಲೆಯಿಂದ ಅರಣ್ಯವನ್ನು ಆವರಿಸುತ್ತಿದ್ದಳು.
ಪಂಚಶೀರ್ಷಧರೈರ್ನಾಗೈಃ ಶೈಲೈರಿವ ಸಮುನ್ನತೈಃ |
ನಭಸ್ಪೃಶೈರ್ಮಹಾವೃಕ್ಷೈಃ ಪರಿಕ್ಷಿಪ್ತಂ ಮಹಾವನಮ್ ॥9॥
ಮತ್ತೆ ಐದುಹೆಡೆಯ ನಾಗಗಳಿಂದ, ಬೆಟ್ಟದಂತೆ ಅತಿ ಎತ್ತರವಾಗಿರುವ ಗಗನವನ್ನೇ ಮುಟ್ಟುತ್ತಿರುವ ಮಹಾವೃಕ್ಷಗಳಿಂದ ಆವೃತವಾದ ವನವನ್ನು ಕಂಡನು.
ವನಮಧ್ಯೇ ಚ ತತ್ರಾಭೂದ್ ಉದಪಾನಃ ಸಮಾವೃತಃ |
ವಲ್ಲೀಭಿಸ್ತೃಣನದ್ಧಾಭಿರ್ಗೂಢಾಭಿರಭಿಸಂವೃತಃ ॥10॥
ಆ ಕಾಡಿನ ಮಧ್ಯದಲ್ಲಿ ಬಳ್ಳಿಗಳಿಂದ ಹುಲ್ಲಿನಿಂದ ಆವೃತವಾಗಿ ಮುಚ್ಚಿಹೋದ ಬಾವಿಯೊಂದು ಇದ್ದಿತ್ತು.
ಪಪಾತ ಸ ದ್ವಿಜಸ್ತತ್ರ ನಿಗೂಢೇ ಸಲಿಲಾಶಯೇ |
ವಿಲಗ್ನಶ್ಚಾಭವತ್ ತಸ್ಮಿನ್ ಲತಾಸಂತಾನಸಂಕುಲೇ ॥11॥
ಆ ಬ್ರಾಹ್ಮಣನು ಮುಚ್ಚಿದ ನೀರಿನ ಆಶ್ರಯವಾದ ಬಾವಿಯಲ್ಲಿ ಬಿದ್ದನು, ಅಲ್ಲಿ ಬಳ್ಳಿಗಳ ಪೊದೆಗಳ ಸಮೂಹದಲ್ಲಿ ನೇತಾಡಿದನು.
ಪನಸಸ್ಯ ಯಥಾ ಜಾತಂ ವೃಂತಬದ್ಧಂ ಮಹಾಫಲಮ್ |
ಸ ತಥಾ ಲಂಬತೇ ತತ್ರ ಊರ್ಧ್ವಪಾದೋ ಹ್ಯಧಃಶಿರಾಃ ॥12॥
ಹೇಗೆ ಹಲಸಿನ ದೊಡ್ಡಹಣ್ಣು ತೊಟ್ಟನ್ನಾಶ್ರಯಿಸಿಕೊಂಡು ನೇತಾಡುವುದೊ, ಹಾಗೆಯೇ ಆತನು ತಲೆ ಕೆಳಗಾಗಿ ಕಾಲುಗಳು ಮೇಲಾಗಿ ಅಲ್ಲಿ ನೇತಾಡಿದನು.
ತಥಾ ತತ್ರೈವ ಚಾಯಾತೋ ದಂತೀ ದಲಿತಪರ್ವತಃ |
ಕೂಪವೀನಾಹವೇಲಾಯಾಮ್ ಅಪಶ್ಯತ ಮಹಾಗಜಮ್ ॥13॥
ಹಾಗೆಯೇ ಅಲ್ಲಿಗೆ ಬಂದ ಪರ್ವತವನ್ನು ಸೀಳುವಂಥದ ದಂತಗಳನ್ನು ಹೊಂದಿರುವ ಮಹಾಗಜವನ್ನು ಬಾವಿಯ ಅತಿ ಸಮೀಪದಲ್ಲಿ ಕಂಡನು.
ಷಡ್ವಕ್ತ್ರಂ ಕೃಷ್ಣಶಬಲಂ ದ್ವಿಷಟ್ಪದಚಾರಿಣಮ್ |
ಕ್ರಮೇಣ ಪರಿಸರ್ಪಂತಂ ವಲ್ಲೀವೃಕ್ಷಸಮಾವೃತಮ್ |
ಕೂಪಮಧ್ಯೇ ಮಹಾನಾಗಮಪಶ್ಯತ ಮಹಾಬಲಮ್ ॥14॥
ಆನೆಗೆ ಆರು ಮುಖಗಳು, ಶಬಲ ಮತ್ತು ಕಪ್ಪುಬಣ್ಣಗಳಿಂದ ಕೂಡಿದೆ, ಹನ್ನೆರಡು ಕಾಲುಗಳಿಂದ ಚಲಿಸುವುದು, ಕ್ರಮವಾಗಿ ಬಳ್ಳಿಗಳಿಂದ ಆವೃತವಾದ ಬಾವಿಯ ಬಳಿಗೆ ಆಗಮಿಸುತ್ತಿದೆ. ಮತ್ತೆ ಬಾವಿಯ ಮಧ್ಯದಲ್ಲಿ ಬಲಿಷ್ಟವಾದ ಒಂದು ದೊಡ್ಡ ಸರ್ಪವನ್ನು ಕಂಡನು.
ತಸ್ಯ ಶಾಖಾಪ್ರಶಾಖಾಸು ವೃಕ್ಷಶಾಖಾಪ್ರಲಂಬಿನಃ |
ನಾನಾವರ್ಣಾ ಮಧುಕರಾ ಘೋರರೂಪಾ ಭಯಾವಹಾಃ ॥15॥
ಆಸತೇ ಮಧು ಸಂಹೃತ್ಯ ಪೂರ್ವಮೇವ ನಿಕೇತಜಾಃ ॥16॥
ಭಯಂಕರಗಳಾದ ಘೋರ ಆಕಾರಗಳನ್ನು ಹೊಂದಿರುವ ನಾನಾಬಣ್ಣದ ಜೇನುನೊಣಗಳು, ಆ ಬಾವಿಯ ಬಳಿಯಿರುವ ವೃಕ್ಷದ ಕೊಂಬೆ ಕವಲು ಟಿಸಿಲುಗಳಲ್ಲಿ ಈ ಮೊದಲೇ ಗೂಡುಕಟ್ಟಿಕೊಂಡು ಜೇನನ್ನು ಹೀರುತ್ತಾ ಇದ್ದವು.
ಭೂಯೋ ಭೂಯಃ ಸಮೀಹಂತೇ ಮಧೂನಿ ಭರತರ್ಷಭ |
ಸ್ವಾದೂನಿ ಯಾನಿ ಭೂತಾನಿ ಯೈರ್ಬಾಹೋರ್ನ ವಿತೃಪ್ಯತೇ ॥17॥

ಭರತ ಶ್ರೇಷ್ಠನೆ! ಪ್ರಾಣಿಗಳಿಗೆ ಯಾವುದು ಅತ್ಯಂತ ರುಚಿಕರವೋ, ಬಾಲಕರು ಯಾವುದರಿಂದ ತೃಪ್ತಿಯನ್ನು ಹೊಂದುವದಿಲ್ಲವೊ, ಅಂತಹ ಜೇನನ್ನು ಆ ದುಂಬಿಗಳು ಮತ್ತೆ ಮತ್ತೆ ಹೀರುತ್ತಿದ್ದವು.
ತೇಷಾಂ ಮಧೂನಾಂ ವಿವಿಧಾ ಧಾರಾ ಪ್ರಸ್ರವತೇ ಸದಾ |
ತಾಂ ಲಂಬಮಾನಃ ಸ ಪುಮಾನ್ ಧಾರಾಂ ಪಿಬತಿ ಸರ್ವದಾ ॥18॥
ಆ ಜೇನುತುಪ್ಪವು ಅನೇಕ ಧಾರೆಗಳಾಗಿ ನಿರಂತರವಾಗಿ ಸೋರುತ್ತಿತ್ತು, ನೇತಾಡುತ್ತಿದ್ದ ಆ ಪುರುಷನು ಆ ಜೇನಿನ ಧಾರೆಯನ್ನು ಹೀರುತ್ತಿದ್ದನು.
ನ ಚಾಸ್ಯ ತೃಷ್ಣಾ ವಿರತಾ ಪಿಬಮಾನಸ್ಯ ಸಂಕಟೇ |
ಅಭೀಪ್ಸತಿ ಚ ತಾಂ ನಿತ್ಯಮತೃಪ್ತಶ್ಚ ಪುನಃ ಪುನಃ ॥19॥
ಅಂತಹ ಸಂಕಟದಲ್ಲಿದ್ದರೂ (ಜೇನನ್ನು) ಪಾನ ಮಾಡುತ್ತಿರುವ ಆತನಿಗೆ ಪಾನ ಮಾಡುವದರಲ್ಲಿ ವೈರಾಗ್ಯವು ಬರಲಿಲ್ಲ. ತೃಪ್ತನಾಗದ ಆತನು ನಿರಂತರವಾಗಿ ಮತ್ತೆ ಮತ್ತೆ ಆ ಜೇನನ್ನು ಬಯಸುತ್ತಿದ್ದನು.
ನ ಚಾಸ್ಯ ಜೀವಿತೇ ರಾಜನ್ ನಿರ್ವೇದಃ ಸಮಜಾಯತ |
ತತ್ರೈವ ಚ ಮನುಷ್ಯಸ್ಯ ಜೀವಿತಾಶಾ ಪ್ರತಿಷ್ಠಿತಾ ॥20॥
ರಾಜನೆ! ಆತನಿಗೆ ಬಾಳಿನಲ್ಲಿ ವೈರಾಗ್ಯವು ಬರಲಿಲ್ಲ. ಅಂತಹ ಅವಸ್ಥೆಯಲ್ಲೂ ಬದುಕಬೇಕೆಂಬ ಆಸೆಯು ಗಾಢವಾಗಿದ್ದಿತು.
ಕೃಷ್ಣಾಃ ಶ್ವೇತಾಶ್ಚ ತಂ ವೃಕ್ಷಂ ನಿಕೃಂತಂತಿ ಸ್ಮ ಮೂಷಿಕಾಃ |
ವ್ಯಾಲೈಶ್ಚ ತದ್ ವನಂ ದುರ್ಗಂ ಸ್ತ್ರಿಯಾ ಚ ಪರಮೋಗ್ರಯಾ ॥21॥
ಆ ಮರವನ್ನು ಕರೀಬಣ್ಣದ ಮತ್ತು ಬಿಳೀಬಣ್ಣದ ಇಲಿಗಳು ಕತ್ತರಿಸುತ್ತಿದ್ದವು. ಅಗಮ್ಯವಾದ ಆ ವನವು ಭಾರೀ ಉಗ್ರಳಾದ ಆ ಹೆಣ್ಣಿನಿಂದ ಮತ್ತು ಬಲೆಯಿಂದಲೂ ಆವೃತವಾಗಿತ್ತು.
ಕೂಪಾಧಸ್ತಾಚ್ಚ ನಾಗೇನ ಪೀನಾಹೇ ಕುಂಜರೇಣ ಚ |
ವೃಕ್ಷಪ್ರಪಾತಾಚ್ಚ ಭಯಂ ಮೂಷಿಕೇಭ್ಯಶ್ಚ ಪಂಚಮಮ್ ॥22॥
ಮಧುಲೋಭಾನ್ಮಧುಕರೈಃ ಷಷ್ಠಮಾಹುರ್ಮಹದ್ಭಯಮ್ |
ಏವಂ ಸಂವಸತೇ ತತ್ರ ಕ್ಷಿಪ್ತಃ ಸಂಸಾರಸಾಗರೇ ॥23॥
ಬಾವಿಯ ಕೆಳಭಾಗದಿಂದ ನಾಗದ ಭಯ, ಬಾವಿಯ ಮೇಲ್ಭಾಗದಿಂದ ಆನೆಯ ಭಯ, ಇಲಿಗಳಿಂದ ಮರವು ಬೀಳುವುದು ಎಂಬ ಐದನೆಯ ಭಯ, ಜೇನಿನ ಆಸೆಯನ್ನು ಹೊಂದಿದ ಜೇನುನೊಣಗಳಿಂದ ಆರನೆಯ ಭಯ, ಈರೀತಿಯಲ್ಲಿ ಸಂಸಾರಸಾಗರದಲ್ಲಿ ಬಿದ್ದ ಜೀವಿಯು ಸಂಸಾರದಲ್ಲಿ ವಾಸಿಸುವನು. (ಹಿಂದಿನ ಶ್ಲೋಕದಲ್ಲಿ ಹೇಳಿದ ಹಾಗೆ ಮತ್ತು ಆಕೆ ಹೆಣೆಯುತ್ತಿರುವ ಬಲೆಯ ಭಯ ಒಟ್ಟು ಆರು ವಿಧದ ಭಯಗಳು).
ನ ಚೈವ ಜೀವಿತಾಶಾಯಾಂ ನಿರ್ವೇದಮುಪಗಚ್ಛತಿ ॥24॥
(ಹೀಗಿದ್ದರೂ ಆತನಿಗೆ) ವೈರಾಗ್ಯವು ಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೇ ಪಂಚಮೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
ಆರನೆಯ ಅಧ್ಯಾಯ
ಹಿಂದಿನ ಅಧ್ಯಾಯದಲ್ಲಿ ಒಗಟಿನಂತೆ ತಿಳಿಸಿದ ವಿಚಾರಗಳ ಸ್ಪುಟೀಕರಣ.
ಧೃತರಾಷ್ಟ್ರಃ
ಅಹೋ ಖಲು ಮಹದ್ ದುಃಖಂ ಕೃಚ್ಛ್ರಂ ವಾಸಂ ವಸತ್ಯಸೌ |
ಕಥಂ ತತ್ರ ರತಿಸ್ತಸ್ಯ ತುಷ್ಟಿರ್ವಾ ವದತಾಂ ವರ ॥1॥
ಧೃತರಾಷ್ಟ್ರ ಮಾತುಗಾರರಲ್ಲಿ ಹಿರಿಯನೆ! ಆಶ್ಚರ್ಯಕರವಾಗಿದೆ, ಆತನು ಭಾರೀ ದುಃಖವನ್ನು ಅನುಭವಿಸುತ್ತಿರುವನು, ಅತಿ ಕಷ್ಟಸ್ಥಳದಲ್ಲಿ ವಾಸಿಸುತ್ತಿರುವನು, ಆತನಿಗೆ ಅಲ್ಲಿ ಹೇಗೆ ತಾನೆ ಆಸಕ್ತಿಯು ಉಂಟಾಯಿತು, ಸಂತೃಪ್ತಿಯಾದರೂ ಹೇಗೆ ಶಕ್ಯವಾದೀತು?
ಸ ದೇಶಃ ಕ್ವ ನು ಯತ್ರಾಸೌ ವಸತೇ ಧರ್ಮಸಂಕಟೇ |
ಕಥಂ ವಾ ಸ ವಿಮುಚ್ಯೇತ ನರಸ್ತಸ್ಮಾನ್ಮಹಾಭಯಾತ್ ॥2॥
ಆತನು ಧರ್ಮಸಂಕಟದಲ್ಲಿ ಸಿಲುಕಿ ವಾಸಿಸುತ್ತಿರುವ ಆ ದೇಶವು ಯಾವುದು? ಮಹಾ ಭಯದಲ್ಲಿ ಸಿಲುಕಿರುವ ಆ ಮನುಷ್ಯನು ಹೇಗೆ ಪಾರಾಗಬಹುದು?
ಏತದ್ವೈ ಸರ್ವಮಾಚಕ್ಷ್ವ ಸಾಧು ಚೇಷ್ಟಾಮಹೇ ತಥಾ |
ತಥಾ ಕೃಪಾ ಮೇ ಮಹತೀ ಜಾತಾ ಹ್ಯುದ್ಧರಣೇನ ಚ ॥3॥
ಈ ಎಲ್ಲವನ್ನೂ ಹೇಳು, ನನಗೆ ಆತನ ವಿಷಯವಾಗಿ ದಯೆಯು ಉಂಟಾಗಿದೆ, ಆತನ ಉದ್ಧಾರಕ್ಕಾಗಿ ನಾನು ಏನಾದರು ಪ್ರಯತ್ನಿಸಬೇಕೆ?
ವಿದುರಃ
ಉಪಾಖ್ಯಾನಮಿದಂ ರಾಜನ್ ಮೋಕ್ಷವಿದ್ಭಿರುದಾಹೃತಮ್ |
ಸುಗತಿಂ ವಿಂದತೇ ಯೇನ ಪರಲೋಕೇಷು ಮಾನವಃ ॥4॥
ವಿದುರ ರಾಜನೇ, ಈ ಉಪಾಖ್ಯಾನವನ್ನು ಮೋಕ್ಷಜ್ಞರು ಉಪದೇಶಿಸಿರುತ್ತಾರೆ. ಯಾವ ಮನುಷ್ಯನು ಯಥಾರ್ಥವಾಗಿ ತಿಳಿಯುವನೋ

ಆತನು ಪರಗತಿಯನ್ನು ಹೊಂದುವನು.
ಯತ್ ತದುಚ್ಯೇತ ಕಾಂತಾರಂ ಮಹತ್ ಸಂಸಾರ ಏವ ಸಃ |
ಯತ್ರ ದುರ್ಗಂ ಹಿ ಯತ್ರೈತತ್ ಸಂಸಾರಗಹನಂ ಹಿ ತತ್ ॥5॥
ಕಗ್ಗಾಡು ಎಂದು ಯಾವದನ್ನು ಹೇಳಲಾಯಿತೋ ಅದೇ ಸಂಸಾರ, ಅಗಮ್ಯ ಎಂದು ಯಾವುದನ್ನು ತಿಳಿಸಲಾಗಿದೆಯೋ ಅದೇ ಈ ಬಹು ಗಂಭೀರವಾದ ಸಂಸಾರ ಎಂದು ಹೇಳಲಾಗಿದೆ.
ಯೇ ಚೈವ ಪ್ರಥಿತಾ ವ್ಯಾಲಾ ವ್ಯಾಧಯಸ್ತೇ ಪ್ರಕೀರ್ತಿತಾಃ ॥6॥
ವಿಷಸರ್ಪ ಎಂದು ಹೇಳಲಾಗಿದೆಯೋ ಅವೇ ರೋಗ ರುಜಿನಗಳು.
ಯಾ ಸಾ ನಾರೀ ಬೃಹತ್ಕಾಯಾ ಅಧಿತಿಷ್ಠತಿ ತತ್ರ ವೈ |
ತಾಮಾಹುಸ್ತು ಜರಾಂ ಪ್ರಾಜ್ಞಾ ವರ್ಣರೂಪವಿನಾಶಿನೀಮ್ ॥7॥
ಅಲ್ಲಿ ದೊಡ್ಡಶರೀರದ ಹೆಣ್ಣು ನಿಂತಿರುವಳು ಎಂದು ಹೇಳಲಾಗಿದ್ದು, ಆಕೆಯನ್ನು ಜ್ಞಾನಿಗಳು ಬಣ್ಣ, ರೂಪಗಳನ್ನು ವಿರೂಪಗೊಳಿಸುವ ಮುಪ್ಪು ಎಂದು ತಿಳಿಯುವರು.
ಸ ಯಸ್ತು ಕೂಪೋ ನೃಪತೇ ಸ ತು ದೇಹಃ ಶರೀರಿಣಾಮ್ ॥8॥
ರಾಜನ್! ಯಾವುದು ಬಾವಿ ಎಂದು ತಿಳಿಸಲಾಗಿದೆಯೋ ಅದು ಜೀವಿಗಳ ಶರೀರ ಎಂದು ತಿಳಿಯುವುದು.
ಯಸ್ತತ್ರ ವಸತೇಽಧಸ್ತಾನ್ಮಹಾಹಿಃ ಕಾಲ ಏವ ಸಃ |
ಅಂತಕಃ ಸರ್ವಭೂತಾನಾಂ ದೇಹಿನಾಂ ಪ್ರಾಣಹಾರ್ಯಸೌ ॥9॥
ಆ ಬಾವಿಯಲ್ಲಿ ಕೆಳಭಾಗದಲ್ಲಿ ವಾಸಿಸುವ ಮಹಾಸರ್ಪವು ಎಲ್ಲ ಪ್ರಾಣಿಗಳ ನಾಶಕ ಮತ್ತು ಜೀವಿಗಳ ಪ್ರಾಣಹಾರಕವಾದ ಕಾಲ ಎಂದು ತಿಳಿಯುವುದು.
ಕೂಪಮಧ್ಯೇ ಚ ಯಾ ಜಾತಾ ವಲ್ಲೀ ಯತ್ರ ಸ ಮಾನವಃ |
ಪ್ರತಾನೇ ಲಂಬತೇ ಲಗ್ನೋ ಜೀವಿತಾಶಾ ಶರೀರಿಣಾಮ್ ॥10॥
ಬಾವಿಯ ಮಧ್ಯದಲ್ಲಿ ಉತ್ಪನ್ನವಾದ ಬಳ್ಳಿ, ಆ ಬಳ್ಳಿಯ ಜೋಕಾಲಿಯಲ್ಲಿ ನೇತಾಡುತ್ತಿರುವ ಆ ಮಾನವ ಎಂದರೆ ಜೀವಿಗಳ ಬದುಕಬೇಕೆಂಬ ಬಲವಾದ ಆಸೆ ಎಂದು ತಿಳಿಯುವುದು.
ಸ ಯಸ್ತು ಕೂಪಪೀನಾಹೇ ವೃಕ್ಷಂ ವಿಪರಿಸರ್ಪತಿ |
ಷಡ್ವಕ್ತ್ರಃ ಕುಂಜರೋ ರಾಜನ್ ಸ ತು ಸಂವತ್ಸರಃ ಸ್ಮೃತಃ ॥11॥
ರಾಜನ್! ಬಾವಿಯ ಸಮೀಪದಲ್ಲಿರುವ ವೃಕ್ಷವನ್ನು ಸಮೀಪಿಸುತ್ತಿರುವ ಆರು ಮುಖದ ಆನೆಯನ್ನೇ ಸಂವತ್ಸರ ಎಂದು ತಿಳಿಯುವುದು.
ಷಣ್ಮುಖಾ ಋತವೋ ಮಾಸಾಃ ಪಾದಾ ದ್ವಾದಶ ಕೀರ್ತಿತಾಃ ॥12॥
ಆ ಆನೆಯ ಆರು ಮುಖ- ಋತುಗಳು, ಹನ್ನೆರಡು ಕಾಲುಗಳು- ಮಾಸಗಳು ಎಂದು ತಿಳಿಯುವುದು.
ಯೇ ತು ವೃಕ್ಷಂ ನಿಕೃಂತಂತಿ ಮೂಷಿಕಾಃ ಪತಗಾಸ್ತಥಾ |
ರಾತ್ರ್ಯಹನಿ ಚ ತಾನ್ ಪ್ರಾಹುಃ ಭೂತಾನಾಂ ಪರಿಚಿಂತಕಾಃ ॥13॥
ಯಾವುದು ವೃಕ್ಷವನ್ನು ಕತ್ತರಿಸುತ್ತಿರುವ ಇಲಿಗಳು ಹಾಗೂ ಹಕ್ಕಿಗಳು, ಅವುಗಳನ್ನು ರಾತ್ರಿ-ಹಗಲು ಎಂದು ತತ್ವಚಿಂತಕರು ಹೇಳುವರು.
ಯೇ ತೇ ಮಧುಕರಾಸ್ತತ್ರ ಕಾಮಾಸ್ತೇ ಪರಿಕೀರ್ತಿತಾಃ ॥14॥
ಯಾವುದು ಜೇನುನೊಣಗಳು ಎಂದು ಹೇಳಲಾಯಿತೋ ಅವು ಕಾಮನೆಗಳು ಎಂದು ಹೇಳಲಾಗಿದೆ.
ಯಾಸ್ತು ತಾ ಬಹುಶೋ ಧಾರಾಃ ಸ್ರವಂತಿ ಬಹುವಿಸ್ತ್ರರಮ್ |
ತಾಂಸ್ತು ಕಾಮರಸಾನ್ ವಿದ್ಯಾದ್ ಯತ್ರ ಸಜ್ಜಂತಿ ಮಾನವಾಃ ॥15॥
ಯಾವುದನ್ನು ಜೇನಿನ ಬಹುಧಾರೆಗಳು ಸುರಿಯುತ್ತಿತ್ತು ಎಂದು ಹೇಳಲಾಯಿತೋ ಅದು ಕಾಮರಸಗಳು (ವಿಷಯ ಜನ್ಯಭೋಗ) ಎಂದು ತಿಳಿಯುವುದು, ಅವುಗಳಲ್ಲಿ ಜನರು ಆಸಕ್ತರಾಗಿರುವರು.
ಏವಂ ಸಂಸಾರಚಕ್ರಸ್ಯ ಪರಿವೃತ್ತಿಂ ವಿದುರ್ಬುಧಾಃ |
ಯೇನ ಸಂಸಾರಚಕ್ರಸ್ಯ ಪಾಶಂ ಛಿಂದಂತಿ ವೈ ಬುಧಾಃ ॥16॥
ಈ ರೀತಿಯಾಗಿ ಸಂಸಾರಚಕ್ರದ ಪರಿವರ್ತನೆಯನ್ನು ಜ್ಞಾನಿಗಳು ತಿಳಿದಿರುವರು. ಯಾವ ಅರಿವಿನಿಂದ ಸಂಸಾರಚಕ್ರದ ಬಂಧವು ಕತ್ತರಿಸಲಾಗುವುದೋ (ಅದನ್ನು) ಜ್ಞಾನಿಗಳು (ತಿಳಿದಿರುವರು) .
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೇ ಷಷ್ಠೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ವಿದುರನು ಧೃತರಾಷ್ಟ್ರನಿಗೆ ತತ್ವಗಳನ್ನು ಉಪದೇಶಿಸಿದನು.
ಧೃತರಾಷ್ಟ್ರಃ
ಅಹೋಽಭಿಹಿತಮಾಖ್ಯಾನಂ ಭವತಾ ತತ್ತ್ವದರ್ಶಿನಾ |
ಭೂಯ ಏವ ಮಹಾಪ್ರಾಜ್ಞ ಶ್ರೋಷ್ಯೇ ವಾಗಮೃತಂ ತವ ॥1॥
ಧೃತರಾಷ್ಟ್ರ ಮಹಾಮೇಧಾವಿಯೆ! ತತ್ವದರ್ಶಿಯಾದ ನೀನು ಆಖ್ಯಾನವನ್ನು ತಿಳಿಸಿದಿ. ಆಶ್ಚರ್ಯ, ನಿನ್ನ ಮಾತೆಂಬ ಅಮೃತವನ್ನು

ಮತ್ತೂ ಕೇಳಲು ಇಚ್ಛೆಯಾಗಿದೆ.
ವಿದುರಃ
ಶೃಣು ಭೂಯಃ ಪ್ರವಕ್ಷ್ಯಾಮಿ ಮಾರ್ಗಸ್ಯೈತಸ್ಯ ವಿಸ್ತರಮ್ |
ಯಚ್ಛ್ರುತ್ವಾ ವಿಪ್ರಮುಚ್ಯಂತೇ ಸಂಸಾರಾದ್ವಿ ವಿಚಕ್ಷಣಾಃ ||2||
ವಿದುರ ಯಾವುದನ್ನು ಕೇಳುವುದರಿಂದ ಜ್ಞಾನಿಗಳು ಮುಕ್ತರಾಗುವರೋ, ಅಂಥ ಸಂಸಾರಮಾರ್ಗವನ್ನು ಇನ್ನೂ ವಿಸ್ತಾರವಾಗಿ ತಿಳಿಸುವೆನು, ಕೇಳು.
ಯಥಾ ತು ಪುರುಷೋ ರಾಜನ್ ದೀರ್ಘಮಧ್ವಾನಮಾಸ್ಥಿತಃ |
ಕ್ವಚಿತ್ ಕ್ವಚಿಚ್ಛ್ರಮಾಚ್ಛ್ರಾಂತಃ ಕುರುತೇ ವಾಸಮೇವ ವಾ ||3||
ಏವಂ ಸಂಸಾರಪರ್ಯಾಯೇ ಗರ್ಭವಾಸೇಷು ಭಾರತ |
ಕುರ್ವಂತಿ ದುರ್ಬುಧಾ ವಾಸಂ ಮುಚ್ಯಂತೇ ತತ್ರ ಪಂಡಿತಾಃ ||4||
ರಾಜನ್! ಹೇಗೆ ಪುರುಷನು ಬಲುದೂರದ ಹಾದಿಯಲ್ಲಿ ಸಾಗುವಾಗ, ಆಯಾಸದಿಂದ ಬಳಲಿದಾಗ ಅಲ್ಲಲ್ಲಿ ತಂಗುವನೋ, ಹಾಗೆ ಭರತಕುಲೋತ್ಪನ್ನನೇ! ಸಂಸಾರದಲ್ಲಿ ಸುತ್ತುವವನು ಗರ್ಭಗಳಲ್ಲಿ ವಾಸಿಸುವನು. ಅಜ್ಞರು ಮಾತ್ರ ಹೀಗೆ ವಾಸಿಸುವರು. ಜ್ಞಾನಿಗಳು (ಈ ಸಂಸಾರ ಚಕ್ರದಿಂದ) ಮುಕ್ತರಾಗುವರು.
ತಸ್ಮಾದಧ್ವಾನಮೇವೈತತ್ ಆಹುಃ ಶಾಸ್ತ್ರವಿದೋ ಜನಾಃ ||5||
ಯತ್ ತತ್ ಸಂಸಾರಗಹನಂ ವನಮಾಹುರ್ಮನೀಷಿಣಃ |
ಸೋಽಯಂ ಲೋಕೇ ಸಮಾವರ್ತೋ ಮರ್ತ್ಯಾನಾಂ ಭರತರ್ಷಭ ||6||
ಚರಾಣಾಂ ಸ್ಥಾವರಾಣಾಂ ಚ ಗೃಧ್ಯೇತ್ ತತ್ರ ನ ಪಂಡಿತಃ ||7||
ಆದ್ದರಿಂದ ಶಾಸ್ತ್ರವನ್ನು ತಿಳಿದವರು ಇದನ್ನು ( ಸಂಸಾರವನ್ನು) ಮಾರ್ಗ ಎಂದು ಹೇಳುವರು. `ಯಾವ ಇದನ್ನು ಸಂಸಾರವನ್ನು ಆಳವಾದದ್ದು, ಕಗ್ಗಾಡು' ಎಂದು ಜ್ಞಾನಿಗಳು ಹೇಳುವರು. ಭರತಕುಲಶ್ರೇಷ್ಠನೇ! ಲೋಕದಲ್ಲಿ (ಸಾಮಾನ್ಯ) ಜೀವಿಗಳಿಗೆ ಆ ಈ ಯಾವ ಸಂಸಾರವು ಚಕ್ರವಾಗಿದೆ, ಪಂಡಿತನು ಈ ಸ್ಥಿರ-ಜಂಗಮಾತ್ಮಕ ಸಂಸಾರವನ್ನು ಇಚ್ಛಿಸುವದಿಲ್ಲ.
ಶಾರೀರಾ ಮಾನಸಾಶ್ಚೈವ ಮರ್ತ್ಯಾನಾಂ ವ್ಯಾಧಯಸ್ತು ಯೇ |
ಪ್ರತ್ಯಕ್ಷಾಶ್ಚ ಪರೋಕ್ಷಾಶ್ಚ ತೇ ವ್ಯಾಲಾಃ ಕಥಿತಾ ಬುಧೈಃ ||8||
ಶಾರೀರಿಕವಾದ ಮತ್ತು ಮಾನಸಿಕವಾದ ಕಾಣುವ, ಕಾಣದ ಯಾವ ವ್ಯಾಧಿಗಳು ಮನುಷ್ಯರಿಗಿವೆಯೋ ಅವುಗಳನ್ನೇ ವಿಷಸರ್ಪ ಎಂದು ಜ್ಞಾನಿಗಳು ಹೇಳುವರು.
ಕ್ಲಿಶ್ಯಮಾನಾಶ್ಚ ಯೇ ನಿತ್ಯಂ ವಾರ್ಯಮಾಣಾಶ್ಚ ಭಾರತ |
ಸ್ವಕರ್ಮಭಿರ್ಮಹಾವ್ಯಾಳೈಃ ನೋದ್ವಿಜಂತ್ಯಲ್ಪಬುದ್ಧಯಃ ||9||
ಭರತಕುಲೋತ್ಪನ್ನನೇ! ತಮ್ಮ ಕರ್ಮ ಎಂಬ ಮಹಾಸರ್ಪಗಳಿಂದ ನಿತ್ಯ ದುಃಖಕ್ಕೆ ಈಡಾಗುವರು ಮತ್ತು (ಅನೇಕ ಬಾರಿ ಅನೇಕ ವಿಧವಾದ) ಅಡೆ-ತಡೆಗಳಿಗೆ ಒಳಗಾಗುವರು, ಹೀಗಾದರೂ ಮೂಢರು (ಈ ಸಂಸಾರಸರ್ಪದಿಂದ) ಉದ್ವೇಗಕ್ಕೆ ಒಳಗಾಗರು. ( ಈ ಸಂಸಾರದಲ್ಲಿ ವಿರಕ್ತಿಯನ್ನು ಹೊಂದಲಾರರು ಎಂದು ಭಾವ.)
ಅಥಾಪಿ ತೈರ್ವಿಮುಚ್ಯೇತ ವ್ಯಾಧಿಭಿಃ ಪುರುಷೋ ನೃಪ |
ಆವೃಣೋತ್ಯೇವ ತಂ ಪಶ್ಚಾಜ್ಜರಾ ರೂಪವಿನಾಶಿನೀ ||10||
ರಾಜನೇ! ಆ ವ್ಯಾಧಿಗಳಿಂದ ಮನುಜನು ಹೇಗಾದರೂ ಮುಕ್ತನಾಗನು, ಆದರೆ ಅನಂತರದಲ್ಲಿ ರೂಪವನ್ನು ನಾಶಗೊಳಿಸುವ ಮುಪ್ಪು ಆತನನ್ನು ಆಕ್ರಮಿಸುವುದು ನಿಶ್ಚಯ.
ಶಬ್ದರೂಪರಸಸ್ಪರ್ಶಗಂಧೈಶ್ಚ ವಿವಿಧೈರಪಿ |
ಮಜ್ಜಮಾನಂ ಮಹಾಪಂಕೇ ನಿರಾಲಂಬೇ ಸಮಂತತಃ ||11||
ಸಂವತ್ಸರರ್ತವೋ ಮಾಸಾಃ ಪಕ್ಷಾಹೋರಾತ್ರಿಸಂಧಯಃ |
ಕ್ರಮೇಣಾಸ್ಯ ಪ್ರಮಾರ್ಜಂತಿ ರೂಪಮಾಯುಸ್ತಥೈವ ಚ ||12||
ವಿವಿಧವಾದ ಶಬ್ದ, ರೂಪ, ರಸ, ಸ್ಪರ್ಶ, ಗಂಧಗಳಿಂದ ಕೂಡಿರುವ ಬಹು ಆಳವಾದ (ಸಂಸಾರವೆಂಬ) ದೊಡ್ಡ ಕೆಸರಿನ ಗುಂಡಿಯಲ್ಲಿ ಮುಳುಗುವವನು, ಅತನ ರೂಪವನ್ನು ಮತ್ತು ಆಯುವನ್ನು ವರ್ಷಗಳು ತಿಂಗಳುಗಳು ಪಕ್ಷಗಳು ಹಗಲು ರಾತ್ರಿಗಳು ಸಂಧ್ಯೆಗಳು ಕ್ರಮವಾಗಿ ನಾಶಗೊಳಿಸುವವು.
ಏತೇ ಕಾಲಸ್ಯ ವಿಧಯೋ ನೈನಂ ಜಾನಂತಿ ದುರ್ಬುಧಾಃ ||13||
ಅಜ್ಞರು ಕಾಲದ ಈ ಪರಿಗಳನ್ನು ತಿಳಿಯಲಾರರು.
ಧಾತ್ರಾಭಿಲಿಖಿತಾನ್ಯಾಹುಃ ಸರ್ವಭೂತಾನಿ ಕರ್ಮಣಾ ||14||
ಬ್ರಹ್ಮನು ಎಲ್ಲ ಜೀವರ ಕರ್ಮಾನುಸಾರಿಯಾಗಿ ಬರೆಯುವನು ಎಂದು ಹೇಳುವರು.
ರಥಃ ಶರೀರಂ ಭೂತಾನಾಂ ಸತ್ತ್ವಮಾಹುಸ್ತು ಸಾರಥಿಮ್ |
ಇಂದ್ರಿಯಾಣಿ ಹಯಾನಾಹುಃ ಕರ್ಮ ಬುದ್ಧಿಶ್ಚ ರಶ್ಮಯಃ ||15||
ಜೀವಿಗಳ ಶರೀರವನ್ನೇ ರಥ ಎಂದು, ಜೀವಿಯನ್ನು ರಥಿಕ ಎಂದು, ಇಂದ್ರಿಯಗಳನ್ನು ಕುದುರೆ ಎಂದು, ಬುದ್ಧಿ ಮತ್ತು ಕರ್ಮಗಳನ್ನು ಲಗಾಮು ಎಂದು ಹೇಳುವರು.
ತೇಷಾಂ ಹಯಾನಾಂ ಯೋ ವೇಗಂ ಧಾವತಾಮನುಧಾವತಿ |
ನ ಸಂಯಮಯತೇ ಬುದ್ಧ್ಯಾ ಸ ಯಂತಾ ನ ನಿವರ್ತತೇ ||16||

ಯಾವ ನಿಯಾಮಕನು (ಸಾರಥಿಯು) ಆ ಕುದುರೆಗಳ ವೇಗಕ್ಕೆ ಅನುಸಾರವಾಗಿ ಓಡುವನೋ, (ಆ ಕುದುರೆಗಳನ್ನು) ಬುದ್ಧಿಯಿಂದ ನಿಯಂತ್ರಿಸುವುದಿಲ್ಲವೋ ಆತನು ಹಿಂತಿರುಗಲಾರನು (ಈ ಸಂಸಾರಚಕ್ರದಲ್ಲಿಯೇ ಸುತ್ತುವನು ಎಂದು ಭಾವ).
ಯಸ್ತು ಸಂಸಾರಚಕ್ರೇಽಸ್ಮಿನ್ ಚಕ್ರವತ್ ಪರಿವರ್ತತೇ |
ಯಾಮ್ಯಮಾಹೂ ರಥಂ ಹ್ಯೇನಂ ಮುಹ್ಯಂತೇ ಯೇನ ದುರ್ಬುಧಾಃ ||
ಯಾವುದು ಈ ಸಂಸಾರಚಕ್ರದಲ್ಲಿಯೇ ಚಕ್ರದಂತೆ ಸುತ್ತುವುದೊ, ಈ ರಥವನ್ನು ಯಾಮ್ಯರಥ (ಯಮಲೋಕಕ್ಕೆ ಸಾಗುವ ರಥ) ಎಂದು ಕರೆಯುವರು, ಅಜ್ಞರು ಇದರಲ್ಲಿ ಮೋಹಿತರಾಗಿರುವರು.
ಸ ವೈ ತತ್ ಪ್ರಾಪ್ನುಯಾದ್ ರಾಜನ್ ಯತ್ ತ್ವಂ ಪ್ರಾಪ್ತೋ ನರಾಧಿಪ |
ರಾಜ್ಯನಾಶಃ ಸುಹೃನ್ನಾಶಃ ಸುತನಾಶಶ್ಚ ಭಾರತ ||18||
ಭರತಕುಲೋತ್ಪನ್ನನೆ, ಮನುಜಾಧಿಪನೆ! ನೀನು ಏನನ್ನು ಹೊಂದಿದಿಯೋ, ರಾಜ್ಯನಾಶ, ಪುತ್ರನಾಶ ಮತ್ತು ಸ್ನೇಹಿತರ ನಾಶ, ಅದನ್ನು (ರಾಜ್ಯನಾಶಾದಿಗಳನ್ನು) ಆತನು (ಯಾಮ್ಯರಥವನ್ನೇರಿದವನು) ಹೊಂದುವನು.
ಅನುತರ್ಷುಕಮೇವೈತದ್ ದುಃಖಂ ಭವತಿ ಭಾರತ |
ಸಾಧುಃ ಪರಮದುಃಖಾನಾಂ ದುಃಖಭೈಷಜ್ಯಮಾರಭೇತ್ ||19||
ಭರತಕುಲೋತ್ಪನ್ನನೆ! ದುರಾಸೆಯ ಮನುಜನಿಗೆ (ಅನು ತರ್ಷುಕಂ= ಆಸೆಗಳ ಬೆನ್ನಹತ್ತಿ ಸಾಗುವವನು) ಈ ದುಃಖವು ಪ್ರಾಪ್ತವಾಗುವುದು, ಸಜ್ಜನನು ಭಾರೀ ದುಃಖಕ್ಕೆ ದುಃಖ ನಿವಾರಕ ಔಷಧಗಳನ್ನು ಆರಂಭಿಸುವನು.
ಜ್ಞಾನೌಷಧಮವಾಪ್ಯೇಹ ದುರಾವಾಪಂ ಮಹೌಷಧಮ್ |
ಛಿಂದ್ಯಾದ್ ದುಃಖಮಯಂ ವ್ಯಾಧಿಂ ನರಃ ಸಂಯತಮಾನಸಃ ||20||
ಮನವನ್ನು ಹತೋಟಿಯಲ್ಲಿ ಇಟ್ಟುಕೊಂಡ ಮನುಜನು ಇಲ್ಲಿ (ಜೀವನದಲ್ಲಿ) ಕಷ್ಟಪ್ರಾಪ್ಯವಾದ ಮಹಾಔಷಧವಾದ ಜ್ಞಾನವೆಂಬ ಔಷಧವನ್ನು ಹೊಂದಿ, ದುಃಖರೂಪವಾದ ಮಹಾವ್ಯಾಧಿಯನ್ನು ನಾಶಗೊಳಿಸಬೇಕು.
ನ ವಿಕ್ರಮೋ ನ ಚಾಪ್ಯರ್ಥೋ ನ ಮಿತ್ರಂ ನ ಸುಹೃಜ್ಜನಃ |
ತಥಾ ಮೋಚಯತೇ ದುಃಖಾದ್ ಯಥಾತ್ಮಾ ಸ್ಥಿರನಿಶ್ಚಯಃ ||21||
ಸ್ಥಿರಪ್ರಜ್ಞೆಯು ಆತ್ಮನನ್ನು ದುಃಖದಿಂದ ಹೇಗೆ ಸಂರಕ್ಷಿಸುವುದೋ ಹಾಗೆ ಪರಾಕ್ರಮವು ರಕ್ಷಿಸದು, ಹಣವು ರಕ್ಷಿಸದು, ಮಿತ್ರರು ರಕ್ಷಿಸರು, ಆಪ್ತರು ರಕ್ಷಿಸರು.
ತಸ್ಮಾನ್ಮೈತ್ರಂ ಸಮಾಸ್ಥಾಯ ಶೀಲಮಾಪದ್ಯ ಭಾರತ |
ದಮಸ್ತ್ಯಾಗೋಽಪ್ರಮಾದಶ್ಚ ತೇ ತ್ರಯೋ ಬ್ರಹ್ಮಣೋ ಹಯಾಃ ||22||
ಭರತಕುಲೋತ್ಪನ್ನನೆ! ಆದ್ದರಿಂದ (ಎಲ್ಲರಲ್ಲಿಯೂ) ಸ್ನೇಹಭಾವವನ್ನು ಹೊಂದು, ಸಚ್ಚಾರಿತ್ರ್ಯವನ್ನು ಆಶ್ರಯಿಸು, ಇಂದ್ರಿಯನಿಗ್ರಹ, ತ್ಯಾಗ ಅಪ್ರಮಾದ ಈ ಮೂರು ಬ್ರಹ್ಮನ ಕುದುರೆಗಳು.
ಶೀಲರಶ್ಮಿಸಮಾಯುಕ್ತೇ ಸ್ಥಿತೋ ಯೋ ಮಾನಸೇ ರಥೇ |
ತ್ಯಕ್ತ್ವಾ ಮೃತ್ಯುಭಯಂ ರಾಜನ್ ಬ್ರಹ್ಮಲೋಕಂ ಸ ಗಚ್ಛತಿ ||23||
ರಾಜನೆ! ಯಾವನು ಮನಸ್ಸೆಂಬ ರಥದಲ್ಲಿ ಶೀಲ ಎಂಬ ಕುದುರೆಯನ್ನು ಹೂಡಿ ಇರುವನೋ, ಆತನು ಮೃತ್ಯುಭಯವನ್ನು ದಾಟಿ ಬ್ರಹ್ಮಲೋಕಕ್ಕೆ ಸಾಗುವನು.
ಅಭಯಂ ಸರ್ವಭೂತೇಭ್ಯೋ ಯೋ ದದಾತಿ ಮಹೀಪತೇ |
ಸ ಗಚ್ಛತಿ ಪರಂ ಸ್ಥಾನಂ ವಿಷ್ಣೋಃ ಪದಮನಾಮಯಮ್ ||24||
ಭೂಮಿಗೊಡೆಯನೆ! ಎಲ್ಲ ಜೀವಿಗಳಿಗೆ ಅಭಯವನ್ನು (ಆಶ್ರಯವನ್ನು) ಯಾವಾತನು ನೀಡುವನೋ, ಆತನು ದೋಷರಹಿತವಾದ ಶ್ರೇಷ್ಠವಾದ ವಿಷ್ಣುವಿನ ಸ್ಥಾನವನ್ನು ಹೊಂದುವನು.
ನೈತತ್ ಕ್ರತುಸಹಸ್ರೇಣ ನೋಪವಾಸೇನ ನಿತ್ಯಶಃ |
ಅಭಯಸ್ಯ ಹಿ ದಾನೇನ ಯತ್ಫಲಂ ಪ್ರಾಪ್ನುಯಾನ್ನರಃ ||25||
ಮನುಷ್ಯನು ಅಭಯವನ್ನು ನೀಡುವುದರಿಂದ ಯಾವ ಸ್ಥಾನವನ್ನು ಹೊಂದುವನೋ, ಆ ಸ್ಥಾನವನ್ನು ಸಾವಿರ ಯಜ್ಞಗಳನ್ನು ಆಚರಿಸುವುದರಿಂದ ಹೊಂದಲಾರನು, ನಿತ್ಯ ಉಪವಾಸದಿಂದಲೂ ಹೊಂದಲಾರನು.
ನ ಹ್ಯಾತ್ಮನಃ ಪ್ರಿಯತರಂ ಕಿಂಚಿದ್ ಭೂತೇಷು ನಿಶ್ಚಿತಮ್ |
ಅನಿಷ್ಟಂ ಸರ್ವಭೂತಾನಾಂ ಮರಣಂ ನಾಮ ಭಾರತ ||26||
ಭರತಕುಲೋತ್ಪನ್ನನೆ! ಪ್ರಾಣಿಗಳಿಗೆ ಜೀವಕ್ಕಿಂತ ಪ್ರಿಯವಾದದ್ದು ಮತ್ತೊಂದು ಇಲ್ಲ ಎಂದು ನಿಶ್ಚಿತವಾಗಿದೆ, ಎಲ್ಲ ಪ್ರಾಣಿಗಳಿಗೂ ಸಾವು ಎನ್ನುವುದು ಅನಿಷ್ಟ.
ತಸ್ಮಾತ್ ಸರ್ವೇಷು ಭೂತೇಷು ದಯಾ ಕಾರ್ಯಾ ವಿಪಶ್ಚಿತಾ ||27||
ಜ್ಞಾನಿಯಾದವನು ಈ ಕಾರಣದಿಂದ ಎಲ್ಲ ಪ್ರಾಣಿಗಳಲ್ಲಿ ದಯೆಯನ್ನು ಮಾಡಬೇಕು.
ನಾನಾಯೋಗಸಮಾಯುಕ್ತಾ ಬುದ್ಧಿಜಾಲೇನ ಸಂವೃತಾಃ |
ಸುಸೂಕ್ಷ್ಮಮದೃಷ್ಟಯೋ ಧೀರಾ ವ್ರಜಂತಿ ಬ್ರಹ್ಮಸಾಮ್ಯತಾಮ್ ||28||
ವಿವಿಧ ಯೋಗಗಳನ್ನು ಹೊಂದಿದ, ಅನೇಕ ವಿಚಾರಗಳಿಂದ ಕೂಡಿರುವ, ಅತ್ಯಂತ ಸೂಕ್ಷ್ಮ ದೃಷ್ಟಿಯನ್ನು ಹೊಂದಿರುವ ಧೀರರು ಬ್ರಹ್ಮನ ಸಾಮ್ಯವನ್ನು (ತಮ್ಮ ಯೋಗ್ಯತಾನುಸಾರವಾಗಿ ಜ್ಞಾನಾನಂದಗಳನ್ನು) ಹೊಂದುವರು.
ಏವಂ ಜ್ಞಾತ್ವಾ ಮಹಾಪ್ರಾಜ್ಞ ಸ ತೇಷಾಮೌರ್ಧ್ವದೈಹಿಕಮ್ |
ಕರ್ತುಮರ್ಹತಿ ತೇನೈವ ಫಲಂ ಪ್ರಾಪ್ಸ್ಯತಿ ವೈ ಭವಾನ್ ||29||

ಮಹಾಪ್ರಾಜ್ಞನೆ! ಈ ರೀತಿಯಾಗಿ ತಿಳಿದು, ಅವರುಗಳಿಗೆ ಔರ್ಧ್ವದೈಹಿಕ ಕರ್ಮಗಳನ್ನು ಮಾಡುವವನಾಗು, ನೀನು ಅದರಿಂದಲೇ ಫಲವನ್ನು ಹೊಂದುವವನಾಗುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೇ ಸಪ್ತಮೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ವ್ಯಾಸರಿಂದ ಧೃತರಾಷ್ಟ್ರನಿಗೆ ಶೋಕಪರಿಹಾರಕ ಉಪದೇಶ.
ವೈಶಂಪಾಯನಃ
ವಿದುರಸ್ಯ ತು ತದ್ವಾಕ್ಯಂ ನಿಶಮ್ಯ ಕುರುಸತ್ತಮಃ |
ಪುತ್ರಶೋಕಾಭಿಸಂತಪ್ತಃ ಪಪಾತ ಭುವಿ ಮೂರ್ಚ್ಛಿತಃ ॥1॥
ವೈಶಂಪಾಯನ ವಿದುರನ ಆ ಮಾತುಗಳನ್ನು ಕೇಳಿದ ಕುರುಶ್ರೇಷ್ಠನು ಪುತ್ರಶೋಕದಿಂದ ಪರಿತಪ್ತನಾಗಿ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು.
ತಂ ತಥಾ ಪತಿತಂ ಭೂಮೌ ನಿಃಸಂಜ್ಞಂ ಪ್ರೇಕ್ಷ್ಯ ಬಾಂಧವಾಃ |
ಕೃಷ್ಣದ್ವೈಪಾಯನಶ್ಚೈವ ಕ್ಷತ್ತಾ ಚ ವಿದುರಸ್ತಥಾ ॥2॥
ಸಂಜಯಃ ಸುಹೃದಶ್ಚಾನ್ಯೇ ತಥಾ ಯೇ ಚಾಸ್ಯ ಸಮ್ಮತಾಃ ॥3॥
ಜಲೇನ ಸುಖಶೀತೇನ ತಾಲವೃಂತೈಶ್ಚ ಭಾರತ |
ಪಸ್ಪೃಶುಃ ಶನಕೈರ್ಗಾತ್ರಂ ವೀಜಮಾನಾಶ್ಚ ಯತ್ನತಃ ॥4॥
ಅನ್ವಾಸತ ಚಿರಂ ಕಾಲಂ ಧೃತರಾಷ್ಟ್ರಂ ತಥಾವಿಧಮ್ ॥5॥
ಭರತಕುಲೋತ್ಪನ್ನನೇ! ಆ ರೀತಿಯಲ್ಲಿ ಭೂಮಿಯಲ್ಲಿ ಎಚ್ಚರವಿಲ್ಲದೇ ಬಿದ್ದ ಆತನನ್ನು ನೋಡಿ ಬಂಧುಗಳು, ಕೃಷ್ಣದ್ವೈಪಾಯನರು ಹಾಗೂ ಸೂತಪುತ್ರನಾದ ವಿದುರ, ಸಂಜಯ, ಬೇರೆ ಸ್ನೇಹಿತರು ಹಾಗು ಆತನಿಗೆ ಸಂಮತರಾದವರು ಯಾರಿದ್ದರೋ ಅವರು ಹಿತಕಾರಕವಾದ ತಂಪಾದ ನೀರಿನಿಂದ ಸಂಪ್ರೋಕ್ಷಿಸಿದರು, ತಾಳೇಮರದ ಬೀಸಣಿಕೆಯಿಂದ ಯತ್ನಪೂರ್ವಕವಾಗಿ ಬೀಸಿದರು, ನಿಧಾನವಾಗಿ ಮೈದಡವಿದರು, ಆ ರೀತಿಯಲ್ಲಿದ್ದ ಧೃತರಾಷ್ಟ್ರನಿಗೆ ತುಂಬ ಹೊತ್ತಿನವರೆಗೆ ಶೈತ್ಯೋಪಚಾರವನ್ನು ಮಾಡಿದರು.
ಅಥ ದೀರ್ಘಸ್ಯ ಕಾಲಸ್ಯ ಲಬ್ಧಸಂಜ್ಞೋ ಮಹೀಪತಿಃ |
ವಿಲಲಾಪ ಚಿರಂ ಕಾಲಂ ಪುತ್ರಾರ್ತಿಭಿರಭಿಪ್ಲುತಃ ॥6॥
ಅನಂತರದಲ್ಲಿ ತುಂಬ ತಡವಾಗಿ ಎಚ್ಚರಗೊಂಡ ಪುತ್ರಶೋಕದಿಂದ ತುಂಬಿಹೋಗಿರುವ ಭೂಮಿಗೊಡೆಯನು ತುಂಬ ಹೊತ್ತಿನ ಪರ್ಯಂತ ರೋದಿಸಿದನು.
ಧೃತರಾಷ್ಟ್ರಃ
ಧಿಗಸ್ತು ಖಲು ಮಾನುಷ್ಯಂ ಮಾನುಷ್ಯೇ ಚ ಪರಿಗ್ರಹಮ್ |
ಯತೋ ಮೂಲಾನಿ ದುಃಖಾನಿ ಸಂಭವಂತಿ ಪುನಃ ಪುನಃ ॥7॥
ಧೃತರಾಷ್ಟ್ರ ಮನುಷ್ಯತ್ವಕ್ಕೆ ಧಿಕ್ಕಾರವಿರಲಿ, ಅದರಲ್ಲಿಯೂ ದುಃಖಕ್ಕೆ ಮೂಲವಾದ ವಿವಾಹಾದಿ ಬಂಧನಕ್ಕೆ ಧಿಕ್ಕಾರವಿರಲಿ. ಏಕೆಂದರೆ (ಈ ವಿವಾಹಾದಿಗಳೆಂಬ ಸಂಸಾರಬಂಧನವೆ) ದುಃಖದ ಮೂಲವಾಗಿದೆ, ಆದ್ದರಿಂದಲೇ ಮತ್ತೆ ಮತ್ತೆ ದುಃಖಗಳು ಪ್ರಾಪ್ತವಾಗುವವು.
ಮಿತ್ರನಾಶೇಽರ್ಥನಾಶೇ ಚ ಜ್ಞಾತಿಸಂಬಂಧಿನಾಮಪಿ |
ಪ್ರಾಪ್ಯತೇ ಸುಮಹದ್ದುಃಖಂ ವಿಷಾಗ್ನಿಪ್ರತಿಮಂ ವಿಭೋ ॥8॥
ಒಡೆಯನೆ! ಸ್ನೇಹಿತನ ಸಾವುಂಟಾದಲ್ಲಿ, ಹಣದ ನಾಶವಾದಲ್ಲಿ, ಜ್ಞಾತಿ ಸಂಬಂಧಿಗಳ ನಾಶವಾದಲ್ಲಿ, ಮೂರ್ತಿಮತ್ತಾದ ಬೆಂಕಿ ವಿಷಗಳಿಂದ ಪ್ರಾಪ್ತವಾಗುವ ದುಃಖದಂತೆ ಭಾರೀ ದುಃಖವು ಬಂದೊದಗುವುದು.
ಯೇನ ದಹ್ಯಂತಿ ಗಾತ್ರಾಣಿ ಯೇನ ಪ್ರಜ್ಞಾ ವಿನಶ್ಯತಿ |
ಯೇನಾಭಿಭೂತಃ ಪುರುಷೋ ಮರಣಂ ಬಹುಮನ್ಯತೇ ॥9॥
ತದಿದಂ ವ್ಯಸನಂ ಪ್ರಾಪ್ತಂ ಮಯಾ ಭಾಗ್ಯವಿಪರ್ಯಯಾತ್ |
ತಚ್ಚೈವಾಹಂ ಕರಿಷ್ಯಾಮಿ ಅದ್ಯೈವ ದ್ವಿಜಸತ್ತಮ ॥10॥
ಯಾವುದರಿಂದ ದೇಹವು ದಹಿಸುವುದೊ, ಯಾವುದರಿಂದ ನಮ್ಮ ವಿವೇಕವೇ ನಾಶಹೊಂದುವುದೊ, ಯಾವುದನ್ನು ಹೊಂದುವುದರಿಂದ ಮನುಜನು ಮರಣವನ್ನೇ ಒಳಿತು ಎನ್ನುವನೋ, ಆ ವ್ಯಸನವು ನನ್ನ ಅದೃಷ್ಟದ ವ್ಯತ್ಯಯದಿಂದ ಈಗ ಪ್ರಾಪ್ತವಾಗಿದೆ, ಬ್ರಾಹ್ಮಣೋತ್ತಮನೆ (ಕೃಷ್ಣದ್ವೈಪಾಯನರೆ)! ನಾನು ಈಗ ಹಾಗೆಯೇ ಮಾಡುವೆನು (ಸಾವನ್ನು ಹೊಂದುವೆನು).
ವೈಶಂಪಾಯನಃ
ಇತ್ಯುಕ್ತ್ವಾ ಚ ಮಹಾತ್ಮಾನಂ ಪಿತರಂ ಬ್ರಹ್ಮವಿತ್ತಮಮ್ |
ಧೃತರಾಷ್ಟ್ರೋಽಭವನ್ಮೂಢಃ ಶೋಕಂ ಚ ಪರಮಂ ಗತಃ ॥11॥
ವೈಶಂಪಾಯನ ಧೃತರಾಷ್ಟ್ರನು ಈ ರೀತಿಯಾಗಿ ಮಹಾತ್ಮನಾದ ಬ್ರಹ್ಮಜ್ಞಾನಿಯಾದ ತಂದೆಯನ್ನು (ಕೃಷ್ಣದ್ವೈಪಾಯನರನ್ನು) ಉದ್ದೇಶಿಸಿ ಹೇಳಿ, ಏನೂ ತಿಳಿಯದವನಾಗಿ ತುಂಬ ಶೋಕಕ್ಕೆ ಒಳಗಾದನು.
ಅಭೂಚ್ಚ ತೂಷ್ಣೀಂ ರಾಜಾಽಸೌ ಧ್ಯಾಯಮಾನೋ ಮಹೀಪತಿಃ ॥12॥

ಮತ್ತೆ ಭೂಮಿಗೆ ಒಡೆಯನಾದ ರಾಜನು ಚಿಂತಿಸುತ್ತ ಮೌನಿಯಾದನು.
ತಸ್ಯ ತದ್ವಚನಂ ಶ್ರುತ್ವಾ ಕೃಷ್ಣದ್ವೈಪಾಯನಃ ಪ್ರಭುಃ |
ಪುತ್ರಶೋಕಾಭಿಸಂತಪ್ತಂ ಪುತ್ರಂ ವಚನಮಬ್ರವೀತ್ ||13||
ಒಡೆಯರಾದ ಕೃಷ್ಣದ್ವೈಪಾಯನರು ಆತನ ಆ ಮಾತುಗಳನ್ನು ಕೇಳಿ ಮಗನ ಶೋಕದಿಂದ ಪರಿತಪಿಸುತ್ತಿರುವ (ತನ್ನ) ಮಗನನ್ನು ಉದ್ದೇಶಿಸಿ ಮಾತುಗಳನ್ನು ಹೇಳಿದರು.
ವ್ಯಾಸಃ
ಧೃತರಾಷ್ಟ್ರ ಮಹಾಬಾಹೋ ಶೃಣು ವಕ್ಷ್ಯಾಮಿ ಪುತ್ರಕ ||14||
ವ್ಯಾಸರು ನೀಳಬಾಹುವೆ, ಧೃತರಾಷ್ಟ್ರ, ಮಗನೆ! ಹೇಳುವೆನು, ಕೇಳು.
ಶ್ರುತವಾನಸಿ ಮೇಧಾವೀ ಧರ್ಮಾರ್ಥಕುಶಲಃ ಪ್ರಭೋ |
ನ ತೇಽಸ್ತ್ಯವಿದಿತಂ ಕಿಂಚಿದ್ ವೇದಿತವ್ಯಂ ಪರಂತಪ ||15||
ಶತ್ರುವಿಗೆ ದುಃಖದಾಯಕನೆ, ಒಡೆಯನೆ! ಶಾಸ್ತ್ರವನ್ನು ಕೇಳಿದವನಾಗಿರುವಿ, ಮೇಧಾವಿಯಾಗಿರುವಿ, ಧರ್ಮ-ಅರ್ಥಗಳಲ್ಲಿ ಕುಶಲನಾಗಿರುವಿ, ನೀನು ತಿಳಿಯದೇ ಇರುವುದು ಯಾವುದೂ ಇಲ್ಲ, ತಿಳಿಯಬೇಕಾದದ್ದು ಏನೂ ಇಲ್ಲ.
ಅನಿತ್ಯತಾಂ ಹಿ ಭೂತಾನಾಂ ವಿಜಾನಾಸಿ ನ ಸಂಶಯಃ ||16||
ಪ್ರಾಣಿಗಳ ಅನಿತ್ಯತ್ವವನ್ನು ತಿಳಿದವನಾಗಿರುವಿ, ಇದರಲ್ಲಿ ಸಂದೇಹವಿಲ್ಲ.
ಅಧ್ರುವೇ ಜೀವಲೋಕೇಽಸ್ಮಿನ್ ಸ್ಥಾನೇ ವಾ ಶಾಶ್ವತೇ ಸತಿ |
ಜೀವಿತೇ ಮರಣಾಂತೇ ಚ ಕಸ್ಮಾಚ್ಛೋಚಸಿ ಪುತ್ರಕ ||17||
ಈ ಜೀವಿಸಮೂಹವು ಅನಿತ್ಯ, ಶಾಶ್ವತವಾದ ಸ್ಥಾನವು ಬೇರೆಯೇ ಇದೆ, ಬದುಕಿದವಗೆ ಸಾವೇ ಕೊನೆಯದು, ಮಗನೇ! ಯಾವ ಕಾರಣದಿಂದ ಶೋಕಿಸುತ್ತಿರುವಿ?
ಪ್ರತ್ಯಕ್ಷಸ್ತವ ರಾಜೇಂದ್ರ ವೈರಸ್ಯಾಸ್ಯ ಸಮುದ್ಭವಃ |
ಪುತ್ರಂ ತೇ ಕಾರಣಂ ಕೃತ್ವಾ ಕಾಲಯೋಗೇನ ನಿರ್ಮಿತಃ ||18||
ರಾಜರ ಒಡೆಯನೆ! ನಿನ್ನ ಸಮಕ್ಷಮದಲ್ಲಿಯೇ ಈ ದ್ವೇಷವು ಸಮುತ್ಪನ್ನವಾಯಿತು, ನಿನ್ನ ಮಗನನ್ನು ಕಾರಣವನ್ನಾಗಿಸಿಕೊಂಡು ಕಾಲಯೋಗವು (ಈ ದ್ವೇಷವನ್ನು) ನಿರ್ಮಿಸಿತು.
ಅವಶ್ಯಂ ಭವಿತವ್ಯೇ ಚ ಕುರೂಣಾಂ ಸಂಕ್ಷಯೇ ನೃಪ |
ಕಸ್ಮಾಚ್ಛೋಚಸಿ ತಾನ್ ಶೂರಾನ್ ಗತಾನ್ ಪರಮಿಕಾಂ ಗತಿಮ್ ||19||
ರಾಜನೆ! ಕುರುಗಳ ನಾಶವು ಅವಶ್ಯವಾಗಿ ಆಗಲೇ ಬೇಕಿತ್ತು, ಉತ್ತುಮಗತಿಯನ್ನು ಹೊಂದಿರುವ ಆ ಶೂರರನ್ನು ಉದ್ದೇಶಿಸಿ ಏತಕ್ಕಾಗಿ ದುಃಖಿಸುವಿ?
ಜಾನತಾ ಚ ಮಹಾಬಾಹೋ ವಿದುರೇಣ ಮಹಾತ್ಮನಾ |
ಯತಿತಂ ಸರ್ವಯತ್ನೇನ ಶಮಂ ಪ್ರತಿ ನರೇಶ್ವರ ||20||
ನೀಳಬಾಹುವೆ, ಜನರ ಒಡೆಯನೆ! ಮಹಾತ್ಮನಾದ ವಿದುರನು ಎಲ್ಲ ವಿಧದಿಂದಲೂ ಶಾಂತಿಗಾಗಿ ಯತ್ನಿಸಿದನು, ಅದನ್ನು ನೀನೂ ತಿಳಿದಿರುವಿ.
ನ ಚ ದೈವಕೃತೋ ಮಾರ್ಗಃ ಶಕ್ಯೋ ಭೂತೇನ ಕೇನಚಿತ್ |
ಘಟತಾಽಪಿ ಚಿರಂ ಕಾಲಂ ನಿಯಂತುಮಿತಿ ಮೇ ಮತಿಃ ||21||
ಯಾವುದೋ ವ್ಯಕ್ತಿಯಿಂದ ದೀರ್ಘಕಾಲದವರೆಗೆ ತಡೆಯಲು ಯತ್ನಿಸಿದರೂ ಸಹ, ದೈವವು ನಿಶ್ಚಯಿಸಿದ ಮಾರ್ಗವನ್ನು ತಡೆಯಲು ಶಕ್ಯವಿಲ್ಲ ಎನ್ನುವುದು ನನ್ನ ದೃಢನಿರ್ಣಯ.
ದೈವತಾನಾಂ ಹಿ ಯತ್ ಕಾರ್ಯಂ ಮಯಾ ಪ್ರತ್ಯಕ್ಷತಃ ಶ್ರುತಮ್ |
ತತ್ ತೇಽಹಂ ಸಂಪ್ರವಕ್ಷ್ಯಾಮಿ ಕಥಂ ಸ್ಥೈರ್ಯಂ ಭವೇತ್ ತವ ||22||
ದೇವತೆಗಳು ಯಾವುದನ್ನು, ಹೇಗೆ ಮಾಡಬೇಕು ಎನ್ನುವದನ್ನು ನಾನು ಸ್ವತಃ ಕೇಳಿರುವೆನು. ಅದನ್ನು ನಿನಗೆ ನಾನು ಹೇಳುವೆನು, ಆಗ ನಿನಗೆ ಧೈರ್ಯ ಬಂದೀತು.
ಪುರಾಽಹಂ ಸ್ವೇಚ್ಛಯಾ ಯಾತಃ ಸಭಾಮೈಂದ್ರೀಂ ಜಿತಕ್ಲಮಃ |
ಅಪಶ್ಯಂ ತತ್ರ ಚ ಸದಾ ಸಮವೇತಾನ್ ದಿವೌಕಸಃ ||23||
ನಾರದಪ್ರಮುಖಾಂಶ್ಚಾಪಿ ಸರ್ವಾನ್ ದೇವರ್ಷಿಸತ್ತಮಾನ್ ||24||
ಹಿಂದೆ, ಶ್ರಮರಹಿತನಾದ ನಾನು ಸ್ವೇಚ್ಛೆಯಿಂದ ಇಂದ್ರಸಭೆಗೆ ಹೋದೆನು, ಅಲ್ಲಿ ಮಿಲಿತರಾದ ದೇವತೆಗಳನ್ನು, ನಾರದರೆ ಮುಂತಾದ ಎಲ್ಲ ದೇವರ್ಷಿಶ್ರೇಷ್ಠರನ್ನು ಕಂಡೆನು.
ತತ್ರಾಪಿ ಚ ಮಯಾ ದೃಷ್ಟಾ ಪೃಥಿವೀ ಪೃಥಿವೀಪತೇ |
ಕಾರ್ಯಾರ್ಥಮುಪಸಂಪನ್ನಾ ದೇವತಾನಾಂ ಸಮೀಪತಃ ||25||
ಭೂಮಿಯ ಒಡೆಯನೆ! ಅದರಲ್ಲೂ ಸಹ, ದೇವತೆಗಳ ಸಮೀಪದಲ್ಲಿ ಕಾರ್ಯಭಾರದಿಂದ ಆಗಮಿಸಿದ ಭೂದೇವಿಯನ್ನು ನಾನು ಕಂಡೆನು.
ಉಪಾಗಮ್ಯ ತದಾ ಧಾತ್ರೀ ದೇವಾನಾಹ ಸಮಾಗತಾನ್ ||26||
ಆಗ ಅಲ್ಲಿಗೆ ಆಗಮಿಸಿದ ಭೂದೇವಿಯು ಮಿಲಿತರಾದ ದೇವತೆಗಳನ್ನು ಉದ್ದೇಶಿಸಿ ಹೇಳಿದಳು.
ಪೃಥಿವೀ

ಯತ್ ಕಾರ್ಯಂ ಮಮ ಯುಷ್ಮಾಭಿರ್ಬ್ರಹ್ಮಣಃ ಸದನೇ ತದಾ |
ಪ್ರತಿಜ್ಞಾತಂ ಮಹಾಭಾಗಾಃ ತಚ್ಛೀಘ್ರಂ ಸಂವಿಧೀಯತಾಮ್ ॥27॥
ಭೂದೇವಿ ಮಹಾಮಹಿಮರೆ! ಅಂದು ಬ್ರಹ್ಮನ ಸದನದಲ್ಲಿ ನನ್ನ ಸಲುವಾಗಿ ಯಾವ ಕಾರ್ಯವನ್ನು ಮಾಡುವುದಾಗಿ ಶಪಿಸಿ ಹೇಳಿದ್ದಿರೋ ಅದನ್ನು ಶೀಘ್ರವಾಗಿ ಮಾಡಿರಿ.
ವ್ಯಾಸಃ
ತಸ್ಯಾಸ್ತದ್ವಚನಂ ಶ್ರುತ್ವಾ ವಿಷ್ಣುರ್ಲೋಕನಮಸ್ಕೃತಃ |
ಉವಾಚ ಪ್ರಹಸನ್ ವಾಕ್ಯಂ ಪ್ರಭುಸ್ತಾಂ ದೇವಸಂಸದಿ ॥28॥
ವೇದವ್ಯಾಸರು ಆಕೆಯ ಆ ಮಾತನ್ನು ಕೇಳಿ, ಲೋಕವಂದ್ಯನಾದ ಸ್ವಾಮಿಯಾದ ವಿಷ್ಣುವು ಮುಗುಳುನಗುತ್ತಾ ಆಕೆಯನ್ನು ಉದ್ದೇಶಿಸಿ ದೇವತೆಗಳ ಸಭೆಯಲ್ಲಿ ಹೇಳಿದನು.
ಶ್ರೀಭಗವಾನ್
ಧೃತರಾಷ್ಟ್ರಸ್ಯ ಪುತ್ರಾಣಾಂ ಯಸ್ತು ಜ್ಯೇಷ್ಠಃ ಶತಸ್ಯ ವೈ |
ದುರ್ಯೋಧನ ಇತಿ ಖ್ಯಾತಃ ಸ ತೇ ಕಾರ್ಯಂ ಕರಿಷ್ಯತಿ ॥29॥
ಭಗವಂತ ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಹಿರಿಯನಾದ ಯಾವನು ದುರ್ಯೋಧನ ಎಂದಿರುವನೋ ಆತನು ನಿನ್ನ ಕಾರ್ಯವನ್ನು ಮಾಡುವನು.
ತಂ ಚ ಪ್ರಾಪ್ಯ ಮಹೀಪಾಲಂ ಕೃತಕೃತ್ಯಾ ಭವಿಷ್ಯಸಿ ॥30॥
ಆ ಭೂಮಿಯ ಒಡೆಯನನ್ನು ಸೇರಿದಲ್ಲಿ ನೀನು ಕೃತಕೃತ್ಯಳಾಗುವಿ.
ತಸ್ಯಾರ್ಥೇ ಪೃಥಿವೀಪಾಲಾಃ ಕುರುಕ್ಷೇತ್ರಂ ಸಮಾಗತಾಃ |
ಅನ್ಯೋನ್ಯಂ ಘಾತಯಿಷ್ಯಂತಿ ದೃಢೈಃ ಶಸ್ತ್ರೈಃ ಪ್ರಹಾರಿಣಃ ॥31॥
ಆತನ ಸಲುವಾಗಿ ಭೂಮಿಯ ಒಡೆಯರು ಕುರುಕ್ಷೇತ್ರದಲ್ಲಿ ಮಿಲಿತರಾಗಿರುವರು. ಪ್ರಬಲವಾದ ಶಸ್ತ್ರಗಳಿಂದ ಪ್ರಹರಿಸುವ ಅವರು ಪರಸ್ಪರವಾಗಿ ಸಂಹರಿಸಿಕೊಳ್ಳುತ್ತಾರೆ.
ತತಸ್ತೇ ಭವಿತಾ ದೇವಿ ಭಾರಸ್ಯ ಯುಧಿ ನಾಶನಮ್ |
ಗಚ್ಛ ಶೀಘ್ರಂ ಸ್ವಕಂ ಸ್ಥಾನಂ ಲೋಕಾನ್ ಧಾರಯ ಶೋಭನೇ ॥32॥
ದೇವಿ, ಮಂಗಳಕರಳೆ! ಆದ್ದರಿಂದ ಯುದ್ಧದಲ್ಲಿ ನಿನ್ನ ಭಾರವು ನಾಶವಾಗಲಿದೆ (ನಿನಗೆ ಭಾರವಾದ ದುಷ್ಟರ ನಾಶವು ಸಂಭವಿಸುವುದು). ಶೀಘ್ರವಾಗಿ ನಿನ್ನ ಸ್ಥಾನಕ್ಕೆ ತೆರಳು, ಲೋಕವನ್ನು ಧರಿಸುವವಳಾಗು.
ವ್ಯಾಸಃ
ಸ ಏಷ ತೇ ಸುತೋ ರಾಜನ್ ಕಾಲಃ ಸಂಹಾರಕಾರಣಾತ್ |
ಕಲೇರಂಶಃ ಸಮುತ್ಪನ್ನೋ ಗಾಂಧಾರ್ಯಾ ಜಠರೇ ನೃಪ ॥33॥
ವೇದವ್ಯಾಸರು ರಾಜನೆ! ಕಲಿಯ ಅಂಶಭೂತನಾದ ಆ ಈ ಯಾವ ನಿನ್ನ ಮಗನು (ಜಗವನ್ನು) ಸಂಹರಿಸಲು ಗಾಂಧಾರಿಯ ಹೊಟ್ಟೆಯಲ್ಲಿ ಕಾಲನಾಗಿ (ಮೃತ್ಯುವಾಗಿ) ಹುಟ್ಟಿರುವನು.
ಅಮರ್ಷೀ ಬಲವಾನ್ ಶೂರಃ ಕ್ರೋಧನೋ ದುಷ್ಪ್ರಸಾಧನಃ |
ದೈವಯೋಗಾತ್ ಸಮುತ್ಪನ್ನಾ ಭ್ರಾತರಸ್ತಸ್ಯ ತಾದೃಶಾಃ ॥34॥
ಬಲಿಷ್ಠನು, ಶೂರನು, ಸೇಡಿನ ಸ್ವಭಾವದವನು, ಸಿಟ್ಟಿಗೆ ಅಧೀನನಾದವನು, (ಎಷ್ಟೇ ಸಂಪತ್ತು ದೊರೆತರೂ) ತೃಪ್ತಿಯನ್ನು ಕಾಣದವನು (ದುರ್ಯೋಧನನು). ಅದೃಷ್ಟವಶಾತ್ ಆತನ ಸಹೋದರರೂ ಅಂತಹವರೇ ಹುಟ್ಟಿದರು.
ಶಕುನಿರ್ಮಾತುಲಶ್ಚೈವ ಕರ್ಣಶ್ಚ ಪರಮಃ ಸಖಾ |
ಸಮುತ್ಪನ್ನಾ ವಿನಾಶಾರ್ಥಂ ಪೃಥಿವ್ಯಾಂ ಸಹಿತಾ ನೃಪಾಃ ॥35॥
(ಆತನ) ಸೋದರಮಾವ ಶಕುನಿ ಮತ್ತು ಪರಮ ಮಿತ್ರ ಕರ್ಣ ಇವರೆಲ್ಲರೂ ಇತರ ದೊರೆಗಳಿಂದ ಕೂಡಿದವರಾಗಿ ಭೂಮಿಯಲ್ಲಿ (ಸರ್ವ) ನಾಶಕ್ಕಾಗಿಯೇ ಹುಟ್ಟಿದರು.
ಏತಮರ್ಥಂ ಮಹಾಬಾಹೋ ನಾರದೋ ವೇದ ತತ್ತ್ವತಃ ॥36॥
ನೀಳಬಾಹುವೆ! ಈ ವಿಷಯವನ್ನು ನಾರದನು ಯಥಾರ್ಥವಾಗಿ ತಿಳಿದಿದ್ದನು.
ಆತ್ಮಾಪರಾಧಾತ್ ಪುತ್ರಾಸ್ತೇ ವಿನಷ್ಟಾಃ ಪೃಥಿವೀಪತೇ |
ಮಾ ತಾನ್ ಶೋಚಸ್ವ ರಾಜೇಂದ್ರ ನ ಹಿ ಶೋಕೇಽಸ್ತಿ ಕಾರಣಮ್ ॥
ಭೂಮಿಯ ಒಡೆಯನೆ! ತಮ್ಮ ತಪ್ಪಿನಿಂದಲೇ ನಿನ್ನ ಮಕ್ಕಳು ನಾಶವನ್ನು ಹೊಂದಿದರು, ಅವರನ್ನು ಉದ್ದೇಶಿಸಿ ದುಃಖಿಸದಿರು, ರಾಜಶ್ರೇಷ್ಠನೆ! ದುಃಖಿಸಲು ಕಾರಣವಿಲ್ಲ.
ನ ಹಿ ತೇ ಪಾಂಡವಾಃ ಸ್ವಲ್ಪಮ್ ಅಪರಾಧ್ಯಂತಿ ತೇ ನೃಪ |
ಪುತ್ರಾಸ್ತವ ದುರಾತ್ಮಾನೋ ಯೈರಿಯಂ ಘಾತಿತಾ ಮಹೀ ॥38॥
ರಾಜನೆ! ಆ ಪಾಂಡುಪುತ್ರರು ನಿನಗೆ ಸ್ವಲ್ಪವೂ ದ್ರೋಹವನ್ನು ಮಾಡಿಲ್ಲ, ದುಷ್ಟಸ್ವಭಾವದ ನಿನ್ನ ಮಕ್ಕಳು, ಅವರಿಂದ ಈ ಭೂಮಿಯೇ ಹಾನಿಗೆ ಒಳಗಾಯಿತು.
ನಾರದೇನ ಸಮಾಖ್ಯಾತಂ ಪೂರ್ವಮೇವ ನ ಸಂಶಯಃ |
ಯುಧಿಷ್ಠಿರಸ್ಯ ಸಮಿತೌ ರಾಜಸೂಯೇ ನಿವೇದಿತಮ್ ॥39॥
ಈ ಮೊದಲೇ ನಾರದರು ಈ ವಿಚಾರವನ್ನು ಸಂದೇಹಕ್ಕೆ ಅವಕಾಶವಿಲ್ಲದಂತೆ ತಿಳಿಸಿದ್ದರು, ಯುಧಿಷ್ಠಿರನ ರಾಜಸೂಯೆಯ ಸಭೆಯಲ್ಲಿ

ತಿಳಿಸಿದ್ದರು.
ಪಾಂಡವಾಃ ಕೌರವಾಶ್ಚೈವ ಸಮಾಸಾದ್ಯ ಪರಸ್ಪರಮ್ |
ನ ಭವಿಷ್ಯಂತಿ ರಾಜೇಂದ್ರ ಯತ್ ತೇ ಕೃತ್ಯಂ ತದಾಚರ ||40||
`ಪಾಂಡುಪುತ್ರರು ಕೌರವರು ಪರಸ್ಪರ (ಸಂಘರ್ಷದಲ್ಲಿ) ಮಿಲಿತರಾಗಿ ಉಳಿಯಲಾರರು, ರಾಜರ ಒಡೆಯನೇ! ಯಾವುದು ಕರ್ತವ್ಯವೋ ಅದನ್ನು ಆಚರಿಸು' ಎಂದು.
ನಾರದಸ್ಯ ವಚಃ ಶ್ರುತ್ವಾ ತಥಾಽಕುರ್ವತ ಪಾಂಡವಾಃ |
ಏತತ್ ತೇ ಸರ್ವಮಾಖ್ಯಾತಂ ದೇವಗುಹ್ಯಂ ಸನಾತನಮ್ ||41||
ನಾರದರ ಮಾತನ್ನು ಕೇಳಿ ಪಾಂಡುಪುತ್ರರು ಹಾಗೆಯೇ ಮಾಡಿದರು. ಪ್ರಾಚೀನವಾದ ಈ ಎಲ್ಲ ದೇವರಹಸ್ಯವನ್ನು ನಿನಗೆ ತಿಳಿಸಿರುವೆನು.
ಕಥಂ ತೇ ಶೋಕನಾಶಃ ಸ್ಯಾತ್ ಪ್ರಾಣೇಷು ಚ ದಯಾ ಪ್ರಭೋ |
ಸ್ನೇಹಶ್ಚ ಪಾಂಡುಪುತ್ರೇಷು ಜ್ಞಾತ್ವಾ ದೈವಕೃತಂ ವಿಧಿಮ್ ||42||
(ಈ ಸುದ್ದಿಯನ್ನು ತಿಳಿದ ಮೇಲೆ) ಹೇಗೆ ತಾನೆ ನಿನ್ನ ದುಃಖದ ನಾಶವು ಆಗದಿದ್ದೀತು? ನಿನ್ನ ಪ್ರಾಣದ ಮೇಲೆ ದಯೆತೋರು (ಆತ್ಮಹತ್ಯೆಗೆ ಯತ್ನಿಸದಿರು ಎಂದು ಭಾವ). (ಈ ಎಲ್ಲವೂ) ದೈವದಿಂದ ನಡೆಸಲಾಗಿದೆ ಎಂದು ತಿಳಿದು, ಪಾಂಡುಪುತ್ರರಲ್ಲಿ ಸ್ನೇಹವನ್ನು ಮಾಡು.
ಏಷ ಚಾರ್ಥೋ ಮಹಾರಾಜ ಪೂರ್ವಮೇವ ಮಯಾ ಶ್ರುತಃ |
ಕಥಿತೋ ಧರ್ಮರಾಜಸ್ಯ ರಾಜಸೂಯೇ ಕುರೂತ್ತಮ ||43||
ಮಹಾರಾಜನೇ! ಈ ವಿಷಯವನ್ನು ನಾನು ಮೊದಲೇ ಕೇಳಿದ್ದೆನು, ಕುರುಗಳಲ್ಲಿ ಹಿರಿಯನೇ! ರಾಜಸೂಯಯಾಗದ ಸಂದರ್ಭದಲ್ಲಿ ಧರ್ಮರಾಜನಿಗೆ ತಿಳಿಸಿದ್ದೆನು.
ಯತಿತಂ ಧರ್ಮಪುತ್ರೇಣ ಮಯಾ ಗುಹ್ಯೇ ನಿವೇದಿತೇ |
ಅವಿಗ್ರಹೇ ಕೌರವಾಣಾಂ ದೈವಂ ತು ಬಲವತ್ತರಮ್ ||44||
ನಾನು ರಹಸ್ಯದಲ್ಲಿ ತಿಳಿಸಿದ ನಂತರದಲ್ಲಿ ಧರ್ಮಪುತ್ರನು ಕೌರವರೊಡನೆ ಯುದ್ಧವಾಗದಿರಲು ಯತ್ನಿಸಿದನು, ಆದರೆ ದೈವವು ಬಲಿಷ್ಟವಾದದ್ದು.
ಅನತಿಕ್ರಮಣೀಯೋ ಹಿ ವಿಧೀ ರಾಜನ್ ಕಥಂಚನ |
ಕೃತಾಂತಸ್ಯ ಹಿ ಭೂತೇನ ಚರೇಣ ಸ್ಥಾವರೇಣ ಚ ||45||
ರಾಜನೇ! ಕೃತಾಂತನ ನಿರ್ಣಯವನ್ನು ಸ್ಥಿರಪ್ರಾಣಿಯಿಂದಾಗಲಿ, ಚರಪ್ರಾಣಿಯಿಂದಾಗಲಿ ಯಾವ ಪ್ರಯತ್ನದಿಂದಲೂ ಅತಿಕ್ರಮಿಸಲು ಆಗದು.
ಭವಾನ್ ಧರ್ಮಪರೋ ಯತ್ರ ಬುದ್ಧಿಶ್ರೇಷ್ಠಶ್ಚ ಭಾರತ |
ಮುಹ್ಯತೇ ಪ್ರಾಣಿನಾಂ ಜ್ಞಾತ್ವಾ ಗತಿಮಾಗತಿಮೇವ ಚ ||46||
ಭರತಕುಲೋತ್ಪನ್ನನೇ! ನೀನು ಧರ್ಮಪರನು, ಬುದ್ಧಿವಂತರಲ್ಲಿ ಹಿರಿಯ, ಪ್ರಾಣಿಗಳ ಹುಟ್ಟು-ಸಾವು ಇವುಗಳನ್ನು ತಿಳಿದಿದ್ದರೂ ಆದರೂ ಮೋಹಗೊಳ್ಳುತ್ತಿರುವಿ.
ತ್ವಾಂ ತು ಶೋಕೇನ ಸಂತಪ್ತಂ ಮುಹ್ಯಮಾನಮಚೇತನಮ್ |
ಜ್ಞಾತ್ವಾ ಯುಧಿಷ್ಠಿರೋ ರಾಜಾ ಪ್ರಾಣಾನಪಿ ಪರಿತ್ಯಜೇತ್ ||47||
ನೀನಾದರೋ ದುಃಖದಿಂದ ಪರಿತಪಿಸುತ್ತಿರುವವನಾಗಿ ಬುದ್ಧಿಶೂನ್ಯನಾಗಿ ಮೋಹಕ್ಕೆ ಒಳಗಾಗುವುದನ್ನು ತಿಳಿದ ರಾಜನಾದ ಯುಧಿಷ್ಠಿರನು ಪ್ರಾಣವನ್ನೇ ಪರಿತ್ಯಜಿಸಿಯಾನು.
ಕೃಪಾಲುರ್ನಿತ್ಯಶೋ ವೀರಃ ತಿರ್ಯಗ್ಯೋನಿಗತೇಷ್ವಪಿ |
ಸ ಕಥಂ ತ್ವಯಿ ರಾಜೇಂದ್ರ ಕೃಪಾಂ ವೈ ನ ಕರಿಷ್ಯತಿ ||48||
ರಾಜೇಂದ್ರ! ತಿರ್ಯಕ್‌ಪ್ರಾಣಿಗಳಲ್ಲೂ ದಯಾಪರನಾದ ವೀರನು, ನಿತ್ಯದಯಾಪರನೂ ಆದ ಆತನು ಹೇಗೆತಾನೇ ನಿನ್ನಲ್ಲಿ ದಯೆಯನ್ನು ತೋರದಿರುವನು?
ಮಮ ಚೈವ ನಿಯೋಗೇನ ವಿಧೇಶ್ಚಾಪ್ಯನಿವರ್ತನಾತ್ |
ಪಾಂಡವಾನಾಂ ಚ ಕಾರುಣ್ಯಾತ್ ಪ್ರಾಣಾನ್ ಧಾರಯ ಭಾರತ ||49||
ಭರತಕುಲೋತ್ಪನ್ನನೇ! ನನ್ನ ಆದೇಶದಂತೆ, ವಿಧಿಯ ನಿಯಮವನ್ನು ಮೀರಲಾಗದಿರುವುದರಿಂದ, ಪಾಂಡವರ ಮೇಲಿನ ಕಾರುಣ್ಯದಿಂದಲೂ ಸಹ ಪ್ರಾಣವನ್ನು ಧರಿಸು (ಆತ್ಮಹತ್ಯೆಗೆ ಯತ್ನಿಸದಿರು).
ಏವಂ ತೇ ವರ್ತಮಾನಸ್ಯ ಲೋಕೇ ಕೀರ್ತಿರ್ಭವಿಷ್ಯತಿ |
ಧರ್ಮಶ್ಚ ಸುಮಹಾಂಸ್ತಾತ ತಪ್ತಸ್ಯ ತಪಸಶ್ಚಿರಾತ್ ||50||
ಮಗನೇ! ಈ ರೀತಿಯಾಗಿರುವುದರಿಂದ ಪ್ರಪಂಚದಲ್ಲಿ ಕೀರ್ತಿಯು ಪ್ರಾಪ್ತವಾಗುವುದು, (ಮುಂದಿನ ದಿನಗಳಲ್ಲಿ) ದೀರ್ಘಕಾಲಪರ್ಯಂತ ತಪವನ್ನು ಆಚರಿಸುವುದರಿಂದ ಭಾರೀ ಧರ್ಮವನ್ನು ಆಚರಿಸಿದಂತೆಯೂ ಆಗುವುದು.
ಪುತ್ರಶೋಕಂ ಸಮುತ್ಪನ್ನಂ ಹುತಾಶಂ ಜ್ವಲಿತಂ ಯಥಾ |
ಪ್ರಜ್ಞಾಂಭಸಾ ಮಹಾರಾಜ ನಿರ್ವಾಪಯ ಸದಾ ಸತಾ ||51||
ಮಹಾರಾಜನೇ! ಪುತ್ರಶೋಕದಿಂದ ಉತ್ಪನ್ನವಾದ ಪ್ರಜ್ವಲಿಸುವ ಈ ಬೆಂಕಿಯನ್ನು ಸತ್‌ಪ್ರಜ್ಞೆ ಎಂಬ ನೀರಿನಿಂದ ನಿರಂತರ ಶಮನಗೊಳಿಸು.
ವೈಶಂಪಾಯನಃ

ಏತಚ್ಛ್ರುತ್ವಾ ತು ವಚನಂ ವ್ಯಾಸಸ್ಯಾಮಿತತೇಜಸಃ |
ಮುಹೂರ್ತಂ ಸಮನುಧ್ಯಾಯ ಧೃತರಾಷ್ಟ್ರೋಽಭ್ಯಭಾಷತ ||52||
ವೈಶಂಪಾಯನ ಮಹಾತೇಜಸ್ವಿಯಾದ ವ್ಯಾಸರ ಈ ಮಾತನ್ನು ಕೇಳಿ, ಧೃತರಾಷ್ಟ್ರನು ಸ್ವಲ್ಪಹೊತ್ತು ಚಿಂತಿಸಿದವನಾಗಿ ಮಾತನಾಡಿದನು.
ಧೃತರಾಷ್ಟ್ರಃ
ಮಹತಾ ಶೋಕಜಾಲೇನ ಪ್ರಣುನ್ನೋಽಸ್ಮಿ ದ್ವಿಜೋತ್ತಮ |
ನಾತ್ಮಾನಮವಬುಧ್ಯಾಮಿ ಮುಹ್ಯಮಾನೋ ಮುಹುರ್ಮುಹುಃ||53||
ಧೃತರಾಷ್ಟ್ರ ಬ್ರಾಹ್ಮಣಶ್ರೇಷ್ಠನೇ! ಭಾರೀ ಶೋಕವೆಂಬ ಬಲೆಯಲ್ಲಿ ಸಿಲುಕಿರುವೆನು. ಮತ್ತೆ ಮತ್ತೆ ಮೋಹಕ್ಕೆ ಸಿಲುಕಿರುವ ನಾನು ನನ್ನ ತನವನ್ನೇ ಮರೆತಿರುವೆನು.
ಇದಂ ತು ವಚನಂ ಶ್ರುತ್ವಾ ತವ ದೈವನಿಯೋಗಜಮ್ |
ಧಾರಯಿಷ್ಯಾಮ್ಯಹಂ ಪ್ರಾಣಾನ್ ಯತಿಷ್ಯೇ ಚ ನ ಶೋಚಿತುಮ್ ||
ಆದರೆ `ದೈವದ ನಿರ್ಣಯ' ಎಂಬ ಈ ನಿನ್ನ ಮಾತನ್ನು ಕೇಳಿ ಪ್ರಾಣವನ್ನು ಧರಿಸುವೆನು, ದುಃಖದಿಂದ ಹೊರಬರಲು ಯತ್ನಿಸುವೆನು.
ವೈಶಂಪಾಯನ
ಏತಚ್ಛ್ರುತ್ವಾ ತು ವಚನಂ ವ್ಯಾಸಃ ಸತ್ಯವತೀಸುತಃ |
ಧೃತರಾಷ್ಟ್ರಸ್ಯ ರಾಜೇಂದ್ರ ತತ್ರೈವಾಂತರಧೀಯತ ||55||
ವೈಶಂಪಾಯನ ಸತ್ಯವತಿಯ ಪುತ್ರರಾದ ವ್ಯಾಸರು ಧೃತರಾಷ್ಟ್ರನ ಈ ಮಾತನ್ನು ಕೇಳಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೇ ಅಷ್ಟಮೋಽಧ್ಯಾಯಃ ||
|| ಜಲಪ್ರದಾನಪರ್ವಣಿ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಪುನಃ ಶೋಕತಪ್ತನಾದ ಧೃತರಾಷ್ಟ್ರನಿಗೆ ವಿದುರನಿಂದ ಉಪದೇಶ.
ಜನಮೇಜಯಃ
ಗತೇ ಭಗವತಿ ವ್ಯಾಸೇ ಧೃತರಾಷ್ಟ್ರೋ ಮಹೀಪತಿಃ |
ಕಿಮಚೇಷ್ಟತ ವಿಪ್ರರ್ಷೇ ತನ್ಮೇ ವ್ಯಾಖ್ಯಾತುಮರ್ಹಸಿ ||1||
ಜನಮೇಜಯ ಬ್ರಹ್ಮರ್ಷಿಯೆ! ಭಗವಂತರಾದ ವ್ಯಾಸರು ಅಂತರ್ಧಾನ ಹೊಂದಲು ಭೂಮಿಗೆ ಒಡೆಯನಾದ ಧೃತರಾಷ್ಟ್ರನು ಏನು ಮಾಡಿದನು? ಅದನ್ನು ನನಗೆ ತಿಳಿಸುವವರಾಗಿ.
ತಥೈವ ಕೌರವೋ ರಾಜಾ ಧರ್ಮಪುತ್ರೋ ಮಹಾಮನಾಃ |
ಕೃಪಪ್ರಭೃತಯಶ್ಚೈವ ಕಿಮಕುರ್ವತ ತೇ ತ್ರಯಃ ||2||
ಹಾಗೆಯೆ ಮಹಾಮಹಿಮನಾದ ಕೌರವರ ರಾಜನಾದ ಧರ್ಮರಾಜನು, ಕೃಪನೇ ಮುಂತಾದ ಆ ಮೂವರು ಏನು ಮಾಡಿದರು?
ಅಶ್ವತ್ಥಾಮ್ನಃ ಶ್ರುತಂ ಕರ್ಮ ಶಾಪಶ್ಚಾನ್ಯೋನ್ಯಕಾರಿತಃ |
ವೃತ್ತಾಂತಮುತ್ತರಂ ಬ್ರೂಹಿ ಯದಭಾಷತ ಸಂಜಯಃ ||3||
ಅಶ್ವತ್ಥಾಮನು ಮಾಡಿದ ಕೆಲಸವನ್ನು ಕೇಳಿದೆನು, ಪರಸ್ಪರ ಒಬ್ಬರಿಗೆ ಮತ್ತೊಬ್ಬರು ನೀಡಿದ ಶಾಪದ ವಿಚಾರವನ್ನೂ ಕೇಳಿದೆನು, ಮುಂದಿನ ಸುದ್ದಿಯನ್ನು ಹೇಳಿ, ಸಂಜಯನು ಏನು ಹೇಳಿದನು?
ವೈಶಂಪಾಯನಃ
ಹತೇ ದುರ್ಯೋಧನೇ ಚೈವ ಹತೇ ಸೈನ್ಯೇ ಚ ಸರ್ವಶಃ |
ಸಂಜಯೋ ವಿಗತಪ್ರಜ್ಞೋ ಧೃತರಾಷ್ಟ್ರಮುಪಸ್ಥಿತಃ ||4||
ವೈಶಂಪಾಯನ ಎಲ್ಲ ಸೈನ್ಯವು ನಾಶವಾಗಲು, ದುರ್ಯೋಧನನೂ ಮೃತನಾಗಲು, ದಿವ್ಯದೃಷ್ಟಿಯನ್ನು ಕಳೆದುಕೊಂಡ ಸಂಜಯನು ಧೃತರಾಷ್ಟ್ರನ ಬಳಿ ಆಗಮಿಸಿದನು.
ಸಂಜಯಃ
ಆಗಮ್ಯ ನಾನಾದೇಶೇಭ್ಯೋ ನಾನಾಜನಪದೇಶ್ವರಾಃ |
ಪಿತೃಲೋಕಂ ಗತಾ ರಾಜನ್ ಸರ್ವೇ ತವ ಸುತೈಃ ಸಹ ||5||
ಸಂಜಯ ರಾಜನೆ! ನಾನಾ ದೇಶಗಳಿಂದ ಬಂದ ನಾನಾ ದೇಶಗಳ ರಾಜರೆಲ್ಲ ನಿನ್ನ ಮಕ್ಕಳಿಂದ ಕೂಡಿಕೊಂಡು ಪಿತೃಲೋಕಕ್ಕೆ ತೆರಳಿದರು.
ಯಾಚ್ಯಮಾನೇನ ಸತತಂ ತವ ಪುತ್ರೇಣ ಭಾರತ |
ಘಾತಿತಾ ಪೃಥಿವೀ ಸರ್ವಾ ವೈರಸ್ಯಾಂತಂ ವಿಧಿತ್ಸತಾ ||6||
ಭರತಕುಲೋತ್ಪನ್ನನೆ! ದ್ವೇಷದ ಕೊನೆಯನ್ನು ಬಯಸುವ ನಿನ್ನ ಮಗನು ನಿರಂತರವಾಗಿ ಪ್ರಾರ್ಥಿತನಾದರೂ (ಯುದ್ಧ ತರವಲ್ಲ, ಪಾಂಡವರೊಡನೆ ಸಂಧಾನಕ್ಕೆ ಒಪ್ಪಿಕೊ ಎಂದು ಅನೇಕ ಹಿರಿಯರು ತಿಳಿಸಿದರೂ ಹಟಹಿಡಿದ ದುರ್ಯೋಧನನು ಯುದ್ಧವನ್ನೇ ನಿರ್ಣಯಿಸಿದ್ದನು) ಸಮಗ್ರ ಭೂಮಿಯನ್ನು ನಾಶಗೊಳಿಸಿದನು.

ಪುತ್ರಾಣಾಮಥ ಪೌತ್ರಾಣಾಂ ಪಿತೄಣಾಂ ಚ ಮಹೀಪತೇ |
ಆನುಪೂರ್ವ್ಯೇಣ ಸರ್ವೇಷಾಂ ಪ್ರೇತಕಾರ್ಯಾಣಿ ಕಾರಯ ॥7॥
ಭೂಮಿಯ ಒಡೆಯನೇ! ಅನುಕ್ರಮವಾಗಿ ಮಕ್ಕಳ ಮೊಮ್ಮಕ್ಕಳ ಮತ್ತು ಹಿರಿಯರೆಲ್ಲರ ಪ್ರೇತಕರ್ಮವನ್ನು ಮಾಡು.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ಘೋರಂ ಸಂಜಯಸ್ಯ ಮಹೀಪತಿಃ |
ಗತಾಸುರಿವ ನಿಶ್ಚೇಷ್ಟೋ ನ್ಯಪತತ್ ಪೃಥಿವೀತಳೇ ॥8॥
ವೈಶಂಪಾಯನ ಭೂಮಿಯ ಒಡೆಯನು ಸಂಜಯನ ಆ ಘೋರವಾದ ಮಾತನ್ನು ಕೇಳಿ ಜೀವಹೋದಂಥವನಾಗಿ ನಿಷ್ಕ್ರಿಯನಾಗಿ ನೆಲಕ್ಕೆ ಉರುಳಿದನು.
ತಂ ಶಯಾನಮುಪಾಗಮ್ಯ ಪೃಥಿವ್ಯಾಂ ಪೃಥಿವೀಪತಿಮ್ |
ವಿದುರಃ ಸರ್ವಧರ್ಮಜ್ಞ ಇದಂ ವಚನಮಬ್ರುವೀತ್ ॥9॥
ಭೂಮಿಯಲ್ಲಿ ಮಲಗಿರುವ ಆ ಭೂಮಿಯ ಒಡೆಯನನ್ನು ಉದ್ದೇಶಿಸಿ ಸರ್ವಧರ್ಮವನ್ನು ತಿಳಿದ ವಿದುರನು ಈ ಮಾತನ್ನು ಹೇಳಿದನು.
ವಿದುರಃ
ಉತ್ತಿಷ್ಠ ರಾಜನ್ ಕಿಂ ಶೇಷೇ ಮಾ ಶುಚೋ ಭರತರ್ಷಭ |
ಏಷಾ ವೈ ಸರ್ವಸತ್ತ್ವಾನಾಂ ಲೋಕೇಶ್ವರ ಪರಾ ಗತಿಃ ॥10॥
ವಿದುರ ಭರತಕುಲದ ಹಿರಿಯನೆ, ರಾಜನೆ! ದುಃಖಿಸದಿರು, ಏಕೆ ಮಲಗಿರುವೆ? ಮೇಲೇಳು. ಲೋಕದೊಡೆಯ! ಎಲ್ಲ ಜೀವಿಗಳಿಗೂ ಇದುವೇ ಕೊನೆಯ ಗತಿಯು.
ಅಭಾವಾದೀನಿ ಭೂತಾನಿ ಭಾವಮಧ್ಯಾನಿ ಭಾರತ |
ಅಭಾವನಿಧನಾನ್ಯೇವ ತತ್ರ ಕಾ ಪರಿದೇವನಾ ॥11॥
ಜೀವಿಗಳು (ಹುಟ್ಟುವ) ಮೊದಲು ಕಾಣವು, ಮಧ್ಯದಲ್ಲಿ (ಹುಟ್ಟಿದಾಗ) ಕಾಣಸಿಗುವವು, ನಿಧನಾನಂತರದಲ್ಲಿ ಪುನಃ ಕಾಣವು, ಈ ವಿಷಯದಲ್ಲಿ ದುಃಖಕ್ಕೆ ಎಡೆಯಲ್ಲಿ?
ನ ಶೋಚನ್ ಮೃತಮನ್ವೇತಿ ನ ಶೋಚನ್ ಮ್ರಿಯತೇ ನರಃ |
ಏವಂ ಸಾಂಸಿದ್ಧಿಕೇ ಲೋಕೇ ಕಿಮರ್ಥಮನುಶೋಚಸಿ ॥12॥
ಮನುಜನು ದುಃಖಿಸುವುದರಿಂದ ಮೃತನನ್ನು ಅನುಸರಿಸಲಾಗದು, (ಮೃತನಿಗಾಗಿ) ದುಃಖಿಸುತ್ತಾ ಮರಣವನ್ನು ಹೊಂದಲಾಗುವುದಿಲ್ಲ. ಇದು ಲೋಕದಲ್ಲಿ ಸಿದ್ಧವಾದ ಸಂಗತಿ, ಏತಕ್ಕಾಗಿ ದುಃಖಿಸುವಿ?
ಯಾಂಶ್ಚಾಪಿ ನಿಹತಾನ್ ಯುದ್ಧೇ ರಾಜಂಸ್ತ್ವಮನುಶೋಚಸಿ |
ನ ಶೋಚ್ಯಾ ಹಿ ಮಹಾತ್ಮಾನಃ ಸರ್ವೇ ತೇ ತ್ರಿದಿವಂ ಗತಾಃ ॥13॥
ರಾಜನೆ! ಯುದ್ಧದಲ್ಲಿ ಮೃತರಾದ ಯಾರನ್ನು ಉದ್ದೇಶಿಸಿ ದುಃಖಿಸುವಿ? ಮಹಾತ್ಮರಾದ ಅವರು ಯಾರೂ ದುಃಖಕ್ಕೆ ವಿಷಯರಲ್ಲ, ಅವರೆಲ್ಲರೂ ಸ್ವರ್ಗಕ್ಕೆ ಹೋಗಿಯಾಗಿದೆ.
ನ ಯಜ್ಞೈರ್ದಕ್ಷಿಣಾವದ್ಭಿರ್ನ ತಪೋಭಿರ್ನ ವಿದ್ಯಯಾ |
ತಥಾ ಸ್ವರ್ಗಮುಪಾಯಾಂತಿ ಯಥಾ ಶೂರಾಸ್ತನುತ್ಯಜಃ ॥14॥
ಶೂರರು (ಯುದ್ಧದಲ್ಲಿ) ದೇಹವನ್ನು ತ್ಯಜಿಸುವುದರಿಂದ ಯಾವರೀತಿಯಾದ ಸ್ವರ್ಗವನ್ನು ಹೊಂದುವರೋ, ಆಂತಹ ಸ್ವರ್ಗವನ್ನು ಯಜ್ಞಗಳಿಂದ ಹೊಂದಲು ಶಕ್ಯವಿಲ್ಲ, ದಕ್ಷಿಣೆಯನ್ನು ನೀಡುವುದರಿಂದ ಹೊಂದಲು ಶಕ್ಯವಿಲ್ಲ, ತಪಸ್ಸಿನಿಂದ ಹೊಂದಲು ಶಕ್ಯವಿಲ್ಲ, ವಿದ್ಯೆಯಿಂದ ಹೊಂದಲು ಶಕ್ಯವಿಲ್ಲ.
ಸರ್ವೇ ವೇದವಿದಃ ಶೂರಾಃ ಸರ್ವೇ ಸುಚರಿತವ್ರತಾಃ |
ಸರ್ವೇ ಚಾಭಿಮುಖಾಃ ಕ್ಷೀಣಾಸ್ತತ್ರ ಕಾ ಪರಿದೇವನಾ ॥15॥
(ಯುದ್ಧದಲ್ಲಿ ಮೃತರಾದ) ಎಲ್ಲರೂ ವೇದವಿದರು, ಎಲ್ಲರೂ ಶೂರರು, ಎಲ್ಲರೂ ವ್ರತಗಳನ್ನು ಸರಿಯಾಗಿ ಆಚರಿಸಿದವರು, ಎಲ್ಲರೂ (ರಣರಂಗದಲ್ಲಿ ಶತ್ರುವಿನ) ಎದುರಿನಲ್ಲಿಯೇ ಮರಣವನ್ನು ಹೊಂದಿದವರು. ಇಲ್ಲಿ ದುಃಖಿಸಲು ಕಾರಣವೇನು?
ಶರೀರಾಗ್ನಿಷು ಶೂರಾಣಾಂ ಜುಹುವುಸ್ತೇ ಶರಾಹುತೀಃ |
ಹೂಯಮಾನಾನ್ ಶರಾಂಶ್ಚೈವ ಸೇಹುರುತ್ತಮಪೂರುಷಾಃ ॥16॥
ಆ ಶೂರರು ಬಾಣಗಳೆಂಬ ಆಹುತಿಗಳನ್ನು ಶರೀರ ಎಂಬ ಅಗ್ನಿಯಲ್ಲಿ ಹೋಮಿಸಿರುವರು. ಹೋಮಿಸಿದ ಶರಗಳನ್ನು ಶ್ರೇಷ್ಠಪುರುಷರು ಸಹಿಸುವರು.
ಏವಂ ರಾಜಂಸ್ತವಾಚಕ್ಷೇ ಸ್ವರ್ಗ್ಯಂ ಪಂಥಾನಮುತ್ತಮಮ್ |
ನ ಯುದ್ಧಾದಧಿಕಂ ಕಿಂಚಿತ್ ಕ್ಷತ್ರಿಯಸ್ಯೇಹ ವಿದ್ಯತೇ ॥17॥
ರಾಜನೆ! ನಿನಗೆ ಹೇಳುವೆನು, ಈ ಲೋಕದಲ್ಲಿ ಯುದ್ಧಕ್ಕಿಂತ ಉತ್ತಮವಾದ ಸ್ವರ್ಗಮಾರ್ಗವು ಕ್ಷತ್ರಿಯನಿಗೆ ಮತ್ತೊಂದು ಇಲ್ಲ.
ಕ್ಷತ್ರಿಯಾಸ್ತೇ ಮಹಾತ್ಮಾನಃ ಶೂರಾಃ ಸಮಿತಿಶೋಭನಾಃ |
ಆಶಿಷಂ ಪರಮಾಂ ಪ್ರಾಪ್ತಾ ನ ಶೋಚ್ಯಾಃ ಸರ್ವ ಏವ ಹಿ ॥18॥
ಆ ಮಹಾತ್ಮರಾದ ಶೂರರಾದ ಕ್ಷತ್ರಿಯರು (ಇಂದ್ರಾದಿಗಳ) ಸಭೆಗಳಲ್ಲಿ ಶೋಭಾಯಮಾನರು, ಮಹತ್ತರವಾದ ಆಶೀರ್ವಾದಕ್ಕೆ ಪಾತ್ರರಾಗಿರುವರು, ಅವರೆಲ್ಲರ ಬಗ್ಗೆ ಚಿಂತಿಸುವ ಅವಶ್ಯಕತೆ ಇರುವುದಿಲ್ಲ.
ಆತ್ಮನಾಽಽತ್ಮಾನಮಾಶ್ವಾಸ್ಯ ಮಾ ಶುಚಃ ಪುರುಷರ್ಷಭ |

ನಾದ್ಯ ಶೋಕಾಭಿಭೂತಸ್ತ್ವಂ ಕಾರ್ಯಮುತ್ಸ್ರಷ್ಟುಮರ್ಹಸಿ ॥19॥
ಪುರುಷಶ್ರೇಷ್ಠನೆ! ನೀನೇ ನಿನ್ನನ್ನು ಸಮಾಧಾನಿಸಿಕೊಂಡು ದುಃಖಿಸದಿರು, ದುಃಖದ ಅಧೀನನಾಗಿ ಕರ್ತವ್ಯದಿಂದ ವಿಮುಖನಾಗಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರವಿಶೋಕೇ ನವಮೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ಪುನಃ ಶೋಕತಪ್ತನಾದ ಧೃತರಾಷ್ಟ್ರನಿಗೆ ವಿದುರನಿಂದ ಉಪದೇಶ.
ವೈಶಂಪಾಯನಃ
ವಿದುರಸ್ಯ ತು ತದ್ವಾಕ್ಯಂ ಶ್ರುತ್ವಾ ತು ಪುರುಷರ್ಷಭಃ |
ಯುಜ್ಯತಾಂ ಯಾನಮಿತ್ಯುಕ್ತ್ವಾ ಪುನರ್ವಚನಮಬ್ರವೀತ್ ॥1॥
ವೈಶಂಪಾಯನ ವಿದುರನ ವಾಕ್ಯವನ್ನು ಕೇಳಿದ ಪುರುಷಶ್ರೇಷ್ಠನು `ವಾಹನವನ್ನು ಯೋಜಿಸಿ' ಎಂದು ಹೇಳಿ, ಮತ್ತೆ ಈ ವಾಕ್ಯಗಳನ್ನು ಹೇಳಿದನು.
ಕ್ಷಿಪ್ರಮಾನಯ ಗಾಂಧಾರೀಂ ಸರ್ವಾಶ್ಚ ಭರತಸ್ತ್ರಿಯಃ |
ಕುಂತೀಂ ಚೈವ ತಥಾ ಕ್ಷತ್ತಃ ಸಮಾನಯ ಮಮಾಂತಿಕಮ್ ॥2॥
`ಸೂತನೆ! ಗಾಂಧಾರಿಯನ್ನು, ಭರತಕುಲೋತ್ಪನ್ನರ ಎಲ್ಲರ ಪತ್ನಿಯರನ್ನು (ಸೊಸೆಯರನ್ನು), ಕುಂತಿಯನ್ನು ಶೀಘ್ರವಾಗಿ ನನ್ನ ಸಮೀಪಕ್ಕೆ ಕರೆದು ತನ್ನಿರಿ' ಎಂದು.
ಏವಮುಕ್ತ್ವಾ ತು ಧರ್ಮಾತ್ಮಾ ವಿದುರಂ ಧರ್ಮವಿತ್ತಮಮ್ |
ಶೋಕವಿಪ್ರಹತಜ್ಞಾನೋ ಯಾನಮೇವಾನ್ವರೋಹತ ॥3॥
ಈ ರೀತಿಯಾಗಿ ಹೇಳಿ, ಧರ್ಮಜ್ಞನಾದ ವಿದುರನನ್ನು (ಕರೆದುಕೊಂಡು) ಶೋಕದಿಂದ ಅರಿವನ್ನೇ ಕಳೆದುಕೊಂಡ ಧರ್ಮಾತ್ಮನು ಯಾನವನ್ನು ಏರಿದನು.
ಗಾಂಧಾರೀ ಚೈವ ಶೋಕಾರ್ತಾ ಭರ್ತುರ್ವಚನಚೋದಿತಾ |
ಸಹ ಕುಂತ್ಯಾ ಯತೋ ರಾಜಾ ಸಹ ಸ್ತ್ರೀಭಿಃ ಸಮಾದ್ರವತ್ ॥4॥
ದುಃಖದಿಂದ ತಪ್ತಳಾದ ಗಾಂಧಾರಿಯು ಪತಿಯ ಮಾತಿನಿಂದ ಪ್ರೇರೇಪಿತಳಾಗಿ ಕುಂತಿಯಿಂದ, ಸೊಸೆಯರಿಂದ ಕೂಡಿಕೊಂಡು ಎಲ್ಲಿ ರಾಜನೋ ಅಲ್ಲಿಗೆ ಧಾವಿಸಿದಳು.
ತಾಃ ಸಮಾಸಾದ್ಯ ರಾಜಾನಂ ಭೃಶಂ ಶೋಕಸಮನ್ವಿತಾಃ |
ಆಮಂತ್ರ್ಯಾನ್ಯೋನ್ಯಮಾಯಸ್ತಾ ಭೃಶಂ ವೈ ಚುಕ್ರುಶುಸ್ತಥಾ ॥5॥
ಅತ್ಯಂತ ದುಃಖಿತರಾದ ಅವರು ರಾಜನ ಬಳಿ ಆಗಮಿಸಿ, ಪರಸ್ಪರ ಒಬ್ಬರನ್ನು ಮತ್ತೊಬ್ಬರು ಆಹ್ವಾನಿಸಿಕೊಂಡು ಆಗಮಿಸಿದ ಅವರು ಗಟ್ಟಿಯಾಗಿ ರೋದಿಸಿದರು.
ತಾಃ ಸಮಾಶ್ವಾಸಯತ್ ಕ್ಷತ್ತಾ ತಾಭ್ಯಶ್ಚಾರ್ತತರಃ ಸ್ವಯಮ್ |
ಅಶ್ರುಕಂಠೀಃ ಸಮಾರೋಪ್ಯ ತತಸ್ತಾ ನಿರ್ಯಯುಃ ಪುರಾತ್ ॥6॥
ಸೂತನು ಅವರುಗಳನ್ನು ಸಮಾಧಾನಗೊಳಿಸಿದನು, ಅವರುಗಳಿಂದ ತಾನೇ ಅತ್ಯಂತ ದುಃಖಿತನಾದನು. ಅನಂತರದಲ್ಲಿ ರೋದಿಸುತ್ತಿರುವ ಅವರುಗಳನ್ನು (ರಥದಲ್ಲಿ) ಏರಿಸಿಕೊಂಡು, ನಗರದಿಂದ ಹೊರಟರು.
ತತಃ ಪ್ರಣಾದಃ ಸಂಜಜ್ಞೇ ಸರ್ವೇಷು ಕುರುವೇಶ್ಮಸು |
ಆಕುಮಾರಂ ಪುರಂ ತಚ್ಚಾಪ್ಯಭವಚ್ಛೋಕಕರ್ಶಿತಮ್ ॥7॥
ಅನಂತರದಲ್ಲಿ ಎಲ್ಲ ಕುರುಗಳ ಮನೆಯಲ್ಲಿ ಆರ್ತಸ್ವರವು ಉಂಟಾಯಿತು, ಮಕ್ಕಳಿಂದ ಆರಂಭಿಸಿ ಸಮಸ್ತ ನಗರವು ಶೋಕದಿಂದ ಕುಗ್ಗಿತು.
ಅದೃಷ್ಟಪೂರ್ವಾ ಯಾ ನಾರ್ಯಃ ಪುರಾ ದೇವಗಣೈರಪಿ |
ಪೃಥಗ್ಜನೇನ ದೃಶ್ಯಂತೇ ತಾಸ್ತದಾ ನಿಹಿತೇಶ್ವರಾಃ ॥8॥
ದೇವತೆಗಳ ಸಮೂಹವೂ ಈ ಹಿಂದೆ ಕಾಣದ ಯಾವ ನಾರಿಯರೋ, ಗಂಡಂದಿರನ್ನು ಕಳೆದು ಕೊಂಡ ಅವರು ಸಾಮಾನ್ಯಜನರ ಕಣ್ಣಿಗೂ ವಿಷಯವಾದರು.
ಪ್ರಕೀರ್ಯ ಕೇಶಾನಸಿತಾನ್ ಭೂಷಣಾನ್ಯವಮುಚ್ಯ ಚ |
ಏಕವಸ್ತ್ರಧರಾ ನಾರ್ಯಃ ಪರಿಪೇತುರನಾಥವತ್ ॥9॥
ಕಪ್ಪಾದ ಕೂದಲುಗಳನ್ನು ಹರಡಿಕೊಂಡಿರುವ, ಭೂಷಣಗಳನ್ನು (ಆಭರಣಗಳನ್ನು) ಬಿಚ್ಚಿಟ್ಟಿರುವ, ಒಂದೇ ವಸ್ತ್ರವನ್ನು ಧರಿಸಿರುವ ಆ ಸ್ತ್ರೀಯರು ಅನಾಥರಂತೆ ಕೆಳಗೆ ಬಿದ್ದರು.
ಶ್ವೇತಪರ್ವತರೂಪೇಭ್ಯೋ ಗೃಹೇಭ್ಯಸ್ತಾ ನಿರಾಕ್ರಮನ್ |
ಗುಹಾಭ್ಯ ಇವ ಶೈಲಾನಾಂ ಪೃಷತ್ಯೋ ಹತಯೂಥಪಾಃ ॥10॥
ಬಿಳಿಪರ್ವತದ ಗುಹೆಯಿಂದ ನಾಯಕನನ್ನು ಕಳೆದುಕೊಡ ಜಿಂಕೆಗಳು ಹೊರಬರುವಂತೆ, ಮನೆಗಳಿಂದ (ತಮ್ಮ ತಮ್ಮ

ಅರಮನೆಗಳಿಂದ) ಅವರುಗಳು (ಕೌರವರ ಪತ್ನಿಯರು) ಹೊರಬಂದರು.
ತಾನ್ಯುದೀರ್ಣಾನಿ ನಾರೀಣಾಂ ತದಾ ಬೃಂದಾನ್ಯನೇಕಶಃ |
ಶೋಕಾರ್ತಾ ನ್ಯರುದನ್ ಘೋರಂ ಕಿಶೋರಾಣಾಮಿವಾಂಕಣೇ ॥11॥
(ಅರಮನೆಯಿಂದ) ಹೊರಬಂದ, ದುಃಖದಿಂದ ಆರ್ತರಾದ ಮಹಿಳೆಯರ ಅನೇಕ ಗುಂಪುಗಳು , (ಮನೆಯ) ಅಂಗಳದಲ್ಲಿ ಚಿಕ್ಕಮಕ್ಕಳು ರೋದಿಸುವಂತೆ ಆಗ ರೋದಿಸಿದರು.
ಪ್ರಗೃಹ್ಯ ಬಾಹೂನ್ ಕ್ರೋಶಂತ್ಯಃ ಪುತ್ರಾನ್ ಭ್ರಾತೄನ್ ಪಿತೄನಪಿ |
ದರ್ಶಯಂತ್ಯ ಇವಾಭಸ್ಮ ಯುಗಾಂತೇ ಲೋಕಸಂಕ್ಷಯೇ ॥12॥
ವಿಲಪಂತ್ಯೋ ರುದಂತ್ಯಶ್ಚ ಧಾವಮಾನಾ ಇತಸ್ತತಃ |
ಶೋಕೇನ ವಿಹತಜ್ಞಾನಾಃ ಕರ್ತವ್ಯಂ ನ ಪ್ರಜಜ್ಞಿರೇ ॥13॥
ಮಕ್ಕಳನ್ನು, ಸಹೋದರರನ್ನು, ತಂದೆಯರನ್ನು ಕರೆಯುವವರಾಗಿ, ಪರಸ್ಪರ ಒಬ್ಬರ ಬಾಹುಗಳನ್ನು ಮತ್ತೊಬ್ಬರು ಪಿಡಿದವರಾಗಿ, ಲೋಕ ನಾಶವಾಗುವ ಯುಗದ ಅಂತ್ಯದಲ್ಲಿ ಸುತ್ತಲೂ ಹರಡಿರುವ ಭಸ್ಮವನ್ನು ಕಂಡವರಂತೆ, ದುಃಖಿಸುತ್ತಿರುವ, ರೋದಿಸುತ್ತಿರುವ, ಅತ್ತಿಂದಿತ್ತ ಪರದಾಡುತ್ತಿರುವ, ದುಃಖದಿಂದ ಅರಿವನ್ನೇ ಕಳೆದುಕೊಂಡಿರುವ ಅವರು ಕರ್ತವ್ಯಕರ್ಮದ ಎಚ್ಚರವಿಲ್ಲದವರಾದರು.
ವ್ರೀಳಾಂ ಜಗ್ಮುಃ ಪುರಾ ಯಾಃ ಸ್ಮ ಸಖೀನಾಮಪಿ ಯೋಷಿತಃ |
ನಿರ್ಲಜ್ಜಾಸ್ತಾಸ್ತು ರಾಜೇಂದ್ರ ಶ್ವಶ್ರೂಣಾಮಪಿ ಸನ್ನಿಧೌ ॥14॥
ರಾಜರ ಒಡೆಯನೇ! ಹಿಂದೆ ಯಾರು ತಮ್ಮ ಸಖಿಯರ ಬಳಿಯಲ್ಲೂ ನಾಚುತ್ತಿದ್ದರೋ, ಅವರು (ತಮ್ಮ ) ಅತ್ತೆಯರ ಸನ್ನಿಧಿಯಲ್ಲಿ ಲಜ್ಜಾರಹಿತರಾಗಿ ವರ್ತಿಸಿದರು (ಏಕವಸ್ತ್ರಧಾರಿಗಳಾಗಿ ತಿರುಗಾಡಿದರು).
ಪರಸ್ಪರಂ ಸುಸೂಕ್ಷ್ಮೇಷು ಶೋಕೇಷ್ವಾಶ್ವಾಸಯಂತಿ ಯಾಃ |
ತಾಃ ಶೋಕವಿಹ್ವಲಾ ರಾಜನ್ ನಾವೈಕ್ಷಂತ ಪರಸ್ಪರಮ್ ॥15॥
ರಾಜನೇ! (ಹಿಂದೆ) ಯಾರು ಅತಿ ಸಣ್ಣ ದುಃಖದ ಸಂದರ್ಭಗಳಲ್ಲೂ ಪರಸ್ಪರ ಸಮಾಧಾನವನ್ನು ಹೇಳುತ್ತಿದ್ದರೋ ಅವರು ಶೋಕದಲ್ಲಿ ಮುಳುಗಿದ್ದರೂ ಒಬ್ಬರನ್ನು ಮತ್ತೊಬ್ಬರು ನೋಡಲೂ ಇಲ್ಲ.
ತಾಭಿಃ ಪರಿವೃತೋ ರಾಜಾ ರುದಂತೀಭಿಃ ಸಹಸ್ರಶಃ |
ನಿರ್ಯಯೌ ನಗರಾತ್ ತೂರ್ಣಂ ದೀನಸತ್ತ್ವಯೋಧನಂ ಪ್ರತಿ ॥16॥
ರೋದಿಸುತ್ತಿರುವ ಸಹಸ್ರಾರು ಆ ಹೆಂಗಳೆಯರಿಂದ ಸುತ್ತುವರಿದಿರುವ ದೀನನಾದ ರಾಜನು (ಧೃತರಾಷ್ಟ್ರನು) ನಗರದಿಂದ ರಣರಂಗಕ್ಕೆ ಹೊರಟನು.
ಶಿಲ್ಪಿನೋ ವಣಿಜೋ ವೈಶ್ಯಾಃ ಸರ್ವಕರ್ಮೋಪಜೀವಿನಃ |
ತೇ ಪಾರ್ಥಿವಂ ಪುರಸ್ಕೃತ್ಯ ನಿರ್ಯಯುರ್ನಗರಾದ್ ಬಹಿಃ ॥17॥
ಶಿಲ್ಪಿಗಳು, ವ್ಯಾಪಾರಿಗಳು, ವೈಶ್ಯರು, ವಿವಿಧ ಕಸುಬುಗಳಿಂದ ಜೀವಿಸುವವರು ರಾಜನನ್ನು ಮುಂದೆಮಾಡಿಕೊಂಡು ನಗರದಿಂದ ಹೊರ ಹೊರಟರು.
ತೇಷಾಂ ವಿಕ್ರೋಶಮಾನಾನಾಮಾರ್ತಾನಾಂ ಕುರುಸಂಕ್ಷಯೇ |
ಪ್ರಾದುರಾಸೀನ್ಮಹಾನ್ ಶಬ್ದೋ ವ್ಯಥಯನ್ ಭುವನಾನ್ಯುತ ॥18॥
ಕುರುಗಳ ಯುದ್ಧದ ಸಂದರ್ಭದಲ್ಲಿ ದುಃಖಿತರಾದ, ರೋದಿಸುತ್ತಿರುವ ಅವರುಗಳಿಂದ ಭಾರೀ ಗದ್ದಲವು ಆರಂಭವಾಯಿತು. ಆ (ಗದ್ದಲದ) ಶಬ್ದವು ಲೋಕವನ್ನೇ ದುಃಖಕ್ಕೆ ಈಡುಮಾಡಿತು.
ಯುಗಾಂತಕಾಲೇ ಸಂಪ್ರಾಪ್ತೇ ಭೂತಾನಾಂ ದಹ್ಯತಾಮಿವ |
ಅಭಾವಸ್ಯೋದಯಂ ಪ್ರಾಪ್ತ ಇತಿ ಭೂತಾನಿ ಮೇನಿರೇ ॥19॥
ಯುಗಾಂತವು ಪ್ರಾಪ್ತವಾಗಲು ಪ್ರಾಣಿಗಳ ನಾಶವಾಗುವಂತೆ (ಜೀವಿಗಳ) ನಾಶವು ಸಂಪ್ರಾಪ್ತವಾಯಿತು ಎಂದು ಜೀವಿಗಳು ಭಾವಿಸಿದವು.
ಭೃಶಮುದ್ವಿಗ್ನಮನಸಸ್ತೇ ಪೌರಾ ಜನಸಂಕ್ಷಯೇ |
ಪ್ರಾಕ್ರೋಶಂತ ಮಹಾರಾಜ ಸ್ವನುರಕ್ತಾಸ್ತದಾ ಭೃಶಮ್ ॥20॥
ಮಹಾರಾಜನೇ! ಜನರ ನಾಶದ ಆ ಸಂದರ್ಭದಲ್ಲಿ ಅತ್ಯಂತ ಉದ್ವೇಗಕ್ಕೆ ಒಳಗಾದ (ಮತ್ತೆ ಅವರಲ್ಲಿ) ಅನುರಕ್ತರಾದ ಆ ನಾಗರಿಕರೂ ರೋದಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ದಶಮೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಮೃತಬಂಧುಗಳನ್ನು ಕಾಣಲು ರಣಭೂಮಿಗೆ ಹೊರಟ ಧೃತರಾಷ್ಟ್ರನಿಗೆ ಮಾರ್ಗಮಧ್ಯದಲ್ಲಿ ಅಶ್ವತ್ಥಾಮಾದಿ ಮೂವರ ಭೇಟ್ಟಿ, ಅವರು
ಧೃತರಾಷ್ಟ್ರನಿಗೆ ಸಮಾಧಾನಕರ ಮಾತುಗಳನ್ನು ಹೇಳುವುದು,
ಅವರು ತನುತಮಗೆ ಅಭಿಮತವಾದ ಸ್ಥಳಕ್ಕೆ ತೆರಳುವುದು.
ವೈಶಂಪಾಯನಃ
ಕ್ರೋಶಮಾತ್ರಂ ತತೋ ಗತ್ವಾ ದದೃಶುಸ್ತಾನ್ ಮಹಾರಥಾನ್ |

ಶಾರದ್ವತಂ ಕೃಪಂ ದ್ರೌಣಿಂ ಕೃತವರ್ಮಾಣಮೇವ ಚ ॥1॥
ವೈಶಂಪಾಯನ ಅನಂತರದಲ್ಲಿ (ಅರಮನೆಯಿಂದ) ಒಂದು ಕೂಗು ಅಳತೆ ಮಾತ್ರ ಸಾಗಿ, ಶರದ್ವತಗೋತ್ರೋತ್ಪನ್ನನಾದ ಕೃಪಾಚಾರ್ಯ, ದ್ರೋಣಪುತ್ರ ಮತ್ತು ಕೃತವರ್ಮರೆಂಬ ಆ ಮಹಾರಥಿಕರನ್ನು (ಧೃತರಾಷ್ಟ್ರಾದಿಗಳು) ಕಂಡರು.
ತೇ ತು ದೃಷ್ಟ್ವೈವ ರಾಜಾನಂ ಪ್ರಜ್ಞಾಚಕ್ಷುಷಮೀಶ್ವರಮ್ ।
ಅಶ್ರುಕಂಠಾ ವಿನಿಃಶ್ವಸ್ಯ ರುದಂತ ಇದಮಬ್ರುವನ್ ॥2॥
ಜ್ಞಾನನೇತ್ರನಾದ (ಬಾಹ್ಯನೇತ್ರವಿಲ್ಲದ), ಸ್ವಾಮಿಯಾದ ರಾಜನನ್ನು ಕಂಡ ಅವರು ಕುತ್ತಿಗೆ ಪರ್ಯಂತ ಕಣ್ಣೀರನ್ನು ಸುರಿಸುತ್ತಾ ನಿಟ್ಟುಸಿರನ್ನು ಬಿಡುತ್ತಾ ರೋದಿಸುತ್ತಿರುವ ಅವರು ಇದನ್ನು ಹೇಳಿದರು.
ಕೃಪಾದಯಃ
ಪುತ್ರಸ್ತವ ಮಹಾರಾಜ ಕೃತ್ವಾ ಕರ್ಮ ಸುದುಷ್ಕರಮ್ ।
ಗತಃ ಸಾನುಚರೋ ರಾಜಾ ಶಕ್ರಲೋಕಂ ಮಹಾರಥಃ ॥3॥
ಕೃಪಾದಿಗಳು ಮಹಾರಾಜನೇ! ನಿನ್ನ ಪುತ್ರನಾದ ಮಹಾರಥಿಕನಾದ ರಾಜನು ಮತ್ತೊಬ್ಬರು ಮಾಡಲಾಗದ ಕರ್ಮವನ್ನು ಮಾಡಿ, ಅನುಚರರ ಸಹಿತನಾಗಿ ಇಂದ್ರಲೋಕಕ್ಕೆ ಸಾಗಿದನು.
ದುರ್ಯೋಧನಬಲಾನ್ಮುಕ್ತಾ ವಯಮೇವ ತ್ರಯೋ ರಥಾಃ ।
ಸರ್ವಮನ್ಯತ್ ಪರಿಕ್ಷೀಣಂ ಸೈನ್ಯಂ ತೇ ಭರತರ್ಷಭ ॥4॥
ಭರತಕುಲೋತ್ಪನ್ನನೇ! ನಾವು ಮೂವರು ಮಾತ್ರ ದುರ್ಯೋಧನನ ಬಲದಿಂದ ಮುಕ್ತರಾಗಿರುವೆವು, ನಿನ್ನ ಬೇರೆ ಎಲ್ಲ ಸೈನ್ಯವು ನಾಶವಾಯಿತು.
ವೈಶಂಪಾಯನಃ
ಇತ್ಯೇವಮುಕ್ತ್ವಾ ರಾಜಾನಂ ಕೃಪಃ ಶಾರದ್ವತಸ್ತದಾ ।
ಗಾಂಧಾರೀಂ ಪುತ್ರಶೋಕಾರ್ತಾಮಿದಂ ವಚನಮಬ್ರವೀತ್ ॥5॥
ವೈಶಂಪಾಯನ ಕೃಪನು ರಾಜನನ್ನು ಉದ್ದೇಶಿಸಿ ಹೀಗೆ ಹೇಳಿ, ಪುತ್ರಶೋಕದಿಂದ ಆರ್ತಳಾದ ಗಾಂಧಾರಿಯನ್ನು ಉದ್ದೇಶಿಸಿ ಹೀಗೆ ಹೇಳಿದನು.
ಕೃಪಃ
ಅಭೀತಾ ಯುಧ್ಯಮಾನಾಸ್ತೇ ಘ್ನಂತಃ ಶತ್ರುಗಣಾನ್ ಬಹೂನ್ ।
ವೀರಕರ್ಮಾಣಿ ಕುರ್ವಾಣಾಃ ಪುತ್ರಾಸ್ತೇ ನಿಧನಂ ಗತಾಃ ॥6॥
ಕೃಪರು ಹೆದರಿಕೆಯಿಲ್ಲದೇ ಯುದ್ಧಮಾಡುತ್ತಿರುವ ಆ ನಿನ್ನ ಪುತ್ರರು ಶತ್ರುಗಳ ಸಮೂಹದ ಬಹುಭಾಗವನ್ನು ಸಂಹರಿಸುತ್ತಾ, ವೀರರ ಕರ್ಮಗಳನ್ನು ಮಾಡುತ್ತಾ ಸಾವನ್ನು ಹೊಂದಿದರು.
ಧ್ರುವಂ ಸಂಪ್ರಾಪ್ಯ ಲೋಕಾಂಸ್ತೇ ನಿರ್ಮಲಾನ್ ಶಸ್ತ್ರನಿರ್ಜಿತಾನ್ ।
ಭಾಸ್ವರಂ ದೇಹಮಾಸ್ಥಾಯ ವಿಹರಂತ್ಯಮರಾ ಇವ ॥7॥
ನಿಶ್ಚಯವಾಗಿಯೂ ಅವರು ಶಸ್ತ್ರದಿಂದ ಸೋತವರು ಹೊಂದಬಹುದಾದ ಶುದ್ಧವಾದ ಲೋಕವನ್ನು ಹೊಂದಿ, ಪ್ರಕಾಶಮಾನವಾದ ದೇಹವನ್ನು ಹೊಂದಿ ದೇವತೆಗಳಂತೆ ವಿಹರಿಸುತ್ತಿರುವರು.
ಸರ್ವೇ ಹ್ಯಭಿಮುಖಾ ರಾಜ್ಞ ಯುಧ್ಯಮಾನಾ ಹತಾ ಯುಧಿ ॥8॥
ಎಲ್ಲರೂ ರಾಜರಿಗೆ ಅಭಿಮುಖರಾಗಿ ಹೋರಾಡುತ್ತಾ ಯುದ್ಧದಲ್ಲಿ ಮೃತರಾದರು.
ನ ಹಿ ಕಶ್ಚಿದ್ಧಿ ಶೂರಾಣಾಂ ಯುಧ್ಯಮಾನಃ ಪರಾಙ್ಮುಖಃ ।
ಶಸ್ತ್ರೇಣ ನಿಧನಂ ಪ್ರಾಪ್ತೋ ನ ಹಿ ಕಶ್ಚಿತ್ ಕೃತಾಂಜಲಿಃ ॥9॥
ಶೂರರ ಎದುರಿನಲ್ಲಿ ಯುದ್ಧಮಾಡುತ್ತಿರುವ ಯಾರೊಬ್ಬರೂ ಹಿಂತಿರುಗಲಿಲ್ಲ, ಶಸ್ತ್ರದಿಂದ ಮರಣವನ್ನು ಹೊಂದಿದರು, ಯಾರೂ (ಶತ್ರುಗಳಿಗೆ) ಕೈಜೋಡಿಸಲಿಲ್ಲ.
ಏತಾಂ ತಾಂ ಕ್ಷತ್ರಿಯಸ್ಯಾಹುಃ ಪುರಾಣಾಃ ಪರಮಾಂ ಗತಿಮ್ ।
ಶಸ್ತ್ರೇಣ ನಿಧನಂ ಸಂಖ್ಯೇ ತಾನ್ ನ ಶೋಚಿತುಮರ್ಹಸಿ ॥10॥
ಕ್ಷತ್ರಿಯನಿಗೆ ಯುದ್ಧದಲ್ಲಿ ಶಸ್ತ್ರದಿಂದ ಸಾವು ಪ್ರಾಪ್ತವಾದಲ್ಲಿ ಯಾವ ಶ್ರೇಷ್ಠ ಗತಿಯನ್ನು ಪ್ರಾಚೀನರು ತಿಳಿಸಿರುವರೋ ಅದನ್ನು ಹೊಂದಿರುವ ಅವರನ್ನು ಉದ್ದೇಶಿಸಿ ದುಃಖಿಸುವುದು ತರವಲ್ಲ.
ನ ಚಾಪಿ ಶತ್ರವಸ್ತೇಷಾಮೃಧ್ಯಂತೇ ರಾಜ್ಞ ಪಾಂಡವಾಃ ।
ಶೃಣು ಯತ್ ಕೃತಮಸ್ಮಾಭಿರಶ್ವತ್ಥಾಮಪುರೋಗಮೈಃ ॥11॥
ರಾಜನೇ! ಅವರುಗಳ (ನಿನ್ನ ಪುತ್ರರ) ಶತ್ರುಗಳಾದ ಪಾಂಡವರು ಹೆಚ್ಚಿನ ಲಾಭವನ್ನು ಹೊಂದಿಲ್ಲ. ಅಶ್ವತ್ಥಾಮನ ಮುಂದಾಳುತನದಲ್ಲಿ ನಾವು ಏನನ್ನು ಮಾಡಿದೆವು ಎನ್ನುವುದನ್ನು ಕೇಳು.
ಅಧರ್ಮೇಣ ಹತಂ ಶ್ರುತ್ವಾ ಭೀಮಸೇನೇನ ತೇ ಸುತಮ್ ।
ಸುಪ್ತಂ ಶಿಬಿರಮಾವಿಶ್ಯ ಪಾಂಡೂನಾಂ ಕದನಂ ಮಹತ್ ॥12॥
ಅಧರ್ಮದಿಂದ ನಿನ್ನ ಮಗನನ್ನು ಭೀಮಸೇನನು ಸಂಹರಿಸಿದನು ಎನ್ನುವುದನ್ನು ಕೇಳಿ, ಮಲಗಿದ ಪಾಂಡವರ ಶಿಬಿರವನ್ನು ಹೊಕ್ಕು ಭಾರೀ ಕದನವನ್ನು ಸಾರಿದೆವು.
ಪಾಂಚಾಲಾ ನಿಹತಾಃ ಸರ್ವೇ ಧೃಷ್ಟದ್ಯುಮ್ನಪುರೋಗಮಾಃ ।
ದ್ರುಪದಸ್ಯಾತ್ಮಜಾಶ್ಚೈವ ದ್ರೌಪದೇಯಾಶ್ಚ ಪಾತಿತಾಃ ॥13॥

ದ್ರುಪದನ ಮಕ್ಕಳಾದ ಧೃಷ್ಟದ್ಯುಮ್ನನೇ ಮುಂತಾದ ಎಲ್ಲ ಪಾಂಚಾಲರನ್ನು ಸಂಹರಿಸಿದೆವು. ದ್ರೌಪದಿಯ ಮಕ್ಕಳನ್ನೂ ಕೆಡವಿದೆವು.
ತಥಾ ವಿಶಸನಂ ಕೃತ್ವಾ ಪುತ್ರಶತ್ರುಗಣಸ್ಯ ತೇ |
ಪ್ರಾದ್ರವಾಮ ನ ಹಿ ಸ್ಥಾತುಂ ರಣೇ ಶಕ್ಷ್ಯಾಮಹೇ ತ್ರಯಃ ॥14॥
ನಿನ್ನ ಮಕ್ಕಳ ಶತ್ರುಗಣದ ನಾಶವನ್ನು ಮಾಡಿ (ಅಲ್ಲಿಂದ) ಓಡಿದೆವು, ನಾವು ಮೂವರೇ ರಣರಂಗದಲ್ಲಿ ನಿಲ್ಲಲು ಸಮರ್ಥರಲ್ಲ.
ತೇ ಹಿ ಶೂರಾ ಮಹೇಷ್ವಾಸಾಃ ಕ್ಷಿಪ್ರಮೇಷ್ಯಂತಿ ಪಾಂಡವಾಃ |
ಅಮರ್ಷವಶಮಾಪನ್ನಾ ವೈರಂ ಪ್ರತಿಚಿಕೀರ್ಷವಃ ॥15॥
ತೇ ಹತಾನಾತ್ಮಜಾನ್ ಶ್ರುತ್ವಾ ಪ್ರಮತ್ತಾಃ ಪುರುಷರ್ಷಭಾಃ |
ಅನ್ವಿಷ್ಯಂತಃ ಪದಂ ಶೂರಾಃ ಕ್ಷಿಪ್ರಮೇಷ್ಯಂತಿ ಪಾಂಡವಾಃ ॥16॥
ಶೂರರಾದ ಬಿಲ್ಲಾಳುಗಳಾದ ಆ ಪಾಂಡವರು ಶೀಘ್ರದಲ್ಲಿ ಬರಲಿದ್ದಾರೆ, ದ್ವೇಷಕ್ಕೆ ಪ್ರತೀಕಾರ ಮಾಡಬೇಕೆಂಬ ಇಚ್ಛೆಯಿರುವ ಸಿಟ್ಟಿನ ಅಧೀನರಾಗಿರುವ ಅವರು ಮಕ್ಕಳು ಮೃತರಾದರು ಎನ್ನುವುದನ್ನು ಕೇಳಿ, ಪ್ರಮಾದರಹಿತರಾದ ಪುರುಷಶ್ರೇಷ್ಠರಾದ ಶೂರರಾದ ಪಾಂಡವರು (ನಮ್ಮ) ಸ್ಥಾನವನ್ನು ಅರಸುತ್ತಾ ಶೀಘ್ರವಾಗಿ ಬರಲಿದ್ದಾರೆ.
ಪಾಂಡೂನಾಂ ಕಿಲ್ಬಿಷಂ ಕೃತ್ವಾ ಸಂಸ್ಥಾತುಂ ನೋತ್ಸಹಾಮಹೇ |
ಅನುಜಾನೀಹಿ ಮಾಂ ರಾಜ್ಞಿ ಮಾ ಚ ಶೋಕೇ ಮನಃ ಕೃಥಾಃ ॥17॥
ಪಾಂಡವರಿಗೆ ಅನ್ಯಾಯವನ್ನು ಮಾಡಿ (ನಾವು ಇಲ್ಲಿ) ನಿಲ್ಲಲು ಉತ್ಸಾಹವನ್ನು ಹೊಂದಿಲ್ಲ, ಮಹಾರಾಣಿಯೆ! ನನಗೆ ಅನುಮತಿಯನ್ನು ನೀಡು, ದುಃಖದಲ್ಲಿ ಮನವನ್ನು ಮಾಡದಿರು.
ರಾಜಂಸ್ತ್ವಮನುಜಾನೀಹಿ ಧೈರ್ಯಮಾತಿಷ್ಠ ಚೋತ್ತಮಮ್ |
ದಿಷ್ಟಾಂತಂ ಪಶ್ಯ ಚಾಪಿ ತ್ವಂ ಕ್ಷತ್ರಧರ್ಮಂ ಚ ಕೇವಲಮ್ ॥18॥
ರಾಜನೆ! ನೀನೂ ಅನುಮತಿಯನ್ನು ನೀಡು, ಹೆಚ್ಚಿನ ಧೈರ್ಯವನ್ನು ತೆಗೆದುಕೊ, ಕೇವಲ ಕ್ಷತ್ರಧರ್ಮವನ್ನು ಗಮನಿಸಿ (ಮಕ್ಕಳ) ಅಂತ್ಯವನ್ನು ಕಾಣುವವನಾಗು. (ಕ್ಷತ್ರಿಯನಾದವನು ರಣರಂಗದಲ್ಲಿ ಸಾವನ್ನು ಹೊಂದುವುದು ಹೆಮ್ಮೆಯ ಸಂಗತಿ ಎಂದು ತಿಳಿಯುವವನಾಗು ಎಂದು ಭಾವ).
ವೈಶಂಪಾಯನಃ
ಇತ್ಯೇವಮುಕ್ತ್ವಾ ರಾಜಾನಂ ಕೃತ್ವಾ ಚಾಪಿ ಪ್ರದಕ್ಷಿಣಮ್ |
ಕೃಪಶ್ಚ ಕೃತವರ್ಮಾ ಚ ದ್ರೋಣಪುತ್ರಶ್ಚ ಭಾರತ ॥19॥
ಅನ್ವೀಕ್ಷಮಾಣಂ ರಾಜಾನಂ ಧೃತರಾಷ್ಟ್ರಂ ಮನೀಷಿಣಮ್ |
ಗಂಗಾಮನು ಮಹಾತ್ಮಾನಃ ತೂರ್ಣಮಶ್ವಾನಚೋದಯನ್ ॥20॥
ವೈಶಂಪಾಯನ ಭರತಕುಲೋತ್ಪನ್ನನೆ! ಕೃಪ ಕೃತವರ್ಮ ದ್ರೋಣಪುತ್ರನೂ ಸಹ ರಾಜನನ್ನು ಉದ್ದೇಶಿಸಿ ಹೀಗೆ ಹೇಳಿ, ಪ್ರದಕ್ಷಿಣೆಯನ್ನೂ ಮಾಡಿ, ಜ್ಞಾನಿಯಾದ ರಾಜನಾದ ಧೃತರಾಷ್ಟ್ರನನ್ನು ಮತ್ತೆ ಮತ್ತೆ ನೋಡುತ್ತಾ ಗಂಗೆಯನ್ನು ಅನುಸರಿಸಿ ಆ ಮಹಾತ್ಮರು ಕುದುರೆಗಳನ್ನು ವೇಗವಾಗಿ ಪ್ರಚೋದಿಸಿದರು.
ಅಪಕ್ರಮ್ಯ ಚ ತೇ ಸರ್ವೇ ತ್ರಯೋ ರಾಜನ್ ಮಹಾರಥಾಃ |
ಆಮಂತ್ರ್ಯಾನ್ಯೋನ್ಯಮುದ್ವಿಗ್ನಾಃ ತ್ರಿಧಾ ತೇ ಪ್ರಯಯುಸ್ತತಃ ॥21॥
ರಾಜನೆ! ಆ ಎಲ್ಲ ಮೂವರೂ ಮಹಾರಥಿಕರು ಸ್ವಲ್ಪದೂರ ಸಾಗಿ, ಅನಂತರದಲ್ಲಿ ಹೆದರಿದ ಅವರು ಪರಸ್ಪರವಾಗಿ ಆಲೋಚಿಸಿ ಮೂರು ಹಾದಿಗಳಲ್ಲಿ ಸಾಗಿದರು.
ಜಗಾಮ ಹಸ್ತಿನಪುರಂ ಕೃಪಃ ಶಾರದ್ವತಸ್ತತಃ |
ಸ್ವಮೇವ ರಾಷ್ಟ್ರಂ ಹಾರ್ದಿಕ್ಯೋ ದ್ರೌಣಿರ್ವ್ಯಾಸಾಶ್ರಮಂ ಯಯೌ ॥22॥
ಅನಂತರದಲ್ಲಿ ಶರದ್ವತಗೋತ್ರೋತ್ಪನ್ನನಾದ ಕೃಪನು ಹಸ್ತಿನಪುರಕ್ಕೆ ತೆರಳಿದನು, ಕೃತವರ್ಮನು ತನ್ನ ನಗರಕ್ಕೆ ತೆರಳಿದನು, ದ್ರೋಣಪುತ್ರನು ವ್ಯಾಸಾಶ್ರಮಕ್ಕೆ ತೆರಳಿದನು.
ಏವಂ ತೇ ಪ್ರಯಯುರ್ವೀರಾಃ ವೀಕ್ಷಮಾಣಾಃ ಪರಸ್ಪರಮ್ |
ಭಯಾರ್ತಾಃ ಪಾಂಡುಪುತ್ರಾಣಾಮಾಗಸ್ಕೃತ್ವಾ ಮಹಾತ್ಮನಾಮ್ ॥23॥
ಮಹಾತ್ಮರಾದ ಪಾಂಡುಪುತ್ರರಿಗೆ ಪಾಪವನ್ನೆಸಗಿ, ಭಯಗ್ರಸ್ತರಾದ ವೀರರಾದ ಅವರು ಒಬ್ಬರನ್ನು ಮತ್ತೊಬ್ಬರು ನೋಡುತ್ತಾ ಹೊರಟರು.
ಸಮೇತ್ಯ ವೀರಂ ರಾಜಾನಂ ತದಾ ತ್ವನುದಿತೇ ರವೌ |
ವಿಪ್ರಜಗ್ಮುರ್ಮಹಾರಾಜ ಯಥೇಷ್ಟಕಮರಿಂದಮಾಃ ॥24॥
ಮಹಾರಾಜನೆ! ಶತ್ರುಗಳನ್ನು ಮಣಿಸುವ (ಆ ಮೂವರು) ವೀರನಾದ ರಾಜನನ್ನು (ಧೃತರಾಷ್ಟ್ರನನ್ನು) ಸಂಧಿಸಿ, ಸೂರ್ಯೋದಯವಾಗುವ ಮೊದಲು ಅವರಿಗೆ ಅಭೀಷ್ಟವಾದ ಸ್ಥಳಕ್ಕೆ ಸಾಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಏಕಾದಶೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ಯುಧಿಷ್ಠಿರಸ್ಯಾನು ವಿಚಿತ್ರವೀರ್ಯ
ಸುತಸ್ಯ ಪಾದಾವಭಿವಂದಮಾನಮ್ |

ಆಕೃಷ್ಯ ಭೀಮಂ ಪರಮೇಶ್ವರೋಽಯೋ-
ಮಯಾಕೃತಿಮಧಾತ್ ಪುರತೋ ನೃಪಸ್ಯ ॥
ಯುಧಿಷ್ಠಿರನ ಅನಂತರ ಭೀಮ ಬಂದು ಧೃತರಾಷ್ಟ್ರನಿಗೆ ಪಾದಾಭಿವಂದನೆ ಮಾಡುವಾಗ ಶ್ರೀಕೃಷ್ಣ ಅವನನ್ನು ಈಚೆಗೆ ಸೆಳೆದು, ಅವನ ಸ್ಥಾನದಲ್ಲಿ ಕಬ್ಬಿಣದ ಪ್ರತಿಮೆಯನ್ನು ಧೃತರಾಷ್ಟ್ರನ ಮುಂದೆ ನಿಲ್ಲಿಸಿದನು.
ಭೀಮಾಕೃತಿಂ ತಾಂ ಸ ಸುಯೋಧನೇನ
ಕಾರಾಪಿತಾಮಭ್ಯಸನೇ ಗದಾಯಾಃ |
ಆಶ್ಲಿಷ್ಯ ಚೂರ್ಣೀಕೃತವಾನಸೃಗ್ ವಮನ್
ಹಾ ತಾತ ಭೀಮೇತಿ ವದನ್ ಪಪಾತ ॥
ದುರ್ಯೋಧನನ ಗದಾಭ್ಯಾಸಕ್ಕಾಗಿ ಮಾಡಿಸಿದ್ದ ಆ ಭೀಮಪ್ರತಿಮೆಯನ್ನು ಧೃತರಾಷ್ಟ್ರ ಬಿಗಿಯಾಗಿ ಅಪ್ಪಿ ಪುಡಿ ಮಾಡಿದನು. ತಾನೂ ನೆತ್ತರು ಕಾರುತ್ತಾ `ಹಾ ಮಗು, ಭೀಮ! ಸತ್ತೆಯಾ?' ಎಂದು ಹೇಳುತ್ತಾ ಬಿದ್ದನು.
* * * * *
ಹನ್ನೆರಡನೆಯ ಅಧ್ಯಾಯ
ಧರ್ಮರಾಜನು ಕೃಷ್ಣಾದಿಗಳಿಂದ ಕೂಡಿಕೊಂಡು ಧೃತರಾಷ್ಟ್ರನ ಸಮೀಪಕ್ಕೆ ತೆರಳಿದನು, ಧೃತರಾಷ್ಟ್ರನು ಧರ್ಮರಾಜನನ್ನು ಮೃದುವಾಗಿ ಆಲಿಂಗನ ಮಾಡಿಕೊಂಡನು, ಅನಂತರದಲ್ಲಿ ಕೃಷ್ಣನು ಮುಂದೆ ಸರಿಸಿದ ಭೀಮನ
ಲೋಹದ ಪ್ರತಿಮೆಯನ್ನು ಬಿಗಿಯಾಗಿ ಆಲಿಂಗಿಸಿ ಭಂಜಿಸಿದನು.
ವೈಶಂಪಾಯನಃ
ಹತೇಷು ಸರ್ವಸೈನ್ಯೇಷು ಪಾಂಡುಪುತ್ರೋ ಯುಧಿಷ್ಠಿರಃ |
ಶುಶ್ರುವೇ ಪಿತರಂ ವೃದ್ಧಂ ನಿರ್ಯಾಂತಂ ಗಜಸಾಹ್ವಯಾತ್ ॥1॥
ವೈಶಂಪಾಯನ ಪಾಂಡುಪುತ್ರನಾದ ಯುಧಿಷ್ಠಿರನು ಎಲ್ಲ ಸೈನ್ಯವು ಸಂಹೃತವಾಗಲು, ವೃದ್ಧನಾದ ತಂದೆಯು ಹಸ್ತಿನಾವತಿಯಿಂದ ಹೊರಟನು ಎಂಬುದನ್ನು ಕೇಳಿದನು.
ಸೋಽಭ್ಯಯಾತ್ ಪುತ್ರಶೋಕಾರ್ತಂ ಪುತ್ರಶೋಕಪರಿಪ್ಲುತಃ |
ಶೋಚಮಾನೋ ಮಹಾರಾಜ ಭ್ರಾತೃಭಿಃ ಸಹಿತಸ್ತತಃ ॥2॥
ಅನ್ವೀಯಮಾನೋ ವೀರೇಣ ದಾಶಾರ್ಹೇಣ ಮಹಾತ್ಮನಾ |
ಯುಯುಧಾನೇನ ಚ ತಥಾ ತಥೈವ ಚ ಯುಯುತ್ಸುನಾ ॥3॥
ಮಹಾರಾಜನೇ! ಅನಂತರದಲ್ಲಿ ಪುತ್ರಶೋಕದಿಂದ ಮುಳುಗಿಹೋದ ದುಃಖಿಸುತ್ತಿರುವ ಮಹಾತ್ಮನಾದ ದಶಾರ್ಹಕುಲೋತ್ಪನ್ನನಾದ ವೀರನಾದ ಕೃಷ್ಣನಿಂದ ಅನುಸರಿಸಿದವನಾದ, ಹಾಗೆಯೇ ಸಾತ್ಯಕಿಯಿಂದ ಮತ್ತು ಯುಯುತ್ಸುವಿನಿಂದಲೂ ಅನುಸರಿಸಿದವನಾದ ಆತನು (ಯುಧಿಷ್ಠಿರನು) ಸಹೋದರರಿಂದ ಕೂಡಿಕೊಂಡು ಪುತ್ರಶೋಕದಿಂದ ಆರ್ತನಾದವನನ್ನು (ಧೃತರಾಷ್ಟ್ರನನ್ನು) ಸಮೀಪಿಸಿದನು.
ತಮನ್ವಯಾತ್ ಸುದುಃಖಾರ್ತಾ ದ್ರೌಪದೀ ಶೋಕಕರ್ಶಿತಾ |
ಸಹ ಪಾಂಚಾಲಯೋಷಿದ್ಭಿಃ ಯಾಸ್ತತ್ರಾಸನ್ ಸಮಾಗತಾಃ ॥4॥
ಯಾರು ಯಾರು ಆ ಮೊದಲೇ ಅಲ್ಲಿಗೆ ಬಂದು ಸೇರಿದ್ದರೋ ಆ ಎಲ್ಲರಿಂದ ಪಾಂಚಾಲಸ್ತ್ರೀಯರಿಂದಲೂ ಒಡಗೂಡಿದ ದುಃಖದಿಂದ ಸೊರಗಿದ ಅತ್ಯಂತ ದುಃಖಿತಳಾದ ದ್ರೌಪದಿಯು ಆತನನ್ನು (ಧರ್ಮರಾಜನನ್ನು) ಅನುಸರಿಸಿದಳು.
ಸಂಗ್ರಾಮಮನು ಬೃಂದಾನಿ ಸ್ತ್ರೀಣಾಂ ಭರತಸತ್ತಮ |
ಕುರರೀಣಾಮಿವಾರ್ತಾನಾಂ ಕ್ರೋಶಂತೀನಾಂ ದದರ್ಶ ಹ ॥5॥
ತಾಭಿಃ ಪರಿವೃತೋ ರಾಜಾ ರುದಂತೀಭಿಃ ಸಮಂತತಃ |
ಊರ್ಧ್ವಬಾಹುಭಿರಾರ್ತಾಭಿಃ ಬ್ರುವಂತೀಭಿಃ ಪ್ರಿಯಾಪ್ರಿಯೇ ॥6॥
ಭರತಕುಲೋತ್ಪನ್ನರಲ್ಲಿ ಉತ್ತಮನೇ! ರೋದಿಸುತ್ತಿರುವ ಕುರರ ಪಕ್ಷಿಗಳಂತೆ ದುಃಖಿತರಾದ ಮಹಿಳೆಯರ ಗುಂಪನ್ನು ಧರ್ಮರಾಜನು ರಣರಂಗದ ಸಮೀಪದಲ್ಲಿ ಕಂಡನು. (ಪಾಂಡವರ ಬಗ್ಗೆ) ಪ್ರೀತಿಯ ದ್ವೇಷದ ಮಾತುಗಳನ್ನು ಆಡುತ್ತಿರುವ, ದುಃಖಿತರಾಗಿ ಕೈಗಳನ್ನು ಮೇಲೆತ್ತಿ ರೋದಿಸುತ್ತಿರುವ ರಾಜನನ್ನು (ಧೃತರಾಷ್ಟ್ರನನ್ನು), ಸುತ್ತುವರೆದಿದ್ದ ಸ್ತ್ರೀಯರನ್ನು ಕಂಡನು.
ಸ್ತ್ರಿಯಃ
ಧರ್ಮಸ್ತೇ ಕ್ವ ನು ಧರ್ಮಜ್ಞ ಕ್ವ ನು ಸಾಽದ್ಯಾನೃಶಂಸತಾ |
ಯಥಾಽವಧೀಃ ಪಿತೄನ್ ಭ್ರಾತೄನ್ ಗುರೂನ್ ಪುತ್ರಾನ್ ಸಖೀನಪಿ ॥
ಧರ್ಮಜ್ಞನೆ! ಪಿತೃಗಳನ್ನು ಸಹೋದರರನ್ನು ಗುರುಗಳನ್ನು ಮಕ್ಕಳನ್ನು ಸ್ನೇಹಿತರನ್ನು ಸಂಹರಿಸಿದ ನಿನ್ನ ಧರ್ಮವು ಎಲ್ಲಿದೆ? ಇಂದು (ನಿನ್ನ) ಆ ಸಾಧುತನವೆಲ್ಲಿದೆ?
ಘಾತಯಿತ್ವಾ ಕಥಂ ದ್ರೋಣಂ ಭೀಷ್ಮಂ ಚಾಪಿ ಪಿತಾಮಹಮ್ |
ಮನಸ್ತೇಽಭೂನ್ಮಹಾರಾಜ ಹತ್ವಾ ಚಾಪಿ ಜಯದ್ರಥಮ್ ॥8॥
ಮಹಾರಾಜನೆ! ದ್ರೋಣರನ್ನು ಸಂಹರಿಸಲು, ಪಿತಾಮಹರನ್ನು ಸಂಹರಿಸಲು, ಜಯದ್ರಥನನ್ನು ಸಂಹರಿಸಲು ನಿನಗೆ ಮನವು ಹೇಗೆ ಉಂಟಾಯಿತು?
ಕಿಂ ನು ರಾಜ್ಯೇನ ತೇ ಕಾರ್ಯಂ ಪಿತೄನ್ ಭ್ರಾತೄನಪಶ್ಯತಃ |
ಅಭಿಮನ್ಯುಂ ಚ ದುರ್ಧರ್ಷಂ ದ್ರೌಪದೇಯಾಂಶ್ಚ ಭಾರತ ॥9॥

ಭರತಕುಲೋತ್ಪನ್ನನೇ! ಪಿತೃಗಳನ್ನು ಕಾಣದೆ, ಸಹೋದರರನ್ನು ಕಾಣದೆ, ಶತ್ರುಗಳಿಂದ ಧರ್ಷಣಕ್ಕೆ ಒಳಗಾಗದ ಅಭಿಮನ್ಯುವನ್ನು ಕಾಣದ, ದ್ರೌಪದಿಯ ಪುತ್ರರನ್ನು ಕಾಣದ, ನಿನಗೆ ರಾಜ್ಯದಿಂದ ಏನು ಪ್ರಯೋಜನ?
ವೈಶಂಪಾಯನಃ
ಅತೀತ್ಯ ತಾಃ ಮಹಾರಾಜ ಕ್ರೋಶಂತೀಃ ಕುರರೀರಿವ |
ವವಂದೇ ಪಿತರಂ ಜ್ಯೇಷ್ಠಂ ಧರ್ಮರಾಜೋ ಯುಧಿಷ್ಠಿರಃ ॥10॥
ವೈಶಂಪಾಯನ ಮಹಾರಾಜನೆ! ಕುರರ ಪಕ್ಷಿಗಳಂತೆ ಕೂಗುತ್ತಿರುವ ಅವರೆಲ್ಲರನ್ನೂ ದಾಟಿ ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನು ದೊಡ್ಡಪ್ಪನನ್ನು ನಮಿಸಿದನು.
ತತೋಽಭಿವಾದ್ಯ ಪಿತರಂ ಕ್ರಮೇಣಾಮಿತ್ರಕರ್ಶನಾಃ |
ನ್ಯವೇದಯಂತ ನಾಮಾನಿ ಪಾಂಡವಾಸ್ತೇಽಪಿ ಸರ್ವಶಃ ॥11॥
ಅನಂತರದಲ್ಲಿ ಶತ್ರುಗಳನ್ನು ಬಗ್ಗುಬಡಿಯುವ ಆ ಎಲ್ಲ ಪಾಂಡವರು ಕ್ರಮವಾಗಿ ನಮಸ್ಕರಿಸಿ (ತಮ್ಮ) ಹೆಸರುಗಳನ್ನು ಹೇಳಿಕೊಂಡರು.
ತಮಾತ್ಮಜಾಂತಕರಣಂ ಪಿತಾ ಪುತ್ರವಧಾರ್ದಿತಃ |
ಅಪ್ರೀಯಮಾಣಃ ಶೋಕಾರ್ತಃ ಪಾಂಡವಂ ಪರಿಷಸ್ವಜೇ ॥12॥
ಮಕ್ಕಳ ಸಾವಿನಿಂದ ದುಃಖಿತನಾದ ದುಃಖದಿಂದ ಬೆಂದ (ಆ) ದೊಡ್ಡಪ್ಪನು ಮಕ್ಕಳ ಸಾವಿಗೆ ಕಾರಣನಾದ ಆ ಪಾಂಡುಪುತ್ರನನ್ನು (ಧರ್ಮರಾಜನನ್ನು) ಒಲ್ಲದ ಮನದಿಂದ ಅಪ್ಪಿಕೊಂಡನು.
ಧರ್ಮರಾಜಂ ಪರಿಷ್ವಜ್ಯ ಸಾಂತ್ವಯಿತ್ವಾ ಚ ಭಾರತ |
ದುಷ್ಟಾತ್ಮಾ ಭೀಮಮನ್ವೈಚ್ಛದ್ ದಿಧಕ್ಷುರಿವ ಪಾವಕಃ ॥13॥
ಭರತಕುಲೋತ್ಪನ್ನನೇ! ಧರ್ಮರಾಜನನ್ನು ಅಪ್ಪಿಕೊಂಡು ಸಮಾಧಾನಗೊಳಿಸಿದ ನಂತರದಲ್ಲಿ ದಹಿಸಲು ಬಯಸುವ ಬೆಂಕಿಯಂತೆ ಕೆಟ್ಟ ಅಂತರಂಗದವನಾದ (ಧೃತರಾಷ್ಟ್ರನು) ಭೀಮಸೇನನನ್ನು (ಆಲಿಂಗಿಸಿಕೊಳ್ಳಲು) ಬಯಸಿದನು.
ಸ ಕೋಪಪಾವಕಸ್ತಸ್ಯ ಶೋಕವಾಯುಸಮೀರಿತಃ |
ಭೀಮಸೇನಮಯಂ ದಾವಂ ದಿಧೃಕ್ಷುರಿವ ದೃಶ್ಯತೇ ॥14॥
ಶೋಕವೆಂಬ ಗಾಳಿಯಿಂದ ಉದ್ದೀಪನಗೊಂಡ ಆತನ ಕೋಪವೆಂಬ ಬೆಂಕಿಯು ಭೀಮಸೇನನೆಂಬ ಅರಣ್ಯವನ್ನು ದಹಿಸಲು ಬಯಸಿರುವಂತೆ ಕಂಡಿತು.
ತಸ್ಯ ಸಂಕಲ್ಪಮಾಜ್ಞಾಯ ಭೀಮಂ ಪ್ರತ್ಯಶುಭಂ ಹರಿಃ |
ಭೀಮಮಾಕ್ಷಿಪ್ಯ ಪಾಣಿಭ್ಯಾಂ ಪ್ರದದೌ ಭೀಮಮಾಯಸಮ್ ॥15॥
ಭೀಮನ ಬಗ್ಗೆ ಕೆಟ್ಟಭಾವವಿರುವ ಆತನ ಇಚ್ಛೆಯನ್ನು ತಿಳಿದ ಹರಿಯು, ಕೈಗಳಿಂದ ಭೀಮನನ್ನು ತಳ್ಳಿ, ಕಬ್ಬಿಣದ ಭೀಮನನ್ನು (ಭೀಮಪ್ರತಿಮೆಯನ್ನು) ಮುಂದೆ ಮಾಡಿದನು.
ಪ್ರಾಗೇವ ತು ಮಹಾಬಾಹುರ್ಬುದ್ಧ್ವಾ ತಸ್ಯೇಂಗಿತಂ ಹರಿಃ |
ಸಂವಿಧಾನಂ ಮಹಾಪ್ರಾಜ್ಞಸ್ತತ್ರ ಚಕ್ರೇ ಜನಾರ್ದನಃ ॥16॥
ನೀಳಬಾಹುವಾದ ಮಹಾಜ್ಞಾನಿಯಾದ (ಪ್ರಳಯಕಾಲದಲ್ಲಿ ಎಲ್ಲ) ಜನರನ್ನು ಸಂಹರಿಸುವ ಹರಿಯು, ಮೊದಲೇ ಆತನ (ಧೃತರಾಷ್ಟ್ರನ) ಅಂತರಂಗವನ್ನು ತಿಳಿದು, ಪ್ರತಿತಂತ್ರವನ್ನು ಮಾಡಿದನು.
ಉಪಗೃಹ್ಯೈವ ಬಾಹುಭ್ಯಾಂ ರಾಜಾ ಸ್ತಂಭಮಯೋಮಯಮ್ |
ಬಭಂಜ ಬಲವಾನ್ ರಾಜಾ ಮನ್ಯಮಾನೋ ವೃಕೋದರಮ್ ॥17॥
ಪ್ರಜಾರಂಜಕನಾದ ಬಲಿಷ್ಠನಾದ ರಾಜನು ಸ್ತಂಭದಂತಿರುವ ಭೀಮಸೇನನನ್ನು (ಕಬ್ಬಿಣದ ಗೊಂಬೆಯನ್ನು) ಎರಡೂ ಕೈಗಳಿಂದ ಹಿಡಿದು ಪುಡಿಮಾಡಿದನು.
ನಾಗಾಯುತಸಮಪ್ರಾಣಃ ಸ ರಾಜಾ ಭೀಮಮಾಯಸಮ್ |
ಭಂಕ್ತ್ವಾ ವಿಮಥಿತೋರಸ್ಕಃ ಸುಸ್ರಾವ ರುಧಿರಂ ಮುಖಾತ್ ॥18॥
ಹತ್ತುಸಾವಿರ ಆನೆಯ ಬಲವನ್ನು ಹೊಂದಿರುವ ಆ ರಾಜನು ಕಬ್ಬಿಣದ ಭೀಮಸೇನನನ್ನು ಪುಡಿಮಾಡಿ, ಎದೆಯು ಜಜ್ಜಿದಂತಾದುದರಿಂದ ಬಾಯಿಯಿಂದ ರಕ್ತವನ್ನು ಸುರಿಸಿದನು.
ತತಃ ಪಪಾತ ಮೇದಿನ್ಯಾಂ ತಥೈವ ರುಧಿರೋಕ್ಷಿತಃ |
ಪ್ರಪುಷ್ಪಿತಾಗ್ರಶಿಖರಃ ಪಾರಿಜಾತ ಇವ ದ್ರುಮಃ ॥19॥
ಹಾಗೆಯೇ ರಕ್ತದಿಂದ ಸಿಕ್ತನಾದ (ಧೃತರಾಷ್ಟ್ರನು) ನೆಲಕ್ಕೆ ಉರುಳಿದನು, ಪರ್ವತದ ತುದಿಯಲ್ಲಿನ ಹೂಗಳಿಂದ ಭರಿತವಾದ ಪಾರಿಜಾತ ಮರಬಿದ್ದಂತೆ ಕಂಡನು.
ಪರ್ಯಗೃಹ್ಣೀತ ತಂ ವಿದ್ವಾನ್ ಸೂತೋ ಗಾವಲ್ಗಣಿಸ್ತದಾ |
ಮೈವಮಿತ್ಯಬ್ರವೀಚ್ಚೈನಂ ಶಮಯನ್ ಸಾಂತ್ವಯನ್ನಪಿ ॥20॥
ಜ್ಞಾನಿಯಾದ ಸೂತನಾದ ಗವಲ್ಗಣನ ಪುತ್ರನು (ಸಂಜಯನು) ಅತನನ್ನು ಹಿಡಿದುಕೊಂಡನು, ` ಹೀಗಾಗ ಕೂಡದು' ಎಂದು ಹೇಳಿದನು, ಆತನನ್ನು ಸಮಧಾನಪಡಿಸಿದನು, ಶೈತ್ಯೋಪಚಾರವನ್ನು ಮಾಡಿದನು.
ಹತೋ ಭೀಮ ಇತಿ ಜ್ಞಾತ್ವಾ ಗತಮನ್ಯುರ್ಮಹಾಮನಾಃ |
ಹಾ ಹಾ ಭೀಮೇತಿ ಚುಕ್ರೋಶ ಭೂಯಃ ಶೋಕಸಮನ್ವಿತಃ ॥21॥
ಭೀಮನು ಮೃತನಾದನು ಎಂದು ತಿಳಿದು ಕೋಪವನ್ನಡಗಿಸಿಕೊಂಡಿದ್ದ ಮಹಾಮನಸ್ವಿಯು `ಅಯ್ಯಯ್ಯೋ ಭೀಮಸೇನ' ಎಂದು

ಅರಚಿದನು, ಮತ್ತೆ ದುಃಖಾವಿಷ್ಟನಾದನು.
ತಂ ವಿದಿತ್ವಾ ಗತಕ್ರೋಧಂ ಭೀಮಸೇನವಧಾರ್ದಿತಮ್ |
ವಾಸುದೇವೋ ವರಂ ಪುಂಸಾಮಿದಂ ವಚನಮಬ್ರವೀತ್ ॥22॥
ಭೀಮಸೇನನ ಸಂಹರಣದಿಂದ ದುಃಖಿತನಾದ, ಕೋಪವನ್ನು ಅಡಗಿಸಿಕೊಂಡಿರುವ ಆತನ ಅಂತರಂಗವನ್ನು ತಿಳಿದು, ವಾಸುದೇವನು ಮನುಜರಿಗೆ ಹಿರಿಯನಾದ ಧೃತರಾಷ್ಟ್ರನನ್ನು ಉದ್ದೇಶಿಸಿ ಈ ಮಾತನ್ನು ತಿಳಿಸಿದನು.
ಶ್ರೀಭಗವಾನ್
ಮಾ ಶುಚೋ ಧೃತರಾಷ್ಟ್ರ ತ್ವಂ ನೈವ ಭೀಮಸ್ತ್ವಯಾ ಹತಃ |
ಆಯಸೀ ಪ್ರತಿಮಾ ಹ್ಯೇಷಾ ತ್ವಯಾ ರಾಜನ್ ನಿಪಾತಿತಾ ॥23॥
ಕೃಷ್ಣ ರಾಜನೆ, ಧೃತರಾಷ್ಟ್ರನೇ! ನೀನು ದುಃಖಿಸದಿರು, ನಿನ್ನಿಂದ ಭೀಮಸೇನನು ಸಂಹೃತನಾಗಿಲ್ಲ. ಈ ಕಬ್ಬಿಣದ ಪ್ರತಿಮೆಯು ನಿನ್ನಿಂದ ಪುಡಿಮಾಡಲ್ಪಟ್ಟಿತು.
ತ್ವಾಂ ಕ್ರೋಧವಶಮಾಪನ್ನಂ ವಿದಿತ್ವಾ ಭರತರ್ಷಭ |
ಮಯಾಽಪಕೃಷ್ಟಃ ಕೌಂತೇಯೋ ಮೃತ್ಯೋರ್ದಂಷ್ಟ್ರಾಂತರಂ ಗತಃ ॥24॥
ಭರತಕುಲಶ್ರೇಷ್ಠನೆ! ನೀನು ಕ್ರೋಧದ ಅಧೀನನಾಗಿರುವದನ್ನು ತಿಳಿದು, ಮೃತ್ಯುವಿನ ದವಡೆಯಲ್ಲಿ ಸಿಲುಕಿದ ಕುಂತೀಪುತ್ರನನ್ನು ನಾನು ಪಾರುಮಾಡಿರುವೆ.
ನ ಹಿ ತೇ ರಾಜಶಾರ್ದೂಲ ಬಲೇ ತುಲ್ಯೋಽಸ್ತಿ ಕಶ್ಚನ |
ಯಃ ಸಹೇತ ಮಹಾಬಾಹೋ ತವ ನಿಗ್ರಹಣಂ ನರಃ ॥25॥
ರಾಜವ್ಯಾಘ್ರನೇ! ಬಲದಲ್ಲಿ ನಿನ್ನ ಸಮಾನರು ಯಾರೂ ಇಲ್ಲ. ನಿನ್ನ ಹಿಡಿತವನ್ನು ಯಾವ ಮನುಷ್ಯನು ಸಹಿಸಿಯಾನು?
ಯಥಾ ಹಿ ನಾಂತಕಂ ಪ್ರಾಪ್ಯ ಜೀವನ್ ಮುಚ್ಯೇತ ಕಶ್ಚನ |
ಏವಂ ಬಾಹ್ವಂತರಂ ಪ್ರಾಪ್ಯ ನ ಜೀವೇದಿಹ ಕಶ್ಚನ ॥26॥
ಹೇಗೆ ಅಂತಕನನ್ನು ಹೊಂದಿ ಯಾರೂ ಮುಕ್ತರಾಗುವುದಿಲ್ಲವೊ, ಹಾಗೆ ನಿನ್ನ ಬಾಹುವಿನ ಹಿಡಿತಕ್ಕೆ ಸಿಲುಕಿದವನು ಯಾವಾತನೂ ಬದುಕಲಾರ.
ತಸ್ಮಾತ್ ಪುತ್ರೇಣ ತೇ ಯಾ ಸಾ ಪ್ರತಿಮಾ ಕಾರಿತಾಽಽಯಸೀ |
ಭೀಮಸ್ಯ ಸೇಯಂ ಕೌರವ್ಯ ತವೈವೋಪಹೃತಾ ಮಯಾ ॥27॥
ಕುರುಕುಲೋತ್ಪನ್ನನೆ! ನಿನ್ನ ಪುತ್ರನು ಭೀಮನ ಕಬ್ಬಿಣದ ಪ್ರತಿಮೆಯನ್ನು ಮಾಡಿಸಿದ್ದನು( ನಿತ್ಯವು ಗದಾಯುದ್ಧವನ್ನು ಅಭ್ಯಸಿಸಲು ದುರ್ಯೋಧನನು ಭೀಮನ ಪ್ರತಿಮೆಯನ್ನು ಮಾಡಿಸಿಕೊಂಡಿದ್ದನು), ಆದ್ದರಿಂದ (ಭೀಮಸೇನನನ್ನು ಸಂಹರಿಸಬಾರದು ಎಂಬ ಉದ್ದೇಶದಿಂದ) ನಾನು ನಿನ್ನಿಂದ ಆ ಪ್ರತಿಮೆಯನ್ನು ನಾಶಗೊಳಿಸಿಸಿದೆನು.
ಪುತ್ರಶೋಕಾಭಿಸಂತಾಪಾದ್ ಧರ್ಮಾದಪಹೃತಂ ಮನಃ |
ತವ ರಾಜೇಂದ್ರ ತೇನ ತ್ವಂ ಭೀಮಸೇನಂ ಜಿಘಾಂಸಸಿ ॥28॥
ರಾಜರಲ್ಲಿ ಹಿರಿಯನೆ! ಮಕ್ಕಳ ಶೋಕದಿಂದ ಸಂತಪ್ತನಾದ್ದರಿಂದ ನಿನ್ನ ಮನವು ಧರ್ಮವನ್ನು ತೊರೆಯಿತು, ಆದ್ದರಿಂದ ಭೀಮಸೇನನನ್ನು ಸಂಹರಿಸಲು ಬಯಸಿದ್ದಿ.
ನ ಚ ತೇ ತತ್ ಕ್ಷಮಂ ರಾಜನ್ ಹನ್ಯಾಸ್ತ್ವಂ ಯದ್ ವೃಕೋದರಮ್ |
ನ ಹಿ ಪುತ್ರಾ ಮಹಾರಾಜ ಜೀವೇಯುಸ್ತೇ ಕಥಂಚನ ॥29॥
ರಾಜನೆ! ಅದು ನಿನ್ನಿಂದ ಶಕ್ಯವಿಲ್ಲದ್ದು, ಮತ್ತೂ ನೀನು ಭೀಮಸೇನನ್ನು ಸಂಹರಿಸಿದರೂ ಹೇಗಾದರೂ ನಿನ್ನ ಮಕ್ಕಳು ಬದುಕಿಬಾಳಲಾರರು (ಆಯುಷ್ಯವು ಮುಗಿದ ನಿನ್ನ ಪುತ್ರನು ಪಾಂಡವರಿಂದ ಬದುಕಿ ಉಳಿದಿದ್ದರೂ ಸಂಹೃತರಾಗಲೇ ಬೇಕಿತ್ತು ಎಂದು ಭಾವ).
ತಸ್ಮಾದ್ ಯತ್ ಕೃತಮಸ್ಮಾಭಿರ್ಮನ್ಯಮಾನೈಃ ಶಮಂ ಪ್ರತಿ |
ಅನುಮನ್ಯಸ್ವ ರಾಜೇಂದ್ರ ಮಾ ಚ ಶೋಕೇ ಮನಃ ಕೃಥಾಃ ॥30॥
ರಾಜಶ್ರೇಷ್ಠನೆ! ಶಾಂತಿಯನ್ನು ಬಯಸುವ ನಾವು ಏನೆಲ್ಲವನ್ನು ಮಾಡಿದೆವು (ಆದರೆ ಫಲಿಸಲಿಲ್ಲ). ಆದ್ದರಿಂದ (ನಮ್ಮನ್ನು) ಕ್ಷಮಿಸುವವನಾಗು, ದುಃಖದಲ್ಲಿ ಮನವನ್ನು ಮಾಡಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ
ಅಯೋಮಯಭೀಮಪ್ರತಿಮಾಭಂಜನಂ ನಾಮ ದ್ವಾದಶೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ತಮಾಹ ಕೃಷ್ಣೋ ನ ಹತೋಽದ್ಯ ಭೀಮೋ
ನ ಚ ತ್ವಯಾಽನ್ಯೈರಪಿ ಶಕ್ಯತೇಽಸೌ |
ಹಂತುಂ ಸ್ವಬುದ್ಧಿಃ ಪ್ರಥಿತಾ ತ್ವಯಾಽದ್ಯ
ಪಾಪಾ ಹಿ ತೇ ಬುದ್ಧಿರದ್ಯಾಪಿ ರಾಜನ್ ॥
ಆಗ ಧೃತರಾಷ್ಟ್ರನಿಗೆ ಶ್ರೀಕೃಷ್ಣನೆಂದ- `ಭೀಮನೀಗ ಹತನಾಗಿಲ್ಲ. ನಿನಗಾಗಲಿ ಬೇರೆಯವರಿಗಾಗಲಿ ಅವನನ್ನು ಕೊಲ್ಲಲು ಶಕ್ಯವೂ

ಇಲ್ಲ. ಆದರೆ ರಾಜನೆ, ನೀನೀಗ ನಿನ್ನ ಹಾಳು ಬುದ್ಧಿಯನ್ನೇ ತೋರಿಸಿಕೊಂಡೆ. ಇನ್ನೂ ನಿನ್ನದು ಪಾಪಬುದ್ಧಿಯೆ!
ಸ್ವಬುದ್ಧಿದೋಷಾದತಿಪಾಪಶೀಲ
ಪುತ್ರಾಖ್ಯಪಾಪಾನಿ ವಿವರ್ಧಯಿತ್ವಾ |
ನೀತೋ ವಶಂ ತೈಃ ಫಲಮದ್ಯ ಭುಂಜನ್
ನ ಕ್ರೋಧಿತುಂ ಚಾರ್ಹಸಿ ಭೀಮಸೇನೇ ॥
ನಿನ್ನ ಈ ಬುದ್ಧಿ ದೋಷದಿಂದಲೆ ಅತಿಪಾಪಶೀಲರಾದ ಪುತ್ರರೂಪಿಪಾಪಗಳನ್ನೆ ಬೆಳೆಸಿ, ಅವರಿಗೆ ವಶನಾಗಿ, ಪಾಪದ ಫಲವನ್ನೇ ಉಣ್ಣುತ್ತಿರುವ ನೀನು ಇನ್ನಾದರೂ ಭೀಮಸೇನನಲ್ಲಿ ಕೋಪ ಮಾಡದಿರು.
ಇತ್ಯುಕ್ತೇ ಶಾಂತಬುದ್ಧಶ್ಚ ರಾಜ್ಞಾಽಽಹೂತೋ ವೃಕೋದರಃ |
ಅಭ್ಯವಂದತ ತತ್ಪಾದಾವನುಜಾದ್ಯಾಶ್ಚ ತಸ್ಯ ಯೇ ॥
ಕೃಷ್ಣ ಹೀಗೆ ಹೇಳಿದಾಗ ಧೃತರಾಷ್ಟ್ರ, ಶಾಂತಬುದ್ಧಿಯಿಂದಲೆ ಭೀಮನನ್ನು ಕರೆದ. ಅವನು ಬಂದು ಧೃತರಾಷ್ಟ್ರನ ಪಾದಗಳನ್ನು ವಂದಿಸಿದನು. ಬಳಿಕ ಅವನ ತಮ್ಮಂದಿರು ಮುಂತಾದವರೂ ಅಭಿವಾದನ ಮಾಡಿದರು.
ವಜ್ರಾಚ್ಚ ದೃಢದೇಹತ್ವಾದವಿಕಾರೇ ವೃಕೋದರೇ |
ನ ದೋಷೋ ವಿವೃತೋಽಸ್ಯ ಸ್ಯಾದಿತಿ ಕೃಷ್ಣೇನ ವಂಚಿತಃ ॥
ಭೀಮಸೇನನು ವಜ್ರಕ್ಕಿಂತಲೂ ಗಟ್ಟಿಯಾದ ಶರೀರದವನು. ಅವನ ಅಂಗಗಳಲ್ಲಿ ಯಾವ ವಿಕಾರಕ್ಕೂ ಆಸ್ಪದವಿಲ್ಲ. ಆದರೂ ಭೀಮನನ್ನು ಧೃತರಾಷ್ಟ್ರ ಅಪ್ಪಿದ್ದರೆ ಧೃತರಾಷ್ಟ್ರನ ದುಷ್ಟಬುದ್ಧಿ ಪ್ರಕಟವಾಗುತ್ತಿದ್ದಿಲ್ಲ. ಅದರಿಂದ ಕೃಷ್ಣ ಹೀಗೆ ವಂಚಿಸಿದ್ದ.
* * * * *

ಹದಿಮೂರನೆಯ ಅಧ್ಯಾಯ
ಕೃಷ್ಣನ ಉಪದೇಶದಿಂದ ಕೋಪವನ್ನು ಬಿಟ್ಟ ಧೃತರಾಷ್ಟ್ರನು
ಭೀಮಾದಿಗಳನ್ನು ಆಲಿಂಗಿಸಿಕೊಂಡನು.

ವೈಶಂಪಾಯನಃ
ತತ ಏನಮುಪಾತಿಷ್ಠನ್ ಶೌಚಾರ್ಥಂ ಪರಿಚಾರಕಾಃ |
ಕೃತಶೌಚಂ ಪುನಶ್ಚೈನಂ ಪ್ರೋವಾಚ ಮಧುಸೂದನಃ ॥1॥
ವೈಶಂಪಾಯನ ಅನಂತರದಲ್ಲಿ ಪರಿಚಾರಕರು ಈತನನ್ನು (ಧೃತರಾಷ್ಟ್ರನನ್ನು) ಶೌಚಕ್ಕಾಗಿ ಸಮೀಪಿಸಿದರು, ಶೌಚವನ್ನು ಮುಗಿಸಿದ ಆತನನ್ನು ಉದ್ದೇಶಿಸಿ ಮಧಸೂದನನು ಉಪದೇಶಿಸಿದನು.
ಶ್ರೀಭಗವಾನ್
ರಾಜನ್ನಧೀತಾ ವೇದಾಸ್ತೇ ಶಾಸ್ತ್ರಾಣಿ ವಿವಿಧಾನಿ ಚ |
ಶ್ರುತಾನಿ ಚ ಪುರಾಣಾನಿ ರಾಜಧರ್ಮಾಶ್ಚ ಕೇವಲಾಃ ॥2॥
ಕೃಷ್ಣ ರಾಜನೆ! ನೀನು ವೇದಗಳನ್ನು, ವಿವಿಧಶಾಸ್ತ್ರಗಳನ್ನು ಅಭ್ಯಸಿಸಿರುವಿ, ಪುರಾಣಗಳನ್ನು ಮುಖ್ಯವಾದ ರಾಜಧರ್ಮಗಳನ್ನು ಕೇಳಿರುವಿ.
ಏವಂ ವಿದ್ವಾನ್ ಮಹಾಪ್ರಾಜ್ಞಃ ಸಮರ್ಥಃ ಸತ್ವವಾನ್ ಬಲೀ |
ಆತ್ಮಾಪರಾಧೇ ಕಸ್ಮಾತ್ ತ್ವಂ ಕುರುಷೇ ರೋಷಮೀದೃಶಮ್ ॥3॥
ಈ ರೀತಿಯಾಗಿ ತಿಳಿದವನಾದ ಮಹಾಜ್ಞಾನಿಯಾದ ಸಮರ್ಥನಾದ ಅಂತಃಸತ್ವ ಬಹಿಃಸತ್ವವನ್ನು ಹೊಂದಿರುವ ನೀನು ನಿನ್ನ ಅಪರಾಧದಿಂದಲೇ (ಅನರ್ಥವು ಸಂಭವಿಸಿರಲು) ಏತಕ್ಕಾಗಿ ಇಂತಹ ರೋಷವನ್ನು (ಅನ್ಯರಲ್ಲಿ) ಮಾಡುತ್ತಿರುವಿ?
ಉಕ್ತವಾಂಸ್ತೇ ತಥೈವಾಹಂ ಭೀಷ್ಮದ್ರೋಣೌ ಚ ಭಾರತ |
ವಿದುರಃ ಸಂಜಯಶ್ಚೈವ ತ್ವಂ ತು ರಾಜನ್ನಧಃ ಕೃಥಾಃ ॥4॥
ರಾಜನೆ, ಭರತಕುಲೋತ್ಪನ್ನನೆ! ನಾನು (ಈಗ ಏನು ಹೇಳಿದೆನೊ) ಅದೇ ರೀತಿಯಲ್ಲಿ ಭೀಷ್ಮರು ದ್ರೋಣರು ವಿದುರನು ಸಂಜಯನು ನಿನ್ನನ್ನು ಉದ್ದೇಶಿಸಿ (ಈ ಹಿಂದೆಯೇ) ಹೇಳಿದ್ದರು, ಆದರೆ ನೀನು ಅದನ್ನು ಧಿಕ್ಕರಿಸಿದಿ.
ಸ ವಾರ್ಯಮಾಣೋ ನಾಸ್ಮಾಕಮಕಾರ್ಷೀರ್ವಚನಂ ತದಾ |
ಪಾಂಡವಾನಧಿಕಾನ್ ಜಾನನ್ ಬಲೇ ಶೌರ್ಯೇ ಚ ಭಾರತ ॥5॥
ಕುರುವಂಶೋದ್ಭವನೆ! ಬಲ ಶೌರ್ಯಗಳಲ್ಲಿ ಪಾಂಡುಪುತ್ರರು (ನಿನ್ನ ಮಕ್ಕಳಿಂದ) ಹೆಚ್ಚಿನವರು ಎಂದು ತಿಳಿದರೂ ಸಹ (ತಪ್ಪು ನಿರ್ಣಯವನ್ನು ತೆಗೆದುಕೊಂಡಿದ್ದ) ಆತನು (ನಿನ್ನ ಪುತ್ರನು) ನಿಷೇಧಕ್ಕೆ ಯೋಗ್ಯನಾಗಿದ್ದರೂ ಸಹ, ಆಗ ನಮ್ಮ ಮಾತುಗಳನ್ನು ಅನುಸರಿಸಲಿಲ್ಲ (ನಿನ್ನ ಪುತ್ರನನ್ನು ತಡೆಯಲಿಲ್ಲ).
ರಾಜಾ ಹಿ ಯಃ ಸ್ಥಿರಃ ಪ್ರಾಜ್ಞಃ ಸ್ವಯಂ ದೋಷಾನವೇಕ್ಷತೇ |
ದೇಶಕಾಲವಿಭಾಗಂ ಚ ಪರಂ ಶ್ರೇಯಃ ಸ ವಿಂದತಿ ॥6॥
ಯಾವಾತನು ಸ್ಥಿರ ಪ್ರಜ್ಞೆಯನ್ನು ಹೊಂದಿರುವನೋ ಆತನು ತನ್ನಲ್ಲಿಯ ದೋಷವನ್ನು ತಿಳಿದವನಾಗುವನೊ, ದೇಶದ ಕಾಲದ ಗತಿಯನ್ನು ತಿಳಿದವನಾಗುವನೊ (ಯಾವ ಕಾಲದಲ್ಲಿ ಏನನ್ನು ಆಚರಿಸಬೇಕು, ಆಚರಿಸಬಾರದು ಎಂದು ತಿಳಿದಂಥ ಕೊಂಡಿರುವನೊ) ಆತನು ಉತ್ತಮಗತಿಯನ್ನು ಹೊಂದುವನು.
ಉಚ್ಯಮಾನಂ ನ ಯಃ ಶ್ರೇಯೋ ಗೃಹ್ಣೀತೇ ವೈ ಯಥಾತಥಮ್ |
ಆಪದಂ ಸಮನುಪ್ರಾಪ್ಯ ಸೋಽಭ್ಯೇತಿ ವಿಲಯಂ ಕಿಲ ॥7॥
ಯಾವಾತನು ಉಪದಿಷ್ಟನಾದರೂ ಶ್ರೇಯೋಮಾರ್ಗವನ್ನು ಅನುಸರಿಸುವುದಿಲ್ಲವೊ ಆತನು ಆಪತ್ತಿಗೆ ಸಿಲುಕಿ, ನಾಶವನ್ನು

ಹೊಂದುವುದು ನಿಶ್ಚಯ!
ಅತೋಽನ್ಯವೃತ್ತಮಾತ್ಮಾನಂ ಸಮವೇಕ್ಷಸ್ವ ಭಾರತ |
ರಾಜಂಸ್ತ್ವಮವಿಧೇಯಾತ್ಮಾ ದುರ್ಯೋಧನವಶೇ ಸ್ಥಿತಃ ॥8॥
ಭರತಕುಲೋತ್ಪನ್ನನೆ, ರಾಜನೆ! ದುಷ್ಟಸ್ವಭಾವದವನಾದ ದುರ್ಯೋಧನನ ವಶದಲ್ಲಿದ್ದಿ, ಆದ್ದರಿಂದ ಬೇರೇ ಹಾದಿಯಲ್ಲಿದ್ದ ನಿನ್ನನ್ನೇ ಪರಿಶೀಲಿಸಿಕೊ. (ನಿನ್ನ ಹಿಂದಿನ ದಿನಗಳಲ್ಲಿನ ನಿರ್ಣಯಗಳನ್ನು ಪರಿಶೀಲಿಸಿಕೊ).
ಆತ್ಮಾಪರಾಧಾದಾಪನ್ನಃ ತತ್ ಕಿಂ ಭೀಮಜಿಘಾಂಸಯಾ |
ತಸ್ಮಾತ್ ಸಂಯಚ್ಛ ಕೋಪಂ ತ್ವಂ ಸ್ವಮನುಸ್ಮೃತ್ಯ ದುಷ್ಕೃತಮ್ ॥9॥
ನಿನ್ನ ತಪ್ಪಿರುವಾಗ ನೀನು ಭೀಮಸೇನನನ್ನು ಕೊಲ್ಲಲು ಏಕೆ ಬಯಸುವಿ? ಆದ್ದರಿಂದ ನೀನು ನಿನ್ನ ದುಷ್ಕೃತ್ಯಗಳನ್ನು ಸ್ಮರಿಸಿಕೊಂಡು ಕೋಪವನ್ನು ನಿಗ್ರಹಿಸು.
ಯಸ್ತು ತಾಂ ಸ್ಪರ್ಧಯಾ ಕ್ಷುದ್ರಃ ಪಾಂಚಾಲೀಮಾನಯತ್ ಸಭಾಮ್ |
ಸ ಹತೋ ಭೀಮಸೇನೇನ ವೈರಂ ಪ್ರತಿಚಿಕೀರ್ಷತಾ ॥10॥
ಯಾವ ಕ್ಷುದ್ರನು (ದುರ್ಯೋಧನನು) ಪೈಪೋಟಿಯಿಂದ ಆ ಪಾಂಚಾಲಿಯನ್ನು ಸಭೆಗೆ ಸೆಳೆದು ತಂದನೊ, (ಆ) ದ್ವೇಷಕ್ಕೆ ಪ್ರತೀಕಾರ ಮಾಡಬೇಕೆಂಬ ಇಚ್ಛೆಯಿರುವ ಭೀಮಸೇನನು ಆತನನ್ನು ಸಂಹರಿಸಿದನು.
ಆತ್ಮನೋಽತಿಕ್ರಮಂ ಪಶ್ಯ ಪುತ್ರಸ್ಯ ಚ ದುರಾತ್ಮನಃ |
ಯದನಾಗಸಿ ಪಾಂಡೂನಾಂ ಪರಿತ್ಯಾಗಃ ಪರಂತಪ ॥11॥
ಶತ್ರುದುಃಖಕರನೆ! ನಿನ್ನ ಮತ್ತು ನಿನ್ನ ಮಕ್ಕಳಾದ ದುಷ್ಟರ ಅಪಚಾರಗಳನ್ನು ಗಮನಿಸು, ಹಿಂದೆ ನಿರಪರಾಧಿಗಳಾದ ಪಾಂಡುಪುತ್ರರ ಪರಿತ್ಯಾಗ ಮಾಡಿರುವಿ.
ವೈಶಂಪಾಯನಃ
ಏವಮುಕ್ತಃ ಸ ಕೃಷ್ಣೇನ ನೃಪಃ ಸತ್ಯಂ ಜನಾಧಿಪ |
ಉವಾಚ ದೇವಕೀಪುತ್ರಂ ಧೃತರಾಷ್ಟ್ರೋ ಮಹೀಪತಿಃ ॥12॥
ವೈಶಂಪಾಯನ ಜನನಾಯಕನೆ! ಕೃಷ್ಣನು ಈರೀತಿಯಾಗಿ ಸತ್ಯವನ್ನು ಹೇಳಲು, ಭೂಮಿಯ ಒಡೆಯನಾದ ರಾಜನಾದ ಧೃತರಾಷ್ಟ್ರನು ದೇವಕೀಪುತ್ರನನ್ನು ಉದ್ದೇಶಿಸಿ ಹೇಳಿದನು.
ಧೃತರಾಷ್ಟ್ರಃ
ಏವಮೇತನ್ಮಹಾಭಾಗ ಯಥಾ ವದಸಿ ಮಾಧವ |
ಪುತ್ರಸ್ನೇಹಸ್ತು ಧರ್ಮಾತ್ಮನ್ ಧರ್ಮಾನ್ಮಾಂ ಸಮಚಾಲಯತ್ ॥13॥
ಧೃತರಾಷ್ಟ್ರ ಭಾಗ್ಯವಂತನೆ ಮಧುಕುಲೋತ್ಪನ್ನನೆ! ನೀನು ಏನನ್ನು ಹೇಳಿರುವಿಯೋ ಅದು ಸರಿ. ಧರ್ಮಾತ್ಮನೆ! ಪುತ್ರಸ್ನೇಹವು ನನ್ನನ್ನು ಧರ್ಮದಿಂದ ಭ್ರಷ್ಟನನ್ನಾಗಿಸಿತು.
ದಿಷ್ಟ್ಯಾ ಸ ಪುರುಷವ್ಯಾಘ್ರೋ ಬಲವಾನ್ ಸತ್ಯವಿಕ್ರಮಃ |
ತ್ವದ್ಗುಪ್ತೋ ನಾಗಮತ್ ಕೃಷ್ಣ ಭೀಮೋ ಬಾಹ್ವಂತರಂ ಮಮ ॥14॥
ಕೃಷ್ಣ! ನೋಡಿದೆಯಾ? ಸತ್ಯದಿಂದಲೇ ಜಯಿಸುವ ಬಲಿಷ್ಟರಾದ ಪುರುಷರಲ್ಲಿ ಶ್ರೇಷ್ಠನಾದ ಆ ಭೀಮಸೇನನು ನಿನ್ನಿಂದ ರಕ್ಷಿತನಾಗಿ ನನ್ನ ತೋಳಿನ ಒಳಗಡೆ ಬಾರಲಿಲ್ಲ.
ಇದಾನೀಂ ತ್ವಹಮೇಕಾಗ್ರೋ ಗತಮನ್ಯುರ್ಗತಜ್ವರಃ |
ಮಧ್ಯಮಂ ಪಾಂಡವಂ ವೀರಂ ಸ್ಪ್ರಷ್ಟುಮಿಚ್ಛಾಮಿ ಕೇಶವ ॥15॥
ಕೇಶವನೆ! ಈಗಲಾದರೋ ನಾನು ಸ್ಥಿರಮನಸ್ಕನಾಗಿರುವೆ ಕೋಪವನ್ನು ಬಿಟ್ಟುರುವೆ ಜ್ವರರಹಿತನಾಗಿರುವೆ (ದ್ವೇಷಾದಿಗಳನ್ನು ಪರಿತ್ಯಜಿಸಿರುವೆ), ವೀರನಾದ ಪಾಂಡುಪುತ್ರರಲ್ಲಿ ಮಧ್ಯಮನನ್ನು (ಭೀಮಸೇನನ್ನು) ಸ್ಪರ್ಶಿಸಲು ಇಚ್ಛಿಸುವೆನು.
ಹತೇಷು ಪಾರ್ಥಿವೇಷ್ವೇಷು ಪುತ್ರೇಷು ಚ ಹತೇಷು ಚ |
ಪಾಂಡುಪುತ್ರೇಷು ಮೇ ಧರ್ಮಃ ಪ್ರೀತಿಶ್ಚಾಪ್ಯವತಿಷ್ಠತೇ ॥16॥
ಈ ರಾಜರೆಲ್ಲರೂ ಮೃತರಾಗಲು, ನನ್ನ ಮಕ್ಕಳು ಮೃತರಾಗಲು, ಇನ್ನು ಪಾಂಡುಪುತ್ರರಲ್ಲಿಯೇ ನನ್ನ ಪ್ರೀತಿ ಧರ್ಮವು ಸ್ಥಿರವಾಗಿರುವುದು.
ವೈಶಂಪಾಯನಃ
ತತಃ ಸ ಭೀಮಂ ಚ ಧನಂಜಯಂ ಚ
ಮಾದ್ರ್ಯಾಶ್ಚ ಪುತ್ರೌ ಪುರುಷಪ್ರವೀರೌ |
ಪಸ್ಪರ್ಶ ಗಾತ್ರೈಃ ಪ್ರರುದನ್ ಸುಗಾತ್ರಾನ್
ಆಶ್ವಾಸ್ಯ ಕಲ್ಯಾಣಮುವಾಚ ಚೈನಾನ್ ॥17॥
ವೈಶಂಪಾಯನ ಅನಂತರದಲ್ಲಿ ಆತನು ಭೀಮಸೇನ ಮತ್ತು ಧನಂಜಯನ ಪುರುಷಶ್ರೇಷ್ಠರಾದ ಮಾದ್ರಿಯ ಪುತ್ರರ ದೇಹಗಳನ್ನು ಸ್ಪರ್ಷಿಸಿದನು, ಸುಂದರ ಶರೀರಗಳಾದ ಅವರಿಗೆ ರೋದಿಸುತ್ತಾ ಮಂಗಳವಾಗಲಿ ಎಂದು ಹರಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಧೃತರಾಷ್ಟ್ರಕೋಪವಿಸರ್ಜನಂ ನಾಮ ತ್ರಯೋದಶೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.

* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ -28ನೇ ಅಧ್ಯಾಯ
ಸರ್ವಾನಾಶ್ಲಿಷ್ಯ ಚ ಪ್ರೇಮ್ಣಾ ಯುಯೋಜ ನೃಪ ಆಶಿಷಃ |
ಕುಲನಾಶಕರಃ ಪಾಪಃ ಶಾಪಯೋಗ್ಯಸ್ತವ ಹ್ಯಹಮ್ ॥
ಇತ್ಯುಕ್ತ್ವೈವ ಪ್ರಣಮತೋ ಗಾಂಧಾರೀ ಸುಪದಾಂಗುಲೀಃ |
ದದರ್ಶ ಧರ್ಮರಾಜಸ್ಯ ಪಟ್ಯಾಂತೇನ ಪ್ರಕೋಪಿತಾ |
ತಸ್ಯಾಃ ಕ್ರೋಧಾಗ್ನಿನಿರ್ದಗ್ಧನಖಃ ಸ ಕುನಖೋಽಭವತ್ ॥
ಧೃತರಾಷ್ಟ್ರನು ಪ್ರೀತಿಯಿಂದ ಎಲ್ಲರನ್ನೂ ಆಲಿಂಗಿಸಿ ಆಶೀರ್ವಾದ ಮಾಡಿದನು. ಆದರೆ ಧರ್ಮರಾಜ `ನಾನು ಕುಲನಾಶಕರನಾದ ಪಾಪಿ, ನಿನ್ನ ಶಾಪಕ್ಕೆ ಅರ್ಹನಾಗಿದ್ದೇನೆ' ಎಂದು ಹೇಳಿ ಗಾಂಧಾರಿಗೆ ನಮಿಸಿದಾಗ ಅವಳು ಕುಪಿತಳಾಗಿ ಕಣ್ಣಿಗೆ ಕಟ್ಟಿದ ಬಟ್ಟೆಯ ಅಂಚಿನಿಂದ ಧರ್ಮರಾಜನ ಸುಂದರವಾದ ಪಾದದ ಬೆರಳುಗಳನ್ನು ಕಂಡಳು. ಆಗ ಅವಳ ಕ್ರೋಧಾಗ್ನಿಯಿಂದ ಕಾಲ್ಬೆರಳ ಉಗುರುಗಳು ಸುಟ್ಟು ಅವನು ಹಾಳುಗುರಿನವನೆನಿಸಿದನು.
ಹದಿನಾಲ್ಕನೆಯ ಅಧ್ಯಾಯ
ಕೃಷ್ಣ ಯುಧಿಷ್ಠಿರಾದಿಗಳು ಗಾಂಧಾರಿಯ ಸಮೀಪಕ್ಕೆ ತೆರಳಿದರು, ಗಾಂಧಾರಿಯು ಯುಧಿಷ್ಠಿರನನ್ನು ಶಪಿಸುವಳು ಎನ್ನುವುದನ್ನು ಮೊದಲೇ
ತಿಳಿದ ವ್ಯಾಸರು ಗಾಂಧಾರಿಯ ಕೋಪವನ್ನು ಶಮನಗೊಳಿಸಿದರು.
ವೈಶಂಪಾಯನಃ
ಧೃತರಾಷ್ಟ್ರಾಭ್ಯನುಜ್ಞಾತಾಃ ತತಸ್ತೇ ಕುರುಪುಂಗವಾಃ |
ಅಭ್ಯಯುರ್ಭ್ರಾತರಃ ಸರ್ವೇ ಗಾಂಧಾರೀಂ ಸಹಕೇಶವಾಃ ॥1॥
ವೈಶಂಪಾಯನ ಆನಂತರ ಧೃತರಾಷ್ಟ್ರನಿಂದ ಅನುಮತಿಯನ್ನು ಪಡೆದ ಕುರುವಂಶದ ಮೂರ್ಧನ್ಯರಾದ ಆ ಸಹೋದರರು ಕೇಶವನಿಂದ ಕೂಡಿಕೊಂಡು ಗಾಂಧಾರಿಯ ಬಳಿ ಸಾಗಿದರು.
ತತೋ ಜ್ಞಾತ್ವಾ ಹತಾಮಿತ್ರಂ ಧರ್ಮರಾಜಂ ಯುಧಿಷ್ಠಿರಮ್ |
ಗಾಂಧಾರೀ ಪುತ್ರಶೋಕಾರ್ತಾ ಶಪ್ತುಮೈಚ್ಛದನಿಂದಿತಾ ॥2॥
ತಸ್ಯಾಃ ಪಾಪಮಭಿಪ್ರಾಯಂ ವಿದಿತ್ವಾ ಪಾಂಡವಾನ್ ಪ್ರತಿ |
ಋಷಿರ್ಗಂಧವತೀಪುತ್ರಃ ಪ್ರಾಗೇವ ಸಮಪದ್ಯತ ॥3॥
ಅನಂತರ ಕಲಂಕರಹಿತಳಾದ, ಮಕ್ಕಳ ಶೋಕದಿಂದ ಆರ್ತಳಾದ ಗಾಂಧಾರಿಯು, ಶತ್ರುಗಳನ್ನು ಸಂಹರಿಸಿದ, ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನನ್ನು ಶಪಿಸಲು ಬಯಸಿದ್ದಳು. ಪಾಂಡವರ ಬಗ್ಗೆ ಆಕೆಯ ಕೆಟ್ಟಭಾವನೆಯನ್ನು ಮೊದಲೇ ತಿಳಿದಿದ್ದ ಸತ್ಯವತಿಯ ಪುತ್ರನಾದ ಋಷಿಯು (ವ್ಯಾಸರು) ಮೊದಲೇ (ಪಾಂಡವರು ಅಲ್ಲಿಗೆ ಬರುವ ಮೊದಲೇ) ಆಗಮಿಸಿದ್ದರು.
ಸ ಗಂಗಾಯಾಮುಪಸ್ಪೃಶ್ಯ ಬ್ರಹ್ಮರ್ಷಿಃ ಪ್ರಯತಃ ಶುಚಿಃ |
ತಂ ದೇಶಮುಪಸಂಪೇದೇ ಪಾರಾಶರ್ಯೋ ಮನೋಜವಃ ॥4॥
ಪರಾಶರರ ಪುತ್ರನಾದ, ಮನೋವೇಗವನ್ನು ಹೊಂದಿರುವ ಆ ಬ್ರಹ್ಮಜ್ಞಾನಿಯು ಗಂಗೆಯ ಜಲದಿಂದ ಶುದ್ಧನಾಗಿ ಆ ಸ್ಥಳಕ್ಕೆ (ಗಾಂಧಾರಿಯ ಬಳಿಗೆ) ಆಗಮಿಸಿದನು.
ದಿವ್ಯೇನ ಚಕ್ಷುಷಾ ಜ್ಞಾತ್ವಾ ಮನಸಾಽನುದ್ಧತೇನ ಚ |
ಸರ್ವಂ ಪ್ರಾಣಭೃತಾಂ ಭಾವಂ ಸತತಂ ಸಮಬುದ್ಧ್ಯತ ॥5॥
ಎಲ್ಲ ಪ್ರಾಣಿಗಳ ವಿಚಾರವನ್ನು ನಿರಂತರ ತಿಳಿಯುವ ಅವರು, ದಿವ್ಯ ದೃಷ್ಟಿಯಿಂದ (ಯಾರು) ಮನದಲ್ಲಿ ಏನು ಚಿಂತಿಸುತ್ತಿರುವರು ಎಂಬುವುದನ್ನು ತಿಳಿದರು.
ಸ ಸ್ನುಷಾಮಬ್ರವೀತ್ ಕಾಲೇ ಕಲ್ಯಾಣಾನಿ ಮಹಾತಪಾಃ |
ಶಾಪಕಾಲಮವಾಕ್ಷಿಪ್ಯ ಶಮಕಾಲಮುದೀರಯನ್ ॥6॥
ಯೋಗ್ಯಕಾಲದಲ್ಲಿ ಮಹಾತಪಸ್ವಿಗಳಾದ ಅವರು ಶಾಪಪ್ರಸಂಗವನ್ನು ಹೋಗಲಾಡಿಸಿ ಶಾಂತಿಕಾಲವನ್ನು ಬೆಳಗುವ ಮಂಗಳಕರವಾದ ಮಾತುಗಳನ್ನು (ತಮ್ಮ) ಸೊಸೆಗೆ ಹೇಳಿದರು.
ವ್ಯಾಸಃ
ನ ಕೋಪಃ ಪಾಂಡವೇ ಕಾರ್ಯೋ ಗಾಂಧಾರಿ ಶಮಮಾಪ್ನುಹಿ |
ರಜೋ ನಿಗೃಹ್ಯತಾಂ ಚೈವ ಶೃಣು ಚೇದಂ ವಚೋ ಮಮ ॥7॥
ವ್ಯಾಸರು ಗಾಂಧಾರಿ, ಪಾಂಡವರಲ್ಲಿ ಕೋಪವನ್ನು ಮಾಡುವುದು ತರವಲ್ಲ, ಶಾಂತಿಯನ್ನು ಹೊಂದುವವಳಾಗು, ರಜೋಭಾವವನ್ನು ನಿಗ್ರಹಿಸು, ನನ್ನ ಮಾತನ್ನು ಕೇಳುವವಳಾಗು.
ಪುರೋಕ್ತಾ ಯುದ್ಧಕಾಲೇ ತ್ವಂ ಪುತ್ರೇಣ ಜಯಮಿಚ್ಛತಾ |
ಜಯಮಾಶಾಸ್ವ ಮೇ ಮಾತರ್ಯುದ್ಧ್ಯಮಾನಸ್ಯ ಶತ್ರುಭಿಃ ॥8॥
ಜಯವನ್ನು ಬಯಸುವ ನಿನ್ನ ಪುತ್ರನು ಹಿಂದೆ ಯುದ್ಧಸಂದರ್ಭದಲ್ಲಿ ನಿನ್ನನ್ನು ಪ್ರಾರ್ಥಿಸಿದನು- `ಅಮ್ಮ! ಶತ್ರುಗಳೊಡನೆ ಯುದ್ಧಮಾಡುವ ನನಗೆ ಜಯವಾಗಲಿ' ಎಂದು ಹರಸು' ಎಂದು.
ಸಾ ತಥಾ ಯಾಚ್ಯಮಾನಾ ತ್ವಂ ಯುದ್ಧಕಾಲೇ ಜಯೈಷಿಣಾ |
ಉಕ್ತವತ್ಯಸಿ ಕಲ್ಯಾಣಿ ಯತೋ ಧರ್ಮಸ್ತತೋ ಜಯಃ ॥9॥

ಯುದ್ಧಸಂದರ್ಭದಲ್ಲಿ ಜಯವನ್ನು ಬಯಸುವ ಆತನು ಆ ರೀತಿಯಾಗಿ ಪ್ರಾರ್ಥಿಸಲು, ಮಂಗಳಕರಳೆ! ನೀನು ` ಎಲ್ಲಿ ಧರ್ಮವೋ ಅಲ್ಲಿ ಜಯ' ಎಂದು ಹೇಳುತ್ತಿದ್ದಿ.
ವಾಕ್ಯೇ ವ್ಯತೀತೇ ಮಾ ಕ್ರೋಧೇ ಮನಃ ಕುರು ಯಶಸ್ವಿನಿ |
ಸ್ಮರಾಮಿ ಭಾಷಮಾಣಾಂ ಹಿ ತ್ವಾಮಹಂ ಸತ್ಯವಾದಿನೀಮ್ ॥10॥
ಕೀರ್ತಿವಂತಳೆ! (ಎಲ್ಲಿ ಧರ್ಮವೋ ಅಲ್ಲಿ ಜಯ ಎಂದು) ಮಾತು ನುಡಿದಾಯಿತು, ಇನ್ನು ಸಿಟ್ಟಿನಲ್ಲಿ ಮನವನ್ನು ಮಾಡದಿರು, `ನೀನು ಎಂದೂ ಸತ್ಯವನ್ನೇ ನುಡಿದವಳು' ಎಂದು ನೆನಪಿಸಿಕೊಳ್ಳುವೆ.
ವಿಗ್ರಹೇ ತುಮುಲೇ ರಾಜ್ಞಾಂ ಗತ್ವಾ ಪರಮಸಂಶಯಮ್ |
ಜಿತಂ ಪಾಂಡುಸುತೈರ್ಯುದ್ಧೇ ನೂನಂ ಧರ್ಮಸ್ತತೋಽಧಿಕಃ ॥11॥
ಭಯಂಕರವಾದ ಯುದ್ಧದಲ್ಲಿ (ಪಾಂಡವರಿಗೆ ಜಯವು) ತುಂಬ ಸಂದೇಹ ಎಂದು ಭಾವಿಸಿರಲು, ಅಂತಹ ಯುದ್ಧದಲ್ಲಿ ಪಾಂಡುಪುತ್ರರು ಜಯಸಿರುವರು, ಆದ್ದರಿಂದ ನಿಶ್ಚಯವಾಗಿಯೂ ಅಧಿಕವಾದ ಧರ್ಮವು ಅವರಲ್ಲಿಯೇ ಇದೆ.
ಕ್ಷಮಾಶೀಲಾ ಪುರಾ ಭೂತ್ವಾ ಸಾಽದ್ಯ ನ ಕ್ಷಮಸೇ ಕಥಮ್ |
ಅಧರ್ಮಂ ಜಹಿ ಧರ್ಮಜ್ಞೇ ಯತೋ ಧರ್ಮಸ್ತತೋ ಜಯಃ ॥12॥
ಹಿಂದೆ ಶಾಂತಿಪ್ರಿಯಳಾಗಿದ್ದ ನೀನು, ಈಗೇಕೆ ಶಾಂತಿಯನ್ನು ಧಿಕ್ಕರಿಸುವಿ? ಧರ್ಮವನ್ನು ತಿಳಿದವಳೆ! ಅಧರ್ಮವನ್ನು ಬಿಡು. ಎಲ್ಲಿ ಧರ್ಮವೋ ಅಲ್ಲಿ ಜಯ.
ಸಾ ತ್ವಂ ಧರ್ಮಂ ಪರಿತ್ಯಜ್ಯ ವಾಚಂ ಚೋಕ್ತಾಂ ಮನಸ್ವಿನಿ |
ಕೋಪಂ ಸಂಯಚ್ಛ ಗಾಂಧಾರಿ ಮೈವಂ ಭೂಃ ಸತ್ಯವಾದಿನಿ ॥13॥
ಅಂತಹ ನೀನು ಧರ್ಮವನ್ನು , ಹಿಂದೆ ಹೇಳಿದ ಮಾತುಗಳನ್ನು ಪರಿತ್ಯಜಿಸುವುದೆ? ಗಾಂಧಾರಿ! ಕೋಪವನ್ನು ನಿಯಂತ್ರಿಸು, ಸತ್ಯವಾದಿನಿಯೆ! ಈ ರೀತಿಯಾಗಬೇಡ (ಕೋಪಿಸಿಕೊಳ್ಳ ಬೇಡ).
ಗಾಂಧಾರೀ
ಭಗವನ್ ನಾಭ್ಯಸೂಯಾಮಿ ನೈತಾನಿಚ್ಛಾಮಿ ನಶ್ಯತಃ |
ಪುತ್ರಶೋಕೇನ ತು ಬಲಾನ್ಮನೋ ವಿಹ್ವಲತೀವ ಮೇ ॥14॥
ಗಾಂಧಾರಿ ಪೂಜ್ಯರೆ! ಅವರ ಬಗ್ಗೆ ಅಸೂಯೆಯನ್ನು ಹೊಂದಲಾರೆ, ಅವರ ನಾಶವನ್ನು ಬಯಸಲಾರೆ, ಪುತ್ರಶೋಕದಿಂದ ನನ್ನ ಮನವು ಅತಿಯಾಗಿ ವ್ಯಾಕುಲಗೊಂಡಂತಾಗಿದೆ.
ಯಥೈವ ಕುಂತ್ಯಾ ಕೌಂತೇಯಾ ರಕ್ಷಿತವ್ಯಾಸ್ತಥಾ ಮಯಾ |
ತಥೈವ ಧೃತರಾಷ್ಟ್ರೇಣ ರಕ್ಷಿತವ್ಯಾ ಮಯಾ ಯಥಾ ॥15॥
ಕುಂತಿಯು ಹೇಗೆ ಅವರನ್ನು ಸಂರಕ್ಷಿಸುವಳೊ, ಹಾಗೆ ನನ್ನಿಂದಲೂ ಅವರು ರಕ್ಷಣೀಯರು, ನನ್ನಿಂದ ಹೇಗೆ ರಕ್ಷಿತರೊ ಹಾಗೆಯೇ ಧೃತರಾಷ್ಟ್ರನಿಂದಲೂ ರಕ್ಷಣೀಯರು.
ದುಃಶಾಸನಾಪರಾಧೇನ ಶಕುನೇಃ ಸೌಬಲಸ್ಯ ಚ |
ಕರ್ಣದುರ್ಯೋಧನಾಭ್ಯಾಂ ಚ ವೃತ್ತೋಽಯಂ ಕುರುಸಂಕ್ಷಯಃ॥16॥
ದುಃಶಾಸನನ ತಪ್ಪಿನಿಂದ ಹಾಗೂ ಸುಬಲಪುತ್ರನಾದ ಶಕುನಿಯ ತಪ್ಪಿನಿಂದ ಕರ್ಣ-ದುರ್ಯೋಧನರ ತಪ್ಪಿನಿಂದ ಈ ಕುರುಕುಲದ ನಾಶವು ಸಂಭವಿಸಿತು.
ನಾಪರಾಧ್ನೋತಿ ಬೀಭತ್ಸುಃ ನ ಚ ಪಾರ್ಥೋ ವೃಕೋದರಃ |
ನಕುಲಃ ಸಹದೇವಶ್ಚ ನೈವ ಜಾತು ಯುಧಿಷ್ಠಿರಃ ॥17॥
ಅರ್ಜುನನ ತಪ್ಪಿಲ್ಲ, ಕುಂತಿಯ ಪುತ್ರ ವೃಕೋದರನ ತಪ್ಪಿಲ್ಲ. ನಕುಲ-ಸಹದೇವರ ತಪ್ಪಿಲ್ಲ, ಎಂದೆಂದೂ ಯುಧಿಷ್ಠಿರನ ತಪ್ಪಿಲ್ಲ.
ಯುಧ್ಯಮಾನಾ ಹಿ ಕೌರವ್ಯಾಃ ಕೃಂತಮಾನಾಃ ಪರಸ್ಪರಮ್ |
ನಿಹತಾಸ್ಸೈಹರ್ತಾಶ್ಚಾನ್ಯೇ ತತ್ರ ನಾಸ್ತ್ಯಪ್ರಿಯಂ ಮಮ ॥18॥
ಕುರುಕುಲೋತ್ಪನ್ನರು ಯುದ್ಧವನ್ನು ಮಾಡುತ್ತಾ, ಪರಸ್ಪರ ಕಿತ್ತಾಡುತ್ತಾ ಮರಣವನ್ನಪ್ಪಿದರು, ಅವರಿಂದ (ಪಾಡವರಿಂದ) ಮೃತರಾದರು, ಈ ವಿಷಯವು ನನಗೆ ಅಪ್ರಿಯವಲ್ಲ.
ಯತ್ ತು ಕರ್ಮಾಕರೋದ್ಭೀಮೋ ವಾಸುದೇವಸ್ಯ ಪಶ್ಯತಃ |
ದುರ್ಯೋಧನಂ ಸಮಾಹೂಯ ಗದಾಯುದ್ಧೇ ಮಹಾಮನಾಃ ॥19॥
ಶಿಕ್ಷಯಾಽಭ್ಯಧಿಕಂ ಜ್ಞಾತ್ವಾ ಚರಂತಂ ಬಹುಧಾ ರಣೇ |
ಅಧೋ ನಾಭೇಃ ಪ್ರಹೃತವಾನ್ ತನ್ಮೇ ಕೋಪಯತೀವ ಹಿ ॥20॥
ಆದರೆ ಮಹಾಭಿಮಾನಿಯಾದ ಭೀಮಸೇನನು ಗದಾಯುದ್ಧಕ್ಕೆ ದುರ್ಯೋಧನನನ್ನು ಆಹ್ವಾನಿಸಿ, (ಗದಾಯುದ್ಧದ) ನೈಪುಣ್ಯದಲ್ಲಿ ಅಧಿಕ ಎಂದು ತಿಳಿದು, ಬಹುವಿಚಿತ್ರವಾಗಿ ರಣರಂಗದಲ್ಲಿ ಹೋರಾಡುತ್ತಿರುವ (ದುರ್ಯೋಧನನ) ನಾಭಿಯಿಂದ ಕೆಳಭಾಗದಲ್ಲಿ, ಕೃಷ್ಣನು ನೋಡುತ್ತಿರುವಾಗಲೇ ಹೊಡೆದನು, ಅದು ನನ್ನ ಅತಿಕೋಪಕ್ಕೆ ಕಾರಣವಾಗಿದೆ.
ಕಥಂ ಹಿ ಧರ್ಮಂ ಧರ್ಮಜ್ಞಾಃ ಸಮುದ್ದಿಷ್ಟಂ ಮಹಾತ್ಮಭಿಃ |
ತ್ಯಜೇಯುರಾಹವೇ ಶೂರಾಃ ಪ್ರಾಣಹೇತೋಃ ಕಥಂಚನ ॥21॥
ಪ್ರಾಣಕ್ಕಾಗಿ ಶೂರರು ಧರ್ಮವನ್ನು ಅರಿತವರು ಹೇಗೆತಾನೆ ಮಹಾತ್ಮರಿಂದ ಉಪದಿಷ್ಟವಾದ ಧರ್ಮವನ್ನು ಪರಿತ್ಯಜಿಸಿದರು?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಗಾಂಧಾರೀವಾಕ್ಯಂ ನಾಮ ಚತುರ್ದಶೋಽಧ್ಯಾಯಃ ॥

॥ ಜಲಪ್ರದಾನಪರ್ವಣಿ ಚತುರ್ದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ವಂದಮಾನಂ ಪುನರ್ಭೀಮಮಾಹ ಸಾ ಕ್ರೋಧವಿಹ್ವಲಾ |
ಅಧರ್ಮತಃ ಕಥಂ ಭೀಮ ಸುತಂ ಮೇ ತ್ವಂ ನಿಜಘ್ನಿವಾನ್ ॥
ಭೀಮ ಗಾಂಧಾರಿಯನ್ನು ನಮಿಸುವಾಗ, ಅವಳು ಪುನಃ ಕ್ರೋಧ ಪರವಶಳಾಗಿ `ಭೀಮ! ನೀನು ನನ್ನ ಮಗನನ್ನು ಅಧರ್ಮದಿಂದ ಹೇಗೆ ಕೊಂದೆ?' ಎಂದಳು.
ಇತ್ಯುಕ್ತೇऽಸ್ಯಾಃ ಶಮಯಿತುಂ ಕ್ರೋಧಮಗ್ರೇ ವೃಕೋದರಃ |
ಪ್ರಾಹ ನ ಪ್ರಾಣಸಂದೇಹೇ ಪಾಪಂ ಸ್ಯಾತ್ ಪಾಪಿನೋ ವಧೇ ॥
ಗಾಂಧಾರಿ ಹೀಗೆ ಹೇಳಿದಾಗ ಭೀಮ ಅವಳ ಕೋಪವನ್ನು ತಗ್ಗಿಸಲು ಮೊದಲಿಗೆ ಹೀಗೆ ಹೇಳಿದ- `ಪ್ರಾಣಾಪಾಯದ ಬಗ್ಗೆ ಸಂದೇಹ ಬಂದಾಗ ಪಾಪಿಯನ್ನು ಅಧರ್ಮದಿಂದ ಕೊಂದರೂ ಪಾಪವಿಲ್ಲ'.
ಇತ್ಯುಕತ್ವ ತಾಂ ಪುನಃ ಪ್ರಾಹ ಪ್ರತಿಜ್ಞಾಹಾನಿಮಂತರಾ |
ನ ಮೇऽಸ್ತಿ ಪ್ರಾಣಸಂದೇಹ ಇತಿ ಜಾನನ್ ವೃಕೋದರಃ ॥
ಯಥಾಪ್ರತಿಜ್ಞಂ ಭ್ರಾತೃವ್ಯಾನ್ ರಣೇ ಮಮ ನಿಜಘ್ನುಷಃ |
ಕ್ವಾಧರ್ಮಃ ಕ್ಷತ್ರಜಾತೇಸ್ತು ತದ್ಧಾನೌ ಜೀವಿತಂ ನ ಹಿ ॥
ಹೀಗೆ ಹೇಳಿ, ಪ್ರತಿಜ್ಞಾಹಾನಿ ಪ್ರಸಕ್ತಿ ಹೊರತು ತನಗೆ ಪ್ರಾಣಾಪಾಯ ಸಂದೇಹ ಎಂಬುದಿಲ್ಲವೆಂದು ತಿಳಿದಿರುವ ಭೀಮ ತಿರುಗಿ ಗಾಂಧಾರಿಗೆ ಹೇಳಿದ- `ಪ್ರತಿಜ್ಞಾನುಸಾರವಾಗಿ ಯುದ್ಧದಲ್ಲಿ ಶತ್ರುಗಳನ್ನು ಕೊಂದಿರುವ ಕ್ಷತ್ರಿಯ ಜಾತಿಯವನಾದ ನನಗೆ ಅಧರ್ಮ ಯಾವುದು? ಪ್ರತಿಜ್ಞಾಹಾನಿಯಾದರೆ ಕ್ಷತ್ರಿಯನಿಗೆ ಬದುಕೇ ಇಲ್ಲ ತಾನೆ?
ಪಾಪಾ ನ ಶುದ್ಧಧರ್ಮೇಣ ಹಂತವ್ಯಾ ಇತಿ ಚ ಶ್ರುತಿಃ |
ಅನ್ಯವತ್ ಪಾಪಹನನಂ ಪಾಪಯೇತ್ಯಾಹ ಹಿ ಶ್ರುತಿಃ |
ಅತೋऽಸುರಾನ್ ನೈಕೃತಿಕಾನ್ ನಿಕೃತ್ಯಾ ಘ್ನಂತಿ ದೇವತಾಃ ॥
ಪಾಪಿಗಳನ್ನು ಶುದ್ಧ ಧರ್ಮದಿಂದ ಕೊಲ್ಲಕೂಡದೆಂದು ಶ್ರುತಿಯೂ ಹೇಳಿದೆ. ಅನ್ಯರನ್ನು ಧರ್ಮದಿಂದ ಕೊಲ್ಲುವಂತೆ ಪಾಪಿಗಳನ್ನು ಧರ್ಮದಿಂದ ಕೊಲ್ಲುವುದು ಪಾಪಕರವಾಗುತ್ತದೆ ಎಂದೂ ಶ್ರುತಿ ಹೇಳಿದೆ. ಅದರಿಂದಲೇ ವಂಚಕರಾದ ಅಸುರರನ್ನು ದೇವತೆಗಳು ವಂಚನೆಯಿಂದಲೇ ಕೊಲ್ಲುತ್ತಾರೆ.
ನಿಕೃತ್ಯಾ ನಿಕೃತಿಂ ಹನ್ಯಾನ್ನಿಕೃತ್ಯಾ ನೈವ ಧಾರ್ಮಿಕಮ್ |
ಇತಿ ಶ್ರುತಿರ್ಹಿ ಪರಮಾ ಪಠ್ಯತೇ ಪೈಂಗಿಭಿಃ ಸದಾ ॥
ವಂಚಕನನ್ನು ವಂಚನೆಯಿಂದ ಕೊಲ್ಲಬೇಕು. ಧಾರ್ಮಿಕರನ್ನು ವಂಚನೆಯಿಂದ ಕೊಲ್ಲಬಾರದು ಎಂಬ ಶ್ರುತಿಯನ್ನು ಪೈಂಗಿಶಾಖೆಯವರು ನಿತ್ಯ ಪಠಿಸುತ್ತಾರೆ.
* * * * *
ಹದಿನೈದನೆಯ ಅಧ್ಯಾಯ
ಭೀಮಸೇನ, ಗಾಂಧಾರಿಯರ ಸಂವಾದ, ಯುಧಿಷ್ಠಿರಾದಿಗಳು
ಗಾಂಧಾರಿಗೆ ನಮಿಸುವುದು, ಕುಂತಿ ಮತ್ತು ಗಾಂಧಾರಿಯರು
ದ್ರೌಪದಿಗೆ ಸಾಂತ್ವನವನ್ನು ಹೇಳಿದರು.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ತಸ್ಯಾ ಭೀಮಸೇನೋऽಥ ಭೀತವತ್ |
ಗಾಂಧಾರೀಂ ಪ್ರತ್ಯುವಾಚೇದಂ ವಚಃ ಸಾನುನಯಂ ತದಾ ॥1॥
ವೈಶಂಪಾಯನ ಅನಂತರದಲ್ಲಿ ಆಕೆಯ (ಗಾಂಧಾರಿಯ) ಮಾತನ್ನು ಕೇಳಿದ ಭೀಮಸೇನನು ಆಗ ಹೆದರಿದವನಂತೆ ಅನುನಯಪುರಃಸರವಾಗಿ ಗಾಂಧಾರಿಯನ್ನು ಉದ್ದೇಶಿಸಿ ಉತ್ತರಿಸಿದನು.
ಭೀಮಃ
ಅಧರ್ಮೋ ಯದಿ ವಾ ಧರ್ಮಃ ತ್ರಾಸಾತ್ ತತ್ರ ಮಯಾ ಕೃತಃ |
ಆತ್ಮಾನಂ ತ್ರಾತುಕಾಮೇನ ತನ್ಮೇ ತ್ವಂ ಕ್ಷಂತುಮರ್ಹಸಿ ॥2॥
ಭೀಮಸೇನ ಅಧರ್ಮವೋ ಅಥವಾ ಧರ್ಮವೋ ಭಯದಿಂದ ಅಲ್ಲಿ ನಾನು ನನ್ನನ್ನು ರಕ್ಷಿಸಿಕೊಳ್ಳಬೇಕೆಂಬ ಬಯಕೆಯಿಂದ ಹಾಗೆ ಮಾಡಿದೆನು, ಆದರಿಂದ ನೀನು ನನ್ನನ್ನು ಕ್ಷಮಿಸಬೇಕು.
ನ ಹಿ ಯುದ್ಧೇನ ಪುತ್ರಸ್ತೇ ಧರ್ಮೇಣ ಸುಮಹಾಬಲಃ |
ಶಕ್ಯಃ ಕೇನಚಿದುದ್ಯಂತುಂ ತಸ್ಮಾದ್ ವಿಷಮಮಾಚರನ್ ॥3॥
ಮಹಾಬಲಿಷ್ಠನಾದ ನಿನ್ನ ಮಗನನ್ನು ಧರ್ಮಯುದ್ಧದಿಂದ ಗೆಲ್ಲಲೂ ಯಾರಿಂದಲೂ ಶಕ್ಯವಿಲ್ಲ, ಆದ್ದರಿಂದ ನಾನೂ ವಿಷಮವಾಗಿ ವರ್ತಿಸಿದೆನು.
ಅಧರ್ಮೇಣ ಜಿತಃ ಪೂರ್ವಂ ತೇನಾಪಿ ಚ ಯುಧಿಷ್ಠಿರಃ |
ನಿಕೃತಾಶ್ಚ ಸದೈವ ಸ್ಮ ತತೋ ವಿಷಮಮಾಚರಮ್ ॥4॥

ಯುಧಿಷ್ಠಿರನನ್ನು ಆತನು ಮೊದಲು ಅಧರ್ಮದಿಂದಲೇ ಗೆದ್ದಿದ್ದನು, ಯಾವಗಲೂ ಆತನಿಂದ ಮೋಸಗೊಂಡಿದ್ದೆವು, ಆದ್ದರಿಂದ ವಿಷಮವಾಗಿ ವರ್ತಿಸಿರುವೆನು.
ಸೈನ್ಯಸ್ಯೈಕೋಽವಶಿಷ್ಟೋಽಯಂ ಗದಾಯುದ್ಧೇ ಚ ವೀರ್ಯವಾನ್ |
ನ ತ್ಯಕ್ಷ್ಯತಿ ಹೃತಂ ರಾಜ್ಯಮಿತಿ ಚೈವ ಕೃತಂ ಮಯಾ ||5||
ವೀರ್ಯಶಾಲಿಯಾದ ಆತನೋರ್ವನೇ ಸೈನ್ಯದಲ್ಲಿ ಉಳಿದಿದ್ದನು, ಆದರೂ ಅಪಹರಿಸಿದ ರಾಜ್ಯವನ್ನು ಹಿಂತಿರುಗಿಸಲಾರ ಎಂದು ಗದಾಯುದ್ಧದಲ್ಲಿ ನಾನು ಹೀಗೆ ಆಚರಿಸಿದೆನು.
ಮಾಂ ಹತ್ವಾ ನ ಹರೇದ್ ರಾಜ್ಯಮಿತಿ ಚೈತತ್ ಕೃತಂ ಮಯಾ ||6||
ನನ್ನನ್ನು ಸಂಹರಿಸಿ (ಆತನು) ರಾಜ್ಯವನ್ನು ಅಪಹರಿಸದಿರಲಿ ಎಂದು ನಾನು ಹಾಗೆ ಮಾಡಿದೆನು.
ಏಕಪತ್ನೀಂ ಚ ಪಾಂಚಾಲೀಮೇಕವಸತ್ರಂ ರಜಸ್ವಲಾಮ್ |
ಭವತ್ಯಾ ವಿದಿತಂ ಸರ್ವಮುಕ್ತವಾನ್ ಯತ್ ಸುತಸ್ತವ ||7||
(ನಮ್ಮ) ಮುಖ್ಯಪತ್ನಿಯಾದ ರಜಸ್ವಲೆಯಾದ ಏಕವಸ್ತ್ರಧಾರಿಣಿಯಾದ ಪಾಂಚಾಲದೇಶದ ರಾಜನ ಪುತ್ರಿಯನ್ನು (ದ್ರೌಪದಿಯನ್ನು) ಉದ್ದೇಶಿಸಿ ನಿನ್ನ ಪುತ್ರನು ಏನೆಲ್ಲವನ್ನೂ ಹೇಳಿದನು ಎನ್ನುವದನ್ನು ನೀನು ತಿಳಿದವಳೇ ಆಗಿರುವಿ (ಆದ್ದರಿಂದ ನಾನು ಆತನ ತೊಡೆಯನ್ನು ಮುರಿದಿರುವೆನು).
ಸುಯೋಧನಮಸಂಹೃತ್ಯ ನ ಶಕ್ಯಾ ಭೂಃ ಸಸಾಗರಾ |
ಕೇವಲಂ ಭೋಕ್ತುಮಸ್ಮಾಭಿರಿತಿ ಚೈತತ್ ಕೃತಂ ಮಯಾ ||8||
ಸುಯೋಧನನನ್ನು ಸಂಹರಿಸದೇ ನಾವು ಸಾಗರಪರ್ಯಂತವಿರುವ ಈ ಭೂಮಿಯನ್ನು ಭೋಗಿಸಲು ಶಕ್ಯವಿಲ್ಲ, ಆದ್ದರಿಂದ ನಾನು ಹಾಗೆ ಮಾಡಿದೆನು.
ತಚ್ಚಾಪ್ಯಪ್ರಿಯಮಸ್ಮಾಕಂ ಪುತ್ರಸ್ತೇ ಸಮುದಾಚರತ್ |
ದ್ರೌಪದ್ಯಾ ಯತ್ ಸಭಾಮಧ್ಯೇ ಸವ್ಯಮೂರುಮದರ್ಶಯತ್ ||9||
ದ್ರೌಪದಿಗೆ ಬಲತೊಡೆಯನ್ನು ಸಭೆಯ ಮಧ್ಯದಲ್ಲಿ ತೋರಿಸಿದನು. ನಮಗೆ ಅಪ್ರಿಯವಾದ ಆದನ್ನೂ ಸಹ ನಿನ್ನ ಪುತ್ರನು ಮಾಡಿದನು.
ತತ್ರೈವ ವಧ್ಯಃ ಸೋಽಸ್ಮಾಕಂ ದುರಾಚಾರೋಽಂಬ ತೇ ಸುತಃ |
ಧರ್ಮರಾಜಾಜ್ಞಯಾ ತ್ವೇವಂ ಸ್ಥಿತಾಃ ಸ್ಮ ಸಮಯೇ ಪುರಾ ||10||
ಅಲ್ಲಿಯೇ ದುರಾಚಾರಿಯಾದ ನಿನ್ನ ಮಗನು ನಮ್ಮಿಂದ ಸಂಹೃತನಾಗಬೇಕಿತ್ತು, ಆದರೆ ಹಿಂದೆ ಧರ್ಮರಾಜನ ಆಜ್ಞೆಯಿಂದ ನಿಯಮಕ್ಕೆ ಕಟ್ಟುಬಿದ್ದೆವು.
ವೈರಂ ಸಂಧುಕ್ಷಿತಂ ರಾಜ್ಞಾ ಪುತ್ರೇಣ ತವ ಯನ್ಮಹತ್ |
ಕ್ಲೇಶಿತಾಶ್ಚ ವನೇಽತ್ಯರ್ಥಂ ತಸ್ಮಾದೇತತ್ ಕೃತಂ ಮಯಾ ||11||
ಮಹಾರಾಣಿಯೆ! ದ್ವೇಷವನ್ನು ಸಾಧಿಸುವ ನಿನ್ನ ಮಗನಿಂದ ವನದಲ್ಲಿ ತುಂಬಾ ಕ್ಲೇಶವನ್ನು ಅನುಭವಿಸಿದೆವು, ಆದ್ದರಿಂದ ನಾನು ಹಾಗೆ ಮಾಡಿದೆನು.
ವೈರಸ್ಯಾಸ್ಮಿ ಗತಃ ಪಾರಂ ಹತ್ವಾ ದುರ್ಯೋಧನಂ ರಣೇ |
ರಾಜ್ಯಂ ಯುಧಿಷ್ಠಿರೇ ಪ್ರಾಪ್ತೇ ವಯಂ ವಿಗತಮನ್ಯವಃ ||12||
ರಣದಲ್ಲಿ ದುರ್ಯೋಧನನನ್ನು ಸಂಹರಿಸಿ ದ್ವೇಷದ ಕೊನೆಯನ್ನು ಕಂಡೆನು, ಯುದಿಷ್ಠಿರನು ರಾಜ್ಯವನ್ನು ಹೊಂದಲು ನಮ್ಮ ಕೋಪವು ತಣಿಯಿತು.
ಗಾಂಧಾರೀ
ನ ತಸ್ಯೈವಂ ವಧಸ್ತಾತ ಯಂ ಪ್ರಶಂಸಸಿ ಮೇ ಸುತಮ್ |
ಕೃತವಾಂಶ್ಚಾಪಿ ತತ್ಸರ್ವಂ ಯದಿದಂ ಭಾಷಸೇ ಮಯಿ ||13||
ಗಾಂಧಾರಿ ಮಗನೆ! `ಆತನ ಸಂಹಾರವು ಹಾಗೆ ಶಕ್ಯವಿಲ್ಲ' ಎಂದು ಯಾವ ನನ್ನ ಮಗನನ್ನು ಹೊಗಳುತ್ತಿರುವಿ (ಇದು ನನಗೆ ಸಮಾಧಾನದ ಮಾತಾಯಿತು), ಆತನು ನೀನು ಹೇಳಿದ್ದೆಲ್ಲವನ್ನೂ ಮಾಡಿದ್ದನು ( `ಗದಾಯುದ್ಧದಲ್ಲಿ ನಿಪುಣ, ಯುದ್ಧದಲ್ಲಿ ಆತನನ್ನು ಸಂಹರಿಸುವವರು ಭೂಮಿಯಲ್ಲಿ ಯಾರೂ ಇಲ್ಲ' ಎಂದು ಭೀಮನು ಈ ಹಿಂದೆ ಹೇಳಿದ್ದನು, ಅದು ದುರ್ಯೋಧನನ ಪ್ರಶಂಸೆ ಎಂದು ಗಾಂಧಾರಿಯ, ಭಾವಿಸಿದಳು, ಆದರೆ `ನನ್ನ ಹೊರತಾಗಿ ಮತ್ತಾರೂ ಆತನನ್ನು ಕೊಲ್ಲಲಾರರು' ಎನ್ನುವ ಭೀಮನ ಭಾವವನ್ನು ಆಕೆ ತಿಳಿಯಲಿಲ್ಲ. ಮತ್ತೂ ಸಹ `ದುರ್ಯೋಧನನು ನಮಗೆ ಮತ್ತು ದ್ರೌಪದಿಗೆ ತುಂಬಾ ಅನ್ಯಾಯವನ್ನು ಮಾಡಿದ್ದನು' ಎಂದು ಭೀಮನು ತಿಳಿಸಿದ್ದನು, ಅದು ಸತ್ಯ ಎಂದು ಗಾಂಧಾರಿಯು ಒಪ್ಪಿಕೊಂಡಳು ಎಂದು ಭಾವ).
ಹತಾಶ್ವೇ ನಕುಲೇ ಯತ್ ತದ್ ವೃಷಸೇನೇನ ಭಾರತ |
ಅಪಿಬಃ ಶೋಣಿತಂ ಸಂಖ್ಯೇ ದುಃಶಾಸನಶರೀರಜಮ್ ||14||
ಭರತಕುಲೋತ್ಪನ್ನನೆ! ಯಾವಾಗ ವೃಷಸೇನನು (ಕರ್ಣನು) ನಕುಲನ ಅಶ್ವಗಳನ್ನು ಸಂಹರಿಸಿ, ಅವಮಾನಿಸಿದನೋ ಆಗ ನೀನು ಅದಕ್ಕೆ ಪ್ರತೀಕಾರವಾಗಿ ಯುದ್ಧದಲ್ಲಿ ದುಃಶಾಸನನ ಶರೀರಜನ್ಯವಾದ ರಕ್ತವನ್ನು ಕುಡಿದಿಯಲ್ಲವೆ?
ಸದ್ಭಿರ್ವಿಗರ್ಹಿತಂ ಘೋರಮನಾರ್ಯಜನಸೇವಿತಮ್ |
ಕ್ರೂರಂ ಕರ್ಮಾಕರೋಃ ಕಸ್ಮಾತ್ ತದಯುಕ್ತಂ ವೃಕೋದರ ||15||
ವೃಕೋದರ! ಅಯೋಗ್ಯರಿಂದ ಆಚರಿಸಲು ಯೋಗ್ಯವಾದ, ಭಯಂಕರವಾದ, ಸಜ್ಜನರಿಂದ ನಿಂದ್ಯವಾದ, ಕ್ರೂರವಾದ ಅಯುಕ್ತವಾದ ಆ ಕರ್ಮವನ್ನು ಏತಕ್ಕಾಗಿ ಮಾಡಿದಿ? ಅದು ಸರಿಯಲ್ಲ.
ಭೀಮಃ

ಅನ್ಯಸ್ಯಾಪಿ ನ ಪಾತವ್ಯಂ ರುಧಿರಂ ಕಿಂ ಪುನಃ ಸ್ವಕಮ್ |
ಯಥೈವಾತ್ಮಾ ತಥಾ ಭ್ರಾತಾ ನ ವಿಶೇಷೋಽಸ್ತಿ ಕಶ್ಚನ ॥16॥
ಭೀಮಸೇನ ಅನ್ಯರ ರಕ್ತವೂ ಸಹ ಪಾನಕ್ಕೆ ಅಯೋಗ್ಯವಾಗಿದೆ, ಇನ್ನು ನಮ್ಮ ರಕ್ತವು ಪಾನಕ್ಕೆ ಯೋಗ್ಯವೆ? ನಾನು ಹೇಗೋ ನನ್ನ ತಮ್ಮನೂ ಹಾಗೆ. ನಮ್ಮಿರ್ವರಲ್ಲಿ ಯಾವ ಭೇದವೂ ಇಲ್ಲ. (ಸೋದರರ ರಕ್ತವನ್ನು ಪಾನಮಾಡಿದಲ್ಲಿ ತನ್ನ ರಕ್ತವನ್ನೇ ಪಾನಮಾಡಿದಂತೆ, ಈರ್ವರೂ ಒಂದೇ ಕುಲದಲ್ಲಿ ಬಂದವರು ಎಂದು ಭಾವ)
ಹತಾಶ್ವಂ ನಕುಲಂ ದೃಷ್ಟ್ವಾ ವೃಷಸೇನೇನ ಸಂಯುಗೇ |
ಶತ್ರೂಣಾಂ ತು ಪ್ರಹೃಷ್ಟಾನಾಂ ತ್ರಾಸಃ ಸಂಜನಿತೋ ಮಯಾ ॥17॥
ಯುದ್ಧದಲ್ಲಿ ವೃಷಸೇನನು ನಕುಲನ ಅಶ್ವಗಳನ್ನು ಸಂಹರಿಸಿರುವುದನ್ನು ಕಂಡು (ಆಗ ಕರ್ಣನು ನಕುಲನಿಗೆ ವಿಶೇಷವಾಗಿ ಅವಮಾನಿಸಿದ್ದನು. ಆದ್ದರಿಂದ) , ಶತ್ರುಗಳು ಹರ್ಷಿಸುತ್ತಿರಲು, ನಾನು (ಅವರೆಲ್ಲರಿಗೂ) ಭಯವನ್ನು ಉಂಟುಮಾಡಿದೆನು. (ಆಗ ಭೀಮಸೇನನು ದುಃಶಾಸನನನ್ನು ಸಂಹರಿಸಿ, ಆತನ ಎದೆಯನ್ನು ಬಗೆದು, ಅಲ್ಲಿ ನೆರೆದಿದ್ದ ಎಲ್ಲರಿಗೂ ಅತಿಭಯಂಕರನಾಗಿ ಕಂಡನು. ಹಿಂದೆ ದ್ರೌಪದಿಗೆ ಮತ್ತು ಪಾಂಡವರಿಗೆ ಕೌರವರು ಮಾಡಿದ ಎಲ್ಲ ವಿಧವಾದ ಅಪಮಾನಗಳಿಗೆ ಅದು ಪ್ರತೀಕಾರವಾಗಿತ್ತು ಎಂದು ಭಾವ.)
ಸ ಪ್ರತಿಜ್ಞಾಮಕರವಂ ಪಿಬಾಮ್ಯಸೃಗರೇರಿತಿ |
ರುಧಿರಂ ನಾತಿಚಕ್ರಾಮ ದಂತೋಷ್ಠಾನ್ಮೇಽಂಬ ಮಾ ಶುಚಃ ॥18॥
`ಶತ್ರುವಿನ (ದುಃಶಾಸನನ) ರಕ್ತವನ್ನು ಪಾನ ಮಾಡುವೆನು' ಎಂಬ (ನನ್ನ) ಪ್ರತಿಜ್ಞೆಯನ್ನು ಮಾಡಿದ್ದೆ. ಆದರೆ ನನ್ನ ಹಲ್ಲು ತುಟಿಗಳನ್ನು (ಆ ರಕ್ತವು) ದಾಟಲಿಲ್ಲ, ಆದ್ದರಿಂದ ತಾಯಿಯೆ! ದುಃಖಿಸದಿರು.
ವೈವಸ್ವತೋ ಹಿ ತದ್ವೇದ ಯಥಾವತ್ ಕುಲನಂದಿನಿ |
ಮಾ ಕೃಥಾ ಹೃದಿ ತನ್ಮಾತಃ ನ ತತ್ ಪೀತಂ ಮಯಾಽನಘೇ ॥19॥
ಕುಲಕ್ಕೆ ಆನಂದವನ್ನು ನೀಡುವವಳೆ! ಅದನ್ನು (ಅಂದು ಅಲ್ಲಿ ನಡೆದ ಘಟನೆಯನ್ನು) ಯಥಾರ್ಥವಾಗಿ ಸೂರ್ಯಸುತನು (ಕರ್ಣನು) ಬಲ್ಲ, ನಾನು ಅದನ್ನು ಪಾನಮಾಡಲಿಲ್ಲ, ಆದ್ದರಿಂದ ತಾಯಿಯೆ! ಮನದಲ್ಲಿ ಅ ವಿಷಯವನ್ನು ಚಿಂತಿಸದಿರು.
ಕೇಶಪಕ್ಷಪರಾಮರ್ಶೇ ದ್ರೌಪದ್ಯಾ ದ್ಯೂತಕಾರಿತೇ |
ಕ್ರೋಧಾದ್ಯದಬ್ರುವಂ ಚಾಹಂ ತಚ್ಚ ಮೇ ಕ್ಷಂತುಮರ್ಹಸಿ ॥20॥
ದ್ಯೂತವಾಡಿದ ಸಂದರ್ಭದಲ್ಲಿ ದ್ರೌಪದಿಯ ತುರುಬನ್ನು ಜಗ್ಗಿದಾಗ ಕೋಪದಿಂದ ಏನನ್ನೋ ಹೇಳಿದ್ದನು (ಆದರೆ ಅದನ್ನು ಆಚರಿಸಲಿಲ್ಲ). ಆದ್ದರಿಂದ ನನ್ನನ್ನು ಕ್ಷಮಿಸುವವಳಾಗು. (ಈ ಶ್ಲೋಕದ ಕೊನೆಯಪಾದದ ಪಾಠಾಂತರವು ಹೀಗಿದೆ-`ತಚ್ಚ ಮೇ ಹೃದಿ ವರ್ತತೇ- ಅದು ಇನ್ನೂ ಮನದಲ್ಲಿ ನೆನಪಿದೆ' ಈ ಪಾಠದಲ್ಲಿ ಅಧ್ಯಾಹಾರದ ಕ್ಲೇಶವಿಲ್ಲ, ಪ್ರಕೃತಕ್ಕೆ ತುಂಬ ಸಂಗತ ಎಂದೂ ತೋರುವುದು.)
ಕ್ಷತ್ರಧರ್ಮಚ್ಯುತೋ ರಾಜ್ಞಿ ಭವೇಯಂ ಶಾಶ್ವತೀಃ ಸಮಾಃ |
ಪ್ರತಿಜ್ಞಾಂ ತಾಮನಿಸ್ತೀರ್ಯ ತತಸ್ತತ್ ಕೃತವಾನಹಮ್ ॥21॥
ಮಹಾರಾಣಿಯೆ! ಆ ಪ್ರತಿಜ್ಞೆಯನ್ನು ಸತ್ಯಗೊಳಿಸದೇ ಹೋದಲ್ಲಿ ನಿರಂತರವಾಗಿ ಕ್ಷತ್ರಧರ್ಮದಿಂದ ಚ್ಯುತನಾಗುತ್ತಿದ್ದೆನು, ಆದ್ದರಿಂದ ಅದನ್ನು ಆಚರಿಸುವವನಾದೆನು.
ಅನಿಗೃಹ್ಯ ಪುರಾ ಪುತ್ರಾನ್ ಅಸ್ಮಾಸ್ವನಪಕಾರಿಷು |
ನ ಮಾಮರ್ಹಸಿ ಕಲ್ಯಾಣಿ ದೋಷೇಣ ಪರಿಶಂಕಿತುಮ್ ॥22॥
ಮಂಗಳಕರಳೆ! ಹಿಂದೆ ನಮಗೆ ಅಪಕಾರವನ್ನು ಮಾಡುತ್ತಿದ್ದ (ನಿನ್ನ) ಮಕ್ಕಳನ್ನು (ನೀನು) ನಿಗ್ರಹಿಸದೆ, ನನ್ನನ್ನು ದೋಷಿಯಂದು ಆಶಂಕಿಸುವುದು ತರವಲ್ಲ.
ಗಾಂಧಾರೀ
ವೃದ್ಧಸ್ಯಾಸ್ಯ ಶತಂ ಪುತ್ರಾನ್ ನಿಘ್ನಂಸ್ತ್ವಮಪರಾಜಿತಃ |
ಕಸ್ಮಾನ್ನ ಶೇಷಿತಃ ಕಂಚಿದ್ ಯೇನಾಲ್ಪಮಪರಾಧಿತಮ್ ॥23॥
ಗಾಂಧಾರಿ ಈ ಮುದುಕನ ನೂರು ಪುತ್ರರನ್ನು ಸಂಹರಿಸಿದ, ಸೋಲಿಲ್ಲದ ಸರದಾರನಾದ ನೀನು, ಯಾವ (ನನ್ನ) ಪುತ್ರನು ಅಲ್ಪ ತಪ್ಪೆಸಗಿದ್ದನೋ ಆತನನ್ನಾದರೂ ಏಕೆ ಉಳಿಸಲಿಲ್ಲ?
ಸಂತಾನಮಾವಯೋಸ್ತಾತ ವೃದ್ಧಯೋರ್ಹೃತರಾಜ್ಯಯೋಃ |
ನಾಶೇಷಯಃ ಕಥಂ ಯಷ್ಟಿಮೇಕಾಂ ವೃದ್ಧಯುಗಸ್ಯ ವೈ ॥24॥
ಮಗನೆ! ರಾಜ್ಯವನ್ನು ಕಳೆದುಕೊಂಡ ವೃದ್ಧರಾದ ನಮ್ಮ ಈ ಮುದಿಜೋಡಿಗೆ ಊರುಗೋಲಾಗುವ ಒಬ್ಬ ಮಗನನ್ನಾದರೂ ಏಕೆ ಉಳಿಸಲಿಲ್ಲ?
ಶೇಷೇ ಹ್ಯವಸ್ಥಿತೇ ತಾತ ಪುತ್ರಾಣಾಮಲ್ಪಕೇಽಪಿ ಚ |
ನ ಮೇ ದುಃಖಂ ಭವೇದದ್ಯ ಯದಿ ತ್ವಂ ಧರ್ಮಮಾಚರೇಃ ॥25॥
ಮಗನೆ! ನೀನು ಧರ್ಮವನ್ನು ಆಚರಿಸಿದ್ದರೂ (ತೊಡೆಯನ್ನು ಭೇದಿಸುವುದು, ರಕ್ತವನ್ನು ಪಾನಮಾಡುವುದು ನೂರು ಧೃತರಾಷ್ಟ್ರನಪುತ್ರರನ್ನು ಸಂಹರಿಸುವುದು ಈ ಮುಂತಾದ ಪ್ರತಿಜ್ಞೆಗಳನ್ನು ಪೂರ್ಣಗೊಳಿಸುವುದು ಕ್ಷತ್ರಿಯನಾದ ಭೀಮಸೇನನ ಧರ್ಮ) ಒಬ್ಬ ಮಗನನ್ನಾದರೂ ಉಳಿಸಿದ್ದಲ್ಲಿ, ನನಗೆ (ಇಷ್ಟು) ದುಃಖವು ಆಗುತ್ತಿರಲಿಲ್ಲ.
ವೈಶಂಪಾಯನಃ
ತಮೇವಮುಕ್ತ್ವಾ ಗಾಂಧಾರೀ ಯುಧಿಷ್ಠಿರಮಪೃಚ್ಛತ |

ಕ್ವ ಸ ರಾಜೇತಿ ಸಕ್ರೋಧಾ ಪುತ್ರಪೌತ್ರವಧಾರ್ದಿತಾ ॥26॥
ವೈಶಂಪಾಯನ ಆತನನ್ನು (ಭೀಮಸೇನನನ್ನು ಉದ್ದೇಶಿಸಿ) ಈ ರೀತಿಯಾಗಿ ಹೇಳಿ, ಕ್ರೋಧಯುಕ್ತಳಾದ, ಮಕ್ಕಳ ಮೊಮ್ಮಕ್ಕಳ ಸಾವಿನಿಂದ ದುಃಖಿತಳಾದ ಗಾಂಧಾರಿಯು `ಆ ರಾಜನು ಎಲ್ಲಿ?' ಎಂದು ಯುಧಿಷ್ಠಿರನ ಬಗ್ಗೆ ಪ್ರಶ್ನಿಸಿದಳು.
ತಾಮಭ್ಯಗಚ್ಛತ್ ಕೌಂತೇಯೋ ವೇಪಮಾನಃ ಕೃತಾಂಜಲಿಃ |
ಯುಧಿಷ್ಠಿರಸ್ತು ಗಾಂಧಾರೀಂ ಮಧುರಂ ವಾಕ್ಯಮಬ್ರವೀತ್ ॥27॥
ಕುಂತೀಪುತ್ರನು ನಡುಗುತ್ತಾ ಕೈಜೋಡಿಸಿದವನಾಗಿ ಆಕೆಯ ಬಳಿ ಸಾರಿದನು, ಯುಧಿಷ್ಠಿರನು ಗಾಂಧಾರಿಯನ್ನು ಉದ್ದೇಶಿಸಿ ಮಧುರ ನುಡಿಯನ್ನು ಆಡಿದನು.
ಯುಧಿಷ್ಠಿರಃ
ಪುತ್ರಹಂತಾ ನೃಶಂಸೋಽಹಂ ತವ ದೇವಿ ಯುಧಿಷ್ಠಿರಃ |
ಶಾಪಾರ್ಹಃ ಪೃಥಿವೀನಾಶೇ ಹೇತುಭೂತಃ ಶಪಸ್ವ ಮಾಮ್ ॥28॥
ಯುಧಿಷ್ಠಿರ ನಿನ್ನ ಮಕ್ಕಳ ಕೊಲೆಗಡಕ, ನರ ಹಂತಕ, ಭೂಮಿಯ ನಾಶಕ್ಕೆ ಕಾರಣನು, ಶಾಪಿಸಲು ಯೋಗ್ಯನಾದ ನಾನು ಯುಧಿಷ್ಠಿರ, ನನ್ನನ್ನು ಶಪಿಸು.
ನ ಹಿ ಮೇ ಜೀವಿತೇನಾರ್ಥೋ ನ ರಾಜ್ಯೇನ ಸುಖೇನ ವಾ |
ತಾದೃಶಾನ್ ಸುಹೃದೋ ಹತ್ವಾ ಸುಮೂಢಸ್ಯ ಸುತದ್ರುಹಃ ॥29॥
(ನಿನ್ನ) ಮಕ್ಕಳಿಗೆ ದ್ರೋಹ ಮಾಡಿದ ಮಹಾ ಮೂರ್ಖನಾದ ಅಂತಹ ಸ್ನೇಹಿತರನ್ನು ಸಂಹರಿಸಿದ ನನಗೆ ಈ ಬದುಕಿನಿಂದ ಯಾವ ಪ್ರಯೋಜನವೂ ಇಲ್ಲ, ರಾಜ್ಯದಿಂದ ಸುಖದಿಂದ ಏನು ಪ್ರಯೋಜನವಿದೆ?
ವೈಶಂಪಾಯನಃ
ತಮೇವಂವಾದಿನಂ ಭೀತಂ ಸನ್ನಿಕರ್ಷಾಗತಂ ತದಾ |
ನೋವಾಚ ಕಿಂಚಿದ್ ಗಾಂಧಾರೀ ನಿಃಶ್ವಾಸಪರಮಾ ನೃಪ ॥30॥
ವೈಶಂಪಾಯನ ರಾಜನ್! ಸಮೀಪಕ್ಕೆ ಆಗಮಿಸಿದ ಭೀತನಾದ ಈ ರೀತಿಯಾಗಿ ಮಾತನಾಡುತ್ತಿರುವ ಆತನನ್ನು ಉದ್ದೇಶಿಸಿ ದೀರ್ಘವಾಗಿ ನಿಟ್ಟುಸುರನ್ನು ಬಿಡುತ್ತಿದ್ದ ಗಾಂಧಾರಿಯು ಏನನ್ನೂ ಹೇಳಲಿಲ್ಲ.
ತಸ್ಯಾವನತದೇಹಸ್ಯ ಪಾದಯೋರ್ನಿಪತಿಷ್ಯತಃ |
ಯುಧಿಷ್ಠಿರಸ್ಯ ನೃಪತೇರ್ಧರ್ಮಾತ್ಮಾ ಧರ್ಮದರ್ಶಿನೀ ॥31॥
ಅಂಗುಲ್ಯಗ್ರಾಣಿ ದದೃಶೇ ದೇವೀ ಪಟ್ಟಾಂತರೇಣ ಸಾ |
ತತಃ ಸ ಕುನಖೀಭೂತೋ ದರ್ಶನೀಯನಖೋ ನೃಪಃ ॥32॥
ಕಾಲುಗಳಿಗೆ ನಮಿಸುತ್ತಿರುವ ಬಾಗಿದ ದೇಹದ ಆ ರಾಜನಾದ ಯುಧಿಷ್ಠಿರನ ಕಾಲ್ಬೆರಳುಗಳ ತುದಿಗಳನ್ನು (ಕಣ್ಣಿಗೆ ಬಂಧಿಸಿದ ಬಟ್ಟೆಯ) ಪಟ್ಟಿಯ ಸಂದಿನಿಂದ ಆ ದೇವಿಯು ಕಂಡಳು, ಆದ್ದರಿಂದ ಸುಂದರವಾದ ಉಗುರುಗಳನ್ನು ಹೊಂದಿದ್ದ ಆ ರಾಜನು ಕರಟಿದ ಉಗುರುಗಳನ್ನು ಹೊಂದಿದವನಾದನು.
ತಂ ದೃಷ್ಟ್ವಾಽಥಾರ್ಜುನೋಽಗಚ್ಛದ್ ವಾಸುದೇವಸ್ಯ ಪೃಷ್ಠತಃ ॥33॥
ಅನಂತರದಲ್ಲಿ ಅದನ್ನು ಕಂಡ ಅರ್ಜುನನು ವಾಸುದೇವನ ಹಿಂಬದಿ ಸರಿದನು.
ಏವಂ ಸಂಚೇಷ್ಟಮಾನಾಂಸ್ತಾನ್ ಇತಶ್ಚೇತಶ್ಚ ಭಾರತ |
ಗಾಂಧಾರೀ ವಿಗತಕ್ರೋಧಾ ಸಾಂತ್ವಯಾಮಾಸ ಮಾತೃವತ್ ॥34॥
ಭರತಕುಲೋತ್ಪನ್ನನೆ! ಈರೀತಿಯಾಗಿ ಇತ್ತಿಂದತ್ತ ಸರಿದಾಡುತ್ತಿದ್ದ ಅವರೆಲ್ಲರನ್ನು (ಪಾಂಡುಪುತ್ರರನ್ನು) ಉಪಶಮನಗೊಂಡ ಕೋಪವುಳ್ಳ ಗಾಂಧಾರಿಯು ತಾಯಿಯಂತೆ ಸಮಾಧಾನಪಡಿಸಿದಳು.
ತೇ ಪಾಂಡವಾಸ್ತ್ವನುಜ್ಞಾತಾ ಮಾತರಂ ವೀತಮತ್ಸರಾಃ |
ಅಭ್ಯಗಚ್ಛಂತ ಸಹಿತಾಃ ಪೃಥಾಂ ಪೃಥುಲವಕ್ಷಸಃ ॥35॥
ಮಾತ್ಸರ್ಯರಹಿತರಾದ ವಿಶಾಲವಾದ ಎದೆಯನ್ನು ಹೊಂದಿರುವ ಪಾಂಡವರು ಒಟ್ಟಾಗಿ (ಆಕೆಯಿಂದ) ಅನುಮತಿಯನ್ನು ಪಡೆದು, ತಾಯಿಯಾದ ಪೃಥಾದೇವಿಯ ಬಳಿ ಸಾರಿದರು.
ಚಿರಸ್ಯ ದೃಷ್ಟ್ವಾ ಪುತ್ರಾಂಸ್ತಾನ್ ಪುತ್ರಾಧಿಭಿರಭಿಪ್ಲುತಾ |
ಬಾಷ್ಪಮಾಹಾರಯಾಮಾಸ ವಸ್ತ್ರೇಣಾವೃತ್ಯ ವೈ ಮುಖಮ್ ॥36॥
ಆ ಮಕ್ಕಳನ್ನು ದೀರ್ಘಕಾಲದ ಅನಂತರದಲ್ಲಿ ಕಂಡ ಕುಂತಿಯು ಮಕ್ಕಳು ಅನುಭವಿಸಿದ ದುಃಖವನ್ನು ನೆನೆಯುವುದರಿಂದ ಉಕ್ಕಿಬಂದ ಕಣ್ಣೀರನ್ನು, ಮುಖವನ್ನು ವಸ್ತ್ರದಿಂದ (ಸೆರಗಿನಿಂದ) ಮುಚ್ಚಿಕೊಂಡು ತಡೆದಳು.
ತತೋ ಬಾಷ್ಪಂ ಸಮುತ್ಸೃಜ್ಯ ಸಹ ಪುತ್ರೈಸ್ತಥಾ ಪೃಥಾ |
ಅಪಶ್ಯದೇನಾನ್ ಶಸ್ತ್ರೌಘೈರ್ಬಹುಧಾ ಪರಿವಿಕ್ಷತಾನ್ ॥37॥
ಅನಂತರದಲ್ಲಿ ಪೃಥಾದೇವಿಯು ಮಕ್ಕಳೊಡನೆ ಕಣ್ಣೀರನ್ನು ತಡೆದುಕೊಂಡು, ಆಯುಧಗಳಿಂದ ಬಹಳವಾಗಿ ಗಾಯಗೊಂಡ ಈ ಮಕ್ಕಳನ್ನು ನೋಡಿದಳು.
ಸಾ ತಾನೇಕೈಕಶಃ ಪುತ್ರಾನ್ ಸಂಸ್ಪೃಶಂತೀ ಪುನಃ ಪುನಃ |
ಅನ್ವಶೋಚತ ದುಃಖಾರ್ತಾಂ ದ್ರೌಪದೀಂ ನಿಹತಾತ್ಮಜಾಮ್ ॥38॥
ಆಕೆಯು ಮತ್ತೆ ಮತ್ತೆ ಆ ಎಲ್ಲ ಮಕ್ಕಳನ್ನು ಒಬ್ಬರನ್ನಾಗಿ ಸ್ಪರ್ಶಿಸುತ್ತಾ, ಮಕ್ಕಳನ್ನು ಕಳೆದುಕೊಂಡು ದುಃಖಿತಳಾದ ದ್ರೌಪದಿಯನ್ನು ಉದ್ದೇಶಿಸಿ ದುಃಖಿಸಿದಳು.

ರುದಂತೀಮಥ ಪಾಂಚಾಲೀಂ ದದರ್ಶ ಪತಿತಾಂ ಭುವಿ ॥39॥
ನೆಲದಲ್ಲಿ ಮಲಗಿದ್ದ, ಅಳುತ್ತಿರುವ ಪಾಂಚಾಲರಾಜನ ಪುತ್ರಿಯನ್ನು ಕಂಡಳು.
ಪಾಂಚಾಲೀ
ಆರ್ಯೇ ಪೌತ್ರಾಃ ಕ್ವ ತೇ ಸರ್ವೇ ಸೌಭದ್ರಸಹಿತಾ ಗತಾಃ |
ನ ತ್ವಾಂ ತೇಽದ್ಯಾಭಿಗಚ್ಛಂತಿ ಚಿರದೃಷ್ಟ್ವಾಮನಿಂದಿತೇ ॥40॥
ದ್ರೌಪದಿ ದೋಷರಹಿತಳೇ ಪೂಜ್ಯಳೇ! ಸುಭದ್ರೆಯ ಪುತ್ರಸಹಿತರಾದ ನಿನ್ನ ಎಲ್ಲ ಮೊಮ್ಮಕ್ಕಳು ಎಲ್ಲಿರುವರು? ಬಲುಹಿಂದೆ ನಿನ್ನನ್ನು ಕಂಡಿದ್ದ ಅವರು, ಏಕೆ ಇಂದು ನಿನ್ನ ಬಳಿ ಸಾರುತ್ತಿಲ್ಲ?
ಕಿಂ ನು ರಾಜ್ಯೇನ ಮೇ ಕಾರ್ಯಂ ವಿಹೀನಾಯಾಃ ಸುತೈರ್ವರೈಃ ॥41॥
ಶ್ರೇಷ್ಠರಾದ ಮಕ್ಕಳನ್ನು ಕಳೆದುಕೊಂಡ ನನಗೆ ಈ ರಾಜ್ಯದಿಂದ ಏನು ಪ್ರಯೋಜನ?
ವೈಶಂಪಾಯನಃ
ತಾಂ ಸಮಾಶ್ವಾಸಯಾಮಾಸ ಪೃಥಾ ಪೃಥುಲಲೋಚನಾಮ್ |
ಉತ್ಥಾಪ್ಯ ಯಾಜ್ಞಸೇನೀಂ ತು ರುದತೀಂ ಶೋಕಲಾಲಸಾಮ್ ॥42॥
ವೈಶಂಪಾಯನ ವಿಶಾಲವಾದ ನಯನಗಳನ್ನು ಹೊಂದಿರುವ ಪೃಥಾದೇವಿಯು ದುಃಖದಿಂದ ಆಯಾಸಗೊಂಡಿರುವ ರೋದಿಸುತ್ತಿರುವ ಆ ಯಾಜ್ಞಸೇನಿಯನ್ನು ಮೇಲೆತ್ತಿ ಸಮಾಧಾನಪಡಿಸಿದಳು.
ತಯೈವ ಸಹಿತಾ ತತ್ರ ಪುತ್ರೈರನುಗತಾ ಪೃಥಾ |
ಅಭ್ಯಗಚ್ಛತ ಗಾಂಧಾರೀಮಾರ್ತಮಾರ್ತತರಾ ಸ್ವಯಮ್ ॥43॥
ಅನುಸರಿಸಿ ಬರುತ್ತಿರುವ, ಮಕ್ಕಳಿಂದ ಕೂಡಿದವಳಾದ ಸ್ವತಃ ಅತ್ಯಂತ ದುಃಖಿತಳಾದ ಪೃಥಾದೇವಿಯು ಆಕೆಯಿಂದ (ದ್ರೌಪದೀದೇವಿಯಿಂದ) ಕೂಡಿಕೊಂಡು ದುಃಖಿತಳಾದ ಗಾಂಧಾರಿಯ ಬಳಿ ಸಾಗಿದಳು.
ತಾಮುವಾಚಾಥ ಗಾಂಧಾರೀ ಸಹ ಕುಂತ್ಯಾ ಯಶಸ್ವಿನೀಮ್ ॥44॥
ಕೀರ್ತಿವಂತಳಾದ ಆಕೆಯನ್ನು (ದ್ರೌಪದಿಯನ್ನು) ಉದ್ದೇಶಿಸಿ, ಕುಂತೀ ದೇವಿಯಂದ ಕೂಡಿದ ಗಾಂಧಾರೀ ದೇವಿಯು ಉಪದೇಶಿಸಿದಳು.
ಗಾಂಧಾರೀ
ಮೈವಂ ಪುತ್ರೀತಿ ಶೋಕಾರ್ತಾ ಪಶ್ಯ ಮಾಮಪಿ ದುಃಖಿತಾಮ್ |
ಮನ್ಯೇ ಲೋಕವಿನಾಶೋಽಯಂ ಕಾಲಪರ್ಯಾಯಚೋದಿತಃ ॥45॥
ಗಾಂಧಾರಿ ಮಗಳೇ! ಈರೀತಿಯಾಗಿ ದುಃಖಿಸದಿರು, ದುಃಖಿತಳಾದ ನನ್ನನ್ನು ನೋಡು, ವ್ಯತ್ಯಸ್ತವಾದ ಕಾಲದಿಂದ ಪ್ರೇರಿತವಾಗಿ ಈ ಲೋಕನಾಶವು ಸಂಭವಿಸಿದೆ ಎಂದು ಭಾವಿಸಿರುವೆನು.
ಅವಶ್ಯಭಾವೀ ಸಂಪ್ರಾಪ್ತಃ ಸ್ವಭಾವಾದ್ ರೋಮಹರ್ಷಣಃ ॥46॥
ಅವಶ್ಯವಾಗಿ ಸಂಭವಿಸಲೇ ಬೇಕಾದದ್ದು ರೋಮಾಂಚಕಾರಿಯಾದದ್ದು ಬಂದೊದಗಿದೆ.
ಇದಂ ತು ಸಮನುಪ್ರಾಪ್ತಂ ವಿದುರಸ್ಯ ವಚೋ ಮಹತ್ |
ಅಸಿದ್ಧಾನುನಯೇ ಕೃಷ್ಣೇ ಯದುವಾಚ ಮಹಾದ್ಯುತಿಃ ॥47॥
ಕೃಷ್ಣನ ಸಂಧಿಯು ಸಿದ್ಧಿಸದೇ ಹೋಗಲು ಮಹಾಜ್ಞಾನಿಯು (ವಿದುರನು) ಏನನ್ನು ಹೇಳಿದ್ದನೋ ಅದು ಬಂದೋದಗಿದೆ, ವಿದುರನ ಮಾತುಗಳು ಮಹತ್ತರವಾದವು.
ಅಸ್ಮಿನ್ನಪರಿಹಾರ್ಯೇಽರ್ಥೇ ವ್ಯತೀತೇ ಚ ವಿಶೇಷತಃ |
ಮಾ ಶುಚೋ ನ ಹಿ ಶೋಚ್ಯಾಸ್ತೇ ಸಂಗ್ರಾಮೇ ನಿಧನಂ ಗತಾಃ ॥48॥
ಈ ತಿದ್ದಲಾಗದ ಮತ್ತು ವಿಶೇಷವಾಗಿ ಗತಿಸಿಹೋದ ಘಟನೆಯಬಗ್ಗೆ ದುಃಖಿಸದಿರು, ಯುದ್ಧದಲ್ಲಿ ಮೃತರಾದ ಅವರು ಶೋಚ್ಯರಲ್ಲ (ವೀರಸ್ವರ್ಗದಲ್ಲಿ ವಿರಾಜಮಾನರಾಗುವರು).
ಯಥೈವ ತ್ವಂ ತಥೈವಾಹಂ ಕೋ ಮಾಮಾಶ್ವಾಸಯಿಷ್ಯತಿ |
ಮಮೈವ ಚಾಪರಾಧೇನ ಕುಲಮೇತದ್ ವಿನಾಶಿತಮ್ ॥49॥
ನೀನು ಹೇಗೊ ನಾನೂ ಹಾಗೆ (ಪುತ್ರಮರಣದಿಂದ ದುಃಖಿತಳಾಗಿರುವೆನು), ನನ್ನನ್ನು ಯಾರು ತಾನೇ ಸಮಧಾನಗೊಳಿಸುವರು? ನನ್ನ ಅಪರಾಧದಿಂದಲೇ (ದುರ್ಯೋಧನನನ್ನು ಹತೋಟಿಯಲ್ಲಿ ಇಟ್ಟುಕೊಳ್ಳದಿದ್ದರಿಂದ) ಈ ಕುಲವು ವಿನಾಶವನ್ನು ಹೊಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಪಂಚದಶೋಽಧ್ಯಾಯಃ ॥
॥ ಜಲಪ್ರದಾನಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಜಲಪ್ರದಾನಪರ್ವ ॥
* * * * *
2. ಸ್ತ್ರೀವಿಲಾಪಪರ್ವ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ತಸ್ಯಾ ಯಾಶ್ಚ ಸ್ನುಷಾಃ ಸರ್ವಾಸ್ತಾಭಿಃ ಸಹ ಪುರಸ್ಕೃತಾಮ್ |
ಕೃತ್ವಾ ತಂ ಧೃತರಾಷ್ಟ್ರಂ ಚ ವಿದುರಾದೀಂಶ್ಚ ಸರ್ವಶಃ ॥
ಪಾಂಡವಾಃ ಪ್ರಧನಸ್ಥಾನಂ ಸಭಾರ್ಯಾಃ ಪೃಥಯಾ ಸಹ |

ಕೃಷ್ಣಾಭ್ಯಾಂ ಚ ಯಯುಸ್ತತ್ರ ಗಾಂಧಾರ್ಯಾಸ್ತಪಸೋ ಬಲಮ್ ||
ಜಾನನ್ ಪಾಂಡವರಕ್ಷಾರ್ಥಂ ಚಿಕೀರ್ಷುಸ್ತತ್ತಪೋವ್ಯಯಮ್ |
ವೇದೇಶ್ವರೋ ದದೌ ದಿವ್ಯಂ ಚಕ್ಷುಃ ಸತ್ಯವತೀಸುತಃ ||
ಗಾಂಧಾರಿಯನ್ನು ಅವಳ ಎಲ್ಲ ಸೊಸೆಯರೊಂದಿಗೆ ಮುಂದೆ ಮಾಡಿಕೊಂಡು, ಹಾಗೇ ಧೃತರಾಷ್ಟ್ರನನ್ನೂ ವಿದುರ ಮುಂತಾದವರನ್ನೂ ಎಲ್ಲರನ್ನೂ ಮುಂದೆ ಮಾಡಿಕೊಂಡು ಪಾಂಡವರು ಪತ್ನೀಸಮೇತರಾಗಿ ಕುಂತಿ ಮತ್ತು ವೇದವ್ಯಾಸ ಕೃಷ್ಣರೊಂದಿಗೆ ಒಡಗೂಡಿ ರಣಭೂಮಿಗೆ ಹೋದರು. ಅಲ್ಲಿ ಗಾಂಧಾರಿಯ ತಪೋಬಲವನ್ನು ಅರಿತಿದ್ದ ವೇದವ್ಯಾಸರು ಪಾಂಡವರ ರಕ್ಷಣೆಗಾಗಿ ಅವಳ ತಪಸ್ಸನ್ನು ವ್ಯಯ ಮಾಡಲು ಬಯಸಿ ಅವಳಿಗೆ ದಿವ್ಯ ಚಕ್ಷುಸ್ಸನ್ನು ನೀಡಿದರು.
* * * * *
ಹದಿನಾರನೆಯ ಅಧ್ಯಾಯ
ವ್ಯಾಸರ ಅನುಗ್ರಹದಿಂದ ದಿವ್ಯದೃಷ್ಟಿಯನ್ನು ಗಾಂಧಾರಿಯು ಹೊಂದುವುದು, ಧೃತರಾಷ್ಟ್ರ ಧರ್ಮನಂದನಾದಿಗಳು ಮಹಿಳೆಯರಿಂದ ಕೂಡಿಕೊಂಡು ರಣರಂಗಕ್ಕೆ ಬರುವುದು, ಮಹಿಳೆಯರ ರೋದನ, ಗಾಂಧಾರಿಯು ರೋದಿಸುತ್ತಿರುವ
ತನ್ನ ಸೊಸೆಯರನ್ನು ಕೃಷ್ಣನಿಗೆ ತೋರಿಸುವುದು.
ವೈಶಂಪಾಯನಃ
ಏವಮುಕತ್ವ ತು ಗಾಂಧಾರೀ ಕುರೂಣಾಮವಕರ್ತನಮ್ |
ಅಪಶ್ಯತ್ ತತ್ರ ತಿಷ್ಠಂತೀ ಸರ್ವಂ ದಿವ್ಯೇನ ಚಕ್ಷುಷಾ ||1||
ವೈಶಂಪಾಯನ ಗಾಂಧಾರಿಯು ಈ ರೀತಿಯಾಗಿ ಹೇಳಿ, ಅಲ್ಲಿಯೇ ನಿಂತು ದಿವ್ಯ ದೃಷ್ಟಿಯಿಂದ ಕುರುಗಳ ನಾಶವನ್ನು ಕಂಡಳು.
ಗಾಂಧಾರೀ ಚ ಮಹಾಭಾಗಾ ಸಮಾನವ್ರತಚಾರಿಣೀ |
ಉಗ್ರೇಣ ತಪಸಾ ಯುಕ್ತಾ ಸತತಂ ಸತ್ಯವಾದಿನೀ ||2||
ವರದಾನೇನ ಕೃಷ್ಣಸ್ಯ ಮಹರ್ಷೇಃ ಪುಣ್ಯಕರ್ಮಣಃ |
ದಿವ್ಯಜ್ಞಾನಬಲೋಪೇತಾ ವಿವಿಧಂ ಪರ್ಯದೇವಯತ್ ||3||
ಗಾಂಧಾರಿಯಾದರೂ ಮಹಾಮಹಿಮೋಪೇತಳು, ಗಂಡನ ಸಮಾನವಾದ ವ್ರತವನ್ನು ಆಚರಿಸಿದವಳು, ಉಗ್ರವಾದ ತಪವನ್ನು ಆಚರಿಸಿದವಳು, ನಿರಂತರ ಸತ್ಯವನ್ನೇ ನುಡಿದವಳು, ಪುಣ್ಯಕರ್ಮಿಯಾದ ಮಹರ್ಷಿಗಳಾದ ಕೃಷ್ಣದ್ವೈಪಾಯನರ ವರದಿಂದ ದಿವ್ಯಜ್ಞಾನಸಹಿತಳಾಗಿ ವಿವಿಧ ಘಟನೆಗಳನ್ನು ನೋಡಿ ತಿಳಿದಳು.
ದದರ್ಶ ಸಾ ಬುದ್ಧಿಮತೀ ದೂರಾದೇವ ಯಥಾಽಂತಿಕೇ |
ರಣಾಜಿರಂ ತದ್ವೀರಾಣಾಮದ್ಭುತಂ ರೋಮಹರ್ಷಣಮ್ ||4||
ವೀರರಿಗೆ ರೋಮಾಂಚಕಾರಿಯಾದ ಅದ್ಭುತವಾದ ರಣಾಂಗಣವನ್ನು ದೂರದಿಂದಲೇ ಹತ್ತಿರದಿಂದ ನೋಡುವಂತೆ ಜ್ಞಾನಿಯಾದ ಆಕೆಯು (ಗಾಂಧಾರಿಯು) ಕಂಡಳು.
ಅಸ್ಥಿಕೇಶಪರಿಸ್ತೀರ್ಣಂ ರುಧಿರೌಘಪರಿಪ್ಲುತಮ್ |
ಶರೀರೈರ್ಬಹುಸಾಹಸ್ರೈರ್ವಿನಿಕೀರ್ಣಂ ಸಮಂತತಃ ||5||
ಯೂನಾಂ ಗಜಾನಾಮಶ್ವಾನಾಮಾವೃತಂ ರುಧಿರಾಶನೈಃ |
ಶರೀರೈರಶಿರಸ್ಕೈಶ್ಚ ವಿದೇಹೈಶ್ಚ ಶಿರೋಗಣೈಃ ||6||
ಗಜಾಶ್ವನರವೀರಾಣಾಂ ನಿಃಸತ್ತ್ವೈರಭಿಸಂವೃತಮ್ |
ಸೃಗಾಲವಲಗೋಮಾಯುಕಂಕಕಾಕನಿಷೇವಿತಮ್ ||7||
ಮೋದನಂ ಪುರುಷಾದಾನಾಂ ರಕ್ಷಸಾಂ ಕುಲಸಂಕುಲಮ್ |
ಅಶಿವಾಭಿಃ ಶಿವಾಭಿಶ್ಚ ಸೇವಿತಂ ಗೃಧ್ರನಾದಿತಮ್ ||8||
ಅಸ್ಥಿ-ಕೇಶಗಳನ್ನು ಚೆಲ್ಲಾಡಿದ, ರಕ್ತದ ಕೋಡಿಯು ಹರಿದ, ಸುತ್ತಲೂ ಸಾವಿರಾರು ದೇಹಗಳಿಂದ ಹರಡಿರುವ, ಪ್ರಾಯದ ಆನೆಕುದುರೆಗಳ ರಕ್ತವನ್ನು ಕುಡಿಯುವ ಪ್ರಾಣಿಗಳಿಂದ ವ್ಯಾಪ್ತವಾದ, ಮುಂಡವಿಲ್ಲದ ರುಂಡಗಳು, ರುಂಡವಿಲ್ಲದ ಮುಂಡಗಳು ಇವುಗಳ ಸಮೂಹದಿಂದ ವ್ಯಾಪ್ತವಾದ, ಆನೆ-ಕುದುರೆ-ವೀರರ ಕಳೇಬರಗಳಿಂದ ವ್ಯಾಪ್ತವಾದ, ನರಿ ಗುಳ್ಳೇನರಿ ತೋಳ ರಣಹದ್ದು ಕಾಗೆಗಳು ನೆರದಿದ್ದ, ಮನುಷ್ಯಮಾಂಸವನ್ನು ತಿನ್ನುವ ರಾಕ್ಷಸರಿಗೆ ಸಂತಸವನ್ನು ನೀಡುವ, ಅಮಂಗಳಕರಗಳಾದ ನರಿಗಳು ನೆರೆದಿದ್ದ, ರಣಹದ್ದುಗಳ ಕೂಗಾಟದಿಂದ ಕೂಡಿದ್ದ ರಣರಂಗವನ್ನು ಗಾಂಧಾರಿಯು ಕಂಡಳು.
ತತೋ ವ್ಯಾಸಾಭ್ಯನುಜ್ಞಾತೋ ಧೃತರಾಷ್ಟ್ರೋ ಮಹೀಪತಿಃ |
ಪಾಂಡುಪುತ್ರಾಶ್ಚ ತೇ ಸರ್ವೇ ಯುಧಿಷ್ಠಿರಪುರೋಗಮಾಃ ||9||
ವಾಸುದೇವಂ ಪುರಸ್ಕೃತ್ಯ ಹತಬಂಧುಂ ಚ ಪಾರ್ಥಿವಮ್ |
ಕುರುಸ್ತ್ರಿಯಃ ಸಮಾಸಾದ್ಯ ಜಗ್ಮುರಾಯೋಧನಂ ಪ್ರತಿ ||10||
ಅನಂತರದಲ್ಲಿ ವ್ಯಾಸರಿಂದ ಅನುಮತನಾದ, ಭೂಮಿಯ ಒಡೆಯನಾದ ಧೃತರಾಷ್ಟ್ರನು, ಯುಧಿಷ್ಠಿರನೇ ಮುಂತಾದ ಆ ಎಲ್ಲ ಪಾಂಡುಪುತ್ರರು ಬಂಧುಗಳನ್ನು ಕಳೆದುಕೊಂಡ ರಾಜನನ್ನು, ಕೃಷ್ಣನನ್ನು ಮುಂದೆ ಮಾಡಿಕೊಂಡು , ಕುರುಸ್ತ್ರೀಯರು- ಇವರಿಂದ ಕೂಡಿಕೊಂಡು ರಣರಂಗವನ್ನು ಉದ್ದೇಶಿಸಿ ಹೊರಟರು.
ಸಮಾಸಾದ್ಯ ಕುರುಕ್ಷೇತ್ರಂ ತಾಃ ಸ್ತ್ರಿಯೋ ನಿಹತೇಶ್ವರಾಃ |
ಅಪಶ್ಯಂತ ಹತಾಂಸ್ತತ್ರ ಪುತ್ರಾನ್ ಭ್ರಾತೄನ್ ಪ್ರಿಯಾನ್ ಸಖೀನ್ ||
ಗಂಡಂದಿರನ್ನು ಕಳೆದುಕೊಂಡ ಆ ಸ್ತ್ರೀಯರು ಕುರುಕ್ಷೇತ್ರವನ್ನು ಸೇರಿ, ಮೃತರಾದ ಮಕ್ಕಳನ್ನು ಸಹೋದರರನ್ನು ಪ್ರಿಯರನ್ನು

ಸ್ನೇಹಿತರನ್ನು ಅಲ್ಲಿ ಕಂಡರು.
ಕ್ರವ್ಯಾದೈರ್ಭಕ್ಷ್ಯಮಾಣಾಂಶ್ಚ ಕಂಕಗೋಮಾಯುವಾಯಸೈಃ |
ಭೂತೈಃ ಪಿಶಾಚೈ ರಕ್ಷೋಭಿರ್ವಿವಿಧೈಶ್ಚ ನಿಶಾಚರೈಃ ||12||
ರುದ್ರಾಕ್ರೀಡನಿಭಂ ದೃಷ್ಟ್ವಾ ತದಾ ವಿಶಸನಂ ಸ್ತ್ರಿಯಃ |
ಕುರರ್ಯ ಇವ ಶೋಕಾರ್ತಾ ವಿಕ್ರೋಶಂತ್ಯೋ ನಿಪೇತಿರೇ ||13||
ಮಾಂಸಾಹಾರಿಗಳಾದ ಕಂಕಪಕ್ಷಿಗಳು, ನರಿಗಳು ಕಾಗೆಗಳು ಭೂತಗಳು ಪಿಶಾಚಗಳು ರಾಕ್ಷಸರು ಬೇರೇ ಬೇರೆ ರಾತ್ರಿಚರರು (ಮೃತವ್ಯಕ್ತಿಯ ದೇಹದಿಂದ ಮಾಂಸವನ್ನು ಭಕ್ಷಿಸುವುದನ್ನು) ರುದ್ರದೇವನ ಕ್ರೀಡಾಸ್ಥಾನವಾದ ಶ್ಮಶಾನದಂತಿರುವ ರಣರಂಗವನ್ನು ಕಂಡ ಸ್ತ್ರೀಯರು, ಹೆಣ್ಣು ಕುರರ ಪಕ್ಷಿಗಳಂತೆ ದುಃಖಿತರಾಗಿ ರೋದಿಸುತ್ತಾ ನೆಲಕ್ಕೆ ಉರುಳಿದರು.
ಅದೃಷ್ಟಪೂರ್ವಂ ಪಶ್ಯಂತ್ಯೋ ದುಃಖಾರ್ತಾ ಭರತಸ್ತ್ರಿಯಃ |
ಶರೀರೇಷು ಸ್ಖಲಂತ್ಯಶ್ಚ ನ್ಯಪತಂಶ್ಚಾಪರಾ ಭುವಿ ||14||
ಹಿಂದೆ ಕಾಣದಿದ್ದನ್ನು ಕಂಡ ಭರತಕುಲೋತ್ಪನ್ನ. ಸ್ತ್ರೀಯರು ದುಃಖಿತರಾಗಿ ಎಡವುತ್ತಾ ಶರೀರಗಳ ಮೇಲೆ (ಹೇಣಗಳ ಮೇಲೆ) ಬಿದ್ದರು, ಮತ್ತೆ ಕೆಲವರು ನೆಲದ ಮೇಲೆ ಬಿದ್ದರು.
ಶ್ರಾಂತಾನಾಂ ಚಾಪ್ಯನಾಥಾನಾಂ ಕ್ರಂದಂತೀನಾಂ ಭೃಶಂ ತಥಾ |
ಪಾಂಚಾಲಕುರುಯೋಷಾಣಾಂ ಕೃಪಣಂ ತದಭೂನ್ಮಹತ್ ||15||
ಆಯಾಸಗೊಂಡ, ಪತಿಗಳನ್ನು ಕಳೆದುಕೊಂಡ ಕುರು-ಪಾಂಚಾಲದ ಸ್ತ್ರೀಯರು ಅತ್ಯಂತವಾಗಿ ರೋದಿಸುತ್ತಿರಲು ಅದು ತುಂಬಾ ಕರುಣಾಜನಕವಾಗಿದ್ದಿತು.
ದುಃಖಾಭಿಹತಚಿತ್ತಾಭಿಃ ಸಮಂತಾದನುನಾದಿತಮ್ |
ದೃಷ್ಟ್ವಾऽऽಯೋಧನಮತ್ಯುಗ್ರಂ ಧರ್ಮಜ್ಞಾ ಸುಬಲಾತ್ಮಜಾ ||16||
ತತಃ ಸಾ ಪುಂಡರೀಕಾಕ್ಷಮಾಮಂತ್ರ್ಯ ಪುರುಷೋತ್ತಮಮ್ |
ಕುರೂಣಾಂ ವೈಶಸಂ ದೃಷ್ಟ್ವಾ ದುಃಖಾದ್ ವಚನಮಬ್ರವೀತ್ ||17||
ಧರ್ಮಜ್ಞಳಾದ ಸುಬಲನ ಪುತ್ರಿಯು (ಗಾಂಧಾರಿಯು) ಸುತ್ತಲೂ ದುಃಖದಿಂದ ಹೈರಾಣಗೊಂಡ ಮನದ ಸ್ತ್ರೀಯರು ರೋದಿಸುತ್ತಿರುವುದನ್ನು, ಅತ್ಯುಗ್ರವಾದ ರಣರಂಗವನ್ನು ನೋಡಿ, ಕುರುಗಳ ದುರವಸ್ಥೆಯನ್ನು ಕಂಡು, ಅನಂತರದಲ್ಲಿ ಪುರುಷೋತ್ತಮನಾದ ತಾವರೆಯ ಪತ್ರದಂತೆ ಕಣ್ಣುಗಳನ್ನು ಹೊಂದಿರುವವನನ್ನು (ಕೃಷ್ಣನನ್ನು) ಕರೆದು ಈ ರೀತಿಯಾಗಿ ಹೇಳಿದಳು.
ಗಾಂಧಾರೀ
ಪಶ್ಯೈತಾಃ ಪುಂಡರೀಕಾಕ್ಷ ಸ್ನುಷಾ ಮೇ ನಿಹತೇಶ್ವರಾಃ |
ಪ್ರಕೀರ್ಣಕೇಶ್ಯಃ ಕ್ರೋಶಂತ್ಯಃ ಕುರರ್ಯ ಇವ ಮಾಧವ ||18||
ಗಾಂಧಾರಿ ತಾವರೆಯ ಪತ್ರದಂತೆ ಕಣ್ಣುಗಳನ್ನು ಹೊಂದಿರುವ ಮಾಧವನೇ! ಗಂಡಂದಿರನ್ನು ಕಳೆದುಕೊಂಡ ತಲೆಕೂದಲನ್ನು ಹರಡಿಕೊಂಡಿರುವ ಹೆಣ್ಣು ಕುರರ ಪಕ್ಷಿಯಂತೆ ರೋದಿಸುತ್ತಿರುವ ನನ್ನ ಈ ಸೊಸೆಯಂದಿರನ್ನು ನೋಡು,
ಅಮೂಸ್ತ್ವಭಿಸಮಾಗಮ್ಯ ಸ್ಮರಂತ್ಯೋ ಭರತರ್ಷಭಾನ್ |
ಪೃಥಗೇವಾನುಪದ್ಯಂತೇ ಪುತ್ರಾನ್ ಭ್ರಾತೄನ್ ಪಿತೄನ್ ಪತೀನ್ ||19||
ಈ ಹೆಣ್ಣುಗಳು ಇಲ್ಲಿಗೆ ಒಟ್ಟಿಗೆ ಆಗಮಿಸಿ, (ತಮ್ಮ) ಪುತ್ರರ ಸಹೋದರರ ಪಿತೃಗಳ ಗಂಡಂದಿರ ಅ ಭರತಶ್ರೇಷ್ಠರ ಗುಣಗಳನ್ನು ಸ್ಮರಿಸುತ್ತಾ, ಅವರ ಬಳಿ ಸಾಗಲು, ಬೇರೆ ಬೇರೆ ದಿಕ್ಕಿನೆಡೆಗೆ ನುಗ್ಗುತ್ತಿರುವರು. (ತಮ್ಮ ಅನುಬಂಧಿಗಳ ಶವವನ್ನು ಅರಸುತ್ತಾ ಅತ್ತ ಇತ್ತ ತಿರುಗಾಡುತ್ತಿರುವರು ಎಂದು ಭಾವ.)
ವೀರಸೂಭಿರ್ಮಹಾಬಾಹೋ ಹತಪುತ್ರಾಭಿರಾವೃತಮ್ |
ಕ್ವಚಿಚ್ಚ ವೀರಪತ್ನೀಭಿರ್ಹತವೀರಾಭಿರಾವೃತಮ್ ||20||
ನೀಳಬಾಹುವೆ! ಈ ರಣರಂಗವು ಮಕ್ಕಳನ್ನು ಕಳೆದುಕೊಂಡ ಕೆಲವು ವೀರಮಾತೆಯರಿಂದ, ಶೂರಗಂಡಂದಿರನ್ನು ಕಳೆದುಕೊಂಡ ಹಲವು ವೀರಪತ್ನಿಯರಿಂದ ತುಂಬಿರುವುದು.
ಶೋಭಿತಂ ಪುರುಷವ್ಯಾಘ್ರೈರ್ಭೀಷ್ಮಕರ್ಣಾಭಿಮನ್ಯುಭಿಃ |
ದ್ರೋಣದ್ರುಪದಶಲ್ಯೈಶ್ಚ ಜ್ವಲದ್ಭಿರಿವ ಪಾವಕೈಃ ||21||
ಅಗ್ನಿಯಂತೆ ಪ್ರಜ್ವಲಿಸುವ ಪುರುಷಶ್ರೇಷ್ಠರಾದ ಭೀಷ್ಮ ಕರ್ಣ ಅಭಿಮನ್ಯು ದ್ರೋಣ ದ್ರುಪದ ಶಲ್ಯ ಇವರೆಲ್ಲರಿಂದ ರಣರಂಗವು ಶೋಭಿತವಾಗಿದೆ.
ಕಾಂಚನೈಃ ಕವಚೈರ್ನಿಷ್ಕೈರ್ಮಣಿಭಿಶ್ಚ ಮಹಾಘನೈಃ |
ಅದ್ಭುತೈರ್ಹಸ್ತಕೇಯೂರೈಃ ಸ್ರಗ್ಭಿಶ್ಚ ಸಮಲಂಕೃತಮ್ ||22||
ಚಿನ್ನದ ಕವಚಗಳಿಂದ ಅತ್ಯಮೂಲ್ಯ ನಿಷ್ಕಮಣಿಗಳಿಂದ ಅದ್ಭುತವಾದ ಹಸ್ತಾಭರಣವಾದ ಕೇಯೂರಗಳಿಂದ ಹಾರಗಳಿಂದ ( ಈ ರಣರಂಗವು) ಅಲಂಕೃತವಾಗಿದೆ.
ವೀರಬಾಹುವಿಸೃಷ್ಟಾಭಿಃ ಶಕ್ತಿಭಿಃ ಪರಿಘೈರಪಿ |
ಖಡ್ಗೈಶ್ಚ ವಿಮಲೈಸ್ತೀಕ್ಷ್ಣೈಃ ಸಶರೈಶ್ಚ ಶರಾಸನೈಃ ||23||
ಶೂರರ ಕೈಗಳಿಂದ ತ್ಯಕ್ತವಾದ ಶಕ್ತ್ಯಾಯುಧಗಳಿಂದ ಪರಿಘಗಳಿಂದ ಹರಿತವಾದ ಶುದ್ಧವಾದ ಕತ್ತಿಗಳಿಂದ ಬಾಣಗಳಿಂದ ಕೂಡಿರುವ ಬಿಲ್ಲುಗಳಿಂದ ( ಈ ರಣರಂಗವು) ಅಲಂಕೃತವಾಗಿದೆ.
ಕ್ರವ್ಯಾದಸಂಘೈರ್ಮುದಿತೈಃ ತಿಷ್ಠದ್ಭಿಃ ಸಹಿತೈಃ ಕ್ವಚಿತ್ |

ಕ್ವಚಿದಾಕ್ರೀಡಮಾನೈಶ್ಚ ಶಯಾನೈಶ್ಚಾಪರೈಃ ಕ್ವಚಿತ್ ॥24॥
ಸಂತಸದಿಂದಿರುವ ಮಾಂಸಾಹಾರಿಗಳಲ್ಲಿ ಕೆಲವು ನಿಂತಿವೆ, ಕೆಲವು ಒಟ್ಟಾಗಿವೆ, ಕೆಲವು ಕ್ರೀಡಿಸುತ್ತಿವೆ ಮತ್ತೆ ಕೆಲವು ಮಲಗಿವೆ.
ಏತದೇವಂವಿಧಂ ವೀರ ಸಂಪಶ್ಯಾಯೋಧನಂ ಮಹತ್ |
ತ್ವಯಾ ತು ಸಾಧಿತಂ ಕರ್ಮ ಪುಷ್ಕರಾಕ್ಷ ಮಹಾದ್ಯುತೇ ॥25॥
ಹೆಬ್ಬೆಳಕಿನವನೆ ಪುಷ್ಕರಾಕ್ಷನೆ ವೀರನೆ! ಈ ಎಲ್ಲ ರೀತಿಯಲ್ಲಿನ ರಣರಂಗವನ್ನು ನೋಡು, ನೀನೇ ಸಾಧಿಸಿದ ಘನಕಾರ್ಯವಿದು.
ಪಶ್ಯಮಾನಾ ಚ ದಹ್ಯಾಮಿ ಶೋಕೇನಾಹಂ ಜನಾರ್ದನ ॥26॥
ಜನಾರ್ದನನೆ! (ಈ ದೃಶ್ಯವನ್ನು) ನೋಡುತ್ತಿರುವ ನಾನು ದುಃಖದಿಂದ ಬೆಂದಿರುವೆ.
ಪಾಂಚಾಲಾನಾಂ ಕುರೂಣಾಂ ಚ ವಿನಾಶಂ ಮಧುಸೂದನ |
ಪಂಚಾನಾಮಿವ ಭೂತಾನಾಮಹಂ ವಧಮಚಿಂತಯಮ್ ॥27॥
ಮಧುಸೂದನ! ಪಾಂಚಾಲರ ಮತ್ತು ಕುರುಗಳ ಸಾವನ್ನು ಪಂಚಭೂತಾತ್ಮಕವಾದ ಪ್ರಪಂಚದ ವಿನಾಶವೆಂದೇ ಭಾವಿಸುವೆ.
ತಾನ್ ಸುಪರ್ಣಾಶ್ಚ ಗೃಧ್ರಾಶ್ಚ ವಿಕರ್ಷಂತ್ಯಸೃಗುಕ್ಷಿತಾನ್ |
ನಿಗೃಹ್ಯ ಕವಚಾನುಗ್ರಾನ್ ಭಕ್ಷಯಂತಿ ಸಹಸ್ರಶಃ ॥28॥
ಸಾವಿರಾರು ಗರುಡಪಕ್ಷಿಗಳು ಹದ್ದುಗಳು ರಕ್ತದಿಂದ ತೋಯ್ದುಹೋದ ಗಟ್ಟಿಯಾದ ಕವಚಗಳನ್ನು ಬದಿಗೆ ಸರಿಸಿ, ಅವರುಗಳನ್ನು (ಮೃತರಾದ ಪಾಂಚಾಲರ-ಕೌರವರ ದೇಹಗಳನ್ನು ಕಾಲುಗಳಿಂದ) ಹಿಡಿದುಕೊಂಡು ತಿನ್ನುತ್ತಿವೆ.
ಜಯದ್ರಥಸ್ಯ ಕರ್ಣಸ್ಯ ತಥೈವ ದ್ರೋಣಭೀಷ್ಮಯೋಃ |
ಅಭಿಮನ್ಯೋರ್ವಿನಾಶಂ ಚ ಕಶ್ಚಿಂತಯಿತುಮರ್ಹತಿ ॥29॥
ಜಯದ್ರಥನ ಕರ್ಣನ ಹಾಗೆಯೇ ದ್ರೋಣ-ಭೀಷ್ಮರ ಅಭಿಮನ್ಯುವಿನ ಸಾವನ್ನು ಯಾವನು ತಾನೇ ಊಹಿಸಿಯಾನು?
ಅವಧ್ಯಕಲ್ಪಾನ್ ನಿಹತಾನ್ ಗತಸತ್ವಾನಚೇತಸಃ |
ಗೃಧ್ರಕಂಕವಲಶ್ಯೇನಶ್ವಸೃಗಾಲಸಮಾವೃತಾನ್ ॥30॥
ಅಮರ್ಷವಶಮಾಪನ್ನಾನ್ ದುರ್ಯೋಧನವಶೇ ಸ್ಥಿತಾನ್ |
ಪಶ್ಯೇಮಾನ್ ಪುರುಷವ್ಯಾಘ್ರಾನ್ ಸಂಶಾಂತಾನಿವ ಪಾವಕಾನ್ ॥31॥
ದುರ್ಯೋಧನನ ಅಧೀನದಲ್ಲಿದ್ದ ಕೋಪಕ್ಕೆ ಅಧೀನರಾಗಿದ್ದ ಸಾವಿಲ್ಲದವರಿಗೆ ಸಮರಾದವರು (ಆದರೆ) ಮರಣವನ್ನು ಹೊಂದಿರುವ ಚೈತನ್ಯವಿಲ್ಲದ ಬಲಹೀನರಾದ ಹದ್ದು-ಕಂಕಪಕ್ಷಿ-ಗಿಡುಗ-ನರಿಗಳಿಂದ ಆವೃತರಾಗಿರುವ, ಶಾಂತವಾದ ಅಗ್ನಿಯಂತೆ ಇರುವ ಈ ಪುರುಷಶ್ರೇಷ್ಠರನ್ನು ನೋಡು.
ಶಯನಾನ್ಯುಚಿತಾಃ ಸರ್ವೇ ಮೃದೂನಿ ವಿಮಲಾನಿ ಚ |
ವಿಪನ್ನಾಸ್ತೇಽದ್ಯ ವಸುಧಾಂ ವಿವೃತಾಮಧಿಶೇರತೇ ॥32॥
ಶುಭ್ರವಾದ ಮೆತ್ತನೆಯ ಹಾಸಿಗೆಯಲ್ಲಿ ಪವಡಿಸಲು ಯೋಗ್ಯರಾದ ಎಲ್ಲರೂ ಬದಲಾದ ಈ ಸಂದರ್ಭದಲ್ಲಿ ಬಯಲು ನೆಲದಲ್ಲಿ ಬಿದ್ದಿರುವರು.
ವಂದಿಭಿಶ್ಚಾಧಿಕಂ ಕಾಲೇ ಸ್ತುವದ್ಭಿರಭಿನಂದಿತಾಃ |
ಶಿವಾನಾಮಶಿವಾ ಘೋರಾಃ ಶೃಣ್ವಂತಿ ವಿವಿಧಾ ಗಿರಃ ॥33॥
ಬದುಕಿದ ಹೆಚ್ಚಿನ ಸಂದರ್ಭದಲ್ಲಿ ಸ್ತುತಿಪಾಠಕರಿಂದ ಸ್ತುತಿಗಳಿಂದ ಸ್ತುತ್ಯರಾದ ಇವರು ಈಗ ಅಮಂಗಳಕರಗಳಾದ ಘೋರವಾದ ನರಿಗಳ ವಿವಿಧರೀತಿಯ ಮಾತನ್ನು (ಕೂಗನ್ನು) ಕೇಳುತ್ತಿರುವರು.
ಯೇ ಪುರಾ ಶೇರತೇ ವೀರಾಃ ಶಯನೇಷು ಯಶಸ್ವಿನಃ |
ಚಂದನಾಗರುದಿಗ್ಧಾಂಗಾಸ್ತೇಽದ್ಯ ಪಾಂಸುಷು ಶೇರತೇ ॥34॥
ಯಾರು ಚಂದನ-ಅಗರುಗಳಿಂದ ಲಿಪ್ತವಾದ ಅಂಗಗಳುಳ್ಳ ಕೀರ್ತಿವಂತರಾದ ವೀರರು ಹಿಂದೆ ಹಾಸಿಗೆಗಳಲ್ಲಿ ಪವಡಿಸುತ್ತಿದ್ದರೋ ಅವರು ಈಗ ಧೂಳಿನಲ್ಲಿ ಮಲಗಿರುವರು.
ತೇಷಾಮಾಭರಣಾನ್ಯೇತೇ ಗೃಧ್ರಗೋಮಾಯುವಾಯಸಾಃ |
ಆಕ್ಷಿಪಂತಿ ಶಿವಾ ದೃಷ್ಟ್ವಾ ವಿನದಂತಿ ಪುನಃ ಪುನಃ ॥35॥
ಅವರು ತೊಟ್ಟಿರುವ ಆಭರಣಗಳನ್ನು ಈ ಹದ್ದು-ನರಿ-ಕಾಗೆಗಳು ಎಳೆದಾಡುತ್ತಿವೆ, ನರಿಗಳನ್ನು ಕಂಡು ಮತ್ತೆ ಮತ್ತೆ ಹರ್ಷಿಸುತ್ತಿವೆ.
ಬಾಣಾನ್ ವಿಶಿತಾನ್ ಪೀತಾನ್ ನಿಸ್ತ್ರಿಂಶಾನ್ ವಿಮಲಾ ಗದಾಃ |
ಯುದ್ಧಾಭಿಪಾತಿನಃ ಶೂರಾ ಜೀವಂತ ಇವ ಬಿಭ್ರತಿ ॥36॥
ಚೂಪಾದ ಬಾಣಗಳನ್ನು, ಹಳದೀಬಣ್ಣದ ಕತ್ತಿಗಳನ್ನು ನಿರ್ಮಲವಾದ ಗದೆಗಳನ್ನು ಧರಿಸಿರುವ ಯುದ್ಧಭೂಮಿಯಲ್ಲಿ ಮಲಗಿರುವ ಈ ಶೂರರು ಜೀವಂತವಾಗಿರುವರೋ ಎಂಬಂತೆ ತೋರುತ್ತಿರುವರು.
ಆಪೀತವರ್ಣಾ ಬಹವಃ ಕ್ರವ್ಯಾದೈರಭಿಘಾತಿತಾಃ |
ಋಷಭಪ್ರತಿರೂಪಾಕ್ಷಾಃ ಶೇರತೇ ಚ ಸಹಸ್ರಶಃ ॥37॥
ಹೊಂಬಣ್ಣದ ಈ ಬಹುಮಂದಿಗಳು, ಮಾಂಸಾಹಾರಿ ಪಕ್ಷಿಗಳಿಂದ ಘಾಸಿಗೊಳಗಾಗಿ ವೃಷಭದ ಪ್ರತಿರೂಪರಂತೆ ಸಾವಿರಾರು ಮಂದಿಗಳಾಗಿ ತೋರುತ್ತಿರುವರು.
ಅಪರೇ ಪುನರಾಲಿಂಗ್ಯ ಗದಾಃ ಪರಿಘಬಾಹವಃ |
ಶೇರತೇಽಭಿಮುಖಾಃ ಶೂರಾ ದಯಿತಾ ಇವ ಯೋಷಿತಃ ॥38॥
ಪರಿಘವನ್ನು ಕೈಯಲ್ಲಿ ಹಿಡಿದಿರುವ ಮತ್ತೆ ಕೆಲವು ಶೂರರು ಗದೆಗಳನ್ನು ಆಲಿಂಗಿಸಿಕೊಂಡು ಮೇಲ್ಮುಖರಾಗಿ ಮಲಗಿರುವರು,

ಪ್ರೀತಿಪಾತ್ರಳಾದ ಪತ್ನಿಯನ್ನು ಆಲಿಂಗಿಸಿಕೊಂಡಿರುವಂತೆ ತೋರುವರು.
ಬಿಭ್ರತಃ ಕವಚಾನ್ಯನ್ಯೇ ವಿಮಲಾನ್ಯಾಯುಧಾನಿ ಚ |
ನ ಧರ್ಷಯಂತಿ ಕ್ರವ್ಯಾದಾ ಜೀವಂತೀತಿ ಜನಾರ್ದನ ॥39॥
ಜನಾರ್ದನನೇ! ಕೆಲವರು ಕವಚಗಳನ್ನು ಧರಿಸಿರುವರು, ನಿರ್ಮಲವಾದ ಅಯುಧಗಳನ್ನು ಮತ್ತೆ ಕೆಲವರು ಧರಿಸಿರುವರು, ಇನ್ನೂ ಬದುಕಿರುವರು ಎಂದು ಭಾವಿಸಿದ (ಅವರ ದೇಹಗಳನ್ನು) ಮಾಂಸಾಹಾರಿ ಪಕ್ಷಿಗಳು ಎಳೆದಾಡುತ್ತಿಲ್ಲ.
ಕ್ರವ್ಯಾದೈಃ ಕೃಷ್ಯಮಾಣಾನಾಮಪರೇಷಾಂ ಮಹಾತ್ಮನಾಮ್ |
ಶಾತಕುಂಭಸ್ರಜಶ್ಚಿತ್ರಾ ವಿಪ್ರಕೀರ್ಣಾಃ ಸಹಸ್ರಶಃ ॥40॥
ಮಾಂಸಾಹಾರಿ ಪಕ್ಷಿಗಳಿಂದ ಕಿತ್ತಾಡಿದ ಮತ್ತೆ ಕೆಲವು ಮಹಾತ್ಮರ ಚಿನ್ನದ ಮಾಲೆಗಳು ವಿಚಿತ್ರವಾದ ಸಾವಿರಾರು ಮಾಲೆಗಳು ಚೆಲ್ಲಾಡಿಹೋಗಿರುವವು.
ಏತೇ ಗೋಮಾಯವೋಽಭೀತಾ ನಿಹತಾನಾಂ ಯಶಸ್ವಿನಾಮ್ |
ಕಂಠಾಂತರಗತಾನ್ ದಿವ್ಯಾನ್ ಆಕ್ಷಿಪಂತಿ ಮಹಾಮಣೀನ್ ॥41॥
ಹೆದರಿಕೆಯೇ ಇಲ್ಲದ ಈ ನರಿಗಳು ಮೃತರಾದ ಈ ಮಹಾತ್ಮರ ಕತ್ತಿನಲ್ಲಿರುವ ಅಮೂಲ್ಯವಾದ ಮಹಾರತ್ನಗಳನ್ನು ಕಿತ್ತೆಸೆಯುತ್ತಿವೆ.
ಸರ್ವೇಷ್ವಪರರಾತ್ರೇಷು ಯಾನವಂದಂತ ವಂದಿನಃ |
ಸ್ತುತಿಭಿಶ್ಚ ಪರಾರ್ಧ್ಯಾಭಿರುಪಚಾರೈಶ್ಚ ಶಿಕ್ಷಿತಾಃ ॥42॥
ತಾನದ್ಯ ಪರಿದೇವಂತಿ ದುಃಖಿತಾಃ ಪರಮಾಂಗನಾಃ |
ಕೃಪಣಾ ವೃಷ್ಣಿಶಾರ್ದೂಲ ದುಃಖಶೋಕಾನ್ವಿತಾ ಭೃಶಮ್ ॥43॥
ವೃಷ್ಣಿಕುಲದ ಹಿರಿಯನೇ! ವಿದ್ಯಾವಂತರಾದ ವಂದಿಮಾಗದರು ಮಧ್ಯರಾತ್ರಿಯಲ್ಲೂ ಸಹ ಯಾರನ್ನು ಉತ್ತಮವಾದ ಸ್ತುತಿಗಳಿಂದ ಉಪಚಾರದ ಮಾತುಗಳಿಂದ ನಮಿಸುತ್ತಿದ್ದರೋ, ಅವರನ್ನು ಉದ್ದೇಶಿಸಿ ಈಗ ಕಾರ್ಪಣ್ಯದಿಂದ ದುಃಖಶೋಕಗಳಿಂದ ಕೂಡಿದವರಾದ ಅವರ ಸ್ತ್ರೀಯರು ದುಃಖಿಸುತ್ತಿದ್ದಾರೆ.
ನೀಲೋತ್ಪಲವನಾನೀವ ವಿಭಾಂತಿ ರುಚಿರಾಣಿ ವೈ |
ಮುಖಾನಿ ಪರಮಸ್ತ್ರೀಣಾಂ ಪರಿಶುಷ್ಕಾಣಿ ಕೇಶವ ॥44॥
ಕೇಶವನೇ! ಈ ಉತ್ತಮಸ್ತ್ರೀಯರ ಬಾಡಿದ ಮುಖಗಳು ಸುಂದರವಾದ ನೈದಿಲೆಯ ವನದಂತೆ ತೋರುತ್ತಿವೆ ( ಹತ್ತಾರು ಸುಂದರ ಸ್ತ್ರೀಯರ ಮುಖದಿಂದ ಮಿಲಿತವಾದ ಈ ರಣರಂಗವು ನೈದಿಲೆಯ ತೋಟದಂತೆ ಭಾಸವಾಗುತ್ತಿದೆ. ಉಮ್ಮಳಿಸಿರುವ ದುಃಖದ ಭರದಲ್ಲಿ ಮಾತಿನ ಹಿಡಿತವು ತಪ್ಪಿದೆ ಎಂದು ತಿಳಿಸುತ್ತಿರುವರು ಎಂದು ಭಾವ.)
ರುದಿತ್ವಾ ವಿರತಾ ಹ್ಯೇತಾ ಧ್ಯಾಯಂತಃ ಸಪರಿಕ್ಲಮಾಃ |
ಕುರುಸ್ತ್ರಿಯೋಽಭಿಗಚ್ಛಂತಿ ತೇನ ತೇನೈವ ದುಃಖಿತಾಃ ॥45॥
ರೋದನದಿಂದ ವಿರತರಾದ ಈ ಕುರುವನಿತೆಯರು ಆಯಾಸಗೊಂಡವರಾಗಿ, (ತಮ್ಮ ಅನುಬಂಧಿಗಳನ್ನು) ನೆನೆಯುತ್ತಾ ಸುತ್ತುತ್ತಿರುವರು, (ಮತ್ತೆ ಇನ್ನೊಬ್ಬ ಅನುಬಂಧಿಯ ದೇಹವು ಕಂಡೊಡನೆ) ಮತ್ತೆ ಅದೇ ರೀತಿಯಿಂದ ದುಃಖದಿಂದ ಬಳಲುವರು.
ಏತಾನ್ಯಾದಿತ್ಯವರ್ಣಾನಿ ಪುಂಡರೀಕನಿಭಾನಿ ಚ |
ಪಶ್ಯ ರೋದನತಾಮ್ರಾಣಿ ವದನಾನೀಹ ಯೋಷಿತಾಮ್ ॥46॥
ಕಮಲದಂತೆ ತೋರುತ್ತಿದ್ದ ಸೂರ್ಯನ ಬಣ್ಣವನ್ನು ಹೊಂದಿದ್ದ ಸ್ತ್ರೀಯರ ಮುಖಗಳು ರೋದಿಸುವುದರಿಂದ ಕೆಂಪುಬಣ್ಣಕ್ಕೆ ತಿರುಗಿರುವುದನ್ನು ಕಾಣುವವನಾಗು.
ಶ್ಯಾಮಾನಾಂ ವರವರ್ಣಾನಾಂ ಗೌರೀಣಾಮೇಕವಾಸಸಾಮ್ |
ದುರ್ಯೋಧನವರಸ್ತ್ರೀಣಾಂ ಪಶ್ಯ ವೃಂದಾನಿ ಕೇಶವ ॥47॥
ಕೇಶವ! ಸುಂದರಿಯರಾದ ಶ್ರೇಷ್ಠ ಮೈಬಣ್ಣವನ್ನು ಹೊಂದಿರುವ ಬಿಳಿಯ ವರ್ಣದಿಂದಿರುವ ದುರ್ಯೋಧನನ ಸ್ತ್ರೀಯರ ಗುಂಪು ಒಂಟಿವಸ್ತ್ರದಿಂದ ಕೂಡಿರುವುದನ್ನು ನೋಡು.
ಆಸಾಮಪರಿಪೂರ್ಣಾರ್ಥಂ ನಿಶಮ್ಯ ಪರಿದೇವಿತಮ್ |
ಇತರೇತರಸಂಕ್ರಂದಾತ್ ನ ವಿಜಾನಂತಿ ಯೋಷಿತಃ ॥48॥
ಓರ್ವ ಸ್ತ್ರೀಯ ಪೂರ್ಣವಾಗದ ರೋದನದ ಮಧ್ಯದಲ್ಲಿ ಮತ್ತೋರ್ವಳ ರೋದನದಿಂದ ಸಂಕ್ರಾಂತವಾದ್ದರಿಂದ (ಏನೆಂದು ರೋದಿಸುತ್ತಿರುವರು ಎನ್ನುವುದು) ತಿಳಿಯದಾಗಿದೆ.
ಏತಾ ದೀರ್ಘಮಿವೋಚ್ಛ್ವಸ್ಯ ನಿಃಶ್ವಸ್ಯ ಚ ವಿಲಪ್ಯ ಚ |
ವಿಸ್ಪಂದಮಾನಾ ದುಃಖೇನ ಜೀವಿತಂ ನಾಜಹುಃ ಸ್ತ್ರಿಯಃ ॥49॥
ಇವರು ದೀರ್ಘವಾಗಿ ಉಸಿರನ್ನು ಬಿಡುತ್ತಾ ನಿಟ್ಟುಸಿರನ್ನು ಬಿಡುತ್ತಾ ರೋದಿಸುತ್ತಾ ದುಃಖದಿಂದ ಹೊರಳಾಡುತ್ತಿರುವರು. ಆದರೆ ಈ ಮಹಿಳೆಯರು ಜೀವವನ್ನು ಪರಿತ್ಯಜಿಸಿಲ್ಲ ( ಶವರಾಶಿಯ ಮಧ್ಯದಲ್ಲಿರುವ ಈ ಸ್ತ್ರೀಯರು ದುಃಖದಿಂದ ಹೊರಳಾಡುತ್ತಿರುವುದರಿಂದ ಇವರು ಮೃತರಾಗಿಲ್ಲ ಎಂದು ಊಹಿಸಬಹುದು ಎಂದು ಭಾವ.)
ಬಹ್ವ್ಯದೃಷ್ಟ್ವಾ ಶರೀರಾಣಿ ಕ್ರೋಶಂತಿ ವಿಲಪಂತಿ ಚ |
ಪಾಣಿಭಿಶ್ಚಾಪರಾ ಘ್ನಂತಿ ಶಿರಾಂಸಿ ಮೃದುಪಾಣಯಃ ॥50॥
ಕೋಮಲವಾದ ಕರಗಳನ್ನು ಹೊಂದಿರುವ ಈ ಸ್ತ್ರೀಯರು (ವಿಶಾಲವಾದ ರಣರಂಗದಲ್ಲಿ ಲಕ್ಷಾವಧಿ ಶರೀರಗಳ ಮಧ್ಯದಲ್ಲಿ ತಮ್ಮ ಅನುಬಂಧಿಗಳಲ್ಲಿ) ಅನೇಕರ ಶರೀರಗಳನ್ನು ಕಾಣದೆ, ಅರಚುತ್ತಾ ರೋದಿಸುತ್ತಾ (ತಮ್ಮ) ತಲೆಗಳನ್ನು (ತಮ್ಮ) ಕೈಗಳಿಂದ ಚಚ್ಚಿಕೊಳ್ಳುತ್ತಿರುವರು.

ಶಿರೋಭಿಃ ಪತಿತೈರ್ಹಸ್ತೈಃ ಸರ್ವಾಂಗೈಃ ಖಂಡಶಃ ಕೃತೈಃ |
ಇತರೇತರಸಂಕ್ರಾಂತೈರಾಸ್ತೀರ್ಣಾ ಭಾತಿ ಮೇದಿನೀ ॥51॥
ನೆಲದಲ್ಲಿ ಹರಡಿರುವ ತಲೆಗಳಿಂದ, ಕರಗಳಿಂದ, ತುಂಡಾಗಿರುವ ನಾನಾಬಗೆಯ ಅಂಗಗಳಿಂದ, ಯಾವುದೋ ಶರೀರ, ಮತ್ತಾವುದೋ ತಲೆ, ಯಾವುದೋ ತಲೆ ಮತ್ತಾವುದೋ ದೇಹ ಇಂತಹ ನಾನಾದೇಹಗಳಿಂದ ತುಂಬಿರುವ (ರಣ) ಭೂಮಿಯು ಭಾಸವಾಗುತ್ತಿದೆ.
ವಿಶಿರಸ್ಕಾನ್ ಅಧಃಕಾಯಾನ್ ದೃಷ್ಟ್ವಾ ಘೋರಾನನಿಂದಿತಾನ್ |
ಮುಹ್ಯಂತ್ಯನುಚಿತಾ ನಾರ್ಯೋ ವಿದೇಹಾನಿ ಶಿರಾಂಸಿ ಚ ॥52॥
ತಲೆಯಿಲ್ಲದ ಕೆಳಭಾಗದ ಶರೀರಗಳನ್ನು, ಶರೀರವಿಲ್ಲದ ತಲೆಗಳನ್ನು (ಇಂತಹ) ಭಯಂಕರವಾದವುಗಳನ್ನು ಕಂಡು ಅನಗತ್ಯವಾಗಿ ಸ್ತ್ರೀಯರು ಭಯಗ್ರಸ್ಥರಾಗುತ್ತಿರುವರು.
ಶಿರಃ ಕಾಯೇನ ಸಂಧಾಯ ವೀಕ್ಷಮಾಣಾ ವಿಚೇತಸಃ ॥53॥
ಅಪಶ್ಯಂತ್ಯೋಽಪರಂ ತತ್ರ ನೇದಮಸ್ಯೇತಿ ದುಃಖಿತಾಃ ॥54॥
ಬಾಹೂರುಚರಣಾನನ್ಯಾನ್ ವಿಶಿಖೋನ್ಮಥಿತಾನ್ ಪೃಥಕ್ |
ಸಂದಧತ್ಯೋಽಸುಖಾವಿಷ್ಟಾ ಮೂರ್ಛಂತೀಹ ಪುನಃ ಪುನಃ ॥55॥
ರುಂಡವನ್ನು ಮುಂಡದಿಂದ ಸಂಯೋಜಿಸಿ ನೋಡುವರು, ಇದು ಇದರದ್ದಲ್ಲ ಎಂದು (ತಿಳಿದು), ಮತ್ತೊಂದೆಡೆಯಲ್ಲಿ ಮತ್ತೊಂದನ್ನು ಅರಸುತ್ತಾರೆ, ಬಾಣಗಳಿಂದ ತುಂಡಾಗಿ ಪ್ರತ್ಯೇಕವಾಗಿ ಬಿದ್ದಿರುವ ಕರಗಳನ್ನು, ತೊಡೆಗಳನ್ನು ಜೋಡಿಸುತ್ತಾರೆ, ಮತ್ತೆ ಮತ್ತೆ ನೋಡುತ್ತಾರೆ, ಬುದ್ದಿಗೆಟ್ಟವರಾಗಿ ದುಃಖದಿಂದ ಕೂಡಿದವರಾಗಿ ಮೂರ್ಛಿತರಾಗುವರು.
ಉತ್ಕೃತ್ತಶಿರಸಶ್ಚಾನ್ಯಾನ್ ವಿಜಗ್ಧಾನ್ ಮೃಗಪಕ್ಷಿಭಿಃ |
ದೃಷ್ಟ್ವಾಽಪಿ ನ ವಿಜಾನಂತಿ ಭರ್ತೄನ್ ಭಾರತಯೋಷಿತಃ ॥56॥
ತುಂಡರಿಸಿ ಎಸೆದ ತಲೆಗಳನ್ನು ಮೃಗ-ಪಕ್ಷಿಗಳು ಕಚ್ಚಿ ತಿಂದಿವೆ, ಭರತಕುಲೋತ್ಪನ್ನರ ಪತ್ನಿಯರು (ಅಂತಹ ಶರೀರಗಳನ್ನು) ಕಂಡರೂ (ತಮ್ಮ) ಗಂಡನದು ಎಂದು ತಿಳಿಯಲಾರರು.
ಪಾಣಿಭಿಶ್ಚಾಪರಾ ಘ್ನಂತಿ ಶಿರಾಂಸಿ ಮಧುಸೂದನ |
ಪ್ರೇಕ್ಷ್ಯ ಭ್ರಾತೄನ್ ಪಿತೄನ್ ವಾಽಪಿ ಪತೀಂಶ್ಚ ನಿಹತಾನ್ ಪರೈಃ ॥57॥
ಮಧುಸೂದನ! ಶತ್ರುಗಳಿಂದ ನಿಹಿತರಾದ ಸಹೋದರರನ್ನು ಗಂಡಂದಿರನ್ನು ತಂದೆಯರನ್ನು ಕಂಡು ಕೈಗಳಿಂದ ತಲೆಯನ್ನು ಚಚ್ಚಿಕೊಳ್ಳುತ್ತಿರುವರು.
ಬಾಹುಭಿಃ ಕಾರ್ಮುಕೈಃ ಖಡ್ಗೈಃ ಶಿರೋಭಿಶ್ಚ ಸಕುಂಡಲೈಃ |
ಅಗಮ್ಯಕಲ್ಪಾ ಪೃಥಿವೀ ಮಾಂಸಶೋಣಿತಕರ್ದಮಾ ॥58॥
ಅನೇಕ ಬಿಲ್ಲುಗಳಿಂದ ಖಡ್ಗಗಳಿಂದ ತಲೆಗಳಿಂದ ಕುಂಡಲಗಳಿಂದ ತುಂಬಿರುವ ಮಾಂಸ ರಕ್ತಗಳಿಂದ ಕೆಸರಾದ (ರಣರಂಗದ) ಭೂಭಾಗವು ಅಗಮ್ಯವಾಗಿದೆ.
ನ ದುಃಖೇಷೂಚಿತಾಃ ಪೂರ್ವಂ ದುಃಖಂ ಗಾಹಂತ್ಯನಿಂದಿತಾಃ |
ಭ್ರಾತೃಭಿಃ ಪಿತೃಭಿಃ ಪುತ್ರೈರುಪಸ್ತೀರ್ಣಾಂ ವಸುಂಧರಾಮ್ ॥59॥
ಯೂಥಾನೀವ ಕಿಶೋರೀಣಾಂ ಸುಕೇಶೀನಾಂ ಜನಾರ್ದನ |
ಸ್ನುಷಾಣಾಂ ಧೃತರಾಷ್ಟ್ರಸ್ಯ ಪಶ್ಯ ಬೃಂದಾನ್ಯನೇಕಶಃ ॥60॥
ಜನಾರ್ದನ! ಸಹೋದರರಿಂದ ತಂದೆಯರಿಂದ ಮಕ್ಕಳಿಂದ ಚೆಲ್ಲಾಡಿರುವ ಈ ರಣರಂಗದಲ್ಲಿ, ಹಿಂದೆ ದುಃಖವನ್ನು ಅನುಭವಿಸಿರದ ದೋಷರಹಿತರಾದ , ಹೆಣ್ಣುಕುದುರೆಗಳ ಗುಂಪಿನಂತಿರುವ, ಸುಂದರ ಕೇಶಗಳನ್ನು ಹೊಂದಿರುವ, ದುಃಖದಲ್ಲಿ ಮುಳುಗಿರುವ ಧೃತರಾಷ್ಟ್ರನ ಸೊಸೆಯರ ಸಮೂಹವನ್ನು ನೋಡು.
ನಾತೋ ದುಃಖತರಂ ಕಿಂಸ್ವಿತ್ ಕೇಶವ ಪ್ರತಿಭಾತಿ ಮೇ |
ಯದಿಮಾಃ ಕುರ್ವತೇ ಸರ್ವಾ ರವಮುಚ್ಚಾವಚಂ ಸ್ತ್ರಿಯಃ ॥61॥
ಕೇಶವ! ಈ ಎಲ್ಲ ಹೆಂಗಳೆಯರು ಗಟ್ಟಿಯಾಗಿ ರೋದಿಸುತ್ತಿರುವರು, ಇದಕ್ಕಿಂತ ಹೆಚ್ಚಿನ ದುಃಖವು ಮತ್ತೊಂದಿಲ್ಲ ಎಂದು ತೋರುವುದು.
ನೂನಂ ವೈ ಚರಿತಂ ಪಾಪಂ ಮಯಾ ಪೂರ್ವೇಷು ಜನ್ಮಸು |
ಯಾನ್ ಪಶ್ಯಾಮಿ ಹತಾನ್ ಪುತ್ರಾನ್ ಪೌತ್ರಾನ್ ಭ್ರಾತೄಂಶ್ಚ ಕೇಶವ ॥
ಕೇಶವ! ಯಾವ ಮೃತರಾದ ಪುತ್ರರನ್ನು ಮೊಮ್ಮಕ್ಕಳನ್ನು ಸಹೋದರರನ್ನು ನೋಡುತ್ತಿರುವೆನೋ, (ಇದರಿಂದ ಊಹಿಸುವೆನು) ನಿಶ್ಚಯವಾಗಿಯೂ ನಾನು ನನ್ನ ಹಿಂದಿನ ಎಲ್ಲ ಜನ್ಮಗಳಲ್ಲಿ ಪಾಪವನ್ನು ಮಾಡಿರುವೆನು.
ವೈಶಂಪಾಯನಃ
ಏವಮಾರ್ತಾ ವಿಲಪತೀ ಸಮಾಭಾಷ್ಯ ಜನಾರ್ದನಮ್ |
ಗಾಂಧಾರೀ ಪುತ್ರಶೋಕಾರ್ತಾ ದದರ್ಶ ನಿಹತಂ ಸುತಮ್ ॥63॥
ವೈಶಂಪಾಯನ ಜನಾರ್ದನನನ್ನು ಉದ್ದೇಶಿಸಿ ಈ ರೀತಿಯಾಗಿ ಹೇಳಿ, ದುಃಖಿತಳಾದ ಪುತ್ರಶೋಕದಿಂದ ಆರ್ತಳಾದ ಗಾಂಧಾರಿಯು ರೋದಿಸುತ್ತಾ ಮೃತನಾದ ಮಗನನ್ನು ಕಂಡಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಸ್ತ್ರೀಪ್ರಲಾಪೋ ನಾಮ ಷೋಡಶೋಽಧ್ಯಾಯಃ ॥
॥ ಸ್ತ್ರೀಪರ್ವಣಿ ಪ್ರಥಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಪುತ್ರ ದುರ್ಯೋಧನನನ್ನು ಕಂಡ ಗಾಂಧಾರಿಯ ರೋದನ.
ವೈಶಂಪಾಯನಃ
ಹತಂ ದುರ್ಯೋಧನಂ ದೃಷ್ಟ್ವಾ ಗಾಂಧಾರೀ ಶೋಕಕರ್ಶಿತಾ |
ಸಹಸಾ ನ್ಯಪತದ್ ಭೂಮೌ ಛಿನ್ನೇವ ಕದಳೀ ವನೇ ||1||
ವೈಶಂಪಾಯನ ಮೃತನಾದ ದುರ್ಯೋಧನನನ್ನು ಕಂಡ ಗಾಂಧಾರಿಯು ದುಃಖದ ಪ್ರಭಾವಕ್ಕೆ ಒಳಗಾಗಿ, ತೋಟದ ತುಂಡರಿಸಿದ ಬಾಳೇಗಿಡದಂತೆ ಭೂಮಿಯಲ್ಲಿ ಬಿದ್ದಳು.
ಸಾ ತು ಲಬ್ಧ್ವಾ ಪುನಃ ಸಂಜ್ಞಾಂ ವಿಕ್ರುಶ್ಯ ಚ ಪುನಃ ಪುನಃ |
ದುರ್ಯೋಧನಮಭಿಪ್ರೇಕ್ಷ್ಯ ಶಯಾನಂ ರುಧಿರೋಕ್ಷಿತಮ್ ||2||
ಪರಿಷ್ವಜ್ಯಾಥ ಗಾಂಧಾರೀ ಕೃಪಣಂ ಪರ್ಯದೇವಯತ್ ||3||
ಮತ್ತೆ ಎಚ್ಚರವನ್ನು ಪಡೆದ ಆ ಗಾಂಧಾರಿಯಾದರೂ ಮತ್ತೆ ಮತ್ತೆ ಅರಚುತ್ತಾ ರಕ್ತದಿಂದ ಒದ್ದೆಯಾದ ನೆಲದಲ್ಲಿ ಬಿದ್ದ ದುರ್ಯೋಧನನನ್ನು ಕಂಡು ಅನಂತರದಲ್ಲಿ (ಆತನ ಶರೀರವನ್ನು) ಅಪ್ಪಿಕೊಂಡು ಅತ್ಯಂತವಾಗಿ ದುಃಖಿಸಿದಳು.
ಹಾ ಹಾ ಪುತ್ರೇತಿ ದುಃಖಾರ್ತಾ ವಿಲಲಾಪಾಕುಲೇಂದ್ರಿಯಾ ||4||
ಕಳವಳಗೊಂಡ ಇಂದ್ರಿಯಳಾದ ಗಾಂಧಾರಿಯು ಅಯ್ಯೋ ಅಯ್ಯೋ ಪುತ್ರನೆ! ಎಂದು ರೋದಿಸಿದಳು.
ಸುಗೂಢಜತ್ರುಂ ವಿಮಲಂ ಹಾರನಿಷ್ಕನಿಷೇವಿತಮ್ |
ವಾರಿಣಾ ನೇತ್ರಜೇನೋರಃ ಸಿಂಚಂತೀ ಶೋಕಕರ್ಶಿತಾ ||5||
ಸ್ವಚ್ಛವಾದ ಮಾಂಸದಿಂದ ಪುಷ್ಟವಾದ (ದುರ್ಯೋಧನನ) ಎದೆಯ ಭಾಗವನ್ನು ದುಃಖದಿಂದ ಬೆಂದ ಗಾಂಧಾರಿಯು ಕಣ್ಣೀರಿನಿಂದ ಒದ್ದೆಗೊಳಿಸಿದಳು.
ಸಮೀಪಸ್ಥಂ ಹೃಷೀಕೇಶಮಿದಂ ವಚನಮಬ್ರುವೀತ್ ||6||
ಸಮೀಪದಲ್ಲಿದ್ದ ಹೃಷೀಕೇಶನನ್ನು ಉದ್ದೇಶಿಸಿ ಈ ಮಾತನ್ನು ಹೇಳಿದಳು.
ಗಾಂಧಾರೀ
ಉಪಸ್ಥಿತೇಽಸ್ಮಿನ್ ಸಂಗ್ರಾಮೇ ಜ್ಞಾತೀನಾಂ ಸಂಕ್ಷಯೇ ವಿಭೋ |
ಮಾಮಯಂ ಪ್ರಾಹ ವಾರ್ಷ್ಣೇಯ ಪ್ರಾಂಜಲಿರ್ನೃಪಸತ್ತಮಃ ||7||
ಅಸ್ಮಿನ್ ಜ್ಞಾತಿಸಮುದ್ಧರ್ಷೇ ಜಯಮಂಬಾ ಬ್ರವೀತು ಮೇ ||8||
ಗಾಂಧಾರಿ ಪ್ರಭುವೆ, ವೃಷ್ಣಿಕುಲೋತ್ಪನ್ನನೆ! ಜ್ಞಾತಿಗಳ ನಾಶಕ್ಕೆ ಕಾರಣವಾದ ಈ ಯುದ್ಧವು ಆರಂಭವಾಗಲು, ಒಡೆಯರಲ್ಲಿ ಶ್ರೇಷ್ಠನಾದ ಈತನು (ದುರ್ಯೋಧನನು) ನನ್ನನ್ನು ಉದ್ದೇಶಿಸಿ `ಅಮ್ಮಾ! ಈ ಜ್ಞಾತಿಕಲಹದಲ್ಲಿ ನನಗೆ ಜಯವಾಗಲಿ ಎಂದು ಹೇಳು' ಎಂದು ಬೇಡಿದನು.
ಇತ್ಯುಕ್ತಾ ಜಾನತೀ ಸರ್ವಮಹಂ ಸ್ವಂ ವ್ಯಸನಾಗಮಮ್ |
ಅಬ್ರುವಂ ಪುರುಷವ್ಯಾಘ್ರ `ಯತೋ ಧರ್ಮಸ್ತತೋ ಜಯಃ' ||9||
ಯದಾ ತು ಯುಧ್ಯಮಾನಸ್ತ್ವಂ ಸಂಪ್ರಮುಹ್ಯಸಿ ಪುತ್ರಕ |
ಧ್ರುವಂ ಶಸ್ತ್ರಹತಾನ್ ಲೋಕಾನ್ ಪ್ರಾಪ್ತೋಽಸ್ಯಮರವತ್ ಪ್ರಭೋ ||
ಪುರುಷಶ್ರೇಷ್ಠನೆ, ಪ್ರಭುವೆ! ಈರೀತಿಯಾಗಿ ಹೇಳಿಸಿಕೊಂಡ ನಾನು, ಮುಂದೆ ಒದಗಲಿರುವ ಎಲ್ಲ ವ್ಯಸನವನ್ನೂ ತಿಳಿದವಳಾಗಿದ್ದೆನು, `ಎಲ್ಲಿ ಧರ್ಮವೋ ಅಲ್ಲಿಯೇ ವಿಜಯ, ಒಂದು ವೇಳೆ ಯುದ್ಧಮಾಡುವ ಸಂದರ್ಭದಲ್ಲಿ ಮೋಹಿತನಾದಲ್ಲಿ (ಮೈಮರೆತಲ್ಲಿ) ಮಗನೆ! ದೇವತೆಗಳಂತೆ ನಿಶ್ಚಯವಾಗಿಯೂ ಶಸ್ತ್ರದಿಂದ ಮೃತರಾದವರು ಹೊಂದುವ ಲೋಕಗಳನ್ನು ಹೊಂದುವಿ' ಎಂದು ಹೇಳಿದ್ದೆನು.
ಇತ್ಯೇವಮಬ್ರುವಂ ಪೂರ್ವಂ ನೈನಂ ಶೋಚಾಮ್ಯಹಂ ಪ್ರಭೋ ||11||
ಧೃತರಾಷ್ಟ್ರಂ ತು ಶೋಚಾಮಿ ಕೃಪಣಂ ಹತಬಾಂಧವಮ್ ||12||
ಸ್ವಾಮಿಯೆ! ಮೊದಲೇ ಈರೀತಿಯಾಗಿ ಹೇಳಿದ ನಾನು ಈತನನ್ನು ಉದ್ದೇಶಿಸಿ ದುಃಖಿಸುವುದಿಲ್ಲ, ಕೃಪಣನಾದ ಬಂಧುಹೀನನಾದ ಧೃತರಾಷ್ಟ್ರನ ವಿಷಯದಲ್ಲಿ ದುಃಖಿಸುವೆನು.
ಅಮರ್ಷಣಂ ಯುಧಾಂ ಶ್ರೇಷ್ಠಂ ಕೃತಾಸ್ತ್ರಂ ಯುದ್ಧದುರ್ಮದಮ್ |
ಶಯಾನಂ ವೀರಶಯನೇ ಪಶ್ಯ ಮಾಧವ ಮೇ ಸುತಮ್ ||13||
ಮಾಧವ! ಯುದ್ಧದಲ್ಲಿ ಸೋಲನ್ನು ಕಾಣದವರಲ್ಲಿ ಹಿರಿಯನಾದ, ಅಸ್ತ್ರಗಳನ್ನು ಹೊಂದಿದ್ದ, ಯುದ್ಧದಲ್ಲಿ ಆಯಾಸಗೊಳ್ಳದ, ವೀರರ ಶಯನದಲ್ಲಿ ಮಲಗಿರುವ ನನ್ನ ಪುತ್ರನನ್ನು ನೋಡು.
ಯೋಽಯಂ ಮೂರ್ಧಾವಸಿಕ್ತಾನಾಮಗ್ರೇ ಯಾತಿ ಪರಂತಪಃ |
ಸೋಽಯಂ ಪಾಂಸುಷು ಶೇತೇಽದ್ಯ ಪಶ್ಯ ಕಾಲಸ್ಯ ಪರ್ಯಯಮ್ ||
ಶತ್ರುಗಳಿಗೆ ದುಃಖಕಾರಕನೆ! ಯಾವ ಈತನು ಪಟ್ಟಾಭಿಷಿಕ್ತರ ಮುಂದಾಳಾಗಿ ಸಾಗುತ್ತಿದ್ದನೊ, ಅಂತಹ ಈತನು ಈಗ ಧೂಳಿನಲ್ಲಿ ಬಿದ್ದಿರುವನು, ಕಾಲದ ಬದಲಾವಣೆಯನ್ನು ಕಾಣುವವನಾಗು.
ಏವಂ ದುರ್ಯೋಧನೋ ವೀರೋ ಗತಿಂ ತ್ವಸುಲಭಾಂ ಗತಃ |
ತಥಾ ಹ್ಯಭಿಮುಖಃ ಶೇತೇ ಶಯನೇ ವೀರಸೇವಿತೇ ||15||

ಸುಲಭದಲ್ಲಿ ಹೊಂದಲು ಆಗದ ಸ್ಥಾನವನ್ನು ವೀರನಾದ ದುರ್ಯೋಧನನು ಈ ರೀತಿಯಾಗಿ ಹೊಂದಿ, ವೀರರು ಹೊಂದಬಹುದಾದ ಹಾಸಿನಲ್ಲಿ (ಶತ್ರುವಿನ) ಎದುರಿನಲ್ಲಿ ಪವಡಿಸಿರುವನು.
ಯಂ ಪುರಾ ಪರ್ಯುಪಾಸೀನಾ ರಮಯಂತಿ ವರಸ್ತ್ರಿಯಃ |
ತಂ ವೀರಶಯನೇ ಸುಪ್ತಂ ರಮಯಂತ್ಯಶಿವಾಃ ಶಿವಾಃ ||16||
ಹಿಂದೆ ಯಾರನ್ನು ಸೇವಿಸುವುದರಿಂದ ಶ್ರೇಷ್ಠಸ್ತ್ರೀಯರು ಸಂತಸಗೊಳ್ಳುತ್ತಿದ್ದರೋ, (ಈಗ) ವೀರಶಯನದಲ್ಲಿ (ರಣರಂಗದ ನೆಲದಲ್ಲಿ) ಮಲಗಿರುವ ಆತನನ್ನು ಅಮಂಗಳಕರಗಳಾದ ನರಿಗಳು ಸುತ್ತುವರೆದು ಸಂತಸಗೊಳ್ಳುತ್ತಿವೆ.
ಯಂ ಪುರಾ ಪರ್ಯುಪಾಸೀನಾ ರಮಯಂತಿ ಮಹೀಕ್ಷಿತಃ |
ಮಹೀತಳಸ್ಥಂ ನಿಹತಂ ಗೃಧ್ರಾಸ್ತಂ ಪರ್ಯುಪಾಸತೇ ||17||
ಯಾರನ್ನು ಭೂಮಿಯ ಒಡೆಯರು ಹಿಂದೆ ಸುತ್ತುವರೆಯುತ್ತಿದ್ದರೊ, (ಇಂದು) ಮೃತನಾಗಿ ನೆಲದಲ್ಲಿ ಬಿದ್ದಿರುವ ಆತನನ್ನು ಹದ್ದುಗಳು ಸುತ್ತುವರೆದಿವೆ.
ಯಂ ಪುರಾ ವ್ಯಜನೈರಗ್ರ್ಯೈರುಪಜೀವಂತಿ ಯೋಷಿತಃ |
ತಮದ್ಯ ಪಕ್ಷವ್ಯಜನೈರುಪಜೀವಂತಿ ಪಕ್ಷಿಣಃ ||18||
ಯಾರಿಗೆ ಶ್ರೇಷ್ಠವಾದ ವ್ಯಜನ (ಬೀಸಣಿಗೆ)ಗಳನ್ನು ಧರಿಸಿ ಸ್ತ್ರೀಯರು ಉಪಜೀವಿಸುತ್ತಿದ್ದರೋ ಇಂದು ಆತನನ್ನು ಪಕ್ಷಿಗಳು ತಮ್ಮ ರೆಕ್ಕೆಗಳೆಂಬ ವ್ಯಜನದಿಂದ ಉಪಜೀವಿಸುತ್ತಿವೆ.
ಏಷ ಶೇತೇ ಮಹಾಬಾಹುರ್ಬಲವಾನ್ ಸತ್ಯವಿಕ್ರಮಃ |
ಸಿಂಹೇನೇವ ದ್ವಿಪಃ ಸಂಖೇ ಭೀಮಸೇನೇನ ಪಾತಿತಃ ||19||
ಭೀಮಸೇನನಿಂದ ಕೆಡಹಲಾದ ನಿಜಬಲಿಷ್ಠನಾದ ನೀಳಬಾಹುವಾದ ಬಲಶಾಲಿಯು, ಕದನದಲ್ಲಿ ಸಿಂಹದಿಂದ ಕೆಡಹಲಾದ ಆನೆಯಂತೆ ಮಲಗಿರುವನು.
ಪಶ್ಯ ದುರ್ಯೋಧನಂ ಕೃಷ್ಣ ಶಯಾನಂ ರುಧಿರೋಕ್ಷಿತಮ್ |
ನಿಹತಂ ಭೀಮಸೇನೇನ ಗದಾಮಾಲಿಂಗ್ಯ ಭಾರತಮ್ ||20||
ಕೃಷ್ಣ! ಭೀಮಸೇನನಿಂದ ಮೃತನಾದ, ಗದೆಯನ್ನು ಅಪ್ಪಿಕೊಂಡಿರುವ, ರಕ್ತಸಿಕ್ತನಾಗಿ ಮಲಗಿರುವ, ಭರತಕುಲೋತ್ಪನ್ನನಾದ ದುರ್ಯೋಧನನನ್ನು ನೋಡು.
ಅಕ್ಷೌಹಿಣೀರ್ಮಹಾಬಾಹುರ್ದಶ ಚೈಕಂ ಚ ಕೇಶವ |
ಆನಯದ್ಯಃ ಪುರಾ ಸಂಖೇ ಸೋಽನಯಾ ನಿಧನಂ ಗತಃ ||21||
ಕೇಶವ! ಹನ್ನೊಂದು ಅಕ್ಷೋಹಿಣೀ ಸೇನೆಯನ್ನು ಯಾವನು ಈ ಹಿಂದೆ ಸಂಗ್ರಹಿಸಿದನೋ ಆತನು ಅದರೊಡನೆ (ಆ ಎಲ್ಲ ಸೇನೆಯೊಡನೆ) ಯುದ್ಧದಲ್ಲಿ ಅನ್ಯಾಯದಿಂದ ಸಾವನ್ನು ಹೊಂದಿರುವನು.
ಏಷ ದುರ್ಯೋಧನಃ ಶೇತೇ ಮಹೇಷ್ವಾಸೋ ಮಹಾರಥಃ |
ಶಾರ್ದೂಲ ಇವ ಸಿಂಹೇನ ಭೀಮೇನ ವಿನಿಪಾತಿತಃ ||22||
ಭೀಮನಿಂದ ಸಂಹೃತನಾದ ದೊಡ್ಡಬಿಲ್ಲಾಳಾದ ಮಹಾರಥಿಕನಾದ ಈ ದುರ್ಯೋಧನನು ಸಿಂಹದಿಂದ ಸಂಹೃತವಾದ ಹುಲಿಯಂತೆ ಮಲಗಿರುವನು.
ವಿದುರಂ ಹ್ಯವಮತ್ಯೈಷಃ ಪಿತರಂ ಚೈವ ಮಂದಭಾಕ್ |
ಬಾಲೋ ವೃದ್ಧಾವಮಾನೇನ ಮಂದೋ ಮೃತ್ಯುವಶಂ ಗತಃ ||23||
ಅಲ್ಪಭಾಗ್ಯಶಾಲಿಯಾದ ಈತನು ವಿದುರನನ್ನು ಹಾಗು ತಂದೆಯನ್ನು ಅತಿಕ್ರಮಿಸುತ್ತಿದ್ದನು, ಮೂರ್ಖನಾದ ಬಾಲನು (ತಿಳಿವಳಿಕೆಯಿಲ್ಲದವನು) ಹಿರಿಯರನ್ನು ಅವಮಾನಿಸಿದ್ದರಿಂದ ಸಾವಿನ ವಶವಾದನು.
ನಿಃಸಪತ್ನಾ ಮಹೀ ಯಸ್ಯ ತ್ರಯೋದಶ ಸಮಾಃ ಸ್ಥಿತಾ |
ಸ ಶೇತೇ ನಿಹತಃ ಸಂಖೇ ಪುತ್ರೋ ಮೇ ಪೃಥಿವೀಪತಿಃ ||24||
ಶತ್ರುರಹಿತವಾದ ಭೂಮಿಯು ಹದಿಮೂರುವರ್ಷ ಯಾರ ಅಧೀನದಲ್ಲಿದ್ದಿತೋ, ಆ ಪೃಥಿವೀಪತಿಯಾದ ನನ್ನ ಮಗನು ಯುದ್ಧದಲ್ಲಿ ನಿಹತನಾಗಿ ಮಲಗಿರುವನು.
ಅಪಶ್ಯಂ ಕೃಷ್ಣ ಪೃಥಿವೀಂ ಧಾರ್ತರಾಷ್ಟ್ರವಶಾನುಗಾಮ್ |
ಪೂರ್ಣಾಂ ಹಸ್ತಿಗವಾಶ್ವೈಶ್ಚ ವಾರ್ಷ್ಣೇಯ ನ ತು ತಚ್ಚಿರಮ್ ||25||
ವೃಷ್ಣಿಕುಲೋತ್ಪನ್ನನೆ, ಕೃಷ್ಣನೆ! ನೋಡು, ಆನೆ ಗೋವು ಕುದುರೆ ಇವುಗಳಿಂದ ಪೂರ್ಣವಾದ ಸಮಗ್ರ ಭೂಮಿಯು ಧೃತರಾಷ್ಟ್ರನ ಪುತ್ರನ ಅಧೀನದಲ್ಲಿದ್ದಿತ್ತು, ಆದರೆ ಅದು ಬಹುಕಾಲವಲ್ಲ.
ತಾಮೇವಾದ್ಯ ಮಹಾಬಾಹೋ ಪಶ್ಯಾಮ್ಯನ್ಯಾನುಶಾಸಿತಾಮ್ |
ಹೀನಾಂ ಹಸ್ತಿಗವಾಶ್ವೈಶ್ಚ ಕಿಂ ನು ಜೀವಾಮಿ ಮಾಧವ ||26||
ನೀಳಬಾಹುವೆ, ಮಾಧವ! ಆನೆ ಗೋವು ಇವುಗಳಿಂದ ರಹಿತವಾದ (ಬರಿದಾದ) ಅದೇ ಭೂಮಿಯು ಇಂದು ಅನ್ಯರ ಅಧೀನವಾಗಿರುವುದನ್ನು ಕಾಣುತ್ತಿರುವೆನು, (ಹೀಗಿರಲು ನಾನು) ಹೇಗೆ ಬದುಕಲಿ?
ಇದಂ ಕೃಚ್ಛ್ರತರಂ ಪಶ್ಯ ಪುತ್ರಸ್ಯಾಪಿ ವಧಾನ್ಮಮ |
ಯಾ ಇಮಾಃ ಪರ್ಯುಪಾಸಂತೇ ಹತಾನ್ ಶೂರಾನ್ ರಣೇ ಸ್ತ್ರಿಯಃ ||
ನನ್ನ ಮಕ್ಕಳ ಸಾವಿಗಿಂತಲೂ ಕ್ಲೇಶಕರವಾದದ್ದು ಇದು- ರಣರಂಗದಲ್ಲಿ ಮೃತರಾದ ಶೂರರನ್ನು ಸುತ್ತುವರೆದು ನಿಂತಿರುವ ಈ ಯಾವ ಸ್ತ್ರೀಯರು (ಇವರನ್ನು ಕಾಣುವುದು).

ಪ್ರಕೀರ್ಣಕೇಶಾಂ ಸುಶ್ರೋಣೀಂ ದುರ್ಯೋಧನಭುಜಾಂಕಗಾಮ್ |
ರುಕ್ಮ(ಗ್ಮ)ವೇದಿನಿಭಾಂ ಪಶ್ಯ ಕೃಷ್ಣ ಲಕ್ಷ ್ಮ(ಕ್ಷ)ಣಮಾತರಮ್ ॥28॥
ಕೃಷ್ಣ! ತಲೆಕೂದಲನ್ನು ಹರಡಿಕೊಂಡಿರುವ ಸುಂದರ ಕಟಿಯನ್ನು ಹೊಂದಿರುವ ದುರ್ಯೋಧನನ ಭುಜದ ಬಳಿಯಿರುವ ಚಿನ್ನದ ವೇದಿಕೆಯಂತೆ ತೋರುವ (ಸುಂದರಳಾದ) ಲಕ್ಷಣನ ತಾಯಿಯನ್ನು ನೋಡು.
ನೂನಮೇಷಾ ಪುರಾ ಬಾಲಾ ಜೀವಮಾನೇ ಮಹಾಭುಜೇ |
ಭುಜಮಾಶ್ರಿತ್ಯ ರಮತೇ ಸುಭುಜಸ್ಯ ಮನಸ್ವಿನೀ ॥29॥
ಹಿಂದೆ ನೀಳಬಾಹುವು (ದುರ್ಯೋಧನನು) ಬದುಕಿರುವಾಗ ಸ್ವಾಭಿಮಾನಿನಿಯಾದ ಈ ಬಾಲಿಕೆಯು ಸುಂದರ ಭುಜನ (ದುರ್ಯೋಧನನ) ಭುಜಗಳನ್ನು ಅಶ್ರಯಿಸಿ ಸಂತಸದಿಂದಿದ್ದಳು.
ಕಥಂ ನು ಶತಧಾ ನೇದಂ ಹೃದಯಂ ಮಮ ದೀರ್ಯತೇ |
ಪಶ್ಯಂತ್ಯಾ ನಿಹತಂ ಪುತ್ರಂ ಪೌತ್ರೇಣ ಸಹಿತಂ ರಣೇ ॥30॥
ಮೊಮ್ಮಕ್ಕಳಿಂದ ಸಹಿತನಾದ ಮೃತನಾದ ಮಗನನ್ನು ನೋಡುತ್ತಿರುವ ನನ್ನ ಹೃದಯವು ಏಕೆ ನೂರು ಹೋಳಾಗಿ ಸೀಳುತ್ತಿಲ್ಲ?
ಪುತ್ರಂ ರುಧಿರಸಂಸಿಕ್ತಮುಪಜಿಘ್ರತ್ಯನಿಂದಿತಾ |
ದುರ್ಯೋಧನಂ ತು ಮೃದುನಾ ಪಾಣಿನಾ ಪರಿಮಾರ್ಜತಿ ॥31॥
ದೋಷರಹಿತಳು (ನನ್ನ ಸೊಸೆಯು) ರಕ್ತದಿಂದ ನೆಂದಿರುವ ಪುತ್ರನನ್ನು ಆಘ್ರಾಣಿಸುತ್ತಿರುವಳು, ದುರ್ಯೋಧನನನ್ನಾದರೊ ಮೃದು ಕರಗಳಿಂದ ಸವರುತ್ತಿರುವಳು.
ಕಿಂ ನು ಶೋಚತಿ ಭರ್ತಾರಮಥ ಪುತ್ರಂ ಮನಸ್ವಿನೀ |
ತಥಾ ಹ್ಯವಸ್ಥಿತಾ ಭಾತಿ ಪುತ್ರಂ ಚಾಪ್ಯಭಿವೀಕ್ಷತೇ ॥32॥
ಸ್ವಶಿರಃ ಪಂಚಶಾಖಾಭ್ಯಾಮಭಿಹತ್ಯಾಯತೇಕ್ಷಣಾ |
ಪತತ್ಯುರಸಿ ವೀರಸ್ಯ ಕುರುರಾಜಸ್ಯ ಮಾಧವ ॥33॥
ಮಾಧವ! ನೋಡು, ಸ್ವಾಭಿಮಾನಿನಿಯು ಅಗಲವಾದ ಕಣ್ಣುಗಳನ್ನು ಹೊಂದಿರುವವಳು ( ನನ್ನ ಸೊಸೆಯು ತನ್ನ) ಗಂಡನಿಗಾಗಿ ದುಃಖಿಸುವಳೋ ಅಥವಾ ಮಗನಿಗಾಗಿ ದುಃಖಿಸುವಳೋ? ಆ ರೀತಿಯಾದ ಅವಸ್ಥೆಯಲ್ಲಿ ಇರುವಂತೆ ತೋರುತ್ತಿರುವಳು, (ಒಮ್ಮೆ) ಮಗನನ್ನು ನೋಡುವಳು, ಮತ್ತೊಮ್ಮೆ ವೀರನಾದ ಕುರುರಾಜನಾದ ಗಂಡನ ಎದೆಯಲ್ಲಿ ಒರಗುವಳು, ಎರಡೂ ಕೈಗಳಿಂದ ತನ್ನ ತಲೆಯನ್ನು ಚೆಚ್ಚಿಕೊಳ್ಳುತ್ತಿರುವಳು. (ಪಂಚಶಾಖಾಭ್ಯಾಂ- ಎರಡೂ ಕೈಗಳಿಂದ, `ಪಂಚಶಾಖಃ ಶಯಃ ಪಾಣಿಃ' ಎಂದು ಅಮರಕೋಶವು, ಲಕ್ಷಾಲಂಕಾರ.)
ಪುಂಡರೀಕಮಿವಾಘ್ರಾತಿ ಪುಂಡರೀಕಾಂತರಪ್ರಭಾ |
ಮುಖಂ ಪ್ರಮೃಜ್ಯ ಪುತ್ರಸ್ಯ ಭರ್ತುಶ್ಚೈವ ತಪಸ್ವಿನೀ ॥34॥
ಕಮಲದ ಎಸಳಿನಂತೆ ಕಾಂತಿಯನ್ನು ಹೊಂದಿರುವ ತಪಸ್ವಿನಿಯಾದ ಆಕೆಯು (ನನ್ನ ಸೊಸೆಯು) ಕಮಲವನ್ನು ಮೂಸುತ್ತಿರುವಳೊ ಎನ್ನುವಂತೆ (ತನ್ನ) ಮಗನ ಮುಖವನ್ನು ಮೂಸುತ್ತಿರುವಳು, ಹಾಗೆಯೇ (ತನ್ನ) ಗಂಡನ ಮುಖವನ್ನೂ ಆಘ್ರಾಣಿಸುತ್ತಿರುವಳು.
ಯದಿ ವಾಪ್ಯಾಗಮಾಃ ಸಂತಿ ಯದಿ ಚ ಶ್ರುತಯಸ್ತಥಾ |
ಧ್ರುವಂ ಲೋಕಮವಾಪ್ತೋಽಯಂ ನೃಪೋ ಬಾಹುಬಲಾರ್ಜಿತಮ್ ॥
ಸ್ಮೃತಿಗಳು ಪ್ರಮಾಣವಾಗಿದ್ದಲ್ಲಿ ಹಾಗೆಯೇ ವೇದಗಳು ಪ್ರಮಾಣವಾಗಿದ್ದಲ್ಲಿ ಬಾಹುಬಲದಿಂದ ಸಂಪಾದಿಸಿದ ಲೋಕವನ್ನು ಈ ರಾಜನು ನಿಶ್ಚಯವಾಗಿಯೂ ಹೊಂದಿರುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಗಾಂಧಾರೀಪ್ರಲಾಪೋ ನಾಮ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಕೃಷ್ಣನಲ್ಲಿ ಸೊಸೆಯರ ರೋದನವನ್ನು ಕಂಡ ಗಾಂಧಾರಿಯ ಅಳಲು.
ಗಾಂಧಾರೀ
ಪಶ್ಯ ಮಾಧವ ಪುತ್ರಾನ್ ಮೇ ಶತಸಂಖ್ಯಾನ್ ಜಿತಕ್ಲಮಾನ್ |
ಗದಯಾ ಭೀಮಸೇನೇನ ಭೂಯಿಷ್ಠಂ ನಿಹತಾನ್ ರಣೇ ॥1॥
ಗಾಂಧಾರಿ ಮಾಧವ! ಯುದ್ಧದಲ್ಲಿ ಪ್ರಾಯಶಃ ಭೀಮಸೇನನ ಗದೆಯಿಂದ ಮೃತರಾದ, ಆಯಾಸವನ್ನೇ ಅರಿಯದ ನೂರುಸಂಖ್ಯಾಕರಾದ ನನ್ನ ಪುತ್ರರನ್ನು ನೋಡು.
ಇದಂ ದುಃಖತರಂ ಮೇಽದ್ಯ ಯದಿಮಾ ಮುಕ್ತಮೂರ್ಧಜಾಃ |
ಹತಭರ್ತ್ರ್ಯೋ ರಣೇ ಬಾಲಾಃ ಪರಿಧಾವಂತಿ ಮೇ ಸ್ನುಷಾಃ ॥2॥
ಗಂಡಂದಿರನ್ನು ಕಳೆದುಕೊಂಡಿರುವ ಬಾಲೆಯರಾದ ತಲೆಕೂದಲನ್ನು ಹರಡಿ ಕೊಂಡಿರುವ ಯಾವ ಈ ನನ್ನ ಸೊಸೆಯರು ರಣರಂಗದಲ್ಲಿ ಸುತ್ತಾಡುತ್ತಿರುವರೋ, ಇದು ಈಗ ನನಗೆ ಅತಿದುಃಖಕ್ಕೆ ಕಾರಣವಾಗಿದೆ.
ಪ್ರಾಸಾದತಳಚಾರಿಣ್ಯಃ ಚರಣೈರ್ಭೂಷಣಾನ್ವಿತೈಃ |
ಕಾಯೇನಾದ್ಯ ಸ್ಪೃಶಂತೀಮಾಂ ರುಧಿರಾರ್ದ್ರಾಂ ವಸುಂಧರಾಮ್ ॥3॥
ಆಭರಣಗಳಿಂದ ಭೂಷಿತವಾದ ಕಾಲುಗಳಿಂದ ಮಹಡಿಯ ಮೇಲೆ ಸಂಚರಿಸುತ್ತಿದ್ದ ನನ್ನ ಸೊಸೆಯರು ಇಂದು ಬರಿಗಾಲಲ್ಲಿ

ರಕ್ತದಿಂದ ಒದ್ದೆಯಾದ ಭೂಮಿಯಲ್ಲಿ ಸಂಚರಿಸುತ್ತಿರುವವರು.
ಗೃಧ್ರಾನುತ್ಸಾರಯಂತ್ಯಶ್ಚ ಗೋಮಾಯೂಂಶ್ಚ ತಥಾಽಪರಾಃ |
ಶೋಕೇನಾರ್ತಾ ವಿಘೂರ್ಣಂತ್ಯೋ ಮತ್ತಾ ಇವ ಚರಂತ್ಯುತ ॥4॥
ಕೆಲವರು ಹದ್ದುಗಳನ್ನು ಓಡಿಸುತ್ತಿರುವವರು, ಮತ್ತೆ ಕೆಲವರು ನರಿಗಳನ್ನು ಓಡಿಸುತ್ತಿರುವವರು, ದುಃಖದಿಂದ ಬಳಲಿದ ಕೆಲವರು ನಿಟ್ಟುಸಿರನ್ನು ಬಿಡುತ್ತಿರುವವರು, ಮತ್ತೆ ಕೆಲವರು ಹುಚ್ಚರಂತೆ ಸುತ್ತುತ್ತಿರುವವರು.
ಏಷಾಂ ಯಾ ತ್ವನವದ್ಯಾಂಗೀ ಕರಸಮ್ಮಿತಮಧ್ಯಮಾ |
ಘೋರಮಾಯೋಧನಂ ದೃಷ್ಟ್ವಾ ಪತತ್ಯಸುಖಿತಾ ಭುವಿ ॥5॥
ಇವರಲ್ಲಿ ಯಾವನು ಕೈಯಂತೆ ತೆಳುವಾದ ಸೊಂಟವನ್ನು ಹೊಂದಿರುವ ದೋಷವಿಲ್ಲದ ಅವಯವಗಳನ್ನು ಹೊಂದಿರುವ ಭಾನುಮತಿಯು ಭಯಂಕರವಾದ ರಣರಂಗವನ್ನು ಕಂಡು ದುಃಖಿತಳಾಗಿ ನೆಲದಲ್ಲಿ ಬಿದ್ದಿರುವಳು.
ದೃಷ್ಟ್ವಾ ಮೇ ಪಾರ್ಥಿವಸುತಾಮೇನಾಂ ಲಕ್ಷ್ಮಣಮಾತರಮ್ |
ರಾಜಪತ್ನೀಂ ಮಹಾಬಾಹೋ ಮನೋ ಮೇಽಭ್ಯುಪತಾಮ್ಯತಿ ॥6॥
ನೀಳಬಾಹುವನ್ನು ಹೊಂದಿದವನೇ! ನನ್ನ ಈ ರಾಜನ ಸುತೆಯಾದ ಲಕ್ಷಣನ ತಾಯಿಯಾದ ರಾಜಪತ್ನಿಯನ್ನು ಕಂಡು ನನ್ನ ಮನವು ದುಃಖಿಸುವುದು. (ಅಭ್ಯುಪತಾಮ್ಯತಿ- `ತಮು- ಗ್ಲಾನೌ' ಎಂಬ ಧಾತುವಿನಿಂದ ನಿಷ್ಪನ್ನವಾದ ರೂಪ, ಲಕ್ಷ್ಮಾಲಂಕಾರ).
ಭ್ರಾತೄಂಶ್ಚಾನ್ಯಾಃ ಪಿತೄಂಶ್ಚಾನ್ಯಾಃ ಪುತ್ರಾಂಶ್ಚ ನಿಹತಾನ್ ಭುವಿ |
ದೃಷ್ಟ್ವಾ ಪರಿಪತಂತ್ಯೇತಾಃ ಪ್ರಗೃಹ್ಯ ಸುಭುಜಾ ಭುಜಾನ್ ॥7॥
ಮೃತರಾದ ಸಹೋದರರರನ್ನು, ಮತ್ತೆ ಮೃತರಾದ ತಂದೆಯರನ್ನು, ಮತ್ತೆ ಮೃತರಾದ ಮಕ್ಕಳನ್ನು ಭೂಮಿಯಲ್ಲಿ (ರಣರಂಗದಲ್ಲಿ) ಕಂಡು, ಸುಂದರವಾದ ಭುಜಗಳನ್ನು ಹೊಂದಿರುವ ಇವರು ಪರಸ್ಪರ ಕೈಗಳನ್ನು ಹಿಡಿದುಕೊಂಡು ನೆಲಕ್ಕೆ ಉರುಳುತ್ತಿರುವವರು.
ಮಧ್ಯಾನಾಮಥ ವೃದ್ಧಾನಾಂ ಬಾಲಾನಾಂ ಚಾಪರಾಜಿತ |
ಆಕ್ರಂದಂ ಹತಬಂಧೂನಾಂ ದಾರುಣೇ ವೈಶಸೇ ಶೃಣು ॥8॥
ಸೋಲಿಲ್ಲದವನೇ! ಬಂಧುಗಳನ್ನು ಕಳೆದುಕೊಂಡ ನಡುವಯದವರ, ವಯಸ್ಸಾದವರ ಚಿಕ್ಕವಯಸ್ಸಿನವರ ದಾರುಣವಾದ ಮನಕರಗುವ ರೋದನವನ್ನು ಕೇಳು.
ರಥನೀಡಾಂಶ್ಚ ದೇಹಾಂಶ್ಚ ಹತಾನಾಂ ಗಜವಾಜಿನಾಮ್ |
ಆಶ್ರಿತ್ಯ ಶ್ರಮಮೋಹಾರ್ತಾಃ ಸ್ಥಿತಾ ಪಶ್ಯ ಮಹಾಭುಜ ॥9॥
ನೀಳಬಾಹುವೇ! ಆಯಾಸ, ಮೋಹಗಳಿಂದ ದುಃಖಿತರಾದ ಇವರು ರಥಗಳ ಅವಶೇಷಗಳನ್ನು, ಮೃತವಾದ ಆನೆಕುದುರೆಗಳ ದೇಹಗಳನ್ನು ಆಶ್ರಯಿಸಿ ನಿಂತಿರುವುದನ್ನು ನೋಡು.
ಅನ್ಯಾ ಹ್ಯಪಹೃತಂ ಕಾಯಾಚ್ಚಾರುಕುಂಡಲಮುನ್ನಸಮ್ |
ಸ್ವಸ್ಯ ಬಂಧೋಃ ಶಿರಃ ಕೃಷ್ಣ ಗೃಹೀತ್ವಾ ಪಶ್ಯ ತಿಷ್ಠತಿ ॥10॥
ಕೃಷ್ಣ! ನೋಡು, ಮತ್ತೊಬ್ಬಳು ದೇಹದಿಂದ ಕಿತ್ತೆಸೆದ ಸುಂದರವಾದ ಕುಂಡಲ-ಮೂಗುಗಳನ್ನು ಹೊಂದಿರುವ ತನ್ನ ಬಂಧುವಿನ ತಲೆಯನ್ನು ಹಿಡಿದುಕೊಂಡು ನಿಂತಿರುವಳು.
ಪೂರ್ವಜನ್ಮಕೃತಂ ಪಾಪಂ ಮನ್ಯೇ ನಾಲ್ಪಮಿವಾನಘ |
ಏತಾಭಿರನವದ್ಯಾಭಿರ್ಮಯಾ ಚೈವಾಲ್ಪಪುಣ್ಯಯಾ ॥11॥
ಪಾಪರಹಿತನೇ! ದೋಷರಹಿತರಾದ ಈ ಸ್ತ್ರೀಯರು ಮತ್ತು ಅಲ್ಪಪುಣ್ಯವಂತಳಾದ ನಾನೂ ಸಹ ಹಿಂದಿನ ಜನ್ಮದಲ್ಲಿ ಭಾರೀ ಪಾಪವನ್ನು ಮಾಡಿರುವೆವು.
ತದಿದಂ ಧರ್ಮರಾಜೇನ ಘಾತಿತಂ ನೋ ಜನಾರ್ದನ |
ನ ಹಿ ನಾಶೋಽಸ್ತಿ ವಾರ್ಷ್ಣೇಯ ಕರ್ಮಣೋಃ ಶುಭಪಾಪಯೋಃ ॥
ಜನಾರ್ದನ! ಆದ್ದರಿಂದಲೇ ಧರ್ಮರಾಜನು ನಮ್ಮನ್ನು ಘಾಸಿಗೊಳಿಸಿರುವನು, ವೃಷ್ಣಿಕುಲೋತ್ಪನ್ನನೇ! ಶುಭಾಶುಭಕರ್ಮಗಳಿಗೆ ನಾಶವಿಲ್ಲ (ಮಾಡಿದ ಪಾಪ- ಪುಣ್ಯಗಳನ್ನು ಅನುಭವಿಸಲೇಬೇಕು ಎಂದು ಭಾವ).
ಪ್ರತ್ಯಗ್ರವಯಸಃ ಪಶ್ಯ ದರ್ಶನೀಯಕುಚಾನನಾಃ |
ಕುಲೇಷು ಜಾತಾ ಹ್ರೀಮತ್ಯಃ ಕೃಷ್ಣಪಕ್ಷ್ಮಾಕ್ಷಿಮೂರ್ಧಜಾಃ ॥13॥
ಹಂಸಗದ್ಗದಭಾಷಿಣ್ಯೋ ದುಃಖಶೋಕಪ್ರಮೋಹಿತಾಃ |
ಸಾರಸ್ಯ ಇವ ಪಶ್ಯಂತ್ಯಃ ಪತಿತಾಃ ಪಶ್ಯ ಮಾಧವ ॥14॥
ಮಾಧವ! ನೋಡು, (ನನ್ನ ಸೊಸೆಯರು) ಹದಿಹರೆಯದವರು, ಸುಂದರವಾದ ಎದೆ ಮುಖಗಳನ್ನು ಹೊಂದಿರುವರು, ಸತ್ಕುಲದಲ್ಲಿ ಜನ್ಮವನ್ನು ಹೊಂದಿರುವರು, ಲಜ್ಜಾಶೀಲರು, ಕರಿಯದಾದ ಕಣ್ಣಿನ ರೆಪ್ಪೆಗಳನ್ನು ತಲೆಕೂದಲುಗಳನ್ನು ಹೊಂದಿರುವರು, ಹಂಸದ ಧ್ವನಿಯಂತೆ ಮೆದು ಮಾತಿನವರು, ದುಃಖ-ಶೋಕಗಳಿಂದ ಮೋಹಿತರಾದ ಇವರು ಸಾರಸಪಕ್ಷಿಯಂತೆ ಕಾಣುತ್ತಿರುವರು, ನೆಲದಲ್ಲಿ ಬಿದ್ದಿರುವರು.
ಫುಲ್ಲಪದ್ಮಪ್ರಕಾಶಾನಿ ಪುಂಡರೀಕಾಕ್ಷ ಯೋಷಿತಾಮ್ |
ಅನವದ್ಯಾನಿ ವಕ್ತ್ರಾಣಿ ತಪತ್ಯಂಶುಭಿರಂಶುಮಾನ್ ॥15॥
ಪುಂಡರೀಕನಯನನೇ! ಅರಳಿದ ಕಮಲಗಳಂತಿರುವ ದೋಷರಹಿತವಾದ ಈ ಮಹಿಳೆಯರ ಮುಖಗಳನ್ನು ಸೂರ್ಯನು ತನ್ನ ಕಿರಣಗಳಿಂದ ದಹಿಸುತ್ತಿರುವನು.
ಸೇರ್ಷ್ಯಾಣಾಂ ಮಮ ಪುತ್ರಾಣಾಂ ವಾಸುದೇವಾವರೋಧನಮ್ |

ಮತ್ತಮಾತಂಗದರ್ಪಾಣಾಂ ಪಶ್ಯಂತ್ಯದ್ಯ ಪೃಥಗ್ಜನಾಃ ॥16॥
ವಾಸುದೇವ! ಮದಿಸಿದ ಆನೆಗಳಂತೆ ಗರ್ವಿಷ್ಠರಾದ ಅಸೂಯಾರತರಾಗಿದ್ದ ನನ್ನ ಮಕ್ಕಳು, (ಅವರ ಪತ್ನಿಯರನ್ನು ಅನ್ಯರು ನೋಡದಿರಲಿ ಎಂದು ಸೆರಗಿನ ಮುಸುಕು ಮುಂತಾದವುಗಳಿಂದ) ತಡೆಯುತ್ತಿದ್ದರು, ಇಂತಹ ಕಳಂಕರಹಿತರಾದವರನ್ನು ಇಂದು ಸಾಮಾನ್ಯಜನರೂ ನೋಡುತ್ತಿರುವರು.
ಶತಚಂದ್ರಾಣಿ ಚರ್ಮಾಣಿ ಧ್ವಜಾಂಶ್ಚಾದಿತ್ಯಸನ್ನಿಭಾನ್ |
ರೌಗ್ಮಾಣಿ ಚೈವ ವರ್ಮಾಣಿ ನಿಷ್ಕಾನಪಿ ಚ ಕಾಂಚನಾನ್ ॥17॥
ಶಿರಸ್ತ್ರಾಣಾನಿ ಚೈತಾನಿ ಪುತ್ರಾಣಾಂ ಚ ಮಹೀತಳೇ |
ಪಶ್ಯ ದೀಪ್ತಾನಿ ಗೋವಿಂದ ಪಾವಕಾನ್ ಸುಹುತಾನಿವ ॥18॥
ಗೋವಿಂದ! ನನ್ನ ಮಕ್ಕಳ ಪ್ರಕಾಶಮಾನವಾದ ನೂರುಚಂದ್ರರಂತಿರುವ ಗುರಾಣಿಗಳು, ಸೂರ್ಯನಿಗೆ ಸಮವಾದ ಧ್ವಜಗಳು, ಹೊನ್ನಿನ ಕವಚಗಳು, ಚಿನ್ನದ ನಿಷ್ಕಗಳು (ಎದೆಯ ಅಲಂಕಾರ), ಈ ತಲೆಯ ಆವಾರಕಗಳು ಪ್ರಜ್ವಲಿಸಿ ಶಾಂತವಾದ ಅಗ್ನಿಯಂತೆ ಭೂಮಿಯಲ್ಲಿ ಬಿದ್ದಿವೆ ನೋಡು.
ಏಷ ದುಃಶಾಸನಃ ಶೇತೇ ಶೂರೇಣಾಮಿತ್ರಘಾತಿನಾ |
ಪೀತಶೋಣಿತಸರ್ವಾಂಗೋ ಭೀಮಸೇನೇನ ಪಾತಿತಃ ॥19॥
ದ್ಯೂತಕ್ಲೇಶಾನನುಸ್ಮೃತ್ಯ ದ್ರೌಪದೀಚೋದಿತೇನ ಚ ॥20॥
ದ್ಯೂತದ ಕ್ಲೇಶಗಳನ್ನು ಸ್ಮರಿಸಿಕೊಂಡು, ದ್ರೌಪದಿಯಿಂದ ಪ್ರೇರಿತನಾದ ಶತ್ರುಸಂಹಾರಕನಾದ ಶೂರನಾದ ಭೀಮಸೇನನು ಎಲ್ಲ ಅವಯವಗಳಿಂದ ರಕ್ತವನ್ನು ಹೀರಿ ಈ ದುಶ್ಶಾಸನನನ್ನು (ಇಲ್ಲಿ) ಕೆಡವಿರುವನು.
ಉಕ್ತಾ ಹ್ಯನೇನ ಪಾಂಚಾಲೀ ಸಭಾಯಾಂ ದ್ಯೂತನಿರ್ಜಿತಾ |
ಪ್ರಿಯಂ ಚಿಕೀರ್ಷತಾ ಭ್ರಾತುಃ ಕರ್ಣಸ್ಯ ಚ ಜನಾರ್ದನ ॥21॥
ಸಹೈವ ಸಹದೇವೇನ ನಕುಲೇನಾರ್ಜುನೇನ ಚ ॥22॥
ದಾಸೀಭೂತಾಽಸಿ ಪಾಂಚಾಲಿ ಕ್ಷಿಪ್ರಂ ಪ್ರವಿಶ ನೋ ಗೃಹಾನ್ |
ತತೋಽಹಮಬ್ರುವಂ ಕೃಷ್ಣ ತದಾ ದುರ್ಯೋಧನಂ ನೃಪಮ್ ॥23॥
ಜನಾರ್ದನ! ಕರ್ಣನಿಗೆ ಮತ್ತು (ತನ್ನ) ಅಣ್ಣನಿಗೆ ಖುಷಿಯನ್ನು ಉಂಟುಮಾಡಬೇಕೆಂದು ಈತನು, ಸಭೆಯಲ್ಲಿ ದ್ಯೂತದಲ್ಲಿ ಸೋತ ಪಾಂಚಾಲಿಯನ್ನು ಉದ್ದೇಶಿಸಿ ಹೇಳಿದನು-` ಪಾಂಚಾಲಿ! ಸಹದೇವ ನಕುಲ ಅರ್ಜುನ ಇವರಿಂದ ಒಡಗೂಡಿದ (ನೀನು) ದಾಸಿಯಾಗಿರುವಿ, ಈ ಕೂಡಲೇ ನಮ್ಮ ಮನೆಗೆ ಹೋಗು' ಎಂದು. ಆಗ ನಾನು ರಾಜನಾದ ದುರ್ಯೋಧನನನ್ನು ಉದ್ದೇಶಿಸಿ ಹೇಳಿದೆನು.
ಮೃತ್ಯುಪಾಶಪರಿಕ್ಷಿಪ್ತಂ ಶಕುನಿಂ ಪುತ್ರ ವರ್ಜಯ |
ಗಾಂಧಾರರಾಜಂ ದುರ್ಬುದ್ಧಿಂ ಮಾತುಲಂ ಕಲಹಪ್ರಿಯಮ್ ॥24॥
ಮಗನೆ! ಮೃತ್ಯುಪಾಶವನ್ನು ಎಸೆಯುವ ದುರ್ಬುದ್ಧಿಯವನಾದ ಗಾಂಧಾರ ರಾಜನಾದ (ನಿನ್ನ) ಸೋದರಮಾವನಾದ ಜಗಳಗಂಟನಾದ ಈ ಶಕುನಿಯನ್ನು ಪರಿತ್ಯಜಿಸು.
ಕ್ಷಿಪ್ರಮೇನಂ ಪರಿತ್ಯಜ್ಯ ಪುತ್ರ ಸಂಶಾಮ್ಯ ಪಾಂಡವೈಃ |
ನ ತ್ವಂ ಬುಧ್ಯಸಿ ದುರ್ಬುದ್ಧೇ ಭೀಮಸೇನಮಮರ್ಷಿಣಮ್ ॥25॥
ತಿಳಿಗೇಡಿ ಮಗನೆ! ಕೂಡಲೇ ಈತನನ್ನು ಪರಿತ್ಯಜಿಸಿ, ಪಾಂಡವರೊಡನೆ ಸಂಧಿಯನ್ನು ಮಾಡಿಕೊ, ನೀನು ಕೋಪಿಷ್ಠನಾದ ಭೀಮನನ್ನು (ಸರಿಯಾಗಿ) ತಿಳಿದಿಲ್ಲ.
ವಾಙ್ನಾರಾಚೈಸ್ತುದಂಸ್ತೀಕ್ಷ್ಣೈರುಲ್ಕಾಭಿರಿವ ಕುಂಜರಮ್ |
ತಾನೇವಂ ರಹಸಿ ಕ್ರುದ್ಧೋ ವಾಕ್‌ಶಲ್ಯಾನ್ನವಧಾರಯನ್ ॥26॥
ಉತ್ಸಸರ್ಜ ವಿಷಂ ತೇಷು ಸರ್ಪೋ ಗೋವೃಷಭೇಷ್ವಿವ ॥27॥
ಬೆಂಕಿಯ ಕೊಳ್ಳಿಯಿಂದ ಆನೆಯನ್ನು ತಿವಿಯುವಂತೆ ತೀಕ್ಷ್ಣವಾದ ಮಾತುಗಳೆಂಬ ಬಾಣಗಳಿಂದ (ಪಾಂಡವರನ್ನು ) ತಿವಿದನು. ಒಳಗೇ ಕೋಪಿಸಿಕೊಂಡಿದ್ದ ಭೀಮಸೇನನು ಆ ಮಾತುಗಳೆಂಬ ಬಾಣಗಳನ್ನು ಸಹಿಸಿಕೊಂಡಿದ್ದು, (ಸರಿಯಾದ ಸಮಯದಲ್ಲಿ) ಸರ್ಪವು ವೃಷಭಗಳಲ್ಲಿ ವಿಷವನ್ನು ಕಾರುವಂತೆ ಅವರುಗಳಲ್ಲಿ ವಿಷವನ್ನು ಕಾರಿರುವನು.
ಏಷ ದುಃಶಾಸನಃ ಶೇತೇ ನಿಕ್ಷಿಪ್ಯ ವಿಪುಲೌ ಭುಜೌ |
ನಿಹತೋ ಭೀಮಸೇನೇನ ಸಿಂಹೇನೇವ ಮಹರ್ಷಭಃ ॥28॥
ಸಿಂಹದಿಂದ ನಿಹತವಾದ ಮಹಾವೃಷಭದಂತೆ ಭೀಮನಿಂದ ನಿಹತನಾದ ಈ ದುಃಶಾಸನನು ನೀಳವಾದ ಭುಜಗಳನ್ನು ಭೂಮಿಯಲ್ಲಿ ಚಾಚಿಕೊಂಡು ಮಲಗಿರುವನು.
ಅತ್ಯರ್ಥಮಕರೋದ್ ರೌದ್ರಂ ಭೀಮಸೇನೋಽತ್ಯಮರ್ಷಣಃ |
ದುಃಶಾಸನಸ್ಯ ಯತ್ ಕ್ರುದ್ಧೋಽಪಿಬಚ್ಛೋಣಿತಮಾಹವೇ ॥29॥
ತುಂಬಕೋಪಿಯಾದ ಭೀಮಸೇನನು ಯುದ್ಧದಲ್ಲಿ ದುಃಶಾಸನನ ರಕ್ತವನ್ನು ಪಾನ ಮಾಡಿ, ಕೋಪದ ಅತಿರೇಕವನ್ನು ಪ್ರದರ್ಶಿಸಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಜಲಪ್ರದಾನಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ

ಕೃಷ್ಣನಲ್ಲಿ ಮೃತರಾದ ತನ್ನ ಮಕ್ಕಳಿಗಾಗಿ ಗಾಂಧಾರಿಯ ಅಳಲು
ಗಾಂಧಾರೀ
ಏಷ ಮಾಧವ ಪುತ್ರೋ ಮೇ ವಿಕರ್ಣಃ ಪ್ರಾಜ್ಞಸಮ್ಮತಃ |
ಭೂಮೌ ವಿನಿಹತಃ ಶೇತೇ ಭೀಮೇನ ಶತಧಾ ಕೃತಃ ||1||
ಗಾಂಧಾರಿ ಮಾಧವ! ಈ ನನ್ನ ಮಗನಾದ ಜ್ಞಾನಿಗಳಿಗೆ ಸಂಮತನಾದ ಈ ವಿಕರ್ಣನು ಭೀಮನಿಂದ ನೂರಾರು ಸೀಳಾಗಿ ಹತನಾಗಿ ಬಿದ್ದಿರುವನು.
ಗಜಮಧ್ಯೇ ಹತಃ ಶೇತೇ ವಿಕರ್ಣೋ ಮಧುಸೂದನ |
ನೀಲಮೇಘಪರಿಕ್ಷಿಪ್ತಃ ಶರದೀವ ದಿವಾಕರಃ ||2||
ಮಧುಸೂದನ! ಶರತ್ಕಾಲದಲ್ಲಿ ಕರಿಮೋಡಗಳ ಮಧ್ಯೆ ಎಸೆದ ಸೂರ್ಯನಂತೆ ವಿಕರ್ಣನು ಆನೆಗಳ ಮಧ್ಯೆ ಹತನಾಗಿ ಬಿದ್ದಿರುವನು.
ಅಸ್ಯ ಚಾಪಗ್ರಹೇಣೈಷ ಪಾಣಿಃ ಕೃತಕಿಣೋ ಮಹಾನ್ |
ಕಥಂಚಿಚ್ಛಿದ್ಯತೇ ಗೃಧ್ರೈರತ್ತುಕಾಮೈಸ್ತಳತ್ರವಾನ್ ||3||
ಈತನ ನೀಳವಾದ ಕರವು ಧನುಸ್ಸನ್ನು ಧರಿಸಿದ್ದರಿಂದ ಜಡ್ಡುಗಟ್ಟಿಹುದು, ಕೈಗಳು ಕವಚಗಳಿಂದ ಯುಕ್ತವಾಗಿದ್ದರೂ ಸಹ (ಮಾಂಸವನ್ನು) ತಿನ್ನಬೇಕೆಂಬ ಬಯಕೆಯ ರಣಹದ್ದುಗಳು ಹೇಗೋ (ಆತನ ಕೈಗಳನ್ನು) ತುಂಡರಿಸಿವೆ.
ಅಸ್ಯ ಭಾರ್ಯಾಽಽಮಿಷಪ್ರೇಪ್ಸೂನ್ ಗೃಧ್ರಕಾಕಾನ್ ತಪಸ್ವಿನೀ |
ವಾರಯತ್ಯನಿಶಂ ಬಾಲಾ ನ ಚ ಶಕ್ನೋತಿ ಮಾಧವ ||4||
ಮಾಧವ! ಈತನ ಪತ್ನಿಯಾದ ಬಾಲಿಕೆಯು ಮಾಂಸಕಾಮಿಗಳಾದ ಹದ್ದು ಕಾಗೆಗಳನ್ನು ಓಡಿಸಲು ನಿರಂತರ ಯತ್ನಿಸುತ್ತಿರುವಳು, ಆದರೂ ಆಗುತ್ತಿಲ್ಲ.
ಯುವಾ ವೃಂದಾರಕಃ ಶೂರೋ ವಿಕರ್ಣಃ ಪುರುಷರ್ಷಭ |
ಸುಖೋಷಿತಃ ಸುಖಾರ್ಹಶ್ಚ ಶೇತೇ ಪಾಂಸುಷು ಮಾಧವ ||5||
ಮಾಧವ! ಯುವಕನಾದ ದೇವತೆಯಂತಿರುವ ಪುರುಷಶ್ರೇಷ್ಠನಾದ ಸುಖವಾಗಿ ಬೆಳೆದ ಸುಖವನ್ನು ಉಣ್ಣಲು ಯೋಗ್ಯನಾದ ವಿಕರ್ಣನು ಧೂಳಿನಲ್ಲಿ ಬಿದ್ದಿರುವನು. (`ವೃಂದಾರಕ ಇವ ವಿದ್ಯಮಾನಃ- ವೃಂದಾರಕಃ' ಎಂದು ಲುಪ್ತೋಪಮಾ- ಲಕ್ಷಾಲಂಕಾರ).
ಕರ್ಣಿನಾಲೀಕನಾರಾಚೈರ್ಭಿನ್ನವರ್ಮಾಣಮಾಹವೇ |
ಅದ್ಯಾಪಿ ನ ಜಹಾತ್ಯೇನಂ ಲಕ್ಷ್ಮೀರ್ಭರತಸತ್ತಮಮ್ ||6||
ಯುದ್ಧದಲ್ಲಿ ಕರ್ಣಿ ನಾಲೀಕ ಬಾಣಗಳಿಂದ ಭಿನ್ನಕವಚಿಯಾದ ಭಾರತೋತ್ತಮನಾದ ಈತನನ್ನು ಕಾಂತಿಯು ಈಗಲೂ ಬಿಟ್ಟಿಲ್ಲ. (ಮೃತನಾಗಿ ಕೆಲವು ದಿನಗಳು ಸಂದಿದ್ದರೂ ದೇಹದ ಕಾಂತಿಗೆ ಕುಂದಾಗಿಲ್ಲ ಎಂದು ಭಾವ.)
ಏಷ ಸಂಗ್ರಾಮಶೂರೇಣ ಪ್ರತಿಜ್ಞಾಂ ಪಾಲಯಿಷ್ಯತಾ |
ದುರ್ಮುಖೋ ನಿಹತಃ ಶೇತೇ ಭೀಮೇನಾರಿನಿಬರ್ಹಣಃ ||7||
ಯುದ್ಧಶೂರನಾದ ಪ್ರತಿಜ್ಞೆಯನ್ನು ಪರಿಪಾಲಿಸುವ ಭೀಮನಿಂದ ಶತ್ರುನಾಶಕನಾದ ಈ ದುರ್ಮುಖನು ಮೃತನಾಗಿ ಬಿದ್ದಿರುವನು.
ತಸ್ಯೈತದ್ವದನಂ ಕೃಷ್ಣ ಶ್ವಾಪದೈರರ್ಧಭಕ್ಷಿತಮ್ |
ವಿಭಾತ್ಯಭ್ಯಧಿಕಂ ತಾತ ಸಪ್ತಮ್ಯಾಮಿವ ಚಂದ್ರಮಾಃ ||8||
ತಂದೆಯೆ, ಕೃಷ್ಣ! ಈತನ ಈ ಮುಖವು ನಾಯಿಯಿಂದ ಅರ್ಧತಿನ್ನಲಾಗಿದೆ, ಆದರೂ ಸಪ್ತಮಿಯ ಚಂದ್ರನಂತೆ ಕಂಗೊಳಿಸುತ್ತಿದ್ದಾನೆ.
ಶೂರಸ್ಯಾಸ್ಯ ರಣೇ ಕೃಷ್ಣ ಪಶ್ಯಾನನಮಥೇದೃಶಮ್ ||9||
ಕೃಷ್ಣ! ಶೂರನಾದ ಈತನ ಇಂತಹ ಮುಖವನ್ನಾದರೂ ನೋಡು.
ಸ ಕಥಂ ನಿಹತೋಽಮಿತ್ರೈಃ ಪಾಂಸೂನ್ ಗ್ರಸತಿ ಮತ್ಸುತಃ |
ಯಸ್ಯಾಹವಮುಖೇ ಸೌಮ್ಯ ಸ್ಥಾತಾ ನೈವೋಪಲಭ್ಯತೇ ||10||
ಸೌಮ್ಯನೆ! ಯಾರ ಯುದ್ಧದಲ್ಲಿ ಎದುರಿನಲ್ಲಿ ನಿಲ್ಲುವವನೇ ಇರಲಿಲ್ಲವೋ, ಅಂತಹ ನನ್ನ ಮಗನು ಹೇಗೋ ಶತ್ರುಗಳಿಂದ ಸಂಹೃತನಾಗಿ ಮಣ್ಣನ್ನು ಮುಕ್ಕುತ್ತಿರುವನು.
ಚಿತ್ರಸೇನಂ ಹತಂ ಭೂಮೌ ಶಯಾನಂ ಮಧುಸೂದನ |
ಧಾರ್ತರಾಷ್ಟ್ರಮಿಮಂ ಪಶ್ಯ ಪ್ರತಿಮಾನಂ ಧನುರ್ಭೃತಾಮ್ ||11||
ಮಧುಸೂದನ! ಧನುರ್ಧಾರಿಗಳ ಮಾದರಿಯಾಗಿ ಧೃತರಾಷ್ಟ್ರನ ಪುತ್ರನಾಗಿ ಸಂಹೃತನಾಗಿ ಭೂಮಿಯಲ್ಲಿ ಮಲಗಿರುವ ಈ ಚಿತ್ರಸೇನನನ್ನು ಕಾಣು.
ತಂ ಚಿತ್ರಮಾಲ್ಯಾಭರಣಂ ಯುವತ್ಯಃ ಶೋಕಕರ್ಶಿತಾಃ |
ಕ್ರವ್ಯಾದಸಂಘಸಹಿತಾ ರುದಂತ್ಯಃ ಪರ್ಯುಪಾಸತೇ ||12||
ಬೆಲೆಬಾಳುವ ಮಾಲೆ ಮತ್ತು ಆಭರಣಗಳನ್ನು ಧರಿಸಿರುವ ಈತನನ್ನು, ದುಃಖದಿಂದ ಬಳಲಿದ ರೋದಿಸುತ್ತಿರುವ ಯುವತಿಯರು, ಮಾಂಸಭಕ್ಷಿಗಳಾದ ಪ್ರಾಣಿಗಳೂ ಸುತ್ತುವರೆದಿವೆ.
ಸ್ತ್ರೀಣಾಂ ರುದಿತನಿರ್ಘೋಷಂ ಶ್ವಾಪದಾನಾಂ ಚ ಗರ್ಜಿತಮ್ |
ಚಿತ್ರರೂಪಮಿದಂ ಕೃಷ್ಣ ವಿಮಿಶ್ರಂ ಪ್ರತಿಭಾತಿ ಮೇ ||13||
ಕೃಷ್ಣ! ನಾಯಿಗಳ ಬೊಗಳುವಿಕೆ ಮತ್ತು ಹೆಂಗಳೆಯರ ಅಳುವಿನ ಸದ್ದು ಕೂಡಿಕೊಂಡು ಇದು ವಿಚಿತ್ರವಾಗಿ ನನಗೆ ತೋರುತ್ತಿದೆ.
ಯುವಾ ವೃಂದಾರಕೋ ನಿತ್ಯಂ ಪ್ರವರಸ್ತ್ರೀನಿಷೇವಿತಃ |
ವಿವಿಂಶತಿರಸೌ ಶೇತೇ ಧ್ವಸ್ತಃ ಪಾಂಸುಷು ಮಾಧವ ||14||

ದೇವತೆಗಳಂತೆ ನಿತ್ಯ ಯುವಕನಾದ ಉತ್ತಮಸ್ತ್ರೀಯರಿಂದ ಸೇವಿತನಾದ ಈ ವಿವಿಂಶತಿಯು ಮೃತನಾಗಿ ಧೂಳಿನಲ್ಲಿ ಮಲಗಿರುವನು.
ಶರಸಂಕೃತ್ತವರ್ಮಾಣಂ ವೀರಂ ವಿಶಸನೇ ಹತಮ್ |
ಪರಿವಾರ್ಯಾಸತೇ ಗೃಧ್ರಾಃ ಪಶ್ಯ ಕೃಷ್ಣ ವಿವಿಂಶತಿಮ್ ॥15॥
ಕೃಷ್ಣ! ನೋಡು, ಬಾಣಗಳಿಂದ ತುಂಡಾದ ಕವಚಿಯಾದ ಯುದ್ಧದಲ್ಲಿ ಮೃತನಾದ ವಿವಿಂಶತಿಯನ್ನು ರಣಹದ್ದುಗಳು ಸುತ್ತುವರೆದಿವೆ.
ಪ್ರಮಥ್ಯ ಸಮರೇ ವೀರಃ ಪಾಂಡವಾನಾಮನೀಕಿನೀಮ್ |
ಆವಿಶ್ಯ ಶಯನಂ ಶೇತೇ ಪುನಃ ಸತ್ಪುರುಷೋಚಿತಮ್ ॥16॥
ವೀರನು ಯುದ್ಧದಲ್ಲಿ ಪಾಂಡವರ ಸೇನೆಯನ್ನು ಸದೆಬಡಿದು, ಮತ್ತೆ ಸತ್ಪುರುಷರಿಗೆ ಯೋಗ್ಯವಾದ ಹಾಸಿಗೆಯಲ್ಲಿ (ರಣರಂಗದಲ್ಲಿ) ಮಲಗಿರುವನು.
ಸ್ಮಿತೋಪಪನ್ನಂ ಸುನಸಂ ಸುಭ್ರು ತಾರಾಧಿಪೋಪಮಮ್ |
ಅತೀವ ಸೌಮ್ಯಂ ವದನಂ ಕೃಷ್ಣ ಪಶ್ಯ ವಿವಿಂಶತೇಃ॥17॥
ಕೃಷ್ಣ! ಮುಗಳುನಗೆಯಿಂದ ಕೂಡಿರುವ, ಸುಂದರವಾದ ಮೂಗನ್ನು ಹೊಂದಿರುವ, ಚಂದ್ರನಿಗೆ ಹೋಲಿಕೆಯಾಗುವ ಹುಬ್ಬುಗಳನ್ನು ಹೊಂದಿರುವ, ವಿವಿಂಶತಿಯ ಅತಿಸೌಮ್ಯವಾದ ಮುಖವನ್ನು ನೋಡು.
ಏನಂ ಹಿ ಪರ್ಯುಪಾತಿಷ್ಠನ್ ಬಹುಧಾ ವರಯೋಷಿತಃ |
ಕ್ರೀಡಂತಮಿವ ಗಂಧರ್ವಂ ದೇವಕನ್ಯಾಃ ಸಹಸ್ರಶಃ ॥18॥
ಕ್ರೀಡಿಸುತ್ತಿರುವ ಗಂಧರ್ವನನ್ನು ಸಾವಿರಾರು ದೇವಕನ್ಯೆಯರು ಸೇವಿಸುತ್ತಿರುವಂತೆ ಅನೇಕ ಮಹಿಳಾಮಣಿಯರು ಈತನನ್ನು ಸುತ್ತುವರೆದಿರುವರು.
ಹಂತಾರಮರಿಸೈನ್ಯಾನಾಂ ವೀರಂ ಸಮಿತಿಶೋಭನಮ್ |
ನಿಬರ್ಹಣಮಮಿತ್ರಾಣಾಂ ದುಸ್ಸಹಂ ಪ್ರಸಹೇತ ಕಃ॥19॥
ಶತ್ರುಸೈನ್ಯವನ್ನು ಸಂಹರಿಸುವ ರಣರಂಗದಲ್ಲಿ ಶೋಭಾಯಮಾನನಾದ ಶತ್ರುಗಳಿಂದ ಧರ್ಷಿತನಾಗದ ದುಃಸಹನನ್ನು ಯಾರು ಎದುರಿಸುವರು?
ದುಸ್ಸಹಸ್ಯೈತದಾಭಾತಿ ಶರೀರಂ ಸಂವೃತಂ ಶರೈಃ |
ಗಿರಿರಾತ್ಮರುಹೈಃ ಫುಲ್ಲೈಃ ಕರ್ಣಿಕಾರೈರಿವಾವೃತಃ ॥20॥
ಬಾಣಗಳಿಂದ ಕೂಡಿರುವ ದುಃಸಹನ ಶರೀರವು, ತನ್ನಲ್ಲಿ ಬೆಳೆದ ಕಾಡುಕಣಗಿಲೆಯ ಪುಷ್ಪಗಳಿಂದ ಕೂಡಿದ ಬೆಟ್ಟದಂತೆ ಕಾಣುತ್ತಿದೆ.
ಶಾತಕುಂಭಸ್ರಜಾ ಭಾತಿ ಕವಚೇನ ಚ ಭಾಸ್ವತಾ |
ಅಗ್ನಿನೇವ ಗಿರಿಃ ಶ್ವೇತೋ ಗತಾಸುರಪಿ ದುಸ್ಸಹಃ ॥21॥
ಚಿನ್ನದ ಮಾಲೆಯಿಂದ ಹೊಳೆಯುವ ಕವಚದಿಂದ ಕೂಡಿರುವ ದುಃಸಹನು ಮೃತನಾದರೂ ಬೆಂಕಿಯಿಂದ ಕೂಡಿರುವ ಶ್ವೇತಪರ್ವತದಂತೆ ಕಾಣುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸ್ತ್ರೀಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಕೃಷ್ಣನಲ್ಲಿ ಅಭಿಮನ್ಯುವಿಗಾಗಿ ಗಾಂಧಾರಿಯ ಅಳಲು
ಗಾಂಧಾರೀ
ಅಧ್ಯರ್ಧಗುಣಮಾಹುರ್ಯಂ ಬಲೇ ಶೌರ್ಯೇ ಚ ಮಾಧವ |
ಪಿತ್ರಾ ತ್ವಯಾ ಚ ದಾಶಾರ್ಹ ದೃಪ್ತಂ ಸಿಂಹಮಿವೋತ್ಕಟಮ್ ॥1॥
ಗಾಂಧಾರಿ ದಶಾರ್ಹಕುಲೋತ್ಪನ್ನನೆ, ಮಾಧವ! ಶ್ರೇಷ್ಠಸಿಂಹದಂತೆ ದೃಪ್ತನಾದ ಅಭಿಮನ್ಯುವು ಬಲದಿಂದ ಶೌರ್ಯದಿಂದ (ಆತನ) ತಂದೆಗೆ ಮತ್ತು ನಿನಗೆ (ಕೃಷ್ಣನಿಗೆ) ಒಂದೂವರೆ ಪಟ್ಟು ಹೆಚ್ಚಿನವನು ಎಂದು ಹೇಳುವರು.
ಯೋ ಬಿಭೇದ ಚಮೂಮೇಕೋ ಮಮ ಪುತ್ರಸ್ಯ ದುರ್ಭಿದಾಮ್ |
ಸ ಭೂತ್ವಾ ಮೃತ್ಯುರನ್ಯೇಷಾಂ ಸ್ವಯಂ ಮೃತ್ಯುವಶಂ ಗತಃ ॥2॥
ನನ್ನ ಮಗನ ಅಭೇದ್ಯವಾದ ಸೇನೆಯನ್ನು ಯಾವನು ಓರ್ವನೆ ಭೇದಿಸಿದನೋ, ಶತ್ರುಗಳಿಗೆ ಮೃತ್ಯುಪ್ರಾಯನಾಗಿದ್ದನೋ ಆತನು ಸ್ವತಃ ಮೃತ್ಯುವಿನ ವಶನಾದನು.
ತಸ್ಯೋಪಲಕ್ಷಯೇ ಕೃಷ್ಣ ಕಾರ್ಷ್ಣೇರಮಿತತೇಜಸಃ |
ಅಭಿಮನ್ಯೋರ್ಹತಸ್ಯಾಪಿ ಪ್ರಭಾ ನೈವೋಪಶಾಮ್ಯತಿ ॥3॥
ಕೃಷ್ಣ! ಮೃತನಾದರೂ ಮಹಾತೇಜಸ್ವಿಯಾದ ಅರ್ಜುನನ ಪುತ್ರನಾದ ಆ ಅಭಿಮನ್ಯುವಿನ ಕಾಂತಿಯು ಶಾಂತವಾಗಿಲ್ಲ.
ಏಷಾ ವಿರಾಟದುಹಿತಾ ಸ್ನುಷಾ ಗಾಂಡೀವಧನ್ವನಃ |
ಹತಂ ಬಾಲಾ ಪತಿಂ ವೀರಂ ದೃಷ್ಟ್ವಾ ಶೋಚತ್ಯನಿಂದಿತಾ ॥4॥
ದೋಷರಹಿತಳಾದ ವಿರಾಟರಾಜನ ಪುತ್ರಿಯಾದ ಬಾಲಕಿಯಾದ ಗಾಂಡೀವ ಧನುರ್ಧಾರಿಯ ಸೊಸೆಯಾದ ಈಕೆಯು ಮೃತನಾದ ವೀರನಾದ ಗಂಡನನ್ನು ಕಂಡು ದುಃಖಿಸುತ್ತಿರುವಳು.

ತಮೇಷಾ ಹಿ ಸಮಾಸಾದ್ಯ ಭಾರ್ಯಾ ಭರ್ತಾರಮಂತಿಕಾತ್ |
ವಿರಾಟದುಹಿತಾ ಕೃಷ್ಣ ಪಾಣಿನಾ ಪರಿಮಾರ್ಜತಿ ॥5॥
ಕೃಷ್ಣ! (ಅಭಿಮನ್ಯುವಿನ) ಪತ್ನಿಯಾದ ಈ ವಿರಾಟನ ಪುತ್ರಿಯು ಆ (ತನ್ನ) ಗಂಡನನ್ನು ಸಮೀಪಿಸಿ, ಕರಗಳಿಂದ ಸವರುತ್ತಿರುವಳು.
ತಥಾ ವಕ್ತ್ರಮುಪಾಘ್ರಾಯ ಸೌಭದ್ರಸ್ಯ ಯಶಸ್ವಿನೀ |
ವಿಬುದ್ಧಕಮಲಾಕಾರಂ ಕಂಬುವೃತ್ತಶಿರೋಧರಮ್ ॥6॥
ಹಾಗೆಯೆ ಸುಭದ್ರೆಯ ಮಗನ ಅರಳಿದ ಕಮಲದಂತಿರುವ ಮುಖವನ್ನು, ಶಂಖದಂತೆ ದುಂಡಾದ ಕತ್ತನ್ನು ಆಘ್ರಾಣಿಸುತ್ತಿರುವಳು.
ಕಾಮರೂಪಮತೀವೈಷಾ ಪರಿಷ್ವಜತಿ ಭಾಮಿನೀ ॥7॥
ಲಜ್ಜಮಾನಾ ಪುರಾ ಚೈನಂ ಮಾಧ್ವೀಕಮದಮೂರ್ಚ್ಛಿತಾ ॥8॥
ಹಿಂದೆ ಈ ಸುಂದರಿಯು ಮದ್ಯಪಾನದಿಂದ ಮತ್ತಳಾಗಿ ನಾಚಿಕೆಯಿಂದ ಮನ್ಮಥನಂತಿರುವ (ತನ್ನ ಗಂಡನನ್ನು) ಅಪ್ಪಿಕೊಳ್ಳುತ್ತಿದ್ದಳು.
ತಸ್ಯ ಕ್ಷತಜಸಂದಿಗ್ಧಂ ಜಾತರೂಪಪರಿಷ್ಕೃತಮ್ |
ವಿಮುಚ್ಯ ಕವಚಂ ಕೃಷ್ಣ ಶರೀರಮಭಿವೀಕ್ಷತೇ ॥9॥
ಕೃಷ್ಣ! ರಕ್ತದಿಂದ ಅಂಟಿಕೊಂಡಿದ್ದ ಚಿನ್ನದ ಕುಸುರೀ ಕೆಲಸದಿಂದ ಕೂಡಿದ ಕವಚವನ್ನು ಬಿಚ್ಚಿ (ಅತನ) ಶರೀರವನ್ನು ಪರಿಶೀಲಿಸುತ್ತಿರುವಳು.
ಅವೇಕ್ಷಮಾಣಾ ತಂ ಬಾಲಾ ಕೃಷ್ಣ ತ್ವಾಮಭಿವೀಕ್ಷತೇ ॥10॥
ಆತನನ್ನು ಪರಿಶೀಲಿಸುತ್ತಿರುವ ಆ ಬಾಲಕಿಯು ನಿನ್ನನ್ನು ಗಮನಿಸುತ್ತಿರುವಳು.
ಕಥಂ ತೇ ಪುಂಡರೀಕಾಕ್ಷ ಸದೃಶಾಕ್ಷೋ ನಿಪಾತಿತಃ |
ಬಲೇ ಶೌರ್ಯೇ ಚ ಸದೃಶಸ್ತೇಜಸಾ ಚೈವ ತೇಽನಘ ॥11॥
ಪಾಪರಹಿತನೆ, ಕಮಲನಯನನೆ! ನಿನ್ನಂತೆ ಕಣ್ಣುಗಳನ್ನು ಹೊಂದಿರುವ, ಬಲದಲ್ಲಿ ಶೌರ್ಯದಲ್ಲಿ ತೇಜಸ್ಸಿನಲ್ಲಿಯೂ ನಿನಗೆ ಸಮನಾಗಿದ್ದ ಈತನು ಹೇಗೆ ತಾನೆ ಕೆಡಹಲ್ಪಟ್ಟನು?
ರೂಪೇಣ ಚ ತವಾತ್ಯರ್ಥಂ ಶೇತೇ ಭುವಿ ನಿಪಾತಿತಃ ॥12॥
`ರೂಪದಿಂದ ನಿನಗೆ ಅತಿಯಾಗಿ ಹೋಲಿಕೆಯಿರುವ ಈತನು ನೆಲದಲ್ಲಿ ಬಿದ್ದಿರುವನು' (ಹೀಗೆಂದು ಕೃಷ್ಣನಲ್ಲಿ ತಿಳಿಸಿ, ಇನ್ನು ಮೃತ ಪತಿಯನ್ನು ಸಂಬೋಧಿಸಿ ಮಾತನಾಡುತ್ತಿರುವಳು.)
ಅತ್ಯಂತಸುಕುಮಾರಸ್ಯ ರಾಂಕವಾಜಿನಶಾಯಿನಃ |
ಕಚ್ಚಿದದ್ಯ ಶರೀರಂ ತೇ ಭೂಮೌ ನ ಪರಿತಪ್ಯತೇ ॥13॥
ಅತ್ಯಂತಕೋಮಲನಾದ ನೀನು ರಾಂಕಪ್ರಾಣಿಯಥಡಿಯಲ್ಲಿ (ಮೆತ್ತನೆಯ ಚರ್ಮವನ್ನು ಹೊಂದಿರುವ ಒಂದು ಪ್ರಾಣಿ) ಮಲಗುತ್ತಿದ್ದಿ, ಈಗ ನೆಲದಲ್ಲಿ ಬಿದ್ದಿರುವ ಶರೀರಕ್ಕೆ ತುಂಬಾ ನೋವಾಗುತ್ತಿದೆಯೆ?
ಮಾತಂಗಭುಜವರ್ಷ್ಮಾಣೌ ಜ್ಯಾಕ್ಷೇಪಕಠಿನತ್ವಚೌ |
ಕಾಂಚನಾಂಗದಿನೌ ಶೇತೇ ವಿಕ್ಷಿಪ್ಯ ವಿಪುಲೌ ಭುಜೌ ॥14॥
ಆನೆಯ ಸೊಂಡಿಲಿನಂತಿರುವ ಬಿಲ್ಲಿನ ಹಗ್ಗದ ತಿಕ್ಕುವಿಕೆಯಿಂದ ಜಡ್ಡುಗಟ್ಟಿದ ಚರ್ಮವನ್ನು ಹೊಂದಿರುವ ಚಿನ್ನದ ಉಡುಗೆಗಳನ್ನು ತೊಟ್ಟಿರುವ ದಪ್ಪವಾದ ಭುಜಗಳನ್ನು ಚಾಚಿಕೊಂಡು ಮಲಗಿರುವನು.
ವ್ಯಾಯಮ್ಯ ಬಹುಧಾ ನೂನಂ ಸುಖಸುಪ್ತಃ ಶ್ರಮಾದಿವ |
ಏವಂ ವಿಲಪತೀಮಾರ್ತಾಂ ಕಿಂ ಮಾಂ ನ ಪ್ರತಿಭಾಷಸೇ ॥15॥
ವ್ಯಾಯಾಮವನ್ನು ಮಾಡಿ ಬಹು ಶ್ರಮವಾದಾಗ ಸುಖವಾಗಿ ಮಲಗಿದಂತೆ ತೋರುವನು, ಈ ರೀತಿಯಾಗಿ ರೋದಿಸುತ್ತಿರುವ ದುಃಖಿತಳಾದ ನನ್ನನ್ನು ಏಕೆ ಮಾತನಾಡಿಸುತ್ತಿಲ್ಲ?
ನನು ಮಾಂ ತ್ವಂ ಪುರಾ ದೂರಾದ್ ಅಭಿವೀಕ್ಷ್ಯಾಭಿಭಾಷಸೇ |
ನ ಸ್ಮರಾಮ್ಯಪರಾಧಂ ಮೇ ಕಿಂ ಮಾಂ ನ ಪ್ರತಿಭಾಷಸೇ ॥16॥
ನೀನು ಹಿಂದೆ ದೂರದಿಂದ ನನ್ನನ್ನು ಕಂಡರೂ ಮಾತನಾಡಿಸುತ್ತಿದ್ದಿ, (ನನ್ನಿಂದ) ಯಾವ ಅಪರಾಧವೂ (ಸಂದಿರುವುದು) ನನ್ನ ಸ್ಮರಣೆಗೆ ಬರುತ್ತಿಲ್ಲ, ಏಕೆ ನನ್ನನ್ನು ಮಾತನಾಡಿಸುತ್ತಿಲ್ಲ?
ಆರ್ಯಾಮಾರ್ಯ ಸುಭದ್ರಾಂ ತ್ವಮಿಮಾಂಶ್ಚ ತ್ರಿದಶೋಪಮಾನ್ |
ಪಿತ್ರೂನ್ ಮಾತೄಂಶ್ಚ ದುಃಖಾರ್ತಾನ್ ವಿಹಾಯ ಕ್ವ ಗಮಿಷ್ಯಸಿ ॥17॥
ಪೂಜ್ಯನೆ! ನೀನು ಪೂಜ್ಯಳಾದ ಸುಭದ್ರೆಯನ್ನು, ದೇವತೆಗಳಂತಿರುವ ದುಃಖಿತರಾದ ತಂದೆಯನ್ನು, ತಾಯಂದಿರನ್ನು ಪರಿತ್ಯಜಿಸಿ ಎಲ್ಲಿಗೆ ಹೋಗುವಿ?
ವೈಶಂಪಾಯನಃ
ತಸ್ಯ ಶೋಣಿತಸಂದಿಗ್ಧಾನ್ ಕೇಶಾನುನ್ನಮ್ಯ ಪಾಣಿನಾ |
ಉತ್ಸಂಗೇ ವಕ್ತ್ರಮಾಧಾಯ ಜೀವಂತಮಿವ ಪೃಚ್ಛತಿ ॥18॥
ವೈಶಂಪಾಯನ ಆತನ ರಕ್ತಸಿಕ್ತವಾದ ಕೂದಲುಗಳನ್ನು ಮೇಲೆತ್ತಿ, ತೊಡೆಯ ಮೇಲೆ ಕೈಗಳಿಂದ ಮುಖವನ್ನು ಇಟ್ಟುಕೊಂಡು ಬದುಕಿರುವವನನ್ನು ಪ್ರಶ್ನಿಸುವಂತೆ ಪ್ರಶ್ನಿಸುತ್ತಿರುವಳು.
ಸ್ವಸ್ರೀಯಂ ವಾಸುದೇವಸ್ಯ ಪುತ್ರಂ ಗಾಂಡೀವಧನ್ವನಃ |
ಕಥಂ ತ್ವಾಂ ರಣಮಧ್ಯಸ್ಥಂ ಜಘ್ನುರೇತೇ ಮಹಾರಥಾಃ ॥19॥
ವಾಸುದೇವನ ತಂಗಿಯ ಮಗನಾದ, ಗಾಂಡಿವಧನುಸ್ಸನ್ನು ಧರಿಸಿದವನ ಪುತ್ರನಾದ (ನೀನೂ ಸಾಮಾನ್ಯನಲ್ಲ) ರಣರಂಗದ

ಮಧ್ಯದಲ್ಲಿರುವ ನಿನ್ನನ್ನು ಈ ಮಹಾರಥರು ಹೇಗೆ ಸಂಹರಿಸಿದರು?
ಧಿಗಸ್ತು ಕ್ರೂರಕರ್ತೄಂಸ್ತಾನ್ ಕೃಪಕರ್ಣಜಯದ್ರಥಾನ್ |
ದ್ರೋಣದ್ರೌಣಾಯನೀ ಚೋಭೌ ಯೈರಹಂ ವಿಧವಾ ಕೃತಾ ॥20॥
ಯಾರು ನನ್ನನ್ನು ವಿಧವೆಯನ್ನಾಗಿ ಮಾಡಿದರೋ ಆ ಕ್ರೂರಕರ್ಮಿಗಳಾದ ಕೃಪ ಕರ್ಣ ಜಯದ್ರಥರಿಗೆ , ದ್ರೋಣ ದ್ರೋಣಪುತ್ರರೀರ್ವರಿಗೆ ಧಿಕ್ಕಾರವಿರಲಿ.
ರಥರ್ಷಭಾಣಾಂ ಸರ್ವೇಷಾಂ ಕಥಮಾಸೀತ್ ತದಾ ಮನಃ |
ಬಾಲಂ ತ್ವಾಂ ಪರಿವಾರ್ಯೈಕಮನೇಕೇಷಾಂ ನಿಜಘ್ನತಾಮ್ ॥21॥
ಬಾಲಕನಾದ ಏಕಾಕಿಯಾದ ನಿನ್ನನ್ನು ಸುತ್ತುವರೆದ ಬಹುಸಂಖ್ಯಾಕರಾದ ಮಹಾರಥಿಕರಾದ (ನಿನ್ನನ್ನು) ಸಂಹರಿಸಿದ ಎಲ್ಲರ ಮನವು ಆಗ ಹೇಗಿದ್ದಿತು? (ಅವರೆಲ್ಲರ ಮನವು ಕಲ್ಲಾಗಿತ್ತೆನು?)
ಕಥಂ ನು ಪಾಂಡವಾನಾಂ ಚ ಪಾಂಚಾಲಾನಾಂ ಚ ಪಶ್ಯತಾಮ್ |
ತ್ವಂ ವೀರ ನಿಧನಂ ಪ್ರಾಪ್ತೋ ನಾಥವಾನ್ ಸನ್ನನಾಥವತ್ ॥22॥
ಹೇ ವೀರನೆ! ಪಾಂಡವರು ಪಾಂಚಾಲರು ನೋಡುತ್ತಿರುವಾಗ ಪಾಲಕರನ್ನು ಹೊಂದಿದ ನೀನು ಅನಾಥನಂತೆ ಹೇಗೆ ಸಾವನ್ನು ಹೊಂದಿದಿ?
ದೃಷ್ಟ್ವಾ ಬಹುಭಿರಾಕ್ರಂದ್ಯೈರ್ನಿಹತಂ ತ್ವಾಮನಾಥವತ್ |
ವೀರಾಃ ಪುರುಷಶಾರ್ದೂಲಃ ಕಥಂ ಜೀವಂತಿ ಪಾಂಡವಾಃ ॥23॥
ಅನೇಕಜನರು ಆಕ್ರಮಿಸಿ ಗತಿಯಿಲ್ಲದವರಂತೆ ನಿನ್ನನ್ನು ಸಂಹರಿಸಿರುವುದನ್ನು ಕಂಡು ವೀರರಾದ ಪುರುಷಶ್ರೇಷ್ಠರಾದ ಪಾಂಡವರು ಹೇಗೆ ತಾನೆ ಜೀವಿಸುವರು?
ನ ರಾಜ್ಯಲಾಭೋ ವಿಪುಲಃ ಶತ್ರೂಣಾಂ ವಾ ಪರಾಭವಃ |
ಪ್ರೀತಿಂ ದಾಸ್ಯತಿ ಪಾರ್ಥಾನಾಂ ತ್ವಾಮೃತೇ ಪುಷ್ಕರೇಕ್ಷಣ ॥24॥
ಕಮಲದಂತೆ ನಯನಗಳನ್ನು ಹೊಂದಿದವನೆ! ನೀನಿಲ್ಲದೆ ಪೃಥೆಯ ಪುತ್ರರಿಗೆ ಸಮೃದ್ಧವಾದ ರಾಜ್ಯದ ಲಾಭವಾಗಲಿ, ಶತ್ರುಗಳ ಸೋಲಾಗಲಿ ಖುಷಿಯನ್ನು ನೀಡುವುದೆ?
ತವ ಶಸ್ತ್ರಜಿತಾನ್ ಲೋಕಾನ್ ಧರ್ಮೇಣ ಚ ದಮೇನ ಚ |
ಕ್ಷಿಪ್ರಮನ್ವಾಗಮಿಷ್ಯಾಮಿ ತತ್ರ ಮಾಂ ಪ್ರತಿಪಾಲಯ ॥25॥
ನೀನು ಧರ್ಮದಿಂದ ಇಂದ್ರಿಯನಿಗ್ರಹದಿಂದ ಶಸ್ತ್ರದಿಂದ ಜಯಿಸಿದ ಆ ಲೋಕಕ್ಕೆ ಶೀಘ್ರವಾಗಿ ಬರಲಿದ್ದೇನೆ, ಅಲ್ಲಿ ನನ್ನನ್ನು ನಿರೀಕ್ಷಿಸು.

ದುಷ್ಕರಂ ಪುನರಪ್ರಾಪ್ತೇ ಕಾಲೇ ಭವತಿ ಕೇನಚಿತ್ |
ಯದಹಂ ತ್ವಾ(ತ್ವಾಂ) ರಣೇ ದೃಷ್ಟ್ವಾ ಹತಂ ಜೀವಾಮಿ ದುರ್ಭಗಾ ॥
ಯಾರಿಗಾದರೂ ಮರಣಕಾಲವು ಸನ್ನಿಹಿತವಾಗದಿದ್ದಲ್ಲಿ ಸಾವು ಕಷ್ಟವೆ, ಈಯಾವ ನಾನು ರಣರಂಗದಲ್ಲಿ (ಮೃತನಾದ) ನಿನ್ನನ್ನು ನೋಡಿಯೂ ಅದೃಷ್ಟಹೀನಳಾದ ನಾನು ಬದುಕಿರುವೆನು.
ಕಾಮಿದಾನೀಂ ನರವ್ಯಾಘ್ರ ತ್ವಂ ಶ್ಲಕ್ಷ್ಣಸ್ಮಿತಯಾ ಗಿರಾ |
ಪಿತೃಲೋಕೇ ಸಮೇತ್ಯಾನ್ಯಾಂ ಮಾಮಿವಾಮಂತ್ರಯಿಷ್ಯಸಿ ॥27॥
ಪುರುಷಶ್ರೇಷ್ಠನೆ! ಈಗ ಪಿತೃಲೋಕವನ್ನು ಸೇರಿ, ಇಲ್ಲಿ ನನ್ನನ್ನು ಮಾತನಾಡಿಸುತ್ತಿದ್ದಂತೆ ಅಲ್ಲಿ ಬೇರೇ ಯಾವ ಕನ್ಯೆಯನ್ನು ಮಾತನಾಡಿಸುತ್ತೀಯಾ?
ನೂನಮಪ್ಸರಸಾಂ ಸ್ವರ್ಗೇ ಮನಾಂಸಿ ಪ್ರಮಥಿಷ್ಯಸಿ |
ಪರಮೇಣ ಚ ರೂಪೇಣ ಗಿರಾ ಚ ಸ್ಮಿತಪೂರ್ವಯಾ ॥28॥
ನಿಶ್ಚಯವಾಗಿಯೂ ಸ್ವರ್ಗದಲ್ಲಿ, (ನಿನ್ನ) ಶ್ರೇಷ್ಠ ರೂಪದಿಂದ, ಮುಗುಳ್ನಗೆಯಿಂದ ಕೂಡಿದ ಮಾತುಗಳಿಂದ ಅಪ್ಸರೆಯರ ಮನಸನ್ನು ಕಲುಕುತ್ತಿರುವಿ.
ಪ್ರಾಪ್ಯ ಪುಣ್ಯಕೃತಾಲ್ಲೋಕಾನಪ್ಸರೋಭಿಃ ಸಮೇಯಿವಾನ್ |
ಸೌಭದ್ರ ವಿಹರನ್ ಕಾಲೇ ಸ್ಮರೇಥಾಃ ಸುಕೃತಾನಿ ಮೇ ॥29॥
ಸುಭದ್ರಾತನಯನೆ! ಪುಣ್ಯಾಚರಣದಿಂದ ಲಭ್ಯವಾಗುವ ಲೋಕಗಳನ್ನು ಹೊಂದಿ, ಅಪ್ಸರೆಯರಿಂದ ಒಡಗೂಡಿ ವಿಹರಿಸುವ ಕಾಲದಲ್ಲಿ ನನ್ನ ಸತ್ಕರ್ಮಗಳನ್ನು ಸ್ಮರಿಸು.
ಏತಾವಾನಿಹ ಸಂವಾಸೋ ವಿಹಿತಸ್ತೇ ಮಯಾ ಸಹ |
ಷಣ್ಮಾಸಾನ್ ಸಪ್ತಮೇ ಮಾಸೇ ತ್ವಂ ವೀರ ನಿಧನಂ ಗತಃ ॥30॥
ಕೇವಲ ಆರು ತಿಂಗಳುಗಳ ಕಾಲಮಾತ್ರ ಇಲ್ಲಿ ನನ್ನೊಡನೆ ನಿನಗೆ ವಿಹಿತವಾಗಿತ್ತು (ವಿಧಿ ನಿಶ್ಚಯಿಸಿತ್ತು), ಏಳನೆ ತಿಂಗಳಲ್ಲಿ ವೀರನೆ! ಸಾವನ್ನು ಹೊಂದಿರುವಿ.
ಗಾಂಧಾರೀ
ಇತ್ಯುಕ್ತವಚನಾಮೇನಾಮಪಾಕರ್ಷಂತಿ ದುಃಖಿತಾಮ್ |
ಉತ್ತರಾಂ ಮೋಘಸಂಕಲ್ಪಾಂ ಮತ್ಸ್ಯರಾಜಕುಲಸ್ತ್ರಿಯಃ ॥31॥
ಗಾಂಧಾರಿ ಈ ರೀತಿಯಾಗಿ ಹೇಳುತ್ತಿರುವ ಹತಾಶಳಾದ ದುಃಖಿತಳಾದ ಈ ಉತ್ತರೆಯನ್ನು ಮತ್ಸ್ಯರಾಜನ ಕುಲದ ಮಹಿಳೆಯರು ದೂರಸೆಳೆಯುತ್ತಿರುವರು.

ಉತ್ತರಾಮಪಕೃಷ್ಯೈತಾಮಾರ್ತಾಮಾರ್ತತರಾಃ ಸ್ವಯಮ್ |
ವಿರಾಟಂ ನಿಹತಂ ದೃಷ್ಟ್ವಾ ಕ್ರೋಶಂತಿ ವಿಲಪಂತಿ ಚ ॥32॥
ದುಃಖಿತಳಾದ ಉತ್ತರೆಯನ್ನು ಸೆಳೆಯುತ್ತಿರುವ ಸ್ವತಃ ಅತ್ಯಂತ ದುಃಖಿತರಾದ ಇವರು ಮೃತನಾದ ವಿರಾಟನನ್ನು ಕಂಡು ಅರಚುತ್ತಿರುವರು, ರೋದಿಸುತ್ತಿರುವರು.
ದ್ರೋಣಾಸ್ತ್ರಶರಸಂಕೃತ್ತಂ ಶಯಾನಂ ಶೋಣಿತೋಕ್ಷಿತಮ್ |
ವಿರಾಟಂ ವಿತುದಂತ್ಯೇತೇ ಗೃಧ್ರಗೋಮಾಯುವಾಯಸಾಃ ॥33॥
ದ್ರೋಣನ ಅಸ್ತ್ರ-ಬಾಣಗಳಿಂದ ಘಾಸಿಗೊಂಡು ರಕ್ತಸಿಕ್ತನಾಗಿ ಮಲಗಿರುವ ವಿರಾಟನನ್ನು ಹದ್ದು ನರಿ ಕಾಗೆಗಳು ಕಿತ್ತಿ ತಿನ್ನುತ್ತಿವೆ.
ವಿತುದ್ಯಮಾನಂ ವಿಹಗೈರ್ವಿರಾಟಮಸಿತೇಕ್ಷಣಾಃ |
ನ ಶಕ್ನುವಂತಿ ವಿವಶಾ ವಿಸರ್ಜಯಿತುಮಾತುರಾಃ ॥34॥
ಕಪ್ಪುಕಣ್ಣಿನ ಕಾತುರರಾದ ಪರಾಧೀನರಾದ ಮಹಿಳೆಯರು ಕಾಗೆಗಳಿಂದ ಕುಕ್ಕಲ್ಪಡುವ ವಿರಾಟನನ್ನು (ಅವುಗಳಿಂದ) ಪಾರುಮಾಡಲು ಸಮರ್ಥರಾಗುತ್ತಿಲ್ಲ.
ಆಸಾಮಾತಪತಪ್ತಾನಾಮಾಯಾಸೇನ ಚ ಯೋಷಿತಾಮ್ |
ಶ್ರಮೇಣ ಚ ವಿವರ್ಣಾನಾಂ ರೂಪಾಣಾಂ ವಿಕೃತಂ ವಪುಃ ॥35॥
ಬಿಸಿಲಿನಿಂದ ಬೆಂದು ಆಯಾಸದಿಂದ ಬಣ್ಣವನ್ನು ಕಳೆದುಕೊಂಡ ಈ ಮಹಿಳೆಯರ ದೇಹವು ಶ್ರಮದಿಂದ ಬಳಲುವಿಕೆಯಿಂದ ವಿಕೃತವಾಗಿದೆ.
ಉತ್ತರಾಂ ಚಾಭಿಮನ್ಯುಂ ಚ ಕಾಂಭೋಜಂ ಚ ಸುದಕ್ಷಿಣಮ್ |
ಶಿಶೂನೇತಾನ್ ಹತಾನ್ ಪಶ್ಯ ಲಕ್ಷ(ಕ್ಷ್ಮ)ಣಂ ಚ ಸುದರ್ಶನಮ್ ॥36॥
ಮೃತರಾದ ಅಭಿಮನ್ಯುವನ್ನು, ಕಾಂಭೋಜದೇಶದ ಸುದಕ್ಷಿಣನನ್ನು, ಈ ಎಲ್ಲ ಪುತ್ರರನ್ನು ಸುಂದರನಾದ ಲಕ್ಷಣನನ್ನು ಮತ್ತೂ ಈ ಉತ್ತರೆಯನ್ನು ನೋಡು.
ಕಾರ್ಷ್ಣಿನಾಽಭಿಹತಂ ಕೃಷ್ಣ ಲಕ್ಷಣಂ ಪ್ರಿಯದರ್ಶನಮ್ |
ಆಯೋಧನಶಿರೋಮಧ್ಯೇ ಶಯಾನಂ ಪಶ್ಯ ಮಾಧವ ॥37॥
ಮಾಧವ, ಕೃಷ್ಣ! ನೋಡಲು ಚಂದವಿದ್ದ, ಅರ್ಜುನನ ಪುತ್ರನಿಂದ ಸಂಹೃತನಾಗಿ ರಣರಂಗದ ಮಧ್ಯೆ ಮಲಗಿರುವ ಲಕ್ಷಣನನ್ನು ನೋಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಸ್ತ್ರೀಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ಕೃಷ್ಣನಲ್ಲಿ ಕರ್ಣನಿಗಾಗಿ ಗಾಂಧಾರಿಯ ಅಳಲು
ಗಾಂಧಾರೀ
ಏಷ ವೈಕರ್ತನಃ ಶೇತೇ ಮಹೇಷ್ವಾಸೋ ಮಹಾರಥಃ |
ಜ್ವಲಿತಾನಲವತ್ ಸಂಖ್ಯೇ ಸಂಶಾಂತಃ ಪಾರ್ಥತೇಜಸಾ ॥1॥
ಗಾಂಧಾರಿ ದೊಡ್ಡಬಿಲ್ಲಾಳಾದ ಮಹಾರಥಿಕನಾದ ಈ ಕರ್ಣನು ಯುದ್ಧದಲ್ಲಿ ಪೃಥೆಯ ಪುತ್ರನ ಬಲದಿಂದ ಶಾಂತನಾಗಿ (ಸಂಹೃತನಾಗಿ), ಉರಿದು ಶಾಂತವಾದ ಅಗ್ನಿಯಂತೆ ಮಲಗಿರುವನು.
ಪಶ್ಯ ವೈಕರ್ತನಂ ಕರ್ಣಂ ನಿಪಾತ್ಯಾತಿರಥಾನ್ ಬಹೂನ್ |
ಶೋಣಿತೌಘಪರೀತಾಂಗಂ ಶಯಾನಂ ಪತಿತಂ ಭುವಿ ॥2॥
ಅನೇಕ ಅತಿರಥರನ್ನು ಕೆಡವಿ ರಕ್ತದಿಂದ ತೊಯ್ದ ಅವಯವಗಳನ್ನು ಹೊಂದಿರುವ ನೆಲದಲ್ಲಿ ಬಿದ್ದು ಮಲಗಿರುವ ಕರ್ಣನನ್ನು ನೋಡು.
ಅಮರ್ಷೀ ದೀರ್ಘರೋಷಶ್ಚ ಮಹೇಷ್ವಾಸೋ ಮಹಾರಥಃ |
ರಣೇ ವಿನಿಹತಃ ಶೇತೇ ಶೂರೋ ಗಾಂಡೀವಧನ್ವನಾ ॥3॥
ಕೋಪವನ್ನು ಹೊಂದಿದ್ದ ದೀರ್ಘರೋಷವನ್ನು ಹೊಂದಿದ್ದ ದೊಡ್ಡಬಿಲ್ಲಾಳಾದ ಮಹಾರಥಿಕನಾದ ಶೂರನು ರಣರಂಗದಲ್ಲಿ ಗಾಂಡೀವಧನುವನ್ನು ಧರಿಸಿದ ಅರ್ಜುನನಿಂದ ಸಂಹೃತನಾಗಿ ಮಲಗಿರುವನು.
ಯಂ ಸ್ಮ ಪಾಂಡವಸಂತ್ರಾಸಾನ್ಮಮ ಪುತ್ರಾ ಮಹಾರಥಾಃ |
ಪ್ರಾಯುದ್ಧ್ಯಂತ ಪುರಸ್ಕೃತ್ಯ ಮಾತಂಗಮಿವ ಯೂಥಪಮ್ ॥4॥
ಶಾರ್ದೂಲಮಿವ ಸಿಂಹೇನ ಸಮರೇ ಸವ್ಯಸಾಚಿನಾ |
ಮಾತಂಗಮಿವ ಮತ್ತೇನ ಮಾತಂಗೇನ ನಿಪಾತಿತಮ್ ॥5॥
ಆನೆಯ ಹಿಂಡು, ನಾಯಕ ಸಲಗವನ್ನು ಮುಂದೆಮಾಡಿಕೊಂಡು ಸಾಗುವಂತೆ, ಮಹಾರಥಿಕರಾದ ನನ್ನ ಪುತ್ರರು ಪಾಂಡವರ ಭೀತಿಯಿಂದ ಯಾರನ್ನು ಮುಂದೆ ಮಾಡಿಕೊಂಡು ಯುದ್ಧವನ್ನು ಮಾಡುತ್ತಿದ್ದರೋ, ಆ ಕರ್ಣನನ್ನು ಯುದ್ಧದಲ್ಲಿ ಸವ್ಯಸಾಚಿಯು, ಸಿಂಹವು ಹುಲಿಯನ್ನು ಸಂಹರಿಸುವಂತೆ, ಮದಿಸಿದ ಆನೆಯು ಆನೆಯನ್ನು ಕೆಡಹುವಂತೆ ಕೆಡಹಿರುವನು.
ತ ಏತಾಃ ಪುರುಷವ್ಯಾಘ್ರ ನಿಹತಂ ಶೂರಮಾಹವೇ |

ಪ್ರಕೀರ್ಣಮೂರ್ಧಜಾಸ್ತಸ್ಯ ಸ್ತ್ರಿಯಸ್ತಂ ಪರ್ಯುಪಾಸತೇ ॥6॥
ಪುರುಷಶ್ರೇಷ್ಠನೇ! ಯುದ್ಧದಲ್ಲಿ ಸಂಹೃತನಾದ ಆ ಶೂರನನ್ನು ಆ ಈ ಯಾವ ಸ್ತ್ರೀಯರು ತಲೆಕೂದಲನ್ನು ಹರಡಿಕೊಂಡು ಸುತ್ತುವರೆದಿರುವರು.
ಉದ್ವಿಗ್ನಃ ಸತತಂ ಯಸ್ಮಾದ್ ಧರ್ಮರಾಜೋ ಯುಧಿಷ್ಠಿರಃ |
ತ್ರಯೋದಶ ಸಮಾ ನಿದ್ರಾಂ ಚಿಂತಯನ್ ನಾಧಿಗಚ್ಛತಿ ॥7॥
ಅನಾಧೃಷ್ಯಃ ಪರೈರ್ಯುದ್ಧೇ ಶತ್ರುಭಿರ್ಮಘವಾನಿವ |
ಯುಗಾಂತಾಗ್ನಿರಿವಾರ್ಚಿಷ್ಮಾನ್ ಹಿಮವಾನಿವ ಸುಸ್ಥಿರಃ ॥8॥
ಸ ಭೂತ್ವಾ ಶರಣಂ ಪೂರ್ವಂ ಧಾರ್ತರಾಷ್ಟ್ರಸ್ಯ ಮಾಧವ |
ಭೂಮೌ ವಿನಿಹತಃ ಶೇತೇ ವಾತರುಗ್ಣ ಇವ ದ್ರುಮಃ ॥9॥
ಮಾಧವ! ಯುದ್ಧದಲ್ಲಿ ಸ್ಥಿರವಾಗಿನಿಲ್ಲುವ ಧರ್ಮರಾಜನು ಯಾರಿಂದ ನಿರಂತರ ಉದ್ವಿಗ್ನನಾಗಿದ್ದನೊ, ಈತನ ಚಿಂತೆಯಿಂದ ಹದಿಮೂರುವರ್ಷ ನಿದ್ರೆಯನ್ನು ಹೊಂದಿರಲಿಲ್ಲವೋ, ಶತ್ರುಗಳಿಂದ ಯುದ್ಧದಲ್ಲಿ ಧರ್ಷಣಕ್ಕೆ ಒಳಗಾಗದ ಇಂದ್ರನಂತಿದ್ದ ಯುಗದ ಕೊನೆಯ ಅಗ್ನಿಯಂತೆ ಕಾಂತಿಮಂತನಾದ ಹಿಮಾಲಯದಂತೆ ನಿಶ್ಚಲನಾಗಿ ನಿಲ್ಲುವ, ಈಹಿಂದೆ ಧೃತರಾಷ್ಟ್ರನ ಮಕ್ಕಳಿಗೆ ಆಶ್ರಯನಾಗಿದ್ದ ಆತನು ಗಾಳಿಯಿಂದ ಬಿದ್ದ ಮರದಂತೆ ಭೂಮಿಯಲ್ಲಿ ಮೃತನಾಗಿ ಮಲಗಿರುವನು.
ಪಶ್ಯ ಕರ್ಣಸ್ಯ ಪತ್ನೀಂ ತ್ವಂ ವೃಷಸೇನಸ್ಯ ಮಾತರಮ್ |
ಲಾಲಪ್ಯಮಾನಾಂ ಕರುಣಂ ರುದಂತೀಂ ಪತಿತಾಂ ಭುವಿ ॥10॥
ಮನಕರಗುವಂತೆ ರೋದಿಸುತ್ತಿರುವ ನೆಲದಲ್ಲಿ ಬಿದ್ದಿರುವ ಕರ್ಣನ ಪತ್ನಿಯನ್ನು ಸಮಾಧಾನಪಡಿಸುತ್ತಿರುವ ಕರ್ಣನ ತಾಯಿಯನ್ನು ನೀನು ನೋಡು.
ಆಚಾರ್ಯಶಾಪೋಽನುಗತೋ ಧ್ರುವಂ ತ್ವಾಂ
ಯದಗ್ರಸಚ್ಚಕ್ರಮಿದಂ ಧರಾ ತೇ |
ತತಃ ಶರೇಣಾಭಿಹತಂ ಶಿರಸ್ತೇ
ಧನಂಜಯೇನಾಹವಚಕ್ರಮಧ್ಯೇ ॥11॥
ಆಚಾರ್ಯನ ಶಾಪವು ನಿನ್ನನ್ನು ನಿಶ್ಚಯವಾಗಿಯೂ ಅನುಸರಿಸಿತು, ಆದ್ದರಿಂದಲೇ ಯುದ್ಧಮಧ್ಯದಲ್ಲಿ ಭೂಮಿಯು ಯಾವಾಗ ಈ ಚಕ್ರವನ್ನು ನುಂಗಿತೊ ಆ ಕೂಡಲೆ ಧನಂಜಯನು ನಿನ್ನ ತಲೆಯನ್ನು ಬಾಣದಿಂದ ತೆಗೆದನು. (ಹಿಂದೆ ಕಾರಣಾಂತರದಿಂದ ಕರ್ಣನು ಬ್ರಾಹ್ಮಣನೋರ್ವನ ಗೋವನ್ನು ಸಂಹರಿಸಿದ್ದನು, ತನ್ನಿಮಿತ್ತ ಆತನು ಈ ರೀತಿಯಲ್ಲಿ ಶಪಿಸಿದ್ದನು, ಆ ಶಾಪವು ಈಗ ಫಲಿಸಿತು ಎಂದು ಕರ್ಣನ ತಾಯಿಯು ನುಡಿಯುತ್ತಿರುವಳು.)
ಅಹೋ ಧಿಗೇಷಾ ಪತಿತಾ ವಿಸಂಜ್ಞಾ
ಸಮೀಕ್ಷ್ಯ ಜಾಂಬೂನದಬದ್ಧನಿಷ್ಕಮ್ |
ಕರ್ಣಂ ಮಹಾಬಾಹುರದೀನಸತ್ತ್ವಂ
ಸುಷೇಣಮಾತಾ ರುದತೀ ಭೃಶಾರ್ತಾ ॥12॥
ಬಹು ಆರ್ತಳಾದ ಸುಷೇಣನ ತಾಯಿಯು, ಮಹಾ ಅದಟಿನ ನೀಳಬಾಹುವಿನ ಚಿನ್ನದ ಕವಚದಿಂದ ಬಂಧಿತನಾದ ಕರ್ಣನನ್ನು ನೋಡಿ ಮೂರ್ಛಿತಳಾಗಿ ಬಿದ್ದು ರೋದಿಸುತ್ತಿರುವಳು, (ಈ ಸನ್ನಿವೇಶಕ್ಕೆ) ಧಿಕ್ಕಾರವಿರಲಿ.
ಅಲ್ಪಾವಶೇಷೋ ಹಿ ಕೃತೋ ಮಹಾತ್ಮಾ
ಶರೀರಭಕ್ಷೈಃ ಪರಿಭಕ್ಷಯದ್ಭಿಃ |
ದ್ರಷ್ಟುಂ ನ ಸಂಪ್ರೀತಿಕರಃ ಶಶೀವ |
ಕೃಷ್ಣಸ್ಯ ಪಕ್ಷಸ್ಯ ಚತುರ್ದಶಾಹೇ ॥13॥
ಮಾಂಸವನ್ನು ತಿನ್ನುವ ಪ್ರಾಣಿಗಳಿಂದ ( ಆತನ ಶರೀರವನ್ನು ತಿಂದು) ಸ್ವಲ್ಪಮಾತ್ರ ಉಳಿದಿರುವ ಮಹಾತ್ಮನು, ಕೃಷ್ಣಪಕ್ಷದ ಚತುರ್ದಶೀದಿನದಂದಿನ ಚಂದ್ರನಂತೆ ನೋಡಲು ಪ್ರೀತಿಕರನಾಗಿಲ್ಲ.
ವಿವರ್ತಮಾನಾ ಪತಿತಾ ಪೃಥಿವ್ಯಾಮ್
ಉತ್ಥಾಯ ದೀನಾ ಪುನರೇವ ಚೈಷಾ |
ಕರ್ಣಸ್ಯ ವಕ್ತ್ರಂ ಪರಿಜಿಘ್ರಮಾಣಾ
ರೋರೂಯತೇ ಪುತ್ರವಧಾಭಿತಪ್ತಾ ॥14॥
ದುಃಖಿತಳಾದ ಈಕೆಯು ಭೂಮಿಯಲ್ಲಿ ಮುಖಅಡಿಮಾಡಿಕೊಂಡು ಬಿದ್ದಿರುವ (ಕರ್ಣನನ್ನು) ಮೇಲೆತ್ತಿ, ಮತ್ತೆ ಕರ್ಣನ ಮುಖವನ್ನು ಆಘ್ರಾಣಿಸುವವಳಾಗಿ ಮಗನ ಸಾವಿನಿಂದ ದುಃಖಿತಳಾಗಿ ರೋದಿಸುತ್ತಿರುವಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಬಾಹ್ಲೀಕನಿಗಾಗಿ ಗಾಂಧಾರಿಯ ಅಳಲು.
ಗಾಂಧಾರೀ
ಆವಂತ್ಯಂ ಭೀಮಸೇನೇನ ಭಕ್ಷಯಂತಿ ನಿಪಾತಿತಮ್ |

ಗೃಧ್ರುಗೋಮಾಯವಃ ಶೂರಂ ಬಹುಬಂಧುಮಬಂಧುವತ್ ॥1॥
ಗಾಂಧಾರಿ ಭೀಮಸೇನನಿಂದ ಸಂಹೃತನಾದ ಶೂರನಾದ ಬಹುಬಂಧುಗಳನ್ನು ಹೊಂದಿರುವ ಅವಂತೀದೇಶದ ರಾಜನನ್ನು (ಬಾಹ್ಲೀಕರಾಜನನ್ನು) ಹದ್ದು ನರಿಗಳು ಅನಾಥನನ್ನು (ಶರೀರವನ್ನು ತಿನ್ನುವಂತೆ) ತಿನ್ನುತ್ತಿವೆ.
ತಂ ಪಶ್ಯ ಕದನಂ ಕೃತ್ವಾ ಶತ್ರೂಣಾಂ ಮಧುಸೂದನ |
ಶಯಾನಂ ವೀರಶಯನೇ ರುಧಿರೇಣ ಸಮುಕ್ಷಿತಮ್ ॥2॥
ಮಧುಸೂದನ! ಶತ್ರುಗಳೊಡನೆ ಯುದ್ಧವನ್ನು ಮಾಡಿ ರಕ್ತದಿಂದ ನೆನೆದವನಾಗಿ ವೀರರ ಹಾಸಿಗೆಯಲ್ಲಿ ಮಲಗಿರುವ ಆತನನ್ನು ನೋಡು.
ತಂ ಸೃಗಾಲಾಶ್ಚ ಕಂಕಾಶ್ಚ ಕ್ರವ್ಯಾದಾಶ್ಚ ಪೃಥಗ್ವಿಧಾಃ |
ತೇನ ತೇನ ವಿಕರ್ಷಂತಿ ಪಶ್ಯ ಕಾಲಸ್ಯ ಪರ್ಯಯಮ್ ॥3॥
ನರಿಗಳು ಕಂಕಪಕ್ಷಿಗಳು ಬೇರೆ ಬೇರೆ ಮಾಂಸಭಕ್ಷಿಪ್ರಾಣಿಗಳು (ಮೃತರ ದೇಹಗಳಿಂದ) ಆ ಅವಯವಗಳನ್ನು ಕಿತ್ತುತ್ತಿವೆ, ಕಾಲದ ವ್ಯತ್ಯಯವನ್ನು ಕಾಣು.
ಶಯಾನಂ ವೀರಶಯನೇ ಶೂರಮಾಕ್ರಂದಕಾರಿಣಮ್ |
ಆವಂತ್ಯಮಭಿತೋ ನಾರ್ಯೋ ರುದಂತ್ಯಃ ಪರ್ಯುಪಾಸತೇ ॥4॥
ವೀರಶಯನದಲ್ಲಿ ಮಲಗಿರುವ ಶೂರನಾದ ಆಕ್ರಮಣಕಾರಿಯಾದ ಅವಂತಿದೇಶದ ರಾಜನನ್ನು ರೋದಿಸುತ್ತಾ ಆತನ ಮಹಿಳೆಯರು ಸುತ್ತಲೂ ನೆರೆದಿರುವರು.
ಪ್ರಾತಿಪೇಯಂ ಮಹೇಷ್ವಾಸಂ ಹತಂ ಭೀಮೇನ ಬಾಹ್ಲಿಕಮ್ |
ಪ್ರಸುಪ್ತಮಿವ ಶಾರ್ದೂಲಂ ಪಶ್ಯ ಕೃಷ್ಣ ಮನಸ್ವಿನಮ್ ॥5॥
ಪ್ರತೀಪರಾಜನ ಪುತ್ರನಾದ ದೊಡ್ಡಬಿಲ್ಲಾಳಾದ ಭೀಮನಿಂದ ಮೃತನಾದ ಸ್ವಾಭಿಮಾನಿಯಾದ ಹುಲಿಯು ಮಲಗಿರುವಂತೆ ಮಲಗಿರುವ ಬಾಹ್ಲೀಕನನ್ನು ಕೃಷ್ಣ! ನೋಡು. ( ಬಾಹ್ಲೀಕ ದೇವಾಪಿ ಶಂತನು ಮೂವರು ಪ್ರತೀಪರಾಜನ ಪುತ್ರರು. ಬಾಹ್ಲೀಕನ ತಾಯಿಯು ಅವಂತಿದೇಶದ ರಾಜನ ಪುತ್ರಿ. ಈತನು ಮಾತಾಮಹನ ಮನೆಯಲ್ಲಿಯೇ ನೆಲೆಸಿದ್ದ).
ಅತೀವ ಮುಖವರ್ಣೋಽಸ್ಯ ನಿಹತಸ್ಯಾಪಿ ಶೋಭತೇ |
ಸೋಮಸ್ಯೇವಾಭಿಪೂರ್ಣಸ್ಯ ಪೌರ್ಣಮಾಸ್ಯಾಂ ಸಮುದ್ಯತಃ ॥6॥
ಮೃತನಾಗಿದ್ದರೂ ಈತನ ಮುಖದ ವರ್ಣವು ಹುಣ್ಣಿಮೆಯಂದು ಉದಿಸಿದ ಪೂರ್ಣನಾದ ಚಂದ್ರನಂತೆ ಶೋಭಿಸುತ್ತಿದೆ.
ಪುತ್ರಶೋಕಾಭಿತಪ್ತೇನ ಪ್ರತಿಜ್ಞಾಂ ಚೈವ ರಕ್ಷತಾ |
ಪಾಕಶಾಸನಿನಾ ಸಂಖ್ಯೇ ವಾರ್ಧಕ್ಷತ್ರಿರ್ನಿಪಾತಿತಃ ॥7॥
ಪುತ್ರಶೋಕದಿಂದ ತಪ್ತನಾದ (ತನ್ನ) ಪ್ರತಿಜ್ಞೆಯನ್ನು ರಕ್ಷಿಸಿಕೊಳ್ಳುವ ಪಾಕಶಾಸನನ (ಇಂದ್ರನ) ಪುತ್ರನು (ಅರ್ಜುನನು) ವೃದ್ಧಕ್ಷತ್ರನ ಪುತ್ರನನ್ನು ( ಸೈಂಧವನನ್ನು ಜಯದ್ರಥ) ಯುದ್ಧದಲ್ಲಿ ಕೆಡಹಿರುವನು.
ಏಕಾದಶ ಚಮೂಭರ್ತ್ರಾ ರಕ್ಷ್ಯಮಾಣಂ ಮಹಾತ್ಮನಾ |
ಸತ್ಯಂ ಚಿಕೀರ್ಷತಾ ಪಶ್ಯ ಹತಮೇನಂ ಜಯದ್ರಥಮ್ ॥8॥
ಹನ್ನೊಂದು ಅಕ್ಷೋಹಿಣೀಸೇನೆಯ ಒಡೆಯನಿಂದ (ದುರ್ಯೋಧನನಿಂದ) ರಕ್ಷಿತನಾದ ಮಹಾತ್ಮರಿಂದ (ದ್ರೋಣಾದಿಗಳಿಂದ) ರಕ್ಷಿತನಾದ ಈ ಜಯದ್ರಥನನ್ನು, ಸತ್ಯವನ್ನು ಸಂರಕ್ಷಿಸಬೇಕೆಂದು ಬಯಸುವ ಅರ್ಜುನನು ಸಂಹರಿಸಿರುವನು, ನೋಡು.
ಸಿಂಧುಸೌವೀರಭರ್ತಾರಂ ದರ್ಪಪೂರ್ಣಂ ಮನಸ್ವಿನಮ್ |
ಭಕ್ಷಯಂತಿ ಶಿವಾ ಗೃಧ್ರಾ ಜನಾರ್ದನ ಜಯದ್ರಥಮ್ ॥9॥
ಜನಾರ್ದನ! ಸ್ವಾಭಿಮಾನಿಯಾದ ದರ್ಪಭರಿತನಾದ ಸಿಂಧುಸೌವಿರ ದೇಶದ ಒಡೆಯನಾದ ಜಯದ್ರಥನನ್ನು ನರಿಗಳು ಹದ್ದುಗಳು ತಿನ್ನುತ್ತಿವೆ.
ಸಂರಕ್ಷ್ಯಮಾಣಂ ಭಾರ್ಯಾಭಿರನುರಕ್ತಾಭಿರಚ್ಯುತ |
ಭಷಂತೋಽಪ್ಯಪಕರ್ಷಂತಿ ಗಹನಂ ನಿಮ್ನಮಂತಿಕಾತ್ ॥10॥
ಅಚ್ಯುತ! (ತಮ್ಮ ಗಂಡಂದಿರಲ್ಲಿ) ಅನುರಕ್ತರಾದ ಹೆಂಡಂದಿರಿಂದ ಸಂರಕ್ಷಿತವಾದರೂ, ಹೆದರಿಸುತ್ತಿದ್ದರೂ (ಶೂ ಶೂ... ಎಂದು ನರಿ ಮುಂತಾದ ಮಾಂಸಾಶಿಗಳನ್ನು ಹೆದರಿಸುತ್ತಿದ್ದರೂ, ಅವರ) ಹತ್ತಿರದಿಂದ ಆಳದ ತಗ್ಗಿಗೆ (ಶವಗಳನ್ನು) ಎಳೆಯುತ್ತಿವೆ.
ತಮೇತಾಃ ಪರ್ಯುಪಾಸಂತೇ ವೀಕ್ಷಮಾಣಾ ಮಹಾಭುಜಮ್ |
ಸಿಂಧುಸೌವೀರಕಾಂಭೋಜಗಾಂಧಾರಯವನಸ್ತ್ರಿಯಃ ॥11॥
ನೀಳಬಾಹುವಾದ ಆತನನ್ನು ಈ ಸಿಂಧು ಸೌವಿರ ಕಾಂಭೋಜ ಗಾಂಧಾರ ಯವನ ಸ್ತ್ರೀಯರು ನೋಡುತ್ತಾ ಸುತ್ತುವರೆದಿರುವರು.
ಯದಾ ಕೃಷ್ಣಾಮುಪಾದಾಯ ಪ್ರಾದ್ರವತ್ ಕೇಕಯೈಃ ಸಹ |
ತದೈವ ವಧ್ಯಃ ಪಾಂಡೂನಾಂ ಜನಾರ್ದನ ಜಯದ್ರಥಃ ॥12॥
ದುಃಶಲಾಂ ಮಾನಯದ್ಭಿಸ್ತು ತದಾ ಮುಕ್ತೋ ಜಯದ್ರಥಃ |
ಕಥಮದ್ಯ ನ ತಾಂ ಕೃಷ್ಣ ಮಾನಯಂತಿ ಸ್ಮ ತೇ ಸುತಾಃ ॥13॥
ಜನಾರ್ದನ! ಯಾವಾಗ ಕೃಷ್ಣೆಯನ್ನು (ದ್ರೌಪದಿಯನ್ನು) ಅಪಹರಿಸಿಕೊಂಡು ಕೇಕಯರೊಡನೆ ಓಡಿದನೋ ಅಂದೇ ಪಾಂಡವರಿಂದ ಸಂಹೃತನಾಗಬೇಕಿತ್ತು, ದುಃಶಲೆಯನ್ನು (ಜಯದ್ರಥನ ಪತ್ನಿ ಮತ್ತು ದುರ್ಯೋಧನನ ತಂಗಿ) ಆದರಿಸಿದ್ದರಿಂದ ಆಗ ಜಯದ್ರಥನು ಮುಕ್ತನಾದನು, ಕೃಷ್ಣ! ಆ ಮಕ್ಕಳು (ಪಾಂಡವರು) ಆಕೆಯನ್ನು (ದುಃಶಲೆಯನ್ನು) ಇಂದು ಏಕೆ ಆದರಿಸುತ್ತಿಲ್ಲ? (ದುಃಶಲೆಯ ಮೇಲಿನ ಪ್ರಿತಿಯಿಂದ ಆಕೆಯ ಗಂಡನಾದ ಜಯದ್ರಥನನ್ನು ಸಂಹರಿಸದೇ ಬಿಡಬಹುದಿತ್ತಲ್ಲವೇ? ಎಂದು ಭಾವ.)

ಸೈಂಧವಂ ಮೇ ಸುತಾ ಬಾಲಾ ಪ್ರಲಪಂತೀವ ದುಃಖಿತಾ |
ಪ್ರಮಾಪಯತಿ ಚಾತ್ಮಾನಂ ಪ್ರಾಕ್ರೋಶಂತೀ ಚ ಪಾಂಡವಾನ್ ॥14॥
ಅತ್ಯಂತ ದುಃಖಿತಳಾದ ಚಿಕ್ಕವಯದವಳಾದ ನನ್ನ ಮಗಳು ಸೈಂಧವನನ್ನು ಉದ್ದೇಶಿಸಿ ರೋದಿಸುತ್ತಿರುವಳು, ತನ್ನನ್ನೇ ನಿಂದಿಸಿಕೊಳ್ಳುತ್ತಿರುವಳು (ಪೂರ್ವಜನ್ಮದಲ್ಲಿ ಮಹಾಪಾಪಿಯಾಗಿದ್ದೆ ಇತ್ಯಾದಿಯಾಗಿ ತನ್ನನ್ನೇ ತಾನು ನಿಂದಿಸಿಕೊಳ್ಳುತ್ತಿರುವಳು), ಪಾಂಡವರ ವಿಷಯದಲ್ಲಿ ಕೋಪಿಸಿಕೊಳ್ಳುತ್ತಿರುವಳು.
ಕಿಂ ನು ದುಃಖತರಂ ಕೃಷ್ಣ ಪರಂ ಮಮ ಭವಿಷ್ಯತಿ |
ಯತ್ ಸುತಾ ವಿಧವಾ ಬಾಲಾ ಸ್ನುಷಾಶ್ಚ ನಿಹತೇಶ್ವರಾಃ ॥15॥
ಬಾಲಿಕೆಯಾದ ಮಗಳು ವಿಧವೆಯಾದಳು, ಸೊಸೆಯಂದಿರಾದರೋ ಗಂಡಂದಿರನ್ನು ಕಳೆದುಕೊಂಡಿರುವರು, ಕೃಷ್ಣ! ನನಗೆ ಇದಕ್ಕಿಂತಲೂ ಹೆಚ್ಚಿನ ಬೇರೆ ಯಾವ ದುಃಖವು ಒದಗಬಹುದು?
ಅಹೋ ಧಿಗ್ ದುಃಶಲಾಂ ಪಶ್ಯ ವೀತಶೋಕಭಯಾದಿವ |
ಭರ್ತುಃ ಶಿರ ಅಪಶ್ಯಂತೀಂ ಧಾವಮಾನಾಮಿತಸ್ತತಃ ॥16॥
ಕೃಷ್ಣ! ದುಃಶಲೆಯನ್ನು ನೋಡು, ಗಂಡನ ತಲೆಯನ್ನು ಕಾಣದೆ ಶೋಕರಹಿತಳಂತೆ ಭಯರಹಿತಳಷ್ಟೆ. ಇತ್ತಿಂದತ್ತ ಓಡುತ್ತಿರುವಳು. (ಆತನ ತಲೆಯು ಈ ರಣರಂಗದಲ್ಲಿಲ್ಲ, ಆತನ ಶಿರವನ್ನು ತೆಗೆದ ಅರ್ಜುನನು ಪಾಶುಪತಾಸ್ತ್ರದ ಪ್ರಭಾವದಿಂದ ಆ ತಲೆಯನ್ನು ಎಲ್ಲೋ ದೂರದಲ್ಲಿರುವ ಆತನ ತಂದೆಯ ಕರಗಳಲ್ಲಿ ಬೀಳುವಂತೆ ಮಾಡಿದ್ದನು) ಇಂತಹ ಘೋರಾವಸ್ಥೆಗೆ ಕಾರಣವಾದ ಯುದ್ಧಕ್ಕೆ ಧಿಕ್ಕಾರವಿರಲಿ.
ವಾರಯಾಮಾಸ ಯಃ ಸರ್ವಾನ್ ಪಾಂಡವಾನ್ ಪುತ್ರಗರ್ಧಿನಃ |
ಸ ಹತ್ವಾ ವಿಶಿಖೈಃ ಸೇನಾಂ ಸ್ವಯಂ ಮೃತ್ಯುವಶಂ ಗತಃ ॥17॥
ಯಾವನು ಬಾಣಗಳಿಂದ ಸೇನೆಯನ್ನು ಸಂಹರಿಸಿ, ಪುತ್ರಪ್ರೇಮಿಗಳಾದ ಎಲ್ಲ ಪಾಂಡವರನ್ನು (ಅಭಿಮನ್ಯುವನ್ನು ಸಂಹರಿಸುವ ದಿನದಂದು ವರಪ್ರಭಾವದಿಂದ ಸೇನೆಯ ವ್ಯೂಹದ ಮುಖದಲ್ಲಿ ನಿಂತು) ತಡೆದಿದ್ದನೊ, ಆತನು ಸ್ವತಃ ಮೃತ್ಯುವಿನ ವಶನಾಗಿರುವನು.
ತಂ ಸುಪ್ತಮಿವ ಮಾತಂಗಂ ವೀರಂ ಪರಮದುರ್ಜಯಮ್ |
ಪರಿವಾರ್ಯ ರುದಂತ್ಯೇತಾಃ ಸ್ತ್ರಿಯಶ್ಚಂದ್ರೋಪಮಾನನಾಃ ॥18॥
ವೀರನಾದ ಮತ್ತೊಬ್ಬರಿಂದ ಸೋಲನ್ನೇ ಕಾಣದ ಆನೆಯಂತೆ ಮಲಗಿರುವ ಆತನನ್ನು ಚಂದ್ರನಂತೆ ಮುಖಗಳನ್ನು ಹೊಂದಿರುವ ಈ ಮಹಿಳೆಯರು ಸುತ್ತುವರೆದು ರೋದಿಸುತ್ತಿರುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಸೈಂಧವದರ್ಶನಂ ನಾಮ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ಮೂರನೆಯ ಅಧ್ಯಾಯ
ಶಲ್ಯ-ಭೀಷ್ಮಾದಿಗಳಿಗಾಗಿ ಗಾಂಧಾರಿಯ ಅಳಲು
ಗಾಂಧಾರೀ
ಏಷ ಶಲ್ಯೋ ಹತಃ ಶೇತೇ ಸಾಕ್ಷಾನ್ನಕುಲಮಾತುಲಃ |
ಧರ್ಮಜ್ಞೇನ ಸತಾ ತಾತ ಧರ್ಮರಾಜೇನ ಸಂಯುಗೇ ॥1॥
ಗಾಂಧಾರಿ ಸಜ್ಜನನಾದ ಧರ್ಮವನ್ನು ತಿಳಿದ ಧರ್ಮರಾಜನಿಂದ ಯುದ್ಧದಲ್ಲಿ ನಕುಲನ ಸ್ವಂತ ಸೋದರಮಾವನಾದ ಈ ಶಲ್ಯರಾಜನು ಸಂಹೃತನಾಗಿ ಬಿದ್ದಿರುವನು.
ಯಸ್ತ್ವಯಾ ಸ್ಪರ್ಧತೇ ನಿತ್ಯಂ ಸರ್ವತ್ರ ಮಧುಸೂದನ |
ಸ ಏಷ ನಿಹತಃ ಶೇತೇ ಮದ್ರರಾಜೋ ಮಹಾಬಲಃ ॥2॥
ಮಾಧವ! ಮಹಾಬಲಶಾಲಿಯಾದ ಯಾವಾಗಲೂ ಎಲ್ಲ ಸಂದರ್ಭಗಳಲ್ಲಿಯೂ ನಿನ್ನೊಡನೆ ಸ್ಪರ್ಧಿಸುತ್ತಿದ್ದನೋ ಆ ಇ ಮದ್ರರಾಜನು ಮೃತನಾಗಿ ಬಿದ್ದಿರುವನು.
ಜಯದ್ರಥೇ ಯದಿ ಬ್ರೂಯುರಪರಾಧಂ ಕಥಂಚನ |
ಮದ್ರಪುತ್ರೇ ಕಥಂ ಬ್ರೂಯುರಪರಾಧಂ ವಿವಕ್ಷವಃ ॥3॥
ಜಯದ್ರಥನ ವಿಷಯದಲ್ಲಿ ಹೇಗಾದರೂ ತಪ್ಪನ್ನು ಹೇಳಬಹುದು, ಆದರೆ ಮದ್ರಪುತ್ರನ ವಿಷಯದಲ್ಲಿ ತಿಳಿದವರು ತಪ್ಪನ್ನು ಹೇಗೆ ಹೇಳಿಯಾರು?
ತೇನ ಸಂಗೃಹ್ಣತಾ ತಾತ ರಥಮಾಧಿರಥೇರ್ಯುಧಿ |
ಜಯಾರ್ಥಂ ಪಾಂಡುಪುತ್ರಾಣಾಂ ತಥಾ ತೇಜೋವಧಃ ಕೃತಃ ॥4॥
ತಂದೆಯೆ! ಯುದ್ಧದಲ್ಲಿ ಅಧಿರಥನ ಪುತ್ರನ (ಕರ್ಣನ) ರಥದ ಸಾರಥಿಯಾಗಿದ್ದ ಆತನು ಹಾಗೆಯೇ ಪಾಂಡುಪುತ್ರರ ಜಯಕ್ಕಾಗಿ (ಕರ್ಣನ) ತೇಜೋವಧೆಯನ್ನು ಮಾಡಿದನು.
ಅಹೋ ಧಿಕ್ ಪಶ್ಯ ಶಲ್ಯಸ್ಯ ಪೂರ್ಣಚಂದ್ರಸುದರ್ಶನಮ್ |
ಮುಖಂ ಪದ್ಮಪಲಾಶಾಕ್ಷಂ ಕಾಕೈರಾದಷ್ಟಮವ್ರಣಮ್ ॥5॥
ಪದ್ಮದ ಎಲೆಯಂತಿರುವ ಕಣ್ಣುಗಳನ್ನು ಹೊಂದಿರುವ ಪೂರ್ಣಚಂದ್ರನಂತೆ ಸುಂದರವಾದ ವ್ರಣವಿಲ್ಲದ ಶಲ್ಯರಾಜನ ಮುಖವನ್ನು ಕಾಗೆಗಳು ಕುಕ್ಕುತ್ತಿವೆ, ಅಯ್ಯೋ ಧಿಕ್ಕಾರವಿರಲಿ.

ಏಷಾ ಚಾಮೀಕರಾಭಸ್ಯ ತಪ್ತಕಾಂಚನಸಪ್ರಭಾ |
ಆಸ್ಯಾದ್ ವಿನಿಃಸೃತಾ ಜಿಹ್ವಾ ಭಕ್ಷ್ಯತೇ ಕೃಷ್ಣಪಕ್ಷಿಭಿಃ ॥6॥
ಹೊಂಬಣ್ಣದ ಈತನ ಮುಖದಿಂದ ಹೊರಬಂದ ಪುಟಕ್ಕಿಟ್ಟ ಚಿನ್ನದಂತಿರುವ ನಾಲಿಗೆಯನ್ನು ಕಾಗೆಗಳು ತಿನ್ನುತ್ತಿವೆ.
ಯುಧಿಷ್ಠಿರೇಣ ನಿಹತಂ ಶಲ್ಯಂ ಸಮಿತಿಶೋಭನಮ್ |
ರುದಂತ್ಯಃ ಪರ್ಯುಪಾಸಂತೇ ಮದ್ರರಾಜಕುಲಾಂಗನಾಃ ॥7॥
ರಣರಂಗಕ್ಕೆ ಶೋಭಾವಹನಾದ ಶಲ್ಯನನ್ನು ಯುಧಿಷ್ಠಿರನು ಸಂಹರಿಸಿದನು, ರೋದಿಸುತ್ತಿರುವ ಮದ್ರರಾಜನ ಮಹಿಳೆಯರು ಆತನನ್ನು ಸುತ್ತುವರೆದಿರುವರು.
ಏತಾಃ ಸುಸೂಕ್ಷ್ಮವಸನಾ ಮದ್ರರಾಜಂ ನರರ್ಷಭಮ್ |
ಕ್ರೋಶಂತ್ಯಭಿಸಮಾಸಾದ್ಯ ಕ್ಷತ್ರಿಯಾಃ ಕ್ಷತ್ರಿಯರ್ಷಭಮ್ ॥8॥
ಅತಿತೆಳುವಾದ ವಸ್ತ್ರವನ್ನು ತೊಟ್ಟಿರುವ ಕ್ಷತ್ರಿಯಕುಲೋತ್ಪನ್ನೆಯರಾದ ಇವರು ಕ್ಷತ್ರಿಯಶ್ರೇಷ್ಠನಾದ ಮನುಷ್ಯರಲ್ಲಿ ಹಿರಿಯನಾದ ಮದ್ರರಾಜನ ಬಳಿ ಬಂದು ರೋದಿಸುತ್ತಿರುವರು.
ಶಲ್ಯಂ ನಿಪತಿತಂ ನಾರ್ಯಃ ಪರಿವಾರ್ಯಾಭಿತಃ ಸ್ಥಿತಾಃ |
ವಾಶಿತಾಗೃಷ್ಟಯಃ ಪಂಕೇ ಪರಿಮಗ್ನಮಿವಾರ್ಷಭಮ್ ॥9॥
ಕೆಸರಿನಲ್ಲಿ ಸಿಲುಕಿದ ವೃಷಭವನ್ನು ಕಡಸುಗಳು ಸುತ್ತುವರೆದಂತೆ, ಬಿದ್ದಿರುವ ಶಲ್ಯನನ್ನು ಸ್ತ್ರೀಯರು ಸುತ್ತುವರೆದು ನಿಂತಿರುವರು.
ಶಲ್ಯಂ ಶರಣದಂ ಶೂರಂ ಪಶ್ಯೈನಂ ರಥಸತ್ತಮಮ್ |
ಶಯಾನಂ ವೀರಶಯನೇ ಶರೈರ್ವಿಶಕಲೀಕೃತಮ್ ॥10॥
ಆಶ್ರಯದಾತನಾಗಿದ್ದ ರಥಿಕರಲ್ಲಿ ಉತ್ತಮನಾದ ಬಾಣಗಳಿಂದ ಘಾಸಿಗೊಂಡಿರುವ ವೀರಶಯನದಲ್ಲಿ ಮಲಗಿರುವ ಶೂರನಾದ ಈ ಶಲ್ಯನನ್ನು ನೋಡು.
ಏಷ ಶೈಲಾಲಯೋ ರಾಜಾ ಭಗದತ್ತಃ ಪ್ರತಾಪವಾನ್ |
ಗಜಾಂಕುಶಧರಃ ಶ್ರೀಮಾನ್ ಶೇತೇ ಯುಧಿ ನಿಪಾತಿತಃ ॥11॥
ಗುಡ್ಡಗಾಡಿನ ರಾಜನಾದ ಪ್ರತಾಪಶಾಲಿಯಾದ ಆನೆಯ ಅಂಕುಶವನ್ನು ಧರಿಸಿರುವ ಕಾಂತಿಮಂತನಾದ ಈ ಭಗದತ್ತನು, ಯುದ್ಧದಲ್ಲಿ (ಶತ್ರುಗಳಿಂದ) ಕೆಡಹಲಾಗಿ ಮಲಗಿರುವನು.
ಯಸ್ಯ ರುಗ್ಮಮಯೀ ಮಾಲಾ ಶಿರಸ್ಯೇಷಾ ವಿರಾಜತೇ |
ಶ್ವಾಪದೈರ್ಭಕ್ಷ್ಯಮಾಣಸ್ಯ ಶೋಭಯತ್ಯೇವ ಮೂರ್ಧಜಾನ್ ॥12॥
ಯಾವನು ನಾಯಿಗಳಿಂದ ತಿನ್ನಲ್ಪಟ್ಟಿರುವನೋ ಆತನ ಚಿನ್ನದ ಈ ಮಾಲೆಯು ತಲೆಯಲ್ಲಿ ವಿರಾಜಿಸುತ್ತಿದೆ, ತಲೆಕೂದಲುಗಳನ್ನು ಚೆಂದಗೊಳಿಸುತ್ತಿದೆ.
ಏತೇನ ಕಿಲ ಪಾರ್ಥಸ್ಯ ಯುದ್ಧಮಾಸೀತ್ ಸುದಾರುಣಮ್ |
ರೋಮಹರ್ಷಣಮತ್ಯುಗ್ರಂ ಶಕ್ರಸ್ಯ ಬಲಿನಾ ಯಥಾ ॥13॥
ಇಂದ್ರನಿಗೂ ಬಲಿಚಕ್ರವರ್ತಿಗೂ ನಡೆದಂತೆ, ಈತನಿಗೂ ಪೃಥೆಯ ಪುತ್ರನಿಗೂ ಭಯಂಕರವಾದ ರೋಮಾಂಚಕಾರಿಯಾದ ಯುದ್ಧವಾಯಿತು.
ಯೋಧಯಿತ್ವಾ ಮಹಾಬಾಹುರೇಷ ಪಾರ್ಥಂ ಧನಂಜಯಮ್ |
ಸಂಶಯಂ ಗಮಯಿತ್ವಾ ಚ ಕುಂತೀಪುತ್ರೇಣ ಪಾತಿತಃ ॥14॥
ಈ ನೀಳಬಾಹುವು ಯುದ್ಧಮಾಡಿ ಪೃಥೆಯ ಪುತ್ರನಾದ ಧನಂಜಯನಿಗೆ (ಗೆಲುವಿನ) ಸಂದೇಹವನ್ನು ಉಂಟುಮಾಡಿ, (ಕೊನೆಗೆ) ಕುಂತೀಪುತ್ರನೇ (ಈತನನ್ನು) ಕೆಡಹಿದನು.
ಯಸ್ಯ ನಾಸ್ತಿ ಸಮೋ ಲೋಕೇ ಶೌರ್ಯೇ ವೀರ್ಯೇ ಚ ಕಶ್ಚನ |
ಸ ಏಷ ನಿಹತಃ ಶೇತೇ ಭೀಷ್ಮೋ ಭೀಮಕೃದಾಹವೇ ॥15॥
ಶೌರ್ಯದಲ್ಲಿ ವೀರ್ಯದಲ್ಲಿ ಯಾರಿಗೆ ಸಮರು ಈ ಲೋಕದಲ್ಲಿ ಯಾರೂ ಇಲ್ಲವೊ ಅಂತಹ ಈ ಭೀಷ್ಮನು ಯುದ್ಧದಲ್ಲಿ ಭಯಂಕರವಾದ ಕರ್ಮವನ್ನು ಮಾಡಿ ನಿಹತನಾಗಿ ಮಲಗಿರುವನು.
ಪಶ್ಯ ಶಾಂತನವಂ ಕೃಷ್ಣ ಶಯಾನಂ ಸೂರ್ಯವರ್ಚಸಮ್ |
ಯುಗಾಂತ ಇವ ಕಾಲೇನ ಪಾತಿತಂ ಸೂರ್ಯಮಂಬರಾತ್ ॥16॥
ಸೂರ್ಯನಂತೆ ಕಾಂತಿಯಿರುವ ಮಲಗಿರುವ ಶಂತನುವಿನ ಪುತ್ರನನ್ನು ನೋಡು, ಕೃಷ್ಣ! ಪ್ರಳಯಕಾಲದಲ್ಲಿ ಗಗನದಿಂದ ಕಾಲನು ಕೆಡಹಿರುವ ಸೂರ್ಯನಂತೆ ತೋರುತ್ತಿರುವನು.
ಏಷ ಜಿತ್ವಾ ರಣೇ ಶತ್ರೂನ್ ಶಸ್ತ್ರಪಾತೇನ ವೀರ್ಯವಾನ್ |
ನರಸೂರ್ಯೋಽಸ್ತಮಭ್ಯೇತಿ ಸೂರ್ಯೋಽಸ್ತಮಿವ ಕೇಶವ ॥17॥
ಕೇಶವ! ರಣರಂಗದಲ್ಲಿ ಶಸ್ತ್ರಗಳಿಂದ ಪ್ರಹರಿಸಿ ಶತ್ರುಗಳನ್ನು ಗೆದ್ದಿರುವ ಈ ನರಸೂರ್ಯನು ಸೂರ್ಯನು ಅಸ್ತಂಗತನಾಗುವಂತೆ ಅಸ್ತಮಯನಾಗಲಿರುವನು.
ಶರತಲ್ಪಗತಂ ವೀರಂ ಧರ್ಮೇ ದೇವರ್ಷಿಣಾ ಸಮಮ್ |
ಶಯಾನಂ ವೀರಶಯನೇ ಪಶ್ಯ ಶೂರನಿಷೇವಿತೇ ॥18॥
ಧರ್ಮದಲ್ಲಿ ದೇವರ್ಷಿಗಳಿಗೆ ಸಮನಾದ ಶೂರರು ಮಲಗುವ ವೀರಶಯನದಲ್ಲಿ ಮಲಗಿರುವ ಶರತಲ್ಪದಲ್ಲಿರುವ ವೀರನನ್ನು ನೋಡು.
ಕರ್ಣಿನಾಲೀಕನಾರಾಚೈರಾಸ್ತೀರ್ಯ ಶಯನೋತ್ತಮಮ್ |

ಆವಿಶ್ಯ ಶೇತೇ ಭಗವಾನ್ ಸ್ಕಂದಃ ಶರವಣಂ ಯಥಾ ॥19॥
ಸ್ಕಂದನು ಜಂಬೂಹುಲ್ಲಿನಲ್ಲಿ ಮಲಗಿರುವಂತೆ, ಕರ್ಣಿಗಳನ್ನು ನಾಲೀಕಗಳನ್ನು ಬಾಣಗಳನ್ನು ಹರಡಿಕೊಂಡು ಶ್ರೇಷ್ಠವಾದ ಹಾಸನ್ನು ಏರಿ ಮಲಗಿರುವನು.
ಅತೂಲಪೂರ್ಣಂ ಗಾಂಗೇಯಃ ತ್ರಿಭಿರ್ಬಾಣೈಃ ಸಮನ್ವಿತಮ್ |
ಉಪಧಾಯೋಪಧಾನಾರ್ಥಂ ದತ್ತಂ ಗಾಂಡೀವಧನ್ವನಾ ॥20॥
ಹತ್ತಿಯಿಲ್ಲದೆ ಪೂರ್ಣವಾದ, ಮೂರುಬಾಣಗಳಿಂದ ಕೂಡಿರುವ, ಗಾಂಡೀವ ಧನುರ್ಧಾರಿಯಾದ ಅರ್ಜುನನು ನೀಡಿದ ತಲೆದಿಂಬನ್ನು ತಲೆಯ ಆಧಾರಕ್ಕಾಗಿ ಗಂಗಾಪುತ್ರನು ಸ್ವೀಕರಿಸಿರುವನು.
ಪಾಲಯಾನಃ ಪಿತುಃಶಾಸ್ತ್ರಮೂರ್ಧ್ವರೇತಾ ಮಹಾಯಶಾಃ |
ಏಷ ಶಾಂತನವಃ ಶೇತೇ ಮಾಧವಾಪ್ರತಿಮೋ ರಥಃ ॥21॥
ಮಾಧವ! ತಂದೆಯ ಶಾಸನವನ್ನು ಪರಿಪಾಲಿಸುವ ಊರ್ಧ್ವರೇತಸ್ಕನಾದ ಮಹಾಕೀರ್ತಿಶಾಲಿಯಾದ ರಥಿಕರಲ್ಲಿ ಸರಿಸಾಟಿಯಿಲ್ಲದ ಈ ಶಾಂತ ಮಲಗಿರುವನು.
ಧರ್ಮಾತ್ಮಾ ತಾತ ಸರ್ವಜ್ಞಃ ಪಾರಂಪರ್ಯೇಽಥ ನಿರ್ಣಯೇ |
ಅಮರ್ತ್ಯ ಇವ ಮರ್ತ್ಯಃ ಸನ್ನೇಷ ಪ್ರಾಣಾನಧಾರಯತ್ ॥22॥
ತಂದೆಯೆ! ಧರ್ಮಾತ್ಮನಾದ ಸರ್ವಜ್ಞನಾದ ಮನುಜನಾದರೂ ದೇವತೆಗಳಂತೆ ಇರುವವನಾಗಿ ಉತ್ತರಾಯಣಕಾಲದ ಪ್ರಾಪ್ತಿಗಾಗಿ ಪ್ರಾಣವನ್ನು ಧರಿಸಿರುವನು (ಪಾರಂಪರ್ಯೇ ಅಥ ನಿರ್ಣಯೇ- ಮುಮುಕ್ಷುಗಳ ಪರಂಪರೆಯಲ್ಲಿ ಬಂದಿರುವ ಉತ್ತರಾಯಣಕಾಲಕ್ಕಾಗಿ ಎಂದು ಅರ್ಥೈಸಲಾಗಿದೆ. ಉತ್ತರಾಯಣ ಕಾಲದಲ್ಲಿ ಮರಣವನ್ನು ಹೊಂದುವುದು ಶ್ರೇಷ್ಠ ಎಂಬುವುದು ಶಾಸ್ತ್ರಸಂಮತ ನಿರ್ಣಯ ಎಂದು ಒಟ್ಟು ಭಾವ.)
ನಾಸ್ತಿ ಯುದ್ಧೇ ಸಮಃ ಕಶ್ಚಿನ್ನ ವಿದ್ಯಾಸು ಪರಾಕ್ರಮೇ |
ಯತ್ರ ಶಾಂತನವೋ ಭೀಷ್ಮಃ ಶೇತೇಽದ್ಯ ನಿಹತಃ ಪರೈಃ ॥23॥
ವಿದ್ಯೆಯಲ್ಲಿ ಪರಾಕ್ರಮದಲ್ಲಿ ಯುದ್ಧದಲ್ಲಿ ಯಾರೂ (ಆತನಿಗೆ) ಸಮರಿಲ್ಲವೋ, ಅಂತಹ ಶಂತನುವಿನ ಪುತ್ರನಾದ ಭೀಷ್ಮನು ಈಗ ಶತ್ರುವಿನಿಂದ ಹತನಾಗಿ ಮಲಗಿರುವನು.
ಸ್ವಯಮೇತೇನ ಶೂರೇಣ ಪೃಚ್ಛ್ಯಮಾನೇನ ಪಾಂಡವೈಃ |
ಧರ್ಮಜ್ಞೇನಾಹವೇ ಮೃತ್ಯುಃ ಆಖ್ಯಾತಃ ಸತ್ಯವಾದಿನಾ ॥24॥
ಪಾಂಡವರಿಂದ ಕೇಳಲಾಗಿ, ಧರ್ಮಜ್ಞನಾದ ಶೂರನಾದ ಸತ್ಯವಾದಿಯಾದ ಈತನು ಯುದ್ಧದಲ್ಲಿ ತನ್ನ ಸಾವಿನ ರಹಸ್ಯವನ್ನು ಹೇಳಿದನು.
ಪ್ರನಷ್ಟಃ ಕುರುವಂಶಃ ಸ ಪುನರ್ಯೇನ ಸಮುದ್ಧೃತಃ |
ಸ ಗತಃ ಕುರುಭಿಃ ಸಾರ್ಧಂ ಮಹಾಬುದ್ಧಿಃ ಪರಾಜಯಮ್ ॥25॥
ನಿಂತುಹೋಗಿದ್ದ ಆ ಕುರುವಂಶವನ್ನು ಯಾರು ಮತ್ತೆ ಉದ್ಧರಿಸಿದನೊ, ಆ ಮಹಾಜ್ಞಾನಿಯು ಕುರುಗಳಿಂದ ಕೂಡಿಕೊಂಡು ಸೋಲನ್ನು ಹೊಂದಿದನು.
ಧರ್ಮೇಣ ಕುರವಃ ಕಂ ನು ಪರಿಪ್ರಕ್ಷ್ಯಂತಿ ಮಾಧವ |
ಹತೇ ದೇವವ್ರತೇ ಭೀಷ್ಮೇ ದೇವಕಲ್ಪೇ ನರರ್ಷಭೇ ॥26॥
ಮಾಧವ! ಪುರುಷಶ್ರೇಷ್ಠನಾದ ದೇವತೆಯಂತಿರುವ ದೇವವ್ರತನಾದ ಭೀಷ್ಮನು ಮರಣವನ್ನು ಹೊಂದಲು (ಮುಂದಿನ ದಿನಗಳಲ್ಲಿ) ಕುರುಗಳು ಧರ್ಮದ ವಿಷಯದಲ್ಲಿ ಪರಿಪರಿಯಾಗಿ ಯಾರನ್ನು ಪ್ರಶ್ನಿಸುವರು?
ಅರ್ಜುನಸ್ಯ ವಿನೇತಾರಮಾಚಾರ್ಯಂ ಸಾತ್ಯಕೇಸ್ತಥಾ |
ತಂ ಪಶ್ಯ ಪತಿತಂ ದ್ರೋಣಂ ಕುರೂಣಾಂ ಗುರುಸತ್ತಮಮ್ ॥27॥
ಅರ್ಜುನನ ಗುರುವು ಹಾಗೆ ಸಾತ್ಯಕಿಯ ಪರಮಗುರುವು ಮತ್ತು ಕುರುಗಳಿಗೆ ಮುಖ್ಯಗುರುವಾದ ಬಿದ್ದಿರುವ ದ್ರೋಣರನ್ನು ನೋಡು.
ಅಸ್ತ್ರಂ ಚತುರ್ವಿಧಂ ವೇದ ಯಥೈವ ತ್ರಿದಶೇಶ್ವರಃ ॥28॥
ದೇವತೆಗಳ ಸ್ವಾಮಿಯಂತೆ (ಇಂದ್ರನಂತೆ) ನಾಲ್ಕುವಿಧ ಅಸ್ತ್ರಗಳನ್ನು ಬಲ್ಲವನು.
ವಿಧಿಪಾದೋ ಮಂತ್ರಪಾದಃ ಪೂಜಾಪಾದಸ್ತಥೈವ ಚ |
ರಹಸ್ಯಪಾದ ಇತ್ಯೇತತ್ ಪ್ರೋಕ್ತಂ ಪಾದಚತುಷ್ಟಯಮ್ ॥29॥
ವಿಧಿಪಾದ ಮಂತ್ರಪಾದ ಹಾಗೂ ಪೂಜ್ಯಪಾದ ಮತ್ತು ರಹಸ್ಯಪಾದ ಹೀಗೆ ನಾಲ್ಕುಪಾದಗಳೆಂದು ಉಕ್ತವಾಗಿವೆ.
ಪೈಶಾಚಮಾಸುರಂ ಗಾಂಧರ್ವಂ ಮಾನುಷಂ ಚ ಚತುರ್ವಿಧಮ್ |
ಭಾರ್ಗವೋ ವಾ ಮಹಾವೀರ್ಯಸ್ತಥಾ ದ್ರೋಣೋಽಪಿ ಮಾಧವ ॥
ಮಾಧವ! ಪೈಶಾಚ ಆಸುರ ಗಾಂಧರ್ವ ಮತ್ತು ಮಾನುಷ ಎಂದು ನಾಲ್ಕುವಿಧ ವಿದ್ಯೆಗಳನ್ನು ಭೃಗುಗೋತ್ರೋತ್ಪನ್ನನಾದ ಮಹಾವೀರ್ಯವಂತನಾದ ಪರುಶುರಾಮ ಮತ್ತು ದ್ರೋಣನೂ ಬಲ್ಲವನಾಗಿದ್ದನು.
ಯಸ್ಯ ಪ್ರಸಾದಾದ್ ಬೀಭತ್ಸುಃ ಪಾಂಡವಃ ಕರ್ಮ ದುಷ್ಕರಮ್ |
ಚಕಾರ ಸ ಹತಃ ಶೇತೇ ನೈನಮಸ್ತ್ರಾಣ್ಯಪಾಲಯನ್ ॥31॥
ಯಾರ ಅನುಗ್ರಹದಿಂದ ಪಾಡುವಿನ ಪುತ್ರನಾದ ಬೀಭತ್ಸುವು ಮತ್ತೊಬ್ಬರಿಂದ ಮಾಡಲಾಗದಂತಹ ಸಾಹಸಕರ್ಮವನ್ನು ಮಾಡಿದನೋ ಆತನು (ದ್ರೋಣನು) ಮೃತನಾಗಿ ಬಿದ್ದಿರುವನು, ಈತನನ್ನು (ಆ) ಅಸ್ತ್ರಗಳು ಕಾಪಾಡಲಿಲ್ಲ.
ಯಂ ಪುರೋಧಾಯ ಕುರವ ಆಹ್ವಯಂತಿ ಸ್ಮ ಪಾಂಡವಾನ್ |

ಸೋಽಯಮಸ್ತ್ರಭೃತಾಂ ಶ್ರೇಷ್ಠೋ ದ್ರೋಣಃ ಶಸ್ತ್ರೈಃ ಪೃಥಕ್ ಕೃತಃ ॥32॥
ಯಾವಾತನನ್ನು ಮುಂದೆ ಮಾಡಿಕೊಂಡು ಕುರುಗಳು ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದರೋ, ಆ ಈ ಯಾವ ಅಸ್ತ್ರಧಾರಿಗಳಲ್ಲಿ ಹಿರಿಯನಾದ ದ್ರೋಣನು ಶಸ್ತ್ರಗಳಿಂದ ಛಿದ್ರನಾಗಿರುವನು.
ಯಸ್ಯ ನಿರ್ದಹತಃ ಸೇನಾಂ ಗತಿರಗ್ನೇರಿವಾಭವತ್ |
ಸ ಭೂಮೌ ನಿಹತಃ ಶೇತೇ ಶಾಂತಾರ್ಚಿರಿವ ಪಾವಕಃ ॥33॥
(ಶತ್ರು) ಸೇನೆಯನ್ನು ದಹಿಸುವ ಯಾರ ಗತಿಯು ಅಗ್ನಿಯ ಗತಿಯಂತೆ ಇತ್ತೋ (ಅಪ್ರತಿಹತಗತಿಯವನಾಗಿದ್ದನೋ) ಆತನು ಭೂಮಿಯಲ್ಲಿ ನಿಹತನಾಗಿ, ಪ್ರಜ್ವಲಿಸಿ ಶಾಂತವಾದ ಅಗ್ನಿಯಂತೆ ಬಿದ್ದಿರುವನು.
ಧನುರ್ಮುಷ್ಟಿರಶೀರ್ಣಶ್ಚ ಹಸ್ತಾವಾಪಶ್ಚ ಮಾಧವ |
ದ್ರೋಣಸ್ಯ ನಿಹತಸ್ಯಾಪಿ ದದೃಶೇ ಜೀವತೋ ಯಥಾ ॥34॥
ಮಾಧವ! ಮೃತರಾಗಿದ್ದರೂ ಬಿಲ್ಲನ್ನು ಧರಿಸಿದ ದ್ರೋಣನ ಮುಷ್ಟಿಯು ಸಡಿಲವಾಗಿಲ್ಲ, ಮತ್ತು ಕೈಕವಚಗಳೂ ಕಳಚಿಲ್ಲ, ಬದುಕಿರುವಂತೆ ತೋರುತ್ತಿರುವರು.
ವೇದಾಶ್ಚ ಯಸ್ಮಾಚ್ಚತ್ವಾರಃ ಸರ್ವಾಸ್ತ್ರಾಣಿ ಚ ಕೇಶವ |
ಅನಪೇತಾನಿ ವೈ ಶೂರಾದ್ ಯಥೈವಾಽಽದೌ ಪ್ರಜಾಪತೇಃ ॥35॥
ಕೇಶವ! ಸೃಷ್ಟಿಯ ಆದಿಯಲ್ಲಿ ಪ್ರಜಾಪತಿಯನ್ನು ವೇದಗಳು ಹೇಗೆ ಬಿಟ್ಟಿರಲಿಲ್ಲವೋ ಹಾಗೆ ಈ ಶೂರನನ್ನು ನಾಲ್ಕುವೇದಗಳು ಸರ್ವಅಸ್ತ್ರಗಳು ಬಿಟ್ಟಿರಲಿಲ್ಲ.
ವಂದನಾರ್ಹಾವಿಮೌ ತಸ್ಯ ವಂದಿಭಿರ್ವಂದಿತೌ ಶುಭೌ |
ಗೋಮಾಯವೋ ವಿಕರ್ಷಂತಿ ಪಾದೌ ಕ್ಷತ್ರಶತಾರ್ಚಿತೌ ॥36॥
ವಿಶೇಷಪೂಜಾರ್ಹಗಳಾದ ವಂದಿಮಾಗದರಿಂದ ವಂದಿತವಾದ ಮಂಗಳಕರ- ಗಳಾದ ನೂರಾರು ಕ್ಷತ್ರಿಯರಿಂದ ಪೂಜಿತವಾದ ಆತನ (ದ್ರೋಣನ) ಪಾದಗಳನ್ನು ನರಿಗಳು ಕಿತ್ತೆಳೆಯುತ್ತಿವೆ.
ದ್ರೋಣಂ ದ್ರುಪದಪುತ್ರೇಣ ನಿಹತಂ ಮಧುಸೂದನ |
ಕೃಪೀ ಕೃಪಣಮನ್ವಾಸ್ತೇ ದುಃಖೋಪಹತಚೇತನಾ ॥37॥
ಮಧುಸೂದನ! ದ್ರುಪದಪುತ್ರನಿಂದ ಸಂಹೃತನಾದ ದ್ರೋಣನನ್ನು ದುಃಖದಿಂದ ಕುಗ್ಗಿದ ಮನವುಳ್ಳ ಕೃಪಿಯು ತಲೆತಗ್ಗಿಸಿಕೊಂಡು ಅನುಸರಿಸುತ್ತಿರುವಳು.
ತಾಂ ಪಶ್ಯ ರುದತೀಮಾರ್ತಾಂ ಮುಕ್ತಕೇಶೀಮಧೋಮುಖೀಮ್ |
ಹತಂ ಪತಿಮುಪಾಸ್ಯಂತೀಂ ದ್ರೋಣಂ ಶಸ್ತ್ರಭೃತಾಂ ವರಮ್ ॥38॥
ದುಃಖಿತಳಾಗಿ ರೋದಿಸುತ್ತಿರುವ ತಲೆಕೂದಲನ್ನು ಹರಡಿಕೊಂಡಿರುವ ತಲೆಯನ್ನು ತಗ್ಗಿಸಿಕೊಂಡಿರುವ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಗಂಡನಾದ ಮೃತನಾದ ದ್ರೋಣನನ್ನು ಸೇವಿಸುತ್ತಿರುವ ಆಕೆಯನ್ನು ನೋಡು.
ಬಾಣೈರ್ಭಿನ್ನತನುತ್ರಾಣಂ ಧೃಷ್ಟದ್ಯುಮ್ನೇನ ಕೇಶವ |
ಉಪಾಸತೇ ಮೃಧೇ ದ್ರೋಣಂ ಜಟಿಲಾ ಬ್ರಹ್ಮಚಾರಿಣೀ ॥39॥
ಕೇಶವ! ಧೃಷ್ಟದ್ಯುಮ್ನನ ಬಾಣಗಳಿಂದ ಭಿನ್ನವಾದ ಕವಚವನ್ನು ಹೊಂದಿರುವ ದ್ರೋಣನನ್ನು ಜಟಾಧಾರಿಣಿಯಾದ ಬ್ರಹ್ಮಚಾರಿಣಿಯಾದ ಕೃಪಿಯು ಉಪಾಸಿಸುತ್ತಿರುವಳು.
ಪ್ರೇತಕೃತ್ಯೇ ಚ ಯತತೇ ಕೃಪೀ ಕೃಪಣಮಾತುರಾ |
ಹತಸ್ಯ ಸಮರೇ ಭರ್ತುಃ ಸುಕುಮಾರೀ ಯಶಸ್ವಿನೀ ॥40॥
ಸುಕೋಮಲಳಾದ ಕೀರ್ತಿವಂತಳಾದ ಗಾಬರಿಗೊಂಡಿರುವ ದೀನಳಾದ ಕೃಪಿಯು ಯುದ್ಧದಲ್ಲಿ ಮೃತನಾದ ಗಂಡನಿಗೆ ಪ್ರೇತಕಾರ್ಯವನ್ನು (ಔರ್ಧ್ವದೈಹಿಕಕ್ರಿಯೆಯನ್ನು) ಮಾಡಲು ಹವಣಿಸುತ್ತಿರುವಳು.
ಅಗ್ನೀನಾಹೃತ್ಯ ವಿಧಿವತ್ ಚಿತಾಂ ಪ್ರಜ್ವಾಲ್ಯ ಸರ್ವಶಃ |
ದ್ರೋಣಮಾದಾಯ ಗಾಯಂತಿ ತ್ರೀಣಿ ಸಾಮಾನಿ ಗಾಯಕಾಃ ॥41॥
ವಿಧಿಯ ಪ್ರಕಾರವಾಗಿ ಅಗ್ನಿಯನ್ನು ತಂದು ಸುತ್ತಲೂ ಚಿತೆಯನ್ನು ಅಗ್ನಿಯಿಂದ ಪ್ರಜ್ವಲಿಸಿ ದ್ರೋಣನನ್ನು (ದೇಹವನ್ನು) ತಂದು ಸಾಮಗಾನಿಗಳು ಮೂರು ಸಾಮಮಂತ್ರಗಳನ್ನು ಹಾಡುತ್ತಿರುವರು.
ಕಿರಂತಿ ಚ ಚಿತಾಮೇತೇ ಜಟಿಲಾ ಬ್ರಹ್ಮಚಾರಿಣಃ |
ಧನುರ್ಭಿಃ ಶಕ್ತಿಭಿಶ್ಚೈವ ರಥನೀಡೈಶ್ಚ ಮಾಧವ ॥42॥
ಮಾಧವ! ಜಟಾಧಾರಿಗಳಾದ ಈ ಬ್ರಹ್ಮಚಾರಿಗಳು ಬಿಲ್ಲಿನಿಂದ ಶಕ್ತ್ಯಾಯುಧದಿಂದ ರಥದ ನೀಡದಿಂದ ಚಿತೆಯನ್ನು ಕೆದರುತ್ತಿರುವರು.
ಶಸ್ತ್ರೈಶ್ಚ ವಿವಿಧೈರನ್ಯೈರ್ಧಕ್ಷ್ಯಂತೋ ಭೂರಿತೇಜಸಮ್ ॥43॥
ಅತಿತೇಜಸ್ವಿಯಾದ ದ್ರೋಣರನ್ನು ( ಆ ಬ್ರಹ್ಮಚಾರಿಗಳು ಅಲ್ಲೇ ಬಿದ್ದಿರುವ) ಬೇರೆ ಬೇರೆ ಶಸ್ತ್ರಗಳಿಂದಲೇ ದಹಿಸುತ್ತಿರುವರು. (ದ್ರೋಣರಿಗೆ ಅಗ್ನಿಸಂಸ್ಕಾರಮಾಡಿದ ಬ್ರಹ್ಮಚಾರಿಗಳು ಯುದ್ಧಭೂಮಿಯಲ್ಲಿ ಬಿದ್ದಿರುವ ಬಿಲ್ಲು ಮುಂತಾದ ಯುದ್ಧಸಾಮಗ್ರಿಗಳಿಂದಲೇ ಚಿತೆಯನ್ನು ಕೆದರಿ ಅಗ್ನಿಯನ್ನು ಒಟ್ಟುಮಾಡುತ್ತಿರುವರು ಎಂದು ಭಾವ).
ತ ಏತೇ ದ್ರೋಣಮಾಧಾಯ ಗಾಯಂತಿ ಚ ರುದಂತಿ ಚ |
ಸಾಮಭಿಸ್ತ್ರಿಭಿರಂತಸ್ಥೈರನುಶಂಸಂತಿ ಚಾಪರೇ ॥44॥
ಆ ಈಯಾವ ಬ್ರಹ್ಮಚಾರಿಗಳು ದ್ರೋಣನನ್ನು ಚಿತೆಯಲ್ಲಿ ಇಟ್ಟು ರೋದಿಸುತ್ತಿರುವರು ಮತ್ತು ಕೊನೆಯಲ್ಲಿ ಹೇಳಬೇಕಾಗಿರುವ ಮೂರು ಸಾಮ ಮಂತ್ರಗಳನ್ನು ಗಾನ ಮಾಡುತ್ತಿರುವರು, ಮತ್ತೆ ಕೆಲವರು (ದ್ರೋಣರನ್ನು) ಸ್ತುತಿಸುತ್ತಿರುವರು.

ಅಗ್ನಾವಗ್ನಿಮಿವಾಧಾಯ ದ್ರೋಣಂ ಹುತ್ವಾ ಹುತಾಶನೇ |
ಗಚ್ಛಂತ್ಯಭಿಮುಖಾ ಗಂಗಾಂ ದ್ರೋಣಶಿಷ್ಯಾ ದ್ವಿಜಾತಯಃ ॥45॥
ಅಪಸವ್ಯಾಂ ಚಿತಾಂ ಕೃತ್ವಾ ಪುರಸ್ಕೃತ್ಯ ಕೃಪೀಂ ತಥಾ ॥46॥
ಅಗ್ನಿಯನ್ನೇ ಅಗ್ನಿಯಲ್ಲಿ ಸೇರಿಸಿದಂತೆ ಅಗ್ನಿಯಲ್ಲಿ ದ್ರೋಣನನ್ನು ಹೋಮಿಸಿ, ಚಿತೆಯನ್ನು ಅಪ್ರದಕ್ಷಿಣಾಕಾರವಾಗಿ ಸುತ್ತುಹಾಕಿ, ಕೃಪಿಯನ್ನು ಮುಂದೆ ಮಾಡಿಕೊಂಡು, ಬ್ರಾಹ್ಮಣಜಾತಿಯ ದ್ರೋಣಶಿಷ್ಯರು ಗಂಗೆಯ ಅಭಿಮುಖರಾಗಿ ಹೊರಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಶಲ್ಯಭೀಷ್ಮದ್ರೋಣದರ್ಶನಂ ನಾಮ ತ್ರಯೋವಿಂಶೋಽಧ್ಯಾಯಃ ॥
॥ ಸ್ತ್ರೀಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಗಾಂಧಾರಿಯು ಭೂರಿಶ್ರವಸ್ ಮುಂತಾದವರ ಸ್ತ್ರೀಯರಿಗಾಗಿ ಪರಿತಪಿಸುವುದು.
ಗಾಂಧಾರೀ
ಸೌಮದತ್ತಿಂ ಚ ಪಶ್ಯೈನಂ ಯುಯುಧಾನೇನ ಪಾತಿತಮ್ |
ವಿತುದ್ಯಮಾನಂ ಬಹುಭಿರ್ವಿಹಗೈರ್ಮಾಧವಾಂತಿಕೇ ॥1॥
ಗಾಂಧಾರಿ ಮಾಧವ! ಸಾತ್ಯಕಿಯು ಕೆಡಹಿರುವ ಸಮೀಪದಲ್ಲಿರುವ ಸೋಮದತ್ತಿಯನ್ನು (ಭೂರಿಶ್ರವಸನನ್ನು) ನೋಡು, ಅನೇಕ ಪಕ್ಷಿಗಳು (ಆತನ ದೇಹವನ್ನು) ಕುಕ್ಕುತ್ತಿವೆ.
ಪುತ್ರಶೋಕಾಭಿಸಂತಪ್ತಃ ಸೋಮದತ್ತೋ ಜನಾರ್ದನ |
ಯುಯುಧಾನಂ ಮಹೇಷ್ವಾಸಂ ಗರ್ಹಯನ್ನಿವ ದೃಶ್ಯತೇ ॥2॥
ಜನಾರ್ದನ! ಪುತ್ರಶೋಕದಿಂದ ಬಳಲಿದ ಸೋಮದತ್ತನು ದೊಡ್ಡಬಿಲ್ಲಾಳಾದ ಸಾತ್ಯಕಿಯನ್ನು ನಿಂದಿಸುತ್ತಿರುವನೋ ಎಂಬಂತೆ ಕಾಣುತ್ತಿರುವನು.
ಅಸೌ ತು ಭೂರಿಶ್ರವಸೋ ಮಾತಾ ಶೋಕಪರಿಪ್ಲುತಾ |
ಆಶ್ವಾಸಯತಿ ಭರ್ತಾರಂ ಸೋಮದತ್ತಮನಿಂದಿತಾ ॥3॥
ದೋಷರಹಿತಳಾದ ಶೋಕದಿಂದ ಬಳಲಿದ ಈ ಭೂರಿಶ್ರವಸನ ತಾಯಿಯು ಗಂಡನಾದ ಸೋಮದತ್ತನನ್ನು ಸಮಾಧಾನಪಡಿಸುತ್ತಿರುವಳು.
ದಿಷ್ಟ್ಯಾ ತ್ವಿಯಂ ಮಹಾರಾಜ ದಾರುಣಂ ಭರತಕ್ಷಯಮ್ |
ಕುರೂಣಾಂ ಕದನಂ ಘೋರಂ ಯುಗಾಂತಂ ನಾನುಪಶ್ಯಸಿ ॥4॥
ಮಹಾರಾಜನೇ! ಅದೃಷ್ಟವಶಾತ್ ಪ್ರಳಯಕ್ಕೆ ಸಮವಾದ ಈ ಕುರುಗಳ ಘೋರವಾದ ಕದನವನ್ನು ಭರತವಂಶೀಯರ ಸಾವನ್ನು ನೀನು ನೋಡುತ್ತಿಲ್ಲ.
ದಿಷ್ಟ್ಯಾ ಯೂಪಧ್ವಜಂ ವೀರಂ ಪುತ್ರಂ ಭೂರಿಸಹಸ್ರದಮ್ |
ಅನೇಕಕ್ರತುಯಜ್ವಾನಂ ನಿಹತಂ ನಾದ್ಯ ಪಶ್ಯಸಿ ॥5॥
ಅದೃಷ್ಟದಿಂದಲೇ ಯೂಪಧ್ವಜನಾದ (ಯಜ್ಞಸ್ತಂಭವನ್ನೇ ತನ್ನ ಧ್ವಜದಲ್ಲಿ ಕುರುಹನ್ನಾಗಿ ಮಾಡಿಕೊಂಡಿದ್ದ.) ಅನೇಕ ಯಜ್ಞಗಳನ್ನು ಆಚರಿಸಿದ್ದ ವೀರನಾದ ಮಗನಾದ ಭೂರಿಶ್ರವಸನನ್ನು ಈ ಸಂದರ್ಭದಲ್ಲಿ ಕಾಣುತ್ತಿಲ್ಲ.
ದಿಷ್ಟ್ಯಾ ಸ್ನುಷಾಣಾಮಾಕ್ರಂದೇ ಘೋರಂ ವಿಲಪಿತಂ ಬಹು |
ನ ಶೃಣೋಷಿ ಮಹಾರಾಜ ಸಾರಸೀನಾಮಿವಾರ್ಣವೇ ॥6॥
ಮಹಾರಾಜ! ಸಮುದ್ರತೀರದಲ್ಲಿ ಸಾರಂಗಪಕ್ಷಿಗಳು ಕೂಗುವಂತೆ ಬಹುವಾಗಿ ರೋದಿಸುತ್ತಿರುವ ನಿನ್ನ ಸೊಸೆಯರ ಘೋರವಾದ ಕೂಗನ್ನು ನೀನು ಕೇಳುತ್ತಿಲ್ಲ.
ಏಕವಸ್ತ್ರಾನುಸಂವೀತಾಃ ಪ್ರಕೀರ್ಣಾಸಿತಮೂರ್ಧಜಾಃ |
ಸ್ನುಷಾಸ್ತೇ ಪರಿಧಾವಂತಿ ಹತಾಪತ್ಯಾ ಹತೇಶ್ವರಾಃ ॥7॥
ಗಂಡಂದಿರನ್ನು ಕಳೆದುಕೊಂಡಂತಹ ಸ್ವಾಮಿರಹಿತರಾದ (ಅನಾಥರಾದ) ನಿನ್ನ ಸೊಸೆಯರು ಒಂದೇ ವಸ್ತ್ರವನ್ನು ತೊಟ್ಟು ಕರಿದಾದ ತಲೆಯ ಕೂದಲನ್ನು ಹರಡಿಕೊಂಡು ಸುತ್ತಲೂ ಅಲೆದಾಡುತ್ತಿದ್ದಾರೆ.
ಶ್ವಾಪದೈರ್ಭಕ್ಷ್ಯಮಾಣಂ ತ್ವಮಹೋ ದಿಷ್ಟ್ಯಾ ನ ಪಶ್ಯಸಿ ॥8॥
(ನಿನ್ನ ಮಗನನ್ನು) ನಾಯಿಗಳು ತಿನ್ನುತ್ತಿರುವದನ್ನು ನೀನು ಅದೃಷ್ಟವಶಾತ್ ನೋಡಲಾರಿ.
ಛಿನ್ನಬಾಹುಂ ನರವ್ಯಾಘ್ರಮರ್ಜುನೇನ ನಿಪಾತಿತಮ್ |
ಶಲಂ ವಿನಿಹತಂ ಸಂಖ್ಯೇ ಭೂರಿಶ್ರವಸಮೇವ ಚ ॥9॥
ಸ್ನುಷಾಶ್ಚ ವಿಧವಾಃ ಸರ್ವಾ ದಿಷ್ಟ್ಯಾ ನಾದ್ಯೇಹ ಪಶ್ಯಸಿ ॥10॥
ಅರ್ಜುನನಿಂದ ಛಿನ್ನಬಾಹುವಾದ ಮನುಜಶ್ರೇಷ್ಠನಾದ (ರಣರಂಗದಲ್ಲಿ) ಬಿದ್ದಿರುವ ಭೂರಿಶ್ರವಸ್‌ನನ್ನು, ಯುದ್ಧದಲ್ಲಿ ಮೃತನಾದ ಶಲನನ್ನು ವಿಧವೆಯರಾದ ಎಲ್ಲ ಸೊಸೆಯರನ್ನು ಅದೃಷ್ಟದಿಂದ ಈಗ ನೋಡಲಾರಿ.
ದಿಷ್ಟ್ಯಾ ತತ್ ಕಾಂಚನಂ ಛತ್ರಂ ಯೂಪಕೇತೋರ್ಮಹಾತ್ಮನಃ |
ವಿನಿಕೀರ್ಣಂ ರಥೋಪಸ್ಥೇ ಸೌಮದತ್ತೇರ್ನ ಪಶ್ಯಸಿ ॥11॥

ಯೂಪಕೇತುವಾದ ಮಹಾತ್ಮನಾದ ಸೋಮದತ್ತಿಯ ಆ ಚಿನ್ನದ ಛತ್ರವು ರಥದ ಸಮೀಪದಲ್ಲಿಯೇ ತುಂಡಾಗಿ ಬಿದ್ದಿರುವುದನ್ನು ಅದಷ್ಟವಶಾತ್ ಕಾಣಲಾರಿ.
ಅಮೂಸ್ತು ಭೂರಿಶ್ರವಸೋ ಭಾರ್ಯಾಃ ಸಾತ್ಯಕಿನಾ ಹತಮ್ |
ಪರಿವಾರ್ಯಾನುಶೋಚಂತಿ ಭರ್ತಾರಮಸಿತೇಕ್ಷಣಾಃ ॥12॥
ಸಾತ್ಯಕಿಯಿಂದ ಸಂಹೃತನಾದ (ತಮ್ಮ) ಗಂಡನಾದ ಭೂರಿಶ್ರವಸನನ್ನು, ಕಪ್ಪುನಯನಗಳನ್ನು ಹೊಂದಿರುವ (ಆತನ) ಈ ಮಹಿಳೆಯರು ಸುತ್ತುವರೆದು ದುಃಖಿಸುತ್ತಿರುವರು.
ಏತಾ ವಿಲಪ್ಯ ಬಹುಲಂ ಭರ್ತುಃ ಶೋಕೇನ ಕರ್ಶಿತಾಃ |
ಪತಂತ್ಯಭಿಮುಖಾ ಭೂಮೌ ಕೃಪಣಂ ಬತ ಕೇಶವ ॥13॥
ಕೇಶವ! ಗಂಡನ ದುಃಖದಿಂದ ತಪ್ತರಾಗಿ ತುಂಬಾ ರೋದಿಸಿದವರಾಗಿ ದೀನರಾದ ಇವರು (ತಮ್ಮ) ಗಂಡನ ಅಭಿಮುಖರಾಗಿ ಭೂಮಿಯಲ್ಲಿ ಬೀಳುತ್ತಿರುವರು.
ಬೀಭತ್ಸುರತಿಬೀಭತ್ಸಂ ಕರ್ಮೇದಮಕರೋತ್ ಕಥಮ್ |
ಪ್ರಮತ್ತಸ್ಯ ಯದಚ್ಛೈತ್ಸೀತ್ ಬಾಹುಂ ಶೂರಸ್ಯ ಯಜ್ವನಃ ॥14॥
ಯಜ್ಞಗಳನ್ನು ಆಚರಿಸಿದ ಶೂರನಾದ (ಅರ್ಜುನನನ್ನು) ಲಕ್ಷಿಸದೇ ಇದ್ದ ಅವನ (ನಿನ್ನ ಪುತ್ರನ) ಬಾಹುವನ್ನು ಕತ್ತರಿಸಿದನು, ಅಂತಹ ಅತಿ ಹೇಸಿಗೆಯ ಕರ್ಮವನ್ನು ಅರ್ಜುನನು ಹೇಗೆ ಮಾಡಿದನು?
ತತಃ ಪಾಪತರಂ ಕರ್ಮ ಕೃತವಾನಿಹ ಸಾತ್ಯಕಿಃ |
ಯಸ್ಯ ಪ್ರಾಯೋಪವಿಷ್ಟಸ್ಯ ಪ್ರಾಹಾರ್ಷೀತ್ ಸಂಶಿತಾತ್ಮನಃ ॥15॥
ಈ ಯುದ್ಧದಲ್ಲಿ ಸಾತ್ಯಕಿಯು ಪ್ರಾಯೋಪವಿಷ್ಟನಾಗಿದ್ದ ಆತ್ಮನಿಯಮನದಲ್ಲಿದ್ದ ಆತನನ್ನು ಪ್ರಹರಿಸಿದನು, ಆತನು ಅದಕ್ಕಿಂತಲೂ ಪಾಪಕರವಾದ ಕರ್ಮವನ್ನು ಮಾಡಿದನು.
ಏಕೋ ದ್ವಾಭ್ಯಾಂ ಹತಃ ಶೇಷೇ ತ್ವಮಧರ್ಮೇಣ ಧಾರ್ಮಿಕ |
ಇತಿ ಯೂಪಧ್ವಜಸ್ಯೈತಾ ಭಾರ್ಯಾಃ ಕ್ರೋಶಂತಿ ಮಾಧವ ॥16॥
ಮಾಧವ! ಯೂಪಧ್ವಜನ ಹೆಂಡಂದಿರು `ಧಾರ್ಮಿಕನೆ! ನೀನು ಒಬ್ಬನೆ ಇಬ್ಬರಿಂದ ಅನ್ಯಾಯದಿಂದ ಸಂಹೃತನಾಗಿ ಮಲಗಿರುವಿ' ಎಂದು ಅರಚುತ್ತಿರುವರು.
ಭಾರ್ಯಾ ಯೂಪಧ್ವಜಸ್ಯೈಷಾ ಕರಸಮ್ಮಿತಮಧ್ಯಮಾ |
ಕೃತ್ವೋತ್ಸಂಗೇ ಭುಜಂ ಭರ್ತುಃ ಕೃಪಣಂ ಪರ್ಯದೇವಯತ್ ॥17॥
ಕೈಯಂತೆ ತೆಳುವಾದ ಕಟಿಯನ್ನು ಹೊಂದಿರುವ, ಯೂಪಧ್ವಜನ ಪತ್ನಿಯಾದ ಈಕೆಯು ಗಂಡನ (ಕತ್ತರಿಸಿ ಕೆಳಬಿದ್ದ) ಕರವನ್ನು ತೊಡೆಯ ಮೇಲೆ ಇಟ್ಟುಕೊಂಡು ದೀನಳಾಗಿ ರೋದಿಸುತ್ತಿರುವಳು.
ಸೌಮದತ್ತಿಪ್ರಿಯಾ
ಅಯಂ ಸ ರಶನೋತ್ಕರ್ಷೀ ಪೀನಸ್ತನವಿಮರ್ದನಃ |
ನಾಭ್ಯೂರುಜಘನಸ್ಪರ್ಶೀ ನೀವೀವಿಸ್ರಂಸನಃ ಕರಃ ॥18॥
ಸೋಮದತ್ತನ ಪತ್ನಿ ಈ ಕರವು (ತನ್ನ ಪತ್ನಿಯರೊಡನೆ ಸರಸದಲ್ಲಿರುವಾಗ) ಒಡ್ಯಾಣವನ್ನು ಕಳಚುತ್ತಿತ್ತು, ತುಂಬಿದ ಎದೆಗಳ ಮರ್ದನ ಮಾಡುತ್ತಿತ್ತು, ನಾಭಿ ತೊಡೆ ಸೊಂಟಗಳ ಸ್ಪರ್ಶವನ್ನು ಮಾಡುತ್ತಿತ್ತು, ಕೆಳ ಉಡುಪನ್ನು ಬಿಚ್ಚುತ್ತಿತ್ತು.
ಅಯಂ ಸ ಹಂತಾ ಶತ್ರೂಣಾಂ ಮಿತ್ರಾಣಾಮಭಯಂಕರಃ |
ಪ್ರದಾತಾ ಗೋಸಹಸ್ರಾಣಾಂ ಕ್ಷತ್ರಿಯಾಂತಕರಃ ಕರಃ ॥19॥
ಇದು ಶತ್ರುಗಳನ್ನು ಸಂಹರಿಸಿದ ಕರ, ಮಿತ್ರರಿಗೆ ಆಸರೆಯಾದ ಕರ, ಸಾವಿರಾರು ಗೋಗಳನ್ನು ನೀಡಿದ ಕರ, ಕ್ಷತ್ರಿಯರಿಗೆ ಆತಂಕವಾದ ಕರ.
ವಾಸುದೇವಸ್ಯ ಸಾನ್ನಿಧ್ಯೇ ಪಾರ್ಥೇನಾಕ್ಲಿಷ್ಟಕರ್ಮಣಾ |
ಯುಧ್ಯತಃ ಸಮರೇಽನ್ಯೇನ ಪ್ರಮತ್ತಸ್ಯ ನಿಪಾತಿತಃ ॥20॥
ಶ್ರಮಸಾಧ್ಯಕರ್ಮಗಳನ್ನು ಮಾಡುವ ಪೃಥೆಯ ಪುತ್ರನು (ಅರ್ಜುನನು), ಬೇರೊಬ್ಬರೊಡನೆ ಯುದ್ಧದಲ್ಲಿ ರತನಾಗಿದ್ದ (ಅರ್ಜುನನ ವಿಷಯದಲ್ಲಿ) ಲಕ್ಷ್ಯವಿರದವನನ್ನು (ನಿನ್ನನ್ನು) ವಾಸುದೇವನ ಸಮಕ್ಷಮದಲ್ಲಿ ಕೆಡಹಿರುವನು. (ಸಾತ್ಯಕಿಯು ಮೂರ್ಛಿತನಾಗಿದ್ದನು ಆಗ ಭೂರಿಶ್ರವಸನು ಆತನ ಶಿರವನ್ನು ಕತ್ತರಿಸಲು ಹವಣಿಸುತ್ತಿದ್ದನು, ಇದನ್ನು ಗಮನಿಸಿದ ಶ್ರೀಕೃಷ್ಣನು ಅರ್ಜುನನಿಗೆ ಸಾತ್ಯಕಿಯನ್ನು ಸಂರಕ್ಷಿಸಲು ಸೂಚಿಸಿದನು, ಆಗ ದೂರದಲ್ಲಿದ್ದ ಅರ್ಜುನನು ಭೂರಿಶ್ರವಸನ ಕೈಯನ್ನು ತನ್ನ ಬಾಣಗಳಿಂದ ಕತ್ತರಿಸಿದ್ದನು ಈ ಘಟನೆಯನ್ನು ನೆನಸಿಕೊಳ್ಳುತ್ತಿರುವರು ಎಂದು ಭಾವ.)
ಕಿಂ ನು ವಕ್ಷ್ಯತಿ ಸಂಸತ್ಸು ಕಥಾಸು ಚ ಜನಾರ್ದನಃ |
ಅರ್ಜುನಸ್ಯ ತು ತತ್ಕರ್ಮ ಸ್ವಯಂ ಚಾಪಿ ಕಿರೀಟವಾನ್ ॥21॥
ಅರ್ಜುನನ ಆ ಕೆಲಸದ ಬಗ್ಗೆ ಜನಾರ್ದನನು ಸಭೆಗಳಲ್ಲಿನ ಸಂವಾದದಲ್ಲಿ ಏನೆಂದು ಹೇಳುತ್ತಾನೆ? ಸ್ವತಃ ಕಿರೀಟಧಾರಿಯಾಗಿ (ಧರ್ಮಶಾಸಕನಾಗಿ) ಏನೆಂದು ಹೇಳಿಕೊಳ್ಳುವನು? (ತಮ್ಮ ತಪ್ಪನ್ನು ಹೇಗೆ ಸಮರ್ಥಿಸಿಕೊಳ್ಳುವರು? ಎಂದು ಭಾವ.)
ಗಾಂಧಾರೀ
ಇತ್ಯೇವಂ ಗರ್ಹಯಿತ್ವೈಷಾ ತೂಷ್ಣೀಮಾಸ್ತೇ ವರಾಂಗನಾ |
ತಾಮೇತಾಮನುಶೋಚಂತಿ ಸಪತ್ನ್ಯಃ ಸ್ವಾಮಿನಃ ಸ್ನುಷಾಃ ॥22॥
ಗಾಂಧಾರಿ ಈ ರೀತಿಯಾಗಿ ನಿಂದಿಸಿ ಆ ಶ್ರೇಷ್ಠಮಹಿಳೆಯು ಸುಮ್ಮನಾದಳು, ಆಕೆಯ ಸವತಿಯರು ಆಕೆಯ ಮತ್ತು ಆಕೆಯ ಸೊಸೆಯರ

ವಿಷಯದಲ್ಲಿ ದುಃಖಿಸುತ್ತಿರುವರು.
ಗಾಂಧಾರರಾಜಃ ಶಕುನಿರ್ಬಲವಾನ್ ಸತ್ಯವಿಕ್ರಮಃ |
ನಿಹತಃ ಸಹದೇವೇನ ಭಾಗಿನೇಯೇನ ಮಾತುಲಃ ॥23॥
ನಿಜಪರಾಕ್ರಮಿಯಾದ ಗಾಂಧಾರದ ರಾಜನಾದ ಬಲಿಷ್ಠನಾದ ಸೋದರ ಮಾವನಾದ ಶಕುನಿಯು ತಂಗಿಯ ಮಗನಾದ ಸಹದೇವನಿಂದ ಮೃತನಾದನು.
ಯಃ ಪುರಾ ಹೇಮದಂಡಾಭ್ಯಾಂ ವ್ಯಜನಾಭ್ಯಾಂ ಚ ವೀಜ್ಯತೇ |
ಸ ಏಷ ಪಕ್ಷಿಭಿಃ ಪಕ್ಷೈಃ ಶಯಾನ ಉಪವೀಜ್ಯತೇ ॥24॥
ಯಾರು ಈ ಮೊದಲು ಚಿನ್ನದ ಹಿಡಿಗೋಲನ್ನು ಹೊಂದಿರುವ ವ್ಯಜನಗಳಿಂದ ಬೀಸಿಸಿಗೊಳ್ಳುತ್ತಿದ್ದನೋ ಆ ಈತನು ಇಲ್ಲಿ ಬಿದ್ದು ಪಕ್ಷಿಗಳ ರೆಕ್ಕೆಗಳಿಂದ ಬೀಸಿಸಿ- ಕೊಳ್ಳುತ್ತಿರುವನು.
ಯಶ್ಚ ರೂಪಾಣಿ ಕುರುತೇ ಶತಶೋಽಥ ಸಹಸ್ರಶಃ |
ತಸ್ಯ ಮಾಯಾವಿನೋ ಮಾಯಾ ದಗ್ಧಾಃ ಪಾಂಡವತೇಜಸಾ ॥25॥
ಯಾವನು ನೂರೊ ಸಾವಿರವೋ ಬಣ್ಣದ ಬದುಕನ್ನು ಕಟ್ಟುತ್ತಿದ್ದನೋ, ಆ ಕಪಟಿಯ ಬಣ್ಣವೆಲ್ಲ ಪಾಂಡವರ ತೇಜಸ್ಸಿನಿಂದ ಬೂದಿಯಾಯಿತು.
ಮಾಯಯಾ ನಿಕೃತಿಪ್ರಜ್ಞೋ ಯೋ ಜಿಗಾಯ ಯುಧಿಷ್ಠಿರಮ್ |
ಸಭಾಯಾಂ ವಿಪುಲಂ ರಾಜ್ಯಂ ಸ ಕಥಂ ಜೀವಿತಂ ಜಹೌ ॥26॥
ಯಾವನು ಕಪಟತನದಲ್ಲಿ ನಿಪುಣನೋ, ಕಪಟದಿಂದ ಸಭೆಯಲ್ಲಿ ಯುಧಿಷ್ಠಿರನನ್ನು ವಿಪುಲರಾಜ್ಯವನ್ನು ಗೆದ್ದನೋ, ಆತನು ಜೀವಿತವನ್ನು ಹೇಗೆ ತ್ಯಜಿಸಿದನು?
ಶಕುಂತಾಃ ಶಕುನಿಂ ಕೃಷ್ಣ ಸಮಂತಾತ್ ಪರ್ಯುಪಾಸತೇ |
ಕಿತವಂ ಮಮ ಪುತ್ರಾಣಾಂ ವಿನಾಶಾಯೋಪಶಿಕ್ಷಿತಮ್ ॥27॥
ಕೃಷ್ಣ! ನನ್ನ ಮಕ್ಕಳ ವಿನಾಶಕ್ಕಾಗಿ ಕಪಟವನ್ನು ಬೋಧಿಸಿದ ಶಕುನಿಯನ್ನು ಸುತ್ತಲೂ ಪಕ್ಷಿಗಳು ಸುತ್ತುವರೆದಿವೆ.
ಏತೇನೈತನ್ಮಹದ್ ವೈರಮಾಹಿತಂ ಪಾಂಡವೈಃ ಸಹ |
ವಧಾಯ ಮಮ ಪುತ್ರಾಣಾಮಾತ್ಮನಃ ಸಗಣಸ್ಯ ಚ ॥28॥
ತನ್ನ (ಶಕುನಿಯ) ಪರಿವಾರದವರ ನನ್ನ ಮಕ್ಕಳ ನಾಶಕ್ಕಾಗಿ, ಈತನೇ ಪಾಂಡವರೊಡನೆ ಭಾರೀ ದ್ವೇಷವನ್ನು ಹುಟ್ಟುಹಾಕಿದನು.
ಯಥೈವ ಮಮ ಪುತ್ರಾಣಾಂ ಲೋಕಾಃ ಶಸ್ತ್ರಜಿತಾಃ ಪ್ರಭೋ |
ಏವಮಸ್ಯಾಪಿ ದುರ್ಬುದ್ಧೇರ್ಲೋಕಾಃ ಶಸ್ತ್ರೇಣ ನಿರ್ಜಿತಾಃ ॥29॥
ಸ್ವಾಮಿಯೆ! ನನ್ನ ಮಕ್ಕಳಿಗೆ ಹೇಗೆ ಶಸ್ತ್ರದಿಂದ ಸಂಪಾದಿತವಾದ ಲೋಕಗಳು ಪ್ರಾಪ್ತವಾಗುವವೋ, ಹಾಗೆಯೇ ಈ ದುರ್ಬುದ್ಧಿಯವನಿಗೂ ಶಸ್ತ್ರದಿಂದ ಪ್ರಾಪ್ತವಾಗುವ ಲೋಕಗಳು ಪ್ರಾಪ್ತವಾಗುವವು.
ಕಥಂ ಚ ನಾಯಂ ತತ್ರಾಪಿ ಪುತ್ರಾನ್ ಮೇ ಭ್ರಾತೃಭಿಃ ಸಹ |
ವಿರೋಧಯೇದ್ ಋಜುಪ್ರಜ್ಞಾನ್ ಅನೃಜುರ್ಮಧುಸೂದನ ॥30॥
ಮಧುಸೂದನ! ನೇರನಡೆನುಡಿಗಳಿರದ ಈತನು (ಕಪಟಿಯು) ನೇರನಡೆನುಡಿಗಳಿರುವ ಸಹೋದರರಿಂದ ಒಡಗೂಡಿರುವ ನನ್ನ ಮಕ್ಕಳಲ್ಲಿ ಅಲ್ಲಿಯೂ ಸಹ ವಿರೋಧವನ್ನು ಹುಟ್ಟುಹಾಕಬಹುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಸೋಮದತ್ತಶಕುನಿದರ್ಶನಂ ನಾಮ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 28ನೇ ಅಧ್ಯಾಯ
ತೇನ ದೃಷ್ಟ್ವಾ ಪ್ರೇತದೇಹಾನ್ ಸರ್ವಾಂಸ್ತತ್ರ ಸಮಾಕುಲಾ |
ಶಶಾಪ ಯಾದವೇಶಾನಂ ತ್ವಯಾಽಸ್ಮತ್ಕುಲನಾಶನಮ್ ॥
ಯತ್ಕೃತಂ ತತ್ ತವ ಕುಲಂ ಗಚ್ಛತ್ವನ್ಯೋನ್ಯತಃ ಕ್ಷಯಮ್ |
ಇತ್ಯುಕ್ತೋ ಭಗವಾನ್ ಕೃಷ್ಣಃ ಸ್ವಚಿಕೀರ್ಷಿತಮೇವ ತತ್ ॥
ಅಸ್ತ್ವೇವಮಿತ್ಯಾಹ ವಿಭುರೀಶ್ವರೋಽಪ್ಯನ್ಯಥಾ ಕೃತೌ |
ತೇನ ತಸ್ಯಾಸ್ತಪೋ ನಷ್ಟಂ ಹೀನಾ ಸಾಽತೋ ಹಿ ಭರ್ತೃತಃ |
ನಾಶಯೇದ್ಧಿ ಸದಾ ವಿಷ್ಣುಃ ಸ್ವಯೋಗ್ಯಾದಧಿಕಾನ್ ಗುಣಾನ್ ॥
ಗಾಂಧಾರಿ ದಿವ್ಯದೃಷ್ಟಿಯಿಂದ ರಣಭೂಮಿಯಲ್ಲಿ ಬಿದ್ದಿದ್ದ ಎಲ್ಲ ಶವಗಳನ್ನೂ ಕಂಡು ಶೋಕಾರ್ತಳಾಗಿ ಕೃಷ್ಣನನ್ನು ಶಪಿಸಿದಳು- `ನೀನು ನಮ್ಮ ಕುಲವನ್ನು ಪರಸ್ಪರ ಕಲಹದಿಂದ ನಾಶ ಮಾಡಿದೆಯಾದ್ದರಿಂದ ನಿನ್ನ ಕುಲವೂ ಪರಸ್ಪರ ಕಲಹದಿಂದ ನಾಶ ಹೊಂದಲಿ' ಎಂದು. ಗಾಂಧಾರಿ ಹೀಗೆ ಶಪಿಸಿದಾಗ ಆ ಶಾಪವನ್ನು ಹುಸಿ ಮಾಡಲು ಶಕ್ತನಾಗಿದ್ದರೂ ಭಗವಾನ್ ಶ್ರೀಕೃಷ್ಣ `ನನ್ನ ಕುಲನಾಶವನ್ನು ನಾನೇ ಮಾಡಬೇಕೆಂದಿದ್ದೆ. ಅದರಿಂದ ಹಾಗೇ ಆಗಲಿ' ಎಂದನು. ಹೀಗೆ ಶಾಪ ಕೊಟ್ಟಿದ್ದರಿಂದ ಗಾಂಧಾರಿಯ ತಪೋಬಲ ನಷ್ಟವಾಯಿತು. ಅದರಿಂದ ತಪೋಬಲದಲ್ಲಿ ಅವಳು ತನ್ನ ಪತಿಗಿಂತ ಕಡಿಮೆಯೂ ಆದಳು. ಯಾರೇ ಆಗಲಿ, ತಮ್ಮ ಯೋಗ್ಯತೆಗೆ ಮೀರಿದ ಪುಣ್ಯ ಮಾಡಿದರೆ ವಿಷ್ಣು ಸ್ವಯಂ ಅದನ್ನು ನಾಶಮಾಡುತ್ತಾನೆ ಎನ್ನುವುದು ಪ್ರಸಿದ್ಧವಿದೆ.
* * * * *

ಇಪ್ಪತ್ತೈದನೆಯ ಅಧ್ಯಾಯ
ಗಾಂಧಾರಿಯು ಕುರು-ಪಾಂಡವರ ಸಂಕ್ಷಯಕ್ಕೆ ಕೃಷ್ಣನೇ ಕಾರಣ,
ಆದ್ದರಿಂದ ಕೃಷ್ಣನ ಎಲ್ಲ ಬಂಧುಗಳು ಪರಸ್ಪರ ಕಲಹದಿಂದ
ನಾಶವಾಗಲಿ ಎಂದು ಶಪಿಸಿದಳು.
ಗಾಂಧಾರೀ
ಕಾಂಭೋಜಂ ಪಶ್ಯ ದುರ್ಧರ್ಷಂ ಕಾಂಭೋಜಾಸ್ತರಣೋಚಿತಮ್ ।
ಶಯಾನಮೃಷಭಸ್ಕಂಧಂ ಹತಂ ಪಾಂಸುಷು ಮಾಧವ ॥1॥
ಗಾಂಧಾರಿ ಮಾಧವ! ಕಾಂಭೋಜದೇಶದಲ್ಲಿ ತಯಾರಾಗುವ ಶಯನದಲ್ಲಿ ಮಲಗಲು ಯೋಗ್ಯನಾದ ಎತ್ತಿನ ಹೆಗಲಿನಂತೆ ಎತ್ತರದ ಹೆಗಲನ್ನು ಹೊಂದಿರುವ ಮೃತನಾಗಿ ಮಣ್ಣಿನಲ್ಲಿ ಮಲಗಿರುವ ಶತ್ರುಗಳಿಂದ ಧರ್ಷಣಕ್ಕೆ ಒಳಗಾಗದ ಕಾಂಭೋಜರಾಜನನ್ನು ನೋಡು.
ಅಸ್ಯ ಕ್ಷತಜಸಂದಿಗ್ಧೌ ಬಾಹೂ ಚಂದನರೂಷಿತೌ ।
ಅವೇಕ್ಷ್ಯ ಕೃಪಣಂ ಭಾರ್ಯಾ ವಿಲಪತ್ಯತಿದುಃಖಿತಾ ॥2॥
ಶ್ರೀಗಂಧದಿಂದ ಪೂಸಿತವಾಗಿದ್ದ (ಈಗ) ಘಾಸಿಯಿಂದ ರಕ್ತದಿಂದ ಒದ್ದೆಯಾದ ಬಾಹುಗಳನ್ನು ಕಂಡು ಆತನ ಹೆಂಡತಿಯು ಅತ್ಯಂತ ದುಃಖಿತಳಾಗಿ ರೋದಿಸುತ್ತಿರುವಳು.
ಕಾಂಭೋಜಭಾರ್ಯಾ
ಇಮೌ ತೌ ಪರಿಘಪ್ರಖ್ಯೌ ಬಾಹೂ ಶುಭತಲಾಂಗುಲೀ ।
ಯಯೋರ್ವಿವರಮಾಪನ್ನಾಂ ಮಾಂ ರತಿರ್ನಾ ಪುರಾಽಜಹತ್ ॥3॥
ಕಾಂಭೋಜನ ಪತ್ನಿ ಪರಿಘಯುದ್ಧಕ್ಕೆ ಸಮವಾದ ಸುಂದರ ಬೆರಳುಗಳಿಂದ ಯುಕ್ತವಾದ ಆ ಈ ಬಾಹುಗಳು, ಹಿಂದೆ ಅವುಗಳ ಮಧ್ಯದಲ್ಲಿ ಸೇರಿದ ನನ್ನನ್ನು ರತಿಸೌಖ್ಯವು ಬಿಟ್ಟುಹೋಗುತ್ತಿರಲಿಲ್ಲ. (`ನಿನ್ನ ಆಲಿಂಗನದಿಂದ ರತಿಸೌಖ್ಯವನ್ನು ಹೊಂದಿದ್ದೆ' ಎಂದು ತನ್ನ ಹಿಂದಿನ ನೆನಪನ್ನು ಮೆಲುಕು ಹಾಕುತ್ತಿರುವಳು.)
ಗಾಂಧಾರೀ
ಕಾಂ ಗತಿಂ ತು ಗಮಿಷ್ಯಾಮಿ ತ್ವಯಾ ಹೀನಾ ನರೇಶ್ವರ ।
ದೂರಬಂಧುರನಾಥಾಽದ್ಯ ಹ್ಯತೀವ ಮಧುರಸ್ವರಾ ॥4॥
ಗಾಂಧಾರಿ ಅತ್ಯಂತ ಕೋಮಲಧ್ವನಿಯ ಆಕೆಯು `ಮನುಜರ ಒಡೆಯನೆ! ನಿನ್ನನ್ನು ಕಳೆದುಕೊಂಡಿರುವ ಈಗ ಬಂಧುಗಳಿಂದ ದೂರಳಾದ ಅನಾಥಳಾದ ನಾನು ಯಾವ ಗತಿಯನ್ನು ಹೊಂದುವೆನು?' (ಎಂದು ರೋದಿಸುತ್ತಿರುವಳು.)
ಆತಪೇ ಕ್ಲಾಮ್ಯಮಾನಾನಾಂ ವಿವಿಧಾನಾಮಿವ ಸ್ರಜಾಮ್ ।
ಕ್ಲಾಂತಾನಾಮಪಿ ನಾರೀಣಾಂ ಜಹಾತಿ ಶ್ರೀರ್ನ ವೈ ತನುಮ್ ॥5॥
ಬಿಸಿಲಿನಲ್ಲಿ ಬಾಡುವ ವಿವಿಧಪುಷ್ಪಮಾಲೆಯಂತೆ ಬಾಡಿರುವರು ಈ ಮಹಿಳೆಯರು, ಆದರೆ ಇವರ ದೇಹದ ಕಾಂತಿಯು ಕುಂದಿಲ್ಲ.
ಶಯಾನಮಭಿತಃ ಶೂರಂ ಕಲಿಂಗಂ ಮಧುಸೂದನ ।
ಪಶ್ಯ ದೀಪ್ತಾಂಗದಯುಗಪ್ರತಿನದ್ಧಂ ಮಹಾಭುಜಮ್ ॥6॥
ಮಧುಸೂದನ! ಶೂರನಾದ ಮುರಿದುಹೋದ ಪ್ರಕಾಶಮಾನವಾದ ಭುಜಕೀರ್ತಿಯನ್ನು ಹೊಂದಿರುವ ಮಹಾಪುರುಷನಾದ ಕಲಿಂಗನು ಸನಿಹದಲ್ಲಿ ಮಲಗಿರುವುದನ್ನು ನೋಡು.
ಮಾಗಧಾನಾಮಧಿಪತಿಂ ಜಯತ್ಸೇನಂ ಜನಾರ್ದನ ।
ಪರಿವಾರ್ಯ ಪ್ರರುದಿತಾ ಮಾಗಧ್ಯಃ ಪಶ್ಯ ಯೋಷಿತಃ ॥7॥
ಜನಾರ್ದನ! ಮಗಧದ ಅಧಿಪತಿ ಜಯತ್ಸೇನನನ್ನು ಸುತ್ತುವರೆದು ಮಗಧರಾಜನ ಪತ್ನಿಯರು ರೋದಿಸುತ್ತಿರುವುದನ್ನು ನೋಡು.
ಹರಿಣ್ಯಾಯತನೇತ್ರಾಣಾಂ ಸುಸ್ವರಾಣಾಂ ಜನಾರ್ದನ ।
ಮಮ ಶ್ರುತಿಹರೋ ನಾದೋ ಮನೋ ಮೋಹಯತೀವ ಮೇ ॥8॥
ಜನಾರ್ದನ! ಜಿಂಕೆಯ ಕಣ್ಣುಗಳಂತೆ ಅಗಲವಾದ ಕಣ್ಣುಗಳನ್ನು ಹೊಂದಿರುವ ಮಧುರಸ್ವರವನ್ನು ಹೊಂದಿರುವ ನಾರಿಯರ, ಕಿವಿಗಳನ್ನು ಸೆಳೆಯುವ (ಆ) ನಾದವು ನನ್ನ ಮನವನ್ನು ಮೋಹಿಸುತ್ತದೆ.
ಪ್ರಕೀರ್ಣಸರ್ವಾಭರಣಾ ರುದಂತ್ಯಃ ಶೋಕಕರ್ಶಿತಾಃ ।
ಸ್ವಾಸ್ತೀರ್ಣಶಯನೋಪೇತಾ ಮಾಗಧ್ಯಃ ಶೇರತೇ ಭುವಿ ॥9॥
ಆಭರಣಗಳೆಲ್ಲವೂ ವ್ಯತ್ಯಸ್ತವಾಗಿರುವ ದುಃಖದಿಂದ ಬಳಲಿರುವ ಉತ್ತಮವಾದ ಹಾಸಿನಲ್ಲಿ ಆಸೀನರಾಗಲು ಯೋಗ್ಯರಾದ ಮಗಧರಾಜನ ಪತ್ನಿಯರು ನೆಲದಲ್ಲಿ ಕುಳಿತಿರುವರು.
ಕೋಸಲಾನಾಮಧಿಪತಿಂ ರಾಜಪುತ್ರಂ ಬೃಹದ್ಬಲಮ್ ।
ಭರ್ತಾರಂ ಪರಿವಾರ್ಯೈತಾಃ ಪೃಥಕ್ ಪ್ರರುದಿತಾಃ ಸ್ತ್ರಿಯಃ ॥10॥
ಅಸ್ಯ ಗಾತ್ರಗತಾನ್ ಬಾಣಾನ್ ಕಾರ್ಷ್ಣಿಬಾಹುಬಲೇರಿತಾನ್ ।
ಉದ್ಧರಂತ್ಯಸುಖಾವಿಷ್ಟಾ ಮೂರ್ಚ್ಛಮಾನಾಃ ಪುನಃ ಪುನಃ ॥11॥
ಕೋಸಲದ ಅಧಿಪತಿಯಾದ ರಾಜಕುವರನಾದ (ತಮ್ಮ) ಗಂಡನಾದ ಬೃಹದ್ಬಲನನ್ನು ಸುತ್ತುವರೆದು ರೋದಿಸುತ್ತಿರುವ ಸ್ತ್ರೀಯರು ದುಃಖದಿಂದ ಕುಳಿತುಕೊಂಡು, ಮತ್ತೆ ಮತ್ತೆ ಮೂರ್ಛಿತರಾಗುತ್ತಾ ಈತನ ದೇಹದಲ್ಲಿ ನೆಟ್ಟಿರುವ ಕೃಷ್ಣನ ಸೋದರಳಿಯನ ಬಾಹುಬಲದಿಂದ ಪ್ರೇರಿತವಾದ ಬಾಣಗಳನ್ನು ಕಿತ್ತೊಗೆಯುತ್ತಿರುವರು.

ಆಸಾಂ ಸರ್ವಾನವದ್ಯಾನಾಮಾತಪೇನ ಪರಿಕ್ಲಮಾತ್ |
ಪ್ರಮ್ಲಾನನಲಿನಾಭಾನಿ ಭಾಂತಿ ವಕ್ತ್ರಾಣಿ ಮಾಧವ ||12||
ಮಾಧವ! ದೋಷರಹಿತವಾದ ಅವಯವಗಳನ್ನು ಹೊಂದಿರುವ ಬಿಸಿಲಿನಿಂದ ಬಾಡಿರುವ ಈ ಸ್ತ್ರೀಯರ ಮುಖಗಳು ಬಾಡಿದ ಕಮಲಗಳಂತೆ ತೋರುತ್ತವೆ.
ದ್ರೋಣೇನ ನಿಹತಾಃ ಶೂರಾಃ ಶೇರತೇ ರುಧಿರೋಕ್ಷಿತಾಃ |
ಧೃಷ್ಟದ್ಯುಮ್ನಸುತಾಃ ಸರ್ವೇ ಭ್ರಾತರೋ ಹೇಮಮಾಲಿನಃ ||13||
ದ್ರೋಣರಿಂದ ಮೃತರಾದ ಧೃಷ್ಟದ್ಯುಮ್ನನ ಮಕ್ಕಳಾದ ಚಿನ್ನದ ಮಾಲೆಗಳನ್ನು ಧರಿಸಿರುವ ರಕ್ತದಿಂದ ತೋಯ್ದುಹೋಗಿರುವ ಶೂರರಾದ ಎಲ್ಲ ಸಹೋದರರು ಮಲಗಿರುವರು.
ರಥಾಶ್ವವಾಯುಂ ಚಾಪಾರ್ಚಿಂ ಶರಶಕ್ತಿಗದೇಂಧನಮ್ |
ದ್ರೋಣಮಾಸಾದ್ಯ ನಿರ್ದಗ್ಧಾಃ ಶಲಭಾ ಇವ ಪಾವಕಮ್ ||14||
ರಥ-ಕುದುರೆಗಳೆಂಬ ಗಾಳಿಯನ್ನು ಹೊಂದಿರುವ ಬಿಲ್ಲೆಂಬ ಜ್ವಾಲೆಯಿಂದ ಕೂಡಿರುವ ಬಾಣ-ಶಕ್ತಿ-ಗದೆಗಳೆಂಬ ಇಂಧನವನ್ನು ಹೊಂದಿರುವ ದ್ರೋಣನೆಂಬ ಬೆಂಕಿಯನ್ನು ಹೊಕ್ಕ ಇವರುಗಳು ದೀಪದ ಹುಳುಗಳಂತೆ ದಗ್ಧರಾದರು.
ತಥೈವ ನಿಹತಾಃ ಶೂರಾಃ ಶೇರತೇ ರುಚಿರಾಂಗದಾಃ |
ದ್ರೋಣೇನಾಭಿಹತಾಃ ಸಂಖ್ಯೇ ಭ್ರಾತರಃ ಪಂಚ ಕೇಕಯಾಃ ||15||
ಹಾಗೆಯೆ ಚೆಂದದ ಭುಜಕೀರ್ತಿಗಳನ್ನು ಹೊಂದಿರುವ ಯುದ್ಧದಲ್ಲಿ ದ್ರೋಣರಿಂದ ಹತರಾದ ಶೂರರಾದ ಕೇಕಯದ ಐವರು ಸಹೋದರರು ಮಲಗಿರುವರು.
ತಪ್ತಕಾಂಚನವರ್ಣಾಭಾಃ ತಾಮ್ರಧ್ವಜರಥವ್ರಜಾಃ |
ಭಾಸಯಂತಿ ಮಹೀಂ ಭಾಸಾ ಜ್ವಲಿತಾ ಇವ ಪಾವಕಾಃ ||16||
ಪುಟವಿಟ್ಟ ಚಿನ್ನದಂತೆ ಕಾಂತಿಯನ್ನು ಹೊಂದಿರುವ ತಾಮ್ರಧ್ವಜಗಳನ್ನು ಹೊಂದಿರುವ ರಥಗಳ ಸಮೂಹವನ್ನು ಹೊಂದಿರುವ ಪ್ರಜ್ವಲಿಸುವ ಬೆಂಕಿಯಂತಿರುವ ಇವರು ತಮ್ಮ ಕಾಂತಿಯಿಂದ ಭೂಮಿಯನ್ನು ಬೆಳಗಿಸುವರು.
ದ್ರೋಣೇನ ದ್ರುಪದಂ ಸಂಖ್ಯೇ ಪಶ್ಯ ಮಾಧವ ಪಾತಿತಮ್ |
ಮಹಾದ್ವಿಪಮಿವಾರಣ್ಯೇ ಸಿಂಹೇನ ಮಹತಾ ಹತಮ್ ||17||
ಮಾಧವ! ದ್ರೋಣನಿಂದ ಯುದ್ಧದಲ್ಲಿ ಕೆಡಹಲಾದ ದ್ರುಪದನನ್ನು ನೋಡು, ಅರಣ್ಯದಲ್ಲಿ ಬಲಿಷ್ಠ ಸಿಂಹವು ದೊಡ್ಡ ಆನೆಯನ್ನು ಕೆಡಹಿದಂತಿದೆ.
ಪಾಂಚಾಲರಾಜ್ಞೋ ವಿಮಲಂ ಪುಂಡರೀಕಾಕ್ಷ ಪಾಂಡರಮ್ |
ಆತಪತ್ರಂ ಸಮಾಭಾತಿ ಶರದೀವ ದಿವಾಕರಃ ||18||
ಪುಂಡರೀಕಾಕ್ಷ! ಪಾಂಚಾಲರಾಜನ ಶುದ್ಧವಾದ ಬಿಳಿಯದಾದ ಛತ್ರವು ಶರತ್ಕಾಲದ ಸೂರ್ಯನಂತೆ ತೋರುವುದು.
ಏತಾಸ್ತು ದ್ರುಪದಂ ವೃದ್ಧಂ ಸ್ನುಷಾ ಭಾರ್ಯಾಶ್ಚ ದುಃಖಿತಾಃ |
ದಗ್ಧ್ವಾ ಗಚ್ಛಂತಿ ಪಾಂಚಾಲರಾಜಾನಮಪಸವ್ಯತಃ ||19||
ದುಃಖಿತರಾದ ಈ (ದ್ರುಪದರಾಜನ) ಹೆಂಡಂದಿರು ಸೊಸೆಯರು ವೃದ್ಧನಾದ ಪಾಂಚಾಲದ ರಾಜನಾದ ದ್ರುಪದನನ್ನು ದಹಿಸಿ ಎಡದಿಂದ ಸಾಗುತ್ತಿರುವರು.
ಧೃಷ್ಟಕೇತುಂ ಮಹೇಷ್ವಾಸಂ ಚೇದಿಪುಂಗವಮಂಗನಾಃ |
ದ್ರೋಣೇನ ನಿಹತಂ ಶೂರಂ ಹರಂತಿ ಹೃತಚೇತಸಃ ||20||
ದ್ರೋಣನಿಂದ ಮೃತನಾದ ಚೇದಿದೇಶದ ಹಿರಿಯನಾದ ಶೂರನಾದ ಧೃಷ್ಟಕೇತುವನ್ನು (ಆತನ) ಮಹಿಳೆಯರು ಭಾರದ ಮನದಿಂದ ಹೊರುತ್ತಿರುವರು.
ದ್ರೋಣಾಸ್ತ್ರಮಭಿಹತ್ಯೈವ ವಿಮರ್ದೇ ಮಧುಸೂದನ |
ಮಹೇಷ್ವಾಸೋ ಹತಃ ಶೇತೇ ವಜ್ರಾಹತ ಇವ ದ್ರುಮಃ ||21||
ಮಧುಸೂದನ! ದೊಡ್ಡಬಿಲ್ಲಾಳಾದ ಧೃಷ್ಟಕೇತುವು ಯುದ್ಧದಲ್ಲಿ ದ್ರೋಣನ ಅಸ್ತ್ರದಿಂದ ಪ್ರತಿಹತನಾದ ಕೂಡಲೆ, ಸಿಡಿಲಿನಿಂದ ಕೆಡಹಲಾದ ವೃಕ್ಷದಂತೆ ಮೃತನಾಗಿ ಉರುಳಿರುವನು.
ಏಷ ಚೇದಿಪತಿಃ ಶೂರೋ ಧೃಷ್ಟಕೇತುರ್ಮಹಾರಥಃ |
ಶೇತೇ ವಿನಿಹತಃ ಸಂಖ್ಯೇ ಹತ್ವಾ ಶತ್ರೂನ್ ಸಹಸ್ರಶಃ ||22||
ಮಹಾರಥಿಕನಾದ ಶೂರನಾದ ಚೇದಿದೇಶದ ರಾಜನಾದ ಧೃಷ್ಟಕೇತುವು ಯುದ್ಧದಲ್ಲಿ ಸಾವಿರಾರು ಶತ್ರುಗಳನ್ನು ಸಂಹರಿಸಿ (ದ್ರೋಣರಿಂದ) ಹತನಾಗಿ ಮಲಗಿರುವನು.
ವಿತುದ್ಯಮಾನಂ ವಿಹಗೈಸ್ತಂ ಭಾರ್ಯಾಃ ಪ್ರತ್ಯುಪಸ್ಥಿತಾಃ |
ಚೇದಿರಾಜಂ ಹೃಷೀಕೇಶ ಹತಂ ಸಬಲಬಾಂಧವಮ್ ||23||
ಹೃಷೀಕೇಶನೆ! ಬಂಧುಸಹಿತನಾಗಿ ಮೃತನಾದ ಪಕ್ಷಿಗಳಿಂದ ಕುಕ್ಕಿಸಿಕೊಳ್ಳುತ್ತಿರುವ ಆ ಚೇದಿದೇಶದ ರಾಜನನ್ನು ಅವನ ಪತ್ನಿಯರು ಸುತ್ತುವರೆದಿರುವರು.
ದಾಶಾರ್ಹೀಪುತ್ರಜಂ ವೀರಂ ಶಯಾನಂ ಸತ್ಯವಿಕ್ರಮಮ್ |
ಆದಾಯಾಂಕೇ ರುದಂತ್ಯೇತಾ ಚೇದಿರಾಜವರಾಂಗನಾಃ ||24||
ದಶಾರ್ಹಕನ್ಯೆಯ ಮೊಮ್ಮಗನಾದ ( ದಶಾರ್ಹಕುಲದ ಶೂರನ ಪುತ್ರಿ ಹಾಗೂ ವಸುದೇವನ ಸೋದರಿಯು ಶ್ರುತಶ್ರವಳು. ಆಕೆಯ ಪುತ್ರ

ಶಿಶುಪಾಲ, ಆತನ ಪುತ್ರನು ಈ ಧೃಷ್ಟಕೇತು) ನಿಜಪರಾಕ್ರಮಿಯಾದ ಶೂರನಾದ (ರಣರಂಗದಲ್ಲಿ) ಮಲಗಿರುವ ಧೃಷ್ಟಕೇತುವನ್ನು ಈ ಚೇದಿರಾಜನ ಪತ್ನಿಯರು ತೊಡೆಯ ಮೇಲಿರಿಸಿಕೊಂಡು ರೋದಿಸುತ್ತಿರುವರು.
ಅಸ್ಯ ಪುತ್ರಂ ಹೃಷೀಕೇಶ ಸುವಕ್ತ್ರಂ ಚಾರುಕುಂಡಲಮ್ |
ದ್ರೋಣೇನ ಸಮರೇ ಪಶ್ಯ ನಿಕೃತ್ತಂ ಬಹುಭಿಃ ಶರೈಃ ||25||
ಹೃಷೀಕೇಶ! ಈತನ ಪುತ್ರನಾದ ಸುಂದರಕುಂಡಲಗಳನ್ನು ಧರಿಸಿರುವ ಸುವಕ್ತ್ರನನ್ನು ದ್ರೋಣರು ಅನೇಕ ಬಾಣಗಳಿಂದ ತುಂಡರಿಸಿರುವುದನ್ನು ಕಾಣು.
ಪಿತರಂ ನೂನಮಾಜಿಸ್ಥಂ ಯುಧ್ಯಮಾನಂ ಪರೈಃ ಸಹ |
ನಾಜಹಾತ್ ಪಿತರಂ ವೀರಮದ್ಯಾಪಿ ಮಧುಸೂದನ ||26||
ಮಧುಸೂದನ! ಯುದ್ಧಭೂಮಿಯಲ್ಲಿ ಶತ್ರುಗಳೊಡನೆ ಯುದ್ಧಮಾಡುತ್ತಿದ್ದಾಗ ತಂದೆಯನ್ನು (ಸುವಕ್ತ್ರನು) ಬಿಟ್ಟಿರುತ್ತಿರಲಿಲ್ಲ, ಈಗಲೂ (ಮರಣ ಸಂದರ್ಭದಲ್ಲೂ) ಶೂರನು ತಂದೆಯನ್ನು ಬಿಟ್ಟಿಲ್ಲ.
ಏವಂ ಮಮಾಪಿ ಪುತ್ರಸ್ಯ ಪುತ್ರಃ ಪಿತರಮನ್ವಗಾತ್ |
ದುರ್ಯೋಧನಂ ಮಹಾಬಾಹೋ ಲಕ್ಷ್ ಮ(ಕ್ಷ್ಮ)ಣಃ ಪರವೀರಹಾ ||27||
ನೀಳಬಾಹುವೆ! ಇದೇ ರೀತಿಯಾಗಿ ನನ್ನ ಮಗನ ಮಗನಾದ ಶತ್ರುಗಳ ವೀರ್ಯವನ್ನು ನಾಶಗೊಳಿಸುವ ಲಕ್ಷಣನು ತಂದೆಯಾದ ದುರ್ಯೋಧನನನ್ನು ಅನುಸರಿಸಿ ಹೋದನು.
ವಿಂದಾನುವಿಂದಾವಾವಂತ್ಯೌ ಪತಿತೌ ಪಶ್ಯ ಮಾಧವ |
ವನೇಷು ಪುಷ್ಪಿತೌ ಸಾಲೌ ಮರುತಾ ಗಲಿತಾವಿವ ||28||
ಕಾಂಚನಾಂಗದವರ್ಮಾಣೌ ಬಾಣಖಡ್ಗಧನುರ್ಧರೌ |
ಋಷಭಪ್ರತಿರೂಪಾಕ್ಷೌ ಶಯಾನೌ ವಿಮಲಸ್ರಜೌ ||29||
ಮಾಧವ! ಕಾಡಿನಲ್ಲಿ ಗಾಳಿಯಿಂದ ಕೆಡಹಲಾದ ಹೂವುಗಳಿಂದ ಕೂಡಿದ ತಾಲವಕ್ಷಗಳಂತೆ ಅವಂತಿದೇಶದ ಕುವರರಾದ ವಿಂದಾನುವಿಂದರು ಚಿನ್ನದ ಭುಜಕೀರ್ತಿ ಮತ್ತು ಕವಚವನ್ನು ಧರಿಸಿರುವರು, ಬಾಣ ಖಡ್ಗ ಬಿಲ್ಲುಗಳನ್ನು ಧರಿಸಿರುವರು, ಗೂಳಿಯ ಕಣ್ಣಿನಂತೆ ಅಗಲವಾದ ಕಣ್ಣುಗಳನ್ನು ಹೊಂದಿರುವರು, ಶುದ್ಧವಾದ ಮಾಲೆಗಳನ್ನು ತೊಟ್ಟಿರುವರು, (ಮೃತರಾಗಿ) ಬಿದ್ದಿರುವ ಇವರನ್ನು ಗಮನಿಸು.
ಅವಧ್ಯಾಃ ಪಾಂಡವಾಃ ಕೃಷ್ಣ ಸರ್ವ ಏವ ತ್ವಯಾ ಸಹ |
ಯೇ ಮುಕ್ತಾ ದ್ರೋಣಭೀಷ್ಮಾಭ್ಯಾಂ ಕರ್ಣಾದ್ ವೈಕರ್ತನಾತ್ ಕೃಪಾತ್ ||
ದುರ್ಯೋಧನಾದ್ ದ್ರೋಣಸುತಾನ್ ಸೈಂಧವಾಚ್ಚ ಜಯದ್ರಥಾತ್ |
ಸೌಮದತ್ತೇರ್ವಿಕರ್ಣಾಚ್ಚ ಶೂರಾಚ್ಚ ಕೃತವರ್ಮಣಃ ||31||
ಕೃಷ್ಣ! ದುರ್ಯೋಧನನಿಂದ, ಅಶ್ವತ್ಥಾಮನಿಂದ, ಸಿಂಧುದೇಶದ ರಾಜನಾದ ಜಯದ್ರಥನಿಂದ,ಸೋಮದತ್ತಿಯಿಂದ, ವಿಕರ್ಣನಿಂದ,ಶೂರನಾದ ಕೃತವರ್ಮನಿಂದ, ದ್ರೋಣ-ಭೀಷ್ಮರಿಂದ, ಸೂರ್ಯಸುತನಾದ ಕರ್ಣನಿಂದ, ಕೃಪರಿಂದ ಯಾರು ಮುಕ್ತರಾಗಿರುವರೋ, ಆ ನಿನ್ನನ್ನೂ ಸೇರಿಸಿಕೊಂಡು ಈ ಎಲ್ಲ ಪಾಂಡುಪುತ್ರರು ಅವಧ್ಯರೇ ಸರಿ.
ಯೇ ಹನ್ಯುಃ ಶಸ್ತ್ರವೇಗೇನ ದೇವಾನಪಿ ನರರ್ಷಭಾಃ |
ತ ಇಮೇ ನಿಹತಾಃ ಸರ್ವೇ ಪಶ್ಯ ಕಾಲಸ್ಯ ಪರ್ಯಯಮ್ ||32||
ಯಾವ ಪುರುಷಶ್ರೇಷ್ಠರು ಶಸ್ತ್ರಗಳ ವೇಗದಿಂದ ದೇವತೆಗಳನ್ನೂ ಸಂಹರಿಸಲು ಸಮರ್ಥರೋ, ಈ ಆ ಎಲ್ಲರೂ (ದ್ರೋಣಾದಿಗಳು) ಮೃತರಾಗಿರುವರು, ಕಾಲದ ಬದಲಾವಣೆಯನ್ನು ಗಮನಿಸು.
ನಾತಿಭಾರೋಽಸ್ತಿ ದೈವಸ್ಯ ಧ್ರುವಂ ಮಾಧವ ಕಶ್ಚನ |
ಯತ್ರೇಮೇ ನಿಹತಾಃ ಶೂರಾಃ ಕ್ಷತ್ರಿಯಾಃ ಕ್ಷತ್ರಿಯೈಃ ಸಹ ||33||
ಶೂರಾಶ್ಚ ಕೃತವಿದ್ಯಾಶ್ಚ ಮಮ ಪುತ್ರಾ ಮನಸ್ವಿನಃ ||34||
ಮಾಧವ! ಶೂರರಾದ ಶಿಕ್ಷಿತರಾದ ಸ್ವಾಭಿಮಾನಿಗಳಾದ ನನ್ನ ಮಕ್ಕಳು, ಶೂರರಾದ ಈ ಎಲ್ಲ ಕ್ಷತ್ರಿಯರು ಕ್ಷತ್ರಿಯರಿಂದಲೇ ಮೃತರಾದರು, (ಇದನ್ನು ಗಮನಿಸಿದಲ್ಲಿ) ನಿಶ್ಚಯವಾಗಿಯೂ ದೈವಕ್ಕೆ ಯಾವುದೂ ಅತಿಭಾರವಾದದ್ದಿಲ್ಲ ಎಂದು ತಿಳಿಯುವುದು.
ತದೈವ ನಿಹತಾಃ ಕೃಷ್ಣ ಮಮ ಪುತ್ರಾ ಯಶಸ್ವಿನಃ |
ಯದೈವಾಕೃತಕಾಮಸ್ತ್ವಮುಪಪ್ಲಾವ್ಯಂ ಗತಃ ಪುನಃ ||35||
ಕೃಷ್ಣ! ಎಂದು ನೀನು ಇಚ್ಛೆಯು ಪೂರ್ಣಗೊಳ್ಳದೆ (ಸಂಧಿಯು ವಿಫಲವಾಗಿ) ಉಪಪ್ಲಾವ್ಯನಗರಕ್ಕೆ ಹಿಂದಿರುಗಿದೆಯೋ ಅಂದೇ ಕೀರ್ತಿವಂತರಾದ ನನ್ನ ಪುತ್ರರು ಮೃತರಾದರು ಎಂದು ತಿಳಿದುಕೊಂಡಿದ್ದೆ.
ಶಂತನೋಶ್ಚೈವ ಪುತ್ರೇಣ ಪ್ರಾಜ್ಞೇನ ವಿದುರೇಣ ಚ |
ತದೈವೋಕ್ತಾಸ್ಮಿ ಮಾ ಸ್ನೇಹಂ ಕುರುಷ್ವಾತ್ಮಸುತೇಷ್ವಿತಿ ||35||
ಶಂತನುವಿನ ಮಗ ಭೀಷ್ಮನು, ಪ್ರಾಜ್ಞನಾದ ವಿದುರನು ಅಂದೇ ನನ್ನನ್ನು ಉದ್ದೇಶಿಸಿ `ನಿನ್ನ ಮಕ್ಕಳಲ್ಲಿ ಸ್ನೇಹವನ್ನು ಮಾಡದಿರು' ಎಂದು ಹೇಳಿದ್ದರು.
ನ ತಯೋರ್ವಚನಂ ತಾತ ಮಿಥ್ಯಾ ಭವಿತುಮರ್ಹತಿ |
ಅಚಿರೇಣೈವ ಮೇ ಪುತ್ರಾ ಭಸ್ಮೀಭೂತಾ ಜನಾರ್ದನ ||37||
ತಂದೆಯೆ! ಅವರೀರ್ವರ ವಚನವು ಸುಳ್ಳಾಗಲು ಶಕ್ಯವಿಲ್ಲ. ಜನಾರ್ದನ! ಬಹುಬೇಗ ನನ್ನ ಪುತ್ರರು ಬೂದಿಯಾದರು.
ವೈಶಂಪಾಯನಃ

ಇತ್ಯುಕತ್ವಾ ನ್ಯಪತದ್ ಭೂಮೌ ಗಾಂಧಾರೀ ಶೋಕಕರ್ಶಿತಾ |
ದುಃಖೋಪಹತವಿಜ್ಞಾನಾ ಧೈರ್ಯಮುತ್ಸೃಜ್ಯ ಭಾರತ ॥38॥
ವೈಶಂಪಾಯನ ಭರತಕುಲೋತ್ಪನ್ನನೇ! ದುಃಖದಿಂದ ಎಚ್ಚರವನ್ನು ಕಳೆದುಕೊಂಡ ದುಃಖದಿಂದ ಬಳಲಿದ ಗಾಂಧಾರಿಯು ಈ ರೀತಿಯಾಗಿ ಹೇಳುತ್ತಾ ಧೈರ್ಯವನ್ನು ಕಳೆದುಕೊಂಡವಳಾಗಿ ಭೂಮಿಯಲ್ಲಿ ಬಿದ್ದಳು.
ತತಃ ಕೋಪಪರೀತಾಂಗೀ ದುಃಖಶೋಕಪರಿಪ್ಲುತಾ |
ಜಗಾದ ಶೌರಿಂ ರೋಷೇಣ ಗಾಂಧಾರೀ ವ್ಯಥಿತೇಂದ್ರಿಯಾ ॥39॥
ಅನಂತರದಲ್ಲಿ ಬಳಲಿದ ಇಂದ್ರಿಯಗಳುಳ್ಳ ಕೋಪಪೂರಿತಳಾದ ದುಃಖ ಶೋಕಗಳಿಂದ ತುಂಬಿಹೋಗಿದ್ದ ಗಾಂಧಾರಿಯು ರೋಷದಿಂದ ಶೂರನ ಮೊಮ್ಮಗನನ್ನು ಉದ್ದೇಶಿಸಿ ಹೇಳಿದಳು.
ಗಾಂಧಾರೀ
ಪಾಂಡವಾ ಧಾರ್ತರಾಷ್ಟ್ರಾಶ್ಚ ಕ್ರುದ್ಧಾಃ ಕೃಷ್ಣ ಪರಸ್ಪರಮ್ |
ಉಪೇಕ್ಷಿತಾ ವಿನಶ್ಯಂತಃ ತ್ವಯಾ ಕಸ್ಮಾಜ್ಜನಾರ್ದನ ॥40॥
ಗಾಂಧಾರಿ ಕೃಷ್ಣ, ಜನಾರ್ದನ! ಪರಸ್ಪರ ಕೋಪಗೊಂಡು ವಿನಾಶವನ್ನು ಹೊಂದುತ್ತಿರುವ ಪಾಂಡವರ ಕೌರವರ ವಿಷಯದಲ್ಲಿ ನೀನು ಏಕೆ ಉದಾಸೀನನಾದಿ?
ಶಕ್ತೇನ ಬಹುಭೃತ್ಯೇನ ವಿಪುಲೇ ತಿಷ್ಠತಾ ಬಲೇ ॥41॥
ಉಭಯತ್ರ ಸಮತ್ವೇನ ಶ್ರುತವಾಕ್ಯೇನ ಚೈವ ಹಿ |
ಇಚ್ಛತೋಪೇಕ್ಷಿತೋ ನಾಶಃ ಕುರೂಣಾಂ ಮಧುಸೂದನ ॥42॥
ಯಸ್ಮಾತ್ ತ್ವಯಾ ಮಹಾಬಾಹೋ ಫಲಂ ತಸ್ಮಾದವಾಪ್ನುಹಿ ॥43॥
ಸ್ವತಃ ಸಮರ್ಥ, ಭಾರೀ ಸೇನೆಯು ನಿನ್ನಲ್ಲಿದೆ, ಶಾಸ್ತ್ರಗಳನ್ನು ಬಲ್ಲವ, ಉಭಯರೂ ಸಮರಾಗಿದ್ದರು (ಕುರು-ಪಾಂಡವರು ಉಭಯರೂ ಅನುಬಂಧಿಗಳು, ಅವರಿಗೆ ಆಜ್ಞೆಯನ್ನು ಮಾಡಿ ಸರಿದಾರಿಗೆ ತರಲು ಸಮರ್ಥ ಎಂದು ಭಾವ) ಹೀಗಿದ್ದರೂ ಯಾವ ಕಾರಣದಿಂದ ಅವರ ನಾಶವನ್ನು ಬಯಸಿದ್ದಿಯೋ ಆದ್ದರಿಂದ ಅದರ ಫಲವನ್ನು ಹೊಂದುವಿ.
ಪತಿಶುಶ್ರೂಷಯಾ ಯನ್ಮೇ ತಪಃ ಕಿಂಚಿದುಪಾರ್ಜಿತಮ್ |
ತೇನ ತ್ವಾಂ ದುರವಾಪೇನ ಶಪೇ ಚಕ್ರಗದಾಧರ ॥44॥
ಚಕ್ರಗದಾಧರನೇ! ಗಂಡನ ಸೇವೆಯಿಂದ ನಾನು ಸ್ವಲ್ಪ ತಪವನ್ನು ಆಚರಿಸಿದ್ದೇ ಆದಲ್ಲಿ, ಕಷ್ಟದಿಂದ ಸಂಪಾದಿಸಿದ ಆ ಪುಣ್ಯದಿಂದ ಶಪಿಸುವೆನು.
ಯಸ್ಮಾತ್ ಪರಸ್ಪರಂ ಘ್ನಂತೋ ಜ್ಞಾತಯಃ ಕುರುಪಾಂಡವಾಃ |
ಉಪೇಕ್ಷಿತಾಸ್ತೇ ಗೋವಿಂದ ತಸ್ಮಾಜ್ಜ್ಞಾತೀನ್ ವಧಿಷ್ಯಸಿ ॥45॥
ಗೋವಿಂದ! ಪರಸ್ಪರವಾಗಿ ಸಂಹರಿಸಿಕೊಳ್ಳುತ್ತಿರುವ ಜ್ಞಾತಿಗಳಾದ ಕುರು-ಪಾಂಡವರನ್ನು ಯಾವ ಕಾರಣದಿಂದ (ತಡೆಯಲು ಸಮರ್ಥನಾಗಿದ್ದರೂ) ಅಲಕ್ಷಿಸಿದೆಯೋ ಆದ್ದರಿಂದ ನಿನ್ನ ಜ್ಞಾತಿಗಳನ್ನೂ (ನೀನೇ) ಸಂಹರಿಸುವಿ.
ತ್ವಮಪ್ಯುಪಸ್ಥಿತೇ ವರ್ಷೇ ಷಟ್‌ತ್ರಿಂಶೇ ಮಧುಸೂದನ |
ಹತಜ್ಞಾತಿರ್ಹತಾಮಾತ್ಯೋ ಹತಪುತ್ರೋ ವನೇಚರಃ ॥46॥
ಅನಾಥವದಭಿಜ್ಞಾತೋ ಲೋಕೇಷ್ವನಭಿಲಕ್ಷಿತಃ |
ಕುತ್ಸಿತೇನಾಭ್ಯುಪಾಯೇನ ನಿಧನಂ ಸಮವಾಪ್ಸ್ಯಸಿ ॥47॥
ಮಧುಸೂದನ! ಇನ್ನು ಮೂವತ್ತಾರು ವರ್ಷಗಳು ಸಂದಲು ಅನುಬಂಧಿಗಳನ್ನು ಕಳೆದುಕೊಂಡವನಾಗಿ ಮಂತ್ರಿಗಳನ್ನು ಕಳೆದುಕೊಂಡವನಾಗಿ ಮಕ್ಕಳನ್ನು ಕಳೆದುಕೊಂಡವನಾಗಿ ಕಾಡಿನಲ್ಲಿ ಸುತ್ತುವವನಾಗಿ ಲೋಕದಲ್ಲಿ (ಎಲ್ಲರಿಂದಲೂ) ಉಪೇಕ್ಷಿತನಾಗಿ ಅನಾಥರಂತೆ ಅಪರಿಚಿತನಾಗಿ ಯಾವುದೋ ಸಣ್ಣ ನೆವದಿಂದ ಸಾವನ್ನು ಅಪ್ಪುವಿ.
ತವಾಪ್ಯೇವಂ ಹತಸುತಾ ನಿಹತಜ್ಞಾತಿಬಾಂಧವಾಃ |
ಸ್ತ್ರಿಯಃ ಪರಿಪತಿಷ್ಯಂತಿ ಯಥೇಮಾ ಭರತಸ್ತ್ರಿಯಃ ॥48॥
ನೀನು ಸಹ ಇದೇರೀತಿಯಲ್ಲಿ ಮಕ್ಕಳನ್ನು ಕಳೆದುಕೊಂಡಾಗ ಜ್ಞಾತಿಬಾಂಧವರನ್ನು ಕಳೆದುಕೊಂಡಾಗ, ಈ ಭರತಕುಲೋತ್ಪನ್ನರ ಹೆಂಡಂದಿರಂತೆ ಆ ಸ್ತ್ರೀಯರು ಪರಿತಪಿಸುವರು.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ಘೋರಂ ವಾಸುದೇವೋ ಮಹಾಮನಾಃ |
ಉವಾಚ ದೇವೀಂ ಗಾಂಧಾರೀಮಿದಮಭ್ಯುತ್ಸ್ಮಯನ್ನಿವ ॥49॥
ವೈಶಂಪಾಯನ ಮುಗುಳುನಗುತ್ತಿರುವಂತೆ ಇರುವ ಮಹಾತ್ಮನಾದ ವಾಸುದೇವನು ಘೋರವಾದ ಆ ಮಾತನ್ನು ಕೇಳಿ ಸಮ್ಮತಿಸಿದವನಂತೆ ದೇವೀ ಗಾಂಧಾರಿಯನ್ನು ಉದ್ದೇಶಿಸಿ ಈರೀತಿಯಾಗಿ ಹೇಳಿದನು.
ಶ್ರೀಭಗವಾನ್
ಸಂಹರ್ತಾ ವೃಷ್ಣಿಚಕ್ರಸ್ಯ ನಾನ್ಯೋ ಮದ್ ವಿದ್ಯತೇ ಶುಭೇ |
ಜಾನೇಽಹಮೇತದಪ್ಯೇವಂ ಚೀರ್ಣಂ ಚರಸಿ ಕ್ಷತ್ರಿಯೇ ॥50॥
ಶ್ರೀಕೃಷ್ಣ ಮಂಗಳಕರಳೆ ಕ್ಷತ್ರಿಯಳೆ ! ವೃಷ್ಣಿಗಳ ಸಮೂಹವನ್ನು ಸಂಹರಿಸಲು ನನ್ನಿಂದ ಬೇರೆ ಯಾರೂ ಇರುವುದಿಲ್ಲ ಎಂದು ನಾನು ತಿಳಿದಿರುವೆನು, ಇದನ್ನೇ ನಾನು ಸಂಕಲ್ಪಿಸಿದ್ದೆ, ನೀನೂ ಅದನ್ನು ಮಾತಿನಿಂದ ತಿಳಿಸಿರುವಿ.
ಅವಧ್ಯಾಸ್ತೇ ನರೈರನ್ಯೈರಪಿ ವಾ ದೇವದಾನವೈಃ |

ಪರಸ್ಪರಕೃತಂ ನಾಶಮತಃ ಪ್ರಾಪ಼್್ಯಂತಿ ಯಾದವಾಃ ||51||
ಆ ಯಾದವರು ಬೇರೇ ಮನುಷ್ಯರಿಂದ ಅಥವಾ ದೇವತೆಗಳಿಂದ ದಾನವರಿಂದ ಅವಧ್ಯರು, ಆದ್ದರಿಂದ ಪರಸ್ಪರ ಹೊಡೆದಾಡಿಕೊಂಡು ನಾಶವನ್ನು ಹೊಂದಲಿರುವರು.
ವೈಶಂಪಾಯನಃ
ಇತ್ಯುಕ್ತವತಿ ದಾಶಾರ್ಹೇ ಪಾಂಡವಾಸ್ತ್ರಸ್ತಮಾನಸಾಃ |
ಬಭೂವುರ್ಭೃಶಸಂವಿಗ್ನಾ ನಿರಾಶಾಸ್ತೇಽಪಿ ಜೀವಿತೇ ||52||
ವೈಶಂಪಾಯನ ಈ ರೀತಿಯಾಗಿ ದಶಾರ್ಹಕುಲೋತ್ಪನ್ನನು ಹೇಳುತ್ತಿರಲು ಪಾಂಡವರು ಹೆದರಿದ ಮನಸಿನವರಾದರು, ಉದ್ವೇಗಗೊಂಡವರಾಗಿ ಇನ್ನು ಬದುಕಿದರೂ ವ್ಯರ್ಥ ಎಂದು ಭಾವಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ವಾಸುದೇವಶಾಪೋ ನಾಮ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.

|| ಸಮಾಪ್ತಂ ಸ್ತ್ರೀವಿಲಾಪಪರ್ವ ||
* * * * * *
3. ಶ್ರಾದ್ಧಪರ್ವ
ಇಪ್ಪತ್ತಾರನೆಯ ಅಧ್ಯಾಯ
ದುಃಖದಿಂದ ಭೂಮಿಯಲ್ಲಿ ಬಿದ್ದಿದ್ದ ಗಾಂಧಾರಿಗೆ ಶ್ರೀಕೃಷ್ಣನು ಸಮಾಧಾನವನ್ನು ಹೇಳಿದನು. ಧರ್ಮರಾಜನ ಸೂಚನೆಯಂತೆ ಸಂಜಯ ಮತ್ತು
ವಿದುರರು ಮೃತರಿಗೆ ಉತ್ತರಕ್ರಿಯೆಗಳನ್ನು ನಡೆಸಿದರು
ಶ್ರೀಭಗವಾನ್
ಉತ್ತಿಷ್ಠೋತ್ತಿಷ್ಠ ಗಾಂಧಾರಿ ಮಾ ಚ ಶೋಕೇ ಮನಃ ಕೃಥಾಃ |
ತವೈವ ಹ್ಯಪರಾಧೇನ ಕುರವೋ ನಿಧನಂ ಗತಾಃ ||1||
ಶ್ರೀಕೃಷ್ಣ ಗಾಂಧಾರಿ! ಮೇಲೇಳು ಮೇಲೇಳು, ಮನದಲ್ಲಿ ದುಃಖಿಸದಿರು, ನಿನ್ನ ಅಪರಾಧದಿಂದಲೇ ಕುರುಗಳು ಮರಣವನ್ನು ಹೊಂದಿದರು.
ಯಾ ತ್ವಂ ಪುತ್ರಂ ದುರಾತ್ಮಾನಮ್ ಈರ್ಷುಮತ್ಯಂತಮಾನಿನಮ್ |
ದುರ್ಯೋಧನಂ ಪುರಸ್ಕೃತ್ಯ ದುಷ್ಕೃತಂ ಸಾಧು ಮನ್ಯಸೇ ||2||
ನಿಷ್ಠುರಂ ಚೈವ ಪರುಷಂ ವೃದ್ಧಾನಾಂ ಶಾಸನಾತಿಗಮ್ |
ಕಥಮಾತ್ಮಕೃತಂ ದೋಷಂ ಮಯ್ಯಾಧಾತುಮಿಹೇಚ್ಛಸಿ ||3||
ಯಾವ ನೀನು ದುರಾತ್ಮನಾದ ಅಸೂಯಾಪರನಾದ ದುರಭಿಮಾನಿಯಾದ ನಿಷ್ಠುರ ನುಡಿಗಳನ್ನಾಡುವ, ಚುಚ್ಚುಮಾತುಗಳನ್ನಾಡುವ ಹಿರಿಯರನ್ನು ಧಿಕ್ಕರಿಸುವ (ನಿನ್ನ) ಮಗನಾದ ದುರ್ಯೋಧನನನ್ನು ಮುಂದಿಟ್ಟುಕೊಂಡು ತಪ್ಪೆಸಗಿ ಸರಿಯಾದದ್ದನ್ನು ನಡೆಸಿರುವೆನು ಎಂದು ಭಾವಿಸುವಿ? ನಿನ್ನಲ್ಲಿನ ತಪ್ಪನ್ನು ನನ್ನಲ್ಲಿ ಆರೋಪಿಸಲು ಏಕೆ ಬಯಸುವಿ?
ಮೃತಂ ವಾ ಯದಿ ವಾ ನಷ್ಟಂ ಯೋಽತೀತಮನುಶೋಚತಿ |
ದುಃಖೇನ ಲಭತೇ ದುಃಖಂ ದ್ವಾವನರ್ಥೌ ಪ್ರಪದ್ಯತೇ ||4||
ಮರಣವನ್ನು ಹೊಂದಿದವರ ವಿಷಯದಲ್ಲಾಗಲಿ, ಹಾಳುಗೆಡವಿದ ವಸ್ತುವಿನ ವಿಷಯದಲ್ಲಾಗಲಿ, ಗತಿಸಿಹೋದದ್ದರ ಬಗ್ಗೆಯಾಗಲಿ ದುಃಖಿಸುವುದರಿಂದ ಮತ್ತಷ್ಟು ದುಃಖವು ಹೆಚ್ಚುವುದು, (ಚಿಂತಿಸುವುದರಿಂದ ಕರ್ತವ್ಯಕರ್ಮದಿಂದ ವಿಮುಖನಾಗಿ ಕಾಲವೂ ವ್ಯರ್ಥವಾಗುವುದು, ಹೀಗಾಗಿ) ಎರಡೆರಡು ನಷ್ಟವನ್ನು ಹೊಂದುವನು.
ತಪೋರ್ಥಿನಂ ಬ್ರಾಹ್ಮಣೀ ದತ್ತಗರ್ಭಾ
ಗೌರ್ವೋಢಾರಂ ಧಾವಿತಾರಂ ತುರಂಗಃ |
ಶೂದ್ರಾ ದಾಸಂ ಪಶುಪಾಲಂ ತು ವೈಶ್ಯಾ
ವಧಾರ್ಥಿನಂ ತ್ವದ್ವಿಧಾ ರಾಜಪುತ್ರೀ ||5||
ಗರ್ಭಧರಿಸಿದ ಬ್ರಾಹ್ಮಣಿಯು ತಪಸ್ವಿ ಪುತ್ರನನ್ನು, ಹಸುವು ಭಾರಹೊರುವ ಎತ್ತನ್ನು, ಕುದುರೆಯು ವೇಗವಾಗಿ ಓಡುವ ಕುದುರೆಯನ್ನು, ಶೂದ್ರಳು ಸೇವಾಸಮರ್ಥನನ್ನು, ವೈಶ್ಯಳು ಪಶುಸಂರಕ್ಷಕನನ್ನು, ನಿನ್ನಂಥ ರಾಜಪುತ್ರಿಯು (ರಣರಂಗದಲ್ಲಿ) ಸಾವನ್ನು ಬಯಸುವ ಪುತ್ರನನ್ನು ಇಚ್ಛಿಸುತ್ತಾರೆ.
ವೈಶಂಪಾಯನಃ
ತಚ್ಛ್ರುತ್ವಾ ವಾಸುದೇವಸ್ಯ ಪುನರುಕ್ತಂ ವಚೋಽಪ್ರಿಯಮ್ |
ತೂಷ್ಣೀಂ ಬಭೂವ ಗಾಂಧಾರೀ ಶೋಕವ್ಯಾಕುಲಲೋಚನಾ ||6||
ವೈಶಂಪಾಯನ ಮತ್ತೆ ಹೇಳಿದ ವಾಸುದೇವನ ಅಪ್ರಿಯವಾದ ಆ ಮಾತನ್ನು ಕೇಳಿ, ದುಃಖದಿಂದ ಬಳಲಿದ ಕಂಗಳುಳ್ಳ ಗಾಂಧಾರಿಯು ಮೌನವಹಿಸಿದಳು.
ಧೃತರಾಷ್ಟ್ರಸ್ತು ರಾಜರ್ಷಿರ್ನಿಗೃಹ್ಯಾಬುದ್ಧಿಜಂ ತಮಃ |
ಪರ್ಯಪೃಚ್ಛತ ಧರ್ಮಾತ್ಮಾ ಧರ್ಮರಾಜಂ ಯುಧಿಷ್ಠಿರಮ್ ||7||

ರಾಜರ್ಷಿಯಾದ ಧರ್ಮಾತ್ಮನಾದ ಧೃತರಾಷ್ಟ್ರನು ಅಜ್ಞಾನದಿಂದ ಉಂಟಾದ ಮೋಹವನ್ನು ನಿಯಂತ್ರಿಸಿ, ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನನ್ನು ಪ್ರಶ್ನಿಸಿದನು.
ಧೃತರಾಷ್ಟ್ರ:
ಜೀವತಾಂ ಪರಿಮಾಣಜ್ಞಃ ಸೈನ್ಯಾನಾಮಸಿ ಪಾಂಡವ |
ಹತಾನಾಂ ಯದಿ ಜಾನೀಷೇ ಪರಿಮಾಣಂ ಬ್ರವೀಹಿ ಮೇ ॥8॥
ಧೃತರಾಷ್ಟ್ರ ಪಾಂಡುಪುತ್ರನೆ! ಬದುಕಿರುವ ಸೈನ್ಯದ ಪರಿಮಾಣವನ್ನು ತಿಳಿದವನಾಗಿರುವಿ, ಮೃತರಾದವರ (ಸೈನ್ಯದ) ಪರಿಮಾಣವು ತಿಳಿದ ಪಕ್ಷದಲ್ಲಿ ನನಗೆ ತಿಳಿಸು.
ಯುಧಿಷ್ಠಿರಃ
ದಶಾಯುತಸಹಸ್ರಾಣಿ ಸಹಸ್ರಾಣಿ ಚ ವಿಂಶತಿಃ |
ಕೋಟ್ಯಃ ಷಷ್ಟಿಶ್ಚ ಷಟ್ ಚೈವ ಅಸ್ಮಿನ್ ರಾಜನ್ ಮೃಧೇ ಹತಾಃ ॥9॥
ಆಲಕ್ಷಾಣಾಂ ತು ಶೂರಾಣಾಂ ಸಹಸ್ರಾಣಿ ಚತುರ್ದಶ |
ದಶ ಚಾನ್ಯಾನಿ ರಾಜೇಂದ್ರ ಶತಂ ಷಷ್ಟಿಶ್ಚ ಭಾರತ ॥10॥
ಧರ್ಮರಾಜ ಭರತಕುಲೋತ್ಪನ್ನನೆ! ಒಂದುನೂರಾರವತ್ತಾರುಕೋಟಿ ಇಪ್ಪತ್ತು ಸಾವಿರ ಯೋಧರು ಮೃತರಾಗಿದ್ದಾರೆ. ಇಪ್ಪತ್ನಾಲ್ಕುಸಾವಿರದ ನೂರಾ ಅರವತ್ತು ಶೂರರು ಏನಾದರೆಂದು (ಮೃತರಾಗಿರುವರೋ ತಲೆತಪ್ಪಿಸಿಕೊಂಡು ಪರಾರಿ-ಯಾಗಿರುವರೋ) ತಿಳಿಯದು.
ಧೃತರಾಷ್ಟ್ರ:
ಯುಧಿಷ್ಠಿರ ಗತಿಂ ಕಾಂ ತೇ ಗತಾಃ ಪುರುಷಸತ್ತಮಾಃ |
ಆಚಕ್ಷ್ವ ಮೇ ಮಹಾಬಾಹೋ ಸರ್ವಜ್ಞೋ ಹ್ಯಸಿ ಮೇ ಮತಃ ॥11॥
ಧೃತರಾಷ್ಟ್ರ ನೀಳಬಾಹುವೆ ಯುಧಿಷ್ಠಿರ ! ನನ್ನ ಅಭಿಪ್ರಾಯದಂತೆ ನೀನು ಎಲ್ಲವನ್ನೂ ಬಲ್ಲವ, ಆ ಪುರುಷಶ್ರೇಷ್ಠರು ಯಾವ ಗತಿಯನ್ನು ಹೊಂದಿರುವರು? ನನಗೆ ತಿಳಿಸು.
ಯುಧಿಷ್ಠಿರಃ
ಯೈರ್ಹುತಾನಿ ಶರೀರಾಣಿ ಹೃಷ್ಟೈಃ ಪರಮಸಂಯುಗೇ |
ದೇವರಾಜಸಮಾಸ್ತೇ ತು ದೇವರಾಜೇನ ಪೂಜಿತಾಃ ॥12॥
ಧರ್ಮರಾಜ ಶ್ರೇಷ್ಠವಾದ ಯುದ್ಧದಲ್ಲಿ ಸಂತಸದ ಮನದಿಂದ ಯಾರು (ತಮ್ಮ) ಶರೀರವನ್ನು ಆಹುತಿಯನ್ನಾಗಿ ನೀಡಿರುವರೋ (ಮರಣವನ್ನು ಹೊಂದಿರುವರೊ) ಅವರು ಇಂದ್ರನಿಗೆ ಸಮರು, ದೇವರಾಜನಿಂದ ಸನ್ಮಾನಿತರಾಗುವರು.
ಯೇ ತ್ವಹೃಷ್ಟೇನ ಮನಸಾ ಮರ್ತವ್ಯಮಿತಿ ಭಾರತ |
ಗಂಧರ್ವಲೋಕೇ ಪೂಜ್ಯಂತೇ ತೇ ಗಂಧರ್ವೈಃ ಸಮಾಗತಾಃ ॥13॥
ಭರತಕುಲೋತ್ಪನ್ನನೆ! ಯಾರು ಮನಸಿಲ್ಲದೇ (ಅನಿವಾರ್ಯವಾಗಿ) ಸಾಯುವುದು ಅನಿವಾರ್ಯ ಎಂಬ ಭಾವದಿಂದ ಮರಣವನ್ನು ಹೊಂದಿರುವರೋ ಅವರು ಗಂಧರ್ವಲೋಕದಲ್ಲಿ ಗಂಧರ್ವರಿಂದ ಮಾನಿತರಾಗುವರು.
ಯೇ ತು ಸಂಗ್ರಾಮಭೂಮಿಷ್ಠಾ ಯಾಚಮಾನಾಃ ಪರಾಙ್ಮುಖಾಃ |
ಶಸ್ತ್ರೇಣ ನಿಧನಂ ಪ್ರಾಪ್ತಾಸ್ತೇ ಗತಾ ಗುಹ್ಯಕಾನ್ ಪ್ರತಿ ॥14॥
ಯಾರು ಯುದ್ಧಭೂಮಿಯಲ್ಲಿದ್ದು (ಶತ್ರುವಿನಲ್ಲಿ) ಯಾಚಿಸುವವರಾಗಿ (ಯುದ್ಧದಿಂದ) ಪರಾಙ್ಮುಖರಾದವರು ಶಸ್ತ್ರಗಳಿಂದ ಸಾವನ್ನು ಹೊಂದಿದಲ್ಲಿ ಅವರು ಗುಹ್ಯಲೋಕಕ್ಕೆ ಹೋಗುವರು.
ವಿಧ್ಯಮಾನಾಃ ಪರ್ಯೈರ್ಯ ತು ಹ್ರೀಯಮಾಣಾ ನಿರಾಯುಧಾಃ |
ಹ್ರೀನಿಷೇಧಾ ಮಹಾತ್ಮಾನಃ ಪರಾನಭಿಮುಖಾನ್ ರಣೇ ॥15॥
ಭಿದ್ಯಮಾನಾಃ ಶಿತೈರ್ಬಾಣೈಃ ಕ್ಷತ್ರಧರ್ಮಪರಾಯಣಾಃ |
ಹತಾಸ್ತೇ ಬ್ರಹ್ಮಸದನಂ ಗತಾ ವೀರಾಃ ಸುವರ್ಚಸಃ ॥16॥
ಯಾರು ಶತ್ರುಗಳಿಂದ ಹೊಡೆಸಿಕೊಂಡು ನಿರಾಯುಧರಾಗಿ (ತಮ್ಮ ವಾಹನದಿಂದ) ಕೆಡಹಿಸಿಕೊಂಡವರಾಗಿಯೂ ನಾಚಿಕೆಯಿಂದ ತಡೆಯಲ್ಪಡುವವರಾಗಿ (ರಣರಂಗದಿಂದ ಪಲಾಯನ ಮಾಡುವುದು ಲಜ್ಜೆಗೆಟ್ಟ ಕೆಲಸ ಎಂದು ಭಾವಿಸಿ) ರಣರಂಗದಲ್ಲಿ ಶತ್ರುವಿನ ಅಭಿಮುಖವಾಗಿ ನಿಲ್ಲುವರೊ ಕ್ಷತ್ರಧರ್ಮಪರಾಯಣರಾದವರನ್ನು (ಶತ್ರುಗಳು) ಹರಿತ ಬಾಣಗಳಿಂದ ತುಂಡರಿಸುವರು, ಮೃತರಾದ ಕಾಂತಿಮಂತರಾದ ವೀರರಾದ ಆ ಮಹಾತ್ಮರು ಬ್ರಹ್ಮಸದನವನ್ನು ಸೇರಿರುವರು.
ಕ್ಷತ್ರಧರ್ಮೇಣ ನಿಹತಾಸ್ತೇ ಗತಾಃ ಪರಮಾಂ ಗತಿಮ್ ॥17॥
(ಒಟ್ಟಿನಲ್ಲಿ ಯಾರು) ಕ್ಷತ್ರಧರ್ಮದಿಂದ ನಿಹತರಾದರೋ ಅವರು (ಎಲ್ಲರೂ) ಉತ್ತಮಗತಿಯನ್ನು ಹೊಂದಿರುವರು.
ಯೇ ತತ್ರ ನಿಹತಾ ರಾಜನ್ನಂತರಾಯೋಧನಂ ಪ್ರತಿ |
ಯಥಾಕಥಂಚಿತ್ ಪುರುಷಾಸ್ತೇ ಗತಾ ಹ್ಯುತ್ತರಾನ್ ಕುರೂನ್ ॥18॥
ರಾಜನೆ! ಈ ರಣರಂಗದಲ್ಲಿ ಯಾವುದೇ ರೀತಿಯಲ್ಲಿ ಯಾರು ಮೃತರಾಗಿರುವರೋ ಆ ಪುರುಷರು ಉತ್ತರಕುರುದೇಶವನ್ನು ಹೊಂದುವರು.
ಧೃತರಾಷ್ಟ್ರ:
ಯೇನ ಜ್ಞಾನಬಲೇನೈವ ಪುತ್ರ ಪಶ್ಯಸಿ ಸಿದ್ಧವತ್ |
ತನ್ಮೇ ವದ ಮಹಾಬಾಹೋ ಶ್ರೋತವ್ಯಂ ಯದಿ ವೈ ಮಯಾ ॥19॥

ಧೃತರಾಷ್ಟ್ರ ಮಗನೇ! ಯಾವ ಜ್ಞಾನದ ಬಲದಿಂದ ಸಿದ್ಧಪುರುಷರಂತೆ (ಈ ಎಲ್ಲವನ್ನು) ತಿಳಿದಿರುವಿ? ಒಂದು ವೇಳೆ ನಾನು ಅದನ್ನು ತಿಳಿಯಬಹುದಾದಲ್ಲಿ ನನಗೆ ತಿಳಿಸು.
ಯುಧಿಷ್ಠಿರಃ
ನಿದೇಶಾತ್ ಭವತಃ ಪೂರ್ವಂ ವನೇ ವಿಚರತಾ ಮಯಾ |
ತೀರ್ಥಯಾತ್ರಾಪ್ರಸಂಗೇನ ಸಂಪ್ರಾಪ್ತೋ ಯಮುನಾತಟಮ್ ॥20॥
ಧರ್ಮರಾಜ ನಿನ್ನ ಆಜ್ಞೆಯಂತೆ ಈ ಹಿಂದೆ ವನದಲ್ಲಿ ತಿರುಗಾಡುತ್ತಿದ್ದ ನಾನು ತೀರ್ಥಯಾತ್ರಾ ಸಂದರ್ಭದಲ್ಲಿ ಯಮುನಾತೀರಕ್ಕೆ ಹೋಗಿದ್ದೆನು.
ದೇವರ್ಷಿರ್ಲೋಮಶೋ ದೃಷ್ಟಸ್ತತಃ ಪ್ರಾಪ್ತೋಽಸ್ಮ್ಯನುಸ್ಮೃತಿಮ್ |
ದಿವ್ಯಂ ಚಕ್ಷುರನುಪ್ರಾಪ್ತಂ ಜ್ಞಾನಯೋಗೇನ ವೈ ಪುರಾ ॥21॥
ದೇವರ್ಷಿಗಳಾದ ಲೋಮಶರನ್ನು ಕಂಡೆನು, ಅವರಿಂದ ಅನುಸ್ಮೃತಿವಿದ್ಯೆಯನ್ನು ಹೊಂದಿದೆನು, ಹಿಂದೆಯೇ ಜ್ಞಾನಯೋಗದಿಂದ ದಿವ್ಯ ಚಕ್ಷುಸ್ಸನ್ನು ಹೊಂದಿದ್ದೆ.
ಧೃತರಾಷ್ಟ್ರಃ
ಯಥಾಽನಾಥಾ ಜನಾಸ್ತಾತ ನಾಥವಂತಶ್ಚ ಪಾಂಡವ |
ಕಚ್ಚಿತ್ತೇಷಾಂ ಶರೀರಾಣಿ ಧಕ್ಷ್ಯಂತೇ ವಿಧಿಪೂರ್ವಕಮ್ ॥22॥
ಧೃತರಾಷ್ಟ್ರ ಮಗನೆ ಪಾಂಡುಪುತ್ರನೆ! ಕೆಲವರು ಅನಾಥರು ಮತ್ತೆ ಕೆಲವರು ಸನಾಥರು ಇವರೆಲ್ಲರಿಗೂ ವಿಧಿಪೂರ್ವಕವಾಗಿ ದಹನಕ್ರಿಯೆಯನ್ನು ನಡೆಸುವಿಯೆನು?
ಯುಧಿಷ್ಠಿರಃ
ನ ಯೇಷಾಂ ಶಾಂತಿಕರ್ತಾರೋ ನ ಚ ಯೇ ಹ್ಯಾಹಿತಾಗ್ನಯಃ |
ವಯಂ ತು ತೇಷಾಂ ಕುರ್ಮೋಽದ್ಯ ಬಹುತ್ವಾತ್ ತಾತ ಕರ್ಮಣಃ ॥
ಧರ್ಮರಾಜ ತಂದೆಯೇ! ಯಾರಿಗೆ ಉತ್ತರಕ್ರಿಯೆಯನ್ನು ಮಾಡುವವರು ಇಲ್ಲವೋ, ಯಾರು ಆಹಿತಾಗ್ನಿಗಳಲ್ಲವೊ ಬಹುಜನರಾದ್ದರಿಂದ ಅವರೆಲ್ಲರಿಗೂ ನಾವೇ ಉತ್ತರಕ್ರಿಯೆಯನ್ನು ಈಗ ಮಾಡುವೆವು.
ಯಾನ್ ಸುಪರ್ಣಾಶ್ಚ ಗೃಧ್ರಾಶ್ಚ ವಿಕರ್ಷಂತಿ ತತಸ್ತತಃ |
ತೇಷಾಂ ಸಂಕರ್ಷಣಾ ಲೋಕಾ ಭವಿಷ್ಯಂತಿ ನ ಸಂಶಯಃ ॥24॥
ಯಾರನ್ನು ಗರುಡಪಕ್ಷಿಗಳು ಹದ್ದುಗಳು ಮತ್ತೆ ಮತ್ತೆ ಎಳೆದಾಡಿವೆಯೋ ಅವರಿಗೆ ಸಂಕರ್ಷಣ ಲೋಕವು ಪ್ರಾಪ್ತವಾಗುವುದು, ಸಂದೇಹವಿಲ್ಲ.
ವೈಶಂಪಾಯನಃ
ಏವಮುಕತ್ವ ಮಹಾಪ್ರಾಜ್ಞಃ ಕುಂತೀಪುತ್ರೋ ಯುಧಿಷ್ಠಿರಃ |
ಆದಿದೇಶ ಸುಧರ್ಮಾಣಂ ಧೌಮ್ಯಂ ಸೂತಂ ಚ ಸಂಜಯಮ್ ॥25॥
ವಿದುರಂ ಚ ಮಹಾಬುದ್ಧಿಂ ಯುಯುತ್ಸುಂ ಚಾಪಿ ಕೌರವಮ್ |
ಇಂದ್ರಸೇನಮುಖಾನ್ ಭೃತ್ಯಾನ್ ಸೂತಾಂಶ್ಚೈವ ಚ ಸರ್ವಶಃ ॥26॥
ವೈಶಂಪಾಯನ ಮಹಾಜ್ಞಾನಿಯಾದ ಕುಂತೀಪುತ್ರನಾದ ಯುಧಿಷ್ಠಿರನು ಹೀಗೆ ಹೇಳಿ ಸುಧರ್ಮನಿಗೆ ಧೌಮ್ಯರಿಗೆ ಸೂತನಾದ ಸಂಜಯನಿಗೆ ಮಹಾಜ್ಞಾನಿಯಾದ ವಿದುರನಿಗೆ ಕೌರವನಾದ ಯುಯುತ್ಸುವಿಗೆ ಇಂದ್ರಸೇನ ಮುಂತಾದ ಭೃತ್ಯರಿಗೆ ಎಲ್ಲ ಸಾರಥಿಗಳಿಗೆ ಆಜ್ಞಾಪಿಸಿದನು.
ಯುಧಿಷ್ಠಿರಃ
ಭವಂತಃ ಕಾರಯನ್ತ್ವೇಷಾಂ ಪ್ರೇತಕಾರ್ಯಾಣಿ ಸರ್ವಶಃ |
ಯಥಾ ನಾಥವತಾಂ ಕಿಂಚಿಚ್ಛರೀರಂ ನ ವಿನಶ್ಯತೇ ॥27॥
ಧರ್ಮರಾಜ ನೀವು ಈ ಎಲ್ಲರಿಗೂ ಪ್ರೇತಕಾರ್ಯವನ್ನು ನಡೆಸಿರಿ, ವಾರಸುದಾರರ ಶರೀರಗಳಿಗೆ ಹೇಗೆ ನಾಶಗೊಳ್ಳದಂತೆ ಪ್ರೇತಕಾರ್ಯವನ್ನು ಮಾಡಲಾಗುವುದೋ ಹಾಗೆ ಇವರುಗಳಿಗೂ ಮಾಡುವುದು.
ವೈಶಂಪಾಯನಃ
ಶಾಸನಾದ್ಧರ್ಮರಾಜಸ್ಯ ಕ್ಷತ್ತಾ ಸೂತಶ್ಚ ಸಂಜಯಃ |
ಸುಧರ್ಮಾ ಧೌಮ್ಯಸಹಿತ ಇಂದ್ರಸೇನಾದಯಸ್ತಥಾ ॥28॥
ಚಂದನಾಗುರುಕಾಷ್ಠಾನಿ ತಥಾ ಕಾಲೇಯಕಾನ್ಯಪಿ |
ಘೃತಂ ತೈಲಂ ಚ ಗಂಧಾಂಶ್ಚ ಕ್ಷೌಮಾಣಿ ವಸನಾನಿ ಚ ॥29॥
ಸಮಾಹೃತ್ಯ ಮಹಾರ್ಹಾಣಿ ದಾರೂಣಾಂ ಚೈವ ಸಂಚಯಾನ್ |
ರಥಾಂಶ್ಚ ಮೃದಿತಾಂಸ್ತತ್ರ ನಾನಾಪ್ರಹರಣಾನಿ ಚ ॥30॥
ಚಿತಾಃ ಕೃತ್ವಾ ಪ್ರಯತ್ನೇನ ಯಥಾ ಮುಖ್ಯಾನ್ ನರಾಧಿಪಾನ್ |
ದಾಹಯಾಮಾಸುರವ್ಯಗ್ರಾ ವಿಧಿದೃಷ್ಟೇನ ಕರ್ಮಣಾ ॥31॥
ವೈಶಂಪಾಯನ ಧರ್ಮರಾಜನ ಶಾಸನದಿಂದ ವಿದುರ ಸೂತನಾದ ಸಂಜಯ ಸುಧರ್ಮ ಹಾಗೂ ಧೌಮ್ಯ ಇವರಿಂದ ಸೇರಿಕೊಂಡ ಇಂದ್ರಸೇನಾದಿಗಳು ಶ್ರೀಗಂಧದ ಕಟ್ಟಿಗೆಗಳನ್ನು ಕಾಲೀಯಕವನ್ನು (ಸುಗಂಧದ್ರವ್ಯ) ತುಪ್ಪ ಎಣ್ಣೆ ಗಂಧ ನುಣುಪಾದ ವಸ್ತ್ರಗಳನ್ನು ಭಾರೀ ಕಾಷ್ಠರಾಶಿಯನ್ನು ಅಲ್ಲಿಯೇ ಮುರಿದುಬಿದ್ದಿದ್ದ ರಥಗಳನ್ನು ನಾನಾ ಆಯುಧಗಳನ್ನು ಒಟ್ಟುಮಾಡಿ, ಪ್ರಯತ್ನದಿಂದ

ಚಿತೆಯನ್ನು ನಿರ್ಮಿಸಿ ಆದ್ಯತೆಯ ಅನುಸಾರ ರಾಜರೆಲ್ಲರನ್ನು ವಿಧ್ಯುಕ್ತಕ್ರಮದಲ್ಲಿ ಬೇಸರಿಸಿಕೊಳ್ಳದಂತೆ ದಹಿಸಿದರು.
ದುರ್ಯೋಧನಂ ಚ ರಾಜಾನಂ ಭ್ರಾತೄಂಶ್ಚಾಸ್ಯ ಮಹಾರಥಾನ್ |
ಶಲ್ಯಂ ಶಲಂ ಚ ರಾಜಾನಂ ಭೂರಿಶ್ರವಸಮೇವ ಚ ||32||
ಜಯದ್ರಥಂ ಚ ರಾಜಾನಮಭಿಮನ್ಯುಂ ಚ ಭಾರತ |
ದೌಃಶಾಸನಿಂ ಲಕ್ಷ್ಮಣಂ ಚ ಧೃಷ್ಟಕೇತುಂ ಚ ಭಾರತ ||33||
ಬೃಹದ್ಬಲಂ ಸೋಮದತ್ತಂ ಸೃಂಜಯಂ ಚ ಮಹಾರಥಮ್ |
ರಾಜಾನಂ ಕ್ಷೇಮಧನ್ವಾನಂ ವಿರಾಟದ್ರುಪದೌ ತಥಾ ||34||
ಶಿಖಂಡಿನಂ ಚ ಪಾಂಚಾಲ್ಯಂ ಧೃಷ್ಟದ್ಯುಮ್ನಂ ಚ ಭಾರತ |
ಯುಧಾಮನ್ಯುಂ ಚ ದುರ್ಧರ್ಷಮುತ್ತಮೌಜಸಮೇವ ಚ ||35||
ಕೋಸಲೇಂದ್ರಂ ದ್ರೌಪದೇಯಾನ್ ಶಕುನಿಂ ಚೈವ ಸೌಬಲಮ್ |
ಅಚಲಂ ವೃಷಕಂ ಚೈವ ಭಗದತ್ತಂ ಚ ಭಾರತ ||36||
ಕರ್ಣಂ ವೈಕರ್ತನಂ ಚೈವ ಸಹಪುತ್ರಮಮರ್ಷಣಮ್ |
ಕೇಕಯಾಂಶ್ಚ ಮಹೇಷ್ವಾಸಾನ್ ತ್ರಿಗರ್ತಾಂಶ್ಚ ಮಹಾರಥಾನ್ ||37||
ಘಟೋತ್ಕಚಂ ರಾಕ್ಷಸೇಂದ್ರಂ ಬಕಭ್ರಾತರಮೇವ ಚ |
ಅಲಂಬುಸಂ ಚ ರಾಜಾನಂ ಜಲಸಂಧಂ ಚ ಪಾರ್ಥಿವಮ್ ||38||
ಅನ್ಯಾಂಶ್ಚ ಪಾರ್ಥಿವಾನ್ ಶೂರಾನ್ ಶತಶೋಽಥ ಸಹಸ್ರಶಃ |
ಘೃತಧಾರಾಹುತೈರ್ದೀಪ್ತೈಃ ಪಾವಕೈಃ ಸಮದಾಹಯನ್ ||39||
ಭರತಕುಲೋತ್ಪನ್ನನೇ! ರಾಜನಾದ ದುರ್ಯೋಧನನನ್ನು ಮಹಾರಥಿಕರಾದ ಆತನ ಸಹೋದರರನ್ನು ಶಲ್ಯನನ್ನು ಶಲನನ್ನು ರಾಜನಾದ ಭೂರಿಶ್ರವಸ್ನನ್ನು ರಾಜನಾದ ಜಯದ್ರಥನನ್ನು ಅಭಿಮನ್ಯುವನ್ನು ದುಃಶಾಸನನ ಮಗನನ್ನು ಲಕ್ಷಣನನ್ನು ಧೃಷ್ಟಕೇತುವನ್ನು ಬೃಹದ್ಬಲನನ್ನು ಮಹಾರಥಿಕನಾದ ಸಂಜಯನನ್ನು ರಾಜನಾದ ಕ್ಷೇಮಧನ್ವನನ್ನು ವಿರಾಟ-ದ್ರುಪದರನ್ನು ಶಿಖಂಡಿಯನ್ನು ಪಾಂಚಾಲಾಧಿಪನಾದ ಧೃಷ್ಟದ್ಯುಮ್ನನನ್ನು ಉತ್ತಮ ಪರಾಕ್ರಮಿಯಾದ ಧರ್ಷಣಕ್ಕೆ ಒಳಗಾಗದ ಉತ್ತಮೌಜನನ್ನು ಕೋಸಲದ ಅಧಿಪತಿಯನ್ನು ದ್ರೌಪದಿಯ ಮಕ್ಕಳನ್ನು ಸುಬಲದೇಶದ ಶಕುನಿಯನ್ನು ಅಚಲನನ್ನು ವೃಷಕನನ್ನು ಭಗದತ್ತನನ್ನು ಕೋಪಿಯಾದ ಪುತ್ರಸಹಿತನಾದ ಸೂರ್ಯಪುತ್ರ ಕರ್ಣನನ್ನು ದೊಡ್ಡಬಿಲ್ಲಾಳುಗಳಾದ ಕೇಕಯದೇಶದ ರಾಜಕುಮಾರರನ್ನು ಮಹಾರಥಿಕರಾದ ತ್ರಿಗರ್ತದ ರಾಜಕುಮಾರರನ್ನು ರಾಕ್ಷಸೇಂದ್ರನಾದ ಘಟೋತ್ಕಚನನ್ನು ಬಕಾಸುರನ ಸಹೋದರನಾದ ಅಲಂಬುಸನನ್ನು ರಾಜನಾದ ಜಲಸಂಧನನ್ನು ಇನ್ನೂ ಬೇರೆಯವರಾದ ಶೂರರಾದ ಸಾವಿರಾರು ಭೂಮಿಯ ಒಡೆಯರನ್ನು ತುಪ್ಪದ ಧಾರೆಯ ಆಹುತಿಗಳಿಂದ ಜ್ವಲಿತವಾದ ಅಗ್ನಿಗಳಿಂದ ದಹಿಸಿದರು.
ಪಿತೃಮೇಧಾಂಶ್ಚ ಕೇಷಾಂಚಿತ್ ಪಾರ್ಥಿವಾನಾಂ ಮಹಾತ್ಮನಾಮ್ |
ಸಾಮಾನಿ ಚಾನ್ವಗೀಯಂತ ತೇಽನ್ವಶಾಸತ ಚಾಪರೇ||40||
ಮಹಾತ್ಮರಾದ ಕೆಲವು ಭೂಮಿಯ ಒಡೆಯರಿಗೆ ಪಿತೃಮೇಧಕ ವಿಧಿಯಿಂದ ಉತ್ತರಕ್ರಿಯೆಗಳನ್ನು ಮಾಡಿದರು, ಸಾಮಮಂತ್ರಗಳನ್ನು ಹಾಡಿದರು, ಮತ್ತೆ ಕೆಲವರು ಅವರುಗಳನ್ನು ಅನುಸರಿಸಿ ಕ್ರಿಯೆಗಳನ್ನು ಮಾಡಿದರು.
ಸಾಮ್ನಾಮೃಚಾಂ ಚ ನಾದೇನ ಸ್ತ್ರೀಣಾಂ ಚ ರುದಿತಸ್ವನೈಃ |
ಕಶ್ಮಲಂ ಸರ್ವಭೂತಾನಾಂ ತದಾನೀಮನ್ವಪದ್ಯತ ||41||
ಋಕ್ ಮತ್ತು ಸಾಮಗಳ ಗಾನದಿಂದ ಹೆಣ್ಣುಮಕ್ಕಳ ರೋದನದ ಶಬ್ದದಿಂದ ಆಗ ಎಲ್ಲ ಪ್ರಾಣಿಗಳು ವ್ಯಾಕುಲವಾದವು.
ಹುತಾಶ್ಚ ತತ್ರ ದೀಪ್ತಾಶ್ಚ ದೀಪ್ಯಮಾನಾಶ್ಚ ಪಾವಕಾಃ |
ನಭಸೀವಾನ್ವದೃಶ್ಯಂತ ಗ್ರಹಾಸ್ತನ್ವಭ್ರಸಂವೃತಾಃ ||42||
ಉರಿಯುತ್ತಿರುವ ಧಗಧಗಿಸುತ್ತಿರುವ ಪ್ರಜ್ವಸುಸಿತ್ತಿರುವ ಚಿತಾಗ್ನಿಗಳು, ಮೋಡದಿಂದ ಆವೃತವಾದ ಗಗನದಲ್ಲಿನ ಗ್ರಹಗಳಂತೆ ಭಾಸವಾಗುತ್ತಿದ್ದವು.
ಯೇ ಚಾಪ್ಯನಾಥಾಸ್ತತ್ರಾಸನ್ ನಾನಾದೇಶಸಮಾಗತಾಃ ||43||
ತಾಂಶ್ಚ ಸರ್ವಾನ್ ಸಮಾನೀಯ ರಾಶೀನ್ ಕೃತ್ವಾ ಸಹಸ್ರಶಃ |
ಚಿತಾದಾರುಭಿರತ್ಯುಗ್ರೈಃ ಪ್ರಭೂತಸ್ನೇಹಮೂರ್ಚ್ಛಿತೈಃ ||44||
ದಾಹಯಾಮಾಸ ವಿದುರೋ ಧರ್ಮರಾಜಸ್ಯ ಶಾಸನಾತ್ ||45||
ಅಲ್ಲಿ ನಾನಾದೇಶಗಳಿಂದ ಬಂದ ಸೇನಾನಿಗಳ ಶವಗಳು ವಾರಸುದಾರರು ಇಲ್ಲದೇ ಬಿದ್ದಿದ್ದವು. ಧರ್ಮರಾಜನ ಆದೇಶದಂತೆ ವಿದುರನು (ಆ ಶವಗಳನ್ನು) ಸಾವಿರಾರು ರಾಶಿಗಳನ್ನಾಗಿಸಿ ಹೆಚ್ಚು ಎಣ್ಣೆಯಿಂದ ನೆನೆಸಿ ತುಂಬಾ ಕಟ್ಟಿಗೆಗಳನ್ನು ಸೇರಿಸಿ ಸುಡಿಸಿದನು.
ಕಾರಯಿತ್ವಾ ಕ್ರಿಯಾಸ್ತೇಷಾಂ ಕುರುರಾಜೋ ಯುಧಿಷ್ಠಿರಃ |
ಧೃತರಾಷ್ಟ್ರಂ ಪುರಸ್ಕೃತ್ಯ ಗಂಗಾಮಭಿಮುಖೋಽಗಮತ್ ||46||
(ಮೃತರಿಗೆ ಉತ್ತರ)ಕ್ರಿಯೆಯನ್ನು ಪೂರ್ಣಗೊಳಿಸಿ ಕುರುರಾಜನಾದ ಯುಧಿಷ್ಠಿರನು ಧೃತರಾಷ್ಟ್ರನನ್ನು ಮುಂದೆಮಾಡಿಕೊಂಡು ಗಂಗೆಯ ಕಡೆಗೆ ಸಾಗಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಷಟ್ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ಇಪ್ಪತ್ತೇಳನೆಯ ಅಧ್ಯಾಯ
ಮೃತರಿಗೆ ತರ್ಪಣವನ್ನೀಯಲು ಧೃತರಾಷ್ಟ್ರಾದಿಗಳು ಗಂಗಾತೀರಕ್ಕೆ ತೆರಳುವುದು, ತರ್ಪಣವನ್ನು ಈಯುವ ಸಂದರ್ಭದಲ್ಲಿ ಕುಂತಿಯು, ಕರ್ಣನು ತನ್ನ
ಪುತ್ರ ಎಂದು ಧರ್ಮರಾಜಾದಿಗಳಿಗೆ ತಿಳಿಸುವುದು, ಧೃತರಾಷ್ಟ್ರಾದಿಗಳು
ತಮ್ಮ ತಮ್ಮ ಬಂಧುಗಳಿಗೆ ತರ್ಪಣವನ್ನು ನೀಡಿದರು.
ವೈಶಂಪಾಯನಃ
ತೇ ಸಮಾಸಾದ್ಯ ಗಂಗಾಂ ತು ಶಿವಾಂ ಪುಣ್ಯಜಲಾನ್ವಿತಾಮ್ |
ಹ್ರಾದಿನೀಂ ವಪ್ರಸಂಪನ್ನಾಂ ಮಹಾನೂಪಾಂ ಮಹಾವನಾಮ್ ||1||
ಭೂಷಣಾನ್ಯುತ್ತರೀಯಾಣಿ ವೇಷ್ಟನಾನ್ಯವಮುಚ್ಯ ಚ |
ಕವಚಾನಿ ವಿಚಿತ್ರಾಣಿ ಗಂಗಾಮವಜಗಾಹಿರೇ ||2||
ವೈಶಂಪಾಯನ ಅವರು ಮಂಗಳಕರವಾದ ಜಲದಿಂದ ಕೂಡಿರುವ ಶುಭಕರವಾದ ಮಡುಗಳಿಂದ ಯುಕ್ತವಾಗಿರುವ ವಿಶಾಲವಾದ ಕಾಡಿನಿಂದ ಸುತ್ತುವರೆದಿರುವ ಗಂಗೆಯನ್ನು ಸೇರಿ, ಭೂಷಣಗಳನ್ನು ಉತ್ತರೀಯವಸ್ತ್ರಗಳನ್ನು ಕಟಿಬಂಧಗಳನ್ನು ವಿಚಿತ್ರವಾದ ಕವಚಗಳನ್ನು ಕಳಚಿ ಗಂಗೆಯಲ್ಲಿ ಮುಳುಗಿ ಸ್ನಾನ ಮಾಡಿದರು.
ತತಃ ಪಿತೄಣಾಂ ಪುತ್ರಾಣಾಂ ಗುರೂಣಾಂ ಸ್ವಜನಸ್ಯ ಚ |
ಭ್ರಾತೄಣಾಮಾರ್ಯಕಾಣಾಂ ಚ ಪತೀನಾಂ ಚ ಕುರುಸ್ತ್ರಿಯಃ ||3||
ಉದಕಂ ಚಕ್ರಿರೇ ಸರ್ವಾ ರುದಂತ್ಯೋ ಭೃಶದುಃಖಿತಾಃ ||4||
ಅನಂತರದಲ್ಲಿ ತುಂಬಾ ದುಃಖಿತರಾದ ಎಲ್ಲ ಕುರುಮಹಿಳೆಯರು ರೋದಿಸುತ್ತಾ ತಂದೆಯರಿಗೆ ಮಕ್ಕಳಿಗೆ ಗುರುಗಳಿಗೆ ತಮ್ಮ ಅನುಬಂಧಿಗಳಿಗೆ ಸಹೋದರರಿಗೆ ಪೂಜ್ಯರಿಗೆ ಗಂಡಂದಿರಿಗೆ ಜಲತರ್ಪಣವನ್ನು ಇತ್ತರು.
ಸುಹೃದಾಂ ಚಾಪಿ ಧರ್ಮಜ್ಞಾಃ ಪ್ರಚಕ್ರುಃ ಸಲಿಲಕ್ರಿಯಾಃ ||5||
ಧರ್ಮವನ್ನು ತಿಳಿದ ಆ ಸ್ತ್ರೀಯರು ಸ್ನೇಹಿತರಿಗೂ ಸಹ ಜಲತರ್ಪಣವನ್ನು ಇತ್ತರು.
ಉದಕೇ ಕ್ರಿಯಮಾಣೇ ತು ವೀರಾಣಾಂ ವೀರಪತ್ನಿಭಿಃ |
ಸೂಪತೀರ್ಥಾಽಭವದ್ ಗಂಗಾ ಭೂಯೋ ವಿಪ್ರಸಸಾರ ಚ ||6||
ವೀರಪತ್ನಿಯರು ವೀರರಿಗೆ ಜಲತರ್ಪಣವನ್ನು ನೀಡಲು, ಗಂಗೆಯು (ಆ ಮೃತರಿಗೆ ಉತ್ತಮಲೋಕವನ್ನು ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ಬ್ರಹ್ಮಾಂಡದಲ್ಲಿರುವ ಎಲ್ಲ ತೀರ್ಥಗಳಿಂದ ಕೂಡಿದವಳಾದಳು) ಸೂಪತೀರ್ಥಳು ಆದಳು, ಹೆಚ್ಚು ವೇಗದಿಂದಲೂ ಪ್ರವಹಿಸಿದಳು.
ತನ್ಮಹೋದಧಿಸಂಕಾಶಂ ನಿರಾನಂದನಿರುತ್ಸವಮ್ |
ವೀರಪತ್ನೀಭಿರಾಕೀರ್ಣಂ ಗಂಗಾತೀರಮಶೋಭತ ||7||
ದೊಡ್ಡ ಸಮುದ್ರದಂತಿರುವ ವೀರಪತ್ನಿಯರು ಜಮಾಯಿಸಿದ ಗಂಗೆಯ ತೀರವು ಲವಲವಿಕೆಯಿಲ್ಲದೆಯೂ ಸಂಭ್ರಮ ರಹಿತವಾಗಿಯೂ ತೋರಿತು.
ತತಃ ಕುಂತೀ ಮಹಾರಾಜ ರುದಂತೀ ಶೋಕಕರ್ಶಿತಾ |
ವ್ರೀಡಯಾ ಮಂದಯಾ ವಾಚಾ ಪುತ್ರಾನ್ ವಚನಮಬ್ರವೀತ್ ||8||
ಮಹಾರಾಜ! ಅನಂತರದಲ್ಲಿ ಕುಂತಿಯು ಶೋಕದಿಂದ ಬಳಲಿ ರೋದಿಸುತ್ತಾ ನಾಚಿಕೆಯಿಂದ ಮೆದು ಧ್ವನಿಯಿಂದ ಮಕ್ಕಳನ್ನು ಉದ್ದೇಶಿಸಿ ಮಾತೊಂದನ್ನು ಹೇಳಿದಳು.
ಕುಂತೀ
ಯಃ ಸ ಶೂರೋ ಮಹೇಷ್ವಾಸೋ ರಥಯೂಥಪಯೂಥಪಃ |
ಅರ್ಜುನೇನ ಹತಃ ಸಂಖ್ಯೇ ವೀರಲಕ್ಷಣಲಕ್ಷಿತಃ ||9||
ಯಂ ಸೂತಪುತ್ರಂ ಮನ್ಯಧ್ವಂ ರಾಧೇಯ ಇತಿ ಪಾಂಡವಾಃ |
ಯೋ ವ್ಯರಾಜಚ್ಚಮೂಮಧ್ಯೇ ದಿವಾಕರ ಇವ ಪ್ರಭುಃ ||10||
ಅತ್ಯರಿಚ್ಯತ ಯಃ ಸರ್ವಾನ್ ಪುರಾ ವಃ ಸಪದಾನುಗಾನ್ |
ದುರ್ಯೋಧನಬಲಂ ಸರ್ವಂ ಯಃ ಪ್ರಕರ್ಷನ್ ವ್ಯರೋಚತ ||11||
ಯಸ್ಯ ನಾಸ್ತಿ ಸಮೋ ಲೋಕೇ ಪೃಥಿವ್ಯಾಮಪಿ ಕಶ್ಚನ |
ಯೋಽವೃಣೀತ ಯಶಃ ಶೂರಃ ಪ್ರಾಣೈರಪಿ ಸದಾ ಭುವಿ ||12||
ಸತ್ಯಸಂಧಸ್ಯ ಶೂರಸ್ಯ ಸಂಗ್ರಾಮೇಷ್ವಪಲಾಯಿನಃ |
ಕುರುಧ್ವಮುದಕಂ ತಸ್ಯ ಭ್ರಾತುರಕ್ಲಿಷ್ಟಕರ್ಮಣಃ ||13||
ಕುಂತಿ ಯಾವನು ಶೂರನೊ ದೊಡ್ಡಬಿಲ್ಲಾಳೋ ರಥಿಕರ ರಥಿಕನೊ ಯುದ್ಧದಲ್ಲಿ ಅರ್ಜುನನಿಂದ ಸಾವನ್ನು ಅಪ್ಪಿದನೊ ವೀರರ ಲಕ್ಷಣಗಳಿಂದ ಕೂಡಿದ್ದನೊ, ಪಾಂಡು ಪುತ್ರರೆ! ನೀವು ಯಾವನನ್ನು ಸೂತಪುತ್ರ ರಾಧೆಯ ಪುತ್ರ ಎಂದು ತಿಳಿದಿದ್ದಿರೊ ಯಾವನು ಸೈನ್ಯದ ಮಧ್ಯದಲ್ಲಿ ಸ್ವಾಮಿ ಸೂರ್ಯನಂತೆ ಪ್ರಕಾಶಮಾನನಾಗಿದ್ದನೋ, ಹಿಂದೆ (ಯುದ್ಧದಲ್ಲಿ) ಸಹಾಯಕರಿಂದ ಕೂಡಿಕೊಂಡು ಎಲ್ಲರಿಂದಲೂ ಮಿಗಿಲಾಗಿದ್ದನೊ ದುರ್ಯೋಧನನ ಸಮಸ್ತ ಬಲವನ್ನು ಮುಂದೆ ಸಾಗಿಸುತ್ತ ಪ್ರಕಾಶಿಸಿದನೊ, ಈ ಭೂಲೋಕದಲ್ಲಿ ಯಾರಿಗೆ ಯಾವೊಬ್ಬನೂ (ಅವನಿಗೆ) ಸಮನಲ್ಲವೋ ಯಾವ ಶೂರನು ಸದಾ ಭೂಮಿಯಲ್ಲಿ ಪ್ರಾಣಕ್ಕಿಂತಲೂ (ಹೆಚ್ಚೆಂದು) ಕೀರ್ತಿಯನ್ನೇ ವರಿಸುತ್ತಿದ್ದನೊ, ಸತ್ಯಸಂಧನಾದ ಶೂರನಾದ ಯುದ್ಧದಲ್ಲಿ ಬೆನ್ನು ಮಾಡದ ದುಃಶಕ್ಯವಾದ ಕೆಲಸವನ್ನು ಮಾಡುತ್ತಿದ್ದ

(ನಿಮ್ಮ) ಸೋದರನಿಗೆ ತರ್ಪಣವನ್ನು ನೀಡಿ.
ಸ ಹಿ ತೇ ಪೂರ್ವಜೋ ಭ್ರಾತಾ ಭಾಸ್ಕರಾನ್ಮಯ್ಯಜಾಯತ |
ಕುಂಡಲೀ ಕವಚೀ ಶೂರೋ ದಿವಾಕರಸಮಪ್ರಭಃ ॥14॥
ಆತನು ನಿಮ್ಮ ಹಿರಿಯ ಅಣ್ಣ, ನನ್ನಲ್ಲಿ ಸೂರ್ಯದೇವನಿಂದ ಹುಟ್ಟಿದ್ದನು, ಕುಂಡಲ ಸಹಿತನಾಗಿ ಕವಚಸಹಿತನಾಗಿ ಇದ್ದ ಶೂರನು ಸೂರ್ಯನ ಸಮವಾದ ಕಾಂತಿಯನ್ನು ಹೊಂದಿದ್ದನು.
ವೈಶಂಪಾಯನಃ
ಶ್ರುತ್ವಾ ತು ಪಾಂಡವಾಃ ಸರ್ವೇ ಮಾತುರ್ವಚನಮಪ್ರಿಯಮ್ |
ಕರ್ಣಮೇವಾಭ್ಯರೋಚಂತ ಭೂಯಶ್ಚಾತ್ಯಾತುರಾ ಭವನ್ ॥15॥
ವೈಶಂಪಾಯನ ಎಲ್ಲ ಪಾಂಡುಪುತ್ರರು ಅಪ್ರಿಯವಾದ ತಾಯಿಯ ಮಾತನ್ನು ಕೇಳಿ ಕರ್ಣನಿಗಾಗಿ ದುಃಖಿಸಿದರು ಮತ್ತು ಅತ್ಯಂತ ಆತುರರಾದರು.
ತತಃ ಸ ಪುರುಷವ್ಯಾಘ್ರಃ ಕುಂತೀಪುತ್ರೋ ಯುಧಿಷ್ಠಿರಃ |
ಉವಾಚ ಮಾತರಂ ವೀರೋ ನಿಃಶ್ವಸನ್ನಿವ ಪನ್ನಗಃ ॥16॥
ಅನಂತರದಲ್ಲಿ ಆ ಪುರುಷಶ್ರೇಷ್ಠನಾದ ಕುಂತೀಪುತ್ರನಾದ ವೀರನಾದ ಯುಧಿಷ್ಠಿರನು ಹಾವಿನಂತೆ ಭುಸುಗುಟ್ಟುತ್ತಾ ತಾಯಿಯನ್ನು ಉದ್ದೇಶಿಸಿ ನುಡಿದನು.
ಯುಧಿಷ್ಠಿರಃ
ಯಃ ಶರೋರ್ಮಿಧ್ವಜಾವರ್ತೋ ಮಹಾಭುಜಮಹಾಗ್ರಹಃ |
ತಳಶಬ್ದಾನುನದಿತೋ ಮಹಾರಥಮಹಾದ್ರುಮಃ ॥17॥
ಯಸ್ಯೇಷುಪಾತಮಾಸಾದ್ಯ ಕೋಽನ್ಯಸ್ತಿಷ್ಠೇದ್ಧನಂಜಯಾತ್ ॥18॥
ಕಥಂ ಪುತ್ರೋ ಭವತ್ಯಾಽಽಶು ದೇವಗರ್ಭಃ ಪುರಾಽಭವತ್ |
ಕುಂಡಲೀ ಕವಚೀ ಶೂರೋ ದಿವಾಕರಸಮಪ್ರಭಃ ॥19॥
ಯಸ್ಯ ಬಾಹುಪ್ರತಾಪೇನ ತಾಪಿತಾಃ ಸರ್ವತೋ ವಯಮ್ |
ತಮಗ್ನಿರಿವ ವಸ್ತ್ರೇಣ ಕಥಂ ಛಾದಿತವತ್ಯಸಿ ॥20॥
ಯುಧಿಷ್ಠಿರ ಬಾಣಗಳೆಂಬ ತೆರೆಯಿಂದ ಧ್ವಜವೆಂಬ ಸುಳಿಯಿಂದ (ತನ್ನ) ದೊಡ್ಡಭುಜಗಳೆಂಬ ಮೊಸಳೆಗಳಿಂದ ಬಿಲ್ಲಿನ ಹಗ್ಗದ ಝೇಂಕಾರವೆಂಬ ಪ್ರಖರಶಬ್ದದಿಂದ ಮಹಾರಥವೆಂಬ ಮೋಡದಿಂದ ಯುಕ್ತವಾದ (ಸಮುದ್ರನು ಕರ್ಣ), ಅರ್ಜುನನ ಹೊರತಾಗಿ ಮತ್ತಾರೂ ಯಾರ ಬಾಣದ ಎದುರು ನಿಲ್ಲಲು ಶಕ್ಯವಿರಲಿಲ್ಲವೋ ಅಂತಹ ಶೂರನಾದ ದೇವಸದೃಶನಾದ (ಹುಟ್ಟುವಾಗಲೇ) ಕುಂಡಲಗಳನ್ನು ಕವಚವನ್ನು ಧರಿಸಿದ್ದ ಸೂರ್ಯನಿಗೆ ಸಮವಾದ ಕಾಂತಿಯನ್ನು ಹೊಂದಿದ್ದ ಕರ್ಣನು ಹಿಂದೆ ಹೇಗೆ ನಿನ್ನ ಪುತ್ರನಾಗಿ ಜನಿಸಿದನು? ಯಾರ ಬಾಹುಬಲದಿಂದ ನಾವೆಲ್ಲರೂ ಪರಿತಪ್ತರಾದೆವೊ ಆತನನ್ನು ವಸ್ತ್ರದಿಂದ ಬೆಂಕಿಯನ್ನು ಮುಚ್ಚಿಡುವುದು ಹೇಗೆ ಶಕ್ಯವಿಲ್ಲವೋ (ಅಂತಹವನನ್ನು) ಹೇಗೆ ಮರೆಮಾಚಿದ್ದಿ?
ಯಸ್ಯ ಬಾಹುಪ್ರಭಾವೇನ ವೈರಮಸ್ಮಾಸ್ವರೋಚಯತ್ |
ಸುಯೋಧನಸ್ತು ತಂ ಜ್ಯೇಷ್ಠಂ ಕಥಂ ನೋದಿತವತ್ಯಸಿ ॥21॥
ಯಾವಾತನ ಬಾಹುಬಲದಿಂದ ದುರ್ಯೋಧನನು ನಮ್ಮಲ್ಲಿ ವೈರವನ್ನು ಮಾಡುತ್ತಿದ್ದನೋ ಅಂತಹ ಅಣ್ಣನ ವಿಷಯವನ್ನು ಏಕೆ ಹೇಳಲಿಲ್ಲ?
ತಥಾ ಕರ್ಣಂ ಮಹೇಶ್ವಾಸಂ ಧಾರ್ತರಾಷ್ಟ್ರೈರುಪಾಸಿತಮ್ |
ಉಪಾಸಿತಂ ಯಥಾಽಸ್ಮಾಭಿರ್ಬಲಂ ಗಾಂಡೀವಧನ್ವನಃ ॥22॥
ನಾವು ಹೇಗೆ ಗಾಂಡಿವಧನುರ್ಧಾರಿಯನ್ನು ಆಧರಿಸಿಕೊಂಡಿದ್ದೆವೋ ಹಾಗೆ ದೊಡ್ಡಬಿಲ್ಲಾಳಾದ ಕರ್ಣನನ್ನು ಧೃತರಾಷ್ಟ್ರನ ಪುತ್ರರು ಆಶ್ರಯಿಸಿದ್ದರು.
ಭೂಮಿಪಾನಾಂ ಚ ಸರ್ವೇಷಾಂ ಲೋಕೇ ಬಲವತಾಂ ವರಮ್ |
ನಾನ್ಯಃ ಕುಂತೀಸುತಾಜ್ಜಿಷ್ಣೋರ್ನಿಹನ್ಯಾದ್ ರಥಿನೋ ರಥೀ ॥23॥
ಈ ಜಗದಲ್ಲಿ ಬಲಿಷ್ಠರಾದ ಎಲ್ಲ ಭೂಮಿಪಾಲರಿಂದ ಶ್ರೇಷ್ಠನಾದ ರಥಿಕರ ರಥಿಕನಾದ ಕರ್ಣನನ್ನು ಕುಂತೀಪುತ್ರನಾದ ಅರ್ಜುನನ ಹೊರತಾಗಿ ಮತ್ತಾರು ಸಂಹರಿಸುತ್ತಿದ್ದರು?
ಸ ನಃ ಪ್ರಥಮಜೋ ಭ್ರಾತಾ ಸರ್ವಶಸ್ತ್ರಭೃತಾಂ ವರಃ |
ಅಸೂತ ತಂ ಭವತ್ಯಗ್ರೇ ಕಥಮದ್ಭುತವಿಕ್ರಮಮ್ ॥24॥
ಎಲ್ಲ ಶಸ್ತ್ರಧಾರಿಗಳಿಂದ ಉತ್ತಮನಾದ ನಮ್ಮ ದೊಡ್ಡ ಅಣ್ಣನು, ಅಂತಹ ಮಹಾಪರಾಕ್ರಮಿಯನ್ನು ನೀನು ಮೊದಲು ಹೇಗೆ ಹೆತ್ತಿರುವಿ?
ಅಹೋ ಭವತ್ಯಾ ಮಂತ್ರೇಣ ಗೃಹೀತೇನ ವಯಂ ಹತಾಃ |
ನಿಧನೇನ ಹಿ ಕರ್ಣಸ್ಯ ಪೀಡಿತಾಃ ಸಹಬಾಂಧವಾಃ ॥25॥
ಅಯ್ಯೋ! ನಿನ್ನ ಗುಟ್ಟಿನಿಂದ ನಾವು ಮೃತರಾದೆವು, ಕರ್ಣನ ಸಾವಿನಿಂದ ಬಂಧುಗಳಿಂದ ಕೂಡಿದ ನಾವು ಪೀಡೆಗೆ ಒಳಗಾದೆವು.
ಅಭಿಮನ್ಯೋರ್ವಿನಾಶಾದ್ಧಿ ದ್ರೌಪದೇಯವಧಾದಪಿ |
ಪಾಂಚಾಲಾನಾಂ ವಧಾಚ್ಚಾಪಿ ಕುರೂಣಾಂ ಘಾತನಾದಪಿ ॥26॥
ತತಃ ಶತಗುಣಂ ದುಃಖಮಿದಮಾಪತಿತಂ ಮಹತ್ ॥27॥

ಅಭಿಮನ್ಯುವಿನ ಸಾವಿಗಿಂತಲೂ ದ್ರೌಪದಿಯ ಮಕ್ಕಳ ಸಾವಿಗಿಂತಲೂ ಪಾಂಚಾಲರ ಸಾವಿಗಿಂತಲೂ ಕೌರವರ ಸಾವಿಗಿಂತಲೂ ನೂರುಪಟ್ಟು ಹೆಚ್ಚು ದುಃಖವು ಬಂದೊದಗಿತು.
ಕರ್ಣಮೇವಾನುಶೋಚಾಮಿ ದಹ್ಯಾಮ್ಯಗ್ನಾವಿವಾಹಿತಃ |
ನ ಚ ಮೇ ಕಿಂಚಿದಪ್ರಾಪ್ಯಂ ಭವೇದಪಿ ದಿವಿ ಸ್ಥಿತಮ್ ॥28॥
ನ ಚ ಸ್ಮ ವೈಶಸಂ ಘೋರಂ ಕೌರವಾಣಾಂ ಕೃತಂ ಭವೇತ್ ॥29॥
ಕರ್ಣನ ಬಗ್ಗೆ ಚಿಂತಿಸುವೆ, ಬೆಂಕಿಯಲ್ಲಿ ದೂಡಿಸಿಕೊಂಡವನಂತೆ ಪರಿತಪಿಸುತ್ತಿರುವೆನು, ನನಗೆ ಹೊಂದಲಾಗದ್ದು ಯಾವುದೂ ಇರಲಿಲ್ಲ, ಸ್ವರ್ಗದಲ್ಲಿದ್ದರೂ (ಆ ಪದಾರ್ಥವನ್ನು) ಹೊಂದುತ್ತಿದ್ದೆ, ಕೌರವರನ್ನು ಕತ್ತರಿಸುವ ಘೋರಕತ್ಯವೇ (ಕರ್ಣನು ನಮ್ಮ ಅಣ್ಣ ಎಂದು ಮೊದಲೇ ತಿಳಿದಿದ್ದರೆ) ನಡೆಯುತ್ತಿರಲಿಲ್ಲ.
ವೈಶಂಪಾಯನಃ
ಏವಂ ವಿಲಪ್ಯ ಕರುಣಂ ಧರ್ಮರಾಜೋ ಯುಧಿಷ್ಠಿರಃ |
ವದನ್ ಸ ಶನಕೈ ರಾಜನ್ ಚಕಾರಾಸ್ಯೋದಕಂ ಪ್ರಭುಃ ॥30॥
ವೈಶಂಪಾಯನ ರಾಜನೆ! ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನು ಈ ರೀತಿಯ ಕರುಣಾಜನಕವಾಗುವಂತೆ ರೋದಿಸಿ, (ಆತನ ವಿಷಯವನ್ನು) ಮೆತ್ತಗೆ ಹೇಳಿ, ಸ್ವಾಮಿಯಾದ ಧರ್ಮಜನು ತರ್ಪಣವನ್ನು ನೀಡಿದನು.
ತತೋ ವಿನೇದುಃ ಸಹಸಾ ಸ್ತ್ರಿಯಃ ಪುಂಭಿಶ್ಚ ಸರ್ವಶಃ |
ಅಭಿತೋ ಯಾಃ ಸ್ಥಿತಾಸ್ತತ್ರ ತಸ್ಮಿನ್ನುದಕಕರ್ಮಣಿ ॥31॥
ಅನಂತರದಲ್ಲಿ ಸುತ್ತಲೂ ಅಲ್ಲಿ ಆ ತರ್ಪಣಕ್ರಿಯೆಗಾಗಿ ಜಮೆಯಾಗಿದ್ದರೋ ಆ ಎಲ್ಲ ಸ್ತ್ರೀಯರು ಪುರುಷರು ಗಟ್ಟಿಯಾಗಿ ರೋದಿಸಿದರು.
ತತಃ ಸಮಾನಯಾಮಾಸ ಕರ್ಣಸ್ಯ ಚ ಪರಿಚ್ಛದಮ್ |
ಸ್ತ್ರಿಯಃ ಕುರುಪತಿಃ ಶ್ರೀಮಾನ್ ಪ್ರೇಮ್ಣಾ ಭ್ರಾತುರ್ಯುಧಿಷ್ಠಿರಃ ॥32॥
ಅನಂತರದಲ್ಲಿ ಕಾಂತಿಮಂತನಾದ ಕುರುಪತಿಯಾದ ಯುಧಿಷ್ಠಿರನು ಅಣ್ಣನಾದ ಕರ್ಣನ ಪರಿವಾರದವರನ್ನು ಪತ್ನಿಯರನ್ನು ಕರೆಸಿದನು.
ಸ ತಾಭಿಃ ಸಹ ಧರ್ಮಾತ್ಮಾ ಪ್ರೇತಕಾರ್ಯಮನಂತರಮ್ |
ಕೃತ್ವೋತ್ತತಾರ ಗಂಗಾಯಾಃ ಸಲಿಲಾದ್ವ್ಯಾಕುಲೇಂದ್ರಿಯಃ ॥33॥
ಕಳವಳಗೊಂಡ ಇಂದ್ರಿಯನಾದ ಧರ್ಮಾತ್ಮನು ಅವರೆಲ್ಲರಿಂದ ಕೂಡಿಕೊಂಡು ಆನಂತರದ ಪ್ರೇತಕಾರ್ಯಗಳನ್ನು ಮುಗಿಸಿ ಗಂಗೆಯಿಂದ ಮೇಲೆದ್ದನು.
ಸರ್ವಂ ಚಕಾರ ಕರ್ಣಸ್ಯ ವಿಧಿವದ್ ಭೂರಿದಕ್ಷಿಣಮ್ ॥34॥
ಕರ್ಣನಿಗಾಗಿ ವಿಧೀ-ಶಾಸ್ತ್ರಾನುಸಾರವಾಗಿ ಭಾರಿ ದಕ್ಷಿಣೆಯನ್ನು ನೀಡುವುದೇ ಮುಂತಾದ ಎಲ್ಲವನ್ನೂ ಮಾಡಿದನು.
ಪಾಪೇನಾಽಸೌ ಮಯಾ ಶ್ರೇಷ್ಠೋ ಭ್ರಾತಾ ಜ್ಞಾತಿರ್ನಿಪಾತಿತಃ |
ಅತೋ ಮನಸಿ ಯದ್ಗುಹ್ಯಂ ಸ್ತ್ರೀಣಾಂ ತನ್ನ ಭವಿಷ್ಯತಿ ॥34॥
ದುಷ್ಕರ್ಮದ ಪ್ರಭಾವದಿಂದ ಶ್ರೇಷ್ಠನಾದ ಅಣ್ಣನನ್ನು ಸಂಹರಿಸಿರುವೆನು. ಆದ್ದರಿಂದ ಇನ್ನು ಮಹಿಳೆಯರ ಮನದಲ್ಲಿ ಗುಟ್ಟು ನಿಲ್ಲದಿರಲಿ (ಎಂದು ಧರ್ಮರಾಜನು ನುಡಿದನು).
ಸ ರಾಜಾ ಧೃತರಾಷ್ಟ್ರಶ್ಚ ಕೃತಾಂಜಲಿರತಂದ್ರಿತಃ |
ಸಮುತ್ತತಾರ ಗಂಗಾಯಾಂ ಭ್ರಾತೃಭಿಃ ಸಹ ಭಾರತ ॥35॥
ಭರತಕುಲೋತ್ಪನ್ನನೇ! ಆಲಸ್ಯವಿಲ್ಲದಂತೆ ಸಹೋದರರಿಂದ ಕೂಡಿದ ರಾಜನು ಮತ್ತು ಧೃತರಾಷ್ಟ್ರನು ತರ್ಪಣವನ್ನು ಇತ್ತು, ಗಂಗೆಯಿಂದ ಮೇಲೆದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಶ್ರಾದ್ಧಪರ್ವ ॥

॥ ಸಮಾಪ್ತಂ ಸ್ತ್ರೀಪರ್ವ ॥
* * * * *

ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ
ಶ್ರೀಮನ್ಮಹಾಭಾರತ
ಶಾಂತಿಪರ್ವ
ರಾಜಧರ್ಮಪರ್ವ
ಒಂದನೆಯ ಅಧ್ಯಾಯ
ಯುಧಿಷ್ಠಿರನು ಯುದ್ಧದಲ್ಲಿ ಮೃತಪಟ್ಟ ಬಂಧುಗಳಿಗೆ ಧರ್ಮೋದಕವನ್ನು ನೀಡಲು ಗಂಗಾತೀರಕ್ಕೆ ತೆರಳಿದ್ದನು. ಅಲ್ಲಿಗೆ

ವೇದವ್ಯಾಸರು ನಾರದರೇ ಮೊದಲಾದ ಮಹರ್ಷಿಗಳು ಆಗಮಿಸಿದರು. ನಾರದರ ಮೂಲಕ ಯುಧಿಷ್ಠಿರನು ಕರ್ಣನ ವೃತ್ತಾಂತವನ್ನು ತಿಳಿಯಲು ಪ್ರಾರ್ಥಿಸಿದನು
ವೈಶಂಪಾಯನಃ
ಕೃತೋದಕಾಸ್ತೇ ಸುಹೃದಾಂ ಸರ್ವೇಷಾಂ ಪಾಂಡುನಂದನಾಃ |
ವಿದುರೋ ಧೃತರಾಷ್ಟ್ರಶ್ಚ ಸರ್ವಾಶ್ಚ ಭರತಸ್ತ್ರಿಯಃ ॥1॥
ವೈಶಂಪಾಯನರು ಎಲ್ಲಾ ಪಾಂಡವರು ಯುದ್ಧದಲ್ಲಿ ಮೃತಪಟ್ಟ ಬಂಧುಗಳಿಗೆ ಧರ್ಮೋದಕವನ್ನು ನೀಡಲು ಗಂಗಾತೀರದಲ್ಲಿ ಸೇರಿದ್ದರು. ವಿದುರ, ಧೃತರಾಷ್ಟ್ರಹಾಗೂ ಭರತವಂಶದ ಎಲ್ಲಾ ಹಿರಿಯರು ತಮ್ಮ ನೆಚ್ಚಿನ ಸ್ನೇಹಿತರಾದ ಬಂಧುಗಳಿಗೆ ಧರ್ಮೋದಕಗಳನ್ನು ಎಲ್ಲರೂ ಸೇರಿ ನೀಡಿದರು.
ತತ್ರ ತೇ ಸುಮಾಹಾತ್ಮನೋ ನ್ಯವಸನ್ ಕುರುನಂದನಾಃ |
ಶೌಚಂ ನಿವರ್ತಯಿಷ್ಯಂತೋ ಮಾಸಮೇಕಂ ಬಹಿಃ ಪುರಾತ್ ॥2॥
ಧರ್ಮೋದಕವನ್ನು ಸಾಂಗೋಪಾಂಗವಾಗಿ ಎಲ್ಲರೂ ನೀಡಿದರು. ಅವರೆಲ್ಲರೂ ಶ್ರೇಷ್ಠರಾದ, ಮಹಾತ್ಮರಾದ ಪಾಂಡವರ ಜೊತೆ ಒಂದು ತಿಂಗಳ ಕಾಲ ಅಲ್ಲಿಯೇ ಇದ್ದುಬಿಟ್ಟರು. ನಗರದ ಹೊರಭಾಗದಲ್ಲಿರುವ ಗಂಗಾನದಿಯ ತೀರದಲ್ಲಿ ಶುದ್ಧಿಯ ಕಾರ್ಯಗಳನ್ನು ಆಚರಿಸುತ್ತಾ ಕಾಲ ಕಳೆದರು.
ಟಿಪ್ಪಣಿ - ಶೌಚಂನಿವರ್ತಯಿಷ್ಯಂತ ಇತ್ಯತ್ರ ನಿವರ್ತಯಿಷ್ಯಂತಃ ನಿತರಾಂ ವರ್ತಯಿಷ್ಯಂತಃ | `ನಿವರ್ತಯಿಷ್ಯಂತ' ಎನ್ನುವುದಕ್ಕೆ ಚೆನ್ನಾಗಿ ಆಚರಿಸುವವರಾಗಿ ಎಂದರ್ಥ. ಕುರುನಂದನರು ಒಂದು ತಿಂಗಳುಗಳ ಕಾಲ ಶೌಚವನ್ನು ಚೆನ್ನಾಗಿ ಆಚರಿಸು- ವವರಾಗಿ ಎಂದಭಿಪ್ರಾಯ.
ಒಂದುವಿಮರ್ಶೆ - `ತತ್ರ ತೇ ಸುಮಹಾತ್ಮಾನೋ' ಎಂಬ ಎರಡನೆಯ ಶ್ಲೋಕವು ಆಶೌಚದ ಆಚರಣೆಗೋಸ್ಕರ ಪಾಂಡವರು ಒಂದು ತಿಂಗಳುಗಳ ಕಾಲ ನಗರವನ್ನು ಬಿಟ್ಟು, ಹೊರಗಡೆ ವಾಸ ಮಾಡಿದರು ಎಂದು ಹೇಳುತ್ತಿದೆ. ಇದು ಹೇಗೆ ಸರಿ ? ಎಂಬುದನ್ನು ಈಗ ವಿಮರ್ಶಿಸಬೇಕು.
ದಶಾಹಾಚ್ಛುಧ್ಯತೇ ವಿಪ್ರೋ ದ್ವಾದಶಾಧೇನ ಭೂಪತಿಃ |
ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ ॥
(ಮ.ಸ್ಮೃತಿ.5-82)
ಮೃತಾಶೌಚವನ್ನು ವಿಪ್ರನು ಹತ್ತುದಿವಸಗಳ ಕಾಲ ಆಚರಿಸಬೇಕು. ಕ್ಷತ್ರಿಯನು ಹನ್ನೆರಡು ದಿವಸಗಳು ಆಚರಿಸಬೇಕು. ವೈಶ್ಯನು ಹದಿನೈದು ದಿವಸಗಳ ಕಾಲ ಆಚರಿಸಿದರೆ ಶುದ್ಧನಾಗುತ್ತಾನೆ. ಶೂದ್ರನು ಒಂದು ತಿಂಗಳ ಕಾಲ ಆಚರಣೆ ಮಾಡಿದರೆ ಶುದ್ಧನಾಗುತ್ತಾನೆ. ಈ ವಾಕ್ಯದಂತೆ ಕ್ಷತ್ರಿಯರಿಗೆ ಒಂದು ತಿಂಗಳ ಕಾಲ ಆಶೌಚವು ಇರುವುದೇ ಇಲ್ಲ. ಹೀಗಿರುವಾಗ ಪಾಂಡವರೇಕೆ ಮಾಸಪರ್ಯಂತವಾಗಿ ಗಂಗಾತೀರದಲ್ಲಿ ಆಶೌಚವನ್ನು ಆಚರಿಸಿದರು ?
ಮತ್ತೊಂದು ಪ್ರಶ್ನೆ ಇಲ್ಲಿ ಎದುರಾಗುತ್ತದೆ ? ಯುದ್ಧದಲ್ಲಿ ಮೃತನಾದರೆ ಅವನ ಸಂಬಂಧಿಗಳಿಗೆ ಆಶೌಚವೇ ಇರುವುದಿಲ್ಲ. ಇದನ್ನೂ ಸಹ ಮನುಸ್ಮೃತಿ ಹೀಗೆ ಹೇಳಿದೆ -
ಉದ್ಯತೈರಾಹವೇ ಶಸ್ತ್ರೈಃ ಕ್ಷತ್ರಧರ್ಮಾಹತಸ್ಯ ಚ |
ಸದ್ಯಃ ಸಂತಿಷ್ಠತೇ ಯಜ್ಞಃ ತಥಾ ಶೌಚಮಿತಿಸ್ಥಿತಿಃ ॥
ಯುದ್ಧದಲ್ಲಿ ಆಯುಧಗಳಿಂದ ಹತನಾದ ಕ್ಷಾತ್ರಧರ್ಮಾನುಷ್ಠಾತೃವಿಗೆ ಕೂಡಲೇ ಯಜ್ಞ ಮಾಡಿದ ಫಲವು ಲಭಿಸುತ್ತದೆ. ಮತ್ತು ಸಪಿಂಡರಿಗೆ ಶುದ್ಧಿ- ಯಾಗುತ್ತದೆ.
ಈ ಶ್ಲೋಕದ ಪ್ರಕಾರ ಸಪಿಂಡರಾದ ಸಂಬಂಧಿಕರಿಗೆ ಆಶೌಚ ದೋಷವೇ ಇರುವುದಿಲ್ಲ. ಆದ್ದರಿಂದ ಪಾಂಡವರೇಕೆ ಒಂದು ತಿಂಗಳ ಕಾಲ ಆಶೌಚವನ್ನು ಆಚರಿಸಿದರು? ಎಂಬ ಪ್ರಶ್ನೆ ಮತ್ತಷ್ಟು ದೃಢವಾಗುತ್ತದೆ.
ಮಲಗಿದ್ದಾಗ ಪಶುಗಳಂತೆ ಸಂಹರಿಸಲ್ಪಟ್ಟ ದ್ರೌಪದಿಯ ಮಕ್ಕಳೇ ಮೊದಲಾ- ದವರ ಉದ್ದೇಶಕ್ಕಾಗಿ ಆಶೌಚವನ್ನು ಆಚರಿಸುತ್ತಿದ್ದಾರೆ ಎಂಬ ಸಮಾಧಾನ ಹೇಳಿದರೂ ಕೂಡ ಹನ್ನೆರಡು ದಿವಸವೇ ಸಾಕಿತ್ತು ಮೂವತ್ತು ದಿವಸಗಳ ಅವಶ್ಯಕತೆ ಇರಲಿಲ್ಲ ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ.
ಇದಕ್ಕೆ ಎರಡು ರೀತಿಯಲ್ಲಿ ಸಮಾಧಾನವನ್ನು ತಿಳಿಯಬಹುದು. ಧರ್ಮ- ಶಾಸ್ತ್ರದ ಚೌಕಟ್ಟಿನಲ್ಲಿ ಒಂದು ತಿಂಗಳ ಕಾಲ ಆಶೌಚವನ್ನು ಆಚರಿಸುತ್ತಿದ್ದಾರೆಂದು ಇಲ್ಲಿ ವಿವಕ್ಷಿಸಬೇಕಾಗಿಲ್ಲ. ಅತ್ಯಂತ ಆತ್ಮೀಯರು ಹಾಗೂ ಆ ದೇಶದ ಮುಖ್ಯಸ್ಥರು ಮೃತರಾದಾಗ ಕೆಲವು ದಿವಸಗಳ ಕಾಲ ಶೋಕಾಚರಣೆ ಮಾಡುವ ವಾಡಿಕೆ ಪ್ರಸ್ತುತ ಕಾಲದಲ್ಲೂ ಪ್ರಾಪ್ತವಾಗಿದೆ. ಈ ಪಾಂಡವರೆಲ್ಲರೂ ತಮಗೆ ಅತ್ಯಂತ ಆತ್ಮೀಯರಾದ ಮತ್ತು ಪ್ರಧಾನರಾದ ವ್ಯಕ್ತಿಗಳ ಮರಣನಿಮಿತ್ತವಾಗಿ ಶೌಚಾ- ಚಾರವನ್ನು ಮಾಡಲು ಒಂದು ತಿಂಗಳಕಾಲ ತಾವೇ ನಿರ್ಧಾರ ಮಾಡಿಕೊಂಡು ಗಂಗಾತೀರದಲ್ಲಿ ವಾಸಮಾಡಿದರು. ಮತ್ತು ಮೃತರಾದ ವ್ಯಕ್ತಿಗಳಿಗೆ ಜಲ- ತರ್ಪಣಾದಿಗಳನ್ನು ನೀಡುವ ಮೂಲಕ ಅವರನ್ನು ಸ್ಮರಿಸಿಕೊಂಡು ಅವರಿಗೆ ಕೃತಜ್ಞತೆಯನ್ನು ಹೇಳುವ ಉದ್ದೇಶವೂ ಕೂಡ ಆ ಪಾಂಡವರಿಗಿತ್ತು. ಒಂದುವೇಳೆ ಗಂಗಾತೀರದಲ್ಲಿ ವಾಸಮಾಡದೇ ನಗರದಲ್ಲೇ ವಾಸಮಾಡಿದ್ದರೆ, ಅಂತ್ಯ- ಕ್ರಿಯಾದಿಗಳನ್ನು ಸಾಂಗೋಪಾಂಗವಾಗಿ ನೆರವೇರಿಸಲು ಮೃತಪಟ್ಟ ವ್ಯಕ್ತಿಗಳಿಗೆ ಕೃತಜ್ಞತೆ ಮೊದಲಾದವುಗಳನ್ನು ಸಮರ್ಪಿಸಲು ಅನುಕೂಲವಾಗುತ್ತಿರಲಿಲ್ಲ.
ಮತ್ತೊಂದು ಸಮಾಧಾನ ಹೀಗಿದೆ - ಹದಿನೆಂಟು ದಿವಸಗಳ ಕಾಲ ಯುದ್ಧ- ವಾದ ಕೂಡಲೆ ಯುಧಿಷ್ಠಿರನು ರಾಜ್ಯಭಾರವನ್ನು ವಹಿಸಿಕೊಂಡು. ತನ್ನ ವಿಜೃಂಭಣೆಯ ಜೀವನವನ್ನು ನಡೆಸಲು ಪ್ರಾರಂಭ ಮಾಡಿದರೆ. ಯಾರಿಗೂ ಇದರಿಂದ ಸಂತೋಷವಾಗುತ್ತಿರಲಿಲ್ಲ. ಸ್ವತಃ ಪಾಂಡವರಿಗೂ ಕೂಡ ತೃಪ್ತಿಯು ಸಿಗುತ್ತಿರಲಿಲ್ಲ. ಸಾಮಾಜಿಕ ದೃಷ್ಟಿಯಿಂದ ವೈಯಕ್ತಿಕ ಮನಃಶುದ್ಧಿಯ ದೃಷ್ಟಿಯಿಂದ ಈ ಒಂದು ತಿಂಗಳ ಕಾಲ ಶೋಕಾಚರಣೆಯನ್ನು ಆಚರಿಸಿದರು. ಮತ್ತು ಅತ್ಯಂತ ಆತ್ಮೀಯರಾದ ತಂದೆ, ತಾಯಿ, ಮಕ್ಕಳು ಮೊದಲಾದವರು ಮೃತರಾದಾಗ ಅದೇ ತಿಂಗಳಿನಲ್ಲೇ ಯಾವುದೇ ಮಂಗಳ ಕಾರ್ಯವನ್ನು ಮಾಡುವುದು

ಉಚಿತವಲ್ಲ ಎಂಬುದನ್ನೂ ಕೂಡ ಈ ಮೂಲಕ ಪಾಂಡವರು ಮಾರ್ಗದರ್ಶನ ಮಾಡಿರುವರು.
ಕೃತೋದಕಂ ತು ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ಅಭಿಜಗ್ಮುರ್ಮಹಾತ್ಮನಃ ಸಿದ್ಧಾ ಬ್ರಹ್ಮರ್ಷಿಸತ್ತಮಾಃ ॥3॥
ತನ್ನೆಲ್ಲಾ ಬಂಧುಜನರಿಗೆ ಮತ್ತು ಸ್ನೇಹಿತರಿಗೆ ಧರ್ಮೋದಕವನ್ನು ಧರ್ಮ- ರಾಜನು ನೀಡಿದನು. ಕುಳಿತಿದ್ದ ಅವನ ಬಳಿ ಅನೇಕ ಮಹಾತ್ಮರಾದ ಸಿದ್ಧಪುರುಷ- ರೆನಿಸಿದ ಬ್ರಹ್ಮರ್ಷಿಗಳು ಬಂದರು.
ದ್ವೈಪಾಯನೋ ನಾರದಶ್ಚ ದೇವಲಶ್ಚ ಮಹಾನ್ ಋಷಿಃ |
ದೇವಸ್ಥಾನಶ್ಚ ಕಣ್ವಶ್ಚ ತೇಷಾಂ ಶಿಷ್ಯಾಶ್ಚ ಸತ್ತಮಾಃ ॥4॥
ವೇದವ್ಯಾಸದೇವರು, ನಾರದಮಹರ್ಷಿಗಳು, ದೇವಲಋಷಿಗಳು, ಮಹಾತ್ಮ- ರಾದ ದೇವಸ್ಥಾನ ಎಂಬ ಮತ್ತೊಬ್ಬ ಋಷಿಗಳು, ಕಣ್ವರೂ ಸಹ ಶಿಷ್ಯಸಹಿತರಾಗಿ ಧರ್ಮರಾಜನ ಬಳಿಗೆ ಬಂದರು. (`ದೇವಸ್ಥಾನ' ಎಂಬ ಋಷಿಯ ಹೆಸರು ಅಪೂರ್ವವಾಗಿದೆ. ಅದನ್ನು ಇಲ್ಲಿ ವ್ಯಾಸರು ಉಲ್ಲೇಖ ಮಾಡಿದ್ದನ್ನು ಗಮನಿಸಬೇಕು).
ಅನ್ಯೇ ಚ ವೇದವಿದ್ವಾಂಸಃ ಕೃತಪ್ರಜ್ಞಾ ದ್ವಿಜಾತಯಃ |
ಗೃಹಸ್ಥಾಃ ಸ್ನಾತಕಾಃ ಸರ್ವೇ ದದೃಶುಃ ಕುರುಸತ್ತಮಮ್ ॥5॥
ಇಷ್ಟೇ ಅಲ್ಲದೇ ವೇದಜ್ಞಾನಿಗಳಾದ ಅತ್ಯಂತ ಪ್ರಜ್ಞಾವಂತರಾದ ಅನೇಕ ಬ್ರಾಹ್ಮಣರೂ ಕೂಡ ಅಲ್ಲಿಗೆ ಆಗಮಿಸಿದರು. ಗೃಹಸ್ಥರೂ, ಸ್ನಾತಕರು ಅನೇಕ ಸಾಧುಸಜ್ಜನರು ಆ ಕುರುಶ್ರೇಷ್ಠನಾದ ಯುಧಿಷ್ಠಿರನ ಸಮಾಗಮವನ್ನು ಅಪೇಕ್ಷಿಸಿ ಅಲ್ಲಿಗೆ ಬಂದರು.
ಅಭಿಗಮ್ಯ ಮಹಾತ್ಮಾನಃ ಪೂಜಿತಾಶ್ಚ ಯಥಾವಿಧಿ |
ಆಸನೇಷು ಮಹಾರ್ಹೇಷು ವಿವಿಶುಸ್ತೇ ಮಹರ್ಷಯಃ ॥6॥
ಅಲ್ಲಿಗೆ ಆಗಮಿಸಿದ ಮಹಾತ್ಮರಾದ ಎಲ್ಲ ಸಾಧುಸಜ್ಜನರನ್ನು, ಋಷಿಪುಂಗವ- ರನ್ನು ಪಾಂಡವರು ಯಥೋಚಿತವಾಗಿ ಸತ್ಕಾರ ಮಾಡಿದರು. ಅವರವರಿಗೆ ತಕ್ಕಂತೆ ಆಸನಗಳನ್ನು ನೀಡಿದರು. ಮಹರ್ಷಿಗಳೆಲ್ಲರೂ ಆಸೀನರಾದರು.
ಪ್ರತಿಗೃಹ್ಯ ತತಃ ಪೂಜಾಂ ತತ್ಕಾಲಸದೃಶೀಂ ತದಾ |
ಪರ್ಯುಪಾಸನ್ ಯಥಾನ್ಯಾಯಂ ಪರಿವಾರ್ಯ ಯುಧಿಷ್ಠಿರಮ್ ॥7॥
ತತ್ಕಾಲಕ್ಕೆ ತಕ್ಕಂತೆ ಸತ್ಕಾರವನ್ನು ಎಲ್ಲಾ ಋಷಿಮುನಿಗಳು ಸ್ವೀಕರಿಸಿದರು. ಯಥಾನುಕ್ರಮವಾಗಿ ಯುಧಿಷ್ಠಿರನನ್ನು ಸುತ್ತುವರೆದು ಕುಳಿತರು.
ವಿಶೇಷವಿಚಾರ - ಒಂದು ತಿಂಗಳುಗಳ ಕಾಲ ಆಶೌಚವನ್ನು ಆಚರಿಸುವ ಉದ್ದೇಶದಿಂದ ಪಾಂಡವರೇ ಮೊದಲಾದವರು ಊರಿನ ಹೊರಗೆ ವಾಸಿಸಿದರು. ಆಶೌಚವಿದ್ದಾಗ ಊರಿನಲ್ಲಿ ವಾಸಿಸುವ ಸಂಪ್ರದಾಯವು ಆ ಕಾಲದಲ್ಲಿ ಇರಲಿಲ್ಲ ಎಂಬುದು ಇದರಿಂದ ತಿಳಿಯುತ್ತದೆ. ಊರಿನ ಹೊರಗಿರುವ ಗಂಗಾನದಿಯ ತೀರದಲ್ಲಿ ಎಲ್ಲಾ ಋಷಿಮುನಿಗಳು ಯುಧಿಷ್ಠಿರಾದಿಗಳಿಗೆ ಸಾಂತ್ವನಗಳನ್ನು ಹೇಳುವುದಕ್ಕಾಗಿ ಆಗಮಿಸಿದರು. ಆಗ ಅಲ್ಲಿಗೆ ಆಗಮಿಸಿದ ಋಷಿಪುಂಗವರಿಗೆ ಯುಧಿಷ್ಠಿರಾದಿಗಳು ಸತ್ಕಾರವನ್ನು ಮಾಡಿದರು. ಆದರೆ ಊರಿನ ಅರಮನೆಯಲ್ಲಿ ಇದ್ದಾಗ ಹೇಗೆ ವೈಭವದ ಸತ್ಕಾರವಿರುತ್ತದೋ, ಆ ರೀತಿಯ ಸತ್ಕಾರವನ್ನು ಇಲ್ಲಿ ಮಾಡಲಿಲ್ಲ. ಆದ್ದರಿಂದಲೇ `ತತ್ಕಾಲಸದೃಶೀಂ' ಎಂಬುದಾಗಿ ಹೇಳಿದ್ದಾರೆ. ಅರ್ಥಾತ್ ಮಾತಿನ ಮೂಲಕ ಆಶೌಚದಲ್ಲಿ ಮಾಡಲು ಧರ್ಮಸಮ್ಮತಿಯಲ್ಲಿರುವ ರೀತಿಯಲ್ಲಷ್ಟೇ ಸತ್ಕಾರವನ್ನು ಮಾಡಿದರೆಂದು ತಿಳಿಯಬೇಕು.
ಪುಣ್ಯೇ ಭಾಗೀರಥೀತೀರೇ ಶೋಕವ್ಯಾಕುಲಚೇತಸಮ್ |
ಆಶ್ವಾಸಯಂತೋ ರಾಜಾನಂ ವಿಪ್ರಾಃ ಶತಸಹಸ್ರಶಃ ॥8॥
ಅತ್ಯಂತ ಪುಣ್ಯಕರವಾದ ಭಾಗೀರಥೀ ನದಿಯ ತೀರದಲ್ಲಿ ರಾಜನಾದ
ಯುಧಿಷ್ಠಿರನು ದುಃಖದಿಂದ ಕಳವಳಗೊಂಡ ಮನಸ್ಸುಳ್ಳವನಾಗಿದ್ದನು. ಆ ಸಂದರ್ಭ -ದಲ್ಲಿ ನೂರಾರು, ಸಾವಿರಾರು ಬ್ರಾಹ್ಮಣರು ದುಃಖಿತನಾದ ಆ ಧರ್ಮರಾಜನನ್ನು ಪರಿಪರಿಯಾಗಿ ಸಂತೈಸುತ್ತಿದ್ದರು.
ನಾರದಸ್ತ್ವಬ್ರವೀತ್ ಕಾಲೇ ಧರ್ಮಾತ್ಮಾನಂ ಯುಧಿಷ್ಠಿರಮ್ |
ವಿಚಾರ್ಯ ಮುನಿಭಿಃ ಸಾರ್ಧಂ ತತ್ಕಾಲಸದೃಶಂ ವಚಃ ॥9॥
ಧರ್ಮಾತ್ಮನೆಂದೇ ಪ್ರಸಿದ್ಧನಾದ ಯುಧಿಷ್ಠಿರನ ಜೊತೆ ನಾರದರು ಮಾತನಾ- ಡಲು ಇಚ್ಛಿಸಿದರು. ಅನೇಕ ಮುನಿಗಳ ಜೊತೆ ಸಮಾಲೋಚನೆ ಮಾಡಿ, ಆ ಕಾಲಕ್ಕೆ ಉಚಿತವಾದ ಯಾವ ಮಾತುಗಳನ್ನಾಡಬೇಕೆಂದು ವಿಚಾರ ಮಾಡಿ ಹೀಗೆ ಹೇಳಿ- ದರು-
ಭವತೋ ಬಾಹುವೀರ್ಯೇಣ ಪ್ರಸಾದಾನ್ಮಾಧವಸ್ಯ ಚ |
ಜಿತೇಯಮವನಿಃ ಕೃತ್ಸ್ನಾ ಧರ್ಮೇಣ ಚ ಯುಧಿಷ್ಠಿರ ॥10॥
ಯುಧಿಷ್ಠಿರನೇ ! ನೀನು ನಿನ್ನ ತೋಳಿನ ಪರಾಕ್ರಮದಿಂದ ಶ್ರೀಕೃಷ್ಣಪರಮಾತ್ಮನ ದಿವ್ಯವಾದ ಅನುಗ್ರಹದಿಂದ ಧರ್ಮದ ಬೆಂಬಲದಿಂದ ಸಮಗ್ರ ಭೂಮಂಡಲವನ್ನು ಗೆದ್ದಿರುವಿ.
ದಿಷ್ಟ್ಯಾ ಮುಕ್ತಸ್ತು ಸಂಗ್ರಾಮಾದಸ್ಮಾಲ್ಲೋಕಭಯಂಕರಾತ್ |
ಕ್ಷತ್ರಧರ್ಮರತಶ್ಚಾಪಿ ಕಚ್ಚಿನ್ಮೋದಸಿ ಪಾಂಡವ ॥11॥
ಸೌಭಾಗ್ಯವಶದಿಂದ ನೀನು ಅತ್ಯಂತ ಲೋಕಭಯಂಕರವಾದ ದೊಡ್ಡ ಸಂಗ್ರಾಮ -ದಿಂದ ಮುಕ್ತನಾಗಿ ಗೆದ್ದು ಬಂದಿರುವಿ. ಇದುವೇ ನಿನ್ನ ಕ್ಷತ್ರಧರ್ಮದ ಪರಿಪಾಲನೆ- ಯಾಗಿದೆ. ಕ್ಷತ್ರಿಯಧರ್ಮದಲ್ಲಿ ನಿರತನಾಗಿರುವ ನೀನು ಇದರಿಂದ ಸಂತುಷ್ಟನಾಗಿ- ರುವಿ ಅಲ್ಲವೇ?
ಕಚ್ಚಿಚ್ಚ ನಿಹತಾಮಿತ್ರಃ ಪ್ರೀಣಾಸಿ ಸುಹೃದೋ ನೃಪ |
ಕಚ್ಚಿಚ್ ಛ್ರಿಯಮಿಮಾಂ ಪ್ರಾಪ್ಯ ನ ತ್ವಾಂ ಶೋಕಃ ಪ್ರಬಾಧತೇ ॥12॥
ಎಲ್ಲಾ ಶತ್ರುಗಳನ್ನು ಕೊಂದಿರುವುದರಿಂದ ತೃಪ್ತನಾಗಿರುವಿಯಲ್ಲವೇ? ಎಲ್ಲಾ ನಿನ್ನ ಸಹೋದರರನ್ನು ಸಂತೋಷಪಡಿಸುತ್ತಿರುವಿ ಅಲ್ಲವೇ? ಈ ರಾಜ್ಯಲಕ್ಷ್ಮಿಯನ್ನು ಪಡೆದ ಮೇಲೆ ನಿನಗೆ ಯಾವ ಶೋಕವೂ ಕೂಡ ಪ್ರಬಲವಾಗಿ ಬಾಧಿಸುತ್ತಿಲ್ಲ ಅಲ್ಲವೇ?

ಯುಧಿಷ್ಠಿರಃ
ವಿಜಿತೇಯಂ ಮಹೀ ಕೃತ್ಸ್ನಾ ಕೃಷ್ಣಬಾಹುಬಲಾಶ್ರಯಾತ್ |
ಬ್ರಾಹ್ಮಣಾನಾಂ ಪ್ರಸಾದೇನ ಭೀಮಾರ್ಜುನಬಲೇನ ಚ ॥13॥
ಯುಧಿಷ್ಠಿರ ಓ ನಾರದ ಮಹರ್ಷಿಗಳೇ ! ಶ್ರೀಕೃಷ್ಣಪರಮಾತ್ಮನ ಬಾಹುವಿನ ಪರಾಕ್ರಮದಿಂದಷ್ಟೇ ಈ ಸಮಗ್ರಭೂಮಂಡಲವು ಜಯಸಲ್ಪಟ್ಟಿದೆ. ಬ್ರಾಹ್ಮಣರ ಅನುಗ್ರಹ, ಭೀಮಾರ್ಜುನರ ಬಲವೂ ಕೂಡ ಇದಕ್ಕೆ ಕಾರಣವಾಗಿದೆ.
ಇದಂ ತು ಮೇ ಮಹದ್ ದುಃಖಂ ವರ್ತತೇ ಹೃದಿ ನಿತ್ಯದಾ |
ಕೃತ್ವಾ ಜ್ಞಾತಿಕ್ಷಯಮಿಮಂ ಮಹಾಂತಂ ಲೋಭಕಾರಿತಮ್ ॥14॥
ಆದರೆ ನನ್ನ ಹೃದಯದ ಅಂತರಾಳದಲ್ಲಿ ಬಹುದೊಡ್ಡ ದುಃಖವುಂಟಾಗಿದೆ. ಎಲ್ಲಾ ಬಂಧುಜನರ ಸಂಹಾರವನ್ನು ನಾನು ಮಾಡಿಬಿಟ್ಟೆ. ರಾಜ್ಯಲೋಭದ ಕಾರಣ- ಬಿಟ್ಟರೆ ಇದಕ್ಕೆ ಬೇರೆ ಕಾರಣ ಇಲ್ಲ. ಈ ದುಃಖ ನನ್ನನ್ನು ಸುಡುತ್ತಿದೆ.
ಸೌಭದ್ರಂ ದ್ರೌಪದೇಯಾಂಶ್ಚ ಘಾತಯಿತ್ವಾ ಪ್ರಿಯಾನ್ ಸುತಾನ್ |
ಜಯೋಽಯಮಜಯಾಕಾರೋ ಭಗವನ್ ಪ್ರತಿಭಾತಿ ಮೇ ॥15॥
ಸುಭದ್ರೆಯ ಮಗನಾದ ಅಭಿಮನ್ಯುವನ್ನು ಮತ್ತು ದ್ರೌಪದಿಯ ಐದುಮಂದಿ ಪ್ರಿಯರಾದ ಮಕ್ಕಳನ್ನು ಯುದ್ಧದಲ್ಲಿ ಸಾಯಿಸಿ, ನಾನು ಜಯವನ್ನು ಹೊಂದಿರು- ವೆನು. ಓ ಪೂಜ್ಯರೇ ! ಈ ಜಯವು ನನಗೆ ಪರಾಜಯರೂಪವಾಗಿದೆ ಎಂದೆ- ನಿಸುತ್ತಿದೆ.
ಕಿನ್ನು ವಕ್ಷ್ಯತಿ ವಾರ್ಷ್ಣೇಯೀ ವಧೂರ್ಮೇ ಮಧುಸೂದನಮ್ |
ದ್ವಾರಕಾವಾಸಿನೀ ಕೃಷ್ಣಂ ಇತಃ ಪ್ರತಿಗತಂ ಹರಿಮ್ ॥16॥
ವೃಷ್ಣಿಕುಲದಲ್ಲಿ ಜನಿಸಿದ ನನಗೆ ಸೊಸೆಯಂತಿರುವ ಸುಭದ್ರೆಯು ನನ್ನ ವಿಷಯ- ದಲ್ಲಿ ಏನೆಂದುಕೊಳ್ಳುತ್ತಾಳೆ. ಮಧುಸೂದನನಾದ ಶ್ರೀಕೃಷ್ಣನು ದ್ವಾರಕೆಗೆ ತೆರಳಿದ ಮೇಲೆ ಅಲ್ಲಿರುವ ಜನರು ಕೃಷ್ಣನನ್ನು ಕುರಿತು, ತನ್ನ ಬಗ್ಗೆ ಏನೆಲ್ಲಾ ಮಾತನಾಡುತ್ತಾರೆ.
ವಿಶೇಷವಿಚಾರ - `ದ್ವಾರಕಾವಾಸಿನೀ' ಎಂಬುದಕ್ಕೆ ವ್ಯಾಖ್ಯಾನದಲ್ಲಿ ದ್ವಾರಕೆ- ಯಲ್ಲಿರುವ ಜನಸಮೂಹವು ಎಂಬರ್ಥವನ್ನು ತಿಳಿಸಿದ್ದಾರೆ. `ಕೃಷ್ಣಂ' ಎಂಬುದಕ್ಕೆ `ಹರಿಂ ಮಧುಸೂದನಮ್' ಎಂದೆರಡು ವಿಶೇಷಣಗಳನ್ನಾಗಿ ತಿಳಿಯಬೇಕು.
ಸುಭದ್ರೆಯು ಧರ್ಮರಾಜನ ಸೊಸೆಯೆಂದು `ಮೇ ವಧೂಃ' ಎಂಬ ಪದ- ದಿಂದ ತಿಳಿಯುತ್ತದೆ. ಆದರೆ ನಿಜವಾದ ಸೊಸೆಯಲ್ಲ. ತಮ್ಮನಾದ ಅರ್ಜುನನ ವಿಷಯದಲ್ಲಿ ಯುಧಿಷ್ಠಿರನು ಮಗನಂತೆ ವಾತ್ಸಲ್ಯವನ್ನು ಇಟ್ಟುಕೊಂಡಿದ್ದನು. ಈ ದೃಷ್ಟಿಯಿಂದ ಅವನ ಹೆಂಡತಿಯನ್ನು ಸೊಸೆಯೆಂದು ಹೇಳಲಾಗಿದೆ. ನನ್ನ ಸೊಸೆಯು `ರಾಜ್ಯಲೋಭಕ್ಕೋಸ್ಕರ ನನ್ನ ಪ್ರಿಯನಾದ ಮಗನನ್ನು ಬಲಿ ಕೊಟ್ಟೆಯಾ?' ಎಂದು ಪ್ರಶ್ನಿಸಿದರೆ ನಾನು ಏನೆಂದು ಅವಳಿಗೆ ಉತ್ತರಿಸಲಿ? ಎಂದು ಧರ್ಮರಾಜನ ಆತಂಕ. ಮತ್ತು ಕೃಷ್ಣಪರಮಾತ್ಮನು ಮುಂದೆ ದ್ವಾರಕೆಗೆ ತೆರಳುತ್ತಾನೆ. ಆಗ ಅಲ್ಲಿರುವ ದ್ವಾರಕೆಯ ಜನರು ಕೃಷ್ಣನನ್ನು ಕುರಿತು `ಆ ಧರ್ಮರಾಜನು ರಾಜ್ಯಲೋಭಕ್ಕೋಸ್ಕರ ಅಭಿಮನ್ಯು ಮೊದಲಾದವರನ್ನು ಕೊಂದುಬಿಟ್ಟನಲ್ಲಾ' ಎಂದು ಪ್ರಶ್ನಿಸಿದರೆ ಏನುತ್ತರ? ಎಂಬುದು ಯುಧಿಷ್ಠಿರನ ಗೊಂದಲ.
ದ್ರೌಪದೀ ಹತಪುತ್ರೇಯಂ ಕೃಪಣಾ ಹತಬಾಂಧವಾ |
ಅಸ್ಮತ್ಪ್ರಿಯಹಿತೇ ಯುಕ್ತಾ ಭೂಯಃ ಪೀಡಯತೀವ ಮಾಮ್ ॥17॥
ದ್ರೌಪದಿಯ ಸ್ಥಿತಿ ಅತ್ಯಂತದಯನೀಯವಾಗಿದೆ. ಎಲ್ಲಾ ಮಕ್ಕಳನ್ನು ಕಳೆದು- ಕೊಂಡಿದ್ದಾಳೆ. ತಂದೆ ಮೊದಲಾದವರನ್ನೂ ಕೂಡ ಕಳೆದುಕೊಂಡು ಅತ್ಯಂತ ದುಃಖಿತಳಾಗಿದ್ದಾಳೆ. ಇವಳು ನಿರಂತರ ನಮಗೆಲ್ಲಾ ಜಯವನ್ನೇ ಉಂಟುಮಾಡು- ವಳಾಗಿದ್ದಾಳೆ. ಇಂಥ ಇವಳಿಗೆ ಒದಗಿದ ದುಃಖವು ನನ್ನನ್ನು ಬಹಳ ಪೀಡಿಸುತ್ತಿದೆ.
ವಿವರಣೆ - ಜೀವನದಲ್ಲಿ ಪ್ರತೀಕ್ಷಣವೂ ನಮಗೆಲ್ಲ ಹಿತವನ್ನೇ ಬಯಸಿದವಳು ದ್ರೌಪದೀದೇವಿ. ಆದರೆ ಅವಳ ತಂದೆಯಾದ ದ್ರುಪದನನ್ನು, ನೆಚ್ಚಿನ ಐದುಮಂದಿ ಮಕ್ಕಳನ್ನು ಇಂದು ನಾನು ಯುದ್ಧದಲ್ಲಿ ಕೊಂದುಬಿಟ್ಟಿರುವೆ ಎಂಬುದು ಧರ್ಮ- ರಾಜನ ಆತಂಕ.
ಇದಮನ್ಯಚ್ಚ ಭಗವನ್ ಯತ್ ತ್ವಾಂ ವಕ್ಷ್ಯಾಮಿ ನಾರದ |
ಮಂತ್ರಸಂವರಣೇನಾಸ್ಮಿ ಕುಂತ್ಯಾ ದುಃಖೇನ ಯೋಜಿತಃ ॥18॥
ಓ ನಾರದರೇ ! ನನ್ನ ದುಃಖ ಇಷ್ಟೇ ಅಲ್ಲ. ಇನ್ನೂ ಅನೇಕ ದುಃಖಗಳಿವೆ. ಅವುಗಳಲ್ಲಿ ಒಂದು ಪ್ರಧಾನವಾದ ಮತ್ತೊಂದು ದುಃಖವಿದೆ. ಅದನ್ನು ನಿಮ್ಮ ಬಳಿ ಹಂಚಿಕೊಳ್ಳುತ್ತೇನೆ. ನನ್ನ ತಾಯಿಯಾದ ಕುಂತಿಯು ಕರ್ಣನ ಜನ್ಮವೃತ್ತಾಂತವನ್ನು ಮುಚ್ಚಿಟ್ಟಿದ್ದರಿಂದ ಆ ಭ್ರಾತೃವಿಯೋಗದ ದುಃಖ ನನ್ನನ್ನು ಸುಡುತ್ತಿದೆ.
ಯೋಽಸೌ ನಾಗಾಯುತಬಲೋ ಲೋಕೇಽಪ್ರತಿರಥೋ ರಣೇ |
ಸಿಂಹಖೇಲಗತಿರ್ಧೀಮಾನ್ ಘೃಣೀ ದಾಂತಾ ಯತವ್ರತಃ ॥19॥
ಆ ಕರ್ಣನು ಎಂಥ ಪರಾಕ್ರಮಿ ಎಂದರೆ ಹತ್ತುಸಾವಿರ ಆನೆಗಳ ಬಲವನ್ನು ಹೊಂದಿದ್ದನು. ಅವನಿಗೆ ಸರಿಸಾಟಿಯಾದ ಮಹಾರಥಿಕರು ರಣರಂಗದಲ್ಲೇ ಇರ- ಲಿಲ್ಲ. ಅರಣ್ಯದಲ್ಲಿ ನಿರ್ಭೀತವಾಗಿ ಸಂಚರಿಸುವ ಸಿಂಹದಂತೆ ರಣರಂಗದಲ್ಲಿ ಭಯರಹಿತನಾಗಿ ಸಂಚರಿಸುತ್ತಿದ್ದನು. ಅತ್ಯಂತ ಧೀಮಂತನಾಗಿದ್ದನು. ಇಂದ್ರಿಯ- ನಿಗ್ರಹವನ್ನು ಹೊಂದಿದ್ದನು. ಮಹಾದಾನಿಯಾಗಿದ್ದನು. ಅನೇಕ ವ್ರತಾನುಷ್ಠಾನಗಳಲ್ಲಿ ತತ್ಪರನಾಗಿದ್ದನು.
ಆಶ್ರಯೋ ಧಾರ್ತರಾಷ್ಟ್ರಾಣಾಂ ಮಾನೀ ತೀಕ್ಷ್ಣಪರಾಕ್ರಮಃ |
ಅಮರ್ಷೀ ನಿತ್ಯಸಂರಂಭೀ ಕ್ಷೇಪ್ತಾಸ್ಮಾಕಂ ರಣೇ ರಣೇ ॥20॥
ಎಲ್ಲಾ ಧೃತರಾಷ್ಟ್ರನ ಮಕ್ಕಳಿಗೆ ತಾನೊಬ್ಬನೇ ಆಶ್ರಯನಾಗಿದ್ದನು. ಆದ್ದರಿಂದಲೇ ಅತ್ಯಂತ ಮಾನ್ಯನಾಗಿದ್ದನು. ಉಗ್ರವಾದ ಪರಾಕ್ರಮವನ್ನು ಹೊಂದಿದ್ದನು. ಕೋಪಿಷ್ಠ- ನಾಗಿರುತ್ತಿದ್ದನು. ಎಲ್ಲಾ ಯುದ್ಧಗಳಲ್ಲಿ ನಮ್ಮೆಲ್ಲರನ್ನು ಪರಾಭವಗೊಳಿಸುತ್ತಿದ್ದನು.
ಶೀಘ್ರಾಸ್ತ್ರಶ್ಚಿತ್ರಯೋಧೀ ಚ ಕೃತೀ ಚಾದ್ಭುತವಿಕ್ರಮಃ |
ಗೂಢೋತ್ಪನ್ನಃ ಸುತಃ ಕುಂತ್ಯಾ ಭ್ರಾತಾಽಸ್ಮಾಕಂ ಚ ಸೋದರಃ ॥21॥

ಶೀಘ್ರವಾದ ಅಸ್ತ್ರಪ್ರಯೋಗವನ್ನು ಮಾಡುವುದರಲ್ಲಿ ಹೆಸರುವಾಸಿಯಾಗಿದ್ದನು. ವಿಚಿತ್ರವಾಗಿ ಯುದ್ಧವನ್ನು ಮಾಡುವುದರಿಂದ ಚಿತ್ರಯೋಧಿ ಎನಿಸಿದ್ದನು. ಮಹಾ- ಪರಾಕ್ರಮಶಾಲಿಯಾಗಿದ್ದನು. ಇಂಥ ಕರ್ಣನು ನಮ್ಮ ತಾಯಿಯಾದ ಕುಂತಿಗೆ ರಹಸ್ಯದಲ್ಲಿ ಹುಟ್ಟಿದ ಮಗನಾಗಿದ್ದಾನೆ. ನಮ್ಮೆಲ್ಲರ ಹಿರಿಯ ಸಹೋದರನಾಗಿದ್ದಾನೆ.
ಗಮನೀಯ ಅಂಶ - ಯುಧಿಷ್ಠಿರನು ನಾರದರ ಬಳಿ ಕರ್ಣನ ಬಗ್ಗೆ ಹೇಳುವಾಗ ಮೊದಲೇ ಅವನ ಹೆಸರನ್ನು ಹೇಳಲಿಲ್ಲ. ಅವನಲ್ಲಿರುವ ಎಲ್ಲಾ ಗುಣಗಳನ್ನು ಹೊಗಳಿ, ಇಂಥ ಗುಣಗಳುಳ್ಳವನು ಕರ್ಣನು ಎಂಬುದಾಗಿ ತಿಳಿಸಿದ್ದಾನೆ. ಅನುವಾದ ಸೌಕರ್ಯಕ್ಕೋಸ್ಕರ ಮೊದಲೇ ಕರ್ಣನ ಹೆಸರನ್ನು ಅನುವಾದದಲ್ಲಿ ಉಲ್ಲೇಖಿಸಲಾಗಿದೆ.
ತೋಯಕರ್ಮಣಿ ಯಂ ಕುಂತೀ ಕಥಯಾಮಾಸ ಸೂರ್ಯಜಮ್ |
ಪುತ್ರಂ ಸರ್ವಗುಣೋಪೇತಮವಕೀರ್ಣಂ ಜಲೇ ಪುರಾ |
ಮಂಜೂಷಾಯಾಂ ಸಮಾಧಾಯ ಗಂಗಾಸ್ರೋತಸ್ಯಾಮಜ್ಜಯತ್ ॥22॥
ಧರ್ಮೋದಕ ನೀಡುವ ಸಂದರ್ಭದಲ್ಲಿ ಸೂರ್ಯನಿಂದ ತನ್ನಲ್ಲಿ ಈ ಕರ್ಣನು ಹುಟ್ಟಿದ ಕಥೆಯನ್ನು ನನ್ನ ತಾಯಿಯಾದ ಕುಂತಿಯು ತಿಳಿಸಿದ್ದಾಳೆ. ಎಲ್ಲಾ ಗುಣ- ಗಳಿಂದ ಕೂಡಿದ ಎಲ್ಲ ಲಕ್ಷಣಗಳಿಂದ ಕೂಡಿದ ಆ ಪುತ್ರನನ್ನು ಸೂರ್ಯನಿಂದ ಹೊಂದಿದ ಮೇಲೆ ತಾನು ನೀರಿನಲ್ಲಿ ತೇಲಿಬಿಟ್ಟೆನು ಎಂಬುದಾಗಿ ನನ್ನ ತಾಯಿ ತಿಳಿಸಿದಳು. ನೀರಿನಲ್ಲಿ ಮುಳುಗಬಾರದೆಂಬ ಉದ್ದೇಶದಿಂದ ಒಂದು ಪೆಟ್ಟಿಗೆಯ ಒಳಗೆ ಆ ಮಗುವನ್ನು ಮಲಗಿಸಿ ಗಂಗಾನದಿಯಲ್ಲಿ ಬಿಟ್ಟುಬಿಟ್ಟಳು.
ಯಂ ಸೂತಪುತ್ರಂ ಲೋಕೋಽಯಂ ರಾಧೇಯಂ ಚಾಪ್ಯಮನ್ಯತ |
ಸ ಜ್ಯೇಷ್ಠಪುತ್ರಃ ಕುಂತ್ಯಾ ವೈ ಭ್ರಾತಾಸ್ಮಾಕಂ ಚ ಮಾತೃಜಃ ॥23॥
ಸಮಸ್ತಲೋಕವು ಯಾರನ್ನು ಸೂತನ ಮಗ, ರಾಧೇಯನಾಗಿದ್ದಾನೆಂದು ತಿಳಿ- ದಿದೆಯೋ, ಅವನು ಬೇರಾರೂ ಅಲ್ಲ, ನಮ್ಮೆಲ್ಲರ ಹಿರಿಯಣ್ಣ. ನಮ್ಮ ತಾಯಿಯ ಹೊಟ್ಟೆಯಲ್ಲಿ ಹುಟ್ಟಿಬಂದ ನಮ್ಮ ಸಹೋದರ.
ಅಜಾನತಾ ಮಯಾ ಸಂಖ್ಯೇ ರಾಜ್ಯಲುಬ್ಧೇನ ಘಾತಿತಃ |
ತನ್ಮೇ ದಹತಿ ಗಾತ್ರಾಣಿ ತೂಲರಾಶಿಮಿವಾನಲಃ ॥24॥
ಈ ವಿಷಯ ನನಗೆ ತಿಳಿದೇ ಇರಲಿಲ್ಲ. ರಾಜ್ಯಲೋಭಕ್ಕೋಸ್ಕರ ತಮ್ಮನ ಮೂಲಕ ಅಣ್ಣನನ್ನು ಕೊಲ್ಲಿಸಿಬಿಟ್ಟೆ. ಹತ್ತಿಯ ರಾಶಿಯನ್ನು ಬೆಂಕಿಯು ಸುಟ್ಟು ಭಸ್ಮ ಮಾಡುವಂತೆ ಈ ವಿಷಯವೆಂಬ ಅಗ್ನಿಯು ನನ್ನ ಅಂಗಾಂಗಗಳನ್ನು ಸುಡುತ್ತಿದೆ.
ನಹಿ ತಂ ವೇದ ಪಾರ್ಥೋಽಪಿ ಭ್ರಾತರಂ ಶ್ವೇತವಾಹನಃ |
ನಾಹಂ ನ ಭೀಮೋ ನ ಯವೌ ಸ ತ್ವಸ್ಮಾನ್ ವೇದ ಸುವ್ರತಃ ॥25॥
ನನಗಷ್ಟೇ ಅಲ್ಲ, ನನ್ನ ತಮ್ಮನಾದ ಶ್ವೇತವಾಹನನಾದ ಅರ್ಜುನನಿಗೂ ಕೂಡ ಕರ್ಣನು ತನ್ನ ಅಣ್ಣನೆಂಬ ವಿಷಯವು ತಿಳಿದೇ ಇರಲಿಲ್ಲ. ಭೀಮಸೇನನಿಗೂ ತಿಳಿದಿರಲಿಲ್ಲ. ನಕುಲ-ಸಹದೇವರಿಗೂ ಕೂಡ ತಿಳಿದಿರಲಿಲ್ಲ. ಆದರೆ ವ್ರತನಿಷ್ಠನಾದ ಆ ಕರ್ಣನಿಗೆ ನಾವೆಲ್ಲರೂ ಅವನ ತಮ್ಮಂದಿರು ಎಂಬ ವಿಚಾರವು ತಿಳಿದಿತ್ತು.
ಗತಾ ಕಿಲ ಪೃಥಾ ತಸ್ಯ ಸಕಾಶಮಿತಿ ನಃ ಶ್ರುತಮ್ |
ಅಸ್ಮಾಕಂ ಶಮಕಾಮಾ ವೈ ತ್ವಂ ಚ ಪುತ್ರೋ ಮಮೇತ್ಯಥ ॥26॥
ಕರ್ಣನ ಜೊತೆ ನಮಗೆ ಸಂಧಿ ಮಾಡಿಸಬೇಕೆಂಬ ಇಚ್ಛೆಯಿಂದ ಕುಂತೀ- ದೇವಿಯು ಹಿಂದೊಮ್ಮೆ ಕರ್ಣನ ಬಳಿ ತೆರಳಿದ್ದಳೆಂಬ ವಾರ್ತೆಯನ್ನು ನಾವು ಕೇಳಿದ್ದೇವೆ. ಕರ್ಣನ ಬಳಿ ತೆರಳಿದ ಕುಂತಿಯು ``ನೀನು ನನ್ನ ಮಗ'' ಎಂದು ಹೇಳಿದಳಂತೆ.
ಪೃಥಾಯ ನ ಕೃತಃ ಕಾಮಸ್ತೇನ ಚಾಪಿ ಮಹಾತ್ಮನಾ |
ಅಪಿ ಪಶ್ಚಾದಿದಂ ಮಾತರ್ಯವೋಚದಿತಿ ನಃ ಶ್ರುತಮ್ ॥27॥
ಪೃಥೆಯ ಅಭಿಲಾಷೆಯನ್ನು ಮಾತ್ರ ಆ ಕರ್ಣನು ಪೂರೈಸಲಿಲ್ಲ. ಅಲ್ಲದೇ ಮಹಾತ್ಮನಾದ ಕರ್ಣನು ನಮ್ಮ ತಾಯಿಯ ಬಳಿ ಮುಂದಿನ ಮಾತುಗಳನ್ನು ಹೇಳಿದನೆಂದು ಕೇಳಿದ್ದೇನೆ.
ನಹಿ ಶಕ್ಷ್ಯಾಮ್ಯಹಂ ತ್ಯಕ್ತುಂ ನೃಪಂ ದುರ್ಯೋಧನಂ ರಣೇ |
ಅನಾರ್ಯತ್ವಂ ನೃಶಂಸತ್ವಂ ಚ ಕೃತಘ್ನತ್ವಂ ಚ ಮೇ ಭವೇತ್ ॥28॥
ಮಹಾಯುದ್ಧ ನಡೆಯುವ ಇಂಥ ಇಂಥ ಸಂದರ್ಭದಲ್ಲಿ ದುರ್ಯೋಧನನ ಪಕ್ಷವನ್ನು ಪರಿತ್ಯಾಗ ಮಾಡಲು ನನಗೆ ಸಾಧ್ಯವೇ ಇಲ್ಲ. ಹಾಗೇನಾದರೂ ದುರ್ಯೋಧನನ್ನು ಪರಿತ್ಯಾಗ ಮಾಡಿ, ಪಾಂಡವರ ಪಕ್ಷಕ್ಕೆ ನಾನು ಸೇರಿದರೆ ನನಗೆ `ಅನಾರ್ಯತ್ವ, ನೃಶಂಸತ್ವ, ಕೃತಘ್ನತ್ವ' ಇತ್ಯಾದಿ ದೋಷಗಳು ಬರುತ್ತವೆ.
ವಿವರಣೆ - `ಅನಾರ್ಯತ್ವ' = ನೀಚನಾಗುವಿಕೆ, `ನೃಶಂಸತ್ವ' = ಕ್ರೂರಿಯಾಗುವಿಕೆ, `ಕೃತಘ್ನತ್ವ' = ಉಪಕಾರಸ್ಮರಣೆ ಇಲ್ಲದಿರುವಿಕೆ. ಎಲ್ಲಾ ಜನರು ನನ್ನನ್ನು ನೀಚನೆಂದು, ಕ್ರೂರಿಯೆಂದು ಉಪಕಾರಸ್ಮರಣೆ ಇಲ್ಲದವನೆಂದು ನಿಂದಿಸುತ್ತಾರೆ ಆದ್ದರಿಂದ ನಾನು ದುರ್ಯೋಧನನ ಪಕ್ಷವನ್ನು ಪರಿತ್ಯಾಗ ಮಾಡುವುದಿಲ್ಲ ಎಂಬುದು ಕರ್ಣನ ಅಭಿಪ್ರಾಯ.
ಯುಧಿಷ್ಠಿರೇಣ ಸಂಧಿಂ ಚ ಯದಿ ಕುರ್ಯಾಂ ಮತೇ ತವ |
ಭೀತೋ ರಣೇ ಶ್ವೇತವಾಹಾದಿತಿ ಮಾಂ ಮಂಸ್ಯತೇ ಜನಃ ॥29॥
ಒಂದು ವೇಳೆ ನೀನು ಹೇಳುವಂತೆ ಯುಧಿಷ್ಠಿರನ ಜೊತೆ ಸಂಧಿಯನ್ನು ನಾನು ಮಾಡಿಕೊಳ್ಳುವುದಾದರೆ, ಆಗ ಜನರೆಲ್ಲರು ನನ್ನನ್ನು ನಿಂದಿಸುತ್ತಾರೆ. ಅರ್ಜುನನಿಗೆ ಭಯಪಟ್ಟು ಕರ್ಣನು ಯುಧಿಷ್ಠಿರನ ಜೊತೆ ಸಂಧಿಮಾಡಿಕೊಂಡನೆಂದು ತಿಳಿದು- ಬಿಡುತ್ತಾರೆ.
ಸೋಽಹಂ ನಿರ್ಜಿತ್ಯ ಸಮರೇ ವಿಜಯಂ ಸಹಕೇಶವಮ್ |
ಸಂಧಾಸ್ಯೇ ಧರ್ಮಪುತ್ರೇಣ ಪಶ್ಚಾದಿತಿ ಚ ಸೋಽಬ್ರವೀತ್ ॥30॥
ಆದ್ದರಿಂದ ನಾನು ರಣರಂಗದಲ್ಲಿ ಮೊದಲು ಕೃಷ್ಣನಿಂದ ಕೂಡಿದ ಆ ಅರ್ಜುನನನ್ನು ಸೋಲಿಸುತ್ತೇನೆ. ಅನಂತರ ನೀನು ಹೇಳಿದಂತೆ ಧರ್ಮರಾಜನ ಜೊತೆ ಸಂಧಾನ ಮಾಡಿಕೊಳ್ಳುತ್ತೇನೆ. ಹೀಗೆ ಕರ್ಣನು ನಮ್ಮ ತಾಯಿಗೆ ಹೇಳಿದನು.

ತಮುವಾಚತ್ ಕಿಲ ಪೃಥಾ ಪುನಃ ಪುಥುಳವಕ್ಷಸಮ್ |
ಚತುರ್ಣಾಮಭಯಂ ದೇಹಿ ಕಾಮಂ ಯುದ್ಧ್ಯಸ್ವ ಫಲ್ಗುನಮ್ ॥31॥
ಕರ್ಣನ ಮಾತನ್ನು ಕೇಳಿದ ಆ ಕುಂತಿಯು ವಿಶಾಲವಾದ ವಕ್ಷ್ಯಸ್ಥಳದಿಂದ ಕೂಡಿದ ತನ್ನ ಹಿರಿಯ ಮಗನಾದ ಕರ್ಣನನ್ನು ಕುರಿತು ಹೀಗೆ ಹೇಳಿದಳು - ``ಅರ್ಜುನನ ಜೊತೆ ನೀನು ಇಚ್ಚೆ ಬಂದಂತೆ ಯುದ್ದ ಮಾಡು. ಆದರೆ ಉಳಿದ ನಾಕುಮಂದಿ ನನ್ನ ಮಕ್ಕಳನ್ನು ಕೊಲ್ಲುವುದಿಲ್ಲ'' ಎಂಬುದಾಗಿ ನನಗೆ ಅಭಯಪ್ರದಾನ ಮಾಡು.
ಸೋಽಬ್ರವೀನ್ಮಾತರಂ ಧೀಮಾನ್ ವೇಪಮಾನಃ ಕೃತಾಂಜಲಿಃ |
ಕಣ್ಣೀರು ಸುರಿಸುತ್ತಾ, ನಡುಗುತ್ತಿರುವ ತನ್ನ ತಾಯಿಯನ್ನು ಕುರಿತು
ಧೀಮಂತನಾದ ಕರ್ಣನು ಕೈಮುಗಿದನು. ಮತ್ತು ಹೀಗೆ ಅಭಯದಾನ ಮಾಡಿದನು.
ಪ್ರಾಪ್ತಾನ್ ವಿಷಹ್ಯಾಂಶ್ಚತುರೋ ನ ಹನಿಷ್ಯಾಮಿ ತೇ ಸುತಾನ್॥32॥
ಪಂಚೈವ ಹಿ ಸುತಾ ಮಾತರ್ಭವಿಷ್ಯಂತಿ ಹಿ ತೇ ಧ್ರುವಮ್ |
ಸಕರ್ಣಾ ವಾ ಹತೇ ಪಾರ್ಥೇ ಸಾರ್ಜುನಾ ವಾ ಹತೇ ಮಹಿ ॥33॥
ತಾಯಿಯೇ ! ಅರ್ಜುನನ್ನು ಬಿಟ್ಟು ಉಳಿದ ಆ ನಿನ್ನ ನಾಕುಮಂದಿ ಮಕ್ಕಳನ್ನು ಯುದ್ದದಲ್ಲಿ ನಾನು ಸಂಹಾರ ಮಾಡಲಾರೆ. ನನ್ನಿಂದ ಅವರು ಸೋಲುತ್ತಾರೆ. ಮತ್ತು ಅವರನ್ನು ಸಂಹಾರ ಮಾಡುವ ಸಾಮರ್ಥ್ಯವೂ ನನಗಿದೆ. ಆದರೂ ನಿನಗೆ ಈಗ ಕೊಡುತ್ತಿರುವ ಮಾತಿನಂತೆ ನಾನು ಅವರನ್ನು ಕೊಲ್ಲುವುದಿಲ್ಲ. ಒಂದು ವೇಳೆ ಆ ರಣರಂಗದಲ್ಲಿ ಅರ್ಜುನನು ಸತ್ತರೆ ಕರ್ಣನನ್ನು ಸೇರಿಸಿಕೊಂಡು ನಿನಗೆ ಐದುಮಂದಿ ಮಕ್ಕಳು ಉಳಿಯುತ್ತಾರೆ. ಒಂದುವೇಳೆ ಕರ್ಣನು ಮೃತಪಟ್ಟರೆ, ಅರ್ಜುನನ್ನು ಸೇರಿಸಿಕೊಂಡು ನಿನಗೆ ಐದುಮಂದಿ ಮಕ್ಕಳು ಉಳಿಯುತ್ತಾರೆ. ಏನೇ ಆದರೂ ನಿನಗೆ ಐದುಮಂದಿ ಮಕ್ಕಳು ಉಳಿಯುವುದರಲ್ಲಿ ಸಂಶಯವಿಲ್ಲ. ಇದು ನಿಶ್ಚಯ.
ಟಿಪ್ಪಣಿ - ಪ್ರಾಪ್ತಾನ್ ವಿಷಹ್ಯಾಂಶ್ಚತುರ ಇತ್ಯತ್ರ ವಿಷಹ್ಯಾನ್ ವಿಶೇಷೇಣ ಸೋಢುಂ ಶಕ್ಯಾನ್, ಸಂಹರ್ತುಂ ಶಕ್ಯನಾಪೀತಿ ಯಾವತ್ ॥ `ವಿಷಹ್ಯಾನ್' ಎಂದರೆ ಉಳಿದ ನಾಲ್ವರನ್ನು ಎದುರಿಸಲು ಸಮರ್ಥನಾಗಿದ್ದೇನೆ. ಸಂಹಾರ ಮಾಡಲು ಸಮರ್ಥನಾಗಿದ್ದೇನೆ ಎಂದಭಿಪ್ರಾಯ.
ತಂ ಪುತ್ರಗೃದ್ಧಿನೀ ಭೂಯೋ ಮಾತಾ ಪುತ್ರಮಥಾಬ್ರವೀತ್ |
ಭ್ರಾತೄಣಾಂ ಸ್ವಸ್ತಿ ಕುರ್ವೀಥಾ ಯೇಷಾಂ ಸ್ವಸ್ತಿ ಚಿಕೀರ್ಷಸಿ ॥34॥
ಕರ್ಣನ ಮಾತನ್ನು ಕೇಳಿದ ಕುಂತೀದೇವಿಯು ಎಲ್ಲಾ ಮಕ್ಕಳಿಗೆ ಹಿತವನ್ನು ಅಪೇಕ್ಷಿಸುವವಳಾಗಿ ಪುನಃ ತನ್ನ ಜ್ಯೇಷ್ಠಪುತ್ರನನ್ನು ಕುರಿತು ಹೀಗೆ ಹೇಳಿದಳು - ``ನೀನು ಯಾವ ನಾಕುಮಂದಿ ನಿನ್ನ ಸಹೋದರರಿಗೆ ಕಲ್ಯಾಣವನ್ನು ಅಪೇಕ್ಷಿಸು- ತ್ತೀಯೋ, ಆ ನಾಕುಮಂದಿ ಸಹೋದರರ ವಿಷಯದಲ್ಲಿ ಅವಶ್ಯವಾಗಿ ಮಂಗಳ- ವನ್ನು ಉಂಟುಮಾಡುವಂತೆ ನಡೆದುಕೋ''.
ತಮೇವಮುಕತ್ವ ತು ಪೃಥಾ ವಿಸೃಜ್ಯೋಪಯಯೌ ಗೃಹಾನ್ ॥35॥
ಹೀಗೆ ತನ್ನ ಹಿರಿಯ ಮಗನಿಗೆ ಹೇಳಿ ಕುಂತಿಯು ಆ ಕರ್ಣನನ್ನು ಅಲ್ಲಿಯೇ ಬಿಟ್ಟು ಮನೆಗೆ ವಾಪಸ್ಸು ಬಂದಳು.
ಸೋಽರ್ಜುನೇನ ಹತೋ ವೀರೋ ಭ್ರಾತಾ ಭ್ರಾತ್ರಾ ಸಹೋದರಃ|
ನಚೈವ ವಿವೃತೋ ಮಂತ್ರಃ ಪೃಥಾಯಾಸ್ತಸ್ಯ ವಾ ಮುನೇ ॥36॥
ಓ ನಾರದಮುನಿಗಳೇ! ಇಂಥ ಕರ್ಣನನ್ನು ಅರ್ಜುನನೇ ಸಂಹಾರ ಮಾಡಿ- ದನು. ಸ್ವತಃ ತಮ್ಮನೇ ಅಣ್ಣನನ್ನು ಕೊಂದನು. ಕರ್ಣನು ನಮ್ಮ ಸಹೋದರನೆಂಬ ರಹಸ್ಯವನ್ನು ಕೊನೆಯತನಕ ಕುಂತಿಯು ನಮಗೆ ತಿಳಿಸಲೇ ಇಲ್ಲ. ಕರ್ಣನೂ ಕೂಡ ತಿಳಿಸಲಿಲ್ಲ.
ಅಥ ಶೂರೋ ಮಹೇಷ್ವಾಸಃ ಪಾರ್ಥೇನಾಸೌ ನಿಪಾತಿತಃ |
ಅಹಂ ತ್ವಜ್ಞಾಸಿಷಂ ಪಶ್ಚಾತ್ ಸ್ವಸೋದರ್ಯಂ ದ್ವಿಜೋತ್ತಮ ॥37॥
ಪೂರ್ವಜಂ ಭ್ರಾತರಂ ಕರ್ಣಂ ಪೃಥಾಯಾ ವಚನಾತ್ ಪ್ರಭೋ |
ತೇನ ಮೇ ದೂಯತೇಽತೀವ ಹೃದಯಂ ಭ್ರಾತೃಘಾತಿನಃ ॥38॥
ಓ ಬ್ರಾಹ್ಮಣಶ್ರೇಷ್ಠರೇ ! ಯಾವ ಕಾರಣದಿಂದ ಕರ್ಣನು ನಮ್ಮ ಹಿರಿಯಣ್ಣ- ನಾಗಿದ್ದಾನೆಂಬ ವಿಚಾರವನ್ನು ನಾವು ತಿಳಿಯಲಿಲ್ಲವೋ, ಆ ಕಾರಣದಿಂದ ಅರ್ಜುನನು ಮಹಾಧನುಷ್ಮಂತನಾದ ಕರ್ಣನನ್ನು ಯುದ್ದದಲ್ಲಿ ಕೊಂದುಬಿಟ್ಟನು. ಆ ಕರ್ಣನು ಸತ್ತ ಬಳಿಕ ನಾನು ನಮ್ಮ ತಾಯಿಯ ಮೂಲಕ ಕರ್ಣನು ನಮ್ಮ ಹಿರಿಯಣ್ಣನೆಂದು ತಿಳಿದುಕೊಂಡೆನು. ಅಣ್ಣನ ಕೊಲೆಗೆ ಕಾರಣನಾದ ನನ್ನ ಹೃದಯವು ಬಹಳವಾಗಿ ಸಂತಾಪಪಡುತ್ತಿದೆ.
ಕರ್ಣಾರ್ಜುನಸಹಾಯೋಽಹಂ ಜಯೇಯಮಪಿ ವಾಸವಮ್ |
ಕರ್ಣ ಮತ್ತು ಅರ್ಜುನ ಇವರಿಬ್ಬರ ಸಹಾಯವು ನನಗೆ ಇದ್ದಿದ್ದರೆ ನಾನು ದೇವರಾಜನಾದ ಇಂದ್ರನನ್ನೂ ಕೂಡ ಗೆದ್ದು ಬಿಡುತ್ತಿದ್ದೆ.
ಸಭಾಯಾಂ ಕ್ಲಿಶ್ಯಮಾನಸ್ಯ ಧಾರ್ತರಾಷ್ಟ್ರೈರ್ದುರಾತ್ಮಭಿಃ |
ಸಹಸೋತ್ಪತಿತಃ ಕ್ರೋಧಃ ಕರ್ಣಂ ದೃಷ್ಟ್ವಾ ಪ್ರಶಾಮ್ಯತಿ ॥38॥
ದುರಾತ್ಮರಾದ ಆ ಧೃತರಾಷ್ಟ್ರನ ಮಕ್ಕಳು ಆ ಸಭೆಯಲ್ಲಿ ನನಗೆ ಬಹಳ ದುಃಖ- ವನ್ನು ಉಂಟುಮಾಡುತ್ತಿದ್ದರು. ಆ ಕ್ಷಣದಲ್ಲಿ ನನಗೆ ಕೋಪವು ಮಿತಿಮೀರಿ ಬರುತ್ತಿತ್ತು. ಆದರೆ ಕರ್ಣನನ್ನು ನೋಡಿದ ಕೂಡಲೇ ಆ ಕೋಪವು ಶಾಂತ- ವಾಗುತ್ತಿತ್ತು.
ಯದಾ ಹ್ಯಸ್ಯ ಗಿರೋ ರೂಕ್ಷಾಃ ಶೃಣೋಮಿ ಕಟುಕೋದಯಾಃ |
ಸಭಾಯಾಂ ಗದತೋ ದ್ಯೂತೇ ದುರ್ಯೋಧನಹಿತೈಷಿಣಃ |
ತದಾ ನಶ್ಯತಿ ಮೇ ಕ್ರೋಧಃ ಪಾದೌ ತಸ್ಯ ನಿರೀಕ್ಷ್ಯ ಹ ॥39॥
ದ್ಯೂತವು ನಡೆಯುವ ಆ ತುಂಬಿದ ಸಭೆಯಲ್ಲಿ ದುರ್ಯೋಧನನಿಗೆ ಸಂತೋಷವನ್ನು ಉಂಟುಮಾಡುವುದಕ್ಕಾಗಿ ಕರ್ಣನು ನನಗೆ ಕರ್ಣಕಠೋರವಾದ ಅತ್ಯಂತ ತೀಕ್ಷ್ಣವಾದ ಮಾತುಗಳಿಂದ ನಿಂದಿಸುತ್ತಿದ್ದನು. ಆ ಮಾತುಗಳನ್ನು ಕೇಳಿ, ನನಗೆ ಬಹಳ ಸಿಟ್ಟು ಬರುತ್ತಿತ್ತು. ಆದರೆ ಆ ಕರ್ಣನ ಎರಡು ಕಾಲುಗಳನ್ನು ನೋಡಿದಾಗ ನನ್ನ ಆ ಕೋಪವು ಶಾಂತವಾಗುತ್ತಿತ್ತು.

ಕುಂತ್ಯಾ ಹಿ ಸದೃಶೌ ಪಾದೌ ಕರ್ಣಸ್ಯೇತಿ ಮತಿರ್ಮಮ |
ಸಾದೃಶ್ಯಹೇತುಮನ್ವಿಚ್ಛನ್ ಪೃಥಾಯಾಸ್ತಸ್ಯ ಚೈವ ಹಿ |
ಕಾರಣಂ ನಾಧಿಗಚ್ಛಾಮಿ ಕಥಂಚಿದಪಿ ಚಿಂತಯನ್ ॥40॥
ಈ ಕುಂತಿಯ ಪಾದಗಳಂತೆ ಕರ್ಣನ ಪಾದಗಳಿದ್ದವು. ಇದನ್ನು ನಾನು ಸ್ಪಷ್ಟವಾಗಿ ತಿಳಿದಿದ್ದೇನೆ. ಇವರಿಬ್ಬರ ಪಾದಗಳು ಒಂದೇ ಲಕ್ಷಣದಿಂದ ಕೂಡಿರಲು ಏನು ಕಾರಣ? ಎಂಬ ಜಿಜ್ಞಾಸೆ ಬಹಳ ಮೂಡುತ್ತಿತ್ತು. ಆದರೆ ಆ ಕಾರಣವನ್ನು ತಿಳಿದು- ಕೊಳ್ಳಲು ನನ್ನಿಂದ ಸಾಧ್ಯವಾಗಲಿಲ್ಲ. ಎಷ್ಟು ಪ್ರಯತ್ನಪಟ್ಟರೂ ಆ ವಿಷಯದಲ್ಲಿ ವಿಫಲನಾದೆ.
ಕಥಂ ನು ತಸ್ಯ ಸಂಗ್ರಾಮೇ ಪೃಥಿವೀ ಚಕ್ರಮಗ್ರಸತ್ |
ಕಥಂಚ ಶಪ್ತೋ ಭ್ರಾತಾ ಮೇ ತತ್ತ್ವಂ ವಕ್ತುಮಿಹಾರ್ಹಸಿ ॥41॥
ಓ ನಾರದರೇ ! ಆ ರಣರಂಗದಲ್ಲಿ ಕರ್ಣನ ರಥಚಕ್ರವನ್ನು ಭೂಮಿಯು ಹೇಗೆ ನುಂಗಿತು? ನನ್ನ ಹಿರಿಯಣ್ಣನಾದ ಆ ಕರ್ಣನಿಗೆ ಅಂಥ ಶಾಪವು ಏಕೆ ಬಂದಿತು? ಮತ್ತು ಯಾರಿಂದ ಆ ಶಾಪ ಬಂದಿತು? ಈ ಎಲ್ಲದರ ಬಗ್ಗೆ ಯಥಾರ್ಥವಾಗಿ ನನಗೆ ತಿಳಿಸಿರಿ.
ಶ್ರೋತುಮಿಚ್ಛಾಮಿ ಭಗವಂಸ್ತ್ವತ್ತಃ ಸರ್ವಂ ಯಥಾತಥಮ್ |
ಭವಾನ್ ಹಿ ಸರ್ವವಿದ್ ವಿದ್ವಾಂಲ್ಲೋಕೇ ವೇದ ಕೃತಾಕೃತಮ್ ॥42॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪ್ರಥಮೋಽಧ್ಯಾಯಃ ॥1॥
ಓ ಪೂಜ್ಯರೇ! ತಾವು ಎಲ್ಲವನ್ನೂ ಕೂಡ ತಿಳಿದವರಾಗಿದ್ದೀರಿ. ವಿದ್ವಾಂಸ- ರಾಗಿದ್ದೀರಿ. ಹಿಂದೆ ನಡೆದದ್ದನ್ನು ಮತ್ತು ಮುಂದೆ ನಡೆಯುವುದನ್ನು ಸ್ಪಷ್ಟವಾಗಿ ತಿಳಿದಿರುತ್ತೀರಿ. ಆದ್ದರಿಂದ ಈ ಎಲ್ಲಾ ವಿಷಯವನ್ನು ಯಥಾರ್ಥವಾಗಿ ತಮ್ಮಿಂದ ಕೇಳಿ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ.
ವಿಶೇಷವಿಚಾರ - ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶಾಂತಿಪರ್ವದ ಪ್ರಾರಂಭವು ಚಾರ್ವಾಕ ಎಂಬ ತ್ರಿದಂಡಿ ಸನ್ಯಾಸಿಯ ಸಂವಾದದಿಂದ ಪ್ರಾರಂಭ- ವಾಗುತ್ತದೆ. ಆದರೆ ಮೂಲ ಮಹಾಭಾರತದಲ್ಲಿ ಗಂಗಾತೀರಕ್ಕೆ ಶೌಚಾಚಾರವನ್ನು ಆಚರಣೆ ಮಾಡುವುದಕ್ಕಾಗಿ ಪಾಂಡವರು ತೆರಳಿದರು ಎಂಬ ಕಥೆಯಿಂದ ಪ್ರಾರಂಭವಾಗುತ್ತದೆ. ಈ ವ್ಯತ್ಯಾಸವನ್ನು ಗಮನಿಸಬೇಕು.
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೊದಲನೆಯ ಅಧ್ಯಾಯವು ಮುಗಿಯಿತು.
* * * * * *

2. ಎರಡನೆಯ ಅಧ್ಯಾಯ

ಬ್ರಹ್ಮಾಸ್ತ್ರವನ್ನು ಪಡೆಯಬೇಕೆಂಬ ಇಚ್ಛೆ ಕರ್ಣನಿಗೆ ಉಂಟಾಯಿತು. ದ್ರೋಣಾಚಾರ್ಯರ ಬಳಿ ತೆರಳಿದಾಗ ಅದು ದೊರಕಲಿಲ್ಲ ಎಂಬ ಉದ್ವೇಶದಿಂದ ಪರಶುರಾಮದೇವರ ಬಳಿ, ತಾನು ಬ್ರಾಹ್ಮಣನೆಂದು ಹೇಳಿಕೊಂಡನು. ಅದಕ್ಕಾಗಿ ಅವರ ಶಿಷ್ಯತ್ವವನ್ನು ವಹಿಸಿದನು. ಅಲ್ಲಿ ಪ್ರಮಾದ- ದಿಂದ ಬ್ರಾಹ್ಮಣರ ಹಸುವಿನ ಕರುವನ್ನು ಕೊಂದುಬಿಟ್ಟನು. ಇದರಿಂದ ಕರ್ಣನಿಗೆ ಆ ಬ್ರಾಹ್ಮಣನ ಶಾಪವು ಉಂಟಾಯಿತು.
ವೈಶಂಪಾಯನಃ
ಸ ಏವಮುಕ್ತಸ್ತು ಮುನಿರ್ನಾರದೋ ವದತಾಂ ವರಃ |
ಕಥಯಾಮಾಸ ತತ್ ಸರ್ವಂ ಯಥಾ ಶಪ್ತಃ ಸ ಸೂತಜಃ ॥1॥
ವೈಶಂಪಾಯನರು ಓ ರಾಜನೇ! ವಾಗ್ಮಿಗಳಲ್ಲೇ ಶ್ರೇಷ್ಠರಾದ ಆ ನಾರದ- ಮುನಿಗಳು ಧರ್ಮರಾಜನಿಂದ ಹೀಗೆ ಪ್ರಾರ್ಥಿಸಲ್ಪಟ್ಟರು - ಆ ಧರ್ಮರಾಜನಿಗೆ ಎಲ್ಲವನ್ನು ತಿಳಿಸುವುದಕ್ಕಾಗಿ ಕರ್ಣನು ಆ ಬ್ರಾಹ್ಮಣನಿಂದ ಹೇಗೆ ಶಾಪಕ್ಕೀಡಾದನು ಎಂಬುದನ್ನು ನಾರದರು ಹೇಳಲು ಪ್ರಾರಂಭ ಮಾಡಿದರು.
ಏವಮೇತನ್ಮಹಾಬಾಹೋ ಯಥಾ ವದಸಿ ಭಾರತ |
ನ ಕರ್ಣಾರ್ಜುನಯೋಃ ಕಿಂಚಿದವಿಷಹ್ಯಂ ಭವೇದ್ ರಣೇ ॥2॥
ಓ ಮಹಾಬಾಹುವಾದ ಯುಧಿಷ್ಠಿರನೇ ! ನೀನು ಹೇಳಿದ್ದು ಸರಿ. ಕರ್ಣ ಮತ್ತು ಅರ್ಜುನರಿಗೆ ಯುದ್ಧದಲ್ಲಿ ಸಾಧಿಸಲು ಆಗದೇ ಇರುವುದು ಯಾವುದೂ ಇಲ್ಲ. ಇವರಿಬ್ಬರೂ ಸೇರಿದರೆ ದೇವೇಂದ್ರನನ್ನೂ ಕೂಡ ಸೋಲಿಸುತ್ತಾರೆ.
ಗುಹ್ಯಮೇತತ್ತು ದೇವಾನಾಂ ಕಥಯಿಷ್ಯಾಮಿ ತೇ ನೃಪ |
ತನ್ನಿಬೋಧ ಮಹಾರಾಜ ಯಥಾ ವೃತ್ತಮಿದಂ ಪುರಾ ॥3॥
ಓ ರಾಜನೇ ! ಇದು ದೇವಗುಹ್ಯವಾದ ವಿಚಾರ. ಅದನ್ನು ನಿನಗೆ ತಿಳಿಸಲು ಇಚ್ಛಿಸುತ್ತೇನೆ. ಹಿಂದೆ ಇದು ಹೇಗೆ ನಡೆಯಿತು ಎಂಬುದನ್ನು ಯಥಾವತ್ತಾಗಿ ಹೇಳು- ತ್ತೇನೆ ಕೇಳು.
ವಿವರಣೆ - ಕರ್ಣ ಮತ್ತು ಅರ್ಜುನರು ಒಟ್ಟಿಗೆ ಸ್ನೇಹದಿಂದ ಸೇರಬಾರ- ದೆಂಬುದೇ ದೇವತೆಗಳ ಅಭಿಲಾಷೆ. ಆದ್ದರಿಂದ ಕರ್ಣನು ಅರ್ಜುನನಿಂದ ಸಂಹಾರವನ್ನು ಹೊಂದುವುದಕ್ಕಾಗಿ ಅನೇಕ ಹಂತಗಳಲ್ಲಿ ದೇವತೆಗಳು ಉಪಾಯಗಳನ್ನು ಮಾಡುತ್ತಾ ಬಂದರು. ಅದನ್ನು ನಿನಗೆ ತಿಳಿಸುತ್ತೇನೆ ಎಂಬುದು ಇದರ ಅಭಿಪ್ರಾಯ.
ಕ್ಷತ್ರಂ ಸ್ವರ್ಗಂ ಕಥಂ ಗಚ್ಛೇಚ್ಛಸ್ತ್ರಪೂತಮಿತಿ ಪ್ರಭೋ |
ಸಂಘರ್ಷಜನನಸ್ತಸ್ಮಾತ್ ಕನ್ಯಾಗರ್ಭೋ ವಿನಿರ್ಮಿತಃ ॥4॥
ಓ ಪ್ರಭುವೇ ! ಹಿಂದೊಮ್ಮೆ ದೇವತೆಗಳು ಹೀಗೆ ವಿಚಾರವನ್ನು ಮಾಡಿದರು - ಈ ಭೂಮಂಡಲದಲ್ಲಿರುವ ಎಲ್ಲಾ ಕ್ಷತ್ರಿಯರು ಶಸ್ತ್ರಗಳ ಆಘಾತದಿಂದ ಪವಿತ್ರರಾಗಿ ಸ್ವರ್ಗಲೋಕಕ್ಕೆ ಹೇಗೆ ಹೋಗುತ್ತಾರೆ? ಇದಕ್ಕೆ ಏನು ಮಾಡಬೇಕು? ಎಂದು ಯೋಚನೆ ಮಾಡಿದರು. ಆಗ ದೇವತೆಗಳು ಕ್ಷತ್ರಿಯರಲ್ಲಿ ಪರಸ್ಪರ ಸಂಘರ್ಷವನ್ನು ಉಂಟುಮಾಡುವುದಕ್ಕಾಗಿ ಸೂರ್ಯನ ಮೂಲಕ ಕುಮಾರಿಯಾದ ಕುಂತಿಯ ಗರ್ಭದಲ್ಲಿ ಒಬ್ಬ ತೇಜಸ್ವಿಯಾದ ಬಾಲಕನನ್ನು ಹುಟ್ಟಿಸಿದರು. ಅವನೇ ಈ ಕ್ಷತ್ರಿಯರ ಪರಸ್ಪರ ಸಂಘರ್ಷಕ್ಕೆ ಮೂಲಕಾರಣನಾದನು.
ವಿವರಣೆ - ಭೂಮಿಯಲ್ಲಿ ಕ್ಷತ್ರಿಯರು ತುಂಬಿದ್ದಾರೆ. ಇವರು ಶಸತ್ರಸ್ತ್ರಗಳಿಂದ ಮೃತರಾಗಿ ಸ್ವರ್ಗಸ್ಥರಾಗಬೇಕು. ಆದರೆ ಇದಕ್ಕೆ ಏನು

ವಿಧಾನ? ಎಂದು ದೇವತೆಗಳು ಯೋಚನೆ ಮಾಡಿದರು. ಪರಸ್ಪರಸಂಘರ್ಷ ಮಾಡಿದರೆ ಶಸ್ತ್ರ- ಪ್ರಹಾರಗಳಿಂದ ಎಲ್ಲ ಕ್ಷತ್ರಿಯರು ಪವಿತ್ರರಾಗುತ್ತಾರೆ. ಅದರಿಂದ ಸ್ವರ್ಗವನ್ನು ಅವರು ಪಡೆಯಬಹುದು. ಹೀಗೆ ಯೋಚನೆಯನ್ನು ಮಾಡಿ, ಆ ಪರಸ್ಪರ- ಸಂಘರ್ಷಕ್ಕೆ ಕಾರಣವಾದ ಗರ್ಭವನ್ನು ಕುಂತಿಯ ಉದರದಲ್ಲಿಟ್ಟರು. ಇದಕ್ಕೆ ಸೂರ್ಯನನ್ನು ನಿಮಿತ್ತವನ್ನಾಗಿ ಮಾಡಿಕೊಂಡರು ಎಂಬುದು ಈ ಶ್ಲೋಕದ ಸಾರಾಂಶ.
ಕ್ಷತ್ರಂ ಸ್ವರ್ಗಂ ಕಥಂ ಗಚ್ಛೇಚ್ಛಸ್ತ್ರಪೂತಮಿತಿ ಪ್ರಭೋ | ಸಂಘರ್ಷಜನನಸ್ತಸ್ಮಾತ್ ಕನ್ಯಾಗರ್ಭೋ ವಿನಿರ್ಮಿತಃ ||
ಇತ್ಯತ್ರ ಅಯಂ ಭಾವಃ | ಕರ್ಣಸ್ಯ ಕ್ಷತ್ರಿಯಾಯಾಂ ಜನನಾಭಾವೇ ಕ್ಷತ್ರಂ ಶಸ್ತ್ರಪೂತಂ ಸ್ವರ್ಗಂ ಗಚ್ಛೇದಿತಿ ಪ್ರಮೇಯಂ ನ ಸಿದ್ಧ್ಯೇತ್ | ಅತಃ ಕ್ಷತ್ರಿಯಾಯಾಂ ಜನನಮಾವಶ್ಯಕಮ್| ತಚ್ಚಾರ್ಜುನಾದಿವತ್ ಸ್ಪಷ್ಟಂ ಕುಂತ್ಯಾಂ ಜನನೇ ಕ್ಷತ್ರಿಯತ್ವಸ್ಯ ಸುಪ್ರಸಿದ್ಧತ್ವಾತ್ ದ್ರೋಣಾದ್ವಾ ಪರಶುರಾಮಾದ್ವಾ-ಬ್ರಹ್ಮಕ್ಷತ್ರಯೋರುಭಯೋರಪಿ ಯೋಗ್ಯಂ ಬ್ರಹ್ಮಾಸ್ತ್ರಂ ಲಭೇತೈವ | ಬ್ರಹ್ಮಾಸ್ತ್ರಲಾಭೇ ಚ ಕರ್ಣಸ್ಯ ನ ಕುತಶ್ಚಿಚ್ಛಸ್ತ್ರಘಾತಃ ಸ್ಯಾತ್, ಪ್ರತ್ಯುತ ಸ್ವಶತ್ರುಮೇವ ತೇನ ಹನ್ಯಾತ್ | ಅತಶ್ಚ ಕರ್ಣಸ್ಯ ಶಸ್ತ್ರಘಾತಸಾಧ್ಯಸ್ವರ್ಗೋಽಪಿ ನ ಸ್ಯಾತ್ | ಕನ್ಯಾಗರ್ಭಾಜ್ಜನನೇ ತು ಕ್ಷತ್ರಜಾತಿರಪಿ ಜಾತಾ | ಪುನಃ ಸೂತಪುತ್ರತ್ವಪ್ರಸಿದ್ಧೌ ಚ ಬ್ರಹ್ಮಾಸ್ತ್ರಲಾಭೋಽಪಿ ನಾಭೂತ್ | ಅತಃ ಕ್ಷತ್ರಜಾತಿಮತಃ ಕರ್ಣಸ್ಯ ಶಸ್ತ್ರಪೂತಂ ಮರಣಮಪಿ ನ್ಯಾಯಪ್ರಾಪ್ತ ಮಿತ್ಯುಭಯಲಾಭಾಯ ಕನ್ಯಾಯಾಂ ಜನನಂ ದೇವೈರ್ನಿರ್ಮಿತಮಿತಿ ವಕ್ತುರ್ನಾರದಸ್ಯ ಹೃದಯಮಿತಿ | ಸಂಘರ್ಷಜನನಃ ದೇವಾನಾಮನ್ಯೋನ್ಯಂ ಸಂಘರ್ಷಣೇನ ಮಥನೇನ ಜನನಂ ಯಸ್ಯ | `ಸಂಹರ್ಷಜನನಃ' ಇತಿ ಪಾಠೇ ಸ್ಪಷ್ಟೋಽರ್ಥಃ ||
ಈ ಶ್ಲೋಕದ ಅಭಿಪ್ರಾಯ ಹೀಗಿದೆ - ಕರ್ಣನು ಶಸ್ತ್ರಗಳಿಂದ ಪೂತನಾಗಿ ಸ್ವರ್ಗವನ್ನು ಪಡೆಯಬೇಕು ಎಂಬುದು ದೇವತೆಗಳ ಸಂಕಲ್ಪ. ಹಾಗಾಗಬೇಕೆಂದರೆ ಅವನು ಕ್ಷತ್ರಿಯನಾಗಬೇಕು. ಒಂದುವೇಳೆ ಕರ್ಣನು ಕ್ಷತ್ರಿಯಜಾತಿಯಲ್ಲಿ ಹುಟ್ಟದಿದ್ದರೆ ಶಸ್ತ್ರಪೂತನಾಗಿ ಸ್ವರ್ಗವನ್ನು ಹೊಂದಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಕರ್ಣನಿಗೆ ಕ್ಷತ್ರಿಯ ಜಾತಿಯಲ್ಲಿ ಹುಟ್ಟುವುದು ಅನಿವಾರ್ಯವಾಯಿತು. ಎಲ್ಲಾ ದೇವತೆಗಳು ಭಗವಂತನ ಸಂಕಲ್ಪದಂತೆ ಸೂರ್ಯನ ಮೂಲಕ ಕುಂತಿಯು ಕನ್ಯೆಯಾಗಿರುವಾಗ ಕುಂತಿಯ ಗರ್ಭದಿಂದ ಕರ್ಣನನ್ನು ಹುಟ್ಟುವಂತೆ ಮಾಡಿದರು. ಆದರೆ ಅರ್ಜುನಾದಿಗಳಂತೆ ಸ್ಪಷ್ಟವಾದ ಕ್ಷತ್ರಿಯರಿಗೆ ಮಾಡಬೇಕಾದ ಯಾವುದೇ ಸಂಸ್ಕಾರಗಳು ಕರ್ಣನಿಗೆ ಆಗಲಿಲ್ಲ. ಅರ್ಜುನಾದಿಗಳಂತೆ ಸ್ಪಷ್ಟವಾಗಿ ಕುಂತಿಯಲ್ಲಿ ಜನನವಾಗಿದ್ದರೆ ಅವನೂ ಕೂಡ ಅರ್ಜುನಾದಿಗಳಂತೆ ಕ್ಷತ್ರಿಯನೆಂದು ಪ್ರಸಿದ್ಧನಾಗುತ್ತಿದ್ದನು. ಆಗ ದ್ರೋಣಾಚಾರ್ಯರು, ಅಥವಾ ಪರಶುರಾಮದೇವರು ಅರ್ಜುನಾದಿಗಳಿಗೆ ಉಪದೇಶಿಸಿದಂತೆ ಕರ್ಣನಿಗೂ ಕೂಡ ಬ್ರಹ್ಮಾಸ್ತ್ರವನ್ನು ಉಪದೇಶ ಮಾಡುತ್ತಿದ್ದರು. ಏಕೆಂದರೆ ಬ್ರಹ್ಮಾಸ್ತ್ರವನ್ನು ಬ್ರಾಹ್ಮಣರಿಗೆ ಮತ್ತು ಕ್ಷತ್ರಿಯರಿಗೆ ಮಾತ್ರ ಉಪದೇಶ ಮಾಡಬೇಕು. ಆದರೆ ಕರ್ಣನಿಗೆ ಬ್ರಹ್ಮಾಸ್ತ್ರದ ಉಪದೇಶ ಆಗಬಾರದೆಂಬುದೇ ದೈವಸಂಕಲ್ಪ. ಒಂದುವೇಳೆ ಕರ್ಣನಿಗೆ ಬ್ರಹ್ಮಾಸ್ತ್ರದ ಲಾಭವಾದರೆ, ಕರ್ಣನು ಯಾವುದೇ ಶಸ್ತ್ರಘಾತವು ತನಗೆ ಆಗದಂತೆ ತನ್ನನ್ನು ರಕ್ಷಣೆ ಮಾಡಿಕೊಳ್ಳುತ್ತಿದ್ದನು. ಬ್ರಹ್ಮಾಸ್ತ್ರವೆಂಬ ದೊಡ್ಡ ಅಸ್ತ್ರದ ರಕ್ಷಣೆಯಿರುವ ಕರ್ಣನನ್ನು ಅರ್ಜುನನಿಗೆ ಕೊಲ್ಲಲು ಸಾಧ್ಯವಾಗುತ್ತಿರಲಿಲ್ಲ. ಹೊರತಾಗಿ ತಾನೇ ಅರ್ಜುನನ್ನು ಕೊಲ್ಲುತ್ತಿದ್ದನು. ಆದ್ದರಿಂದ ಕರ್ಣನನ್ನು ಕ್ಷತ್ರಿಯನನ್ನಾಗಿ ಹುಟ್ಟಿಸಿದರೂ ಕೂಡ ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನು ಮಾಡಿಕೊಳ್ಳಲು ಸಾಧ್ಯವಾಗದಂತೆ ವಿಧಿಯೇ ನಿರ್ಮಾಣ ಮಾಡಿತು.
ಕ್ಷತ್ರಿಯೋಚಿತವಾದ ಸಂಸ್ಕಾರಗಳು ಆಗದ ಕಾರಣ ಕರ್ಣನಿಗೆ ಬ್ರಹ್ಮಾಸ್ತ್ರದ ಉಪದೇಶವು ಇರುವುದಿಲ್ಲ. ಕ್ಷತ್ರಿಯನಾಗಿ ಹುಟ್ಟಿದ ಕಾರಣ ಶಸ್ತ್ರಘಾತದಿಂದ ಪ್ರಾಪ್ತವಾಗುವ ಸ್ವರ್ಗವು ಅವನಿಗೆ ಉಂಟಾಯಿತು. ಕನ್ಯೆಯ ಗರ್ಭದಿಂದ ಹುಟ್ಟಿದ್ದರಿಂದ ಅವನು ಕ್ಷತ್ರಿಯನೇ ಆಗಿದ್ದಾನೆ. ಆದರೆ ಮುಂದೆ ಸೂತಪುತ್ರನೆಂದು ಪ್ರಸಿದ್ಧನಾದ ಕಾರಣ ಬ್ರಹ್ಮಾಸ್ತ್ರದ ಲಾಭವು ಅವನಿಗೆ ಆಗಲಿಲ್ಲ. ಹೀಗೆ ಕ್ಷತ್ರಿಯ ಜಾತಿ, ಶಸ್ತ್ರಪೂತವಾದ ಮರಣವೂ ಕೂಡ ನ್ಯಾಯಪ್ರಾಪ್ತವಾಗುತ್ತದೆ. ಈ ದೃಷ್ಟಿಯಿಂದ ಕನ್ಯೆಯಲ್ಲಿ ಕರ್ಣನ ಜನನವನ್ನು ದೈವವು ನಿರ್ಮಾಣ ಮಾಡಿತು. ಇಷ್ಟು ನಾರದರ ಮಾತಿನ ಅಭಿಪ್ರಾಯವಾಗಿದೆ.
ವಿಮರ್ಶೆ - ಈ ಲಕ್ಷಾಲಂಕಾರಭಾಗವನ್ನು ಪ್ರಕ್ಷಿಪ್ತವೆಂದೇ ಹೇಳಬೇಕು. ಭಾವೀಸಮೀರರೆಂದೇ ಪ್ರಸಿದ್ಧರಾದ ಶ್ರೀವಾದಿರಾಜರು ತಾತ್ಪರ್ಯನಿರ್ಣಯಕ್ಕೆ ವಿರುದ್ಧವಾಗಿ, ಮೂಲ ಮಹಾಭಾರತಕ್ಕೆ ಹೀಗೆ ವ್ಯಾಖ್ಯಾನ ಮಾಡಲು ಸಾಧ್ಯವಿಲ್ಲ. ಏಕೆಂದರೆ ಕರ್ಣನಿಗೆ ಬ್ರಹ್ಮಾಸ್ತ್ರದ ಉಪದೇಶವಿತ್ತು. ಮತ್ತು ಅದನ್ನು ಯುದ್ಧದಲ್ಲಿ ಪ್ರಯೋಗ ಮಾಡಿದನು ಎಂಬುದಕ್ಕೆ ಸ್ಪಷ್ಟ ಆಧಾರವಿದೆ. ಇದೇ ಶಾಂತಿಪರ್ವದ ಮೂರನೆಯ ಅಧ್ಯಾಯದ ಎರಡನೆಯ ಶ್ಲೋಕ ಹೀಗಿದೆ -
ತಸ್ಮೈ ಸ ವಿಧಿವತ್ ಕೃತ್ಸ್ನಂ ಬ್ರಹ್ಮಾಸ್ತ್ರಂ ಸನಿವರ್ತನಮ್ |
ಪ್ರೋವಾಚಾಖಿಲಮವ್ಯಗ್ರಂ ತಪಸ್ವೀ ತತ್ ತಪಸ್ವಿನೇ ||2||
ಈ ಶ್ಲೋಕವು ಪರಶುರಾಮದೇವರು ವಿಧಿಪ್ರಕಾರವಾಗಿ ಬ್ರಹ್ಮಾಸ್ತ್ರವನ್ನು ಕರ್ಣನಿಗೆ ಉಪದೇಶಿಸಿದ್ದಾರೆಂದು ತಿಳಿಸುತ್ತಿದೆ. ಮತ್ತು ಮಹಾಭಾರತ ತಾತ್ಪರ್ಯನಿರ್ಣಯದ 27 ನೇ ಅಧ್ಯಾಯದ 181, 182 ಈ ಎರಡು ಶ್ಲೋಕಗಳಲ್ಲಿ ಸ್ಪಷ್ಟವಾಗಿ ಕರ್ಣಾರ್ಜುನರಿಬ್ಬರೂ ಪರಸ್ಪರವಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದರು. ಮತ್ತು ಅಸ್ತ್ರಗಳನ್ನು ಉಪಶಮನ ಮಾಡಿದರು ಎಂದು ಹೇಳಲಾಗಿದೆ. ಹಾಗೂ ಸರ್ಪಾಸ್ತ್ರವನ್ನು ಬಿಟ್ಟಾಗ ಕರ್ಣನು ಅದರಲ್ಲಿ ಬ್ರಹ್ಮಾಸ್ತ್ರಕ್ಕೆ ಉಪಯುಕ್ತವಾದ ಮಂತ್ರವನ್ನೂ ಕೂಡ ಅಭಿಮಂತ್ರಣೆ ಮಾಡಿದ್ದನೆಂದು ಆಚಾರ್ಯರು ನಿರ್ಣಯವನ್ನು ನೀಡಿದ್ದಾರೆ. ಆದ್ದರಿಂದ ಲಕ್ಷಾಲಂಕಾರದ ಈ ವಾಕ್ಯದಲ್ಲಿ ಬ್ರಹ್ಮಾಸ್ತ್ರದ ಉಪದೇಶವು ಕರ್ಣನಿಗೆ ಇರುವುದಿಲ್ಲ ಎಂದು ಹೇಳಿದ್ದು ವಿರುದ್ಧವಾಗುತ್ತದೆ.
ಮಹಾಭಾರತತಾತ್ಪರ್ಯನಿರ್ಣಯದಲ್ಲಿರುವ ಹಾಗೂ ಮಹಾಭಾರತ- ದಲ್ಲಿರುವ `ಬ್ರಹ್ಮಾಸ್ತ್ರ' ಎಂಬ ಶಬ್ದಕ್ಕೆ ಕೆಲವು ವಿದ್ವಾಂಸರುಗಳು ಆಗ್ನೇಯಾದ್ಯಸ್ತ್ರ ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಇದು ಸರಿಯಲ್ಲ. ಕ್ಷತ್ರಿಯಸಂಸ್ಕಾರವನ್ನು ಹೊಂದದ ಕರ್ಣನಿಗೆ ವೇದಮಂತ್ರದಲ್ಲೇ ಅಧಿಕಾರವಿಲ್ಲ. ಪ್ರಸಿದ್ಧವಾದ ಗಾಯತ್ರಿ -ಯಿಂದ ಅಭಿಮಂತ್ರಣೆ ಮಾಡಿ, ಪ್ರಯೋಗಿಸಲ್ಪಡುವ ಬ್ರಹ್ಮಾಸ್ತ್ರಕ್ಕೆ ಅನಧಿಕಾರಿ- ಯಾದ ಮೇಲೆ ಆಗ್ನೇಯಾದ್ಯಸ್ತ್ರಗಳ ಪ್ರಯೋಗದಲ್ಲೂ ಕೂಡ ಅವನಿಗೆ ಅಧಿಕಾರ- ವಿರುವುದಿಲ್ಲ. ಬ್ರಹ್ಮಾಸ್ತ್ರವು ಹೇಗೆ ವೇದಮೂಲಕವೋ, ಆಗ್ನೇಯಾದ್ಯಸ್ತ್ರವೂ ಕೂಡ ವೇದಮೂಲಕವೇ ಆಗಿರುತ್ತದೆ. ಆಗ್ನೇಯಾದಿ ಮಂತ್ರಗಳನ್ನು ಸ್ವೀಕರಿಸಲು ಕರ್ಣನಿಗೆ ಅಧಿಕಾರವಿದೆಯೆಂದು ಹೇಳುವುದಾದರೆ ಗಾಯತ್ರೀಮಂತ್ರವನ್ನು ಸ್ವೀಕರಿಸಲು ಕರ್ಣನಿಗೆ ಹೇಗೆ ಅಧಿಕಾರವಿರುವುದಿಲ್ಲ?

ಮತ್ತು ಲಕ್ಷಾಲಂಕಾರವನ್ನು ಆಧರಿಸಿ ವ್ಯಾಖ್ಯಾನ ಮಾಡುವ ವಿದ್ವಾಂಸರು ಒಂದುಕಡೆ ಆಗ್ನೇಯಾದ್ಯಸ್ತ್ರಗಳೆಂದು ವ್ಯಾಖ್ಯಾನ ಮಾಡುತ್ತಾರೆ. ಮತ್ತೊಂದು ಪಂಚಮವೇದೋಕ್ತ ಮಂತ್ರವೆಂದು ಹೇಳುತ್ತಾರೆ. ಆದ್ದರಿಂದ ನಿರ್ಧಾರಾತ್ಮಕವಾಗಿ ಲಕ್ಷಾಲಂಕಾರವನ್ನು ವ್ಯಾಖ್ಯಾನಿಸಲು ಇಲ್ಲಿ ಅವರಿಗೂ ಸಾಧ್ಯವಾಗುವುದಿಲ್ಲ.

ಸ ಬಾಲಸ್ತೇಜಸಾ ಯುಕ್ತಃ ಸೂತಪುತ್ರತ್ವಮಾಗತಃ |
ಚಕಾರಾಂಗಿರಸಾಂ ಶ್ರೇಷ್ಠೇ ಧನುರ್ವೇದಂ ಗುರೌ ತವ ॥5॥

ಆ ಬಾಲಕನು ಕುಂತಿಯ ಗರ್ಭದಲ್ಲಿ ಹುಟ್ಟಿದರೂ ಕೂಡ ಮುಂದೆ ಸೂತನ ಪುತ್ರನೆಂದು ಪ್ರಸಿದ್ಧನಾದನು. ಅವನು ಅಂಗೀರಸಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣ- ಶ್ರೇಷ್ಠರಾದ ನಿನ್ನ ಗುರುಗಳೇ ಆದ ದ್ರೋಣಾಚಾರ್ಯರಿಂದ ಧನುರ್ವೇದವನ್ನು ಅಧ್ಯಯನ ಮಾಡಿದನು.

ಸ ಬಲಂ ಭೀಮಸೇನಸ್ಯ ಫಲ್ಗುನಸ್ಯ ಚ ಲಾಘವಮ್ |
ಬುದ್ಧಿಂ ಚ ತವ ರಾಜೇಂದ್ರ ಯಮಯೋರ್ವಿನಯಂ ತದಾ ॥6॥

ಓ ರಾಜೇಂದ್ರನೇ ! ಆ ಕರ್ಣನು ಭೀಮಸೇನನ ಬಲವನ್ನು, ಅರ್ಜುನನ ಹಸ್ತಲಾಘವವನ್ನು, ನಿನ್ನ ಬುದ್ಧಿಯನ್ನು, ನಕುಲ-ಸಹದೇವರಲ್ಲಿರುವ ವಿನಯಗುಣ- ವನ್ನು ನೋಡಿ ಹೊಟ್ಟೆಕಿಚ್ಚು ಪಟ್ಟನು.

ಸಖ್ಯಂ ಚ ವಾಸುದೇವೇನ ಬಾಲ್ಯೇ ಗಾಂಡೀವಧನ್ವನಃ |
ಪ್ರಜಾನಾಮನುರಾಗಂ ಚ ಚಿಂತಯಾನೋ ವ್ಯದಹ್ಯತ ॥7॥

ಕೃಷ್ಣನ ಜೊತೆಗೆ ಅರ್ಜುನನಿಗೆ ಇದ್ದ ಮೈತ್ರಿಯನ್ನು, ನಿಮ್ಮ ವಿಷಯದಲ್ಲಿ ಪ್ರಜೆಗಳು ತೋರಿಸುತ್ತಿದ್ದ ಅನುರಾಗವನ್ನು, ಚಿಂತಿಸುತ್ತಾ ಅಸೂಯೆಯನ್ನು ಹೊಂದಿ ಬಹಳ ಪರಿತಾಪಪಟ್ಟನು.

ಸ ಸಖ್ಯಮಗಮದ್ ಬಾಲ್ಯೇ ರಾಜ್ಞಾ ದುರ್ಯೋಧನೇನ ವೈ |
ಯುಷ್ಮಾಭಿರ್ನಿತ್ಯಸಂದ್ವಿಷ್ಟೋ ದೈವಾಚ್ಚಾಪಿ ಸ್ವಭಾವತಃ ॥8॥

ನಿಮ್ಮೆಲ್ಲರ ಮೇಲಿನ ದ್ವೇಷದಿಂದ ಆ ಕರ್ಣನು ರಾಜನಾದ ದುರ್ಯೋಧನನ ಜೊತೆ ಬಾಲ್ಯದಲ್ಲಿಯೇ ಸಖ್ಯವನ್ನು ಬೆಳೆಸಿದನು. ನಿಮ್ಮೆಲ್ಲರನ್ನು ಪ್ರತಿನಿತ್ಯವು ದ್ವೇಷ ಮಾಡುತ್ತಿದ್ದನು. ಹೀಗೆ ದ್ವೇಷಿಸಲು ದೇವತೆಗಳ ಪ್ರೇರಣೆಯೂ ಕಾರಣವಾಗಿತ್ತು. ಮತ್ತು ಅವನ ಸ್ವಭಾವವೂ ಕೂಡ ಕಾರಣವಾಗಿತ್ತು.

ವಿದ್ಯಾಧಿಕಮಥಾಲಕ್ಷ್ಯ ಧನುರ್ವೇದೇ ಧನಂಜಯಮ್ |
ದ್ರೋಣಂ ರಹಸ್ಯುಪಾಗಮ್ಯ ಕರ್ಣೋ ವಚನಮಬ್ರವೀತ್ ॥9॥

ಧನಂಜಯನು ಧನುರ್ವೇದದಲ್ಲಿ ತನಗಿಂತಲೂ ಹೆಚ್ಚು ವಿದ್ಯಾವಂತನಾಗಿ- ದ್ದಾನೆಂಬುದನ್ನು ಕರ್ಣನು ಗಮನಿಸಿದನು. ಅವನನ್ನು ಮೀರಿಸಬೇಕೆಂಬ ಉದ್ದೇಶ- ದಿಂದ ಒಮ್ಮೆ ರಹಸ್ಯವಾಗಿ ದ್ರೋಣಾಚಾರ್ಯರನ್ನು ಸಮೀಪಿಸಿದನು. ಮತ್ತು ಅವರಲ್ಲಿ ಮುಂದಿನ ಈ ಮಾತುಗಳನ್ನು ಹೇಳಿದನು.

ಬ್ರಹ್ಮಾಸ್ತ್ರಂ ವೇತ್ತುಮಿಚ್ಛಾಮಿ ಸರಹಸ್ಯನಿವರ್ತನಮ್ |
ಅರ್ಜುನೇನ ಸಮೋ ಯುದ್ಧೇ ಭವೇಯಮಿತಿ ಮೇ ಮತಿಃ ॥10॥
ಸಮಃ ಶಿಷ್ಯೇಷು ವಃ ಸ್ನೇಹಃ ಪುತ್ರೇ ಚೈವ ತಥಾ ಧ್ರುವಮ್ |
ತ್ವತ್ಪ್ರಸಾದಾನ್ನ ಮಾಂ ಬ್ರೂಯುರಕೃತಾಸ್ತ್ರಂ ವಿಚಕ್ಷಣಾಃ ॥11॥

ಆಚಾರ್ಯರೇ ಬ್ರಹ್ಮಾಸ್ತ್ರವನ್ನು ನನಗೆ ಉಪದೇಶಿಸಿರಿ. ಅದನ್ನು ತಿಳಿದು- ಕೊಳ್ಳಬೇಕೆಂಬ ಇಚ್ಛೆ ನನಗುಂಟಾಗಿದೆ. ಅದರ ರಹಸ್ಯವನ್ನು ಆ ಬ್ರಹ್ಮಾಸ್ತ್ರವನ್ನು ಹೇಗೆ ಪ್ರಯೋಗ ಮಾಡಬೇಕು? ಹೇಗೆ ಹಿಂದಕ್ಕೆ ತೆಗೆದುಕೊಳ್ಳಬೇಕು ಎಂಬುದನ್ನು ತಮ್ಮಿಂದ ಕಲಿಯಲು ಅಪೇಕ್ಷಿಸುತ್ತೇನೆ. ಯುದ್ಧದಲ್ಲಿ ಅರ್ಜುನನಿಗೆ ಸರಿಸಾಟಿಯಾಗಿ ನಾನು ನಿಲ್ಲಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. ತಾವು ನಿಮ್ಮ ಮಗನಲ್ಲಿ ಹೇಗೆ ಪ್ರೀತಿಯನ್ನು ಮಾಡುತ್ತೀರೋ, ಅದರಂತೆ ನಿಮ್ಮ ಶಿಷ್ಯರಲ್ಲಿಯೂ ಕೂಡ ಸಮಾನವಾದ ಪ್ರೀತಿಯನ್ನು ಮಾಡುತ್ತೀರಿ. ಅಂಥ ಪ್ರೀತಿಯನ್ನು ನನ್ನ ಮೇಲೂ ಸಹ ತೋರಿಸಿರಿ, ಬ್ರಹ್ಮಾಸ್ತ್ರವನ್ನು ಉಪದೇಶಿಸಿರಿ. ನಿಮ್ಮ ಅನುಗ್ರಹದ ಬಲದಿಂದ ಯಾರೊಬ್ಬ ಜ್ಞಾನಿಯೂ ಕೂಡ ನನ್ನನ್ನು ಅಕೃತಾಸ್ತ್ರನೆಂದು (ಬ್ರಹ್ಮಾಸ್ತ್ರದ ಅರಿವಿಲ್ಲ- ದವನೆಂದು) ಹೇಳದಂತಾಗಲಿ.

ವಿಶೇಷವಿಚಾರ - ಕರ್ಣನಿಗೆ ದ್ರೋಣಾಚಾರ್ಯರು ತನ್ನನ್ನು ನಿರಾಕರಿಸ- ಬಹುದೆಂಬ ಭಯವಿತ್ತು. ಆದ್ದರಿಂದ ತಾವು ಯಾರಲ್ಲಿಯೂ ಕೂಡ ಪಕ್ಷಪಾತ ಮಾಡುವುದಿಲ್ಲವೆಂದು ಅವರನ್ನು ಪ್ರಶಂಸೆ ಮಾಡುತ್ತಾನೆ. ಆದರೆ ದ್ರೋಣಾ- ಚಾರ್ಯರಿಗೆ ಅರ್ಜುನನ ಮೇಲೆ ಹೆಚ್ಚು ಒಲವಿದ್ದುದರಿಂದ ಕರ್ಣನ ಅಪೇಕ್ಷೆ- ಯನ್ನು ಪೂರೈಸಲಿಲ್ಲ. ಮತ್ತು ಅರ್ಜುನನಿಗೆ ಸರಿಸಾಟಿಯಾಗಿ ನಿಲ್ಲಬೇಕು. ಅಥವಾ ಅರ್ಜುನನ್ನು ಮೀರಿಸಬೇಕು ಎಂಬ ದುಷ್ಟ ಅಪೇಕ್ಷೆಯನ್ನು ಹೊಂದಿದ್ದನು. ಇದೂ ಸಹ ದ್ರೋಣಾಚಾರ್ಯರಿಗೆ ಇಷ್ಟವಾಗಲಿಲ್ಲ. ಆದ್ದರಿಂದ ಕರ್ಣನನ್ನು ದ್ರೋಣಾಚಾರ್ಯರು ನಿರಾಕರಣೆ ಮಾಡುತ್ತಾರೆ. ನಿಜವಾಗಿಯೂ ಕರ್ಣನನ್ನು ದ್ರೋಣಾಚಾರ್ಯರು ಏಕೆ ನಿರಾಕರಣೆ ಮಾಡಿದರು ಎನ್ನಲು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಹೀಗೆ ನಿರ್ಣಯವನ್ನು ನೀಡಿದ್ದಾರೆ

ತದಾ ಕರ್ಣೋಽಥೈಕಲವ್ಯಶ್ಚ ದಿವ್ಯಾನ್ಯಸ್ತ್ರಾಣ್ಯಾಪ್ತುಂ ದ್ರೋಣಸಮೀಪಮೀಯತುಃ |
ಸೂತೋ ನಿಷಾದ ಇತಿ ನೈತಯೋರದಾದಸ್ತ್ರಾಣಿ ವಿಪ್ರಃ ಸ ತು ರಾಮಶಿಷ್ಯಃ ॥

ಆಗ ಕರ್ಣನೂ ಏಕಲವ್ಯನೂ ದಿವ್ಯಾಸ್ತ್ರಗಳನ್ನು ಪಡೆಯಲು ದ್ರೋಣನ ಬಳಿಗೆ ಬಂದರು. ಒಬ್ಬ ಸೂತ, ಇನ್ನೊಬ್ಬ ಬೇಡ ಎಂದು ಇಬ್ಬರಿಗೂ ದ್ರೋಣ ಅಸ್ತ್ರಗಳನ್ನು ನೀಡಲಿಲ್ಲ.

ದ್ರೋಣಸ್ತಥೋಕ್ತಃ ಕರ್ಣೇನ ಸಾಪೇಕ್ಷಃ ಫಲ್ಗುನಂ ಪ್ರತಿ |
ದೌರಾತ್ಮ್ಯಂ ಚಾಪಿ ಕರ್ಣಸ್ಯ ವಿದಿತ್ವಾ ತಮುವಾಚ ಹ ॥12॥

ಕರ್ಣನು ದ್ರೋಣಾಚಾರ್ಯರನ್ನು ಕುರಿತು ಹೀಗೆ ಪ್ರಾರ್ಥಿಸಿದನು - ದ್ರೋಣಾಚಾರ್ಯರು ಅರ್ಜುನನ ವಿಷಯದಲ್ಲಿ

ಸ್ವಾಭಾವಿಕವಾಗಿಯೇ ಹೆಚ್ಚು ಪ್ರೀತಿಯನ್ನು ಇಟ್ಟುಕೊಂಡಿದ್ದರು. ಮತ್ತು ಕರ್ಣನ ದುಷ್ಟ ಆಲೋಚನೆಯನ್ನೂ ಕೂಡ ಗಮನಿಸಿದರು. ಇಂಥ ದ್ರೋಣಾಚಾರ್ಯರು ಕರ್ಣನನ್ನು ಕುರಿತು ಹೀಗೆ ಹೇಳುತ್ತಾರೆ-
ಮಹಾಭಾರತದ ತಾತ್ಪರ್ಯನಿರ್ಣಯದಲ್ಲಿ ದ್ರೋಣಾಚಾರ್ಯರು ಅರ್ಜು- ನನ ಪಕ್ಷಪಾತಿಯಾಗಿದ್ದರೆಂಬುದನ್ನು ಶ್ರೀಮಧ್ವಾಚಾರ್ಯರು ಹೀಗೆ ಹೇಳಿದ್ದಾರೆ -
ಸ ಪಕ್ಷಪಾತಂ ಚ ಚಕಾರ ತಸ್ಮಿನ್ ಕರೋತಿ ಚಾಸ್ಯೋರುತರಾಂ ಪ್ರಶಂಸಾಮ್ |
ರಹಸ್ಯವಿದ್ಯಾಶ್ಚ ದದಾತಿ ತಸ್ಯ ನಾನ್ಯಸ್ಯ ಕಸ್ಯಾಪಿ ತಥಾ ಕಥಂಚಿತ್ ॥46॥
ಅಂದಿನಿಂದ ದ್ರೋಣ ಅರ್ಜುನನ ಪಕ್ಷಪಾತಿಯಾದ. ಅವನ ಪ್ರಶಂಸೆಯನ್ನೇ ಹೆಚ್ಚಾಗಿ ಮಾಡಿದ. ಗೋಪ್ಯವಾದ ಮಂತ್ರಗಳನ್ನು ಅವನಿಗೇ ಉಪದೇಶಿಸಿದ. ಹಾಗೆ ಬೇರೆ ಯಾರಿಗೂ ಯಾವ ರೀತಿಯಲ್ಲಿಯೂ ಮಾಡಲಿಲ್ಲ.
ಬ್ರಹ್ಮಾಸ್ತ್ರಂ ಬ್ರಾಹ್ಮಣೋ ವಿದ್ಯಾದ್ ಯಥಾವಚ್ಚರಿತವ್ರತಃ |
ಕ್ಷತ್ರಿಯೋ ವಾ ತಪಸ್ವೀ ಯೋ ನಾನ್ಯೋ ವಿದ್ಯಾತ್ ಕಥಂಚನ ॥13॥
ಓ ಕುಮಾರನೇ! ವಿಧಿಪ್ರಕಾರವಾಗಿ ಬ್ರಹ್ಮಚರ್ಯವ್ರತವನ್ನು ಪಾಲಿಸುವ ಬ್ರಾಹ್ಮಣನಷ್ಟೇ ಬ್ರಹ್ಮಾಸ್ತ್ರವನ್ನು ತಿಳಿಯಲು ಅಧಿಕಾರಿಯಾಗುತ್ತಾನೆ. ಅಥವಾ ತಪಸ್ವಿ -ಯಾದ ಕ್ಷತ್ರಿಯನು ಬ್ರಹ್ಮಾಸ್ತ್ರವನ್ನು ತಿಳಿಯಲು ಅಧಿಕಾರಿಯಾಗುತ್ತಾನೆ. ಬೇರೆಯ- ವರು ಯಾವುದೇ ಕಾರಣದಿಂದಲೂ ಇದನ್ನು ತಿಳಿಯಲು ಅಧಿಕಾರಿಯಾಗುವುದಿಲ್ಲ.
ಇತ್ಯುಕ್ತೋಽಂಗಿರಸಾಂ ಶ್ರೇಷ್ಠಮಾಮಂತ್ರ್ಯ ಪ್ರತಿಪೂಜ್ಯ ಚ |
ಜಗಾಮ ಸಹಸಾ ರಾಮಂ ಮಹೇಂದ್ರಂ ಪರ್ವತಂ ಪ್ರತಿ ॥14॥
ದ್ರೋಣಾಚಾರ್ಯರು ಹೀಗೆ ಹೇಳಿದಾಗ ಕರ್ಣನು ಅಂಗೀರಸ ಗೋತ್ರೋ- ದ್ಭವರಲ್ಲಿ ಉತ್ತಮರಾದ ಆ ದ್ರೋಣಾಚಾರ್ಯರನ್ನು ಅಗೌರವ ಮಾಡಲಿಲ್ಲ. ಯಥೋಚಿತವಾಗಿ ಅವರನ್ನು ಗೌರವಿಸಿದನು. ಮತ್ತು ಅವರ ಅನುಮತಿಯನ್ನು ತೆಗೆದುಕೊಂಡು ಕೂಡಲೇ ಮಹೇಂದ್ರಪವರ್ತದಲ್ಲಿದ್ದ ಪರಶುರಾಮದೇವರ ಬಳಿ ತೆರಳಿದನು.
ಕರ್ಣೋಽನವಾಪ್ಯ ನಿಜಮೀಪ್ಸಿತಮುಚ್ಚಮಾನೋ
ಯಸ್ಮಾದವಾಪ ಪುರುಷೋತ್ತಮತೋಽಸ್ತ್ರವೃಂದಮ್ |
ವಿಪ್ರೋಽಪ್ಯಯಂ ತಮಜಮೇಮಿ ಭೃಗೋಃ ಕುಲೋತ್ಥ
ಮಿತ್ಥಂ ವಿಚಿಂತ್ಯ ಸ ಯಯೌ ಭೃಗುಪಾಶ್ರಮಾಯ ॥47॥
ಬಹಳ ಸ್ವಾಭಿಮಾನಿಯಾದ ಕರ್ಣನು ದ್ರೋಣನಿಂದ ತನ್ನ ಅಭೀಷ್ಟವನ್ನು ಪಡೆಯದಿದ್ದಾಗ `ಈ ದ್ರೋಣನೂ ಯಾವ ಪರಶುರಾಮರಿಂದ ಅಸ್ತ್ರ ಸಮೂಹ- ವನ್ನು ಪಡೆದನೋ ಭೃಗುಕುಲದಲ್ಲಿ ಅವತರಿಸಿದ ಆ ಹರಿಯನ್ನೇ ನಾನೂ ಆಶ್ರಯಿ- ಸುತ್ತೇನೆ' ಎಂದು ಆಲೋಚಿಸಿ ಪರಶುರಾಮರ ಆಶ್ರಮಕ್ಕೆ ಹೋದ.
ಸ ತು ರಾಮಮುಪಾಗಮ್ಯ ಶಿರಸಾಭಿಪ್ರಣಮ್ಯ ಚ |
ಬ್ರಾಹ್ಮಣೋ ಭಾಗವೋಽಸ್ಮೀತಿ ಗೌರವೇಣಾಭ್ಯಗಚ್ಛತ ॥15॥
ಕರ್ಣನು ಪರಶುರಾಮದೇವರ ಬಳಿ ತೆರಳಿದನು. ಭಕ್ತಿಪೂರ್ವಕವಾಗಿ ತಲೆಬಾಗಿ ನಮಸ್ಕರಿಸಿದನು. ನಾನು ಭೃಗುವಂಶದ ಬ್ರಾಹ್ಮಣನಾಗಿದ್ದೇನೆ ಎಂದು ಹೇಳಿದನು. ಅತ್ಯಂತಗೌರವದಿಂದ ಆ ಪರಶುರಾಮದೇವರನ್ನು ಉಪಸತ್ತಿ ಮಾಡಿದನು.
ಸ ಸರ್ವವೇತ್ತುಶ್ಚವಿಭೋರ್ಭಯೇನ ವಿಪ್ರೋಽಹಮಿತ್ಯವದದಸ್ತ್ರವರಾತಿಲೋಭಾತ್ |
ಜಾನನ್ನಪಿ ಪ್ರದದಾವಸ್ಯ ರಾಮೋ ದಿವ್ಯಾನ್ಯಸತತ್ರಣ್ಯಖಿಲಾನ್ಯವ್ಯಯಾತ್ಮಾ ॥48॥
ಕರ್ಣ ಉತ್ತಮ ಅಸ್ತ್ರಗಳ ಅತಿಲೋಭದಿಂದಲೂ ಭಯದಿಂದಲೂ ಸರ್ವಜ್ಞ- ರಾದ ಪರಶುರಾಮರ ಮುಂದೆ `ನಾನು ಬ್ರಾಹ್ಮಣ' ಎಂದನು. ಪರಶುರಾಮರು `ಈತ ಸೂತ'ನೆಂದು ತಿಳಿದೂ ಅವನಿಗೆ ಎಲ್ಲ ದಿವ್ಯ ಅಸ್ತ್ರಗಳನ್ನೂ ಉಪದೇಶಿಸಿ- ದರು.
ರಾಮಸ್ತಂ ಪ್ರತಿಜಗ್ರಾಹ ಪೃಷ್ಟ್ವಾ ಗೋತ್ರಾದಿ ಸರ್ವಶಃ |
ಉಷ್ಯತಾಂ ಸ್ವಾಗತಂ ಚೇತಿ ಪ್ರೀತಿಮಾಂಶ್ಚಾಭವದ್ ಭೃಶಮ್ ॥16॥
ತನ್ನನ್ನು ಉಪಸತ್ತಿ ಮಾಡಿದ ಕರ್ಣನ ಗೋತ್ರ ಮೊದಲಾದವುಗಳನ್ನು ಪರಶು- ರಾಮದೇವರು ಕೇಳಿ ತಿಳಿದುಕೊಂಡರು. ಮತ್ತು ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು. ಬಹಳ ಪ್ರೀತಿಯಿಂದ ವತ್ಸ ! ನೀನು ಇಲ್ಲಿಯೇ ಇರು. ನಿನಗೆ ನಾನು ಸ್ವಾಗತವನ್ನು ಅಪೇಕ್ಷಿಸುತ್ತೇನೆ. ಎಂದು ಹೇಳಿದರು. ಮತ್ತು ಅವನನ್ನು ಅತ್ಯಂತ ಪ್ರೀತಿಯಿಂದಲೇ ಕಾಣುತ್ತಿದ್ದರು.
ತತ್ರ ಕರ್ಣಸ್ಯ ವಸತೋ ಮಹೇಂದ್ರೇ ಪರ್ವತೋತ್ತಮೇ |
ಗಂಧರ್ವೈ ರಾಕ್ಷಸೈರ್ಯಕ್ಷೈರ್ದೇವೈಶ್ಚಾಸೀತ್ ಸಮಾಗಮಃ ॥17॥
ಪರ್ವತಗಳಲ್ಲೇ ಶ್ರೇಷ್ಠವಾದ ಆ ಮಹೇಂದ್ರ ಪರ್ವತದಲ್ಲಿ ಕರ್ಣನು ಶಿಷ್ಯನಾಗಿ ಪರಶುರಾಮದೇವರ ಸೇವೆಯಲ್ಲಿ ನಿರತನಾದನು. ಆ ಕಾಲದಲ್ಲಿ ಗಂಧರ್ವರು, ದೇವತೆಗಳು, ಯಕ್ಷರು, ರಾಕ್ಷಸರು ಈ ಕರ್ಣನನ್ನು ಭೇಟಿ ಮಾಡಿದರು.
ಸ ತತ್ರೇಷ್ವಸ್ತ್ರಮಕರೋದ್ ಭೃಗುಶ್ರೇಷ್ಠಾದ್ ಯಥಾವಿಧಿ |
ಪ್ರಿಯಶ್ಚಾಭವದತ್ಯರ್ಥಂ ದೇವಗಂಧರ್ವರಕ್ಷಸಾಮ್ ॥18॥
ಭೃಗುಶ್ರೇಷ್ಠರಾದ ಪರಶುರಾಮದೇವರ ಮೂಲಕ ವಿಧಿಪ್ರಕಾರವಾಗಿ ಎಲ್ಲಾ ಶಸತತ್ರಸ್ತ್ರಗಳ ವಿದ್ಯೆಯನ್ನು ಅಧ್ಯಯನ ಮಾಡಿದನು. ಆದ್ದರಿಂದಲೇ ದೇವತೆಗಳಿಗೆ, ಗಂಧರ್ವರಿಗೆ ಮತ್ತು ರಾಕ್ಷಸರಿಗೆ ಇವನು ಅತ್ಯಂತ ಪ್ರೀತಿಪಾತ್ರನಾದನು.
ಸ ಕದಾಚಿತ್ ಸಮುದ್ರಾಂತೇ ವಿಚರನ್ನಾಶ್ರಮಾಂತಿಕೇ |
ಏಕಃ ಖಡ್ಗಧನುಷ್ಪಾಣಿಃ ಪರಿಚಕ್ರಾಮ ಸೂರ್ಯಜಃ ॥19॥
ಒಮ್ಮೆ ಕರ್ಣನು ಪರಶುರಾಮದೇವರ ಆಶ್ರಮದ ಸಮೀಪದಲ್ಲೇ ಇರುವ ಸಮುದ್ರದ ತೀರದಲ್ಲಿ ಕತ್ತಿ ಹಾಗೂ ಬಿಲ್ಲುಗಳನ್ನು ಕೈಯಲ್ಲಿ ಹಿಡಿದುಕೊಂಡು ಏಕಾಂಗಿಯಾಗಿ ಸಂಚರಿಸುತ್ತಿದ್ದನು.

ಸೋಽಗ್ನಿಹೋತ್ರಪ್ರಸಕ್ತಸ್ಯ ಕಸ್ಯಚಿದ್ ಬ್ರಹ್ಮವಾದಿನಃ |
ಜಘಾನಾಜ್ಞಾನತಃ ಪಾರ್ಥ ಹೋಮಧೇನುಂ ಯದೃಚ್ಛಯಾ ॥20॥
ಆ ಸಂದರ್ಭದಲ್ಲಿ ಒಬ್ಬ ಅಗ್ನಿಹೋತ್ರಿಯ ಹೋಮಧೇನುವನ್ನು ಕಂಡನು. ಯಾವುದೋ ಪ್ರಾಣಿ ಎಂಬ ಭ್ರಾಂತಿಯಿಂದ ಆ ಹೋಮಧೇನುವನ್ನು ಆಕಸ್ಮಿಕವಾಗಿ ಕೊಂದುಬಿಟ್ಟನು.
ಕರ್ಣನಿಗೆ ಹೋಮಧೇನುವೆಂದು ತಿಳಿದಿರಲಿಲ್ಲ. ಯಾವುದೋ ಹಿಂಸಿಸುವ ಪ್ರಾಣಿ ಎಂದು ಅರಿತು ಕೊಂದುಬಿಟ್ಟನು. ಶಾಪವನ್ನು ಕೊಡಿಸಲು ದೇವತೆಗಳು ಮಾಡಿದ ಉಪಾಯವಿದು.
ತದಜ್ಞಾನಕೃತಂ ಮತ್ವಾ ಬ್ರಾಹ್ಮಣಾಯ ನ್ಯವೇದಯತ್ |
ಕರ್ಣಃ ಪ್ರಸಾದಯಂಶ್ಚೈನಮಿದಮಿತ್ಯಬ್ರವೀದ್ ವಚಃ ॥21॥
ಹತ್ತಿರ ಹೋಗಿ ಪರೀಕ್ಷಿಸಿದಾಗ ಅದು ಹೋಮಧೇನುವೆಂದು ಕರ್ಣನಿಗೆ ತಿಳಿಯಿತು. ತನ್ನ ತಪ್ಪಿನ ಅರಿವಾಯಿತು. ಆ ಬ್ರಾಹ್ಮಣನಲ್ಲಿಗೆ ಬಂದು ತಾನು ಮಾಡಿದ ಅಪರಾಧವನ್ನು ತಿಳಿಸಿದನು. ಮತ್ತು ತನ್ನ ವಿಷಯದಲ್ಲಿ ಆ ಬ್ರಾಹ್ಮಣನು ಪ್ರಸನ್ನನಾಗ- ಬೇಕೆಂಬ ಉದ್ದೇಶದಿಂದ ಈ ಮುಂದಿನ ಮಾತುಗಳನ್ನು ಹೇಳಿದನು.
ಅಬುದ್ಧಿಪೂರ್ವಂ ಭಗವನ್ ಧೇನುರೇಷಾ ಹತಾ ತವ |
ಮಯಾ ತತ್ರ ಪ್ರಸಾದಂ ಮೇ ಕುರುಷ್ವೇತಿ ಪುನಃಪುನಃ ॥22॥
ಪೂಜ್ಯರೇ ! ನನ್ನನ್ನು ಕ್ಷಮಿಸಿರಿ. ನನಗೆ ಇದು ಹೋಮಧೇನುವೆಂದು ತಿಳಿಯಲೇ ಇಲ್ಲ. ಕೊಂದುಬಿಟ್ಟೆನು, ಉದ್ದೇಶಪೂರ್ವಕವಾಗಿ ನಾನು ಸರ್ವಥಾ ಕೊಂದಿರು- ವುದಿಲ್ಲ. ನನ್ನ ವಿಷಯದಲ್ಲಿ ಕುಪಿತರಾಗದೇ ತಾವು ಅನುಗ್ರಹಿಸಬೇಕು. ಹೀಗೆ ಪುನಃ ಪುನಃ ಪ್ರಾರ್ಥನೆ ಮಾಡಿದನು.
ತಂ ಸ ವಿಪ್ರೋಽಬ್ರವೀತ್ ಕ್ರುದ್ಧೋ ವಾಚಾ ನಿರ್ಭರ್ತ್ಸಯನ್ನಿವ |
ದುರಾಚಾರ ವಧಾರ್ಹಸ್ತ್ವಂ ಫಲಂ ಪ್ರಾಪ್ನುಹಿ ದುರ್ಮತೇ ॥23॥
ಯೇನ ವಿಸ್ಪರ್ಧಸೇ ನಿತ್ಯಂ ಯದರ್ಥಂ ಘಟಸೇಽನಿಶಮ್ |
ಯುದ್ಧ್ಯತಸ್ತೇನ ತೇ ಪಾಪ ಭೂಮಿಶ್ಚಕ್ರಂ ಗ್ರಸಿಷ್ಯತಿ ॥24॥
ಆದರೆ ಕರ್ಣನ ಪ್ರಾರ್ಥನೆ ಉಪಯೋಗವಾಗಲಿಲ್ಲ. ಆ ಬ್ರಾಹ್ಮಣನು ತನ್ನ ಮಾತಿನಿಂದಲೇ ಆ ಕರ್ಣನನ್ನು ನಿಂದನೆ ಮಾಡುವಂತೆ ಹೀಗೆ ಹೇಳಿದನು. ಓ ದುಷ್ಟಬುದ್ಧಿಯವನೇ! ದುರಾಚಾರಿಯೇ! ಹೋಮಧೇನುವನ್ನು ಕೊಂದ ನೀನು ವಧಾರ್ಹನಾಗಿರುವಿ, ಇದರ ಪಾಪದ ಫಲವನ್ನು ಅನುಭವಿಸಿಯೇ ತೀರುವಿ. ``ಓ ದುಷ್ಟನೇ! ನಿನಗಿದು ನನ್ನ ಶಾಪ, ಯಾವ ವ್ಯಕ್ತಿಯ ವಿಷಯದಲ್ಲಿ ನೀನು ಪ್ರತಿನಿತ್ಯವೂ ಸ್ಪರ್ಧೆಯನ್ನು ಮಾಡುತ್ತಿರುವೆಯೋ, ಯಾರನ್ನು ನಾಶ ಮಾಡುವುದಕ್ಕಾಗಿ, ಅಹ- ರ್ನಿಶಿ ಪ್ರಯತ್ನವನ್ನು ಪಡುತ್ತಿರುವೆಯೋ, ಅಂಥ ವೀರನ ಜೊತೆ ನೀನು ಯುದ್ಧ ಮಾಡುವ ಸಂದರ್ಭದಲ್ಲಿ ಭೂಮಿಯು ನಿನ್ನ ರಥದ ಚಕ್ರವನ್ನು ನುಂಗುತ್ತದೆ.
ತತಶ್ಚಕ್ರೇ ಮಹೀಗ್ರಸ್ತೇ ಮೂರ್ಧಾನಂ ತೇ ವಿಚೇತಸಃ |
ಪಾತಯಿಷ್ಯತಿ ವಿಕ್ರಮ್ಯ ಶತ್ರುರ್ಗಚ್ಛ ನರಾಧಮ ॥25॥
ಯಾವಾಗ ನಿನ್ನ ರಥದ ಚಕ್ರವನ್ನು ಭೂಮಿಯು ನುಂಗುತ್ತದೋ, ಆಗ ವ್ಯಾಕುಲನಾದ ನಿನ್ನ ತಲೆಯನ್ನು ನಿನ್ನ ಶತ್ರುವು ಕತ್ತರಿಸಿ ಬಿಡುವನು. ಓ ನೀಚ- ಮನುಷ್ಯನೇ! ಹೊರಟು ಹೋಗು, ಒಂದು ಕ್ಷಣವೂ ಇಲ್ಲಿರಬೇಡ.
ಯಥೇಯಂ ಗೌರ್ಹತಾ ಮೂಢ ಪ್ರಮತ್ತೇನ ತ್ವಯಾ ಮಮ |
ಪ್ರಮತ್ತಸ್ಯೈವಮೇವಾನ್ಯಃ ಶಿರಸ್ತೇ ಪಾತಯಿಷ್ಯತಿ ॥26॥
ಹೇಗೆ ಎಚ್ಚರ ತಪ್ಪಿ ನನ್ನ ಹೋಮಧೇನುವನ್ನು ನೀನು ಸಂಹಾರ ಮಾಡಿದೆಯೋ, ಅದೇ ರೀತಿಯಲ್ಲಿ ನೀನು ಎಚ್ಚರ ತಪ್ಪಿದಾಗಲೇ ಮುಂದೇನು ಮಾಡಬೇಕೆಂದು ತೋರದೇ, ದಿಗ್ಭ್ರಾಂತನಾದ ಸಂದರ್ಭದಲ್ಲಿ ಶತ್ರುವು ನಿನ್ನ ತಲೆಯನ್ನು ನೆಲಕ್ಕುರು- ಳಿಸುತ್ತಾನೆ.
ತತಃ ಪ್ರಸಾದಯಾಮಾಸ ಪುನಸ್ತಂ ದ್ವಿಜಸತ್ತಮಮ್ |
ಗೋಭಿರ್ಧನೈಶ್ಚ ರತ್ನೈಶ್ಚ ಸ ಚೈನಂ ಪುನರಬ್ರವೀತ್ ॥27॥
ಬ್ರಾಹ್ಮಣನಿಂದ ಶಪಿತನಾದ ಕರ್ಣನು ಅತ್ಯಂತ ದುಃಖಿತನಾದನು. ಹೇಗಾದರೂ ಆ ಬ್ರಾಹ್ಮಣನನ್ನು ಪ್ರಸನ್ನಗೊಳಿಸಬೇಕೆಂಬ ಉದ್ದೇಶದಿಂದ ಅನೇಕ ಹಸುಗಳನ್ನು ನೀಡುತ್ತೇನೆಂದು ಪ್ರಾರ್ಥಿಸಿದನು. ಹಸುಗಳಷ್ಟೇ ಅಲ್ಲದೇ ಧನಕನಕಾದಿಗಳನ್ನೂ ಕೂಡ ಯಥೇಚ್ಛವಾಗಿ ನೀಡುತ್ತೇನೆಂದು ಹೇಳಿ ಪ್ರಸನ್ನಗೊಳಿಸಲು ಪ್ರಯತ್ನಪಟ್ಟನು. ಆದರೆ ಅದರಿಂದ ಶಾಂತನಾಗದ ಆ ಬ್ರಾಹ್ಮಣನು ಪುನಃ ಕರ್ಣನನ್ನು ಕುರಿತು ಹೀಗೆ ಹೇಳಿದನು-
ನೇದಂ ಮದ್ವ್ಯಾಹೃತಂ ಕುರ್ಯಾತ್ ಸರ್ವಲೋಕೋಽಪಿ ವೈ ಮೃಷಾ |
ಗಚ್ಛ ವಾ ತಿಷ್ಠ ವಾ ಯದ್ವಾ ಕಾರ್ಯಂ ತೇ ತತ್ ಸಮಾಚರ ॥28॥
ಓ ಮೂಢನೇ! ನನ್ನ ಮಾತು ಸುಳ್ಳಾಗಲು ಸಾಧ್ಯವೇ ಇಲ್ಲ. ಎಲ್ಲಾ ಲೋಕಗಳು ಒಟ್ಟಾಗಿ ಸೇರಿದರು, ನನ್ನ ಶಾಪವನ್ನು ತಡೆಯಲು ಸಾಧ್ಯವಾಗುವುದಿಲ್ಲ. ನೀನು ಬೇಕಾದರೆ ಇಲ್ಲೇ ಇರು ಅಥವಾ ಹೊರಟುಹೋಗು, ನಿನ್ನ ಕೆಲಸವನ್ನು ಮಾಡಿಕೋ.
ಇತ್ಯುಕ್ತೋ ಬ್ರಾಹ್ಮಣೇನಾಥ ಕರ್ಣೋ ದೈನ್ಯಾದಧೋಮುಖಃ |
ರಾಮಮಭ್ಯಾಗಮದ್ ಭೀತಸ್ತದೇವ ಮನಸಾ ಸ್ಮರನ್ ॥29॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದ್ವಿತಿಯೋಽಧ್ಯಾಯಃ ॥2॥
ಹೀಗೆ ಬ್ರಾಹ್ಮಣನ ಶಾಪದಿಂದ ಕರ್ಣನು ಅತ್ಯಂತ ದೀನನಾದನು. ಮುಖವನ್ನು ಕೆಳಗೆ ಹಾಕಿಕೊಂಡು, ಆ ಬ್ರಾಹ್ಮಣನು ನೀಡಿದ ಶಾಪವನ್ನೇ ಮನಸ್ಸಿನಲ್ಲಿ ಮೆಲಕು ಹಾಕುತ್ತಾ ಭಯಭೀತನಾದನು. ಗುರುವಾದ ಪರಶುರಾಮನ ಬಳಿ ತೆರಳಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 2ನೇ ಅಧ್ಯಾಯವು ಮುಗಿಯಿತು.

*****

3. ಮೂರನೆಯ ಅಧ್ಯಾಯ

ಒಮ್ಮೆ ಪರಶುರಾಮದೇವರು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದರು. ಆ ಸಂದರ್ಭದಲ್ಲಿ ಒಂದು ಕ್ರಿಮಿ ಕರ್ಣನ ತೊಡೆಯನ್ನು ಭೇದಿಸಿತು. ರಕ್ತವು ಧಾರಾಕಾರವಾಗಿ ಹರಿಯಿತು. ಇದರಿಂದ ಪರಶುರಾಮದೇವರಿಗೆ ಎಚ್ಚರವಾಯಿತು. ಕರ್ಣನಿಗೆ ಶಾಪ ನೀಡಿದರು. ಪರಶುರಾಮದೇವರ ಆಜ್ಞೆಯಿಂದ ಕರ್ಣನು ತನ್ನ ದೇಶಕ್ಕೆ ತೆರಳಿದನು.

ನಾರದಃ

ಕರ್ಣಸ್ಯ ಬಾಹುವೀರ್ಯೇಣ ಪ್ರಶ್ರಯೇಣ ದಮೇನ ಚ |

ತುತೋಷ ಭೃಗುಶಾರ್ದೂಲೋ ಗುರುಶುಶ್ರೂಷಯಾ ತಥಾ ॥1॥

ನಾರದರು ಓ ಧರ್ಮರಾಜನೇ! ಕರ್ಣನಿಗಿದ್ದ ಬಾಹುಪರಾಕ್ರಮವನ್ನು ಕಂಡು ಪರಶುರಾಮದೇವರಿಗೆ ಬಹಳ ಸಂತೋಷವಾಯಿತು. ಅಷ್ಟೇ ಅಲ್ಲದೇ ಅವನಲ್ಲಿರುವ ವಿನಯ, ಇಂದ್ರಿಯಜಯ, ತನಗೆ ಮಾಡುತ್ತಿದ್ದ ಗುರುಶೂಶ್ರೂಷೆ ಈ ಎಲ್ಲಾ ಗುಣಗಳಿಂದ ಭೃಗುಶ್ರೇಷ್ಠರಾದ ಪರಶುರಾಮದೇವರು ಸಂತುಷ್ಟರಾದರು.

ತಸ್ಮೈ ಸ ವಿಧಿವತ್ ಕೃತ್ಸ್ನಂ ಬ್ರಹ್ಮಾಸ್ತ್ರಂ ಸನಿವರ್ತನಮ್ |

ಪ್ರೋವಾಚಾಖಿಲಮವ್ಯಗ್ರಂ ತಪಸ್ವೀ ಸುತಪಸ್ವಿನೇ ॥2॥

ಕರ್ಣನ ವಿಷಯದಲ್ಲಿ ಪ್ರೀತರಾದ ಪರಶುರಾಮದೇವರು ಕರ್ಣನಿಗೆ ಅತ್ಯಂತ ಅಪೇಕ್ಷೆ ಇದ್ದ ರಹಸ್ಯವಾದ ಬ್ರಹ್ಮಾಸ್ತ್ರವನ್ನು ವಿಧಿಪ್ರಕಾರವಾಗಿ ಸಂಪೂರ್ಣವಾಗಿ ಉಪದೇಶಿಸಿದರು. ಬ್ರಹ್ಮಾಸ್ತ್ರದ ಪ್ರಯೋಗ ಹಾಗೂ ಉಪಸಂಹಾರಗಳೆರಡನ್ನೂ ಹೇಳಿಕೊಟ್ಟರು. ಇದನ್ನು ಪಡೆಯುವುದಕ್ಕಾಗಿ ಆ ಕರ್ಣನೂ ಸಹ ಒಳ್ಳೆಯ ತಪಸ್ವಿಯೇ ಆಗಿದ್ದನು.

ಟಿಪ್ಪಣಿ -

ಅಸ್ತ್ರಜ್ಞಚೂಡಾಮಣಿಮಿಂದ್ರಸೂನುಂ ವಿಶ್ವಸ್ಯ ಹಂತುಂ ಧೃತರಾಷ್ಟ್ರಪುತ್ರಃ |

ಏನಂ ಸಮಾಶ್ರಿತ್ಯ ದೃಢೋ ಭವೇತೇತ್ಯದಾಜ್ಞಾತ್ವೈವಾಸ್ತ್ರಮಸ್ಮೈ ರಮೇಶಃ (ತಾ.ನಿ.)

ಅಸ್ತ್ರಜ್ಞ ಚೂಡಾಮಣಿಯಿಂದ ಅರ್ಜುನನನ್ನು ಕೊಲ್ಲಲು ದುರ್ಯೋಧನ ಇವನನ್ನು ನಂಬಿ ಆಶ್ರಯಿಸಿ ದೃಢನಾಗಲಿ ಎಂದು ಭಾವಿಸಿ ಅವನಿಗೆ ಪರಶು- ರಾಮರು ತಿಳಿದೇ ಅಸ್ತ್ರವನ್ನು ನೀಡಿದರು.

ವಿದಿತಾಸ್ತ್ರಸ್ತತಃ ಕರ್ಣೋ ರಮಮಾಣೋಽಽಶ್ರಮೇ ಭೃಗೋಃ |

ಚಕಾರ ವೈ ಧನುರ್ವೇದೇ ಯತ್ನಮದ್ಭುತವಿಕ್ರಮಃ ॥3॥

ಪರಶುರಾಮದೇವರಿಂದ ಬ್ರಹ್ಮಾಸ್ತ್ರ ಮೊದಲಾದ ಅಸ್ತ್ರವಿದ್ಯೆಯನ್ನು ತಿಳಿದು- ಕೊಂಡ ಕರ್ಣನಿಗೆ ಆ ಪರಶುರಾಮದೇವರ ಆಶ್ರಮದಲ್ಲಿ ಅತ್ಯಂತ ಉಲ್ಲಾಸದಿಂದ ಕಾಲವನ್ನು ಕಳೆದನು. ಮಹಾಪರಾಕ್ರಮಿಯಾದ ಅವನು ಸತತವಾಗಿ ಧನುರ್ವೇದ- ವನ್ನು ಕರಗತಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿದ್ದನು.

ಟಿಪ್ಪಣಿ -

ಜ್ಞಾನಂ ಚ ಭಾಗವತಮಪ್ಯಪರಾಶ್ಚವಿದ್ಯಾ

ರಾಮಾದವಾಪ್ಯ ವಿಜಯಂ ಧನುರಗ್ರ್ಯಯಾನಮ್ |

ಅಬ್ದೈಶ್ಚತುರ್ಭಿರಥ ಚ ನ್ಯವಸತ್ ತದಂತೇ

ಹಾತುಂ ನ ಶಕ್ತ ಉರುಗಾಯಮಿಮಂ ಸ ಕರ್ಣಃ (ತಾ.ನಿ.)

ನಾಲ್ಕು ವರ್ಷಗಳ ಕಾಲ ಪರಶುರಾಮರಿಂದ ಪರಮಾತ್ಮ ಜ್ಞಾನವನ್ನೂ ಬೇರೆ ವಿದ್ಯೆಗಳನ್ನೂ ಜಯಪ್ರದವಾದ ಬಿಲ್ಲನ್ನೂ ಒಳ್ಳೆಯ ರಥವನ್ನೂ ಪಡೆದು ಕರ್ಣ ಮತ್ತೂ ಹರಿಯನ್ನು ಬಿಡಲಾಗದೆ ಬಳಿಯಲ್ಲಿ ವಾಸಮಾಡಿದನು.

ತತಃ ಕದಾಚಿತ್ ರಾಮಸ್ತು ಚರನ್ನಾಶ್ರಮಮಂತಿಕಾತ್ |

ಕರ್ಣೇನ ಸಹಿತೋ ಧೀಮಾನುಪವಾಸೇನ ಕರ್ಶಿತಃ ॥4॥

ಒಮ್ಮೆ ಪರಶುರಾಮದೇವರು ಕರ್ಣನ ಜೊತೆ ತಮ್ಮ ಆಶ್ರಮದ ಸಮೀಪದಲ್ಲಿ ಸಂಚಾರ ಮಾಡುತ್ತಿದ್ದರು. ಆಗ ಉಪವಾಸವ್ರತದಲ್ಲಿ ನಿರತರಾದ ಪರಶುರಾಮ- ದೇವರಿಗೆ ಆಯಾಸವಾಯಿತು.

ಸುಷ್ವಾಪ ಜಾಮದಗ್ನ್ಯೋ ವೈ ವಿಸ್ರಂಭೋತ್ಪನ್ನಸೌಹೃದಃ |

ಕರ್ಣಸ್ಯೋತ್ಸಂಗ ಆಧಾಯ ಶಿರಃ ಕ್ಲಾಂತಮನಾ ಗುರುಃ ॥5॥

ಕರ್ಣನ ವಿಷಯದಲ್ಲಿ ಪರಶುರಾಮದೇವರಿಗೆ ಬಹಳ ಪ್ರೀತಿಯಿತ್ತು. ವಿಶ್ವಾಸವೂ ಕೂಡ ಅಧಿಕವಾಗಿತ್ತು. ಅವನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದರು. ಮನಸ್ಸೂ ಕೂಡ ಅವರಿಗೆ ಬಹಳ ಆಯಾಸವಾಗಿತ್ತು.

ಅಥ ಕೃಮಿಃ ಶ್ಲೇಷ್ಮಮಯೋ ಮಾಂಸಶೋಣಿತಭೋಜನಃ |

ದಾರುಣೋ ದಾರುಣಸ್ಪರ್ಶಃ ಕರ್ಣಸ್ಯಾಭ್ಯಾಶಮಾಗಮತ್ ॥6॥

ಪರಶುರಾಮದೇವರು ನಿದ್ರೆಯನ್ನು ಮಾಡುತ್ತಿರುವಾಗ ಒಂದು ಕ್ರಿಮಿಯು ಕರ್ಣನ ಬಳಿಗೆ ಬಂದಿತು. ಅತ್ಯಂತ ಭಯಂಕರವಾಗಿತ್ತು. ಕಫ, ಮೇದಸ್ಸು, ಮಾಂಸ ಮತ್ತು ರಕ್ತಗಳನ್ನು ಆಹಾರವನ್ನಾಗಿ ಸ್ವೀಕರಿಸುವ ಸ್ವಭಾವವುಳ್ಳದ್ದಾಗಿತ್ತು. ಭಯಂ- ಕರವಾಗಿ ಕಚ್ಚುವ ಸ್ವಭಾವವನ್ನು ಹೊಂದಿತ್ತು.

ಸ ತಸ್ಯೋರುಮಥಾಸಾದ್ಯ ಬಿಭೇದ ರುಧಿಶಾಶನಃ |

ನ ಚೈನಮಶಕತ್ ಕ್ಷೇಪ್ತುಂ ಹಂತುಂ ವಾಪಿ ಗುರೋರ್ಭಯಾತ್ ॥7॥

ರಕ್ತಪಾಯಿಯಾದ ಆ ಕ್ರಿಮಿಯು ಕರ್ಣನ ತೊಡೆಯ ಮೇಲೆ ಕುಳಿತು- ಕೊಂಡಿತು. ಕರ್ಣನ ತೊಡೆಯನ್ನು ಕೊರೆಯಲು ಪ್ರಾರಂಭಿಸಿತು. ಆದರೆ ಕರ್ಣನಿಗೆ ಆ ಕ್ರಿಮಿಯನ್ನು ಎತ್ತಿ ಎಸೆಯಲು ಅಥವಾ ಸಾಯಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ತಾನು

ಅಲ್ಲಾಡಿದರೆ ಗುರುಗಳಿಗೆ ಎಚ್ಚರವಾದೀತು ಎಂಬ ಭಯ ಹೊಂದಿದನು.
ಸಂದಶ್ಯಮಾನೋಽಪಿ ತಥಾ ಕೃಮಿಣಾ ತೇನ ಭಾರತ |
ಗುರುಪ್ರಬೋಧಶಂಕೀ ಚ ತಮುಪೈಕ್ಷತ ಸೂತಜಃ ॥8॥
ಓ ಭರತವಂಶೋದ್ಭವನೇ! ಆ ಕ್ರಿಮಿಯು ಭಯಂಕರವಾಗಿ ಆ ಕರ್ಣನ ತೊಡೆ- ಯನ್ನು ಕಚ್ಚುತ್ತಲೇ ಇದೆ. ಆದರೂ ತಾನೂ ಶರೀರ ಕಂಪನವನ್ನು ಮಾಡಿದರೆ ಗುರುವಿಗೆ ನಿದ್ರಾಭಂಗವಾಗಿ ಬಿಡುವುದೋ ಏನೋ ಎಂಬ ಭಯದಿಂದ ಆ ಸೂತ- ಪುತ್ರನಾದ ಕರ್ಣನು ಸುಮ್ಮನಿದ್ದನು. ಕ್ರಿಮಿಯು ತೊಡೆಯನ್ನು ಕೊರೆಯುತ್ತಲೇ ಇದ್ದರೂ ಕೂಡ ಅದನ್ನು ಉಪೇಕ್ಷಿಸಿದನು.
ಕರ್ಣಸ್ತು ವೇದನಾಂ ಧೈರ್ಯಾದಸಹ್ಯಾಂ ವಿನಿಗೃಹ್ಯ ತಾಮ್ |
ಅಕಂಪನ್ನವ್ಯಥಯನ್ ಧಾರಯಾಮಾಸ ಭಾರ್ಗವಮ್ ॥9॥
ಕರ್ಣನಿಗೆ ಆ ಕ್ರಿಮಿಯಿಂದ ಬಹಳ ನೋವಾಯಿತು. ಅದನ್ನು ಸಹಿಸಲು ಕಷ್ಟವೂ ಆಯಿತು. ಆದರೂ ಕೂಡ ಧೈರ್ಯದಿಂದ ಆ ನೋವನ್ನು ಸಹಿಸಿಕೊಂಡನು. ತನ್ನ ಅಂಗಾಂಗಗಳನ್ನು ಸ್ವಲ್ಪವೂ ಕದಲಿಸದೆ, ಎಚ್ಚರಿಕೆಯಿಂದ ಇದ್ದನು. ಆ ಕ್ರಿಮಿಗೂ ತೊಂದರೆ ಕೊಡಲಿಲ್ಲ. ಗುರುಗಳಿಗೂ ಕೂಡ ತೊಂದರೆ ಕೊಡದೇ ಹಾಗೇ ಮಲಗಿಸಿಕೊಂಡಿದ್ದನು.
ಯದಾ ತು ರುಧಿರೇಣಾಂಗಂ ಪರಿಸ್ಪೃಷ್ಟೋ ಭೃಗೂದ್ವಹಃ |
ತದಾ ಬುದ್ಧ್ಯತ ತೇಜಸ್ವೀ ಸಂತ್ರಸ್ತಶ್ಚೇದಮಬ್ರವೀತ್ ॥10॥
ಆದರೆ ಕ್ರಿಮಿಯು ಕೊರೆದದ್ದರಿಂದ ತೊಡೆಯಿಂದ ರಕ್ತವು ಧಾರಾಕಾರವಾಗಿ ಹರಿಯಿತು. ಅದೇ ರಕ್ತವು ಮಲಗಿದ ಪರಶುರಾಮದೇವರನ್ನೂ ಕೂಡ ತಗುಲಿತು. ಕೂಡಲೇ ಪರಶುರಾಮದೇವರಿಗೆ ಎಚ್ಚರವಾಯಿತು. ಅದನ್ನು ಕಂಡು ಕಳವಳಗೊಂಡ ಪರಶುರಾಮದೇವರು ಹೀಗೆ ಹೇಳಿದರು -
ಅಹೋಽಸ್ಮ್ಯಶುಚಿತಾಂ ಪ್ರಾಪ್ತಃ ಕಿಮಿದಂ ಕ್ರಿಯತೇ ತ್ವಯಾ |
ಕಥಯಸ್ವ ಭಯಂ ತ್ಯಕ್ತ್ವಾ ಯಾಥಾತಥ್ಯಮಿದಂ ಮಮ ॥11॥
ಏನಾಶ್ಚರ್ಯ! ಶಿಷ್ಯನೇ ! ರಕ್ತಸ್ಪರ್ಶದಿಂದ ನಾನು ಅಶುಚಿಯಾದೆನು. ನೀನೇಕೆ ಸುಮ್ಮನೆ ಕುಳಿತಿರುವೆ, ಭಯ ಪಡದೇ ಹೇಳು. ಯಥಾರ್ಥಸಂಗತಿಯನ್ನು ನನಗೆ ತಿಳಿಸು.
ತಸ್ಯ ಕರ್ಣಸ್ತದಾಚಷ್ಟ ಕೃಮಿಣಾ ಪರಿಭಕ್ಷಣಮ್ |
ದದರ್ಶ ರಾಮಸ್ತಂ ಚಾಪಿ ಕೃಮಿಂಸೂಕರಸನ್ನಿಭಮ್ ॥12॥
ಆಗ ಕರ್ಣನು ಗುರುಗಳಾದ ಪರಶುರಾಮದೇವರಿಗೆ ಕ್ರಿಮಿಯು ತನ್ನ ತೊಡೆ- ಯನ್ನು ಕಚ್ಚಿದ ಎಲ್ಲಾ ವೃತ್ತಾಂತವನ್ನು ಯಥಾವತ್ತಾಗಿ ತಿಳಿಸಿದನು. ಆಗ ಪರಶು- ರಾಮದೇವರು ಕ್ರಿಮಿಯಿಂದ ಕೊರೆಯಲ್ಪಟ್ಟ ಕರ್ಣನನ್ನೂ, ಹಂದಿಯಂತಿದ್ದ ಆ ಕ್ರಿಮಿಯನ್ನೂ ಕೂಡ ನೋಡಿದರು.
ಅಷ್ಟಪಾದಂ ತೀಕ್ಷ್ಣದಂಷ್ಟ್ರಂ ಸೂಚೀಭಿರಿವ ಸಂವೃತಮ್ |
ರೋಮಭಿಃ ಸನ್ನಿರುದ್ಧಾಂಗಮಲರ್ಕಂ ನಾಮ ನಾಮತಃ ॥13॥
ಆ ಕ್ರಿಮಿಗೆ ಎಂಟು ಕಾಲುಗಳಿದ್ದವು. ತೀಕ್ಷ್ಣವಾದ ಕೋರೆದಾಡಿಗಳಿದ್ದವು. ಸೂಜಿಯಂತಿರುವ ರೋಮಗಳಿಂದ ಆ ಕ್ರಿಮಿಯ ದೇಹವು ಆವೃತವಾಗಿತ್ತು. ಕಷ್ಟದಿಂದ ತನ್ನ ಶರೀರವನ್ನು ಆಗ ಅದು ಸಣ್ಣದನ್ನಾಗಿ ಮಾಡಿಕೊಂಡಿತು. `ಅಲರ್ಕ' ಎಂಬುದು ಅದರ ಹೆಸರು. ಇದರ ಹೆಸರು ಇದಕ್ಕೆ ಅನ್ವರ್ಥವಾಗಿತ್ತು.
ಸ ದೃಷ್ಟಮಾತ್ರೋ ರಾಮೇಣ ಕೃಮಿಃ ಪ್ರಾಣಾನವಾಸೃಜತ್ |
ತಸ್ಮಿನ್ನೇವಾಸೃಜಿಕ್ಲಿನ್ನಸ್ತದದ್ಭುತಮಿವಾಭವತ್ ॥14॥
ಯಾವಾಗ ಪರಶುರಾಮದೇವರು ಆ ಕ್ರಿಮಿಯನ್ನು ನೋಡಿದರೋ, ಅವರ ದೃಷ್ಟಿಯಿಂದಲೇ ಕರ್ಣನ ರಕ್ತದಿಂದ ತೊಯ್ದುಹೋದ ಆ ಕ್ರಿಮಿಯು ಪ್ರಾಣವನ್ನು ಬಿಟ್ಟಿತು. ಇದು ಪರಶುರಾಮದೇವರಿಗೆ ಅತ್ಯಂತ ಆಶ್ಚರ್ಯಕರವಾಗಿ ಕಂಡಿತು.
ತತೋಽಂತರಿಕ್ಷೇ ದದೃಶೇ ವಿಶ್ವರೂಪಃ ಕರಾಲವಾನ್ |
ರಾಕ್ಷಸೋ ಲೋಹಿತಗ್ರೀವಃ ಕೃಷ್ಣಾಂಗೋ ಮೇಘವಾಹನಃ ॥15॥
ಮರುಕ್ಷಣದಲ್ಲಿಯೇ ಅಂತರಿಕ್ಷದಲ್ಲಿ ಅನೇಕವಿಧವಾದ ರೂಪಗಳುಳ್ಳ, ಭಯಂ- ಕರವಾದ ಆಕಾರವುಳ್ಳ, ಕಪ್ಪಾದ ಮೈಬಣ್ಣವುಳ್ಳ, ಕಂಠದಲ್ಲಿ ಮಾತ್ರ ಕೆಂಪುಬಣ್ಣವುಳ್ಳ ಮೇಘದ ಮೇಲೆ ನಿಂತಿರುವ ರಾಕ್ಷಸನು ಕಂಡನು.
ಸ ರಾಮಂ ಪ್ರಾಂಜಲಿರ್ಭೂತ್ವಾ ಬಭಾಷೇ ಪೂರ್ಣಮಾನಸಃ |
ಸ್ವಸ್ತಿ ತೇ ಭೃಗುಶಾರ್ದೂಲ ಗಮಿಷ್ಯಾಮಿ ಯಥಾಗತಮ್ ॥16॥
ಮೋಕ್ಷಿತೋ ನರಕಾದಸ್ಮಿ ಭವತಾ ಮುನಿಸತ್ತಮ |
ಭದ್ರಂ ಚ ತೇಽಸ್ತು ನಂದಿಶ್ಚ ಪ್ರಿಯಂ ಮೇ ಭವತಾ ಕೃತಮ್ ॥17॥
ಆ ರಾಕ್ಷಸನು ಭಕ್ತಿಯಿಂದ ಕೈಜೋಡಿಸಿದವನಾಗಿ ಪೂರ್ಣವಾದ ಮನೋರಥ- ವುಳ್ಳವನಾಗಿ, ಆ ಪರಶುರಾಮದೇವರನ್ನು ಕುರಿತು ಹೀಗೆ ಮಾತನಾಡುತ್ತಾನೆ- ಭೃಗುಶ್ರೇಷ್ಠರಾದ ಪರಶುರಾಮದೇವರೇ ! ತಮಗೆ ಮಂಗಳವಾಗಲಿ. ನಾನು ಎಲ್ಲಿಂದ ಬಂದೆನೋ, ಅಲ್ಲಿಗೆ ತೆರಳುತ್ತೇನೆ. ಮುನಿಶ್ರೇಷ್ಠರೇ ! ತಮ್ಮ ಅನುಗ್ರಹದಿಂದ ನನಗೆ ಈ ಕ್ರಿಮಿಜನ್ಮವೆಂಬ ನರಕದಿಂದ ಉದ್ಧಾರವಾಯಿತು. ತಮಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುತ್ತೇನೆ. ತಮಗೆ ಮಂಗಳವಾಗಲಿ ! ನನಗೆ ಯಾವುದು ಪ್ರಿಯವೋ ಅದನ್ನೇ ತಾವು ಮಾಡಿ ಅನುಗ್ರಹಿಸಿರುವಿರಿ.
ತಮುವಾಚ ಮಹಾಬಾಹುರ್ಜಾಮದಗ್ನ್ಯಃ ಪ್ರತಾಪವಾನ್ |
ಕಸ್ತ್ವಂ ಕಸ್ಮಾಚ್ಚ ನರಕಂ ಪ್ರತಿಪನ್ನೋ ಬ್ರವೀಹಿ ತತ್ ॥18॥
ಮಹಾಬಾಹುಶಾಲಿಯಾದ, ಅತ್ಯಂತ ಪ್ರತಾಪಶಾಲಿಯಾದ ಜಮದಗ್ನಿಋಷಿಗಳ ಮಗನಾದ ಪರಶುರಾಮದೇವರು ಆ ರಾಕ್ಷಸನನ್ನು

ಕುರಿತು ಪ್ರಶ್ನಿಸಿದರು. ಯಾರು ನೀನು? ಯಾವ ಕಾರಣಕ್ಕಾಗಿ ನರಕ ಸದೃಶವಾದ ಈ ಕ್ರಿಮಿಶರೀರವನ್ನು ಹೊಂದಿ- ರುವಿ? ನನಗೆ ಕಾರಣವನ್ನು ತಿಳಿಸು.
ಸೋಽಬ್ರುವೀದಹಮಾಸಂ ಪ್ರಾಗ್ |
ಪುರಾ ದೇವಯುಗೇ ತಾತ ಭೃಗೋಸ್ತುಲ್ಯವಯಾ ಇವ ॥19॥
ಆಗ ಆ ರಾಕ್ಷಸನು ಹೀಗೆ ಉತ್ತರಿಸಿದನು - ನಾನು ಹಿಂದೆ ದೇವಯುಗವೆನಿಸಿದ ಕೃತಯುಗದಲ್ಲಿ ದಂಶ ಎಂಬ ಹೆಸರಿನ ದೊಡ್ಡ ಅಸುರನಾಗಿದ್ದೆನು. ಭೃಗುಋಷಿಗೆ ಸಮಾನವಯಸ್ಕನಾಗಿದ್ದೆನು.
ಟಿಪ್ಪಣಿ - ದಂಶ, ದೃತ್ಸ, ಪ್ರಾಗ್ವಂಶ ಹೀಗೆ ಅನೇಕ ಹೆಸರುಗಳಿವೆ. ಒಂದೊಂದು ಪಾಠದಲ್ಲಿ ಒಂದೊಂದು ಬಗೆಯ ಹೆಸರುಗಳ ಉಲ್ಲೇಖವಿದೆ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೇತಿ ಎಂಬ ಹೆಸರನ್ನು ಹೇಳಿದ್ದಾರೆ.
ಸೋಽಹಂ ಭೃಗೋಃ ಸುದಯಿತಾಂ ಭಾರ್ಯಾಮಪಹರಂ ಬಲಾತ್|
ಮಹರ್ಷೇರಭಿಶಾಪೇನ ಕೃಮಿಭೂತೋಽಪತಂ ಭುವಿ ॥20॥
ಇಂಥ ನಾನು ಭೃಗುಋಷಿಗಳಿಗೆ ಪ್ರೇಮಪಾತ್ರಳಾದ ಪತ್ನಿಯನ್ನು ಬಲಾತ್ಕಾರದಿಂದ ಅಪಹರಿಸಿದೆನು. ಇದರಿಂದ ಭೃಗುಋಷಿಗಳು ಅತ್ಯಂತ ಕುಪಿತರಾದರು. ಕ್ರಿಮಿಯಾ- ಗೆಂದು ನನಗೆ ಶಪಿಸಿದರು. ನಾನು ಭೂಮಿಯಲ್ಲಿ ಕ್ರಿಮಿಯಾಗಿ ಬಿದ್ದೆನು.
ಅಬ್ರುವೀತ್ತು ಸ ಮಾಂ ಕ್ರೋಧಾತ್ ತವ ಪೂರ್ವಪಿತಾಮಹಃ |
ಮೂತ್ರಶ್ಲೇಷ್ಮಾಶನಃ ಪಾಪ ನಿರಯಂ ಪ್ರತಿಪತ್ಸ್ಯಸೇ ॥21॥
ಪರಶುರಾಮದೇವರೇ ! ತಮ್ಮ ವಂಶದ ಪಿತಾಮಹರಾದ ಆ ಭೃಗುಋಷಿಗಳು ನನ್ನನ್ನು ಕುರಿತು ಬಹಳ ಕೋಪದಿಂದ ಹೀಗೆ ಹೇಳಿದರು - ``ಮೂತ್ರ, ಕಫ ಮೊದ- ಲಾದವುಗಳನ್ನು ತಿನ್ನುತ್ತಾ, ನರಕಸದೃಶವಾದ ಜನ್ಮವನ್ನು ತಾಳು''.
ಶಾಪಸ್ಯಾಂತೋ ಭವೇದ್ ಬ್ರಹ್ಮನ್ನಿತ್ಯೇವಂ ತಮಥಾಬ್ರುವಮ್ |
ಭವಿತಾ ಭಾರ್ಗವಾತ್ ರಾಮಾತ್ ಇತಿ ಮಾಮಬ್ರುವೀದ್ ಭೃಗುಃ॥22॥
ಅವರು ಶಾಪವನ್ನು ನೀಡಿದ ಮೇಲೆ ನಾನು ಪ್ರಾರ್ಥಿಸಿದೆನು. ಬ್ರಾಹ್ಮಣ- ಶ್ರೇಷ್ಠರೇ ! ಈ ಶಾಪದಿಂದ ನನಗೆ ಮೋಚನೆ ಹೇಗಾಗುತ್ತದೆ? ಎಂದು ಪ್ರಾರ್ಥಿಸಿ- ದೆನು. ಆಗ ಆ ಭೃಗುಋಷಿಗಳು ತಮ್ಮ ವಂಶದಲ್ಲಿ ಭಾರ್ಗವರಾಮನು ಹುಟ್ಟುತ್ತಾನೆ. ಅವನಿಂದ ನಿನಗೆ ಶಾಪವಿಮೋಚನೆಯಾಗುತ್ತದೆ ಎಂದು ತಿಳಿಸಿದರು.
ಸೋಽಹಮೇನಾಂ ಗತಿಂ ಪ್ರಾಪ್ತೋ ಯಥಾ ನಕುಶಲಂ ತಥಾ |
ತ್ವಯಾ ಸಾಧೋ ಸಮಾಗಮ್ಯ ವಿಮುಕ್ತಃ ಪಾಪಯೋನಿತಃ ॥23॥
ಓ ಸಾಧುವರೇಣ್ಯರೇ! ನಾನು ಮಾಡಿದ ತಪ್ಪಿಗೆ ಇಂಥ ಪಾಪಯೋನಿಯಲ್ಲಿ ಹುಟ್ಟಿ, ನರಕದುಃಖವನ್ನು ಅನುಭವಿಸಿದೆನು. ಯಾವ ರೀತಿಯಲ್ಲೂ ಕ್ಷೇಮವನ್ನು ಈ ಜನ್ಮದಲ್ಲಿ ನಾನು ಕಂಡಿಲ್ಲ. ತಮ್ಮ ಸಮಾಗಮದ ಫಲವಾಗಿ ಇಂದು ಈ ಪಾಪ- ಜನ್ಮದಿಂದ ಮುಕ್ತನಾಗಿದ್ದೇನೆ.
ಏವಮುಕ್ತತ್ವ ನಮಸ್ಕೃತ್ಯ ಯಯೌ ರಾಮಂ ಮಹಾಸುರಃ |
ರಾಮಃ ಕರ್ಣಂ ತು ಸುಕ್ರೋಧಮಿದಂ ವಚನಮಬ್ರುವೀತ್ ॥24॥
ಹೀಗೆ ಆ ಮಹಾಸುರನು ಪರಶುರಾಮದೇವರನ್ನು ಕುರಿತು ಹೇಳಿ, ಭಕ್ತಿಯಿಂದ ಪುನಃ ನಮಸ್ಕಾರವನ್ನು ಮಾಡಿದನು. ಅಲ್ಲಿಂದ ತನ್ನ ಸ್ಥಳಕ್ಕೆ ಹೊರಟುಹೋದನು. ಅನಂತರ ಪರಶುರಾಮದೇವರು ಬಹಳ ಸಿಟ್ಟಿನಿಂದ ಕರ್ಣನ ಕಡೆಗೆ ತಿರುಗಿ ಹೀಗೆ ಹೇಳಿದರು -
ಅತಿದುಃಖಮಿದಂ ಮೂಢ ನ ಜಾತು ಬ್ರಾಹ್ಮಣಃ ಸಹೇತ್ |
ಕ್ಷತ್ರಿಯಸ್ಯೇವ ತೇ ಧೈರ್ಯಂ ಕಾಮಯಾ ಸತ್ಯಮುಚ್ಯತಾಮ್ ॥25॥
ಓ ಮೂಢನೇ! ಇಂಥ ಭಯಂಕರವಾದ ಕ್ರಿಮಿಯ ಬಾಧೆಯನ್ನು ಬ್ರಾಹ್ಮಣ- ನಿಂದ ಸಹಿಸಲು ಸಾಧ್ಯವಿಲ್ಲ. ಕ್ಷತ್ರಿಯರು ಮಾತ್ರ ಇಂಥ ವೇದನೆಯನ್ನು ಸಹಿಸಿ- ಕೊಳ್ಳುವ ಧೈರ್ಯವನ್ನು ಹೊಂದಿರುತ್ತಾರೆ. ಇಂಥ ಗುಣವು ನಿನ್ನಲ್ಲಿ ಕಾಣಿಸುತ್ತಿದೆ. ಸುಳ್ಳು ಹೇಳಬೇಡ. ನನ್ನ ಬಳಿ ನೀನಾಗಿಯೇ ಸತ್ಯವನ್ನು ಹೇಳು.
ತಮುವಾಚ ತತಃ ಕರ್ಣಃ ಶಾಪಾದ್ ಭೀತಃ ಪ್ರಸಾದಯನ್ |
ಬ್ರಹ್ಮಕ್ಷತ್ರಾಂತರೇ ಸೂತಂ ಜಾತಂ ಮಾಂ ವಿದ್ಧಿ ಭಾರ್ಗವ ॥26॥
ಆಗ ಕರ್ಣನು ಶಾಪಭಯದಿಂದ ನಡುಗುತ್ತಾ, ಆ ಪರಶುರಾಮದೇವರನ್ನು ಪ್ರಸನ್ನೀಕರಿಸಿಕೊಳ್ಳಲು ಹೀಗೆ ಸತ್ಯವನ್ನು ಬಿಚ್ಚಿಡುವನು. ಓ ಭಾರ್ಗವ! ನಾನು ನಿಜವಾಗಿಯೂ ಕೂಡ ಬ್ರಾಹ್ಮಣನಲ್ಲ. ಬ್ರಾಹ್ಮಣ ಹಾಗೂ ಕ್ಷತ್ರಿಯರಿಬ್ಬರಲ್ಲಿ ಹುಟ್ಟಿದ ಸೂತಜಾತಿಯವನೆಂದು ನನ್ನನ್ನು ತಿಳಿ.
ರಾಧೇಯಃ ಕರ್ಣ ಇತಿ ಮಾ ಪ್ರವದಂತಿ ಜನಾ ಭುವಿ |
ಪ್ರಸಾದಂ ಕುರು ಮೇ ಬ್ರಹ್ಮನ್ನಸ್ತ್ರಲುಬ್ಧಸ್ಯ ಭಾರ್ಗವ ॥27॥
ಕರ್ಣನಾದ ನನ್ನನ್ನು ಜನರು ಭೂಲೋಕದಲ್ಲಿ `ರಾಧೇಯ' ಎಂದೇ ಕರೆಯು- ತ್ತಾರೆ. ನಾನು ಅಸ್ತ್ರವನ್ನು ಕಲಿಯಬೇಕೆಂಬ ಆಸೆಯಿಂದ ನಿನ್ನಲ್ಲಿ ಬ್ರಾಹ್ಮಣವೇಷವನ್ನು ಧರಿಸಿ ಬಂದಿರುವೆನು. ನನ್ನ ಅಪರಾಧವನ್ನು ಮನ್ನಿಸಿ, ಕೃಪೆ ತೋರು.
ಪಿತಾ ಗುರುರ್ನ ಸಂದೇಹೋ ವೇದವಿದ್ಯಾಪ್ರದಃ ಪ್ರಭುಃ |
ಅತೋ ಭಾರ್ಗವ ಇತ್ಯುಕ್ತಂ ಮಯಾ ಗೋತ್ರಂ ತವಾಂತಿಕೇ ॥28॥
ವಿದ್ಯೆಯನ್ನು ನೀಡುವ ಗುರುವೇ ತಂದೆಯೆಂಬ ವಿಷಯದಲ್ಲಿ ನನಗೆ ಸಂದೇಹ- ವಿಲ್ಲ. ಈ ಕಾರಣದಿಂದಲೇ ನನ್ನನ್ನು ಭಾರ್ಗವ ಗೋತ್ರಜನೆಂದು ತಮ್ಮ ಬಳಿ ತಿಳಿಸಿಬಿಟ್ಟೆನು.
ತಮುವಾಚ ಭೃಗುಶ್ರೇಷ್ಠಃ ಸರೋಷಃ ಪ್ರದಹನ್ನಿವ |
ಭೂಮೌ ನಿಪತಿತಂ ದೀನಂ ವೇಪಮಾನಂ ಕೃತಾಂಜಲಿಮ್ ॥29॥

ಇಷ್ಟು ಹೇಳಿ ಕರ್ಣನು ಕೈಮುಗಿದು ನಡುಗುತ್ತಾ ಭೂಮಿಯ ಮೇಲೆ ಬಿದ್ದನು. ಅತ್ಯಂತ ಖಿನ್ನನಾಗಿ ಬದ್ಧಾಂಜಲಿಯಾಗಿ ಪುನಃ ಪುನಃ ಆ ಪರಶುರಾಮದೇವರಿಗೆ ನಮಿಸಿದನು. ಇಂಥ ಉದ್ವಿಗ್ನ ಪರಿಸ್ಥಿತಿಯಲ್ಲಿರುವ ಕರ್ಣನನ್ನು ಕಂಡು ಪರಶು- ರಾಮದೇವರು ಹೀಗೆ ಹೇಳುತ್ತಾರೆ -

ಯಸ್ಮಾನ್ಮಿಥ್ಯೋಪಚರಿತೋ ಅಸ್ತ್ರಲೋಭಾದಿಹ ತ್ವಯಾ |
ತಸ್ಮಾದೇತದ್ಧಿ ತೇ ಮೂಢ ಬ್ರಹ್ಮಾಸ್ತ್ರಂ ಪ್ರತಿಭಾಸ್ಯತಿ ॥30॥
ಅನ್ಯತ್ರ ವಧಕಾಲಾತ್ತೇ ಸದೃಶೇನ ಸಮಿಯುಷಃ |

ಎಲೌ ಮೂರ್ಖನೇ! ಬ್ರಹ್ಮಾಸ್ತ್ರವನ್ನು ಪಡೆಯಬೇಕೆಂಬ ದುರಾಸೆಯಿಂದ ನನ್ನ ಬಳಿಯೇ ಸುಳ್ಳನ್ನು ಹೇಳಿ ವಂಚನೆ ಮಾಡಿರುವೆಯಾ? ಈ ಕಾರಣದಿಂದ ನಿನ್ನ ಮೃತ್ಯುಕಾಲವು ಹತ್ತಿರವಾದಾಗ ಮತ್ತು ನಿನಗೆ ಸರಿಸಾಟಿಯಾದ ವೀರನ ಜೊತೆ ಯುದ್ಧಮಾಡುವಾಗ ಆ ಬ್ರಹ್ಮಾಸ್ತ್ರವು ನಿನಗೆ ಸ್ಫುರಣವಾಗದೇ ಇರಲಿ. ಸರಿಯಾದ ಸಮಯದಲ್ಲಿ ಅದರ ಮಂತ್ರವು ನಿನಗೆ ನೆನಪು ಬಾರದಿರಲಿ. ಉಳಿದ ಸಂದರ್ಭದಲ್ಲಿ ಆ ಅಸ್ತ್ರಜ್ಞಾನವು ನಿನಗೆ ಇರುತ್ತದೆ.

ಅಬ್ರಾಹ್ಮಣೇ ನಹಿ ಬ್ರಹ್ಮ ಧ್ರುವಂ ತಿಷ್ಠೇತ್ ಕದಾಚನ ॥31॥
ಗಚ್ಛೇದಾನೀಂ ನ ತೇ ಸ್ಥಾನಮನೃತಸ್ಯೇಹ ವಿದ್ಯತೇ |
ನ ತ್ವಯಾ ಸದೃಶೋ ಯುದ್ಧೇ ಭವಿತಾ ಕ್ಷತ್ರಿಯೋ ಭುವಿ ॥32॥

ಬ್ರಾಹ್ಮಣನಲ್ಲದವನಲ್ಲಿ ಈ ಬ್ರಹ್ಮಾಸ್ತ್ರವು ಹೆಚ್ಚು ಕಾಲ ಎಂದೂ ನಿಲ್ಲುವುದಿಲ್ಲ. ಇನ್ನು ಹೊರಟು ಹೋಗು. ನಿನ್ನಂಥ ಸುಳ್ಳುಹೇಳುವವರಿಗೆ ಇದು ಉಚಿತವಾದ ಸ್ಥಳವಲ್ಲ. ಆದರೂ ನನ್ನ ಬಳಿ ಶಿಷ್ಯತ್ವವನ್ನು ವಹಿಸಿದ್ದು ವ್ಯರ್ಥವಾಗುವುದಿಲ್ಲ. ಯುದ್ಧದಲ್ಲಿ ನಿನಗೆ ಸರಿಸಾಟಿಯಾದ ಮತ್ತೊಬ್ಬ ಕ್ಷತ್ರಿಯನು ಇರಲು ಸಾಧ್ಯವಿಲ್ಲ.

ಏವಮುಕ್ತಸ್ತು ರಾಮೇಣ ನ್ಯಾಯೇನೋಪಜಗಾಮ ಸಃ |
ದುರ್ಯೋಧನಮುಪಾಗಮ್ಯ ಕೃತಾಸ್ತ್ರೋಽಸ್ಮೀತಿ ಚಾಬ್ರವೀತ್ ॥33॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ತೃತಿಯೋಽಧ್ಯಾಯಃ ॥

ಯುಧಿಷ್ಠಿರನೇ ! ಪರಶುರಾಮದೇವರು ಹೀಗೆ ಹೇಳಿದ ಮೇಲೆ ಕರ್ಣನು ತನ್ನ ಯೋಗ್ಯತೆಗೆ ಅನುಗುಣವಾಗಿ ಆ ಗುರುವನ್ನು ಸತ್ಕಾರ ಮಾಡಿದನು. ಮತ್ತು ಅಲ್ಲಿಂದ ಹೊರಟನು. ಹಸ್ತಿನಾಪಟ್ಟಣಕ್ಕೆ ಬಂದು ದುರ್ಯೋಧನನಲ್ಲಿ `ಕೃತಾಸ್ತ್ರೋಽಸ್ಮಿ' ನಾನು ಸಕಲ ಅಸ್ತ್ರವಿದ್ಯೆಗಳಲ್ಲಿ ಪಾರಂಗತನಾಗಿದ್ದೇನೆ ಎಂದು ಹೇಳಿದನು.

ಟಿಪ್ಪಣಿ - ತನಗೆ ಬಂದ ಯಾವುದೇ ಶಾಪಗಳನ್ನು ದುರ್ಯೋಧನನಿಗೆ ತಿಳಿಸಲಿಲ್ಲ. ಎಲ್ಲಾ ಅಸ್ತ್ರವಿದ್ಯೆಗಳನ್ನು ಕಲಿತಿದ್ದೇನೆ ಎಂದಷ್ಟೇ ತಿಳಿಸಿದನು.

ತಾತ್ಪರ್ಯನಿರ್ಣಯ -

ಅಂಕೇ ನಿಧಾಯ ಸ ಕದಾಚಿದಮುಷ್ಯ ರಾಮಃ
ಶಿಶ್ಯೇ ಶಿರೋ ವಿಗತನಿದ್ರ ಉದಾರಬೋಧಃ |
ಸಂಸುಪ್ತವತ್ ಸುರವರಃ ಸುರಕಾರ್ಯಹೇತೋ
ರ್ದಾತುಂ ಚ ವಾಲಿನಿಧನಸ್ಯ ಫಲಂ ತದಸ್ಯ ॥

ಒಮ್ಮೆ ಪರಶುರಾಮರು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ಮಲಗಿದರು. ನಿದ್ದೆ ಇಲ್ಲದ ಉತ್ತಮಜ್ಞಾನರೂಪನಾದ ಆ ದೇವೋತ್ತಮ ದೇವಕಾರ್ಯಕ್ಕಾಗಿ ಮತ್ತು ಸುಗ್ರೀವಾವತಾರದಲ್ಲಿ ವಾಲಿಯನ್ನು ಕೊಲ್ಲಿಸಿದ್ದಕ್ಕೆ ಫಲಕೊಡುವುದಕ್ಕಾಗಿ ನಿದ್ದೆ ಮಾಡುತ್ತಿರುವಂತೆ ಮಲಗಿದ್ದನು.

ತತ್ರಾಸ ರಾಕ್ಷಸವರಃ ಸ ತು ಹೇತಿನಾಮಾ
ಕಾಲೇ ಮಹೇಂದ್ರಮನುಪಾಸ್ಯ ಹಿ ಶಾಪತೋಽಸ್ಯ |
ಕೀಟಸ್ತಮಿಂದ್ರ ಉತ ತತ್ರ ಸಮಾವಿವೇಶ
ಕರ್ಣಸ್ಯ ಶಾಪಮುಪಪಾದಯಿತುಂ ಸುತಾರ್ಥೇ ॥

ಹೇತಿ ಎಂಬ ಉತ್ತಮ ರಾಕ್ಷಸ ಸಕಾಲದಲ್ಲಿ ಇಂದ್ರನ ಸೇವೆ ಮಾಡದಿದ್ದುದಕ್ಕಾಗಿ ಅವನ ಶಾಪದಿಂದ ಕೀಟನಾಗಿ ಅಲ್ಲಿ ಹುಟ್ಟಿದ್ದನು. ತನ್ನ ಮಗನಾದ ಅರ್ಜುನನ ಹಿತಕ್ಕಾಗಿ ಕರ್ಣನಿಗೆ ಪರಶುರಾಮರಿಂದ ಶಾಪಕೊಡಿಸುವ ಉದ್ದೇಶದಿಂದ ಇಂದ್ರ ಆ ಕೀಟದಲ್ಲಿ ಆವೇಶಗೊಂಡನು.

ಕರ್ಣಃ ಸಕೀಟತನುಗೇನ ಕಿರೀಟನ್ನೈವ
ಹ್ಯೂರೋರಧಸ್ತಲತ ಔಪರಿಗಾತ್ವಚಶ್ಚ |
ವಿದ್ಧಃ ಶರೇಣ ಸ ಯಥಾ ರುಧಿರಸ್ಯ ಧಾರಾಂ
ಸುಸ್ರಾವ ತಂ ವಿಗತ ನಿದ್ರ ಇವಾಹ ರಾಮಃ ॥

ಕೀಟ ಶರೀರದಲ್ಲಿದ್ದ ಹೇತಿಯೊಂದಿಗೆ ಇಂದ್ರ ಕರ್ಣನ ತೊಡೆಯ ಕೆಳಭಾಗದಿಂದಾರಂಭಿಸಿ ಮೇಲ್ಭಾಗದ ಚರ್ಮದವರೆಗೂ ಬಾಣದಂತೆ ಕೊರೆದು ಗಾಯ ಮಾಡಿದ. ಆಗ ರಕ್ತದ ಕೋಡಿ ಹರಿಯಿತು. ಪರಶುರಾಮರು ಅದರಿಂದ ಎಚ್ಚೆತ್ತವನಂತೆ ಎದ್ದು ಕೇಳತೊಡಗಿದರು.

ಕಿಂ ತ್ವಂ ನ ಚಾಲಯಸಿ ಮಾಂ ರುಧಿರಪ್ರಸೇಕೇ
ಪ್ರಾಪ್ತೇಽಪಿ ಪಾವನವಿರೋಧಿನಿ ಕೋಽಸಿ ಚೇತಿ |
ತಂ ಪ್ರಾಹ ಕರ್ಣ ಇಹ ನೈವ ಮಯಾ ವಿಧೇಯೋ
ನಿದ್ರಾವಿರೋಧ ಇತಿ ಕೀಟ ಉಪೇಕ್ಷಿತೋ ಮೇ ॥

`ಅಪವಿತ್ರ ರಕ್ತ ಸ್ಪರ್ಶವಾಗುತ್ತಿದ್ದರೂ ನೀನು ನನ್ನನ್ನು ಏಕೆ ಅಲ್ಲಾಡಿಸಲಿಲ್ಲ? ಯಾರು ನೀನು?' ಪರಶುರಾಮ ಹೀಗೆ ಕೇಳಿದಾಗ

ಕರ್ಣನೆಂದ, `ನಾನು ನಿಮಗೆ, ಈ ಗಾಢ ನಿದ್ರಾಕಾಲದಲ್ಲಿ ನಿದ್ರಾಭಂಗವನ್ನು ಮಾಡಬಾರದೆಂದು ಕೀಟವನ್ನು ಸುಮ್ಮನೆಬಿಟ್ಟೆ'.
ಜಾತ್ಯಾಸ್ಮಿ ಸೂತ ಉತ ತೇ ತನಯೋಽಸ್ಮಿ ಸತ್ಯಂ
ತೇನಾಸ್ಮಿ ವಿಪ್ರ ಇತಿ ಭಾರ್ಗವವಂಶಜೋಽಹಮ್ |
ಅಗ್ರೇಽಬ್ರುವಂ ಭವತ ಈಶ ನ ಹಿ ತ್ವದನ್ಯೋ
ಮಾತಾ ಪಿತಾ ಗುರುತರೋ ಜಗತೋಽಪಿ ಮುಖ್ಯಃ ॥
``ಜನ್ಮತಃ ನಾನು ಸೂತನಾಗಿದ್ದೇನೆ. ತಮ್ಮ ಮಗನೂ ಆಗಿರುವುದರಿಂದ ಭಾರ್ಗವಗೋತ್ರೋತ್ಪನ್ನಬ್ರಾಹ್ಮಣನೆಂದು ತಮ್ಮ ಮುಂದೆ ಹೇಳಿದ್ದೆ. ಅದೂ ಸತ್ಯವೆ. ಏಕೆಂದರೆ ನಿಮಗಿಂತ ಬೇರೆ ಜಗತ್ತಿಗೆ ಮುಖ್ಯವಾಗಿ ತಾಯಿ ತಂದೆ ಮತ್ತು ಮಹಾಗುರು ಇನ್ನೊಬ್ಬನಿಲ್ಲ ತಾನೆ?'
ಇತ್ಯುಕ್ತಮಾತ್ರವಚನೇ ಸ ತು ಕೀಟಕೋಽಸ್ಯ
ರಾಮಸ್ಯ ದೃಷ್ಟಿವಿಷಯತ್ವತ ಏವ ರೂಪಮ್ |
ಸಂಪ್ರಾಪ್ಯ ನೈಜಮತಿಪೂರ್ಣಗುಣಸ್ಯ ತಸ್ಯ
ವಿಷ್ಣೋರನುಗ್ರಹತ ಆಪ ವಿಮಾನಗಃ ಸ್ವಃ ॥
ಹೀಗೆ ಕರ್ಣ ಹೇಳಿದ ಮಾತ್ರಕ್ಕೆ ಪರಶುರಾಮರ ದೃಷ್ಟಿಗೋಚರವಾದ ಕೀಟ ತನ್ನ ನಿಜರೂಪ ತಳೆದು ಅತ್ಯಂತ ಪೂರ್ಣಗುಣರಾದ ಆ ಪರಶುರಾಮರ ಅನು- ಗ್ರಹದಿಂದ ವಿಮಾನವೇರಿ ಸ್ವರ್ಗ ಪಡೆಯಿತು.
ಅಥಾಹ ರಾಮಸ್ತಮಸತ್ಯವಾಚಂ
ನ ತೇ ಸಕಾಶೇ ಮಮ ವಾಸಯೋಗ್ಯತಾ |
ತಥಾಪಿ ತೇ ನೈವ ವೃಥಾ ಮದೀಯಾ
ಭಕ್ತಿರ್ಭವೇಜ್ಜೇಷ್ಯಸಿ ಸರ್ವ ಶೂತ್ರನ್ ॥
ಸುಳ್ಳು ಹೇಳಿದ ಕರ್ಣನಿಗೆ ಪರಶುರಾಮರು ಶಪಿಸಿದರು - `ನಿನಗೆ ನನ್ನ ಬಳಿ ಇರಲು ಯೋಗ್ಯತೆ ಇಲ್ಲ. ಆದರೂ ನಿನಗೆ ನನ್ನಲ್ಲಿರುವ ಭಕ್ತಿ ಎಂದೂ ವ್ಯರ್ಥ- ವಾಗದು. ಅದರಿಂದ ನೀನು ಎಲ್ಲ ಶತ್ರುಗಳನ್ನು ಗೆಲ್ಲುವಿ.
ಅಸ್ಪರ್ಧಮಾನಂ ನ ಕಥಂಚನ ತ್ವಾಂ ಚೇತಾ ಕಶ್ಚಿತ್ ಸ್ಪರ್ಧಮಾನಸ್ತುಯಾಸಿ |
ಪರಾಭೂತಿಂ ನಾತ್ರ ವಿಚಾರ್ಯಮಾಸ್ತಿಪ್ರಮಾದೀ ತ್ವಂ ಭವಿತಾ ಚಾಸ್ತ್ರಸೇಂ॥
`ನೀನು ಸ್ಪರ್ಧಿಸದಿರುವಾಗ ಯಾರೂ ಯಾವ ರೀತಿಯಿಂದಲೂ ನಿನ್ನನ್ನು ಗೆಲ್ಲ- ಲಾರರು. ಸ್ಪರ್ಧಿಸಿದರೆ ಪರಾಜಯ ಹೊಂದುವಿ, ಅಸ್ತ್ರಸಮೂಹವನ್ನು ಮರೆ- ಯುವಿ, ಇದರಲ್ಲಿ ವಿಚಾರಿಸುವುದೇನಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 3ನೆಯ ಅಧ್ಯಾಯವು ಮುಗಿಯಿತು.
*****
4. ನಾಕನೆಯ ಅಧ್ಯಾಯ
ದುರ್ಯೋಧನನು ಸ್ವಯಂವರಮಂಟಪದಲ್ಲಿ ಕಳಿಂಗರಾಜನ ಕನ್ಯೆಯನ್ನು ಅಪಹರಿಸಿದನು. ಆಗ ಕರ್ಣನು ದುರ್ಯೋಧನನ ಪರವಾಗಿ ಬಂದ ಎಲ್ಲಾ ರಾಜರನ್ನು ಸೋಲಿಸಿದನು.
ನಾರದಃ
ಕರ್ಣಸ್ತು ಸಮವಾಪ್ಯೈತದಸ್ತ್ರಂ ಭಾರ್ಗವನಂದನಾತ್ |
ದುರ್ಯೋಧನೇನ ಸಹಿತೋ ಮುಮುದೇ ಭರತರ್ಷಭ ॥1॥
ನಾರದರು ಓ ಭರತವಂಶೋದ್ಭವನೇ! ಈ ಪ್ರಕಾರವಾಗಿ ದಿವ್ಯಾಸ್ತ್ರಗಳನ್ನು ಪರಶುರಾಮದೇವರ ದೆಸೆಯಿಂದ ಕರ್ಣನು ಪಡೆದುಕೊಂಡನು. ಮುಂದೆ ದುರ್ಯೋಧನನ ಜೊತೆ ಸಂತೋಷದಿಂದ ಕಾಲ ಕಳೆದನು.
ತತಃ ಕದಾಚಿದ್ ರಾಜಾನಃ ಸಮಾಜಗ್ಮುಃ ಸ್ವಯಂವರೇ |
ಕಲಿಂಗವಿಷಯೇ ರಾಜನ್ ರಾಜ್ಞಶ್ಚಿತ್ರಾಂಗದಸ್ಯ ಚ ॥2॥
ಹೀಗೆ ಕಾಲ ಕಳೆಯುತ್ತಿರುವಾಗ ಒಮ್ಮೆ ಕಳಿಂಗದೇಶದ ರಾಜನಾದ ಚಿತ್ರಾಂಗ- ದನು ತನ್ನ ಮಗಳ ಸ್ವಯಂವರವನ್ನು ಏರ್ಪಡಿಸಿದನು. ಆ ಸ್ವಯಂವರದ ಮಹೋ- ತ್ಸವಕ್ಕೆ ಅನೇಕ ದೇಶಗಳಿಂದ ರಾಜರುಗಳು ಬಂದು ನೆರೆದಿದ್ದರು.
ಶ್ರೀಮದ್ ರಾಜಪುರಂ ನಾಮ ನಗರಂ ತತ್ರ ಭಾರತ |
ರಾಜಾನಃ ಶತಶಸ್ತತ್ರ ಕನ್ಯಾರ್ಥಂ ಸಮುಪಾಗಮನ್ ॥3॥
ಸಂಪದ್ಭರಿತವಾದ ಆ ರಾಜಪುರವೆಂಬ ನಗರವು ಕಳಿಂಗ ದೇಶದ ರಾಜಧಾನಿ- ಯಾಗಿತ್ತು. ನೂರಾರು ಮಂದಿ ರಾಜಕುಮಾರರು ಆ ರಾಜಕುಮಾರಿಯನ್ನು ಪಡೆಯುವುದಕ್ಕಾಗಿ ಅಲ್ಲಿಗೆ ಆಗಮಿಸಿದ್ದರು.
ಶ್ರುತ್ವಾ ದುರ್ಯೋಧನಸ್ತತ್ರ ಸಮೇತಾನ್ ಸರ್ವಪಾರ್ಥಿವಾನ್ |
ರಥೇನ ಕಾಂಚನಾಂಗೇನ ಕರ್ಣೇನ ಸಹಿತೋ ಯಯೌ ॥4॥
ಎಲ್ಲಾ ನಗರಗಳಿಂದ ರಾಜಕುಮಾರರು ಆ ಸ್ವಯಂವರಕ್ಕೆ ಬಂದಿರುವರೆಂಬ ವಿಷಯವನ್ನು ದುರ್ಯೋಧನನು ತಿಳಿದನು. ಅಲ್ಲಿಗೆ ತಾನೂ ಹೋಗಬೇಕೆಂದು ಅಪೇಕ್ಷೆ ಪಟ್ಟನು. ಬಂಗಾರಮಯವಾದ ರಥದಲ್ಲಿ ಕುಳಿತು ತನ್ನ ಸ್ನೇಹಿತನಾದ ಕರ್ಣನ ಜೊತೆ ಆ ಸ್ವಯಂವರ ಸ್ಥಳಕ್ಕೆ ಹೊರಟನು.
ತತಃ ಸ್ವಯಂವರೇ ತಸ್ಮಿನ್ ಸಂಪ್ರವೃತ್ತೇ ಮಹೋತ್ಸವೇ |
ಸಮಾಜಗ್ಮುರ್ನೃಪತಯಃ ಕನ್ಯಾರ್ಥೇ ನೃಪಸತ್ತಮ ॥5॥
ಓ ನರೋತ್ತಮನೇ! ಆ ರಾಜಪುರ ಪಟ್ಟಣದಲ್ಲಿ ಸ್ವಯಂವರಕ್ಕೆ ಸಂಬಂಧಪಟ್ಟ ಮಹೋತ್ಸವವು ಪ್ರಾರಂಭವಾಯಿತು. ಅದೇ ಸಂದರ್ಭದಲ್ಲಿ ಕನ್ಯಾರ್ಥಿಗಳಾಗಿ ಅನೇಕ ರಾಜರುಗಳು ಆಗಮಿಸಿದರು.

ಶಿಶುಪಾಲೋ ಜರಾಸಂಧೋ ಭೀಷ್ಮಕೋ ವಕ್ರ ಏವ ಚ |
ಕಪೋತರೋಮಾ ನೀಲಶ್ಚ ರುಕ್ಮೀ ಚ ದೃಢವಿಕ್ರಮಃ ॥6॥
ಸೃಗಾಲಶ್ಚ ಮಹಾರಾಜ ಸ್ತ್ರೀರಾಜ್ಯಾಧಿಪತಿಶ್ಚ ಯಃ |
ಅಶೋಕಃ ಶತಧನ್ವಾ ಚ ಭೋಜೋ ವೀರಶ್ಚ ನಾಮತಃ ॥7॥
ಶಿಶುಪಾಲ, ಜರಾಸಂಧ, ಭೀಷ್ಮ, ದಂತವಕ್ರ, ಕಪೋತರೋಮ, ನೀಲ, ಮಹಾಪರಾಕ್ರಮಶಾಲಿಯಾದ ರುಗ್ಮಿ ಮತ್ತು ಸ್ತ್ರೀರಾಜ್ಯಕ್ಕೆ ಅಧಿಪತಿಯಾದ ಮಹಾ- ರಾಜನೆಂದು ಪ್ರಸಿದ್ಧನಾದ ಸೃಗಾಲವಾಸುದೇವ, ಅಶೋಕ, ಶತಧನ್ವಾ, ಭೋಜ, ವೀರ ಮೊದಲಾದ ರಾಜರುಗಳು ಅಲ್ಲಿಗೆ ಬಂದರು.
ಏತೇ ಚಾನ್ಯೇ ಚ ಬಹವೋ ದಕ್ಷಿಣಾಂ ದಿಶಮಾಶ್ರಿತಾಃ |
ಮ್ಲೇಚ್ಛಾಚಾರ್ಯಾಶ್ಚ ರಾಜಾನಃ ಪ್ರಾಚ್ಯೋದೀಚ್ಯಾಶ್ಚ ಭಾರತ ॥8॥
ಈ ಎಲ್ಲಾ ರಾಜರುಗಳು ಮತ್ತು ಇನ್ನೂ ಅನೇಕ ರಾಜರುಗಳು ಅಲ್ಲಿಗೆ ಬಂದರು. ದಕ್ಷಿಣದೇಶದಿಂದ ಅನೇಕ ರಾಜಕುಮಾರರು ಆಗಮಿಸಿದರು. ಮ್ಲೇಂಛರು, ಆರ್ಯರು ಹಾಗೂ ಪೂರ್ವದಿಕ್ಕಿನ, ಉತ್ತರದಿಕ್ಕಿನ ರಾಜರುಗಳೂ ಕೂಡ ಅಲ್ಲಿಗೆ ಬಂದರು.
ಕಾಂಚನಾಂಗದಿನಃ ಸರ್ವೇ ಬದ್ಧಜಾಂಬೂನದಸ್ರಜಃ |
ಸರ್ವೇ ಭಾಸ್ವರದೇಹಾಶ್ಚ ವ್ಯಾಘ್ರಾ ಇವ ಮದೋತ್ಕಟಾಃ ॥9॥
ಆಗಮಿಸಿದ ಎಲ್ಲಾ ರಾಜರು ಸುವರ್ಣಮಯವಾದ ಆಭರಣಗಳನ್ನು ಧರಿಸಿ- ಕೊಂಡಿದ್ದರು. ಸುವರ್ಣದ ಹಾರಗಳನ್ನು ಕಂಠದಲ್ಲಿ ಧರಿಸಿದ್ದರು. ಅವರ ದೇಹದ ಕಾಂತಿಯು ಸುವರ್ಣದಂತೆ ಕಂಗೊಳಿಸುತ್ತಿತ್ತು. ಪ್ರತಿಯೊಬ್ಬರೂ ಕೂಡ ಶುಭ್ರವಾದ ಶರೀರವುಳ್ಳವರಾಗಿದ್ದರು. ಹುಲಿಯಂತೆ ಬಲದಿಂದ ದರ್ಪಿಷ್ಟರಾಗಿದ್ದರು.
ತತಃ ಸಮುಪವಿಷ್ಟೇಷು ತೇಷು ರಾಜಸು ಭಾರತ |
ವಿವೇಶ ರಂಗಂ ಸಾ ಕನ್ಯಾ ಧಾತ್ರೀವರ್ಷಧರಾನ್ವಿತಾ ॥10॥
ಆ ಸ್ವಯಂವರದ ಸಭಾಂಗಣದಲ್ಲಿ ಎಲ್ಲಾ ರಾಜರು ತಮ್ಮ ಯೋಗ್ಯವಾದ ಆಸನಗಳಲ್ಲಿ ಕುಳಿತುಕೊಂಡರು. ಆಗ ರಾಜಕನ್ಯೆಯು ತನ್ನ ಸಖಿಯರ ಜೊತೆ ಮತ್ತು ದಾದಿಯರ ಜೊತೆ ರಂಗಪ್ರವೇಶ ಮಾಡಿದಳು.
ಧಾತ್ರೀವರ್ಷಧರಾನ್ವಿತಾಇತ್ಯತ್ರವರ್ಷಧರಾಃ ಷಂಢಾಃ | `ಷಂಡೋವರ್ಷಧರಸ್ತುಲ್ಯೌ' ಇತ್ಯಮರಃ ॥
`ಧಾತ್ರೀವರ್ಷಧರಾನ್ವಿತಾ' ಎಂಬಲ್ಲಿ ವರ್ಷಧರ ಎಂಬ ಪದಕ್ಕೆ ಷಂಡರು ಎಂದರ್ಥ. `ಷಂಡೋವರ್ಷಧರಸ್ತುಲ್ಯೌ' ಎಂಬ ಅಮರಕೋಶವು ಇದಕ್ಕೆ ಆಧಾರವಾಗಿದೆ.
ವಿವರಣೆ - ಆ ರಾಜಕುಮಾರಿಯು ರಂಗಪ್ರವೇಶವನ್ನು ಮಾಡುವಾಗ ಅವಳ ಜೊತೆ ಯಾರಿದ್ದರು ? ಎಂಬುದಕ್ಕೆ `ಧಾತ್ರೀವರ್ಷಧರಾನ್ವಿತಾ' ಎಂಬ ಪದವು ವಿವರಣೆಯನ್ನು ನೀಡುತ್ತಿದೆ. ಧಾತ್ರೀ ಎಂಬ ಪದಕ್ಕೆ ದಾದಿಯರು ಎಂದರ್ಥ. ದಾದಿಯರು ಎಂದರೆ ಸಾಕುತಾಯಿಯರು ಎಂದರ್ಥ. ವಾಸ್ತವಿಕವಾಗಿ ಧಾತ್ರೀ ಎಂಬ ಪದವು ತಾಯಿಯೆಂಬರ್ಥದಲ್ಲಿ ಪ್ರಯುಕ್ತವಾಗಿದೆ. ಆದರೆ ಪಟ್ಟದ ರಾಣಿ- ಯರು ಸಾಮಾನ್ಯವಾಗಿ ಹಾಗೇ ಸಭೆಯ ಮಧ್ಯದಲ್ಲಿ ಎಲ್ಲರ ಎದುರು ನಡೆದಾಡುವುದಿಲ್ಲ. ಆದ್ದರಿಂದ ಧಾತ್ರೀ ಎಂಬ ಪದಕ್ಕೆ ಸಾಕುತಾಯಿ ಎಂಬ ಮತ್ತೊಂದು ಅರ್ಥವನ್ನು ಕೋಶಗಳಲ್ಲಿ ಕಾಣುತ್ತೇವೆ. ಕನ್ಯೆಯನ್ನು ಅತ್ಯಂತ ಪ್ರೀತಿವಾತ್ಸಲ್ಯದಿಂದ ನೋಡಿಕೊಂಡ ಹಿರಿಯ ದಾದಿಯರನ್ನು ಇಲ್ಲಿ ವಿವಕ್ಷಿಸಬೇಕು. ಕೆಲವು ಪುಸ್ತಕಗಳಲ್ಲಿ ಸಖಿಯರು ಎಂಬರ್ಥವನ್ನು ಹೇಳುತ್ತಾರೆ. ಈ ಅರ್ಥವನ್ನು ಸುತರಾಂ ಇಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಆ ಕನ್ಯೆಗೆ ಆತ್ಮೀಯರಾದ ಹಿರಿಯರಾದ ಅವಳನ್ನು ಸಾಕಿಬೆಳೆಸಿದ ದಾದಿಯರು ಅವಳ ಜೊತೆ ಇದ್ದರು ಎಂಬರ್ಥವನ್ನೇ ವಿವಕ್ಷಿಸಬೇಕು. ಮತ್ತು ಆ ಕನ್ಯೆಯ ಜೊತೆ ವರ್ಷಧರರೂ ಕೂಡ ಇದ್ದರು. ವರ್ಷಧರರು ಎಂದರೆ ನಪುಂಸಕರು ಎಂದರ್ಥ. ಸಾಮಾನ್ಯವಾಗಿ ರಾಜಕನ್ಯೆಯರ ರಕ್ಷಣೆಗಾಗಿ ಷಂಡರು ಇರುತ್ತಿದ್ದರು. ಯಾವುದೇ ರೀತಿ ಇತರರು ಅವಳ ಮೇಲೆ ದೈಹಿಕವಾದ ತೊಂದರೆಗಳನ್ನು ನೀಡಬಾರದೆನ್ನಲು ಷಂಢರನ್ನು ಏರ್ಪಾಡು ಮಾಡಿರುತ್ತಿದ್ದರು. ರಾಜಕನ್ಯೆಯ ಅಂಗರಕ್ಷಕರಾಗಿ ದಾದಿಯರಿದ್ದರೆ, ಅವಳ ರಕ್ಷಕ- ರಾಗಿ ಷಂಢರು ಇರುತ್ತಿದ್ದರೆಂಬುದನ್ನು ನಾವು ಇತಿಹಾಸದ ಕಥೆಗಳಿಂದ ತಿಳಿಯು- ತ್ತೇವೆ. ಮಹಾಭಾರತದಲ್ಲೂ ಕೂಡ ಇದರ ಉಲ್ಲೇಖವಿರುವುದು ಅತ್ಯಪೂರ್ವ- ವಾಗಿದೆ. ಆದ್ದರಿಂದ ಈ ಶ್ಲೋಕದಲ್ಲಿರುವ ಈ ವಿಶೇಷಣವು ರಾಣಿಯರ ಮತ್ತು ರಾಜಕನ್ಯೆಯರ ರಕ್ಷಣೆಯನ್ನು ಹೇಗೆ ಮಾಡುತ್ತಿದ್ದರು? ಎಂಬ ವಿಷಯದಲ್ಲಿ ಗಮನೀಯವಾದ ಆಧಾರವಾಗಿದೆ.
ಈಗ ಕಾಣಿಸುವ ಅಮರಕೋಶದ ದಾಕ್ಷಿಣಾತ್ಯಪಾಠ ಹಾಗೂ ಔತ್ತರೇಯ- ಪಾಠಗಳಲ್ಲಿ ವರ್ಷಧರಃ ಎಂಬ ಪಾಠವು ಕಾಣಿಸುವುದಿಲ್ಲ. ವರ್ಷವರ ಎಂಬ ಪಾಠವೇ ಕಾಣಿಸುತ್ತದೆ. ಆದರೆ ಬೇರೆ ಕೋಶಗಳಲ್ಲಿ ವರ್ಷಧರ ಮತ್ತು ವರ್ಷವರ ಎಂಬೆರಡು ಶಬ್ದಗಳು ಸಮಾನಾರ್ಥಕಗಳೆಂದು ಬರೆಯುತ್ತಾರೆ. ಆದ್ದರಿಂದ ಲಕ್ಷಾಲಂಕಾರದಲ್ಲಿ ಕಾಣಿಸುವ ವರ್ಷಧರ ಎಂಬ ಪ್ರಯೋಗವು ಸಾಧುವಾಗಿದೆ. ಮತ್ತು ಷಂಢಾಃ ಎಂಬರ್ಥವನ್ನು ಬರೆದಿರುವುದು ಸ್ವರಸವಾದ ಅರ್ಥವಾಗಿದೆ.
ತತಃ ಸಂಶ್ರಾವ್ಯಮಾಣೇಷು ರಾಜ್ಞಾಂ ನಾಮಸು ಭಾರತ |
ಅತ್ಯಕ್ರಾಮದ್ ಧಾರ್ತರಾಷ್ಟ್ರಂ ಸಾ ಕನ್ಯಾ ವರವರ್ಣಿನೀ ॥11॥
ಓ ಭರತನಂದನನೇ! ಅನಂತರ ಆ ರಾಜಕನ್ಯೆಯು ಸ್ವಯಂವರಮಾಲೆಯನ್ನು ಹಿಡಿದುಕೊಂಡು, ಮುಂದೆ ಮುಂದೆ ಸಾಗುತ್ತಿರುವಂತೆ ರಾಜಭಟರು ಅವಳಿಗೆ ಅಲ್ಲಿ ಕುಳಿತಿರುವ ಎಲ್ಲಾ ರಾಜರುಗಳ ಪರಿಚಯವನ್ನು ಮಾಡಿಸುತ್ತಿದ್ದರು. ಆ ರಾಜ- ಕನ್ಯೆಯು ಎಲ್ಲಾ ರಾಜರನ್ನು ನೋಡುತ್ತಾ ಹಾಗೇ ಮುಂದೆ ಸಾಗುತ್ತಿದ್ದಳು. ಆದರೆ ಯಾರಿಗೂ ಸ್ವಯಂವರ ಮಾಲೆಯನ್ನು ಹಾಕುತ್ತಿರಲಿಲ್ಲ. ಅದೇ ರೀತಿಯಾಗಿ ದುರ್ಯೋಧನನನ್ನೂ ಕೂಡಿ ಉಪೇಕ್ಷಿಸಿ ಮುಂದೆ ಸಾಗಿದಳು.
ದುರ್ಯೋಧನಸ್ತು ಕೌರವ್ಯೋ ನಾಮರ್ಷಯತ ಲಂಘನಮ್ |
ಪ್ರತ್ಯಷೇಧಚ್ಚ ತಾಂ ಕನ್ಯಾಮಸತ್ಕೃತ್ಯ ನರಾಧಿಪಾನ್ ॥12॥
ತನಗೆ ಸ್ವಯಂವರ ಮಾಲೆಯನ್ನು ಹಾಕದೇ ಉಪೇಕ್ಷಿಸಿ, ಆ ಕನ್ಯೆಯು ಮುಂದೆ ಸಾಗಿದ್ದನ್ನು ಕಂಡು ದುರ್ಯೋಧನನಿಗೆ ಸಹಿಸಲು

ಸಾಧ್ಯವಾಗಲಿಲ್ಲ. ಅಲ್ಲಿ ನೆರೆದಿ- ರುವ ಎಲ್ಲಾ ರಾಜರನ್ನು ಉಪೇಕ್ಷಿಸಿ, ಆ ದುರ್ಯೋಧನನು ಎದ್ದು ಬಂದು ಆ ಕನ್ಯೆಯು ಮುಂದೆ ಹೋಗದಂತೆ ತಡೆದನು.
ಸ ವೀರ್ಯಮದಮತ್ತತ್ವಾದ್ ಭೀಷ್ಮದ್ರೋಣಾವುಪಾಶ್ರಿತಃ |
ರಥಮಾರೋಪ್ಯ ತಾ ಕನ್ಯಾಮಾಜಹಾರ ನರಾಧಿಪಃ ॥13॥
ಆ ದುರ್ಯೋಧನನಿಗೆ ತನ್ನ ಪರಾಕ್ರಮದ ಬಗ್ಗೆ ಬಹಳ ಕೆಚ್ಚಿತ್ತು. ಭೀಷ್ಮ- ದ್ರೋಣಾದಿಗಳ ಆಶ್ರಯದ ಬಲವೂ ಕೂಡ ಇತ್ತು. ಆದ್ದರಿಂದ ಯಾರನ್ನೂ ಕೂಡ ಲೆಕ್ಕಿಸದೆ ಆ ಕನ್ಯೆಯನ್ನು ಹಿಡಿದು, ಬಲಾತ್ಕಾರವಾಗಿ ತನ್ನ ರಥದಲ್ಲಿ ಕೂಡಿಸಿ- ಕೊಂಡನು. ಅನಂತರ ಅಲ್ಲಿ ನೆರೆದ ಎಲ್ಲ ರಾಜರನ್ನು ಯುದ್ಧಕ್ಕೆ ಕರೆದನು.
ಟಿಪ್ಪಣಿ - ದುರ್ಯೋಧನ ಅಪಹರಿಸಿದ ಈ ಕನ್ಯೆ ಬೇರಾರೂ ಅಲ್ಲ. ಸಾಕ್ಷಾತ್ ಅಲಕ್ಷ್ಮಿಯೇ ಆಗಿದ್ದಾಳೆ. ಮತ್ತು ಇವಳ ತಂದೆ ಕಾಶೀರಾಜನಾಗಿದ್ದಾನೆ. ಇದನ್ನು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಹೀಗೆ ನಿರ್ಣ- ಯಿಸಿದ್ದಾರೆ -
ಪೂರ್ವಂ ಹಿ ತೇಷು ವನಗೇಷು ಬಭೂವ ಕಾಶಿ-
ರಾಜ್ಞಃ ಸುತಾಕೃತ ಉರುಕ್ಷಿತಿಪಾಲಯೋಗಃ |
ತತ್ರ ಸ್ವಯಂವರಗತಾಂ ಧೃತರಾಷ್ಟ್ರಪುತ್ರಃ
ಕನ್ಯಾಂ ಬಲಾಜ್ಜಗೃಹ ಆತ್ಮಬಲಾತಿದೃಪ್ತಃ ॥
ದ್ರೌಪದೀ ಸ್ವಯಂವರವಾಗುವುದಕ್ಕೆ ಮೊದಲು, ಪಾಂಡವರು ಹಿಡಿಂಬವನ- ದಲ್ಲಿದ್ದಾಗ, ಕಾಶಿರಾಜನ ಮಗಳ ಸ್ವಯಂವರಕ್ಕಾಗಿ ರಾಜರುಗಳ ಮಹಾ ಸಮ್ಮೇಲನ ನಡೆದಿತ್ತು. ಅದರಲ್ಲಿ ದುರ್ಯೋಧನನು ತಾನೇ ಬಲಿಷ್ಠನೆಂಬ ಮಹಾ ಅಹಂಕಾರದಿಂದ ಸ್ವಯಂವರ ಮಂಟಪದಲ್ಲಿ ನಿಂತಿದ್ದ ಕನ್ಯೆಯನ್ನು ಬಲಾತ್ಕಾರವಾಗಿ ಅಪಹರಿಸಿದ.
ಪೂರ್ವಂ ಹಿ ರಾಜಗಣನೇ ಮಗಧಾಧಿರಾಜಃ
ಸಂಖ್ಯಾತ ಇತ್ಯತಿರುಷಾ ಪ್ರಗೃಹೀತಕನ್ಯೇ |
ದುರ್ಯೋಧನೇ ನೃಪತಯೋ ಯುಯುಧುಃ ಸ್ಮತೇನ
ಭಗ್ನಾಶ್ಚ ಕರ್ಣಸಹಿತೇನ ಸಹಾನುಜೇನ ॥
ಸ್ವಯಂವರಮಂಟಪದಲ್ಲಿ ರಾಜರುಗಳಲ್ಲಿ ಮೊದಲಿಗೆ ಜರಾಸಂಧ ಪರಿ- ಗಣಿತನಾದನೆಂದು ಅಸಹನೆಯಿಂದ ದುರ್ಯೋಧನನು ಕನ್ಯೆಯನ್ನು ಅಪಹರಿ- ಸಿದ್ದ. ಆಗ ರಾಜರು ಅವನೊಡನೆ ಯುದ್ಧ ಮಾಡಿದರು. ದುರ್ಯೋಧನ ಅವರನ್ನು ಕರ್ಣನ ಮತ್ತು ತಮ್ಮಂದಿರ ಸಹಾಯದಿಂದ ಪರಾಭವಗೊಳಿಸಿದ.
ತಮನ್ವಯಾದ್ ರಥೀ ಖಡ್ಗೀ ಬದ್ಧಗೋಧಾಂಗುಲಿತ್ರವಾನ್ |
ಕರ್ಣಃ ಶಸ್ತ್ರಭೃತಾಂ ಶ್ರೇಷ್ಠಃ ಪೃಷ್ಠತಃ ಪುರುಷರ್ಷಭ ॥14॥
ಆ ಕರ್ಣನು ಆ ದುರ್ಯೋಧನನಿಗೆ ಬೆಂಬಲಿಗನಾಗಿ ನಿಂತನು. ರಥಾ- ರೂಢನಾಗಿ ಖಡ್ಗವನ್ನು ಹಿಡಿದು ಕೈಚೀಲಗಳನ್ನು ಧರಿಸಿ, ಆ ದುರ್ಯೋಧನನ ಹಿಂದೆ ಸಾಗಿದನು.
ತತೋ ವಿಮರ್ದಃ ಸುಸಾನ್ ರಾಜ್ಞಾಮಾಸೀದ್ ಯುಧಿಷ್ಠಿರ |
ಸನ್ನಹ್ಯತಾಂ ತನುತ್ರಾಣಿ ರಥಾನ್ ಯೋಜಯತಾಮಪಿ ॥15॥
ಯುಧಿಷ್ಠಿರನೇ! ಆ ದುರ್ಯೋಧನನ ದುಷ್ಕೃತನವನ್ನು ಕಂಡು ಕುಪಿತರಾದ ಅಲ್ಲಿ ನೆರೆದ ರಾಜರೆಲ್ಲರೂ ಯುದ್ಧಕ್ಕೆ ಸಿದ್ಧರಾದರು. ಕೆಲವರು ಕವಚಗಳನ್ನು ಧರಿಸಿದರು. ಕೆಲವರು ರಥಗಳನ್ನು ಸಜ್ಜುಗೊಳಿಸಿದರು.
ತೇಽಭ್ಯಧಾವಂತ ಸಂಕ್ರುದ್ಧಾಃ ಕರ್ಣದುರ್ಯೋಧನಾವುಭೌ |
ಶರವರ್ಷಾಣಿ ಮುಂಚಂತೋ ಮೇಘಾಃ ಪರ್ವತಯೋರಿವ ॥16॥
ಅನಂತರ ಭಯಂಕರ ಯುದ್ಧವೇ ಪ್ರಾರಂಭವಾಯಿತು. ಕರ್ಣ, ದುರ್ಯೋ- ಧನರಿಬ್ಬರು ಅತ್ಯಂತ ಕ್ರುದ್ಧರಾಗಿ ಮೇಘಗಳು ಪರ್ವತದ ಮೇಲೆ ಮಳೆಯನ್ನು ಸುರಿಸುವಂತೆ ಎಡೆಬಿಡದೆ ಬಾಣವರ್ಷಗಳನ್ನು ಸುರಿಸಿದರು.
ಟಿಪ್ಪಣಿ - ದುರ್ಯೋಧನ ಮತ್ತು ಕರ್ಣರಿಬ್ಬರು ಒಟ್ಟಿಗೆ ಯುದ್ಧ ಮಾಡಿದ- ರೆಂದು ಇಲ್ಲಿ ಉಲ್ಲೇಖವಿದೆ. ಆದರೆ ಸ್ವಲ್ಪ ಕಾಲ ದುರ್ಯೋಧನನು ಕರ್ಣನ ಮತ್ತು ತಮ್ಮಂದಿರ ಸಹಾಯದಿಂದ ಯುದ್ಧವನ್ನು ಮಾಡುತ್ತಾನೆ. ಅನಂತರ ಮುಂದೆ ಕರ್ಣನೊಬ್ಬನೇ ಯುದ್ಧವನ್ನು ಮಾಡುತ್ತಾನೆ. ಇದನ್ನು ಮುಂದಿನ ಶ್ಲೋಕವು ಇಲ್ಲಿ ಸ್ಪಷ್ಟ ಪಡಿಸಿದೆ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಇದರ ಬಗ್ಗೆ ಸ್ಪಷ್ಟವಾದ ನಿರ್ಣಯವನ್ನು ಶ್ರೀಮಧ್ವಾಚಾರ್ಯರು ಮಾಡಿರುತ್ತಾರೆ. ಮತ್ತು ಇಲ್ಲಿಲ್ಲದ ಇನ್ನೂ ಹೆಚ್ಚಿನ ವಿಚಾರವನ್ನು ಮಹಾಭಾರತ ತಾತ್ಪರ್ಯನಿರ್ಣಯದಿಂದ ತಿಳಿದುಕೊಳ್ಳಬೇಕು-
ಭಗ್ನೇಷು ತೇಷು ಪುನರಾತ್ತಶರಾಸನೇಷು
ಕರ್ಣೋ ಜಗಾದ ಧೃತರಾಷ್ಟ್ರಸುತಂ ಪ್ರಯಾಹಿ |
ಯುಕ್ತಃ ಸಹೋದರಜನೈರ್ಗುರುಭೀಷ್ಮಮುಖ್ಯೈ-
ರ್ಯುಕ್ತಸ್ಯ ತೇ ನ ಪರಮೇತ್ಯ ಹಿ ಧರ್ಷಣೇಶಾಃ ॥
ಪರಾಜಿತರಾದ ರಾಜರು ಪುನಃ ಬಿಲ್ಲನೆತ್ತಿದಾಗ ಕರ್ಣ ದುರ್ಯೋಧನನಿಗೆ ಹೇಳಿದ. `ನೀನು ತಮ್ಮಂದಿರೊಡನೆ ಹಸ್ತಿನಾವತಿಗೆ ಹೋಗು. ಅಲ್ಲಿ ಭೀಷ್ಮ ಮುಂತಾದವರ ರಕ್ಷಣೆಯಲ್ಲಿರುವಾಗ ನಿನ್ನನ್ನು ಈ ರಾಜರು ಬಂದು ಆಕ್ರಮಿಸಲು ಶಕ್ತರಾಗಲಾರರು.
ಏಕಾಂತತೋ ಜಯಮವೀಕ್ಷ್ಯ ಚ ನಾನುಯಾತಿ
ಬಾರ್ಹದ್ರಥಃ ಪುರಗತಸ್ಯ ಜಯೇ ನ ನಿಷ್ಠಾ |
ದ್ರೌಣಿಂ ಹಿ ರುದ್ರತನುಮೇಷ ಸದಾ ವಿಜಾನನ್
ನೋ ತೇನ ಯುದ್ಧಮಭಿವಾಂಛತಿ ರುದ್ರಭಕ್ತಃ ॥

ಜರಾಸಂಧನೂ ತಾನು ನಿಶ್ಚಿತವಾಗಿ ಜಯಗಳಿಸುವೆನೆಂಬ ವಿಶ್ವಾಸವಿಲ್ಲದೆ ಯುದ್ಧಕ್ಕೆ ಹೊರಡುವುದಿಲ್ಲ. ನೀನು ನಿನ್ನ ಪಟ್ಟಣದಲ್ಲಿದ್ದರೆ ಅವನಿಗೆ ಜಯ- ಗಳಿಸುವ ಬಗ್ಗೆ ಭರವಸೆ ಉಂಟಾಗಲಾರದು. ಇದಲ್ಲದೆ ಅಶ್ವತ್ಥಾಮನನ್ನು ಅವನು ರುದ್ರನ ಅವತಾರವೆಂದು ಸದಾ ತಿಳಿದಿರುವುದರಿಂದ ಅವನೊಡನೆ ಯುದ್ಧವನ್ನು ರುದ್ರಭಕ್ತನಾದ ಆತ ಎಂದಿಗೂ ಇಷ್ಟಪಡುವುದಿಲ್ಲ.

ಏಕೋಽಹಮೇವ ನೃಪತೀನ್ ಪ್ರತಿಯೋಧಯಿಷ್ಯ

ಏತೈರ್ಮಯಿ ಪ್ರವಿಜಿತೇಽಪಿನ ತೇಽಸ್ತ್ಯಕೀರ್ತಿಃ |

ಏಕಂ ಚ ತೇಽನುಜಮಿಮೇ ಯದಿ ಪೌರುಷೇಣ

ಗೃಹ್ಣೀಯುರತ್ರ ತವ ಕೀರ್ತಿರುಪೈತಿ ನಾಶಂ ॥

ಇಲ್ಲಿ ನಾನೊಬ್ಬನೇ ರಾಜರನ್ನು ಇದಿರಿಸಿ ಯುದ್ಧ ಮಾಡಬಲ್ಲೆ. ಒಂದು ವೇಳೆ ನಾನು ಇವರಿಗೆ ಸೋತರೂ ನಿನಗೆ ಅಪಕೀರ್ತಿ ಇಲ್ಲ. ನೀನು ಇಲ್ಲಿಯೆ ಇದ್ದು ನಿನ್ನ ಒಬ್ಬ ತಮ್ಮನನ್ನಾದರೂ ಇವರು ಪೌರುಷದಿಂದ ಸೆರೆ ಹಿಡಿದರೂ ನಿನ್ನ ಕೀರ್ತಿ ಹಾಳಾಗುವುದು.

ಭೀಷ್ಮಾದಯೋಽಪಿ ನ ಹಿ ಯೋಧಯಿತುಂ ಸಮರ್ಥಾ

ರಾಜ್ಞಾ ಹ್ಯನೇನ ತತ ಏವ ಚ ಬಾಹ್ಲಿಕೋಽಸ್ಯ |

ಭೃತ್ಯೋ ಬಭೂವ ನ ಹಿ ಭೀಷ್ಮಮಯಂ ಯುಧೇಽಗಾದ್

ರಾಜಾ ನ ಹೀತಿ ನ ಚ ತೇನ ವಿರೋಧ ಆಸೀತ್ ॥

ಭೀಷ್ಮಾದಿಗಳೂ ಕೂಡ ಈ ಜರಾಸಂಧನೊಡನೆ ಯುದ್ಧ ಮಾಡಲು ಶಕ್ತರಲ್ಲ. ಅದರಿಂದಲೇ ಬಾಹ್ಲಿಕ ಅವನಿಗೆ ಅಡಿಯಾಳಾಗಿದ್ದಾನೆ. ಆದರೂ ಭೀಷ್ಮನನ್ನು ಯುದ್ಧದಲ್ಲಿ ಅವನು ಆಕ್ರಮಿಸಲಿಲ್ಲ. ಏಕೆಂದರೆ ಭೀಷ್ಮ ರಾಜನಲ್ಲ ಎಂದು. ಅದರಿಂದಲೇ ಭೀಷ್ಮನೊಡನೆ ಜರಾಸಂಧ ಎಂದೂ ಯುದ್ಧ ಮಾಡಲಿಲ್ಲ.

ಇತ್ಯುಕ್ತ ಆಶು ಸ ವಿಮೃಶ್ಯ ಯಯೌ ಪುರಂ ಸ್ವಂ

ಕರ್ಣೋಽಪಿ ತೈಃ ಪ್ರತಿಯುಯೋಧ ಜಿಗಾಯ ಚೈತಾನ್ |

ಕರ್ಣಸ್ಯ ವೀರ್ಯಮಗಣಯ್ಯ ಜರಾಸುತೋಽಪಿ

ಹ್ಯೇಕೈಕಮೇವ ನೃಪತಿಂ ಸ ದಿದೇಶ ಯೋದ್ಧುಮ್ ॥

ಕರ್ಣ ಹೀಗೆ ಹೇಳಿದಾಗ ದುರ್ಯೋಧನ ಆಲೋಚಿಸಿ ತನ್ನ ಪಟ್ಟಣಕ್ಕೆ ಹಿಂತಿರುಗಿದ. ಕರ್ಣ ರಾಜರೊಡನೆ ಯುದ್ಧಮಾಡಿ ಅವರನ್ನು ಗೆದ್ದನು. ಏಕೆಂದರೆ ಕರ್ಣನ ಸಾಮರ್ಥ್ಯವನ್ನು ಲೆಕ್ಕಿಸದೆ ಜರಾಸಂಧ ಒಬ್ಬೊಬ್ಬ ರಾಜನನ್ನೇ ಅವನ ಬಳಿ ಯುದ್ಧ ಮಾಡಲು ಕಳಿಸಿದ್ದ. ಮಹಾಭಾರತದಲ್ಲಿ ಯುದ್ಧ ಮುಗಿದ ಮೇಲೆ ದುರ್ಯೋಧನ ಕರ್ಣರಿಬ್ಬರೂ ಒಟ್ಟಿಗೆ ತಮ್ಮ ಪಟ್ಟಣಕ್ಕೆ ಹಿಂತಿರುಗಿದರೆಂದು ಹೇಳಲಾಗಿದೆ. ಆದರೆ ನಿರ್ಣಯದಲ್ಲಿ ದುರ್ಯೋಧನ ಮೊದಲೇ ತನ್ನ ಪಟ್ಟಣಕ್ಕೆ ಕನ್ಯೆಯನ್ನು ಕರೆದುಕೊಂಡು ಹೋದನು. ಅನಂತರ ಕರ್ಣನು ತೆರಳಿದನು ಎಂದು ಹೇಳಿರುತ್ತಾರೆ.

ಕರ್ಣಸ್ತೇಷಾಮಾಪತತಾಮೇಕೈಕೇನ ಕ್ಷುರೇಣ ಹ |

ಧನೂಂಷಿ ಸಶರಾವಾಪಾ ನ್ಯಪಾತಯತ ಭೂತಲೇ ॥17॥

ಅನಂತರ ಕರ್ಣನೊಬ್ಬನೇ ತನ್ನ ಪರಾಕ್ರಮದಿಂದ ಪ್ರತಿಯೊಬ್ಬ ರಾಜರ ಧನುಸ್ಸುಗಳನ್ನು ಮತ್ತು ಬಾಣಗಳ ಸಮೂಹವನ್ನು ತನ್ನ ಬಾಣದಿಂದ ಕತ್ತರಿಸಿದನು. ಮತ್ತು ಆ ರಾಜರನ್ನು ನೆಲದ ಮೇಲೆ ಬೀಳಿಸಿದನು.

ತತೋ ವಿಧನುಷಃ ಕಾಂಶ್ಚಿತ್ ಕಾಂಶ್ಚಿದ್ ಉದ್ಯತಕಾರ್ಮುಕಾನ್ |

ಕಾಂಶ್ಚಿದುದ್ವಹತೋ ಬಾಣಾನ್ ರಥಶಕ್ತಿಗದಾಸ್ತಥಾ ॥18॥

ಕರ್ಣನು ತನ್ನಲ್ಲಿರುವ ಯುದ್ಧಕೌಶಲ್ಯದಿಂದ ಕೆಲವರ ಬಿಲ್ಲುಬಾಣಗಳನ್ನು ಒಂದೊಂದೇ ತನ್ನ ಬಾಣದಿಂದ ಕತ್ತರಿಸಿ ಉರುಳಿಸಿದನು. ಕೆಲವರನ್ನು ಧನುಸ್ಸಿಲ್ಲದ- ವರನ್ನಾಗಿ ಮಾಡಿದರು. ಕೆಲವರು ಬಿಲ್ಲನ್ನು ಎತ್ತಿ ಬಾಣಗಳನ್ನು ಬಿಡುತ್ತಿರುವಾಗ ಅವರು ಎತ್ತಿದ ಕೈಯ ಜೊತೆ ಹಾಗೆಯೇ ಅವರು ನಿಲ್ಲುವಂತೆ ಮಾಡಿಬಿಟ್ಟನು. ಇನ್ನೂ ಕೆಲವರು ತಮ್ಮ ಬಾಣಗಳನ್ನು, ರಥಗಳನ್ನು, ಶಕ್ತ್ಯಾಯುಧವನ್ನು, ಗದೆ ಮೊದಲಾದ ಆಯುಧಗಳನ್ನು ಅಲ್ಲಿಯೇ ಬಿಟ್ಟು ಓಡಿಹೋಗುವಂತೆ ಮಾಡಿದನು.

ಲಾಘವಾದಾಕುಲೀಕೃತ್ಯ ಕರ್ಣಃ ಪ್ರಹರತಾಂ ವರಃ |

ಹತಸೂತಾಂಶ್ಚ ಭೂಯಿಷ್ಠಾನವಜಿಗ್ಯೇ ನರಾಧಿಪಾನ್ ॥19॥

ತನ್ನ ಕೈಚಳಕದಿಂದ ಆ ಕರ್ಣನು ಅನೇಕ ರಾಜರುಗಳ ಸಾರಥಿಗಳನ್ನು ಕೊಂದು- ಬಿಟ್ಟನು. ಅಲ್ಲಿರುವ ಎಲ್ಲಾ ರಾಜರುಗಳಿಗೆ ವ್ಯಾಕುಲತೆಯನ್ನು ಉಂಟುಮಾಡಿದನು. ತನ್ನೆದುರಿಗೆ ನಿಂತ ಎಲ್ಲಾ ರಾಜರುಗಳನ್ನು ತಾನೊಬ್ಬನೇ ಜಯಿಸಿದನು.

ತೇ ಸ್ವಯಂ ವಾಹಯಂತೋಽಶ್ವಾನ್ ಯಾಹಿ ಯಾಹೀತಿ ವಾದಿನಃ |

ವ್ಯಪೇಯುಸ್ತೇ ರಣಂ ಹಿತ್ವಾ ರಾಜಾನೋ ಭಗ್ನಮಾನಸಾಃ ॥20॥

ಅನಂತರ ಅಲ್ಲಿ ನೆರೆದ ಎಲ್ಲಾ ರಾಜರು ಭಗ್ನಮನೋರಥರಾದರು. ಸಾರಥಿ- ಗಳನ್ನು ಕಳೆದುಕೊಂಡ ಅವರು ರಥಾಶ್ವಗಳನ್ನು ತಾವೇ ನಡೆಸಿಕೊಂಡು, ಓಡಿರಿ ಓಡಿರಿ ಎಂದು ಕೂಗುತ್ತಾ ಪಲಾಯನ ಮಾಡಿದರು.

ದುರ್ಯೋಧನಸ್ತು ಕರ್ಣೇನ ಪಾಲ್ಯಮಾನೋಽಭ್ಯಯಾತ್ ತದಾ |

ಹೃಷ್ಟಃ ಕನ್ಯಾಮುಪಾದಾಯ ನಗರಂ ನಾಗಸಾಹ್ವಯಮ್ ॥21॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಚತುರ್ಥೋಽಧ್ಯಾಯಃ ॥4॥

ಹೀಗೆ ದುರ್ಯೋಧನನು ಕರ್ಣನಿಂದ ರಕ್ಷಿತನಾದನು. ಬಹಳ ಸಂತುಷ್ಟನಾ- ದನು. ಆ ಕನ್ಯೆಯನ್ನು ಅಪಹಾರ ಮಾಡಿಕೊಂಡು ತನ್ನ ಹಸ್ತಿನಾವತಿಗೆ ಬಂದು ಸೇರಿದನು.

ಟಿಪ್ಪಣಿ- ದುರ್ಯೋಧನನು ಅಪಹರಿಸಿದ ಈ ಕನ್ಯೆ ಬೇರೆ ಯಾರು ಅಲ್ಲ. ದುರ್ಯೋಧನನ ಪಟ್ಟದರಸಿಯೇ ಆಗಿದ್ದಾಳೆ. ಅರ್ವಾಚೀನರು ಇವಳನ್ನು ಭಾನು- ಮತಿ ಎಂದು ಕರೆಯುತ್ತಾರೆ. ಆಶ್ಚರ್ಯವೆಂದರೆ ಸಮಗ್ರ ಮಹಾಭಾರತದಲ್ಲಿ ಎಲ್ಲಿಯೂ ಸಹ

ಇವಳ ಹೆಸರು ಉಲ್ಲೇಖವಿರುವುದಿಲ್ಲ. ಶ್ರೀಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಇವಳನ್ನು ಅಲಕ್ಷ್ಮೀ ಎಂದಷ್ಟೇ ಕರೆದಿದ್ದಾರೆ. ಉಲ್ಲೇಖ ಹೀಗಿದೆ -
ಉದ್ವಾಹ್ಯ ಕಾಶಿತಯಾಂ ಗಿರಿಜಾಭಿವಿಷ್ಟಾಂ
ಸಾಕ್ಷಾನ್ನರೇಷು ಜನಿತಾಂ ಪ್ರಥಮಾಲಕ್ಷ್ಮೀಂ |
ತಸ್ಯಾಂ ಸುತಂ ತ್ವಜನಯತ್ ಪುರ ಆಸ ಯೋಽಕ್ಷಃ
ಕನ್ಯಾಂ ಪುರಾ ಪ್ರಿಯತಮಾಂ ಚ ಷಡಾನನಸ್ಯ ॥
ಪಾರ್ವತಿಯ ಆವೇಶದೊಂದಿಗೆ ಮನುಷ್ಯರಲ್ಲಿ ಹುಟ್ಟಿದ ಸಾಕ್ಷಾತ್ ಜ್ಯೇಷ್ಠೆ ಅಲಕ್ಷ್ಮಿಯೇ ಆಗಿದ್ದ ಕಾಶಿರಾಜಕುಮಾರಿಯನ್ನು ದುರ್ಯೋಧನ ಮದುವೆಯಾಗಿ ಅವಳಲ್ಲಿ ಹಿಂದೆ ಅಕ್ಷಕುಮಾರನಾಗಿದ್ದವನನ್ನು ಮಗನನ್ನಾಗಿ ಹುಟ್ಟಿಸಿದ. ಹಿಂದೆ ಷಣ್ಮುಖನ ಭಾರ್ಯೆಯಾಗಿದ್ದವಳನ್ನು ಮಗಳನ್ನಾಗಿಯೂ ಹುಟ್ಟಿಸಿದ.
ಪುತ್ರೋ ಬಭೂವ ಸ ತು ಲಕ್ಷಣನಾಮಧೇಯಃ
ಸಾ ಲಕ್ಷಣೇತ್ಯಧಿಕರೂಪಗುಣಾ ಸುಕನ್ಯಾ |
ತಸ್ಯಾನುಜಾಶ್ಚ ನಿಜಯೋಗ್ಯಗುಣಾ ಅವಾಪು-
ರ್ಭಾರ್ಯಾಃ ಪುನಶ್ಚ ಸ ಸುಯೋಧನ ಆಪ ಭಾರ್ಯಾಃ ॥
ದುರ್ಯೋಧನನ ಮಗನಿಗೆ ಲಕ್ಷಣ ಎಂದು ಹೆಸರು. ಮಗಳಿಗೆ ಲಕ್ಷಣಾ ಎಂದು. ಅವಳು ಅಧಿಕ ಸೌಂದರ್ಯಾದಿಗುಣಗಳಿಂದ ಯುಕ್ತಳು. ದುರ್ಯೋ- ಧನನ ತಮ್ಮಂದಿರೂ ತಮಗೆ ತಕ್ಕುದಾದ ಗುಣವುಳ್ಳ ಹೆಂಡಂದಿರನ್ನು ಪಡೆದರು. ಪುನಃ ದುರ್ಯೋಧನ ಬೇರೆ ಹೆಂಡಂದಿರನ್ನೂ ಪರಿಗ್ರಹಿಸಿದ.
ಪೂರ್ವಂ ಸುರಾಂತಕ ಇತಿ ಪ್ರಥಿತಃ ಸುತೋಽಭೂತ್
ದುಶ್ಶ್ಯಾಸನಸ್ಯ ತದನು ಪ್ರತಿತಪ್ಯಮಾನಾಃ |
ದೃಷ್ಟ್ವೈವ ಪಾರ್ಥಬಲವೀರ್ಯಗುಣಾನ್ ಸಮೃದ್ಧಿಂ
ತಾಂ ಚೈವ ತೇ ಪ್ರತಿಯಯುಃ ಸ್ವಕಲಿಂಗದೇಶಂ ॥203॥
ಹಿಂದೆ ರಾಮಾಯಣ ಕಾಲದಲ್ಲಿ ಸುರಾಂತಕನೆಂದು ಪ್ರಸಿದ್ಧನಾದ ರಾಕ್ಷಸ ದುಃಶಾಸನನಿಗೆ ಮಗನಾಗಿ ಹುಟ್ಟಿದ. ಬಳಿಕ ಪಾಂಡವರ ಬಲ ವೀರ್ಯಗುಣ- ಗಳನ್ನೂ ಆ ಮಹಾಸಂಪತ್ತನ್ನೂ ಕಂಡೇ ಪರಿತಾಪಗೊಂಡ ಕೌರವರು ಕಲಿಂಗ ದೇಶಕ್ಕೆ ಹೋದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 4ನೆಯ ಅಧ್ಯಾಯವು ಮುಗಿಯಿತು.
*****
5. ಐದನೆಯ ಅಧ್ಯಾಯ
ಕರ್ಣನ ಬಲ ಮತ್ತು ಪರಾಕ್ರಮಗಳ ವರ್ಣನೆ.
ನಾರದಃ
ಆವಿಷ್ಕೃತಬಲಂ ಕರ್ಣಂ ಜ್ಞಾತ್ವಾ ರಾಜಾ ಸ ಮಾಗಧಃ |
ಆಹ್ವಯದ್ ದ್ವೈರಥೇನಾಜೌ ಜರಾಸಂಧೋ ಮಹೀಪತಿಃ ॥1॥
ನಾರದರು ಕರ್ಣನ ಪರಾಕ್ರಮವನ್ನು ವರ್ಣಿಸುತ್ತಿದ್ದಾರೆ. ಓ ಮಹಾರಾಜನೇ! ಎಲ್ಲೆಡೆಯೂ ಕರ್ಣನ ಪರಾಕ್ರಮದ ವಾರ್ತೆ ಹಬ್ಬಿತು. ಮಗಧರಾಜನಾದ ಜರಾ- ಸಂಧನಿಗೂ ಕೂಡ ಈ ವಿಚಾರ ತಿಳಿಯಿತು. ಅವನು ತನ್ನೊಡನೆ ದ್ವಂದ್ವಯುದ್ಧಕ್ಕಾಗಿ ಬರಬೇಕೆಂದು ಕರ್ಣನಿಗೆ ಆಹ್ವಾನ ನೀಡಿದನು.
ತಯೋಃ ಸಮಭವದ್ ಯುದ್ಧಂ ದಿವ್ಯಾಸ್ತ್ರವಿದುಷೋರ್ದ್ವಯೋಃ |
ಯುಧಿ ನಾನಾಪ್ರಹರಣೈರನ್ಯೋನ್ಯಮಭಿವರ್ಷತೋಃ ॥2॥
ಇಬ್ಬರಿಗೂ ಕೂಡ ದ್ವಂದ್ವಯುದ್ಧವು ಪ್ರಾರಂಭವಾಯಿತು. ಇಬ್ಬರೂ ಕೂಡ ವಿವಿಧವಾದ ದಿವ್ಯಾಸ್ತ್ರಗಳನ್ನು ತಿಳಿದಿದ್ದರು. ಪರಸ್ಪರವಾಗಿ ಆ ಅಸ್ತ್ರಗಳನ್ನು ಪ್ರಯೋಗಿ- ಸುತ್ತಿದ್ದರು.
ಕ್ಷೀಣಬಾಣೌ ವಿಧನುಷೌ ಭಗ್ನಖಡ್ಗೌ ಮಹೀಂ ಗತೌ |
ಬಾಹುಭಿಃ ಸಮಸಜ್ಜೇತಾಮುಭಾವಪಿ ಬಲಾನ್ವಿತೌ ॥3॥
ಎಲ್ಲಾ ಆಯುಧಗಳನ್ನು ಪ್ರಯೋಗಿಸಿದ ಮೇಲೆ ಅವರಿಬ್ಬರಲ್ಲಿ ಬಾಣಗಳೇ ಇಲ್ಲದಂತಾದವು. ಧನುಸ್ಸುಗಳನ್ನೂ ಕೂಡ ಕಳೆದುಕೊಂಡರು. ಖಡ್ಗಗಳೂ ಕೂಡ ತುಂಡಾದವು. ಅನಂತರ ಇಬ್ಬರೂ ಕೂಡ ರಥದಿಂದ ಹಾರಿ ನೆಲದಲ್ಲಿ ನಿಂತು ಬಾಹುಯುದ್ಧಕ್ಕೆ ಸಿದ್ಧರಾದರು.
ಟಿಪ್ಪಣಿ - ಕನ್ಯೆಯನ್ನು ಕರೆದುಕೊಂಡು ನಗರಕ್ಕೆ ತೆರಳಿದ ಮೇಲೆ ಕರ್ಣನ ಪರಾಕ್ರಮವನ್ನು ಕೇಳಿದ ಜರಾಸಂಧನು ಯುದ್ಧಕ್ಕೆ ಬರುತ್ತಾನೆಂದು ಈ ಶ್ಲೋಕ- ಗಳನ್ನು ನೋಡಿದಾಗ ಆಪಾತತಃ ಕಾಣಿಸುತ್ತದೆ. ಆದರೆ ಮಹಾಭಾರತತಾತ್ಪರ್ಯ- ನಿರ್ಣಯದಲ್ಲಿ ಆ ಎಲ್ಲಾ ರಾಜರು ಸೋತಮೇಲೆ ಜರಾಸಂಧನು ಕರ್ಣನ ಜೊತೆ ಅಲ್ಲಿಯೇ ಯುದ್ಧ ಮಾಡಿದನೆಂದು ನಿರ್ಣಯಿಸಿದ್ದಾರೆ -
ಸರ್ವೇಷು ತೇಷು ವಿಜಿತೇಷ್ವಭಿಜಗ್ಮಿವಾನ್ ಸ
ಯೋದ್ಧುಂ ಬೃಹದ್ರಥಸಂತೋಽಪ್ಯಮುನಾ ರಥೇನ |
ತಂ ಚೈವ ರಾಮವರತೋ ವಿರಥಂ ವಿಶಸ್ತ್ರಂ
ಚಕ್ರೇ ಸ ಚೈನಮಥ ಮುಷ್ಟಿಭಿರಭ್ಯುಪೇತೌ ॥
ಒಬ್ಬೊಬ್ಬರಾಗಿ ಎಲ್ಲ ರಾಜರೂ ಪರಾಜಿತರಾದಾಗ ಜರಾಸಂಧ ತಾನೆ ಕರ್ಣ- ನೊಡನೆ ಯುದ್ಧ ಮಾಡಲು ರಥವೇರಿ ಹೊರಟ. ಪರಶುರಾಮರ ವರಬಲದಿಂದ ಕರ್ಣ ಜರಾಸಂಧನನ್ನು ವಿರಥನನ್ನಾಗಿಯೂ ನಿರಾಯುಧನನ್ನಾಗಿಯೂ ಮಾಡಿ- ದನು.

ಜರಾಸಂಧನೂ ಕರ್ಣನನ್ನು ಹಾಗೇ ವಿರಥನನ್ನಾಗಿಯೂ ನಿರಾಯುಧ- ನನ್ನಾಗಿಯೂ ಮಾಡಿದನು. ಬಳಿಕ ಇಬ್ಬರೂ ಮುಷ್ಟಿಗಳಿಂದ ಹೋರಾಡಿದರು.
ಬಾಹುಕಂಟಕಯುದ್ಧೇನ ತಸ್ಯ ಕರ್ಣೋಽಥ ಯುದ್ಧ್ಯತಃ |
ಬಿಭೇದ ಸಂಧಿಂ ದೇಹಸ್ಯ ಜರಯಾ ಶ್ಲೇಷಿತಸ್ಯ ಹ ॥4॥
ಆ ಬಾಹುಯುದ್ಧದಲ್ಲಿ ಕರ್ಣನು ಬಾಹುಕಂಟಕವೆಂಬ ಒಂದು ಯುದ್ಧಕ್ರಮ- ದಿಂದ ಮಲ್ಲಯುದ್ಧವನ್ನು ಮಾಡಲು ಪ್ರಾರಂಭಿಸಿದನು. ಜರಾ ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಆ ಜರಾಸಂಧನ ಸಂಧಿಯ ಬಂಧವನ್ನು ಸೀಳಲು ಪ್ರಾರಂಭಿಸಿದನು.
ವಿವರಣೆ -
ಏಕಾಂ ಜಂಘಾಂ ಪದಾಕ್ರಮ್ಯ ಪರಾಮುದ್ವಿಮ್ಯಪಾರ್ಯತೇ॥
ಕೇತಕೀ ಪತ್ರವತ್ ಛತ್ರೋಃ ಯುದ್ಧ ತದ್‌ಬಾಹುಕಂಟಕಂ ॥
ಶತ್ರುವಿನ ಮೊಣಕಾಲನ್ನು ಮೆಟ್ಟಿ ನಿಂತು, ಮತ್ತೊಂದು ಮೊಣಕಾಲನ್ನು ಮೇಲಕ್ಕೆ ಸೀಳುವುದನ್ನು ಬಾಹುಕಂಟಕಯುದ್ಧ ಎನ್ನುತ್ತಾರೆ. ಕೇತಕೀ ಹೂವನ್ನು ಇಬ್ಭಾಗ ಮಾಡುವಂತೆ ಇದು ಒಂದು ಯುದ್ಧದ ಕ್ರಮ. ಇದನ್ನು ಕರ್ಣನು ತಿಳಿದಿ- ದ್ದನು.
ವಿಮರ್ಶೆ - ವಾಸ್ತವಿಕವಾಗಿ `ಬಾಹುಕಂಟಕಯುದ್ಧೇನ ತಸ್ಯ ಕರ್ಣೋಽಥ ಯುದ್ಧ್ಯತಃ' ಎಂಬ ಪಾಠವು ದಾಕ್ಷಿಣಾತ್ಯ ಕೋಶಗಳಲ್ಲಿ ಕಾಣಿಸುವುದೇ ಇಲ್ಲ. ಔತ್ತರೇಯಕೋಶದಲ್ಲಷ್ಟೇ ಈ ಪಾಠವಿರುತ್ತದೆ. ಆದ್ದರಿಂದ ಮೇಲೆ ಹೇಳಿದ ನೀಲಕಂಠೀಯವ್ಯಾಖ್ಯಾನದ ಪ್ರಕಾರ ಬಾಹುಕಂಟಕಯುದ್ಧಪದಕ್ಕೆ ಅದೊಂದು ಯುದ್ಧತಂತ್ರವೆಂಬ ಅರ್ಥವನ್ನು ವಿವಕ್ಷಿಸುವುದು ನಿರವಕಾಶವಾಗುವುದಿಲ್ಲ. ಮತ್ತು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಕರ್ಣ ಹಾಗೂ ಜರಾಸಂಧರ ಯುದ್ಧ- ವನ್ನು ವರ್ಣನೆ ಮಾಡುವಾಗ ಈ ಯುದ್ಧನೀತಿಯನ್ನು ಉಲ್ಲೇಖ ಮಾಡಿರುವು- ದಿಲ್ಲ.
ಸ ವಿಕಾರಂ ಶರೀರಸ್ಯ ದೃಷ್ಟ್ವಾ ನೃಪತಿರಾತ್ಮನಃ |
ಪ್ರೀತೋಽಸ್ಮೀತ್ಯಬ್ರವೀತ್ ಕರ್ಣಂ ವೈರಮುತ್ಸೃಜ್ಯ ಭಾರತ ॥5॥
ಓ ಭರತವಂಶೋದ್ಭವನೇ ! ಜರಾಸಂಧನಿಗೆ ಕರ್ಣನನ್ನು ಗೆಲ್ಲುವುದು ಅಸಾಧ್ಯ ಎನಿಸಿತು. ಅವನಿಂದ ತನ್ನ ಶರೀರಕ್ಕುಂಟಾದ ಆಪತ್ತನ್ನು ಗಮನಿಸಿ ಕರ್ಣನ ಪರಾ- ಕ್ರಮವನ್ನು ಮೆಚ್ಚಿದನು. ಕರ್ಣನ ವಿಷಯದಲ್ಲಿ ವೈರವನ್ನು ಪರಿತ್ಯಾಗ ಮಾಡಿದನು. ಸ್ನೇಹಭಾವದಿಂದ ಕರ್ಣನ ವಿಷಯದಲ್ಲಿ ಪ್ರೀತನಾಗಿ ನಿನ್ನ ಬಳಿ ನಾನು ಸ್ನೇಹ ಮಾಡುತ್ತೇನೆ ಎಂದು ಹೇಳಿದನು.
ಪ್ರೀತ್ಯಾ ದದೌ ಸ ಕರ್ಣಾಯ ಮಾಲಿನೀಂ ನಗರೀಮಥ |
ಅಂಗೇಷು ನರಶಾರ್ದೂಲ ಸ ರಾಜಾಸೀತ್ ಸಪತ್ನಜಿತ್ ॥6॥
ಆಗ ಆ ಜರಾಸಂಧನು ಕರ್ಣನಿಗೆ ತನ್ನ ಅಂಗದೇಶದಲ್ಲಿದ್ದ ಮಾಲಿನೀ ಎಂಬ ನಗರವನ್ನು ಪಾರಿತೋಷಕವಾಗಿ ನೀಡಿದನು. ಆಗ ಕರ್ಣನು ಎಲ್ಲಾ ಶತ್ರುಗಳನ್ನು ಸೋಲಿಸಿ, ಆ ಅಂಗರಾಜ್ಯಕ್ಕೆ ಅಧಿಪತಿಯಾದನು.
ಟಿಪ್ಪಣಿ -
ಸಂಧೌ ಯದೈವ ಜರಯಾ ಪ್ರತಿಸಂಧಿತಸ್ಯ
ಕರ್ಣೋ ಜಘಾನ ನ ಪರತ್ರ ತುತೋಷ ರಾಜಾ |
ನ ಜ್ಞಾತಮೇತದಪಿ ಹೋ ಹಲಿನಾ ತದೇತದ್
ಜ್ಞಾತಂ ತ್ವಯಾ ಭವ ತತೋ ಮಮ ಭೃತ್ಯ ಏವ ॥
ಜರಾಸಂಧನಿಗೆ ಕರ್ಣ ಬೇರೆ ಕಡೆ ಬಿಟ್ಟು ಸಂಧಿಯಲ್ಲಿಯೇ ಯಾವಾಗ ಹೊಡೆಯಲು ತೊಡಗಿದನೋ ಆಗ ಜರಾಸಂಧ ಮೆಚ್ಚಿದ. ನನ್ನ ಮರ್ಮಸ್ಥಳವನ್ನು ಬಲರಾಮನೂ ತಿಳಿಯಲಿಲ್ಲ. ನೀನು ತಿಳಿದುಬಿಟ್ಟೆ. ಅದರಿಂದ ನೀನು ನನ್ನ ಭಟನಾಗಿರು.
ಏವಂವಿಧಂ ಸುಕುಶಲಂ ಬಹುಯುದ್ಧ ಶೌಂಡಂ
ನ ತಾವಂ ಹನಿಷ್ಯ ಉತ ತೇ ಪಿತುರೇವ ಪೂರ್ವಂ |
ಬಾಹ್ವೋರ್ಬಲಾದಭಿಹೃತಂ ಹಿ ಮಯಾಽಂಗರಾಜ್ಯಂ
ತತ್ತ್ವಂ ಗೃಹಾಣ ಯುಧಿ ಕರ್ಮಕರಶ್ಚ ಮೇ ಸ್ಯಾಃ ॥198॥
ಇಂಥ ಒಳ್ಳೆಯ ಕುಶಲನಾದ, ಬಹುಯುದ್ಧ ಸಮರ್ಥನಾದ ನಿನ್ನನ್ನು ನಾನು ಕೊಲ್ಲುವುದಿಲ್ಲ. ಮಾತ್ರವಲ್ಲ, ಹಿಂದೆ ನಿನ್ನ ತಂದೆಯಿಂದ ನಾನು ನನ್ನ ಬಾಹು ಬಲದಿಂದ ಅಂಗರಾಜ್ಯವನ್ನು ಗೆದ್ದುಕೊಂಡಿದ್ದೆ. ಅದನ್ನು ನೀನು ತೆಗೆದುಕೊ. ಯುದ್ಧಗಳಲ್ಲಿ ನೀನು ನನ್ನ ಭಟನಾಗಿರು.
ಪಾಲಯಾಮಾಸ ಚಂಪಾಂ ತು ಕರ್ಣಃ ಪರಬಲಾರ್ದನಃ |
ದುರ್ಯೋಧನಸ್ಯಾನುಮತೇ ತವಾಪಿ ವಿದಿತಂ ತಥಾ ॥7॥
ಆ ಕರ್ಣನು ದುರ್ಯೋಧನನ ಅನುಮತಿಯಿಂದ ಚಂಪಾ ಎಂಬ ಪಟ್ಟಣ- ವನ್ನೂ ಕೂಡ ಪರಿಪಾಲನೆ ಮಾಡಿದನು. ಯುಧಿಷ್ಠಿರನೇ! ಈ ಎಲ್ಲಾ ವಿಷಯಗಳು ನಿನಗೂ ಕೂಡ ತಿಳಿದೇ ಇರುತ್ತದೆ.
ಒಂದು ವಿಮರ್ಶೆ - ಚಂಪಾ ಎಂಬ ದೇಶವನ್ನು ದುರ್ಯೋಧನನು ಕರ್ಣನಿಗೆ ನೀಡಿದನೆಂದು ಈ ಶ್ಲೋಕದಲ್ಲಿ ಕಾಣಿಸುತ್ತದೆ. ಆದರೆ ದಾಕ್ಷಿಣಾತ್ಯಕೋಶಗಳಲ್ಲಿ `ಚಂಪಾಂ ತು' ಎಂಬ ಪಾಠವು ಕಾಣಿಸುವುದಿಲ್ಲ. `ವರ್ಣಾಂಸ್ತು' ಎಂಬ ಪಾಠವು ಕಾಣಿಸುತ್ತದೆ. ಆದ್ದರಿಂದ ದುರ್ಯೋಧನನು `ಚಂಪಾ' ಎಂಬ ದೇಶವನ್ನು ನೀಡಿ- ದನು ಎಂಬುದಕ್ಕೆ ಇದು ನಿರವಕಾಶವಾದ ಆಧಾರವಾಗುವುದಿಲ್ಲ. ದಾಕ್ಷಿಣಾತ್ಯ ಪಾಠದ ಪ್ರಕಾರ ಆ ದೇಶದಲ್ಲಿ ಚತುವರ್ಣದವರನ್ನು ಕರ್ಣನು ರಕ್ಷಣೆ ಮಾಡಿ- ದನು ಎಂದಷ್ಟೇ ಅರ್ಥವಾಗುತ್ತದೆ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೀಗೆ ಶ್ರೀಮಧ್ವಾಚಾರ್ಯರು ನಿರ್ಣಯವನ್ನು ನೀಡಿದ್ದಾರೆ.
ಇತ್ಯುಕ್ತ ಆಶು ಸ ತಥೈವ ಚಕಾರ ಕರ್ಣಃ
ಪೂರ್ವಂ ಹಿ ತಸ್ಯ ನಿಜರಾಜ್ಯಪದೈಕದೇಶಃ |

ದುರ್ಯೋಧನೇನ ವಿಹಿತೋ ಮಗಧಾಧಿರಾಜಂ
ಜಿತ್ವಾ ವೃಕೋದರಹೃತಃ ಪಿತುರೇವ ದತ್ತಃ ॥
ಜರಾಸಂಧ ಹೀಗೆ ಹೇಳಿದಾಗ ಕರ್ಣ ಬೇಗನೇ ಅಂಗರಾಜ್ಯವನ್ನು ಸ್ವೀಕರಿಸಿದ. ಹಿಂದೆ ಶಸ್ತ್ರಾಭ್ಯಾಸಪ್ರದರ್ಶನಕಾಲದಲ್ಲಿ ದುರ್ಯೋಧನ ಕರ್ಣನಿಗೆ ಕೊಟ್ಟಿದ್ದುದು ಅವನ ಅಂಗರಾಜ್ಯದ ಒಂದು ಭಾಗ ಮಾತ್ರ. ಅದು ದಿಗ್ವಿಜಯಕಾಲದಲ್ಲಿ ಭೀಮ ಜರಾಸಂಧನನ್ನು ಗೆದ್ದು ಅವನಿಂದ ಅಪಹರಿಸಿ ಧೃತರಾಷ್ಟ್ರನಿಗೆ ಕೊಟ್ಟಿದ್ದನು.
ಅಂಗಾಧಿರಾಜ್ಯಮುಪಲಭ್ಯ ಜರಾಸುತಸ್ಯ
ಸ್ನೇಹಂ ಚ ಸೂರ್ಯಸುತ ಆಶು ಕುರೂನ್ ಜಗಾಮ |
ದೃಷ್ಟ್ವೈವ ತಂ ಮುಮುದಿರೇ ಧೃತರಾಷ್ಟ್ರಪುತ್ರಾ
ನಾನೇನ ತುಲ್ಯಮಭಿಜಗ್ಮುರತೋ ಹರಿಂ ಚ ॥200॥
ಹೀಗೆ ಅಂಗರಾಜ್ಯವನ್ನೂ ಜರಾಸಂಧನ ಸ್ನೇಹವನ್ನೂ ಸಂಪಾದಿಸಿ ಕರ್ಣನು ಬೇಗನೆ ಕೌರವರ ಬಳಿಗೆ ಬಂದನು. ಅವನನ್ನು ಕಂಡೊಡನೆ ಕೌರವರು ಆನಂದ- ಪಟ್ಟರು. ಅವನಿಗೆ ಶ್ರೀಕೃಷ್ಣನೂ ಸಮನಲ್ಲ ಎಂದುಕೊಂಡರು.
ಕರ್ಣನು ಅಂಗರಾಜ್ಯಾಧಿಪತಿ ಎಂದೇ ಪ್ರಸಿದ್ಧನಾಗಿದ್ದಾನೆ. ಇವನಿಗೆ ಬಂದ ಅಂಗರಾಜ್ಯದ ಬಗ್ಗೆ ವಿವರವನ್ನು ಹೀಗೆ ತಿಳಿಯಬೇಕು - ಕರ್ಣನ ವಂಶದಲ್ಲಿ ಅಂಗ ಎಂಬ ರಾಜನಿದ್ದನು. ಅವನಿಗೆ ಸಂಬಂಧಪಟ್ಟ ದೇಶವೇ ಅಂಗರಾಜ್ಯ ಎನಿಸಿದೆ. ಹಾಗಿದ್ದರೆ ಜರಾಸಂಧನ ಬಳಿ ಈ ಅಂಗರಾಜ್ಯವು ಹೇಗೆ ಬಂದಿತು? ಅವನೇಕೆ ಕರ್ಣನಿಗೆ ಇದನ್ನು ಕೊಟ್ಟನು? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯ-ಬೇಕೆಂದರೆ ಕರ್ಣನ ಪೂರ್ವಜರ ಸಂಕ್ಷೇಪ ಪರಿಚಯವನ್ನು ತಿಳಿಯಬೇಕಾಗುತ್ತದೆ. ಚಂದ್ರವಂಶದಲ್ಲಿ ನಹುಷನು ಹುಟ್ಟಿದನು, ಆ ನಹುಷನಿಗೆ ಯಯಾತಿಯು ಹುಟ್ಟಿದನು. ಆ ಯಯಾತಿಗೆ ನಾಕುಮಂದಿ ಮಕ್ಕಳಿದ್ದರು. ಅವರಲ್ಲಿ ಅನು ಎಂಬುವನೂ ಕೂಡ ಒಬ್ಬನಾಗಿದ್ದನು. ಯಯಾತಿರಾಜನ ಶಾಪದ ಬಲದಿಂದ ಅನು ಎಂಬ ಮಗನ ವಂಶವು ಮುಂದೆ ಕ್ಷತ್ರಿಯ ಪರಂಪರೆಯಲ್ಲಿ ಬರುವುದಿಲ್ಲ. ಸಾಂಕರ್ಯವನ್ನು ಹೊಂದಿ, ಸೂತವಂಶವಾಗಿ ವಿಭಾಗ ಹೊಂದುತ್ತದೆ. ಆ ಅನುರಾಜನ ಮಗನೇ ಸಭಾನರ. ಆ ಸಭಾನರಿಗೆ ಕಾಲನರನು, ಅವನಿಗೆ ಸಂಜಯನು ಹುಟ್ಟುತ್ತಾನೆ. ಇದೇ ವಂಶದಲ್ಲಿ ಹೋಮ ಎಂಬುವನು ಬರುತ್ತಾನೆ. ಅವನ ವಂಶದಲ್ಲೇ ಸುತಪ ಸಹ ಬರುತ್ತಾನೆ. ಅವನ ಮಗನೇ ಬಲಿಯಾಗಿದ್ದಾನೆ. ಆ ಬಲಿಗೆ ಅಂಗ, ವಂಗ, ಕಳಿಂಗ ಇತ್ಯಾದಿ ಮಕ್ಕಳು ಹುಟ್ಟುತ್ತಾರೆ. ಇವರಿಗೆ ಸಂಬಂಧಪಟ್ಟ ದೇಶಗಳೇ ಆಯಾ ಹೆಸರುಗಳಿಂದ ಪ್ರಸಿದ್ಧವಾಗುತ್ತವೆ. ಅಂಗನಿಗೆ ಘನಪಾನ ಎಂಬ ಮಗನು ಹುಟ್ಟುತ್ತಾನೆ. ದಿವಿರಥ, ಧರ್ಮರಥ, ಮಿತ್ರರಥ, ಸದ್ಧರ್ಮ ಇವರೆಲ್ಲರೂ ಇದೇ ವಂಶದಲ್ಲಿ ಬಂದವರು. ಈ ಸದ್ಧರ್ಮನ ಮಗನೇ ಅಧಿರಥನು. ಈ ಅಧಿರಥನ ಸಾಕುಮಗನೇ ಕರ್ಣನಾಗಿದ್ದಾನೆ. ಭಾಗವತ ಪುರಾಣದ ಒಂಬತ್ತನೆಯ ಸ್ಕಂಧದ ಇಪ್ಪತ್ತನೆಯ ಅಧ್ಯಾಯದಲ್ಲಿ ಈ ವಂಶದ ವಿಸ್ತಾರವು ಪ್ರಾಪ್ತವಾಗಿದೆ. ಆದರೆ ಆ ವಂಶದ ಹೆಸರಿನಲ್ಲಿ ಸ್ವಲ್ಪ ವ್ಯತ್ಯಾಸವು ಕಾಣಿಸುತ್ತದೆ.
ಈ ಚಂದ್ರವಂಶವು ಕ್ಷತ್ರಿಯರ ವಂಶವಾಗಿದೆ. ಇದೇ ವಂಶದಲ್ಲಿ ಬಂದಿರುವ ಅಧಿರಥನು ಹೇಗೆ ಸೂತನಾದನು? ಎಂಬುದೇ ಇಲ್ಲಿ ಮೂಡುವ ಪ್ರಶ್ನೆ. ಉತ್ತರ- ವನ್ನು ಹೀಗೆ ತಿಳಿಯಬೇಕು - ಯಯಾತಿಯ ಶಾಪದಂತೆ ಸದ್ಧರ್ಮ ಅಥವಾ ಅವನ ಪೂರ್ವಿಕರಲ್ಲಿ ಯಾರೋ ಒಬ್ಬರು ಸೂತಜಾತಿಯ ಹೆಂಡತಿಯನ್ನು ವಿವಾಹವಾಗಿ- ದ್ದರು. ಅವಳಲ್ಲಿ ಹುಟ್ಟಿದ ವಂಶದಲ್ಲಿಯೇ ಅಧಿರಥನು ಬಂದಿದ್ದಾನೆ. ಆದ್ದರಿಂದ ಸೂತಪತ್ನಿಯಲ್ಲಿ ಹುಟ್ಟಿದ ಕಾರಣ ಅಧಿರಥನು ಸೂತಜಾತಿಯವನಾಗಿದ್ದಾನೆ. ಹಾಗಾಗಿ ಅವನ ಸಾಕುಮಗನಾದ ಕರ್ಣನೂ ಕೂಡ ಸೂತನೆಂದೇ ಪ್ರಸಿದ್ಧ- ನಾದನು.
ಈ ಅಧಿರಥನಿಗೆ ತನ್ನ ವಂಶದ ಪೂರ್ವಿಕನಾದ ಅಂಗನಿಗೆ ಸಂಬಂಧಪಟ್ಟ ಒಂದು ದೇಶದ ಆಧಿಪತ್ಯವು ದೊರಕಿರುತ್ತದೆ. ಆದರೆ ಜರಾಸಂಧನು ದಿಗ್ವಿಜಯ ಮಾಡುವ ಸಂದರ್ಭದಲ್ಲಿ ಈ ಅಂಗರಾಜ್ಯವನ್ನು ಅಧಿರಥನಿಂದ ವಶಪಡಿಸಿ- ಕೊಂಡಿದ್ದನು. ಪಾಂಡವರು ದ್ರೋಣಾಚಾರ್ಯರ ಬಳಿ ಶಸ್ತ್ರಾಭ್ಯಾಸ ಮಾಡುವ ಮೊದಲು ಭೀಮನು ಒಮ್ಮೆ ದಿಗ್ವಿಜಯ ಮಾಡಿದ್ದನು. ಆ ಸಂದರ್ಭದಲ್ಲಿ ಆ ಜರಾಸಂಧನಿಂದ ಆ ಅಂಗರಾಜ್ಯದ ಒಂದು ಭಾಗವನ್ನು ಗೆದ್ದು, ಧೃತರಾಷ್ಟ್ರನಿಗೆ ಭೀಮಸೇನನು ಅದನ್ನು ನೀಡಿದ್ದನು. ಅನಂತರ ಶಸ್ತ್ರಾಭ್ಯಾಸ ಪ್ರದರ್ಶನವನ್ನು ಮಾಡಿದಾಗ ಕರ್ಣನು ಅರ್ಜುನನ ಜೊತೆ ಸೋಲುತ್ತಾನೆ. ಆಗ ದುರ್ಯೋ- ಧನನು ಕರ್ಣನಿಗೆ ಸಾಂತ್ವನದ ಮಾತುಗಳನ್ನು ಹೇಳಿ ಈ ಅಂಗರಾಜ್ಯವನ್ನು ಕೊಡುತ್ತಾನೆ. ಭೀಮಸೇನನು ಧೃತರಾಷ್ಟ್ರನಿಗೆ ಜರಾಸಂಧನಿಂದ ಗೆದ್ದು ತಂದ ಯಾವ ಅಂಗರಾಜ್ಯವಿದೆಯೋ, ಅದನ್ನು ದುರ್ಯೋಧನನು ಈ ಸಂದರ್ಭದಲ್ಲಿ ಕರ್ಣನಿಗೆ ನೀಡುತ್ತಾನೆ. ಆದರೆ ಹಿಂದೊಮ್ಮೆ ದುರ್ಯೋಧನನ ಮೂಲಕ ಕರ್ಣನಿಗೆ ಅಂಗರಾಜ್ಯದ ಏಕದೇಶವು ಪ್ರಾಪ್ತವಾಗಿತ್ತು. ಈಗ ಜರಾಸಂಧನ ಜೊತೆ ಗೆದ್ದ ಬಳಿಕ ಉಳಿದ ಭಾಗವೂ ಕೂಡ ದೊರಕುತ್ತದೆ. ಹಾಗಾಗಿ ಸಂಪೂರ್ಣ ಅಂಗರಾಜ್ಯದ ಒಡೆತನವನ್ನು ಕರ್ಣನು ಸಂಪಾದನೆ ಮಾಡಿಕೊಳ್ಳುತ್ತಾನೆ. ಆದ್ದರಿಂದ ತಾತ್ಪರ್ಯನಿರ್ಣಯದ ಪ್ರಕಾರ ಚಂಪಾ ಎಂಬ ದೇಶವನ್ನು ದುರ್ಯೋಧನನು ಕೊಟ್ಟಿದ್ದನು ಎಂದು ಹೇಳುವುದು ವಿರುದ್ಧವಾಗುತ್ತದೆ. ಹಿಂದೆ ಅಂಗರಾಜ್ಯದ ಏಕದೇಶವನ್ನು ದುರ್ಯೋಧನನಿಂದ ಪಡೆದುಕೊಂಡಿದ್ದನು. ಈಗ ಜರಾಸಂಧನನ್ನು ಗೆದ್ದು ಉಳಿದ ಅರ್ಧಭಾಗವನ್ನೂ ಕೂಡ ಪಡೆದುಕೊಂಡನು. ಆದ್ದರಿಂದ ಕರ್ಣನು `ಅಂಗರಾಜ್ಯಾಧಿಪತಿ' ಎಂಬುದಾಗಿ ಪ್ರಸಿದ್ಧಿಯನ್ನು ಹೊಂದಿ- ದನು ಎಂದು ತಿಳಿಯಬೇಕು.
ಏವಂ ಶಸ್ತ್ರಪ್ರತಾಪೇನ ಪ್ರಥಿತಃ ಸೋಽಭವತ್ ಕ್ಷಿತೌ |
ತ್ವದ್ಧಿತಾರ್ಥಂ ಸುರೇಂದ್ರೇಣ ಭಿಕ್ಷಿತೋ ವರ್ಮಕುಂಡಲೇ ॥8॥
ಹೀಗೆ ಕರ್ಣನು ತನ್ನಲ್ಲಿರುವ ಶಸ್ತ್ರಾಸ್ತ್ರಗಳ ಚಾತುರ್ಯದಿಂದ ಲೋಕದಲ್ಲಿ ವಿಖ್ಯಾತನಾದನು. ಇದನ್ನು ಕಂಡು ದೇವೇಂದ್ರನು ನಿಮ್ಮೆಲ್ಲರ ಹಿತಕ್ಕಾಗಿ ಅವನ ಬಳಿ ತೆರಳಿ ಜನ್ಮತಃ ಆಗತವಾದ ಕರ್ಣನ ಕವಚಕುಂಡಲಗಳೆರಡನ್ನು ಯಾಚನೆ ಮಾಡಿದನು.
ಸ ದಿವ್ಯೇ ಸಹಜೇ ಪ್ರಾದಾತ್ ಕುಂಡಲೇ ಪರಮಾರ್ಚಿತೇ |
ಸಹಜಂ ಕವಚಂ ಚೈವ ಮೋಹಿತೋ ದೇವಮಾಯಯಾ ॥9॥
ವಿಮುಕ್ತಃ ಕುಂಡಲಾಭ್ಯಾಂ ಚ ಸಹಜೇನ ಚ ವರ್ಮಣಾ |
ನಿಹತೋ ವಿಜಯೇನಾಜೌ ವಾಸುದೇವಸ್ಯ ಪಶ್ಯತಃ ॥10॥

ಅತ್ಯಂತ ಉದಾರಿಯಾದ ಆ ಕರ್ಣನು, ಆ ಕವಚ ಮತ್ತು ಕುಂಡಲಗಳೆರಡನ್ನೂ ತನ್ನ ದೇಹದಿಂದ ಛೇದನೆ ಮಾಡಿ, ದಾನ ಮಾಡಿಬಿಟ್ಟನು. ದೇವತೆಗಳ ಮಾಯೆಗೆ ಮರುಳಾಗಿ ತನ್ನ ಸಹಜವಾದ ಅಂಗದಂತಿದ್ದ ಆ ಕವಚ ಕುಂಡಲಗಳೆರಡನ್ನೂ ಕಿತ್ತು ದಾನ ಮಾಡಿದ್ದರಿಂದಲೇ ಶ್ರೀಕೃಷ್ಣನ ಎದುರಿನಲ್ಲಿ ಅರ್ಜುನನಿಂದ ಮೃತನಾದನು.

ಬ್ರಾಹ್ಮಣಸ್ಯಾಭಿಶಾಪೇನ ರಾಮಸ್ಯ ಚ ಮಹಾತ್ಮನಃ |
ಕುಂತ್ಯಾಶ್ಚ ವರದಾನೇನ ಮಾಯಯಾ ಚ ಶತಕ್ರತೋಃ ॥11॥
ಭೀಷ್ಮಾವಮಾನಾತ್ ಸಂಖ್ಯಾಯಾಂ ರಥಾನಾಮರ್ಧಕೀರ್ತನಾತ್ |
ಶಲ್ಯಾತ್ ತೇಜೋವಧಾಚ್ಚಾಪಿ ವಾಸುದೇವನಯೇನ ಚ ॥12॥

ಧರ್ಮರಾಜನೇ! ಆ ಕರ್ಣನ ಮರಣಕ್ಕೆ ಅನೇಕ ಕಾರಣಗಳಿವೆ. ಬ್ರಾಹ್ಮಣನ ಶಾಪ, ಮಹಾತ್ಮನಾದ ಪರಶುರಾಮನ ಶಾಪ, ಕುಂತಿಗೆ ವರದಾನ ಮಾಡಿದ್ದು, ಇಂದ್ರನಿಗೆ ಕವಚ-ಕುಂಡಲಗಳನ್ನು ದಾನಮಾಡಿದ್ದು, ರಥಿಕರು, ಅತಿರಥರು ಎಷ್ಟು ಮಂದಿ ಇದ್ದಾರೆಂದು ಗಣನೆಯನ್ನು ಮಾಡುವ ಸಂದರ್ಭದಲ್ಲಿ ಕರ್ಣನನ್ನು ಅರ್ಧರಥನೆಂದು ಹೇಳಿ ಭೀಷ್ಮಾಚಾರ್ಯರು ಕರ್ಣನನ್ನು ಅವಮಾನಗೊಳಿಸಿದ್ದು, ಅತ್ಯಂತ ಉತ್ಸಾಹದಲ್ಲಿ ಯುದ್ಧವನ್ನು ಮಾಡಲು ಹೊರಟಾಗ ಶಲ್ಯನು ತೇಜೋವಧೆ ಮಾಡಿದ್ದು ಇವೆಲ್ಲವೂ ಅವನ ಮರಣಕ್ಕೆ ಕಾರಣವಾಗಿವೆ. ಜೊತೆಯಲ್ಲಿ ಶ್ರೀಕೃಷ್ಣ- ಪರಮಾತ್ಮನ ಯುದ್ಧನೀತಿಯು ಕರ್ಣನ ಅವಸಾನಕ್ಕೆ ಮುಖ್ಯಕಾರಣವಾಯಿತು.

ರುದ್ರಸ್ಯ ದೇವರಾಜಸ್ಯ ಯಮಸ್ಯ ವರುಣಸ್ಯ ಚ |
ಕುಬೇರದ್ರೋಣಯೋಶ್ಚೈವ ಕೃಪಸ್ಯ ಚ ಮಹಾತ್ಮನಃ ॥13॥
ಅಸತ್ರಣಿ ದಿವ್ಯಾನ್ಯಾದಾಯ ಯುಧಿ ಗಾಂಡೀವಧನ್ವನಾ |
ಹತೋ ವೈಕರ್ತನಃ ಕರ್ಣೌ ದಿವಾಕರಸಮದ್ಯುತಿಃ ॥14॥

ಅಷ್ಟೇ ಅಲ್ಲದೇ ಅರ್ಜುನನು ಆ ಯುದ್ಧದಲ್ಲಿಯೂ ಕೂಡ ಇಂದ್ರ, ರುದ್ರ, ಯಮ, ವರುಣ, ಕುಬೇರ, ಕೃಪ, ದ್ರೋಣ ಇವರಿಂದೆಲ್ಲಾ ಪಡೆದುಕೊಂಡ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಗಾಂಡೀವವೆಂಬ ದಿವ್ಯವಾದ ಧನುಸ್ಸಿನ ಸಹಾಯದಿಂದಲೇ ಸೂರ್ಯಸಮಾನವರ್ಚಸ್ವಿಯಾದ ವೈಕರ್ತನಾದ ಕರ್ಣನನ್ನು ಸಂಹಾರ ಮಾಡಿದನು.

ಏವಂ ಶಪ್ತಸ್ತವ ಭ್ರಾತಾ ಬಹುಭಿಶ್ಚಾಪಿ ವಂಚಿತಃ |
ನ ಶೋಚ್ಯಃ ಸ ನರವ್ಯಾಘ್ರೋ ಯುದ್ಧೇ ಹಿ ನಿಧನಂ ಗತಃ ॥15॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚಮೋಽಧ್ಯಾಯಃ ॥5॥

ಓ ಧರ್ಮರಾಜನೇ! ನಿನ್ನ ಅಣ್ಣನಾದ ಆ ಕರ್ಣನು ಹೀಗೆ ಅನೇಕರ ಶಾಪಕ್ಕೆ ಭಾಗಿಯಾಗಿದ್ದನು. ತಾನು ಅನೇಕರಿಗೆ ಮಾಡಿದ ವಂಚನೆಯಿಂದಲೂ ಯುದ್ಧದಲ್ಲಿ ಮೃತನಾದನು. ಆದ್ದರಿಂದ ನೀನು ಅವನ ಮರಣದ ವಿಷಯದಲ್ಲಿ ದುಃಖವನ್ನು ಪಡುವುದು ಯುಕ್ತವಾಗುವುದಿಲ್ಲ.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 5ನೆಯ ಅಧ್ಯಾಯವು ಮುಗಿಯಿತು.

## 6. ಆರನೆಯ ಅಧ್ಯಾಯ

ಕರ್ಣವಧೆಯಿಂದ ದುಃಖಿತನಾದ ಯುಧಿಷ್ಠಿರನಿಗೆ ಕುಂತಿಯಿಂದ ಸಮಾಧಾನ. ಸ್ತ್ರೀಯರಲ್ಲಿ ರಹಸ್ಯವು ನಿಲ್ಲಬಾರದೆಂದು ಯುಧಿಷ್ಠಿರನಿಂದ ಶಾಪಪ್ರದಾನ.

ವೈಶಂಪಾಯನಃ
ಏತಾವದುಕತ್ತ್ವ ದೇವರ್ಷಿರ್ವಿರರಾಮ ಸ ನಾರದಃ |
ಯುಧಿಷ್ಠಿರಸ್ತು ರಾಜರ್ಷಿರ್ದಧ್ಯೌ ಶೋಕಪರಿಪ್ಲುತಃ ॥1॥

ವೈಶಂಪಾಯನ ಮಹಾರಾಜನೇ ! ದೇವರ್ಷಿಗಳಾದ ನಾರದರು ಯುಧಿಷ್ಠಿರ- ನಿಗೆ ಕರ್ಣನ ವೃತ್ತಾಂತವನ್ನು ಇಷ್ಟು ತಿಳಿಸಿ ಸುಮ್ಮನಾದರು. ಆಗ ರಾಜರ್ಷಿಯಾದ
ಯುಧಿಷ್ಠಿರನು ದುಃಖದಿಂದ ವ್ಯಾಕುಲಗೊಂಡವನಾಗಿ ಕರ್ಣನನ್ನು ಕೊಂದುದರ ಬಗ್ಗೆ ಯೋಚಿಸುತ್ತಿದ್ದನು.

ತಂ ದೀನಮನಸಂ ವೀರಮಧೋವದನಮಾತುರಮ್ |
ನಿಃಶ್ವಸಂತಂ ಯಥಾ ನಾಗಂ ಪರ್ಯಶ್ರುನಯನಂ ತಥಾ ॥2॥
ಕುಂತೀ ಶೋಕಪರಿತಾಂಗೀ ದುಃಖೋಪಹತಚೇತನಾ |
ಅಬ್ರುವೀನ್ಮಧುರಾಭಾಷಾ ಕಾಲೇ ವಚನಮರ್ಥವತ್ ॥3॥

ಚಿಂತಿಸುತ್ತಿರುವ ಆ ಸಂದರ್ಭದಲ್ಲಿ ಯುಧಿಷ್ಠಿರನು ದೈನ್ಯಾವಸ್ಥಿತಿಯನ್ನು ಹೊಂದಿದ್ದನು. ಮತ್ತು ದುಃಖದಿಂದ ಪರಿತಪಿಸುತ್ತಿದ್ದನು. ಹಾವಿನಂತೆ ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಿದ್ದನು. ಕಣ್ಣುಗಳಿಂದ ಅಶ್ರುಬಿಂದುಗಳು ಬೀಳುತ್ತಿದ್ದವು. ಇಂಥ ಸ್ಥಿತಿಯಲ್ಲಿರುವ ಧರ್ಮರಾಜನನ್ನು ನೋಡಿ, ಕುಂತಿಗೆ ಬಹಳ ದುಃಖವಾಯಿತು. ಆಗ ಸಮಯೋಚಿತವಾದ ಮೃದುವಾದ ಮಾತುಗಳಿಂದ ಆ ಯುಧಿಷ್ಠಿರನಿಗೆ ಹೀಗೆ ಅರ್ಥಪೂರ್ಣವಾದ ಮಾತುಗಳಿಂದ ಸಾಂತ್ವನವನ್ನು ಹೇಳಿದಳು.

ಯುಧಿಷ್ಠಿರ ಮಹಾಬಾಹೋ ನೈನಂ ಶೋಚಿತುಮರ್ಹಸಿ |
ಜಹಿ ಶೋಕಂ ಮಹಾಪ್ರಾಜ್ಞ ಶೃಣು ಚೇದಂ ವಚೋ ಮಮ ॥4॥

ಯುಧಿಷ್ಠಿರನೇ! ಮಹಾಬಾಹುವೇ! ಅತ್ಯಂತ ಮೇಧಾವಿ ಕರ್ಣನ ವಿಷಯದಲ್ಲಿ ಇಷ್ಟೊಂದು ದುಃಖಿಸುವ ಅವಶ್ಯಕತೆಯಿಲ್ಲ. ದುಃಖವನ್ನು ಪರಿತ್ಯಾಗ ಮಾಡು. ನನ್ನ ಮಾತನ್ನು ಶ್ರದ್ಧೆಯಿಂದ ಕೇಳು.

ಯತಿತಃ ಸ ಮಯಾ ಪೂರ್ವಂ ಭ್ರಾತ್ರ್ಯಂ ಜ್ಞಾಪಯಿತುಂ ತವ |
ಭಾಸ್ಕರೇಣ ಚ ದೇವೇನ ಪಿತ್ರಾ ಧರ್ಮಭೃತಾಂ ವರ ॥5॥

ಓ ಧರ್ಮಮೂರ್ತಿಗಳಲ್ಲಿ ಶ್ರೇಷ್ಠನಾದವನೇ! ಹಿಂದೆಯೇ ನಾನು ನಿನ್ನ ಸಹೋ- ದರನಾದ ಕರ್ಣನಿಗೆ ಈ ಎಲ್ಲಾ ವಿಷಯವನ್ನು ಹೇಳಿದ್ದೆ. ನಿಮ್ಮಲ್ಲಿ ಸಹೋದರ ಭಾವವನ್ನು ಹೊಂದಿ, ಬದುಕಲು ಉಪದೇಶಿಸಿದ್ದೆ. ನಾನಷ್ಟೇ ಅಲ್ಲದೇ ಅವನ ತಂದೆಯಾದ ಸೂರ್ಯದೇವನೂ ಕೂಡ ನಿಮ್ಮ ಜೊತೆ ಸಹೋದರಭಾವದಿಂದ ಬದುಕಬೇಕೆಂದು ಬುದ್ಧಿ ಹೇಳಿದ್ದನು.

ಯದ್ವಾಚ್ಯಂ ಹಿತಕಾಮೇನ ಸುಹೃದಾ ಭೂತಿಮಿಚ್ಛತಾ |
ತಥಾ ದಿವಾಕರೇಣೋಕ್ತಃ ಸ್ವಪ್ನಾಂತೇ ಮಮ ಚಾಗ್ರತಃ ॥6॥

ಹಿತವನ್ನು ಅಪೇಕ್ಷಿಸುವ ಆಪ್ತಮಿತ್ರನು ತನ್ನ ನೆಚ್ಚಿನ ಸ್ನೇಹಿತರಿಗೆ ಹೇಗೆ ಹಿತವನ್ನೇ ಹೇಳುತ್ತಾನೋ, ಅದರಂತೆ ತಂದೆಯಾದ ಸೂರ್ಯನೂ ಕೂಡ ನನ್ನ ಮುಂದೆಯೇ ಅವನಿಗೆ ಹಿತನುಡಿಗಳನ್ನು ಹೇಳಿದ್ದನು. ಅಷ್ಟೇ ಅಲ್ಲದೇ ಸ್ವಪ್ನದಲ್ಲಿಯೂ ಕೂಡ ಬಂದು ಅವನಿಗೆ ಬುದ್ಧಿ ಹೇಳಿದ್ದನು.

ನಚೈನಮಶಕದ್ ಭಾನುರಹಂ ವಾ ಸ್ನೇಹಕಾರಣೈಃ |
ಪುರಾ ಪ್ರತ್ಯನುನೇತುಂ ವಾ ನೇತುಂ ವಾಪ್ಯೇಕತಾಂ ತ್ವಯಾ ॥7॥

ಆದರೆ ಕರ್ಣನು ಮಾತ್ರ ನನ್ನ ಮಾತನ್ನು, ಅಥವಾ ಸೂರ್ಯದೇವನ ಮಾತನ್ನು ಕೇಳಲಿಲ್ಲ. ದುರ್ಯೋಧನನ ಮೇಲೆ ಅವನಿಗೆ ಗಾಢವಾದ ಸ್ನೇಹವಿತ್ತು. ಆದ್ದರಿಂದ ಆ ಕರ್ಣನನ್ನು ನಿಮ್ಮ ಜೊತೆ ಸೇರಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಸೂರ್ಯ- ನಿಂದಲೂ ಕೂಡ ಸಾಧ್ಯವಾಗಲಿಲ್ಲ.

ತತಃ ಕಾಲಪರೀತಃ ಸ ವೈರಸ್ಯೋದ್ಧರಣೇ ರತಃ |
ಪ್ರತೀಪಕಾರೀ ಯುಷ್ಮಾಕಮಿತಿ ಚೋಪೇಕ್ಷಿತೋ ಮಯಾ ॥8॥

ಅನಂತರ ಕಾಲಪ್ರೇರಿತನಾದ ಕರ್ಣನು ನಿಮ್ಮ ಜೊತೆ ಸ್ನೇಹ ಮಾಡುವುದಿರಲಿ, ವೈರವನ್ನೇ ಹೆಚ್ಚು ಹೆಚ್ಚು ಬೆಳೆಸಿದನು. ಅದರಲ್ಲೇ ಆಸಕ್ತನಾದನು. ನಿಮಗೆ ಪ್ರತೀಕಾರ ಮಾಡುವುದರಲ್ಲೇ ಆಸಕ್ತನಾದನು. ಆದ್ದರಿಂದ ಅವನ ಈ ದುಷ್ಟಗುಣಗಳನ್ನು ಕಂಡು ನಾನು ಅವನನ್ನು ಉಪೇಕ್ಷೆ ಮಾಡಿದನು.

ಇತ್ಯುಕ್ತೋ ಧರ್ಮರಾಜಸ್ತು ಮಾತ್ರಾ ಬಾಷ್ಪಾಕುಲೇಕ್ಷಣಃ |
ಉವಾಚ ವಾಕ್ಯಂ ಧರ್ಮಾತ್ಮಾ ಶೋಕವ್ಯಾಕುಲಚೇತನಃ |
ಭವತ್ಯಾ ಗೂಢಮಂತ್ರತ್ವಾತ್ ಪೀಡಿತೋಽಸ್ಮೀತ್ಯುವಾಚ ತಾಮ್ ॥9॥

ತಾಯಿಯಾದ ಕುಂತಿಯು ಇಷ್ಟು ಹೇಳಿದರೂ ಕೂಡ ಧರ್ಮರಾಜನಿಗೆ ಸಮಾಧಾನವಾಗಲಿಲ್ಲ. ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಬಹಳ ದುಃಖದಿಂದ ಆ ತಾಯಿಯನ್ನು ಕುರಿತು ಹೀಗೆ ಹೇಳುತ್ತಾನೆ - ಅಮ್ಮಾ ! ನೀನು ಈ ರಹಸ್ಯವನ್ನು ಮುಚ್ಚಿಟ್ಟು ನನಗೆ ಬಹಳ ಸಂಕಟವನ್ನು ಉಂಟುಮಾಡಿರುವಿ.

ಶಶಾಪ ಚ ಮಹಾತೇಜಾಃ ಸರ್ವಲೋಕೇಷು ಚ ಸ್ತ್ರಿಯಃ |
ನ ಗುಹ್ಯಂ ಧಾರಯಿಷ್ಯಂತೀತ್ಯತಿದುಃಖಸಮನ್ವಿತಃ ॥10॥

ಇಷ್ಟು ಹೇಳಿದ ಮಹಾತೇಜಸ್ವಿಯಾದ ಧರ್ಮರಾಜನು ತನ್ನ ದುಃಖವನ್ನು ತಡೆದುಕೊಳ್ಳಲಾಗದೇ, ಸಮಸ್ತ ಸ್ತ್ರೀಕುಲಕ್ಕೆ ಶಾಪವನ್ನು ನೀಡಿದನು. ``ಇನ್ನು ಮುಂದೆ ಪ್ರಪಂಚದಲ್ಲಿ ಯಾವ ಸ್ತ್ರೀಯರೂ ಕೂಡ ರಹಸ್ಯ ವಿಚಾರಗಳನ್ನು ಗುಟ್ಟಾಗಿ ಇಟ್ಟು- ಕೊಳ್ಳುವುದಿಲ್ಲ.

ಸ ರಾಜಾ ಪುತ್ರಪೌತ್ರಾಣಾಂ ಸಂಬಂಧಿಸುಹೃದಾಂ ತಥಾ |
ಸ್ಮರನ್ನುದ್ವಿಗ್ನಹೃದಯೋ ಬಭೂವಾಸ್ವಸ್ಥಚೇತನಃ ॥11॥

ಹೀಗೆ ಆ ಧರ್ಮರಾಜನು ಯುದ್ಧದಲ್ಲಿ ಮರಣವನ್ನು ಹೊಂದಿದ ತನ್ನ ಪುತ್ರ ಪೌತ್ರಾದಿಗಳನ್ನು ಮತ್ತೆ ಮತ್ತೆ ನೆನೆಸಿಕೊಂಡನು. ಉದ್ವಿಗ್ನವಾದ ಹೃದಯವುಳ್ಳವನಾಗಿ ಬಂಧುವರ್ಗದ ವಿಯೋಗದಿಂದ ಅತ್ಯಂತ ಅಸ್ವಸ್ಥನಾದನು.

ತತಃ ಶೋಕಪರೀತಾತ್ಮಾ ಸಧೂಮ ಇವ ಪಾವಕಃ |
ನಿರ್ವೇದಮಕರೋದ್ಧೀಮಾನ್ ರಾಜಾ ಸಂತಾಪಪೀಡಿತಃ ॥12॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಷಷ್ಠೋಽಧ್ಯಾಯಃ ॥

ಹೊಗೆಯಾಡುವ ಬೆಂಕಿಯಂತೆ ಮನಸ್ಸಿನ ಒಳಗೆ ಸಂಕಟದಿಂದ ಕುದಿಯುತ್ತಾ ರಾಜ್ಯದ ವಿಷಯದಲ್ಲಿ ಮತ್ತು ತನ್ನ ಜೀವನದ ಬಗ್ಗೆ ಜಿಹಾಸೆಯನ್ನು ಹೊಂದಿದನು.

ರಾಜಧರ್ಮಪರ್ವಕನ್ನಡಾನುವಾದದಲ್ಲಿ 6ನೆಯ ಅಧ್ಯಾಯವು ಮುಗಿಯಿತು.

*****

## 7. ಏಳನೆಯ ಅಧ್ಯಾಯ

ಯುಧಿಷ್ಠಿರನು ಕರ್ಣನ ವಧೆಯಿಂದ ಅತ್ಯಂತ ಖಿನ್ನನಾದನು. ತನ್ನ ಆತಂಕವನ್ನು ಅರ್ಜುನನ ಜೊತೆ ಪ್ರಕಟ ಪಡಿಸಿದನು. ರಾಜ್ಯವನ್ನು ಪರಿತ್ಯಾಗ ಮಾಡಿ, ಕಾಡಿಗೆ ಹೋಗುತ್ತೇನೆಂದು ತಿಳಿಸಿದನು.

ವೈಶಂಪಾಯನಃ

ಯುಧಿಷ್ಠಿರಸ್ತು ಧರ್ಮಾತ್ಮಾ ಶೋಕವ್ಯಾಕುಲಚೇತನಃ |
ಶುಶೋಚ ದುಃಖಸಂತಪ್ತಃ ಸ್ಮೃತ್ವಾ ಕರ್ಣಂ ಮಹಾರಥಮ್ ॥1॥

ವೈಶಂಪಾಯನರು ಜನಮೇಜಯರಾಜನೇ ! ಧರ್ಮಸ್ವರೂಪನಾದ ಆ ಯುಧಿಷ್ಠಿರನಿಗೆ ತನ್ನ ತಾಯಿಯು ಅಷ್ಟು ಬಗೆಯಲ್ಲಿ ಸಮಾಧಾನ ಮಾಡಿದರೂ ಕೂಡ ಸಮಾಧಾನವಾಗಲಿಲ್ಲ. ಮತ್ತಷ್ಟು ದುಃಖದಿಂದ ಕೊರಗುತ್ತಲೇ ಇದ್ದನು. ಮೃತನಾದ ಆ ಕರ್ಣನನ್ನು ಮತ್ತೆ ಮತ್ತೆ ನೆನೆಸಿಕೊಂಡು ದುಃಖದಿಂದ ಪರಿತಪಿಸಿ- ದನು.

ಆವಿಷ್ಟೋ ದುಃಖಶೋಕಾಭ್ಯಾಂ ನಿಃಶ್ವಸಂಶ್ಚ ಪುನಃಪುನಃ |
ದೃಷ್ಟ್ವಾರ್ಜುನಮುವಾಚೇದಂ ವಚನಂ ಶೋಕಕರ್ಶಿತಃ ॥2॥

ಬಹಳವಾದ ದುಃಖದಿಂದ ಹಾಗೂ ಶೋಕದಿಂದ ಪುನಃ ಪುನಃ ನಿಟ್ಟುಸಿರು ಬಿಡುತ್ತಾ ಪಕ್ಕದಲ್ಲಿ ಕುಳಿತ ಅರ್ಜುನನನ್ನು ಕಂಡು, ದುಃಖದ ಮಾತುಗಳನ್ನು ಹೀಗೆ ಹೇಳಿದನು -
ಯದ್ ಭೈಕ್ಷಮಾಚಾರಿಷ್ಯಾಮ ವೃಷ್ಣ್ಯಂಧಕಪುರೇ ವಯಮ್ |
ಜ್ಞಾತೀನ್ ನಿಷ್ಪುರುಷಾನ್ ಕೃತ್ವಾ ನೇಮಾಂ ಪ್ರಾಪ್ಸ್ಯಾಮ ದುರ್ಗತಿಮ್ ॥3॥
ಅರ್ಜುನನೇ! ಒಂದು ವೇಳೆ ನಾವು ಸರಿಯಾಗಿ ಯೋಚನೆಯನ್ನು ಮಾಡಿ, ವೃಷ್ಣ್ಯಂಧಕನಗರಗಳಲ್ಲಿ ಭಿಕ್ಷಾಟನೆಯನ್ನೇ ಮಾಡುತ್ತಿದ್ದರೆ ನಮ್ಮ ಜ್ಞಾತಿಬಂಧುಗಳನ್ನು ಹೀಗೆ ಕೊಲ್ಲುವ ಪರಿಸ್ಥಿತಿ ಬರುತ್ತಿರಲಿಲ್ಲ. ಅವರನ್ನೆಲ್ಲಾ ಕೊಂದು ನಾವು ಇಂಥ ಕೆಟ್ಟ ದುಸ್ಥಿತಿಗೆ ಈಡಾಗುತ್ತಿರಲಿಲ್ಲ.
ಅಮಿತ್ರಾ ನಃ ಸಮೃದ್ಧಾರ್ಥಾ ವೃತ್ತಾರ್ಥಾಃ ಕುರವಃ ಕಿಲ |
ಆತ್ಮಾನಮಾತ್ಮನಾ ಹತ್ವಾ ಕಿಂ ಧರ್ಮಫಲಮಾಪ್ನುಮಃ ॥4॥
ನಮ್ಮ ಶತ್ರುಗಳೆಲ್ಲರೂ ಕೃತಕೃತ್ಯರಾದರು. ಕ್ಷತ್ರಿಯ ಧರ್ಮವನ್ನು ಪರಿಪಾಲನೆ ಮಾಡಿ, ಪುಣ್ಯವನ್ನು ಗಳಿಸಿ ಉತ್ತಮಗತಿಯನ್ನು ಹೊಂದಿದರು. ಆದರೆ ನಾವು ಅದಕ್ಕೆ ವಿರುದ್ಧವಾಗಿ ನಮ್ಮನ್ನು ನಾವೇ ಕೊಂದು ಕೊಂಡೆವು. ಹೀಗಿರುವಾಗ ನಮ್ಮ ಧರ್ಮದ ಫಲವನ್ನು ಹೊಂದಲು ನಾವು ಹೇಗೆ ಸಾಧ್ಯ ?
ಟಿಪ್ಪಣಿ- ಅಮಿತ್ರಾ ನ ಸಮೃದ್ಧಾರ್ಥಾ ವೃತ್ತಾರ್ಥಾಃ ಕುರವಃ ಕಿಲ ಇತ್ಯತ್ರ ವೃತ್ತಾರ್ಥಾಃ ಪ್ರವೃತ್ತಸರ್ವಾರ್ಥಾಃ ಕುರವಃ ಅಮಿತ್ರಾಃ ಕಿಲ ಅಸ್ಮಾಭಿರ್ನಾಶಿತತ್ವಾತ್ ಸಮೃದ್ಧಾ ನ ಕಿಲ | ಏವಂಚ ಆತ್ಮನಾ ಆತ್ಮಾನಂ ಸ್ವಶರೀರಸಮಾನಂ ಕುರುವಂಶಂ ಹತ್ವಾ ಕಿಂ ಧರ್ಮಫಲಮಾಪ್ನುಮ ಇತಿ ಯೋಜನಾ ॥
ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಪೌರಸಮ್ |
ಧಿಗಸ್ತ್ವಮರ್ಷಂ ಯೇನೇಮಾಮಾಪದಂ ಗಮಿತಾ ವಯಮ್ ॥5॥
ಕ್ಷಾತ್ರಧರ್ಮಕ್ಕೆ ಧಿಕ್ಕಾರ! ಕ್ಷತ್ರಿಯರ ಸೇನಾಬಲಕ್ಕೆ ಧಿಕ್ಕಾರ! ಕ್ಷತ್ರಿಯರ ಪೌರುಷಕ್ಕೆ ಧಿಕ್ಕಾರ! ಆ ಸೇಡು ಸಿಟ್ಟುಗಳಿಗೂ ಧಿಕ್ಕಾರ! ಯಾವುದನ್ನು ಹೊಂದಿ ನಾವಿಂದು ಇಂಥ ಆಪತ್ತಿಗೆ ಗುರಿಯಾಗಿದ್ದೇವೆ.
ಸಾಧು ಕ್ಷಮಾ ದಮಃ ಶೌಚಮವೈರೋಧ್ಯಮಮತ್ಸರಃ |
ಅಹಿಂಸಾ ಸತ್ಯವಚನಂ ನಿತ್ಯಾನಿ ವನಚಾರಿಣಾಮ್ ॥6॥
ನಿಜವಾಗಿಯೂ ವನವಾಸದಲ್ಲಿರುವವರ ಕ್ಷಮೆಯೇ ಜಯಿಸುತ್ತದೆ. ಜಿತೇಂದ್ರಿ- ಯತ್ವ, ಶುಚಿತ್ವ ಬೇರೆಯವರಲ್ಲಿ ದ್ವೇಷಮಾತ್ಸರ್ಯಗಳಿಲ್ಲದಿರುವಿಕೆ, ಅಹಿಂಸೆ, ಸತ್ಯ ಇವುಗಳೇ ಶ್ರೇಷ್ಠವಾಗಿವೆ. ಮತ್ತು ನಿತ್ಯಧರ್ಮಗಳಾಗಿವೆ.
ವಯಂ ತು ಲೋಭಾನ್ಮೋಹಾಚ್ಚ ದಂಭಂ ಮಾನಂ ಚ ಸಂಶ್ರಿತಾಃ |
ಇಮಾಮವಸ್ಥಾಮಾಪನ್ನಾ ರಾಜ್ಯಲೇಶಬುಭುಕ್ಷಯಾ ॥7॥
ಆದರೆ ನಾವು ಲೋಭ, ಮೋಹ ಇವುಗಳಿಗೆ ತುತ್ತಾಗಿ ಡಂಭದಿಂದ ಮತ್ತು ದುರಭಿಮಾನದಿಂದ ಇಂಥ ದುರವಸ್ಥೆಯನ್ನು ಹೊಂದಿದ್ದೇವೆ.
ತ್ರೈಲೋಕ್ಯಸ್ಯಾಪಿ ರಾಜ್ಯೇನ ನಾಸ್ಮಾನ್ ಕಶ್ಚಿತ್ ಪ್ರಹರ್ಷಯೇತ್ |
ಬಾಂಧವಾನ್ನಿಹತಾನ್ ದೃಷ್ಟ್ವಾ ಪೃಥಿವ್ಯಾಮಾಮಿಷೈಷಿಣಃ ॥8॥
ಅರ್ಜುನನೇ! ಭೂಮಿಯ ಅಪೇಕ್ಷೆಯಿಂದ ನಮ್ಮ ಬಂಧುಗಳನ್ನು ನಾವು ನಮ್ಮ ಕೈಯ್ಯಾರೆ ಕೊಂದಿದ್ದೇವೆ. ಇಂಥ ನಮಗೆ ಮೂರು ಲೋಕಗಳ ಆಧಿಪತ್ಯವನ್ನೇ ಕೊಟ್ಟರೂ ನಮ್ಮನ್ನು ಸಂತೋಷ ಪಡಿಸಲು ಯಾರಿಗೂ ಸಾಧ್ಯವಿಲ್ಲ.
ತೇ ವಯಂ ಪೃಥಿವೀಹೇತೋರವಧ್ಯಾನ್ ಪೃಥಿವೀಸಮಾನ್ |
ಸಂಪರಿತ್ಯಜ್ಯ ಜೀವಾಮೋ ಹೀನಾರ್ಥಾ ಹತಬಾಂಧವಾಃ ॥9॥
ಭೂಮಿಯ ಆಸೆಯಿಂದ ಅನೇಕ ರಾಜರುಗಳನ್ನು ನಾವು ಕೊಂದಿದ್ದಾಯಿತು. ಯಾರನ್ನು ಕೊಲ್ಲಬಾರದೋ ಅವರನ್ನೆಲ್ಲಾ ಕೊಂದು, ಹಣವನ್ನು, ಸಂಪತ್ತನ್ನು, ಬಂಧುಗಳನ್ನು ಕಳೆದುಕೊಂಡು ನಾವಿಂದು ಬದುಕಬೇಕಾಗಿದೆ.
ಆಮಿಷೇ ಗೃಧ್ಯಮಾನಾನಾಮಶುಭಂ ವೈ ಶುನಾಮಿವ |
ಆಮಿಷಂ ಚೈವ ನೋ ನಷ್ಟಮಾಮಿಷಸ್ಯ ಚ ಭೋಜಿನಾಮ್ ॥10॥
ಒಂದು ಮಾಂಸದ ತುಂಡಿಗೆ ಆಸೆಪಟ್ಟು ಕಚ್ಚಾಡುವ ನಾಯಿಗಳಂತೆ ನಾವು ರಾಜ್ಯಕ್ಕಾಗಿ ಹೊಡೆದಾಡಿದ್ದೇವೆ. ಇಂಥ ಅಮಂಗಲಸ್ಥಿತಿಯನ್ನು ತಂದುಕೊಂಡಿದ್ದೇವೆ. ಆ ನಾಯಿಗಳು ತಮ್ಮೊಳಗೆ ಜಗಳವಾಡಿ ಗೆದ್ದಮೇಲೆ ಆಹಾರವನ್ನು ತಿಂದು ಸುಖ-ಪಡುತ್ತವೆ. ಆದರೆ ನಾವಿಂದು ಎಲ್ಲಾ ಬಂಧುಗಳನ್ನು ಕಳೆದುಕೊಂಡು ರಾಜ್ಯ- ಭೋಗವೂ ಕೂಡ ಇಷ್ಟವಿಲ್ಲದಂತಾಗಿದೆ. ಇದನ್ನು ಭೋಗಿಸಲು ನಮ್ಮಿಂದ ಸಾಧ್ಯವೇ ಇಲ್ಲ.
ಆಮಿಷಂ ಚೈವ ನೋ ನಷ್ಟಮಾಮಿಷಸ್ಯ ಚ ಭೋಜಿನಾಮ್ ಇತ್ಯತ್ರ ಆಮಿಷಸ್ಯ ಆಮಿಷಪ್ರಾಯಸ್ಯ ರಾಜ್ಯಸ್ಯ ಭೋಜಿನಾಂ ನಃ ಆಮಿಷಂ ಆಮಿಷಸ್ಥಾನೀಯಂ ರಾಜ್ಯಂ ನಷ್ಟಂ ಹತಬಂಧುಜನತ್ವಾತ್ ನಷ್ಟಪ್ರಾಯಮ್॥
ನ ಪೃಥಿವ್ಯಾ ಸಕಲಯಾ ನ ಸುವರ್ಣಸ್ಯ ರಾಶಿಭಿಃ |
ನ ಗವಾಶ್ವೇನ ಸರ್ವೇಣ ತೇ ತ್ಯಾಜ್ಯಾ ಯ ಇಮೇ ಹತಾಃ ॥11॥
ಈ ಸಮಗ್ರಭೂಮಿಯನ್ನು ಸುವರ್ಣದ ರಾಶಿಗಳನ್ನು ಗಜ, ತುರಗ ಇವುಗಳ ಸಮೂಹವನ್ನು ಪ್ರತಿಫಲವಾಗಿ ಪಡೆಯಬಹುದು. ಆದರೂ ಯಾರನ್ನು ಬಿಡಬಾರದೋ ಅಂಥವರೆಲ್ಲಾ ನಮ್ಮಿಂದ ಇಂದು ಹತರಾಗಿದ್ದಾರೆ.
ಸಂಯುಕ್ತಾಃ ಕಾಮಮನ್ಯುಭ್ಯಾಂ ಕ್ರೋಧಾಮರ್ಷಸಮನ್ವಿತಾಃ |
ಮೃತ್ಯುಯಾನಂ ಸಮಾರುಹ್ಯ ಗತಾ ವೈವಸ್ವತಕ್ಷಯಮ್ ॥12॥
ಆದರೆ ಅವರೆಲ್ಲರೂ ಕಾಮ ಮತ್ತು ಕ್ರೋಧಗಳಿಗೆ ವಶರಾಗಿದ್ದರು. ಹರ್ಷ ಮತ್ತು ಕ್ರೋಧಗಳಿಂದ ಕೂಡಿದ್ದರು. ಆದ್ದರಿಂದ ಅವರೆಲ್ಲರೂ

ಮೃತ್ಯುವೆಂಬ ವಾಹನವನ್ನು ಹತ್ತಿಕೊಂಡು ಯಮನ ಪಟ್ಟಣಕ್ಕೆ ಹೊರಟು ಹೋದರು.
ಬಹುಕಲ್ಯಾಣಮಿಚ್ಛಂತ ಈಹಂತೇ ಪಿತರಃ ಸುತಾನ್ |
ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ತಿತಿಕ್ಷಯಾ ॥13॥
ಪಿತೃಗಳು ತಮ್ಮ ತಪಸ್ಸಿನಿಂದ, ಬ್ರಹ್ಮಚರ್ಯದಿಂದ, ಸತ್ಯನಿಷ್ಠೆಯಿಂದ, ಕ್ಷಮೆ- ಯಿಂದ ಕೂಡಿದವರಿಗೆ ಅನೇಕ ವಿಧವಾದ ಕ್ಷೇಮಗಳನ್ನು ಮತ್ತು ಅಭ್ಯುದಯವನ್ನು ಉದ್ದೇಶಿಸಿ ಮಕ್ಕಳನ್ನು ಅಪೇಕ್ಷೆ ಪಡುತ್ತಾರೆ.
ಉಪವಾಸೈಸ್ತಥೇಜ್ಯಾಭಿರ್ವ್ರತಕೌತುಕಮಂಗಲೈಃ |
ಲಭಂತೇ ಮಾತರೋ ಗರ್ಭಾನ್ ಮಾಸಾನ್ ದಶ ಚ ಬಿಭ್ರತಿ ॥14॥
ಸ್ತ್ರೀಯರೂ ಕೂಡ ಉಪವಾಸ, ಯಾಗ, ಅನೇಕ ಬಗೆಯ ವ್ರತಗಳು, ವಿವಿಧ ಬಗೆಯ ಹರಕೆಗಳು, ನಾನಾವಿಧ ಮಂಗಳಕಾರ್ಯಗಳು ಇವುಗಳನ್ನೆಲ್ಲಾ ಆಚರಿಸಿ, ಸತ್ಪುತ್ರನು ಹುಟ್ಟಬೇಕೆಂಬ ಇಚ್ಛೆಯಿಂದ ಗರ್ಭವನ್ನು ಧರಿಸುತ್ತಾರೆ. ಹತ್ತು ತಿಂಗಳ ತನಕ ಆ ಗರ್ಭವನ್ನು ಜಾಗರೂಕತೆಯಿಂದ ರಕ್ಷಿಸುತ್ತಾರೆ.
ಯದಿ ಸ್ವಸ್ತಿ ಪ್ರಜಾಯಂತೇ ಜಾತಾ ಜೀವಂತಿ ವಾ ಯದಿ |
ಸಂಭಾವಿತಾ ಚಾಬಲಾಸ್ತೇ ದದ್ಯುರ್ಯದಿ ನಃ ಸುಖಮ್ |
ಇಹ ಚಾಮುತ್ರ ಚೈವೇತಿ ಕೃಪಣಾಃ ಫಲಹೇತುಕಾಃ ॥15॥
ಸಂತಾನವನ್ನು ಹೊಂದಬೇಕಾದರೆ ಇಚ್ಛೆ ಹೀಗಿರುತ್ತದೆ - ಕ್ಷೇಮದಿಂದ ಪ್ರಸವ- ವಾಗಬೇಕು. ಹುಟ್ಟಿದ ಮೇಲೆ ಆ ಮಗು ಆರೋಗ್ಯವಾಗಿ ಬದುಕಬೇಕು. ಚಿರಂಜೀವಿಯಾಗಿ ಬೆಳೆದು ಬಲಾಢ್ಯನಾಗಬೇಕು, ಲೋಕದಲ್ಲಿ ಗೌರವವನ್ನು ಪಡೆಯಬೇಕು. ಆಗಷ್ಟೇ ನಾವು ಇಹಲೋಕದಲ್ಲಿ, ಪರಲೋಕದಲ್ಲಿ ಸ್ವಲ್ಪವಾದರೂ ಸುಖವನ್ನು ಅನುಭವಿಸಲು ಸಾಧ್ಯ. ಹೀಗೆ ಬಹಳ ದೈನ್ಯದಿಂದ ತಂದೆ-ತಾಯಂದಿರು ಮಕ್ಕಳ ವಿಷಯದಲ್ಲಿ ಆಸೆಯನ್ನು ಹೊಂದಿರುತ್ತಾರೆ.
ಟಿಪ್ಪಣಿ - ಬಹುಕಲ್ಯಾಣಮಿಚ್ಛಂತ ಎಂಬ ಶ್ಲೋಕದಲ್ಲಿ ಮಕ್ಕಳನ್ನು ಪಡೆಯುವುದಕ್ಕೆ ತಂದೆಯಾದವನ ಶ್ರಮವನ್ನು ವರ್ಣಿಸಿ, `ಉಪವಾಸೈಃ' ಎಂಬ ಶ್ಲೋಕದಿಂದ ತಾಯಿಯ ಆಸೆ ಆಕಾಂಕ್ಷೆಗಳನ್ನು ವರ್ಣಿಸಿದ್ದಾರೆ. `ಯದಿ ಸ್ವಸ್ತಿ' ಎಂಬ ಶ್ಲೋಕದಿಂದ ಇಬ್ಬರ ಸಮಾನವಾದ ಆಕಾಂಕ್ಷೆಯನ್ನು ಹೇಳಿದ್ದಾರೆ.
ತಾಸಾಮಯಂ ಸಮಾರಂಭೋ ನಿವೃತ್ತಃ ಕೇವಲೋಽಫಲಃ |
ಯದಾಸಾಂ ನಿಹತಾಃ ಪುತ್ರಾ ಯುವಾನೋ ಮೃಷ್ಟಕುಂಡಲಾಃ ॥16॥
ಅಭುಕ್ತ್ವಾ ಪಾರ್ಥಿವಾನ್ ಭೋಗಾನೃಣಾನ್ಯನವದಾಯ ಚ |
ಪಿತೃಭ್ಯೋ ದೇವತಾಭ್ಯಶ್ಚ ಗತಾ ವೈವಸ್ವತಕ್ಷಯಮ್ ॥17॥
ಆದರೆ ಈಗ ನಮ್ಮ ಕುರುಕುಲದ ಸ್ತ್ರೀಯರಿಗೆ ಎಲ್ಲಾ ಆಸೆಗಳು ನಿಷ್ಫಲವಾಗಿವೆ. ತಮ್ಮ ಮಕ್ಕಳು ಒಳ್ಳೆಯ ಯೌವನವಂತರಾಗಿ, ಕುಂಡಲಾದ್ಯಭರಣಗಳನ್ನು ಧರಿಸಿ ತಮ್ಮ ಪರಾಕ್ರಮದಿಂದ ಯುದ್ಧವನ್ನು ಮಾಡಿ, ಅದೇ ಯುದ್ಧದಲ್ಲಿ ಮೃತರಾಗಿದ್ದಾರೆ. ಆ ರಾಜಕುಮಾರರು ತಮ್ಮ ತಂದೆ-ತಾಯಿಯಂದಿರ ಆಸೆಯನ್ನು ಪೂರೈಸದೇ ಮೃತರಾಗಿದ್ದಾರೆ. ಈ ರಾಜಕುಮಾರರು ಹುಟ್ಟಿ ರಾಜಭೋಗಗಳನ್ನು ಅನುಭವಿಸ- ಲಿಲ್ಲ. ಪಿತೃಗಳಿಗೂ ದೇವತೆಗಳಿಗೂ ತಾವು ಸಲ್ಲಿಸಬೇಕಾದ ಋಣವನ್ನು ತೀರಿಸಲಿಲ್ಲ. ತಾವು ಲೋಕದಲ್ಲಿ ಹುಟ್ಟಿದ್ದಕ್ಕೆ ಸಾರ್ಥಕ್ಯವೇ ಇಲ್ಲದಂತೆ ಯಮನ ಪುರಿಗೆ ಹೊರಟು ಬಿಟ್ಟರು.
ಟಿಪ್ಪಣಿ - ಪಿತೃಭ್ಯೋ ದೇವತಾಭ್ಯಾಶ್ಚ ಗತಾ ವೈವಸ್ವತಕ್ಷಯಮ್ ಇತ್ಯತ್ರ ಪಿತೃಭ್ಯೋ ದೇವತಾಭ್ಯಾಶ್ಚ ಋಣಾನಿ ಮನುಷ್ಯೇಭ್ಯಃ ಅನ್ನಂ ಚ ವಿಹಾಯ ವೈವಸ್ವತಕ್ಷಯಂ ಗತಾ ಇತಿ ಯೋಜನಾ ॥
ಪಿತೃಭ್ಯೋ ದೇವತಾಭ್ಯಾಶ್ಚ ಗತಾ ವೈವಸ್ವತಕ್ಷಯಮ್ ಎಂಬಲ್ಲಿ ಪಿತೃಗಳಿಗೆ, ದೇವತೆಗಳಿಗೆ ಋಣವನ್ನು ಪರಿಹರಿಸದೇ, ಮನುಷ್ಯರಿಗೆ ಅನ್ನವನ್ನು ನೀಡದೇ ಯಮ- ಪಟ್ಟಣವನ್ನು ಕುರಿತು ಹೊರಟು ಬಿಟ್ಟರು ಎಂಬುದಾಗಿ ಯೋಜನೆಯನ್ನು ಮಾಡಿ- ಕೊಳ್ಳಬೇಕು.
ವಿಶೇಷವಿಚಾರ - ನಮ್ಮ ಶತ್ರುಗಳು ಈ ಲೋಕಕ್ಕೆ ಬಂದು, ಪಿತೃಋಣ, ದೇವಋಣ, ಭೂತಋಣವನ್ನು ತೀರಿಸದೆ ಯಮನಪಟ್ಟಣಕ್ಕೆ ಹೋಗಿಬಿಟ್ಟರು ಎಂಬುದು ಈ ಶ್ಲೋಕದ ಭಾವ.
`ಋಣಾನಿ ಅನವಧಾಯ' ಎಂಬುದು ಒಂದು ಪಾಠ. `ಅನ್ನಂ ವಿಹಾಯ ಚ' ಎಂಬುದು ಮತ್ತೊಂದು ಪಾಠ. ಲಕ್ಷಾಲಂಕಾರದಲ್ಲಿ `ಅನ್ನಂ ವಿಹಾಯ ಚ' ಎಂಬ ಪಾಠವನ್ನೇ ವಿವಕ್ಷಿಸಿದ್ದಾರೆ.
`ಪಿತೃಭ್ಯಃ ದೇವತಾಭ್ಯಃ' ಎಂಬಲ್ಲಿ ಚತುರ್ಥೀವಿಭಕ್ತಿಯು ಷಷ್ಠ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂಬುದಾಗಿ ಕುಂಭಕೋಣಪ್ರತಿಯಲ್ಲಿ ವ್ಯಾಖ್ಯಾನವನ್ನು ಮಾಡಿದ್ದಾರೆ. ಆಗ ಅನವಧಾಯ ಎಂಬ ಪದಕ್ಕೆ `ತೀರಿಸದೆ' ಎಂಬರ್ಥವನ್ನು ಹೇಳಿದಂತಾಗುತ್ತದೆ. ಆದರೆ ಲಕ್ಷಾಲಂಕಾರದಲ್ಲಿ ಚತುರ್ಥೀವಿಭಕ್ತಿಗೆ ಷಷ್ಠ್ಯರ್ಥ- ವನ್ನು ವಿವಕ್ಷಿಸುವ ಅವಶ್ಯಕತೆಯಿರುವುದಿಲ್ಲ. ವಿಹಾಯ ಎಂಬ ಅವ್ಯಯವನ್ನು ಸೇರಿಸಿದ್ದರಿಂದ `ಪಿತೃಭ್ಯಃ ದೇವತಾಭ್ಯಃ' ಎಂಬಲ್ಲಿರುವ ಚತುರ್ಥೀವಿಭಕ್ತ್ಯರ್ಥವನ್ನೇ ವಿವಕ್ಷಿಸಿದ್ದಾರೆ. ಆದರೆ `ಅನವಧಾಯ' ಎಂಬ ಪದವನ್ನು ವಿವಕ್ಷಿಸದೇ `ಅನ್ನಂ ವಿಹಾಯ' ಎಂಬ ಪಾಠವನ್ನು ವಿವಕ್ಷಿಸಿದಾಗ ಮಾತ್ರ ಹೀಗೆ ವ್ಯಾಖ್ಯಾನ ಮಾಡಲು ಸಾಧ್ಯ.
ಚತುರ್ಥ್ಯಾದ್ಯವಿಭಕ್ತಿಗಳ ಅರ್ಥದಲ್ಲಿ ಷಷ್ಠೀವಿಭಕ್ತಿಯನ್ನು ಪ್ರಯೋಗಿಸು- ವುದು ಕಾಣಿಸುತ್ತದೆ. ಆದರೆ ಷಷ್ಠ್ಯರ್ಥದಲ್ಲಿ ಚತುರ್ಥ್ಯಯದಿವಿಭಕ್ತಿಗಳನ್ನು ಪ್ರಯೋಗಿಸುವುದು ಶಾಸ್ತ್ರಗಳಲ್ಲಿ ಹೆಚ್ಚಾಗಿ ಕಾಣಿಸುವುದಿಲ್ಲ. ಆದ್ದರಿಂದ ಲಕ್ಷಾ- ಲಂಕಾರದ ಪಾಠದ ಪ್ರಕಾರ ವ್ಯಾಖ್ಯಾನ ಮಾಡುವುದು ಇಲ್ಲಿ ಸೂಕ್ತವಾಗಿ ಕಾಣಿಸು- ತ್ತದೆ.
ಯದೈಷಾಮಂಗ ಪಿತರೌ ಜಾತೌ ಕಾಮಮಯಾವಿವ |
ಸಂಜಾತಧನರತ್ನೇಷು ತದೈವ ನಿಹತಾ ನೃಪಾಃ ॥18॥
ಆ ರಾಜಕುಮಾರರ ತಂದೆ, ತಾಯಿಯರು ತಮ್ಮ ಮಕ್ಕಳು ಸಂಪಾದನೆ ಮಾಡುವ ಧನಗಳನ್ನು, ರತ್ನಗಳನ್ನು ಉಪಭೋಗಿಸಬೇಕೆಂಬ ಆಸೆಯನ್ನು ಹೊಂದಿ- ದ್ದರು. ಆದರೆ ಆಸೆಯನ್ನು ಈಡೇರಿಸುವಷ್ಟರಲ್ಲಿಯೇ ಯುದ್ಧದಲ್ಲಿ ಮೃತರಾಗಿಬಿಟ್ಟರು.
ಪಾಠಾಂತರದ ಬಗ್ಗೆ - ದಾಕ್ಷಿಣಾತ್ಯಪಾಠದ ಕೆಲವು ಪುಸ್ತಕಗಳಲ್ಲಿ ಹೀಗೆ ಪಾಠ- ವಿದೆ-

ಯದೇವಾಂಶಾ ಚ ಪಿತರೌ ಜಾತಕರ್ಮಕರಾವಿವ |
ಸಂಜಾತಬಾಲರೂಪೇಷು ತದೇವ ನಿಹತಾ ನೃಪಾಃ ॥
ತಂದೆ, ತಾಯಿಗಳು ಬಾಲ್ಯದಲ್ಲಿ ಜಾತಕರ್ಮವನ್ನು ಮಕ್ಕಳಿಗೆ ಮಾಡಿದರು. ಆದರೆ ಅಷ್ಟರಲ್ಲಿಯೇ ತಾವೇ ಮೃತರಾಗಿಬಿಟ್ಟರು. ಹಿಂದಿನ ಶ್ಲೋಕಗಳಲ್ಲಿ ತಂದೆ, ತಾಯಿಗಳು ಶಿಶುಗರ್ಭದಲ್ಲಿದ್ದಾಗ ಯಾವ ಭಾವನೆಯನ್ನು ಹೊಂದಿರುತ್ತಾರೆಂದು ತಿಳಿಸಲಾಯಿತು. ಈ ಶ್ಲೋಕದಲ್ಲಿ ಹುಟ್ಟಿದ ಮಕ್ಕಳಿಗೆ ಜಾತಕರ್ಮವನ್ನು ಮಾಡಿ, ಹತಾಶರಾದರು ಎಂದು ತಿಳಿಸಲಾಗಿದೆ. ಆದ್ದರಿಂದ ಈ ಪಾಠದಲ್ಲಿ ಹಿಂದಿನ ಶ್ಲೋಕಗಳಲ್ಲಿ ಹೆಚ್ಚಿನ ಸ್ವಾರಸ್ಯವು ಕಾಣಿಸುತ್ತದೆ.
ಸಂಯುಕ್ತಾಃ ಕಾಮಮನ್ಯುಭ್ಯಾಂ ಕ್ರೋಧಹರ್ಷಾಸಮಂಜಸಾಃ |
ನ ತೇ ಜನ್ಮಫಲಂ ಕಿಂಚಿದ್ ಭೋಕ್ತಾರೋ ಜಾತು ಕರ್ಹಿಚಿತ್ ॥22॥
ಕಾಮ ಮತ್ತು ಕ್ರೋಧಗಳಿಗೆ ತುತ್ತಾಗಿ ಕ್ರೋಧ ಮತ್ತು ಹರ್ಷಗಳ ಸಮತೋಲನವನ್ನು ಯಾರು ಕಳೆದುಕೊಂಡರೋ, ಅಂಥವರು ವಿಜಯದ ಆಸೆಯನ್ನು ಹೊಂದಲು ಯಾವಾಗಲೂ ಸಾಧ್ಯವಿಲ್ಲ ಎಂದೂ ಸಹ ಜಯಫಲವನ್ನು ಅವರು ಅನುಭವಿಸುವುದಿಲ್ಲ.
ವಿವರಣೆ - ಅರ್ಥದ ಅಭಿಲಾಷೆಯನ್ನು ಕಾಮವೆಂದು, ಅರ್ಥವು ದೊರೆ- ಯದಿದ್ದಾಗ ಉಂಟಾಗುವ ದೈನ್ಯವನ್ನು ಮನ್ಯುವೆಂದು, ಕಾಮದ ತಡೆಯುವಿಕೆ- ಯಿಂದ ಉಂಟಾಗುವ ತಾಪವನ್ನೇ ಕ್ರೋಧವೆಂದು, ಅರ್ಥದ ಅಭಿಲಾಷೆಯು ಪೂರ್ಣವಾದಾಗ ಉಂಟಾಗುವ ಉಲ್ಲಾಸವನ್ನೇ ಹರ್ಷವೆಂದು ಇಲ್ಲಿ ವ್ಯಾಖ್ಯಾನ- ದಲ್ಲಿ ಪರಿಗಣಿಸಲಾಗಿದೆ. ಇವುಗಳಿಂದ ಯಾರ ಮನಸ್ಸು ಸಮತೋಲನವನ್ನು ಕಳೆದುಕೊಂಡು ವಿಕಾರಕ್ಕೆ ಈಡಾಗುತ್ತದೋ, ಅಂಥ ಮನುಷ್ಯನಿಗೆ ವಿಜಯದ ಫಲ ದೊರೆಯಲು ಸಾಧ್ಯವಿಲ್ಲ ಎಂಬುದು ಶ್ಲೋಕದ ಅಭಿಪ್ರಾಯ.
ಪಾಂಚಾಲಾನಾಂ ಕುರೂಣಾಂ ಚ ಹತಾ ಏವ ಹಿ ಯೇಽಹತಾಃ|
ತೇ ವಯಂ ತ್ವಧಮಾಂಲ್ಲೋಕಾನ್ ಪ್ರಪದ್ಯೇಮ ಸ್ವಕರ್ಮಭಿಃ |
(ನ ಸಕಾಮಾ ವಯಂ ತೇ ನಚಾಸ್ಮಾಭಿರ್ನ ತೈರ್ಜಿತಮ್) ॥23॥
ಪಾಂಚಾಲರಲ್ಲಿ ಮತ್ತು ಕುರುಗಳಲ್ಲಿ ಯಾರು ಮರಣವನ್ನು ಹೊಂದಿದರೋ, ಅವರು ನಿಜವಾಗಿಯೂ ಕೂಡ ಹತರಾಗಲಿಲ್ಲ. ಸ್ವರ್ಗವನ್ನು ಮತ್ತು ಸತ್ಕೀರ್ತಿ- ಯನ್ನು ಪಡೆದು ಅಮರರಾದರು. ಆದರೆ ಅವರನ್ನು ಸಂಹಾರ ಮಾಡಿದ ನಾವು ಮಾತ್ರ ಈ ಬಂಧುಜನ ವಧೆ ಎಂಬ ಕೆಟ್ಟಕರ್ಮದ ಫಲವಾಗಿ ಅಧಮಲೋಕಗಳನ್ನು ಹೊಂದುವವರಿದ್ದೇವೆ.
ಪಾಠಾಂತರದ ಬಗ್ಗೆ - ಕೆಲವು ಪುಸ್ತಕಗಳಲ್ಲಿ `ಹತಾ ಏವ ಹಿ ಯೇ ಹತಾಃ' ಎಂಬ ಪಾಠವಿದೆ. ಈ ಪಾಠದ ಪ್ರಕಾರ ತಾತ್ಪರ್ಯವನ್ನು ಹೀಗೆ ತಿಳಿಯಬೇಕು. ಯಾವ ಕೌರವರು ಹಾಗೂ ಪಾಂಚಾಲರು ಹತರಾದರೋ, ಅವರು ಸಂಪೂರ್ಣವಾಗಿ ನಾಶವನ್ನೇ ಹೊಂದಿದರು. ಒಂದುವೇಳೆ ಅವರು ಯುದ್ಧದಲ್ಲಿ ಹತರಾಗದಿದ್ದರೆ, ತಮ್ಮ ಜೀವನದಲ್ಲಿ ಮುಂದೆ ಉಚ್ಛ್ರಾಯಸ್ಥಿತಿಯಲ್ಲಿ ಇರುತ್ತಿದ್ದರು.
ಈ ಪಾಠದ ಪ್ರಕಾರ ಉತ್ತರಾರ್ಧದಲ್ಲಿ `ನ ಚೇತ್ ಸರ್ವಾನಯಂ ಲೋಕಃ ಪಶ್ಯೇತ್ ಸ್ವೇನೈವ ಕರ್ಮಣಾ' ಎಂದಿರುತ್ತದೆ. ಹಿಂದಿನ ಅರ್ಥದ ಜೊತೆ ಈ ಅರ್ಥವು ಹೊಂದಾಣಿಕೆಯಾಗುವುದರಿಂದ ಈ ಪಾಠದಲ್ಲಿ ಹೆಚ್ಚಿನ ಸ್ವಾರಸ್ಯವಿದೆ ಎಂದು ಭಾಸವಾಗುತ್ತದೆ.
ಪಾಂಚಾಲಾನಾಂ ಕುರೂಣಾಂ ಚ ಇತ್ಯತ್ರ ಪಾಂಚಾಲಾನಾಂ ಕುರೂಣಾಂ ಚ ಮಧ್ಯೇ ಯೇ ಹತಾಃ ತೇ ಹತಾ ಏವ, ಐಹಿಕಫಲಸ್ಯ ಈಷದಪ್ಯನನುಭವಾತ್ | ನ ಸಕಾಮಾ ವಯಂ ತೇ ಚ ಇತ್ಯತ್ರ ವಯಮಪಿ ಸಕಾಮಾ ನ ಭವಾಮಃ, ಪುತ್ರಪೌತ್ರಾದೀನಾಂ ನಷ್ಟತ್ವಾತ್ | ತೇ ಕುರುಪಾಂಚಾಲಾಸ್ತು ಮೃತತ್ವಾದೇವ ಸಕಾಮಾ ನ | ತೈರಪಿ ನ ಜಿತಮ್ | ಅಸ್ಮಾಭಿರಪಿ ಬಂಧೂನಾಮೇವ ವಧಾತ್ ನ ಜಿತಮ್ | ಶತ್ರುಜಯೋ ಹಿ ಜಯಃ ಬಂಧುಜಯಸ್ತು ನೈವ ಜಯ ಇತಿ ಭಾವಃ ॥
`ಪಾಂಚಾಲಾನಾಂ ಕುರೂಣಾಂ ಚ' ಎಂಬಲ್ಲಿ ಪಾಂಚಾಲರಲ್ಲಿ ಹಾಗೂ ಕುರುವಂಶದವರ ಮಧ್ಯದಲ್ಲಿ ಯಾರು ಹತರಾದರೋ, ಅವರು ಸಂಪೂರ್ಣವಾಗಿಯೇ ಹತವಾದರು. ಐಹಿಕಫಲವನ್ನು ಸ್ವಲ್ಪವೂ ಸಹ ಅನುಭವಿಸಲಿಲ್ಲ. ಸ್ವಲ್ಪವೂ ಸಹ ತಮ್ಮ ಅಭಿಲಾಷೆಗಳನ್ನು ಈಡೇರಿಸಿಕೊಳ್ಳಲಿಲ್ಲ. ನಾವೂ ಸಹ ನಮ್ಮ ಅಭಿಲಾಷೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗಲಿಲ್ಲ. ಏಕೆಂದರೆ ನಾವು ಗೆದ್ದರೂ ಕೂಡ ನಮ್ಮ ಮಕ್ಕಳು ಹಾಗೂ ಮೊಮ್ಮಕ್ಕಳು ಮೃತರಾಗಿದ್ದಾರೆ. ಆ ಕುರುಪಾಂಚಾಲರು ಮರಣವನ್ನು ಹೊಂದಿ- ರುವುದರಿಂದಲೇ ತಮ್ಮ ಅಭಿಲಾಷೆಗಳನ್ನು ಈಡೇರಿಸಿಕೊಳ್ಳಲು ಅಸಮರ್ಥರಾಗಿದ್ದಾರೆ. ಆದ್ದರಿಂದ ಅವರೂ ಕೂಡ ಗೆದ್ದಿಲ್ಲ. ನಾವೂ ಸಹ ಗೆಲ್ಲಲಿಲ್ಲ. ಶತ್ರುಗಳ ಜಯವೇ ನಿಜವಾದ ಜಯ. ಬಂಧುಜಯವನ್ನು ಯಾರೂ ಸಹ ಜಯವೆಂದು ಹೇಳುವುದಿಲ್ಲ ಎಂಬುದು ಶ್ಲೋಕದ ಅಭಿಪ್ರಾಯ.
ಲಕ್ಷಾಲಂಕಾರದ ಪ್ರಕಾರ `ಹತಾ ಏವ ಹಿ ಯೇ ಹತಾಃ' ಎಂಬ ಪಾಠವನ್ನು ವಿವಕ್ಷಿಸಬೇಕು. `ಹತಾ ಏವ ಹಿ ಯೇ ಅಹತಾ' ಎಂಬ ಪಾಠಕ್ಕಿಂತ ಈ ಪಾಠದಲ್ಲಿರುವ ಹೆಚ್ಚಿನ ಸ್ವಾರಸ್ಯವನ್ನೂ ಕೂಡ ಗಮನಿಸಬೇಕು.
ವಯಮೇವಾಸ್ಯ ಲೋಕಸ್ಯ ವಿನಾಶೇ ಕಾರಣಂ ಸ್ಮೃತಾಃ |
ಧೃತರಾಷ್ಟ್ರಸ್ಯ ಪುತ್ರೇಣ ನಿಕೃತಿಪ್ರೀತಿಸಂಯುತಃ (ನಿಕೃತ್ಯಾಪ್ರತ್ಯಪತ್ಸ್ಮಹಿ) ॥24॥
ಅರ್ಜುನನೇ! ಇವರೆಲ್ಲರ ನಾಶಕ್ಕೆ ನಾವೇ ಕಾರಣರೆಂಬ ಭಾವನೆ ನನಗಿರುವುದು ನಿಜ. ಆದರೆ ವಿಚಾರ ಮಾಡಿದಾಗ ಈ ಇವರೆಲ್ಲರ ನಾಶಕ್ಕೆ ಧೃತರಾಷ್ಟ್ರನ ಮಗನಾದ ದುರ್ಯೋಧನನ ಕಪಟವೇ ಕಾರಣವೆಂದು ನಾನು ತಿಳಿದಿದ್ದೇನೆ.
ವಿವರಣೆ - ವಿನಾಶದ ಕಾರಣಕ್ಕೆ ಆ ಧೃತರಾಷ್ಟ್ರನ ಮಗನಾದ ದುರ್ಯೋ- ಧನನ ಕಪಟವೇ ಕಾರಣವೆಂದು ನನಗೆ ತಿಳಿದಿದೆ. ಅವನೇ ನಿಜವಾದ ಮುಖ್ಯ- ಕಾರಣ. ನಾವು ಅಮುಖ್ಯಕಾರಣರಾಗಿದ್ದೇವೆ ಎಂಬುದು ಶ್ಲೋಕದ ಭಾವ.
ಧೃತರಾಷ್ಟ್ರಸ್ಯ ಪುತ್ರೇಣ ಇತ್ಯತ್ರ ಧೃತರಾಷ್ಟ್ರಸ್ಯ ಪುತ್ರೇಣ ಕಾರಣೇನ ವಯಮೇವಾಸ್ಯ ಲೋಕಸ್ಯ ವಿನಾಶೇ ಕಾರಣಂ ಸ್ಮೃತಾ ಇತಿ ಯೋಜನಾ | ತಸ್ಯ ಧೃತರಾಷ್ಟ್ರಪುತ್ರಸ್ಯ ದುರ್ಗುಣಾನಾಹ - ನಿಕೃತಿಪ್ರೀತಿಸಂಯುತ ಇತ್ಯಾದಿನಾ ॥ `ಧೃತರಾಷ್ಟ್ರಸ್ಯ ಪುತ್ರೇಷು' ಇತಿ ಪಾಠೇ ಧೃತರಾಷ್ಟ್ರಪುತ್ರಾಣಾಂ ಮಧ್ಯೇ ಜ್ಯೇಷ್ಠೋ ದುರ್ಯೋಧನಃ ನಿಕೃತ್ಯಾಂ ಕಪಟೇ ಪ್ರೀತಿಸಂಯುತ ಇತ್ಯಾದಿಯೋಜನಾ ॥
ಧೃತರಾಷ್ಟ್ರನ ಮಗನಾದ ದುರ್ಯೋಧನನಿಂದಾಗಿ ನಾವೇ ಈ ಲೋಕನಾಶಕ್ಕೆ ಕಾರಣರಾಗಿದ್ದೇವೆಂದು ತಿಳಿಯುತ್ತದೆ. ಧೃತರಾಷ್ಟ್ರನ ಮಗನಲ್ಲಿರುವ ದುರ್ಗುಣವನ್ನು `ನಿಕೃತಿಪ್ರೀತಿಸಂಯುತ' ಎಂಬುದರಿಂದ ಹೇಳಿದ್ದಾರೆ. ಕೆಲವು ಪುಸ್ತಕಗಳ ಪ್ರಕಾರ `ಧೃತರಾಷ್ಟ್ರಸ್ಯ

ಪುತ್ರೇಷು' ಎಂಬ ಪಾಠವಿದೆ. ಧೃತರಾಷ್ಟ್ರನ ಮಕ್ಕಳಲ್ಲಿ ದುರ್ಯೋಧನನು ಜ್ಯೇಷ್ಠನಾಗಿದ್ದಾನೆ. ಕಪಟದಲ್ಲಿ ಪ್ರೀತಿಯನ್ನು ಇವನು ಹೊಂದಿದ್ದಾನೆಂಬುದು ಇದರ ಅಭಿಪ್ರಾಯ.
ವಿವರಣೆ - `ನಿಕೃತ್ಯಾ ಪ್ರತ್ಯಪತ್ಸ್ಮಹಿ' ಎಂಬ ಪಾಠವನ್ನು ಮೂಲದಲ್ಲಿ ಕಾಣುತ್ತೇವೆ. ದುರ್ಯೋಧನನ ಕಪಟವೇ ಕಾರಣವೆಂದು ತಿಳಿಯುತ್ತೇನೆಂಬುದು ಇದರ ಅಭಿಪ್ರಾಯ. ಆದರೆ `ನಿಕೃತಿ ಪ್ರೀತಿಸಂಯುತ' ಎಂಬುದು ಟಿಪ್ಪಣಿಯ ಪಾಠ. ದುರ್ಯೋಧನನು ಮೇಲ್ನೋಟಕ್ಕೆ ಪ್ರೀತಿ ಮಾಡುತ್ತಿದ್ದ. ಆದರೆ ಅವನ ಪ್ರೀತಿಯಲ್ಲಿ ಕಪಟವೇ ತುಂಬಿತ್ತು ಎಂಬುದು ಇದರ ಅಭಿಪ್ರಾಯ. ಈ ಪಾಠದಲ್ಲಿ ಹೆಚ್ಚು ಸ್ವಾರಸ್ಯ ಕಾಣಿಸುತ್ತದೆ.
ಸದೈವ ನಿಕೃತಿಪ್ರಜ್ಞೋ ದ್ವೇಷ್ಟಾ ಮಾಯೋಪಜೀವಿನಃ |
ಮಿಥ್ಯಾವೃತ್ತಃ ಸ ಸತತಮಸ್ಮಾಸ್ವನಪಕಾರಿಷು ॥25॥
ಆ ದುರ್ಯೋಧನನು ನಿರಂತರವಾಗಿ ನಮ್ಮ ವಿಷಯದಲ್ಲಿ ಕಪಟ ಬುದ್ಧಿಯನ್ನೇ ಮಾಡುತ್ತಿದ್ದನು. ದ್ವೇಷವನ್ನು ಸಾಧಿಸುತ್ತಿದ್ದನು. ವಂಚನೆಯ ಬುದ್ಧಿಯನ್ನು ಹೊಂದಿ- ದ್ದನು. ಮಿಥ್ಯಾಚಾರಿಯಾಗಿದ್ದನು. ನಮ್ಮ ವಿಷಯದಲ್ಲಿ ಅಪಕಾರವನ್ನೇ ಮಾಡುತ್ತಿ- ದ್ದನು.
ನ ಸಕಾಮಾ ವಯಂ ತೇ ಚ ನಚಾಸ್ಮಾಭಿರ್ನ ತೈರ್ಜಿತಮ್ |
ನ ತೈರ್ಭುಕ್ತೇಯಮವನಿರ್ನ ನಾರ್ಯೋ ಗೀತವಾದಿತಮ್ ॥19॥
ನಮ್ಮ ಕಾಮನೆಯು ಪೂರ್ಣವಾಗಲಿಲ್ಲ. ನಮ್ಮ ಶತ್ರುಗಳ ಕಾಮನೆಯೂ ಕೂಡ ಪೂರ್ಣವಾಗಲಿಲ್ಲ. ನಾವು ಜಯವನ್ನು ಗಳಿಸಲಿಲ್ಲ. ಅವರೂ ಸಹ ಜಯವನ್ನು ಗಳಿಸಲಿಲ್ಲ. ಈ ಭೂಮಂಡಲವನ್ನು ಅವರೂ ಕೂಡ ಭೋಗಿಸಲಿಲ್ಲ. ಸ್ತ್ರೀಯರನ್ನು ನಿರಾತಂಕವಾಗಿ ಉಪಭೋಗ ಮಾಡಲಿಲ್ಲ. ಆನಂದದಾಯಕವಾದ ಗೀತೆಗಳನ್ನು, ವಾದ್ಯಗಳನ್ನು ಕೇಳಲು ಸಾಧ್ಯವಾಗಲಿಲ್ಲ.
ಪಾಠಾಂತರದ ಬಗ್ಗೆ - ಕೆಲವು ಪುಸ್ತಕಗಳಲ್ಲಿ ಈ ಶ್ಲೋಕ ಹಾಗೂ ಮುಂದಿನ ಶ್ಲೋಕವು `ಯದೇಶಾಮಂಗಪಿತರೌ' ಎಂಬ ಶ್ಲೋಕದ ಅನಂತರ ಇರುತ್ತದೆ. ಆದರೆ ಪ್ರಕೃತದಲ್ಲೇ ಇದು ಹೆಚ್ಚು ಪ್ರಸಕ್ತವಾಗುತ್ತದೆ.
ನಾಮಾತ್ಯಸುಹೃದಾಂ ವಾಕ್ಯಂ ನಚ ಶ್ರುತವತಾಂ ಶ್ರುತಮ್ |
ನ ರತ್ನಾನಿ ಪರಾರ್ಘ್ಯಾನಿ ನ ಭೂರ್ನ ದ್ರವಿಣಾಗಮಃ ॥20॥
ನಾಮಾತ್ಯಯಸಮಿತೌ ಕಥ್ಯಂ ನಚ ಶ್ರುತವತಾಂ ಶ್ರುತಮ್ |
ನ ರತ್ನಾನಿ ಪರಾರ್ಘಯನಿ ನ ಭೂರ್ನ ದ್ರವಿಣಾಗಮಃ ॥27॥
ಅವರು ನಿರಂತರವಾಗಿ ಅಮಾತ್ಯರ ಮತ್ತು ಸ್ನೇಹಿತಜನರ ಹಿತವಾಕ್ಯಗಳನ್ನು ಕೇಳಲಿಲ್ಲ. ಶಾಸ್ತ್ರಜ್ಞರ ಉಪದೇಶಗಳನ್ನೂ ಕೂಡ ಕೇಳಿಸಿಕೊಳ್ಳಲಿಲ್ಲ. ಉತ್ತಮ ರತ್ನ- ಗಳನ್ನು, ದ್ರವ್ಯಗಳನ್ನು ಅನುಭವಿಸಲಿಲ್ಲ. ಅವರಿಗೆ ಬರುತ್ತಿದ್ದ ಅಪಾರವಾದ ಕಪ್ಪಕಾಣಿಕೆಗಳೂ ಕೂಡ ಆನಂದವನ್ನು ಉಂಟುಮಾಡಲಿಲ್ಲ.
`ನಾಮಾತ್ಯಸಮಿತೌ' ಇತ್ಯತ್ರ ಅಮಾತ್ಯಸಮಿತೌ ವಾಕ್ಯಂ ನೀತಿವಾಕ್ಯಂ ನಚ ಶ್ರುತಮ್ | ಶ್ರುತವತಾಂ ವಾಕ್ಯಮ್ ಅಧ್ಯಾತ್ಮವಾಕ್ಯಂ ಚ ನ ಶ್ರುತಮಿತಿ ಯೋಜನಾ ॥
`ನಾಮಾತ್ಯಸಮಿತೌ' ಎಂಬಲ್ಲಿ ಅಮಾತ್ಯರ ಮತ್ತು ಸುಹೃಜ್ಜನರ ವಾಕ್ಯವನ್ನು, ಮತ್ತು ನೀತಿವಾಕ್ಯವನ್ನು ಅವರು ಕೇಳಲಿಲ್ಲ ಎಂದರ್ಥ. ಶ್ರುತವತಾಂ = ಶಾಸ್ತ್ರಜ್ಞರ ವಾಕ್ಯವೆಂದರೆ ಅಧ್ಯಾತ್ಮವಾಕ್ಯವನ್ನು ಅವರು ಕೇಳಲಿಲ್ಲ ಎಂಬುದಾಗಿ ಯೋಜನೆಯನ್ನು ಮಾಡಿಕೊಳ್ಳ- ಬೇಕು.
ಋದ್ಧಿಮಸ್ಮಾಸು ತಾಂ ದೃಷ್ಟ್ವಾ ವಿವರ್ಣೋ ಹರಿಣಃ ಕೃಶಃ |
ಧೃತರಾಷ್ಟ್ರಸ್ಯ ನೃಪತೇಃ ಸೌಬಲನೇ ನಿವೇದಿತಃ ॥28॥
ಆ ದುರ್ಯೋಧನನಿಗೆ ನಮ್ಮ ಮೇಲೆ ಅಪಾರವಾದ ದ್ವೇಷವಿತ್ತು. ಆ ದ್ವೇಷದಿಂದ ಪರಿತಾಪವನ್ನು ಹೊಂದಿ, ತಾನು ಸುಖವನ್ನೇ ಅನುಭವಿಸಲಿಲ್ಲ. ನಮ್ಮಲ್ಲಿದ್ದ ಸಮೃದ್ಧಿಯನ್ನು ಕಂಡು ಹೊಟ್ಟೆಕಿಚ್ಚು ಹೊಂದಿ ಬಿಳುಚಿಕೊಂಡನು. ಕೃಶನಾಗಿಬಿಟ್ಟನು. ದುರ್ಯೋಧನನ ಇಂಥ ಸ್ಥಿತಿಯನ್ನು ಶಕುನಿಯು ಧೃತರಾಷ್ಟ್ರನಿಗೆ ವಿವರಿಸಿ ಹೇಳಿದನು.
ಪಾಠಾಂತರದ ಬಗ್ಗೆ - `ಅಸ್ಮದ್ವೇಷೇಣ ತಾದ್ರುಂಷ್ಟ್ವಾ ವಿವರ್ಣೋ ಹರಿಣಃ ಕೃಶಃ' ಎಂಬ ಪಾಠಾಂತರವನ್ನು ಇಲ್ಲಿ ಕಾಣಬಹುದು. `ಸಂಯುಕ್ತಾಃ ಕಾಮಮನ್ಯು- ಭ್ಯಾಂ' ಎಂಬ ಹಿಂದೆ ಇರುವ ಶ್ಲೋಕಕ್ಕಿಂತ ಮೊದಲು ಈ ಶ್ಲೋಕಗಳು ಕೆಲವು ಪುಸ್ತಕಗಳಲ್ಲಿ ಕಾಣಿಸುತ್ತದೆ. ಇನ್ನೂ ಕೆಲವು ಕಡೆ ಎರಡೂ ಕಡೆಯು ಕಾಣಿಸುತ್ತದೆ. ಒಂದೇ ಶ್ಲೋಕ ಎರಡು ಕಡೆ ಅಪ್ರಸ್ತುತವಾದ್ದರಿಂದ ಇಲ್ಲಿ ಮಾತ್ರ ಸೇರಿಸಿ, ಅನುವಾದ ಮಾಡಲಾಗಿದೆ.
ತಂ ಪಿತಾ ಪುತ್ರಗೃದ್ಧಿತ್ವಾದನುಮೇನೇऽನಯೇ ಸ್ಥಿತಮ್ |
ಅನವೇಕ್ಷ್ಯೈಷ ಪಿತರಂ ಗಾಂಗೇಯಂ ವಿದುರಂ ತಥಾ|
ಅಸಂಶಯಂ ಧೃತರಾಷ್ಟ್ರೋ ಯಥೈವಾಹಂ ತಥಾ ಗತಃ ॥29॥
ಪುತ್ರನ ಮೇಲಿನ ವಾತ್ಸಲ್ಯದಿಂದ ಧೃತರಾಷ್ಟ್ರನು ಅನ್ಯಾಯ ಮಾರ್ಗವನ್ನೇ ಅವಲಂಬಿಸಿದನು. ಮಗನ ದುಷ್ಟವಾದ ಆಲೋಚನೆಗಳಿಗೆ ತಾನು ಅನುಮತಿಯನ್ನು ನೀಡಿದನು. ಭೀಷ್ಮಾಚಾರ್ಯರ ಮತ್ತು ವಿದುರನ ಅಭಿಪ್ರಾಯವನ್ನು ಆ ಧೃತರಾಷ್ಟ್ರ- ನು ಉಪೇಕ್ಷೆ ಮಾಡಿಬಿಟ್ಟನು. ಈ ಕಾರಣದಿಂದಲೇ ಇಂದು ನಾನು ಎಲ್ಲರನ್ನು ಹೇಗೆ ಕಳೆದುಕೊಂಡಿದ್ದೇನೋ, ಹಾಗೆ ಧೃತರಾಷ್ಟ್ರನೂ ಕೂಡ ಕಳೆದುಕೊಂಡಿದ್ದಾನೆ. ಇದರಲ್ಲಿ ಸ್ವಲ್ಪವೂ ಕೂಡ ಸಂಶಯವಿಲ್ಲ.
ಟಿಪ್ಪಣಿ - `ಅನಪೇಕ್ಷ್ಯೈವ ಪಿತರಂ ಗಾಂಗೇಯಮ್' ಇತ್ಯತ್ರ `ಪಿತರಂ ಗಾಂಗೇಯಂ ವಿದುರಂ ಚಾನಪೇಕ್ಷ್ಯ' ರಾಜಾ ಧೃತರಾಷ್ಟ್ರಃ ಯಂ ದುರ್ಯೋಧನಮ್ ಅಸಂಶಯಮ್ `ಅನುಮೇನೇ' | ಅಶುಚಿಂ ಲುಬ್ಧಂ ಕಾಮವಶಾನುಗಾಂ ಪುತ್ರಮ್ ಅನಿಯಮ್ಯ, ಯಥಾ ಅಯಂ ದುರ್ಯೋಧನೋ ಗಚ್ಛತಿ ತಥಾ ಸ್ವಯಂ ಚ ಗತ ಇತಿ ಯೋಜನಾ॥
`ಅನಪೇಕ್ಷ್ಯೈವ ಪಿತರಂ ಗಾಂಗೇಯಮ್' ಎಂಬುದರ ಅಭಿಪ್ರಾಯ ಹೀಗಿದೆ - ತಂದೆ ಸಮಾನನಾದ ಭೀಷ್ಮನನ್ನು , ಚಿಕಪ್ಪನನ್ನು ವಿದುರನನ್ನು ಉಪೇಕ್ಷೆ ಮಾಡಿ, ರಾಜನಾದ ಧೃತರಾಷ್ಟ್ರನು ದುರ್ಯೋಧನನಿಗೆ ಸಂಶಯ ಪಡದೇ ಅನುಮತಿ ನೀಡಿದನು. ಆ

ದುರ್ಯೋಧನನು ಶುದ್ಧವಾದ ಮನೋಭಾವನೆಯನ್ನು ಹೊಂದಿರಲಿಲ್ಲ. ಕಾಮಪರ- ವಶನಾಗಿದ್ದನು. ಇಂಥ ಮಗನನ್ನು ಆ ಧೃತರಾಷ್ಟ್ರನು ನಿಯಂತ್ರಣ ಮಾಡಲಿಲ್ಲ. ಆದ್ದರಿಂದ ದುರ್ಯೋಧನನು ಯಾವ ಹಾದಿಯಲ್ಲಿ ತೆರಳಿದನೋ, ಅದೇ ಹಾದಿಯಲ್ಲೇ ತಂದೆ- ಯಾದ ಧೃತರಾಷ್ಟ್ರನೂ ಕೂಡ ತೆರಳಿದನು ಎಂಬುದಾಗಿ ಯೋಜನೆಯನ್ನು ತಿಳಿಯಬೇಕು.
ಅನಿಯಮ್ಯಾಶುಚಿಂ ಲುಬ್ಧಂ ಪುತ್ರಂ ಕಾಮವಶಾನುಗಮ್ |
ಪತಿತೋ ಯಶಸೋ ದೀಪ್ತಾದ್ ಘಾತಯಿತ್ವಾ ಸಹೋದರಾನ್ ॥30॥
ದುರ್ಯೋಧನನು ಅಪವಿತ್ರವಾದ ಆಚಾರವಿಚಾರಗಳಿಂದ ಕೂಡಿದ್ದಾನೆ. ಲೋಭಿಯಾಗಿದ್ದಾನೆ, ಕಾಮಪರವಶನಾಗಿದ್ದಾನೆ. ಇಂಥ ಮಗನನ್ನು ಧೃತರಾಷ್ಟ್ರನು ನಿಯಂತ್ರ ಮಾಡಬೇಕಿತ್ತು. ದುರ್ಯೋಧನನ ಸಂಹಾರಕ್ಕೆ ಆ ಧೃತರಾಷ್ಟ್ರನೇ ಕಾರಣನಾದನು ಮತ್ತು ಆ ದುರ್ಯೋಧನನ ಸಹೋದರರ ಸಂಹಾರಕ್ಕೂ ಕೂಡ ಕಾರಣನಾದನು. ಉಜ್ವಲವಾದ ಯಶಸ್ಸನ್ನು ಪಡೆಯದೇ ಭ್ರಷ್ಟನಾದನು.
ಇಮೌ ವೃದ್ಧೌ ಚ ಶೋಕಾಗ್ನೌ ಪ್ರಕ್ಷಿಪ್ಯ ಚ ಸುಯೋಧನಃ |
ಅಸ್ಮತ್ಪ್ರದ್ವೇಷಸಂಯುಕ್ತಃ ಪಾಪಬುದ್ಧಿಃ ಸದೈವ ಹಿ ॥31॥
ಧೃತರಾಷ್ಟ್ರ ಮತ್ತು ಗಾಂಧಾರಿಯರು ವೃದ್ಧರಾಗಿದ್ದಾರೆ. ಇವರನ್ನು ಸಂತೈಸದೇ ಆ ದುಷ್ಟನಾದ ದುರ್ಯೋಧನನು ಪುತ್ರಶೋಕವೆಂಬ ಪ್ರಜ್ವಲಿಸುವ ಅಗ್ನಿಯಲ್ಲಿ ಆ ವೃದ್ಧರನ್ನು ಹಾಕಿಬಿಟ್ಟನು. ಈ ದುರ್ಯೋಧನನು ನಿರಂತರ ನಮ್ಮ ಬಗ್ಗೆ ಅತಿಯಾದ ದ್ವೇಷದಿಂದಲೇ ಸಂತಪ್ತನಾಗಿದ್ದನು.
ಕೋ ಹಿ ಬಂಧುಃ ಕುಲೀನಃ ಸಂಸ್ತಥಾ ಬ್ರೂಯಾತ್ ಸುಹೃಜ್ಜನೇ |
ಯಥಾಸಾವುಕ್ತವಾನ್ ಕ್ಷುದ್ರೋ ಯುಯುತ್ಸುರ್ವೃಷ್ಣಿಸನ್ನಿಧೌ ॥32॥
ಹಿಂದೆ ಶ್ರೀಕೃಷ್ಣನು ಸಂಧಾನಕ್ಕಾಗಿ ಹಸ್ತಿನಾಪಟ್ಟಣಕ್ಕೆ ತೆರಳಿದ್ದನು. ಆಗ ದುರ್ಯೋಧನನು ಸಂಧಾನವನ್ನು ಮಾಡಿಕೊಳ್ಳದೇ ಯುದ್ಧ ಮಾಡುತ್ತೇನೆಂದು ಹೇಳಿದನು. ತನ್ನ ಬಂಧುಗಳ ಬಗ್ಗೆ ಯುದ್ಧ ಮಾಡುತ್ತೇನೆಂದು ಕುಲೀನನಾದ ಯಾರು ತಾನೇ ತನ್ನ ಸ್ನೇಹಿತರಲ್ಲಿ ಹೀಗೆ ಹೇಳುತ್ತಾರೆ ?
ಆತ್ಮನೋ ಹಿ ವಯಂ ದೋಷಾದ್ ವಿನಷ್ಟಾಃ ಶಾಶ್ವತೀಃ ಸಮಾಃ |
ಪ್ರದಹಂತೋ ದಿಶಃ ಸರ್ವಾಸ್ತೇಜಸಾ ಭಾಸ್ಕರಾ ಇವ ॥33॥
ಸೂರ್ಯನು ತನ್ನ ತೇಜಸ್ಸಿನಿಂದ ಎಲ್ಲ ದಿಕ್ಕುಗಳನ್ನು ಹೇಗೆ ಸುಡುತ್ತಾನೋ? ಅದರಂತೆ ಈ ದುರ್ಯೋಧನನು ತನ್ನಲ್ಲಿರುವ ದೋಷದಿಂದಲೇ ಎಲ್ಲರನ್ನೂ ಕೂಡ ಸುಟ್ಟನು.
ಟಿಪ್ಪಣಿ - ಆತ್ಮನೋ ಹಿ ವಯಂ ದೋಷಾತ್ ಇತ್ಯತ್ರ ಆತ್ಮನಃ ದುರ್ಯೋಧನಸ್ಯ ದೋಷಾತ್ ॥
`ಆತ್ಮನೋ ಹಿ ವಯಂ ದೋಷಾತ್' ಎಂಬಲ್ಲಿ `ಆತ್ಮನಃ' ಎಂಬ ಪದಕ್ಕೆ ದುರ್ಯೋಧನನ ಎಂದರ್ಥ. ಇದಕ್ಕೆ `ದೋಷಾತ್' ಎಂಬಲ್ಲಿ ಅನ್ವಯ.
ವಿವರಣೆ - ಪ್ರಳಯಕಾಲದ ಸೂರ್ಯನು ಎಲ್ಲಾ ದಿಕ್ಕುಗಳಲ್ಲಿರುವ ಪದಾರ್ಥಗಳನ್ನು ಸುಡುವಂತೆ ದುರ್ಯೋಧನನು ಸಹೋದರರನ್ನು, ಪುತ್ರರನ್ನು, ಪೌತ್ರರನ್ನೂ, ಪಿತೃಗಳನ್ನು ಸಂಹಾರ ಮಾಡಿದನು. ನಾವೂ ಸಹ ಅವನಿಂದಲೇ ಹತರಾದೆವು. ಆ ದುರ್ಯೋಧನನೂ ಕೂಡ ಸ್ವತಃ ಹತನಾದನು ಎಂಬುದು ಶ್ಲೋಕದ ಭಾವ.
ಸೋಽಸ್ಮಾಕಂ ವೈರಪುರುಷೋ ದುರ್ಮಂತ್ರಿಪ್ರಗ್ರಹಂ ಗತಃ |
ದುರ್ಯೋಧನಕೃತೇ ಹ್ಯೇತತ್ ಕುಲಂ ನೋ ವಿನಿಪಾತಿತಮ್ |
ಅವಧ್ಯಾನಾಂ ವಧಂ ಕೃತ್ವಾ ಲೋಕೇ ಪ್ರಾಪ್ತಾಃ ಸ್ಮ ವಾಚ್ಯತಾಮ್ ॥34॥
ನಮ್ಮನ್ನು ವೈರ ಮಾಡುವ ಪುರುಷನಾದ ದುರ್ಯೋಧನನು ಕೆಟ್ಟ ಮಂತ್ರಿಜನರ ಬಂಧನಕ್ಕೆ ಸಿಕ್ಕಿದ್ದನು. ಅಂಥ ದುರ್ಯೋಧನನ ನಿಮಿತ್ತದಿಂದ ನಮ್ಮ ಭರತಕುಲವೇ ಇಂದು ನಾಶವಾಗಿ ಹೋಯಿತು. ಅವಧ್ಯರಾದವರನ್ನೂ ಕೂಡ ವಧೆ ಮಾಡಿ ಇಂದು ನಾವು ಲೋಕನಿಂದನೆಗೆ ಆಸ್ಪದರಾಗಿದ್ದೇವೆ.
ಕುಲಸ್ಯಾಸ್ಯಾಂತಕರಣಂ ದುರ್ಮತಿಂ ಪಾಪಕಾರಿಣಮ್ |
ರಾಜಾ ರಾಷ್ಟ್ರೇಶ್ವರಂ ಕೃತ್ವಾ ಧೃತರಾಷ್ಟ್ರೋಽದ್ಯ ಶೋಚತಿ ॥35॥
ನಮ್ಮ ಕುಲದ ಸಂಪೂರ್ಣ ವಿನಾಶಕ್ಕೆ ಕಾರಣನಾದ, ದುರ್ಮತಿಯಾದ, ಪಾಪ- ಭಾಜನನಾದ ಆ ದುರ್ಯೋಧನನ್ನು ನಾನೇಕೆ ರಾಷ್ಟ್ರಪುರುಷನನ್ನಾಗಿ ಮಾಡಿದೆನು? ಎಂಬುದಾಗಿ ಧೃತರಾಷ್ಟ್ರನು ಈಗ ಪಶ್ಚಾತ್ತಾಪ ಪಡುತ್ತಿದ್ದಾನೆ.
ಹತಾಃ ಶೂರಾಃ ಕೃತಂ ಪಾಪಂ ವಿಷಯಃ ಸ್ವೋ ವಿನಾಶಿತಃ |
ಹತ್ವಾ ನೋ ವಿಗತೋ ಮನ್ಯುಃ ಶೋಕೋ ಮಾಂ ರಂಧಯತ್ಯಯಮ್ ॥36॥
ಈ ಯುದ್ಧದಲ್ಲಿ ಅನೇಕ ಶೂರರು ಮರಣವನ್ನು ಹೊಂದಿದರು. ನಾವು ಯಾರನ್ನು ಕೊಲ್ಲಬಾರದೋ, ಅವರನ್ನೆಲ್ಲಾ ಕೊಂದಿದ್ದಾಯಿತು. ಅದರಿಂದ ಪಾಪ- ವನ್ನು ಕಟ್ಟಿಕೊಂಡೆವು. ನಮ್ಮ ದೇಶವು ನಾಶವಾಯಿತು. ಈ ಯುದ್ಧದಿಂದ ಶತ್ರುಗಳ ಮೇಲಿದ್ದ ಕೋಪವು ನಾಶವಾಯಿತು. ಆದರೆ ಬಂಧುಗಳ ವಿಯೋಗದಿಂದ ಉಂಟಾಗಿರುವ ಶೋಕವು ನಮ್ಮನ್ನು ಇಂದು ಸುಡುತ್ತಿದೆ.
`ಶೋಕೋ ಮಾಂ ರಂಧಯತ್ಯಯಮ್' ಇತ್ಯತ್ರ ರಂಧಯತಿ ದಹತಿ ॥
`ಶೋಕೋ ಮಾಂ ರಂಧಯತ್ಯಯಮ್' ಎಂಬಲ್ಲಿ `ರಂಧಯತಿ' ಎಂಬ ಪದಕ್ಕೆ `ದಹತಿ' ಸುಡುತ್ತದೆ ಎಂದರ್ಥ.
ಧನಂಜಯಕೃತಂ ಪಾಪಂ ಕಲ್ಯಾಣೇನೋಪಹನ್ಯತೇ |
ಖ್ಯಾಪನೇನಾನುತಾಪೇನ ದಾನೇನ ತಪಸಾಪಿ ವಾ |
ನಿವೃತ್ತ್ಯಾ ತೀರ್ಥಗಮನಾಚ್ಛ್ರುತಿಸ್ಮೃತಿಜಪೇನ ಚ ॥37॥
ಓ ಅರ್ಜುನನೇ ! ನಾವು ಮಾಡಿದ ಪಾಪವು ಶುಭವಾದ ಕರ್ಮಗಳನ್ನು ಆಚರಣೆ ಮಾಡುವುದರಿಂದ ಪರಿಹಾರವಾಗುತ್ತದೆ. ಅಥವಾ ಮತ್ತೊಬ್ಬರಲ್ಲಿ ಅದನ್ನು ಹೇಳಿಕೊಳ್ಳುವುದರಿಂದಲೂ ಪರಿಹಾರವಾಗುತ್ತದೆ. ಅಥವಾ ಪಶ್ಚಾತ್ತಾಪ ಪಡುವು- ದರಿಂದ ದಾನ ಮತ್ತು

ತಪಸ್ಸುಗಳಿಂದ ಆ ಪಾಪವು ಪರಿಹಾರವಾಗುತ್ತದೆ. ಅಥವಾ ವಿಷಯ ಪದಾರ್ಥಗಳ ನಿವೃತ್ತಿಯಿಂದ (ಎಲ್ಲವನ್ನೂ ಪರಿತ್ಯಾಗ ಮಾಡುವುದರಿಂದ) ತೀರ್ಥಕ್ಷೇತ್ರಯಾತ್ರೆ ಮಾಡುವುದರಿಂದ ಶ್ರುತಿ-ಸ್ಮೃತಿಗಳನ್ನು ಜಪ ಮಾಡುವುದ- ರಿಂದಲೂ ಪಾಪವು ಪರಿಹಾರವಾಗುತ್ತದೆ.

ಟಿಪ್ಪಣಿ - ಧನಂಜಯಕೃತಂ ಪಾಪಂ ಕಲ್ಯಾಣೇನೋಪಹನ್ಯತೇ ಇತ್ಯತ್ರ ಧನಸ್ಯ ಶತ್ರುಧನಸ್ಯ ಜಯಃ ಧನಂಜಯಃ, ತೇನ ಕೃತಂ ಪಾಪಂ, ಧನಂಜಯೇನ ಅರ್ಜುನೇನ ಕೃತಂ ಪಾಪಂ ಸ್ವಜ್ಯೇಷ್ಠಕರ್ಣವಧಾಖ್ಯಪಾಪಂ ವಾ | ಕಲ್ಯಾಣೇನ ಪುಣ್ಯಕರ್ಮಕರಣೇನ| ನಿವೃತ್ತ್ಯಾ ವಿಷಯೇಭ್ಯೋ ನಿವೃತ್ತ್ಯಾ, ವೈರಾಗ್ಯೇಣೇತ್ಯರ್ಥಃ ॥

ಧನಂಜಯಕೃತಂ ಪಾಪಂ ಕಲ್ಯಾಣೇನೋಪಹನ್ಯತೇ ಎಂಬಲ್ಲಿ ಶತ್ರುಧನವನ್ನು ಗೆದ್ದಿರುವ ಕಾರಣ, ಅರ್ಜುನನು `ಧನಂಜಯ' ಎಂದು ಕರೆಸಿಕೊಳ್ಳುತ್ತಾನೆ. ಅಂಥ ಧನಂಜಯನಿಂದ ತನಗಿಂತಲೂ ಜ್ಯೇಷ್ಠನಾದ ಕರ್ಣನ ವಧೆಯೆಂಬ  ಯಾವ ಪಾಪವು ಬಂದಿದೆಯೋ, ಅದು ಎಂದರ್ಥ. ಕಲ್ಯಾಣೇನ ಎಂಬುದಕ್ಕೆ ಪುಣ್ಯಕರ್ಮವನ್ನು ಆಚರಣೆ ಮಾಡುವುದರಿಂದ ಪರಿಹಾರವಾಗುತ್ತದೆ ಎಂದರ್ಥ. `ನಿವೃತ್ತ್ಯಾ 'ಎಂಬುದಕ್ಕೆ ವಿಷಯಪದಾರ್ಥಗಳ ನಿವೃತ್ತಿಯಿಂದ ಎಂದರ್ಥ. ಅರ್ಥಾತ್ ವೈರಾಗ್ಯದಿಂದ ಎಂದರ್ಥ.

ವಿವರಣೆ - ಜೀವನದಲ್ಲಿ ಅನೇಕ ದೊಡ್ಡ ತಪ್ಪುಗಳನ್ನು ತಿಳಿದೋ, ಅಥವಾ ತಿಳಿಯದೇ ಆಚರಿಸುತ್ತೇವೆ. ಅಂಥ ಸಂದರ್ಭದಲ್ಲಿ ಅದರಿಂದ ಬರುವ ಪಾಪವನ್ನು ಹೇಗೆ ಪರಿಹಾರ ಮಾಡಿಕೊಳ್ಳಬೇಕೆಂದು ಮಹಾಭಾರತದ ಈ ಶ್ಲೋಕವು ನಮ್ಮನ್ನು ಎಚ್ಚರಿಸುತ್ತಿದೆ. 1. ಅನೇಕ ಪುಣ್ಯಕರ್ಮಗಳನ್ನು ಮಾಡುವುದು, 2. ಅನೇಕ ಶಿಷ್ಟ- ಜನರ ಬಳಿ ನಾವು ಮಾಡಿದ ಪಾಪವನ್ನು ಹೇಳಿಕೊಳ್ಳುವುದು, 3. ಪಶ್ಚಾತ್ತಾಪಪಟ್ಟು ಮುಂದೆಂದೂ ಅದೇ ತಪ್ಪನ್ನು ಮಾಡದೇ ಇರುವುದು. 4. ಮಾಡಿದ ತಪ್ಪಿನ ಪರಿಮಾರ್ಜನೆಗಾಗಿ ಅನೇಕ ಬಗೆಯ ದಾನಗಳನ್ನು ಮಾಡುವುದು, 5. ತಪಸ್ಸನ್ನು ಆಚರಿಸುವುದು, 6. ಎಲ್ಲವನ್ನೂ ಪರಿತ್ಯಾಗ ಮಾಡುವುದು, 7. ತೀರ್ಥಕ್ಷೇತ್ರ- ಯಾತ್ರೆ ಮಾಡುವುದು, ಶ್ರುತಿ-ಸ್ಮೃತಿಗಳಲ್ಲಿ ಹೇಳಿರುವ ಮಹಾಮಂತ್ರಗಳ ಜಪವನ್ನು ಮಾಡುವುದು, ಇಷ್ಟು ಕಾರಣಗಳಿಂದ ಪಾಪವು ಪರಿಹಾರವಾಗುತ್ತದೆ.

ಪ್ರಕೃತ ಯುಧಿಷ್ಠಿರನಿಗೆ ಎಲ್ಲವನ್ನೂ ಪರಿತ್ಯಾಗ ಮಾಡಬೇಕೆಂಬ ಪ್ರಾಯಶ್ಚಿತ್ತ- ವನ್ನು ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಹೀಗೆ ಹೇಳುತ್ತಿದ್ದಾನೆ -

ತ್ಯಾಗವಾಂಶ್ಚ ಪುನಃ ಪಾಪಂ ನಾಲಂಕರ್ತುಮಿತಿ ಶ್ರುತಿಃ |
ತ್ಯಾಗವಾನ್ ಜನ್ಮಮರಣೇ ನಾಪ್ನೋತೀತಿ ಶ್ರುತಿರ್ಯದಾ |

ಇಷ್ಟು ಬಗೆಯ ಪರಿಹಾರಗಳಲ್ಲಿ ಯಾರು ತ್ಯಾಗವನ್ನೇ ಮಾಡುತ್ತಾನೋ, ಅವನು ಮತ್ತೆ ಪಾಪಕರ್ಮದಲ್ಲಿ ತೊಡಗಲು ಸಾಧ್ಯವಿಲ್ಲ. ಈ ವಿಷಯವನ್ನು ಶ್ರುತಿಯೇ ಸ್ಪಷ್ಟಪಡಿಸುತ್ತಿದೆ. ಯಾರು ತ್ಯಾಗವನ್ನು ಮಾಡುತ್ತಾನೋ, ಅವನು ಜನನ ಮತ್ತು ಮರಣಗಳನ್ನು ಪುನಃ ಹೊಂದಲಾರ ಎಂದು.

ವಿವರಣೆ - `ತ್ಯಾಗೇನೇಕೇ ಅಮೃತತ್ವಮಾನಶುಃ' ಎಂಬ ಶ್ರುತಿಯನ್ನೇ ಅರ್ಥತಃ ಈ ಶ್ಲೋಕದಲ್ಲಿ ವ್ಯಾಖ್ಯಾನ ಮಾಡಲಾಗಿದೆ.

ಪ್ರಾಪ್ತವರ್ತ್ಮಾ ಕೃತಮತಿರ್ಬ್ರಹ್ಮ ಸಂಪದ್ಯತೇ ತದಾ ॥38॥
ಸ ಧನಂಜಯನಿರ್ದ್ವಂದ್ವೋ ಮುನಿರ್ಜ್ಞಾನಸಮನ್ವಿತಃ |
ವನಮಾಮಂತ್ರ್ಯ ವಃ ಸರ್ವಾನ್ ಗಮಿಷ್ಯಾಮಿ ಪರಂತಪ ॥39॥

ಅರ್ಜುನನೇ! ಯಾರು ಎಲ್ಲಾ ವಿಷಯಪದಾರ್ಥಗಳನ್ನು ಪರಿತ್ಯಾಗ ಮಾಡು- ತ್ತಾನೋ, ಅವನಿಗೆ ಮೋಕ್ಷಮಾರ್ಗವು ಸುಲಭವಾಗಿ ದೊರಕುತ್ತದೆ. ಜ್ಞಾನದಿಂದ ಕೂಡಿರುವ ಸ್ಥಿರವಾದ ಬುದ್ಧಿಯನ್ನು ಹೊಂದಿರುವ, ದ್ವಂದ್ವಗಳನ್ನು ದಾಟಿದವನಾಗಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಪರಂತಪನೇ! ನಿಮ್ಮೆಲ್ಲರ ಅನುಮತಿಯನ್ನು ಪಡೆದುಕೊಂಡು ನಾನು ಅರಣ್ಯಕ್ಕೆ ಹೊರಡುತ್ತೇನೆ.

ಟಿಪ್ಪಣಿ- ತ್ಯಾಗವಾನ್ ಜನ್ಮಮರಣೇ ಇತ್ಯತ್ರ ಜನ್ಮಕ್ಷಯನಿಮಿತ್ತಂ ಕೈವಲ್ಯಂ ಚ ಯತ್ನೇ ಕೃತೇ ಸತಿ ಪ್ರಾಪ್ತುಂ ಶಕ್ಯಮಿತಿ ಶ್ರುತಿರಾಹ | ಅತಃ ಪಾಪಮಾತ್ರಪರಿಹಾರಃ ಕಿಂ ವಕ್ತವ್ಯ ಇತಿ ಭಾವಃ ॥ `ತ್ಯಾಗವಾನ್ ಜನ್ಮಮರಣೇ' ಎಂಬುದರ ಅಭಿಪ್ರಾಯ ಹೀಗಿದೆ - ಜನನ ಮತ್ತು ಮರಣಗಳನ್ನು ದಾಟಲು ಮೋಕ್ಷವನ್ನು ಅಪೇಕ್ಷಿಸಬೇಕೆಂದು ಶ್ರುತಿ ಹೇಳುತ್ತದೆ. ಯಾರು ಎಲ್ಲ ವಿಷಯಪದಾರ್ಥಗಳನ್ನು ಪರಿತ್ಯಾಗ ಮಾಡುತ್ತಾರೋ, ಅವರಿಗೆ ಮೋಕ್ಷವು ದೊರಕುತ್ತದೆ ಎಂದು ಶ್ರುತಿಯು ಹೇಳುತ್ತಿರುವಾಗ ಕೇವಲ ಪಾಪವು ಪರಿಹಾರವಾಗು- ತ್ತದೆಂಬುದಾಗಿ ಪ್ರತ್ಯೇಕವಾಗಿ ಹೇಳಬೇಕೇನು ? ಎಂಬುದು ಶ್ಲೋಕದ ಭಾವ.

ನಹಿ ಕೃತ್ಸ್ನತಮೋ ಧರ್ಮಃ ಶಕ್ಯಃ ಪ್ರಾಪ್ತುಮಿತಿ ಶ್ರುತಿಃ |
ಪರಿಗ್ರಾಹವತಾ ತನ್ಮೇ ಪ್ರತ್ಯಕ್ಷಮರಿಸೂದನ ॥40॥

ಯಾವ ವ್ಯಕ್ತಿಯು ಮತ್ತೊಬ್ಬರ ಬಳಿ ದಾನವನ್ನು ತೆಗೆದುಕೊಳ್ಳುತ್ತಾನೋ, ತೆಗೆದುಕೊಂಡದ್ದನ್ನು ಸಂಗ್ರಹ ಮಾಡುತ್ತಾನೋ, ಅಂಥವನಿಗೆ ಸಂಪೂರ್ಣವಾದ ಧರ್ಮವನ್ನು ಆಚರಣೆ ಮಾಡಲು ಸಾಧ್ಯವಾಗುವುದಿಲ್ಲ ಎಂಬುದಾಗಿ ಶ್ರುತಿಯೇ ಹೇಳುತ್ತಿದೆ. ಮತ್ತು ಇದು ನನ್ನ ಪ್ರತ್ಯಕ್ಷಾನುಭವವೂ ಕೂಡ ಆಗಿದೆ.

ವಿವರಣೆ - ತ್ಯಾಗಿಯಾದವನಷ್ಟೇ ಸಂಪೂರ್ಣವಾದ ಧರ್ಮವನ್ನು ಆಚರಿಸಲು ಸಾಧ್ಯ. `ಇಜ್ಯಾಚಾರ ಧರ್ಮೋ ಅಹಿಂಸಾದಾನಸ್ವಾಧ್ಯಾಯಕರ್ಮಣಾಂ | ಅಯಂ ತು ಪರಮೋ ಧರ್ಮೋ ಯದ್ಯೋಗೇ  ಆತ್ಮದರ್ಶನಂ ॥' ಎಂಬ ಯಾಜ್ಞವಲ್ಕ್ಯರ ಮಾತಿನಂತೆ ಸಂಪೂರ್ಣವಾದ ತ್ಯಾಗವನ್ನು ಮಾಡಿದರೆ ಮಾತ್ರ, ಸಂಪೂರ್ಣವಾದ ಧರ್ಮವನ್ನು ಆಚರಿಸಲು ಸಾಧ್ಯ ಎಂದು ತಿಳಿಯುತ್ತದೆ.

ಮಯಾ ನಿಸೃಷ್ಟಂ ಪಾಪಂ ಹಿ ಪರಿಗ್ರಹಸಮೀಪ್ಸತಾ |
ಜನ್ಮಕ್ಷಯನಿಮಿತ್ತಂ ಚ ಶಕ್ಯಂ ಪ್ರಾಪ್ತುಮಿತಿ ಶ್ರುತಿಃ ॥41॥

ಆದರೆ ನಾನಿಂದು ರಾಜ್ಯವೆಂಬ ಪರಿಗ್ರಹವನ್ನು ಅಪೇಕ್ಷಿಸುತ್ತಿದ್ದೇನೆ. ಆದ್ದರಿಂದ ಪಾಪದ ರಾಶಿಯೇ ನನ್ನನ್ನು ಆವರಿಸಿದೆ. ಇದು ಜನ್ಮ ಮತ್ತು ಮರಣಗಳಿಗೆ ನಿಮಿತ್ತವಾಗಿದೆ. ಯಾರು ಪರಿಗ್ರಹವನ್ನು ಮಾಡುತ್ತಾರೋ, ಅವರಿಗೆ ಮುಕ್ತಿಯು ದೊರಕುವುದಿಲ್ಲವೆಂದು

ಶ್ರುತಿಯೇ ಹೇಳುತ್ತಿದೆ.
ಸ ಪರಿಗ್ರಹಮ್ಮುತ್ಸೃಜ್ಯ ಕೃತ್ಸ್ನಂ ರಾಜ್ಯಂ ತಥೈವ ಚ |
ಗಮಿಷ್ಯಾಮಿ ವಿನಿರ್ಮುಕ್ತೋ ವಿಶೋಕೋ ವಿಜ್ವರಸ್ತಥಾ ॥42॥
ಆದ್ದರಿಂದ ನಾನು ರಾಜ್ಯಪರಿಗ್ರಹವನ್ನು ಪರಿತ್ಯಾಗ ಮಾಡುತ್ತೇನೆ. ಮತ್ತು ಆ ಎಲ್ಲಾ ಸಾಂಸಾರಿಕ ಬಂಧನಗಳಿಂದಲೂ ಮುಕ್ತನಾಗುತ್ತೇನೆ. ಶೋಕರಹಿತನಾಗಿ ಯಾವುದೇ ಮಮತೆಯನ್ನಿಟ್ಟುಕೊಳ್ಳದೇ ನಾನು ಅರಣ್ಯಕ್ಕೆ ತೆರಳುತ್ತೇನೆ.
ಪ್ರಶಾಸಧ್ವಮಿಮಾಮುರ್ವೀಂ ಕ್ಷೇಮಾಂ ನಿಹತಕಂಟಕಾಮ್ |
ನ ಮಮಾರ್ಥೋಽಸ್ತಿ ರಾಜ್ಯೇನ ಭೋಗೈರ್ವಾ ಕುರುನಂದನ ॥43॥
ಓ ಅರ್ಜುನನೇ! ಆದ್ದರಿಂದ ಯಾವುದೇ ಶತ್ರುಗಳ ಉಪದ್ರವವಿಲ್ಲದ ಈ ಭೂಮಂಡಲವನ್ನು ನೀವುಗಳು ಪಾಲನೆ ಮಾಡಿರಿ. ನನಗೆ ಈ ರಾಜ್ಯದಿಂದ ಆಗ- ಬೇಕಾದದ್ದು ಏನೂ ಇಲ್ಲ. ಈ ಭೋಗಗಳಿಂದಲೂ ನನಗೇನೂ ಪ್ರಯೋಜನವಿಲ್ಲ.
ಪಾಠಾಂತರದ ಬಗ್ಗೆ - ಕೆಲವು ಪುಸ್ತಕಗಳಲ್ಲಿ ಪ್ರಶಾಧಿ ತ್ವಂ ಎಂಬ ಪಾಠವಿದೆ. ಈ ಪಾಠದ ಪ್ರಕಾರ - ಓ ಅರ್ಜುನನೇ! ಈ ಭೂಮಿಯನ್ನು ನೀನು ಪರಿಪಾಲನೆ ಮಾಡು ಎಂದು ಹೇಳಿದಂತಾಗುತ್ತದೆ. ಈ ಪಾಠಕ್ಕಿಂತಲೂ `ಪ್ರಶಾಸಧ್ವಂ' ಎಂಬ ಪಾಠವೇ ಉಚಿತವೆಂದು ಕಾಣಿಸುತ್ತದೆ. ಏಕೆಂದರೆ ಅರ್ಜುನನಿಗಿಂತಲೂ ಹಿರಿಯ- ನಾದ ಭೀಮಸೇನನು ಇರುವಾಗ ಅರ್ಜುನನಿಗೆ ಅಧಿಕಾರ ವಹಿಸಲು ಸಾಧ್ಯವಿಲ್ಲ. ಆದ್ದರಿಂದ ನೀವೆಲ್ಲರೂ ಭೂಪಾಲನೆಯನ್ನು ಮಾಡಿರಿ ಎಂಬುದಾಗಿ ಯುಧಿಷ್ಠಿರ- ನು ಹೇಳಿದನೆಂದು ತಿಳಿಯಬೇಕು.
ಏತಾವದುಕತ್ವಾ ವಚನಂ ಧರ್ಮರಾಜೋ ಯುಧಿಷ್ಠಿರಃ |
ವ್ಯಾಪಾರಮತ್ ತತಃ ಪಾರ್ಥಃ ಕನೀಯಾನ್ ಪ್ರತ್ಯಭಾಷತ ॥44॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಸಪ್ತಮೋಽಧ್ಯಾಯಃ ॥7॥
ಧರ್ಮರಾಜನಾದ ಯುಧಿಷ್ಠಿರನು ಅರ್ಜುನನ ಬಳಿ ಇಷ್ಟು ಮಾತುಗಳನ್ನು ಹೇಳಿ ವಿರಮಿಸಿದನು. ಅನಂತರ ಕುಂತಿಯಲ್ಲಿ ಕೊನೆಯ ಮಗನಾಗಿ ಹುಟ್ಟಿದ ಅರ್ಜುನನು ತನ್ನ ಅಭಿಪ್ರಾಯವನ್ನು ತಿಳಿಸಲು ಪ್ರಾರಂಭ ಮಾಡಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 7ನೆಯ ಅಧ್ಯಾಯವು ಮುಗಿಯಿತು.
*****
8. ಎಂಟನೆಯ ಅಧ್ಯಾಯ
ಯುಧಿಷ್ಠಿರನ ಅಭಿಪ್ರಾಯವನ್ನು ಅರ್ಜುನನು ನಿರಾಕರಣೆ ಮಾಡಿದನು. ಸಂಪತ್ತನ್ನು ಗಳಿಸುವುದು ಕ್ಷತ್ರಿಯರ ಮುಖ್ಯಧರ್ಮವಾಗಿದೆ. ಗಳಿಸಿದ ಸಂಪತ್ತಿನಿಂದ ಯುಧಿಷ್ಠಿರನಿಗೆ ಯಜ್ಞ ಮಾಡುವಂತೆ ಅರ್ಜುನನು ಪ್ರೇರಿಸಿದುದು.
ವೈಶಂಪಾಯನಃ
ಅಥಾರ್ಜುನ ಉವಾಚೇದಮ್ ಅಧಿಕ್ಷಿಪ್ತ ಇವಾಕ್ಷಮೀ |
ಅಭಿನೀತಿತರಂ ವಾಕ್ಯಂ ದೃಢವಾದಪರಾಕ್ರಮಃ ॥1॥
ದರ್ಶಯನ್ನೈಂದ್ರಿರಾತ್ಮಾನಮುಗ್ರಮುಗ್ರಪರಾಕ್ರಮಃ |
ಸ್ಮಯಮಾನೋ ಮಹಾತೇಜಾಃ ಸೃಕ್ಕಿಣೀ ಪರಿಸಂಲಿಹನ್ ॥2॥
ವೈಶಂಪಾಯನರು ಜನಮೇಜಯನೇ! ಯುಧಿಷ್ಠಿರನ ಮಾತನ್ನು ಕೇಳಿ ಅರ್ಜುನನಿಗೆ ಅಣ್ಣನು ತನ್ನ ಕಾರ್ಯಕ್ಕಾಗಿ ತನ್ನನ್ನು ನಿಂದಿಸಿದಂತೆ ತೋರಿತು. ಆ ಮಾತುಗಳು ಅವನಿಗೆ ದುಸ್ಸಹವಾಗಿ ಕಂಡುಬಂದವು. ಮಾತಿನಲ್ಲಿಯೂ, ಪರಾ- ಕ್ರಮದಲ್ಲಿಯೂ ಮತ್ತೊಬ್ಬರಿಂದ ಹಿಂಜರಿಯದ ಉಗ್ರವಾದ ಪರಾಕ್ರಮವುಳ್ಳ ಮಹಾತೇಜಸ್ವಿಯಾದ ಅರ್ಜುನನು ಆವೇಶದಿಂದ ಕೂಡಿದ ಮಾತುಗಳಿಂದ ಕೋಪಗೊಂಡವನಂತೆ ಕಂಡನು. ಹುಸಿನಗೆಯಿಂದ ಹೀಗೆಂದನು
ಅಹೋ ದುಃಖಮಹೋ ಕೃಚ್ಛ್ರಮಹೋ ವೈಕ್ಲವ್ಯಮುತ್ತಮಮ್ |
ಯತ್ಕೃತ್ವಾ ಮಾನುಷಂ ಕರ್ಮ ತ್ಯಜೇಥಾಃ ಶ್ರಿಯಮುತ್ತಮಾಮ್॥3॥
ನೀನು ಮನುಷ್ಯರಿಗೆ ಸಾಧ್ಯವಲ್ಲದ ವೀರಕಾರ್ಯವನ್ನು ಮಾಡಿರುವಿ. ಗಳಿಸಿದ ಮಹತ್ತಾದ ಈ ಸಂಪತ್ತನ್ನೆಲ್ಲಾ ಬಿಟ್ಟು ಹೋಗಬೇಕೆನ್ನುತ್ತಿರುವಿ? ಆಹಾ! ನಿನ್ನ ದುಃಖವೇನು? ನಿನ್ನ ಪ್ರಯಾಸವೇನು? ನಿನ್ನ ಭಯವೇನು? ಇವೆಲ್ಲ ನನಗೆ ಆಶ್ಚರ್ಯವನ್ನುಂಟುಮಾಡುತ್ತಿವೆ.
ಶತ್ರೂನ್ ಹತ್ವಾ ಮಹೀಂ ಲಬ್ಧ್ವಾ ಸ್ವಧರ್ಮೇಣೋಪಪಾದಿತಾಮ್ |
ಹತಾಮಿತ್ರಃ ಕಥಂ ಸರ್ವಂ ತ್ಯಜೇಥಾ ಬುದ್ಧಿಲಾಘವಾತ್ ॥4॥
ನೀನು ನಿನ್ನ ಸ್ವಧರ್ಮದಿಂದಲೇ ಶತ್ರುಗಳನ್ನು ಸಂಹರಿಸಿ ಭೂಮಿಯನ್ನು ಸಂಪಾದಿಸಿರುವಿ. ಶತ್ರುಗಳನ್ನು ನಿರ್ಮೂಲ ಮಾಡಿದ ಮೇಲೆಯೂ ಸ್ಥಿರಬುದ್ಧಿ- ಯಿಲ್ಲದೆ ನಿಷ್ಕಂಟಕವಾದ ಈ ರಾಜ್ಯವನ್ನು ಹೇಗೆ ತಾನೇ ತ್ಯಜಿಸುವಿ?
ಕ್ಲೀಬಸ್ಯ ಹಿ ಕುತೋ ರಾಜ್ಯಂ ದೀರ್ಘಸೂತ್ರಸ್ಯ ವಾ ಪುನಃ |
ಕಿಮರ್ಥಂ ಚ ಮಹೀಪಾಲಾನವಧೀಃ ಕ್ರೋಧಮೂರ್ಚ್ಛಿತಃ ॥5॥
ಪೌರುಷವಿಲ್ಲದ ಹೇಡಿಗಳಿಗೆ, ಸೋಮಾರಿಗಳಿಗೆ ರಾಜ್ಯವು ಹೇಗೆ ಲಭಿಸು- ವುದು? ಏತಕ್ಕೋಸ್ಕರ ಕೋಪಾವಿಷ್ಟನಾಗಿ ಅನೇಕ ರಾಜರನ್ನು ಸಂಹರಿಸಿದೆ ?
ಯೋ ಹ್ಯಾಜಿಜೀವಿಷೇದ್ ಭೈಕ್ಷ್ಯಂ ಕರ್ಮಣಾ ನೈವ ಕೇನಚಿತ್ |
ಸ ಆರಂಭಾನ್ ಬುಭೂಷೇತ ಹತಸ್ವಸ್ತಿರಕಿಂಚನಃ ॥6॥
ಲೋಕದಲ್ಲಿ ಯಾರು ನಿರ್ಗತಿಕನಾಗಿ, ಅಪ್ರಸಿದ್ಧನಾಗಿ, ಸಂತಾನ ಸಮೃದ್ಧಿ, ಪಶುಸಮೃದ್ಧಿ ಯಾವುದೂ ಇಲ್ಲದವನಾಗಿ, ಅನಾಮಧೇಯನೆನಿಸುವನೋ ಅಂತ- ಹವನು ಭಿಕ್ಷಾಟನದಿಂದ ಜೀವಿಸಬೇಕೆಂದು ಬಯಸುವನು. ಅಂತಹವನು ಸ್ವಪ್ರಯ- ತ್ನದಿಂದ

ಯಾವ ರಾಜ್ಯವನ್ನು ಪಡೆಯಲು ಬಯಸುವನು.
ಟಿಪ್ಪಣಿ - ಕರ್ಮಣಾ ನೈವ ಕೇನಚಿದ್ ಇತ್ಯತ್ರ ಕರ್ಮಣಾ ಸ್ವಯೋಗ್ಯ- ಕರ್ಮಣಾ | ಹತಸ್ವಸ್ತಿಃ ಅಕಿಂಚನಃ ಸ ನಿರ್ಭಾಗ್ಯಃ ಆರಂಭಾದ್ಯುದ್ಧಾದ್ಯಾ- ರಂಭಾತ್ ಮಾ ಬುಭೂಷೇತ ॥ `ಕರ್ಮಣ' ಎಂದರೆ ಸ್ವಯೋಗ್ಯವಾದ ಕರ್ಮ- ದಿಂದ ಎಂದರ್ಥ. `ಹತಸ್ವಸ್ತಿಃ ಅತಿಕಿಂಚನಃ' - ಯಾರ ಜೀವನದಲ್ಲಿ ಮಂಗಳ- ಕಾರ್ಯಗಳು ನಡೆಯುತ್ತಿಲ್ಲವೋ, ನಿರ್ಧನಿಕನಾಗಿರುತ್ತಾನೋ, ಅವನು ನಷ್ಟ- ಭಾಗ್ಯನಾಗಿರುತ್ತಾನೆ. ಅಂಥವನು ಯುದ್ಧವನ್ನು ಮಾಡಲು ಅಪೇಕ್ಷಿಸುವುದೇ ಇಲ್ಲ.
ಕಾಪಾಲೀಂ ನೃಪ ಪಾಪಿಷ್ಠಾಂ ವೃತ್ತಿಮಾಸ್ಥಾಯ ಜೀವತಃ |
ಸಂತ್ಯಜ್ಯ ರಾಜ್ಯಮೃದ್ಧಂ ತ್ವಾಂ ಲೋಕೋಽಯಂ ಪ್ರವಿಷ್ಯತಿ ॥7॥
ಸರ್ವಲೋಕೇಷು ವಿಖ್ಯಾತೋ ನ ಪುತ್ರಪಶುಸಂಹಿತಃ |
ಮಹಾರಾಜನೇ! ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿ, ಪಶು, ಪುತ್ರ ಸಮೃದ್ಧಿ- ಯುಳ್ಳವನಾಗಿರುವವನು ಎಂದಿಗೂ ಪಾಪಿಷ್ಠವಾದ ಇಂಥ ಭಿಕ್ಷಾವೃತ್ತಿಯನ್ನು ಅವ- ಲಂಬಿಸಲಾರನು. ಈಗ ನೀನು ಕೈಗೆ ಬಂದ ರಾಜ್ಯವನ್ನೆಲ್ಲಾ ಬಿಟ್ಟು ಕೇವಲ ಹೀನವಾದ ಕಾಪಾಲವೃತ್ತಿಯನ್ನು ಅವಲಂಬಿಸಿ ಜೀವಿಸಿದರೆ ಲೋಕವು ನಿನ್ನನ್ನು ದೂಷಿಸುತ್ತದೆ.
ಟಿಪ್ಪಣಿ - ಸಂತ್ಯಜ್ಯ ರಾಜ್ಯಮೃದ್ಧಂ ತ್ವಾಮ್ ಇತ್ಯತ್ರ ಋದ್ಧಂ ರಾಜ್ಯಂ ಸಂತ್ಯಜ್ಯ ಗತಂ ತ್ವಾಂ ಅಯಂ ಲೋಕಃ ಪ್ರವಿದಿಷ್ಯತಿ ಇತಿ ಯೋಜನಾ ॥
ಸಮೃದ್ಧವಾದ ರಾಜ್ಯವನ್ನು ಪರಿತ್ಯಾಗ ಮಾಡಿದ ನಿನ್ನನ್ನು ಈ ಲೋಕವು ನಿಂದಿ- ಸುತ್ತದೆಂದು ಯೋಜನೆ ಮಾಡಿಕೊಳ್ಳಬೇಕು.
ಸರ್ವಾರಂಭಾನ್ ಸಮುತ್ಸೃಜ್ಯ ಹತಸ್ವಸ್ತಿರಕಿಂಚನಃ |
ಕಸ್ಮಾದಾಶಂಸಸೇ ಭೈಕ್ಷ್ಯಂ ಕರ್ತುಂ ಪ್ರಾಕೃತವತ್ ಪ್ರಭೋ ॥8॥
ಪ್ರಭುವೇ! ನೀನೀಗ ಸಮಸ್ತಪ್ರಯತ್ನಗಳನ್ನು ಬಿಟ್ಟು ಮುಂದಿನ ಅಭ್ಯುದಯ- ಗಳನ್ನೆಲ್ಲಾ ತೊರೆದು ದರಿದ್ರನಾಗಿ, ಅವಿವೇಕಿಯಂತೆ ಭಿಕ್ಷುವಾಗಬೇಕೆಂದು ಏಕೆ ಆಸೆ ಪಡುತ್ತಿರುವಿ ?
ಅಸ್ಮಿನ್ ರಾಜಕುಲೇ ಜಾತೋ ಜಿತ್ವಾ ಕೃತ್ಸ್ನಾ ವಸುಂಧರಾಮ್ |
ಧರ್ಮಾರ್ಥಾವಖಿಲೌ ಹಿತ್ವಾ ವನಂ ಮೌಢ್ಯಾತ್ ಪ್ರತಿಷ್ಠಸೇ ॥9॥
ಈ ಸರ್ವಶ್ರೇಷ್ಠವಾದ ಕುರುಕುಲದಲ್ಲಿ ಹುಟ್ಟಿ, ಭೂಮಿಯನ್ನೆಲ್ಲಾ ಜಯಿಸಿದ ನೀನು ಈಗ ಮೂರ್ಖತನದಿಂದ ಧರ್ಮಾರ್ಥಗಳನ್ನೆಲ್ಲಾ ತ್ಯಜಿಸಿ ಏತಕ್ಕಾಗಿ ಕಾಡಿಗೆ ಹೊರಟುನಿಂತಿರುವೆ ?
ಯದೀಮಾನಿ ಹವೀಂಷೀಹ ವಿಮಥಿಷ್ಯಂತ್ಯಸಾಧವಃ |
ಭವತಾ ವಿಪ್ರಹೀಣಾನಿ ಪ್ರಾಪ್ತಂ ತ್ವಾಮೇವ ಕಿಲ್ಬಿಷಮ್ ॥10॥
ಅಣ್ಣಾ! ನೀನು ಬಿಟ್ಟು ಹೋದ ಮೇಲೆ ಅನಾಥವಾದ ಈ ರಾಜ್ಯವೆಂಬ ಹವಿಸ್ಸನ್ನು ಅಲ್ಪಜನಗಳು ಬಂದು ಆಕ್ರಮಿಸಿ ಉಪಭೋಗಿಸಿ ಕೆಡಿಸುವುದಾದರೆ ಆ ಪಾಪಕ್ಕೆ ನೀನೇ ಭಾಗಿಯಾಗುವೆಯಲ್ಲವೇ?
ವಿವರಣೆ - ರಾಜ್ಯವನ್ನು ಧರ್ಮಕ್ಕೋಸ್ಕರ ಗೆದ್ದಿರುವಿ. ಇದನ್ನು ಪರಿಪಾಲನೆ ಮಾಡಿರುವುದೂ ಕೂಡ ನಿನ್ನ ಕರ್ತವ್ಯವಾಗಿದೆ. ರಾಜ್ಯವನ್ನು ಗೆದ್ದಮೇಲೆ ಯಜ್ಞಕ್ಕಾಗಿ ಸಂಗ್ರಹಿಸಲ್ಪಟ್ಟ ಸಾಮಗ್ರಿಗಳನ್ನು ವಿನಿಯೋಗ ಮಾಡುವುದು ನಿನ್ನ ಕರ್ತವ್ಯವಾಗಿದೆ. ಒಂದು ವೇಳೆ ನೀನು ರಾಜ್ಯವನ್ನು ಪರಿಪಾಲನೆ ಮಾಡದಿದ್ದರೆ. ಯಜ್ಞಯಾಗಾದಿಗಳನ್ನು ಆಚರಿಸದಿದ್ದರೆ, ಆಗ ನೀನು ಅನರ್ಥಕ್ಕೆ ಭಾಗಿಯಾಗುವಿ. ಎಲ್ಲವನ್ನು ಪರಿತ್ಯಾಗ ಮಾಡಿ, ಅರಣ್ಯಕ್ಕೆ ಹೋದರೆ ನಿನ್ನನ್ನೇ ಎಲ್ಲರೂ ಅನುಸರಣೆ ಮಾಡುತ್ತಾರೆ. ದೇಶದಲ್ಲಿ ಧರ್ಮಕಾರ್ಯವೇ ನಡೆಯುವುದಿಲ್ಲ. ಯಜ್ಞಗಳೂ ಕೂಡ ನಡೆಯುವುದಿಲ್ಲ. ಭಗವಂತನಿಗೆ ಸಮರ್ಪಿಸಬೇಕಾದ ವಸ್ತುಗಳನ್ನು ಭೋಗಿಜನರು ತಮ್ಮ ಭೋಗಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. ಆ ಎಲ್ಲಾ ಪಾಪವು ನಿನ್ನನ್ನೇ ಸುತ್ತುವರೆಯುತ್ತದೆ. ಧರ್ಮಲೋಪದ ಪಾಪವೂ ಕೂಡ ನಿನಗೆ ಬರುತ್ತದೆ. ಆದ್ದರಿಂದ ನೀನು ಅನಾಥವಾದ ಈ ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗುವುದು ಸರ್ವಥಾ ಯುಕ್ತವಲ್ಲ.
ಆಕಿಂಚನ್ಯಂ ಮುನೀನಾಂ ಚ ಇತಿ ವೈ ನಹುಷೋಽಬ್ರವೀತ್ |
ಕೃತ್ವಾ ನೃಶಂಸಂ ಹ್ಯಧನೇ ಧಿಗಸ್ತ್ವಧನತಾಮಿಹ ॥11॥
ಧನಹೀನನಾಗಿರುವುದು ಮುನಿಗಳ ಧರ್ಮವು, ರಾಜರ ಧರ್ಮವಲ್ಲವೆಂದು ನಹುಷನು ದಾರಿದ್ರ್ಯವನ್ನು ನಿಂದಿಸಿರುವನು. ಧನವಿಲ್ಲದ ಕಾಲದಲ್ಲಿ ಮನುಷ್ಯನು ಕ್ರೂರ ಕೆಲಸಗಳನ್ನು ನಡೆಸುವನು. ಆದ್ದರಿಂದ ಧನಹೀನತ್ವಕ್ಕೆ ಧಿಕ್ಕಾರ ಎಂದು ಹೇಳಿರುವನು.
ಟಿಪ್ಪಣಿ - ಆಕಿಂಚನ್ಯಂ ಮುನೀನಾಮ್ ಇತ್ಯತ್ರ ಅಕಿಂಚನಸ್ಯ ಭಾವಃ ಆಕಿಂಚನ್ಯಂ ವೈರಾಗ್ಯಮ್ | ಕೃತ್ವಾ ನೃಶಂಸಂ ನಿಧನೇ ಇತ್ಯತ್ರ ನಿಧನೇ ಯುದ್ಧೇ ನೃಶಂಸಂ ಕೃತ್ವಾ ಪುನಃ ಅಧನತಾಂ ಧನಾಶಾರಾಹಿತ್ಯಂ ವೈರಾಗ್ಯಮಿತ್ಯರ್ಥಃ, ಧಿಗಸ್ತು `ಅಕಿಂಚನಸ್ಯ ಭಾವಃ ಆಕಿಂಚನ್ಯಂ' ಎಂಬ ವ್ಯುತ್ಪತ್ತಿಯಿಂದ ವೈರಾಗ್ಯ.
ಅಶ್ವಸ್ತನಮೃಷೀಣಾಂ ಹಿ ವಿದ್ಯತೇ ವೇದ ತದ್ ಭವಾನ್ |
ಯೇ ತ್ವಿಮಂ ಧರ್ಮಮಿತ್ಯಾಹುರ್ಧನಾದೇಷ ಪ್ರವರ್ತತೇ ॥12॥
ಮರುದಿನದ ಆಹಾರಕ್ಕಾಗಿ ಏನೂ ಇಲ್ಲದ ಸ್ಥಿತಿಯು ಋಷಿಗಳಿಗೆ ಮಾತ್ರವೇ
ವಿಧಿಸಲ್ಪಟ್ಟಿದೆ ಎಂಬುದನ್ನು ನೀನೂ ತಿಳಿದಿರುವೆ. ಮತ್ತು ಜಗತ್ತಿನಲ್ಲಿ ಕ್ಷತ್ರಿಯಧರ್ಮ -ವನ್ನು ಜೀವನದ ರೀತಿಯನ್ನಾಗಿ ಹೇಗೆ ನಿರೂಪಿಸಿರುತ್ತಾರೋ, ಆ ಧರ್ಮವು ಧನಮೂಲಕವೇ ಆಗಿರುತ್ತದೆ.
ಟಿಪ್ಪಣಿ - ಅಶ್ವಸ್ತನಮೃಷೀಣಾಂ ಹಿ ಇತ್ಯತ್ರ ಶ್ವಸ್ತನಧನಧಾನ್ಯಾದ್ಯಭಾವಃ ಅಶ್ವಸ್ತನಮ್ ॥
ನಾಳೆಗಾಗಿ ಧನ-ಧಾನ್ಯಗಳನ್ನು ಸಂಗ್ರಹ ಮಾಡದೇ ಇರುವುದನ್ನು ಅಶ್ವಸ್ತನ ಎಂದು ಕರೆಯುತ್ತಾರೆ.
ವಿವರಣೆ - `ಅಸಂತುಷ್ಟೋ ದ್ವಿಜೋ ನಷ್ಟಃ ಸಂತುಷ್ಟಶ್ಚ ಮಹೀಪತಿಃ' ತೃಪ್ತನಾಗದ ಬ್ರಾಹ್ಮಣನು ಅವನತಿಯನ್ನು ಹೊಂದುತ್ತಾನೆ. ಧನಕನಕಾದಿಗಳಿಂದ ತೃಪ್ತನಾದ ರಾಜನು ಅವನತಿಯನ್ನು ಹೊಂದುತ್ತಾನೆ ಎಂಬ ಮಾತಿನಂತೆ ಬ್ರಾಹ್ಮಣ- ನಿಗೆ ಎಂದೂ ಸಹ

ಅತೃಪ್ತಿಯು ಇರಬಾರದು. ರಾಜನಾದವನಿಗೆ ಎಷ್ಟೇ ಧನ- ಕನಕಾದಿಗಳು ಬಂದರೂ ಕೂಡ ತೃಪ್ತಿಯು ಇರಬಾರದು. ಮತ್ತಷ್ಟು ಹಣ- ಸಂಪಾದನೆ ಮಾಡಬೇಕೆಂಬ ಕಾತುರ ಇರಬೇಕು. ಹಣವನ್ನು ಯಥೇಚ್ಛವಾಗಿ ಸಂಪಾದನೆ ಮಾಡಿ, ರಾಜ್ಯಕೋಶಾದಿಗಳನ್ನು ವೃದ್ಧಿಗೊಳಿಸುತ್ತಲೇ ಇರಬೇಕು. ಇದುವೇ ನಿಜವಾದ ರಾಜಧರ್ಮವಾಗಿದೆ. ಇದನ್ನೆಲ್ಲಾ ಪರಿತ್ಯಾಗ ಮಾಡಿ, ಜೀವನಕ್ಕೆ ಬೇಕಾಗುವಷ್ಟು ಮಾತ್ರ ಭಿಕ್ಷಾಟನೆಯನ್ನು ಮಾಡಿಕೊಂಡು, ಸಂಚರಿ- ಸುವುದು ಕ್ಷತ್ರಿಯರ ಧರ್ಮವಲ್ಲ. ಇದು ಬ್ರಾಹ್ಮಣರ ಧರ್ಮವಾಗಿದೆ. ಬ್ರಾಹ್ಮಣರ ಧರ್ಮವನ್ನು ಕ್ಷತ್ರಿಯರು ಅನುಸರಿಸುವುದು ಅಧರ್ಮವಾಗುತ್ತದೆ. ಕ್ಷತ್ರಿಯರ ಧರ್ಮವನ್ನು ಬ್ರಾಹ್ಮಣರು ಅನುಸರಿಸುವುದೂ ಕೂಡ ಅಧರ್ಮವಾಗುತ್ತದೆ. ಆದ್ದರಿಂದ ನಿನ್ನ ವರ್ತನೆಯು ಧರ್ಮವಿಪರ್ಯಾಸವನ್ನು ಉಂಟುಮಾಡುತ್ತಿದೆ.

ಧರ್ಮಂ ಸಂಹರತೇ ತಸ್ಯ ಧನಂ ಹರತಿ ಯಸ್ಯ ಯಃ |
ಹ್ರಿಯಮಾಣೇ ಧನೇ ರಾಜನ್ ವಯಂ ಕಸ್ಯ ಕ್ಷಮೇಮಹಿ ॥13॥

ಒಬ್ಬನ ಧನವನ್ನು ಮತ್ತೊಬ್ಬನು ಅಪಹರಿಸಿದರೆ, ಅವನ ಧರ್ಮವನ್ನೇ ಅಪಹರಿಸಿದಂತಾಗುವುದು. ನಮ್ಮ ಸ್ಥಿತಿಯು ಈಗ ಹಾಗೆಯೇ ಆಗಿದೆ. ನಮ್ಮ ಧನ- ವನ್ನು ಇನ್ನೊಬ್ಬರು ಅಪಹರಿಸಿಕೊಂಡಾಗ ಹೇಗೆ ತಾನೇ ನಾವು ಕ್ಷಮಿಸಿ ಸುಮ್ಮನಿರ- ಬಹುದು?

ವಿವರಣೆ - ಜೀವನದಲ್ಲಿ ಸಂಪತ್ತು ಮತ್ತು ಧರ್ಮ ಎರಡೂ ಕೂಡ ಇರಬೇಕು. ಒಂದಕ್ಕೊಂದು ಇವು ಪೂರಕಗಳಾಗಿವೆ. ಒಬ್ಬನ ಹಣವನ್ನು ಅಪಹಾರ ಮಾಡಿದರೆ ಅವನ ಧರ್ಮವನ್ನೂ ಕೂಡ ಅಪಹಾರ ಮಾಡಿದಂತಾಗುತ್ತದೆ. ಪ್ರಕೃತ ಶತ್ರುಗಳಾದ ದುರ್ಯೋಧನಾದಿಗಳು ನಮ್ಮ ಸಂಪತ್ತನ್ನು ಅಪಹಾರ ಮಾಡುವ ಮೂಲಕ ನಮ್ಮ ಧರ್ಮವನ್ನೂ ಕೂಡ ಅಪಹಾರ ಮಾಡಿದರು. ಹದಿಮೂರು ವರ್ಷಗಳ ಕಾಲ ನಾವು ಕ್ಷತ್ರಿಯಧರ್ಮವನ್ನು ಅನುಷ್ಠಾನ ಮಾಡಲಾಗದೇ ಧರ್ಮಚ್ಯುತರಾದೆವು. ಹೀಗೆ ಯಾರು ಸಂಪತ್ತನ್ನು ಅಪಹಾರ ಮಾಡುತ್ತಾರೋ, ಅವರ ವಿಷಯದಲ್ಲಿ ನಾವು ಕ್ಷಮೆಯಿಂದಿರಲು ಸಾಧ್ಯವೇ ಇಲ್ಲ. ನಮ್ಮ ಧರ್ಮ- ವನ್ನು ಪರಿಪಾಲನೆ ಮಾಡಿಕೊಳ್ಳುವುದಕ್ಕಾಗಿ ಶತ್ರುಗಳಿಂದ ಅಪಹರಿಸಲ್ಪಟ್ಟ ರಾಜ್ಯವನ್ನು ಕ್ಷತ್ರಿಯೋಚಿತವಾದ ಯುದ್ಧದಲ್ಲಿ ಜಯಗಳಿಸಿದ್ದೇವೆ. ಇದು ನಮಗೆ ಧರ್ಮವೇ ಆಗಿದೆ.

ಅಭಿಶಸ್ತಂ ಪ್ರಪಶ್ಯಂತಿ ದರಿದ್ರಂ ಪಾರ್ಶ್ವತಃ ಸ್ಥಿತಮ್ |
ದಾರಿದ್ರ್ಯಂ ಪಾತಕಂ ಲೋಕೇ ಕಸ್ತಚ್ಛಂಸಿತುಮರ್ಹತಿ ॥14॥

ಜಗತ್ತಿನಲ್ಲಿ ಜನರು ತಮ್ಮ ಪಕ್ಕದಲ್ಲಿ ನಿಂತಿರುವ ದರಿದ್ರನನ್ನು ನೋಡಿ, ಇವನು ಶಾಪದಿಂದ ಹುಟ್ಟಿದ್ದಾನೆ ಎಂದು ತಿಳಿಯುತ್ತಾನೆ. ಈ ಲೋಕದಲ್ಲಿ ದಾರಿದ್ರ್ಯವು ಪಾತಕವೆಂದೇ ಭಾವಿಸಲ್ಪಟ್ಟಿದೆ. ಅಂಥ ದಾರಿದ್ರ್ಯವನ್ನು ನಿನ್ನ ಹೊರತು ಬೇರೆ ಯಾರು ತಾನೇ ಪ್ರಶಂಸಿಸುವರು.

ಟಿಪ್ಪಣಿ - ಅಭಿಶಸ್ತಂ ಪ್ರಪಶ್ಯಂತಿ ಇತ್ಯತ್ರ ಪಾರ್ಶ್ವತಃ ಸ್ಥಿತಂ ದರಿದ್ರಮ್ ಅಭಿಶಸ್ತಮ್ ಅಭಿತಃ ಶಾಸನಂ ಶಿಕ್ಷಾಂ ಪ್ರಾಪ್ತಮ್, ಸರ್ವೈರ್ಧಿಕ್ಕೃತಮಿತ್ಯರ್ಥಃ, ಪ್ರಪಶ್ಯಂತಿ | ಶಂಸಿತುಂ ಸ್ತೋತುಮ್ |

ಪಕ್ಕದಲ್ಲಿರುವ ದರಿದ್ರನನ್ನು ಕಂಡು ಜನರು ಇವನು ಧಿಕ್ಕಾರಕ್ಕೆ ಒಳಗಾದವ- ನೆಂದು ಕಾಣುತ್ತಾರೆ. `ಶಂಸಿತುಂ' ಎಂದರೆ ಸ್ತುತಿಸಲು ಎಂದರ್ಥ.

ಪತಿತಃ ಶೋಚ್ಯತೇ ರಾಜನ್ ನಿರ್ಧನಶ್ಚಾಪಿ ಶೋಚ್ಯತೇ |
ವಿಶೇಷಂ ನಾಧಿಗಚ್ಛಾಮಿ ಪತಿತಸ್ಯಾಧನಸ್ಯ ಚ ॥15॥

ಪತಿತನು ಹೇಗೋ ನಿರ್ಧನನೂ ಹಾಗೆಯೇ ವ್ಯಸಕ್ಕೀಡು ಮಾಡಲ್ಪಡುವನು. ಆದ್ದರಿಂದ ಪತಿತನಿಗೂ, ದರಿದ್ರನಿಗೂ ನಾನು ಯಾವ ವಿಧವಾದ ಅಂತರವನ್ನು ಕಾಣಲಾರೆ. (ಧರ್ಮಭ್ರಷ್ಟನನ್ನು ಪತಿತನೆನ್ನುತ್ತಾರೆ).

ಅರ್ಥೇಭ್ಯೋ ಹಿ ವಿವೃದ್ಧೇಭ್ಯಃ ಸಂಭೃತೇಭ್ಯಸ್ತತಸ್ತತಃ |
ಕ್ರಿಯಾಃ ಸರ್ವಾಃ ಪ್ರವರ್ತಂತೇ ಪರ್ವತೇಭ್ಯ ಇವಾಪಗಾಃ ॥16॥

ಪರ್ವತಗಳಿಂದ ಅನೇಕ ನದಿಗಳು ಬಂದು ಒಟ್ಟಾಗಿ ಸೇರಿ ಪ್ರವಾಹವಾಗುವಂತೆ ಹಣವು ನಾನಾಕಡೆಯಿಂದ ಕಪ್ಪ-ಕಾಣಿಕೆಗಳ ರೂಪದಲ್ಲಿ ಹರಿದು ಬಂದು ಬೊಕ್ಕಸವನ್ನು ತುಂಬುತ್ತದೆ. ಅದರಿಂದ ಎಲ್ಲ ವಿಧವಾದ ಶುಭಕರ್ಮಗಳಿಗೂ ಹಣವೇ ಮೂಲವಾಗಿರುತ್ತದೆ.

ಅರ್ಥಾದ್ ಧರ್ಮಶ್ಚ ಕಾಮಶ್ಚ ಸ್ವರ್ಗಶ್ಚೈವ ನರಾಧಿಪ |
ಪ್ರಾಣಯಾತ್ರಾ ಹಿ ಲೋಕಸ್ಯ ವಿನಾರ್ಥಂ ನ ಪ್ರಸಿದ್ಧ್ಯತಿ ॥17॥

ನರೇಶ್ವರನೇ! ಧನದಿಂದಲೇ ಧರ್ಮಾಚರಣೆ, ಧನದಿಂದಲೇ ಕಾಮೋಪ- ಭೋಗಗಳನ್ನು ಅನುಭವಿಸಲು ಸಾಧ್ಯ. ಅಷ್ಟೇ ಏಕೆ ಹಣವಿಲ್ಲದ ಮನುಷ್ಯನಿಗೆ ಜೀವನ ಯಾತ್ರೆಯೂ ನಡೆಯುವುದಿಲ್ಲ.

ಅರ್ಥೇನ ಹಿ ವಿಹೀನಸ್ಯ ಪುರುಷಸ್ಯಾಲ್ಪಮೇಧಸಃ |
ವ್ಯುಚ್ಛಿದ್ಯಂತೇ ಕ್ರಿಯಾಃ ಸರ್ವಾ ಗ್ರೀಷ್ಮೇ ಕುಸರಿತೋ ಯಥಾ ॥18॥

ಗ್ರೀಷ್ಮಋತುವಿನಲ್ಲಿ ಚಿಕ್ಕ-ಚಿಕ್ಕ ನದಿಗಳು ಬತ್ತಿಹೋಗುವಂತೆ ಅಲ್ಪಬುದ್ಧಿಯುಳ್ಳ ಧನಹೀನನಾದ ಪುರುಷನ ಕಾರ್ಯಗಳೆಲ್ಲವೂ ನಡುವೆ ಮುರಿದು ಹೋಗುತ್ತವೆ.

ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾಂಧವಾಃ |
ಯಸ್ಯಾರ್ಥಾಃ ಸ ಪುಮಾಂಲ್ಲೋಕೇ ಯಸ್ಯಾರ್ಥಾಃ ಸ ಚ ಪಂಡಿತಃ ॥19॥

ಹಣವು ಯಾರ ಬಳಿ ಇರುತ್ತದೋ, ಅವನ ಬಳಿಗೆ ಮಿತ್ರರು ಬರುತ್ತಾರೆ. ಐಶ್ವರ್ಯ ಇರುವವನ ಬಳಿಗೆ ಬಂಧುಗಳು ಹುಡುಕಿಕೊಂಡು ಬರುತ್ತಾರೆ. ಹಣ- ವಿದ್ದವನೇ ಲೋಕದಲ್ಲಿ ಪುರುಷನು. ಧನಸಂಪತ್ತನ್ನು ಹೊಂದಿದವನೇ ಪಂಡಿತನು.

ವಿವರಣೆ - ಶ್ರೀಮಂತರಾಗಿದ್ದಾಗ ಹುಡುಕಿಕೊಂಡು, ಸಾವಿರಾರು ಜನರು ಬರುತ್ತಾರೆ. ಸಂಬಂಧವಿಲ್ಲದವರೆಲ್ಲರೂ ನಾವು ನಿಮ್ಮ ಸಂಬಂಧಿಗಳೆನ್ನುತ್ತಾರೆ. ನಾವು ನಿಮ್ಮ ಮಿತ್ರರೆನ್ನುತ್ತಾರೆ. ದೂರದ ಬಂಧುಗಳು ಹತ್ತಿರವಾಗುತ್ತಾರೆ. ಐಶ್ವರ್ಯವಿರುವ ನನಗೆ ಸಮಸ್ತ ಜಗತ್ತೇ ಗೌರವ ನೀಡುತ್ತದೆ. ಐಶ್ವರ್ಯವಿದ್ದ- ವನೇ ಪಂಡಿತನು. ಅವನೇ ವಿದ್ಯಾವಂತ. ಇದು ಜಗತ್ತಿನ ನೀತಿಯೇ ಆಗಿದೆ. ಆದ್ದರಿಂದ

ಹಣವಿದ್ದವನೇ ಸುಖವಾಗಿ ಬದುಕಲು ಸಾಧ್ಯವೆಂದು ಅರ್ಜುನನು ಇಲ್ಲಿ ಪ್ರತಿಪಾದನೆ ಮಾಡುತ್ತಿದ್ದಾನೆ.
ಅಧನೇನಾರ್ಥಕಾಮೇನ ನಾರ್ಥಃ ಶಕ್ಯೋ ವಿವಿತ್ಸತಾ |
ಅರ್ಥೈರರ್ಥಾ ನಿಬಧ್ಯಂತೇ ಗಜೈರಿವ ಮಹಾಗಜಾಃ ॥20॥
ದರಿದ್ರನಾದವನು ಅರ್ಥವನ್ನು ಅಪೇಕ್ಷಿಸಿದರೂ ಅವನಿಂದ ಅಪಾರ ಧನವನ್ನು ಸಂಗ್ರಹಿಸಲು ಸಾಧ್ಯವಾಗುವುದಿಲ್ಲ. ಮೊದಲೇ ಸ್ವಲ್ಪ ಧನವನ್ನು ಸಂಗ್ರಹಿಸಿ ಆ ಧನದಿಂದ ಅಪಾರ ಧನವನ್ನು ಸಂಗ್ರಹಿಸಬೇಕು. ಆನೆಗಳಿಂದ ಆನೆಯನ್ನು ಹಿಡಿಯುವ ಹಾಗೆ ಹಣದಿಂದಲೇ ಹಣವನ್ನು ಸಂಪಾದಿಸಿ ವೃದ್ಧಿಗೊಳಿಸಬೇಕು.
ವಿವರಣೆ - ಶ್ರೀಮಂತ ಯಾರಲ್ಲಿ ಹಣವಿರುತ್ತದೋ, ಅವರಿಗಷ್ಟೇ ಜನರು ಹಣವನ್ನು ನೀಡುತ್ತಾರೆ. ಬಡವನಿಗೆ ಜನರು ಹಣವನ್ನು ನೀಡುವುದಿಲ್ಲ. ನಿರ್ಧನನು ಊಟ ಬಟ್ಟೆಗಳನ್ನಷ್ಟೇ ಸಂಪಾದನೆ ಮಾಡಬಹುದು. ಆಸ್ತಿಪಾಸ್ತಿ- ಹಣವನ್ನು ಸಂಗ್ರಹಣೆ ಮಾಡಲು ಅವನಿಂದ ಸಾಧ್ಯವಾಗುವುದಿಲ್ಲ. ರಾಜ್ಯ- ಕೋಶಾದಿಗಳನ್ನು ಪಡೆದುಕೊಂಡು, ಐಶ್ವರ್ಯವಂತನಾದ ನೀನು ಪುನಃ ದಾರಿದ್ರ್ಯವನ್ನು ಬಯಸುವುದು ಸೂಕ್ತವಲ್ಲ.
ಟಿಪ್ಪಣಿ - ಅಧನೇನಾರ್ಥಕಾಮೇನ ಇತ್ಯತ್ರ ಅರ್ಥಕಾಮೇನ ಪ್ರಯೋಜನ-ಕಾಮೇನ ॥ `ಕಾಮೇನ' ಎಂಬುದಕ್ಕೆ ಪ್ರಯೋಜನವನ್ನು ಅಪೇಕ್ಷಿಸುವವನಿಂದ ಎಂದರ್ಥ.
ಧರ್ಮಃ ಕಾಮಶ್ಚ ಸ್ವರ್ಗಶ್ಚ ಹರ್ಷಃ ಕ್ರೋಧಃ ಶ್ರುತಂ ದಮಃ |
ಅರ್ಥಾದೇತಾನಿ ಸರ್ವಾಣಿ ಪ್ರವರ್ತಂತೇ ನರಾಧಿಪ ॥21॥
ಪ್ರಜಾಪಾಲಕನೇ ! ಧರ್ಮ, ಕಾಮ, ಸ್ವರ್ಗ, ಸಂತೋಷ, ಕ್ರೋಧ, ಶಾಸ್ತ್ರಜ್ಞಾನ, ಇಂದ್ರಿಯನಿಗ್ರಹ, ಇವೆಲ್ಲವೂ ಧನದಿಂದಲೇ ಸಿದ್ಧವಾಗುತ್ತವೆ. ಧನದಿಂದಲೇ ಶೋಭಿಸುತ್ತವೆ.
ವಿವರಣೆ - ವಿದ್ವಾಂಸರು ಶ್ರೀಮಂತರ ಮನೆಗಳಿಗೆ ಹೋಗಿ ಪಾಠವನ್ನು ಹೇಳುವ ಮೂಲಕ ಸಂಭಾವನೆಯನ್ನು ಪಡೆದುಕೊಳ್ಳುತ್ತಾರೆ. ಹಣವಿದ್ದರೆ, ಶಾಸ್ತ್ರ- ಗಳ ಅಧ್ಯಯನವು ಸುಲಭವಾಗುತ್ತದೆಂಬುದು ಇದರ ಅಭಿಪ್ರಾಯ.
ಧನಾತ್ ಕುಲಂ ಪ್ರಭವತಿ ಧನಾದ್ ಧರ್ಮಃ ಪ್ರವರ್ಧತೇ |
ನಾಧನಸ್ಯಾಸ್ತ್ಯಯಂ ಲೋಕೋ ನ ಪರಃ ಪುರುಷೋತ್ತಮ ॥22॥
ಧನದಿಂದಲೇ ಕುಲಗಳು ಶೋಭಿಸುವವು. ಧನದಿಂದಲೇ ಧರ್ಮವು ಪ್ರವರ್ಧ- ಮಾನವಾಗುವುದು. ಧನವಿಲ್ಲದವನಿಗೆ ಇಹಪರಗಳೆರಡೂ ಇರುವುದಿಲ್ಲ.
ನಾಧನೋ ಧರ್ಮಕೃತ್ಯಾನಿ ಯಥಾವದನುತಿಷ್ಠತಿ |
ಧನಾದ್ಧಿ ಧರ್ಮಃ ಸ್ರವತಿ ಶೈಲಾದ್ ಗಿರಿನದೀ ಯಥಾ ॥23॥
ಧನವಿಲ್ಲದವನು ಯಾವ ಧರ್ಮಕಾರ್ಯಗಳನ್ನು ಸರಿಯಾಗಿ ನಡೆಸಲಾರನು. ಪರ್ವತ ಬೆಟ್ಟಗಳಿಂದ ನದಿಯು ಹೇಗೆ ತಡೆಯಿಲ್ಲದೆ ಹರಿಯುವುದೋ, ಹಾಗೇ ಧನದಿಂದಲೇ ಧರ್ಮವು ನಿರಂಕುಶವಾಗಿ ಮುಂದುವರಿಯುವುದು.
ಟಿಪ್ಪಣಿ - ಶೈಲಾದ್ ಗಿರಿನದೀ ಯಥಾ ಇತ್ಯತ್ರ ಗಿರಿನದೀ ಗಿರಿಮೂಲಾ ನದೀ ಶೈಲಾದಿವ | `ಗಿರಿನದೀ' ಎಂದರೆ ಗಿರಿಮೂಲಕವಾದ ನದಿಯು ಪರ್ವತದಿಂದ ಧುಮುಕುವಂತೆ ಎಂದರ್ಥ.
ಯಃ ಕೃಶಾರ್ಥಃ ಕೃಶಗವಃ ಕೃಶಭೃತ್ಯಃ ಕೃಶಾತಿಥಿಃ |
ಸ ವೈ ರಾಜನ್ ಕೃಶೋ ನಾಮ ನ ಶರೀರಕೃಶಃ ಕೃಶಃ ॥24॥
ರಾಜನೇ! ಯಾರಲ್ಲಿ ಧನ, ಗೋವು, ಭೃತ್ಯರು, ಅತಿಥಿಗಳು ಸಮೃದ್ಧವಾಗಿಲ್ಲ- ದುದರಿಂದ ಈ ಎಲ್ಲ ಸಂಪತ್ತಿನಿಂದ ಕೃಶನೆನಿಸುವನೋ, ಅವನೇ ನಿಜವಾದ ಕೃಶನೆಂದು ಹೇಳಬೇಕು. ಶರೀರದಿಂದ ಕೃಶನಾದವನನ್ನು ಕೃಶನೆನ್ನಬಾರದು.
ವಿವರಣೆ - ಯಾರು ಶರೀರದಿಂದ ಕೃಶವಾಗಿದ್ದಾನೋ, ಅವನನ್ನು ಕೃಶನೆಂದು ಜಗತ್ತು ಹೇಳುವುದಿಲ್ಲ. ಯಾರ ಬಳಿ, ಹಣವು ಇರುವುದಿಲ್ಲವೋ, ಗೋಸಂಪತ್ತು, ಮೃತ್ಯುಸಂಪತ್ತು, ಶಿಷ್ಯಸಂಪತ್ತು ಇರುವುದಿಲ್ಲವೋ, ಅಂಥವನನ್ನೇ ಕೃಶನೆಂದು ಜಗತ್ತು ತಿಳಿಯುತ್ತದೆ.
ಅವೇಕ್ಷಸ್ವ ಯಥಾನ್ಯಾಯಂ ಪಶ್ಯ ದೇವಾಸುರಂ ಯಥಾ |
ರಾಜನ್ ಕಿಮನ್ಯಜ್-ಜ್ಞಾತೀನಾಂ ವಧಾದ್ ಋಧ್ಯಂತಿ ದೇವತಾಃ ॥25॥
ಮಹಾರಾಜನೇ! ನ್ಯಾಯಸಮ್ಮತವಾಗಿ ವಿಚಾರ ಮಾಡು. ದೇವಾಸುರರ ವಿಚಾರ -ವೇನು ಎಂಬುದನ್ನು ನೀನು ಚೆನ್ನಾಗಿ ವಿಮರ್ಶಿಸು. ದೇವತೆಗಳು ತಮ್ಮ ಜ್ಞಾತಿ- ಬಾಂಧವರಾದ ಅಸುರರ ವಧೆಯಾಗುವುದನ್ನು ನಿರಂತರ ಅಪೇಕ್ಷಿಸುತ್ತಾರೆ.
ಟಿಪ್ಪಣಿ - ಅವೇಕ್ಷಸ್ವ ಯಥಾನ್ಯಾಯಂ ಪಶ್ಯ ದೈವಾಸುರಂ ಯಥಾ ಇತ್ಯತ್ರ ದೈವಾಸುರಂ ದೇವಾಸುರಸಂಬಂಧಿಕರ್ಮ, ಸ್ವಜ್ಯೇಷ್ಠದಾಯಾದಾನ್ ಅಸುರಾನ್ ಹತ್ವಾ ಕನಿಷ್ಠದಾಯಾದಾಃ ಸುರಾಃ ರಾಜ್ಯಮನುಭವಂತಿ ತದ್ ಯಥಾ ಯಥಾವತ್ ಪಶ್ಯ | ಯಥಾನ್ಯಾಯಂ ತನ್ನ್ಯಾಯಮನತಿಕ್ರಮ್ಯ ಅವೇಕ್ಷಸ್ವ ಸ್ವಜ್ಞಾತಿವಧೇಽಪಿ ದೃಷ್ಟಿಂ ದಿಶೇತಿ ಯೋಜನಾ ॥ ದೇವತೆಗಳು ತಮ್ಮ ಹಿರಿಯದಾಯಾದಿಗಳೆನಿಸಿದ ಅಸುರರನ್ನು ಕೊಂದು ಸ್ವರ್ಗರಾಜ್ಯವನ್ನು ಅನುಭವಿಸುತ್ತಿದ್ದಾರೆ. ಅದೇ ನ್ಯಾಯ- ವನ್ನು ನೀನೂ ಸಹ ಅನುಸರಿಸಿ ನಿನ್ನ ಜ್ಞಾತಿವಧೆಯ ಬಗ್ಗೆ ಆಲೋಚಿಸು. ನಿನಗಿಂತ ಶ್ರೇಷ್ಠರಾದ ದೇವತೆಗಳಂತೆ ನಡೆದುಕೋ
ನಚೇದ್ ಹರ್ತವ್ಯಮನ್ಯಸ್ಯ ಕಥಂ ತದ್ ಧರ್ಮಮಾರಭೇತ್ |
ಏತಾವಾನೇವ ವೇದೇಷು ನಿಶ್ಚಯಃ ಕವಿಭಿಃ ಕೃತಃ ॥26॥
ಅಧ್ಯೇತವ್ಯಾ ತ್ರಯೀ ನಿತ್ಯಂ ಭವಿತವ್ಯಂ ವಿಪಶ್ಚಿತಾ |
ಸರ್ವಥಾ ಧನಮಾಹಾರ್ಯಂ ಯಷ್ಟವ್ಯಂ ಚಾಪಿ ಯತ್ನತಃ ॥27॥
ರಾಜನಾದವನು ಮತ್ತೊಬ್ಬರ ಧನವನ್ನು ತೆಗೆದುಕೊಳ್ಳದಿದ್ದರೆ, ಅವನು ಧರ್ಮವನ್ನು ನಡೆಸುವುದಕ್ಕೆ ಬೇರೆ ದಾರಿ ಏನು? ವೇದಶಾಸ್ತ್ರಗಳನ್ನು ತಿಳಿದ ವಿದ್ವಾಂಸರು ಇದನ್ನೇ ವೇದಗಳಿಂದ ನಿರೂಪಿಸಿ ಹೇಳಿರುವರು. ವೇದಗಳನ್ನು ನಿತ್ಯವೂ ಓದಬೇಕು. ಒಳ್ಳೆಯ

ಜ್ಞಾನವಂತನಾಗಬೇಕು, ಸರ್ವವಿಧದಿಂದಲೂ ಧನವನ್ನು ಸಂಪಾದಿಸಿ ಪ್ರಯತ್ನಪೂರ್ವಕವಾಗಿ ಆ ಧನದಿಂದ ಯಜ್ಞ
ಯಾಗಾದಿಗಳನ್ನು ನಡೆಸಬೇಕು.
ಟಿಪ್ಪಣಿ - ನಚೇದ್ ಹರ್ತವ್ಯಮನ್ಯಸ್ಯ ಇತ್ಯತ್ರ ನ ಚೇದ್ ದುಷ್ಟಜ್ಞಾತಿವಧಂ ಕೃತ್ವಾ ತದ್ ದ್ರವ್ಯಾಹರಣಂ ಧರ್ಮೋ ನ ಚೇದ್,
ಅನ್ಯಸ್ಯ ದೈತ್ಯವರ್ಗಸ್ಯ ಹರ್ತವ್ಯಂ ಹರ್ತುಂ ಯೋಗ್ಯಂ ದ್ರವ್ಯಮಾಹೃತ್ಯ ದೇವತಾಸಮೂಹಃ ಕಥಂ ಧರ್ಮಮಾಚರೇತ್ ॥
ದುಷ್ಟರಾದ ಜ್ಞಾತಿಗಳ ವಧೆಯನ್ನು ಮಾಡಿ ಸಂಪತ್ತನ್ನು ತೆಗೆದುಕೊಳ್ಳುವುದು ಧರ್ಮವಾಗದಿದ್ದರೆ ದೈತ್ಯರ ಸಂಪತ್ತನ್ನು
ತೆಗೆದುಕೊಂಡು ದೇವತೆಗಳು ಆಡಳಿತವನ್ನು ನಡೆಸಿದ್ದು ಹೇಗೆ ತಾನೇ ಧರ್ಮವಾಗುತ್ತಿತ್ತು?
ದ್ರೋಹಾದ್ ದೇವೈರವಾಪ್ತಾನಿ ದಿವಿ ಸ್ಥಾನಾನಿ ಸರ್ವಶಃ |
ದ್ರೋಹಾತ್ ಕಿಮನ್ಯಜ್-ಜ್ಞಾತೀನಾಂ ಗೃಧ್ಯಂತೇ ಯೇನ ದೇವತಾಃ ॥28
ದೇವತೆಗಳೂ ಕೂಡ ಅಸುರರ ದ್ರೋಹದಿಂದಲೇ ಸ್ವರ್ಗದ ಸ್ಥಾನವನ್ನು ಸಂಪಾ- ದಿಸಿದರು. ದೇವತೆಗಳು ತಮ್ಮ ಜ್ಞಾತಿಗಳಿಂದ
ರಾಜ್ಯವನ್ನು ಸ್ವಾಧೀನ ಮಾಡಿ- ಕೊಂಡರು. ಹೀಗೆ ಮಾಡುವುದು ತಮ್ಮ ಜ್ಞಾತಿಗಳ ದ್ರೋಹವಲ್ಲದೆ ಮತ್ತೇನು!
ಇತಿ ದೇವಾ ವ್ಯವಸಿತಾ ವೇದವಾದಾಶ್ಚ ಶಾಶ್ವತಾಃ |
ಅಧೀಯಂತೇಽಧ್ಯಾಪಯಂತೇ ಯಜಂತೇ ಯಾಜಯಂತಿ ಚ ॥29॥
ಕೃತ್ಸ್ನಂ ತದೇವ ಚ ಶ್ರೇಯೋ ಯದಪ್ಯಾದದತೇಽನ್ಯತಃ |
ನ ಪಶ್ಯಾಮೋಽನಪಹೃತಂ ಧನಂ ಕಿಂಚಿತ್ ಕ್ವಚಿದ್ ವಯಮ್ ॥30॥
ದೇವತೆಗಳೂ ಹ ಸಂಪತ್ತಿನ ಮಾರ್ಗದಲ್ಲಿ ಹೋಗಿರುವರು. ಶಾಶ್ವತಗಳೆನಿಸಿದ, ವೇದವಾಕ್ಯಗಳೂ ಅದನ್ನೇ ಹೇಳುವವು. ಅಧ್ಯಯನ,
ಅಧ್ಯಾಪನ, ಯಜನ, ಯಾಜನಗಳೆಂಬ ಈ ಕರ್ಮಗಳು ನಡೆಯುವುದಕ್ಕೆ ಧನವೇ ಮೂಲ ಆಧಾರ. ಜಗತ್ತಿನಲ್ಲಿರುವ ಸಮಸ್ತ ವಸ್ತುಗಳು
ಇದರ ಮೂಲವೇ ಆಗಿವೆ. ಶ್ರೇಯಸ್ಸಿಗೂ ಈ ಧನವೇ ಕಾರಣವಾಗಿದೆ. ಬೇರೆಯವರಿಗೆ ಅಪಕಾರವಿಲ್ಲದೆ ಯಾವ ವಿಧದಿಂದಾ- ದರೂ
ಎಲ್ಲಿಯಾದರೂ ಅಲ್ಪವೂ ಸಹ ಧನ ಬಂದದ್ದನ್ನು ನಾವು ಕಾಣುತ್ತಿಲ್ಲ. ದುಷ್ಟರ ಹಣವನ್ನು ಸಂಗ್ರಹಿಸಲೇ ಬೇಕಾಗುತ್ತದೆ.
ರಾಜರೆಲ್ಲರೂ ಈ ವಿಧವಾಗಿಯೇ ಭೂಮಿಯನ್ನು ವಶಮಾಡಿಕೊಂಡು ಆಳುತ್ತಿದ್ದಾರೆ.
ಏವಮೇವ ಹಿ ರಾಜಾನೋ ಜಯಂತಿ ಪೃಥಿವೀಮಿಮಾಮ್ |
ಜಿತ್ವಾ ಮಮೇಯಂ ಬ್ರುವತೇ ಪುತ್ರಾ ಇವ ಪಿತುರ್ಧನಮ್ ॥31॥
ರಾಜರು ಮತ್ತೊಬ್ಬರ ಭೂಮಿಯನ್ನು ಬಲತ್ಕಾರದಿಂದ ಜಯಿಸುತ್ತಾರೆ. ಮಕ್ಕಳು ತಂದೆಯ ಆಸ್ತಿಯನ್ನು ತಮ್ಮದೆಂದು
ಹೇಳಿಕೊಳ್ಳುವಂತೆ, ಶತ್ರುಗಳಿಂದ ಜಯಿಸಿದ ಭೂಮಿಯನ್ನು ತಮ್ಮದೆಂದೇ ರಾಜರು ಹೇಳಿಕೊಳ್ಳುತ್ತಾರೆ.
ರಾಜರ್ಷಯೋ ಜಿತಸ್ವರ್ಗೋ ಧರ್ಮೋ ಹ್ಯೇಷಾಂ ನಿಗದ್ಯತೇ |
ಯಥೈವ ಪೂರ್ಣಾದುದಧೇಃ ಸ್ಯಂದಂತ್ಯಾಪೋ ದಿಶೋ ದಶ |
ಏವಂ ರಾಜಕುಲಾದ್ ವಿತ್ತಂ ಪೃಥಿವೀಂ ಪ್ರತಿತಿಷ್ಠತಿ ॥32॥
ಹಿಂದೆ ಇದೇ ರೀತಿಯಲ್ಲಿ ರಾಜ್ಯವಾಳುತ್ತಿದ್ದ ರಾಜರು ರಾಜರ್ಷಿಗಳೆನಿಸಿ ಸ್ವರ್ಗಕ್ಕೆ ತೆರಳಿದ್ದಾರೆ. ರಾಜರ್ಷಿಗಲಿಗೆ ಅದೇ ಉತ್ತಮ
ಧರ್ಮವೆಂದು ಪ್ರಶಂಸಿಸಲ್ಪಟ್ಟಿದೆ. ಸಮುದ್ರದ ನೀರು ಮೇಘಗಳ ರೂಪದಲ್ಲಿ ಭೂಮಿಯಲ್ಲಿ ಎಲ್ಲೆಡೆಯೂ ಸುರಿ- ಯುವಂತೆ; ರಾಜರು
ಸಂಪಾದಿಸಿದ ಧನವು ನಾನಾರೂಪದಲ್ಲಿ ಭೂಮಿಯಲ್ಲಿ ಎಲ್ಲೆಡೆಯೂ ಹರಡುವುದು.
ಆಸೀದಿಯಂ ದಿಲೀಪಸ್ಯ ನೃಗಸ್ಯ ನಹುಷಸ್ಯ ಚ |
ಅಂಬರೀಷಸ್ಯ ಮಾಂಧಾತುಃ ಪೃಥಿವೀ ಸಾ ತ್ವಯಿ ಸ್ಥಿತಾ |
ಸ ತ್ವಾಂ ದ್ರವ್ಯಮಯೋ ಯಜ್ಞಃ ಸಂಪ್ರಾಪ್ತಃ ಸರ್ವದಕ್ಷಿಣಃ ॥33॥
ಹಿಂದೆ ಈ ಭೂಮಂಡಲವನ್ನು ದೀಲಿಪನು ಆಳುತ್ತಿದ್ದನು. ನೃಗ, ನಹುಷ, ಅಂಬರೀಷ, ಮಾಂಧಾತಾ ಇವರೆಲ್ಲರೂ ಈ
ಭೂಮಿಯನ್ನು ಆಳಿದರು. ಈಗ ನಿನ್ನ ರಕ್ಷಣೆಗೆ ಒಳಪಟ್ಟಿದೆ. ಸರ್ವರಕ್ಷಣೆಗಳುಳ್ಳ ದ್ರವ್ಯರೂಪವಾದ ಆ ಯಜ್ಞದ ನಿರ್ವ- ಹಣೆಯ
ಭಾರವು ನಿನ್ನಲ್ಲಿ ಬಂದು ಸೇರಿದೆ.
ತಂ ಚೇನ್ನ ಯಜಸೇ ರಾಜನ್ ಪ್ರಾಪ್ತಸ್ತ್ವಂ ದೇವಕಿಲ್ಬಿಷಮ್ |
ಯೇಷಾಂ ರಾಜಾಶ್ವಮೇಧೇನ ಯಜತೇ ದಕ್ಷಿಣಾವತಾ |
ಉಪೇತ್ಯ ತಸ್ಯಾವಭೃಥಂ ಪೂತಾಃ ಸರ್ವೇ ಭವಂತಿ ತೇ ॥34॥
ನೀನೇನಾದರೂ ಬಹು ದಕ್ಷಿಣೆಗಳುಳ್ಳ ಅಶ್ವಮೇಧಯಾಗವನ್ನು ಮಾಡದಿದ್ದರೆ ರಾಜ್ಯದಲ್ಲಿ ನಡೆಯುವ ಎಲ್ಲಾ ಪಾಪಗಳಿಗೆ
ಭಾಗಿಯಾಗುವಿ. ಯಾವ ಪ್ರಜಾ- ರಕ್ಷಕನಾದ ಅರಸನು ಭೂರಿದಕ್ಷಿಣೆಗಳುಳ್ಳ ಅಶ್ವಮೇಧಯಾಗವನ್ನು ನಡೆಸುವನೋ, ಅಂಥ ರಾಜನ
ಅವಭೃಥಕಾಲದಲ್ಲಿ ಸಮಸ್ತ ಪ್ರಜೆಗಳು ಆಗಮಿಸಿ ಪವಿತ್ರರಾಗುವರು.
ವಿಶ್ವರೂಪೋ ಮಹಾದೇವಃ ಸರ್ವಮೇಧೇ ಮಹಾಮಖೇ |
ಜುಹಾವ ಸರ್ವಭೂತಾನಿ ತಥೈವಾತ್ಮಾನಮಾತ್ಮನಾ ॥35॥
ಹಿಂದೆ ವಿಶ್ವರೂಪಿಯಾದ ಮಹಾದೇವನಾದ ವಿಷ್ಣುವು ಕೂಡ ಸರ್ವಮೇಧ- ವೆಂಬ ಮಹಾಯಾಗವನ್ನು ಆಚರಿಸಿದ್ದನು. ಎಲ್ಲಾ
ಭೂತಗಳನ್ನು ಅದರಲ್ಲಿ ಹೋಮ ಮಾಡಿದನು. ಮತ್ತು ತನ್ನನ್ನೂ ಸಹ ಹೋಮ ಮಾಡಿಕೊಂಡನು. ಮಹಾವಿಷ್ಣು ಜಗತ್ತನ್ನೇ
ಹೋಮಿಸುತ್ತಾನೆ. ಯಾಗ ಮಾಡುವವನು, ಅಗ್ನಿ, ದ್ರವ್ಯ ಎಲ್ಲದರ- ಲ್ಲಿಯೂ ವಿಷ್ಣುವೇ ನಿಂತು ಹೋಮವನ್ನು ಮಾಡಿದನು.
ಶಾಶ್ವತೋಽಯಂ ಭೂತಿಪಥೋ ನಾಸ್ಯಾಂತಮನುಶುಶ್ರುಮ |
ಮಹಾನ್ ದಾಶರಥಃ ಪಂಥಾ ಮಾ ರಾಜನ್ ಕುಪಥಂ ಗಮಃ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅಷ್ಟಮೋಽಧ್ಯಾಯಃ ॥8॥
ಮಹಾರಾಜನೇ ! ಇದೇ ಶಾಶ್ವತವಾದ ಕ್ಷೇಮಮಾರ್ಗವು. ಇದಕ್ಕೆ ಎಂದಿಗೂ ನಾಶವಿಲ್ಲವೆಂದು ಕೇಳಿರುವೆನು. ಇದು ದಾಶರಥವೆಂಬ

ಮಹಾಮಾರ್ಗವಾಗಿದೆ. ನಮ್ಮ ಹಿರಿಯರು ಹೋದ ಈ ದಾರಿಯನ್ನು ಅನುಸರಿಸಿ ನಡೆ. ಇದನ್ನು ಬಿಟ್ಟು ಬೇರೆ ಮಾರ್ಗವನ್ನು ಹಿಡಿಯಬೇಡ.
ದಶರಥಾಶ್ಚ ಪ್ರಚರಂತಿ ಯಸ್ಮಿನ್ ಸಃ ದಶರಥಃ ಸ ಏವ ದಾಶರಥಃ ಯಜ್ಞಕ್ಕೆ ಹತ್ತು ರಥಗಳಿರುತ್ತದೆ. ಪಶು, ಪತ್ನೀ, ಯಜಮಾನ, ಋಗ್ವಿಕ್, ಮೂರುವೇದಗಳು ನಾಲ್ವರು ಋತ್ವಿಜರು.
ರಾಜಧರ್ಮಪರ್ವ ಕನ್ನಡಾನುವಾದಲ್ಲಿ 8ನೆಯ ಅಧ್ಯಾಯವು ಮುಗಿಯಿತು.
*****
9. ಒಂಬತ್ತನೆಯ ಅಧ್ಯಾಯ
ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಸನ್ಯಾಸಧರ್ಮವನ್ನು ಪಾಲಿಸುತ್ತೇನೆಂದು ಯುಧಿಷ್ಠಿರನು ಅರ್ಜುನನಿಗೆ ಪ್ರತ್ಯುತ್ತರವನ್ನು ಹೇಳಿದುದು.
ಯುಧಿಷ್ಠಿರಃ
ಮುಹೂರ್ತಂ ತಾವದೇಕಾಗ್ರೋ ಮನಃಶ್ರೋತ್ರೇಽಂತರಾತ್ಮನಿ |
ಧಾರಯಿತ್ವಾಪಿ ತತ್ ಶ್ರುತ್ವಾ ರೋಚೇತಂ ವಚನಂ ಮಮ ॥1॥
ಅರ್ಜುನನೇ! ಒಂದು ಮುಹೂರ್ತಕಾಲದವರೆಗೆ ನಿನ್ನ ಮನಸ್ಸನ್ನು ಮತ್ತು ಕಿವಿಗಳನ್ನು ಪರಮಾತ್ಮನಲ್ಲಿ ನೆಲೆಗೊಳಿಸು. ಏಕಾಗ್ರಚಿತ್ತನಾಗಿ ಧ್ಯಾನಮಾಡು. ಆಗ ನನ್ನ ಮಾತು ನಿನಗೆ ಒಪ್ಪುವುದು.
ಸಾರ್ಥಾಗಮ್ಯಮಹಂ ಮಾರ್ಗಂ ನ ಜಾತು ತ್ವತ್ಕೃತೇ ಪುನಃ |
ಗಚ್ಛೇಯಂ ತದ್ ಗಮಿಷ್ಯಾಮಿ ಹಿತ್ವಾ ಗ್ರಾಮ್ಯಸುಖಾನ್ಯುತ ॥2॥
ಋಷಿಮುನಿಗಳು ಯಾವ ದಾರಿಯನ್ನು ಹಿಡಿದಿರುವರೋ ಅದೇ ದಾರಿಯನ್ನು ಹಿಡಿಯುವೆನು. ನಿನಗಾಗಿ ನಾನು ಎಂದಿಗೂ ವಿಷಯಾಸಕ್ತಿಯನ್ನು ಹೊಂದು- ವುದಿಲ್ಲ. ಈ ಗ್ರಾಮ್ಯಸುಖಗಳನ್ನೆಲ್ಲಾ ಬಿಡುವೆನು.
ಟಿಪ್ಪಣಿ- ಸಾರ್ಥಾಗಮ್ಯಮಹಂ ಮಾರ್ಗಮ್ ಇತ್ಯತ್ರ ಸಾರ್ಥೇನ ಸತಾಂ ಸಮೂಹೇನ ಅಗಮ್ಯಂ ಮಾರ್ಗಂ ತ್ವತ್ಕೃತೇ ಜಾತು ನ ಗಚ್ಛೇಯಮಿತಿ ಯೋಜನಾ ॥ ಸಜ್ಜನರು ಹೋಗದೇ ಇರುವ ಮಾರ್ಗದಲ್ಲಿ ನಿನಗೋಸ್ಕರ ನಾನು ಎಂದೂ ಹೋಗುವುದಿಲ್ಲ.
ಕ್ಷೇಮ್ಯಶ್ಚೈಕಾಕಿನಾ ಗಮ್ಯಃ ಪಂಥಾಃ ಕೋಽಸ್ತೀತಿ ಪೃಚ್ಛ ಮಾಮ್ |
ಅಥವಾ ನೇಚ್ಛಸಿ ಪ್ರಷ್ಟುಮಪೃಚ್ಛನ್ನಪಿ ಮೇ ಶೃಣು ॥3॥
ಅರ್ಜುನ! ಮತ್ತೊಬ್ಬರ ಸಹಾಯವಿಲ್ಲದೆ ತಾನೇ ಒಂಟಿಯಾಗಿ ತೆರಳಲು ಸಾಧ್ಯವಾದ ಕ್ಷೇಮಕರವಾದದು ದಾರಿ ಯಾವುದೆಂದು ನನ್ನನ್ನು ಕೇಳು. ನಾನು ನಿನಗೆ ಹೇಳುವೆನು. ಒಂದುವೇಳೆ ನಿನಗೆ ಪ್ರಶ್ನೆಯನ್ನು ಕೇಳುವುದಕ್ಕೆ ಇಷ್ಟವಿಲ್ಲದಿದ್ದರೂ, ನಾನು ಹೋಗುವ ದಾರಿ ಯಾವುದು ಎಂದು ಹೇಳುವೆನು. ಕೇಳು.
ಹಿತ್ವಾ ಗ್ರಾಮ್ಯಸುಖಾಚಾರಂ ತಪ್ಯಮಾನೋ ಮಹತ್ ತಪಃ |
ಅರಣ್ಯೇ ಫಲಮೂಲಾಶೀ ಚರಿಷ್ಯಾಮಿ ಮೃಗೈಃ ಸಹ ॥4॥
ಇನ್ನು ಮುಂದೆ ನಾನು ಗ್ರಾಮ್ಯಸುಖಗಳನ್ನು ತೊರೆದು ಅರಣ್ಯದಲ್ಲಿ ಕಂದ- ಮೂಲಫಲಗಳನ್ನು ತಿನ್ನುತ್ತಾ ಕಠಿಣವಾದ ತಪಸ್ಸನ್ನು ಮಾಡುವೆನು. ಅರಣ್ಯದಲ್ಲಿ ಮೃಗಗಳೊಡನೆ ಸಂಚರಿಸುವೆನು.
ಜುಹ್ವಾನೋಽಗ್ನಿಂ ಯಥಾಕಾಲಮುಭೌ ಕಾಲಾವುಪಸ್ಪೃಶನ್ |
ಕೃಶಃ ಪರಿಮಿತಾಹಾರಶ್ಚರ್ಮಚೀರಜಟಾಧರಃ ॥5॥
ಪ್ರಾತಃಕಾಲದಲ್ಲಿ ಮತ್ತು ಸಾಯಂಕಾಲದಲ್ಲಿ ಸ್ನಾನ ಮಾಡುತ್ತಾ ಕಾಲಕಾಲಕ್ಕೆ ಅಗ್ನಿಕಾರ್ಯಗಳನ್ನು ಮಾಡುವೆನು. ಜೀವಧಾರಣೆಗೆ ಎಷ್ಟು ಬೇಕೋ ಅಷ್ಟೇ ಆಹಾರ- ವನ್ನು ಸ್ವೀಕರಿಸಿ ದೇಹವನ್ನು ಕೃಶಗೊಳಿಸುವೆನು. ಕೃಷ್ಣಾಜಿನ ಮತ್ತು ವಲ್ಕಲಗಳನ್ನೇ ಬಟ್ಟೆಯನ್ನಾಗಿ ಧರಿಸಿ, ಜಟಾಧಾರಿಯಾಗಿರುವೆನು.
ಶೀತವಾತಾತಪಸಹಃ ಕ್ಷುತ್ಪಿಪಾಸಾಶ್ರಮಕ್ಷಮಃ |
ತಪಸಾ ವಿಧಿದೃಷ್ಟೇನ ಶರೀರಮುಪಶೋಷಯನ್ ॥6॥
ಚಳಿ-ಗಾಳಿ-ಬಿಸಿಲುಗಳನ್ನು ಸಹಿಸಿಕೊಳ್ಳುತ್ತೇನೆ. ಹಸಿವು ಬಾಯಾರಿಕೆ ಮತ್ತು ಪರಿಶ್ರಮಗಳನ್ನು ಸಹಿಸಿಕೊಳ್ಳಲು ಅಭ್ಯಾಸ ಮಾಡುತ್ತೇನೆ. ಶಾಸ್ತ್ರದಲ್ಲಿ ಹೇಳಿದ ತಪೋಮಾರ್ಗದಿಂದ ಶರೀರವನ್ನು ಶೋಷಿಸುವೆನು.
ಮನಃಕರ್ಣಸುಖಾ ನಿತ್ಯಂ ಶೃಣ್ವನ್ನುಚ್ಚಾವಚಾ ಗಿರಃ |
ಮುದಿತಾನಾಮರಣ್ಯೇಷು ವಸತಾಂ ಮೃಗಪಕ್ಷಿಣಾಮ್ ॥7॥
ಅರಣ್ಯದಲ್ಲಿ ಸಂತೋಷದಿಂದ ವಾಸಿಸುವ ಮೃಗಪಕ್ಷಿಗಳ ವಿವಿಧ ಕಲರವಗಳು ಮನಸ್ಸಿಗೆ, ಕಿವಿಗಳಿಗೆ ಆನಂದ ನೀಡುತ್ತವೆ. ಅದನ್ನು ಕೇಳುತ್ತಾ ಸಂತೋಷದಿಂದ ಮೃಗಪಕ್ಷಿಗಳೊಂದಿಗೆ ಕಾಡಿನಲ್ಲಿ ವಾಸಿಸುವೆನು.
ಆಜಿಘ್ರನ್ ಪೇಶಲಾನ್ ಗಂಧಾನ್ ಫುಲ್ಲಾನಾಂ ವೃಕ್ಷವಿರುಧಾಮ್ |
ನಾನಾರೂಪಾನ್ ವನೇ ಪಶ್ಯನ್ ರಮಣೀಯಾನ್ ವನೌಕಸಃ ॥8॥
ಅರಳಿರುವ ಮರ-ಗಿಡ-ಬಳ್ಳಿಗಳಿಂದ ಮನೋಹರವಾದ ಹೂವುಗಳ ಸುಗಂಧವನ್ನು ಆಘ್ರಾಣಿಸುತ್ತೇನೆ. ನಾನಾರೂಪಗಳಿಂದ ಮನೋಹರವಾದ ವನವಾಸಿಗಳನ್ನು ನೋಡುತ್ತಾ ಕಾಲಕಳೆಯುತ್ತೇನೆ.
ವಾನಪ್ರಸ್ಥಜನಸ್ಯಾಪಿ ದರ್ಶನಂ ಕುಲವಾಸಿನಾಮ್ |
ನಾಪ್ರಿಯಾಣ್ಯಾಚರಿಷ್ಯಾಮಿ ಕಿಂ ಪುನರ್ಗ್ರಾಮವಾಸಿನಾಮ್ ॥9॥
ಅರಣ್ಯದಲ್ಲಿ ವಾನಪ್ರಸ್ಥಾಶ್ರಮದಲ್ಲಿರುವವರನ್ನು ಗುರುಕುಲವಾಸಿಗಳಾದ ಬ್ರಹ್ಮ- ಚಾರಿಗಳನ್ನು ಆಗಾಗ ಸಂದರ್ಶಿಸುತ್ತೇನೆ. ಕಾಡಿನಲ್ಲಿರುವ ಯಾವುದೇ ಪ್ರಾಣಿಗಳಿಗೂ ನಾನು ಅಪ್ರಿಯವನ್ನು ಎಣಿಸುವುದಿಲ್ಲ. ಇನ್ನು ಗ್ರಾಮಗಳಲ್ಲಿ ವಾಸಿಸುವ ಜನರಿಗೆ

ಅಪ್ರಿಯವಾದ ಕೆಲಸವನ್ನು ಹೇಗೆ ತಾನೇ ಮಾಡುವೆನು?
ಏಕಾಂತಶೀಲೀ ವಿಮೃಶನ್ ಪಕ್ವಾಪಕ್ವೇನ ವರ್ತಯನ್ |
ಪಿತ್ರೂನ್ ದೇವಾಂಶ್ಚ ವನ್ಯೇನ ವಾಗ್ಭಿರದ್ಭಿಶ್ಚ ತರ್ಪಯನ್ ॥10॥
ನಿರ್ಜನವಾದ ಸ್ಥಳದಲ್ಲಿ ಧ್ಯಾನನಿರತನಾಗುತ್ತೇನೆ. ಪಕ್ವವಾದ ಆಹಾರವೇ ಆಗಿರಲಿ ಅಪಕ್ವವಾದ ಆಹಾರವೇ ಆಗಿರಲಿ ಅದರಿಂದಲೇ ದೇಹಧಾರಣೆಯನ್ನು ಮಾಡುವೆನು. ಪಿತೃಗಳನ್ನು ಮತ್ತು ದೇವತೆಗಳನ್ನು ಕಾಡಿನಲ್ಲಿ ಸಿಗುವ ವಸ್ತುವಿ- ನಿಂದಲೂ ಮತ್ತು ಮಧುರವಾದ ಮಾತಿನಿಂದಲೂ ತೃಪ್ತಿಪಡಿಸುತ್ತೇನೆ.
ಏವಮಾರಣ್ಯಶಾಸ್ತ್ರಾಣಾಮುಗ್ರಮುಗ್ರತರಂ ವಿಧಿಮ್ |
ಸೇವಮಾನಃ ಪ್ರತೀಕ್ಷಿಷ್ಯೇ ದೇಹಸ್ಯಾಸ್ಯ ಸಮಾಪನಮ್ ॥11॥
ಹೀಗೆ ಅರಣ್ಯಕಶಾಸ್ತ್ರವಿಧಿಗೆ ಅನುಗುಣವಾಗಿ ಕಠಿಣವಾದ ವಿಧಿಯನ್ನು ಆಚರಿಸುವೆನು. ಉಗ್ರವಾದ ನಿಯಮಗಳನ್ನು ಹಿಡಿದು ಈ ದೇಹದ ಅವಸಾನ- ಕಾಲವನ್ನು ನಿರೀಕ್ಷಿಸುವೆನು.
ಅಥವೈಕೋಽಹಮೇಕಾಹಮೇಕೈಕಸ್ಮಿನ್ ವನಸ್ಪತೌ |
ಚರನ್ ಭೈಕ್ಷ್ಯಂ ಮುನಿರ್ಮುಂಡಃ ಕ್ಷಪಯಿಷ್ಯೇ ಕಲೇವರಮ್ ॥12॥
ನಾನು ಮೌನವನ್ನು ಆಚರಿಸುತ್ತಾ ತಲೆಯನ್ನು ಮುಂಡನ ಮಾಡಿಕೊಂಡು ಸನ್ಯಾಸಿಯಾಗಿ ಪ್ರತಿದಿನ ಕೇವಲ ಒಂದೊಂದೇ ವೃಕ್ಷದಿಂದ ಹಣ್ಣನ್ನು ತೆಗೆದು- ಕೊಳ್ಳುತ್ತಾ ಈ ಶರೀರವನ್ನು ಕ್ಷಯಿಸುತ್ತೇನೆ.
ಪಾಂಸುಭಿಃ ಸಮವಚ್ಛನ್ನಃ ಶೂನ್ಯಾಗಾರಪ್ರತಿಶ್ರಯಃ |
ವೃಕ್ಷಮೂಲನಿಕೇತೋ ವಾ ತ್ಯಕ್ತಸರ್ವಪ್ರಿಯಾಪ್ರಿಯಃ ॥13॥
ಯಾರೂ ಇಲ್ಲದ ಕಾಡಿನಲ್ಲಿ ಧೂಳಿನಿಂದ ಬರಿದಾದ ಮನೆಯಲ್ಲಿ ಇಲ್ಲವೇ ವೃಕ್ಷದ ಬುಡದಲ್ಲಿ ವಾಸ ಮಾಡುವೆನು. ಪ್ರಿಯವಾದ ಮತ್ತು ಅಪ್ರಿಯವಾದವು- ಗಳೆರಡನ್ನು ಪರಿತ್ಯಾಗ ಮಾಡುವೆನು.
ನ ಶೋಚನ್ನ ಪ್ರಹೃಷ್ಯಂಶ್ಚ ತುಲ್ಯನಿಂದಾತ್ಮಸಂಸ್ತುತಿಃ |
ನಿರಾಶೀರ್ನಿರ್ಮಮೋ ಭೂತ್ವಾ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥14॥
ಸಂತೋಷ ದುಃಖ ಎರಡನ್ನು ತೊರೆಯುವೆನು. ನಿಂದೆ ಮತ್ತು ಸ್ತುತಿಯನ್ನು ಸಮಾನವಾಗಿ ಕಾಣುವೆನು. ಆಸೆ-ಮಮಕಾರಗಳನ್ನು ತೊರೆಯುತ್ತೇನೆ. ಸುಖ- ದುಃಖಾದಿ ದ್ವಂದ್ವಗಳಿಂದ ದೂರಸರಿದು, ಯಾವುದೇ ವಸ್ತುಗಳನ್ನು ಪರಿಗ್ರಹಿಸು- ವುದಿಲ್ಲ.
ಆತ್ಮಾರಾಮಃ ಪ್ರಸನ್ನಾತ್ಮಾ ಜಡಾಂಧಬಧಿರಾಕೃತಿಃ |
ಅಕುರ್ವಾಣಃ ಪರೈಃ ಕಾಂಚಿತ್ ಸಂವಿದಂ ಜಾತು ಕೇನಚಿತ್ ॥15॥
ಯೋಗಬಲದಿಂದ ಪ್ರಸನ್ನ ಮನಸ್ಕನಾಗುತ್ತೇನೆ. ಮಂದಬುದ್ಧಿಯವನೂ, ಕುರುಡನು, ಕಿವುಡನು ಇದ್ದ ಹಾಗೆ ಬೇರೆ ಯಾರನ್ನು ಗಮನಿಸದೆ ನನ್ನಲ್ಲಿ ನಾನು ಆನಂದಿಸುವೆನು. ಬೇರೆಯವರಿಂದ ಯಾವುದೇ ಕಾರ್ಯವನ್ನು ಮಾಡಿಸಿಕೊಳ್ಳು- ವುದಿಲ್ಲ, ಯಾರೊಡನೆಯೂ ಮಾತನಾಡುವುದಿಲ್ಲ.
ಜಂಗಮಾಜಂಗಮಾನ್ ಸರ್ವಾನವಿಹಿಂಸಶ್ಚತುರ್ವಿಧಾನ್ |
ಪ್ರಜಾಃ ಸರ್ವಾಃ ಸ್ವಧರ್ಮಸ್ಥಾಃ ಸಮಃ ಪ್ರಾಣಭೃತಃ ಪ್ರತಿ ॥16॥
ಜರಾಯುಜ, ಸ್ವೇದಜ, ಅಂಡಜ, ಉದ್ಭಿಜಗಳೆಂಬ ಜಂಗಮ-ಅಜಂಗಮ ಜೀವಿಗಳಲ್ಲಿ ಒಂದನ್ನೂ ನಾನು ಹಿಂಸಿಸುವವನಲ್ಲ. ಸ್ವಧರ್ಮದಲ್ಲಿರುವ ಅಥವಾ ಇಂದ್ರಿಯಪೋಷಕರಾದ ಪ್ರಜೆಗಳೆಲ್ಲರನ್ನು ಸಮಬುದ್ಧಿಯಿಂದ ನೋಡುವೆನು.
ನಚಾಪ್ಯವಹಸನ್ ಕಂಚಿನ್ನ ಕುರ್ವನ್ ಭ್ರುಕುಟೀಃ ಕ್ವಚಿತ್ |
ಪ್ರಸನ್ನವದನೋ ನಿತ್ಯಂ ಸರ್ವೇಂದ್ರಿಯಸುಸಂಯತಃ ॥17॥
ಯಾರನ್ನು ನೋಡಿ ಹಾಸ್ಯ ಮಾಡುವುದಿಲ್ಲ. ಯಾರ ಮುಂದೆಯೂ ಹುಬ್ಬು- ಗಂಟಿಕ್ಕುವುದಿಲ್ಲ. ಎಲ್ಲ ಇಂದ್ರಿಯಗಳನ್ನು ನಿಯಮಬದ್ಧವಾಗಿರಿಸಿ ಯಾವಾಗಲೂ ಪ್ರಸನ್ನಮುಖದಿಂದಲೇ ಇರುತ್ತೇನೆ.
ಅಪೃಚ್ಛನ್ ಕಸ್ಯಚಿನ್ಮಾರ್ಗಂ ವ್ರಜನ್ ಯೇನೈವ ಕೇನಚಿತ್ |
ನ ದೇಶಂ ನ ದಿಶಂ ಕಾಂಚಿದ್ ಗಂತುಮಿಚ್ಛನ್ ವಿಶೇಷತಃ ॥18॥
ಅರಣ್ಯದಲ್ಲಿ ಸಂಚರಿಸುವಾಗ ಯಾವ ಹಾದಿ ಎಲ್ಲಿಗೆ ಹೋಗುತ್ತದೆಂದು ಯಾರನ್ನೂ ಕೇಳುವುದಿಲ್ಲ. ನಾನು ಇದೇ ದೇಶಕ್ಕೆ ಹೋಗಬೇಕೆಂದು ಈ ದಿಕ್ಕಿಗೆ ಹೋಗಬೇಕೆಂದು ಇಚ್ಛಿಸುವುದಿಲ್ಲ. ಸಿಕ್ಕಿದ ಮಾರ್ಗದಲ್ಲಿ ಪ್ರಯಾಣ ಬೆಳೆಸುತ್ತೇನೆ.
ಗಮನೇ ನಿರಪೇಕ್ಷಶ್ಚ ಪಶ್ಚಾದನವಲೋಕಯನ್ |
ಋಜುಃ ಪ್ರಣಿಹಿತೋ ಗಚ್ಛನ್ ತ್ರಸಸ್ಥಾವರವರ್ಜಕಃ ॥19॥
ಇಂಥ ಸ್ಥಳದಲ್ಲೇ ವಿಶ್ರಾಂತಿ ಪಡೆಯಬೇಕೆಂದೂ ಸಹ ಅಪೇಕ್ಷಿಸುವುದಿಲ್ಲ. ಮುಂದೆ ಹೋಗುವಾಗ ಹಿಂದಕ್ಕೆ ನೋಡಲಾರೆನು. ನೇರವಾಗಿ ಹೋಗುತ್ತಲೇ ಇರುತ್ತೇನೆ. ಅಂತರ್ಮುಖಿಯಾಗಿರುತ್ತೇನೆ. ಸ್ಥಾವರ-ಜಂಗಮಗಳಿಗೆ ಯಾವುದೇ ರೀತಿಯಲ್ಲಿಯೂ ತೊಂದರೆಯನ್ನು ನೀಡುವುದಿಲ್ಲ.
ಟಿಪ್ಪಣಿ - ತ್ರಸಸ್ಥಾವರವರ್ಜಕ ಇತ್ಯತ್ರ ತ್ರಸನ್ ಪಾಪಾತ್ ತ್ರಸನ್ | ಸ್ಥಾವರವರ್ಜಕಃ ಸ್ಥಾವರಾಣಾಂ ಛೇದಾದಿವರ್ಜಕಃ | ಮಧ್ಯಮಪದಲೋಪೀ ಸಮಾಸಃ ॥ ಪಾಪಕಾರ್ಯಗಳಿಂದ ರಹಿತನಾಗಿರುತ್ತೇನೆ. ಸ್ಥಾವರಪದಾರ್ಥಗಳಿಗೆ ಛೇದನಾದಿಗಳನ್ನು ಮಾಡಲಾರೆನು ಎಂದಭಿಪ್ರಾಯ.
ಸ್ವಭಾವಸ್ತು ಪ್ರಯಾತ್ಯಗ್ರೇ ಪ್ರಭವಂತ್ಯಶನಾನ್ಯಪಿ |
ದ್ವಂದ್ವಾನಿ ಚ ವಿರುದ್ಧಾನಿ ತಾನಿ ಸರ್ವಾಣ್ಯಚಿಂತಯನ್ ॥20॥
ಹುಟ್ಟಿನಿಂದ ಬಂದಿರುವ ಸ್ವಭಾವಕ್ಕೆ ಅನುಗುಣವಾಗಿ ಮುಂದೆ ಸಾಗುತ್ತಿರುತ್ತೇನೆ. ಹಾದಿಯಲ್ಲಿ ಸಿಕ್ಕ ಹಣ್ಣು, ಗೆಡ್ಡೆ-ಗೆಣಸುಗಳನ್ನು

ತಿನ್ನುತ್ತಾ ಮುಂದೆ ಸಾಗುತ್ತೇನೆ. ಆ ಸಮಯದಲ್ಲಿ ವಿರುದ್ಧಧರ್ಮಗಳಿರುವ ದ್ವಂದ್ವಗಳನ್ನು ಚಿಂತಿಸುವುದಿಲ್ಲ. ಆಯಾ ಕಾಲಕ್ಕೆ ಸಿಕ್ಕ ಆಹಾರವು ಅಲ್ಪವೇ ಆಗಿರಲಿ, ರುಚಿಯಾಗಿರಲಿ, ಉಣ್ಣುವುದಕ್ಕೆ ಸಾಧ್ಯವಿಲ್ಲದಂತಿರಲಿ. ಅದರಿಂದಲೇ ಕಾಲವನ್ನು ಕಳೆಯುವೆನು. ಯಾವುದಕ್ಕೂ ಚಿಂತೆ ಮಾಡುವುದಿಲ್ಲ.
ಅಲ್ಪಂ ವಾ ಸ್ವಾದು ವಾ ಭೋಜ್ಯಂ ಪೂರ್ವಾಲಾಭೇನ ಜಾತುಚಿತ್ |
ಅನ್ಯೇಷ್ವಪಿ ಚರಂಲ್ಲಾಭಮಲಾಭೇ ಸಪ್ತ ಪೂರಯನ್ ॥21॥
ಭಿಕ್ಷೆಯು ಸ್ವಲ್ಪವೇ ಸಿಕ್ಕಲಿ, ರುಚಿಕರವಿಲ್ಲದ್ದೇ ಇರಲಿ, ಅದನ್ನೇ ಅಮೃತವೆಂದು ಭಾವಿಸಿ ಉಣ್ಣುತ್ತೇನೆ. ಒಂದುವೇಳೆ ಮೊದಲೇ ಮನೆಯಲ್ಲಿ ಭಿಕ್ಷೆ ದೊರಕದಿದ್ದರೆ ಎರಡು, ಮೂರು, ಹೀಗೆ ಏಳು ಮನೆಗಳಿಗೆ ಹೋಗುತ್ತೇನೆ. ಏಳನೆಯ ಮನೆ- ಯಲ್ಲಿಯೂ ಭಿಕ್ಷೆಯು ಸಿಗದಿದ್ದರೆ ಎಂಟನೆಯ ಮನೆಗೆ ಹೋಗುವುದಿಲ್ಲ.
ವಿಧೂಮೇ ನ್ಯಸ್ತಮುಸಲೇ ವ್ಯಂಗಾರೇ ಭುಕ್ತವಜ್ಜನೇ |
ಅತೀತಪಾತ್ರಸಂಚಾರೇ ಕಾಲೇ ವಿಗತಭಿಕ್ಷುಕೇ ॥22॥
ಏಕಕಾಲಂ ಚರನ್ ಭೈಕ್ಷ್ಯಂ ತ್ರೀನಥ ದ್ವೇ ಚ ಪಂಚ ವಾ |
ಸ್ನೇಹಪಾಶಂ ವಿಮುಚ್ಯಾಹಂ ಚರಿಷ್ಯಾಮಿ ಮಹೀಮಿಮಾಮ್ ॥23॥
ಮನೆಯಲ್ಲಿ ಹೊಗೆಯಾಡದೆ ಇರುವಾಗ, ಒನಕೆಯ ಶಬ್ದವು ನಿಂತಾಗ, ಒಲೆಯಲ್ಲಿ ಬೆಂಕಿ ಆರಿದ ನಂತರ, ಮನೆಯವರೆಲ್ಲರೂ ಭೋಜನ ಮಾಡಿದ ನಂತರ, ಅಡುಗೆಯ ಪಾತ್ರೆಯನ್ನು ಊಟಕ್ಕಾಗಿ ತೆಗೆದುಕೊಂಡು ಮತ್ತೊಂದು ಕಡೆ ಹೋಗುತ್ತಿರುವಾಗ, ಭಿಕ್ಷುಕರೆಲ್ಲರೂ ಭಿಕ್ಷೆಯನ್ನು ತೆಗೆದುಕೊಂಡು ಹೋದ ನಂತರ, ಎರಡು, ಮೂರು ಅಥವಾ ಐದು ಮನೆಗಳಿಗೆ ಹೋಗಿ ದಿನಕ್ಕೆ ಒಂದೇ ಬಾರಿ ಭಿಕ್ಷೆ ಬೇಡುತ್ತೇನೆ. ಸ್ನೇಹವೆಂಬ ಪಾಶವನ್ನು ಸಂಪೂರ್ಣವಾಗಿ ಕಡಿದು ಮುಕ್ತನಂತೆ ಈ ಭೂಮಿಯಲ್ಲಿ ಸಂಚರಿಸುವೆನು.
ಅಲಾಭೇ ಸತಿ ವಾ ಲಾಭೇ ಸಮದರ್ಶೀ ಮಹಾತಪಾಃ |
ನ ಜಿಜೀವಿಷುವತ್ ಕಿಂಚಿನ್ನ ಮುಮೂರ್ಷುವದಾಚರನ್ ॥24॥
ಲಾಭನಷ್ಟಗಳೆರಡನ್ನು ಒಂದೇ ವಿಧವಾಗಿ ಭಾವಿಸುತ್ತ, ಮಹಾತಪಸ್ವಿನಲ್ಲಿ ನೆಲೆ- ಗೊಳ್ಳುತ್ತೇನೆ. ಜೀವಿಸಲು ಬಯಸುವವನು ಧನಾದಿಗಳನ್ನು ಸಂಗ್ರಹಿಸುವಂತೆ ನಾನು ಸಂಗ್ರಹಿಸುವುದಿಲ್ಲ. ಸಾಯಲು ಬಯಸುವವನಂತೆ ಅನ್ನಾದಿಗಳನ್ನು ತ್ಯಾಗ ಮಾಡು- ವುದೂ ಇಲ್ಲ.
ಜೀವಿತಂ ಮರಣಂ ಚೈವ ನಾಭಿನಂದನ್ನ ಚ ದ್ವಿಷನ್ |
ವಾಸ್ಯೈಕಂ ತಕ್ಷತೋ ಬಾಹುಂ ಚಂದನೇನೈಕಮುಕ್ಷತಃ |
ನಾಕಲ್ಯಾಣಂ ನ ಕಲ್ಯಾಣಂ ಚಿಂತಯನ್ನುಭಯೋಸ್ತಯೋಃ ॥25॥
ಬದುಕಿರಬೇಕೆಂದಾಗಲಿ, ಸಾಯಬೇಕೆಂದಾಗಲಿ ಉದ್ದೇಶವಿರುವ ಮನುಷ್ಯ- ನಂತಲ್ಲ. ಜೀವನಕ್ಕೂ-ಮರಣಕ್ಕೂ ನಾನು ಯಾವ ವ್ಯತ್ಯಾಸವನ್ನು ಕಾಣುವುದಿಲ್ಲ. ನನ್ನ ತೋಳನ್ನು ಕತ್ತಿಯಿಂದ ಕಡಿಯತಕ್ಕವನೂ, ನನ್ನ ತೋಳಿಗೆ ಚಂದನವನ್ನು ಲೇಪಮಾಡತಕ್ಕವನೂ, ಇಬ್ಬರಲ್ಲಿಯೂ ಸಮಾನಭಾವದಿಂದ ಕಾಣುವೆನು. ಇವರಿಬ್ಬರೂ ನನ್ನ ದೃಷ್ಟಿಯಲ್ಲಿ ಸಮಾನರೇ ಆಗುತ್ತಾರೆ. ನನಗೆ ಸ್ನೇಹಿತರೂ ಇಲ್ಲ. ದ್ವೇಷಿಯೂ ಇಲ್ಲ.
ಯಾಃ ಕಾಶ್ಚಿಜ್ಜೀವತಾ ಶಕ್ಯಾಃ ಕರ್ತುಮಭ್ಯುದಯಕ್ರಿಯಾಃ |
ಸರ್ವಾಸ್ತಾಃ ಸಮಭಿತ್ಯಜ್ಯ ನಿಮೇಷಾದಿವ್ಯವಸ್ಥಿತಃ ॥26॥
ಬದುಕಿರುವವನು ತನ್ನ ಕ್ಷೇಮಕ್ಕಾಗಿ ಮಾಡಬಹುದಾದ ಕಾರ್ಯಗಳು ಯಾವುದು ಇವೆಯೋ ಅದೆಲ್ಲವನ್ನು ತೊರೆದು ಈ ಶರೀರದಲ್ಲಿ ಆತ್ಮನಿರುವವರೆಗೂ ಅನಿವಾರ್ಯವಾಗಿ ಮಾಡಲೇಬೇಕಾಗುವ ರೆಪ್ಪೆಹೊಡೆಯುವುದು ಸಿಕ್ಕುವ ಭಿಕ್ಷೆ- ಯನ್ನು ಭುಂಜಿಸಲು ಕೈ ಬಾಯಿಗಳನ್ನು ಅಲುಗಾಡಿಸುವುದು, ಇಂಥ ಕಾರ್ಯಗಳನ್ನು ಮಾತ್ರವೇ ಮಾಡುತ್ತೇನೆ.
ಟಿಪ್ಪಣಿ - ನಿಮೇಷಾದಿವ್ಯವಸ್ಥಿತಃ ಇತ್ಯತ್ರ ನಿಮೇಷಾದಿಷು ಚಕ್ಷುಷೋ ರ್ನಿಮೇಷಣೇ ಆದಿಪದೇನ ಉನ್ಮೇಷಣೇ ಚ ಸ್ಥಿತಃ ॥ ಕಣ್ಣು ತೆರೆಯುವುದು ಮುಚ್ಚುವುದು ಮೊದಲಾದವುಗಳನ್ನಷ್ಟೇ ಮಾಡುತ್ತೇನೆಂದಭಿಪ್ರಾಯ.
ತೇಷು ನಿತ್ಯಮಸಕ್ತಶ್ಚ ತ್ಯಕ್ತಸರ್ವೇಂದ್ರಿಯಕ್ರಿಯಃ |
ಸುಪರಿತ್ಯಕ್ತಸಂಕಲ್ಪಃ ಸುನಿರ್ಣಿಕ್ತಾತ್ಮಕಲ್ಮಷಃ ॥27॥
ಈ ಶರೀರವ್ಯಾಪಾರಗಳಲ್ಲಿ ಸಂಬಂಧವನ್ನಿಟ್ಟುಕೊಳ್ಳದೆ, ಎಲ್ಲ ಇಂದ್ರಿಯ ವ್ಯಾಪಾರಗಳನ್ನು ತೊರೆದು, ಸಮಸ್ತ ಸಂಕಲ್ಪವನ್ನು ಬಿಟ್ಟು, ಮನಸ್ಸಿನ ಕಲ್ಮಷವನ್ನು ಸಂಪೂರ್ಣ ತೊರೆದು ಶುದ್ಧನಾಗುವೆನು.
ವಿಮುಕ್ತಃ ಸರ್ವಸಂಗೇಭ್ಯೋ ವ್ಯತೀತಃ ಸರ್ವವಾಗುರಾಃ |
ನ ವಶೇ ಕಸ್ಯಚಿತ್ ತಿಷ್ಠನ್ ಸಧರ್ಮಾ ಮಾತರಿಶ್ವನಃ ॥28॥
ಎಲ್ಲ ವಿಧವಾದ ಸಹವಾಸಗಳನ್ನು ತೊರೆದು, ಸಂಸಾರಪಾಶಗಳನ್ನು ಹರಿದು, ಯಾವನೊಬ್ಬನ ಅಧೀನನೂ ಆಗದೇ ಗಾಳಿಯಂತೆ ಸ್ವೇಚ್ಛೆಯಾಗಿ ಸಂಚರಿಸುವೆನು.
ಟಿಪ್ಪಣಿ - ವ್ಯತೀತಃ ಸರ್ವವಾಗುರಾ ಇತ್ಯತ್ರ ಸರ್ವವಾಗುರಾಃ ಸಮಸ್ತ- ಸಂಸಾರಬಂಧನಾನಿ | `ವಾಗುರಾ ಮೃಗಂಧನೀ' ಇತ್ಯಮರಃ ॥ ಸರ್ವವಾಗುರಾ ಎಂದರೆ ಎಲ್ಲಾ ಬಗೆಯ ಸಂಸಾರಬಂಧನಗಳು ಎಂದಭಿಪ್ರಾಯ.
ವೀತರಾಗಶ್ಚರನ್ನೇವಂ ತುಷ್ಟಿಂ ಪ್ರಾಪ್ಸ್ಯಾಮಿ ಶಾಶ್ವತೀಮ್ |
ತೃಷ್ಣಯಾ ಹಿ ಮಹತ್ ಪಾಪಮಜ್ಞಾನಾದಸ್ಮಿ ಕಾರಿತಃ ॥29॥
ಹೀಗೆ ವಿರಕ್ತಿಯಿಂದ ಸಂಚರಿಸುತ್ತಾ ನಿಜವಾದ ಮನಃಶಾಂತಿಯನ್ನು ಹೊಂದು- ವೆನು. ಅಜ್ಞಾನದಿಂದ ಉಂಟಾದ ರಾಜ್ಯದ ಆಸೆಯು ನನ್ನಿಂದ ಬಹಳ ದೊಡ್ಡ ಪಾಪವನ್ನು ಮಾಡಿಸಿಬಿಟ್ಟಿತು.
ಕುಶಲಾಕುಶಲಾನ್ಯೇಕೇ ಕೃತ್ವಾ ಕರ್ಮಾಣಿ ಮಾನವಾಃ |

ಕಾರ್ಯಕಾರಣಸಂಶ್ಲಿಷ್ಟಂ ಸ್ವಜನಂ ನಾಮ ಬಿಭ್ರತಿ ॥30॥
ಕೆಲವರು ಶುಭಕರ್ಮಗಳನ್ನು ಮಾಡುತ್ತಾರೆ. ಜೊತೆಯಲ್ಲಿ ಅಶುಭಕರ್ಮಗಳನ್ನು ಮಾಡುತ್ತಾರೆ. ತಮ್ಮ ಸುಖಕ್ಕಾಗಿ ಹೆಂಡತಿ-ಮಕ್ಕಳ ಪೋಷಣೆಯಲ್ಲಿ ರತರಾಗುತ್ತಾರೆ.
ವಿವರಣೆ - ನ ವಾ ಅರೇ ಪತ್ಯುಕ್ತಕಾಮಾಯ ಪತಿಃ ಪ್ರಿಯೋ ಭವತಿ | ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ ॥ ಗಂಡನಿಗೆ ಸಂತೋಷವಾಗ- ಬೇಕೆಂಬ ದೃಷ್ಟಿಯಿಂದ ಹೆಂಡತಿಯು ಗಂಡನನ್ನು ಪ್ರೀತಿಸುವುದಿಲ್ಲ. ತನ್ನ ಆಸೆ- ಯನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಗಂಡನನ್ನು ಪ್ರೀತಿಸುತ್ತಾಳೆ ಎಂಬ ಉಪ- ನಿಷತ್ತಿನ ಮಾತಿನಂತೆ ಪ್ರತಿಯೊಬ್ಬರೂ ಕೂಡ ಜಗತ್ತಿನಲ್ಲಿ ಸ್ವಾರ್ಥಿಗಳೇ ಆಗಿರುತ್ತಾರೆ. ಮಕ್ಕಳನ್ನೂ ಕೂಡ ತಮ್ಮ ಹಿತಕ್ಕಾಗಿಯೇ, ತಮ್ಮ ಸಂತೋಷಕ್ಕಾ- ಗಿಯೇ ಪ್ರೀತಿ ಮಾಡುತ್ತಾರೆ. ಮಕ್ಕಳಿಗೆ ಪ್ರೀತಿ ಪಡಿಸಬೇಕೆಂಬ ಉದ್ದೇಶವೂ ಕೂಡ ಯಾರಿಗೂ ಇರುವುದಿಲ್ಲ. ಗಂಡನೂ ಕೂಡ ತನ್ನ ಸುಖಕ್ಕಾಗಿಯೇ ಹೆಂಡತಿಯನ್ನು ಪ್ರೀತಿಸುತ್ತಾನೆ. ಹೀಗೆ ಸಮಸ್ತಜಗತ್ತು ಸ್ವಾರ್ಥಪರವಾಗಿದೆ.
ಆಯುಷೋಽಂತೇ ಪ್ರಹಾಯೇದಂ ಕ್ಷೀಣಪ್ರಾಣಂ ಕಲೇವರಮ್ |
ಪ್ರತಿಗೃಹ್ಣಾತಿ ತತ್ ಪಾಪಂ ಕರ್ತುಃ ಕರ್ಮಫಲಂ ಹಿ ತತ್ ॥31॥
ಒಬ್ಬನು ತನ್ನ ಆಯುಷ್ಯದ ಕೊನೆಯಲ್ಲಿ ಆತ್ಮನು ಶರೀರವನ್ನು ಬಿಟ್ಟು ತಾನು ಮಾಡಿದ ಪಾಪದ ಫಲವನ್ನು ಅನುಭವಿಸುವುದಕ್ಕಾಗಿ ಇಂಥ ಶರೀರಗಳನ್ನು ಪಡೆಯುವವನು. ಏಕೆಂದರೆ ಮಾಡಿದ ಕರ್ಮಕ್ಕೆ ಫಲವನ್ನು ಅನುಭವಿಸಿಯೇ ತೀರ- ಬೇಕು.
ಏವಂ ಸಂಸಾರಚಕ್ರೇಽಸ್ಮಿನ್ ವ್ಯಾವಿದ್ಧೇ ರಥಚಕ್ರವತ್ |
ಸಮೇತಿ ಭೂತಗ್ರಾಮೋಽಯಂ ಭೂತಗ್ರಾಮೇಣ ಕಾರ್ಯವಾನ್ ॥32॥
ರಥದ ಚಕ್ರದಂತೆ ನಿರಂತರವಾಗಿ ಸಾಗುವ ಈ ಸಂಸಾರರಥದಲ್ಲಿ ಭೂತ- ಗ್ರಾಮವು (ಪ್ರಾಣಿಸಮೂಹವು) ಪಂಚಭೂತಗಳ ಕಾರ್ಯವಶದಿಂದ ಮತ್ತೊಂದು ಪ್ರಾಣಿಗಳ ಸಮುದಾಯದೊಡನೆ ಬೆರೆಯುತ್ತಾರೆ. (ಬಂಧು-ಮಿತ್ರರ ರೂಪದಿಂದ)
ಟಿಪ್ಪಣಿ - ಸಮೇತಿ ಭೂತಗ್ರಾಮೋಽಯಂ ಭೂತಗ್ರಾಮೇಣ ಕಾರ್ಯವಾನ್ ಇತ್ಯತ್ರ ಭೂತಗ್ರಾಮೇಣ ಪಂಚಮಹಾಭೂತಸಮೂಹೇನ ಕಾರ್ಯೋ ಯೋ ದೇಹಸ್ತದ್ವಾನ್ ಅಯಂ ಭೂತಗ್ರಾಮಃ ಪ್ರಾಣಿಸಮೂಹಃ ಸಮೇತಿ ಇತಿ ಯೋಜನಾ ॥ ಪಂಚಮಹಾಭೂತಗಳ ಸಮೂಹದಿಂದ ರಚಿತವಾದ ಈ ದೇಹ ಎಂದರ್ಥ.
ಜನ್ಮಮೃತ್ಯುಜರಾವ್ಯಾಧಿವೇದನಾಭಿರುಪದ್ರುತಮ್ |
ಅಪಾರಮಿಮಮಚಾಸ್ವಸ್ಥಂ ಸಂಸಾರಂ ತ್ಯಜತಃ ಸುಖಮ್ ॥33॥
ಹುಟ್ಟು, ಸಾವು, ಮುಪ್ಪು ರೋಗ, ವೇದನೆ ಮುಂತಾದ ಕಷ್ಟಗಳಿಂದ ತುಂಬಿದ ಪಾರವೇ ಇಲ್ಲದೆ ಸಮುದ್ರದಂತಿರುವ ಈ ಸಂಸಾರವನ್ನು ಬಿಟ್ಟವನೇ ನಿಜವಾದ ಸುಖಿಯಾದವನು.
ದಿವಃ ಪತತ್ಸು ದೇವೇಷು ಸ್ಥಾನೇಭ್ಯಶ್ಚ ಮಹರ್ಷಿಷು |
ಕೋ ಹಿ ನಾಮ ಭವೇನಾರ್ಥೀ ಭವೇತ್ ಕಾರಣತತ್ತ್ವವಿತ್॥34॥
ಸ್ವರ್ಗದಲ್ಲಿರುವ ದೇವತೆಗಳು ತಮ್ಮ ಪುಣ್ಯಾವಸಾನದಲ್ಲಿ ಕೆಳಕ್ಕೆ ಬೀಳುತ್ತಾರೆ. ಮಹರ್ಷಿಗಳು ತಮ್ಮ ಪದವಿಯನ್ನು ಕಳೆದುಕೊಳ್ಳುತ್ತಾರೆ. ಇದನ್ನು ತಿಳಿದ ಯಾವ ಜ್ಞಾನಿಯು ಜನ್ಮ-ಮೃತ್ಯುರೂಪವಾದ ಈ ಸಂಸಾರದಲ್ಲಿ ಆಸೆಯುಳ್ಳವನಾಗಲು ಸಾಧ್ಯ!
ವಿವರಣೆ - ಸ್ವರ್ಗವು ಶಾಶ್ವತವಲ್ಲ. ಅವರವರ ಸ್ಥಾನಗಳೂ ಕೂಡ ಶಾಶ್ವತವಲ್ಲ. ಮೋಕ್ಷವು ಮಾತ್ರ ಶಾಶ್ವತವಾಗಿದೆ. ಆದ್ದರಿಂದ ಸ್ವರ್ಗಕ್ಕೋಸ್ಕರ ಯಾವುದೇ ಸಾಧನೆಗಳನ್ನು ಮಾಡುವುದು ತನ್ನ ಸ್ಥಾನಮಾನಗಳ ಉಳಿಯುವಿಕೆಗಾಗಿ ಸಾಧನೆಗಳನ್ನು ಮಾಡುವುದು ಸಂಪೂರ್ಣ ವ್ಯರ್ಥವಾದ ಕಾರ್ಯವಾಗಿದೆ. ಭಗವಂತನ ಪ್ರೀತಿಯನ್ನು ಅಪೇಕ್ಷಿಸಿ, ಮೋಕ್ಷಕ್ಕೋಸ್ಕರ ಸಾಧನೆ ಮಾಡುವುದಷ್ಟೇ ಅತ್ಯಂತ ಸಾರ್ಥಕವಾದ ಕಾರ್ಯವಾಗಿದೆ.
ಕೃತ್ವಾ ಹಿ ವಿವಿಧಂ ಕರ್ಮ ತತ್ತದ್ ವಿವಿಧಲಕ್ಷಣಮ್ |
ಪಾರ್ಥಿವೈರ್ನೃಪತಿಃ ಸ್ವಲ್ಪೈಃ ಕಾರಣೈರೇವ ಬಧ್ಯತೇ ॥35॥
ಅಲ್ಪಸುಖದ ಅಪೇಕ್ಷೆಯಿಂದಲೇ ರಾಜರು ಬೇರೆ ಬೇರೆ ಲಕ್ಷಣಗಳುಳ್ಳ ವಿವಿಧ ಕಾರ್ಯದಲ್ಲಿ ಪ್ರವರ್ತಿಸಿ ಒಬ್ಬರಿಗೊಬ್ಬರು ಸ್ವಲ್ಪ ಕಾರಣಕ್ಕಾಗಿ ಹೊಡೆದಾಡಿ ಸಾಯುವರು.
ತಸ್ಮಾತ್ ಪ್ರಜ್ಞಾಮೃತಮಿದಂ ಚಿರಾನ್ಮಾಂ ಪ್ರತ್ಯುಪಸ್ಥಿತಮ್ |
ತತ್ ಪ್ರಾಪ್ಯ ಪ್ರಾರ್ಥಯೇ ಸ್ಥಾನಮವ್ಯಯಂ ಶಾಶ್ವತಂ ಧ್ರುವಮ್ ॥35॥
ಅರ್ಜುನ! ಆದ್ದರಿಂದ ಈ ಜ್ಞಾನವೆಂಬ ಅಮೃತವು ಬಹುಕಾಲದಿಂದ ನನ್ನ ಮನಸ್ಸನ್ನು ಸೆಳೆಯುತ್ತಿದೆ. ನಾನು ಶಾಶ್ವತವೂ ನಿಷ್ಕಲ್ಮಶವೂ ಆದ ಸ್ಥಾನವನ್ನು ಪಡೆಯಲು ಬಯಸುವೆನು.
ಏತಯಾ ಸತತಂ ಧೃತ್ಯಾ ಚರನ್ನೇವಂಪ್ರಕಾರಯಾ |
ದೇಹಂ ಸಂಸ್ಥಾಪಯಿಷ್ಯಾಮಿ ನಿರ್ಭಯಂ ಮಾರ್ಗಮಾಸ್ಥಿತಃ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ನವಮೋಽಧ್ಯಾಯಃ ॥9॥
ನಾನು ನನ್ನ ಬುದ್ಧಿಯು ಮೂಲಕವಾಗಿ ಈ ಹಿಂದೆ ಹೇಳಿದ ರೀತಿಯಲ್ಲಿ ಕಾಡಿನಲ್ಲಿ ಅಲೆದಾಡುತ್ತಾ,
ಜನ್ಮ-ಮೃತ್ಯು-ಜರಾ-ವ್ಯಾಧಿ-ವೇದನೆಗಳಿಂದ ಆಕ್ರಾಂತ- ವಾದ ಈ ದೇಹವನ್ನು ಭಯವಿಲ್ಲದ ದಾರಿಯನ್ನು ಅರೆಸಿ ಮುಕ್ತಿಗೊಳಿಸುತ್ತೇನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 9ನೆಯ ಅಧ್ಯಾಯವು ಮುಗಿಯಿತು.
*****

10. ಹತ್ತನೆಯ ಅಧ್ಯಾಯ
ಯುಧಿಷ್ಠಿರನಿಗೆ ಭೀಮಸೇನದೇವರ ಸಲಹೆ.

ಭೀಮಃ
ಶ್ರೋತ್ರಿಯಸ್ಯೇವ ತೇ ರಾಜನ್ ಮಂದಕಸ್ಯಾವಿಪಶ್ಚಿತಃ |
ಅನುವಾಕಹತಾ ಬುದ್ಧಿರ್ನೈಷಾ ತತ್ತ್ವಾರ್ಥದರ್ಶಿನೀ ॥1॥
ರಾಜನೇ ! ಈಗ ನೀನು ಹೇಳುವ ಮಾತುಗಳನ್ನು ಕೇಳಿದರೆ, ಕೇವಲ ವೇದವನ್ನು ಕಂಠಪಾಠ ಮಾಡಿ, ವೇದಾರ್ಥವನ್ನು ತಿಳಿಯದ ಮೂರ್ಖನಾದ, ವಿವೇಚನಾಶಕ್ತಿ ಇಲ್ಲದ ಮಂದಬುದ್ಧಿಯುಳ್ಳ ಶ್ರೋತ್ರಿಯನ ಬಾಯಿಯಿಂದ ಹೊರಡುವ ಮಾತುಗಳಂತಿರುವ ಈ ನಿನ್ನ ಬುದ್ಧಿಯು ತತ್ತ್ವಾರ್ಥಗಳನ್ನೇನೂ ವಿಮರ್ಶಿಸಿದ ಹಾಗೇ ತೋರುವುದಿಲ್ಲ.
ಟಿಪ್ಪಣಿ - ಅನುವಾಹಕತಾ ಬುದ್ಧಿಃ ಇತ್ಯತ್ರ ಅನುವಾಕಃ ಆಪಾತರಮಣೀಯ- ವೇದವಾಕ್ಯಮ್, ತೇನ ಹತಾ ಬುದ್ಧಿಃ ॥ ಅನುವಾಕ ಎಂದರೆ ಆಪಾತರಮಣೀಯ- ವಾದ ವೇದವಾಕ್ಯದಿಂದ.
ಆಲಸ್ಯೇ ಕೃತಚಿತ್ತಸ್ಯ ರಾಜಧರ್ಮಾನಸೂಯತಃ |
ವಿನಾಶೇ ಧಾರ್ತರಾಷ್ಟ್ರಾಣಾಂ ಕಿಂ ಫಲಂ ಭರತರ್ಷಭ ॥2॥
ಭರತಶ್ರೇಷ್ಠನೇ! ಸೋಮಾರಿತನದಲ್ಲಿಯೇ ಬುದ್ಧಿಯನ್ನು ಸ್ಥಿರಗೊಳಿಸಿ, ರಾಜ- ಧರ್ಮವನ್ನು ನಿಂದಿಸುತ್ತಿರುವ ನೀನು ಆ ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲಿಸಿ ಯಾವ ಫಲವನ್ನು ಪಡೆದಂತಾಯಿತು?
ಕ್ಷಮಾನುಕಂಪಾ ಕಾರುಣ್ಯಮಾನೃಶಂಸ್ಯಂ ನ ವಿದ್ಯತೇ |
ಕ್ಷಾತ್ರಮಾಚರತೋ ಮಾರ್ಗಮಪಿ ಬಂಧೌ ಸ್ತ್ವದಂತರಾ ॥3॥
ಕ್ಷತ್ರಿಯರಿಗೆ ವಿಹಿತವಾದ ಧರ್ಮಮಾರ್ಗದಲ್ಲಿ ನಡೆಯುವವನಿಗೆ ತನ್ನ ಬಂಧು- ಗಳ ವಿಷಯದಲ್ಲಿಯೂ ಕ್ಷಮೆ, ಅನುಕಂಪ, ಕಾರುಣ್ಯ, ಕಾಠಿಣ್ಯ ಇಲ್ಲದಿರುವಿಕೆ ಇತ್ಯಾದಿಗುಣಗಳು ಇರುವುದಿಲ್ಲ. ಹೀಗಿರುವಾಗ ನೀನು ಕ್ಷತ್ರಿಯಕುಲದಲ್ಲಿ ಹುಟ್ಟಿದ್ದ- ರಿಂದ ನಿನ್ನ ಹೃದಯದಲ್ಲಿ ಈ ಗುಣಗಳು ಬರಲು ಹೇಗೆ ಸಾಧ್ಯ?
ಟಿಪ್ಪಣಿ - ಮಾರ್ಗಮಪಿ ಬಂಧೌ ತ್ವದಂತರಾ ಇತ್ಯತ್ರ ತ್ವದಂತರಾ ತ್ವಾಂ
ವಿನಾ ॥ `ತ್ವದಂತರಾ' ಎಂದರೆ ನಿನ್ನನ್ನು ಬಿಟ್ಟು ಎಂದರ್ಥ.
ಯದೀಮಾಂ ಭವತೋ ಬುದ್ಧಿಂ ವಿದ್ಯಾಮ ವಯಮೀದೃಶೀಮ್ |
ಶಸ್ತ್ರಂ ನೈವ ಗ್ರಹೀಷ್ಯಾಮೋ ನ ವಧಿಷ್ಯಾಮ ಕಂಚನ ॥4॥
ನಿನಗೆ ಇಂಥ ಬುದ್ಧಿಯು ಹುಟ್ಟುವುದೆಂದು ನಮಗೆ ಮೊದಲೇ ತಿಳಿದಿದ್ದರೆ, ನಾವು ಶಸ್ತ್ರಗಳನ್ನೇ ಹಿಡಿಯುತ್ತಿರಲಿಲ್ಲ. ಯಾರೊಬ್ಬರನ್ನೂ ಕೊಲ್ಲುತ್ತಿರಲಿಲ್ಲ.
ಭೈಕ್ಷ್ಯಮೇವಾಚರಿಷ್ಯಾಮ ಶರೀರಸ್ಯಾವಿಮೋಕ್ಷಣಾತ್ |
ನಚೇದಂ ದಾರುಣಂ ಯುದ್ಧಮಭವಿಷ್ಯನ್ಮಹೀಕ್ಷಿತಾಮ್ ॥5॥
ನಾವು ಈ ಶರೀರದ ಅಂತ್ಯವಾಗುವವರೆಗೂ ಭಿಕ್ಷೆಯನ್ನೇ ಮಾಡಿಕೊಂಡು ಜೀವನ ನಿವರ್ಹಣೆಯನ್ನು ಮಾಡುತ್ತಿದ್ದೆವು. ಆಗ ರಾಜರಲ್ಲಿ ಇಂಥ ಭಯಂಕರವಾದ ಯುದ್ಧವೇ ನಡೆಯುತ್ತಿರಲಿಲ್ಲ.
ಪ್ರಾಣಸ್ಯಾನ್ನಮಿದಂ ಸರ್ವಮಿತಿ ವೈ ಕವಯೋ ವಿದುಃ |
ಸ್ಥಾವರಂ ಜಂಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಮ್ ॥6॥
ಪ್ರಾಜ್ಞರು ಈ ಪ್ರಪಂಚವೆಲ್ಲವೂ ಬಲಿಷ್ಠರಿಗೆ ಅನ್ನವೆಂದು ಹೇಳುತ್ತಾರೆ. ಸ್ಥಾವರ ಜಂಗಮಗಳೆಲ್ಲವೂ ಬಲಿಷ್ಠನಾದವನ ಪಾಲನೆಗೆ ಸೇರಿದುದು.
ಆದದಾನಸ್ಯ ಚೇದ್ ರಾಜ್ಯಂ ಯೇ ಕೇಚಿತ್ ಪರಿಪಂಥಿನಃ |
ಹಂತವ್ಯಾಸ್ತ ಇತಿ ಪ್ರಾಜ್ಞಾಃ ಕ್ಷತ್ರಧರ್ಮವಿದೋ ವಿದುಃ ॥7॥
ಕ್ಷತ್ರಿಯಧರ್ಮವನ್ನು ತಿಳಿದ ಪ್ರಾಜ್ಞರು ಹೀಗೆ ಹೇಳುತ್ತಾರೆ - ರಾಜರು ರಾಜ್ಯ- ವನ್ನು ಸಂಪಾದಿಸಲು ಹೊರಟಾಗ ಯಾರಾದರೂ ಅದನ್ನು ವಿರೋಧಿಸಿದರೆ ಅವರನ್ನು ವಿರೋಧಿಸಿದರೆ ಅವರನ್ನು ಸಂಹರಿಸಬೇಕೆಂದು ಹೇಳುತ್ತಾರೆ.
ತೇ ಸದೋಷಾ ಹತಾಸ್ಮಾಭಿಃ ರಾಜ್ಯಸ್ಯ ಪರಿಪಂಥಿನಃ |
ತಾನ್ ಹತ್ವಾ ಭುಂಕ್ಷ್ವ ಧರ್ಮೇಣ ಯುಧಿಷ್ಠಿರ ಮಹೀಮಿಮಾಮ್ ॥8॥
ಅಣ್ಣನಾದ ಯುಧಿಷ್ಠಿರನೇ ! ಹೀಗೆ ನಮ್ಮ ರಾಜ್ಯವನ್ನು ನಾವು ಮತ್ತೆ ಪಡೆಯಲು ಯಾರು ನಮಗೆ ಅಡ್ಡಿಯನ್ನುಂಟು ಮಾಡಿದರೋ, ಆ ಅಪರಾಧಿಗಳು ಅಥವಾ ಶತ್ರುಗಳು ನಮ್ಮಿಂದ ಸಂಹೃತರಾಗಿದ್ದಾರೆ. ಧರ್ಮದಿಂದ ಪ್ರಾಪ್ತವಾಗಿರುವ ಈ ಭೂಮಿಯನ್ನು ಅನುಭವಿಸಲೇಬೇಕು.
ಯಥಾ ಹಿ ಪುರುಷಃ ಖಾತ್ವಾ ಕೂಪಮಪ್ರಾಪ್ಯ ಚೋದಕಮ್ |
ಪಂಕದಿಗ್ಧೋ ನಿವರ್ತೇತ ಕರ್ಮೇದಂ ನಸ್ತಥೋಪಮಮ್ ॥9॥
ಒಬ್ಬ ಮನುಷ್ಯನು ನೀರಿಗಾಗಿ ಪ್ರಯತ್ನಪಟ್ಟು ಬಾವಿಯನ್ನು ತೋಡುತ್ತಾನೆ. ಕೊನೆಗೆ ಅದರಿಂದ ನೀರನ್ನು ಪಡೆಯದೆ ಅದರೊಳಗಿನ ಕೆಸರನ್ನು ಮೈಗೆ ಹಚ್ಚಿಕೊಂಡು ಮೇಲೆದ್ದು ಬರುತ್ತಾನೆ. ನಮ್ಮ ಈಗಿನ ಸ್ಥಿತಿ ಹೀಗಿದೆ.
ಯಥಾರುಹ್ಯ ಮಹಾವೃಕ್ಷಮಪಹೃತ್ಯ ತತೋ ಮಧು |
ಅಪ್ರಾಶ್ಯ ನಿಧನಂ ಗಚ್ಛೇತ್ ಕರ್ಮೇದಂ ನಸ್ತಥೋಪಪಮ್ ॥10॥
ಒಬ್ಬನು ಶ್ರಮಪಟ್ಟು ದೊಡ್ಡ ಮರವನ್ನೇರುತ್ತಾನೆ. ಅಲ್ಲಿದ್ದ ಜೇನನ್ನು ಸಂಗ್ರಹಿಸಿ -ಕೊಂಡು ಅದನ್ನು ರುಚಿ ನೋಡುವ ಮೊದಲೇ ಮರಣಕ್ಕೀಡಾಗುತ್ತಾನೆ. ಇದರಂತೆ ಈಗಿನ ನಮ್ಮ ಪ್ರಯತ್ನವು ಹಾಸ್ಯಾಸ್ಪದವಾಗಿದೆ.
ಯಥಾ ಮಹಾಂತಮಧ್ವಾನಮಾಶಯಾ ಪುರುಷಃ ಪತನ್ |
ಸ ನಿರಾಶೋ ನಿವರ್ತೇತ ಕರ್ಮೇದಂ ನಸ್ತಥೋಪಮಮ್ ॥11॥

ದೊಡ್ಡ ನಿಧಿಯು ಸಿಗುವುದೆಂಬ ಆಸೆಯಿಂದ ಸಾವಿರಾರು ಯೋಜನೆಗಳಷ್ಟು ದೂರ ಹೋಗಿ ಅಲ್ಲಿ ಏನೂ ಇಲ್ಲವೆಂದು ತಿಳಿದೊಡನೆಯೇ ನಿರಾಸೆಯಿಂದ ಹಿಂತಿರುಗವವನಂತೆ ನಮ್ಮ ಈಗಿನ ಸ್ಥಿತಿಯಾಗಿದೆ.

ಯಥಾ ಶತ್ರೂನ್ ಘಾತಯಿತ್ವಾ ಪುರುಷಃ ಕುರುಸತ್ತಮ |
ಆತ್ಮಾನಂ ಘಾತಯೇತ್ ಪಶ್ಚಾತ್ ಕರ್ಮೇದಂ ನಸ್ತಥೋಪಮಮ್ ||12||

ಕುರುನಂದನನೇ! ಒಬ್ಬನು ಮಹಾಪ್ರಯತ್ನದಿಂದ ಶತ್ರುಗಳನ್ನೆಲ್ಲ ಕೊಂದು, ಕೊನೆಗೆ ತನ್ನನ್ನು ತಾನೇ ಕೊಲೆ ಮಾಡಿಕೊಳ್ಳುವುದಕ್ಕೆ ನಮ್ಮ ಕಾರ್ಯವನ್ನು ಹೋಲಿ- ಸಬಹುದು.

ಯಥಾನ್ನಂ ಕ್ಷುಧಿತೋ ಲಬ್ಧ್ವಾ ನ ಭುಂಜೀತ ಯದೃಚ್ಛಯಾ |
ಕಾಮೀ ಚ ಕಾಮಿನೀಂ ಲಬ್ಧ್ವಾ ಕರ್ಮೇದಂ ನಸ್ತತೋಪಮಮ್ ||13||

ಹಸಿದವನು ಅನ್ನವನ್ನು ಕೈಯಲ್ಲಿಟ್ಟುಕೊಂಡು ಉಣ್ಣದಂತೆ, ಕಾಮವುಳ್ಳವನು ಕಾಮಿನಿಯನ್ನು ಪಡೆದು ಅವಳನ್ನು ಅನುಭವಿಸಲಾರದೆ ಇರುವಂತೆ, ನಮ್ಮ ಸ್ಥಿತಿ- ಯಾಗಿದೆ.

ವಯಮೇವಾತ್ರ ಗಾರ್ಹ್ಯಾ ಹಿ ಯದ್ವಯಂ ಮಂದಚೇತಸಃ |
ತ್ವಾಂ ರಾಜನ್ನನುಗಚ್ಛಾಮೋ ಜ್ಯೇಷ್ಠೋಽಯಮಿತಿ ಭಾರತ ||14||

ಧರ್ಮರಾಜನೇ! ನಿಜವಾಗಿ ಹೇಳುವುದಾದರೆ ನಾವೇ ಮಂದಬುದ್ಧಿಯುಳ್ಳ- ವರು. ನಮ್ಮದೇ ದೋಷ ಹೊರತು ನಿನ್ನ ತಪ್ಪಲ್ಲ. ಮಂದಬುದ್ಧಿಯುಳ್ಳ ನಿನ್ನನ್ನು ಅಣ್ಣನೆಂದು ಗೌರವಿಸಿ ಅನುಸರಿಸಿ ನಡೆಯುತ್ತಿದ್ದುದೇ ನಮ್ಮ ತಪ್ಪಾಯಿತು.

ವಯಂ ಹಿ ಬಾಹುಬಲಿನಃ ಕೃತವಿದ್ಯಾ ಮನಸ್ವಿನಃ |
ಕ್ಲೀಬಸ್ಯ ವಾಕ್ಯೇ ತಿಷ್ಠಾಮೋ ಯಥೈವಾಶಕ್ತಯಸ್ತಥಾ ||15||

ನಾವು ಅಸಮಾನವಾದ ತೋಳ್ಬಲವುಳ್ಳವರಾಗಿದ್ದೇವೆ. ಶಸ್ತ್ರ-ಶಾಸ್ತ್ರವಿದ್ಯೆಗಳಲ್ಲಿ ಪಾರಂಗತರಾಗಿದ್ದೇವೆ. ಇಂದ್ರಿನಿಗ್ರಹವುಳ್ಳವರಾಗಿದ್ದೇವೆ. ಹೀಗಿದ್ದರೂ ಬಲಹೀನರಾದ ಮನುಷ್ಯರಂತೆ ನಪುಂಸಕನೊಬ್ಬನ ಮಾತಿನಂತೆ ನಡೆದುಕೊಳ್ಳುತ್ತಿದ್ದೇವೆ.

ಅಗತೀನ್ ಕಾಗತೀನಸ್ಮಾನ್ನಷ್ಟಾರ್ಥಾನರ್ಥಸಿದ್ಧಯೇ |
ಕಥಂ ವೈ ನಾನುಪಶ್ಯೇಯುರ್ಜನಾಃ ಪಶ್ಯಂತ ಯಾದೃಶಮ್ ||16||

ನಿರ್ಗತಿಕರನ್ನು ಕಾಪಾಡತಕ್ಕ ನಾವು ಗತಿಯಿಲ್ಲದವರಂತೆ ಕೈಗೆ ಬಂದ ಹಣವನ್ನೆಲ್ಲ ಕಳೆದುಕೊಂಡ ನಿರ್ಗತಿಕರಾದ ಮಾತ್ರಕ್ಕೆ ಪ್ರಜೆಗಳು ಸ್ವಾರ್ಥಸಿದ್ಧಿಗಾಗಿ ಹೇಗೆ ತಾನೇ ನಮ್ಮನ್ನು ಎದುರು ನೋಡದಿರುವರು ?

ಟಿಪ್ಪಣಿ - ಕಥಂ ವೈ ನಾನುಪಶ್ಯೇಯುರ್ಜನಾಃ ಪಶ್ಯತ ಯಾದೃಶಮ್ ಇತ್ಯತ್ರ ಹೇ ಜನಾಃ, ಭವಂತಃ ಅರ್ಥಸಿದ್ಧಯೇ ನಷ್ಟಾರ್ಥಾನಸ್ಮಾನ್ ಕಥಂ ನಾನು- ಪಶ್ಯೇಯುಃ | ಯಾದೃಶಮರ್ಥಂ ಯೂಯಂ ಪಶ್ಯತ, ತಸ್ಯೈ ಅರ್ಥಸಿದ್ಧಯೇ ಕಥಂ ನಾನುಪಶ್ಯೇಯುರಿತಿ ಪೂರ್ವೇಣಾನ್ವಯಃ || ಜನರು ಅರ್ಥಕ್ಕಾಗಿ ನಮ್ಮನ್ನು ಆಶ್ರಯಿಸುತ್ತಾರೆ. ಒಂದು ವೇಳೆ ನಾವೇ ಅರ್ಥಹೀನರಾದರೆ ಜನರು ನಮ್ಮ ಬಗ್ಗೆ ಏನೆಂದು ಕೊಂಡಾರು? ನಮ್ಮ ದೌರ್ಬಲ್ಯವನ್ನು ಕಂಡು ಅಸಮಾಧಾನವನ್ನು ಹೊಂದುವರು.

ಆಪತ್ಕಾಲೇ ಹಿ ಸನ್ನ್ಯಾಸಃ ಕರ್ತವ್ಯ ಇತಿ ಶಿಷ್ಯತೇ |
ಜರಯಾಭಿಪರೀತೇನ ಶತ್ರುಭಿರ್ವ್ಯಂಸಿತೇನ ವಾ ||17||

ಆಪತ್ಕಾಲದಲ್ಲಿ ಮಾತ್ರವೇ ಸನ್ನ್ಯಾಸವನ್ನು ತೆಗೆದುಕೊಳ್ಳಬೇಕು. ಮುಪ್ಪು ಆವರಿಸಿ -ದಾಗ ಸನ್ನ್ಯಾಸವನ್ನು ತೆಗೆದುಕೊಳ್ಳಬಹುದು. ಶತ್ರುಗಳಿಂದ ರಾಜ್ಯ-ಧನ-ಸಂಪತ್ತು- ಗಳನ್ನು ಕಳೆದುಕೊಂಡು ವಂಚಿತನಾದಾಗಲೂ ಸನ್ನ್ಯಾಸವನ್ನು ತೆಗೆದುಕೊಳ್ಳಬಹುದು.

ತಸ್ಮಾದಿಹ ಕೃತಪ್ರಜ್ಞಾಸ್ತ್ಯಾಗಂ ನ ಪರಿಚಕ್ಷತೇ |
ಧರ್ಮವ್ಯತಿಕ್ರಮಂ ಚೈವ ಮನ್ಯಂತೇ ಸೂಕ್ಷ್ಮದರ್ಶಿನಃ ||18||

ನಮ್ಮ ಈಗಿನ ಸ್ಥಿತಿಯಲ್ಲಿ ಸನ್ನ್ಯಾಸ ಸ್ವೀಕಾರವನ್ನು ಪ್ರಾಜ್ಞರು ಒಪ್ಪುವುದಿಲ್ಲ. ಅಷ್ಟು ಮಾತ್ರವಲ್ಲ. ಧರ್ಮಸೂಕ್ಷ್ಮವನ್ನು ತಿಳಿದವರು ಹೀಗೆ ಮಾಡುವುದು ಧರ್ಮಾ- ತಿಕ್ರಮವೆಂದೂ ತಿಳಿಯುವರು.

ಕಥಂ ತಸ್ಮಾತ್ ಸಮುತ್ಪನ್ನಸ್ತನ್ನಿಷ್ಠಸ್ತದುಪಾಶ್ರಯಃ |
ತದೇವ ನಿಂದನ್ನಾಸೀತ ಶ್ರದ್ಧಾ ವಾನ್ಯತ್ರ ಗೃಹ್ಯತೇ ||19||

ಕ್ಷತ್ರಿಯಧರ್ಮದಲ್ಲಿ ಹುಟ್ಟಿದ ಯಾರು ಕ್ಷತ್ರಿಯಧರ್ಮದಲ್ಲಿಯೇ ನಿರತರಾಗಿ- ರುವರೋ, ಯಾರು ಕ್ಷತ್ರಿಯಧರ್ಮವನ್ನೇ ಆಶ್ರಯಿಸಿ ಜೀವನವನ್ನು ನಿರ್ವಹಿಸುತ್ತಿ- ರುವರೋ ಅವರೇ ಕ್ಷಾತ್ರಧರ್ಮವನ್ನು ಹೇಗೆ ನಿಂದಿಸುವರು? ಇದರಿಂದ ಕ್ಷತ್ರಿಯರು ಯುದ್ಧಧರ್ಮವನ್ನು ವಿಧಿಸಿದ ವಿಧಾತೃವನ್ನೇ ನಿಂದನೆ ಮಾಡಿದಂತಾಗುವುದಲ್ಲವೇ?

ಶ್ರಿಯಾ ವಿಹೀನೈರಧನೈರ್ನಾಸ್ತಿಕೈಃ ಸಂಪ್ರವರ್ತಿತಮ್ |
ವೇದಾವಾದಸ್ಯ ವಿಜ್ಞಾನಂ ಸತ್ಯಾಭಾಸಮಿವಾನೃತಮ್ ||20||

ನಿರ್ಧನರು ಮತ್ತು ನಾಸ್ತಿಕರು - ವೇದಗಳ ಅರ್ಥವಾದ ವಾಕ್ಯಗಳಿಂದ ಪ್ರತಿ- ಪಾದಿತವಾದ ವಿಜ್ಞಾನದ ಆಶ್ರಯವನ್ನು ಪಡೆದವರಾಗಿ ಸತ್ಯದಂತೆ ಕಾಣುವ ಮಿಥ್ಯಾ- ಮತವನ್ನು ಪ್ರಚಾರ ಮಾಡುತ್ತಾರೆ. ಅಂಥ ಅರ್ಥವಾದವನ್ನು ಆಧಾರವನ್ನಾಗಿ ಇಟ್ಟುಕೊಂಡು ಕ್ಷತ್ರಿಯನಾದವನು ಸನ್ನ್ಯಾಸವನ್ನು ಸ್ವೀಕರಿಸುವುದು ಖಂಡಿತವಾಗಿ- ಯೂ ಯೋಗ್ಯವಲ್ಲ.

ಶಕ್ಯಂ ತು ಮೌನಮಾಸ್ಥಾಯ ಬಿಭ್ರಾತಾತ್ಮಾನಮಾತ್ಮನಾ |
ಧರ್ಮಚ್ಛದ್ಮ ಸಮಾಸ್ಥಾಯ ಚ್ಯವಿತುಂ ನ ತು ಜೀವಿತುಮ್ ||21||

ಸತ್ಯದಂತೆ ತಿಳಿದದ್ದು ಸುಳ್ಳೇ ಹೊರತು ಸತ್ಯವಲ್ಲ. ಸನ್ನ್ಯಾಸವನ್ನು ಹಿಡಿದು ತನ್ನನ್ನು ಮಾತ್ರ ತಾನು ರಕ್ಷಣೆ ಮಾಡಿಕೊಳ್ಳುವ ಮನುಷ್ಯನು ಧರ್ಮವೆಂಬ ನೆಪದಿಂದ ಅಧರ್ಮವನ್ನು ಹಿಡಿದು ತನ್ನನ್ನು ತಾನೇ ಕೊಲ್ಲುವವನೇ ಹೊರತು ಜೀವನದ ಸಾರ್ಥಕ್ಯವನ್ನು ಹೊಂದಲು ಸಾಧ್ಯವಾಗುವುದಿಲ್ಲ.

ಶಕ್ಯಂ ಪುನರರಣ್ಯೇಷು ಸುಖಮೇಕೇನ ಜೀವಿತುಮ್ |
ಅಬಿಭ್ರತಾ ಪುತ್ರಪೌತ್ರಾನ್ ದೇವರ್ಷೀನತಿಥೀನ್ ಪಿತೄನ್ ॥22॥
ಮಕ್ಕಳು - ಮೊಮ್ಮಕ್ಕಳನ್ನು ಪೋಷಿಸಲಾರದೆ, ದೇವರ್ಷಿ ಪಿತೃಗಳನ್ನು, ಅತಿಥಿಗ- ಳನ್ನು ತೃಪ್ತಿಗೊಳಿಸದೆ ಕಾಡಿನಲ್ಲಿ ಒಂಟಿಯಾಗಿದ್ದು ಅರಣ್ಯದಿಂದಲೇ ಸದ್ಗತಿಯನ್ನು ಪಡೆಯುವುದು ಸಾಧ್ಯವೇ ?
ನೇಮೇ ಮೃಗಾಃ ಸ್ವರ್ಗಜಿತೋ ನ ವರಾಹಾ ನ ಪಕ್ಷಿಣಃ |
ಅಥಾನ್ಯೇನ ಪ್ರಕಾರೇಣ ಪುಣ್ಯಮಾಹುರ್ನ ತಾಂಜನಾಃ ॥23॥
ವನವಾಸದಿಂದ ಸ್ವರ್ಗ ದೊರೆಯುವುದಾದರೆ ಕಾಡಿನಲ್ಲಿರುವ ಮೃಗಗಳು, ಪಕ್ಷಿಗಳು, ಹಂದಿಗಳು, ಸ್ವರ್ಗವನ್ನು ಇನ್ನೂ ಏಕೆ ಹೊಂದಿಲ್ಲ? ಅರಣ್ಯವಾಸದಿಂದ ಸ್ವರ್ಗದೊರೆಯುವ ಪಕ್ಷದಲ್ಲಿ ಜನರು ಬೇರೆ ವಿಧದಿಂದ ತಮಗೆ ಪುಣ್ಯಪ್ರಾಪ್ತಿ- ಯುಂಟೆಂದೇ ಹೇಳುತ್ತಿರಲಿಲ್ಲ.
ಯದಿ ಸನ್ನ್ಯಾಸತಃ ಸಿದ್ಧಿಂ ರಾಜನ್ ಕಶ್ಚಿದವಾಪ್ನುಯಾತ್ |
ಪರ್ವತಾಶ್ಚ ದ್ರುಮಾಶ್ಚೈವ ಕ್ಷಿಪ್ರಂ ಸಿದ್ಧಿಮವಾಪ್ನುಯುಃ ॥24॥
ರಾಜನಾದವನು ಸನ್ನ್ಯಾಸದಿಂದ ಸಿದ್ಧಿ ಹೊಂದುವ ಪಕ್ಷದಲ್ಲಿ ಕಾಡಿನಲ್ಲಿರುವ ವೃಕ್ಷಗಳೂ, ಪರ್ವತಗಳೂ ಕೂಡಲೇ ಸಿದ್ಧಿಯನ್ನು ಹೊಂದಬೇಕಲ್ಲವೇ?
ಏತೇ ಹಿ ನಿತ್ಯಸನ್ನ್ಯಾಸಾ ದೃಶ್ಯಂತೇ ನಿರುಪದ್ರವಾಃ |
ಅಪರಿಗ್ರಹವಂತಶ್ಚ ಸತತಂ ಬ್ರಹ್ಮಚಾರಿಣಃ ॥25॥
ಪರ್ವತಗಳಿಗೆ ವೃಕ್ಷಗಳಿಗೆ ಸ್ತ್ರೀಸಂಗವಿಲ್ಲ. ದೇಹಯಾತ್ರೆಗೆ ಬೇಕಾದ ವಸ್ತು- ವೊಂದನ್ನೂ ಅವು ಸಂಗ್ರಹಿಸಿಡತಕ್ಕವುಗಳಲ್ಲ. ಮತ್ತೊಬ್ಬರಿಗೆ ಉಪದ್ರವ ಕೊಡು- ವವು ಅಲ್ಲ. ಅವು ನಿತ್ಯಸನ್ನ್ಯಾಸಿಗಳಂತೆ ಕಾಣುತ್ತಿದೆಯಲ್ಲವೇ?
ಅಥ ಚೇದಾತ್ಮಭಾಗ್ಯೇಷು ನಾನ್ಯೇಷಾಂ ಸಿದ್ಧಿಮಶ್ನುತೇ |
ತಸ್ಮಾತ್ ಕರ್ಮೈವ ಕರ್ತವ್ಯಂ ನಾಸ್ತಿ ಸಿದ್ಧಿರಕರ್ಮಣಃ ॥26॥
ಮತ್ತೊಬ್ಬರ ಸಿದ್ಧಿಯಿಂದ ನಮಗೇನೂ ಫಲವಿಲ್ಲವೆಂಬುದಾದರೆ ಪ್ರತಿ- ಯೊಬ್ಬರೂ ತಮ್ಮ ತಮ್ಮ ಕರ್ಮಗಳಿಂದಲೇ ಸಿದ್ಧಿಯನ್ನು ಪಡೆಯಬೇಕು. ಅದಕ್ಕಾ- ದರೂ ಕರ್ಮವನ್ನು ಮಾಡಿಯೇ ತೀರಬೇಕು. ಕರ್ಮವಿಲ್ಲದೆ ಸಿದ್ಧಿಯಿಲ್ಲ.
ಔದಕಾಃ ಸೃಷ್ಟಯಶ್ಚೈವ ಜಂತವಃ ಸಿದ್ಧಿಮಾಪ್ನುಯುಃ |
ತೇಷಾಮಾತ್ಮೈವ ಭರ್ತವ್ಯೋ ನಾನ್ಯಃ ಕಶ್ಚನ ವಿದ್ಯತೇ ॥27॥
ಕರ್ಮವಿಲ್ಲದೆ ಕೇವಲ ಆತ್ಮವನ್ನು ರಕ್ಷಿಸುವವನಿಗೆ ಸಿದ್ಧಿ ಆಗುತ್ತದೆ ಎಂದು ಹೇಳಿದ ಪಕ್ಷದಲ್ಲಿ, ಜಲದಲ್ಲಿರುವ ಮೀನು ಮೊದಲಾದ ಜಂತುಗಳೂ, ಸ್ಥಾವರಗಳೂ ಸಿದ್ಧಿಯನ್ನು ಹೊಂದಬೇಕಾಗುತ್ತದೆ. ಅವುಗಳಿಗೂ ರಕ್ಷಿಸಬೇಕಾದುದು ತಮ್ಮ ಆತ್ಮವೊಂದೇ ಹೊರತು ಬೇರೆ ಅಲ್ಲ.
ಅವೇಕ್ಷಸ್ವ ಯಥಾ ಸ್ವೈಃ ಸ್ವೈಃ ಕರ್ಮಭಿರ್ವ್ಯಾಪೃತಂ ಜಗತ್|
ತಸ್ಮಾತ್ ಕರ್ಮೈವ ಕರ್ತವ್ಯಂ ನಾಸ್ತಿ ಸಿದ್ಧಿರಕರ್ಮಣಃ ॥28॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದಶಮೋಽಧ್ಯಾಯಃ ॥
ಪ್ರಾಣಿಗಳೆಲ್ಲವೂ ತಮ್ಮ ತಮ್ಮ ಕರ್ಮಗಳಲ್ಲಿ ನಿರತವಾಗಿರುವುವು. ಆದ್ದರಿಂದ ಸ್ವಕರ್ಮವು ಎಲ್ಲರಿಗೂ ಕರ್ತವ್ಯವೇ ಆಗಿದೆ. ಕರ್ಮವನ್ನು ಬಿಟ್ಟವನಿಗೆ ಎಂದಿಗೂ ಸಿದ್ಧಿಯಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 10ನೆಯ ಅಧ್ಯಾಯವು ಮುಗಿಯಿತು.
*****

11. ಹನ್ನೊಂದನೆಯ ಅಧ್ಯಾಯ
ಪಕ್ಷಿರೂಪಿಯಾದ ಇಂದ್ರನಿಗೆ ಮತ್ತು ಪಕ್ಷಿರೂಪಿಯಾದ ಇಂದ್ರನಿಗೂ ಋಷಿಕುಮಾರರಿಗೂ ನಡೆದ ಸಂಭಾಷಣೆಯನ್ನು ಉದಾಹರಿಸಿ ಅರ್ಜುನನು ಯುಧಿಷ್ಠಿರನನ್ನು ಕುರಿತು ಗೃಹಸ್ಥ ಧರ್ಮವೇ ಶ್ರೇಷ್ಠವೆಂದು ನಿರೂಪಿಸಿದುದು.
ಅರ್ಜುನಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ತಾಪಸೈಃ ಸಹ ಸಂವಾದಂ ಶಕ್ರಸ್ಯ ಭರತರ್ಷಭ ॥1॥
ಅರ್ಜುನನು ಭರತರ್ಷಭನೇ ! ಕರ್ಮವು ಮೇಲೋ, ಸನ್ನ್ಯಾಸವು ಮೇಲೋ ಎಂಬ ವಿಚಾರದಲ್ಲಿ ಇಂದ್ರನಿಗೂ ಋಷಿಗಳಿಗೂ ನಡೆದ ಸಂವಾದ ರೂಪವಾದ ಪುರಾತನಕಥೆಯೊಂದನ್ನು ಉದಾಹರಿಸಿದರು. ಅದನ್ನು ಹೇಳುವೆನು ಕೇಳು.
ಕೇಚಿದ್ ಗೃಹಾನ್ ಪರಿತ್ಯಜ್ಯ ವನಮಭ್ಯಾಗಮನ್ ದ್ವಿಜಾಃ |
ಅಜಾತಶ್ಮಶ್ರವೋ ಮಂದಾಃ ಕುಲೇ ಜಾತಾಃ ಪ್ರವವ್ರಜುಃ ॥2॥
ಸತ್ಕುಲದಲ್ಲಿ ಹುಟ್ಟಿ, ಭಾಗ್ಯವಂತರಾಗಿ, ಧರ್ಮವನ್ನು ನಡೆಸುವ ಶಕ್ತಿಯುಳ್ಳ ಕೆಲವು ಬ್ರಾಹ್ಮಣಬಾಲಕರು, ಮನೆಯನ್ನು ತೊರೆದು ಕಾಡಿಗೆ ಹೊರಟರು. ವಿವೇಚನೆ ಸಾಲದ ಅವರು ಮೀಸೆಮೊಳೆಯುವ ಪ್ರಾಯಕ್ಕೆ ಮೊದಲೇ ಸನ್ನ್ಯಾಸಿಗಳಾಗ- ಬೇಕೆಂದು ನಿರ್ಧರಿಸಿದರು.
ಧರ್ಮೋಽಯಮಿತಿ ಮನ್ವಾನಾ ಬ್ರಹ್ಮಚರ್ಯೇ ವ್ಯವಸ್ಥಿತಾಃ |
ತ್ಯಕ್ತ್ವಾ ಭ್ರಾತೄನ್ ಪಿತೄಂಶ್ಚೈವ ತಾನಿಂದ್ರೋಽನ್ವಕೃಪಾಯತ ॥3॥
ಸನ್ನ್ಯಾಸವೇ ಉತ್ತಮ ಧರ್ಮವೆಂದು ಕಾಡಿನಲ್ಲಿ ನಿಶ್ಚಿಂತವಾಗಿರಬಹುದೆಂದು ಆ ಬ್ರಹ್ಮಚಾರಿಗಳು, ತಂದೆತಾಯಂದಿರನ್ನು

ಸಹೋದರರನ್ನು ತೊರೆದು ಅರಣ್ಯಕ್ಕೆ ಹೋದರು.
ತಾನಾಬಭಾಷೇ ಭಗವಾನ್ ಪಕ್ಷೀ ಭೂತ್ವಾ ಹಿರಣ್ಮಯಃ |
ಸುದುಷ್ಕರಂ ಮನುಷ್ಯೈಶ್ಚ ಯತ್ ಕೃತಂ ವಿಘಸಾಶಿಭಿಃ ॥4॥
ಪುಣ್ಯಂ ಚ ಬತ ಕರ್ಮೈಷಾಂ ಪ್ರಶಸ್ತಂ ಚೈವ ಜೀವಿತಮ್ |
ಸಂಸಿದ್ಧಾಸ್ತೇ ಗತಿಂ ಮುಖ್ಯಾಂ ಪ್ರಾಪ್ತಾ ಧರ್ಮಪರಾಯಣಾಃ ॥5॥
ಇವರಲ್ಲಿ ಇಂದ್ರನಿಗೆ ಕನಿಕರವು ಹುಟ್ಟಿತು. ಅವನು ಸುವರ್ಣಮಯವಾದ ಒಂದು ಹಕ್ಕಿಯ ರೂಪವನ್ನು ಧರಿಸಿ ಬ್ರಾಹ್ಮಣವಟುಗಳ ಸಮೀಪದಲ್ಲಿ ಬಂದು ಹೀಗೆಂದನು.
ಯಜ್ಞದ ಶೇಷವನ್ನು ಭುಂಜಿಸುವವರ ಪುಣ್ಯಕ್ಕೆ ಸಮಾನವಾದ ಪುಣ್ಯವನ್ನು ಬೇರೆ ಯಾರೂ ಯಾವ ವಿಧದಿಂದಲೂ ಸಂಪಾದಿಸಲಾರರು. ಅವರ ಕರ್ಮವು ಜೀವನಕ್ರಮವು ಅತ್ಯಂತ ಪ್ರಶಸ್ತವೂ ಆಗಿದೆ. ಅವರು ಬಯಸಿದ ಸಿದ್ಧಿಯನ್ನು ಪಡೆಯುವವರು. ಧರ್ಮವನ್ನು ಪ್ರಧಾನವಾಗಿ ನಂಬಿದವರೇ ಉತ್ತಮ ಗತಿಯನ್ನು ಹೊಂದುವರು ಎಂದನು.
ಋಷಯಃ
ಅಹೋ ಬತಾಯಂ ಶಕುನಿರ್ವಿಘಸಾಶಾನ್ ಪ್ರಶಂಸತಿ |
ಅಸ್ಮಾನ್ನೂನಮಯಂ ಶಾಸ್ತಿ ವಯಂ ಚ ವಿಘಸಾಶಿನಃ ॥6॥
ಹಕ್ಕಿಯ ಈ ಮಾತಿನ ನಿಜ ಅರ್ಥವನ್ನು ತಿಳಿಯದ ಆ ಬ್ರಹ್ಮಚಾರಿಗಳು ಹಕ್ಕಿಯು ತಮ್ಮನ್ನೇ ಪ್ರಶಂಸೆ ಮಾಡುತ್ತಿದೆ ಎಂದು ಸಂತೋಷಗೊಂಡರು. (ವಿಘಸವೆಂದರೆ ಹುಲ್ಲು, ಗೆಡ್ಡೆ, ಎಲೆ, ಹಣ್ಣು, ಮುಂತಾದ ವನ ಪದಾರ್ಥಗಳು) ತಮ್ಮನ್ನು ತಾವೇ ಆಹಾ ಸಂತೋಷವು! ವಿಘಸಭೋಜಿಗಳಾದ ನಮ್ಮನ್ನು ಈ ಪಕ್ಷಿಯು ಹೊಗಳುತ್ತಿದೆ. ಕಾಡಿನಲ್ಲಿ ಅಲೆಯುವ ನಮ್ಮನ್ನು ಕುರಿತೇ ಹೇಳುತ್ತಿದೆ. ನಾವು ಇನ್ನು ಮುಂದೆ ವಿಘಸವನ್ನು ಭುಂಜಿಸಬೇಕೆಂದು ಅನುಶಾಸನ ಮಾಡುತ್ತಿದೆ ಎಂದು ಸಂತೋಷದಿಂದ ಮಾತಾಡಿಕೊಳ್ಳುತ್ತಿದ್ದರು.
ಶಕುನಿಃ
ನಾಹಂ ಯುಷ್ಮಾನ್ ಪ್ರಶಂಸಾಮಿ ಪಂಕದಿಗ್ಧಾನ್ ರಜಸ್ವಲಾನ್ |
ಉಚ್ಛಿಷ್ಟಭೋಜಿನೋ ಮಂದಾನನ್ಯೇ ವೈ ವಿಘಸಾಶಿನಃ ॥7॥
ಆಗ ಪಕ್ಷಿಯು ಅವರನ್ನು ಕುರಿತು ಹೀಗೆಂದಿತು. ಕಾಡಿನಲ್ಲಿ ತಿರುಗಿ ಕಾಡಿನ ಧೂಳನ್ನು ಮೈಗೆ ಅಂಟಿಸಿಕೊಂಡು ಒಳಗೂ ಹೊರಗೂ ಕಶ್ಮಲಯುಕ್ತರಾಗಿ ಎಂಜಲನ್ನು ತಿನ್ನುತ್ತಿರುವ ಬುದ್ಧಿಹೀನರಾದ ನಿಮ್ಮಂತಹವರನ್ನು ನಾನು ಹೊಗಳಿಲ್ಲ. ವಿಘಸವನ್ನು ಭುಂಜಿಸುವವರೆಂದರೆ ಅವರೇ ಬೇರೆ. ನೀವಲ್ಲ ಎಂದಿತು.
ಋಷಯಃ
ಇದಂ ಶ್ರೇಯಃ ಪರಮಿತಿ ವಯಮೇವಾಭ್ಯುಪಾಸ್ಮಹೇ |
ಶಕುನೇ ಬ್ರೂಹಿ ಯಚ್ಛ್ರೇಯೋ ಭೃಶಂ ತೇ ಶ್ರದ್ದಧಾಮಹೇ ॥8॥
ಋಷಿಗಳು ಪಕ್ಷಿರಾಜ ! ನಾವು ವನವಾಸವನ್ನೇ ಉತ್ತಮ ಮಾರ್ಗವೆಂದು ತಿಳಿದಿದ್ದೇವೆ. ನಮ್ಮ ಶ್ರೇಯಸ್ಸಿಗೆ ಉತ್ತಮ ದಾರಿಯನ್ನು ತಿಳಿಸು. ನಿನ್ನನ್ನು ನಂಬಿ ನಿನ್ನ ಮಾತಿನಂತೆ ನಡೆಯುವೆವು.
ಶಕುನಿಃ
ಯದಿ ಮಾಂ ನಾಭಿಶಂಕಧ್ವಂ ವಿಭಜ್ಯಾತ್ಮಾನಮಾತ್ಮನಾ |
ತತೋಽಹಂ ವಃ ಪ್ರವಕ್ಷ್ಯಾಮಿ ಯಾಥಾತಥ್ಯಂ ಹಿತಂ ವಚಃ ॥9॥
ಪಕ್ಷಿ ಬ್ರಹ್ಮಚಾರಿಗಳೇ ! ನೀವು ಮನಸ್ಸಿನಲ್ಲಿ ನನ್ನ ಬಗ್ಗೆ ಸಂದೇಹವನ್ನು ತೊರೆದರೆ ನಿಮ್ಮ ಶ್ರೇಯಸ್ಸು ಯಾವುದರಿಂದ ಲಭ್ಯವಾಗುತ್ತದೆಂಬುದನ್ನು ಹೇಳು- ತ್ತೇನೆ. ಈ ಎಲ್ಲ ವಿಷಯಗಳನ್ನು ಮನಸ್ಸಿನಲ್ಲಿಯೂ ತರ್ಕಿಸಿ ವಿಭಜಿಸಿ ನಿಮಗೆ ಹಿತವಾದ ಮಾತನ್ನು ಹೇಳುವೆನು.
ಋಷಯಃ
ಶೃಣುಮಸ್ತೇ ವಚಸ್ತಾತ ಪಂಥಾನೋ ವಿದಿತಾಸ್ತವ |
ನಿಯೋಗೇ ಚೈವ ಧರ್ಮಾತ್ಮನ್ ಸ್ಥಾತುಮಿಚ್ಛಾಮ ಶಾಧಿ ನಃ ॥10॥
ಋಷಿಗಳು ಧರ್ಮಾತ್ಮನೇ! ನಿನ್ನ ಮಾತನ್ನು ನಾವು ನಂಬುವೆವು. ನೀನು ಹೇಳಿದಂತೆ ನಡೆಯುವೆವು. ಶ್ರೇಯಸ್ಸಿನ ಮಾರ್ಗಗಳು ಅನೇಕ ಇವೆ. ಅವುಗಳನ್ನೆಲ್ಲ ಚೆನ್ನಾಗಿ ತಿಳಿದ ನೀನು ನಮ್ಮನ್ನು ಕುರಿತು ಉಪದೇಶಿಸು.
ಶಕುನಿಃ
ಚತುಷ್ಪದಾಂ ಗೌಃ ಪ್ರವರಾ ಲೋಹಾನಾಂ ಕಾಂಚನಂ ವರಮ್ |
ಶಬ್ದಾನಾಂ ಪ್ರವರೋ ಮಂತ್ರೋ ಬ್ರಾಹ್ಮಣೋ ದ್ವಿಪದಾಂ ವರಃ ॥11॥
ಪಕ್ಷಿ ನಾಕು ಕಾಲುಗಳಿರುವ ಪ್ರಾಣಿಗಳಲ್ಲಿ ಹಸುವು ಶ್ರೇಷ್ಠವಾದದ್ದು. ಲೋಹ- ಗಳಲ್ಲಿ ಬಂಗಾರವು ಉತ್ತಮವಾದದ್ದು. ಶಬ್ದಗಳಲ್ಲಿ ವೇದಮಂತ್ರವು, ದ್ವಿಪಾದಗಳಲ್ಲಿ ಬ್ರಾಹ್ಮಣನು ಶ್ರೇಷ್ಠನು.
ಮಂತ್ರೋಽಯಂ ಜಾತಕರ್ಮಾದಿ ಬ್ರಾಹ್ಮಣಸ್ಯ ವಿಧೀಯತೇ |
ಜೀವತೋಽಪಿ ಯಥಾಕಾಲಂ ಶ್ಮಶಾನನಿಧನಾದಿಭಿಃ ॥12॥
ಬ್ರಾಹ್ಮಣನಿಗೆ ಮಂತ್ರಪೂರ್ವಕವಾದ ಜಾತಕರ್ಮಾದಿ ಸಂಸ್ಕಾರಗಳು ವಿಹಿತ- ವಾಗಿವೆ. ಅವನು ಎಲ್ಲಿಯವರೆಗೆ ಜೀವಿಸಿರುವನೋ ಅಲ್ಲಿಯವರೆಗೂ ಆಯಾ ಸಮಯದಲ್ಲಿ ಉಪನಯನ, ವಿವಾಹಾದಿ ಸಂಸ್ಕಾರಗಳು ಮತ್ತು ಮರಣಾನಂತರವೂ ಸ್ಮಶಾನದಲ್ಲಿ ಅಂತ್ಯಸಂಸ್ಕಾರಗಳು ವಿಹಿತವಾಗಿವೆ.

ಕರ್ಮಾಣಿ ವೈದಿಕಾನ್ಯಸ್ಯ ಸ್ವರ್ಗ್ಯಃ ಪಂಥಾಸ್ತ್ವನುತ್ತಮಃ |
ಅಥ ಸರ್ವಾಣಿ ಕರ್ಮಾಣಿ ಮಂತ್ರಸಿದ್ಧಾನಿ ಚಕ್ಷತೇ ॥13॥
ಆಮ್ನಾಯದೃಢವಾದೀನಿ ತಥಾ ಸಿದ್ಧಿರಿಹೇಷ್ಯತೇ |
ಮಾಸಾರ್ಧಮಾಸಾ ಋತವ ಆದಿತ್ಯಶಶಿತಾರಕಮ್ ॥14॥
ಈಹಂತೇ ಸರ್ವಭೂತಾನಿ ತದಿದಂ ಕಮರಸಂಜ್ಞಿತಮ್ |
ಸಿದ್ಧಿಕ್ಷೇತ್ರಮಿದಂ ಪುಣ್ಯಮಯಮೇವಾಶ್ರಮೋ ಮಹಾನ್ ॥15॥
ಬ್ರಾಹ್ಮಣನಿಗೆ ವೇದೋಕ್ತಕರ್ಮಗಳೇ ಸ್ವರ್ಗಾದಿಗಳನ್ನು ಪಡೆಯಲು ಅನು- ಕೂಲವಾದ ಮಾರ್ಗಗಳು. ಕರ್ಮಮಾರ್ಗವೇ ಅವನಿಗೆ ಉತ್ತಮ ಮಾರ್ಗವು. ಕರ್ಮಗಳಿಂದಲೇ ಮಂತ್ರಗಳ ಸಿದ್ಧಿಯೆಂದು ವೇದವಾಕ್ಯಗಳು ಸ್ಪಷ್ಟಪಡಿಸುತ್ತವೆ. ಈ ಕರ್ಮಮಾರ್ಗದಲ್ಲಿ ಪಕ್ಷ, ಮಾಸ, ಋತು ಮೊದಲಾದ ಅಭಿಮಾನಿ ದೇವತೆಗಳನ್ನು ಪುರಸ್ಕರಿಸಿಕೊಂಡು ಚಂದ್ರಮಂಡಲದ ಮೂಲಕ ಪಿತೃಲೋಕಪದವಿಯನ್ನು, ಸೂರ್ಯಮಂಡಲದ ಮೂಲಕ ದೇವಲೋಕಪದವಿಯನ್ನು ಹೊಂದುತ್ತಾರೆ. ಸಂಸಾರಬಂಧದಿಂದ ಬಿಡುಗಡೆಗೊಂಡು ಪರಮಾತ್ಮನ ಸನಿಹಕ್ಕೆ ತೆರಳಲು ಸಾಧನಮಾರ್ಗಗಳಾಗಿವೆ. ಈ ಮೂರು ಬಗೆಯ ಸಿದ್ಧಿಗಳು ಕರ್ಮದಿಂದಲೇ ಉಂಟಾಗುವವು. ಪ್ರಾಣಿಗಳೂ ಕೂಡ ಕರ್ಮದ ಫಲವನ್ನೇ ಉಣ್ಣುವವು. ಕರ್ಮಸಿದ್ಧಾಂತವನ್ನು ಒಪ್ಪಿದವನಿಗೆ ಕರ್ಮವೇ ಸಮಸ್ತಸಿದ್ಧಿಗಳಿಗೂ ಸಾಧನ. ಪುಣ್ಯಕ್ಷೇತ್ರವೆನಿಸುವುದು. ಕರ್ಮಮಾರ್ಗವನ್ನು ಅನುಸರಿಸುವ ಆಶ್ರಯವೇ ದೊಡ್ಡ ಆಶ್ರಮವು
ಅಥ ಯೇ ಕರ್ಮ ನಿಂದಂತೋ ಮನುಷ್ಯಾಃ ಕಾಪಥಂ ಗತಾಃ |
ಮೂಢಾನಾಮರ್ಥಹೀನಾನಾಂ ತೇಷಾಮೇನಸ್ತು ವಿದ್ಯತೇ ॥16॥
ಈ ಕರ್ಮಮಾರ್ಗವನ್ನು ನಿಂದಿಸಿ ಬೇರೆ ಮಾರ್ಗಕ್ಕೆ ಹೋಗುವ ಮೂಢರು ಪುರುಷಾರ್ಥಗಳಿಂದ ಹೀನರಾಗಿ ಪಾಪಿಗಳಾಗುತ್ತಾರೆ.
ದೇವವಂಶಾನ್ ಪಿತೃವಂಶಾನ್ ಬ್ರಹ್ಮವಂಶಾಂಶ್ಚ ಶಾಶ್ವತಾನ್ |
ಸಂತ್ಯಜ್ಯ ಮೂಢಾ ವರ್ತಂತೇ ತತೋ ಯಾಂತ್ಯಶ್ರುತೀಪಥಮ್ ॥17॥
ವೇದದಲ್ಲಿ ತಿಳಿಸಿದ ಕರ್ಮಗಳ ಮೂಲಕ ಬ್ರಾಹ್ಮಣರು ದೇವರ್ಷಿ ಪಿತೃಗಳನ್ನು ಆರಾಧಿಸಬೇಕು. ಆದರೆ ಮೂಢರಾದವರು ಯಜ್ಞ-ಯಾಗಗಳಿಂದ ದೇವತೆಗಳನ್ನು, ಶ್ರಾದ್ಧ-ತರ್ಪಣಾದಿಗಳಿಂದ ಪಿತೃಗಳನ್ನು, ಸ್ವಾಧ್ಯಾಯ-ಬ್ರಹ್ಮಯಜ್ಞಗಳಿಂದ ಋಷಿ- ಗಳನ್ನು ಆರಾಧಿಸುವುದನ್ನು ಬಿಟ್ಟು ವೇದವಿರುದ್ಧವಾದ ಮಾರ್ಗವನ್ನು ಆಶ್ರಯಿಸು- ತ್ತಾರೆ.
ಏತದ್ ವೋಽಸ್ತು ತಪೋ ಯುಕ್ತಂ ದದಾಮೀತ್ಯೃಷಿಚೋದಿತಮ್ |
ತಸ್ಮಾತ್ ತತ್ತದ್-ವ್ಯವಸ್ಥಾನಂ ತಪಸ್ವಿ ತಪ ಉಚ್ಯತೇ ॥18॥
ವೇದಗಳಲ್ಲಿ ಹೇಳಲ್ಪಟ್ಟ ಕರ್ಮಗಳೇ ತಪಸ್ಸು ಎಂಬುದಾಗಿ ಕರೆಯಿಸಿಕೊಳ್ಳುತ್ತವೆ. ಆದ್ದರಿಂದ ನಿಷ್ಠೆಯಿಂದ ಮಾಡಲ್ಪಡುವ ಕರ್ಮಗಳೇ ತಪಸ್ವಿಗಳ ತಪಸ್ಸು ಎಂದು ಹೇಳಲ್ಪಟ್ಟಿದೆ.
ವಿವರಣೆ - ಕಾಡಿಗೆ ಹೋಗಿ ಧ್ಯಾನ ಮಾಡುವುದಷ್ಟೇ ತಪಸ್ಸಲ್ಲ. ಮನೆಯಲ್ಲಿ ಕುಳಿತು ಶ್ರದ್ಧೆಯಿಂದ ವೇದೋಕ್ತಕರ್ಮಗಳನ್ನು ಆಚರಣೆ ಮಾಡಿದರೂ ಕೂಡ ತಪಸ್ಸು ಎಂಬುದಾಗಿ ಕರೆಸಿಕೊಳ್ಳುತ್ತದೆ ಎಂಬುದು ಭಾವ.
ದೇವವಂಶಾನ್ ಪಿತೃವಂಶಾನ್ ಬ್ರಹ್ಮವಂಶಾಂಶ್ಚ ಶಾಶ್ವತಾನ್ |
ಸಂವಿಭಜ್ಯ ಗುರೋಶ್ಚರ್ಯಾಂ ತದ್ ವೈ ದುಷ್ಕರಮುಚ್ಯತೇ ॥19॥
ಆ ದಿನದ ಯಾವ ಸಮಯದಲ್ಲಿ ಏನನ್ನು ಅನುಷ್ಠಾನ ಮಾಡಬೇಕೆಂಬುದನ್ನು ವಿಚಾರ ಮಾಡಿ ಇಟ್ಟುಕೊಳ್ಳಬೇಕು. ಯಜ್ಞಗಳ ಮೂಲಕ ದೇವತೆಗಳನ್ನು ಆರಾಧನೆ ಮಾಡಬೇಕು. ಸ್ವಾಧ್ಯಾಯದ ಮೂಲಕ ಋಷಿಗಳನ್ನು ಆರಾಧನೆ ಮಾಡಬೇಕು. ಶ್ರಾದ್ಧ ತರ್ಪಣಾದಿಗಳ ಮೂಲಕ ಪಿತೃ ದೇವತೆಗಳನ್ನು ಆರಾಧನೆ ಮಾಡಬೇಕು. ಮತ್ತು ದುಷ್ಕರವಾದ ಗುರುಶುಶ್ರೂಷೆಯನ್ನು ಮಾಡಬೇಕು. ಇದರಿಂದ ಮಹಾ- ಫಲವು ದೊರಕುತ್ತದೆ.
ದೇವಾ ವೈ ದುಷ್ಕರಂ ಕೃತ್ವಾ ವಿಭೂತಿಂ ಪರಮಾಂ ಗತಾಃ |
ತಸ್ಮಾದ್ ಗಾರ್ಹಸ್ಥ್ಯಮುದ್ವೋಢುಂ ದುಷ್ಕರಂ ಪ್ರಬ್ರವೀಮಿ ವಃ ॥20॥
ದೇವತೆಗಳು ಅತ್ಯಂತ ದಕ್ಷಿಣಸಾಧ್ಯವಾದ ವ್ರತಗಳನ್ನು ಅನುಷ್ಠಾನವನ್ನು ಮಾಡಿ- ರುವರು ಅದರ ಫಲವಾಗಿಯೇ ಶ್ರೇಷ್ಠವಾದ ಸ್ಥಾನಮಾನಗಳನ್ನು ಪಡೆದುಕೊಂಡಿ- ರುವರು. ಆ ದೇವತೆಗಳೆಲ್ಲರೂ ಗಾರ್ಹಸ್ಥ್ಯಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಿರು- ವರು. ಆದ್ದರಿಂದ ಅಂತ ಶ್ರೇಷ್ಠವಾದ ಗೃಹಸ್ಥಧರ್ಮವನ್ನು ತಮಗೆ ತಿಳಿಸುತ್ತಿದ್ದೇನೆ.
ತಪಃ ಶ್ರೇಷ್ಠಂ ಪ್ರಜಾನಾಂ ಹಿ ಮೂಲಮೇತನ್ನ ಸಂಶಯಃ |
ಕುಟುಂಬವಿಧಿನಾನೇನ ಯಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥21॥
ವೇದದಲ್ಲಿ ಹೇಳಲ್ಪಟ್ಟ ಈ ಗೃಹಸ್ಥ ಧರ್ಮದ ಆಚರಣೆಯೇ ಶ್ರೇಷ್ಠ ತಪಸ್ಸಾಗಿದೆ. ಈ ಧರ್ಮವು ಹಿತಸಾಧನೆಗೆ ಮೂಲ ಕಾರಣವಾಗಿದೆ. ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಕುಟುಂಬವನ್ನು ರಕ್ಷಣೆ ಮಾಡಬೇಕು. ಈ ಗೃಹಸ್ಥಾಶ್ರಮದಲ್ಲಿ ಈ ಗೃಹಸ್ಥಾಶ್ರಮವನ್ನು ಆಶ್ರಯಿಸಿಕೊಂಡು ಉಳಿದ ಮೂರು ಆಶ್ರಮಗಳು ಇರುತ್ತವೆ.
ಏತದ್ ವಿದುಸ್ತಪೋ ವಿಪ್ರಾ ದ್ವಂದ್ವಾತೀತಾ ವಿಮತ್ಸರಾಃ |
ತಸ್ಮಾದ್ ವ್ರತಂ ಮಧ್ಯಮಂ ಚ ಲೋಕೇಷು ತಪ ಉಚ್ಯತೇ ॥22॥
ಯಾವ ವಿಪ್ರರು ಸುಖದುಃಖಗಳೆಂಬ ದ್ವಂದ್ವಗಳಿಂದ ಅತೀತರಾಗಿದ್ದಾರೆ. ಅಸೂಯೆಗಳಿಂದ ಸ್ನೇಹಿತರಾಗಿದ್ದಾರೊ, ಅವರು ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಹೇಳುತ್ತಾರೆ. ಆದ್ದರಿಂದ ಈ ಗೃಹಸ್ಥಾಶ್ರಮವ್ರತವು ಲೋಕದಲ್ಲಿ ತಪಸ್ಸೆಂದು ಪ್ರಸಿದ್ಧವಾಗಿದೆ.
ದುರಾಧರ್ಷಂ ಪದಂ ಚೈವ ಗಚ್ಛಂತಿ ವಿಘಸಾಶಿನಃ |
ಸಾಯಂಪ್ರಾತರ್ವಿಭಜ್ಯಾನ್ನಂ ಸ್ವಕುಟುಂಬೇ ಯಥಾವಿಧಿ ॥23॥
ದತ್ವಾತಿಥಿಭ್ಯೋ ದೇವೇಭ್ಯಃ ಪಿತೃಭ್ಯಃ ಸ್ವಜನಸ್ಯ ಚ |

ಅವಶಿಷ್ಟಾನಿ ಯೇಽಶ್ನಂತಿ ತಾನಾಹುರ್ವಿಘಸಾಶಿನಃ ॥24॥
ಯಜ್ಞಶೇಷದ ಭೋಜನವನ್ನು ಉಣ್ಣುವವರು ಸಾಮಾನ್ಯರಿಂದ ಜಯಿಸಲು ಅಸಾಧ್ಯವಾದ ಪುಣ್ಯಲೋಕಗಳಿಗೆ ಹೋಗುತ್ತಾರೆ. ಯಾರು ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ತಮ್ಮ ತಮ್ಮ ಸಂಸಾರದಲ್ಲಿ ಯಥಾವಿಧಿಯಾಗಿ ಅನ್ನವನ್ನು ವಿಭಾಗಿಸಿ ದೇವತೆಗಳಿಗೆ-ಪಿತೃಗಳಿಗೆ ನಿವೇದನೆ ಮಾಡಿ, ಅತಿಥಿಗಳಿಗೂ ಮತ್ತು ಬಂಧುವರ್ಗದವರಿಗೂ ಭೋಜನ ಮಾಡಿಸಿ ಅನ್ನಶೇಷವನ್ನು ತಿನ್ನುತ್ತಾರೋ, ಅವರು ವಿಘಸಾಶಿಗಳೆಂದು ಕರೆಯಲ್ಪಡುತ್ತಾರೆ.
ತಸ್ಮಾತ್ ಸ್ವಧರ್ಮಮಾಸ್ಥಾಯ ಸುವ್ರತಾಃ ಸತ್ಯವಾದಿನಃ ।
ಲೋಕಸ್ಯ ಗುರವೋ ಭೂತ್ವಾ ತೇ ಭವಂತ್ಯನುಪಸ್ಕೃತಾಃ ॥25॥
ಆದ್ದರಿಂದ ವಿಘಸಾಶಿಗಳು ಸ್ವಧರ್ಮದಲ್ಲಿಯೇ ಆಸಕ್ತರಾಗಿದ್ದು ವರ್ಣಾ- ಶ್ರಮೋಚಿತವಾದ ವ್ರತಾನುಷ್ಠಾನಗಳನ್ನು ಶ್ರದ್ಧೆಯಿಂದ ಮಾಡುತ್ತಾ ಸತ್ಯನಿಷ್ಠರಾಗಿ ಯಾವ ವಿಧವಾದ ಸಂಶಯವೂ ಇಲ್ಲದವರಾಗಿ ಲೋಕದಲ್ಲಿ ಗುರುಗಳಾಗಿ ವಿರಾಜಿಸುತ್ತಾರೆ.
ತ್ರಿದಿವಂ ಪ್ರಾಪ್ಯ ಶಕ್ರಸ್ಯ ಸ್ವರ್ಗಲೋಕೇ ವಿಮತ್ಸರಾಃ ।
ವಸಂತಿ ಶಾಶ್ವತೀರ್ವರ್ಷಾ ಜನಾ ದುಷ್ಕರಕಾರಿಣಃ ॥26॥
ಕಷ್ಟಸಾಧ್ಯವಾದ ವೇದದಲ್ಲಿ ಹೇಳಿದ ಗೃಹಸ್ಥಕರ್ಮಗಳಲ್ಲಿ ಆಸಕ್ತರಾಗಿ, ಅನ- ಸೂಯರಾದ ಪುಣ್ಯಾತ್ಮರು ಇಂದ್ರಲೋಕವನ್ನು ಹೊಂದಿ ಸ್ವರ್ಗದಲ್ಲಿ ನಿಷ್ಕಲ್ಮಷಚಿತ್ತ- ರಾಗಿ ಬಹುಕಾಲದವರೆಗೆ ವಾಸಿಸುವರು.
ತತಸ್ತೇ ತದ್ ವಚಃ ಶ್ರುತ್ವಾ ತಸ್ಯ ಧರ್ಮಾರ್ಥಸಂಹಿತಮ್ ।
ಉತ್ಸೃಜ್ಯ ನಾಸ್ತೀತಿ ಗತಾ ಗಾರ್ಹಸ್ಥ್ಯಂ ಧರ್ಮಮಾಶ್ರಿತಾಃ ॥27॥
ಅರ್ಜುನ ಪಕ್ಷಿಯು ಹೇಳಿದ ಧರ್ಮಾರ್ಥದಿಂದ ಕೂಡಿದ ಉಪದೇಶವನ್ನು ಕೇಳಿದ ಕೂಡಲೇ ಆ ಬ್ರಹ್ಮಚಾರಿಗಳು ತಮಗೆ ಅನಿಸಿದ ತಪ್ಪನ್ನು ಬಿಟ್ಟು ಗೃಹಸ್ಥ- ಧರ್ಮವನ್ನು ಕೈಗೊಂಡರು.
ತಸ್ಮಾತ್ ತ್ವಮಪಿ ದುರ್ಧರ್ಷಂ ಧೈರ್ಯಮಾಲಂಬ್ಯ ಶಾಶ್ವತಮ್ ।
ಪ್ರಶಾಧಿ ಪೃಥಿವೀಂ ಕೃತ್ಸ್ನಾಂ ಹತಾಮಿತ್ರಾಂ ನರೋತ್ತಮ ॥28॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಏಕಾದಶೋಽಧ್ಯಾಯಃ ॥11॥
ನರೋತ್ತಮನೇ! ನಿನಗೆ ತಿಳಿಯದ ವಿಷಯವಿಲ್ಲ. ಪುರುಷಶ್ರೇಷ್ಠನೆನಿಸಿದ ನೀನು ಧೈರ್ಯವನ್ನು ಆಶ್ರಯಿಸಿ ಶತ್ರುಗಳಿಂದ ದೂರವಾದ ಈ ಅಖಂಡಭೂಮಂಡಲವನ್ನು ರಕ್ಷಣೆ ಮಾಡು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 11ನೆಯ ಅಧ್ಯಾಯವು ಮುಗಿಯಿತು.
*****
12. ಹನ್ನೆರಡನೆಯ ಅಧ್ಯಾಯ
ಯುಧಿಷ್ಠಿರನಿಗೆ ನಕುಲನು ಗೃಹಸ್ಥಧರ್ಮವನ್ನು ಪ್ರಶಂಸೆ ಮಾಡುತ್ತಾ, ಸಮಾಧಾನದ ಮಾತುಗಳನ್ನು ಹೇಳಿದುದು.
ವೈಶಂಪಾಯನಃ
ಅರ್ಜುನಸ್ಯ ವಚಃ ಶ್ರುತ್ವಾ ನಕುಲೋ ವಾಕ್ಯಮಬ್ರವೀತ್ ।
ರಾಜಾನಮಭಿಸಂಪ್ರೇಕ್ಷ್ಯ ಸರ್ವಧರ್ಮಭೃತಾಂ ವರಮ್ ॥1॥
ಅನುರುದ್ಧ್ಯ ಮಹಾಪ್ರಾಜ್ಞೋ ಭ್ರಾತುಶ್ಚಿತ್ತಮರಿಂದಮಃ ।
ವ್ಯೂಢೋರಸ್ಕೋ ಮಹಾಬಾಹುಸ್ತಾಮ್ರಾಸ್ಯೋ ಮಿತಭಾಷಿತಾ ॥2॥
ವೈಶಂಪಾಯನರು ಅರಿಂದಮನೇ! ಅರ್ಜುನನು ಹೇಳಿದ ಮಾತನ್ನು ಮಹಾ- ಪ್ರಾಜ್ಞನಾದ ವಿಶಾಲವಕ್ಷನಾದ, ಮಹಾನುಬಾಹುವಾದ, ಎಣ್ಣೆಗೆಂಪಾದ ಮುಖವನ್ನು ಹೊಂದಿರುವ, ಮಿತಭಾಷಿಯಾದ ನಕುಲನು ಕೇಳಿದನು. ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗಬೇಕೆನ್ನುವ ಯುಧಿಷ್ಠಿರನ ಮನಃಸ್ಥಿತಿಯನ್ನು ರಾಜ್ಯಾಡಳಿತದ ಕುರಿತು ಒಲವನ್ನು ಬೆಳೆಸಲು ಧರ್ಮರಾಜನನ್ನು ನೋಡುತ್ತಾ ಹೀಗೆಂದನು.
ನಕುಲ
ವಿಶಾಖಯೂಪೇ ದೇವಾನಾಂ ಸರ್ವೇಷಾಮಗ್ನಯಶ್ಚಿತಾಃ ।
ತಸ್ಮಾದ್ ವಿದ್ಧಿ ಮಹಾರಾಜ ದೇವಾಃ ಕರ್ಮಫಲೇ ಸ್ಥಿತಾಃ ॥3॥
ನಕುಲ ವಿಶಾಖಯೂಪವೆಂಬ ಕ್ಷೇತ್ರದಲ್ಲಿ ದೇವತೆಗಳು ಅಗ್ನಿಕಾರ್ಯಕ್ಕಾಗಿ ಮಾಡಿದ ಸ್ಥಂಡಿಲದ ಗುರುತನ್ನು ತೋರಿಸತಕ್ಕ ಭಾಗಗಳು ಇನ್ನೂ ಇಲ್ಲಿ ಕಾಣುತ್ತಿವೆ. ಆದುದರಿಂದ ದೇವತೆಗಳೂ ಕೂಡ ಇಲ್ಲಿ ಕರ್ಮಗಳನ್ನು ನಡೆಸಿ ಅದರ ಫಲವನ್ನೇ ಈಗ ಅನುಭವಿಸುತ್ತಿರುವರು.
ಅನಾಸ್ತಿಕಾನಾಂ ಭೂತಾನಾಂ ಪ್ರಾಣದಾಃ ಪಿತರಶ್ಚ ಯೇ ।
ತೇಽಪಿ ಕರ್ಮೈವ ಕುರ್ವಂತಿ ವಿಧಿಂ ಪಶ್ಯಸ್ವ ಪಾರ್ಥಿವ ॥4॥
ಆಸ್ತೀಕರಲ್ಲದ ಪ್ರಾಣಿಗಳಿಗೂ ವೃಷ್ಟಿಯ ಮೂಲಕವಾಗಿ ಅನ್ನದಾನ ಮಾಡು- ವುದರಿಂದ ಲೋಕಪಿತೃಗಳೆನಿಸಿಕೊಂಡ ದೇವತೆಗಳೂ ಕೂಡ ಕರ್ಮಗಳನ್ನು ಮಾಡಿಯೇ ಆ ಪದವಿಯಲ್ಲಿರುವರು.
ವೇದವಾದಾಪವಿದ್ಧಾಂಸ್ತು ತಾನ್ ವಿದ್ಧಿ ಭೃಶನಾಸ್ತಿಕಾನ್ ।
ನಹಿ ವೇದೋಕ್ತಮುತ್ಸೃಜ್ಯ ವಿಪ್ರಃ ಸರ್ವೇಷು ಕರ್ಮಸು ।
ದೇವಯಾನೇನ ನಾಕಸ್ಯ ಪೃಷ್ಠಮಾಪ್ನೋತಿ ಭಾರತ ॥5॥
ಅರ್ಜುನನು ಈಗ ಪ್ರಸ್ತಾಪಿಸಿದ ಆ ಬ್ರಾಹ್ಮಣರು ವೇದಗಳನ್ನು ಬಿಟ್ಟು ನಾಸ್ತಿಕರೆಂದೇ ತಿಳಿ. ಬ್ರಾಹ್ಮಣನಾದವನು ವೇದೋಕ್ತಮಾರ್ಗವನ್ನು ಬಿಟ್ಟು ಬೇರೆ ಎಂಥ ಕರ್ಮಗಳಿಂದಾದರೂ ದೇವಯಾನಮಾರ್ಗದಿಂದ ಸ್ವರ್ಗಕ್ಕೆ ತೆರಳಿ ಬ್ರಹ್ಮ-

ಲೋಕವನ್ನು ಸೇರಲಾರನು.
ಅತ್ಯಾಶ್ರಮಾನಯಂ ಸರ್ವಾನಿತ್ಯಾಹುರ್ವೇದ ನಿಶ್ಚಯಾಃ |
ಬ್ರಾಹ್ಮಣಾಃ ಶ್ರುತಿಸಂಪನ್ನಾಸ್ತಾನ್ ನಿಬೋಧ ಜನಾಧಿಪ ॥6॥
ವೇದಗಳಲ್ಲಿ ನಿಶ್ಚಯಜ್ಞಾನವನ್ನು ಪಡೆದು ಶಾಸ್ತ್ರಗಳನ್ನು ತಿಳಿದ ಬ್ರಾಹ್ಮಣರು ಎಲ್ಲಾ ಆಶ್ರಮಗಳಿಗಿಂತಲೂ ಗೃಹಸ್ಥಾಶ್ರಮವೇ ಮೇಲೆಂದು ಹೇಳುವರು. ಅವರು ಹೇಳಿದ ಮಾತನ್ನಾದರೂ ಕೇಳು.
ವಿತ್ತಾನಿ ಧರ್ಮಲಬ್ಧಾನಿ ಕ್ರತುಮುಖ್ಯೇಷ್ವವಾಸೃಜನ್ |
ಕೃತಾತ್ಮಾ ಸ ಮಹಾರಾಜ ಸ ವೈ ತ್ಯಾಗೀ ಸ್ಮೃತೋ ನರಃ ॥7॥
ಮಹಾರಾಜನೇ ! ಧರ್ಮದಿಂದ ಸಂಪಾದಿಸಿದ ಧನವನ್ನು ಸಂಗ್ರಹಿಸಿ, ಅದರಿಂದ ಉತ್ತಮಯಾಗವನ್ನು ನಡೆಸಿ, ಆ ಯಾಗದ ಮೂಲಕವಾಗಿ ದಾನ ಮಾಡುವವನೇ ನಿಜವಾದ ಜಿತೇಂದ್ರಿಯನು. ಅವನೇ ಸರ್ವವಿಧದಿಂದಲೂ ತ್ಯಾಗಿಯೆನಿಸುವನು.
ಅನವೇಕ್ಷ್ಯ ಸುಖಾದಾನಂ ತಥೈವೋರ್ಧ್ವಂ ಪ್ರತಿಷ್ಠಿತಃ |
ಆತ್ಮತ್ಯಾಗೀ ಮಹಾರಾಜ ಸ ತ್ಯಾಗೀ ತಾಮಸಃ ಮತಃ ॥8॥
ಮಹಾರಾಜನೇ! ಯಾರು ಗೃಹಸ್ಥಧರ್ಮದ ಸುಖಭೋಗಗಳನ್ನು ತೊರೆದು ಕಾಡಿನಲ್ಲಿ ನಿಷ್ಠೆಯಿಂದ ಶರೀರತ್ಯಾಗ ಮಾಡುವವನು ತಾಮಸತ್ಯಾಗಿ ಎನಿಸುವನು.
ಅನಿಕೇತಃ ಪರಿಪತನ್ ವೃಕ್ಷಮೂಲಾಶ್ರಯೋ ಮುನಿಃ |
ಅಪಾಚಕಃ ಸದಾ ಯೋಗೀ ಸ ತ್ಯಾಗೀ ಪಾರ್ಥ ಭಿಕ್ಷುಕಃ ॥9॥
ಮನೆಯನ್ನು ಬಿಟ್ಟು ಭಿಕ್ಷೆಗಾಗಿ ಅಲೆದಾಡುತ್ತಾ ಮರದ ನೆರಳನ್ನೇ ಆಶ್ರಯ- ಮಾಡಿಕೊಂಡು, ಬೇರೆಯವರಲ್ಲಿ ಕೈ ಒಡ್ಡದೆ, ಪಾಕವನ್ನು ಮಾಡಿಕೊಳ್ಳದ ಮುನಿ- ವ್ರತದಲ್ಲಿರುವ ಭಿಕ್ಷುಕನು ಸನ್ಯಾಸಿ ಎನಿಸುತ್ತಾನೆ.
ಕ್ರೋಧಹರ್ಷಾವನಾದೃತ್ಯ ಪೈಶುನ್ಯಂ ಚ ವಿಶೇಷತಃ |
ವಿಪ್ರೋ ವೇದಾನಧೀತೇ ಯಃ ಸ ತ್ಯಾಗೀ ಪಾರ್ಥಂ ಉಚ್ಯತೇ ॥10॥
ಸಂತೋಷ-ಸಿಟ್ಟುಗಳನ್ನು ಬಿಟ್ಟು, ಪರನಿಂದೆಯಲ್ಲಿ ಆಸಕ್ತನಾಗದೇ, ಸದಾ ವೇದಾಧ್ಯಯನದಲ್ಲಿ ಆಸಕ್ತನಾಗಿ, ಗುರುಪೂಜೆಯನ್ನು ಮಾಡುವವನು ತ್ಯಾಗಿ ಎನಿಸುತ್ತಾನೆ.
ವಿವರಣೆ - ತನಗಿಷ್ಟವಾಗದ ವಿಷಯದಲ್ಲಿ ಸಿಟ್ಟು ಮಾಡಿಕೊಳ್ಳುವುದು. ಇಷ್ಟವಾದ ವಿಷಯದಲ್ಲಿ ಸಂತೋಷವನ್ನು ಹೊಂದುವುದು. ಮತ್ತೊಬ್ಬರ ದೋಷಗಳ ಬಗ್ಗೆ ವಿಚಾರ ಮಾಡುವುದು. ಇವುಗಳೆಲ್ಲವನ್ನೂ ಸಂಪೂರ್ಣವಾಗಿ ತ್ಯಾಗ ಮಾಡಬೇಕು. ಇದನ್ನು ಪರಿತ್ಯಾಗ ಮಾಡುವುದು ಸುಲಭವಲ್ಲ. ಸುಖದಲ್ಲಿ ಹಿಗ್ಗದೇ, ದುಃಖದಲ್ಲಿ ಕುಗ್ಗದೇ, ಮತ್ತೊಬ್ಬರನ್ನು ನಿಂದಿಸದೇ, ಚಾಡಿ ಹೇಳದೇ, ಜಿತೇಂದ್ರಿಯನಾಗಲು ಪ್ರಯತ್ನವನ್ನು ಪಡಬೇಕು. ಇಂಥವನೇ ನಿಜವಾದ ತ್ಯಾಗಿ ಎಂಬುದಾಗಿ ಕರೆಯಸಿಕೊಳ್ಳುತ್ತಾನೆ.
ಆಶ್ರಮಾಂಸ್ತುಲಯಾ ಸರ್ವಾನ್ ಧೃತಾನಾಹುರ್ಮನೀಷಿಣಃ |
ಏಕತಸ್ತೇ ತ್ರಯೋ ರಾಜನ್ ಗೃಹಸ್ಥಾಶ್ರಮ ಏಕತಃ ॥11॥
ರಾಜನೇ! ವಿದ್ವಾಂಸರು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ- ಗಳೆಂಬ ಆಶ್ರಮಗಳ ವೈಶಿಷ್ಟ್ಯವೇನೆಂಬುದನ್ನು ತಕ್ಕಡಿಯಲ್ಲಿ ಇಟ್ಟು ತೂಗಿದಾಗ ಗೃಹಸ್ಥಾಶ್ರಮವೊಂದೇ ಬೇರೆ ಮೂರು ಆಶ್ರಮಗಳಿಗೆ ಸಮತೂಕದಲ್ಲಿ ಇತ್ತೆಂದು ಹೇಳುವರು.
ಸಮೀಕ್ಷತೇ ತು ಯೋಽರ್ಥಂ ವೈ ಕಾಮಂ ಸ್ವರ್ಗಂ ಚ ಭಾರತ |
ಅಯಂ ಪಂಥಾ ಮಹರ್ಷೀಣಾಮಿಯಂ ಲೋಕವಿದಾಂ ಗತಿಃ ॥12॥
ವಿವೇಕವೆಂಬ ತಕ್ಕಡಿಯ ತಟ್ಟೆಗಳಲ್ಲಿ ಇಟ್ಟು ತೂಗಿದಾಗ ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಸಿದ್ಧವಾಯಿತು. ಗೃಹಸ್ಥಾಶ್ರಮದಲ್ಲಿ ಕಾಮಸ್ವರ್ಗಗಳೆರಡೂ ಸಮಾನ- ವಾಗಿರುವುದರಿಂದ, ಮಹರ್ಷಿಗಳಿಗೆ ಇದೇ ಸರಿಯಾದ ಮಾರ್ಗವೆಂದು ತಿಳಿಯಿತು.
ಇತಿ ಯಃ ಕುರುತೇ ಭಾವಂ ಸ ತ್ಯಾಗೀ ಭರತರ್ಷಭ |
ನ ಯಃ ಪರಿತ್ಯಜ್ಯ ಗೃಹಾನ್ ವನಮೇತಿ ವಿಮೂಢವತ್ ॥13॥
ಭರತರ್ಷಭನೇ ! ಗೃಹಸ್ಥಾಶ್ರಮದಲ್ಲಿ ಇದ್ದು, ವೇದದಲ್ಲಿ ಹೇಳಿದ ಕರ್ಮ- ಗಳನ್ನು ಮಾಡುವುದೇ ಯೋಗ್ಯವೆಂದು ತಿಳಿದು ಯಾರು ಮಾಡುವನೋ ಅವನೇ ತ್ಯಾಗಿಯೆನಿಸುವನು. ಯಾವ ಮನುಷ್ಯನು, ಸರ್ವಕರ್ಮಗಳನ್ನು ತ್ಯಾಗಮಾಡಿ ಮನೆ-ಮಠಗಳನ್ನು ತೊರೆದು ಕಾಡಿಗೆ ಹೋಗುತ್ತಾನೋ, ಅವನು ಮೂಢನು.
ಯದಾ ಕಾಮಾನ್ ಸಮೀಕ್ಷೇತ ಧರ್ಮವೈತಂಸಿಕೋ ನರಃ |
ಅಥೈನಂ ಮೃತ್ಯುಪಾಶೇನ ಕಂಠೇ ಬಧ್ನಾತಿ ಮೃತ್ಯುರಾಟ್ ॥14॥
ಅರಣ್ಯಕ್ಕೆ ತೆರಳಿದ ಅಂಥ ಮನುಷ್ಯನಿಗೆ ಏನಾದರೂ ಕಾಮಭೋಗಗಳ ಸ್ಮರಣೆ ಬಂದರೆ, ಅವನು ಧರ್ಮವೇಷವನ್ನು ಧರಿಸಿದ ಡಾಂಭಿಕ ಎನಿಸುವನು. ಅಂಥವನನ್ನು ಮೃತ್ಯುದೇವನು ಕಂಠದಲ್ಲಿ ಬಿಗಿದು ಸೆಳೆಯುವನು.
ಅಭಿಮಾನಕೃತಂ ಕರ್ಮ ನೈತತ್ ಫಲವದುಚ್ಯತೇ |
ತ್ಯಾಗಯುಕ್ತಂ ಮಹಾರಾಜ ಸರ್ವಮೇವ ಮಹಾಫಲಮ್ ॥15॥
ಮಹಾರಾಜನೇ! ಯಾವುದೇ ಕರ್ಮವಾಗಲಿ ದುರಭಿಮಾನಪೂರ್ವಕವಾಗಿ ಮಾಡಿದರೆ ಅದು ಫಲಕಾರಿಯಾಗುವುದಿಲ್ಲ. ಯಾವುದೇ ಫಲದ ಅಪೇಕ್ಷೆಯಿಲ್ಲದೆ ಮಾಡಿದ ಕರ್ಮವು ಉತ್ತಮ ಫಲವನ್ನು ಕೊಡುವುದು.
ಶಮೋ ದಮಸ್ತಪೋ ದಾನಂ ಸತ್ಯಂ ಶೌಚಮಥಾರ್ಜವಮ್ |
ಯಜ್ಞೋ ಧೃತಿಶ್ಚ ಧರ್ಮಶ್ಚ ನಿತ್ಯಮಾರ್ಷೋ ವಿಧಿಃ ಸ್ಮೃತಃ ॥16॥
ಶಮ, ದಮ, ಧೈರ್ಯ, ಸತ್ಯ, ಶೌಚ, ಸರಳತೆ, ಯಜ್ಞ, ಧೃತಿ, ಧರ್ಮ ಇವುಗಳು ಋಷಿಗಳಿಗೆ ಹಿತವನ್ನುಂಟು ಮಾಡುವಂಥ ನಿತ್ಯವಾದ ವಿಧಿಗಳು.

ಪಿತೃದೇವಾತಿಥಿಕೃತೇ ಸಮಾರಂಭೋಽತ್ರ ಶಸ್ಯತೇ |
ಅತ್ರೈವ ಹಿ ಮಹಾರಾಜ ತ್ರಿವರ್ಗಃ ಕೇವಲಂ ಫಲಮ್ ॥17॥
ಮಹಾರಾಜನೇ! ಗೃಹಸ್ಥಾಶ್ರಮದಲ್ಲಿ ಪಿತೃಗಳು, ದೇವತೆಗಳು, ಅತಿಥಿಗಳು ಇವರನ್ನು ಕುರಿತು ಮಾಡುವ ಕರ್ಮಗಳೆಲ್ಲವು ಪ್ರಶಂಸೆಗೆ ಪಾತ್ರವಾಗಿವೆ. ಗೃಹಸ್ಥ- ಧರ್ಮದಲ್ಲಿಯೇ ಧರ್ಮಾರ್ಥಕಾಮಗಳೆಂಬ ಮೂರು ವರ್ಗಗಳ ಫಲವು ದೊರೆಯುವುದು.
ಏತಸ್ಮಿನ್ ವರ್ತಮಾನಸ್ಯ ವಿಧೌ ವಿಪ್ರನಿಷೇವಿತೇ |
ತ್ಯಾಗಿನಃ ಪ್ರಸೃತಸ್ಯೇಹ ನೋಚ್ಛಿತ್ತಿರ್ವಿದ್ಯತೇ ಕ್ವಚಿತ್ ॥18॥
ಹೀಗೆ ಅಭಿಮಾನವನ್ನು ಬಿಟ್ಟು, ವೇದವಿಹಿತವಾದ ಕರ್ಮಗಳನ್ನು ನಿಷ್ಠೆಯಿಂದ ನಡೆಸುವವನಿಗೆ ಎಲ್ಲಿಯೂ, ಯಾವ ವಿಧದಿಂದಲೂ ಹಾನಿಯಿರುವುದಿಲ್ಲ.
ಅಸೃಜದ್ಧಿ ಪ್ರಜಾ ರಾಜನ್ ಪ್ರಜಾಪತಿರಕಲ್ಮಷಃ |
ಮಾಂ ಯಕ್ಷ್ಯಂತೀತಿ ಶಾಂತಾತ್ಮಾ ಯಜ್ಞೈರ್ವಿವಿಧದಕ್ಷಿಣೈಃ ॥19॥
ಶಾಂತಾತ್ಮನಾದ ಪಾಪರಹಿತನಾದ ಪ್ರಜಾಪತಿಯು ವಿವಿಧ ದಕ್ಷಿಣೆಗಳಿಂದ ಕೂಡಿರುವ ಯಜ್ಞಗಳ ಮೂಲಕವಾಗಿ ನನ್ನನ್ನು ಆರಾಧಿಸಬೇಕು ಎಂಬ ಉದ್ದೇಶ- ದಿಂದ ಪ್ರಜೆಗಳನ್ನು ಸೃಷ್ಟಿಸಿದನು.
ವೀರುಧಶ್ಚೈವ ವೃಕ್ಷಾಂಶ್ಚ ಯಜ್ಞಾರ್ಥಂ ವೈ ತಥೌಷಧೀಃ |
ಪಶೂಂಶ್ಚೈವ ತಥಾ ಮೇಧ್ಯಾನ್ ಯಜ್ಞಾರ್ಥಾನಿ ಹವೀಂಷಿ ಚ ॥20॥
ಆ ಕಾರಣದಿಂದಲೇ ಯಜ್ಞಕ್ಕೋಸ್ಕರ ಗಿಡಬಳ್ಳಿಗಳನ್ನು, ಔಷಧಿಗಳನ್ನು, ಪವಿತ್ರವಾದ ಪಶುಗಳನ್ನು, ಯಜ್ಞಕ್ಕೆ ಸಂಬಂಧಿಸಿದ ಹವಿಸ್ಸನ್ನು ಲೋಕದಲ್ಲಿ ಸೃಷ್ಟಿಸಿದನು.
ಗೃಹಸ್ಥಾಶ್ರಮಿಣಸ್ತಚ್ಚ ಯಜ್ಞಕರ್ಮ ವಿರೋಧಕಮ್ |
ತಸ್ಮಾದ್ ಗಾರ್ಹಸ್ಥ್ಯಮೇವೇಹ ದುಷ್ಕರಂ ದುರ್ಲಭಂ ತಥಾ ॥21॥
ಇಂಥಹ ಯಜ್ಞಗಳನ್ನು ಸರಿಯಾಗಿ ನಡೆಸುವುದಕ್ಕೆ ಗೃಹಸ್ಥಾಶ್ರಮವೇ ಯೋಗ್ಯವು. ಈ ಕಾರಣದಿಂದ ಗೃಹಸ್ಥಾಶ್ರಮವು ದುಷ್ಕರವೂ; ದುರ್ಲಭವೂ ಆಗಿರುತ್ತದೆ.
ತತ್ ಸಂಪ್ರಾಪ್ಯ ಗೃಹಸ್ಥಾ ಯೇ ಪಶುಧಾನ್ಯಸಮನ್ವಿತಾಃ |
ನ ಯಜಂತೇ ಮಹಾರಾಜ ಶಾಶ್ವತಂ ತೇಷು ಕಿಲ್ಬಿಷಮ್ ॥22॥
ಇಂಥ ದುರ್ಲಭವಾದ ಗೃಹಸ್ಥಾಶ್ರಮವನ್ನು ಪಡೆದು ಧನ-ಧಾನ್ಯ-ಪಶು- ಸಮೃದ್ಧಿಯನ್ನು ಹೊಂದಿ ವಿಧಿಪೂರ್ವಕವಾಗಿ ಯಜ್ಞಯಾಗವನ್ನು ಯಾರು ನಡೆಸು- ವುದಿಲ್ಲವೋ, ಅವರಲ್ಲಿ ಪಾಪವು ಶಾಶ್ವತವಾಗಿ ಉಳಿಯುವುದು.
ಸ್ವಾಧ್ಯಾಯಯಜ್ಞಾ ಋಷಯೋ ಜ್ಞಾನಯಜ್ಞಾಸ್ತಥಾಪರೇ |
ಅಥಾಪರೇ ಮಹಾಯಜ್ಞಾನ್ ಮನಸ್ಯೇವ ವಿತನ್ವತೇ ॥23॥
ಋಷಿಗಳಲ್ಲಿ ಕೆಲವರು ಸ್ವಾಧ್ಯಾಯವನ್ನೇ ಯಜ್ಞವು, ಕೆಲವರು ಜ್ಞಾನವನ್ನು ಯಜ್ಞವೆನ್ನುತ್ತಾರೆ. ಇನ್ನೂ ಕೆಲವರು ಧ್ಯಾನಯೋಗವೆಂಬ ಮಹಾಯಜ್ಞವನ್ನು ಮನಸ್ಸಿನಲ್ಲಿಯೇ ನಡೆಸುತ್ತಾರೆ.
ಇದಮನ್ಯನ್ಮಹಾರಾಜ ವಿದ್ವದ್ಭಿಃ ಕಥಿತಂ ಮಮ |
ಭೂಮಿರಗ್ನಿಶ್ಚ ವಾಯುಶ್ಚ ನಭಶ್ಚ ನ ದಿವಾಕರಃ ॥24॥
ನಕ್ಷತ್ರಾಣಿ ನ ಚಂದ್ರಶ್ಚ ನ ದಿಶಃ ಕಾಲ ಏವ ಚ |
ಶಬ್ದಃ ಸ್ಪರ್ಶಶ್ಚ ರೂಪಂ ಚ ನ ಗಂಧೋ ನ ರಸಃ ಕ್ವಚಿತ್ ॥25॥
ಮಹಾರಾಜನೇ! ಇಷ್ಟೇ ಅಲ್ಲದೆ ವಿದ್ವಾಂಸರಿಂದ ನಾನು ಮತ್ತೊಂದನ್ನು ಕೇಳಿರುವೆನು. ಈ ಜಗತ್ತು ನಿರ್ಮಾಣವಾಗುವ ಮೊದಲು. ಭೂಮಿಯೇ ಮೊದ- ಲಾದ ಪಂಚಭೂತಗಳು, ಸೂರ್ಯಚಂದ್ರ, ನಕ್ಷತ್ರಗಳು, ದಿಕ್ಕುಗಳು, ಕಾಲ, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಲ್ಲಿ ಯಾವುದೊಂದೂ ಇರಲಿಲ್ಲ.
ನಚ ಸಂತಿ ಪ್ರಮಾಣಾನಿ ಯೈಃ ಪ್ರಮೇಯಂ ಪ್ರಸಾಧ್ಯತೇ |
ಪ್ರತ್ಯಕ್ಷಮನುಮಾನಂ ಚ ನೋಪಮಾನಮಥಾಗಮಃ ॥26॥
ಪ್ರಮಾಣಗಳೆನಿಸಿದ ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ, ಉಪಮಾನ ಇವುಗಳಲ್ಲಿ ಯಾವುದೂ ಇರಲಿಲ್ಲ.
ನಾರ್ಥಾಪತ್ತಿರ್ನ ಚೈತಿಹ್ಯಂ ನ ದೃಷ್ಟಾಂತೋ ನ ಸಂಶಯಃ |
ನ ಕ್ವಚಿನ್ನಿರ್ಣಯೋ ರಾಜನ್ನ ಧರ್ಮಾಧರ್ಮ ಏವ ಚ ॥27॥
ರಾಜನೇ! ಅರ್ಥಾಪತ್ತಿ, ಐತಿಹ್ಯಗಳೆಂಬ ಪ್ರಮಾಣಗಳೂ ಇರಲಿಲ್ಲ. ದೃಷ್ಟಾಂತ- ವಿರಲಿಲ್ಲ. ಸಂಶಯ, ನಿಶ್ಚಯಗಳು ಇರಲಿಲ್ಲ. ಧರ್ಮಾಧರ್ಮಗಳೂ ಇರಲಿಲ್ಲ.
ತಿರ್ಯಕ್ ಸ್ಥಾವರಂ ಚೈವ ನ ದೇವಾ ನಚ ಮಾನುಷಾಃ |
ವರ್ಣಾಶ್ರಮವಿಭಾಗಾಶ್ಚ ನಚ ಕರ್ತಾ ನ ಕಾಮಕೃತ್ |
ನಚಾರ್ಥಶ್ಚ ವಿಭೂತಿಶ್ಚ ನಾಚಾರ್ಥಸ್ಯ ವಿಚೇಷ್ಟಿತಮ್ ॥28॥
ವಿವಿಧವಾದ ತಿರ್ಯಕ್, ಸ್ಥಾವರ, ಜಂಗಮಾದಿಗಳು ಇರಲಿಲ್ಲ. ವರ್ಣಾಶ್ರಮ- ವಿಭಾಗಗಳಿರಲಿಲ್ಲ. ಕರ್ತನು, ಕೊಡುವವನೂ ಇರಲಿಲ್ಲ, ಧನ, ಐಶ್ವರ್ಯ, ಅದರ ಫಲಾನುಭವ ಇವುಗಳಲ್ಲಿ ಯಾವುದೊಂದೂ ಇರಲಿಲ್ಲ.
ತಮೋಭೂತಮಿದಂ ಸರ್ವಮನಾಲೋಕಂ ಜಗನ್ನೃಪ |
ನಚಾತ್ಮಾ ವಿದ್ಯಮಾನೋಽಪಿ ಮನಸಾ ಯೋಗಮಿಚ್ಛತಿ ॥29॥
ರಾಜನೇ! ಜಗತ್ತೆಲ್ಲವೂ ತಮೋಮಯವಾಗಿ ಪ್ರಕಾಶಹೀನವಾಗಿತ್ತು. ಆತ್ಮ- ವಿದ್ದರೂ ಮನಸ್ಸಿನ ಸಂಬಂಧವನ್ನು ಹೊಂದಿರಲಿಲ್ಲ.

ಅಚೇತನಂ ಮನಸತ್ತ್ವಸೀದಾತ್ಮಾ ಏವ ಸಚೇತನಃ |
ಈಶ್ವರಶ್ಚೇತನಸ್ತ್ವೇಕಸ್ತೇನೇದಂ ಗಹನೀಕೃತಮ್ |
ಮಂತ್ರಾಶ್ಚ ಚೇತನಾ ರಾಜನ್ನ ಚ ದೇಹೇನ ಯೋಜಿತಾಃ ॥30॥
ರಾಜನೇ! ಆತ್ಮಮಾತ್ರ ಜ್ಞಾನವಿಶಿಷ್ಟನಾಗಿದ್ದನು. ಮನಸ್ಸು ಸಹಅಚೇತನವಾಗಿತ್ತು. ಈ ಪ್ರಪಂಚವನ್ನೆಲ್ಲ ವ್ಯಾಪಿಸಿರುವ ಈಶ್ವರನೊಬ್ಬನೇ ಚೇತನನೆನಿಸಿದ್ದನು. ಅಂಥ ಈಶ್ವರನಿಂದಲೇ ಜಗತ್ತು ತುಂಬಿಹೋಗಿತ್ತು. ಮಂತ್ರಗಳು ಚೈತನ್ಯಪೂರಿತವಾಗಿ- ದ್ದವು. ಆದರೆ ಆ ಮಂತ್ರಗಳಿಗೆ ದೇಹದ ಜೊತಡೆ ಸಂಪರ್ಕವೇ ಇರಲಿಲ್ಲ.
ತೇನ ವಿಶ್ವಸೃಜೋ ನಾಮ ಋಷಯೋ ಮಂತ್ರದೇವತಾಃ |
ಚೈತನ್ಯಮೀಶ್ವರಾತ್ ಪ್ರಾಪ್ಯ ಬ್ರಹ್ಮಾಂಡಂ ತೈರ್ವಿನಿರ್ಮಿತ್ತಮ್ ॥31॥
ಅಂಥ ಸ್ಥಿತಿಯಲ್ಲಿ ಮಂತ್ರದೇವತೆಗಳೆನಿಸಿಕೊಂಡ ಸೃಷ್ಟಿಕರ್ತರೆಂಬ ಋಷಿಗಳು ಮೊದಲು ಈಶ್ವರನಿಂದ ಹುಟ್ಟಿದರು. ಇವರು ಈಶ್ವರನಿಂದ ತಕ್ಕ ಜ್ಞಾನವನ್ನು ಹೊಂದಿ ಈ ಬ್ರಹ್ಮಾಂಡವನ್ನು ಸೃಷ್ಟಿಸಿದರು.
ಇಷ್ಟ್ವಾ ವಿಶ್ವಸೃಜಂ ಯಜ್ಞಂ ನಿರ್ಮಿತಂ ಪ್ರಪಿತಾಮಹಃ |
ಸೃಷ್ಟಿಸ್ತೇನ ಸಮಾರಬ್ಧಾ ಪ್ರಸಾದಾದೀಶ್ವರಸ್ಯ ಚ ॥32॥
ವಿಶ್ವಸೃಜವೆಂಬ ಯಾಗವನ್ನು ನಡೆಸಿ ಪಿತಾಮಹನೆಂಬುವನನ್ನು ಸೃಷ್ಟಿಸಿದರು. ಆ ಪಿತಾಮಹನು ಭಗವಂತನ ಅನುಗ್ರಹದಿಂದ ಲೋಕಗಳನ್ನು ಸೃಷ್ಟಿಸಿದನು.
ಚೈತನ್ಯಮೀಶ್ವರಸ್ಯೇದಂ ಸಚೇತನಮಿದಂ ಜಗತ್ |
ಯೋಗೇನ ಚ ಸಮಾವಿಷ್ಟಂ ಜಗತ್ ಕೃತ್ಸ್ನಂ ಚ ಶಂಭುನಾ ॥33॥
ಚೇತನವಿಶಿಷ್ಟವಾದ ಈ ಜಗತ್ತೆಲ್ಲವೂ ಈಶ್ವರನ ಜ್ಞಾನರೂಪವಾದುದು. ಆ ಈಶ್ವರನೇ ತನ್ನ ಶಕ್ತಿಯಿಂದ ಜಗತ್ತನ್ನು ವ್ಯಾಪಿಸಿದನು.
ಧರ್ಮಶ್ಚಾರ್ಥಶ್ಚ ಕಾಮಶ್ಚ ಉಕ್ತೋ ಮೋಕ್ಷಶ್ಚ ಸಂಕ್ಷಯೇ |
ಬ್ರಹ್ಮಣಃ ಪರಮೇಶಸ್ಯ ಈಶ್ವರೇಣ ಯದೃಚ್ಛಯಾ ॥34॥
ಭಗವಂತನು ಮೊದಲು ಬ್ರಹ್ಮನಿಗೆ ಧಮ, ಅರ್ಥ, ಕಾಮ, ಮೋಕ್ಷವನ್ನು ಉಪದೇಶಿಸಿದನು.
ಅಜ್ಞೋ ಜಂತುರನೀಶಶ್ಚ ಭಾಜನಂ ಸುಖದುಃಖಯೋಃ |
ಈಶ್ವರಪ್ರೇರಿತೋ ಗಚ್ಛೇತ್ ಸ್ವರ್ಗಂ ವಾ ಶ್ವಭ್ರಮೇವ ವಾ ॥35॥
ಜ್ಞಾನಶಕ್ತಿಗಳಿಲ್ಲದೆ, ಸುಖದುಃಖಗಳಿಗೆ ಪಾತ್ರವಾದುದರಿಂದ ಪ್ರಾಣಿಗಳು ಈ ಭಗವಂತನಿಂದ ಪ್ರೇರಿತಗಳಾಗಿಯೇ ಸ್ವರ್ಗನರಕಾದಿಗಳನ್ನು ಹೊಂದುವುವು.
ಪ್ರಧಾನಂ ಪುರುಷಂ ಚೈವ ಆತ್ಮಾನಂ ಸರ್ವದೇಹಿನಾಮ್ |
ಮನಸಾ ವಿಷಯೈಶ್ಚೈವ ಚೇತನೇನ ಪ್ರಚೋದಿತಾಃ |
ಸುಖದುಃಖೇನ ಯುಜ್ಯಂತೇ ಕರ್ಮಭಿಶ್ಚ ಪ್ರಚೋದಿತಾಃ ॥36॥
ಪ್ರಾಣಿಗಳು ಈಶ್ವರನಿಂದಲೂ, ಮನಸ್ಸಿನಿಂದಲೂ, ವಿಷಯಗಳಿಂದಲೂ ತಮ್ಮ ಕರ್ಮಗಳಿಂದಲೂ ಪ್ರೇರಿತಗಳಾಗಿ ಪ್ರಕೃತಿಪುರುಷಸಂಬಂಧಗಳಿಂದ ಸುಖದುಃಖ- ಗಳನ್ನು ಹೊಂದುತ್ತಿವೆ.
ವರ್ಣಾಶ್ರಮವಿಭಾಗಾಶ್ಚ ಈಶ್ವರೇಣ ಪ್ರವರ್ತಿತಾಃ |
ಸದೇವಾಸುರಗಂಧರ್ವಂ ಯೇನೇದಂ ನಿರ್ಮಿತಂ ಜಗತ್ ॥37॥
ದೇವತೆಗಳನ್ನು, ಅಸುರರನ್ನು, ಗಂಧರ್ವರನ್ನು ಸೃಷ್ಟಿಸಿದ ಆ ಈಶ್ವರನೇ ವರ್ಣಾಶ್ರಮಗಳನ್ನು, ಅವುಗಳಲ್ಲಿ ಹಲವು ಅಂತರ್ಭೇದವನ್ನು ಏರ್ಪಡಿಸಿರುವನು. ಅವನ ಆಜ್ಞೆಯಂತೆ ಸಕಲಲೋಕಗಳು ಸ್ವಕರ್ಮದಲ್ಲಿ ಪ್ರವರ್ತಿಸುತ್ತಿದೆ.
ತ್ವಂ ಚಾನ್ಯೇ ಚ ಮಹಾರಾಜ ಈಶ್ವರಸ್ಯ ವಶೇ ಸ್ಥಿತಾಃ |
ಜೀವಂತೇ ಚ ಮ್ರಿಯಂತೇ ಚ ನ ಸ್ವತಂತ್ರಾಃ ಕಥಂಚನ ॥38॥
ಮಹಾರಾಜನೇ! ನೀನು, ನಾನು, ಇತರರು, ಎಲ್ಲರೂ ಆ ಈಶ್ವರನ
ಅಧೀನದಲ್ಲಿಯೇ ನಡೆಯುವವರೇ ಹೊರತು ಯಾರೂ ಸ್ವತಂತ್ರರಲ್ಲ? ಪ್ರಾಣಿಗಳ ಜನನ-ಮರಣಗಳು ಭಗವಂತನ ಅಧೀನವೇ ಆಗಿವೆ.
ಹಿತ್ವಾಹಿತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ |
ಯಜಂತೇ ಕರ್ಮಣಾ ದೇವಾ ನ ಸ ಪಾಪೇನ ಲಿಪ್ಯತೇ ॥39॥
ಪ್ರಾಣಿಗಳಿಗೆ ಯಾವುದರಲ್ಲಿಯೂ ಸ್ವಾತಂತ್ರ್ಯವಿಲ್ಲ. ದೇವತೆಗಳು ಪ್ರಾಣಿಗಳನ್ನು ಕೊಂದು ಜಗತ್ತನ್ನು ನಾಶಪಡಿಸಿಯೇ ಕರ್ಮರೂಪವಾದ ಯಾಗಗಳನ್ನು ಮಾಡು- ವರು. ಅದರಿಂದ ಅವರಿಗೆ ಯಾವ ಪಾಪವೂ ಇರುವುದಿಲ್ಲ.
ಹಿಂಸಾತ್ಮಕಾನಿ ಕರ್ಮಾಣಿ ಸರ್ವೇಷಾಂ ಗೃಹಮೇಧಿನಾಮ್ |
ದೇವತಾನಾಮೃಷೀಣಾಂ ಚ ತೇ ಚ ಯಾಂತಿ ಪರಾಂ ಗತಿಮ್ ॥40॥
ದೇವತೆಗಳಾಗಲಿ, ಋಷಿಗಳಾಗಲಿ, ಗೃಹಸ್ಥರಾಗಲಿ ಇವರೆಲ್ಲರ ಕರ್ಮಗಳಲ್ಲಿ ಹಿಂಸೆಯು ಇರುವುದು. ಅಂಥ ಕರ್ಮವನ್ನು ಮಾಡುವ ಗೃಹಸ್ಥರು ಉತ್ತಮ ಗತಿಯನ್ನು ಹೊಂದುವರು.
ಪಾತಿತಾಃ ಶತ್ರವಃ ಪೂರ್ವಂ ಸರ್ವತ್ರ ವಸುಧಾಧಿಪೈಃ |
ಪ್ರಜಾನಾಂ ಹಿತಕಾಮೈಶ್ಚ ಆತ್ಮನಶ್ಚ ಹಿತೈಷಿಭಿಃ ॥41॥
ಮಹಾತ್ಮರೆನಿಸಿದ ನಮ್ಮ ಹಿಂದಿನ ಮಹಾರಾಜರು ಪ್ರಜೆಗಳಿಗೂ ತಮಗೂ ಹಿತವನ್ನು ಬಯಸಿ ಹಲವು ಶತ್ರುಗಳನ್ನು ಸಂಹರಿಸಿರುವರು.

ಯದಿ ತತ್ರ ಭವೇತ್ ಪಾಪಂ ಕಥಂ ತೇ ಸ್ವರ್ಗಮಾಸ್ಥಿತಾಃ |

ನ ಪ್ರಾಪ್ತಾ ನರಕಂ ರಾಜನ್ ವೇಷ್ಟಿತಾಃ ಪಾಪಕರ್ಮಭಿಃ ॥42॥
ರಾಜನೇ! ಅದು ಪಾಪವಾಗಿದ್ದರೆ ಅವರು ಸ್ವರ್ಗವನ್ನು ಹೇಗೆ ಹೊಂದುತ್ತಿದ್ದರು. ಅದೇ ಅವರನ್ನು ನರಕದಲ್ಲಿ ಹಾಕಿರುತ್ತಿತ್ತಲ್ಲವೇ?
ಏವಂ ದಾನಸಮಾಧಾನಂ ಮಾರ್ಗಮಾತಿಷ್ಠತೋ ನೃಪ |
ದ್ವಿಜಾತೇರ್ಬ್ರಹ್ಮಭೂತಸ್ಯ ಸ್ಪೃಹಯಂತಿ ದಿವೌಕಸಃ ॥43॥
ರಾಜನೇ! ಹಿಂದೆ ಹೇಳಿದ್ದನ್ನು ಮನಸ್ಸಿಗೆ ತಂದುಕೊಂಡು ಮನಸ್ಸನ್ನು ಸಮಾ- ಧಾನದಿಂದ ಕರ್ಮಮಾರ್ಗದಲ್ಲಿ ತೊಡಗಿಸು. ಭಗವಂತನನ್ನು ಜಪಿಸುವ ಬ್ರಹ್ಮಾದಿ- ಗಳನ್ನು ನೋಡಿ ದೇವತೆಗಳೂ ಅವರ ಸ್ಥಿತಿಗೆ ಆಸೆಪಡುವರು.
ಸ ರತ್ನಾನಿ ವಿಚಿತ್ರಾಣಿ ಸಂಭೃತಾನಿ ತತಸ್ತತಃ |
ಮಖೇಷ್ವನಭಿಸಂತ್ಯಜ್ಯ ನಾಸ್ತಿಕ್ಯಮಭಿಜಲ್ಪಸಿ ॥44॥
ಈ ಮಹಾಯಜ್ಞದ ವಿಜಯದಿಂದ ನಾವು ವಿಚಿತ್ರವಾದ ರತ್ನಗಳನ್ನು ನಾನಾ- ದೇಶಗಳಿಂದ ಸಂಗ್ರಹಿಸಿರುತ್ತೇವೆ. ಹೀಗೆ ಸಂಗ್ರಹಿಸಿದ ರತ್ನಗಳನ್ನು ನಾವು ಯಜ್ಞಗಳ ಮೂಲಕವಾಗಿ ವಿತರಣೆ ಮಾಡಬೇಕಾಗಿದೆ. ನೀನು ಹಾಗೇ ಮಾಡಲಿಚ್ಛಿಸದೇ ನಾಸ್ತಿಕತ್ವಕ್ಕೆ ಸಂಬಂಧಿಸಿದ ಮಾತುಗಳನ್ನು ಆಡುತ್ತಿರುವೆ.
ಕುಟುಂಬಮಾಸ್ಥಿತೇ ತ್ಯಾಗಂ ನ ಪಶ್ಯಾಮಿ ನರಾಧಿಪ |
ರಾಜಸೂಯಾಶ್ವಮೇಧೇಷು ಸರ್ವಮೇಧೇಷು ವಾ ಪುನಃ ॥45॥
ನರಾಧಿಪನೇ! ಕುಟುಂಬದಲ್ಲಿ ಆಸಕ್ತನಾದವನಿಗೆ ತ್ಯಾಗವೆಂಬುದು ಅಸಾಧ್ಯವಾದ ಕಾರ್ಯ. ನೀನೀಗ ಈ ಗೃಹಸ್ಥಾಶ್ರಮಧರ್ಮವನ್ನೇ ಹಿಡಿದು ಬ್ರಾಹ್ಮಣರಿಂದ (ಮೂಲಕ) ಆಚರಿಸಲ್ಪಡತಕ್ಕ ಅಶ್ವಮೇಧ, ರಾಜಸೂಯ, ಸರ್ವಮೇಧಗಳೇ ಮೊದಲಾದ ಹಲವು ಯಜ್ಞಗಳನ್ನು ನಡೆಸು.
ಯೇ ಚಾನ್ಯೇ ಕ್ರತವಸ್ತಾತ ಬ್ರಾಹ್ಮಣೈರಭಿಪೂಜಿತಾಃ |
ತೈರ್ಯಜಸ್ವ ಮಹಾರಾಜ ಶಕ್ರೋ ದೇವಪತಿರ್ಯಥಾ ॥46॥
ಮಹಾರಾಜನೇ! ಈ ಯಜ್ಞಯಾಗಗಳ ಅನುಷ್ಠಾನದಿಂದ, ಬ್ರಾಹ್ಮಣರ ಪ್ರಶಂಸೆಗೆ ಪಾತ್ರನಾಗು. ದೇವಪತಿಯಾದ ಇಂದ್ರನಂತೆ ಆ ಮಹಾಯಜ್ಞಗಳ ಮೂಲಕವಾಗಿ ದೇವತೆಗಳನ್ನು ಅರಾಧಿಸು.
ರಾಜ್ಞಃ ಪ್ರಮಾದದೋಷೇಣ ದಸ್ಯುಭಿಃ ಪರಿಮುಷ್ಯತಾಮ್ |
ಅಶರಣ್ಯಃ ಪ್ರಜಾನಾಂ ಯಃ ಸ ರಾಜಾ ಕಲಿರುಚ್ಯತೇ ॥47॥
ಯಾವ ರಾಜನು ತನ್ನ ಪ್ರಮಾದದೋಷದಿಂದಾಗಿ ಕಳ್ಳರು ಸ್ವತ್ತನ್ನು ಅಪ- ಹರಿಸಿದಾಗ ಪ್ರಜೆಗಳಿಗೆ ರಕ್ಷನಾಗುವುದಿಲ್ಲವೋ, ಅಂಥ ರಾಜನು ಕಲಿ ಎಂಬ ಹೆಸರಿ- ನಿಂದ ಕರೆಯಲ್ಪಡುತ್ತಾನೆ.
ಅಶ್ವಾನ್ ಗಾಶ್ಚೈವ ದಾಸೀಶ್ಚ ಕರೇಣೂಶ್ಚ ಸ್ವಲಂಕೃತಾಃ |
ಗ್ರಾಮಾನ್ ಜನಪದಾಂಶ್ಚೈವ ಕ್ಷೇತ್ರಾಣಿ ಚ ಗೃಹಾಣಿ ಚ ॥48॥
ಅಪ್ರದಾಯ ದ್ವಿಜಾತಿಭ್ಯೋ ಮಾತ್ಸರ್ಯಾವಿಷ್ಟಚೇತಸಃ |
ವಯಂ ತೇ ರಾಜಕಲಯೋ ಭವಿಷ್ಯಾಮೋ ವಿಶಾಂ ಪತೇ ॥49॥
ಮಹಾರಾಜನೇ! ನಾವು ದಾಯಾದಿಗಳ ದ್ವೇಷದಿಂದ ಇಷ್ಟು ಕಾರ್ಯಗಳನ್ನು ನಡೆಸಿದೆವು. ಅವರನ್ನು ಕೊಂದು ಐಶ್ವರ್ಯವನ್ನು ಸಾಧಿಸಿದೆವು. ಹೀಗಿರುವಾಗ ಅದಕ್ಕಾಗಿ ಅಲಂಕೃತವಾದ ಹೂವುಗಳು, ಆನೆಗಳು, ಕುದುರೆಗಳನ್ನು, ದಾಸಿಯರನ್ನು, ಗ್ರಾಮಗಳನ್ನು, ಕ್ಷೇತ್ರಗಳನ್ನು, ಗೃಹಗಳನ್ನು ಬ್ರಾಹ್ಮಣರಿಗೆ ದಾನಮಾಡಿ ಧನವನ್ನು ಸಾರ್ಥಕಗೊಳಿಸದೆ ಹೋದಲ್ಲಿ ನಾವು ರಾಜರೆಂದು ಕರೆಯಲ್ಪಡದೆ ಕಲಿಪುರುಷರೇ ಆಗುವೆವು.
ಅದಾತಾರೋಽಶರಣ್ಯಾಶ್ಚ ರಾಜಕಿಲ್ಬಿಷನಾಗಿನಃ |
ದೋಷಣಾಮೇವ ಭೋಕ್ತಾರೋ ನ ಸುಖಾನಾಂ ಕದಾಚನ ॥50॥
ಮತ್ತೊಬ್ಬರಿಗೆ ದಾನಮಾಡದೆ, ಶರಣಾಗತರನ್ನು ರಕ್ಷಿಸದೆ ಇರುವಂತಹ ರಾಜರು ಮಹಾಪಾಪಕ್ಕೆ ಗುರಿಯಾಗುವರು. ಅವರಿಗೆ ಎಂದಿಗೂ ಸುಖವಿರುವುದಿಲ್ಲ.
ಅನಿಷ್ಟ್ವಾ ಚ ಮಹಾಯಜ್ಞೈರಕೃತ್ವಾ ಚ ಪಿತೃಸ್ವಧಾಮ್ |
ತೀರ್ಥೇಷ್ವನಭಿಸಂತ್ಯಜ್ಯ ಪ್ರವ್ರಜಿಷ್ಯಸಿ ಚೇದಥ ॥51॥
ಛಿನ್ನಾಭ್ರಮಿವ ಗಂತಾಸಿ ವಿಲಯಂ ಮಾರುತೇರಿತಮ್ |
ಲೋಕಯೋರುಭಯೋರ್ಽಭ್ರಷ್ಟೋ ಹ್ಯಂತರಾಲೇ ವ್ಯವಸ್ಥಿತಃ ॥52॥
ಪ್ರಭುವೇ! ಮಹಾಯಜ್ಞಗಳಿಂದ ದೇವತೆಗಳನ್ನು ಆರಾಧಿಸದೆ ಪಿತೃಶ್ರಾದ್ಧಗಳನ್ನು ನಡೆಸದೆ ಪುಣ್ಯತೀರ್ಥಗಳ ಸ್ನಾನವನ್ನು ಮಾಡದೆ ನೀನು ರಾಜ್ಯವನ್ನು ತೊರೆದು ಸನ್ಯಾಸಿಯಾಗಿ ಹೋದ ಪಕ್ಷದಲ್ಲಿ ಇಹದಲ್ಲಿಯೂ, ಪರದಲ್ಲಿಯೂ ಎಲ್ಲವನ್ನು ಕಳೆದುಕೊಂಡು ಪಿಶಾಚಜನ್ಮದಿಂದ ಬಿರುಗಾಳಿಗೆ ಎದುರಾದ ಮೋಡದಂತೆ ನಾಶ- ಹೊಂದುವಿ.
ಅಂತರ್ಬಹಿಶ್ಚ ಯತ್ಕಿಂಚಿನ್ಮನೋವ್ಯಾಸಂಗಕಾರಕಮ್ |
ಪರಿತ್ಯಜ್ಯ ಭವೇತ್ ತ್ಯಾಗೀ ನ ಯೋ ಹಿತ್ವಾ ಪ್ರತಿಷ್ಠತೇ ॥53॥
ಅಂತರಂಗದಲ್ಲಿ ಬಹಿರಂಗದಲ್ಲಿ ಮನಸ್ಸಿಗೆ ಚಿಂತೆಯನ್ನುಂಟುಮಾಡುವ ವಸ್ತುವನ್ನು ತೊರೆದವನು ತ್ಯಾಗಿಯೆನಿಸುವನೇ ಹೊರತು; ಮನೆಯನ್ನು ಬಿಟ್ಟು ಹೋದ ಮಾತ್ರಕ್ಕೆ ಸನ್ಯಾಸಿಯಾಗುವುದಿಲ್ಲ.
ಏತಸ್ಮಿನ್ ವರ್ತಮಾನಸ್ಯ ವಿಧೌ ವಿಪ್ರನಿಷೇವಿತೇ |
ಬ್ರಾಹ್ಮಣಸ್ಯ ಮಹಾರಾಜ ನೋಚ್ಛಿತ್ತಿರ್ವಿದ್ಯತೇ ಕ್ವಚಿತ್ ॥54॥
ಇಂಥ ಪರಮಶ್ರೇಷ್ಠವಾದ ಗೃಹಸ್ಥಾಶ್ರಮದಲ್ಲಿಯೇ ಇದ್ದುಕೊಂಡು ಧರ್ಮಕ್ಕೆ ಅವಿರುದ್ಧವಾದ, ವೇದವಿಹಿತವಾದ ಕರ್ಮಮಾರ್ಗದಲ್ಲಿ

ವರ್ತಿಸತಕ್ಕವನಿಗೆ ಎಂದಿಗೂ ಎಲ್ಲಿಯೂ ಹಾನಿಯಿರುವುದಿಲ್ಲ.
ನಿಹತ್ಯ ಶತ್ರೂಂಸ್ತರಸಾ ಸಮೃದ್ಧಾನ್
ಶಕ್ರೋ ಯಥಾ ದೈತ್ಯಬಲಾನಿ ಸಂಖ್ಯೇ |
ಕಃ ಪಾರ್ಥ ಶೋಚೇನ್ನಿರತಃ ಸ್ವಧರ್ಮೇ
ಪೂರ್ವೈಃ ಸ್ಮೃತೇ ಪಾರ್ಥಿವ ಶಿಷ್ಟಜುಷ್ಟೇ ॥55॥
ಕುಂತಿಪುತ್ರನೇ! ಇಂದ್ರನು ಯುದ್ಧದಲ್ಲಿ ದೈತ್ಯರನ್ನು ಕೊಂದನು. ಪೂರ್ವಜ- ರಿಂದ ವಿಧಿಸಲ್ಪಟ್ಟ, ಶಿಷ್ಟರಾದ ರಾಜರಿಂದ ಆಚರಿಸಲ್ಪಡುತ್ತಿರುವ ಸ್ವಧರ್ಮದಲ್ಲಿ ನೆಲೆಗೊಂಡನು. ಯಾರು ತಾನೇ ಇಂಥ ದುಃಖಕ್ಕೆ ಅವಕಾಶ ಕೊಡುವನು !
ಕ್ಷಾತ್ರೇಣ ಧರ್ಮೇಣ ಪರಾಕ್ರಮೇಣ
ಜಿತ್ವಾ ಮಹೀಂ ಮಂತ್ರವಿದ್ಭ್ಯಃ ಪ್ರದಾಯ |
ನಾಕಸ್ಯ ಪೃಷ್ಠೇಽಸಿ ನರೇಂದ್ರ ಗಂತಾ
ನ ಶೋಚಿತವ್ಯಂ ಭವತಾದ್ಯ ಪಾರ್ಥ ॥56॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದ್ವಾದಶೋಽಧ್ಯಾಯಃ ॥12॥
ಕ್ಷತ್ರಿಯ ಧರ್ಮದಿಂದ ನಿನ್ನ ಪರಾಕ್ರಮವನ್ನು ತೋರಿಸು. ಈ ಭೂಮಿಯನ್ನು ಸಾಧಿಸಿದ ನೀನು ವೇದವನ್ನು ಬಲ್ಲ ಬ್ರಾಹ್ಮಣನಿಗೆ ಧನವನ್ನು ದಾನಮಾಡಿ ಪುಣ್ಯಫಲದಿಂದ ಸ್ವರ್ಗವನ್ನು ಹೊಂದಬಹುದು. ಈ ಸ್ಥಿತಿಯಲ್ಲಿ ನೀನು ಶೋಕಿಸು- ವುದು ಯುಕ್ತವೇ ಅಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿಯಿತು.
*****
13. ಹದಿಮೂರನೆಯ ಅಧ್ಯಾಯ
ಯುಧಿಷ್ಠಿರನನ್ನು ಕುರಿತು ಸಹದೇವನ ಮಾತು.
ಸಹದೇವಃ
ನ ಬಾಹ್ಯಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ಭಾರತ |
ಶಾರೀರಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ವಾ ನ ವಾ ॥1॥
ಸಹದೇವ ಭಾರತನೇ! ಬಾಹ್ಯವಾದ ಸಂಪತ್ತುಗಳನ್ನು ತ್ಯಾಗ ಮಾಡುವುದ- ರಿಂದ ಸಿದ್ಧಿಯುಂಟಾಗುವುದಿಲ್ಲ. ಆದರೆ ಶರೀರಕ್ಕೆ ಸಂಬಂಧಿಸಿದ ಅಹಂಕಾರ ಮಮಕಾರಗಳನ್ನು ಬಿಡುವುದುರಿಂದ ಸಿದ್ಧಿಯಾಗಬಹುದು.
ಬಾಹ್ಯದ್ರವ್ಯವಿಮುಕ್ತಸ್ಯ ಶಾರೀರೇಷು ಚ ಗೃಧ್ಯತಃ |
ಯೋ ಧರ್ಮೋ ಯತ್ ಸುಖಂ ವಾ ಸ್ಯಾದ್ ದುರ್ಹೃದಾಂ
ತತ್ ತಥಾಸ್ತು ನಃ ॥2॥
ಹೊರಗಿನ ವಸ್ತುಗಳನ್ನು ಬಿಟ್ಟು ಶರೀರದ ಒಳಗಿನ ಸುಖವನ್ನು ಯಾರು ಬಯಸುತ್ತಾನೋ, ಅವನ ಧರ್ಮ, ಸುಖಗಳೆಲ್ಲವೂ ಶತ್ರುಗಳಿಗೆ ಮಾತ್ರವೇ ಲಭಿಸಲಿ.
ಶಾರೀರಂ ದ್ರವ್ಯಮುತ್ಸೃಜ್ಯ ಪೃಥಿವೀಮನುಶಾಸತಃ |
ಯೋ ಧರ್ಮೋ ಯತ್ ಸುಖಂ ವಾ ಸ್ಯಾತ್ ಸುಹೃದಾಂ
ತತ್ ತಥಾಸ್ತು ನಃ ॥3॥
ಶರೀರ ಸಂಬಂಧವಾದ ಅಹಂಕಾರ-ಮಮಕಾರಗಳನ್ನು ತ್ಯಜಿಸಿ ಪೃಥಿವಿಯನ್ನು ಪಾಲನೆ ಮಾಡುವವನಿಗೆ ಯಾವ ಧರ್ಮವಿರುವುದೋ ಮತ್ತು ಯಾವ ಸುಖವಿರುವುದೋ, ಅಂಥ ಸುಖವು ಮತ್ತು ಧರ್ಮವು ನಮ್ಮ ಸುಹೃದರಿಗೆ ಇರಲಿ.
ದ್ವ್ಯಕ್ಷರಸ್ತು ಭವೇನ್ಮೃತ್ಯುಸ್ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್ |
ಮಮೇತಿ ಚ ಭವೇನ್ಮೃತ್ಯುರ್ನ ಮಮೇತಿ ಚ ಶಾಶ್ವತಮ್ ॥4॥
ಮೃತ್ಯುವಿನ ಮಾರ್ಗವು ಎರಡೇ ಅಕ್ಷರಗಳಲ್ಲಿರುವುದು. ಶಾಶ್ವತವಾದ ಬ್ರಹ್ಮ- ಮಾರ್ಗವು ಮೂರು ಅಕ್ಷರಗಳಲ್ಲಿ ಅಡಗಿರುವುದು. ಮಮ ಎಂಬ ಎರಡಕ್ಷರಗಳೇ ಮೃತ್ಯುವಿಗೆ ಮಾರ್ಗವು `ನಮಮ' ಎಂಬ ಮೂರಕ್ಷರಗಳು ಶಾಶ್ವತ ಪರಬ್ರಹ್ಮಕ್ಕೆ ಕಾರಣವು.
ಬ್ರಹ್ಮಮೃತ್ಯೂ ಚ ತೌ ರಾಜನ್ನಾತ್ಮನ್ಯೇವ ಸಮಾಶ್ರಿತೌ |
ಅದೃಶ್ಯಮಾನೌ ಭೂತಾನಿ ಯೋಧಯೇತಾಮಸಂಶಯಮ್ ॥5॥
ರಾಜನೇ! ಬ್ರಹ್ಮ ಮತ್ತು ಮೃತ್ಯುಗಳು ಅವರವರ ಬುದ್ಧಿಯಲ್ಲಿಯೇ ಕಾಣದಂತೆ ಸೇರಿಕೊಂಡಿವೆ. ಪ್ರಾಣಿಗಳನ್ನು ತಮ್ಮ ವಶಮಾಡಿಕೊಳ್ಳುವವು. ಇದರಲ್ಲಿ ಸಂದೇಹ- ವಿಲ್ಲ.
ಅವಿನಾಶೋಽಸ್ಯ ಸತ್ವಸ್ಯ ನಿಯತೋ ಯದಿ ಭಾರತ |
ಭಿತ್ತ್ವಾ ಶರೀರಂ ಭೂತಾನಾಂ ನ ಹಿಂಸಾ ಪ್ರತಿಪತ್ಸ್ಯತೇ ॥6॥
ಭಾರತನೇ! ನೀನು ತಿಳಿದುಕೊಂಡಿರುವಂತೆ ಈ ಜೀವಕ್ಕೆ ವಿನಾಶವೆಂಬುದೇ ಇಲ್ಲವಾದಲ್ಲಿ ಪ್ರಾಣಿಗಳ ಶರೀರವನ್ನು ಕತ್ತರಿಸಿ ಹಾಕಿದರೂ ಆ ಶರೀರದಲ್ಲಿ ಇರುವ ಜೀವಕ್ಕೆ ಯಾವ ಹಿಂಸೆಯೂ ಆಗುವುದಿಲ್ಲ.
ಅಥಾಪಿ ಚ ಸಹೋತ್ಪತ್ತಿಃ ಸತ್ತ್ವಸ್ಯ ಪ್ರಲಯಸ್ತಥಾ |
ನಷ್ಟೇ ಶರೀರೇ ನಷ್ಟಂ ಸ್ಯಾದ್ ವೃಥಾ ಚ ಸ್ಯಾತ್ ಕ್ರಿಯಾಪಥಃ ॥7॥
ಒಂದು ವೇಳೆ ಈ ಶರೀರದೊಡನೆ ಜೀವವೂ ವಿನಾಶವಾದ ಪಕ್ಷದಲ್ಲಿ, ಶರೀರದೊಡನೆ ಜೀವವೂ ಹೋಗಿಬಿಡುವುದು. ಆಗ ಕರ್ಮಮಾರ್ಗವು ವ್ಯರ್ಥವೇ ಆಗುವುದು.
ತಸ್ಮಾದೇಕಾಂತಮುತ್ಸೃಜ್ಯ ಪೂರ್ವೈಃ ಪೂರ್ವತರೈಶ್ಚ ಯಃ |

ಪಂಥಾ ನಿಷೇವಿತಃ ಸದ್ಭಿಃ ಸ ನಿಷೇವ್ಯೋ ವಿಜಾನತಾ ॥8॥
ಈ ಕಾರಣದಿಂದ ತಿಳಿವಳಿಕೆಯುಳ್ಳವನು ತನ್ನ ಬುದ್ಧಿಯನ್ನು ಪ್ರಮಾಣವಾಗಿಟ್ಟು- ಕೊಳ್ಳದೇ ನಮ್ಮ ಹಿರಿಯರು ಹಾಗೂ ಪೂರ್ವಜರು, ಸತ್ಪುರುಷರು ಅನುಸರಿಸಿ- ಕೊಂಡು ಬಂದ ಹಾದಿಯನ್ನೇ ಆಶ್ರಯಿಸಬೇಕು.
ಲಬ್ಧ್ವಾಪಿ ಪೃಥಿವೀಂ ಕೃತ್ಸ್ನಾಂ ಸಹಸ್ಥಾವರಜಂಗಮಾಮ್ |
ನ ಭುಂಕ್ತೇ ಯೋ ನೃಪಃ ಸಮ್ಯಗ್ ನಿಷ್ಫಲಂ ತಸ್ಯ ಜೀವಿತಮ್ ॥9॥
ಸ್ಥಾವರ-ಜಂಗಮಗಳಿಂದ ಯುಕ್ತವಾದ ಈ ಸಕಲ ಭೂಮಿಯನ್ನು ಪಡೆದು ಯಾವ ರಾಜನೂ ಅದನ್ನು ಚೆನ್ನಾಗಿ ಪಾಲನೆ ಮಾಡುವುದಿಲ್ಲವೋ ಅಂಥವನ ಜೀವನವು ವ್ಯರ್ಥವೇ ಸರಿ.
ಅಥವಾ ವಸತೋ ರಾಜನ್ ವನೇ ವನ್ಯೇನ ಜೀವತಃ |
ದ್ರವ್ಯೇಷು ಯಸ್ಯ ಮಮತಾ ಮೃತ್ಯೋರಾಸ್ಯೇ ಸ ವರ್ತತೇ ॥10॥
ಒಂದುವೇಳೆ ಎಲ್ಲವನ್ನೂ ತ್ಯಾಗ ಮಾಡಿ ಕಾಡಿಗೆ ಹೋದರೂ, ಅಲ್ಲಿರುವ ವಸ್ತುಗಳಿಂದ ಬದುಕತಕ್ಕವನಿಗೆ ಆ ದ್ರವ್ಯಗಳಲ್ಲಿ ಮಮತೆ ಹುಟ್ಟಿದರೆ, ಅವನು ಮೃತ್ಯುವಿಗೆ ಬಾಯಿಗೆ ಸಿಲುಕಿದಂತೆಯೇ ಸರಿ.
ಬಾಹ್ಯಾಭ್ಯಂತರಭೂತಾನಾಂ ಸ್ವಭಾವಂ ಪಶ್ಯ ಭಾರತ |
ಯೇ ತು ಪಶ್ಯಂತಿ ತದ್ಭಾವಂ ಶುಷ್ಯಂತೇ ಸ್ತೋಕಕಾ ಇವ ॥11॥
ಭಾರತನೇ! ಬಾಹ್ಯದಲ್ಲಿ ಅಂತರಂಗದಲ್ಲಿ ಇರುವ ವಸ್ತುಗಳ ಸ್ವಭಾವ ಭೇದಗಳನ್ನು ಚೆನ್ನಾಗಿ ವಿಮರ್ಶಿಸು. ಇವೆರಡನ್ನು ಯಥಾವತ್ತಾಗಿ ತಿಳಿದವನು ಮಹಾ -ಭಯದಿಂದ ಮುಕ್ತನಾಗುತ್ತಾನೆ.
ಭವಾನ್ ಪಿತಾ ಭವಾನ್ ಮಾತಾ ಭವಾನ್ ಭ್ರಾತಾ ಭವಾನ್ ಗುರುಃ|
ದುಃಖಪ್ರಲಾಪಾನಾರ್ತಸ್ಯ ತಸ್ಮಾನ್ಮೇ ಕ್ಷಂತುಮರ್ಹಸಿ ॥12॥
ನೀನು ಮಹಾಪ್ರಾಜ್ಞನು, ನನಗೆ ತಂದೆ, ತಾಯಿ, ಗುರು, ಒಡಹುಟ್ಟಿದವನು ಎಲ್ಲವೂ ನೀನೇ ಆಗಿರುವಿ. ದುಃಖದಿಂದ ನಿನ್ನ ಮುಂದೆ ಪ್ರಲಾಪಿಸಿದ ನನ್ನ ಮಾತು- ಗಳನ್ನು ನೀನು ಮನ್ನಿಸಬೇಕು.
ತಥ್ಯಂ ವಾ ಯದಿ ವಾಽತಥ್ಯಂ ಯನ್ಮಯೈತತ್ ಪ್ರಭಾಷಿತಮ್ |
ತದ್ ವಿದ್ಧಿ ಪೃಥಿವೀಪಾಲ ಭಕ್ತ್ಯಾ ಭರತಸತ್ತಮ ॥13॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ತ್ರಯೋದಶೋಽಧ್ಯಾಯಃ ॥13॥
ಭರತಸತ್ತಮನೇ ! ನಾನು ಹೇಳಿದುದು ಸತ್ಯವಾಗಿರಲಿ, ಅಸತ್ಯವಾಗಿರಲಿ, ನಿನ್ನಲ್ಲಿ ಭಕ್ತಿಯಿಂದ ಹೇಳಿದ್ದೆಂದೇ ಗ್ರಹಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 13ನೆಯ ಅಧ್ಯಾಯವು ಮುಗಿಯಿತು.
*****
14. ಹದಿನಾಕನೆಯ ಅಧ್ಯಾಯ
ದ್ರೌಪದೀದೇವಿಯು ಯುಧಿಷ್ಠಿರನನ್ನು ಕುರಿತು ರಾಜ್ಯಭಾರವನ್ನು ಮಾಡು ಎಂಬುದಾಗಿ ವಿವರವಾಗಿ ತಿಳಿಸುತ್ತಾಳೆ. ಕ್ಷತ್ರಿಯರು ಬ್ರಾಹ್ಮಣಧರ್ಮವನ್ನು ಆಶ್ರಯಿಸಬಾರದು. ಕ್ಷತ್ರಿಯರ ಧರ್ಮ ಹಾಗೂ ಬ್ರಾಹ್ಮಣ ಧರ್ಮದ ಬಗ್ಗೆ ವಿವೇಚನೆ. ದಂಡನೀತಿಯ ಅನುಸರಣೆಯಿಂದ ಆಗುವ ಲಾಭಗಳು. ಅಳವಡಿಸಿಕೊಂಡ ಕ್ಷತ್ರಿಯನ ವೈಭವ. ಬ್ರಾಹ್ಮಣರೂ ಕೂಡ ಕೆಲವೊಮ್ಮೆ ಯುದ್ಧಮಾಡಬೇಕು ಎಂಬ ಬೋಧನೆ. ಅವ್ಯೇಷ್ಟವನಿಗೆ ಮತ್ತು ಪಾತಕಿಗಳಿಗೆ ಕಟ್ಟೆಚ್ಚರ. ದುರ್ಯೋಧನಾದಿಗಳು ಮಹಾಪಾತಕಿಗಳು ಎಂಬುದರ ಬೋಧನೆ. ಯುಧಿಷ್ಠಿರನಿಗೆ ಕರ್ತವ್ಯತ್ವದ ಬೋಧನೆ.
ವೈಶಂಪಾಯನಃ
ಅವ್ಯಾಹರತಿ ಕೌಂತೇಯೇ ಧರ್ಮರಾಜೇ ಯುಧಿಷ್ಠಿರೇ |
ಭ್ರಾತೃಣಾಂ ಬ್ರುವತಾಂ ತಾಂಸ್ತಾನ್ ವಿವಿಧಾನ್ ವೇದನಿಶ್ಚಯಾನ್ ॥1॥
ವೈಶಂಪಾಯನರು ಜನಮೇಜಯರಾಜನೇ! ಹೀಗೆ ತನ್ನ ನಾಲ್ವರು ಸಹೋದರರು ಹೇಳಿದ ವಿವಿಧ ಸಿದ್ಧಾಂತಗಳನ್ನು ಕೇಳಿಯೂ ಧರ್ಮರಾಜನು ಏನನ್ನೂ ಮಾತ- ನಾಡದೇ ಸುಮ್ಮನಿದ್ದನು.
ಮಹಾಭಿಜನಸಂಪನ್ನಾ ಶ್ರೀಮತ್ಯಾಯತಲೋಚನಾ |
ಅಭ್ಯಭಾಷತ ರಾಜೇಂದ್ರಂ ದ್ರೌಪದೀ ಯೋಷಿತಾಂ ವರಾ ॥2॥
ಆ ಸಂದರ್ಭದಲ್ಲಿ ಸತ್ಕುಲಪ್ರಸೂತೆಯಾದ, ಕಾಂತಿಯುಕ್ತಳಾದ, ವಿಶಾಲನೇತ್ರೆ- ಯಾದ, ದ್ರೌಪದಿಯು ರಾಜೇಂದ್ರನಾದ ಯುಧಿಷ್ಠಿರನನ್ನು ನೋಡಿದಳು.
ಆಸೀನಮೃಷಭಂ ರಾಜ್ಞಾಂ ಭ್ರಾತೃಭಿಃ ಪರಿವಾರಿತಮ್ |
ಸಿಂಹಶಾರ್ದೂಲ ಸದೃಶೈರ್ವಾರಣೈರಿವ ಯೂಥಪಮ್ ॥3॥
ಸಿಂಹ ಶಾರ್ದೂಲಗಳಂತಿರುವ ತನ್ನ ತಮ್ಮಂದಿರೆಲ್ಲ ಸುತ್ತಲೂ ಕುಳಿತಿರಲು ಮದಭರಿತವಾದ ಆನೆಗಳಿಂದ ಆವೃತವಾದ ಯೂಥಪತಿಯಂತೆ ಆ ನಾಲ್ವರ ನಡುವೆ ಮೌನದಿಂದ ಕುಳಿತಿದ್ದನು.
ಅಭಿಮಾನವತೀ ನಿತ್ಯಂ ವಿಶೇಷೇಣ ಯುಧಿಷ್ಠಿರೇ |
ಲಾಲಿತಾ ಸತತಂ ರಾಜ್ಞಾ ಧರ್ಮಜ್ಞಾ ಧರ್ಮದರ್ಶಿನೀ ॥4॥
ದ್ರೌಪದಿಗೆ ಎಲ್ಲರಿಗಿಂತಲೂ ಧರ್ಮರಾಜನಲ್ಲಿ ಭಕ್ತಿಗೌರವಗಳು ಹೆಚ್ಚು. ಧರ್ಮರಾಜನು ಅವಳನ್ನು ವಿಶೇಷವಾಗಿ ಆದರಿಸುತ್ತಿದ್ದನು.
ಆಮಂತ್ರ್ಯ ವಿಪುಲಶ್ರೋಣೀ ಸಾಮ್ನಾ ಪರಮವಲ್ಗುನಾ |
ಭರ್ತಾರಮಭಿಸಂಪ್ರೇಕ್ಷ್ಯ ತತೋ ವಚನಮಬ್ರವೀತ್ ॥5॥
ಧರ್ಮಾಧರ್ಮಗಳನ್ನು ನಿರೂಪಿಸುವುದರಲ್ಲಿ ಸಮರ್ಥಳೆನಿಸಿದ ಆ ದ್ರೌಪದಿ- ದೇವಿಯು ತನ್ನ ಪತಿಯನ್ನು ನೋಡಿ ಅತ್ಯಂತ

ಮೃದುವಾಕ್ಯದಿಂದ ಹೇಳಿದಳು.
ದ್ರೌಪದೀ
ಇಮೇ ತೇ ಭ್ರಾತರಃ ಪಾರ್ಥ ಶುಷ್ಯಂತಸ್ತೋಕಕಾ ಇವ |
ವಾವಾಶ್ಯಮಾನಾಸ್ತಿಷ್ಠಂತಿ ನಚೈನಾನಭಿನಂದಸೇ ॥6॥
ದ್ರೌಪದೀ ಪಾರ್ಥನೇ! ನಿನ್ನ ತಮ್ಮಂದಿರು ನೀನು ಅರಣ್ಯಕ್ಕೆ ಹೋಗಬಾರ- ದೆಂದು ಎಷ್ಟು ಕಳವಳಿಸುತ್ತಿರುವರು ನೋಡು. ಚಾತಕಪಕ್ಷಿಗಳಂತೆ ಬಾರಿಬಾರಿಗೂ ಅಂಗಾಲಾಚಿ ಬೇಡಿಕೊಳ್ಳುತ್ತಿದ್ದಾರೆ. ದುಃಖಿತರಾದ ಅವರನ್ನು ಯುಕ್ತಿಯುಕ್ತವಾದ ಮಾತುಗಳಿಂದ ಸಂತೋಷಗೊಳಿಸು.
ನಂದಯ್ಯೆತಾನ್ ಮಹಾರಾಜ ಮತ್ತಾನಿವ ಮಹಾದ್ವಿಪಾನ್ |
ಉಪಪನ್ನೇನ ವಾಕ್ಯೇನ ಸತತಂ ದುಃಖಭಾಗಿನಃ ॥7॥
ಮಹಾರಾಜನೇ! ಮದಿಸಿದ ಆನೆಗಳಂತೆಯೇ ಇರುವ ಈ ನಿನ್ನ ಸಹೋದರರನ್ನು ಯುಕ್ತಿಯುಕ್ತವಾದ ಮಾತುಗಳಿಂದ ಸಂತೋಷಗೊಳಿಸು. ನಿಶ್ಚಯವಾಗಿಯೂ ಇವರು ಇದುವರೆಗೂ ನಿರಂತರವಾಗಿ ದುಃಖದಲ್ಲಿಯೇ ಕಾಲ ಕಳೆದಿರುತ್ತಾರೆ.
ಕಥಂ ದ್ವೈತವನೇ ರಾಜನ್ ಪೂರ್ವಮುಕ್ತತ್ವ ತಥಾ ವಚಃ |
ಭ್ರಾತೄನೇತಾನ್ ಸ್ಮ ಸಹಿತಾನ್ ಶೀತವಾತಾತಪಾರ್ದಿತಾನ್ ॥8॥
ರಾಜ್ಯದ ವಿಷಯವಾಗಿ ಹಿಂದೆ ನೀನು ಹೇಳಿದ ಮಾತನ್ನು ಸ್ಮರಣೆಗೆ ತರುತ್ತೇನೆ. ನಾವೆಲ್ಲರೂ ದ್ವೈತವನದಲ್ಲಿದ್ದೆವು. ಆ ಸಂದರ್ಭದಲ್ಲಿ ನಿನ್ನ ಸಹೋದರರು ಚಳಿ, ಗಾಳಿ, ಬಿಸಿಲುಗಳಿಂದ ಪೀಡಿಸಲ್ಪಡುತ್ತಿದ್ದರು. ಆಗ ನೀನು ನಿನ್ನ ಸಹೋದರರನ್ನು ಸಂತೈಸುವುದಕ್ಕಾಗಿ ಈ ಮಾತನ್ನಾಡಿದೆ -
ವಯಂ ದುರ್ಯೋಧನಂ ಹತ್ವಾ ಮೃಧೇ ಭೋಕ್ಷ್ಯಾಮ ಮೇದಿನೀಮ್|
ಸಂಪೂರ್ಣಾಂ ಸರ್ವಕಾಮಾನಾಮಾಹವೇ ವಿಜಯೈಷಿಣಃ ॥9॥
ವಿರಥಾಂಶ್ಚ ರಥಾನ್ ಕೃತ್ವಾ ನಿಹತ್ಯ ಚ ಮಹಾಗಜಾನ್ |
ಸಂಸ್ತೀರ್ಯ ಚ ರಥೈರ್ಭೂಮಿಂ ಸಸಾದಿಭಿರರಿಂದಮಾಃ ॥10॥
ಯಜತಾಂ ವಿವಿಧೈರ್ಯಜ್ಞೈಃ ಸಮೃದ್ಧೈರಾಪ್ತದಕ್ಷಿಣೈಃ |
ವನವಾಸಕೃತಂ ದುಃಖಂ ಭವಿಷ್ಯತಿ ಸುಖಾಯ ನಃ ॥11॥
ಅರಿಂದಮರೇ ! ನಾವು ಯುದ್ಧದಲ್ಲಿ ದುರ್ಯೋಧನನನ್ನು ಕೊಂದು ಸಮಸ್ತ ಕಾಮಭೋಗಗಳಿಂದ ತುಂಬಿದ ಈ ಭೂಮಿಯನ್ನು ಶೀಘ್ರದಲ್ಲಿ ಅನುಭವಿಸುತ್ತೇವೆ. ನಾವು ಯುದ್ಧದಲ್ಲಿ ಅನೇಕ ಶತ್ರುವೀರರನ್ನು, ರಥ, ತುರಗಗಳನ್ನು ಕೊಂದು ರಥಿಕರ ದೇಹಗಳಿಂದ ಮತ್ತು ರಥಗಳಿಂದ ರಣಭೂಮಿಯನ್ನೆಲ್ಲ ಹರಡಿ ಜಯಶೀಲರಾಗು- ತ್ತೇವೆ. ಸಮೃದ್ಧವಾದ ದಾನ-ದಕ್ಷಿಣೆಗಳಿಂದ ವಿವಿಧ ಯಜ್ಞಗಳಿಂದ ದೇವತೆಗಳನ್ನು ಪೂಜಿಸುತ್ತೇವೆ. ಈಗ ನಾವು ಅನುಭವಿಸುವ ವನವಾಸದುಃಖವೆಲ್ಲವೂ ಮುಂದಿನ ನಮ್ಮ ಅಪಾರ ಸುಖಕ್ಕೆ ಕಾರಣ ಎಂದು ಹೇಳಿದೆಯಲ್ಲವೇ?
ಇತ್ಯೇತಾನೇವಮುಕ್ತತ್ವ ತ್ವಂ ಸ್ವಯಂ ಧರ್ಮಭೃತಾಂ ವರ |
ಕಥಮದ್ಯ ಪುನರ್ವೀರ ವಿನಿಹಂಸಿ ಮನಾಂಸ್ಯುತ ॥12॥
ಧರ್ಮಶ್ರೇಷ್ಠನೇ! ಇದೇ ಸಾಂತ್ವನದ ಮಾತುಗಳನ್ನು, ನೀನೇ ಈ ಹಿಂದೆ ಹೇಳಿ ಈಗ ಪುನಃ ಅನುಚಿತವಾದ ಮಾತುಗಳಿಂದ ನಮ್ಮ ಮನಸ್ಸನ್ನೇಕೆ ನೋಯಿಸು- ತ್ತಿರುವಿ?
ನ ಕ್ಲೀಬೋ ವಸುಧಾಂ ಭುಂಕ್ತೇ ನ ಕ್ಲೀಬೋ ಧನಮಶ್ನುತೇ |
ನ ಕ್ಲೀಬಸ್ಯ ಗೃಹೇ ಪುತ್ರಾ ಮತ್ಸ್ಯಾಃ ಪಂಕ ಇವಾಸತೇ ॥13॥
ಹೇಡಿಯಾದವನು ಭೂಮಿಯನ್ನು ಅನುಭವಿಸಲಾರನು. ಧನವನ್ನು ಅನು- ಭವಿಸಲಾರನು. ಹೇಡಿಯ ಮನೆಯಲ್ಲಿ ಹುಟ್ಟಿದ ಮಕ್ಕಳೂ ಕೆಸರಿನಲ್ಲಿ ಬಿದ್ದ ಮೀನಿ- ನಂತಿರುವರು ಸುಖವನ್ನೇ ಅವರು ಕಾಣಲಾರರು.
ನಾದಂಡಃ ಕ್ಷತ್ರಿಯೋ ಭಾತಿ ನಾದಂಡೋ ಭೂತಿಮಶ್ನುತೇ |
ನಾದಂಡಸ್ಯ ಪ್ರಜಾ ರಾಜ್ಞಃ ಸುಖಮೇಧಂತಿ ಭಾರತ ॥14॥
ಭಾರತನೇ! ದಂಡವನ್ನು ಹಿಡಿಯದಿರುವ ಕ್ಷತ್ರಿಯನು ಶೋಭಿಸುವುದಿಲ್ಲ. ಅಂಥವನು ಭೂಮಿಯನ್ನು ಅನುಭವಿಸಲಾರನು. ಅವನ ಪ್ರಜೆಗಳೂ ಸುಖದಿಂದ ಇರಲಾರರು.
ಸದೇವಾಸುರಗಂಧರ್ವೈರಪ್ಸರೋಭಿರ್ವಿಭೂಷಿತಮ್ |
ರಕ್ಷೋಭಿರ್ಗುಹ್ಯಕೈರ್ನಾಗೈರ್ಮನುಷ್ಯೈಶ್ಚ ವಿಭೂಷಿತಮ್ ॥15॥
ದೇವತೆಗಳು, ಅಸುರರು, ಗಂಧರ್ವರು, ಅಪ್ಸರರು, ಗುಹ್ಯಕರು, ರಾಕ್ಷಸರು, ನಾಗರು, ಮನುಷ್ಯರು ಇದರಿಂದ ತುಂಬಿದ ಧರ್ಮಾರ್ಥ-ಕಾಮಗಳಿಂದ ಪೂರ್ಣ- ವಾದ ಈ ಜಗತ್ತೆಲ್ಲವೂ ರಾಜದಂಡದಿಂದ ನಿಯಂತ್ರಿಸಲ್ಪಟ್ಟಾಗಲೇ ಅನುಭವ- ಯೋಗ್ಯವಾಗುವುದು.
ತ್ರಿವರ್ಗೇಣ ಚ ಸಂಪೂರ್ಣಂ ತ್ರಿವರ್ಗಸ್ಯಾಗಮೇನ ಚ |
ದಂಡೇನಾಭ್ಯಾಹೃತಂ ಸರ್ವಂ ಜಗದ್ಭೋಗಾಯ ಕಲ್ಪತೇ ॥16॥
ಸಂಪೂರ್ಣವಾದ ಆಗಮದ ಅಧಿಕಾರವನ್ನು ಹೊಂದಿದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ತ್ರಿವರ್ಗದಿಂದ ಕೂಡಿದ ಈ ಜಗತ್ತು ಅನುಭವಕ್ಕೆ ಯೋಗ್ಯವಾಗುತ್ತದೆ.
ಸ್ವಾಯಂಭುವಂ ಮಹೀಪಾಲ ಆಗಮಂ ಶೃಣು ಶಾಶ್ವತಮ್ |
ವಿಪ್ರಾಣಾಂ ವಿದಿತಶ್ಚಾಯಂ ತವ ಚೈವ ವಿಶಾಂಪತೇ ॥17॥

ಸ್ವಾಯಂಭುವಮನುವಿನ ನೀತಿಶಾಸ್ತ್ರವು ಈ ಭೂಲೋಕದಲ್ಲಿ ಎಂದೆಂದೂ ಶಾಶ್ವತವಾಗಿದೆ. ಇದನ್ನು ಶ್ರದ್ಧೆಯಿಂದ ನೀನು ಕೇಳು. ಪ್ರತಿಯೊಬ್ಬ ಬ್ರಾಹ್ಮಣರಿಗೂ ಇದರ ಬಗ್ಗೆ ತಿಳಿದಿದೆ. ನೀನೂ ಸಹ ಈ ಆಗಮದ ಬಗ್ಗೆ ತಿಳಿದುಕೊಂಡಿರುವಿ.
ಅರಾಜಕೇ ಹಿ ಲೋಕೇಽಸ್ಮಿನ್ ಸರ್ವತೋ ವಿದ್ರುತೇ ಭಯಾತ್ |
ರಕ್ಷಾರ್ಥಮಸ್ಯ ಲೋಕಸ್ಯ ರಾಜಾನಮಸೃಜತ್ ಪ್ರಭುಃ |
ಮಹಾಕಾಯಂ ಮಹಾವೀರ್ಯಂ ಪಾಲೇನ ಜಗತಃ ಕ್ಷಮಮ್ ॥18॥
ಒಮ್ಮೆ ಈ ಜಗತ್ತು ರಾಜನಿಲ್ಲದೇ ಎಲ್ಲೆಡೆಯು ಭಯದಿಂದ ಚದುರಿ ಹೋಗಿತ್ತು. ಆಗ ಜಗತ್ತನ್ನು ರಕ್ಷಣೆ ಮಾಡುವುದಕ್ಕಾಗಿ ಆ ಸರ್ವೇಶ್ವರನಾದ ಪರ- ಮಾತ್ಮನು ರಾಜನನ್ನು ಸೃಷ್ಟಿ ಮಾಡಿದನು. ಅಂಥ ರಾಜನು ದೃಢವಾದ ಶರೀರ- ವುಳ್ಳವನೂ ಅತ್ಯಂತ ಪರಾಕ್ರಮಶಾಲಿಯೂ ಜಗತ್ತಿನ ರಕ್ಷಣೆಯಲ್ಲಿ ಸಂಪೂರ್ಣವಾಗಿ ಸಮರ್ಥನೂ ಆಗಿದ್ದನು.
ಅನಿಲಾಗ್ನಿಯಮಾರ್ಕಾಣಾಮಿಂದ್ರಸ್ಯ ವರುಣಸ್ಯ ಚ |
ಚಂದ್ರವಿತ್ತೇಶಯೋಶ್ಚೈವ ಮಾತ್ರಾ ನಿರ್ಹೃತ್ಯ ಶಾಶ್ವತೀಃ ॥19॥
ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ ಮೊದಲಾದ ಲೋಕ- ಪಾಲಕರು ಮತ್ತು ಸೂರ್ಯಚಂದ್ರರು ಇವರುಗಳಲ್ಲಿರುವ ಶಾಶ್ವತವಾದ ಅಂಶಗ- ಳನ್ನು ತೆಗೆದುಕೊಂಡು ಸಮರ್ಥರಾದ ರಾಜರುಗಳನ್ನು ಆ ಪರಮಾತ್ಮನು ಸೃಷ್ಟಿ ಮಾಡಿದನು.
ಟಿಪ್ಪಣಿ - ಮಾತ್ರಾ ನಿರ್ಹೃತ್ಯ ಶಾಶ್ವತೀಃ ಇತ್ಯತ್ರ ಯಸ್ಮಾದೇಷಾಂ ಸುರೇಂದ್ರಾ- ಣಾಂ ಶಾಶ್ವತೀಃ ಮಾತ್ರಾಃ ಅಂಶಾನ್ ನಿರ್ಹೃತ್ಯ ಆದಾಯ ಈಶ್ವರಾಃ ಸಮರ್ಥಾಃ ನೃಪಾಃ ಸಂಭವಂತಿ | ಏಷಃ ರಾಜಾ |
`ಮಾತ್ರಾ ನಿರ್ಹೃತ್ಯ ಶಾಶ್ವತೀಃ' - ಎಂಬಲ್ಲಿ `ಯಸ್ಮಾದೇಷಾಂ ಸುರೇಂದ್ರಾಣಾಂ ಶಾಶ್ವತೀಃ ಮಾತ್ರಾಃ' = ಯಾವ ದೇವಶ್ರೇಷ್ಠರ ಶಾಶ್ವತವಾದ ಅಂಶಗಳಿವೆಯೋ, ಅವುಗಳನ್ನು `ನಿರ್ಹೃತ್ಯ' = ತೆಗೆದುಕೊಂಡು, `ಈಶ್ವರಾಃ' =ಸಮರ್ಥರಾದ ರಾಜರುಗಳು ಸೃಷ್ಟರಾದರು.`ಏಷಃ' = ರಾಜನು.
ಯಸ್ಮಾದೇಷಾಂ ಸುರೇಂದ್ರಾಣಾಂ ಸಂಭವತ್ಯಂಶತೋ ನೃಪಃ |
ತಸ್ಮಾದಭಿಭವತ್ಯೇಷ ಸರ್ವಭೂತಾನಿ ತೇಜಸಾ ॥20॥
ಯಾವ ಕಾರಣದಿಂದ ರಾಜನು ದೇವಶ್ರೇಷ್ಠರ ಅಂಶದಿಂದ ಭೂಲೋಕದಲ್ಲಿ ಅವತರಿಸುವನೋ, ಆ ಕಾರಣದಿಂದ ಸಮಸ್ತ ಭೂತಗಳನ್ನು ಅಡಗಿಸುವ ಶಕ್ತಿ ಅವನಿಗಿರುತ್ತದೆ.
ತಪತ್ಯಾದಿತ್ಯವಚ್ಚೈವ ಚಕ್ಷೂಂಷಿ ಚ ಮನಾಂಸಿ ಚ |
ನಚೈನಂ ಭುವಿ ಶಕ್ನೋತಿ ಕಶ್ಚಿದಪ್ಯಭಿವೀಕ್ಷಿತುಮ್ ॥21॥
ಇಂಥ ಶ್ರೇಷ್ಠನಾದ ರಾಜನು ಸೂರ್ಯನಂತೆ ಜ್ವಲಿಸುತ್ತಾನೆ. ನೇರವಾಗಿ ಕಣ್ಣಿಟ್ಟು ಈ ರಾಜನನ್ನು ನೋಡುವ ಸಾಮರ್ಥ್ಯ ಯಾರಿಗೂ ಇರುವುದಿಲ್ಲ. ಮನಸ್ಸಿ- ನಿಂದಲೂ ಅವನ ಬಗ್ಗೆ ತಿಳಿಯಲು ಸಾಧ್ಯವಾಗುವುದಿಲ್ಲ. ಒಬ್ಬಿಬ್ಬರಿಗೆ ಅಷ್ಟೇ ಅಲ್ಲ. ಸಮಸ್ತಲೋಕದಲ್ಲಿ ಯಾರೊಬ್ಬರಿಗೂ ಕೂಡ ಈ ರಾಜನನ್ನು ತಿಳಿಯಲು ಸಾಧ್ಯವಾ- ಗುವುದಿಲ್ಲ.
ಸೋಽಗ್ನಿರ್ಭವತಿ ವಾಯುಶ್ಚ ಸೋಽರ್ಕಃ ಸೋಮಶ್ಚ ಧರ್ಮರಾಟ್ |
ಸ ಕುಬೇರಃ ಸ ವರುಣಃ ಸ ಮಹೇಂದ್ರಃ ಪ್ರತಾಪವಾನ್ ॥22॥
ರಾಜನು ಭೂಲೋಕದಲ್ಲಿ ಅಗ್ನಿಯಂತೆ ಬೆಳಗುತ್ತಾನೆ. ವಾಯುವಂತೆ ಸಂಚರಿ- ಸುತ್ತಾನೆ. ಸೂರ್ಯನಂತೆ ಪ್ರಖರನಾಗಿರುತ್ತಾನೆ. ಚಂದ್ರನಂತೆ ಶಾಂತನಾಗಿರುತ್ತಾನೆ. ಕುಬೇರನಂತೆ ಧನವಂತನಾಗಿರುತ್ತಾನೆ. ವರುಣನಂತೆ ಸುವೃಷ್ಟಿಪ್ರದನಾಗಿರುತ್ತಾನೆ. ಮಹೇಂದ್ರನಂತೆ ಪ್ರತಾಪಶಾಲಿಯಾಗಿರುತ್ತಾನೆ.
ಪಿತಾಮಹಸ್ಯ ದೇವಸ್ಯ ವಿಷ್ಣೋಃ ಶರ್ವಸ್ಯ ಚೈವ ಹಿ |
ಋಷೀಣಾಂ ಚೈವ ಸರ್ವೇಷಾಂ ತಸ್ಮಿಂಸ್ತೇಜಃ ಪ್ರತಿಷ್ಠಿತಮ್ ॥23॥
ಜಗದೀಶ್ವರನಾದ ಕ್ರೀಡಾದಿಗುಣವಿಶಿಷ್ಟನಾದ ಮಹಾವಿಷ್ಣುವಿನಲ್ಲಿರುವ ಜಗತ್‌ಪಾಲಕತ್ವಶಕ್ತಿಯು ಇವನಲ್ಲಿರುತ್ತದೆ. ಚತುರ್ಮುಖಬ್ರಹ್ಮನಲ್ಲಿರುವ ಸರ್ಜನ- ಶಕ್ತಿಯು ಇವನಲ್ಲಿರುತ್ತದೆ. ಮಹಾರುದ್ರದೇವನ ಸಂಹಾರಶಕ್ತಿಯೂ ಕೂಡ ಈ ರಾಜನಲ್ಲಿರುತ್ತದೆ. ಸಮಸ್ತಋಷಿಗಳ ಬ್ರಹ್ಮತೇಜಸ್ಸು ಇವನಲ್ಲಿ ನೆಲೆಗೊಂಡಿರುತ್ತದೆ.
ಬಾಲೋಽಪಿ ನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ |
ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥24॥
ರಾಜನು ಬಾಲಕನಾಗಿದ್ದರೂ ಕೂಡ ಸಾಮಾನ್ಯ ಮನುಷ್ಯನೆಂದು ಅವನನ್ನು ಉಪೇಕ್ಷೆ ಮಾಡಬಾರದು. ಮನುಷ್ಯರೂಪದಲ್ಲಿರುವ ಬಹುದೊಡ್ಡ ದೇವತೆಯೆಂದೇ ಅವನನ್ನು ಗೌರವಿಸಬೇಕು.
ಏಕಮೇವ ದಹತ್ಯಗ್ನಿರ್ನರಂ ದುರುಪಸರ್ಪಿಣಮ್ |
ಕುಲಂ ದಹತಿ ರಾಜಾಗ್ನಿಃ ಸಪಶುದ್ರವ್ಯಸಂಚಯಮ್ ॥25॥
ಒಂದೇ ಅಗ್ನಿಯು ಎಚ್ಚರ ತಪ್ಪಿ ಸಮೀಪಿಸಿದವನನ್ನು ಸುಟ್ಟುಬಿಡುತ್ತದೆ. ರಾಜ- ನೆಂಬ ಅಗ್ನಿಯೂ ಕೂಡ ಪಶು, ದ್ರವ್ಯಗಳಿಂದ ಸಹಿತವಾದ ಸಮಸ್ತಕುಲವನ್ನೇ ಭಸ್ಮ- ಮಾಡುತ್ತದೆ.
ವಿವರಣೆ - ಅಗ್ನಿಯನ್ನು ಎಚ್ಚರಿಕೆಯಿಂದ ಸರಿಯಾಗಿ ಉಪಯೋಗಿಸಿ- ಕೊಂಡಾಗ ನಮಗೆ ಅಪೇಕ್ಷಿತವಾದ ಎಲ್ಲಾ ಭಕ್ಷ್ಯಭೋಜ್ಯಗಳನ್ನು ನೀಡುತ್ತದೆ. ಜೀವನವನ್ನೇ ಹಸನ್ಮುಖಿಯನ್ನಾಗಿ ಮಾಡುತ್ತದೆ. ಆದರೆ ಉಪೇಕ್ಷೆಯಿಂದ ಉದಾ- ಸೀನದಿಂದ ಎಚ್ಚರ ತಪ್ಪಿ ಅಗ್ನಿಯ ಬಳಿ ಹೋದರೆ ನಮ್ಮನ್ನೇ ಸುಟ್ಟುಬಿಡುತ್ತದೆ. ಅದರಂತೆ ರಾಜನೂ ಕೂಡ ಸರಿಯಾದ ಭಾವನೆಯಿಂದ ಭಯಭಕ್ತಿಗಳಿಂದ ಸಹಿತನಾಗಿ ರಾಜನನ್ನು ಆಶ್ರಯಿಸಿದರೆ ನಮಗೆ ಜೀವನಪ್ರದನಾಗುತ್ತಾನೆ. ಉಪೇ- ಕ್ಷಿಸಿದರೆ ಸಂಪೂರ್ಣವಾಗಿ ನಾಶಮಾಡುತ್ತಾನೆ. ಅಗ್ನಿಯು ಕೇವಲ ನಮ್ಮನ್ನು ಸುಡುತ್ತದೆ. ಆದರೆ ಈ ರಾಜಾಜ್ಞೆಯು ನಮ್ಮನ್ನಷ್ಟೇ ಅಲ್ಲದೇ ನಮ್ಮಲ್ಲಿರುವ ಸಂಪತ್ತು ಪಶುಗಳು ಎಲ್ಲವನ್ನೂ ನಾಶಮಾಡಿ, ಸಮಸ್ತಕುಲವನ್ನೂ ಕೂಡ ನಾಶ ಮಾಡಿಬಿಡುತ್ತದೆ. ಆದ್ದರಿಂದ ಅತ್ಯಂತ

ಎಚ್ಚರಿಕೆಯಿಂದ ರಾಜಾಜ್ಞೆಯ ಜೊತೆ ವ್ಯವ -ಹರಿಸಬೇಕು.
ಧೃತರಾಷ್ಟ್ರಕುಲಂ ದಗ್ಧಂ ಕ್ರೋಧೋದ್ಭೂತೇನ ವಹ್ನಿನಾ |
ಪ್ರತ್ಯಕ್ಷಮೇತಲ್ಲೋಕಸ್ಯ ಸಂಶಯೋ ಹಿ ನ ವಿದ್ಯತೇ ॥26॥
ಯುಧಿಷ್ಠಿರನೇ! ನಿನ್ನ ಕ್ರೋಧದಿಂದ ಹುಟ್ಟಿದ ಅಗ್ನಿಯಿಂದಲೇ ಆ ಧೃತರಾಷ್ಟ್ರನ ಕುಲವು ಸಂಪೂರ್ಣವಾಗಿ ಭಸ್ಮವಾಯಿತು. ಇದನ್ನು ಸಮಸ್ತ ಜಗತ್ತೇ ಕಣ್ಣಾರೆ ಕಂಡಿದೆ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.
ಕುಲಜೋ ವೃತ್ತಸಂಪನ್ನೋ ಧಾರ್ಮಿಕಶ್ಚ ಮಹೀಪತಿಃ |
ಪ್ರಜಾನಾಂ ಪಾಲೇನ ಯುಕ್ತಃ ಪೂಜ್ಯತೇ ದೈವತೈರಪಿ ॥27॥
ಉತ್ತಮ ಕುಲದಲ್ಲಿ ಹುಟ್ಟಿ, ಗೌರವದಿಂದ ಎಲ್ಲಾ ಧರ್ಮಗಳನ್ನು ಪಾಲನೆ ಮಾಡುತ್ತಾ, ಪ್ರಜೆಗಳನ್ನು ಹಿತದೃಷ್ಟಿಯಿಂದ ಯಾವ ರಾಜನು ರಕ್ಷಣೆ ಮಾಡು- ತ್ತಾನೋ, ಅಂಥವನನ್ನು ದೇವತೆಗಳೂ ಕೂಡ ಪ್ರಶಂಸೆ ಮಾಡುತ್ತಾರೆ. ಮತ್ತು ಪೂಜಿಸುತ್ತಾರೆ.
ವಿವರಣೆ - ರಾಜನಾದವನು ಉತ್ತಮಕುಲದಲ್ಲಿ ಹುಟ್ಟಿರಬೇಕು. ಎಲ್ಲಾ ಧರ್ಮಗಳನ್ನು ಪಾಲನೆ ಮಾಡಬೇಕು. ಪ್ರಜೆಗಳನ್ನು ನಿಷ್ಕಾಮವಾಗಿ ರಕ್ಷಣೆ ಮಾಡ- ಬೇಕು. ಇಂಥವನನ್ನು ಮಾತ್ರ ದೇವತೆಗಳು ಪೂಜಿಸುತ್ತಾರೆ. ರಾಜನಲ್ಲಿ ಈ ಎಲ್ಲಾ ಧರ್ಮಗಳು ಅವಶ್ಯವಾಗಿ ಇರಬೇಕು ಎಂಬುದು ಅಭಿಪ್ರಾಯ.
ಕಾರ್ಯಂ ಯೋಽವೇಕ್ಷ್ಯ ಶಕ್ತಿಂ ಚ ದೇಶಕಾಲೌ ಚ ತತ್ತ್ವತಃ |
ಕುರುತೇ ಧರ್ಮಸಿದ್ಧ್ಯರ್ಥಂ ವೈಶ್ವರೂಪಂ ಪುನಃಪುನಃ ॥28॥
ತಸ್ಯ ಪ್ರಸಾದೇ ಪದ್ಮಾತ್ಮಾ ವಿಜಯಶ್ಚ ಪರಾಕ್ರಮೇ |
ಮೃತ್ಯುಶ್ಚ ವಸತಿ ಕ್ರೋಧೇ ಸರ್ವತೇಜೋಮಯೋ ಹಿ ಸಃ ॥29॥
ರಾಜನು ತನ್ನಲ್ಲಿರುವ ಶಕ್ತಿ, ಮಾಡಬೇಕಾದ ಕರ್ತವ್ಯ ಹಾಗೂ ದೇಶಕಾಲಗಳು ಇವುಗಳನ್ನೆಲ್ಲಾ ಸರಿಯಾಗಿ ತಿಳಿದುಕೊಂಡಿರಬೇಕು. ಧರ್ಮಸಾಧನೆಗಳನ್ನು ಅನೇಕ ಮುಖಗಳಿಂದ ಮಾಡುತ್ತಿರಬೇಕು. ಒಮ್ಮೆ ಮಾತ್ರವಲ್ಲದೇ ಪುನಃ ಪುನಃ ಧರ್ಮವನ್ನು ಸಾಧಿಸಬೇಕು. ಅಂಥ ರಾಜನ ವಿಷಯದಲ್ಲಿ ಲಕ್ಷ್ಮಿಯು ಸಂಪೂರ್ಣವಾಗಿ ಒಲಿದು- ಬರುವಳು. ಅವನ ಪರಾಕ್ರಮಕ್ಕೆ ವಿಶೇಷವಾದ ಜಯವು ಒದಗಿ ಬರುವುದು. ಅವನ ಕೋಪದಲ್ಲಿ ಮೃತ್ಯುದೇವತೆಯು ನೆಲೆಗೊಳ್ಳುವುದು. ಹೀಗೆ ಅವನು ಸಕಲ ತೇಜೋಮಯನಾಗಿ ಕಂಗೊಳಿಸುವನು.
ಟಿಪ್ಪಣಿ - ವೈಶ್ವರೂಪಂ ನಾನಾರೂಪಂ ಕರ್ಮ, ಸಿದ್ಧ್ಯರ್ಥಂ ಕಾರ್ಯ- ಸಿದ್ಧ್ಯರ್ಥಂ ಕುರುತೇ | ತಸ್ಯ ಪ್ರಸಾದೇ ಸತಿ ಆಶ್ರಿತೋ ಜನಃ ಪದ್ಮಾತ್ಮಾ ಪದ್ಮಾ ಸಂಪದ್ ಆತ್ಮನಿ ಯಸ್ಯಾಸೌ ಪದ್ಮಾತ್ಮಾ ಭವತಿ | `ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಇತ್ಯಮರಃ | ಪರಾಕ್ರಮೇ ಸತಿ ಶತ್ರವಃ ಶ್ರಿಯಂ ಸ್ವಸಂಪದಂ ವೇದಯಂತೀತಿ ಶ್ರೀವಿದೋ ಭವಂತಿ |
`ವೈಶ್ವರೂಪಂ' - ಅನೇಕ ವಿಧವಾದ ಕಾರ್ಯಗಳ ಸಿದ್ಧಿಗಾಗಿ ಅನೇಕ ಮುಖ- ಗಳಿಂದ ಸಾಧನೆಗೈಯ್ಯುತ್ತಾನೆ. `ತಸ್ಯ ಪ್ರಸಾದೇ ಸತಿ' - ಆ ರಾಜನಷ್ಟೇ ಲಕ್ಷ್ಮಿಯ ಅನುಗ್ರಹವನ್ನು ಹೊಂದುವುದಲ್ಲ. ಅವನನ್ನು ಆಶ್ರಯಿಸಿದ ವ್ಯಕ್ತಿಯೂ ಕೂಡ ಲಕ್ಷ್ಮಿಯ ಅನುಗ್ರಹವನ್ನು ಹೊಂದುತ್ತಾನೆ. `ಪದ್ಮಾತ್ಮಾ ' ಎಂಬಲ್ಲಿರುವ `ಪದ್ಮಾ' ಎಂಬ ಶಬ್ದಕ್ಕೆ ಸಂಪತ್ತು ಎಂದರ್ಥ. ಪದ್ಮಾತ್ಮನಾಗುತ್ತಾನೆ ಎಂದರೆ ಲಕ್ಷ್ಮಿಯ ಅನು- ಗ್ರಹವಿಶೇಷವನ್ನು ಹೊಂದುತ್ತಾನೆ ಎಂದರ್ಥ. ಪದ್ಮಾ ಎಂಬ ಶಬ್ದಕ್ಕೆ ಲಕ್ಷ್ಮೀ ಎಂಬರ್ಥವನ್ನು `ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಎಂಬ ಅಮರಕೋಶವು ಹೇಳುತ್ತದೆ. ರಾಜನಲ್ಲಿ ಉತ್ತಮವಾದ ಪರಾಕ್ರಮವಿದ್ದಾಗ ಶತ್ರುಗಳು ತಮ್ಮ ಸಂಪತ್ತನ್ನು ತಿಳಿಯುತ್ತಾರೆ. ಶ್ರೀವಿದರಾಗುತ್ತಾರೆ.
ತಂ ಯಸ್ತು ದ್ವೇಷ್ಟಿ ಸಮ್ಮೋಹಾತ್ ಸ ವಿನಶ್ಯತಿ ಮಾನವಃ |
ತಸ್ಯ ಹ್ಯಾಶುವಿನಾಶಾಯ ರಾಜಾಽಪಿ ಕುರುತೇ ಮನಃ ॥30॥
ಶ್ರೇಷ್ಠನಾದ ಈ ರಾಜನನ್ನು ಯಾರು ಭ್ರಾಂತಿಯಿಂದ ದ್ವೇಷ ಮಾಡುತ್ತಾನೋ, ಅಂಥ ಮಾನವನು ಸಂಪೂರ್ಣವಾಗಿ ನಾಶ ಹೊಂದುತ್ತಾನೆ. ಅಂಥ ಮಾನವನು ತನ್ನ ರಾಜ್ಯದಲ್ಲಿ ಕ್ಷಣಕಾಲವೂ ಬದುಕುವುದು ಬೇಡವೆಂದು ರಾಜನು ಅಂದುಕೊಳ್ಳು- ತ್ತಾನೆ.
ವಿವರಣೆ - ಅತ್ಯಂತ ಧಾರ್ಮಿಕನಾದ ತಪಃಶಕ್ತಿಯುಳ್ಳ ಅತೀಂದ್ರಿಯ ಸಾಮರ್ಥ್ಯ ಹೊಂದಿದ ರಾಜನಿಗೆ ದುಷ್ಟನಾದ ಮಾನವನು ತನ್ನ ರಾಜ್ಯದಲ್ಲಿ ಇರುವುದು ಬೇಡವೆಂದು ಅನಿಸಿದರೂ ಸಾಕು. ಅಂಥ ಮಾನವನು ಸಂಪೂರ್ಣ- ವಾಗಿ ನಷ್ಟನಾಗುತ್ತಾನೆ. ಆದ್ದರಿಂದ ಗುಣವಂತನಾದ ರಾಜನನ್ನು ಮೋಹದಿಂದ ಅಥವಾ ಬೇರೆ ಯಾವುದೇ ಕಾರಣದಿಂದ ಸರ್ವಥಾ ದ್ವೇಷ ಮಾಡಬಾರದು.
ತಸ್ಮಾದ್ ಧರ್ಮಂ ಯದಿಷ್ಟೇಷು ಸ ವ್ಯವಸ್ಯತಿ ಪಾರ್ಥಿವಃ |
ಅನಿಷ್ಟಂ ಚಾಪ್ಯನಿಷ್ಟೇಷು ತದ್ಧರ್ಮಂ ನ ವಿಚಾಲಯೇತ್ ॥31॥
ಆದ್ದರಿಂದ ರಾಜನು ಯಾರು ತನ್ನನ್ನು ಇಷ್ಟ ಪಡುತ್ತಾರೋ, ಅಂಥವರಲ್ಲಿ ಸದ್ಗುಣವಂತನಾಗಿರುತ್ತಾನೆ. ಅವರಿಗೆ ಒಳ್ಳೆಯದನ್ನೇ ಮಾಡುತ್ತಾನೆ. ಯಾರು ತನ್ನನ್ನು ಇಷ್ಟಪಡುವುದಿಲ್ಲವೋ, ಅಂಥವರಿಗೆ ಒಳ್ಳೆಯದನ್ನು ಸರ್ವಥಾ ಮಾಡಲಾರ. ಅನಿಷ್ಟವನ್ನೇ ಅವರಿಗೆ ಮಾಡುತ್ತಾನೆ. ಇದುವೇ ಆ ರಾಜನ ಧರ್ಮವಾಗಿದೆ. ಈ ಧರ್ಮವನ್ನು ಅವನು ತಪ್ಪುವುದು ಧರ್ಮಸಮ್ಮತವಲ್ಲ.
ತಸ್ಯಾರ್ಥೇ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಮ್ |
ಬ್ರಹ್ಮತೇಜೋಮಯಂ ದಂಡಮಸೃಜತ್ ಪೂರ್ವಮೀಶ್ವರಃ ॥32॥
ಸಮಸ್ತ ಜಗತ್ತನ್ನು ರಕ್ಷಣೆ ಮಾಡುವುದಕ್ಕಾಗಿ ಬ್ರಹ್ಮನ ತೇಜೋಮಯರೂಪ- ವಾದ ದಂಡನೀತಿಯನ್ನು ರಾಜನಿಗೋಸ್ಕರವೇ ಆ ಭಗವಂತನು ಸೃಷ್ಟಿಮಾಡಿ- ರುವನು. ಆ ದಂಡನೀತಿಯನ್ನು ಹೊಂದಿದ ರಾಜನು ಸಕಲಭೂತಗಳನ್ನು ನಿರಾ- ತಂಕವಾಗಿ ರಕ್ಷಣೆ ಮಾಡಲು ಸಮರ್ಥನಾಗುವನು.
ತಸ್ಯ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ಭಯಾದ್ ಭೋಗಾಯ ಕಲ್ಪಂತೇ ಧರ್ಮಾನ್ನ ವಿಚಲಂತಿ ಚ ॥33॥
ಈ ದಂಡನೀತಿಯನ್ನು ತಿಳಿದ ಸ್ಥಾವರ ಜಂಗಮ ಪ್ರಾಣಿಗಳು ಭಯಪಡುತ್ತವೆ. ಆ ಭಯದಿಂದಲೇ ವಿಹಿತವಾದದ್ದನ್ನಷ್ಟೇ ಭೋಗ ಮಾಡುತ್ತವೆ. ಎಂದೆಂದೂ ಧರ್ಮ- ವನ್ನು ಬಿಟ್ಟಿರಲು ಮನಸ್ಸನ್ನು ಮಾಡುವುದಿಲ್ಲ.

ದೇಶಕಾಲೌ ಚ ಶಕ್ತಿಂ ಚ ಕಾರ್ಯಂ ಚಾವೇಕ್ಷ್ಯ ತತ್ತ್ವತಃ |
ಯಥಾರ್ಹತಃ ಸಂಪ್ರಣಯೇನ್ನರೇಷ್ವನ್ಯಾಯವರ್ತಿಷು ||34||
ನ್ಯಾಯಮಾರ್ಗದಲ್ಲಿ ಇರುವ ಎಲ್ಲಾ ಪ್ರಜೆಗಳನ್ನು ದೇಶಕಾಲಗಳಿಗೆ ತಕ್ಕಂತೆ ತನ್ನ ಶಕ್ತಿಗೆ ಅನುಗುಣವಾಗಿ ಪ್ರಾಮಾಣಿಕವಾಗಿ ರಾಜನು ರಕ್ಷಣೆ ಮಾಡಬೇಕು. ಅನ್ಯಾಯ ಮಾರ್ಗದಲ್ಲಿ ಸಾಗುವವನಿಗೆ ಯಥಾಯೋಗ್ಯವಾಗಿ ಶಿಕ್ಷೆಯನ್ನೂ ಕೂಡ ನೀಡ- ಬೇಕು.
ಸ ರಾಜಾ ಪುರುಷೋ ದಂಡಃ ಸ ನೇತಾ ಶಾಸಿತಾ ಚ ಸಃ |
ವರ್ಣಾನಾಮಾಶ್ರಮಾಣಾಂ ಚ ಧರ್ಮಪ್ರಭುರಥಾವ್ಯಯಃ ||35||
ಸಮಸ್ತ ಲೋಕಕ್ಕೆ ದಂಡನೀತಿಯೇ ರಾಜನ ಸ್ಥಾನದಲ್ಲಿದೆ. ಅದರಿಂದಲೇ ಎಲ್ಲಾ ಪ್ರಜೆಗಳು ತಮ್ಮ ಕರ್ತವ್ಯಗಳ ಬಗ್ಗೆ ಎಚ್ಚರ ವಹಿಸುತ್ತಾರೆ. ಆದ್ದರಿಂದ ದಂಡನೀತಿ- ಯನ್ನು ಅಳವಡಿಸಿಕೊಂಡ ರಾಜನಷ್ಟೇ ಭೂಲೋಕವನ್ನು ರಕ್ಷಣೆ ಮಾಡಲು ಸಮರ್ಥನಾಗುತ್ತಾನೆ. ಸಕಲ ವರ್ಣಗಳ, ಸಕಲ ಆಶ್ರಮಗಳ ಧರ್ಮಗಳಿಗೆ ಸ್ವಾಮಿ- ಯಾದ ಎಂದೆಂದೂ ನಾಶವಾಗದ ಈ ದಂಡನೀತಿಯು ಅತ್ಯಂತ ಶ್ರೇಷ್ಠವಾಗಿದೆ.
ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ |
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ||36||
ದಂಡವೇ ಪ್ರಜೆಗಳನ್ನು ಶಾಸನೆ ಮಾಡುತ್ತದೆ. ರಕ್ಷಣೆ ಮಾಡುತ್ತದೆ. ಸಮಸ್ತ ಜಗತ್ತು ಮಲಗಿದಾಗಲೂ ಈ ದಂಡನೀತಿಯು ಎಚ್ಚರದಿಂದಿರುತ್ತದೆ. ಆದ್ದರಿಂದ ಈ ದಂಡನೀತಿಯನ್ನು ಧರ್ಮಸ್ವರೂಪವೆಂದು ವಿದ್ವಾಂಸರು ತಿಳಿಯುತ್ತಾರೆ.
ಸುಸಮೀಕ್ಷ್ಯ ಧೃತೋ ದಂಡಃ ಸರ್ವಾ ರಂಜಯತಿ ಪ್ರಜಾಃ |
ಅಸಮೀಕ್ಷ್ಯ ಪ್ರಣೀತಸ್ತು ವಿನಾಶಯತಿ ಸರ್ವಶಃ ||37||
ಚೆನ್ನಾಗಿ ವಿಚಾರ ಮಾಡಿ, ಅಳವಡಿಸಿದ ದಂಡವು ಪ್ರಜೆಗಳ ಸಂತೋಷಕ್ಕೆ ಕಾರಣವಾಗುತ್ತದೆ. ವಿಚಾರ ಮಾಡದೇ ಪ್ರಯೋಗಿಸಿದ ದಂಡನೀತಿಯು ಎಲ್ಲರನ್ನು ನಾಶಗೊಳಿಸುತ್ತದೆ. ಆದ್ದರಿಂದ ರಾಜನಾದವನು ವಿಚಾರ ಮಾಡಿ, ದಂಡವನ್ನು ಪ್ರಯೋಗ ಮಾಡಬೇಕು.
ಯದಿ ನ ಪ್ರಣಯೇದ್ ರಾಜಾ ದಂಡಂ ದಂಡ್ಯೇಷ್ವತಂದ್ರಿತಃ |
ಜಲೇ ಮತ್ಸ್ಯಾನಿವಾಭಕ್ಷ್ಯನ್ ದುರ್ಬಲಾನ್ ಬಲವತ್ತರಾಃ ||38||
ಇಂದ್ರಿಯಗಳ ಹತೋಟಿಯನ್ನು ಕಳೆದುಕೊಂಡು, ದಂಡನೀತಿಯನ್ನು ಪ್ರಜೆಗಳ ವಿಷಯದಲ್ಲಿ ಎಚ್ಚರಿಕೆಯಿಂದ ಪ್ರಯೋಗ ಮಾಡದಿದ್ದರೆ ಆಗ ನೀರಿನಲ್ಲಿರುವ ಬಲಿಷ್ಠ -ವಾದ ಮೀನುಗಳು ಸಣ್ಣಮೀನುಗಳನ್ನು ಭಕ್ಷಿಸುವಂತೆ ಲೋಕದಲ್ಲಿ ಬಲಾಢ್ಯರು ದುರ್ಬಲರನ್ನು ಭಕ್ಷಿಸುತ್ತಾರೆ.
ವಿವರಣೆ - ರಾಜನಾದವನು ಆಯಾ ಪ್ರಜೆಗಳಿಗೆ ಅನುಗುಣವಾಗಿ ದಂಡ- ನೀತಿಶಾಸ್ತ್ರವು ಹೇಳುವಂತೆ ದಂಡನೀತಿಯನ್ನು ಅಳವಡಿಸಬೇಕು. ಗಮನಿಸಿ ಪ್ರತಿಯೊಬ್ಬರಿಗೂ ಶಿಕ್ಷೆಯನ್ನು ಕೊಡಬೇಕು. ಇಲ್ಲದಿದ್ದರೆ ದುರ್ಬಲರು ಅತ್ಯಂತ ಪ್ರಾಮಾಣಿಕರಾಗಿದ್ದರೂ ಕೂಡ ಬಲಿಷ್ಠರಿಂದ ಸೋಲುತ್ತಾರೆ. ದುರ್ಬಲರಲ್ಲಿರುವ ಧರ್ಮ, ಪ್ರಾಮಾಣಿಕತನ ಇವುಗಳಿಗೆ ಜಗತ್ತಿನಲ್ಲಿ ಬೆಲೆಯೇ ಇಲ್ಲದಂತಾಗುತ್ತದೆ. ಆದ್ದರಿಂದ ಧರ್ಮ, ಪ್ರಾಮಾಣಿಕತನ ಇವುಗಳಿಗೆ ಮಾನ್ಯತೆಯನ್ನು ನೀಡುವುದ- ಕ್ಕಾಗಿ ದಂಡನೀತಿಯನ್ನು ಪ್ರತಿಯೊಬ್ಬರಲ್ಲಿಯೂ ಕೂಡ ಅಳವಡಿಸಬೇಕು.
ಕಾಕೋಽದ್ಯಾಚ್ಚ ಪುರೋಡಾಶಂ ಶ್ವಾ ಚೈವಾಬಲಿಹೇದ್ಧವಿಃ |
ಸ್ವಾಮಿತ್ವಂ ನ ಕ್ವಚಿಚ್ಚ ಸ್ಯಾತ್ ಪ್ರಪದ್ಯೇತಾಧರೋತ್ತರಮ್ ||39||
ರಾಜನಾದವನು ದಂಡನೀತಿಯನ್ನು ಪ್ರಯೋಗ ಮಾಡದಿದ್ದರೆ ಲೋಕದಲ್ಲಿ ಅನೇಕ ಅನರ್ಥಗಳೇ ಉಂಟಾಗುತ್ತವೆ. ಕಾಗೆಯು ಪವಿತ್ರವಾದ ಪುರೋಡಾಶವನ್ನು ಭಕ್ಷಿಸುತ್ತದೆ. ನಾಯಿಯು ಯಜ್ಞದ ಹವಿಸ್ಸನ್ನು ತಿನ್ನುತ್ತದೆ. ಜಗತ್ತಿನಲ್ಲಿ ಯಾರೊಬ್ಬ ಪ್ರಭುವೇ ಇಲ್ಲದಂತಾಗಿ ಅಧಮರು ಉತ್ತಮರಾಗುತ್ತಾರೆ. ಉತ್ತಮರು ಅಧಮರಾ- ಗುವ ದುಃಸ್ಥಿತಿವುಂಟಾಗುತ್ತದೆ.
ಸರ್ವೋ ದಂಡಜಿತೋ ಲೋಕೋ ದುರ್ಬಲಸ್ತು ಶುಚಿರ್ನರಃ |
ದಂಡಸ್ಯ ಹಿ ಭಯಾತ್ ಸರ್ವಂ ಜಗದ್ಭೋಗಾಯ ಕಲ್ಪತೇ ||40||
ಲೋಕದಲ್ಲಿ ದಂಡನೀತಿಯನ್ನು ಅಳವಡಿಸದಿದ್ದರೆ ಬಾಹ್ಯವಾಗಿ, ಆಂತರಿಕವಾಗಿ ಶುಚಿರ್ಭೂತನಾದ ಒಬ್ಬ ಮನುಷ್ಯನೇ ದೊರೆಯಲು ಸಾಧ್ಯವಾಗುವುದಿಲ್ಲ. ಯಾವಾಗ ದಂಡನೀತಿಯನ್ನು ರಾಜನಾದವನು ಅಳವಡಿಸುತ್ತಾನೋ, ಆಗ ಅದರ ಭಯದಿಂದ ಸಮಸ್ತಲೋಕವು ಶುಚಿಯಾಗಿರುತ್ತದೆ. ಅಂಥ ಜಗತ್ತು ಸುಖದ ಅನುಭವವನ್ನು ಹೊಂದಲು ಸಾಧ್ಯ.
ದೇವದಾನವಗಂಧರ್ವಾ ರಕ್ಷಾಂಸಿ ಪತಗೋರಗಾಃ |
ತೇಽಪಿ ಭೋಗಾಯ ಕಲ್ಪಂತೇ ದಂಡೇನೈವಾಭಿಪೀಡಿತಾಃ ||41||
ದೇವತೆಗಳು, ಅಸುರರು, ಗಂಧರ್ವರು, ರಕ್ಷಸರು, ಪತಗರು, ಉರಗಗಳು ದಂಡಕ್ಕೆ ಹೆದರಿಯೇ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿದ್ದಾರೆ. ಹಾಗೂ ಭೋಗಗಳಿಗೆ ಪಾತ್ರರಾಗಿರುತ್ತಾರೆ.
ದೂಷ್ಯೇಯುಃ ಸರ್ವವರ್ಣಾಶ್ಚ ಭಿದ್ಯೇರನ್ ಸರ್ವಸೇತವಃ |
ಸರ್ವಲೋಕಪ್ರಕೋಪಶ್ಚ ಭವೇದ್ ದಂಡಸ್ಯ ವಿಭ್ರಮಾತ್ ||42||
ದಂಡನೀತಿಯನ್ನು ಅಳವಡಿಸದಿದ್ದರೆ ವರ್ಣಾಶ್ರಮ ವ್ಯವಸ್ಥೆಯೇ ಹಾಳಾಗುತ್ತದೆ. ಎಲ್ಲಾ ಕಟ್ಟುಪಾಡುಗಳು ಛಿದ್ರಗೊಳ್ಳುತ್ತವೆ. ಸಮಸ್ತ ಲೋಕವು ಪ್ರಕ್ಷೋಭವಾಗುತ್ತದೆ.
ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಪಾಪಹಾ |
ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ ಸಾಧು ಪಶ್ಯತಿ ||43||
ದಂಡಪುರುಷನು ಕಪ್ಪಾದ ದೇಹದಿಂದ ಕೂಡಿ, ಕೆಂಪಾದ ಕಣ್ಣುಗಳಿಂದ ಎಲ್ಲೆಡೆಯೂ ನೋಡುತ್ತಾ ಪಾಪಿಗಳನ್ನು ಶಿಕ್ಷಿಸುತ್ತಿರುತ್ತಾನೆ. ಇವನ ಸಂಚಾರ ಎಲ್ಲಿರುತ್ತದೋ, ಅಲ್ಲಿರುವ ಪ್ರಜೆಗಳು ತಮ್ಮ ನಿಯಮದಂತೆ ಸರಿಯಾಗಿ ನಡೆದು- ಕೊಂಡು,

ಸನ್ಮಾರ್ಗಾನುಯಾಯಿಗಳಾಗುತ್ತಾರೆ. ಎಂದೆಂದೂ ಅಜ್ಞಾನಕ್ಕೆ ತುತ್ತಾಗು- ವುದಿಲ್ಲ.
ಟಿಪ್ಪಣಿ - ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಇತ್ಯತ್ರ ಕೋಪಾತ್ ಶ್ಯಾಮಃ ಶ್ಯಾಮವದನಃ ಲೋಹಿತಾಕ್ಷಶ್ಚ ದಂಡಃ ದಂಡಕೋ ರಾಜಾ |
`ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ' - ಎಂಬಲ್ಲಿ ಕೋಪದಿಂದ ಕಪ್ಪು- ಬಣ್ಣವನ್ನು ಹೊಂದಿದ್ದಾನೆ. ಶ್ಯಾಮವರ್ಣದ ವದನವನ್ನು ಹೊಂದಿದ್ದಾನೆ. ಕೆಂಪಾದ ಕಣ್ಣುಗಳನ್ನು ಹೊಂದಿದ್ದಾನೆ. ಇಂಥ ದಂಡಪುರುಷನೇ ಲೋಕದ ರಾಜನಾಗಿದ್ದಾನೆ ಎಂದಭಿಪ್ರಾಯ.
ಆಹುಸ್ತಸ್ಯ ಪ್ರಣೇತಾರಂ ರಾಜಾನಂ ಸತ್ಯವಾದಿನಮ್ |
ಸಮೀಕ್ಷ್ಯಕಾರಿಣಂ ಪ್ರಾಜ್ಞಂ ಧರ್ಮಕಾಮಾರ್ಥಕೋವಿದಮ್ ॥44॥
ತಂ ರಾಜಾ ಪ್ರಣಯನ್ ಸಮ್ಯಕ್ ಸ್ವರ್ಗಾಯಾಭಿಪ್ರವರ್ತತೇ |
ಕಾಮಾತ್ಮವಿಷಯೀ ಕ್ಷುದ್ರೋ ದಂಡೇನೈವ ನಿಹನ್ಯತೇ ॥45॥
ಸಮಸ್ತ ಪ್ರಜೆಗಳು ತಮ್ಮ ನಿಯಮದಲ್ಲಿ ತೊಡಗಲು ಕಾರಣನಾದ ಈ ದಂಡ- ಪುರುಷನೇ ರಾಜನ ಸ್ಥಾನದಲ್ಲಿ ನಿಂತಿದ್ದಾನೆ. ಎಲ್ಲಾ ಜ್ಞಾನಿಗಳು ಇವನನ್ನು ಸತ್ಯವಾದಿ ಎನ್ನುತ್ತಾರೆ. ಜಗತ್ತಿಗೆ ಪ್ರಣೇತೃವಾಗಿದ್ದಾನೆ. ಎಲ್ಲವನ್ನು ನೋಡುತ್ತಾ ಆಯಾ ಕೆಲಸ- ಗಳನ್ನು ಮಾಡಿಸುತ್ತಾನೆ. ಅತ್ಯಂತ ಪ್ರಾಜ್ಞನಾಗಿದ್ದಾನೆ. ಧರ್ಮ, ಅರ್ಥ, ಕಾಮಗಳನ್ನು ಅರಿತಿದ್ದಾನೆ. ಇಂಥ ದಂಡಪುರುಷನನ್ನು ಸರಿಯಾಗಿ ಆಲೋಚನೆ ಮಾಡಿ, ಪ್ರಜೆಗಳ ವಿಷಯದಲ್ಲಿ ರಾಜನಾದವನು ಪ್ರಯೋಗಿಸಬೇಕು. ಅಂಥ ರಾಜನು ಸ್ವರ್ಗವನ್ನೇ ಪಡೆಯುತ್ತಾನೆ. ಇದನ್ನು ಪಾಲಿಸದೇ ತನ್ನ ಕಾಮನೆಯಲ್ಲೇ ಮನಸ್ಸನ್ನಿಟ್ಟ ನೀಚನಾದ ರಾಜನು ಅದೇ ದಂಡಪುರುಷನಿಂದ ಹತನಾಗುತ್ತಾನೆ.
ವಿವರಣೆ - ರಾಜನಾದವನು ಸ್ವತಂತ್ರವಾಗಿ ಏನನ್ನೂ ಮಾಡುವಂತಿಲ್ಲ. ಕಾನೂನಿಗೆ ಅನುಗುಣವಾಗಿಯೇ ವರ್ತಿಸಬೇಕು. ದಂಡನೀತಿಯು ಆಯಾ ಕಾಲ- ಗಳಲ್ಲಿ ಪ್ರತಿಯೊಬ್ಬನು ಮಾಡಬೇಕಾದ ಕರ್ತವ್ಯಗಳನ್ನು ಬೋಧನೆ ಮಾಡುತ್ತದೆ. ಅದಕ್ಕನುಗುಣವಾಗಿ ಯಾರು ವರ್ತನೆ ಮಾಡುವುದಿಲ್ಲವೋ, ಅವರನ್ನು ಶಿಕ್ಷಿಸು- ವುದು ರಾಜನ ಕರ್ತವ್ಯವಾಗಿರುತ್ತದೆ. ಆದ್ದರಿಂದ ರಾಜನಿಗೂ ಕೂಡ ಮಾನ್ಯವಾ- ದದ್ದು ದಂಡನೀತಿ. ಆದ್ದರಿಂದಲೇ ಪ್ರಕೃತ ಈ ಶ್ಲೋಕಗಳಲ್ಲಿ ದಂಡನೀತಿಯನ್ನೇ ರಾಜನ ಸ್ಥಾನದಲ್ಲಿ ವರ್ಣಿಸುತ್ತಿದ್ದಾರೆ. ರಾಜನಿಗೂ, ರಾಜನಂತಿರುವ ಈ ದಂಡನೀತಿಯು ಪ್ರತಿಯೊಬ್ಬರಿಗೂ ಕೂಡ ಅನ್ವಯಿಸುವಂತೆ ರಾಜನಿಗೂ ಕೂಡ ಅನ್ವಯಿಸುತ್ತದೆ. ಆ ದಂಡನೀತಿಗೆ ವಿರುದ್ಧವಾಗಿ ರಾಜನು ವರ್ತನೆ ಮಾಡಿದಲ್ಲಿ ಸ್ವತಃ ದಂಡಪುರುಷನೇ ಆ ರಾಜನನ್ನು ಸಂಹಾರ ಮಾಡುತ್ತಾನೆ.
ದಂಡೋ ಹಿ ಸುಮಹಾತೇಜಾ ದುರ್ಧರಶ್ಚಾಕೃತಾತ್ಮಭಿಃ |
ಧರ್ಮಾದ್ ವಿಚಲಿತಂ ಹಂತಿ ನೃಪಮೇವ ಸಬಾಂಧವಮ್ ॥46॥
ಆ ದಂಡನೀತಿಯು ಅತ್ಯಂತ ತೇಜಸ್ಸುಳ್ಳದ್ದು. ಪ್ರಾಜ್ಞರಿಗಲ್ಲದೇ ಅಜ್ಞಾನಿಗಳಿಗೆ ಇದನ್ನು ಅರ್ಥಮಾಡಿಕೊಳ್ಳಲು ಮತ್ತು ಅನುಸರಿಸಲು ಸಾಧ್ಯವೇ ಆಗುವುದಿಲ್ಲ. ಜಗತ್ತಿನಲ್ಲಿ ಯಾರು ಧರ್ಮದಿಂದ ವಿಚಲಿತನಾಗಿರುತ್ತಾನೋ, ಅಂಥವನು ರಾಜ- ನಾಗಿದ್ದರೂ ಸರಿ, ಬಂಧುಬಾಂಧವರ ಜೊತೆ ಆ ದಂಡಪುರುಷನು ನಾಶಮಾಡು- ತ್ತಾನೆ. ರಾಜನನ್ನೇ ಸಂಹಾರ ಮಾಡುತ್ತಾನೆ.
ತತೋ ದುರ್ಗಂ ರಾಷ್ಟ್ರಂ ಚ ಲೋಕಂ ಚ ಸಚರಾಚರಮ್ |
ಅಂತರಿಕ್ಷಗತಾಂಶ್ಚೈವ ಮುನೀನ್ ದೇವಾಂಶ್ಚ ಹಿಂಸತಿ ॥47॥
ಧರ್ಮಭ್ರಷ್ಟನಾದ ರಾಜನನ್ನಷ್ಟೇ ದಂಡಪುರುಷನು ನಾಶಮಾಡುವುದಲ್ಲ. ಅವನ ದುರ್ಗವನ್ನು, ರಾಷ್ಟ್ರವನ್ನು ಚರಾಚರಾತ್ಮಕವಾದ ಸಮಸ್ತಲೋಕವನ್ನೇ ನಾಶಮಾಡುತ್ತಾನೆ. ಮತ್ತು ಆಕಾಶದಲ್ಲಿರುವ ಪ್ರಾಣಿಗಳನ್ನು, ಮುನಿಗಳನ್ನು, ದೇವತೆಗಳನ್ನೂ ಕೂಡ ನಿಗ್ರಹಿಸುತ್ತಾನೆ.
ವಿವರಣೆ - ರಾಜನಾದವನು ಅತ್ಯಂತ ಧರ್ಮಿಷ್ಠನಾಗಿರಬೇಕು. ಇಲ್ಲದಿದ್ದರೆ ತಾನಷ್ಟೇ ದಂಡನೀತಿಯಿಂದ ನಷ್ಟನಾಗುವುದಲ್ಲ, ಅವನಿಂದ ಸಮಸ್ತ ಜಗತ್ತೇ ನಾಶವಾಗುವ ಭೀಕರ ಪರಿಸ್ಥಿತಿ ಎದುರಾಗುತ್ತದೆ. ಇದರಿಂದ ಋಷಿಮುನಿಗಳಿಗೆ ಸಾಕ್ಷಾತ್ಕಾರಕ್ಕಾಗಿ ತಪಸ್ಸನ್ನು ಮಾಡಲೂ ಕೂಡ ಸಾಧ್ಯವಾಗುವುದಿಲ್ಲ. ರಾಜ- ನಾದವನು ಅಧರ್ಮಮಾರ್ಗದಲ್ಲಿದ್ದಾಗ ದೇವತೆಗಳಿಗೂ ಕೂಡ ಸುಖ-ಶಾಂತಿ- ಗಳು ದೊರಕುವುದಿಲ್ಲ. ಆದ್ದರಿಂದ ರಾಜನು ಅತ್ಯಂತ ಎಚ್ಚರಿಕೆಯಿಂದ ದಂಡ- ನೀತಿಯನ್ನು ಅಳವಡಿಸಿಕೊಳ್ಳಬೇಕು.
ಸೋಽಸಹಾಯೇನ ಮೂಢೇನ ಲುಬ್ಧೇನಾಕೃತಬುದ್ಧಿನಾ |
ಅಶಕ್ಯೋ ನ್ಯಾಯತೋ ನೇತುಂ ವಿಷಯಾಂಶ್ಚೈವ ಸೇವತಾ ॥48॥
ಯಾರು ಅಸಹಾಯಕನೋ, ಮೂರ್ಖನೋ, ಲೋಭಿಯೋ, ವಿಚಾರ ಮಾಡದ ಬುದ್ಧಿಯುಳ್ಳವನೋ, ಅಂಥವನಿಗೆ ನ್ಯಾಯರೀತಿಯಿಂದ ಈ ದಂಡನೀತಿ- ಯನ್ನು ಅಳವಡಿಸಿಕೊಳ್ಳಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಇಂದ್ರಿಯನಿಗ್ರಹ- ವನ್ನು ಹೊಂದಲೇಬೇಕು.
ಶುಚಿನಾ ಸತ್ಯಸಂಧೇನ ನೀತಿಶಾಸ್ತ್ರಾನುಸಾರಿಣಾ |
ದಂಡಃ ಪ್ರಣೇತುಂ ಶಕ್ಯೋ ಹಿ ಸುಸಹಾಯೇನ ಧೀಮತಾ ॥49॥
ಶುಚಿಯಾದವನು, ಸತ್ಯಸಂಧನಾದವನು, ನೀತಿಶಾಸ್ತ್ರವನ್ನು ಅನುಸರಿಸುವವನು, ಸಹಾಯಸಂಪತ್ತುಳ್ಳವನು, ಬುದ್ಧಿವಂತನು ಆದ ರಾಜನಷ್ಟೇ ಆ ದಂಡವನ್ನು ಪ್ರಯೋಗಿಸಲು ಸಮರ್ಥನಾಗುತ್ತಾನೆ.
ಸ್ವರಾಷ್ಟ್ರೇ ನ್ಯಾಯವರ್ತೀ ಸ್ಯಾದ್ ಭೃಶದಂಡಶ್ಚ ಶತ್ರುಷು |
ಸುಹೃತ್ಸ್ವಜಿಹ್ಮಃ ಸ್ನಿಗ್ಧೇಷು ಬ್ರಾಹ್ಮಣೇಷು ಕ್ಷಮಾನ್ವಿತಃ ॥50॥
ತನ್ನ ರಾಷ್ಟ್ರದಲ್ಲಿ ನ್ಯಾಯದಿಂದ ವರ್ತಿಸುತ್ತಿರುವ ಶತ್ರುಗಳನ್ನು ಅತ್ಯಂತ ಕಠಿಣ- ವಾಗಿಯೇ ದಂಡಿಸಬೇಕಾಗುತ್ತದೆ. ಸ್ನೇಹಿತರಲ್ಲಿ ಎಂದೂ ಸಹ ವಕ್ರಬುದ್ಧಿಯನ್ನು ಹೊಂದಬಾರದು. ಬ್ರಾಹ್ಮಣರಲ್ಲಿ ಕ್ಷಮಾಶೀಲನಾಗಿರಬೇಕು. ಇಂಥ ರಾಜನು ದಂಡನೀತಿಗೆ ಅರ್ಹನಾಗುತ್ತಾನೆ.

ದಂಡನೀತಿ ಎಂದರೇನು ?
ವಿವರಣೆ - ರಾಜನೀತಿಯನ್ನೇ ದಂಡನೀತಿ ಎನ್ನುತ್ತಾರೆ. ಅರ್ಥಶಾಸ್ತ್ರವನ್ನೂ ಕೂಡ ದಂಡನೀತಿ ಎನ್ನುತ್ತಾರೆ. `ದಂಡೇನ ನೀಯತೇ ದಂಡನೀತಿಃ' ಎಂದು ಇದರ ವ್ಯುತ್ಪತ್ತಿ. ಅಥವಾ `ದಂಡಃ ನೀಯತೇ ಅನಯಾ ಇತಿ ದಂಡನೀತಿಃ' ಎಂಬುದಾ- ಗಿಯೂ ವ್ಯುತ್ಪತ್ತಿಯನ್ನು ತಿಳಿಯಬಹುದು. ಸಾಮ, ದಾನ, ಭೇದ, ದಂಡ ಈ ನಾಕು ಉಪಾಯಗಳಲ್ಲಿ ದಂಡವು ಪ್ರಧಾನವಾಗಿದೆ.
ಧರ್ಮದಿಂದ ಪ್ರಜೆಗಳನ್ನು ಪರಿಪಾಲನೆ ಮಾಡುವುದಕ್ಕಾಗಿ ಪರಮಾತ್ಮನು ಈ ದಂಡನೀತಿಯನ್ನು ಸೃಷ್ಟಿ ಮಾಡಿದ್ದಾನೆ. ಇದನ್ನು ರಾಜನಾದವನು ಅನುಷ್ಠಾನ- ಗೊಳಿಸಬೇಕು. ಹಾಗೇ ಅನುಷ್ಠಾನಗೊಳಿಸಿದ ರಾಜನಿಗೂ ದಂಡವೆಂದೇ ಕರೆಯು- ತ್ತಾರೆ. ಅನೇಕ ಕಾರಣಗಳ ಪೂರ್ವಕವಾಗಿ ಅರ್ಥತತ್ವಗಳ ಪರೀಕ್ಷಾರೂಪವಾದ ಆನ್ವಿಕ್ಷಿಕೀ ಮೊದಲಾದ ಯೋಗಕ್ಷೇಮಸಾಧನವಾದ ದಂಡವನ್ನು ತನ್ನ ರಾಜ್ಯದಲ್ಲಿ ಅನುಷ್ಠಾನ ಮಾಡುವುದರಿಂದ ಇದಕ್ಕೆ ದಂಡನೀತಿ ಎಂಬುದಾಗಿ ಕರೆಯುತ್ತಾರೆ.
`ದಮೋ ದಂಡ ಇತಿ ಖ್ಯಾತಃ ತಾತ್ಸ್ಥ್ಯಾತ್ ದಂಡೋ ಮಹೀಪತಿಃ |
ತಸ್ಯ ನೀತಿಃ ದಂಡನೀತಿಃ ನಯನಾತ್ ನೀತಿರುಚ್ಯತೇ ॥
ಮನುಷ್ಯನ ವ್ಯವಹಾರಕ್ಕೆ ಬೇಕಾದ ಭೂಮಿ, ಧನ ಇವುಗಳ ಲಾಭ ಮತ್ತು ಇವುಗಳ ರಕ್ಷಣೆಗೆ ಉಪಾಯಗಳನ್ನು ಹೇಳುವ ಶಾಸ್ತ್ರವು ಅರ್ಥಶಾಸ್ತ್ರ ಎಂಬುದಾಗಿ ಕರೆಸಿಕೊಳ್ಳುತ್ತದೆ. ಕೃಷಿ, ವಾಣಿಜ್ಯ, ಪಶುಪಾಲನೆಗಳ ಮತ್ತು ಭೂಮಿ, ಧನ- ಕನಕಾದಿಗಳ ಯೋಗಕ್ಷೇಮವು ರಾಜನಿಗೆ ಸೇರಿರುವುದರಿಂದ ಇದಕ್ಕೆ ರಾಜನೀತಿ ಎಂದೂ ಕೂಡ ಕರೆಯುತ್ತಾರೆ.
ಅನ್ವಿಕ್ಷೀಕೀ ತ್ರಯೀವಾರ್ತಾನಾಂ ಯೋಗಕ್ಷೇಮಸಾಧನೋ ದಂಡಃ ತಸ್ಯನೀತಿಃ ದಂಡನೀತಿಃ |
ಸುವ್ಯವಸ್ಥಿತವಾದ ರಾಜ್ಯಪದ್ಧತಿಯನ್ನು ಅಥವಾ ನ್ಯಾಯವಾದ ರಾಜ್ಯದ ಆಡಳಿತವನ್ನು ದಂಡನೀತಿ ಎಂಬುದಾಗಿಯೂ ವ್ಯವಹರಿಸುತ್ತಾರೆ.
ರಾಜನನ್ನು ದಂಡನೇತೃ ಎಂಬುದಾಗಿ ಕರೆಯುತ್ತಾರೆ. ಅನ್ವೀಕ್ಷೀಕೀ ಮೊದಲಾ- ದವುಗಳಿಗೆ ಯೋಗಕ್ಷೇಮಸಾಧನವನ್ನು ರಾಜ್ಯದಲ್ಲಿ ನಯನ ಮಾಡಿ, ಅನುಷ್ಠಾನಕ್ಕೆ ತರುವುದರಿಂದ ರಾಜನನ್ನು ದಂಡನೇತೃ ಎಂಬುದಾಗಿ ಕರೆಯುತ್ತಾರೆ. ಇಂಥ ದಂಡ -ನೀತಿಯ ಬಗ್ಗೆ ಸಂಪೂರ್ಣವಾಗಿ ಅರಿತಿರಬೇಕು ಎಂಬುದಾಗಿ ಮನುಸ್ಮೃತಿಯು ಹೇಳುತ್ತದೆ.
ಸೈನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ |
ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ॥
ಏವಂವೃತ್ತಸ್ಯ ರಾಜ್ಞಸ್ತು ಶಿಲೋಂಚ್ಛೇನಾಪಿ ಜೀವತಃ |
ವಿಸ್ತೀರ್ಯೇತ ಯಶೋ ಲೋಕೇ ತೈಲಬಿಂದುರಿವಾಂಭಸಿ ॥51॥
ಹೀಗೆ ದಂಡನೀತಿಯನ್ನು ಅಳವಡಿಸಿಕೊಂಡ ರಾಜನು ಕಾಡಿನಲ್ಲಿ ಎಲ್ಲರೂ ಆರಿಸಿಕೊಂಡು ಉಳಿದ ಧಾನ್ಯದ ಕಾಳುಗಳನ್ನು ಆಯ್ದುಕೊಂಡು ತಿಂದು ಜೀವಿಸುವ ಶೀಲೋಂಛವೃತ್ತಿಯಲ್ಲಿದ್ದರೂ ಕೂಡ ಕೀರ್ತಿಶಾಲಿಯಾಗುತ್ತಾನೆ. ನೀರಿನ ಮೇಲೆ ಬಿಟ್ಟ ಎಣ್ಣೆಯು ಎಲ್ಲೆಡೆಯೂ ಪಸರಿಸುತ್ತದೆಯೋ, ಅದರಂತೆ ಇವನ ಕೀರ್ತಿಯು ಲೋಕದಲ್ಲಿ ಎಲ್ಲೆಡೆಯೂ ಕೂಡ ವಿಸ್ತಾರವಾಗಿ ಹರಡುತ್ತದೆ.
ವಿವರಣೆ - ಶಿಲೋಂಛವೃತ್ತಿ - ಇದೊಂದು ವ್ರತ. ಕೃಷಿಕನು ತಾನು ಬೆಳೆದ ಧಾನ್ಯಗಳನ್ನೆಲ್ಲಾ ಆರಿಸಿಕೊಂಡು ತೆರಳಿದ ನಂತರ ಪಶು, ಪಕ್ಷಿಗಳೂ ಕೂಡ ಉಳಿದ ಆ ಧಾನ್ಯಗಳನ್ನು ತಿಂದುಳಿದ ಅನಂತರ ಸಿಗುವ ಧಾನ್ಯಗಳನ್ನು ಆರಿಸಿಕೊಂಡು ತಂದು ತಿನ್ನುವುದಕ್ಕೆ ಶಿಲೋಂಛವೃತ್ತಿ ಎಂದು ಕರೆಯುತ್ತಾರೆ. ವಾನಪ್ರಸ್ಥಾಶ್ರಮಿ- ಗಳು ಈ ವ್ರತವನ್ನು ಆಚರಿಸುತ್ತಾರೆ. ಜಗತ್ತಿನಲ್ಲಿ ಎಂದೂ ಕೂಡ ಇವರು ಬೆಳಕಿಗೆ ಬರುವುದೇ ಇಲ್ಲ. ತಮ್ಮಿಷ್ಟಕ್ಕೆ ತಾವು ಸಾಧನೆಗೈಯ್ಯುತ್ತಿರುತ್ತಾರೆ. ದಂಡನೀತಿಯನ್ನು ಅಳವಡಿಸಿಕೊಂಡ ರಾಜನು, ಇಂಥ ಸ್ಥಿತಿಯಲ್ಲಿದ್ದರೂ ಕೂಡ ಅವನ ಕೀರ್ತಿಯು ಲೋಕದಲ್ಲಿ ಎಲ್ಲೆಡೆಯೂ ಕೂಡ ಹರಡುತ್ತದೆ ಎಂಬುದು ಈ ಶ್ಲೋಕದ ಧ್ವನಿ.
ಅತಸ್ತು ವಿಪರೀತಸ್ಯ ನೃಪತೇರಕೃತಾತ್ಮನಃ |
ಸಂಕ್ಷಿಪ್ಯೇತ ಯಶೋ ಲೋಕೇ ಘೃತಬಿಂದುರಿವಾಂಭಸಿ ॥52॥
ಒಂದು ವೇಳೆ ದಂಡನೀತಿಯನ್ನು ಅಳವಡಿಸದ ವಿಪರೀತವಾಗಿ ರಾಜನು ವರ್ತನೆ ಮಾಡಿದರೆ, ಅಥವಾ ನಡೆದುಕೊಂಡರೆ ಅವನ ಕೆಲಸಗಳೆಲ್ಲವೂ ವ್ಯರ್ಥವಾಗುತ್ತವೆ. ನೀರಿನಲ್ಲಿ ಬಿಟ್ಟ ತುಪ್ಪದ ಬಿಂದುವಿನಂತೆ ಇದ್ದಲ್ಲಿಯೇ ಅವನ ಕೀರ್ತಿ ಉಳಿಯುತ್ತದೆ. ಸ್ವಲ್ಪವೂ ಕೂಡ ಅವನ ಕೀರ್ತಿ ಹೆಚ್ಚುವುದಿಲ್ಲ.
ದೇವದೇವೇನ ರುದ್ರೇಣ ಬ್ರಹ್ಮಣಾ ಚ ಮಹೀಪತೇ |
ವಿಷ್ಣುನಾ ಚೈವ ದೇವೇನ ಶಕ್ರೇಣ ಚ ಮಹಾತ್ಮನಾ ॥53॥
ಲೋಕಪಾಲೈಶ್ಚ ಭೂತೈಶ್ಚ ಪಾರ್ಥಿವೈಶ್ಚ ಕೃತಾತ್ಮಭಿಃ |
ಧರ್ಮಾದ್ ವಿಚಲಿತಾ ರಾಜನ್ ಧಾರ್ತರಾಷ್ಟ್ರಾ ನಿಪಾತಿತಾಃ ॥54॥
ಅಧಾರ್ಮಿಕಾ ದುರಾಚಾರಾಃ ಸಸೈನ್ಯಾ ವಿನಿಪಾತಿತಾಃ |
ಓ ಮಹೀಪತಿಯೇ! ನಿನ್ನ ಶತ್ರುಗಳಾದ ಕೌರವರು ದಂಡನೀತಿಯನ್ನು ಅನು- ಸರಿಸಲಿಲ್ಲ. ಧರ್ಮಪರಿಪಾಲನೆಯನ್ನು ಮಾಡಲಿಲ್ಲ. ಆ ಕಾರಣದಿಂದಲೇ ಅವರಿಂದು ಸಂಪೂರ್ಣವಾಗಿ ನಾಶವನ್ನು ಹೊಂದಿದ್ದಾರೆ. ಅವರ ನಾಶಕ್ಕಾಗಿ ನಿನಗೆ ಎಲ್ಲ ದೇವತೆಗಳು ಬೆಂಬಲವನ್ನು ನೀಡಿದ್ದಾರೆ. ಸಕಲ ದೇವತೆಗಳಿಗೆ ದೇವನಾದ ಮಹಾವಿಷ್ಣು, ಜೀವೋತ್ತಮನಾದ ಚತುರ್ಮುಖಬ್ರಹ್ಮ , ವೈಷ್ಣವೋತ್ತಮನಾದ ಮಹಾರುದ್ರದೇವ, ದೇವತೆಗಳ ಅಧಿಪತಿಯಾದ ದೇವೇಂದ್ರ, ಸಕಲ ದಿಕ್‌ಪಾಲಕರು, ಪಂಚಭೂತಗಳು ಮಹಾತ್ಮನಾದ ಪಾಂಡವರು ಇವರೇ ಮೊದಲಾದವರು ಅವರ ನಾಶವನ್ನು ಮಾಡಿರುವರು. ಧೃತರಾಷ್ಟ್ರನ ಮಕ್ಕಳೆಲ್ಲರೂ ಧರ್ಮಮಾರ್ಗವನ್ನು ಪರಿತ್ಯಾಗ ಮಾಡಿದ್ದರಿಂದ ಅಧಾರ್ಮಿಕರಾದ್ದರಿಂದ, ದುರಾಚಾರಿಗಳಾದ್ದರಿಂದ ಸಮಸ್ತಸೈನ್ಯಗಳೊಡನೆ ಸಂಪೂರ್ಣವಾಗಿ ಹತರಾದರು.
ಟಿಪ್ಪಣಿ - ಪಾರ್ಥಿವೈಶ್ಚ ಕೃತಾತ್ಮಭಿಃ ಇತ್ಯತ್ರ ಆಚಾರಿತಾದಿತಿ ಯೋಗಪದಾಧ್ಯಾ- ಹಾರಃ | `ಪಾರ್ಥಿವೈಶ್ಚ ಕೃತಾತ್ಮಭಿಃ' - ಆಚರಿತಾತ್ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಕೃತಾತ್ಮರಾದ ಪಾಂಡವರಿಂದ ಆಚರಿಸಲ್ಪಟ್ಟ ಎಂದಭಿಪ್ರಾಯ.

ತಾನ್ ನಿಹತ್ಯ ನ ದೋಷಸ್ತೇ ಸ್ವಲ್ಪೋಽಪಿ ಜಗತೀಪತೇ |
ಬಲಾದ್ ಧರ್ಮಪಥಾ ವಾ ತಾನ್ ಕ್ಷತ್ರಧರ್ಮೇಣ ವಾ ನೃಪ ॥55॥
ಓ ರಾಜಾಧಿರಾಜನೇ ! ಅಧಾರ್ಮಿಕರಾದ ಆ ಕೌರವರನ್ನು ಕೊಂದಿದ್ದರಿಂದ ನಿನಗೆ ಸ್ವಲ್ಪವೂ ಕೂಡ ದೋಷವು ಬರುವುದಿಲ್ಲ. ಬಲದಿಂದ ಧರ್ಮದ ಮಾರ್ಗ- ದಿಂದ ಅಥವಾ ಕ್ಷತ್ರಿಯ ಧರ್ಮದಿಂದ ಅವರನ್ನು ನೀನು ವಧೆ ಮಾಡಿರುವಿ. ಪ್ರಜಾಪಾಲಕನೇ! ನಿನಗೆಂತು ದೋಷ ಬರಲು ಸಾಧ್ಯ?
ಟಿಪ್ಪಣಿ - ಬಲಾದ್ ಧರ್ಮಪಥಾ ವಾ ತಾನ್ ಕ್ಷತ್ರಧರ್ಮೇಣ ವಾ ನೃಪ ಇತ್ಯತ್ರ ಬಲಾದ್ ಧರ್ಮಪಥಾ ವಾ ಕ್ಷತ್ರಧರ್ಮೇಣ ವಾ ತಾನ್ ನಿಹತ್ಯ ನ ದೋಷ ಇತಿ ಪೂರ್ವೇಣಾನ್ವಯಃ |
`ಬಲಾದ್ ಧರ್ಮಪಥಾ ವಾ ತಾನ್ ಕ್ಷತ್ರಧರ್ಮೇಣ' - ಎಂಬಲ್ಲಿ ಬಲಾದ್ ಧರ್ಮಪಥಾ ವಾ ಕ್ಷತ್ರಧರ್ಮೇಣ ವಾ ತಾನ್ ನಿಹತ್ಯ ನ ದೋಷಃ' ಎಂಬುದಾಗಿ ಹಿಂದಿನ ಶ್ಲೋಕಾರ್ಥದ ಜೊತೆ ಅನ್ವಯವನ್ನು ತಿಳಿದುಕೊಳ್ಳಬೇಕು. ಭುಜಬಲದಿಂದ, ಧರ್ಮಮಾರ್ಗದಿಂದ, ಕ್ಷತ್ರಿಯಧರ್ಮದಿಂದ, ಆ ಕೌರವರನ್ನು ಕೊಂದಿರುವ ಕಾರಣ ನಿನಗೆ ಯಾವುದೇ ದೋಷವು ಬರುವುದಿಲ್ಲ ಎಂದಭಿಪ್ರಾಯ.
ಮಿತ್ರತಾ ಸರ್ವಭೂತೇಷು ದಾನಮಧ್ಯಯನಂ ತಪಃ |
ಬ್ರಾಹ್ಮಣಸ್ಯೈಷ ಧರ್ಮಃ ಸ್ಯಾನ್ನ ರಾಜ್ಞೋ ರಾಜಸತ್ತಮ ॥56॥
ರಾಜಶ್ರೇಷ್ಠನೇ! ಸಕಲ ಪ್ರಾಣಿಗಳಲ್ಲಿ ಸ್ನೇಹ, ದಾನಮಾಡುವಿಕೆ, ಅಧ್ಯಯನ ಮಾಡುವಿಕೆ, ತಪಸ್ಸಿನ ಆಚರಣೆ, ಇವುಗಳೆಲ್ಲವೂ ಬ್ರಾಹ್ಮಣನಿಗೆ ನಿತ್ಯಧರ್ಮವಾಗಿವೆ. ಇವುಗಳು ಕ್ಷತ್ರಿಯರ ಧರ್ಮಗಳಲ್ಲ.
ಅಸತಾಂ ಪ್ರತಿಷೇಧಶ್ಚ ಸತಾಂ ಚ ಪರಿಪಾಲನಮ್ |
ಏಷ ರಾಜ್ಞಾಂ ಪರೋ ಧರ್ಮಃ ಸಮರೇ ಚಾಪಲಾಯನಮ್ ॥57॥
ದುಷ್ಟರನ್ನು ನಿಗ್ರಹ ಮಾಡುವಿಕೆ. ಸಜ್ಜನರನ್ನು ರಕ್ಷಣೆ ಮಾಡುವಿಕೆ. ಯುದ್ಧದಿಂದ ಹಿಂತಿರುಗಿ ಓಡದಿರುವಿಕೆ. ಇವುಗಳು ಕ್ಷತ್ರಿಯರ ಮುಖ್ಯಧರ್ಮಗಳಾಗಿವೆ.
ಯಸ್ಮಿನ್ ಕ್ಷಮಾ ಚ ಕ್ರೋಧಶ್ಚ ದಾನಾದಾನೇ ಭಯಾಭಯೇ |
ನಿಗ್ರಾಹಾನುಗ್ರಹೌ ಚೋಭೌ ಸ ವೈ ಧರ್ಮವಿದುಚ್ಯತೇ ॥58॥
ಕ್ಷಮೆ, ಸಿಟ್ಟು, ದಾನ, ಪ್ರತಿಗ್ರಹ, ನಿಗ್ರಹ, ಅನುಗ್ರಹ ಇವುಗಳು ಯಾರಲ್ಲಿ ಸಮಾನವಾಗಿರುತ್ತವೋ, ಅವನನ್ನೇ ಧರ್ಮಜ್ಞ ಎಂದು ಕರೆಯುತ್ತಾರೆ.
ನ ಶ್ರುತೇನ ನ ದಾನೇನ ನ ಸಾಂತ್ವೇನ ನಚೇಜ್ಯಯಾ |
ತ್ವಯೇಯಂ ಪೃಥಿವೀ ಲಬ್ಧಾ ನೋತ್ಕೋಚೇನ ತಥಾಪ್ಯುತ ॥59॥
ಓ ರಾಜನೇ! ಈ ಭೂಮಿಯು ನಿನಗೆ ಶಾಸ್ತ್ರಶ್ರವಣದಿಂದ ಪ್ರಾಪ್ತವಾ- ಗಿರುವುದಲ್ಲ. ಅಥವಾ ನೀನು ಮಾಡಿದ ದಾನದ ಪ್ರತಿಫಲವಾಗಿಯೂ ದೊರೆತದ್ದಲ್ಲ. ನಿನ್ನಲ್ಲಿರುವ ಮೃದುವಾದ ವಾಕ್ಯಗಳಿಂದಲೂ ಕೂಡ ಪ್ರಾಪ್ತವಾಗಿಲ್ಲ. ಯಾಗಬಲದಿಂದ ಯಾಚನೆಯಿಂದಲೂ ಕೂಡ ಈ ರಾಜ್ಯವು ನಿನಗೆ ಬಂದಿರು- ವುದಿಲ್ಲ.
ವಿವರಣೆ - ಬ್ರಾಹ್ಮಣನಲ್ಲಿರಬೇಕಾದ ಗುಣಗಳು ನಿನ್ನಲ್ಲಿವೆ. ಇದು ನಿನಗೆ ವಿಹಿತವಲ್ಲ. ಕ್ಷತ್ರಿಯಲ್ಲಿರಬೇಕಾದ ಅಸಾಧಾರಣಗುಣಗಳು ನಿನ್ನಲ್ಲಿರಬೇಕು. ಬ್ರಾಹ್ಮಣನಲ್ಲಿರುವ ಧರ್ಮಗಳನ್ನು ನೀನು ಅಳವಡಿಸಿಕೊಂಡಿರುವಿ. ನಿರಂತರ ಶಾಸ್ತ್ರಶ್ರವಣ ದಾನ, ಯಜ್ಞಯಾಗ ಮೊದಲಾದವುಗಳನ್ನು ಆಚರಿಸುತ್ತಿರುವಿ. ಅದರಿಂದ ನಿನಗೆ ಈ ಭೂಮಂಡಲವು ದೊರೆತಿದೆ ಎಂಬುದಾಗಿ ಸರ್ವಥಾ ತಿಳಿಯಬೇಡ. ಆದ್ದರಿಂದ ಕ್ಷತ್ರಧರ್ಮದಲ್ಲಿ ಆಸಕ್ತನಾಗು ಎಂಬುದು ಈ ಶ್ಲೋಕದ ಅಭಿಪ್ರಾಯ.
ಯತ್ತದ್ ಬಲಮಮಿತ್ರಾಣಾಂ ತಥಾ ವಿರಸಮುದ್ಯತಮ್ |
ಹಸ್ತ್ಯಶ್ವರಥಸಂಪನ್ನಂ ತ್ರಿಭಿರಗೈರ್ಮಹತ್ತರಮ್ ॥60॥
ರಕ್ಷಿತಂ ದ್ರೋಣಕರ್ಣಾಭ್ಯಾಮಶ್ವತ್ಥಾಮ್ನಾ ಕೃಪೇಣ ಚ |
ತತ್ತ್ವಯಾ ನಿಹತಂ ವೀರ ತಸ್ಮಾದ್ ಭುಂಕ್ಷ ವಸುಂಧರಾಮ್ ॥61॥
ಓ ಪರಾಕ್ರಮಿಯೇ! ವೀರ್ಯಪರಾಕ್ರಮಗಳಲ್ಲಿ ಹೆಸರುವಾಸಿಗಳಾದ ಆನೆ, ಕುದುರೆ ಮತ್ತು ರಥಗಳೆಂಬ ಮೂರು ಶ್ರೇಷ್ಠವಾದ ಸೇನಾಂಗಗಳಿಂದ ಮಹಾಸೈನ್ಯವು ಕೂಡಿತ್ತು. ಮಹಾವೀರರಾದ ದ್ರೋಣ, ಕರ್ಣ, ಕೃಪ, ಅಶ್ವತ್ಥಾಮರಿಂದ ರಕ್ಷಿತವಾಗಿತ್ತು. ಇಂಥ ಬಲಸಂಪನ್ನವಾದ ಶತ್ರುಗಳ ಮಹಾಸೈನ್ಯವನ್ನು ನೀನು ಧ್ವಂಸ ಮಾಡಿರುವಿ. ಆದ್ದರಿಂದಲೇ ಈ ವಸುಂಧರೆಯನ್ನು ನೀನು ಪಡೆದುಕೊಂಡಿರುವಿ. ವೀರ್ಯಶುಲ್ಕದಿಂದ ಪ್ರಾಪ್ತವಾದ ಈ ಭೂಮಂಡಲವನ್ನು ಈಗ ಉಪಭೋಗಿಸು.
ಜಂಬೂದ್ವೀಪೋ ಮಹಾರಾಜ ನಾನಾಜನಪದಾಯುತಃ |
ತ್ವಯಾ ಪುರುಷಶಾರ್ದೂಲ ದಂಡೇನ ಮೃದಿತಃ ಪ್ರಭೋ ॥62॥
ಓ ಪುರುಷಸಿಂಹನಾದ ಮಹಾರಾಜನೇ! ಅನೇಕ ದೇಶಗಳಿಂದ ಕೂಡಿರುವ, ಈ ಜಂಬೂದ್ವೀಪವನ್ನು ನೀನು ದಂಡದಿಂದ ಶತ್ರುಗಳನ್ನು ನಿಗ್ರಹ ಮಾಡಿ, ನಿನ್ನ
ಅಧೀನವನ್ನಾಗಿ ಪಡೆದುಕೊಂಡಿರುವಿ. (ಬ್ರಾಹ್ಮಣಧರ್ಮದ ಪರಿಪಾಲನೆಯಿಂದ- ಲ್ಲ).
ಜಂಬೂದ್ವೀಪೇನ ಸದೃಶಃ ಕ್ರೌಂಚದ್ವೀಪೋ ನರಾಧಿಪ |
ಅಪರೇಣ ಮಹಾಮೇರೋರ್ದಂಡೇನ ಮೃದಿತಸ್ತ್ವಯಾ ॥63॥
ಕ್ರೌಂಚದ್ವೀಪವು ಜಂಬೂದ್ವೀಪಕ್ಕೆ ಸದೃಶವಾಗಿದೆ. ಓ ನರಾಧಿಪನೇ! ನಿನ್ನ ಭುಜಬಲದಿಂದಲೇ ಈ ಕ್ರೌಂಚದ್ವೀಪವನ್ನು ವಶಮಾಡಿಕೊಂಡಿರುವಿ. ಈ ಕ್ರೌಂಚ- ದ್ವೀಪವು ಮಹಾಮೇರುಪರ್ವತದ ಪೂರ್ವಭಾಗದಲ್ಲಿದೆ.
ಕ್ರೌಂಚದ್ವೀಪೇನ ಸದೃಶಃ ಶಾಕದ್ವೀಪೋ ನರಾಧಿಪ |
ಪೂರ್ವೇಣ ತು ಮಹಾಮೇರೋರ್ದಂಡೇನ ಮೃದಿತಸ್ತ್ವಯಾ ॥64॥

ಶಾಕದ್ವೀಪವು ಕ್ರೌಂಚದ್ವೀಪಕ್ಕೆ ಸಮಾನವಾಗಿದೆ. ಮಹಾಮೇರುಪರ್ವತದ ಉತ್ತರಭಾಗದಲ್ಲಿ ಈ ಶಾಕದ್ವೀಪವಿದೆ. ನರಾಧೀಪನೇ! ಈ ಶಾಕದ್ವೀಪವನ್ನೂ ಕೂಡ ನೀನು ದಂಡನೀತಿಯಿಂದಲೇ ವಶಮಾಡಿಕೊಂಡಿರುವಿ.
ಉತ್ತರೇಣ ಮಹಾಮೇರೋಃ ಶಾಕದ್ವೀಪೇನ ಸಮ್ಮಿತಃ |
ಭದ್ರಾಶ್ವಃ ಪುರುಷವ್ಯಾಘ್ರ ದಂಡೇನ ಮೃದಿತಸ್ತ್ವಯಾ ॥65॥
ಮಹಾಮೇರುಪರ್ವತದ ಉತ್ತರದಿಕ್ಕಿನಲ್ಲಿ ಶಾಕದ್ವೀಪವಿದೆ. ಇದಕ್ಕೆ ಸಮಾನ- ವಾಗಿ ಭದ್ರಾಶ್ವವರ್ಷವಿದೆ. ಈ ಭದ್ರಾಶ್ವವರ್ಷವನ್ನೂ ಕೂಡ ನಿನ್ನ ದಂಡಶಕ್ತಿ- ಯಿಂದಲೇ ಅಧೀನವನ್ನಾಗಿ ಮಾಡಿಕೊಂಡಿರುವಿ.
ದ್ವೀಪಾಶ್ಚ ಸಾಂತರದ್ವೀಪಾ ನಾನಾಜನಪದಾಲಯಾಃ |
ವಿಗಾಹ್ಯ ಸಾಗರಂ ವೀರ ದಂಡೇನ ಮೃದಿತಾಸ್ತ್ವಯಾ ॥66॥
ಎಲ್ಲಾ ದ್ವೀಪಗಳು, ವರ್ಷಗಳು ಅಷ್ಟೇ ಅಲ್ಲದೇ ಅನೇಕ ದೇಶಗಳಿಗೆ ಆಶ್ರಯವಾದ ದ್ವೀಪಗಳು, ದ್ವೀಪಾಂತರಗಳು, ಸಮುದ್ರವನ್ನು ದಾಟಿದ ಆ ಎಲ್ಲಾ ಪ್ರದೇಶವನ್ನು ನಿನ್ನ ದಂಡಶಕ್ತಿಯಿಂದಲೇ ಅಧೀನವನ್ನಾಗಿ ಮಾಡಿಕೊಂಡಿರುವಿ.
ವಿವರಣೆ - ಒಟ್ಟು ಏಳು ದ್ವೀಪಗಳಿವೆ. 1. ಜಂಬೂದ್ವೀಪ, 2. ಪ್ಲಕ್ಷದ್ವೀಪ, 3. ಶಾಲ್ಮಲಿದ್ವೀಪ, 4. ಕುಶದ್ವೀಪ, 5. ಕ್ರೌಂಚದ್ವೀಪ, 6. ಶಾಕದ್ವೀಪ,
7. ಪುಷ್ಕರದ್ವೀಪ. ಇವೆಲ್ಲವನ್ನೂ ಹಾಗೂ ಎಲ್ಲಾ ವರ್ಷಗಳನ್ನು ತನ್ನ ಅಧೀನವ- ನ್ನಾಗಿ ಮಾಡಿಕೊಂಡಿದ್ದನು ಎಂದಭಿಪ್ರಾಯ.
ಏತಾನ್ಯಪ್ರತಿಮಾನಿ ತ್ವಂ ಕೃತ್ವಾ ಕರ್ಮಾಣಿ ಭಾರತ |
ನ ಪ್ರೀಯಸೇ ಮಹಾರಾಜ ಪೂಜ್ಯಮಾನೋ ದ್ವಿಜಾತಿಭಿಃ ॥67॥
ಇಂಥ ಅಪ್ರತಿಮವಾದ, ಅನುಪಮವಾದ ಕಾರ್ಯಗಳನ್ನು ನೀನು ಮಾಡಿರುವಿ. ಆದ್ದರಿಂದಲೇ ಬ್ರಾಹ್ಮಣಶ್ರೇಷ್ಠರಿಂದ ಪುರಸ್ಕೃತನಾಗಿರುವಿ. ಆದರೂ ಕೂಡ ನಿನಗೆ ತೃಪ್ತಿಯೇ ಆಗುತ್ತಿಲ್ಲ.
ಸ ತ್ವಂ ಭ್ರಾತೄನಿಮಾನ್ ದೃಷ್ಟ್ವಾ ಪ್ರತಿನಂದಸ್ವ ಭಾರತ |
ಋಷಭಾನಿವ ಸಮ್ಮತ್ತಾನ್ ಗಜೇಂದ್ರಾನೂರ್ಜಿತಾನಿವ ॥68॥
ನಿನ್ನ ಈ ವಿಜಯಯಾತ್ರೆಯಲ್ಲಿ ನಿನ್ನ ಸಹೋದರರು ಪೂರ್ಣವಾಗಿ ಬೆಂಬಲಿಗ- ರಾಗಿದ್ದಾರೆ. ಮದಿಸಿರುವ ಎತ್ತುಗಳಂತಿದ್ದಾರೆ. ಬಲಿಷ್ಠವಾದ ಆನೆಗಳಂತಿದ್ದಾರೆ. ಇಂಥ ನಿನ್ನ ಈ ತಮ್ಮಂದಿರನ್ನು ಒಮ್ಮೆ ಕೃಪಾದೃಷ್ಟಿಯಿಂದ ನೋಡಿ, ಅವರನ್ನು ಸಂತೋಷ ಪಡಿಸು.
ಅಮರಪ್ರತಿಮಾಃ ಸರ್ವೇ ಶತ್ರುಸಾಹಾಃ ಪರಂತಪಾಃ |
ಏಕೋಽಪಿ ಹಿ ಸುಖಾಯೈಷಾಂ ಕ್ಷಮಃ ಸ್ಯಾದಿತಿ ಮೇ ಮತಿಃ ॥69॥
ನಿನ್ನ ಈ ತಮ್ಮಂದಿರು ಸಾಮಾನ್ಯರಲ್ಲ. ದೇವಶ್ರೇಷ್ಠರಂತಿದ್ದಾರೆ. ಪ್ರತಿಯೊಬ್ಬರೂ ಕೂಡ ಶತ್ರುಗಳನ್ನು ಸಂಪೂರ್ಣವಾಗಿ ನಿಗ್ರಹ ಮಾಡುತ್ತಾರೆ. ಶತ್ರುಗಳಿಗೆ ಪರಿ- ತಾಪವನ್ನು ಉಂಟುಮಾಡುವವರಾಗಿದ್ದಾರೆ. ಇವರಲ್ಲಿ ಯಾರೊಬ್ಬನೂ ಕೂಡ ನನ್ನನ್ನು ಸುಖವಾಗಿಟ್ಟರಲು ಸಂಪೂರ್ಣವಾಗಿ ಸಮರ್ಥರಾಗಿದ್ದಾರೆ.
ಕಿಂ ಪುನಃ ಪುರುಷವ್ಯಾಘ್ರಾಃ ಪತಯೋ ಮೇ ನರರ್ಷಭಾಃ |
ಸಮಸ್ತಾನೀಂದ್ರಿಯಾಣೀವ ಶರೀರಸ್ಯ ವಿಚೇಷ್ಟನೇ ॥70॥
ಐದು ಇಂದ್ರಿಯಗಳು ಶರೀರವನ್ನು ಏಕಭಾವದಿಂದ ನಡೆಸಿಕೊಂಡು ಹೋಗು- ವಂತೆ ಈ ಐದುಮಂದಿ ಪುರುಷೋತ್ತಮರೂ ಆದ ನನ್ನ ಗಂಡಂದಿರು ನನ್ನ ರಕ್ಷಣೆ- ಯಲ್ಲಿ ಬದ್ಧಕಂಕಣರಾಗಿದ್ದಾರೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕೇನು?
ಅನೃತಂ ಮಾ ಬ್ರುವೀಚ್ಛ್ವಶ್ರೂಃ ಸರ್ವಜ್ಞಾ ಸರ್ವದರ್ಶಿನೀ |
ನನ್ನ ಅತ್ತೆಯಾದ ಕುಂತಿಯು ಎಂದೂ ಸಹ ಸುಳ್ಳನ್ನು ಹೇಳಿದವಳಲ್ಲ. ಅದೆಷ್ಟೋ ವಿಷಯಗಳನ್ನು ಕಣ್ಣಾರೆ ಕಂಡ ಅವಳು ಎಲ್ಲವನ್ನು ಬಲ್ಲವಳಾಗಿದ್ದಾಳೆ.
ಯುಧಿಷ್ಠಿರಸತ್ತ್ವಂ ಪಾಂಚಾಲಿ ಸುಖೇ ಧಾಸ್ಯತ್ಯನುತ್ತಮೇ ॥71॥
ಹತ್ವಾ ರಾಜಸಹಸ್ರಾಣಿ ಬಹೂನ್ಯಾಶು ಪರಾಕ್ರಮಃ |
ತದ್ ವ್ಯರ್ಥಂ ಸಂಪ್ರಪಶ್ಯಾಮಿ ಮೋಹಾತ್ತವ ಜನಾಧಿಪ ॥72॥
ಅತ್ತೆಯಾದ ಕುಂತಿಯು ನನಗೆ ಹೀಗೆ ಹೇಳಿದ್ದಳು - ``ಓ ಪಾಂಚಾಲಿಯೇ ! ದುಃಖಿಸಬೇಡ. ನನ್ನ ಹಿರಿಯ ಮಗನಾದ ಮಹಾಪರಾಕ್ರಮಿಯಾದ ಯುಧಿಷ್ಠಿರನು ಸಾವಿರಗಟ್ಟಳೆ ಇರುವ ಶತ್ರುಗಳನ್ನು ಸಂಹಾರ ಮಾಡಿ, ನಿನ್ನನ್ನು ಶ್ರೇಷ್ಠವಾದ ಸುಖ- ಸಿಂಹಾಸನದಲ್ಲಿ ಕುಳ್ಳಿರಿಸುತ್ತಾನೆ''. ನಮ್ಮ ಅತ್ತೆಯ ಈ ಮಾತನ್ನು ಇಂದು ನೀನು ವ್ಯರ್ಥಮಾಡುತ್ತಿರುವಿ. ನಿನ್ನಲ್ಲಿರುವ ಮೋಹದಿಂದ ನನಗೆ ಸುಖವನ್ನು ನೀಡದೇ, ಪುನಃ ಕಷ್ಟವನ್ನೇ ನೀಡುತ್ತಿರುವಿ.
ಯೇಷಾಮುನ್ಮತ್ತಕೋ ಜ್ಯೇಷ್ಠಃ ಸರ್ವೇ ತಸ್ಯೋಪಚಾರಿಣಃ |
ತವೋನ್ಮಾದೇನ ರಾಜೇಂದ್ರ ಸೋನ್ಮಾದಾಃ ಸರ್ವಪಾಂಡವಾಃ ॥73॥
ಜ್ಯೇಷ್ಠಪುತ್ರನು ಮೋಹವನ್ನು ಹೊಂದಿದರೆ ಅವನ ತಮ್ಮಂದಿರೂ ಕೂಡ ಅವನನ್ನೇ ಅನುಸರಿಸುತ್ತಾರೆ. ಮಹಾರಾಜನೇ ! ನೀನು ಮೋಹವನ್ನು ಹೊಂದಿ, ಅಧರ್ಮದ ಮಾರ್ಗದಲ್ಲಿ ನಡೆದರೆ ಉಳಿದ ಪಾಂಡವರೂ ಕೂಡ ನಿನ್ನಂತೆಯೇ ನಡೆದುಕೊಳ್ಳುತ್ತಾರೆ.
ವಿವರಣೆ - `ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ' ಎಂಬ ನಾಣ್ಣುಡಿಯಂತೆ, ಹಿರಿಯರು ವರ್ತಿಸಿದಂತೆ ಕಿರಿಯರು ಅನುಸರಿಸುತ್ತಾರೆ. ಹಿರಿಯಣ್ಣನು ಜೀವನ- ದಲ್ಲಿ ತಪ್ಪು ತೀರ್ಮಾನಗಳನ್ನು ತೆಗೆದುಕೊಂಡಾಗ, ಸಣ್ಣವರೂ ಕೂಡ ಅದನ್ನೇ ಧರ್ಮವೆನ್ನುತ್ತಾರೆ. ಆದ್ದರಿಂದ ಹಿರಿಯವನು ಜವಾಬ್ದಾರಿಯಿಂದ ಸನ್ಮಾರ್ಗದಲ್ಲಿ- ಯೇ ನಡೆಯಬೇಕು. ಅದರ ಬಗ್ಗೆಯೇ ಹೆಚ್ಚು ವಿವೇಕವನ್ನು ಹೊಂದಬೇಕು.
ಯದಿ ಹಿ ಸ್ಯುರನುನ್ಮತ್ತಾ ಭ್ರಾತರಸ್ತೇ ಜನಾಧಿಪ |

ಬದ್ಧ್ವಾ ತ್ವಾಂ ನಾಸ್ತಿಕೈಃ ಸಾರ್ಧಂ ಪ್ರಶಾಸೇಯುರ್ವಸುಂಧರಾಮ್ ॥74॥
ಒಂದು ವೇಳೆ ನಿನ್ನಂತೆ ನಿನ್ನ ಸಹೋದರರು ಮೋಹವನ್ನು ಹೊಂದದೇ ಇದ್ದರೆ, ಆಗ ಸತ್ಯಮಾರ್ಗದಲ್ಲಿ ನಾಸ್ತಿಕರೊಡನೆ ನಿನ್ನನ್ನೂ ಕೂಡ ಬಂಧಿಸಿ, ಭೂಮಂಡಲ- ವನ್ನು ತಾವೇ ಆಳುತ್ತಿದ್ದರು.
ವಿವರಣೆ - ನಿನ್ನ ತಮ್ಮಂದಿರು ನೀನು ಹಾಕಿಕೊಟ್ಟ ಮಾರ್ಗದಲ್ಲೇ ನಡೆ- ಯುತ್ತಾರೆ. ಎಂದೂ ಕೂಡ ಅದಕ್ಕೆ ವಿರುದ್ಧವಾಗಿ ನಡೆಯುವವರಲ್ಲ. ಹಿರಿಯಣ್ಣ- ನಿಗೆ ವಿರುದ್ಧವಾಗಿ ನಡೆಯಬಾರದೆಂಬುದೇ ಅವರ ಧೋರಣೆಯಾಗಿದೆ. ಹಾಗಿಲ್ಲ- ದಿದ್ದರೆ ಅವರು ಸ್ವತಃ ತಾವೇ ಭೂಮಂಡಲವನ್ನು ಆಳುತ್ತಿದ್ದರು. ಮತ್ತು ಈ ಜಗತ್ತಿನಲ್ಲಿರುವ ಅನೇಕ ನಾಸ್ತಿಕರ ಜೊತೆ ನಿನ್ನನ್ನೂ ಕೂಡ ಸೇರಿಸಿ ಬಂಧಿಸು- ತ್ತಿದ್ದರು. ಸ್ವಧರ್ಮದಲ್ಲಿ ನಿಷ್ಠೆಯಿಲ್ಲದವನು ಪರಧರ್ಮವನ್ನು ಅನುಸರಿಸುವವನು ನಾಸ್ತಿಕನಿಗೆ ಸಮಾನನಾಗಿದ್ದಾನೆ ಎಂಬುದು ದ್ರೌಪದಿಯ ಅಭಿಪ್ರಾಯ.
ಕುರುತೇ ಮೂಢಮೇವಂ ಹಿ ಯಃ ಶ್ರೇಯೋ ನಾಧಿಗಚ್ಛತಿ |
ಧೂಪೈರಂಜನಯೋಗೈಶ್ಚ ನಸ್ಯಕರ್ಮಭಿರೇವ ಚ |
ಭೇಷಜೈಃ ಸ ಚಿಕಿತ್ಸ್ಯಃ ಸ್ಯಾದ್ ಯ ಉನ್ಮಾರ್ಗೇಣ ಗಚ್ಛತಿ ॥75॥
ಯಾವ ಮೂಢನು ತನ್ನ ಪರಾಕ್ರಮದಿಂದ ಶತ್ರುಗಳನ್ನು ನಿಗ್ರಹ ಮಾಡಿ, ರಾಜ್ಯವನ್ನು ಅನುಭವಿಸದೇ ಕಾಡಿಗೆ ಹೋಗುತ್ತೇನೆನ್ನುತ್ತಾನೋ, ಅವನು ಎಂದೂ ಸಹ ಶ್ರೇಯಸ್ಸನ್ನು ಹೊಂದುವುದಿಲ್ಲ. ಯಾರು ಅಪಮಾರ್ಗದಲ್ಲಿ ಹೀಗೆ ಹೋಗುತ್ತಾನೋ, ಅವನಿಗೆ ಚಿಕಿತ್ಸೆಯನ್ನು ನೀಡಬೇಕು. ಧೂಪಗಳಿಂದ, ಕಣ್ಣಿಗೆ ಅಂಜನವನ್ನು ಹಚ್ಚುವುದರಿಂದ, ಮೂಗಿಗೆ ಔಷಧಿಯನ್ನು ಹಾಕುವುದರಿಂದ ಇನ್ನೂ ಅನೇಕ ಬಗೆಯ ಔಷಧಿಗಳಿಂದ ಅವನ ಹುಚ್ಚನ್ನು ಬಿಡಿಸಬೇಕು.
ವಿವರಣೆ - ತನ್ನ ಭುಜಪರಾಕ್ರಮದಿಂದ ಶತ್ರುಗಳನ್ನು ಜಯಿಸಿ, ಬಂದ ಅಪಾರ ಸಂಪತ್ತನ್ನು ಅನುಭವಿಸದಿದ್ದರೆ, ಅವನ ಬುದ್ಧಿ ಹಾಳಾಗಿದೆ ಎಂದರ್ಥ. ಬುದ್ಧಿ ಹಾಳಾದವನನ್ನು ಮೂರ್ಖ, ಹುಚ್ಚ ಇತ್ಯಾದಿಯಾಗಿ ಕರೆಯುತ್ತಾರೆ. ಅಂಥವನಿಗೆ ಆಯುರ್ವೇದದಲ್ಲಿ ಅನೇಕ ಚಿಕಿತ್ಸೆಗಳಿವೆ. ಹಾಗೇ ಚಿಕಿತ್ಸೆ ನೀಡುವುದರಿಂದ, ಅವನ ಬುದ್ಧಿಯು ಸರಿಯಾಗಿ ಕೆಲಸವನ್ನು ಮಾಡುತ್ತದೆ. ಮೂಗಿಗೆ ಔಷಧಿಯುಕ್ತವಾದ ತೈಲವನ್ನು ಹಾಕುವುದನ್ನೇ `ನಸ್ಯಕರ್ಮ' ಎನ್ನುತ್ತಾರೆ. ನಸ್ಯವಿಧಿಯನ್ನು ವಾಗ್ಭಟನು ಅಷ್ಟಾಂಗಹೃದಯದ ಇಪ್ಪತ್ತನೆಯ ಅಧ್ಯಾಯದಲ್ಲಿ ಹೀಗೆ ಹೇಳಿರುತ್ತಾನೆ -
ಊರ್ಧ್ವಜತ್ರುವಿಕಾರೇಷು ವಿಶೇಷಾನ್ನಸ್ಯಮಿಷ್ಯತೇ |
ನಾಸಾ ಹಿ ಶಿರಸೋ ದ್ವಾರಂ ತೇನ ತದ್ವ್ಯಾಪ್ಯ ಹಂತಿ ತಾನ್ ॥
ಭುಜದ ಮೇಲಿನ ಅಂಗದ ವಿಕಾರಗಳಿಗೆ ನಸ್ಯಪ್ರಯೋಗವನ್ನು ಮಾಡುತ್ತಾರೆ. ಮೂಗು ತಲೆಯ ದ್ವಾರವಾಗಿದೆ. ಆ ದ್ವಾರದಿಂದ ನೀಡುವ ಚಿಕಿತ್ಸೆಯು ಶಿರಸ್ಸಿನಲ್ಲಿ ಎಲ್ಲೆಡೆಯೂ ವ್ಯಾಪಿಸಿ, ಅದರಲ್ಲಿರುವ ವಿಕಾರಗಳನ್ನು ಪರಿಹರಿಸುತ್ತವೆ. ಅನೇಕ ಗಿಡಮೂಲಿಕೆಗಳಿಂದ ಕೂಡಿದ ತೈಲವನ್ನು ಮೂಗಿನ ರಂಧ್ರದಲ್ಲಿ ಹಾಕುತ್ತಾರೆ. ಮತ್ತು ಆರು ಅಂಗುಲ ಉದ್ದವಿರುವ ಪ್ರಣಾಳಿಕೆಯಿಂದ ಚೂರ್ಣವನ್ನು ಕೂಡ ಮೂಗಿನ ರಂಧ್ರಕ್ಕೆ ಹಾಕುತ್ತಾರೆ. ಇದರಿಂದ ಶಿರೋಭಾಗದಲ್ಲಿರುವ ಎಲ್ಲಾ ವಿಕಾರಗಳು ಪರಿಹಾರವಾಗುತ್ತವೆ. ಹುಚ್ಚು ಮೊದಲಾದವುಗಳು ಸಂಪೂರ್ಣವಾಗಿ ನಾಶವಾಗುತ್ತವೆ. ಇದನ್ನು ಚೂರ್ಣಚಿಕಿತ್ಸೆಯೆಂದು `ಧ್ಮಾನಂ ವಿರೇಚಶ್ಚೂರ್ಣೋ' ಎಂಬಂತೆ ಧ್ಮಾನ ಎಂದೂ ಕರೆಯುತ್ತಾರೆ. ಪಂಚಕರ್ಮಚಿಕಿತ್ಸೆಯಲ್ಲಿ ನಸ್ಯಕರ್ಮ- ವೂ ಕೂಡ ಪ್ರಧಾನವಾಗಿದೆ. ಅಭ್ಯಂಗದ ಅನಂತರ ಇಂದೂ ಕೂಡ ಇದನ್ನು ಆಚರಿಸುತ್ತಾರೆ.
ಧೂಮಪಾನವಿಧಿ
ವಾಗ್ಭಟನು ಅಷ್ಟಾಂಗಹೃದಯದ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಧೂಮ- ಪಾನದ ವಿಧಿಯನ್ನು ತಿಳಿಸಿರುತ್ತಾನೆ -
ಜತ್ರೂರ್ಧ್ವಕಫವಾತೋತ್ಥವಿಕಾರಾಣಾಂ ಆಜನ್ಮನೇ |
ಉಚ್ಛೇದಾಯ ಚ ಜಾತಾನ್ ಪಿಬೇದ್ ಧೂಮಂ ಸದಾತ್ಮವಾನ್ ॥
ಭುಜದ ಮೇಲಿನ ಎಲ್ಲಾ ದೋಷಗಳಿಗೆ ಕಫ ಮತ್ತು ವಾತಗಳಿಂದ ಹುಟ್ಟಿದ ವಿಕಾರಗಳ ಪರಿಹಾರಕ್ಕೆ ಮತ್ತು ಯಾವುದೇ ವಿಕಾರವು ಹುಟ್ಟದಿರುವುದಕ್ಕೆ ಧೂಮ- ಪಾನವನ್ನು ವಿಧಿಸುತ್ತಾರೆ. ಧೂಮಪಾನದಲ್ಲಿ ಉಪಯೋಗಿಸುವ ದ್ರವ್ಯಗಳು ಹೀಗಿವೆ - ಅಗುರು, ಗುಗ್ಗುಲು, ಮುಸ್ತಾ, ಸ್ಥೌಣೇಯ, ಶೈಲೇಯ, ನಲದ, ಉಶೀರ, ವಾಲಕ, ವಾರಂಗ, ಕೌಂತೀ, ಮಧುಕಾ, ಬಿಲ್ವಮಜ್ಜ, ಏಲವಾಲುಕ, ಶ್ರೀವೇಷ್ಟಕ, ಸರ್ಜರಸ, ಧ್ಯಾಮಕ, ಮದನ, ಪ್ಲವ, ಶಲ್ಲಕೀ, ಕುಂಕುಮ, ಮಾಷ, ಯವ, ಕಂದುರುಕ, ತಿಲಾ. ಶಲ್ಲಕೀ, ಲಾಕ್ಷಾ, ಪೃಥ್ವೀಕಾ, ಕಮಲ, ಉಲ್ಪಲಾ, ನ್ಯಗ್ರೋಧ, ಉದುಂಬರ, ಅಶ್ವತ್ಥ, ಪ್ಲಕ್ಷಾ, ಲೋದ್ರುತ್ವಚ, ಸಿತಾ, ಯಷ್ಟೀಮಧು, ಸುವರ್ಣತ್ವಕ್, ಪದ್ಮಕಾ, ರಕ್ತಯಷ್ಟಿಕಾ, ಗಂಧ, ಅಕುಷ್ಟತಗರ. ಜ್ಯೋತಿಷ್ಮತೀ, ನಿಶಾ, ದಶಮೂಲ, ಮನೋಹ್ವಾ, ಅಲ, ಲಾಕ್ಷಾ, ಶ್ವೇತಾ. ಹೀಗೆ ಅನೇಕ ಔಷಧಿ ಪದಾರ್ಥಗಳಿಂದ ಕೂಡಿರುವ ಧೂಮಪಾನವನ್ನು ಮಾಡಿದರೆ ಉನ್ಮಾದವು ಪರಿಹಾರವಾಗುತ್ತದೆ.
ಅಂಜನಾವಿಧಿ
ವಾಗ್ಭಟನು ಇಪ್ಪತ್ಮೂರನೆಯ ಅಧ್ಯಾಯದಲ್ಲಿ ಅಂಜನಾವಿಧಿಯನ್ನು ತಿಳಿಸಿ- ದ್ದಾನೆ. ಎಲ್ಲಾ ಬಗೆಯ ಅಕ್ಷಿರೋಗಗಳಿಗೆ ಅಂಜನಾವಿಧಿಯನ್ನು ಮಾಡಬೇಕೆಂದು ತಿಳಿಸಿದ್ದಾನೆ. ಮತ್ತು ಶಿರಸ್ಸಿನ ಎಲ್ಲ ದೋಷಗಳೂ ಪರಿಹಾರವಾಗುತ್ತವೆ ಎಂದೂ ಕೂಡ ತಿಳಿಸಿರುತ್ತಾನೆ.
ಲೇಖನಂ ರೋಪಣಂ ದೃಷ್ಟಿಪ್ರಸಾದನಮಿತಿ ತ್ರಿಧಾ |
ಅಂಜನಂ, ಲೇಖನಂ ತತ್ರ ಕಷಾಯಾಮ್ಲಪಟೂಷಣೈಃ ॥
ರೋಪಣಂ ತಿಕ್ತಕೈರ್ದ್ರವ್ಯೈಃ, ಸ್ವಾದುಶೀತೈಃ ಪ್ರಸಾದನಮ್ ॥
ಸಾಹಂ ಸರ್ವಾಧಮಾ ಲೋಕೇ ಸ್ತ್ರೀಣಾಂ ಭರತಸತ್ತಮ |
ತಥಾ ವಿನಿಕೃತಾಽಮಿತ್ರೈರ್ಯಾಹಮಿಚ್ಛಾಮಿ ಜೀವಿತುಮ್ ॥76॥
ಭರತಕುಲೋತ್ತಂಸನೇ! ಲೋಕದಲ್ಲಿರುವ ಸರ್ವಸ್ತ್ರೀಯರಲ್ಲಿ ನಾನೇ ಅತ್ಯಂತ ನೀಚಳು. ಏಕೆಂದರೆ ಶತ್ರುಗಳಾದ

ಧೃತರಾಷ್ಟ್ರಪುತ್ರರಿಂದ ಇಷ್ಟೊಂದು ಅವಮಾನಿತ- ೂದರೂ ಕೂಡ ಲಜ್ಜೆಯಿಲ್ಲದೇ ಜೀವಿಸಬೇಕೆಂದು ಬಯಸುತ್ತಿದ್ದೇನಲ್ಲವೇ?
ಧೃತರಾಷ್ಟ್ರಸುತಾ ರಾಜನ್ ನಿತ್ಯಮುತ್ಪಥಗಾಮಿನಃ |
ತಾದೃಶಾನಾಂ ವಧೇ ದೋಷಂ ನಾಹಂ ಪಶ್ಯಾಮಿ ಕರ್ಹಿಚಿತ್ ॥77॥
ನಿರ್ದೋಷಂ ವಧಮೇತೇಷಾಂ ಷಣ್ಣಾಮಪ್ಯಾತತಾಯಿನಾಮ್ |
ರಾಜನೇ! ಆ ಧೃತರಾಷ್ಟ್ರನ ಮಕ್ಕಳು ಎಂದೆಂದೂ ದುರ್ಮಾಗದಲ್ಲಿಯೇ ನಡೆಯುತ್ತಾರೆ. ಅವರನ್ನು ನಾಶ ಮಾಡಿದ್ದಕ್ಕೆ ನಿನಗೆ ಲವಲೇಶವೂ ಕೂಡ ಪಾಪ ಬಂದದ್ದನ್ನು ನಾನು ಕಾಣಲಾರೆನು.
ಇಮಾಂಶ್ಚೋಶನಸಾ ಗೀತಾನ್ ಶ್ಲೋಕಾನ್ ಶೃಣು ನರಾಧಿಪ |
ಆತ್ಮಹಂತಾಽರ್ಥಹಂತಾ ಚ ಬಂಧುಹಂತಾ ವಿಷಪ್ರದಃ |
ಆಥವರ್ಣೇನ ಹಂತಾ ಚ ಯಶ್ಚ ಭಾರ್ಯಾಂ ಪರಾಮೃಶೇತ್ ॥78॥
ನರಾಧಿಪನೇ! ಶುಕ್ರಾಚಾರ್ಯರು ಹೇಳಿದ ಅರ್ಥಪೂರ್ಣವಾದ ಈ ಶ್ಲೋಕ- ವನ್ನು ಕೇಳು - ಆತ್ಮಹತ್ಯೆ, ಸಂಪತ್ತಿನ ಅಪಹರಣ, ಬಂಧುಗಳ ನಾಶ, ವಿಷವನ್ನು ನೀಡುವುದು, ಅಥರ್ವವೇದದಲ್ಲಿ ಹೇಳಿದ ಮಾಟ, ಮಂತ್ರಗಳೆಂಬ ಕೃತ್ಯಪ್ರಯೋಗ -ದಿಂದ ಮತ್ತೊಬ್ಬನನ್ನು ಕೊಲ್ಲುವವನು. ಮತ್ತೊಬ್ಬರ ಹೆಂಡತಿಯನ್ನು ಸ್ಪರ್ಶ ಮಾಡುವುದು. ಈ ಆರು ವಿಧ ಜನರನ್ನು ಆತತಾಯೀ ಎಂಬುದಾಗಿ ಕರೆಯುತ್ತಾರೆ.
ಟಿಪ್ಪಣಿ - ಆಥವರ್ಣೇನ ಹಂತಾ ಚ ಇತ್ಯತ್ರ ಆಥರ್ವಣೇನ ಅಥರ್ವವೇದೋಕ್ತ- ಕೃತ್ಯಾ ಪ್ರಯೋಗಮಂತ್ರೇಣ |
ಆಥವರ್ಣೇನ ಎಂಬುದಕ್ಕೆ ಅಥರ್ವ ವೇದದಲ್ಲಿ ಹೇಳಿದ ಕೃತ್ಯಪ್ರಯೋಗಮಂತ್ರ- ದಿಂದ ಮತ್ತೊಬ್ಬನನ್ನು ಹಿಂಸಿಸಬಾರದು ಎಂದಭಿಪ್ರಾಯ.
ಬ್ರಹ್ಮಾ ನಿರ್ದೋಷಂ ವಧಮೇತೇಷಾಂ ಷಣ್ಣಾಮಪ್ಯಾತತಾಯಿನಾಮ್ |
ಪ್ರೋವಾಚ ಭಗವಾನ್ ಭಾರ್ಗವಾಯ ಮಹಾತ್ಮನೇ ॥79॥
ಇವರನ್ನು ಕೊಲ್ಲುವುದರಿಂದ ಸ್ವಲ್ಪವೂ ಕೂಡ ದೋಷವು ಬರುವುದಿಲ್ಲ. ಹಿಂದೊಮ್ಮೆ ಭಾರ್ಗವನಿಗೆ ಬ್ರಹ್ಮನೂ ಕೂಡ ಈ ನೀತಿವಾಕ್ಯಗಳನ್ನು ಹೇಳಿದ್ದನು.
ಬ್ರಹ್ಮಕ್ಷತ್ರವಿಶಾಂ ರಾಜನ್ ಸತ್ಪಥೇ ವರ್ತಿನಾಮಪಿ |
ಪ್ರಸಹ್ಯಾಗಾರಮಾಗಮ್ಯ ಹಂತಾರಂ ಗರದಂ ತಥಾ ॥80॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರು ಸನ್ಮಾರ್ಗದಲ್ಲಿ ನಡೆಯುತ್ತಿರುವಾಗ ಅವರ ಮನೆಗೆ ನುಗ್ಗಿ, ಅವರನ್ನು ಕೊಲ್ಲುವುದು, ಅವರಿಗೆ ವಿಷವುಣಿಸುವಿಕೆ ಮೊದಲಾದವುಗಳನ್ನು ಮಾಡುವವನನ್ನು ಕೊಲ್ಲಬೇಕು.
ಅಭಕ್ಷ್ಯಾಪೇಯದಾತಾರಮಗ್ನಿದಂ ಚ ನಿಶಾತಯೇತ್ |
ಮಾರ್ಗ ಏಷ ಮಹೀಪಾನಾಂ ಗೋಬ್ರಾಹ್ಮಣವಧೇಷು ಚ ॥81॥
ತಿನ್ನಬಾರದ ವಸ್ತುಗಳನ್ನು ಯಾರು ತಿನ್ನುತ್ತಾನೋ, ಕುಡಿಯಬಾರದ್ದನ್ನು ಯಾರು ಕುಡಿಯುತ್ತಾನೋ, ಯಾರು ಮನೆಗೆ ಬೆಂಕಿ ಹಚ್ಚುತ್ತಾನೋ, ಗೋ-ಬ್ರಾಹ್ಮಣರ ವಧೆಯಲ್ಲಿ ಆಸಕ್ತನಾಗಿರುತ್ತಾನೋ, ಅವನನ್ನು ಎದುರಿಸಲೇ ಬೇಕು.
ಕೇಶಗ್ರಹೇ ಚ ನಾರೀಣಾಮಪಿ ಯುದ್ಧ್ಯೇತ್ ಪಿತಾಮಹಮ್ |
ಬ್ರಹ್ಮಾಣಂ ದೇವದೇವೇಶಂ ಕಿಂ ಪುನಃ ಪಾಪಕಾರಿಣಮ್ ॥82॥
ಹೆಣ್ಮಕ್ಕಳ ತಲೆಕೂದಲಿಗೆ ಕೈಹಾಕುವವನನ್ನೂ ಕೂಡ ಯುದ್ಧಮಾಡಿ ಕೊಲ್ಲ- ಬೇಕು. ಹೀಗಿರುವಾಗ ಎಲ್ಲಾ ಬಗೆಯ ಪಾಪಗಳನ್ನು ಮಾಡಿದ ಧೃತರಾಷ್ಟ್ರರ ಮಕ್ಕಳ ಬಗ್ಗೆ ಪ್ರತ್ಯೇಕವಾಗಿ ಹೇಳುವುದೇನು ?
ಗೋಬ್ರಾಹ್ಮಣಾರ್ಥೇ ವ್ಯಸನೇ ಚ ರಾಜ್ಞಾಂ
ರಾಷ್ಟ್ರೋಪಮರ್ದೇ ಸ್ವಶರೀರಹೇತೋಃ |
ಸ್ತ್ರೀಣಾಂ ಚ ವಿಕ್ರುಷ್ಟರುತಾನಿ ಶ್ರುತ್ವಾ
ವಿಪ್ರೋಽಪಿ ಯುದ್ಧ್ಯೇತ ಮಹಾಪ್ರಭಾವಃ ॥83॥
ಗೋಬ್ರಾಹ್ಮಣರಿಗೆ ಸಂಕಟಸ್ಥಿತಿ ಪ್ರಾಪ್ತವಾದಾಗ ರಾಜರುಗಳು ರಾಷ್ಟ್ರಕ್ಕೆ ದ್ರೋಹವೆಸಗುವಾಗ ತನ್ನ ಶರೀರವನ್ನು ಕಾಪಾಡಿಕೊಳ್ಳುವ ಸಂದರ್ಭ ಒದಗಿದಾಗ, ಸ್ತ್ರೀಯರ ಆಕ್ರಂದನವನ್ನು ಕೇಳಿದಾಗ ಬ್ರಾಹ್ಮಣನೂ ಕೂಡ ಯುದ್ಧಕ್ಕೆ ಸಿದ್ಧನಾಗ- ಬೇಕು.
ವಿವರಣೆ - ಕ್ಷತ್ರಿಯರು ಇಲ್ಲದಿದ್ದಾಗ ಬೇರೆ ಯಾರೂ ಸಹ ಹೋರಾಟ ಮಾಡದೇ ಇದ್ದಾಗ, ಬ್ರಾಹ್ಮಣನು ಧರ್ಮದ ಉದ್ಧಾರಕ್ಕಾಗಿ ಯುದ್ಧ ಮಾಡಲು ಸಿದ್ಧನಾಗಬೇಕಾಗುತ್ತದೆ. ಬ್ರಾಹ್ಮಣನಿಗೆ ಹಿಂಸೆ ಮಾಡುವುದು ಅಧರ್ಮವಾದರೂ ಕೂಡ ಧರ್ಮದ ಉನ್ನತಿಗಾಗಿ ಯುದ್ಧ ಮಾಡುವುದು ಅನಿವಾರ್ಯವೆಂದು ಇಲ್ಲಿ ತಿಳಿಸುತ್ತಿದ್ದಾರೆ. ಬ್ರಾಹ್ಮಣನಿಗೆ ಸಾಮರ್ಥ್ಯವು ಇದ್ದಾಗ ಅಧರ್ಮದ ವಿರುದ್ಧ ಯುದ್ಧಮಾಡಲೇ ಬೇಕು. ಸಾಮರ್ಥ್ಯವು ಇಲ್ಲದ್ದಿದ್ದಾಗ ಮಾತಿನಿಂದಲಾದರೂ ಪ್ರತಿಭಟನೆಯನ್ನು ಮಾಡಬೇಕು. ಇದಕ್ಕೂ ಸಾಮರ್ಥ್ಯವಿಲ್ಲದಿದ್ದಾಗ ಆ ಪರಿ- ಸರವನ್ನೇ ಬಿಟ್ಟು, ಮತ್ತೊಂದು ಕಡೆ ತೆರಳಬೇಕು. ಈ ಮೂರನ್ನು ಬಿಟ್ಟು, ಅಧರ್ಮ ನಡೆಯುತ್ತಿದ್ದರೂ ಸುಮ್ಮನೆ ಕುಳಿತುಕೊಳ್ಳಬಾರದು. ಅದು ಮಹಾ- ಪರಾಧವಾಗುತ್ತದೆ. ಈ ಶ್ಲೋಕವು ಜೀವನದ ಪಾಠವನ್ನು ತಿಳಿಸುವ ಉತ್ತಮ ಸುಭಾಷಿತವಾಗಿದೆ.
ಧರ್ಮಾದ್ ವಿಚಲಿತಂ ವಿಪ್ರಂ ನಿಹನ್ಯಾದಾತತಾಯಿನಮ್ |
ತಸ್ಯಾನ್ಯತ್ರ ವಧಂ ವಿದ್ವಾನ್ ಮನಸಾಽಪಿ ನ ಚಿಂತಯೇತ್ ॥84॥
ಯಾವ ಬ್ರಾಹ್ಮಣನು ಧರ್ಮವನ್ನು ಬಿಟ್ಟು, ಆತತಾಯಿ ಎಂದು ಕರೆಸಿಕೊಳ್ಳು- ತ್ತಾನೋ, ಅವನನ್ನು ಕ್ಷತ್ರಿಯನಾದವನು ಕೊಲ್ಲಬೇಕು. ಆದರೆ ಯಾವುದೇ ಪಾಪ- ವನ್ನು ಮಾಡದ, ಬ್ರಾಹ್ಮಣನ ವಧೆಯ ವಿಷಯದಲ್ಲಿ ಮನಸ್ಸನ್ನೂ ಕೂಡ ಮಾಡ- ಬಾರದು. ಮನಸ್ಸಿನಿಂದಲೂ ಕೂಡ ಬ್ರಾಹ್ಮಣವಧೆಯನ್ನು ಚಿಂತಿಸಬಾರದು.

ಗೋಬ್ರಾಹ್ಮಣವಧೇ ವೃತ್ತಂ ಮಂತ್ರತ್ರಾಣಾರ್ಥಮೇವ ಚ |
ನಿಹನ್ಯಾತ್ ಕ್ಷತ್ರಿಯೋ ವಿಪ್ರಂ ಸ್ವಕುಟುಂಬಸ್ಯ ಚಾಪ್ತಯೇ ॥85॥
ಯಾರು ಗೋಬ್ರಾಹ್ಮಣರ ವಧೆಯನ್ನು ಮಾಡಲು ಹೊರಟಿರುತ್ತಾರೋ, ಅಂಥವನನ್ನು ರಾಜನು ಕೊಲ್ಲಬೇಕು. ಬ್ರಾಹ್ಮಣನಾದರೂ ಕೂಡ ಅವನನ್ನು ಬಿಡ- ಬಾರದು. ಆದರೆ ತನ್ನ ಕುಟುಂಬವನ್ನು ರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಕ್ಷತ್ರಿಯನು ದುಷ್ಟಬ್ರಾಹ್ಮಣನನ್ನು ಕೊಲ್ಲಬಹುದು.
ತಸ್ಕರೇಣ ನೃಶಂಸೇನ ಧರ್ಮಾತ್ ಪ್ರಚಲಿತೇನ ಚ |
ಕ್ಷತ್ರಬಂಧುಃ ಪರಂ ಶಕ್ತ್ಯಾ ಯುದ್ಧ್ಯೇದ್ ವಿಪ್ರೇಣ ಸಂಯುಗೇ ॥86॥
ಬ್ರಾಹ್ಮಣನು ಧರ್ಮಚ್ಯುತನಾದಾಗ, ಚೋರನಾದಾಗ, ಕ್ರೂರನಾದಾಗ ಕ್ಷತ್ರಿಯನು ತನ್ನಲ್ಲಿರುವ ಭುಜಪರಾಕ್ರಮದಿಂದ ಆ ಬ್ರಾಹ್ಮಣನನ್ನು ಯುದ್ಧದಲ್ಲಿ ಕೊಲ್ಲಬಹುದು.
ಆತಾತಾಯಿನಮಾಯಾಂತಮಪಿ ವೇದಾಂತಪಾರಗಮ್ |
ಜಿಘಾಂಸಂತಂ ಜಿಘಾಂಸೀಯಾನ್ನ ತೇನ ಭ್ರೂಣಹಾ ಭವೇತ್ ॥87॥
ಬ್ರಾಹ್ಮಣನಾಗಿದ್ದರೂ ಆತತಾಯಿ ಆಗಿದ್ದರೆ ತನ್ನ ಮೇಲೆ ಯುದ್ಧ ಮಾಡಲು ಬಂದಾಗ ಅವನನ್ನು ನಿಸ್ಸಂಶಯವಾಗಿ ಕೊಲ್ಲಬಹುದು. ವೇದಜ್ಞಾನಿಯಾದ ಬ್ರಾಹ್ಮಣನನ್ನು ಕೊಂದಾಗ ಉಂಟಾಗುವ ಭ್ರೂಣಹತ್ಯಾ ದೋಷವು ಬರುವುದಿಲ್ಲ.
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಽಪ್ಯಂತ್ಯಜೋಽಪಿ ವಾ |
ನ ಹನ್ಯಾದ್ ಬ್ರಾಹ್ಮಣಂ ಶಾಂತಂ ತೃಣೇನಾಪಿ ಕದಾಚನ ॥88॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಚಂಡಾಲ ಇವರಲ್ಲಿ ಯಾರೊ- ಬ್ಬನೂ ಕೂಡ ಎಂದೂ ಕೂಡ ಒಂದು ಹುಲ್ಲುಕಡ್ಡಿಯಿಂದಲೂ ಶಾಂತನಾದ ಬ್ರಾಹ್ಮಣನನ್ನು ಹಿಂಸಿಸಬಾರದು.
ಬ್ರಾಹ್ಮಣಾಯಾವಗುರ್ಯಾದ್ಯಃ ಸ್ಪೃಷ್ಟ್ವಾ ಗುರುತರಂ ಮಹತ್ |
ವರ್ಷಾಣಾಂ ತ್ರಿಶತಂ ಪಾಪಃ ಪ್ರತಿಷ್ಠಾಂ ನಾಧಿಗಚ್ಛತಿ ॥89॥
ಸಾಧುಸ್ವಭಾವದ ಬ್ರಾಹ್ಮಣನಿಗೆ ದೊಡ್ಡದಾದ ದೊಣ್ಣೆಯಿಂದ ಹೊಡೆಯಲು ಕೈಎತ್ತಿದರೂ ಸಾಕು. ಆ ಪಾಪದಿಂದ ಮನುಷ್ಯನು ಮುನ್ನೂರು ವರ್ಷಗಳ ಕಾಲ ನೆಲೆ ಇಲ್ಲದೆ ಎಲ್ಲೆಡೆಯೂ ಅಲೆಯುವಂತಾಗುತ್ತದೆ.
ಸಹಸ್ರಾಣಿ ಚ ವರ್ಷಾಣಿ ನಿಹತ್ಯ ನರಕೇ ಪತೇತ್ |
ತಸ್ಮಾನ್ನೈವಾವಗುರ್ಯಾದ್ಧಿ ನೈವ ಶಸ್ತ್ರಂ ನಿಪಾತಯೇತ್ ॥90॥
ಯಾರು ಬ್ರಾಹ್ಮಣನನ್ನು ಹೊಡದೇ ಬಿಡುತ್ತಾನೋ, ಅವನು ಸಾವಿರ ವರ್ಷಗಳ ತನಕ ನರಕದಲ್ಲಿ ಬೀಳುತ್ತಾನೆ. ಆದ್ದರಿಂದ ಬ್ರಾಹ್ಮಣನ ಮೇಲೆ ಕೈ ಎತ್ತುವುದನ್ನು, ಆಯುಧದಿಂದ ಹೊಡೆಯುವುದನ್ನು ಎಂದೂ ಸಹ ಮಾಡಬಾರದು. ಇವೆರಡೂ ಕೂಡ ಮಹಾಪಾತಕಗಳೇ ಆಗಿವೆ.
ಶೋಣಿತಂ ಯಾವತಃ ಪಾಂಸೂನ್ ಗೃಹ್ಣಾತೀತಿ ಹಿ ಧಾರಣಾಮ್ |
ತಾವತೀಃ ಸ ಸಮಾಃ ಪಾಪೋ ನರಕೇ ಪರಿವರ್ತತೇ ॥91॥
ಒಂದು ವೇಳೆ ಬ್ರಾಹ್ಮಣನ ದೇಹಕ್ಕೆ ಶಸತ್ರಘಾತ ಮಾಡಿದರೆ ಅದರಿಂದ ರಕ್ತಕಣ- ಗಳು ಭೂಮಿಯಲ್ಲಿ ಬಿದ್ದಾಗ ಎಷ್ಟು ಧೂಳಿನ ಕಣಗಳಿಗೆ, ಆ ರಕ್ತವು ಅಂಟಿಕೊಳ್ಳು- ತ್ತದೋ, ಅಷ್ಟು ವರ್ಷಗಳ ಕಾಲ ಆ ಪಾಪಿಯು ಎಲ್ಲಾ ನರಕಗಳಲ್ಲಿ ಸುತ್ತಾಡುತ್ತಾನೆ.
ಟಿಪ್ಪಣಿ - ಗೃಹ್ಣಾತೀಹ ಹಿ ಧಾರಣಾನ್ ಇತ್ಯತ್ರ ಅವಗುರೇತ್ ನಿಂದಾ ಕುರ್ಯಾತ್| `ಗುರೀ ಉದ್ಯಮನೇ' ಇತಿ ಧಾತುಃ | ಧಾರಣಾನ್ ಧರಣ್ಯಾಂ ವಿದ್ಯಮಾನಾನ್ | `ಗೃಹ್ಣಾತೀಹ ಹಿ ಧಾರಣಾನ್' ನಿಂದೆಯನ್ನು ಮಾಡಿದರೂ ಸಾಕು ಎಂದಭಿಪ್ರಾಯ- ವನ್ನು ತಿಳಿಯಬೇಕು. `ಧಾರಣಾನ್' ಎಂದರೆ ಭೂಮಿಯಲ್ಲಿ ಬಿದ್ದಿರುವ ಎಂದರ್ಥ.
ತ್ವಗಸ್ಥಿಭೇದಂ ವಿಪ್ರಸ್ಯ ಯಃ ಕುರ್ಯಾತ್ ಕಾರಯೇವ ವಾ |
ಬ್ರಹ್ಮಹಾ ಸ ತು ವಿಜ್ಞೇಯಃ ಪ್ರಾಯಶ್ಚಿತ್ತೀ ನರಾಧಮಃ ॥92॥
ಬ್ರಾಹ್ಮಣನ ಚರ್ಮವನ್ನು, ಮೂಳೆಯನ್ನು ಯಾರು ಗಾಯ ಪಡಿಸುತ್ತಾನೋ, ಅಥವಾ ಹಿಂಸೆ ನೀಡಲು ಪ್ರಚೋದನೆ ಮಾಡುತ್ತಾನೋ, ಅಂಥವನು ಬ್ರಹ್ಮಹತ್ಯೆಗೆ ಗುರಿಯಾಗುತ್ತಾನೆ. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದ ನರಾಧಮ ಎಂದು ಕರೆಸಿಕೊಳ್ಳುತ್ತಾನೆ.
ಶ್ರೋತ್ರಿಯಂ ಬ್ರಾಹ್ಮಣಂ ಹತ್ವಾ ತಥಾಽಽತ್ರೇಯೀಂ ಚ ಬ್ರಾಹ್ಮಣೀಮ್ |
ಚತುರ್ವಿಂಶತಿವರ್ಷಾಣಿ ಚರೇದ್ ಬ್ರಹ್ಮಹಣೋ ವ್ರತಮ್ ॥93॥
ದ್ವಿಗುಣಾ ಬ್ರಹ್ಮಹತ್ಯೇಯಂ ಸರ್ವೈಃ ಪ್ರೋಕ್ತಾ ಮಹರ್ಷಿಭಿಃ |
ಪ್ರಾಯಶ್ಚಿತ್ತಮಕುರ್ವಾಣಂ ಕೃತಾಂಕಂ ವಿಪ್ರವಾಸಯೇತ್ ॥94॥
ಯಾರು ಶ್ರೋತ್ರಿಯ ಬ್ರಾಹ್ಮಣನನ್ನು ಕೊಲ್ಲುತ್ತಾನೋ, ಮತ್ತು ಉತ್ತಮ ಬ್ರಾಹ್ಮಣಸ್ತ್ರೀಯನ್ನು ಕೊಲ್ಲುತ್ತಾನೋ, ಅಂಥವನಿಗೆ ಎರಡು ಪಟ್ಟು ಬ್ರಹ್ಮಹತ್ಯಾ ಪಾತಕವು ಬರುತ್ತದೆ. ಇಪ್ಪತ್ನಾಕು ವರ್ಷಗಳ ಕಾಲ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ- ಬೇಕೆಂಬ ವ್ರತವನ್ನು ಋಷಿಗಳು ತಿಳಿಸಿದ್ದಾರೆ. ಪಾಪ ಮಾಡಿಯೂ ಕೂಡ ಯಾರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಿಲ್ಲವೋ, ಅಂಥವನ ದೇಹದಲ್ಲಿ ಏನಾದರೂ ಒಂದು ಗುರುತನ್ನು ಮಾಡಿ, ಅವನ ಸಂಪರ್ಕವನ್ನು ಯಾರೂ ಮಾಡದಂತೆ ಎಲ್ಲರಿಗೂ ತಿಳಿಸಿ, ದೇಶವನ್ನು ಬಿಟ್ಟು, ಅವನನ್ನು ಕಳುಹಿಸಬೇಕು. ಅವನ ಸಂಪರ್ಕ- ವನ್ನು ಯಾರೂ ಕೂಡ ಮಾಡಬಾರದು.
ಟಿಪ್ಪಣಿ - ಕೃತಾಂಕಂ ವಿಪ್ರವಾಸಯೇದ್ ಇತ್ಯತ್ರ ಕೃತಾಂಕಂ ಕೃತಶ್ವಾನಮುದ್ರಾ- ದ್ಯಂಕಮ್ | `ಕೃತಾಂಕಂ ವಿಪ್ರವಾಸಯೇದ್' ಎಂಬಲ್ಲಿ `ಕೃತಾಂಕಂ' ಎಂದರೆ ನಾಯಿಯ ಚಿಹ್ನೆಯನ್ನು ಬರೆಯಬೇಕು ಎಂದಭಿಪ್ರಾಯ.
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ವಾ ಘಾತಯೇನ್ನೃಪಃ |
ಬ್ರಹ್ಮಘ್ನಂ ತಸ್ಕರಂ ಚೈವ ಮಾಭೂದೇವಂ ಚರಿಷ್ಯತಿ ॥95॥

ಬ್ರಾಹ್ಮಣನನ್ನು ಕೊಂದ ವ್ಯಕ್ತಿಯು ಬ್ರಾಹ್ಮಣನೇ ಆಗಿರಲಿ, ಕ್ಷತ್ರಿಯನೇ ಆಗಿರಲಿ, ವೈಶ್ಯನೇ ಆಗಿರಲಿ, ಶೂದ್ರನೇ ಆಗಿರಲಿ ರಾಜನಾದವನು ಅವನನ್ನು ದಂಡಿಸಲೇ ಬೇಕು. ಮುಂದೆ ಎಂದೂ ಕೂಡ ಇಂಥ ಅಪರಾಧವನ್ನು ಮಾಡಬಾರದು. ಇದನ್ನು ನೋಡಿ, ಮತ್ತೊಬ್ಬರೂ ಕೂಡ ಇಂಥ ಅಪರಾಧವನ್ನು ಮಾಡಬಾರದೆಂಬ ಎಚ್ಚರಿಕೆಯನ್ನು ನೀಡಬೇಕು.
ಛಿತ್ತ್ವಾ ಹಸ್ತೌ ಚ ಪಾದೌ ಚ ನಾಸಿಕೋಷ್ಠೌ ಚ ಭೂಪತಿಃ |
ಬ್ರಹ್ಮಘ್ನಂ ಚೋತ್ತಮಂ ಪಾಪಂ ನೇತ್ರೋದ್ಧಾರೇಣ ಯೋಜಯೇತ್ ॥96
ಬ್ರಾಹ್ಮಣಘಾತುಕನ ಕೈಗಳನ್ನು ಕತ್ತರಿಸಬೇಕು. ಅಥವಾ ಕಾಲುಗಳನ್ನು ಕತ್ತರಿಸ- ಬೇಕು. ತುಟಿ, ಮೂಗು ಇವುಗಳನ್ನಾದರೂ ತುಂಡರಿಸಬೇಕು. ಇಷ್ಟು ಮಾಡಿದರೂ ಪುನಃ ಬ್ರಹ್ಮಹತ್ಯೆಯನ್ನು ಯಾರು ಮಾಡುತ್ತಾನೋ, ಅಂಥವನ ಕಣ್ಣುಗಳನ್ನೇ ಕಿತ್ತುಹಾಕಬೇಕು.
ಶೂದ್ರಸ್ಯೈಷ ಸ್ಮೃತೋ ದಂಡಸ್ತದ್ವದ್ ರಾಜನ್ಯವೈಶ್ಯಯೋಃ |
ಪ್ರಾಯಶ್ಚಿತ್ತಮಕುರ್ವಾಣಂ ಬ್ರಾಹ್ಮಣಂ ತು ಪ್ರವಾಸಯೇತ್ ॥97॥
ಶೂದ್ರನು ಬ್ರಾಹ್ಮಣಘಾತುಕನಾಗಿದ್ದರೆ ಈ ಬಗೆಯ ಶಿಕ್ಷೆಯನ್ನು ನೀಡಬೇಕು. ವೈಶ್ಯ ಹಾಗೂ ಕ್ಷತ್ರಿಯರಿಗೂ ಕೂಡ ಶೂದ್ರನ ಸಮಾನವಾದ ಶಿಕ್ಷೆಯನ್ನೇ ನೀಡಬೇಕು. ಆದರೆ ಬ್ರಾಹ್ಮಣನೇ ಬ್ರಾಹ್ಮಣಘಾತುಕನಾಗಿದ್ದರೆ ಅವನಿಂದ ಪ್ರಾಯ- ಶ್ಚಿತ್ತವನ್ನು ಮಾಡಿಸಬೇಕು. ಅವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಊರನ್ನು ಬಿಟ್ಟು ಕಳುಹಿಸಬೇಕು.
ಕ್ಷತ್ರಿಯಂ ವೈಶ್ಯಶೂದ್ರೌ ಚ ಶಸ್ತ್ರೇಣೈವ ಚ ಘಾತಯೇತ್ |
ಬ್ರಹ್ಮಘ್ನಾನ್ ಬ್ರಾಹ್ಮಣಾನ್ ರಾಜಾ ಕೃತಾಂಕಾನ್ ವಿಪ್ರವಾಸಯೇತ್ ॥98
ಬ್ರಾಹ್ಮಣನನ್ನು ಕೊಲ್ಲುವ ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರನ್ನು ಶಸ್ತ್ರಗಳಿಂದಲೇ ಕೊಲ್ಲಿಸಬೇಕು. ಬ್ರಹ್ಮಹತ್ಯಾ ಮಾಡಿದ ಬ್ರಾಹ್ಮಣನಿಗೆ ರಾಜನಾದವನು ಯಾವುದಾ- ದರೂ ಒಂದು ಚಿಹ್ನೆಯನ್ನು ದೇಹದಲ್ಲಿ ಮಾಡಿ ಹೊರಗಟ್ಟಬೇಕು.
ವಿಕಲೇಂದ್ರಿಯಾಂಸ್ತ್ರಿವರ್ಣಾಂಶ್ಚ ಚಂಡಾಲೈಃ ಸಹ ವಾಸಯೇತ್ |
ತೈಶ್ಚ ಯಃ ಸಂಪಿಬೇತ್ ಕಶ್ಚಿತ್ ಸ ಪಿಬನ್ ಬ್ರಹ್ಮಹಾ ಭವೇತ್ ॥99॥
ಯಾವ ತ್ರಿವರ್ಣದವರು ಹೀಗೆ ಬ್ರಹ್ಮಹತ್ಯೆಯ ಪಾಪದಿಂದ ವಿಕಲೇಂದ್ರಿಯ- ರಾಗಿರುತ್ತಾರೋ, ಅಂಥವರನ್ನು ಪುನಃ ತಮ್ಮ ಸಂಪರ್ಕದಲ್ಲಿಟ್ಟುಕೊಳ್ಳಬಾರದು. ಚಂಡಾಲರ ಗುಂಪಿನಲ್ಲಿ ಸೇರಿಸಬೇಕು. ಅಂಥವನ ಜೊತೆ ಯಾರು ಸಹಭೋಜನ- ವನ್ನು, ಅಥವಾ ಸಹಪಾನವನ್ನು ಮಾಡುತ್ತಾನೋ, ಅಂಥವನೂ ಕೂಡ ಬ್ರಹ್ಮ- ಹತ್ಯಾಪಾಪವನ್ನು ಹೊಂದುತ್ತಾನೆ.
ಪ್ರೇತಾನಾಂ ನಚ ದೇಯಾನಿ ಪಿಂಡದಾನಾನಿ ಕೇನಚಿತ್ ॥100॥
ಅಂಥ ಬ್ರಹ್ಮಹತ್ಯೆ ಮಾಡಿದವನು ಮರಣವನ್ನು ಹೊಂದಿದ ಮೇಲೆ ಅವನಿಗೆ ಪಿಂಡದಾನವನ್ನು ಮಾಡಬಾರದು. ಅವನಿಗೋಸ್ಕರ ಯಾವುದೇ ದಾನ ಮೊದಲಾ- ದವುಗಳನ್ನೂ ಕೂಡ ಮಾಡಬಾರದು.
ವಿವರಣೆ - ಮಹಾಪಾತಕಗಳನ್ನು ಮಾಡಿ ಯಾರು ಮೃತನಾಗಿರುತ್ತಾನೋ, ಅವನಿಗೆ ಪಿಂಡದಾನಾದಿಗಳನ್ನೂ ಕೂಡ ಮಾಡಬಾರದು ಎಂಬುದಾಗಿ ಶಾಂತಿ- ಪರ್ವದ ಈ ಶ್ಲೋಕವು ಅತ್ಯಂತಸ್ಪಷ್ಟವಾಗಿ ಹೇಳುತ್ತಿದೆ. ಇದರಿಂದ ಜೀವನದಲ್ಲಿ ಬ್ರಹ್ಮಹತ್ಯೆ ಮೊದಲಾದ ಮಹಾಪಾತಕಗಳನ್ನು ಸರ್ವಥಾ ಮಾಡಬಾರದೆಂದು ಎಚ್ಚೆತ್ತುಕೊಳ್ಳಬೇಕು.
ಒಂದು ವಿಮರ್ಶೆ -
ಅವೈಷ್ಣವರಿಗೆ ಮತ್ತು ಪಾತಕಿಗಳಿಗೆ ಶ್ರಾದ್ಧಾದಿಗಳನ್ನು ಮಾಡಬಹುದೇ ?
ಮಗನಾದವನು ತಂದೆಯ ಶ್ರಾದ್ಧವನ್ನು ಮಾಡಲೇಬೇಕು. ಕರ್ತೃವಾಗಿರುವು- ದರಿಂದ ಶ್ರಾದ್ಧವನ್ನು ಬಿಡುವಂತಿಲ್ಲ. ತಂದೆಯಾದವನು ಒಂದು ವೇಳೆ ಮಹಾ- ಪಾತಕಿಯಾಗಿದ್ದರೆ ಬ್ರಹ್ಮಹತ್ಯಾ ಮೊದಲಾದ ಪಾಪಗಳನ್ನು ಮಾಡಿದ್ದಲ್ಲಿಯೂ ಕೂಡ ಮಗನಾದವನು ಶ್ರಾದ್ಧವನ್ನು ಬಿಡುವಂತಿಲ್ಲ. ಪಿತೃದೇವತೆಗಳಿಗೆ ಆ ಪಿಂಡವನ್ನು ಸಮರ್ಪಣೆ ಮಾಡಿ, ನಮ್ಮ ತಂದೆಯು ಮಾಡಿದ ಅಪರಾಧವನ್ನು ಮನ್ನಿಸಿ, ಅವರಿಗೆ ಸದ್ಗತಿಯನ್ನು ನೀಡು ಎಂಬುದಾಗಿ, ಉತ್ತಮಜನ್ಮವು ಪ್ರಾಪ್ತವಾಗಲೀ ಎಂಬುದಾಗಿ ಪ್ರಾರ್ಥಿಸಲೇ ಬೇಕು. ಬ್ರಹ್ಮರಾಕ್ಷಸ ಮೊದಲಾದ ದೇಹಗಳು ಬಂದಿದ್ದಲ್ಲಿ ಅದರ ಪರಿಹಾರಕ್ಕೂ ಕೂಡ ಪ್ರಯತ್ನವನ್ನು ಪಡಲೇ ಬೇಕು. ಮಗನಾಗಿ ಈ ಕರ್ತವ್ಯವನ್ನು ಆಚರಿಸದೇ ಇರುವಂತಿಲ್ಲ. ಹಾಗೇನಾದರೂ ನಮ್ಮ ತಂದೆಯು ಬ್ರಹ್ಮಹತ್ಯೆಯನ್ನು ಮಾಡಿದ್ದಾನೆಂದು ಶ್ರಾದ್ಧಾದಿಗಳನ್ನು ಮಾಡದೇ ಇದ್ದರೆ ಅವನ ಸದ್ಗತಿಗೆ ಪ್ರಯತ್ನವನ್ನು ಪಡದೇ ಇದ್ದರೆ, ಕರ್ತವ್ಯಭ್ರಷ್ಟನಾಗುತ್ತಾನೆ. ಧರ್ಮಶಾಸ್ತ್ರಗಳ ಆಧಾರದಿಂದ ಈ ಎಲ್ಲಾ ವಿಚಾರಗಳು ಸ್ಪಷ್ಟವಾಗುತ್ತವೆ.
ಹಾಗಾದರೆ ಮಹಾಭಾರತದ ಈ ಶ್ಲೋಕದಲ್ಲಿ ಬ್ರಹ್ಮಹತ್ಯೆ ಮಾಡಿದ ಬ್ರಾಹ್ಮಣಾದಿಗಳಿಗೆ ಶ್ರಾದ್ಧಾದಿಗಳನ್ನು ಕೂಡ ಮಾಡಬಾರದು ಎಂದು ಹೇಳಿ- ದ್ದಾರಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಕರ್ತೃ ಬಿಟ್ಟು ಉಳಿದ ಸಂಬಂಧಿಕರು ಅಥವಾ ಅಭಿಮಾನದಿಂದ ಮಿತ್ರರೇ ಮೊದಲಾದವರು ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಪಿಂಡದಾನಾದಿಗಳನ್ನು ಮಾಡಬಾರದು ಎಂದಭಿಪ್ರಾಯ. ಮಗನು ಪಿಂಡದಾನಾದಿಗಳನ್ನು ಮಾಡಲೇ ಬೇಕು. ಆದರೆ ಉಳಿದವರು ಮಾಡಬಾರದು ಎಂಬುದಾಗಿ ತಿಳಿದುಕೊಳ್ಳಬೇಕು. ರಾವಣನು ಸತ್ತ ಮೇಲೆ ವಿಭೀಷಣನು ಪಿಂಡದಾನಾದಿಗಳಲ್ಲಿ ಪ್ರವೃತ್ತಿಯನ್ನು ಮಾಡದೇ ಇದ್ದಾಗ ಶ್ರೀರಾಮಚಂದ್ರನೇ ಸ್ವತಃ ನಿಂತು ಎಲ್ಲಾ ಕಾರ್ಯಗಳನ್ನು ಮಾಡಿಸುತ್ತಾನೆ. `ಮರಣಾಂತಾನಿ ವೈರಾಣಿ' ಎಂಬುದಾಗಿ ಬೋಧಿಸುತ್ತಾನೆ. ಅಲ್ಲಿ ರಾವಣನ ಮಕ್ಕಳು ಯಾರೂ ಇಲ್ಲದೇ ಇರುವುದರಿಂದ ತಮ್ಮನೇ ಆ ಸ್ಥಾನದಲ್ಲಿ ನಿಂತು ಅಂತ್ಯಸಂಸ್ಕಾರವನ್ನು ಮಾಡುವ ಪ್ರಸಂಗವು ಪ್ರಾಪ್ತವಾಗಿತ್ತು.
ಧೃತರಾಷ್ಟ್ರನು ದುರ್ಯೋಧನಾದಿಗಳಿಗೆ ಪಿಂಡದಾನಾ -ದಿಗಳನ್ನು ಮಾಡುತ್ತೇನೆ ಎಂಬುದಾಗಿ ಹೇಳಿದಾಗ ಭೀಮಸೇನದೇವರು ಅವೈಷ್ಣವರಿಗೆ ಶ್ರಾದ್ಧಾದಿಗಳನ್ನು ಮಾಡುವ ಅವಶ್ಯಕತೆಯಿಲ್ಲ ಎಂಬುದಾಗಿ ಹೇಳಿ ಯಾವುದೇ ಸಹಕಾರವನ್ನು ನೀಡುವುದಿಲ್ಲ. ಭೀಮಸೇನದೇವರ ಅಭಿಪ್ರಾಯ- ವೇನೆಂದರೆ ತಂದೆಯಾದ ನೀನು ಅವೈಷ್ಣವರಿಗೆ ಪಿಂಡದಾನಾದಿಗಳನ್ನು ಮಾಡುವ ಅವಶ್ಯಕತೆಯು ಇರುವುದಿಲ್ಲ. ಶ್ರಾದ್ಧಾದಿಗಳನ್ನು ಮಾಡಲು ನೀನು ಕರ್ತೃವೂ ಅಲ್ಲ. ಅದನ್ನು ಮಾಡುವ ಕರ್ತವ್ಯ ಇರುವವರೇ ಬೇರೆ ಇದ್ದಾರೆ ಎಂದು. ಆದ್ದರಿಂದ ತಂದೆಯು ಅವೈಷ್ಣವನಾಗಿದ್ದರೂ ಕೂಡ ಮಗನಾದವನು ಅವನ ಔನ್ನತ್ಯಕ್ಕೆ ಪ್ರಯತ್ನವನ್ನು ಪಡಲೇ ಬೇಕು.

ಪ್ರಹ್ಲಾದರಾಜರು ಈ ವಿಷಯದಲ್ಲಿ ನಮಗೆಲ್ಲರಿಗೂ ಆದರ್ಶರಾಗಿದ್ದಾರೆ.
ಕೃಷ್ಣರೂಪಾ ಸುರೂಪಾ ಚ ನರ್ಮಘ್ನಾ ಲಬ್ಧಮೂರ್ಧಜಾ |
ದುನೋತ್ಯದುಷ್ಕೃತಕರ್ತಾರಂ ಬ್ರಹ್ಮಹತ್ಯೇತಿ ತಾಂ ವಿದುಃ ॥101॥
ಬ್ರಹ್ಮಹತ್ಯೆಯು ಕಪ್ಪುವರ್ಣದಿಂದ ಕೂಡಿದ್ದು, ತಲೆಯನ್ನು ಕೆದರಿಕೊಂಡು ವಿಕಾರರೂಪವುಳ್ಳದ್ದಾಗಿ ಕಣ್ಣಿಗೆ ಕಾಣದಂತೆ ಪಾಪ ಮಾಡಿದವನನ್ನು ಹಿಂಬಾಲಿ- ಸುತ್ತಲೇ ಇರುತ್ತದೆ. ನಿರಂತರ ಅವನನ್ನು ಪೀಡಿಸುತ್ತದೆ. ಅವನು ಮಾಡುವ ಪುಣ್ಯಕರ್ಮಗಳೆಲ್ಲವನ್ನೂ ಸಂಪೂರ್ಣ ನಾಶಮಾಡುತ್ತದೆ.
ಟಿಪ್ಪಣಿ - ಅಸುರೂಪಾ ನರ್ಮಘ್ನಾ ಇತ್ಯತ್ರ ಕೃಷ್ಣವರ್ಣಾ ಅಸುರೂಪಾ ಕ್ರೂರರೂಪಾ ನರ್ಮಘ್ನಾ ಲಂಬಮೂರ್ಧಜಾ ಬ್ರಹ್ಮಹತ್ಯಾ ಅದುಷ್ಕೃತಕರ್ತಾರಂ ಪುಣ್ಯ- ಕರ್ತಾರಂ ದುನೋತಿ ಪೀಡಯತಿ |
`ಅಸುರೂಪಾ ನರ್ಮಘ್ನಾ' ಎಂಬಲ್ಲಿ `ಕೃಷ್ಣವರ್ಣಾ ಅಸುರೂಪಾ' ಎಂಬುದಕ್ಕೆ ಕ್ರೂರರೂಪವಾಗಿದೆ ಎಂದರ್ಥ. `ಅದುಷ್ಕೃತಕರ್ತಾರಂ' ಎಂಬುದಕ್ಕೆ ಪುಣ್ಯಕೆಲಸವನ್ನು ಮಾಡದವನನ್ನು ಎಂದರ್ಥ. `ದುನೋತಿ' ಎಂದರೆ ಪೀಡಿಸುತ್ತದೆ ಎಂದರ್ಥ.
ಪಾಪ ಮಾಡಿದವನ ಪಾಪದ ಸ್ವರೂಪ ಹೀಗಿದೆ - ಅವನ ತಲೆ ಬ್ರಹ್ಮಹತ್ಯೆಯ ಸ್ವರೂಪವಾಗಿದ್ದು, ಕೆದರಿಕೊಂಡು ವಿಕಾರ ರೂಪವನ್ನು ಹೊಂದಿರುತ್ತದೆ. ಅವನ ಎರಡು ಭುಜಗಳು ನಿರಂತರ ಕದಿಯುವುದರಲ್ಲಿ ಆಸಕ್ತವಾಗಿದೆ. ಅವನ ಮನಸ್ಸು ಹೆಂಡ- ಕುಡಿಯುವುದರಲ್ಲೇ ಅನುರಕ್ತವಾಗಿದೆ. ಎರಡು ಕಟಿಗಳು ಉತ್ತಮಸ್ತ್ರೀಯರ ಭೋಗದಲ್ಲಿ ನಿರತವಾಗಿರುತ್ತದೆ. ಪಾತಕಗಳು ಅವನ ಕಾಲಿನ ರೂಪದಲ್ಲಿವೆ. ಅವನ ದೇಹದಲ್ಲಿರುವ ರೋಮಗಳೆಲ್ಲವೂ ಉಪಪಾತಕರೂಪವಾಗಿವೆ. ಕೆಂಪುಮೀಸೆಗಳಿಂದ ಕೂಡಿದ್ದು, ಕ್ರೂರ- ವಾದ ಕಣ್ಣುಗಳಿಂದ ಕೂಡಿವೆ. ಕೆಳಮುಖವಾಗಿ ಕಪ್ಪು ಬಣ್ಣದಲ್ಲಿರುವ ಹೆಬ್ಬೆರಳಿನ ಗಾತ್ರದಲ್ಲಿದೆ. ಖಡ್ಗ, ಚರ್ಮಗಳನ್ನು ಧರಿಸಿ ಹೊಟ್ಟೆಯ ಎಡಭಾಗದಲ್ಲಿ ಈ ಪಾಪ- ಪುರುಷನು ಕುಳಿತಿರುತ್ತಾನೆ.
ಬ್ರಹ್ಘ್ನೇನ ಪಿಬಂತಶ್ಚ ವಿಪ್ರಾ ದೇಶಾಃ ಪುರಾಣಿ ಚ |
ಅಚಿರಾದೇವ ಪೀಡ್ಯಂತೇ ದುರ್ಭಿಕ್ಷವ್ಯಾಧಿತಸ್ಕರೈಃ ॥102॥
ಯಾರು ಬ್ರಹ್ಮಹತ್ಯೆಯನ್ನು ಮಾಡಿರುತ್ತಾನೋ, ಅವನ ಜೊತೆ ಸೇರಿ ಪಾನ ಭೋಜನಗಳನ್ನು ಬ್ರಾಹ್ಮಣರು ಮಾಡಬಾರದು. ಹಾಗೇನಾದರೂ ಮಾಡಿದರೆ ಅವರು ವಾಸಿಸುವ ದೇಶಗಳು, ಪಟ್ಟಣಗಳು ಬರಗಾಲದಿಂದ ಪೀಡಿತವಾಗುತ್ತವೆ. ಕಳ್ಳಕಾಕರಿಂದ ಹೆಚ್ಚುತ್ತವೆ. ರೋಗ-ರುಜಿನಗಳು ಉಲ್ಬಣಗೊಳ್ಳುತ್ತವೆ.
ಟಿಪ್ಪಣಿ - ಬ್ರಹ್ಘ್ನೇನ ಪಿಬಂತಶ್ಚ ಇತ್ಯತ್ರ ಬ್ರಹ್ಘ್ನೇನ ಸಹ ಪಿಬಂತಃ ಮದ್ಯಾದಿಕಂ ಪಿಬಂತಃ | ಬ್ರಹ್ಮಹತ್ಯೆಯನ್ನು ಮಾಡಿದವನ ಜೊತೆ ಸುರಾಪಾನಾದಿಗಳನ್ನು ಮಾಡುವ- ವನು ಎಂದರ್ಥ.
ಬ್ರಾಹ್ಮಣಂ ಪಾಪಕರ್ಮಾಣಂ ವಿಪ್ರಾಣಾಮಾತತಾಯಿನಮ್ |
ಕ್ಷತ್ರಿಯಂ ವೈಶ್ಯಶೂದ್ರೌ ಚ ನೇತ್ರೋದ್ಧಾರೇಣ ಯೋಜಯೇತ್॥103॥
ಬ್ರಹ್ಮಹತ್ಯೆಯನ್ನು ಮಾಡಿದ ವಿಪ್ರರು ಆತತಾಯಿಗಳು ಎಂದು ಕರೆಸಿಕೊಳ್ಳುತ್ತಾರೆ. ಇವರು ನರಕಕ್ಕೆ ತೆರಳುತ್ತಾರೆ. ಬ್ರಹ್ಮಹತ್ಯೆಯನ್ನು ಆಚರಿಸಿದ ಕ್ಷತ್ರಿಯರು, ವೈಶ್ಯರು ಹಾಗೂ ಶೂದ್ರರು ಇವರಲ್ಲಿ ಯಾರೇ ಆಗಿದ್ದರೂ ರಾಜನಾದವನು ಅವರ ಕಣ್ಣು- ಗಳನ್ನು ಕೀಳಿಸಬೇಕು.
ಟಿಪ್ಪಣಿ - ಬ್ರಾಹ್ಮಣಂ ಪಾಪಕರ್ಮಾಣಮ್ ಇತ್ಯತ್ರ ವಿಪ್ರಾಣಾಂ ಮಧ್ಯೇ ಆತ- ತಾಯಿನಂ ಪಾಪಕರ್ಮಾಣಂ ಬ್ರಾಹ್ಮಣಂ ನರಕೇ ಪಾಯಯೇತ್, ನತು ರಾಜಾ ತೇಷಾಂ ನೇತ್ರೋತ್ಪಾಟನಾದಿಕಂ ಕುರ್ಯಾದಿತಿ ಭಾವಃ |
ವಿಪ್ರರ ಮಧ್ಯದಲ್ಲಿ ಪಾಪಕರ್ಮವನ್ನು ಆಚರಿಸಿದ ಬ್ರಾಹ್ಮಣನಿಗೆ ನರಕವೇ ಗತಿ- ಯಾಗುತ್ತದೆ. ಅಂಥವರಿಗೆ ರಾಜನಾದವನು ಕಣ್ಣುಕೀಳಿಸುವಿಕೆ ಮೊದಲಾದ ಶಿಕ್ಷೆಗಳನ್ನು ನೀಡಬಾರದು.
ದುರ್ಬಲಾನಾಂ ಬಲಂ ರಾಜಾ ಬಲಿನೋ ಯೇ ಚ ಸಾಧವಃ |
ಬಲಿನಾಂ ದುರ್ಬಲಾನಾಂ ಚ ಪಾಪಾನಾಂ ಮೃತ್ಯುರಿಷ್ಯತೇ ॥104॥
ಸಾಧುಗಳು ದುರ್ಬಲರೇ ಆಗಿರಲಿ, ಬಲಿಷ್ಠರೇ ಆಗಿರಲಿ ಅವರಿಗೆ ರಾಜನೇ ಬಲ ಎನಿಸುತ್ತಾನೆ. ಪಾಪಿಗಳು ದುರ್ಬಲರೇ ಆಗಿರಲಿ, ಬಲಿಷ್ಠರೇ ಆಗಿರಲಿ ಅಂಥವರಿಗೆ ರಾಜನಾದವನು ಮೃತ್ಯು ಎನಿಸುತ್ತಾನೆ.
ಸದೋಷಮಪಿ ಯೋ ಹನ್ಯಾದಶ್ರಾವ್ಯ ಜಗತೀಪತೇ |
ದುರ್ಬಲಂ ಬಲವಂತಂ ವಾ ಸ ಪರಾಜಯಮರ್ಹತಿ ॥105॥
ಬ್ರಾಹ್ಮಣನಾದವನು ದುಷ್ಟನಾದಾಗ ರಾಜನ ಅನುಮತಿಯನ್ನು ಪಡೆಯದೇ ಶಿಕ್ಷೆಯನ್ನು ನೀಡಿದರೆ ಅವನು ದುರ್ಬಲನೇ ಆಗಿರಲಿ, ಬಲಿಷ್ಠನೇ ಆಗಿರಲಿ, ಅವನು ಶಿಕ್ಷೆಗೆ ಅರ್ಹನಾಗುತ್ತಾನೆ.
ಟಿಪ್ಪಣಿ - ಸದೋಷಮಪಿ ಯೋ ಹನ್ಯಾದ್ ಇತ್ಯತ್ರ ಬ್ರಾಹ್ಮಣಮಿತ್ಯನುವರ್ತತೇ |
`ಸದೋಷಮಪಿ ಯೋ ಹ್ಯನಾತ್' ಎಂಬಲ್ಲಿ `ಬ್ರಾಹ್ಮಣಂ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು.
ರಾಜಾಜ್ಞಾಂ ಪ್ರಾಡ್‌ವಿವಾಕಂ ಚ ನೇಚ್ಛೇದ್ ಯಚ್ಚಾಪಿ ನಿಷ್ಪತೇತ್ |
ಸಾಕ್ಷಿಣಂ ಸಾಧುವಾಕ್ಯಂ ಚ ಜಿತಂ ತಮಪಿ ನಿರ್ದಿಶೇತ್ ॥106॥
ಯಾರು ರಾಜನ ಅಥವಾ ರಾಜನಿಂದ ನಿಯಮಿಸಲ್ಪಟ್ಟ ಅಧಿಕಾರಿಯ ಆಜ್ಞೆ- ಯನ್ನು ಮೀರುತ್ತಾನೋ, ಸಾಕ್ಷಿಗಳನ್ನು ನಿರಾಕರಿಸುತ್ತಾನೋ, ಸಜ್ಜನರ ಮಾತುಗಳನ್ನು ಉಪೇಕ್ಷಿಸುತ್ತಾನೋ, ಅವನೂ ಕೂಡ ಅಪರಾಧಿಯೆಂದೇ ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ಜಿತಂ ತಮಪಿ ನಿರ್ದಿಶೇಷದ್ ಇತ್ಯತ್ರ ಜಿತಂ ಜಯವಂತಮ್ |
`ಜಿತಂ ತಮಪಿ ನಿರ್ದಿಶೇಷದ್' ಎಂಬಲ್ಲಿ `ಜಿತಂ' ಎಂಬುದಕ್ಕೆ ಜಯವುಳ್ಳವನು ಎಂದರ್ಥ. ಜಯವುಳ್ಳವನನ್ನು ಉಪೇಕ್ಷಿಸಬಾರದು ಎಂದಭಿಪ್ರಾಯ.
ಬಂಧನಾನ್ನಿಷ್ಪತೇದ್ ಯಚ್ಚ ಪ್ರತಿಭೂರ್ನ ದದಾತಿ ಚ |

ಕುಲಜಶ್ಚ ಧನಾಢ್ಯಶ್ಚ ಸ ಪರಾಜಯಮರ್ಹತಿ ॥107॥
ಯಾರು ಸೆರೆಯಿಂದ ತಪ್ಪಿಸಿಕೊಂಡು ಹೋಗಿರುತ್ತಾನೋ, ಅಪರಾಧಿಯನ್ನು ಒಪ್ಪಿಸಿಕೊಡದ ಹೊಣೆಗಾರವನ್ನು ಹೊಂದಿರುತ್ತಾನೋ, ಅಂಥವನು ಸತ್ಕುಲ ಪ್ರಸೂತನಾಗಿದ್ದರೂ ಧನಾಢ್ಯನಾಗಿದ್ದರೂ ಕೂಡ ಅಪರಾಧಿಯೆಂದೇ ಕರೆಸಿಕೊಳ್ಳು- ತ್ತಾನೆ. ಶಿಕ್ಷೆಗೆ ಒಳಪಡುತ್ತಾನೆ.
ಟಿಪ್ಪಣಿ - ಪ್ರತಿಭೂರ್ನ ದದಾತಿ ಚ ಇತ್ಯತ್ರ ಪ್ರತಿಭವತೀತಿ ಪ್ರತಿಭೂಃ ವಿಪರೀತ ಇತ್ಯರ್ಥಃ | `ಪ್ರತಿಭೂಃ' ಎಂಬುದಕ್ಕೆ ಪ್ರತಿಭವತೀತಿ ಪ್ರತಿಭೂಃ ಎಂಬ ನಿಷ್ಪತ್ತಿಯನ್ನು ವಿವಕ್ಷಿಸಬೇಕು. ಅಪರಾಧಿಯನ್ನು ಒಪ್ಪಿಸದಿದ್ದರೆ ಎಂದರ್ಥ.
ರಾಜಾಜ್ಞಯಾ ಸಮಾಹೂತೋ ಯೋ ನ ಗಚ್ಛೇತ್ ಸಭಾಂ ನರಃ |
ಬಲವಂತಮುಪಾಶ್ರಿತ್ಯ ಸಾಯುಧಃ ಸ ಪರಾಜಿತಃ ॥108॥
ರಾಜನು ಅಪ್ಪಣೆಯನ್ನು ಮಾಡಿದಾಗ ಯಾರು ರಾಜನ ಆಸ್ಥಾನಕ್ಕೆ ತೆರಳುವುದಿ- ಲ್ಲವೋ, ಮತ್ತೊಬ್ಬ ಬಲಿಷ್ಠನ ಸಹಾಯವನ್ನು ಹೊಂದಿ, ರಾಜದೂತನ ಮೇಲೆ ಆಯುಧಗಳಿಂದ ಕೂಡಿ ನಿಗ್ರಹಿಸಲು ಬರುತ್ತಾನೋ, ಅವನೂ ಸಹ ಅಪರಾಧಿಯೇ ಆಗುತ್ತಾನೆ.
ತಂ ದಂಡೇನ ವಿನಿರ್ಜಿತ್ಯ ಮಹಾಸಾಹಸಿಕಂ ನರಮ್ |
ವಿಯುಕ್ತದೇಹಸರ್ವಸ್ವಂ ಪರಲೋಕಂ ವಿಸರ್ಜಯೇತ್ ॥109॥
ಇಂಥ ಅಪರಾಧಿಗಳಿಗೆ ಮತ್ತು ಮಹಾಪರಾಧಿಗಳಿಗೆ ರಾಜನಾದವನು ಶಿಕ್ಷೆಯನ್ನು ನೀಡಲೇಬೇಕು. ಅವರಲ್ಲಿರುವ ಎಲ್ಲ ಸಂಪತ್ತುಗಳನ್ನು ಕಸಿದುಕೊಂಡು ಮತ್ತೊಂದು ದೇಶಕ್ಕೆ ಅಟ್ಟಬೇಕು.
ಟಿಪ್ಪಣಿ - ಪರಲೋಕಂ ವಿಸರ್ಜಯೇದ್ ಇತ್ಯತ್ರ ಪರಲೋಕಂ ಪ್ರತಿ ವಿಸರ್ಜ- ಯೇತ್ |
ಮೃತಸ್ಯಾಪಿ ನ ದೇಯಾನಿ ಪಿಂಡದಾನಾನಿ ಕೇನಚಿತ್ |
ದತ್ವಾ ದಂಡಂ ಪ್ರಯಚ್ಛೇತ ಮಧ್ಯಮಂ ಪೂರ್ವಸಾಹಸಮ್ ॥110॥
ಹೀಗೆ ಮಹಾಪರಾಧಗಳನ್ನು ಮಾಡಿದ ವ್ಯಕ್ತಿಯು ಮೃತನಾದ ಮೇಲೆ ಅವನಿಗೆ ಪಿಂಡಪ್ರದಾನಾದಿಗಳನ್ನು ಮಾಡಬಾರದು. ರಾಜಾಜ್ಞೆಯನ್ನು ಮೀರಿ ಯಾರಾದರೂ ಪಿಂಡಪ್ರದಾನವನ್ನು ಮಾಡಿದರೆ ಅವನೂ ಸಹ ಎರಡನೇ ಅಪರಾಧಿಯಾಗುತ್ತಾನೆ. ಅಂಥವನಿಗೂ ಕೂಡ ಶಿಕ್ಷೆಯನ್ನು ನೀಡಬೇಕು.
ಟಿಪ್ಪಣಿ- ದತ್ವಾ ದಂಡಮ್ ಇತ್ಯತ್ರ ದತ್ವಾ ಬಲಾತ್ ಪಿಂಡಾದಿಕಂ ದಾಪಯಿತ್ವಾ, ಮಧ್ಯಮಂ ದಂಡಂ ಪ್ರಯಚ್ಛೇತ | ಪೂರ್ವಂ ಸಾಹಸಂ ನ ಕರೋಮೀತಿ ಸತ್ತ್ವಂ ಯಸ್ಯ ತಸ್ಮಾತ್ ಪೂರ್ವಸಾಹಸಾತ್ |
`ದತ್ವಾ ದಂಡಮ್' ಎಂಬಲ್ಲಿ ಬಲಾತ್ಕಾರವಾಗಿ ಪಿಂಡಪ್ರದಾನಾದಿಗಳನ್ನು ಯಾರು ಮಾಡುತ್ತಾನೋ, ಅಂಥವನು ಎರಡನೆಯ ಅಪರಾಧಿಯೆಂದು ಕರೆಸಿಕೊಳ್ಳುತ್ತಾನೆ ಎಂದಭಿಪ್ರಾಯ. `ಪೂರ್ವಸಾಹಸಂ' ಎಂದರೆ ಹಿಂದೆ ಮಾಡಿದವನ ಅಪರಾಧವನ್ನು ನಾನು ಮಾಡಲಾರೆ ಎಂದು ಹೇಳುವವನು ಎಂದರ್ಥ.
ಕುಲಸ್ತ್ರೀವ್ಯಭಿಚಾರಂ ಚ ರಾಷ್ಟ್ರಸ್ಯ ಚ ವಿಮರ್ದನಮ್ |
ಬ್ರಹ್ಮಹತ್ಯಾಂ ಚ ಚೌರ್ಯಂ ಚ ರಾಜದ್ರೋಹಂ ಚ ಪಂಚಮಮ್ ॥111॥
ಯಾರು ಉತ್ತಮಕುಲದಲ್ಲಿ ಹುಟ್ಟಿದ ಸ್ತ್ರೀಯನ್ನು ಬಲಾತ್ಕಾರ ಮಾಡುವಿಕೆ, ರಾಷ್ಟ್ರಕ್ಕೆ ಕೆಡಕನ್ನು ಬಯಸುವಿಕೆ, ಬ್ರಹ್ಮಹತ್ಯೆ, ಕಳ್ಳತನ, ರಾಜದ್ರೋಹ ಇವುಗಳು ಮಹಾಪಾತಕಗಳು.
ಯುದ್ಧಾದನ್ಯತ್ರ ಹಿಂಸಾಯಾಂ ಸುರಾಪಸ್ಯ ಚ ಕೀರ್ತನೇ |
ಮಹಾಂತಂ ಗುರುಲ್ಪೇ ಚ ಮಿತ್ರದ್ರೋಹೇ ಚ ಪಾತಕಮ್ ॥112॥
ಯುದ್ಧವಿಲ್ಲದ ಕಾಲದಲ್ಲಿ ಹಿಂಸೆ ನೀಡುವುದು. ಸುರಾಪಾನ ಮಾಡುವುದು, ಗುರುದಾರ ಪರಿಗ್ರಹವನ್ನು ಮಾಡುವುದು, ಮಿತ್ರದ್ರೋಹವನ್ನು ಮಾಡುವುದು ಇವುಗಳು ಮಹಾಪಾತಕಗಳು.
ನ ಕಥಂಚಿದುಪೇಕ್ಷೇತ ಮಹಾಸಾಹಸಿಕಂ ನರಮ್ |
ಸರ್ವಸ್ವಮಪಹೃತ್ಯಾಶು ತತಃ ಪ್ರಾಣೈರ್ವಿಯೋಜಯೇತ್ ॥113॥
ಇಂಥ ಮಹಾಪಾತಕಗಳನ್ನು ಮಾಡುವವರು, ಮಹಾಪರಾಧಿಗಳು ಎಂದು ಕರೆಸಿಕೊಳ್ಳುತ್ತಾರೆ. ಇಂಥವರನ್ನು ಉಪೇಕ್ಷೆ ಮಾಡದೇ ಅವರ ಎಲ್ಲಾ ಸಂಪತ್ತನ್ನು ಕಸಿದುಕೊಂಡು ಅವರಿಗೆ ಗಲ್ಲುಶಿಕ್ಷೆಯನ್ನೇ ನೀಡಬೇಕು.
ತ್ರಿಷು ವರ್ಣೇಷು ಯೋ ದಂಡಃ ಪ್ರಣೀತೋ ಬ್ರಹ್ಮಣಾ ಪುರಾ |
ಮಹಾಸಾಹಸಿಕಂ ವಿಪ್ರಂ ಕೃತಾಂಕಂ ವಿಪ್ರವಾಸಯೇತ್ ॥114॥
ನಾಕುವರ್ಣಗಳಲ್ಲಿ ಮೂರುವರ್ಣದವರಿಗೆ ಮಾತ್ರ ಶಿಕ್ಷೆಯನ್ನು ನೀಡಬೇಕು. ಬ್ರಾಹ್ಮಣನು ಇಂಥ ಮಹಾಪರಾಧವನ್ನು ಮಾಡಿದ ಪಕ್ಷದಲ್ಲಿ ಅವನ ದೇಹದಲ್ಲಿ ಒಂದು ಚಿಹ್ನೆಯನ್ನು ಮಾಡಿ, ಅವನನ್ನು ಯಾರೂ ಸಂಪರ್ಕ ಮಾಡದಂತೆ ದೇಶ ಬಿಟ್ಟು ಹೊರಗೆ ಕಳುಹಿಸಬೇಕು.
ಸಾಹಸ್ರೋ ವಾ ಭವೇದ್ ದಂಡಃ ಕಾಂಚನೋ ದೇಹನಿಷ್ಕ್ರಿಯಾ |
ಚತುರ್ಣಾಮಪಿ ವರ್ಣಾನಾಮೇವಮಾಹೋಶನಾ ಕವಿಃ ॥115॥
ನಾಕು ವರ್ಣದವರು ಮಹಾಪರಾಧವನ್ನು ಮಾಡಿದಾಗ ಅವರಿಗೆ ಶಿಕ್ಷೆಯನ್ನು ನೀಡಬೇಕು. ಸಾವಿರ ವರಹಗಳ ದಂಡವನ್ನು ವಿಧಿಸಬೇಕು ಎಂಬುದಾಗಿ ಶುಕ್ರನೀತಿ- ಯಲ್ಲಿ ಶುಕ್ರಾಚಾರ್ಯರು ಹೇಳಿರುವರು.
ನಾರೀಣಾಂ ಬಾಲವೃದ್ಧಾನಾಂ ಗೋಪತೇಶ್ಚ ಮಹಾಮತಿಃ |
ಪಾಪಾನಾಂ ದುರ್ವಿನೀತಾನಾಂ ಪ್ರಾಣಾಂತಂ ಚ ಬೃಹಸ್ಪತಿಃ ॥116॥
ಸ್ತ್ರೀಯರು, ಬಾಲರು, ವೃದ್ಧರು, ಗೊಲ್ಲರು ಇವರುಗಳು ಅಪರಾಧವನ್ನು ಆಚರಿಸಿದಾಗ ದುರ್ವಿನೀತರಾದಾಗ ಮರಣದಂಡನೆಯನ್ನೇ ನೀಡಬೇಕು. ಹೀಗೆ ಎಲ್ಲಾ ಅಪರಾಧಿಗಳಿಗೂ ಸಮಾನ ಶಿಕ್ಷೆ ಎಂಬುದಾಗಿ ಬೃಹಸ್ಪತ್ಯಾಚಾರ್ಯರು ತಮ್ಮ ನೀತಿ ಶಾಸ್ತ್ರದಲ್ಲಿ

ಹೇಳಿರುವರು.
ದಂಡಮಾಹ ಮಹಾಭಾಗ ಸರ್ವೇಷಾಮಾತತಾಯಿನಾಮ್ |
ಸರ್ವೇಷಾಂ ಪಾಪಬುದ್ಧೀನಾಂ ಪಾಪಕರ್ಮೈವ ಕುರ್ವತಾಮ್ |
ಧೃತರಾಷ್ಟ್ರಸ್ಯ ಪುತ್ರಾಣಾಂ ದಂಡೋ ನಿರ್ದೋಷ ಇಷ್ಯತೇ |
ಸೌಬಲಸ್ಯ ಚ ದುರ್ಬುದ್ಧೇಃ ಕರ್ಣಸ್ಯ ಚ ದುರಾತ್ಮನಃ ॥117॥
ಓ ರಾಜನೇ! ಧೃತರಾಷ್ಟ್ರನ ಮಕ್ಕಳು ಈ ಎಲ್ಲಾ ಅಪರಾಧಗಳನ್ನು ಮಾಡಿರು- ತ್ತಾರೆ. ನಿರಂತರ ಪಾಪದಲ್ಲಿಯೇ ಆಸಕ್ತರಾಗಿದ್ದು, ಪಾಪಕರ್ಮಿಗಳಾಗಿದ್ದಾರೆ. ರಾಜನಾದ ನಿನ್ನಿಂದ ಮರಣದಂಡನೆಗೆ ಭಾಗಿಗಳಾಗಿದ್ದಾರೆ. ಆದ್ದರಿಂದ ನಿನಗೆ ಯಾವ ದೋಷಗಳೂ ಕೂಡ ಇದರಿಂದ ಬರುವುದಿಲ್ಲ. ದುರಾತ್ಮನಾದ ಕರ್ಣನ ದುರ್ಬು- ದ್ಧಿಯಿಂದ, ಸೌಬಲನ ಪಾಪಬುದ್ಧಿಯಿಂದ ಅವರು ಇಂದು ಮರಣಶಿಕ್ಷೆಯನ್ನು ಅನುಭವಿಸಿದ್ದಾರೆ.
ಪಶ್ಯತಾಂ ಚೈವ ಶೂರಾಣಾಂ ಯಾऽಹಂ ದ್ಯೂತೇ ಸಭಾಂ ತದಾ |
ರಜಸ್ವಲಾ ಸಮಾನೀತಾ ಭವತಾಂ ಪಶ್ಯತಾಂ ನೃಪ |
ವಾಸಸೈಕೇನ ಸಂವೀತಾ ತವ ದೋಷೇಣ ಭೂಪತೇ ॥118॥
ಅವರೆಲ್ಲರೂ ಪಾಪಬುದ್ಧಿಯಾಗಿದ್ದರು ಎಂಬುದನ್ನು ನೀನೂ ಕೂಡ ಈ ಹಿಂದೆ ನೋಡಿರುವಿ. ಆ ಧೃತರಾಷ್ಟ್ರನ ಮಕ್ಕಳು ಜೂಜಾಟದಲ್ಲಿ ನಿನ್ನನ್ನು ಸೋಲಿಸಿದರು. ಸಭೆಯಲ್ಲಿ ಅನೇಕ ಶೂರರ ಮತ್ತು ನಿನ್ನ ಎದುರು ಏಕವಸ್ತ್ರಳಾದ ನನ್ನನ್ನು ರಾಜಸಭೆಯಲ್ಲಿ ಸೆಳೆದು ತಂದರು. ರಜಸ್ವಲಳಾದ ನನಗೆ ಹೀಗೆ ಅವಮಾನ ಮಾಡಿದ ಅಂಥವರು ಬ್ರಹ್ಮಹತ್ಯಾ, ಸ್ತ್ರೀಹತ್ಯಾ ಮೊದಲಾದ ದೋಷಗಳಿಂದ ಪೂರಿತರಾಗಿ- ದ್ದಾರೆ.
ಮಾಭೂದ್ ಧರ್ಮವಿಲೋಪಸ್ತೇ ಧೃತರಾಷ್ಟ್ರಕುಲಕ್ಷಯಾತ್ |
ಕ್ರೋಧಾಗ್ನಿನಾ ತು ದಗ್ಧಂ ಚ ಸಪಶುದ್ರವ್ಯಸಂಚಯಮ್ ॥119॥
ನಿನ್ನ ಕೋಪಾಗ್ನಿಯಿಂದಲೇ ಸಮಸ್ತ ಪಶುದ್ರವ್ಯಗಳ ಜೊತೆ ಆ ಧೃತರಾಷ್ಟ್ರಕುಲವು ಈ ಹಿಂದೆಯೇ ನಷ್ಟವಾಗಿದೆ. ಅದನ್ನೇ ಈಗ ಯುದ್ಧದಲ್ಲಿ ನಾಶ ಮಾಡಿರುವಿ. ನಿನಗೆ ಈ ವಿಷಯದಲ್ಲಿ ಧರ್ಮಲೋಪದ ಭಯವು ಸರ್ವಥಾ ಬೇಡ.
ಸಾऽಹಮೇವಂವಿಧಂ ದುಃಖಂ ಸಂಪ್ರಾಪ್ತಾ ತವ ಹೇತುನಾ |
ಆದಿತ್ಯಸ್ಯ ಪ್ರಸಾದೇನ ನಚ ಪ್ರಾಣೈರ್ವಿಯೋಜಿತಾ ॥120॥
ನಿನ್ನಲ್ಲಿರುವ ಅತಿಯಾದ ಕಾರುಣ್ಯದಿಂದಲೇ ನಾನು ಇಂಥ ಮಹಾದುಃಖಗಳನ್ನು ಅನುಭವಿಸಿದೆನು. ಆದರೆ ಆ ಸೂರ್ಯನಾರಾಯಣನ ಅನುಗ್ರಹದಿಂದ ನಾನು ಪ್ರಾಣಗಳನ್ನು ರಕ್ಷಣೆ ಮಾಡಿಕೊಂಡೆನು.
ರಕ್ಷಿತಾ ದೇವದೇವೇನ ಜಗತಃ ಕಾಲಹೇತುನಾ |
ದಿವಾಕರೇಣ ದೇವೇನ ವಿವಸಾತ್ರ ನ ಕೃತಾ ತದಾ ॥121॥
ಆ ಸೂರ್ಯನ ರಥದಲ್ಲಿ ಕುಳಿತ ನಾರಾಯಣನು ನನಗೆ ಅವಮಾನವಾ- ಗುತ್ತಿರುವ ಪ್ರಸಂಗವನ್ನು ಅರಿತು, ವಸ್ತ್ರಹೀನಳಾಗದಂತೆ ರಕ್ಷಿಸಿದನು.
ಏತೇಷಾಂ ಯತಮಾನಾನಾಮುತ್ಪದ್ಯಂತೇ ತು ಸಂಪದಃ |
ತ್ವಂ ತು ಸರ್ವಾ ಮಹೀಂ ಲಬ್ಧ್ವಾ ಕುರುಷೇ ಸ್ವಯಮಾಪದಮ್ ॥122॥
ನಿನ್ನ ತಮ್ಮಂದಿರು ನಿನ್ನನ್ನು ಸಮಾಧಾನಗೊಳಿಸಲು ಬಹಳ ಪ್ರಯತ್ನಪಡುತ್ತಿ- ದ್ದಾರೆ. ಸಂಪತ್ತು ಪ್ರಾಪ್ತವಾದಾಗ ಅದನ್ನು ಸ್ವೀಕರಿಸು. ಸಮಸ್ತ ಭೂಮಂಡಲವನ್ನು ಪರಿತ್ಯಾಗ ಮಾಡುವುದಾದರೆ ನೀನೇ ಆಪತ್ತನ್ನು ತಂದುಕೊಂಡಂತಾಗುತ್ತದೆ.
ವಿವರಣೆ - ದ್ರೌಪದೀ ದೇವಿಯು ಯುಧಿಷ್ಠಿರನಿಗೆ ಕ್ಷತ್ರಿಯನ ಕರ್ತವ್ಯವನ್ನು ವಿವರವಾಗಿ ಬೋಧಿಸಿದಳು. ಬ್ರಾಹ್ಮಣರ ಧರ್ಮದ ವ್ಯತ್ಯಾಸವನ್ನು ತಿಳಿಸಿ ಹೇಳಿದಳು. ಕ್ಷತ್ರಿಯನು ಬ್ರಾಹ್ಮಣ ಧರ್ಮವನ್ನು ಸ್ವೀಕರಿಸಬಾರದು. ದಂಡನೀತಿ- ಯನ್ನು ಅಳವಡಿಸಿಕೊಂಡು ರಾಜ್ಯವನ್ನು ಪರಿಪಾಲನೆ ಮಾಡಬೇಕೆಂಬುದನ್ನು ಶುಕ್ರನೀತಿಯ ಉಲ್ಲೇಖ ಮಾಡುವ ಮೂಲಕ ಮಾರ್ಮಿಕವಾಗಿ ಉಪದೇಶಿಸಿ- ದಳು. ಹೀಗೆ ಉಪದೇಶಿಸಿ ನಿನ್ನ ತಮ್ಮಂದಿರು ನಿನಗೆ ಹೇಳಿದ ಮಾತುಗಳೆಲ್ಲವೂ ಸತ್ಯವೇ ಆಗಿವೆ. ಅವರ ಮಾತುಗಳಲ್ಲಿ ವಿಶ್ವಾಸವನ್ನು ನೀನು ಇಡಲೇ ಬೇಕು. ಸರ್ವಥಾ ಉಪೇಕ್ಷೆ ಮಾಡಬಾರದು. ಅದರಂತೆ ನಾನು ಹೇಳುತ್ತಿರುವ ಮಾತು- ಗಳೂ ಕೂಡ ಸತ್ಯವೇ ಆಗಿವೆ. ಅಖಂಡ ಭೂಮಂಡಲವನ್ನು ನಿನ್ನ ಭುಜಪರಾ- ಕ್ರಮದಿಂದ ಪಡೆದಿರುವಿ. ಇನ್ನೇನು ಅನುಭವಿಸುವ ಸಂದರ್ಭ ಒದಗಿದಾಗ ನೀನು ಕಾಡಿಗೆ ತೆರಳಿದರೆ ನಿನ್ನನ್ನು ಮೂರ್ಖನೆಂದೇ ಜಗತ್ತು ತಿಳಿಯುತ್ತದೆ. ಮತ್ತು ಎಲ್ಲಾ ಆಪತ್ತುಗಳನ್ನು ನೀನೇ ತಂದುಕೊಂಡಂತಾಗುತ್ತದೆ. ಆದ್ದರಿಂದ ರಾಜ್ಯಭಾರವನ್ನು ಸ್ವೀಕರಿಸಿ, ಉತ್ತಮ ರೀತಿಯಲ್ಲಿ ಪ್ರಜೆಗಳ ರಕ್ಷಣೆಗಳನ್ನು ಮಾಡಿ, ಧರ್ಮಶೀಲ- ನಾಗು ಎಂದು ಉಪದೇಶಿಸುತ್ತಿದ್ದಾಳೆ.
ಯಥಾಸ್ತಾಂ ಸಮ್ಮತೌ ರಾಜ್ಞಾಂ ಪೃಥಿವ್ಯಾಂ ರಾಜಸತ್ತಮೌ |
ಮಾಂಧಾತಾ ಚಾಂಬರೀಷಶ್ಚ ತಥಾ ರಾಜನ್ ವಿರಾಜಸೇ ॥123॥
ಹಿಂದೆ ಅಂಬರೀಷ ಮತ್ತು ಮಾಂಧಾತಾ ಎಂಬ ಇಬ್ಬರು ರಾಜರಿದ್ದರು. ಇವ- ರನ್ನು ಎಲ್ಲರೂ ಕೂಡ ಒಪ್ಪಿಕೊಂಡಿದ್ದರು. ಧರ್ಮಸಮ್ಮತವಾಗಿ ಅವರ ರಾಜ್ಯಪರಿ- ಪಾಲನೆಯು ಆದರ್ಶಪ್ರಾಯವಾಗಿತ್ತು. ಅದರಂತೆ ನೀನೂ ಸಹ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡಿದರೆ ಸಮಸ್ತರಿಂದ ಸ್ತುತ್ಯನಾಗುವಿ. ಲೋಕದಲ್ಲಿ ವಿರಾಜಿಸುವಿ.
ಪ್ರಶಾಧಿ ಪೃಥಿವೀಂ ದೇವೀಂ ಪ್ರಜಾ ಧರ್ಮೇಣ ಪಾಲಯನ್ |
ಸಪರ್ವತವನದ್ವೀಪಾಂ ಮಾ ರಾಜನ್ ವಿಮನಾ ಭವ ॥124॥
ಪರ್ವತ, ವನ, ದ್ವೀಪಗಳಿಂದ ಕಂಗೊಳಿಸುತ್ತಿರುವ ಈ ಭೂದೇವಿಯನ್ನು ಧರ್ಮದಿಂದ ಪರಿಪಾಲನೆ ಮಾಡು. ಎಂದೂ ಕೂಡ ರಾಜ್ಯಪರಿಪಾಲನೆಯ ವಿಷಯದಲ್ಲಿ ವಿಮುಖನಾಗಬೇಡ.

ಯಜಸ್ವ ವಿವಿಧೈರ್ಯಜ್ಞೈರ್ಜುಹ್ವನ್ನಗ್ನೀನ್ ಪ್ರಯಚ್ಛ ಚ |
ಪುರಾಣಿ ಭೋಗಾನ್ ವಾಸಾಂಸಿ ದ್ವಿಜಾತಿಭ್ಯೋ ನೃಪೋತ್ತಮ ॥125॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಚತುರ್ದಶೋಽಧ್ಯಾಯಃ ॥14॥
ನೃಪೋತ್ತಮನೇ! ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾಗಿ ಅನೇಕ ಧಾರ್ಮಿಕಕಾರ್ಯ -ಗಳನ್ನು ನೆರವೇರಿಸು. ಬಗೆಬಗೆಯ ಯಜ್ಞಯಾಗಾದಿಗಳನ್ನು ಆಚರಿಸು. ಅಗ್ನಿಯಲ್ಲಿ ಎಲ್ಲ ದೇವತೆಗಳಿಗೆ ಆಹುತಿಯನ್ನು ನೀಡಿ ತೃಪ್ತಿ ಪಡಿಸು. ಭೂಲೋಕದಲ್ಲಿರುವ ಬ್ರಾಹ್ಮಣರನ್ನು ಅನೇಕ ಬಗೆಯ ಸಂಪತ್ತುಗಳನ್ನು, ಭೋಗವಸ್ತುಗಳನ್ನು , ವಸ್ತ್ರಗಳನ್ನು ದಾನಮಾಡುವ ಮೂಲಕ ತೃಪ್ತಿಪಡಿಸು.
ಗಮನಿಸಿ - ಹದಿನಾಕನೆಯ ಈ ಅಧ್ಯಾಯದಲ್ಲಿ ಒಟ್ಟು ನೂರಿಪ್ಪತ್ತೈದು ಶ್ಲೋಕ -ಗಳಿವೆ. ಆದರೆ ಪ್ರಚಲಿತ ಪಾಠದಲ್ಲಿ ಕೇವಲ ಮೂವತ್ತೊಂಬತ್ತು ಶ್ಲೋಕಗಳು ಕಾಣಿಸುತ್ತವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 14ನೆಯ ಅಧ್ಯಾಯವು ಮುಗಿಯಿತು.
*****

ಹದಿನೈದನೆಯ ಅಧ್ಯಾಯ

ಅರ್ಜುನನು ಯುಧಿಷ್ಠಿರನಿಗೆ ದಂಡಪ್ರಯೋಗದ ಮಹತ್ವವನ್ನು ತಿಳಿಸುತ್ತಿದ್ದಾನೆ. ಲೋಕದಲ್ಲಿ ನಾಕುವರ್ಣದವರು, ನಾಕು ಆಶ್ರಮದವರು ತಮ್ಮತಮ್ಮ ಕರ್ತವ್ಯದಲ್ಲಿ ದಂಡನೀತಿಗೆ ಭಯಪಟ್ಟೇ ಅನುಷ್ಠಾನವನ್ನು ಮಾಡುತ್ತಿದ್ದಾರೆ. ಸಕಲ ಪ್ರಾಣಿಗಳೂ ಕೂಡ ದಂಡಪ್ರಯೋಗಕ್ಕೆ ಹೆದರುತ್ತವೆ. ದುಷ್ಟರ ವಿಷಯದಲ್ಲಿ, ದುಷ್ಟವಿಚಾರಗಳಲ್ಲಿ, ತಪ್ಪು ಮಾಡಿದವರಲ್ಲಿ ಮಾತ್ರ ದಂಡಪ್ರಯೋಗವನ್ನು ಮಾಡಬೇಕು. ಪ್ರಾಮಾಣಿಕತೆ ಮೊದಲಾದವುಗಳಿದ್ದಲ್ಲಿ ಮಾಡಬಾರದು. ಶತ್ರುಗಳ ವಧದಿಂದ ದುಃಖವನ್ನು ಪಡಬಾರದು. ಮೃತ್ಯುವೆಂದರೆ ಹಳೆಯ ದೇಹವನ್ನು ಬಿಡುವುದು ಎಂದರ್ಥ. ಧರ್ಮರಾಜನೇ! ನಿನಗೆ ದುಃಖಿಸಲು ಯಾವ ಕಾರಣಗಳು ಇರುವುದಿಲ್ಲ.
ವೈಶಂಪಾಯನಃ
ಯಜ್ಞಸೇನ್ಯಾ ವಚಃ ಶ್ರುತ್ವಾ ಪುನರೇವಾರ್ಜುನೋಽಬ್ರವೀತ್ |
ಅನುಮಾನ್ಯ ಮಹಾಬಾಹುಂ ಜ್ಯೇಷ್ಠಂ ಭ್ರಾತರಮೀಶ್ವರಮ್ ॥1॥
ವೈಶಂಪಾಯನರು ಯಾಜ್ಞಸೇನೆಯ ಮಾತುಗಳನ್ನು ಕೇಳಿ ಪುನಃ ಅರ್ಜುನನು ಮಾತನಾಡಲು ಪ್ರಾರಂಭಿಸಿದನು. ಮಹಾಬಾಹುವಾದ ಲೋಕಕ್ಕೆ ರಾಜನಾದ ತನ್ನ ಹಿರಿಯಣ್ಣನನ್ನು ಕುರಿತು ಗೌರವಪೂರ್ವಕವಾದ ಮಾತುಗಳಿಂದ ಹೀಗೆ ಹೇಳುತ್ತಾನೆ.
ವಿವರಣೆ - ದ್ರೌಪದೀದೇವಿಯು ಶುಕ್ರನೀತಿ, ಬೃಹಸ್ಪತಿನೀತಿ ಮೊದಲಾದವು- ಗಳನ್ನು ಉಲ್ಲೇಖಮಾಡುವ ಮೂಲಕ ರಾಜನಿಗೆ ಅನೇಕ ವಿಧವಾಗಿ ಬೋಧನೆ- ಯನ್ನು ಮಾಡಿದಳು. ಇಷ್ಟಾದರೂ ಯುಧಿಷ್ಠಿರನಿಗೆ ರಾಜ್ಯಭಾರವನ್ನು ಮಾಡಲೇ- ಬೇಕೆಂಬ ದಾರ್ಢ್ಯವು ಬರುವುದಿಲ್ಲ. ವಿಚಲಿತನಾಗದೇ ತುಮುಲದಲ್ಲಿಯೇ ಕುಳಿತ ಯುಧಿಷ್ಠಿರನನ್ನು ಕುರಿತು, ಅರ್ಜುನನಿಗೆ ಸಾಂತ್ವನ ಮಾಡಬೇಕೆಂಬ ಬಯಕೆ ಉಂಟಾಗುತ್ತದೆ. ದ್ರೌಪದೀದೇವಿಯ ಮಾತುಗಳನ್ನೇ ಉಪೋದ್ಬಲಿಸುವ ಮೂಲಕ ತಾನೂ ಸಹ ಯುಧಿಷ್ಠಿರನನ್ನು ಕುರಿತು, ಅನೇಕ ವಿಚಾರಗಳನ್ನು ತಿಳಿಸಲು ಪ್ರಾರಂಭ ಮಾಡುತ್ತಾನೆ. ಅವಳು ತಿಳಿಸಿದ ದಂಡನೀತಿಯ ಬಗ್ಗೆ ಮತ್ತಷ್ಟು ಮಹತ್ವವನ್ನು ಸಾರುತ್ತಾನೆ.
ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ |
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥2॥
ಮಹಾರಾಜನೇ! ದಂಡನೀತಿಯನ್ನು ಅವಶ್ಯವಾಗಿ ಅಳವಡಿಸಿಕೊಳ್ಳಬೇಕು. ಈ ದಂಡವೇ ಸಮಸ್ತಪ್ರಜೆಗಳನ್ನು ಪರಿಪಾಲನೆ ಮಾಡುತ್ತದೆ. ಎಲ್ಲರನ್ನೂ ಕೂಡ ಈ ದಂಡವೇ ರಕ್ಷಿಸುತ್ತದೆ. ಸಮಸ್ತ ಜಗತ್ತು ಮಲಗಿದ್ದರೂ ಕೂಡ ಈ ದಂಡವು ಎಚ್ಚರ- ವಾಗಿರುತ್ತದೆ. ವಿದ್ವಾಂಸರು ಈ ದಂಡವನ್ನು ಧರ್ಮವೆಂದು ಸಾರುತ್ತಾರೆ.
ಧರ್ಮಂ ಸಂರಕ್ಷತೇ ದಂಡಸ್ತಥೈವಾರ್ಥಂ ನರಾಧಿಪ |
ಕಾಮಂ ಸಂರಕ್ಷತೇ ದಂಡಸ್ತ್ರಿವರ್ಗೋ ದಂಡ ಉಚ್ಯತೇ ॥3॥
ನರಾಧಿಪನೇ! ದಂಡವೇ ಧರ್ಮವನ್ನು ರಕ್ಷಿಸುತ್ತದೆ. ಅರ್ಥವನ್ನೂ ಕೂಡ ರಕ್ಷಣೆ ಮಾಡುತ್ತದೆ. ಕಾಮವನ್ನೂ ಕೂಡ ಈ ದಂಡವೇ ಪರಿಪಾಲನೆ ಮಾಡುತ್ತದೆ. ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗವೂ ಕೂಡ ದಂಡವೆಂದೇ ಕರೆಸಿಕೊಳ್ಳುತ್ತದೆ.
ದಂಡೇನ ರಕ್ಷ್ಯತೇ ಧಾನ್ಯಂ ಧನಂ ದಂಡೇನ ರಕ್ಷ್ಯತೇ |
ಏತದ್ ವಿದ್ವನ್ನುಪಾದತ್ಸ್ವ ಸ್ವಭಾವಂ ಪಶ್ಯ ಲೌಕಿಕಮ್ ॥4॥
ಧಾನ್ಯಗಳ ರಕ್ಷಣೆಯೂ ಕೂಡ ದಂಡದಿಂದಲೇ ಆಗುತ್ತದೆ. ಧನದ ರಕ್ಷಣೆಯೂ ಕೂಡ ದಂಡದಿಂದಾಗುತ್ತದೆ. ಈ ರೀತಿಯಾಗಿ ತಿಳಿದು ದಂಡದ ಪರಿಣಾಮಗಳೇನು ಎಂಬುದನ್ನು ಅರ್ಥ ಮಾಡಿಕೊಂಡು, ನೀನು ಆ ದಂಡನೀತಿಯನ್ನು ಅಳವಡಿಸು. ಸಮಸ್ತ ಜಗತ್ತಿನ ಸ್ವಭಾವವನ್ನು ಇದರ ಮೂಲಕ ಅವಲೋಕಿಸು.
ರಾಜದಂಡಭಯಾದೇಕೇ ಪಾಪಾಃ ಪಾಪಂ ನ ಕುರ್ವತೇ |
ಯಮದಂಡಭಯಾದೇಕೇ ಪರಲೋಕಭಯಾದಪಿ ॥5॥
ಕೆಲವರು ರಾಜದಂಡದ ಭಯದಿಂದ ಪಾಪವನ್ನು ಮಾಡುವುದಿಲ್ಲ. ಇನ್ನುಳ ಕೆಲವರು ಯಮದಂಡದ ಭಯದಿಂದ ಪಾಪಕಾರ್ಯಗಳನ್ನು ಮಾಡುವುದಿಲ್ಲ. ಇನ್ನು ಕೆಲವರು ಪರಲೋಕದ ಭಯದಿಂದ ಪಾಪಕಾರ್ಯವನ್ನು ಮಾಡುವುದಿಲ್ಲ. ಹೀಗೆ ದಂಡವೇ ಎಲ್ಲರನ್ನು ಸನ್ಮಾರ್ಗದಲ್ಲಿ ನಡೆಸುತ್ತದೆ.
ವಿವರಣೆ - ಮತ್ತೊಬ್ಬರ ಈ ಲೋಕದಲ್ಲಿ ದಂಡದ ಭಯವು ಇಲ್ಲದಿದ್ದರೆ ಪ್ರತಿಯೊಬ್ಬರೂ ವ್ಯಭಿಚಾರಿಗಳಾಗಿರುತ್ತಿದ್ದರು. ಕಳ್ಳಕಾಕರರಾಗಿರುತ್ತಿದ್ದರು. ಅಧರ್ಮಮಾರ್ಗದಲ್ಲಿ ನಡೆಯುವ ಮೂಲಕ ಪಾತಕಿಗಳಾಗಿರುತ್ತಿದ್ದರು. ಕೆಲವ- ರಿಗೆ ಲೋಕದ ಜನರು ಶಿಕ್ಷಿಸುತ್ತಾರೆಂಬ ಭಯ. ಕೆಲವರಿಗೆ ಸೆರೆಮನೆ ಮೊದಲಾದ- ವುಗಳ ಭಯ. ಕೆಲವರಿಗೆ ರಾಜರುಗಳ ಭಯ. ಕೆಲವರಿಗೆ ಯಮದೇವರ ಭಯ. ಇನ್ನೂ ಕೆಲವರಿಗೆ ನರಕ ಮೊದಲಾದ ಪರಲೋಕಗಳ ಭಯ. ಶಿಕ್ಷೆಗೆ ಹೆದರಿಯೇ ಪ್ರತಿಯೊಬ್ಬರೂ ಕೂಡ ಅಪರಾಧಗಳನ್ನು

ಮಾಡದೇ ಸನ್ಮಾರ್ಗದಲ್ಲಿ ನಡೆಯಲು ಪ್ರಯತ್ನಿಸುತ್ತಾರೆ. ದಂಡದ ಭಯವೇ ಇದ್ದಲ್ಲಿ ಹೀಗೆ ಸನ್ಮಾರ್ಗದಲ್ಲಿ ನಡೆಯಲು ಸಾಧ್ಯವಾಗುತ್ತಿರಲಿಲ್ಲ. ಪ್ರಸ್ತುತ ಜೀವನಕ್ಕೆ ಈ ಶ್ಲೋಕವು ಅತ್ಯಂತ ಅರ್ಥ- ಪೂರ್ಣವಾಗಿದೆ.

ಪರಸ್ಪರಭಯಾದೇಕೇ ಪಾಪಾಃ ಪಾಪಂ ನ ಕುರ್ವತೇ |
ಏವಂ ಸಾಂಸಿದ್ಧಿಕೇ ಲೋಕೇ ಸರ್ವಂ ದಂಡೇ ಪ್ರತಿಷ್ಠಿತಮ್ ॥6॥

ದಂಡಕ್ಕೆ ಹೆದರಿ ಒಬ್ಬರನ್ನೊಬ್ಬರು ಪರಸ್ಪರ ಕಬಳಿಸುವುದಿಲ್ಲ. ಈ ದಂಡವು ಲೋಕವನ್ನು ನಿಯಮಿಸುತ್ತಿದೆ. ಆದ್ದರಿಂದ ಎಲ್ಲವೂ ಕೂಡ ದಂಡದಲ್ಲಿಯೇ ಅಡಗಿದೆ.

ವಿವರಣೆ - ಕೆಲವರಲ್ಲಿ ಪರಸ್ಪರ ಭಯವಿರುತ್ತದೆ. ನಾನು ಅವನ ಸ್ವತ್ತನ್ನು ಅಪ- ಹಾರ ಮಾಡಿದರೆ, ಅವನು ನಾಳೆ ನನ್ನ ಸ್ವತ್ತನ್ನು ಅಪಹರಿಸುತ್ತಾನೆಂಬ ಭಯ- ವಿರುತ್ತದೆ. ನಾನು ಅವನನ್ನು ಕೊಂದರೆ ಅವನ ಕಡೆಯವರು ನನ್ನನ್ನು ಕೊಲ್ಲುತ್ತಾ- ರೆಂಬ ಭಯವಿರುತ್ತದೆ. ಹೀಗೆ ಲೋಕದಲ್ಲಿ ಪರಸ್ಪರವಾಗಿಯೂ ದಂಡಪ್ರಯೋಗ- ಗಳಿರುವುದರಿಂದ ಅದಕ್ಕೆ ಹೆದರಿಯೇ ಕೆಟ್ಟ ಕೆಲಸಗಳನ್ನು ಪಾಪಿಗಳೂ ಕೂಡ ಮಾಡುವುದಿಲ್ಲ. ಸಾಧುಗಳೂ ಕೂಡ ದಂಡಕ್ಕೆ ಹೆದರುತ್ತಾರೆ. ಪಾಪಿಷ್ಠರೂ ಕೂಡ ದಂಡಕ್ಕೆ ಹೆದರುತ್ತಾರೆ. ಲೋಕಮಾರ್ಯಾದೆಯನ್ನು ಅತಿಕ್ರಮವನ್ನು ಮಾಡದಿರಲು ಎಲ್ಲರೂ ದಂಡವನ್ನೇ ಅಪೇಕ್ಷಿಸುತ್ತಾರೆ. ಪಶುಗಳೂ ಕೂಡ ಯಜಮಾನನಿಗೆ ಹೆದರಿಯೇ ಉಪಕರಿಸುತ್ತವೆ. ಹೀಗೆ ಸಕಲವೂ ಕೂಡ ದಂಡದಲ್ಲಿಯೇ ಪ್ರತಿಷ್ಠಿತ- ವಾಗಿದೆ.

ದಂಡಸ್ಯೈವ ಭಯಾದೇಕೇ ನ ಖಾದಂತಿ ಪರಸ್ಪರಮ್ |
ಅಂಧೇ ತಮಸಿ ಮಜ್ಜೇಯುರ್ಯದಿ ದಂಡೋ ನ ಪಾಲಯೇತ್॥7॥

ಶಿಕ್ಷೆಯ ಭಯದಿಂದಲೇ ಒಬ್ಬ ಮತ್ತೊಬ್ಬನನ್ನು ಕಡಿದು ತಿನ್ನುತ್ತಿಲ್ಲ. ಒಂದು ವೇಳೆ ಶಿಕ್ಷೆಯ ಭಯವೇ ಇಲ್ಲದಿದ್ದರೆ ಸಮಸ್ತಲೋಕವೇ ಅಂಧಂತಮಸ್ಸಿನಲ್ಲಿ ಮುಳುಗಿಹೋಗುತ್ತಿತ್ತು.

ವಿವರಣೆ - ಜಗತ್ತಿನಲ್ಲಿ ನರಮಾಂಸ ಭಕ್ಷಕರು ಏಕಿಲ್ಲ ಎಂದರೆ ? ಮತ್ತೊಬ್ಬರು ಶಿಕ್ಷಿಸುತ್ತಾರೆ ಎಂಬ ಭಯದಿಂದ ಅಷ್ಟೇ. ಶಿಕ್ಷೆಯ ಭಯವು ಇಲ್ಲದಿದ್ದರೆ ಪರಸ್ಪರ ಜನಗಳೇ ಕೊಚ್ಚಿ ತಿಂದುಹಾಕುತ್ತಿದ್ದರು. ರಾಜರು ದಂಡನೀತಿಯನ್ನು ಪ್ರಯೋಗ ಮಾಡದಿದ್ದರೆ ಸಮಸ್ತ ಜಗತ್ತು ದುಃಖಸಾಗರದಲ್ಲಿ ಮುಳುಗಿ ಹೋಗುತ್ತಿತ್ತು.

ಇಂದಿನ ಸಮಾಜದಲ್ಲೂ ನಾವು ಕಾನೂನಿನ ಮಹತ್ವವನ್ನು ಅರಿತಿದ್ದೇವೆ. ಎಲ್ಲಾ ಮಂತ್ರಿಗಳೂ ಕೂಡ ಕಾನೂನಿನ ಅಧೀನವಾಗಿಯೇ ಕೆಲಸವನ್ನು ಮಾಡುತ್ತಾರೆ. ನ್ಯಾಯಾಲಯಗಳೂ ಕೂಡ ಕಾನೂನಿನ ಅಧೀನವಾಗಿಯೇ ಕಾರ್ಯಗಳನ್ನು ನಿರ್ವಹಿಸುತ್ತವೆ. ಕಾನೂನಿಗೆ ಎಂಥ ಘಟಾನುಘಟಿಗಳೂ ಕೂಡ ಭಯಪಡುತ್ತಾರೆ. ಅದನ್ನೇ ಇಲ್ಲಿ ದಂಡನೀತಿ ಇತ್ಯಾದಿಯಾಗಿ ಕರೆಯುತ್ತಿದ್ದಾರೆ.

ಯಸ್ಮಾದದಾಂತಾನ್ ದಮಯತ್ಯಶಿಷ್ಟಾನ್ ದಂಡಯತ್ಯಪಿ |
ದಮನಾದ್ ದಂಡಾನಾಚ್ಚೈವ ತಸ್ಮಾದ್ ದಂಡಂ ವಿದುರ್ಬುಧಾಃ ॥8॥

ಸ್ವೇಚ್ಛಾಚಾರಿಗಳನ್ನು ನಿಗ್ರಹ ಮಾಡುವುದರಿಂದಲೇ ಇದಕ್ಕೆ ದಂಡ ಎಂದು ಹೆಸರು. ದುಷ್ಟರನ್ನು ಶಿಕ್ಷೆಗೆ ಒಳಪಡಿಸುವುದರಿಂದಲೂ ಇದಕ್ಕೆ ದಂಡ ಎಂದು ಹೆಸರು. ದಮನ ಮಾಡುವುದರಿಂದ, ದಂಡನೆ ಮಾಡುವುದರಿಂದ ಇದಕ್ಕೆ ದಂಡ ಎಂಬುದಾಗಿ ವಿದ್ವಾಂಸರು ಕರೆಯುತ್ತಾರೆ.

ವಿವರಣೆ - `ದಂಡಯತೀತಿ ದಂಡಃ' ಅಥವಾ `ದಮಯತೀತಿ ದಂಡಃ' ಎಂಬ ವ್ಯುತ್ಪತ್ತಿಯನ್ನು ತಿಳಿಯಬೇಕು. ದಂಡಯತಿ ಎಂದರೆ ಹೊಡೆಯುವುದರಿಂದ ಎಂದರ್ಥ. ಛಡಿ ಏಟು ಕೊಡುವುದರಿಂದ, ಅಥವಾ ಗಲ್ಲುಶಿಕ್ಷೆ ಮೊದಲಾದವು- ಗಳನ್ನು ನೀಡುವುದರಿಂದ ಇದಕ್ಕೆ ದಂಡ ಎಂದು ಕರೆಯುತ್ತಾರೆ. `ದಮಯತಿ ಇತಿ ದಂಡಃ' ಎಂಬುದಕ್ಕೆ ಅವನಲ್ಲಿರುವ ಎಲ್ಲ ಐಶ್ವರ್ಯವನ್ನು ಕಸಿದುಕೊಳ್ಳುವು- ದರಿಂದ ಅವನಲ್ಲಿರುವ ಒಳ್ಳೆಯ ಹೆಸರನ್ನು ಕಸಿದುಕೊಳ್ಳುವುದರಿಂದ ತನ್ಮೂಲಕ- ವಾಗಿ ಸಮಾಜದಲ್ಲಿ ಎಂದೆಂದೂ ಮೇಲೆದ್ದು ಬಾರದಂತೆ ಮಾಡುವುದರಿಂದ `ದಂಡ' ಎಂಬುದಾಗಿ ಕರೆಯುತ್ತಾರೆ. ಆದ್ದರಿಂದ ಯಾರೊಬ್ಬರೂ ಕೂಡ ಸ್ವೇಚ್ಛಾ- ಚಾರಿಗಳಾಗಿ ಬದುಕಲು ಸಾಧ್ಯವಿಲ್ಲ.

ವಾಚಾ ದಂಡೋ ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ಭುಜಾರ್ಪಣಮ್|
ದಾನದಂಡಃ ಸ್ಮೃತೋ ವೈಶ್ಯೋ ನಿರ್ದಂಡಃ ಶೂದ್ರ ಉಚ್ಯತೇ ॥9॥

ಎಲ್ಲರಿಗೂ ಕೂಡ ಸಮಾನವಾಗಿ ಶಿಕ್ಷೆಯನ್ನು ಕೊಡಬಾರದು. ಬ್ರಾಹ್ಮಣರಿಗೆ ಮಾತಿನಿಂದಷ್ಟೇ ಶಿಕ್ಷೆ. ಕ್ಷತ್ರಿಯನಿಗೆ ಯುದ್ಧದಲ್ಲಿ ತೊಡಗಿಸುವಿಕೆಯೇ ಶಿಕ್ಷೆ. ವೈಶ್ಯರಿಗೆ ಸಂಪತ್ತನ್ನು ಕಸಿದುಕೊಳ್ಳುವುದೇ ಶಿಕ್ಷೆ. ಶೂದ್ರರಿಗೆ ಸೇವಾವೃತ್ತಿಯಲ್ಲಿರುವಂತೆ ಮಾಡುವುದೇ ಶಿಕ್ಷೆ.

ವಿವರಣೆ - ಬ್ರಾಹ್ಮಣರಿಗೆ ಗಲ್ಲುಶಿಕ್ಷೆಯನ್ನು ಕ್ಷತ್ರಿಯನು ನೀಡಬಾರದು. ಅಥವಾ ಛಡಿಯೇಟು ಮೊದಲಾದವುಗಳನ್ನೂ ಕೂಡ ಕೊಡಬಾರದು. `ಉತ್ತಮೇ ವಚಸಾ ಶಿಕ್ಷಾ' ಎಂಬ ಮಾತಿನಂತೆ ಮಾತಿನಿಂದ ನಿಂದಿಸಬೇಕು, ಗದರಿಸಬೇಕು. ಇಷ್ಟು ಮಾತ್ರ ಬ್ರಾಹ್ಮಣನಿಗೆ ನೀಡಬಹುದಾದ ಶಿಕ್ಷೆ. ಕ್ಷತ್ರಿಯರು ಅಪರಾಧವನ್ನು ಮಾಡಿದರೆ ಅವರನ್ನು ಯುದ್ಧದಲ್ಲಿ ತೊಡಗಿಸಬೇಕು. ಸೇನೆಯಲ್ಲಿ ಸೇರಿಸಿ ಯುದ್ಧವನ್ನು ಅವನ ಮೂಲಕ ಮಾಡಿಸಬೇಕು. ವೈಶ್ಯರಿಗೆ ಅವರ ಬಳಿ ಇರುವ ಎಲ್ಲಾ ಸಂಪತ್ತನ್ನು ಕಸಿದುಕೊಳ್ಳಬೇಕು. `ನಿರ್ದಂಡಃ ಶೂದ್ರ ಉಚ್ಯತೇ' ಎಂಬಂತೆ ಶೂದ್ರರಿಗೆ ದಂಡವೇ ಇಲ್ಲವೆಂದು ಹೇಳಿದಂತೆ ಕಾಣಿಸುತ್ತದೆ. ಶೂದ್ರನ ಮೂಲಕ ತನ್ನ ಸೇವೆಯನ್ನು ಮಾಡಿಸಿಕೊಳ್ಳುವುದೇ ಅವನಿಗೆ ನೀಡುವ ಶಿಕ್ಷೆ. ಆದರೆ ಇದು ಅವನ ವೃತ್ತಿಯಾಗಿರುವುದರಿಂದ `ನಿರ್ದಂಡಃ' ಎಂಬುದಾಗಿ ಶ್ಲೋಕದಲ್ಲಿ ಹೇಳಿ- ರುತ್ತಾರೆ.

ಟಿಪ್ಪಣಿ - ಕ್ಷತ್ರಿಯಾಣಾಂ ಭುಜಾರ್ಪಣಮ್ ಇತ್ಯತ್ರ ಭುಜಾರ್ಪಣಮ್ ಅನ್ಯೋನ್ಯಂ ಯುದ್ಧಾಯ ಭುಜಯೋರರ್ಪಣಮ್ | `ಭುಜಾರ್ಪಣ' ಎಂದರೆ ಯುದ್ಧ- ದಲ್ಲಿ ಭುಜಪರಾಕ್ರಮವನ್ನು ಸಮರ್ಪಿಸುವಿಕೆ ಎಂದರ್ಥ.

ಅಸಮ್ಮೋಹಾಯ ಮರ್ತ್ಯಾನಾಮರ್ಥಸಂರಕ್ಷಣಾಯ ಚ |
ಮರ್ಯಾದಾ ಸ್ಥಾಪಿತಾ ಲೋಕೇ ದಂಡಸಂಜ್ಞಾ ವಿಶಾಂಪತೇ ॥10॥

ರಾಜನೇ! ಮನುಷ್ಯರ ಮೋಹವು ದಂಡದಿಂದಲೇ ನಾಶವಾಗಲು ಸಾಧ್ಯ. ಅರ್ಥಸಂರಕ್ಷಣೆಯಾಗಬೇಕೆಂದರೂ ದಂಡನೀತಿಯನ್ನು ಅನುಸರಿಸಬೇಕು. ಲೋಕ- ಮರ್ಯಾದೆಯೇ `ದಂಡ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತದೆ.

ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಸೂನೃತಃ |
ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ ಸಾಧು ಪಶ್ಯತಿ ॥11॥
ಯಾವ ರಾಜ್ಯದಲ್ಲಿ ಕೆಂಪುಕಣ್ಣುಗಳಿಂದ ಕೂಡಿದ, ಕಪ್ಪುದೇಹದಿಂದ ಕೂಡಿರುವ ದಂಡಪುರುಷನು ದುಷ್ಟರನ್ನು ಶಿಕ್ಷಿಸುತ್ತಾನೋ, ಅಂಥ ದಂಡಪುರುಷನು ದಂಡ- ಪಾಣಿಯಾಗಿ ಸಂಚರಿಸಲು ರಾಜನು ಅನುಕೂಲ ಮಾಡುತ್ತಾನೋ, ಅಂಥ ರಾಜ್ಯದಲ್ಲಿ ಪ್ರಜೆಗಳು ಮೋಹಪರವಾಗಿರುವುದಿಲ್ಲ.
ವಿವರಣೆ - ಯಮನನ್ನೇ ಇಲ್ಲಿ ದಂಡಪುರುಷನೆಂದು ವಿವಕ್ಷಿಸಲಾಗಿದೆ. ತಪ್ಪು ಮಾಡಿದರೆ ಆ ಯಮನು ಬಂದು ಸ್ವತಃ ಶಿಕ್ಷೆಯನ್ನು ನೀಡುತ್ತಾನೆ ಎಂದಭಿಪ್ರಾಯ. ಕಪ್ಪುದೇಹದಿಂದ ಕೂಡಿರುವ ಆ ಯಮನು ಕ್ರೋಧಾತಿಶಯದಿಂದ ಕೆಂಪುಕಣ್ಣು- ಗಳನ್ನು ಒಮ್ಮೆ ಬಿಟ್ಟರೆ ಸಾಕು, ಎಂಥ ಅಪರಾಧಿಗಳೂ ಕೂಡ ಭಯಪಡುತ್ತಾರೆ. ಅಂಥ ದಂಡಪುರುಷನನ್ನು ನೆನೆಸಿಕೊಂಡೇ ಕೆಟ್ಟದ್ದನ್ನು ಮಾಡುವುದಿಲ್ಲ ಎಂದಷ್ಟೇ ಅಲ್ಲ. ಕೆಟ್ಟದ್ದನ್ನು ಮಾಡಲು ಯೋಚನೆಯನ್ನೂ ಕೂಡ ಪ್ರಜೆಗಳು ಮಾಡು- ವುದಿಲ್ಲ. ಇಂಥ ದಂಡಪುರುಷನು ಎಲ್ಲೆಡೆಯೂ ಸಂಚರಿಸುತ್ತಾನೆ. ಆದರೆ ರಾಜನು ಅತ್ಯಂತ ಧರ್ಮಯುಕ್ತನಾಗಿರಬೇಕು. ವಿನಯಾದಿ ಗುಣಗಳನ್ನು ಹೊಂದಿರಬೇಕು. ಅಂಥ ರಾಜ್ಯದಲ್ಲಿ ಮಾತ್ರ ದಂಡಪುರುಷನು ಸಂಚರಿಸುತ್ತಾನೆ.
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಽಥ ಭಿಕ್ಷುಕಃ |
ದಂಡಸ್ಯೈವ ಭಯಾದೇತೇ ಮನುಷ್ಯಾ ವರ್ತ್ಮನಿ ಸ್ಥಿತಾಃ ॥12॥
ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ನ್ಯಾಸಿ ಈ ನಾಲ್ಕು ಆಶ್ರಮದವರು ದಂಡ- ಪುರುಷನ ಭಯದಿಂದಲೇ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿದ್ದಾರೆ.
ವಿವರಣೆ - ಪ್ರತಿಯೊಬ್ಬರು ಅವರವರ ಆಶ್ರಮಧರ್ಮಗಳನ್ನು ಪರಿಪಾಲನೆ ಮಾಡಲೇ ಬೇಕು. ಇದೂ ಸಹ ದಂಡಪುರುಷನಾದ ಯಮಧರ್ಮನ ಭಯ- ದಿಂದಲೇ ನಡೆಯುತ್ತಿದೆ ಎಂಬುದಾಗಿ ಇಲ್ಲಿ ತಿಳಿಸಿದ್ದಾರೆ.
ನಾಭೀತೋ ಯಜತೇ ರಾಜನ್ನಾಭೀತೋ ದಾತುಮಿಚ್ಛತಿ |
ನಾಭೀತಃ ಪುರುಷಃ ಕಶ್ಚಿತ್ ಸಮಯೇ ಸ್ಥಾತುಮಿಚ್ಛತಿ ॥13॥
ದಂಡಪುರುಷನಿಗೆ ಹೆದರದವನು ಯಜ್ಞವನ್ನು ಆಚರಿಸುವುದಿಲ್ಲ. ಪಾಪದ ಭಯವಿಲ್ಲದವನು ದಾನವನ್ನು ಮಾಡುವುದಿಲ್ಲ. ಪಾಪದ ಭಯವಿಲ್ಲದವನು ತನ್ನ ಮಾತಿನ ಪ್ರಕಾರ ನಡೆಯಲು ಇಚ್ಛಿಸುವುದಿಲ್ಲ.
ವಿವರಣೆ - ಅನೇಕರು ಪಾಪದ ಭಯದಿಂದಲೇ ಯಜ್ಞ-ಯಾಗಾದಿಗಳನ್ನು ಆಚರಿಸುತ್ತಾರೆ. ಆ ಯಜ್ಞಯಾಗಾದಿಗಳ ಆಚರಣೆಯಿಂದ ಪಾಪಗಳು ಪರಿಹಾರ- ವಾಗುತ್ತವೆ. ಮತ್ತು ಪುಣ್ಯಸಂಪಾದನೆ ಆಗುತ್ತದೆಂಬ ಭಾವನೆಯು ಇರುತ್ತದೆ. ಯಾರಿಗೆ ನಮ್ಮ ಪಾಪಕ್ಕೆ ಶಿಕ್ಷೆಯಾಗುತ್ತದೆಂಬ ಭಯವೇ ಇರುವುದಿಲ್ಲವೋ, ಅಂಥವರು ಯಜ್ಞವನ್ನು ಆಚರಿಸುವುದಿಲ್ಲ. ತಾವು ಸಂಪಾದಿಸಿದ ಹಣದ ದಾನವನ್ನೂ ಕೂಡ ಮಾಡುವುದಿಲ್ಲ. ಏಕೆಂದರೆ ತಮ್ಮ ಪಾಪಕ್ಕೆ ಯಾವುದೇ ಶಿಕ್ಷೆಯು ಇರುವುದಿಲ್ಲ. ಮತ್ತು ಹೇಳಿದಂತೆ ನಡೆದುಕೊಳ್ಳುವುದು ತುಂಬಾ ಮುಖ್ಯವಾದ ಧರ್ಮ. ಪ್ರತಿಜ್ಞಾಭಂಗವನ್ನು ಮಾಡಿದವನು ಪಾಪಿಷ್ಠನಾಗುತ್ತಾನೆ. ಒಂದುವೇಳೆ ದಂಡಪುರುಷನ ಭಯವೇ ಇಲ್ಲದಿದ್ದರೆ ಪ್ರತಿಜ್ಞಾಭಂಗಕ್ಕೆ ಯಾರೂ ಸಹ ಹೆದರುವುದಿಲ್ಲ. ತಾವು ಹೇಳುವುದೇ ಒಂದು, ಮಾಡುವುದೇ ಮತ್ತೊಂದು ಎಂಬುದಾಗಿ ಪ್ರತಿಯೊಬ್ಬರೂ ಅಪ್ರಾಮಾಣಿಕರಾಗುತ್ತಾರೆ.
ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮ ದುಷ್ಕರಮ್ |
ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಮಹತೀಂ ಶ್ರಿಯಮ್ ॥14॥
ಮರ್ಮಸ್ಥಾನವನ್ನು ಕತ್ತರಿಸದಿದ್ದರೆ, ಅಸಾಧ್ಯವಾದ ಕಾರ್ಯವನ್ನು ಮಾಡದಿದ್ದರೆ, ಮತ್ತೊಬ್ಬನನ್ನು ಕೊಲ್ಲದಿದ್ದರೆ ಬೆಸ್ತನಂತೆ ಐಶ್ವರ್ಯವನ್ನು ಸಂಪಾದನೆ ಮಾಡಲು ಸಾಧ್ಯವಾಗುವುದಿಲ್ಲ.
ವಿವರಣೆ - ಈ ಶ್ಲೋಕವನ್ನು ಆಪಾತತಃ ನೋಡಿದಾಗ ಹಿಂದಿನ ವಚನಗಳಿಗೆ ವಿರುದ್ಧವಾಗಿ ಇರುವಂತೆ ಕಾಣಿಸುತ್ತದೆ. ಮತ್ತೊಬ್ಬರಿಗೆ ದುಃಖ ನೀಡಬೇಕು. ಮತ್ತೊಬ್ಬರನ್ನು ಕೊಲ್ಲಬೇಕು. ತನ್ಮೂಲಕ ಹಣ ಸಂಪಾದನೆ ಮಾಡಬೇಕು ಎಂಬುದು ಈ ಶ್ಲೋಕದಿಂದ ತಿಳಿಯುವ ಅರ್ಥ. ಆದರೆ ಶತ್ರುಜನರನ್ನು ಸಂಹಾರ ಮಾಡಬೇಕೆಂಬುದಷ್ಟೇ ಇದರ ಅಭಿಪ್ರಾಯ. ಎಲ್ಲರನ್ನು ನೋಯಿಸಬೇಕು, ಅಥವಾ ಕೊಲ್ಲಬೇಕು ಎಂಬುದು ಇದರ ಅಭಿಪ್ರಾಯವಲ್ಲ. ದಂಡನೀತಿಯನ್ನು ರಾಜನಾದವನು ಅಳವಡಿಸಲೇ ಬೇಕು. ಆ ದಂಡನೀತಿಯನ್ನು ಅಳವಡಿಸುವ ಕ್ರಮವನ್ನು ಈ ಶ್ಲೋಕದಲ್ಲಿ ನಿರೂಪಣೆ ಮಾಡುತ್ತಿದ್ದಾರೆ. ಯಾರು ಪಾಪವನ್ನು ಮಾಡಿರುತ್ತಾನೋ, ಅಥವಾ ಪಾತಕಿಯಾಗಿರುತ್ತಾನೋ, ಅಥವಾ ಶತ್ರುವಾಗಿರು- ತ್ತಾನೋ, ಅಂಥವನ ಮರ್ಮಸ್ಥಾನಗಳನ್ನು ಕತ್ತರಿಸಬೇಕು. ಮತ್ತು ಅಂಥ ಶತ್ರುವನ್ನು ಸಂಹಾರ ಮಾಡಬೇಕು. ಅಸಾಧ್ಯವಾದ ಕಾರ್ಯಗಳಲ್ಲಿ ತೊಡಗಿಸ- ಬೇಕು. ಅಂದರಷ್ಟೇ ವಿಪುಲವಾದ ಸಂಪತ್ತನ್ನು ಪಡೆದುಕೊಳ್ಳುತ್ತಾನೆ. ಬೆಸ್ತನು ಗಾಳಕ್ಕೆ ಮೀನನ್ನು ಹಾಕುವಂತೆ ನಯವಿನಯವಾದ ಮಾತುಗಳಿಂದ ಶತ್ರುವನ್ನು ಮೋಹ- ಗೊಳಿಸಬೇಕು. ಸಮಯವನ್ನು ನೋಡಿ, ಶತ್ರುವಿನ ಮರ್ಮವನ್ನು ಭೇದಿಸಬೇಕು. ಅನಂತರ ಅಂಥ ಶತ್ರುವನ್ನು ಕೊಲ್ಲಬೇಕು. ಶತ್ರುವಿನ ಸಂಹಾರದ ವಿಷಯದಲ್ಲಿ, ಅಥವಾ ಪಾತಕಿಗೆ ಶಿಕ್ಷೆ ನೀಡುವ ಸಂದರ್ಭದಲ್ಲಿ ಭಯಂಕರನಾದ ದಂಡಪುರುಷ- ನನ್ನು ತನ್ನಲ್ಲಿ ಆವಾಹನೆ ಮಾಡಿಕೊಳ್ಳಬೇಕು.
ಟಿಪ್ಪಣಿ - ನಾಚ್ಛಿತ್ವಾ ಪರಮರ್ಮಾಣಿ ಇತ್ಯತ್ರ ಪರಮರ್ಮಾಣಿ ಅಚ್ಛಿತ್ವಾ ಮಹತೀಂ ಶ್ರಿಯಂ ನ ಪ್ರಾಪ್ನೋತಿ ಇತಿ ಸರ್ವತ್ರ ಉತ್ತರೇಣಾನ್ವಯಃ ॥ ದುಷ್ಟನ ಮರ್ಮ- ಸ್ಥಾನಗಳನ್ನು ಕತ್ತರಿಸದಿದ್ದರೆ ವಿಪುಲವಾದ ಸಂಪತ್ತು ದೊರಕುವುದಿಲ್ಲ. ಹೀಗೆ ಮುಂದಕ್ಕೆ ಅನ್ವಯ ತಿಳಿಯಬೇಕು.
ನಾಘ್ನತಃ ಕೀರ್ತಿರಸ್ತೀಹ ನ ವಿತ್ತಂ ನ ಪುನಃ ಪ್ರಜಾಃ |
ಇಂದ್ರೋ ವೃತ್ರವಧೇನೈವ ಮಹೇಂದ್ರಃ ಸಮಪದ್ಯತ ॥15॥
ಶತ್ರುವನ್ನು ಕೊಲ್ಲದ ರಾಜನಿಗೆ ಈ ಭೂಲೋಕದಲ್ಲಿ ಕೀರ್ತಿಯು ಲಭಿಸು- ವುದಿಲ್ಲ. ಐಶ್ವರ್ಯವು ಪ್ರಾಪ್ತವಾಗುವುದಿಲ್ಲ. ಪ್ರಜೆಗಳ ಅನುರಾಗವು ದೊರಕುವು- ದಿಲ್ಲ. ಇಂದ್ರನು ತನ್ನ ಪರಮಶತ್ರುವಾದ ವೃತ್ರಾಸುರನನ್ನು ಸಂಹಾರಮಾಡಿದ್ದ- ರಿಂದಲೇ

ಮಹೇಂದ್ರಸ್ಥಾನವನ್ನು ಅಲಂಕರಿಸಿದನು.
ವಿವರಣೆ - ಪ್ರಜೆಗಳನ್ನು ರಕ್ಷಣೆ ಮಾಡುವುದಕ್ಕಾಗಿ ಕೀರ್ತಿ, ಹಣ, ಪ್ರಜೆಗಳ ಬೆಂಬಲ ಇವುಗಳನ್ನು ರಾಜನಾದವನು ಹೊಂದಲೇ ಬೇಕು. ಅದಕ್ಕಾಗಿ ದಂಡ- ನೀತಿಯನ್ನು ಅಳವಡಿಸಬೇಕು. ತನ್ಮೂಲಕವಾಗಿ ಶತ್ರುವನ್ನು ನಿಷ್ಕಾರುಣ್ಯದಿಂದ ಸಂಹಾರ ಮಾಡಬೇಕು.
ಯ ಏವ ದೇವಾ ಹಂತಾರಸ್ತಾಂಲ್ಲೋಕೋಽರ್ಚಯತೇ ಭೃಶಮ್ |
ಹಂತಾ ರುದ್ರಸ್ತಥಾ ಸ್ಕಂದಃ ಶಕ್ರೋಽಗ್ನಿರ್ವರುಣೋ ಯಮಃ ॥16॥
ಹಂತಾ ಕಾಲಸ್ತಥಾ ವಾಯುರ್ಮೃತ್ಯುರ್ವೈಶ್ರವಣೋ ರವಿಃ |
ವಸವೋ ಮರುತಃ ಸಾಧ್ಯಾ ವಿಶ್ವೇದೇವಾಶ್ಚ ಭಾರತ ॥17॥
ಏತಾನ್ ದೇವಾನ್ನಮಸ್ಯಂತಿ ಪ್ರತಾಪಪ್ರಣತಾ ಜನಾಃ |
ನ ಬ್ರಹ್ಮಾಣಂ ನ ಧಾತಾರಂ ನ ಪೂಷಾಣಂ ಕಥಂಚನ ॥18॥
ಯುಧಿಷ್ಠಿರನೇ! ಯಾವ ದೇವತೆಗಳು ದುಷ್ಟರನ್ನು, ಮತ್ತು ಶತ್ರುಗಳನ್ನು ಸಂಹಾರ ಮಾಡಿದ್ದಾರೋ, ಅಂಥ ದೇವತೆಗಳು ಇಂದು ಲೋಕದಲ್ಲಿ ಪೂಜಿತರಾ- ಗಿದ್ದಾರೆ. ಮಹಾರುದ್ರ, ಸ್ಕಂದ, ಇಂದ್ರ, ವರುಣ, ಯಮ, ವಾಯು, ಮೃತ್ಯು, ಕುಬೇರ, ಸೂರ್ಯ, ಅಷ್ಟವಸುಗಳು ನಲವತ್ತೆಂಟು ಮರುತ್‌ದೇವತೆಗಳು, ಸಾಧ್ಯರು, ವಿಶ್ವೇದೇವತೆಗಳು ಇವರೆಲ್ಲರೂ ಕೂಡ ಶತ್ರುಗಳ ಸಂಹಾರವನ್ನು ಮಾಡಿಯೇ ಉತ್ತಮರಾಗಿದ್ದಾರೆ. ಆದರೆ ಇವರನ್ನು ಎಲ್ಲರೂ ಕೂಡ ಪೂಜ್ಯ- ಭಾವನೆಯಿಂದ ನಮಿಸುತ್ತಾರೆ. ಯಾರೊಬ್ಬರೂ ಕೂಡ ಈ ದೇವತೆಗಳನ್ನು ಕೊಲೆ ಮಾಡಿದವರೆಂದು, ನಿಷ್ಕರುಣಿಗಳೆಂದು ತಿರಸ್ಕಾರ ಮಾಡುವುದಿಲ್ಲ. ಈ ದೇವತೆಗಳ ಪ್ರತಾಪಶಕ್ತಿಯನ್ನು ಗಮನಿಸಿ, ವಿನೀತರಾಗಿ ಎಲ್ಲಾ ಭಕ್ತರು ನಿರಂತರವಾಗಿ ದೇವತೆ- ಗಳನ್ನು ನಮಸ್ಕಾರ ಮಾಡುತ್ತಾರೆ. ಬ್ರಹ್ಮನನ್ನು, ಧಾತೃವನ್ನು, ಪೂಷಣನನ್ನು ಈ ಕಾರಣಬಿಟ್ಟು, ಬೇರೆ ಯಾವುದೇ ಕಾರಣದಿಂದ ಭಕ್ತರು ಪೂಜಿಸುವುದಿಲ್ಲ.
ಮಧ್ಯಸ್ಥಾನ್ ಸರ್ವಭೂತೇಷು ದಾಂತಾನ್ ಶಮಪರಾಯಣಾನ್ |
ಯಜಂತೇ ಮಾನವಾಃ ಕೇಚಿತ್ ಪ್ರಶಾಂತಾಃ ಸರ್ವಕರ್ಮಸು ॥19॥
ಎಲ್ಲಾ ಭೂತಗಳಲ್ಲಿ ರಾಗದ್ವೇಷಗಳಿಲ್ಲದೇ ಸಮಾನಭಾವನೆಯಿಂದ ಅವರವರ ಯೋಗ್ಯತೆಗೆ ತಕ್ಕಂತೆ ಫಲಗಳನ್ನು ದೇವತೆಗಳು ನೀಡುತ್ತಾರೆ. ಆ ದೇವತೆಗಳು ಶಾಂತಿಪರಾಯಣರು, ಜಿತೇಂದ್ರಿಯರು ಆಗಿರುತ್ತಾರೆ. ಕೆಲವು ಮನುಷ್ಯರು ಅಂಥ ದೇವತೆಗಳ ಪ್ರೀತಿಗಾಗಿ ಅನೇಕ ಯಜ್ಞ-ಯಾಗಾದಿಗಳನ್ನು ಮಾಡುತ್ತಾರೆ. ಪೂಜೆ ಮಾಡುತ್ತಾರೆ. ಪ್ರತಿಯೊಂದು ಕರ್ಮಗಳ ಪ್ರಾರಂಭದಲ್ಲಿ ಅವರನ್ನು ಪ್ರಾರ್ಥಿಸುತ್ತಾರೆ.
ನಹಿ ಪಶ್ಯಾಮಿ ಜೀವಂತಂ ಲೋಕೇ ಕಂಚಿದಹಿಂಸಯಾ |
ಸತ್ತ್ವೈಃ ಸತ್ತ್ವಾ ಹಿ ಜೀವಂತಿ ದುರ್ಬಲೈರ್ಬಲವತ್ತರಾಃ ॥20॥
ಯುಧಿಷ್ಠಿರನೇ! ಕೇವಲ ಅಹಿಂಸೆಯಿಂದ ಜೀವನ ಮಾಡಲು ಸಾಧ್ಯವೇ ಇಲ್ಲ. ಅಂಥವರನ್ನು ನಾನು ಇದುವರೆಗೂ ಕಂಡೂ ಇಲ್ಲ. ದುರ್ಬಲರಾದ ಪ್ರಾಣಿಗಳನ್ನು ತಿನ್ನುವುದರಿಂದಲೇ ಪ್ರಬಲವಾದ ಪ್ರಾಣಿಗಳು ಇಂದು ಜೀವಿಸುತ್ತಿದ್ದಾರೆ. ಇದುವೇ ಲೋಕದ ಸ್ವಭಾವ.
ನಕುಲೋ ಮೂಷಕಾನತ್ತಿ ಬಿಡಾಲೋ ನಕುಲಂ ತಥಾ |
ಬಿಡಾಲಮತ್ತಿ ಶ್ವಾ ರಾಜನ್ ಶ್ವಾನಂ ವ್ಯಾಲಮೃಗಸ್ತಥಾ ॥21॥
ಈ ಲೋಕದಲ್ಲಿ ಬಲಿಷ್ಠ ಪ್ರಾಣಿಗಳು ದುರ್ಬಲ ಪ್ರಾಣಿಗಳನ್ನು ತಿಂದು ಬದುಕು- ತ್ತವೆ. ಮುಂಗುಸಿಯು ಇಲಿಗಳನ್ನು ತಿನ್ನುತ್ತದೆ. ಬೆಕ್ಕು ಮುಂಗುಸಿಯನ್ನು ತಿನ್ನುತ್ತದೆ. ನಾಯಿಯು ಬೆಕ್ಕನ್ನು ತಿನ್ನುತ್ತದೆ. ಚಿರತೆಯು ನಾಯಿಯನ್ನು ತಿನ್ನುತ್ತದೆ.
ತಾನತ್ತಿ ಪುರುಷಃ ಸರ್ವಾನ್ ಪಶ್ಯ ಧರ್ಮೋ ಯಥಾಗತಃ |
ಪ್ರಾಣಸ್ಯಾನ್ನಮಿದಂ ಸರ್ವಂ ಜಂಗಮಂ ಸ್ಥಾವರಂ ಚ ಯತ್ ॥22॥
ಈ ಎಲ್ಲಾ ಪ್ರಾಣಿಗಳನ್ನು ಮನುಷ್ಯನು ಕೊಂದು ತಿನ್ನುತ್ತಾನೆ. ಹೀಗೆ ಕಾಲಚಕ್ರ- ವನ್ನು ನೀನೇ ಗಮನಿಸು. ಈ ಭೂಮಂಡಲದಲ್ಲಿರುವ ಎಲ್ಲಾ ಸ್ಥಾವರ ಜಂಗಮಗಳು ಪ್ರಾಣಧಾರಣೆಗೆ ಅನ್ನರೂಪವಾಗಿಯೇ ನಿಂತಿವೆ.
ವಿಧಾನಂ ದೇವವಿಹಿತಂ ತತ್ರ ವಿದ್ವಾನ್ನ ಮುಹ್ಯತಿ |
ಯಥಾ ಸೃಷ್ಟೋಽಸಿ ರಾಜೇಂದ್ರ ತಥಾ ಭವಿತುಮರ್ಹಸಿ ॥23॥
ಹೀಗೆ ದುರ್ಬಲ ಪ್ರಾಣಿಗಳನ್ನು ತಿಂದು ಬದುಕಬೇಕೆಂಬುದನ್ನು ದೈವವೇ ಸೃಷ್ಟಿ ಮಾಡಿದೆ. ಇದರಲ್ಲಿ ಜ್ಞಾನಿಯಾದವನು ಮೋಹವನ್ನು ಹೊಂದಿರುವುದಿಲ್ಲ. ವಿಧಾತೃವು ಹೇಗೆ ನಿನ್ನನ್ನು ಸೃಷ್ಟಿ ಮಾಡಿರುವನೋ, ಅದಕ್ಕನುಗುಣವಾಗಿ ನಡೆಯು- ವುದು ನಿನ್ನ ಕರ್ತವ್ಯವಾಗಿದೆ.
ವಿವರಣೆ - ದುರ್ಬಲ ಪ್ರಾಣಿಗಳನ್ನು ತಿಂದು ಬದುಕುವುದು ಅಧರ್ಮವಲ್ಲ. ಇದನ್ನು ದೇವರೇ ಸೃಷ್ಟಿ ಮಾಡಿದ್ದಾನೆ. ಹೀಗಿರುವಾಗ ಶತ್ರುಗಳನ್ನು ಪಾತಕಿಗಳನ್ನು ಸಂಹಾರ ಮಾಡುವುದು ನಿನಗೆ ಅತ್ಯಂತ ಉಚಿತವೇ ಆಗಿದೆ. ಇದು ನಿನ್ನ ಧರ್ಮವೇ ಆಗಿದೆ. ಕ್ಷತ್ರಿಯ ವಂಶದಲ್ಲಿ ಜನಿಸಿದ ನಿನಗೆ ವಿಹಿತವಾದದ್ದು ಶತ್ರು- ಸಂಹಾರ. ಇದನ್ನು ಬಿಟ್ಟರೆ ವರ್ಣಾಶ್ರಮಧರ್ಮಗಳಿಂದ ನೀನು ಚ್ಯುತನಾಗುವಿ.
ವಿನೀತಕ್ರೋಧಹರ್ಷಾ ಹಿ ಮಂದಾ ವನಮುಪಾಶ್ರಿತಾಃ |
ವಿನಾ ವಧಂ ನ ಕುರ್ವಂತಿ ತಾಪಸಾಃ ಪ್ರಾಣಯಾಪನಮ್ ॥24॥
ಆದರೆ ಮೂಢರಾದ ಕ್ಷತ್ರಿಯರು ಕ್ರೋಧ ಹರ್ಷಗಳೆರಡನ್ನು ಬಿಟ್ಟು, ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಾರೆ. ಆದರೆ ಅರಣ್ಯದಲ್ಲಿಯೂ ಕೂಡ ತಮ್ಮ ಆಹಾರ- ಕ್ಕಾಗಿ ಪ್ರಾಣಿಗಳ ವಧೆಯನ್ನು ಮಾಡಲೇಬೇಕು.
ವಿವರಣೆ - ಕ್ಷತ್ರಿಯರಾದವರು ದುಷ್ಟರಲ್ಲಿ ಕ್ರೋಧವನ್ನು, ಶಿಷ್ಟರಲ್ಲಿ ಹರ್ಷವನ್ನು ಹೊಂದಿರಬೇಕು. ದುಷ್ಟರನ್ನು ಶಿಕ್ಷಿಸಿ ರಾಜ್ಯವನ್ನು ಪರಿಪಾಲನೆ ಮಾಡಬೇಕು. ಇದನ್ನೆಲ್ಲಾ ತೊರೆದು ಕಾಡಿಗೆ ಹೋಗುವುದು ಅವರ ಧರ್ಮವಲ್ಲ. ಅಹಿಂಸಾಪಾಲನೆಯ ದೃಷ್ಟಿಯಿಂದ ಕಾಡಿಗೆ ಹೋದರೂ ಕೂಡ ಅವರ ಉದ್ದೇಶವು ಈಡೇರುವುದಿಲ್ಲ. ಕಾಡಿಗೆ ಹೋದರೆ ತಮ್ಮ ಪ್ರಾಣಧಾರಣೆಗೆ ಅಲ್ಲಿಯೂ ಕೂಡ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಅವರು ಪ್ರಾಣಿಹಿಂಸೆಯನ್ನು ಮಾಡಬೇಕು. ಗೆಡ್ಡೆ-ಗೆಣಸುಗಳನ್ನು ತಿಂದಾಗಲೂ ಅವುಗಳು

ಸಜೀವವಾದ್ದರಿಂದ ಅಲ್ಲಿರುವ ಜೀವಗಳಿಗೂ ಕೂಡ ಹಿಂಸೆ ಮಾಡಿದಂತಾಗುತ್ತದೆ. ಆದ್ದರಿಂದ ಅಹಿಂಸಾವೃತ್ತಿಯು ಕ್ಷತ್ರಿಯರಿಂದ ಪಾಲಿಸಲು ಸಾಧ್ಯವೇ ಆಗುವುದಿಲ್ಲ. ಅದು ಅಧರ್ಮವೂ ಕೂಡ ಆಗಿರುತ್ತದೆ.
ಟಿಪ್ಪಣಿ - ವಿನಾ ವಧಮ್ ಇತ್ಯತ್ರ ವಧಂ ಕಂದಮೂಲಾದಿಸ್ಥಾವರವಧಮ್ | ಕಾಡಿನಲ್ಲಿ ಮಾಡುವ ವಧೆಯೆಂದರೆ ಗೆಡ್ಡೆಗೆಣಸು ಮೊದಲಾದ ಸ್ಥಾವರಪದಾರ್ಥಗಳ ವಧೆ ಎಂದೇ.
ಉದಕೇ ಬಹವಃ ಪ್ರಾಣಾಃ ಪೃಥಿವ್ಯಾಂ ಚ ಫಲೇಷು ಚ |
ನಚ ಕಶ್ಚಿನ್ನ ತಾನ್ ಹಂತಿ ಕಿಮನ್ಯತ್ ಪ್ರಾಣಯಾಪನಾತ್ ॥25॥
ಜಲದಲ್ಲಿ, ಭೂಮಿಯಲ್ಲಿ, ಕಾಡಿನಲ್ಲಿ ಸಿಗುವ ಫಲಗಳಲ್ಲಿ ಎಷ್ಟೋ ಪ್ರಾಣಿಗಳು ಇರುತ್ತವೆ. ಆ ಪ್ರಾಣಿಗಳನ್ನು ಕೊಲ್ಲದೇ ಜೀವಿಸಲು ಯಾರಿಂದಲೂ ಸಾಧ್ಯವಿಲ್ಲ.
ವಿವರಣೆ - ಪ್ರಾಣಿ ಹಿಂಸೆ ಮಾಡಬಾರದೆಂಬ ದೃಷ್ಟಿಯಿಂದ ಮೊಲ, ಜಿಂಕೆ ಮೊದಲಾದವುಗಳನ್ನು ಕೊಲ್ಲದೇ ಇದ್ದರೂ ಕೂಡ ಕಂದಮೂಲಫಲಗಳನ್ನು ತಿನ್ನ- ಬೇಕು. ಆದರೆ ಅವುಗಳಲ್ಲೂ ಕೂಡ ಎಷ್ಟೋ ಪ್ರಾಣಿಗಳಿರುತ್ತವೆ. ಅವುಗಳನ್ನೂ ಕೂಡ ನಾನು ತಿನ್ನುವುದಿಲ್ಲ. ನೀರನ್ನಷ್ಟೇ ಕುಡಿಯುತ್ತೇನೆ ಎಂದು ಪ್ರತಿಜ್ಞೆ ಮಾಡಿ- ದರೂ ಕೂಡ ಆ ನೀರಿನಲ್ಲೂ ಕೂಡ ಅದೆಷ್ಟೋ ಪ್ರಾಣಿಗಳಿರುತ್ತವೆ. ಹೀಗೆ ಸೂಕ್ಷ್ಮಾತಿಸೂಕ್ಷ್ಮವಾದ ಅನೇಕಪ್ರಾಣಿಗಳನ್ನು ಕೊಲ್ಲದೇ ಬದುಕಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಅಹಿಂಸಾವೃತ್ತಿಯಲ್ಲಿ ಜೀವಿಸುವುದು ಯಾರಿಂದಲೂ ಸಾಧ್ಯವಾಗದ ಮಾತು.
ಟಿಪ್ಪಣಿ- ನಚ ಕಶ್ಚಿನ್ನ ತಾನ್ ಹಂತಿ ಇತ್ಯತ್ರ ಕಶ್ಚಿದಪಿ ತಾನ್ ಹಂತೀತಿ ನ |
`ನಚ ಕಶ್ಚಿನ್ನ ತಾನ್ ಹಂತಿ' ಎಂಬಲ್ಲಿ ಯಾರೊಬ್ಬನೂ ಕೂಡ ಈ ಪ್ರಾಣಿಗಳನ್ನು ಕೊಲ್ಲುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ.
ಸೂಕ್ಷ್ಮಯೋನೀನಿ ಭೂತಾನಿ ತರ್ಕಗಮ್ಯಾನಿ ಕಾನಿಚಿತ್ |
ಪಕ್ಷ್ಮಣೋಽಪಿ ನಿಪಾತೇನ ಯೇಷಾಂ ಸ್ಯಾತ್ ಸ್ಕಂಧಪರ್ಯಯಃ ॥26॥
ಈ ಜಗತ್ತಿನಲ್ಲಿ ಅತ್ಯಂತ ಸೂಕ್ಷ್ಮದೇಹವನ್ನು ಹೊಂದಿದ ಅನೇಕ ಪ್ರಾಣಿಗಳಿವೆ. ಇನ್ನೂ ಕೆಲವು ಕಣ್ಣಿಗೂ ಕಾಣದ ಊಹೆಯಿಂದಷ್ಟೇ ತಿಳಿಯಬೇಕಾದ ಪ್ರಾಣಿಗಳೂ ಇವೆ. ಆಶ್ಚರ್ಯವೆಂದರೆ ಕಣ್ಣಿನ ರೆಪ್ಪೆ ಆಡಿಸುವುದರಿಂದಲೇ ಹೆಗಲನ್ನೇ ಮುರಿದು- ಕೊಳ್ಳುವ ಸೂಕ್ಷ್ಮಜೀವಿಗಳು ಎಷ್ಟೋ ಇವೆ.
ಟಿಪ್ಪಣಿ - ಸ್ಕಂಧಪರ್ಯಯ ಇತ್ಯತ್ರ ಸ್ಕಂಧಸ್ಯ ಪರ್ಯಯಃ ವಿಪರ್ಯಯೋ ನಾಶಃ|
`ಸ್ಕಂಧಪರ್ಯಯಃ' ಎಂಬಲ್ಲಿ `ಸ್ಕಂಧಸ್ಯ ಪರ್ಯಯಃ' ಎಂದು ವಿಗ್ರಹ. ಪರ್ಯಯ ಶಬ್ದಕ್ಕೆ ವಿಪರ್ಯಯ ಎಂದರ್ಥ. ನಾಶ ಎಂದಭಿಪ್ರಾಯ. ಹೆಗಲಿನ ನಾಶ ಎಂದು ಇದರ ಅರ್ಥ.
ಗ್ರಾಮಾನ್ನಿಷ್ಕ್ರಮ್ಯ ಮುನಯೋ ವಿಗತಕ್ರೋಧಮತ್ಸರಾಃ |
ವನೇ ಕುಟುಂಬಧರ್ಮಾಣೋ ದೃಶ್ಯಂತೇ ಪರಿಮೋಹಿತಾಃ ॥27॥
ಕೆಲವು ಮುನಿಗಳು ಕೋಪ, ಅಸೂಯೆ ಮೊದಲಾದವುಗಳನ್ನು ಪರಿತ್ಯಾಗ ಮಾಡಿ, ತಮ್ಮ ಊರನ್ನೇ ಬಿಟ್ಟು ಕಾಡಿಗೆ ಹೋಗುತ್ತಾರೆ. ಆದರೆ ಆ ಕಾಡಿನಲ್ಲಿ ಕುಟುಂಬದ ಪರಿಪಾಲನೆಯಲ್ಲಿ ತೊಡಗುತ್ತಾರೆ. ಪತ್ನಿ-ಪುತ್ರಾದಿಗಳ ಅನುರಾಗದಲ್ಲಿ ಮೋಹಿತರಾಗುತ್ತಾರೆ.
ಭೂಮಿಂ ಭಿತ್ತ್ವೌಷಧೀಶ್ಛಿತ್ತ್ವಾ ವೃಕ್ಷಾದೀನಂಡಜಾನ್ ಪಶೂನ್ |
ಮನುಷ್ಯಾಸ್ತನ್ವತೇ ಯಜ್ಞಾಂಸ್ತೇ ಸ್ವರ್ಗಂ ಪ್ರಾಪ್ನುವಂತಿ ಚ ॥28॥
ಮನುಷ್ಯರು ಯಾಗವನ್ನು ಮಾಡುವುದಕ್ಕಾಗಿ ಭೂಮಿಯನ್ನು ಅಗೆಯುತ್ತಾರೆ. ಔಷಧಿ ಸಸ್ಯಗಳನ್ನು ಕಡಿಯುತ್ತಾರೆ. ವೃಕ್ಷಗಳನ್ನು ಕತ್ತರಿಸುತ್ತಾರೆ. ಪಶು-ಪಕ್ಷ್ಯಾದಿಗಳನ್ನು ಕೊಲ್ಲುತ್ತಾರೆ. ಅನಂತರವೇ ಯಾಗವನ್ನು ಮಾಡಲು ಉದ್ಯುಕ್ತರಾಗುತ್ತಾರೆ. ಇಂಥ ಯಾಗವನ್ನು ಮಾಡುವುದರಿಂದ ಸ್ವರ್ಗವನ್ನೂ ಕೂಡ ಪಡೆಯುತ್ತಾರೆ.
ವಿವರಣೆ - ಹಿಂದಿನ ಶ್ಲೋಕದಲ್ಲಿ ಅಹಿಂಸೆಯನ್ನು ಪರಿಪಾಲನೆ ಮಾಡು- ವುದಕ್ಕಾಗಿ ಕೆಲವರು ಕಾಡಿಗೆ ಹೋಗುತ್ತಾರೆ. ಆದರೆ ಪತ್ನಿ-ಪುತ್ರಾದಿಗಳ ಮೋಹ- ದಿಂದ ಪೀಡಿತರಾಗಿ ಇಹಲೋಕ ಹಾಗೂ ಪರಲೋಕಗಳೆರಡನ್ನೂ ಕಳೆದುಕೊಳ್ಳು- ತ್ತಾರೆಂದು ಹೇಳಲಾಯಿತು. ಇಲ್ಲಿ ಕ್ರೋಧ ಅಸೂಯೆಗಳನ್ನು ಪರಿತ್ಯಾಗ ಮಾಡಿ, ವಾನಪ್ರಸ್ಥರಾಗಿ ಕಾಡಿಗೆ ಹೋಗಿ, ಕಾಮಕ್ಕೆ ತುತ್ತಾಗಿ ಜೀವನವನ್ನು ವ್ಯರ್ಥ ಮಾಡಿಕೊಳ್ಳುವುದಕ್ಕಿಂತ ಗ್ರಾಮದಲ್ಲಿಯೇ ಇದ್ದು, ಯಜ್ಞ-ಯಾಗಾದಿಗಳ ಆಚರಣೆ ಮಾಡಬೇಕು. ಕರ್ತವ್ಯಕರ್ಮಗಳಲ್ಲಿ ನಿರತರಾಗಿದ್ದು ಮತ್ತೊಬ್ಬರಿಗೆ ಹಿಂಸಾಚಾರದಂತೆ ಕಾಣುತ್ತಿದ್ದರೂ ಕೂಡ ವಿಹಿತವಾದ ಸತ್ಕರ್ಮಗಳನ್ನು ಆಚರಣೆ ಮಾಡಿ, ಯಜ್ಞ-ಯಾಗಾದಿಗಳನ್ನು ಆಚರಿಸಿದಾಗ ಸ್ವರ್ಗವೇ ಅವನಿಗೆ ದೊರಕು- ತ್ತದೆ. ಕಾಡಿಗೆ ಹೋಗಿ ತಮ್ಮ ಆಶ್ರಮಧರ್ಮವನ್ನು ಪರಿಪಾಲನೆ ಮಾಡದೇ ಇರುವುದಕ್ಕಿಂತ ರಾಜ್ಯದಲ್ಲಿಯೇ ಇದ್ದು, ತಮ್ಮ ಗೃಹಸ್ಥಾಶ್ರಮದ ಕರ್ತವ್ಯಗಳನ್ನು ಮಾಡುವುದು ಅತ್ಯಂತ ಶ್ರೇಯಸ್ಕರ ಎಂಬುದಾಗಿ ಹೇಳುತ್ತಿದ್ದಾರೆ.
ದಂಡನೀತ್ಯಾಂ ಪ್ರಣೀತಾಯಾಂ ಸರ್ವೇ ಸಿದ್ಧ್ಯಂತ್ಯುಪಕ್ರಮಾಃ |
ಕೌಂತೇಯ ಸರ್ವಭೂತಾನಾಂ ತತ್ರ ಮೇ ನಾಸ್ತಿ ಸಂಶಯಃ ॥29॥
ಕೌಂತೇಯನೇ! ದಂಡನೀತಿಯನ್ನು ಸುವ್ಯವಸ್ಥಿತವಾಗಿ ಅನುಷ್ಠಾನಕ್ಕೆ ತಂದಾಗ ಎಲ್ಲಾ ಪ್ರಾಣಿಗಳ ಸಕಲ ಪ್ರಯತ್ನಗಳು ಸಾರ್ಥಕವಾಗುತ್ತವೆ. ಈ ವಿಷಯದಲ್ಲಿ ನನಗೆ ಸ್ವಲ್ಪವೂ ಸಂಶಯವಿಲ್ಲ.
ವಿವರಣೆ - ದಂಡನೀತಿಯನ್ನು ಅಳವಡಿಸಿಕೊಳ್ಳುವುದು ಸ್ವಾರ್ಥಕ್ಕಾಗಿ ಅಲ್ಲ. ಅಥವಾ ಮತ್ತೊಬ್ಬರಿಗೆ ವಿನಾಕಾರಣ ಹಿಂಸೆ ಮಾಡುವುದಕ್ಕೂ ಅಲ್ಲ. ಪ್ರಜೆಗಳಿಗೆ ಹಿತವಾಗುವುದಕ್ಕೋಸ್ಕರ ಅವರ ಶ್ರಮಗಳೆಲ್ಲವೂ ಸಾರ್ಥಕವಾಗುವುದಕ್ಕೋಸ್ಕರ ಈ ದಂಡನೀತಿಯನ್ನು ರಾಜನಾದವನು ಅಳವಡಿಸಬೇಕು. ಆಗಷ್ಟೇ ಎಲ್ಲಾ ಪ್ರಜೆಗಳ ಸಾಧನೆಯು ಪೂರ್ಣವಾಗುತ್ತದೆ.
ದಂಡಶ್ಚೇನ್ನ ಭವೇಲ್ಲೋಕೇ ವಿನಶ್ಯೇಯುರಿಮಾ ಪ್ರಜಾಃ |
ಜಲೇ ಮತ್ಸ್ಯಾನಿವಾಭಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥30॥
ಒಂದು ವೇಳೆ ದಂಡನೀತಿಯನ್ನು ಅಳವಡಿಸದಿದ್ದರೆ, ಈ ಎಲ್ಲ ಪ್ರಜೆಗಳು ನಾಶ- ವನ್ನು ಹೊಂದುತ್ತಾರೆ. ನೀರಿನಲ್ಲಿರುವ ದೊಡ್ಡ

ಮೀನುಗಳು, ಚಿಕ್ಕ ಮೀನುಗಳನ್ನು ತಿಂದು ಬದುಕುವಂತೆ ಬಲಿಷ್ಠರಾದವರು ದುರ್ಬಲರನ್ನು ನಾಶಗೊಳಿಸಿ, ಬದುಕು- ತ್ತಾರೆ.
ಸತ್ಯಂ ಚೇದಂ ಬ್ರಹ್ಮಣಾ ಪೂರ್ವಮುಕ್ತಂ
ದಂಡಃ ಪ್ರಜಾ ರಕ್ಷತಿ ಸಾಧು ನೀತಃ |
ಪಶ್ಯಾಗ್ನಯಶ್ಚ ಪ್ರತಿಶಾಮ್ಯಂತ್ಯಭೀತಾಃ
ಸಂತರ್ಜಿತಾ ದಂಡಭಯಾಜ್ಜ್ವಲಂತಿ ॥31॥
``ಸುವ್ಯವಸ್ಥಿತವಾಗಿ ಪ್ರಯೋಗಿಸಲ್ಪಟ್ಟ ದಂಡವು ಪ್ರಜೆಗಳನ್ನು ರಕ್ಷಣೆ ಮಾಡು- ತ್ತದೆ'' ಎಂಬ ಸತ್ಯವಾದ ಮಾತನ್ನು ಬ್ರಹ್ಮನು ಹಿಂದೆಯೇ ಹೇಳಿದ್ದನು. ಯುಧಿಷ್ಠಿರನೇ ನೀನೇ ಪ್ರತ್ಯಕ್ಷವಾಗಿ ನೋಡು. ಶಾಂತವಾದ ಅಗ್ನಿಗಳು ಪೂತ್ಕಾರದ ಭಯದಿಂದಲೇ ಉಜ್ವಲವಾಗಿ ಹೊತ್ತಿಕೊಂಡು ಉರಿಯಲು ತೊಡಗುತ್ತವೆ.
ಟಿಪ್ಪಣಿ- ಬ್ರಾಹ್ಮಣನು ಕರ್ತವ್ಯವಿಮುಖನಾದಾಗ ಮಾತಿನಿಂದಷ್ಟೇ ಅವನಿಗೆ ಶಿಕ್ಷೆಯನ್ನು ವಿಧಿಸಲಾಗಿದೆ. ಅಗ್ನಿಯು ಶಾಂತವಾದಾಗ ಪೂತ್ಕಾರದಿಂದಷ್ಟೇ ಶಿಕ್ಷೆಯು ವಿಹಿತವಾಗಿದೆ. ಪೂತ್ಕಾರ ಮಾಡಿದಾಗ ಆರಿಹೋದ ಅಗ್ನಿಯು ಹೊತ್ತಿಕೊಳ್ಳುತ್ತದೆ. ದುರ್ಗಂಧವಾದ ಮಾಂಸಕ್ಕೆ ಭಯಪಟ್ಟ ಅಗ್ನಿಯು ಶಾಂತವಾಗಿ ಬಿಡುತ್ತದೆ. ಆಗ ಮತ್ತಷ್ಟು ಕಟ್ಟಿಗೆಗಳನ್ನು ಹಾಕಿ, ಪೂತ್ಕಾರವನ್ನು ಮಾಡಿದಾಗ ಭುಗ್ಗೆಂದು ಹೊತ್ತಿ- ಕೊಂಡು ಉರಿಯುತ್ತದೆ. ಅಗ್ನಿಯು ಆ ದುರ್ಗಂಧವಾದ ಮಾಂಸವನ್ನೂ ಕೂಡ ದಂಡಭಯದಿಂದಲೇ ಸುಡುತ್ತದೆ.
ಅಂಧಂ ತಮ ಇವೇದಂ ಸ್ಯಾನ್ನ ಪ್ರಜ್ಞಾಯೇತ ಕಿಂಚನ |
ದಂಡಶ್ಚೇನ್ನ ಭವೇಲ್ಲೋಕೇ ವಿಭಜನ್ ಸಾಧ್ವಸಾಧುನೀ ॥32॥
ಒಂದು ವೇಳೆ ``ಇದು ಒಳ್ಳೆಯದು, ಇದು ಕೆಟ್ಟದ್ದು'' ಎಂಬುದನ್ನು ವಿಭಾಗ ಮಾಡದಿದ್ದರೆ ಸಜ್ಜನರನ್ನು ಪರಿಪಾಲನೆ ಮಾಡಿ, ದುರ್ಜನರನ್ನು ನಿಗ್ರಹ ಮಾಡ- ದಿದ್ದರೆ, ಈ ಲೋಕವೇ ಅಂಧಂತಮಸ್ಸಿನಿಂದ ತುಂಬುತ್ತಿತ್ತು. ಯಾರು ದುಷ್ಟರು, ಯಾರು ಶಿಷ್ಟರು ಎಂಬ ವಿಭಾಗವೇ ಇಲ್ಲದಂತಾಗುತ್ತಿತ್ತು.
ಯೇಽಪಿ ಸಂಭಿನ್ನಮರ್ಯಾದಾ ನಾಸ್ತಿಕಾ ವೇದನಿಂದಕಾಃ |
ತೇಽಪಿ ಭೋಗಾಯ ಕಲ್ಪಂತೇ ದಂಡೇನಾಶು ನಿಪೀಡಿತಾಃ ॥33॥
ಯಾರು ಧರ್ಮದ ಚೌಕಟ್ಟನ್ನು ದಾಟಿ ನಡೆಯುತ್ತಾರೋ, ನಾಸ್ತಿಕರಾಗು- ತ್ತಾರೋ, ವೇದಗಳನ್ನು ನಿಂದನೆ ಮಾಡುತ್ತಾರೋ, ಅಂಥವರಿಗೆ ರಾಜದಂಡದಿಂದ ಶಿಕ್ಷೆಯನ್ನು ನೀಡಲೇ ಬೇಕು. ಆಗ ಅಂಥ ನಾಸ್ತಿಕರೂ ಕೂಡ ದಂಡಭಯದಿಂದ ಧರ್ಮದ ಚೌಕಟ್ಟಿನೊಳಗೆ ಬದುಕುತ್ತಾರೆ.
ಟಿಪ್ಪಣಿ - ಕೆಲವರು ಸಂಪರ್ಕದಿಂದ ಅಥವಾ ಅಜ್ಞಾನಾದಿಗಳಿಂದ ನಾಸ್ತಿಕ- ರಾಗಿರುತ್ತಾರೆ. ವೇದಗಳನ್ನು ಏಕೆ ನಂಬಬೇಕೆಂದು ಕುವಾದ ಮಾಡುತ್ತಾರೆ. ಹಿತೋಪದೇಶವನ್ನು ಮಾಡಿದಾಗಲೂ ಒಪ್ಪದಿದ್ದರೆ ಅವರಿಗೆ ದಂಡಪ್ರಯೋಗ- ವನ್ನೇ ಮಾಡಬೇಕು. ಆಗ ಭಯಪಟ್ಟು ಧರ್ಮಮಾರ್ಗದಲ್ಲಿ ಬದುಕಲು ಪ್ರಯತ್ನಿ- ಸುತ್ತಾರೆ. ಹೀಗೆ ಧರ್ಮಬಾಹಿರರನ್ನೂ ಕೂಡ, ನಾಸ್ತಿಕರನ್ನೂ ಕೂಡ ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಮಾಡುವುದೇ ರಾಜದಂಡದ ವೈಶಿಷ್ಟ್ಯವಾಗಿದೆ.
ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ |
ದಂಡಸ್ಯ ಹಿ ಭಯಾದ್ ಭೀತೋ ಭೋಗಾಯೇಹ ಪ್ರಕಲ್ಪತೇ ॥34॥
ಪ್ರತಿಯೊಬ್ಬರೂ ಕೂಡ ದಂಡದಿಂದಲೇ ಜಯಿಸುತ್ತಾರೆ. ಸಹಜವಾಗಿ ಶುಚಿ- ರ್ಭೂತನಾದ ಮನುಷ್ಯನಿರುವುದೇ ದುರ್ಲಭವಾಗಿದೆ. ದಂಡಭಯದಿಂದಲೇ ಪ್ರತಿಯೊಬ್ಬರೂ ಧರ್ಮಪರಿಪಾಲನೆಯಲ್ಲಿ ಪ್ರವೃತ್ತರಾಗುತ್ತಿದ್ದಾರೆ.
ವ್ಯಾಖ್ಯಾನ - ಈ ಲೋಕದಲ್ಲಿ ದಂಡಶಿಕ್ಷೆಯ ಭಯವಿಲ್ಲದಿದ್ದರೆ ಪ್ರತಿ- ಯೊಬ್ಬರೂ ಅಪಮಾರ್ಗದಲ್ಲಿಯೇ ನಡೆಯುತ್ತಿದ್ದರು. ಸಹಜವಾಗಿ ಧರ್ಮವನ್ನು ಆಚರಿಸಬೇಕೆಂಬ ಬುದ್ಧಿ ಇರುವುದು ಬಹಳ ದುರ್ಲಭ. ಹೀಗೇಕೆ ಹೇಳುತ್ತಿದ್ದಾರೆ. ಕೆಲವರು ತಪ್ಪು ಮಾಡುತ್ತಿರುವಾಗ ಇದು ತಪ್ಪೆಂದು ತಿಳಿದಿರುತ್ತದೆ. ಆದರೆ ನನಗೆ ಇದರಿಂದ ಏನೂ ತೊಂದರೆಯಾಗುವುದಿಲ್ಲ ಎಂಬ ಅಥವಾ ಯಾರೂ ಈ ತಪ್ಪನ್ನು ತಿಳಿಯುವುದಿಲ್ಲ ಎಂಬ ಭಾವನೆಯಿಂದ ಮನುಷ್ಯನು ಎಡವುತ್ತಾನೆ. ಹೀಗೆ ತಪ್ಪು- ಗಳನ್ನು ಹೆಚ್ಚಿಸಿಕೊಂಡು ತನ್ನ ಜೀವನವನ್ನು ಅಂಧಕಾರಮಯವನ್ನಾಗಿ ಮಾಡಿ- ಕೊಳ್ಳುತ್ತಾನೆ. ಇವನನ್ನು ನೋಡಿದ ಉಳಿದವರೂ ಕೂಡ ತಪ್ಪು ಮಾಡುವುದರಲ್ಲೇ ನಿರತರಾಗುತ್ತಾರೆ. ಹಿಂಸಾಚಾರ, ದುರ್ವ್ಯವಹಾರ, ಭ್ರಷ್ಟಾಚಾರಗಳು ಹೆಚ್ಚುತ್ತವೆ. ಭ್ರಷ್ಟಾಚಾರ ಮಾಡುವವರಿಗೆ ಪ್ರಜೆಗಳೇ ಅನುಮೋದನೆ ಮಾಡುತ್ತಾರೆ. ಇಂಥ ಸಂದರ್ಭದಲ್ಲಿ ಅವಶ್ಯವಾಗಿ ದಂಡನೀತಿಯನ್ನು ಅಳವಡಿಸಬೇಕು. ಯಾವುದೇ ರೀತಿಯಲ್ಲಿ ಅದನ್ನು ಸಡಿಲಗೊಳಿಸಬಾರದು. ಮತ್ತು ಏಕಾಂತದಲ್ಲಿ ಮಾಡುವ ತಪ್ಪುಗಳನ್ನೂ ಕೂಡ ಗಮನಿಸಿ ಅವನಿಗೆ ಶಿಕ್ಷೆಯನ್ನು ನೀಡಬೇಕು. ಭ್ರಷ್ಟಾಚಾರ ಮೊದಲಾದವುಗಳಿಗೆ ಸ್ವಲ್ಪವೂ ಅವಕಾಶ ಕೊಡದೇ ರಾಜ್ಯವನ್ನು ಪರಿಪಾಲನೆ ಮಾಡಬೇಕು. ಹೀಗೆ ಅತ್ಯಂತಪ್ರಾಮಾಣಿಕವಾಗಿ ಪ್ರಜೆಗಳು ಬದುಕುವಂತೆ ರಾಜ- ನಾದವನು ಪ್ರಯತ್ನ ಪಡಬೇಕು.
ಇಂದಿನ ಕಾಲದಲ್ಲಿ ಭ್ರಷ್ಟಾಚಾರ ಮೊದಲಾದವುಗಳನ್ನು ಮಾಡದೇ ಬದುಕಲು ಸಾಧ್ಯವೇ ಆಗುವುದಿಲ್ಲವೆಂಬ ಭಾವನೆ ಎಲ್ಲ ಸಾತ್ವಿಕರಲ್ಲೂ ತುಂಬಿದೆ. ಯಾವು- ದಾದರೂ ಸಂಕಟ ಪರಿಸ್ಥಿತಿಯು ಎದುರಾದಾಗ ಪರಿಹಾರವಾದರೆ ಸಾಕು ಎಂಬ ಭಾವನೆಯಿಂದ ಭ್ರಷ್ಟಾಚಾರ ಮಾಡುವವರಿಗೆ ಕಾನೂನುಬಾಹಿರವಾಗಿ ಹಣ ಮೊದಲಾದವುಗಳನ್ನು ಕೊಟ್ಟು, ಪಾರಾಗುವ ಮನೋಭಾವನೆ ಪ್ರತಿಯೊಬ್ಬರಲ್ಲೂ ಬೆಳೆಯುತ್ತಿದೆ. ರಾಜರಾದವರೂ ಕೂಡ ಇದನ್ನು ಗಮನಿಸದೇ ಸ್ವತಃ ತಾವೇ ಭ್ರಷ್ಟಾಚಾರ ಮೊದಲಾದವುಗಳನ್ನು ಮಾಡುತ್ತಾ, ರಾಜ್ಯಪರಿಪಾಲನೆಯಲ್ಲಿ ತೊಡ -ಗಿದ್ದಾರೆ. ಇದೆಲ್ಲವೂ ಕೂಡ ಜಗತ್ತಿನ ನಾಶಕ್ಕೆ ಕಾರಣವೆಂದು ಈ ಶ್ಲೋಕಗಳು ನಿರೂಪಣೆ ಮಾಡುತ್ತಿವೆ.
ಚಾತುರ್ವರ್ಣ್ಯಾಪ್ರಮೋಹಾಯ ಸುನೀತಿನಯನಾಯ ಚ |
ದಂಡೋ ವಿಧಾತ್ರಾ ವಿಹಿತೋ ಧರ್ಮಾರ್ಥಾವಭಿರಕ್ಷಿತುಮ್ ॥35॥
ನಾಕುವರ್ಣದವರು ಸಂತೋಷದಿಂದ ಬದುಕುವುದಕ್ಕಾಗಿ ಪ್ರತಿಯೊಬ್ಬರೂ ನೀತಿವಂತರಾಗಿ ಬಾಳುವುದಕ್ಕಾಗಿ ಧರ್ಮ ಮತ್ತು ಅರ್ಥಗಳನ್ನು ಈ ಭೂಲೋಕ - ದಲ್ಲಿ ಸಂರಕ್ಷಣೆ ಮಾಡುವುದಕ್ಕಾಗಿ ಆ ಬ್ರಹ್ಮನೇ ದಂಡನೀತಿಯನ್ನು ವಿಧಾನ ಮಾಡಿರುತ್ತಾನೆ.

ಯದಿ ದಂಡಾನ್ನ ಬಿಭ್ಯೇಯುರ್ವಯಾಂಸಿ ಶ್ವಾಪದಾನಿ ಚ |
ಅದ್ಯುಃ ಪಶೂನ್ ಮನುಷ್ಯಾಂಶ್ಚ ಯಜ್ಞಾರ್ಥಾನಿ ಹವೀಂಷಿ ಚ ॥36॥
ಹಿಂಸೆ ಮಾಡುವ ಮೃಗಗಳು, ಪಕ್ಷಿಗಳು ದಂಡಕ್ಕೆ ಭಯಪಡದಿದ್ದರೆ ಆ ಮೃಗಗಳು ಹಾಗೂ ಪಕ್ಷಿಗಳು ಸಾಧುವಾದ ಪಶುಗಳನ್ನು, ಮನುಷ್ಯರನ್ನು ಹಾಗೂ ಯಜ್ಞ- ಕ್ಕೋಸ್ಕರ ಉಪಯೋಗಿಸಲು ಇಟ್ಟ ಹವಿಸ್ಸುಗಳನ್ನು ತಿಂದುಬಿಡುತ್ತಿದ್ದವು.
ನ ಬ್ರಹ್ಮಚಾರ್ಯಧೀಯೀತ ಕಲ್ಯಾಣೀ ಗೌರ್ನ ದುಹ್ಯತೇ |
ನ ಕನ್ಯೋದ್ವಹನಂ ಗಚ್ಛೇದ್ ಯದಿ ದಂಡೋ ನ ಪಾಲಯೇತ್॥37॥
ದಂಡನೀತಿಯನ್ನು ಈ ಲೋಕದಲ್ಲಿ ಅಳವಡಿಸಿ, ಲೋಕಮರ್ಯಾದೆಯನ್ನು ಸಂರಕ್ಷಣೆ ಮಾಡದಿದ್ದರೆ, ಬ್ರಹ್ಮಚಾರಿಯೂ ಕೂಡ ವೇದಾಧ್ಯಯನದಲ್ಲಿ ತೊಡಗು- ತ್ತಿರಲಿಲ್ಲ. ಕಲ್ಯಾಣಕರವಾದ ಹಸುವೂ ಕೂಡ ಹಾಲು ನೀಡುತ್ತಿರಲಿಲ್ಲ. ಕನ್ಯೆಯೂ ಕೂಡ ಮದುವೆಯಾಗುತ್ತಿರಲಿಲ್ಲ.
ಟಿಪ್ಪಣಿ - ಬ್ರಹ್ಮಚಾರಿಯಾದವನು ವೇದಾಧ್ಯಯನವನ್ನು ಮಾಡುವುದ- ರಿಂದಲೇ ಈ ಜಗತ್ತಿನಲ್ಲಿ ಜ್ಞಾನವು ಸ್ಥಾಪನೆಯಾಗುತ್ತದೆ. ಪ್ರತಿಯೊಬ್ಬ ತ್ರೈವರ್ಣಿಕರು ತಮ್ಮ ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನವನ್ನು ಮಾಡಲೇ ಬೇಕು. ವೇದದಲ್ಲಿ ಹೇಳಲ್ಪಟ್ಟ ತತ್ವಜ್ಞಾನವನ್ನು ಸಂಪಾದನೆ ಮಾಡಬೇಕು. ರಾಜದಂಡದ ಭಯವು ಇಲ್ಲದಿದ್ದರೆ ಬ್ರಹ್ಮಚಾರಿಯಾದವನು ವೇದಾಧ್ಯಯನವನ್ನೇ ಮಾಡುತ್ತಿರಲಿಲ್ಲ. ಹಸುಗಳು ಹಾಲನ್ನು ಕೊಡುವುದರಿಂದಲೇ ಪ್ರತಿಯೊಬ್ಬರೂ ಆರೋಗ್ಯವಂತರಾಗಿದ್ದಾರೆ. ಆದ್ದರಿಂದಲೇ ಹಸುಗಳನ್ನು ಮಾತೃಸ್ಥಾನದಲ್ಲಿ ಪೂಜೆ ಮಾಡಲಾಗುತ್ತದೆ. ಲೋಕಕ್ಕೆ ಕಲ್ಯಾಣವನ್ನು ಉಂಟುಮಾಡುವ ಕಲ್ಯಾಣಿ ಎಂಬು- ದಾಗಿಯೇ ಗೌರವಿಸಲಾಗುತ್ತದೆ. ದಂಡಭಯವಿಲ್ಲದಿದ್ದರೆ ಹಸುಗಳೂ ಕೂಡ ಹಾಲನ್ನು ಕೊಡುತ್ತಿರಲಿಲ್ಲ. ಕನ್ಯೆಯರು ಸರಿಯಾದ ಸಮಯದಲ್ಲಿ ವಿವಾಹ- ವಾಗುವುದರಿಂದಲೇ ಗಾರ್ಹಸ್ಥ್ಯಧರ್ಮವು ಶುದ್ಧವಾಗಿರುತ್ತದೆ. ದಂಡಭಯ- ವಿಲ್ಲದಿದ್ದರೆ ಕನ್ಯೆಯರು ವಿವಾಹವಾಗದೇ ಅನೇಕ ಪುರುಷರ ಸಂಪರ್ಕದಲ್ಲಿ ತೊಡಗಿ, ಗಾರ್ಹಸ್ಥ್ಯಧರ್ಮವನ್ನೇ ಹಾಳುಮಾಡುತ್ತಿದ್ದರು. ಹೀಗೆ ಪ್ರತಿಯೊಬ್ಬರ ವರ್ಣಾಶ್ರಮ ಧರ್ಮಪರಿಪಾಲನೆಯು ಉಳಿಸುವುದಕ್ಕಾಗಿ ದಂಡನೀತಿಯನ್ನು ಅಳವಡಿಸಬೇಕು. ಪರಲೋಕವನ್ನೇ ಒಪ್ಪದೇ ವರ್ಣಾಶ್ರಮಧರ್ಮಗಳೇ ಇರಬಾರ -ದೆಂಬ ಕಾನೂನು ಹೊರಡಿಸಿದ ಇಂದಿನ ಕಾಲದಲ್ಲಿ ಬದುಕುತ್ತಿರುವುದೇ ನಮ್ಮ ದೌರ್ಭಾಗ್ಯ ಎಂಬ ಭಾವನೆ ಮೂಡುತ್ತದೆ.
ವಿಶ್ವಗ್ಲೋಪಃ ಪ್ರವರ್ತೇತ ಭಿದ್ಯೇರನ್ ಸರ್ವಸೇತವಃ |
ಮಮತ್ವಂ ನ ಪ್ರಜಾನೀಯುರ್ಯದಿ ದಂಡೋ ನ ಪಾಲಯೇತ್ ॥38॥
ರಾಜದಂಡವು ಲೋಕಮರ್ಯಾದೆಯನ್ನು ಪಾಲನೆ ಮಾಡದೇ ಇದ್ದರೆ ಈ ಭೂಲೋಕದಲ್ಲಿ ಎಲ್ಲ ಧರ್ಮಕರ್ಮಗಳು ನಾಶವಾಗುತ್ತಿದ್ದವು. ಧಾರ್ಮಿಕವಾದ ಕಾರ್ಯಗಳೇ ಸಂಪೂರ್ಣವಾಗಿ ನಾಶವಾಗುತ್ತಿದ್ದವು. ಲೋಕಮರ್ಯಾದೆಯೇ ಇಲ್ಲದಂತಾಗುತ್ತಿತ್ತು. ಇದು ನನ್ನ ಕರ್ತವ್ಯ, ಇದು ನನ್ನ ಕರ್ತವ್ಯವಲ್ಲ ಎಂಬ ವಿವೇಚನೆಯೇ ಯಾರಿಗೂ ಇರುತ್ತಿರಲಿಲ್ಲ.
ನ ಸಂವತ್ಸರಸತ್ರಾಣಿ ತಿಷ್ಠೇಯುರಕುತೋಭಯಾಃ |
ವಿಧಿವದ್ ದಕ್ಷಿಣಾವಂತಿ ಯದಿ ದಂಡೋ ನ ಪಾಲಯೇತ್ ॥39॥
ದಂಡವು ಧರ್ಮಾರ್ಥವನ್ನು ಪರಿಪಾಲನೆ ಮಾಡದೇ ಇದ್ದಿದ್ದರೆ ಒಂದು ಸಂವತ್ಸರದ ಕಾಲ ಆಚರಿಸುವ ಸತ್ರಯಾಗಗಳನ್ನು ಆಚರಿಸಲು ಸಾಧ್ಯವೇ ಆಗು- ತ್ತಿರಲಿಲ್ಲ. ಅದರಲ್ಲಿ ಭೂರಿದಕ್ಷಿಣೆಯನ್ನೂ ಕೂಡ ನೀಡಲು ಸಾಧ್ಯವೇ ಆಗುತ್ತಿರ- ಲಿಲ್ಲ.
ಚರೇಯುರ್ನಾಶ್ರಮೇ ಧರ್ಮಂ ಯಥೋಕ್ತಂ ವಿಧಿಮಾಶ್ರಿತಾಃ |
ನ ವಿದ್ಯಾಂ ಪ್ರಾಪ್ನುಯಾತ್ ಕಶ್ಚಿದ್ ಯದಿ ದಂಡೋ ನ ಪಾಲಯೇತ್ ॥40॥
ರಾಜದಂಡವನ್ನು ಲೋಕದಲ್ಲಿ ಅನುಷ್ಠಾನ ಮಾಡದಿದ್ದರೆ, ಪ್ರಜೆಗಳೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಆಚರಣೆ ಮಾಡುತ್ತಿರಲಿಲ್ಲ. ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಯಾವುದೇ ವಿಧಿಗಳನ್ನು ಅನುಷ್ಠಾನಕ್ಕೆ ತರುತ್ತಿರಲಿಲ್ಲ. ಹೀಗೆ ವರ್ಣಾ- ಶ್ರಮಧರ್ಮಗಳೇ ನಾಶವಾದ ಮೇಲೆ ಯಾರೊಬ್ಬರೂ ಕೂಡ ವೇದಾಧ್ಯಯನ- ವನ್ನು ಮಾಡಿ, ತತ್ವಜ್ಞಾನವನ್ನು ಪಡೆಯುತ್ತಿರಲಿಲ್ಲ.
ಟಿಪ್ಪಣಿ - ತತ್ವಜ್ಞಾನದ ಸಂಪಾದನೆಗೆ ವರ್ಣಾಶ್ರಮಧರ್ಮದ ಪರಿಪಾಲನೆ ಅತ್ಯಂತ ಮುಖ್ಯ. ಯಾರು ವರ್ಣಾಶ್ರಮಧರ್ಮವನ್ನು ಪರಿಪಾಲನೆ ಮಾಡುವು- ದಿಲ್ಲವೋ ಅವರಿಗೆ ಶಿಕ್ಷೆಯನ್ನು ನೀಡಬೇಕು.
ನ ಚೋಷ್ಟ್ರಾ ನ ಬಲೀವರ್ದಾ ನಾಶ್ವಾಶ್ವತರಗರ್ದಭಾಃ |
ಯುಕ್ತಾ ವಹೇಯುರ್ಯಾನಾನಿ ಯದಿ ದಂಡೋ ನ ಪಾಲಯೇತ್ ॥41॥
ಒಂದು ವೇಳೆ ದಂಡವು ಲೋಕಮರ್ಯಾದೆಯನ್ನು ಪಾಲನೆ ಮಾಡದಿದ್ದರೆ ಒಂಟೆಗಳು, ಎತ್ತುಗಳು, ಕುದುರೆಗಳು, ಹೇಸರುಗತ್ತೆಗಳು, ಕತ್ತೆಗಳು ವಾಹವನ್ನು ಧರಿಸಿದ್ದರೂ ಕೂಡ ಎಳೆದುಕೊಂಡು ಹೋಗುತ್ತಿರಲಿಲ್ಲ.
ಟಿಪ್ಪಣಿ - ಮನುಷ್ಯರಷ್ಟೇ ಅಲ್ಲದೇ ಪ್ರಾಣಿಗಳೂ ಕೂಡ ದಂಡಪ್ರಯೋಗಕ್ಕೆ ಹೆದರುತ್ತವೆ. ಗಾಡಿಗೆ ಎತ್ತುಗಳನ್ನು ಕಟ್ಟಿದಾಗ ಚಾವಟಿ ಏಟಿಗೆ ಹೆದರಿಯೇ ಎಳೆದುಕೊಂಡು ಹೋಗುತ್ತವೆ. ಯಜಮಾನನು ದಂಡಪ್ರಯೋಗವನ್ನು ಮಾಡು- ವುದಿಲ್ಲವೆಂದು ಅವುಗಳಿಗೆ ತಿಳಿದರೆ ಒಂದು ಹೆಜ್ಜೆಯನ್ನೂ ಕೂಡ ಮುಂದೆ ಇಡುವುದಿಲ್ಲ.
ನ ಪ್ರೇಷ್ಯಾ ವಚನಂ ಕುರ್ಯುರ್ನ ಬಾಲೋ ಜಾತು ಕರ್ಹಿಚಿತ್ |
ನ ತಿಷ್ಠೇದ್ಯುವತಿ ಧರ್ಮೇ ಯದಿ ದಂಡೋ ನ ಪಾಲಯೇತ್ ॥42॥
ದಂಡವು ಲೋಕವನ್ನು ರಕ್ಷಣೆ ಮಾಡದೇ ಇದ್ದರೆ ಸೇವಕರು ಯಜಮಾನನ ಮಾತನ್ನು ಕೇಳುತ್ತಿರಲಿಲ್ಲ. ಮಕ್ಕಳು ತಾಯಿಯ ಮಾತುಗಳನ್ನು ಕೇಳುತ್ತಿರಲಿಲ್ಲ. ಯುವತಿಯಾದವಳು ತನ್ನ ಸತಿಯ ಧರ್ಮದಲ್ಲಿ ಸ್ಥಿರವಾಗಿ ನಿಲ್ಲುತ್ತಿರಲಿಲ್ಲ.
ದಂಡೇ ಸ್ಥಿತಾಃ ಪ್ರಜಾಃ ಸರ್ವಾ ಭಯಂ ದಂಡೇ ವಿದುರ್ಬುಧಾಃ |
ದಂಡೇ ಸ್ವರ್ಗೋ ಮನುಷ್ಯಾಣಾಂ ಲೋಕೋಽಯಂ ಸುಪ್ರತಿಷ್ಠಿತಃ ॥43॥
ಪ್ರಜೆಗಳೆಲ್ಲರೂ ದಂಡದಿಂದಲೇ ಸತ್ಯಮಾರ್ಗದಲ್ಲಿ ನಡೆಯುತ್ತಿದ್ದಾರೆ. ವಿದ್ವಾಂಸರೂ ಕೂಡ ಭಯವು ದಂಡದಲ್ಲಿಯೇ ಅಡಗಿದೆ

ಎಂದು ತಿಳಿಸುತ್ತಾರೆ. ಮನುಷ್ಯನಿಗೆ ಸ್ವರ್ಗ ಹಾಗೂ ಭೂಲೋಕಗಳು ದಂಡದಿಂದಲೇ ಪ್ರಾಪ್ತವಾಗುತ್ತವೆ.
ನ ತತ್ರ ಕೂಟಂ ಪಾಪಂ ವಾ ವಂಚನಾ ವಾಪಿ ದೃಶ್ಯತೇ |
ಯತ್ರ ದಂಡಃ ಸುವಿಹಿತಶ್ಚರತ್ಯರಿವಿನಾಶನಃ ॥44॥
ನ್ಯಾಯರೀತಿಯಿಂದ ಪ್ರಯೋಗಿಸಲ್ಪಟ್ಟು ವಿರೋಧಿಗಳನ್ನು ನಿಗ್ರಹ ಮಾಡುವ ದಂಡವು ಯಾವ ದೇಶದಲ್ಲಿ ನೆಲೆಗೊಂಡಿದೆಯೋ, ಅಲ್ಲಿ ಕಪಟ, ಮೋಸ, ಪಾಪ- ಗಳು ಎಂದೂ ಸಹ ಬರುವುದಿಲ್ಲ.
ಟಿಪ್ಪಣಿ - ದಂಡಪ್ರಯೋಗವನ್ನು ಸುವ್ಯವಸ್ಥಿತವಾಗಿ ಅನುಷ್ಠಾನಕ್ಕೆ ತರಬೇಕು. ಇಲ್ಲದಿದ್ದರೆ ಅನಾಹುತವೇ ಆಗುತ್ತದೆ. ದಂಡಪ್ರಯೋಗವನ್ನು ಶಿಷ್ಟರ ಮೇಲೆ ಎಂದೂ ಮಾಡಬಾರದು. ಅಥವಾ ಸತ್ಯ, ಪ್ರಾಮಾಣಿಕತೆಗಳು ಇದ್ದಲ್ಲಿ ದಂಡ- ಪ್ರಯೋಗವನ್ನು ಮಾಡಬಾರದು. ಅದಕ್ಕಾಗಿಯೇ ಇಲ್ಲಿ `ಸುವಿಹಿತಃ' ಎಂಬುದಾಗಿ ಹೇಳಿದ್ದಾರೆ.
ಹವಿಃ ಶ್ವಾ ಪ್ರಲಿಹೇದ್ ದೃಷ್ಟ್ವಾ ದಂಡಶ್ಚೇನ್ನೋದ್ಯತೋ ಭವೇತ್ |
ಹರೇತ್ ಕಾಕಃ ಪುರೋಡಾಶಂ ಯದಿ ದಂಡೋ ನ ಪಾಲಯೇತ್ ॥45॥
ದಂಡಪ್ರಯೋಗವನ್ನು ಸುವ್ಯವಸ್ಥಿತವಾಗಿ ಮಾಡದಿದ್ದರೆ ನಾಯಿಯು ಹವಿಸ್ಸನ್ನು ತಿನ್ನಲು ಮುನ್ನುಗ್ಗುತ್ತದೆ. ದಂಡದ ಭಯವು ಇಲ್ಲದಿದ್ದರೆ ಕಾಗೆಯು ಪುರೋಡಾಶ- ವನ್ನು ಎತ್ತಿಕೊಂಡು ಹೋಗುತ್ತದೆ.
ಯದಿದಂ ಧರ್ಮತೋ ರಾಜ್ಯಂ ವಿಹಿತಂ ಯದ್ಯಧರ್ಮತಃ |
ಕಾರ್ಯಸ್ತತ್ರ ನ ಶೋಕೋ ವೈ ಭುಂಕ್ಷ್ವ ಭೋಗಾನ್ ಯಜಸ್ವ ಚ ॥46॥
ಯುಧಿಷ್ಠಿರನೇ! ಈ ರಾಜ್ಯವು ನಮಗೆ ಧರ್ಮದಿಂದ ಪ್ರಾಪ್ತವಾಯಿತೋ ಅಥವಾ ಅಧರ್ಮದಿಂದ ಪ್ರಾಪ್ತವಾಯಿತೋ ? ಎಂಬುದರ ಬಗ್ಗೆ ಈಗ ವಿಚಾರವು ಬೇಡ. ಅದಕ್ಕೋಸ್ಕರ ನೀನು ಚಿಂತೆಯನ್ನೂ ಕೂಡ ಮಾಡಬೇಡ. ಭೋಗಗಳನ್ನು ಅನುಭವಿಸು. ಯಾಗಗಳನ್ನು ಆಚರಿಸು.
ಸುಖೇನ ಧರ್ಮಂ ಶ್ರೀಮಂತಶ್ಚರಂತಿ ಶುಚಿವಾಸಸಃ |
ಸಂವಸಂತಃ ಪ್ರಿಯೈರ್ದಾರೈರ್ಭುಂಜಾನಾಶ್ಚಾನ್ನಮುತ್ತಮಮ್ ॥47॥
ಶ್ರೀಮಂತರು ಶುದ್ಧವಾದ ಬಟ್ಟೆಯನ್ನು ಧರಿಸುತ್ತಾರೆ. ತಮ್ಮ ಪ್ರಿಯರಾದ ಪತ್ನಿ- ಯರ ಜೊತೆ ಸೇರುತ್ತಾರೆ. ಮೃಷ್ಟಾನ್ನಗಳನ್ನು ಭುಂಜಿಸುತ್ತಾರೆ. ಸುಖವಾಗಿಯೇ ಧರ್ಮವನ್ನು ಆಚರಣೆ ಮಾಡುತ್ತಾರೆ.
ಅರ್ಥೇ ಸರ್ವೇ ಸಮಾರಂಭಾಃ ಸಮಾಯತ್ತಾ ನ ಸಂಶಯಃ |
ಸ ಚ ದಂಡೇ ಸಮಾಯತ್ತಃ ಪಶ್ಯ ದಂಡಸ್ಯ ಗೌರವಮ್ ॥48॥
ಎಲ್ಲಾ ವೈಭವಗಳು ಅರ್ಥದ ಅಧೀನವಾಗಿವೆ. ಈ ವಿಷಯದಲ್ಲಿ ಸಂಶಯವೇ ಇರುವುದಿಲ್ಲ. ಆ ಅರ್ಥವು ದಂಡದ ಅಧೀನವಾಗಿದೆ. ದಂಡದ ರಕ್ಷಣೆಯು ಇಲ್ಲ- ದಿದ್ದರೆ ಸಂಪತ್ತು ಉಳಿಯುವುದಿಲ್ಲ. ಆದ್ದರಿಂದ ದಂಡದ ಗೌರವವನ್ನು ಗಮನಿಸು.
ಟಿಪ್ಪಣಿ - ಶ್ರೀಮಂತರು ಹಣದಿಂದ ಸುಲಭವಾಗಿ ಧರ್ಮಾಚರಣೆಯನ್ನು ಮಾಡುವಂತೆ, ನೀನೂ ಸಹ ಅಪಾರವಾದ ಸಂಪತ್ತುಗಳನ್ನು ವಿನಿಯೋಗಿಸಿ, ಧರ್ಮಾಚರಣೆಯಲ್ಲಿ ರತನಾಗು. ಸಮಸ್ತ ಅರ್ಥವು ದಂಡದ ಅಧೀನವಾಗಿದೆ. ನಿರಂತರ ದಂಡದ ರಕ್ಷಣೆಯಲ್ಲಿಯೇ ಸಾಕಷ್ಟು ಧನವು ಉಳಿಯುತ್ತದೆ.
ಲೋಕಯಾತ್ರಾರ್ಥಮೇವೇಹ ಧರ್ಮಪ್ರವಚನಂ ಕೃತಮ್ |
ಅಹಿಂಸಾ ಸಾಧುಹಿಂಸೇತಿ ಶ್ರೇಯಾನ್ ಧರ್ಮಪರಿಗ್ರಹಃ ॥49॥
ಲೋಕದಲ್ಲಿ ಸುವ್ಯವಸ್ಥಿತವಾದ ನಡತೆಗೆ ವಿದ್ವಾಂಸರು ಧರ್ಮವನ್ನು ಪ್ರತಿಪಾದನೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಅಹಿಂಸೆಯೇ ಒಳ್ಳೆಯದು ಎಂಬುದನ್ನು ಪ್ರತಿ- ಪಾದನೆ ಮಾಡಿದ್ದಾರೆ. ಹಿಂಸೆ ಮಾಡುವುದು ಅಯುಕ್ತ ಎಂಬುದನ್ನು ಪ್ರತಿಪಾದನೆ ಮಾಡಿದ್ದಾರೆ. ಇಂಥ ಸಂದರ್ಭದಲ್ಲಿ ಯಾವುದು ಧರ್ಮ, ಯಾವುದು ಅಧರ್ಮ ಎಂದು ವಿಚಾರ ಮಾಡಿಯೇ ಕಾರ್ಯದಲ್ಲಿ ಪ್ರವೃತ್ತನಾಗಬೇಕು.
ಟಿಪ್ಪಣಿ - `ಅಹಿಂಸಾ ಸಾಧುಹಿಂಸೇತಿ ಶ್ರೇಯಾನ್ ಧರ್ಮಪರಿಗ್ರಹಃ' ಎಂಬ ಉತ್ತರಾರ್ಧದ ಅಭಿಪ್ರಾಯವನ್ನು ಹೀಗೆ ತಿಳಿಯತಕ್ಕದ್ದು - ಸರ್ವಥಾ ಹಿಂಸೆಯನ್ನೇ ಮಾಡಬಾರದೋ, ಅಥವಾ ದುಷ್ಟರಿಗೆ ಹಿಂಸೆಯನ್ನು ಮಾಡಬೇಕೋ ? ಎಂಬ ಪ್ರಶ್ನೆಯು ಪ್ರಾಪ್ತವಾದಾಗ ಯಾವುದು ಧರ್ಮವೋ, ಅದನ್ನೇ ಮಾಡಬೇಕು ಎಂದಭಿಪ್ರಾಯ. ಒಬ್ಬ ಸಾಧುವಾದ ಋಷಿಯನ್ನು ಕಳ್ಳಕಾಕರು ಹಿಂಸೆ ಮಾಡಲು ಆಗಮಿಸುತ್ತಾರೆ. ನಿಷ್ಕಾರುಣವಾಗಿ ಹಿಂಸೆ ಮಾಡಲು ಹೊರಟ, ಆ ಕಳ್ಳಕಾಕರಿಗೆ ಶಿಕ್ಷೆಯನ್ನು ನೀಡುವುದು ಸಾಧುವೋ? ಅಸಾಧುವೋ? ಎಂಬ ಪ್ರಶ್ನೆಯು ಬಂದರೆ, ವಿವೇಚನೆಯನ್ನು ಮಾಡಿ, ಕಳ್ಳಕಾಕರ ಹಿಂಸೆಯೇ ಸಾಧುವಾಗಿದೆ ಎಂದು ನಿರ್ಣಯ ಮಾಡಬೇಕು. ಇಲ್ಲದಿದ್ದರೆ ನಿಷ್ಕಾರುಣವಾಗಿ ಅವರು ಆ ಸಾಧುವಾದ ಮುನಿಗೆ ಹಿಂಸೆಯನ್ನು ನೀಡಿ, ಧರ್ಮಕ್ಕೆ ಅನ್ಯಾಯವನ್ನು ಮಾಡುತ್ತಾರೆ. ಆದ್ದರಿಂದ ಅಹಿಂಸಾವ್ರತವನ್ನು ಆಚರಿಸುವಾಗ ಸಮಯಾಸಮಯಗಳನ್ನು ನೋಡಿ, ಪ್ರವೃತ್ತಿ- ಯನ್ನು ಮಾಡಬೇಕು. ಹಸುವನ್ನು ತಿನ್ನಲು ಆಗಮಿಸಿದ ಹುಲಿಯನ್ನು ಕೊಲ್ಲುವುದು ಧರ್ಮವೋ? ಅಧರ್ಮವೋ? ಇತ್ಯಾದಿ ವಿಚಾರಗಳನ್ನು ಮಾಡಿ, ಪ್ರವೃತ್ತರಾಗ- ಬೇಕು.
ನಾತ್ಯಂತಗುಣವಾನ್ ಕಶ್ಚಿನ್ನ ಚಾಪ್ಯತ್ಯಂತನಿರ್ಗುಣಃ |
ಉಭಯಂ ಸರ್ವಕಾರ್ಯೇಷು ದೃಶ್ಯತೇ ಸಾಧ್ವಸಾಧು ಚ ॥50॥
ಜಗತ್ತಿನಲ್ಲಿ ಸಂಪೂರ್ಣವಾಗಿ ಕೇವಲ ಗುಣವುಳ್ಳ ಒಂದು ಪದಾರ್ಥವು ಇರುವುದಿಲ್ಲ. ಯಾವುದೇ ಗುಣವೇ ಇಲ್ಲದ ವಸ್ತುವೂ ಕೂಡ ಇರುವುದಿಲ್ಲ. ಪ್ರತಿಯೊಂದು ಕಾರ್ಯಗಳಲ್ಲಿಯೂ ಒಳ್ಳೆಯದು ಹಾಗೂ ಕೆಟ್ಟದ್ದು ಇದ್ದೇ ಇರುತ್ತವೆ.
ಟಿಪ್ಪಣಿ - ಇಂಥವನು ಕೆಟ್ಟವನು, ಇಂಥವನು ದುಷ್ಟನು ಎಂದು ನಿರ್ಣಯ ಮಾಡುವುದೂ ಕೂಡ ಕಠಿಣವಾದದ್ದೇ ಆಗಿದೆ. ಏಕೆಂದರೆ ಪ್ರತಿಯೊಬ್ಬರಲ್ಲಿಯೂ ಒಳ್ಳೆಯ ಗುಣಗಳು ಇರುತ್ತವೆ. ಕೆಟ್ಟಗುಣಗಳು ಇರುತ್ತವೆ. ಆದರೆ ಅವನ ಉದ್ದೇಶ- ವನ್ನರಿತು, ಅವನ ಕೆಟ್ಟ ಕಾಮನೆಗಳನ್ನರಿತು ದಂಡಪ್ರಯೋಗವನ್ನು ಮಾಡತಕ್ಕದ್ದು. ಒಬ್ಬ ಸಾಧುವಾದವನು ಮುಖ್ಯವಾದ ಧರ್ಮವನ್ನು ಆಚರಣೆ ಮಾಡಲು ಹೊರಟಾಗ, ಸಣ್ಣಪುಟ್ಟ ಅಧರ್ಮಗಳು ನಡೆದರೆ, ಅಂಥ ಸಂದರ್ಭದಲ್ಲಿ ದಂಡಪ್ರಯೋಗವನ್ನು ಮಾಡಬಾರದು. ಅದರಂತೆ ಒಬ್ಬ

ದರೋಡೆಗಾರನು ದರೋಡೆಯನ್ನು ಮಾಡಿ, ಆ ಹಣದಿಂದ ದಾನ-ಧರ್ಮಾದಿಗಳನ್ನು ಮಾಡಿದರೆ ಅದನ್ನು ಧರ್ಮವೆಂದೂ ಕೂಡ ಭಾವಿಸಿ, ಅವನಿಗೆ ಶಿಕ್ಷೆಯನ್ನು ನೀಡದೇ ಇರಬಾರದು.
ಪಶೂನಾಂ ವೃಷಣಂ ಛಿತ್ತ್ವಾ ತತೋ ಭಿಂದಂತಿ ನಸ್ಸು ತಾನ್ |
ಕೃಷಂತಿ ಬಹವೋ ಭಾರಾನ್ ಬಧ್ನಂತಿ ದಮಯಂತಿ ಚ ॥51॥
ಲೋಕದ ಜನರು ಹೋರಿಯ ಬೀಜವನ್ನು ಮೊದಲು ಒಡೆಯುತ್ತಾರೆ. ಅನಂತರ ಮೂಗಿಗೆ ದಾರವನ್ನು ಹಾಕುತ್ತಾರೆ. ಅವುಗಳ ಮೇಲೆ ದೊಡ್ಡ ಭಾರವನ್ನು ಹೊರಿಸಿ ಕಟ್ಟಿಹಾಕುತ್ತಾರೆ, ಹೊಡೆಯುತ್ತಾರೆ, ಹೊಲ ಊಳುತ್ತಾರೆ.
ಟಿಪ್ಪಣಿ - ತತೋ ಭಿಂದಂತಿ ನಸ್ಸು ತಾನ್ ಇತ್ಯತ್ರ ನಸ್ಸು ನಾಸಾಪುಟೇಷು |
`ತತೋ ಭಿಂದಂತಿ ನಸ್ಸು ತಾನ್' ಎಂಬಲ್ಲಿ ನಸ್ಸು ಎಂದರೆ ನಾಸಾಪುಟವನ್ನು ಮೂಗುದಾರದಿಂದ ಬೀರುತ್ತಾರೆ ಎಂದರ್ಥ.
ಏವಂ ಪರ್ಯಾಕುಲೇ ಲೋಕೇ ವಿಪತೇ ಝರ್ಝರಿಕೃತೇ |
ತೈಸ್ತೈರ್ನ್ಯಾಯ್ಯೈರ್ಮಹಾರಾಜ ಪುರಾಣಂ ಧರ್ಮಮಾಚರ ॥52॥
ಓ ಮಹಾರಾಜನೇ! ಹೀಗೆ ಸಮಸ್ತಲೋಕವು ಆಯಾ ವ್ಯವಹಾರಗಳಿಂದ ಕೂಡಿ, ಭಯದಿಂದ ಸ್ವಕಾರ್ಯದಲ್ಲಿ ಪ್ರವೃತ್ತಿಯನ್ನು ಮಾಡುತ್ತಿವೆ. ಇಲ್ಲದಿದ್ದರೆ ಯಾವುದೂ ಕೂಡ ಸರಿಯಾಗಿ ನಡೆಯುವುದೇ ಇಲ್ಲ. ಆದ್ದರಿಂದ ನೀನು ಈಗ ಹೊಸದಾದ್ದನ್ನು ಏನೂ ಮಾಡಬೇಕಾಗಿಲ್ಲ. ನಮ್ಮ ಪೂರ್ವಿಕರು ಹೇಳಿದ ಧರ್ಮವನ್ನಷ್ಟೇ ಆಚರಣೆ ಮಾಡು. ಧರ್ಮರಕ್ಷಣೆಯನ್ನು ಮಾಡು.
ಯಜ ದೇಹಿ ಪ್ರಜಾಂ ರಕ್ಷ ಧರ್ಮಂ ಸಮನುಪಾಲಯ |
ಅಮಿತ್ರಾನ್ ಜಹಿ ಕೌಂತೇಯ ಮಿತ್ರಾಣಿ ಪರಿಪಾಲಯ ॥50॥
ಯಜ್ಞ-ಯಾಗಾದಿಗಳನ್ನು ನಡೆಸು, ದಾನಗಳನ್ನು ಮಾಡು, ಪ್ರಜೆಗಳನ್ನು ಪರಿ- ಪಾಲನೆ ಮಾಡು, ಧರ್ಮಸ್ಥಾಪನೆಯನ್ನು ಮಾಡು, ಶತ್ರುಗಳನ್ನು ಜಯಿಸು, ಮಿತ್ರ- ರನ್ನು ಹೆಚ್ಚಿಸಿಕೋ.
ಮಾ ಚ ತೇ ನಿಘ್ನತಃ ಶತ್ರೂನ್ ಮನ್ಯುರ್ಭವತು ಭಾರತ |
ನ ತತ್ರ ಕಿಲ್ಬಿಷಂ ಕಿಂಚಿತ್ ಕರ್ತುರ್ಭವತಿ ಭಾರತ ॥51॥
ಶತ್ರುಗಳನ್ನು ಕೊಂದ ಕಾರಣಕ್ಕೆ ದುಃಖವನ್ನು ಅನುಭವಿಸಬೇಡ. ಶತ್ರುವಧದಿಂದ ರಾಜರಿಗೆ ಎಂದೂ ಕೂಡ ಲವಲೇಶವು ಪಾಪವು ಅಂಟುವುದಿಲ್ಲ.
ಆತತಾಯೀ ಹಿ ಯೋ ಹನ್ಯಾದಾತತಾಯಿನಮಾಗತಮ್ |
ನ ತೇನ ಭ್ರೂಣಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮೃಚ್ಛತಿ ॥52॥
ಶಸ್ತ್ರವನ್ನು ಮೇಲೆತ್ತಿಕೊಂಡು ತನ್ನನ್ನು ವಧೆ ಮಾಡಲು ಬರುವವನನ್ನು ಕೊಲ್ಲು- ವುದು ಎಂದೂ ಕೂಡ ಭ್ರೂಣಹತ್ಯೆ ಮಾಡಿದಂತೆ ಆಗುವುದಿಲ್ಲ. ಕೋಪವನ್ನು ನಿಗ್ರಹಿಸುವುದು ಲೋಕದ ನಿಯಮವಾಗಿದೆ.
ಟಿಪ್ಪಣಿ- ಶಸ್ತ್ರವನ್ನು ಹಿಡಿದು ಯಾರು ಕೊಲ್ಲಲು ಮುನ್ನುಗ್ಗುತ್ತಾನೋ, ಅವನನ್ನು ಶಸ್ತ್ರವನ್ನು ಹಿಡಿದವನೇ ಕೊಲ್ಲಬೇಕು. ಇದರಿಂದ ಭ್ರೂಣಹತ್ಯೆಯ ಪಾಪವು ಬರುವುದಿಲ್ಲ. ಏಕೆಂದರೆ ಇಂಥ ಸಂದರ್ಭದಲ್ಲಿ ಶತ್ರುವಿನಲ್ಲಿರುವ ಕೋಪವನ್ನು ನಮ್ಮಲ್ಲಿರುವ ಕೋಪವು ನಿಗ್ರಹ ಮಾಡುತ್ತದಷ್ಟೇ. ಇದನ್ನು ಅರ್ಥ- ಮಾಡಿಕೊಳ್ಳಬೇಕು.
ಟಿಪ್ಪಣಿ - ಮನ್ಯುಸ್ತಂ ಮನ್ಯುಮೃಚ್ಛತಿ ಇತ್ಯತ್ರ ಮನ್ಯುಃ ಏಕಸ್ಯ ಮನ್ಯುಃ ಮನ್ಯುಮ್ ಅಪರಸ್ಯ ತಂ ಮನ್ಯುಮೃಚ್ಛತಿ | ಏಕಸ್ಯ ಮನ್ಯುನಾ ಅಪರಸ್ಯ ಮನ್ಯುನಾಶೋ ಭವತೀತ್ಯರ್ಥಃ|
`ಮನ್ಯುಸ್ತಂ ಮನ್ಯುಮೃಚ್ಛತಿ' ಎಂಬುದರ ಅರ್ಥ ಹೀಗಿದೆ - ಒಬ್ಬನಲ್ಲಿರುವ ಕೋಪವು, ಮತ್ತೊಬ್ಬನಲ್ಲಿರುವ ಕೋಪವನ್ನು ನಿಗ್ರಹ ಮಾಡುತ್ತದೆ. ಒಬ್ಬನಲ್ಲಿರುವ ಕೋಪದಿಂದ ಮತ್ತೊಬ್ಬನ ಕೋಪವು ನಷ್ಟವಾಗುತ್ತದೆ.
ಅವಧ್ಯಃ ಸರ್ವಭೂತಾನಾಮಂತರಾತ್ಮಾ ನ ಸಂಶಯಃ |
ಅವಧ್ಯೇ ಚಾತ್ಮನಿ ಕಥಂ ವಧ್ಯೋ ಭವತಿ ಕೇನಚಿತ್ ॥53॥
ಸಕಲ ಪ್ರಾಣಿಗಳಲ್ಲಿ ಇರುವ ಅಂತರಾತ್ಮನು ಅವಧ್ಯನಾಗಿದ್ದಾನೆ. ಈ ವಿಷಯದಲ್ಲಿ ಸಂಶಯವೇ ಇರುವುದಿಲ್ಲ. ಆತ್ಮನು ಅವಧ್ಯನಾಗಿರುವುದರಿಂದಲೇ ಒಬ್ಬನು ಮತ್ತೊಬ್ಬನನ್ನು ಕೊಲ್ಲುತ್ತಾನೆಂಬುದು ಹೇಗೆ ತಾನೇ ಸಮಂಜಸವಾಗುತ್ತದೆ? ಆತ್ಮ- ನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ.
ಯಥಾ ಹಿ ಪುರುಷಃ ಶಾಲಾಂ ಪುನಃ ಸಂಪ್ರವಿಶೇನ್ನವಾಮ್ |
ಏವಂ ಜೀವಃ ಶರೀರಾಣಿ ತಾನಿ ತಾನಿ ಪ್ರಪದ್ಯತೇ ॥54॥
ಹೇಗೆ ಪುರುಷನು ಹೊಸ ಮನೆಗಳಿಗೆ ವಾಸ ಮಾಡಲು ತೆರಳುತ್ತಾನೋ, ಅದೇ ರೀತಿಯಲ್ಲಿ ನಮ್ಮ ದೇಹದ ಒಳಗಿರುವ ಜೀವನೂ ಕೂಡ ಹೊಸ ಶರೀರಗಳನ್ನು ಧರಿಸುತ್ತಾನೆ. ಇದರಿಂದ ಅವನು ಸತ್ತನು ಎಂದು ದುಃಖಿಸಬಾರದು.
ದೇಹಾನ್ ಪುರಾಣಾನುತ್ಸೃಜ್ಯ ನವಾನ್ ಸಂಪ್ರತಿಪದ್ಯತೇ |
ಏವಂ ಮೃತ್ಯುಮುಖಂ ಪ್ರಾಹುರ್ಯೇ ಜನಾಸ್ತತ್ತ್ವದರ್ಶಿನಃ ॥55॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚದಶೋಽಧ್ಯಾಯಃ ॥15॥
ಈ ಜೀವಾತ್ಮನು ಹಳೆಯ ಶರೀರವನ್ನು ಬಿಟ್ಟು, ಹೊಸ ಶರೀರವನ್ನು ಪಡೆ- ಯುತ್ತಾನೆ. ಇದನ್ನೇ ತತ್ತ್ವಜ್ಞಾನಿಗಳು ಮೃತ್ಯು ಎಂಬುದಾಗಿ ಕರೆಯುತ್ತಾರೆ.
ಟಿಪ್ಪಣಿ - ಹಳೆಯ ಜೀರ್ಣವಾದ ದೇಹಗಳನ್ನು ಪರಿತ್ಯಾಗ ಮಾಡುತ್ತಾನೆ. ಹಳೆಯ ಬಟ್ಟೆಯನ್ನು ಪರಿತ್ಯಾಗ ಮಾಡಿ, ಹೊಸ ಬಟ್ಟೆಯನ್ನು ಸ್ವೀಕರಿಸಿದಾಗ ಸುಖವನ್ನು ಅನುಭವಿಸುವಂತೆ ಹಳೆಯ ದೇಹವನ್ನು ಬಿಟ್ಟಾಗ ಸಂತೋಷವನ್ನೇ ನಾವು ಪಡಬೇಕು. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು - `ಯಥಾ ಶರೀರಾಣಿ ವಿಹಾಯ ಜೀರ್ಣಾನಿ ಅನ್ಯಾನಿ ಸಂಯಾತಿ ನವಾನಿ ದೇಹಿ' ಎಂಬುದಾಗಿ ಹೇಳಿರುತ್ತಾನೆ. ಅದನ್ನೇ ಅರ್ಜುನನು ಇಲ್ಲಿ ಯುಧಿಷ್ಠಿರನಿಗೆ ಉಪದೇಶಿಸುತ್ತಿದ್ದಾನೆ.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 15ನೆಯ ಅಧ್ಯಾಯವು ಮುಗಿಯಿತು.
16. ಹದಿನಾರನೆಯ ಅಧ್ಯಾಯ
ದುರ್ಯೋಧನಾದಿಗಳಿಂದ ಹಿಂದೆ ಅನುಭವಿಸಿದ ದುಃಖಗಳನ್ನು ನೆನಪು ಮಾಡಿ ಮೋಹವನ್ನು ತ್ಯಾಗಮಾಡುವಂತೆ ರಾಜ್ಯಭಾರ ಕಾರ್ಯದಲ್ಲಿ ತೊಡಗುವಂತೆ ಭೀಮಸೇನದೇವರ ಸಲಹೆ.
ವೈಶಂಪಾಯನಃ
ಅರ್ಜುನಸ್ಯ ವಚಃ ಶ್ರುತ್ವಾ ಭೀಮಸೇನೋಽತ್ಯಮರ್ಷಣಃ |
ಧೈರ್ಯಮಾಸ್ಥಾಯ ತೇಜಸ್ವೀ ಜ್ಯೇಷ್ಠಂ ಭ್ರಾತರಮಬ್ರವೀತ್ ॥1॥
ಅರ್ಜುನನ ಮಾತನ್ನು ಕೇಳಿದ ಮೇಲೆ ಭೀಮಸೇನನಿಗೆ ಧರ್ಮರಾಜನ ಪ್ರವೃತ್ತಿ ಸಹಿಸಲಾಗಲಿಲ್ಲ. ಧೈರ್ಯವನ್ನು ತಾಳಿದ ಭೀಮಸೇನನು, ತೇಜಸ್ವಿಯಾದ ಹಿರಿಯ ಸಹೋದರನಾದ ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು -
ರಾಜನ್ ವಿದಿತಧರ್ಮೋಽಸಿ ನ ತೇಽಸ್ತ್ಯವಿದಿತಂ ಭುವಿ |
ಉಪಶಿಕ್ಷಾಮ ತೇ ವೃತ್ತಂ ಸದೈವ ನ ಚ ಶಕ್ನುಮಃ ॥2॥
ರಾಜನೇ! ಲೋಕದಲ್ಲಿ ವಿದಿತವಾದ ಎಲ್ಲ ಧರ್ಮವನ್ನು ನೀನು ತಿಳಿದವನು. ನಿನಗೆ ತಿಳಿಯದ್ದು ಯಾವುದೂ ಇಲ್ಲ. ನಿನ್ನ ಸದ್ವಿಚಾರಗಳನ್ನು ನಡತೆಗಳನ್ನು ನಾವು ನೋಡಿ ತಿಳಿದಿದ್ದೇವೆ. ಆದರೆ ಅದರಂತೆ ನಡೆಯಲು ಸಾಧ್ಯವಾಗುತ್ತಿಲ್ಲ.
ನ ವಕ್ಷ್ಯಾಮಿ ನ ವಕ್ಷ್ಯಾಮೀತ್ಯೇವಂ ಮೇ ಮನಸಿ ಸ್ಥಿತಮ್ |
ಅತಿ ದುಃಖಾತ್ತು ವಕ್ಷ್ಯಾಮಿ ತನ್ನಿಬೋಧ ಜನಾಧಿಪ ॥3॥
ಪ್ರಜೆಗಳ ಅರಸನೇ! ಈ ಸಂದರ್ಭದಲ್ಲಿ ನಾನು ಏನನ್ನೂ ಸರ್ವಥಾ ಹೇಳ- ಬಾರದೆಂದೇ ನಾನು ಮನಸ್ಸಿನಿಂದ ಸ್ಥಿರವಾಗಿದ್ದೇನೆ. ಆದರೆ ಬಹಳವಾದ ದುಃಖದಿಂದ ನಾನು ಮಾತನಾಡಬೇಕಾಗಿದೆ. ಹೇಳುವೆನು ಕೇಳು.
ಭವತಸ್ತು ಪ್ರಮೋಹೇನ ಸರ್ವಂ ಸಂಶಯಿತಂ ಕೃತಮ್ |
ವಿಕ್ಲವತ್ವಂ ಚ ನಃ ಪ್ರಾಪ್ತಮಬಲತ್ವಂ ತಥೈವ ಚ ॥4॥
ಭರತರ್ಷಭನೇ! ನಿನಗೆ ಇರುವ ಬುದ್ಧಿಮೋಹದಿಂದ ಎಲ್ಲವನ್ನು ಸಂದೇಹ - ದಿಂದಲೇ ಕಾಣಬೇಕಾಗಿದೆ. ನಮಗೆ ಹೇಡಿತನವೂ ಮತ್ತು ಅಶಕ್ತತೆಯೂ ನಿನ್ನಿಂದಲೇ ಉಂಟಾಗುತ್ತಿದೆ.
ಕಥಂ ಹಿ ರಾಜಾ ಲೋಕಸ್ಯ ಸರ್ವಶಾಸ್ತ್ರವಿಶಾರದಃ |
ಮೋಹಮಾಪದ್ಯಸೇ ದೈನ್ಯಾದ್ ಯಥಾ ಕಾಪುರುಷಸ್ತಥಾ ॥5॥
ಪುರುಷೋತ್ತಮನೇ! ಸಕಲಶಾಸ್ತ್ರಗಳನ್ನೆಲ್ಲಾ ತಿಳಿದು ಲೋಕದ ಪ್ರಭುವಾಗಿರುವ ನೀನು ಯಾವ ಮೋಹಕ್ಕೆ ಸಿಲುಕಿ ಇಂಥ ದೈನ್ಯದ ಅವಸ್ಥೆಯನ್ನು ಹೊಂದಿರುವಿ?
ಅಗತಿಶ್ಚ ಗತಿಶ್ಚೈವ ಲೋಕಸ್ಯ ವಿದಿತಾ ತವ |
ಆಯತ್ಯಾಂ ಚ ತದಾತ್ವೇ ಚ ನ ತೇಽಸ್ತ್ಯವಿದಿತಂ ಪ್ರಭೋ ॥6॥
ಅರಸನೇ! ಜಗತ್ತಿನ ಆಗುಹೋಗುಗಳನ್ನು ಚೆನ್ನಾಗಿ ತಿಳಿದವನು ನೀನು. ಈಗ ನಡೆಯುತ್ತಿರುವ ಮುಂದೆ ನಡೆಯುವ ಎಲ್ಲ ವಿಷಯಗಳನ್ನು ಎಲ್ಲವನ್ನು ತಿಳಿದವನು ನೀನು.
ಟಿಪ್ಪಣಿ - ಆಯತ್ಯಾಂ ಚ ತದಾತ್ವ ಇತ್ಯತ್ರ ತದಾತ್ವೇ ತತ್ಕಾಲೇ, ಆಯತ್ಯಾಂ ಉತ್ತರಕಾಲೇ ಚ ಯತ್ ಕಾರ್ಯಂ ತತ್ ತೇ ಅವಿದಿತಂ ನಾಸ್ತಿ | `ತತ್ಕಾಲಸ್ತು ತದಾ ತ್ವಂ ಸ್ಯಾದುತ್ತರಃ ಕಾಲ ಆಯತಿಃ' ಇತ್ಯಮರಃ | ಮುಂದೆ ಆಗುವ ಕಾರ್ಯಗಳು ನಿನಗೆ ತಿಳಿಯದೇ ಇರುವುದು ಯಾವುದೂ ಇಲ್ಲ.
ಏವಂ ಗತೇ ಮಹಾರಾಜ ರಾಜ್ಯಂ ಪ್ರತಿ ಜನಾಧಿಪ |
ಹೇತುಮತ್ರ ಪ್ರವಕ್ಷ್ಯಾಮಿ ತದಿಹೈಕಮನಾಃ ಶೃಣು ॥7॥
ಪ್ರಜೆಗಳ ಪ್ರಭುವೇ! ಮಹಾರಾಜನೇ! ನೀನು ರಾಜ್ಯವನ್ನು ಯಾವ ಕಾರಣದಿಂದ ನಡೆಸಬೇಕು ಎಂಬುದಕ್ಕೆ ಒಂದೆರಡು ಕಾರಣಗಳನ್ನು ಹೇಳುವೆನು. ಒಂದೇ ಮನಸ್ಸಿ- ನಿಂದ ಕೇಳು.
ದ್ವಿವಿಧೋ ಜಾಯತೇ ವ್ಯಾಧಿಃ ಶಾರಿರೋ ಮಾನಸಸ್ತಥಾ |
ಪರಸ್ಪರಂ ತಯೋರ್ಜನ್ಮ ನಿರ್ದ್ವಂದ್ವಂ ನೋಪಲಭ್ಯತೇ ॥8॥
ಜೀವನಿಗೆ ಎರಡು ರೋಗಗಳು ಅಂಟಿಕೊಂಡು ಹುಟ್ಟುತ್ತವೆ. ಒಂದು ಶಾರೀರಿಕ- ರೋಗ ಮತ್ತೊಂದು ಮಾನಸಿಕ ರೋಗ. ಇವೆರಡು ಜನ್ಮಜನ್ಮಗಳಲ್ಲಿಯೂ ಪರಸ್ಪರ ಅಂಟಿಕೊಂಡೇ ಬರುತ್ತವೆಂದು ಜ್ಞಾನಿಗಳು ಹೇಳುತ್ತಾರೆ. ಒಂದರಿಂದ ಮತ್ತೊಂದು ಹುಟ್ಟುತ್ತದೆ.
ಶಾರೀರಾಜ್ಜಾಯತೇ ವ್ಯಾಧಿರ್ಮಾನಸೋ ನಾತ್ರ ಸಂಶಯಃ |
ಮಾನಸಾಜ್ಜಾಯತೇ ವ್ಯಾಧಿ ಶಾರೀರ ಇತಿ ನಿಶ್ಚಯಃ ॥9॥
ಶರೀರದಿಂದ ಹುಟ್ಟಿದ ರೋಗವು ವ್ಯಾಧಿ ಎನಿಸಿದ ಮನಸ್ಸಿನ ರೋಗವಾಗುವಲ್ಲಿ ಸಂದೇಹವಿಲ್ಲ. ಮನಸ್ಸಿನಿಂದ ಹುಟ್ಟಿದ ರೋಗವು ಶರೀರದ ಮೇಲೆ ಪರಿಣಾಮ ಬೀರದೆ ಇರುವುದಿಲ್ಲ. ಇದು ನಿಶ್ಚಯವು.
ಶಾರೀರ ಮಾನಸೇ ದುಃಖೇ ಯೋಽತೀತೇ ಅನುಶೋಚತಿ |
ದುಃಖೇನ ಲಭತೇ ದುಃಖಂ ದ್ವಾವನರ್ಥೌ ಪ್ರಪದ್ಯತೇ ॥10॥
ಹಿಂದೆ ಕಳೆದು ಹೋದ ಶಾರೀರಿಕವಾದ ಮತ್ತು ಮಾನಸಿಕವಾದ ದುಃಖಗಳನ್ನು ಸ್ಮರಿಸಿಕೊಂಡು ಯಾರು ಶೋಕಪಡುತ್ತಾರೋ ಅವರು ದುಃಖದಿಂದ ದುಃಖವನ್ನೇ ಅನುಭವಿಸುತ್ತಾರೆ. ಈ ಎರಡು ವಿಧವಾದ ಅನರ್ಥವನ್ನೇ ಹೊಂದುತ್ತಾರೆ.
ಶೀತೋಷ್ಣೇ ಚೈವ ವಾಯುಶ್ಚ ತ್ರಯಃ ಶಾರೀರಜಾ ಗುಣಾಃ |
ತೇಷಾಂ ಗುಣಾನಾಂ ಸಾಮ್ಯಂ ಚ ತದಾಹುಃ ಸ್ವಸ್ಥಲಕ್ಷಣಮ್ ॥11॥

ನೀರು (ಶೀತ) ಬೆಂಕಿ (ಪಿತ್ತ) ಗಾಳಿ (ವಾತ) ಇವುಗಳು ಶರೀರದ ಗುಣಗಳು. ಈ ಗುಣಗಳು ಸಮಾನವಾಗಿದ್ದಾಗ ದೇಹವು ಆರೋಗ್ಯವಾಗಿರುತ್ತದೆ.
ತೇಷಾಮನ್ಯತಮೋದ್ರೇಕೇ ವಿಧಾನಮುಪದಿಶ್ಯತೇ |
ಉಷ್ಣೇನ ಬಾಧ್ಯತೇ ಶೀತಂ ಶೀತೇನೋಷ್ಣಂ ಪ್ರಬಾಧ್ಯತೇ ॥12॥
ಈ ಮೂರರಲ್ಲಿ ಯಾವುದೇ ಒಂದು ಉದ್ರೇಕವಾದರೂ ಚಿಕಿತ್ಸೆಯು ಆವಶ್ಯಕ. ಅವುಗಳಲ್ಲಿಯೇ ಒಂದಕ್ಕೊಂದು ನಿವಾರಕ. ಉಷ್ಣದಿಂದ, ಶೀತವೂ ಶೀತದಿಂದ ಉಷ್ಣವೂ, ಅವೆರಡರಿಂದ ವಾತವೂ ಪರಿಹಾರವಾಗುತ್ತದೆ.
ಸತ್ತ್ವಂ ರಜಸ್ತಮಶ್ಚೈವ ಮಾನಸಾಃ ಸ್ಯುಸ್ತ್ರಯೋ ಗುಣಾಃ |
ಹರ್ಷೇಣ ಬಾಧ್ಯತೇ ಲೋಕೋ ಹರ್ಷಃ ಲೋಕೇನ ಬಾಧ್ಯತೇ ॥13॥
ಹಾಗೆಯೇ ಸತ್ವ, ರಜಸ್ಸು, ತಮಸ್ಸು ಈ ಮೂರು ಮಾನಸಿಕ ಗುಣಗಳು. ಸಂತೋಷದಿಂದ ದುಃಖವೂ, ದುಃಖದಿಂದ ಸಂತೋಷವೂ ಜಗತ್ತಿನಲ್ಲಿ ಬಂಧಿತ- ವಾಗಿದೆ.
ವಿವರಣೆ - ಸತ್ವ, ರಜಸ್ಸು, ತಮಸ್ಸು ಎಂಬ ಈ ಮೂರುಗುಣಗಳು ಮಾನಸಿಕ ಗುಣಗಳು. ಈ ಮೂರು ಗುಣಗಳೂ ಸಮಾನವಾಗಿರುವುದೇ ಮನೋವ್ಯಾಧಿ- ಯಿಲ್ಲದುದಕ್ಕೆ ಲಕ್ಷಣವೆಂದು ಹೇಳುವರು. ಈ ಮೂರರಲ್ಲಿ ಒಂದು ಹೆಚ್ಚಾದರೂ ಅದಕ್ಕೆ ಪರಿಹಾರವು ವಿಧಿಸಲ್ಪಟ್ಟಿದೆ. ಸಂತೋಷದಿಂದ ದುಃಖವೂ ದುಃಖದಿಂದ ಸಂತೋಷವೂ ಅವೆರಡರ ಮೋಹವು ಕ್ರಮವಾಗಿ ಕಳೆಯುವುದೆಂದು ವಿಧಿಯಿದೆ.
ಕಶ್ಚಿತ್ ಸುಖೇ ವರ್ತಮಾನೋ ದುಃಖಸ್ಯ ಸ್ಮರ್ತುಮಿಚ್ಛತಿ |
ಕಶ್ಚಿತ್ ದುಃಖೇ ವರ್ತಮಾನಃ ಸುಖಸ್ಯ ಸ್ಮರ್ತುಮಿಚ್ಛತಿ ॥14॥
ಸುಖದಲ್ಲಿರುವ ಕೆಲವರು ಕಳೆದ ದುಃಖದ ಕ್ಷಣಗಳನ್ನು ಮನಸ್ಸಿಗೆ ತಂದು- ಕೊಳ್ಳುವರು. ದುಃಖದಲ್ಲಿರುವ ಕೆಲವರು ಹಿಂದಿನ ಸುಖವನ್ನು ಮನಸ್ಸಿಗೆ ತಂದು- ಕೊಳ್ಳುವರು.
ಸ ತ್ವಂ ನ ದುಃಖೀ ದುಃಖಸ್ಯ ನ ಸುಖೀ ಚ  ಸುಖಸ್ಯ ಚ |
ನ ದುಃಖೀ ಸುಖಜಾತಸ್ಯ ನ ಸುಖೀ ದುಃಖಜಸ್ಯವಾ ॥15॥
ನೀನಾದರೂ ದುಃಖವುಳ್ಳವನೂ ಅಲ್ಲ. ದುಃಖವಿಲ್ಲದವನೂ ಅಲ್ಲ. ನೀನು ದುಃಖವನ್ನು ನೆನೆಯ ಬೇಕಾದ ಸ್ಥಿತಿಯಲ್ಲಾಗಲಿ ಸುಖವನ್ನು ನೆನೆಯ ಬೇಕಾದ ಸ್ಥಿತಿಯಲ್ಲಾಗಲಿ ಇರುವವನಲ್ಲ.
ಸ್ಮರ್ತುಮರ್ಹಸಿ ಕೌರವ್ಯ ದಿಷ್ಟಂ ತು ಬಲವತ್ತರಮ್ |
ಅಥವಾ ತೇ ಸ್ವಭಾವೋಽಯಂ ಯೇನ ಪಾರ್ಥಿವ ಕ್ಲಿಷ್ಯಸೇ ॥16॥
ದೃಷ್ಟ್ವಾ ಸಭಾಗತಾಂ ಕೃಷ್ಣಾಮೇಕವಸತ್ರಂ ರಜಸ್ವಲಾಮ್ |
ಮಿಷತಾಂ ಪಾಂಡುಪುತ್ರಾಣಾಂ ನ ತತ್ ಸ್ಮರ್ತುಮಿಹಾರ್ಹಸಿ ॥17॥
ಕುರುಕುಲನಂದನನೇ! ಹಿಂದಿನ ಘಟನೆಗಳನ್ನೆಲ್ಲಾ ಗಮನಿಸು. ಮುಖ್ಯವಾಗಿ ದೈವವು ಬಲವತ್ತರವಾದುದು. ಹಾಗಲ್ಲದಿದ್ದರೆ ಇಂಥ ಪರಿಸ್ಥಿತಿಯಲ್ಲಿಯೂ ಶಾಂತಿ- ಯಿಂದಿರುವುದು ನಿನ್ನ ಸ್ವಭಾವವೇ ಆಗಿರಬಹುದು. ನೋಡು, ಸಭಾಮಧ್ಯದಲ್ಲಿ ಏಕವಸ್ತ್ರಧಾರಿಣಿಯಾದ ರಜಸ್ವಲೆಯಾದ ದ್ರೌಪದಿಯನ್ನು ಎಳೆದು ತಂದದ್ದು ನೆನಪಿ- ಲ್ಲವೆ? ಪಾಂಡುಪುತ್ರರಾದ ನಮ್ಮೆದುರೇ ನಡೆದ ಘಟನೆಯು ಮರೆತು ಹೋಯಿತೇ?
ಟಿಪ್ಪಣಿ - ನ ತತ್ ಸ್ಮರ್ತುಮಿಹಾರ್ಹಸಿ ಇತ್ಯತ್ರ ಕಥಮ್ ಇತಿ ಪದಮಿಹಾಪ್ಯಾವರ್ತ್ಯ ಕಥಂ ಸ್ಮರ್ತುಂ ನಾರ್ಹಸೀತಿ ಯೋಜನಾ ಕಾರ್ಯಾ| `ನ ತತ ಸ್ಮತುಮಿಹಾರ್ಹಸಿ' ಎಂಬಲ್ಲಿ ಕಥಮ್ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ಮರಣೆ ಮಾಡಿ- ಕೊಳ್ಳಲು ಏಕೆ ಸಾಧ್ಯವಾಗದು ಎಂಬುದು ಅದರರ್ಥ.
ಪ್ರವ್ರಾಜನಂ ಚ ನಗರಾದಜಿನೈಶ್ಚ ವಿವಾಸನಮ್ |
ಮಹಾರಣ್ಯನಿವಾಸಶ್ಚ ನ ತಸ್ಯ ಸ್ಮರ್ತುಮರ್ಹಸಿ ॥18॥
ಪಟ್ಟಣವನ್ನು ಬಿಟ್ಟು ಹೊರಹಾಕಲ್ಪಟ್ಟ ನಾವು ಕೃಷ್ಣಾಜಿನವನ್ನು ತೊಟ್ಟು ಘೋರ ಅರಣ್ಯದಲ್ಲಿ ಅಲೆದಾಡಿದೆವು. ಅದೆಲ್ಲವೂ ನಿನ್ನ ನೆನಪಿಗೆ ಬರುತ್ತಿಲ್ಲವೇ?
ಜಟಾಸುರಾತ್ ಪರಿಕ್ಲೇಶಂ ಚಿತ್ರಸೇನೇನ ಚಾಹವಮ್ |
ಸೌಂಧವಾಚ್ಚ ಪರಿಕ್ಲೇಶಂ ಕಥಂ ವಿಸ್ಮೃತವಾನಸಿ ॥19॥
ಪುನರಜ್ಞಾತಚರ್ಯಾಯಾಂ ಕೀಚಕೇನ ಪದಾ ವಧಮ್ |
ದ್ರೌಪದ್ಯಾ ರಾಜಪುತ್ರ್ಯಾಶ್ಚ ಕಥಂ ವಿಸ್ಮೃತವಾನಸಿ ॥20॥
ಜಟಾಸುರನು ನಮಗೆ ಉಪದ್ರವ ನೀಡಿದ, ಚಿತ್ರಸೇನನು ಕಾದಾಡಿದ. ಸೈಂಧವನಿಂದ ಅನೇಕ ಕ್ಲೇಶಗಳನ್ನು ಅನುಭವಿಸಿದೆವು. ಎಲ್ಲ ಘಟನೆಗಳು ನಿನ್ನ ಸ್ಮೃತಿಗೆ ಬರುತ್ತಿಲ್ಲವೇಕೆ? ಅಜ್ಞಾತವಾಸ ಕಾಲದಲ್ಲಿ ರಾಜಕುಮಾರಿಯಾದ ದ್ರೌಪದೀದೇವಿ- ಯನ್ನು ಕೀಚಕನು ಕಾಲಿನಿಂದ ಒದ್ದದ್ದು ಇವೆಲ್ಲವನ್ನು ಹೇಗೆ ನೀನು ಮರೆತು ಬಿಟ್ಟೆ ?
ಯಚ್ಚ ತೇ ದ್ರೋಣಭೀಷ್ಮಾಭ್ಯಾಂ ಯುದ್ಧಮಾಸೀದರಿಂದಮ |
ಮನಸೈಕೇನ ಯೋದ್ಧವ್ಯಮಿದಂ ಯುದ್ಧಮುಪಸ್ಥಿತಮ್ ॥21॥
ಯಾವ ರೀತಿಯಾಗಿ ಹಿಂದೆ ನೀನು ದ್ರೋಣ ಭೀಷ್ಮಾದಿಗಳೊಡನೆ ಶತ್ರುವಿನಂತೆ ಯುದ್ಧಭೂಮಿಯಲ್ಲಿ ಕಾದಾಡಿದೆಯೋ, ಹಾಗೆಯೇ ಇಂದು ನೀನು ನಿನ್ನ ಮನಸ್ಸೆಂಬ ಶತ್ರುವಿನೊಡನೆ ಘೋರವಾದ ಯುದ್ಧವನ್ನು ಮಾಡುವ ಕಾಲವು ಬಂದೊದಗಿದೆ.
ಟಿಪ್ಪಣಿ - ಮನಸೈಕೇನ ಯೋದ್ಧವ್ಯಮ್ ಇತ್ಯತ್ರ ಏಕೇನ ತವ ಮನಸಾ ಇದಾನೀಂ ಯೋದ್ಧವ್ಯಮ್ | ನಿನ್ನ ಮನಸ್ಸಿನ ಜೊತೆ ನೀನು ಯುದ್ಧ ಮಾಡಬೇಕು.

ಯತ್ರ ನಾಸ್ತಿ ಶರೈಃ ಕಾರ್ಯಂ ನ ಮಿತ್ರೈರ್ನ ಚ ಬಂಧುಭಿಃ |
ಆತ್ಮನ್ಯೇಕೇನ ಯೋದ್ಧವ್ಯಂ ತತ್ತೇ ಯುದ್ಧಮುಪಸ್ಥಿತಮ್ ॥22॥
ಈ ಯುದ್ಧಕ್ಕೆ ಬಾಣಗಳು ಬೇಕಾಗಿಲ್ಲ. ಯಾವ ಮಿತ್ರರೂ ಬಂಧುಗಳೂ ಬೇಕಾಗಿಲ್ಲ. ನೀನು ನಿನ್ನ ಮನಸ್ಸಿನ ಜೊತೆ ಹೋರಾಡಬೇಕಾಗಿದೆ.
ತಸ್ಮಿನ್ನನಿರ್ಜಿತೇ ಯುದ್ಧೇ ಪ್ರಾಣಾನ್ ಯದಿ ಹ ಮೋಕ್ಷ್ಯಸೇ |
ಅನ್ಯಂ ದೇಹಂ ಸಮಾಸ್ಥಾಯ ತತಸ್ತೈರಪಿ ಯೋತ್ಸ್ಯಸೇ ॥23॥
ಈ ಮಾನಸಿಕ ಯುದ್ಧದಲ್ಲಿ ನೀನು ನಿನ್ನ ಮನಸ್ಸನ್ನು ಗೆಲ್ಲಲೇಬೇಕು. ಇಲ್ಲದಿದ್ದರೆ ಮತ್ತೊಂದು ದೇಹವನ್ನು ಪಡೆದ ಮೇಲೂ ಆ ಮನಸ್ಸು ಮತ್ತೆ ನಿನ್ನೊಡನೆ ಯುದ್ಧ ಮಾಡದೆ ಬಿಡದು.
ತಸ್ಮಾದದ್ಯೈವ ಗಂತವ್ಯಂ ಯುದ್ಧಸ್ವ ಭರತರ್ಷಭ |
ಪರಮವ್ಯಕ್ತಧರ್ಮಸ್ಯ ವ್ಯಕ್ತಂ ತ್ಯಕ್ತ್ವಾ ಸ್ವಕರ್ಮಭಿಃ |
ತಸ್ಮಿನ್ನನಿರ್ಜಿತೇ ಯುದ್ಧೇ ಕಾಮವಸಾಂ ಗಮಿಷ್ಯಸಿ |
ಏತಜ್ಜಿತ್ವಾ ಮಹಾರಾಜ ಕೃತಕೃತ್ಯೋ ಭವಿಷ್ಯಸಿ ॥24॥
ಭರತರ್ಷಭನೇ! ಆದ್ದರಿಂದ ನೀನು ಯುದ್ಧವನ್ನು ಮಾಡಿಯೇ ತೀರಬೇಕು. ಮಹಾರಾಜನೇ! ಈ ಮಾನಸಯುದ್ಧದಲ್ಲಿ ನೀನು ಗೆದ್ದರೆ ಕೃತ್ಯಕೃತ್ಯನಾಗುವಿ.
ಏತಾಂ ಬುದ್ಧಿಂ ವಿನಿಶ್ಚಿತ್ಯ ಭೂತಾನಾಮಾಗತಿಂ ಗತಿಮ್ |
ಪಿತೃಪೈತಾಮಹೇ ವೃತ್ತೇ ಶಾಧಿ ರಾಜ್ಯಂ ಯಥೋಚಿತವತ್ ॥25॥
ಈ ದೃಢಭಾವವನ್ನು ಮನಸ್ಸಿನಲ್ಲಿ ನೆಲೆಗೊಳಿಸಿ ಪ್ರಾಣಿಗಳ ಸುಗತಿ ದುರ್ಗತಿ- ಗಳನ್ನು ಚಿಂತಿಸು. ನಿನ್ನ ತಂದೆ ತಾತಂದಿರು ನಡೆದ ಹಾದಿಯನ್ನೇ ಹಿಡಿದು ಯಥಾಶಕ್ತಿ ರಾಜ್ಯವನ್ನು ರಕ್ಷಿಸು.
ದಿಷ್ಟ್ಯಾ ದುರ್ಯೋಧನಃ ಪಾಪೋ ನಿಹತಃ ಸಾನುಗೋ ಯುಧಿ |
ದ್ರೌಪದ್ಯಾಃ ಕೇಶಪಾಶಸ್ಯ ದಿಷ್ಟ್ಯಾ ತ್ವಂ ಪದವೀಂ ಗತಃ ॥26॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಭೀಮವಾಕ್ಯೇ ಷೋಡಶೋಽಧ್ಯಾಯಃ ॥16॥
ನಿನ್ನ ಅದೃಷ್ಟದಿಂದ ಪಾಪಿಯಾದ ದುರ್ಯೋಧನನು ಸಮಸ್ತ ಪರಿವಾರ- ದೊಂದಿಗೆ ಯುದ್ಧದಲ್ಲಿ ಹತನಾದನು. ದ್ರೌಪದಿಯ ತಲೆ ಕೂದಲಿನ ಭಾಗ್ಯ ವಿಶೇಷವೇ ಅವನನ್ನು ಸರ್ವನಾಶ ಮಾಡಿತು. ನಿನ್ನ ಅದೃಷ್ಟದಿಂದ ಬಂದ ಈ ರಾಜ್ಯ- ಪದವಿಯನ್ನು ನೀನು ಹೊಂದು.
ಟಿಪ್ಪಣಿ - ಪರಮವ್ಯಕ್ತಧರ್ಮಸ್ಯ ಇತ್ಯತ್ರ ಅವ್ಯಕ್ತಧರ್ಮಸ್ಯ ಅತಿಸೂಕ್ಷ್ಮಸ್ಯ ಮನೋವಿವೇಕಸ್ಯ, ತ್ಯಕ್ತ್ವಾ ಅಜ್ಞಜನಸದೃಶಂ ಭಾವಂ ತ್ಯಕ್ತ್ವಾ ತಸ್ಮಿನ್ ಮನಸಿ ಅರ್ಜಿತೇ ಸತಿ ಕಾಮವಸ್ಥಾಂ ಗಮಿಷ್ಯಸೀತ್ಯರ್ಥಃ |
ದ್ರೌಪದ್ಯಾಃ ಕೇಶಪಕ್ಷಸ್ಯ ಇತ್ಯತ್ರ ದ್ರೌಪದ್ಯಾಃ ಕೇಶಪಕ್ಷಸ್ಯ ಪದವೀಂ ದುರ್ಯೋ- ಧನಾದಯೋ ದಿಷ್ಟ್ಯಾ ಗತಾಃ | ಯಥಾ ದ್ರೌಪದ್ಯಾಃ ಕೇಶಪಕ್ಷಸ್ಪರ್ಶಾಕರ್ಷಣಾದಿನಾ ತೈರ್ಘಾತಿತಮ್, ತಥಾ ಮಯಾಪಿ ಕೇಶಾದೌ ಪಾದಸ್ಪರ್ಶೇನ ಇತಸ್ತತ ಆಕರ್ಷಣೇನ ನ ಘಾತಿತಾ ಇತಿ ಭಾವಃ | ದ್ರೌಪದೀದೇವಿಯ ಕೇಶಾಕರ್ಷಣೆ ಮಾಡುವ ಮೂಲಕ ಹೇಗೆ ದುರ್ಯೋಧನಾದಿಗಳು ತೊಂದರೆ ಮಾಡಿದರೋ ಅದರಂತೆ ಅದೇ ದುರ್ಯೋಧನಾದಿ -ಗಳು ಪಾದಸ್ಪರ್ಶದಿಂದ ಸಂಹೃತರಾದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಹದಿನಾರನೆಯ ಅಧ್ಯಾಯವು ಮುಗಿಯಿತು.
*****
17. ಹದಿನೇಳನೆಯ ಅಧ್ಯಾಯ
ಭೀಮಸೇನದೇವರ ಮಾತುಗಳನ್ನು ಅಂಗೀಕರಿಸದೆ ಜ್ಞಾನಿಜನರ ಮಾರ್ಗವನ್ನು ಪ್ರಶಂಸೆ ಮಾಡಿದ ಯುಧಿಷ್ಠಿರ.
ಯುಧಿಷ್ಠಿರಃ
ಅಸಂತೋಷಃ ಪ್ರಮಾದಶ್ಚ ಮದೋ ರಾಗೋಽಪ್ರಶಾಂತತಾ |
ಬಲಂ ಮೋಹೋಽಭಿಮಾನಶ್ಚಾಪ್ಯುದ್ವೇಗಶ್ಚೈವ ಸರ್ವಶಃ ॥1॥
ಯುಧಿಷ್ಠಿರ ಭೀಮಸೇನ ! ಅಸಂತೃಪ್ತಿ, ಮೈಮರೆಯುವುದು, ಮದ, ರಾಗ, ಅಶಾಂತಿ, ಬಲ, ಮೋಹ, ಅಭಿಮಾನ, ಉದ್ವೇಗ ಎಂಬ ಈ ದುರ್ಗುಣಗಳು ಒಂದೆಡೆ ಸೇರಿದಾಗ ಆಸೆ ಹುಟ್ಟುವುದು ಸಹಜ.
ಏಭಿಃ ಪಾಪ್ಮಭಿರಾವಿಷ್ಟೋ ರಾಜ್ಯಂ ತ್ವಮಭಿಕಾಂಕ್ಷಸೇ |
ನಿರಾಮಿಷೋ ವಿನಿರ್ಮುಕ್ತಃ ಪ್ರಶಾಂತಃ ಸುಸುಖೀ ಭವ ॥2॥
ಈ ಎಲ್ಲ ಪಾಪಗಳು ನಿನ್ನಲ್ಲಿ ಸೇರಿ ರಾಜ್ಯಕ್ಕಾಗಿ ಆಸೆಪಡುತ್ತಿರುವಿ. ಭೋಗ್ಯ- ವಸ್ತುಗಳನ್ನೆಲ್ಲ ಬಿಟ್ಟು ಶಾಂತಿಯನ್ನು ಬಯಸಿದರೆ ಪ್ರಶಾಂತವಾದ ಮನಸ್ಸನ್ನು ಹೊಂದಿ ಸುಖವಾಗಿರುವಿ.
ಯ ಇಮಾಮಖಿಲಾಂ ಭೂಮಿಂ ಶಿಷ್ಯಾದೇಕೋ ಮಹೀಪತಿಃ |
ತಸ್ಯಾಪ್ಯುದರಮೇಕಂ ವೈ ಕಿಮಿದಂ ತ್ವಂ ಪ್ರಶಂಸಸಿ ॥3॥
ಭೂಮಿಪಾಲನೇ! ಸಮಸ್ತ ಭೂಮಂಡಲವನ್ನು ಆಳಬೇಕಾದ ಚಕ್ರವರ್ತಿಗೂ ಹೊರೆಯ ಬೇಕಾದ ಹೊಟ್ಟೆಯು ಒಂದೇ! ವಿಷಯವು ಹೀಗಿರುವಾಗ ರಾಜ್ಯಾಡ- ಳಿತವನ್ನು ಏಕೆ ಪ್ರಶಂಸುತ್ತಿರುವಿ.
ಟಿಪ್ಪಣಿ - ಶಿಷ್ಯಾದೇಕೋ ಮಹೀಪತಿಃ ಇತ್ಯತ್ರ ಶಿಷ್ಯಾತ್ ಶಾಸನಂ ಕುರ್ಯಾತ್| ತಸ್ಯಾಪಿ ಏಕಮೇವ ಉದರಮ್, ನತು ದ್ವಯಮಸ್ತಿ | ರಾಜನೆಂಬ ಕಾರಣದಿಂದ ಅವನಿಗೆ ಎರಡು ಹೊಟ್ಟೆ ಇರುವುದಿಲ್ಲ.

ನಾಹ್ನಾ ಪೂರಯಿತುಂ ಶಕ್ಯಾಂ ನ ಮಾಸೈರ್ಭರತರ್ಷಭ |
ಅಪೂರ್ಯಾಂ ಪೂರಯನ್ನಿಚ್ಛಾಮಾಯುಷಾಪಿ ನ ಶಕ್ನುಯಾತ್ ॥4॥
ನರಸಿಂಹನೇ ! ರಾಜ್ಯವನ್ನು ಪಡೆದುಕೊಳ್ಳಬೇಕೆಂದು ಹೇಳುತ್ತಿರುವಿ. ಒಂದು ದಿನದಲ್ಲಿಯಾಗಲಿ, ಅನೇಕ ತಿಂಗಳುಗಳಿಂದಾಗಲಿ ಪೂರೈಸಲು ಸಾಧ್ಯವಿಲ್ಲದ ಆಸೆ- ಯೆಂಬುದನ್ನು ಆಯುಷ್ಯವೆಲ್ಲವೂ ದುಡಿದರೂ ಪೂರೈಸಲು ಸಾಧ್ಯವಿಲ್ಲ.
ಟಿಪ್ಪಣಿ - ಅಪೂರ್ಯಾಂ ಪೂರಯನ್ನಿಚ್ಛಾಮ್ ಇತ್ಯತ್ರ ಇಚ್ಛಾಂ ನ ಶಕ್ನುಯಾತ್ ಪೂರಯಿತುಂ ನ ಶಕ್ನುಯಾದಿತಿ ಯೋಗ್ಯಪದಾಧ್ಯಾಹಾರೇಣ ಯೋಜನಾ | `ಪೂರ- ಯಿತುಂ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಪೂರಯಿತುಂ ನ ಶಕ್ನುಯಾತ್ ಎಂಬರ್ಥವನ್ನು ಹೇಳಬೇಕು.
ಯಥೇದ್ಧಃ ಪ್ರಜ್ವಲತ್ಯಗ್ನಿರಸಮಿದ್ಧಃ ಪ್ರಶಾಮ್ಯತಿ |
ಅಲ್ಪಾಹಾರತಯಾ ತ್ವಗ್ನಿಂ ಶಮಯೌದರ್ಯಮುತ್ಥಿತಮ್ ॥5॥
ಬೆಂಕಿಗೆ ಕಟ್ಟಿಗೆಯನ್ನು ಹಾಕಿದಷ್ಟು ಪ್ರಜ್ವಲಿಸುವುದು, ಕಟ್ಟಿಗೆಯನ್ನು ಹಾಕುವುದು ನಿಲ್ಲಿಸಿದರೆ ಆ ಅಗ್ನಿಯು ತನ್ನಷ್ಟಕ್ಕೆ ಶಾಂತವಾಗುವುದು.
ಆತ್ಮೋದರಕೃತೇಽಪ್ರಾಜ್ಞಃ ಕರೋತಿ ವಿಘಸಂ ಬಹು |
ಜಯೋದರಂ ಪೃಥಿವ್ಯಾ ತೇ ಶ್ರೇಯೋ ನಿರ್ಜಿತಯಾ ಜಿತಮ್ ॥6॥
ತಿಳುವಳಿಕೆ ಇಲ್ಲದ ಮನುಷ್ಯನು ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿಯೇ ಅನೇಕ ಬಗೆಯ ಹಿಂಸೆಯನ್ನು ಮಾಡುವನು. ಉರಿಯುವ ಜಠರಾಗ್ನಿಯನ್ನು ಮಿತವಾದ ಆಹಾರದಿಂದಲೇ ಕ್ರಮವಾಗಿ ಅಡಗಿಸಬಹುದು. ಆದ್ದರಿಂದ ಹೊಟ್ಟೆ- ಯೊಂದನ್ನು ಜಯಿಸಿದರೆ ಸಮಸ್ತಭೂಮಿಯನ್ನೇ ಜಯಿಸಿದ ಶ್ರೇಯಸ್ಸು ನಿನಗಾಗು- ತ್ತದೆ.
ಮಾನುಷಾನ್ ಕಾಮಭೋಗಾಂಸ್ತ್ವಮೈಶ್ವರ್ಯಂ ಚ ಪ್ರಶಂಸಸಿ |
ಅಭೋಗಿನೋಽಬಲಾಶ್ಚೈವ ಯಾಂತಿ ಸ್ಥಾನಮನುತ್ತಮಮ್ ॥7॥
ಮನುಷ್ಯರು ಬಯಸುವ ಕಾಮ, ಭೋಗ ಮತ್ತು ಐಶ್ವರ್ಯಗಳನ್ನು ನೀನು ಪ್ರಶಂಸಿಸುತ್ತಿರುವೆ. ಈ ಎಲ್ಲ ಭೋಗಗಳನ್ನು ತೊರೆದ ದೇಹಬಲಹೀನರಾದ ಅನೇಕರು ಉತ್ತಮವಾದ ಸ್ಥಾನವನ್ನು ಪಡೆದಿರುವರು.
ಯೋಗಃ ಕ್ಷೇಮಶ್ಚ ರಾಷ್ಟ್ರಸ್ಯ ಧರ್ಮಾಧರ್ಮೌ ತ್ವಯಿ ಸ್ಥಿತೌ |
ಮುಚ್ಯಸ್ವ ಮಹತೋ ಭಾರಾತ್ ತ್ಯಾಗಮೇವಾಭಿಸಂಶ್ರಯ ॥8॥
ರಾಷ್ಟ್ರಭಾರವನ್ನು ನೀನು ವಹಿಸಿದರೆ ರಾಷ್ಟ್ರದ ಯೋಗಕ್ಷೇಮವನ್ನು ಮತ್ತು ಧರ್ಮಾಧರ್ಮದ ಭಾರವನ್ನು ಹೊರಬೇಕು. ಇಂಥ ಮಹಾಭಾರವನ್ನು ಹೊರು- ವುದಕ್ಕೆ ಏಕೆ ಬಯಸುವೆ. ತ್ಯಾಗರೂಪದ ಸನ್ಯಾಸವನ್ನು ಆಶ್ರಯಿಸಿ ಮುಕ್ತನಾಗು.
ಏಕೋದರಕೃತೇ ವ್ಯಾಘ್ರಃ ಕರೋತಿ ವಿಘಸಂ ಬಹು |
ತಮನ್ಯೇಽಪ್ಯುಪಜೀವಂತಿ ಮಂದಾ ಲೋಭವಶಾ ಮೃಗಾಃ ॥9॥
ತನ್ನ ಒಂದು ಹೊಟ್ಟೆಗೋಸ್ಕರ ಹುಲಿಯು ಬಹಳ ಪ್ರಾಣಿಗಳನ್ನು ಹಿಂಸೆ ಮಾಡುತ್ತದೆ. ಆ ಮೃಗದಂತೆ ಬುದ್ಧಿಹೀನರಾದ ಕೆಲವು ಮಂದಿ ಕ್ರೂರಮಾರ್ಗವನ್ನೇ ಅನುಸರಿಸುವರು.
ಟಿಪ್ಪಣಿ - ಕರೋತಿ ವಿಘಸಂ ಬಹು ಇತ್ಯತ್ರ ವಿಘಸಂ ವಿಘಸನಂ ಪ್ರಾಣಿಹಿಂಸನಮ್| ಜಯೋದರಂ ಪೃಥಿವ್ಯಾ ತ ಇತ್ಯತ್ರ ಉದರಂ ಜಯ | ನಿರ್ಜಿತಯಾ ತಯಾ ಪೃಥಿವ್ಯಾ ತವ ಶ್ರೇಯೋ ಭವತೀತಿ ಯೋಜನಾ |
ವಿಷಯಾನ್ ಪ್ರತಿಸಂಗೃಹ್ಯ ಸನ್ಯಾಸಂ ಕುರುತೇ ಯತಿಃ |
ನ ಚ ತುಷ್ಯಂತಿ ರಾಜಾನಃ ಪಶ್ಯ ಬುದ್ಧ್ಯಂತರಂ ಯಥಾ ॥10॥
ರಾಜ್ಯದಲ್ಲಿ ಸುಖವಿದೆ ಎಂದು ತಿಳಿದಿರುವೆಯಾ? ರಾಜನಿಗೆ ವಿಷಯಗಳ ಬಗ್ಗೆ ಮನಸ್ಸು ಚಿಂತಿಸುವುದು. ವಿಷಯಸುಖಗಳನ್ನೆಲ್ಲ ತೊರೆದು ಸನ್ಯಾಸದಲ್ಲಿ ಮನಸ್ಸಿಟ್ಟ- ವನಿಗೆ ಮಾತ್ರ ಮನವು ಸಂತೋಷದಿಂದ ಇರುತ್ತದೆ.
ಪತ್ರಾಹಾರೈರಶ್ಮಕುಟ್ಟೈರ್ದಂತೋಲೂಖಲಿಕೈಸ್ತಥಾ |
ಅಂಬ್ಭಕ್ಷೈರ್ವಾಯುಭಕ್ಷೈಶ್ಚ ತೈರಯಂ ನರಕೋ ಜಿತಃ ॥11॥
ಕೆಲವು ಸನ್ಯಾಸಿಗಳು ಬರೀ ಎಲೆಗಳನ್ನು ಮಾತ್ರ ಉಣ್ಣುವರು. ಕೆಲವರು ತಮಗೆ ದೊರೆತ ಧಾನ್ಯವನ್ನು ಕಲ್ಲಿನಿಂದ ಕುಟ್ಟಿ ತಿನ್ನುವರು. ಕೆಲವರು ಕೇವಲ ತಮ್ಮ ಹಲ್ಲಿನಿಂದ ಜಗಿದು ತಿನ್ನುವರು. ಮತ್ತು ಕೆಲವರು ಕೇವಲ ನೀರನ್ನು ಕುಡಿಯುವರು. ಕೆಲವರು ಕೇವಲ ವಾಯುಭಕ್ಷಕರಾಗಿರುವರು. ಇಂಥವರು ನರಕವನ್ನು ಗೆಲ್ಲುವರು.
ಯಶ್ಚೆತ್ವಮಾಂ ವಸುಧಾಂ ಕೃತ್ಸ್ನಾಂ ಪ್ರಶಾಸೇದಖಿಲಾಂ ನೃಪಃ |
ತುಲ್ಯಾಶ್ಮಕಾಂಚನೋ ಯಶ್ಚ ಸ ಕೃತಾರ್ಥೋ ನ ಪಾರ್ಥಿವಃ ॥12॥
ಭೂಮಂಡಲವನ್ನು ಚಕ್ರವರ್ತಿಯಾಗಿ ಪಾಲಿಸುವ ರಾಜನು ಕಲ್ಲನ್ನು ಹಾಗೂ ಬಂಗಾರವನ್ನು ಸಮಾನವಾಗಿ ಕಾಣುವ ಸನ್ಯಾಸಿ ಇವರಿಬ್ಬರಲ್ಲಿ ಸನ್ಯಾಸಿಯೇ ಕೃತಾರ್ಥನು; ರಾಜನಲ್ಲ.
ಸಂಕಲ್ಪೇಷು ನಿರಾರಂಭೋ ನಿರಾಶೋ ನಿರ್ಮಮೋ ಭವ |
ಅಶೋಕಂ ಸ್ಥಾನಮಾತಿಷ್ಠ ಇಹ ಚಾಮುತ್ರ ಚಾವ್ಯಯಮ್ ॥13॥
ಆದ್ದರಿಂದ ನೀನು ಅಂದುಕೊಂಡ ಕರ್ಮಗಳನ್ನು ಮಾಡಬೇಕಾಗಿಲ್ಲ. ಆಸೆ- ಗಳನ್ನು ತೊರೆದು ಮಮತೆಯನ್ನು ಪರಿತ್ಯಜಿಸು. ಇದರಮೂಲಕ ಈ ಲೋಕದಲ್ಲಿ ಪರಲೋಕದಲ್ಲಿಯೂ ಅಕ್ಷಯವಾದ ದುಃಖವಿಲ್ಲದ ಪದವಿಯನ್ನು ಹೊಂದುವಿ.
ನಿರಾಮಿಷಾ ನ ಶೋಚಂತಿ ಶೋಚಸಿ ತ್ವಂ ಕಿಮಾಮಿಷಮ್ |
ಪರಿತ್ಯಜ್ಯಾಮಿಷಂ ಸರ್ವಂ ಮೃಷಾವಾದಾತ್ ಪ್ರಮೋಕ್ಷ್ಯಸೇ ॥14॥
ವಿಷಯ ಸುಖದಲ್ಲಿ ಮುಳುಗಿದಷ್ಟು ದುಃಖವೇ ಹೆಚ್ಚು. ವಿಷಯಸುಖವನ್ನು ಬಯಸದವನಿಗೆ ದುಃಖವೇ ಇಲ್ಲ. ಆದ್ದರಿಂದ ನೀನು

ವಿಷಯಭೋಗವನ್ನು ಬಿಡು. ರಾಜ್ಯದಲ್ಲಿ ಇದ್ದರೂ ಅವನು ತ್ಯಾಗಿಯೇ ಎಂಬ ಸುಳ್ಳುವಾದವನ್ನು ಬಿಡು.
ಪಂಥಾನೌ ಪಿತೃಯಾನಶ್ಚ ದೇವಯಾನಶ್ಚ ವಿಶ್ರುತೌ |
ಈಜಾನಾಃ ಪಿತೃಯಾನೇನ ದೇವಯಾನೇನ ಮೋಕ್ಷಿಣಃ ॥15॥
ಪಿತೃಯಾನ ಮತ್ತು ದೇವಯಾನ ಎಂಬ ಎರಡು ಮಾರ್ಗಗಳಿವೆ. ಯಾರು ಸಕಾಮರಾಗಿ ಯಜ್ಞಾನುಷ್ಠಾನ ಮಾಡುವರೋ ಅವರು ಪಿತೃಯಾನದ ಮೂಲಕ ಪುಣ್ಯಲೋಕಗಳಿಗೆ ಹೋಗುತ್ತಾರೆ. ಯಾರು ಆಸೆಯನ್ನು ಬಿಟ್ಟು ಸನ್ಯಾಸಿಗಳಾ- ಗುತ್ತಾರೋ, ಅವರು ದೇವಯಾನದ ಮೂಲಕ ಮೋಕ್ಷವನ್ನು ಹೊಂದುತ್ತಾರೆ.
ತಪಸಾ ಬ್ರಹ್ಮಚರ್ಯೇಣ ಸ್ವಾಧ್ಯಾಯೇನ ಮಹರ್ಷಯಃ |
ವಿಮುಚ್ಯ ದೇಹಾಂಸ್ತೇ ಯಾಂತಿ ಮೃತ್ಯೋರವಿಷಯಂ ಗತಾಃ ॥15॥
ಸ್ವಾಧ್ಯಾಯ, ತಪಸ್ಸು, ಬ್ರಹ್ಮಚರ್ಯ, ಇವುಗಳಿಂದ ಕಾಲವನ್ನು ಕಳೆಯುತ್ತಾ ದೇಹವನ್ನು ತ್ಯಜಿಸಿದ ಎಷ್ಟೋ ಮಹರ್ಷಿಗಳು ಮೃತ್ಯುವಿಗೆ ಗೋಚರವಲ್ಲದ ಶಾಶ್ವತಪದವಿಗೆ ಹೋಗಿರುವರು.
ವಿವರಣೆ - ಮೃತ್ಯುವಿಗೆ ಗೋಚರವಲ್ಲದ ಎಂದರೆ ಮುಕ್ತರಾಗುವುದು ಎಂದರ್ಥ. ಮೃತ್ಯುವಶರಾದವರಿಗೆ ಪುನರ್ಜನ್ಮವು ತಪ್ಪಿದ್ದಲ್ಲ. ಜನನ ಮರಣಗಳ ಚಕ್ರ ತಪ್ಪಿದ್ದಲ್ಲ.
ದೇಹವನ್ನು ಬಿಡುವುದೆಂದರೆ ಮರಣ ಹೊಂದುವುದು ಎಂದೇ ಅರ್ಥ- ವಾದರೂ ಮೃತ್ಯುವಿಗೆ ವಿಷಯವಾಗದೇ ದೇಹವನ್ನು ಬಿಟ್ಟು ಪರಮಪದವನ್ನು ಸೇರುತ್ತಾರೆ ಎಂದರ್ಥ.
ಆಮಿಷಂ ಬಂಧನಂ ಲೋಕೇ ಕರ್ಮೇಹೋಕ್ತಂ ತಥಾಮಿಷಮ್ |
ತಾಭ್ಯಾಂ ವಿಮುಕ್ತಃ ಪಾಪಾಭ್ಯಾಂ ಪದಮಾಪ್ನೋತಿ ತತ್ಪರಮ್ ॥17॥
ಜಗತ್ತಿನಲ್ಲಿ ವಿಷಯ ಬಂಧನ ಹಾಗೂ ಅದಕ್ಕೆ ಪೂರಕವಾದ ಕರ್ಮಗಳು ಆಮಿಷಗಳೆಂದು ಕರೆಯಲ್ಪಡುತ್ತವೆ. ವಿಷಯಬಂಧನದಲ್ಲಿ ಸಿಲುಕುವುದು ಮತ್ತು ಅದಕ್ಕೆ ಪೂರಕವಾದ ಕರ್ಮಗಳಲ್ಲಿ ಆಸಕ್ತನಾಗುವುದು ಈ ಎರಡು ಪಾಪಗಳಿಂದ ಮುಕ್ತನಾದವನೇ ಪರಮಪದವನ್ನು ಹೊಂದುವನು.
ಅಪಿ ಗಾಥಾಂ ಪುರಾ ಗೀತಾಂ ಜನಕೇನ ವದಂತ್ಯುತ |
ನಿರ್ದ್ವಂದ್ವೇನ ವಿಮುಕ್ತೇನ ಮೋಕ್ಷಂ ಸಮನುಪಶ್ಯತಾ ॥18॥
ದ್ವಂದ್ವಗಳನ್ನು ತೊರೆದು ಸಂಗವಿಮುಕ್ತನಾಗಿ ಮೋಕ್ಷಮಾರ್ಗವನ್ನು ತಿಳಿದ ಜನಕಮಹಾರಾಜನು ಹಿಂದೆ ಹೇಳಿದ ಗಾಥೆಯೊಂದನ್ನು ಹಿರಿಯರು ಹೇಳುತ್ತಾರೆ. ಅದನ್ನು ನಾನು ಕೇಳಿರುವೆನು.
ಅನಂತಂ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ |
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ ॥19॥
ನನಗೆ ಲೆಕ್ಕವಿಲ್ಲದಷ್ಟು ಧನವಿದೆ. ಆದರೆ ಅದರಲ್ಲಿ ಒಂದೂ ನನ್ನದಲ್ಲ. ಈ ಮಿಥಿಲೆಯು ಬೆಂಕಿಯಲ್ಲಿ ಉರಿದು ಹೋದರೂ ನನ್ನದಾವುದೂ ಸುಡುವುದಿಲ್ಲ.
ವಿವರಣೆ - ಧನವು ನನ್ನದಲ್ಲವೆಂದು ತಿಳಿದಿದ್ದೇನೆ. ನನ್ನ ದೇಹ ಸಹಿತ ಈ ಮಿಥಿಲೆಯೇ ಸುಟ್ಟುಹೋದರೂ ನನ್ನದಾದ ಈ ಆತ್ಮವನ್ನು ಸುಡಲು ಯಾವ ದಾವಾಗ್ನಿಗೂ ಸಾಧ್ಯವಾಗುವುದಿಲ್ಲ.
ಪ್ರಜ್ಞಾಪ್ರಾಸಾದಮಾರುಹ್ಯ ಅಶೋಚನ್ ಶೋಚತೋ ಜನಾನ್ |
ಜಗತೀಸ್ಥಾನಿವಾದ್ರಿಸ್ಥೋ ಮಂದಬುದ್ಧಿನವೇಕ್ಷತೇ ॥20॥
ಪರ್ವತದ ಮೇಲೆ ನಿಂತುಕೊಂಡಿರುವವನು ಕೆಳಗಿರುವವನನ್ನು ಹೇಗೆ ನೋಡುತ್ತಾನೆ. ಅದರಂತೆ ಪ್ರಜ್ಞಾ ಎಂಬ ಮಹಡಿಯ ಮೇಲೆ ಕುಳಿತ ಶೋಕ, ಮೋಹ ಮೊದಲಾದ ದೋಷಗಳಿಲ್ಲದ ಜ್ಞಾನಿಯು ಸಂಸಾರದಲ್ಲಿ ಮುಳುಗಿದ ಮಂದಬುದ್ಧಿ ಜನರನ್ನು ನೋಡುತ್ತಾನೆ.
ವಿವರಣೆ - ಪರ್ವತದ ಮೇಲೆ ನಿಂತಿರುವವನು ನೆಲದ ಮೇಲೆ ನಿಂತಿರು- ವವನನ್ನು ನೋಡಿ ಪ್ರಭಾವಿತನಾಗುವುದಿಲ್ಲವೋ, ಅದರಂತೆ ಪ್ರಜ್ಞಾ ಎಂಬ ಪ್ರಾಸಾದದಲ್ಲಿ ಕುಳಿತ ಜ್ಞಾನಿಯೂ ಕೂಡ ಶೋಕ, ಮೋಹಗಳನ್ನು ಹೊಂದಿ ಸಂಸಾರದಲ್ಲಿ ಮುಳುಗಿದ ಜನರಿಂದ ಯಾವುದೇ ಪ್ರಭಾವಕ್ಕೆ ಒಳಗಾಗುವುದಿಲ್ಲ.
ದೃಶ್ಯಂ ಪ್ರಶ್ಯತಿ ಯಃ ಪಶ್ಯನ್ ಸ ಚಕ್ಷುಷ್ಮಾನ್ ಸ ಬುದ್ಧಿಮಾನ್ |
ಅಜ್ಞಾತಾನಾಂ ಚ ವಿಜ್ಞಾನಾತ್ ಸಂಬೋಧಾದ್ ಬುದ್ಧಿರುಚ್ಯತೇ॥21॥
ತಿಳಿಯುವ ಸಂದರ್ಭದಲ್ಲಿ ತಿಳಿಯಲೇ ಬೇಕಾದದ್ದನ್ನು ಯಾರು ತಿಳಿಯು- ತ್ತಾನೋ, ಅಂಥವನೇ ಬುದ್ಧಿವಂತನು ಮತ್ತು ನಿಜವಾದ ಕಣ್ಣುಗಳನ್ನು ಹೊಂದಿರು- ವವನು. ಅತ್ಯಂತ ನಿಗೂಢವಾದ ವಿಚಾರವನ್ನು ತಿಳಿಸಿಕೊಡುವುದರಿಂದ ಮತ್ತು ಇದು ಕರ್ತವ್ಯ, ಇದು ಕರ್ತವ್ಯವಲ್ಲ ಎಂಬುದಾಗಿ ಬೋಧಿಸುವುದರಿಂದಲೂ ಅಂತಃಕರಣಕ್ಕೆ ಬುದ್ಧಿ ಎಂಬುದಾಗಿ ಕರೆಯುತ್ತಾರೆ.
ವಿವರಣೆ - ಯಾರು ಈ ಸಮಗ್ರ ಜಗತ್ತನ್ನು ನೋಡುತ್ತಾ ಇದೆಲ್ಲವೂ ಕೇವಲ ನಾಟಕವಾಗಿದೆ ಎಂಬುದಾಗಿ ತಿಳಿದುಕೊಳ್ಳುತ್ತಾನೋ, ಅವನು ನಿಜವಾದ ಕಣ್ಣು- ಗಳನ್ನು ಹೊಂದಿದವನು. ಬುದ್ಧಿವಂತನೂ ಕೂಡ ಆಗಿರುತ್ತಾನೆ. ತಿಳಿಯದೇ ಇರುವ ಆತ್ಮನನ್ನು ತಿಳಿಸಿಕೊಡುವುದೇ ಬುದ್ಧಿ. ಅದರ ಅನುಭವಕ್ಕೆ ತಂದುಕೊಳ್ಳು- ವುದರಿಂದ ಅದನ್ನು ಬುದ್ಧಿ ಎಂಬುದಾಗಿ ಕರೆಯುತ್ತಾರೆ.
ತಿಳಿಯಬೇಕಾದ ಕರ್ತವ್ಯಾಕರ್ತವ್ಯಗಳನ್ನು ತಿಳಿದವನೇ ನಿಜವಾದ ಕಣ್ಣುಳ್ಳ- ವನು. ಅವನೇ ಬುದ್ಧಿವಂತನು. ತಿಳಿಯದ ವಿಷಯವನ್ನು ತಿಳಿಯುವ ಹಾಗೆ ಹೇಳುವವನು ಸಂಶಯಗಳನ್ನು ಕಳೆಯುವವನು ಬುದ್ಧಿವಂತನೆಂದು ಕರೆಯಲ್ಪಡು- ವನು.
ಯಸ್ತು ವಾಚಂ ವಿಜಾನಾತಿ ಬಹುಮಾನಮಿಯಾತ್ ಸ ವೈ |
ಬ್ರಹ್ಮಭಾವಪ್ರಪನ್ನಾನಾಂ ವೈದ್ಯಾನಾಂ ಭಾವಿತಾತ್ಮನಾಮ್ ॥22॥
ಯಾರು ಆತ್ಮತತ್ವದಲ್ಲಿ ನೆಲೆಗೊಂಡ ಹಿರಿಯರ ನಿಜವಾದ ಮಹಿಮೆಯನ್ನು ತಿಳಿಯಬಲ್ಲನೋ ಅಂಥವನೇ ಬಹುಮಾನವನ್ನು ಹೊಂದುವನು.

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥23॥
ಬಗೆ ಬಗೆಯ ಜೀವರಾಶಿಗಳು ಒಬ್ಬನೇ ಭಗವಂತನಲ್ಲಿ ಆಶ್ರಯಿಸಿವೆ. ಅವನಿಂದಲೇ ಹುಟ್ಟುತ್ತಿವೆ. ಅವುಗಳ ತಾರತಮ್ಯಜ್ಞಾನಪೂರ್ವಕವಾಗಿ ಯಾವಾಗ ತಿಳಿಯುವನೋ ಆಗ ಸಾಧಕನು ಪರಮಾತ್ಮನನ್ನು ಸೇರುತ್ತಾನೆ.
ಟಿಪ್ಪಣಿ - ತತಃ ಬ್ರಹ್ಮಣ ಏವ ಸೃಷ್ಟಿಕಾಲೇ ವಿಸ್ತಾರಂ ಚ ಪಶ್ಯತಿ ತೇ ಜನಾಃ ಉಕ್ತ- ವಿಧಯಾ ಸೃಷ್ಟಿಪ್ರಲಯಯೋರ್ಭೇದಂ ಜಾನಂತೋ ಜನಾಃ |
ತೇ ಜನಾಸ್ತಾಂ ಗತಿಂ ಯಾಂತಿ ನಾವಿದ್ವಾಂಸೋಽಲ್ಪಚೇತಸಃ |
ನಾಬುದ್ಧಯೋ ನಾಪತಸಃ ಸರ್ವಂ ಬುದ್ಧೌ ಪ್ರತಿಷ್ಠಿತಮ್ ॥24॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಯುಧಿಷ್ಠಿರವಾಕ್ಯೇ ಸಪ್ತದಶೋಽಧ್ಯಾಯಃ ॥17॥
ವಿದ್ಯೆಯಿಲ್ಲದ, ತಪಸ್ಸು ಇಲ್ಲದ, ಬುದ್ಧಿ ಇಲ್ಲದ, ಅಲ್ಪಸತ್ವವುಳ್ಳ ಜನರು ಪರಮಾತ್ಮನನ್ನು ಸೇರಲಾರರು. ಇವೆಲ್ಲವೂ ಅವರವರ ಬುದ್ಧಿಯಲ್ಲಿಯೇ ನೆಲೆ- ಗೊಂಡಿರುವುದು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 17ನೆಯ ಅಧ್ಯಾಯವು ಮುಗಿಯಿತು.
*****
18. ಹದಿನೆಂಟನೆಯ ಅಧ್ಯಾಯ
ಅರ್ಜುನನು ಅಣ್ಣನಾದ ಧರ್ಮರಾಜನಿಗೆ ಮಾಡಬೇಕಾದ ಕರ್ತವ್ಯವನ್ನು ಬೋಧಿಸುತ್ತಿದ್ದಾನೆ. ಅದಕ್ಕಾಗಿ ಜನಕರಾಜನಿಗೂ ಮತ್ತುಅವನ ಪತ್ನಿಗೂ ನಡೆದ ಸಂವಾದವನ್ನು ತಿಳಿಸಿ ಸನ್ಯಾಸವನ್ನು ತೆಗೆದುಕೊಳ್ಳುವಂತೆ ಯುಧಿಷ್ಠಿರನನ್ನು ತಡೆದನು.
ವೈಶಂಪಾಯನಃ
ತೂಷ್ಣೀಂಭೂತಂ ತು ರಾಜಾನಂ ಪುನರೇವಾರ್ಜುನೋಽಬ್ರವೀತ್ |
ಸಂತಪ್ತಃ ಶೋಕದುಃಖಾಭ್ಯಾಂ ರಾಜವಾಕ್ಶಲ್ಯಪೀಡಿತಃ ॥1॥
ವೈಶಂಪಾಯನ - ಯುಧಿಷ್ಠಿರನು ಹೀಗೆ ಹೇಳಿ ಸುಮ್ಮನಾದನು. ಆಗ ಅರ್ಜು- ನನಿಗೆ ಯುಧಿಷ್ಠಿರನ ಮಾತುಗಳೆಲ್ಲವೂ ಶಲ್ಯದಂತೆ ಹೃದಯಕ್ಕೆ ಘಾಸಿ ಮಾಡಿದವು. ಇದರಿಂದ ಬಹಳ ಶೋಕ ಮತ್ತು ದುಃಖಗಳಿಂದ ಕೂಡಿದ ಅರ್ಜುನನು ಆ ರಾಜನಾದ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿದನು.
ಅರ್ಜುನಃ
ಕಥಯಂತಿ ಪುರಾವೃತ್ತಮಿತಿಹಾಸಮಿಮಂ ಜನಾಃ |
ವಿದೇಹರಾಜ್ಞಃ ಸಂವಾದಂ ಭಾರ್ಯಯಾ ಸಹ ಭಾರತ ॥2॥
ಅರ್ಜುನ - ಹಿಂದೆ ವಿದೇಹರಾಜನಾದ ಜನಕನಿಗೂ ಅವನ ಹೆಂಡತಿಗೂ ನಡೆದಿರುವ ಸಂವಾದದಿಂದ ಇತಿಹಾಸವನ್ನು ಜನರು ಹೇಳುತ್ತಾರೆ. ಅದನ್ನು ನಿನಗೆ ತಿಳಿಸುತ್ತೇನೆ ಕೇಳು.
ಉತ್ಸೃಜ್ಯ ರಾಜ್ಯಂ ಭಿಕ್ಷಾರ್ಥೇ ಕೃತಬುದ್ಧಿಂ ನರೇಶ್ವರಮ್ |
ವಿದೇಹರಾಜಮಹಿಷೀ ದುಃಖಿತಾ ಯದಭಾಷತ ॥3॥
ಜನಕರಾಜನು ತನ್ನ ರಾಜ್ಯವನ್ನು ಪರಿತ್ಯಾಗ ಮಾಡಿ ಭಿಕ್ಷುವಾಗಿ ಹೊರಡಲು ನಿಶ್ಚಯಿಸಿದನು. ಆಗ ಇವನ ಈ ವರ್ತನೆಯನ್ನು ಕಂಡು ಹೆಂಡತಿಗೆ ಬಹಳ ದುಃಖವಾಯಿತು. ಆಗ ತನ್ನ ಗಂಡನ ಸಮೀಪ ಬಂದ ಹೀಗೆ ಮಾತನಾಡಿದಳು
ಧನಾನ್ಯಪತ್ಯಂ ದಾರಾಶ್ಚ ರತ್ನಾನಿ ವಿವಿಧಾನಿ ಚ |
ಪಂಥಾನಂ ಪಾವಕಂ ಹಿತ್ವಾ ಜನಕೋ ಮೌಢ್ಯಮಾಸ್ಥಿತಃ ॥4॥
ತಂ ದದರ್ಶ ಪ್ರಿಯಾ ಭಾರ್ಯಾ ಭೈಕ್ಷ್ಯವೃತ್ತಿಮಕಿಂಚನಮ್ |
ಧಾನಾಮುಷ್ಟಿಮುಪಾಸೀನಂ ನಿರೀಹಂ ಗತಮತ್ಸರಮ್ ॥5॥
ತಮುವಾಚ ಸಮಾಗತ್ಯ ಭರ್ತಾಮಕುತೋಭಯಮ್ |
ಕ್ರುದ್ಧಾ ಮನಸ್ವಿನೀ ಭಾರ್ಯಾ ವಿವಿಕ್ತೇ ಹೇತುಮದ್ ವಚಃ ॥6॥
ಜನಕರಾಜನು ಮೂರ್ಖನಾಗಿದ್ದಾನೆ. ತನ್ನ ಧನರತ್ನಗಳನ್ನು, ಹೆಂಡಂದಿರನ್ನು, ಮಕ್ಕಳನ್ನು, ಮಿತ್ರರನ್ನು, ತ್ರೇತಾಗ್ನಿಯನ್ನು, ಅತಿಥಿಗಳನ್ನು ಪರಿತ್ಯಾಗ ಮಾಡಿ ಭಿಕ್ಷುವೃತ್ತಿಯನ್ನು ಆಶ್ರಯಿಸಿ ಹೊರಟಿದ್ದಾನೆ. ಕೇವಲ ಮುಷ್ಟಿಮಾತ್ರದ ಹುರಿದ ಧಾನ್ಯವನ್ನೇ ನಿರೀಕ್ಷಿಸುತ್ತಾ ಯಾವುದೇ ಆಸೆಯಿಲ್ಲದೇ ಮಾತ್ಸರ್ಯರಹಿತನಾಗಿ ಯಾರಿಗೂ ಹೆದರದೇ ಹೊರಟಿದ್ದಾನೆ. ಇಂಥ ತನ್ನ ಪತಿಯನ್ನು ಕಂಡು ಧೀರ ಮನಸ್ಸುಳ್ಳ ಅವನ ಹೆಂಡತಿಗೆ ಪತಿಯ ಈ ವರ್ತನೆ ಇಷ್ಟವಾಗುವುದಿಲ್ಲ. ತನ್ನ ಪತಿಯ ಬಳಿ ತೆರಳಿ ಕಾರಣಸಹಿತವಾದ ಮಾತುಗಳಿಂದ ರಹಸ್ಯವಾಗಿ ಹೀಗೆ ಹೇಳುತ್ತಾಳೆ -
ಕಥಮುತ್ಸೃಜ್ಯ ರಾಜ್ಯಂ ಸ್ವಂ ಧನಧಾನ್ಯಸಮನ್ವಿತಮ್ |
ಕಾಪಾಲೀಂ ವೃತ್ತಿಮಾಸ್ಥಾಯ ಧನಾಮುಷ್ಟಿರ್ನ ತೇ ವರಃ ॥7॥
ಆರ್ಯಪುತ್ರ ! ಏಕಿದು? ಏನಿದು ನಿನ್ನ ವರ್ತನೆ? ಧನಧಾನ್ಯಸಮೃದ್ಧವಾದ ಈ ರಾಜ್ಯವನ್ನೇಕೆ ಪರಿತ್ಯಾಗ ಮಾಡುತ್ತಿರುವೆ? ಕಾಪಾಲಿಕವೃತ್ತಿಯನ್ನು ಆಶ್ರಯಿಸಿ ಒಂದು ಮುಷ್ಟಿಧಾನ್ಯ ಸಿಗುವುದೇ? ಎಂಬ ನಿರೀಕ್ಷೆಯಿಂದ ಬೀದಿ ಬೀದಿ ಅಲೆಯುವ ಕಾರಣ -ವೇನು?
ಪ್ರತಿಜ್ಞಾ ತೇಽನ್ಯಥಾ ರಾಜನ್ ವಿಚೇಷ್ಟಾ ಚಾನ್ಯಥಾ ತವ |
ಯದ್ ರಾಜ್ಯಂ ಮಹದುತ್ಸೃಜ್ಯ ಸ್ವಲ್ಪೇ ತುಷ್ಯಸಿ ಪಾರ್ಥಿವ ॥8॥

ಓ ರಾಜನೇ! ನಿನ್ನ ಪ್ರತಿಜ್ಞೆಯೇ ಒಂದು, ನಿನ್ನ ವರ್ತನೆಯೇ ಮತ್ತೊಂದು, ಸಮೃದ್ಧವಾದ ಈ ರಾಜ್ಯವನ್ನು ಪರಿತ್ಯಾಗ ಮಾಡಿ ಅಲ್ಪಸುಖಕ್ಕಾಗಿ ಆಸೆ ಪಡುವು- ದೇಕೆ?
ನೈತೇನಾತಿಥಯೋ ರಾಜನ್ ದೇವರ್ಷಿಪಿತರಸ್ತಥಾ |
ಅದ್ಯ ಶಕ್ಯಾಸ್ತ್ವಯಾ ಭರ್ತುಂ ಮೋಘಸ್ತೇಽಯಂ ಪರಿಶ್ರಮಃ ॥9॥
ಓ ಪತಿದೇವನೇ! ನಿನ್ನ ಈ ಪ್ರಯತ್ನವು ವ್ಯರ್ಥವಾಗಿದೆ. ನೀನು ತೆರಳುತ್ತಿರುವ ಈ ದಾರಿಯಲ್ಲಿ ಯಾರೇ ಒಬ್ಬ ಅತಿಥಿಗೆ, ದೇವತೆಗೆ, ಪಿತೃಗಳಿಗೆ, ಋಷಿಗಳಿಗೆ ತೃಪ್ತಿ ಪಡಿಸಲು ಸಾಧ್ಯವಾಗುವುದಿಲ್ಲ.
ದೇವತಾತಿಥಿಭಿಶ್ಚೈವ ಪಿತೃಭಿಶ್ಚೈವ ಪಾರ್ಥಿವ |
ಸರ್ವೈರೇತೈಃ ಪರಿತ್ಯಕ್ತಃ ಪರಿವ್ರಜಸಿ ನಿಷ್ಕ್ರಿಯಃ ॥10॥
ನೀನು ಕರ್ಮಭ್ರಷ್ಟನಾಗುತ್ತಿರುವೆ. ದೇವತೆಗಳು, ಋಷಿಗಳು, ಪಿತೃಗಳು ಎಲ್ಲರೂ ಕೂಡ ನಿನ್ನ ಕೈಬಿಡುವರು. ಯಾವುದೇ ಕರ್ತವ್ಯಗಳನ್ನು ಆಚರಿಸದೇ ವ್ಯರ್ಥವಾಗಿ ತಿರುಗಲು ಹೊರಟಿರುವಿ.
ಯಸ್ತ್ವಂ ತ್ರೈವಿದ್ಯವೃದ್ಧಾನಾಂ ಬ್ರಾಹ್ಮಣಾನಾಂ ಸಹಸ್ರಶಃ |
ಭರ್ತಾ ಭೂತ್ವಾ ಚ ಲೋಕಸ್ಯ ಸೋಽದ್ಯ ತೈರ್ಭೃತಿಮಿಚ್ಛಸಿ ॥11॥
ಸಾವಿರಾರು ಮಂದಿ ವೇದವನ್ನು ಅಧ್ಯಯನ ಮಾಡುವ ವೃದ್ಧರಾದ ಬ್ರಾಹ್ಮಣರಿಗೆ ಇಷ್ಟರ ತನಕ ಆಶ್ರಯನಾಗಿದ್ದಿ, ಸಮಸ್ತ ಲೋಕಕ್ಕೆ ಒಡೆಯನಾಗಿದ್ದಿ. ಈಗ ಇಷ್ಟೊಂದು ಪುಣ್ಯಕಾರ್ಯವನ್ನು ಪರಿತ್ಯಾಗ ಮಾಡಿ, ನಿನ್ನ ಉದರಭರಣಕ್ಕಾಗಿ ಮತ್ತೊಬ್ಬರ ದಯೆಗೆ ಪಾತ್ರನಾಗಲು ಹೊರಟಿರುವೆ.
ಶ್ರಿಯಂ ಹಿತ್ವಾ ಪದೀಪ್ತಾಂ ತ್ವಂ ಶ್ವವತ್ ಸಂಪ್ರತಿ ವೀಕ್ಷ್ಯಸೇ |
ಅಪುತ್ರಾ ಜನನೀ ತೇಽದ್ಯ ಕೌಸಲ್ಯಾ ಚಾಪತಿಸ್ತ್ವಯಾ ॥12॥
ಸಮೃದ್ಧವಾದ ಸಂಪತ್ತನ್ನು ಪರಿತ್ಯಾಗ ಮಾಡಿ ಬಂದ ನಿನ್ನನ್ನು ಇತರರು ನಾಯಿ- ಯಂತೆ ತಿರಸ್ಕಾರದಿಂದ ಕಾಣುವರು. ನಿನ್ನನ್ನು ಹಡೆದ ತಾಯಿ ಪುತ್ರಹೀನಳೆಂಬ ಭಾವನೆ ಹೊಂದುವಳು. ಕೌಸಲ್ಯೆಯಾದ ನಿನ್ನ ಹೆಂಡತಿಯಾದ ನಾನೂ ಸಹ ಪತಿಯಿಲ್ಲದಂತೆ ಆಗುವೆನು.
ಅಮೀ ಚ ಧರ್ಮಕಾಮಾಸತ್ತ್ವಂ ಕ್ಷತ್ರಿಯಾಃ ಪರ್ಯುಪಾಸತೇ |
ತ್ವದಾಶಾಮಭಿಕಾಂಕ್ಷಂತಃ ಕೃಪಣಾಃ ಫಲಹೇತುಕಾಃ॥13॥
ಧರ್ಮ ಮತ್ತು ಕಾಮಗಳನ್ನು ಅಪೇಕ್ಷಿಸುವ ಕ್ಷತ್ರಿಯರು ನಿನ್ನನ್ನು ಆಶ್ರಯಿಸಿ ಅನೇಕ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳಬೇಕೆಂಬ ಅಭಿಲಾಷೆ ಹೊಂದಿದ್ದಾರೆ. ಅದಕ್ಕಾಗಿ ನಿನ್ನನ್ನೇ ಉಪಾಸನೆಗೈಯುತ್ತಿದ್ದಾರೆ. ನಿನ್ನ ಸೇವೆಯಲ್ಲಿಯೇ ಆಸಕ್ತರಾಗಿ- ದ್ದಾರೆ. ದೀನರಾದ ಆ ಕ್ಷತ್ರಿಯರು ನಿನ್ನಿಂದ ಉತ್ತಮಫಲವನ್ನು ನಿರೀಕ್ಷಿಸುತ್ತಿದ್ದಾರೆ.
ತಾಂಶ್ಚ ತ್ವಂ ವಿಫಲಾನ್ ಕುರ್ವನ್ ಕಂ ನು ಲೋಕಂ ಗಮಿಷ್ಯಸಿ |
ರಾಜನ್ ಸಂಶಯಿತೋ ಮೋಕ್ಷೋ ಪರತಂತ್ರೇಷು ದೇಹಿಷು ॥14॥
ಇಂಥ ಕ್ಷತ್ರಿಯರ ಅಪೇಕ್ಷೆಗಳನ್ನೆಲ್ಲಾ ವಿಫಲವನ್ನಾಗಿ ಮಾಡಿ, ಯಾವ ಪುಣ್ಯ- ಲೋಕವನ್ನು ಹೊಂದಲು ಬಯಸುತ್ತಿರುವಿ. ಸರ್ವಸ್ವವನ್ನು ಹೀಗೆ ಪರಿತ್ಯಾಗ ಮಾಡುವುದರಿಂದ ಮೋಕ್ಷವಾಗುತ್ತದೆಂಬ ನಿಶ್ಚಯವೂ ಕೂಡ ಇರುವುದಿಲ್ಲ. ಎಲ್ಲಾ ಜೀವರು ವಿಧಿಯ ಅಧೀನರಾಗಿದ್ದಾರೆ.
ನೈವ ತೇಽಸ್ತಿ ಪರೋ ಲೋಕೋ ನಾಪರಃ ಪಾಪಕರ್ಮಣಃ |
ಧರ್ಮ್ಯಾನ್ ದಾರಾನ್ ಪರಿತ್ಯಜ್ಯ ಯಸ್ತ್ವಮಿಚ್ಛಸಿ ಜೀವಿತುಮ್ ॥15॥
ಧರ್ಮನಿರತರಾದ ಹೆಂಡಂದಿರನ್ನು ಪರಿತ್ಯಾಗ ಮಾಡಿ, ಏಕಾಕಿಯಾಗಿ ಜೀವಿಸಲು ಇಚ್ಛಿಸುತ್ತಿರುವ ನಿನ್ನ ಈ ವರ್ತನೆ ಪಾಪಕರ್ಮವೇ ಆಗಿದೆ. ನಿನಗೆ ಪರಲೋಕದಲ್ಲಿ ಯಾವುದೇ ಸುಖವು ದೊರೆಯುವುದಿಲ್ಲ. ಈ ಲೋಕವೂ ಕೂಡ ಸುಖಕರವಲ್ಲ.
ಸ್ರಜೋ ಗಂಧಾನಲಂಕಾರಾನ್ ವಾಸಾಂಸಿ ವಿವಿಧಾನಿ ಚ |
ಕಿಮರ್ಥಮಭಿಸಂತ್ಯಜ್ಯ ಪರಿವ್ರಜಸಿ ನಿಷ್ಕ್ರಿಯಃ ॥16॥
ಜನಕರಾಜನೇ! ಮಾಲೆಗಳನ್ನು, ಪರಿಮಳ ದ್ರವ್ಯಗಳನ್ನು, ಅಲಂಕಾರವಸ್ತು- ಗಳನ್ನು, ನಾನಾವಿಧವಾದ ವಸ್ತ್ರಗಳನ್ನು ಪರಿತ್ಯಾಗ ಮಾಡಿ, ಎಲ್ಲಾ ಕರ್ತವ್ಯಗಳಿಂದ ಭ್ರಷ್ಟನಾಗಿ ಏಕೆ ಇಲ್ಲಿಂದ ಹೊರಟಿರುವಿ ?
ನಿಪಾನಂ ಸರ್ವಭೂತಾನಾಂ ಭೂತ್ವಾ ತ್ವಂ ಪಾವನಂ ಮಹತ್ |
ಆಢ್ಯೋ ವನಸ್ಪತಿರ್ಭೂತ್ವಾ ಸೋಽನ್ಯಾಂಸ್ತ್ವಂ ಪರ್ಯುಪಾಸತೇ ॥17॥
ಇಲ್ಲಿಯ ತನಕ ನೀನು ಎಲ್ಲಾ ವಿಧದ ಪ್ರಾಣಿಗಳಿಗೆ ನೀರನ್ನು ಒದಗಿಸುವ ಪರಮಪವಿತ್ರವಾದ ದೊಡ್ಡದಾದ ಜಲಾಶಯದಂತೆ ಇದ್ದಿ. ಇಂಥ ನೀನು ಹಸಿವು ತೃಷೆಗಳನ್ನು ನಿವಾರಿಸಿಕೊಳ್ಳಲು ಮತ್ತೊಬ್ಬರನ್ನು ಆಶ್ರಯಿಸಲು ಹೊರಟಿರುವಿ. ಮತ್ತು ಇಲ್ಲಿಯ ತನಕ ಎಲ್ಲರಿಗೂ ಆಶ್ರಯ ನೀಡುವ ಫಲಪುಷ್ಪಭರಿತವಾದ ವೃಕ್ಷದಂತೆ ಭದ್ರವಾಗಿ ನೆಲೆಸಿದ್ದಿ. ಈಗ ಮತ್ತೊಬ್ಬರ ನೆರಳಿನಲ್ಲಿ ಬದುಕಲು ಹೊರಟಿರುವಿ.
ಖಾದಂತಿ ಹಸ್ತಿನಂ ನ್ಯಾಸ್ಯೈಃ ಕ್ರವ್ಯಾದಾ ಬಹವೋಽಪ್ಯುತ |
ಬಹವಃ ಕೃಮಯಶ್ಚೈವ ಕಿಂ ಪುನಸತ್ತ್ವಮನರ್ಥಕಮ್ ॥18॥
ಮಾಂಸಾಹಾರಿಗಳಾದ ಕ್ಷುದ್ರವಾದ ಮೃಗಗಳು ಆನೆಯನ್ನು ತಿಂದುಬಿಡುತ್ತವೆ. ಅನೇಕ ಕ್ರಿಮಿಗಳೂ ಕೂಡ ಭಕ್ಷಿಸುತ್ತವೆ. ಹೀಗಿರುವಾಗ ನಿಷ್ಕರ್ಮಿಯಾದ ನಿನ್ನನ್ನು ಆ ಪ್ರಾಣಿಗಳು ತಿನ್ನದೇ ಬಿಡುತ್ತವೇನು ?
ಯ ಇಮಾಂ ಕುಂಡಿಕಾಂ ಭಿಂದ್ಯಾತ್ ತ್ರಿವಿಷ್ಟಬ್ಧಂ ಚ ಯೋ ಹರೇತ್|
ವಾಸಶ್ಚಾಪಿ ಹರೇತ್ ತಸ್ಮಿನ್ ಕಥಂ ತೇ ಮಾನಸಂ ಭವೇತ್ ॥19॥

ನಿನ್ನಷ್ಟಕ್ಕೆ ನೀನು ಅಲೆದಾಡುತ್ತಿರುವಾಗ ಒಬ್ಬನು ಬಂದು ನಿನ್ನ ಕಮಂಡಲುವನ್ನು ಒಡೆದುಹಾಕುತ್ತಾನೆ. ಮತ್ತೊಬ್ಬನು ನಿನ್ನ ತ್ರಿದಂಡವನ್ನು ಅಪಹರಿಸಿಬಿಡುತ್ತಾನೆ. ನೀನು ಉಟ್ಟುಕೊಂಡ ಬಟ್ಟೆಯನ್ನೇ ಕಿತ್ತುಕೊಂಡು ಬಿಡುತ್ತಾನೆ. ನಿನ್ನ ಕೃಷ್ಣಾಜಿನವನ್ನೂ ಕೂಡ ಅಪಹರಿಸುತ್ತಾನೆ. ಇಂಥ ಸಂದರ್ಭದಲ್ಲಿ ನಿನ್ನ ಮನಸ್ಸು ಅವರ ಬಗ್ಗೆ ಏನು ಆಲೋಚಿಸುತ್ತದೆ? ಎಂಬುದನ್ನು ವಿಮರ್ಶೆ ಮಾಡಿರುವಿಯಾ.

ಟಿಪ್ಪಣಿ - ತ್ರಿವಿಷ್ಟತ್ವಂ ಚ ಯೋ ಹರೇದ್ ಇತ್ಯತ್ರ ತ್ರಿಷು ಲೋಕೇಷು ವಿಷ್ಟೋ ನಿವಿಷ್ಟೋ ಯಸ್ಮಿನ್ ಕೃಷ್ಣಾಜಿನಾದೌ ತಸ್ಯ ಭಾವಃ ತ್ರಿವಿಷ್ಟತ್ವಮ್ | `ತ್ರಿವಿಷ್ಟಪತ್ವಂ ಚ ಯೋ ಹರೇತ್'- ಎಂಬಲ್ಲಿ ಮೂರು ಲೋಕಗಳಲ್ಲಿ ಉಪಯೋಗಿಸುವ ಕೃಷ್ಣಾಜಿನ. `ತಸ್ಯಭಾವಃ ತ್ರಿವಿಷ್ಟತ್ವಂ' ಎಂದರ್ಥ.

ಯಸ್ತ್ವಯಂ ಸರ್ವಮುತ್ಸೃಜ್ಯ ಧಾನಾಮುಷ್ಟೇರನುಗ್ರಹಃ |
ಯದಾನೇನ ಸಮಂ ಸರ್ವಂ ಕಿಮಿದಂ ಹ್ಯವಸೀಯತೇ ॥20॥

ಎಲ್ಲವನ್ನು ಪರಿತ್ಯಾಗ ಮಾಡಿ ಒಂದು ಮುಷ್ಟಿ ಧಾನ್ಯವನ್ನು ಪಡೆಯುವುದರಿಂದ ನಿನಗೇನು ಲಾಭ? ಅಷ್ಟರಿಂದಲೇ ನೀನು ಎಲ್ಲವನ್ನು ಪಡೆದು ಚರಿತಾರ್ಥ- ನಾಗುವುದಾದರೆ ಈ ರಾಜ್ಯವನ್ನೇಕೆ ಪರಿತ್ಯಾಗ ಮಾಡುತ್ತಿರುವಿ? ಆ ಮುಷ್ಟಿಯ ಧಾನ್ಯದಿಂದಲೂ ನಿನಗೆ ಸಂಗವು ತಪ್ಪಲಿಲ್ಲ.

ವಿವರಣೆ - ಎಲ್ಲಾ ರಾಜ್ಯಕೋಶಗಳನ್ನು ಪರಿತ್ಯಾಗ ಮಾಡಿ, ಒಂದು ಮುಷ್ಟಿಯ ಹಿಟ್ಟಿಗಾಗಿ ಹೊರಟಿರುವಿ. ಶರೀರವನ್ನು ಧರಿಸುವುದಕ್ಕಾಗಿ ಮುಷ್ಟಿ ಹಿಟ್ಟನ್ನು ಸ್ವೀಕರಿಸಲೇಬೇಕು ಎಂದು ಉತ್ತರಿಸುವುದಾದರೆ, ಸನ್ಯಾಸಿಯಾದರೂ ಕೂಡ ನಿನಗೆ ಅದರ ಸಂಗ ತಪ್ಪಲಿಲ್ಲ ಎಂದು ನೀನೇ ಒಪ್ಪಿಕೊಂಡಂತಾಯಿತು. ಸಮಸ್ತ ವಸ್ತುಗಳನ್ನು ನೀನು ಸಮಾನವಾದ ದೃಷ್ಟಿಯಿಂದ ಕಾಣಬೇಕು. ರಾಜ್ಯದ ವಿಷಯ- ದಲ್ಲಿ ಸಂಗವನ್ನು ಬಿಟ್ಟಂತೆ ಆ ಮುಷ್ಟಿಹಿಟ್ಟಿನಲ್ಲೂ ಸಂಗವನ್ನು ನೀನು ಬಿಡಬೇಕು. ಇಲ್ಲದಿದ್ದರೆ ರಾಜ್ಯವನ್ನಾದರೂ ಏಕೆ ಪರಿತ್ಯಾಗ ಮಾಡುವಿ ? ಒಂದು ಬೇಕು, ಮತ್ತೊಂದು ಬೇಡ ಎಂಬ ಚಿಂತನೆಯೇ ತಪ್ಪು. ಆದ್ದರಿಂದ ನೀನು ಮೊದಲು ವಿವೇಕಿಯಾಗು, ಜ್ಞಾನಶೀಲನಾಗು, ಆಗ ಈ ರಾಜ್ಯವನ್ನು ಪರಿತ್ಯಾಗ ಮಾಡುವ ಅಗತ್ಯವು ಬರುವುದಿಲ್ಲ. ಜ್ಞಾನಿಯಾದವನು ಮುಷ್ಟಿಹಿಟ್ಟನ್ನು ಪರಿತ್ಯಾಗ ಮಾಡ- ದಂತೆ ರಾಜ್ಯವನ್ನೂ ಕೂಡ ಪರಿತ್ಯಾಗ ಮಾಡಲಾರನು.

ಧಾನಾಮುಷ್ಟೇರಿಹಾರ್ಥಶ್ಚೇತ್ ಪ್ರತಿಜ್ಞಾ ತೇ ವಿನಶ್ಯತಿ |
ಕಾ ವಾಹಂ ತವ ಕೋ ಮೇ ತ್ವಂ ಕಶ್ಚ ತೇ ಮಯ್ಯನುಗ್ರಹಃ ॥21॥

ನಿನ್ನ ಜೀವನದ ರಕ್ಷಣೆಗಾಗಿ ಮುಷ್ಟಿಧಾನ್ಯವನ್ನು ಪಡೆಯಲು ಇಚ್ಛಿಸುವಿ- ಯಾದರೇ, ನಿನ್ನ ಸಂಕಲ್ಪವೇ ವ್ಯರ್ಥವಾಗುತ್ತದೆ. ಇದಕ್ಕಿಂತ ರಾಜ್ಯವನ್ನು ವಹಿಸು- ವುದೇ ಹೆಚ್ಚು. ನಿನಗೆ ನಾನು ಯಾರು? ನನಗೆ ನೀನು ಯಾರು? ನನ್ನಲ್ಲಿ ನೀನು ತೋರಿಸಬೇಕಾದ ಅನುಗ್ರಹವಾದರೂ ಕೂಡ ಏನು?

ವಿವರಣೆ - ಜೀವನವನ್ನು ನಡೆಸಲು ಮುಷ್ಟಿ ಅನ್ನವು ಆವಶ್ಯಕವೆಂದು ನೀನು ತಿಳಿದಿರುವಿ. ಆದರೆ ಎಲ್ಲವನ್ನು ತ್ಯಾಗಮಾಡುತ್ತೇನೆಂಬ ಪ್ರತಿಜ್ಞೆಯನ್ನು ಮಾಡಿ- ರುತ್ತಿ. ನಿನ್ನ ಈ ತಿಳುವಳಿಕೆಗೂ, ನೀನು ಮಾಡಿದ ಪ್ರತಿಜ್ಞೆಗೂ ವಿರೋಧವಿದೆ. ಎಲ್ಲವನ್ನು ಪರಿತ್ಯಾಗ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿ, ಒಂದು ವಸ್ತುವನ್ನು ಅಪೇಕ್ಷಿಸಿದರೂ ಸಾಕು ಪ್ರತಿಜ್ಞೆಯು ಭಂಗವಾಗುತ್ತದೆ. ಇದು ಅರ್ಧಜರತೀಯ ನ್ಯಾಯವಾಗುತ್ತದೆ. ಎಲ್ಲವನ್ನು ಪರಿತ್ಯಾಗ ಮಾಡಿದ ಮೇಲೆ ನಾನು ನಿನಗೇನಾ- ಗಬೇಕು? ನಿನ್ನಿಂದ ನನಗೇನಾಗಬೇಕು? ನನ್ನ ಮೇಲೆ ನಿನಗೆ ಅನುಗ್ರಹದ ಬುದ್ಧಿ ಇರುವುದಾದರೆ, ಮೊದಲಿನಂತೆ ಈ ರಾಜ್ಯವನ್ನು ಶಾಸನ ಮಾಡು. ಅರಮನೆಯಲ್ಲಿ ವಾಸಮಾಡು, ಶ್ರೇಷ್ಠವಾದ ವಸ್ತ್ರಾಭರಣಗಳನ್ನು ಧರಿಸು.

ಪ್ರಶಾಧಿ ಪೃಥಿವೀಂ ರಾಜನ್ ಯದಿ ತೇऽನುಗ್ರಹೋ ಭವೇತ್ |
ಪ್ರಾಸಾದಂ ಶಯನಂ ಯಾನಂ ವಾಸಾಂಸ್ಯಾಭರಣಾನಿ ಚ ॥22॥

ನಿನ್ನ ಮನಸ್ಸಿನ ಆಸೆಯು ಈಡೇರಬೇಕೆಂದರೆ ಉಪ್ಪರಿಗೆಯ ಮೇಲೆ ಪವಡಿಸು. ಸಮಲಂಕೃತವಾದ ರಥದಲ್ಲಿ ಕುಳಿತುಕೋ, ಶ್ರೇಷ್ಠವಾದ ವಸ್ತ್ರಗಳನ್ನು, ಆಭರಣ- ಗಳನ್ನು ಧಾರಣೆ ಮಾಡು, ಸಮೃದ್ಧಿಯಿಂದ ರಾಜ್ಯವನ್ನು ಪರಿಪಾಲನೆ ಮಾಡು.

ಶ್ರಿಯಾ ವಿಹೀನೈರಧನೈಸ್ತ್ಯಕ್ತಮಿತ್ರೈರಕಿಂಚನೈಃ |
ಸೌಷ್ಟಿಕೈಃ ಸಂಭೃತಾನರ್ಥಾನ್ ಯಃ ಸಂತ್ಯಜತಿ ಕಿಂ ನು ತತ್ ॥23॥

ಯಾರು ದುಡ್ಡಿನ ಆಸೆಯನ್ನು ಬಿಟ್ಟಿರುತ್ತಾರೋ, ಎಲ್ಲಾ ಬಗೆಯ ಸಂಪತ್ತುಗಳ ಅಪೇಕ್ಷೆಯನ್ನು ಹೊಂದಿರುವುದಿಲ್ಲವೋ, ಮಿತ್ರರನ್ನೂ ಕೂಡ ಪರಿತ್ಯಾಗ ಮಾಡಿ- ರುತ್ತಾರೋ, ಏನೂ ಇಲ್ಲದವರಾಗಿ ಸನ್ಯಾಸಿಗಳಾಗಿರುತ್ತಾರೋ, ಅವರು ತಮ್ಮ ಸುಖಕ್ಕಾಗಿ ದಂಡ, ಕಮಂಡಲು ಮೊದಲಾದವುಗಳನ್ನು ಸಂಗ್ರಹ ಮಾಡಿಟ್ಟು- ಕೊಳ್ಳುತ್ತಾರೆ. ಹೀಗಿರುವಾಗ ಆಸೆಯುಳ್ಳ ಮನುಷ್ಯನು ರಾಜ್ಯವನ್ನು ಏಕೆ ತಾನೇ ಬಿಡಬೇಕು ?

ವಿವರಣೆ - ಯಾರು ಕಾಂತಿಹೀನರೋ, ನಿರ್ಧನರೋ, ಬಂಧು-ಮಿತ್ರ ರಹಿತರೋ, ಅವರು ಸುಖಾಪೇಕ್ಷೆಯಿಂದಲೇ ಕಮಂಡಲು, ಕೃಷ್ಣಾಜಿನ ಮೊದಲಾ- ದವುಗಳನ್ನು ಸಂಗ್ರಹ ಮಾಡಿಕೊಳ್ಳುತ್ತಾರೆ. ನಿಜವಾಗಿಯೂ ಕೂಡ ಅವರು ಸಂಗ್ರಾಹಕರೇ ಹೊರತು, ತ್ಯಾಗಿಗಳಲ್ಲ. ನಿರ್ಧನರಾದವರಿಗೆ ತ್ಯಾಗ ಮಾಡಲು ಏನು ತಾನೇ ಸಿಗುತ್ತದೆ? ಸನ್ಯಾಸಿಗಳು ಯಾವುದನ್ನು ತಾನೇ ತ್ಯಾಗ ಮಾಡಲು ಸಾಧ್ಯ? ಸನ್ಯಾಸಿಯಾದವನಿಗೆ ತ್ಯಾಗದಿಂದ ಆಗಬೇಕಾದದ್ದು ಯಾವುದೂ ಇಲ್ಲ. ರಾಜನಾದವನು ಸನ್ಯಾಸಿಯಾದರೆ ಅವನೂ ಕೂಡ ಏನನ್ನು ತಾನೇ ತ್ಯಾಗ ಮಾಡಲು ಸಾಧ್ಯ? ಸನ್ಯಾಸಿಯಾಗುವ ಮೊದಲಷ್ಟೇ ತ್ಯಾಗ ಮಾಡಬೇಕು. ತಾನು ಸಂಪಾದನೆ ಮಾಡಿದ್ದೆಲ್ಲವನ್ನು ದಾನ ಮಾಡಬೇಕು. ರಾಜತ್ವವನ್ನು ಪರಿತ್ಯಾಗ ಮಾಡಿ ಸನ್ಯಾಸಿಯಾಗುವುದನ್ನು ಯಾರೂ ಸಹ ತ್ಯಾಗ ಎಂದು ಕರೆಯುವುದಿಲ್ಲ. ರಾಜ್ಯಕೋಶಗಳನ್ನು ಬಿಡುವುದು ಪುರುಷಾರ್ಥಸಾಧಕವಲ್ಲ. ಕರ್ತವ್ಯವನ್ನು ಪರಿತ್ಯಾಗ ಮಾಡಿ, ಪಲಾಯನ ಮಾಡುವುದು ತ್ಯಾಗವಲ್ಲ. ನಿಜವಾಗಿಯೂ ಕೂಡ ಸನ್ಯಾಸಿಯಾಗಬೇಕು, ತ್ಯಾಗಿಯಾಗಬೇಕೆಂದರೆ ರಾಜನು ಸ್ವಧರ್ಮವನ್ನು ಪರಿಪಾಲನೆ ಮಾಡಬೇಕು, ರಾಜ್ಯಭಾರ ಮಾಡಬೇಕು, ನಿರ್ಗತಿಕರಿಗೆ ಆಶ್ರಯ ನೀಡಬೇಕು, ಯಥೇಚ್ಛವಾಗಿ ದಾನಮಾಡಬೇಕು. ರಾಜನಾದವನು ತನಗೆ ವಿಹಿತವಾದ ಕಪ್ಪಕಾಣಿಕೆಗಳನ್ನು ಮತ್ತೊಬ್ಬರಿಂದ ಸ್ವೀಕಾರ ಮಾಡಬೇಕು. ಇದನ್ನು ಬಿಟ್ಟು ಹಿಡಿಮುಷ್ಟಿಯ

ಧಾನ್ಯವನ್ನು ಬೇಡುವುದು ಅಧರ್ಮವಾಗುತ್ತದೆ. ವಿಹಿತವಾದದ್ದನ್ನು ಪರಿತ್ಯಾಗ ಮಾಡಿರುವುದು ಒಂದು ದೋಷ. ಅವಿಹಿತ-ವಾದದ್ದನ್ನು ಸ್ವೀಕಾರ ಮಾಡುವುದು ಮತ್ತೊಂದು ದೋಷ. ಆದ್ದರಿಂದ ರಾಜನಾದ ನೀನು ಕರ್ತವ್ಯಪರಿಪಾಲನೆಯನ್ನು ಮಾಡಿ ನಿಜವಾದ ತ್ಯಾಗಿಯಾಗಲು ಪ್ರಯತ್ನಿಸು ಎಂಬುದು ಅರ್ಜುನನ ಅಭಿಪ್ರಾಯ.
ಟಿಪ್ಪಣಿ - ಸೌಪ್ತಿಕೈಃ ಸಂಭೃತಾನ್ ಇತ್ಯತ್ರ ಸುಷ್ಠು ಶೋಭನಂ ಭವೇದಿತ್ಯಾಶಾ ಯೇಷಾಂ ತೇ ಸೌಪ್ತಿಕಾಃ, ತೈಃ |
ಇದು ನನಗೆ ಸುಖಕರವಾಗುತ್ತದೆ ಎಂಬ ಆಸೆಯನ್ನು ಹೊಂದಿರುವವರು `ಸೌಪ್ತಿಕರು' ಎಂದು ಕರೆಸಿಕೊಳ್ಳುತ್ತಾರೆ. ಅಂಥ ಸೌಪ್ತಿಕರಿಂದ ಸಂಗ್ರಹಿಸಲ್ಪಟ್ಟದ್ದು ಎಂದರ್ಥ.
ಯೋಽತ್ಯಂತಂ ಪ್ರತಿಗೃಹ್ಣೀಯಾದ್ ಯಶ್ಚ ದದ್ಯಾತ್ ಸದೈವ ಹಿ |
ತಯೋಸ್ತ್ವಮಂತರಂ ವಿದ್ಧಿ ಶ್ರೇಯಾಂಸ್ತಾಭ್ಯಾಂ ಕ ಉಚ್ಯತೇ ॥24॥
ಭಿಕ್ಷೆ ಬೇಡಲು ಹೋಗುತ್ತೇನೆಂದು ನೀನು ಹೇಳುತ್ತಿರುವಿ. ಆದರೆ ಯಾವಾ- ಗಲೂ ಕೈ ಚಾಚಿ ಬೇಡುವವನಿಗೂ, ಯಾವಾಗಲೂ ದಾನವನ್ನು ನೀಡುವವನಿಗೂ ಇರುವ ತಾರತಮ್ಯವನ್ನು ಒಮ್ಮೆ ಆಲೋಚನೆ ಮಾಡು. ಇವರಿಬ್ಬರಲ್ಲಿ ಯಾರು ಶ್ರೇಷ್ಠರೆಂಬುದನ್ನು ಗಮನಿಸು.
ವಿವರಣೆ - ದಾನ ಮಾಡುವವನು ಹಾಗೂ ದಾನ ಕೊಡುವವನು ಇವರಿಬ್ಬ- ರಲ್ಲಿ ದಾನ ಕೊಡುವವನೇ ಶ್ರೇಷ್ಠನೆಂಬುದು ನಿರ್ಧಾರಿತವಾದ ವಿಚಾರ. ಸನ್ಯಾಸಿ- ಯಾದವನು ಇನ್ನೊಬ್ಬರ ಬಳಿ ಬೇಡುತ್ತಾನೆಯೇ ಹೊರತು, ಇನ್ನೊಬ್ಬನಿಗೆ ಏನನ್ನೂ ಕೂಡ ಕೊಡಲಾರನು. ಯಾರು ದಾನವನ್ನು ಮಾಡುತ್ತಾನೋ, ಅವನು ತನ್ನಲ್ಲಿರುವ ಪಾಪಗಳನ್ನು ಕಳೆದುಕೊಂಡು ದುಷ್ಕರ್ಮದ ಫಲವನ್ನು ನಿವಾರಣೆ ಮಾಡಿಕೊಳ್ಳುತ್ತಾನೆ. ಶ್ರೇಯಸ್ಸಿಗೆ ಪಾತ್ರನಾಗುತ್ತಾನೆ. ಪ್ರತಿಗ್ರಹ ಮಾಡಿದವನು ಆ ಪಾಪಗಳನ್ನು ಪಡೆದುಕೊಳ್ಳುತ್ತಾನೆ. ಆದರೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು, ಆ ಪಾಪವನ್ನು ದಾನ ಸ್ವೀಕರಿಸಿದವನು ಪರಿಹಾರ ಮಾಡಿಕೊಳ್ಳಬಹುದು. ಆದರೆ ಅದನ್ನು ಮೀರಿ ಪುಣ್ಯ ಸಂಪಾದನೆ ಮಾಡುವುದು ಅವನಿಗೆ ಬಹಳ ಕಷ್ಟವೇ ಆಗುತ್ತದೆ. ಆದರೆ ದಾನ ಮಾಡುವವನು ತನ್ನ ಪಾಪವನ್ನು ಕಳೆದುಕೊಂಡು ಸುಲಭವಾಗಿ ಪುಣ್ಯಸಂಪಾದನೆಯಲ್ಲಿ ತೊಡಗುತ್ತಾನೆ. ಹೆಚ್ಚಿನ ಸಮಯದ ವಿನಿಯೋಗ ಇವನಿಗೆ ಆವಶ್ಯಕವಾಗಿರುವುದಿಲ್ಲ. ಆದ್ದರಿಂದ ಯಾಚಕರಿಗೆ ಆಶ್ರಯನಾಗಿರುವುದೇ ಹೆಚ್ಚು ಶ್ರೇಯಸ್ಸಾಧನ. ಇದನ್ನು ಬಿಟ್ಟು ತಾನೇ ಯಾಚಕ- ನಾಗಲು ತೆರಳಬಾರದು.
ಸದೈವ ಯಾಚಮಾನೇಷು ತಥಾ ದಂಭಾನ್ವಿತೇಷು ಚ |
ಏತೇಷು ದಕ್ಷಿಣಾ ದತ್ತಾ ದಾವಾಗ್ನಾವಿವ ದುಹ್ರುತಮ್ ॥25॥
ನಿರಂತರ ಯಾಚನೆ ಮಾಡುವುದನ್ನೇ ವೃತ್ತಿ ಮಾಡಿಕೊಂಡಿರುವವನಿಗೆ ಡಾಂಭಿಕನಾದವನಿಗೆ ನೀಡುವ ದಕ್ಷಿಣೆಯು ಕಾಡ್ಗಿಚ್ಚಿನಲ್ಲಿ ಹುತ ಮಾಡಿದ ಹವಿಸ್ಸಿನಂತೆ ವ್ಯರ್ಥವಾಗುತ್ತದೆ.
ವಿವರಣೆ - ಯಾಚನೆ ಮಾಡುವುದನ್ನೇ ಯಾರು ವೃತ್ತಿಯನ್ನಾಗಿ ಮಾಡಿ- ಕೊಂಡಿರುತ್ತಾರೋ, ಅವರಿಗೆ ದಾನ ಮಾಡುವುದು ವ್ಯರ್ಥ. ಮತ್ತು ತಾನು ಧರ್ಮಿಷ್ಠನೆಂಬ ಮುಖವಾಡ ಹಾಕಿಕೊಂಡ ಡಾಂಭಿಕನಿಗೂ ದಾನ ಮಾಡುವುದು ವ್ಯರ್ಥ. ಕಾಡ್ಗಿಚ್ಚಿನಲ್ಲಿ ಆಹುತಿ ನೀಡಿದಂತೆ ಇವರಿಗೆ ಮಾಡುವ ದಾನವು ವ್ಯರ್ಥ- ವಾಗುತ್ತದೆ. ಆದ್ದರಿಂದ ಯಾಚನಾವೃತ್ತಿಯನ್ನು ನೀನು ಸ್ವೀಕರಿಸುವುದು ಉಚಿತ-ವಲ್ಲ.
ಜಾತವೇದಾ ಯಥಾ ರಾಜನ್ ನಾದಗ್ಧ್ವೈವೋಪಶಾಮ್ಯತಿ |
ಸದೈವ ಯಾಚಮಾನೋ ಹಿ ತಥಾ ಶಾಮ್ಯತಿ ನ ದ್ವಿಜಃ ॥26॥
ಬೆಂಕಿಗೆ ಎಷ್ಟು ಕಟ್ಟಿಗೆಯನ್ನು ಹಾಕುತ್ತೇವೋ, ಅಷ್ಟು ಚೆನ್ನಾಗಿ ಅದು ಉರಿ- ಯುತ್ತದೆ. ಕಟ್ಟಿಗೆ ಹಾಕಿದಷ್ಟು ಶಾಂತವಾಗಲು ಸಾಧ್ಯವೇ ಇಲ್ಲ. ಅದರಂತೆ ಯಾಚನೆ- ಯನ್ನು ವೃತ್ತಿಯನ್ನಾಗಿ ಮಾಡಿಕೊಂಡ ಬ್ರಾಹ್ಮಣನು ಎಂದೂ ಕೂಡ ಶಾಂತಿಯನ್ನು ಹೊಂದಲಾರನು.
ವಿವರಣೆ - ಬೇಡಿದಾಗ ಮತ್ತೊಬ್ಬರು ನೀಡಬೇಕು. ಇಲ್ಲದಿದ್ದರೆ ಸಿಟ್ಟು ಮಾಡಿಕೊಳ್ಳುತ್ತಾನೆ. ಅವನಿಗೆ ನೆಮ್ಮದಿಯೇ ಇರುವುದಿಲ್ಲ. ಶಾಂತಿಯೂ ಕೂಡ ಇರುವುದಿಲ್ಲ ಎಂಬುದು ಈ ಶ್ಲೋಕದ ಭಾವ.
ಸತಾಂ ವೈ ದದತೋಽನ್ನಂ ಚ ಲೋಕೇಽಸ್ಮಿನ್ ಪ್ರಕೃತಿರ್ಧ್ರುವಾ |
ನ ಚೇದ್ ರಾಜಾ ಭವೇದ್ ದಾತಾ ಕುತಃ ಸ್ಯುರ್ಮೋಕ್ಷಕಾಂಕ್ಷಿಣಃ ॥27॥
ಸನ್ಯಾಸಿಗಿಂತಲೂ ಕೂಡ ಸನ್ಯಾಸಿಗೆ ಅನ್ನವನ್ನು ನೀಡುವ ಬ್ರಾಹ್ಮಣನೇ ಶ್ರೇಷ್ಠನು. ಅನ್ನವನ್ನು ನೀಡುವ ಬ್ರಾಹ್ಮಣನೇ ಇಲ್ಲದಿದ್ದರೆ ಮೋಕ್ಷಾರ್ಥಿಯಾದ ಸನ್ಯಾಸಿಗಳು ಇರಲು ಹೇಗೆ ಸಾಧ್ಯ ?
ವಿವರಣೆ - ಗೃಹಸ್ಥರೇ ಸನ್ಯಾಸಿಗಳಿಗೆ ಆಧಾರರಾಗಿರುತ್ತಾರೆ. ದಾನವನ್ನು ತೆಗೆದುಕೊಳ್ಳುವ ಸನ್ಯಾಸಿಗಿಂತಲೂ ಗೃಹಸ್ಥನೇ ಶ್ರೇಷ್ಠ ಎಂಬುದು ಇಲ್ಲಿಯ ಅಭಿಪ್ರಾಯ.
ಅನ್ನಾದ್ ಗೃಹಸ್ಥಾ ಲೋಕೇಽಸ್ಮಿನ್ ಭಿಕ್ಷವಸ್ತತ ಏವ ಚ |
ಅನ್ನಾತ್ ಪ್ರಾಣಃ ಪ್ರಭವತಿ ಅನ್ನದಃ ಪ್ರಾಣದೋ ಭವೇತ್ ॥28॥
ಗೃಹಸ್ಥರು ನೀಡುವ ಅನ್ನದಿಂದಲೇ ಸನ್ಯಾಸಿಯು ಜೀವನವನ್ನು ನಡೆಸಬೇಕು. ಏಕೆಂದರೆ ಪ್ರಾಣವು ಅನ್ನದಲ್ಲಿ ನೆಲೆಗೊಂಡಿರುತ್ತದೆ. ಅನ್ನದಾತೃವು ಪ್ರಾಣದಾತಾ ಎಂದು ಕರೆಸಿಕೊಳ್ಳುತ್ತಾನೆ.
ವಿವರಣೆ - ಸನ್ಯಾಸಿಗಿಂತಲೂ ಕೂಡ ಗೃಹಸ್ಥನೇ ಏಕೆ ಶ್ರೇಷ್ಠನೆಂಬುದಕ್ಕೆ ಕಾರಣ ಈ ಶ್ಲೋಕದಲ್ಲಿದೆ. ಯಾರು ಅನ್ನದಾತೃವೋ ಅವನು ಪ್ರಾಣಪ್ರದ. ಪ್ರಾಣಪದ- ನಾದವನು ಪಿತೃಸಮಾನ ಎಂಬುದು ಲೋಕಸಿದ್ಧವಾದ ನಿಯಮ. ಆದ್ದರಿಂದ ಸನ್ಯಾಸಿಗಿಂತಲೂ ಗೃಹಸ್ಥನು ಶ್ರೇಷ್ಠನೆಂದು ಇದರಿಂದ ತಿಳಿಯುತ್ತದೆ.
ಗೃಹಸ್ಥೇಭ್ಯೋಽಪಿ ನಿರ್ಮುಕ್ತಾ ಗೃಹಸ್ಥಾನೇವ ಸಂಶ್ರಿತಾಃ |
ಪ್ರಭವಂ ಚ ಪ್ರತಿಷ್ಠಾಂ ಚ ದಾಂತಾ ವಿಂದಂತ ಆಸತೇ ॥29॥
ಜಿತೇಂದ್ರಿಯರಾದ ಸನ್ಯಾಸಿಗಳು ಗೃಹಸ್ಥಾಶ್ರಮವನ್ನು ಪರಿತ್ಯಾಗ ಮಾಡಿ ಗೃಹಸ್ಥ ಜನರನ್ನೇ ಆಶ್ರಯಿಸುತ್ತಾರೆ. ಆ ಎಲ್ಲಾ

ಸನ್ನ್ಯಾಸಿಗಳಿಗೆ ಗೃಹಸ್ಥರೇ ಆಶ್ರಯದಾತೃ- ರಾಗುತ್ತಾರೆ. ಸನ್ನ್ಯಾಸಿಗಳ ಉಗಮಸ್ಥಾನ ಗೃಹಸ್ಥಾಶ್ರಮವೇ ಆಗಿರುತ್ತದೆ. ಆದ್ದರಿಂದ ಗೃಹಸ್ಥರೇ ಶ್ರೇಷ್ಠರಾಗಿದ್ದಾರೆ.
ತ್ಯಾಗಾನ್ನ ಭಿಕ್ಷುಕಂ ವಿದ್ಯಾನ್ನ ಮೌಢ್ಯಾನ್ನ ಚ ಯಾಚನಾತ್ |
ಋಜುಸ್ತು ಯೋಽರ್ಥಂತ್ಯಜತಿ ನಸುಖಂ ವಿದ್ಧಿ ಭಿಕ್ಷುಕಮ್ ॥30॥
ಎಲ್ಲವನ್ನು ಪರಿತ್ಯಾಗ ಮಾಡುವುದರಿಂದ ಅವನು ಸನ್ನ್ಯಾಸಿ ಎಂದು ಕರೆಸಿ- ಕೊಳ್ಳುವುದಿಲ್ಲ. ಅಥವಾ ತನ್ನ ಸನ್ನ್ಯಾಸಾಶ್ರಮದಲ್ಲಿ ತನಗಿರುವ ಮೋಹದಿಂದಲೂ ತಾನು ಸನ್ನ್ಯಾಸಿ ಎಂದು ಕರೆಸಿಕೊಳ್ಳುವುದಿಲ್ಲ. ಪ್ರಾಮಾಣಿಕವಾದ ಬುದ್ಧಿಯಿಂದ ಯಾರು ಎಲ್ಲಾ ಪ್ರಯೋಜನಗಳನ್ನು ಪರಿತ್ಯಾಗ ಮಾಡುತ್ತಾನೋ, ಅಂಥ ಭಿಕ್ಷುಕನೇ ನಿಜವಾದ ಸನ್ನ್ಯಾಸಿ ಎಂದು ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ತ್ಯಾಗಾನ್ನ ಭಿಕ್ಷುಕಂ ವಿಂದ್ಯಾದ್ ಇತ್ಯತ್ರ ತ್ಯಾಗಾದ್ ಭಾರ್ಯಾದಿಷು ಕೋಪೇನ ತ್ಯಾಗಾತ್ |
`ತ್ಯಾಗನ್ನಾ ಭಿಕ್ಷುಕಂ ವಿದ್ಯಾಂತ್' ಎಂಬಲ್ಲಿ `ತ್ಯಾಗಾತ್' ಭಾರ್ಯಾದಿಗಳನ್ನು ಕೋಪದಿಂದ ಪರಿತ್ಯಾಗ ಮಾಡುವವನು ಸನ್ನ್ಯಾಸಿ ಎಂದು ಕರೆಸಿಕೊಳ್ಳುವುದಿಲ್ಲ ಎಂದರ್ಥ.
ಅಸಕ್ತಃ ಸಕ್ತವದ್ ಗಚ್ಛನ್ ನಿಃಸಂಗೋ ಮುಕ್ತಬಂಧನಃ |
ಸಮಃ ಶತ್ರೌ ಚ ಮಿತ್ರೇ ಚ ಸ ವೈ ಮುಕ್ತೋ ಮಹೀಪತೇ ॥31॥
ಯಾವುದೇ ಪದಾರ್ಥದಲ್ಲಿ ಆಸಕ್ತಿ ಇಲ್ಲದಿದ್ದರೂ ಆಸಕ್ತನಿರುವಂತೆ ಲೋಕ- ವ್ಯವಹಾರಗಳನ್ನು ನಡೆಸುತ್ತಾನೋ, ಯಾವುದಕ್ಕೂ ಅಂಟಿಕೊಳ್ಳುವುದಿಲ್ಲವೋ, ಎಲ್ಲಾ ವಿಧವಾದ ಬಂಧನಗಳಿಂದ ಮುಕ್ತನಾಗಿರುತ್ತಾನೋ, ಶತ್ರು ಹಾಗೂ ಮಿತ್ರರನ್ನು ಸಮಾನ ಭಾವನೆಯಿಂದ ಕಾಣುತ್ತಾನೋ, ಅವನು ರಾಜನಾಗಿದ್ದರೂ ಕೂಡ ಸರ್ವದಾ ಮುಕ್ತನಾಗಿರುತ್ತಾನೆ. ಸನ್ನ್ಯಾಸಿಯಾಗಿರುತ್ತಾನೆ.
ಟಿಪ್ಪಣಿ - ಅಸಕ್ತಃ ಸಕ್ತವದ್ ಇತ್ಯತ್ರ ಅಸಕ್ತಃ ಮನಸಾ ಸಂಗರಹಿತಃ, ಸಕ್ತವದ್ ಬಹಿಃ ಸಕ್ತವದ್ ಗಚ್ಛನ್ |
`ಅಸಕ್ತಃ ಸಕ್ತವತ್' - ಅಸಕ್ತಃ = ಮನಸ್ಸಿನಿಂದ ಸಂಗವನ್ನು ಪರಿತ್ಯಾಗ ಮಾಡಿದವನು. ಸಕ್ತವತ್ = ಬಾಹ್ಯವಾಗಿ ಆಸಕ್ತಿಯಿದ್ದವನಂತೆ ವರ್ತಿಸುವವನು.
ಪರಿವ್ರಜಂತಿ ದಾನಾರ್ಥಂ ಮುಂಡಾಃ ಕಾಷಾಯವಾಸಸಃ |
ಸಿತಾ ಬಹುವಿಧೈಃ ಪಾಶೈಃ ಸಂಚಿನ್ವಂತೋ ವೃಥಾಮಿಷಮ್ ॥32॥
ಮುಂಡನ ಮಾಡಿಸಿಕೊಂಡು ಕೆಂಪು ಬಟ್ಟೆಯನ್ನು ಧಾರಣೆ ಮಾಡಿ, ಸನ್ನ್ಯಾಸ ಜೀವನವನ್ನು ಸ್ವೀಕಾರ ಮಾಡಿ, ಇನ್ನೊಬ್ಬರ ಬಳಿ ದಾನವನ್ನು ಬೇಡುವುದಕ್ಕಾಗಿ ಅಲೆದಾಡುತ್ತಿರುತ್ತಾರೆ. ಅವರ ಅಂತರಂಗದಲ್ಲಿ ಆಸೆಗಳೇ ತುಂಬಿರುತ್ತವೆ. ಅದಕ್ಕೆ ಆ ಆಸೆಗಳನ್ನು ಪೂರೈಸಿಕೊಳ್ಳಲು ಸುಖಸಾಮಗ್ರಿಗಳನ್ನೇ ನಿರಂತರ ಯೋಚನೆ ಮಾಡುತ್ತಾರೆ.
ವಿವರಣೆ - ಶಿಷ್ಯಸಂಪತ್ತು, ಮಠಸಂಪತ್ತು, ಧನಸಂಪತ್ತು, ಆಸ್ತಿಸಂಪತ್ತು ಇವುಗಳ ರಕ್ಷಣೆ ಮಾಡಿದರೆ ಮಾತ್ರ ಸನ್ನ್ಯಾಸಿ ಎಂಬ ಲೋಕವಾಡಿಕೆಯನ್ನು ಈ ಶ್ಲೋಕದಲ್ಲಿ ನಿರಾಕರಣೆ ಮಾಡಿದ್ದಾರೆ.
ಟಿಪ್ಪಣಿ - ಸಿತಾ ಬಹುವಿಧೈಃ ಪಾಶೈಃ ಸಂಚಿನ್ವಂತೋ ವೃಥಾಮಿಷಮ್ ಇತ್ಯತ್ರ ಸಿತಾಃ ಬದ್ಧಾಃ | ಆಮಿಷಂ ಸ್ವೋದರಮಾಂಸಂ ಸಂಚಿನ್ವಂತಃ ಪೋಷಯಂತಃ |
`ಸಿತಾಃ ಬಹುವಿಧೈಃ ಪಾಶೈಃ ಸಂಚಿನ್ವಂತೋ ವೃಥಾಮಿಷಮ್' - ಸಿತಾಃ = ಬದ್ಧ- ರಾದವರು, ಆಮಿಷಂ = ಅನೇಕ ಆಸೆಗಳನ್ನು, ಸಂಚಿನ್ವಂತಃ = ಪೋಷಿಸುವಂತವರಾಗಿ.
ತ್ರಯೀಂ ಚ ನಾಮ ವಾರ್ತಾಂ ಚ ತ್ಯಕ್ತ್ವಾ ಪುತ್ರಾನ್ ವ್ರಜಂತಿ ಯೇ|
ತ್ರಿವಿಷ್ಟಬ್ಧಂ ಚ ವಾಸಶ್ಚ ಪ್ರತಿಗೃಹ್ಣಂತ್ಯಬುದ್ಧಯಃ ॥33॥
ಯಾರು ಮೂರು ವೇದಗಳ ಅಧ್ಯಯನವನ್ನು, ವಾಣಿಜ್ಯಾದಿ ವೃತ್ತಿಗಳನ್ನು, ಮಕ್ಕಳನ್ನು ಪರಿತ್ಯಾಗ ಮಾಡಿ ಹೊರಡುತ್ತಾರೋ, ತಮ್ಮ ಹೆಸರನ್ನೂ ಕೂಡ ಬಿಡು- ತ್ತಾರೋ, ತ್ರಿದಂಡ ಕಾಷಾಯಗಳನ್ನು ಧರಿಸಿರುತ್ತಾರೋ, ಅವರು ನಾನಾವಿಧವಾದ ಆಸೆಗಳನ್ನು ಮನಸ್ಸಿನಲ್ಲಿ ಹಾಗೇ ತುಂಬಿಕೊಂಡಿರುತ್ತಾರೆ. ಬುದ್ಧಿಹೀನರಾಗಿ ಸನ್ನ್ಯಾಸಿ- ಜೀವನವನ್ನು ಇಚ್ಛಿಸಿರುತ್ತಾರೆ.
ಟಿಪ್ಪಣಿ - ತ್ರಯೀಂ ಚ ನಾಮ ವಾರ್ತಾಂ ಚ ಇತ್ಯತ್ರ ವಾರ್ತಾಂ ವೃತ್ತಿಂ ಜೀವನೋಪಾಯಮ್, ನಾಮ ಪೂರ್ವಂ ವಿದ್ಯಮಾನಂ ಗೋತ್ರನಾಮಾದಿಕಮ್ |
`ತ್ರಯೀಂ ಚ ನಾಮ ವಾರ್ತಾಂ ಚ ' ಎಂಬಲ್ಲಿ `ವಾರ್ತಾಂ' ಎಂಬ ಪದಕ್ಕೆ ವೃತ್ತಿ ಎಂದರ್ಥ. ಜೀವನೋಪಾಯ ಎಂದರ್ಥ. `ನಾಮ' = ಮೊದಲು ಇರುವ ಗೋತ್ರ ಮತ್ತು ಹೆಸರುಗಳನ್ನು.
ವಿವರಣೆ - ಮೂರು ವೇದಗಳ ಅಧ್ಯಯನವನ್ನೇ ಬಿಡುತ್ತಾರೆ. ವೇದಗಳಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಬಿಡುತ್ತಾರೆ, ಕೃಷಿ ಗೋರಕ್ಷಕ ವಾಣಿಜ್ಯಾದಿ ಲೌಕಿಕ ವೃತ್ತಿಗಳನ್ನು ಪರಿತ್ಯಾಗ ಮಾಡುತ್ತಾರೆ. ತಮ್ಮ ಹೆಸರು ಗೋತ್ರಗಳನ್ನೂ ಕೂಡ ಬಿಡುತ್ತಾರೆ. ಹೆಂಡತಿ ಮತ್ತು ಮಕ್ಕಳನ್ನೂ ಕೂಡ ಪರಿತ್ಯಾಗ ಮಾಡುತ್ತಾರೆ. ತ್ರಿದಂಡವನ್ನು ಹಿಡಿದು ಕಾಷಾಯವಸ್ತ್ರವನ್ನು ಧರಿಸಿ ಸನ್ನ್ಯಾಸಿಗಳೆಂದು ಹೇಳಿ- ಕೊಂಡು ತಿರುಗುತ್ತಾರೆ. ಇಂಥವರು ಬುದ್ಧಿಹೀನರೇ ಸರಿ. ಯಾವುದನ್ನು ತ್ಯಾಗ ಮಾಡಬಾರದೋ ಅದನ್ನು ತ್ಯಾಗ ಮಾಡಿದರೂ, ಪ್ರತಿಗ್ರಹವನ್ನು ಇವರು ಪರಿತ್ಯಾಗ ಮಾಡಿರುವುದೇ ಇಲ್ಲ. ಮೊದಲು ಪ್ರತಿಗ್ರಹವನ್ನು ಪರಿತ್ಯಾಗ ಮಾಡಿ ಅನಂತರ ಸನ್ನ್ಯಾಸಿಯಾಗಬೇಕು ಎಂಬುದೇ ಇದರ ಭಾವ.
ಅನಿಷ್ಕಷಾಯೇ ಕಾಷಾಯಮೀಹಾರ್ಥಮಿತಿ ವಿದ್ಧಿ ತಮ್ |
ಧರ್ಮಧ್ವಜಾನಾಂ ಮುಂಡಾನಾಂ ವೃತ್ತ್ಯರ್ಥಮಿತಿ ಮೇ ಮಿತಿಃ ॥34॥
ಹೃದಯದಲ್ಲಿ ರಾಗಾದಿಗಳನ್ನು ಪರಿತ್ಯಾಗ ಮಾಡದೇ ಬಾಹ್ಯವಾಗಿ ಕಾಷಾಯ- ವಸ್ತ್ರವನ್ನು ಧರಿಸುವುದು ಕೇವಲ ಸ್ವಾರ್ಥಸಾಧನೆಯ ಒಂದು ವೇಷವಷ್ಟೇ. ಧರ್ಮದ ಮುಖವಾಡವನ್ನು ಧರಿಸಿ ತಿರುಗುವ ಮುಂಡರಿಗೆ ಸನ್ನ್ಯಾಸಿಜೀವನವು ಒಂದು ವೃತ್ತಿಯೇ ಆಗಿದೆ. ಇದು ನನ್ನ ಅಭಿಪ್ರಾಯ.
ವಿವರಣೆ - ಸನ್ನ್ಯಾಸಧರ್ಮವನ್ನು ಇಲ್ಲಿ ಅರ್ಜುನನು ನಿಂದಿಸುತ್ತಿಲ್ಲ. ಸನ್ನ್ಯಾಸಿ ವೇಷದ ಸೋಗನ್ನು ಹಾಕಿ, ಮನಸ್ಸನ್ನು ಗೆಲ್ಲಲಾಗದೇ

ಧರ್ಮದ ಮುಖವಾಡವನ್ನು ಹಾಕಿಕೊಂಡವರನ್ನಷ್ಟೇ ಇಲ್ಲಿ ಅರ್ಜುನನು ನಿಂದಿಸುತ್ತಿದ್ದಾನೆ. ಹೊರಗೆ ಕಾಷಾಯ- ವಸ್ತ್ರವನ್ನು ಧಾರಣೆ ಮಾಡಬೇಕೆಂದರೆ ಹೃದಯದಲ್ಲಿ ಕಾಷಾಯವನ್ನು ಪರಿತ್ಯಾಗ ಮಾಡಿರಬೇಕು. ರಾಗ, ಕಾಮಕ್ರೋಧಾದಿಗಳನ್ನು ಗೆದ್ದಿರಬೇಕು. ಇಲ್ಲದಿದ್ದರೆ ಸ್ವಾರ್ಥಸಾಧನೆಗಾಗಿ ಕೀರ್ತಿಕಾಮುಕತನದಿಂದ ಸನ್ಯಾಸಜೀವನದ ವೇಷವಷ್ಟೇ ಇವನಿಗೆ ಬಂದ ಲಾಭ. ಧರ್ಮದ ಸೋಗನ್ನು ಹಾಕಿ, ತಾನು ನಿಜವಾದ ವಿರಕ್ತನೆಂದು ಹೇಳಿಕೊಳ್ಳುವ ಇವನು ಅಪ್ರಾಮಾಣಿಕ. ಗೋಮುಖವ್ಯಾಘ್ರ ಎಂಬುದು ಅರ್ಜುನನ ಅಭಿಪ್ರಾಯ.

ಕಾಷಾಯೈರಜಿನೈಶ್ಚೀರೈರ್ನಗ್ನಾನ್ ಮುಂಡಾನ್ ಜಟಾಧರಾನ್ |
ಬಿಭ್ರತ್ ಸಾಧೂನ್ ಮಹಾರಾಜ ಜಯ ಲೋಕಾನ್ ಜಿತೇಂದ್ರಿಯಃ ॥35॥

ಓ ಧರ್ಮರಾಜನೇ! ಯಾರು ಜೀವಿಕೆಗೋಸ್ಕರ ಕಾಷಾಯವಸ್ತ್ರವನ್ನು ಧರಿಸಿ- ದ್ದಾರೋ, ಕೃಷ್ಣಾಜಿನ, ಹರಿದ ಬಟ್ಟೆಗಳನ್ನು ಧರಿಸಿದ್ದಾರೋ, ನಗ್ನರಾಗಿ ಮುಂಡಿಗಳಾಗಿ ತಿರುಗುತ್ತಿದ್ದಾರೋ, ಜಟಾಧಾರಿಗಳಾಗಿದ್ದಾರೋ ಅಂಥ ಸನ್ಯಾಸಿಗಳನ್ನೂ ಕೂಡ ನೀನು ಜಯಿಸುವಿ. ಮೊದಲು ಜಿತೇಂದ್ರಿಯನಾಗಿ ನಿನ್ನ ಕರ್ತವ್ಯದಲ್ಲಿ ತೊಡಗು. ಆಗ ಆ ಎಲ್ಲಾ ವಿಧದ ಸನ್ಯಾಸಿಗಳಿಗೆ ಆಶ್ರಯದಾತನಾಗಿರುವಿ.

ವಿವರಣೆ - ಮೇಲೆ ಉಲ್ಲೇಖಿಸಿದಂತೆ ಕರ್ತವ್ಯಕರ್ಮಗಳನ್ನು ಪರಿತ್ಯಾಗ ಮಾಡಿ, ಅಂತರಂಗದಲ್ಲಿ ತ್ಯಾಗಬುದ್ಧಿಯಲ್ಲಿ ಸನ್ಯಾಸಿಜೀವನವನ್ನು ಸ್ವೀಕರಿಸುವುದು ವ್ಯರ್ಥ. ಆದ್ದರಿಂದ ನೀನು ನಿಜವಾದ ಕರ್ತವ್ಯಪರಿಪಾಲಕನಾಗು. ಎಲ್ಲಾ ವಿಧವಾದ ಜನರಿಗೆ ಆಶ್ರಯದಾತನಾಗು, ಆಗ ಆ ಸನ್ಯಾಸಿಗಳನ್ನೂ ಕೂಡ ನೀನು ಜಯಿಸುವಿ. ಅವರಿಗಿಂತಲೂ ಹೆಚ್ಚಿನ ಪುಣ್ಯವನ್ನು ಸಂಪಾದನೆ ಮಾಡುವಿ.  ನೀನು ಸನ್ಯಾಸವೃತ್ತಿಯನ್ನು ಸ್ವೀಕರಿಸಿದಾಗ ಏನು ಫಲವು ದೊರಕುತ್ತದೋ, ಅದಕ್ಕಿಂತ ಹೆಚ್ಚಿನ ಫಲವನ್ನೇ ಹೊಂದುವಿ. ಮತ್ತು ಕಾಷಾಯವಸ್ತ್ರವನ್ನು ಉಟ್ಟು, ಜಟಾಧಾರಿಗಳಾಗಿ ಅಥವಾ ಮುಂಡಿಗಳಾಗಿ ಸಂಚರಿಸುವ ಎಲ್ಲಾ ಸನ್ಯಾಸಿಗಳಿಗೂ ನೀನು ಆಶ್ರಯದಾತನಾಗು. ಅದರಿಂದ ನೀನು ಅವರಿಗಿಂತಲೂ ಶ್ರೇಷ್ಠನಾಗುವಿ. ಈಗಾಗಲೇ ಹಿಂದೆ ತಿಳಿಸಿದಂತೆ ದಾನವನ್ನು ಸ್ವೀಕರಿಸುವವನಿಗಿಂತ ದಾನವನ್ನು ಕೊಡುವವನೇ ಶ್ರೇಷ್ಠನಾಗಿರುತ್ತಾನೆ.  ಆದ್ದರಿಂದ ಅಂಥವರಿಗೆಲ್ಲಾ ಜೀವನೋಪಾ- ಯವನ್ನು ಕಲ್ಪಿಸಿದಾಗ ಅವರಿಗಿಂತಲೂ ನೀನು ಶ್ರೇಷ್ಠನಾಗುವಿ.

ಟಿಪ್ಪಣಿ - ಕಾಷಾಯೈರಜಿನೈಃ ಇತ್ಯತ್ರ ವೃತ್ತ್ಯರ್ಥಮ್ ಇತಿ ಪ್ರಾಚೀನಪದಮಾವರ್ತ್ಯ ವೃತ್ತ್ಯರ್ಥಂ ಸ್ವೋದರಪೂರಣಾರ್ಥಂ ಕಾಷಾಯೈರಜಿನೈಶ್ಚೀರೈಶ್ಚ ಸಂವೃತೋ ಭವತಿ | ತಥಾ ನಗ್ನಃ ಮುಂಡಃ ಜಟೀ ಚ ಭವತಿ | ಸಾಧೂನ್ ಸಜ್ಜನಾನ್ ಬಿಭ್ರದ್ ಧನ- ದಾನಾದಿನಾ ಪೋಷಯನ್ ಜಿತೇಂದ್ರಿಯೋ ಗೃಹಸ್ಥಃ ಲೋಕಾನ್ ಜಯೇತ್, ನತು ಪ್ರಾಗುಕ್ತೋ ಡಂಭಃ ಸನ್ಯಾಸೀತಿ ಭಾವಃ | `ಕಾಷಾಯೈರಜಿನೈಃ' ಎಂಬಲ್ಲಿ ವೃತ್ತ್ಯರ್ಥಂ ಎಂಬುದಾಗಿ ಹಿಂದೆ ಇರುವ ಪದವನ್ನು ಆವೃತ್ತಿ ಮಾಡಿಕೊಂಡು ತನ್ನ ಹೊಟ್ಟೆಯನ್ನು ತುಂಬಿಸುವುದಕ್ಕಾಗಿ, ಕಾಷಾಯವಸ್ತ್ರವನ್ನು, ಕೃಷ್ಣಾಜಿನವನ್ನು, ಹರಿದ ಬಟ್ಟೆಗಳನ್ನು ಧರಿಸಿರುತ್ತಾರೆ ಎಂಬರ್ಥವನ್ನು ತಿಳಿಯಬೇಕು. ಇದರಂತೆ ನಗ್ನನಾಗುತ್ತಾನೆ, ಮುಂಡಿಯಾಗಿರುತ್ತಾನೆ, ಜಟಾಧಾರಿಯಾಗಿರುತ್ತಾನೆ. ಇಂಥ `ಸಾಧೂನ್' = ಸಜ್ಜನರನ್ನು, `ಬಿಭ್ರತ್' = ಆಹಾರ ಮೊದಲಾದವುಗಳನ್ನು ಕೊಡುವ ಮೂಲಕ ಪೋಷಣೆ ಮಾಡುತ್ತಾ,  `ಜಿತೇಂದ್ರಿಯಃ' = ಇಂದ್ರಿಯವನ್ನು ಗೆದ್ದ ಗೃಹಸ್ಥನಾಗಿ ಲೋಕಗಳನ್ನು  ಜಯಿಸು, ಹೊರತು ಹಿಂದೆ ಹೇಳಿದಂತೆ ಡಾಂಭಿಕನಾದ ಸನ್ಯಾಸಿ- ಯಾಗಬೇಡ ಎಂದಭಿಪ್ರಾಯ.

ಅಗ್ನ್ಯಾಧೇಯಾನಿ ಗುರ್ವರ್ಥಂ ಕ್ರತೂನಪಿ ಸುದಕ್ಷಿಣಾನ್ |
ದದಾತ್ಯಹರಹಃ ಪೂರ್ವಂ ಕೋ ನು ಧರ್ಮರತಸ್ತತಃ ॥36॥

ಪ್ರತಿನಿತ್ಯ ಮಾಡುವ ಅಗ್ನ್ಯಾದಾನಾದಿ ಕಾರ್ಯಗಳಿಗೆ ಆವಶ್ಯಕವಾದ ಸಂಪತ್ತನ್ನು, ಪಶುಗಳನ್ನು, ದಕ್ಷಿಣೆಯನ್ನು ಒದಗಿಸಿಕೊಡುತ್ತಾನೋ, ಮತ್ತು ಉತ್ತಮ ದಕ್ಷಿಣೆಗಳನ್ನು ಕೊಡುವ ಮೂಲಕ ಯಜ್ಞಗಳನ್ನೂ ಕೂಡ ಆಚರಿಸುತ್ತಾನೋ, ಅವನಿಗಿಂತಲೂ ಶ್ರೇಷ್ಠರಾದ ಮತ್ತೊಬ್ಬ ಧರ್ಮಪರಾಯಣರು ಜಗತ್ತಿನಲ್ಲಿ ಯಾರು ತಾನೇ ಇರಲು ಸಾಧ್ಯ?

ವಿವರಣೆ - ಮತ್ತೊಬ್ಬರು ಮಾಡುವ ಯಜ್ಞಯಾಗಾದಿಗಳಿಗೆ ತಾವು ಅನುಕೂಲ ಮಾಡಬೇಕು. ಸ್ವತಃ ತಾನೂ ಕೂಡ ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಡುವ ಮೂಲಕ ಯಜ್ಞಯಾಗವನ್ನು ಮಾಡಬೇಕು. ಇವನೇ ನಿಜವಾದ ಧರ್ಮಿಷ್ಠ. ಇವನನ್ನು ಮೀರಿಸಿ ವ್ಯಕ್ತಿ ಮತ್ತೊಬ್ಬನಿರಲು ಸಾಧ್ಯವಿಲ್ಲ ಎಂದು ಭಾವ.

ತತ್ತ್ವಜ್ಞೋ ಜನಕೋ ರಾಜಾ ಲೋಕೇಽಸ್ಮಿನ್ನಿತಿ ಗೀಯತೇ |
ಸೋಽಪ್ಯಾಸೀನ್ಮೋಹಸಂಪನ್ನೋ ಮಾ ಮೋಹವಶಮನ್ವಗಾಃ ॥37॥

ಅಣ್ಣನೇ! ಲೋಕದಲ್ಲಿ ರಾಜನಾದ ಜನಕನು ಶ್ರೇಷ್ಠವಾದ ತತ್ವಜ್ಞಾನಿಯಾಗಿ- ದ್ದನೆಂದು ಎಲ್ಲರೂ ಹೇಳುತ್ತಾರೆ. ಅವನಿಗೂ ಕೂಡ ಒಮ್ಮೆ ಹೀಗೆ ಸನ್ಯಾಸದ ಮೇಲೆ ಮೋಹವು ಉಂಟಾಗಿತ್ತು. ಅವನಂತೆ ನೀನು ಮೋಹಕ್ಕೆ ವಶನಾಗಬೇಡ.

ಏವಂ ಧರ್ಮಮನುಕ್ರಾಂತಾಃ ಸದಾ ದಾನತಪಃಪರಾಃ |
ಆನೃಶಂಸ್ಯಗುಣೋಪೇತಾಃ ಕಾಮಕ್ರೋಧವಿವರ್ಜಿತಾಃ ॥38॥
ಪ್ರಜಾನಾಂ ಪಾಲನೇ ಯುಕ್ತಾ ದಾನಮುತ್ತಮಮಾಸ್ಥಿತಾಃ |
ಇಷ್ಟಾಂಲ್ಲೋಕಾನವಾಪ್ಸ್ಯಾಮೋ ಗುರುವೃದ್ಧೋಪಚಾಯಿನಃ ॥39॥

ನಾವು ಯಾವಾಗಲೂ ಧರ್ಮಗಳನ್ನೇ ಆಚರಿಸೋಣ. ಯಥೇಚ್ಛವಾಗಿ ದಾನವನ್ನು ಮಾಡೋಣ. ತಪಸ್ಸನ್ನು ಆಚರಿಸೋಣ. ಹಿಂಸೆಯನ್ನು ಮಾಡದೇ ಸದ್ಗುಣಶಾಲಿಗಳಾಗಿ ಜೀವಿಸೋಣ. ಕಾಮಕ್ರೋಧಾದಿಗಳನ್ನು ಪರಿತ್ಯಾಗ ಮಾಡಿ, ಮನೋನಿಗ್ರಹದಿಂದ ಪ್ರಜೆಗಳನ್ನು ರಕ್ಷಿಸೋಣ. ಹಿರಿಯರನ್ನು, ಗುರುಗಳನ್ನು ಪೂಜಿಸಿ, ಯಜ್ಞಯಾಗಾದಿಗಳನ್ನು ನಡೆಸಿ ಜೀವನವನ್ನು ಸಾರ್ಥಕ ಮಾಡಿ- ಕೊಳ್ಳೋಣ. ಇದರಿಂದಲೇ ನಾವು ಪುಣ್ಯಲೋಕಗಳನ್ನು ಪಡೆದುಕೊಳ್ಳುತ್ತೇವೆ.

ದೇವತಾತಿಥಿಭೂತಾನಾಂ ನಿರ್ವಪಂತೋ ಯಥಾವಿಧಿ |
ಸ್ಥಾನಮಿಷ್ಟಮವಾಪ್ಸ್ಯಾಮೋ ಬ್ರಹ್ಮಣ್ಯಾಃ ಸತ್ಯವಾದಿನಃ ॥40॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅರ್ಜುನವಾಕ್ಯೇ

ಅಷ್ಟಾದಶೋಽಧ್ಯಾಯಃ ॥18॥
ದೇವತೆಗಳಿಗೆ ಮತ್ತು ಅತಿಥಿಗಳಿಗೆ ಪ್ರಾಣಿಗಳಿಗೆ ಯಥಾಯೋಗ್ಯವಾಗಿ, ಅವರವರ ಭಾಗಗಳನ್ನು ಆಯಾ ಕಾಲಗಳಲ್ಲಿ ಸಮರ್ಪಿಸಿ ತೃಪ್ತಿಯನ್ನು ಪಡಿಸೋಣ. ಇದರಿಂದ ಇಷ್ಟವಾದ ಪುಣ್ಯಲೋಕಗಳನ್ನು ಪಡೆದು ಧನ್ಯರಾಗೋಣ. ಇದುವೇ ನಮ್ಮ ಜೀವನ ಋಜುವಾದ ಮಾರ್ಗ. ಇದರಿಂದಲೇ ಪುಣ್ಯಲೋಕಗಳು ನಮಗೆ ಖಂಡಿತವಾಗಿಯೂ ಲಭಿಸುತ್ತವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 18ನೆಯ ಅಧ್ಯಾಯವು ಮುಗಿಯಿತು.
*****
19. ಹತ್ತೊಂಬತ್ತನೆಯ ಅಧ್ಯಾಯ
ಅರ್ಜುನನ ಬಳಿ ಯುಧಿಷ್ಠಿರ ತನ್ನ ನಿಲುವನ್ನು ಸಮರ್ಥನೆ ಮಾಡಿಕೊಂಡನು. ಸನ್ಯಾಸವೇ ಉತ್ತಮ ಧರ್ಮವೆಂದು ಪ್ರತಿಪಾದನೆ ಮಾಡಿದನು.
ಯುಧಿಷ್ಠಿರಃ
ವೇದಾಹಂ ತಾತ ಶಾಸ್ತ್ರಾಣಿ ಅಪರಾಣಿ ಪರಾಣಿ ಚ |
ಉಭಯಂ ವೇದವಚನಂ ಕುರು ಕರ್ಮ ತ್ಯಜೇತಿ ಚ ॥1॥
ಯುಧಿಷ್ಠಿರ - ಓ ತಮ್ಮನೇ! ಧರ್ಮವನ್ನು ತಿಳಿಸುವ ಎಲ್ಲ ಶಾಸ್ತ್ರಗಳನ್ನು ನಾನು ಚೆನ್ನಾಗಿ ಅರಿತಿರುವೆನು. ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಾಸ್ತ್ರಜ್ಞಾನ ನನಗಿದೆ. ಕರ್ಮವನ್ನು ಪ್ರತಿಪಾದನೆ ಮಾಡುವ ಶಾಸ್ತ್ರಜ್ಞಾನವೂ ಕೂಡ ನನಗಿದೆ. ಮತ್ತು ಇವೆರಡಕ್ಕೆ ವಿರುದ್ಧವಾದ ಕರ್ಮಗಳನ್ನು ಪರಿತ್ಯಾಗ ಮಾಡಬೇಕೆಂದು ಹೇಳುವ ವೇದವಚನಗಳನ್ನೂ ಕೂಡ ನಾನು ಅರಿತಿರುವೆನು.
ವಿವರಣೆ - ಶಾಸ್ತ್ರಗಳು ಪರ, ಅಪರ ಎಂಬುದಾಗಿ ಎರಡು ವಿಧವಾಗಿದೆ. ಪರತತ್ವವೆನಿಸಿದ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಾಸ್ತ್ರಗಳು ಪರಶಾಸ್ತ್ರ- ಗಳು ಎಂದು ಕರೆಸಿಕೊಳ್ಳುತ್ತವೆ. ಉಳಿದ ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವ ಶಾಸ್ತ್ರಗಳು ಅಪರಶಾಸ್ತ್ರಗಳು ಎಂದು ಕರೆಸಿಕೊಳ್ಳುತ್ತವೆ. ಈ ಎಲ್ಲಾ ಶಾಸ್ತ್ರಗಳನ್ನೂ ಕೂಡ ನಾನು ಅರಿತಿದ್ದೇನೆ. ಮತ್ತು ವೇದದಲ್ಲಿ ಕರ್ಮವನ್ನು ಮಾಡು ಎಂದು ಹೇಳುವ ವಾಕ್ಯಗಳೂ ಇವೆ. ಕರ್ಮವನ್ನು ಪರಿತ್ಯಾಗ ಮಾಡು ಎಂಬುದಾಗಿ ಹೇಳುವ ವಾಕ್ಯಗಳೂ ಕೂಡ ಇವೆ. ಇವೆರಡಕ್ಕೆ ಪರಸ್ಪರವಾಗಿ ವಿರೋಧವು ಕಾಣಿಸುತ್ತದೆ. ಈ ಎಲ್ಲಾ ಬಗೆಯ ಶಾಸ್ತ್ರಬಗೆಯ ವಾಕ್ಯಗಳನ್ನು ನಾನು ಯುಕ್ತಿ- ಪೂರ್ವಕವಾಗಿ ವಿಚಾರ ಮಾಡಿ ತಿಳಿದುಕೊಂಡಿದ್ದೇನೆ. ವಿರುದ್ಧವಾದ ಎರಡು ವಾಕ್ಯಗಳಲ್ಲಿ ಯಾವುದು ಸತ್ಯ, ಯಾವುದು ಸಿದ್ಧಾಂತ ಎಂಬುದನ್ನು ಯಥಾವತ್ತಾಗಿ ತಿಳಿದುಕೊಂಡಿದ್ದೇನೆ.
ಆಕುಲಾನಿ ಚ ಶಾಸ್ತ್ರಾಣಿ ಹೇತುಭಿಶ್ಚಿಂತಿತಾನಿ ಚ |
ನಿಶ್ಚಯಶ್ಚೈವ ಯೋ ಮಂತ್ರೇ ವೇದಾಹಂ ತಂ ಯಥಾವಿಧಿ ॥2॥
ಶಾಸ್ತ್ರಗಳು ಮೇಲ್ನೋಟದಲ್ಲಿ ಪರಸ್ಪರ ವಿರೋಧವಿರುವಂತೆ ಕಾಣಿಸುತ್ತವೆ. ಅನೇಕ ಕಾರಣಗಳನ್ನು ಹುಡುಕಿ ವಿಚಾರ ಮಾಡಿದರೂ ಕೂಡ ಆ ವಾಕ್ಯಗಳು ಪರಸ್ಪರ ವಿರುದ್ಧವಾದಂತೆಯೇ ತೋರುತ್ತದೆ. ಆದರೆ ನಾನು ಅವುಗಳನ್ನೆಲ್ಲಾ ಪುನಃ ಪುನಃ ವಿಚಾರ ಮಾಡಿ, ಅವುಗಳ ಮುಖ್ಯಸಿದ್ಧಾಂತ ಏನು ಎಂಬುದನ್ನು ಯಥಾ- ವತ್ತಾಗಿ ತಿಳಿದುಕೊಂಡಿದ್ದೇನೆ.
ತ್ವಂ ತು ಕೇವಲಮಸ್ತ್ರಜ್ಞೋ ವೀರವ್ರತಸಮನ್ವಿತಃ |
ಶಾಸ್ತ್ರಾರ್ಥಂ ತತ್ತ್ವತೋ ಗಂತುಂ ನ ಸಮರ್ಥಃ ಕಥಂಚನ ॥3॥
ಆದರೆ ನೀನು ಅಸ್ತ್ರವಿದ್ಯೆಯನ್ನಷ್ಟೇ ಚೆನ್ನಾಗಿ ಅರಿತಿರುವಿ. ವೀರವ್ರತವನ್ನು ಆಚರಿಸುತ್ತಿರುವಿ. ಶಾಸ್ತ್ರಗಳ ಮರ್ಮವನ್ನು ಯಥಾವತ್ತಾಗಿ ತಿಳಿದುಕೊಳ್ಳಲು ನೀನು ಸಮರ್ಥನಲ್ಲ. ತತ್ವನಿರ್ಣಯವನ್ನೂ ಕೂಡ ಮಾಡಲು ನಿನ್ನಿಂದ ಸಾಧ್ಯವಿಲ್ಲ.
ಶಾಸ್ತ್ರಾರ್ಥಸೂಕ್ಷ್ಮದರ್ಶೀ ಯೋ ಧರ್ಮನಿಶ್ಚಯಕೋವಿದಃ |
ತೇನಾಪ್ಯೇವಂ ನ ವಾಚ್ಯೋಽಹಂ ಯದಿ ಧರ್ಮಂ ಪ್ರಪಶ್ಯಸಿ ॥4॥
ಯಾರು ಶಾಸ್ತ್ರಾಸ್ತ್ರಗಳ ಸೂಕ್ಷ್ಮವಿಚಾರಗಳನ್ನು ತಿಳಿದಿರುತ್ತಾರೋ, ಧರ್ಮವನ್ನು ನಿಶ್ಚಯ ಮಾಡುವುದರಲ್ಲಿ ಪ್ರವೀಣರಾಗಿರುತ್ತಾರೋ, ಅಂಥವರು ಯಾರೇ ಆಗಿದ್ದರೂ ನೀನು ಹೇಳಿದ ಮಾತುಗಳನ್ನು ಹೇಳಲಾರರು.
ಭ್ರಾತೃಸೌಹೃದಮಾಸ್ಥಾಯ ಯದುಕ್ತಂ ವಚನಂ ತ್ವಯಾ |
ನ್ಯಾಯ್ಯಂ ಯುಕ್ತಂ ಚ ಕೌಂತೇಯ ಪ್ರೀತೋಽಹಂ ತೇನ ತೇಽರ್ಜುನ ॥5॥
ಅರ್ಜುನನೇ ! ನೀನು ನನ್ನ ಮೇಲಿರುವ ಪ್ರೀತಿಯಿಂದ ನಿನ್ನ ಅಭಿಪ್ರಾಯವನ್ನು ತಿಳಿಸಿರುವಿ. ನ್ಯಾಯಸಮ್ಮತವಾಗಿ ನಿನಗೆ ಅನಿಸಿದ ಮಾತುಗಳನ್ನು ಆಡಿರುವಿ. ಇದ- ರಿಂದ ನನಗೆ ಸಂತೋಷವಾಗಿದೆ.
ಯುದ್ಧಧರ್ಮೇಷು ಸರ್ವೇಷು ಕ್ರಿಯಾಣಾಂ ನೈಪುಣೇಷು ಚ |
ನ ತ್ವಯಾ ಸದೃಶಃ ಕಶ್ಚಿತ್ ತ್ರಿಷು ಲೋಕೇಷು ವಿದ್ಯತೇ ॥6॥
ಧರ್ಮಂ ಸೂಕ್ಷ್ಮತರಂ ವಾಕ್ಯಂ ತತ್ರ ದುಷ್ಪ್ರತರಂ ತ್ವಯಾ |
ಧನಂಜಯ ನ ಮೇ ಬುದ್ಧಿಮಭಿಶಂಕಿತುಮರ್ಹಸಿ ॥7॥
ನಮ್ಮೆಲ್ಲರಿಗೂ ಒಡೆಯನಾದ ಬ್ರಹ್ಮನೆನಿಸಿದ ವಾಸುದೇವನಿಗೆ ಸಮಾನನಾದವನು ಇಲ್ಲಿಯ ತನಕ ಹುಟ್ಟಿರುವುದಿಲ್ಲ. ಈಗಲೂ ಇಲ್ಲ. ಮುಂದೆ ಹುಟ್ಟುವ ಸಾಧ್ಯತೆ- ಯೂ ಇಲ್ಲ. ಅದರಂತೆ ಎಲ್ಲಾ ವಿಧದ ಯೋಧರಲ್ಲಿ ನೀನೇ ಶ್ರೇಷ್ಠನಾಗಿರುವಿ. ನಿನಗೆ ಸರಿಸಾಟಿಯಾದ ಮತ್ತೊಬ್ಬ ವೀರ ಇದುವರೆಗೂ ಹುಟ್ಟಿಲ್ಲ. ಮುಂದೆ ಹುಟ್ಟುವ ಸಾಧ್ಯತೆಯೂ ಇಲ್ಲ.
ಬಲಮಿಂದ್ರೇ ಚ ವಾಯೌ ಚ ಬಲಂ ಯಚ್ಚ ಜನಾರ್ದನೇ |
ತದ್ ಬಲಂ ಭೀಮಸೇನೇ ಚ ತ್ವಯಿ ಚಾರ್ಜುನ ವಿದ್ಯತೇ ॥8॥
ಇಂದ್ರ, ವಾಯು, ಜನಾರ್ದನ ಇವರಲ್ಲಿ ಎಂಥ ಬಲವಿದೆಯೋ, ಅಂಥದ್ದೇ ಬಲ ನಿನ್ನಲ್ಲಿ. ಹಾಗೂ ಭೀಮಸೇನನಲ್ಲಿ ನೆಲೆಗೊಂಡಿದೆ.
ತ್ವತ್ಸಮಶ್ಚಿತ್ರಯೋಧೀ ಚ ದೂರಪಾತೀ ಚ ಪಾಂಡವ |

ದಿವ್ಯಾಸ್ತ್ರೇಣ ಚ ಸಂಪನ್ನ ಕೋ ವಾನ್ಯಸ್ತ್ವತ್ಸಮೋ ನರಃ ॥9॥
ವಿಚಿತ್ರವಾದ ಯುದ್ಧದಲ್ಲಿ ದೂರದಿಂದ ಪಡೆಯುವುದರಲ್ಲಿ ದಿವ್ಯಾಸ್ತ್ರಸಂಪತ್ತಿ- ನಲ್ಲಿ ನಿನಗೆ ಸರಿಸಾಟಿಯಾದ ಮತ್ತೊಬ್ಬ ವೀರನಿರಲು ಸಾಧ್ಯವಿಲ್ಲ.
ಯುದ್ಧಧರ್ಮೇಷು ಸರ್ವೇಷು ಕ್ರಿಯಾಣಾಂ ನೈಪುಣೇಷು ಚ |
ನ ತ್ವಯಾ ಸದೃಶಃ ಕಶ್ಚಿತ್ ತ್ರಿಷು ಲೋಕೇಷು ವಿದ್ಯತೇ ॥10॥
ಅನೇಕ ಬಗೆಯ ಯುದ್ಧದ ಧರ್ಮಗಳಲ್ಲಿ ಮತ್ತು ಸಂಗ್ರಾಮಕೌಶಲಗಳಲ್ಲಿ ನಿನಗೆ ಸರಿಸಾಟಿಯಾದವನೇ ಮೂರು ಲೋಕಗಳಲ್ಲಿ ಯಾರೂ ಇರುವುದಿಲ್ಲ.
ಧರ್ಮಂ ಸೂಕ್ಷ್ಮತರಂ ವಾಚ್ಯಂ ತತ್ರ ದುಷ್ಪ್ರತರಂ ತ್ವಯಾ |
ಧನಂಜಯ ನ ಮೇ ಬುದ್ಧಿಮಭಿಶಂಕಿತುಮರ್ಹಸಿ ॥11॥
ಧರ್ಮವು ಅತ್ಯಂತಸೂಕ್ಷ್ಮವಾಗಿದೆ. ಅದರಲ್ಲಿ ನೀನು ಪ್ರಾವೀಣ್ಯವನ್ನು ಸಾಧಿ- ಸಲು ಸಾಧ್ಯವಿಲ್ಲ. ಅಂಥ ಧರ್ಮದ ವಿಷಯದಲ್ಲಿ ನನ್ನ ಬುದ್ಧಿಗೆ ನಿರ್ಧಾರವಾಗಿ ತೋರಿದ ವಿಷಯದಲ್ಲಿ ನೀನು ಸಂದೇಹಪಡುವುದು ಯುಕ್ತವಲ್ಲ.
ಟಿಪ್ಪಣಿ - ತಚ್ಚ ದುಷ್ಪ್ರತರಂ ತ್ವಯಾ ಇತ್ಯತ್ರ ಪ್ರಕರ್ಷೇಣ ತರ್ತುಂ ಯೋಗ್ಯಂ ಪ್ರತರಂ, ಪ್ರತರಂ ನ ಭವತೀತಿ ದುಷ್ಪ್ರತರಮ್ | ತತ್ತ್ವಂ ನ ವೃದ್ಧಾ ಇತ್ಯತ್ರ ತತ್ತ್ವಂ ತತ್ತ್ವತಃ | ತದ್ವತ್ತ್ವಂ ಯೋಧಮುಖ್ಯೇಷು ಇತ್ಯತ್ರ ತ್ವಂ ಯೋಧಮುಖ್ಯೇಷು ತದ್ವತ್ ಮಹೇಶ್ವರಾದಿವತ್ | ತ್ವಯಿ ಪರಮಂ ಸತ್ತ್ವಮಿಷ್ಯತೇ |
`ತದ್ವತ್ತ್ವಂ ಯೋಧಮುಖ್ಯೇಷು' ಎಂಬಲ್ಲಿ ಮಹೇಶ್ವರಾದಿಗಳಲ್ಲಿ ವಿಶೇಷಶಕ್ತಿ ಇರುವಂತೆ ನಿನ್ನಲ್ಲಿ ಅಂಥ ಶಕ್ತಿ ಇದೆ ಎಂದಭಿಪ್ರಾಯ.
ಟಿಪ್ಪಣಿ - ತಚ್ಚ ದುಷ್ಪ್ರತರಂ ತ್ವಯಾ ಇತ್ಯತ್ರ ಪ್ರಕರ್ಷೇಣ ತರ್ತುಂ ಯೋಗ್ಯಂ ಪ್ರತರಂ, ಪ್ರತರಂ ನ ಭವತೀತಿ ದುಷ್ಪ್ರತರಮ್ |
`ತತ್ರ ದುಷ್ಪ್ರತರಂ ತ್ವಯಾ' - ಎಂಬಲ್ಲಿ ಪ್ರಕರ್ಷದಿಂದ ದಾಟಲು ಸಾಧ್ಯವಾದದ್ದು ಯಾವುದೋ, ಅದು `ಪ್ರತರ' ಎಂದು ಕರೆಸಿಕೊಳ್ಳುತ್ತದೆ. `ದುಷ್ಪ್ರತರ' ಎಂದರೆ ದಾಟಲು ಸಾಧ್ಯವಾಗದೇ ಇರುವುದು ಎಂದರ್ಥ.
ಯುದ್ಧಶಾಸ್ತ್ರವಿದೇವ ತ್ವಂ ನ ವೃದ್ಧಾಃ ಸೇವಿತಾಸ್ತ್ವಯಾ |
ಸಂಕ್ಷಿಪ್ತವಿಸ್ತರವಿದಾಂ ನ ತೇಷಾಂ ವೇತ್ಸಿ ನಿಶ್ಚಯಮ್ ॥12॥
ಓ ಅರ್ಜುನನೇ! ನೀನು ಕೇವಲ ಯುದ್ಧಶಾಸ್ತ್ರವನ್ನೇ ತಿಳಿದಿರುವಿ. ಎಂದೂ ಸಹ ಜ್ಞಾನವೃದ್ಧರನ್ನು ಸೇವೆ ಮಾಡಿರುವುದಿಲ್ಲ. ಆದ್ದರಿಂದ ಸಂಕ್ಷೇಪವಾಗಿ ಅಥವಾ ವಿಸ್ತಾರವಾಗಿ ಧರ್ಮದ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ತಿಳಿದುಕೊಂಡಿರುವ ನಿರ್ಧಾರಗಳನ್ನು ನಿನ್ನಿಂದ ತಿಳಿಯಲು ಸಾಧ್ಯವಿಲ್ಲ.
ಟಿಪ್ಪಣಿ - ತತ್ತ್ವಂ ನ ವೃದ್ಧಾ ಇತ್ಯತ್ರ ತತ್ತ್ವಂ ತತ್ತ್ವತಃ |
`ತ್ವಂ ನ ವೃದ್ಧಾಃ' ಎಂಬಲ್ಲಿ ತತ್ವಂ ಎಂಬ ಪದಕ್ಕೆ ತತ್ವತಃ ಎಂದರ್ಥ.
ತಪಸ್ತ್ಯಾಗೋಽವಿಧಿರಿತಿ ನಿಶ್ಚಯಸ್ತ್ವೇಷ ಧೀಮತಾಮ್ |
ಪರಂ ಪರಂ ಜ್ಯಾಯ ಏಷಾಂ ಯೇಷಾಂ ನೈಶ್ರೇಯಸೀ ಮತಿಃ ॥13॥
ಯಾರಿಗೆ ಮೋಕ್ಷಾಪೇಕ್ಷಿತವಾದ ನಿಶ್ಚಯ ಜ್ಞಾನವು ಇರುತ್ತದೋ, ಅಂಥಹ ಸಾಧಕರ ನಿರ್ಣಯವು ಹೀಗಿದೆ - ತಪಸ್ಸು, ತ್ಯಾಗ ಮತ್ತು ಶಾಸೊತ್ರೋಕ್ತವಿಧಿ- ವಿಧಾನಗಳಿಂದ ಯಾವ ಬ್ರಹ್ಮಜ್ಞಾನವಿದೆಯೋ, ಆ ಮೂರರಲ್ಲಿ ತಪಸ್ಸಿಗೆ ತ್ಯಾಗವು, ತ್ಯಾಗಕ್ಕಿಂತಲೂ ವಿಧಿಯು ಬಲಿಷ್ಠವಾಗಿದೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಇದೇ ಮೋಕ್ಷಕ್ಕೆ ಸಾಧಕವಾಗಿದೆ.
ಯಸ್ತ್ವೇತನ್ಮನ್ಯಸೇ ಪಾರ್ಥ ನ ಜ್ಯಾಯೋಽಸ್ತಿ ಧನಾದಿತಿ |
ತತ್ರ ತೇ ವರ್ತಯಿಷ್ಯಾಮಿ ಯಥಾ ನೈತತ್ ಪ್ರಧಾನತಃ ॥14॥
ಆದರೆ ನೀನು ಧನವೇ ಶ್ರೇಷ್ಠವೆಂದು ಹೇಳುತ್ತಿರುವಿ. ಆದರೆ ಆ ಧನವು ಪ್ರಧಾನವಲ್ಲ.
ತಪಃಸ್ವಾಧ್ಯಾಯಶೀಲಾ ಹಿ ದೃಶ್ಯಂತೇ ಧಾರ್ಮಿಕಾ ಜನಾಃ |
ಋಷಯಸ್ತಪಸಾ ಯುಕ್ತಾ ಯೇಷಾಂ ಲೋಕಾಃ ಸನಾತನಾಃ ॥15॥
ಲೋಕದಲ್ಲಿ ತಪಸ್ಸು, ಸ್ವಾಧ್ಯಾಯ ಇವುಗಳನ್ನು ನಿರಂತರ ಆಚರಿಸುತ್ತಾ ಧಾರ್ಮಿಕರಾಗಿರುವ ಜನರು ಅನೇಕರಿದ್ದಾರೆ. ಋಷಿಗಳೂ ಕೂಡ ತಪಸ್ಸಿನಲ್ಲೇ ಆಸಕ್ತರಾಗಿರುತ್ತಾರೆ. ಇವರೆಲ್ಲರಿಗೂ ಸನಾತನವಾದ ಪುಣ್ಯಲೋಕಗಳು ಪ್ರಾಪ್ತ- ವಾಗುತ್ತವೆ.
ಅಜಾತಶತ್ರವೋ ಧೀರಾಸ್ತಥಾನ್ಯೇ ವನವಾಸಿನಃ |
ಅರಣ್ಯೇ ಬಹವಶ್ಚೈವ ಸ್ವಾಧ್ಯಾಯೇನ ದಿವಂ ಗತಾಃ ॥16॥
ಕೆಲವು ಧೀರರು ಅಜಾತಶತ್ರುಗಳಾಗಿರುತ್ತಾರೆ. ಇನ್ನೂ ಕೆಲವು ಅರಣ್ಯದಲ್ಲೇ ವಾಸ ಮಾಡುತ್ತಾರೆ. ನಿರಂತರ ಸ್ವಾಧ್ಯಾಯದಲ್ಲೇ ನಿರತರಾಗಿ ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತಾರೆ. ಮರಣವನ್ನು ಹೊಂದಿದ ಮೇಲೆ ಸ್ವರ್ಗಕ್ಕೆ ತೆರಳುತ್ತಾರೆ.
ಉತ್ತರೇಣ ತು ಪಂಥಾನಮಾರ್ಯಾ ವಿಷಯನಿಗ್ರಹಾತ್ |
ಅಬುದ್ಧಿಜಂ ತಮಸ್ತ್ಯಕತ್ವ ಲೋಕಾಂಸ್ತ್ಯಾಗವತಾಂ ಗತಾಃ ॥17॥
ಅನೇಕ ಆರ್ಯಪುರುಷರು ಇಂದ್ರಿಯಗಳನ್ನು ಗೆದ್ದಿದ್ದಾರೆ. ಅವುಗಳಿಗೆ ಸಂಬಂಧ- ಪಟ್ಟ ವಿಷಯಗಳಿಂದ ದೂರ ಸರಿದಿದ್ದಾರೆ. ತಮ್ಮ ಅವಿವೇಕಬುದ್ಧಿಗಳಿಂದ ಹುಟ್ಟಿದ ಅಜ್ಞಾನವನ್ನು ಪರಿತ್ಯಾಗ ಮಾಡಿದ್ದಾರೆ. ದೇವಯಾನದ ಮೂಲಕ ತ್ಯಾಗಿಗಳಷ್ಟೇ ಹೊಂದಲ್ಪಡುವ ಪುಣ್ಯಲೋಕಗಳನ್ನು ಪಡೆದಿದ್ದಾರೆ. ಇವರದ್ದು ಉತ್ತರಾಯಣ ಮಾರ್ಗ.
ದಕ್ಷಿಣೇನ ತು ಪಂಥಾನಂ ಯಂ ಭಾಸ್ವಂತಂ ಪ್ರಚಕ್ಷತೇ |
ಏತೇ ಕ್ರಿಯಾವತಾಂ ಲೋಕಾ ಯೇ ಶ್ಮಶಾನಾನಿ ಭೇಜಿರೇ ॥18॥
ಸಕಾಮಕರ್ಮಿಗಳಾದ ಗೃಹಸ್ಥರು, ದಕ್ಷಿಣಾಯನ ಮಾರ್ಗವಾಗಿದೆ. ಪಿತೃ- ಯಾನವೆಂಬ ದಕ್ಷಿಣಮಾರ್ಗದಿಂದ ಚಂದ್ರಲೋಕವನ್ನು ಹೊಂದುತ್ತಾರೆ ಕರ್ಮ- ಗಳಲ್ಲೇ ನಿರತರಾಗಿರುತ್ತಾರೆ. ಇವರೆಲ್ಲರೂ ಹೋಗುವ ಮಾರ್ಗವೆಂದರೆ ಅದು ಸ್ಮಶಾನಮಾರ್ಗ.

ಅನಿರ್ದೇಶ್ಯಾ ಗತಿಃ ಸಾ ತು ಯಾಂ ಪ್ರಪಶ್ಯಂತಿ ಮೋಕ್ಷಿಣಃ |
ತಸ್ಮಾದ್ ಯೋಗಃ ಪ್ರಧಾನೇಷ್ಟಃ ಸ ತು ದುಃಖಂ ಪ್ರವೇದಿತುಮ್ ॥19॥
ಮೋಕ್ಷಾರ್ಥಿಗಳು ಯಾವ ಮಾರ್ಗವನ್ನು ಹಿಡಿದು ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳುತ್ತಾರೋ, ಅದು ಇಂಥದ್ದೇ ಮಾರ್ಗದಲ್ಲಿ ಅವರು ತೆರಳಿರುತ್ತಾರೆಂದು ಹೇಳಲು ಸಾಧ್ಯವಿಲ್ಲ.
ವಿವರಣೆ - ಗುರುಗಳ ಮಾರ್ಗದರ್ಶನದಲ್ಲಿ ಆತ್ಮಸಾಕ್ಷಾತ್ಕಾರವು ಆಗುತ್ತದೆ. ಧ್ಯಾನಯೋಗದಿಂದ ಅಥವಾ ಜ್ಞಾನಯೋಗದಿಂದ ಆತ್ಮಸಾಕ್ಷಾತ್ಕಾರವು ಸಾಧ್ಯ- ವಾಗುತ್ತದೆ. ಆ ಜ್ಞಾನಯೋಗದ ಅಥವಾ ಧ್ಯಾನಯೋಗದ ಸ್ವರೂಪವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ ಎಂಬುದು ಅಭಿಪ್ರಾಯ.
ಅನುಸ್ಮೃತ್ಯ ತು ಶಾಸ್ತ್ರಾಣಿ ಕವಯಃ ಸಮವಸ್ಥಿತಾಃ |
ಅಪೀಹ ಸ್ಯಾದಪೀಹ ಸ್ಯಾತ್ ಸಾರಾಸಾರದಿದೃಕ್ಷಯಾ ॥20॥
ಎಲ್ಲಾ ವಿದ್ವಾಂಸರು ಒಂದೇ ಕಡೆ ಸೇರಿ ಈ ಮಾರ್ಗದಲ್ಲಿ ನಡೆದರೆ ಆ ಸಾರಾಸಾರ ವಿಮರ್ಶೆಯನ್ನು ತಿಳಿದ ಅನೇಕ ವಿದ್ವಾಂಸರು ಬಹಳ ವಿಷಯಗಳನ್ನು ತಿಳಿದು ಇಲ್ಲಿರುವುದೇ, ಅಲ್ಲಿರಬಹುದೇ ಎಂಬುದಾಗಿ ಹುಡುಕಿ ಕೊನೆಯಲ್ಲಿ ಈ ನಿಶ್ಚಯಕ್ಕೆ ಬಂದಿದ್ದಾರೆ.
ಟಿಪ್ಪಣಿ - ಅಪೀಹ ಸ್ಯಾದಪೀಹ ಸ್ಯಾದ್ ಇತ್ಯತ್ರ ಸಾರಾಸಾರದಿದೃಕ್ಷಯಾ ಇಹ ಸ್ಯಾದಪಿ ಇಹ ಸ್ಯಾದಪೀತಿ ಕ್ರಿಯಾಯೋಗೇ ವಿಚಾರಯಂತಿ |
ವಿವರಣೆ - ವಿದ್ವಾಂಸರು ಒಂದೇ ಕಡೆ ಸೇರಿ ಎಲ್ಲಿ ಸಾರವಿದೆ? ಯಾವುದನ್ನು ಅನುಸರಣೆ ಮಾಡುವುದರಿಂದ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ಈ ಮಾರ್ಗವು ಕೇವಲ ಸಾರರಹಿತವೇ? ಅಥವಾ ಆಡಂಬರವೇ? ಈ ಮಾರ್ಗದಲ್ಲಿ ಜನನ- ಮರಣಗಳ ಬಾಧೆ ತಪ್ಪಿಸಿಕೊಳ್ಳಲು ಸಾಧ್ಯವಿದೆಯೇ? ಯಾವುದು ದಕ್ಷಿಣಮಾರ್ಗ, ಯಾವುದು ಉತ್ತರಮಾರ್ಗ? ಎಂಬುದಾಗಿ ಸಾರಾಸಾರಗಳನ್ನು ಕಂಡುಕೊಳ್ಳಲು ಇಚ್ಛಿಸಿದ್ದಾರೆ. ಅದಕ್ಕೆ ಸಂಬಂಧಪಟ್ಟ ಎಲ್ಲಾ ಶಾಸ್ತ್ರಗಳನ್ನು ಅವಲೋಕಿಸಿದ್ದಾರೆ. ಈ ಎಲ್ಲ ವಿಚಾರಗಳು ನಿನಗೆ ತಿಳಿದಿರುವುದೇ ಇಲ್ಲ.
ವೇದವಾದಾನತಿಕ್ರಮ್ಯ ಶಾಸ್ತ್ರಾಣ್ಯರಣ್ಯಕಾನಿ ಚ |
ವಿಪಾಟ್ಯ ಕದಲೀಸ್ತಂಭಂ ಸಾರಂ ದದೃಶಿರೇ ನ ತೇ ॥21॥
ಎಲ್ಲಾ ವೇದ-ವೇದಾಂತಗಳನ್ನು ಅಧ್ಯಯನ ಮಾಡಿ, ಶಾಸ್ತ್ರಗಳನ್ನು ಆರಣ್ಯಕ- ಗಳನ್ನೂ ಕೂಡ ಅಧ್ಯಯನ ಮಾಡಿ, ಕೊನೆಯಲ್ಲಿ ಬಾಳೆಯ ಕಂಬವನ್ನು ಸುಲಿದು, ಸುಲಿದು ಅದರಲ್ಲಿರುವ ತಿರುಳನ್ನು ಕಾಣದವರಂತೆ ಮುಖ್ಯಸಾರವನ್ನೇ ಇವರು ಕಾಣಲಾರರು.
ಟಿಪ್ಪಣಿ - ವಿಪಾಟ್ಯ ಕದಲೀಸ್ತಂಭಮ್ ಇತ್ಯತ್ರ ತೇ ಕದಲೀಸ್ತಂಭಂ ವಿಪಾಟ್ಯೈವ ಸಾರಂ ನ ದದೃಶಿರೇ |
`ವಿಪಾಟ್ಯ ಕದಲೀಸ್ತಂಭಂ' ಎಂಬಲ್ಲಿ `ತೇ ಕದಲೀ ಸ್ತಂಭಂ ಸಾರಂ ದದೃಶಿರೇ' ಅವರು ಬಾಳೇಕಂಬವನ್ನು ಎಷ್ಟು ಸೀಳಿದರು ಸಾರವನ್ನು ಕಾಣುವುದಿಲ್ಲ ಎಂದರ್ಥ.
ವಿವರಣೆ - ಕೆಲವರು ವೇದವಾಕ್ಯಗಳನ್ನು ಚೆನ್ನಾಗಿ ಅಧ್ಯಯನ ಮಾಡುತ್ತಾರೆ. ವೇದಾಂತಶಾಸ್ತ್ರಗಳನ್ನೂ ಕೂಡ ಅಧ್ಯಯನ ಮಾಡುತ್ತಾರೆ. ಶಾಸ್ತ್ರವಿಧಿಗಳನ್ನು ಅನುಸರಿಸುತ್ತಾರೆ, ಚರ್ಚಿಸುತ್ತಾರೆ, ಆರಣ್ಯಕಗಳನ್ನೂ ಕೂಡ ಅಧ್ಯಯನ ಮಾಡು- ತ್ತಾರೆ. ಆದರೂ ಕೂಡ ಮುಖ್ಯಸಾರವನ್ನೇ ಅವರು ಅರ್ಥಮಾಡಿಕೊಳ್ಳುವುದಿಲ್ಲ. ಇಂಥವರು ಎಷ್ಟು ಓದಿಯೂ ವ್ಯರ್ಥ.
ಅಥೈಕಾಂತವ್ಯುದಾಸೇನ ಶರೀರೇ ಪಾಂಚಭೌತಿಕೇ |
ಇಚ್ಛಾದ್ವೇಷಸಮಾಸಕ್ತಮಾತ್ಮಾನಂ ಪ್ರಾಹುರಿಂಗಿತೈಃ ॥22॥
ಅಂಥವರಿಗೆ ಆತ್ಮತತ್ವವು ತಿಳಿಯುವುದಿಲ್ಲ. ಏಕಾಂತವಾದ ಸನ್ಯಾಸ ಮಾರ್ಗ- ವನ್ನು ನಿರಾಕರಣೆ ಮಾಡಿ, ಪಾಂಚಭೌತಿಕವಾದ ಶರೀರದೊಳಗಿರುವ ಆತ್ಮನನ್ನೇ ಇಚ್ಛಾದ್ವೇಷಯುಕ್ತನನ್ನಾಗಿ ತಿಳಿಯುತ್ತಾರೆ. ಆದರೆ ಆತ್ಮತತ್ವ ಹಾಗಿರುವುದೇ ಇಲ್ಲ.
ಟಿಪ್ಪಣಿ - ಏಕಾಂತವ್ಯುದಾಸೇನ ಇತ್ಯತ್ರ ವ್ಯುದಾಸಃ ಔದಾಸೀನ್ಯಮುಪೇಕ್ಷಾ |
`ಏಕಾಂತ ಉದಾಸೇನ' ಎಂಬಲ್ಲಿ ವ್ಯುದಾಸ ಎಂಬ ಪದಕ್ಕೆ ಔದಾಸೀನ್ಯ ಎಂದರ್ಥ. ಸನ್ಯಾಸದಲ್ಲಿ ಉಪೇಕ್ಷೆಯನ್ನು ಮಾಡಿ ಎಂಬಭಿಪ್ರಾಯವನ್ನು ತಿಳಿಯಬೇಕು.
ವಿವರಣೆ - ಮೊದಲು ಜೀವಾತ್ಮನನ್ನು ತಿಳಿಯಲು ಪ್ರಯತ್ನಿಸಬೇಕು. ಅನಂತರ ಪರಮಾತ್ಮನನ್ನು ತಿಳಿಯಬೇಕು. ಅಹಂಕಾರ ಮಮಕಾರಗಳಿಂದ ಇಚ್ಛಾದ್ವೇಷ- ಗಳನ್ನೇ ತಮ್ಮ ಪಾಂಚಭೌತಿಕ ಶರೀರಗಳಲ್ಲಿ ಇವರು ತುಂಬಿಕೊಂಡಿರುತ್ತಾರೆ. ಇದರಿಂದ ತಮ್ಮನ್ನೇ ತಾವು ತಿಳಿದುಕೊಳ್ಳುವುದಿಲ್ಲ. ಕ್ರೋಧಮೋಹಗಳಿಗೆ ಒಳಗಾಗಿ ಅಂತರಂಗಜ್ಞಾನವನ್ನು ಕಳೆದುಕೊಳ್ಳುತ್ತಾರೆ. ಹೀಗಿರುವಾಗ ಪರಮಾತ್ಮತ- ತ್ವವನ್ನು ತಿಳಿದುಕೊಳ್ಳಲು ಇವರಿಂದ ಸಾಧ್ಯವೇ ಆಗುವುದಿಲ್ಲ.
ಅಗ್ರಾಹ್ಯಂ ಚಕ್ಷುಷಾ ಸೂಕ್ಷ್ಮಮನಿರ್ದೇಶ್ಯಂ ಚ ತದ್ಗಿರಾ |
ಕರ್ಮಹೇತುಪುರಸ್ಕಾರಂ ಭೂತೇಷು ಪರಿವರ್ತತೇ ॥23॥
ಆ ಆತ್ಮತತ್ವವು ಕಣ್ಣಿಗೆ ಕಾಣಿಸುವುದಿಲ್ಲ. ಇಂದ್ರಿಯಗಳಿಗೆ ಗೋಚರ- ವಾಗುವುದಿಲ್ಲ. ಬಾಯಿಯಿಂದ ನಿರೂಪಣೆ ಮಾಡಲು ಸಾಧ್ಯವಾಗುವುದಿಲ್ಲ. ಕರ್ಮಕ್ಕೆ ಕಾರಣವೆನಿಸಿದ ಅಜ್ಞಾನದಿಂದ ಪುನಃ ಪುನಃ ಶರೀರಗಳನ್ನು ಪಡೆದು ಈ ಸಂಸಾರಚಕ್ರದಲ್ಲಿ ಸುತ್ತುತ್ತಲೇ ಇರುತ್ತದೆ.
ಟಿಪ್ಪಣಿ - ತದ್ಗಿರಾ ಇತ್ಯತ್ರ ತತ್ ಜೀವಸ್ವರೂಪಮ್ |
`ತದ್ಗಿರಾ' ಎಂಬಲ್ಲಿ `ತತ್' ಎಂಬ ಪದಕ್ಕೆ `ಜೀವಸ್ವರೂಪ' ಎಂದರ್ಥ.
ವಿವರಣೆ - ಜೀವಸ್ವರೂಪವನ್ನು ಕಣ್ಣಿಂದ ಕಾಣಲು ಸಾಧ್ಯವಿಲ್ಲ. ಯಾವ ಇಂದ್ರಿಯಗಳಿಗೂ ಅದು ಗೋಚರವಲ್ಲ. ಅತ್ಯಂತಸೂಕ್ಷ್ಮವಾಗಿದೆ. ಮಾತಿ- ನಿಂದಲೂ ಕೂಡ ಅದನ್ನು ವರ್ಣಿಸಲು ಸಾಧ್ಯವಿಲ್ಲ. ಅಜ್ಞಾನದ ಹೊದಿಕೆಯಿಂದ ಆತ್ಮತತ್ವವು ಮುಚ್ಚಿಹೋಗಿದೆ. ಹೀಗಿರುವಾಗ ತನ್ನ ಸ್ವರೂಪವನ್ನು ತಿಳಿದುಕೊಳ್ಳಲು ಇಂಥ ಅಜ್ಞಾನಿಗಳಿಗೆ ಸಾಧ್ಯವೇ ಆಗುವುದಿಲ್ಲ. ಪರಮಾತ್ಮನನ್ನು ತಿಳಿದುಕೊಳ್ಳು- ವುದಂತೂ ದೂರತೋಪಾಸ್ತ.

ಕಲ್ಯಾಣಗೋಚರಂ ಕೃತ್ವಾ ಮನಸ್ತೃಷ್ಣಾಂ ನಿಗೃಹ್ಯ ಚ |
ಕರ್ಮಸಂತತಿಮುತ್ಸೃಜ್ಯ ಸ್ಯಾನ್ನಿರಾಲಂಬನಃ ಸುಖೀ ॥24॥
ಆದ್ದರಿಂದ ಮನಸ್ಸನ್ನು ವಿಷಯದೆಡೆ ಹೋಗದಂತೆ ಮಾಡಿ, ಅಹಂಕಾರವನ್ನು ಪರಿತ್ಯಾಗ ಮಾಡಿ, ಕಲ್ಯಾಣಮಯವಾದ ಮೋಕ್ಷದ ಕಡೆ ನಡೆಯಬೇಕು. ಎಲ್ಲಾ ಕರ್ಮಸಂತತಿಗಳನ್ನು ಪರಿತ್ಯಾಗ ಮಾಡಿ ಯಾರನ್ನು ಆಶ್ರಯಿಸದೇ ಜೀವಿಸಬೇಕು. ಅಲ್ಲಿಯೇ ನಿಜವಾದ ಸುಖವಿದೆ.
ವಿವರಣೆ - ಮನಸ್ಸನ್ನು ಮೋಕ್ಷದೆಡೆ ತೊಡಗಿಸಬೇಕು. ಆಸೆಯನ್ನು ಸಂಪೂರ್ಣವಾಗಿ ನಿಗ್ರಹ ಮಾಡಬೇಕು. ಕರ್ಮಗಳ ಪರಂಪರೆಯನ್ನೇ ಪರಿತ್ಯಾಗ ಮಾಡಬೇಕು. ಯಾವುದೇ ಸಂಪತ್ತನ್ನೂ, ಜನರನ್ನೂ ಆಶ್ರಯಿಸಬಾರದು. ಆಗಷ್ಟೇ ಪರಮಸುಖಿಯಾಗಲು ಸಾಧ್ಯ.
ಅಸ್ಮಿನ್ನೇವಂ ಸೂಕ್ಷ್ಮಗಮ್ಯೇ ಮಾರ್ಗೇ ಸದ್ಭಿರ್ನಿಷೇವಿತೇ |
ಕಥಮರ್ಥಮನರ್ಥಾಢ್ಯಮರ್ಜುನ ತ್ವಂ ಪ್ರಶಂಸಸಿ ॥25॥
ಹೀಗೆ ಅತ್ಯಂತಸೂಕ್ಷ್ಮದೃಷ್ಟಿಯಿಂದ ತಿಳಿಯಲ್ಪಡುವ ಮೋಕ್ಷಮಾರ್ಗದಲ್ಲಿ ನಡೆದಾಗ ಸಂಪೂರ್ಣವಾದ ಸುಖವು ದೊರೆಯುತ್ತದೆ. ಇದನ್ನು ಎಲ್ಲಾ ಸಜ್ಜನರು ಅನುಸರಿಸುತ್ತಾರೆ. ಓ ಅರ್ಜುನನೇ! ಹೀಗಿರುವಾಗ ಅನರ್ಥಪೂರ್ಣವಾದ ಅನ್ಯ- ಮಾರ್ಗವನ್ನೇಕೆ ನೀನು ಪ್ರಶಂಸೆ ಮಾಡುತ್ತಿರುವೆ?
ಟಿಪ್ಪಣಿ - ಅಸ್ಮಿನ್ ವೈ ಸೂಕ್ಷ್ಮಗಮ್ಯೇ  ಚ  ಇತ್ಯತ್ರ ಅಸ್ಮಿನ್ ಮಾರ್ಗೇ ವಿದ್ಯಮಾನಮ್ ಅರ್ಥಂ ಪುರುಷಾರ್ಥಮ್ ಅನರ್ಥಾಖ್ಯಂ ಕಥಂ ಪ್ರಶಂಸಸಿ ಪ್ರಕರ್ಷೇಣ ಶಂಸಸಿ ಪುನಃಪುನಃ ಕಥಯಸೀತ್ಯರ್ಥಃ |
`ಅಸ್ಮಿನ್ನೇವಂ ಸೂಕ್ಷ್ಮಗಮ್ಯೇ  ಚ ' ಎಂಬಲ್ಲಿ `ಅಸ್ಮಿನ್ ಮಾರ್ಗೇ' ಈ ಮಾರ್ಗದಲ್ಲಿ ಪುರುಷಾರ್ಥದಾಯಕವಾದ ಮಾರ್ಗವಿರುವಾಗ ಪುನಃ ಪುನಃ ಅನರ್ಥಮಾರ್ಗವನ್ನೇಕೆ ಪ್ರಶಂಸೆ ಮಾಡುತ್ತಿರುವಿ ಎಂದರ್ಥ.
ವಿವರಣೆ - ಅರ್ಜುನನೇ! ಯಾರೂ ಸಹ ಸಂಪತ್ತನ್ನು, ಭೋಗವನ್ನು ಪ್ರಶಂಸೆ ಮಾಡುವುದಿಲ್ಲ. ಅವೆಲ್ಲವೂ ಕೇವಲ ಅನರ್ಥಕಾರಿಯಾಗಿದೆ. ಸಜ್ಜನರೆಲ್ಲರೂ ಸೂಕ್ಷ್ಮಬುದ್ಧಿಯಿಂದ, ಏಕಾಗ್ರಬುದ್ಧಿಯಿಂದ ಈ ಎಲ್ಲಾ ವಿಷಯಗಳ ಪರಿತ್ಯಾಗವೇ ಪರಮಸುಖಕ್ಕೆ ಕಾರಣವೆಂದು ನಿರ್ಣಯಿಸಿದ್ದಾರೆ. ಆದ್ದರಿಂದ ನೀನು ಆ ಸಜ್ಜನರ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಹೊಂದುವುದು ಅಯುಕ್ತವಾಗಿದೆ.
ಪೂರ್ವಶಾಸ್ತ್ರವಿದೋऽಪ್ಯೇವಂ ಜನಾಃ ಪಶ್ಯಂತಿ ಭಾರತ |
ಕ್ರಿಯಾಸು ನಿರತಾ ನಿತ್ಯಂ ದಾನೇ ಯಜ್ಞೇ ಚ ಕರ್ಮಣಿ ॥26॥
ಎಲ್ಲಾ ಶಾಸ್ತ್ರಗಳನ್ನು ಅರಿತಿರುವ ವಿದ್ವಾಂಸರೂ ಕೂಡ ಮತ್ತು ಯಜ್ಞದಾನಾದಿ ಕರ್ಮಗಳಲ್ಲಿ ನಿರತರಾದವರೂ ಕೂಡ ನೀನು ಹೇಳಿದ ಮಾರ್ಗವು ಅನರ್ಥ- ಕಾರಿಯೆಂದೇ ನಿರ್ಣಯ ಮಾಡಿದ್ದಾರೆ.
ವಿವರಣೆ - ಯಜ್ಞ, ದಾನ ಮೊದಲಾದ ಕರ್ಮಗಳಲ್ಲಿ ನಿರಂತರ ಆಸಕ್ತರಾದ ಪ್ರಾಚೀನಕಾಲದ ಶಾಸ್ತ್ರಜ್ಞರೂ ಕೂಡ ನಾನು ಹೇಳಿದ ಅಭಿಪ್ರಾಯವನ್ನೇ ಹೊಂದಿದ್ದಾರೆ. ಯಾರು ಕರ್ಮಮಾರ್ಗವನ್ನೇ ಅನುಸರಿಸುತ್ತಾರೋ, ಅಂಥವರೇ ಇದು ಪರಮಸುಖಕ್ಕೆ ಕಾರಣವಲ್ಲ ಎಂದು ಹೇಳುತ್ತಿರುವಾಗ ನೀನೇಕೆ ಅದನ್ನು ಪ್ರಶಂಸೆ ಮಾಡುತ್ತಿರುವೆ.
ಭವಂತಿ ಸುದುರಾವರ್ತಾ ಹೇತುಮಂತೋऽಪಿ ಪಂಡಿತಾಃ |
ದೃಢಪೂರ್ವೇ ಸ್ಮೃತಾ ಮೂಢಾ ನೈತದಸ್ತೀತಿವಾದಿನಃ ॥27॥
ಆದರೆ ಕೆಲವು ವಿದ್ವಾಂಸರು ವಿಷಯಾಸಕ್ತಿಯಿಂದ ಮೋಕ್ಷವಿಲ್ಲವೆಂದು ತಿಳಿ- ಸುತ್ತಾ, ತಾವು ಮೂಢರಾಗಿಯೇ ಪ್ರವೃತ್ತಿಯನ್ನು ಮಾಡುತ್ತಿದ್ದಾರೆ. ಅಂಥವರಿಗೆ ಸರಿಯಾದ ಮಾರ್ಗವನ್ನು ತೋರಿಸುವುದು ಬಹಳ ಕಷ್ಟ.
ಟಿಪ್ಪಣಿ - ನೈತದಸ್ತೀತಿ ವಾದಿನ ಇತ್ಯತ್ರ ಏತದ್ ಯೋಗಶಾಸ್ತ್ರಮ್|
`ನೈತದಸ್ತೀತಿವಾದಿನಃ'ಎಂಬಲ್ಲಿ `ಏತತ್' ಎಂಬ ಪದಕ್ಕೆ `ಯೋಗಶಾಸ್ತ್ರ' ಎಂದರ್ಥ.
ವಿವರಣೆ - ಯಾರು ಆತ್ಮನನ್ನೇ ಇಲ್ಲವೆಂದು ಹೇಳುತ್ತಾರೋ, ಅಂಥವರು ಮೂರ್ಖರಾಗುತ್ತಾರೆ. ಯೋಗಶಾಸ್ತ್ರವನ್ನು ಪ್ರಮಾಣವೆಂದು ಒಪ್ಪುವವರು. ಶರೀರ -ವನ್ನೇ ಆತ್ಮವೆಂದು ಹೇಳುತ್ತಾರೆ. ಇಂಥವರು ತಮ್ಮ ದೃಢವಾದ ಸಂಸ್ಕಾರದಿಂದ ಪ್ರಭಾವಿತರಾಗಿ ಮೂರ್ಖರಾಗುತ್ತಾರೆ ಎಂಬುದಾಗಿಯೂ ಕೂಡ ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡಬಹುದು.
ಅನೃ(ಮೃ)ತಸ್ಯಾವಮಂತಾರೋ ವಕ್ತಾರೋ ಜನಸಂಸದಿ |
ಚರಂತಿ ವಸುಧಾಂ ಕೃತ್ಸ್ನಾಂ ವಾವದೂಕಾ ಬಹುಶ್ರುತಾಃ ॥28॥
ಯಾನ್ ವಯಂ ನಾಭಿಜಾನೀಮಃ ಕಸ್ತಾನ್ ಜ್ಞಾತುಮಿಹಾರ್ಹತಿ |
ಏವಂ ಪ್ರಾಜ್ಞಾಃ ಶ್ರುತಶ್ಚಾಪಿ ಮಹಾಂತಃ ಶಾಸ್ತ್ರವಿತ್ತಮಾಃ ॥28ಎ॥
ಪಾರ್ಥ ವಯಂ ವಿಜಾನೀಮಃ ಕಸ್ತಾಂಜ್ಞಾತುಮಿಹಾರ್ಹತಿ |
ಏವಂ ಪ್ರಾಜ್ಞಾಃ ಶ್ರುತಾಶ್ಚಾಪಿ ಮಹಾಂತಃ ಶಾಸ್ತ್ರವಿತ್ತಮಾಃ ॥29॥
ಮೋಕ್ಷವಿಲ್ಲ, ಧರ್ಮವಿಲ್ಲ, ಪರಲೋಕವಿಲ್ಲ ಇತ್ಯಾದಿಯಾಗಿ ಹೇಳುವ ಮಿಥ್ಯಾವಾದಿಗಳನ್ನು, ನಾಸ್ತಿಕರನ್ನು, ವಿದ್ವಾಂಸರು ಯುಕ್ತಿಯುಕ್ತವಾಗಿ ನಿರಾಕರಣೆ ಮಾಡುತ್ತಾರೆ. ಮತ್ತು ಅಖಂಡಭೂಮಂಡಲದಲ್ಲಿ ಜ್ಞಾನದಿಂದ ಬೆಳಗುತ್ತಾರೆ. ಇಂಥ ಬಹುಶ್ರುತರು ಯಾರು ಆಗಿದ್ದಾರೆಂಬುದನ್ನೇ ನಮ್ಮಿಂದ ತಿಳಿಯಲು ಸಾಧ್ಯವಾಗು- ವುದಿಲ್ಲ. ನಾವೇ ಅಂಥ ಮಹಾಪಂಡಿತರನ್ನು ತಿಳಿದಿಲ್ಲವೆಂದ ಮೇಲೆ ಸಾಧಾರಣ ಮನುಷ್ಯರು ಅವರನ್ನು ಹೇಗೆ ತಾನೇ ತಿಳಿಯುತ್ತಾರೆ? ಇಂಥ ಶಾಸ್ತ್ರವಿಶಾರದರು ಈ ಭೂಮಂಡಲದಲ್ಲಿದ್ದಾರೆಂದಷ್ಟೇ ನಾವು ಕೇಳಿದ್ದೇವೆ. ಅವರನ್ನು ಗುರುತಿಸಲು ನಮ್ಮಿಂದ ಸಾಧ್ಯವಾಗಿರುವುದಿಲ್ಲ.
ಟಿಪ್ಪಣಿ - ಯಾನ್ ವಯಂ ನ ವಿಜಾನೀಮ ಇತ್ಯತ್ರ ಯಾನ್ ಜ್ಞಾನನಿಷ್ಠಾನ್ ವಯಮ್ ಅಪಿ ನ ಜಾನೀಮಃ |
`ಯಾನ್ನ ವಯಂ ವಿಜಾನೀಮಃ' ಎಂಬಲ್ಲಿ `ಯಾನ್ ' ಜ್ಞಾನನಿಷ್ಠರಾದವರನ್ನು `ವಯಂ' ನಾವೂ ಕೂಡ ತಿಳಿದಿರುವುದಿಲ್ಲ ಎಂದರ್ಥ.

ತಪಸಾ ಮಹದಾಪ್ನೋತಿ ಬುದ್ಧ್ಯಾ ವೈ ವಿಂದತೇ ಮಹತ್ |
ತ್ಯಾಗೇನ ಸುಖಮಾಪ್ನೋತಿ ಸದಾ ಕೌಂತೇಯ ತತ್ತ್ವವಿತ್ ॥30॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ
ರಾಜಧರ್ಮೇ ಯುಧಿಷ್ಠಿರವಾಕ್ಯೇ ಏಕೋನವಿಂಶೋಽಧ್ಯಾಯಃ ॥19॥
ಅರ್ಜುನನೇ! ಯಾರು ತತ್ತ್ವವನ್ನು ತಿಳಿದಿದ್ದಾನೋ, ತಪಸ್ಸಿನಿಂದ ಮಹಾ- ವೈರಾಗ್ಯವನ್ನು ಪಡೆದಿದ್ದಾನೋ, ಅಂಥವನು ತನ್ನ ಬುದ್ಧಿಯ ಏಕಾಗ್ರತೆಯಿಂದ ಆ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಸ್ವಾರ್ಥವನ್ನು ಪರಿತ್ಯಾಗ ಮಾಡುವುದರಿಂದ ನಿರಂತರವಾಗಿ ಪರಮಸುಖವನ್ನು ಹೊಂದುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 19ನೆಯ ಅಧ್ಯಾಯವು ಮುಗಿಯಿತು.
*****
20. ಇಪ್ಪತ್ತನೆಯ ಅಧ್ಯಾಯ
ದೇವಸ್ಥಾನ ಎಂಬ ಋಷಿಗಳು ಯುಧಿಷ್ಠಿರನಿಗೆ
ಯಜ್ಞಮಹತ್ತ್ವವನ್ನು ತಿಳಿಸಿ ಯಜ್ಞ ಮಾಡಲು ಉಪದೇಶಿಸಿದರು.
ವೈಶಂಪಾಯನಃ
ತಸ್ಮಿನ್ ವಾಕ್ಯಾಂತರೇ ವಕ್ತಾ ದೇವಸ್ಥಾನೋ ಮಹಾತಪಾಃ |
ಅಭಿನೀತತರಂ ವಾಕ್ಯಮಿತ್ಯುವಾಚ ಯುಧಿಷ್ಠಿರಮ್ ॥1॥
ವೈಶಂಪಾಯನ - ಅರ್ಜುನನಿಗೂ, ಯುಧಿಷ್ಠಿರನಿಗೂ ಪರಸ್ಪರ ವಾದಪ್ರತಿ- ವಾದಗಳು ನಡೆಯುತ್ತಿದ್ದವು. ಆಗ ಮಹಾತಪಸ್ವಿಗಳು ವಾಕ್‌ಚತುರರು ಆದ ದೇವಸ್ಥಾನ ಎಂಬ ಮುನಿಗಳು ಯುಧಿಷ್ಠಿರನನ್ನು ಕುರಿತು ಹೀಗೆ ಯುಕ್ತಿಯುಕ್ತವಾದ ಮಾತುಗಳನ್ನು ಹೇಳುವರು.
ಟಿಪ್ಪಣಿ - ದೇವಸ್ಥಾನೋ ಮಹಾತಪಾ ಇತ್ಯತ್ರ ದೇವಸ್ಥಾನಃ ದೇವಸ್ಥಾನಾಖ್ಯ- ಋಷಿಃ | `ದೇವಸ್ಥಾನೋ ಮಹಾತಪಾಃ' - ದೇವಸ್ಥಾನ = ದೇವಸ್ಥಾನ ಎಂಬ ಋಷಿಗಳು.
ಯದ್ ವಚಃ ಫಾಲ್ಗುನೇನೋಕ್ತಂ ನ ಜ್ಯಾಯೋಽಸ್ತಿ ಧನಾದಿತಿ |
ಅತ್ರ ತೇ ವರ್ತಯಿಷ್ಯಾಮಿ ತದೇಕಾಂತಮನಾಃ ಶೃಣುಃ ॥2॥
ಓ ಧರ್ಮರಾಜನೇ! ಸಂಪತ್ತಿಗಿಂತ ಶ್ರೇಷ್ಠವಾದದ್ದು ಮತ್ತೊಂದು ಇಲ್ಲವೆಂದು ಅರ್ಜುನನು ನಿನ್ನನ್ನು ಕುರಿತು ಹೇಳಿದನು. ಈ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ನಿನಗೆ ತಿಳಿಸುತ್ತೇನೆ. ಸಾವಧಾನಮನಸ್ಸಿನಿಂದ ಅದನ್ನು ಕೇಳು.
ಅಜಾತಶತ್ರೋ ಧರ್ಮೇಣ ಕೃತ್ಸ್ನಾ ತೇ ವಸುಧಾ ಜಿತಾ |
ತಾಂ ಜಿತ್ವಾ ಚ ವೃಥಾ ರಾಜನ್ ನ ಪರಿತ್ಯಕ್ತುಮರ್ಹಸಿ ॥3॥
ಅಜಾತಶತ್ರುವೇ! ಭೂಮಂಡಲವನ್ನು ಕ್ಷಾತ್ರಧರ್ಮದಿಂದ ನೀನು ಜಯಿಸಿರುವಿ. ಧರ್ಮದಿಂದ ಪಡೆದ ಈ ಭೂಮಿಯನ್ನು ವ್ಯರ್ಥವಾಗಿ ಬಿಡುವುದು ನ್ಯಾಯವಲ್ಲ.
ಚತುಷ್ಪದೀ ಹಿ ನಿಃಶ್ರೇಣೀ ಬ್ರಹ್ಮಣ್ಯೇಷಾ ಪ್ರತಿಷ್ಠಿತಾ |
ತಾಂ ಕ್ರಮೇಣ ಮಹಾಬಾಹೋ ಯಥಾವಜ್ಜಯ ಪಾರ್ಥಿವ ॥4॥
ಬ್ರಹ್ಮನನ್ನು ಪಡೆಯಲು ಬ್ರಹ್ಮಚರ್ಯ, ಗಾರ್ಹಸ್ಥ್ಯ, ಸನ್ನ್ಯಾಸ, ವಾನಪ್ರಸ್ಥ ಎಂಬ ನಾಕು ಹಂತಗಳಿವೆ. ಈ ನಾಕು ಮಜಲುಗಳನ್ನು ಕ್ರಮವಾಗಿ ದಾಟಿಯೇ ಆ ಪರಮಾತ್ಮನನ್ನು ಸೇರಬೇಕು. ಮಹಾಬಾಹುವೇ! ಈ ಕ್ರಮದಲ್ಲಿಯೇ ನೀನೂ ಕೂಡ ಮೊದಲು ಗೃಹಸ್ಥಧರ್ಮವನ್ನು ಆಶ್ರಯಿಸು.
ಟಿಪ್ಪಣಿ - ಬ್ರಹ್ಮಣ್ಯೇಷಾ ಪ್ರತಿಷ್ಠಿತಾ ಇತ್ಯತ್ರ ಚತುಷ್ಪದಾ ಬ್ರಹ್ಮಚಾರೀ ಗೃಹೀ ವಾನಪ್ರಸ್ಥೋ ಭಿಕ್ಷುರಿತಿ ಚತುಃಸ್ಥಾನವತೀ, ಪೂರ್ವಮೇಕಂ ತದುಪರ್ಯೇಕಂ ತದುಪರ್ಯೇಕಮಿತ್ಯಾದಿಕ್ರಮೇಣ ಚತುಷ್ಪದಾ ಚತುಃಸ್ಥಾನವತೀ ನಿಃಶ್ರೇಣೀ ಸ್ವರ್ಗಾ- ರೋಹಣಸೋಪಾನವಿಶೇಷಃ ಬ್ರಹ್ಮಣಿ ವೇದೇ ಪ್ರತಿಷ್ಠಿತಾ |
`ಬ್ರಹ್ಮಣ್ಯೇಷಾ ಪ್ರತಿಷ್ಠಿತಾ' - ಚತುಷ್ಪದ ಎಂದರೆ ಬ್ರಹ್ಮಚಾರಿ, ಗೃಹೀ, ವಾನಪ್ರಸ್ಥ, ಭಿಕ್ಷು ಎಂಬುದು ನಾಕುಸ್ಥಾನಗಳು. ಮೊದಲು ಬ್ರಹ್ಮಚರ್ಯ, ಅನಂತರ ಗಾರ್ಹಸ್ಥ್ಯ, ವಾನಪ್ರಸ್ಥ, ಅನಂತರ ಭಿಕ್ಷು ಎಂಬುದಾಗಿ ಆ ನಾಕು ಹಂತಗಳನ್ನು ಕ್ರಮವಾಗಿಯೇ ದಾಟಬೇಕು. ಈ ನಾಕು ಸ್ವರ್ಗದ ಮೆಟ್ಟಿಲುಗಳಾಗಿವೆ.
ವಿವರಣೆ - ಮೋಕ್ಷಗಳನ್ನು ಹೊಂದಲು ನಾಕು ಆಶ್ರಮಧರ್ಮಗಳನ್ನು ಪರಿಪಾಲನೆ ಮಾಡಬೇಕೆಂದು ವೇದದಲ್ಲೇ ಹೇಳಲ್ಪಟ್ಟಿದೆ. ಈ ನಾಕು ಆಶ್ರಮಗಳನ್ನು ಕ್ರಮಪ್ರಕಾರವಾಗಿಯೇ ಆಚರಿಸಬೇಕು. ಬ್ರಹ್ಮಚರ್ಯ ಆಶ್ರಮವನ್ನು ಪರಿಪಾಲನೆ ಮಾಡಿ, ಗೃಹಸ್ಥಾಶ್ರಮಧರ್ಮವನ್ನು ಆಚರಣೆ ಮಾಡಿ, ಅನಂತರ ವಾನಪ್ರಸ್ಥಾ- ಶ್ರಮವನ್ನು ಸ್ವೀಕರಿಸಬೇಕು. ಅಂತಿಮವಾಗಿ ಸನ್ನ್ಯಾಸಾಶ್ರಮವನ್ನು ಕುರಿತು ತೆರಳ- ಬೇಕು. ಗೃಹಸ್ಥಾಶ್ರಮದಲ್ಲಿ ಮಾಡಬೇಕಾದ ಕರ್ತವ್ಯಕರ್ಮಗಳನ್ನು ಪರಿತ್ಯಾಗ ಮಾಡಿ, ಅಂತಿಮವಾದ ಸನ್ನ್ಯಾಸಾಶ್ರಮಕ್ಕೆ ತೆರಳುವುದು ಸಮಂಜಸವಲ್ಲ.
ತಸ್ಮಾತ್ ಪಾರ್ಥ ಮಹಾಯಜ್ಞೈರ್ಯಜಸ್ವ ಬಹುದಕ್ಷಿಣೈಃ |
ಸ್ವಾಧ್ಯಾಯಯಜ್ಞಾ ಋಷಯೋ ಜ್ಞಾನಯಜ್ಞಾಸ್ತಥಾಪರೇ ॥5॥
ಆದ್ದರಿಂದ ಓ ಕುಂತೀಪುತ್ರನೇ! ಭೂರಿದಕ್ಷಿಣೆಗಳನ್ನು ನೀಡಿ, ಮಹಾಯಜ್ಞವನ್ನು ನೀನು ಆಚರಿಸು. ಕೆಲವು ಜ್ಞಾನಿಗಳು ಸ್ವಾಧ್ಯಾಯವನ್ನೇ ಯಜ್ಞವನ್ನಾಗಿ ಆಚರಿಸು- ತ್ತಾರೆ. ಇನ್ನೂ ಕೆಲವರು ಬ್ರಹ್ಮಜ್ಞಾನವನ್ನೇ ಯಜ್ಞವನ್ನಾಗಿ ಆಚರಿಸುತ್ತಾರೆ.
ವಿವರಣೆ - ಋಷಿಗಳು ಅಧ್ಯಯನ ಅಧ್ಯಾಪನಗಳನ್ನು ಮಾಡುತ್ತಾರೆ. ಇವರಿಗೆ ಸ್ವಾಧ್ಯಾಯವೇ ಯಜ್ಞ. ಸನ್ನ್ಯಾಸಿಗಳು ಕೇವಲ ಜ್ಞಾನದಲ್ಲೇ ಆಸಕ್ತರಾಗಿರುತ್ತಾರೆ. ಇವರು ಜ್ಞಾನಯಜ್ಞವನ್ನು ಆಚರಿಸುತ್ತಾರೆ. ನೀನು ಬಹುದಕ್ಷಿಣಾಕವಾದ ಮಹಾ- ಯಜ್ಞವನ್ನು ಆಚರಿಸಿ, ದೇವತೆಗಳನ್ನು ತೃಪ್ತಿಪಡಿಸು.

ಕರ್ಮನಿಷ್ಠಾಂಶ್ಚ ಬುದ್ಯೇಥಾಸ್ತಪೋನಿಷ್ಠಾಂಶ್ಚ ಪಾರ್ಥಿವ |
ವೈಖಾನಸಾನಾಂ ಕೌಂತೇಯ ವಚನಂ ಶ್ರೂಯತೇ ಯಥಾ ॥6॥
ಯಾರು ಕರ್ಮವನ್ನು ಹೆಚ್ಚು ಆಚರಿಸುತ್ತಾರೋ, ಅವರು ಗೃಹಸ್ಥರಾಗಿರುತ್ತಾರೆ. ತಪಸ್ಸಿನಲ್ಲಿ ಯಾರು ನಿರತರಾಗಿರುತ್ತಾರೋ, ಅವರು ವಾನಪ್ರಸ್ಥಾಶ್ರಮಿಗಳಾಗಿರು- ತ್ತಾರೆ. ಹೀಗೆ ವೈಖಾನಸರು ಹೇಳುತ್ತಾರೆ.
ವಿವರಣೆ - ಸ್ವಾಧ್ಯಾಯವನ್ನು ಯಜ್ಞವನ್ನಾಗಿ ಬ್ರಹ್ಮಚಾರಿಗಳು ಮಾಡುತ್ತಾರೆ. ಬ್ರಹ್ಮಜ್ಞಾನವನ್ನು ಯಜ್ಞವನ್ನಾಗಿ ಯೋಗಿಗಳು ಆಚರಿಸುತ್ತಾರೆ. ಗೃಹಸ್ಥರು ಕರ್ಮಾ- ಚರಣೆಯನ್ನೇ ಯಜ್ಞವನ್ನಾಗಿ ಆಚರಿಸುತ್ತಾರೆ. ವಾನಪ್ರಸ್ಥಾಶ್ರಮಿಗಳು ತಪಸ್ಸನ್ನೇ ಯಜ್ಞವನ್ನಾಗಿ ಆಚರಿಸುತ್ತಾರೆ. ಪ್ರತಿಯೊಬ್ಬರು ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ವೇದೋಕ್ತಕರ್ಮಗಳನ್ನು ಆಚರಿಸಲೇಬೇಕು. ಗೃಹಸ್ಥನಾದ ಕ್ಷತ್ರಿಯನು ಅಶ್ವಮೇಧ, ರಾಜಸೂಯ ಮೊದಲಾದ ಯಾಗಗಳನ್ನು ಆಚರಿಸಬೇಕು. ಋಷಿಗಳು ಜ್ಞಾನದ ಕಾರ್ಯವನ್ನು ಹೆಚ್ಚು ಮಾಡಬೇಕು. ನಾಕನೆಯ ಆಶ್ರಮವನ್ನು ಆಶ್ರಯಿಸಿದ ಸನ್ನ್ಯಾಸಿಗಳು ಜ್ಞಾನಯಜ್ಞದಲ್ಲಿ ನಿರತರಾಗಿರುತ್ತಾರೆ. ನೀನು ಕರ್ಮ- ನಿಷ್ಠನಾಗಬೇಕಾದವನು. ಈ ಕರ್ತವ್ಯವನ್ನು ಪರಿತ್ಯಾಗ ಮಾಡಿ ಜ್ಞಾನಯಜ್ಞದಲ್ಲಿ ಪಾಲ್ಗೊಳ್ಳುವುದು ಯುಕ್ತವಾಗುವುದಿಲ್ಲ.
ಈಹೇತ ಧನಹೇತೋರ್ಯಸ್ತಸ್ಯಾನೀಹಾ ಗರೀಯಸೀ |
ಭೂಯಾನ್ ದೋಷೋ ಹಿ ವರ್ಧೇತ ಯಸ್ತಂ ಧನಮುಪಾಶ್ರಯೇತ್ ॥7॥
ಯಾಗಾದಿಕರ್ಮಗಳನ್ನು ನಡೆಸಬೇಕೆಂಬ ಉದ್ದೇಶದಿಂದ ಆಸೆಯನ್ನು ಪಟ್ಟು ಧನಸಂಪಾದನೆಯನ್ನು ಮಾಡುವುದು ಯುಕ್ತವಲ್ಲ. ಹಾಗೆ ಧನವನ್ನು ಸಂಪಾದನೆ ಮಾಡುವುದಕ್ಕಿಂತಲೂ ಆಸೆಯನ್ನು ಬಿಡುವುದೇ ಶ್ರೇಷ್ಠವಾಗಿದೆ. ಏಕೆಂದರೆ ಯಾರು ಯಾವಾಗ ಹಣದ ವಿಷಯದಲ್ಲೇ ನಿರತನಾಗಿರುತ್ತಾನೋ, ಅವನಲ್ಲಿ ಕೇವಲ ದೋಷಗಳೇ ಅಭಿವೃದ್ಧಿಯನ್ನು ಹೊಂದುತ್ತವೆ.
ಟಿಪ್ಪಣಿ - ಈಹೇತ ಧರ್ಮಹೇತೋರ್ಯ ಇತ್ಯತ್ರ ಯಃ ಧರ್ಮಹೇತೋಃ ಈಹೇತ ತಸ್ಯ ಸಾ ಈಹಾ ಗರೀಯಸೀ ಅನೀಹೈವ | ಕೇವಲಂ ಸ್ವೋದರಭರಣಾಯ ಈಹಾಯಾ ಅಕರಣಾತ್ | ಭೂಯಾನ್ ದೋಷ ಇತ್ಯತ್ರ ಸರ್ವಥಾ ಅನೀಹಾಯಾಃ ಭೂಯಾನ್ ದೋಷಃ ಅಭಿವರ್ಧೇತ |
`ಈಹೇತ ಧನಹೇತೋರ್ಯಃ' - ಧರ್ಮವನ್ನು ಆಚರಣೆ ಮಾಡಬೇಕೆಂಬ ದೃಷ್ಟಿ- ಯಿಂದ ಯಾವ ಆಸೆಯು ಉಂಟಾಗುತ್ತದೋ, ಅದು ತಪ್ಪಲ್ಲ. ಕೇವಲ ಉದರಂಭರಣೆ- ಗೋಸ್ಕರ ಆಸೆ ಪಡುವ ಹಣವಷ್ಟೇ ದೋಷದಾಯಕವಾಗಿದೆ. ಯಾವುದಕ್ಕೂ ಆಸೆ ಪಡದೇ ಇರುವುದು ದೋಷಕ್ಕೆ ಕಾರಣವಾಗುತ್ತದೆ.
ಕೃಚ್ಛ್ರಾಚ್ಚ ದ್ರವ್ಯಸಂಹಾರಂ ಕುರ್ವಂತಿ ಧನಕಾರಣಾತ್ |
ಆತ್ಮನಾ ತೃಷಿತೋಽಬುದ್ಧ್ವಾ ಭ್ರೂಣಹತ್ಯಾಂ ನ ಬುದ್ಧ್ಯತೇ ॥8॥
ಯಾರು ಲೋಭಿಗಳೋ ಅವರು ಹಣವನ್ನು ಕೂಡಿಡಬೇಕು ಎಂಬ ಕಾರಣ- ದಿಂದ ಬಹಳ ಕಷ್ಟದಿಂದಲೇ ತನಗೋಸ್ಕರ ಹಣವನ್ನು ಸಂಗ್ರಹ ಮಾಡುತ್ತಾರೆ. ಆದರೆ ಹಣದ ಆಸೆ ಹಿಂದೆ ಬಿದ್ದು, ಮತ್ತೊಬ್ಬರಿಗೆ ದಾನವನ್ನು ಮಾಡದೇ ಭ್ರೂಣ- ಹತ್ಯಾಪಾಪವನ್ನು ಹೊಂದುತ್ತಾರೆ.
ಟಿಪ್ಪಣಿ - ಆತ್ಮನಾ ತೃಷಿತ ಇತ್ಯತ್ರ ಆತ್ಮನಾ ಸ್ವೇನ ಕಾರಣೇನ ತೃಷಿತಃ ತೃಷ್ಣಾವಾನ್ |
`ಆತ್ಮನ ತೃಷ್ಯತಃ' - ತನಗೋಸ್ಕರ ಹಣವನ್ನು ಸಂಪಾದನೆ ಮಾಡುವವನು
ವಿವರಣೆ - ಹಣವನ್ನು ಕೇವಲ ತನಗೋಸ್ಕರ ಯಾರು ಸಂಪಾದನೆ ಮಾಡು- ತ್ತಾರೋ, ಅಥವಾ ಹಣವನ್ನು ಕೂಡಿಡಬೇಕೆಂಬ ಉದ್ದೇಶದಿಂದ ಹಣವನ್ನು ಸಂಪಾದನೆ ಮಾಡುತ್ತಾರೋ, ಅವರಿಗೆ ಭ್ರೂಣಹತ್ಯಾದೋಷವು ಬರುತ್ತದೆ. ಧನದಾಹದಿಂದ ಕೂಡಿರುವ ಮನುಷ್ಯನು ಮತ್ತೊಬ್ಬನಿಗೆ ದಾನ ಮಾಡಲಾರನು. ಯೋಗ್ಯರಾದವರಿಗೆ ದಾನವನ್ನು ಮಾಡದೇ ಇರುವುದು ಎಷ್ಟು ಪಾಪವೋ, ಅಯೋಗ್ಯರಾದವರಿಗೆ ದಾನವನ್ನು ಕೊಡುವುದೂ ಕೂಡ ಅಷ್ಟೇ ಪಾಪ. ಧನದ ಲೋಭದಿಂದ ಧನವನ್ನು ಸಂಗ್ರಹ ಮಾಡುವುದು ಯುಕ್ತವಲ್ಲ. ಹಾಗೇನಾದರೂ ಲೋಭಗ್ರಸ್ತನಾಗಿ ಹಣವನ್ನು ಸಂಪಾದನೆ ಮಾಡಲು ಪ್ರಾರಂಭಿಸಿದರೆ ಇದರಿಂದ ಮಹಾಪಾಪ ಉಂಟಾಗುತ್ತದೆ. ಆದ್ದರಿಂದ ಹಣ ಸಂಪಾದನೆಯನ್ನು ಮಾಡಿ, ಯಜ್ಞಾಚರಣೆಯನ್ನು ಆಚರಿಸಿ, ಭೂರಿದಕ್ಷಿಣೆಯನ್ನು ಕೊಟ್ಟು ಸಾರ್ಥಕಗೊಳಿಸ- ಬೇಕೆಂಬುದು ದೇವಸ್ಥಾನಋಷಿಗಳ ಅಭಿಪ್ರಾಯವಾಗಿದೆ.
ಅನರ್ಹತೇ ಯದ್ ದದಾತಿ ನ ದದಾತಿ ಯದರ್ಹತೇ |
ಅರ್ಹಾನರ್ಹಾಪರಿಜ್ಞಾನಾದ್ ದಾನಧರ್ಮೋಽಪಿ ದುಷ್ಕರಃ ॥9॥
ಯಾರು ಅಯೋಗ್ಯರಿಗೆ ದಾನವನ್ನು ಮಾಡುತ್ತಾರೋ, ಅಂಥ ದಾನವು ವ್ಯರ್ಥವಾಗುತ್ತದೆ. ದಾನವನ್ನು ಸ್ವೀಕರಿಸಲು ಯಾರು ಪಾತ್ರರೋ, ಅಂಥವರಿಗೆ ಯಾರೂ ದಾನವನ್ನು ಕೊಡುವುದಿಲ್ಲ. ಏಕೆಂದರೆ ಯಾರು ಪಾತ್ರರು, ಯಾರು ಅಪಾತ್ರರು ಎಂಬ ವಿಷಯದಲ್ಲಿ ದಾತೃಗಳಿಗೆ ಪರಿಜ್ಞಾನವೇ ಇರುವುದಿಲ್ಲ. ಆದ್ದರಿಂದ ದಾನಧರ್ಮವು ಅತ್ಯಂತ ದುಷ್ಕರವಾಗಿದೆ.
ಯಜ್ಞಾಯ ಸೃಷ್ಟಾನಿ ಧನಾನಿ ಧಾತ್ರಾ
ಯಜ್ಞೋದ್ದಿಷ್ಟಃ ಪುರುಷೋ ರಕ್ಷಿತಾ ಚ |
ತಸ್ಮಾತ್ ಸರ್ವಂ ಯಜ್ಞ ಏವೋಪಯೋಜ್ಯಂ
ಧನಂ ತತೋಽನಂತರ ಏವ ಕಾಮಃ ॥10॥
ಚತುರ್ಮುಖಬ್ರಹ್ಮನು ಧನವನ್ನು ಯಜ್ಞಕ್ಕೋಸ್ಕರವೇ ಸೃಷ್ಟಿ ಮಾಡಿದ್ದಾನೆ. ಯಜ್ಞಕ್ಕೋಸ್ಕರ ಧನವನ್ನು ಸಂಪಾದಿಸಬೇಕೆಂಬ ಉದ್ದೇಶದಿಂದಲೇ ಪುರುಷನನ್ನು ಸೃಷ್ಟಿ ಮಾಡಿದ್ದಾನೆ. ಆದ್ದರಿಂದ ಎಲ್ಲಾ ಬಗೆಯ ಸಂಪತ್ತನ್ನು ಯಜ್ಞಕ್ಕಾಗಿಯೇ ವಿನಿ- ಯೋಗ ಮಾಡಬೇಕು. ಹಾಗೇ ಯಜ್ಞ ಮಾಡಿದಾಗ ತನ್ನ ಮನಸ್ಸಿನಲ್ಲಿ ಉದ್ದಿಷ್ಟ- ವಾದ ಅಪೇಕ್ಷೆಗಳನ್ನು ಯಜಮಾನನು ಪಡೆದುಕೊಳ್ಳುತ್ತಾನೆ.
ಯಜ್ಞೈರಿಂದ್ರೋ ವಿವಿಧೈ ರತ್ನವದ್ಭಿ-
ರ್ದೇವಾನ್ ಸರ್ವಾನಭ್ಯಯಾದ್ ಭೂರಿತೇಜಾಃ |
ತೇನೇಂದ್ರತ್ವಂ ಪ್ರಾಪ್ಯ ವಿಭ್ರಾಜತೇಽಸೌ

ತಸ್ಮಾದ್ ಯಜ್ಞೇ ಸರ್ವಮೇವೋಪಯೋಜ್ಯಮ್ ॥11॥
ಮಹಾತೇಜಸ್ವಿಯಾದ ಇಂದ್ರನು ಕೂಡ ರತ್ನಗಳನ್ನೇ ದಕ್ಷಿಣೆಯನ್ನಾಗಿ ಯಾಗ- ಗಳಲ್ಲಿ ನೀಡಿದನು. ಆದ್ದರಿಂದಲೇ ದೇವತೆಗಳಿಗೂ ಒಡೆಯನಾದನು. ಈಗಲೂ ಕೂಡ ಇಂದ್ರಪದವಿಯಲ್ಲಿ ಕಂಗೊಳಿಸುತ್ತಿದ್ದಾನೆ. ಆದ್ದರಿಂದ ರಾಜನಾದವನು ಎಲ್ಲಾ ತನ್ನ ಸಂಪತ್ತನ್ನು ಸಕಲೈಶ್ವರ್ಯಗಳನ್ನು ಯಜ್ಞಕ್ಕಾಗಿ ವಿನಿಯೋಗ ಮಾಡಬೇಕು.
ಮಹಾದೇವಃ ಸರ್ವಯಜ್ಞೇ ಮಹಾತ್ಮಾ
ಹುತ್ವಾಽಽತ್ಮಾನಂ ದೇವದೇವೋ ಬಭೂವ |
ವಿಶ್ವಾಂಲ್ಲೋಕಾನ್ ವ್ಯಾಪ್ಯ ವಿಷ್ಟಭ್ಯ ಕೀರ್ತ್ಯಾ
ವಿರಾಜತೇ ದ್ಯುತಿಮಾನ್ ಕೃತ್ತಿವಾಸಾಃ ॥12॥
ಮಹಾತ್ಮನಾದ ಶಿವನೂ ಕೂಡ ಸರ್ವಮೇಧವೆಂಬ ಯಜ್ಞವನ್ನು ಆಚರಿಸಿದನು. ಅದರಲ್ಲಿ ತನ್ನನ್ನೇ ಹೋಮ ಮಾಡಿಕೊಂಡು ತ್ರೈಲೋಕ್ಯಗಳಲ್ಲಿ ತನ್ನ ಕೀರ್ತಿಯಿಂದ ಬೆಳಗಿದನು. ತನ್ನನ್ನು ಆತ್ಮಸಮರ್ಪಣೆ ಮಾಡಿಕೊಂಡ ಕಾರಣದಂದಲೇ ಕೃತ್ತಿವಾಸನು ಸಂಪೂರ್ಣ ವಿಶ್ವವನ್ನೇ ವ್ಯಾಪಿಸಿದನು.
ಆವಿಕ್ಷಿತಃ ಪಾರ್ಥಿವೋಽಸೌ ಮರುತ್ತೋ
ವೃದ್ಧ್ಯಾ ಶಕ್ರಂ ಯೋಽಜಯದ್ ದೇವರಾಜಮ್ |
ಯಜ್ಞೇ ಯಸ್ಯ ಶ್ರೀಃ ಸ್ವಯಂ ಸನ್ನಿವಿಷ್ಟಾ
ಯಸ್ಮಿನ್ ಭಾಂಡಂ ಕಾಂಚನಂ ಸರ್ವಮಾಸೀತ್ ॥13॥
ಆವಿಕ್ಷಿತನ ಮಗನಾದ ಮರುತ್ ಎಂಬ ರಾಜನೂ ಕೂಡ ತನ್ನ ಸಮೃದ್ಧವಾದ ಸಂಪತ್ತಿನಿಂದ ಯಜ್ಞವನ್ನು ಆಚರಿಸಿ, ಇಂದ್ರನನ್ನೂ ಕೂಡ ಜಯಿಸಿದನು. ಅವನ ಯಾಗಪಾತ್ರೆಗಳೆಲ್ಲವೂ ಕೂಡ ಸುವರ್ಣಮಯವಾಗಿತ್ತು. ಅಲ್ಲಿ ಲಕ್ಷ್ಮಿಯ ದಿವ್ಯ- ಸನ್ನಿಧಾನವಿತ್ತು. ಅವನು ಮಾಡಿದ ಯಜ್ಞದಲ್ಲೂ ಕೂಡ ಲಕ್ಷ್ಮೀದೇವಿಯು ಸ್ವತಃ ನೆಲೆಸಿದ್ದಳು.
ಟಿಪ್ಪಣಿ - ಆವಿಕ್ಷಿತಃ ಪಾರ್ಥಿವ ಇತ್ಯತ್ರ ಅವಿಕ್ಷಿತಸ್ಯ ಪುತ್ರಃ ಆವಿಕ್ಷಿತಃ | `ಆವಿಕ್ಷಿತಃ' - ಅವಿಕ್ಷಿತನ ಪುತ್ರನಾದವನು ಆವಿಕ್ಷಿತನು.
ಹರಿಶ್ಚಂದ್ರಃ ಪಾರ್ಥಿವೇಂದ್ರಃ ಶ್ರುತಸ್ತೇ
ಯಜ್ಞೈರಿಷ್ಟ್ವಾ ಪುಣ್ಯಭಾಗ್ ವೀತಶೋಕಃ |
ಋದ್ಧ್ಯಾ ಶಕ್ರಂ ಯೋಽಜಯನ್ಮಾನುಷಃ ಸಂ-
ಸ್ತಸ್ಮಾದ್ ಯಜ್ಞೇ ಸರ್ವಮೇವೋಪಯೋಜ್ಯಮ್ ॥14॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದೇವಸ್ಥಾನವಾಕ್ಯೇ ವಿಂಶೋಽಧ್ಯಾಯಃ ॥20॥
ಮಹಾರಾಜನಾದ ಹರಿಶ್ಚಂದ್ರನು ಅನೇಕ ಯಾಗಗಳನ್ನು ಆಚರಿಸಿ ಮನುಷ್ಯ- ನಾಗಿದ್ದಾಗಲೇ ದೇವೇಂದ್ರನಿಗಿಂತ ಉತ್ತಮನೆನಿಸಿದನು. ಮತ್ತು ಶೋಕರಹಿತನೂ, ಪುಣ್ಯವಂತನೂ ಆದನು. ಆದ್ದರಿಂದ ರಾಜನಾದ ನೀನು ನಿನ್ನೆಲ್ಲ ಐಶ್ವರ್ಯವನ್ನು ಯಜ್ಞದಲ್ಲಿ ಉಪಯೋಗಿಸಿ ಧನ್ಯನಾಗು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 20ನೆಯ ಅಧ್ಯಾಯವು ಮುಗಿಯಿತು.
*****
21. ಇಪ್ಪತ್ತೊಂದನೆಯ ಅಧ್ಯಾಯ
ದೇವಸ್ಥಾನಮುನಿಗಳು ಯುಧಿಷ್ಠಿರನಿಗೆ ಸ್ವಧರ್ಮಾನುಷ್ಠಾನವೇ
ಶ್ರೇಯಸ್ಕರವೆಂದು ಉಪದೇಶ ಮಾಡಿದರು.
ದೇವಸ್ಥಾನಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಇಂದ್ರೇಣ ಸಮಯೇ ಪೃಷ್ಟೋ ಯದುವಾಚ ಬೃಹಸ್ಪತಿಃ ॥1॥
ದೇವಸ್ಥಾನ - ಧರ್ಮರಾಜನೇ! ಇದೇ ವಿಷಯದಲ್ಲಿ ಈ ಹಿಂದೆ ಒಂದು ಇತಿಹಾಸ ನಡೆದಿತ್ತು. ಇದನ್ನು ಜ್ಞಾನಿಜನರು ಉದಾಹರಣೆಯನ್ನಾಗಿ ಹೇಳುತ್ತಾರೆ. ಇದೇ ರೀತಿಯಲ್ಲಿ ಬೃಹಸ್ಪತ್ಯಾಚಾರ್ಯರ ಬಳಿ ದೇವೇಂದ್ರನು ಪ್ರಶ್ನಿಸಿದ್ದನು. ಆಗ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ಕುರಿತು ಆ ಇತಿಹಾಸವನ್ನು ಹೇಳಿದರು.
ಸಂತೋಷೋ ವೈ ಸ್ವರ್ಗತಮಃ ಸಂತೋಷಃ ಪರಮಂ ಸುಖಮ್ |
ತುಷ್ಟೇರ್ನ ಕಿಂಚಿತ್ ಪರತಃ ಸಾ ಸಮ್ಯಕ್ ಪ್ರತಿತಿಷ್ಠತಿ ॥2॥
ಸಂತೋಷವು ಸ್ವರ್ಗಕ್ಕೆ ಸಮಾನವಾಗಿರುತ್ತದೆ. ಸಂತೋಷವೇ ಪರಮಸುಖ- ವಾಗಿದೆ. ಸಂತೋಷಕ್ಕಿಂತ ಮಿಗಿಲಾಗಿದುದು ಮತ್ತೊಂದಿಲ್ಲ. ಇಂಥ ಸಂತೋಷ- ವನ್ನು ಪಡೆದ ಮೇಲೆ ಮತ್ತೊಂದರ ಅಪೇಕ್ಷೆಯೇ ಇರುವುದಿಲ್ಲ.
ಯದಾ ಸಂಹರತೇ ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ |
ತದಾಽಽತ್ಮಜ್ಯೋತಿರಚಿರಾತ್ ಸ್ವಾತ್ಮನ್ಯೇವ ಪ್ರಸೀದತಿ ॥3॥
ಆಮೆಯು ತನ್ನ ಅವಯವಗಳನ್ನು ತನ್ನಲ್ಲಿ ಹೇಗೆ ಅಡಗಿಸಿಕೊಳ್ಳುತ್ತದೋ, ಅದರಂತೆ ಯಾರು ತನ್ನ ಇಂದ್ರಿಯಗಳನ್ನೆಲ್ಲಾ ಕಾಮಗಳಿಗೆ ಒಳಪಡಿಸದೇ ತನ್ನೊಳಗೆ ಅಡಗಿಸಿಕೊಳ್ಳುತ್ತಾನೋ, ಆಗ ಅವನಿಗೆ ಜ್ಯೋತಿರ್ಮಯವಾದ ಆತ್ಮತತ್ವವು ಮನಸ್ಸಿನಲ್ಲಿ ಪ್ರಕಟವಾಗುತ್ತದೆ.
ನ ಬಿಭೇತಿ ಯದಾ ಚಾಯಂ ಯದಾ ಚಾಸ್ಮಾನ್ನ ಬಿಭ್ಯತಿ |
ಕಾಮದ್ವೇಷೌ ಚ ಜಯತಿ ತದಾಽಽತ್ಮಾನಂ ಚ ಪಶ್ಯತಿ ॥4॥
ಯಾವಾಗ ಮನುಷ್ಯನು ಯಾವುದೇ ಕಾರಣಕ್ಕೂ ಯಾರಿಂದಲೂ ಹೆದರುವು- ದಿಲ್ಲವೋ, ಮತ್ತು ಯಾವಾಗ ಅವನಿಂದ ಯಾರಿಗೂ

ಯಾವುದೇ ವಿಧವಾದ ಭಯವು ಇರುವುದಿಲ್ಲವೋ? ಯಾವಾಗ ಯಾರು ರಾಗದ್ವೇಷಗಳನ್ನು ಜಯಿಸಿರು- ತ್ತಾನೋ, ಆಗ ಅಂಥವನು ತನ್ನ ಹೃದಯದಲ್ಲಿ ಪರಮಾತ್ಮ ತತ್ವವನ್ನು ಕಾಣುತ್ತಾನೆ.
ಯದಾಸೌ ಸರ್ವಭೂತಾನಾಂ ನ ದ್ರುಹ್ಯತಿ ನ ಕಾಂಕ್ಷತಿ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥5॥
ಯಾವ ಪ್ರಾಣಿಗೇ ಆಗಲಿ ಮನೋ-ವಾಕ್-ಕಾಯಗಳಿಂದ ದ್ರೋಹವನ್ನು ಮಾಡುವುದಿಲ್ಲವೋ, ಮತ್ತೊಬ್ಬನಿಗೆ ದ್ರೋಹವಾಗುವುದನ್ನು ಬಯಸುವುದೂ ಇಲ್ಲವೋ, ಇತರ ಯಾವುದೇ ವಸ್ತುವನ್ನೂ ಕೂಡ ಬಯಸುವುದಿಲ್ಲವೋ, ಅಂಥವನು ತನ್ನ ಹೃದಯದಲ್ಲಿ ಪರಮಾತ್ಮ ತತ್ವವನ್ನು ಕಾಣುತ್ತಾನೆ.
ಏವಂ ಕೌಂತೇಯ ಭೂತಾನಿ ತಂ ತಂ ಧರ್ಮಂ ತಥಾ ತಥಾ |
ತದಾಽಽತ್ಮನಾ ಪ್ರಪಶ್ಯಂತಿ ತಸ್ಮಾದ್ ಬುದ್ಧ್ಯಸ್ವ ಭಾರತ ॥6॥
ಓ ಯುಧಿಷ್ಠಿರನೇ! ಸಮಸ್ತಮನುಷ್ಯರು ತಮ್ಮ ಧರ್ಮಗಳನ್ನು ಆಯಾ- ಕಾಲಗಳಲ್ಲಿ ವಿಧಿಪ್ರಕಾರವಾಗಿ ಆಚರಿಸುತ್ತಾ, ತಮ್ಮ ಹೃದಯದಲ್ಲಿ ಪರಮಾತ್ಮನನ್ನು ಕಾಣುತ್ತಾರೆ. ಆದ್ದರಿಂದ ನೀನೂ ಸಹ ಕರ್ತವ್ಯದಲ್ಲಿ ನಿರತನಾಗು.
ಅನ್ಯೇ ಸಾಮ ಪ್ರಶಂಸಂತಿ ವ್ಯಾಯಾಮಮಪರೇ ಜನಾಃ |
ನೈಕಂ ನ ಚಾಪರಂ ಕೇಚಿದುಭಯಂ ಚ ತಥಾಪರೇ ॥7॥
ಕೆಲವರು ಪ್ರಿಯವಚನವನ್ನೇ ಶ್ರೇಷ್ಠವೆನ್ನುವರು. ಇನ್ನೂ ಕೆಲವರು ಯಾಗಾದಿ- ಕರ್ಮಗಳನ್ನು ಶ್ರೇಷ್ಠವೆನ್ನುವರು. ಇನ್ನೂ ಕೆಲವರು ಸನ್ನ್ಯಾಸವನ್ನು ಶ್ರೇಷ್ಠವೆನ್ನುವರು. ಕೆಲವರು ಇವುಗಳಲ್ಲಿ ಒಂದನ್ನು ಮಾತ್ರ ಶ್ರೇಷ್ಠವೆಂದು ಪ್ರಶಂಸೆ ಮಾಡುವುದಿಲ್ಲ. ಈ ಎರಡನ್ನೂ ಕೂಡ ಪ್ರಶಂಸೆ ಮಾಡುತ್ತಾರೆ.
ಟಿಪ್ಪಣಿ - ಅನ್ಯೇ ಸಾಮ ಪ್ರಶಂಸಂತಿ ಇತ್ಯತ್ರ ಸಾಮ ಪ್ರಿಯವಚನಮ್ | ಏಕಂ ಪ್ರಾಗುಕ್ತಂ ಸಾಮ, ಅಪರಂ ಪಶ್ಚಾದುಕ್ತಂ ವ್ಯಾಯಾಮಂ ಚ ನ ಪ್ರಶಂಸಂತಿ, ಅರಣ್ಯೇ ತಪಸ್ಯೇವ ವರ್ತಂತ ಇತಿ ಭಾವಃ | `ಅನ್ಯೇ ಸಾಮ ಪ್ರಶಂಸಂತಿ' ಸಾಮ ಶಬ್ದಕ್ಕೆ `ಪ್ರಿಯವಾದ ಮಾತು 'ಎಂದರ್ಥ. `ಏಕಂ' ಎಂಬ ಶಬ್ದಕ್ಕೆ `ಹಿಂದೆ ಹೇಳಿದ ಸಾಮವಚನ' ಎಂದರ್ಥ. ಅಪರಂ ಎಂದರೆ ವ್ಯಾಯಾಮ ಎಂದರ್ಥ.
ವಿವರಣೆ - ಸಂತೋಷ ಅಥವಾ ಪರಮಾತ್ಮನ ಸಾಕ್ಷಾತ್ಕಾರವಾಗುವುದು ಜೀವನದಲ್ಲಿ ಅತ್ಯಂತಶ್ರೇಷ್ಠವಾಗಿದೆ. ಇಂಥ ಸಂತೋಷವನ್ನು ಪಡೆದುಕೊಳ್ಳ- ಬೇಕೆಂದರೆ ಅರಣ್ಯಕ್ಕೆ ಹೋಗಬೇಕಾಗಿಲ್ಲ. ತಾನಿರುವಲ್ಲಿಯೇ ಅಂಥ ಸಂತೋಷ- ವನ್ನು ಪಡೆದುಕೊಳ್ಳಬಹುದು. ಮತ್ತು ಆತ್ಮ ಸಾಕ್ಷಾತ್ಕಾರಕ್ಕೆ ಸರ್ವತ್ಯಾಗವನ್ನೂ ಕೂಡ ಮಾಡಬೇಕಾಗಿಲ್ಲ. ಸಾಮಶಬ್ದಕ್ಕೆ ಪ್ರಿಯವಾದ ಮಾತುಗಳು ಎಂದರ್ಥ. ವ್ಯಾಯಾಮಪದಕ್ಕೆ ಯತ್ನ ಮತ್ತು ಪರಿಶ್ರಮ ಎಂದರ್ಥ. ಬೇರೆಯವರು ಧ್ಯಾನ- ವನ್ನು ಪ್ರಶಂಸೆ ಮಾಡಿಯೇ ಮಾಡುತ್ತಾರೆ. ಸಾಮ ಮತ್ತು ವ್ಯಾಯಾಮಗಳೆರಡನ್ನು ಅವಸ್ಥಾಭೇದದಿಂದ ಪ್ರಶಂಸೆ ಮಾಡುತ್ತಾರೆ ಎಂದರ್ಥ.
ಯಜ್ಞಮೇಕೇ ಪ್ರಶಂಸಂತಿ ಸನ್ನ್ಯಾಸಮಪರೇ ಜನಾಃ |
ದಾನಮೇಕೇ ಪ್ರಶಂಸಂತಿ ಕೇಚಿಚ್ಚೈವ ಪ್ರತಿಗ್ರಹಮ್ ॥8॥
ಕೆಲವರು ಯಜ್ಞವನ್ನು ಪ್ರಶಂಸೆ ಮಾಡುತ್ತಾರೆ. ಕೆಲವರು ಸನ್ನ್ಯಾಸವನ್ನು ಪ್ರಶಂಸೆ ಮಾಡುತ್ತಾರೆ. ಇನ್ನೂ ಕೆಲವರು ದಾನ ಮಾಡುವುದನ್ನು ಪ್ರಶಂಸೆ ಮಾಡುತ್ತಾರೆ. ಕೆಲವರು ದಾನವನ್ನು ತೆಗೆದುಕೊಳ್ಳುವುದೇ ಶ್ರೇಷ್ಠವೆಂದು ಹೇಳುತ್ತಾರೆ.
ಕೇಚಿತ್ ಸರ್ವಂ ಪರಿತ್ಯಜ್ಯ ತೂಷ್ಣೀಂ ಧ್ಯಾಯಂತ ಆಸತೇ |
ಕೆಲವರು ಎಲ್ಲವನ್ನೂ ಪರಿತ್ಯಾಗ ಮಾಡಿ, ಮೌನವಾಗಿ ಧ್ಯಾನದಲ್ಲಿಯೇ ಆಸಕ್ತ -ರಾಗಿರುತ್ತಾರೆ.
ರಾಜ್ಯಮೇಕೇ ಪ್ರಶಂಸಂತಿ ಪ್ರಜಾನಾಂ ಪರಿಪಾಲನಮ್ ॥9॥
ಹತ್ವಾ ಛಿತ್ತ್ವಾ ಚ ಭಿತ್ತ್ವಾ ಚ ಕೇಚಿದೇಕಾಂತಶೀಲಿನಃ |
ಕೆಲವರು ಶತ್ರುಗಳನ್ನು ಕೊಂದು, ಶತ್ರುಸೈನಿಕರನ್ನು ತುಂಡರಿಸಿ, ಶತ್ರುಗಳ ಕೋಟೆಯನ್ನು ಭೇದಿಸಿ ಶುತ್ರರಾಜ್ಯವನ್ನು ವಶಮಾಡಿಕೊಂಡು ಪ್ರಜೆಗಳನ್ನು ಪರಿಪಾಲನೆ ಮಾಡುವ ರಾಜ್ಯವನ್ನೇ ಪ್ರಶಂಸೆ ಮಾಡುತ್ತಾರೆ. ಇನ್ನೂ ಕೆಲವರು ಏಕಾಂತವಾಸದಲ್ಲಿ ಧ್ಯಾನಶೀಲವಾಗಿರುವುದನ್ನು ಪ್ರಶಂಸೆ ಮಾಡುತ್ತಾರೆ.
ಏತತ್ ಸರ್ವಂ ಸಮಾಲೋಕ್ಯ ಬುಧಾನಾಮೇಷ ನಿಶ್ಚಯಃ ॥10॥
ಅದ್ರೋಹೇಣೈವ ಭೂತಾನಾಂ ಯೋ ಧರ್ಮಃ ಸ ಸತಾಂ ಮತಃ |
ಇವನ್ನೆಲ್ಲಾ ಸರಿಯಾಗಿ ವಿಮರ್ಶೆ ಮಾಡಿ ಕೊನೆಯಲ್ಲಿ ಪಂಡಿತರು ಹೀಗೆ ನಿಶ್ಚಯಿಸಿದ್ದಾರೆ. ಪ್ರಾಣಿಗಳಿಗೆ ದ್ರೋಹವಿಲ್ಲದೇ ಮಾಡುವ ಧರ್ಮವೇ ಸಜ್ಜನರಿಗೆ ಸಮ್ಮತವಾಗಿದೆ ಎಂದು.
ಅದ್ರೋಹಃ ಸತ್ಯವಚನಂ ಸಂವಿಭಾಗೋ ದಯಾ ದಮಃ ॥11॥
ಪ್ರಜನಂ ಸ್ವೇಷು ದಾರೇಷು ಮಾರ್ದವಂ ಹ್ರೀರಚಾಪಲಮ್ |
ಏವಂ ಧರ್ಮಂ ಪ್ರಧಾನೇಷ್ಟಂ ಮನುಃ ಸ್ವಾಯಂಭುವೋಽಬ್ರವೀತ್ ॥12॥
ತಸ್ಮಾದೇತತ್ ಪ್ರಯತ್ನೇನ ಕೌಂತೇಯ ಪ್ರತಿಪಾಲಯ |
ದ್ರೋಹವಿಲ್ಲದಿರುವುದು, ಸತ್ಯವನ್ನೇ ಹೇಳುವುದು, ದಾನ ಮಾಡುವುದು, ದಯೆ ಇರುವುದು, ಇಂದ್ರಿಯನಿಗ್ರಹವನ್ನು ಹೊಂದಿರುವುದು. ತನ್ನ ಹೆಂಡತಿಯ- ಲ್ಲಷ್ಟೇ ಸಂತಾನವನ್ನು ಉತ್ಪತ್ತಿ ಮಾಡುವುದು. ಎಲ್ಲರ ವಿಷಯದಲ್ಲಿ ಮೃದುವಾಗಿ- ರುವುದು, ದುಷ್ಕರ್ಮಗಳನ್ನು ಮಾಡಲು ನಾಚಿಕೊಳ್ಳುವುದು. ಜಿಹ್ವಾಚಾಪಲ್ಯ, ದೃಷ್ಟಿಚಾಪಲ್ಯ, ಸ್ಪರ್ಶಚಾಪಲ್ಯಗಳಿಂದ ದೂರವಿರುವುದು. ಇವುಗಳೇ ಶ್ರೇಷ್ಠವಾದ ಮತ್ತು ಇಷ್ಟವಾದ ಧರ್ಮಗಳೆಂದು ಸ್ವಾಯಂಭುವಮನು ಹೇಳಿರುತ್ತಾನೆ. ಆದ್ದರಿಂದ ನೀನೂ ಸಹ ಸ್ವಾಯಂಭುವಮನು ಹೇಳಿರುವಂತೆ ಈ ಎಲ್ಲಾ ಧರ್ಮಗಳನ್ನು ಪ್ರಯತ್ನಪೂರ್ವಕವಾಗಿ ಆಚರಿಸು.
ಯೋ ಹಿ ರಾಜ್ಯೇ ಸ್ಥಿತಃ ಶಶ್ವದ್ ವಶೀ ತುಲ್ಯಪ್ರಿಯಾಪ್ರಿಯಃ ॥13॥
ಕ್ಷತ್ರಿಯೋ ಯಜ್ಞಶಿಷ್ಟಾಶೀ ರಾಜಾ ಶಾಸ್ತ್ರಾರ್ಥತತ್ತ್ವವಿತ್ |

ಅಸಾಧುನಿಗ್ರಹರತಃ ಸಾಧೂನಾಂ ಪ್ರಗ್ರಹೇ ರತಃ ॥14॥
ಧರ್ಮವರ್ತ್ಮನಿ ಸಂಸ್ಥಾಪ್ಯ ಪ್ರಜಾ ವರ್ತೇತ ಧರ್ಮತಃ |
ಪುತ್ರಸಂಕ್ರಾಮಿತಶ್ರೀಶ್ಚ ವನೇ ವನ್ಯೇನ ವರ್ತಯನ್ ॥15॥
ವಿಧಿನಾ ಶ್ರಾವಣೇನೈವ ಕುರ್ಯಾತ್ ಕರ್ಮಾಣ್ಯತಂದ್ರಿತಃ |
ಯ ಏವಂ ವರ್ತತೇ ರಾಜನ್ ಸ ರಾಜಾ ಧರ್ಮನಿಶ್ಚಿತಃ ॥16॥
ಯಾರು ರಾಜ್ಯದಲ್ಲಿ ಸಿಂಹಾಸನಾರೂಢನಾಗಿ ಅಧಿಪತಿಯಾಗಿರುತ್ತಾನೋ, ಅವನು ಎಲ್ಲಾ ಇಂದ್ರಿಯಗಳನ್ನು ಜಯಿಸಿರಬೇಕು. ಪ್ರಿಯವಾದದ್ದನ್ನು ಅಪ್ರಿಯ- ವಾದದ್ದನ್ನು ಸಮಾನವಾಗಿ ಕಾಣುವ ಭಾವನೆಯುಳ್ಳವನಾಗಿರಬೇಕು. ಯಾಗವನ್ನು ಮಾಡಿ, ಅದರ ಶೇಷವನ್ನು ಭುಂಜಿಸಬೇಕು. ಶಾಸ್ತ್ರಾರ್ಥಗಳನ್ನು, ರಾಜನೀತಿಯನ್ನು ಯಥಾವತ್ತಾಗಿ ತಿಳಿದಿರಬೇಕು. ದುಷ್ಟರನ್ನು ಶಿಕ್ಷಿಸಬೇಕು. ಸಾಧುಗಳನ್ನು ರಕ್ಷಣೆ ಮಾಡಬೇಕು. ರಾಜ್ಯದಲ್ಲಿರುವ ಪ್ರಜೆಗಳು ಧರ್ಮವನ್ನು ಅನುಸರಿಸುವಂತೆ ಮಾಡ- ಬೇಕು. ಕೊನೆಯಲ್ಲಿ ರಾಜ್ಯವನ್ನು ತನ್ನ ಮಗನಿಗೆ ವಹಿಸಿಕೊಡಬೇಕು. ಅನಂತರ ಕಾಡಿಗೆ ತೆರಳಿ ಅಲ್ಲಿ ಸಿಗುವ ಗೆಡ್ಡೆ-ಗೆಣಸು ಮತ್ತು ಫಲಗಳಿಂದಲೇ ದೇಹಯಾತ್ರೆ- ಯನ್ನು ನಡೆಸಬೇಕು. ಎಚ್ಚರ ತಪ್ಪದೇ ವರ್ಣಾಶ್ರಮಧರ್ಮಗಳನ್ನು ಆಚರಿಸಬೇಕು. ಅರಣ್ಯದಲ್ಲಿ ಶಾಸ್ತ್ರಗಳ ಶ್ರವಣದಿಂದ ತಿಳಿದುಕೊಂಡ ಕರ್ಮಗಳನ್ನು ಆಚರಿಸಬೇಕು. ಇಂಥ ರಾಜನು ಧರ್ಮಪ್ರಭು ಎಂದು ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ವಿಧಿನಾ ಶ್ರಾವಣೇನೈವ ಇತ್ಯತ್ರ ಶ್ರಾವಣೇನ ಶ್ರವಣಾನುಕೂಲೇನ |
`ವಿಧಿನಾ ಶ್ರಾವಣೇನೈವ' ಎಂಬಲ್ಲಿ ಶ್ರಾವಣೇನ ಎಂದರೆ ಶ್ರವಣಾನುಕೂಲ- ವಾದದ್ದರಿಂದ.
ತಸ್ಯಾಯಂ ಚ ಪರಶ್ಚೈವ ಲೋಕಃ ಸ್ಯಾತ್ ಸಫಲೋದಯಃ |
ನಿರ್ವಾಣಂ ಹಿ ಸುದುಷ್ಪ್ರಾಪ್ಯಂ ಬಹುವಿಘ್ನಂ ಚ ಮೇ ಮತಮ್ ॥17॥
ಇಂಥ ಧರ್ಮಪ್ರಭುವಾದ ರಾಜನಿಗೆ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಶುಭಫಲಗಳೇ ದೊರೆಯುತ್ತವೆ. ನನ್ನ ಅಭಿಪ್ರಾಯದಲ್ಲಿ ಸನ್ಯಾಸದ ಮೂಲಕವಾಗಿ ಮೋಕ್ಷವನ್ನು ಹೊಂದುವುದು ಅತ್ಯಂತ ದುಷ್ಕರವಾಗಿದೆ. ಮತ್ತು ಅನೇಕವಾದ ವಿಘ್ನಗಳಿಂದಲೂ ಕೂಡ ಕೂಡಿರುತ್ತವೆ.
ಟಿಪ್ಪಣಿ - ನಿರ್ವಾಣಂ ಚ ಸುದುಷ್ಪ್ರಾಪ್ಯಮ್ ಇತ್ಯತ್ರ ನಿರ್ವಾಣಂ ಸರ್ವಪರಿತ್ಯಾಗ- ರೂಪಃ ಸನ್ಯಾಸಃ |
`ನಿರ್ವಾಣಂ ಚ ಸುದುಷ್ಪ್ರಾಪ್ಯಂ' - ಎಂಬಲ್ಲಿ `ನಿರ್ವಾಣಂ' = ಸರ್ವಪರಿತ್ಯಾಗ- ರೂಪವಾದ ಸನ್ಯಾಸ.
ಏವಂ ಧರ್ಮಮನುಕ್ರಾಂತಾಃ ಸತ್ಯದಾನತಪಃಪರಾಃ |
ಆನೃಶಂಸ್ಯಗುಣೈರ್ಯುಕ್ತಾಃ ಕಾಮಕ್ರೋಧವಿವರ್ಜಿತಾಃ ॥18॥
ಪ್ರಜಾನಾಂ ಪಾಲನೇ ಯುಕ್ತಾ ಧರ್ಮಮುತ್ತಮಮಾಸ್ಥಿತಾಃ |
ಗೋಬ್ರಾಹ್ಮಣಾರ್ಥೇ ಯುಧ್ಯಂತಃ ಪ್ರಾಪ್ತಾ ಗತಿಮನುತ್ತಮಾಮ್ ॥19॥
ಯಾರು ಈ ಕ್ರಮದಲ್ಲಿ ಧರ್ಮವನ್ನು ಅನುಸರಿಸುತ್ತಾರೋ, ಅವರು ಸತ್ಯ, ದಾನ, ತಪಸ್ಸು, ಸುಳ್ಳು ಹೇಳದಿರುವಿಕೆ ಮೊದಲಾದ ಗುಣಗಳಿಂದ ಕೂಡಿ, ಕಾಮಕ್ರೋಧರಹಿತರಾಗಿ ಪ್ರಜಾಪಾಲನದಲ್ಲಿ ಆಸಕ್ತರಾಗಿ, ಗೋಬ್ರಾಹ್ಮಣರ ಸೇವೆ- ಗಾಗಿಯೇ ಯುದ್ಧವನ್ನು ಮಾಡುತ್ತಾ ಉತ್ತಮವಾದ ಗತಿಯನ್ನು ಪಡೆಯುತ್ತಾರೆ.
ಏವಂ ರುದ್ರಾಃ ಸವಸಸ್ತಥಾಽಽದಿತ್ಯಾಃ ಪರಂತಪ |
ಸಾಧ್ಯಾ ರಾಜರ್ಷಿಸಂಘಾಶ್ಚ ಧರ್ಮಮೇತಂ ಸಮಾಶ್ರಿತಾಃ |
ಅಪ್ರಮತ್ತಾಸ್ತತಃ ಸ್ವರ್ಗಂ ಪ್ರಾಪ್ತಾಃ ಪುಣ್ಯೈಃ ಸ್ವಕರ್ಮಭಿಃ ॥20॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದೇವಸ್ಥಾನವಾಕ್ಯೇ ಏಕವಿಂಶೋಽಧ್ಯಾಯಃ ॥21॥
ಯುಧಿಷ್ಠಿರನೇ ! ಹೀಗೆ ರುದ್ರರು, ವಸುಗಳು, ಆದಿತ್ಯರು, ಸಾಧ್ಯರು, ಅನೇಕ ಋಷಿಗಳು ಅಪ್ರಮತ್ತರಾಗಿ ಇದೇ ಧರ್ಮವನ್ನು ಆಶ್ರಯಿಸಿ ತಮ್ಮ ತಮ್ಮ ಪುಣ್ಯಕರ್ಮಗಳಿಂದ ಸ್ವರ್ಗಲೋಕವನ್ನು ಪಡೆದುಕೊಳ್ಳುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 21ನೆಯ ಅಧ್ಯಾಯವು ಮುಗಿಯಿತು.
*****
22. ಇಪ್ಪತ್ತೆರಡನೆಯ ಅಧ್ಯಾಯ
ಕ್ಷತ್ರಿಯಧರ್ಮವೇ ಶ್ರೇಷ್ಠ ಎಂಬುದಾಗಿ ಸಮರ್ಥನೆ ಮಾಡುವ ಮೂಲಕ
ಪುನಃ ಯುಧಿಷ್ಠಿರನನ್ನು ಸಮಾಧಾನ ಪಡಿಸಲು ಅರ್ಜುನನ ಪ್ರಯತ್ನ.
ವೈಶಂಪಾಯನಃ
ವೈಶಂಪಾಯನರು ಜನಮೇಜಯರಾಜನನ್ನು ಕುರಿತು ಹೇಳುತ್ತಾರೆ -
ಅಸ್ಮಿನ್ನೇವಾಂತರೇ ವಾಕ್ಯಂ ಪುನರೇವಾರ್ಜುನೋಽಬ್ರವೀತ್ |
ನಿರ್ವಿಣ್ಣಮನಸಂ ಜ್ಯೇಷ್ಠಮಿದಂ ಭ್ರಾತರಮಚ್ಯುತಮ್ ॥1॥
ಯುಧಿಷ್ಠಿರನು ಧರ್ಮಕ್ಕೆ ಕಟ್ಟುಬಿದ್ದು, ತನ್ನ ನಿಲುವನ್ನು ಸಮರ್ಥನೆ ಮಾಡಿ- ಕೊಳ್ಳುತ್ತಿರುವ ಸಂದರ್ಭದಲ್ಲಿ ಪುನಃ ಅರ್ಜುನನು ತನ್ನ ನಿಲುವನ್ನು ಸಮರ್ಥಿಸಲು ಮುಂದಾದನು. ಅತ್ಯಂತ ಖಿನ್ನಮನಸ್ಕನಾಗಿದ್ದನು. ಸ್ವಲ್ಪವೂ ತನ್ನ ನಿರ್ಧಾರದಿಂದ ವಿಚಲಿತನಾಗದ ತನ್ನ ಹಿರಿಯಣ್ಣನ ಜೊತೆ ಈ ಮಾತುಗಳನ್ನು ಹೇಳಿದನು -
ಕ್ಷತ್ರಧರ್ಮೇಣ ಧರ್ಮಜ್ಞ ಪ್ರಾಪ್ಯ ರಾಜ್ಯಮನುತ್ತಮಮ್ |
ಜಿತ್ವಾ ಚಾರೀನ್ನರಶ್ರೇಷ್ಠ ತಪ್ಯತೇ ಕಿಂ ಭವಾನ್ ಭೃಶಮ್ ॥2॥
ಧರ್ಮವನ್ನು ಅರಿತ ಯುಧಿಷ್ಠಿರನಾದ ಅಣ್ಣನನ್ನು ಯಾರಿಂದಲೂ ಹೊಂದಲು ಸಾಧ್ಯವಾಗದ ರಾಜ್ಯವನ್ನು ನಿನ್ನ

ಕ್ಷಾತ್ರಧರ್ಮದಿಂದ ಗೆದ್ದಿರುವಿ. ಆ ರಾಜ್ಯಸಂಪತ್ತು ದೊರೆತ ಮೇಲೆ ದುಃಖಿತನಾಗಿರುವಿ. ಇದಕ್ಕೇನು ಕಾರಣ? ಎಂದೇ ಅರ್ಥವಾಗು-
ತ್ತಿಲ್ಲ.
ಕ್ಷತ್ರಿಯಾಣಾಂ ಮಹಾರಾಜ ಸಂಗ್ರಾಮೇ ನಿಧನಂ ಮತಮ್ |
ವಿಶಿಷ್ಟಂ ಬಹುಭಿರ್ಯಜ್ಞೈಃ ಕ್ಷತ್ರಧರ್ಮಮನುಸ್ಮರ ॥3॥
ಮಹಾರಾಜನೇ! ಕ್ಷತ್ರಿಯರಿಗೆ ಯುದ್ಧದಲ್ಲಿ ಮರಣವೇ ಸರ್ವಶ್ರೇಷ್ಠ. ಎಲ್ಲ ಯಜ್ಞಗಳಿಗಿಂತಲೂ ಕೂಡ ಅತ್ಯಂತ ಉತ್ತಮ. ಇಂಥ
ಕ್ಷಾತ್ರಧರ್ಮವು ಏನು ಹೇಳು- ತ್ತದೆ ಎಂಬುದನ್ನು ಒಮ್ಮೆ ಸ್ಮರಣೆಗೆ ತಂದುಕೋ.
ಬ್ರಾಹ್ಮಣಾನಾಂ ತಪಸ್ತ್ಯಾಗಃ ಪ್ರೇತ್ಯ ಧರ್ಮವಿಧಿಃ ಸ್ಮೃತಃ |
ಕ್ಷತ್ರಿಯಾಣಾಂ ಚ ನಿಧನಂ ಸಂಗ್ರಾಮೇ ವಿಹಿತಂ ಪ್ರಭೋ ॥4॥
ಬ್ರಾಹ್ಮಣರಿಗೆ ತ್ಯಾಗದಿಂದ ಅಥವಾ ಸನ್ಯಾಸದಿಂದಲೇ ಮರಣಹೊಂದುವುದು ಧರ್ಮಸಮ್ಮತವಾಗಿದೆ. ಆದರೆ ಕ್ಷತ್ರಿಯರಿಗೆ
ಯುದ್ಧದಲ್ಲಿ ಮರಣ ಹೊಂದುವುದೇ ಧರ್ಮಶಾಸ್ತ್ರಗಳಲ್ಲಿ ವಿಹಿತವಾಗಿದೆ.
ವಿವರಣೆ - ಬ್ರಾಹ್ಮಣರಿಗೆ ತ್ಯಾಗ ಮತ್ತು ತಪಸ್ಸು ಎರಡೂ ಕೂಡ ಬಹಳ ಮುಖ್ಯವಾದ ಧರ್ಮಗಳು. ಪುಣ್ಯಲೋಕಗಳನ್ನು
ಗಳಿಸಬೇಕೆಂದರೆ ತಮ್ಮೆಲ್ಲ ಸಂಪತ್ತನ್ನು ಮರಣದ ಸಂದರ್ಭದಲ್ಲಿ ಪರಿತ್ಯಾಗ ಮಾಡಿರಬೇಕು. ಅವುಗಳ ಮೇಲೆ ವ್ಯಾಮೋಹವನ್ನು
ಬಿಟ್ಟಿರಬೇಕು. ಹಾಗೇನಾದರೂ ಪರಿತ್ಯಾಗ ಮಾಡದೇ ಸಂಪತ್ತಿನ ಮೇಲೆ ಬಂಧು-ಬಾಂಧವರ ಮೇಲೆ ವ್ಯಾಮೋಹವನ್ನು ಇಟ್ಟುಕೊಂಡು
ಮರಣ- ವನ್ನು ಹೊಂದಿದರೆ ಸದ್ಗತಿಯು ಆಗುವುದಿಲ್ಲ. ಇದೇ ರೀತಿಯಾಗಿ ಕ್ಷತ್ರಿಯರಿಗೆ ಯುದ್ಧದಲ್ಲಿ ಮರಣಹೊಂದುವುದೇ
ಶ್ರೇಯಸ್ಕರ. ಅದನ್ನು ಬಿಟ್ಟು ಸನ್ಯಾಸಿ ಜೀವನವನ್ನು ಹೊಂದಿ ಮರಣವನ್ನು ಹೊಂದಿದರೆ ಕ್ಷತ್ರಿಯರಿಗೂ ಸದ್ಗತಿ- ಯಾಗದು.
ಶಸ್ತ್ರವನ್ನು ಎಂದೂ ಸಹ ಧರಿಸದೇ ಇರಬಾರದು. ಇಂಥ ಶ್ರೇಷ್ಠವಾದ ಕ್ಷಾತ್ರಧರ್ಮದಲ್ಲಿ ಮರಣವನ್ನು ಹೊಂದಿದ ಕ್ಷತ್ರಿಯರ
ವಿಷದಲ್ಲೇಕೆ ದುಃಖವನ್ನು ಹೊಂದಿರುವಿ.
ಕ್ಷಾತ್ರಧರ್ಮೋ ಮಹಾರೌದ್ರಃ ಶಸ್ತ್ರನಿತ್ಯ ಇತಿ ಸ್ಮೃತಃ |
ವಧಶ್ಚ ಭರತಶ್ರೇಷ್ಠ ಕಾಲೇ ಶಸ್ತ್ರೇಣ ಸಂಯುಗೇ ॥5॥
ಕ್ಷತ್ರಿಯರು ಆಚರಿಸಬೇಕಾದ ಧರ್ಮವು ಅತ್ಯಂತ ಭಯಂಕರವಾಗಿದೆ. ನಿತ್ಯ- ವಾಗಿಯೂ ಶಸತ್ರಸ್ತ್ರಗಳನ್ನು ಧರಿಸುವುದೇ ಅವರ
ಧರ್ಮವಾಗಿದೆ. ಸಂದರ್ಭ ಬಂದಾಗ ಯುದ್ಧವನ್ನು ಮಾಡಲೇ ಬೇಕು. ಆಗ ಶಸ್ತ್ರದಿಂದ ವಧೆಯಾದರೂ ಚಿಂತಿಸಬಾರದು. ಇದುವೇ
ಕ್ಷತ್ರಿಯರ ಧರ್ಮ.
ಬ್ರಾಹ್ಮಣಸ್ಯಾಪಿ ಚೇದ್ ರಾಜನ್ ಕ್ಷತ್ರಧರ್ಮೇಣ ವರ್ತತಃ |
ಪ್ರಶಸ್ತಂ ಜೀವಿತಂ ಲೋಕೇ ಕ್ಷತ್ರಂ ಹಿ ಬ್ರಹ್ಮಸಂಭವಮ್ ॥6॥
ಬ್ರಾಹ್ಮಣನಾದವನು ಕ್ಷಾತ್ರಧರ್ಮವನ್ನು ಅನುಸರಿಸಿ ಜೀವನವನ್ನು ಮಾಡುವು- ದಾದಲ್ಲಿ ಅವನಿಗೂ ಕೂಡ ಯುದ್ಧದಲ್ಲಿ
ಮರಣವನ್ನು ಹೊಂದುವುದು ಧರ್ಮ- ಶಾಸ್ತ್ರಕ್ಕೆ ಸಮ್ಮತವಾಗಿದೆ. ಏಕೆಂದರೆ ಕ್ಷತ್ರಿಯಜನ್ಮವು ಅತ್ಯಂತಪ್ರಶಸ್ತವಾಗಿದೆ. ಆ ಬ್ರಹ್ಮನಿಂದ
ಈ ಕ್ಷತ್ರಿಯಜಾತಿಯು ಹುಟ್ಟಿದೆ.
ವಿವರಣೆ - ಕ್ಷತ್ರಧರ್ಮದಿಂದ ಜೀವನವನ್ನು ನಡೆಸಲು ಹೊರಟಿರುವ ಬ್ರಾಹ್ಮಣನಿಗೂ ಕೂಡ ಯುದ್ಧದಲ್ಲಿ ಮರಣ ಹೊಂದುವುದೇ
ಧರ್ಮ. ಇದರಿಂದ ಅವನಿಗೆ ಸದ್ಗತಿಯಾಗುವುದರಲ್ಲಿ ಸಂಶಯವಿಲ್ಲ. ಉತ್ತಮವಾದ ಕ್ಷತ್ರಿಯಧರ್ಮ- ವನ್ನು ಆಶ್ರಯಿಸುವುದು
ಬ್ರಾಹ್ಮಣರಿಗೆ ದೋಷವಾಗುವುದಿಲ್ಲ. ಯಾವ ಬ್ರಹ್ಮನಿಂದ ಬ್ರಾಹ್ಮಣಜಾತಿಯು ಹುಟ್ಟಿದೆಯೋ, ಅವನಿಂದಲೇ ಕ್ಷತ್ರಿಯಜಾತಿಯೂ
ಕೂಡ ಹುಟ್ಟಿದೆ.
ನ ತ್ಯಾಗೋ ನ ಪುನರ್ಯಜ್ಞೋ ನ ತಪೋ ಮನುಜೇಶ್ವರ |
ಕ್ಷತ್ರಿಯಸ್ಯ ವಿಧೀಯಂತೇ ನ ಪರಸ್ವೋಪಜೀವನಮ್ ॥7॥
ಓ ಮನುಜೇಶ್ವರನೇ! ಕ್ಷತ್ರಿಯನಾದವನಿಗೆ ಸನ್ಯಾಸ, ಯಜ್ಞ, ತಪಸ್ಸು ಮತ್ತೊಬ್ಬರನ್ನು ಉಪಜೀವಿಸಿ, ಜೀವನವನ್ನು ನಿರ್ವಹಿಸುವುದು
ವಿಹಿತವಾಗಿರು- ವುದಿಲ್ಲ.
ಸ ಭವಾನ್ ಸರ್ವಧರ್ಮಜ್ಞೋ ಧರ್ಮಾತ್ಮಾ ಭರತರ್ಷಭ |
ರಾಜಾ ಮನೀಷೀ ನಿಪುಣೋ ಲೋಕೇ ದೃಷ್ಟಪರಾವರಃ ॥8॥
ಭರತರ್ಷಭನೇ! ನೀನು ಎಲ್ಲಾ ಧರ್ಮಗಳನ್ನು ಚೆನ್ನಾಗಿ ಅರಿತವನು. ಅಷ್ಟೇ ಅಲ್ಲದೇ ಆ ಎಲ್ಲ ಧರ್ಮಗಳನ್ನು ಮನನ
ಮಾಡಿರುವವನು. ಲೋಕವ್ಯವಹಾರ- ಗಳಲ್ಲಿ ನಿಪುಣನಾಗಿರುವವನು. ಲೋಕದಲ್ಲಿ ಯಾವುದು ಶ್ರೇಷ್ಠ, ಯಾವುದು ಶ್ರೇಷ್ಠವಲ್ಲ
ಎಂಬುದನ್ನು ಯಥಾರ್ಥವಾಗಿ ತಿಳಿದವನು. ಅತ್ಯಂತ ಬುದ್ಧಿವಂತನಾದ ನಿನಗೆ ಈ ದುಃಖವು ಉಚಿತವಲ್ಲ.
ತ್ಯಕ್ತ್ವಾ ಸಂತಾಪಜಂ ಶೋಕಂ ದಂಶಿತೋ ಭವ ಕರ್ಮಣಿ |
ಕ್ಷತ್ರಿಯಸ್ಯ ವಿಶೇಷೇಣ ಹೃದಯಂ ವಜ್ರಸನ್ನಿಭಮ್ ॥9॥
ಸಂತಾಪದಿಂದ ಹುಟ್ಟಿದ ಈ ಶೋಕವನ್ನು ಪರಿತ್ಯಾಗ ಮಾಡು. ರಾಜನಿಗೆ ಉಚಿತವಾದ ಕಾರ್ಯಗಳನ್ನು ಮಾಡಲು ಸಿದ್ಧನಾಗು.
ಕ್ಷತ್ರಿಯನಾದವನಿಗೆ ಹೃದಯವು ವಜ್ರದಂತೆ ಅತ್ಯಂತಕಠಿಣವಾಗಿರಬೇಕು. ನೀನೂ ಸಹ ಅಂಥ ಕಾಠಿಣ್ಯ- ವನ್ನು ಹೊಂದಿ
ಕ್ಷಾತ್ರಧರ್ಮವನ್ನು ಅನುಸರಿಸು.
ಜಿತ್ವಾರೀನ್ ಕ್ಷತ್ರಧರ್ಮೇಣ ಪ್ರಾಪ್ಯ ರಾಜ್ಯಮಕಂಟಕಮ್ |
ವಿಜಿತಾತ್ಮಾ ಮನುಷ್ಯೇಂದ್ರ ಯಜ್ಞದಾನಪರೋ ಭವ ॥10॥
ಕ್ಷಾತ್ರಧರ್ಮದಿಂದ ಎಲ್ಲ ಶತ್ರುಗಳನ್ನು ಗೆದ್ದು ಯಾರ ಉಪದ್ರವವೂ ಇಲ್ಲದ ರಾಜ್ಯವನ್ನು ಪಡೆದುಕೊಂಡಿರುವಿ. ಇಂಥ ನೀನು
ಶೋಕಾವಿರ್ಭೂತವಾದ ಮನಸ್ಸನ್ನು ಜಯಿಸಲೇಬೇಕು. ಯಜ್ಞ ಮತ್ತು ದಾನಗಳನ್ನು ಮಾಡುವುದರಲ್ಲಿ ಆಸಕ್ತನಾಗು.
ಇಂದ್ರೋ ವೈ ಬ್ರಹ್ಮಣಃ ಪುತ್ರಃ ಕ್ಷತ್ರಿಯಃ ಕರ್ಮಣಾಭವತ್ |

ಜ್ಞಾತೀನಾಂ ಪಾಪವೃತ್ತೀನಾಂ ಜಘಾನ ನವತೀರ್ನವ ॥11॥
ಇಂದ್ರನು ಕಶ್ಯಪಋಷಿಯ ಮಗನಾದ್ದರಿಂದ ಬ್ರಾಹ್ಮಣನೇ ಆಗಿರುವನು. ಆದರೂ ಕೂಡ ತನ್ನ ಕರ್ಮದಿಂದ ಕ್ಷಾತ್ರಧರ್ಮವನ್ನು ಅನುಸರಿಸಿದನು. ಕ್ಷಾತ್ರ- ಧರ್ಮಕ್ಕೆ ಅನುಸಾರಿಯಾಗಿ ಪಾಪವೃತ್ತಿಯುಳ್ಳ ಜ್ಞಾತಿಗಳಾದ ಎಂಟುನೂರ ಹತ್ತು- ಮಂದಿ ದೈತ್ಯರನ್ನು ಸಂಹಾರ ಮಾಡಿದನು.
ತಚ್ಚಾಸ್ಯ ಕರ್ಮ ಪೂಜ್ಯಂ ಹಿ ಪ್ರಶಸ್ಯಂ ಚ ವಿಶಾಂಪತೇ |
ತೇನ ಚೇಂದ್ರತ್ವಂ ಸಮಾಪೇದೇ ದೇವಾನಾಮಿತಿ ನಃ ಶ್ರುತಮ್ ॥12॥
ಬ್ರಾಹ್ಮಣನಾಗಿ ಹುಟ್ಟಿ ಕ್ಷಾತ್ರಧರ್ಮವನ್ನು ಅನುಸರಿಸಿದನು ಎಂಬುದಾಗಿ ಯಾರೂ ಸಹ ಆ ದೇವೇಂದ್ರನನ್ನು ನಿಂದನೆ ಮಾಡಲಿಲ್ಲ. ಪ್ರಶಂಸೆಯನ್ನೇ ಮಾಡಿದರು. ಹೀಗೆ ಕ್ಷಾತ್ರಧರ್ಮವನ್ನು ಅವಲಂಬಿಸಿ ದೈತ್ಯರನ್ನು ಸಂಹಾರ ಮಾಡಿದ ಕಾರಣದಿಂದ ಅವನಿಗೆ ದೇವೇಂದ್ರಪದವಿಯೇ ದೊರೆಯಿತು. ಈ ಕಥೆಯನ್ನು ನಾವು ಕೇಳಿದ್ದೇವಷ್ಟೇ.
ಸ ತ್ವಂ ಯಜ್ಞೈರ್ಮಹಾರಾಜ ಯಜಸ್ವ ಬಹುದಕ್ಷಿಣೈಃ |
ಯಥೈವೇಂದ್ರೋ ಮನುಷ್ಯೇಂದ್ರ ಚಿರಾಯ ವಿಗತಜ್ವರಃ ॥13॥
ಮಹಾರಾಜನಾದ ಮನುಷ್ಯೇಂದ್ರನೇ! ನೀನೂ ಕೂಡ ಚಿಂತೆ ಮತ್ತು ಶೋಕ- ಗಳನ್ನು ಪರಿತ್ಯಾಗ ಮಾಡು. ದೇವೇಂದ್ರನಂತೆ ಬಹುದಕ್ಷಿಣಾಕವಾದ ಯಜ್ಞಗಳಿಂದ ದೇವತೆಗಳನ್ನು ಆರಾಧನೆ ಮಾಡು.
ಮಾ ತ್ವಮೇವಂ ಗತೇ ಕಿಂಚಿಚ್ಛೋಚೇಥಾಃ ಕ್ಷತ್ರಿಯರ್ಷಭ |
ಗತಾಸ್ತೇ ಕ್ಷತ್ರಧರ್ಮೇಣ ಶಸ್ತ್ರಪೂತಾಃ ಪರಾಂ ಗತಿಮ್ ॥14॥
ಕ್ಷತ್ರಿಯಶ್ರೇಷ್ಠನೇ! ನಾನು ಹೇಳುತ್ತಿರುವುದೇ ಸತ್ಯವಾದ ಮಾರ್ಗ. ಕಳೆದು ಹೋದ ವಿಷಯದಲ್ಲಿ ಸ್ವಲ್ಪವೂ ಕೂಡ ದುಃಖವು ಪಡಬೇಡ. ಕ್ಷತ್ರಿಯಧರ್ಮಕ್ಕೆ ಅನುಸಾರಿಯಾಗಿ ಯುದ್ಧವನ್ನು ಮಾಡುತ್ತಿದ್ದ ಆ ನಿನ್ನ ಬಂಧುಗಳು ಮತ್ತು ದಾಯಾದಿಗಳು ಶಸ್ತ್ರಪೂತರಾಗಿ ಅತ್ಯಂತ ಶ್ರೇಷ್ಠವಾದ ಸದ್ಗತಿಯನ್ನು ಹೊಂದಿದ್ದಾರೆ.
ಭವಿತವ್ಯಂ ತಥಾ ತಚ್ಚ ಯದ್ ವೃತ್ತಂ ಭರತರ್ಷಭ |
ದಿಷ್ಟಂ ಹಿ ರಾಜಶಾರ್ದೂಲ ನ ಶಕ್ಯಮತಿವರ್ತಿತುಮ್ ॥15॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅರ್ಜುನವಾಕ್ಯೇ ದ್ವಾವಿಂಶೋಽಧ್ಯಾಯಃ ॥22॥
ಭರತವಂಶೋದ್ಭವನೇ! ರಾಜಸಿಂಹನೇ! ಯಾವುದು ಆಗಬೇಕೋ? ಅದು ಆಗಿಯೇ ಆಗುತ್ತದೆ. ಇದಕ್ಕೆ ನಾನು ನೀನು ಅಥವಾ ಬೇರೆ ಯಾರೂ ಸಹ ಕಾರಣ- ರಲ್ಲ. ವಿಧಿಯ ನಿಯಮವನ್ನು ಉಲ್ಲಂಘನೆ ಮಾಡಿ ನಡೆಯಲು ಯಾರಿಂದಲೂ ಕೂಡ ಸಾಧ್ಯವಾಗುವುದಿಲ್ಲ. ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 22ನೆಯ ಅಧ್ಯಾಯವು ಮುಗಿಯಿತು.
*****
23. ಇಪ್ಪತ್ಮೂರನೆಯ ಅಧ್ಯಾಯ
ವೇದವ್ಯಾಸಋಷಿಗಳು ಯುಧಿಷ್ಠಿರನಿಗೆ ಕ್ಷಾತ್ರಧರ್ಮದ ಅನುಷ್ಠಾನವೇ ನಿನಗೆ ಉಚಿತವೆಂದು ಉಪದೇಶಿಸಿದರು. ಇದಕ್ಕೆ ಶಂಖಲಿಖಿತರ ಕಥೆಯನ್ನು ಹೇಳುವ ಪ್ರಸಂಗದಲ್ಲಿ ಸುದ್ಯುಮ್ನರಾಜನ ದಂಡಧರ್ಮಪರಿಪಾಲನೆಯ ಮಹತ್ವವನ್ನು ಉದಾಹರಣೆಯನ್ನಾಗಿ ತಿಳಿಸಿದರು.
ವೈಶಂಪಾಯನಃ
ಏವಮುಕ್ತಸ್ತು ಕೌಂತೆಯೋ ಗುಡಾಕೇಶೇನ ಪಾಂಡವಃ |
ನೋವಾಚ ಕಿಂಚಿತ್ ಕೌರವ್ಯಸ್ತತೋ ದ್ವೈಪಾಯನೋಽಬ್ರವೀತ್ ॥1॥
ವೈಶಂಪಾಯನ - ಭರತಕುಲೋತ್ಪನ್ನನೇ! ಅರ್ಜುನನು ಯುಕ್ತಿಬದ್ಧವಾದ ಧರ್ಮಸಮ್ಮತವಾದ ಇಷ್ಟು ಮಾತುಗಳನ್ನು ಹೇಳಿದರೂ ಕೂಡ ಕುಂತಿಯ ಮಗ- ನಾದ ಯುಧಿಷ್ಠಿರನಿಗೆ ಯಾವುದೇ ಪರಿವರ್ತನೆ ಆಗಲಿಲ್ಲ. ಮೌನವಾಗಿಯೇ ಕುಳಿ- ತನು. ಆಗ ಸಾಕ್ಷಾತ್ ವೇದವ್ಯಾಸದೇವರು ಯುಧಿಷ್ಠಿರನನ್ನು ಕುರಿತು ಹಿತೋಪದೇಶ- ವನ್ನು ಮಾಡಲು ಪ್ರವೃತ್ತರಾದರು.
ಶ್ರೀವೇದವ್ಯಾಸಃ
ಬೀಭತ್ಸೋರ್ವಚನಂ ಸೌಮ್ಯ ಸತ್ಯಮೇತದ್ ಯುಧಿಷ್ಠಿರ |
ಶಾಸ್ತ್ರದೃಷ್ಟಃ ಪರೋ ಧರ್ಮಃ ಸ್ಥಿತೋ ಗಾರ್ಹಸ್ಥ್ಯಮಾಶ್ರಿತಃ ॥2॥
ವೇದವ್ಯಾಸದೇವರು ಯುಧಿಷ್ಠಿರನೇ! ಅರ್ಜುನನ ಮಾತುಗಳೆಲ್ಲವೂ ಸತ್ಯವೇ ಆಗಿವೆ. ಶಾಸ್ತ್ರಸಮ್ಮತವಾಗಿವೆ. ಶಾಸ್ತ್ರದಲ್ಲಿ ಗೃಹಸ್ಥಧರ್ಮವನ್ನು ಆಶ್ರಯಿಸಿರುವ ರಾಜ್ಯಶಾಸ್ತ್ರಧರ್ಮವು ಅತ್ಯಂತ ಶ್ರೇಷ್ಠವೆಂದು ಹೇಳಲ್ಪಟ್ಟಿದೆ.
ಸ್ವಧರ್ಮಂ ಚರ ಧರ್ಮಜ್ಞ ಯಥಾಶಾಸ್ತ್ರಂ ಯಥಾವಿಧಿ |
ನ ಹಿ ಗಾರ್ಹಸ್ಥ್ಯಮುತ್ಸೃಜ್ಯ ತವಾರಣ್ಯಂ ವಿಧೀಯತೇ ॥3॥
ಧರ್ಮಜ್ಞನೇ! ವಿಧಿಗೆ ಅನುಸಾರಿಯಾಗಿ ಕರ್ತವ್ಯವನ್ನು ನಿರ್ವಹಿಸು. ಶಾಸ್ತ್ರಕ್ಕೆ ಅನುಗುಣವಾದ ಸ್ವಧರ್ಮಾಚರಣೆಯನ್ನು ಆಚರಿಸು. ಶ್ರೇಷ್ಠವಾದ ಗೃಹಸ್ಥಾಶ್ರಮ- ವನ್ನು ಪರಿತ್ಯಾಗ ಮಾಡಿ, ಅರಣ್ಯದಲ್ಲಿ ಜೀವಿಸುವುದು ಕ್ಷತ್ರಿಯನಾದ ನಿನಗೆ ವಿಹಿತವಲ್ಲ.
ಗೃಹಸ್ಥಂ ಹಿ ಸದಾ ದೇವಾಃ ಪಿತರೋಽತಿಥಯಸ್ತಥಾ |
ಭೃತ್ಯಾಶ್ಚೈವೋಪಜೀವಂತಿ ತಾನ್ ಭರಸ್ವ ಮಹೀಪತೇ ॥4॥
ಯಾವಾಗಲೂ ಕೂಡ ದೇವತೆಗಳು, ಪಿತೃಗಳು, ಅತಿಥಿಗಳು, ಸೇವಕರು, ಗೃಹಸ್ಥರನ್ನೇ ಆಶ್ರಯಿಸಿ ಜೀವಿಸುತ್ತಾರೆ. ಆದ್ದರಿಂದ ಅವರೆಲ್ಲರಿಗೂ ಆಶ್ರಯನಾಗಿ ನೀನು ಗೃಹಸ್ಥಾಶ್ರಮಧರ್ಮವನ್ನೇ ಪರಿಪಾಲನೆ ಮಾಡಬೇಕು.
ವಯಾಂಸಿ ಪಶವಶ್ಚೈವ ಭೂತಾನಿ ಚ ಮಹಿಪತೇ |

ಗೃಹಸ್ಥೈರೇವ ಧಾರ್ಯಂತೇ ತಸ್ಮಾಚ್ಛ್ರೇಷ್ಠೋ ಗೃಹಾಶ್ರಮೀ ॥5॥
ಮಹೀಪತಿಯೇ! ಪಶುಗಳು, ಪಕ್ಷಿಗಳು ಉಳಿದೆಲ್ಲಾ ಪ್ರಾಣಿಗಳೂ ಕೂಡ ಗೃಹಸ್ಥರನ್ನೇ ರಕ್ಷಕರನ್ನಾಗಿ ಆಶ್ರಯಿಸಿರುತ್ತವೆ. ಗೃಹಸ್ಥರೇ ಎಲ್ಲಾ ಪ್ರಾಣಿಗಳ ಭರಣ ಮತ್ತು ಪೋಷಣೆಗಳನ್ನು ಮಾಡುತ್ತಾರೆ. ಆದ್ದರಿಂದಲೇ ಗೃಹಸ್ಥಾಶ್ರಮವು ಅತ್ಯಂತ ಶ್ರೇಷ್ಠವೆಂದು ತಿಳಿ.
ಸೋಽಯಂ ಚತುರ್ಣಾಮೇತೇಷಾಮಾಶ್ರಮಾಣಾಂ ದುರಾಚರಃ |
ತಂ ಚರಾದ್ಯ ವಿಧಿಂ ಪಾರ್ಥ ದುಶ್ಚರಂ ದುರ್ಬಲೇಂದ್ರಿಯೈಃ ॥6॥
ನಾಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮದ ಆಚರಣೆಯೇ ಅತ್ಯಂತಕಠಿಣವಾಗಿದೆ. ಯಾರಿಗೆ ಇಂದ್ರಿಯಗಳು ದುರ್ಬಲವಾಗಿರುತ್ತವೋ, ಅಂಥವರಿಗೆ ಈ ಗೃಹಸ್ಥಾ- ಶ್ರಮದ ಆಚರಣೆಯನ್ನು ಮಾಡಲು ಸಾಧ್ಯವಾಗುವುದಿಲ್ಲ. ಇಂಥ ಅಸಾಧ್ಯವಾದ ಗೃಹಸ್ಥಾಶ್ರಮಧರ್ಮವನ್ನು ನೀನು ಈಗಿನಿಂದಲೇ ಆಚರಿಸುವವನಾಗು.
ವೇದಜ್ಞಾನಂ ಚ ತೇ ಕೃತ್ಸ್ನಂ ತಪಶ್ಚಾಚರಿತಂ ಮಹತ್ |
ಪಿತೃಪೈತಾಮಹಂ ರಾಜ್ಯಂ ಧುರ್ಯವದ್ವೋಢುಮರ್ಹಸಿ ॥7॥
ಓ ಧರ್ಮಜನೇ! ನಿನಗೆ ಎಲ್ಲ ವೇದಾರ್ಥಗಳ ಪರಿಜ್ಞಾನವಿದೆ. ಕಠಿಣವಾದ ತಪಸ್ಸನ್ನೂ ಕೂಡ ಆಚರಣೆ ಮಾಡಿರುವಿ. ನಿನ್ನ ತಂದೆ, ತಾತಂದಿರ ಕಾಲದಿಂದ ಆಗತವಾದ ಈ ರಾಜ್ಯವನ್ನು ನೀನು ದೊಡ್ಡ ಭಾರವನ್ನು ಹೊತ್ತಂತೆ ಧಾರಣೆ ಮಾಡಬೇಕು.
ತಪೋ ಯಜ್ಞಸ್ತಥಾ ವಿದ್ಯಾ ಭೈಕ್ಷ್ಯಮಿಂದ್ರಿಯಸಂಯಮಃ(ನಿಗ್ರಹಃ) |
ಧ್ಯಾನಮೇಕಾಂತಶೀಲತ್ವಂ ತುಷ್ಟಿರ್ಜ್ಞಾನಂ ಚ ಶಕ್ತಿತಃ ॥8॥
ಬ್ರಾಹ್ಮಣಾನಾಂ ಮಹಾರಾಜ ಚೇಷ್ಟಾ ಸಂಸಿದ್ಧಿಕಾರಿಕಾ |
ತಪಸ್ಸು, ಯಾಗ, ಅಧ್ಯಾತ್ಮವಿದ್ಯೆ, ಭಿಕ್ಷೆ, ಇಂದ್ರಿಯ ನಿಗ್ರಹ, ಧ್ಯಾನ, ಏಕಾಂತ- ವಾಸ, ಸಂತೋಷ, ಶಾಸ್ತ್ರಜ್ಞಾನ, ಶಕ್ತಿಗೆ ತಕ್ಕಂತೆ ದಾನ. ಈ ಎಲ್ಲ ಧರ್ಮಗಳು ಬ್ರಾಹ್ಮಣರಾದವರಿಗೆ ಸಿದ್ಧಿಯನ್ನು ತರುವ ಕಾರ್ಯಗಳಾಗಿವೆ. ಕ್ಷತ್ರಿಯರಿಗಲ್ಲ.
ಕ್ಷತ್ರಿಯಾಣಾಂ ತು ವಕ್ಷ್ಯಾಮಿ ತವಾಪಿ ವಿದಿತಂ ಪುನಃ ॥9॥
ಕ್ಷತ್ರಿಯರು ಯಾವ ಧರ್ಮವನ್ನು ಆಚರಿಸಬೇಕೆಂಬುದನ್ನು ನಿನಗೆ ತಿಳಿದಿದ್ದರೂ ಮತ್ತೊಮ್ಮೆ ಹೇಳುತ್ತೇನೆ ಕೇಳು.
ಯಜ್ಞೋ ವಿದ್ಯಾ ಸಮುತ್ಥಾನಮಸಂತೋಷಃ ಶ್ರಿಯಂ ಪ್ರತಿ |
ದಂಡಧಾರಣಮುಗ್ರತ್ವಂ ಪ್ರಜಾನಾಂ ಪರಿಪಾಲನಮ್ ॥10॥
ವೇದಜ್ಞಾನಂ ತಥಾ ಕೃತ್ಸ್ನಂ ತಪಃ ಸುಚರಿತಂ ತಥಾ |
ದ್ರವಿಣೋಪಾರ್ಜನಂ ಭೂರಿ ಪಾತ್ರೇ ಚ ಪ್ರತಿಪಾದನಮ್ ॥11॥
ಏತಾನಿ ರಾಜ್ಞಾಂ ಕರ್ಮಾಣಿ ಸುಕೃತಾನಿ ವಿಶಾಂಪತೇ |
ಇಮಂ ಲೋಕಮಮುಂ ಚೈವ ಸಾಧಯಂತೀತಿ ನಃ ಶ್ರುತಮ್ ॥12॥
ಯಜ್ಞ ಮಾಡುವುದು, ವಿದ್ಯಾಭ್ಯಾಸ ಮಾಡುವುದು, ಮಹಾಪ್ರಯತ್ನ, ಐಶ್ವರ್ಯದಲ್ಲಿ ಅತೃಪ್ತಿ, ದಂಡನೀತಿ, ನಿರ್ದಾಕ್ಷಿಣ್ಯ, ಪ್ರಜೆಗಳ ಪರಿಪಾಲನೆ, ವೇದಗಳ ಅರ್ಥವನ್ನು ಸಂಪೂರ್ಣವಾಗಿ ತಿಳಿಯುವುದು, ತಪಸ್ಸು, ಸದಾಚಾರ, ಧನಾರ್ಜನೆ, ಸತ್ಪಾತ್ರರಲ್ಲಿ ದಾನ, ಇವೇ ಮೊದಲಾದ ಸತ್ಕರ್ಮಗಳು ಕ್ಷತ್ರಿಯರಿಗೆ ಅತ್ಯಂತ ಉಚಿತವಾಗಿವೆ. ಈ ಸತ್ಕರ್ಮಾಚರಣೆಗಳನ್ನು ಯಾರು ಆಚರಿಸುತ್ತಾರೋ, ಅಂಥವರು ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಸುಖವಾಗಿ ಇರುತ್ತಾರೆ. ಇಹಲೋಕದಲ್ಲಿ ಸುಖವಾಗಿದ್ದು, ಅವಸಾನಾಂತರದಲ್ಲಿಯೂ ಪುಣ್ಯಲೋಕಗಳನ್ನು ಪಡೆಯುತ್ತಾರೆ.
ಏಷಾಂ ಜ್ಯಾಯಸ್ತು ಕೌಂತೇಯ ದಂಡಧಾರಣಮುಚ್ಯತೇ |
ಬಲಂ ಹಿ ಕ್ಷತ್ರಿಯೇ ನಿತ್ಯಂ ಬಲೇ ದಂಡಃ ಸಮಾಹಿತಃ ॥13॥
ಮೇಲೆ ಉಲ್ಲೇಖಿಸಿದ ಕ್ಷತ್ರಿಯರ ಧರ್ಮಗಳಲ್ಲಿ ದಂಡಧಾರಣವೇ ಅತ್ಯಂತ ಶ್ರೇಷ್ಠವಾದ ಧರ್ಮವಾಗಿದೆ ಎಂದು ಶಾಸ್ತ್ರಗಳು ಹೇಳುತ್ತವೆ. ಕ್ಷತ್ರಿಯನಲ್ಲಿ ಬಲವು ನಿತ್ಯವಾಗಿರುತ್ತದೆ. ಕ್ಷತ್ರಿಯನ ಬಲದಲ್ಲಿ ದಂಡವು ಪ್ರತಿಷ್ಠಿತವಾಗಿದೆ. ದಂಡನೀತಿ- ಯನ್ನು ಅನುಸರಿಸಲು ಕ್ಷತ್ರಿಯನಿಗೆ ಬಲವಿರಬೇಕು.
ಏತಾ ವಿದ್ಯಾಃ ಕ್ಷತ್ರಿಯಾಣಾಂ ರಾಜನ್ ಸಂಸಿದ್ಧಿಕಾರಿಕಾಃ |
ಅಪಿ ಗಾಥಾಮಿಮಾಂ ಚಾಪಿ ಬೃಹಸ್ಪತಿರಗಾಯತ ॥14॥
ಈ ಎಲ್ಲ ಕ್ರಿಯೆಗಳು ಕ್ಷತ್ರಿಯರ ಸಂಸಿದ್ಧಿಗೆ ಕಾರಣಗಳಾಗಿವೆ. ಈ ಕ್ರಿಯೆಗಳ ಆಚರಣೆಯಿಂದ ಕ್ಷತ್ರಿಯರು ಎಲ್ಲಾ ಬಗೆಯ ಸಿದ್ಧಿಯನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಬೃಹಸ್ಪತಿಯು ಒಂದು ಗಾಥೆಯನ್ನು ಹೇಳಿರುವನು -
ಭೂಮಿರೇತೌ ನಿಗಿರತಿ ಸರ್ಪೋ ಬಿಲಶಯಾನಿವ |
ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥15॥
ಸರ್ಪವು ಬಿಲದಲ್ಲಿ ಅಡಗಿದ ಇಲಿಗಳನ್ನು ಹೇಗೆ ನುಂಗುತ್ತದೋ, ಹಾಗೇ ಭೂಮಿಯು ಶತ್ರುವನ್ನು, ಯುದ್ಧಮಾಡದ ಕ್ಷತ್ರಿಯನನ್ನು, ದೇಶಸಂಚಾರ ಮಾಡದ ಬ್ರಾಹ್ಮಣನನ್ನು ನುಂಗಿಬಿಡುತ್ತದೆ.
ಸುದ್ಯುಮ್ನಶ್ಚಾಪಿ ರಾಜರ್ಷಿಃ ಶ್ರೂಯತೇ ದಂಡಧಾರಣಾತ್ |
ಪ್ರಾಪ್ತವಾನ್ ಪರಮಾಂ ಸಿದ್ಧಿಂ ದಕ್ಷಃ ಪ್ರಾಚೇತಸೋ ಯಥಾ ॥16॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ವ್ಯಾಸವಾಕ್ಯೇ ತ್ರಯೋವಿಂಶೋಽಧ್ಯಾಯಃ ॥23॥
ರಾಜರ್ಷಿಯಾದ ಸುದ್ಯುಮ್ನನೂ ಕೂಡ ದಂಡಧಾರಣದಿಂದಲೇ ಪ್ರಚೇತಸ ಪುತ್ರನಾದ ದಕ್ಷನಂತೆ ಉತ್ತಮಸಿದ್ಧಿಯನ್ನು ಹೊಂದಿದನೆಂದು ಕೇಳಿದ್ದೇವೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 23ನೆಯ ಅಧ್ಯಾಯವು ಮುಗಿಯಿತು.

*****

24. ಇಪ್ಪತ್ನಾಲ್ಕನೆಯ ಅಧ್ಯಾಯ
ಯುಧಿಷ್ಠಿರನಿಗೆ ವೇದವ್ಯಾಸದೇವರಿಂದ ರಾಜಧರ್ಮದ ಉಪದೇಶ. ಶಂಖಲಿಖಿತರ ಕಥೆಯ ಉಲ್ಲೇಖ. ಅಪರಾಧಿಗಳಿಗೆ ಶಿಕ್ಷೆ ನೀಡುವುದರಿಂದಲೇ ರಾಜನಿಗೆ ಶುದ್ಧಿ. ಕಳ್ಳತನ ಮಾಡಿದ ಪ್ರೀತಿಯ ತಮ್ಮನಿಗೆ ಶಿಕ್ಷೆ ನೀಡಿದ ಅಣ್ಣನ ಉದಾತ್ತಚಿಂತನೆ. ಕಳ್ಳತನವು ಮಹಾಪಾತಕಗಳಲ್ಲಿ ಒಂದಾಗಿದೆ. ಬ್ರಹ್ಮಹತ್ಯೆಗೆ ಸಮಾನವಾಗಿದೆ. ಬ್ರಾಹ್ಮಣನಾದರೂ ಅಪರಾಧಮಾಡಿದ ಲಿಖಿತನಿಗೆ ಶಿಕ್ಷೆ ನೀಡಿದ್ದರಿಂದಲೇ ಸುದ್ಯುಮ್ನನು ಉದ್ಧಾರವಾದನು. ಅಪರಾಧಮಾಡಿದ ದುರ್ಯೋಧನಾದಿಗಳಿಗೆ ಮರಣಶಿಕ್ಷೆಯನ್ನು ನೀಡಿದ್ದರಿಂದ ನೀನೂ ಸಹ ಉದ್ಧೃತನಾಗಿರುವಿ ಎಂದು ವ್ಯಾಸರ ಉಪದೇಶ.
ಯುಧಿಷ್ಠಿರಃ
ಭಗವನ್ ಕರ್ಮಣಾ ಕೇನ ಸುದ್ಯುಮ್ನೋ ವಸುಧಾಧಿಪಃ |
ಸಂಸಿದ್ಧಿಂ ಪರಮಾಂ ಪ್ರಾಪ್ತಃ ಶ್ರೋತುಮಿಚ್ಛಾಮಿ ತಂ ನೃಪಮ್ ||1||
ಯುಧಿಷ್ಠಿರ - ಯುಧಿಷ್ಠಿರನು ವೇದವ್ಯಾಸದೇವರ ಬಳಿ ಪ್ರಶ್ನಿಸುತ್ತಾನೆ. ಷಡ್ಗು- ಣೈಶ್ವರ್ಯಪೂರ್ಣರಾದ ಮಹಾತ್ಮರೇ! ರಾಜನಾದ ಸುದ್ಯುಮ್ನನು ಯಾವ ಕ್ರಮದಲ್ಲಿ ಸಿದ್ಧಿಯನ್ನು ಪಡೆದನು. ಮತ್ತು ಶ್ರೇಷ್ಠಸ್ಥಾನವನ್ನು ಹೊಂದಿದನು. ಇದರ ಬಗ್ಗೆ ಕೇಳಿ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ.
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶಂಖಶ್ಚ ಲಿಖಿತಶ್ಚಾಸ್ತಾಂ ಭ್ರಾತರೌ ಸಂಶಿತವ್ರತೌ ||2||
ವೇದವ್ಯಾಸದೇವರು ಯುಧಿಷ್ಠಿರನೇ! ಸುದ್ಯುಮ್ನನ ವಿಷಯದಲ್ಲಿ ಪುರಾತನ- ವಾದ ಇತಿಹಾಸ ಹೀಗಿದೆ - ಜಿತೇಂದ್ರಿಯರಾದ ಶಂಖ ಹಾಗೂ ಲಿಖಿತರೆಂಬ ಇಬ್ಬರು ಸಹೋದರರಿದ್ದರು.
ತಯೋರಾವಸಥಾವಾಸ್ತಾಂ ರಮಣೀಯೌ ಪೃಥಕ್ ಪೃಥಕ್ |
ನಿತ್ಯಪುಷ್ಪಫಲೈರ್ವೃಕ್ಷೈರುಪೇತೌ ಬಾಹುದಾಮನು ||3||
ಇವರಿಬ್ಬರಿಗೆ ಅತ್ಯಂತರಮಣೀಯವಾದ ಪ್ರತ್ಯೇಕ ಪ್ರತ್ಯೇಕವಾದ ಎರಡು ಆಶ್ರಮಗಳಿದ್ದವು. ಅವು ನಿರಂತರವಾಗಿ ಫಲಪುಷ್ಪಗಳಿಂದ ತುಂಬಿರುತ್ತಿದ್ದವು. ವೃಕ್ಷ- ಗಳಿಂದ ನಿಬಿಡವಾಗಿದ್ದವು. ಬಾಹುದಾ ಎಂಬ ನದಿಯ ದಡದಲ್ಲಿ ಈ ಆಶ್ರಮಗಳಿ- ದ್ದವು.
ಟಿಪ್ಪಣಿ- ಬಾಹುದಾಮನು ಇತ್ಯತ್ರ ಬಾಹುದಾಂ ನಾಮ ನದೀಮ್ |
`ಬಾಹುದಾಮನು' ಎಂಬಲ್ಲಿ `ಬಾಹುದಾ' ಎಂಬುದು ನದಿಯ ಹೆಸರು.
ತತಃ ಕದಾಚಿಲ್ಲಿಖಿತಃ ಶಂಖಸ್ಯಾಶ್ರಮಮಾಗಮತ್ |
ಯದೃಚ್ಛಯಾಪಿ ಶಂಖೋಽಥ ನಿಷ್ಕ್ರಾಂತೋಽಭವದಾಶ್ರಮಾತ್ ||4||
ಒಮ್ಮೆ ಲಿಖಿತನು ಅಣ್ಣನಾದ ಶಂಖನ ಆಶ್ರಮಕ್ಕೆ ಆಗಮಿಸಿದನು. ಯದೃಚ್ಛೆ- ಯಿಂದ ಶಂಖನು ಆಗ ಆಶ್ರಮದಲ್ಲಿ ಇರಲಿಲ್ಲ. ಹೊರಗೆ ಹೋಗಿದ್ದನು.
ಸೋಽಭಿಗಮ್ಯಾಶ್ರಮಂ ಭ್ರಾತುಃ ಶಂಖಸ್ಯ ಲಿಖಿತಸ್ತದಾ |
ಫಲಾನಿ ಪಾತಯಾಮಾಸ ಸಮ್ಯಕ್ ಪರಿಣತಾನ್ಯುತ ||5||
ಅಣ್ಣನಾದ ಶಂಖನ ಆಶ್ರಮಕ್ಕೆ ಆಗಮಿಸಿದ ಲಿಖಿತನು ಅವನ ತೋಟದಲ್ಲಿದ್ದ ಮರದಲ್ಲಿ ಬಿಟ್ಟ ಕಳಿತವಾದ ಹಣ್ಣುಗಳನ್ನು ಕೆಳಕ್ಕೆ ಬೀಳಿಸಿದನು.
ತಾನ್ಯುಪಾದಾಯ ವಿಸ್ರಬ್ಧೋ ಭಕ್ಷಯಾಮಾಸ ಸ ದ್ವಿಜಃ |
ತಸ್ಮಿಂಶ್ಚ ಭಕ್ಷಯತ್ಯೇವ ಶಂಖೋಽಪ್ಯಾಶ್ರಮಮಾಗಮತ್ ||6||
ಬಿದ್ದ ಹಣ್ಣುಗಳನ್ನು ಆರಿಸಿಕೊಂಡನು. ಒಂದೆಡೆಯಲ್ಲಿ ಕುಳಿತು ಸಂತೋಷದಿಂದ ಎಲ್ಲವನ್ನೂ ಕೂಡ ತಿಂದನು. ಹೀಗೆ ಲಿಖಿತನು ಹಣ್ಣನ್ನು ತಿನ್ನುತ್ತಿರುವಾಗಲೇ ಶಂಖನೂ ಕೂಡ ಆಶ್ರಮಕ್ಕೆ ಆಗಮಿಸಿದನು.
ಭಕ್ಷಯಂತಂ ತು ತಂ ದೃಷ್ಟ್ವಾ ಶಂಖೋ ಭ್ರಾತರಮಬ್ರವೀತ್ |
ಕುತಃ ಫಲಾನ್ಯವಾಪ್ತಾನಿ ಹೇತುನಾ ಕೇನ ಖಾದಸಿ ||7||
ತೃಪ್ತಿಯಿಂದ ಹಣ್ಣನ್ನು ತಿನ್ನುತ್ತಿರುವ ತಮ್ಮನಾದ ಲಿಖಿತನನ್ನು ನೋಡಿ, ಶಂಖನು ಹೀಗೆ ಪ್ರಶ್ನಿಸಿದನು - ಎಲ್ಲಿಂದ ಈ ಹಣ್ಣುಗಳನ್ನು ಪಡೆದುಕೊಂಡಿ? ಯಾವ ಕಾರಣಕ್ಕಾಗಿ ಈ ಹಣ್ಣುಗಳನ್ನು ತಿನ್ನುತ್ತಿರುವಿ ?
ಸೋಽಬ್ರವೀದ್ ಭ್ರಾತರಂ ಜ್ಯೇಷ್ಠಮುಪಸ್ಪೃಶ್ಯಾಭಿವಾದ್ಯ ಚ |
ಇತ ಏವ ಗೃಹೀತಾನಿ ಮಯೇತಿ ಪ್ರಹಸನ್ನಿವ ||8||
ಆಗಮಿಸಿದ ಅಣ್ಣನನ್ನು ಕಂಡು ಲಿಖಿತನು ಮೇಲೆದ್ದು ನಿಂತನು. ಅಭಿವಾದನ ಮಾಡಿದನು. ನಗುತ್ತಲೇ ಸಂತೋಷದಿಂದ ಉತ್ತರಿಸಿದನು - ನಾನು ಈ ಹಣ್ಣುಗಳನ್ನು ನಿನ್ನ ಈ ತೋಟದಲ್ಲಿಯೇ ತೆಗೆದುಕೊಂಡೆನು.
ತಮಬ್ರವೀತ್ ತದಾ ಶಂಖಸ್ತೀವ್ರಕೋಪಸಮನ್ವಿತಃ |
ಸ್ತೇಯಂ ತ್ವಯಾ ಕೃತಮಿದಂ ಫಲಾನ್ಯಾದದತಾ ಸ್ವಯಮ್ ||9||
ಗಚ್ಛ ರಾಜಾನಮಾಸಾದ್ಯ ಸ್ವಕರ್ಮ ಪ್ರಥಯಸ್ವ ವೈ ||
ತಮ್ಮನ ನಡತೆಯನ್ನು ಕಂಡ ಶಂಖನಿಗೆ ತೀವ್ರವಾಗಿ ಕೋಪವು ಉಂಟಾಯಿತು. ಕೋಪದಿಂದಲೇ ಹೀಗೆ ಮಾತನಾಡಿದನು -ನೀನು ಈ

ಹಣ್ಣುಗಳನ್ನು ಕಳ್ಳತನ ಮಾಡಿರುವಿ. ನನ್ನ ಅನುಮತಿಯಿಲ್ಲದೇ ತೆಗೆದುಕೊಂಡಿರುವುದರಿಂದ ಕಳ್ಳತನ ಮಾಡಿದಂತೆ ಆಗಿದೆ. ಕೂಡಲೇ ರಾಜನ ಬಳಿ ತೆರಳು. ನೀನು ಮಾಡಿದ ಕಳ್ಳತನವನ್ನು ಅವನಿಗೆ ಹೀಗೆ ಹೇಳು.
ಆದತ್ತಾದಾನಮೇವೇದಂ ಕೃತಂ ಪಾರ್ಥಿವಸತ್ತಮ |
ಸ್ತೇನಂ ಮಾಂ ತ್ವಂ ವಿದಿತ್ವಾ ಚ ಸ್ವಧರ್ಮಮನುಪಾಲಯ ॥10॥
ಶೀಘ್ರಂ ಧಾರಯ ಚೌರಸ್ಯ ಮಮ ದಂಡಂ ನರಾಧಿಪ ॥
ಪಾರ್ಥಿವೇಂದ್ರನೇ! ನನಗೆ ಹಣ್ಣುಗಳನ್ನು ಯಾರೂ ಕೊಟ್ಟಿರಲಿಲ್ಲ. ಮರ- ದಲ್ಲಿರುವ ಫಲಗಳನ್ನು ಯಾರನ್ನು ಕೇಳದೇ, ಯಾರಿಗೂ ಹೇಳದೆ ನಾನಾಗಿಯೇ ತೆಗೆದುಕೊಂಡು ತಿಂದೆನು. ಆದ್ದರಿಂದ ನಾನು ಕಳ್ಳತನವನ್ನು ಮಾಡಿದಂತಾಯಿತು. ನೀನು ರಾಜಧರ್ಮವನ್ನು ಪರಿಪಾಲನೆ ಮಾಡಬೇಕು. ಕಳ್ಳಕಾಕರಿಗೆ ಶಿಕ್ಷೆಯನ್ನು ನೀಡಬೇಕು. ನಿನ್ನ ರಾಜ್ಯದಲ್ಲಿ ಕಳ್ಳತನ ಮಾಡಿದವನಿಗೆ ಯಾವ ಶಿಕ್ಷೆಯನ್ನು ನೀಡುವಿಯೋ, ಅದನ್ನೇ ನನಗೂ ಕೂಡ ನೀಡು (ಎಂದು)
ಇತ್ಯುಕ್ತಸ್ತಸ್ಯ ವಚನಾತ್ ಸುದ್ಯುಮ್ನಂ ವಸುಧಾಧಿಪಮ್ |
ಅಭ್ಯಗಚ್ಛನ್ಮಹಾಬಾಹೋ ಲಿಖಿತಃ ಸಂಶಿತವ್ರತಃ ॥11॥
ಹೀಗೆ ಅಣ್ಣನು ಹೇಳಿದ ಕೂಡಲೇ ದೃಢವ್ರತನಾದ ಲಿಖಿತನು ಅಣ್ಣನ ಮಾತಿನ ಪ್ರಕಾರ ವಸುಧಾಧಿಪನಾದ ಸುದ್ಯುಮ್ನನ ಬಳಿ ತೆರಳಿದನು.
ಸುದ್ಯುಮ್ನಸ್ತ್ವಂತಪಾಲೇಭ್ಯಃ ಶ್ರುತ್ವಾ ಲಿಖಿತಮಾಗತಮ್ |
ಅಭ್ಯಗಚ್ಛತ್ ಮಹಾಮಾತ್ಯಃ ಪದ್ಭ್ಯಾಮೇವ ನರೇಶ್ವರಃ ॥12॥
ಲಿಖಿತನು ತನ್ನ ಅರಮನೆಗೆ ಆಗಮಿಸುತ್ತಿದ್ದಾನೆಂದು ರಾಜನು ದ್ವಾರಪಾಲಕರ ಮೂಲಕ ತಿಳಿದುಕೊಂಡನು. ಕೂಡಲೇ ಅಮಾತ್ಯರಿಂದ ಕೂಡಿಕೊಂಡು ಕಾಲ್ನಡಿಗೆ- ಯಲ್ಲಿಯೇ ಲಿಖಿತನನ್ನು ಆದರಪೂರ್ವಕವಾಗಿ ಸ್ವಾಗತ ಮಾಡಿದನು.
ತಮಬ್ರವೀತ್ ಸಮಾಗತ್ಯ ಸ ರಾಜಾ ಬ್ರಹ್ಮವಿತ್ತಮಮ್ |
ಕಿಮಾಗಮನಮಾಚಕ್ಷ್ವ ಭಗವನ್ ಕೃತಮೇವ ತತ್ ॥13॥
ಬ್ರಹ್ಮಜ್ಞಾನಿಯಾದ ಲಿಖಿತನ ಬಳಿ ತೆರಳಿದ ರಾಜನು ಪ್ರಶ್ನಿಸುತ್ತಾನೆ - ತಾವು ಬಂದ ಕಾರಣವೇನು? ನನ್ನಿಂದ ಆಗಬೇಕಾದ ಕಾರ್ಯ ಯಾವುದಿದೆ?
ಏವಮುಕ್ತಃ ಸ ವಿಪ್ರರ್ಷಿಃ ಸುದ್ಯುಮ್ನಮಿದಮಬ್ರವೀತ್ |
ಪ್ರತಿಶ್ರುತ್ಯ ಕರಿಷ್ಯೇತಿ ಶ್ರುತ್ವಾ ತತ್ ಕರ್ತುಮರ್ಹಸಿ ॥14॥
ಯುಧಿಷ್ಠಿರನೇ! ರಾಜನು ಹೀಗೆ ಹೇಳಿದ ಮೇಲೆ ವಿಪ್ರರ್ಷಿಯಾದ ಲಿಖಿತನು ಸುದ್ಯುಮ್ನನಿಗೆ ಹೀಗೆ ಹೇಳಿದನು -
ಟಿಪ್ಪಣಿ - ಪ್ರತಿಶ್ರುತ್ಯ ಕರಿಷ್ಯೇತಿ ಇತ್ಯತ್ರ ಅಕರಿಷ್ಯೇ ಇತಿ ಲೃಙಿ ಆತ್ಮನೇಪದಿನಿ ಉತ್ತಮಪುರುಷೈಕವಚನಮ್ |
`ಪ್ರತಿಶ್ರುತ್ಯ ಕರಿಷ್ಯೇತಿ' ಎಂಬಲ್ಲಿ ಅಕರಿಷ್ಯೇ ಎಂಬುದಾಗಿ ಪದಚ್ಛೇದವನ್ನು ಮಾಡ- ಬೇಕು. ಆತ್ಮನೇಪದದ ಲೃಙ್ ಲಕಾರದ ಉತ್ತಮಪುರುಷದ ಏಕವಚನವಾಗಿದೆ.
ಅನಿಸೃಷ್ಟಾನಿ ಗುರುಣಾ ಫಲಾನಿ ಪುರುಷರ್ಷಭ |
ಭಕ್ಷಿತಾನಿ ಮಯಾ ರಾಜಂಸ್ತತ್ರ ಮಾಂ ಶಾಧಿ ಮಾಚಿರಮ್ ॥15॥
ಪುರುಷಶ್ರೇಷ್ಠನೇ! ನಾನು ಗುರುಸ್ಥಾನದಲ್ಲಿರುವ ಅಣ್ಣನ ಅನುಮತಿಯನ್ನು ಪಡೆಯದೇ ಅವನ ತೋಟದಲ್ಲಿದ್ದ ಹಣ್ಣುಗಳನ್ನು ತಿಂದುಬಿಟ್ಟೆನು. ಆದ್ದರಿಂದ ಕೂಡಲೇ ಶಿಕ್ಷೆಯನ್ನು ನೀಡು.
ಸುದ್ಯುಮ್ನಃ
ಪ್ರಮಾಣಂ ಚೇನ್ಮತೋ ರಾಜಾ ಭವತೋ ದಂಡಧಾರಣೇ |
ಅನುಜ್ಞಾಯಾಮಪಿ ತಥಾ ಹೇತುಃ ಸ್ಯಾದ್ ಬ್ರಾಹ್ಮಣರ್ಷಭ ॥16॥
ಸುದ್ಯುಮ್ನ ಬ್ರಾಹ್ಮಣಶ್ರೇಷ್ಠರೇ! ಶಿಕ್ಷೆ ನೀಡುವ ಅಧಿಕಾರದಲ್ಲಿ ರಾಜನು ಪ್ರಮಾಣವೆಂಬುದು ನಿಮಗೆ ಅಭಿಪ್ರಾಯವಾಗಿದ್ದಲ್ಲಿ, ಅದರಂತೆ ನಿಮಗೆ ಅನುಜ್ಞೆ- ಯನ್ನು ಕೊಡುವುದಕ್ಕೂ ಆ ರಾಜನಿಗೆ ಅಧಿಕಾರವಿರುತ್ತದಷ್ಟೇ !
ವಿವರಣೆ - ಸುದ್ಯುಮ್ನನು ಉತ್ತರಿಸುತ್ತಾನೆ - ಬ್ರಾಹ್ಮಣಶ್ರೇಷ್ಠನೇ! ಶಿಕ್ಷೆಯನ್ನು ನೀಡಬೇಕೋ, ಬೇಡವೋ? ಎಂಬ ವಿಷಯದಲ್ಲಿ ರಾಜನ ತೀರ್ಮಾನವೇ ಸರಿಯಾದದ್ದು ಎಂಬ ಅಭಿಪ್ರಾಯವು ನಿಮಗೆ ಇರುವುದಾದಲ್ಲಿ ನಿಮ್ಮನ್ನು ಹಿಂತಿರು -ಗಲು ನಾನು ಅನುಮತಿಯನ್ನು ನೀಡಿದ್ದೇನೆ. ಕ್ಷಮಿಸಿರುವುದರಿಂದ ತಮಗೆ ಯಾವುದೇ ಶಿಕ್ಷೆಯು ಇರುವುದಿಲ್ಲ. ರಾಜನಾದವನಿಗೆ ಶಿಕ್ಷೆ ನೀಡಲು ಅಧಿಕಾರ- ವಿರುವಂತೆ ಕ್ಷಮೆಯನ್ನು ನೀಡಲು ಕೂಡ ಅಧಿಕಾರವಿರುತ್ತದೆ. ಆಯಾ ಅಪರಾಧ- ಗಳಿಗೆ ರಾಜನಾದವನು ಕಣ್ಣುಮುಚ್ಚಿ ಶಿಕ್ಷೆಯನ್ನು ನೀಡುವುದಿಲ್ಲ. ಆಯಾ ವ್ಯಕ್ತಿಗಳ ಸ್ವಭಾವ, ಸಂದರ್ಭಗಳನ್ನೆಲ್ಲಾ ಗಮನಿಸಿ ಅಪರಾಧಕ್ಕೆ ಶಿಕ್ಷೆಯನ್ನು ನೀಡುತ್ತಾನೆ. ತಾವು ಬ್ರಹ್ಮಜ್ಞಾನಿಗಳಾಗಿದ್ದೀರಿ, ಸ್ವೋತ್ತಮರಾಗಿದ್ದೀರಿ, ಮತ್ತು ಅತ್ಯಂತಪ್ರಾಮಾ- ಣಿಕವಾಗಿ ಅಲ್ಪಮಟ್ಟದಲ್ಲಿ ನಡೆದ ಅಪರಾಧಕ್ಕೆ ದೊಡ್ಡಮಟ್ಟದಲ್ಲಿ ಶಿಕ್ಷೆಯನ್ನು ಕೇಳುತ್ತಿದ್ದೀರಿ. ಈ ಎಲ್ಲ ಕಾರಣಗಳಿಂದ ನಾನು ತಮಗೆ ಶಿಕ್ಷೆಯನ್ನು ನೀಡುವುದಿಲ್ಲ ಎಂಬುದಾಗಿ ರಾಜನು ಹೇಳುತ್ತಾನೆ.
ಟಿಪ್ಪಣಿ - ಅನುಜ್ಞಾಯಾಮಪಿ ತಥಾ ಇತ್ಯತ್ರ ಅನುಜ್ಞಾಯಾಂ ಕರ್ತವ್ಯಾಯಾಮಪಿ ತಥಾ ಜ್ಯೇಷ್ಠವದ್ ರಾಜಾಪಿ ಹೇತುಃ ಸ್ಯಾತ್ ಸ ಭವಾನ್ ಅಭ್ಯನುಜ್ಞಾತಃ ಮಯಾ ಅಭ್ಯನುಜ್ಞಾತಃ |
`ಅನುಜ್ಞಾಯಾಮಪಿ ತಥಾ' ಎಂಬಲ್ಲಿ ಜ್ಯೇಷ್ಠನಾದ ತಂದೆ ಮತ್ತು ಅಣ್ಣಂದಿರು ಕರ್ತವ್ಯಾಕರ್ತವ್ಯಗಳನ್ನು ನಿರ್ಧರಿಸುವಂತೆ ರಾಜನಿಗೂ ಕೂಡ ನಿರ್ಧಾರ ಮಾಡುವ ಅಧಿ-ಕಾರವಿದೆ. ಆದ್ದರಿಂದ ಅಣ್ಣನ ಅನುಜ್ಞೆಯನ್ನು ಕೊಡದಿದ್ದರೂ ನಾನು ಅನುಜ್ಞೆಯನ್ನು ಕೊಡುತ್ತಿದ್ದೇನೆ ಎಂದಭಿಪ್ರಾಯ.
ಸ ಭವಾನಭ್ಯನುಜ್ಞಾತಃ ಶುಚಿಕರ್ಮಾ ಮಹಾವ್ರತಃ |

ಬ್ರೂಹಿ ಕಾಮಾನತೋಽನ್ಯಾಂಸ್ತ್ವಂ ಕರಿಷ್ಯಾಮಿ ಹಿ ತೇ ವಚಃ ॥17॥
ತಾವು ಅನೇಕ ಸತ್ಕರ್ಮಗಳನ್ನು ಮಾಡಿ, ಮಹಾವ್ರತವುಳ್ಳವರಾಗಿದ್ದೀರಿ. ನೀವು ಇಲ್ಲಿಂದ ಹಿಂತಿರುಗುವಂತೆ ಅನುಜ್ಞೆಯನ್ನು ನೀಡಿದ್ದೇನೆ. ಮತ್ತೇನಾದರೂ ಅಪೇಕ್ಷೆ- ಗಳು ತಮಗಿದ್ದಲ್ಲಿ ತಿಳಿಸಿರಿ. ಆ ನಿಮ್ಮ ಎಲ್ಲಾ ಕಾಮನೆಗಳನ್ನು ಪೂರೈಸುತ್ತೇನೆ.
ವ್ಯಾಸಃ
ಛಂದ್ಯಮಾನೋಽಪಿ ಬ್ರಹ್ಮರ್ಷಿಃ ಪಾರ್ಥಿವೇನ ಮಹಾತ್ಮನಾ |
ನಾನ್ಯಂ ವೈ ವರಯಾಮಾಸ ತಸ್ಮಾದ್ ದಂಡಾದೃತೇ ವರಮ್ ॥18॥
ವೇದವ್ಯಾಸದೇವರು ನಿರ್ಬಂಧಪೂರ್ವಕವಾಗಿ ಆ ರಾಜನು ಲಿಖಿತನಿಗೆ ಹೇಳಿದರೂ ಕೂಡ ಆ ಮಹಾತ್ಮನಾದ ಬ್ರಾಹ್ಮಣನು ತನಗೆ ಶಿಕ್ಷೆಯನ್ನು ಬಿಟ್ಟು ಬೇರೆ ಯಾವುದನ್ನೂ ಕೂಡ ಕೇಳಲಿಲ್ಲ.
ತತಃ ಸ ಪೃಥಿವೀಪಾಲೋ ಲಿಖಿತಸ್ಯ ಮಹಾತ್ಮನಃ |
ಕರೌ ಪ್ರಚ್ಛೇದಯಾಮಾಸ ಧೃತದಂಡೋ ಜಗಾಮ ಸಃ ॥19॥
ಪೃಥಿವೀಪಾಲಕನಾದ ರಾಜನು ಬೇರೆ ವಿಧಿಯಿಲ್ಲದೇ ಆ ಲಿಖಿತನ ಎರಡು ಕೈಗಳನ್ನು ಕತ್ತರಿಸುವಂತೆ ಭಟರಿಗೆ ಆಜ್ಞೆಯನ್ನು ಮಾಡಿದನು. ಶಿಕ್ಷೆಯನ್ನು ಸ್ವೀಕರಿಸಿದ ಲಿಖಿತನು ಅಣ್ಣನ ಬಳಿ ಹೊರಟನು.
ಸ ಗತ್ವಾ ಭ್ರಾತರಂ ಶಂಖಮಾರ್ತರೂಪೋಽಬ್ರವೀದಿದಮ್ |
ಧೃತದಂಡಸ್ಯ ದುರ್ಬುದ್ಧೇರ್ಭಗವನ್ ಕ್ಷಂತುಮರ್ಹಸಿ ॥20॥
ಅಣ್ಣನಾದ ಶಂಖನ ಬಳಿ ತೆರಳಿ ಅತ್ಯಂತ ದುಃಖದಿಂದ ಹೀಗೆ ಹೇಳಿದನು- ರಾಜನಿಂದ ಶಿಕ್ಷೆಯನ್ನು ಪಡೆದುಕೊಂಡಿದ್ದೇನೆ. ಭಗವನ್! ದುರ್ಬುದ್ಧಿಯಾದ ನನ್ನನ್ನು ಕ್ಷಮಿಸಿರಿ.
ಟಿಪ್ಪಣಿ- ಇಂದಿನ ಕಾಲದಲ್ಲಿ ಪ್ರತಿಯೊಬ್ಬ ಸಾತ್ವಿಕರು ಈ ಕಥೆಯನ್ನು ಅರ್ಥಮಾಡಿಕೊಂಡು ಜೀವನವನ್ನು ನಡೆಸಬೇಕು. ಮತ್ತೊಬ್ಬರ ಸ್ವತ್ತನ್ನು ಅಪ- ಹಾರ ಮಾಡಿದರೆ, ಅವರ ಅನುಮತಿಯನ್ನು ಪಡೆಯದೇ ಸ್ವೀಕಾರ ಮಾಡಿದರೆ, ಇಂಥ ಶಿಕ್ಷೆಯನ್ನು ಅನುಭವಿಸಲೇ ಬೇಕು. ಇಲ್ಲದಿದ್ದರೆ ಜನ್ಮಾಂತರದ ತನಕ ಪಾಪ- ರೂಪದಲ್ಲಿ ನಮ್ಮನ್ನೇ ಅದು ಕಾಡುತ್ತದೆ. ಶಿಕ್ಷೆಯನ್ನು ಅನುಭವಿಸುವ ಮೂಲಕ ತತ್ಕ್ಷಣದಲ್ಲಿಯೇ ಆ ಪಾಪವನ್ನು ಪರಿಹಾರ ಮಾಡಿಕೊಳ್ಳಬೇಕು. ಸ್ನೇಹಿತರು, ತಂದೆ, ತಾಯಿ, ಅಣ್ಣ, ತಮ್ಮ ಮೊದಲಾದ ತೀರಾ ಹತ್ತಿರದ ಸಂಬಂಧಿಕರ ಪದಾರ್ಥಗಳನ್ನೂ ಕೂಡ ಅವರ ಅನುಮತಿಯಿಲ್ಲದೇ ಸ್ವೀಕರಿಸಿದರೆ ಅದು ಕಳ್ಳತನವೇ ಆಗುತ್ತದೆ. ಸಚ್ಚಾರಿತ್ರ್ಯದಿಂದ ಜೀವನು ಉಜ್ವಲವಾಗಬೇಕೆಂದರೆ ಪ್ರಾಮಾಣಿತಕನ ಅತ್ಯಂತ ಮುಖ್ಯವಾಗಿರುತ್ತದೆ. ಕೆಲವರಿಗೆ ಅನ್ಯಾಯ ಮಾಡಿದವರಿಗೆ ಮೋಸ ಮಾಡಬಹುದೆಂಬ ಭಾವನೆಯಿರುತ್ತದೆ. ಇನ್ನೂ ಕೆಲವರಿಗೆ ಸರ್ಕಾರಕ್ಕೆ ಮೋಸ ಮಾಡಿದರೆ ಪಾಪ ಬರುವುದಿಲ್ಲವೆಂಬ ಭಾವನೆಯಿರುತ್ತದೆ. ಮತ್ತೊಬ್ಬ ಕಳ್ಳತನ ಮಾಡಿದ್ದನ್ನು ತಾನು ಅನುಭವಿಸಬಹುದೆಂಬ ಭಾವನೆ- ಯಿರುತ್ತದೆ. ಈ ಎಲ್ಲಾ ಭಾವನೆಯನ್ನು ಹೊಂದಿರುವವರಿಗೆ ಈ ಶಂಖಲಿಖಿತರ ಕಥೆಯು ಆತ್ಮವಿಮರ್ಶೆಗೆ ಅವಕಾಶ ಮಾಡಿಕೊಡುತ್ತದೆ.
ಶಂಖಃ
ನ ಕುಪ್ಯೇ ತವ ಧರ್ಮಜ್ಞ ನಚ ದೂಷಯಸೇ ಮಮ |
ಸುನಿರ್ಮಲಂ ಕುಲಂ ಬ್ರಹ್ಮನ್ನಸ್ಮಿನ್ ಜಗತಿ ವಿಶ್ರುತಮ್ ॥21॥
ಧರ್ಮಸ್ತು ತೇ ವ್ಯತಿಕ್ರಾಂತಸ್ತತಸ್ತೇ ನಿಷ್ಕೃತಿಃ ಕೃತಾ ॥
ಶಂಖ ಧರ್ಮವನ್ನು ಅರಿತ ಅನುಜನೇ ! ನಿಜವಾಗಿಯೂ ನಿನ್ನ ಬಗ್ಗೆ ನನಗೆ ಕೋಪವು ಬಂದಿರುವುದಿಲ್ಲ. ನಿನ್ನನ್ನು ದೂಷಿಸುವುದೂ ಇಲ್ಲ. ನನಗೆ ಯಾವುದೇ ಅಪರಾಧವನ್ನು ನೀನು ಮಾಡಿರುವುದಿಲ್ಲ. ಆದರೆ ನಮ್ಮ ವಂಶವು ಅತ್ಯಂತ ನಿರ್ಮಲವಾಗಿದೆ. ಕಳಂಕರಹಿತವಾಗಿದೆ. ಈ ಜಗತ್ತಿನಲ್ಲಿ ಒಳ್ಳೆಯ ಪ್ರಸಿದ್ಧಿಯನ್ನು ಪಡೆದಿದೆ. ಈ ವಂಶದಲ್ಲಿ ಹುಟ್ಟಿದ ನಿನ್ನಿಂದ ಅಲ್ಪಮಟ್ಟದಲ್ಲಿಯೂ ಧರ್ಮದ ಅತಿಕ್ರಮಣ ಆಗಬಾರದು. ಆದ್ದರಿಂದ ನಿನಗೆ ಈ ಬಗ್ಗೆಯ ಪ್ರಾಯಶ್ಚಿತ್ತವನ್ನು ತಿಳಿಸಿದೆನು.
ಸ ಗತ್ವಾ ಬಾಹುದಾಂ ಶೀಘ್ರಂ ತರ್ಪಯಸ್ವ ಯಥಾವಿಧಿ |
ದೇವಾನ್ ಪಿತೄನೃಷೀಂಶ್ಚೈವ ಮಾ ಚಾಧರ್ಮೇ ಮನಃ ಕೃಥಾಃ ॥22॥
ಈಗ ಶೀಘ್ರದಲ್ಲಿ ಬಾಹುದಾ ನದಿಗೆ ತೆರಳು. ಅಲ್ಲಿ ವಿಧಿಪ್ರಕಾರವಾಗಿ ದೇವತೆ- ಗಳಿಗೆ, ಋಷಿಗಳಿಗೆ, ಪಿತೃಗಳಿಗೆ ತರ್ಪಣವನ್ನು ನೀಡಿ ಅವರನ್ನು ತೃಪ್ತಿಪಡಿಸಿ ಅವರ ಅನುಗ್ರಹವನ್ನು ಪ್ರಾರ್ಥಿಸು. ಇನ್ನು ಮುಂದೆ ಯಾವುದೇ ಕ್ಷಣದಲ್ಲಿ ಇಂಥ ಅಧರ್ಮದ ಕಾರ್ಯದಲ್ಲಿ ಪ್ರವೃತ್ತಿ ಮಾಡಬೇಡ.
ಬ್ರಹ್ಮಹತ್ಯಾಂ ಸುರಾಪಾನಂ ಸ್ತೇಯಂ ಗುರ್ವಂಗನಾಗಮಮ್ |
ಮಹಾಂತಿ ಪಾತಕನ್ಯಾಹುಃ ಸಯೋಗಂ ಚೈವ ತೈಃ ಸಹ ॥23॥
ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುದಾರಪರಿಗ್ರಹ ಇವುಗಳು ಮಹಾ- ಪಾತಕಗಳು ಯಾರು ಮಾಡುತ್ತಾರೋ, ಅವರ ಸಹವಾಸವನ್ನೇ ಮಾಡಬಾರದೆಂದು ವಿದ್ವಾಂಸರು ಹೇಳುತ್ತಾರೆ.
ನ ಸ್ತೇಯಸದೃಶಂ ಬ್ರಹ್ಮನ್ ಮಹಾಪಾತಕಮಸ್ತ್ಯುತ |
ಜಗತ್ಯಸ್ಮಿನ್ ಮಹಾಭಾಗ ಬ್ರಹ್ಮಹತ್ಯಾಸಮೋ ಹಿ ತತ್ ॥24॥
ಕಳ್ಳತನವು ಕೂಡ ಮಹಾಪಾತಕವೇ ಆಗಿದೆ. ಇದಕ್ಕೆ ಸದೃಶವಾದ ಮಹಾಪಾತಕ ಬೇರೊಂದು ಇರುವುದಿಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಮತ್ತೊಂದು ಪಾಪವು ಈ ಜಗತ್ತಿನಲ್ಲಿ ಇರುವುದಿಲ್ಲ.
ಸರ್ವಪಾತಕಿನಾ ಬ್ರಹ್ಮನ್ ದಂಡಃ ಶಾರೀರ ಉಚ್ಯತೇ |
ತಸ್ಕರಸ್ಯ ವಿಶೇಷೇಣ ನಾನ್ಯೋ ದಂಡೋ ವಿಧೀಯತೇ ॥25॥
ಬೇರೆ ಅಪರಾಧವನ್ನು ಮಾಡಿದವರಿಗೆ ಕೆಲವೊಮ್ಮೆ ಮಾತ್ರ ಶಾರೀರಿಕ ದಂಡ- ವನ್ನು ವಿಧಿಸುತ್ತಾರೆ. ಆದರೆ ಕಳ್ಳತನ ಮಾಡಿದವರಿಗೆ ಶಾರೀರಿಕ ದಂಡವೇ ಹೊರತು ಮತ್ತೊಂದು ದಂಡವು ಇರುವುದಿಲ್ಲ.

ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯಃ ಶೂದ್ರೋಽಥ ವಾ ದ್ವಿಜ |
ಸರ್ವೇ ಕಾಮಕೃತೇ ಪಾಪೇ ಹಂತವ್ಯಾ ನ ವಿಚಾರಣಾ ॥26॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರರೆಂಬ ನಾಲ್ಕು ವರ್ಣದವರಲ್ಲಿ ಯಾರೇ ಆದರೂ ಉದ್ದೇಶಪೂರ್ವಕವಾಗಿ ಪಾಪವನ್ನು ಮಾಡಿದರೆ ಅವರಿಗೆ ಶಿಕ್ಷೆ- ಯನ್ನು ನೀಡಲೇಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.
ರಾಜಭಿರ್ಧೃತದಂಡಾ ವೈ ಕೃತ್ವಾ ಪಾಪಾನಿ ಮಾನವಾಃ |
ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ |
ಉದ್ಧೃತಂ ನ ಕುಲಂ ಬ್ರಹ್ಮನ್ ರಾಜ್ಞಾ ದಂಡೇ ಧೃತೇ ತ್ವಯಿ ॥27॥
ಮನುಷ್ಯರು ಪಾಪಗಳನ್ನು ಮಾಡಿದಾಗ ರಾಜನಿಂದ ಶಿಕ್ಷೆಯನ್ನು ಸ್ವೀಕಾರ ಮಾಡಬೇಕು. ಆಗಷ್ಟೇ ಅವರು ಮಾಡಿದ ಪಾಪಗಳು ಪರಿಹಾರವಾಗಿ ನಿರ್ಮಲರಾ- ಗುತ್ತಾರೆ. ಪುಣ್ಯಾತ್ಮರಂತೆ ಸ್ವರ್ಗಕ್ಕೆ ತೆರಳುತ್ತಾರೆ. ನೀನೂ ಸಹ ರಾಜನಿಂದ ಶಿಕ್ಷೆಯನ್ನು ಪಡೆದು ಶುದ್ಧನಾಗಿರುವಿ.
ಟಿಪ್ಪಣಿ - ನಮಗೆ ಅತ್ಯಂತ ಆತ್ಮೀಯರು ಅಪರಾಧವನ್ನು ಮಾಡಿದಾಗ ಅವರಿಗೆ ಶಿಕ್ಷೆಯನ್ನು ಅನುಭವಿಸುವಂತೆ ಉಪದೇಶಿಸಬೇಕು. ಒಂದು ವೇಳೆ ಸಮಾಧಾನ- ಗೊಳಿಸಿ ನೀನು ಸುಖವಾಗಿರು ಎಂದು ಹೇಳಿದರೆ ಅವನು ಮಾಡಿದ ಪಾಪ ಹಾಗೆಯೇ ಉಳಿಯುತ್ತದೆ. ಪಾಪಕರ್ಮಕ್ಕೆ ಪ್ರೇರಣೆ ಮಾಡಿದಂತಾಗುತ್ತದೆ. ನಿಜವಾದ ಸ್ನೇಹವಿರುವವನು ಅಧರ್ಮಮಾರ್ಗದಲ್ಲಿ ಹೋಗದಂತೆ, ಅಕಸ್ಮಾತ್ ಹೋದಾಗ ಅದರಿಂದ ಪಾಪವಿಮುಕ್ತನಾಗುವಂತೆ ಪ್ರೇರಣೆ ಮಾಡಬೇಕು. ಹೆಂಡತಿ ಮಕ್ಕಳು ಯಾರೇ ಅಪರಾಧ ಮಾಡಿದರೂ, ಅವರ ಅಪರಾಧಕ್ಕೆ ಶಿಕ್ಷೆ ನೀಡಲೇ ಬೇಕು.
ವ್ಯಾಸಃ
ತಸ್ಯ ತದ್ ವಚನಂ ಶ್ರುತ್ವಾ ಶಂಖಸ್ಯ ಲಿಖಿತಸ್ತದಾ |
ಅವಗಾಹ್ಯಾಪಗಾಂ ಪುಣ್ಯಾಮುದಕಾರ್ಥಂ ಪ್ರಚಕ್ರಮೇ ॥28॥
ವೇದವ್ಯಾಸದೇವರು ಆಗ ಅಣ್ಣನಾದ ಶಂಖನ ಮಾತುಗಳನ್ನು ಕೇಳಿ, ಲಿಖಿತನು ಕೂಡಲೇ ಬಾಹುದಾನದಿಗೆ ಸ್ನಾನ ಮಾಡುವುದಕ್ಕಾಗಿ ತೆರಳಿದನು. ಆ ನದಿಯಲ್ಲಿ ಸ್ನಾನ ಮಾಡಿ, ತರ್ಪಣವನ್ನು ನೀಡುವುದಕ್ಕಾಗಿ ಪ್ರಯತ್ನ ಪಟ್ಟನು.
ಪ್ರಾದುರಾಸ್ತಾಂ ತತಸ್ತಸ್ಯ ಕರೌ ಜಲಸಜಸನ್ನಿಭೌ |
ತತಃ ಸ ವಿಸ್ಮಿತೋ ಭ್ರಾತುರ್ದರ್ಶಯಾಮಾಸ ತೌ ಕರೌ ॥29॥
ಆಶ್ಚರ್ಯವೆಂದರೆ ಅವನಿಗೆ ಎರಡು ಕೈಗಳು ಪ್ರಾದುರ್ಭವಿಸಿದವು. ಆಶ್ಚರ್ಯ- ದಿಂದ ಆ ಲಿಖಿತನು ತರ್ಪಣವನ್ನು ನೀಡಿದನು. ಅಣ್ಣನಾದ ಶಂಖನ ಬಳಿ ಬಂದು ತನಗೆ ಬಂದ ಎರಡು ಕೈಗಳನ್ನು ತೋರಿಸಿದನು.
ತತಸ್ತಮಬ್ರವೀಚ್ಛಂಖಸ್ತಪಸೇದಂ ಕೃತಂ ಮಯಾ |
ಮಾ ಚ ತೇಽತ್ರ ವಿಶಂಕಾಭೂದ್ ದೈವಮೇವ ವಿಧೀಯತೇ ॥30॥
ಅನುಜನೇ! ನನ್ನ ತಪೋಮಹಿಮೆಯಿಂದ ಈ ಕೆಲಸವನ್ನು ಮಾಡಿರುವೆನು. ಈ ವಿಷಯದಲ್ಲಿ ಸಂಶಯ ಪಡಬೇಡ. ಎಲ್ಲವೂ ಕೂಡ ಭಗವಂತನ ಅನುಗ್ರಹದಿಂದ ನಡೆದಿದೆ ಎಂದನು.
ಲಿಖಿತಃ
ಕಿನ್ನು ನಾಹಂ ತ್ವಯಾ ಪೂತಃ ಪೂರ್ವಮೇವ ಮಹಾದ್ಯುತೇ |
ಯಸ್ಯ ತೇ ತಪಸೋ ವೀರ್ಯಮೀದೃಶಂ ದ್ವಿಜಸತ್ತಮ ॥31॥
ಲಿಖಿತ ಮಹಾತೇಜಸ್ವಿಯೇ! ನಿನ್ನ ತಪಸ್ಸಿಗೆ ಇಷ್ಟು ಶಕ್ತಿಯಿರುವುದಾಗಿದ್ದಲ್ಲಿ ಮೊದಲೇ ನನ್ನನ್ನು ಪರಿಶುದ್ಧನನ್ನಾಗಿ ಮಾಡಬಹುದಿತ್ತಲ್ಲವೇ? ಹಾಗೇಕೆ ಮಾಡ- ಲಿಲ್ಲ?
ಟಿಪ್ಪಣಿ - ಕಿನ್ನು ನಾಹಂ ತ್ವಯಾ ಪೂತ ಇತ್ಯತ್ರ ಅಹಂ ತ್ವಯ್ಯೆವ ಹಸ್ತಚ್ಛೇದಂ ಕೃತ್ವಾ ಪೂರ್ವಮೇವ ಕಿನ್ನು ನ ಪೂತಃ |
`ಕಿನ್ನು ನಾಹಂ ತ್ವಯಾ ಪೂತಃ' ಎಂಬಲ್ಲಿ ನೀನೇ ನನ್ನ ಕೈಗಳನ್ನು ಕತ್ತರಿಸಬಹುದಿತ್ತು. ಆಗ ಮತ್ತಷ್ಟು ಬೇಗ ನಾನು ಪಾಪದಿಂದ ಮುಕ್ತನಾಗುತ್ತಿದ್ದೆನು. ನೀನೇಕೆ ರಾಜನ ಬಳಿ ಕಳುಹಿಸಿ ಪಾಪವನ್ನು ಪರಿಹರಿಸಿಕೊಳ್ಳಲು ತಡಮಾಡಿಸಿದೆ.
ಶಂಖಃ
ಏವಮೇತನ್ಮಯಾ ಕಾರ್ಯಂ ನಾಹಂ ದಂಡಧರಸ್ತವ |
ಸ ಚ ಪೂತೋ ನರಪತಿಸ್ತ್ವಂ ಚಾಪಿ ಪಿತೃಭಿಃ ಸಹ ॥32॥
ಶಂಖ ಅನುಜನೇ! ನನ್ನಿಂದ ಪಾಪಪರಿಹಾರ ಮಾಡಲು ಸಾಧ್ಯವಿತ್ತು. ಆದರೆ ರಾಜದಂಡದಿಂದಲೇ ನಿನಗೆ ಪ್ರಾಯಶ್ಚಿತ್ತವಾಗಬೇಕು. ಇದು ರಾಜನ ಕರ್ತವ್ಯ. ಹೀಗೆಯೇ ರಾಜನಿಂದ ಶಿಕ್ಷೆ ಅನುಭವಿಸುವುದರಿಂದ ಪಿತೃಗಳ ಜೊತೆ ನೀನೂ ಸಹ ಪವಿತ್ರನಾಗುವಿ. ದಂಡನೀತಿಯನ್ನು ಅನುಷ್ಠಾನ ಮಾಡಿದ್ದರಿಂದ ರಾಜನೂ ಕೂಡ ಪವಿತ್ರನಾಗುತ್ತಾನೆ.
ವ್ಯಾಸಃ
ಸ ರಾಜಾ ಪಾಂಡವಶ್ರೇಷ್ಠ ಶ್ರೇಷ್ಠೋ ವೈ ತೇನ ಕರ್ಮಣಾ |
ಪ್ರಾಪ್ತವಾನ್ ಪರಮಾಂ ಸಿದ್ಧಿಂ ದಕ್ಷಃ ಪ್ರಾಚೇತಸೋ ಯಥಾ ॥33॥
ವೇದವ್ಯಾಸದೇವರು ಧರ್ಮರಾಜನೇ! ಹೇಗೆ ದಕ್ಷಪ್ರಜಾಪತಿಯು ಉತ್ತಮ ಸಿದ್ಧಿಯನ್ನು ಪಡೆದನೋ, ಅದರಂತೆ ರಾಜನಾದ ಸುದ್ಯುಮ್ನನು ದಂಡ- ಪ್ರಯೋಗವನ್ನು ಮಾಡಿದ್ದರಿಂದ ಉತ್ತಮ ಸಿದ್ಧಿಯನ್ನು ಪಡೆದನು.
ಟಿಪ್ಪಣಿ - ಪ್ರಜೆಗಳು ಅಪರಾಧ ಮಾಡಿದಾಗ, ರಾಜನು ಶಿಕ್ಷೆಯನ್ನು ನೀಡಲೇ ಬೇಕು. ಇಲ್ಲದಿದ್ದರೆ ಅವನು ಅಪವಿತ್ರನಾಗುತ್ತಾನೆ. ಲಿಖಿತನು ಮಾಡಿದ ಅಪರಾಧ- ವನ್ನು ಕ್ಷಮಿಸದೇ ಶಿಕ್ಷೆಯನ್ನು ನೀಡಿದ್ದರಿಂದ ರಾಜನು ಉದ್ಧಾರನಾಗಿದ್ದಾನೆ. ಅದರಂತೆ ನೀನೂ ಕೂಡ ಕಠಿಣವಾದ ರಾಜದಂಡವನ್ನು ಅನುಸರಿಸು ಎಂಬುದಾಗಿ ವ್ಯಾಸರು ಉಪದೇಶಿಸುತ್ತಿದ್ದಾರೆ.

ಏಷ ಧರ್ಮಃ ಕ್ಷತ್ರಿಯಾಣಾಂ ಪ್ರಜಾನಾಂ ಪರಿಪಾಲನಮ್ |
ಉತ್ಪಥೇಽಸ್ಮಿನ್ ಮಹಾರಾಜ ಮಾ ಚ ಶೋಕೇ ಮನಃ ಕೃಥಾಃ ॥34॥
ಕ್ಷತ್ರಿಯರಿಗೆ ಇದುವೇ ನಿಜವಾದ ಧರ್ಮ. ಪ್ರಜೆಗಳನ್ನು ರಕ್ಷಣೆ ಮಾಡಬೇಕಾ- ದದ್ದು ಅವರ ಕರ್ತವ್ಯ. ಧರ್ಮಜ್ಞನಾದ ನೀನು ಕ್ಷಾತ್ರಧರ್ಮದಿಂದ ನಡೆಸಿದ ಕಾರ್ಯದಲ್ಲಿ ದುಃಖವನ್ನು ಹೊಂದಬೇಡ.
ಭ್ರಾತುರಸ್ಯ ಹಿತಂ ವಾಕ್ಯಂ ಶೃಣು ಧರ್ಮಜ್ಞಸತ್ತಮ |
ದಂಡ ಏವ ಹಿ ರಾಜೇಂದ್ರ ಕ್ಷತ್ರಧರ್ಮೋ ನ ಮುಂಡನಮ್ ॥35॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಚತುರ್ವಿಂಶೋಽಧ್ಯಾಯಃ ॥24॥
ನಿನ್ನ ಸಹೋದರರನು ಹೇಳಿದ ಮಾತಿನಂತೆ ನೀನು ನಡೆದುಕೋ. ರಾಜೇಂದ್ರನೇ ! ಕ್ಷತ್ರಿಯರಿಗೆ ಶಿಕ್ಷೆ ನೀಡುವುದೇ ಮುಖ್ಯಧರ್ಮವಾಗಿದೆ. ಮುಂಡನವು ಮುಖ್ಯ- ಧರ್ಮವಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 24ನೆಯ ಅಧ್ಯಾಯವು ಮುಗಿಯಿತು.
*****

25. ಇಪ್ಪತ್ತೈದನೆಯ ಅಧ್ಯಾಯ
ಶ್ರೀವೇದವ್ಯಾಸದೇವರು ಧರ್ಮರಾಜನಿಗೆ ದಂಡನೀತಿಯ ಬಗ್ಗೆ ವಿವರಿಸುತ್ತಿದ್ದಾರೆ. ಬಹಳ ಜಾಗ್ರತೆಯಲ್ಲಿ ದಂಡನೀತಿಯನ್ನು ಅನುಸರಿಸಬೇಕು. ಪಂಡಿತರನ್ನು ಗೌರವಿಸಬೇಕು ಎಂಬುದರ ಬಗ್ಗೆ ವಿಶ್ಲೇಷಣೆ. ಹಯಗ್ರೀವ ಎಂಬ ರಾಜನ ವೃತ್ತಾಂತ.
ಕರ್ತವ್ಯನಿರತನಾದ ರಾಜನು ಯುದ್ಧದಲ್ಲಿ ಅಸು ನೀಗಿದರೂ ಸಂತೋಷ ಪಡುತ್ತಾನೆ. ದಂಡನೀತಿಯನ್ನು ಅನುಸರಿಸುವುದೇ ರಾಜನ ಮುಖ್ಯಕರ್ತವ್ಯ. ಹಯಗ್ರೀವರಾಜನು ಸ್ವಧರ್ಮನಿಷ್ಠೆಯಿಂದ ಪುಣ್ಯಾತ್ಮನಾದುದರ ಬಗ್ಗೆ ವಿವರಣೆ.
ವೈಶಂಪಾಯನಃ
ಪುನರೇವ ಮಹರ್ಷಿಸ್ತಂ ಕೃಷ್ಣದ್ವೈಪಾಯನೋಽಬ್ರವೀತ್ |
ಅಜಾತಶತ್ರುಂ ಕೌಂತೇಯಮಿದಂ ವಚನಮರ್ಥವತ್ ॥1॥
ವೈಶಂಪಾಯನರು ಓ ಜನಮೇಜಯನೇ! ಮಹರ್ಷಿಗಳಾದ ಕೃಷ್ಣದ್ವೈಪಾ- ಯನರು ಪುನಃ ಅಜಾತಶತ್ರುವಾದ ಕುಂತಿಯ ಪುತ್ರನಾದ ಧರ್ಮರಾಜನಿಗೆ ಹೀಗೆ ಹೇಳುತ್ತಾರೆ-
ಅರಣ್ಯೇ ವಸತಾಂ ತಾತ ಭ್ರಾತೄಣಾಂ ತೇ ತಪಸ್ವಿನಾಮ್ |
ಮನೋರಥಾ ಮಹಾರಾಜ ಯೇ ತತ್ರಾಸನ್ ಯುಧಿಷ್ಠಿರ ॥2॥
ಮಗು ಯುಧಿಷ್ಠಿರನೇ! ನೀವು ವನವಾಸದಲ್ಲಿದ್ದಾಗ ತಪಸ್ವಿಗಳಾದ ನಿನ್ನ ಸಹೋದರರು ಅನೇಕ ಅಭಿಲಾಷೆಗಳನ್ನು ಇಟ್ಟುಕೊಂಡಿದ್ದರು.
ತಾನಿಮೇ ಭರತಶ್ರೇಷ್ಠ ಪ್ರಾಪ್ನುವಂತು ಮಹಾರಥಾಃ |
ಪ್ರಶಾಧಿ ಪೃಥಿವೀಂ ಪಾರ್ಥ ಯಯಾತಿರಿವ ನಾಹುಷಃ ॥3॥
ಕುಂತಿಯ ಮಗನೇ! ನಹುಷನ ಮಗನಾದ ಯಯಾತಿಯಂತೆ ನೀನೂ ಕೂಡ ಈ ಭೂಮಿಯನ್ನು ಪರಿಪಾಲನೆ ಮಾಡು. ಆ ಮನೋರಥಗಳನ್ನು ಈಗ ಪಡೆದು- ಕೊಳ್ಳಲಿ.
ಅರಣ್ಯೇ ದುಃಖವಸತಿರನುಭೂತಾ ತಪಸ್ವಿಭಿಃ |
ದುಃಖಸ್ಯಾಂತೇ ನರವ್ಯಾಘ್ರಾಃ ಸುಖಂ ತ್ವನುಭವಂತ್ವಿಮೇ ॥4॥
ವನವಾಸ ಕಾಲದಲ್ಲಿ ತಪಸ್ವಿಗಳಾದ ನೀವೆಲ್ಲರೂ ಬಹಳ ದುಃಖವನ್ನು ಅನು- ಭವಿಸಿರುವಿರಿ. ಪುರುಷವ್ಯಾಘ್ರರಾದ ನೀವೆಲ್ಲರೂ ಎಲ್ಲಾ ದುಃಖಗಳು ಮುಗಿದ ಮೇಲೆ ಈಗಲಾದರೂ ಸುಖಗಳನ್ನು ಅನುಭವಿಸಿರಿ.
ಧರ್ಮಮರ್ಥಂ ಚ ಕಾಮಂ ಚ ಭ್ರಾತೃಭಿಃ ಸಹ ಭಾರತ |
ಅನುಭೂಯ ತತಃ ಪಶ್ಚಾತ್ ಪ್ರಸ್ಥಾತಾಸಿ ವಿಶಾಂ ಪತೇ ॥5॥
ಭಾರತನೇ! ನೀನೂ ಸಹ ಸಹೋದರರ ಜೊತೆ ಧರ್ಮ, ಅರ್ಥ, ಕಾಮಗಳನ್ನು ಅನುಭವಿಸಿದ ಅನಂತರ ವಾನಪ್ರಸ್ಥಾಶ್ರಮಕ್ಕೆ ತೆರಳಬಹುದು.
ಅತಿಥೀನಾಂ ಚ ಪಿತೄಣಾಂ ದೇವತಾನಾಂ ಚ ಭಾರತ |
ಆನೃಣ್ಯಂ ಗಚ್ಛ ಕೌಂತೇಯ ತತಃ ಸ್ವರ್ಗಂ ಗಮಿಷ್ಯಸಿ ॥6॥
ಭರತವಂಶೋದ್ಭವನಾದ ಕೌಂತೇಯನೇ! ಮೊದಲು ನೀನು ಅತಿಥಿಗಳ, ಪಿತೃಗಳ, ದೇವತೆಗಳ ಋಣವನ್ನು ಪರಿಹಾರ ಮಾಡಿಕೊಳ್ಳಬೇಕು. ಅನಂತರ ನಿನ್ನ ಇಷ್ಟದಂತೆ ಎಲ್ಲಾ ಕಾರ್ಯಗಳನ್ನು ಮಾಡಬಹುದು.
ಸರ್ವಮೇಧಾಶ್ವಮೇಧಾಭ್ಯಾಂ ಯಜಸ್ವ ಕುರುನಂದನ |
ತತಃ ಪಶ್ಚಾನ್ಮಹಾರಾಜ ಗಮಿಷ್ಯಸಿ ಪರಾಂ ಗತಿಮ್ ॥7॥
ಮಹಾರಾಜನೇ! ಸರ್ವಮೇಧ ಹಾಗೂ ಅಶ್ವಮೇಧಗಳೆಂಬ ಯಾಗಗಳನ್ನು ಮಾಡು. ಅನಂತರ ನೀನು ಉತ್ತಮಗತಿಯನ್ನು ಹೊಂದುವಿ.
ಭ್ರಾತೄಂಶ್ಚ ಸರ್ವಾನ್ ಕ್ರತುಭಿಃ ಸಂಯೋಜ್ಯ ಬಹುದಕ್ಷಿಣೈಃ |
ಸಂಪ್ರಾಪ್ತಾಃ ಕೀರ್ತಿಮತುಲಾಂ ಪಾಂಡವೇಯ ಭವಿಷ್ಯಸಿ ॥8॥
ಬಹುದಕ್ಷಿಣಾಕವಾದ ಯಾಗಗಳನ್ನು ಮಾಡುವ ಮೂಲಕ ಎಲ್ಲ ಸಹೋದರ- ರನ್ನು ಒಟ್ಟಿಗೆ ಸೇರಿಸು. ಎಲ್ಲರೂ ಕೂಡ ಅದರಲ್ಲಿ ಪಾಲ್ಗೊಳ್ಳುವಂತೆ ಮಾಡು. ಇದರಿಂದ ಎಣೆಯಿಲ್ಲದ ಕೀರ್ತಿಯನ್ನು ಪಡೆಯುವಿ.
ವಿದ್ಮಸ್ತೇ ಪುರುಷವ್ಯಾಘ್ರ ವಚನಂ ಕುರುನಂದನ |

ಶೃಣುಶ್ಚೈವಂ ಯಥಾ ಕುರ್ವನ್ ಧರ್ಮಾನ್ನ ಚ್ಯವಸೇ ನೃಪಃ ॥9॥
ಪುರುಷವ್ಯಾಘ್ರನೇ! ನೀನು ಹೇಳಿದ ಮಾತುಗಳನ್ನು ನಾವು ಚೆನ್ನಾಗಿ ತಿಳಿದಿದ್ದೇವೆ. ಆದರೆ ಪ್ರಕೃತ ನಾನು ಹೇಳಿದಂತೆ ಮಾಡುವುದರಿಂದ ನಿನಗೆ ಧರ್ಮಭ್ರಷ್ಟತೆಯು ಬರುವುದಿಲ್ಲ.
ಆದದಾನಸ್ಯ ಚ ಧನಂ ವಿಗ್ರಹಂ ಚ ಯುಧಿಷ್ಠಿರ |
ಸಮಾನಂ ಧರ್ಮಕುಶಲಾಃ ಸ್ಥಾಪಯಂತಿ ನರೇಶ್ವರ ॥10॥
ಶತ್ರುರಾಜ್ಯವನ್ನು ವಶಪಡಿಸಿಕೊಂಡವನಿಗೆ ಶತ್ರುಗಳ ಜೊತೆಗೆ ಯುದ್ಧವು ಅವರನ್ನು ಜಯಿಸುವುದು, ಅವರ ಸಂಪತ್ತನ್ನು ಸ್ವೀಕರಿಸುವುದು ಧರ್ಮವೇ ಆಗಿರುತ್ತದೆ. ಸಮಾನಧರ್ಮದಲ್ಲಿ ಕುಶಲರಾದವರು ರಾಜನಿಗೋಸ್ಕರ ಯುದ್ಧವನ್ನು ತಿಳಿಸುತ್ತಾರೆ.
ಪ್ರತ್ಯಕ್ಷಮನುಮಾನಂ ಚ ಉಪಮಾನಂ ತಥಾಗಮಃ |
ಅರ್ಥಾಪತ್ತಿಸ್ತಥೈತಿಹ್ಯಂ ಸಂಶಯೋ ನಿರ್ಣಯಸ್ತಥಾ ॥11॥
ಆಕಾರೋ ಹೀಂಗಿತಶ್ಚೈವ ಗತಿಶ್ಚೇಷ್ಟಾ ಚ ಭಾರತ |
ಪ್ರತಿಜ್ಞಾ ಚೈವ ಹೇತುಶ್ಚ ದೃಷ್ಟಾಂತೋಪನಯಸ್ತಥಾ ॥
ಉಕ್ತನಿಗಮನಂ ತೇಷಾಂ ಪ್ರಮೇಯಂ ಚ ಪ್ರಯೋಜನಮ್ ॥12॥
ಪ್ರತ್ಯಕ್ಷ, ಅನುಮಾನ, ಆಗಮ, ಉಪಮಾನ, ಅರ್ಥಾಪತ್ತಿ, ಐತಿಹ್ಯ, ಸಂಶಯ, ನಿರ್ಣಯ, ಇಂಗಿತ, ಚೇಷ್ಟೆ, ನಡತೆ, ಪ್ರತಿಜ್ಞೆ, ಹೇತು, ದೃಷ್ಟಾಂತ, ಉಪನಯ, ಉಕ್ತಿ, ನಿಗಮನ ಎಂಬುದಾಗಿ ಪ್ರಮಾಣಗಳು ಇರುತ್ತವೆ. ಇವುಗಳಿಂದ ನಿರ್ಣಯ ಮಾಡಲ್ಪಟ್ಟ ವಿಷಯಗಳು ಹಾಗೂ ಅವುಗಳ ಪ್ರಯೋಜನಗಳು ಎಲ್ಲವೂ ಕಾರ್ಯಸಿದ್ಧಿಗೆ ಕಾರಣಗಳಾಗಿವೆ ಎಂದು ಹೇಳುತ್ತಾರೆ.
ದೇಶಕಾಲಪ್ರತೀಕ್ಷೀ ಯೋ ದಸ್ಯೋರ್ದರ್ಶಯತೇ ನೃಪಃ |
ಶಾಸ್ತ್ರಜಾಂ ಬುದ್ಧಿಮಾಸ್ಥಾಯ ನೈನಸಾ ಸ ಹಿ ಯುಜ್ಯತೇ ॥13॥
ಅಪರಾಧಿಗೆ ಶಿಕ್ಷೆಯನ್ನು ಕೊಡುವಾಗ ದೇಶ, ಕಾಲಗಳನ್ನು ಗಮನಿಸಬೇಕು. ಶಾಸ್ತ್ರವನ್ನು ಅರಿತು, ಶಾಸ್ತ್ರದಲ್ಲಿ ನಿರ್ಣಯಿಸಿದಂತೆ ಶಿಕ್ಷೆಯನ್ನು ನೀಡಬೇಕು. ಹೀಗೆ ಮಾಡುವುದರಿಂದ ರಾಜನಿಗೆ ಸ್ವಲ್ಪವೂ ಪಾಪವು ಬರುವುದಿಲ್ಲ.
ಟಿಪ್ಪಣಿ - ದುಷ್ಟರನ್ನು ಶಿಕ್ಷಿಸಲೇ ಬೇಕು. ಆದರೆ ಅಪರಾಧವನ್ನು ಮಾಡದೇ ಇದ್ದಾಗ ಅಪರಾಧ ಮಾಡಿದ್ದು, ನಿರ್ಣಯವಾಗದೇ ಇದ್ದಾಗ ಶಿಕ್ಷೆಯನ್ನು ನೀಡ- ಬಾರದು. ದುಷ್ಟರನ್ನು ಶಿಕ್ಷಿಸುವಾಗ ದೇಶಕಾಲಗಳ ವಿವೇಚನೆಯು ಇರಬೇಕು. ಅವಸರವನ್ನು ಮಾಡಬಾರದು. ಇವನು ಅಪರಾಧ ಮಾಡಿದ್ದಾನೆ ಎಂಬುದನ್ನು ಅನೇಕ ಪ್ರಮಾಣಗಳಿಂದ ಖಚಿತಪಡಿಸಿಕೊಳ್ಳಬೇಕು. ಇಲ್ಲದಿದ್ದರೆ ನಿರಪರಾಧಿಗೆ ಶಿಕ್ಷೆಯನ್ನು ನೀಡಿದಂತಾಗುತ್ತದೆ. ಶಾಸ್ತ್ರಾಧ್ಯಯನವನ್ನು ಮಾಡಿದವನಿಗಷ್ಟೇ ಯಾರು ಅಪರಾಧಿ, ಯಾರು ಅಪರಾಧಿಯಲ್ಲ ಎಂಬುದನ್ನು ತಿಳಿಯಲು ಸಾಧ್ಯ.
ಆದಾಯ ಬಲಿಷಡ್-ಭಾಗಂ ಯೋ ರಾಷ್ಟ್ರಂ ನಾಭಿರಕ್ಷತಿ |
ಪ್ರತಿಗೃಹ್ಣಾತಿ ತತ್ಪಾಪಂ ಚತುರ್ಥಾಂಶೇನ ಪಾರ್ಥಿವಃ ॥14॥
ಪ್ರಜೆಗಳಿಗೆ ಎಷ್ಟು ಆದಾಯವು ಬರುತ್ತದೋ, ಅದರಲ್ಲಿ ಆರನೆಯ ಒಂದು ಭಾಗವನ್ನು ರಾಜನಾದವನು ಪಡೆದುಕೊಳ್ಳಬೇಕು. ತನ್ಮೂಲಕ ರಾಷ್ಟ್ರದ ರಕ್ಷಣೆಯಲ್ಲಿ ತೊಡಗಬೇಕು. ಹೀಗೆ ಮಾಡದಿದ್ದರೆ ಆ ಪ್ರಜೆಗಳ ಪಾಪದ ನಾಕನೆಯ ಒಂದು ಭಾಗವನ್ನು ಪಡೆದುಕೊಳ್ಳುತ್ತಾನೆ.
ಟಿಪ್ಪಣಿ - ಮಹಾಭಾರತದ ಕಾಲದಲ್ಲಿ ಎಷ್ಟು ತೆರಿಗೆ ಕೊಡುತ್ತಿದ್ದರು ಎಂಬುದನ್ನು ಈ ಶ್ಲೋಕವು ಹೇಳುತ್ತಿದೆ. ಆರನೆಯ ಒಂದು ಭಾಗವೆಂದರೆ ಒಬ್ಬ ವ್ಯಕ್ತಿಗೆ ಒಂದು ಲಕ್ಷ ಲಾಭವು ಬಂದರೆ, ಹದಿನಾರುಸಾವಿರದ ಐದುನೂರು ರೂಪಾಯಿಗಳನ್ನು ತೆರಿಗೆಯ ರೂಪದಲ್ಲಿ ರಾಜನಿಗೆ ಕೊಡಬೇಕಿತ್ತು. ಆ ಹಣವನ್ನು ರಾಜನು ತೆಗೆದುಕೊಂಡು, ಸ್ವಲ್ಪವೂ ತಾನು ಬೇರೆ ಕಾರ್ಯಕ್ಕೆ ಉಪಯೋಗ ಮಾಡದೇ ಪ್ರಜೆಗಳ ಹಿತಕ್ಕಾಗಿಯೇ ಉಪಯೋಗ ಮಾಡಬೇಕು. ಇಲ್ಲದಿದ್ದರೆ ನೂರಕ್ಕೆ ಇಪ್ಪತ್ತೈದು ಭಾಗದಷ್ಟು ಪಾಪವನ್ನು ರಾಜನು ಹೊಂದು- ತ್ತಿದ್ದನು.
ನಿಬೋಧ ಚ ಯಥಾ ತಿಷ್ಠನ್ ಧರ್ಮಾನ್ನ ಚ್ಯವತೇ ನೃಪಃ |
ನಿಗ್ರಹಾದ್ಧರ್ಮಶಾಸ್ತ್ರಾಣಾಮನುರುದ್ಧ್ಯನ್ನಪೇತಭೀಃ ॥5॥
ರಾಜನಾದವನು ಧರ್ಮಮಾರ್ಗದಲ್ಲಿ ಹೇಗೆ ನಡೆಯಬೇಕೆಂಬುದನ್ನು ಹೇಳು- ತ್ತೇನೆ ಕೇಳು? ಧರ್ಮಶಾಸ್ತ್ರಗಳ ನಿಯಮವನ್ನು ಉಲ್ಲಂಘನೆ ಮಾಡಿದರೆ ಹೇಗೆ ಪತಿತನಾಗುತ್ತಾನೆ? ಧರ್ಮಶಾಸ್ತ್ರಗಳ ನಿಯಮದಂತೆ ನಡೆದುಕೊಂಡರೆ ಹೇಗೆ ಭಯರಹಿತನಾಗುತ್ತಾನೆ? ಇವೆಲ್ಲವನ್ನೂ ಹೇಳುತ್ತೇನೆ ಕೇಳು -
ಕಾಮಕ್ರೋಧಾವನಾದೃತ್ಯ ಪಿತೇವ ಸಮದರ್ಶನಃ |
ಶಾಸ್ತ್ರಜಾಂ ಬುದ್ಧಿಮಾಸ್ಥಾಯ ಯುಜ್ಯತೇ ನೈನಸಾ ಹಿಸಃ ॥16॥
ರಾಜನಾದವನು ಕಾಮಕ್ರೋಧಗಳನ್ನು ಎಲ್ಲಾ ಪ್ರಜೆಗಳ ವಿಷಯದಲ್ಲಿ ಪರಿತ್ಯಾಗ ಮಾಡಬೇಕು. ತಂದೆಯಾದವನು ತನ್ನ ಮಕ್ಕಳನ್ನು ಸಮಾನ ದೃಷ್ಟಿಯಿಂದ ಕಾಣುವಂತೆ ರಾಜನೂ ಸಹ ಸಮಾನದೃಷ್ಟಿಯಿಂದ ಎಲ್ಲ ಪ್ರಜೆಗಳನ್ನು ಕಾಣಬೇಕು. ಇಂಥ ರಾಜನಿಗೆ ಯಾವುದೇ ಪಾಪವು ಬರುವುದಿಲ್ಲ.
ದೈವೇನೋಪಹತೋ ರಾಜಾ ಕರ್ಮಕಾಲೇ ಮಹಾದ್ಯುತೇ |
ಪ್ರಮಾದಯತಿ ತತ್ ಕರ್ಮ ನ ತತ್ರಾಹುರತಿಕ್ರಮಮ್ ॥16॥
ಮಹಾಪರಾಕ್ರಮಿಯೇ! ರಾಜನು ಪ್ರಜೆಗಳ ರಕ್ಷಣೆಯನ್ನು ಮಾಡುವ ಸಂದರ್ಭದಲ್ಲಿ ಪ್ರಮಾದದಿಂದ ಅವನು ತೊಂದರೆಗೀಡಾದರೆ ಅಥವಾ ಮಾಡಿದ ಕೆಲಸವನ್ನು ಪೂರ್ಣವಾಗಿ ಮಾಡದಿದ್ದರೆ ಅದು ರಾಜನು ಅತಿಕ್ರಮವನ್ನು ಮಾಡಿದಂತೆ, ಅಥವಾ ಅಪರಾಧವನ್ನು ಮಾಡಿದಂತೆ ಆಗುವುದಿಲ್ಲ.
ರಾಜನು ಪ್ರಜೆಗಳ ಹಿತಕ್ಕೋಸ್ಕರ ಅನೇಕ ಕಾರ್ಯಗಳನ್ನು ಮಾಡುತ್ತಲೇ ಇರಬೇಕು. ಎಂದೆಂದೂ ಕೂಡ ಆ ಕಾರ್ಯಗಳಿಂದ

ವಿಮುಖನಾಗಬಾರದು. ಇದು ರಾಜನಾದವನ ಮುಖ್ಯ ಕರ್ತವ್ಯವಾಗಿದೆ. ಪ್ರಜೆಗಳ ಹಿತಕ್ಕೋಸ್ಕರ ಅನೇಕ ಕಾರ್ಯಗಳನ್ನು ಹಮ್ಮಿಕೊಂಡಾಗ ದೈವಯೋಗದಂತೆ ಯಾವುದೋ ಒಂದು ಕಾರ್ಯವು ಆಗದಿದ್ದರೆ ಅದರಿಂದ ರಾಜನು ಪಾಪವನ್ನು ಹೊಂದುವುದಿಲ್ಲ. ಉದ್ದೇಶ ಪೂರ್ವಕವಾಗಿ ಮಾಡಿದ ಕೆಲಸವನ್ನು ಮುಗಿಸದೇ ಇರುವುದರಿಂದ ಅಥವಾ ಅಂದುಕೊಂಡಂತೆ ಸಫಲವನ್ನಾಗಿ ಮಾಡದೇ ಇರುವುದರಿಂದಷ್ಟೇ ಪಾಪವು ಬರುತ್ತದೆ.
ತರಸಾ ಬುದ್ಧಿಪೂರ್ವಂ ವಾ ನಿಗ್ರಾಹ್ಯಾ ಏವ ಶತ್ರವಃ |
ಪಾಪೈಃ ಸಹ ನ ಸಂದಧ್ಯಾದ್ ರಾಷ್ಟ್ರಂ ಪುಣ್ಯಂ ನ ಕಾರಯೇತ್॥17॥
ತನ್ನ ಪರಾಕ್ರಮದಿಂದ, ಬುದ್ಧಿಶಕ್ತಿಯಿಂದ ಶತ್ರುಗಳನ್ನು ದಮನ ಮಾಡಬೇಕು. ಎಂದೆಂದೂ ಪಾಪಿಷ್ಠರ ಸಹವಾಸವನ್ನು ಮಾಡಬಾರದು. ರಾಷ್ಟ್ರವನ್ನು ದುಡ್ಡಿ- ಗೋಸ್ಕರ ಮಾರಾಟ ಮಾಡಬಾರದು.
ವಿವರಣೆ - ರಾಜನು ಎಂದೆಂದೂ ದುಷ್ಟರ, ದರೋಡೆಗಾರರ ಸಹವಾಸವನ್ನು ಮಾಡಬಾರದು. ಮತ್ತು ತನ್ನ ಹಣಸಂಪಾದನೆಗೋಸ್ಕರ ಕೆಲವು ಭಾಗಗಳನ್ನು ಮಾರಾಟ ಮಾಡುವುದು ಮೊದಲಾದವುಗಳನ್ನೂ ಕೂಡ ಮಾಡಬಾರದು.
ಶೂರಾಶ್ಚಾರ್ಯಾಶ್ಚ ಸತ್ಕಾರ್ಯಾ ವಿದ್ವಾಂಸಶ್ಚ ಯುಧಿಷ್ಠಿರ |
ಗೋಮಿನೋ ಧನಿನಶ್ಚೈವ ಪರಿಪಾಲ್ಯಾ ವಿಶೇಷತಃ ॥18॥
ಶೂರರಾದವರನ್ನು, ಪೂಜ್ಯರಾದವರನ್ನು, ವಿದ್ವಾಂಸರನ್ನು ಯಥೋಚಿತವಾಗಿ ಸತ್ಕಾರ ಮಾಡಬೇಕು. ಯಾರು ಗೋಮಿಗಳೋ (ಅಪಾರವಾದ ಗೋಸಂಪತ್ತನ್ನು ಹೊಂದಿರುವರೋ), ಮತ್ತು ಶ್ರೀಮಂತರೋ ಅಂಥವರನ್ನು ವಿಶೇಷವಾಗಿ ರಕ್ಷಣೆ ಮಾಡಬೇಕು.
ಟಿಪ್ಪಣಿ- ಸರ್ವೇಷಾಂ ಯೋನಿರುಚ್ಯತ ಇತ್ಯತ್ರ ಯೋನಿಃ ಪ್ರಮಾಣಮ್ |
ಗೋಮಿನೋ ಧನಿನಶ್ಚೈವ ಇತ್ಯತ್ರ ಗೋಮಿನಃ ಬಹುಗೋಧನವಂತೋ ಗೋಪಾಲಾಃ | `ದ್ವೌ ಗವೀಶ್ವರೇ | ಗೋಮಾನ್ ಗೋಮೀ ಗೋಕುಲಂ ತು ಗೋಧನಂ ಸ್ಯಾದ್ ಗವಾಂ ವ್ರಜೇ ॥' ಇತ್ಯಮರಃ |
`ಗೋಮಿನೋ ಧನಿನಶ್ಚೈವ ಎಂಬಲ್ಲಿ ಗೋಮಿನಃ' - ಎಂಬುದಕ್ಕೆ ಗೋ ಎಂಬ ಸಂಪತ್ತುಳ್ಳವರು ಎಂದರ್ಥ. ಅಮರಕೋಶದಲ್ಲಿ ``ದ್ವೌ ಗವೀಶ್ವರೇ | ಗೋಮಾನ್ ಗೋಮೀ ಗೋಕುಲಂ ತು ಗೋಧನಂ ಸ್ಯಾದ್ ಗವಾಂ ವ್ರಜೇ ॥' ಎಂದು ಹೇಳಿರುತ್ತಾರೆ.
ವಿವರಣೆ - `ಗಾಂ ವಿನುತೇ ಇತಿ ಗೋಮಿನಃ' ಹಸುವನ್ನು ರಕ್ಷಣೆ ಮಾಡು- ವವನಾದ ಗೋಪಾಲಕನು ಗೋಮಿ ಎಂದು ಕರೆಸಿಕೊಳ್ಳುತ್ತಾನೆ. ಆಗಿನ ಕಾಲದಲ್ಲಿ ಯಾರಿಗೆ ಬಹಳಷ್ಟು ಗೋವುಗಳಿರುತ್ತವೋ, ಅವನನ್ನು ಶ್ರೀಮಂತನೆಂದು ಮತ್ತು ಅಪಾರಸಂಪತ್ತುಳ್ಳವನನ್ನೂ ಕೂಡ ಶ್ರೀಮಂತನೆಂದು ಪರಿಗಣಿಸುತ್ತಿದ್ದರು. ರಾಜ- ನಾದವನು ಶ್ರೀಮಂತರಿಗೆ ಸರಿಯಾದ ರಕ್ಷಣೆಗಳನ್ನು ನೀಡಬೇಕಿತ್ತು.
ವ್ಯವಹಾರೇಷು ಧರ್ಮ್ಯೇಷು ನಿಯೋಜ್ಯಾಶ್ಚ ಬಹುಶ್ರುತಾಃ |
ಗುಣಯುಕ್ತೇಽಪಿ ನೈಕಸ್ಮಿನ್ ವಿಶ್ವಸ್ಯಾಚ್ಚ ವಿಚಕ್ಷಣಃ ॥19॥
ಧರ್ಮಕ್ಕೆ ಸಂಬಂಧಪಟ್ಟವ್ಯವಹಾರಗಳಲ್ಲಿ ಶಾಸ್ತ್ರವನ್ನು ತಿಳಿದವರನ್ನಷ್ಟೇ ಆಡಳಿತದಲ್ಲಿ ನಿಯೋಜನೆ ಮಾಡಬೇಕು. ಒಬ್ಬ ಬುದ್ಧಿವಂತನಾದವನು ಅತ್ಯಂತ ಗುಣಶಾಲಿಯಾಗಿದ್ದರೂ ಕೂಡ ಅವನನ್ನು ಪೂರ್ಣವಾಗಿ ರಾಜನಾದವನು ನಂಬ- ಬಾರದು.
ಪ್ರಮಾಣಜ್ಞಾ ಮಹೀಪಾಲ ನ್ಯಾಯಶಾಸ್ತ್ರಾವಲಂಬಿನಃ |
ವೇದಾರ್ಥತತ್ತ್ವವಿದ್ ರಾಜಂಸ್ತರ್ಕಶಾಸ್ತ್ರಬಹುಶ್ರುತಾಃ ॥20॥
ಮಂತ್ರೇ ಚ ವ್ಯವಹಾರೇ ಚ ನಿಯೋಕ್ತವ್ಯಾ ವಿಜಾನತಾ |
ಪ್ರಮಾಣಗಳ ಬಗ್ಗೆ ಚೆನ್ನಾಗಿ ತಿಳಿದವನು ನ್ಯಾಯಶಾಸ್ತ್ರದ ಪಾಂಡಿತ್ಯವನ್ನು ಹೊಂದಿದವನು ವೇದಗಳ ಅರ್ಥವನ್ನು ಯಥಾವತ್ತಾಗಿ ತಿಳಿದವನು ಬಹುಶ್ರುತನು ಯಾರು ಇರುತ್ತಾನೋ, ಅಂಥ ವಿದ್ವಾಂಸನನ್ನೇ ವ್ಯವಹಾರಗಳಲ್ಲಿ, ಸಭೆಗಳಲ್ಲಿ ಮಂತ್ರಾರ್ಥಲೋಚನೆ ಮಾಡುವ ಸಂದರ್ಭಗಳಲ್ಲಿ ಅಧಿಕಾರಿಗಳನ್ನಾಗಿ ನಿಯಮನ ಮಾಡಬೇಕು.
ತರ್ಕಶಾಸ್ತ್ರಕೃತಾ ಬುದ್ಧಿರ್ಧರ್ಮಶಾಸ್ತ್ರಕೃತಾ ಚ ಯಾ ॥21॥
ದಂಡನೀತಿಕೃತಾ ಚೈವ ತ್ರೈಲೋಕ್ಯಮಪಿ ಸಾಧಯೇತ್ |
ನಿಯೋಜ್ಯಾ ವೇದತತ್ತ್ವಜ್ಞಾ ಯಜ್ಞಕರ್ಮಸು ಪಾರ್ಥಿವ ॥22॥
ರಾಜನಾದವನು ತರ್ಕಶಾಸ್ತ್ರ, ಧರ್ಮಶಾಸ್ತ್ರ ಮೊದಲಾದವುಗಳಲ್ಲಿ ಸುಶಿಕ್ಷಿತ- ವಾದ ಬುದ್ಧಿಯಿಂದ ದಂಡನೀತಿಯನ್ನು ಅಳವಡಿಸಬೇಕು. ಆಗ ಅವನ ನೀತಿಯು ತ್ರೈಲೋಕ್ಯವು ಅವನ ಅಧೀನವಾಗುವಂತೆ ಮಾಡುತ್ತದೆ. ಯಾರು ವೇದತತ್ತ್ವವನ್ನು ತಿಳಿದಿರುತ್ತಾರೋ ಅವರನ್ನೇ ಯಾಗಕರ್ಮಗಳಲ್ಲಿ ರಾಜನು ನಿಯೋಜನೆ ಮಾಡ- ಬೇಕು.
ವೇದಜ್ಞಾ ಯೇ ಚ ಶಾಸ್ತ್ರಜ್ಞಾಸ್ತೇ ಚ ರಾಜನ್ ಸುಬುದ್ಧಯಃ |
ಆನ್ವೀಕ್ಷಿಕೀತ್ರಯೀವಾರ್ತಾದಂಡನೀತಿಷು ಪಾರಗಾಃ ॥23॥
ತೇ ತು ಸರ್ವತ್ರ ಯೋಕ್ತವ್ಯಾಸ್ತೇ ಚ ಬುದ್ಧೇಃ ಪರಾಂ ಗತಾಃ |
ಅರಕ್ಷಿತಾ ದುರ್ವಿನೀತೋ ಮಾನೀ ಸ್ತಬ್ಧೋಽನಸೂಯಕಃ |
ಏನಸಾ ಯುಜ್ಯತೇ ರಾಜಾ ದುರ್ದಾಂತ ಇತಿ ಚೋಚ್ಯತೇ ॥24॥
ಯಾರು ವೇದವನ್ನು ಸಂಪೂರ್ಣವಾಗಿ ತಿಳಿದಿರುತ್ತಾನೋ, ಎಲ್ಲಾ ಶಾಸ್ತ್ರಗಳನ್ನು ಅಧ್ಯಯನ ಮಾಡಿರುತ್ತಾನೋ, ಬುದ್ಧಿಯಿಂದ ಚತುರನಾಗಿರುತ್ತಾನೋ, ತರ್ಕ- ಶಾಸ್ತ್ರದಲ್ಲಿ ವ್ಯವಹಾರಶಾಸ್ತ್ರದಲ್ಲಿ ಮತ್ತು ದಂಡನೀತಿಯಲ್ಲಿ ಪಾರಂಗತನಾಗಿ- ರುತ್ತಾನೋ, ಅಂಥ ಪಂಡಿತನನ್ನೇ ಎಲ್ಲಾ ಕಾರ್ಯಗಳಲ್ಲಿ ನಿಯೋಜನೆ ಮಾಡ- ಬೇಕು. ಪ್ರಜೆಗಳನ್ನು ರಕ್ಷಣೆ ಮಾಡದ ಹಿರಿಯರನ್ನು ಗೌರವಿಸದ, ವಿನೀತನಲ್ಲದ, ಅತ್ಯಂತ ಅಹಂಕಾರವುಳ್ಳ, ಅಸೂಯೆಯಿಂದ ಕೂಡಿದ ಅರಸನು ಪಾಪಕ್ಕೆ ಭಾಗಿ- ಯಾಗುತ್ತಾನೆ. ಮತ್ತು ದುಷ್ಟನೆಂಬ ಬಿರುದಿಗೂ ಭಾಗಿಯಾಗುತ್ತಾನೆ. ರಾಜ್ಯವನ್ನು ಪರಿಪಾಲನೆ ಮಾಡಲು ಇವನಿಗೆ ಸಾಮರ್ಥ್ಯವೇ ಇಲ್ಲವೆಂದು ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ಆನ್ವೀಕ್ಷಿಕೀತ್ರಯೀವಾರ್ತಾ ಇತ್ಯತ್ರ ಅನುಕೂಲಾ ಈಶಾ ಪರಮಾತ್ಮಾ- ಪರೋಕ್ಷಜ್ಞಾನಮ್, ತತ್ಸಂಬಂಧಿನೀ ವಿದ್ಯಾ

ಆನ್ವೀಕ್ಷಿಕೀ |
`ಆನ್ವೀಕ್ಷಿಕೀತ್ರಯೀವಾರ್ತಾ' ಎಂಬಲ್ಲಿ ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಸಂಬಂಧ- ಪಟ್ಟ ವಿದ್ಯೆಯೇ `ಆನ್ವೀಕ್ಷಿಕೀ' ಎಂದು ಕರೆಸಿಕೊಳ್ಳುತ್ತದೆ. ತರ್ಕಶಾಸ್ತ್ರವನ್ನು ಆನ್ವೀಕ್ಷಿಕೀ ಎಂದು ಇಲ್ಲಿ ವಿವಕ್ಷಿಸಬಾರದು.
ಯೇಽರಕ್ಷ್ಯಮಾಣಾ ಹೀಯಂತೇ ದೈವೇನೋಪಹತೇ ನೃಪೇ |
ತಸ್ಕರೈಶ್ಚಾಪಿ ಹನ್ಯಂತೇ ಸರ್ವಂ ತದ್ ರಾಜಕಿಲ್ಬಿಷಮ್ ॥25॥
ರಾಜನಿಂದ ರಕ್ಷಿಸಲ್ಪಡದೇ ಇರುವ ಪ್ರಜೆಗಳು ಅತಿವೃಷ್ಟಿ, ಅನಾವೃಷ್ಟಿ ಎಂಬ ದೈವಿಕವಾದ ಆಪತ್ತುಗಳಿಂದ ಮತ್ತು ಕಳ್ಳಕಾಕರ ಉಪಟಳಗಳಿಂದ ವಿನಾಶವನ್ನು ಹೊಂದುತ್ತಾರೆ. ಹೀಗೆ ಪ್ರಜೆಗಳ ವಿನಾಶಕ್ಕೆ ರಾಜನೇ ಕಾರಣನೆಂದು ಆಗುತ್ತದಾ- ದ್ದರಿಂದ ಮಹಾಪಾಪವನ್ನು ಹೊಂದುತ್ತಾನೆ.
ಟಿಪ್ಪಣಿ - ರಾಜನು ಅತ್ಯಂತ ಗುಣವಂತನಾಗಿರಬೇಕು. ನೀತಿವಂತನಾಗಿ- ರಬೇಕು. ಇಲ್ಲದಿದ್ದರೆ ದೇಶದಲ್ಲಿ ಸರಿಯಾದ ಕಾಲಕ್ಕೆ ಮಳೆಬೆಳೆಗಳೂ ಕೂಡ ಬರುವುದಿಲ್ಲ. ಕಳ್ಳಕಾರರ ಭಯವು ಹೆಚ್ಚಾಗುತ್ತದೆ. ಪ್ರಜೆಗಳೂ ಕೂಡ ನಾಶವನ್ನು ಹೊಂದುತ್ತಾರೆ. ಪ್ರಜೆಗಳ ನಾಶದ ಪಾಪವು ರಾಜನಿಗೆ ಬರುತ್ತದೆ.
ಟಿಪ್ಪಣಿ - ದೈವೇನಾಭ್ಯಾಹತಾ ನೃಪ ಇತ್ಯತ್ರ ದೈವೇನ ದೇವವಿಷಯೇ ಯಜ್ಞಾದಿಕರ್ಮಣಾ ಅಭ್ಯಾಹತಾ ರಹಿತಾಃ |
`ದೈವೇನಾಭ್ಯಾಹತಾ ನೃಪ' - ಎಂಬಲ್ಲಿ ದೈವೇನ = ದೇವತೆಯ ವಿಷಯದಿಂದ ಯಜ್ಞಾದಿಕರ್ಮಗಳಿಂದ, ಅಭ್ಯಾಹತಾ = ರಹಿತರಾದವರು ಎಂದರ್ಥ.
ಸುಮಂತ್ರಿತೇ ಸುನೀತೇ ಚ ವಿಧಿವಚ್ಚೋಪಪಾದಿತೇ |
ಪೌರುಷೇ ಕರ್ಮಣಿ ಕೃತೇ ನಾಸ್ತ್ಯಧರ್ಮೋ ಯುಧಿಷ್ಠಿರ ॥26॥
ಯುಧಿಷ್ಠಿರನೇ! ಪ್ರಜೆಗಳಿಗೆ ಯಾವುದನ್ನು ಮಾಡುವುದರಿಂದ ಹಿತವಾಗು- ತ್ತದೆಂಬುದನ್ನು ಚೆನ್ನಾಗಿ ಆಲೋಚನೆ ಮಾಡಬೇಕು. ಧರ್ಮಮೂಲವಾದ ನೀತಿಯನ್ನು ಅನುಸರಿಸಬೇಕು. ಎಲ್ಲಾ ರೀತಿಯಿಂದಲೂ ಮನುಷ್ಯ ಪ್ರಯತ್ನದಿಂದ ಸತ್ಕಾರ್ಯಗಳನ್ನು ಮಾಡಿಯೂ ಕೂಡ ಮಳೆ, ಬೆಳೆಗಳು ಆಗದಿದ್ದರೆ, ರಾಜನು ಅಧರ್ಮ ಮಾಡಿದಂತೆ ಆಗುವುದಿಲ್ಲ.
ವಿಚ್ಛಿದ್ಯಂತೇ ಸಮಾರಂಭಾಃ ಸಿದ್ಧ್ಯಂತ್ಯಪಿ ಚ ದೈವತಃ |
ಕೃತೇ ಪುರುಷಕಾರೇ ತು ನೈನಃ ಸ್ಪೃಶತಿ ಪಾರ್ಥಿವಮ್ ॥27॥
ಒಮ್ಮೊಮ್ಮೆ ವ್ಯಕ್ತಿಯು ನಿರ್ದುಷ್ಟನಾಗಿದ್ದರೂ ಪ್ರಾರಂಭ ಮಾಡಿದ ಕೆಲಸಗಳು ದುರ್ಯೋಗದಿಂದ ಹಾಳಾಗುತ್ತವೆ. ದೇವತೆಗಳ ಅನುಗ್ರಹದಿಂದ ಒಮ್ಮೊಮ್ಮೆ ಸಫಲವಾಗುತ್ತವೆ. ಮನುಷ್ಯನ ಎಲ್ಲಾ ಪ್ರಯತ್ನಗಳಿಗೆ ದೈವವೇ ಉತ್ತರವನ್ನು ನೀಡು- ತ್ತದೆ. ಆದ್ದರಿಂದ ಶ್ರದ್ಧಾಪೂರ್ವಕವಾಗಿ ಕೆಲಸವನ್ನು ಮಾಡುವ ರಾಜನಿಗೆ ಯಾವುದೇ ಪಾಪಗಳು ತಟ್ಟುವುದಿಲ್ಲ.
ಟಿಪ್ಪಣಿ - ಮಾಡುವ ಕರ್ತವ್ಯವನ್ನು ಮಾಡಲೇಬೇಕು. ಪ್ರಾಮಾಣಿಕವಾಗಿ ಕರ್ತವ್ಯಗಳನ್ನು ಮಾಡಿಯೂ ಕೂಡ ಹಾನಿಯುಂಟಾದರೆ ದುರ್ಭಿಕ್ಷೆಯುಂಟಾದರೆ ದುಃಖವನ್ನು ಪಡಬಾರದು. ಎಲ್ಲವೂ ಕೂಡ ಭಗವಂತನ ಅಧೀನವೆಂದು ತಿಳಿದು ಶಾಂತಮನಸ್ಕನಾಗಿರಬೇಕು. ತಾನು ಪ್ರಾಮಾಣಿಕವಾಗಿ ಕೆಲಸವನ್ನು ನಿರ್ವಹಿಸಿದ ರಾಜನು ಯಾವುದಕ್ಕೂ ಕೂಡ ಹೆದರುವ ಅವಶ್ಯಕತೆಯಿರುವುದಿಲ್ಲ ಎಂದು ಅಭಿಪ್ರಾಯ.
ಅತ್ರ ತೇ ರಾಜಶಾರ್ದೂಲ ವರ್ತಯಿಷ್ಯೇ ಕಥಾಮಿಮಾಮ್ |
ಯದ್ ವೃತ್ತಂ ಪೂರ್ವರಾಜರ್ಷೇರ್ಹಯಗ್ರೀವಸ್ಯ ಪಾರ್ಥಿವ ॥28॥
ರಾಜಸಿಂಹನೇ! ಈ ಸಂದರ್ಭದಲ್ಲಿ ಇದೇ ವಿಷಯಕ್ಕೆ ಸಂಬಂಧಪಟ್ಟ ಒಂದು ಕಥೆಯನ್ನು ನಿನಗೆ ತಿಳಿಸುತ್ತೇನೆ. ಹಿಂದೆ ರಾಜರ್ಷಿಯಾದ ಹಯಗ್ರೀವನ ವಿಷಯ- ದಲ್ಲಿ ಒಂದು ಕಥೆಯು ನಡೆಯಿತು. ಅದನ್ನು ನಿನಗೆ ತಿಳಿಸುತ್ತೇನೆ.
ಶತ್ರೂನ್ ಹತ್ವಾ ಹತಸ್ಯಾಜೌ ಶೂರಸ್ಯಾಕ್ಲಿಷ್ಟಕರ್ಮಣಃ |
ಅಸಹಾಯಸ್ಯ ಧೀರಸ್ಯ ನಿರ್ಜಿತಸ್ಯ ಯುಧಿಷ್ಠಿರ ॥29॥
ರಾಜರ್ಷಿಯಾದ ಹಯಗ್ರೀವನೆಂಬ ರಾಜನು ಶತ್ರುಗಳ ಜೊತೆ ಯುದ್ಧಕ್ಕೆ ನಿಂತನು. ತಾನು ಅಸಹಾಯಕನಾಗಿಯೇ ಅನೇಕ ಶತ್ರುಗಳನ್ನು ಕೊಂದನು. ಅಂತಿಮ -ವಾಗಿ ಶತ್ರುಗಳಿಂದ ಯುದ್ಧದಲ್ಲಿ ಹತನಾದನು. ತನ್ನ ಕರ್ತವ್ಯವನ್ನು ಪರಿಪಾಲನೆ ಮಾಡಿದ್ದರಿಂದ ಉತ್ತಮ ಲೋಕವನ್ನೇ ಹೊಂದಿದನು.
ಯತ್ಕರ್ಮ ವೈ ನಿಗ್ರಹೇ ಶಾತ್ರವಾಣಾಂ
ಯೋಗಶ್ಚಾಗ್ರ್ಯಃ ಪಾಲನೇ ಮಾನವಾನಾಮ್ |
ಕೃತ್ವಾ ಕರ್ಮ ಪ್ರಾಪ್ಯ ಕೀರ್ತಿಂ ಸುಮುದ್ರಾತ್
ವಾಜಿಗ್ರೀವೋ ಮೋದತೇ ದೇವಲೋಕೇ ॥30॥
ಮಹಾರಾಜನೇ! ಹಯಗ್ರೀವನೆಂಬ ರಾಜನು ಶತ್ರುಗಳ ನಿಗ್ರಹದಲ್ಲಿ ಪ್ರಜೆಗಳ ಪರಿಪಾಲನದಲ್ಲಿ ಏನೇನು ಮಾಡಲು ತನ್ನಿಂದ ಸಾಧ್ಯವೋ, ಅದೆಲ್ಲವನ್ನು ಮಾಡಿ- ದ್ದನು. ಇಹಲೋಕದಲ್ಲಿ ಪ್ರಖ್ಯಾತಿಯನ್ನು ಹೊಂದಿದನು. ಸ್ವರ್ಗದಲ್ಲಿಯೂ ಸುಖ- ವಾಗಿ ವಾಸ ಮಾಡಿದನು.
ಸಂಯುಕ್ತಾತ್ಮಾ ಸಮರೇಷ್ವಾತತಾಯೀ
ಶಸ್ತ್ರೈಶ್ಛಿನ್ನೋ ದಸ್ಯುಭಿರರ್ದ್ಯಮಾನಃ |
ಅಶ್ವಗ್ರೀವಃ ಕರ್ಮಶೀಲೋ ಮಹಾತ್ಮಾ
ಸಂಸಿದ್ಧಾತ್ಮಾ ಮೋದತೇ ದೇವಲೋಕೇ ॥31॥
ಹಯಗ್ರೀವ ಎಂಬ ರಾಜನು ನಿರಂತರ ಆತ್ಮಚಿಂತನೆಯನ್ನೇ ಮಾಡುತ್ತಿದ್ದನು. ಪರಮ ವಿರಕ್ತನಾಗಿದ್ದನು. ಯುದ್ಧದಲ್ಲಿ ಶತ್ರುಗಳನ್ನು ಎದುರಿಸುತ್ತಿದ್ದನು. ಯುದ್ಧ ಮಾಡುತ್ತಿರುವಾಗ ಒಮ್ಮೆ ಅಸಹಾಯಕನಾಗಿ ಶತ್ರುಗಳ ಶಸ್ತ್ರಗಳಿಂದ ಛೇದಿಸಲ್ಪಟ್ಟು ಪ್ರಾಣವನ್ನು

ಪರಿತ್ಯಾಗ ಮಾಡಿದನು. ಅತ್ಯಂತಕರ್ಮನಿಷ್ಠನಾದ ಅಶ್ವಗ್ರೀವನು ಸ್ವಧರ್ಮದಿಂದ ಸಿದ್ಧಿಯನ್ನು ಪಡೆದುಕೊಂಡು ದೇವಲೋಕದಲ್ಲಿ ಸುಖವನ್ನು ಅನುಭವಿಸುತ್ತಿದ್ದಾನೆ.

ಟಿಪ್ಪಣಿ - ಕ್ಷತ್ರಿಯರಿಗೆ ಶತ್ರುಗಳನ್ನು ಸಂಹಾರ ಮಾಡುವುದೇ ಸ್ವಧರ್ಮ- ವಾಗಿದೆ. ಶತ್ರುಗಳನ್ನು ಸಂಹಾರ ಮಾಡಿ, ವಿಜಯಶಾಲಿಯಾಗಿ ರಾಜ್ಯವನ್ನು ಪರಿ- ಪಾಲನೆ ಮಾಡಬೇಕು. ಇಂಥ ಸೌಭಾಗ್ಯವು ನಿನ್ನ ಪಾಲಿಗೆ ಒದಗಿದೆ. ಹಯಗ್ರೀವ ಎಂಬ ರಾಜನು ಹಿಂದೆ ಶತ್ರುಗಳ ಜೊತೆ ಯುದ್ಧ ಮಾಡಿ ಸತ್ತನು. ವಿಜಯವನ್ನೂ ಕೂಡ ಪಡೆಯಲಿಲ್ಲ. ಆದರೆ ಧರ್ಮಪರಿಪಾಲನೆ ಮಾಡಬೇಕೆಂಬ ಕರ್ತವ್ಯ- ನಿಷ್ಠತೆಯು ಅವನಲ್ಲಿ ಹೇರಳವಾಗಿತ್ತು. ಶತ್ರುಗಳಿಂದ ತಾನು ಸೋಲುತ್ತೇನೆಂಬ ವಿಚಾರವು ತಿಳಿದಿದ್ದರೂ ಕೂಡ ಯುದ್ಧದಿಂದ ವಿಮುಖನಾಗಲಿಲ್ಲ. ಯುದ್ಧ ಮಾಡಿ ಸತ್ತನು. ಇದರ ಫಲವಾಗಿ ದೇವಲೋಕದಲ್ಲಿ ದೇವತೆಗಳಿಂದಲೂ ಮಾನ್ಯ- ನಾದನು. ಇಂದೂ ಸಹ ಸುಖವಾಗಿ ದೇವಲೋಕದಲ್ಲಿದ್ದಾನೆ. ಹೀಗೆ ಯುದ್ಧದಲ್ಲಿ ಸೋಲುವುದು ಖಚಿತವಾದರೂ ಕೂಡ ಯುದ್ಧ ಮಾಡಬೇಕು. ಹೀಗಿರುವಾಗ ವಿಜಯಶಾಲಿಯಾದ ನಿನ್ನ ಸೌಭಾಗ್ಯ ಮಹತ್ತರವಾಗಿದೆ ಎಂದಭಿಪ್ರಾಯ.

ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್-
ಸ್ರುವಃ ಖಡ್ಗೋ ರುಧಿರಂ ಯತ್ರ ಚಾಜ್ಯಮ್ |
ರಥೋ ವೇದೀ ಕಾಮಗೋ ಯುದ್ಧಮಗ್ನಿಃ
ಚಾತುರ್ಹೋತ್ರಂ ಚತುರೋ ವಾಜಿಮುಖ್ಯಾಃ ॥32॥

ಯುದ್ಧವೇ ಒಂದು ಪವಿತ್ರವಾದ ಯಜ್ಞ. ಆ ಯಜ್ಞದಲ್ಲಿ ಧನಸ್ಸು ಯೂಪ- ಸ್ತಂಭ. ಧನುಸ್ಸಿನ ಹಗ್ಗವೇ ಯಜ್ಞಕ್ಕೆ ಬೇಕಾದ ಬಂಧನರಜ್ಜು. ಬಾಣವು ಸ್ರುಕ್, ಖಡ್ಗವು ಸ್ರುವ, ರಕ್ತವೇ ಆಜ್ಯ. ರಥವು ಯಜ್ಞದ ವೇದಿಕೆ. ಕಾಮಮೂಲವಾದ ಕ್ರೋಧವೇ ಅಗ್ನಿ. ನಾಕು ರಥಾಶ್ವಗಳು ನಾಕುಮಂದಿ ಋತ್ವಿಜರು.

ಟಿಪ್ಪಣಿ - ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್ ಇತ್ಯತ್ರ ಜ್ಯಾ ರಶನಾ ಯೂಪಬಂಧನಮೇಖಲಾ |
`ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್' - ಎಂಬಲ್ಲಿ ಜ್ಯಾ ರಶನಾ ಎಂದರೆ ಯೂಪವನ್ನು ಕಟ್ಟಲು ಉಪಯೋಗಿಸುವ ಹಗ್ಗ ಎಂದರ್ಥ.

ಹುತ್ವಾ ತಸ್ಮಿನ್ ಯಜ್ಞವಹ್ನಾವಧಾರೀನ್
ಪಾಪಾನ್ಮುಕ್ತೋ ರಾಜಸಿಂಹಸ್ತರಸ್ವೀ |
ಪ್ರಾಣಾನ್ ಹುತ್ವಾ ಚಾವಭೃಥೇ ರಣೇ ಸ
ವಾಜಿಗ್ರೀವೋ ಮೋದತೇ ದೇವಲೋಕೇ ॥33॥

ಹಯಗ್ರೀವ ಎಂಬ ರಾಜನು ಇಂಥ ಯುದ್ಧವೆಂಬ ಅಗ್ನಿಯಲ್ಲಿ ಶತ್ರುಗಳನ್ನು ಹೋಮ ಮಾಡಿ, ಸಕಲವಿಧವಾದ ಪಾಪಗಳಿಂದ ಮುಕ್ತನಾದನು. ಆ ರಣಯಜ್ಞದ ಅವಭೃಥದಲ್ಲಿ ತನ್ನ ಪ್ರಾಣಗಳನ್ನು ಹೋಮಮಾಡಿದ ಹಯಗ್ರೀವನೆಂಬ ರಾಜನು ದೇವಲೋಕದಲ್ಲಿ ಸಂತೋಷ ಪಡುತ್ತಿದ್ದಾನೆ.

ವ್ಯಾಖ್ಯಾನ - ಕ್ಷತ್ರಿಯರಿಗೆ ಯುದ್ಧವೇ ಕರ್ತವ್ಯವಾಗಿದೆ. ಇದನ್ನು ಯಜ್ಞವೆಂದು ಅನುಸಂಧಾನ ಮಾಡಿ, ಭಗವಂತನಿಗೆ ಸಮರ್ಪಣೆ ಮಾಡಬೇಕು. ಅದರ ಅನು- ಸಂಧಾನವನ್ನು ಈ ಎರಡು ಶ್ಲೋಕಗಳು ಎಚ್ಚರಿಸುತ್ತಿವೆ. ಹೋಮ ಮಾಡುವುದಕ್ಕೆ ಯೂಪಸ್ತಂಭ ಹಗ್ಗ, ಸ್ರುಕ್, ಸ್ರುವ, ತುಪ್ಪ, ವೇದಿಕೆ, ಅಗ್ನಿ ಇವುಗಳು ಬೇಕು. ಈ ಯುದ್ಧದಲ್ಲಿ ಧನುಸ್ಸನ್ನು ಯೂಪಸ್ತಂಭವೆಂದು ಭಾವಿಸಿ, ಬಾಣವನ್ನು ಸ್ರುಕ್ ಎಂದು, ಖಡ್ಗವನ್ನು ಸ್ರುವವೆಂದು, ರಕ್ತವನ್ನು ಆಜ್ಯವೆಂದು ಭಾವಿಸಿ ಶತ್ರುಗಳನ್ನು ಅಗ್ನಿಯಲ್ಲಿ ಹೋಮ ಮಾಡಬೇಕು. ತಾನೇ ಮರಣವನ್ನು ಹೊಂದುವುದಾದರೆ, ತನ್ನನ್ನೇ ಭಗವಂತನಿಗೆ ಯುದ್ಧಾಗ್ನಿಯಲ್ಲಿ ಹೋಮಿಸಿಕೊಳ್ಳಬೇಕು. ಇದೇ ಕ್ರಮದಲ್ಲಿ ಆಯಾ ಜಾತಿಯವರು ತಮ್ಮ ತಮ್ಮ ಕರ್ತವ್ಯಗಳನ್ನು ಯಜ್ಞವೆಂದು ಅನುಸಂಧಾನ ಮಾಡಿ ಭಗವಂತನಿಗೆ ಸಮರ್ಪಣೆ ಮಾಡಬೇಕು. ಹಯಗ್ರೀವ ಎಂಬ ರಾಜನು ಅತ್ಯಂತ ಕರ್ಮಾಚರಣೆ ಶೀಲನಾಗಿದ್ದನು. ಜೀವನ- ಪೂರ್ತಿ ಅನೇಕ ಯಜ್ಞಯಾಗಾದಿಗಳನ್ನು ಆಚರಿಸಿದ್ದನು. ಅದರ ಫಲವಾಗಿ ಯುದ್ಧವನ್ನೂ ಕೂಡ ಯಜ್ಞವೆಂದೇ ಭಾವಿಸಿ ಸಾರ್ಥಕ ಮಾಡಿಕೊಂಡನು.

ರಾಷ್ಟ್ರಂ ರಕ್ಷನ್ ಬುದ್ಧಿಪೂರ್ವಂ ನಯೇನ
ಸಂತ್ಯಕ್ತಾತ್ಮಾ ಯಜ್ಞಶೀಲೋ ಮಹಾತ್ಮಾ |
ಸರ್ವಾಂಲ್ಲೋಕಾನ್ ವ್ಯಾಪ್ಯ ಕೀರ್ತ್ಯಾಯ ಮನಸ್ವೀ
ವಾಜಿಗ್ರೀವೋ ಮೋದತೇ ದೇವಲೋಕೇ ॥34॥

ಹಯಗ್ರೀವ ಎಂಬ ರಾಜನು ಯಜ್ಞವನ್ನು ಮಾಡುವುದರಲ್ಲಿ ಆಸಕ್ತನಾಗಿದ್ದನು, ಪುಣ್ಯಾತ್ಮನಾಗಿದ್ದನು, ಮನನಶೀಲನಾಗಿದ್ದನು, ಬುದ್ಧಿಪೂರ್ವಕವಾಗಿ ಒಳ್ಳೆಯ ನೀತಿಯನ್ನು ಅನುಸರಿಸಿ, ರಾಷ್ಟ್ರವನ್ನು ರಕ್ಷಿಸುತ್ತಿದ್ದನು. ಅವನ ಕೀರ್ತಿಯು ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧವಾಗಿತ್ತು. ಇವನು ಯಜ್ಞರೂಪದಲ್ಲಿ ಪ್ರಾಣಾರ್ಪಣೆ- ಯನ್ನು ಮಾಡಿಕೊಂಡು ದೇವಲೋಕದಲ್ಲಿ ಇಂದೂ ಕೂಡ ಆನಂದವಾಗಿದ್ದಾನೆ.

ದೈವೀಂ ಸಿದ್ಧಿಂ ಮಾನುಷೀಂ ದಂಡನೀತಿಂ
ಯೋಗ್ಯನ್ಯಾಸ್ಯೈಃ ಪಾಲಯಿತ್ವಾ ಮಹೀಂ ಚ |
ತಸ್ಮಾದ್ ರಾಜಾ ಧರ್ಮಶೀಲೋ ಮಹಾತ್ಮಾ
ಹಯಗ್ರೀವೋ ಮೋದತೇ ಸ್ವರ್ಗಲೋಕೇ ॥35॥

ಹಯಗ್ರೀವನೆಂಬ ರಾಜನಿಗೆ ಎಲ್ಲ ಕಾರ್ಯಗಳಲ್ಲಿ ಅತ್ಯಂತ ಉತ್ಸಾಹವಿತ್ತು. ಯಾವುದರಲ್ಲೂ ಸ್ವಾಭಿಮಾನವಿರಲಿಲ್ಲ. ಯಾಗ ಮೊದಲಾದ ದೇವಕಾರ್ಯಗಳಲ್ಲಿ ಪ್ರಜೆಗಳನ್ನು ರಕ್ಷಣೆ ಮಾಡುವ ವಿಷಯದಲ್ಲಿ ಅತ್ಯಂತಆಸಕ್ತನಾಗಿದ್ದನು. ಅಹಂಕಾರ- ತ್ಯಾಗರೂಪವಾದ ದೈವೀಸಿದ್ಧಿಯನ್ನು, ದಂಡನೀತಿರೂಪವಾದ ಮಾನುಷೀಸಿದ್ಧಿಯನ್ನು ಹೊಂದಿ ಪುಣ್ಯವಿಶೇಷವನ್ನು ಗಳಿಸಿದನು. ಇದರ ಫಲವಾಗಿ ದೇವಲೋಕದಲ್ಲಿ ಇಂದೂ ಕೂಡ ಸುಖವನ್ನು ಅನುಭವಿಸುತ್ತಿದ್ದಾನೆ.

ವ್ಯಾಖ್ಯಾನ - ಯೋಗನ್ಯಾಸ್ಯೈಃ ಎಂಬಲ್ಲಿ ಯೋಗಶಬ್ದಕ್ಕೆ ಕಾರ್ಯೋತ್ಸಾಹ ಎಂದರ್ಥ. ನ್ಯಾಸ ಶಬ್ದಕ್ಕೆ ಅಭಿಮಾನತ್ಯಾಗ ಎಂದರ್ಥ. ಕಾರ್ಯೋತ್ಸಾಹ ಮತ್ತು ಅಭಿಮಾನತ್ಯಾಗಗಳಿಂದ ದೈವೀಸಿದ್ಧಿಯನ್ನು ಪಡೆದುಕೊಂಡಿದ್ದನು. ದೈವೀಸಿದ್ಧಿ ಎಂದರೆ ಯಜ್ಞಾದಿ ಕ್ರಿಯೆಗಳನ್ನು ಮಾಡಿ, ಸಿದ್ಧಿಯನ್ನು ಪಡೆದುಕೊಂಡಿದ್ದನು ಎಂದು ಅರ್ಥ. ಹೀಗೆ ದೈವಸಂಬಂಧವಾದ ಎಲ್ಲ ಸಿದ್ಧಿಗಳನ್ನು ಪಡೆದುಕೊಂಡು ರಾಜನು ಮಾಡಬೇಕಾದ ದಂಡನೀತಿಯನ್ನು ಅನುಸರಿಸುತ್ತಿದ್ದನು.

ವಿದ್ವಾಂಸ್ತ್ಯಾಗೀ ಶ್ರದ್ದಧಾನಃ ಕೃತಜ್ಞಃ
 ತ್ಯಕ್ತ್ವಾ ಲೋಕಂ ಮಾನುಷಂ ಕರ್ಮ ಕೃತ್ವಾ |
ಮೇಧಾವಿನಾಂ ವಿದುಷಾಂ ಸಮ್ಮತಾನಾಂ
 ತನುತ್ಯಜಾಂ ಲೋಕಮಾಕ್ರಮ್ಯ ರಾಜಾ ॥36॥

ಹಯಗ್ರೀವನು ವಿದ್ವಾಂಸನಾಗಿದ್ದನು, ತ್ಯಾಗಿಯಾಗಿದ್ದನು, ಅತ್ಯಂತ ಶ್ರದ್ಧಾಳು- ವಾಗಿದ್ದನು, ಕೃತಜ್ಞನಾಗಿದ್ದನು. ಮನುಷ್ಯರು ಮಾಡಬೇಕಾದ ಕರ್ತವ್ಯಗಳನ್ನು ಆಚರಿಸುತ್ತಿದ್ದನು. ಪ್ರತಿಯೊಂದರಲ್ಲೂ ಉತ್ಸಾಹದಿಂದ ಭಾಗವಹಿಸುತ್ತಿದ್ದನು. ಯುದ್ಧವೆಂಬ ಯಜ್ಞದ ಮೂಲಕ ಈ ಶರೀರವನ್ನು ಪರಿತ್ಯಾಗ ಮಾಡಿ ಪುಣ್ಯ- ಲೋಕಗಳನ್ನು ಹೊಂದಿ, ಆನಂದವಾಗಿ ಕಾಲಕಳೆಯುತ್ತಿದ್ದಾನೆ.

ಸಮ್ಯಗ್ ವೇದಾನ್ ಪ್ರಾಪ್ಯ ಶಾಸ್ತ್ರಾಣ್ಯಧೀತ್ಯ
 ಸಮ್ಯಗ್ ರಾಷ್ಟ್ರಂ ಪಾಲಯಿತ್ವಾ ಮಹಾತ್ಮಾ |
ಚಾತುರ್ವರ್ಣ್ಯಂ ಸ್ಥಾಪಯಿತ್ವಾ ಸ್ವಧರ್ಮೇ
 ವಾಜಿಗ್ರೀವೋ ಮೊದತೇ ದೇವಲೋಕೇ ॥37॥

ಎಲ್ಲಾ ವೇದಗಳನ್ನು ಚೆನ್ನಾಗಿ ಅಧ್ಯಯನ ಮಾಡಿದ್ದನು. ಶಾಸ್ತ್ರಗಳನ್ನೂ ಕೂಡ ಅಮೂಲಾಗ್ರವಾಗಿ ತಿಳಿದಿದ್ದನು. ರಾಜ್ಯವನ್ನು ನ್ಯಾಯಸಮ್ಮತವಾಗಿ ರಕ್ಷಣೆ ಮಾಡು- ತ್ತಿದ್ದನು. ಆದ್ದರಿಂದಲೇ ಮಹಾತ್ಮನಾಗಿದ್ದನು. ಚಾತುರ್ವಣ್ಯದ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ನಡೆಸುತ್ತಿದ್ದನು. ತನ್ನ ಧರ್ಮದಲ್ಲಿ ರತನಾಗಿದ್ದನು. ಇಂಥ ವಾಜಿ- ಗ್ರೀವನು ದೇವಲೋಕದಲ್ಲಿ ಸುಖವಾಗಿದ್ದಾನೆ.

ಜಿತ್ವಾ ಸಂಗ್ರಾಮಾನ್ ಪಾಲಯಿತ್ವಾ ಪ್ರಜಾಶ್ಚ
 ಸೋಮಂ ಪೀತ್ವಾ ತರ್ಪಯಿತ್ವಾ ದ್ವಿಜಾಗ್ರ್ಯಾನ್ |
ಯುಕ್ತ್ಯಾ ದಂಡಂ ಧಾರಯಿತ್ವಾ ಪ್ರಜಾನಾಂ
 ಯುದ್ಧೇ ಕ್ಷೀಣೋ ಮೋದತೇ ದೇವಲೋಕೇ ॥38॥

ಆ ಹಯಗ್ರೀವರಾಜನು ಅನೇಕ ಯುದ್ಧಗಳಲ್ಲಿ ಪಾಲ್ಗೊಂಡು ಶತ್ರುಗಳನ್ನು ಜಯಿಸಿದ್ದನು. ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದನು. ಯಜ್ಞ- ಗಳಲ್ಲಿ ಸೋಮಪಾನವನ್ನು ಮಾಡುವಷ್ಟು ಶ್ರೇಷ್ಠನಾಗಿದ್ದನು. ಶ್ರೇಷ್ಠರಾದ ಬ್ರಾಹ್ಮಣ- ರಿಗೆ, ದಕ್ಷಿಣಾದಿಗಳನ್ನು ಕೊಟ್ಟು ತೃಪ್ತಿಪಡಿಸುತ್ತಿದ್ದನು. ದಂಡನೀತಿಯ ಮೂಲಕ ಮತ್ತು ಯುಕ್ತಿಯಿಂದ ಪ್ರಜೆಗಳ ಪೋಷಣೆಯನ್ನು ಮಾಡುತ್ತಿದ್ದನು. ಇಂಥ ಶ್ರೇಷ್ಠನಾದ ರಾಜನು ಯುದ್ಧದಲ್ಲಿ ಅಸು ನೀಗಿ ದೇವಲೋಕದಲ್ಲಿ ಆನಂದವಾಗಿ- ದ್ದಾನೆ.

ವೃತ್ತಂ ಯಸ್ಯ ಶ್ಲಾಘನೀಯಂ ಮನುಷ್ಯಾಃ
 ಸಂತೋ ವಿದ್ವಾಂಸಶ್ಚಾರ್ಹಯಂತ್ಯರ್ಹಣೀಯಾಃ |
ಸ್ವರ್ಗಂ ಜಿತ್ವಾ ವೀರಲೋಕಾಂಶ್ಚ ಗತ್ವಾ
 ಸಿದ್ಧಿಂ ಪ್ರಾಪ್ತಾಃ ಪುಣ್ಯಕೀರ್ತಿರ್ಮಹಾತ್ಮಾ ॥39॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚವಿಂಶೋಽಧ್ಯಾಯಃ ॥25॥

ವಿದ್ವಾಂಸರು, ಸಜ್ಜನರು ಇವನ ಉತ್ತಮ ಕಾರ್ಯಗಳನ್ನು ಇಂದೂ ಕೂಡ ಪ್ರಶಂಸೆ ಮಾಡುತ್ತಾರೆ. ಪುಣ್ಯಕೀರ್ತಿಯಾದ ಈ ಮಹಾತ್ಮನು ವೀರಜನರಿಗೆ ಯೋಗ್ಯವಾದ ಗತಿಯನ್ನು ಪಡೆದು, ಈಗ ಸ್ವರ್ಗಲೋಕದಲ್ಲಿ ಆನಂದವನ್ನು ಅನು- ಭವಿಸುತ್ತಿದ್ದಾನೆ.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 25ನೆಯ ಅಧ್ಯಾಯ ಮುಗಿಯಿತು.

*****

## 26. ಇಪ್ಪತ್ತಾರನೆಯ ಅಧ್ಯಾಯ

ವೇದವ್ಯಾಸದೇವರಿಂದ ಯುಧಿಷ್ಠಿರನಿಗೆ ರಾಜಧರ್ಮದ ಉಪದೇಶ. ಸೇನಜಿತ್ ಎಂಬ ರಾಜನು ಉಪದೇಶಿಸಿದ ಧರ್ಮದ ಅನುವಾದ. ದ್ವಂದ್ವಾತೀತನಾಗಬೇಕೆಂಬುದರ ಉಪದೇಶ. ಕ್ಷಣಿಕವಾದ ಸಂಸಾರದಲ್ಲಿ ಆಸೆಯನ್ನು ಪರಿತ್ಯಾಗ ಮಾಡಬೇಕೆಂಬುದರ ವಿವರಣೆ.

ವೈಶಂಪಾಯನಃ

ದ್ವೈಪಾಯನವಚಃ ಶ್ರುತ್ವಾ ಕುಪಿತೇ ಚ ಧನಂಜಯೇ |
ವ್ಯಾಸಮಾಮಂತ್ರ್ಯ ಕೌಂತೇಯಃ ಪ್ರತ್ಯುವಾಚ ಯುಧಿಷ್ಠಿರಃ ॥1॥

ವೈಶಂಪಾಯನರು ಜನಮೇಜಯನೇ! ಅರ್ಜುನನಿಗೆ ಬಹಳ ಕೋಪವು ಬಂದಿತ್ತು. ಇವನನ್ನು ನೋಡಿ, ವೇದವ್ಯಾಸದೇವರ ಬಳಿ ಯುಧಿಷ್ಠಿರನು ಹೀಗೆ ಹೇಳುತ್ತಾನೆ -

ನ ಪಾರ್ಥಿವಮಿದಂ ರಾಜ್ಯಂ ನಚ ಭೋಗಾಃ ಪೃಥಗ್ವಿಧಾಃ |
ಪ್ರೀಣಯಂತಿ ಮನೋ ಮೇಽದ್ಯ ಶೋಕೋ ಮಾ ನರ್ದಯತ್ಯಯಮ್ ॥2

ಭಗವಾನ್ ವೇದವ್ಯಾಸರೇ! ಸಮಸ್ತ ಭೂಮಿಯಿಂದ ಕೂಡಿದ ಈ ರಾಜ್ಯ ಮತ್ತು ವಿವಿಧ ಭೋಗಗಳು ನನ್ನ ಮನಸ್ಸಿಗೆ ಸಂತೋಷಕರವಾಗಿರುವುದಿಲ್ಲ. ಕೇವಲ ದುಃಖವೇ ನನ್ನಲ್ಲಿ ವಿಜೃಂಭಿಸುತ್ತಿದೆ.

ಶ್ರುತ್ವಾ ಚ ವೀರಹೀನಾನಾಮಪುತ್ರಾಣಾಂ ಚ ಯೋಷಿತಾಮ್ |
ಪರಿದೇವಯಮಾನಾನಾಂ ಶಾಂತಿಂ ನೋಪಲಭೇ ಮುನೇ ॥3॥

ಪತಿಯನ್ನು, ಪುತ್ರರನ್ನು ಕಳೆದುಕೊಂಡ ಸ್ತ್ರೀಯರ ಆಕ್ರಂದನವನ್ನು ಕೇಳಿ ನನ್ನ ಮನಸ್ಸಿಗೆ ಶಾಂತಿಯೇ ದೊರೆಯುತ್ತಿಲ್ಲ.

ಇತ್ಯುಕ್ತಃ ಪ್ರತ್ಯುವಾಚೇದಂ ವ್ಯಾಸೋ ಯೋಗವಿದಾಂ ವರಃ |
ಯುಧಿಷ್ಠಿರಂ ಮಹಾಪ್ರಾಜ್ಞೋ ಧರ್ಮಜ್ಞೋ ವೇದಪಾರಗಃ ॥4॥
ಜನಮೇಜಯನೇ! ಯುಧಿಷ್ಠಿರನು ವೇದವ್ಯಾಸದೇವರನ್ನು ಕುರಿತು ಹೀಗೆ ಹೇಳಿದನು - ಆಗ ಯೋಗಿಜ್ಞಾನಿಗಳಲ್ಲಿ ಸರ್ವೋತ್ತಮರಾದ, ಸರ್ವಜ್ಞರಾದ, ಧರ್ಮಜ್ಞರಾದ, ವೇದವೇದಾಂಗಪರಾಂಗತರಾದ ಶ್ರೀವೇದವ್ಯಾಸದೇವರು
ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿದರು.
ನ ಕರ್ಮಣಾ ಲಭ್ಯತೇ ಚಿಂತಯಾ ವಾ
ನಾಪ್ಯಸ್ತಿ ದಾತಾ ಪುರುಷಸ್ಯ ಕಶ್ಚಿತ್ |
ಪರ್ಯಾಯಯೋಗಾದ್ ವಿಹಿತಂ ವಿಧಾತ್ರಾ
ಕಾಲೇನ ಸರ್ವಂ ಲಭತೇ ಮನುಷ್ಯಃ ॥5॥
ನಮಗೆ ಅಪೇಕ್ಷಿತವಾದ ವಸ್ತುವು ಕೇವಲ ಕಾರ್ಯದಿಂದ ದೊರಕುವುದಿಲ್ಲ. ಚಿಂತೆ ಮಾಡುವುದರಿಂದ ಅದು ಸಿಗುವುದಿಲ್ಲ. ತನಗೆ ಅಪೇಕ್ಷಿತವಾದ ವಸ್ತುವನ್ನು ಕೊಡುವ ಪುರುಷನೂ ಕೂಡ ಯಾರೂ ಇರುವುದಿಲ್ಲ. ಕಾಲಯೋಗವನ್ನನುಸರಿಸಿ ದೈವದಿಂದ ಅದು ದೊರಕುತ್ತದೆ. ಎಲ್ಲವನ್ನೂ ಕೂಡ ಆಯಾ ಸಮಯದಲ್ಲಿ ಮನುಷ್ಯರಿಗೆ ಭಗವಂತನು ನೀಡುತ್ತಾನೆ.
ನ ಬುದ್ಧಿಶಾಸ್ತ್ರಾಧ್ಯಯನೇನ ಶಕ್ಯಂ
ಪ್ರಾಪ್ತುಂ ವಿಶೇಷಂ ಮನುಜೈರಕಾಲೇ |
ಮೂರ್ಖೋಽಪಿ ಪ್ರಾಪ್ನೋತಿ ಕದಾಚಿದರ್ಥಾನ್
ಕಾಲೋ ಹಿ ಕಾರ್ಯಂ ಪ್ರತಿ ನಿರ್ವಿಶೇಷಃ ॥6॥
ಬುದ್ಧಿಯಿಂದ ಶಾಸ್ತ್ರಗಳ ಅಧ್ಯಯನದಿಂದ ಯೋಗವಿಲ್ಲದ ಕಾಲದಲ್ಲಿ ಯಾವುದೇ ವಿಶೇಷಫಲವನ್ನು ಪಡೆಯಲು ಯಾವ ಮನುಷ್ಯರಿಗೂ ಕೂಡ ಸಾಧ್ಯವಿಲ್ಲ. ಕಾಲವು ಪಕ್ವವಾದಾಗಷ್ಟೇ ಫಲವು ದೊರಕುತ್ತದೆ. ಬುದ್ಧಿಹೀನನಾದ ಮೂರ್ಖನಿಗೂ ಕಾಲ ಬಂತೆಂದರೆ ಯಥೇಚ್ಛವಾದ ಐಶ್ವರ್ಯವು ತಾನಾಗಿಯೇ ಬರುತ್ತದೆ. ಆದ್ದರಿಂದ ಕಾರ್ಯದ ಸಿದ್ಧಿಗೆ ಕಾಲದ ಪಕ್ವತೆಯೇ ಕಾರಣವಾಗುತ್ತದೆ. ಪ್ರಾಜ್ಞರು, ಮೂರ್ಖರು ಎಂಬ ಭೇದವಿರುವುದಿಲ್ಲ.
ನಾಭೂತಿಕಾಲೇ ಚ ಫಲಂ ದದಾತಿ
ಶಿಲ್ಪಾನಿ ನ ಮಂತ್ರಾಶ್ಚ ತಥೌಷಧಾನಿ |
ತಾನ್ಯೇವ ಕಾಲೇನ ಸಮಾಹಿತಾನಿ
ಸಿದ್ಧ್ಯಂತಿ ವರ್ಧಂತಿ ಚ ಭೂತಿಕಾಲೇ ॥7॥
ಮನುಷ್ಯನಿಗೆ ದೊರೆಯಬಾರದು ಎಂಬ ಭಗವತ್ ಸಂಕಲ್ಪವಿದ್ದಾಗ, ಮಂತ್ರ- ಗಳು, ಔಷಧಿಗಳು, ಶಿಲ್ಪಶಾಸ್ತ್ರಗಳು ಯಾವುದೇ ಬಗೆಯ ಫಲವನ್ನು ನೀಡುವುದಿಲ್ಲ. ಇದೇ ಶಿಲ್ಪಶಾಸ್ತ್ರ ಹಾಗೂ ಮಂತ್ರೌಷಧಿಗಳು ಮನುಷ್ಯರನ್ನು ಉಚ್ಚ್ರಾಯಸ್ಥಿತಿಯಲ್ಲಿ- ಡುತ್ತವೆ. ಕಾಲನ ಪ್ರೇರಣೆಯಿಂದ ಕೈ ಹಾಕಿದ ಕಾರ್ಯಗಳೆಲ್ಲವೂ ಸಿದ್ಧಿಸುತ್ತವೆ.
ಕಾಲೇನ ಶೀಘ್ರಾಃ ಪ್ರವಿವಾಂತಿ ವಾತಾಃ
ಕಾಲೇನ ವೃಷ್ಟಿರ್ಜಲದಾನುಪೈತಿ |
ಕಾಲೇನ ಪದ್ಮೋತ್ಪಲವಜ್ಜಲಂ ಚ
ಕಾಲೇನ ಪುಷ್ಯಂತಿ ವನೇಷು ವೃಕ್ಷಾಃ ॥8॥
ಕಾಲವು ಬಂದಾಗಷ್ಟೇ ಗಾಳಿಯು ವೇಗವಾಗಿ ಬೀಸುತ್ತದೆ. ಕಾಲವು ಬಂದಾಗಷ್ಟೇ ಮೋಡಗಳು ನೀರನ್ನು ಸುರಿಸುತ್ತವೆ. ಕಾಲವು ಪ್ರಾಪ್ತವಾದಾಗಷ್ಟೇ ಸರೋವರದ ನೀರು ಕಮಲಪುಷ್ಪಗಳಿಂದ ಶೋಭಾಯಮಾನವಾಗುತ್ತದೆ. ಸರಿಯಾದ ಕಾಲದಲ್ಲಷ್ಟೇ ಅರಣ್ಯದಲ್ಲಿರುವ ಮರಗಳು ಚಿಗುರಿ ಹಸಿರಾಗುತ್ತವೆ.
ಟಿಪ್ಪಣಿ - ಬಿರುಗಾಳಿಯು ಯಾವಾಗಲೂ ಬರುವುದಿಲ್ಲ. ಮಳೆಯೂ ಕೂಡ ವರ್ಷಪೂರ್ತಿ ಬರುವುದಿಲ್ಲ. ಕಮಲಪುಷ್ಪ ರಾತ್ರಿ ಅರಳುವುದಿಲ್ಲ. ಕುಮುದಪುಷ್ಪ ಹಗಲು ಅರಳುವುದಿಲ್ಲ. ವಸಂತಕಾಲ ಬಿಟ್ಟು, ಬೇರೆ ಕಾಲದಲ್ಲಿ ಗಿಡಮರಗಳು ಚಿಗುರುವುದಿಲ್ಲ. ಹೀಗೆ ಪ್ರತಿಯೊಂದಕ್ಕೂ ಆಯಾ ಕಾಲಗಳು ಪಕ್ವವಾಗಬೇಕು. ಹೀಗೆ ಪ್ರತಿಯೊಂದಕ್ಕೂ ಕಾಲವು ಬರಬೇಕು.
ಕಾಲೇನ ಕೃಷ್ಣಾಶ್ಚ ಸಿತಾಶ್ಚ ರಾತ್ರ್ಯಃ
ಕಾಲೇನ ಚಂದ್ರಃ ಪರಿಪೂರ್ಣಬಿಂಬಃ |
ನಾಕಾಲತಃ ಪುಷ್ಪಫಲಂ ನಗಾನಾಂ
ನಾಕಾಲವೇಗಾಃ ಸರಿತೋ ವಹಂತಿ ॥9॥
ಕಾಲಕ್ಕೆ ಅನುಗುಣವಾಗಿ ಶುಕ್ಲಪಕ್ಷ-ಕೃಷ್ಣಪಕ್ಷಗಳೆರಡು ಬರುತ್ತವೆ. ಕಾಲಕ್ಕನು- ಗುಣವಾಗಿಯೇ ಚಂದ್ರನು ಪರಿಪೂರ್ಣವಾಗುತ್ತಾನೆ. ಅಕಾಲದಲ್ಲಿ ವೃಕ್ಷಗಳು ಫಲ- ಪುಷ್ಪಗಳನ್ನು ನೀಡುವುದಿಲ್ಲ. ಅಕಾಲದಲ್ಲಿ ನದಿಗಳು ವೇಗವಾಗಿ ಹರಿಯುವುದಿಲ್ಲ.
ನಾಕಾಲಮತ್ತಾಃ ಖಗಪನ್ನಗಾಶ್ಚ
ಮೃಗದ್ವಿಪಾಃ ಶೈಲಮೃಗಾಶ್ಚ ಲೋಕೇ |
ನಾಕಾಲತಃ ಸ್ತ್ರೀಷು ಭವಂತಿ ಗರ್ಭಾ
ನಾಯಾಂತ್ಯಕಾಲೇ ಶಿಶಿರೋಷ್ಣವರ್ಷಾಃ ॥10॥
ಪಕ್ಷಿಗಳು, ಸರ್ಪಗಳು, ಮೃಗಗಳು, ಆನೆಗಳು, ಬೆಟ್ಟದ ಜಂತುಗಳು ಇವುಗಳಲ್ಲಿ ಯಾವುದೊಂದೂ ಕೂಡ ಅಕಾಲದಲ್ಲಿ ಮದಭರಿತವಾಗುವುದಿಲ್ಲ. ಸ್ತ್ರೀಯರಿಗೆ ಅಕಾಲದಲ್ಲಿ ಗರ್ಭವು ಉಂಟಾಗುವುದಿಲ್ಲ. ಶೀತೋಷ್ಣಗಳಾಗಲೀ, ಮಳೆಯಾಗಲೀ ಅಕಾಲದಲ್ಲಿ ಉಂಟಾಗುವುದಿಲ್ಲ.

ನಾಕಾಲತೋ ಮ್ರಿಯತೇ ಜಾಯತೇ ವಾ
ನಾಕಾಲತೋ ವ್ಯಾಹರತೇ ಚ ಬಾಲಃ |
ನಾಕಾಲತೋ ಯೌವನಮಭ್ಯುಪೈತಿ
ನಾಕಾಲತೋ ರೋಹತಿ ಬೀಜಮುಪ್ತಮ್ ॥11॥
ಅಕಾಲದಲ್ಲಿ ಮಗು ಹುಟ್ಟುವುದಿಲ್ಲ. ಮತ್ತು ಸಾಯುವುದೂ ಇಲ್ಲ. ಕಾಲಕ್ಕೂ ಮೊದಲು ಮಾತನಾಡಲು ಕಲಿಯುವುದಿಲ್ಲ. ಕಾಲವು ಪಕ್ವವಾಗದೇ ಯೌವನ ಬರುವುದಿಲ್ಲ.
ಟಿಪ್ಪಣಿ - ಮಗು ಹುಟ್ಟಬೇಕೆಂದು ಏನೇ ಪ್ರಯತ್ನ ಪಟ್ಟರೂ ಮಗುವು ಹುಟ್ಟು- ವುದಿಲ್ಲ. ಪೂರ್ವಕರ್ಮದ ಅನುಸಾರಿಯಾಗಿಯೇ ಮಗುವು ಹುಟ್ಟುತ್ತದೆ. ಅದರಂತೆ ಹುಟ್ಟಿದ ಮಗು ಎಲ್ಲಿ ಸಾಯುತ್ತದೋ, ಎಂಬ ಭಯವೂ ಅನಾವಶ್ಯಕ. ಪೂರ್ವಕರ್ಮ- ದಂತೆ ಕಾಲವು ಬಂದಾಗಷ್ಟೇ ಅದಕ್ಕೆ ಸಾವು ಬರುತ್ತದೆ. ಹುಟ್ಟು ಸಾವುಗಳು ನಮ್ಮ
ಅಧೀನವಾಗಿರುವುದಿಲ್ಲ. ಆದ್ದರಿಂದ ಪ್ರತಿಯೊಂದು ಕಾಲನಾಮಕನಾದ ಪರಮಾತ್ಮನ ಅಧೀನವೆಂದು ಭಾವಿಸಿ, ಸುಖ-ದುಃಖಗಳಿಂದ ರಹಿತರಾಗಿರಬೇಕು.
ನಾಕಾಲತೋ ಭಾನುರುಪೈತಿ ಯೋಗಂ
ನಾಕಾಲತೋಽಸ್ತಂ ಗಿರಿಮಭ್ಯುಪೈತಿ |
ನಾಕಾಲತೋ ವರ್ಧತೇ ಹೀಯತೇ ಚ
ಚಂದ್ರಃ ಸಮುದ್ರೋಽಪಿ ಮಹೋರ್ಮಿಮಾಲೀ ॥12॥
ಅಕಾಲದಲ್ಲಿ ಸೂರ್ಯೋದಯವಾಗುವುದಿಲ್ಲ. ಅಕಾಲದಲ್ಲಿ ಚಂದ್ರೋ- ದಯವೂ ಆಗುವುದಿಲ್ಲ. ಅಕಾಲದಲ್ಲಿ ಸೂರ್ಯ-ಚಂದ್ರರು ಅಸ್ತಂಗತರೂ ಕೂಡ ಆಗುವುದಿಲ್ಲ. ಪರ್ವಕಾಲವು ಬರದೇ ಅಕಾಲದಲ್ಲಿ ಸಮುದ್ರಕ್ಕೆ ವೃದ್ಧಿಕ್ಷಯವು ಇರುವುದಿಲ್ಲ. ಇದರಂತೆ ಚಂದ್ರನೂ ಕೂಡ ಅಕಾಲದಲ್ಲಿ ವೃದ್ಧಿಹ್ರಾಸಗಳನ್ನು ಹೊಂದುವುದಿಲ್ಲ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ರಾಜ್ಞಾ ಸೇನಜಿತಾ ದುಃಖಾರ್ತೇನ ಯುಧಿಷ್ಠಿರ ॥13॥
ಇದೇ ವಿಷಯದಲ್ಲಿ ಒಮ್ಮೆ ದುಃಖಿತನಾದ ಸೇನಾಜಿತ್ ಎಂಬ ರಾಜನು ತನ್ನ ಅನುಭವವನ್ನು ಪದ್ಯಗಳ ಮೂಲಕ ಹೇಳಿದ್ದಾನೆ. ಅದನ್ನೇ ನಿನಗೂ ಕೂಡ ತಿಳಿಸುತ್ತೇನೆ ಕೇಳು.
ಸರ್ವಾನೇವೈಷ ಪರ್ಯಾಯೋ ಮರ್ತ್ಯಾಯನ್ ಸ್ಪೃಶತಿ ದುಸ್ತರಃ |
ಕಾಲೇನ ಪರಿಪಕ್ವಾ ಹಿ ಮ್ರಿಯಂತೇ ಸರ್ವಮಾನವಾಃ ॥14॥
ಯಾರಿಂದಲೂ ಎದುರಿಸಲಾಗದ ಈ ಕಾಲಚಕ್ರವು ಎಲ್ಲಾ ಮನುಷ್ಯರನ್ನು ಬಂಧಿಸುತ್ತದೆ. ಭೂಮಿಯಲ್ಲಿರುವ ಎಲ್ಲಾ ಪ್ರಾಣಿಗಳು ಕಾಲದಿಂದ ಪರಿಪಕ್ವಗೊಂಡೇ ಮರಣವನ್ನು ಹೊಂದುತ್ತವೆ.
ಘ್ನಂತಿ ಚಾನ್ಯಾನ್ನರಾ ರಾಜಂಸ್ತಾನಪ್ಯನ್ಯೇ ನರಾಸ್ತಥಾ |
ಸಂಜ್ಞಯಾ ಲೌಕಿಕೀ ರಾಜನ್ನ ಹಿನಸ್ತಿ ನ ಹನ್ಯತೇ ॥15॥
ಲೋಕದಲ್ಲಿ ಒಬ್ಬನು ಮತ್ತೊಬ್ಬನನ್ನು ಕೊಲ್ಲುತ್ತಾನೆ. ಆ ಕೊಂದವನನ್ನು ಇನ್ನು ಕೆಲವರು ಕೊಲ್ಲುತ್ತಾರೆ. ನಾನು ಕೊಂದೆ, ಅವನು ಕೊಂದನು ಇತ್ಯಾದಿಯಾದ ವ್ಯವಹಾರಗಳೆಲ್ಲವೂ ಕೂಡ ವಿಚಾರ ಮಾಡಿದರೆ ಒಬ್ಬನು ಮತ್ತೊಬ್ಬನನ್ನು ಕೊಲ್ಲು- ವುದೂ ಇಲ್ಲ. ಮತ್ತೊಬ್ಬನಿಂದ ಕೊಲ್ಲಲ್ಪಡುವುದೂ ಇಲ್ಲ. ಕಾಲಾಧೀನವಾಗಿಯೇ ಎಲ್ಲರೂ ಮರಣವನ್ನು ಹೊಂದುತ್ತಾರೆ.
ಹಂತೀತಿ ಮನ್ಯತೇ ಕಶ್ಚಿನ್ನ ಹಂತೀತ್ಯಪಿ ಚಾಪರೇ |
ಸ್ವಭಾವತಸ್ತು ನಿಯತೌ ಭೂತಾನಾಂ ಪ್ರಭವಾಪ್ಯಯೌ ॥16॥
ಅವನು ಇವನನ್ನು ಕೊಲ್ಲುತ್ತಾನೆ. ಇವನು ಅವನನ್ನು ಕೊಲ್ಲುತ್ತಾನೆ ಎಂಬು- ದೆಲ್ಲವೂ ಕೂಡ ಭ್ರಾಂತಿಯಾಗಿದೆ. ವಾಸ್ತವಿಕವಾಗಿ ಪ್ರಾಣಿಗಳ ಹುಟ್ಟುಸಾವುಗಳು ಸ್ವಾಭಾವಿಕವಾಗಿಯೇ ನಡೆಯುತ್ತವೆ.
ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ |
ಅಹೋ ಕಷ್ಟಮಿತಿ ಧ್ಯಾಯನ್ ಶೋಕಸ್ಯಾಪಚಿತಿಂ ಚರೇತ್ ॥17॥
ಧನವು ನಾಶವಾದರೆ ಅಥವಾ ಪತ್ನಿ, ಪುತ್ರ, ಪಿತೃ ಮೊದಲಾದ ತುಂಬಾ ಹತ್ತಿರ- ದವರು ಸತ್ತರೆ, ಅಯ್ಯೋ! ಎಂಥ ಕಷ್ಟವು ಒದಗಿತು! ಎಂಥ ದುಃಖವು ಬಂದಿತು! ಎಂದು ಗೋಳಿಡುತ್ತಾ ದುಃಖಿಸುತ್ತಿದ್ದೂ ದುಃಖವು ಹೆಚ್ಚಾಗುತ್ತದೆ. ಕಡಿಮೆ- ಯಾಗುವುದಿಲ್ಲ.
ಸ ಕಿಂ ಶೋಚಸಿ ಮೂಢಃ ಸಂಶೋಚ್ಯಾನ್ ಕಿಮನುಶೋಚಸಿ |
ಪಶ್ಯ ದುಃಖೇಷು ದುಃಖಾನಿ ಭಯೇಷು ಚ ಭಯಾನ್ಯಪಿ ॥18॥
ಹೀಗೆ ಮನುಷ್ಯನು ತನ್ನಲ್ಲದ ದುಃಖವನ್ನು ಹೆಚ್ಚಿಸಿಕೊಂಡು, ಮರಗುತ್ತಾನೆ. ಹೀಗಿರುವಾಗ ನೀನೇಕೆ ಮೂರ್ಖನಂತೆ ದುಃಖಪಡದವರಿಗಾಗಿ ದುಃಖಿಸುತ್ತಿರುವಿ. ನೀನೇ ಗಮನಿಸು. ದುಃಖಕ್ಕೆ ಅವಕಾಶ ಕೊಟ್ಟಷ್ಟು ಅದು ಉಮ್ಮಳಿಸುತ್ತದೆ. ಭಯವೂ ಕೂಡ ಇದರಂತೆ. ಭಯದಿಂದಲೇ ಭಯ ಹೆಚ್ಚುತ್ತದೆ.
ಟಿಪ್ಪಣಿ - ದುಃಖವು ಬಂದಾಗ ನಿಜವಾದ ವಿವೇಕವನ್ನು ಹೊಂದಿ, ಆ ದುಃಖವನ್ನು ಪರಿತ್ಯಾಗಮಾಡಬೇಕು. ಎಲ್ಲವೂ ಕೂಡ ಕಾಲಾಧೀನವಾಗಿ ನಡೆ- ಯುತ್ತಿರುವಾಗ ದುಃಖಪಡಲು ಯಾವುದೇ ಕಾರಣಗಳಿರುವುದಿಲ್ಲ. ಒಂದುವೇಳೆ ವಿನಾಕಾರಣ ದುಃಖವನ್ನೇ ಅನುಭವಿಸುವುದಾದರೆ, ಆ ದುಃಖದಿಂದ ಮತ್ತೊಂದು ದುಃಖ ಉಲ್ಬಣವಾಗಿ ಬರುತ್ತದೆ. ಅದರಿಂದ ಮತ್ತೊಂದು ದುಃಖ ಬರುತ್ತದೆ. ಇದರಂತೆ ಭಯಪ್ರಸಂಗದಲ್ಲೂ ಭಯವನ್ನು ಪಡುತ್ತಲೇ ಇದ್ದರೆ ಭಯವು ಹೆಚ್ಚಾಗುತ್ತದೆ. ಅಂಥ ಸಂದರ್ಭದಲ್ಲಿ ಭಯವನ್ನು ನಿಗ್ರಹ ಮಾಡಬೇಕು. ನೀನು ದುಃಖವನ್ನು ಅನುಭವಿಸುತ್ತಿದ್ದರೆ, ಉಳಿದ ರಾಜಸ್ತ್ರೀಯರೆಲ್ಲರೂ ಕೂಡ ತಮ್ಮ ದುಃಖವನ್ನು ಹೆಚ್ಚಿಸಿಕೊಂಡು ಪಡಬಾರದ ಕಷ್ಟವನ್ನು ಅನುಭವಿಸುತ್ತಾರೆ. ನೀನು ಮನೋನಿಗ್ರಹವನ್ನು ಮಾಡಿಕೊಂಡು ದುಃಖವನ್ನು ಪರಿತ್ಯಾಗ ಮಾಡಿದರೆ,

ನಿನ್ನಿಂದ ಉಳಿದವರೆಲ್ಲರೂ ಸಮಾಧಾನವನ್ನು ಹೊಂದುತ್ತಾರೆ.
ಆತ್ಮಾಪಿ ಚಾಯಂ ನ ಮಮ ಸರ್ವಾಪಿ ಪೃಥಿವೀ ಮಮ |
ಯಥಾ ಮಮ ತಥಾನ್ಯೇಷಾಮಿತಿ ಪಶ್ಯನ್ನ ಮುಹ್ಯತಿ ॥19॥
ದೇಹವು ನನ್ನದಲ್ಲ. ಭೂಮಿಯೊಳಗಿರುವ ಯಾವುದೇ ಪದಾರ್ಥಗಳೂ ಕೂಡ ನನ್ನದಲ್ಲ. ಹೇಗೆ ಈ ಪದಾರ್ಥಗಳು ನನ್ನದಲ್ಲವೋ, ಅದರಂತೆ ಮತ್ತೊಬ್ಬನದ್ದೂ ಅಲ್ಲ ಎಂದೇ ತಿಳಿಯಬೇಕು. ತನ್ನದಲ್ಲ, ಮತ್ತೊಬ್ಬನದ್ದು ಎಂದು ತಿಳಿದರೂ ಕೂಡ ಭ್ರಾಂತಿಯಾಗುತ್ತದೆ.
ಟಿಪ್ಪಣಿ - ಪ್ರತಿಯೊಂದು ಪದಾರ್ಥಗಳು ಪರಮಾತ್ಮನ ಅಧೀನವಾಗಿವೆ. ಸರ್ವತ್ರ ವ್ಯಾಪ್ತನಾದ ಪರಮಾತ್ಮನದ್ದೇ ಪ್ರತಿಯೊಂದು ವಸ್ತುಗಳು. ಹೀಗಿರುವಾಗ ಈ ಪದಾರ್ಥವು ನನ್ನದಲ್ಲ. ಅವನದ್ದು ಎಂದು ಎಷ್ಟೋ ಮಂದಿ ಹೇಳುತ್ತಾರೆ. ಇದೂ ಕೂಡ ಭ್ರಾಂತಿ. ಏಕೆಂದರೆ ಯಾವ ಪದಾರ್ಥಗಳು ಯಾರ ಅಧೀನವೂ ಅಲ್ಲ. ಕೇವಲ ಪರಮಾತ್ಮನ ಅಧೀನವಾಗಿವೆ. ಆದ್ದರಿಂದ ಇದು ನನ್ನದು, ಇದು ಅವನದ್ದು ಎಂಬ ಅಭಿಮಾನದಿಂದ ದುಃಖವನ್ನು ಅನುಭವಿಸುವ ಪ್ರಸಕ್ತಿಯು ಇರುವುದಿಲ್ಲ.
ಶೋಕಸ್ಥಾನಸಹಸ್ರಾಣಿ ಹರ್ಷಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥20॥
ದುಃಖಕ್ಕೆ ಸಾವಿರ ಕಾರಣಗಳಿರುವಂತೆ, ಸಂತೋಷಕ್ಕೂ ಕೂಡ ಸಾವಿರ ಕಾರಣ- ಗಳಿರುತ್ತವೆ. ಇವೆರಡೂ ಕೂಡ ಮೂರ್ಖರನ್ನಷ್ಟೇ ಆವರಿಸುತ್ತವೆ. ನಿಜವಾದ ವಿವೇಕಿಯ ಹತ್ತಿರವೇ ಸುಳಿಯುವುದಿಲ್ಲ.
ಟಿಪ್ಪಣಿ - ಸುಖ-ದುಃಖಗಳೆರಡೂ ಕೂಡ `ಆಗಮಾಪಾಯಿನೋ ನಿತ್ಯಾಃ' ಎಂದು ಹೇಳುವಂತೆ ಸಹಜವಾಗಿ ಬಂದುಹೋಗುವ ಪ್ರಕ್ರಿಯೆಗಳು. ಎರಡೂ ಕೂಡ ಅನಿತ್ಯವೇ ಆಗಿವೆ. ಅನಿತ್ಯವಾದ ಸುಖ-ದುಃಖಗಳನ್ನು ಅನುಭವಿಸಿ ಯಾರು ಕುಗ್ಗುವಿಕೆ, ಹಿಗ್ಗುವಿಕೆಯನ್ನು ಹೊಂದುತ್ತಾನೋ, ಅವನು ಮೂರ್ಖನೇ ಆಗಿದ್ದಾನೆ. ನಿಜವಾದ ವಿವೇಕಿಯಾದ ವಿದ್ವಾಂಸನು ಸುಖ-ದುಃಖಗಳೆರಡರ ವಿಷಯದಲ್ಲಿ ಸಮತ್ವಬುದ್ಧಿಯನ್ನು ಹೊಂದಿರುತ್ತಾನೆ. ಸುಖದಿಂದ ಹಿಗ್ಗುವುದಿಲ್ಲ, ದುಃಖದಿಂದ ಕುಗ್ಗುವುದಿಲ್ಲ. ಆದ್ದರಿಂದ ಅವನ ಮನಸ್ಸಿನ ಮೇಲೆ ಈ ಸುಖ-ದುಃಖಗಳು ಯಾವುದೇ ಪರಿಣಾಮವನ್ನು ಉಂಟುಮಾಡುವುದಿಲ್ಲ.
ಏವಮೇತಾನಿ ಕಾಲೇನ ಪ್ರಿಯದ್ವೇಷ್ಯಾಣಿ ಭಾಗಶಃ |
ಜೀವೇಷು ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ॥21॥
ಕಾಲಕ್ಕೆ ಅನುಗುಣವಾಗಿ ಈ ಸುಖ-ದುಃಖಗಳೆರಡೂ ಅಪ್ರಿಯ ಹಾಗೂ ಪ್ರಿಯಗಳಾಗುತ್ತವೆ. ಜೀವರಲ್ಲಿ ಪ್ರತ್ಯೇಕವಾದ ಪರಿವರ್ತನೆಯನ್ನು ಹೊಂದಿಸುತ್ತಾ, ಸುಖ-ದುಃಖಗಳೆರಡನ್ನೂ ಹೆಚ್ಚಿಸುತ್ತಾ ಚಕ್ರದಂತೆ ಸುತ್ತಿ, ಸುತ್ತಿ ಬರುತ್ತಲೇ ಇರುತ್ತವೆ. ವಾಸ್ತವಿಕವಾಗಿ ಲೋಕದಲ್ಲಿ ಸುಖವೇ ಇರುವುದಿಲ್ಲ. ದುಃಖವಷ್ಟೇ ಇರುತ್ತದೆ. ಪ್ರಪಂಚದಲ್ಲಿ ದುಃಖವೇ ಬಹಳವಿದೆ. ಸುಖವೇ ಇಲ್ಲದಾಗಿದೆ. ಹೆಜ್ಜೆಹೆಜ್ಜೆಗೂ ದುಃಖವೇ ಒದಗುತ್ತವೆ. ಏಕೆಂದರೆ ಪ್ರತಿಯೊಬ್ಬರಿಗೂ ಅತ್ಯಾಸೆಗಳು ಮೂಡುತ್ತವೆ. ಇದರಿಂದ ಪೀಡಿತರಾಗಿ ದುಃಖವನ್ನೇ ಹೊಂದುತ್ತಾರೆ. ದುಃಖವೆಂಬ ಪೀಡೆಗೆ ವಿನಾಶವೇ ಸುಖ. ಎಲ್ಲಾ ಆಸೆಗಳನ್ನು ಪರಿತ್ಯಾಗ ಮಾಡಬೇಕು. ಆಗಷ್ಟೇ ಸುಖವು ದೊರಕುತ್ತದೆ.
ವಿವರಣೆ - ಆಸೆಗೆ ಮಿತಿಯೇ ಇಲ್ಲ. ಪ್ರತಿಯೊಬ್ಬರೂ ಆಸೆಯಿಂದ ಪೀಡಿತ- ರಾಗಿ ಮನಸ್ಸಿಗೆ ಬಹಳ ದುಃಖವನ್ನು ಅನುಭವಿಸುತ್ತಾರೆ. ಎಷ್ಟೇ ಐಶ್ವರ್ಯವಿದ್ದರೂ ಭೋಗವಿದ್ದರೂ, ತೃಷ್ಣೆಯಿಂದ ಪೀಡಿತನಾದ ವ್ಯಕ್ತಿಯು ದುಃಖಿಯಾಗಿರುತ್ತಾನೆ. ಆದ್ದರಿಂದ ಈ ಲೋಕದಲ್ಲಿ ಸುಖವೇ ಕಾಣಿಸುತ್ತಿಲ್ಲ. ಸುಖಬಂದಾಗಲೂ ಮತ್ತಷ್ಟು ಸುಖದ ಅಪೇಕ್ಷೆಯನ್ನು ಪಟ್ಟು ಬಂದಿರುವ ಸುಖವನ್ನು ಅನುಭವಿಸಲು ಇವನಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಭಾಗವತದಲ್ಲಿ `ನೈರಾಶ್ಯಂ ಪರಮಂ ಸುಖಂ' ಎಂಬುದಾಗಿ ಯಯಾತಿಯು ಹೇಳುತ್ತಾನೆ. ಆಸೆಯನ್ನು ಪರಿತ್ಯಾಗ ಮಾಡುವುದೇ ನಿಜವಾದ ಸುಖ.
ದುಃಖಮೇವಾತಿ ನ ಸುಖಂ ತಸ್ಮಾತ್ ತದುಪಲಭ್ಯತೇ |
ತೃಷ್ಣಾರ್ತಿಪ್ರಭವಂ ದುಃಖಂ ದುಃಖಾರ್ತಿಪ್ರಭವಂ ಸುಖಮ್ ॥22॥
ಈ ಜಗತ್ತಿನಲ್ಲಿ ಕೇವಲ ದುಃಖವೇ ತುಂಬಿದೆ. ಸುಖವೇ ಕಾಣಿಸುತ್ತಿಲ್ಲ. ಪ್ರತಿಯೊಬ್ಬರೂ ದುಃಖವನ್ನೇ ಅನುಭವಿಸುತ್ತಿದ್ದಾರೆ. ಇದಕ್ಕೆ ಕಾರಣವೇನೆಂದರೆ ಅತ್ಯಾಸೆಯೇ ಆಗಿದೆ. ಅತಿಯಾದ ಆಸೆಯಿಂದಲೇ ದುಃಖವು ಹುಟ್ಟುತ್ತದೆ. ಇಂತಹ ದುಃಖದಿಂದ ವಿನಾಶವು ಆಗುತ್ತದೆ. ಆದ್ದರಿಂದ ಅತಿಯಾದ ಆಸೆಯನ್ನು ಬಿಡುವುದೇ ನಿಜವಾದ ಸುಖ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.
ವಿವರಣೆ - ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ಕೂಡ ಅತಿಯಾದ ಆಸೆಯು ಹೆಚ್ಚುತ್ತದೆ. ಈ ಆಸೆ ಎಂಬ ಸಂಕೋಲೆಯಿಂದ ಪ್ರತಿಯೊಬ್ಬರು ಬಂಧಿತರಾಗಿದ್ದಾರೆ. ಅತಿಯಾದ ಆಸೆಯೊಂದು ರೋಗವಾಗಿದೆ. ಯಾರಿಗೆ ಈ ರೋಗವು ಇರುತ್ತದೆ ಅಂಥವರಿಗೆ ಎಷ್ಟು ಐಶ್ವರ್ಯವು ಬಂದರೂ ಕೂಡ ಸುಖ ಉಂಟಾಗುವುದಿಲ್ಲ. ಅದಕ್ಕಾಗಿ ಆಸೆಯನ್ನು ಮೊಟ್ಟಮೊದಲು ಪೂರ್ಣವಾಗಿ ಬಿಟ್ಟುಬಿಡಬೇಕು. `ನೈರಾಶ್ಯಂ ಪರಮಂ ಸುಖಂ' ಎಂಬುದಾಗಿ ಭಾಗವತದಲ್ಲಿ ಹೇಳಿದ್ದನ್ನು ಅನುಸರಿಸಿ ಸುಖದ ಕಡೆ ಧಾವಿಸಬೇಕು.
ಟಿಪ್ಪಣಿ - ದುಃಖಮೇವಾತಿ ನ ಸುಖಮ್ ಇತ್ಯತ್ರ ಅತಿ ಅತಿಶಯೇನ ನಿಯಮೇನ ದುಃಖಮೇವ ನ, ಸುಖಮಪಿ ನ | ತಸ್ಮಾದ್ ದುಃಖಾದನಂತರಂ ತತ್ ಸುಖಮ್, ತಸ್ಮಾತ್ ಸುಖಾದನಂತರಂ ತದ್ ದುಃಖಮಿತ್ಯಾವೃತ್ತ್ಯಾ ಯೋಜನಾ|
`ದುಃಖಮೇವಾತಿ ನ ಸುಖಮ್' ಎಂಬಲ್ಲಿ ಅತಿ ಎಂಬುದಕ್ಕೆ ಅತಿಶಯೇನ ಅಥವಾ ನಿಯಮದಿಂದ ದುಃಖವೇ ಆಗುತ್ತದೆಂಬ ನಿಯಮವಿಲ್ಲ. ಸುಖವೂ ಕೂಡ ಆಗುವುದಿಲ್ಲ. ಆದ್ದರಿಂದ `ದುಃಖದ ಅನಂತರ ಸುಖ, ಸುಖದ ಅನಂತರ ದುಃಖ' ಎಂಬುದಾಗಿ ಆವೃತ್ತಿಯಿಂದ ಯೋಜನೆ ಮಾಡಿಕೊಳ್ಳಬೇಕು.
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ |
ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ ॥23॥
ಸುಖದ ಅನಂತರ ದುಃಖವು ಬರುತ್ತದೆ. ದುಃಖದ ಅನಂತರ ಸುಖವು ಬರು- ತ್ತದೆ. ಯಾರೊಬ್ಬನೂ ಕೂಡ ಕೇವಲ ದುಃಖವನ್ನು, ಕೇವಲ ಸುಖವನ್ನು ಅನುಭವಿ- ಸಲು ಸಾಧ್ಯವಿಲ್ಲ.
ಟಿಪ್ಪಣಿ - ಸುಖದಿಂದ ಹಿಗ್ಗಬಾರದು. ದುಃಖದಿಂದ ಕುಗ್ಗಬಾರದು. ಏಕೆಂದರೆ ಸುಖದ ಗರ್ಭದಲ್ಲಿ ದುಃಖವಿದೆ ಎಂಬ ಎಚ್ಚರಿಕೆಯನ್ನು

ಹೊಂದಿ, ಹಿಗ್ಗದೇ ಸಮಚಿತ್ತನಾಗಿರಬೇಕು. ದುಃಖವು ಬಂದಾಗ, ದುಃಖದ ಗರ್ಭದಲ್ಲಿ ಸುಖವಿದೆ ಎಂದು ತಿಳಿದು ಕುಗ್ಗಬಾರದು.
ಸುಖಮೇವ ಹಿ ದುಃಖಾಂತ ಕದಾಚಿದ್ ದುಃಖತಃ ಸುಖಮ್ |
ತಸ್ಮಾದೇತದ್ ದ್ವಯಂ ಜಹ್ಯಾದ್ಯ ಇಚ್ಛೇಚ್ಛಾಶ್ವತಂ ಸುಖಮ್ ॥24॥
ಸುಖವು ದುಃಖದಲ್ಲಿ ಕೊನೆಗೊಳ್ಳುತ್ತದೆ. ದುಃಖವು ಸುಖದಲ್ಲಿ ಕೊನೆಗೊಳ್ಳು- ತ್ತದೆ. ಸುಖವು ದುಃಖದ ಅಂತ್ಯದಲ್ಲಿ ಪ್ರಾರಂಭವಾಗುತ್ತದೆ. ಹೀಗೆ ಸುಖ-ದುಃಖಗಳೆ- ರಡು ಅನಿತ್ಯವಾಗಿವೆ. ಆದ್ದರಿಂದ ಈ ಎರಡನ್ನು ಪರಿತ್ಯಾಗ ಮಾಡಿ, ಶಾಶ್ವತಸುಖ- ವನ್ನೇ ನಿಜವಾದ ವ್ಯಕ್ತಿಯು ಅಪೇಕ್ಷಿಸಬೇಕು.
ಯನ್ನಿಮಿತ್ತಂ ಭವೇಚ್ಛೋಕಸ್ತಾಪೋ ವಾ ದುಃಖಮೂರ್ಚ್ಛಿತಃ |
ಆಯಾಸೋ ವಾಪಿ ಯನ್ಮೂಲಸ್ತದೇಕಾಂಗಮಪಿ ತ್ಯಜೇತ್ ॥25॥
ಯಾವ ಕಾರಣದಿಂದ ದುಃಖವು ಬಂದಿರುತ್ತದೋ, ಯಾವ ಕಾರಣದಿಂದ ತಡೆಯಲಾರದ ಪರಿತಾಪವು ಬಂದಿರುತ್ತದೋ, ಯಾವ ಕಾರಣದಿಂದ ಆಯಾಸವು ಉಂಟಾಗುತ್ತದೋ, ಆ ಕಾರಣವನ್ನೇ ಮೂಲಸಹಿತ ತೆಗೆದುಹಾಕಬೇಕು. ಶೋಕ, ಪರಿತಾಪ, ಆಯಾಸಗಳು ಶರೀರದ ಅವಯವಗಳಿಂದಲೇ ಬಂದರೂ ಅಂಥ ಅಂಗವನ್ನೇ ಕತ್ತರಿಸಬೇಕು.
ಟಿಪ್ಪಣಿ - ಹಾವು ಕಚ್ಚಿದ ಅವಯವವನ್ನು ತುಂಡರಿಸಿದರೆ ಹೇಗೆ ಕ್ಷೇಮ- ವಾಗುತ್ತದೋ, ಅದರಂತೆ ಯಾವ ಅವಿಭಾಜ್ಯ ಅಂಗದಿಂದ ದುಃಖವಾಗುತ್ತದೋ, ಆ ಅಂಗವನ್ನೇ ಕತ್ತರಿಸಬೇಕು. ಅವಿಭಾಜ್ಯವಾದ ಸಂಬಂಧಿಕರಿಂದ ಅಂಥ ದುಃಖವು ಹೆಚ್ಚುತ್ತಿದ್ದರೆ ಆ ವ್ಯಕ್ತಿಯನ್ನೇ ಪರಿತ್ಯಾಗ ಮಾಡಬೇಕು. ದುರ್ಯೋಧನಾದಿಗಳಿಂದ ಅಸಾಧ್ಯವಾದ ದುಃಖವು ಪ್ರಾಪ್ತವಾಗಿತ್ತು. ಆದ್ದರಿಂದ ಆ ದುರ್ಯೋಧನನನ್ನು ಕೊಂದದ್ದು ಎಲ್ಲರಿಗೂ ಕ್ಷೇಮಕರವಾಗಿದೆ ಎಂದಭಿಪ್ರಾಯ.
ಸುಖಂ ವಾ ಯದಿ ವಾ ದುಃಖಂ ಪ್ರಿಯಂ ವಾ ಯದಿ ವಾಪ್ರಿಯಮ್ |
ಪ್ರಾಪ್ತಂ ಪ್ರಾಪ್ತಮುಪಾಸೀತ ಹೃದಯೇನಾಪರಾಜಿತಃ ॥26॥
ಸುಖವಾಗಲೀ, ದುಃಖವಾಗಲೀ, ಪ್ರಿಯವಾಗಲಿ, ಅಪ್ರಿಯಳಾಗಲೀ ಯಾವುದು ಬಂದರೂ ಎದೆಗುಂದದೆ ಸ್ವಾಗತ ಮಾಡಬೇಕು.
ಟಿಪ್ಪಣಿ - ಜೀವನದಲ್ಲಿ ಸುಖದ ನಿರೀಕ್ಷೆಯಲ್ಲಿ ಕಾಲ ಕಳೆಯಬಾರದು. ಪ್ರಿಯವಾದದ್ದೇ ದೊರಕಬೇಕೆಂದು ಅಪೇಕ್ಷಿಸಬಾರದು. ದುಃಖವು ಬಂದರೆ ಅದನ್ನೂ ಸ್ವಾಗತ ಮಾಡಬೇಕು. ಅಪ್ರಿಯವಾದದ್ದು ಬಂದರೆ ಅದನ್ನೂ ಕೂಡ ಸ್ವಾಗತ ಮಾಡಬೇಕು. ಆಗಷ್ಟೇ ಅವನು ವಿವೇಕಿ ಎಂದು ಕರೆಸಿಕೊಳ್ಳುತ್ತಾನೆ.
ಈರ್ಷದಪ್ಯಂಗ ದಾರಾಣಾಂ ಪುತ್ರಾಣಾಂ ವಾ ಚರಾಪ್ರಿಯಮ್ |
ತತೋ ಜ್ಞಾಸ್ಯಸಿ ಕಃ ಕಸ್ಯ ಕೇನ ವಾ ಕಥಮೇವ ವಾ ॥27॥
ಪ್ರಿಯಮಿತ್ರನೇ! ಅಷ್ಟೇ ಅಲ್ಲದೇ ತನ್ನ ಪತ್ನಿಯರಿಗಾಗಲೀ, ಪುತ್ರರಿಗಾಗಲೀ ಪ್ರಿಯವಲ್ಲದ ಕಾರ್ಯವನ್ನು ಸ್ವಲ್ಪ ಮಾಡಿದರೂ ಸಾಕು, ಯಾರಿಗೆ ಯಾರು ಎಂಬುದು ತಿಳಿಯುತ್ತದೆ. ಮತ್ತು ಯಾರಲ್ಲಿ ಯಾರು ಹೇಗೆ ಇರುತ್ತಾರೆಂಬುದೂ ಕೂಡ ಸ್ಪಷ್ಟವಾಗಿ ತಿಳಿಯುತ್ತದೆ.
ವಿವರಣೆ - ಈ ಲೋಕದಲ್ಲಿ ಯಾರೊಬ್ಬರೂ ಕೂಡ ಅಪ್ರಿಯವಾದದ್ದನ್ನು ಸಹಿಸಿಕೊಳ್ಳುವುದಿಲ್ಲ. ಅಚಾತುರ್ಯದಿಂದ ಅಪ್ರಿಯವಾದದ್ದನ್ನು ಮಾಡಿದರೆ ನಮ್ಮನ್ನು ದ್ವೇಷಿಸುತ್ತಾರೆ. ಉಳಿದವರಿರಲಿ, ಹೆಂಡತಿ ಮಕ್ಕಳೂ ಕೂಡ ಅಪ್ರಿಯ- ವಾದದ್ದನ್ನು ಸಹಿಸಲಾರರು. ಹಿಂದೆ ಎಷ್ಟೇ ಪ್ರೀತಿಯನ್ನು ತೋರಿಸಿದ್ದರೂ ಒಂದು ಬಾರಿ ಅಪ್ರಿಯವಾದದ್ದನ್ನು ಆಚರಿಸಿದರೆ ಅಪ್ರಿಯವಾದದ್ದನ್ನಷ್ಟೇ ನೆನಪಿನಲ್ಲಿ ಇಟ್ಟುಕೊಳ್ಳುತ್ತಾರೆ. ಅಪ್ರಿಯವಾದ ಕಾರ್ಯವನ್ನು ಮಾಡಿದರೆ ಸಂಬಂಧಿಯೇ ಅಲ್ಲವೆಂಬ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ತಮಗೆ ಇವನಿಂದ ಎಷ್ಟು ಉಪ- ಯೋಗವಿದೆ ಎಂಬುದನ್ನಷ್ಟೇ ಅವರು ಗಮನಿಸುತ್ತಿರುತ್ತಾರೆ. ಅವನಿಂದ ತಮಗೆ ಯಾವುದೇ ಉಪಯೋಗವಿಲ್ಲವೆಂದು ತಿಳಿದ ಮೇಲೆ ಅವನನ್ನು ಮೂಲೆಗುಂಪ- ನ್ನಾಗಿ ಮಾಡುತ್ತಾರೆ. ಮುಪ್ಪಿನ ಕಾಲದಲ್ಲಿ ದೇಹವು ಯಾರಿಗೂ ಬೇಡವಾದಾಗ ಸಂಪೂರ್ಣವಾಗಿ ಉಪೇಕ್ಷಿಸುತ್ತಾರೆ. ಆದ್ದರಿಂದ ಯಾರು ಹೆಂಡತಿ, ಯಾರು ಮಗ. ಈ ಸಂಸಾರ ಎಷ್ಟು ವಿಚಿತ್ರ, ನೀನು ಯಾರು? ಅವನು ಯಾರು? ಎಲ್ಲ ವಿಷಯ -ವನ್ನು ಗಮನಿಸಿದಾಗ ಸಂಸಾರಕ್ಕೂ ನಮಗೂ ಯಾವುದೇ ಸಂಬಂಧವಿಲ್ಲ- ವೆಂದು ಮನದಟ್ಟಾಗುತ್ತದೆ.
ಜೀವನದಲ್ಲಿ ಹೇಗಿರಬೇಕು ಎಂದರೆ ಯಾರು ಭಗವಂತನನ್ನು ಪ್ರೀತಿ ಮಾಡುತ್ತಾರೋ, ಅವರನ್ನಷ್ಟೇ ನಾವು ಪ್ರೀತಿ ಮಾಡಬೇಕು. ಅದರಲ್ಲೂ ಕೂಡ ಇವನು ಹರಿಭಕ್ತನಾಗಿದ್ದಾನೆ. ಇವನಿಂದ ನನ್ನಲ್ಲಿ ಹರಿಭಕ್ತಿ ಅಭಿವೃದ್ಧಿವಾಗು- ತ್ತದೆಂದಷ್ಟೇ ಭಾವನೆಯಿರಬೇಕು. ಹರಿಭಕ್ತನಲ್ಲಿಯೂ ಕೂಡ ವ್ಯಾವಹಾರಿಕವಾದ ಸಂಬಂಧಗಳನ್ನು ಇಟ್ಟುಕೊಳ್ಳಬಾರದು. ಅಧ್ಯಾತ್ಮಬಾಂಧವ್ಯವನ್ನಷ್ಟೇ ಇಟ್ಟುಕೊಳ್ಳ- ಬೇಕು. ಯಾರು ಹರಿಭಕ್ತನಾಗಿರುವುದಿಲ್ಲವೋ, ಅಂಥವನನ್ನು ಹರಿಭಕ್ತರನ್ನಾಗಿ ಮಾಡಲು ಪ್ರಯತ್ನಿಸಬೇಕು. ಅಥವಾ ಹರಿಭಕ್ತನೇ ಆಗಿದ್ದರೂ ಹರಿಭಕ್ತಿಯು ಅವನಲ್ಲಿ ಅಭಿವೃದ್ಧಿ ಆಗುವಂತೆ ಅವನ ಜೊತೆ ಸಂಬಂಧವನ್ನು ಬೆಳೆಸಬೇಕು. ಹರಿಭಕ್ತರಲ್ಲದವರನ್ನು ಅಥವಾ ಹರಿಭಕ್ತರಲ್ಲದ ವಿಷಯದಲ್ಲಷ್ಟೇ ದ್ವೇಷ ತಾತ್ಸಾರ- ಗಳನ್ನು ಮಾಡಬೇಕು. ಇದನ್ನು ಬಿಟ್ಟು ನನಗೆ ಪ್ರಿಯವನ್ನು ಮಾಡುವವನನ್ನು ಪ್ರೀತಿಸುವುದು, ನನಗೆ ಪ್ರಿಯವನ್ನು ಮಾಡದಿರುವವನನ್ನು ದ್ವೇಷಿಸುವುದು ಸರ್ವಥಾ ತಪ್ಪು. ಹೀಗೆ ಮಾಡುವುದರಿಂದ ಜೀವನದಲ್ಲಿ ಅನಂತದುಃಖಗಳನ್ನೇ ಎದುರಿಸ- ಬೇಕಾಗುತ್ತದೆ. ಪ್ರಾಮಾಣಿಕಜೀವನವೆಂದರೆ ಇದು ಮಾತ್ರ. ಮತ್ತೊಂದಲ್ಲ ಎಂಬುದು ಇಲ್ಲಿನ ಅಭಿಪ್ರಾಯ. ಅಂದಮಾತ್ರಕ್ಕೆ ಯಾರಿಗೂ ಪ್ರಿಯವನ್ನೇ ಮಾಡಬಾರದು, ಉಪಕಾರವನ್ನು ಮಾಡಬಾರದು ಎಂದಭಿಪ್ರಾಯವಲ್ಲ. ಏನೇ ಪ್ರಿಯವನ್ನು ಮಾಡಿದರೂ ಅದು ಭಗವಂತನಿಗೆ ಸಮರ್ಪಿತವಾಗಲಿ ಎಂಬ ಅನುಸಂಧಾನವಿರಬೇಕು. ಅಚಾತುರ್ಯದಿಂದ ಮತ್ತೊಬ್ಬರಿಗೆ ಅಪ್ರಿಯವು ನಡೆ- ದರೆ ಅದರಿಂದ ಸಂಸಾರದ ಸ್ವರೂಪವನ್ನು ಅರ್ಥಮಾಡಿಕೊಂಡು ವಿರಕ್ತನಾಗ- ಬೇಕು.
ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇ ಪರಂ ಗತಾಃ |
ತ ಏವ ಸುಖಮೇಧಂತೇ ಮಧ್ಯಮಃ ಕ್ಲಿಷ್ಯತೇ ಜನಃ ॥28॥
ಲೋಕದಲ್ಲಿ ಇಬ್ಬರು ಮಾತ್ರ ಸಂತೋಷದಲ್ಲಿರುತ್ತಾರೆ. ಒಬ್ಬ ಮೂಢ, ಮತ್ತೊಬ್ಬ ಬುದ್ಧಿವಂತ. ಇವರಿಬ್ಬರ ನಡುವೆ ಇರುವ ವ್ಯಕ್ತಿಯು ಯಾವಾಗಲೂ ದುಃಖವನ್ನೇ ಅನುಭವಿಸುತ್ತಾನೆ.

ಇತ್ಯಬ್ರುವೀನ್ಮಹಾಪ್ರಾಜ್ಞೋ ಯುಧಿಷ್ಠಿರ ಸ ಸೇನಜಿತ್ |
ಪರಾವರಜ್ಞೋ ಲೋಕಸ್ಯ ಧರ್ಮವಿತ್ ಸುಖದುಃಖವಿತ್ ॥29॥
ಯುಧಿಷ್ಠಿರನೇ! ಇಷ್ಟು ವಿಷಯವನ್ನು ಮಹಾಪ್ರಾಜ್ಞನಾದ, ದೇವಜ್ಞನಾದ ಸೇನಜಿತ್ ಎಂಬ ರಾಜನು ತಿಳಿಸಿರುವನು. ಲೋಕದಲ್ಲಿ ಮುಂದೆ ಏನು ನಡೆ- ಯುತ್ತದೆ, ಹಿಂದೆ ಏನು ನಡೆದಿದೆ ಎಂಬುದನ್ನು, ಯಾವುದು ಸುಖ, ಯಾವುದು ದುಃಖ ಎಂಬುದನ್ನು ಪರಾಂಬರಿಸಿ ತಿಳಿಸಿರುವನು.
ಪರದುಃಖೇನ ಯೋ ದುಃಖೀ ನ ಜಾತು ಸ ಸುಖೀ ಭವೇತ್ |
ದುಃಖಾನಾಂ ಹಿ ಕ್ಷಯೋ ನಾಸ್ತಿ ಜಾಯತೇ ಹ್ಯಪರಾತ್ ಪರಮ್ ॥30॥
ಧರ್ಮರಾಜನೇ! ಮತ್ತೊಬ್ಬರ ದುಃಖಕ್ಕಾಗಿ ಯಾರು ದುಃಖಿಸುತ್ತಾನೋ, ಅವನು ಎಂದೂ ಕೂಡ ಸುಖಿಯಾಗಲಾರ. ಏಕೆಂದರೆ ದುಃಖಗಳಿಗೆ ಎಂದೂ ಕೂಡ ಕೊನೆಯೆಂಬುದೇ ಇರುವುದಿಲ್ಲ. ದುಃಖದಿಂದ ದುಃಖವೇ ಹುಟ್ಟುತ್ತಾ ಹೋಗುತ್ತದೆ.
ಟಿಪ್ಪಣಿ- ಪರದುಃಖೇನ ಯೋ ದುಃಖೀ ಇತ್ಯತ್ರ ಪರದುಃಖೇನ ಪುತ್ರದಾರಾದೀನಾಂ ದುಃಖೇನ |
`ಪರದುಃಖೇನ ಯೋ ದುಃಖೀ' ಎಂಬಲ್ಲಿ `ಪರದುಃಖೇನ' ಮಕ್ಕಳು, ಹೆಂಡತಿ ಮೊದಲಾದವರ ದುಃಖದಿಂದ ಎಂದರ್ಥ.
ಸುಖಂ ಚ ದುಃಖಂ ಚ ಭವಾಭವೌ ಚ
ಲಾಭಾಲಾಭೌ ಮರಣಂ ಜೀವಿತಂ ಚ |
ಪರ್ಯಾಯತಃ ಸರ್ವಮಿಹ ಸ್ಪೃಶಂತಿ
ತಸ್ಮಾದ್ ಧೀರೋ ನೈವ ಹೃಷ್ಯೇನ್ನ ಶೋಚೇತ್ ॥31॥
ಸುಖ-ದುಃಖಗಳು, ಸಂಪತ್ತು-ವಿಪತ್ತುಗಳು, ಲಾಭ-ನಷ್ಟಗಳು, ಜನನ-ಮರಣ -ಗಳು ಇವೆಲ್ಲವೂ ಒಂದಾದ ಮೇಲೆ ಒಂದರಂತೆ ಸುತ್ತಿ ಬರುತ್ತಲೇ ಇರುತ್ತವೆ. ಸಮುದ್ರದ ಅಲೆಗಳಂತೆ ಬರುತ್ತಿರುವ ಇವುಗಳನ್ನು ಕಂಡು ದುಃಖಿಸಲೂ ಬಾರದು. ಸಂತೋಷವನ್ನೂ ಪಡಬಾರದು. ಅಂಥವನೇ ಧೀರ ಎಂದು ಕರೆಸಿಕೊಳ್ಳುತ್ತಾನೆ.
ದೀಕ್ಷಾಂ ರಾಜ್ಞಃ ಸಂಯುಗೇ ಯುದ್ಧಮಾಹು-
ರ್ಯೋಗಂ ರಾಷ್ಟ್ರೇ ದಂಡನೀತ್ಯಾಂ ಚ ಸಮ್ಯಕ್ |
ವಿತ್ತತ್ಯಾಗೋ ದಕ್ಷಿಣಾನಾಂ ಚ ಯಜ್ಞೇ
ಸಮ್ಯಗ್ ಜ್ಞಾನಂ ಪಾವನಾನೀತಿ ವಿದ್ಯಾತ್ ॥32॥
ಧರ್ಮರಾಜನೇ! ಯುದ್ಧ ಮಾಡುವುದು, ರಾಜ್ಯವನ್ನು ಪರಿಪಾಲನೆ ಮಾಡು- ವುದು, ದಂಡನೀತಿಯನ್ನು ಅನುಸರಿಸುವುದು, ಸಂಪತ್ತನ್ನು ದಕ್ಷಿಣರೂಪದಲ್ಲಿ ದಾನ ಮಾಡುವುದು ಇವೆಲ್ಲವೂ ಕುಲಧರ್ಮಗಳಾಗಿವೆ. ಇವುಗಳನ್ನು ಆಚರಣೆ ಮಾಡು- ವುದರಿಂದ ರಾಜನು ಪಾವನನಾಗುತ್ತಾನೆ.
ವಿವರಣೆ - ಜೀವನವು ಯಜ್ಞರೂಪದಿಂದ ಇರಬೇಕು. ಜೀವನವನ್ನು ನಡೆಸು- ವವನು ಯಜ್ಞದೀಕ್ಷಿತನಂತೆ ಇರಬೇಕು. ಯುದ್ಧಭೂಮಿಯಲ್ಲಿ ಮಾಡುವ ಯುದ್ಧವೂ ಕೂಡ ಯಜ್ಞರೂಪವಾಗಿರಬೇಕು. ದಂಡನೀತಿಯನ್ನು ಅಳವಡಿಸುವುದೂ ಕೂಡ ಯೋಗಸಾಧನರೂಪದಲ್ಲಿರಬೇಕು ಎಂದಭಿಪ್ರಾಯ.
ರಕ್ಷನ್ ರಾಷ್ಟ್ರಂ ಬುದ್ಧಿಪೂರ್ವಂ ನಯೇನ
ಸಂತ್ಯಕ್ತಾತ್ಮಾ ಯಜ್ಞಶೀಲೋ ಮಹಾತ್ಮಾ |
ಸರ್ವಾಂಲ್ಲೋಕಾನ್ ಧರ್ಮದೃಷ್ಟ್ಯಾ ಚರಂಶ್ಚಾ-
ಪ್ಯೂರ್ಧ್ವಂ ದೇಹಾನ್ಮೋದತೇ ದೇವಲೋಕೇ ॥33॥
ಯಥಾರ್ಥಜ್ಞಾನವನ್ನು ಪಡೆದು ಅಹಂಕಾರವನ್ನು ಪರಿತ್ಯಾಗ ಮಾಡಿ, ನೀತಿ- ಯಿಂದ ರಾಜ್ಯವನ್ನು ಪರಿಪಾಲನೆ ಮಾಡಬೇಕು. ಯಜ್ಞಗಳನ್ನು ಮಾಡಬೇಕು. ಎಲ್ಲಾ ಪ್ರಾಣಿಗಳನ್ನು ಸಮಾನದೃಷ್ಟಿಯಿಂದ ನೋಡಬೇಕು. ಇಂಥ ಮಹಾತ್ಮನಾದ ರಾಜನು ದೇಹವನ್ನು ಬಿಟ್ಟ ಮೇಲೆ ಸ್ವರ್ಗಲೋಕದಲ್ಲಿ ಆನಂದವಾಗಿರುತ್ತಾನೆ.
ಜಿತ್ವಾ ಸಂಗ್ರಾಮಾನ್ ಪಾಲಯಿತ್ವಾ ಚ ರಾಷ್ಟ್ರಂ
ಸೋಮಂ ಪೀತ್ವಾ ವರ್ಧಯಿತ್ವಾ ಪ್ರಜಾಶ್ಚ |
ಯುಕ್ತ್ಯಾ ದಂಡಂ ಧಾರಯಿತ್ವಾ ಪ್ರಜಾನಾಂ
ಯುದ್ಧೇ ಕ್ಷೀಣೋ ಮೋದತೇ ದೇವಲೋಕೇ ॥34॥
ಯುದ್ಧದಲ್ಲಿ ಜಯಗಳಿಸಬೇಕು. ರಾಜ್ಯವನ್ನು ಧರ್ಮದಿಂದ ಪರಿಪಾಲನೆ ಮಾಡಬೇಕು. ಯಜ್ಞಗಳಲ್ಲಿ ಸೋಮರಸವನ್ನು ಪಾನ ಮಾಡಬೇಕು. ದಂಡನೀತಿ- ಯಿಂದ ಪ್ರಜೆಗಳನ್ನು ಸಂತೋಷಪಡಿಸಬೇಕು. ಈ ಕ್ರಮದಲ್ಲಿ ಯಾವ ಕ್ಷತ್ರಿಯನು ಧರ್ಮಪರಿಪಾಲನೆಯನ್ನು ಮಾಡುತ್ತಾನೋ, ಅಂಥವನು ಮರಣದ ಅನಂತರ ಎಲ್ಲಾ ಲೋಕಗಳಲ್ಲಿಯೂ ಸಂತೋಷಪಡುತ್ತಾನೆ.
ಸಮ್ಯಗ್ ವೇದಾನ್ ಪ್ರಾಪ್ಯ ಶಾಸ್ತ್ರಾಣ್ಯಧೀತ್ಯ
ಸಮ್ಯಗ್ ರಾಷ್ಟ್ರಂ ಪಾಲಯಿತ್ವಾ ಚ ರಾಜಾ |
ಚಾತುರ್ವರ್ಣ್ಯಂ ಸ್ಥಾಪಯಿತ್ವಾ ಸ್ವಧರ್ಮೇ
ಪೂತಾತ್ಮಾ ವೈ ಮೋದತೇ ದೇವಲೋಕೇ ॥35॥
ವೇದಗಳನ್ನು ಮತ್ತು ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣದವರು ಅವರವರ ಧರ್ಮವನ್ನು ನಿಷ್ಠೆಯಿಂದ ಪರಿಪಾಲನೆ ಮಾಡಲು ವ್ಯವಸ್ಥೆಗೊಳಿಸಬೇಕು. ಇಂಥ ರಾಜನು ಪೂತಾತ್ಮನಾಗುತ್ತಾನೆ. ಮರಣದ ಅನಂತರ ದೇವರಾಜ್ಯದಲ್ಲಿ ಸುಖವಾಗಿರುತ್ತಾನೆ.
ಯಸ್ಯ ವೃತ್ತಂ ನಮಸ್ಯಂತಿ ಸ್ವರ್ಗಸ್ಥಸ್ಯಾಪಿ ಮಾನವಾಃ |

ಪೌರಜಾನಪದಾಮಾತ್ಯಾಃ ಸ ರಾಜಾ ರಾಜಸತ್ತಮಃ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಸೇನಜಿದುಪಾಖ್ಯಾನಂ ನಾಮ ಷಡ್ವಿಂಶೋಽಧ್ಯಾಯಃ ॥26॥
ಮರಣದ ಅನಂತರದಲ್ಲಿ ಯಾವ ರಾಜನ ಉತ್ತಮ ನಡತೆಯನ್ನು ಪ್ರತಿಯೊಬ್ಬ ಪ್ರಜೆಗಳು ಮಂತ್ರಿಗಳು ನಿರಂತರ ಕೊಂಡಾಡುತ್ತಾರೋ, ಅಂಥ ರಾಜನೇ ರಾಜ- ಶ್ರೇಷ್ಠನೆಂದು ಕರೆಸಿಕೊಳ್ಳುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 26ನೆಯ ಅಧ್ಯಾಯವು ಮುಗಿಯಿತು.
*****
27. ಇಪ್ಪತ್ತೇಳನೆಯ ಅಧ್ಯಾಯ
ಸಕಲವನ್ನು ಪರಿತ್ಯಾಗ ಮಾಡುವುದೇ ಶ್ರೇಷ್ಠವೆಂದು ಯುಧಿಷ್ಠಿರನ ಸಮರ್ಥನೆ.
ವೈಶಂಪಾಯನಃ
ಅಸ್ಮಿನ್ನೇವ ಪ್ರಕರಣೇ ಧನಂಜಯಮುದಾರಧೀಃ |
ಅಭಿನೀತತರಂ ವಾಕ್ಯಮಿತ್ಯುವಾಚ ಯುಧಿಷ್ಠಿರಃ ॥1॥
ವೈಶಂಪಾಯನರು ಜನಮೇಜಯನೇ! ಉತ್ಕೃಷ್ಟವಾದ ಬುದ್ಧಿಯುಳ್ಳ ಧರ್ಮ- ರಾಜನು ಇದೇ ಸಂದರ್ಭದಲ್ಲಿ ಅರ್ಜುನನನ್ನು ಕುರಿತು ಸಂದರ್ಭಕ್ಕೆ ಉಚಿತವಾದ ಮಾತುಗಳನ್ನು ಹೇಳಿದನು.
ಯದೇತನ್ಮನ್ಯಸೇ ಪಾರ್ಥ ನ ಜ್ಯಾಯೋಽಸ್ತಿ ಧನಾದಿತಿ |
ನ ಸ್ವರ್ಗೋ ನ ಸುಖಂ ನಾರ್ಥೋ ನಿರ್ಧನಸ್ಯೇತಿ ತನ್ಮೃಷಾ ॥2॥
ಅರ್ಜುನನೇ! ಹಣವೇ ಶ್ರೇಷ್ಠ. ಹಣಕ್ಕಿಂತಲೂ ಶ್ರೇಷ್ಠವಾದದ್ದು ಮತ್ತೊಂದಿಲ್ಲ. ಹಣವಿಲ್ಲದವನಿಗೆ ಸ್ವರ್ಗ, ಸುಖ, ಪ್ರಯೋಜನಗಳು ಯಾವುದೂ ಇಲ್ಲವೆಂದು ನೀನು ಭಾವಿಸಿರುವುದು ತಪ್ಪು.
ಸ್ವಾಧ್ಯಾಯಯಜ್ಞಸಂಸಿದ್ಧಾ ದೃಶ್ಯಂತೇ ಬಹವೋ ಜನಾಃ |
ತಪೋರತಾಶ್ಚ ಮುನಯೋ ಯೇಷಾಂ ಲೋಕಾಃ ಸನಾತನಾಃ ॥3॥
ಹಣವೇ ಇಲ್ಲದೆ ಅದೆಷ್ಟೋ ಸಾಧಕರು ವೇದಗಳ ಅಧ್ಯಯನ ಮತ್ತು ಅಧ್ಯಾ- ಪನಗಳಿಂದಲೇ ಸಿದ್ಧಿಯನ್ನು ಪಡೆದಿದ್ದಾರೆ. ಅನೇಕ ಋಷಿಮುನಿಗಳು ತಪೋನಿಷ್ಠರಾಗಿ ಸನಾತನವಾದ ಲೋಕಗಳನ್ನು ಪಡೆದುಕೊಂಡಿದ್ದಾರೆ.
ಋಷೀಣಾಂ ಸಮಯಂ ಶಶ್ವದ್ ಯೇ ರಕ್ಷಂತಿ ಧನಂಜಯ |
ಆಶ್ರಿತಾಃ ಸರ್ವಧರ್ಮಜ್ಞಾ ದೇವಾಸ್ತಾನ್ ಬ್ರಾಹ್ಮಣಾನ್ ವಿದುಃ ॥4॥
ಧನಂಜಯನೇ! ಎಲ್ಲಾ ಧರ್ಮಗಳನ್ನು ತಿಳಿಸಿಕೊಂಡಿರುವ ಯಾವ ಮನುಷ್ಯ- ರಿದ್ದಾರೋ, ಬ್ರಹ್ಮಚರ್ಯ ಆಶ್ರಮದಲ್ಲಿದ್ದು ಋಷಿಗಳ ನಿಯಮದಿಂದ ಯಥಾ- ವತ್ತಾಗಿ ಅಧ್ಯಯನಸಂಪತ್ತನ್ನು ರಕ್ಷಿಸಿಕೊಂಡು ಯಾರು ಬರುತ್ತಿದ್ದಾರೋ, ಅಂಥ ಸಾಧಕರನ್ನೇ ದೇವತೆಗಳು ಬ್ರಾಹ್ಮಣರೆಂದು ಹೇಳುತ್ತಾರೆ.
ಸ್ವಾಧ್ಯಾಯನಿಷ್ಠಾನ್ ಹಿ ಋಷೀನ್ ಜ್ಞಾನನಿಷ್ಠಾಂಸ್ತಥಾಽಪರಾನ್ |
ಬುದ್ಧ್ಯೇಥಾಃ ಸಂತತಂ ಚಾಪಿ ಧರ್ಮನಿಷ್ಠಾನ್ ಧನಂಜಯ ॥5॥
ಧನಂಜಯನೇ! ಕೆಲವು ಋಷಿಗಳು ವೇದಶಾಸ್ತ್ರಗಳ ಅಧ್ಯಯನ ಮತ್ತು ಅಧ್ಯಾ- ಪನಗಳಲ್ಲೇ ಆಸಕ್ತರಾಗಿರುತ್ತಾರೆ. ಇನ್ನೂ ಕೆಲವರು ಜ್ಞಾನವನ್ನು ಸಂಪಾದನೆ ಮಾಡು- ವುದರಲ್ಲಿ ಅಭಿಲಾಷೆಯುಳ್ಳವರಾಗಿರುತ್ತಾರೆ. ಇವರೆಲ್ಲರೂ ನಿರಂತರ ಧರ್ಮಪರಿ- ಪಾಲನೆಯಲ್ಲಿ ಆಸಕ್ತರಾಗಿರುತ್ತಾರೆಂಬುದನ್ನು ನೀನು ಅರ್ಥಮಾಡಿಕೊಳ್ಳಬೇಕು.
ಜ್ಞಾನನಿಷ್ಠೇಷು ಕಾರ್ಯಾಣಿ ಪ್ರತಿಷ್ಠಾಪ್ಯಾನಿ ಪಾಂಡವ |
ವೈಖಾನಸಾನಾಂ ವಚನಂ ಯಥಾ ನೋ ವಿದಿತಂ ಪ್ರಭೋ ॥6॥
ಪಾಂಡವನೇ! ನಮಗೆ ತಿಳಿದಂತೆ ಯಾರು ಶ್ರೇಷ್ಠ ಜ್ಞಾನವನ್ನು ಹೊಂದಿರು- ತ್ತಾರೋ, ಅಂಥವರಿಗೆ ರಾಜ್ಯದ ಆಡಳಿತಕಾರ್ಯವನ್ನು ಒಪ್ಪಿಸಬೇಕು. ಹೀಗೆ ವೈಖಾ ನಸರು ಹೇಳುತ್ತಾರೆ.
ಅಜಾಶ್ಚ ಪೃಶ್ನಯಶ್ಚೈವ ಸಿಕತಾಶ್ಚೈವ ಭಾರತ |
ಅರುಣಾಃ ಕೇತವಶ್ಚೈವ ಸ್ವಾಧ್ಯಾಯೇನ ದಿವಂ ಗತಾಃ ॥7॥
ಅಜರು, ಪೃಶ್ನಿಗಳು, ಸಿಕತರು, ಅರುಣರು, ಕಿತವರು ಇವರೆಲ್ಲರೂ ಅಧ್ಯಯನ- ದಿಂದಲೇ ಉತ್ತಮ ಲೋಕವನ್ನು ಪಡೆದಿದ್ದಾರೆ.
ಟಿಪ್ಪಣಿ - ಅಜಾಶ್ಚ ಪೃಶ್ನಯಶ್ಚೈವ ಇತ್ಯತ್ರ ಅಜಾಃ ಅಜನಾಮಕಾಃ | ಪೃಶ್ನಯಃ ಪೃಶ್ನಿನಾಮಕಾಃ, ಏವಮುತ್ತರತ್ರಾಪಿ |
`ಅಜಾಶ್ಚ ಪೃಶ್ನಯಶ್ಚೈವ ಎಂಬಲ್ಲಿ ಅಜಾಃ ಎಂದರೆ ಅಜನಾಮಕರು ಎಂದರ್ಥ. `ಪೃಶ್ನಯಃ' ಎಂದರೆ ಪೃಶ್ನಿ ಎಂಬ ಹೆಸರುಳ್ಳವರು ಎಂದರ್ಥ. ಇದರಂತೆ ಉಳಿದದ್ದನ್ನೂ ಕೂಡ ತಿಳಿದುಕೊಳ್ಳಬೇಕು.
ಅವಾಪ್ಯೈತಾನಿ ಕರ್ಮಾಣಿ ವೇದೋಕ್ತಾನಿ ಧನಂಜಯ |
ದಾನಮಧ್ಯಯನಂ ಯಜ್ಞೋ ನಿಗ್ರಹಶ್ಚೈವ ದುರ್ಗ್ರಹಃ ॥8॥
ದಾನ, ಅಧ್ಯಯನ, ಯಜ್ಞ, ಇಂದ್ರಿಯನಿಗ್ರಹ ಮೊದಲಾದ ವೇದಗಳಲ್ಲಿ ಹೇಳಲ್ಪಟ್ಟ ಸತ್ಕರ್ಮಗಳ ಆಚರಣೆಯಿಂದಲೇ ಇವರೆಲ್ಲರೂ ಉತ್ತಮಲೋಕವನ್ನು ಪಡೆದಿದ್ದಾರೆ.
ದಕ್ಷಿಣೇನ ಚ ಪಂಥಾನಮರ್ಯಮ್ಣೋ ಯೇ ದಿವಂ ಗತಾಃ |
ಏತಾನ್ ಕ್ರಿಯಾವತಾಂ ಲೋಕಾನುಕ್ತವಾನ್ ಪೂರ್ವಮಪ್ಯಹಮ್ ॥9॥
ಅತ್ಯಂತ ಕಠಿಣವಾದ ಕರ್ಮಗಳನ್ನು ಆಚರಣೆ ಮಾಡಿ, ಅನೇಕ ಸಾಧಕರು ದಕ್ಷಿಣಾಯನ ಮಾರ್ಗದಿಂದ ಸ್ವರ್ಗಕ್ಕೆ ತೆರಳಿದ್ದಾರೆ. ವೇದಗಳಲ್ಲಿ ಹೇಳಲ್ಪಟ್ಟ ಧರ್ಮಾಚರಣೆಯನ್ನು ಮಾಡಿದವರಿಗೆ ಯಾವ ಲೋಕಗಳು ದೊರಕುತ್ತವೆ ಎಂಬು- ದನ್ನು ಈ ಹಿಂದೆಯೇ

ನಾನು ತಿಳಿಸಿದ್ದೇನೆ.
ಉತ್ತರೇಣ ತು ಪಂಥಾನಂ ನಿಯಮಾದ್ ಯಂ ಪ್ರಪಶ್ಯಸಿ |
ಏತೇ ಯಾಗವತಾಂ ಲೋಕಾ ಭಾಂತಿ ಪಾರ್ಥ ಸನಾತನಾಃ ॥10॥
ಅರ್ಜುನನೇ! ಅತ್ಯಂತನಿಯಮಾನುಷ್ಠಾನದಲ್ಲಿರುವುದರಿಂದ ನೀನೂ ಸಹ ಇದೆಲ್ಲವನ್ನು ಕಾಣುತ್ತಿರುವಿ. ಅದರಲ್ಲಿ ಯಾವ ಉತ್ತರಾಯಣಮಾರ್ಗವನ್ನು ನೋಡುತ್ತಿರುವಿಯೋ, ಆ ಮಾರ್ಗವು ಜ್ಞಾನಯಜ್ಞವನ್ನು ಆಚರಿಸುವ ಸಾಧಕರಿ- ಗಷ್ಟೇ ದೊರಕುತ್ತದೆ.
ತತ್ರೋತ್ತರಾಂ ಗತಿಂ ಪಾರ್ಥ ಪ್ರಶಂಸಂತಿ ಪುರಾವಿದಃ |
ಸಂತೋಷೋ ವೈ ಸ್ವರ್ಗತಮಃ ಸಂತೋಷಃ ಪರಮಂ ಸುಖಮ್ ॥11॥
ಪಾರ್ಥನೇ! ಜ್ಞಾನದಿಂದ ಲಭಿಸುವ ಉತ್ತರಾಯಣಮಾರ್ಗವನ್ನೇ ಪುರಾತನ- ಮುನಿಗಳು ಪ್ರಶಂಸೆ ಮಾಡುತ್ತಾರೆ. ಸಂತೋಷವೇ ಪರಮಸುಖವಾಗಿದೆ. ಸಂತೋಷ -ಕ್ಕಿಂತಲೂ ಮತ್ತೊಂದು ಪಡೆಯಬೇಕಾದ್ದು ಇರುವುದಿಲ್ಲ.
ತುಷ್ಟೇರ್ನ ಕಿಂಚಿತ್ ಪರಮಂ ಸಾ ಸಮ್ಯಕ್ ಪ್ರತಿತಿಷ್ಠತಿ |
ವಿನೀತಕ್ರೋಧಹರ್ಷಸ್ಯ ಸತತಂ ಸಿದ್ಧಿರುತ್ತಮಾ ॥12॥
ಯಾರು ಕೋಪ ಮತ್ತು ಸಂತೋಷಗಳನ್ನು ಜಯಿಸಿರುತ್ತಾನೋ, ಅವನಿಗೆ ಸಂತೃಪ್ತಿಯು ಇರುತ್ತದೆ. ಅಂತಹವನಿಗೆ ಯಾವಾಗಲೂ ಉತ್ತಮವಾದ ಸಿದ್ಧಿಯು ಲಭಿಸುತ್ತದೆ.
ಅತ್ರಾಪ್ಯುದಾಹರಂತೀಮಾಂ ಗಾಥಾಂ ಗೀತಾಂ ಯಯಾತಿನಾ |
ಯಾಽಭಿಪ್ರತ್ಯಾಹರೇತ್ ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ ॥13
ಇದೇ ವಿಷಯದಲ್ಲಿ ಹಿಂದೆ ಯಯಾತಿರಾಜನು ತನ್ನ ಆತ್ಮಾನುಭವವನ್ನು ಪದ್ಯಗಳ ಮೂಲಕ ಹೇಳಿರುತ್ತಾನೆ. ಅವನು ಹೇಳಿದಂತೆ ಆಮೆಯು ತನ್ನ ಅವ- ಯವಗಳನ್ನು ಒಳಗೆ ಬೇಕಾದಾಗ ಸೆಳೆದುಕೊಂಡು, ಬೇಕಾದಾಗ ಹೊರಗೆ ಬಿಡುತ್ತದೋ, ಅದರಂತೆ ಕಾಮಾದಿಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿರು- ವವನು ಸಂತೋಷದಿಂದ ಇರುತ್ತಾನೆ.
ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ |
ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥14॥
ನಿಜವಾದ ಸಾಧಕನು ಯಾರೊಬ್ಬನಿಗೂ ಭಯ ಪಡುವುದಿಲ್ಲ. ಯಾರೊಬ್ಬ- ರನ್ನು ಭಯಪಡಿಸುವುದೂ ಇಲ್ಲ. ಯಾವಾಗ ಯಾವುದನ್ನು ಇಚ್ಛಿಸುವುದಿಲ್ಲವೋ. ಯಾವುದನ್ನು ದ್ವೇಷ ಮಾಡುವುದಿಲ್ಲವೋ, ಆಗ ಪರಮಾತ್ಮನ ಸಾಮೀಪ್ಯವನ್ನು ಹೊಂದುತ್ತಾನೆ.

ಯದಾ ನ ಭಾವಂ ಕುರುತೇ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥15॥
ನಿಜವಾದ ಸಾಧಕನು ಬೇರೆ ಪ್ರಾಣಿಗಳಿಗೆ ಮನಸ್ಸಿನಿಂದ ಮಾತಿನಿಂದ ಕಾರ್ಯ- ದಿಂದ ಕೆಟ್ಟದ್ದನ್ನು ಬಯಸುವುದಿಲ್ಲವೋ, ಆಗ ಅವನು ಪರಮಾತ್ಮನನ್ನು ಹೊಂದು- ತ್ತಾನೆ.
ವಿನೀತಮಾನಮೋಹಶ್ಚ ಬಹುಸಂಗವಿವರ್ಜಿತಃ |
ತದಾತ್ಮಜ್ಯೋತಿಷಃ ಸಾಧೋ ನಿರ್ವಾಣಮುಪಪದ್ಯತೇ ॥16॥
ಮಾನ ಮತ್ತು ಮೋಹಗಳನ್ನು ನಿಗ್ರಹ ಮಾಡಿ ಎಲ್ಲರ ಸಂಗವನ್ನು ಯಾವಾಗ ಬಿಡುತ್ತಾನೋ, ಪರಮಾತ್ಮನೆಂಬ ಜ್ಯೋತಿಯ ಬಗ್ಗೆ ನಿರಂತರ ತಿಳಿದುಕೊಳ್ಳು- ತ್ತಾನೋ, ಆಗ ಅಂಥ ಸಾಧಕನು ಮೋಕ್ಷವನ್ನು ಹೊಂದುತ್ತಾನೆ.
ಇದಂ ತು ಶೃಣು ಮೇ ಪಾರ್ಥ ಬ್ರುವತಃ ಸಂಯತೇಂದ್ರಿಯಃ |
ಧರ್ಮಮನ್ಯೇ ವೃತ್ತಮನ್ಯೇ ಧನಮೀಹಂತಿ ಚಾಪರೇ ॥17॥
ಓ ಪಾರ್ಥನೇ! ನಾನು ಈಗ ಹೇಳುವ ವಿಷಯವನ್ನು ಗಮನವಿಟ್ಟು ಕೇಳು. ಇಂದ್ರಿಯನಿಗ್ರಹವು ಅತ್ಯಂತಶ್ರೇಷ್ಠವಾದದ್ದು. ಕೆಲವರು ಧರ್ಮವನ್ನು ಅನುಷ್ಠಾನ- ಮಾಡಬೇಕೆಂದು ಪ್ರಯತ್ನ ಪಡುತ್ತಾರೆ. ಇನ್ನು ಕೆಲವರು ಅಪಾರವಾದ ಹಣವನ್ನು ಸಂಪಾದನೆ ಮಾಡಬೇಕೆಂದು ಪ್ರಯತ್ನ ಪಡುತ್ತಾರೆ.
ಧನಹೇತೋರ್ಯ ಈಹೇತ ತಸ್ಯಾನೀಹಾ ಗರೀಯಸೀ |
ಭೂಯಾನ್ ದೋಷೋ ಹಿ ವಿತ್ತಸ್ಯ ಯಶ್ಚ ಧರ್ಮಸ್ತದಾಶ್ರಯಃ ॥18॥
ಕೆಲವರು ಧರ್ಮಕ್ಕೆ ಧನವು ಆಧಾರವಾಗಿದೆ ಎಂಬ ಉದ್ದೇಶದಿಂದ ಧನಾ- ರ್ಜನೆಯನ್ನು ಮಾಡಲು ಆಸೆ ಪಡಬಹುದು. ಆದರೆ ಅಂಥ ಹಣಕ್ಕಾಗಿ ಆಸೆ ಪಡದಿ- ರುವುದೇ ಒಳ್ಳೆಯದು. ಧರ್ಮಕ್ಕೆ ಆ ಹಣವು ಆವಶ್ಯಕವಾಗಿದ್ದರೂ ಅದರಲ್ಲಿ ಅನೇಕ ದೋಷಗಳಿರುತ್ತವೆ.
ಪ್ರತ್ಯಕ್ಷಮನುಪಶ್ಯಾಮಿ ತ್ವಮಪಿ ದ್ರಷ್ಟುಮರ್ಹಸಿ |
ವರ್ಜನಂ ವರ್ಜನೀಯಾನಾಮೀಹಮಾನೇನ ದುಷ್ಕರಮ್ ॥19॥
ನಾನು ಪ್ರತ್ಯಕ್ಷವಾಗಿಯೇ ಹಣ ಸಂಪಾದನೆಯಲ್ಲಿರುವ ದೋಷಗಳನ್ನು ಕಾಣು- ತ್ತಿದ್ದೇನೆ. ನೀನೂ ಸಹ ಇದನ್ನು ಪ್ರತ್ಯಕ್ಷವಾಗಿ ಕಾಣಬಹುದು. ಹಣದ ಸಂಪಾದನೆ- ಯಲ್ಲಿ ಯಾರು ಆಸಕ್ತರಾಗಿರುತ್ತಾರೋ, ಬಿಡಬೇಕಾದದ್ದನ್ನು ಬಿಡದೇ ಪಾಪವನ್ನೇ ಹೊಂದುತ್ತಾರೆ.
ಯೇ ವಿತ್ತಮಭಿಪದ್ಯಂತೇ ಸಮ್ಯಕ್ತ್ವಂ ತೇಷು ದುರ್ಲಭಮ್ |
ದ್ರುಹ್ಯತಃ ಪ್ರೈತಿ ತತ್ ಪ್ರಾಹುಃ ಪ್ರತಿಕೂಲಂ ಯಥಾತಥಮ್ ॥20॥
ಯಾರು ಹಣದ ಬೆನ್ನು ಹತ್ತುತ್ತಾರೋ, ಅವರಲ್ಲಿ ಸಜ್ಜನಿಕೆಯು ಬಹಳ ಅಪರೂಪ. ಏಕೆಂದರೆ ಹಣವು ದ್ರೋಹ ಮಾಡುವನಿಗಷ್ಟೇ ಲಭಿಸುತ್ತದೆ. ಹೀಗೆ ಅನುಭವಿಗಳು ಹೇಳುತ್ತಾರೆ. ಹಾಗೇನಾದರೂ ಸಜ್ಜನನು ಹಣವನ್ನು ಸಂಪಾದನೆ ಮಾಡಿದರೂ ಮುಂದೆ ಅದು ತನ್ನ ಸಾಧನೆಗೆ ಪ್ರತಿಕೂಲವೇ ಆಗುತ್ತದೆ.

ಟಿಪ್ಪಣಿ - ದ್ರುಹ್ಯತಃ ಪ್ರೈತಿ ತತ್ ಪ್ರಾಹುಃ ಇತ್ಯತ್ರ ದ್ರುಹ್ಯತಃ ಪುರುಷಸ್ಯ ಪ್ರತಿಕೂಲಂ ಯಥಾ ಭವತಿ ತಥಾ ತತ್ ಪರಲೋಕಸುಖಂ ಪ್ರೈತಿ ನಶ್ಯತಿ |
`ದ್ರುಹ್ಯತಃ' ಎಂಬುದಕ್ಕೆ ಪುರುಷನಿಗೆ ಪ್ರತಿಕೂಲವಾಗುತ್ತದೆ. ಈ ಹಣ ಸಂಪಾ- ದನೆಯಿಂದ ಪರಲೋಕ ಸುಖವು ನಾಶವಾಗುತ್ತದೆ ಎಂದಭಿಪ್ರಾಯ.
ವಿವರಣೆ - ಹಣಸಂಪಾದನೆಯನ್ನು ಮಾಡುವುದೇ ಜೀವನದ ಮುಖ್ಯ ಉದ್ದೇಶವಾಗಿರಬಾರದು. ಹಣಸಂಪಾದನೆಯನ್ನು ಕೇವಲ ಜೀವನ ನಿರ್ವಾಹಣೆಗೆ ಆವಶ್ಯಕವಿದ್ದಷ್ಟೇ ಮಾಡಬೇಕು. ಹೆಚ್ಚು ಮಾಡಿದರೆ ಅದು ಅನ್ಯಮಾರ್ಗದಲ್ಲೇ ನಮ್ಮನ್ನು ಕರೆದುಕೊಂಡು ಹೋಗುತ್ತದೆ. ಅಂದಮಾತ್ರಕ್ಕೆ ಹಣವನ್ನೇ ಸಂಪಾದನೆ ಮಾಡಬಾರದು ಎಂದಭಿಪ್ರಾಯವಲ್ಲ. ಆವಶ್ಯಕವಿದ್ದಷ್ಟು ಹಣವನ್ನು ಸಂಪಾದನೆ ಮಾಡಿ ಅದರಿಂದ ಜೀವನವನ್ನು ಸಾಗಿಸಬೇಕು.
ಯಸ್ತು ಸಂಭಿನ್ನವೃತ್ತಃ ಸ್ಯಾದ್ ವೀತಶೋಕಭಯೋ ನರಃ |
ಅಲ್ಪೇನ ತೃಷಿತೋ ದ್ರುಹ್ಯನ್ ಭ್ರೂಣಹತ್ಯಾಂ ನ ಬುದ್ಧ್ಯತೇ ॥21॥
ಅಲ್ಪವಾದ ಧನದ ಆಸೆಗಾಗಿ ಮನುಷ್ಯನು ಸದಾಚಾರದಿಂದ ಭ್ರಷ್ಟನಾಗುತ್ತಾನೆ. ಶೋಕ ಮತ್ತು ಭಯಗಳನ್ನೇ ಲೆಕ್ಕಿಸುವುದಿಲ್ಲ. ಆದ್ದರಿಂದಲೇ ಮತ್ತೊಬ್ಬರಿಗೆ ದ್ರೋಹವನ್ನೂ ಕೂಡ ಮಾಡುತ್ತಾನೆ. ಇವನು ಭ್ರೂಣಹತ್ಯಾಪಾಪವನ್ನೂ ಕೂಡ ಗಮನಿಸುವುದಿಲ್ಲ.
ಟಿಪ್ಪಣಿ - ಹಣವೇ ಮುಖ್ಯವಾದಾಗ ಎಲ್ಲಾ ಪಾಪಕಾರ್ಯಗಳಲ್ಲೂ ತೊಡ- ಗುತ್ತಾನೆ. ಸುಳ್ಳುಗಳನ್ನು ಹೇಳುವುದು. ಅಪ್ರಾಮಾಣಿಕತನದಿಂದ ನಡೆದುಕೊಳ್ಳು- ವುದು ಆಯಾ ಕಾಲಕ್ಕೆ ಮಾಡಬೇಕಾದ ಕರ್ತವ್ಯಗಳನ್ನು ಪರಿತ್ಯಾಗ ಮಾಡುವುದು. ಕೇವಲ ಸ್ವಾರ್ಥನಾಗಿರುವುದು. ತನ್ನನ್ನು ಪ್ರಶಂಸೆ ಮಾಡಿಕೊಳ್ಳುವುದು. ಮತ್ತೊಬ್ಬ- ರನ್ನು ನಿಂದನೆ ಮಾಡುವುದು. ಈ ದುರ್ಗುಣಗಳು ಇದ್ದರಷ್ಟೇ ಹಣಸಂಪಾ- ದನೆಯು ಸುಲಭವಾಗುತ್ತದೆ. ಆದ್ದರಿಂದ ಸಜ್ಜನನೂ ಕೂಡ ಹಣಸಂಪಾದನೆಯಲ್ಲಿ ತೊಡಗಿದಾಗ ಈ ಎಲ್ಲ ದುರ್ಗುಣಗಳನ್ನು ಹೊಂದುವ ಸಾಧ್ಯತೆಯಿರುತ್ತದೆ.
ಟಿಪ್ಪಣಿ - ಅಲ್ಪೇನ ತೃಷಿತ ಇತ್ಯತ್ರ ತೃಷಿತಃ ಧನತೃಷ್ಣಾವಾನ್ |
`ಅಲ್ಪೇನ ತೃಷಿತಃ' ಎಂಬಲ್ಲಿ `ತೃಷಿತಃ' ಎಂಬುದಕ್ಕೆ ಹಣದ ತೃಷೆ ಇರುವವನು ಎಂದರ್ಥ.
ದುಷ್ಯಂತ್ಯಾದದತೋ ಭೃತ್ಯಾ ನಿತ್ಯಂ ದಸ್ಯುಭಯಾದಿವ |
ದುರ್ಲಭಂ ಚ ಧನಂ ಪ್ರಾಪ್ಯ ಭೃಶಂ ದತ್ವಾSನುತಪ್ಯತೇ ॥22॥
ಭೃತ್ಯರು ತಮಗೆ ಬರಬೇಕಾದ ಹಣವನ್ನು ಸರಿಯಾದ ಕಾಲಕ್ಕೆ ಪಡೆದುಕೊಳ್ಳು- ತ್ತಾರೆ. ಮತ್ತು ತಮ್ಮ ಪ್ರಯತ್ನಕ್ಕೆ ಪ್ರತಿಫಲವಾಗಿ ಆ ಹಣವನ್ನು ಪಡೆದುಕೊಳ್ಳುತ್ತಾರೆ. ಹಣವನ್ನು ಕೊಟ್ಟ ಯಜಮಾನನು ಮಾತ್ರ ಕಳ್ಳರು ಧನವನ್ನು ಕೊಳ್ಳೆಹೊಡೆದು- ಕೊಂಡು ಹೋದರೆ ಹೇಗೆ ದುಃಖಿಸುತ್ತಾನೋ, ಹಾಗೇ ಇವನು ದುಃಖಿಸುತ್ತಾನೆ.
ಅಧನಃ ಕಸ್ಯ ಕಿಂ ವಾಚ್ಯೋ ವಿಮುಕ್ತಃ ಸರ್ವಶಃ ಸುಖೀ |
ದೇವಸ್ವಮುಪಗೃಹ್ಯೈವ ಧನೇನ ನ ಸುಖೀ ಭವೇತ್ ॥23॥
ಹಣವಿಲ್ಲದವನ ಬಗ್ಗೆ ಯಾರೂ ಏನನ್ನೂ ಮಾತನಾಡುವುದಿಲ್ಲ. ಯಾವುದೇ ಕಾರಣಕ್ಕೂ ಅವನನ್ನು ಯಾರೂ ನಿಂದಿಸುವುದಿಲ್ಲ. ಎಲ್ಲಾ ವಿಧವಾದ ಭಯಗಳಿಂದ ರಹಿತನಾಗಿರುತ್ತಾನೆ. ಒಂದು ವೇಳೆ ದೇವಸ್ವತ್ತಾದ ಹಣವನ್ನು ಮನುಷ್ಯನು ತೆಗೆದು- ಕೊಂಡರೂ ಅದನ್ನು ಸುಖಕ್ಕಾಗಿ ಉಪಯೋಗಿಸಬಾರದು. ಹಣದಿಂದ ಮನುಷ್ಯನಿಗೆ ಸುಖವು ದೊರಕುವುದಿಲ್ಲ.
ತತ್ರ ಗಾಥಾಂ ಯಜ್ಞಗೀತಾಂ ಕೀರ್ತಯಂತಿ ಪುರಾವಿದಃ |
ತ್ರಯೀಮುಪಾಶ್ರಿತಾಂ ಲೋಕೇ ಯಜ್ಞಸಂಸ್ತರಕಾರಿಕಾಮ್ ॥24॥
ಇದೇ ವಿಷಯದಲ್ಲಿ ಪುರಾಣವನ್ನು ತಿಳಿದವರು ವೇದಪ್ರತಿಪಾದಿತವಾದ ಯಜ್ಞ- ಗೀತೆ ಎಂಬ ಒಂದು ಸುಭಾಷಿತವನ್ನು ಹೇಳುತ್ತಾರೆ.
ಯಜ್ಞಾಯ ಸೃಷ್ಟಾನಿ ಧನಾನಿ ಧಾತ್ರಾ
ಯಜ್ಞಾಯ ಸೃಷ್ಟಃ ಪುರುಷೋ ರಕ್ಷಿತಾ ಚ |
ತಸ್ಮಾತ್ ಸರ್ವಂ ಯಜ್ಞ ಏವೋಪಯೋಜ್ಯಂ
ಧನಂ ನ ಕಾಮಾಯ ಹಿತಂ ಪ್ರಶಸ್ತಮ್ ॥25॥
ಯಜ್ಞಕ್ಕೋಸ್ಕರವೇ ಬ್ರಹ್ಮನು ಹಣವನ್ನು ಸೃಷ್ಟಿ ಮಾಡಿರುವನು. ಆ ಹಣವನ್ನು ರಕ್ಷಣೆ ಮಾಡಿ ಯಜ್ಞ ಮಾಡುವುದಕ್ಕಾಗಿಯೇ ಮನುಷ್ಯರನ್ನು ಸೃಷ್ಟಿ ಮಾಡಿರುವನು. ಆದ್ದರಿಂದ ಆ ಶ್ರೇಷ್ಠವಾದ ಹಣವನ್ನು ಯಜ್ಞಕ್ಕಾಗಿಯೇ ಉಪಯೋಗಿಸಬೇಕು. ಸ್ವೇಚ್ಛೆಯಿಂದ ಹಣವನ್ನು ಉಪಯೋಗಿಸುವುದು ಪ್ರಶಸ್ತವಾಗಿರುವುದಿಲ್ಲ.
ಏತತ್ ಸ್ವಾರ್ಥೇ ಚ ಕೌಂತೇಯ ಧನಂ ಧನವತಾಂ ವರ |
ಧಾತಾ ದದಾತಿ ಮರ್ತ್ಯೇಭ್ಯೋ ಯಜ್ಞಾರ್ಥಮಿತಿ ವಿದ್ಧಿ ತತ್ ॥26॥
ಧನವಂತರಲ್ಲಿ ಶ್ರೇಷ್ಠನಾದ ಅರ್ಜುನನೇ! ಪರಮಾತ್ಮನು ಯಾವ ಕಾರಣಕ್ಕಾಗಿ ಹಣವನ್ನು ನಮಗೆ ನೀಡುತ್ತಾನೋ, ಅದನ್ನು ಯಜ್ಞಕ್ಕೋಸ್ಕರವೇ ಉಪಯೋಗಿಸ- ಬೇಕೆಂದು ತಿಳಿ.
ತಸ್ಮಾದ್ ಬುದ್ಧ್ಯಂತಿ ಪುರುಷಾ ನಹಿ ತತ್ ಕಸ್ಯಚಿದ್ ಧ್ರುವಮ್ |
ಶ್ರದ್ಧಧಾನಸ್ತತೋ ಲೋಕೋ ದದ್ಯಾಚ್ಚೈವ ಯಜೇತ ಚ ॥27॥
ಆದ್ದರಿಂದ ಮತಿವಂತರು ಹಣವು ಯಾರಲ್ಲಿಯೂ ಕೂಡ ಸ್ಥಿರವಾಗಿ ನಿಲ್ಲುವು- ದಿಲ್ಲವೆಂದು ಹೇಳುತ್ತಾರೆ. ವೇದೋಕ್ತಕರ್ಮಗಳಲ್ಲಿ ಶ್ರದ್ಧೆಯಿರುವ ಮನುಷ್ಯರು ಕ್ಷಣಿಕವಾದ ಹಣವನ್ನು ಯಜ್ಞದ ಮೂಲಕ ಮತ್ತು ದಾನದ ಮೂಲಕ ಉಪ- ಯೋಗಿಸುತ್ತಾರೆ.
ಲಬ್ಧಸ್ಯ ತ್ಯಾಗಮಿತ್ಯಾಹುರ್ನ ಭೋಗಂ ನಚ ಸಂಚಯಮ್ |
ತಸ್ಯ ಕಿಂ ಸಂಚಯೇನಾರ್ಥಃ ಕಾರ್ಯೇ ಜ್ಯಾಯಸಿ ತಿಷ್ಠತಿ ॥28॥
ಸಂಪಾದನೆ ಮಾಡಿದ ಹಣವನ್ನು ಯಜ್ಞ ಹಾಗೂ ದಾನದ ಮೂಲಕ ತ್ಯಾಗ ಮಾಡಬೇಕು. ಅದನ್ನು ಕೂಡಿಡಬಾರದು. ಸುಖವನ್ನು

ಅನುಭವಿಸುವುದಕ್ಕಾಗಿಯೂ ಖರ್ಚು ಮಾಡಬಾರದು. ಆದ್ದರಿಂದ ಹಣವನ್ನು ಸಂಪಾದನೆ ಮಾಡುವುದರಿಂದ ಏನು ಉಪಯೋಗವಿದೆ? ಮತ್ತು ಯಜ್ಞಯಾಗಾದಿಗಳಿಗಿಂತಲೂ ಜ್ಞಾನಸಂಪಾ- ದನೆಯು ಅತ್ಯಂತಶ್ರೇಷ್ಠವಾಗಿರುವುದರಿಂದ ಅದಕ್ಕಾಗಿ ಹಣಸಂಪಾದನೆಯನ್ನೇಕೆ ಮಾಡಬೇಕು.
ಯೇ ಸ್ವಧರ್ಮಾದಪೇತೇಭ್ಯಃ ಪ್ರಯಚ್ಛಂತ್ಯಲ್ಪಬುದ್ಧಯಃ |
ಶತಂ ವರ್ಷಾಣಿ ತೇ ಪ್ರೇತ್ಯ ಪುರೀಷಂ ಭುಂಜತೇ ಜನಾಃ ॥29॥
ಯಾರು ವಿವೇಕವಿಲ್ಲದೇ ಸ್ವಧರ್ಮದಿಂದ ಭ್ರಷ್ಟರಾಗಿ ಹಣವನ್ನು ಸಂಪಾದನೆ ಮಾಡುತ್ತಾರೋ, ಅವರು ದೇಹವನ್ನು ಬಿಟ್ಟ ಮೇಲೆ ನೂರಾರು ವರ್ಷಗಳ ಕಾಲ ಅಮೇಧ್ಯವನ್ನು ತಿನ್ನುತ್ತಾ ಕಾಲವನ್ನು ಕಳೆಯುತ್ತಾರೆ. ಅಪಾತ್ರನಿಗೆ ದಾನ ಮಾಡು- ವುದರಿಂದಲೂ ಇದೇ ದುಃಖವನ್ನು ಅನುಭವಿಸುತ್ತಾನೆ.
ಅನರ್ಹತೇ ಯದ್ ದದಾತಿ ನ ದದಾತಿ ಯದರ್ಹತೇ |
ಅರ್ಹಾನರ್ಹಾಪರಿಜ್ಞಾನಾದ್ ದಾನಧರ್ಮೋಽಪಿ ದುಷ್ಕರಃ ॥30॥
ಅಯೋಗ್ಯರಿಗೆ ಯಾರು ದಾನವನ್ನು ಮಾಡುತ್ತಾರೋ, ಯೋಗ್ಯರಿಗೆ ಯಾರು ದಾನವನ್ನು ಮಾಡುವುದಿಲ್ಲವೋ, ಯಾರಿಗೆ ದಾನಕ್ಕೆ ಪಾತ್ರಾಪಾತ್ರವಿಚಾರವು ತಿಳಿದಿರುವುದಿಲ್ಲವೋ, ಅಂಥವರಿಗೆ ದಾನಧರ್ಮವೂ ಕೂಡ ದುರ್ಲಭವೇ ಆಗು- ತ್ತದೆ.
ಲಬ್ಧಾನಾಮಪಿ ವಿತ್ತಾನಾಂ ಬೋದ್ಧವ್ಯೌ ದ್ವಾವತಿಕ್ರಮೌ |
ಅಪಾತ್ರೇ ಪ್ರತಿಪತ್ತಿಶ್ಚ ಪಾತ್ರೇ ಚಾಪ್ರತಿಪಾದನಮ್ ॥31॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಸಪ್ತವಿಂಶೋಽಧ್ಯಾಯಃ ॥27॥
ಸಂಗ್ರಹ ಮಾಡಿದ ಹಣವನ್ನು ವಿನಿಯೋಗ ಮಾಡುವ ಸಂದರ್ಭದಲ್ಲಿಯೂ ಕೂಡ ಎರಡನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು. ಅಪಾತ್ರನಿಗೆ ದಾನ ಮಾಡು- ವುದು, ಪಾತ್ರನಾದವನಿಗೆ ದಾನವನ್ನು ಕೊಡದಿರುವುದು. ಇವೆರಡೂ ಕೂಡ ಪಾಪಕರವಾದ ಕಾರ್ಯಗಳೇ ಆಗಿವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 27ನೆಯ ಅಧ್ಯಾಯವು ಮುಗಿಯಿತು.
*****
27. ಇಪ್ಪತ್ತೆಂಟನೆಯ ಅಧ್ಯಾಯ
ಧರ್ಮರಾಜನು ವೇದವ್ಯಾಸರ ಬಳಿ ಬಿಕ್ಕಿ ಬಿಕ್ಕಿ ಅತ್ತನು. ಪ್ರಾಯೋಪವೇಶವನ್ನು ಮಾಡಿ ದೇಹವನ್ನು ಪರಿತ್ಯಾಗ ಮಾಡುತ್ತೇನೆಂದು ಗೋಳಿಟ್ಟನು. ಆಗ ವೇದವ್ಯಾಸದೇವರು ಅಸ್ವತಂತ್ರನಾದ ನಿನಗೆ ಇದರಲ್ಲಿ ಅಧಿಕಾರವಿಲ್ಲ. ನಿನ್ನ ಕರ್ತವ್ಯಪರಿಪಾಲನೆ ಮಾಡುವುದೇ ನಿನಗೆ ಧರ್ಮ ಎಂದು ಉಪದೇಶಿಸಿದರು.
ಯುಧಿಷ್ಠಿರಃ
ಅಭಿಮನ್ಯೌ ಹತೇ ಬಾಲೇ ದ್ರೌಪದ್ಯಾಸ್ತನಯೇಷು ಚ |
ಧೃಷ್ಟದ್ಯುಮ್ನೇ ವಿರಾಟೇ ಚ ದ್ರುಪದೇ ಚ ಮಹೀಪತೌ ॥1॥
ಯುಧಿಷ್ಠಿರ ಮಹಾತ್ಮರೇ! ಪುಟ್ಟ ಬಾಲಕನಾದ ಅಭಿಮನ್ಯು ಮೃತನಾದನು. ದ್ರೌಪದಿಯ ಐದು ಮಕ್ಕಳೂ ಕೂಡ ಸತ್ತುಹೋದರು. ಧೃಷ್ಟದ್ಯುಮ್ನ, ವಿರಾಟ, ದ್ರುಪದ ಮೊದಲಾದ ಮಹೀಪತಿಗಳೂ ಕೂಡ ಮೃತರಾದರು.
ವಸುಷೇಣೇ ಚ ಧರ್ಮಜ್ಞೇ ಧೃಷ್ಟಕೇತೌ ಚ ಪಾರ್ಥಿವೇ |
ತಥಾನ್ಯೇಷು ನರೇಂದ್ರೇಷು ನಾನಾದೇಶ್ಯೇಷು ಸಂಯುಗೇ ॥2॥
ಧರ್ಮಜ್ಞನಾದ ವಸುಷೇಣ, ಧೃಷ್ಟಕೇತು ಅನೇಕ ದೇಶದ ರಾಜರುಗಳು ನಮಗಾಗಿ ಪ್ರಾಣತ್ಯಾಗ ಮಾಡಿದರು.
ನ ವಿಮುಂಚತಿ ಮಾಂ ಶೋಕೋ ಜ್ಞಾತಿಘಾತಿನಮಾತುರಮ್ |
ರಾಜ್ಯಕಾಮುಕಮತ್ಯುಗ್ರಂ ಸ್ವವಂಶೋಚ್ಛೇದಕಾರಕಮ್ ॥3॥
ಈ ಎಲ್ಲ ಬಂಧುಜನರ ದುಃಖಕ್ಕೆ ನಾನೇ ಕಾರಣನಾಗಿದ್ದೇನೆ. ರಾಜ್ಯಲೋಭಿ- ಯಾದ, ಅತ್ಯಂತ ಕಠಿಣವಾದ ಕರ್ಮವನ್ನು ಆಚರಿಸಿರುವ ವಂಶವನ್ನೇ ನಿರ್ಮೂಲ ಮಾಡಿದ ನಾನು ಈ ಎಲ್ಲ ದುಃಖವನ್ನು ಹೇಗೆ ತಾನೇ ಸಹಿಸಿಕೊಳ್ಳಲಿ?
ಯಸ್ಯಾಂಕೇ ಕ್ರೀಡಮಾನೇನ ಮಯಾ ವಿಪರಿವರ್ತಿತಮ್ |
ಸ ಮಯಾ ರಾಜ್ಯಲುಬ್ಧೇನ ಗಾಂಗೇಯೋ ವಿನಿಪಾತಿತಃ ॥4॥
ಯಾರ ತೊಡೆಯ ಮೇಲೆ ಆಟವಾಡಿಕೊಂಡು ಬೆಳೆದೆನೋ, ಅಂಥ ಗಂಗಾಪುತ್ರನಾದ ಭೀಷ್ಮನನ್ನೇ ಕೊಲ್ಲಿಸಿಬಿಟ್ಟೆನು. ರಾಜ್ಯದ ಲೋಭ ಬಿಟ್ಟು ಬೇರೆ ಯಾವ ಉದ್ದೇಶ ನನಗಿತ್ತು.
ಟಿಪ್ಪಣಿ - ಮಯಾ ವಿಪರಿವರ್ತಿತಮ್ ಇತ್ಯತ್ರ ವಿಪರಿವರ್ತಿತಮ್ ಇತಸ್ತತೋ ವೇಷ್ಟನಂ ಕೃತಮ್ |
ಮಯಾ ವಿಪರಿವರ್ತಿತಮ್ ಎಂಬಲ್ಲಿ ವಿಪರಿವರ್ತಿತಮ್ ಎಂಬುದಕ್ಕೆ ಸುತ್ತಲೂ ಹೊರಳಾಡುತ್ತಿದ್ದೆನು ಎಂದರ್ಥ.
ಯದಾ ಹ್ಯೇನಂ ವಿಘೂರ್ಣಂತಮಪಶ್ಯಂ ಪಾರ್ಥಸಾಯಕೈಃ |
ಕಂಪಮಾನಂ ಯಥಾ ವಜ್ರೈಃ ಪ್ರೇಕ್ಷಮಾಣಂ ಶಿಖಂಡಿನಾ ॥5॥
ಜೀರ್ಣಂ ಸಿಂಹಮಿವ ಪ್ರಾಂಶುಂ ನರಸಿಂಹಂ ಪಿತಾಮಹಮ್ |
ಕೀರ್ಯಮಾಣಂ ಶರೈಸ್ತೀಕ್ಷ್ಣೈರ್ದೃಷ್ಟ್ವಾ ಮೇ ವ್ಯಥಿತಂ ಮನಃ ॥6॥
ಆ ಭೀಷ್ಮನು ವಯಸ್ಸಾದರೂ ಸಿಂಹದಂತಿದ್ದನು. ಎತ್ತರವಾದ ಶರೀರ ಅವನ- ದ್ದಾಗಿತ್ತು. ನರಸಿಂಹನಂತೆ ಶೋಭಿಸುತ್ತಿದ್ದನು. ಪಿತಾಮಹನಾದ ಆ ಭೀಷ್ಮನು ಘರ್ಜಿಸುತ್ತಿದ್ದನು. ಅರ್ಜುನನ ತೀಕ್ಷ್ಣವಾದ ಬಾಣಗಳಿಂದ ಪೀಡಿತನಾಗಿ ಕಂಪಿಸು- ತ್ತಿದ್ದನು. ಅವನನ್ನು ಕೊಲ್ಲುವುದಕ್ಕಾಗಿ ಶಿಖಂಡಿಯನ್ನು ಅರ್ಜುನನು ನಿಲ್ಲಿಸಿದನು. ಶಿಖಂಡಿಯನ್ನು ಮುಂದಿಟ್ಟು ಹೊಡೆದ ಅರ್ಜುನನ ಬಾಣಗಳಿಂದ ಶರೀರವೆಲ್ಲವೂ ಮುಚ್ಚಲ್ಪಟ್ಟಿತ್ತು. ಇಂಥ ಪಿತಾಮಹನನ್ನು ನೆನೆಸಿಕೊಂಡರೆ ಇಂದೂ ಕೂಡ ನನ್ನ ಮನಸ್ಸು ಬಹಳ

ದುಃಖಿತವಾಗುತ್ತದೆ.
ಪ್ರಾಙ್ಮುಖಂ ಸೀದಮಾನಂ ಚ ರಥಾದಪಚ್ಯುತಂ ಶರೈಃ |
ಘೂರ್ಣಮಾನಂ ಯಥಾ ಶೈಲಂ ತದಾ ಮೇ ಕಶ್ಮಲೋಽಭವತ್ ॥7॥
ಶತ್ರುಪಕ್ಷದ ಸೈನಿಕರನ್ನು ಧ್ವಂಸ ಮಾಡುವುದರಲ್ಲಿ ಅತ್ಯಂತ ಶಕ್ತಿಶಾಲಿಯಾದ ಆ ಭೀಷ್ಮನು ರಥದಲ್ಲಿ ಪೂರ್ವಾಭಿಮುಖವಾಗಿ ಕುಳಿತುಕೊಂಡನು. ಅರ್ಜುನನ ಬಾಣಗಳ ಪ್ರಹಾರದಿಂದ ಪ್ರತಿಕ್ಷಣವೂ ಕುಸಿಯುತ್ತಿದ್ದನು. ವಜ್ರಾಘಾತದಿಂದ ಕುಸಿ- ಯುವ ಪರ್ವತದಂತೆ ಭೀಷ್ಮನೂ ಕೂಡ ಕುಸಿದು ಬಿದ್ದನು. ಇಂಥ ಭೀಷ್ಮನನ್ನು ನೆನೆಸಿಕೊಂಡರೆ ನನಗೆ ಮೂರ್ಛೆಯೇ ಬರುತ್ತದೆ.
ಯಃ ಸ ಬಾಣಧನುಷ್ಪಾಣಿರ್ಯೋಧಯಾಮಾಸ ಭಾರ್ಗವಮ್ |
ಬಹೂನ್ಯಹಾನಿ ಕೌರವ್ಯಃ ಕುರುಕ್ಷೇತ್ರೇ ಮಹಾಮೃಧೇ ॥8॥
ಸಮೇತಂ ಪಾರ್ಥಿವಂ ಕ್ಷತ್ರಂ ವಾರಣಸ್ಯಾಂ ನದೀಸುತಃ |
ಕನ್ಯಾರ್ಥಮಾಹ್ವಯದ್ ವೀರೋ ರಥೇನೈಕೇನ ಸಂಯುಗೇ ॥9॥
ಯಾವ ಕುರುಕುಲೋದ್ಭವನಾದ ಭೀಷ್ಮನು ಕುರುಕ್ಷೇತ್ರದಲ್ಲಿ ನಡೆದ ಮಹಾ- ಯುದ್ಧದಲ್ಲಿ ಅನೇಕ ದಿವಸಗಳ ಕಾಲ ಧನುರ್ಬಾಣಗಳನ್ನು ಹಿಡಿದು ಪರಶುರಾಮ- ದೇವರ ಜೊತೆ ಯುದ್ಧ ಮಾಡಿದನು. ಕಾಶಿಯಲ್ಲಿ ಭೀಷ್ಮನು ಕನ್ಯಾರ್ಥವಾಗಿ ಹೋಗಿದ್ದಾಗ ಒಬ್ಬನೇ ಎಲ್ಲಾ ರಾಜರುಗಳನ್ನು ಯುದ್ಧಕ್ಕೆ ಆಹ್ವಾನಿಸಿ, ಪರಾಭವ- ಗೊಳಿಸಿದನು. ಅಂಥ ಭೀಷ್ಮನನ್ನೇ ನಾವು ಕೊಂದುಬಿಟ್ಟೆವು.
ಯೇನ ಚೋಗ್ರಾಯುಧೋ ರಾಜಾ ಚಕ್ರವರ್ತೀ ದುರಾಸದಃ |
ದಗ್ಧಃ ಶಸ್ತ್ರಪ್ರತಾಪೇನ ಸ ಮಯಾ ಯುಧಿ ಘಾತಿತಃ ॥10॥
ಯಾವ ಭೀಷ್ಮನು ತನ್ನ ಅಸ್ತ್ರಗಳ ಪ್ರತಾಪದಿಂದ ದುರ್ಜಯನಾದ ಉಗ್ರಾಯುಧ ಎಂಬ ಚಕ್ರವರ್ತಿಯನ್ನು ಸುಟ್ಟುಬಿಟ್ಟನು. ಅಂಥ ಮಹಾತ್ಮನಾದ ಭೀಷ್ಮನನ್ನೇ ನಾನು ತಂತ್ರಗಾರಿಕೆಯಿಂದ ಯುದ್ಧದಲ್ಲಿ ಕೊಂದುಬಿಟ್ಟೆನು.
ಸ್ವಯಂ ಮೃತ್ಯುಂ ರಕ್ಷಮಾಣಃ ಪಾಂಚಾಲ್ಯಂ ಯಃ ಶಿಖಂಡಿನಮ್ |
ನ ಬಾಣೈಃ ಪಾತಯಾಮಾಸ ಸೋಽರ್ಜುನೇನ ನಿಪಾತಿತಃ ॥11॥
ಆ ಭೀಷ್ಮನಿಗೆ ಶಿಖಂಡಿಯು ತನ್ನ ಮೃತ್ಯುವೆಂದು ತಿಳಿದಿತ್ತು. ಆದರೂ ತನ್ನ ಪ್ರತಿಜ್ಞೆಯು ಭಂಗವಾಗಬಾರದೆಂಬ ದೃಷ್ಟಿಯಿಂದ ಅವನ ಮೇಲೆ ಕೈ ಎತ್ತಲಿಲ್ಲ. ಸುಮ್ಮನೆ ನಿಂತು ಬಿಟ್ಟನು. ಆಗ ಅರ್ಜುನನು ಆ ಭೀಷ್ಮನ ಮೇಲೆ ಬಾಣಪ್ರಯೋಗ- ವನ್ನು ಮಾಡಿ ಬೀಳಿಸಿಬಿಟ್ಟನು.
ಯದೈನಂ ಪತಿತಂ ಭೂಮಾವಪಶ್ಯಂ ರುಧಿರೋಕ್ಷಿತಮ್ |
ತದೈವಾವಿಶದತ್ಯುಗ್ರೋ ಜ್ವರೋ ಮಾಂ ಮುನಿಸತ್ತಮ ॥12॥
ಓ ಮುನಿಸತ್ತಮನೇ! ಯಾವಾಗ ಅರ್ಜುನನ ಬಾಣಗಳಿಂದ ಗಾಯಗೊಂಡ ಆ ಭೀಷ್ಮನು ಸುರಿಯುವ ರಕ್ತದ ಜೊತೆ ಕೆಳಗೆ ಬೀಳುತ್ತಿದ್ದನೋ, ಅದನ್ನು ನೆನೆಸಿ- ಕೊಂಡು ನನ್ನ ಮನಸ್ಸಿಗೆ ಜ್ವರವು ಬಂದುಬಿಟ್ಟಿದೆ.
ಯೇನ ಸಂವರ್ಧಿತಾ ಬಾಲಾ ಯೇನ ಸ್ಮ ಪರಿರಕ್ಷಿತಾಃ |
ಸ ಮಯಾ ರಾಜ್ಯಲುಬ್ಧೇನ ಪಾಪೇನ ಗುರುಘಾತಿನಾ ॥13॥
ಅಲ್ಪಕಾಲಸ್ಯ ರಾಜ್ಯಸ್ಯ ಕೃತೇ ಮೂಢೇನ ಘಾತಿತಃ ॥
ಯಾವ ಭೀಷ್ಮನಿಂದ ಸಣ್ಣಮಕ್ಕಳಾದ ನಾವೆಲ್ಲರೂ ಬೆಳೆದೆವೋ, ಅಂಥ ಶ್ರೇಷ್ಠ- ನಾದ ಭೀಷ್ಮನನ್ನು ನಾನು ಕೊಂದುಬಿಟ್ಟೆ. ಕ್ಷಣಿಕವಾದ ಅಲ್ಪಕಾಲದ ಈ ರಾಜ್ಯದ ಆಸೆಗಾಗಿ ಮತಿಹೀನನಾಗಿ, ಪಿತೃಘಾತಿಯಾದೆ.
ಆಚಾರ್ಯಶ್ಚ ಮಹೇಷ್ವಾಸಃ ಸರ್ವಪಾರ್ಥಿವಪೂಜಿತಃ |
ಅಭಿಗಮ್ಯ ರಣೇ ಮಿಥ್ಯಾ ಪಾಪೇನೋಕ್ತಃ ಸುತಂ ಪ್ರತಿ ॥14॥
ಇಷ್ಟೇ ಅಲ್ಲದೇ ಆ ದ್ರೋಣನನ್ನೂ ಕೂಡ ಕೊಂದವನು ನಾನೇ. ಆ ದ್ರೋಣಾ- ಚಾರ್ಯರು ಸಾಮಾನ್ಯರಲ್ಲ. ನಮ್ಮೆಲ್ಲರಿಗೂ ಗುರುಗಳೂ ಆಚಾರ್ಯಪುರುಷರೂ ಧನುರ್ಧರರಲ್ಲೇ ಅಗ್ರೇಸರರೂ ಎಲ್ಲಾ ರಾಜರುಗಳಿಂದ ಪೂಜಿತರಾದವರು ಆಗಿದ್ದಾರೆ. ಅವರನ್ನು ಕೊಲ್ಲುವುದಕ್ಕಾಗಿ ಆ ರಣರಂಗದಲ್ಲಿ ಪಾಪಿಯಾದ ನಾನು ನಿಮ್ಮ ಮಗನು ಸತ್ತನು ಎಂಬ ಸುಳ್ಳನ್ನು ಹೇಳಿಬಿಟ್ಟೆನು.
ತನ್ಮೇ ದಹತಿ ಗಾತ್ರಾಣಿ ಯನ್ಮಾಂ ಗುರುರಭಾಷತ |
ಸತ್ಯವಾಕ್ಯೋ ಹಿ ರಾಜಂಸ್ತ್ವಂ ಯದಿ ಜೀವತಿ ಮೇ ಸುತಃ |
ಸತ್ಯಮಾಮರ್ಶಯನ್ ವಿಪ್ರೋ ಮಯಿ ತತ್ ಪರಿಪೃಷ್ಟವಾನ್ ॥15॥
ಅಂಥ ಸಂದರ್ಭದಲ್ಲಿಯೂ ಕೂಡ ಆ ದ್ರೋಣಾಚಾರ್ಯರು ನನ್ನನ್ನು ಪ್ರಶ್ನಿಸಿದರು. ಧರ್ಮರಾಜನೇ! ನಿನ್ನ ಮೇಲೆ ನನಗೆ ಬಹಳ ವಿಶ್ವಾಸವಿದೆ. ನನ್ನ ಮಗನು ಬದುಕಿದ್ದಾನೋ ಇಲ್ಲವೋ ನಿಜವಾಗಿ ಹೇಳು ಎಂದು ದೈನ್ಯದಿಂದ ಪ್ರಶ್ನಿಸಿದನು. ಅವರ ಈ ಪ್ರಶ್ನೆಗಳು ನನ್ನ ಶರೀರವನ್ನು ಸುಟ್ಟುಬಿಡುತ್ತಿದೆ. ನನ್ನ ಮೇಲೆ ವಿಶ್ವಾಸವಿಟ್ಟು ಪ್ರಶ್ನೆ ಮಾಡಿದಾಗಲೂ ನಾನು ರಾಜ್ಯದ ಆಸೆಯಿಂದ ಸುಳ್ಳನ್ನು ಹೇಳಿಬಿಟ್ಟೆನು.
ಕುಂಜರಂ ಚಾಂತರಂ ಕೃತ್ವಾ ಮಿಥ್ಯೋಪಚರಿತಂ ಮಯಾ |
ಸುಭೃಶಂ ರಾಜ್ಯಲುಬ್ಧೇನ ಪಾಪೇನ ಗುರುಘಾತಿನಾ ॥16॥
ಪಾಪಿಷ್ಟನಾದ ಗುರುಹಂತಕನಾದ ರಾಜ್ಯಲೋಲುಪನಾದ ನಾನು ಆನೆಯನ್ನು ನೆಪವನ್ನಾಗಿ ಮಾಡಿಕೊಂಡು ಅವರ ಬಳಿ ಕೂಡಲೇ ಸುಳ್ಳುಗಳನ್ನು ಹೇಳಿದೆನು.
ಸತ್ಯಕಂಚುಕಮುನ್ಮುಚ್ಯ ಮಯಾಸಕ್ತೋ ಗುರುರಾಹವೇ |
ಅಶ್ವತ್ಥಾಮಾ ಹತ ಇತಿ ಕುಂಜರೇ ವಿನಿಪಾತಿತೇ ॥17॥

ಕಾನ್ನು ಲೋಕಾನ್ ಗಮಿಷ್ಯಾಮಿ ಕೃತ್ವಾ ತತ್ ಕರ್ಮ ದಾರುಣಮ್॥
ಸತ್ಯದ ಮುಸುಕು ಹಾಕಿಕೊಂಡು ಪಾಪಿಯಾದ ನಾನು ರಾಜ್ಯದ ಆಸೆಯಿಂದ ಅಶ್ವತ್ಥಾಮನೆಂಬ ಆನೆಯು ಸತ್ತಿದ್ದರಿಂದ `ಅಶ್ವತ್ಥಾಮಾ ಹತಃ' ಎಂಬುದಾಗಿ ಸುಳ್ಳನ್ನು ಹೇಳಿ ವಂಚಿಸಿದೆನು. ಗುರುಘಾತಿಯಾದ ರಾಜ್ಯಲೋಲುಪನಾದ ನನ್ನಂಥ ಪಾಪಿಷ್ಠ ಮತ್ತೊಬ್ಬನಿರಲು ಸಾಧ್ಯವಿಲ್ಲ. ಇಂಥ ಪಾಪಿಯಾದ ನಾನು ಯಾವ ನರಕಕ್ಕೆ ಹೋಗಬೇಕೋ ನನಗೆ ತಿಳಿಯುತ್ತಿಲ್ಲ.
ಅಘಾತಯಂ ಚ ಯತ್ ಕರ್ಣಂ ಸಮರೇಷ್ವಪಲಾಯಿನಮ್ |
ಜ್ಯೇಷ್ಠಂ ಭ್ರಾತರಮತ್ಯುಗ್ರಂ ಕೋ ಮತ್ತಃ ಪಾಪಕೃತ್ತಮಃ ॥18॥
ಇಷ್ಟೇ ಅಲ್ಲದೇ ಒಡಹುಟ್ಟಿದ ನನ್ನ ಅಣ್ಣನಾದ ಕರ್ಣನನ್ನೂ ಕೂಡ ಕೊಲ್ಲಿಸಿ- ಬಿಟ್ಟೆ. ನನಗಿಂತ ಕಡುಪಾಪಿ ಮತ್ತೊಬ್ಬನಿರಲು ಹೇಗೆ ಸಾಧ್ಯ?
ಅಭಿಮನ್ಯುಂ ಚ ಯದ್ ಬಾಲಂ ಜಾತಂ ಸಿಂಹಮಿವಾದ್ರಿಷು |
ಪ್ರಾವೇಶಯಮಹಂ ಲುಬ್ಧೋ ವಾಹಿನೀಂ ದ್ರೋಣಪಾಲಿತಾಮ್ ॥19॥
ಪರ್ವತದಲ್ಲಿರುವ ಸಿಂಹದಂತೆ ಅರ್ಜುನನ ಮಗುವಾಗಿ ಹುಟ್ಟಿದ ಆ ಅಭಿ- ಮನ್ಯುವನ್ನು ದ್ರೋಣರಿಂದ ಪಾಲಿತವಾದ ಸೇನೆಯ ವ್ಯೂಹದೊಳಗೆ ಪ್ರವೇಶಿಸು- ವಂತೆ ಮಾಡಿದ, ಪಾಪಿಯೂ ಕೂಡ ನಾನೇ ಆಗಿದ್ದೇನೆ.
ತದಾಪ್ರಭೃತಿ ಬೀಭತ್ಸುಂ ನ ಶಕ್ನೋಮಿ ನಿರೀಕ್ಷಿತುಮ್ |
ಕೃಷ್ಣಂ ಚ ಪುಂಡರೀಕಾಕ್ಷಂ ಕಿಲ್ಬಿಷೀ ಭ್ರೂಣಹಾ ಯಥಾ ॥20॥
ಅವತ್ತಿನಿಂದ ಭ್ರೂಣಹತ್ಯೆ ಮಾಡಿದ ಮಹಾಪಾಪಿಷ್ಠನಂತೆ ನಾನು ಅರ್ಜುನ- ನ್ನಾಗಲೀ, ಪುಂಡರೀಕಾಕ್ಷನಾದ ಕೃಷ್ಣನನ್ನಾಗಲೀ ಮುಖ ಎತ್ತಿ ನೋಡಲೂ ಸಹ ನಾಚಿಕೆ ಪಡುತ್ತಿದ್ದೇನೆ.
ದ್ರೌಪದೀಂ ಚಾಪ್ಯದುಃಖಾರ್ಹಾಂ ಪಂಚಪುತ್ರವಿನಾಕೃತಾಮ್ |
ಶೋಚಾಮಿ ಪೃಥಿವೀಂ ಹೀನಾಂ ಪಂಚಭಿಃ ಪರ್ವತೈರಿವ ॥21॥
ಭೂಮಿಯು ಐದು ಪರ್ವತಗಳ ಆಧಾರದಲ್ಲಿದೆ. ಆ ಐದು ಪರ್ವತಗಳನ್ನೂ ಕೂಡ ಕಳೆದುಕೊಂಡ ಪೃಥಿವಿಯು ಎಷ್ಟು ದುಃಖವನ್ನು ಹೊಂದುತ್ತದೋ, ಅದರಂತೆ ದ್ರೌಪದಿಯೂ ಕೂಡ ತನ್ನ ಐದು ಮಂದಿ ಮಕ್ಕಳನ್ನು ಕಳೆದುಕೊಂಡು ದುಃಖ ಕೂಪದಲ್ಲಿ ಮುಳುಗಿದ್ದಾಳೆ.
ಸೋಽಹಮಾಗಸ್ಕರಃ ಪಾಪಃ ಪೃಥಿವೀನಾಶಕಾರಕಃ |
ಆಸೀನ ಏವಮೇವೇದಂ ಶೋಷಯಿಷ್ಯೇ ಕಲೇವರಮ್ ॥22॥
ಸಮಸ್ತಲೋಕಕ್ಕೆ ಹಾನಿಯನ್ನುಂಟುಮಾಡಿದ ಮಹಾಪಾಪಿಷ್ಠನು ನಾನಾಗಿರು- ವೆನು. ಇನ್ನುಮುಂದೆ ನಾನು ಈ ಭೂಮಿಯಲ್ಲಿ ಬದುಕಿರಲು ಅರ್ಹನಲ್ಲ. ನಾನು ಇಲ್ಲಿ ಕುಳಿತಿರುವ ಹಾಗೇ ಈ ದೇಹವನ್ನು ಶೋಷಣೆ ಮಾಡುತ್ತೇನೆ.
ಪ್ರಾಯೋಪವಿಷ್ಟಂ ಜಾನೀಧ್ವಮದ್ಯ ಮಾಂ ಗುರುಘಾತಿನಮ್ |
ಯಥಾನ್ಯಾಸ್ವಪಿ ಜಾತೀಷು ನ ಭವೇಯಂ ಕುಲಾಂತಕೃತ್ ॥23॥
ಅನೇಕ ಗುರುಹಿರಿಯರನ್ನು ಸಂಹಾರ ಮಾಡಿದ ನಾನು ಮುಂದಿನ ಜನ್ಮದಲ್ಲಿ ಈ ಪರಿಯಲ್ಲಿ ಕುಲಘಾತುಕನಾಗಿ ಹುಟ್ಟುವುದು ಬೇಡ. ಅದಕ್ಕಾಗಿ ಈಗಲೇ ಪ್ರಾಯೋಪವೇಶಕ್ಕೆ ಕುಳಿತುಬಿಡುತ್ತೇನೆ.
ನ ಭೋಕ್ಷ್ಯೇ ನ ಚ ಪಾನೀಯಮುಪಯೋಕ್ಷ್ಯೇ ಕಥಂಚನ |
ಶೋಷಯಿಷ್ಯೇ ಪ್ರಿಯಾನ್ ಪ್ರಾಣಾನಿಹಸ್ಥೋಽಯಂ ತಪೋಧನ ॥24॥
ತಪೋಧನರೇ! ಇನ್ನು ಮುಂದೆ ನಾನು ಏನನ್ನೂ ತಿನ್ನಲಾರೆ. ಏನನ್ನೂ ಕುಡಿಯಲಾರೆ. ಹೀಗೆ ಸಂಪೂರ್ಣ ಆಹಾರವನ್ನು ತ್ಯಾಗಮಾಡಿ, ನನ್ನ ಪ್ರಾಣಗಳನ್ನು ಪರಿತ್ಯಾಗ ಮಾಡುತ್ತೇನೆ.
ಯಥೇಷ್ಟಂ ಗಮ್ಯತಾಂ ಕಾಮಮನುಜಾನೇ ಪ್ರಸಾದ್ಯ ವಃ |
ಸರ್ವೇ ಮಾಮನುಜಾನೀತ ತ್ಯಕ್ಷ್ಯಾಮೀದಂ ಕಲೇವರಮ್ ॥25॥
ಬಂದ ತಾವೆಲ್ಲರೂ ತಮ್ಮ ಇಚ್ಛೆಯಂತೆ ಇಲ್ಲಿಂದ ತೆರಳಿರಿ. ತಮ್ಮನ್ನು ಕೈಮುಗಿದು ಪ್ರಾರ್ಥಿಸುತ್ತೇನೆ. ನನ್ನ ಸಂಕಲ್ಪಕ್ಕೆ ಅನುಮತಿಯನ್ನು ಕೊಟ್ಟು, ತಾವು ಹೊರಡಿರಿ. ಪಾಪಿಷ್ಟನಾದ ನಾನು ಈ ಶರೀರವನ್ನು ಇಲ್ಲಿಯೇ ಪರಿತ್ಯಾಗ ಮಾಡುತ್ತೇನೆ.
ವೈಶಂಪಾಯನಃ
ತಮೇವಂವಾದಿನಂ ಪಾರ್ಥಂ ಬಂಧುಶೋಕೇನ ವಿಹ್ವಲಮ್ |
ಮೈವಮಿತ್ಯಬ್ರವೀದ್ ವ್ಯಾಸೋ ನಿಗೃಹ್ಯ ಮುನಿಸತ್ತಮಃ ॥26॥
ವೈಶಂಪಾಯನರು ಜನಮೇಜಯನೇ! ಬಂಧುಗಳ ವಿಯೋಗದಿಂದ ಪ್ರಾಪ್ತ- ವಾದ ಶೋಕವನ್ನು ಧರ್ಮರಾಜನಿಗೆ ತಡೆದುಕೊಳ್ಳಲಾಗಲಿಲ್ಲ. ಅತ್ಯಂತವಿಹ್ವಲ- ನಾದನು. ಪ್ರಾಯೋಪವೇಶದ ಮೂಲಕ ದೇಹವನ್ನೇ ಪರಿತ್ಯಾಗಮಾಡುತ್ತೇನೆಂದು ಹೇಳಿದನು. ಹೀಗಿರುವಾಗ ಆ ವೇದವ್ಯಾಸದೇವರು ಆ ಧರ್ಮರಾಜನನ್ನು ಕುರಿತು ಹೇಳುತ್ತಾರೆ - ಯುಧಿಷ್ಠಿರ ! ಎಂದಿಗೂ ಈ ಕೆಲಸವನ್ನು ಮಾಡಬೇಡ.
ಅತಿವೇಲಂ ಮಹಾರಾಜ ನ ಶೋಕಂ ಕರ್ತುಮರ್ಹಸಿ |
ಪುನರುಕ್ತಂ ಪ್ರವಕ್ಷ್ಯಾಮಿ ದಿಷ್ಟಮೇತದಿತಿ ಪ್ರಭೋ ॥27॥
ಮಹಾರಾಜನೇ! ಮಿತಿಮೀರಿ ಪರಿತಾಪಪಡಬೇಡ. ಎಲ್ಲವೂ ಕೂಡ ದೈವಾ-
ಧೀನವೆಂದು ಈಗಾಗಲೇ ನಾನು ತಿಳಿಸಿರುವೆನು. ಪುನಃ ಅದನ್ನೇ ಹೇಳುತ್ತಿದ್ದೇನೆ. ಆದ್ದರಿಂದ ಈ ವಿಷಯದಲ್ಲಿ ದುಃಖವನ್ನು ಪಡಬೇಡ.
ಸಂಯೋಗಾ ವಿಪ್ರಯೋಗಾಂತಾಃ ಜಾತಾನಾಂ ಪ್ರಾಣಿನಾಂ ಧ್ರುವಮ್|
ಬುದ್ಬುದಾ ಇವ ತೋಯೇಷು ಭವಂತಿ ನ ಭವಂತಿ ಚ ॥28॥

ಲೋಕದಲ್ಲಿ ಹುಟ್ಟಿದ ಪ್ರತಿಯೊಬ್ಬರಿಗೂ ಸೇರುವಿಕೆ ಹಾಗೂ ಅಗಲುವಿಕೆಗಳು ನೀರಿನ ಮೇಲಿನ ಗುಳ್ಳೆಯಂತೆ ಅತ್ಯಂತಕ್ಷಣಿಕವಾಗಿವೆ. ಕೆಲವು ಹೊತ್ತು ಇದ್ದಹಾಗೇ ಕಾಣಿಸುತ್ತವೆ. ಕೂಡಲೇ ಏನೂ ಇಲ್ಲದಂತಾಗುತ್ತವೆ.
ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ |
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಹಿ ಜೀವಿತಮ್ ॥29॥
ಸಾಮಾನ್ಯವಾಗಿ ಸೇರುವಿಕೆಯು ಅಗಲುವಿಕೆಯಲ್ಲಿ ಪರ್ಯವಸಾನವಾಗುತ್ತದೆ. ಅಭಿವೃದ್ಧಿಗಳು ಕ್ಷಯದಲ್ಲಿ ಪರ್ಯವಸಾನವಾಗುತ್ತವೆ. ಉನ್ನತಿಯು ಕೆಳಗೆ ಬೀಳುವು- ದರಲ್ಲಿ ಪರ್ಯವಸಾನವಾಗುತ್ತದೆ. ಜೀವನವು ಮರಣದಲ್ಲಿ ಪರ್ಯವಸಾನವಾಗು- ತ್ತದೆ.
ವಿವರಣೆ - ಜೀವನದಲ್ಲಿ ಮಾಡಿದ ಎಲ್ಲಾ ಸಂಪಾದನೆಗಳು ಅಂತಿಮವಾಗಿ ನಾಶವೇ ಆಗುತ್ತವೆ. ಮಿತಿಮೀರಿದ ಔನ್ನತ್ಯ ಹಾಗೂ ಏರುವಿಕೆಗಳು ಪತನದಲ್ಲಿಯೇ ಪರ್ಯವಸಾನಗೊಳ್ಳುತ್ತವೆ. ಒಬ್ಬರ ಜೊತೆ ಅತಿಯಾದ ಸ್ನೇಹವು ಅಗಲುವಿಕೆ- ಯಲ್ಲಿಯೇ ಕೊನೆಗೊಳ್ಳುತ್ತದೆ. ಹುಟ್ಟು ಮರಣದಲ್ಲಿ ಕೊನೆಗೊಳ್ಳುತ್ತದೆ. ಆದ್ದ- ರಿಂದ ಪ್ರತಿಯೊಂದರಲ್ಲಿಯೂ ದ್ವಂದ್ವಾತೀತರಾಗಲು ಪ್ರಯತ್ನಿಸಬೇಕು.
ಸುಖಂ ದುಃಖಾಂತಮಾಲಸ್ಯಂ ದಾಕ್ಷ್ಯಂ ದುಃಖಂ ಸುಖೋದಯಮ್ |
ಭೂತಿಃ ಶ್ರೀರ್ಹ್ರೀರ್ಧೃತಿಃ ಸಿದ್ಧಿರ್ನಾದಕ್ಷೇ ನಿವಸಂತ್ಯುತ ॥30॥
ಸುಖವು ದುಃಖದಲ್ಲಿ ಕೊನೆಗೊಳ್ಳುತ್ತದೆ. ಆಲಸ್ಯವು ಆ ಕಾಲದಲ್ಲಿ ಮಾತ್ರ ಸುಖದಾಯಕ. ಅದೂ ಸಹ ದುಃಖದಲ್ಲಿಯೇ ಕೊನೆಗೊಳ್ಳುತ್ತದೆ. ಸಾಹಸವು ತತ್ಕಾಲದಲ್ಲಿ ದುಃಖಕರವಾಗಿ ತೋರಿದರೂ ಕೊನೆಯಲ್ಲಿ ಸುಖಕರವಾಗುತ್ತದೆ.
ಅಣಿಮಾಹದೈಶ್ವರ್ಯಗಳು, ನಾಚಿಕೆ, ಧೈರ್ಯ, ಕೀರ್ತಿ ಇವುಗಳೆಲ್ಲವೂ ಪ್ರಯತ್ನ- ಶೀಲರಲ್ಲಷ್ಟೇ ನೆಲೆಗೊಳ್ಳುತ್ತದೆ. ಸೋಮಾರಿಗಳಲ್ಲಿ ಕ್ಷಣಮಾತ್ರವು ಇರಲಾರವು.
ವಿವರಣೆ - `ಆಲಸ್ಯಂ ಅಮೃತಂ ವಿಷಂ' ಎಂಬಂತೆ ಮನುಷ್ಯನು ಎಂದೂ ಸಹ ಆಲಸ್ಯವನ್ನು ಮಾಡಬಾರದು. ಅದು ತತ್ಕಾಲದಲ್ಲಷ್ಟೇ ಸುಖಕರವಾಗಿದ್ದರೂ ಅದರಿಂದ ಮುಂದೆ ದುಃಖವೇ ಒದಗುತ್ತದೆ. ಸುಖವೂ ಕೂಡ ದುಃಖದಲ್ಲಿಯೇ ಕೊನೆಗೊಳ್ಳುತ್ತದೆ. ಯಾರಿಗೆ ದುಃಖವು ಬಂದಿರುತ್ತದೋ, ಅವನು ದಕ್ಷತೆಯಿಂದ ಅದನ್ನು ಎದುರಿಸಬೇಕು. ಯಾರು ಕಾರ್ಯದಕ್ಷನಾಗಿರುತ್ತಾನೋ, ಅವನಿಗಷ್ಟೇ ಐಶ್ವರ್ಯ, ಧೈರ್ಯ, ಕೀರ್ತಿಗಳು ಬರುತ್ತವೆ. ಕಾರ್ಯದಕ್ಷನಲ್ಲದವನಿಗೆ ಇವು ಒಂದೂ ಕೂಡ ಸಿಗಲಾರವು.
ನಾಲಂ ಸುಖಾಯ ಸುಹೃದೋ ನಾಲಂ ದುಃಖಾಯ ದುರ್ಹೃದಃ |
ನಚ ಪ್ರಜಾಲಮರ್ಥೇಭ್ಯೋ ನ ಸುಖೇಭ್ಯೋಽಪ್ಯಲಂ ಧನಮ್ ॥31॥
ಸ್ನೇಹಿತರು ನಮಗೆ ನಿರಂತರ ಸುಖವನ್ನು ಕೊಡಲು ಸಮರ್ಥರಲ್ಲ. ಶತ್ರುಗಳೂ ಕೂಡ ನಮಗೆ ದುಃಖವನ್ನು ನೀಡಲು ಸಮರ್ಥರಲ್ಲ. ಎಷ್ಟು ಮಂದಿ ಪ್ರಜೆಗಳಿದ್ದರೂ ಅವರಿಂದ ನಮಗೆ ಧನವು ದೊರೆಯುವುದಿಲ್ಲ. ಎಷ್ಟೇ ಧನವಿದ್ದರೂ ಅದರಿಂದ ಸುಖವು ದೊರೆಯುವುದಿಲ್ಲ.
ಯಥಾ ಸೃಷ್ಟೋಽಸಿ ಕೌಂತೇಯ ಧಾತ್ರಾ ಕರ್ಮಸು ತತ್ ಕುರು |
ಅತ ಏವ ಹಿ ಸಿದ್ಧಿಸ್ತೇ ನೇಶಸ್ತ್ವಂಕರ್ಮಣಾ ನೃಪ ॥32॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಧರ್ಮರಾಜದುಃಖವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ ॥28
ಕುಂತೀಪುತ್ರನೇ! ಆ ವಿಧಿಯು ನಿನ್ನನ್ನು ಯಾವುದಕ್ಕೋಸ್ಕರ ಸೃಷ್ಟಿ ಮಾಡಿ- ದೆಯೋ, ಆ ಕರ್ಮಗಳನ್ನು ನೀನು ಆಚರಿಸಲೇ ಬೇಕು. ಅದರಿಂದಲೇ ನಿನಗೆ ಸಿದ್ಧಿಯುಂಟಾಗುತ್ತದೆ. ಅದಕ್ಕೆ ವಿರುದ್ಧವಾಗಿ ಸ್ವಂತವಾಗಿ ಮಾಡಲು ನಿನಗೆ ಯಾವುದೇ ಸ್ವಾತಂತ್ರ್ಯವಿರುವುದಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಧರ್ಮರಾಜನ ದುಃಖವರ್ಣನೆ ಎಂಬ
28ನೆಯ ಅಧ್ಯಾಯವು ಮುಗಿಯಿತು.
*****
29. ಇಪ್ಪತ್ತೊಂಬತ್ತನೆಯ ಅಧ್ಯಾಯ
ಅಶ್ಮಮಹರ್ಷಿ ಮತ್ತು ಜನಕರ ಸಂವಾದವನ್ನು ಉಪಾಖ್ಯಾನವನ್ನು ಹೇಳುವ ಮೂಲಕ ವೇದವ್ಯಾಸದೇವರು ಯುಧಿಷ್ಠಿರನಿಗೆ ಕ್ಷತ್ರಿಯಧರ್ಮದ ಶ್ರೇಷ್ಠತೆಯನ್ನು ಉಪದೇಶಿಸಿದರು.
ವೈಶಂಪಾಯನಃ
ಜ್ಞಾತಿಶೋಕಾಭಿತಪ್ತಸ್ಯ ಪ್ರಾಣಾನಭ್ಯುತ್ಸಿಸೃಕ್ಷತಃ |
ಜ್ಯೇಷ್ಠಸ್ಯ ಪಾಂಡುಪುತ್ರಸ್ಯ ವ್ಯಾಸಃ ಶೋಕಮಪಾನುದತ್ ॥1॥
ವೈಶಂಪಾಯನರು  ಬಂಧುಗಳ ವಿಯೋಗದಿಂದ ಪ್ರಾಣತ್ಯಾಗವನ್ನೇ ಮಾಡು- ತ್ತೇನೆಂದು ಹೇಳುತ್ತಿರುವ ಧರ್ಮರಾಜನನ್ನು ನೋಡಿ, ಅವನ ದುಃಖವನ್ನು ಪರಿಹರಿಸಲು ವೇದವ್ಯಾಸದೇವರು ಹೀಗೆ ಹೇಳುತ್ತಾರೆ -
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಶ್ಮಗೀತಂ ನರವ್ಯಾಘ್ರ ತನ್ನಿಬೋಧ ಯುಧಿಷ್ಠಿರ ॥2॥
ಓ ಯುಧಿಷ್ಠಿರನೇ! ಈ ವಿಷಯದಲ್ಲಿ ಹಿಂದೆ ನಡೆದ ಅಶ್ಮಗೀತೆಯೆಂಬ  ಒಂದು ಪುರಾತನವಾದ ಇತಿಹಾಸವನ್ನು ಜ್ಞಾನಿಜನರು ಉದಾಹರಿಸುತ್ತಾರೆ. ಅದನ್ನೇ ನಿನಗೆ ತಿಳಿಸುತ್ತೇನೆ ಕೇಳು -
ಅಶ್ಮಾನಾಂ ಬ್ರಾಹ್ಮಣಂ ಪ್ರಾಜ್ಞಂ ವೈದೇಹೋ ಜನಕೋ ನೃಪಃ |
ಸಂಶಯಂ ಪರಿಪಪ್ರಚ್ಛ ದುಃಖಶೋಕಪರಿಪ್ಲುತಃ ॥3॥
ಹಿಂದೆ ವಿದೇಹರಾಜನಾದ ಜನಕನು ಅತ್ಯಂತದುಃಖಿತನಾಗಿದ್ದನು. ಅಶ್ಮ ಎಂಬ ಪ್ರಾಜ್ಞನಾದ ಬ್ರಾಹ್ಮಣನ ಬಳಿ ತೆರಳಿ ತನ್ನ

ಸಂಶಯವನ್ನು ಪರಿಹರಿಸೆಂದು ಪ್ರಾರ್ಥಿಸಿ- ದನು.
ಜನಕಃ
ಆಗಮೇ ಯದಿ ವಾಪಾಯೇ ಜ್ಞಾತೀನಾಂ ದ್ರವಿಣಸ್ಯ ಚ |
ನರೇಣ ಪ್ರತಿಪತ್ತವ್ಯಂ ಕಲ್ಯಾಣಂ ಕಥಮಿಚ್ಛತಾ ॥4॥
ಜನಕರಾಜ ಬ್ರಾಹ್ಮಣಶ್ರೇಷ್ಠನೇ! ಬಂಧುಗಳು ಹಾಗೂ ಸಂಪತ್ತು ನಮ್ಮ ಸಮೀಪಕ್ಕೆ ಬರುವಾಗ, ಮತ್ತು ಕೈಬಿಟ್ಟು ಹೋಗುವಾಗ ಕಲ್ಯಾಣವನ್ನೇ ಅಪೇಕ್ಷಿಸುವ ಮನುಷ್ಯನು ಹೇಗೆ ವರ್ತಿಸಬೇಕು? ಇದನ್ನು ದಯವಿಟ್ಟು ನನಗೆ ತಿಳಿಸಿರಿ.
ಅಶ್ಮ
ಉತ್ಪನ್ನಮಿಮಮಾತ್ಮಾನಂ ನರಸ್ಯಾನಂತರಂ ತತಃ |
ತಾನಿ ತಾನ್ಯಭಿವರ್ತಂತೇ ದುಃಖಾನಿ ಚ ಸುಖಾನಿ ಚ ॥5॥
ಅಶ್ಮ ರಾಜನೇ ಈ ದೇಹವು ಹುಟ್ಟುವ ಕ್ಷಣದಲ್ಲಿಯೇ ಸುಖ-ದುಃಖಗಳ ಬೆನ್ನು ಹತ್ತುತ್ತದೆ. ಸ್ವಲ್ಪವೂ ವ್ಯವಧಾನವಿಲ್ಲದೇ ಅವನವನ ಕರ್ಮಗಳಿಗನುಗುಣವಾಗಿ ಸುಖದುಃಖಗಳು ಬರುತ್ತಲೇ ಇರುತ್ತವೆ.
ತೇಷಾಮನ್ಯತರಾಪತ್ತೌ ಯದ್ ಯದೇವೋಪಸೇವತೇ |
ತತ್ ತದ್ಧಿ ಚೇತನಾಮಸ್ಯ ಹರತ್ಯಭ್ರಮಿವಾನಿಲಃ ॥6॥
ಈ ಸುಖ ಮತ್ತು ದುಃಖಗಳು ಎರಡೂ ಕೂಡ ಮನಸ್ಸಿಗೆ ಹೆಚ್ಚು ಹತ್ತಿಸಿ- ಕೊಂಡರೆ, ಗಾಳಿಯು ಮೋಡವನ್ನು ಹೇಗೆ ಹಾರಿಸಿಕೊಂಡು ಹೋಗುತ್ತದೋ, ಹಾಗೇ ಇವುಗಳು ಮನುಷ್ಯನ ವಿವೇಕವನ್ನೇ ಹಾರಿಸಿಬಿಡುತ್ತವೆ.
ವಿವರಣೆ - ಸಹಜವಾಗಿ ಸುಖ-ದುಃಖಗಳು ಬರುತ್ತಲೇ ಇರುತ್ತವೆ. ಎರಡೂ ಕೂಡ ನಮ್ಮ ಮನಸ್ಸಿನ ಸ್ಥಿಮಿತವನ್ನು ಅಲ್ಲೋಲಕಲ್ಲೋಲ ಮಾಡುತ್ತವೆ. ಇದನ್ನು ಮನಸ್ಸಿಗೆ ಹತ್ತಿಸಿಕೊಂಡರೆ, ಮನುಷ್ಯನು ವಿವೇಕವನ್ನೇ ಕಳೆದುಕೊಳ್ಳುತ್ತಾನೆ.
ಅಭಿಜಾತೋಽಸ್ಮಿ ಸಿದ್ಧೋಽಸ್ಮಿ ನಾಸ್ಮಿ ಕೇವಲಮಾನುಷಃ |
ಇತ್ಯೇಭಿಃ ಹೇತುಭಿಸ್ತಸ್ಯ ತ್ರಿಭಿಶ್ಚಿತ್ತಂ ಪ್ರಸಿಚ್ಯತೇ ॥7॥
`ನನ್ನ ವಂಶ ದೊಡ್ಡದು', `ನಾನು ಸಿದ್ಧಪುರುಷ', `ನಾನು ಇತರರಂತೆ ಸಾಧಾ- ರಣನಲ್ಲ' ಹೀಗೆ ಮೂರು ಬಗೆಯ ಅಹಂಕಾರಗಳಿಂದ ಮನುಷ್ಯನ ಬುದ್ಧಿಯು ಅವನಲ್ಲಿ ಹುಟ್ಟಿ ಅವನನ್ನು ಉಬ್ಬಿಸಿಬಿಡುತ್ತದೆ. ಮನುಷ್ಯನು ಅತ್ಯಂತ ಗರ್ವಿಷ್ಠನಾಗು- ತ್ತಾನೆ.
ಸಂಪ್ರಸಕ್ತಮನಾ ಭೋಗಾನ್ ವಿಸೃಜ್ಯ ಪಿತೃಸಂಚಿತಾನ್ |
ಪರಿಕ್ಷೀಣಃ ಪರಸ್ವಾನಾಮಾದಾನಂ ಸಾಧು ಮನ್ಯತೇ ॥8॥
ಅಹಂಕಾರವನ್ನು ಹೊಂದಿದ ಮನುಷ್ಯನು ನಿರಂತರ ಕಾಮೋಪಭೋಗಗಳಲ್ಲಿ ಆಸಕ್ತನಾಗುತ್ತಾನೆ. ತಂದೆ, ತಾತ, ಮುತ್ತಾತ ಮೊದಲಾದವರು ಸಂಪಾದನೆ ಮಾಡಿದ ಐಶ್ವರ್ಯವನ್ನು ವ್ಯಯ ಮಾಡುತ್ತಾನೆ. ಅದು ಪೂರ್ಣ ಮುಗಿದ ಮೇಲೆ ಮತ್ತೊ- ಬ್ಬರ ಸ್ವತ್ತನ್ನು ಅಪಹರಿಸುವುದೇ ಒಳ್ಳೆಯದೆಂದು ಭಾವಿಸುತ್ತಾನೆ. `ಭೋಗಾನ್' ಎಂದರೆ ಭೋಗಸಾಧನದ್ರವ್ಯಗಳು ಎಂದರ್ಥ.
ಟಿಪ್ಪಣಿ - ರಥಾತ್ ಪರರಥಾರುಜಮ್ ಇತ್ಯತ್ರ ರಥಾತ್ ಸ್ವರಥಾತ್ ಪರರಥಾ- ನಾಮ್ ಆ ಸಮಂತಾದ್ ರುಗ್ ಯಸ್ಮಾತ್ ತಂ ಪರರಥಾರುಜಮ್ | ಸ ಪ್ರಸಿಕ್ತಮನಾ ಭೋಗಾನ್ ಇತ್ಯತ್ರ ಭೋಗಾನ್ ಭೋಗಸಾಧನದ್ರವ್ಯಾಣಿ |
ತಮತಿಕ್ರಾಂತಮರ್ಯಾದಮಾದದಾನಮಸಾಂಪ್ರತಮ್ |
ಪ್ರತಿಷೇಧಂತಿ ರಾಜಾನೋ ಲುಬ್ಧಾ ಮೃಗಮಿವೇಷುಭಿಃ ॥9॥
ಲೋಕದ ಮೇರೆಯನ್ನೇ ಮೀರಿ, ಕಳ್ಳತನ ಮೊದಲಾದ ಕೆಟ್ಟ ಕೆಲಸಗಳಲ್ಲಿ ತೊಡಗುತ್ತಾನೆ. ಜಿಂಕೆಗಳನ್ನು ಬೇಡರು ಬಾಣಗಳಿಂದ ಹೊಡೆಯುವಂತೆ ರಾಜನು ಅಂಥ ಕಳ್ಳನನ್ನು ದಂಡಿಸುತ್ತಾನೆ.
ಯೇ ಚ ವಿಂಶತಿವರ್ಷಾ ವಾ ತ್ರಿಂಶದ್ವರ್ಷಾಶ್ಚ ಮಾನವಾಃ |
ಪರೇಣ ತೇ ವರ್ಷಶತಾನ್ನ ಭವಿಷ್ಯಂತಿ ಪಾರ್ಥಿವ ॥10॥
ರಾಜದಂಡಕ್ಕೆ ಪಾತ್ರರಾಗಿ ಕೆಟ್ಟಕೆಲಸಗಳಿಂದ ಇಪ್ಪತ್ತು ವರ್ಷದಲ್ಲೇ ಸತ್ತು- ಹೋಗುತ್ತಾರೆ. ಅಥವಾ ಮೂವತ್ತು ವರ್ಷದಲ್ಲಿ ತೀರಿಹೋಗುತ್ತಾರೆ. ಸಂಪೂರ್ಣ ನೂರು ವರ್ಷಗಳ ಕಾಲ ಅಂಥ ಹೀನರು ಬದುಕುವುದೇ ಇಲ್ಲ.
ಟಿಪ್ಪಣಿ - ಪರೇಣ ತೇ ವರ್ಷಶತಾ ಇತ್ಯತ್ರ ಪರೇಣ ವೈರಿಣಾ ವರ್ಷಾಣಾಂ ಶತಂ ಯೇಷಾಂ ತೇ ವರ್ಷಶತಾಃ |
`ಪರೇಣ' ವೈರಿಗಳಿಂದ ನೂರು ವರ್ಷಗಳ ಕಾಲ ಬದುಕುವುದಿಲ್ಲ.
ವಿವರಣೆ - ತಂದೆ, ಮುತ್ತಾತ ಮೊದಲಾದವರು ಸಂಪಾದನೆ ಮಾಡಿದ ಹಣದ ಮೌಲ್ಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಯಾವುದೇ ಕಾರಣಕ್ಕೂ ಅಪವ್ಯಯ ಮಾಡಬಾರದು. ಹಾಗೇನಾದರೂ ತನ್ನ ಇಚ್ಛೆಗೆ ಅನುಗುಣವಾಗಿ ಆ ಹಣವನ್ನು ವ್ಯರ್ಥ ಮಾಡಿದರೆ, ಆಯುಷ್ಯವನ್ನು ಕಳೆದುಕೊಳ್ಳುತ್ತಾನೆ. ಮತ್ತು ಅವನಿಗೆ ಧರ್ಮಾಧರ್ಮಗಳಲ್ಲಿ ನಂಬಿಕೆ ಇಲ್ಲದ ಕಾರಣ, ಪಿತೃವಂಶದ ಹಣವನ್ನೇ ಅಪವ್ಯಯಮಾಡಿದ ಮೇಲೆ ಉಳಿದವರ ಹಣವನ್ನು ಕದಿಯುವುದರಲ್ಲಿಯೂ ಅಧರ್ಮದ ಬುದ್ಧಿಯು ಅವರಿಗೆ ಉಂಟಾಗುವುದಿಲ್ಲ. ಧರ್ಮವನ್ನು ನಂಬದ ಅಂಥ ಮನುಷ್ಯನು ಕಳ್ಳತನ ಆರಂಭ ಮಾಡುತ್ತಾನೆ. ಆದರೆ ಅಂತಿಮವಾಗಿ ಜಗತ್ತಿನಲ್ಲಿ ಅವನು ಕಳ್ಳನೇ ಆಗುತ್ತಾನೆ. ಅವನನ್ನು ಹಿಡಿದು ರಾಜಭಟರು ಶಿಕ್ಷೆಗೆ ಒಳಪಡಿಸುತ್ತಾರೆ. ಅಥವಾ ಶತ್ರುಜನರು ಅವರನ್ನು ಕೊಲ್ಲುತ್ತಾರೆ.
ಟಿಪ್ಪಣಿ - ಕೆಲವು ಕಳ್ಳರು ರಾಜದಂಡಕ್ಕೆ ಪಾತ್ರರಾಗಿ ಮರಣವನ್ನು ಹೊಂದು- ತ್ತಾರೆ. ಇನ್ನು ಕೆಲವರು ತಮ್ಮ ಶತ್ರುಗಳಿಂದಲೇ ಮರಣವನ್ನು ಹೊಂದುತ್ತಾರೆ. ಕಳ್ಳತನವನ್ನು ಮಾಡಲು ಹೊರಟು ಎಲ್ಲರನ್ನೂ ಶತ್ರುಗಳನ್ನಾಗಿ ಮಾಡಿಕೊಳ್ಳುತ್ತಾರೆ. ಅವರಿಂದಲೇ ಸಾಯುತ್ತಾರೆ.
ತೇಷಾಂ ಪರಮದುಃಖಾನಾಂ ಬುದ್ಧ್ಯಾ ಭೈಷದ್ಯಮಾಚರೇತ್ |
ಸರ್ವಪ್ರಾಣಭೃತಾಂ ವೃತ್ತಂ ಪ್ರೇಕ್ಷಮಾಣಸ್ತತಸ್ತತಃ ॥11॥
ಇಂಥ ಪರಮದುಃಖವನ್ನು ಹೊಂದುವ ಮನುಷ್ಯರಿಗೆ ಸರಿಯಾದ ಮಾರ್ಗ- ವನ್ನು ತೋರಿಸುವುದಕ್ಕಾಗಿ ಬುದ್ಧಿಯಿಂದ ಆಲೋಚಿಸಿ,

ಚಿಕಿತ್ಸೆಯನ್ನು ಅವರಿಗೆ ನೀಡಬೇಕು. ಅದಕ್ಕಾಗಿ ರಾಜನಾದವನು ತನ್ನ ಎಲ್ಲಾ ಪ್ರಜೆಗಳ ನಡುವಳಿಕೆಗಳನ್ನು ಪರಿಶೀಲನೆ ಮಾಡುತ್ತಲೇ ಇರಬೇಕು.
ಮಾನಸಾನಾಂ ಪುನರ್ಯೋನಿರ್ದುಃಖಾನಾಂ ಚಿತ್ತವಿಭ್ರಮಃ |
ಅನಿಷ್ಟೋಪನಿಪಾತೋ ವಾ ತೃತೀಯಂ ನೋಪಪದ್ಯತೇ ||12||
ಮನುಷ್ಯರಿಗೆ ದುಃಖವನ್ನು ತಂದುಕೊಳ್ಳಲು ಎರಡು ಪ್ರಬಲಕಾರಣಗಳಿರುತ್ತವೆ. ಬುದ್ಧಿಭ್ರಮೆ ಮತ್ತು ಅನಿಷ್ಟಪ್ರಾಪ್ತಿ. ಇವೆರಡು ಮಾತ್ರ ಮನುಷ್ಯನಿಗೆ ದುಃಖವನ್ನು ನೀಡುತ್ತವೆ. ಇವೆರಡನ್ನು ಬಿಟ್ಟು, ಮೂರನೆಯ ಕಾರಣವು ಇರುವುದಿಲ್ಲ.
ಏವಮೇತಾನಿ ದುಃಖಾನಿ ತಾನಿ ತಾನೀಹ ಮಾನವಮ್ |
ವಿವಿಧಾನ್ಯುಪವರ್ತಂತೇ ತಥಾ ಸಾಂಸ್ಪರ್ಶಕಾನಿ ಚ ||13||
ಹೀಗೆ ಬೇರೆ ಬೇರೆ ವಿಧವಾದ ಆಯಾ ದುಃಖಗಳು ವಿಷಯಸಂಗದಿಂದ ಬರುವ ದುಃಖಗಳು ಮನುಷ್ಯನಿಗೆ ತೊಂದರೆಯನ್ನು ಕೊಡುತ್ತಲೇ ಇರುತ್ತವೆ.
ಜರಾಮೃತ್ಯೂ ಹಿ ಭೂತಾನಾಂ ಖಾದಿತಾರೌ ವೃಕಾವಿವ |
ಬಲಿನಾಂ ದುರ್ಬಲಾನಾಂ ಚ ಹ್ರಸ್ವಾನಾಂ ಮಹತಾಮಪಿ ||14||
ಮುಪ್ಪು ಮತ್ತು ಸಾವುಗಳಿಗೆ ಬಲಿಷ್ಠರಾದವರೆಂದು, ದುರ್ಬಲರೆಂದು, ಚಿಕ್ಕವ- ರೆಂದು, ದೊಡ್ಡವರೆಂದು ತಾರತಮ್ಯವೇ ಇರುವುದಿಲ್ಲ. ಎಲ್ಲರನ್ನು ನುಂಗಿಹಾಕುತ್ತವೆ.
ನ ಕಶ್ಚಿಜ್ಜಾತ್ವತಿಕ್ರಾಮೇತ್ ಜರಾಮೃತ್ಯೂ ಹ ಮಾನವಃ |
ಅಪಿ ಸಾಗರಪರ್ಯಂತಾಂ ವಿಜಿತ್ಯೇಮಾಂ ವಸುಂಧರಾಮ್ ||15||
ಮನುಷ್ಯನು ಸಾಗರದ ತನಕ ಸಮಸ್ತ ಭೂಮಂಡಲವನ್ನು ಜಯಿಸಬಹುದು. ಆದರೆ ಯಾರೊಬ್ಬನೂ ಕೂಡ ಎಂದೆಂದೂ ಮುಪ್ಪು ಮತ್ತು ಸಾವುಗಳನ್ನು ಗೆಲ್ಲಲು ಸಮರ್ಥನಾಗುವುದಿಲ್ಲ.
ಸುಖಂ ವಾ ಯದಿ ವಾ ದುಃಖಂ ಭೂತಾನಾಂ ಪರ್ಯುಪಸ್ಥಿತಮ್ |
ಪ್ರಾಪ್ತವ್ಯಮವಶೈಃ ಸರ್ವಂ ಪರಿಹಾರೋ ನ ವಿದ್ಯತೇ ||16||
ಸುಖ ಮತ್ತು ದುಃಖಗಳು ಪ್ರತಿಯೊಬ್ಬರಿಗೂ ಬರುತ್ತವೆ. ಇದನ್ನು ಎಲ್ಲರೂ ಅನುಭವಿಸಿಯೇ ತೀರಬೇಕು. ತಾವಾಗಿಯೇ ಬಂದು ಹಿಡಿದುಕೊಳ್ಳುವ ಈ ಸುಖ- ದುಃಖಗಳಿಗೆ ಪರಿಹಾರವು ಇರುವುದಿಲ್ಲ.
ಪೂರ್ವೇ ವಯಸಿ ಮಧ್ಯೇ ವಾಪ್ಯುತ್ತರೇ ವಾ ನರಾಧಿಪ |
ಅವರ್ಜನೀಯಾಸ್ತೇಽರ್ಥಾ ವೈ ಕಾಂಕ್ಷಿತಾಶ್ಚ ತತೋಽನ್ಯಥಾ ||17||
ಮನುಷ್ಯನಾಗಿ ಹುಟ್ಟಿದಾಗ ಸಣ್ಣವಯಸ್ಸಿನಲ್ಲಿ, ಯೌವನದಲ್ಲಿ, ವೃದ್ಧಾಪ್ಯದಲ್ಲಿ ಸುಖ-ದುಃಖರೂಪವಾದ ವಿಷಯಗಳು ತಪ್ಪುವುದೇ ಇಲ್ಲ. ತಾನು ಅಪೇಕ್ಷಿಸಿದ ಅಥವಾ ಅಪೇಕ್ಷಪಡದ ವಿಷಯಗಳಲ್ಲಿ ಯಾವುದು ಬಂದರೂ ಅದನ್ನು ಸ್ವಾಗತ ಮಾಡಬೇಕು. ಬಿಡಲು ಸಾಧ್ಯವಿಲ್ಲ.
ಸುಪ್ರಿಯೈರ್ವಿಪ್ರಯೋಗಾಶ್ಚ ಸಂಪ್ರಯೋಗಸ್ತಥಾಪ್ರಿಯೈಃ |
ಅರ್ಥಾನರ್ಥೌ ಸುಖಂ ದುಃಖಂ ವಿಧಾನಮನುವರ್ತತೇ ||18||
ತನಗೆ ಅತ್ಯಂತ ಇಷ್ಟರಾದವರ ಸಹವಾಸವೇ ದೊರಕುವುದಿಲ್ಲ, ಅಪ್ರಿಯ- ರಾದವರ ಜೊತೆ ಬೇಡವೆಂದರೂ ಸಹವಾಸವು ದೊರಕುತ್ತದೆ. ಅರ್ಥಪ್ರಾಪ್ತಿ, ಅನರ್ಥದ ಪ್ರಾಪ್ತಿ, ಸುಖ ಮತ್ತು ದುಃಖ ಇವುಗಳೆಲ್ಲವೂ ಅವರವರ ಪ್ರಾರಬ್ಧ- ಕರ್ಮವನ್ನು ಅನುಸರಿಸಿಯೇ ಬರುತ್ತವೆ.
ಪ್ರಾದುರ್ಭಾವಶ್ಚ ಭೂತಾನಾಂ ದೇಹತ್ಯಾಗಸ್ತಥೈವ ಚ |
ಪ್ರಾಪ್ತಿರ್ವ್ಯಾಯಾಮಯೋಗಶ್ಚ ಸರ್ವಮೇತತ್ ಪ್ರತಿಷ್ಠಿತಮ್ ||19||
ಇದರಂತೆ ಪ್ರಾಣಿಗಳ ಹುಟ್ಟು, ಸಾವು, ಲಾಭ, ನಷ್ಟ ಎಲ್ಲವೂ ಕೂಡ ದೈವದ
ಅಧೀನವಾಗಿಯೇ ಇರುತ್ತವೆ.
ಗಂಧವರ್ಣರಸಸ್ಪರ್ಶಾ ನಿವರ್ತಂತೇ ಸ್ವಭಾವತಃ |
ತಥೈವ ಸುಖದುಃಖಾನಿ ವಿಧಾನಮನುವರ್ತತೇ ||20||
ರೂಪ, ರಸ, ಗಂಧ, ಸ್ಪರ್ಶಾದಿಗಳು ಸಹಜವಾಗಿ ಬರುತ್ತವೆ. ಅದರಂತೆ ಸುಖ- ದುಃಖಗಳೂ ಕೂಡ ದೈವಾಧೀನವಾಗಿ ಬರುತ್ತವೆ.
ಟಿಪ್ಪಣಿ - ಗಂಧವರ್ಣರಸಸ್ಪರ್ಶಾ ನಿವರ್ತಂತ ಇತ್ಯತ್ರ ಎಂದರೆ ಸುತರಾಂ ಇರುತ್ತದೆ ಎಂದರ್ಥ.
ವಿವರಣೆ - ಗಂಧ, ರೂಪ, ರಸ, ಸ್ಪರ್ಶಗಳೆಲ್ಲವೂ ಕೂಡ ಸಹಜವಾಗಿ ಬರುತ್ತವೆ, ಹೋಗುತ್ತವೆ. ಹೂವು ಅರಳಿದಾಗ ಸಹಜವಾಗಿ ಪರಿಮಳ ಬರುತ್ತದೆ. ಹೂವು ಬಾಡುವುದರಿಂದ ಪರಿಮಳವು ಹೋಗುತ್ತದೆ. ಅದರಂತೆ ಸುಖ-ದುಃಖ- ಗಳೂ ಕೂಡ ಅವರವರ ಕರ್ಮಗಳಿಗೆ ಅನುಗುಣವಾಗಿ ಬರುತ್ತವೆ, ಹೋಗುತ್ತವೆ.
ಆಸನಂ ಶಯನಂ ಯಾನಮುತ್ಥಾನಂ ಪಾನಭೋಜನಮ್ |
ನಿಯತಂ ಸರ್ವಭೂತಾನಾಂ ಕಾಲೇನೈವ ಭವಂತ್ಯುತ ||21||
ಕುಳಿತುಕೊಳ್ಳುವುದು, ಮಲಗುವುದು, ಓಡಾಡುವುದು, ಎದ್ದುನಿಂತುಕೊಳ್ಳು- ವುದು, ಕುಡಿಯುವುದು, ತಿನ್ನುವುದು ಇವುಗಳನ್ನು ಎಲ್ಲಾ ಪ್ರಾಣಿಗಳೂ ಕೂಡ ಮಾಡುತ್ತವೆ.
ವೈದ್ಯಶ್ಚಾಪ್ಯಾತುರಾಃ ಸಂತಿ ಬಲವಂತಃ ಸುದುರ್ಬಲಾಃ |
ಸ್ತ್ರೀಮಂತಶ್ಚ ತಥಾ ಷಂಢಾ ವಿಚಿತ್ರಃ ಕಾಲಪರ್ಯಯಃ ||22||
ವೈದ್ಯರೇ ರೋಗಿಗಳಾಗುತ್ತಾರೆ. ಬಲಿಷ್ಠರು ದುರ್ಬಲರಾಗುತ್ತಾರೆ. ಷಂಡರು ಹೆಂಡತಿಯೊಡನೆ ಕೂಡುತ್ತಾರೆ. ಹೀಗೆ ಕಾಲಗತಿಯೇ

ಬಲುವಿಚಿತ್ರ.
ಕುಲೇ ಜನ್ಮ ತಥಾ ವೀರ್ಯಮಾರೋಗ್ಯಂ ಧೈರ್ಯಮೇವ ಚ |
ಸೌಭಾಗ್ಯಮುಪಭೋಗಶ್ಚ ಭವಿತವ್ಯೇನ ಲಭ್ಯತೇ ॥23॥
ಸತ್ಕುಲದಲ್ಲಿ ಹುಟ್ಟುವುದು, ವೀರ್ಯವಂತನಾಗುವುದು, ದೇಹವನ್ನು ಆರೋಗ್ಯವಾಗಿ ಇರುವಂತೆ ನೋಡಿಕೊಳ್ಳುವುದು, ಎಂಥಾ ಸಂದರ್ಭದಲ್ಲೂ ಧೈರ್ಯವಂತನಾಗಿರುವುದು, ಸೌಭಾಗ್ಯವಂತನಾಗಿರುವುದು ಎಲ್ಲಾ ಭಾಗ್ಯಗಳನ್ನು ಅನುಭವಿಸುವುದು ಇವೆಲ್ಲವೂ ಆ ದೈವದ ಅಧೀನವಾಗಿಯೇ ಪ್ರಾಪ್ತವಾಗುತ್ತವೆ.
ಸಂತಿ ಪುತ್ರಾಃ ಸುಬಹವೋ ದರಿದ್ರಾಣಾಮನಿಚ್ಛತಾಮ್ |
ಬಹೂನಾಮಿಚ್ಛತಾಂ ನಾಸ್ತಿ ಸಮೃದ್ಧಾನಾಂ ವಿಚೇಷ್ಟತಾಮ್ ॥24॥
ಇಚ್ಛೆಪಡದಿದ್ದರೂ ದರಿದ್ರರಿಗೆ ಅನೇಕ ಮಕ್ಕಳು ಹುಟ್ಟುತ್ತಾರೆ. ಅತ್ಯಂತ- ಶ್ರೀಮಂತರು ತಮ್ಮ ಅಪೇಕ್ಷೆಯಂತೆ ಖರ್ಚು ಮಾಡಿದರೂ ಆಸೆಯನ್ನಿಟ್ಟು- ಕೊಂಡರೂ ಮಕ್ಕಳಾಗುವುದಿಲ್ಲ ಹೀಗೆ ವಿಧಿಯ ಕಾರ್ಯವೇ ಬಲುವಿಚಿತ್ರ.
ವ್ಯಾಧಿರಗ್ನಿರ್ಜಲಂ ಶಸ್ತ್ರಂ ಬುಭುಕ್ಷಾ ಶ್ವಾಪದೋ ವಿಷಮ್ |
ಜ್ವರಶ್ಚ ಮರಣಂ ಜಂತೋರುಚ್ಚಾಚ್ಚ ಪತನಂ ತಥಾ ॥25॥
ನಿರ್ಯಾಣಂ ಯಸ್ಯ ಯದ್ ದಿಷ್ಟಂ ತೇನ ಗಚ್ಛತಿ ಹೇತುನಾ |
ದೃಶ್ಯತೇ ನಾಭ್ಯತಿಕ್ರಾಮನ್ನತಿಕ್ರಾಂತೋ ನವಾ ಪುನಃ ॥26॥
ರೋಗ, ಬೆಂಕಿ, ನೀರು, ಶಸ್ತ್ರ, ಹಸಿವೆ, ಅಪಘಾತ, ವಿಷ, ಜ್ವರ, ಕೆಳಗೆ ಬೀಳು- ವುದು ಇಷ್ಟು ಮರಣದ ನಿಮಿತ್ತಕಾರಣಗಳು. ಪರಲೋಕಯಾತ್ರೆಗೆ ಇವುಗಳೇ ಸೇತುವೆಯಂತಿವೆ. ಆಯಾ ವ್ಯಕ್ತಿಯು ಹುಟ್ಟಿದಾಗ ಇವನು ಹೇಗೆ ಪರಲೋಕಕ್ಕೆ ಹೋಗಬೇಕೆಂದು ನಿರ್ಣಯ ಮಾಡಲಾಗಿರುತ್ತದೋ, ಅದೇ ಕ್ರಮದಲ್ಲಿಯೇ ನಿರ್ಯಾಣವನ್ನು ಮಾಡುತ್ತಾನೆ.
ದೃಶ್ಯತೇ ಹಿ ಯುವೈವೇಹ ವಿನಶ್ಯನ್ ವಸುಮಾನ್ನರಃ |
ದರಿದ್ರಶ್ಚ ಪರಿಕ್ಲಿಷ್ಟಃ ಶತವರ್ಷೋ ಜರಾನ್ವಿತಃ ॥27॥
ಕೆಲವರು ಐಶ್ವರ್ಯವನ್ನು ಹೊಂದಿರುತ್ತಾರೆ. ಆದರೆ ಯುವಕನಾಗಿರುವಾಗಲೇ ಮರಣ ಬರುತ್ತದೆ. ಕೆಲವರು ಬಹಳ ಬಡತನದಲ್ಲಿ ಜೀವನವನ್ನು ನಡೆಸುತ್ತಾರೆ. ಆದರೂ ನೂರು ವರ್ಷಗಳ ತನಕ ಬದುಕುತ್ತಾರೆ.
ವಿವರಣೆ - ಕೆಲವರಿಗೆ ಬೇಕಾದಷ್ಟು ಹಣವಿರುತ್ತದೆ. ಆ ಹಣವನ್ನು ವಿನಿ- ಯೋಗಿಸಿ ತಮ್ಮ ಜೀವನವನ್ನು ಕಾಪಾಡಿಕೊಳ್ಳುತ್ತಾರೆ. ಮತ್ತು ಅತ್ಯಂತಸತ್ವಯುತ- ವಾದ ಆಹಾರವನ್ನು ತಿನ್ನುತ್ತಾರೆ. ಆರೋಗ್ಯವನ್ನು ಯಥೇಚ್ಛವಾಗಿ ಹಣವನ್ನು ವಿನಿಯೋಗ ಮಾಡಿ ಕಾಪಾಡಿಕೊಳ್ಳುತ್ತಾರೆ. ಆದರೂ ಕೂಡ ಅವರಿಗೆ ರೋಗಗಳು ಬಂದೇ ಬರುತ್ತವೆ. ಯೌವನದಲ್ಲಿಯೇ ಮರಣವನ್ನೂ ಹೊಂದುತ್ತಾರೆ. ಆದರೆ ಮತ್ತೊಬ್ಬ ಕಡುಬಡವನಿರುತ್ತಾನೆ. ತನ್ನ ಆರೋಗ್ಯಕ್ಕಾಗಿ ಸತ್ವಯುತವಾದ ಆಹಾರವನ್ನೇ ತಿನ್ನುವುದಿಲ್ಲ. ತಂಗಳನ್ನವನ್ನೇ ತಿಂದು ಬದುಕುತ್ತಾನೆ. ಕೆಲವೊಮ್ಮೆ ಉಪವಾಸವಿರುತ್ತಾನೆ. ನೀರು ಕುಡಿಯುತ್ತಾನೆ. ಆದರೂ ಕೂಡ ನೂರು ವರ್ಷಗಳ ತನಕ ಬದುಕುತ್ತಾನೆ. ಇದರಿಂದಲೇ ತಿಳಿಯುತ್ತದೆ. ಎಲ್ಲವೂ ಕೂಡ ದೈವಾಧೀನ- ವೆಂದು.
ಅಕಿಂಚನಾಶ್ಚ ದೃಶ್ಯಂತೇ ಪುರುಷಾಶ್ಚಿರಜೀವಿನಃ |
ಸಮೃದ್ಧೇ ಚ ಕುಲೇ ಜಾತಾ ವಿನಶ್ಯಂತಿ ಪತಂಗವತ್॥28॥
ಯಾರ ಹತ್ತಿರ ಏನೂ ಕೂಡ ಇರುವುದಿಲ್ಲವೋ, ಅಂಥ ದರಿದ್ರನು ಚಿರಂಜೀವಿ -ಯಾಗಿ ಬದುಕುತ್ತಾನೆ. ಆಗರ್ಭಶ್ರೀಮಂತನು ಪತಂಗದಂತೆ ಬಹುಬೇಗ ಸತ್ತು ಹೋಗುತ್ತಾನೆ.
ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನ ವಿದ್ಯತೇ |
ಕಾಷ್ಠಾನ್ಯಪಿ ಹಿ ಜೀರ್ಯಂತೇ ದರಿದ್ರಾಣಾಂ ನರಾಧಿಪ ॥29॥
ಸಾಮಾನ್ಯವಾಗಿ ಶ್ರೀಮಂತರಿಗೆ ಅನ್ನವನ್ನು ಅರಗಿಸಿಕೊಳ್ಳುವ ಶಕ್ತಿಯೇ ಇರು- ವುದಿಲ್ಲ. ದರಿದ್ರರಿಗೆ ಕಟ್ಟಿಗೆಯನ್ನು ತಿಂದರೂ ಕೂಡ ಜೀರ್ಣಿಸಿಕೊಳ್ಳುವ ಶಕ್ತಿಯಿ- ರುತ್ತದೆ.
ಅಹಮೇತತ್ ಕರೋಮೀತಿ ಮನ್ಯತೇ ಕಾಲಚೋದಿತಃ |
ಯದ್ಯದಿಷ್ಟಮಸಂತೋಷಾದ್ ದುರಾತ್ಮಾ ಪಾಪಮಾಚರನ್ ॥30॥
ಒಬ್ಬನು ವಿಧಿಯ ಅಧೀನವಾಗಿ ಎಲ್ಲ ಕೆಲಸವನ್ನು ಮಾಡುತ್ತಾನೆ. ಅಂತಿಮವಾಗಿ ನಾನೇ ಮಾಡಿದೆನೆಂದು ತಿಳಿದುಬಿಡುತ್ತಾನೆ. ಇಂಥವನೇ ನಿಜವಾದ ದುರಾತ್ಮನು ಮತ್ತು ಪಾಪಿಷ್ಠನು.
ಟಿಪ್ಪಣಿ - ಯದ್ಯದಿಷ್ಟಮಸಂತೋಷಾದ್ ಇತ್ಯತ್ರ ಯದಿ ಅದಿಷ್ಟಮ್ ಅಪ್ರಾಪ್ತಮ್ |
`ಯದ್ಯದಿಷ್ಟಮ್' ಎಂಬಲ್ಲಿ ಯದಿ ಅದಿಷ್ಟಮ್ ಎಂಬುದಾಗಿ ಪದಚ್ಛೇದ ಮಾಡ- ಬೇಕು. ಅದಿಷ್ಟಮ್ ಎಂದರೆ ದೊರಕದೇ ಇರುವುದು ಎಂದರ್ಥ. ತನಗೆ ಯಾವುದು ದೊರಕಿಲ್ಲವೋ, ಅದನ್ನು ಸಾಧಿಸಿಕೊಳ್ಳಲು ಪಾಪಕರ್ಮಗಳನ್ನು ಆಚರಿಸುತ್ತಾನೆ ಎಂದಭಿಪ್ರಾಯ.
ಸ್ತ್ರಿಯೋಽಕ್ಷಾ ಮೃಗಯಾ ಪಾನಂ ಪ್ರಸಂಗಾನ್ನಿಂದಿತಾ ಬುಧೈಃ |
ದೃಶ್ಯಂತೇ ಚಾಪಿ ಬಹವಃ ಸಂಪ್ರಸಕ್ತಾ ಬಹುಶ್ರುತಾಃ ॥31॥
ಬೇಟೆಯಾಡುವುದು, ಜೂಜಾಡುವುದು, ಸ್ತ್ರೀಯರಲ್ಲಿ ಅತಿಯಾದ ಆಸಕ್ತಿ- ಯನ್ನು ಹೊಂದಿರುವುದು, ಹೆಂಡ ಕುಡಿಯುವುದು, ಈ ಎಲ್ಲಾ ದುರಭ್ಯಾಸಗಳನ್ನು ವಿದ್ವಾಂಸರು ನಿಂದನೆ ಮಾಡುತ್ತಾರೆ. ಆದರೂ ಕೂಡ ಶಾಸ್ತ್ರಗ್ರಂಥಗಳನ್ನು ಓದಿದ ವಿದ್ವಾಂಸರುಗಳೇ ಇಂಥ ಕುಕೃತ್ಯಗಳಲ್ಲಿ ಆಸಕ್ತರಾಗಿಬಿಡುತ್ತಾರೆ.
ಇತಿ ಕಾಲೇನ ಸರ್ವಾರ್ಥಾನೀಪ್ಸಿತಾನೀಪ್ಸಿತಾನಿ ಚ |
ಸ್ಪೃಶ್ಯಂತಿ ಸರ್ವಭೂತಾನಿ ನಿಮಿತ್ತಂ ನೋಪಲಭ್ಯತೇ ॥32॥
ಹೀಗೆ ಮನುಷ್ಯನಿಗೆ ಬರುವ ಇಷ್ಟ - ಅನಿಷ್ಟಗಳು, ಧರ್ಮ, ಅರ್ಥಗಳೆಲ್ಲವೂ

ವಿಧಿಯ ಅಧೀನವಾಗಿಯೇ ಇರುತ್ತವೆ. ಇದಕ್ಕೆ ಬೇರೆ ಕಾರಣಗಳು ಇರುವುದಿಲ್ಲ.
ಟಿಪ್ಪಣಿ - ನಿಮಿತ್ತಂ ನೋಪಲಭ್ಯತ ಇತ್ಯತ್ರ ನಿಮಿತ್ತಂ ನಿಮಿತ್ತಭೂತಃ ಸರ್ವೇಶ್ವರಃ|
`ನಿಮಿತ್ತಂ' ಎಂದರೆ ನಿಮಿತ್ತನಾದ ಸರ್ವೇಶ್ವರನನ್ನು ಬಿಟ್ಟರೆ, ಬೇರೆ ಕಾರಣವಿರುವು- ದಿಲ್ಲ ಎಂದರ್ಥ.
ವಾಯುಮಾಕಾಶಮಗ್ನಿಂ ಚ ಚಂದ್ರಾದಿತ್ಯಾವಹಃಕ್ಷಪೇ |
ಜ್ಯೋತಿಂಷಿ ಸರಿತಃ ಶೈಲಾನ್ ಕಃ ಕರೋತಿ ಬಿಭರ್ತಿ ವಾ ॥33॥
ವಾಯು, ಆಕಾಶ, ಅಗ್ನಿ, ಚಂದ್ರ, ಸೂರ್ಯ,ಹಗಲು, ರಾತ್ರಿ, ನಕ್ಷತ್ರ, ನದಿಗಳು, ಪರ್ವತಗಳು ಇವುಗಳನ್ನು ಆ ಪರಮಾತ್ಮ ಬಿಟ್ಟರೆ ಬೇರೆ ಯಾರು ತಾನೇ ಸೃಷ್ಟಿ ಮಾಡಲು, ಧಾರಣೆ ಮಾಡಲು ಸಮರ್ಥನಾಗಿರುತ್ತಾನೆ.
ಶೀತಮುಷ್ಣಂ ತಥಾ ವರ್ಷಂ ಕಾಲೇನ ಪರಿವರ್ತತೇ |
ಏವಮೇವ ಮನುಷ್ಯಾಣಾಂ ಸುಖದುಃಖೇ ನರರ್ಷಭ ॥34॥
ಓ ನರೋತ್ತಮನೇ! ಚಳಿಗಾಲ, ಬೇಸಿಗೆಕಾಲ, ಮಳೆಗಾಲಗಳು ಆ ಕಾಲದ
ಅಧೀನವಾಗಿಯೇ ಸುತ್ತಿ ಬರುತ್ತವೆ. ಅದರಂತೆ ಸುಖ-ದುಃಖಗಳೂ ಕೂಡ ಕಾಲದ ಅಧೀನವಾಗಿವೆಯೇ ಒಂದರ ಮೇಲೊಂದು ಬರುತ್ತಿರುತ್ತವೆ.
ನೌಷಧಾನಿ ನ ಶಾಸ್ತ್ರಾಣಿ ನ ಹೋಮಾ ನ ಪುನರ್ಜಪಾಃ |
ತ್ರಾಯಂತೇ ಮೃತ್ಯುನೋಪೇತಂ ಜರಯಾ ವಾಪಿ ಮಾನುಷಮ್ ॥35॥
ಔಷಧಿಗಳು, ಶಾಸ್ತ್ರಗಳು, ಹೋಮಗಳು ಅನೇಕ ಬಗೆಯ ಜಪಗಳು ಮರಣ- ದಿಂದ ಮನುಷ್ಯನನ್ನು ರಕ್ಷಣೆ ಮಾಡಲಾರವು. ಮುಪ್ಪನ್ನೂ ಕೂಡ ತಪ್ಪಿಸಲಾರವು.
ಯಥಾ ಕಾಷ್ಠಂ ನ ಕಾಷ್ಠಂ ಚ ಸಮೇಯಾತಾಂ ಮಹೋದಧೌ |
ಸಮೇತ್ಯ ಚ ವ್ಯತೀಯಾತಾಂ ತದ್ವದ್ ಭೂತಸಮಾಗಮಃ ॥36॥
ಮಹಾಸಮುದ್ರದಲ್ಲಿ ಎರಡು ಕಟ್ಟಿಗೆಗಳು ಎಲ್ಲಿಂದಲೋ ತೇಲಿಕೊಂಡು ಬಂದು, ಕೆಲವು ಸಮಯ ಒಟ್ಟಾಗಿಯೇ ಇದ್ದು ಪುನಃ ಅಗಲುತ್ತವೆ. ಅನಂತರ ಅವೆರಡೂ ಬೇರೆ ಬೇರೆಯೇ ಹೋಗುತ್ತವೆ. ಇದರಂತೆ ಈ ಸಂಸಾರದಲ್ಲಿ ಹೆಂಡತಿ, ಮಕ್ಕಳು, ತಂದೆ, ತಾಯಿ ಮೊದಲಾದ ಬಂಧುಗಳ ಸಮಾಗಮವೂ ಕೂಡ ಕೆಲವು ಕಾಲ ಇರುತ್ತದೆ. ಕೆಲವು ಕಾಲದ ಅನಂತರ ಅಗಲುತ್ತವೆ.
ಟಿಪ್ಪಣಿ - ಈ ಶ್ಲೋಕವು ಭಾಗವತದಲ್ಲಿಯೂ ಕೂಡ ಬರುತ್ತದೆ. ಈ ಶ್ಲೋಕವು ಅತ್ಯಂತಮಾರ್ಮಿಕವಾಗಿದೆ.
ಯೇ ಚಾಪಿ ಪುರುಷೈಃ ಸ್ತ್ರೀಭಿರ್ಗೀತವಾದ್ಯೈರೂಪಸ್ಥಿತಾಃ |
ಯೇ ಚಾನಾಥಾಃ ಪರಾನ್ನಾದಾಃ ಕಾಲಸ್ತೇಷು ಸಮಕ್ರಿಯಃ ॥37॥
ಯಾವ ಪುರುಷರು ಸ್ತ್ರೀಯರ ಮಧ್ಯದಲ್ಲಿಯೇ ಇರುತ್ತಾರೋ, ಅವರ ಗೀತೆಗಳನ್ನು, ವಾದ್ಯಗಳನ್ನು ಕೇಳುತ್ತಾ, ಆನಂದತುಂದಿಲರಾಗಿರುತ್ತಾರೋ, ಅಂಥ ಶ್ರೀಮಂತರ ವಿಷಯದಲ್ಲಿ ಮತ್ತು ಪರಾನ್ನದಲ್ಲಿ ಆಸಕ್ತರಾದ ಅನಾಥರ ವಿಷಯ- ದಲ್ಲಿಯೂ ಕಾಲವು ಸಮಾನವಾಗಿಯೇ ಕೆಲಸವನ್ನು ಮಾಡುತ್ತದೆ. ಧನಿಕರು, ದರಿದ್ರರು, ಮೂರ್ಖರು ವಿದ್ವಾಂಸರು ಎಂಬ ವ್ಯತ್ಯಾಸವು ಕಾಲಕ್ಕೆ ಇರುವುದಿಲ್ಲ.
ಮಾತೃಪಿತೃಸಹಸ್ರಾಣಿ ಪುತ್ರದಾರಶತಾನಿ ಚ |
ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ॥38॥
ಅನೇಕ ಜನ್ಮಗಳಲ್ಲಿ, ಅನೇಕ ತಾಯಿ, ಅನೇಕ ತಂದೆ, ನೂರಾರು ಹೆಂಡತಿ- ಯರು, ಸಾವಿರಾರು ಮಕ್ಕಳು ಇವರನ್ನೆಲ್ಲಾ ಪಡೆದಿದ್ದಾಗಿದೆ. ಅನುಭವಿಸಿದ್ದೂ ಆಗಿದೆ. ಹೀಗಿರುವಾಗ ಯಾರಿಗೆ ಯಾರು ಸಂಬಂಧಪಟ್ಟವರು?
ಟಿಪ್ಪಣಿ - ಅದೆಷ್ಟೋ ಜನ್ಮಗಳನ್ನು ತಾಳಿದ್ದೇವೆ. ಅದೆಷ್ಟೋ ಜನ್ಮಗಳಲ್ಲಿ ಯಾರು ತಂದೆಯಾಗಿದ್ದಾರೆ, ತಾಯಿಯಾಗಿದ್ದಾರೆ, ಮಕ್ಕಳುಗಳಾಗಿದ್ದಾರೆ. ಹೀಗಿರುವಾಗ, ಯಾರು ತಂದೆ, ಯಾರು ತಾಯಿ, ಯಾರು ಮಕ್ಕಳು, ಯಾರು ಹೆಂಡತಿ, ಅವರಲ್ಲಿ ಯಾರೊಬ್ಬರೂ ಕೂಡ ಈ ಜನ್ಮದಲ್ಲಿ ಇರುವುದಿಲ್ಲ. ನಾವೂ ಕೂಡ ಅವರಿಗೆ ಯಾವುದೇ ರೀತಿಯಲ್ಲಿ ಸಂಬಂಧಿಕರಾಗಿರುವುದಿಲ್ಲ. ಈ ಜನ್ಮದಲ್ಲಿ ತಂದೆ, ತಾಯಿ, ಹೆಂಡತಿ, ಮಕ್ಕಳು ಯಾರಾಗಿದ್ದಾರೋ, ಅವರು ಕೇವಲ ಈ ಜನ್ಮಕ್ಕಷ್ಟೇ ಸೀಮಿತರಾದವರು. ಸಂಸಾರವು ಬಲು ಕ್ಷಣಿಕ. ಎಲ್ಲವೂ ಕೂಡ ಭಗವಂತನ
ಅಧೀನವಾಗಿ ನಡೆದು ಹೋಗುತ್ತದೆ. ಹೀಗಿರುವಾಗ ಹೆಂಡತಿ ಮಕ್ಕಳ ಮೇಲೆ ವಿಪರೀತವಾದ ಅಭಿಮಾನವೇಕೆ? ಅವರಿಗೋಸ್ಕರ ಸಮಯವನ್ನು ವ್ಯರ್ಥ- ಮಾಡುವುದೇಕೆ? ಇದನ್ನು ವಿವೇಚನೆ ಮಾಡಿ, ಸಂಸಾರದಲ್ಲಿ ಅನುರಕ್ತನಾಗದೇ ಕರ್ತವ್ಯದೃಷ್ಟಿಯಿಂದಷ್ಟೇ ಬದುಕಲು ಕಲಿಯಬೇಕು.
ನೈವಾಸ್ಯ ಕಶ್ಚಿದ್ ಭವಿತಾ ನಾಯಂ ಭವತಿ ಕಸ್ಯಚಿತ್ |
ಪಥಿ ಸಂಗತಮೇವೇದಂ ದಾರಬಂಧುಸುಹೃದ್ಗಣೈಃ ॥39॥
ಈ ಜಗತ್ತಿನಲ್ಲಿ ಯಾರೊಬ್ಬನೂ ಕೂಡ ಯಾರಿಗೂ ಉಪಕಾರಿಯಲ್ಲ. ಯಾರಿಗೂ ಸಂಬಂಧಪಟ್ಟವನೂ ಅಲ್ಲ. ತಮ್ಮ ಕರ್ಮಕ್ಕೆ ಅನುಗುಣವಾಗಿ ದಾರಿಯಲ್ಲಿ ಪ್ರಯಾಣ ಮಾಡುವವರ ಜೊತೆ ಕೂಡುವಂತೆ ಇವರೂ ಕೂಡ ಕೂಡಿ ಅಗಲುತ್ತಾರೆ.
ವಿವರಣೆ - ತಂದೆ, ತಾಯಿ, ಹೆಂಡತಿ, ಮಕ್ಕಳು, ಸ್ನೇಹಿತರು, ಬಂಧುಗಳು ಇವರೆಲ್ಲರೂ ಕೂಡ ಅತ್ಯಂತ ಕ್ಷಣಿಕರು. ದಾರಿಯಲ್ಲಿ ನಡೆದು ಹೋಗುವಾಗ ಅನೇಕರು ನಮ್ಮ ಜೊತೆ ಕೆಲವು ಕ್ಷಣಗಳ ಕಾಲ ಇರುತ್ತಾರೆ. ಅನಂತರ ಅವರು ಬೇರೆ ಊರಿಗೆ ಹೋಗುತ್ತಾರೆ. ನಾವು ನಮ್ಮ ಊರಿಗೆ ತೆರಳುತ್ತೇವೆ. ಅದರಂತೆ ಮೋಕ್ಷದ ದಾರಿಯಲ್ಲಿ ಸಾಗುವಾಗ, ಈ ಹೆಂಡತಿ, ಮಕ್ಕಳು ಮೊದಲಾದವ- ರೆಲ್ಲರೂ ಕೆಲವು ಕಾಲವಷ್ಟೇ ನಮ್ಮ ಜೊತೆ ಇರುತ್ತಾರೆ. ಇದನ್ನೆಲ್ಲಾ ಆಲೋಚನೆ ಮಾಡಿ, ಮನಸ್ಸನ್ನು ಸ್ಥಿರಗೊಳಿಸಬೇಕು.
ಕ್ವಾಸಂ ಕ್ವಾಸ್ಮಿ ಗಮಿಷ್ಯಾಮಿ ಕೋ ನ್ವಹಂ ಕಿಮಿಹಾಸ್ಥಿತಃ |
ಕಸ್ಮಾತ್ ಕಮನುಶೋಚೇಯಮಿತ್ಯೇವಂ ಸ್ಥಾಪಯೇನ್ಮನಃ ॥40॥

ಆದ್ದರಿಂದ ಯಾರು ವಿವೇಕಿಯೋ, ಅವನು ತನ್ನ ಮನಸ್ಸಿನಲ್ಲಿ ನಾನು ಎಲ್ಲಿ- ದ್ದೇನೆ? ಎಲ್ಲಿಗೆ ಹೋಗುತ್ತಿದ್ದೇನೆ? ನಾನು ಯಾರು? ಇಲ್ಲಿಗೇಕೆ ಬಂದಿದ್ದೇನೆ? ಯಾರಿಗೋಸ್ಕರ ಇಲ್ಲಿ ಇದ್ದೇನೆ? ಏತಕ್ಕಾಗಿ ಇದನ್ನೆಲ್ಲಾ ಆಲೋಚನೆ ಮಾಡುತ್ತಿ- ದ್ದೇನೆ? ಹೀಗೆ ತನ್ನಂತರಂಗದಲ್ಲಿ ಆತ್ಮವಿಮರ್ಶೆಯನ್ನು ಮಾಡಿಕೊಂಡು ಮನಸ್ಸನ್ನು ಸ್ಥಿರಗೊಳಿಸಬೇಕು.

ಅನಿತ್ಯೇ ಪ್ರಿಯಸಂವಾಸೇ ಸಂಸಾರೇ ಚಕ್ರವದ್ ಗತೌ |
ನ ದೃಷ್ಟಪೂರ್ವಂ ಪ್ರತ್ಯಕ್ಷಂ ಪರಲೋಕಂ ವಿದುರ್ಬುಧಾಃ ॥
ಆತಮಾಂಸ್ತ್ವನತಿಕ್ರಮ್ಯ ಶ್ರದ್ಧಾತವ್ಯಂ ಬುಭೂಷತಾ ॥41॥

ಈ ಸಂಸಾರವು ಚಕ್ರದಂತೆ ಸುತ್ತುತ್ತಿದೆ. ಇದರಲ್ಲಿ ಪ್ರಿಯವಾದವರ ಜೊತೆ ಸೇರುವಿಕೆ ಅನಿತ್ಯವಾಗಿದೆ, ಶಾಶ್ವತವಲ್ಲ. ಯಾರು ವಿವೇಕಿಯೋ, ಅವನು ಬಂಧುಮರಣದಿಂದ ದುಃಖಿಸಬಾರದು. ಪರಲೋಕವು ಕಣ್ಣಿಗೆ ಕಾಣಿಸುವುದಲ್ಲ. ಯಾರು ಪರಲೋಕಕ್ಕೆ ಆಸೆ ಪಡುತ್ತಾನೋ, ಅವನು ಶಾಸ್ತ್ರಮಾರ್ಯಾದೆಯನ್ನು ಮೀರದೇ ಅದರಲ್ಲಿ ನಂಬಿಕೆಯನ್ನಿಡಬೇಕೆಂದು ವಿದ್ವಾಂಸರು ಹೇಳುತ್ತಾರೆ. ಆದರೆ ಯಾರು ಶ್ರೇಯಸ್ಸನ್ನು ಅಪೇಕ್ಷಿಸುತ್ತಾನೋ, ಅವನು ವೇದಗಳಲ್ಲಿ ಹೇಳಿದ್ದನ್ನು ಉಲ್ಲಂಘನೆ ಮಾಡದೇ ಶ್ರದ್ಧೆಯನ್ನು ಹೊಂದಬೇಕು.

ವಿವರಣೆ - ನಾವು ಪರಲೋಕವನ್ನು ನೋಡದೇ ಇರಬಹುದು. ಅಥವಾ ನೋಡಿದ್ದು ನೆನಪಿಲ್ಲದೇ ಇರಬಹುದು. ಆದರೆ ಯಾರು ಧರ್ಮಾಧರ್ಮಗಳ ಬಗ್ಗೆ, ಪರಲೋಕದ ಬಗ್ಗೆ ಅನುಭವದಿಂದ ಮಾತನಾಡುತ್ತಾರೋ, ಅಂಥ ಋಷಿ- ಮುನಿಗಳ ಮಾತಿನಲ್ಲಿ ಶ್ರದ್ಧೆಯನ್ನಿಡಬೇಕು. ವೇದೋಕ್ತವಾದ ಕರ್ಮಗಳನ್ನು ಆಚರಿಸುತ್ತಾ, ವೇದವು ಹೇಳಿಕೊಟ್ಟ ಮಾರ್ಗದಲ್ಲಿ ಸಾಗಬೇಕು. ಅಂಥವನು ಮಾತ್ರ ನಿಜವಾದ ವಿವೇಕಿ ಎಂಬುದಾಗಿ ಕರೆಸಿಕೊಳ್ಳುತ್ತಾನೆ.

ಕುರ್ವೀತ ಪಿತೃದೈವತ್ಯಂ ಧರ್ಮಾಣಿ ಚ ಸಮಾಚರೇತ್ |
ಯಜೇಚ್ಚ ವಿದ್ವಾನ್ ವಿಧಿವತ್ ತ್ರಿವರ್ಗಂ ಚಾಪ್ಯನುವ್ರಜೇತ್ ॥42॥

ಯಾರು ನಿಜವಾದ ಜ್ಞಾನಿಯೋ, ಅವನು ಪಿತೃಸಂಬಂಧಿಯಾದ ಶ್ರಾದ್ಧ, ತರ್ಪಣ ಮೊದಲಾದ ಕಾರ್ಯಗಳನ್ನು ಮಾಡಬೇಕು. ದೇವತೆಗಳಿಗೆ ಸಂಬಂಧಪಟ್ಟ ಧರ್ಮಾಚರಣೆಗಳನ್ನು ಮಾಡಬೇಕು. ಹಾಗೂ ಯಾಗದ ಮೂಲಕ ಎಲ್ಲಾ ದೇವತೆ- ಗಳನ್ನು ಸಂತೋಷ ಪಡಿಸಬೇಕು. ಹೀಗೆ ಧರ್ಮ, ಅರ್ಥ, ಕಾಮಗಳಲ್ಲಿ ಅನುರಕ್ತ- ನಾಗಬೇಕು.

ಸನ್ನಿಮಜ್ಜೇಜ್ಜಗದಿದಂ ಗಂಭೀರೇ ಕಾಲಸಾಗರೇ |
ಜರಾಮೃತುಯಮಹಾಗ್ರಾಹೇ ನ ಕಶ್ಚಿದವಬುದ್ಧ್ಯತೇ ॥43॥

ಈ ಕಾಲವೆಂಬ ಸಾಗರವು ಮುಪ್ಪು ಮತ್ತು ಮರಣಗಳೆಂಬ ಮೊಸಳೆಗಳಿಂದ ಕೂಡಿದೆ. ಈ ಸಾಗರದಲ್ಲಿ ಜಗತ್ತೇ ಮುಳುಗಿ ಹೋಗುತ್ತಿದೆ. ಆದರೆ ಯಾವ ಮನುಷ್ಯನೂ ಕೂಡ ಇದನ್ನು ತಿಳಿದುಕೊಳ್ಳುತ್ತಿಲ್ಲ.

ಆಯುರ್ವೇದಮಧೀಯಾನಾಃ ಕೇವಲಂ ಸಪರಿಗ್ರಹಮ್ |
ದೃಶ್ಯಂತೇ ಬಹವೋ ವೈದ್ಯಾ ವ್ಯಾಧಿಭಿಃ ಸಮಭಿಪ್ಲುತಾಃ ॥44॥

ಯಾರು ಆಯುರ್ವೇದವನ್ನು ಚೆನ್ನಾಗಿ ತಿಳಿದು ವೈದ್ಯರಾಗಿದ್ದಾರೋ, ಅಂಥ- ವರೂ ಕೂಡ ರೋಗಪೀಡಿತರಾಗಿರುವುದನ್ನು ಕಣ್ಣಾರೆ ಕಾಣುತ್ತಿದ್ದೇವೆ. ಅವರಷ್ಟೇ ಅಲ್ಲದೇ ಅವರ ಪರಿವಾರದವರೂ ಕೂಡ ರೋಗಗಳಿಂದ ಪೀಡಿತರಾಗಿದ್ದಾರೆ.

ತೇ ಪಿಬಂತಃ ಕಷಾಯಾಂಶ್ಚ ಸರ್ಪೀಂಷಿ ವಿವಿಧಾನಿ ಚ |
ನ ಮೃತ್ಯುಮತಿವರ್ತಂತೇ ವೇಲಾಮಿವ ಮಹೋದಧಿಃ ॥45॥

ಆ ಆಯುರ್ವೇದ ವೈದ್ಯರು ರೋಗದ ನಿವಾರಣೆಗಾಗಿ ಅನೇಕ ಬಗೆಯ ಕಷಾಯಗಳನ್ನು ಕುಡಿಯುತ್ತಾರೆ. ಔಷಧಿಸಸ್ಯಗಳಿಂದ ಬೆರೆಸಿದ ಘೃತಗಳನ್ನು ಕುಡಿ- ಯುತ್ತಾರೆ. ಆದರೆ ಸಮುದ್ರವು ತೀರವನ್ನು ದಾಟಿ ಹೊರಗೆ ಬಾರದೇ ಇರುವಂತೆ ಅವರೂ ಕೂಡ ಮೃತ್ಯುವನ್ನು ದಾಟಿ, ಹೊರಗಡೆ ಬರಲು ಸಾಧ್ಯವಾಗುವುದಿಲ್ಲ.

ವಿವರಣೆ - ಸಾಮಾನ್ಯವಾಗಿ ಆಯುರ್ವೇದ ವೈದ್ಯರು ಮುಪ್ಪು ಬರುವುದಿಲ್ಲ, ಯಾವುದೇ ರೋಗಗಳು ಬರುವುದಿಲ್ಲ ಎಂದು ಹೇಳುತ್ತಾ ಅನೇಕ ಬಗೆಯ ಔಷಧಿಗಳನ್ನು ನೀಡುತ್ತಾರೆ. ಮತ್ತೊಬ್ಬರಿಗೆ ಚಿಕಿತ್ಸೆಗಳನ್ನು ಮಾಡುತ್ತಾರೆ. ಆದರೆ ಸ್ವತಃ ತಾವೇ ಆ ಮೃತ್ಯುಕೂಪದಲ್ಲಿ ಬಿದ್ದಿರುತ್ತಾರೆ. ತಮಗೆ ಅಂಟಿಕೊಂಡ ರೋಗಗಳನ್ನು ಪರಿಹರಿಸಿಕೊಳ್ಳಲು ಅವರಿಗೆ ಸಾಧ್ಯವಾಗುತ್ತಿಲ್ಲ. ವೈದ್ಯವಿಜ್ಞಾನವು ಪ್ರತಿಯೊಂದ- ಕ್ಕೂ ಉಪಾಯವನ್ನು ಹೇಳಿದೆ. ಅದೆಲ್ಲವನ್ನೂ ಅನುಷ್ಠಾನಕ್ಕೆ ತಂದರೂ, ಇವರಿಂದ ರೋಗವನ್ನು ದಾಟಲು ಸಾಧ್ಯವಾಗುತ್ತಿಲ್ಲ. ಮರಣವನ್ನೂ ಕೂಡ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದರಿಂದಲೇ ನಮಗೆ ಸ್ಪಷ್ಟವಾಗುತ್ತದೆ. ಎಲ್ಲವೂ ಕೂಡ ಕಾಲದ ಅಧೀನ ಎಂದು.

ರಸಾಯನವಿದಶ್ಚೈವ ಸುಪ್ರಯುಕ್ತರಸಾಯನಾಃ |
ದೃಶ್ಯಂತೇ ಜರಯಾ ಭಗ್ನಾ ನಗಾ ನಾಗೈರಿವೋತ್ತಮೈಃ ॥46॥

ವೈದ್ಯರುಗಳು ಆಯುರ್ವೇದಶಾಸ್ತ್ರವನ್ನು ಅಧ್ಯಯನಮಾಡಿ, ರಸಾಯನಗಳನ್ನು ಸಿದ್ಧಪಡಿಸುತ್ತಾರೆ. ಮತ್ತು ಆಯುರ್ವೇದಶಾಸ್ತ್ರ ಹೇಳಿದ ಪ್ರಕಾರದಲ್ಲಿಯೇ ಎಲ್ಲಾ ಪಥ್ಯಗಳನ್ನು ಮಾಡುತ್ತಾ ಔಷಧಿಗಳನ್ನು ಸೇವಿಸುತ್ತಾರೆ. ಆದರೂ ಕೂಡ ವೃಕ್ಷಗಳು ಬಲಿಷ್ಠವಾದ ಆನೆಯ ಶಕ್ತಿಯಿಂದ ಹೇಗೆ ಮುರಿದುಬಿಡುತ್ತವೋ, ಹಾಗೆಯೇ ಈ ವೈದ್ಯರೂ ಕೂಡ ಮುಪ್ಪಿನಿಂದ ಭಗ್ನರಾಗುತ್ತಾರೆ.

ತಥೈವ ತಪಸೋಪೇತಾಃ ಸ್ವಾಧ್ಯಾಯಾಭ್ಯಸನೇ ರತಾಃ |
ದಾತಾರೋ ಯಜ್ಞಶೀಲಾಶ್ಚ ನ ತರಂತಿ ಜರಾಂತಕೌ ॥47॥

ಇದರಂತೆ ಋಷಿಮುನಿಗಳು ತಪಸ್ಸಿನಲ್ಲಿ ನಿರತರಾಗಿರುತ್ತಾರೆ. ವೇದಶಾಸ್ತ್ರಗಳ ಅಧ್ಯಯನದಲ್ಲಿ ಆಸಕ್ತರಾಗಿರುತ್ತಾರೆ. ಇವರುಗಳು ಮತ್ತು ದಾನಿಗಳು, ಯಜ್ಞ- ಶೀಲರು ಆ ವೈದ್ಯರಂತೆಯೇ ಮುಪ್ಪು ಮತ್ತು ಸಾವುಗಳನ್ನು ದಾಟಲು ಸಮರ್ಥ- ರಾಗುವುದಿಲ್ಲ.

ನ ಹ್ಯಹಾನಿ ನಿವರ್ತಂತೇ ನ ಮಾಸಾ ನ ಪುನಃ ಸಮಾಃ |
ಜಾತಾನಾಂ ಸರ್ವಭೂತಾನಾಂ ನ ಪಕ್ಷಾ ನ ಪುನಃ ಕ್ಷಪಾಃ ॥48॥

ಕಳೆದು ಹೋದ ದಿನಗಳು ಪುನಃ ಬರುವುದಿಲ್ಲ. ಕಳೆದು ಹೋದ ರಾತ್ರಿಗಳು, ಪಕ್ಷಗಳು, ಮಾಸಗಳು, ವರ್ಷಗಳು ಎಂದೆಂದೂ ಹಿಂದೆ

ತಿರುಗಿ ಬರುವುದಿಲ್ಲ.
ಟಿಪ್ಪಣಿ - ನಹ್ಯಹಾನಿ ನಿವರ್ತಂತ ಇತ್ಯತ್ರ ಅಹಾನಿ ಗತಾಹಾನಿ ನ ನಿವರ್ತಂತೇ ಪುನರ್ನಾಯಾಂತಿ | ಏವಮುತ್ತರತ್ರಾಪಿ |
`ನಹ್ಯಹಾನಿ' ಎಂದರೆ ಕಳೆದ ದಿನಗಳು ಎಂದರ್ಥ. ನ ನಿವರ್ತಂತೇ' ಎಂದರೆ ಪುನಃ ಬರುವುದಿಲ್ಲ ಎಂದರ್ಥ.
ವಿವರಣೆ - ಆಯುಷ್ಯವು ಪ್ರತಿಕ್ಷಣವು ಕ್ಷೀಣಿಸುತ್ತದೆ. ಕಾಲದ ಬೆಲೆಯನ್ನು ಅರ್ಥಮಾಡಿಕೊಳ್ಳದೇ ಆಯುಷ್ಯದ ಹರಣವನ್ನೇ ಎಲ್ಲರೂ ಮಾಡುತ್ತಾರೆ. ಸೂರ್ಯಾಸ್ತವಾಯಿತೆಂದರೆ ಸಂತೋಷ ಪಡಬಾರದು. ಈ ದಿನದಲ್ಲಿ ನಾನು ಯಾವುದೇ ಸಾಧನೆಯನ್ನು ಮಾಡಲಿಲ್ಲ ಎಂಬುದಾಗಿ ಎಚ್ಚೆತ್ತುಕೊಂಡು, ಸಮಯ -ಸಾರ್ಥಕದ ಬಗ್ಗೆ ಗಮನವನ್ನು ಹರಿಸಬೇಕು. ಉಳಿದವರು ರೋಗರುಜಿನಗಳಿಂದ ಮರಣಗಳಿಂದ ಬಾಧಿತರಾಗುತ್ತಿದ್ದಾರೆ. ನಾನೂ ಕೂಡ ಇಂಥ ಸನ್ನಿವೇಶಕ್ಕೆ ಮುಂದೊಂದು ದಿನ ಭಾಗಿಯಾಗುತ್ತೇನೆ. ಆದ್ದರಿಂದ ಈಗ ನನಗೆ ದೊರೆತ ಸಮಯವನ್ನು ಸಾರ್ಥಕ ಮಾಡಿಕೊಳ್ಳಬೇಕು ಯಾವುದೇ ರೀತಿಯಲ್ಲಿ ಆಲಸ್ಯವನ್ನು ನಾನು ಮಾಡಬಾರದು ಎಂಬುದಾಗಿ ಎಲ್ಲಿಯ ತನಕ ಮನುಷ್ಯನು ಎಚ್ಚೆತ್ತು- ಕೊಳ್ಳುವುದಿಲ್ಲವೋ, ಅಲ್ಲಿಯ ತನಕವೂ ಅವನು ಅವಿವೇಕಿಯಾಗಿಯೇ ಬದುಕು-ತ್ತಾನೆ.
ಸೋऽಯಂ ವಿಪುಲಮಧ್ವಾನಂ ಕಾಲೇನ ಧ್ರುವಮಧ್ರುವಃ |
ನರೋऽವಶಃ ಸಮಭ್ಯೇತಿ ಸರ್ವಭೂತನಿಷೇವಿತಮ್ ॥49॥
ಅತ್ಯಂತ ಅಸ್ಥಿರನಾದ, ಅಸ್ವತಂತ್ರನಾದ ಮನುಷ್ಯನ ಕಾಲವು ಸನ್ನಿಹಿತವಾದಾಗ ಎಲ್ಲಾ ಪ್ರಾಣಿಗಳು ತುತ್ತಾಗುವ ವಿಶಾಲವಾದ ಆ ಮೃತ್ಯುವಿನ ದಾರಿಯನ್ನು ಹಿಡಿ- ಯುತ್ತಾನೆ.
ದೇಹೋ ವಾ ಜೀವತೋऽಪ್ಯೇತಿ ಜೀವೋ ವಾಪ್ಯೇತಿ ದೇಹತಃ |
ಪಥಿ ಸಂಗತಮೇವೇದಂ ದಾರೈರನ್ಯೈಶ್ಚ ಬಂಧುಭಿಃ ॥50॥
ಒಂದೋ ದೇಹವು ಜೀವನನ್ನು ಬಿಡುತ್ತದೆ. ಅಥವಾ ಜೀವನು ದೇಹವನ್ನು ಬಿಡುತ್ತಾನೆ. ಇದರ ನಡುವೆ ಸೇರುವ ಹೆಂಡತಿ ಮಕ್ಕಳೆಂಬ ಸಂಸರ್ಗವು ಕೇವಲ ಪ್ರಯಾಣಿಕರ ಸೇರುವಿಕೆಯಂತೆ ಅಶಾಶ್ವತವಾಗಿದೆ.
ಟಿಪ್ಪಣಿ - ದೇಹೋ ವಾ ಜೀವತಃ ಇತ್ಯತ್ರ ಜೀವತಃ ಜೀವಾತ್ ದೇಹೋ ಗಚ್ಛೇತ್, ಶಿರಶ್ಛೇದದಾಹಾದೌ ದೇಹಸ್ಯೈವ ಪ್ರಾಗ್ ಗಮನಾತ್|
ಜೀವೋऽಪ್ಯೇತಿ ದೇಹತಃ ಯೋಗಾಭ್ಯಾಸಾದಿನಾ ಮರಣೇ ಸತಿ ದೇಹತಃ ಜೀವಃ ಅಪ್ಯೇತಿ ನಾಶಂ ಪ್ರಾಪ್ನೋತಿ |
`ಜೀವಿತಃ' ಜೀವಿಸಲ್ಪಟ್ಟ, `ದೇಹಃ' ದೇಹವು ನಾಶವಾಗುತ್ತದೆ. ಶಿರಶ್ಛೇದ ಮತ್ತು ದಾಹಾದಿಗಳಲ್ಲಿ ದೇಹವೇ ಮೊದಲು ನಾಶವಾಗುತ್ತದೆ. ಅನಂತರ ಜೀವನು ತೆರಳುತ್ತಾನೆ. ಯೋಗಾಭ್ಯಾಸಗಳಿಂದ ಮರಣವಾದಾಗ ಮೊದಲು ಜೀವನು ಹೊರಡುತ್ತಾನೆ. ಅನಂತರ ದೇಹವು ನಾಶವಾಗುತ್ತದೆ.
ನಾಯಮತ್ಯಂತಸಂವಾಸೋ ಲಭ್ಯತೇ ಜಾತು ಕೇನಚಿತ್ |
ಅಪಿ ಸ್ವೇನ ಶರೀರೇಣ ಕಿಮುತಾನ್ಯೇನ ಕೇನಚಿತ್ ॥51॥
ಒಬ್ಬ ಮನುಷ್ಯನು ಮತ್ತೊಬ್ಬ ಮನುಷ್ಯನ ಜೊತೆ ಸ್ನೇಹದಿಂದ ಹೆಚ್ಚು ಕಾಲ
ಬದುಕಲು ಸಾಧ್ಯವಿಲ್ಲ. ಬೇರೆ ಎಲ್ಲರಿಗಿಂತಲೂ ಹೆಚ್ಚು ಪ್ರೀತಿಯನ್ನು ಮಾಡುವ ತನ್ನ ಶರೀರದಲ್ಲಿಯೇ ತಾನು ಹೆಚ್ಚು ಕಾಲವಿರಲು ಸಾಧ್ಯವಾಗುವುದಿಲ್ಲ. ಹೀಗಿರುವಾಗ ಮತ್ತೊಬ್ಬನ ಜೊತೆ ಹೆಚ್ಚು ಕಾಲ ಇರುವುದಿಲ್ಲವೆಂದು ಹೇಳುವುದೇನಿದೆ.
ವಿವರಣೆ - ಪ್ರೀತ್ಯಾಸ್ಪದರು ಅಗಲಿದಾಗ ದುಃಖ ಪಡುವುದು, ಒಂದಾದಾಗ ಸಂತೋಷಪಡುವುದು, ಇದು ಅವಿವೇಕಿಗಳ ವರ್ತನೆ. ಏಕೆಂದರೆ `ಯಾರಿಗೆ ಯಾರಿಗುಂಟು ಎರವಿನ ಸಂಸಾರ' ಎಂಬ ನಾಣ್ನುಡಿಯಂತೆ ಪ್ರೀತ್ಯಾಸ್ಪದನಾದ ವ್ಯಕ್ತಿಯಿದ್ದರೂ ಅವನ ಜೊತೆ ಅಭಿಮಾನವನ್ನು ಬೆಳಸಿಕೊಳ್ಳದೇ ಬದುಕಬೇಕು. ಆಗಷ್ಟೇ ಅಗಲಿದಾಗ ಯಾವುದೇ ದುಃಖವು ಉಂಟಾಗುವುದಿಲ್ಲ. ತನ್ನ ಶರೀರ- ವನ್ನೂ ಕೂಡ ಹೆಚ್ಚು ಪ್ರೀತಿ ಮಾಡಬಾರದು. ಸಾಧನೆಗೆ ಅನುಕೂಲವಾಗಲು ಮಾತ್ರ ಅದನ್ನು ಉಪಯೋಗಿಸಿಕೊಳ್ಳಬೇಕು. ಒಂದು ವಾಹನವನ್ನು ಉಪ- ಯೋಗಿಸಿಕೊಂಡು ನಾವು ಎಲ್ಲಿಗೆ ತಲುಪಬೇಕೋ, ಅಲ್ಲಿಗೆ ತಲುಪುತ್ತೇವೆ. ತಲುಪುವ ತನಕ ಮಾತ್ರ ವಾಹನವು ನಮಗೆ ಅನಿವಾರ್ಯವಾಗುತ್ತದೆ. ನಮ್ಮ ಉದ್ದಿಷ್ಟವಾದ ಸ್ಥಳವು ದೊರೆತ ಮೇಲೆ ವಾಹನವನ್ನು ಯಾವುದೇ ಅಭಿಮಾನ- ವಿಲ್ಲದೆ ಬಿಟ್ಟು ಹೇಗೆ ತೆರಳುತ್ತೇವೋ, ಅದರಂತೆ ಈ ದೇಹವೂ ಕೂಡ ಒಂದು ಜನ್ಮದಿಂದ ಮತ್ತೊಂದು ಜನ್ಮದ ತನಕ ನಡೆಯಲು ವಾಹನವಾಗಿದೆ. ಆದ್ದರಿಂದ ದೇಹದ ವಿಷಯದಲ್ಲೂ ಹೆಚ್ಚು ಅಭಿಮಾನವನ್ನು ಮಾಡಬಾರದು.
ಕ್ವ ನು ತೇऽದ್ಯ ಪಿತಾ ರಾಜನ್ ಕ್ವ ನು ತೇऽದ್ಯ ಪಿತಾಮಹಃ |
ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯಂತಿ ತೇऽಪಿ ಚ ॥52॥
ಪಾಪರಹಿತನಾದ ಜನಕರಾಜನೇ! ನಿನ್ನ ತಂದೆಯು ಎಲ್ಲಿದ್ದಾನೆ ತಿಳಿಸು. ನಿನ್ನ ತಾತಂದಿರು ಎಲ್ಲಿದ್ದಾರೆ ತಿಳಿಸು. ಯಾರೂ ಸಹ ಇಂದು ನಿನ್ನ ಕಣ್ಣಿಗೆ ಕಾಣಿಸುತ್ತಿಲ್ಲ. ನೀನೂ ಸಹ ಅವರ ಕಣ್ಣಿಗೆ ಕಾಣಿಸುತ್ತಿಲ್ಲ.
ವಿವರಣೆ - ನಿನ್ನ ತಂದೆ ತಾತಂದಿರು, ನಿನ್ನ ಜೊತೆ ಇಂದು ಹೇಗೆ ಇರು- ವುದಿಲ್ಲವೋ, ಅದರಂತೆ ಮುಂದೊಂದು ದಿನ ಹೆಂಡತಿ, ಮಕ್ಕಳು, ಮೊಮ್ಮಕ್ಕಳಿಂದ ದೂರನಾಗುವಿ. ಅಂದು ಅವರನ್ನು ನೀನು ನೋಡಲು ಸಾಧ್ಯವಿಲ್ಲ. ನಿನ್ನನ್ನು ಅವರು ನೋಡಲು ಸಾಧ್ಯವಿಲ್ಲ. ಆದ್ದರಿಂದ ಹೆಂಡತಿ ಮಕ್ಕಳ ಮೇಲೆ ಅಭಿಮಾನ- ವನ್ನು ಪರಿತ್ಯಾಗ ಮಾಡಬೇಕು.
ನ ಹ್ಯೇವ ಪುರುಷೋ ದ್ರಷ್ಟಾ ಸ್ವರ್ಗಸ್ಯ ನರಕಸ್ಯ ವಾ |
ಆಗಮಸ್ತು ಸತಾಂ ಚಕ್ಷುರ್ನೃಪತೇ ತಮಿಹಾಚರ ॥53॥
ನರೋತ್ತಮನೇ! ಯಾರೇ ಒಬ್ಬ ಪುರುಷನು ಮಾಂಸಮಯವಾದ ಈ ಕಣ್ಣಿನಿಂದ ಅತೀಂದ್ರಿಯವಾದ ಸ್ವರ್ಗವನ್ನು ಕಾಣಲು ಸಾಧ್ಯವಿಲ್ಲ. ನರಕವನ್ನೂ ಕೂಡ ನೋಡಲು ಸಾಧ್ಯವಿಲ್ಲ. ಸಜ್ಜನರಿಗೆ ಸ್ವರ್ಗ ಹಾಗೂ ನರಕಗಳನ್ನು ನೋಡುವ ಕಣ್ಣು ಎಂದರೆ ಅದು ವೇದ ಮಾತ್ರ. ಅಂಥ ಕಣ್ಣಿನಂತಿರುವ ವೇದದಲ್ಲಿ ಹೇಳಲ್ಪಟ್ಟ ಕರ್ತವ್ಯಗಳನ್ನು ಆಚರಿಸುವುದರಲ್ಲಿ ಆಸಕ್ತನಾಗು.
ವಿವರಣೆ - ದೇವರು, ಧರ್ಮ, ಸ್ವರ್ಗ, ನರಕ ಇವುಗಳನ್ನು ವೇದದಿಂದಷ್ಟೇ ತಿಳಿಯಲು ಸಾಧ್ಯ. ವೇದವು ಹೇಳುವ ವಿಷಯದಲ್ಲಿ ವಿಶ್ವಾಸವನ್ನಿಟ್ಟು, ನರಕಕ್ಕೆ ಹೆದರಿ ಸ್ವರ್ಗದಲ್ಲಿ ಅನುರಕ್ತರಾಗಿ ನಾವು ನಮ್ಮ ಕರ್ತವ್ಯಗಳಲ್ಲಿ ತೊಡಗಬೇಕು. ಸ್ವರ್ಗಾದಿಗಳನ್ನು

ನೋಡಲು ನಮಗಿರುವ ಕಣ್ಣು ಎಂದರೆ ವೇದಮಾತ್ರ. ಯಾರು ಈ ವೇದವನ್ನು ಓದುವುದಿಲ್ಲವೋ, ಅವರು ಕಣ್ಣಿಲ್ಲದ ಕುರುಡನಂತೆ ಪ್ರಪಾತಕ್ಕೆ ಬಿದ್ದು ಅಧೋಗತಿಯನ್ನೇ ಹೊಂದುತ್ತಾನೆ.

ಚರಿತಬ್ರಹ್ಮಚರ್ಯೋ ಹಿ ಪ್ರಜಾಯೇತ ಯಜೇತ ಚ |
ಪಿತೃದೇವಮಹರ್ಷೀಣಾಮಾನೃಣ್ಯಾದನಸೂಯಕಃ ॥54॥

ತ್ರೈವರ್ಣಿಕನಾದ ಪುರುಷನು ಬ್ರಹ್ಮಚರ್ಯ ಆಶ್ರಮವನ್ನು ನಿಷ್ಠೆಯಿಂದ ಪರಿ- ಪಾಲನೆ ಮಾಡಬೇಕು. ಆ ಸಂದರ್ಭದಲ್ಲಿ ಗುರುಶುಶ್ರೂಷೆಯನ್ನು ಮಾಡುತ್ತಾ, ವೇದವನ್ನು ಅಧ್ಯಯನ ಮಾಡಬೇಕು. ವೇದಾಂಗಗಳನ್ನೂ ಕೂಡ ಅಧ್ಯಯನ ಮಾಡಬೇಕು. ಜೀವನದ ಪ್ರಾರಂಭದಲ್ಲಿ ಹೀಗೆ ಬ್ರಹ್ಮಚರ್ಯ ಆಶ್ರಮವನ್ನು ಪಾಲನೆ ಮಾಡಿದ ಮೇಲೆ, ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡಬೇಕು. ಗೃಹಸ್ಥಾಶ್ರಮವನ್ನು ತೆಗೆದುಕೊಂಡ ಮೇಲೆ ಪಿತೃಯಜ್ಞ, ದೇವಯಜ್ಞ, ಮನುಷ್ಯಯಜ್ಞಗಳನ್ನು ಮಾಡುವ ಮೂಲಕ ಋಣಪರಿಹಾರವನ್ನು ಮಾಡಿಕೊಳ್ಳಬೇಕು. ಪ್ರಜಾಸಂತಾನವನ್ನು ಅಭಿವೃದ್ಧಿಗೊಳಿಸಬೇಕು. ಯಜ್ಞಗಳನ್ನು ಆಚರಣೆ ಮಾಡಬೇಕು. ಪ್ರತಿಯೊಂದು ಕರ್ಮಗಳ ಹಿಂದೆ ಅಸೂಯೆಯೆಂಬ ದೋಷವು ಬರಬಾರದು.

ಟಿಪ್ಪಣಿ - ಪ್ರಜಾಯೇತ ಯಜೇತ ಚ ಇತ್ಯತ್ರ ಪ್ರಜಾಯೇತ ಪ್ರಜಾಂ ಜನಯೇತ್ |

ಟಿಪ್ಪಣಿ - ತ್ರೈವರ್ಣಿಕನಾದ ಮನುಷ್ಯನು ಹುಟ್ಟಿದಾಗಿನಿಂದ ಸಾಯುವ ತನಕ ಹೇಗೆ ಸಾಧನೆಯನ್ನು ಮಾಡಿಕೊಳ್ಳಬೇಕು. ಬ್ರಹ್ಮಚರ್ಯ ಆಶ್ರಮದಲ್ಲಿ ಯಾವ ಧರ್ಮವನ್ನು ಮುಖ್ಯವಾಗಿ ಅನುಷ್ಠಾನ ಮಾಡಬೇಕು ಎಂಬುದರ ಬಗ್ಗೆ ಈ ಶ್ಲೋಕದಲ್ಲಿ ವಿಶ್ಲೇಷಣೆ ಮಾಡುತ್ತಿದ್ದಾರೆ. ಗುರುಶುಶ್ರೂಷೆ, ವೇದಾಧ್ಯಯನ, ವೇದಾಂಗಗಳ ಅಧ್ಯಯನ ಈ ಮೂರು ಬ್ರಹ್ಮಚಾರಿಗೆ ಆವಶ್ಯಕವಾದ ಕರ್ಮ- ಗಳಾಗಿವೆ. ಗೃಹಸ್ಥಾಶ್ರಮಿಗೆ ಋಣಪರಿಹಾರ, ಸಂತಾನಾಭಿವೃದ್ಧಿ, ಅಧ್ಯಯನ, ಯಜನ ಮೊದಲಾದ ಕರ್ಮಗಳು ಅತ್ಯಂತ ಅವಶ್ಯಕವಾಗಿವೆ.

ಸ ಯಜ್ಞಶೀಲಃ ಪ್ರಜನೇ ನಿವಿಷ್ಟಃ
ಪ್ರಾಗ್ ಬ್ರಹ್ಮಚಾರೀ ಪ್ರವಿಭಕ್ತಪಕ್ಷಃ |
ಆರಾಧಯೇತ್ ಸ್ವರ್ಗಮಿಮಂ ಚ ಲೋಕಂ
ಪರಂ ಚ ಮುಕ್ತತ್ವ ಹೃದಯವ್ಯಲೀಕಮ್ ॥55॥

ಸಾಧಕನಾದವನು ಮೊದಲು ಬ್ರಹ್ಮಚರ್ಯವ್ರತವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡಬೇಕು. ವೇದಾಧ್ಯಯನವು ಮುಗಿದ ಮೇಲೆ ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡಿ, ಸಂತಾನವನ್ನು ಪಡೆಯಬೇಕು. ಕಣ್ಣಿನಿಂದ ಯಾವುದೇ ತಪ್ಪನ್ನು ಮಾಡ- ಬಾರದು. ಹೃದಯದಲ್ಲಿ ಯಾವುದೇ ದೋಷವನ್ನು ಇಟ್ಟುಕೊಳ್ಳಬಾರದು. ಯಜ್ಞ- ಶೀಲನಾಗಿರಬೇಕು. ಮೋಕ್ಷವನ್ನು ಬಯಸಬೇಕು. ಪರಮಾತ್ಮನನ್ನು ಆರಾಧನೆ ಮಾಡಬೇಕು.

ಟಿಪ್ಪಣಿ - ಯಜ್ಞವನ್ನು ಆಚರಣೆ ಮಾಡಿದರೆ ದೇವತೆಗಳು ತೃಪ್ತರಾಗುತ್ತಾರೆ. ತನ್ಮೂಲಕ ಭಗವಂತನೂ ಕೂಡ ತೃಪ್ತನಾಗುತ್ತಾನೆ. ಜೀವನದಲ್ಲಿ ಬ್ರಹ್ಮಚರ್ಯ ಆಶ್ರಮವನ್ನು ಮೊದಲು ಹೊಂದಿ, ಉತ್ತಮ ಜ್ಞಾನಿಯಾಗಿ ಅನಂತರ ಗೃಹಸ್ಥಾ- ಶ್ರಮವನ್ನು ಸ್ವೀಕಾರ ಮಾಡಬೇಕು. ಅನೇಕ ಸತ್ಕರ್ಮಗಳನ್ನು ಆಚರಣೆ ಮಾಡುವ ಮೂಲಕ ಗೃಹಸ್ಥಾಶ್ರಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಹೇಳಿದ್ದಾರೆ.

ಸಮ್ಯಗ್ ಹಿ ಧರ್ಮಂ ಚರತೋ ನೃಪಸ್ಯ
ದ್ರವ್ಯಾಣಿ ಚಾಭ್ಯಾಹರತೋ ಯಥಾವತ್ |
ಪ್ರವೃತ್ತಧರ್ಮಸ್ಯ ಯಶೋಽಭಿವರ್ಧತೇ
ಸರ್ವೇಷು ಲೋಕೇಷು ಚರಾಚರೇಷು ॥56॥

ಧರ್ಮವನ್ನು ಅಚ್ಚುಕಟ್ಟಾಗಿ ಅನುಷ್ಠಾನ ಮಾಡಬೇಕು. ಧರ್ಮಮಾರ್ಗದಲ್ಲಿ ಪ್ರಜಾಪರಿರಕ್ಷಣೆಯನ್ನು ಮಾಡಬೇಕು. ಆಯಾ ಪ್ರಜೆಗಳಿಗೆ ಬರುವ ಆದಾಯಕ್ಕೆ ಅನುಗುಣವಾಗಿ ತೆರಿಗೆಯನ್ನು ತೆಗೆದುಕೊಳ್ಳಬೇಕು. ಹೀಗೆ ಯಾರು ಧರ್ಮ- ಮಾರ್ಗದಲ್ಲಿ ರಾಜ್ಯವನ್ನು ಪರಿರಕ್ಷಣೆ ಮಾಡುತ್ತಾನೋ, ಅಂಥ ರಾಜನ ಕೀರ್ತಿಯು ಎಲ್ಲ ಲೋಕಗಳಲ್ಲೂ ಕೂಡ ಹಬ್ಬುತ್ತದೆ.

ಟಿಪ್ಪಣಿ - ಕ್ಷತ್ರಿಯನಾದ ರಾಜನು ಏನು ಮಾಡಬೇಕೆಂಬುದನ್ನು ಈ ಶ್ಲೋಕವು ತಿಳಿಸುತ್ತಿದೆ. ತನ್ನ ವೈಯಕ್ತಿಕ ಅಭಿಪ್ರಾಯವನ್ನಿಟ್ಟುಕೊಂಡು ಒಬ್ಬರಲ್ಲಿ ಅನುರಾಗ, ಮತ್ತೊಬ್ಬರಲ್ಲಿ ದ್ವೇಷಗಳನ್ನು ಮಾಡಬಾರದು. ಎಲ್ಲ ಪ್ರಜೆಗಳನ್ನು ಅನುರಾಗ- ದಲ್ಲಿಯೇ ಕಾಣಬೇಕು. ತನಗೆ ಅವಶ್ಯಕವಿದೆಯೆಂದು ತೆರಿಗೆಯನ್ನೂ ಕೂಡ ಬಹಳ ಸ್ವೀಕಾರ ಮಾಡಬಾರದು. ಎಷ್ಟು ತೆರಿಗೆಯನ್ನು ತೆಗೆದುಕೊಂಡಾಗ ಪ್ರಜೆಗಳಿಗೆ ಕಷ್ಟವಾಗುವುದಿಲ್ಲವೋ, ಅಷ್ಟನ್ನು ಮಾತ್ರ ಸ್ವೀಕಾರ ಮಾಡಬೇಕು.

ಇತ್ಯೇವಮಾಜ್ಞಾಯ ವಿದೇಹರಾಜೋ
ವಾಕ್ಯಂ ಸಮಗ್ರಂ ಪರಿಪೂರ್ಣಹೇತುಃ |
ಅಶ್ಮಾನಮಾಮಂತ್ರ್ಯ ವಿಶುದ್ಧಬುದ್ಧಿಃ
ಯಯೌ ಗೃಹಂ ಸ್ವಂ ಪ್ರತಿ ಶಾಂತಶೋಕಃ ॥57॥

ಹೀಗೆ ಶುದ್ಧವಾದ ಬುದ್ಧಿಯಿಂದ ಕೂಡಿದ ವಿದೇಹರಾಜನು ಅಶ್ಮಮುನಿಯು ಹೇಳಿದ ಯುಕ್ತಿಯಿಂದ ಕೂಡಿದ, ಸಮಗ್ರ ಉಪದೇಶವನ್ನು ಕೇಳಿದನು. ಅದರಿಂದ ಅವನಿಗಿರುವ ದುಃಖವೆಲ್ಲವೂ ಪರಿಹಾರವಾಯಿತು. ಆ ಅಶ್ಮ ಋಷಿಯ ಅಪ್ಪಣೆಯನ್ನು ಪಡೆದುಕೊಂಡು ತನ್ನ ಅರಮನೆಗೆ ಹಿಂತಿರುಗಿದನು.

ಟಿಪ್ಪಣಿ - ಇಲ್ಲಿಯ ತನಕ ಅಶ್ಮಮುನಿಯು ಜನಕರಾಜನಿಗೆ ಉಪದೇಶ ಮಾಡಿದ್ದನ್ನು ವೇದವ್ಯಾಸದೇವರು ಯುಧಿಷ್ಠಿರನಿಗೆ ತಿಳಿಸಿದರು. ಯುಧಿಷ್ಠಿರನೇ ! ಅಶ್ಮಮುನಿಯ ಯುಕ್ತಿಯುಕ್ತವಾದ ಉಪದೇಶವನ್ನು ಕೇಳಿರುವಿ ಅಲ್ಲವೇ? ಯಾವಾಗ ಸಂಪೂರ್ಣವಾಗಿ ಉಪದೇಶವನ್ನು ಪಡೆದನೋ, ಆಗ ಜನಕರಾಜನು ಬಹಳ ಸಂತೋಷ ಪಟ್ಟನು. ತನ್ನಲ್ಲಿರುವ ದುಃಖವೆಲ್ಲವನ್ನು ಪರಿಹಾರ ಮಾಡಿ- ಕೊಂಡನು. ಮತ್ತು ರಾಜ್ಯಭಾರಕ್ಕಾಗಿ ತನ್ನ ಅರಮನೆಗೆ ಹೊರಟನು.

ತಥಾ ತ್ವಮಪ್ಯಚ್ಯುತ ಮುಂಚ ಶೋಕಂ
ಉತ್ತಿಷ್ಠ ಶಕ್ರೋಪಮ ಹರ್ಷಮೇಹಿ |
ಕ್ಷಾತ್ರೇಣ ಧರ್ಮೇಣ ಮಹೀ ಜಿತಾ ತೇ
ತಾಂ ಭುಂಕ್ಷ್ವ ಕುಂತೀಸುತ ಮಾ ವಿಷಾದೀಃ ॥58॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ವ್ಯಾಸವಾಕ್ಯೇ ಅಶ್ಮಗೀತಂ ನಾಮ ಏಕೋನತ್ರಿಂಶೋಽಧ್ಯಾಯಃ ॥29
ಯಾವುದೇ ದೋಷವಿಲ್ಲದ ಇಂದ್ರನಿಗೆ ಸಮಾನನಾದ ಕುಂತಿಪುತ್ರನೇ! ಅಶ್ಮ- ಋಷಿಯು ಜನಕರಾಜನಿಗೆ ಮನಸ್ಸಿಗೆ ನಾಟುವಂತೆ ಉಪದೇಶವನ್ನು ಮಾಡಿದರು. ಇದರಿಂದ ಆ ಜನಕರಾಜನ ಶೋಕಮೋಹಗಳೆಲ್ಲವೂ ಪರಿಹಾರವಾದವು. ಮತ್ತು ಅದೇ ಪ್ರಭಾವದಿಂದ ನೀನೂ ಸಹ ಶೋಕವನ್ನು ಪರಿತ್ಯಾಗ ಮಾಡು. ಉತ್ಸಾಹ ಭರಿತನಾಗು. ಸಂತೋಷವನ್ನು ಹೊಂದು, ನಿನ್ನ ಧರ್ಮಕ್ಕೆ ಅನುಸಾರಿಯಾಗಿ ಭೂಮಂಡಲವನ್ನು ಜಯಿಸಿರುವಿ, ನಿನಗಾಗಿ ಒಲಿದ ಭೂಮಿಯ ಅವಹೇಳವನ್ನು ಮಾಡಬೇಡ. ನಿನ್ನ ಪರಾಕ್ರಮವೆಂಬ ಶುಲ್ಕದಿಂದ ಪಡೆದುಕೊಂಡ ಈ ಭೂಮಿ- ಯನ್ನು ಅನುಭವಿಸು.
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****
30. ಮೂವತ್ತನೆಯ ಅಧ್ಯಾಯ
ವೈಶಂಪಾಯನಃ
ಅವ್ಯಾಹರತಿ ಕೌಂತೇಯೇ ಧರ್ಮಪುತ್ರೇ ಯುಧಿಷ್ಠಿರೇ |
ಗುಡಾಕೇಶೋ ಹೃಷೀಕೇಶಮಭ್ಯಭಾಷತ ಪಾಂಡವಃ ॥1॥
ವೈಶಂಪಾಯನರು ಎಲ್ಲ ಋಷಿಮುನಿಗಳು ಎಷ್ಟೇ ಸಮಾಧಾನ ಮಾಡಿದರೂ, ಯುಧಿಷ್ಠಿರನು ಏನನ್ನೂ ಮಾತನಾಡಲಿಲ್ಲ. ಮೌನವಾಗಿಯೇ ಕುಳಿತಿದ್ದ. ಹೀಗಿರು- ವಾಗ ಪಾಂಡುವಿನ ಪುತ್ರನಾದ ಅರ್ಜುನನು ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳುತ್ತಾನೆ
ಜ್ಞಾತಿಶೋಕಾಭಿಸಂತಪ್ತೋ ಧರ್ಮರಾಜಃ ಪರಂತಪಃ |
ಏಷ ಶೋಕಾರ್ಣವೇ ಮಗ್ನಸ್ತಮಾಶ್ವಾಸಯ ಮಾಧವ ॥2॥
ಓ ಮಾಧವನೇ! ಶತ್ರುಗಳಿಗೆ ತಾಪವನ್ನು ಉಂಟುಮಾಡುವ ಧರ್ಮರಾಜನು ಈಗ ಜ್ಞಾತಿಗಳ ವಿಯೋಗದಿಂದ ಬಹಳ ದುಃಖವನ್ನು ಅನುಭವಿಸುತ್ತಿದ್ದಾನೆ. ದುಃಖ- ಸಾಗರದಲ್ಲಿಯೇ ಮುಳುಗಿದ್ದಾನೆ. ಇಂಥ ನಮ್ಮಣ್ಣನಾದ ಧರ್ಮರಾಜನಿಗೆ ನೀನೇ ಸಮಾಧಾನ ಮಾಡಬೇಕು.
ಸರ್ವೇ ಸ್ಮ ತೇ ಸಂಶಯಿತಾಃ ಪುನರೇವ ಜನಾರ್ದನ |
ಅಸ್ಯ ಶೋಕಂ ಮಹಾಬಾಹೋ ಪ್ರಣಾಶಯಿತುಮರ್ಹಸಿ ॥3॥
ಅಣ್ಣನಾದ ಧರ್ಮರಾಜನು ಹೀಗೆ ದುಃಖಿತನಾದರೆ, ನಾವೆಲ್ಲರೂ ಸಂಶಯ- ಗ್ರಸ್ತರಾಗುತ್ತೇವೆ. ಏನನ್ನು ಮಾಡಬೇಕೆಂದು ತಿಳಿಯದೇ ದಿಗ್ಭ್ರಾಂತರಾಗುತ್ತೇವೆ. ಮಹಾಬಾಹುವೇ! ಕಾರುಣ್ಯದಿಂದ ಆ ಧರ್ಮರಾಜನ ಶೋಕವನ್ನು ಪರಿಹಾರ ಮಾಡು. ನೀನೊಬ್ಬನೇ ಇದಕ್ಕೆ ಸಮರ್ಥನು.
ಏವಮುಕ್ತಸ್ತು ಗೋವಿಂದೋ ವಿಜಯೇನ ಮಹಾತ್ಮನಾ |
ಪರ್ಯವರ್ತತ ರಾಜಾನಂ ಪುಂಡರೀಕೇಕ್ಷಣೋಽಚ್ಯುತಃ ॥4॥
ಜನಮೇಜಯರಾಜನೇ! ಅರ್ಜುನನು ಹೀಗೆ ಪ್ರಾರ್ಥನೆ ಮಾಡಿದಾಗ ಪುಂಡ- ರೀಕಾಕ್ಷನಾದ ಶ್ರೀಕೃಷ್ಣಪರಮಾತ್ಮನು ಹಾಗೆಯೇ ಆಗಲಿ ಎಂದು ಸಮ್ಮತಿ ನೀಡಿದನು. ರಾಜನಾದ ಧರ್ಮರಾಜನಿರುವಲ್ಲಿಗೆ ನಡೆದನು. ಅವನೆದುರು ಕುಳಿತು, ಮಾತನಾ- ಡಲು ಪ್ರಾರಂಭ ಮಾಡಿದನು.
ಅನತಿಕ್ರಮಣೀಯೋ ಹಿ ಧರ್ಮರಾಜಸ್ಯ ಕೇಶವಃ |
ಬಾಲ್ಯಾತ್ ಪ್ರಭೃತಿ ಗೋವಿಂದಃ ಪ್ರೀತ್ಯಾ ಚಾಭ್ಯಧಿಕೋಽರ್ಜುನಾತ್ ॥5॥
ಧರ್ಮರಾಜನು ಕೇಶವನಾದ ಶ್ರೀಕೃಷ್ಣನ ಮಾತನ್ನು ಎಂದೂ ಸಹ ಉಲ್ಲಂಘನೆ ಮಾಡಿರುವನಲ್ಲ. ಬಾಲ್ಯದಿಂದ ಅರ್ಜುನನಿಗಿಂತಲೂ ಹೆಚ್ಚು ಶ್ರೀಕೃಷ್ಣನೇ ಪ್ರೀತ್ಯಾ- ಸ್ಪದನಾಗಿದ್ದನು. ಶ್ರೀಕೃಷ್ಣನನ್ನು ಪ್ರೀತಿಸುವಷ್ಟು ಯಾರನ್ನೂ ಸಹ ಪ್ರೀತಿಸುತ್ತಿರಲಿಲ್ಲ.
ಸಂಪ್ರಗೃಹ್ಯ ಮಹಾಬಾಹುರ್ಭುಜಂ ಚಂದನಭೂಷಿತಮ್ |
ಶೈಲಸ್ತಂಭೋಪಮಂ ಶೌರಿರುವಾಚಾಭಿವಿನೋದಯನ್ ॥6॥
ಯುಧಿಷ್ಠಿರನು ದುಃಖದಲ್ಲಿ ಮುಳುಗಿ ಕಲ್ಲಿನ ಕಂಭದಂತೆ ಕುಳಿತುಬಿಟ್ಟಿದ್ದನು. ಅವನ ಭುಜವು ಚಂದನಚರ್ಚಿತವಾಗಿತ್ತು. ಇಂಥ ಎರಡು ಭುಜಗಳನ್ನು ಹಿಡಿದು- ಕೊಂಡು ವಿನೋದದಿಂದ ಶ್ರೀಕೃಷ್ಣಪರಮಾತ್ಮನು ಮಾತನಾಡಲು ಪ್ರಾರಂಭ ಮಾಡಿ- ದನು.
ಶುಶುಭೇ ವದನಂ ತಸ್ಯ ಸುದಂಷ್ಟ್ರಂ ಚಾರುಲೋಚನಮ್ |
ವ್ಯಾಕೋಶಮಿವ ವಿಸ್ಪಷ್ಟಂ ಪದ್ಮಂ ಸೂರ್ಯವಿಬೋಧಿತಮ್ ॥7॥
ಮಾತನಾಡುತ್ತಿರುವಾಗ ಶ್ರೀಕೃಷ್ಣನ ಮುಖಕಮಲವು ಅತ್ಯಂತ ಸುಂದರವಾಗಿ ಕಾಣಿಸುತ್ತಿತ್ತು. ಕಣ್ಣುಗಳಿಂದ ಕಾಂತಿಯು ಹೊರಹೊಮ್ಮುತ್ತಿತ್ತು. ಸುಂದರವಾದ ದಂತಪಂಕ್ತಿಗಳು ಶೋಭಾಯಮಾನವಾಗಿದ್ದವು. ಶ್ರೀಕೃಷ್ಣನ ಮುಖವು ಕಮಲ- ಕ್ಕಿಂತಲೂ ಹೆಚ್ಚು ಮುದವನ್ನು ನೀಡುತ್ತಿದ್ದವು. ಸೂರ್ಯೋದಯವಾದಾಗ ಕಮಲವು ಅರಳುವಂತೆ, ಶ್ರೀಕೃಷ್ಣನು ಅರಳಿದ ಮುಖದಿಂದ ಮಾತನಾಡಲು ಪ್ರಾರಂಭ ಮಾಡಿದನು.
ವಿವರಣೆ - ನಮ್ಮ ಜೀವನದಲ್ಲಿ ಅನೇಕ ಬಾರಿ ದುಃಖಸಾಗರದಲ್ಲಿ ಮುಳುಗಿ ಬಿಡುತ್ತೇವೆ. ಜಗತ್ತೇ ಶೂನ್ಯವಾಗುತ್ತದೆ. ಇಂಥ ಸಂದರ್ಭದಲ್ಲಿ ಶ್ರೀಕೃಷ್ಣಪರ- ಮಾತ್ಮನ ಈ ರೂಪವನ್ನು, ಈ ಸೌಂದರ್ಯವನ್ನು ಸ್ಮರಣೆ ಮಾಡಿಕೊಳ್ಳಬೇಕು. ನಮ್ಮ ದುಃಖವನ್ನು

ಶ್ರೀಕೃಷ್ಣನು ಬಂದು ಪರಿಹಾರ ಮಾಡುತ್ತಿದ್ದಾನೆ ಎಂದು ಭಾವಿಸಬೇಕು.
ಮಾ ಕೃಥಾಃ ಪುರುಷವ್ಯಾಘ್ರ ಶೋಕಂ ತ್ವಂ ಗಾತ್ರಶೋಷಣಮ್ |
ನಹಿ ತೇ ಸುಲಭಾ ಭೂಯೋ ಯೇ ಹತಾಽಸ್ಮಿನ್ ರಣಾಜಿರೇ ॥8॥
ಧರ್ಮರಾಜನೇ! ನೀನು ಎಲ್ಲ ಪುರುಷರ ಮಧ್ಯದಲ್ಲಿ ಸಿಂಹದಂತೆ ಇರುವಂಥ- ವನು. ಏಕೆ ದುಃಖವನ್ನು ಹೊಂದಿರುವಿ. ನಿನಗಿರುವ ಈ ದುಃಖವು ನಿನ್ನ ಶರೀರವನ್ನೇ ಶೋಷಣೆ ಮಾಡಿಬಿಡುತ್ತದೆ. ನೀನು ಎಷ್ಟೇ ದುಃಖವನ್ನು ಹೊಂದಿದರೂ ರಣಾಂಗಣದಲ್ಲಿ ಮೃತರಾದವರು ಮರಳಿ ಬರುವುದಿಲ್ಲ. ನಿನ್ನ ಈ ದುಃಖವು ಸಂಪೂರ್ಣ ವ್ಯರ್ಥವಾದುದು.
ಸ್ವಪ್ನಲಬ್ಧಾ ಯಥಾ ಲಾಭಾ ವಿತಥಾಃ ಪ್ರತಿಬೋಧನೇ |
ಏವಂ ತೇ ಕ್ಷತ್ರಿಯಾ ರಾಜನ್ ಯೇ ವ್ಯತೀತಾ ಮಹಾರಣೇ ॥9॥
ಸ್ವಪ್ನದಲ್ಲಿ ಅದೆಷ್ಟೋ ಸಂಪತ್ತು ಸಿಕ್ಕಿರುತ್ತದೆ. ಎಚ್ಚರವಾದ ಮೇಲೆ ಆ ಸಂಪತ್ತು ಬೇಕೆಂದರೂ ಸಹ ದೊರೆಯುವುದಿಲ್ಲ. ಅದರಂತೆ ಮಹಾಯುದ್ಧದಲ್ಲಿ ನಾಶವನ್ನು ಹೊಂದಿದ ಯಾರೊಬ್ಬ ಕ್ಷತ್ರಿಯರೂ ಕೂಡ ನಿನಗೆ ಈಗ ಬೇಕೆಂದರೂ ಸಹ ದೊರಕುವುದಿಲ್ಲ.
ಸರ್ವೇ ಹ್ಯಭಿಮುಖಾಃ ಶೂರಾ ವಿಗತಾ ರಣಶೋಭಿನಃ |
ನೈಷಾಂ ಕಶ್ಚಿತ್ ಪೃಷ್ಠತೋ ವಾ ಪಾಲಯನ್ ವಾಪಿ ಪಾತಿತಃ ॥10॥
ಮಹಾಯುದ್ಧದಲ್ಲಿ ಯುದ್ಧವನ್ನು ಆಡುತ್ತಿದ್ದ ಕ್ಷತ್ರಿಯರು ಆ ಯುದ್ಧಭೂಮಿಗೆ ಅಲಂಕಾರಪ್ರಾಯರಾಗಿದ್ದರು. ಪ್ರತಿಯೊಬ್ಬರೂ ಸಹ ಶತ್ರುಗಳಿಗೆ ಅಭಿಮುಖರಾಗಿ ನಿಂತು, ಧೈರ್ಯದಿಂದ ಯುದ್ಧವನ್ನು ಮಾಡುತ್ತಿದ್ದರು. ಹೀಗಿರುವಾಗಲೇ ಅವರು ಶತ್ರುಗಳಿಂದ ಮೃತರಾಗಿದ್ದಾರೆ. ಮೃತರಾದವರಲ್ಲಿ ಯಾರೊಬ್ಬರೂ ಸಹ ಶತ್ರುಗಳಿಗೆ ಬೆನ್ನು ತೋರಿಸಿ ಓಡಿದವರಲ್ಲ. ತಮ್ಮ ಬೆನ್ನಿಗೆ ಬಾಣವನ್ನು ಚುಚ್ಚಿಸಿಕೊಂಡವರಲ್ಲ. ಅಥವಾ ಭಯಗೊಂಡು ಓಡುತ್ತಾ ಶಸತ್ರಘಾತಗಳಿಂದ ಸತ್ತವರೂ ಅಲ್ಲ.
ವಿವರಣೆ - ಯಾರಿಗಾಗಿ ನೀನು ದುಃಖವನ್ನು ಹೊಂದುತ್ತಿರುವೆಯೋ, ಅವರೆಲ್ಲರೂ ಉತ್ತಮಪರಾಕ್ರಮಿಗಳು. ಸಂತೋಷದಿಂದಲೇ ಪ್ರಾಣವನ್ನು ಬಿಟ್ಟ- ವರು. ಯುದ್ಧವನ್ನು ಮಾಡುತ್ತಿರುವಾಗಲೂ ಸಂತೋಷದಿಂದ ಇದ್ದು, ಮೃತರಾದ ಮೇಲೂ ಸಹ ವೀರಸ್ವರ್ಗವನ್ನು ಹೊಂದಿರುವರು. ಇಂಥವರ ಬಗ್ಗೆ ನೀನೇಕೆ ಕಳವಳವನ್ನು ಹೊಂದಿರುವಿ. ಅವರನ್ನು ನೋಡಬೇಕೆಂಬ ಆಸೆಯಿಂದ ದುಃಖವನ್ನು ಹೊಂದುತ್ತಿರುವಿಯಾದರೆ ಇದು ಸಾಧ್ಯವಾಗದ ಮಾತು. ಅವರೆಂದೂ ಸಹ ಮರಳಿ ಬರಲು ಸಾಧ್ಯವಿಲ್ಲ. ಸ್ವಪ್ನದಲ್ಲಿ ಕಂಡ ಚಿನ್ನವು ಹೇಗೆ ಎದ್ದಮೇಲೆ ದೊರಕುವುದಿಲ್ಲವೋ, ಮೃತರಾದವರು ಭೂಲೋಕಕ್ಕೆ ಬರಲು ಸಾಧ್ಯವಿಲ್ಲ ಇತ್ಯಾದಿಯಾಗಿ ಶ್ರೀಕೃಷ್ಣಪರಮಾತ್ಮನು ಸಮಾಧಾನವನ್ನು ಮಾಡುತ್ತಿದ್ದಾನೆ.
ಸರ್ವೇ ತ್ಯಕ್ತತ್ವತ್ಮನಃ ಪ್ರಾಣಾನ್ ಯುದ್ಧಾ ವೀರಾ ಮಹಾಹವೇ |
ಶಸ್ತ್ರಪೂತಾ ದಿವಂ ಪ್ರಾಪ್ತಾ ನ ತಾನ್ ಶೋಚಿತುಮರ್ಹಸಿ ॥11॥
ಪ್ರತಿಯೊಬ್ಬ ಯೋಧರು ತಮ್ಮ ಸಂಪೂರ್ಣ ಪರಾಕ್ರಮದಿಂದ ಯುದ್ಧವನ್ನು ಮಾಡಿ, ಪ್ರಾಣಗಳನ್ನು ಪರಿತ್ಯಾಗ ಮಾಡಿರುವರು. ಶಸ್ತ್ರದಿಂದ ಪವಿತ್ರರಾಗಿರುವರು. ಆದ್ದರಿಂದಲೇ ಈಗ ಸ್ವರ್ಗದಲ್ಲಿ ಸುಖಿಯಾಗಿರುವರು. ಅವರೆಲ್ಲರೂ ಸುಖದಲ್ಲಿ- ರುವಾಗ ನೀನೇಕೆ ದುಃಖವನ್ನು ಹೊಂದುವಿ.
ಕ್ಷತ್ರಧರ್ಮರತಾ ಶೂರಾ ವೇದವೇದಾಂಗಪಾರಗಾಃ |
ಪ್ರಾಪ್ತಾ ವೀರಗತಿಂ ಪುಣ್ಯಾಂ ನ ತಾನ್ ಶೋಚಿತುಮರ್ಹಸಿ ॥12॥
ತಮ್ಮ ಕ್ಷತ್ರಿಯ ಧರ್ಮಕ್ಕೆ ಉಚಿತವಾದ ರೀತಿಯಲ್ಲಿಯೇ ಆ ಶೂರರು ಪ್ರಾಣ- ತ್ಯಾಗವನ್ನು ಮಾಡಿದ್ದಾರೆ. ಅವೆರಲ್ಲರೂ ವೇದವೇದಾಂಗಪಾರಂಗತರಾಗಿದ್ದಾರೆ. ವೀರರಗಷ್ಟೇ ದೊರಕುವ ಪುಣ್ಯಮಯ ಸ್ವರ್ಗವನ್ನು ಹೊಂದಿರುತ್ತಾರೆ. ಅವರ ವಿಷಯದಲ್ಲಿ ದುಃಖ ಪಡಲು ಕಾರಣವಿಲ್ಲ.
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಸೃಂಜಯಂ ಪುತ್ರಶೋಕಾರ್ತಂ ಯಥಾಯಂ ಪ್ರಾಹ ನಾರದಃ ॥13॥
ಧರ್ಮರಾಜನೇ! ಈ ಹಿಂದೆ ಪುತ್ರಶೋಕದಿಂದ ಸೃಂಜಯನು ಬಹಳ ದುಃಖ- ವನ್ನು ಹೊಂದಿದ್ದನು. ಆಗ ನಾರದರು ಬಂದು ಅವನಿಗೊಂದು ಪುರಾತನದ ಇತಿಹಾಸವನ್ನು ಉದಾಹರಿಸಿದರು. ಅದನ್ನು ನಿನಗೀಗ ಹೇಳುತ್ತೇನೆ ಕೇಳು.
ಸುಖದುಃಖೈರಹಂ ತ್ವಂ ಚ ಪ್ರಜಾಃ ಸರ್ವಾಶ್ಚ ಸೃಂಜಯ |
ಅವಿಮುಕ್ತಂ ಚರಿಷ್ಯಾಮಸ್ತತ್ರ ಕಾ ಪರಿದೇವನಾ ॥14॥
ಸೃಂಜಯನೇ! ಸತ್ತ ಮಗುವಿಗೇಕೇ ಇಷ್ಟೊಂದು ದುಃಖಿಸುವಿ. ನಾನು, ನೀನು ಮತ್ತು ಸಮಸ್ತ ಪ್ರಜೆಗಳು ಸುಖ-ದುಃಖಗಳನ್ನು ದಾಟಲಾರೆವು. ಪ್ರತಿಯೊಬ್ಬರೂ ಅದನ್ನು ಅನುಭವಿಸಲೇಬೇಕು. ಈ ವಿಷಯದಲ್ಲೇಕೆ ನಿನಗೆ ದುಃಖ.
ಮಹಾಭಾಗ್ಯಂ ಪುರಾ ರಾಜ್ಞಾಂ ಕೀರ್ತ್ಯಮಾನಂ ಮಯಾ ಶೃಣು |
ಗಚ್ಛಾವಧಾನಂ ನೃಪತೇ ತತೋ ದುಃಖಂ ಪ್ರಹಾಸ್ಯಸಿ ॥15॥
ನಾನೀಗ ನಿನಗೆ ಹಿಂದಿನ ರಾಜರ ಮಹಾಸೌಭಾಗ್ಯದ ಇತಿಹಾಸವನ್ನು ಹೇಳುತ್ತೇನೆ. ಇದನ್ನು ಸಾವಧಾನಚಿತ್ತದಿಂದ ಕೇಳು. ಇದರಿಂದಲಾದರೂ ನಿನಗೆ ದುಃಖವು ಪರಿಹಾರವಾಗುತ್ತದೆ.
ಮೃತಾನ್ ಮಹಾನುಭಾವಾಂಸ್ತ್ವಂ ಶ್ರುತ್ವೈವ ತು ಮಹೀಪತೀನ್ |
ಶಮಮಾನಯ ಸಂತಾಪಂ ಶೃಣು ವಿಸ್ತರಶಶ್ಚ ಮೇ ॥16॥
ಮಹಾನುಭಾವರಾದ ಪರಲೋಕವನ್ನು ಹೊಂದಿದ, ಆ ಎಲ್ಲಾ ರಾಜರುಗಳ ಚರಿತ್ರೆಗಳನ್ನು ಕೇಳಿದ ನಂತರ ಪುತ್ರವಿಯೋಗದಿಂದ ನಿನಗಾದ ದುಃಖವನ್ನು ಪರಿಹಾರ ಮಾಡಿಕೋ. ಅವರ ಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು.
ಕ್ರೂರಗ್ರಹಾಭಿಶಮನಮಾಯುರ್ವರ್ಧನಮುತ್ತಮಮ್ |
ಅಗ್ರಿಮಾಣಾಂ ಕ್ಷಿತಿಭುಜಾಮುಪಾದಾನಮನೋಹರಮ್ ॥17॥

ಅವರ ಚರಿತ್ರೆಯು ಅತ್ಯಂತ ಪವಿತ್ರವಾಗಿವೆ. ಕೇಳಿದ ಮಾತ್ರದಿಂದಲೇ ಕ್ರೂರವಾದ ಗ್ರಹಗಳ ದೋಷಗಳು ಪರಿಹಾರವಾಗುತ್ತವೆ. ಆಯುಸ್ಸು ಅಭಿವೃದ್ಧವಾ- ಗುತ್ತದೆ. ಶ್ರೇಷ್ಠರಾದ ಹದಿನಾರು ಮಂದಿ ರಾಜರ ಚರಿತ್ರೆಯನ್ನು ನಿನಗೆ ಹೇಳುತ್ತೇನೆ ಕೇಳು.

ಟಿಪ್ಪಣಿ - ಜಾತಕ ಕುಂಡಲಿಯಲ್ಲಿ ಕ್ರೂರ ಗ್ರಹಗಳ ದೃಷ್ಟಿಯಿದ್ದರೆ ಅಥವಾ ಕ್ರೂರ ಗ್ರಹಗಳ ಬಾಧೆಯಿದ್ದರೆ ಮುಂದೆ ಹೇಳುವ ಹದಿನಾರು ಮಂದಿ ರಾಜರ ಚರಿತ್ರೆಯನ್ನು ಓದಬೇಕು. ಆಗ ಆ ಎಲ್ಲ ಬಾಧೆಗಳು ಪರಿಹಾರವಾಗುತ್ತವೆ. ಅಥವಾ ಮತ್ತೊಬ್ಬರಿಗೆ ಗ್ರಹಬಾಧೆ ದೋಷವು ಇದ್ದಲ್ಲಿ ಈ ಹದಿನಾರು ರಾಜರ ಕಥೆಯನ್ನು ಅವರಿಗೆ ಹೇಳುವುದರಿಂದಲೂ ದೋಷವು ಪರಿಹಾರವಾಗುತ್ತದೆ.

ಮರುತ್ ರಾಜನ ಸಾಧನೆ

ಆವಿಕ್ಷಿತಂ ಮರುತ್ತಂ ಮೇ ಮೃತಂ ಸೃಂಜಯ ಶುಶ್ರುಮ |
ಯಸ್ಯ ಸೇಂದ್ರಾಃ ಸವರುಣಾ ಬೃಹಸ್ಪತಿಪುರೋಗಮಾಃ ॥18॥
ದೇವಾ ವಿಶ್ವಸೃಜೋ ರಾಜ್ಞೋ ಯಜ್ಞಮೀಯುರ್ಮಹಾತ್ಮನಃ |
ಯಃ ಸ್ಪರ್ಧಾಮನಯಚ್ಛಕ್ರಂ ದೇವರಾಜಂ ಶತಕ್ರತುಮ್ ॥19॥

ಆವಿಕ್ಷಿತನ ಮಗನಾದ ಮರುತ್ ಎಂಬ ರಾಜನು ಮೃತನಾದ ವಿಷಯವನ್ನು ನಾವು ಕೇಳಿದ್ದೇವೆ. ಮಹಾತ್ಮನಾದ ಮರುತ್‌ರಾಜನು ಒಮ್ಮೆ ಮಹಾಯಜ್ಞವನ್ನು ಆಚರಿಸಿದನು. ಅದರಲ್ಲಿ ಇಂದ್ರ, ವರುಣ, ಬೃಹಸ್ಪತಿ, ಮೊದಲಾದ ದೇವತೆಗಳು ಪ್ರಜಾಪತಿಗಳು ಬೃಹಸ್ಪತಿಯನ್ನು ಮುಂದೆ ಮಾಡಿಕೊಂಡು, ಭಾಗವಹಿಸಿದರು. ಆ ಮರುತ್‌ರಾಜನು ಯಜ್ಞಮಾಡುವುದರ ಮೂಲಕ ದೇವರಾಜನಾದ ಶತಕ್ರತು ಎನಿಸಿದ ಇಂದ್ರನನ್ನೂ ಕೂಡ ಸ್ಪರ್ಧಿಸಿದನು.

ಶಕ್ರಪ್ರಿಯೈಷೀ ಯಂ ವಿದ್ವಾನ್ ಪ್ರತ್ಯಾಚಷ್ಟ ಬೃಹಸ್ಪತಿಃ |
ಸಂವರ್ತೋ ಯಾಜಯಾಮಾಸ ಯಂ ಪೀಡಾರ್ಥಂ ಬೃಹಸ್ಪತೇಃ॥20॥

ಆ ಯಾಗದಲ್ಲಿ ಇಂದ್ರನ ಪ್ರೇರಣೆಯಿಂದ ಬೃಹಸ್ಪತಿಯು ಅವನ ಬಳಿ ತೆರಳಿದನು. ಯಾಗವನ್ನು ನಿಲ್ಲಿಸು ಎಂದು ಹೇಳಿದನು. ಆಗ ಬೃಹಸ್ಪತಿಯ ತಮ್ಮನಾದ ಸಂವರ್ತನು ಇಂದ್ರನ ಮೇಲಿನ ಸ್ಪರ್ಧೆಯಿಂದ ಇಂದ್ರನಿಗೆ ವಿರುದ್ಧವಾದ ಆ ಯಾಗವನ್ನು ಮಾಡಿಸಿದನು.

ಯಸ್ಮಿನ್ ಪ್ರಶಾಸತಿ ಸತಾಂ ನೃಪತೌ ನೃಪಸತ್ತಮ |
ಅಕೃಷ್ಟಪಚ್ಯಾ ಪೃಥಿವೀ ವಿಬಭೌ ಚೈತ್ಯಮಾಲಿನೀ ॥21॥

ಆ ಮರುತ್‌ರಾಜನು ರಾಜ್ಯಭಾರವನ್ನು ಮಾಡುತ್ತಿರುವಾಗ ಕೃಷಿಮಾಡ- ದೆಯೂ, ಪೃಥಿವಿಯು ಸಸ್ಯಗಳಿಂದ ಸಮೃದ್ಧವಾಗಿ ಶೋಭಿಸುತ್ತಿತ್ತು. ಯಜ್ಞಶಾಲೆಗಳ ಸಾಲುಗಳಿಂದ ಭೂಮಂಡಲವು ಪ್ರಕಾಶಿಸುತ್ತಿತ್ತು.

ಆವಿಕ್ಷಿತಸ್ಯ ವೈ ಸತ್ರೇ ವಿಶ್ವೇ ದೇವಾಃ ಸಭಾಸದಃ |
ಮರುತಃ ಪರಿವೇಷ್ಟಾರಃ ಸಾಧ್ಯಾಶ್ಚಾಸನ್ ಮಹಾತ್ಮನಃ ॥22॥

ಆವಿಕ್ಷಿತನ ಮಗನಾದ ಮಹಾತ್ಮನಾದ ಮರುತ್‌ನ ಯಜ್ಞದಲ್ಲಿ ವಿಶ್ವೇ- ದೇವತೆಗಳೇ ಸಭಾಸದರಾಗಿದ್ದರು. ಮರುತ್‌ಗಣಗಳು ಮತ್ತು ಸಾಧ್ಯರು ಯಜ್ಞದಲ್ಲಿ ಭಾಗವಹಿಸಿದ ಋತ್ವಿಜರಿಗೆ ಪರಿಚಾರಕರಾಗಿದ್ದರು.

ಟಿಪ್ಪಣಿ - ``ಮರುತಃ ಪರಿವೇಷ್ಟಾರೋ ಮರುತಸ್ಯಾ ವಸುಂಧರೇಃ | ಆವಿಕ್ಷಿತಸ್ಯ ವೈ ಸತ್ರೇ ವಿಶ್ವೇ ದೇವಾಃ ಸಭಾಸದಃ'' ಎಂಬುದಾಗಿ ಮರುತ್‌ರಾಜನು ಮಾಡಿದ ಯಜ್ಞವನ್ನು ಐತರೇಯ ಬ್ರಾಹ್ಮಣವೂ ಕೂಡ ಪ್ರಶಂಸೆ ಮಾಡುತ್ತದೆ.

ಮರುದ್ಗಣಾ ಮರುತ್ತಸ್ಯ ಯತ್ ಸೋಮಮಪಿಬಂತ ತೇ |
ದೇವಾನ್ ಮನುಷ್ಯಾನ್ ಗಂಧರ್ವಾನತ್ಯರಿಚ್ಯಂತ ದಕ್ಷಿಣಾಃ ॥23॥

ಆ ಯಾಗದಲ್ಲಿ ಅವನು ಕೊಟ್ಟ ದಕ್ಷಿಣೆಗಳು ದೇವತೆಗಳು, ಮನುಷ್ಯರು, ಗಂಧರ್ವಾದಿಗಳೆಲ್ಲರೂ ನೀಡಿದ ದಕ್ಷಿಣೆಗಳಿಗಿಂತಲೂ ಅತಿಶಯವಾಗಿದ್ದವು. ಎಲ್ಲಾ ಮರುದ್ಗಣದವರು ಯಥೇಚ್ಛವಾಗಿ ಸೋಮರಸವನ್ನು ಆ ಯಜ್ಞದಲ್ಲಿ ಪಾನ ಮಾಡಿದರು.

ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥24॥

ಸೃಂಜಯನೇ! ನಿನಗಿಂತಲೂ ನಿನ್ನ ಪುತ್ರನಿಗಿಂತಲೂ, ಧರ್ಮ, ಜ್ಞಾನ, ಐಶ್ವರ್ಯ, ವೈರಾಗ್ಯಗಳೆಂಬ ನಾಲ್ಕರಲ್ಲಿಯೂ ಆ ರಾಜನು ಬಹಳ ಉತ್ತಮನಾಗಿ- ದ್ದನು. ಅಂಥ ರಾಜನೇ! ಇಂದು ಮೃತನಾಗಿರುವಾಗ, ನಿನ್ನ ಮಗನ ವಿಷಯದಲ್ಲಿ ಏಕೆ ದುಃಖ ಪಡುತ್ತಿರುವಿ?

ಟಿಪ್ಪಣಿ - ಸೂರ್ಯವಂಶದಲ್ಲಿ ಅವಿಕ್ಷಿತ್ ಎಂಬ ರಾಜನಿದ್ದನು. ಇವನ ಮಗನೇ ಆವಿಕ್ಷಿತ. ಇವನಿಗೆ ಮರುತ್ ಎಂಬ ಹೆಸರಿದೆ. ಮರುದ್ದೇವತೆಗಳಂತೆ ಮಹಾಶಕ್ತಿವಂತನಾದ್ದರಿಂದ ಇವನನ್ನು ಮರುತ್‌ರಾಜ ಎಂದೇ ಕರೆಯುತ್ತಿದ್ದರು. ವಿಶಾಲಾದೇವಿಯೇ ಇವನ ತಾಯಿ. ಬೃಹಸ್ಪತಿಯ ತಮ್ಮನಾದ ಸಂವರ್ತನನಿಂದ ಒಂದು ಮಹಾಯಾಗವನ್ನು ಆಚರಿಸಿದನು. ಆ ಯಜ್ಞದಲ್ಲಿ ಎಲ್ಲವೂ ಕೂಡ ಸ್ವರ್ಣಮಯವಾಗಿತ್ತು. ಸೋಮರಸಪಾನದಿಂದ ಇಂದ್ರನು ಮತ್ತನಾದನು. ದಕ್ಷಿಣೆಗಳಿಂದ ಬ್ರಾಹ್ಮಣರು ತೃಪ್ತರಾದರು. ಆ ಯಜ್ಞದಲ್ಲಿ ದೇವತೆಗಳಿಗೆ ಮರುತ್‌ಗಳೇ ಬಡಿಸಿದರು. ಮೊದಲು ಇಂದ್ರನು ಯಜ್ಞಕ್ಕೆ ವಿಘ್ನವನ್ನುಂಟು ಮಾಡಿದರೂ ಅಂತಿಮವಾಗಿ ಸ್ನೇಹವನ್ನು ಬೆಳೆಸಿದನು. ಆ ಯಜ್ಞದಲ್ಲಿ ಕೊಟ್ಟ ಹಣವನ್ನು ಬ್ರಾಹ್ಮಣರು ಎತ್ತಲಾಗದೇ, ಒಯ್ಯಲಾಗದೇ ಹಿಮಾಚಲ ಪ್ರದೇಶದಲ್ಲಿ ಚೆಲ್ಲಿ ಹೋದರು. ಇದನ್ನು ವೇದವ್ಯಾಸರ ಸೂಚನೆಯಂತೆ ಧರ್ಮರಾಜನು ಹಸ್ತಿನಾ- ವತಿಗೆ ತರಿಸಿ, ಅಶ್ವಮೇಧಯಾಗವನ್ನು ಮಾಡಿದನು. ಇವನು ಏಕಚಕ್ರಾಧಿಪತಿ- ಯಾಗಿ 85000 ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿದನು. ರಾಮಾಯಣ ಹಾಗೂ ಮಹಾಭಾರತದ ದ್ರೋಣಪರ್ವದಲ್ಲಿಯೂ ಇವನ ಕಥೆಯು ವಿಸ್ತಾರ- ವಾಗಿ ಬರುತ್ತದೆ.

ಸುಹೋತ್ರ ರಾಜನ ಸಾಧನೆ

ಸುಹೋತ್ರಂ ಚೇದ್ ವೈತಿಥಿನಂ ಮೃತಂ ಸೃಂಜಯ ಶುಶ್ರುಮ |
ಯಸ್ಮೈ ಹಿರಣ್ಯಂ ವವೃಷೇ ಮಘವಾನ್ ಪರಿವತ್ಸರಮ್ ॥25॥

ವಿತಿಥ ಎಂಬ ರಾಜನಿಗೆ ಸುಹೋತ್ರ ಎಂಬ ಮಗನಿದ್ದನು. ಇವನೂ ಕೂಡ ಮರಣವನ್ನು ಹೊಂದಿದನು. ಇವನು ರಾಜ್ಯಭಾರ ಮಾಡುತ್ತಿದ್ದಾಗ, ದೇವೇಂದ್ರನು ಒಂದು ವರ್ಷಗಳ ಕಾಲ ಎಡೆಬಿಡದೆ ಸುವರ್ಣವೃಷ್ಟಿಯನ್ನು ಮಾಡುತ್ತಿದ್ದನು.

ಸತ್ಯನಾಮಾ ವಸುಮತೀ ಯಂ ಪ್ರಾಪ್ಯಾಸೀಜ್ಜನಾಧಿಪ |
ಹಿರಣ್ಯಮವಹನ್ನದ್ಯಸ್ತಸ್ಮಿನ್ ಜನಪದೇಶ್ವರೇ ॥26॥
ಅವನ ರಾಜ್ಯಭಾರದಲ್ಲಿಯೇ ಭೂದೇವಿಗೆ ವಸುಮತಿ ಎಂಬ ಹೆಸರು ಬಂದಿತ್ತು. ನದಿಗಳು ಸುವರ್ಣದ ನೀರನ್ನೇ ಪ್ರವಹಿಸುತ್ತಿದ್ದವು.
ಕೂರ್ಮಾನ್ ಕರ್ಕಟಕಾನ್ ನಕ್ರಾನ್ ಮಕರಾನ್ ಶಿಂಶುಕಾನಪಿ |
ನದೀಷ್ವಪಾತಯದ್ ರಾಜನ್ ಮಘವಾ ಲೋಕಪೂಜಿತಾಃ ॥27॥
ಸರ್ವಲೋಕಗಳಿಂದ ಪೂಜಿತನಾದ ದೇವೇಂದ್ರನು ಸುವರ್ಣಮಯವಾದ ಆಮೆಗಳನ್ನು, ಏಡಿಗಳನ್ನು, ಮೊಸಳೆಗಳೇ ಮೊದಲಾದ ಜಲಜಂತುಗಳನ್ನು ದೇವೇಂದ್ರನು ಸುವರ್ಣಮಯಗಳನ್ನಾಗಿಯೇ ಮಾಡಿಟ್ಟಿದ್ದನು.
ಹೈರಣ್ಯಾನ್ ಪತಿತಾನ್ ದೃಷ್ಟ್ವಾ ಮತ್ಸ್ಯಾನ್ ಮಕರಕಚ್ಛಪಾನ್ |
ಸಹಸ್ರಶೋಽಥ ಶತಶಸ್ತತೋಽಸ್ಮಯತ ವೈತಿಥಿಃ ॥28॥
ಸುವರ್ಣಮಯವಾದ ಸಾವಿರಾರು ಮೀನುಗಳು ಅಲ್ಲಿದ್ದವು. ಸಾವಿರಾರು ಮೊಸಳೆಗಳನ್ನು, ಆಮೆಗಳನ್ನು ಆ ನದಿಗಳಲ್ಲಿ ದೇವೇಂದ್ರನು ಬಿಟ್ಟಿದ್ದನ್ನು ನೋಡಿ, ಆ ಸುಹೋತ್ರನೇ ಅಚ್ಚರಿಪಟ್ಟಿದ್ದನು.
ತದ್ ಹಿರಣ್ಯಮಪರ್ಯಂತಮಾವೃತ್ತಂ ಕುರುಜಾಂಗಲೇ |
ಈಜಾನೋ ವಿತತೇ ಯಜ್ಞೇ ಬ್ರಾಹ್ಮಣೇಭ್ಯಃ ಸಮಾರ್ಪಯತ್ ॥29॥
ಕುರುಜಾಂಗಲಾ ದೇಶದಲ್ಲಿ ಸುವರ್ಣರಾಶಿಯು ಮೊದಲಿನಿಂದ ಕೊನೆಯ ತನಕ ಪರ್ವತದಂತೆ ವ್ಯಾಪಿಸಿತ್ತು. ಆಗ ಸುಹೋತ್ರನು ಒಂದು ಮಹಾಯಾಗವನ್ನು ನಡೆಸಿದನು. ಆಗ ಆ ಎಲ್ಲಾ ಸುವರ್ಣದ ರಾಶಿಯನ್ನು ಬ್ರಾಹ್ಮಣರಿಗೆ ದಕ್ಷಿಣಾ- ರೂಪದಲ್ಲಿ ಆ ಸುಹೋತ್ರನು ದಾನ ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥30॥
ಅದಕ್ಷಿಣಮಯಜ್ವಾನಂ ಶ್ವೈತ್ಯ ಸಂಶಾಮ್ಯ ಮಾ ಶುಚಃ |
ಸೃಂಜಯನೇ! ನಿನಗಿಂತಲೂ ಮತ್ತು ನಿನ್ನ ಮಗನಿಗಿಂತಲೂ, ಆ ಸುಹೋತ್ರನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಶ್ರೇಷ್ಠನಾಗಿದ್ದನು. ಹೆಚ್ಚು ಪುಣ್ಯ- ಶಾಲಿಯಾಗಿದ್ದನು. ಅಂಥ ಸುಹೋತ್ರನೂ ಕೂಡ ಮೃತನಾದನು. ಹೀಗಿರುವಾಗ ಯಾವುದೇ ಯಾಗ ಮಾಡದ, ಬ್ರಾಹ್ಮಣನಿಗೆ ಅಪಾರದಕ್ಷಿಣೆಯನ್ನು ಕೊಡದ ಮೃತನಾದ ನಿನ್ನ ಮಗನ ವಿಷಯದಲ್ಲಿ ಏಕೆ ದುಃಖ ಪಡುತ್ತಿರುವಿ ?
ಟಿಪ್ಪಣಿ - ಶ್ವೈತ್ಯ ಸಂಶಾಮ್ಯ ಮಾ ಶುಚ ಇತ್ಯತ್ರ ಶ್ವೈತ್ಯ ಚಿತ್ತಸಮಾಧಾನಯುಕ್ತಃ|
`ಶ್ವೈತ್ಯಃ' ಎಂಬುದಕ್ಕೆ ಚಿತ್ತಸಮಾಧಾನದಿಂದ ಯುಕ್ತನಾದವನು ಎಂದರ್ಥ.
ಟಿಪ್ಪಣಿ - ಭೂಮನ್ಯು ಎಂಬ ರಾಜನ ಮಗನೇ ಸುಹೋತ್ರ. ಚಂದ್ರವಂಶ- ದವನು. ಇವನ ಹೆಂಡತಿ ಜಯಂತಿ. ಅಜಮೀಢಾ ಮತ್ತು ಹಸ್ತಿ ಎಂಬುವರು ಇವನ ಮಕ್ಕಳು. ಇವನೂ ಕೂಡ ಅನೇಕ ಯಾಗಗಳನ್ನು ಆಚರಿಸಿದ್ದು ಮಹಾ- ಭಾರತದ ದ್ರೋಣಪರ್ವದಲ್ಲಿ ವಿಸ್ತಾರವಾಗಿ ಬರುತ್ತದೆ. ಇವನ ರಾಜ್ಯದಲ್ಲಿ ಸುವರ್ಣವೃಷ್ಟಿಯನ್ನು ದೇವೇಂದ್ರನು ಮಾಡಿದ ಬಗ್ಗೆಯೂ ವಿವರಣೆ ದ್ರೋಣ- ಪರ್ವದಲ್ಲೇ ಇರುತ್ತದೆ.
ಬೃಹದ್ರಥರಾಜನ ಸಾಧನೆ
ಅಂಗಂ ಬೃಹದ್ರಥಂ ಚೈವ ಮೃತಂ ಶುಶ್ರುಮ ಸೃಂಜಯ |
ಯಃ ಸಹಸ್ರಂ ಸಹಸ್ರಾಣಾಂ ಗಜಾನಾಮತಿಪದ್ಮಿನಾಮ್ |
ಈಜಾನೋ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ |
ಯಃ ಸಹಸ್ರಂ ಸಹಸ್ರಾಣಾಂ ಶ್ವೇತಾನಶ್ವಾನವಾಸೃಜತ್ ॥31॥
ಅಂಗದೇಶದಲ್ಲಿ ಬೃಹದ್ರಥ ಎಂಬ ರಾಜನಿದ್ದನು. ಅವನೂ ಸಹ ಮೃತನಾದನು. ಇವನು ರಾಜ್ಯಭಾರವನ್ನು ಮಾಡುತ್ತಿದ್ದಾಗ, ಪದ್ಮಮಾಲಿಕೆಯುಳ್ಳ ಹತ್ತು ಲಕ್ಷ ಆನೆಗಳನ್ನು ಮಹಾಯಾಗದಲ್ಲಿ ದಾನ ಮಾಡಿದನು. ಬಿಳಿ ಬಣ್ಣದ ಹತ್ತು ಲಕ್ಷ ಕುದುರೆಗಳನ್ನು ಆ ಯಾಗದಲ್ಲಿ ದಾನ ಮಾಡಿದನು.
ಸಹಸ್ರಂ ಚ ಸಹಸ್ರಾಣಾಂ ಕನ್ಯಾ ಹೇಮವಿಭೂಷಿತಾಃ |
ಈಜಾನೋ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ ॥32॥
ಸುವರ್ಣಾಭರಣಗಳಿಂದ ಅಲಂಕೃತಗೊಂಡ ಹತ್ತುಲಕ್ಷಕನ್ಯೆಯರನ್ನು ದಕ್ಷಿಣಾ- ರೂಪದಲ್ಲಿ ದಾನ ಮಾಡಿದನು.
ಶತಂ ಶತಸಹಸ್ರಾಣಾಂ ವೃಷಾಣಾಂ ಹೇಮಮಾಲಿನಾಮ್ |
ಗವಾಂ ಸಹಸ್ರಾನುಚರಂ ದಕ್ಷಿಣಾಮತ್ಯಕಾಲಯತ್॥33॥
ಬೃಹದ್ರಥನು ಒಂದು ಕೋಟಿ ಗೋವುಗಳನ್ನು, ಹಾಗೂ ಸ್ವರ್ಣಮಾಲೆಗಳಿಂದ ಅಲಂಕೃತಗೊಂಡ ಒಂದು ಕೋಟಿ ಎತ್ತುಗಳನ್ನು ಅವುಗಳ ಸೇವೆಗಾಗಿ ಸಾವಿರಾರು ಸೇವಕರನ್ನು ದಕ್ಷಿಣರೂಪವಾಗಿ ದಾನ ಮಾಡಿದನು.
ಅಂಗಸ್ಯ ಯಜಮಾನಸ್ಯ ತದಾ ವಿಷ್ಣುಪದೇ ಗಿರೌ |
ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ॥34॥
ಅಂಗರಾಜ್ಯದ ದೊರೆಯಾದ ಬೃಹದ್ರಥನು ವಿಷ್ಣುಪದ ಎಂಬ ಗಿರಿಯಲ್ಲಿ ಯಜ್ಞವನ್ನು ಆಚರಿಸಿದನು. ಆಗ ದೇವೇಂದ್ರನೂ ಕೂಡ ಯಥೇಚ್ಛೆಯಾಗಿ ಸೋಮ -ರಸವನ್ನು ಪಾನ ಮಾಡಿ, ದೇಹದ ಬಗ್ಗೆ ಪರಿಜ್ಞಾನವೇ ಇಲ್ಲದಷ್ಟು ತೃಪ್ತನಾದನು. ಬ್ರಾಹ್ಮಣರು ಭೋಜನ ಮತ್ತು ದಕ್ಷಿಣೆಗಳಿಂದ ತೃಪ್ತರಾದರು.
ಯಸ್ಯ ಯಜ್ಞೇಷು ರಾಜೇಂದ್ರ ಶತಸಂಖ್ಯೇಷು ವೈ ಪುರಾ |
ದೇವಾನ್ ಮನುಷ್ಯಾನ್ ಗಂಧರ್ವಾನತ್ಯರಿಚ್ಯಂತ ದಕ್ಷಿಣಾಃ ॥35॥

ಅವನು ನಡೆಸಿದ ನೂರಾರು ಯಜ್ಞಗಳಲ್ಲಿ ಕೊಟ್ಟ ದಕ್ಷಿಣೆಗಳು, ದೇವತೆಗಳು, ಮನುಷ್ಯರು, ಗಂಧರ್ವರು ಎಲ್ಲರೂ ಸೇರಿ, ಯಜ್ಞಸಭೆಯಲ್ಲಿ ಕೊಡುತ್ತಿದ್ದ ದಕ್ಷಿಣೆ- ಗಳನ್ನೆಲ್ಲಾ ಮೀರಿಸಿತ್ತು.

ನ ಜಾತೋ ಜನಿತಾ ಚಾನ್ಯಃ ಪುಮಾನ್ ಯಸ್ತತ್ ಪ್ರದಾಸ್ಯತಿ |
ಯದಂಗಃ ಪ್ರದದೌ ವಿತ್ತಂ ಸೋಮಸಂಸ್ಥಾಸು ಸಪ್ತಸು ॥36॥

ಸೋಮಸಂಸ್ಥಾ ಎಂದು ಕರೆಯಲ್ಪಡುವ ಏಳು ಯಾಗಗಳಲ್ಲಿಯೂ ಅಂಗ- ರಾಜನು ಎಷ್ಟು ದಕ್ಷಿಣೆಗಳನ್ನು ಕೊಟ್ಟನೋ, ಅಷ್ಟು ದಕ್ಷಿಣೆಗಳನ್ನು ಕೊಟ್ಟ ಮನುಷ್ಯನು ಈ ಹಿಂದೆ ಹುಟ್ಟಿಲ್ಲ. ಮುಂದೆಯೂ ಕೂಡ ಹುಟ್ಟಲು ಸಾಧ್ಯವಿಲ್ಲ.

ಟಿಪ್ಪಣಿ - ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಶೋಡಶಿ, ಅತಿರಾತ್ರ, ವಾಜಪೇಯ, ಆಪ್ತೋರ್ಯಾಮ ಎಂಬ ಏಳು ಯಾಗಗಳನ್ನು ಸೋಮಸಂಸ್ಥಾ ಎಂದು ಕರೆಯುತ್ತಾರೆ.

ನ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥37॥

ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯವೆಂಬ ನಾಕು ಗುಣಗಳಲ್ಲಿ ನಿನ್ನ ಮಗನಿಗಿಂತ ಅತ್ಯುತ್ತಮನಾದ ಆ ಬೃಹದ್ರಥರಾಜನೇ ಮರಣವನ್ನು ಹೊಂದಿ- ರುವಾಗ, ನಿನ್ನ ಮಗನಿಗೋಸ್ಕರ ಏಕೆ ದುಃಖವನ್ನು ಅನುಭವಿಸುವಿ.

ಟಿಪ್ಪಣಿ - ಬೃಹದ್ರಥ ಚಂದ್ರವಂಶದ ಕ್ಷತ್ರಿಯ. ಕಾಶೀರಾಜನ ಇಬ್ಬರು ಪುತ್ರಿ- ಯರೇ ಇವನ ಪತ್ನಿಯರು. ಜರಾಸಂಧನು ಇವನ ಮಗ. ಮಹಾಭಾರತದ ಅರಣ್ಯಪರ್ವದಲ್ಲಿ ಇವನ ಕಥೆಯು ವಿಸ್ತಾರವಾಗಿ ಬಂದಿದೆ. ಬೃಹದ್ರಥನ ಹೆಸರು ಋಗ್ವೇದದಲ್ಲಿಯೂ ಕೂಡ ಬರುತ್ತದೆ.

ಶಿಬಿ ಚಕ್ರವರ್ತಿಯ ಸಾಧನೆ

ಶಿಬಿಮೌಶೀನರಂ ಚೈವ ಮೃತಂ ಶುಶ್ರುಮ ಸೃಂಜಯ |
ಯ ಇಮಾಂ ಪೃಥಿವೀಂ ಕೃತ್ಸ್ನಾಂ ಚರ್ಮವತ್ಸಮವೇಷ್ಟಯತ್ ॥38॥

ಉಶೀನರ ಎಂಬ ರಾಜನಿಗೆ, ಶಿಬಿ ಎಂಬ ಮಗನಿದ್ದನು. ಇವನೂ ಸಹ ರಾಜ್ಯ- ಭಾರವನ್ನು ಮಾಡಿ, ಮೃತನಾದನು. ಸೃಂಜಯನೇ! ಸಮಗ್ರಭೂಮಂಡಲವನ್ನು ಚರ್ಮದಂತೆ ಹೊದಿಸಿ, ತನ್ನ ಅಧೀನವನ್ನಾಗಿ ಮಾಡಿಕೊಂಡಿದ್ದನು.

ಟಿಪ್ಪಣಿ - ಚಾಪೆಯ ಸುರುಳಿಯನ್ನು ಬಿಡಿಸಿ, ಹರಡಿದಷ್ಟು ಸುಲಭವಾಗಿ ಸಮಗ್ರ ಭೂಮಂಡಲವನ್ನೇ ಹರಡಿ, ತನ್ನ ಅಧೀನವನ್ನಾಗಿ ಮಾಡಿಕೊಂಡಿದ್ದನು. ಹರಡಿದ ಚಾಪೆಯು ಹೇಗೆ ಸಂಪೂರ್ಣವಾಗಿ ನಮ್ಮ ಅಧೀನವಾಗಿರುತ್ತದೋ, ಅದರಂತೆ ಈ ಭೂಮಂಡಲವನ್ನು ತನ್ನ ಅಧೀನವನ್ನಾಗಿ ಮಾಡಿಕೊಂಡಿದ್ದನು. ಅವನ ರಾಜ್ಯಾಡಳಿತದಲ್ಲಿ ಬೇರೆ ಯಾರೊಬ್ಬನೂ ರಾಜನಾಗಿರಲಿಲ್ಲ ಎಂದಭಿ- ಪ್ರಾಯ.

ಮಹತಾ ರಥಘೋಷೇಣ ಪೃಥಿವೀಮನುನಾದಯನ್ |
ಏಕಚ್ಛತ್ರಾಂ ಮಹೀಂ ಚಕ್ರೇ ಜೈತ್ರೇಣೈಕರಥೇನ ಯಃ ॥39॥

ಶಿಬಿಯು ತನ್ನ ರಥದ ಘೋಷದಿಂದ ಭೂಮಂಡಲವನ್ನೇ ಪ್ರತಿಧ್ವನಿಗೊಳಿಸಿ- ದನು. ಸಮಗ್ರ ಭೂಮಂಡಲವನ್ನು ಏಕಚಕ್ರಾಧಿಪತ್ಯದಿಂದ ಆಳಿದನು.

ಯಾವದದ್ಯ ಗವಾಶ್ವಂ ಸ್ಯಾದಾರಣ್ಯೈಃ ಪಶುಭಿಃ ಸಹ |
ತಾವತೀಃ ಪ್ರದದೌ ಗಾಃ ಸ ಶಿಬಿರೌಶೀನರೋऽಧ್ವರೇ ॥40॥

ಆ ಶಿಬಿಯು ಒಮ್ಮೆ ಮಹಾಯಾಗವನ್ನು ಆಚರಿಸಿದನು. ಆಗ ಅರಣ್ಯದಲ್ಲೂ ಸೇರಿದಂತೆ ತನ್ನ ಆಡಳಿತದಲ್ಲಿ ಎಷ್ಟು ಹಸು, ಕುದುರೆಗಳಿದ್ದವೋ, ಅಷ್ಟೇ ಸಂಖ್ಯೆಯ ಹಸುಗಳನ್ನು ದಾನವನ್ನಾಗಿ ನೀಡಿದನು.

ನೋದ್ಯಂತಾರಂ ಧುರಂ ತಸ್ಯ ಕಂಚಿನ್ಮೇನೇ ಪ್ರಜಾಪತಿಃ |
ನ ಭೂತಂ ನ ಭವಿಷ್ಯಂತಂ ಸರ್ವರಾಜಸು ಭಾರತ |
ಅನ್ಯತ್ರೌಶೀನರಾಚ್ಛೈಬ್ಯಾದ್ ರಾಜರ್ಷೇರಿಂದ್ರವಿಕ್ರಮಾತ್ ॥41॥

ಇಂದ್ರನ ಪರಾಕ್ರಮದಂತೆ ಬಲಿಷ್ಠನಾದ ಆ ಶಿಬಿಯೆಂಬ ಯಾವ ರಾಜರ್ಷಿ- ಯಿದ್ದನೋ, ಅವನು ಮಾಡಿದ ಪ್ರಜಾರಕ್ಷಣೆಯಂತೆ ಮತ್ತೊಬ್ಬ ರಾಜನು ಹಿಂದೆಂದೂ ಮಾಡಿರುವುದಿಲ್ಲ. ಮುಂದೆಯೂ ಕೂಡ ಅವನನ್ನು ಮೀರಬಲ್ಲ ಮತ್ತೊಬ್ಬ ರಾಜನು ಹುಟ್ಟಲು ಸಾಧ್ಯವಿಲ್ಲ. ಹೀಗೆ ಆ ಬ್ರಹ್ಮನೇ ತಿಳಿದಿದ್ದನು.

ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥
ಅದಕ್ಷಿಣಮಯಜ್ವಾನಂ ತಂ ವೈ ಸಂಶಾಮ್ಯ ಮಾ ಶುಚಃ ॥42॥

ನಿನಗಿಂತ ಮತ್ತು ನಿನ್ನ ಮಗನಿಗಿಂತ ಧರ್ಮ, ಜ್ಞಾನ, ವೈರಾಗ್ಯ ಮತ್ತು, ಐಶ್ವರ್ಯ ನಾಲ್ಕು ಗುಣಗಳಲ್ಲಿ ಅಧಿಕನಾದ ಆ ಶಿಬಿ ಚಕ್ರವರ್ತಿಯೇ ಮರಣವನ್ನು ಹೊಂದಿದ ಮೇಲೆ, ಯಜ್ಞ-ಯಾಗಾದಿಗಳನ್ನು ಮಾಡದ, ದಕ್ಷಿಣೆಗಳನ್ನು ಕೊಡದ ನಿನ್ನ ಮಗನ ವಿಷಯದಲ್ಲಿ ಇಷ್ಟೇಕೆ ದುಃಖವನ್ನು ಅನುಭವಿಸುತ್ತಿರುವಿ. ದುಃಖವನ್ನು ಹೊಂದಬೇಡ.

ಟಿಪ್ಪಣಿ - ಚಂದ್ರವಂಶದಲ್ಲಿ ಹುಟ್ಟಿದ ಉಶೀನರ ಎಂಬ ರಾಜನ ಮಗನೇ ಶಿಬಿ. ಯಯಾತಿಯ ಮಗಳಾದ ಮಾಧವಿಯು ಇವನ ತಾಯಿ. ಗೋಪತಿಯು ಇವನ ಮಗ. ಋಷಗರ್ಭ, ಶಿಬಿರ, ಮದ್ರ, ಕೇಕಯ ಮೊದಲಾದ ಮಕ್ಕಳು ಇವನಿಗಿದ್ದರು ಎಂಬುದಾಗಿ ಭಾಗವತವು ಹೇಳುತ್ತಿದೆ. ಇವನಿಗೆ ಬೃಹದ್‌ಗರ್ಭನೆಂಬ ಮತ್ತೊಬ್ಬ ಮಗನಿದ್ದನು. ಇವನನ್ನು ಬ್ರಹ್ಮದೇವನಿಗೆ ಸಮರ್ಪಣೆ ಮಾಡಿದನು. ಇವನೊಮ್ಮೆ ನದಿಯ ದಡದಲ್ಲಿ ಯಾಗವನ್ನು ಮಾಡುತ್ತಿದ್ದಾಗ ಇಂದ್ರನು ಗಿಡುಗನಾಗಿ, ಅಗ್ನಿಯು ಪಾರಿವಾಳವಾಗಿಯೂ ಬಂದರು. ಆ ಪಾರಿವಾಳವನ್ನು ಶಿಬಿಯು ರಕ್ಷಣೆ ಮಾಡುವುದಕ್ಕಾಗಿ ತನ್ನ ದೇಹವನ್ನೇ ಗಿಡುಗಕ್ಕೆ ಸಮರ್ಪಣೆ ಮಾಡಿದನು. ಶರಣಾಗತ ರಕ್ಷಣೆಯ ಈ ಗುಣವನ್ನು ಕಂಡು, ದೇವತೆಗಳು ಮೆಚ್ಚಿದರು.

ಭರತ ಚಕ್ರವರ್ತಿಯ ಸಾಧನೆ

ಭರತಂ ಚೈವ ದೌಃಷಂತಿಂ ಮೃತಂ ಸೃಂಜಯ ಶುಶ್ರುಮ |
ಶಾಕುಂತಲಂ ಮಹೇಷ್ವಾಸಂ ಭೂರಿದ್ರವಿಣತೇಜಸಮ್ ॥43॥
ದುಷ್ಯಂತನಿಗೆ ಶಕುಂತಲೆಯಲ್ಲಿ ಭರತನು ಮಗನಾಗಿ ಹುಟ್ಟಿದನು. ಇವನೂ ಸಹ ಚಕ್ರವರ್ತಿಯಾಗಿ ಭೂಮಿಯನ್ನು ಆಳಿದನು. ಆದರೆ ಕಾಲಗತಿಯಂತೆ ಇವನೂ ಸಹ ಮೃತನಾಗಿದ್ದಾನೆ. ಈ ಭರತನು ಮಹಾತೇಜಸ್ವಿಯಾಗಿದ್ದನು. ಧನುರ್ಧಾರಿಯಾಗಿ- ದ್ದನು. ಅತ್ಯಂತ ಶ್ರೀಮಂತನಾಗಿದ್ದನು.
ಯೋ ಬದ್ಧ್ವಾ ತ್ರಿಂಶತೋ ಹ್ಯಶ್ವಾನ್ ದೇವೇಭ್ಯೋ ಯಮುನಾಮನು |
ಸರಸ್ವತೀಂ ವಿಂಶತಿಂ ಚ ಗಂಗಾಮನು ಚತುರ್ದಶ ॥44॥
ಇವನು ದೇವತೆಗಳನ್ನು ತೃಪ್ತಿ ಪಡಿಸುವುದಕ್ಕಾಗಿ, ಯಮುನಾ ನದಿಯ ತೀರದಲ್ಲಿ ಮೂವತ್ತು ಅಶ್ವಮೇಧಯಾಗಗಳನ್ನು, ಗಂಗಾನದಿ ತೀರದಲ್ಲಿ ಇಪ್ಪತ್ತು ಅಶ್ವಮೇಧ- ಯಾಗಗಳನ್ನು, ಸರಸ್ವತೀ ನದಿಯ ತೀರದಲ್ಲಿ ಹದಿನಾಲ್ಕು ಅಶ್ವಮೇಧಯಾಗಗಳನ್ನು ಆಚರಿಸಿದನು.
ಅಶ್ವಮೇಧಸಹಸ್ರಾಣಿ ರಾಜಸೂಯಶತೇನ ಚ |
ಇಷ್ಟವಾನ್ ಸ ಮಹಾತೇಜಾ ದೌಃಷಂತಿರ್ಭರತಃ ಪುರಾ ॥45॥
ಆ ಭರತನು ತಾನು ಚಕ್ರವರ್ತಿಯಾಗಿದ್ದಾಗ ಒಟ್ಟು ಒಂದು ಸಾವಿರ ಅಶ್ವ- ಮೇಧಯಾಗಗಳನ್ನು, ನೂರು ರಾಜಸೂಯಯಾಗಗಳನ್ನು ಆಚರಿಸಿ ದೇವತೆಗಳನ್ನು ತೃಪ್ತಿಗೊಳಿಸಿದ್ದನು.
ಭರತಸ್ಯ ಮಹತ್ ಕರ್ಮ ಸರ್ವರಾಜಸು ಪಾರ್ಥಿವಾಃ |
ಖಂ ಮರ್ತ್ಯ ಇವ ಬಾಹುಭ್ಯಾಂ ನಾನುಗಂತುಮಶಕ್ನುವನ್ ॥46॥
ಮನುಷ್ಯನು ತನ್ನ ಬಾಹುಗಳಿಂದ ಆಕಾಶವನ್ನು ಮುಟ್ಟಲು ಹೇಗೆ ಅಸಾಧ್ಯವೋ? ಅದರಂತೆ ಆ ಭರತನು ಮಾಡಿದ ಮಹತ್ಕಾರ್ಯಗಳನ್ನು ಯಾವ ರಾಜನೂ ಕೂಡ ಅನುಸರಿಸಲು ಸಾಧ್ಯವಾಗುವುದಿಲ್ಲ.
ಪರಂ ಸಹಸ್ರಾದ್ ಯೋ ಬದ್ಧ್ವಾನ್ ಹಯಾನ್ ವೇದೀಂ ವಿತತ್ಯ ಚ |
ಸಹಸ್ರಂ ಯತ್ರ ಪದ್ಮಾನಾಂ ಕಣ್ವಾಯ ಭರತೋ ದದೌ ॥47॥
ಭರತನು ಸಾವಿರಕ್ಕಿಂತ ಅಧಿಕವಾದ ಅಶ್ವಗಳನ್ನು ಬಂಧಿಸಿ, ಯಾಗ ಮಾಡಿದನು. ಆ ಯಾಗದಲ್ಲಿ ನೂರು ಕೋಟಿ ಹಸುಗಳನ್ನು ಕಣ್ವಋಷಿಗಳಿಗೆ ದಾನ ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥48॥
ನಾಕು ಗುಣಗಳಿಂದ ನಿನಗಿಂತಲೂ, ನಿನ್ನ ಮಗನಿಗಿಂತಲೂ ಹೆಚ್ಚು ಮಹಾ- ಭಾಗ್ಯಶಾಲಿಯಾದ ಆ ಭರತನೇ ಮರಣವನ್ನು ಹೊಂದಿದ ಮೇಲೆ ನಿನ್ನ ಮಗನ ವಿಷಯದಲ್ಲಿ ಏಕೆ ದುಃಖವನ್ನು ಅನುಭವಿಸುವಿ?
ಟಿಪ್ಪಣಿ - ದುಷ್ಯಂತರಾಜನು ಕಣ್ವಾಶ್ರಮಕ್ಕೆ ತೆರಳಿದಾಗ ಅಲ್ಲಿ ಶಕುಂತಲೆ- ಯನ್ನು ನೋಡಿ ಮನಸೋತನು. ಗಾಂಧರ್ವವಿವಾಹವಾದನು. ಅವಳಲ್ಲಿ ಗರ್ಭಾ -ಧಾನ ಮಾಡಿದನು. ನಿನ್ನನ್ನು ಕರೆಯಿಸಿಕೊಳ್ಳುತ್ತೇನೆಂದು ವಾಗ್ದಾನ ಮಾಡಿ, ತನ್ನ ಪಟ್ಟಣಕ್ಕೆ ಹೊರಟುಬಿಟ್ಟನು. ಶಕುಂತಲೆಯು ಪುತ್ರನನ್ನು ಹೆತ್ತು ಕೆಲವು ವರ್ಷಗಳು ದಾಟಿದರೂ ದುಷ್ಯಂತನು ಈಕೆಯನ್ನು ಕರೆಸಿಕೊಳ್ಳಲಿಲ್ಲ. ಕಣ್ವಋಷಿಗಳು ಶಕುಂತಲೆಯನ್ನು ತನ್ನ ಶಿಷ್ಯರ ಜೊತೆ ರಾಜನ ಆಸ್ಥಾನಕ್ಕೆ ಕಳುಹಿಸಿದರು. ರಾಜನು ಆ ಶಕುಂತಲೆಯನ್ನು ಮತ್ತು ಮಗುವನ್ನು ಸ್ವೀಕರಿಸಲು ಅನುಮಾನ ಪಟ್ಟನು. ಆಗ ಆಕಾಶವಾಣಿಯಾಯಿತು. `ಶಕುಂತಲೆಯು ನಿನ್ನ ಪತ್ನಿ, ಬಾಲಕನು ನಿನ್ನ ಮಗ ಸ್ವೀಕರಿಸು' ಎಂದು. ಅನಂತರ ರಾಜನು ಅವರನ್ನು ಸ್ವೀಕರಿಸಿದನು. ಆ ಮಗುವೇ ಭರತನಾದನು. ದುಷ್ಯಂತನ ಅನಂತರ ಭರತನು ರಾಜನಾದನು. ಅವನಿಗೆ ಮೂರು ಮಂದಿ ಪತ್ನಿಯರಿದ್ದರು. ಒಂಬತ್ತು ಮಂದಿ ಮಕ್ಕಳಾದರು. ಈ ಭರತನ ಆಳ್ವಿಕೆ- ಯಿಂದಲೇ ಈ ದೇಶಕ್ಕೆ `ಭಾರತ' ಎಂಬ ಹೆಸರು ಬಂದಿತು. ಮತ್ತು ಅವನ ವಂಶಕ್ಕೂ `ಭರತವಂಶ' ಎಂದೇ ಹೆಸರು ಬಂದಿತು. ಇವನು ಗಂಗಾತೀರದಲ್ಲಿ ಮತ್ತು ಯಮುನಾ ತೀರದಲ್ಲಿ ಅನೇಕ ಅಶ್ವಮೇಧಯಾಗಗಳನ್ನು ಆಚರಿಸಿದನು. ಚಂದ್ರವಂಶದಲ್ಲೇ ಅತ್ಯಂತ ಹೆಸರುವಾಸಿಯಾದನು. ಇವನು ಕಥೆಯು ಆದಿ- ಪರ್ವದಲ್ಲಿ ವಿಸ್ತಾರವಾಗಿ ಬಂದಿದೆ.
ಶ್ರೀರಾಮಚಂದ್ರನ ಸಾಧನೆ
ರಾಮಂ ದಾಶರಥಿಂ ಚೈವ ಮೃತಂ ಶುಶ್ರುಮ ಸೃಂಜಯ |
ಯೋಽನ್ವಕಂಪತ ವೈ ನಿತ್ಯಂ ಪ್ರಜಾಃ ಪುತ್ರಾನಿವೌರಸಾನ್ ॥49॥
ಸೃಂಜಯನೇ! ದಶರಥನಿಗೆ ಶ್ರೀರಾಮನೆಂಬ ಮಗನಿದ್ದನು. ನಿತ್ಯವಾಗಿಯೂ ಎಲ್ಲಾ ಪ್ರಜೆಗಳನ್ನು ಔರಸಪುತ್ರರಂತೆ ಕಾಣುತ್ತಾ, ಅತ್ಯಂತ ಅನುಕಂಪದಿಂದ ಎಲ್ಲರನ್ನೂ ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದನು. ಅಂಥ ಶ್ರೀರಾಮನೂ ಕೂಡ ಪರಂಧಾಮವನ್ನು ಪ್ರವೇಶಿಸಿದನು.
ವಿಧವಾ ಯಸ್ಯ ವಿಷಯೇ ನಾನಾಥಾಃ ಕಾಶ್ಚನಾಭವನ್ |
ಸರ್ವಸ್ಯಾಸೀತ್ ಪಿತೃಸಮೋ ರಾಮೋ ರಾಜ್ಯಂ ಯದಾನ್ವಶಾತ್॥50॥
ಆ ಶ್ರೀರಾಮಚಂದ್ರನು ರಾಜ್ಯಭಾರವನ್ನು ಮಾಡುತ್ತಿರುವಾಗ, ಒಬ್ಬಳೇ ಒಬ್ಬಳು ಸ್ತ್ರೀಯು ವಿಧವೆಯಾಗಿರಲಿಲ್ಲ. ಒಬ್ಬರೂ ಕೂಡ ಅನಾಥರಾಗಿರಲಿಲ್ಲ. ಪ್ರತಿಯೊಬ್ಬ ಪ್ರಜೆಗಳಿಗೂ ಈ ಶ್ರೀರಾಮಚಂದ್ರನು ತಂದೆಯ ಸಮಾನನಾಗಿದ್ದನು.
ಕಾಲವರ್ಷಾಶ್ಚ ಪರ್ಜನ್ಯಾಃ ಸಸ್ಯಾನಿ ರಸವಂತಿ ಚ |
ನಿತ್ಯಂ ಸುಭಿಕ್ಷಮೇವಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥51॥
ಕಾಲಕ್ಕೆ ಸರಿಯಾಗಿ ಮಳೆಯಾಗುತ್ತಿತ್ತು. ಬೆಳೆಗಳು ಸಮೃದ್ಧವಾಗಿ ಬೆಳೆಯು- ತ್ತಿದ್ದವು. ನಿತ್ಯವೂ ಅವನ ರಾಜ್ಯದಲ್ಲಿ ಸುಭಿಕ್ಷವೇ ಇದ್ದಿತು. ದುರ್ಭಿಕ್ಷವೇ ಆ ರಾಮ- ರಾಜ್ಯದಲ್ಲಿ ಇರಲಿಲ್ಲ.
ಪ್ರಾಣಿನೋ ನಾಪ್ಸು ಮಜ್ಜಂತಿ ನಾನರ್ಥೇ ಪಾವಕೋಽದಹತ್ |

ನ ವ್ಯಾಲಜಂ ಭಯಂ ಚಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥52॥
ಶ್ರೀರಾಮಚಂದ್ರನು ರಾಜ್ಯಭಾರ ಮಾಡುತ್ತಿದ್ದಾಗ ಒಬ್ಬರೇ ಒಬ್ಬರೂ ಕೂಡ ನೀರಿನಲ್ಲಿ ಮುಳುಗಿ ಸಾಯಲಿಲ್ಲ. ಅಗ್ನಿಯಲ್ಲಿ ಬಿದ್ದು ಪ್ರಾಣ ಬಿಡಲಿಲ್ಲ. ರೋಗ- ದಿಂದ ಪೀಡಿತರಾಗಿರಲಿಲ್ಲ.
ಆಸನ್ ವರ್ಷಸಹಸ್ರಾಣಿ ತಥಾ ಪುತ್ರಸಹಸ್ರಿಕಾಃ |
ಅರೋಗಾಃ ಸರ್ವಸಿದ್ಧಾರ್ಥಾಃ ಪ್ರಜಾ ರಾಮೇ ಪ್ರಶಾಸತಿ ॥53॥
ಸ್ತ್ರೀಯರು ಸಾವಿರ ವರ್ಷಗಳ ಕಾಲ ಬದುಕುತ್ತಿದ್ದರು. ಸಾವಿರ ವರ್ಷಗಳನ್ನು ತುಂಬಿದ ಪುರುಷರಿದ್ದರು. ಎಲ್ಲಾ ಪ್ರಜೆಗಳು ರೋಗವಿಲ್ಲದೇ ದೃಢಕಾಯರಾಗಿದ್ದರು. ಪೂರ್ಣವಾದ ಅಭಿಲಾಷೆಗಳನ್ನು ಹೊಂದುತ್ತಿದ್ದರು.
ನಾನ್ಯೋನ್ಯೇನ ವಿವಾದೋಽಭೂತ್ ಸ್ತ್ರೀಣಾಮಪಿ ಕುತೋ ನೃಣಾಮ್|
ಧರ್ಮನಿತ್ಯಾಃ ಪ್ರಜಾಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ ॥54॥
ಆ ರಾಮರಾಜ್ಯದಲ್ಲಿ ಸ್ತ್ರೀಯರು ಪರಸ್ಪರವಾಗಿ ಜಗಳ ಮಾಡುತ್ತಿರಲಿಲ್ಲ. ಹೀಗಿದ್ದ ಮೇಲೆ ಪುರುಷರಲ್ಲಿ ವಿವಾದವಿರಲಿಲ್ಲವೆಂದು ಪ್ರತ್ಯೇಕವಾಗಿ ಹೇಳ- ಬೇಕೇನು? ಪ್ರಜೆಗಳು ಯಾವುದೇ ಭಯ ಇಲ್ಲದೇ ಧರ್ಮವನ್ನು ಅನುಷ್ಠಾನ ಮಾಡುತ್ತಿದ್ದರು. ಇದುವೇ ರಾಮರಾಜ್ಯದ ವೈಭವ.
ಸಂತುಷ್ಟಾಃ ಸರ್ವಸಿದ್ಧಾರ್ಥಾ ನಿರ್ಭಯಾ ಸ್ವೈರಚಾರಿಣಃ |
ನರಾಃ ಸತ್ಯವ್ರತಾಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ ॥55॥
ಎಲ್ಲ ಪ್ರಜೆಗಳು ತಮ್ಮೆಲ್ಲ ಅಭೀಷ್ಟಗಳನ್ನು ಪೂರೈಸಿಕೊಂಡು ಸಂತೃಪ್ತರಾಗಿದ್ದರು. ಯಾವುದೇ ಭಯವಿರಲಿಲ್ಲ. ಯಥೇಚ್ಛವಾಗಿ ಕಾಮನೆಗಳನ್ನು ಪಡೆದುಕೊಳ್ಳು- ತ್ತಿದ್ದರು. ಪ್ರತಿಯೊಬ್ಬರೂ ಸತ್ಯಪರಾಯಣರಾಗಿದ್ದರು. ಹೀಗೆ ರಾಮರಾಜ್ಯವನ್ನು ಪ್ರಶಂಸೆ ಮಾಡುತ್ತಾರೆ.
ನಿತ್ಯಪುಷ್ಪಫಲಾಶ್ಚೈವ ಪಾದಪಾ ನಿರುಪದ್ರವಾಃ |
ಸರ್ವಾ ದ್ರೌಣದುಘಾ ಗಾವೋ ರಾಮೇ ರಾಜ್ಯಂ ಪ್ರಶಾಸತಿ ॥56॥
ವೃಕ್ಷಗಳೂ ಕೂಡ ಪ್ರತಿನಿತ್ಯ ಹೂವು, ಹಣ್ಣುಗಳನ್ನು ಯಥೇಚ್ಛವಾಗಿ ಬಿಡುತ್ತಿದ್ದವು. ಯಾವುದೇ ಉಪದ್ರವವು ವೃಕ್ಷಗಳಿಗೆ ಇರಲಿಲ್ಲ. ಎಲ್ಲ ಹಸುಗಳು ಕೊಳಗದಷ್ಟು ಹಾಲನ್ನು ನೀಡುತ್ತಿದ್ದವು. ಹೀಗೆ ಶ್ರೀರಾಮನು ರಾಜ್ಯವನ್ನು ಶಾಸನೆ ಮಾಡುತ್ತಿದ್ದನು.
ಸ ಚತುರ್ದಶ ವರ್ಷಾಣಿ ವನೇ ಪ್ರೋಷ್ಯ ಮಹಾತಪಾಃ |
ದಶಾಶ್ವಮೇಧಾನ್ ಜಾರೂಥ್ಯಾಮಾಜಹಾರ ನಿರರ್ಗಲಾನ್ ॥57॥
ಆ ಶ್ರೀರಾಮನು ಹದಿನಾಕು ವರ್ಷಗಳ ಕಾಲ ವನವಾಸವನ್ನು ಮುಗಿಸಿ ರಾಜ್ಯಕ್ಕೆ ಹಿಂತಿರುಗಿದನು. ಅನಂತರ ಹತ್ತು ಅಶ್ವಮೇಧಯಾಗಗಳನ್ನು, ಜಾರೂಥೀ ಎಂಬ ನದಿಯ ತೀರದಲ್ಲಿ ಯಾವ ತೊಂದರೆಯಿಲ್ಲದೇ ಆಚರಿಸಿದನು.
ಟಿಪ್ಪಣಿ- ಜಾರುಥ್ಯಮಾಜಹಾರ ನಿರರ್ಗಲಾನ್ ಇತ್ಯತ್ರ ಜಾರುಥ್ಯಾಂ ಜಾರು- ಥೀಸಂಜ್ಞಾಯಾಂ ನದ್ಯಾಮ್ |
ಜಾರೂಥೀ ಎಂಬ ಹೆಸರುಳ್ಳ ನದಿಯಲ್ಲಿ
ಶ್ಯಾಮೋ ಯುವಾ ಲೋಹಿತಾಕ್ಷೋ ಮತ್ತವಾರಣವಿಕ್ರಮಃ |
ಆಜಾನುಬಾಹುಃ ಸುಮುಖೋ ಹರಿಃ ಸ್ಕಂಧೋ ಮಹಾಭುಜಃ ॥58॥
ದಶವರ್ಷಸಹಸ್ರಾಣಿ ರಾಮೋ ರಾಜ್ಯಮಕಾರಯತ್ |
ಶ್ರೀರಾಮಚಂದ್ರನ ದೇಹದ ಕಾಂತಿಯು ಶ್ಯಾಮಲವರ್ಣದಿಂದ ಕಂಗೊಳಿ- ಸುತ್ತಿತ್ತು. ಕೆಂಪಾದ ಕಡೆಗಣ್ಣುಗಳ ನೋಟವನ್ನು ಹೊಂದಿದ್ದನು. ಆನೆಗಳ ಗುಂಪಿ- ನಲ್ಲಿ ಮಹಾಸಲಗದಂತೆ ಬಲಿಷ್ಠನಾಗಿದ್ದನು. ಆಜಾನುಬಾಹುವಾಗಿದ್ದನು. ಸುಂದರ- ವಾದ ಮುಖವುಳ್ಳವನಾಗಿದ್ದನು. ಸಿಂಹದ ಹೆಗಲಿನಂತೆ ವಿಶಾಲವಾದ ಹೆಗಲುಳ್ಳವ- ನಾಗಿದ್ದನು. ಮಾಂಸಲವಾದ ಭುಜಗಳನ್ನು ಹೊಂದಿದ್ದನು. ಇಂಥ ಶ್ರೀರಾಮ- ಚಂದ್ರನು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಪರಿಪಾಲನೆಯನ್ನು ಮಾಡಿ- ದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥59॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ, ನಿನ್ನ ಮಗನಿಗಿಂತಲೂ ಅತ್ಯಧಿಕನಾದ ಆ ಶ್ರೀರಾಮಚಂದ್ರನೇ ಪರಂಧಾಮವನ್ನು ಪ್ರವೇಶ ಮಾಡಿದ ಮೇಲೆ ನೀನು ನಿನ್ನ ಮಗನ ವಿಷಯದಲ್ಲಿ ಏಕೆ ವ್ಯರ್ಥವಾಗಿ ಸಂಕಟವನ್ನು ಅನುಭವಿಸುತ್ತಿರುವಿ?
ಟಿಪ್ಪಣಿ - ಶ್ರೀರಾಮಚಂದ್ರನ ಆಡಳಿತವನ್ನುರಾಮಾಯಣವು ಅತ್ಯಂತ ವಿಸ್ತಾರವಾಗಿ ವರ್ಣನೆ ಮಾಡಿದೆ. ಮಹಾಭಾರತದ ವನಪರ್ವದಲ್ಲಿಯೂ ಸಂಕ್ಷೇಪವಾಗಿ ಸಂಪೂರ್ಣರಾಮಾಯಣದ ಕಥೆಯು ಇರುತ್ತದೆ. ಶ್ರೀರಾಮ- ಚಂದ್ರನು ಒಟ್ಟು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿ- ದನು. ನಕ್ಷತ್ರಮಾಸದ ಪ್ರಕಾರ ಹದಿಮೂರುಸಾವಿರ ವರ್ಷಗಳ ಕಾಲ ರಾಜ್ಯ- ಭಾರವನ್ನು ಮಾಡಿದ್ದಾನೆ. ಜಾರೂಥೀ ಎಂಬ ನದಿಯ ದಡದಲ್ಲಿ ಹತ್ತು ಅಶ್ವ- ಮೇಧಯಾಗಗಳನ್ನು ಮಾಡಿದನೆಂಬ ವಿಚಾರವು ಇಲ್ಲಿ ಮಾತ್ರ ಬರುತ್ತಿದೆ. ವಾಸ್ತವಿಕವಾಗಿ ಜಾರೂಥೀ ಎಂಬ ಒಂದು ನಗರವಿತ್ತು. ಅಲ್ಲಿ ಆಹುತಿ ಎಂಬ ರಾಜನಿದ್ದನು. ಅವನು ಶ್ರೀಕೃಷ್ಣನಿಂದ ಪರಾಜಿತನಾದನೆಂದು ಮಹಾಭಾರತದ ವನಪರ್ವದಲ್ಲಿ ಕಥೆಯು ಬಂದಿದೆ. ಆದರೆ ಇಲ್ಲಿ ಲಕ್ಷಾಲಂಕಾರದಲ್ಲಿ ಜಾರೂಥೀ ಎಂಬ ನದಿಯ ದಡದಲ್ಲಿ ಎಂದು ಹೇಳುತ್ತಿದ್ದಾರೆ.
ಭಗೀರಥನ ಸಾಧನೆ
ಭಗೀರಥಂ ಚ ರಾಜಾನಂ ಮೃತಂ ಶುಶ್ರುಮ ಸೃಂಜಯ |
ಯಸ್ಯೇಂದ್ರೋ ವಿತತೇ ಯಜ್ಞೇ ಸೋಮಂ ಪೀತ್ವಾ ಮದೋತ್ಕಟಃ ॥60॥
ಅಸುರಾಣಾಂ ಸಹಸ್ರಾಣಿ ಬಹೂನಿ ಸುರಸತ್ತಮಃ |

ಅಜಯದ್ ಬಾಹುವೀರ್ಯೇಣ ಭಗವಾನ್ ಪಾಕಶಾಸನಃ ॥61॥
ಸೃಂಜಯನೇ! ಭಗೀರಥನೆಂಬ ರಾಜನೂ ಕೂಡ ಮರಣವನ್ನು ಹೊಂದಿದ- ನೆಂಬುದನ್ನು ನಾವು ಕೇಳಿದ್ದೇವೆ. ಅವನೂ ಕೂಡ ಒಂದು ದೊಡ್ಡ ಯಾಗವನ್ನು ಆಚರಿಸಿದನು. ಅದರಲ್ಲಿ ಸುರಶ್ರೇಷ್ಠನಾದ ಪಾಕಶಾಸನನಾದ ಭಗವಾನ್ ಇಂದ್ರನು ಸೋಮರಸವನ್ನು ಯಥೇಚ್ಛವಾಗಿ ಪಾನ ಮಾಡಿದನು. ಇದರಿಂದ ಮದಭರಿತ- ನಾದನು. ಹೀಗೆ ಯಾಗವನ್ನು ಆಚರಿಸಿದ ಆ ಭಗೀರಥನು ಸಾವಿರಾರು ಅಸುರರನ್ನು ತನ್ನ ಭುಜಪರಾಕ್ರಮದಿಂದ ಒಬ್ಬನೇ ಸದೆಬಡೆದನು.
ಯಃ ಸಹಸ್ರಂ ಸಹಸ್ರಾಣಾಂ ಕನ್ಯಾ ಹೇಮವಿಭೂಷಿತಾಃ |
ಈಜಾನೋ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ ॥62॥
ತಾನು ಮಾಡಿದ ಆ ದೊಡ್ಡಯಾಗದಲ್ಲಿ ಸುವರ್ಣಾಭರಣಗಳಿಂದ ಭೂಷಿತ- ರಾದ ಹತ್ತುಲಕ್ಷ ಕನ್ಯೆಯರನ್ನು ದಕ್ಷಿಣಾರೂಪದಲ್ಲಿ ದಾನವನ್ನು ಮಾಡಿದನು.
ಸರ್ವಾ ರಥಗತಾಃ ಕನ್ಯಾ ರಥಾಃ ಸರ್ವೇ ಚತುರ್ಯುಜಃ |
ರಥೇ ರಥೇ ಶತಂ ನಾಗಾಃ ಪದ್ಮಿನೋ ಹೇಮಮಾಲಿನಃ ॥63॥
ಆ ಪ್ರತಿಯೊಬ್ಬ ಕನ್ಯೆಯರು ರಥಾರೂಢರಾಗಿದ್ದರು. ಒಂದೊಂದು ರಥದ ಹಿಂದೆಯೂ ಸುವರ್ಣಾಭರಣಗಳಿಂದ ಭೂಷಿತವಾದ ಹಣೆಯಲ್ಲಿ ಕಮಲದ ಚಿಹ್ನೆಯನ್ನು ಹೊಂದಿದ ನೂರು ಆನೆಗಳಿಂದಲೂ ಮತ್ತು ಪ್ರತಿಯೊಂದು ರಥಕ್ಕೂ ನಾಕು ಕುದುರೆಗಳಿದ್ದವು.
ಸಹಸ್ರಮಶ್ವಾ ಏಕೈಕಂ ಹಸ್ತಿನಂ ಪೃಷ್ಠತೋಽನ್ವಯುಃ |
ಗವಾಂ ಸಹಸ್ರಮಶ್ವೇಽಶ್ವೇ ಸಹಸ್ರಂ ಗವ್ಯಜಾವಿಕಮ್ ॥64॥
ಪ್ರತಿಯೊಂದು ಆನೆಗಳ ಜೊತೆಗೂ ಸಾವಿರಾರು ಕುದುರೆಗಳಿದ್ದವು. ಪ್ರತಿ- ಯೊಂದು ಕುದುರೆಗಳ ಜೊತೆ ಸಾವಿರಾರು ಹಸುಗಳಿದ್ದವು. ಒಂದೊಂದು ಹಸುವಿನ ಹಿಂದೆಯೂ ಸಾವಿರ ಆಡು ಮತ್ತೆ ಮೇಕೆಗಳು ಇದ್ದವು. ಇವೆಲ್ಲವನ್ನೂ ಭಗೀರಥನು ದಾನ ಮಾಡಿದನು.
ಉಪಹ್ವರೇ ನಿವಸತೋ ಯಸ್ಯಾಂಕೇ ನಿಷಸಾದ ಹ |
ಗಂಗಾ ಭಾಗೀರಥೀ ತಸ್ಮಾದುರ್ವಶೀ ಹ್ಯಭವತ್ ಪುರಾ ॥65॥
ಒಮ್ಮೆ ಭಗೀರಥನು ಗಂಗಾನದಿಯ ತೀರದಲ್ಲಿ ವಾಸ ಮಾಡುತ್ತಿದ್ದಾಗ, ಗಂಗಾ- ದೇವಿಯು ಸಣ್ಣಬಾಲಕಿಯಂತೆ ಬಂದು, ಆ ಭಗೀರಥನ ತೊಡೆಯಲ್ಲಿ ಕುಳಿತಳು. ಆದ್ದರಿಂದಲೇ ಆ ಗಂಗೆಯು ಭಾಗೀರಥೀ ಎಂದು, ಊರ್ವಶೀ ಎಂದು ಪ್ರಸಿದ್ಧಳಾ- ದಳು.
ಟಿಪ್ಪಣಿ - ಉಪಹ್ವರೇ ನಿವಸತ ಇತ್ಯತ್ರ ಉಪಹ್ವರೇ ಸಮೀಪೇ ಏಕಾಂತೇ ವಾ|
`ಉಪಹ್ವರೇ' ಎಂಬುದಕ್ಕೆ ಸಮೀಪದಲ್ಲಿ ಅಥವಾ ಏಕಾಂತದಲ್ಲಿ ಎಂದರ್ಥ.
ಭೂರಿದಕ್ಷಿಣಮಿಕ್ಷ್ವಾಕುಂ ಯಜಮಾನಂ ಭಗೀರಥಮ್ |
ತ್ರಿಲೋಕಪಥಗಾ ಗಂಗಾ ದುಹಿತೃತ್ವಮುಪೇಯುಷೀ ॥66॥
ಯಜ್ಞದಲ್ಲಿ ಯಜಮಾನನಾಗಿ ಯಥೇಚ್ಛವಾಗಿ ದಕ್ಷಿಣೆಯನ್ನು ನೀಡುತ್ತಿದ್ದ ಇಕ್ಷ್ವಾಕುಕುಲೋದ್ಭವನಾದ ಆ ಭಗೀರಥನನ್ನು ತ್ರಿಲೋಕಪಾವನೆಯಾದ ಗಂಗಾ- ದೇವಿಯು ತಂದೆಯನ್ನಾಗಿ ಮಾಡಿಕೊಂಡಳು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥67॥
ಸೃಂಜಯನೇ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಭಗೀರಥನು ನಿನಗಿಂತಲೂ, ನಿನ್ನ ಮಗನಿಗಿಂತಲೂ ಅತ್ಯಂತಪುಣ್ಯಶಾಲಿಯಾಗಿದ್ದಾನೆ. ಅವನೇ ಮರಣವನ್ನು ಹೊಂದಿದ ಮೇಲೆ ನೀನು ಬೇರೆಯವರ ವಿಷಯದಲ್ಲಿ ದುಃಖ ಪಡಲು ಅರ್ಥವೇ ಇಲ್ಲ. ಆದ್ದರಿಂದ ನಿನ್ನ ಮಗನು ಸತ್ತನೆಂದು ದುಃಖಿಸಬೇಡ.
ಟಿಪ್ಪಣಿ - ಇಕ್ಷ್ವಾಕುವಂಶದ ದಿಲೀಪನ ಮಗನೇ ಭಗೀರಥನು. ಇವನಿಗೆ ಹಂಸಿ ಎಂಬ ಮಗಳಿದ್ದಳು. ಕೌತ್ಸಮುನಿಯೇ ಅಳಿಯನು. ಕಪಿಲಮುನಿಯ ಕೋಪ -ದಿಂದ ಬೂದಿಯಾದ ಅರವತ್ತುಸಾವಿರ ಮಂದಿ ಸಾಗರರ ಸದ್ಗತಿಗಾಗಿ ಗಂಗಾ- ವತರಣವನ್ನು ಮಾಡಿಸಿದ ಮಹಾಧೀರ. ಭಗೀರಥನ ತಂದೆಯಾದ ದಿಲೀಪನು ಗಂಗಾವತರಣದ ಪ್ರಯತ್ನದಲ್ಲಿ ಸದ್ಗತಿಯನ್ನು ಹೊಂದಿದನು. ಅವನ ತಂದೆಯ ಆಸೆಯನ್ನು ಈಡೇರಿಸಬೇಕೆಂದು ಭಗೀರಥನು ತಪಸ್ಸಿಗಾಗಿ ಹಿಮಾಲಯ ಪ್ರಾಂತ್ಯಕ್ಕೆ ತೆರಳಿದನು. ಅಲ್ಲಿ ಆ ರಾಜನು ಕಂದಮೂಲಫಲಗಳನ್ನು ಹಾಗೂ ನೀರನ್ನೇ ಆಹಾರವನ್ನಾಗಿ ಸೇವಿಸುತ್ತಾ, ಒಂದು ಸಾವಿರ ವರ್ಷಗಳ ಕಾಲ ಘೋರ ತಪಸ್ಸನ್ನು ಮಾಡಿದನು. ಅಂತೂ ಗಂಗೆಯು ಪ್ರತ್ಯಕ್ಷಳಾದಳು. ಭೂಮಿಗೆ ಬರಲು ಒಪ್ಪಿದಳು. ಆದರೆ ತನ್ನ ವೇಗವನ್ನು ತಡೆಯುವರು ಯಾರು ಎಂದು ಕೇಳಿದಳು. ಆಗ ಭಗೀರಥನು ಪುನಃ ಮಹಾರುದ್ರದೇವರನ್ನು ಕುರಿತು ತಪಸ್ಸು ಮಾಡಿದನು. ಪ್ರತ್ಯಕ್ಷರಾದ ಮಹಾದೇವರು ಗಂಗೆಯನ್ನು ತಾನು ಧರಿಸುತ್ತೇನೆಂದು ಅಭಯ ಪ್ರದಾನ ಮಾಡಿದರು. ಪುನಃ ಗಂಗೆಯನ್ನು ಪ್ರಾರ್ಥಿಸಿ, ಭೂಮಿಗೆ ಬರುವಂತೆ ಕೇಳಿಕೊಂಡನು. ಆಗ ಗಂಗೆಯು ಶಿವನ ಜಡೆಯಲ್ಲಿ ಧುಮುಕಿದಳು. ಶಿವನ ಜಡೆ- ಯಿಂದ ಕೆಳಗೆ ಹರಿದು, ಆ ಸಗರರಿಗೆ ಸದ್ಗತಿಯನ್ನು ಉಂಟುಮಾಡಿದಳು. ಒಮ್ಮೆ ಕಾಲೇರಯೆಂಬ ರಕ್ಕಸರ ನಾಶಕ್ಕಾಗಿ ಅಗಸ್ತ್ಯನು ಸಮುದ್ರವನ್ನೇ ಆಚಮನ ಮಾಡಿ- ಬಿಟ್ಟನು. ಆಗ ಭಗೀರಥನು ಆ ಸಮುದ್ರವನ್ನು ಗಂಗೋದಕದಿಂದ ತುಂಬಿಸಿದನು. ಗಂಗೋತ್ರಿಯ ಸನ್ನಿಧಾನದಲ್ಲಿ ಭೂಮಿಗೆ ಗಂಗೆಯು ಇಳಿದುಬಂದದ್ದೆಂದು ದಾಖಲೆಗಳಿವೆ. ಅಂದಿನಿಂದ ಇಲ್ಲಿಯ ತನಕವೂ ಭರತಖಂಡದಲ್ಲಿರುವವರನ್ನು, ಈ ಗಂಗೆಯು ಪಾವನ ಮಾಡುತ್ತಿದ್ದಾಳೆ. ಈ ಗಂಗೆಯ ಕಥೆಯನ್ನು ರಾಮಾ- ಯಣದ ಬಾಲಕಾಂಡದಲ್ಲಿ ಶ್ರೀರಾಮನಿಗೆ ವಿಶ್ವಾಮಿತ್ರರು ತಿಳಿಸುತ್ತಾರೆ. ಮತ್ತು ಮಹಾಭಾರತದ ಅರಣ್ಯಪರ್ವದಲ್ಲಿ, ದ್ರೋಣಪರ್ವಗಳಲ್ಲಿಯೂ ಇದರ ವಿಚಾರವಿದೆ.
ದಿಲೀಪರಾಜನ ಸಾಧನೆ
ದಿಲೀಪಂ ಚ ಮಹಾತ್ಮಾನಂ ಮೃತಂ ಶುಶ್ರುಮ ಸೃಂಜಯ |
ಯಸ್ಯ ಕರ್ಮಾಣಿ ಭೂರೀಣಿ ಕಥಯಂತಿ ದ್ವಿಜಾತಯಃ ॥68॥
ಸೃಂಜಯನೇ! ಯಾವ ರಾಜನು ಮಾಡಿದ ಮಹಾಕಾರ್ಯಗಳನ್ನು ಬ್ರಾಹ್ಮಣರು ಇಂದೂ ಕೂಡ ಪ್ರಶಂಸೆ ಮಾಡುತ್ತಾರೋ, ಅಂಥ

ಕೀರ್ತಿಶಾಲಿಯಾದ, ಮಹಾತ್ಮ- ನಾದ ದೀಲೀಪನೂ ಕೂಡ ಮೃತನಾದನು ಎಂಬುದಾಗಿ ನಾವು ಕೇಳಿದ್ದೇವೆ.
ಇಮಾಂ ವೈ ವಸುಸಂಪನ್ನಾಂ ವಸುಧಾಂ ವಸುಧಾಧಿಪಃ |
ದದೌ ತಸ್ಮಿನ್ ಮಹಾಯಜ್ಞೇ ಬ್ರಾಹ್ಮಣೇಭ್ಯಃ ಸಮಾಹಿತಃ ॥69॥
ಅವನ ಆಡಳಿತದಲ್ಲಿ ಸಮಗ್ರಭೂಮಿಯು ಧನಸಮೃದ್ಧವಾಗಿತ್ತು. ಆದ್ದರಿಂದಲೇ ವಸುಧೆಯಾಗಿದ್ದಳು. ಇವನು ವಸುಧಾಧಿಪನಾಗಿದ್ದನು. ಇವನು ಒಂದು ದೊಡ್ಡ- ಯಾಗವನ್ನು ಆಚರಣೆ ಮಾಡಿದನು. ಈ ಧನಸಮೃದ್ಧವಾದ ಭೂಮಿಯನ್ನೇ ಬ್ರಾಹ್ಮಣರಿಗೆ ದಾನವನ್ನಾಗಿ ನೀಡಿದನು.
ತಸ್ಯೇಹ ಜಾಯಮಾನಸ್ಯ ಯಜ್ಞೇ ಯಜ್ಞೇ ಪುರೋಹಿತಃ |
ಸಹಸ್ರಂ ವಾರಣಾನ್ ಹೈಮಾನ್ ದಕ್ಷಿಣಾಮತ್ಯಕಾಲಯತ್ ॥70॥
ಆ ಯಾಗದಲ್ಲಿ ಪ್ರತಿಯೊಬ್ಬ ಪುರೋಹಿತರು ಸುವರ್ಣಾಲಂಕೃತವಾದ ಸಾವಿರ ಆನೆಗಳನ್ನು ದಕ್ಷಿಣೆಯನ್ನಾಗಿ ಸ್ವೀಕರಿಸಿದರು.
ತಸ್ಯ ಯಜ್ಞೇ ಮಹಾನಾಸೀದ್ ಯೂಪಃ ಶ್ರೀಮಾನ್ ಹಿರಣ್ಮಯಃ |
ತಂ ದೇವಾಃ ಕರ್ಮ ಕುರ್ವಾಣಾಃ ಶಕ್ರಜ್ಯೇಷ್ಠಾ ಉಪಾಶ್ರಯನ್ ॥71॥
ಅವನು ಮಾಡುತ್ತಿದ್ದ ಯಾಗದಲ್ಲಿ ನೆಡಲ್ಪಟ್ಟ ಯೂಪಸ್ತಂಭವೂ ಕೂಡ ಸುವರ್ಣಮಯವಾಗಿತ್ತು. ಅತ್ಯಂತಕಾಂತಿಯುತವಾಗಿತ್ತು. ಆ ಯೂಪಸ್ತಂಭವನ್ನು ಆಶ್ರಯಿಸಿ, ಇಂದ್ರನೇ ಮೊದಲಾದ ದೇವತೆಗಳು ಯಜ್ಞಕರ್ಮಗಳನ್ನು ಮಾಡುತ್ತಿ- ದ್ದರು.
ಚಷಾಲೌ ಯಸ್ಯ ಸೌವರ್ಣಸ್ತಸ್ಮಿನ್ ಯೂಪೇ ಹಿರಣ್ಮಯೇ |
ನನೃತುರ್ದೇವಗಂಧರ್ವಾಃ ಷಟ್ಸಹಸ್ರಾಣಿ ಸಪ್ತಧಾ ॥72॥
ಸುವರ್ಣಮಯವಾದ ಯೂಪಸ್ತಂಭದ ಮೇಲೆ ಚಷಾಲ ಎಂಬ ಸುವರ್ಣ- ಸ್ತೂಪಿಯು ಆರುಸಾವಿರ ಮಂದಿ ದೇವಗಂಧರ್ವರು ನರ್ತನ ಮಾಡುತ್ತಿದ್ದರು.
ಟಿಪ್ಪಣಿ - ಚಷಾಲೌ ಯಸ್ಯ ಸೌವರ್ಣೌ ಇತ್ಯತ್ರ ಚಷಾಲೌ ಯೂಪಕಟಕೌ| `ಚಷಾಲೋ ಯೂಪಕಟಕಃ' ಇತ್ಯಮರಃ |
`ಚಷಾಲೌ ಯಸ್ಯ ಸೌವರ್ಣೌ' ಎಂಬಲ್ಲಿ `ಚಷಾಲೌ' ಎಂದರೆ ಬಂಗಾರದ ಬಳೆಯಲ್ಲಿ ಎಂದರ್ಥ. `ಚಷಾಲೋ ಯೂಪಕಟಕಃ' ಎಂಬುದಾಗಿ ಅಮರ- ಕೋಶವು ಹೇಳುತ್ತದೆ.
ಅವಾದಯತ್ತತ್ರ ವೀಣಾಂ ಮಧ್ಯೇ ವಿಶ್ವಾವಸುಃ ಸ್ವಯಮ್ |
ಸರ್ವಭೂತಾನ್ಯಮನ್ಯಂತ ಮಮ ವಾದಯತೀತ್ಯಯಮ್ ॥73॥
ಅವರ ಮಧ್ಯದಲ್ಲಿ ವಿಶ್ವಾವಸು ಎಂಬ ಗಂಧರ್ವನು ಸಪ್ತಸ್ವರಗಳಿಂದ ಕೂಡಿದ ವೀಣಾವಾದನವನ್ನು ಮಾಡುತ್ತಿದ್ದನು. ಆ ವೀಣಾವಾದನವನ್ನು ಕೇಳುತ್ತಿದ್ದ ಎಲ್ಲಾ ಭೂತಗಳು ಇದು ನಮಗೋಸ್ಕರವೇ ಎಂಬ ಭಾವನೆಯಿಂದ ಅತ್ಯಂತ ಆದರವುಳ್ಳ- ವರಾಗಿ ಆ ಸಂಗೀತವನ್ನು ಕೇಳುತ್ತಿದ್ದರು.
ಏತದ್ರಾಜ್ಞೋ ದಿಲೀಪಸ್ಯ ರಾಜಾನೋ ನಾನುಚಕ್ರಿರೇ |
ಯತ್ ಸ್ತ್ರಿಯೋ ಹೇಮಸಂಪನ್ನಾಃ ಪಥಿ ಮತ್ತಾಃ ಸ್ಮ ಶೇರತೇ ॥74॥
ಈ ದಿಲೀಪರಾಜನು ಮಾಡಿದ ಯಾಗಕಾರ್ಯದಂತೆ ಮತ್ತೊಬ್ಬ ರಾಜನು ಮಾಡಲು ಸಾಧ್ಯವೇ ಇಲ್ಲ. ಸುವರ್ಣಮಯವಾದ ಆಭರಣಗಳಿಂದ ಅಲಂಕೃತ- ರಾದ ಸಾವಿರಾರು ಆನೆಗಳು ಮದಭರಿತವಾಗಿ ಬೀದಿಯಲ್ಲೇ ಮಲಗುತ್ತಿದ್ದವು.
ಟಿಪ್ಪಣಿ - `ಯತ್ ಸ್ತ್ರಿಯೋ ಹೇಮಸಂಪನ್ನಾಃ' ಎಂಬ ಪಾಠವು ಕಾಣಿಸುತ್ತಿದೆ. ಈ ಪಾಠದ ಪ್ರಕಾರ ಸ್ತ್ರೀಯರು ಮದೋನ್ಮತ್ತರಾಗಿ ಬೀದಿಯಲ್ಲಿ ಮಲಗುತ್ತಿದ್ದ- ರೆಂದು ಅರ್ಥವಾಗುತ್ತದೆ. ಆದರೆ ಉಳಿದ ಪುಸ್ತಕಗಳಲ್ಲಿ `ಗಜಾಃ' ಎಂಬ ಪಾಠವಿದೆ. ಆಗ ಆನೆಗಳು ಸುವರ್ಣಾಭರಣಗಳನ್ನು ಹಾಕಿಕೊಂಡು ಬೀದಿಯಲ್ಲಿ ಮಲಗುತ್ತಿ- ದ್ದವು ಎಂದು ಅರ್ಥವಾಗುತ್ತದೆ.
ರಾಜಾನಮುಗ್ರಧನ್ವಾನಂ ದಿಲೀಪಂ ಸತ್ಯವಾದಿನಮ್ |
ಯೇಽಪಶ್ಯನ್ ಸುಮಹಾತ್ಮಾನಂ ತೇಽಪಿ ಸ್ವರ್ಗಜಿತೋ ನರಾಃ॥75॥
ಆ ದಿಲೀಪನು ಉಗ್ರವಾದ ಧನುಸ್ಸುಳ್ಳವನಾಗಿದ್ದನು. ಸತ್ಯವಾದಿಯಾಗಿದ್ದನು. ಶ್ರೇಷ್ಠಮಹಾತ್ಮನಾಗಿದ್ದನು. ಇವನನ್ನು ಯಾರು ನೋಡುತ್ತಾರೋ, ಅವರೂ ಕೂಡ ಸ್ವರ್ಗವನ್ನು ಪಡೆಯುತ್ತಾರೆ.
ತ್ರಯಃ ಶಬ್ದಾ ನ ಜೀರ್ಯಂತೇ ದಿಲೀಪಸ್ಯ ನಿವೇಶನೇ |
ಸ್ವಾಧ್ಯಾಯಘೋಷೋ ಜ್ಯಾಘೋಷೋ ದೀಯತಾಮಿತಿ ಚೈವ ಹಿ॥76॥
ಆ ದಿಲೀಪನ ಮನೆಯಲ್ಲಿ ವೇದದ ಧ್ವನಿ, ಬಿಲ್ಲಿನ ಧ್ವನಿ, ದಾನ ಮಾಡಿರಿ ಎಂಬ ಧ್ವನಿ ಈ ಮೂರು ನಿರಂತರ ಕೇಳಿಸುತ್ತಲೇ ಇದ್ದವು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥77॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಆ ದಿಲೀಪನು ನಿನ- ಗಿಂತಲೂ ಅತ್ಯಧಿಕನಾಗಿದ್ದಾನೆ. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದಾನೆ. ಅವನೇ ಮರಣವನ್ನು ಹೊಂದಿದಲ್ಲಿ ಬೇರೆಯವರ ವಿಷಯದಲ್ಲಿ ಹೇಳುವುದೇನಿದೆ. ಆದ್ದರಿಂದ ನಿನ್ನ ಮಗನು ಸತ್ತನೆಂಬ ವಿಷಯದಲ್ಲಿ ದುಃಖಿಸಬೇಡ.
ಮಾಂಧಾತ ರಾಜನ ಸಾಧನೆ
ಮಾಂಧಾತಾರಂ ಯೌವನಾಶ್ವಂ ಮೃತಂ ಶುಶ್ರುಮ ಸೃಂಜಯ |
ಯಂ ದೇವಾ ಮರುತೋ ಗರ್ಭಂ ಪಿತುಃ ಪಾರ್ಶ್ವಾದಪಾಹರನ್ ॥78॥
ಯೌವನಾಶ್ವನ ಮಗನೇ ಮಾಂಧಾತಾ ಇವನೂ ಕೂಡ ಮರಣವನ್ನು ಹೊಂದಿ- ದನೆಂಬುದನ್ನು ನಾವು ಕೇಳಿದ್ದೇವೆ. ಇವನು ತನ್ನ ತಂದೆಯ ಗರ್ಭದಲ್ಲಿಯೇ ಬೆಳೆದು ಅವನ ಒಂದು ಪಾರ್ಶ್ವವನ್ನು ಭೇದಿಸಿಕೊಂಡು ಹುಟ್ಟಿದನು.
ಸಮೃದ್ಧೋ ಯುವನಾಶ್ವಸ್ಯ ಜಠರೇ ಯೋ ಮಹಾತ್ಮನಃ |

ಪೃಷದಾಜ್ಯೋದ್ಭವಃ ಶ್ರೀಮಾಂಸ್ತ್ರಿಲೋಕವಿಜಯೀ ನೃಪಃ ॥79॥
ಸಂತಾನಪ್ರಾಪ್ತಿಯ ಉದ್ದೇಶದಿಂದ ಯುವನಾಶ್ವನು ತುಪ್ಪ, ಮೊಸರು ಎರಡನ್ನು ಬೆರೆಸಿಟ್ಟದ್ದನ್ನು ಕುಡಿದು ಬಿಟ್ಟನು. ಅದು ಮಂತ್ರಪೂತವಾಗಿತ್ತು. ಇದರ ಪರಿ- ಣಾಮದಿಂದ ಅವನ ಹೊಟ್ಟೆಯಲ್ಲಿಯೇ ಗರ್ಭವು ಬೆಳೆಯಿತು. ಅವನ ದೇಹದ ಭಾಗದಿಂದಲೇ ಮರುದ್ದೇವತೆಗಳು ಆ ಗರ್ಭವನ್ನು ಹೊರಗೆ ತೆಗೆದರು.
ಟಿಪ್ಪಣಿ- ಪೃಷದಾಜ್ಯೋದ್ಭವಃ ಶ್ರೀಮಾನ್ ಇತ್ಯತ್ರ ಪೃಷದಾಜ್ಯಂ ಸರ್ಪಿಷಾ ಮಿಶ್ರಃ ಹವಿಃ | `ಪೃಷದಾಜ್ಯಂ ಹವಿಃ ಸರ್ಪಿಃ' ಇತ್ಯಮರಃ | `ಪೃಷದಾಜ್ಯಂ' ಎಂದರೆ ತುಪ್ಪದಿಂದ ಮಿಶ್ರಿತವಾದ ಹವಿಸ್ಸು. `ಪೃಷದಾಜ್ಯಂ ಹವಿಃ ಸರ್ಪಿಃ' ಎಂಬುದಾಗಿ ಅಮರಕೋಶವು ಹೇಳುತ್ತದೆ.
ಯಂ ದೃಷ್ಟ್ವಾ ಪಿತುರುತ್ಸಂಗೇ ಶಯಾನಂ ದೇವರೂಪಿಣಮ್ |
ಅನ್ಯೋನ್ಯಮಬ್ರುವನ್ ದೇವಾಃ ಕಮಯಂ ಧಾಸ್ಯತೀತಿ ವೈ ॥80॥
ದೇವತೆಯಂತೆ ಕಾಣುತ್ತಿರುವ ಹುಟ್ಟಿದ ಮಗುವು ತನ್ನ ತಂದೆಯ ತೊಡೆಯ ಮೇಲೆ ಮಲಗಿತ್ತು. ಆ ಶಿಶುವನ್ನು ನೋಡಿ, ಜನರು `ಕಂ ಧಾಸ್ಯತಿ' `ಯಾರ ಹಾಲನ್ನು ಕುಡಿಯುತ್ತದೆ' ಎಂದು ಮಾತನಾಡಿಕೊಂಡರು.
ಮಾಮೇವ ಧಾಸ್ಯತೀತ್ಯೇವಮಿಂದ್ರೋ ಅಭ್ಯವಪದ್ಯತ |
ಮಾಂಧಾತೇತಿ ತತಸ್ತಸ್ಯ ನಾಮ ಚಕ್ರೇ ಶತಕ್ರತುಃ ॥81॥
ಆಗ ದೇವೇಂದ್ರನು `ಮಾಮೇವ ಧಾಸ್ಯತಿ' `ನನ್ನ ಹಾಲನ್ನೇ ಕುಡಿಯುತ್ತಾನೆ' ಎಂದು ಹೇಳಿ, ಆ ಶಿಶುವನ್ನು ಸಮೀಪಿಸಿದನು. ಆದ್ದರಿಂದಲೇ `ಮಾಂಧಾತಾ' ಎಂಬ ಹೆಸರು ಅವನಿಗೆ ಬಂದಿತು.
ತತಸ್ತು ಪಯಸೋ ಧಾರಾಂ ಪುಷ್ಟಿಹೇತೋರ್ಮಹಾತ್ಮನಃ |
ತಸ್ಯಾಸ್ಯೇ ಯೌವನಾಶ್ವಸ್ಯ ಪಾಣಿರಿಂದ್ರಸ್ಯ ಚಾಸ್ರವತ್ ॥82॥
ಅನಂತರ ಮಹಾತ್ಮನಾದ ಯೌವನಾಶ್ವನಾದ ಮಾಂಧಾತನ ಶರೀರದ ಪೋಷಣೆಗಾಗಿ ದೇವೇಂದ್ರನು ತನ್ನ ಬೆರಳನ್ನು ಮಗುವಿನ ಬಾಯಿಯಲ್ಲಿ ಇಟ್ಟನು. ಮಗು ಆ ದೇವೇಂದ್ರನ ಬೆರಳನ್ನೇ ಚೀಪಿತು. ಆ ಬೆರಳಿನಿಂದ ಅಮೃತವು ಸ್ರವಿಸಿತು.
ತಂ ಪಿಬತ್ ಪಾಣಿಮಿಂದ್ರಸ್ಯ ಸಮಾಮಹ್ನಾ ವ್ಯವರ್ಧತ |
ಸ ಆಸೀದ್ ದ್ವಾದಶಸಮೋ ದ್ವಾದಶಾಹೇನ ಪಾರ್ಥಿವ ॥83॥
ದೇವೇಂದ್ರನ ಕೈಯ ಬೆರಳನ್ನು ಚೀಪುತ್ತಾ ಆ ಮಗುವು ಅಮೃತಪಾನವನ್ನೇ ಮಾಡುತ್ತಿತ್ತು. ಇದರಿಂದ ಆ ಮಗುವಿನ ದೇಹವು ಹನ್ನೆರಡು ದಿವಸಗಳಲ್ಲಿಯೇ ಹನ್ನೆರಡು ವರ್ಷದಷ್ಟು ಪರಿಪುಷ್ಟವಾದ ದೇಹವನ್ನು ಹೊಂದಿತು.
ಟಿಪ್ಪಣಿ - ಸಮಾಮಹ್ನಾ ವ್ಯವರ್ಧತ ಇತ್ಯತ್ರ ಅಹ್ನಾ ಏಕದಿವಸೇನ ಸಮಾಂ ಏಕವರ್ಷಂ ವ್ಯವರ್ಧತ | ಏಕದಿವಸೇನ ಏಕವರ್ಷಬಾಲೋಪಮೋಽಭೂದಿತ್ಯರ್ಥಃ |
`ಅಹ್ನಾ' ಒಂದೇ ದಿವಸದಲ್ಲಿ, `ಸಮಾಂ' ಒಂದು ವರ್ಷದಷ್ಟು ಬೆಳೆದನು. ಒಂದೇ ದಿವಸದಲ್ಲಿ ಒಂದು ವರ್ಷದ ಮಗುವಿಗೆ ಸಮಾನವಾಗಿ ಬೆಳೆದನು ಎಂದು ಅರ್ಥ. ಹನ್ನೆರಡು ದಿವಸದಲ್ಲಿ ಹನ್ನೆರಡು ವರ್ಷದ ಮಗುವಿಗೆ ಸಮಾನವಾಗಿ ಬೆಳೆದನು ಎಂದು ಅರ್ಥ.
ತಮಿಯಂ ಪೃಥಿವೀ ಸರ್ವಾ ಏಕಾಹ್ನಾ ಸಮಪದ್ಯತ |
ಧರ್ಮಾತ್ಮಾನಂ ಮಹಾತ್ಮಾನಂ ಶೂರಮಿಂದ್ರಸಮಂ ಯುಧಿ ॥84॥
ಆ ಬಾಲಕನು ದೇವೇಂದ್ರನಿಗೆ ಸಮಾನನಾಗಿ ಬೆಳೆದನು. ಅಖಂಡ ಭೂ- ಮಂಡಲವನ್ನು ಒಂದೇ ದಿವಸದಲ್ಲಿ ತನ್ನ ಅಧೀನವನ್ನಾಗಿ ಮಾಡಿಕೊಂಡನು. ಮಹಾತ್ಮನು, ಧರ್ಮಸ್ವರೂಪನು, ಅತ್ಯಂತಪರಾಕ್ರಮಿಯೂ ಆಗಿ ಬೆಳೆದನು.
ಯಶ್ಚಾಂಗಾರಂ ಹಿ ನೃಪತಿಂ ಮರುತ್ತಮಸಿತಂ ಗಯಮ್ |
ಅಂಗಂ ಬೃಹದ್ರಥಂ ಚೈವ ಮಾಂಧಾತಾ ಸಮರೇಽಜಯತ್ ॥85॥
ಮಾಂಧಾತನು ಯುದ್ಧದಲ್ಲಿ ಅಂಗಾರ, ಮರುತ್, ಅಸಿತ, ಗಯ, ಬೃಹದ್ರಥ ಮೊದಲಾದ ರಾಜರನ್ನು ಗೆದ್ದನು.
ಯೌವನಾಶ್ವೋ ಯದಾಗಾಂರಂ ಸಮರೇ ಸಮಯೋಧಯತ್ |
ವಿಸ್ಫಾರೈರ್ಧನುಷೋ ದೇವಾ ದ್ಯೌರಭೇದೀತಿ ಮೇನಿರೇ ॥86॥
ಅಂಗರಾಜನ ಜೊತೆ ಮಾಂಧಾತನು ಯುದ್ಧ ಮಾಡುತ್ತಿದ್ದನು. ಆಗೊಮ್ಮೆ ಬಿಲ್ಲಿನಿಂದ ಠೇಂಕಾರವನ್ನು ಮಾಡಿದನು. ಈ ಧ್ವನಿಯು ಎಷ್ಟು ಭಯಂಕರವಾಗಿತ್ತು ಎಂದರೆ ದೇವತೆಗಳು ತಮ್ಮ ಲೋಕವೇ ಸೀಳಿಹೋಯಿತೆಂದು ಹೆದರಿದರು.
ಯತಃ ಸೂರ್ಯ ಉದೇತಿ ಸ್ಮ ಯತ್ರ ಚ ಪ್ರತಿತಿಷ್ಠತಿ |
ಸರ್ವಂ ತದ್ ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥87॥
ಸೂರ್ಯನು ಉದಯಿಸಿ, ಅಸ್ತಂಗತನಾಗುವ ಭೂಭಾಗವೆಲ್ಲವೂ ಮಾಂಧಾತ- ರಾಜನ ಕ್ಷೇತ್ರವೆಂದೇ ಕರೆಯಲ್ಪಡುತ್ತದೆ.
ವಿವರಣೆ - ಸಮಗ್ರ ಭೂಮಂಡಲದಲ್ಲಿಯೇ ಸೂರ್ಯನ ಕಿರಣಗಳು ಬೀಳುತ್ತವೆ. ಆ ಸೂರ್ಯನ ಕಿರಣಗಳು ಬೀಳುವ ಪ್ರದೇಶವನ್ನು ಮಾಂಧಾತ- ರಾಜನು ತನ್ನ ಅಧೀನವನ್ನಾಗಿ ಮಾಡಿಕೊಂಡನು ಎಂದಭಿಪ್ರಾಯ.
ಅಶ್ವಮೇಧಶತೇನೇಷ್ಟ್ವಾ ರಾಜಸೂಯಶತೇನ ಚ |
ಅದದಾದ್ ರೋಹಿತಾನ್ ಮತ್ಸ್ಯಾನ್ ಬ್ರಾಹ್ಮಣೇಭ್ಯೋ ಮಹೀಪತಿಃ ॥88
ಆ ಮಾಂಧಾತರಾಜನು ನೂರು ಅಶ್ವಮೇಧಯಾಗಗಳನ್ನು, ನೂರು ರಾಜ- ಸೂಯಯಾಗಗಳನ್ನು ಮಾಡಿದನು. ಆ ಸಂದರ್ಭದಲ್ಲಿ ರೋಹಿತ ಮತ್ಸ್ಯಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.
ಹೈರಣ್ಯಾನ್ ಯೋಜನೋತ್ಸೇಧಾನಾಯತಾನ್ ದಶಯೋಜನಮ್|
ಅತಿರಿಕ್ತಾನ್ ದ್ವಿಜಾತಿಭ್ಯೋ ವ್ಯಭಜನ್ನಿತರೇ ಜನಾಃ ॥89॥
ದಾನಮಾಡಲ್ಪಟ್ಟ ಆ ರೋಹಿತಮತ್ಸ್ಯಗಳು ಒಂದು ಯೋಜನ ಎತ್ತರವಾಗಿ- ದ್ದವು, ಹತ್ತುಯೋಜನ ಉದ್ದವಾಗಿದ್ದವು. ಬ್ರಾಹ್ಮಣರಿಗೆ

ದಾನ ಮಾಡಿ ಉಳಿದ ಹಣವನ್ನು ಬೇರೆ ಜನರು ಹಂಚಿಕೊಂಡರು.
ಟಿಪ್ಪಣಿ - ದ್ರೋಣಪರ್ವದ ಅರವತ್ತೆರಡನೆಯ ಅಧ್ಯಾಯದಲ್ಲೂ ಇಂಥದ್ದೇ ಶ್ಲೋಕವೊಂದು ಇದೆ -`ಹೈರಣ್ಯಾನ್ ಯೋಜನೋತ್ಸೇಧಾನ್ ಆಯತಾನ್ ದಶಯೋಜನಮ್ |' ಎಂದು. ಈ ಮಾಂಧಾತರಾಜನ ಕಥೆಯು ಅಲ್ಲಿಯೂ ಬಂದಿದೆ. ಬಂಗಾರದ ಮೀನುಗಳು ಹತ್ತು ಯೋಜನದಷ್ಟು ಸ್ಥಳದಲ್ಲಿ ತುಂಬಿದ್ದವು ಎಂದೂ ಕೂಡ ಅರ್ಥವನ್ನು ಮಾಡಬಹುದು. ಆಗ ಹತ್ತು ಯೋಜನದಷ್ಟು ಚಿನ್ನವು ತುಂಬಿತ್ತು. ಆ ಮತ್ಸ್ಯಗಳು ಒಂದೊಂದೂ ಕೂಡ ಹತ್ತು ಯೋಜನದಷ್ಟು ಉದ್ದವಾಗಿದ್ದವೆಂದು ಹೇಳಬೇಕಾಗಿಲ್ಲ.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥90॥
ಸೃಂಜಯನೇ! ನಿನಗಿಂತಲೂ ನಿನ್ನ ಮಗನಿಗಿಂತಲೂ ಆ ಮಾಧಾಂತನು ಧರ್ಮ, ಜ್ಞಾನ, ವೈರಾಗ್ಯ ಐಶ್ವರ್ಯಗಳಲ್ಲಿ ಅತ್ಯಧಿಕನು. ಅವನೇ ಮರಣವನ್ನು ಹೊಂದಿದ ಮೇಲೆ ಏನೂ ಮಾಡದ ನಿನ್ನ ಮಗ ಮರಣ ಹೊಂದಿರುವುದರಲ್ಲಿ ಏನು ವಿಶೇಷ- ವಿದೆ? ಇದಕ್ಕೇಕೆ ದುಃಖಿಸುವೆ?
ಟಿಪ್ಪಣಿ - ಯುವನಾಶ್ವನು ಸೂರ್ಯವಂಶದವನು. ಇವನು ಪುತ್ರನಿಗಾಗಿ ಯಾಗವನ್ನು ಆಚರಿಸುತ್ತಿದ್ದನು. ಭೃಗುಋಷಿಗಳು ಪುತ್ರಪ್ರದವಾದ ಉದಕವನ್ನು ಮಂತ್ರಿಸಿಟ್ಟಿದ್ದರು. ಇವನು ತಿಳಿಯದೇ ಅದನ್ನು ಕುಡಿದು ಗರ್ಭವನ್ನು ಧರಿಸಿದನು. ದೇವತೆಗಳೇ ಬಂದು ಆ ಉದರದಿಂದ ಆ ಮಗುವನ್ನು ಹೊರಗೆ ತೆಗೆದರು. ಇಂದ್ರನ ಹೆಬ್ಬೆರಳಿನಿಂದ ಅಮೃತರಸವನ್ನು ಪಾನ ಮಾಡಿ, ದೇವೇಂದ್ರನಿಗೆ ಸಮಾನ- ನಾಗಿ ಭೂಲೋಕದಲ್ಲಿ ಬೆಳೆದನು. ಲವಣಾಸುರನ ಜೊತೆ ಯುದ್ಧವನ್ನು ಮಾಡಿ ಅವನಿಂದ ಹತನಾದನು. ಇವನ ಪತ್ನಿಯೇ ಶಶಿಬಿಂದು, ಪುತ್ರಿ ಬಿಂದುಮತಿ, ಪುರುಪುತ್ಸ, ಅಂಬರೀಷ, ಮುಚುಕುಂದರು ಇವನ ಮಕ್ಕಳು. ಇದಲ್ಲದೇ ಐವತ್ತು ಮಂದಿ ಪುತ್ರಿಯರೂ ಕೂಡ ಮಾಂಧಾತನಿಗೆ ಇದ್ದರು. ಅವರನ್ನೇ ಸೌಭರಿ- ಮಹರ್ಷಿಗಳು ವಿವಾಹವಾದರು.
ಯಯಾತಿಂ ನಾಹುಷಂ ಚೈವ ಮೃತಂ ಶುಶ್ರುಮ ಸೃಂಜಯ |
ಯ ಇಮಾಂ ಪೃಥಿವೀಂ ಸರ್ವಾಂ ವಿಜಿತ್ಯ ಸಹಸಾಗರಾಮ್ ॥91॥
ನಹುಷನ ಪುತ್ರನೇ ಯಯಾತಿ. ಇವನೂ ಕೂಡ ಮೃತನಾದದ್ದನ್ನು ನಾವು ಕೇಳುತ್ತೇವೆ. ಈ ಯಯಾತಿಯು ಸಮುದ್ರದ ತನಕವಿರುವ ಸಮಗ್ರ ಭೂಮಿಯನ್ನು ಗೆದ್ದನು.
ಶಮ್ಯಾಪಾತೇನಾಭ್ಯತೀಯಾದ್ ವೇದೀಭಿಶ್ಚಿತ್ರಯನ್ನೃಪ |
ಈಜಾನಃ ಕ್ರತುಭಿಃ ಪುಣ್ಯೈಃ ಪರ್ಯಗಚ್ಛದ್ ವಸುಂಧರಾಮ್ ॥92॥
ಒಬ್ಬ ಬಲಿಷ್ಠನಾದವನು ಶಮ್ಯಾ ಎಂಬ ದಂಡವನ್ನು ಎಸೆದರೆ ಎಷ್ಟು ದೂರಕ್ಕೆ ಹೋಗಿ ಬೀಳುವುದು. ಅಷ್ಟಷ್ಟು ದೂರಕ್ಕೆ ಒಂದೊಂದು ಯಜ್ಞವೇದಿಕೆಯನ್ನು ಮಾಡಿಸಿದ್ದನು. ಅಷ್ಟು ಯಾಗಗಳನ್ನು ಆಚರಿಸಿದ್ದನು. ಅನೇಕ ಯಾಗಗಳನ್ನು ಆಚರಣೆ ಮಾಡಿ, ಕೊನೆಯಲ್ಲಿ ಸಮಗ್ರಭೂಮಿಯನ್ನೇ ಯಜ್ಞವೇದಿಕೆಯನ್ನಾಗಿ ಮಾಡಿದ್ದನು. ಸಮಗ್ರ ಭೂಮಂಡಲವನ್ನೇ ಪ್ರದಕ್ಷಿಣೆ ಮಾಡಿದನು.
ವಿವರಣೆ - `ಶಮ್ಯಾ' ಎಂಬುದಕ್ಕೆ `ಸ್ಥೂಲಬುದ್ಧ್ಯಾ ಕಾಷ್ಠ ದಂಡಃ' ಎಂದರ್ಥ. ಬುಡವು ಸ್ಥೂಲವಾಗಿರಬೇಕು. ಅಂಥ ಒಂದು ಮರದ ಕೋಲು. ಗೂಟದ ಕೋಲು ಎಂದು ಕರೆಯುತ್ತಾರೆ. ಬಲಿಷ್ಠನಾದ ವ್ಯಕ್ತಿಯು ಈ ದಂಡವನ್ನು ಹಿಡಿದು ಬೀಸಿ ಎಸೆದರೆ ಎಷ್ಟು ದೂರ ಹೋಗಿ ಬೀಳುತ್ತದೋ, ಆ ಸ್ಥಳವನ್ನೇ ಶಮ್ಯಾಪಾತ- ವೆನ್ನುತ್ತಾರೆ. ಈ ಅಳತೆಯನ್ನು ಮಾಡಿಕೊಂಡು ಸಮಗ್ರಭೂಮಂಡಲದಲ್ಲಿ ಯಜ್ಞವೇದಿಕೆಯನ್ನು ನಿರ್ಮಾಣ ಮಾಡಿದ್ದನು. ಪ್ರತಿಯೊಂದು ಶಮ್ಯಾಪಾತಗಳ- ಲ್ಲಿಯೂ ಯಜ್ಞವನ್ನು ಮಾಡಿದ್ದನು. ಹೀಗೆ ಸಮಗ್ರಭೂಮಂಡಲವನ್ನೇ ಪರ್ಯ- ಟನೆ ಮಾಡಿದ್ದನು. ಮತ್ತು ಭೂಮಿಯಲ್ಲೆಲ್ಲೆಡೆಯೂ ಯಜ್ಞವೇದಿಕೆಗಳೇ ಕಾಣು- ವಂತೆ ಮಾಡಿದ್ದನು.
ಟಿಪ್ಪಣಿ- ಶಮ್ಯಾಪಾತೇನಾಭ್ಯಗಚ್ಛನ್ ಇತ್ಯತ್ರ ಆ ಸಮಂತಾತ್ ಪತತೀತ್ಯಾಪಾತೋ ರಥಚಕ್ರಮ್ | ಶಮೀಮಯಃ ಆಪಾತೋ ಯಸ್ಯ ತೇನ ರಥೇನ|
ವಿಮರ್ಶೆ -
`ಶಮ್ಯಾಪ್ರಾಸ ಎಂದರೇನು ?
`ಶಮ್ಯಾ' ಎಂದರೆ ಬುಡವು ದಪ್ಪವಿರುವ ಒಂದು ಕೋಲು. ಇದನ್ನು ಬಲಿಷ್ಠ- ನಾದವನು ದೂರ ಎಸೆದರೆ, ಎಷ್ಟು ದೂರವು ಹೋಗುತ್ತದೋ, ಅದನ್ನು ಅಳತೆಯನ್ನಾಗಿಟ್ಟುಕೊಂಡು, ಯಜ್ಞವೇದಿಕೆಗಳನ್ನು ಸಿದ್ಧಗೊಳಿಸಿ, ಯಜ್ಞವನ್ನು ಆಚರಿಸುವುದು. ಪುನಃ ಅಲ್ಲಿ ಯಜ್ಞವು ಮುಗಿದ ಮೇಲೆ ಆ ಶಮ್ಯವನ್ನು ಎಸೆಯ- ಬೇಕು. ಅದು ಬಿದ್ದಲ್ಲಿ, ಯಜ್ಞಶಾಲೆಯನ್ನು ನಿರ್ಮಾಣ ಮಾಡಿ, ಅಲ್ಲಿ ಯಜ್ಞವನ್ನು ಆಚರಿಸುವುದು. ಹೀಗೆ ಸಮಗ್ರಭೂಮಂಡಲದಲ್ಲಿ ಎಲ್ಲೆಡೆಯು ಯಜ್ಞಶಾಲೆಗಳನ್ನು ನಿರ್ಮಾಣ ಮಾಡಿ, ಯಜ್ಞಗಳನ್ನು ಮಾಡುತ್ತಿದ್ದನೆಂದು ಹೇಳುತ್ತಾರೆ.
ಭಾಗವತದಲ್ಲಿ `ಶಮ್ಯಾಪ್ರಾಸ' ಎಂಬ ಶಬ್ದವು ಪ್ರಸಿದ್ಧವಾಗಿದೆ. ಅದರ ಆಧಾರದಲ್ಲಿ ಇದಕ್ಕೆ ಸ್ಪಷ್ಟವಾದ ಅರ್ಥವನ್ನು ಹೀಗೆ ತಿಳಿಯಬೇಕು. ಶಮ್ಯಾಪ್ರಾಸ ಎಂಬ ಹೆಸರಿನ ಆಶ್ರಮವಿತ್ತು ಎಂಬುದಾಗಿ ಭಾಗವತದಲ್ಲಿ ಹೇಳಿದ್ದಾರೆ. ಭಾಗವತ- ದಲ್ಲಿ ಪ್ರಥಮಸ್ಕಂಧದ ಏಳನೆಯ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ `ಬ್ರಹ್ಮಾದ್ಯಾಃ ಸರಸ್ವತ್ಯಾಃ ಆಶ್ರಮೇ ಪಶ್ಚಿಮೇ ತಟೇ ಶಮ್ಯಾಪ್ರಾಸ ಇತಿ ಪ್ರೋಕ್ತಃ ಋಷೀನಾಂ ಸತ್ಯವರ್ತಿನಃ' ಇದಕ್ಕೆ ಭಾಗವತ ತಾತ್ಪರ್ಯದಲ್ಲಿ ಹೀಗೆ ವ್ಯಾಖ್ಯಾನವನ್ನು ಮಾಡಿದ್ದಾರೆ - `ಶಮ್ಯಾಂ ಪ್ರಾಸ್ಯ ತತ್ರ ಶಾಲಾಂ ಕೃತ್ವಾ ಯಜ್ಞಃ ಕ್ರಿಯತೇ ಸಃ ಶಮ್ಯಾಪ್ರಾಸಃ' ಇಲ್ಲಿಯೂ ಕೂಡ ಶಮ್ಯಾ ಎಂಬುದಕ್ಕೆ ಗೂಟ ಎಂದೇ ಅರ್ಥ. ಅದನ್ನು ಬಿದ್ದ ಸ್ಥಳದಲ್ಲಿ ಆಶ್ರಮವನ್ನು ನಿರ್ಮಾಣ ಮಾಡಬೇಕು ಎಂದೇ ಅರ್ಥ. ಆದರೆ ಶಮ್ಯಾ ಎಂಬುದಕ್ಕೆ ಯಾವುದೋ ಮರದ ಗೂಟ- ವೆಂದರ್ಥವಲ್ಲ. ಖದಿರ ಎಂಬ ಮರವಿದೆ. ಅದರ ಕಾಷ್ಠದಿಂದ ನಿರ್ಮಾಣ ಮಾಡಿರಬೇಕು. ಮೂವತ್ತಾರು ಇಂಚು ಉದ್ದವಿರಬೇಕು. ಗದೆಯ ಆಕಾರದಲ್ಲಿ- ರಬೇಕು. ಇದು ಯಜ್ಞಾಯುಧವೆಂದು ಪರಿಗಣಿಸಲಾಗಿದೆ. ಈ ಗೂಟದ ತುದಿಯು ಎಂಟು ಕುಂಭಗಳಿರುತ್ತವೆ. ಯಜಮಾನನ ಪತ್ನಿಯು ತಲೆಗೆ ಕಟ್ಟಿ- ಕೊಳ್ಳುವ ಬಟ್ಟೆಯನ್ನು ಕಟ್ಟಿರುತ್ತಾರೆ ಎಂದರ್ಥ. ಕೃಷ್ಣಾಜಿನದ ಮೇಲೆ ಶಮ್ಯವನ್ನು ಇಟ್ಟು ಅದರ ಮೇಲೆ ಬೀಸುವ

ಕಲ್ಲನ್ನಿಟ್ಟು ಅಗ್ನೀಧ್ರು ಎಂಬ ಋತ್ವಿಜನು ಅಕ್ಕಿ, ಮೊದಲಾದ ಹವಿಸ್ಸುಪದಾರ್ಥಗಳನ್ನು ಬೀಸಬೇಕು. ಭಾಗವತ ವ್ಯಾಖ್ಯಾನಗಳಿಂದ ಈ ವಿಷಯವು ತಿಳಿಯುತ್ತದೆ. ಇಂಥ ಶಮ್ಯವನ್ನು ಎಸೆಯಬೇಕು, ಅಲ್ಲಿಯ ತನಕ ಯಾಗ ಶಾಲೆಯನ್ನು ನಿರ್ಮಾಣ ಮಾಡಬೇಕು. ಆ ಶಮ್ಯವು ಎಲ್ಲಿ ಬಿದ್ದಿರುತ್ತದೋ, ಅಲ್ಲಿಯೇ ಅಗ್ನಿಕುಂಡವನ್ನು ರಚನೆ ಮಾಡಬೇಕು. ಒಂದುವೇಳೆ, ಆ ಗುರುತು ಮಾಡಿದ ಸ್ಥಳದಿಂದ ಹೊರಗೆ ಹೋಮಕಾಲದಲ್ಲಿ ಅಗ್ನಿಯು ಬಿದ್ದರೆ ಕವಿರಗ್ನಿ ಎಂಬ ಮಂತ್ರವನ್ನು ಹೇಳಿ, ಮೂರು ಪ್ರದಕ್ಷಿಣೆ ಮಾಡಿ ಕುಂಡದೊಳಗೆ ಅಗ್ನಿಯನ್ನು ಹಾಕಬೇಕು. ಶಮ್ಯದಿಂದ ಗುರುತು ಮಾಡಿದ ಸ್ಥಳದಿಂದ ಸ್ವಲ್ಪ ದೂರ ಅಗ್ನಿಯು ಬಿದ್ದರೆ, ಕುಂಡದಲ್ಲಿರುವ ಎಲ್ಲಾ ಅಗ್ನಿಯನ್ನು ಆ ಸ್ಥಳಕ್ಕೆ ತಂದು, ಆ ಸ್ಥಳದಲ್ಲಿಟ್ಟು ಋತ್ವಿಜರು ದಿನಪೂರ್ತಿ ಅಲ್ಲಿಯೇ ವಾಸವನ್ನು ಮಾಡಬೇಕು. ಆಪಸ್ತಂಭ ಶ್ರೌತ ಸೂತ್ರದಲ್ಲಿ `ಶಮ್ಯಾ ಪರಾಸ' ಎಂದು ಹೇಳಲಾಗುತ್ತದೆ. ಭಾಗವತದಲ್ಲಿ `ಶಮ್ಯಾ- ಪ್ರಾಸ' ಎಂಬ ಶಬ್ದವಿದೆ. ಆದರೆ ಆಪಸ್ತಂಭದಲ್ಲಿ `ಪರಾಸ' ಎಂಬ ಮೂರಕ್ಷರದ ಶಬ್ದವಿದೆ. ಶಬ್ದದಲ್ಲಿ ಮಾತ್ರ ವ್ಯತ್ಯಾಸ. ಅರ್ಥದಲ್ಲಿ ವ್ಯತ್ಯಾಸವು ಇರುವುದಿಲ್ಲ. ಪ್ರಕೃತ ಮಹಾಭಾರತದ 92ನೆಯ ಶ್ಲೋಕದಲ್ಲಿ `ಪಾತ' ಎಂಬ ಪದಪ್ರಯೋಗ- ವಿದೆ. `ಪಾತ' ಎಂದರೂ ಪ್ರಾಸ' ಎಂದೇ ಅರ್ಥ. ಆದ್ದರಿಂದ ಶಮ್ಯಾಪ್ರಾತ, ಶಮ್ಯಾಪ್ರಾಸ, ಶಮ್ಯಾಪರಾಸ ಮೂರು ಕೂಡ ಪರ್ಯಾಯ ಶಬ್ದಗಳೇ ಆಗಿವೆ.

ದೃಷ್ಟ್ವಾ ಕ್ರತುಸಹಸ್ರೇಣ ವಾಜಿಮೇಧಶತೇನ ಚ |
ತರ್ಪಯಾಮಾಸ ದೇವೇಂದ್ರಂ ತ್ರಿಭಿಃ ಕಾಂಚನಪರ್ವತೈಃ ॥93॥

ಈ ಯಾಯಾತಿಯು ನೂರು ವಾಜಪೇಯಯಾಗಗಳನ್ನು ಸಾವಿರಾರು ಇತರೆ ಯಾಗಗಳನ್ನು ಮಾಡಿ, ಬಂಗಾರದ ಪರ್ವತಗಳನ್ನು ದಾನ ಮಾಡಿ, ದೇವೇಂದ್ರನನ್ನು ತೃಪ್ತಿ ಪಡಿಸಿದನು.

ವ್ಯೂಢೇ ದೇವಾಸುರೇ ಯುದ್ಧೇ ಹತ್ವಾ ದೈತೇಯದಾನವಾನ್ |
ವ್ಯಭಜತ್ ಪೃಥಿವೀಂ ಕೃತ್ಸ್ನಾಂ ಯಯಾತಿರ್ನಹುಷಾತ್ಮಜಃ ॥94॥

ಆ ಯಾಯಾತಿಯು ಯುದ್ಧವನ್ನು ಮಾಡಿ, ಭೂಮಿಯಲ್ಲಿರುವ ದೈತ್ಯರನ್ನು ದಾನವರನ್ನು ಸದೆಬಡೆದನು. ಸಮಗ್ರಭೂಮಂಡಲವನ್ನೇ ತನ್ನ ಅಧೀನವನ್ನಾಗಿ ಮಾಡಿಕೊಂಡನು. ಮತ್ತು ಆ ಭೂಮಿಯನ್ನು ತನ್ನ ಮಕ್ಕಳಿಗೆ ವಿಭಾಗ ಮಾಡಿ ನೀಡಿದನು.

ಅಂತ್ಯೇಷು ಪುತ್ರಾನ್ನಿಕ್ಷಿಪ್ಯ ಯದುದ್ರುಹ್ಯುಪುರೋಗಮಾನ್ |
ಪೂರುಂ ರಾಜ್ಯೇಽಭಿಷಿಚ್ಯ ಸ್ವೇ ಸದಾರಃ ಪ್ರಸ್ಥಿತೋ ವನಮ್ ॥95॥

ಆ ಯಯಾತಿಗೆ ಒಟ್ಟು ನಾಕು ಮಕ್ಕಳಿದ್ದರು. ಕೊನೆಯವನೇ ಪುರು ಎಂಬು- ವನು. ಇವನಿಗೆ ತನ್ನ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು. ಯದು, ದ್ರುಹ್ಯ, ಅನು ಎಂಬ ಉಳಿದ ಮೂರು ಮಕ್ಕಳನ್ನು ಗಡಿಯ ಪ್ರಾಂತ್ಯದಲ್ಲಿ ರಾಜರನ್ನಾಗಿ ಮಾಡಿದನು. ಪತ್ನಿಯ ಸಹಿತನಾಗಿ ಅರಣ್ಯಕ್ಕೆ ತೆರಳಿದನು.

ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥96॥

ಯಯಾತಿಯು, ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನ- ಗಿಂತಲೂ ನಿನ್ನ ಮಗನಿಗಿಂತಲೂ ಅತ್ಯಧಿಕನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ ನೀನೇನು? ನಿನ್ನ ಮಗನೇನು? ಅದಕ್ಕೇಕೆ ನೀನು ಚಿಂತಿಸುವಿ.

ವಿವರಣೆ - ನಹುಷನ ಮಗನೇ ಯಯಾತಿ. ಚಂದ್ರವಂಶದವನು. ದೇವ- ಯಾನಿ, ಶರ್ಮಿಷ್ಠೆ ಎಂಬ ಇಬ್ಬರು ಪತ್ನಿಯರು ಇವನಿಗಿದ್ದರು. ಶುಕ್ರಾಚಾರ್ಯರ ಮಗಳೇ ದೇವಯಾನಿ. ಇವಳಲ್ಲಿ ಯದು ಮತ್ತು ತುರ್ವಸು ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಶರ್ಮಿಷ್ಠೆಯಲ್ಲಿ ದ್ರುಹ್ಯ ಮತ್ತು ಅನು, ಪೂರು ಎಂಬ ಮೂವರು ಗಂಡು ಮಕ್ಕಳು ಹುಟ್ಟಿದರು. ಮಾಧವಿ ಎಂಬ ಒಬ್ಬ ಹೆಣ್ಣು ಮಗಳೂ ಕೂಡ ಹುಟ್ಟಿದಳು. ದೇವಯಾನಿಯನ್ನು ಕೇಳದೇ ಶರ್ಮಿಷ್ಠೆಯನ್ನು ವಿವಾಹವಾ- ಗಿದ್ದರಿಂದ ಶುಕ್ರಾಚಾರ್ಯರು ಅಕಾಲವೃದ್ಧಾಪ್ಯವು ಬರುವಂತೆ ಶಪಿಸಿದ್ದರು. ಆ ವೃದ್ಧಾಪ್ಯವನ್ನು ಬೇರೆಯವರಿಗೆ ನೀಡಬಹುದೆಂದೂ ಕೂಡ ಅನುಶಾಪವನ್ನು ನೀಡಿದ್ದರು. ಆದರೆ ಯದು ಮೊದಲಾದ ಮಕ್ಕಳು ಆ ವೃದ್ಧಾಪ್ಯವನ್ನು ಸ್ವೀಕರಿಸ- ಲಿಲ್ಲ. ಶರ್ಮಿಷ್ಠೆಯ ಕೊನೆಯ ಮಗನಾದ ಪೂರುವು ಮಾತ್ರ ತಂದೆಯ ವೃದ್ಧಾಪ್ಯ- ವನ್ನು ಸಂತೋಷದಿಂದ ಸ್ವೀಕರಿಸಿದನು. ಇದರಿಂದ ತೃಪ್ತನಾದ ಯಯಾತಿಯು ಆ ಪೂರುವಿಗೆ ತನ್ನ ರಾಜ್ಯಭಾರವನ್ನು ಒಪ್ಪಿಸಿದನು. ಮುಂದೆ ವೈರಾಗ್ಯವನ್ನು ತಾಳಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನು. ಆದಿಪರ್ವದಲ್ಲಿ ಇವನ ಕಥೆಯು ವಿಸ್ತಾರ- ವಾಗಿ ಬಂದಿದೆ.

ಅಂಬರೀಷಂ ಚ ನಾಭಾಗಂ ಮೃತಂ ಶುಶ್ರುಮ ಸೃಂಜಯ |
ಯಂ ಪ್ರಜಾ ವವ್ರಿರೇ ಪುಣ್ಯಂ ಗೋಪ್ತಾರಂ ನೃಪಸತ್ತಮ್ ॥97॥

ನಾಭಾಗನ ಮಗನಾದ ಅಂಬರೀಷರಾಜನೂ ಕೂಡ ಮೃತನಾಗಿದ್ದಾನೆಂದು ಕೇಳಿದ್ದೇವೆ. ಪ್ರಜೆಗಳು ಅವನನ್ನು ತಮಗೆ ರಕ್ಷಕನಾದ ಪುಣ್ಯಪುರುಷನೆಂದು ಅತ್ಯಂತ ವಿಶ್ವಾಸವಿಟ್ಟಿದ್ದರು.

ಯಃ ಸಹಸ್ರಂ ಸಹಸ್ರಾಣಾಂ ರಾಜ್ಞಾಮಯುತಯಾಜಿನಾಮ್ |
ಈಜಾನೋ ವಿತತೇ ಯಜ್ಞೇ ಬ್ರಾಹ್ಮಣೇಭ್ಯಃ ಸಮಾಹಿತಃ ॥98॥

ಇವನು ಒಂದು ಯಾಗವನ್ನು ಮಾಡಿದನು. ಆ ಯಾಗದ ವೈಭವವೇನೆಂದರೆ ಆ ಯಾಗದಲ್ಲಿ ಯಾವ ಬ್ರಾಹ್ಮಣರನ್ನು ಆಹ್ವಾನ ಮಾಡಿದ್ದನೋ, ಅವರನ್ನು ಸೇವೆ ಮಾಡುವುದಕ್ಕಾಗಿ ಒಂದುಲಕ್ಷ ಹತ್ತುಸಾವಿರ ರಾಜರನ್ನು ಯೋಜಿಸಿದ್ದನು. ಆ ರಾಜರೂ ಕೂಡ ಹತ್ತುಸಾವಿರ ಯಾಗಗಳನ್ನು ಮಾಡಿದ ಮಹಾಪುರುಷರೇ ಆಗಿದ್ದರು.

ನೈತತ್ ಪೂರ್ವೇ ಜನಾಶ್ಚಕ್ರುರ್ನ ಕರಿಷ್ಯಂತಿ ಚಾಪರೇ |
ಇತ್ಯಂಬರೀಷಂ ನಾಭಾಗಿಮನ್ವಮೋದಂತ ದಕ್ಷಿಣಾಃ ॥99॥

``ಇಂಥ ವೈಭವ ಯಾಗವನ್ನು ನಡೆಸದವರು ಇದುವರೆಗೂ ಯಾರು ಹುಟ್ಟಿಲ್ಲ. ಮುಂದೆ ಹುಟ್ಟುವ ಸಾಧ್ಯತೆಯೂ ಇಲ್ಲ'' ಎಂಬುದಾಗಿ ಪ್ರತಿಯೊಬ್ಬರೂ ಕೂಡ ನಾಭಾಗನ ಪುತ್ರನಾದ ಅಂಬರೀಷನನ್ನು ಪ್ರಶಂಸೆ ಮಾಡಿದರು.

ಶತಂ ರಾಜಸಹಸ್ರಾಣಿ ಶತಂ ರಾಜಶತಾನಿ ಚ |

ಸರ್ವೇಽಶ್ವಮೇಧೈರೀಜಾನಾಸ್ತೇಽಭ್ಯಯುರ್ದಕ್ಷಿಣಾಯನಮ್ ॥100॥
ಬ್ರಾಹ್ಮಣರ ಸೇವೆಯಲ್ಲಿ ನಿರತರಾದ ಒಂದು ಲಕ್ಷದ ಹತ್ತುಸಾವಿರ ರಾಜರು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನೇ ಪಡೆದರು. ದಕ್ಷಿಣಾಯಣ ಮಾರ್ಗ- ದಿಂದ ಪುಣ್ಯಲೋಕಗಳಿಗೆ ತೆರಳಿದರು.
ಟಿಪ್ಪಣಿ- ತೇಽಭ್ಯಯುರ್ದಕ್ಷಿಣಾಯನಮ್ ಇತ್ಯತ್ರ ದಕ್ಷಿಣಾಯನಂ ದಕ್ಷಿಣಾ- ಮಾರ್ಗಮ್ | ದಕ್ಷಿಣಾಮಿತಿ ಯಾವತ್ |
ಟಿಪ್ಪಣಿ - `ಅಭ್ಯಯು ದಕ್ಷಿಣಾಯನಮ್' ಎಂಬುದಾಗಿ ದಕ್ಷಿಣಾಯನ ಮಾರ್ಗದಲ್ಲಿ ತೆರಳಿದ್ದಾರೆ ಎಂದು ಹೇಳಿದ್ದಾರೆ. ಆದರೆ ಉತ್ತರಾಯಣದ ಮಾರ್ಗದ ಮೂಲಕ ಬ್ರಹ್ಮಲೋಕಕ್ಕೆ ತೆರಳಿದರು ಎಂದೇ ಅರ್ಥವನ್ನು ಮಾಡ- ಬೇಕು. ಏಕೆಂದರೆ ಪ್ರತಿಯೊಬ್ಬ ಸಾಧಕರು ಉತ್ತರಾಯಣ ಎಂಬ ದೇವಯಾನ ಮಾರ್ಗದಿಂದಲೇ ಬ್ರಹ್ಮಲೋಕಕ್ಕೆ ತೆರಳುತ್ತಾರೆ. ಆದ್ದರಿಂದ ದಕ್ಷಿಣಾಯನದ ಅನಂತರ ಉತ್ತರಾಯಣಮಾರ್ಗದಿಂದ ಬ್ರಹ್ಮಲೋಕಕ್ಕೆ ತೆರಳಿದರು ಎಂಬುದು ಇದರ ಅಭಿಪ್ರಾಯ.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥101॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಅಂಬರೀಷನಿಗಿಂತಲೂ ಅಧಿಕನಾದವನು ಮತ್ತೊಬ್ಬನಿರಲಿಲ್ಲ. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ- ನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ, ನಿನ್ನ ವಿಷಯದಲ್ಲಿ ನಿನ್ನ ಮಗನ ವಿಷಯದಲ್ಲಿ ದುಃಖಪಡಲು ಕಾರಣವೇ ಇಲ್ಲ.
ಟಿಪ್ಪಣಿ - ಈ ಅಂಬರೀಷರಾಜನು ಸೂರ್ಯವಂಶದವನು. ವೈವಸ್ವತ- ಮನುವಿನ ಮೊಮ್ಮಗನು. ನಾಭಾಗನ ಮಗನು. ಏಕಾದಶಿ ವ್ರತ ಮತ್ತು ದ್ವಾದಶಿ ಪಾರಣೆಯ ವಿಷಯದಲ್ಲಿ ಪ್ರಸಿದ್ಧಿಯನ್ನು ಪಡೆದನು. ದೂರ್ವಾಸ ಋಷಿಯು ದ್ವಾದಶಿ ಪಾರಣೆಯ ಕಾಲದಲ್ಲಿ ಬಾರದೇ ಇದಿದ್ದರಿಂದ ತೀರ್ಥಸೇವನೆಯನ್ನು ಮಾಡಿದನು. ಇದರಿಂದ ಕುಪಿತನಾದ ದೂರ್ವಾಸಮುನಿಯು ಅಂಬರೀಷನ ನಾಶಕ್ಕಾಗಿ ಕೃತ್ಯವೊಂದನ್ನು ನಿರ್ಮಾಣ ಮಾಡಿಬಿಟ್ಟನು. ಆಗ ಭಗವಂತನು ತನ್ನ ಚಕ್ರಾಯುಧದಿಂದ ಆ ಕೃತ್ಯನನ್ನು ಸಂಹರಿಸಿ ಅಂಬರೀಷನನ್ನು ಕಾಪಾಡಿದನು. ಈ ಅಂಬರೀಷನಿಗೆ ವಿರೂಪ, ಕೇತುಮಂತ, ಶಂಭು ಎಂಬ ಮೂವರು ಮಕ್ಕಳು ಹುಟ್ಟಿದರು.
ಶಶಬಿಂದು ರಾಜನ ಸಾಧನೆ
ಶಶಬಿಂದುಂ ಚೈತ್ರರಥಂ ಮೃತಂ ಶುಶ್ರುಮ ಸೃಂಜಯ |
ಯಸ್ಯ ಭಾರ್ಯಾಸಹಸ್ರಾಣಾಂ ಶತಮಾಸೀನ್ಮಹಾತ್ಮನಃ ॥102॥
ಚಿತ್ರರಥ ಎಂಬ ರಾಜನ ಮಗನೇ ಶಶಬಿಂದು ರಾಜ. ಇವನೂ ಕೂಡ ಸತ್ತನು ಎಂಬ ವಾರ್ತೆಯನ್ನು ಕೇಳಿದ್ದೇವೆ. ಇವನಿಗೆ ಒಂದು ಲಕ್ಷ ಹೆಂಡತಿಯರಿದ್ದರು. ಪ್ರತಿಯೊಬ್ಬರಲ್ಲಿಯೂ ಹತ್ತುಲಕ್ಷಮಂದಿ ಮಕ್ಕಳನ್ನು ಹುಟ್ಟಿಸಿದ್ದನು.
ಸಹಸ್ರಂ ತು ಸಹಸ್ರಾಣಾಂ ಯಸ್ಯಾಸನ್ ಶಾಶಬಿಂದವಃ |
ಹಿರಣ್ಯಕವಚಾಃ ಸರ್ವೇ ಸರ್ವೇ ಚೋತ್ತಮಧನ್ವಿನಃ ॥103॥
ಆ ಮಕ್ಕಳಲ್ಲಿ ಪ್ರತಿಯೊಬ್ಬರೂ ಕೂಡ ಸುವರ್ಣಕವಚಗಳನ್ನೇ ಧಾರಣೆ ಮಾಡಿದ್ದರು. ಮಹಾಧನುರ್ಧಾರಿಗಳಾಗಿದ್ದರು.
ಟಿಪ್ಪಣಿ - ಯಸ್ಯಾಸನ್ ಶಾಶಬಿಂದವ ಇತ್ಯತ್ರ ಶಾಶಬಿಂದವಃ ಶಶಬಿಂದುಕುಮಾರಾಃ |
`ಶಾಶಬಿಂದವ' ಎಂಬುದಕ್ಕೆ ಶಶಬಿಂದು ರಾಜನ ಮಕ್ಕಳು ಎಂದರ್ಥ.
ಶತಂ ಕನ್ಯಾ ರಾಜಪುತ್ರಮೇಕೈಕಂ ಪೃಷ್ಠತೋಽನ್ವಯುಃ |
ಕನ್ಯಾಂ ಕನ್ಯಾಂ ಶತಂ ನಾಗಾ ನಾಗಂ ನಾಗಂ ಶತಂ ರಥಾಃ ॥104॥
ಈ ಶಶಬಿಂದು ರಾಜನ ಪ್ರತಿಯೊಬ್ಬ ಮಕ್ಕಳೂ ಕೂಡ ನೂರು ಮಂದಿ ಹೆಣ್ಣು- ಮಕ್ಕಳನ್ನು ವಿವಾಹವಾದರು. ಪ್ರತಿಯೊಬ್ಬ ಕನ್ಯೆಯ ಹಿಂದೆಯ ಕೂಡ ನೂರು ನೂರು ಆನೆಗಳು ಹೋಗುತ್ತಿದ್ದವು. ಒಂದೊಂದು ಆನೆಯ ಹಿಂದೆಯೂ ನೂರು ನೂರು ರಥಗಳು ಹೋಗುತ್ತಿದ್ದವು.
ರಥಂ ರಥಂ ಶತಂ ಚಾಶ್ವಾ ದೇಶಜಾ ಹೇಮಮಾಲಿನಃ |
ಅಶ್ವಮಶ್ವಂ ಶತಂ ಗಾವೋ ಗಾಂ ಗಾಂ ತದ್ವದಜಾವಿಕಮ್ ॥105॥
ಪ್ರತಿಯೊಂದು ರಥದ ಹಿಂದೆಯೂ ಸುವರ್ಣಮಾಲೆಗಳಿಂದ ಅಲಂಕೃತವಾದ ನೂರು ನೂರು ದೇಶಿಯ ಕುದುರೆಗಳು ತೆರಳುತ್ತಿದ್ದವು. ಪ್ರತಿಯೊಂದು ಕುದುರೆಯ ಹಿಂದೆಯೂ ಕೂಡ ನೂರು ನೂರು ಹಸುಗಳು ತೆರಳುತ್ತಿದ್ದವು. ಪ್ರತಿಯೊಂದು ಹಸುಗಳ ಹಿಂದೆ ನೂರು ನೂರು ಆಡುಗಳು ತೆರಳುತ್ತಿದ್ದವು.
ಏತದ್ಧನಮಪರ್ಯಂತಮಶ್ವಮೇಧೇ ಮಹಾಮಖೇ |
ಶಶಬಿಂದುರ್ಮಹಾರಾಜಃ ಬ್ರಾಹ್ಮಣೇಭ್ಯಃ ಸಮಾದಿಶತ್ ॥106॥
ಈ ಶಶಬಿಂದು ರಾಜನು ಒಂದು ಅಶ್ವಮೇಧಯಾಗವನ್ನು ಮಾಡಿದನು. ಆ ಯಾಗದಲ್ಲಿ ಇಷ್ಟು ಧನರಾಶಿಯನ್ನು ಬ್ರಾಹ್ಮಣರಿಗೆ ದಾನ ಮಾಡಿಬಿಟ್ಟನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥107॥
ಈ ಶಶಬಿಂದು ರಾಜನೂ ಕೂಡ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಗಳಲ್ಲಿ ನಿನಗಿಂತ ಬಹಳ ಉತ್ತಮನಾಗಿದ್ದನು. ಹೀಗಿರುವಾಗ ನಿನ್ನ ಮಗನ ವಿಷಯ- ದಲ್ಲಿ ನೀನು ದುಃಖಿಸುವುದು, ನಿನ್ನ ವಿಷಯದಲ್ಲಿ ನೀನು ದುಃಖಿಸುವುದರಲ್ಲಿ ಅರ್ಥವೇ ಇಲ್ಲ.
ಟಿಪ್ಪಣಿ - ವೃಷ್ಣಿವಂಶದ ಚಿತ್ರರಥರಾಜನ ಮಗನೇ ಶಶಬಿಂದು. ಇವನು ಮಾಡಿದ ದಂಡನೀತಿ, ನ್ಯಾಯಗಳನ್ನು ಅನುಸರಿಸಿ ಅನೇಕ ರಾಜರು ರಾಜರ್ಷಿ ಪದವನ್ನು ಪಡೆದರು. ಇವನಿಗೆ ಬಿಂದುಮತಿ ಎಂಬ ಮಗಳಿದ್ದಳು. ಇವಳೇ ಮಾಂಧಾತನ ಹೆಂಡತಿ ಈ ಶಶಬಿಂದು ರಾಜನಿಗೆ ಚೈತ್ರರಥ ಎಂಬ ಹೆಸರೂ ಕೂಡ ಇರುತ್ತದೆ.
ಗಯ ರಾಜನ ಸಾಧನೆ

ಗಯಂಚಾಮೂರ್ತರಯಸಂ ಮೃತಂ ಶುಶ್ರುಮ ಸೃಂಜಯ |
ಯಃ ಸ ವರ್ಷಶತಂ ರಾಜಾ ಹುತಶಿಷ್ಟಾಶನೋಽಭವತ್ ॥108॥
ಸಂಜಯನೇ! ಗಯ ಎಂಬ ರಾಜನಿದ್ದನು. ಇವನು ``ಅಮೂರ್ತರಯಸ'' ಎಂಬ ರಾಜನ ಮಗನಿವನು. ನೂರು ವರ್ಷಗಳ ಕಾಲ ಹೋಮವನ್ನು ಮಾಡಿ, ಹೋಮಶೇಷವನ್ನೇ ಇವನು ತಿನ್ನುತ್ತಿದ್ದನು.
ಯಸ್ಮೈ ವಹ್ನಿರ್ವರಾನ್ ಪ್ರಾದಾತ್ ತತೋ ವವ್ರೇ ವರಾನ್ ಗಯಃ |
ದದತೋ ಮೇಽಕ್ಷಯಾ ಚಾಸ್ತು ಧರ್ಮೇ ಶ್ರದ್ಧಾ ಚ ವರ್ಧತಾಮ್ ॥109॥
ಮನೋ ಮೇ ರಮತಾಂ ಸತ್ಯೇ ತ್ವತ್ಪ್ರಸಾದಾದ್ ಹುತಾಶನ |
ಲೇಭೇ ಚ ಕಾಮಾಂಸ್ತಾನ್ ಸರ್ವಾನ್ ಪಾವಕಾದಿತಿ ನಃ ಶ್ರುತಮ್ ॥110॥
ಇವನ ಈ ನಿಷ್ಠೆಯನ್ನು ನೋಡಿ, ಅಗ್ನಿದೇವನು ಸುಪ್ರೀತನಾದನು. ಯಾವು- ದಾದರೂ, ವರವನ್ನು ಕೇಳುವಂತೆ ಗಯನಿಗೆ ಹೇಳಿದನು. ಆಗ ಗಯನು ಅಗ್ನಿಯಿಂದ ಈ ವರವನ್ನು ಕೇಳಿದನು. ``ಯಜ್ಞೇಶ್ವರನೇ ! ನಾನು ಎಷ್ಟು ದಾನವನ್ನು ಮಾಡಿದರೂ ಅದು ಅಷ್ಟೇ ಅಕ್ಷಯವಾಗಬೇಕು. ನನಗೆ ನಿರಂತರಧರ್ಮದಲ್ಲಿ ಶ್ರದ್ಧೆಯು ಅಭಿವೃದ್ಧಿಯಾಗಬೇಕು. ನನ್ನ ಮನಸ್ಸು ಯಾವಾಗಲೂ ಸತ್ಯದಲ್ಲಿ ಆಸಕ್ತವಾಗಿರಬೇಕು. ನಿನ್ನ ಅನುಗ್ರಹ ನನಗೆ ಎಂದೆಂದೂ ಇರಬೇಕು''. ಅಗ್ನಿಯು ಅವನಿಗೆ ಈ ಎಲ್ಲಾ ವರಗಳನ್ನು ನೀಡಿದನೆಂದು ನಾವು ಕೇಳಿದ್ದೇವೆ.
ದರ್ಶೇನ ಪೌರ್ಣಮಾಸೇನ ಚಾತುರ್ಮಾಸ್ಯೈಃ ಪುನಃಪುನಃ |
ಅಯಜತ್ ಸ ಮಹಾತೇಜಾಃ ಸಹಸ್ರಂ ಪರಿವತ್ಸರಾನ್ ॥111॥
ಸೃಂಜಯನೇ! ಆ ಗಯನು ಸಾವಿರ ವರ್ಷಗಳ ಕಾಲ ದರ್ಶಯಾಗ ಪೌರ್ಣ- ಮಾಸ ಯಾಗ, ಚಾತುರ್ಮಾಸ್ಯ ಯಾಗ, ಅಶ್ವಮೇಧಯಾಗಗಳನ್ನು ಆಚರಿಸಿದನು.
ಶತಂ ಗವಾಂ ಸಹಸ್ರಾಣಿ ಶತಮಶ್ವಶತಾನಿ ಚ |
ಉತ್ಥಾಯೋತ್ಥಾಯ ವೈ ಪ್ರಾದಾತ್ ಸಹಸ್ರಂ ಪರಿವತ್ಸರಾನ್ ॥112॥
ಆ ಸಂದರ್ಭದಲ್ಲಿ ಆ ರಾಜನು ಸಾವಿರ ವರ್ಷಗಳವರೆಗೂ ಲಕ್ಷಸಂಖ್ಯೆಯ ಗೋವುಗಳನ್ನು, ಹತ್ತು ಸಾವಿರ ಕುದುರೆಗಳನ್ನು, ಪುನಃ ಪುನಃ ದಾನ ಮಾಡುತ್ತಲೇ ಇದ್ದನು.
ತರ್ಪಯಾಮಾಸ ಸೋಮೇನ ದೇವಾನ್ ವಿತ್ತೈರ್ದ್ವಿಜಾನಪಿ |
ಪಿತೄನ್ ಸ್ವಧಾಭಿಃ ಕಾಮೈಶ್ಚ ಸ್ತ್ರಿಯಃ ಸ್ವಾಃ ಪುರುಷರ್ಷಭ ॥113॥
ದೇವತೆಗಳನ್ನು ಸೋಮರಸವನ್ನು ನೀಡುವ ಮೂಲಕ ತೃಪ್ತಿಪಡಿಸಿದನು. ಯಥೇಚ್ಛವಾದ ಐಶ್ವರ್ಯಗಳನ್ನು ಕೊಡುವ ಮೂಲಕ ಬ್ರಾಹ್ಮಣರನ್ನು ತೃಪ್ತಿ ಪಡಿಸಿದನು. ಶ್ರಾದ್ಧ ಹಾಗೂ ತರ್ಪಣಗಳಿಂದ ಪಿತೃಗಳನ್ನು ತೃಪ್ತಿಪಡಿಸಿದನು. ವಿವಿಧವಾದ ಕಾಮೋಪಭೋಗಗಳಿಂದ ಸ್ತ್ರೀಯರನ್ನು ತೃಪ್ತಿಪಡಿಸಿದನು.
ಸೌವರ್ಣಾಂ ಪೃಥಿವೀಂ ಕೃತ್ವಾ ದಶವ್ಯಾಮಾಂ ದ್ವಿರಾಯತಾಮ್ |
ದಕ್ಷಿಣಾಮದದದ್ ರಾಜಾ ವಾಜಿಮೇಧೇ ಮಹಾಮಖೇ ॥114॥
ಅವನು ಒಂದು ಅಶ್ವಮೇಧಯಾಗದಲ್ಲಿ ಐವತ್ತು ಮಾರುಗಳಷ್ಟು ಅಗಲವಾದ, ನೂರು ಮಾರುಗಳಷ್ಟು ಉದ್ದವಾದ ಸುವರ್ಣದ ಭೂಮಿಯನ್ನು ಮಾಡಿಸಿ, ಅದನ್ನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ನೀಡಿದನು.
ಟಿಪ್ಪಣಿ - ದಶವ್ಯಾಮಾಂ ದ್ವಿರಾಯತಾಮ್ ಇತ್ಯತ್ರ ದಶವ್ಯಾಮಾಂ ದಶಪ್ರಮಾಣೇನ ವ್ಯಾಮೋ ವಿಸ್ತಾರೋ ಯಸ್ಯಾಃ ಸಾ ತಾಮ್ | ದ್ವಿರಾಯತಾಂ ತತೋ ದ್ವಿಃ ಪ್ರಮಾಣೇನ ದೀರ್ಘಾಮ್ |
`ದಶವ್ಯಾಮಾಂ' ಎಂಬುದಕ್ಕೆ ಹತ್ತು ಮಾರುಗಳಷ್ಟು ವಿಸ್ತಾರವಾದ ಎಂದರ್ಥ. ಅದರ ಎರಡು ಪಟ್ಟು ಅಗಲವಾದ ಭೂಮಿಯನ್ನು ಎಂದರ್ಥ.
ಯಾವತ್ಯಃ ಸಿಕತಾ ರಾಜನ್ ಗಂಗಾಯಾಃ ಪುರುಷರ್ಷಭ |
ತಾವತೀರೇವ ಗಾಃ ಪ್ರಾದಾದಾಮೂರ್ತರಯಸೋ ಗಯಃ ॥115॥
ಗಂಗಾನದಿಯಲ್ಲಿ ಎಷ್ಟು ಮರಳಿನ ಕಣಗಳಿವೆಯೋ, ಅಷ್ಟು ಸಂಖ್ಯೆಯ ಗೋವು -ಗಳನ್ನು ಅಮೂರ್ತರಯಸನ ಮಗನಾದ ಗಯನು ಬ್ರಾಹ್ಮಣರಿಗೆ ದಾನವನ್ನು ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥116॥
ಸೃಂಜಯನೇ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಆ ಗಯನು ನಿನಗಿಂತ ಅತ್ಯುತ್ತಮನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯವಂತನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ ನೀನೇಕೆ ದುಃಖಿಸುವಿ.
ವ್ಯಾಖ್ಯಾನ - ಅಮೂರ್ತರಯ ಅಥವಾ ಅಧೂರ್ತರಜ ಎಂಬ ರಾಜನ ಮಗನೇ ಗಯ. ಈ ಮಹಾರಾಜನಿಂದ ನಿರ್ಮಿತವಾದ ಪರ್ವತಕ್ಕೆ `ಗಯಶಿರಸ್' ಎಂದು ಕರೆಯುತ್ತಾರೆ. ಫಲ್ಗುನದಿಯು ಇಲ್ಲಿಯೇ ಹರಿಯುತ್ತದೆ. ಈ ಮಹಾ- ರಾಜನು ಪ್ರತಿನಿತ್ಯವು ಪರ್ವತಕಾರವಾಗಿ ಅನ್ನವನ್ನು ಮಾಡಿ, ಕಾಲುವೆಯಂತೆ ತುಪ್ಪವನ್ನು ಹರಿಸಿ, ನದಿಯಂತೆ ಮೊಸರು ಹರಿಸಿ, ವ್ಯಂಜನಗಳನ್ನು ರಾಶಿರಾಶಿ- ಯಾಗಿ ಮಾಡಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುತ್ತಿದ್ದನಂತೆ. ಇವನು ಕೊಟ್ಟ ದಕ್ಷಿಣೆಗಳು ನದಿತೀರದ ಮರಳಿನ ಕಣಗಳಂತೆ ಅಸಂಖ್ಯಾಕವಾಗಿದ್ದವು. ಇವನ ಬಗ್ಗೆ ವನಪರ್ವದಲ್ಲಿ ಇನ್ನೂ ಹೆಚ್ಚಿನ ವಿಚಾರವು ಬಂದಿದೆ.
ರಂತಿದೇವನ ಸಾಧನೆ
ರಂತಿದೇವಂ ಚ ಸಾಂಕೃತ್ಯಂ ಮೃತಂ ಶುಶ್ರುಮ ಸೃಂಜಯ |
ಸಮ್ಯಗಾರಾಧ್ಯ ಯಃ ಶಕ್ರಂ ವರಂ ಲೇಭೇ ಮಹಾಯಶಾಃ ॥117॥

ಸಂಕೃತಿ ಎಂಬ ರಾಜನ ಮಗನೇ ರಂತಿದೇವ. ಇವನೂ ಕೂಡ ಮರಣವನ್ನು ಹೊಂದಿದನೆಂದು ಕೇಳಿದ್ದೇವೆ. ಮಹಾಯಶಸ್ಸನ್ನು ಹೊಂದಿದ ರಂತಿದೇವನು ದೇವೇಂದ್ರನನ್ನು ತನ್ನ ಆರಾಧನೆಯಿಂದ ಒಲಿಸಿಕೊಂಡು, ವರಗಳನ್ನು ಪಡೆದು- ಕೊಂಡನು.
ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ |
ಶ್ರದ್ಧಾ ಚ ನೋ ಮಾ ವ್ಯಗಮನ್ಮಾ ಚ ಯಾಚಿಷ್ಮ ಕಂಚನ ॥118॥
ದಾನಮಾಡಲು ಯಥೇಚ್ಛವಾದ ಅನ್ನ ತನ್ನಲ್ಲಿರಬೇಕು. ಸೇವೆ ಮಾಡುವುದಕ್ಕಾಗಿ ನಿರಂತರ ಅತಿಥಿಗಳು ತನಗೆ ದೊರೆಯಬೇಕು. ಅತಿಥಿ ಸತ್ಕಾರದಲ್ಲಿ ಎಂದೂ ಶ್ರದ್ಧೆಯು ಕಮ್ಮಿಯಾಗಬಾರದು. ಮತ್ತೊಬ್ಬರನ್ನು ಯಾವುದಕ್ಕೂ ಯಾಚನೆ ಮಾಡ- ಬಾರದು.
ಉಪಾತಿಷ್ಠಂತ ಪಶವಃ ಸ್ವಯಂ ತಂ ಸಂಶಿತವ್ರತಮ್ |
ಗ್ರಾಮ್ಯಾರಣ್ಯಾ ಮಹಾತ್ಮಾನಂ ರಂತಿದೇವಂ ಯಶಸ್ವಿನಮ್ ॥119॥
ಅತ್ಯಂತ ನಿಯಮವ್ರತವನ್ನು ಹೊಂದಿದ ಮಹಾತ್ಮನಾದ ರಂತಿದೇವನು ಉತ್ತಮ ಕೀರ್ತಿವಂತನಾದನು. ಅವನ ಬಳಿಗೆ ಗ್ರಾಮಗಳಲ್ಲಿರುವ, ಅರಣ್ಯಗಳಲ್ಲಿರುವ ಪಶು- ಪಕ್ಷಿಗಳು ತಾವಾಗಿಯೇ ಆಗಮಿಸುತ್ತಿದ್ದವು.
ಮಹಾನದೀ ಚರ್ಮರಾಶೇರುಕ್ಲೇದಾತ್ ಸುಸ್ರುವೇ ಯತಃ |
ತತಶ್ಚರ್ಮಣ್ವತೀತ್ಯೇವಂ ವಿಖ್ಯಾತಾ ಸಾ ಮಹಾನದೀ ॥120॥
ಆ ರಂತಿದೇವನು ಯಾಗದಲ್ಲಿ ಉಪಯೋಗಿಸಿದ ಪಶುಗಳ ಚರ್ಮದಿಂದ ಸ್ರವಿಸಿದ ಜಲವೇ ನದಿಯಾಗಿ ಹರಿದು, ಚರ್ಮಣ್ವತಿ ಎಂದು ಪ್ರಸಿದ್ಧಿ ಪಡೆಯಿತು. ಇದು ಮಹಾನದಿಯಾಗಿದೆ.
ವಿಮರ್ಶೆ -
ರಂತಿದೇವನು ಗೋಹತ್ಯೆಯನ್ನು ಮಾಡುತ್ತಿದ್ದನೇ ?
ಕೆಲವು ಪಾಠಗಳಲ್ಲಿ ಸಸೃಜೇ ಎಂದಿದೆ. ಇಲ್ಲಿ ಸುಸ್ರುವೇ ಎಂದಿದೆ. ಈ ಶ್ಲೋಕಕ್ಕೆ ಹೀಗೆ ವ್ಯಾಖ್ಯಾನವನ್ನು ಮಾಡುತ್ತಾರೆ. ರಂತಿದೇವನ ಆಸ್ಥಾನದಲ್ಲಿ ನಿತ್ಯವು ಪ್ರಾಣಹತ್ಯೆಯು ನಡೆಯುತ್ತಿತ್ತು. ಎಷ್ಟು ನಡೆಯುತ್ತಿತ್ತೆಂದರೆ ಪ್ರಾಣಿಗಳ ರಕ್ತದ ನದಿಯೇ ಹರಿಯಿತು. ಅದರಿಂದಲೇ ಚರ್ಮಣ್ವತಿ ಎಂಬ ಹೆಸರು ಆ ನದಿಗೆ ಬಂದಿತು.
ಮುಂದೆ ಇದಕ್ಕೆ ಪೂರಕವಾದ ಮತ್ತೊಂದು ಶ್ಲೋಕವು ಬರುತ್ತದೆ-
ಸಾಂಕೃತೇ ರಂತಿದೇವಸ್ಯ ಯಾಂ ರಾತ್ರಿಮವಸದ್ ಗೃಹೇ |
ಆಲಭ್ಯಂತ ಶತಂ ಗಾವಃ ಸಹಸ್ರಾಣಿ ಚ ವಿಂಶತಿಃ ॥124॥
ಕೆಲವು ಪುಸ್ತಕಗಳಲ್ಲಿ ಆಲಭ್ಯಂತ ಎಂಬ ಪಾಠವಿದೆ. ಆದರೆ ಅಲಭಂತ ಎಂಬ ಪಾಠವೇ ಸಾಧುವಾಗಿದೆ. `ಅಲಭಂತ' ಎಂದರೆ ಇಪ್ಪತ್ತು ಸಾವಿರ ಹಸುಗಳನ್ನು ಹೊಂದಿದರು ಎಂದರ್ಥ. `ಆಲಭ್ಯಂತ' ಎಂಬ ಪಾಠವನ್ನು ವಿವಕ್ಷಿಸಿ ಕೆಲವರು ನಿತ್ಯವೂ ಇಪ್ಪತ್ತು ಸಾವಿರ ಹಸುಗಳನ್ನು ಕಡಿಯುತ್ತಿದ್ದರು ಎಂದು ವ್ಯಾಖ್ಯಾನವನ್ನು ಮಾಡುತ್ತಾರೆ. ಮಹಾಭಾರತವನ್ನು ಸರಿಯಾಗಿ ಅರ್ಥವನ್ನು ಮಾಡಿಕೊಳ್ಳದೇ ಆಂಗ್ಲಭಾಷೆಯಲ್ಲಿ ಕೆಲವರು ಈ ಶ್ಲೋಕಗಳಿಗೆ ವಿಮರ್ಶೆಯನ್ನು ಮಾಡಿದ್ದಾರೆ. ಇದನ್ನೇ ಆಧಾರವನ್ನಾಗಿ ಇಟ್ಟುಕೊಂಡು ಕೆಲವರು ಪ್ರತಿನಿತ್ಯವು ರಂತಿದೇವನು ಇಪ್ಪತ್ತು ಸಾವಿರ ಹಸುಗಳನ್ನು ಕಡಿಯುತ್ತಿದ್ದರು ಎಂದು ಹೇಳುತ್ತಾರೆ. ಇದು ತಪ್ಪು. ರಂತಿದೇವನು ಸರ್ವಥಾ ಪ್ರಾಣಿಹತ್ಯೆಯನ್ನು ಮಾಡುತ್ತಿದ್ದಾರೆ. ಗೋಹತ್ಯೆಯನ್ನು ಸುತರಾಂ ಮಾಡುತ್ತಿರಲಿಲ್ಲ. ಹಾಗಿದ್ದರೆ `ಚರ್ಮರಾಶೇರು- ಕ್ಲೇದಾತ್ ಸುಸ್ರುವೇ' ಎಂಬುದಕ್ಕೆ ಹೇಗೆ ವ್ಯಾಖ್ಯಾನವನ್ನು ಮಾಡಬೇಕು ಎಂದರೆ, ರಂತಿದೇವನು ಪ್ರತಿನಿತ್ಯವು ಬ್ರಾಹ್ಮಣರಿಗೆ ಇಪ್ಪತ್ತು ಸಾವಿರ ಹಸುಗಳನ್ನು ದಾನ ಮಾಡುತ್ತಿದ್ದನೆಂದು ನೂರಿಪ್ಪತ್ನಾಕನೆಯ ಶ್ಲೋಕದಲ್ಲಿ ಹೇಳಿದ್ದಾರೆ. ಅರ್ಥಾತ್ ಅಷ್ಟು ಹಸುಗಳನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಅವುಗಳಿಗೆ ಉಪಚಾರವನ್ನು ಮಾಡುತ್ತಿದ್ದನು. ಅದಕ್ಕಾಗಿ ನೀರಿನಿಂದ ಹಸುಗಳನ್ನು ತೊಳೆಯುತ್ತಿದ್ದನು. ಆ ತೊಳೆದ ನೀರು ಹರಿದು ಹರಿದು ನದಿಯಾಯಿತು. ಹಸುಗಳ ಚರ್ಮದ ವಾಸನೆ- ಯಿಂದ ಕೂಡಿದ್ದರಿಂದ ಅದಕ್ಕೆ `ಚರ್ಮಣ್ವತಿ' ಎಂಬ ಹೆಸರು ಬಂದಿತು ಎಂಬುದಾಗಿ ಅರ್ಥವನ್ನು ತಿಳಿಯಬೇಕು. ಹೀಗೆ ಸಂಸ್ಕೃತದಲ್ಲಿ ಕ್ರಿಯಾಪದವನ್ನು ಸ್ವಲ್ಪ ವ್ಯತ್ಯಾಸವಾಗಿ ತಿಳಿದರೂ ಅರ್ಥವೇ ವ್ಯತ್ಯಾಸವಾಗಿಬಿಡುತ್ತದೆ. ಸಂಸ್ಕೃತ ಭಾಷೆಯಲ್ಲಿ ಗಮನಿಸಿ ಅರ್ಥವನ್ನು ತಿಳಿಯತಕ್ಕದ್ದು. ಈ ವ್ಯಾಖ್ಯಾನಕ್ಕೆ ಆಧಾರವು ನೂರ ಹತ್ತೊಂಬತ್ತನೆಯ ಶ್ಲೋಕದಿಂದ ತಿಳಿಯುತ್ತಿದೆ.
ಉಪಾತಿಷ್ಠಂತ ಪಶವಃ ಸ್ವಯಂ ತಂ ಸಂಶಿತವ್ರತಮ್ |
ಗ್ರಾಮ್ಯಾರಣ್ಯಾ ಮಹಾತ್ಮಾನಂ ರಂತಿದೇವಂ ಯಶಸ್ವಿನಮ್ ॥119॥
ಅರಣ್ಯದಲ್ಲಿರುವ ಪ್ರಾಣಿಗಳು ನಿರ್ಭಯದಿಂದ ಯಾವುದೇ ಸಂಶಯವಿಲ್ಲದೇ ರಂತಿದೇವನ ಬಳಿ ಬರುತ್ತಿದ್ದವು ಎಂಬುದಾಗಿ ಈ ಶ್ಲೋಕದಲ್ಲಿ ಹೇಳಿದ್ದಾರೆ. ಬಂದ ಪ್ರಾಣಿಗಳಿಗೆ ಸ್ನಾನ, ಪಾನ, ಆಹಾರಗಳನ್ನು ನೀಡುತ್ತಿದ್ದವು ಎಂಬುದನ್ನು ಮುಂದಿನ ಶ್ಲೋಕವು ವರ್ಣನೆ ಮಾಡಿದೆ. ಒಂದು ವೇಳೆ ಪ್ರಾಣಿಗಳನ್ನೆಲ್ಲಾ ರಂತಿದೇವನು ಸಂಹಾರ ಮಾಡುವುದಿದ್ದರೆ ನಿರ್ಭಯದಿಂದ ಆ ಪ್ರಾಣಿಗಳು ಬರುತ್ತರಲೇ ಇರಲಿಲ್ಲ. ಆದ್ದರಿಂದ `ಉಪಾತಿಷ್ಠಂತ' ಎಂಬ ಶ್ಲೋಕದಲ್ಲಿ ನಿರ್ಭಯದಿಂದ ಪ್ರಾಣಿಗಳು ಬರುತ್ತಿದ್ದವು ಎಂದು ಹೇಳಿ, `ಮಹಾನದೀ ಚರ್ಮರಾಶೇಃ' ಎಂಬ ಶ್ಲೋಕದಿಂದ ರಂತಿದೇವನು ಹಸು ಮೊದಲಾದ ಪ್ರಾಣಿಗಳಿಗೆ ಉಪಚಾರವನ್ನು ಮಾಡುತ್ತಿದ್ದನೆಂದು ಹೇಳಿ, ಮುಂದಿನ ಮೂರು ಶ್ಲೋಕಗಳಲ್ಲಿ ಅವನ ಸಂಪತ್ತನ್ನು ವರ್ಣನೆ ಮಾಡಿ, ನೂರಿಪ್ಪತ್ನಾಕನೆಯ ಶ್ಲೋಕದಲ್ಲಿ ಹಸುಗಳನ್ನು ಮುಟ್ಟುವ ಮಾತ್ರದಿಂದಲೇ ಬ್ರಾಹ್ಮಣರಿಗೆ ಇಪ್ಪತ್ತು ಸಾವಿರ ಹಸುಗಳನ್ನು ದಾನ ಮಾಡುತ್ತಿದ್ದ- ನೆಂದು ಹೇಳಿದ್ದಾರೆ. ಆದ್ದರಿಂದ ಗೋಹತ್ಯೆಯನ್ನು ಮಾಡಿ, ಗೋವುಗಳ ರಕ್ತವೇ ಚರ್ಮಣ್ವತಿ ನದಿಯಾಗಿದೆ ಎಂಬ ವಾಕ್ಯವು ಅಪ್ರಬುದ್ಧವಾಗಿದೆ.
ಬ್ರಾಹ್ಮಣೇಭ್ಯೋ ದದೌ ನಿಷ್ಕಾನ್ ಸದಸಿ ಪ್ರತತೇ ನೃಪಃ |
ತುಭ್ಯಂ ತುಭ್ಯಂ ನಿಷ್ಕಮಿತಿ ಯತ್ರಾಕ್ರೋಶಂತಿ ವೈ ದ್ವಿಜಾಃ ॥121॥
ಆ ರಂತಿದೇವನು ಬ್ರಾಹ್ಮಣರಿಗೆ ಯಥೇಚ್ಛವಾಗಿ ಸುವರ್ಣನಾಣ್ಯಗಳನ್ನು ದಕ್ಷಿಣೆಯನ್ನಾಗಿ ನೀಡಿದನು. ಆ ಸಂದರ್ಭದಲ್ಲಿ ಬ್ರಾಹ್ಮಣರು ``ನಿನಗೆ ರಾಜನು ಎಷ್ಟು ವರಾಹಗಳನ್ನು ಕೊಡುತ್ತಿದ್ದಾನೆ, ನನಗೂ ಕೂಡ ಅಷ್ಟೇ ದಕ್ಷಿಣೆಯನ್ನು ಕೊಡು- ತ್ತಾನೆ'' ಎಂದು ಪರಸ್ಪರವಾಗಿ ಚರ್ಚಿಸುತ್ತಿದ್ದರು.

ಸಹಸ್ರಂ ತುಭ್ಯಮಿತ್ಯುಕತ್ವ ಬ್ರಾಹ್ಮಣಾನ್ ಸಂಪ್ರಪದ್ಯತೇ |
ಅನ್ವಾಹಾರ್ಯೋಪಕರಣಂ ದ್ರವ್ಯೋಪಕರಣಂ ಚ ಯತ್ ॥122॥
ಹೀಗೆ ಬ್ರಾಹ್ಮಣರು ಪರಸ್ಪರ ಮಾತನಾಡಿಕೊಳ್ಳುತ್ತಿರುವಾಗ ಆ ರಂತಿದೇವನು ಸಾವಿರ ನಿಷ್ಕಗಳನ್ನು ನೀವು ತೆಗೆದುಕೊಳ್ಳಿ ಬನ್ನಿ ಎಂಬುದಾಗಿ ಹೇಳುತ್ತಾ, ಅವರವರ ಅಪೇಕ್ಷೆಗಿಂತಲೂ ಹೆಚ್ಚು ದಕ್ಷಿಣೆಗಳನ್ನು ನೀಡಿ ಸಂತೋಷ ಪಡಿಸುತ್ತಿದ್ದನು. ಯಜ್ಞಕ್ಕೆ ಸಂಬಂಧಪಟ್ಟ ಅನ್ವಹಾರ್ಯಾಗ್ನಿಯಲ್ಲಿ ಹೋಮ ಮಾಡಲು ಉಪಯುಕ್ತವಾದ ಉಪಕರಣಗಳು ಹಾಗೂ ಯಜ್ಞದ್ರವ್ಯಗಳನ್ನು ಸಂಗ್ರಹಿಸಲು ಆವಶ್ಯಕವಾದ ಉಪ- ಕರಣಗಳೆಲ್ಲವೂ ಸ್ವರ್ಣಮಯವಾಗಿದ್ದವು.
ಘಟಾಃ ಸ್ಥಾಲ್ಯಃ ಕಟಾಹಾಶ್ಚ ಪಾತ್ರ್ಯಶ್ಚ ಪಿಠರಾ ಅಪಿ |
ನ ತತ್ ಕಿಂಚಿದಸೌವರ್ಣಂ ರಂತಿದೇವಸ್ಯ ಧೀಮತಃ ॥123॥
ಗಡಿಗೆಗಳು, ಹಂಡೆಗಳು, ತಾಲಿಗಳು, ಬೋಗೋಣಿಗಳು ಇವೆಲ್ಲವೂ ಕೂಡ ಬಂಗಾರದ್ದೇ ಆಗಿದ್ದವು. ಬಂಗಾರವಲ್ಲದ ಒಂದೇ ಒಂದು ವಸ್ತು ಅಲ್ಲಿ ಇರಲಿಲ್ಲ.
ಸಾಂಕೃತೇ ರಂತಿದೇವಸ್ಯ ಯಾಂ ರಾತ್ರಿಮವಸದ್ ಗೃಹೇ |
ಅಲಭಂತ ಶತಂ ಗಾವಃ ಸಹಸ್ರಾಣಿ ಚ ವಿಂಶತಿಃ ॥124॥
ಸಂಕೃತಿಯ ಮಗನಾದ ಆ ರಂತಿದೇವನ ಮನೆಯಲ್ಲಿ ಒಂದು ರಾತ್ರಿಯ ಅತಿಥಿ ಭೋಜನಕ್ಕಾಗಿ ಸಾವಿರದ ನೂರಿಪ್ಪತ್ತು, (ಇಪ್ಪತ್ತು ಸಾವಿರದ ನೂರು ಗೋವುಗಳನ್ನು ಸ್ಪರ್ಶ ಮಾಡುವುದರ ಮೂಲಕವೇ ದಾನವನ್ನಾಗಿ ಪಡೆಯುತ್ತಿದ್ದರು.) ಆ ಸಮಯ- ದಲ್ಲಿ ಆ ಬ್ರಾಹ್ಮಣರು
ವಿಮರ್ಶೆ - ಅಲಭಂತ ಎಂಬ ಪಾಠವೇ ಸಾಧುವಾಗಿದೆ. ಆಲಭ್ಯಂತ ಎಂಬ ಪಾಠವು ಅಸಾಧುವಾಗಿದೆ. ಇಂದಿನ ಹಲವಾರು ಪುಸ್ತಕಗಳಲ್ಲಿ ಆಲಭ್ಯಂತ ಎಂಬ ಪಾಠವೇ ಕಾಣಿಸುತ್ತಿದೆ. ಆಲಂಭನ ಮಾಡುವುದು ಎಂದರೆ ಕಡಿಯುವುದು ಎಂದರ್ಥ. ಹಸುಗಳನ್ನು ರಂತಿದೇವನು ಕಡಿಯಲು ಸಾಧ್ಯವೇ ಇಲ್ಲ. ಇದನ್ನು ಯಾರು ತಮ್ಮ ದೃಷ್ಟಿಗೆ ಅನುಗುಣವಾಗಿ ಸೇರಿಸಿದ ಪಾಠ. ಆದ್ದರಿಂದ `ಅಲಭಂತ' ಎಂಬ ಪಾಠವನ್ನೇ ಸ್ವೀಕಾರ ಮಾಡಬೇಕು.
ತತ್ರ ಸ್ಮ ಸೂದಾಃ ಕ್ರೋಶಂತಿ ಸುಮೃಷ್ಟಮಣಿಕುಂಡಲಾಃ |
ಸೂಪಭೂಯಿಷ್ಠಮಶ್ನೀಧ್ವಂ ನಾದ್ಯ ಮಾಂಸಂ ಯಥಾ ಪುರಾ ॥125॥
ಅಲ್ಲಿರುವ ಅಡುಗೆ ಮಾಡುವವರೂ ಕೂಡ ರತ್ನದ ಕುಂಡಲಗಳನ್ನು ಧಾರಣೆ ಮಾಡುತ್ತಿರುತ್ತಿದ್ದರು. ಅವರು ತೊವ್ವೆಗಳನ್ನು ಯಥೇಚ್ಛವಾಗಿ ಭುಂಜಿಸಿರಿ. ಮೊದ- ಲಿನಂತೆ ಈಗ ಊಟದಲ್ಲಿ ಮಾಂಸವಿಲ್ಲ ಎಂದು ಬ್ರಾಹ್ಮಣರನ್ನು ಕುರಿತು ಉಪಚರಿಸು -ತ್ತಿದ್ದರು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥126॥
ಸೃಂಜಯನೇ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಈ ರಂತಿದೇವನು ಅತ್ಯಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯವಂತನಾ- ಗಿದ್ದನು. ಇವನೇ ಮರಣವನ್ನು ಹೊಂದಿದ ಮೇಲೆ ನಿನ್ನ ಮಗನ ವಿಷಯಕ್ಕಾಗಿ ಏಕೆ ದುಃಖವನ್ನು ಹೊಂದುವಿ?
ವ್ಯಾಖ್ಯಾನ - ಸಂಕೃತಿಯ ಮಗನಾದ ಊರು ವಂಶದವನಾದ ರಂತಿದೇವನು ಮಾಡಿದ ಪಶುಯಜ್ಞವು ಈಗಲೂ ಪ್ರಸಿದ್ಧಿಯನ್ನು ಪಡೆದಿದೆ. ಆ ಪಶುಯಜ್ಞದ ಚರ್ಮದ ರಾಶಿಯಿಂದಲೇ ಚರ್ಮಣ್ವತಿ ನದಿಯು ಉತ್ಪತ್ತಿಯಾಗಿದೆ. ರಂತಿ- ದೇವನು ರಾಜ್ಯಭಾರವನ್ನು ಮುಗಿಸಿ ವನಪ್ರಸ್ಥಾಶ್ರಮಕ್ಕೆ ತೆರಳಿದಾಗ ನಲವತ್ತೆಂಟು ದಿವಸಗಳ ಕಾಲ ಉಪವಾಸವನ್ನು ಮಾಡುತ್ತಾನೆ. ಆಗ ನಲವತ್ತೆಂಟನೆಯ ದಿವಸ ದಿವ್ಯಭೋಜನವು ದೊರೆತಾಗ ತನ್ನ ಸಂಸಾರಕ್ಕೆ ಹಂಚಿ, ತನ್ನ ಪಾಲಿನದ್ದನ್ನು ಉಣ್ಣಬೇಕೆನ್ನುವಷ್ಟರಲ್ಲಿ ಬ್ರಾಹ್ಮಣನು ಬಂದು ಆಹಾರ ಬೇಡುತ್ತಾನೆ. ಪುನಃ ಕೆಲವು ದಿವಸಗಳ ಕಾಲ ಉಪವಾಸವಿದ್ದ ಮೇಲೆ ಶೂದ್ರನೊಬ್ಬನು ಬಂದು, ಇನ್ನೂ ಕೆಲವು ದಿವಸಗಳ ಅನಂತರ ತಾಯಿಯು ಬಂದು, ಮತ್ತೊಮ್ಮೆ ಬೇಡನು ಬಂದು, ಆ ರಂತಿದೇವನ ಆಹಾರವನ್ನು ಬೇಡುತ್ತಾರೆ. ಹಸಿದಿದ್ದರೂ ಕೂಡ ರಂತಿದೇವನು ಇವರನ್ನೆಲ್ಲಾ ತೃಪ್ತಿ ಪಡಿಸಿ ನಿರ್ವಿಕಾರನಾಗಿರುತ್ತಾನೆ. ರಂತಿದೇವನ ತ್ಯಾಗದಿಂದ ಭಗವಂತನು ಪ್ರಸನ್ನನಾಗಿ ಸದ್ಗತಿಯನ್ನು ನೀಡುತ್ತಾನೆ. ಭಾಗವತದಲ್ಲಿ ಮಹಾ- ಭಾರತದ ದ್ರೋಣಪರ್ವದಲ್ಲಿಯೂ ಇವನ ಕಥೆಯು ಬರುತ್ತದೆ.
ಸಗರ ಚಕ್ರವರ್ತಿಯ ಸಾಧನೆ
ಸಗರಂ ಚ ಮಹಾತ್ಮಾನಂ ಮೃತಂ ಶುಶ್ರುಮ ಸೃಂಜಯ |
ಐಕ್ಷ್ವಾಕಂ ಪುರುಷವ್ಯಾಘ್ರಮತಿಮಾನುಷವಿಕ್ರಮಮ್ ॥127॥
ಇಕ್ಷ್ವಾಕು ವಂಶದಲ್ಲಿ ಸಗರ ಎಂಬ ರಾಜನಿದ್ದನು. ಇವನೂ ಕೂಡ ಮೃತನಾದ- ನೆಂಬುದನ್ನು ನಾವು ಕೇಳಿದ್ದೇವೆ. ಮಹಾತ್ಮನು, ಪುರುಷಶ್ರೇಷ್ಠನು, ಅತಿಮಾನುಷವಾದ ಪರಾಕ್ರಮವುಳ್ಳವನು ಇವನಾಗಿದ್ದನು.
ಷಷ್ಟಿಃ ಪುತ್ರಸಹಸ್ರಾಣಿ ಯಂ ಯಾಂತಂ ಪೃಷ್ಠತೋಽನ್ವಯುಃ |
ನಕ್ಷತ್ರರಾಜಂ ವರ್ಷಾಂತೇ ವ್ಯಭ್ರೇ ಜ್ಯೋತಿರ್ಗಣಾ ಇವ ॥128॥
ಇವನಿಗೆ ಅರವತ್ತು ಸಾವಿರ ಮಕ್ಕಳಿದ್ದರು. ಚಂದ್ರನನ್ನು ಸಾವಿರಾರು ನಕ್ಷತ್ರಗಳು ಅನುಸರಿಸುವಂತೆ ಎಲ್ಲಾ ಮಕ್ಕಳು ಇವನನ್ನು ಅನುಸರಿಸುತ್ತಿದ್ದರು.
ಏಕಚ್ಛತ್ರಾ ಮಹೀ ಯಸ್ಯ ಪ್ರಣತಾ ಹ್ಯಭವತ್ ಪುರಾ |
ಯೋಽಶ್ವಮೇಧಸಹಸ್ರೇಣ ತರ್ಪಯಾಮಾಸ ದೇವತಾಃ ॥129॥
ಈ ಸಗರನು ಏಕಚ್ಛತ್ರದಿಂದ ಭೂಮಿಯನ್ನು ಪರಿಪಾಲನೆ ಮಾಡಿದನು. ಸಾವಿರ ಅಶ್ವಮೇಧಯಾಗಗಳನ್ನು ಮಾಡಿ, ದೇವತೆಗಳನ್ನು ತೃಪ್ತಿ ಪಡಿಸಿದನು.
ಯಃ ಪ್ರಾದಾತ್ ಕಾಂಚನಸ್ತಂಭಂ ಪ್ರಾಸಾದಂ ಸರ್ವಕಾಂಚನಮ್ |

ಪೂರ್ಣಂ ಪದ್ಮದಲಾಕ್ಷೀಣಾಂ ಸ್ತ್ರೀಣಾಂ ಶಯನಸಂಕುಲಮ್ ॥130॥
ಚಿನ್ನದ ಕಂಬಗಳಿಂದ ನಿರ್ಮಿಸಿದ ಪದ್ಮದಲಾಯತಾಕ್ಷಿಯರಾದ ಸ್ತ್ರೀಯರಿಂದ ಕೂಡಿದ ಹಂಸತೂಲಿಕಾತಲ್ಪಗಳಿಂದ ಅಲಂಕೃತವಾದ ಸುವರ್ಣಮಯವಾದ ಪ್ರಾಸಾದಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.
ದ್ವಿಜಾತಿಭ್ಯೋಽನುರೂಪೇಭ್ಯಃ ಕಾಮಾನುಚ್ಚಾವಚಾಂಸ್ತಥಾ |
ಯಸ್ಯಾದೇಶೇನ ತದ್ ವಿತ್ತಂ ವ್ಯಭಜಂತ ದ್ವಿಜಾತಯಃ ॥131॥
ಬ್ರಾಹ್ಮಣರಿಗೆ ವಿವಿಧವಾದ ಕಾಮೋಪಭೋಗಸಾಮಗ್ರಿಗಳನ್ನು ದಾನ ಮಾಡಿ- ದನು. ಮತ್ತು ಅವರವರು ಕೇಳಿದ ಕೋರಿಕೆಗಳನ್ನೆಲ್ಲಾ ಸಲ್ಲಿಸಿದನು. ಅವನ ಆದೇಶದಿಂದ ಎಲ್ಲಾ ಬ್ರಾಹ್ಮಣರು ಅವನು ನೀಡಿದ ಭೋಗ್ಯವಸ್ತುಗಳನ್ನು ಹಂಚಿ- ಕೊಂಡರು.
ಖಾನಯಾಮಾಸ ಯಃ ಕೋಪಾತ್ ಪೃಥಿವೀಂ ಸಾಗರಾಂಕಿತಾಮ್|
ಯಸ್ಯ ನಾಮ್ನಾ ಸಮುದ್ರಶ್ಚ ಸಾಗರತ್ವಮುಪಾಗತಃ ॥132॥
ಕುಪಿತನಾದ ಚಕ್ರವರ್ತಿಯು ಈಗ ಸಾಗರ ಎಂಬ ಹೆಸರಿನಿಂದ ಕರೆಯುವ ಭೂಭಾಗವನ್ನು ಅಗೆಸಿದನು. ಮುಂದೆ ಅವನ ಹೆಸರಿನಿಂದಲೇ ಸಮುದ್ರವು ಸಾಗರ ಎಂಬ ಬಿರುದನ್ನು ಹೊಂದಿತು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥133॥
ಸೃಂಜಯನೇ! ಹೀಗೆ ಸಗರನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಗಳಲ್ಲಿ ನಿನಗಿಂತಲೂ ನಿನ್ನ ಮಗನಿಗಿಂತಲೂ ಅತ್ಯಧಿಕನಾಗಿದ್ದನು. ಅವನೇ ಮೃತನಾದ ಮೇಲೆ ಬೇರೆಯವರ ವಿಷಯದಲ್ಲಿ ದುಃಖಿಸುವ ಅವಶ್ಯಕತೆಯಿಲ್ಲ. ನಿನ್ನ ಮಗನು ಹೊಂದಿದ್ದಾನೆಂದು ಏಕೆ ದುಃಖಿಸುವಿ?
ವ್ಯಾಖ್ಯಾನ - ಇಕ್ಷ್ವಾಕುವಂಶದ ಬಾಹುಕನ ಮಗನೇ ಸಗರ. ತನ್ನ ಮಲ- ತಾಯಿಯು ತನ್ನ ತಾಯಿಗೆ ಹಾಕಿದ ಗರ್ಭಸ್ತಂಭ ಹಾಗೂ ವಿಷದ ಪರಿಣಾಮವಾಗಿ ಏಳುವರ್ಷ ತಾಯಿಯ ಉದರದಲ್ಲೇ ಇದ್ದನು. ಔರ್ವಮುನಿಯ ಆಶ್ರಮದಲ್ಲೇ ಬಾಹುಕನು ಮೃತನಾದನು. ಅದೇ ಔರ್ವಮುನಿಯಿಂದ ಶಿಕ್ಷಿತನಾದ ಸಗರನು ಹೈಹಯರನ್ನು ನಿಶ್ಶೇಷವಾಗಿ ನಾಶ ಮಾಡಿದನು. ಸಗರಚಕ್ರವರ್ತಿಯು ಸಪ್ತದ್ವೀಪ- ವತಿಯಾದ ಭೂಮಂಡಲವನ್ನು ಪರಿಪಾಲನೆ ಮಾಡಿದನು. ಸುಮತಿ ಮತ್ತು ಕೇಶಿನಿಯರು ಸಗರನ ಪತ್ನಿಯರು. ಇವರೂ ಕೂಡ ಔರ್ವಋಷಿಯನ್ನು ಸೇವೆ ಮಾಡಿದರು. ಆ ಮುನಿಗಳ ಅನುಗ್ರಹದಿಂದ ಸುಮತಿಯು ಅರವತ್ತು ಸಾವಿರ ಕುಮಾರರನ್ನು ಪಡೆದಳು. ಕೇಶಿನಿ ಅಸಮಂಜಸನೆಂಬ ಮಗನನ್ನೂ ಕೂಡ ಪಡೆದಳು. ಅಸಮಂಜಸನು ಕೆಟ್ಟವನಾದ್ದರಿಂದ ತಂದೆಯು ಆತನನ್ನು ಬಿಟ್ಟನು. ಮುಂದೆ ಅಸಮಂಜಸನ ದುಶ್ಚಟವನ್ನೇ ಅರವತ್ತು ಸಾವಿರ ಬಾಲಕರೂ ಕೂಡ ಅನುಸರಿಸಲು ಅವರಿಂದ ಯಜ್ಞಾದಿಷಟ್ಕರ್ಮಗಳೆಲ್ಲ ನಾಶವಾದವು. ಆಗ ದೇವತೆಗಳು ಕಪಿಲಮಹಾಮುನಿಗೆ ಶರಣಾಗತರಾದರು. ಆಗ ಕಪಿಲಮಹರ್ಷಿಯು ಸ್ವಲ್ಪಕಾಲದಲ್ಲಿಯೇ ಅರವತ್ತು ಸಾವಿರ ಮಕ್ಕಳು ನಾಶ ಹೊಂದುತ್ತಾರೆಂದು ಅಭಯ ದಾನ ಮಾಡಿದನು. ಕೆಲವು ಸಮಯದಲ್ಲಿಯೇ ಸಗರ ಚಕ್ರವರ್ತಿಯು ಅಶ್ವಮೇಧಯಾಗವನ್ನು ಕೈಗೊಂಡನು. ಅರವತ್ತು ಸಾವಿರ ಮಕ್ಕಳು ಆ ಕುದುರೆಯ ರಕ್ಷಣೆಗಾಗಿ ನಿಂತರು. ಆ ಅಶ್ವವನ್ನು ಇಂದ್ರನು ಅಪಹರಿಸಿ, ಬಿಲವನ್ನು ಪ್ರವೇಶಿಸಿ- ದನು. ಆಗ ಸಗರಪುತ್ರರು ಭೂಮಿಯಲ್ಲಿ ಎಲ್ಲಿಯೂ ಅಶ್ವವನ್ನು ಕಾಣದೇ ಪಾತಾಳವನ್ನು ಶೋಧಿಸಬೇಕೆಂದು ಯೋಜನಪ್ರಮಾಣ ಭೂಮಿಯನ್ನು ಅಗೆದರು. ಪಾತಾಳವನ್ನು ಪ್ರವೇಶಮಾಡಿ, ಅಲ್ಲಿ ಶರತ್ಕಾಲದ ಸೂರ್ಯನಂತೆ ಕಂಗೊಳಿಸುತ್ತಿದ್ದ ಕಪಿಲಋಷಿಯನ್ನು ಕಂಡು ಇವನೇ ಕುದುರೆಯನ್ನು ಕದ್ದಿದ್ದಾನೆಂದು ಅವನ ಮೇಲೆ ಯುದ್ಧಕ್ಕೆ ಹೊರಟರು. ಆಗ ಕಪಿಲಋಷಿಯು ಒಮ್ಮೆ ಕಣ್ಣು ತೆರೆದನು. ಅದರಿಂದಲೇ ಎಲ್ಲರೂ ಸುಟ್ಟು ಭಸ್ಮರಾದರು. ಇವರು ಅಗೆದ ಕಾರಣದಿಂದಲೇ ಸಮುದ್ರಕ್ಕೆ ಸಾಗರ ಎಂದು ಹೆಸರು ಬಂದಿತು.
ರಾಜಾನಂ ಚ ಪೃಥುಂ ವೈನ್ಯಂ ಮೃತಂ ಶುಶ್ರುಮ ಸೃಂಜಯ |
ಯಮಭ್ಯಷಿಂಚನ್ ಸಂಭೂಯ ಮಹಾರಣ್ಯೇ ಮಹರ್ಷಯಃ॥134॥
ವೇನನ ಮಗನೇ ಪೃಥುಚಕ್ರವರ್ತಿ. ಇವನೂ ಸಹ ಮೃತನಾದನೆಂದು ನಾವು ಕೇಳಿದ್ದೇವೆ. ಅನೇಕ ಮಹರ್ಷಿಗಳು ಗೊಂಡಾರಣ್ಯದಲ್ಲಿ ಒಂದಾಗಿ ಸೇರಿ ಈ ಪೃಥು- ಚಕ್ರವರ್ತಿಯನ್ನು ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಿದರು.
ಪ್ರಥಯಿಷ್ಯತಿ ವೈ ಲೋಕಾನ್ ಪೃಥುರಿತ್ಯೇವ ಶಬ್ದಿತಃ |
ಕ್ಷತಾಚ್ಚ ನಸಶತ್ರಯತೀತಿ ಸ ತಸ್ಮಾತ್ ಕ್ಷತ್ರಿಯಃ ಸ್ಮೃತಃ ॥135॥
ಒಳ್ಳೆಯ ಧರ್ಮಮರ್ಯಾದೆಗಳನ್ನು ಲೋಕದಲ್ಲಿ ಸ್ಥಾಪನೆ ಮಾಡುತ್ತಾನೆ. ಆದ್ದ- ರಿಂದ ಇವನನ್ನು `ಪೃಥು' ಎಂದೇ ಕರೆಯಬೇಕೆಂದು ಎಲ್ಲ ಋಷಿಗಳು ಇವನನ್ನು `ಪೃಥು' ಎಂದರು. ಆಪತ್ತಿನಿಂದ ಎಲ್ಲರನ್ನು ರಕ್ಷಣೆ ಮಾಡುತ್ತಾನಾದ್ದರಿಂದ ಇವನು ಉತ್ತಮಕ್ಷತ್ರಿಯನಾಗಿದ್ದನು.
ಪೃಥುಂ ವೈನ್ಯಂ ಪ್ರಜಾ ದೃಷ್ಟ್ವಾ ರಕ್ತಾಃ ಸ್ಮೇತಿ ಯದಬ್ರುವನ್ |
ತತೋ ರಾಜೇತಿ ನಾಮಾಸ್ಯ ಅನುರಾಗಾದಜಾಯತ ॥136॥
ವೇನರಾಜನ ಮಗನಾದ ಪೃಥುಚಕ್ರವರ್ತಿಯನ್ನು ನೋಡಿದ ಕೂಡಲೇ ಪ್ರಜೆ- ಗಳೆಲ್ಲರೂ ``ನಮಗೆ ಪೃಥು ಎಂದರೆ ಇಷ್ಟ '' ಎಂದು ಹೇಳುತ್ತಿದ್ದರು. ಈ ಅನು- ರಾಗದ ಕಾರಣದಿಂದಲೇ ಅವನಿಗೆ ರಾಜಾ ಎಂಬ ಹೆಸರು ಅನ್ವರ್ಥಕವಾಯಿತು.
ಅಕೃಷ್ಟಪಚ್ಯಾ ಪೃಥಿವೀ ಪುಟಕೇ ಪುಟಕೇ ಮಧು |
ಸರ್ವಾ ದ್ರೋಣದುಘಾ ಗಾವೋ ವೈನ್ಯಸ್ಯಾಸನ್ ಪ್ರಶಾಸತಃ ॥137॥
ಪೃಥುರಾಜನು ರಾಜ್ಯಭಾರವನ್ನು ಮಾಡುತ್ತಿರುವಾಗ ಕೃಷಿಯನ್ನು ಮಾಡದೇ ಇದ್ದರೂ ಕೂಡ ಸಮೃದ್ಧವಾಗಿ ಬೆಳೆಯು ಬೆಳೆಯುತ್ತಿತ್ತು. ಪ್ರತಿಯೊಂದು ವೃಕ್ಷದ ಕೊಟರೆಗಳಲ್ಲಿ ಜೇನು ಕಟ್ಟಿರುತ್ತಿತ್ತು. ಹಸುಗಳು ಕೊಳಗದಷ್ಟು ಹಾಲುಗಳನ್ನು ನೀಡುತ್ತಿದ್ದವು. ಹೀಗೆ ಪೃಥಿವಿಯನ್ನು ಪಾಲನೆ ಮಾಡಿದನು.
ಟಿಪ್ಪಣಿ- ಪುಟಕೇ ಪುಟಕೇ ಮಧು ಇತ್ಯತ್ರ ಪುಟಕೇ ಪುಟಕೇ ವೃಕ್ಷಾದೀನಾಂ ಕೋಟರೇ ಕೋಟರೇ | `ಪುಟಕೇ ಪುಟಕೇ' ವೃಕ್ಷಗಳ

ಪ್ರತಿಯೊಂದು ಕೊಟರೆಗಳಲ್ಲಿ.
ಅರೋಗಾಃ ಸರ್ವಸಿದ್ಧಾರ್ಥಾ ಮನುಷ್ಯಾ ಅಕುತೋಭಯಾಃ |
ಯತಾಭಿಕಾಮಮವಸನ್ ಕ್ಷೇತ್ರೇಷು ಚ ಗೃಹೇಷು ಚ ॥138॥
ಅವನ ರಾಜ್ಯಪರಿಪಾಲನೆಯಲ್ಲಿ ಯಾರೇ ಒಬ್ಬ ಮನುಷ್ಯರಿಗೆ ಖಾಯಿಲೆಗಳು ಇರಲಿಲ್ಲ. ಪ್ರತಿಯೊಬ್ಬರೂ ದೃಢಕಾಯರಾಗಿದ್ದರು. ತಮಗೆ ಆವಶ್ಯಕವಾದ ಎಲ್ಲಾ ಅಭಿಲಾಷೆಗಳನ್ನು ಪಡೆದುಕೊಳ್ಳುತ್ತಿದ್ದರು. ಯಾವುದೇ ಭಯವು ಅವರಿಗಿರಲಿಲ್ಲ. ಆ ಪೃಥುರಾಜನ ಪ್ರಜೆಗಳು ತಾವು ಇರುವ ಕ್ಷೇತ್ರಗಳಲ್ಲಿ ಮನೆಗಳಲ್ಲಿ ನಿಶ್ಚಿಂತೆಯಾಗಿ ವಾಸ ಮಾಡುತ್ತಿದ್ದರು.
ಆಪಃ ಸಂಸ್ತಂಭಿರೇ ಯಸ್ಯ ಸಮುದ್ರಸ್ಯ ಯಿಯಾಸತಃ |
ಸರಿತಶ್ಚಾನುದೀರ್ಯಂತ ಧ್ವಜಸಂಗಶ್ಚ ನಾಭವತ್ ॥139॥
ಅವನು ಸಮುದ್ರದ ಮೇಲೆ ತೆರಳುತ್ತಿರುವಾಗ ಜಲವೂ ಕೂಡ ಕಲ್ಲಿನಂತೆ ಅವನಿಗೆ ಅನುಕೂಲ ಮಾಡಿಕೊಡುತ್ತಿತ್ತು. ಅವನು ತನ್ನ ಬಿಲ್ಲಿನ ತುದಿಗಳಿಂದ ಬೆಟ್ಟಗಳನ್ನೇ ಕಡಿದು ಭೂಮಿಯನ್ನು ಸಮತಟ್ಟನ್ನಾಗಿ ಮಾಡಿದನು.
ಹೈರಣ್ಯಾಂ ತ್ರಿನಲೋತ್ಸೇಧಾನ್ ಪರ್ವತಾನೇಕವಿಂಶತಿಮ್ |
ಬ್ರಾಹ್ಮಣೇಭ್ಯೋ ದದೌ ರಾಜಾ ಯೋಽಶ್ವಮೇಧೇ ಮಹಾಮಖೇ ॥140॥
ಅವನು ಒಂದು ಅಶ್ವಮೇಧಯಾಗವನ್ನು ನಡೆಸಿದನು. ಆಗ ಮೂರು ಆಳು- ಗಳಷ್ಟು ಎತ್ತರದಲ್ಲಿರುವ ಸುವರ್ಣಪರ್ವತಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥141॥
ಇಂಥ ಶ್ರೇಷ್ಠನಾದ ಪೃಥುರಾಜನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಗಳಲ್ಲಿ ನಿನಗಿಂತಲೂ ಅತ್ಯಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ -ನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ ಉಳಿದವರ ವಿಷಯದಲ್ಲಿ ಏಕೆ ದುಃಖವನ್ನು ಅನುಭವಿಸುವಿ.
ವ್ಯಾಖ್ಯಾನ - ಪೃಥುರಾಜನ ಪತ್ನಿಯೇ ಅರ್ಚಿ. ಈಕೆಯಲ್ಲಿ ಅಂತರ್ಧಾನನೆಂಬ ಮಗನು ಹುಟ್ಟಿದನು. ಇವನ ಮೊಮ್ಮಗನು ಪ್ರಾಚೀನಬರ್ಹಿ. ಇವನ ತಂದೆಯಾದ ವೇನನು ನಾಸ್ತಿಕನು ದುಷ್ಟನು ಆಗಿದ್ದನು. ಋಷಿಗಳೇ ಹೂಂಕಾರದಿಂದ ಇವನನ್ನು ಕೊಂದರು. ಮುಂದೆ ಯಾರು ರಾಜನಾಗ ಬೇಕು ಎಂದು ವಿಚಾರ ಮಾಡಿದಾಗ, ಆ ವೇನನ ತೊಡೆಯನ್ನು ಮಥನ ಮಾಡಿದರು. ಆಗ ಪೃಥು ಹುಟ್ಟಿದನು. ಅವನು ಅತ್ಯಂತ ಧರ್ಮಿಷ್ಟನಾದನು. ಎಲ್ಲ ಋಷಿಮುನಿಗಳ ಅನುಗ್ರಹಕ್ಕೆ ಪಾತ್ರನಾದನು. ಸಮಗ್ರ ಭೂಮಂಡಲವನ್ನು ಸಮತಟ್ಟನ್ನಾಗಿ ಮಾಡಿದನು. ಅವನಿಂದಲೇ ಈ ಭೂಮಿಗೆ `ಪಾರ್ಥಿವ' ಎಂಬ ಹೆಸರು ಬಂದಿತು.
ಕಿಂ ವೈ ತೂಷ್ಣೀಂ ಧ್ಯಾಯಸಿ ಸೃಂಜಯ ತ್ವಂ
ನ ಮೇ ರಾಜನ್ ವಾಚಮಿಮಾಂ ಶೃಣೋಷಿ |
ನ ಚೇನ್ಮೋಘಂ ವಿಪ್ರಲಪ್ತಂ ಮಯೇದಂ
ಪಥ್ಯಂ ಮುಮೂರ್ಷೋರಿವ ಸಮ್ಯಗುಕ್ತಮ್ ॥142॥
ಸೃಂಜಯನೇ! ನಾನಿಷ್ಟು ಹೇಳುತ್ತಿದ್ದರೂ ಕೂಡ ನೀನು ಸುಮ್ಮನೆ ಕುಳಿತು ಏನನ್ನು ಯೋಚನೆ ಮಾಡುತ್ತಿರುವಿ? ನನ್ನ ಮಾತನ್ನೇಕೆ ಕೇಳುತ್ತಿಲ್ಲ? ಸಾಯುತ್ತಿರುವ ಮನುಷ್ಯನಿಗೆ ಪಥ್ಯವು ಹೇಗೆ ವ್ಯರ್ಥವಾಗುತ್ತದೋ, ಅದರಂತೆ ನಾನು ಹೇಳುತ್ತಿರುವ ಹಿತವಾಕ್ಯಗಳು ನಿನ್ನಲ್ಲಿ ವ್ಯರ್ಥವಾಗುವುದಿಲ್ಲ ತಾನೇ?
ಶೃಣೋಮಿ ತೇ ನಾರದ ವಾಚಮೇನಾಂ
ವಿಚಿತ್ರಾರ್ಥಾಂ ಸ್ರಜಮಿವ ಪುಣ್ಯಗಂಧಾಮ್ |
ರಾಜರ್ಷೀಣಾಂ ಪುಣ್ಯಕೃತಾಂ ಮಹಾತ್ಮನಾಂ
ಕೀರ್ತ್ಯಯ ಯುಕ್ತಾಂ ಶೋಕನಿರ್ಣಾಶನಾರ್ಥಮ್ ॥143॥
ಸೃಂಜಯ ಮಹಾತ್ಮರಾದ ನಾರದರೇ! ಶ್ರದ್ಧೆಯಿಂದ ನಿಮ್ಮ ಮಾತನ್ನು ಕೇಳುತ್ತಿ -ರುವೆನು. ಆ ನಿಮ್ಮ ಮಾತುಗಳು ವಿಚಿತ್ರಾರ್ಥಗಳಿಂದ ಸಹಿತವಾಗಿವೆ. ಪವಿತ್ರವಾದ ಗಂಧದಿಂದ ಕೂಡಿರುವ ಮಾಲೆಯಂತೆ ಅದನ್ನು ನಾನು ಸಂತೋಷದಿಂದ ಸ್ವೀಕರಿಸಿರುವೆ. ಪುಣ್ಯಾತ್ಮರಾದ ಎಲ್ಲಾ ರಾಜರ್ಷಿಗಳ ಕೀರ್ತಿಯನ್ನು ಕೊಂಡಾಡುವ, ಆ ನಿಮ್ಮ ಮಾತುಗಳು ನನ್ನ ದುಃಖವನ್ನು ಸಂಪೂರ್ಣವಾಗಿ ಪರಿಹರಿಸಿವೆ.
ನ ತೇ ಮೋಘಂ ವಿಪ್ರಲಪ್ತಂ ಮಹರ್ಷೇ
ದೃಷ್ಟ್ವೈವ ತ್ವಾಂ ನಾರದಾಹಂ ವಿಶೋಕಃ |
ಶುಶ್ರೂಷೇ ತೇ ವಚನಂ ಬ್ರಹ್ಮವಾದಿನ್
ನ ತೇ ತೃಪ್ಯಾಮ್ಯಮೃತಸ್ಯೇವ ಪಾನಾತ್ ॥144॥
ಮಹರ್ಷಿಗಳೇ ! ತಾವು ನನಗೆ ಹೇಳಿದ ಮಾತುಗಳು ಸರ್ವಥಾ ವ್ಯರ್ಥವಾಗು- ವುದಿಲ್ಲ. ತಮ್ಮನ್ನು ನೋಡಿದಾಕ್ಷಣವೇ ನನ್ನ ದುಃಖವೆಲ್ಲವೂ ಪರಿಹಾರವಾಗಿದೆ. ಬ್ರಹ್ಮಜ್ಞಾನಿಗಳೇ ! ಅಮೃತಪಾನದಂತಿರುವ ನಿಮ್ಮ ಮಾತುಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಾಗುತ್ತಿಲ್ಲ. ಪುನಃ ಕೇಳಬೇಕೆನಿಸುತ್ತಿದೆ.
ಅಮೋಘದರ್ಶಿನ್ಮಮ ಚೇತ್ ಪ್ರಸಾದಂ
ಸುತಾಘದಗ್ಧಸ್ಯ ವಿಭೋ ಪ್ರಕುರ್ಯಾಃ |
ಮೃತಸ್ಯ ಸಂಜೀವನಮದ್ಯ ಮೇ ಸ್ಯಾತ್
ತವ ಪ್ರಸಾದಾತ್ ಸುತಸಂಗಮಶ್ಚ ॥145॥
ತಮ್ಮ ದರ್ಶನವೇ ಅಮೋಘವಾಗಿದೆ. ನಾನು ಪುತ್ರನ ವಿಯೋಗದಿಂದ ದುಃಖ -ಸಂತಪ್ತನಾಗಿರುವೆನು. ನೀವು ಪ್ರಸನ್ನರಾದಲ್ಲಿ ಸತ್ತು

ಹೋದ ಆ ಮಗನು ಜೀವಂತ- ವಾಗಿ ಪುನಃ ಬರುತ್ತಾನೆ. ಅಂಥ ಶಕ್ತಿ ನಿಮ್ಮಲ್ಲಿದೆ. ತಮ್ಮ ಪ್ರಸಾದದಿಂದ ನನಗೆ ಪುನಃ ಪುತ್ರ ಸಮಾಗಮವು ಉಂಟಾಗುವಂತೆ ಕರುಣಿಸಿರಿ.
ಯಸ್ತೇ ಪುತ್ರೋ ದಯಿತೋಽಯಂ ವಿಜಾತಃ
ಸ್ವರ್ಣಷ್ಠೀವೀ ಯಮದಾತ್ ಪರ್ವತಸ್ತೇ |
ಪುನಸ್ತೇ ತಂ ಪುತ್ರಮಹಂ ದದಾಮಿ
ಹಿರಣ್ಯನಾಭಂ ವರ್ಷಸಹಸ್ರಿಣಂ ಚ ॥146॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ತ್ರಿಂಶೋಽಧ್ಯಾಯಃ ॥30॥
ನಾರದರು ಸೃಂಜಯನೇ! ನಿನಗೆ ಪರ್ವತನು ಅನುಗ್ರಹಿಸಿದ ಸ್ವರ್ಣಷ್ಠೀವಿ ಎಂಬ ಮಗನು ಮೃತನಾಗಿದ್ದಾನೆ. ಅವನ ದೇಹವಷ್ಟೇ ನಿನ್ನ ಮನೆಯಲ್ಲಿ ಮಲಗಿದೆ. ಈ ದೇಹದಲ್ಲಿ ಪುನಃ ಅವನು ಬಂದು ನೆಲೆಸುವಂತೆ ಮಾಡುತ್ತೇನೆ. ಅವನನ್ನು ಬದುಕಿಸುತ್ತೇನೆ. ಅವನು ಸ್ವರ್ಣಸಮಾನವಾದ ದೇಹಕಾಂತಿಯಿಂದ ಸಾವಿರವರ್ಷ- ಕಾಲ ಬದುಕುತ್ತಾನೆ. ಹೀಗೆ ಆ ಸೃಂಜಯನಿಗೆ ನಾರದರು ಅನುಗ್ರಹವನ್ನು ಮಾಡಿ- ದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 30ನೆಯ ಅಧ್ಯಾಯವು ಮುಗಿಯಿತು.
****
31. ಮೂವತ್ತೊಂದನೆಯ ಅಧ್ಯಾಯ
ನಾರದ ಹಾಗೂ ಪರ್ವತರ ಕಥೆಯನ್ನು ಶ್ರೀ ಕೃಷ್ಣನು ಧರ್ಮರಾಜನಿಗೆ ತಿಳಿಸುತ್ತಿದ್ದಾನೆ.
ಯುಧಿಷ್ಠಿರಃ
ಸ ಕಥಂ ಕಾಂಚನಷ್ಠೀವೀ ಸೃಂಜಯಸ್ಯ ಸುತೋಽಭವತ್ |
ಪರ್ವತೇನ ಕಿಮರ್ಥಂ ಚ ದತ್ತಃ ಕೇನ ಮಮಾರ ಚ ॥1॥
ಶ್ರೀಕೃಷ್ಣನೇ! ಸ್ವರ್ಣಷ್ಠೀವಿಯು ಆ ಸೃಂಜಯನಿಗೆ ಹೇಗೆ ಮಗನಾದನು? ಪರ್ವತ ಋಷಿಯು ಸ್ವರ್ಣಷ್ಠೀವಿಯನ್ನು ಸೃಂಜಯನಿಗೆ ಯಾವ ಕಾರಣಕ್ಕಾಗಿ ನೀಡಿ- ದನು? ಯಾವ ಕಾರಣಕ್ಕಾಗಿ ಆ ಸ್ವರ್ಣಷ್ಠೀವಿಯು ಮರಣವನ್ನು ಹೊಂದಿದನು?
ಯದಾ ವರ್ಷಸಹಸ್ರಾಯುಸ್ತದಾ ಭವತಿ ಮಾನವಃ |
ಕಥಮಪ್ರಾಪ್ತಕೌಮಾರಃ ಸೃಂಜಯಸ್ಯ ಸುತೋ ಮೃತಃ ॥2॥
ಆ ಕಾಲದಲ್ಲಿ ಪ್ರತಿಯೊಬ್ಬ ಮಾನವನು ಸಾವಿರ ವರ್ಷಗಳ ಕಾಲ ಜೀವಿಸು- ತ್ತಿದ್ದನು. ಹೀಗಿದ್ದರೂ ಕೌಮಾರಾವಸ್ಥೆಯನ್ನು ಹೊಂದುವ ಮೊದಲೇ ಆ ಸೃಂಜಯನ ಮಗನು ಏಕೆ ಮರಣವನ್ನು ಹೊಂದಿದನು?
ಉತಾಹೋ ನಾಮಮಾತ್ರಂ ವೈ ಸುವರ್ಣಷ್ಠೀವಿನೋಽಭವತ್ |
ತಥ್ಯಂ ವಾ ಕಾಂಚನಷ್ಠೀವೀತ್ಯೇತದಿಚ್ಛಾಮಿ ವೇದಿತುಮ್ ॥3॥
ಅವನಿಗೆ `ಸ್ವರ್ಣಷ್ಠೀವಿ' ಎಂಬುದು ಕೇವಲ ಹೆಸರು ಮಾತ್ರವೋ? ಅಥವಾ ಸಕಾರಣಕವಾಗಿ ಆ ಹೆಸರು ಬಂದಿದೆಯೋ? ಈ ವಿಷಯವನ್ನು ತಮ್ಮಿಂದ ತಿಳಿ- ಯಲು ಬಯಸುತ್ತೇನೆ.
ಶ್ರೀಭಗವಾನ್
ಅತ್ರ ತೇ ಕಥಯಿಷ್ಯಾಮಿ ಯಥಾವೃತ್ತಂ ಜನೇಶ್ವರ |
ನಾರದಃ ಪರ್ವತಶ್ಚೈವ ಪ್ರಾಗ್ ಋಷೀ ಲೋಕಪೂಜಿತೌ ॥4॥
ಶ್ರೀಕೃಷ್ಣ ಜನೇಶ್ವರನೇ ! ಈ ಸಂದರ್ಭದಲ್ಲಿ ಅವನ ಚರಿತ್ರೆಯನ್ನು ನಿನಗೆ ತಿಳಿಸುತ್ತೇನೆ ಕೇಳು. ನಾರದ ಹಾಗೂ ಪರ್ವತ ಇವರಿಬ್ಬರು ಮಹರ್ಷಿಗಳು ಲೋಕ- ದಲ್ಲಿ ಎಲ್ಲರಿಂದಲೂ ಪೂಜಿತರಾದವರು.
ಮಾತುಲೋ ಭಾಗಿನೇಯಶ್ಚ ದೇವಲೋಕಾದಿಹಾಗತೌ |
ವಿಹರ್ತುಕಾಮೌ ಸಂಪ್ರೀತ್ಯಾ ಮಾನುಷೇಷು ಪುರಾ ಪ್ರಭೂ ॥5॥
ಅವರಿಬ್ಬರಲ್ಲಿ ನಾರದರು ಸೋದರಮಾವ ಆಗಬೇಕು. ಪರ್ವತಋಷಿಯು ಸೋದರಳಿಯ ಆಗಬೇಕು. ಇವರಿಬ್ಬರು ಒಮ್ಮೆ ಭೂಲೋಕದಲ್ಲಿ ಸಂಚಾರ ಮಾಡ- ಬೇಕೆಂಬ ಅಪೇಕ್ಷೆಯಿಂದ ದೇವಲೋಕದಿಂದ ಭೂಲೋಕಕ್ಕೆ ಆಗಮಿಸಿದರು.
ಹವಿಃಪವಿತ್ರಭೋಜ್ಯೇನ ದೇವಭೋಜ್ಯೇನ ಚೈವ ಹ |
ನಾರದೋ ಮಾತುಲಶ್ಚೈವ ಭಾಗಿನೇಯಶ್ಚ ಪರ್ವತಃ ॥6॥
ಸೋದರಮಾವ ಹಾಗೂ ಅಳಿಯಂದಿರಾದ ನಾರದರು ಹಾಗೂ ಪರ್ವತ- ಋಷಿಯು ಭೂಲೋಕದಲ್ಲಿ ದೊರೆಯುವ ಹವಿಸ್ಸನ್ನು ಪವಿತ್ರವಾದ ದೇವತೆಗಳು ಉಪಯೋಗಿಸುವ ಆಹಾರಪದಾರ್ಥವನ್ನು ತಿನ್ನುತ್ತಾ ಭೂಲೋಕದಲ್ಲಿ ಸಂಚಾರ ಮಾಡಿದರು.
ತಾವುಭೌ ತಪಸೋಪೇತಾವವನೀತಲಚಾರಿಣೌ |
ಭುಂಜಾನೌ ಮಾನುಷಾನ್ ಭೋಗಾನ್ ಯಥಾವತ್
ಪರ್ಯಧಾವತಾಮ್ ॥7॥
ಅವರಿಬ್ಬರು ಭೂಮಿಯಲ್ಲಿ ತಪಸ್ಸನ್ನು ಆಚರಿಸುತ್ತಿದ್ದರು. ಮನುಷ್ಯರು ಉಪ- ಯೋಗಿಸುವ ಆಹಾರಗಳನ್ನೇ ತಿನ್ನುತ್ತಿದ್ದರು. ಭೂಮಿಯಲ್ಲೆಡೆ ಸಂಚಾರ ಮಾಡುತ್ತಿ- ದ್ದರು.
ಪ್ರೀತಿಮಂತೌ ಮುದಾ ಯುಕ್ತೌ ಸಮಯಂ ತತ್ರ ಚಕ್ರತುಃ |
ಯೋ ಭವೇದ್ ಹೃದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ॥8॥
ಅನ್ಯೋನ್ಯಸ್ಯ ಸ ಆಖ್ಯೇಯೋ ಮೃಷಾ ಶಾಪೋಽನ್ಯಥಾ ಭವೇತ್ |
ತೌ ತಥೇತಿ ಪ್ರತಿಜ್ಞಾಯ ಮಹರ್ಷೀ ಲೋಕಪೂಜಿತೌ |

ಸೃಂಜಯಂ ಶ್ವೈತ್ಯಮಭ್ಯೇತ್ಯ ರಾಜಾನಮಿದಮೂಚತುಃ ॥9॥
ಅವರಿಬ್ಬರು ಪರಸ್ಪರಪ್ರೀತಿಯುಳ್ಳವರಾಗಿದ್ದರು. ಒಮ್ಮೆ ತಮ್ಮ-ತಮ್ಮಲ್ಲಿಯೇ ಒಂದು ನಿರ್ಬಂಧವನ್ನು ಮಾಡಿಕೊಂಡರು. ``ತಮ್ಮಲ್ಲಿ ಒಬ್ಬರಿಗೊಬ್ಬರು ಯಾವುದೇ ವಿಚಾರವನ್ನು ಮುಚ್ಚಿಡಬಾರದು. ಅದು ಒಳ್ಳೇಯದೇ ಆಗಿರಲಿ ಕೆಟ್ಟದ್ದೇ ಆಗಿರಲಿ. ತಮ್ಮ ಮನಸ್ಸಿನಲ್ಲಿ ಹುಟ್ಟಿದ ಸಂಕಲ್ಪವನ್ನು ಮತ್ತೊಬ್ಬನಿಗೆ ಹೇಳಬೇಕು. ಹಾಗೇ ಹೇಳದಿದ್ದರೆ, ಅಥವಾ ಸುಳ್ಳು ಹೇಳಿದರೆ ಅವನು ಶಾಪಕ್ಕೆ ಭಾಗಿಯಾಗುತ್ತಾನೆ'' ಎಂದು.
ಹೀಗೆ ಲೋಕಪೂಜಿತರಾದ ಮಹರ್ಷಿಗಳಾದ ನಾರದರು ಮತ್ತು ಪರ್ವತರು ಹಾಗೆಯೇ ಆಗಲೆಂದು ಪರಸ್ಪರವಾಗಿ ಒಪ್ಪಿಕೊಂಡರು. ಪ್ರತಿಜ್ಞಾವಾಕ್ಯವನ್ನು ಅನು ಸರಿಸಿದರು. ಅನಂತರ ರಾಜಶ್ರೇಷ್ಠನಾದ, ಶ್ವೇತರಾಜನ ಮಗನಾದ ಸೃಂಜಯನ ಬಳಿ ತೆರಳಿ ಹೀಗೆ ಹೇಳಿದರು -
ಆವಾಂ ಭವತಿ ವತ್ಸ್ಯಾವಃ ಕಂಚಿತ್ಕಾಲಂ ಹಿತಾಯ ತೇ |
ಯಥಾವತ್ ಪೃಥಿವೀಪಾಲ ಆವಯೋಃ ಪ್ರಗುಣೀಭವ ॥10॥
ತಥೇತಿ ಕೃತ್ವಾ ತೌ ರಾಜಾ ಸತ್ಕೃತ್ಯೋಪಚಚಾರ ಹ |
ಮಹಾರಾಜನೇ! ನಾವಿಬ್ಬರೂ ನಿನಗೆ ಹಿತವನ್ನು ಬಯಸುತ್ತೇವೆ. ಅದಕ್ಕಾಗಿ ಕೆಲವು ಕಾಲದ ತನಕ ನಿನ್ನ ಸಮೀಪದಲ್ಲಿ ವಾಸಮಾಡುತ್ತೇವೆ. ನಾವು ಎಷ್ಟು ದಿವಸಗಳ ಕಾಲ ಇರುತ್ತೇವೋ, ಅಲ್ಲಿಯ ತನಕ ನೀನು ನಮಗೆ ಅನುಕೂಲವಾದ ಸೌಕರ್ಯಗಳನ್ನು ಕಲ್ಪಿಸಿಕೊಡು. ಹೀಗೆ ನಾರದ ಹಾಗೂ ಪರ್ವತನ ಮಾತನ್ನು ಕೇಳಿದ ರಾಜನು ಬಹಳ ಸಂತೋಷಪಟ್ಟನು. ಹಾಗೆಯೇ ಆಗಲಿ ಎಂದನು. ಅವರನ್ನು ಸತ್ಕಾರ ಮಾಡಿ ಎಲ್ಲಾ ಉಪಚಾರಗಳನ್ನು ಮಾಡಿ, ಸ್ವಾಗತ ಮಾಡಿದನು.
ತತಃ ಕದಾಚಿತ್ ತೌ ರಾಜಾ ಮಹಾತ್ಮಾನೌ ತಥಾಗತೌ |
ಅಬ್ರವೀತ್ ಪರಮಪ್ರೀತಃ ಸುತೇಯಂ ವರವರ್ಣಿನೀ ॥11॥
ಏಕೈವ ಮಮ ಕನ್ಯೇಷಾ ಯುವಾಂ ಪರಿಚರಿಷ್ಯತಿ |
ದರ್ಶನೀಯಾನವದ್ಯಾಂಗೀ ಶೀಲವೃತ್ತಸಮನ್ವಿತಾ ॥12॥
ಸುಕುಮಾರೀ ಕುಮಾರೀ ಚ ಪದ್ಮಕಿಂಜಲ್ಕಸನ್ನಿಭಾ ॥
ಸ್ವಲ್ಪ ಕಾಲವು ಕಳೆದ ಮೇಲೆ ಋಷಿಗಳ ವಿಷಯದಲ್ಲಿ ಪರಮಪ್ರೀತನಾದ ಸೃಂಜಯನು ಮಹಾತ್ಮರಾದ ನಾರದ ಹಾಗೂ ಪರ್ವತರ ಬಳಿ ತೆರಳಿದನು. ಬಹಳ ಸಂತೋಷದಿಂದ ಅವರ ಬಳಿ ಹೀಗೆ ಹೇಳಿದನು -
ಮಹರ್ಷಿಗಳೇ! ರೂಪಲಾವಣ್ಯಗಳಿಂದ ಕಂಗೊಳಿಸುತ್ತಿರುವ ಈ ಹೆಣ್ಣುಮಗಳು ನನ್ನ ಏಕೈಕಪುತ್ರಿ. ಇವಳು ದೇವಕನ್ಯೆಯಂತಿದ್ದಾಳೆ. ಒಳ್ಳೆಯ ಶೀಲ ಹಾಗೂ ಸ್ವಭಾವಗಳನ್ನು ಹೊಂದಿದ್ದಾಳೆ. ಕಮಲದ ಕುಸುರಿನಿಂತೆ ಕಾಂತಿಯುಕ್ತಳಾಗಿದ್ದಾಳೆ. ಸುಕುಮಾರಿ ಎಂಬ ಹೆಸರಿನ ಈ ಕುಮಾರಿಯು ತಮ್ಮ ಬಳಿಯಲ್ಲಿದ್ದು ತಮ್ಮ ಸೇವೆ- ಯನ್ನು ಮಾಡಲು ಬಯಸುತ್ತಾಳೆ.
ಪರಮಂ ಸೌಮ್ಯ ಇತ್ಯುಕ್ತಸ್ತಾಭ್ಯಾಂ ರಾಜಾ ಶಶಾಸ ತಾಮ್ |
ಕನ್ಯೇ ವಿಪ್ರಾವುಪಚರ ದೇವವತ್ ಪಿತೃವಚ್ಚ ಹ ॥13॥
ಸೃಂಜಯನ ಮಾತುಗಳನ್ನು ಕೇಳಿ ಇಬ್ಬರು ಮುನಿಗಳು `ಬಹಳ ಸಂತೋಷ ಹಾಗೆಯೇ ಆಗಲಿ' ಎಂದು ಒಪ್ಪಿದರು. ಆಗ ರಾಜನು ಮಗಳನ್ನು ಕರೆದನು. ಮಗಳೇ! ಇವರಿಬ್ಬರು ಶ್ರೇಷ್ಠ ಮುನಿಗಳಾಗಿದ್ದಾರೆ. ಇವರನ್ನು ದೇವತೆಗಳಂತೆ, ತಂದೆಯಂತೆ ಭಕ್ತಿಯಿಂದ ಸೇವೆಯನ್ನು ಮಾಡು.
ಸಾ ತು ಕನ್ಯಾ ತಥೇತ್ಯುಕ್ತ್ವಾ ಪಿತರಂ ಧರ್ಮಚಾರಿಣೀ |
ಯಥಾನಿದೇಶಂ ರಾಜ್ಞಸ್ತೌ ಸತ್ಕೃತ್ಯೋಪಚಚಾರ ಹ ॥14॥
ಆಗ ಆ ಕನ್ಯೆಯು ಹಾಗೆಯೇ ಆಗಲಿ ಎಂದು ಸಂತೋಷದಿಂದ ಹೇಳಿದಳು. ತಂದೆಯ ಆಜ್ಞೆಯಂತೆ ಆ ಇಬ್ಬರು ಮಹರ್ಷಿಗಳನ್ನು ಭಕ್ತಿಯಿಂದ ಉಪಚಾರವನ್ನು ಮಾಡುತ್ತಿದ್ದಳು.
ತಸ್ಯಾಸ್ತಥೋಪಚಾರೇಣ ರೂಪೇಣಾಪ್ರತಿಮೇನ ಚ |
ನಾರದಂ ಹೃಚ್ಛಯಸ್ತೂರ್ಣಂ ಸಹಸೈವಾನ್ವಪದ್ಯತ ॥15॥
ಅವಳು ಮಾಡುತ್ತಿದ್ದ ಉಪಚಾರಗಳಿಂದ ಮತ್ತು ಅವಳಲ್ಲಿರುವ ಅಪ್ರತಿಮವಾದ ರೂಪಲಾವಣ್ಯದಿಂದ ನಾರದರ ಮನಸ್ಸು ಕದಲಿತು. ಅವರ ಮನಸ್ಸಿನಲ್ಲಿ ಸುಪ್ತನಾದ ಕಾಮದೇವನು ಎದ್ದುನಿಂತನು.
ವವೃಧೇ ಚ ತತಸ್ತಸ್ಯ ಹೃದಿ ಕಾಮೋ ಮಹಾತ್ಮನಃ |
ಯತಾ ಶುಕ್ಲಸ್ಯ ಪಕ್ಷಸ್ಯ ಪ್ರವೃತ್ತಾವುಡುರಾಟ್ ಶನೈಃ ॥16॥
ನಾರದರ ಹೃದಯದಲ್ಲಿ ಕಾಮತಾಪವು ಹೆಚ್ಚಾಯಿತು. ಶುಕ್ಲಪಕ್ಷದ ಚಂದ್ರನಂತೆ ದಿನನಿತ್ಯ ಆ ಕಾಮವು ಬೆಳೆಯುತ್ತಿತ್ತು.
ನಚ ತಂ ಭಾಗಿನೇಯಾಯ ಪರ್ವತಾಯ ಮಹಾತ್ಮನೇ |
ಶಶಂಸ ಮನ್ಮಥಂ ತೀವ್ರಂ ವ್ರೀಡಮಾನಃ ಸ ಧರ್ಮವಿತ್ ॥17॥
ಮಹಾತ್ಮನಾದ ತನ್ನ ಅಳಿಯನಾದ ಪರ್ವತನ ಬಳಿ ತನಗೆ ಆ ಹುಡುಗಿಯ ವಿಷಯದಲ್ಲಿ ಉಂಟಾದ ಕಾಮಭಾವವನ್ನು ಹೇಳಿಕೊಳ್ಳಲು ನಾಚಿಕೆ ಪಟ್ಟರು. ನಾಚಿಕೆಯ ಕಾರಣದಿಂದಾಗಿ ತಮ್ಮ ಹೃದಯದಲ್ಲಿ ಅಡಗಿದ ಕಾಮವಿಷಯವನ್ನು ಹೇಳಲಿಲ್ಲ.
ತಪಸಾ ಚೋಂಗಿತೇನಾಥ ಪರ್ವತೋಽಥ ಬುಬೋಧ ತತ್ |
ಕಾಮಾರ್ತಂ ನಾರದಂ ಕ್ರುದ್ಧಃ ಶಶಾಪೈನಂ ತತೋ ಭೃಶಮ್ ॥18॥
ಆದರೆ ತಮ್ಮ ತಪಸ್ಸಿನ ಪ್ರಭಾವದಿಂದ ಹಾಗೂ ನಾರದರ ಅಂಗಚೇಷ್ಟೆಗಳಿಂದ, ಮುಖದಲ್ಲಿದ್ದ ವಿಕಾರಗಳಿಂದ ಪರ್ವತಮುನಿಗೆ ಎಲ್ಲವೂ ತಿಳಿಯಿತು. ನಾರದರ ಮನಸ್ಸಿನಲ್ಲಿ ಕಾಡುತ್ತಿದ್ದ ಕಾಮಪೀಡೆಯು ಅರ್ಥವಾಯಿತು. ಬಹಳ ಕ್ರುದ್ಧರಾದರು. ಕಾಮಾರ್ಥರಾಗಿದ್ದ ನಾರದರನ್ನು ಕೂಡಲೇ ಶಪಿಸಿಬಿಟ್ಟರು.

ಕೃತ್ವಾ ಸಮಯಮವ್ಯಗ್ರೋ ಭವಾನ್ ವೈ ಸಹಿತೋ ಮಯಾ |
ಯೋ ಭವೇದ್ ಹೃದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ॥19॥
ನೀನು ಹಿಂದೆ ನನ್ನ ಜೊತೆ ಏನೆಂದು ಶಪಥ ಮಾಡಿದ್ದೀ. ಅದನ್ನು ಈಗ ಮರೆತು -ಬಿಟ್ಟೆಯಾ? ಒಳ್ಳೆಯದಾಗಲೀ, ಕೆಟ್ಟದಾಗಲೀ ನಮ್ಮಿಬ್ಬರಲ್ಲಿ ಬಂದ ಸಂಕಲ್ಪವನ್ನು ಕೂಡಲೇ ಮತ್ತೊಬ್ಬರಿಗೆ ತಿಳಿಸಬೇಕು ಎಂದು ಮಾಡಿಕೊಂಡಿದ್ದೇವೆ ಅಲ್ಲವೇ?
ಅನ್ಯೋನ್ಯಸ್ಯ ಸ ಆಖ್ಯೇಯ ಇತಿ ತದ್ ವೈ ಮೃಷಾ ಕೃತಮ್ |
ಭವತಾ ವಚನಂ ಬ್ರಹ್ಮಂಸ್ತಸ್ಮಾದೇತದ್ ವದಾಮ್ಯಹಮ್ ॥20॥
ಇಂಥ ನಮ್ಮಿಬ್ಬರ ನಿರ್ಬಂಧವನ್ನು ನೀನೀಗ ದಾಟಿರುವಿ. ಅದನ್ನು ಸುಳ್ಳು ಮಾಡಿ -ರುವಿ. ಬ್ರಾಹ್ಮಣನೇ ! ಈಗ ನಾನು ನಿನಗೆ ಹೇಳುತ್ತಿದ್ದೇನೆ ಕೇಳು -
ನಹಿ ಕಾಮಂ ಪ್ರವರ್ತಂತಂ ಭವಾನಾಚಷ್ಟ ಮೇ ಪುರಾ |
ಸುಕುಮಾರ್ಯಾಂ ಕುಮಾರ್ಯಾಂ ತೇ ತಸ್ಮಾದೇಷು ಶಪಾಮ್ಯಹಮ್ ॥21॥
ಕುಮಾರಿಯಾದ ಈ ಸುಕುಮಾರಿಯ ವಿಷಯದಲ್ಲಿ ನಿನ್ನ ಮನಸ್ಸಿನಲ್ಲಿ ಕಾಮ- ಭಾವವು ಹುಟ್ಟಿದೆ. ಪ್ರತಿಜ್ಞೆಗೆ ಅನುಗುಣವಾಗಿ ಈ ಕಾಮವಿಕಾರವನ್ನು ನನ್ನೊಡನೆ ನೀನು ಹಂಚಿಕೊಳ್ಳಬೇಕಿತ್ತು. ಆದರೆ ನೀನು ಅದನ್ನು ನನಗೆ ತಿಳಿಸಿಲ್ಲ. ಆದ್ದರಿಂದ ನಿನಗೀಗ ಶಾಪವನ್ನು ನೀಡುತ್ತೇನೆ.
ಬ್ರಹ್ಮವಾದೀ ಗುರುರ್ಯಸ್ಮಾತ್ ತಪಸ್ವೀ ಬ್ರಾಹ್ಮಣಶ್ಚ ಸನ್ |
ಅಕರ್ಷೀಃ ಸಮಯಭ್ರಂಶಮಾವಾಭ್ಯಾಂ ಯಃ ಕೃತೋ ಮಿಥಃ॥22॥
ನೀನು ಬ್ರಹ್ಮಚಾರಿ ಆಗಿರುವಿ. ನನಗೆ ಸೋದರಮಾವನಾಗಿರುವುದರಿಂದ ಗುರುಸ್ಥಾನದಲ್ಲಿರುವಿ. ತಪಸ್ವಿಯಾಗಿರುವಿ, ಬ್ರಾಹ್ಮಣಕುಲದಲ್ಲಿ ಹುಟ್ಟಿರುವಿ. ಇಷ್ಟಿದ್ದರೂ ನಾವಿಬ್ಬರೂ ಮಾಡಿಕೊಂಡ ಶಪಥವನ್ನು ಸುಳ್ಳು ಮಾಡಿರುವಿ.
ಶಪ್ಸ್ಯೇ ತಸ್ಮಾತ್ ಸುಸಂಕ್ರುದ್ಧೋ ಭವಂತಂ ತಂ ನಿಬೋಧ ಮೇ |
ಸುಕುಮಾರೀ ಚ ತೇ ಭಾರ್ಯಾ ಭವಿಷ್ಯತಿ ನ ಸಂಶಯಃ ॥23॥
ವಾನರಂ ಚೈವ ಕನ್ಯಾ ತ್ವಾಂ ವಿವಾಹಾತ್ ಪ್ರಭೃತಿ ಪ್ರಭೋ |
ಸಂದ್ರಕ್ಷ್ಯಂತಿ ನಾರಶ್ಚಾನ್ಯೇ ಸ್ವರೂಪೇಣ ವಿನಾಕೃತಮ್ ॥24॥
ಇದರಿಂದ ನನಗೆ ಬಹಳ ಕೋಪವುಂಟಾಗಿದೆ. ನಾನು ನಿನಗೀಗ ಶಪಿಸುತ್ತಿದ್ದೇನೆ. ನೀನು ಯಾರನ್ನು ಕಾಮಿಸಿರುವೆಯೋ, ಆ ಸುಕುಮಾರಿಯೇ ನಿನ್ನ ಹೆಂಡತಿ- ಯಾಗುತ್ತಾಳೆ. ಇದರಲ್ಲಿ ಸಂಶಯವಿಲ್ಲ. ಆದರೆ ವಿವಾಹವಾದ ಕೂಡಲೇ ನೀನು ಕಪಿಯಾಗುವಿ. ನಿನ್ನ ಸ್ವರೂಪವನ್ನೇ ಕಳೆದುಕೊಳ್ಳುವಿ. ಎಲ್ಲ ಮನುಷ್ಯರು ನೀನು ನಿಜರೂಪವನ್ನು ಕಳೆದುಕೊಂಡು ಕಪಿರೂಪ ಹೊಂದಿದ್ದನ್ನು ಕಾಣುವರು.
ಸ ತದ್ವಾಕ್ಯಂ ತು ವಿಜ್ಞಾಯ ನಾರದಃ ಪರ್ವತಾತ್ತದಾ |
ಅಶಪತ್ತಮಪಿ ಕ್ರೋಧಾದ್ ಭಾಗಿನೇಯಂ ಸ ಮಾತುಲಃ ॥25॥
ಯುಧಿಷ್ಠಿರನೇ! ಆ ಪರ್ವತಮುನಿಯ ಶಾಪವಾಕ್ಯವನ್ನು ಕೇಳಿದ ಕೂಡಲೇ ನಾರದರು ಹೆದರಲಿಲ್ಲ. ಅವರಿಗೂ ಕೂಡ ಕೋಪವು ಬಂದಿತು. ಆ ಕೋಪಾ- ವೇಶದಿಂದ ಸೋದರಳಿಯನನ್ನು ಶಪಿಸಿದರು.
ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ |
ಯುಕ್ತೋಽಪಿ ಧರ್ಮನಿತ್ಯಶ್ಚ ನ ಸ್ವರ್ಗವಾಸಮಾಪ್ಸ್ಯಸಿ ॥26॥
ಪರ್ವತನೇ ! ತಪಸ್ಸು, ಬ್ರಹ್ಮಚರ್ಯ, ಸತ್ಯ, ಇಂದ್ರಿಯನಿಗ್ರಹ ಮೊದಲಾದ ಉತ್ತಮಗುಣಗಳಿಂದ ನಿತ್ಯವಾಗಿಯೂ ನೀನು ಧರ್ಮನಿರತನಾಗಿರುವಿ. ಹಾಗಿದ್ದರೂ ನಿನಗೆ ಪುನಃ ಪುನಃ ಸ್ವರ್ಗಕ್ಕೆ ಹೋಗುವ ಶಕ್ತಿಯು ನಶಿಸಲಿ.
ತೌ ತು ಶಪ್ತ್ವಾ ಭೃಶಂ ಕ್ರುದ್ಧೌ ಪರಸ್ಪರಮಮರ್ಷಣೌ |
ಪ್ರತಿಜಗ್ಮತುರನ್ಯೋನ್ಯಂ ಕ್ರುದ್ಧಾವಿವ ಗಜೋತ್ತಮೌ ॥27॥
ಹೀಗೆ ಅವರಿಬ್ಬರು ಸಹನೆಯಿಲ್ಲದೇ ಪರಸ್ಪರವಾಗಿ ಕ್ರುದ್ಧರಾದರು. ಪರಸ್ಪರ ಶಾಪಗಳನ್ನು ಕೊಟ್ಟರು. ಕೋಪಗೊಂಡು ಎರಡು ಆನೆಗಳಂತೆ ವಿರುದ್ಧವಾದ ದಿಕ್ಕು- ಗಳಿಗೆ ಹೊರಟು ಹೋದರು.
ಪರ್ವತಃ ಪೃಥಿವೀಂ ಕೃತ್ಸ್ನಾಂ ವಿಚಚಾರ ಮಹಾಮುನಿಃ |
ಪೂಜ್ಯಮಾನೋ ಯಥಾನ್ಯಾಯಂ ತೇಜಸಾ ಸ್ವೇನ ಭಾರತ ॥28॥
ಮಹಾಮುನಿಗಳಾದ ಪರ್ವತರು ತಮ್ಮ ತೇಜಸ್ಸಿನ ಪ್ರಭಾವದಿಂದ ಪ್ರಪಂಚದೆ- ಲ್ಲೆಡೆ ಸಂಚಾರ ಮಾಡತೊಡಗಿದರು. ಯಥೋಚಿತವಾದ ಸತ್ಕಾರಗಳನ್ನು ಪಡೆ- ಯುತ್ತಾ ಅಖಂಡಭೂಮಂಡಲವನ್ನೇ ಸಂಚರಿಸಿದರು.
ಅಥ ತಾಮಲಭತ್ ಕನ್ಯಾಂ ನಾರದಃ ಸೃಂಜಯಾತ್ಮಜಾಮ್ |
ಧರ್ಮೇಣ ಧರ್ಮಪ್ರವರಃ ಸುಕುಮಾರೀಮನಿಂದಿತಾಮ್ ॥29॥
ವಿಪ್ರಶ್ರೇಷ್ಠರಾದ ನಾರದಋಷಿಗಳು ರಾಜಕುಮಾರಿಯಾದ ಸೃಂಜಯನ ಮಗ- ಳಾದ ಆ ಸುಕುಮಾರಿಯನ್ನು ಧರ್ಮರೀತಿಯಿಂದ ವಿವಾಹವಾದರು.
ಸಾ ತು ಕನ್ಯಾ ಯಥಾಶಾಪಂ ನಾರದಂ ತಂ ದದರ್ಶ ಹ |
ಪಾಣಿಗ್ರಹಣಮಂತ್ರಾಣಾಂ ಪ್ರಯೋಗಾದೇವ ವಾನರಮ್ ॥30॥
ಆ ವಿವಾಹದಲ್ಲಿ ವಧು-ವರರು ಕೈಹಿಡಿಯುವಾಗ ಯಾವ ಪಾಣಿಗ್ರಹಣ ಮಂತ್ರವನ್ನು ಉಚ್ಚರಿಸುತ್ತಾರೋ, ಅದು ಮುಗಿಯುಷ್ಟರಲ್ಲಿಯೇ ನಾರದರ ಮುಖವು ಕಪಿಮುಖವಾಯಿತು. ಇದನ್ನು ಆ ರಾಜಕುಮಾರಿಯಾದ ಸುಕುಮಾ- ರಿಯು ನೋಡಿದಳು.
ಸುಕುಮಾರೀ ಚ ದೇವರ್ಷಿಂ ವಾನರಪ್ರತಿಮಾನನಮ್ |

ನೈವಾಮನ್ಯತ ತದಾ ಪ್ರೀತಿಮತ್ಯೇವ ಚಾಭವತ್ ॥31॥
ತನ್ನ ಪತಿಯಾದ ನಾರದರ ಮುಖವು ಕಪಿಮುಖವಾದರೂ ಕೂಡ ತಿರಸ್ಕಾರ- ಭಾವವನ್ನು ಹೊಂದಲಿಲ್ಲ.
ಮಹಾಪತಿವ್ರತೆಯಾಗಿದ್ದಳು. ನಾರದರಲ್ಲಿ ಸಂಪೂರ್ಣ ಪ್ರೀತಿಯನ್ನೇ ತೋರಿಸಿದಳು.
ಉಪತಸ್ಥೇ ಚ ಭರ್ತಾರಂ ನಚಾನ್ಯಂ ಮನಸಾಪ್ಯಗಾತ್ |
ದೇವಂ ಮುನಿಂ ವಾ ಯಕ್ಷಂ ವಾ ಪತಿತ್ವೇ ಪತಿವತ್ಸಲಾ ॥32॥
ಪತಿಸೇವೆಯಲ್ಲಿ ರತಳಾದ ಆ ಸುಕುಮಾರಿಯು ತನ್ನ ಗಂಡನು ಕಪಿಮುಖನಾಗಿ- ದ್ದಾನೆಂಬ ಕಾರಣದಿಂದ ಬೇರೆಯವರ ಬಗ್ಗೆ
ಯೋಚನೆ ಮಾಡಲಿಲ್ಲ. ದೇವತೆಗಳ- ನ್ನಾಗಲೀ, ಮುನಿಗಳನ್ನಾಗಲೀ, ಯಕ್ಷರನ್ನಾಗಲೀ ಯಾವುದೇ ಕಾರಣಕ್ಕೂ ಪತಿರೂಪ- ದಲ್ಲಿ
ಯೋಚನೆ ಮಾಡಲಿಲ್ಲ.
ತತಃ ಕದಾಚಿದ್ ಭಗವಾನ್ ಪರ್ವತೋಽನುಸಸಾರ ಹ |
ವನಂ ವಿರಹಿತಂ ಕಿಂಚಿತ್ ತತ್ರಾಪಶ್ಯತ್ ಸ ನಾರದಮ್ ॥33॥
ಹೀಗೆ ಕೆಲವು ದಿವಸಗಳು ಕಳೆದವು. ಒಮ್ಮೆ ಮುನಿವ್ರತ ಪರಾಯಣರಾದ ಪರ್ವತಮುನಿಗಳು ನಿರ್ಜನವಾದ ಕಾಡಿನಲ್ಲಿ ಒಬ್ಬರೇ
ತೆರಳುತ್ತಿದ್ದರು. ಅಲ್ಲಿ ಕಪಿಮುಖವನ್ನು ಹೊಂದಿದ ನಾರದರನ್ನು ಕಂಡರು.
ತತೋಽಭಿವಾದ್ಯ ಪ್ರೋವಾಚ ನಾರದಂ ಪರ್ವತಸ್ತದಾ |
ಭವಾನ್ ಪ್ರಸಾದಂ ಕುರುತಾಂ ಸ್ವರ್ಗದೇಶಾಯ ಮೇ ಪ್ರಭೋ ॥34॥
ಕೂಡಲೇ ಪರ್ವತಮುನಿಗಳು ನಾರದರಿಗೆ ನಮಸ್ಕಾರವನ್ನು ಮಾಡಿ, ದೈನ್ಯದಿಂದ ಕೈಮುಗಿದು ಹೀಗೆ ಪ್ರಾರ್ಥಿಸಿದರು - ಪ್ರಭುವೇ! ನನಗೆ
ಸ್ವರ್ಗಕ್ಕೆ ಹಿಂತಿರುಗಿ ಹೋಗುವಂತೆ ಅನುಗ್ರಹಿಸು ಎಂದು.
ತಮುವಾಚ ತತೋ ದೃಷ್ಟ್ವಾ ಪರ್ವತಂ ನಾರದಸ್ತದಾ |
ಕೃತಾಂಜಲಿಮುಪಾಸೀನಂ ದೀನಂ ದೀನತರಃ ಸ್ವಯಮ್ ॥35॥
ಆಗ ನಾರದರು ಆ ಪರ್ವತಮುನಿಗಳಿಗೆ ಹೇಳಿದರು - ಪರ್ವತಮುನಿಯ ದೈನ್ಯಸ್ಥಿತಿಯನ್ನು ಕಂಡು ಕನಿಕರಗೊಂಡರು. ಆ
ಪರ್ವತಮುನಿಯಾದರೂ ಕೈ- ಮುಗಿದು ಅತ್ಯಂತ ದೀನರಾಗಿ ನಿಂತಿದ್ದರು.
ತ್ವಯಾಹಂ ಪ್ರಥಮಂ ಶಪ್ತೋ ವಾನರಸ್ತ್ವಂ ಭವಿಷ್ಯಸಿ |
ಇತ್ಯುಕ್ತೇನ ಮಯಾ ಪಶ್ಚಾಚ್ಛಪ್ತಸ್ತ್ವಮಪಿ ಮತ್ಸರಾತ್ ॥36॥
ಅದ್ಯಪ್ರಭೃತಿ ವೈ ವಾಸಂ ಸ್ವರ್ಗೇ ನಾವಾಪ್ಸ್ಯಸೀತಿ ಹ ॥
ಪರ್ವತನೇ! ಮೊದಲು ನನಗೆ ವಾನರ ಮುಖ ಬರಲಿ ಎಂದು ಶಾಪವನ್ನು ನೀಡಿದವನು. ನೀನು ನೀಡಿದ ಶಾಪವನ್ನು ಕೇಳಿ
ಮಾತ್ಸರ್ಯದಿಂದ ನಾನೂ ಸಹ ಇವತ್ತಿನಿಂದ ನಿನಗೆ ಸ್ವರ್ಗಕ್ಕೆ ತೆರಳದಂತೆ ಆಗಲಿ ಎಂದು ಶಾಪವನ್ನು ನೀಡಿದೆನು.
ತವ ನೈತದ್ಧಿ ಸದೃಶಂ ಪುತ್ರಸ್ಥಾನೇ ಹಿ ಮೇ ಭವಾನ್ |
ನಿವರ್ತಯೇತಾಂ ತೌ ಶಾಪಮನ್ಯೋಽನ್ಯೇನ ತದಾ ಮುನೀ ॥37॥
ಪರ್ವತನೇ! ನೀನು ನನಗೆ ಶಾಪವನ್ನು ನೀಡಬಾರದಿತ್ತು. ಏಕೆಂದರೆ ನೀನು ನನ್ನ ಪುತ್ರನ ಸ್ಥಾನದಲ್ಲಿರುವಿ. ನನಗೆ
ಸೋದರಳಿಯನಾಗಿರುವಿ. ಹೀಗೆ ಪರಸ್ಪರ ಮಾತ- ನಾಡಿಕೊಂಡು ನಾರದ ಹಾಗೂ ಪರ್ವತರು ಪಶ್ಚಾತ್ತಾಪವನ್ನು ಪಟ್ಟರು. ಪರಸ್ಪರ
ಶಾಪಗಳನ್ನು ನಿವೃತ್ತಿಗೊಳಿಸಿದರು.
ಶ್ರೀಸಮೃದ್ಧಂ ತದಾ ದೃಷ್ಟ್ವಾ ನಾರದಂ ದೇವರೂಪಿಣಮ್ |
ಸುಕುಮಾರೀ ಪ್ರದುದ್ರಾವ ಪರಪತ್ಯಾಭಿಶಂಕಯಾ ॥38॥
ಈಗ ನಾರದರಿಗೆ ಉತ್ತಮರೂಪವು ಬಂದಿತು. ದೇವತೆಗಳಂತೆ ದಿವ್ಯವಾಗಿ ಕಂಗೊಳಿಸಿದರು. ಇಂಥ ನಾರದರನ್ನು ಕಂಡು ಪತ್ನಿಯಾದ
ಸುಕುಮಾರಿಯು ಓಡಲು ಪ್ರಾರಂಭಿಸಿದಳು. ಇವರು ನನ್ನ ಪತಿಯಲ್ಲ. ಪರಪುರುಷರಾಗಿದ್ದಾರೆಂದು ತಿಳಿದು ಬಿಟ್ಟಳು.
ತಾಂ ಪರ್ವತಸ್ತೋ ದೃಷ್ಟ್ವಾ ಪ್ರದ್ರುವಂತೀಮನಿಂದಿತಾಮ್ |
ಅಬ್ರುವೀತ್ ತವ ಭರ್ತೇಷ ನಾತ್ರ ಕಾರ್ಯಾ ವಿಚಾರಣಾ ॥39॥
ಓಡುತ್ತಿರುವ ಸುಕಮಾರಿಯನ್ನು ಪರ್ವತಮುನಿಗಳು ಕಂಡರು. ನಿಷ್ಕಲಂಕಳಾದ ಆ ಸುಕುಮಾರಿಗೆ ಹೇಳಿದರು. ಸುಕುಮಾರಿಯೇ!
ಇವನೇ ನಿನ್ನ ಪತಿ ಈ ವಿಷಯದಲ್ಲಿ ಸ್ವಲ್ಪವೂ ವಿಚಾರ ಮಾಡಬೇಡ.
ಋಷಿಃ ಪರಮಧರ್ಮಾತ್ಮಾ ನಾರದೋ ಭಗವಾನ್ ಪ್ರಭುಃ |
ತವೈವಾಭೇದ್ಯಹೃದಯೋ ಮಾ ತೇ ಭೂದತ್ರ ಸಂಶಯಃ ॥40॥
ನಾರದಮಹರ್ಷಿ ಪರಮಧರ್ಮಿಷ್ಠನಾಗಿದ್ದಾನೆ. ಸರ್ವಜ್ಞನಾಗಿದ್ದಾನೆ. ನಿನ್ನಲ್ಲಿ ನಿತ್ಯವಾಗಿಯೂ ಅನುರಕ್ತನಾಗಿದ್ದಾನೆ. ಈ
ವಿಷಯದಲ್ಲಿ ನಿನಗೆ ಸ್ವಲ್ಪವೂ ಸಂಶಯವು ಬೇಡ.
ಸಾನುನೀತಾ ಬಹುವಿಧಂ ಪರ್ವತೇನ ಮಹಾತ್ಮನಾ |
ಶಾಪದೋಷಂ ಚ ತಂ ಭರ್ತುಃ ಶ್ರುತ್ವಾ ಸ್ವಾಂ ಪ್ರಕೃತಿಂ ಗತಾ ॥41॥
ಪರ್ವತೋಽಥ ಯಯೌ ಸ್ವರ್ಗಂ ನಾರದೋಽಥ ಯಯೌ ಗೃಹಾನ್॥
ಯುಧಿಷ್ಠಿರನೇ! ಹೀಗೆ ಮಹಾತ್ಮರಾದ ಆ ಪರ್ವತಮುನಿಗಳು ನಾರದರ ಪತ್ನಿಯಾದ ಸುಕುಮಾರಿಗೆ ಅನೇಕ ವಿಧದಲ್ಲಿ ಸಾಂತ್ವನದ
ಮಾತುಗಳನ್ನು ಹೇಳಿದರು. ಮತ್ತು ನಾರದರಿಗೆ ಬಂದ ಶಾಪದ ವಿಷಯವನ್ನು ಆ ಸುಕುಮಾರಿಗೆ ತಿಳಿಸಿದರು. ಈ ವಿಷಯವನ್ನು
ಪರ್ವತಮುನಿಗಳಿಂದ ಸುಕುಮಾರಿಯು ತಿಳಿದು ಸಮಾಧಾನಚಿತ್ತ- ಳಾದಳು. ಅನಂತರ ಆ ಪರ್ವತಮುನಿಯು ಸ್ವರ್ಗಕ್ಕೆ ತೆರಳಿದರು.
ನಾರದರು ತನ್ನ ಪತ್ನಿಯ ಜೊತೆ ಮನೆಗೆ ತೆರಳಿದರು.
ಪ್ರತ್ಯಕ್ಷಕರ್ಮಾ ಸರ್ವಸ್ಯ ನಾರದೋಽಯಂ ಮಹಾನ್ ಋಷಿಃ |

ಏಷ ವಕ್ಷ್ಯತಿ ವೈ ಪೃಷ್ಟೋ ಯಥಾವೃತ್ತಂ ನರೋತ್ತಮ ॥42॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ನಾರದಪರ್ವತಚರಿತ್ರಂ ನಾಮೈಕತ್ರಿಂಶೋಽಧ್ಯಾಯಃ ॥31॥
ನರಶ್ರೇಷ್ಠನಾದ ಯುಧಿಷ್ಠಿರನೇ ! ನಿನ್ನ ಎದುರು ನಿಂತಿರುವ ನಾರದರೇ ಈ ಎಲ್ಲ ಘಟನೆಗಳ ಮುಖ್ಯಪಾತ್ರಧಾರಿಗಳು. ಸುವರ್ಣಷ್ಠೀವಿಯ ಹುಟ್ಟುಸಾವುಗಳನ್ನು ಪ್ರತ್ಯಕ್ಷ -ವಾಗಿ ಕಂಡವರು. ಆಗ ಯಥಾವತ್ತಾಗಿ ಎಲ್ಲವನ್ನೂ ಕೂಡ ನಿನಗೆ ತಿಳಿಸುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ನಾರದ ಮತ್ತು ಪರ್ವತರ ಚರಿತ್ರೆಯನ್ನು ಹೇಳುವ 31ನೆಯ ಅಧ್ಯಾಯವು ಮುಗಿಯಿತು.
*****
32. ಮೂವತ್ತೆರಡನೆಯ ಅಧ್ಯಾಯ
ಸುವರ್ಣಷ್ಠೀವಿಯ ಜನನ, ಮರಣ, ಪುನರ್ಜನ್ಮಗಳ ಚರಿತ್ರೆಯನ್ನು
ನಾರದರು ಯುಧಿಷ್ಠಿರನಿಗೆ ಹೇಳಿದರು.
ವೈಶಂಪಾಯನಃ
ತತೋ ರಾಜಾ ಪಾಂಡುಸುತೋ ನಾರದಂ ಪ್ರತ್ಯಭಾಷತ |
ಭಗವನ್ ಶ್ರೋತುಮಿಚ್ಛಾಮಿ ಸುವರ್ಣಷ್ಠೀವಿಸಂಭವಮ್ ॥1॥
ವೈಶಂಪಾಯನರು ಪಾಂಡುವಿನ ಮಗನಾದ ರಾಜನಾದ ಯುಧಿಷ್ಠಿರನು ನಾರದರನ್ನು ಕುರಿತು, ಶ್ರೀಕೃಷ್ಣನ ಸಲಹೆಯಂತೆ ಪ್ರಶ್ನಿಸುತ್ತಾನೆ - ``ಭಗವನ್ ನಾರದರೇ! ಸುವರ್ಣಷ್ಠೀವಿಯ ಜನನದ ವೃತ್ತಾಂತವನ್ನು ಕೇಳಲು ನಾನು ಅಪೇಕ್ಷಿ- ಸುತ್ತೇನೆ. ದಯವಿಟ್ಟು ತಿಳಿಸಿರಿ''.
ಏವಮುಕ್ತಃ ಸ ಚ ಮುನಿರ್ಧರ್ಮರಾಜೇನ ನಾರದಃ |
ಆಚಾಚಕ್ಷೇ ಯಥಾವೃತ್ತಂ ಸುವರ್ಣಷ್ಠೀವಿನಂ ಪ್ರತಿ ॥2॥
ಧರ್ಮರಾಜನು ಹೀಗೆ ಪ್ರಶ್ನಿಸಿದಾಗ ನಾರದರು ಸಂತೋಷಪಟ್ಟರು. ಸುವರ್ಣ- ಷ್ಠೀವಿಯ ಚರಿತ್ರೆಯನ್ನು ಯಥಾವತ್ತಾಗಿ ಯುಧಿಷ್ಠಿರನಿಗೆ ಹೇಳಲು ಪ್ರಾರಂಭಮಾಡಿ- ದರು.
ಏವಮೇತನ್ಮಹಾರಾಜ ಯಥಾಯಂ ಕೇಶವೋಽಬ್ರವೀತ್ |
ಕಾರ್ಯಸ್ಯಾಸ್ಯ ತು ಯಚ್ಛೇಷಂ ತತ್ ತೇ ವಕ್ಷ್ಯಾಮಿ ಪೃಚ್ಛತಃ ॥3॥
ಮಹಾರಾಜನಾದ ಯುಧಿಷ್ಠಿರನೇ! ಶ್ರೀಕೃಷ್ಣಪರಮಾತ್ಮನು ಹೇಳಿದ ಕಥೆ ಬಹಳ ಸತ್ಯವಾಗಿದೆ. ಅದರ ಮುಂದಿನ ಕಥೆಯನ್ನು ಪ್ರಶ್ನೆ ಮಾಡಿದ ನಿನಗೆ ಹೇಳುತ್ತೇನೆ ಕೇಳು.
ಅಹಂ ಚ ಪರ್ವತಶ್ಚೈವ ಸ್ವಸ್ರೀಯೋ ಮೇ ಮಹಾಮುನಿಃ |
ವಸ್ತುಕಾಮಾವಿಭಗತೌ ಸೃಂಜಯಂ ಜಯತಾಂ ವರಮ್ ॥4॥
ನಾನು ಮತ್ತು ನನ್ನ ಸಹೋದರಿಯ ಮಗನಾದ ಮಹಾಮುನಿಯಾದ ಪರ್ವತ- ಮುನಿಯು ಜಯಿಸುವವರಲ್ಲಿ ಶ್ರೇಷ್ಠನಾದ ಸೃಂಜಯರಾಜನ ಅರಮನೆಯಲ್ಲಿ ಕೆಲವು ಕಾಲ ಇರಬೇಕೆಂಬ ಅಪೇಕ್ಷೆಯಿಂದ ತೆರಳಿದ್ದೆವು.
ತತ್ರ ಸಂಪೂಜಿತೌ ತೇನ ವಿಧಿದೃಷ್ಟೇನ ಕರ್ಮಣಾ |
ಸರ್ವಕಾಮೌ ಸುವಿಹಿತೌ ನಿವಸಾವೋಽಸ್ಯ ವೇಶ್ಮನಿ ॥5॥
ಆ ಸಂದರ್ಭದಲ್ಲಿ ಅವನು ನಮ್ಮಿಬ್ಬರಿಗೆ ಆದರಪೂರ್ವಕವಾಗಿ ಸತ್ಕಾರವನ್ನು ಮಾಡಿದನು. ವಿಧಿಪ್ರಕಾರವಾಗಿ ಅರ್ಘ್ಯಪಾದ್ಯಾದಿಗಳನ್ನು ನೀಡಿದನು. ಅಭಿಲಷಿತ- ವಾದ ಪದಾರ್ಥಗಳನ್ನು ಒದಗಿಸುತ್ತಿದ್ದನು. ಹೀಗೆ ಅವನ ಮನೆಯಲ್ಲಿ ವಾಸಮಾಡಿ- ದೆವು.
ವ್ಯತಿಕ್ರಾಂತಾಸು ವರ್ಷಾಸು ಸಮಯೇ ಗಮನಸ್ಯ ಚ |
ಪರ್ವತೋ ಮಾಮುವಾಚೇದಂ ಕಾಲೇ ವಚನಮರ್ಥವತ್ ॥6॥
ವರ್ಷಾಕಾಲವು ಕಳೆಯುತ್ತಾ ಬಂದಿತು. ಆ ಸಂದರ್ಭದಲ್ಲಿ ಅವನ ಅರಮನೆ- ಯಿಂದ ಹೊರಡುವ ಕಾಲುವು ಪ್ರಾಪ್ತವಾಯಿತು. ಆಗ ಆ ಪರ್ವತಮುನಿಯು ನನ್ನ ಜೊತೆ ಸಮಯೋಚಿತವಾದ ಮಾತುಗಳನ್ನು ಹೀಗೆ ಹೇಳಿದನು -
ಆವಾಮಸ್ಯ ನರೇಂದ್ರಸ್ಯ ಗೃಹೇ ಪರಮಪೂಜಿತೌ |
ಉಷಿತೌ ಸಮಯೇ ಬ್ರಹ್ಮಂಶ್ಚಿಂತ್ಯತಾಮತ್ರ ಸಾಂಪ್ರತಮ್ ॥7॥
ಈ ಸೃಂಜಯರಾಜನು ನಮ್ಮನ್ನು ಇಲ್ಲಿಯ ತನಕ ಬಹಳ ಆದರದಿಂದ ಸತ್ಕಾರ ಮಾಡಿದ್ದಾನೆ. ಇವನಿಗೆ ನಾವು ಹೊರಡುವ ಸಮಯದಲ್ಲಿ ಯಾವುದಾದರೂ ರೀತಿಯಲ್ಲಿ ಉಪಕಾರವನ್ನು ಮಾಡಬೇಕು. ಉಪಕಾರವನ್ನು ಮಾಡದೇ ಹೊರಡ- ಬಾರದು. ಅದಕ್ಕೇನಾದರೂ ಮಾರ್ಗವನ್ನು ಯೋಚಿಸು ಎಂದನು.
ತತೋಽಹಮಬ್ರುವಂ ರಾಜನ್ ಪರ್ವತಂ ಶುಭದರ್ಶನಮ್ |
ಸರ್ವಮೇತತ್ ತ್ವಯಿ ವಿಭೋ ಭಾಗಿನೇಯೋಪಪದ್ಯತೇ ॥8॥
ವರೇಣ ಛಂದ್ಯತಾಂ ರಾಜಾ ಲಭತಾಂ ಯದ್ ಯದಿಚ್ಛತಿ |
ಆವಯೋಸ್ತಪಸಾ ಸಿದ್ಧಿಂ ಪ್ರಾಪ್ನೋತಿ ಯದಿ ಮನ್ಯಸೇ ॥9॥
ಧರ್ಮಜನೇ! ಶುಭದರ್ಶನನಾದ ಸೋದರಳಿಯನಾದ ಆ ಪರ್ವತಮುನಿಗೆ ನಾನು ಹೀಗೆ ಹೇಳಿದನು - ``ನೀನು ಸೃಂಜಯರಾಜನನ್ನೇ ಕೇಳು. ಅವನು ಏನು ಕೇಳುತ್ತಾನೋ, ಅದೆಲ್ಲವನ್ನು ನಾವು ನಡೆಸಿಕೊಡೋಣ. ನೀನು ಸೂಕ್ತವೆಂದು ಭಾವಿಸುವುದಾದರೆ ನಮ್ಮ ತಪಸ್ಸಿನ ಪ್ರಭಾವದಿಂದ ರಾಜನು ಯಾವ ಸಿದ್ಧಿಯನ್ನು ಬೇಕಾದರೂ ಪಡೆದುಕೊಳ್ಳಲಿ''.
ತತ್ ಆಹೂಯ ರಾಜಾನಂ ಸೃಂಜಯಂ ಶುಭದರ್ಶನಮ್ |

ಪರ್ವತೋಽನುಮತಂ ವಾಕ್ಯಮುವಾಚ ಮುನಿಪುಂಗವಃ ॥10॥
ನಾನು ಹೀಗೆ ಹೇಳಿದ ಮೇಲೆ ಪರ್ವತಮುನಿಯು ನನ್ನ ಅನುಮತಿಯನ್ನು ಪಡೆದುಕೊಂಡು ಶುಭದರ್ಶನನಾದ ರಾಜನಾದ ಸೃಂಜಯನನ್ನು ಕರೆದನು. ಆ ಮುನಿಪುಂಗವನು ಸೃಂಜಯರಾಜನನ್ನು ಕುರಿತು ಹೀಗೆ ಹೇಳಿದನು -
ಪ್ರೀತೌ ಸ್ವೋ ನೃಪ ಸತ್ಕಾರೈಸ್ತವ ಹ್ಯಾರ್ಜವಸಂಭೃತೈಃ |
ಆವಾಭ್ಯಾಮಭ್ಯನುಜ್ಞಾತೋ ವರಂ ನೃವರ ಚಿಂತಯ ॥11॥
``ರಾಜನೇ! ನೀನು ಮಾಡಿದ ಸತ್ಕಾರದಿಂದ ನಾವಿಬ್ಬರು ಪರಮಪ್ರೀತರಾಗಿ- ದ್ದೇವೆ. ಅತ್ಯಂತ ಸರಳತೆಯಿಂದ ನೀನು ಮಾಡಿದ ಪ್ರೀತಿವಿಶ್ವಾಸಗಳಿಂದ ಪ್ರಸನ್ನರಾ- ಗಿದ್ದೇವೆ. ನೀನು ನಮ್ಮಿಬ್ಬರಿಂದ ಯಾವುದೇ ವರವನ್ನು ಪಡೆದುಕೊಳ್ಳಬಹುದು. ನಾವಾಗಿಯೇ ಆ ವರಗಳನ್ನು ಇಷ್ಟಪಟ್ಟು ಕೊಡುತ್ತೇವೆ. ಆಲೋಚನೆ ಮಾಡಿ ಹೇಳು.
ದೇವಾನಾಮವಿಹಿಂಸಾಯಾಂ ಯದ್ ಭವೇನ್ಮಾನುಷಕ್ಷಮಮ್ |
ತದ್ ಗೃಹಾಣ ಮಹಾರಾಜ ಪೂಜಾರ್ಹೋ ನೌ ಮತೋ ಭವಾನ್ ॥12॥
ನೀನು ಕೇಳುವ ವರದಿಂದ ದೇವತೆಗಳಿಗೆ ಹಿಂಸೆಯಾಗಬಾರದು. ಮನುಷ್ಯರಿಗೆ ಯಾವುದೇ ಹಾನಿಯು ಆಗಬಾರದು. ಅಂಥ ವರವನ್ನಷ್ಟೇ ಕೇಳು. ನೀನು ನಮ್ಮಿಂದ ಅಭಿನಂದನೀಯ ಆಗಿರುವಿ ಎಂಬುದು ನಮ್ಮ ಅಭಿಪ್ರಾಯವಾಗಿದೆ.
ಸೃಂಜಯಃ
ಪ್ರೀತೌ ಭವಂತೌ ಯದಿ ಮೇ ಕೃತಮೇತಾವತಾ ಮಮ |
ಏಷ ಏವ ಪರೋ ಲಾಭೋ ನಿರ್ವೃತ್ತೋ ಮೇ ಮಹಾಫಲಃ ॥13॥
ಸೃಂಜಯ ಪ್ರಭುಗಳೇ ! ತಾವು ಸಂತುಷ್ಟರಾದರೆ ಸಾಕು. ನಿಮ್ಮ ಸಂತೋಷವೇ ನನ್ನ ಜೀವನದ ದೊಡ್ಡ ಲಾಭ. ಇದೇ ನಾನು ಪಡೆದ ಮಹಾಫಲವಾಗಿದೆ.
ನಾರದಃ
ತಮೇವಂವಾದಿನಂ ಭೂಯಃ ಪರ್ವತಃ ಪ್ರತ್ಯಭಾಷತ |
ವೃಣೀಷ್ವ ರಾಜನ್ ಸಂಕಲ್ಪೋ ಯಸ್ತೇ ಹೃದಿ ಚಿರಂ ಸ್ಥಿತಃ ॥14॥
ನಾರದರು ಯುಧಿಷ್ಠಿರನೇ ! ಸೃಂಜಯನು ಹೀಗೆ ಪುನಃ ಪುನಃ ಹೇಳುತ್ತಿದ್ದರೂ ಪರ್ವತಮುನಿಯು ಮತ್ತೊಮ್ಮೆ ಆ ರಾಜನಿಗೆ ಹೇಳುತ್ತಾನೆ - ``ಮಹಾರಾಜನೇ! ನಿನ್ನ ಹೃದಯದಲ್ಲಿ ಬಹುಕಾಲದಿಂದ ಇರುವ ಕೋರಿಕೆಯನ್ನು ಈಗ ಕೇಳಿಕೋ. ನಿನ್ನ ಕೋರಿಕೆಯನ್ನು ಈಡೇರಿಸಿಕೊಳ್ಳಲು ವರವನ್ನು ಕೇಳಿಕೋ''.
ಸೃಂಜಯಃ
ಅಭೀಪ್ಸಾಮಿ ಸುತಂ ವೀರಂ ವೀರ್ಯವಂತಂ ದೃಢವ್ರತಮ್ |
ಆಯುಷ್ಮಂತಂ ಮಹಾಭಾಗಂ ದೇವರಾಜಸಮದ್ಯುತಿಮ್ ॥15॥
ಸೃಂಜಯ ವೀರನು, ದೀರ್ಘಾಯುಷ್ಮಂತನು, ದೃಢವ್ರತವನು ಭಾಗ್ಯವಂತನು, ದೇವೇಂದ್ರನಿಗೆ ಸಮಾನನಾದವನು ಆದ ಪುತ್ರನನ್ನು ನಾನು ಅಪೇಕ್ಷಿಸುತ್ತಿರುವೆ. ತಾವು ನನಗೆ ಅಂಥ ಪುತ್ರನನ್ನು ಕರುಣಿಸಬೇಕು.
ಪರ್ವತಃ
ಭವಿಷ್ಯತ್ಯೇಷ ತೇ ಕಾಮೋ ನ ತ್ವಾಯುಷ್ಮಾನ್ ಭವಿಷ್ಯತಿ |
ದೇವರಾಜಾಭಿಭೂತ್ಯರ್ಥಂ ಸಂಕಲ್ಪೋ ಹ್ಯೇಷ ತೇ ಹೃದಿ ॥16॥
ಪರ್ವತಮುನಿ ರಾಜನೇ ! ಹಾಗೆಯೇ ಆಗಲಿ. ನಿನ್ನ ಕಾಮನೆಯು ಈಡೇ- ರುತ್ತದೆ. ಆದರೆ ನಿನ್ನ ಆ ಮಗನು ದೀರ್ಘಾಯುಷ್ಯವನ್ನು ಹೊಂದುವುದಿಲ್ಲ. ಏಕೆಂದರೆ ದೇವರಾಜನಾದ ಇಂದ್ರನನ್ನು ಸೋಲಿಸುವ ಸಂಕಲ್ಪವನ್ನು ನೀನು ಮಾಡಿ- ರುವಿ. ಏತನ್ಮೂಲಕ ದೇವತೆಗಳನ್ನು ಹಿಂಸೆ ಮಾಡಬೇಕೆಂಬುದು ನಿನ್ನ ಮನಸ್ಸಿನಲ್ಲಿದೆ.
ಸುವರ್ಣಷ್ಠೀವನಾಚ್ಚೈವ ಸ್ವರ್ಣಷ್ಠೀವೀ ಭವಿಷ್ಯತಿ |
ರಕ್ಷ್ಯಶ್ಚ ದೇವರಾಜಾತ್ ಸ ದೇವರಾಜಸಮದ್ಯುತಿಃ ॥17॥
ನಿನ್ನ ಮಗನು ಸುವರ್ಣಷ್ಠೀವಿ ಎಂಬ ಹೆಸರಿನಿಂದ ಪ್ರಖ್ಯಾತನಾಗುತ್ತಾನೆ. ದೇವೇಂದ್ರನ ಸಮಾನವಾದ ತೇಜಸ್ಸನ್ನು ಹೊಂದಿರುವ ಅವನನ್ನು ದೇವೇಂದ್ರನಿಂದ ನೀನೇ ರಕ್ಷಣೆ ಮಾಡಿಕೊಳ್ಳಬೇಕು.
ತಚ್ಛ್ರುತ್ವಾ ಸೃಂಜಯೋ ವಾಕ್ಯಂ ಪರ್ವತಸ್ಯ ಮಹಾತ್ಮನಃ |
ಪ್ರಸಾದಯಾಮಾಸ ತದಾ ನೈತದೇವಂ ಭವೇದಿತಿ ॥18॥
ಮಹಾತ್ಮನಾದ ಪರ್ವತಮುನಿಯ ಮಾತನ್ನು ಕೇಳಿ ಸೃಂಜಯರಾಜನು ಅವನನ್ನು ಸಂತೋಷಗೊಳಿಸುವುದಕ್ಕಾಗಿ ಹೀಗೆ ಪ್ರಾರ್ಥನೆ ಮಾಡಿದನು - ಶ್ರೇಷ್ಠಮುನಿಗಳೇ ! ನನ್ನ ಮಗನಿಗೆ ದಯವಿಟ್ಟು ಅಲ್ಪಾಯುಷ್ಯವನ್ನು ನೀಡಬೇಡಿರಿ.
ಆಯುಷ್ಮಾನ್ ಮೇ ಭವೇತ್ ಪುತ್ರೋ ಭವತಸ್ತಪಸಾ ಮುನೇ |
ನಚ ತಂ ಪರ್ವತಃ ಕಿಂಚಿದುವಾಚೇಂದ್ರವ್ಯಪೇಕ್ಷಯಾ ॥19॥
ಮುನಿಗಳೇ! ನಿಮ್ಮ ತಪಸ್ಸಿನ ಪ್ರಭಾವದಿಂದ ನನ್ನ ಮಗನು ದೀರ್ಘಾಯುಷ್ಯ- ವನ್ನು ಹೊಂದಬೇಕು ಎಂದು ದೈನ್ಯದಿಂದ ಬೇಡಿದನು. ಆಗ ಪರ್ವತಮುನಿಯು ದೇವೇಂದ್ರನಿಗೆ ದ್ರೋಹ ಮಾಡಬಾರದೆಂಬ ದೃಷ್ಟಿಯಿಂದ ಏನನ್ನೂ ಮಾತನಾಡದೇ ಸುಮ್ಮನಿದ್ದನು.
ತಮಹಂ ನೃಪತಿಂ ದೀನಮಬ್ರುವಂ ಪುನರೇವ ತು |
ಸ್ಮರ್ತವ್ಯೋಽಹಂ ಮಹಾರಾಜ ದರ್ಶಯಿಷ್ಯಾಮಿ ತೇ ಸ್ಮೃತಃ ॥20॥
ಆಗ ನಾನು ಅತ್ಯಂತ ದೀನನಾದ ರಾಜನನ್ನು ನೋಡಿ, ಮಹಾರಾಜನೇ! ಆ ಮಗನಿಗೆ ವಿಪತ್ತು ಬಂದಾಗ ನನ್ನನ್ನು ಸ್ಮರಣೆ ಮಾಡು. ನಾನು ನಿನಗೆ ದರ್ಶನವನ್ನು ನೀಡುತ್ತೇನೆಂದು ಸಾಂತ್ವನವನ್ನು ನೀಡಿದನು.

ಅಹಂ ತೇ ದಯಿತಂ ಪುತ್ರಂ ಪ್ರೇತರಾಜವಶಂ ಗತಮ್ |
ಪುನರ್ದಾಸ್ಯಾಮಿ ತದ್ ರೂಪಂ ಮಾ ಶುಚಃ ಪೃಥಿವೀಪತೇ ॥21॥
ಪೃಥಿವೀಪತಿಯೇ! ನಿನ್ನ ಮಗನು ಯಮನ ಕೈಗೆ ಸಿಕ್ಕಿದ್ದರೂ ಯಾವುದೇ ತೊಂದರೆ ಆಗದಂತೆ ಅವನನ್ನು ಪುನಃ ಕರೆದು ಆ ದೇಹದಲ್ಲಿ ಸೇರುವಂತೆ ಮಾಡು- ತ್ತೇನೆ. ದುಃಖಿಸಬೇಡ ಎಂದನು.
ಏವಮುಕತ್ವ ತು ನೃಪತಿಂ ಪ್ರಯಾತೌ ಸ್ವೋ ಯಥೇಪ್ಸಿತಮ್ |
ಸೃಂಜಯಶ್ಚ ಯಥಾಕಾಮಂ ಪ್ರವಿವೇಶ ಸ್ವಮಂದಿರಮ್ ॥22॥
ಹೀಗೆ ಆ ರಾಜನಿಗೆ ನಾನು ವಾಗ್ದಾನವನ್ನು ಮಾಡಿದೆನು. ಅನಂತರ ಅಲ್ಲಿಂದ ನಾವು ಹೊರಟು ಹೋದೆವು. ಸೃಂಜಯನು ತನ್ನ ಅರಮನೆಗೆ ಹೋದನು.
ಸೃಂಜಯಸ್ಯಾಥ ರಾಜರ್ಷೇಃ ಕಸ್ಮಿಂಶ್ಚಿತ್ ಕಾಲಪರ್ಯಯೇ |
ಜಜ್ಞೇ ಪುತ್ರೋ ಮಹಾವೀರ್ಯಸ್ತೇಜಸಾ ಪ್ರಜ್ವಲನ್ನಿವ ॥23॥
ಕೆಲವು ದಿವಸಗಳು ಕಳೆದ ಮೇಲೆ ರಾಜರ್ಷಿಯಾದ ಸೃಂಜಯನಿಗೆ ಒಬ್ಬ ಮಗನು ಹುಟ್ಟಿದನು. ತೇಜಸ್ಸಿನಿಂದ ಬೆಳಗುತ್ತಿದ್ದನು.
ವವೃಧೇ ಸ ಯಥಾಕಾಲಂ ಸರಸೀವ ಮಹೋತ್ಪಲಮ್ |
ಬಭೂವ ಕಾಂಚನಷ್ಠೀವೀ ಯಥಾರ್ಥಂ ನಾಮ ತಸ್ಯ ತತ್ ॥24॥
ಸರೋವರದಲ್ಲಿ ಕಮಲವು ಹೇಗೆ ವಿಕಸಿತವಾಗುತ್ತದೋ, ಅದರಂತೆ ಈ ಸೃಂಜಯನ ಪುತ್ರನೂ ಕೂಡ ಕಾಲಕ್ಕೆ ಅನುಗುಣವಾಗಿ ಬೆಳೆಯುತ್ತಾ ಬಂದನು. ಸುವರ್ಣವನ್ನು ಉಗುಳುವಂಥ ಕಾಂತಿಯನ್ನು ಹೊಂದಿದ್ದರಿಂದ ಸುವರ್ಣೇಷ್ಠಿ ಎಂದು ಅವನನ್ನು ಎಲ್ಲರು ಕರೆದರು.
ತದದ್ಭುತತಮಂ ಲೋಕೇ ಪಪ್ರಥೇ ಕುರುಸತ್ತಮ |
ಬುಬುಧೇ ತಚ್ಚ ದೇವೇಂದ್ರೋ ವರದಾನಂ ಮಹಾತ್ಮನೋಃ ॥25॥
ಮಹಾತ್ಮನಾದ ಪರ್ವತಮುನಿಗಳ ವರಬಲದಿಂದ ಇಂಥ ಅದ್ಭುತನಾದ ಮಗನು ಹುಟ್ಟಿದ್ದಾನೆಂಬ ವಿಷಯವು ಲೋಕವೆಲ್ಲವೂ ತಿಳಿಯಿತು. ದೇವೇಂದ್ರನೂ ಕೂಡ ತಿಳಿದುಕೊಂಡನು.
ಟಿಪ್ಪಣಿ- ಪಪ್ರಥೇ ಕುರುಸತ್ತಮ ಇತ್ಯತ್ರ ಪಪ್ರಥೇ ಪ್ರಥಿತಮಭೂತ್ |
`ಪ್ರಪಥೇ' ಎಂದರೆ ಪ್ರಸಿದ್ಧನಾದನು ಎಂದರ್ಥ.
ತತಸ್ತ್ವಭಿಭವಾದ್ ಭೀತೋ ಬೃಹಸ್ಪತಿಮತೇ ಸ್ಥಿತಃ |
ಕುಮಾರಸ್ಯಾಂತರಪ್ರೇಕ್ಷೀ ಬಭೂವ ಬಲವೃತ್ರಹಾ ॥26॥
ಬಲಿಷ್ಠನಾದ ವೃತ್ರಾಸುರನನ್ನು ಕೊಂದ, ಆ ಇಂದ್ರನಿಗೆ ಈ ಬಾಲಕನಿಂದ ಹೆದರಿಕೆ ಪ್ರಾರಂಭವಾಯಿತು. ಈ ಬಾಲಕನು ನನ್ನನ್ನು ಸೋಲಿಸುತ್ತಾನೆ ಅದಕ್ಕೆ ಉಪಾಯ- ವನ್ನು ಈಗಲೇ ಮಾಡಬೇಕೆಂದು ತಿಳಿದು ಬೃಹಸ್ಪತಿಯ ಬಳಿ ಆಲೋಚನೆಯನ್ನು ಮಾಡಿದನು. ಆ ರಾಜಕುಮಾರನಿಗೆ ಏನಾದರೂ ಹಾನಿಯನ್ನು ಮಾಡಬೇಕೆಂದು ಪ್ರತಿನಿತ್ಯವು ಅವಕಾಶವನ್ನು ನಿರೀಕ್ಷಿಸಲು ತೊಡಗಿದನು.
ಚೋದಯಾಮಾಸ ವಜ್ರಂ ಸ ದಿವ್ಯಾಸ್ತ್ರಂ ಮೂರ್ತಿಸಂಸ್ಥಿತಮ್ |
ವ್ಯಾಘ್ರೋ ಭೂತ್ವಾ ಜಹೀಮಂ ತ್ವಂ ರಾಜಪುತ್ರಮಿತಿ ಪ್ರಭೋ॥27॥
ಒಂದು ದಿನ ದೇವೇಂದ್ರನು ಸಾಕ್ಷಾತ್ತಾಗಿ ಬಂದು ನಿಂತು ಬಿಟ್ಟನು. ತನ್ನ ದಿವ್ಯಾಸ್ತ್ರ- ವಾದ ವಜ್ರಾಯುಧಕ್ಕೆ ಆದೇಶ ಮಾಡಿದನು. ಈ ರಾಜಪುತ್ರನನ್ನು ನೀನು ವ್ಯಾಘ್ರ- ರೂಪವನ್ನು ತಾಳಿ ಸಂಹಾರ ಮಾಡು ಎಂದು.
ವಿವೃದ್ಧಃ ಕಿಲ ವೀರ್ಯೇಣ ಮಾಮೇಷೋಽಭಿಭವಿಷ್ಯತಿ |
ಸೃಂಜಯಸ್ಯ ಸುತೋ ವಜ್ರ ಯಥೈನಂ ಪರ್ವತೋ ದದೌ ॥28॥
ಅದರ ಪ್ರಕಾರ ವಜ್ರಾಯುಧದ ಜೊತೆ ದೇವೇಂದ್ರನು ಹೀಗೆ ಕಾರಣವನ್ನು ಹೇಳಿದನು. ವಜ್ರಾಯುಧವೇ! ವೀರ್ಯ ಹಾಗೂ ಪರಾಕ್ರಮಗಳಿಂದ ಬೆಳೆಯು- ತ್ತಿರುವ ಸುವರ್ಣಷ್ಠೀವಿಯು ದೊಡ್ಡವನಾದ ಮೇಲೆ ನನ್ನನ್ನು ಪರಾಭವ- ಗೊಳಿಸುತ್ತಾನೆ. ಸೃಂಜಯನ ಅಪೇಕ್ಷೆಯಿಂದ ಹುಟ್ಟಿದ ವೀರನಾಗಿದ್ದಾನೆ. ನನ್ನ ಬಲಕ್ಕೆ ಸಮಾನವಾದ ಬಲವನ್ನು ಪರ್ವತಮುನಿಯು ಈ ಸೃಂಜಯನ ಮಗನಿಗೆ ಅನು- ಗ್ರಹಿಸಿದ್ದಾನೆ. ಆದ್ದರಿಂದ ಅವನನ್ನು ಈಗಲೇ ಕೊಂದುಬಿಡು.
ಏವಮುಕ್ತಸ್ತು ಶಕ್ರೇಣ ವಜ್ರಃ ಪರಪುರಂಜಯಃ |
ಕುಮಾರಸ್ಯಾಂತರಪ್ರೇಕ್ಷೀ ನಿತ್ಯಮೇವಾನ್ವಪದ್ಯತ ॥29॥
ಯುಧಿಷ್ಠಿರನೇ! ಹೀಗೆ ದೇವೇಂದ್ರನು ಆ ವಜ್ರಾಯುಧಕ್ಕೆ ಹೇಳಿದ ಮೇಲೆ ಶತ್ರುಗಳ ಪಟ್ಟಣವನ್ನು ಗೆಲ್ಲಲು ಸಾಮರ್ಥ್ಯವನ್ನು ಹೊಂದಿರುವ ಆ ವಜ್ರಾಯುಧವು ಹೊರಟೇ ಬಿಟ್ಟಿತು. ತನ್ನ ಒಡೆಯನಾದ ದೇವೇಂದ್ರನ ಆಜ್ಞೆಗೆ ಅನುಗುಣವಾಗಿ ಸೃಂಜಯಕುಮಾರನನ್ನು ಸಂಹರಿಸಲು ನಿತ್ಯವೂ ಹೊಂಚು ಹಾಕುತ್ತಿತ್ತು.
ಸೃಂಜಯೋಽಪಿ ಸುತಂ ಪ್ರಾಪ್ಯ ದೇವರಾಜಸಮದ್ಯುತಿಮ್ |
ಹೃಷ್ಟಃ ಸಾಂತಃಪುರೋ ರಾಜಾ ವನನಿತ್ಯೋಽಭವತ್ತದಾ ॥30॥
ಆ ಸೃಂಜಯನೂ ಕೂಡ ದೇವೇಂದ್ರನಿಗೆ ಸಮಾನವಾದ ಬಲಪರಾಕ್ರಮಗಳನ್ನು ಹೊಂದಿದ ತನ್ನ ಕುಮಾರನನ್ನು ಕಂಡು, ನಿತ್ಯವೂ ಸಂತೋಷವನ್ನು ಅನುಭವಿಸುತ್ತಲೇ ಇದ್ದನು. ಅಂತಃಪುರದ ಪರಿವಾರದವರ ಜೊತೆ ನಿತ್ಯವೂ ಅರಣ್ಯಸಂಚಾರವನ್ನು ಮಾಡುತ್ತಾ ಸಂತೋಷದಲ್ಲಿ ಕಾಲಕಳೆಯುತ್ತಿದ್ದನು.
ತತೋ ಭಾಗೀರಥೀತೀರೇ ಕದಾಚಿದ್ ವನನಿರ್ಝರೇ |
ಧಾತ್ರೀದ್ವಿತೀಯೋ ಬಾಲಃ ಸ ಕ್ರೀಡಾರ್ಥಂ ಪರ್ಯಧಾವತ ॥31॥
ಒಮ್ಮೆ ಆ ಸುವರ್ಣಷ್ಠೀವಿಯು ಯಾರೂ ಇಲ್ಲದ ಭಾಗೀರಥೀ ತೀರಕ್ಕೆ ತೆರಳಿ- ದ್ದನು. ದಾದಿಯೊಬ್ಬಳ ಜೊತೆ ಅಲ್ಲಿ ಆಟವಾಡುತ್ತಿದ್ದನು.

ಪಂಚವರ್ಷಕದೇಶೀಯೋ ಬಾಲೋ ನಾಗೇಂದ್ರವಿಕ್ರಮಃ |
ಸಹಸೋತ್ಪತಿತಂ ವ್ಯಾಘ್ರಮಾಸಸಾದ ಮಹಾಬಲಮ್ ॥32॥
ಆಗ ಆ ಮಗುವಿಗೆ ಕೇವಲ ಐದುವರ್ಷಗಳಿದ್ದವು. ಆದರೆ ಮಹಾಗಜದಂತೆ ಅತ್ಯಂತ ಬಲಿಷ್ಠನಾಗಿದ್ದನು. ಅವನಿಗೆ ತಿಳಿಯದಂತೆ ಹಿಂದಿನಿಂದ ಒಂದು ದೊಡ್ಡ ಹೆಬ್ಬುಲಿಯು ಬಂದು ಅವನ ಮೇಲೆ ಬಿದ್ದಿತು.
ಟಿಪ್ಪಣಿ- ಸಹಸೋತ್ಪತಿತಂ ವ್ಯಾಘ್ರಮಾಸಸಾದ್ ಮಹಾಬಲಮ್ | ಸ ಬಾಲಸ್ತೇನ ನಿಷ್ಪಿಷ್ಟ ಇತ್ಯತ್ರ ವ್ಯಾಘ್ರಹಿಂಸಿತತ್ವೇನೋಕ್ತಂ ಸ್ವರ್ಣಷ್ಠೀವಿರೂಪಂ ಪ್ರಾಕ್ | ಚೋರೈ- ರ್ನಾಶಿತಸ್ಯ ತಸ್ಯ ನಾರದೇನ ದತ್ತಂ ಪ್ರತಿರೂಪಮ್ ಇದಾನೀಂ ಪುನಃ ಪರ್ವತೇನ ರಕ್ಷಿತಮ್|
ತಸ್ಮಾತ್ ಕಥಾದ್ವಯಸ್ಯಾಪಿ ನ ವಿರೋಧಃ |
ತೇನ ಚೈವ ವಿನಿಷ್ಪಿಷ್ಟೋ ವೇಪಮಾನೋ ನೃಪಾತ್ಮಜಃ |
ವ್ಯಸುಃ ಪಪಾತ ಮೇದಿನ್ಯಾಂ ತತೋ ಧಾತ್ರೀ ವಿಚುಕ್ರುಶೇ ॥33॥
ತನ್ನ ಮೇಲೆ ಬೀಳುತ್ತಿರುವ ಹುಲಿಯ ಆರ್ಭಟವನ್ನು ಕಂಡು, ಬಾಲಕನು ನಡುಗಿಹೋದನು. ಆ ಸಂದರ್ಭದಲ್ಲಿ ಹುಲಿಯು ಅವನ ಮೇಲೆ ಬಿದ್ದು, ಅಪ್ಪಳಿಸಿತು. ಕೂಡಲೇ ಆ ಕುಮಾರನು ಪ್ರಾಣಬಿಟ್ಟನು. ಇದನ್ನು ಕಂಡು ದಾದಿಯು ಉಚ್ಚಕಂಠದಿಂದ ಕೂಗ ತೊಡಗಿದಳು.
ಹತ್ವಾ ತು ರಾಜಪುತ್ರಂ ಸ ತತ್ರೈವಾಂತರಧೀಯತ |
ಶಾರ್ದೂಲೋ ದೇವರಾಜಸ್ಯ ಮಾಯಯಾಂತರ್ಹಿತಸ್ತದಾ ॥34॥
ಹುಲಿಯು ಹೀಗೆ ಆ ರಾಜಪುತ್ರನನ್ನು ಕೊಂದಿತು. ಅನಂತರ ದೇವರಾಜನ ಮಾಯೆಯಿಂದ ಆಗಮಿಸಿದ ಆ ಹುಲಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿತು.
ಧಾತ್ರ್ಯಾಸ್ತು ನಿನದಂ ಶ್ರುತ್ವಾ ರುದತ್ಯಾಃ ಪರಮಾರ್ತವತ್ |
ಅಭ್ಯಧಾವತ ತಂ ದೇಶಂ ಸ್ವಯಮೇವ ಮಹೀಪತಿಃ ॥35॥
ದಾದಿಯ ಆಕ್ರಂದನವು ಸೃಂಜಯನಿಗೆ ಕೇಳಿಸಿತು. ಕೂಡಲೇ ಸ್ವತಃ ತಾನೇ ಓಡಿಬಂದನು.
ಸ ದದರ್ಶ ಗತಾಸುಂ ತಂ ಶಯಾನಂ ಪೀತಶೋಣಿತಮ್ |
ಕುಮಾರಂ ವಿಗತಾನಂದಂ ನಿಶಾಕರಮಿವ ಚ್ಯುತಮ್ ॥36॥
ತನ್ನ ಮಗನು ಪ್ರಾಣಶೂನ್ಯನಾಗಿ ನೆಲದ ಮೇಲೆ ಬಿದ್ದಿದ್ದನು. ಹುಲಿಯು ರಕ್ತಪಾನವನ್ನು ಮಾಡಿದ್ದರಿಂದ ರಕ್ತಶೂನ್ಯನಾಗಿದ್ದನು. ಆಕಾಶದಲ್ಲಿರುವ ಚಂದ್ರನು ನೆಲದ ಮೇಲೆ ಬಿದ್ದಂತೆ ಆನಂದವನ್ನು ಕಳೆದುಕೊಂಡ ತನ್ನ ಮಗನು ಅಲ್ಲಿ ಬಿದ್ದನು.
ಸ ತಮುತ್ಸಂಗಮಾರೋಪ್ಯ ಪರಪೀಡಿತವಕ್ಷಸಮ್ |
ಪುತ್ರಂ ರುಧಿರಸಂಸಿಕ್ತಂ ಪರ್ಯದೇವಯದಾತುರಃ ॥37॥
ಆ ಸೃಂಜಯನಿಗೆ ಒಮ್ಮೆಲೇ ದುಃಖವು ಉಮ್ಮಳಿಸಿತು. ಎದೆಯನ್ನು ಬಡೆದು- ಕೊಳ್ಳುತ್ತಿದ್ದನು. ಆ ಬಾಲಕನ ಮೃತದೇಹವನ್ನು ಎತ್ತಿ ತನ್ನ ತೊಡೆಯ ಮೇಲಿಟ್ಟು- ಕೊಂಡನು. ಗಟ್ಟಿಯಾಗಿ ಗಳಗಳನೆ ಅತ್ತುಬಿಟ್ಟನು.
ತತಸ್ತಾ ಮಾತರಸ್ತಸ್ಯ ರುಂದತ್ಯಃ ಶೋಕಕರ್ಶಿತಾಃ |
ಅಭ್ಯಧಾವಂತ ತಂ ದೇಶಂ ಯತ್ರ ರಾಜಾ ಸ ಸೃಂಜಯಃ ॥38॥
ಅದೇ ಸಂದರ್ಭದಲ್ಲಿ ಆ ಬಾಲಕನ ತಾಯಿಂದಿರು ಕೂಡ ಓಡಿ ಬಂದರು. ಸೃಂಜಯನು ಆಕ್ರಂದನ ಮಾಡುತ್ತಿದ್ದನು. ಅವನ ಬಳಿ ಬಂದು ತಾವು ಅಳಲು ಪ್ರಾರಂಭ ಮಾಡಿದರು.
ತತಃ ಸ ರಾಜಾ ಸಸ್ಮಾರ ಮಾಮಂತರ್ಗತಮಾನಸಃ |
ತಚ್ಚಾಹಂ ಚಿಂತಿತಂ ಜ್ಞಾತ್ವಾ ಗತವಾಂಸ್ತಸ್ಯ ದರ್ಶನಮ್ ॥39॥
ಇದೇ ಸಂದರ್ಭದಲ್ಲಿ ಅಂದು ನಾನು ಅವನಿಗೆ ಹೇಳಿದ ಮಾತು ನೆನಪಾಯಿತು. ನನ್ನನ್ನು ಮನಸ್ಸಿನಲ್ಲಿ ನೆನೆಸಿಕೊಂಡನು. ಆಗ ಸ್ಮರಣೆ ಮಾಡಿಕೊಳ್ಳುತ್ತಿದ್ದಾನೆಂದು ತಿಳಿದ ಕೂಡಲೇ ನಾನು ಅವನಿಗೆ ದರ್ಶನವನ್ನು ನೀಡಿದೆನು.
ಸ ಮಯೈತಾನಿ ವಾಕ್ಯಾನಿ ಶ್ರಾವಿತಃ ಶೋಕಲಲಾಸಃ |
ಯಾನಿ ತೇ ಯದುವೀರೇಣ ಕಥಿತಾನಿ ಮಹೀಪತೇ ॥40॥
ಶ್ರೀಕೃಷ್ಣ ಪರಮಾತ್ಮನು ಯಾವ ಮಾತುಗಳನ್ನು ಹೇಳುತ್ತಾ ನಿನಗೆ ಸಮಾಧಾನ- ವನ್ನು ಮಾಡುತ್ತಿದ್ದಾನೋ, ಅಂಥ ಮಾತುಗಳನ್ನೇ ನಾನೂ ಕೂಡ ಸೃಂಜಯನಿಗೆ ಪ್ರಾರಂಭ ಮಾಡಿದೆನು. ಬಗೆ ಬಗೆಯಾಗಿ ಅವನಿಗೆ ಸಾಂತ್ವನವನ್ನು ಮಾಡಲು ಪ್ರಯತ್ನಪಟ್ಟೆನು.
ಸಂಜೀವಿತಶ್ಚಾಪಿ ಮಯಾ ವಾಸವಾನುಮತೇ ತದಾ |
ಭವಿತವ್ಯಂ ತಥಾ ತಚ್ಚ ನ ತಚ್ಛಕ್ಯಮತೋಽನ್ಯಥಾ ॥41॥
ಅವನ ದುಃಖವನ್ನು ನೋಡಿ, ಮಗುವನ್ನು ಬದುಕಿಸಬೇಕೆಂದು ಸಂಕಲ್ಪ ಮಾಡಿದೆನು. ಮೊದಲು ದೇವೇಂದ್ರನ ಬಳಿ ಅನುಮತಿಯನ್ನು ಪಡೆದುಕೊಂಡೆನು. ಪುನಃ ಬಾಲಕನನ್ನು ಬದುಕಿಸಿ ಬಿಟ್ಟೆನು. ಬದುಕಿದ ಮೇಲೆ ಇವನು ಇಂದ್ರನನ್ನು ಅನುಸರಿಸಬೇಕೇ ಹೊರತು, ಅವನಿಗೆ ವಿರುದ್ಧವಾಗಿ ನಡೆಯಬಾರದು. ಇಲ್ಲದಿದ್ದರೆ ಬದುಕಿಸಲು ಸಾಧ್ಯವಿಲ್ಲವೆಂದು ಹೇಳಿದನು.
ಅತ ಊರ್ಧ್ವಂ ಕುಮಾರಃ ಸ ಸ್ವರ್ಣಷ್ಠೀವೀ ಮಹಾಯಶಾಃ |
ಚಿತ್ತಂ ಪ್ರಸಾದಯಾಮಾಸ ಪಿತುರ್ಮಾತುಶ್ಚ ವೀರ್ಯವಾನ್ ॥42॥
ನನ್ನ ಮಾತಿಗೆ ಸೃಂಜಯರಾಜನು ಒಪ್ಪಿದನು. ಅನಂತರ ಆ ಮಗುವನ್ನು ಬದುಕಿಸಿದೆನು. ಅನಂತರ ಸುವರ್ಣಷ್ಠೀವಿಯು ಕೀರ್ತಿಯಲ್ಲಿ, ಪರಾಕ್ರಮದಲ್ಲಿ ಪ್ರಖ್ಯಾತನಾದನು. ತಂದೆ-ತಾಯಿಯರಿಗೆ ಸಂತೋಷವನ್ನುಂಟು ಮಾಡಿದನು.
ಕಾರಯಾಮಾಸ ರಾಜ್ಯಂ ಸ ಪಿತರಿ ಸ್ವರ್ಗತೇ ವಿಭುಃ |
ವರ್ಷಾಣಾಮೇಕಶತವತ್ ಸಹಸ್ರಂ ಭೀಮವಿಕ್ರಮಃ ॥43॥

ತನ್ನ ತಂದೆಯಾದ ಸೃಂಜಯನು ಸ್ವರ್ಗಕ್ಕೆ ತೆರಳಿದ ಮೇಲೆ ಸುವರ್ಣಷ್ಠೀವಿಯು ಸಿಂಹಾಸನವನ್ನೇರಿದನು. ಹನ್ನೊಂದು ನೂರು ವರ್ಷಗಳ ಕಾಲ ಭೀಮಪರಾಕ್ರಮ- ನಾದ ಸುವರ್ಣಷ್ಠೀವಿಯು ರಾಜ್ಯವನ್ನಾಳಿದನು.
ತತ ಇಷ್ಟ್ವಾ ಮಹಾಯಜ್ಞೈರ್ಬಹುಭಿರ್ಭೂರಿದಕ್ಷಿಣೈಃ |
ತರ್ಪಯಾಮಾಸ ದೇವಾಂಶ್ಚ ಪಿತೄಂಶ್ಚೈವ ಮಹಾದ್ಯುತಿಃ ॥44॥
ತನ್ನ ರಾಜ್ಯಭಾರದಲ್ಲಿ ಸುವರ್ಣಷ್ಠೀವಿಯು ಬಹುದಕ್ಷಿಣಾಕವಾದ ಅನೇಕ ಮಹಾಯಾಗಗಳನ್ನು ಆಚರಿಸಿದನು. ದೇವತೆಗಳನ್ನು, ಪಿತೃಗಳನ್ನು ಆ ಮಹಾ- ದ್ಯುತಿಯು ಸಂತೋಷ ಪಡಿಸಿದನು.
ಉತ್ಪಾದ್ಯ ಚ ಬಹೂನ್ ಪುತ್ರಾನ್ ಕುಲಸಂತಾನಕಾರಿಣಃ |
ಕಾಲೇನ ಮಹತಾ ರಾಜನ್ ಕಾಲಧರ್ಮಮುಪೇಯಿವಾನ್ ॥45॥
ಅನೇಕ ಪುತ್ರರನ್ನು ಪಡೆದನು. ಪ್ರತಿಯೊಬ್ಬರು ಸಂತಾನಾಭಿವೃದ್ಧಿಗೆ ಕಾರಣರಾ- ಗಿದ್ದರು. ಚಿರಕಾಲ ಭೂಮಿಯಲ್ಲಿದ್ದು ತಾನೂ ಸಹ ಕಾಲಧರ್ಮಕ್ಕೆ ಅನುಗುಣವಾಗಿ ಲೋಕಾಂತರಕ್ಕೆ ತೆರಳಿದನು.
ಸ ತ್ವಂ ರಾಜೇಂದ್ರ ಸಂಜಾತಂ ಶೋಕಮೇತನ್ನಿವರ್ತಯ |
ಯಥಾ ತ್ವಾಂ ಕೇಶವಃ ಪ್ರಾಹ ವ್ಯಾಸಶ್ಚ ಸುಮಹಾತಪಾಃ ॥46॥
ಧರ್ಮರಾಜನೇ! ನೀನೂ ಕೂಡ ಈ ಶೋಕವನ್ನು ಬಿಡಬೇಕು. ಶ್ರೀಕೃಷ್ಣಪರಮಾತ್ಮ ಹಾಗೂ ಶ್ರೀವೇದವ್ಯಾಸದೇವರು ಹೇಳಿದಂತೆ ನಡೆದುಕೋ.
ಪಿತೃಪೈತಾಮಹಂ ರಾಜ್ಯಮಾಸ್ಥಾಯ ಧುರಮುದ್ವಹ |
ದೃಷ್ಟ್ವಾ ಪುಣ್ಯೈರ್ಮಹಾಯಜ್ಞೈರಿಷ್ಟ್ವಾಂಲ್ಲೋಕಾನವಾಪ್ಸ್ಯಸಿ ॥47॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ನಾರದೇನ ಸ್ವರ್ಣಷ್ಠೀವಿಜನ್ಮಕಥನಂ ನಾಮ ದ್ವಾತ್ರಿಂಶೋಽಧ್ಯಾಯಃ ॥32
ನಿನ್ನ ತಾತ, ಮುತ್ತಾತಂದಿರಿಂದ ವಂಶಪಾರಂಪರ್ಯಕವಾಗಿ ಬಂದಿರುವ ಪುಣ್ಯ- ಕರವಾದ ಮಹಾಯಾಗಗಳನ್ನು ನಡೆಸು. ಆಗ ನಿನ್ನ ಅಭೀಷ್ಟವಾದ ಪುಣ್ಯಲೋಕ- ಗಳನ್ನು ಪಡೆಯುವಿ.
ದ್ರೋಣಪರ್ವದಲ್ಲಿಯೂ ಈ ಕಥೆಯು ಬಂದಿದೆ. ಆದರೆ ಸುವರ್ಣಷ್ಠೀಯು ಹೇಗೆ ಹುಟ್ಟಿದ? ಹೇಗೆ ಸತ್ತ? ಎಂಬ ಕಥೆಯಷ್ಟೇ ಅಲ್ಲಿ ಬಂದಿದೆ. ವಿವಾಹದ ಕಥೆಯು ದ್ರೋಣಪರ್ವದಲ್ಲಿ ಬಂದಿರುವುದಿಲ್ಲ. ಅದರ ವಿವರಣೆ ಇಲ್ಲಿ ಪ್ರಸಕ್ತ- ವಾಗಿದೆ. ನಾರದರ ಬಗ್ಗೆ ಬೇರೆ ಬೇರೆ ಪುರಾಣಗಳಲ್ಲಿ ಬಂದ ಕಥೆಯ ಸಂಕ್ಷೇಪ ವಿವರಣೆ ಹೀಗಿದೆ -
ಲಿಂಗಪುರಾಣದಲ್ಲಿ ಬರುವ ಕಥೆ ಹೀಗಿದೆ - ಅಂಬರೀಷ ಎಂಬ ಪ್ರಸಿದ್ಧನಾದ ರಾಜನಿಗೆ ಶ್ರೀಮತಿ ಎಂಬ ಮಗಳಿದ್ದಳು. ಅವನ ಬಳಿ ಒಮ್ಮೆ ನಾರದರು ಹಾಗೂ ಪರ್ವತ ಮಹರ್ಷಿಗಳು ಆಗಮಿಸಿದರು. ಅವನ ಮಗಳನ್ನು ನೋಡಿ, ಮೋಹಿತರಾದರು. ಇಬ್ಬರಲ್ಲೂ ಪರಸ್ಪರ ಜಗಳ ಪ್ರಾರಂಭವಾಯಿತು. ಶ್ರೀಮತಿ- ಯನ್ನು ನಾನು ವಿವಾಹ ಮಾಡಿಕೊಳ್ಳುತ್ತೇನೆಂದು ನಾರದರು ಹೇಳಿದರೆ, ಪರ್ವತ ಋಷಿಗಳು ನಾನು ವಿವಾಹ ಮಾಡಿಕೊಳ್ಳುತ್ತೇನೆಂದು ಹೇಳುತ್ತಾರೆ. ಕೊನೆಯಲ್ಲಿ ಇಬ್ಬರೂ ಕೂಡ ಪರಸ್ಪರ ಶಾಪವನ್ನು ನೀಡಿದರು. ಪರ್ವತ ಋಷಿಯು ನಾರದರಿಗೆ `ನೀನು ಕಪಿಮುಖದವನಾಗು' ಎಂಬುದಾಗಿ ಶಾಪವನ್ನು ನೀಡಿದರು. ನಾರದರು ಪರ್ವತ ಋಷಿಗೆ `ನೀನು ಕತ್ತೆಮುಖದವನಾಗು' ಎಂಬುದಾಗಿ ಶಾಪವನ್ನು ನೀಡಿದರು. ಕೊನೆಯಲ್ಲಿ ಇಬ್ಬರಿಗೂ ಶ್ರೀಮತಿಯನ್ನು ವರಿಸಲು ಸಾಧ್ಯವಾಗದೇ ಅಂಬರೀಷನನ್ನೇ ಶಪಿಸಲು ಮುಂದಾದರು. ಅಂತಿಮವಾಗಿ ಅಂಬರೀಷನು ಭಗವಂತನನ್ನೇ ಮೊರೆಹೊಕ್ಕನು. ಮತ್ತು ತನ್ನ ಮಗಳನ್ನು ಭಗವಂತನಿಗೆ ಕೊಟ್ಟು ವಿವಾಹ ಮಾಡಿದನು.
ದೈವೀಭಾಗವತದಲ್ಲಿ ನಾರದರ ಬಗ್ಗೆ ಹೀಗೆ ಬರುತ್ತದೆ - ಒಮ್ಮೆ ನಾರದರು ಶ್ವೇತದ್ವೀಪಕ್ಕೆ ತೆರಳಿದ್ದರು. ಅಲ್ಲಿ ಮುಕ್ತಜೀವರನ್ನು ಹಾಗೂ ಪರಮಾತ್ಮನನ್ನು ನೋಡಿ ಬಹಳ ಸಂತೋಷ ಪಟ್ಟರು. ಅನಂತರ ನಿನ್ನ ಮಾಯೆಯನ್ನು ನನಗೂ ಕೂಡ ತಿಳಿಸು ಎಂಬುದಾಗಿ ಭಗವಂತನನ್ನು ಶರಣಾಗತರಾದರು. ಆಗ ಪರಮಾತ್ಮನು ನಾರದರನ್ನು ಗರುಡನ ಮೇಲೆ ಕುಳ್ಳಿರಿಸಿಕೊಂಡು ಹೊರಟನು. ಕಾಮ್ಯಕುಬ್ಜ ಎಂಬ ಉತ್ತರಪ್ರದೇಶದಲ್ಲಿರುವ ಕ್ಷೇತ್ರವಿಶೇಷದಲ್ಲಿ ಗರುಡನಿಂದ ನಾರದರನ್ನು ಇಳಿಸಿದನು. ಇಲ್ಲಿರುವ ಸರೋವರದಲ್ಲಿ ಸ್ನಾನ ಮಾಡಿಬಾ ಎಂಬುದಾಗಿ ಭಗವಂತನು ನಾರದರಿಗೆ ಹೇಳಿದರು. ಅದರಂತೆ ನಾರದರು ಸ್ನಾನ ಮಾಡಿದರು. ಆದರೆ ಕೂಡಲೇ ಹೆಣ್ಣಾಗಿ ಬಿಟ್ಟರು. ಹೆಣ್ಣಾದ ನಾರದರು ವಿಷ್ಣುವಿನ ಬಳಿ ತೆರಳಲು ನಾಚಿಕೆ ಪಟ್ಟರು. ಆಗ ನಾರದರ ಕಮಂಡಲು, ವೀಣೆಗಳನ್ನು ಭಗವಂತನು ತೆಗೆದುಕೊಂಡು ತೆರಳಿಬಿಟ್ಟನು. ಇಷ್ಟರಲ್ಲಿ ಆ ಕಾಮ್ಯಕುಬ್ಜದ ತಾಲಧ್ವಜ ಎಂಬ ರಾಜನು ಅಲ್ಲಿಗೆ ಬಂದನು. ನಾರದರನ್ನು ನೋಡಿ ವಿವಾಹವಾದನು. ಆ ತಾಲಧ್ವಜನಿಂದ ವೀರವರ್ಮ, ಸುಧನ್ವ ಮೊದಲಾದ ಇಪ್ಪತ್ತು ಮಂದಿ ಮಕ್ಕಳು ಹುಟ್ಟಿದರು. ಆ ಇಪ್ಪತ್ತು ಮಕ್ಕಳಿಗೂ ಮಕ್ಕಳಾದರು. ಹೀಗೆ ವಂಶವು ಅಭಿವೃದ್ಧವಾಯಿತು. ಒಮ್ಮೆ ತಾಲಧ್ವಜನ ಮೇಲೆ ಶತ್ರುರಾಜ್ಯದವರು ಆಕ್ರಮಣ ಮಾಡಿದರು. ಆಗ ಯುದ್ಧದಲ್ಲಿ ತಾಲಧ್ವಜನು ಸೇರಿದಂತೆ ಮಕ್ಕಳು, ಮೊಮ್ಮಕ್ಕಳೂ ಎಲ್ಲರೂ ಕೂಡ ಯುದ್ಧದಲ್ಲಿ ಸತ್ತುಹೋದರು. ಆಗ ಹೆಣ್ಣಿನ ವೇಷದಲ್ಲಿರುವ ನಾರದರು ರಣರಂಗಕ್ಕೆ ಬಂದು, ಗಂಡ, ಮಕ್ಕಳು, ಮೊಮ್ಮಕ್ಕಳು ಎಲ್ಲರೂ ಮಡಿದದ್ದನ್ನು ಕಂಡು ಗೋಳಾಡಲು ಪ್ರಾರಂಭಮಾಡಿದರು. ಆಗ ಮಹಾವಿಷ್ಣು ಒಬ್ಬ ಮುದುಕನ ವೇಷದಲ್ಲಿ ಅಲ್ಲಿಗೆ ಬಂದನು. ನಾರದರನ್ನು ಸಾಂತ್ವನ ಮಾಡಿದನು. ಗಂಡನಿಗೆ ಮಕ್ಕಳು, ಮೊಮ್ಮಕ್ಕಳಿಗೆ ತಿಲೋದಕವನ್ನು ಕೊಡಿಸಿದನು. ಅನಂತರ ಸಮೀಪದಲ್ಲೇ ಇದ್ದ ಪುಂತೀರ್ಥದಲ್ಲಿ ಸ್ನಾನ ಮಾಡಲು ಹೇಳಿದನು. ಆಗ ಅಲ್ಲಿ ಸ್ನಾನ ಮಾಡಿದ ನಾರದರಿಗೆ ಪುರುಷರೂಪವು ಬಂದಿತು.
ಭಾಗವತದಲ್ಲಿ ಬರುವ ಕಥೆ ಹೀಗಿದೆ - ಚತುರ್ಮುಖಬ್ರಹ್ಮದೇವರ ತೊಡೆ- ಯಿಂದ ನಾರದರು ಹುಟ್ಟಿದರು. ಅನಂತರ ಚತುರ್ಮುಖಬ್ರಹ್ಮದೇವರ ಬಳಿ ನಾನು ಬ್ರಹ್ಮಚಾರಿಯಾಗಿಯೇ ಇರುತ್ತೇನೆಂದು ಆ ನಾರದರು ಹೇಳಿದರು. ಆಗ ಚತುರ್ಮುಖಬ್ರಹ್ಮದೇವರು ಸನಕಾದಿಗಳು ಈಗಾಗಲೇ ಬ್ರಹ್ಮಚಾರಿಗಳಾಗಿದ್ದಾರೆ. ಆದ್ದರಿಂದ ನೀನು ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡು ಎಂದು ಹೇಳಿದರು. ಆದರೆ ನಾರದರು ಸಾಧ್ಯವಿಲ್ಲವೆಂದು ಉತ್ತರಿಸಿದರು. ಕುಪಿತರಾದ ಬ್ರಹ್ಮದೇವರು ಒಂದು ವಿವಾಹವನ್ನು ಮಾಡಿಕೊಳ್ಳಲು ನಿರಾಕರಿಸಿದ ನಿನಗೆ ಐವತ್ತು ವಿವಾಹವಾಗಲಿ ಎಂದು ಶಾಪವನ್ನು ನೀಡಿದರು. ಮತ್ತು ಉಪಬರ್ಹಣ ಎಂಬ

ಗಂಧರ್ವ ಜನ್ಮದ ಮುಂದಿನ ಜನ್ಮದಲ್ಲಿ ಒಬ್ಬ ದಾಸಿಯ ಮಗನಾಗಿ ಹುಟ್ಟುವಿ. ಆ ಜನ್ಮದಲ್ಲಿಯೂ ದೊಡ್ಡ ಹರಿಭಕ್ತನಾಗುವಿ. ಅನಂತರ ನನ್ನ ಮಗನಾಗಿ ಜನಿಸುವಿ ಎಂಬುದಾಗಿ ಚತುರ್ಮುಖ- ಬ್ರಹ್ಮದೇವರು ಹೇಳುತ್ತಾರೆ.
ಚಿತ್ರಕೇತು ಎಂಬ ಗಂಧರ್ವನೊಬ್ಬನು ಶಿವನನ್ನು ಕುರಿತು ತಪಸ್ಸು ಮಾಡುತ್ತಾನೆ. ಅವನ ತಪಸ್ಸಿಗೆ ಶಿವನು ಮೆಚ್ಚುತ್ತಾನೆ. ನಾರದನು ನಿನ್ನ ಮಗನಾಗಿ ಜನಿಸುತ್ತಾನೆಂಬ ವರವನ್ನು ಶಿವನು ನೀಡುತ್ತಾನೆ. ಆಗ ನಾರದನಿಗೆ ಉಪಬರ್ಹಣ ಎಂಬುದಾಗಿ ನಾಮಕರಣವನ್ನು ಚಿತ್ರಕೇತುವು ಮಾಡುತ್ತಾನೆ.  ಆ ಉಪಬರ್ಹಣನು ದೊಡ್ಡ ಹರಿಭಕ್ತನಾಗಿದ್ದನು. ಬೃಹಸ್ಪತ್ಯಾಚಾರ್ಯರಿಂದಲೇ ಎಲ್ಲ ವಿದ್ಯೆಗಳ ಉಪದೇಶವಾ- ಗುತ್ತದೆ. ಹಿಮಾಲಯದ ತಪ್ಪಲಿನಲ್ಲಿ ಒಮ್ಮೆ ತಪಸ್ಸು ಮಾಡುತ್ತಿದ್ದರು. ಸಮಾಧ್ಯವ್ಯಸ್ಥೆ- ಯಲ್ಲಿ ಇದ್ದಾಗ ಚೈತ್ರರಥ ಎಂಬ ಗಂಧರ್ವನ ಐವತ್ತು ಮಕ್ಕಳು ಆ ತಪಸ್ಸು ಮಾಡುತ್ತಿರುವ ಸ್ಥಳಕ್ಕೆ ಆಗಮಿಸಿದರು. ಪ್ರಾರಂಭದಲ್ಲಿ ತಪಸ್ಸಿಗೆ ವಿಘ್ನ ಬಾರದಿದ್ದರೂ ಸ್ವಲ್ಪ ಕಾಲ ಕಳೆದ ಮೇಲೆ ಐವತ್ತು ಜನರನ್ನು ನೋಡಿ, ಮನಸ್ಸು ವಿಕಾರವಾಯಿತು. ಆ ಐವತ್ತು ಜನರ ಜೊತೆ ವಿವಾಹವಾದನು. ತನ್ನ ಅರಮನೆಯಲ್ಲಿ ಸುಖವಾಗಿ ಕಾಲಕಳೆಯುತ್ತಿದ್ದನು. ಈ ಉಪವರ್ಹಣನು ಸಂಗೀತ, ವೀಣೆ ಮೊದಲಾದವುಗಳಲ್ಲಿ ಪ್ರಾವೀಣ್ಯವನ್ನು ಪಡೆದಿದ್ದನು. ಒಮ್ಮೆ ದೇವತೆಗಳು ಈ ಉಪಬರ್ಹಣನನ್ನು ಬಹ್ಮಲೋಕಕ್ಕೆ ಕರೆದುಕೊಂಡು ಹೋದರು. ಉಪಬರ್ಹಣನು ದೇವತೆಗಳ ಜೊತೆ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ರಂಭೆಯೂ ಕೂಡ ಬಂದಿದ್ದಳು. ಆ ರಂಭೆಯನ್ನು ನೋಡಿ, ಈ ಉಪಬರ್ಹಣನಿಗೆ ಮನಸ್ಸು ವಿಕಾರವಾಯಿತು. ಇದನ್ನರಿತ ಪ್ರಜಾಪತಿಗಳಿಗೆ ಸಿಟ್ಟು ಬಂದಿತು. ಕೂಡಲೇ ಶಪಿಸಿದರು. ಇದರಿಂದ ಖಿನ್ನನಾದ ಉಪಬರ್ಹಣನು ತನ್ನ ಅರಮನೆಗೆ ಹಿಂತಿರುಗಿ ಬಂದು ಅತ್ಯಂತ ದುಃಖದಿಂದ ಪ್ರಾಯೋಗವೇಷಕ್ಕಾಗಿ ದರ್ಭಾಸನದ ಮೇಲೆ ಕುಳಿತುಬಿಟ್ಟನು. ಆ ಉಪಬರ್ಹಣನ ಹಿರಿಯ ಪತ್ನಿಯಾದ ಮಾಲತಿಯೆಂಬುವಳು ಇದನ್ನು ತಿಳಿದು ಎಲ್ಲ ಪ್ರಜಾಪತಿಗಳಿಗೆ ತಾನೇ ಶಾಪನೀಡುತ್ತೇನೆಂದು ಧಾವಿಸಿ ಹೊರಟಳು. ನನ್ನ ಪತಿಗೆ ಮರಣ ಬರುವಂತೆ ಏಕೆ ಶಾಪವನ್ನು ನೀಡಿದ್ದೀರಿ? ಎಂದು ಗದರಿಸಿದಳು. ಎಲ್ಲ ಪ್ರಜಾಪತಿಗಳು ವಿಷ್ಣುವನ್ನು ಮೊರೆಹೊಕ್ಕರು. ಮಹಾವಿಷ್ಣುವೇ ಬಂದು ಮಾಲತಿಗೆ ಸಮಾಧಾನ ಹೇಳಿದನು. ದೇವತೆಗಳೂ ಕೂಡ ಆ ಮಾಲತಿಗೆ ಸಮಾಧಾನದ ಮಾತುಗಳನ್ನು ಹೇಳಿದರು. ಹಿಂದೆ ಚತುರ್ಮುಖಬ್ರಹ್ಮನು ವರವನ್ನು ನೀಡಿದ್ದನು. ಅದಕ್ಕೆ ಅನುಗುಣವಾಗಿ ಈಗ ಉಪಬರ್ಹಣನು ಮರವಣವನ್ನು ಹೊಂದಿದರೂ ಕೂಡ ಚತುರ್ಮುಖಬ್ರಹ್ಮನಿಂದ ಹುಟ್ಟುತ್ತಾನೆಂದು ತಿಳಿಸಿದರು. ಪ್ರಜಾಪತಿಗಳ ಶಾಪದ ಪ್ರಭಾವದಿಂದ ಉಪಬರ್ಹಣನು ಮರಣವನ್ನು ಹೊಂದಿದನು. ಮೃತನಾದ ಮೇಲೆ ಮಹಾವಿಷ್ಣುವು ಮುದುಕು ಬ್ರಾಹ್ಮಣನ ವೇಷದಿಂದ ಅಲ್ಲಿಗೆ ಬಂದನು. ಎದ್ದೇಳು ಮೇಲೆ ಎಂಬುದಾಗಿ ಆ ಉಪಬರ್ಹಣನ ತಲೆಯ ಮೇಲೆ ಕೈ ಇಟ್ಟನು. ಕಣ್ಣು ತಿಕ್ಕಿ ಉಪಬರ್ಹಣನು ನಿದ್ದೆಯಿಂದ ಎಚ್ಚೆತ್ತವನಂತೆ ಬದುಕಿ ಬಂದನು. ಪುನಃ ತನ್ನ ಹೆಂಡಂದಿರ ಜೊತೆ ಸುಖವಾಗಿ ಬದುಕಿದನು. ಅನಂತರ ಆ ಐವತ್ತು ಮಂದಿ ಹೆಂಡಂದಿರಲ್ಲಿ ಮಕ್ಕಳು ಹುಟ್ಟಿದಳು. ಅವರಿಗೂ ಮಕ್ಕಳಾಗಿ ಸಂತಾನವು ಅಭಿ- ವೃದ್ಧವಾಯಿತು. ತಾನು ಪುನಃ ಮರಣವನ್ನು ಹೊಂದುತ್ತೇನೆಂದು ಅವನಿಗೆ ತಿಳಿಯಿತು. ಆ ಸಂದರ್ಭದಲ್ಲಿ ವಯೋವೃದ್ಧನಾದ ಉಪಬರ್ಹಣನು ಗಂಗಾನದಿ ತೀರಕ್ಕೆ ಮಾಲತಿಯ ಜೊತೆ ತೆರಳಿ ತಪಸ್ಸನ್ನು ಆಚರಿಸಿದನು. ಅಲ್ಲಿ ಮೃತನಾದನು. ಮಾಲತಿಯೂ ಕೂಡ ಮೃತಳಾದಳು.
ಆದರೆ ಪ್ರಚಲಿತ ಭಾಗವತದ ಏಳನೆಯ ಸ್ಕಂಧದಲ್ಲಿ ಉಪಬರ್ಹಣನ ಕಥೆಯು ಹೀಗಿರುವುದಿಲ್ಲ. ಸತ್ಯಲೋಕಕ್ಕೆ ಸಂಗೀತವನ್ನು ಹಾಡಲು ತೆರಳಿದ ಉಪಬರ್ಹಣನು ಸರಿಯಾದ ಸಂಗೀತ ಕಛೇರಿಯನ್ನು ನಡೆಸಲಿಲ್ಲ. ಅದಕ್ಕಾಗಿ ಪ್ರಜಾಪತಿಗಳು ಶಾಪವನ್ನು ನೀಡಿದರು ಎಂದು ಇರುತ್ತದೆ. ಇದೇ ಉಪಬರ್ಹಣನು ಮುಂದೆ ದಾಸಿಯ ಪುತ್ರನಾದ ಕಥೆಯು ಭಾಗವತದ ಪ್ರಥಮಸ್ಕಂಧದಲ್ಲಿ ಬರುತ್ತದೆ. ಕಾಮ್ಯಕುಬ್ಜ ಎಂಬ ಪಟ್ಟಣದಲ್ಲಿ ದ್ರುಮಿಳ ಎಂಬ ರಾಜನಿದ್ದನು. ಕಲಾವತಿ ಎಂಬು- ವಳು ಇವನ ಹೆಂಡತಿಯಾಗಿದ್ದಳು. ಇವನು ಗಂಗಾನದಿಯ ತೀರದಲ್ಲಿ ತಪಸ್ಸನ್ನು ಆಚರಿಸಿದನು. ಕಶ್ಯಪಋಷಿಗಳನ್ನು ಕಲಾವತಿಯು ಸಂತೋಷ ಪಡಿಸಿದಳು. ಕಶ್ಯಪ- ಋಷಿಗಳ ತಪಃಶಕ್ತಿಯಿಂದ ಅವಳು ತನ್ನ ಪತಿಯ ಮೂಲಕ ಗರ್ಭಿಣಿಯಾದಳು. ಪತಿಯು ವಿರಕ್ತನಾಗಿ ವಾನಪ್ರಸ್ಥಾಶ್ರಮಕ್ಕೆ ಹೊರಟಾಗ ತಾನೂ ಕೂಡ ಪತಿಯ ಸೇವೆ ಮಾಡಿಕೊಂಡು ಕಾಲವನ್ನು ಕಳೆಯುತ್ತೇನೆಂದು ಸಂಕಲ್ಪ ಮಾಡಿದಳು. ಆ ಸಂದರ್ಭದಲ್ಲಿ ನಿನ್ನ ಉದರದಲ್ಲಿ ಪುತ್ರನು ಬೆಳೆಯುತ್ತಿದ್ದಾನೆ. ಆದ್ದರಿಂದ ಪತಿಸೇವೆ- ಗಾಗಿ ವಾನಪ್ರಸ್ಥಾಶ್ರಮಕ್ಕೆ ತೆರಳಬೇಡ ಎಂದು ಆಕಾಶವಾಣಿ ಆಯಿತು. ಅನಂತರ ಪತಿಯೊಬ್ಬನೇ ವಾನಪ್ರಸ್ಥಾಶ್ರಮಕ್ಕೆ ಹೊರಟನು. ಇವಳು ತನ್ನ ದೇಶವನ್ನು ಬಿಟ್ಟು, ಮತ್ತೊಂದು ಊರಿಗೆ ಬಂದು, ಒಬ್ಬ ಬ್ರಾಹ್ಮಣ ಮನೆಯಲ್ಲಿ ಸೇವೆಗಾಗಿ ಸೇರಿಕೊಂಡಳು. ನವಮಾಸವು ತುಂಬಿದ ಮೇಲೆ ಸುಪುತ್ರನಿಗೆ ಜನ್ಮವನ್ನಿತ್ತಳು. ಆ ಊರಿಗೆ ದೊಡ್ಡ ಪ್ರಮಾಣದಲ್ಲಿ ಬರಗಾಲವು ಬಂದಿತ್ತು. ಈ ಮಗವು ಹುಟ್ಟಿದ ಕೂಡಲೇ ಧಾರಾಕಾರವಾಗಿ ಮಳೆಯು ಬಂದಿತ್ತು. `ನಾರ' ಶಬ್ದಕ್ಕೆ ನೀರು ಎಂಬರ್ಥವೂ ಇದೆ. ನೀರನ್ನು ಕೊಟ್ಟಿರುವ ಕಾರಣ ಮಗುವಿಗೆ `ನಾರದ' ಎಂದು ಹೆಸರನ್ನಿಟ್ಟರು. ಈ ಮಗುವು ದೊಡ್ಡವನಾದ ಮೇಲೆ ಆ ತಾಯಿಯು ಸರ್ಪದಿಂದ ಕಚ್ಚಿಸಿಕೊಂಡು ಮೃತಳಾದಳು. ಈ ಮಗುವು ಅನಾಥವಾಯಿತು. ಅನಂತರ ವಿರಕ್ತ- ರಾದ ನಾರದರು ತಪೋನಿರತರಾದರು. ಭಗವಂತನನ್ನು ತಮ್ಮ ಹೃದಯಕಮಲದಲ್ಲಿ ಕಂಡು ಜೀವನವನ್ನು ಸಾರ್ಥಕ ಮಾಡಿಕೊಂಡರು. ಇಷ್ಟು ಪ್ರಥಮಸ್ಕಂಧದಲ್ಲಿ ಬರುವ ಕಥೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ನಾರದರಿಂದ ಹೇಳಲ್ಪಟ್ಟ ಸುವರ್ಣಷ್ಠೀವಿ ಜನ್ಮಕಥನವೆಂಬ 32ನೆಯ ಅಧ್ಯಾಯವು ಮುಗಿಯಿತು.
*****
32. ಮೂವತ್ತೂರನೆಯ ಅಧ್ಯಾಯ
ವೇದ್ಯವ್ಯಾಸದೇವರು ಯುಕ್ತಿಯುಕ್ತವಾದ ಮಾತುಗಳಿಂದ ಯುಧಿಷ್ಠಿರನನ್ನು ಸಮಾಧಾನ ಮಾಡುತ್ತಾರೆ. ಅನೇಕ ತತ್ವಗಳನ್ನು ಹೇಳುವ ಮೂಲಕ ಕ್ಷತ್ರಿಯ ಧರ್ಮದ ಪರಿಪಾಲನೆಯ ಬಗ್ಗೆ ಉಪದೇಶಿಸುತ್ತಾರೆ.
ವೈಶಂಪಾಯನಃ
ತೂಷ್ಣೀಂಭೂತಂ ತು ರಾಜಾನಂ ಶೋಚಮಾನಂ ಯುಧಿಷ್ಠಿರಮ್ |
ತಪಸ್ವೀ ಧರ್ಮತತ್ತ್ವಜ್ಞಃ ಕೃಷ್ಣದ್ವೈಪಾಯನೋಽಬ್ರವೀತ್ ॥1॥
ವೈಶಂಪಾಯನರು  ಜನಮೇಜಯರಾಜನೇ ! ನಾರದರು ವಿವರವಾಗಿ ಇಷ್ಟು ಹೇಳಿದರೂ ಕೂಡ ಯುಧಿಷ್ಠಿರನ ದುಃಖವು

ಶಮನವಾಗಲಿಲ್ಲ. ಮೌನವಾಗಿಯೇ ಕುಳಿತುಬಿಟ್ಟನು. ಆಗ ಎಲ್ಲ ಧರ್ಮಗಳ ಮರ್ಮವನ್ನು ಪೂರ್ಣವಾಗಿ ಅರಿತ ಕೃಷ್ಣದ್ವೈಪಾಯನರು ರಾಜನಾದ ಧರ್ಮರಾಜನನ್ನು ಕುರಿತು ಹೀಗೆ ಉಪದೇಶಿಸಲು ಪ್ರಾರಂಭ ಮಾಡುತ್ತಾರೆ.
ಪ್ರಜಾನಾಂ ಪಾಲನಂ ಧರ್ಮೋ ರಾಜ್ಞಾಂ ರಾಜೀವಲೋಚನ |
ಧರ್ಮಃ ಪ್ರಮಾಣಂ ಲೋಕಸ್ಯ ನಿತ್ಯಂ ಧರ್ಮಾನುವರ್ತನಮ್ ॥2॥
ರಾಜೀವಲೋಚನನೇ! ರಾಜರಿಗೆ ಪ್ರಜೆಗಳನ್ನು ಪರಿಪಾಲನೆ ಮಾಡುವುದೇ ಪರಮಧರ್ಮವಾಗಿದೆ. ನಿರಂತರ ಧರ್ಮವನ್ನು ಅನುಸರಿಸುವವರಿಗೆ ಧರ್ಮವೇ ಪ್ರಮಾಣವಾಗಿರುತ್ತದೆ.
ಅನುತಿಷ್ಠಸ್ವ ವೈ ರಾಜನ್ ಪಿತೃಪೈತಾಮಹಂ ಪದಮ್ |
ಬ್ರಾಹ್ಮಣೇಷು ಚ ಯೋ ಧರ್ಮಃ ಸ ನಿತ್ಯೋ ವೇದನಿಶ್ಚಿತಃ ॥3॥
ರಾಜನೇ! ನೀನು ಧರ್ಮಮಾರ್ಗದಲ್ಲಿಯೇ ಮುನ್ನಡೆಯಬೇಕು. ನಿನ್ನ ತಂದೆ, ತಾತಂದಿರ ಮಾರ್ಗವನ್ನೇ ನೀನು ಹಿಂಬಾಲಿಸಬೇಕು. ಅವರೆಲ್ಲರೂ ಧರ್ಮಕ್ಕೆ ಅನುಸಾರಿಯಾಗಿ ರಾಜ್ಯವನ್ನು ಪರಿಪಾಲನೆ ಮಾಡುತ್ತಿದ್ದರು. ಅದರಂತೆ ನೀನೂ ಕೂಡ ಈ ರಾಜ್ಯವನ್ನು ಪರಿಪಾಲನೆ ಮಾಡು. ಬ್ರಾಹ್ಮಣನಿಗೆ ತಪಸ್ಸನ್ನು ಮಾಡುವುದು ಧರ್ಮವಾಗಿದೆ. ಇದು ಶಾಶ್ವತವಾಗಿ ಪ್ರಮಾಣಭೂತವಾದ ವೇದಗಳಿಂದ ನಿರ್ಧರಿ- ಸಲ್ಪಟ್ಟಿದೆ.
ತತ್ ಪ್ರಮಾಣಂ ಪ್ರಮಾಣಾನಾಂ ಶಾಶ್ವತಂ ಭರತರ್ಷಭ |
ತಸ್ಯ ಧರ್ಮಸ್ಯ ಕೃತ್ಸ್ನಸ್ಯ ಕ್ಷತ್ರಿಯಃ ಪರಿರಕ್ಷಿತಾಃ ॥4॥
ಬ್ರಾಹ್ಮಣ ಮೊದಲಾದ ಎಲ್ಲಾ ವರ್ಣದವರ ಧರ್ಮಗಳಿಗೆ ಕ್ಷತ್ರಿಯರಾದ ರಾಜರೇ ಪರಿರಕ್ಷಕನು.
ತಥಾ ಯಃ ಪ್ರತಿಹಂತ್ಯಸ್ಯ ಶಾಸನಂ ವಿಷಯೇ ನರಃ |
ಸ ಬಾಹುಭ್ಯಾಂ ವಿನಿಗ್ರಾಹ್ಯೋ ಲೋಕಯಾತ್ರಾವಿಘಾತಕಃ ॥5॥
ಯಾವ ಕ್ಷತ್ರಿಯನು ವಿಷಯಲೋಲುಪನಾಗಿ ಧರ್ಮಕ್ಕೆ ವಿರುದ್ಧವಾಗಿ ನಡೆ- ಯುತ್ತಾನೋ, ಅವನು ಲೋಕಯಾತ್ರೆಗೆ ವಿಘಾತಕನಾಗುತ್ತಾನೆ. ಕ್ಷತ್ರಿಯನಾದವನು ಅಂಥ ಸಮಾಜಘಾತಕನನ್ನು ತನ್ನೆರಡು ಭುಜಪರಾಕ್ರಮದಿಂದ ನಿಗ್ರಹ ಮಾಡಬೇಕು. (ಅಥವಾ ಅವನ ತೋಳುಗಳನ್ನೇ ತುಂಡರಿಸಬೇಕು.)
ಪ್ರಮಾಣಮಪ್ರಮಾಣಂ ಯಃ ಕುರ್ಯಾನ್ಮೋಹವಶಂ ಗತಃ |
ಭೃತ್ಯೋ ವಾ ಯದಿ ವಾ ಪುತ್ರಸ್ತಪಸ್ವೀ ವಾಪಿ ಕಶ್ಚನ ॥6॥
ಪಾಪಾನ್ ಸರ್ವೈರುಪಾಯೈಸ್ತಾನ್ ನಿಯಚ್ಛೇದ್ ಘಾತಯೇತ ವಾ ॥
ಯಾವ ವ್ಯಕ್ತಿಯು ಮೋಹಪಾಶಕ್ಕೆ ಸಿಲುಕಿ ಪ್ರಮಾಣವನ್ನು ಅಪ್ರಮಾಣವನ್ನಾಗಿ ಮಾಡುತ್ತಾನೋ, ಅಂಥವನು ಭೃತ್ಯನಾಗಿರಲಿ, ಪುತ್ರನಾಗಿರಲಿ, ತಪಸ್ವಿಯಾಗಿರಲಿ ಅಥವಾ ಬೇರೆ ಯಾರೇ ಆಗಿರಲಿ ಎಲ್ಲಾ ವಿಧವಾದ ಉಪಾಯಗಳಿಂದ ಆ ಪಾಪಿಯನ್ನು ವಿನಾಶಗೊಳಿಸಬೇಕು. ಅಥವಾ ಮತ್ತೊಬ್ಬರಿಂದಲಾದರೂ ಕೊಲ್ಲಿಸ- ಬೇಕು.
ಅತೋಽನ್ಯಥಾ ವರ್ತಮಾನೋ ರಾಜಾ ಪ್ರಾಪ್ನೋತಿ ಕಿಲ್ಬಿಷಮ್ |
ಧರ್ಮಂ ವಿನಶ್ಯಮಾನಂ ಹಿ ಯೋ ನ ರಕ್ಷೇತ್ ಸ ಧರ್ಮಹಾ ॥7॥
ಒಂದು ವೇಳೆ ಪಾಪಿಯಾದವನನ್ನೂ ಕೂಡ ನಿಗ್ರಹ ಮಾಡದೇ ಕ್ಷಮಿಸಿಬಿಟ್ಟರೆ, ಆ ರಾಜನೂ ಕೂಡ ಪಾಪಿಯ ಪಾಪಕ್ಕೆ ಭಾಗಿಯಾಗುತ್ತಾನೆ. ಕ್ರಮೇಣ ನಾಶ- ಹೊಂದುವ ಧರ್ಮವನ್ನು ಸಂರಕ್ಷಣೆ ಮಾಡದ ರಾಜನೂ ಕೂಡ ಧರ್ಮ- ಘಾತುಕನೇ ಆಗುತ್ತಾನೆ.

ತೇ ತ್ವಯಾ ಧರ್ಮಹಂತಾರೋ ನಿಹತಾಃ ಸಪದಾನುಗಾಃ |
ಸ್ವಧರ್ಮೇ ವರ್ತಮಾನಸ್ತ್ವಂ ಕಿನ್ನು ಶೋಚಸಿ ಪಾಂಡವ ॥8॥
ರಾಜಾ ಹಿ ಹನ್ಯಾದ್ ದದ್ಯಾಚ್ಚ ಪ್ರಜಾ ರಕ್ಷೇಚ್ಚ ಧರ್ಮತಃ ॥
ಯುಧಿಷ್ಠಿರನೇ! ನೀನು ಅತ್ಯಂತಯೋಗ್ಯವಾದ ಕಾರ್ಯವನ್ನು ಮಾಡಿರುವಿ. ಆ ದುರ್ಯೋಧನಾದಿಗಳು ಧರ್ಮಘಾತುಕರಾಗಿದ್ದರೂ ನೀನು ಅದನ್ನು ಸಹಕರಿಸಿದ ಅವರ ಪರಿವಾರಗಳ ಜೊತೆ ನಿಗ್ರಹ ಮಾಡಿರುವಿ. ಇದಕ್ಕೋಸ್ಕರ ಏಕೆ ದುಃಖ- ಪಡುತ್ತಿರುವಿ? ರಾಜನಾದವನು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲಲೇ ಬೇಕು. ಅರ್ಥಿಗಳಾದ ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡಬೇಕು.
ಯುಧಿಷ್ಠಿರಃ
ನ ತೇಽಭಿಶಂಕೇ ವಚನಂ ಯದ್ ಬ್ರವೀಷಿ ತಪೋಧನ |
ಅಪರೋಕ್ಷೋ ಹಿ ತೇ ಧರ್ಮಃ ಸರ್ವಧರ್ಮಭೃತಾಂ ವರ ॥9॥
ಯುಧಿಷ್ಠಿರ ತಪೋಧನರೇ! ತಾವು ಹೇಳುವ ಮಾತುಗಳಲ್ಲಿ ನನಗೆ ಸಂಶಯ -ವಿಲ್ಲ. ತಾವು ಸಂಪೂರ್ಣವಾಗಿ ಧರ್ಮವನ್ನು ಅರಿತವರು. ಎಲ್ಲ ಧರ್ಮಗಳನ್ನು ಪ್ರತ್ಯಕ್ಷವಾಗಿ ಕಾಣುವವರು.
ಮಯಾ ಹ್ಯವಧ್ಯಾ ಬಹವೋ ಘಾತಿತಾ ರಾಜ್ಯಕಾರಣಾತ್ |
ತಾನ್ಯಕಾರ್ಯಾಣಿ ಮೇ ಬ್ರಹ್ಮನ್ ದಹಂತಿ ಚ ತಪಂತಿ ಚ ॥10॥
ಆದರೆ ನಾನು ಕೊಲ್ಲಬಾರದ ಅನೇಕ ರಾಜರನ್ನು ಸಂಹಾರ ಮಾಡಿಬಿಟ್ಟೆನು. ಇದುವೇ ನನ್ನ ಪರಿತಾಪಕ್ಕೆ ಕಾರಣವಾಗಿದೆ. ಅವಧ್ಯರಾದ ಅನೇಕರನ್ನು ಸಂಹಾರ ಮಾಡಿರುವುದೇ ನನ್ನ ಮನಸ್ಸನ್ನು ಸುಡುತ್ತಿದೆ. ಮತ್ತು ದಹಿಸುತ್ತಿದೆ.
ವ್ಯಾಸಃ
ಈಶ್ವರೋ ವಾ ಭವೇತ್ ಕರ್ತಾ ಪುರುಷೋ ವಾಪಿ ಭಾರತ |
ಭದ್ರೋ ವಾ ವರ್ತತೇ ಲೋಕೇ ಕರ್ಮಜಂ ವಾ ಫಲಂ ಸ್ಮೃತಮ್ ॥11॥
ವೇದವ್ಯಾಸದೇವರು ಭಾರತನೇ! ನೀನು ವಿಮರ್ಶೆ ಮಾಡು. ಎಲ್ಲ ಕರ್ಮ- ಗಳನ್ನು ಮಾಡುವವನು ಈಶ್ವರನೋ? ಅಥವಾ

ಮನುಷ್ಯನೋ? ಸುಖ- ದುಃಖಾದಿಗಳು ಲೋಕದಲ್ಲಿ ಹೇಗೆ ಬರುತ್ತದೆ? ಆ ಸುಖ-ದುಃಖಗಳು ಅವರವರ ಕರ್ಮದಿಂದ ಉಂಟಾಗುತ್ತವೆಯೇ? ಇದರ ಬಗ್ಗೆ ಯೋಚನೆ ಮಾಡು.
ಟಿಪ್ಪಣಿ- ಭದ್ರೇ ವಾ ವರ್ತತೇ ಲೋಕ ಇತ್ಯತ್ರ ವಾಪದೇನ ಅಭದ್ರೇ ವರ್ತತ ಇತ್ಯಧ್ಯಾಹಾರಣೀಯಮ್ | ಕರ್ಮಜಮ್ ಉಭಯವಿಧಕರ್ಮಜಂ ಫಲಂ ಸ್ಮೃತಂ ಸ್ಮೃತಿಯುಕ್ತಮ್ |
`ಭದ್ರೇ ವಾ ವರ್ತತೇ ಲೋಕೇ' ಎಂಬಲ್ಲಿರುವ `ವಾ' ಪದದಿಂದ `ಅಭದ್ರೇ ವರ್ತತೇ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಕರ್ಮಜಮ್ ಎಂಬುದಕ್ಕೆ ಉಭಯವಿಧವಾದ ಕರ್ಮದಿಂದ ಹುಟ್ಟಿದಎಂದರ್ಥ. ಫಲಂ ಸ್ಮೃತಂ ಎಂದರೆ ಸ್ಮೃತಿಯಿಂದ ಸಿದ್ಧವಾಗಿದೆ ಎಂದರ್ಥ.
ವಿವರಣೆ - ಯುಧಿಷ್ಠಿರನು ಅವಧ್ಯರಾದವರನ್ನು ವಧಿಸಿಬಿಟ್ಟೆ ಎಂದು ಹೇಳುತ್ತಿದ್ದಾನೆ. ಇದಕ್ಕೆ ವೇದವ್ಯಾಸದೇವರು ವಿಮರ್ಶಾತ್ಮಕವಾಗಿ ಉತ್ತರವನ್ನು ನೀಡುತ್ತಿದ್ದಾರೆ. ಯುಧಿಷ್ಠಿರನೇ ! ನಿನ್ನ ಮಾತುಗಳಿಂದ ನೀನೇ ಸರ್ವಕರ್ತಾ ಎಂದು ತಿಳಿಯುತ್ತಿದೆ. ಇದು ಹೇಗೆ ಸರಿ ? ಎಂಬುದನ್ನು ವಿಮರ್ಶೆ ಮಾಡು. ಯಾವುದನ್ನು ಸುಲಭವಾಗಿ ನಿರ್ಧರಿಸಲು ಆಗುವುದಿಲ್ಲ. ಎಲ್ಲ ಶುಭಾಶುಭ ಕರ್ಮಗಳಿಗೆ ಈಶ್ವರನೇ ಪ್ರೇರಕನಾಗಿರುತ್ತಾನೆ. ಮತ್ತು ಮನುಷ್ಯನು `ನಾನು ಕರ್ತಾ' ಎಂದಷ್ಟೇ ತಿಳಿದುಬಿಡುತ್ತಾನೆ. ವಾಸ್ತವಿಕವಾಗಿ ಮನುಷ್ಯನು ಈಶ್ವರನ ಅಧೀನವಾದ ಕರ್ತೃತ್ವ- ವನ್ನಷ್ಟೇ ಹೊಂದಿರುತ್ತಾನೆ. ಆ ಮನುಷ್ಯನ ಯೋಗ್ಯತೆ ಅವನು ಪೂರ್ವಜನ್ಮದಲ್ಲಿ ಮಾಡಿದ ಕಾರಣಗಳು ಪ್ರತಿಯೊಂದು ಕಾರ್ಯಗಳ ಹಿಂದೆ ಕಾರಣಭೂತವಾಗಿ ಇರುತ್ತವೆ. ಸುಖ-ದುಃಖಗಳೆಲ್ಲವೂ ತಮ್ಮ ಹಿಂದಿನ ಕರ್ಮದ ಅಧೀನವಾಗಿಯೇ ನಡೆಯುತ್ತದೆ. ಹೀಗಿರುವಾಗ ಎಲ್ಲವನ್ನು ನಾನೇ ಮಾಡಿಬಿಟ್ಟೆ ಎಂಬ ಕರ್ತೃತ್ವಾ- ಭಿಮಾನವನ್ನೇಕೆ ಮಾಡುತ್ತಿರುವಿ ಎಂದಭಿಪ್ರಾಯ.
ಈಶ್ವರೇಣ ನಿಯುಕ್ತಾ ಹಿ ಸಾಧ್ವಸಾಧು ಚ ಪಾರ್ಥಿವ |
ಕುರ್ವಂತಿ ಪುರುಷಾಃ ಕರ್ಮ ಫಲಮೀಶ್ವರಗಾಮಿ ತತ್ ॥12॥
ಮನುಷ್ಯನಾದವನು ಈಶ್ವರನ ಪ್ರೇರಣೆಗೆ ಒಳಪಟ್ಟು ಕರ್ಮಗಳನ್ನು ನಡೆಸು- ತ್ತಾನೆ. ಜೀವನು ಮಾಡುವ ಶುಭಾಶುಭಕರ್ಮಗಳೆರಡಕ್ಕೂ ಈಶ್ವರನೇ ಮುಖ್ಯ- ಕಾರಣನು. ಆದ್ದರಿಂದ ಪುರುಷನು ಮಾಡುವ ಶುಭಾಶುಭಕರ್ಮಗಳ ಫಲವು ಈಶ್ವರನಿಗೆ ತಲಪುತ್ತದೆ.
ಟಿಪ್ಪಣಿ- ಫಲಮೀಶ್ವರಗಾಮಿ ತದ್ ಇತ್ಯತ್ರ ಈಶ್ವರಗಾಮಿ ಲೋಕದೃಷ್ಟ್ಯಾ ಈಶ್ವರಗಾಮಿ | ತಸ್ಯ ಚಾತಿಸಮರ್ಥತ್ವಾತ್ ನ ಫಲಭೋಕ್ತೃತೇತಿ ಭಾವಃ | ತರ್ಹಿ ನಿಷ್ಫಲಂ ಕರ್ಮೇತ್ಯತ ಆಹ - ಅಥವಾ ಇತಿ ॥
`ಈಶ್ವರಗಾಮಿ' ಎಂಬುದಕ್ಕೆ ಲೋಕದೃಷ್ಟಿಯಿಂದ ಈಶ್ವರನನ್ನು ಹೊಂದುತ್ತವೆ ಎಂದಷ್ಟೇ ಅರ್ಥ. ಈಶ್ವರನು ಅತ್ಯಂತ ಸಮರ್ಥನಾದ್ದರಿಂದ ಯಾವುದೇ ಫಲಭೋಕ್ತೃತ್ವ ಅವನಲ್ಲಿ ಬರುವುದಿಲ್ಲ. ಹಾಗಾದರೆ ಎಲ್ಲ ಕರ್ಮಗಳು ನಿಷ್ಫಲವಾಗುತ್ತವಲ್ಲವೇ ? ಎಂಬ ಪ್ರಶ್ನೆಗೆ ಮುಂದಿನ ಅಥವಾ ಎಂಬ ಶ್ಲೋಕವು ಉತ್ತರಿಸುತ್ತಿದೆ.
ಟಿಪ್ಪಣಿ - ತೇನವಿನಾ ತೃಣಮಪಿ ಅಚಲತಿ' ಈಶ್ವರನಿಲ್ಲದೇ ಹುಲ್ಲೂ ಸಹ ಚಲಿಸುವುದಿಲ್ಲ ಎಂಬ ಮಾತಿನಂತೆ ಪ್ರತಿಯೊಬ್ಬರೂ ಮಾಡುವ ಕಾರ್ಯಗಳಿಗೂ ಈಶ್ವರನೇ ಪ್ರೇರಕನಾಗಿರುತ್ತಾನೆ. ಆದ್ದರಿಂದ ಅದರ ಫಲವೂ ಕೂಡ ಈಶ್ವರನನ್ನೇ ಹೊಂದುತ್ತದೆ. ಇದರ ಅಭಿಪ್ರಾಯ ನಾವು ಮಾಡುವ ಕೆಟ್ಟಕೆಲಸ ಮತ್ತು ಒಳ್ಳೆಯ ಕೆಲಸದಿಂದ ಈಶ್ವರನಿಗೆ ದುಃಖವಾಗುತ್ತದೆ ಅಥವಾ ಸುಖವಾಗುತ್ತದೆಂದರ್ಥವಲ್ಲ. ಸರ್ವತಂತ್ರಸ್ವತಂತ್ರನಾದ್ದರಿಂದ ಪ್ರಾಕೃತವಾದ ಸುಖ-ದುಃಖಗಳೆರಡೂ ಅವನಿಗೆ ತಟ್ಟುವುದೇ ಇಲ್ಲ. ಆದ್ದರಿಂದ ಎಲ್ಲವೂ ಈಶ್ವರನನ್ನು ಸೇರುವಂತೆ ಇವುಗಳೂ ಕೂಡ ಈಶ್ವರನನ್ನು ಸೇರುತ್ತವೆ ಎಂದರೆ ಅವನ ಅಧೀನವಾಗಿ ಇರುತ್ತವೆ ಎಂದಷ್ಟೇ ಅಭಿಪ್ರಾಯವನ್ನು ವಿವಕ್ಷಿಸಬೇಕು.
ಯಥಾ ಹಿ ಪುರುಷಶ್ಛಿಂದ್ಯಾದ್ ವೃಕ್ಷಂ ಪರಶುನಾ ವನೇ |
ಛೇತ್ತುರೇವ ಭವೇತ್ ಪಾಪಂ ಪರಶೋರ್ನ ಕಥಂಚನ ॥13॥
ಒಬ್ಬ ಮನುಷ್ಯನು ಕೊಡಲಿಯಿಂದ ಮರವನ್ನು ಕಡಿದಾಗ ಅದರಿಂದ ಬರುವ ಪಾಪವು ಕಡಿಯುವ ವ್ಯಕ್ತಿಗೆ ಬರುತ್ತದೆ ಹೊರತು, ಕೊಡಲಿಗೆ ಬರುವುದಿಲ್ಲ.
ಅಥವಾ ತದುಪಾದಾನಾತ್ ಪ್ರಾಪ್ನುಯುಃ ಕರ್ಮಣಃ ಫಲಮ್ |
ದಂಡಶಸ್ತ್ರಕೃತಂ ಪಾಪಂ ಪುರುಷೇ ತನ್ನ ವಿದ್ಯತೇ ॥14॥
ಕೊಡಲಿಯು ಛೇದನಕ್ರಿಯೆಗೆ ಉಪಾದಾನ ಕಾರಣವಾಗಿದೆ. ಅಚೇತನವಾದ ಕೊಡಲಿಗೆ ಪಾಪವು ಬರಲು ಸಾಧ್ಯವಿಲ್ಲವೆಂದು ಹೇಳಿದರೆ, ಆ ಕೊಡಲಿಯನ್ನು ನಿರ್ಮಾಣ ಮಾಡಿದ ವ್ಯಕ್ತಿಗೆ ಪಾಪವು ಕತ್ತರಿಸುವವನಿಗೆ ಬರುತ್ತದೆ, ಕೊಡಲಿಗೆ ಬರುವುದಿಲ್ಲ.
ಟಿಪ್ಪಣಿ - ಒಬ್ಬ ಪುರುಷನು ಮರವನ್ನು ಕಡಿಯುತ್ತಾನೆ. ಆ ವೃಕ್ಷವನ್ನು ಕಡಿ- ಯುವುದರಿಂದ ಅವನಿಗೆ ಪಾಪವು ಬರುತ್ತದೆ. ಇಂಥ ಸಂದರ್ಭದಲ್ಲಿ ಕೊಡಲಿಗೆ ಪಾಪವು ಸರ್ವಥಾ ಬರುವುದಿಲ್ಲ. ಕೊಡಲಿಯಿಂದ ವೃಕ್ಷವನ್ನು ಕತ್ತರಿಸುವವನಿಗಷ್ಟೇ ಪಾಪವು ಬರುತ್ತದೆ. ಕೊಡಲಿಯು ಇಲ್ಲಿಯ ಮರವನ್ನು ಕಡಿದಿದ್ದರೂ ಕೂಡ ಅದು ಉಪಾದಾನಕಾರಣವಾಗಿರುವುದರಿಂದ, ಮತ್ತು ಜಡವಾಗಿರುವುದರಿಂದ ತಾನೇ ಕತ್ತರಿಸಿದೆ ಎಂದು ಅದು ಹೇಳಿಕೊಳ್ಳುವುದಿಲ್ಲ. ಪುರುಷನಾದವನು ಕೊಡಲಿಯ ಪಾತ್ರವನ್ನು ಹೇಳದೇ ತಾನೇ ಸಂಪೂರ್ಣವಾಗಿ ಕತ್ತರಿಸಿಬಿಟ್ಟೆ ಎಂದು ಹೇಳಿ- ಕೊಳ್ಳುತ್ತಾನೆ. ಆದ್ದರಿಂದ ಪಾಪಭಾಗಿಯಾಗುತ್ತಾನೆ. ಅದರಂತೆ ಇಲ್ಲಿಯೂ ಕೂಡ ಈಶ್ವರಪ್ರೇರಣೆಯನ್ನು ಮರೆತು ಎಲ್ಲವನ್ನೂ ತಾನೇ ಮಾಡಿದೆ ಎಂದು ಹೇಳಿದರೆ ಎಲ್ಲಾ ಫಲಗಳಿಗೆ ಆ ಜೀವನು ಭಾಗಿಯಾಗುತ್ತಾನೆ.
ಟಿಪ್ಪಣಿ - ತದುಪಾದಾನಾದ್ ಇತ್ಯತ್ರ ತೇನ ಈಶ್ವರೇಣ ಉಪಾದಾನಾತ್ ಜಡವಿಲಕ್ಷಣಜೀವಸ್ಯ ಈಷತ್ಕರ್ತೃತ್ವಸಂಭವೇನ ಫಲೋಪಾದಾನಾತ್ |
`ತದುಪಾದಾನಾದ್' ಎಂಬಲ್ಲಿ ಆ ಫಲಕ್ಕೆ ಜೀವನು ಉಪಾದಾನನಾಗಿದ್ದಾನೆ. ಜಡವಿಲಕ್ಷಣನಾಗಿರುವುದರಿಂದ ಈಷತ್ಕೃತ್ವವು ಜೀವನಿಗೆ ಬರುತ್ತದೆ ಎಂದಭಿಪ್ರಾಯ.
ನ ಚೈತದಿಷ್ಟಂ ಕೌಂತೇಯ ಯದನ್ಯೇನ ಫಲಂ ಕೃತಮ್ |

ಪ್ರಾಪ್ನುಯಾದಿತಿ ತಸ್ಮಾಚ್ಚ ಈಶ್ವರೇ ತನ್ನಿವೇಶಯ ॥15॥
ಒಬ್ಬನು ಮಾಡಿದ ಕರ್ಮಕ್ಕೆ ಮತ್ತೊಬ್ಬನು ಭಾಗಿಯಾಗುತ್ತಾನೆ ಎಂದು ಹೇಳುವುದೂ ಕೂಡ ಸಮ್ಮತವಲ್ಲ. ಆದ್ದರಿಂದ ನೀನೂ ಸಹ ನಿನ್ನನ್ನು ಅಚೇತನ ಸ್ಥಾನದಲ್ಲಿ ತಿಳಿದು ಕರ್ಮಫಲವನ್ನು ಈಶ್ವರನಿಗೆ ಒಪ್ಪಿಸು.
ಟಿಪ್ಪಣಿ - ಯದ್ಯನ್ಯೇನ ಫಲಂ ಕೃತಮ್ ಇತ್ಯತ್ರ ಯದಿ ಅನ್ಯೇನ ಕೃತಂ ಫಲಮ್ ಅನ್ಯಃ ಪ್ರಾಪ್ನುಯಾದಿತಿ ನೇಷ್ಟಮ್, ತರ್ಹಿ ತತ್ ಸಾಮರ್ಥ್ಯಂ ಈಶ್ವರೇ ನಿವೇಶಯ, ಈಶ್ವರಸಾಮರ್ಥ್ಯಯದೇತಜ್ಞಾತಮಿತಿ ಸ್ಮರ |
`ಯದಿ ಅನ್ಯೇನ ಕೃತಂ ಫಲಮ್ ಅನ್ಯಃ ಪ್ರಾಪ್ನ' ಯುದ್ಧದಲ್ಲಿ ಶತ್ರುಗಳನ್ನು ನಿಗ್ರಹ ಮಾಡಿದ ಸಾಮರ್ಥ್ಯವು ಈಶ್ವರಾಧೀನವೆಂದು ತಿಳಿದುಬಿಡು.
ಅಥಾಪಿ ಪುರುಷಃ ಕರ್ತಾ ಕರ್ಮಣೋಃ ಶುಭಪಾಪಯೋಃ |
ನ ಪರಂ ವಿದ್ಯತೇ ತಸ್ಮಾದೇವಮನ್ಯಚ್ಛುಭಂ ಕುರು ॥16॥
ಒಂದುವೇಳೆ ಪುರುಷನು ಈಶ್ವರಾಧೀನವಾದ ಕರ್ತೃತ್ವವನ್ನು ಹೊಂದಿದ್ದಾನೆಂದು ಒಪ್ಪುವುದಾದರೆ ಪುಣ್ಯಕರ್ಮ ಹಾಗೂ ಪಾಪಕರ್ಮಗಳಿಗೆ ಪುರುಷನು ಕಾರಣ- ನಾಗುತ್ತಾನೆ. ಈಶ್ವರದತ್ತವಾದ ಕರ್ತೃತ್ವಕ್ಕಿಂತ ಮತ್ತೊಂದು ಕಾರಣವಿಲ್ಲದ್ದರಿಂದ ನೀನು ಶುಭಕರ್ಮವನ್ನೇ ಆಚರಿಸಬೇಕು.
ಟಿಪ್ಪಣಿ-ಅಥಾಪಿ ಪುರುಷಃ ಕರ್ತಾ ಇತ್ಯತ್ರ ಅಥಾಪಿ ಈಶ್ವರಸ್ಯ ಸರ್ವಕರ್ತೃತ್ವೇಽಪಿ | ತಸ್ಮಾದ್ ಈಶ್ವರದತ್ತಕರ್ತೃತ್ವಾತ್ | `ಅಥಾಪಿ' ಈಶ್ವರನು ಸರ್ವಕರ್ತೃವಾದರೂ ಕೂಡ, `ತಸ್ಮಾದ್' ಈಶ್ವರನಿಂದ ಕೊಡಲ್ಪಟ್ಟ ಕರ್ತೃತ್ವ ಇರುವುದರಿಂದ ಎಂದರ್ಥ.
ವಿವರಣೆ - ಈ ಶ್ಲೋಕಕ್ಕೆ ಅನೇಕ ರೀತಿಯಲ್ಲಿ ವ್ಯಾಖ್ಯಾನಗಳನ್ನು ಮಾಡುತ್ತಾರೆ. ಶುಭಾಶುಭಕರ್ಮಗಳಿಗೆ ದೈವವು ಕಾರಣವೇ ಅಲ್ಲ ಎಂದು ನೀನು ತಿಳಿಯುವುದಾದರೆ, ಈಶ್ವರನು ಕೇವಲ ಸಾಕ್ಷಿಮಾತ್ರ ಆಗುತ್ತಾನೆ. ಆದ್ದರಿಂದ ನೀನು ದುಃಖಿಸಲು ಕಾರಣವಿಲ್ಲವೆಂದು ಆಪಾತತಃ ಇದರ ಅರ್ಥವು ತೋರುತ್ತದೆ. ಆದರೆ ವೇದವ್ಯಾಸ- ದೇವರು ಹೀಗೆ ಈಶ್ವರನಲ್ಲಿ ಸರ್ವತಂತ್ರ ಕರ್ತೃತ್ವವನ್ನು ನಿರಾಕರಣೆ ಮಾಡಿ ಉತ್ತರಿಸಲು ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಸ್ವತಂತ್ರ ಕರ್ತೃವಾಗಿದ್ದಾನೆ. ಆದರೂ ಕೂಡ ಜೀವನಲ್ಲಿ ಅಸ್ವತಂತ್ರ ಕರ್ತೃತ್ವವನ್ನು ಒಪ್ಪಿ ನೀನು ಮಾತನಾಡುವುದಾದರೆ ಎಂಬಭಿಪ್ರಾಯವನ್ನೇ ಅಥಾಪಿ ಎಂಬ ಪದಕ್ಕೆ ವಿವಕ್ಷಿಸಬೇಕು. ಇದನ್ನು ಲಕ್ಷ್ಮಾಂಲಂಕಾರದಲ್ಲಿ ಸ್ಪಷ್ಟಪಡಿಸಿದ್ದಾರೆ.
ನಹಿ ಕಶ್ಚಿತ್ ಕ್ವಚಿದ್ ರಾಜನ್ ದಿಷ್ಟಂ ಪ್ರತಿನಿವರ್ತತೇ |
ದಂಡಶಸ್ತ್ರಕೃತಂ ಪಾಪಂ ಪುರುಷೇ ತನ್ನ ವಿದ್ಯತೇ ॥17॥
ಯಾರೇ ಆಗಲಿ, ಎಲ್ಲಿಯೇ ಆಗಲಿ ವಿಧಿನಿಯಮವನ್ನು ಉಲ್ಲಂಘಿಸುವು- ದಿಲ್ಲವೋ, ಅವನಿಗೆ ಯಾವುದೇ ಪಾಪಗಳು ಬರುವುದಿಲ್ಲ. ಕ್ಷತ್ರಿಯನಾದವನು ದಂಡಧಾರಣನಿಯಮವನ್ನು ಅನುಸರಿಸಿದಾಗ ಅವನಿಗೆ ಯಾವುದೇ ಪಾಪವು ತಟ್ಟುವುದಿಲ್ಲ.
ವಿವರಣೆ - ಕೊಡಲಿಯು ವೃಕ್ಷವನ್ನು ಕತ್ತರಿಸುತ್ತದೆ. ಕತ್ತರಿಸಿದ ಪಾಪ ಕೊಡಲಿಗೆ ಬರುವುದಿಲ್ಲ. ಅಥವಾ ಕೊಡಲಿಯನ್ನು ಸ್ವಧರ್ಮದಂತೆ ತಯಾರು ಮಾಡಿದ ವ್ಯಕ್ತಿಗೂ ಕೂಡ ಪಾಪವು ಬರುವುದಿಲ್ಲ. ಅದರಂತೆ ಯುದ್ಧದಲ್ಲಿ ನೀನು ಅನೇಕ ಶತ್ರುಗಳ ಸಂಹಾರವನ್ನು ಮಾಡಿರುವಿ.  ಇದರಿಂದ ಯಾವುದೇ ಪಾಪವು ನಿನಗೆ ಬರುವುದಿಲ್ಲ.
ಯದಿ ವಾ ಮನ್ಯಸೇ ರಾಜನ್ ಹರೇ ಲೋಕಂ (ಸರ್ವಂ) ಪ್ರತಿಷ್ಠಿತಮ್ |
ಏವಮಪ್ಯಶುಭಂ ಕರ್ಮ ನ ಭೂತಂ ನ ಭವಿಷ್ಯತಿ ॥18॥
ಒಂದು ವೇಳೆ ನೀನು ಲೋಕವು ಆಯಾ ಜೀವರ ಸ್ವಭಾವದಲ್ಲಿ ನೆಲೆನಿಂತಿದೆ ಎಂದು ಭಾವಿಸುವುದಾದರೆ, ಅದಕ್ಕಾಗಿ ಏಕೆ ಚಿಂತಿಸುವಿ ? ದುಷ್ಟರಾದ ಶತ್ರುಗಳ ಸಂಹಾರವನ್ನು ನೀನು ಮಾಡಿದ್ದರೂ ಕೂಡ ನಿನ್ನಲ್ಲಿ ಅಶುಭಕರ್ಮವು ಇದುವರೆಗೂ ನಡೆದಿಲ್ಲ. ಮುಂದೆ ನಡೆಯಲೂ ಕೂಡ ಸಾಧ್ಯವಿಲ್ಲ.
ಟಿಪ್ಪಣಿ - ಹರೇ ಸರ್ವಂ ಪ್ರತಿಷ್ಠಿತಮ್ ಏವಮಪಿ ಇತ್ಯತ್ರ ಹರೇ ತ್ರಿವಿಧಜೀವಾನಾಂ ಯೋಗ್ಯತಾಲಕ್ಷಣಸ್ವಭಾವೇ | ಏವಮಪಿ ಶಿಕ್ಷಾಯೋಗ್ಯಾನಾಂ ದುಷ್ಟಾನಾಂ ಶಿಕ್ಷಣಾದ್ ಅಶುಭಂ ಕರ್ಮ ತ್ವಯಿ ನ ಭೂತಮ್, ನ ಭವಿಷ್ಯತಿ |
ಹರೇ = ತ್ರಿವಿಧಜೀವರ ಯೋಗ್ಯತಾ ಎಂಬ ಸ್ವಭಾವದಲ್ಲಿ ಎಂದರ್ಥ. ಶಿಕ್ಷೆಗೆ ಯೋಗ್ಯರಾದ ದುಷ್ಟರನ್ನು ಶಿಕ್ಷಣೆ ಮಾಡುವುದರಿಂದ ಅಶುಭಕರ್ಮವು ನಿನ್ನಲ್ಲಿ ಹಿಂದೆಯು ಅಂಟಿಲ್ಲ. ಮುಂದೆಯೂ ಕೂಡ ಅಂಟಲು ಸಾಧ್ಯವಿಲ್ಲ ಎಂದಭಿಪ್ರಾಯ.
ವಿವರಣೆ - ಈ ಶ್ಲೋಕವನ್ನು ಕೂಡ ಕೆಲವರು ಎಲ್ಲವೂ ಆಕಸ್ಮಿಕವಾಗಿಯೇ ನಡೆಯುತ್ತದೆ. ನೀನೇಕೆ ಚಿಂತಿಸುತ್ತೀ ಎಂಬುದಾಗಿ ದೇವರನ್ನು ಒಪ್ಪದಂತೆ ವ್ಯಾಖ್ಯಾನ ಮಾಡುತ್ತಾರೆ. ಇದು ಸರಿಯಲ್ಲ. ಪ್ರತಿಯೊಂದು ಕರ್ಮಗಳಿಗೆ ಆಯಾ ಜೀವರ ಯೋಗ್ಯತೆಯೂ ಕೂಡ ಒಂದು ಕಾರಣವಾಗಿರುತ್ತದೆ. ಅವರವರ ಯೋಗ್ಯತೆಗೆ ತಕ್ಕಂತೆ ಪುಣ್ಯಾಪಾಪಕರ್ಮಗಳು ಬರುತ್ತವೆ ಎನ್ನುವುದಾದರೆ, ನೀನು ಯಾವುದೇ ಅಶುಭಕರ್ಮವನ್ನು ಮಾಡಿದಂತಾಗಲಿಲ್ಲ. ಮುಂದೆಯೂ ಕೂಡ ಮಾಡಲು ಸಾಧ್ಯವಿಲ್ಲ. ಎಂಬುದಾಗಿ ವೇದವ್ಯಾಸದೇವರು ಸಾಂತ್ವನ ಮಾಡುತ್ತಿ- ದ್ದಾರೆಂದು ಭಾವಿಸಬೇಕು.
ಅಥಾಭಿಪತ್ತಿರ್ಲೋಕಸ್ಯ ಕರ್ತವ್ಯಾ ಶುಭಪಾಪಯೋಃ |
ಅಭಿಪನ್ನಮಿದಂ ಲೋಕೇ ರಾಜ್ಞಾಮುದ್ಯತದಂಡನಮ್ ॥19॥
ಅಥವಾ ಪುಣ್ಯ-ಪಾಪಗಳನ್ನು ಲೋಕದ ಮಾರ್ಯಾದೆಗೆ ಅನುಗುಣವಾಗಿ ತಿಳಿಯಬೇಕೆಂದು ನೀನು ಹೇಳುವುದಾದರೆ, ರಾಜರು ತಪ್ಪು ಮಾಡಿದವರಿಗೆ ಶಿಕ್ಷಿಸುವುದು ಲೋಕಮಾರ್ಯಾದೆಯೇ ಆಗಿದೆ. ಆದ್ದರಿಂದಲೂ ನೀನು ಚಿಂತಿಸಲು ಕಾರಣವಿಲ್ಲ. ಸಮಸ್ತಲೋಕವು ನೀನು ಮಾಡಿದ ದಂಡಧಾರಣವನ್ನು ಪ್ರಶಂಸೆ ಮಾಡುತ್ತದೆ.
ವಿವರಣೆ - ಲೋಕದಲ್ಲಿ ತಪ್ಪು ಮಾಡಿದವರಿಗೆ, ಅಧಾರ್ಮಿಕರಿಗೆ, ಶಿಕ್ಷೆಯನ್ನು ನೀಡಬೇಕೆಂದು ಎಲ್ಲರೂ ಹೇಳುತ್ತಾರೆ. ಆದ್ದರಿಂದ ದುರ್ಮಾರ್ಗಿಗಳನ್ನು ದಂಡಿಸಿದ್ದಕ್ಕೆ ನೀನು ವ್ಯಥೆ ಪಡಬೇಕಾಗಿಲ್ಲ ಎಂದಭಿಪ್ರಾಯ.
ಅದ್ಯಾಪಿ ಲೋಕೇ ಕರ್ಮಾಣಿ ಸಮಾವರ್ತಂತ ಭಾರತ |
ಶುಭಾಶುಭಫಲಂ ಚೇಮೇ ಪ್ರಾಪ್ನುವಂತೀತಿ ಮೇ ಮತಿಃ ॥20॥

ಇಂದೂ ಕೂಡ ಲೋಕದಲ್ಲಿ ಶುಭಾಶುಭಕರ್ಮಗಳನ್ನು ಪ್ರತಿಯೊಬ್ಬರೂ ಕೂಡ ಆಚರಿಸುತ್ತಲೇ ಇದ್ದಾರೆ. ದಂಡಧಾರಣವಿದ್ದರೂ ಕೂಡ ಶುಭಾಶುಭಫಲವನ್ನು ಪ್ರಜೆಗಳು ಹೊಂದುತ್ತಲೇ ಇದ್ದಾರೆ ಎಂಬುದು ನನ್ನ ಅಭಿಪ್ರಾಯ.
ಏವಂ ಸತ್ಯಂ ಶುಭಾದೇಶಂ ಕರ್ಮಣಸ್ತತ್ಫಲಂ ಧ್ರುವಮ್ |
ತ್ಯಜ ತದ್ ರಾಜಶಾರ್ದೂಲ ಮೈವಂ ಶೋಕೇ ಮನಃ ಕೃಥಾಃ ॥21॥
ಆದ್ದರಿಂದ ಇಷ್ಟು ನಿನಗೆ ಸತ್ಯವನ್ನು ಹೇಳುತ್ತೇನೆ. ನೀನು ಶುಭವನ್ನೇ ಆಚರಣೆ ಮಾಡು. ಇದರಿಂದ ನಿನಗೆ ನಿಶ್ಚಯವಾಗಿ ಶುಭಫಲವು ದೊರಕುತ್ತದೆ. ದುಷ್ಕರ್ಮ- ಗಳನ್ನು ಬಿಟ್ಟುಬಿಡು. ಆದ್ದರಿಂದ ಮನಸ್ಸಿನಲ್ಲಿ ಯಾವುದೇ ದುಃಖವನ್ನು ಅನು- ಭವಿಸಬೇಡ.
ಸ್ವಧರ್ಮೇ ವರ್ತಮಾನಸ್ಯ ಸಾಪವಾದೇಽಪಿ ಭಾರತ |
ಏವಮಾತ್ಮಪರಿತ್ಯಾಗಸ್ತವ ರಾಜನ್ನ ಶೋಭನಃ ॥22॥
ರಾಜನೇ! ಯಾರು ತನ್ನ ಧರ್ಮವನ್ನು ಅಚ್ಚುಕಟ್ಟಾಗಿ ಪಾಲನೆ ಮಾಡುತ್ತಿರು- ತ್ತಾನೋ, ಅಂಥವನು ಅಪವಾದ ಬಂದರೂ ಕೂಡ ಸ್ವಧರ್ಮವನ್ನು ಬಿಡಬಾರದು. ಆದ್ದರಿಂದ ಶತ್ರುನಿಗ್ರಹವನ್ನು ಮಾಡಿ ಸ್ವಧರ್ಮವನ್ನು ಪಾಲನೆ ಮಾಡಿದ ನೀನು ಆತ್ಮವನ್ನು ಪರಿತ್ಯಾಗ ಮಾಡುತ್ತೇನೆಂದು ಹೇಳುವುದು ಕ್ಷೇಮಕರವಲ್ಲ.
ವಿಹಿತಾನಿ ಹಿ ಕೌಂತೇಯ ಪ್ರಾಯಶ್ಚಿತ್ತಾನಿ ಕರ್ಮಿಣಾಮ್ |
ಶರೀರವಾಂಸ್ತಾನಿ ಕುರ್ಯಾದಶರೀರಃ ಪರಾಭವೇತ್ ॥23॥
ಕುಂತಿಪುತ್ರನೇ! ಸ್ವಧರ್ಮಗಳನ್ನು ಆಚರಣೆ ಮಾಡಿದಾಗ ಕೆಲವೊಮ್ಮೆ ದುಷ್ಕರ್ಮಗಳು ನಡೆದರೆ ಅದಕ್ಕೆ ಅನೇಕ ಪ್ರಾಯಶ್ಚಿತ್ತಗಳನ್ನು ಧರ್ಮಶಾಸ್ತ್ರಗಳು ಹೇಳುತ್ತವೆ. ಅಂತಹ ದುಷ್ಕರ್ಮವನ್ನು ಮಾಡಿದ ಕಳಂಕಗಳನ್ನು ಪ್ರಾಯಶ್ಚಿತ್ತಗಳನ್ನು ಆಚರಿಸುವ ಮೂಲಕ ಶುದ್ಧನಾಗಬೇಕು. ಅದನ್ನು ಬಿಟ್ಟು ಶರೀರವನ್ನು ಪರಿತ್ಯಾಗ ಮಾಡಿದರೆ, ಅಧೋಗತಿಯನ್ನು ಹೊಂದುತ್ತಾನೆ.
ವಿವರಣೆ - ಕೆಲವೊಬ್ಬರು ಪಾಪಗಳನ್ನು ಮಾಡಿದ್ದೇವೆಂದು ಭಾವಿಸಿ, ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಇಂಥವರು ಮತ್ತಷ್ಟು ಅನರ್ಥಗಳನ್ನೇ ಎದುರಿಸಬೇಕಾಗುತ್ತದೆ. ಶರೀರವನ್ನು ಸುರಕ್ಷಿತವಾಗಿಟ್ಟುಕೊಂಡು, ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು, ಆ ಪಾಪಗಳನ್ನು ಪರಿಹಾರ ಮಾಡಿಕೊಳ್ಳಲು ಅವಕಾಶವಿದೆ. ಪ್ರಾಣವನ್ನು ಪರಿತ್ಯಾಗ ಮಾಡಿದರೆ ದೇಹಾಂತರದಲ್ಲಿ ಮಹಾದುಃಖವನ್ನು ಅನುಭವಿಸಬೇಕಾಗುತ್ತದೆ.
ಯುಧಿಷ್ಠಿರನೇ! ನೀನು ಸರ್ವಥಾ ಯಾವುದೇ ಪಾಪವನ್ನು ಆಚರಿಸಿಲ್ಲ. ಒಂದು ವೇಳೆ ಪಾಪಕರ್ಮವನ್ನು ಮಾಡಿದ್ದೇನೆಂದು ನಿನಗೆ ಅನ್ನಿಸಿದರೆ ಅದಕ್ಕೆ ಪ್ರಾಯಶ್ಚಿತ್ತಗಳನ್ನು ಮಾಡಿಕೋ. ಇದನ್ನು ಬಿಟ್ಟು, ರಾಜ್ಯವನ್ನು ಪರಿತ್ಯಾಗ ಮಾಡುವುದು ಮತ್ತಷ್ಟು ಅಧರ್ಮಗಳನ್ನು ಆಚರಣೆ ಮಾಡುವುದು, ಪ್ರಾಣ- ತ್ಯಾಗವನ್ನು ಮಾಡುವುದು, ಇದೆಲ್ಲವೂ ಕೂಡ ಮುಂದೆ ನಿನಗೆ ಮಹಾ ಅನರ್ಥ- ಗಳನ್ನೇ ನೀಡುತ್ತವೆ ಎಂದಭಿಪ್ರಾಯ.
ತದ್ ರಾಜನ್ ಜೀವಮಾನಸ್ತ್ವಂ ಪ್ರಾಯಶ್ಚಿತ್ತಂ ಚರಿಷ್ಯಸಿ |
ಪ್ರಾಯಶ್ಚಿತ್ತಮಕೃತ್ವಾ ತು ಪ್ರೇತ್ಯ ತಪ್ತಾಸಿ ಭಾರತ ॥24॥
ರಾಜೇಂದ್ರನೇ! ನೀನು ಬದುಕಿ, ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ಶುದ್ಧನಾಗು. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಪ್ರಾಣವನ್ನು ಪರಿತ್ಯಾಗ ಮಾಡಿದರೆ, ಮುಂದೆ ದೇಹತ್ಯಾಗ ಮಾಡಿದ ಮೇಲೆ ಪಶ್ಚಾತ್ತಾಪ ಪಡಬೇಕಾಗುತ್ತದೆ.
ಯುಧಿಷ್ಠಿರಃ
ಹತಾಃ ಪುತ್ರಾಶ್ಚ ಪೌತ್ರಾಶ್ಚ ಭ್ರಾತರಃ ಪಿತರಸ್ತಥಾ |
ಶ್ವಶುರಾ ಗುರವಶ್ಚೈವ ಮಾತುಲಾಃ ಸಪಿತಾಮಹಾಃ ॥25॥
ಯುಧಿಷ್ಠಿರ ಪಿತಾಮಹರೇ ! ನಾನು ರಾಜ್ಯದ ಆಸೆಯಿಂದ ವಿವೇಚನೆಯಿ- ಲ್ಲದೇ ಅನೇಕರ ಸಾವಿಗೆ ಕಾರಣನಾದೆನು. ಮಕ್ಕಳು, ಮೊಮ್ಮಕ್ಕಳು, ಸಹೋದರರು, ಪಿತೃಗಳು, ಮಾವಂದಿರು, ಗುರುಗಳು, ಸೋದರಮಾವಂದಿರು, ಪಿತಾಮಹರು, ಇವರೆಲ್ಲರೂ ನನ್ನಿಂದ ಮೃತರಾದರು.
ಕ್ಷತ್ರಿಯಾಶ್ಚ ಮಹಾತ್ಮಾನಃ ಸಬಂಧಿಸುಹೃದಸ್ತಥಾ |
ವಯಸ್ಯಾ ಜ್ಞಾತಯಶ್ಚೈವ ಭ್ರಾತರಶ್ಚ ಪಿತಾಮಹ ॥26॥
ಕ್ಷತ್ರಿಯರು, ಅನೇಕ ಮಹಾತ್ಮರು, ಸಂಬಂಧಿಗಳು, ಸ್ನೇಹಿತರು, ಸುಹೃದರು, ಬಂಧುಜನರು, ಅಣ್ಣ-ತಮ್ಮಂದಿರು ಇವರೆಲ್ಲರೂ ಮೃತರಾದರು.
ಬಹವಶ್ಚ ಮನುಷ್ಯೇಂದ್ರಾ ನಾನಾದೇಶಸಮಾಗತಾಃ |
ಘಾತಿತಾ ರಾಜ್ಯಲುಬ್ಧೇನ ಮಯ್ಯೈಕೇನ ಪಿತಾಮಹ ॥27॥
ಅನೇಕ ದೇಶಗಳಿಂದ ಆಗಮಿಸಿದ ಅಸಂಖ್ಯಾತರಾಜರನ್ನೆಲ್ಲ ರಾಜ್ಯವು ಸಿಗು- ತ್ತದೆಂಬ ಆಸೆಯಿಂದ ನಾನೇ ಕೊಲ್ಲಿಸಿಬಿಟ್ಟೆನು. ಪಿತಾಮಹರೇ! ನಾನೊಬ್ಬನೇ ಅವರೆಲ್ಲರ ಸಾವಿಗೆ ಕಾರಣನಾಗಿರುವೆನು.
ತಾಂಸ್ತಾದೃಶಾನಹಂ ಹತ್ವಾ ಧರ್ಮನಿತ್ಯಾನ್ ಮಹೀಕ್ಷಿತಃ |
ಅಸಕೃತ್ ಸೋಮಪಾನ್ ವೀರಾನ್ ಕಿಂ ಪ್ರಾಪ್ಸ್ಯಾಮಿ ತಪೋಧನ ॥28॥
ಯುದ್ಧಕ್ಕಾಗಿ ಆಗಮಿಸಿದ ರಾಜರು ಸಾಮಾನ್ಯರಲ್ಲ. ನಿತ್ಯವಾಗಿಯೂ ಧರ್ಮ- ದಲ್ಲಿ ಆಸಕ್ತರಾಗಿದ್ದರು. ಅನೇಕ ಬಾರಿ ಯಜ್ಞಗಳನ್ನು ಮಾಡಿ ಸೋಮಪಾನವನ್ನು ಮಾಡಿದ್ದರು. ಮಹಾವೀರರಾಗಿದ್ದರು. ತಪೋಧನರೇ ! ಅಂಥ ಮಹಾನುಭಾವರನ್ನು ನಾನು ಸಂಹರಿಸಿ ಏನನ್ನು ತಾನೇ ಪಡೆದುಕೊಳ್ಳಲು ಹೊರಟಿದ್ದೇನೆ?
ದಹ್ಯಾಮ್ಯನಿಶಮದ್ಯಾಹಂ ಚಿಂತಯಾನಃ ಪುನಃ ಪುನಃ |
ಹೀನಾಂ ಪಾರ್ಥಿವಸಿಂಹೈಸ್ತೈಃ ಶ್ರೀಮದ್ಭಿಃ ಪೃಥಿವೀಮಿಮಾಮ್ ॥29॥
ಇದೇ ವಿಷಯವನ್ನು ಎಷ್ಟು ಬಾರಿ ಚಿಂತನೆ ಮಾಡುತ್ತಿದ್ದರೂ ನನಗೆ ಸಮಾ- ಧಾನವು ದೊರಕುತ್ತಿಲ್ಲ. ಬಹಳ ಸಂಕಟವಾಗುತ್ತಿದೆ. ಆ

ಸಂಕಟದಿಂದ ಬೆಂದು- ಹೋಗುತ್ತಿದ್ದೇನೆ. ಶ್ರೀಮಂತರಾದ, ಧರ್ಮನಿಷ್ಠರಾದ ರಾಜರುಗಳನ್ನು ಕಳೆದು- ಕೊಂಡ ಈ ಪೃಥ್ವಿಯು ನನಗೆ ಶೂನ್ಯವಾಗಿ ಕಾಣಿಸುತ್ತಿದೆ.
ದೃಷ್ಟ್ವಾ ಜ್ಞಾತಿವಧಂ ಘೋರಂ ಹತಾಂಶ್ಚ ಶತಶಃ ಪರಾನ್ |
ಕೋಟಿಶಶ್ಚ ನರಾನನ್ಯಾನ್ ಪರಿತಪ್ಯೇ ಪಿತಾಮಹ ॥30॥
ಜ್ಞಾತಿಗಳ ಘೋರವಾದ ಸಂಹಾರವನ್ನು ಕಂಡು, ನೂರಾರು ರಾಜರು ಮಡಿದ- ದ್ದನ್ನು ಕಂಡು ಕೋಟಿಗಟ್ಟಳೆ ಸೈನಿಕರು ಪ್ರಾಣಪರಿತ್ಯಾಗವನ್ನು ಮಾಡಿದ್ದನ್ನು ಕಂಡು ನನಗೆ ಬಹಳ ದುಃಖವಾಗುತ್ತಿದೆ.
ಕಾ ನು ತಾಸಾಂ ವರಸ್ತ್ರೀಣಾಮವಸ್ಥಾದ್ಯ ಭವಿಷ್ಯತಿ |
ವಿಹೀನಾನಾಂ ಸ್ವತನಯೈಃ ಪತಿಭಿರ್ಭ್ರಾತೃಭಿಸ್ತಥಾ ॥31॥
ಆ ಕ್ಷತ್ರಿಯಸ್ತ್ರೀಯರಿಗೆ ಎಂಥ ದುರವಸ್ಥೆಯು ಪ್ರಾಪ್ತವಾಗಿದೆ. ಅವರೆಲ್ಲರೂ ತಮ್ಮ ಸಂಬಂಧಿಗಳನ್ನು, ಮಕ್ಕಳನ್ನು, ಗಂಡಂದಿರನ್ನು, ಅಣ್ಣ-ತಮ್ಮಂದಿರನ್ನು ಕಳೆದು- ಕೊಂಡು ದುಃಖದ ಮಡುವಿನಲ್ಲಿ ಮುಳುಗಿದ್ದಾರೆ.
ಅಸ್ಮಾನಂತಕರಾನ್ ಘೋರಾನ್ ಪಾಂಡವಾನ್ ವೃಷ್ಣಿಸಂಹಿತಾನ್ |
ಆಕ್ರೋಶಂತ್ಯಃ ಕೃಶಾ ದೀನಾ ನಿಪತಂತ್ಯಶ್ಚ ಭೂತಲೇ ॥32॥
ಆ ಎಲ್ಲ ಸ್ತ್ರೀಯರು ಈಗ ತಮ್ಮ ಸಂಬಂಧಿಗಳ ವಿನಾಶಕ್ಕೆ ಕಾರಣರಾದ, ಅವರ ದೃಷ್ಟಿಯಿಂದ ಘೋರ ಪಾಪಿಗಳಾದ ವೃಷ್ಣಿಗಳಿಂದ ಕೂಡಿರುವ ಪಾಂಡವರನ್ನು ನಿಂದಿಸುತ್ತಿದ್ದಾರೆ. ಶಪಿಸುತ್ತಿದ್ದಾರೆ, ದೀನರಾಗಿ, ದುರ್ಬಲರಾಗಿ ನೆಲದ ಮೇಲೆ ಬಿದ್ದು ಹೊರಳಾಡಿ ಆಕ್ರಂದನವನ್ನು ಮಾಡುತ್ತಿದ್ದಾರೆ.
ಅಪಶ್ಯಂತ್ಯಃ ಪಿತೄನ್ ಭ್ರಾತೄನ್ ಪತೀನ್ ಪುತ್ರಾಂಶ್ಚ ಯೋಷಿತಃ |
ತ್ಯಕ್ತ್ವಾ ಪ್ರಾಣಾನ್ ಪ್ರಿಯಾನ್ ಸರ್ವಾನ್ ಗಮಿಷ್ಯಂತಿ
ಯಮಕ್ಷಯಮ್ ॥33॥
ಆ ಸ್ತ್ರೀಯರು ತಮ್ಮ ಮಕ್ಕಳನ್ನು, ಗಂಡಂದಿರನ್ನು, ಪಿತೃಗಳನ್ನು, ಸಹೋದರ- ರನ್ನು ಕಾಣದೇ ಪ್ರಾಣವನ್ನು ಪರಿತ್ಯಾಗ ಮಾಡಿ ಯಮಲೋಕಕ್ಕೆ ಹೋಗುವ ಪರಿಸ್ಥಿತಿ -ಯಲ್ಲಿದ್ದಾರೆ.
ವತ್ಸಲತ್ವಾದ್ ದ್ವಿಜಶ್ರೇಷ್ಠ ತತ್ರ ಮೇ ನಾಸ್ತಿ ಸಂಶಯಃ |
ವ್ಯಕ್ತಂ ಸೌಕ್ಷ್ಮ್ಯಾಚ್ಚ ಧರ್ಮಸ್ಯ ಪ್ರಾಪ್ಸ್ಯಾಮಃ ಸ್ತ್ರೀವಧಂ ವಯಮ್ ॥34॥
ಓ ದ್ವಿಜಶ್ರೇಷ್ಠರೇ! ಆ ಸ್ತ್ರೀಯರಿಗೆ ತಮ್ಮ ಸಂಬಂಧಿಕರ ಮೇಲೆ ಅಧಿಕವಾದ ವಾತ್ಸಲ್ಯವಿದೆ. ಆದ್ದರಿಂದಲೇ ತಮ್ಮ ಪ್ರಾಣಗಳನ್ನು ಧರಿಸಲು ಅವರು ಈಗ ಸಮರ್ಥರಾಗಿರುವುದಿಲ್ಲ. ಪ್ರಾಣಬಿಡುತ್ತಾರೆಂಬ ವಿಷಯದಲ್ಲಿ ನನಗೆ ಸಂಶಯವೂ ಇಲ್ಲ. ಧರ್ಮದ ಮಾರ್ಗವು ಅತ್ಯಂತಸೂಕ್ಷ್ಮವಾಗಿದೆ. ನಿಶ್ಚಯವಾಗಿಯೂ ನಾವು ಅಸಂಖ್ಯಾತರಾದ ಕುಲಸ್ತ್ರೀಯರನ್ನು ವಧೆ ಮಾಡಿದ ಪಾಪಭಾಜನರಾಗುತ್ತಿದ್ದೇವೆ.
ತೇ ವಯಂ ಸುಹೃದೋ ಹತ್ವಾ ಕೃತ್ವಾ ಪಾಪಮನಂತಕಮ್ |
ನರಕೇ ನಿಪತಿಷ್ಯಾಮೋ ಹ್ಯಧಃಶಿರಸ ಏವ ಚ ॥35॥
ಇಂಥ ನಾವು ಎಲ್ಲಾ ಸುಹೃದರನ್ನು ಕೊಂದಿದ್ದೇವೆ. ಅಪಾರವಾದ ಪಾಪವನ್ನು ಸಂಪಾದನೆ ಮಾಡಿದ್ದೇವೆ. ಈ ಕಾರಣದಿಂದ ಘೋರ ನರಕದಲ್ಲಿ ನಾವು ತಲೆಕೆಳಗಾಗಿ ಬೀಳುತ್ತೇವೆ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಶರೀರಾಣಿ ವಿಮೋಕ್ಷ್ಯಾಮಸ್ತಪಸೋಗ್ರೇಣ ಸತ್ತಮ |
ಆಶ್ರಮಾಂಶ್ಚ ವಿಶೇಷಾಂಸ್ತ್ವಂ ಸಮಾಚಕ್ಷ್ವ ಪಿತಾಮಹ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ವ್ಯಾಸವಾಕ್ಯಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ ॥33॥
ಆದ್ದರಿಂದ ಅತ್ಯಂತ ಉಗ್ರವಾದ ತಪಸ್ಸನ್ನು ಮಾಡಿ, ನಾನು ಈ ಶರೀರವನ್ನು ಪರಿತ್ಯಾಗ ಮಾಡುತ್ತೇನೆ. ಸತ್ಪುರುಷರಲ್ಲಿ ಶ್ರೇಷ್ಠರಾದ ಪಿತಾಮಹರೇ! ನಾನೀಗ ಯಾವ ಆಶ್ರಮಧರ್ಮವನ್ನು ಪರಿಪಾಲನೆ ಮಾಡಬೇಕು. ಅದರ ಬಗ್ಗೆ ನನಗೆ ಉಪದೇಶಿಸಿರಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 33ನೆಯ ಅಧ್ಯಾಯವು ಮುಗಿಯಿತು.

34. ಮೂವತ್ನಾಕನೆಯ ಅಧ್ಯಾಯ

ವೇದವ್ಯಾಸದೇವರು ಯುಧಿಷ್ಠಿರನಿಗೆ ಅನೇಕ ಬಗೆಯಲ್ಲಿ ಸಮಾಧಾನವನ್ನು ಮಾಡುತ್ತಿದ್ದಾರೆ. ಪಾಪಗಳಿಗೆ ಪ್ರಾಯಶ್ಚಿತ್ತಾದಿಗಳನ್ನು ತಿಳಿಸುತ್ತಿದ್ದಾರೆ. ಕಾಲದ ಪ್ರಾಬಲ್ಯವನ್ನು ಹೇಳಿ, ದೇವಾಸುರರ ಯುದ್ಧದ ಉದಾಹರಣೆಯನ್ನು ನೀಡುವ ಮೂಲಕ ಅಧಾರ್ಮಿಕರನ್ನು ದಮನ ಮಾಡುವುದು ಅತ್ಯಂತ ಉಚಿತವೆಂದು ವಿವರಿಸುತ್ತಿದ್ದಾರೆ.
ವೈಶಂಪಾಯನಃ
ಯುಧಿಷ್ಠಿರಸ್ಯ ತದ್ ವಾಕ್ಯಂ ಶ್ರುತ್ವಾ ದ್ವೈಪಾಯನಸ್ತದಾ |
ಸಮೀಕ್ಷ್ಯ ನಿಪುಣಂ ಬುದ್ಧ್ಯಾ ಋಷಿಃ ಪ್ರೋವಾಚ ಪಾಂಡವಮ್ ॥1॥
ವೈಶಂಪಾಯನರು ಯುಧಿಷ್ಠಿರನ ಎಲ್ಲಾ ಬಗೆಯ ಮಾತುಗಳನ್ನು ವೇದವ್ಯಾಸ- ಋಷಿಗಳು ಕೇಳಿಸಿಕೊಂಡರು. ತಮ್ಮ ನಿಪುಣವಾದ ಬುದ್ಧಿಯಿಂದ ಸರಿಯಾಗಿ ವಿಮರ್ಶಿಸಿ, ಆ ಪಾಂಡವನಿಗೆ ಮುಂದೆ ಹೇಳುವಂತೆ ಸಮಾಧಾನಕರವಾದ ಮಾತು- ಗಳನ್ನು ಹೇಳಿದರು.
ಮಾ ವಿಷಾದಂ ಕೃಥಾ ರಾಜನ್ ಕ್ಷತ್ರಧರ್ಮಮನುಸ್ಮರ |
ಸ್ವಧರ್ಮೇಣ ಹತಾ ಹ್ಯೇತೇ ಕ್ಷತ್ರಿಯಾಃ ಕ್ಷತ್ರಿಯರ್ಷಭ ॥2॥
ಓ ಕ್ಷತ್ರಿಯಶ್ರೇಷ್ಠನೇ! ಕ್ಷತ್ರಿಯರ ಧರ್ಮವನ್ನು ಒಮ್ಮೆ ನೆನಪು ಮಾಡಿಕೋ. ಬಹಳ ದುಃಖಪಡಬೇಡ. ಎಲ್ಲಾ ಕ್ಷತ್ರಿಯರು ಸ್ವಧರ್ಮವನ್ನು ಅನುಷ್ಠಾನ ಮಾಡಿಯೇ ಮೃತರಾಗಿದ್ದಾರೆ.
ಕಾಂಕ್ಷಮಾಣಾಃ ಶ್ರಿಯಂ ಕೃತ್ಸ್ನಾಂ ಪೃಥಿವ್ಯಾಂ ಚ ಮಹದ್ ಯಶಃ |

ಕೃತಾಂತವಿಧಿಸಂಯುಕ್ತಾಃ ಕಾಲೇನ ನಿಧನಂ ಗತಾಃ ॥3॥
ಯುದ್ಧದಲ್ಲಿ ಪಾಲ್ಗೊಂಡ ಪ್ರತಿಯೊಬ್ಬ ಕ್ಷತ್ರಿಯರಿಗೂ ಕೂಡ ಸಮಗ್ರ ಭೂ- ಮಂಡಲದ ಆಧಿಪತ್ಯದ ಅಪೇಕ್ಷೆಯಿತ್ತು. ಆದರೆ ಆ ಯಮರಾಜನ ನಿಯಮಕ್ಕೆ
ಅಧೀನವಾಗಿ ಅವರೆಲ್ಲರೂ ಪ್ರಾಣವನ್ನು ಕಳೆದುಕೊಂಡರು.
ನ ತ್ವಂ ಹಂತಾ ನ ಭೀಮೋಽಪಿ ನಾರ್ಜುನೋ ನ ಯಮಾವಪಿ |
ಕಾಲಃ ಪರ್ಯಾಯಧರ್ಮೇಣ ಪ್ರಾಣಾನಾದತ್ತ ದೇಹಿನಾಮ್ ॥4॥
ಆ ಕ್ಷತ್ರಿಯರ ಹಂತಕ ನೀನಲ್ಲ. ಭೀಮಸೇನ, ಅರ್ಜುನ, ನಕುಲ-ಸಹದೇವ ಇವರುಗಳಲ್ಲಿ ಯಾರೂ ಸಹ ಅವರನ್ನು ಕೊಂದಿರುವುದಿಲ್ಲ. ಅವರವರ ಕಾಲವು ಪಕ್ವವಾದಾಗ ಆ ಕಾಲನೇ ಪ್ರಾಣಗಳನ್ನು ಅಪಹರಿಸಿಕೊಂಡು ಹೋಗಿರುವನು.
ನ ತಸ್ಯ ಮಾತಾಪಿತರೌ ನಾನುಗ್ರಾಹ್ಯೋಽಸ್ತಿ ಕಶ್ಚನ |
ಕರ್ಮಸಾಕ್ಷೀ ಪ್ರಜಾನಾಂ ಯಸ್ತೇನ ಕಾಲೇನ ಸಂಹೃತಾಃ ॥5॥
ಆ ಕಾಲನಾಮಕನಾದ ಪರಮಾತ್ಮನಿಗೆ ಯಾರೊಬ್ಬ ತಂದೆಯೂ ಇಲ್ಲ. ತಾಯಿಯೂ ಇಲ್ಲ. ಅವನು ಯಾರೊಬ್ಬರ ಅನುಗ್ರಹಕ್ಕೂ ಪಾತ್ರನಲ್ಲ. ಆಯಾ ಜೀವರುಗಳು ಮಾಡುವ ಕರ್ಮಗಳಿಗೆ ಸಾಕ್ಷಿಭೂತನಾಗಿ ನಿಂತಿರುವನು. ಅಂಥ ಕಾಲನಾಮಕನಾದ ಪರಮಾತ್ಮನಿಂದಲೇ ನಿನ್ನೆಲ್ಲಾ ಶತ್ರುಗಳು ಸಂಹೃತರಾಗಿದ್ದಾರೆ.
ಹೇತುಮಾತ್ರಮಿದಂ ತಸ್ಯ ಕಾಲಸ್ಯ ಪುರುಷರ್ಷಭ |
ಯದ್ ಹಂತಿ ಭೂತೈರ್ಭೂತಾನಿ ತದಸ್ಮೈ ರೂಪಮೈಶ್ವರಮ್ ॥6॥
ಆ ಕಾಲನಿಗೆ ಈ ಮಹಾ ಯುದ್ಧವು ಕೇವಲ ನಿಮಿತ್ತವಾಗಿತ್ತು. ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಯನ್ನು ಆ ಕಾಲನೇ ಸಂಹಾರ ಮಾಡಿಸಿರುವನು. ಇದು ಆ ಕಾಲನ ವಿಭೂತಿಶಕ್ತಿಯಾಗಿದೆ ಎಂದಷ್ಟೇ ತಿಳಿದುಬಿಡು.
ಕರ್ಮಸೂತ್ರಾತ್ಮಕಂ ವಿದ್ಧಿ ಸಾಕ್ಷಿಣಂ ಶುಭಪಾಪಯೋಃ |
ಸುಖದುಃಖಗುಣೋದರ್ಕಂ ಕಾಲಂ ಕಾಲಫಲಪ್ರದಮ್ ॥7॥
ಆ ಕಾಲನು ಪ್ರತಿಯೊಬ್ಬರ ಪುಣ್ಯಪಾಪಗಳಿಗೆ ಸಾಕ್ಷಿಭೂತನಾಗಿರುವನು. ಪ್ರತಿಯೊಬ್ಬರ ಕರ್ಮಗಳಿಗೂ ಸೂತ್ರಪ್ರಾಯನಾಗಿರುವನು. ಆ ಪುಣ್ಯ-ಪಾಪಗಳಿಂದ ದೊರೆಯುವ ಸುಖ-ದುಃಖಗಳ ಆವಿರ್ಭಾವಕ್ಕೂ ಅವನೇ ಕಾರಣನಾಗಿರುವನು. ಸಮಯವು ಪಕ್ವವಾದಾಗ ಅವರವರ ಕರ್ಮಗಳಿಗೆ ಅನುಗುಣವಾಗಿ ಫಲವನ್ನು ಅವನೇ ನೀಡುವನು.
ತೇಷಾಮಪಿ ಮಹಾಬಾಹೋ ಕರ್ಮಾಣಿ ಪರಿಚಿಂತಯ |
ವಿನಾಶಹೇತುಕಾರಿತ್ವೇ ಯೈಸ್ತೇ ಕಾಲವಶಂ ಗತಾಃ ॥8॥
ಯುದ್ಧದಲ್ಲಿ ಮರಣವನ್ನು ಹೊಂದಿದ, ಆ ದುರ್ಯೋಧನಾದಿಗಳ ಪುಣ್ಯಕಾರ್ಯ, ಪಾಪಕಾರ್ಯವು ಎಷ್ಟು ಇರುವುದೆಂದು ನೀನೇ ಊಹಿಸು. ತಮ್ಮ ವಿನಾಶಕ್ಕೆ ಎಷ್ಟು ಪಾಪಕೆಲಸಗಳನ್ನು ಮಾಡಬೇಕೋ, ಅಷ್ಟನ್ನೂ ಕೂಡ ಸಂಪಾದನೆ ಮಾಡಿ, ಆ ಕಾಲನ ಆಧೀನವಾಗಿಯೇ ಮರಣವನ್ನು ಹೊಂದಿರುವರು.
ಆತ್ಮನಶ್ಚ ವಿಜಾನೀಹಿ ನಿಯಮವ್ರತಶೀಲತಾಮ್ |
ಯದಾ ತ್ವಮೀದೃಶಂ ಕರ್ಮ ವಿಧಿನಾಕ್ರಮ್ಯ ಕಾರಿತಃ ॥9॥
ಮತ್ತು ನಿನ್ನ ನಡೆ-ನುಡಿಗಳು ಎಷ್ಟು ಶುಭದಾಯಕವಾಗಿವೆ ಎಂಬುದನ್ನು ಗಮನಿಸು. ನೀನು ಮಾಡುತ್ತಿರುವ ನಿಯಮನಿಷ್ಠವಾದ ವ್ರತಗಳನ್ನು ಅನುಷ್ಠಾನ- ಗಳನ್ನು, ಸದ್ಗುಣಗಳನ್ನು ಗಮನಿಸು. ನಿನ್ನಲ್ಲಿರುವ ಅಪಾರವಾದ ಸದ್ಗುಣಗಳ
ಅಧೀನವಾಗಿಯೇ ನಿನಗೆ ಜಯವನ್ನು ತಂದು, ಆ ದುಷ್ಟರನ್ನು ಆ ಕಾಲನು ವಿನಾಶ- ಗೊಳಿಸಿರುವನು.
ತ್ವಷ್ಟ್ರೇವ ವಿಹಿತಂ ಯಂತ್ರಂ ಯಥಾ ಸ್ಥಾಪಯಿತುರ್ವಶೇ |
ಕರ್ಮಣಾ ಕಾಲಯುಕ್ತೇನ ತಥೇದಂ ಭ್ರಾಮ್ಯತೇ ಜಗತ್ ॥10॥
ಯಾವರೀತಿಯಾಗಿ ಬಡಗಿಯಿಂದ ನಿರ್ಮಿತವಾದ ಕೀಲುಬೊಂಬೆಯು ಅವನ ಅಧೀನವಾಗಿ ಚೇಷ್ಟೆಯನ್ನು ಮಾಡುತ್ತದೋ, ಅದರಂತೆ ಕಾಲನಾಮಕನಾದ ಭಗವಂತನ ಅಧೀನವಾಗಿ ಈ ಜಗತ್ತು ತನ್ನ ವ್ಯಾಪಾರದಲ್ಲಿ ತೊಡಗಿದೆ.
ಟಿಪ್ಪಣಿ - ಅಥಾಭಿಪತ್ತಿಃ ಇತ್ಯತ್ರ ಅಥ ತಸ್ಮಾತ್ ಕಾರಣಾತ್ ಶುಭಪಾಪಯೋಃ ಅಭಿಪತ್ತಿಃ ಪ್ರಾಪ್ತಿಃ ಲೋಕಸ್ಯ ಕರ್ತವ್ಯಾ |
ಉದ್ಯತದಂಡನಂ ಉದ್ಯತಂ ಸನ್ನದ್ಧಂ ದಂಡನಂ ದುಷ್ಟಾನಾಂ ಶಿಕ್ಷಣಂ ಯಸ್ಮಿನ್ ತದಿದಂ ರಾಜ್ಯಮ್ ಅಭಿಪನ್ನಂ ತವ ಪ್ರಾಪ್ತಮ್ |
ಸ್ವಧರ್ಮೇ ವರ್ತಮಾನಸ್ಯ ಇತ್ಯತ್ರ ಸಾಪವಾದೇ ಕ್ವಚಿದ್ ದುಷ್ಟಾನಾಂ ಶಿಕ್ಷಣಂ ಕರ್ತವ್ಯಮಿತ್ಯಪವಾದಸಹಿತೇ ಸ್ವಧರ್ಮೇ |
ಕರ್ಮಣಾ ಕಾಲಯುಕ್ತೇನ ಇತ್ಯತ್ರ ಕಾಲಃ ಸಂಹಾರಕೋ ನಾರಾಯಣಃ |
`ಕಾಲಯುಕ್ತೇನ' ಎಂಬಲ್ಲಿ ಕಾಲಶಬ್ದಕ್ಕೆ ಸಂಹಾರಕರ್ತೃವಾದ ನಾರಾಯಣ ಎಂದರ್ಥ.
ಸಮಸ್ತಪ್ರಪಂಚವು ಕಾಲಾಧೀನವಾಗಿದೆ ಎಂದು ವೇದವ್ಯಾಸದೇವರು
ಯುಧಿಷ್ಠಿರನಿಗೆ ಬೋಧಿಸುತ್ತಿದ್ದಾರೆ. ಜಡವಾದ ಕಾಲವನ್ನು ವಿವಕ್ಷಿಸಿ ನಾಸ್ತಿಕ್ಯವನ್ನು ಬೋಧಿಸುತ್ತಿದ್ದಾರೆಂದು ತಿಳಿಯಬಾರದು. ಭಗವಂತನಿಗೆ ಕಾಲವೆಂಬ ರೂಪವಿದೆ. ಈ ರೂಪವೇ ಸಮಸ್ತ ಪ್ರಾಣಿಗಳ ಸಂಹಾರಕ್ಕೆ ಕಾರಣವಾಗಿದೆ. ಇಂಥ ಕಾಲ- ನಾಮಕನಾದ ಪರಮಾತ್ಮನು ಪ್ರತಿಯೊಬ್ಬರ ಕರ್ಮಗಳಿಗೆ ಸಾಕ್ಷಿಯಾಗಿರುತ್ತಾನೆ. ಮತ್ತು ಅವರವರ ಕರ್ಮಗಳಿಗೆ ಫಲಪ್ರದನೂ ಕೂಡ ಆಗಿರುತ್ತಾನೆ. ದುರ್ಯೋಧನಾದಿಗಳು ಆಚರಿಸಿದ ದುಷ್ಕರ್ಮಗಳಿಗೂ ಸಾಕ್ಷಿಯಾಗಿದ್ದಾನೆ. ಧರ್ಮರಾಜಾದಿಗಳು ಆಚರಿಸುತ್ತಿದ್ದ ಸತ್ಕರ್ಮಗಳಿಗೂ ಕೂಡ ಸಾಕ್ಷಿಯಾಗಿದ್ದಾನೆ. ದುರ್ಯೋಧನಾದಿಗಳು ಮಾಡಿದ ನೀಚ ಕಾರ್ಯಗಳಿಗೆ ವಿನಾಶವನ್ನೇ ಫಲವನ್ನಾಗಿ ನೀಡಿದ್ದಾನೆ. ಯುಧಿಷ್ಠಿರಾದಿಗಳು ಮಾಡಿದ ಸತ್ಕಾರ್ಯಗಳಿಗೆ ಅನಂತಕಾಲದ ತನಕ ವಿಜಯವನ್ನು ಸುಖಸಮೃದ್ಧಿಯ ಸೌಭಾಗ್ಯವನ್ನು ದಯಪಾಲಿಸುತ್ತಾನೆ. ಇಂಥ ಕಾಲನನ್ನು ನಿಯಂತ್ರಿಸುವ ಶಕ್ತಿ ಯಾರಿಗೂ ಇರುವುದಿಲ್ಲ. ದುರ್ಯೋಧನಾದಿ- ಗಳ ವಿನಾಶವನ್ನು ನಿಯಂತ್ರಣ ಮಾಡಲು ಎಷ್ಟೇ ಪ್ರಯತ್ನಪಟ್ಟರೂ ಯುಧಿ- ಷ್ಠಿರನಿಂದಲೂ ಸಾಧ್ಯವಾಗುವುದಿಲ್ಲ. ತನ್ನ ಮಕ್ಕಳ ವಿನಾಶವನ್ನೂ ಕೂಡ

ತಪ್ಪಿಸಲು ಯುಧಿಷ್ಠಿರನಿಗೆ ಸಾಧ್ಯವಾಗುವುದಿಲ್ಲ. ಇದೆಲ್ಲವೂ ಕಾಲನಾಮಕನಾದ ಪರಮಾತ್ಮನ ಮಹಿಮೆ ಎಂದಷ್ಟೇ ತಿಳಿದುಕೊಳ್ಳಬೇಕು. ಇದನ್ನು ಹೊರತಾಗಿ ಅಭಿಮನ್ಯು ಮೊದಲಾದವರ ಮೃತ್ಯುವನ್ನು ನಾನು ತಪ್ಪಿಸಬಹುದಿತ್ತು ಎಂಬ ಪರಿತಾಪವು ಅರ್ಥವಿಲ್ಲದ್ದು ಎಂಬುದು ವೇದವ್ಯಾಸದೇವರ ಅಭಿಪ್ರಾಯವಾಗಿದೆ.

ಪುರುಷಸ್ಯ ಹಿ ದೃಷ್ಟ್ವೇಮಾಮುತ್ಪತ್ತಿಮನಿಮಿತ್ತತಃ |
ಯದೃಚ್ಛಯಾ ವಿನಾಶಂ ಚ ಶೋಕಹರ್ಷಾವನರ್ಥಕೌ ॥11॥

ಮನುಷ್ಯನ ಜನ್ಮಕ್ಕೆ ಏನು ಕಾರಣ? ಎಂದು ತಿಳಿಯಲು ಸಾಧ್ಯವಿಲ್ಲ. ಅದರಂತೆ ಅವನ ನಾಶವನ್ನೂ ಕೂಡ ತಿಳಿಯುವುದು ಸಾಧ್ಯವಿಲ್ಲ. ಎಲ್ಲವೂ ಕೂಡ ಆ ಕಾಲನ ಇಚ್ಛೆಯಂತೆಯೇ ನಡೆಯುತ್ತದೆ.

ಟಿಪ್ಪಣಿ - ಉತ್ಪತ್ತಿಮನಿಮಿತ್ತತ ಇತ್ಯತ್ರ ಅನಿಮಿತ್ತತಃ ಅಕಾರವಾಚ್ಯನಾರಾ- ಯಣಾಖ್ಯಸ್ವತಂತ್ರನಿಮಿತ್ತತಃ |

`ಉತ್ಪತ್ತಿಮನಿಮಿತ್ತತಃ' ಎಂಬಲ್ಲಿ ಅನಿಮಿತ್ತತಃ ಎಂಬುದಕ್ಕೆ ಅಕಾರಶಬ್ದದಿಂದ ಪ್ರತಿಪಾದ್ಯನಾದ ನಾರಾಯಣನು ಸ್ವತಂತ್ರವಾಗಿ ಕಾರಣನಾಗಿದ್ದಾನೆ ಎಂದರ್ಥ.

ನಾವು ಏಕೆ ಹುಟ್ಟುತ್ತಿದ್ದೇವೆ? ಏಕೆ ಸಾಯುತ್ತೇವೆ? ಎಂಬುದನ್ನು ನಮ್ಮಿಂದ ತಿಳಿಯಲು ಸಾಧ್ಯವಾಗುವುದಿಲ್ಲ. ಪ್ರತಿಯೊಂದೂ ಕೂಡ ನಮ್ಮ ಕರ್ಮಕ್ಕೆ ಅನು- ಗುಣವಾಗಿ ಆ ಕಾಲನ ಅಧೀನವಾಗಿ ಹುಟ್ಟು-ಸಾವುಗಳನ್ನು ಅನುಭವಿಸುತ್ತಿದ್ದೇವೆ. ಜನನವು ಸುಖಪ್ರದವಾಗಿದೆ ಎಂದು ನಮ್ಮ ಇಚ್ಛೆಗೆ ಅನುಗುಣವಾಗಿ ಹುಟ್ಟಲು ಸಾಧ್ಯವಿಲ್ಲ. ಮರಣವು ದುಃಖಪ್ರದವೆಂಬ ಕಾರಣದಿಂದ ಅದನ್ನು ತಡೆಯಲೂ ಕೂಡ ನಮ್ಮಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಒಬ್ಬನು ಹುಟ್ಟುವುದರಿಂದ ಸಂತೋಷ ಪಡಬಾರದು. ಮತ್ತೊಬ್ಬನು ಸತ್ತನೆಂಬ ಕಾರಣದಿಂದ ದುಃಖವನ್ನು ಪಡಬಾರದು.

ವ್ಯಲೀಕಂ ಚಾಪಿ ಯತ್ತ್ವತ್ರ ಚಿತ್ತಂ ವೈತಂಸಿಕಂ ತವ |
ತದರ್ಥಮಿಷ್ಯತೇ ರಾಜನ್ ಪ್ರಾಯಶ್ಚಿತ್ತಂ ತದಾಚರ॥12॥

ದುರ್ಯೋಧನಾದಿಗಳು ತಮ್ಮ ಕರ್ಮಕ್ಕೆ ಅನುಗುಣವಾಗಿ ಮೃತರಾಗಿದ್ದಾರೆ. ಆದರೆ  ನಾನು ಅವರನ್ನು ಕೊಂದಿದ್ದೇನೆಂಬ ಕಾರಣದಿಂದ ಮನಸ್ಸನ್ನು ಕುಟಿಲವನ್ನಾಗಿ ಮಾಡಿಕೊಂಡಿರುವಿ. ಈ ಪಾಪದ ನಿವೃತ್ತಿಗಾಗಿ ಅನೇಕ ಪ್ರಾಯಶ್ಚಿತ್ತಗಳು ಶಾಸ್ತ್ರಗಳಲ್ಲಿ ಉಕ್ತವಾಗಿವೆ. ನೀನು ಆ ಪ್ರಾಯಶ್ಚಿತ್ತಗಳನ್ನು ಆಚರಿಸಿ, ಮನಸ್ಸನ್ನು ಶುದ್ಧಿಮಾಡಿ- ಕೊಳ್ಳಬೇಕು.

ಟಿಪ್ಪಣಿ - ದುರ್ಯೋಧನಾದಿಗಳನ್ನು ಸಂಹರಿಸುವವನು ನೀನಲ್ಲ. ಆದರೆ ನಾನೇ ಸಂಹಾರ ಮಾಡಿದ್ದೇನೆಂದು ಮನಸ್ಸನ್ನು ಹಾಳುಮಾಡಿಕೊಂಡಿರುವಿ. ನಿನ್ನ ಮನಸ್ಸು ಅತ್ಯಂತ ಉದ್ವಿಗ್ನವಾಗಿದೆ. ಆದ್ದರಿಂದಲೇ ನಿನಗೆ ಪಾಪವು ಅಂಟಿದೆ. ಇದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ವ್ಯಾಸರು ಉಪದೇಶಿಸುತ್ತಿದ್ದಾರೆ.

ಟಿಪ್ಪಣಿ - ಚಿತ್ತಂ ವೈತಂಸಿಕಂ ತವ ಇತ್ಯತ್ರ ವೈತಂಸಿಕಂ ಕುಟಿಲಮ್ | `ವೈತಂಸಿಕಃ ಕೌಟಿಕಶ್ಚ' ಇತ್ಯಮರಃ |

ಚಿತ್ತಂ ವೈತಂಸಿಕಂ ತವ ಎಂಬಲ್ಲಿ ವೈತಂಸಿಕಂ ಎಂಬುದಕ್ಕೆ ಕುಟಿಲವಾದದ್ದು ಎಂದರ್ಥ. `ವೈತಂಸಿಕಃ ಕೌಟಿಕಶ್ಚ' ಎಂಬುದಾಗಿ ಅಮರಕೋಶದಲ್ಲಿ ಹೇಳಲಾಗಿದೆ.

ಇದಂ ಚ ಶ್ರೂಯತೇ ಪಾರ್ಥ ಯುದ್ಧೇ ದೇವಾಸುರೇ ಪುರಾ |
ಅಸುರಾ ಭ್ರಾತರೋ ಜ್ಯೇಷ್ಠಾ ದೇವಾಶ್ಚಾಪಿ ಯವೀಯಸಃ ॥13॥

ಯುಧಿಷ್ಠಿರನೇ! ಹಿಂದೆ ದೇವತೆಗಳಿಗೂ ಅಸುರರಿಗೂ ಘೋರವಾದ ಯುದ್ಧ- ವೊಂದು ನಡೆದಿತ್ತು. ಪ್ರಕೃತ ಆ ಪ್ರಸಂಗವನ್ನು ನಿನಗೆ ಹೇಳುತ್ತೇನೆ ಕೇಳು. ಅಸುರರು ಜ್ಯೇಷ್ಠಭ್ರಾತೃಗಳಾಗಿದ್ದರು, ದೇವತೆಗಳು ಕನಿಷ್ಠಭ್ರಾತೃಗಳಾಗಿದ್ದರು.

ತೇಷಾಮಪಿ ಶ್ರೀನಿಮಿತ್ತಂ ಮಹಾನಾಸೀತ್ ಸಮುಚ್ಛ್ರಯಃ |
ಯುದ್ಧಂ ವರ್ಷಸಹಸ್ರಾಣಿ ದ್ವಾತ್ರಿಂಶದಭವತ್ ಕಿಲ ॥14॥

ತ್ರೈಲೋಕ್ಯಾಧಿಪತ್ಯವೆಂಬ ಸಂಪತ್ತು ಯಾರಿಗೆ ಸೇರಬೇಕೆಂಬ ವಿಷಯದಲ್ಲಿ ಅವರಿಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ಮೂವತ್ತೆರಡು ಸಾವಿರ ವರ್ಷಗಳ ಕಾಲ ಮಹಾಯುದ್ಧವನ್ನು ದೇವತೆಗಳು ಹಾಗೂ ಅಸುರರು ಮಾಡಿದರು.

ಏಕಾರ್ಣವಾಂ ಮಹೀಂ ಕೃತ್ವಾ ರುಧಿರೇಣ ಪರಿಪ್ಲುತಾಮ್ |
ಜಘ್ನುರ್ದೈತ್ಯಾಂಸ್ತದಾ ದೇವಾಸ್ತ್ರಿದಿವಂ ಚೈವ ಲೇಭಿರೇ ॥23॥

ಸಮಸ್ತ ಭೂಮಂಡಲವು ದೈತ್ಯರ ರಕ್ತದಿಂದ ತುಂಬಿಹೋಯಿತು. ಭೂ- ಮಂಡಲದ ಸುತ್ತಲೂ ಇರುವ ಸಮುದ್ರಗಳು ರಕ್ತದ ಸಮುದ್ರಗಳಾದವು. ತಮ್ಮ ಹಿರಿಯ ಸಹೋದರರಾದ ದೈತ್ಯರನ್ನು ಕೊಂದು, ಎಲ್ಲ ದೇವತೆಗಳು ವಿಜಯಶಾಲಿ- ಗಳಾದರು. ತ್ರಿಲೋಕಗಳಿಗೆ ಒಡೆಯರಾದರು.

ತಥೈವ ಪೃಥಿವೀಂ ಲಬ್ಧ್ವಾ ಬ್ರಾಹ್ಮಣಾ ವೇದಪಾರಗಾಃ |
ಸಂಶ್ರಿತಾ ದಾನವಾನಾಂ ವೈ ಸಾಹ್ಯಾರ್ಥೇ ದರ್ಪಮೋಹಿತಾಃ ॥24॥
ಶಾಲಾವೃಕಾ ಇತಿ ಖ್ಯಾತಾಸ್ತ್ರಿಷು ಲೋಕೇಷು ಭಾರತ |
ಅಷ್ಟಾಶೀತಿಸಹಸ್ರಾಣಿ ತೇ ಚಾಪಿ ವಿಬುಧೈರ್ಹತಾಃ ॥25॥

ವೇದಪಾರಂಗತರಾದ ಶಾಲಾವೃಕ ಎಂಬುದಾಗಿ ಪ್ರಸಿದ್ಧಿಯನ್ನು ಪಡೆದ 88000 ಬ್ರಾಹ್ಮಣರು ದರ್ಪದಿಂದ ಕೂಡಿದ್ದರು, ಮೋಹವಶರಾಗಿದ್ದರು, ದೈತ್ಯ- ರಿಗೆ ಅಸುರರಿಗೆ ಸಹಾಯವನ್ನು ಮಾಡುವುದಕ್ಕಾಗಿ ಅಸುರರ ಪಕ್ಷವನ್ನು ಸೇರಿದ್ದರು. ಆದರೆ ದೇವತೆಗಳು ಆ ಬ್ರಾಹ್ಮಣರನ್ನೂ ಕೂಡ ಸಂಹಾರ ಮಾಡಿದರು. ಭೂಮಂಡಲವನ್ನು ತಮ್ಮ ಅಧೀನವನ್ನಾಗಿ ಮಾಡಿಕೊಂಡರು.

ಧರ್ಮವ್ಯುಚ್ಛಿತ್ತಿಮಿಚ್ಛಂತೋ ಯೇಽಧರ್ಮಸ್ಯ ಪ್ರವರ್ತಕಾಃ |
ಹಂತವ್ಯಾಸ್ತೇ ದುರಾತ್ಮಾನೋ ದೇವೈರ್ದೈತ್ಯಾ ಇವೋಲ್ಬಣಾಃ ॥26॥

ಧರ್ಮಮಾರ್ಗವು ಸಂಪೂರ್ಣವಾಗಿ ನಾಶವಾಗಬೇಕೆಂಬ ಇಚ್ಛೆಯಿಂದ ಯಾರು ಅಧರ್ಮಕ್ಕೆ ಪ್ರೇರಕರಾಗಿರುತ್ತಾರೋ, ಅಂಥ ದುರಾತ್ಮರನ್ನು ಕೊಲ್ಲಲೇ ಬೇಕು. ಈ ದೃಷ್ಟಿಯಿಂದ ದೇವತೆಗಳು ಎಲ್ಲಾ ದೈತ್ಯರನ್ನು ಸಂಹಾರ ಮಾಡಿದರು. ಅದರಂತೆ ನೀನೂ ಸಹ

ದುಷ್ಟರನ್ನು ಸಂಹಾರ ಮಾಡಬೇಕು.
ಏಕಂ ಹತ್ವಾ ಯದಿ ಕುಲೇ ಶಿಷ್ಟಾನಾಂ ಸ್ಯಾದನಾಮಯಮ್ |
ಕುಲಂ ಹತ್ವಾಚ ರಾಷ್ಟ್ರಂ ವಾ ನ ತದ್ವೃತ್ತೋಪಘಾತಕಮ್ ॥27॥
ಒಬ್ಬನನ್ನು ಕೊಲ್ಲುವುದರಿಂದ ಕುಲದಲ್ಲಿರುವ ಉಳಿದೆಲ್ಲಾ ಸತ್ಪುರುಷರಿಗೆ ಕ್ಷೇಮವಾಗುವುದಾದರೆ ಅವನನ್ನು ಕೊಲ್ಲುವುದೇ ಧರ್ಮ. ಒಂದು ದುಷ್ಟಕುಲವನ್ನು ಸಂಹಾರ ಮಾಡುವುದರಿಂದ ಸಜ್ಜನರಿಂದ ಕೂಡಿದ ಸಮಸ್ತರಾಷ್ಟ್ರಕ್ಕೆ ಕ್ಷೇಮವಾಗು- ವುದಾದರೆ, ಆ ಕುಲವನ್ನು ಸಂಪೂರ್ಣವಾಗಿ ನಾಶ ಮಾಡುವುದೇ ಧರ್ಮವಾಗು- ತ್ತದೆ. ಇದರಿಂದ ಕುಲವನ್ನು, ಧರ್ಮವನ್ನು ನಾಶ ಮಾಡಿದ ಪಾಪವು ಬರುವುದಿಲ್ಲ.
ಅಧರ್ಮರೂಪೋ ಧರ್ಮೋ ಹಿ ಕಶ್ಚಿದತಸ್ತಿ ನರಾಧಿಪಃ |
ಧರ್ಮಶ್ಚಾಧರ್ಮರೂಪೋಽಸ್ತಿ ತಚ್ಚ ಜ್ಞೇಯಂ ವಿಪಶ್ಚಿತಾ ॥28॥
ಕೆಲವೊಮ್ಮೆ ನಾವು ಮಾಡುವ ಕರ್ಮವು ಅಧರ್ಮದಂತೆ ಕಾಣಬಹುದು. ವಿಚಾರ ಮಾಡಿದರೆ ಅದು ಧರ್ಮವೇ ಆಗಿರುತ್ತದೆ. ಕೆಲವೊಮ್ಮೆ ನಾವು ಮಾಡುವ ಪಾಪಕೆಲಸಗಳು ಧರ್ಮದಂತೆ ಕಾಣಬಹುದು. ಆದರೆ ವಿಚಾರ ಮಾಡಿದರೆ ಅದು ಅಧರ್ಮವೇ ಆಗಿರುತ್ತದೆ. ಹೀಗೆ ವಿದ್ವಾಂಸರು ಧರ್ಮಾಧರ್ಮಗಳ ಸೂಕ್ಷ್ಮ- ರಹಸ್ಯವನ್ನು ಅರಿತುಕೊಳ್ಳಬೇಕು.
ಟಿಪ್ಪಣಿ - ಅಧರ್ಮರೂಪೋ ಧರ್ಮೋ ಹಿ ಇತ್ಯತ್ರ ಕಶ್ಚಿದ್ಧರ್ಮಃ ದುಷ್ಟವಧಾಖ್ಯೋ ಧರ್ಮಃ ಅಧರ್ಮರೂಪಃ ಹಿಂಸಾಮಾತ್ರೇಣ ಅಜ್ಞಾನಿನಾಮ್ ಅಧರ್ಮವದ್ ರೂಪಂ ಯಸ್ಯ ಸಃ ಅಧರ್ಮರೂಪಃ | ಧರ್ಮಃ ಚೋರೈಃ ಪ್ರಶ್ನೇ ಕೃತೇ ಸತಿ ಅನೇನ ಪಥಾ ಬ್ರಾಹ್ಮಣಾ ಗತಾ ಇತಿ ಸತ್ಯರೂಪತ್ವಾದ್ ಧರ್ಮಃ ಅಜ್ಞಾನಾಂ ಧರ್ಮವತ್ ಪ್ರತೀಯಮಾನಃ ಅಧರ್ಮಃ ವಿಪ್ರಹಿಂಸಾಹೇತುತ್ವಾ- ನ್ಮಹಾನಧರ್ಮಃ |
ಅಧರ್ಮರೂಪೋ ಧರ್ಮೋ ಹಿ ಎಂಬಲ್ಲಿ ಕಶ್ಚಿದ್ಧರ್ಮಃ ಎಂಬುದಕ್ಕೆ ದುಷ್ಟವಧೆ ಎಂದರ್ಥ. ಹಿಂಸೆಯನ್ನು ಮಾಡುವುದರಿಂದ ಅಜ್ಞಾನಿಗಳಿಗೆ ಅಧರ್ಮ- ದಂತೆ ಕಾಣಿಸುತ್ತದೆ ಎಂದಭಿಪ್ರಾಯ. `ಧರ್ಮಃ' - ಚೋರರು ಪ್ರಶ್ನೆ ಮಾಡಿದಾಗ ಈ ಮಾರ್ಗದಲ್ಲಿಯೇ ಬ್ರಾಹ್ಮಣನು ಹೋದನು ಎಂಬುದಾಗಿ ಅಜ್ಞಾನಿಗಳಿಗೆ ಧರ್ಮವೆಂದು ಕಾಣಿಸುತ್ತದೆ. ಆದರೆ ವಿಪ್ರಹಿಂಸೆಗೆ ಕಾರಣವಾಗಿರುವುದರಿಂದ ದೊಡ್ಡ ಅಧರ್ಮವೇ ಆಗಿದೆ.
ತಸ್ಮಾತ್ ಸಂಸ್ತಂಭಯಾತ್ಮಾನಂ ಶ್ರುತವಾನಸಿ ಪಾಂಡವ |
ದೇವೈಃ ಪೂರ್ವಗತಂ ಮಾರ್ಗಮನುಯಾತೋಽಸಿ ಭಾರತ ॥21॥
ಯುಧಿಷ್ಠಿರನೇ! ಆದ್ದರಿಂದ ನೀನು ಬಹುಶ್ರುತನಾಗಿರುವಿ. ಶ್ರೇಷ್ಠಪುರುಷರಿಂದ ಉಪದೇಶವನ್ನು ಪಡೆದುಕೊಂಡಿರುವಿ. ನಿನ್ನ ಮನಸ್ಸನ್ನು ಸ್ಥಿರಗೊಳಿಸು. ದೇವತೆಗಳು ಹಿಂದೆ ಯಾವ ಮಾರ್ಗವನ್ನು ಅನುಸರಿಸಿದ್ದರೋ, ಅದೇ ಮಾರ್ಗವನ್ನು ಅನು- ಸರಿಸು.
ನ ಹೀದೃಶಾ ಗಮಿಷ್ಯಂತಿ ನರಕಂ ಪಾಂಡವರ್ಷಭ |
ಭ್ರಾತೄನಾಶ್ವಾಸಯೈತಾಂಸ್ತ್ವಂ ಸುಹೃದಶ್ಚ ಪರಂತಪ ॥22॥
ಓ ಪಾಂಡವಶ್ರೇಷ್ಠನೇ ! ನಿನ್ನಂಥ ಶ್ರೇಷ್ಠರು ಯಾರೂ ಸಹ ನರಕಭಾಜನರಾಗಲು ಸಾಧ್ಯವಿಲ್ಲ. ಪರಂತಪನೇ! ಇನ್ನು ಮುಂದಾದರೂ ನಿನ್ನ ತಮ್ಮಂದಿರನ್ನು ಸಂತೈಸಿ, ರಾಜ್ಯಪರಿಪಾಲನೆಯಲ್ಲಿ ದೃಢಮನಸ್ಸನ್ನು ಮಾಡುವವನಾಗು.
ಯೋ ಹಿ ಪಾಪಸಮಾರಂಭೇ ಕಾರ್ಯೇ ತದ್ಭಾವಭಾವಿತಃ |
ಕುರ್ವನ್ನಪಿ ತಥೈವ ಸ್ಯಾತ್ ಕೃತ್ವಾ ಚ ನಿರಪತ್ರಪಃ ॥23॥
ತಸ್ಮಿಂಸ್ತತ್ ಕಲುಷಂ ಸರ್ವಂ ಸಮಾಪ್ತಮಿತಿ ಶಬ್ದಿತಮ್ |
ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ಹ್ರಾಸೋ ವಾ ಪಾಪಕರ್ಮಣಃ ॥24॥
ಯಾವ ವ್ಯಕ್ತಿಯು ಪಾಪಭಾವನೆಯನ್ನು ಮನಸ್ಸಿನಲ್ಲಿ ತುಂಬಿಕೊಂಡು ಅದರಿಂದ ಪ್ರಭಾವಿತನಾಗಿ ಪಾಪಕರ್ಮದಲ್ಲಿ ಪ್ರವೃತ್ತನಾಗುತ್ತಾನೋ, ಆ ಕೆಲಸವು ಮುಗಿದ ಮೇಲೆ ನಾನು ಮಾಡಿದ್ದು ತಪ್ಪಾಯಿತೆಂದು ಪಶ್ಚಾತ್ತಾಪ ಪಡುವುದಿಲ್ಲವೋ, ತಾನು ಮಾಡಿದ ಪಾಪಕರ್ಮಕ್ಕೆ ನಾಚಿಕೆ ಪಡುವುದಿಲ್ಲವೋ, ಅಂಥವನಲ್ಲಿ ಆ ಪಾಪ- ಕಾರ್ಯವು ಪೂರ್ಣರೂಪದಲ್ಲಿ ಪ್ರತಿಷ್ಠಿತವಾಗಿರುತ್ತದೆಂದು ಶಾಸ್ತ್ರಗಳು ಪ್ರತಿಪಾದನೆ ಮಾಡುತ್ತವೆ. ಅಂಥವನಿಗೆ ಯಾವುದೇ ಪ್ರಾಯಶ್ಚಿತ್ತಗಳಿರುವುದಿಲ್ಲ. ಲೋಕದ ದೃಷ್ಟಿಯಲ್ಲಿ ಬಲಾತ್ಕಾರಕ್ಕೆ ಅವನು ಪ್ರಾಯಶ್ಚಿತ್ತ ಮಾಡಿಕೊಂಡರೂ ಅವನ ಪಾಪವು ಸ್ವಲ್ಪವೂ ಸಹ ಕಡಿಮೆಯಾಗುವುದಿಲ್ಲ.
ತ್ವಂ ತು ಶುಕ್ಲಾಭಿಜಾತೀಯಃ ಪರದೋಷೇಣ ಕಾರಿತಃ |
ಅನಿಚ್ಛಮಾನಃ ಕರ್ಮೇದಂ ಕೃತ್ವಾ ಚ ಪರಿತಪ್ಯಸೇ ॥25॥
ಯುಧಿಷ್ಠಿರನೇ! ನೀನು ಸ್ವಭಾವತಃ ಪರಿಶುದ್ಧನಾಗಿರುವವನು. ನಿನಗೆ ಯುದ್ಧ ಮಾಡಬೇಕೆಂಬ ಇಚ್ಛೆಯು ಸರ್ವಥಾ ಇರಲಿಲ್ಲ. ಶತ್ರುಗಳಾದ ಕಾರಣದಿಂದ ಅನಿ- ವಾರ್ಯವಾಗಿ ನೀನು ಯುದ್ಧವನ್ನು ಮಾಡಬೇಕಾಯಿತು. ಮನಸ್ಸಿಲ್ಲದಿದ್ದರೂ ಯುದ್ಧವನ್ನು ಪೂರ್ಣಗೊಳಿಸಿರುವಿ. ಯುದ್ಧವಾದ ಮೇಲೂ ಸಹ ಪಶ್ಚಾತ್ತಾಪವನ್ನು ಪಡುತ್ತಿರುವಿ.
ಟಿಪ್ಪಣಿ - `ಪರದೋಷೇಣ ಕಾರಿತಃ' ಇತ್ಯತ್ರ ಪರೇಷಾಂ ದುರ್ಯೋ- ಧನಾದೀನಾಂ ದೋಷೇಣ ಕಪಟದ್ಯೂತರಾಜ್ಯಾಪಹಾರಲಾಕ್ಷಾಗೃಹಾದಿಕರಣ- ದೋಷೇಣ |
`ಪರದೋಷೇಣ ಕಾರಿತಃ' ಎಂಬಲ್ಲಿ ಪರರೆಂದರೆ ದುರ್ಯೋಧನಾದಿಗಳು ಎಂದರ್ಥ. ಅವನು ಮಾಡಿದ, ಕಪಟದ್ಯೂತ, ರಾಜ್ಯಾಪಹಾರಲಾಕ್ಷಾಗೃಹದಾಹ, ಇವೇ ಮೊದಲಾದ ಪಾಪಕಾರ್ಯಗಳಿಂದ ಎಂದರ್ಥ.
ಅಶ್ವಮೇಧೋ ಮಹಾಯಜ್ಞಃ ಪ್ರಾಯಶ್ಚಿತ್ತಮುದಾಹೃತಮ್ |
ತಮಾಹರ ಮಹಾರಾಜ ವಿಪಾಪ್ಮೈವಂ ಭವಿಷ್ಯಸಿ ॥26॥
ಇಚ್ಛೆ ಇಲ್ಲದಿದ್ದರೂ ನಡೆದು ಹೋದ ಸರ್ವವಿನಾಶಕ್ಕೆ ಒಂದು ಪ್ರಾಯಶ್ಚಿತ್ತವಿದೆ. ಮಹಾಯಜ್ಞವೆನಿಸಿದ ಅಶ್ವಮೇಧಯಾಗವನ್ನು ಪ್ರಾಯಶ್ಚಿತ್ತವನ್ನಾಗಿ ಉದಾಹರಿಸ- ಲಾಗಿದೆ. ಆ ಅಶ್ವಮೇಧಯಾಗವನ್ನು ನೀನು ಆಚರಿಸು. ಅನಂತರ ನಿನ್ನ ಮನಸ್ಸಿನ- ಲ್ಲಿರುವ

ಕಲ್ಮಶವು ಪರಿಹಾರವಾಗಿ ಪಾಪರಹಿತನಾಗುವೆ.
ಮರುದ್ಭಿಃ ಸಹ ಜಿತ್ವಾರೀನ್ ಮಘವಾನ್ ಪಾಕಶಾಸನಃ |
ಏಕೈಕಂ ಕ್ರತುಮಾಹೃತ್ಯ ಶತಕೃತ್ವಃ ಶತಕ್ರತುಃ ॥27॥
ಪಾಕಶಾಸನನಾದ ದೇವೇಂದ್ರನು ಎಲ್ಲ ಮರುದ್ಗಣಗಳ ಜೊತೆ ಆ ದೈತ್ಯರನ್ನು ಜಯಿಸಿದನು. ಒಮ್ಮೊಮ್ಮೆ ಜಯಸಿದಾಗಲೂ ಒಂದೊಂದು ಅಶ್ವಮೇಧಯಾಗವನ್ನು ಆಚರಿಸುತ್ತಿದ್ದನು. ಹೀಗೆ ನೂರು ಬಾರಿ ಜಯಿಸಿ, ನೂರು ಅಶ್ವಮೇಧಯಾಗಗಳನ್ನು ಆಚರಿಸಿದನು. ಆದ್ದರಿಂದಲೇ ಶತಕ್ರತು ಎಂಬುದಾಗಿ ಅನ್ವರ್ಥನಾಮವನ್ನು ಹೊಂದಿದನು.
ಪೂತಪಾಪ್ಮಾ ಜಿತಸ್ವರ್ಗೋ ಲೋಕಾನ್ ಪ್ರಾಪ್ಯ ಸುಖೋದಯಾನ್ |
ಮರುದ್ಗಣವೃತಃ ಶಕ್ರಃ ಶುಶುಭೇ ಭಾಸಯನ್ ದಿಶಃ ॥28॥
ಸಕಲಪಾಪಗಳಿಂದ ರಹಿತನಾದ ಸ್ವರ್ಗಲೋಕವನ್ನು ಜಯಿಸಿದ ಆ ದೇವೇಂದ್ರ- ನು ಎಲ್ಲ ಪುಣ್ಯಲೋಕಗಳಿಗೆ ತೆರಳಿದನು. ದೇವತೆಗಳ ಸಮೂಹದಿಂದ ಪರಿವೃತನಾಗಿ ಹತ್ತುದಿಕ್ಕುಗಳಲ್ಲಿಯೂ ಬೆಳಗುತ್ತಾ ಪ್ರಕಾಶಿಸಿದನು.
ಸ್ವರ್ಗಲೋಕೇ ಮಹೀಯಂತಮಪ್ಸರೋಭಿಃ ಶಚೀಪತಿಮ್ |
ಋಷಯಃ ಪರ್ಯುಪಾಸಂತೇ ದೇವಾಶ್ಚ ವಿಬುಧೇಶ್ವರಮ್ ॥29॥
ಸ್ವರ್ಗಲೋಕದಲ್ಲಿ ಅಪ್ಸರೆಯರಿಂದ ಸೇವಿಸಲ್ಪಟ್ಟನು. ದೇವೇಶ್ವರನಾದ ಶಚೀಪತಿ -ಯಾದ ಆ ಇಂದ್ರನನ್ನು ದೇವತೆಗಳಾದರೂ ನಿರಂತರ ಇಂದೂ ಸಹ ಉಪಾಸನೆ ಮಾಡುತ್ತಲೇ ಇದ್ದಾರೆ.
ಸೋಽಯಂ ತ್ವಮಿಹ ಸಂಕ್ರಾಂತೋ ವಿಕ್ರಮೇಣ ವಸುಂಧರಾಮ್ |
ನಿರ್ಜಿತಾಶ್ಚ ಮಹೀಪಾಲಾ ವಿಕ್ರಮೇಣ ತ್ವಯಾನಘ ॥30॥
ಪಾಪರಹಿತನೇ! ನಿನ್ನ ಭುಜಪರಾಕ್ರಮದಿಂದ ಸಮಗ್ರ ಭೂಮಂಡಲವನ್ನು ನೀನು ಗೆದ್ದಿರುವೆ. ಎಲ್ಲ ರಾಜರನ್ನು ಸೋಲಿಸಿರುವೆ. ನಿನಗೆ ಸಮಸ್ತ ಭೂಮಂಡಲವು ಈಗ ಅಧೀನವಾಗಿದೆ.
ತೇಷಾಂ ಪುರಾಣಿ ರಾಷ್ಟ್ರಾಣಿ ಗತ್ವಾ ರಾಜನ್ ಸುಹೃದ್ವೃತಃ |
ಭ್ರಾತೄನ್ ಪುತ್ರಾಂಶ್ಚ ಪೌತ್ರಾಂಶ್ಚ ಸ್ವೇ ಸ್ವೇ ರಾಜ್ಯೇಽಭಿಷೇಚಯ ॥31॥
ನಿನ್ನಿಂದ ಹತರಾದ ಎಲ್ಲ ರಾಜರುಗಳ ಪಟ್ಟಣಗಳಿಗೆ ತೆರಳು. ರಾಷ್ಟ್ರಗಳಿಗೆ ತೆರಳು. ಅಲ್ಲಿರುವ ಸುಹೃಜ್ಜನರನ್ನು, ರಾಜರ ಅನುಜರನ್ನು, ಮಕ್ಕಳನ್ನು, ಮೊಮ್ಮಕ್ಕಳನ್ನು, ಆಯಾ ರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡು.
ಬಾಲಾನಪಿ ಚ ಗರ್ಭಸ್ಥಾನ್ ಸಾಂತ್ವಾನಿ ಸಮುದಾಚರನ್ |
ರಂಜಯನ್ ಪ್ರಕೃತೀಃ ಸರ್ವಾಃ ಪರಿಪಾಹಿ ವಸುಂಧರಾಮ್ ॥32॥
ಒಂದುವೇಳೆ ಮಕ್ಕಳುಗಳು ಉಳಿದಿದ್ದರೆ, ಅಥವಾ ಗರ್ಭದಲ್ಲಿ ಶಿಶುಗಳಿದ್ದರೆ, ಆ ರಾಜಪರಿವಾರದವರಿಗೆ ಮುಂದೆ ಆ ಶಿಶುವನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟ- ಗಟ್ಟುತ್ತೇನೆಂದು ಆಶ್ವಾಸನೆಯನ್ನು ನೀಡು. ಅವರನ್ನು ಸಮಾಧಾನಗೊಳಿಸು. ಎಲ್ಲಾ ಪ್ರಜೆಗಳನ್ನು ಸಂತೋಷಪಡಿಸಿ, ಸಮಗ್ರಭೂಮಂಡಲಗಳನ್ನು ಪರಿಪಾಲನೆ ಮಾಡು.
ಕುಮಾರೋ ನಾಸ್ತಿ ಯೇಷಾಂ ಚ ಕನ್ಯಾಸ್ತತ್ರಾಭಿಷೇಚಯ |
ಕಾಮಾಶಯೋ ಹಿ ಸ್ತ್ರೀವರ್ಗಃ ಶೋಕಮೇವಂ ಪ್ರಹಾಸ್ಯಸಿ ॥33॥
ಒಂದು ವೇಳೆ ಯಾವುದಾದರೂ ರಾಜವಂಶದಲ್ಲಿ ಗಂಡುಮಕ್ಕಳಿಲ್ಲದಿದ್ದರೆ, ಕುಮಾರಿಯರನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ, ಪಟ್ಟಾಭಿಷೇಕವನ್ನು ಮಾಡು. ಹೀಗೆ ಮಾಡುವುದರಿಂದ ಅಂತಃಪುರದ ಸ್ತ್ರೀಯರಿಗೆ ಬಹಳ ಸಂತೋಷವಾಗುತ್ತದೆ. ಅವರ ಕಾಮನೆಗಳು ಪೂರ್ಣವಾದಂತಾಗಿ ಅವರ ಶೋಕವನ್ನು ನೀನು ಪರಿಹಾರ ಮಾಡಿ- ದಂತಾಗುತ್ತದೆ.
ಏವಮಾಶ್ವಾಸನಂ ಕೃತ್ವಾ ಸರ್ವರಾಷ್ಟ್ರೇಷು ಭಾರತ |
ಯಜಸ್ವ ವಾಜಿಮೇಧೇನ ಯಥೇಂದ್ರೋ ವಿಜಯೀ ಪುರಾ ॥34॥
ಭಾರತನೇ ! ಪ್ರತಿಯೊಂದು ರಾಷ್ಟ್ರಗಳಿಗೂ ಭೇಟಿ ನೀಡು. ದುಃಖಿತರಾದ ಎಲ್ಲ ಪ್ರಜೆಗಳನ್ನು ಸಮಾಧಾನಪಡಿಸು. ಇಂದ್ರನು ಹೇಗೆ ಅಶ್ವಮೇಧಯಾಗವನ್ನು ಮಾಡಿದನೋ, ಅದರಂತೆ ನೀನೂ ಸಹ ಅಶ್ವಮೇಧಯಾಗವನ್ನು ಆಚರಿಸು.
ಅಶೋಚ್ಯಾಸ್ತೇ ಮಹಾತ್ಮಾನಃ ಕ್ಷತ್ರಿಯಾಃ ಕ್ಷತಿಯರ್ಷಭ |
ಸ್ವಕರ್ಮಭಿರ್ಗತಾ ನಾಶಂ ಕೃತಾಂತಬಲಮೋಹಿತಾಃ ॥35॥
ಯುದ್ಧದಲ್ಲಿ ಯಾರು ಇಚ್ಛೆಪಟ್ಟು ಮೃತರಾಗಿದ್ದಾರೋ, ಅಂಥ ಕ್ಷತ್ರಿಯರ ವಿಷಯದಲ್ಲಿ ನೀನು ದುಃಖಪಡಲು ಕಾರಣವಿಲ್ಲ. ಕ್ಷತ್ರಿಯಶ್ರೇಷ್ಠನೇ ! ಕೃತಾಂತನಾದ ಕಾಲರೂಪಿ ಪರಮಾತ್ಮನ ಬಲದಿಂದ ಮೋಹಿತರಾಗಿ ಅವರೆಲ್ಲರೂ ತಮ್ಮತಮ್ಮ ಕರ್ಮಗಳಿಂದಲೇ ಮೃತರಾಗಿದ್ದಾರೆ.
ಅವಾಪ್ತಃ ಕ್ಷತ್ರಧರ್ಮಸ್ತೇ ರಾಜ್ಯಂ ಪ್ರಾಪ್ತಮಕಲ್ಮಷಮ್ |
ಚಾರಸ್ವ ಧರ್ಮಂ ಕೌಂತೇಯ ಶ್ರೇಯಾನ್ ಯಃ ಪ್ರೇತ್ಯ ಭಾರತಃ ॥26॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅಶ್ವಮೇಧಪ್ರಶಂಸನಂ ನಾಮ ಚತುತ್ರಿಂಶೋಽಧ್ಯಾಯಃ ॥34॥
ನೀನು ನಿನ್ನ ಸ್ವಧರ್ಮವಾದ ಕ್ಷತ್ರಿಯಧರ್ಮಕ್ಕೆ ಅನುಸಾರಿಯಾಗಿ ನಡೆದು- ಕೊಂಡಿರುವೆ. ಇದರ ಫಲವಾಗಿಯೇ ಯಾರೊಬ್ಬ ಶತ್ರುಗಳಿಲ್ಲದ ರಾಜ್ಯಸಂಪತ್ತು ನಿನಗೆ ಲಭಿಸಿದೆ. ಯಾವಧರ್ಮವು ನಿನಗೆ ಬದುಕಿರುವಾಗ ಮತ್ತು ಪರಲೋಕದಲ್ಲಿ ಶ್ರೇಯಸ್ಸನ್ನು ಉಂಟುಮಾಡುತ್ತದೋ, ಅಂಥ ಧರ್ಮವನ್ನು ನೀನು ಪರಿರಕ್ಷಣೆ ಮಾಡು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಅಶ್ವಮೇಧ ಪ್ರಶಂಸೆ ಎಂಬ 34ನೆಯ ಅಧ್ಯಾಯವು ಮುಗಿಯಿತು.
*****

35. ಮೂವತ್ತೈದನೆಯ ಅಧ್ಯಾಯ
ವೇದವ್ಯಾಸದೇವರು ಯುಧಿಷ್ಠಿರನಿಗೆ ಪ್ರಾಯಶ್ಚಿತ್ತಕ್ಕೆ ಕಾರಣವಾದ ಪಾಪಕರ್ಮಗಳ ಬಗ್ಗೆ, ಪ್ರಾಯಶ್ಚಿತ್ತಗಳ ಬಗ್ಗೆ ವಿವರಿಸುತ್ತಾರೆ. ಯಾವ  ಪ್ರಾಯಶ್ಚಿತ್ತವನ್ನು ಮಾಡುವುದರಿಂದ ಯಾವ ಪಾಪವು ಪರಿಹಾರವಾಗುತ್ತದೆ ಎಂಬುದರ ವಿವೇಚನೆ.
ಯುಧಿಷ್ಠಿರಃ
ಕಾನಿ ಕೃತ್ವೇಹ ಕರ್ಮಾಣಿ ಪ್ರಾಯಶ್ಚಿತ್ತೀಯತೇ ನರಃ |
ಕಿಂ ಕೃತ್ವಾ ಚೈವ ಮುಚ್ಯೇತ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹರೇ! ಯಾವ ಕರ್ಮವನ್ನು ಆಚರಣೆ ಮಾಡುವು- ದರಿಂದ ಮನುಷ್ಯನಾದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೆ. ಯಾವ ಬಗೆಯ ಪ್ರಾಯಶ್ಚಿತ್ತಗಳನ್ನು ಮಾಡುವುದರಿಂದ ಆ ಪಾಪಗಳು ಪರಿಹಾರವಾಗುತ್ತವೆ. ಈ ವಿಷಯಗಳನ್ನು ನನಗೆ ದಯವಿಟ್ಟು ವಿವರಿಸಿರಿ.
ವ್ಯಾಸಃ
ಅಕುರ್ವನ್ ವಿಹಿತಂ ಕರ್ಮ ಪ್ರತಿಷಿದ್ಧಾನಿ ಚಾಚರನ್ |
ಪ್ರಾಯಶ್ಚಿತ್ತೀಯತೇ ಹ್ಯೇವಂ ನರೋ ಮಿಥ್ಯಾ ಚ ವರ್ತಯನ್ ॥2॥
ಯುಧಿಷ್ಠಿರನೇ ! ವೇದಶಾಸ್ತ್ರದಲ್ಲಿ ಯಾವ ಕರ್ಮಗಳನ್ನು ಮಾಡಬೇಕೆಂದು ವಿಧಿ-ಸಲಾಗಿರುತ್ತದೋ, ಅದನ್ನು ಆಚರಿಸದೇ ಇರುವವನು, ಹಾಗೂ ವೇದಶಾಸ್ತ್ರಗಳಲ್ಲಿ ನಿಷೇಧ ಮಾಡಲ್ಪಟ್ಟ ಕರ್ಮಗಳನ್ನು ಆಚರಿಸುವವನು ಪ್ರಾಯಶ್ಚಿತ್ತವನ್ನು ಮಾಡಿ- ಕೊಳ್ಳಬೇಕು. ಶಾಸ್ತ್ರವಿರುದ್ಧವಾದ ಆಚರಣಶೀಲನೇ ಪ್ರಾಯಶ್ಚಿತ್ತಭಾಗಿಯಾಗುತ್ತಾನೆ.
ಸೂರ್ಯೇಣಾಭ್ಯುದಿತೋ ಯಶ್ಚ  ಬ್ರಹ್ಮಚಾರೀ ಭವತ್ಯುತ |
ತಥಾ ಸೂರ್ಯಾಭಿನಿರ್ಮುಕ್ತಃ ಕುನಖೀ ಶ್ಯಾವದನ್ನಪಿ ॥3॥
ಸೂರ್ಯೋದಯ ಹಾಗೂ ಸೂರ್ಯಾಸ್ತಗಳಲ್ಲಿ ಯಾವ ಬ್ರಹ್ಮಚಾರಿಯು ಮಲಗಿರುತ್ತಾನೋ ಅವನು ಪ್ರಾಯಶ್ಚಿತ್ತಭಾಗಿಯಾಗುತ್ತಾನೆ. ಉಗುರುಗಳನ್ನು ಬೆಳಿಸಿ- ಕೊಂಡವನು, ಹಲ್ಲುಗಳನ್ನು ಕಪ್ಪಾಗಿ ಇಟ್ಟುಕೊಂಡವನು ಪ್ರಾಯಶ್ಚಿತ್ತಕ್ಕೆ ಭಾಗಿ- ಯಾಗುತ್ತಾನೆ.
ಟಿಪ್ಪಣಿ - ಸೂರ್ಯೇಣಾಭ್ಯುದಿತ ಇತ್ಯತ್ರ ಯಶ್ಚ ಬ್ರಹ್ಮಚಾರೀ ಅರ್ಘ್ಯಮದತ್ ಪೂರ್ವಂ ಸೂರ್ಯೇಣ ಅಭ್ಯುದಿತೋ ಭವತಿ ಸೋಽಪಿ ಪ್ರಾಯಶ್ಚಿತ್ತೀ | ತಥಾ ಸಾಯಮರ್ಘ್ಯಕಾಲೇ ಸೂರ್ಯೇಣ ಅಭಿನಿರ್ಮುಕ್ತಃ ಅರ್ಘ್ಯಕಾಲೇ ಸೂರ್ಯ- ರಹಿತ ಇತ್ಯರ್ಥಃ | ತಾವುಭೌ ಪ್ರಾಯಶ್ಚಿತ್ತಿನೌ | `ಪೂರ್ವಾಂ ಸಂಧ್ಯಾಂ ಸನಕ್ಷತ್ರಾ- ಮುತ್ತರಾಂ ಸದಿವಾಕರಾಮ್' ಇತಿ ಸ್ಮೃತೇಃ |
ಸೂರ್ಯೇಣಾಭ್ಯುದಿತ ಎಂಬಲ್ಲಿ ಯಾವ ಬ್ರಹ್ಮಚಾರಿಯು ಸೂರ್ಯೋ- ದಯಕಾಲದಲ್ಲಿ ಅರ್ಘ್ಯವನ್ನು ನೀಡುವುದಿಲ್ಲವೋ, ಸೂರ್ಯಾಸ್ತಕಾಲದಲ್ಲಿ ಯಾರು ಅರ್ಘ್ಯವನ್ನು ನೀಡುವುದಿಲ್ಲವೋ, ಅವನೂ ಸಹ ಪಾಪಭಾಗಿಯಾ- ಗುತ್ತಾನೆ. `ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುತ್ತರಾಂ ಸದಿವಾಕರಾಮ್' ಎಂಬ ಸ್ಮೃತಿಯ ವಾಕ್ಯದಂತೆ ಸೂರ್ಯನು ಇಲ್ಲದೇ ಇರುವ ನಕ್ಷತ್ರವು ಹುಟ್ಟುವ ಬೆಳಿಗ್ಗೆಯ ಕಾಲದಲ್ಲಿ ಅರ್ಘ್ಯವನ್ನು ನೀಡಬೇಕು. ಸಾಯಂಕಾಲದಲ್ಲಿ ಸೂರ್ಯನು ಇರುವಾಗಲೇ ಅರ್ಘ್ಯವನ್ನು ನೀಡಬೇಕು. ಎರಡನ್ನೂ ಆಚರಿಸದೇ ಇದ್ದರೆ, ಮಹಾಪಾಪಕ್ಕೆ ಭಾಗಿಯಾಗುತ್ತಾನೆಂದಭಿಪ್ರಾಯ.
ಪರಿವಿತ್ತಿಃ ಪರಿವೇತ್ತಾ ಬ್ರಹ್ಮಘ್ನೋ ಯಶ್ಚ ಕುತ್ಸಕಃ |
ದಿಧಿಷೂಪಪತಿರ್ಯಃ ಸ್ಯಾದಗ್ರೇ ದಿಧಿಷುರೇವ ಚ ॥4॥
ಹಿರಿಯಸಹೋದರನು ವಿವಾಹವಾಗದೇ ಇದ್ದಾಗ ತಮ್ಮನಾದವನು ವಿವಾಹ- ವಾದರೆ `ಪರಿವೇತ್ತಾ' ಎಂಬುದಾಗಿ ಕರೆಸಿಕೊಳ್ಳುತ್ತಾನೆ. ಅವನ ಹೆಂಡತಿಯು ಪರಿವಿತ್ತಿ ಎಂಬುದಾಗಿ ಕರೆಸಿಕೊಳ್ಳುತ್ತಾಳೆ. ಇವರಿಬ್ಬರೂ ಪ್ರಾಯಶ್ಚಿತ್ತಭಾಗಿಗಳು. ಇದರಂತೆ ಬ್ರಾಹ್ಮಣರ ಹನನವನ್ನು ಮಾಡಿದವನು, ಲೋಕದಲ್ಲಿ ನಿಂದಿತನಾದವನು, ಒಮ್ಮೆ ವಿವಾಹವಾದ ನಾರಿಯನ್ನು ವಿವಾಹವಾಗುವ ದಿಧಿಷು ಹಾಗೂ ವಿವಾಹಿತಳಾದ
ದಿಧಿಷೂ ಇವರಿಬ್ಬರು ಪ್ರಾಯಶ್ಚಿತ್ತಕ್ಕೆ ಭಾಜನರಾಗುತ್ತಾರೆ.
ಟಿಪ್ಪಣಿ - ದಿಧಿಷೂಪಪತ್ತಿಶ್ಚೈವ ಇತ್ಯತ್ರ ಪರಿವೇತ್ತಾ ಜ್ಯೇಷ್ಠೇ ಅನೂಢೇ ಸತಿ ವಿವಾಹಕರ್ತಾ ಅನುಜಃ | ಪರಿವಿತ್ತಿಃ ತಸ್ಯ ಭಾರ್ಯಾ | `ಪರಿವೇತ್ತಾನುಜೋಽ- ನೂಢೇ ಜ್ಯೇಷ್ಠೇ ದಾರಪರಿಗ್ರಹಾತ್ | ಪರಿವಿತ್ತಿಸ್ತು ತಜ್ಜ್ಯಾಯಾನ್' ಇತ್ಯಮರಃ | ದ್ವಿಃ ಊಢಾ ನಾರೀ ದಿಧಿಷೂಃ ತಸ್ಯಾಃ ಉಪಪತಿಃ ಜಾರಃ | ಅಗ್ರೇದಿಧಿಷುಃ ದ್ವಿರೂಢಾಯಾಃ ಪತಿಃ |  `ಪುನರ್ಭೂರ್ದಿಧಿಷೂರೂಢಾ ದ್ವಿಸ್ತಸ್ಯಾ ದಿಧಿಷುಃ ಪತಿಃ' ಇತ್ಯಮರಃ | ದ್ವಿಃ ಊಢಾ ನಾರೀ ಪುನರ್ಭೂಃ ದಿಧಿಷೂಃ ಇತ್ಯುಚ್ಯತೇ | ತಸ್ಯಾಃ ಪತಿಃ ದಿಧಿಷುಃ ಇತ್ಯುಚ್ಯತೇ ಇತ್ಯರ್ಥಃ|
`ಪರಿವೇತ್ತಾ' ಅಣ್ಣನು ಮದುವೆಯಾಗದಿದ್ದಾಗ ತಮ್ಮನು ವಿವಾಹವಾದರೆ ಪರಿವೇತ್ತಾ ಎಂಬುದಾಗಿ ಕರೆಸಿಕೊಳ್ಳುತ್ತಾನೆ. ಅವನ ಹೆಂಡತಿಯು ಪರಿವತ್ತಿ ಎಂಬುದಾಗಿ ಕರೆಸಿಕೊಳ್ಳುತ್ತಾನೆ. `ಪರಿವೇತ್ತಾನುಜೋಽನೂಢೇ ಜ್ಯೇಷ್ಠೇ ದಾರ- ಪರಿಗ್ರಹಾತ್ | ಪರಿವಿತ್ತಿಸ್ತು ತಜ್ಜ್ಯಾಯಾನ್' ಎಂಬುದಾಗಿ ಅಮರಕೋಶವು ಹೇಳುತ್ತದೆ. ಆದ್ದರಿಂದ ಅಣ್ಣನ ಮದುವೆಯಾಗದಿದ್ದಾಗ ತಮ್ಮನು ಮದುವೆ- ಯಾದರೆ ತಮ್ಮ ಹಾಗೂ ತಮ್ಮನ ಹೆಂಡತಿಯು ಪಾಪಭಾಜನರಾಗುತ್ತಾರೆಂದು ತಿಳಿಯಬೇಕು.
ಯಾವ ನಾರಿಯು ಎರಡು ಬಾರಿಯು ವಿವಾಹವಾಗಿರುತ್ತಾಳೋ, ಅವಳನ್ನು `ದಿಧಿಷೂ' ಎಂಬುದಾಗಿ ಕರೆಯುತ್ತಾರೆ. ಅವಳನ್ನು ವಿವಾಹವಾದವನು ಜಾರ ಎಂಬುದಾಗಿ ಕರೆಸಿಕೊಳ್ಳುತ್ತಾನೆ. `ಅಗ್ರೇದಿಧಿಷುಃ' ಎಂಬುದಕ್ಕೂ ಎರಡು ಬಾರಿ ವಿವಾಹವಾದವಳ ಪತಿ ಎಂದರ್ಥ.  `ಪುನರ್ಭೂರ್ದಿಧಿಷೂರೂಢಾ ದ್ವಿಸ್ತಸ್ಯಾ ದಿಧಿಷುಃ ಪತಿಃ' ಎಂಬುದಾಗಿ ಅಮರಕೋಶವು ಹೇಳುತ್ತದೆ. ಎರಡು ಬಾರಿ ವಿವಾಹವಾದ ನಾರಿಯು `ದಿಧಿಷೂ' ಎಂಬುದಾಗಿ ಕರೆಸಿಕೊಳ್ಳುತ್ತಾಳೆ. ಅವಳ ಪತಿಯು `ದಿಧಿಷುಃ' ಎಂಬುದಾಗಿ ಕರೆಸಿಕೊಳ್ಳುತ್ತಾನೆ.
ಅವಕೀರ್ಣೀ ಭವೇದ್ ಯಶ್ಚ ದ್ವಿಜಾತಿವಧಕಸ್ತಥಾ |
ಅತೀರ್ಥೇ ಬ್ರಹ್ಮಣಸ್ತ್ಯಾಗೀ ತೀರ್ಥೇ ಚಾಪ್ರತಿಪಾದಕಃ ॥5॥
ಬ್ರಹ್ಮಚರ್ಯವ್ರತವನ್ನು ನಾಶಮಾಡಿಕೊಂಡವನು ದ್ವಿಜಾತಿಗಳನ್ನು ವಧೆ ಮಾಡು -ವವನು. ಅಪಾತ್ರನಿಗೆ ದಾನ ಮಾಡುವವನು. ಪಾತ್ರನಿಗೆ ದಾನ ಮಾಡದವನು. ಇವರೆಲ್ಲರೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಅರ್ಹರಾಗುತ್ತಾರೆ.

ಟಿಪ್ಪಣಿ - ಅವಕೀರ್ಣೀ ಇತ್ಯತ್ರ ಅವಕೀರ್ಣೀ ರೇತಃಸ್ಖಲನಾದಿನಾ ಕ್ಷತವ್ರತೋ ಬ್ರಹ್ಮಚಾರೀ | `ಅವಕೀರ್ಣೀ ಕ್ಷತವ್ರತಃ' ಇತ್ಯಮರಃ | ಅತೀರ್ಥೇ ಅಪಾತ್ರೇ ಬ್ರಹ್ಮಣಃ ಬ್ರಾಹ್ಮಣಸ್ಯ ತ್ಯಾಗೀ | `ನಿದಾನಾಗಮಯೋಸ್ತೀರ್ಥಮೃಷಿಜುಷ್ಟೇ ಜಲೇ ಗುರೌ' ಇತ್ಯಮರಃ | ನಿದಾನಂ ದಾನಸ್ಯಾದಿಕಾರಣಮ್, ಪಾತ್ರಮಿತ್ಯರ್ಥಃ |

ಅವಕೀರ್ಣೀ = ರೇತಃಸ್ಖಲನಾದಿಗಳಿಂದ ಬ್ರಹ್ಮಚರ್ಯವ್ರತವನ್ನು ಹಾಳು ಮಾಡಿಕೊಂಡವನು. ದ್ವಿಜಾತಿವದಕಃ = ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಇವರನ್ನು ಕೊಲ್ಲುವವನು. ಅತೀರ್ಥೇ = ಅಪಾತ್ರರಲ್ಲಿ, ಬ್ರಹ್ಮಣಃ = ಬ್ರಾಹ್ಮಣನ, ತ್ಯಾಗೀ = ತ್ಯಾಗವು, ತೀರ್ಥೇಚ = ಪಾತ್ರರಲ್ಲಿ, ಅಪ್ರತಿಪಾದಕಃ = ದಾನವನ್ನು ಮಾಡದವನು.

ಗ್ರಾಮಘಾತೀ ಚ ಕೌಂತೇಯ ಮಾಂಸಸ್ಯ ಪರಿವಿಕ್ರಯೀ |
ಶೂದ್ರಸ್ತ್ರೀವಧಕೋ ಯಶ್ಚ ಪೂರ್ವಃ ಪೂರ್ವಸ್ತು ಗರ್ಹಿತಃ ॥6॥

ಕೌಂತೇಯನೇ! ಯಾರು ಗ್ರಾಮವನ್ನು ನಾಶಗೊಳಿಸುತ್ತಾನೋ, ಮಾಂಸಾದಿ- ಗಳನ್ನು ಮಾರಾಟ ಮಾಡುತ್ತಾನೋ, ಸ್ತ್ರೀಯರನ್ನು, ಶೂದ್ರರನ್ನು ನಾಶಮಾಡು- ತ್ತಾನೋ, ಇವರುಗಳಲ್ಲಿ ಕೊನೆಯವರಿಗಿಂತ ಮೊದಲಿನವರು ಹೆಚ್ಚು ಪಾಪಿಷ್ಠರಾ- ಗಿರುತ್ತಾರೆ. ಅವರೇ ಹೆಚ್ಚು ಪ್ರಾಯಶ್ಚಿತ್ತಭಾಗಿಗಳಾಗುತ್ತಾರೆ.

ವೃಥಾ ಪಶುಸಮಾಲಂಭೀ ವನದಾಹಸ್ಯ ಕಾರಕಃ |
ಅನೃತೇನೋಪವರ್ತೀ ಚ ಪ್ರತಿರೋದ್ಧಾ ಗುರೋಸ್ತಥಾ ॥7॥

ವ್ಯರ್ಥವಾಗಿ ಯಾರು ಪಶುಗಳನ್ನು ವಧೆ ಮಾಡುತ್ತಾರೋ, ಕಾಡುಗಳಿಗೆ ಬೆಂಕಿ ಹಚ್ಚುತ್ತಾರೋ, ಸುಳ್ಳು ಹೇಳುತ್ತಾರೋ, ಗುರುವನ್ನು ಅವಮಾನಗೊಳಿಸುತ್ತಾರೋ, ಇವರೆಲ್ಲರೂ ಪಾಪಭಾಜನರು.

ಯಶ್ಚಾಗ್ನೀನಪವಿದ್ಧ್ಯೇತ ತಥೈವ ಬ್ರಹ್ಮವಿಕ್ರಯೀ |
ಏತಾನ್ಯೇನಾಂಸಿ ಸರ್ವಾಣಿ ವ್ಯುತ್ಕ್ರಾಂತಸಮಯಶ್ಚ ಯಃ ॥8॥

ಯಾರು ಅಗ್ನಿಯ ಪರಿರಕ್ಷಣೆ ಮಾಡಿಕೊಂಡಿರುವುದಿಲ್ಲವೋ, ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿದ ವಸ್ತುವನ್ನು ಯಾರು ಮಾರಾಟ ಮಾಡುತ್ತಾನೋ, ಪ್ರತಿಜ್ಞಾಭಂಗವನ್ನು ಮಾಡಿಕೊಂಡಿರುತ್ತಾನೋ, ಸಮಯ ಪರಿಪಾಲನೆಯನ್ನು ಮಾಡುವುದಿಲ್ಲವೋ, ಇವರೆಲ್ಲರೂ ಪಾಪಭಾಜನರಾಗುತ್ತಾರೆ. ಆದ್ದರಿಂದ ಇವರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇ ಬೇಕು.

ಅಕಾರ್ಯಾಣ್ಯಪಿ ವಕ್ಷ್ಯಾಮಿ ಯಾನಿ ತಾನಿ ನಿಬೋಧ ಮೇ |
ಲೋಕವೇದವಿರುದ್ಧಾನಿ ತಾನ್ಯೇಕಾಗ್ರಮನಾಃ ಶೃಣು ॥9॥

ಧರ್ಮರಾಜನೇ! ವೇದಕ್ಕೆ ವಿರುದ್ಧವಾದ, ಲೋಕಕ್ಕೆ ವಿರುದ್ಧವಾದ ಮಾಡಬಾರದ ಕೆಲಸಗಳು ಯಾವುದು ಎಂಬುದನ್ನು ವಿವರವಾಗಿ ಹೇಳುತ್ತೇನೆ. ಅವೆಲ್ಲವನ್ನೂ ಏಕಾಗ್ರಚಿತ್ತದಿಂದ ಕೇಳುವವನಾಗು.

ಸ್ವಧರ್ಮಸ್ಯ ಪರಿತ್ಯಾಗಃ ಪರಧರ್ಮಸ್ಯ ಚ ಕ್ರಿಯಾ |
ಅಯಾಜ್ಯಯಾಜನಂ ಚೈವ ತಥಾಭಕ್ಷಸ್ಯ ಭಕ್ಷಣಮ್ ॥10॥
ಶರಣಾಗತಸಂತ್ಯಾಗೋ ಭೃತ್ಯಸ್ಯಾಭರಣಂ ತಥಾ |
ರಸಾನಾಂ ವಿಕ್ರಯಶ್ಚಾಪಿ ತಿರ್ಯಗ್ಯೋನಿವಧಸ್ತಥಾ ॥11॥
ಆಧಾನಾದೀನಿ ಕರ್ಮಾಣಿ ಶಕ್ತಿಮಾನ್ನ ಕರೋತಿ ಯಃ |
ಅಪ್ರಯಚ್ಛಂಶ್ಚ ಸರ್ವಾಣಿ ನಿತ್ಯಂ ದೇಯಾನಿ ಭಾರತ ॥12॥
ದಕ್ಷಿಣಾನಾಮದಾನಂ ಚ ಬ್ರಾಹ್ಮಣ್ಯಸ್ವಾಭಿಮರ್ಶನಮ್ |
ಸರ್ವಾಣ್ಯೇತಾನ್ಯಕಾರ್ಯಾಣಿ ಪ್ರಾಹುರ್ಧರ್ಮವಿದೋ ಜನಾಃ ॥13॥

ಸ್ವಧರ್ಮವನ್ನು ಪರಿತ್ಯಾಗ ಮಾಡುವುದು, ಪರಧರ್ಮವನ್ನು ಅನುಷ್ಠಾನ ಮಾಡುವುದು, ಯಜ್ಞ ಮಾಡಲು ಅನಧಿಕಾರಿಯಾದವನಿಂದ ಯಜ್ಞವನ್ನು ಮಾಡಿಸುವುದು. ತಿನ್ನ ಬಾರದ ಪದಾರ್ಥಗಳನ್ನು ತಿನ್ನುವುದು. ಶರಣಾಗತರಾಗಿ ಬಂದವರನ್ನು ರಕ್ಷಣೆ ಮಾಡದಿರುವುದು. ನಂಬಿದ ಸೇವಕರನ್ನು ರಕ್ಷಣೆ ಮಾಡದಿ- ರುವುದು. ಉಪ್ಪು ಬೆಲ್ಲ ಮೊದಲಾದ ರಸಪದಾರ್ಥಗಳನ್ನು ಮಾರಾಟ ಮಾಡು- ವುದು. ಪಶು-ಪಕ್ಷಿ ಮೊದಲಾದ ತಿರ್ಯಗ್ಯೋನಿಗಳನ್ನು ಕೊಲ್ಲುವುದು. ಅನುಷ್ಠಾನ ಮಾಡಲು ಸಾಮರ್ಥ್ಯವಿದ್ದರೂ ಕೂಡ ಆಧಾನ ಮೊದಲಾದ ವೇದೋಕ್ತ ಕರ್ಮಗಳನ್ನು ಅನುಷ್ಠಾನ ಮಾಡದೇ ಇರುವುದು. ನಿತ್ಯವು ಕೊಡಬೇಕಾದ ಗೋಗ್ರಾಸಾದಿಗಳನ್ನು ಕೊಡದಿರುವುದು. ಸತ್‌ಪಾತ್ರರಿಗೆ ದಕ್ಷಿಣೆಗಳನ್ನು ಕೊಡದಿ- ರುವುದು. ಬ್ರಾಹ್ಮಣರ ಸ್ವತ್ತನ್ನು ಅಪಹಾರ ಮಾಡುವುದು. ಈ ಎಲ್ಲಾ ಕಾರ್ಯಗಳು ಸರ್ವಥಾ ಮಾಡಲು ಅಯೋಗ್ಯವಾಗಿವೆ. ಧರ್ಮವನ್ನು ತಿಳಿದ ವಿದ್ವಾಂಸರು ಮೇಲೆ ಉಲ್ಲೇಖಿಸಿದ್ದರಲ್ಲಿ ಯಾವುದನ್ನೂ ಕೂಡ ಮಾಡಬಾರದೆಂದು ಹೇಳುತ್ತಾರೆ.

ಪಿತ್ರಾ ವಿಭಜತೇ ಪುತ್ರೋ ಯಶ್ಚ ಸ್ಯಾದ್ ಗುರುತಲ್ಪಗಃ |
ಅಪ್ರಜಾಯನ್ನಧರ್ಮೇಣ ಭವತ್ಯಾಧರ್ಮಿಕೋ ಜನಃ ॥14॥

ಯಾರು ತಂದೆಯ ಆಸ್ತಿಯನ್ನು ಕಸಿದುಕೊಂಡು ಪ್ರತ್ಯೇಕವಾಗಿ ಇರಲು ಬಯಸುತ್ತಾನೋ, ಅಂಥ ಪುತ್ರನು, ಗುರುಪತ್ನಿಯ ಸಮಾಗಮವನ್ನು ಬಯಸುವ ಶಿಷ್ಯನು, ಮಕ್ಕಳನ್ನು ಪಡೆಯಲು ಪ್ರಯತ್ನಿಸದ ಪತಿಯು ಅಧಾರ್ಮಿಕರೆಂದು ಕರೆಸಿಕೊಳ್ಳುತ್ತಾರೆ.

ಉಕ್ತಾನ್ಯೇತಾನಿ ಕರ್ಮಾಣಿ ವಿಸ್ತರೇಣೇತರೇಣ ಚ |
ಯಾನಿ ಕುರ್ವನ್ನಕುರ್ವಂಶ್ಚ ಪ್ರಾಯಶ್ಚಿತ್ತೀಯತೇ ಜನಃ ॥15॥

ಯಾವ ಕರ್ಮಗಳನ್ನು ಆಚರಣೆ ಮಾಡುವುದರಿಂದ ಮನುಷ್ಯನು ಪ್ರಾಯ- ಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೋ, ಯಾವ ಕರ್ಮವನ್ನು ಮಾಡದಿದ್ದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೋ, ಆ ಎಲ್ಲ ಕರ್ಮಗಳನ್ನು ನಿನಗೆ ವಿಸ್ತಾರವಾಗಿ ತಿಳಿಸಿರುವೆನು.

ಟಿಪ್ಪಣಿ - ಯಾನಿ ಕುರ್ವನ್ನಕುರ್ವಂಶ್ಚ ಇತ್ಯತ್ರ ಯಾನಿ ಅವಿಹಿತಾನಿ ತಾನಿ ಕುರ್ವನ್, ಯಾನಿ ವಿಹಿತಾನಿ ತಾನಿ ಅಕುರ್ವನ್ |

ಅವಿಹಿತವಾದ ಕರ್ಮಗಳನ್ನು ಮಾಡುವುದರಿಂದ, ಅಕುರ್ವನ್ ವಿಹಿತವಾದ ಕರ್ಮಗಳನ್ನು ಮಾಡದೇ ಇರುವುದರಿಂದ ಪ್ರಾಯಶ್ಚಿತ್ತಭಾಗಿಯಾಗುತ್ತಾನೆ ಎಂದರ್ಥ.

ಏತಾನ್ಯೇವ ತು ಕರ್ಮಾಣಿ ಕ್ರಿಯಮಾಣಾನಿ ಮಾನವಾನ್ |
ಯೇಷು ಯೇಷು ನಿಮಿತ್ತೇಷು ನ ಲಿಂಪಂತ್ಯಥ ತಚ್ಛೃಣು ॥16॥

ಮುಂದೆ ಯಾವ ಕಾರಣಗಳಿಂದ ಮನುಷ್ಯನು ಯಾವ ಕರ್ಮಗಳನ್ನು ಮಾಡಬಾರದು, ಮಾಡಿದರೂ ಪಾಪಗಳಿಂದ ಮುಕ್ತನಾಗುವುದಿಲ್ಲವೋ ಅದರ ಬಗ್ಗೆ ಹೇಳುತ್ತೇನೆ ಕೇಳು.

ಪ್ರಗೃಹ್ಯ ಶಸ್ತ್ರಮಾಯಾಂತಮಪಿ ವೇದಾಂತಗಂ ರಣೇ |
ಜಿಘಾಂಸಂತಂ ಜಿಘಾಂಸೀಮಾನ್ನ ತೇನ ಬ್ರಹ್ಮಹಾ ಭವೇತ್ ॥17॥

ವೇದವೇದಾಂಗಗಳನ್ನು ಅಧ್ಯಯನ ಮಾಡಿದ, ಒಬ್ಬ ಬ್ರಾಹ್ಮಣನು ತನ್ನ ಧರ್ಮವನ್ನು ಪರಿತ್ಯಾಗ ಮಾಡಿ, ಶಸತತ್ರಸ್ತ್ರಗಳನ್ನು ಹಿಡಿದು ರಣರಂಗಕ್ಕೆ ಬಂದರೆ, ಅಂಥ ಬ್ರಾಹ್ಮಣನು ಕೊಲ್ಲಲು ಉದ್ಯುಕ್ತನಾದರೆ, ಆ ಸಮಯದಲ್ಲಿ ಆ ಬ್ರಾಹ್ಮಣನನ್ನು ಕೊಂದರೂ ಕೂಡ ಬ್ರಹ್ಮಹತ್ಯಾ ಪಾಪವು ಬರುವುದಿಲ್ಲ.

ಅಪಿ ಚಾಪ್ಯತ್ರ ಕೌಂತೇಯ ಮಂತ್ರೋ ವೇದೇಷು ಪಠ್ಯತೇ |
ವೇದಪ್ರಮಾಣವಿಹಿತಂ ತಂ ಧರ್ಮಂ ಪ್ರಬ್ರವೀಮಿ ತೇ ॥18॥

ಕುಂತೀಪುತ್ರನೇ! ಇದೇ ವಿಷಯದಲ್ಲಿ ವೇದಗಳಲ್ಲಿ ಒಂದು ಮಂತ್ರವನ್ನು ಹೇಳಲಾಗಿದೆ. ಆ ಮಂತ್ರದಿಂದ ತಿಳಿಯುವ ಧರ್ಮವನ್ನು ನಿನಗೆ ಈಗ ಹೇಳುತ್ತೇನೆ ಕೇಳುವವನಾಗು.

ಅಪೇತಂ ಬ್ರಾಹ್ಮಣಂ ವೃತ್ತಾದ್ ಯೋ ಹನ್ಯಾದಾತತಾಯಿನಮ್ |
ನ ತೇನ ಬ್ರಹ್ಮಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮೃಚ್ಛತಿ ॥19॥

ಬ್ರಾಹ್ಮಣನು ಮಾಡಬೇಕಾದ ಕರ್ತವ್ಯಗಳನ್ನು ಮಾಡದೇ, ಭ್ರಷ್ಟನಾಗಿ ಶಸ್ತ್ರವನ್ನು ಹಿಡಿದು ಯುದ್ಧಕ್ಕೆ ಬರುತ್ತಾನೋ, ಅಂಥ ಆತತಾಯಿಯನ್ನು ಸಂಹರಿಸಬೇಕು. ಇದರಿಂದ ಬ್ರಹ್ಮಹತ್ಯಾ ಪಾಪವು ಬರುವುದಿಲ್ಲ. ಅವನ ಕೋಪಕ್ಕೆ ಎದುರಾಗಿ ಮತ್ತೊಂದು ಕೋಪವು ಅವನನ್ನು ಸಂಹಾರ ಮಾಡುತ್ತದೆ.

ಪ್ರಾಣಾತ್ಯಯೇ ತಥಾಜ್ಞಾನಾದಚರನ್ ಮದಿರಾಮಪಿ |
ಅಚೋದಿತೋ ಧರ್ಮಪರೈಃ ಪುನಃ ಸಂಸ್ಕಾರಮರ್ಹತಿ ॥20॥

ಯಾರು ಅಜ್ಞಾನದಿಂದ ಮದ್ಯಪಾನವನ್ನು ಮಾಡಿರುತ್ತಾನೋ, ಅವನಿಗೂ ಕೂಡ ಪ್ರಾಯಶ್ಚಿತ್ತವಾಗಲೇಬೇಕು. ಅಥವಾ ಪ್ರಾಣಹೋಗುವ ಸಂದರ್ಭದಲ್ಲಿ ಔಷಧಿಯ ರೂಪದಲ್ಲಿ ಮದ್ಯವನ್ನು ಪಾನ ಮಾಡಿದವನೂ ಕೂಡ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇ ಬೇಕು. ಧರ್ಮನಿಷ್ಠರಾದ ಸತ್ಪುರುಷರ ಬಳಿ ತನ್ನ ಪಾಪಕಾರ್ಯ- ವನ್ನು ತಿಳಿಸಿ, ಅವನ ಮಾರ್ಗದರ್ಶನದಂತೆ ಸಂಸ್ಕಾರವನ್ನು ಮಾಡಿಕೊಳ್ಳಬೇಕು.

ಟಿಪ್ಪಣಿ - ಆಚರನ್ ಮದಿರಾಮಪಿ ಇತ್ಯತ್ರ `ಚರ ಗತಿಭಕ್ಷಣಯೋಃ' ಇತಿ ಧಾತುಃ |
`ಚರ ಗತಿಭಕ್ಷಣಯೋಃ' ಎಂಬ ಧಾತುವಿನಿಂದ ಅಚರನ್ ಎಂಬ ಪದವು ನಿಷ್ಪನ್ನವಾಗಿದೆ. ಮದ್ಯಪಾನವನ್ನು ಮಾಡುವವನು ಎಂದರ್ಥ.

ಏತತ್ ತೇ ಸರ್ವಮಾಖ್ಯಾತಂ ಕೌಂತೇಯಾಭಕ್ಷ್ಯಭಕ್ಷಣಮ್ |
ಪ್ರಾಯಶ್ಚಿತ್ತವಿಧಾನೇನ ಸರ್ವಮೇತೇನ ಶುದ್ಧ್ಯತಿ ॥21॥

ಕೌಂತೇಯನೇ ! ಯಾವುದನ್ನು ಭಕ್ಷಣ ಮಾಡಬಾರದೋ, ಅದೆಲ್ಲವನ್ನು ನಿನಗೆ ಯಥಾರ್ಥವಾಗಿ ಹೇಳಿರುತ್ತೇನೆ. ಪ್ರಾಯಶ್ಚಿತ್ತದ ವಿಧಿಯನ್ನು ಶಾಸ್ತ್ರದ ಮೂಲಕ ತಿಳಿದುಕೊಂಡು, ಆ ಪ್ರಾಯಶ್ಚಿತ್ತದಿಂದ ಅಭಕ್ಷ್ಯಭಕ್ಷಣದಿಂದ ಪ್ರಾಪ್ತವಾಗುವ ಪಾಪವನ್ನು ಪರಿಹಾರ ಮಾಡಿಕೊಂಡು ಶುದ್ಧನಾಗಬೇಕು.

ಗುರುತಲ್ಪಂ ಹಿ ಗುರ್ವರ್ಥೇ ನ ದೂಷಯತಿ ಮಾನವಮ್ |
ಉದ್ದಾಲಕಃ ಶ್ವೇತಕೇತುಂ ಜನಯಾಮಾಸ ಶಿಷ್ಯತಃ ॥22॥

ಗುರುಗಳ ಪತ್ನಿಯನ್ನು ಸಮಾಗಮ ಮಾಡಿದರೆ ಮಹಾಪಾಪವು ಪ್ರಾಪ್ತ- ವಾಗುತ್ತದೆ. ಆದರೆ ಗುರುವಿನ ಅಪ್ಪಣೆಯ ಮೇರೆಗೆ ಗುರುವಿನ ಕಾರ್ಯಸಿದ್ಧಿಗಾಗಿ ಗುರುತಲ್ಪವನ್ನು ಮಾಡಿದರೆ ದೂಷಿತನಾಗುವುದಿಲ್ಲ. ಉದ್ದಾಲಕನು ಮಗನಾದ ಶ್ವೇತಕೇತುವನ್ನು ಶಿಷ್ಯನ ಮೂಲಕವಾಗಿಯೇ ಪಡೆದುಕೊಂಡನು.

ಟಿಪ್ಪಣಿ - ಈ ಶ್ಲೋಕವು ಅಪರೋಕ್ಷಜ್ಞಾನಿಗಳ ವಿಷಯದಲ್ಲಿ ವಿವಕ್ಷಿಸಬೇಕು. ಏನೂ ತಿಳಿಯದ ಅಜ್ಞಾನಿಯಾದ ಗುರುವು ಶಿಷ್ಯನಿಗೆ ಗುರುತಲ್ಪವನ್ನು ವಿಧಿಸಿದರೆ ಗುರುಶಿಷ್ಯರಿಬ್ಬರು ನರಕಕ್ಕೆ ತೆರಳುತ್ತಾರೆ. ಭೂತಭವಿಷ್ಯತ್ ವರ್ತಮಾನಕಾಲಗಳ ಬಗ್ಗೆ ಎಚ್ಚರವಿದ್ದ ಉನ್ನತ ಮಟ್ಟದ ಹರಿಚಿತ್ತವನ್ನು ಅರಿತ ಅಪರೋಕ್ಷಜ್ಞಾನಿಯಾದ ಗುರುವಿಗೆ ಮಾತ್ರ ಈ ಶ್ಲೋಕವು ಸಂಬಂಧಪಟ್ಟಿದೆ.

ಸ್ತೇಯಂ ಕುರ್ವಂಸ್ತು ಗುರ್ವರ್ಥಮಾಪತ್ಸು ನ ನಿಬಧ್ಯತೇ |
ಬಹುಶಃ ಕಾಮಕಾರೇಣ ನ ಚೇದ್ಯಃ ಸಂಪ್ರವರ್ತತೇ ॥23॥

ಕಳ್ಳತನವನ್ನು ಸರ್ವಥಾ ಮಾಡಬಾರದು. ಆದರೆ ಆಪತ್ಕಾಲದಲ್ಲಿ ಗುರುಗಳ ಪರಿರಕ್ಷಣೆಗೋಸ್ಕರ, ಅಥವಾ ಗುರುದಕ್ಷಿಣೆಯನ್ನು ಕೊಡಬೇಕಾದ ಪರಿಸ್ಥಿತಿಯು ಬಂದಾಗ ಆಪತ್ಕಾಲದಲ್ಲಿ ಕಳ್ಳತನವನ್ನು ಮಾಡಬಹುದು.

ಅನ್ಯತ್ರ ಬ್ರಾಹ್ಮಣಸ್ವೇಭ್ಯ ಆದದಾನೋ ನ ದುಷ್ಯತಿ |
ಸ್ವಯಮಪ್ರಾಶಿತಾ ಯಶ್ಚ ನ ಸ ಪಾಪೇನ ಲಿಪ್ಯತೇ ॥24॥

ಬ್ರಾಹ್ಮಣರ ಸ್ವತ್ತನ್ನು ಬಿಟ್ಟು, ಉಳಿದವರ ಸ್ವತ್ತನ್ನು ಆಪತ್ಕಾಲದಲ್ಲಿ ತೆಗೆದು- ಕೊಳ್ಳುವುದು ತಪ್ಪಾಗುವುದಿಲ್ಲ. ಆದರೆ ಆ ವಸ್ತುವನ್ನು ಸ್ವಾರ್ಥಕ್ಕೋಸ್ಕರ ತನ್ನ ಸುಖಕ್ಕೋಸ್ಕರ ಉಪಯೋಗಿಸಬಾರದು. ಆಗ ಪಾಪದ ಲೇಪವು ಪ್ರಾಪ್ತವಾಗು- ವುದಿಲ್ಲ.

ಪ್ರಾಣತ್ರಾಣೇಽನೃತಂ ವಾಚ್ಯಮಾತ್ಮನೋ ವಾ ಪರಸ್ಯ ವಾ |
ಗುರ್ವರ್ಥೇ ಸ್ತ್ರೀಷು ಚೈವ ಸ್ಯಾದ್ ವಿವಾಹಕರಣೇಷು ಚ ॥25॥
ಸುಳ್ಳನ್ನು ಹೇಳಿದರೆ ಪಾಪವು ಬರುತ್ತದೆ. ಆದರೆ ಪ್ರಾಣವನ್ನು ಪರಿರಕ್ಷಣೆ ಮಾಡಿಕೊಳ್ಳುವ ಸಂದರ್ಭದಲ್ಲಿ ಸುಳ್ಳನ್ನು ಹೇಳಬಹುದು. ಬೇರೆಯವರ ಆಪತ್ಕಾಲ- ದಲ್ಲೂ ಕೂಡ ಸುಳ್ಳನ್ನು ಹೇಳಬಹುದು. ಮತ್ತು ಗುರುಗಳ ಮರ್ಯಾದೆಯನ್ನು ಪರಿರಕ್ಷಣೆ ಮಾಡುವ ಸಂದರ್ಭದಲ್ಲಿ ಸ್ತ್ರೀಯರ ಜೊತೆ ವಿನೋದಕ್ಕಾಗಿ ಮಾತ- ನಾಡುತ್ತಿರುವ ಸಂದರ್ಭದಲ್ಲಿ ವಿವಾಹವನ್ನು ಮಾಡುವ ಉದ್ದೇಶಕ್ಕಾಗಿ ಸುಳ್ಳನ್ನು ಹೇಳಬಹುದು.
ನಾವರ್ತತೇ ವ್ರತಂ ಸ್ವಪ್ನೇ ಶುಕ್ರಮೋಕ್ಷೇ ಕಥಂಚನ |
ಆಜ್ಯಾಹೋಮಃ ಸಮಿದ್ದೇಽಗ್ನೌ ಪ್ರಾಯಶ್ಚಿತ್ತಂ ವಿಧೀಯತೇ ॥26॥
ಬ್ರಹ್ಮಚಾರಿಯಾದವನು ಸ್ವಪ್ನಕಾಲದಲ್ಲಿಯೂ ಕೂಡ ರೇತಸ್ಖಲನವನ್ನು ಮಾಡ- ಬಾರದು. ಆದರೆ ತಿಳಿಯದೇ ಸ್ವಪ್ನಕಾಲದಲ್ಲಿ ರೇತಸ್ಖಲನವಾದರೆ, ಉಪನಯನ ಸಂಸ್ಕಾರವನ್ನು ಮಾಡಿಕೊಳ್ಳಬೇಕಾಗಿಲ್ಲ. ಪ್ರತಿನಿತ್ಯ ಮಾಡುವ ಸಮ್ಮಿದ್ದಾಗ್ನಿಯಲ್ಲಿಯೇ ಆಜ್ಯಹೋಮವನ್ನು ಮಾಡುವ ಮೂಲಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ಟಿಪ್ಪಣಿ - ನಾವರ್ತತೇ ವ್ರತಮ್ ಇತ್ಯತ್ರ ನಾವರ್ತತೇ ತಸ್ಮಾತ್ ಪರಾವೃತ್ಯ ನಾಯಾತಿ | ತತ್ರೈವ ತಿಷ್ಠತೀತ್ಯರ್ಥಃ |
ಪಾರಿವಿತ್ತ್ಯಂ ಚ ಪತಿತೇ ನಾಸ್ತಿ ಪ್ರವ್ರಜಿತೇ ತಥಾ |
ಭಿಕ್ಷಿತೇ ಪಾರದಾರ್ಯಂ ಚ ನ ತದ್ಧರ್ಮಸ್ಯ ದೂಷಕಮ್ ॥27॥
ಒಂದು ವೇಳೆ ಅಣ್ಣನು ಪತಿತನಾಗಿದ್ದರೆ, ಅಥವಾ ಸನ್ಯಾಸಿಯಾಗಿದ್ದರೆ ತಮ್ಮನು ವಿವಾಹವನ್ನು ಮಾಡಿಕೊಳ್ಳಬಹುದು. ಮತ್ತು ಪರಸ್ತ್ರೀಸಂಗವು ಅತ್ಯಂತ ಪಾಪಕಲಸವಾಗಿದ್ದರೂ ಕೂಡ ಸಂತಾನದ ಅಪೇಕ್ಷೆಯಿಂದ ಪರಸ್ತ್ರೀಯು ಭಿಕ್ಷೆಯನ್ನು ಬೇಡಿದಾಗ ಶಾಸ್ತ್ರೋಕ್ತವಿಧಿವಿಧಾನಗಳಿಗೆ ಅನುಸಾರಿಯಾಗಿ ಪರಸ್ತ್ರೀ ಸಂಗವನ್ನು ಮಾಡಬಹುದು.
ಟಿಪ್ಪಣಿ - ಪಾರಿವಿತ್ತ್ಯಂ ತು ಪತಿತ ಇತ್ಯತ್ರ ಜ್ಯೇಷ್ಠೇ ಪತಿತೇ ಸತಿ ಪ್ರವ್ರಜಿತೇ ಚ ಸತಿ ಪಾರಿವಿತ್ತ್ಯಂ ಪರಿವಿತ್ತ್ಯಾಖ್ಯದೋಷೋ ನಾಸ್ತಿ | ಜ್ಯೇಷ್ಠನಾದ ಸಹೋದರನು ಪತಿತನಾಗಿದ್ದರೆ, ಸನ್ಯಾಸಿಯಾಗಿದ್ದರೆ ಪಾರಿವಿತ್ತ ಎಂಬ ದೋಷವು ತಮ್ಮನಿಗೆ ಬರುವುದಿಲ್ಲ. ವಿವಾಹವಾಗಬಹುದು.
ಬೇರೆ ಯುಗಗಳಲ್ಲಿ ಸಂತಾನಕ್ಕೋಸ್ಕರ ಮತ್ತೊಬ್ಬ ಪುರುಷನನ್ನು ಅವಲಂಬಿಸಿ, ಸಂತಾನವನ್ನು ಹೊಂದುವ ಅವಕಾಶವು ಇತ್ತು.
ವೃಥಾ ಪಶುಸಮಾಲಂಭಂ ನೈವ ಕುರ್ಯಾನ್ನ ಕಾರಯೇತ್ |
ಅನುಗ್ರಹಃ ಪಶೂನಾಂ ಹಿ ಸಂಸ್ಕಾರೋ ವಿಧಿಚೋದಿತಃ ॥28॥
ಪಶುಗಳನ್ನು ಕೊಂದು ಮಾಂಸವನ್ನು ತಿನ್ನುವುದು ಅಧರ್ಮವಾಗಿದೆ. ಆದರೆ ವಿದ್ಯುಕ್ತವಾದ ಸಂಸ್ಕಾರಗಳನ್ನು ಮಾಡಿ, ಯಜ್ಞಕ್ಕೋಸ್ಕರ ಪಶುವಧೆಯನ್ನು ಮಾಡ- ಬಹುದು. ಇದು ಪಶುಗಳಿಗೆ ಮಾಡುವ ಅನುಗ್ರಹವೇ ಆಗುತ್ತದೆ. ಇದರಿಂದ ಪಶು- ಗಳಿಗೆ ಉತ್ತಮ ಲೋಕವು ಪ್ರಾಪ್ತವಾಗುತ್ತದೆ.
ಟಿಪ್ಪಣಿ - ಯಾವುದೇ ಪ್ರಾಣಿಗಳನ್ನು ಸರ್ವಥಾ ಕೊಲ್ಲಬಾರದು. ಯಜ್ಞ- ಕ್ಕೋಸ್ಕರ ಹಿಂದಿನ ಯುಗಗಳಲ್ಲಿ ಪ್ರಾಣಿವಧೆಯನ್ನು ಮಾಡುತ್ತಿದ್ದರು. ಆದರೆ ಕಲಿಯುಗದಲ್ಲಿ ಇದನ್ನೂ ಕೂಡ ನಿಷೇಧ ಮಾಡಲಾಗಿದೆ. ಯಜ್ಞಕ್ಕಾಗಿ ಅಥವಾ ಬೇರೆ ಯಾವುದೇ ಧರ್ಮದ ಕಾರ್ಯಗಳಿಗಾಗಿ ಪಶುವಧೆಯನ್ನು ಮಾಡಬಾರದು. ಆದರೆ ಇಂದಿನ ಯುಗದಲ್ಲಿ ಅನೇಕರು ಪ್ರಾಣಿವಧೆಯನ್ನು ಮಾಡಿ, ಮಾಂಸ- ಭಕ್ಷಣೆಯನ್ನು ಮಾಡುತ್ತಿದ್ದಾರೆ. ಇದು ಅತ್ಯಂತಧರ್ಮವಿರುದ್ಧವಾದ ಕಾರ್ಯ- ವಾಗಿದೆ.
ಅನರ್ಹೇ ಬ್ರಾಹ್ಮಣೇ ದತ್ತಮಜ್ಞಾನಾತ್ತನ್ನ ದೂಷಕಮ್ |
ಸತ್ಕಾರಾಣಾಂ ತಥಾತೀರ್ಥೇ ನಿತ್ಯಂ ವಾ ಪ್ರತಿಪಾದನಮ್ ॥29॥
ಯೋಗ್ಯನಲ್ಲದ ಬ್ರಾಹ್ಮಣನಿಗೆ ದಾನವನ್ನು ಮಾಡುವುದು ತಪ್ಪು. ಆದರೆ ಇವನು ಅನರ್ಹನಾಗಿದ್ದಾನೆಂದು ತಿಳಿಯದೇ ದಾನ ಮಾಡಿದಾಗ ಪಾಪವು ಬರುವುದಿಲ್ಲ. ಅದೇ ರೀತಿಯಾಗಿ ಸತ್ಪಾತ್ರನೆಂದು ತಿಳಿಯದೇ ಇದ್ದಾಗ ದಾನ ಮಾಡದೇ ಇದ್ದರೆ ಪಾಪಭಾಜನನಾಗುವುದಿಲ್ಲ.
ಟಿಪ್ಪಣಿ - ತಥಾತೀರ್ಥ ಇತ್ಯತ್ರ ಅತೀರ್ಥೇ ಇತಿ ಪದಚ್ಛೇದಃ |
ಯಾರು ಸತ್ಪಾತ್ರನೋ ಅವನಿಗೆ ದಾನ ಮಾಡಲೇ ಬೇಕು. ಅಪಾತ್ರನಿಗೆ ದಾನ ಮಾಡಲೇ ಬಾರದೆಂಬ ಧರ್ಮವನ್ನು ಈ ಹಿಂದೆ ಹೇಳಿದ್ದರು. ಒಂದುವೇಳೆ ಸತ್ಪಾತ್ರನೆಂದು ತಿಳಿಯದೇ ಇದ್ದರೆ, ದಾನವನ್ನು ಕೊಡದಿದ್ದರೂ ಕೂಡ ತಪ್ಪಾಗು- ವುದಿಲ್ಲ. ಕೆಲವರು ತಮ್ಮನ್ನು ಸತ್ಪಾತ್ರರೆಂದು ಗುರುತಿಸಿಕೊಳ್ಳಲು ಇಚ್ಛಿಸುವುದಿಲ್ಲ. ಅಂಥ ಸಂದರ್ಭದಲ್ಲಿ ಇವರನ್ನು ಸತ್ಪಾತ್ರರೆಂದು ಗುರುತಿಸುವುದೇ ಕಷ್ಟವಾಗುತ್ತದೆ. ಮತ್ತು ಅಪಾತ್ರರಿಗೆ ಸರ್ವಥಾ ದಾನ ಮಾಡಬಾರದು. ಕೆಲವರು ತಾವು ಮಾಡಿದ ದೊಡ್ಡ ದೊಡ್ಡ ಪಾಪಗಳನ್ನು ಜಗತ್ತಿನಲ್ಲಿ ಹಂಚಿಕೊಂಡಿರುವುದೇ ಇಲ್ಲ. ಅಂಥವರನ್ನು ಮೇಲ್ನೋಟಕ್ಕೆ ಅವರ ವೇಷಭೂಷಣಗಳನ್ನು ನಾವು ಸತ್ಪಾತ್ರರೆಂದು ಗುರುತಿಸಿ ದಾನವನ್ನು ಮಾಡುತ್ತೇವೆ. ಅಂತರಂಗದಲ್ಲಿ ಅವರು ಮಾಡಿದ ತಪ್ಪುಗಳು ನಮಗೆ ತಿಳಿದಿರುವುದಿಲ್ಲ. ಇಂಥ ಸಂದರ್ಭದಲ್ಲಿ ದಾನ ಮಾಡಿದವನಿಗೆ ಪಾಪವು ಬರುವುದಿಲ್ಲ. ಆದರೆ ದಾನವನ್ನು ತೆಗೆದುಕೊಂಡ ಅಂಥ ಅಪಾತ್ರನಿಗೆ ಬಹಳಷ್ಟು ಪಾಪವು ಬರುತ್ತದೆ. ಮತ್ತು ಅಪಾತ್ರನಿಗೆ ದಾನ ಮಾಡಿದ ಯಜಮಾನನ ಪಾಪವೂ ಕೂಡ ಅವನಿಗೇ ಬರುತ್ತದೆ ಎಂಬುದಾಗಿ ತಿಳಿಯಬೇಕು.
ಸ್ತ್ರಿಯಾಸ್ತಥಾಪಚಾರಿಣ್ಯಾ ನಿಷ್ಕೃತಿಃ ಸ್ಯಾದದೂಷಿಕಾ |
ಅಪಿ ಸಾ ಪೂಯತೇ ತೇನ ನತು ಭರ್ತಾ ಪ್ರದುಷ್ಯತಿ ॥30॥
ಹೆಂಡತಿಯನ್ನು ಎಂದೂ ಸಹ ತಿರಸ್ಕಾರ ಮಾಡಬಾರದು. ಆದರೆ ಒಂದು ವೇಳೆ ಅವಳು ಪರಪುರುಷರ ಸಂಪರ್ಕವನ್ನು ಮಾಡಿದ್ದರೆ, ಅವಳನ್ನು ತಿರಸ್ಕಾರ ಮಾಡ- ಬೇಕು. ಇದರಿಂದ ಯಾವುದೇ ಪಾಪವು ಬರುವುದಿಲ್ಲ. ಅಂಥ ಪತ್ನಿಯ ಜೊತೆ ಭೋಜನಾದಿಗಳನ್ನು ಮಾಡಬಾರದು. ದೈಹಿಕಸಂಪರ್ಕವನ್ನೂ ಕೂಡ ಮಾಡ- ಬಾರದು. ಇದೇ ಅವಳಿಗೆ ಪ್ರಾಯಶ್ಚಿತ್ತವಾಗಿದೆ. ಪತ್ನಿಯನ್ನು ಪರಿತ್ಯಾಗ ಮಾಡುವುದ- ರಿಂದಲೇ ಅವಳು ಪರಿಶುದ್ಧಳಾಗುತ್ತಾಳೆ.

ಟಿಪ್ಪಣಿ - ನಿಷ್ಕೃತಿಃ ಸ್ಯಾದದೂಷಿಕಾ ಇತ್ಯತ್ರ ನಿಷ್ಕೃತಿಃ ವಿಕ್ರಯಣಮ್ |
ತತ್ತ್ವಂ ಜ್ಞಾತ್ವಾ ತು ಸೋಮಸ್ಯ ವಿಕ್ರಯಃ ಸ್ಯಾದದೂಷಕಃ |
ಅಸಮರ್ಥಸ್ಯ ಭೃತ್ಯಸ್ಯ ವಿಸರ್ಗಃ ಸ್ಯಾದದೋಷವಾನ್ ॥
ವನದಾಹೋ ಗವಾಮರ್ಥೇ ಕ್ರಿಯಮಾಣೋ ನ ದೂಷಕಃ |
ಸೋಮಲತೆಯನ್ನು ಯಜ್ಞಕ್ಕೋಸ್ಕರ ಬಳಸಲಾಗುತ್ತದೆ ಎಂಬ ಉದ್ದೇಶವನ್ನು ಅರ್ಥಮಾಡಿಕೊಂಡು ವಿಕ್ರಯ ಮಾಡಿದರೆ ಯಾವುದೇ ದೋಷವು ಬರುವುದಿಲ್ಲ. ಯಾರು ಸೋಮಲತೆಯನ್ನು ಹಣಕ್ಕಾಗಿ ತೆಗೆದುಕೊಂಡು ಅದರ ರಸವನ್ನು ತೆಗೆದು ಕುಡಿದು ಮತ್ತನಾಗುವ ಉದ್ದೇಶವನ್ನು ಹೊಂದಿರುತ್ತಾನೋ, ಅಂಥವನಿಗೆ ವಿಕ್ರಯ- ವನ್ನು ಮಾಡುವುದು ತಪ್ಪಾಗುತ್ತದೆ. ಅದರಂತೆ ಯಾರು ಭೃತ್ಯನೋ ಅವನು ಕೆಲಸ ಕಾರ್ಯಗಳನ್ನು ಮಾಡಲು ಸಮರ್ಥನಾಗದಿದ್ದರೆ. ಅಂಥವನನ್ನು ಪರಿತ್ಯಾಗ ಮಾಡು -ವುದರಿಂದ ಯಾವುದೇ ದೋಷವು ಬರುವುದಿಲ್ಲ. ಹಸುಗಳಿಗೋಸ್ಕರ ಕಾಡನ್ನು ಸುಡುವುದೂ ತಪ್ಪಾಗುವುದಿಲ್ಲ.
ಟಿಪ್ಪಣಿ - ತತ್ತ್ವಂ ಜ್ಞಾತ್ವಾ ತು ಸೋಮಸ್ಯ ಇತ್ಯತ್ರ ಸೋಮಸ್ಯ ಸೋಮ- ಲತಾಯಾಃ ತತ್ತ್ವಂ ಯಾಥಾರ್ಥ್ಯಮ್ |
ಅನ್ಯಲತಾಮಾನೀಯ ಸೋಮಲತೇತ್ಯ- ನೃತೇನ ವಿಕ್ರಯಣಂ ನಿಷಿದ್ಧಮಿತಿ ಸೂಚಯಿತುಂ ತತ್ತ್ವಂ ಜ್ಞಾತ್ವಾ ಇತ್ಯುಕ್ತಮ್ |
ಸೋಮರಸವನ್ನು ಕೇವಲ ಸುಖಕ್ಕೋಸ್ಕರ ಪಾನ ಮಾಡುವುದು ತಪ್ಪು. ಯಜ್ಞಪ್ರಕ್ರಿಯೆಗೋಸ್ಕರವೇ ಇದನ್ನು ಉಪಯೋಗಿಸಬೇಕು. ಇದನ್ನು ಅರ್ಥ- ಮಾಡಿಕೊಳ್ಳದೇ ಸುಮ್ಮನೆ ಮಾರಾಟ ಮಾಡಿದರೆ ಅಧರ್ಮವಾಗುತ್ತದೆ. ಮತ್ತು ಸೇವಕನಾದವನು ಯಜಮಾನನನ್ನು ನಂಬಿ ಬದುಕುತ್ತಿರುತ್ತಾನೆ. ಅಂದಮಾತ್ರಕ್ಕೆ ಅವನು ಕೆಲಸ ಮಾಡದಿದ್ದರೂ ಕೂಡ ಅವನಿಗೆ ಸಂಬಳ ಕೊಡಬೇಕೆಂಬ ನಿಯಮವು ಇರುವುದಿಲ್ಲ. ಕೆಲಸವನ್ನು ಮಾಡಲು ಅವನಿಗೆ ಶಕ್ತಿಯು ಹ್ರಾಸ- ವಾದರೆ, ಅಥವಾ ಕೆಲಸದಲ್ಲಿ ವಂಚನೆ ಮೊದಲಾದವುಗಳನ್ನು ಮಾಡಿದರೆ ಅಂಥ ಸೇವಕನನ್ನು ಕೆಲಸದಿಂದ ಬಿಡಿಸಬಹುದು. ಸಂಬಳವನ್ನು ಕೊಡಬೇಕಾಗಿಲ್ಲ. ಆಗ ಯಜಮಾನನಿಗೆ ಯಾವುದೇ ಪಾಪವು ಬರುವುದಿಲ್ಲ.
ಅರಣ್ಯದಲ್ಲಿ ಹಸುಗಳನ್ನು ತಿನ್ನುವ ಅನೇಕ ಪ್ರಾಣಿಗಳಿರುತ್ತವೆ. ಅಂಥ ದುಷ್ಟ- ಪ್ರಾಣಿಗಳನ್ನು ಓಡಿಸಲು ಸಾಧ್ಯವಾಗದೇ ಇದ್ದಾಗ ಆ ಅರಣ್ಯಪ್ರದೇಶವನ್ನು ಸುಟ್ಟು ವನ್ಯಮೃಗಗಳನ್ನು ಅಲ್ಲಿಂದ ಓಡಿಸಬಹುದು. ಇದರಿಂದ ಹಸುಗಳು ಸಂರಕ್ಷಿತ- ವಾಗುತ್ತದೆ. ಇಂಥ ಸಂದರ್ಭದಲ್ಲಿ ಕಾಡಿಗೆ ಬೆಂಕಿ ಹಚ್ಚುವುದೂ ಕೂಡ ಪಾಪ- ಕೆಲಸವಾಗುವುದಿಲ್ಲ.
ಉಕ್ತಾನ್ಯೇತಾನಿ ಕರ್ಮಾಣಿ ಯಾನಿ ಕುರ್ವನ್ನ ದುಷ್ಯತಿ |
ಪ್ರಾಯಶ್ಚಿತ್ತಾನಿ ವಕ್ಷ್ಯಾಮಿ ವಿಸ್ತರೇಣೈವ ಭಾರತ ॥32॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚತ್ರಿಂಶೋಽಧ್ಯಾಯಃ ॥35॥
ಯುಧಿಷ್ಠಿರನೇ ! ಯಾವ ಕರ್ಮಗಳು ಪಾಪಕರವಾಗುತ್ತವೆ. ಯಾವ ಕರ್ಮಗಳು ಪಾಪಕರವಾಗುವುದಿಲ್ಲ ಎಂಬುದನ್ನು ಇಲ್ಲಿಯ ತನಕ ಹೇಳಿದ್ದೇನೆ. ಈಗ ಪಾಪಕರವಾದ ಕಾರ್ಯಗಳಿಗೆ ಯಾವ ಬಗೆಯ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳ- ಬೇಕೆಂಬ ವಿಚಾರವನ್ನು ಮುಂದೆ ಹೇಳುತ್ತೇನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 35ನೆಯ ಅಧ್ಯಾಯವು ಮುಗಿಯಿತು.
*****
36. ಮೂವತ್ತಾರನೆಯ ಅಧ್ಯಾಯ
ಪರಸ್ತ್ರೀಗಮನ, ಪರಪುರುಷಸಂಪರ್ಕ, ಬ್ರಹ್ಮಹತ್ಯಾ, ಸುರಾಪಾನ, ವಿವಿಧ ಪಾತಕಗಳು, ಉಪಪಾತಕಗಳು. ಈ ಎಲ್ಲಾ ದೋಷಗಳಿಗೆ ಪ್ರಾಯಶ್ಚಿತ್ತಗಳು.
ವ್ಯಾಸಃ
ತಪಸಾ ಕರ್ಮಭಿಶ್ಚೈವ ಪ್ರದಾನೇನ ಚ ಭಾರತ |
ಪುನಾತಿ ಪಾಪಂ ಪುರುಷಃ ಪೂತಶ್ಚೇನ್ನ ಪ್ರವರ್ತತೇ ॥1॥
ವೇದವ್ಯಾಸದೇವರು ಯುಧಿಷ್ಠಿರನೇ! ಯಾವ ಮನುಷ್ಯನು ಪಾಪವನ್ನು ಆಚರಿಸಿರುತ್ತಾನೋ, ಅಂಥ ಮನುಷ್ಯನು ಆ ಪಾಪಗಳ ಪರಿಹಾರಕ್ಕಾಗಿ ಕೃಚ್ಛ್ರ, ಚಾಂದ್ರಾಯಣ ಮೊದಲಾದ ವ್ರತಗಳನ್ನು ಆಚರಿಸಬೇಕು. ಮತ್ತು ಅನೇಕ ಬಗೆಯ ದಾನಗಳನ್ನು ಮಾಡಬೇಕು. ಆಗ ಅವನು ಮಾಡಿದ ಪಾಪಗಳು ನಾಶವಾಗುತ್ತವೆ. ಆದರೆ ಮುಂದೆಂದೂ ಅದೇ ತಪ್ಪನ್ನು ಸರ್ವಥಾ ಮಾಡಬಾರದು.
ಏಕಕಾಲಂ ತು ಭುಂಜಾನಶ್ಚರನ್ ಭೈಕ್ಷಂ ಸ್ವಕರ್ಮಕೃತ್ |
ಕಪಾಲಪಾಣಿಃ ಖಟ್ವಾಂಗೀ ಬ್ರಹ್ಮಚಾರೀ ಸದೋತ್ಥಿತಃ ॥2॥
ಮಹಾಪಾಪವನ್ನು ಆಚರಿಸಿದವನು ಒಂದೇ ಹೊತ್ತು ಊಟ ಮಾಡಬೇಕು. ತನ್ನ ವೈಯಕ್ತಿಕ ಕೆಲಸಗಳನ್ನು ತಾನೇ ಮಾಡಿಕೊಳ್ಳಬೇಕು. ಭಿಕ್ಷೆ ಬೇಡಿ ಊಟವನ್ನು ಮಾಡಬೇಕು. ಬ್ರಹ್ಮಚರ್ಯವ್ರತದಲ್ಲಿರಬೇಕು. ಸದಾಕಾಲವು ಪರಮಾತ್ಮನ ವಿಷಯ -ದಲ್ಲಿ ಜಾಗೃತನಾಗಿರಬೇಕು. ಕಪಾಲವನ್ನು, ದಂಡವನ್ನು ಕೈಯಲ್ಲಿ ಹಿಡಿದು- ಕೊಂಡಿರಬೇಕು.
ಟಿಪ್ಪಣಿ - ಕಪಾಲಪಾಣಿಃ ಖಟ್ವಾಂಗೀ ಇತ್ಯತ್ರ ಕಪಾಲಪಾಣಿಃ ಭಿಕ್ಷಾಸಂಗ್ರಹಾಯ ಮೃಣ್ಮಯಕಪಾಲಪಾಣಿಃ | ಖಟ್ವಾಂಗೀ ಪಶ್ವಾದಿನಿವಾರಣಾಯ ಖಟ್ವಾಂಗೋ ಲಗುಡಮ್, ತದ್ವಾನ್ |
ಭಿಕ್ಷೆಯ ಸಂಗ್ರಹಕ್ಕೋಸ್ಕರ ಮೃಣ್ಮಯವಾದ ಕಪಾಲವನ್ನು ಕೈಯಲ್ಲಿ ಹಿಡಿದು- ಕೊಂಡಿರಬೇಕು. ಖಟ್ವಾಂಗೀ ಅಂದರೆ ಪಶು ಮೊದಲಾದವುಗಳ ನಿವಾರಣೆ- ಗೋಸ್ಕರ ಒಂದು ಕೋಲನ್ನು ಹಿಡಿದುಕೊಂಡಿರಬೇಕು ಎಂದು ಅಭಿಪ್ರಾಯ.
ಅನಸೂಯುರಧಃಶಾಯೀ ಕರ್ಮ ಲೋಕೇ ಪ್ರಕಾಶಯನ್ |
ಪೂರ್ಣೈರ್ದ್ವಾದಶಭಿರ್ವರ್ಷೈರ್ಬ್ರಹ್ಮಹಾ ವಿಪ್ರಮುಚ್ಯತೇ ॥3॥
ಮತ್ತೊಬ್ಬರಲ್ಲಿ ದೋಷವನ್ನು ಎಣಿಸಬಾರದು. ನೆಲದ ಮೇಲೆ ಮಲಗಿಕೊಳ್ಳ- ಬೇಕು. ತನ್ನ ಪಾಪಕರ್ಮವನ್ನು ಲೋಕದಲ್ಲಿ ಪ್ರಸಿದ್ಧಿಗೊಳಿಸಬೇಕು. ಹೀಗೆ ಹನ್ನೆರಡು ವರ್ಷಗಳ ಕಾಲ ವ್ರತವನ್ನು ಆಚರಿಸಿದರೆ ಬ್ರಹ್ಮಹತ್ಯಾ ಮೊದಲಾದ ಪಾಪಗಳಿಂದ

ವಿಮುಕ್ತನಾಗುತ್ತಾನೆ.
ಲಕ್ಷ್ಯಃ ಶಸ್ತ್ರಭೃತಾಂ ವಾಸ್ಯಾದ್ ವಿದುಷಾಮಿಚ್ಛಯಾತ್ಮನಃ |
ಪ್ರಾಸ್ಯೇದಾತ್ಮಾನಮಗ್ನೌ ವಾ ಸಮಿದ್ಧೇ ನಿರವಾಕ್ಶಿರಾಃ ॥4॥
ಇವನು ಬ್ರಹ್ಮಹತ್ಯೆಯನ್ನು ಮಾಡಿದ್ದಾನೆ ಎಂಬುದಾಗಿ ತಿಳಿದು ಶಸ್ತ್ರಧಾರಿಗಳು ಇವನ ಮೇಲೆ ಲಕ್ಷ್ಯವನ್ನಿಟ್ಟರೆ, ಸ್ವೇಚ್ಛೆಯಿಂದ ಆ ಶಸ್ತ್ರಕ್ಕೆ ಭಾಗಿಯಾಗಬೇಕು. ಉರಿಯುವ ಬೆಂಕಿಯಲ್ಲಿ ತಲೆಕೆಳಗಾಗಿ ಮಾಡಿ, ಧುಮುಕಬೇಕು.
ಟಿಪ್ಪಣಿ - ಶಸ್ತ್ರಘಾತದ ಮೂಲಕ ಅಸುನೀಗಲು ಸಿದ್ಧನಿರಬೇಕು. ಉರಿಯುವ ಬೆಂಕಿಯಲ್ಲಿ ಇಚ್ಛೆಪಟ್ಟು ಧುಮುಕಬೇಕು. ಇಷ್ಟೊಂದು ಘೋರವಾದ ಶಿಕ್ಷೆಯನ್ನು ಅನುಭವಿಸಿದರೆ ಅವನಿಗೆ ಉದ್ಧಾರವಾಗಲು ಸಾಧ್ಯ. ಇಲ್ಲದಿದ್ದರೆ ನೂರಾರು ವರ್ಷಗಳ ಕಾಲ ನರಕ ದುಃಖವನ್ನು ಹೀನ ಯೋನಿಗಳನ್ನು ಅನುಭವಿಸಬೇಕಾ- ಗುತ್ತದೆ. ಇದನ್ನೆಲ್ಲಾ ಗಮನಿಸಿ ಮಹಾಪಾತಕಗಳನ್ನು ಮಾಡುವ ಸಂದರ್ಭದಲ್ಲಿ ಇಂಥ ಘೋರ ಶಿಕ್ಷೆಯ ಎಚ್ಚರವನ್ನು ಹೊಂದಿರಬೇಕು.
ಜಪನ್ ವಾನ್ಯತಮಂ ವೇದಂ ಯೋಜನಾನಾಂ ಶತಂ ವ್ರಜೇತ್ |
ಸರ್ವಸ್ವಂ ವಾ ವೇದವಿದೇ ಬ್ರಾಹ್ಮಣಾಯೋಪಪಾದಯೇತ್ ॥5॥
ನೂರು ಯೋಜನಗಳ ತನಕ ವೇದವನ್ನು ಪಠಿಸುತ್ತಾ, ನಡೆದು ಹೋಗಬೇಕು. ವೇದಜ್ಞನಾದ ಬ್ರಾಹ್ಮಣನಿಗೆ ತನ್ನ ಸರ್ವಸ್ವವನ್ನು ದಾನ ಮಾಡಬೇಕು.
ಧನಂ ವಾ ಜೀವನಾಯಾಲಂ ಗೃಹಂ ವಾ ಸಪರಿಚ್ಛದಮ್ |
ಮುಚ್ಯತೇ ಬ್ರಹ್ಮಹತ್ಯಾಯಾ ಗೋಪ್ತಾ ಗೋಬ್ರಾಹ್ಮಣಸ್ಯ ಚ ॥6॥
ಒಬ್ಬ ಬ್ರಾಹ್ಮಣನಿಗೆ ಜೀವನಕ್ಕೆ ಬೇಕಾಗುವಷ್ಟು ಹಣವನ್ನು ದಾನ ಮಾಡಬೇಕು. ಸುವ್ಯವಸ್ಥಿತವಾದ ಮನೆಯನ್ನು ದಾನಮಾಡಬೇಕು. ಗೋ-ಬ್ರಾಹ್ಮಣರ ಸಂರಕ್ಷಣೆ- ಯನ್ನು ನಿರಂತರವಾಗಿ ಮಾಡಬೇಕು. ಆಗ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾಗು- ತ್ತಾನೆ.
ಷಡ್ಭಿರ್ವರ್ಷೈಃ ಕೃಚ್ಛ್ರಭೋಜೀ ಬ್ರಹ್ಮಹಾ ಪೂಯತೇ ನರಃ |
ಮಾಸೇ ಮಾಸೇ ಸಮಶ್ನಂಸ್ತು ತ್ರಿಭಿರ್ವರ್ಷೈಃ ಪ್ರಮುಚ್ಯತೇ ॥7॥
ಆರು ವರ್ಷಗಳ ಕಾಲ ಹೀಗೆ ಕೃಚ್ಛ್ರವ್ರತದ ಕ್ರಮದಲ್ಲಿ ಭೋಜನವನ್ನು ಮಾಡು -ತ್ತಿದ್ದರೆ, ಬ್ರಹ್ಮಹತ್ಯಾ ಪಾಪವು ಪರಿಹಾರವಾಗುತ್ತದೆ. ಅಥವಾ ಮಾಸಕ್ರಮದಲ್ಲಿ ಕೃಚ್ಛ್ರವ್ರತವನ್ನು ಆಚರಣೆ ಮಾಡಿದರೆ, ಮೂರು ವರ್ಷಗಳಲ್ಲಿಯೇ ಬ್ರಹ್ಮಹತ್ಯಾ ಪಾಪವು ಪರಿಹಾರವಾಗುತ್ತದೆ.
ಟಿಪ್ಪಣಿ - ಮಾಸೇ ಮಾಸೇ ಸಮಶ್ನಂಸ್ತು ಇತ್ಯತ್ರ ಸಮಶ್ನನ್ ಮಾಸೋಪವಾಸಂ ಕೃತ್ವಾ ಮಾಸೇ ಸಂಪೂರ್ಣೇ ಸತಿ ಸಮಶ್ನನ್ |
ತ್ರಿರವಾಕ್ಶಿರಾ ಇತ್ಯತ್ರ ಋಗಾದಿ- ವೇದಾನಾಂ ಮಧ್ಯೇ ಏಕಂ ವೇದಂ ತ್ರಿರ್ಜಪನ್ |
ಮನುಸ್ಮೃತಿಯಲ್ಲಿ ಕೃಚ್ಛವ್ರತವನ್ನು ಹೀಗೆ ಹೇಳಿದ್ದಾರೆ - `ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ | ತ್ರ್ಯಹಂ ಪರಂ ಚ ನಾಶ್ನೀಯಾತ್ಪ್ರಾಜಾಪತ್ಯಂ ಚರನ್ದ್ವಿಜಃ ॥ (ಅ 11, ಶ್ಲೋಕ 211). ಮೂರು ದಿವಸಗಳು ಹಗಲು ಊಟ ಮಾಡಬೇಕು. ಮೂರು ದಿವಸಗಳು ರಾತ್ರಿ ಊಟ ಮಾಡಬೇಕು. ಮೂರು ದಿವಸಗಳು ಯಾರ ಬಳಿಯೂ ಬೇಡದೇ ಇರುವಷ್ಟನ್ನೇ ಊಟ ಮಾಡಬೇಕು. ಮೂರು ದಿವಸಗಳು ಉಪವಾಸ ಮಾಡಬೇಕು. ಹೀಗೆ ಹನ್ನೆರಡು ದಿವಸಗಳ ಪರ್ಯಂತವಾಗಿ ವ್ರತವನ್ನು ಆರು ವರ್ಷಗಳ ಕಾಲ ಆಚರಿಸಬೇಕು. ಆಗ ಬ್ರಹ್ಮಹತ್ಯಾ ಪಾಪದಿಂದ ವಿಮುಕ್ತನಾಗುತ್ತಾನೆ.
ಅಥವಾ ಮಾಸಿಕಾವಿಧಾನದಲ್ಲಿ ಈ ವ್ರತವನ್ನು ಹೀಗೆ ತಿಳಿಸುತ್ತಾರೆ - ಒಂದು ತಿಂಗಳು ಹಗಲು ಭೋಜನ. ಒಂದು ತಿಂಗಳು ರಾತ್ರಿ ಭೋಜನ. ಒಂದು ತಿಂಗಳು ಅಯಾಚಿತವಾಗಿ ಸಿಕ್ಕಿದ್ದಷ್ಟನ್ನು ಊಟ ಮಾಡಬೇಕು. ಮತ್ತೊಂದು ತಿಂಗಳು ಸಂಪೂರ್ಣವಾಗಿ ಉಪವಾಸವನ್ನು ಮಾಡಬೇಕು. ಹೀಗೆ ಮಾಡಿದರೆ ಮೂರು ವರ್ಷಗಳಲ್ಲಿಯೇ ಬ್ರಹ್ಮಹತ್ಯೆಯ ಪಾಪದಿಂದ ವಿನಿರ್ಮುಕ್ತನಾಗುತ್ತಾನೆ. ಅಥವಾ ಒಂದು ವರ್ಷದಲ್ಲಿಯೇ ಬ್ರಹ್ಮಹತ್ಯೆಯು ಪರಿಹಾರವಾಗುತ್ತದೆಂದು ಕೆಲವೆಡೆ ಹೇಳಲಾಗಿದೆ.
ಬ್ರಹ್ಮಹತ್ಯಾಪಾಪವಷ್ಟೇ ಅಲ್ಲದೇ, ಪರಸ್ತ್ರೀಗಮನ, ಪರಪುರುಷ ಸಂಪರ್ಕ, ಮದ್ಯಪಾನ ಮೊದಲಾದ ಮಹಾಪಾತಕಗಳ ಪರಿಹಾರಕ್ಕೂ ಕೂಡ ಕೃಚ್ಛ್ರಚಾಂದ್ರಾ- ಯಣವ್ರತವನ್ನು ಶಾಸ್ತ್ರದಲ್ಲಿ ತಿಳಿಸುತ್ತಾರೆ.
ಸಂವತ್ಸರೇಣ ಮಾಸಾಶೀ ಪೂಯತೇ ನಾತ್ರ ಸಂಶಯಃ |
ತಥೈವೋಪವಸನ್ ರಾಜನ್ ಸ್ವಲ್ಪೇನಾಪಿ ಪ್ರಮುಚ್ಯತೇ ॥8॥
ಒಂದು ಮಾಸದಲ್ಲಿ ಭೋಜನಕ್ರಮವನ್ನು ವ್ಯತ್ಯಾಸ ಗೊಳಿಸುತ್ತಾ ಕೃಚ್ಛ್ರವ್ರತವನ್ನು ಆಚರಣೆ ಮಾಡಿದರೆ ಕೂಡಲೇ ಬ್ರಹ್ಮಹತ್ಯಾ ಪಾಪದಿಂದ ವಿಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಕ್ರತುನಾ ಚಾಶ್ವಮೇಧೇನ ಪೂಯತೇ ನಾತ್ರ ಸಂಶಯಃ |
ಯೇ ಚಾಪ್ಯವಭೃಥಸ್ನಾತಾಃ ಕೇಚಿದೇವಂವಿಧಾ ನರಾಃ ॥9॥
ಅಶ್ವಮೇಧಯಾಗವನ್ನು ಮಾಡಿದರೂ ಕೂಡ ಬ್ರಹ್ಮಹತ್ಯಾಪಾಪವು ಪರಿಹಾರ- ವಾಗುತ್ತದೆ. ಇದರಲ್ಲಿಯೂ ಯಾವುದೇ ಸಂಶಯವಿರುವುದಿಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಬೇರೆ ಪಾಪಾಗಳಿಗೂ ಕೂಡ ಅಶ್ವಮೇಧಯಾಗವನ್ನು ಮಾಡಿ ಅವಭೃಥ ಸ್ನಾನ ಮಾಡುವುದರಿಂದ ಶುದ್ಧಿಯನ್ನು ಹೊಂದಬಹುದು.
ತೇ ಸರ್ವೇ ಪೂತಪಾಪ್ಮಾನೋ ಭವಂತೀತಿ ಪರಾ ಶ್ರುತಿಃ |
ಬ್ರಾಹ್ಮಣಾರ್ಥೇ ಹತೋ ಯುದ್ಧೇ ಮುಚ್ಯತೇ ಬ್ರಹ್ಮಹತ್ಯಯಾ ॥10॥
ಗವಾಂ ಶತಸಹಸ್ರಂ ತು ಪಾತ್ರೇಭ್ಯಃ ಪ್ರತಿಪಾದಯನ್ |
ಬ್ರಹ್ಮಹಾ ವಿಪ್ರಮುಚ್ಯೇತ ಸರ್ವಪಾಪೇಭ್ಯ ಏವ ಚ ॥11॥
`ಸರ್ವಂ ಪಾಪ್ಮಾನಂ ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ' ಎಂಬ ಶ್ರುತಿಯು ಅಶ್ವಮೇಧಯಾಗದಿಂದ ಎಲ್ಲಾ ಪಾಪಗಳು ಪರಿಹಾರವಾಗುತ್ತವೆ ಎಂದು ಹೇಳುತ್ತಿದೆ. ಬ್ರಹ್ಮಹತ್ಯೆಯನ್ನು ಮಾಡಿದವನು ಬ್ರಾಹ್ಮಣರ ರಕ್ಷಣೆಗೋಸ್ಕರ ಯುದ್ಧವನ್ನು

ಮಾಡಬೇಕು. ಆ ಸಂದರ್ಭದಲ್ಲಿ ಮೃತನಾದರೆ, ಆ ಮಹಾಪಾಪದಿಂದ ವಿಮುಕ್ತನಾಗುತ್ತಾನೆ. ಒಂದು ಲಕ್ಷ ಗೋವುಗಳನ್ನು ಸತ್ಪಾತ್ರರಿಗೆ ದಾನ ಮಾಡುವುದ- ರಿಂದಲೂ ಬ್ರಹ್ಮಹತ್ಯಾಪಾಪವು ಪರಿಹಾರವಾಗುತ್ತದೆ. ಮತ್ತು ಉಳಿದೆಲ್ಲಾ ಪಾಪ- ಗಳಿಂದಲೂ ಕೂಡ ವಿಮುಕ್ತನಾಗುತ್ತಾನೆ.
ಕಪಿಲಾನಾಂ ಸಹಸ್ರಾಣಿ ಯೋ ದದ್ಯಾತ್ ಪಂಚವಿಂಶತಿಮ್ |
ದೋಗ್ಧ್ರೀಣಾಂ ಸ ಚ ಪಾಪೇಭ್ಯಃ ಸರ್ವೇಭ್ಯೋ ವಿಪ್ರಮುಚ್ಯತೇ ॥12॥
ಯಥೇಚ್ಛವಾಗಿ ಹಾಲನ್ನು ನೀಡುವ 25000 ಕಪಿಲಗೋವುಗಳನ್ನು ಸತ್ಪಾತ್ರ- ನಿಗೆ ದಾನ ಮಾಡುವುದರಿಂದ ಎಲ್ಲಾ ಪಾಪಗಳಿಂದಲೂ ಕೂಡ ವಿಮುಕ್ತನಾಗುತ್ತಾನೆ.
ಗೋ ಸಹಸ್ರಂ ಸವತ್ಸಾನಾಂ ದೋಗ್ಧ್ರೀಣಾಂ ಪ್ರಾಣಸಂಶಯೇ |
ಸಾಧುಭ್ಯೋ ವೈ ದರಿದ್ರೇಭ್ಯೋ ದತ್ವಾ ಮುಚ್ಯೇತ ಕಿಲ್ಬಿಷಾತ್ ॥13॥
ಪ್ರಾಣ ಹೋಗುವ ಸಂದರ್ಭದಲ್ಲಿ ಯಾವ ಸಾಧಕನು ಹಾಲನ್ನು ನೀಡುವ ಕರುಗಳುಳ್ಳ 1000 ಹಸುಗಳನ್ನು ಸಾಧುಗಳಾದ ಸಂಪತ್ತಿಲ್ಲದ ಸತ್ಪುರುಷರಿಗೆ ದಾನವನ್ನು ಮಾಡುತ್ತಾನೋ ಅವನು ಜೀವನದಲ್ಲಿ ಮಾಡಿದ ಎಲ್ಲ ಪಾಪಗ- ಳಿಂದಲೂ ಕೂಡ ವಿಮುಕ್ತನಾಗುತ್ತಾನೆ.
ಶತಂ ವೈ ಯಸ್ತು ಕಾಂಭೋಜಾನ್ ಬ್ರಾಹ್ಮಣೇಭ್ಯಃ ಪ್ರಯಚ್ಛತಿ |
ನಿಯತೇಭ್ಯೋ ಮಹೀಪಾಲ ಸ ಚ ಪಾಪಾತ್ ಪ್ರಮುಚ್ಯತೇ ॥14॥
ನಿಯಮಾನುಸಾರಿಯಾಗಿ ಸದ್ಬ್ರಾಹ್ಮಣನಿಗೆ ಕಾಂಭೋಜದೇಶದ ನೂರು ಕುದುರೆ -ಗಳನ್ನು ದಾನ ಮಾಡುವುದರಿಂದ ಎಲ್ಲಾ ಪಾಪಗಳಿಂದ ವಿನಿರ್ಮುಕ್ತನಾಗುತ್ತಾನೆ.
ಮನೋರಥಂ ತು ಯೋ ದದ್ಯಾದೇಕಸ್ಮಾ ಅಪಿ ಭಾರತ |
ನ ಕೀರ್ತಯೇತ ದತ್ವಾ ಯಃ ಸ ಚ ಪಾಪಾತ್ ಪ್ರಮುಚ್ಯತೇ ॥15॥
ಯಾವ ಬ್ರಾಹ್ಮಣನ ಮನೋರಥವನ್ನು ಸಂಪೂರ್ಣವಾಗಿ ಪೂರ್ಣಗೊಳಿಸಿ- ದರೂ ಕೂಡ ಮತ್ತು ತಾನು ದಾನ ಮಾಡಿದ ವಸ್ತುವನ್ನು ಮತ್ತೊಬ್ಬರಿಗೆ ಹೇಳದೇ ಇರುವುದರಿಂದಲೂ ಕೂಡ ಬ್ರಹ್ಮಹತ್ಯಾದಿ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಸುರಾಪಾನಂ ಸಕೃತ್ ಪೀತ್ವಾ ಯೋಽಗ್ನಿವರ್ಣಾಂ ಪಿಬೇದ್ ದ್ವಿಜಃ |
ಸ ಪಾವಯತ್ಯಥಾತ್ಮಾನಮಿಹ ಲೋಕೇ ಪರತ್ರ ಚ ॥16॥
ಒಮ್ಮೆ ಸುರಾಪಾನವನ್ನು ಮಾಡಿದರೂ ಸಾಕು ಮಹಾಪಾಪವು ಬರುತ್ತದೆ. ಈ ಪಾಪದ ಪರಿಹಾರಕ್ಕಾಗಿ ಕೆಂಪಗೆ ಕಾದು ಕುದಿಯುತ್ತಿರುವ ಕೆಂಪು ಬಣ್ಣದ ಸುರೆಯನ್ನು ಕುಡಿದು ಬಿಡಬೇಕು.
ಟಿಪ್ಪಣಿ -ಯೋಽಗ್ನಿವರ್ಣಾಂ ಸುರಾಂ ಪಿಬೇದ್ ಇತ್ಯತ್ರ ಅಗ್ನಿವರ್ಣಾಂ ಪುನಃಪುನಃ ಕ್ವಥನೇನ ಅಗ್ನಿಸಮಾನವರ್ಣಾಮ್ |
ಸುರಾಂಬುಘೃತಗೋಮೂತ್ರಪಯಸಾಮಗ್ನಿಸನ್ನಿಭಮ್ |
ಸುರಾಪೋನ್ಯತಮಂ ಪೀತ್ವಾ ಮರಣಾಚ್ಛುದ್ಧಿಮೃಚ್ಛತಿ ॥
ಸುರೆ, ಜಲ, ತುಪ್ಪ, ಗೋಮೂತ್ರ ಹಾಲು ಇವುಗಳಲ್ಲಿ ಯಾವುದಾದರೂ ಒಂದನ್ನು ಚೆನ್ನಾಗಿ ಕುದಿಸಿ ಪ್ರಾಶನ ಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೂ ಈಗಲೂ ಪರಲೋಕದಲ್ಲಿ ಪರಿಶುದ್ಧನಾಗುತ್ತಾನೆ.
ಮರುಪ್ರಪಾತಂ ಪ್ರಪತನ್ ಜ್ವಲನಂ ವಾ ಸಮಾವಿಶನ್ |
ಮಹಾಪ್ರಸ್ಥಾನಮಾತಿಷ್ಠನ್ ಮುಚ್ಯತೇ ಸರ್ವಕಿಲ್ಬಿಷೈಃ ॥17॥
ಮರುಭೂಮಿಯಲ್ಲಿರುವ ಪರ್ವತದ ತುದಿಯಿಂದ ಪ್ರಪಾತಕ್ಕೆ ತಲೆಕೆಳಗಾಗಿ ಬೀಳಬೇಕು. ಜ್ವಲಿಸುತ್ತಿರುವ ಅಗ್ನಿಯನ್ನು ಪ್ರವೇಶ ಮಾಡಬೇಕು. ಮರಣದೀಕ್ಷೆ- ಯನ್ನು ಕೈಗೊಂಡು ಹಿಮಾಲಯದ ಕಡೆ ಮಹಾಪ್ರಸ್ಥಾನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಎಲ್ಲ ಬಗೆಯ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಟಿಪ್ಪಣಿ - ಮರುಪ್ರಪಾತಮ್ ಇತ್ಯತ್ರ ಮರುಪ್ರಪಾತಂ ಮದುದೇಶಸ್ಥ- ಕೂಪಮ್ |
ಬೃಹಸ್ಪತಿಸವೇನೇಷ್ಟ್ವಾ ಸುರಾಪೋ ಬ್ರಾಹ್ಮಣಃ ಪುನಃ |
ಸಮಿತಿಂ ಬ್ರಾಹ್ಮಣೈರ್ಗಚ್ಛೇದಿತಿ ವೈ ಬ್ರಾಹ್ಮಣೀ ಶ್ರುತಿಃ ॥18॥
ಮದ್ಯಪಾನವನ್ನು ಮಾಡಿದ ಬ್ರಾಹ್ಮಣನು ಬೃಹಸ್ಪತಿಸವನ ಎಂಬ ಯಾಗವನ್ನು ಮಾಡಬೇಕು. ಆಗ ಆ ಬ್ರಾಹ್ಮಣನು ಬ್ರಾಹ್ಮಣರ ಸಭೆಗೆ ತೆರಳಲು ಅರ್ಹನಾಗುತ್ತಾನೆ.
ಭೂಮಿಪ್ರದಾನಂ ಕುರ್ಯಾದ್ ಯಃ ಸುರಾಂ ಪೀತ್ವಾ ವಿಮತ್ಸರಃ |
ಪುನರ್ನಚ ಪಿಬೇದ್ ರಾಜನ್ ಸಂಸ್ಕೃತಃ ಶುದ್ಧ್ಯೇತೇ ನರಃ ॥19॥
ಮದ್ಯಪಾನವನ್ನು ಮಾಡಿದ ವ್ಯಕ್ತಿಯು ಮಾತ್ಸರ್ಯರಹಿತನಾಗಿ, ಸತ್ಪಾತ್ರರಿಗೆ ಭೂದಾನವನ್ನು ಮಾಡಬೇಕು. ಮತ್ತೆಂದೂ ಸುರಾಪಾನವನ್ನು ಮಾಡಬಾರದು. ಹೀಗೆ ಸಂಸ್ಕೃತನಾಗಿ ಪರಿಶುದ್ಧಿಯನ್ನು ಹೊಂದಬೇಕು.
ಗುರುತಲ್ಪೀ ಶಿಲಾಂ ತಪ್ತಾಮಾಯಸೀಮಧಿಸಂವಿಶೇತ್ |
ಪಾಣಾವಾಧಾಯ ವಾ ಶೇಫಂ ಪ್ರವ್ರಜೇದೂರ್ಧ್ವದರ್ಶನಃ ॥20॥
ಯಾವ ಮನುಷ್ಯನು ಗುರುಪತ್ನಿಯ ಸಮಾಗಮವನ್ನು ಮಾಡಿರುತ್ತಾನೋ, ಅಂಥವನು ಕೆಂಪಗೆ ಕಾದಿರುವ ಲೋಹಮಯವಾದ ಶಿಲೆಯ ಮೇಲೆ ಮಲಗಿ- ಕೊಳ್ಳಬೇಕು. ಅಥವಾ ತನ್ನ ಜನನೇಂದ್ರಿಯವನ್ನು ತುಂಡರಿಸಿ ತಲೆಯೆತ್ತಿಕೊಂಡು ಆಕಾಶವನ್ನು ನೋಡುತ್ತಾ ಪ್ರಯಾಣ ಮಾಡಬೇಕು.
ಶರೀರಸ್ಯ ವಿಮೋಕ್ಷೇಣ ಮುಚ್ಯತೇ ಕರ್ಮಣೋಽಶುಭಾತ್ |
ಕರ್ಮಭ್ಯೋ ವಿಪ್ರಮುಚ್ಯಂತೇ ಯತ್ತಾಃ ಸಂವತ್ಸರಂ ಸ್ತ್ರಿಯಃ ॥21॥

ಹೀಗೆ ಅನೇಕ ಶಾರೀರಿಕವಾದ ಶಿಕ್ಷೆಯನ್ನು ನೀಡುತ್ತಾ ಶರೀರವನ್ನು ಪರಿತ್ಯಾಗ ಮಾಡಿದರೆ ಮಾತ್ರ ಆ ಗುರುತಲ್ಪಗನ ಮಹಾಪಾಪವು ಪರಿಹಾರವಾಗುತ್ತದೆ. ಯಾವ ಸ್ತ್ರೀಯು ಗುರುತಲ್ಪಗಮನಕ್ಕೆ ಭಾಗಿಯಾಗಿರುತ್ತಾಳೋ, ಅವಳು ಒಂದು ವರ್ಷಗಳ ಕಾಲ ಜಿತೇಂದ್ರಿಯಳಾಗಿದ್ದರೆ, ಆ ಪಾಪದಿಂದ ವಿನಿರ್ಮುಕ್ತಳಾಗುತ್ತಾಳೆ.

ಮಹಾವ್ರತಂ ಚರೇದ್ ಯಸ್ತು ದದ್ಯಾತ್ ಸರ್ವಸ್ವಮೇವ ತು |
ಗುರ್ವರ್ಥೇ ವಾ ಹತೋ ಯುದ್ಧೇ ಸ ಮುಚ್ಯೇತ್ ಕರ್ಮಣೋಽಶುಭಾತ್ ॥22॥

ಒಂದು ತಿಂಗಳ ಕಾಲ ನೀರನ್ನೂ ಸಹ ಕುಡಿಯದೇ ಉಪವಾಸದಲ್ಲಿ ಮಹಾ- ವ್ರತವನ್ನು ಆಚರಣೆ ಮಾಡಬೇಕು. ತನ್ನಲ್ಲಿರುವ ಸರ್ವಸ್ವವನ್ನು ಸದ್ಬ್ರಾಹ್ಮಣನಿಗೆ ದಾನ ಮಾಡಬೇಕು. ಮತ್ತು ಗುರುವಿಗೋಸ್ಕರ ಯುದ್ಧದಲ್ಲಿ ಪ್ರಾಣವನ್ನು ಪರಿತ್ಯಾಗ ಮಾಡಿ ತಾನು ಮಾಡಿದ ಅಶುಭಕರ್ಮದಿಂದ ವಿಮುಕ್ತನಾಗಬೇಕು.

ಅನೃತೇನೋಪಚರ್ತಾ ಚ ಪ್ರತಿರೋದ್ಧಾ ಗುರೋಸ್ತಥಾ |
ಉಪಹೃತ್ಯ ಪ್ರಿಯಂ ತಸ್ಮೈ ತಸ್ಮಾತ್ ಪಾಪಾತ್ ಪ್ರಮುಚ್ಯತೇ ॥23॥

ಯಾರು ಸುಳ್ಳನ್ನು ಹೇಳಿ, ಗುರುವಿನ ಉಪಸತ್ತಿಯನ್ನು ಮಾಡುತ್ತಾನೋ, ಗುರುವಿಗೆ ವಿರುದ್ಧವಾಗಿ ನಡೆದುಕೊಳ್ಳುತ್ತಾನೋ, ಅಂಥವನಿಗೂ ಪಾಪವು ಬರುತ್ತದೆ. ಅದರ ಪರಿಹಾರಕ್ಕಾಗಿ ಗುರುವಿಗೆ ಯಾವ ವಸ್ತುವನ್ನು ಕೊಡುವುದರಿಂದ ಸಂತೋಷವಾಗುತ್ತದೋ, ಆ ವಸ್ತುವನ್ನು ಕೊಟ್ಟು ಪ್ರಸನ್ನಗೊಳಿಸಬೇಕು.

ಅವಕೀರ್ಣಿನಿಮಿತ್ತಂ ತು ಬ್ರಹ್ಮಹತ್ಯಾವ್ರತಂ ಚರೇತ್ |
ಖರಚರ್ಮವಾಸಾಃ ಷಣ್ಮಾಸಂ ತಥಾ ಮುಚ್ಯೇತ ಕಿಲ್ಬಿಷಾತ್ ॥24॥

ಬ್ರಹ್ಮಚರ್ಯ ವ್ರತದಿಂದ ಯಾರು ಭ್ರಷ್ಟನಾಗಿರುತ್ತಾನೋ, ಅಂಥವನು ಮಹಾ- ಪಾಪಿಯಾಗುತ್ತಾನೆ. ಅಂಥವನು ತಾನು ಮಾಡಿದ ಪಾಪಪರಿಹಾರಕ್ಕೆ ಬ್ರಹ್ಮಹತ್ಯಾ ಪಾಪದ ನಿರಸನಕ್ಕೆ ಹೇಳಿರುವ ವ್ರತವನ್ನೇ ಮಾಡಬೇಕು. ಮತ್ತು ಕತ್ತೆಯ ಚರ್ಮವನ್ನು ಹೊದ್ದುಕೊಂಡಿರಬೇಕು. ಹೀಗೆ ಆರುತಿಂಗಳು ಕಾಲ ಮಾಡುವು- ದರಿಂದ ಬ್ರಹ್ಮಚರ್ಯವ್ರತಭಂಗದಿಂದ ಉಂಟಾದ ಪಾಪವು ಪರಿಹಾರವಾಗುತ್ತದೆ.

ಸ್ತೇಯಂ ತು ಯಸ್ಯಾಪಹರೇತ್ ತಸ್ಮೈ ದದ್ಯಾತ್ ಸಮಂ ವಸು |
ವಿವಿಧೇನಾಭ್ಯುಪಾಯೇನ ತೇನ ಮುಚ್ಯೇತ ಕಿಲ್ಬಿಷಾತ್ ॥25॥

ಯಾರು ಪರಸ್ವವನ್ನು ಅಪಹರಣ ಮಾಡಿರುತ್ತಾನೋ, ಅವನು ಅದಕ್ಕೆ ಸಮಾನವಾದ ವಸ್ತುವನ್ನು ತಂದು ಅವನಿಗೆ ನೀಡಬೇಕು. ಅನೇಕ ಬಗೆಯಿಂದ ಅವನನ್ನು ಸಂತೋಷಗೊಳಿಸಬೇಕು. ಹೀಗೆ ಮಾಡುವುದರಿಂದ ಪರಸ್ವಾಪಹರಣದ ದೋಷವು ಪರಿಹಾರವಾಗುತ್ತದೆ.

ಕೃಚ್ಛ್ರಾದ್ ದ್ವಾದಶರಾತ್ರೇಣ ಸಂಯತಾತ್ಮಾ ವ್ರತೇ ಸ್ಥಿತಃ |
ಪರಿವೇತ್ತಾ ಭವೇತ್ ಪೂತಃ ಪರಿವಿತ್ತಿಶ್ಚ ಭಾರತ ॥26॥

ಅಣ್ಣನು ಮದುವೆಯಾಗುವ ಮೊದಲೇ ತಮ್ಮನು ಮದುವೆಯಾದರೆ ಪರಿವೇತ್ತಾ ಎಂದು ಕರೆಸಿಕೊಳ್ಳುತ್ತಾನೆ. ಇಂಥವನು ಹನ್ನೆರಡು ರಾತ್ರಿಗಳ ಪರ್ಯಂತವಾಗಿ ಕೃಚ್ಛ್ರವ್ರತವನ್ನು ಆಚರಣೆ ಮಾಡುವುದರಿಂದ ಪರಿಶುದ್ಧನಾಗುತ್ತಾನೆ. ಅವನ ಹೆಂಡತಿಯಾದ ಪರಿವಿತ್ತಿಗೂ ಇದೇ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.

ಟಿಪ್ಪಣಿ - ಕೃಚ್ಛ್ರಾದ್ ದ್ವಾದಶರಾತ್ರೇಣ ಇತ್ಯತ್ರ ಲ್ಯಬ್ಲೋಪನಿಮಿತ್ತಾ ಪಂಚಮೀ | ಕೃಚ್ಛ್ರಾತ್ ಕೃಚ್ಛ್ರವ್ರತಂ ಸಂಪಾದ್ಯ ॥

ನಿವೇಶ್ಯಸ್ತು ಭವೇತ್ತೇನ ಸದಾ ತಾರಯಿತಾ ಪಿತೄನ್ |
ನತು ಸ್ತ್ರಿಯಾ ಭವೇತ್ ದೋಷೋ ನತು ಸಾ ತೇನ ಲಿಪ್ಯತೇ ॥27॥

ನಿರಂತರವಾಗಿ ಪಿತೃಗಳನ್ನು ಸಂತೋಷಪಡಿಸುವ ಅಣ್ಣನು ತಮ್ಮನ ವಿವಾಹವಾದ ಮೇಲೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ವಿವಾಹವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ಅಣ್ಣನ ಹೆಂಡತಿಗೆ ಯಾವುದೇ ದೋಷವು ತಟ್ಟುವುದಿಲ್ಲ. ಮತ್ತು ಯಾವುದೇ ಬಗೆಯ ಪಾಪಭಾಜನಳೂ ಆಗುವುದಿಲ್ಲ.

ಟಿಪ್ಪಣಿ - ನಿವೇಶ್ಯಸ್ತು ಭವೇತ್ ತೇನ ಸದಾ ಇತ್ಯತ್ರ ಪ್ರಾಯಶ್ಚಿತ್ತೇನ ನಿವೇಶ್ಯಃ ನಿವೇಶನಂ ಗೃಹಂ ಕೃತ್ವಾ ಸ್ಥಾತುಂ ಯೋಗ್ಯಃ |

ಭೋಜನಂ ಹ್ಯಂತರಾ ಶುದ್ಧಂ ಚಾತುರ್ಮಾಸ್ಯೇ ವಿಧೀಯತೇ |
ಸ್ತ್ರಿಯಸ್ತೇನ ವಿಶುದ್ಧ್ಯಂತಿ ಇತಿ ಧರ್ಮವಿದೋ ವಿದುಃ ॥28॥

ಚಾತುರ್ಮಾಸ್ಯಕಾಲದಲ್ಲಿ ಒಂದು ದಿನ ಊಟ ಮಾಡಬೇಕು. ಮತ್ತೊಂದು ದಿನ ಉಪವಾಸ ಮಾಡಬೇಕು. ಹೀಗೆ ಧಾರಣೆಪಾರಣೆ ವ್ರತವನ್ನು ಆಚರಣೆ ಮಾಡುವುದರಿಂದ ಸ್ತ್ರೀಯರು ಪರಿಶುದ್ಧರಾಗುತ್ತಾರೆ. ಈ ವ್ರತವನ್ನು ಧರ್ಮಜ್ಞರು ತಿಳಿಸಿದ್ದಾರೆ.

ಟಿಪ್ಪಣಿ - ಭೋಜನಂ ಹ್ಯಂತರಾ ಇತ್ಯತ್ರ ಭೋಜನಂ ಅಂತರಾ ವಿನಾ|

ಸ್ತ್ರಿಯಸತತ್ವಶಂಕಿತಾಃ ಪಾಪೈರ್ನೋಪಗಮ್ಯಾ ಹಿ ಜಾನತಾ |
ರಜಸಾ ತಾ ವಿಶುದ್ಧ್ಯಂತೇ ಭಸ್ಮನಾ ಭಾಜನಂ ಯಥಾ ॥29॥

ಒಂದು ವೇಳೆ ಪತ್ನಿಯು ವ್ಯಭಿಚಾರಿಯಾಗಿದ್ದಾಳೆ ಎಂಬ ಶಂಕೆಯು ಉಂಟಾದರೆ, ಪತಿಯಾದವನು ಅವಳು ರಜಸ್ವಲೆಯಾಗುವ ತನಕ ಸಮಾಗಮವನ್ನು ಮಾಡ- ಬಾರದು. ಭಸ್ಮಲೇಪನವನ್ನು ಮಾಡುವುದರಿಂದ ಪಾತ್ರೆಯು ಹೇಗೆ ಶುದ್ಧವಾಗು- ತ್ತದೋ, ಅದರಂತೆ ಸ್ತ್ರೀಯರು ರಜೋದರ್ಶನದಿಂದ ಪರಿಶುದ್ಧರಾಗುತ್ತಾರೆ.

ಟಿಪ್ಪಣಿ - ಪಾಪೇನೋಪಗಮ್ಯ ವಿಜಾನತೀಃ ಇತ್ಯತ್ರ ಪಾಪೇನ ಪಾಪಿಷ್ಠೇನ ಜಾರಾದಿನಾ ಉಪಗಮ್ಯ ಕಾಪಟ್ಯೇನ ಬಲೇನ ವಾ ಉಪಾಗಮ್ಯ |

ಸ್ತ್ರೀಯರು ಪರಪುರುಷರನ್ನು ಸಂಪರ್ಕ ಮಾಡಬಹುದು. ರಜೋದರ್ಶನದ ನಂತರ ಅವರು ಶುದ್ಧರಾಗುತ್ತಾರೆ ಎಂಬುದು ಇದರ ಅಭಿಪ್ರಾಯವಲ್ಲ. ಪುರುಷನು ಹೇಗೆ ಪರಸ್ತ್ರೀ ಸಂಪರ್ಕವನ್ನು ಮಾಡಿದರೆ ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದಷ್ಟೇ

ಪರಿಶುದ್ಧನಾಗುತ್ತಾನೋ, ಸ್ತ್ರೀಯೂ ಕೂಡ ಅಷ್ಟೇ ಕಠಿಣವ್ರತದ ಅನುಸರಣೆಯಿಂದಷ್ಟೇ ಪರಿಶುದ್ಧಳಾಗುತ್ತಾಳೆ. ಒಂದು ವೇಳೆ ಸ್ತ್ರೀ ಮತ್ತೊಬ್ಬ  ಪುರುಷನ ಸಂಪರ್ಕವನ್ನು ಮಾಡಿದ್ದಾಳೆಯೇ? ಇಲ್ಲವೇ? ಎಂಬ ಸಂಶಯವು ಬಂದಾಗ ರಜಸ್ವಲೆಯಾದ ನಂತರ ತನ್ನ ಸಂಶಯವನ್ನು ಪರಿಹಾರ ಮಾಡಿ- ಕೊಳ್ಳಬೇಕು. ರಜಸ್ವಲೆಯಾಗುವುದರಿಂದ ಸ್ತ್ರೀಯು ಪರಿಶುದ್ಧಳಾಗಿದ್ದಾಳೆ ಎಂದು ಭಾವಿಸಬೇಕು ಎಂಬುದು ಈ ಶ್ಲೋಕದ ಭಾವವಾಗಿದೆ. ರಜಸ್ವಲೆಯಾಗದಿದ್ದರೆ ಅವಳು ಪತಿತಳಾದ್ದರಿಂದ ಪಾಪಭಾಜನಳಾಗಿದ್ದಾಳೆಂದು ತಿಳಿಯಬೇಕು.
ಪಾದಜೋಚ್ಛಿಷ್ಟಕಾಂಸ್ಯಂ ಚ ಗವಾಘ್ರಾತಮಥಾಪಿ ವಾ |
ಗಂಡೂಷೋಚ್ಛಿಷ್ಟಮಪಿ ವಾ ವಿಶುದ್ಧ್ಯೇದ್ ದಶಭಿಸ್ತು ತತ್      ॥30॥
ಕಂಚಿನ ಪಾತ್ರೆಗೆ ಅಂತ್ಯಜನ ಎಂಜಲು ಸಂಪರ್ಕವಾದರೆ ಹಸು ಮೂಸಿದರೆ ಕಂಚಿನ ಪಾತ್ರೆಯಲ್ಲಿ ಬಾಯಿಮುಕ್ಕಳಿಸಿದರೆ ಹತ್ತು ಬಗೆಯಲ್ಲಿ ಅದನ್ನು ಪರಿಶುದ್ಧ ಮಾಡಬೇಕು.
ಟಿಪ್ಪಣಿ - ಹಸುವಿನ ಬಾಲದಲ್ಲಿ ದೇವತೆಗಳ ಸಾನ್ನಿಧ್ಯವಿರುತ್ತದೆ. ಆದರೆ ಅದು ತಿಂದುಳಿದದ್ದು ಎಂಜಲು ಎಂದೇ ಭಾವಿಸಬೇಕು. ಹತ್ತು ಬಗೆಯಲ್ಲಿ ಕಂಚಿನ ಪಾತ್ರೆಯ ಶುದ್ಧಿಯನ್ನು ತಿಳಿಸುತ್ತಾರೆ. ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ, ಮಣ್ಣು, ನೀರು, ಭಸ್ಮ, ಹುಳಿ, ಅಗ್ನಿ ಈ ಹತ್ತು ಪದಾರ್ಥಗಳು ಎಂದು.
ಚತುಷ್ಪಾತ್ ಸಕಲೋ ಧರ್ಮೋ ಬ್ರಾಹ್ಮಣಾನಾಂ ವಿಧೀಯತೇ |
ಪಾದಾವಕೃಷ್ಟೋ ರಾಜನ್ಯೇ ತಥಾ ಧರ್ಮೋ ವಿಧೀಯತೇ       ॥31॥
ತಥೈವ ವೈಶ್ಯೇ ಚ ಶೂದ್ರೇ ಚ ಪಾದಃ ಪಾದೋ ವಿಧೀಯತೇ |
ಬ್ರಾಹ್ಮಣನು ನಾಕುಪಾದಗಳ ಧರ್ಮವನ್ನು ಆಚರಿಸಬೇಕು. ಕ್ಷತ್ರಿಯನು ಮೂರು ಪಾದಗಳ ಧರ್ಮವನ್ನು ಆಚರಿಸಬೇಕು. ವೈಶ್ಯನು ಎರಡು ಪಾದಗಳ ಧರ್ಮವನ್ನು ಆಚರಿಸಬೇಕು. ಶೂದ್ರನು ಒಂದು ಪಾದದ ಧರ್ಮವನ್ನು ಆಚರಿಸಬೇಕು.
ಟಿಪ್ಪಣಿ - ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಷಟ್ಕರ್ಮಗಳನ್ನು ಬ್ರಾಹ್ಮಣನು ಆಚರಿಸಬೇಕು. ಅಧ್ಯಯನ, ದಾನ, ಯಜನ  ಎಂಬ ಮೂರು ಕರ್ಮಗಳನ್ನು ಕ್ಷತ್ರಿಯರು ಹಾಗೂ ವೈಶ್ಯರು ಆಚರಿಸಬೇಕು. ಶೂದ್ರನು  ಉತ್ತಮರ ಸೇವೆ ಎಂಬ ಒಂದು ಕರ್ಮವನ್ನಷ್ಟೇ ಆಚರಿಸಬೇಕು.
ವಿದ್ಯಾದೇವಂ ವಿಧೇನ್ಯೈಷಾಂ ಗುರುಲಾಘವನಿಶ್ಚಯಮ್       ॥32॥
ತಿರ್ಯಗ್ಯೋನಿವಧಂ ಕೃತ್ವಾ ದ್ರುಮಾಶ್ಛಿತ್ತ್ವೇತರಾನ್ ಬಹೂನ್ |
ತ್ರಿರಾತ್ರಂ ವಾಯುಭಕ್ಷಃ ಸ್ಯಾತ್ ಕರ್ಮ ಚ ಪ್ರಥಯೇನ್ನರಃ       ॥33॥
ಹೀಗೆ ಪಾಪಕರ್ಮಗಳ ಅಲ್ಪತ್ವ ಹಾಗೂ ಮಹತ್ವಗಳನ್ನು ನಿಶ್ಚಯಿಸಿ, ಪ್ರಾಯಶ್ಚಿತ್ತವನ್ನು ಎಷ್ಟು ಆಚರಿಸಬೇಕೆಂಬುದನ್ನು ಮಹಾತ್ಮರ ಮೂಲಕ ದೃಢ- ಪಡಿಸಿಕೊಳ್ಳಬೇಕು. ಪಾಪವು ಗುರುತರವಾಗಿದ್ದರೆ ಒಂದು ವರ್ಷ ಸಂಪೂಣವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅಲ್ಪವಾಗಿದ್ದರೆ, ಮೂರು ದಿವಸಗಳ ಅನುಷ್ಠಾನದಿಂದಲೇ ಪರಿಹಾರವಾಗುತ್ತದೆ. ಪಶುಪಕ್ಷಿಗಳನ್ನು ಸಂಹರಿಸಿದಾಗ ಬರುವ ಪಾಪದ ಪ್ರಾಯಶ್ಚಿತ್ತಕ್ಕೆ ಮೂರು ರಾತ್ರಿಗಳ ತನಕ ವಾಯುಭಕ್ಷಕನಾಗಿ ತಾನು ಮಾಡಿದ ಪಾಪವನ್ನು ಎಲ್ಲರ ಬಳಿ ಹೇಳಿಕೊಳ್ಳುತ್ತಾ ಇರಬೇಕು. ಆಗ ಸಂಹಾರ ಮಾಡಿದ ಪಾಪವು ವೃಕ್ಷಗಳನ್ನು ಕತ್ತರಿಸಿದ ಪಾಪವು ಪರಿಹಾರವಾಗುತ್ತದೆ.
ಅಗಮ್ಯಾಗಮನೇ ರಾಜನ್ ಪ್ರಾಯಶ್ಚಿತ್ತಂ ವಿಧೀಯತೇ |
ಆರ್ದ್ರವಸ್ತ್ರೇಣ ಷಣ್ಮಾಸಂ ವಿಹಾರ್ಯಂ ಭಸ್ಮಶಾಯಿನಾ       ॥34॥
ಧರ್ಮರಾಜನೇ! ಪರಸ್ತ್ರೀಸಂಗವನ್ನು ಮಾಡಿದರೆ, ಹೀಗೆ ಪ್ರಾಯಶ್ಚಿತ್ತವು ವಿಹಿತವಾಗಿದೆ -ಒದ್ದೆ ಬಟ್ಟೆಯನ್ನು ಉಟ್ಟುಕೊಂಡು, ಆರು ತಿಂಗಳ ಕಾಲ ಸಂಚಾರ ಮಾಡುತ್ತಲೇ ಇರಬೇಕು. ರಾತ್ರಿಯ ಹೊತ್ತು, ಬೂದಿಯ ಮೇಲೆ ಮಲಗಿಕೊಳ್ಳ- ಬೇಕು.
ಏಷ ಏವ ತು ಸರ್ವೇಷಾಮಕಾರ್ಯಾಣಾಂ ವಿಧಿರ್ಭವೇತ್ |
ಬ್ರಾಹ್ಮಣೋಕ್ತೇನ ವಿಧಿನಾ ದೃಷ್ಟಾಂತಾಗಮಹೇತುಭಿಃ       ॥35॥
ಇದೇ ಪ್ರಾಯಶ್ಚಿತ್ತವು ಪ್ರತಿಯೊಬ್ಬರಿಗೂ ಹೇಳಲ್ಪಟ್ಟಿದೆ. ಮಾಡಬಾರದ ಕೆಲಸಗಳನ್ನು ಎಸಗಿದರೆ, ಅದರಿಂದ ಉಂಟಾಗುವ ಎಲ್ಲಾ ಬಗೆಯ ಪಾಪಗಳಿಗೆ ಇದೇ ಪ್ರಾಯಶ್ಚಿತ್ತ  ವಿಧಿಸಲ್ಪಟ್ಟಿದೆ. ವೇದಭಾಗವೆನಿಸಿದ ಬ್ರಾಹ್ಮಣದಲ್ಲಿ ಅನೇಕ ದೃಷ್ಟಾಂತ- ಗಳಿಂದ ಕಾರಣಗಳನ್ನು ನೀಡುವ ಮೂಲಕ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.
ಸಾವಿತ್ರೀಮಪ್ಯಧೀಯಾನಃ ಶುಚೌ ದೇಶೇ ಮಿತಾಶನಃ |
ಅಹಿಂಸೋಽಮಂದಕೋಽಜಲ್ಪನ್ ಮುಚ್ಯತೇ ಸರ್ವಕಿಲ್ಬಿಷೈಃ    ॥36॥
ಯಾರು ಪವಿತ್ರವಾದ ಸ್ಥಳದಲ್ಲಿ ಕುಳಿತು, ಅಲ್ಪವಾದ ಆಹಾರವನ್ನು ತೆಗೆದು- ಕೊಳ್ಳುತ್ತಾ, ಹರಿಧ್ಯಾನರತನಾಗುತ್ತಾನೋ, ಅಹಿಂಸಾವ್ರತವನ್ನು ಕೈಗೊಳ್ಳುತ್ತಾನೋ, ರಾಗದ್ವೇಷ-ಮಾನ-ಅಪಮಾನ ಮೊದಲಾದವುಗಳನ್ನು ಬಿಡುತ್ತಾನೋ, ಮೌನಿ- ಯಾಗಿರುತ್ತಾನೋ, ಗಾಯತ್ರೀಮಂತ್ರವನ್ನು ನಿರಂತರ ಜಪಿಸುತ್ತಾನೋ, ಅಂಥವನು ಎಲ್ಲಾ ಬಗೆಯ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಅಹಃಸು ಸತತಂ ತಿಷ್ಠೇದಭ್ಯಾಕಾಶಂ ನಿಶಿ ಸ್ವಪೇತ್ |
ತ್ರಿರಹ್ನಸ್ತ್ರಿರ್ನಿಶಾಯಾಶ್ಚ ಸವಾಸಾ ಜಲಮಾವಿಶೇತ್       ॥37॥
ತಿಳಿಯದೇ ಮಾಡಿದ ಪಾಪಗಳ ಪ್ರಾಯಶ್ಚಿತ್ತಕ್ಕೆ ಈ ವ್ರತವನ್ನು ಆಚರಿಸಬೇಕು - ಹಗಲಿನಲ್ಲಿ ನಿರಂತರ ನಿಂತುಕೊಂಡಿರಬೇಕು. ಕುಳಿತುಕೊಳ್ಳಬಾರದು. ರಾತ್ರಿಯ ಕಾಲದಲ್ಲಿ ಆಕಾಶವನ್ನೇ ಹೊದಿಕೆಯನ್ನಾಗಿ ಮಾಡಿಕೊಂಡು ಮಲಗಿಕೊಳ್ಳಬೇಕು. ಮೂರು ಹಗಲು, ಮೂರು ರಾತ್ರಿ ಉಟ್ಟಬಟ್ಟೆಯಲ್ಲಿಯೇ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು. ಮತ್ತೊಬ್ಬರ ಜೊತೆ ಸಂಭಾಷಣೆಯನ್ನು ಮಾಡಬಾರದು.
ಸ್ತ್ರೀಶೂದ್ರಪತಿತಾಶ್ಚಾಪಿ ನಾಭಿಭಾಷೇದ್ ವ್ರತಾನ್ವಿತಃ |

ಪಾಪಾನ್ಯಜ್ಞಾನತಃ ಕೃತ್ವಾ ಮುಚ್ಯೇದೇವಂವ್ರತೋ ದ್ವಿಜಃ ॥38॥
ವ್ರತಾನುಷ್ಠಾನದಲ್ಲಿರುವನು ಸ್ತ್ರೀಯರ ಜೊತೆ ಶೂದ್ರರ ಜೊತೆ ಪತಿತರ ಜೊತೆ ಮಾತನಾಡಬಾರದು. ಆಗ ಅಜ್ಞಾನದಿಂದ ಮಾಡಿದ ದೋಷಗಳು ಪರಿಹಾರ- ವಾಗುತ್ತವೆ.
ಶುಭಾಶುಭಫಲಂ ಪ್ರೇತ್ಯ ಲಭತೇ ಭೂತಸಾಕ್ಷಿಕಃ |
ಅತಿರಿಚ್ಯೇತ ಯೋ ಯತ್ರ ತತ್ಕರ್ತಾ ಲಭತೇ ಫಲಮ್ ॥39॥
ಯಾವ ಮನುಷ್ಯನು ಶುಭಕರ್ಮಗಳನ್ನು ಹಾಗೂ ಪುಣ್ಯಕರ್ಮಗಳನ್ನು ಮಾಡು -ತ್ತಾನೋ, ಅವನು ಮಾಡುವ ಎಲ್ಲ ಕರ್ಮಗಳಿಗೆ ಪಂಚಭೂತಗಳೇ ಸಾಕ್ಷಿ- ಯಾಗಿರುತ್ತವೆ. ಮರಣವನ್ನು ಹೊಂದಿದ ಮೇಲೆ ತಾನು ಮಾಡಿದ ಕರ್ಮಗಳ ಫಲವನ್ನು ಪಡೆದುಕೊಳ್ಳುತ್ತಾನೆ.
ಟಿಪ್ಪಣಿ - ಅತಿರಿಚ್ಯೇತ ಯೋ ಯತ್ರ ಇತ್ಯತ್ರ ಅತಿರಿಚ್ಯೇತ ಪುಣ್ಯೇನ ಅತಿ- ರಿಚ್ಯೇತ |
ತಸ್ಮಾದ್ ದಾನೇನ ತಪಸಾ ಕರ್ಮಣಾ ಚ ಶುಭಂ ಫಲಮ್ |
ವರ್ಧಯೇದಶುಭಂ ಕೃತ್ವಾ ಯಥಾ ಸ್ಯಾದತಿರೇಕವಾನ್ ॥40॥
ಆದ್ದರಿಂದ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದರೆ ದಾನವನ್ನು ಮಾಡ- ಬೇಕು. ತಪಸ್ಸನ್ನು ಆಚರಿಸಬೇಕು. ಶುಭಕರ್ಮಗಳನ್ನು ನಿರಂತರ ಅಭಿವೃದ್ಧಿಪಡಿಸಿ- ಕೊಳ್ಳಬೇಕು. ಆಗ ಶುಭವಾದ ಫಲವನ್ನೇ ಪಡೆದುಕೊಳ್ಳುತ್ತಾನೆ. ಇದಕ್ಕೆ ವಿಪರೀತ- ವಾಗಿ ಅಶುಭಕರ್ಮಗಳನ್ನು ಮಾಡುತ್ತಿದ್ದರೆ ಕೆಟ್ಟಫಲಗಳನ್ನೇ ಅನುಭವಿಸುತ್ತಾನೆ.
ಕುರ್ಯಾಚ್ಛುಭಾನಿ ಕರ್ಮಾಣಿ ನಿಮಿತ್ತೇ ಪಾಪಕರ್ಮಣಾಮ್ |
ದದ್ಯಾನ್ನಿತ್ಯಂ ಚ ವಿತ್ತಾನಿ ತಥಾ ಮುಚ್ಯೇತ ಕಿಲ್ಬಿಷಾತ್ ॥41॥
ನಿರಂತರ ಶುಭಕರ್ಮಗಳನ್ನೇ ಮಾಡಬೇಕು. ಅನಿವಾರ್ಯವಾದಾಗ ಪಾಪ- ಕರ್ಮಗಳನ್ನು ಮಾಡುವ ಪ್ರಸಂಗವು ಬಂದರೆ, ಅದರ ಪ್ರಾಯಶ್ಚಿತ್ತಕ್ಕೆ ತನ್ನಲ್ಲಿರುವ ಸಂಪತ್ತನ್ನು ಧನವನ್ನು ದಾನ ಮಾಡಬೇಕು. ಆಗ ತಾನು ಮಾಡಿದ ಅಲ್ಪಪಾಪ- ದಿಂದಲೂ ವಿಮುಕ್ತನಾಗುತ್ತಾನೆ.
ಅನುರೂಪಂ ಹಿ ಪಾಪಸ್ಯ ಪ್ರಾಯಶ್ಚಿತ್ತಮುದಾಹೃತಮ್ |
ಮಹಾಪಾತಕವರ್ಜಂ ತು ಪ್ರಾಯಶ್ಚಿತ್ತಂ ವಿಧೀಯತೇ ॥42॥
ಆಯಾ ಪಾಪಕ್ಕೆ ಅನುಗುರೂಪವಾಗಿ ಪ್ರಾಯಶ್ಚಿತ್ತವನ್ನು ಶಾಸ್ತ್ರಗಳಲ್ಲಿ ಉದಾ- ಹರಿಸಲಾಗಿದೆ. ಮಹಾಪಾತಕಕ್ಕೆ ಬಿಟ್ಟು, ಉಳಿದೆಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವನ್ನು ವಿಧಿಸಲಾಗಿದೆ.
ಭಕ್ಷ್ಯಾಭಕ್ಷ್ಯೇಷು ಸರ್ವೇಷು ವಾಚ್ಯಾವಾಚ್ಯೇ ತಥೈವ ಚ |
ಅಜ್ಞಾನಜ್ಞಾನಯೋ ರಾಜನ್ ವಿಹಿತಾನ್ಯವಿಜಾನತಾ ॥43॥
ಯಾವುದನ್ನು ತಿನ್ನಬೇಕು, ಯಾವುದನ್ನು ತಿನ್ನಬಾರದು. ಹೇಗೆ ಮಾತನಾಡಬೇಕು, ಹೇಗೆ ಮಾತನಾಡಬಾರದು,ತಿಳಿಯದೇ ಮಾಡಿದ ಪಾಪಗಳಿಗೇನು ಪರಿಹಾರ? ತಿಳಿದು ಮಾಡಿದ ಪಾಪಗಳಿಗೆ ಏನು ಪರಿಹಾರ? ಧರ್ಮರಾಜನೇ ! ಇದೆಲ್ಲವನ್ನು ನಿನಗೀಗ ನಾನು ತಿಳಿಸಿರುವೆನು.
ಟಿಪ್ಪಣಿ - ವಿಹಿತಾನ್ಯವಿಜಾನತಾ ಇತ್ಯತ್ರ ಅವಿಜಾನತಾ ವಿಹಿತಾನಿ ಪಾಪಾನಿ ಲಘೂನಿ |
ಜಾನತಾ ತು ಕೃತಂ ಪಾಪಂ ಗುರು ಸರ್ವಂ ಭವತ್ಯುತ |
ಅಜ್ಞಾನಾತ್ ಸ್ಖಲಿತೇ ದೋಷೇ ಪ್ರಾಯಶ್ಚಿತ್ತಂ ವಿಧಿಯತೇ ॥44॥
ಪಾಪಕರ್ಮವು ಒಂದೇ ಆಗಿದ್ದರೂ ಅದನ್ನು ತಿಳಿದು ಮಾಡಿದರೆ ದೊಡ್ಡಮಟ್ಟ -ದಲ್ಲಿ ಪಾಪವು ಬರುತ್ತದೆ. ತಿಳಿಯದೇ ಮಾಡಿದರೆ ಅದೇ ಕರ್ಮವು ಸ್ವಲ್ಪವೇ ಪಾಪವನ್ನು ನೀಡುತ್ತದೆ. ಇದನ್ನು ಹೇಗೆ ಅವನಿಂದ ಪಾಪಕಾರ್ಯವು ನಡೆದಿದೆ ಎಂಬುದನ್ನು ವಿಚಾರ ಮಾಡಿ, ಪ್ರಾಯಶ್ಚಿತ್ತವನ್ನು ಶಾಸ್ತ್ರಗಳಲ್ಲಿ ವಿಧಾನ ಮಾಡ- ಲಾಗಿದೆ.
ಶಕ್ಯತೇ ವಿಧಿನಾ ಪಾಪಂ ಯಥೋಕ್ತೇನ ವ್ಯಪೋಹಿತುಮ್ |
ಆಸ್ತಿಕೇ ಶ್ರದ್ದಧಾನೇ ತು ವಿಧಿರೇಷ ವಿಧೀಯತೇ ॥45॥
ಧರ್ಮಶಾಸ್ತ್ರಗಳಲ್ಲಿ ವಿಧಾನ ಮಾಡಲ್ಪಟ್ಟ ಪ್ರಾಯಶ್ಚಿತ್ತಗಳ ಆಚರಣೆಯಿಂದ ಪಾಪಗಳನ್ನು ಖಂಡಿತವಾಗಲೂ ಪರಿಹಾರ ಮಾಡಿಕೊಳ್ಳಲು ಸಾಧ್ಯವಿದೆ. ಭಗವಂತ- ನನ್ನು ನಂಬಬೇಕು. ನಾನು ಪರಿಶುದ್ಧನಾಗಬೇಕೆಂಬ ದೀಕ್ಷೆಯಿರಬೇಕು. ಧರ್ಮದಲ್ಲಿ ಶ್ರದ್ಧೆಯಿರಬೇಕು. ಅಂಥವನಿಗಷ್ಟೇ ಶಾಸ್ತ್ರವು ಪ್ರಾಯಶ್ಚಿತ್ತವನ್ನು ವಿಧಾನ ಮಾಡುತ್ತದೆ.
ನಾಸ್ತಿಕಾಶ್ರದ್ದಧಾನೇಷು ಪುರುಷೇಷು ಕದಾಚನ |
ದಂಭದೋಷಪ್ರಧಾನೇಷು ವಿಧಿರೇಷ ನ ದೃಶ್ಯತೇ ॥46॥
ನಾಸ್ತಿಕರಾದವರಿಗೆ, ಶ್ರದ್ಧೆಯಿಲ್ಲದವರಿಗೆ, ಅಹಂಕಾರವುಳ್ಳವರಿಗೆ, ಕೆಟ್ಟಕೆಲಸದಲ್ಲಿ ನಿರತರಾದವರಿಗೆ ಈ ಪ್ರಾಯಶ್ಚಿತ್ತವನ್ನು ಯಾವುದೇ ಶಾಸ್ತ್ರಗಳು ಸರ್ವಥಾ ಹೇಳು- ವುದಿಲ್ಲ.
ಶಿಷ್ಟಾಚಾರಶ್ಚ ಶಿಷ್ಟಶ್ಚ ಧರ್ಮೋ ಧರ್ಮಭೃತಾಂ ವರ |
ಸೇವಿತವ್ಯೋ ನರವ್ಯಾಘ್ರ ಪ್ರೇತ್ಯ ಚೇಹ ಸುಖಾರ್ಥಿನಾ ॥47॥
ಶ್ರೇಷ್ಠನಾದ ಪುರುಷಶ್ರೇಷ್ಠನೇ! ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಯಾರು ಸುಖವನ್ನು ಇಚ್ಛಿಸುತ್ತಾನೋ, ಅಂಥವನು ಶಿಷ್ಟಾಚಾರಸಂಪ್ರದಾಯವನ್ನು ಅನುಸರಿಸಲೇ ಬೇಕು. ವೇದಗಳಲ್ಲಿ ಹೇಳಲ್ಪಟ್ಟ ಧರ್ಮವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡಬೇಕು.

ಸ ರಾಜನ್ ಮೋಕ್ಷ್ಯಸೇ ಪಾಪಾತ್ ತೇನ ಪೂರ್ವೇಣ ಹೇತುನಾ |
ತ್ರಾಣಾರ್ಥಂ ವಾ ವಧೇನ್ನೈಷಾಮಥ ವಾ ನೃಪಕರ್ಮಣಾ ॥48॥

ಧರ್ಮರಾಜನೇ ! ನೀನು ಶಿಷ್ಟಾಚಾರವನ್ನು ಅನುಸರಿಸುತ್ತಿರುವಿ. ಧರ್ಮ- ಮಾರ್ಗದಲ್ಲಿರುವಿ. ನೀನು ಮಾಡಿದ ಅಲ್ಪವಾದ ಪಾಪದಿಂದ ಖಂಡಿತವಾಗಿಯೂ ವಿಮುಕ್ತನಾಗುವಿ. ಪ್ರಾಣರಕ್ಷಣೆಗೋಸ್ಕರ ರಾಜ್ಯವನ್ನು ಪರಿತ್ಯಾಗ ಮಾಡಬೇಕೆಂಬ ನಿಶ್ಚಯವನ್ನು ಬಿಟ್ಟುಬಿಡು. ಪ್ರಾಯಶ್ಚಿತ್ತವನ್ನು ಮಾಡಿಕೋ. ದಾನ ಮಾಡುವುದರಿಂದ ಧರ್ಮದಿಂದ ಪರಿಪಾಲನೆ ಮಾಡುವಿಕೆಯಿಂದ ಕ್ಷತ್ರಿಯಧರ್ಮದ ಅನುಷ್ಠಾನ- ದಿಂದಲೂ ನೀನು ಪಾಪಗಳಿಂದಲೂ ವಿಮುಕ್ತನಾಗುವಿ.
ಅಥವಾ ತೇ ಘೃಣಾ ಕಾಚಿತ್ ಪ್ರಾಯಶ್ಚಿತ್ತಂ ಚರಿಷ್ಯಸಿ |
ಮಾ ತ್ವೇವಾನಾರ್ಯಜುಷ್ಟೇನ ಕರ್ಮಣಾ ನಿಧನಂ ಗಮಃ ॥49॥
ಒಂದುವೇಳೆ ಯುದ್ಧವೆಂಬ ಘಟನೆಯಿಂದ ನಿನ್ನ ಮನಸ್ಸಿನಲ್ಲಿ ಅನುಕಂಪವು ಉಂಟಾಗಿದ್ದರೆ, ಅಕಾರ್ಯವನ್ನು ಎಸಗಿಬಿಟ್ಟೆ, ಪಶ್ಚಾತ್ತಾಪವುಂಟಾಗಿದ್ದರೆ, ಪ್ರಾಯಶ್ಚಿತ್ತವನ್ನು ಆಚರಿಸು. ಇದನ್ನು ಬಿಟ್ಟು, ಸಂಪ್ರದಾಯವನ್ನು ಅನುಸರಿಸದ ಅನಾರ್ಯರು ತೆರಳುವ ಮಾರ್ಗದಲ್ಲಿ ತೆರಳಬೇಡ. ದೈನ್ಯಾವಸ್ಥೆಯನ್ನು ಹೊಂದ- ಬೇಡ. ಆತ್ಮವಿನಾಶವನ್ನು ಮಾಡಿಕೊಳ್ಳಬೇಡ.
ಏವಮುಕ್ತೋ ಭಗವತಾ ಧರ್ಮರಾಜೋ ಯುಧಿಷ್ಠಿರಃ |
ಚಿಂತಯಿತ್ವಾ ಮುಹೂರ್ತಂ ತು ಪ್ರತ್ಯುವಾಚ ತಪೋಧನಮ್ ॥50॥
ವೈಶಂಪಾಯನರು ಜನಮೇಜಯನೇ! ಶ್ರೀವೇದವ್ಯಾಸದೇವರು ಹೀಗೆ ಯುಧಿ-ಷ್ಠಿರನಿಗೆ ಅನೇಕ ಬಗೆಯಲ್ಲಿ ಸಮಾಧಾನವನ್ನು ಮಾಡಿದರು. ಆ ಯುಧಿಷ್ಠಿರನು ಒಂದು ಮುಹೂರ್ತಗಳ ಕಾಲ ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಾ, ತಪೋ- ಧನರಾದ ಶ್ರೀವೇದವ್ಯಾಸದೇವರನ್ನು ಪುನಃ ಹೀಗೆ ವಿನಮ್ರನಾಗಿ ಪ್ರಶ್ನಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪ್ರಾಯಶ್ಚಿತ್ತೀಯೇ ಷಟ್‌ತ್ರಿಂಶೋऽಧ್ಯಾಯಃ ॥36॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿಯಿತು.
*****

॥ಶ್ರೀಮಧ್ವೇಶಾರ್ಪಣಮಸ್ತು॥
ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ
ಶ್ರೀಮನ್ಮಹಾಭಾರತೇ ಶಾಂತಿಪರ್ವಣಿ
ರಾಜಧರ್ಮಪರ್ವಣಿ
37. ಮೂವತ್ತೇಳನೆಯ ಅಧ್ಯಾಯ
ವ್ಯಾಸರಿಂದ ಯುಧಿಷ್ಠಿರನನ್ನು ಕುರಿತು ಭಕ್ಷ್ಯಾಭಕ್ಷ್ಯ,
ಪಾತ್ರಾಪಾತ್ರ ಮೊದಲಾದವುಗಳ ವಿವೇಚನೆ.
ಯುಧಿಷ್ಠಿರಃ
ಕಿಂ ಭಕ್ಷ್ಯಂ ಕಿಮಭಕ್ಷ್ಯಂ ವಾ ಕಿಂ ಚ ದೇಯಂ ಪ್ರಶಸ್ಯತೇ |
ಕಿಂಚ ಪಾತ್ರಮಪಾತ್ರಂ ವಾ ತನ್ಮೇ ಬ್ರೂಹಿ ತಪೋಧನ ॥1॥
ಯುಧಿಷ್ಠಿರನು ಹೇಳುತ್ತಾನೆ ಎಲೈ ತಪೋಧನರೇ! ಯಾವುದು ಭಕ್ಷ್ಯಮತ್ತು ಯಾವುದು ಅಭಕ್ಷ್ಯವಾಗುತ್ತದೆ. ಯಾವ ವಸ್ತುವನ್ನು ಕೊಟ್ಟರೆ ಪ್ರಶಸ್ತವಾದ ದಾನ- ವಾಗುತ್ತದೆ? ಮತ್ತು ದಾನವನ್ನು ಸ್ವೀಕರಿಸಲು ಪಾತ್ರರು ಮತ್ತು ಅಪಾತ್ರರು ಯಾರು? ಎಂಬುದನ್ನು ನನಗೆ ಹೇಳಿ.
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಿದ್ಧಾನಾಂ ಚೈವ ಸಂವಾದಂ ಮನೋಶ್ಚೈವ ಪ್ರಜಾಪತೇಃ ॥2॥
ವ್ಯಾಸರು ಹೇಳುತ್ತಾರೆ ಈ ವಿಷಯದಲ್ಲಿಯೂ ಸಹ ಪ್ರಜಾಪತಿಯಾದ ಮನುವಿಗೂ ಮತ್ತು ಸಿದ್ಧಪುರುಷರಿಗೂ ನಡೆದ ಪುರಾತನವಾದ ಈ ಸಂವಾದವನ್ನು ಹೇಳುತ್ತಾರೆ.
ಸಿದ್ಧಾಸ್ತಪೋವ್ರತಪರಾಃ ಸಮಾಗಮ್ಯ ಪುರಾ ವಿಭುಮ್ |
ಧರ್ಮಂ ಪಪ್ರಚ್ಛುರಾಸೀನಮಾದಿಕಾಲೇ ಪ್ರಜಾಪತಿಮ್ ॥3॥
ಹಿಂದೆ ಆದಿಕಾಲದಲ್ಲಿ ತಪೋವ್ರತನಿಷ್ಠರಾದ ಸಿದ್ಧರು ಪ್ರಭುವಾದ ಪ್ರಜಾಪತಿ- ಯಾದ ಮನುವಿನ ಸಮೀಪಕ್ಕೆ ಬಂದು, ಕುಳಿತಿದ್ದ ಅವನನ್ನು ಕುರಿತು ಧರ್ಮದ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದರು.
ಕಥಮನ್ನಂ ಕಥಂ ದಾನಂ ಕಥಮಧ್ಯಯನಂ ತಪಃ |
ಕಾರ್ಯಾಕಾರ್ಯಂ ಚ ನಃ ಸರ್ವಂ ಶಂಸ ವೈ ತ್ವಂ ಪ್ರಜಾಪತೇ ॥4॥
ಎಲೈ ಪ್ರಜಾಪತಿಯೇ! ಅನ್ನವು ಯಾವ ರೀತಿಯಾಗಿರಬೇಕು? ದಾನ ಅಧ್ಯಯನ ಮತ್ತು ತಪಸ್ಸುಗಳು ಯಾವ ರೀತಿಯಿರಬೇಕು? ಯಾವುದು ಕಾರ್ಯ ಮತ್ತು ಯಾವುದು ಅಕಾರ್ಯ? ಇವೆಲ್ಲವನ್ನೂ ನಮಗೆ ಹೇಳಿ.
ತೈರೇವಮುಕ್ತೋ ಭಗವಾನ್ ಮನುಃ ಸ್ವಾಯಂಭುವೋऽಬ್ರವೀತ್ |
ಶುಶ್ರೂಷಧ್ವಂ ಯಥಾವೃತ್ತಂ ಧರ್ಮಂ ವ್ಯಾಸಸಮಾಸತಃ ॥5॥
ಅವರಿಂದ ಈ ರೀತಿಯಲ್ಲಿ ಕೇಳಲ್ಪಟ್ಟ ಪೂಜ್ಯನಾದ ಸ್ವಾಯಂಭುವಮನುವು `ಸಂಕ್ಷೇಪವಿಸ್ತಾರಗಳಿಂದ ಯಥಾರ್ಥವಾದ ಧರ್ಮವನ್ನು ಮಾಡಿ' ಎಂದು ಹೇಳಿ- ದನು.
ಅನಾದೇಶೇ ಜಪೋ ಹೋಮ ಉಪವಾಸಸ್ತಥೈವ ಚ |

ಆತ್ಮಜ್ಞಾನಂ ಪುಣ್ಯನದ್ಯೋ ಯತ್ರ ಪ್ರಾಯಶ್ಚ ತತ್ಪರಾಃ ॥6॥
ಅನಾದಿಷ್ಟಂ ತಥೈತಾನಿ ಪುಣ್ಯಾನಿ ಧರಣೀಭೃತಾಮ್ |
ಇನ್ನೊಬ್ಬರಿಂದ ಧನದಾನವನ್ನು ಸ್ವೀಕರಿಸಿ, ಅವರ ಆಜ್ಞೆಯಂತೆ ಮಾಡದ ಜಪ- ಹೋಮ, ಉಪವಾಸ, ಅಧ್ಯಯನ, ಪುಣ್ಯನದೀಸ್ನಾನ ಇವುಗಳು ಪ್ರಾಯಶಃ ಧರ್ಮ -ವನ್ನು ಉಂಟು ಮಾಡುತ್ತವೆ. ಇನ್ನೊಬ್ಬರ ಪ್ರೇರಣೆಯಿಲ್ಲದೆ, ಧನದ ಆಸೆಯಿಲ್ಲದೆ ಮಾಡುವ ಇಂತಹ ಕಾರ್ಯಗಳು ಪುಣ್ಯಪ್ರದವೆನಿಸುತ್ತವೆ.
ಸುವರ್ಣಪ್ರಾಶನಮಪಿ ರತ್ನಾದಿಸ್ನಾನಮೇವ ಚ ॥7॥
ದೇವಸ್ಥಾನಾಭಿಗಮನಮಾಜ್ಯಪ್ರಾಶನಮೇವ ಚ |
ಏತಾನಿ ಮೇಧ್ಯಂ ಪುರುಷಂ ಕುರ್ವಂತ್ಯಾಶು ನ ಸಂಶಯಃ ॥8॥
ಸುವರ್ಣಪ್ರಾಶನ, ರತ್ನಾದಿಮಿಶ್ರಿತಜಲದಿಂದ ಸ್ನಾನ (ರತ್ನಾಭಿಷೇಕ), ದೇವಾ- ಲಯಗಳಿಗೆ ಹೋಗುವುದು, ಘೃತಪ್ರಾಶನ ಇವುಗಳು ಶೀಘ್ರವಾಗಿ ಪುರುಷನನ್ನು ಪವಿತ್ರೀಕರಿಸುತ್ತವೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ನ ಗರ್ವೇಣ ಭವೇತ್ ಪ್ರಾಜ್ಞಃ ಕದಾಚಿದಪಿ ಮಾನದ |
ದೀರ್ಘಮಾಯುರಥೇಚ್ಛನ್ ಹಿ ತ್ರಿರಾತ್ರಂ ಚೋಷ್ಣಪೋ ಭವೇತ್ ॥9॥
ಎಲೈ ಮಾನದನೇ! ಪ್ರಾಜ್ಞನಾದವನು ಎಂದೂ ಗರ್ವವನ್ನು ಮಾಡಬಾರದು. ದೀರ್ಘಾಯುಷ್ಯವನ್ನು ಬಯಸುವವನು ಮೂರು ದಿನಗಳ ಕಾಲದ ಉಷ್ಣಪಾನವನ್ನು ಮಾಡಬೇಕು. (ಇದಕ್ಕೆ ತಪ್ತಕೃಚ್ಛ್ರವೆಂದು ಹೆಸರು. ಮೊದಲ ಮೂರು ದಿನಗಳು ಆರು ಕುಡಿತೆಯಷ್ಟು ಬಿಸಿನೀರನ್ನು ಕುಡಿಯಬೇಕು. ಅನಂತರ ಮೂರು ದಿನಗಳು ಮೂರು ಕುಡಿತೆಯಷ್ಟು ಬಿಸಿ ಹಾಲನ್ನು ಕುಡಿಯಬೇಕು. ಅನಂತರ ಮೂರು ದಿನಗಳು ಒಂದು ಕುಡಿತೆಯಷ್ಟು ಬಿಸಿಯ ತುಪ್ಪವನ್ನು ಮಾತ್ರ ಸೇವಿಸಬೇಕು. ಅನಂತರ ಮೂರು ದಿನಗಳು ಉಪವಾಸವಿರಬೇಕು. ಇದು ತಪ್ತಕೃಚ್ಛ್ರದ ವಿಧಿಯೆಂದು ಮನುಸ್ಮೃತಿಯಲ್ಲಿ ಹೇಳಲ್ಪಟ್ಟಿದೆ).
ಅದತ್ತಸ್ಯಾನುಪಾದಾನಂ ದಾನಮಧ್ಯಯನಂ ತಪಃ |
ಅಹಿಂಸಾ ಸತ್ಯಮಕ್ರೋಧಃ ಕ್ಷಮೇಜ್ಯಾ ಧರ್ಮಲಕ್ಷಣಮ್ ॥10॥
ಇನ್ನೊಬ್ಬರು ಕೊಡದಿದ್ದ ವಸ್ತುವನ್ನು ಸ್ವೀಕರಿಸದಿರುವುದು, ದಾನ, ಅಧ್ಯಯನ, ತಪಸ್ಸು, ಅಹಿಂಸೆ, ಸತ್ಯವಚನ, ಅಕ್ರೋಧ, ಕ್ಷಮೆ, ಪೂಜೆ ಇವು ಧರ್ಮದ ಲಕ್ಷಣಗಳು.
ಸ ಏವ ಧರ್ಮಃ ಸೋಽಧರ್ಮೋಽದೇಶೇಽಕಾಲೇ ಪ್ರತಿಷ್ಠಿತಃ |
ಅದಾನಮನೃತಂ ಹಿಂಸಾ ಧರ್ಮೋ ಹ್ಯಾವಸ್ಥಿಕಃ ಸ್ಮೃತಃ ॥11॥
ಯಾವುದು ಧರ್ಮವೋ ಅದೇ ಕಾರ್ಯವನ್ನು ಅದೇಶದಲ್ಲಿ ಮತ್ತು ಅಕಾಲ- ದಲ್ಲಿ ಮಾಡಿದರೆ ಅದು ಅಧರ್ಮವಾಗುತ್ತದೆ. ಹಾಗೆಯೇ ವಿಶೇಷಸಂದರ್ಭದಲ್ಲಿ ಮಾಡಿದ ಅಧರ್ಮವೂ ಸಹ ಧರ್ಮವಾಗುತ್ತದೆ. ಅಪಾತ್ರರಿಗೆ ದಾನವನ್ನು ಮಾಡ- ದಿರುವುದು, ಬ್ರಾಹ್ಮಣರ ಹಿತದ ಸಲುವಾಗಿ ಸುಳ್ಳನ್ನು ಹೇಳುವುದು, ಮತ್ತು ಗೋವುಗಳನ್ನು ರಕ್ಷಿಸಲು ವ್ಯಾಘ್ರಾದಿಗಳ ಹತ್ಯೆ ಇವು ಅದಾನ, ಅನೃತ, ಹಿಂಸಾ ರೂಪವಾದರೂ ಧರ್ಮವಾಗುತ್ತವೆ. ಅದನ್ನು ಬಿಟ್ಟು ಬೇರೆ ಸ್ಥಳದಲ್ಲಿ ಮಾತ್ರ ಅಧರ್ಮವಾಗುತ್ತವೆ.  ಲಕ್ಷ್ಮಾಲಂಕಾರ.
ದ್ವಿವಿಧೌ ಚಾಪ್ಯುಭಾವೇತೌ ಧರ್ಮಾಧರ್ಮೌ ವಿಜಾನತಾಮ್ |
ಅಪ್ರವೃತ್ತಿಃ ಪ್ರವೃತ್ತಿಶ್ಚ ದ್ವೈವಿಧ್ಯಂ ಲೋಕವೇದಯೋಃ ॥12॥
ಜ್ಞಾನಿಗಳ ದೃಷ್ಟಿಯಲ್ಲಿ ಧರ್ಮ ಮತ್ತು ಅಧರ್ಮಗಳೆರಡೂ ಎರಡು ವಿಧ- ವಾದವುಗಳು. ಲೋಕವೇದವಿಹಿತವಾದ ಧರ್ಮವು ಪ್ರವೃತ್ತಿಧರ್ಮ ಮತ್ತು ನಿವೃತ್ತಿ- ಧರ್ಮ ಎಂದು ಎರಡು ವಿಧ. ಹಾಗೆಯೇ ಅಧರ್ಮವೂ ಸಹ ಧರ್ಮದಲ್ಲಿ ಅಪ್ರವೃತ್ತಿ ಮತ್ತು ಅಧರ್ಮದಲ್ಲಿ ಪ್ರವೃತ್ತಿ ಎಂದು ಎರಡು ವಿಧವಾದದ್ದು.
ಅಪ್ರವೃತ್ತೇರಮರ್ತ್ಯತ್ವಂ ಮರ್ತ್ಯತ್ವಂ ಕರ್ಮಣಃ ಫಲಮ್ |
ಅಶುಭಸ್ಯಾಶುಭಂ ವಿದ್ಯಾಚ್ಛುಭಸ್ಯ ಶುಭಮೇವ ಚ |
ಏತಯೋಶ್ಚೋಭಯೋಃ ಸ್ಯಾತಾಂ ಶುಭಾಶುಭತಯಾ ತಥಾ ॥13॥
ಮೋಕ್ಷವು ನಿವೃತ್ತಿಕರ್ಮಗಳ ಫಲ. ಪುನಃ ಮನುಷ್ಯಾದಿಯೋನಿಗಳು ಪ್ರವೃತ್ತಿ- ಕರ್ಮದ ಫಲ. ಅಶುಭಕರ್ಮದಿಂದ ಅಶುಭವಾದ ಫಲವುಂಟಾಗುತ್ತದೆ. ಶುಭ- ಕರ್ಮದಿಂದ ಶುಭವಾದ ಫಲವುಂಟಾಗುತ್ತದೆ ಎಂದು ತಿಳಿಯಬೇಕು. ಹೀಗೆ ಶುಭಾ- ಶುಭರೂಪವಾದ ಎರಡು ಕರ್ಮಗಳಿಗೂ ಶುಭಾಶುಭರೂಪವಾದ ಫಲವು ದೊರೆ- ಯುತ್ತದೆ.
ದೈವಂ ಚ ದೈವಯುಕ್ತಂ ಚ ಪ್ರಾಣಶ್ಚ ಪ್ರಲಯಶ್ಚ ಹ |
ಅಪೇಕ್ಷಾಪೂರ್ವಕರಣಾದಶುಭಾನಾಂ ಶುಭಂ ಫಲಮ್ ॥14॥
ದೇವಪೂಜೆ ದೇವಮಹಿಮಾಪ್ರತಿಪಾದಕವಾದ ವೇದಾದಿಗಳ ಅಧ್ಯಯನ, ಪ್ರಕೃಷ್ಟಚೇಷ್ಟಾರೂಪವಾದ ಯಜ್ಞ ಮತ್ತು ಫಲಾಪೇಕ್ಷೆಯಿಂದ ಮಾಡುವ ಯಜ್ಞದ ಪಶುಹಿಂಸಾ ಇವುಗಳನ್ನು ಫಲಾಪೇಕ್ಷೆಯಿಂದ ಮಾಡಿದರೆ ಇವು ಅಶುಭ ಕರ್ಮ- ಗಳೆನಿಸುತ್ತವೆ. ಫಲದ ಅಪೇಕ್ಷೆಯನ್ನು ತಿರಸ್ಕರಿಸಿ (ಹಿಂದೆ ಹಾಕಿ)ಅನುಷ್ಠಾನ ಮಾಡಿ- ದರೆ ಇವು ಶುಭಫಲವನ್ನು ಕೊಡುತ್ತವೆ. (ಲಕ್ಷ್ಮಾಲಂಕಾರ).
ಕ್ರೋಧಮೋಹಕೃತೇ ಚೈವ ದೃಷ್ಟಾಂತಾಗಮಹೇತುಭಿಃ |
ಶರೀರಾಣಾಮುಪಕ್ಲೇಶೋ ಮನಸಶ್ಚ ಪ್ರಿಯಾಪ್ರಿಯೇ |
ತದೌಷಧೈಶ್ಚ ಮಂತ್ರೈಶ್ಚ ಪ್ರಾಯಶ್ಚಿತ್ತೈಶ್ಚ ಶಾಮ್ಯತಿ ॥15॥
ಕ್ರೋಧಮೋಹಗಳಿಗೆ ವಶರಾಗಿ ಕರ್ಮಗಳನ್ನು ಆಚರಿಸಿ ಅವುಗಳಿಂದ ಶರೀರಕ್ಕೆ ಕ್ಲೇಶವೂ, ಮನಸ್ಸಿಗೆ ಪ್ರಿಯಾಪ್ರಿಯಗಳೂ ಉಂಟಾದರೆ ಅವುಗಳನ್ನು ಶಾಸ್ತ್ರದೃಷ್ಟವಾದ ಪರಿಹಾರಕಾರಣಗಳಾದ ಮಂತ್ರಗಳಿಂದಲೂ ಪ್ರಾಯಶ್ಚಿತ್ತಗಳಿಂದಲೂ ಮತ್ತು ಔಷಧಿ-ಗಳಿಂದಲೂ ಪರಿಹರಿಸಿಕೊಳ್ಳಬೇಕು.

ಊರ್ಧ್ವಂ ಭವತಿ ಸಂದೋಹಾದಿಹ ದೃಷ್ಟಾರ್ಥಮೇವ ಚ |
ಅಪೇಕ್ಷಾಪೂರ್ವಕರಣಾತ್ ಪ್ರಾಯಶ್ಚಿತ್ತಂ ವಿಧೀಯತೇ ॥16॥
ಧರ್ಮರೂಪವಾದ ಧೇನುವನ್ನು ಚೆನ್ನಾಗಿ ಕರೆಯುವುದರಿಂದ ಎಂದರೆ ಫಲಾ- ಪೇಕ್ಷೆಯಿಲ್ಲದೇ ಆಚರಿಸುವುದರಿಂದ ಊರ್ಧ್ವಗತಿಯುಂಟಾಗುತ್ತದೆ. ಮತ್ತು ಈ ಲೋಕದಲ್ಲಿಯೂ ದೃಷ್ಟವಾದ ಶುಭಫಲವು ದೊರೆಯುತ್ತದೆ. ಆದರೆ ಫಲಾ- ಪೇಕ್ಷೆಯಿಂದ ಮಾಡಿದರೆ ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ.
ಉಪವಾಸಮೇಕರಾತ್ರಂ ದಂಡೋತ್ಸರ್ಗೇ ನರಾಧಿಪಃ |
ವಿಶುದ್ಧ್ಯೇದಾತ್ಮಶುದ್ಧ್ಯರ್ಥಂ ತ್ರಿರಾತ್ರಂ ತು ಪುರೋಹಿತಃ ॥17॥
ರಾಜನಾದವನು ಶಿಕ್ಷೆಗೆ ಅರ್ಹನಾದವನನ್ನು ಶಿಕ್ಷಿಸದಿದ್ದರೆ ಒಂದು ರಾತ್ರಿ ಉಪವಾಸವನ್ನು ಮಾಡಿ ಶುದ್ಧನಾಗುತ್ತಾನೆ. ಆದರೆ ರಾಜಪುರೋಹಿತನು ಮಾತ್ರ ಮೂರು ದಿನ ಉಪವಾಸವನ್ನು ಮಾಡಬೇಕು. (ಲಕ್ಷ್ಮಾಲಂಕಾರ)
ಕ್ಷಯಂ ಶೋಕಂ ಪ್ರಕುರ್ವಾಣೋ ನ ಮ್ರಿಯೇತ ಯದಾ ನರಃ |
ಶಸಾತ್ರದಿಭಿರುಪಾವಿಷ್ಟಸ್ತ್ರಿರಾತ್ರಂ ತತ್ರ ನಿರ್ದಿಶೇತ್ ॥18॥
ರಾಜನು ಅಪರಾಧಿಗೆ ಮರಣದಂಡನೆಯನ್ನು ವಿಧಿಸಿ, ಶಸ್ತ್ರಘಾತಾದಿಗಳನ್ನು ಮಾಡಿದರೂ ಅಪರಾಧಿಯು ಮರಣವನ್ನು ಹೊಂದದಿದ್ದರೆ ರಾಜನು ತನ್ನ ಶುದ್ಧಿ- ಗಾಗಿ ಮೂರು ದಿನ ಉಪವಾಸವನ್ನು ಮಾಡಬೇಕು.
ಜಾತಿಶ್ರೇಣ್ಯಧಿವಾಸಾನಾಂ ಕುಲಧರ್ಮಾಂಶ್ಚ ಸರ್ವತಃ |
ವರ್ಜಯಂತಿ ಹಿ ಯೇ ಧರ್ಮಂ ತೇಷಾಂ ಧರ್ಮೋ ನ ವಿದ್ಯತೇ ॥19॥
ತಮ್ಮ ಜಾತಿಯ ತಮ್ಮ ಸಮಾನರ ತಮ್ಮ ಗೃಹದ ಮತ್ತು ತಮ್ಮ ಕುಲದ ಧರ್ಮಗಳನ್ನು ಯಾರು ತ್ಯಜಿಸುತ್ತಾರೆಯೋ ಅವರಿಗೆ ಯಾವ ಧರ್ಮವೂ ಇರುವು- ದಿಲ್ಲ.
ದಶ ವಾ ವೇದಶಾಸ್ತ್ರಜ್ಞಾಸ್ತ್ರಯೋ ವಾ ಧರ್ಮಪಾಠಕಾಃ |
ಯದ್ ಬ್ರೂಯುಃ ಕಾರ್ಯ ಉತ್ಪನ್ನೇ ಸ ಧರ್ಮೋ ಧರ್ಮಸಂಶಯೇ ॥20
ಧರ್ಮಸಂಶಯವುಂಟಾದಾಗ ವೇದಶಾಸ್ತ್ರಗಳನ್ನು ತಿಳಿದ ಹತ್ತು ವಿದ್ವಾಂಸರು ಅಥವಾ ಧರ್ಮಶಾಸ್ತ್ರವನ್ನು ತಿಳಿದ ಮೂರು ವಿದ್ವಾಂಸರು ಯಾವುದನ್ನು ಮಾಡ- ಬೇಕೆಂದು ಹೇಳುತ್ತಾರೆಯೋ ಅದೇ ಧರ್ಮವೆನಿಸುತ್ತದೆ. ಅದನ್ನು ಮಾಡಬೇಕು.
ಅರುಣಾಮೃತ್ತಿಕಾ ಚೈವ ತಥಾ ಚೈವ ಪಿಪೀಲಿಕಾಃ |
ಶ್ಲೇಷ್ಮಾತ್ಮಕಸ್ತಥಾ ವಿಪ್ರೈರಭಕ್ಷ್ಯಂ ವಿಷಮೇವ ಚ ॥21॥
ಕೆಮ್ಮಣ್ಣು, ಇರುವೆಗಳು ಬೆರೆತ ಆಹಾರ, ಚಳ್ಳೆ ಹಣ್ಣು, ಧರ್ಮಶಾಸ್ತ್ರದಲ್ಲಿ ವಿಷವೆಂದು ಪರಿಗಣಿಸಲ್ಪಟ್ಟ ಆಹಾರ ಇವುಗಳನ್ನು ಬ್ರಾಹ್ಮಣರು ತ್ಯಜಿಸಬೇಕು.
ಅಭಕ್ಷ್ಯಾ ಬ್ರಾಹ್ಮಣೈರ್ಮತ್ಸ್ಯಾಃ ಶಕಲೈರ್ಯೇ ವಿವರ್ಜಿತಾಃ |
ಚತುಷ್ಪಾತ್ ಕಚ್ಛಪಾಜ್ಞಾತೋ ಮಂಡೂಕಾ ಜಲಜಾಶ್ಚ ಯೇ ॥22॥
ಭಾಸಾ ಹಂಸಾಃ ಸುಪರ್ಣಾಶ್ಚ ಚಕ್ರವಾಕಾ ಬಕಾಃ ಪ್ಲವಾಃ |
ಕಂಕೋ ಮದ್ಗುಶ್ಚ ಗೃಧ್ರಾಶ್ಚ ಕಾಕೋಲೂಕಂ ತಥೈವ ಚ ॥23॥
ಕ್ರವ್ಯಾದಾಃ ಪಕ್ಷಿಣಃ ಸರ್ವೇ ಚತುಷ್ಪಾದಾಶ್ಚ ದಂಷ್ಟ್ರಿಣಃ |
ಯೇಷಾಂ ಚೋಭಯತೋ ದಂತಾಶ್ಚತುರ್ದಂಷ್ಟ್ರಾಂಶ್ಚ ಸರ್ವಶಃ ॥24॥
ಮುಳ್ಳಿಲ್ಲದ ಮತ್ಸ್ಯಗಳು, ಆಮೆಯ ಜಾತಿಗೆ ಸೇರಿದ ಚತುಷ್ಪಾದ ಪ್ರಾಣಿಗಳು, ಕಪ್ಪೆ ಮೊದಲಾದ ಜಲಜಾತಿಗಳು, ಹಂಸಗಳು, ಗರುಡಗಳು, ಚಕ್ರವಾಕಪಕ್ಷಿಗಳು, ಕೊಕ್ಕರೆಗಳು, ಭಾಸಪಕ್ಷಿಗಳು, ಗಿಡುಗಗಳು, ಕಂಕಪಕ್ಷಿಗಳು, ನೀರು ಕಾಗೆಗಳು, ಹದ್ದುಗಳು, ಕಾಗೆಗಳು, ಗೂಬೆಗಳು, ಮಾಂಸವನ್ನು ತಿನ್ನುವ ಎಲ್ಲ ಪಕ್ಷಿಗಳು, ನಾಲ್ಕು ಪಾದಗಳನ್ನು ಹೊಂದಿದ ಕೋರೆದಾಡೆ ಉಳ್ಳ ಪ್ರಾಣಿಗಳು, ಎರಡು ಸಾಲು ದಂತವಿರುವ ಪ್ರಾಣಿಗಳು, ನಾಲ್ಕು ಕೋರೆದಾಡೆ ಉಳ್ಳ ಪ್ರಾಣಿಗಳು, ಇವುಗಳಲ್ಲಿ ಯಾವುದನ್ನೂ ಬ್ರಾಹ್ಮಣರು ತಿನ್ನಬಾರದು.
ಏಡಕಾಶ್ವ ಖರೋಷ್ಟ್ರೀಣಾಂ ಸೂತಿಕಾನಾಂ ಗವಾಮಪಿ |
ಮಾನುಷೀಣಾಂ ಮೃಗೀಣಾಂ ಚ ನ ಪಿಬೇದ್ ಬ್ರಾಹ್ಮಣಃ ಪಯಃ ॥25॥
ಆಡು, ಕುದುರೆ, ಕತ್ತೆ, ಒಂಟೆ, ಆಗ ತಾನೇ ಕರುವನ್ನು ಹಾಕಿದ ಗೋವುಗಳು, ಮನುಷ್ಯರು, ಜಿಂಕೆಗಳು ಇವುಗಳ ಹಾಲನ್ನು ಬ್ರಾಹ್ಮಣರು ಕುಡಿಯಬಾರದು.
ಪ್ರೇತಾನ್ನಂ ಸೂತಿಕಾನ್ನಂ ಚ ಯಚ್ಚ ಕಿಂಚಿದನಿರ್ದಶಮ್ |
ಅಭೋಜ್ಯಂ ಚಾಪ್ಯಪೇಯಂ ಚ ಧೇನ್ವಾ ದುಗ್ಧಮನಿರ್ದಶಮ್ ॥26॥
ಹತ್ತು ದಿನ ಕಳೆಯದಿದ್ದ ಮೃತರ ಮನೆಯ ಅನ್ನ, ಜಾತಾಶೌಚವಿರುವ ಮನೆಯವರ ಅನ್ನ ಇವುಗಳನ್ನು ತಿನ್ನಬಾರದು. ಹಸುವು ಕರುವನ್ನು ಹಾಕಿದ ಮೇಲೆ ಹತ್ತು ದಿನ ಕಳೆಯುವವರೆಗೆ ಅದರ ಹಾಲನ್ನು ಕುಡಿಯಬಾರದು.
ರಾಜಾನ್ನಂ ತೇಜ ಆದತ್ತೇ ಶೂದ್ರಾನ್ನಂ ಬ್ರಹ್ಮವರ್ಚಸಮ್ |
ಆಯುಃ ಸುವರ್ಣಕಾರಾನ್ನಮವೀರಾಯಾಶ್ಚ ಯೋಷಿತಃ ॥27॥
ರಾಜಾನ್ನವು ತೇಜಸ್ಸನ್ನು ನಾಶ ಮಾಡುತ್ತದೆ. ಶೂದ್ರಾನ್ನವು ಬ್ರಹ್ಮವರ್ಚಸ್ಸನ್ನು ನಾಶ ಮಾಡುತ್ತದೆ. ಅಕ್ಕಸಾಲಿಗನ ಮತ್ತು ಮಕ್ಕಳಿಲ್ಲದ ಸ್ತ್ರೀಯರ ಅನ್ನವು ಆಯುಸ್ಸನ್ನು ನಾಶ ಮಾಡುತ್ತದೆ.
ವಿಷ್ಠಾ ವಾರ್ಧುಷಿಕಸ್ಯಾನ್ನಂ ಗಣಿಕಾನ್ನಮಥೇಂದ್ರಿಯಮ್ |
ಮೃಷ್ಯಂತಿ ಯೇ ಚೋಪಪತಿಂ ಸ್ತ್ರೀಜಿತಾನಾಂ ಚ ಸರ್ವಶಃ ॥28॥
ಬಡ್ಡಿಯಿಂದ ಜೀವನವನ್ನು ಮಾಡುವವನ ಅನ್ನವು ಅಮೇಧ್ಯಕ್ಕೆ ಸಮನಾ- ದುದು, ವೇಶ್ಯೆಯರ ಅನ್ನ, ತನ್ನ ಪತ್ನಿಯ ಇನ್ನೊಬ್ಬನ

ಸಂಬಂಧವನ್ನು ಹೊಂದಿದ್ದರೂ ಸಹಿಸಿಕೊಂಡು ಇರುವವನ ಅನ್ನ, ಮತ್ತು ಸ್ತ್ರೀವಶರಾದವರ ಅನ್ನ ಎಲ್ಲವೂ ರೇತಸ್ಸಿಗೆ ಸಮಾನವಾದುದು.
ದೀಕ್ಷಿತಸ್ಯ ಕದರ್ಯಸ್ಯ ಕ್ರತುವಿಕ್ರಯಿಕಸ್ಯ ಚ |
ತಕ್ಷಣಶ್ಚರ್ಮಾವಕರ್ತುಶ್ಚ ಪುಂಶ್ಚಲ್ಯಾ ರಜಕಸ್ಯ ಚ |
ಚಿಕಿತ್ಸಕಸ್ಯ ಯಚ್ಚಾನ್ನಮಭೋಜ್ಯಂ ರಕ್ಷಿಣಸ್ತಥಾ ॥29॥
ಯಜ್ಞದೀಕ್ಷಿತನಾದವನ, ನೀಚಸ್ವಭಾವದವನ, ಪೂಜಾದಿಗಳನ್ನು ಮಾರುವವನ, ಬಡಗಿಯ, ಚರ್ಮಕಾರನ, ವೇಶ್ಯೆಯ, ಅಗಸನ, ವೈದ್ಯನ, ಕಾವಲುಗಾರನ ಅನ್ನವು ಅಭೋಜ್ಯವಾದುದು.
ಗಣಗ್ರಾಮಾಭಿಶಸ್ತಾನಾಂ ರಂಗಸ್ತ್ರೀಜೀವಿನಶ್ಚ ಯೇ |
ಪರಿವಿತ್ತಿನಪುಂಸಾಂ ಚ ವಂದಿದ್ಯೂತವಿದಾಂ ತಥಾ ॥30॥
ಗ್ರಾಮದಿಂದ ಅಥವಾ ಕುಲದಿಂದ ಬಹಿಷ್ಕೃತನಾದವನ, ರಂಗಜೀವಿ- ಯಾದವನ, ಸ್ತ್ರೀಯರನ್ನು ಅವಲಂಬಿಸಿ ಜೀವನವನ್ನು ಮಾಡುವವನ, ಅಣ್ಣನಿಗಿಂತ ಮೊದಲು ಮದುವೆಯಾದ ತಮ್ಮನ, ನಪುಂಸಕನ, ಹೊಗಳು ಭಟ್ಟನ, ದ್ಯೂತಾಸಕ್ತನಅನ್ನವು ಅಭೋಜ್ಯವಾದುದು.
ವಾಮಹಸ್ತಾಹೃತಂ ಚಾನ್ನಂ ಶುಷ್ಕಂ ಪರ್ಯುಷಿತಂ ಚ ಯತ್ |
ಸುರಾನುಗತಮುಚ್ಛಿಷ್ಟಮಭೋಜ್ಯಂ ಶೇಷಿತಂ ಚ ಯತ್ ॥31॥
ಎಡಗೈಯಿಂದ ತೆಗೆದುಕೊಂಡು ಬಂದ ಅನ್ನ, ಎಲೆಯಲ್ಲಿ ಬಡಿಸಿ ಬಹಳ ಹೊತ್ತಾಗಿ ಒಣಗಿ ಹೋದ ಅನ್ನ, ಹಳಸಿದ ಅನ್ನ, ಮದ್ಯದ ಜೊತೆಯಲ್ಲಿ ತೆಗೆದು- ಕೊಂಡ ಬಂದ ಅನ್ನ, ಉಚ್ಚಿಷ್ಟ, ಎಲ್ಲರೂ ಊಟ ಮಾಡಿದ ಮೇಲೆ ಉಳಿದ ಅನ್ನ ಇವು ಅಭೋಜ್ಯವಾದವುಗಳು.
ಪಿಷ್ಟಮಾಂಸೇಕ್ಷುಶಾಖಾನಾಂ ವಿಕಾರಾಃ ಪಯಸಸ್ತಥಾ |
ಸಕ್ತುಧಾನಾಕರಂಭಾಶ್ಚ ನೋಪಭೋಜ್ಯಾಶ್ಚಿರಸ್ಥಿತಾಃ ॥32॥
ಹಿಟ್ಟು, ಮಾಂಸ, ಕಬ್ಬಿನ ರಸ, ಹಾಲು, ಇವುಗಳ ವಿಕಾರಗಳು, ಹೋಳಿಗೆ, ಅರಳು, ಅವಲಕ್ಕಿಪುರಿ, ಬಹಳ ಹೊತ್ತಾದ ಮೊಸರಿನಲ್ಲಿ ಕಲಸಿದ  ಹಿಟ್ಟುಹುರಿದ ಹಿಟ್ಟುಗಳು ಇವುಗಳನ್ನು ತಿನ್ನಬಾರದು.
ಪಾಯಸಂ ಕೃಸರಂ ಮಾಂಸಮಪೂಪಾಶ್ಚ ವೃಥಾ ಕೃತಾಃ |
ಅಭೋಜ್ಯಾಶ್ಚಾಪ್ಯಭಕ್ಷ್ಯಾಶ್ಚ ಬ್ರಾಹ್ಮಣೈರ್ಗೃಹಮೇಧಿಭಿಃ ॥33॥
ದೇವತೆಗಳನ್ನು ಅಥವಾ ಅತಿಥಿಗಳನ್ನು ಉದ್ದೇಶಿಸಿ ಮಾಡದ ಪಾಯಸ, ಎಳ್ಳುಪುಡಿ ಅನ್ನ, ಮಾಂಸ, ಅಪೂಪಗಳು ಇವುಗಳನ್ನು ಗೃಹಸ್ಥರಾದ ಬ್ರಾಹ್ಮಣರು ತಿನ್ನಬಾರದು. ಇನ್ನೊಬ್ಬರಿಗೆ ಬಡಿಸಲೂ ಬಾರದು.
ದೇವಾನ್ ಪಿತೄನ್ ಮನುಷ್ಯಾಂಶ್ಚ ಮುನೀನ್ ಗೃಹ್ಯಾಂಶ್ಚ ದೇವತಾಃ |
ಪೂಜಯಿತ್ವಾ ತತಃ ಪಶ್ಚಾತ್ ಗೃಹಸ್ಥೋ ಭೋಕ್ತುಮರ್ಹತಿ ॥34॥
ಗೃಹಸ್ಥನಾದವನು ದೇವತೆಗಳನ್ನು, ಪಿತೃಗಳನ್ನು, ಋಷಿಗಳನ್ನು, ಗೃಹದೇವತೆ- ಗಳನ್ನು, ಮನುಷ್ಯರನ್ನೂ ಪೂಜಿಸಿ ಅನಂತರ ಭೋಜನವನ್ನು ಮಾಡಬೇಕು.
ಯಥಾ ಪ್ರವ್ರಾಜಿತೋ ಭಿಕ್ಷುರ್ಗೃಹಸ್ಥಃ ಸ್ವಗೃಹೇ ವಸೇತ್ |
ಏವಂ ವೃತ್ತಃ ಪ್ರಿಯೈರ್ದಾರೈಃ ಸಂವಸನ್ ಧರ್ಮಮಾಪ್ನುಯಾತ್ ॥35॥
ಗೃಹಸ್ಥನಾದವನು ಸನ್ಯಾಸವನ್ನು ಸ್ವೀಕರಿಸಿದ ಭಿಕ್ಷುವಿನಂತೆ ತನ್ನ ಮನೆಯಲ್ಲಿ ವಾಸ ಮಾಡಬೇಕು. ತನ್ನ ಪ್ರೀತಿಪಾತ್ರಳಾದ ಹೆಂಡತಿಯ ಜೊತೆಯಲ್ಲಿಯೂ ಇಂತಹ ನಡತೆಯನ್ನು ಹೊಂದಿದವನು ಧರ್ಮವನ್ನು ಸಂಪಾದಿಸುತ್ತಾನೆ.
ನ ದದ್ಯಾದ್ ಯಶಸೇ ದಾನಂ ನ ಭಯಾನ್ನೋಪಕಾರಿಣೇ |
ನ ನೃತ್ತಗೀತಶೀಲೇಷು ಹಾಸಕೇಷು ಚ ಧಾರ್ಮಿಕಃ ॥36॥
ಧಾರ್ಮಿಕನಾದವನು ಕೀರ್ತಿಗಾಗಿ ದಾನವನ್ನು ಮಾಡಬಾರದು. ಭಯದಿಂದ ದಾನವನ್ನು ಮಾಡಬಾರದು. ಉಪಕಾರವನ್ನು ಮಾಡಿದವನು ಎಂದು ದಾನವನ್ನು ಮಾಡಬಾರದು. ನರ್ತಕರಿಗೆ ಗಾಯಕರಿಗೆ ಮತ್ತು ವಿದೂಷಕರಿಗೆ ದಾನವನ್ನು ಮಾಡಬಾರದು.
ನ ಮತ್ತೇ ಚೈವ ಚೋನ್ಮತ್ತೇ ನ ಸ್ತೇನೇ ನ ಚಿಕಿತ್ಸಕೇ |
ನ ವಾಗ್ಘೀನೇ ವಿವರ್ಣೇ ವಾ ನಾಂಗಹೀನೇ ನ ವಾಮನೇ ॥37॥
ಪಾನಮತ್ತನಾದವನಿಗೆ, ಹುಚ್ಚನಾದವನಿಗೆ, ಕಳ್ಳನಿಗೆ, ವೈದ್ಯನಿಗೆ, ಮೂಕನಾದ- ವನಿಗೆ, ಚರ್ಮರೋಗವುಳ್ಳವನಿಗೆ, ಅಂಗಹೀನನಾದವನಿಗೆ, ವಾಮನ(ಬಹಳ ಕುಳ್ಳ) -ನಾದವನಿಗೆ ದಾನವನ್ನು ಮಾಡಬಾರದು.
ನ ದುರ್ಜನೇ ದೌಷ್ಕುಲೇ ವಾ ವ್ರತೈರ್ವಾ ಯೋ ನ ಸಂಸ್ಕೃತಃ |
ಅಶ್ರೋತ್ರಿಯೇ ಮೃತಂ ದಾನಂ ಬ್ರಾಹ್ಮಣೇಽಬ್ರಹ್ಮವಾದಿನಿ ॥38॥
ದುರ್ಜನನಿಗೆ, ದುಷ್ಕುಲದಲ್ಲಿ ಹುಟ್ಟಿದವನಿಗೆ, ವ್ರತಗಳನ್ನು ಮಾಡದವನಿಗೆ ದಾನವನ್ನು ಮಾಡಬಾರದು. ಶ್ರೋತ್ರಿಯನಲ್ಲದ, ವೇದವಿದ್ಯಾರಹಿತನಾದ ಬ್ರಾಹ್ಮಣ -ನಿಗೆ ಮಾಡಿದ ದಾನವು ಮೃತವಾಗುತ್ತದೆ.
ಅಸಮ್ಯಕ್ ಚೈವ ಯದ್ ದತ್ತಮಸಮ್ಯಕ್ ಚ ಪ್ರತಿಗ್ರಹಃ |
ಉಭಯೋಃ ಸ್ಯಾದನರ್ಥಾಯ ದಾತುರಾದಾತುರೇವ ಚ ॥39॥
ಸರಿಯಾಗಿ ಕೊಡದಿದ್ದ ದಾನ, ಸರಿಯಾಗಿ ಮಾಡದಿದ್ದ ಪ್ರತಿಗ್ರಹ ಇವೆರಡೂ ದಾನವನ್ನು ಕೊಡುವವನಿಗೂ ದಾನವನ್ನು ಸ್ವೀಕರಿಸುವವನಿಗೂ ಅನರ್ಥವಾದ ಫಲವನ್ನು ಉಂಟು ಮಾಡುತ್ತವೆ.
ಯಥಾ ಖದಿರಮಾಲಂಬ್ಯ ಶಿಲಾಂ ವಾಪ್ಯರ್ಣವಂ ತರನ್ |
ಮಜ್ಜತೇ ಮಜ್ಜತೇ ತದ್ವದ್ ದಾತಾ ಯಶ್ಚ ಪ್ರತೀಚ್ಛಕಃ ॥40॥

ಖದಿರ(ಕಗ್ಗಲಿ)ವೃಕ್ಷದ ಒಂದು ಸಣ್ಣಕೊಂಬೆಯನ್ನು ಹಿಡಿದು, ಅಥವಾ ಕಲ್ಲಿನ ಗುಂಡನ್ನು ಕಟ್ಟಿಕೊಂಡು ಸಮುದ್ರವನ್ನು ದಾಟಲು ಪ್ರಯತ್ನಿಸುವವನು ಮುಳುಗಿ ಹೋಗುವಂತೆ ಇಂತಹ ದಾನವನ್ನು ಮಾಡುವವನು ಮತ್ತು ದಾನವನ್ನು ಸ್ವೀಕರಿ- ಸುವವನು ಮುಳುಗಿ ಹೋಗುತ್ತಾರೆ.
ಕಾಷ್ಠೈರಾರ್ದ್ರೈರ್ಯಥಾ ವಹ್ನಿರುಪಸ್ತೀರ್ಣೋ ನ ದೀಪ್ಯತೇ |
ತಪಃಸ್ವಾಧ್ಯಾಯಚಾರಿತ್ರೈರೇವಂ ಹೀನಃ ಪ್ರತಿಗ್ರಹೀ ॥41॥
ಹಸಿಯ ಕಟ್ಟಿಗೆಗಳನ್ನು ತುಂಬಿದ ಅಗ್ನಿಯು ಹೇಗೆ ಜ್ವಲಿಸುವುದಿಲ್ಲವೋ ಅದರಂತೆ ತಪಸ್ಸು, ಸ್ವಾಧ್ಯಾಯ, ಶೀಲ ಇವುಗಳಿಂದ ಹೀನನಾದ ಪ್ರತಿಗ್ರಹಿಯೂ ಕೂಡ ಶೋಭಿಸುವುದಿಲ್ಲ.
ಕಪಾಲೇ ಯದ್ವದಾಪಃ ಸ್ಯುಃ ಶ್ವದೃತೌ ವಾ ಯಥಾ ಪಯಃ |
ಆಶ್ರಯಸ್ಥಾನದೋಷೇಣ ವೃತ್ತಹೀನೇ ಯಥಾ ಶ್ರುತಮ್ ॥42॥
ಒಳ್ಳೆಯ ಶೀಲವಿಲ್ಲದವನಲ್ಲಿ ಇರುವ ವಿದ್ಯೆಯು ತಲೆಯ ಬುರುಡೆಯಲ್ಲಿ ಹಾಕಿದ ನೀರಿನಂತೆ, ನಾಯಿಯ ಚರ್ಮದಲ್ಲಿ ಶೇಖರಿಸಿದ ಕ್ಷೀರದಂತೆ ಆಶ್ರಯ- ದೋಷದಿಂದ ದುಷ್ಟವಾಗುತ್ತದೆ.
ನಿರ್ಮಂತ್ರೋ ನಿರ್ವ್ರತೋ ಯಃ ಸ್ಯಾದಶಾಸ್ತ್ರಜ್ಞೋಽನಸೂಯಕಃ |
ಅನುಕ್ರೋಶಾತ್ ಪ್ರದಾತವ್ಯಂ ದೀನೇಷ್ವೇವಂ ನರೇಷ್ವಪಿ ॥43॥
ಮಂತ್ರಜಪವಿಲ್ಲದ, ವ್ರತಾನುಷ್ಠಾನವಿಲ್ಲದ, ಶಾಸ್ತ್ರಜ್ಞಾನವಿಲ್ಲದ ಪುರುಷನು ಅಸೂಯಾರಹಿತನಾಗಿದ್ದರೆ ಅಂತಹ ದೀನನಿಗೂ ಅನುಕಂಪದಿಂದ ದಾನವನ್ನು (ಏನನ್ನಾದರೂ) ಕೊಡಬೇಕು.
ನವೈ ದೇಯಮನುಕ್ರೋಶಾದ್ ದೀನಾಯಾಮಪ್ಯಪಕಾರಿಣೇ |
ಆಪ್ತಾಚರಿತಮಿತ್ಯೇವ ಧರ್ಮ ಇತ್ಯೇವ ವಾ ಪುನಃ ॥44॥
ಆದರೆ ಅಂತಹ ದೀನನಾದವನು ಅಪಕಾರವನ್ನು ಮಾಡುವುದಾದರೆ ಅವನಿಗೆ ಸಜ್ಜನರ ಆಚರಣೆಯೆಂದಲಾಗಲೀ ಅಥವಾ ಇದು ಧರ್ಮ ಎಂಬ ದೃಷ್ಟಿಯಿಂದಾ- ಗಲೀ ಅನುಕಂಪದಿಂದಲೂ ಏನನ್ನೂ ಕೊಡಬಾರದು.
ನಿಷ್ಕಾರಣಂ ಸ್ಮ ತದ್ ದತ್ತಂ ಬ್ರಾಹ್ಮಣೇ ಧರ್ಮವರ್ಜಿತೇ |
ಭವೇದಪಾತ್ರದೋಷೇಣ ನ ಮೇಽತ್ರಾಸ್ತಿ ವಿಚಾರಣಾ ॥45॥
ಧರ್ಮರಹಿತನಾದ ಬ್ರಾಹ್ಮಣನಿಗೆ ನಿಷ್ಕಾರಣವಾಗಿ ಕೊಟ್ಟ ದಾನವು ಅಪಾತ್ರನಿಗೆ ಕೊಟ್ಟ ಕಾರಣದಿಂದಾಗಿ ಯಾವ ಫಲವನ್ನೂ ಕೊಡುವುದಿಲ್ಲ. ಈ ವಿಷಯದಲ್ಲಿ ನನಗೆ ಯಾವ ಸಂಶಯವೂ ಇಲ್ಲ.
ಯಥಾ ದಾರುಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ |
ಬ್ರಾಹ್ಮಣಶ್ಚಾನಧೀಯಾನಸ್ತ್ರಯಸ್ತೇ ನಾಮಧಾರಕಾಃ ॥46॥
ಮರದಿಂದ ಮಾಡಿದ ಆನೆ, ಚರ್ಮದಿಂದ ಮಾಡಿದ ಮೃಗ ಮತ್ತು ಅಧ್ಯಯನವನ್ನು ಮಾಡದಿದ್ದ ಬ್ರಾಹ್ಮಣ ಈ ಮೂವರೂ ಹೆಸರಿಗೆ ಮಾತ್ರ ಆನೆ, ಮೃಗ ಮತ್ತು ಬ್ರಾಹ್ಮಣ ಎಂದು ಕರೆಸಿಕೊಳ್ಳಲ್ಪಡುತ್ತಾರೆ.
ಯಥಾ ಷಂಢೋಽಫಲಃ ಸ್ತ್ರೀಷು ಯಥಾ ಗೌರ್ಗವಿ ಚಾಫಲಾ |
ಶಕುನಿರ್ವಾಪ್ಯಪಕ್ಷಃ ಸ್ಯಾನ್ನಿರ್ಮಂತ್ರೋ ಬ್ರಾಹ್ಮಣಸ್ತಥಾ ॥47॥
ನಪುಂಸಕನಾದವನು ಸ್ತ್ರೀಯರ ವಿಷಯದಲ್ಲಿ ನಿಷ್ಫಲನಾದಂತೆ, ಹಾಲನ್ನು ಕರೆದು ಮುದಿಯಾದ ಧೇನು(ಇನ್ನು ಮುಂದೆ ಹಾಲುಕೊಡದ ಧೇನು) ಭೂಮಿಯಲ್ಲಿ
ನಿಷ್ಫಲವಾದಂತೆ, ರೆಕ್ಕೆಗಳು ಮೂಡದಿರುವ ಪಕ್ಷಿಯು ನಿಷ್ಫಲವಾದಂತೆ ಮಂತ್ರ- ರಹಿತನಾದ ಬ್ರಾಹ್ಮಣನು ನಿಷ್ಫಲನಾಗುತ್ತಾನೆ. (ಲಕ್ಷಾಲಂಕಾರ)
ಗ್ರಾಮಧಾನ್ಯಂ ಯಥಾ ಶೂನ್ಯಂ ಯಥಾ ಕೂಪಶ್ಚ ನಿರ್ಜಲಃ |
ಯಥಾ ಹುತಮನಗ್ನೌ ಚ ತಥೈವ ಸ್ಯಾನ್ನಿರಾಕೃತೌ ॥48॥
ಧಾನ್ಯವಿಲ್ಲದ ಗ್ರಾಮದಂತೆ, ಜಲವಿಲ್ಲದ ಕೂಪದಂತೆ, ಅಗ್ನಿಯಿಲ್ಲದ ಹೋಮ- ದಂತೆ ಅಂತಹ ನಿರಾಕಾರನಾದ ಬ್ರಾಹ್ಮಣನಿಗೆ ಕೊಟ್ಟ ದಾನವು ವ್ಯರ್ಥವಾಗುತ್ತದೆ.
ದೇವತಾನಾಂ ಪಿತೄಣಾಂ ಚ ಹವ್ಯಕವ್ಯವಿನಾಶನಃ |
ಶತ್ರುರರ್ಥಹರೋ ಮೂರ್ಖೋ ನ ಲೋಕಾನ್ ಪ್ರಾಪ್ತುಮರ್ಹತಿ ॥49॥
ಅಂತಹ ಬ್ರಾಹ್ಮಣನು ದೇವತೆಗಳಿಗೂ ಮತ್ತು ಪಿತೃಗಳಿಗೂ ಕೊಟ್ಟ ಹವ್ಯ, ಕವ್ಯಗಳನ್ನು ನಾಶ ಪಡಿಸುತ್ತಾನೆ. ಅವನು ಧಾರ್ಮಿಕರಿಗೆ ಶತ್ರುವಾಗಿ ಅವರ ಪ್ರಯೋಜನವನ್ನು ನಾಶ ಮಾಡುವ ಮೂರ್ಖನಾಗುತ್ತಾನೆ. ಅವನಿಗೆ ಸದ್ಗತಿಯಾ- ಗುವುದಿಲ್ಲ.
ಏತತ್ ತೇ ಕಥಿತಂ ಸರ್ವಂ ಯಥಾವೃತ್ತಂ ಯುಧಿಷ್ಠಿರ |
ಸಮಾಸೇನ ಮಹದ್ ಹ್ಯೇತಚ್ಛ್ರೋತವ್ಯಂ ಭರತರ್ಷಭ ॥50॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಭಕ್ಷ್ಯಾಭಕ್ಷ್ಯವಿಧಿರ್ನಾಮ ಸಪ್ತತ್ರಿಂಶೋಽಧ್ಯಾಯಃ ॥37॥
ಎಲೈ ಯುಧಿಷ್ಠಿರನೇ! ನೀನು ಕೇಳಿದ ಎಲ್ಲವನ್ನೂ ನಿನಗೆ ಸಂಕ್ಷೇಪವಾಗಿ ಹೇಳಿರುವೆನು. ಎಲೈ ಭರತರ್ಷಭನೇ! ಇವೆಲ್ಲವನ್ನೂ ಇನ್ನೂ ವಿಸ್ತಾರವಾಗಿ ಕೇಳ- ಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 37ನೆಯ ಅಧ್ಯಾಯವು ಮುಗಿಯಿತು.
0

38. ಮೂವತ್ತೆಂಟನೆಯ ಅಧ್ಯಾಯ
ಯುದ್ಧಾನಂತರದಲ್ಲಿ ಯುಧಿಷ್ಠಿರನ ಪುರಪ್ರವೇಶ
ಯುಧಿಷ್ಠಿರಃ
ಶ್ರೋತುಮಿಚ್ಛಾಮಿ ಭಗವನ್ ವಿಸ್ತರೇಣ ಮಹಾಮುನೇ |
ರಾಜಧರ್ಮಾನ್ ದ್ವಿಜಶ್ರೇಷ್ಠ ಚಾತುರ್ವರ್ಣ್ಯಸ್ಯ ಚಾಖಿಲಾನ್ ॥1॥
ಯುಧಿಷ್ಠಿರ ಪೂಜ್ಯರೇ! ಮಹಾಮುನಿಗಳೇ! ದ್ವಿಜಶ್ರೇಷ್ಠರೇ! ನಾನು ರಾಜ- ಧರ್ಮಗಳನ್ನೂ ಮತ್ತು ಚಾತುರ್ವರ್ಣ್ಯದ ಎಲ್ಲ ಧರ್ಮಗಳನ್ನೂ (ವಿಸ್ತಾರವಾಗಿ) ಕೇಳಲು ಬಯಸುತ್ತೇನೆ.
ಆಪತ್ಸು ಚ ಯಥಾ ನೀತಿರ್ವಿಧಾತವ್ಯಾ ಮಹೀಕ್ಷಿತಾ |
ಧರ್ಮ್ಯಮಾಲಂಬ್ಯ ಪಂಥಾನಂ ವಿಜಯೇಯಂ ಕಥಂ ಮಹೀಮ್ ॥2॥
ರಾಜನಾದವನು ಆಪತ್ತಿನ ಕಾಲದಲ್ಲಿ ಎಂತಹ ನೀತಿಯನ್ನು ಅನುಸರಿಸಬೇಕು? ನಾನು ಧರ್ಮಮಾರ್ಗವನ್ನು ಅವಲಂಬಿಸಿ ಹೇಗೆ ಭೂಮಿಯನ್ನು ಗೆದ್ದೇನು?
ಪ್ರಾಯಶ್ಚಿತ್ತಕಥಾ ಹ್ಯೇಷಾ ಭಕ್ಷ್ಯಾಭಕ್ಷ್ಯವಿವರ್ಜಿತಾ |
ಕೌತೂಹಲಾನುಪ್ರವಣಾ ಹರ್ಷಂ ಜನಯತೀವ ಮೇ ॥3॥
ನೀವು ಹೇಳಿದ ಭಕ್ಷ್ಯಾಭಕ್ಷ್ಯವಿವೇಚನೆಯು ಮತ್ತು ಪ್ರಾಯಶ್ಚಿತ್ತವಿಚಾರವು ನನಗೆ ಬಹಳ ಕುತೂಹಲವನ್ನು ಮತ್ತು ಸಂತೋಷವನ್ನು ಉಂಟು ಮಾಡಿವೆ.
ಧರ್ಮಚರ್ಯಾ ಚ ರಾಜ್ಯಂ ಚ ನಿತ್ಯಮೇವ ವಿರುದ್ಧ್ಯತೇ |
ಯೇನ ಮುಹ್ಯತಿ ಮೇ ಚೇತಶ್ಚಿಂತಯಾನಸ್ಯ ನಿತ್ಯಶಃ ॥4॥
ಧರ್ಮಾಚರಣೆಯು ಮತ್ತು ರಾಜ್ಯಪಾಲನವು ಎರಡೂ ಯಾವಾಗಲೂ ವಿರುದ್ಧವಾದವುಗಳು. ಆದ್ದರಿಂದ ನಾನು ಎಷ್ಟು ಚಿಂತಿಸಿದರೂ ನನ್ನ ಮನಸ್ಸಿಗೆ ಮೋಹವುಂಟಾಗುತ್ತಿದೆ.
ವೈಶಂಪಾಯನಃ
ತಮುವಾಚ ಮಹಾತೇಜಾ ವ್ಯಾಸೋ ವೇದವಿದಾಂವರಃ |
ನಾರದಂ ಸಮಭಿಪ್ರೇಕ್ಷ್ಯ ಸರ್ವಂ ಜಾನನ್ ಪುರಾತನಮ್ ॥5॥
ವೈಶಂಪಾಯನರು ವಿವಿಧವೇತ್ತರಲ್ಲಿ ಶ್ರೇಷ್ಠರಾದ, ಮಹಾತೇಜಸ್ವಿ- ಗಳಾದ ವ್ಯಾಸರು ಪುರಾತನವಾದ ಎಲ್ಲವನ್ನೂ ತಿಳಿದವರಾಗಿ ನಾರದರನ್ನು ನೋಡುತ್ತಾ ಯುಧಿಷ್ಠಿರನನ್ನು ಕುರಿತು ಮಾತನಾಡಿದರು.
ಶ್ರೋತುಮಿಚ್ಛಸಿ ಚೇದ್ ಧರ್ಮಾನಖಿಲೇನ ಯುಧಿಷ್ಠಿರ |
ಪ್ರೈಹಿ ಭೀಷ್ಮಂ ಮಹಾಬಾಹೋ ವೃದ್ಧಂ ಕುರುಪಿತಾಮಹಮ್ ॥6॥
ಎಲೈ ಯುಧಿಷ್ಠಿರನೇ! ನೀನು ಧರ್ಮಗಳನ್ನು ಸಮಗ್ರವಾಗಿ ಕೇಳಲು ಬಯ- ಸುವುದಾದರೆ ಎಲೈ ಮಹಾಬಾಹುವೇ! ಕುರುಪಿತಾಮಹರಾದ ವೃದ್ಧರಾದ ಭೀಷ್ಮರ ಬಳಿಗೆ ಹೋಗು.
ಸ ತೇ ಸರ್ವರಹಸ್ಯೇಷು ಸಂಶಯಾನ್ ಮನಸಿ ಸ್ಥಿತಾನ್ |
ಛೇತ್ತಾ ಭಾಗೀರಥೀಪುತ್ರಃ ಸರ್ವಜ್ಞಃ ಸರ್ವಧರ್ಮವಿತ್ ॥7॥
ಗಂಗಾಪುತ್ರರೂ ಸರ್ವಜ್ಞರೂ ಎಲ್ಲ ಧರ್ಮವನ್ನೂ ತಿಳಿದವರೂ ಆದ ಅವರು ಎಲ್ಲ ರಹಸ್ಯವಿಷಯಗಳಲ್ಲಿಯೂ ನಿನ್ನ ಮನಸ್ಸಿನಲ್ಲಿರುವ ಸಂಶಯಗಳನ್ನು ಪರಿಹರಿಸುವರು.
ಜನಯಾಮಾಸ ಯಂ ದೇವೀ ದಿವ್ಯಾ ತ್ರಿಪಥಗಾ ನದೀ |
ಸಾಕ್ಷಾದ್ ದದರ್ಶ ಯೋ ದೇವಾನ್ ಸರ್ವಾನ್ ಶಕ್ರಪುರೋಗಮಾನ್ ॥8
ಬೃಹಸ್ಪತಿಪುರೋಗಾಂಶ್ಚ ದೇವರ್ಷೀನಸಕೃತ್ ಪ್ರಭುಃ |
ತೋಷಯಿತ್ವೋಪಚಾರೇಣ ರಾಜನೀತಿಮಧೀತವಾನ್ ॥9॥
ತ್ರಿಪಥಗಾಮಿನಿಯಾದ ದೇವಗಂಗೆಯು ಯಾವನನ್ನು ಪುತ್ರನನ್ನಾಗಿ ಪಡೆ- ದಳೋ, ಯಾವನು ಇಂದ್ರಮೊದಲಾದ ಎಲ್ಲ ದೇವತೆಗಳನ್ನೂ ಸಾಕ್ಷಾತ್ತಾಗಿ ನೋಡಿ- ದ್ದಾನೆಯೋ, ಯಾವನು ಬೃಹಸ್ಪತಿ ಮೊದಲಾದ ದೇವರ್ಷಿಗಳನ್ನು ಅನೇಕಬಾರಿ ನೋಡಿ ಪೂಜಿಸಿ, ಅವರನ್ನು ಸಂತೋಷಪಡಿಸಿ, ರಾಜನೀತಿಶಾಸ್ತ್ರವನ್ನು ಅಧ್ಯಯನ- ವನ್ನು ಮಾಡಿದ್ದಾನೆಯೋ (ಅಂತಹ ಭೀಷ್ಮರ ಬಳಿಗೆ ಹೋಗು).
ಉಶನಾ ವೇದ ಯಚ್ಛಾಸ್ತ್ರಂ ಯಚ್ಚ ದೇವಗುರುರ್ದ್ವಿಜಃ |
ತಚ್ಚ ಸರ್ವಂ ಸವ್ಯೈಯಾಖ್ಯಂ ಪ್ರಾಪ್ತವಾನ್ ಕುರುಸತ್ತಮಃ ॥10॥
ಶುಕ್ರಾಚಾರ್ಯರು ಯಾವ ಶಾಸ್ತ್ರವನ್ನು ತಿಳಿದಿದ್ದಾರೆಯೋ, ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ಯಾವ ಶಾಸ್ತ್ರವನ್ನು ತಿಳಿದಿದ್ದಾರೆಯೋ ಅವೆಲ್ಲವನ್ನೂ ವ್ಯಾಖ್ಯಾನಸಹಿತವಾಗಿ ಕುರುಶ್ರೇಷ್ಠರಾದ ಭೀಷ್ಮರು ತಿಳಿದಿದ್ದಾರೆ.
ಭಾರ್ಗವಾಚ್ಚ್ಯವನಾಚ್ಚಾಪಿ ವೇದಾನಂಗೋಪಬೃಂಹಿತಾನ್ |
ಪ್ರತಿಪೇದೇ ಮಹಾಬುದ್ಧಿರ್ವಸಿಷ್ಠಾಚ್ಚ ಯತವ್ರತಾತ್ ॥11॥
ಮಹಾಬುದ್ಧಿಶಾಲಿಗಳಾದ ಭೀಷ್ಮರು ಭಾರ್ಗವವಂಶದ ಚ್ಯವನರಿಂದ ಮತ್ತು ದೃಢವ್ರತರಾದ ವಸಿಷ್ಠರಿಂದ ಎಲ್ಲ ವೇದವೇದಾಂಗಗಳನ್ನು ಅಧ್ಯಯನ ಮಾಡಿದ್ದಾರೆ.
ಪಿತಾಮಹಸುತಂ ಜ್ಯೇಷ್ಠಂ ಕುಮಾರಂ ದೀಪ್ತತೇಜಸಮ್ |
ಅಧ್ಯಾತ್ಮಗತಿತತ್ತ್ವಜ್ಞಮುಪಾಶಿಕ್ಷತ ಯಃ ಪುರಾ ॥12॥

ಅದರ ಹಿಂದೆ ಬ್ರಹ್ಮದೇವರ ಜ್ಯೇಷ್ಠಪುತ್ರರೂ, ದೀಪ್ತವಾದ ತೇಜಸ್ಸುಳ್ಳವರೂ, ಅಧ್ಯಾತ್ಮಜ್ಞಾನನಿಪುಣರೂ ಆದ ಸನತ್ಕುಮಾರರಿಂದ ಶಿಕ್ಷಣವನ್ನು ಪಡೆದಿದ್ದಾರೆ.
ಮಾರ್ಕಂಡೇಯಮುಖಾತ್ ಕೃತ್ಸ್ನಂ ಯತಿಧರ್ಮಮವಾಪ್ತವಾನ್ |
ರಾಮಾದಸಾತ್ರಣಿ ಶಕ್ರಾಚ್ಚ ಪ್ರಾಪ್ತವಾನ್ ಭರತರ್ಷಭ ||13||
ಮಾರ್ಕಂಡೇಯರಿಂದ ಸಮಗ್ರವಾಗಿ ಯತಿಧರ್ಮಗಳನ್ನು ಕೇಳಿ ತಿಳಿದಿದ್ದಾರೆ. ಎಲೈ ಭರತರ್ಷಭನೇ! ಪರಶುರಾಮರಿಂದಲೂ ಮತ್ತು ಇಂದ್ರನಿಂದಲೂ ಅಸ್ತ್ರ- ಗಳನ್ನು ಪಡೆದಿದ್ದಾರೆ.
ಮೃತ್ಯುರಾತ್ಮೇಚ್ಛಯಾ ಯಸ್ಯ ಜಾತಸ್ಯ ಮನುಜೇಷ್ವಪಿ |
ತಥಾऽನಪತ್ಯಸ್ಯ ಸತಃ ಪುಣ್ಯಶ್ಲೋಕಾ ದಿವಿ ಶ್ರುತಾಃ ||14||
ಮನುಷ್ಯಲೋಕದಲ್ಲಿ ಜನಿಸಿದರೂ ಅವರಿಗೆ ಇಚ್ಛಾಮರಣವಿದೆ. ವಿವಾಹವನ್ನು ಮಾಡಿಕೊಳ್ಳದೆ ಮಕ್ಕಳನ್ನು ಪಡೆಯದ ಅವರ ಪವಿತ್ರವಾದ ಕೀರ್ತಿಯು ದೇವ- ಲೋಕದಲ್ಲಿ ಕೇಳಿಬರುತ್ತದೆ.
ಯಸ್ಯ ಬ್ರಹ್ಮರ್ಷಯಃ ಪುಣ್ಯಾ ನಿತ್ಯಮಾಸನ್ ಸಭಾಸದಃ |
ಯಸ್ಯ ನಾವಿದಿತಂ ಕಿಂಚಿಜ್ಜ್ಞಾನಜ್ಞೇಯೇಷು ವಿದ್ಯತೇ ||15||
ಅವರಿದ್ದ ಸಭೆಯಲ್ಲಿ ಪವಿತ್ರರಾದ ಬ್ರಹ್ಮರ್ಷಿಗಳು ಯಾವಾಗಲೂ ಸಭಾಸದ- ರಾಗಿದ್ದರು. ಜ್ಞಾನಜ್ಞೇಯಗಳ ವಿಷಯದಲ್ಲಿ ಅವರಿಗೆ ತಿಳಿಯದಿರುವುದು ಯಾವುದೂ ಇಲ್ಲ.
ಸ ತೇ ವಕ್ಷ್ಯತಿ ಧರ್ಮಜ್ಞಃ ಸೂಕ್ಷ್ಮಧರ್ಮಾರ್ಥತತ್ತ್ವವಿತ್ |
ತಮಭ್ಯೇಹಿ ಪುರಾ ಪ್ರಾಣಾನ್ ಸ ವಿಮುಂಚತಿ ಧರ್ಮವಿತ್ ||16||
ಸೂಕ್ಷ್ಮವಾದ ಧರ್ಮತತ್ವಗಳನ್ನು ಮತ್ತು ಅರ್ಥತತ್ವಗಳನ್ನು ಧರ್ಮಜ್ಞರಾದ ಅವರು ನಿನಗೆ ಎಲ್ಲವನ್ನೂ ಹೇಳುವರು. ಧರ್ಮಜ್ಞರಾದ ಅವರು ಪ್ರಾಣಗಳನ್ನು ತ್ಯಜಿಸುವುದಕ್ಕಿಂತ ಮೊದಲೇ ನೀನು ಅವರ ಬಳಿಗೆ ಹೋಗು.
ವೈಶಂಪಾಯನಃ
ಏವಮುಕ್ತಸ್ತು ಕೌಂತೇಯೋ ದೀರ್ಘಪ್ರಜ್ಞೋ ಮಹಾದ್ಯುತಿಃ |
ಉವಾಚ ವದತಾಂಶ್ರೇಷ್ಠಂ ವ್ಯಾಸಂ ಸತ್ಯವತೀಸುತಮ್ ||17||
ವೈಶಂಪಾಯನರು ಹೀಗೆ ಹೇಳಲ್ಪಟ್ಟ ಕುಂತಿಯ ಪುತ್ರನೂ, ದೀರ್ಘಪ್ರಜ್ಞೆ- ಯುಳ್ಳವನೂ, ಮಹಾಕಾಂತಿಯುಕ್ತನೂ ಆದ ಯುಧಿಷ್ಠಿರನು ಸತ್ಯವತೀಸುತರೂ, ಮಾತನಾಡುವವರಲ್ಲಿ ಶ್ರೇಷ್ಠರೂ ಆದ ವ್ಯಾಸರನ್ನು ಕುರಿತು ಹೇಳಿದನು.
ವೈಶಸಂ ಸುಮಹತ್ ಕೃತ್ವಾ ಜ್ಞಾತೀನಾಂ ಲೋಮಹರ್ಷಣಮ್ |
ಆಗಸ್ಕೃತ್ ಸರ್ವಲೋಕಸ್ಯ ಪೃಥಿವೀನಾಶಕಾರಕಃ ||18||
ಘಾತಯಿತ್ವಾ ತಮೇವಾಜೌ ಛಲೇನಾಜಿಹ್ಮಯೋಧಿನಮ್ |
ಉಪಸಂಪ್ರಷ್ಟುಮರ್ಹಾಮಿ ತಮಹಂ ಕೇನ ಹೇತುನಾ ||19||
ದಾಯಾದಿಗಳಿಗೆ ರೋಮಾಂಚಕಾರಿಯಾದ ದೊಡ್ಡ ಹಿಂಸೆಯನ್ನು ಉಂಟು- ಮಾಡಿ, ಪೃಥಿವಿಯ ನಾಶವನ್ನು ಉಂಟುಮಾಡಿ, ಸ್ವರ್ಗಲೋಕಕ್ಕೂ ಅಪಚಾರವನ್ನು ಮಾಡಿರುವ ನಾನು, ಕಪಟಯುದ್ಧವನ್ನು ಮಾಡದಿರುವ ಅದೇ ಭೀಷ್ಮರನ್ನು ಕಪಟ- ದಿಂದ ಘಾಸಿಗೊಳಿಸಿ, ಅವರ ಸಮೀಪಕ್ಕೆ ಹೋಗಲು ಹೇಗೆ ಅರ್ಹನಾಗುತ್ತೇನೆ?
ತತಸ್ತಂ ನೃಪತಿಶ್ರೇಷ್ಠಂ ಚಾತುರ್ವರ್ಣ್ಯಹಿತೇಪ್ಸಯಾ |
ಪುನರಾಹ ಮಹಾಬಾಹುರ್ಯದುಶ್ರೇಷ್ಠೋ ಮಹಾದ್ಯುತಿಃ ||20||
ಆಗ ಮಹಾಬಾಹುವೂ, ಮಹಾದ್ಯುತಿಯೂ, ಯದುಶ್ರೇಷ್ಠನೂ ಆದ ಕೃಷ್ಣನು ಚಾತುರ್ವರ್ಣ್ಯಕ್ಕೆ ಹಿತವನ್ನುಂಟು ಮಾಡಲು ಬಯಸಿ ಆ ರಾಜಶ್ರೇಷ್ಠನನ್ನು ಕುರಿತು ಮಾತನಾಡಿದನು.
ಶ್ರೀಭಗವಾನ್
ನೇದಾನೀಮತಿನಿರ್ಬಂಧಂ ಶೋಕೇ ಕರ್ತುಮಿಹಾರ್ಹಸಿ |
ಯದಾಹ ಭಗವಾನ್ ವ್ಯಾಸಸ್ತತ್ ಕುರುಷ್ವ ನೃಪೋತ್ತಮ ||21||
ಶ್ರೀಭಗವಾನ್ ಎಲೈ ನೃಪೋತ್ತಮನೇ! ಈಗ ನೀನು ಬಹಳವಾದ ಶೋಕ- ವನ್ನು ಮಾಡಲು ಅರ್ಹನಲ್ಲ; ಪೂಜ್ಯರಾದ ವ್ಯಾಸರು ಏನು ಹೇಳುತ್ತಾರೆಯೋ ಅದರಂತೆ ಮಾಡು.
ಬ್ರಾಹ್ಮಣಾಸತ್ತ್ವಾಂ ಮಹಾಬಾಹೋ ಭ್ರಾತರಶ್ಚ ಮಹೌಜಸಃ |
ಪರ್ಜನ್ಯಮಿವ ಘರ್ಮಾರ್ತಾ ಆಶಂಸಾನಾ ಉಪಾಸತೇ ||22||
ಎಲೈ ಮಹಾಬಾಹುವೇ! ಮಹಾಪರಾಕ್ರಮಿಗಳಾದ ನಿನ್ನ ತಮ್ಮಂದಿರು ಮತ್ತು ಬ್ರಾಹ್ಮಣರು, ಬಿಸಿಲಿನಿಂದ ಬಳಲಿದವರು ಮಳೆಯನ್ನು ನಿರೀಕ್ಷಿಸುವಂತೆ, ನಿನ್ನಿಂದ ಶುಭವನ್ನು ಆಶಂಸಿಸುತ್ತಾ ನಿನ್ನನ್ನು ಉಪಾಸನೆ ಮಾಡುತ್ತಿದ್ದಾರೆ.
ಹತಶಿಷ್ಟಾಶ್ಚ ರಾಜಾನಃ ಕೃತ್ಸ್ನಂ ಚೈವ ಸಮಾಗತಮ್ |
ಚಾತುರ್ವರ್ಣ್ಯಂ ಮಹಾರಾಜ ರಾಷ್ಟ್ರಂ ತೇ ಕುರುಜಾಂಗಲಮ್ ||23||
ಅಳಿದುಳಿದ ರಾಜರೆಲ್ಲರೂ ಇಲ್ಲಿಗೆ ಬಂದಿದ್ದಾರೆ. ಎಲೈ ಮಹಾರಾಜನೇ! ಕುರುಜಾಂಗಲನಿವಾಸಿಗಳಾದ ಚಾತುರ್ವರ್ಣ್ಯಸಂಬಂಧಿಗಳಾದ ನಿನ್ನ ರಾಷ್ಟ್ರದ ಜನರೆಲ್ಲರೂ ಇಲ್ಲಿ ಬಂದಿದ್ದಾರೆ.
ಪ್ರಿಯಾರ್ಥಮಪಿ ಚೈತೇಷಾಂ ಬ್ರಾಹ್ಮಣಾನಾಂ ಮಹಾತ್ಮನಾಮ್ |
ನಿಯೋಗಾದಸ್ಯ ಚ ಗುರೋರ್ವ್ಯಾಸಸ್ಯಾಮಿತತೇಜಸಃ ||24||
ಸುಹೃದಾಂ ಚಾಸ್ಮದಾದೀನಾಂ ದ್ರೌಪದ್ಯಾಶ್ಚ ಪರಂತಪ |

ಕುರು ಪ್ರಿಯಮಮಿತ್ರಘ್ನ ಲೋಕಸ್ಯ ಚ ಹಿತಂ ಕುರು ॥25॥
ಈ ಮಹಾತ್ಮರಾದ ಬ್ರಾಹ್ಮಣರ ಪ್ರಿಯಾರ್ಥವಾಗಿ, ಅಮಿತತೇಜಸ್ವಿಗಳಾದ ಗುರುಗಳಾದ ವ್ಯಾಸರ ಆಜ್ಞೆಗೆ ಅನುಸಾರವಾಗಿ, ನಿನ್ನ ಹಿತೈಷಿಗಳಾದ ನಮ್ಮೆಲ್ಲರ ಮತ್ತು ದ್ರೌಪದಿಯ ಸಲುವಾಗಿ ಎಲೈ ಪರಂತಪನೇ! ಎಲೈ ಶತ್ರುಸೂದನನೇ! ಪ್ರಿಯವನ್ನು ಮಾಡುವವನಾಗು. ಲೋಕಕ್ಕೂ ಹಿತವನ್ನುಂಟುಮಾಡು.
ಏವಮುಕ್ತಸ್ತು ಕೃಷ್ಣೇನ ರಾಜಾ ರಾಜೀವಲೋಚನಃ |
ಹಿತಾರ್ಥಂ ಸರ್ವಲೋಕಸ್ಯ ಸಮುತ್ತಸ್ಥೌ ಮಹಾತಪಾಃ ॥26॥
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ರಾಜೀವಲೋಚನನೂ, ಮಹಾತಪಸ್ವಿಯೂ ಆದ ಯುಧಿಷ್ಠಿರರಾಜನು ಸರ್ವಲೋಕಕ್ಕೆ ಹಿತವನ್ನುಂಟು ಮಾಡಲು ಉದ್ದೇಶಿಸಿ, ಎದ್ದು ನಿಂತನು.
ಸೋಽನುನೀತೋ ನರವ್ಯಾಘ್ರೋ ವಿಷ್ಟರಶ್ರವಸಾ ಸ್ವಯಮ್ |
ದ್ವೈಪಾಯನೇನ ಚ ತಥಾ ದೇವಸ್ಥಾನೇನ ಜಿಷ್ಣುನಾ ॥27॥
ಏತೈಶ್ಚಾನ್ಯೈಶ್ಚ ಬಹುಭಿರನುನೀತೋ ಯುಧಿಷ್ಠಿರಃ |
ವ್ಯಜಹಾನ್ಮಾನಸಂ ದುಃಖಂ ಸಂತಾಪಂ ಚ ಮಹಾಮನಾಃ ॥28॥
ನರವ್ಯಾಘ್ರನಾದ ಅವನು ವಿಷ್ಣುವಿನ ಸ್ವರೂಪನಾದ ಜಿಷ್ಣುವಿನಿಂದಲೂ ವೇದ- ವ್ಯಾಸರಿಂದಲೂ ದೇವಸ್ಥಾನನಾಮಕ ಋಷಿಗಳಿಂದಲೂ ಅರ್ಜುನನಿಂದಲೂ ಮತ್ತು ಇನ್ನೂ ಅನೇಕರಿಂದಲೂ ಹೀಗೆ ಸಮಾಧಾನ ಪಡಿಸಲ್ಪಟ್ಟವನಾಗಿ ಧೈರ್ಯಶಾಲಿ- ಯಾದ ಅವನು ಮನಸ್ಸಿನ ದುಃಖವನ್ನು ಮತ್ತು ಸಂತಾಪವನ್ನು ತ್ಯಜಿಸಿದನು.
ಶ್ರುತವಾಕ್ಯಃ ಶ್ರುತನಿಧಿಃ ಶ್ರುತಶ್ರವ್ಯವಿಶಾರದಃ |
ವ್ಯವಸ್ಯ ಮನಸಃ ಶಾಂತಿಮಗಚ್ಛತ್ ಪಾಂಡುನಂದನಃ ॥29॥
ವೇದವನ್ನು ಶ್ರವಣ ಮಾಡಿದ, ವಿದ್ಯಾನಿಧಿಯಾದ, ಕೇಳಬೇಕಾದುದನ್ನು ಕೇಳುವುದರಲ್ಲಿವಿಶಾರದನಾದ, ಪಾಂಡುನಂದನನಾದ ಅವನು ತನ್ನ ಮನಸ್ಸಿನಿಂದ ವಿಚಾರ ಮಾಡಿ ನಿರ್ಧರಿಸಿ ಶಾಂತಿಯನ್ನು ಹೊಂದಿದನು.
ಸ ತೈಃ ಪರಿವೃತೋ ರಾಜಾ ನಕ್ಷತ್ರೈರಿವ ಚಂದ್ರಮಾಃ |
ಧೃತರಾಷ್ಟ್ರಂ ಪುರಸ್ಕೃತ್ಯ ಸ್ವಪುರಂ ಪ್ರವಿವೇಶ ಹ ॥30॥
ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆ ರಾಜನಾದ ಯುಧಿಷ್ಠಿರನು ಅವರೆ- ಲ್ಲರಿಂದಲೂ ಸುತ್ತುವರಿಯಲ್ಪಟ್ಟು ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ತನ್ನ ಪಟ್ಟಣವನ್ನು ಪ್ರವೇಶಿಸಿದನು.
ಪ್ರವಿವಿಕ್ಷುಃ ಸ ಧರ್ಮಜ್ಞಃ ಕುಂತೀಪುತ್ರೋ ಯುಧಿಷ್ಠಿರಃ |
ಅರ್ಚಯಾಮಾಸ ದೇವಾಂಶ್ಚ ಬ್ರಾಹ್ಮಣಾಂಶ್ಚ ಸಹಸ್ರಶಃ ॥31॥
ಧರ್ಮಜ್ಞನಾದ ಕುಂತೀಪುತ್ರನಾದ ಯುಧಿಷ್ಠಿರನು ಪುರವನ್ನು ಪ್ರವೇಶ ಮಾಡಲು ಬಯಸಿ ಮೊದಲು ದೇವತೆಗಳನ್ನೂ ಮತ್ತು ಸಹಸ್ರಾರುಸಂಖ್ಯಾಕರಾದ ಬ್ರಾಹ್ಮಣ- ರನ್ನೂ ಪೂಜಿಸಿದನು.
ತತೋ ರಥಂ ನವಂ ಶುಭ್ರಂ ಕಂಬಳಾಜಿನಸಂವೃತಮ್ |
ಯುಕ್ತಂ ಷೋಡಶಭಿರ್ಗೋಭಿಃ ಪಾಂಡರೈಃ ಶುಭಲಕ್ಷಣೈಃ ॥32॥
ಮಂತ್ರೈರಭ್ಯರ್ಚಿತಃ ಪುಣ್ಯೈಃ ಸ್ತೂಯಮಾನೋ ಮಹರ್ಷಿಭಿಃ |
ಆರುರೋಹ ಯಥಾ ದೇವಃ ಸೋಮೋಽಮೃತಮಯಂ ರಥಮ್ ॥33॥
ಅನಂತರ ಶುಭಲಕ್ಷಣವುಳ್ಳ ಹದಿನಾರು ಶ್ವೇತಾಶ್ವಗಳನ್ನು ಹೂಡಿದ, ರತ್ನಕಂಬಳಿ ಮತ್ತು ಅಜಿನಗಳಿಂದ ಸುತ್ತುವರೆಯಲ್ಪಟ್ಟ, ಶುಭ್ರವಾದ ಹೊಸದಾದ ರಥವನ್ನು ಮಹರ್ಷಿಗಳಿಂದ ಪುಣ್ಯವಚನಗಳಿಂದ ಸ್ತೋತ್ರಮಾಡಲ್ಪಟ್ಟು ಮತ್ತು ಮಂತ್ರಗಳಿಂದ ಸತ್ಕರಿಸಲ್ಪಟ್ಟು ಚಂದ್ರನು ಅಮೃತಮಯವಾದ ರಥವನ್ನು ಏರಿದಂತೆ ಏರಿದನು.
ಜಗ್ರಾಹ ರಶ್ಮೀನ್ ಕೌಂತೇಯೋ ಭೀಮೋ ಭೀಮಪರಾಕ್ರಮಃ |
ಅರ್ಜುನಃ ಪಾಂಡರಂ ಛತ್ರಂ ಧಾರಯಾಮಾಸ ಭಾನುಮತ್ ॥34॥
ಕುಂತೀಪುತ್ರನಾದ ಭಯಂಕರಪರಾಕ್ರಮವುಳ್ಳ ಭೀಮಸೇನನು ಅಶ್ವಗಳ ಕಡಿ- ವಾಣಗಳನ್ನು ಹಿಡಿದನು. ಅರ್ಜುನನು ಪ್ರಕಾಶಮಾನವಾದ ಶ್ವೇತಚ್ಛತ್ರವನ್ನು ಹಿಡಿ- ದನು.
ಧ್ರಿಯಮಾಣಂ ತು ತಚ್ಛತ್ರಂ ಪಾಂಡರಸ್ತಸ್ಯ ಮೂರ್ಧನಿ |
ಶುಶುಭೇ ತಾರಕಾರಾಜಸಿತಮಭ್ರಮಿವಾಂಬರೇ ॥35॥
ಅವನ ಶಿರಸ್ಸಿನ ಮೇಲೆ ಹಿಡಿದ ಆ ಶ್ವೇತಚ್ಛತ್ರವು ಆಕಾಶದಲ್ಲಿ ಚಂದ್ರನಿಂದ ಕೂಡಿದ ಮೋಡದಂತೆ ಶೋಭಿಸಿತು.
ಚಾಮರವ್ಯಜನೇ ಚಾಸ್ಯ ವೀರೌ ಜಗೃಹತುಸ್ತದಾ |
ಚಂದ್ರರಶ್ಮಿಪ್ರಭೇ ಶುಭ್ರೇ ಮಾದ್ರೀಪುತ್ರಾವಲಂಕೃತೇ ॥36॥
ಮಾದ್ರೀಪುತ್ರರಾದ ವೀರರಾದ ನಕುಲಸಹದೇವರು ಚಂದ್ರಕಿರಣಗಳ ಕಾಂತಿ- ಯುಳ್ಳ ಶುಭ್ರವಾದ ಅಲಂಕೃತವಾದ ಚಾಮರವ್ಯಜನಗಳನ್ನು ಹಿಡಿದರು.
ತೇ ಪಂಚ ರಥಮಾಸ್ಥಾಯ ಭ್ರಾತರಃ ಸಮಲಂಕೃತಾಃ |
ಭೂತಾನೀವ ಸಮಸ್ತಾನಿ ರಾಜನ್ ದದೃಶಿರೇ ತದಾ ॥37॥
ಎಲೈ ರಾಜನೇ! ಅಲಂಕೃತರಾಗಿ ರಥವನ್ನು ಏರಿದ ಆ ಐವರು ಸಹೋದರರು ಒಂದು ಗೂಡಿದ ಪಂಚಭೂತಗಳಂತೆ ಆಗ ಕಂಡುಬಂದರು.
ಆಸ್ಥಾಯ ತು ರಥಂ ಶುಭ್ರಂ ಯುಕ್ತಮಶ್ವೈರ್ಮಹಾಜವೈಃ |

ಅನ್ವಯಾತ್ ಪೃಷ್ಠತೋ ರಾಜನ್ ಯುಯುತ್ಸುಃ ಪಾಂಡವಾಗ್ರಜಮ್ ॥38
ಎಲೈ ರಾಜನ್! ಯುಯುತ್ಸುವು ಮಹಾವೇಗವುಳ್ಳ ಅಶ್ವಗಳಿಂದ ಕೂಡಿದ ಶುಭ್ರವಾದ ರಥವನ್ನು ಏರಿ ಪಾಂಡವರ ಹಿರಿಯನಾದ ಯುಧಿಷ್ಠಿರನನ್ನು ಹಿಂಬಾಲಿ- ಸಿದನು.
ರಥಂ ಹೇಮಮಯಂ ಶುಭ್ರಂ ಸೈನ್ಯಸುಗ್ರೀವಯೋಜಿತಮ್ |
ಸಹ ಸಾತ್ಯಕಿನಾ ಕೃಷ್ಣಃ ಸಮಾಸ್ಥಾಯಾನ್ವಯಾತ್ ಕುರೂನ್ ॥39॥
ಕೃಷ್ಣನು ಸೈನ್ಯಸುಗ್ರೀವ ಅಶ್ವಗಳನ್ನು ಹೂಡಿದ ಸುವರ್ಣಮಯವಾದ ಶುಭ್ರ- ವಾದ ರಥವನ್ನು ಸಾತ್ಯಕಿಯ ಜೊತೆಯಲ್ಲಿ ಏರಿ, ಕುರುಗಳನ್ನು ಹಿಂಬಾಲಿಸಿದನು.
ನರಯಾನೇನ ತು ಜ್ಯೇಷ್ಠಃ ಪಿತಾ ಪಾರ್ಥಸ್ಯ ಭಾರತ |
ಅಗ್ರತೋ ಧರ್ಮರಾಜಸ್ಯ ಗಾಂಧಾರೀಸಹಿತೋ ಯಯೌ ॥40॥
ಎಲೈ ಭಾರತನೇ! ವೃದ್ಧನೂ ತಂದೆಯೂ ಆದ ಧೃತರಾಷ್ಟ್ರನು ಧರ್ಮರಾಜನ ಮುಂಭಾಗದಲ್ಲಿ ಗಾಂಧಾರಿಯ ಜೊತೆಯಲ್ಲಿ ಪಲ್ಲಕ್ಕಿಯ ಮೇಲೆ ಹೊರಟನು.
ಕುರುಸ್ತ್ರಿಯಶ್ಚ ತಾಃ ಸರ್ವಾಃ ಕುಂತೀ ಕೃಷ್ಣಾ ಚ ದ್ರೌಪದೀ |
ಯಾನೈರುಚ್ಚಾವಚೈರ್ಜಗ್ಮುರ್ವಿದುರೇಣ ಪುರಸ್ಕೃತಾಃ ॥41॥
ಎಲ್ಲಾ ಕುರುಸ್ತ್ರೀಯರೂ ಕುಂತೀ ಮತ್ತು ದ್ರುಪದಪುತ್ರಿಯಾದ ಕೃಷ್ಣೆ ಇವರೂ ಶ್ರೇಷ್ಠ-ಕನಿಷ್ಠವಾದ ವಾಹನಗಳನ್ನು ಏರಿ, ವಿದುರನನ್ನು ಮುಂದೆ ಮಾಡಿಕೊಂಡು ಹೊರಟರು.
ತತೋ ರಥಾಶ್ಚ ಬಹುಲಾ ನಾಗಾಶ್ಚ ಸಮಲಂಕೃತಾಃ |
ಪಾದಾತಾಶ್ಚ ಹಯಾಶ್ಚೈವ ಪೃಷ್ಠತಃ ಸಮನುವ್ರಜನ್ ॥42॥
ಅನಂತರ ಅನೇಕ ರಥಗಳು, ಅಲಂಕೃತವಾದ ಗಜಗಳು, ಅಶ್ವಗಳು ಮತ್ತು ಪದಾತಿಗಳು ಅವರನ್ನು ಹಿಂಬಾಲಿಸಿದವು.
ತತೋ ವೈತಾಲಿಕೈಃ ಸೂತೈರ್ಮಾಗಧೈಶ್ಚ ಸುಭಾಷಿತೈಃ |
ಸ್ತೂಯಮಾನೋ ಯಯೌ ರಾಜಾ ನಗರಂ ನಾಗಸಾಹ್ವಯಮ್ ॥43॥
ಅನಂತರ ವೈತಾಲಿಕರಿಂದಲೂ, ಒಳ್ಳೆಯ ರೀತಿಯಲ್ಲಿ ಸ್ತೋತ್ರವನ್ನು ಮಾಡುವ ಸೂತಮಾಗಧರಿಂದಲೂ ಸ್ತೋತ್ರಮಾಡಲ್ಪಟ್ಟು ಯುಧಿಷ್ಠಿರರಾಜನು ಹಸ್ತಿನಪುರಕ್ಕೆ ಹೊರಟನು.
ತತ್ ಪ್ರಯಾಣಂ ಮಹಾಬಾಹೋರ್ಬಭೂವಾಪ್ರತಿಮಂ ಭುವಿ |
ಆಕುಲಾಕುಲಮುತ್ಕೃಷ್ಟಂ ಹೃಷ್ಟಪುಷ್ಟಜನಾನ್ವಿತಮ್ ॥44॥
ಸಂತೋಷದಿಂದ ಕೂಡಿದ ಜನಗಳಿಂದ ಬಹಳವಾಗಿ ನಿಬಿಡವಾಗಿ ಅನೇಕ ರೀತಿಯ ಜಯಘೋಷಗಳಿಂದ ಕೂಡಿದ ಮಹಾಬಾಹುವಾದ ಯುಧಿಷ್ಠಿರನ ಆ ಪ್ರಯಾಣವು ಭೂಮಿಯಲ್ಲಿ ಅಸದೃಶವಾಗಿದ್ದಿತು.
ಅಭಿಯಾನೇ ತು ಪಾರ್ಥಸ್ಯ ನರೈರ್ನಗರವಾಸಿಭಿಃ |
ನಗರಂ ರಾಜಮಾರ್ಗಶ್ಚ ಯಥಾವತ್ ಸಮಲಂಕೃತಮ್ ॥45॥
ಕುಂತೀಪುತ್ರನಾದ ಯುಧಿಷ್ಠಿರನು ನಗರವನ್ನು ಪ್ರವೇಶಿಸುತ್ತಿರಲು ನಗರವಾಸಿ- ಗಳಾದ ಜನರು ನಗರವನ್ನು ಮತ್ತು ರಾಜಮಾರ್ಗವನ್ನು ಚೆನ್ನಾಗಿ ಅಲಂಕಾರ ಮಾಡಿದ್ದರು.
ಪಾಂಡರೇಣ ಚ ಮಾಲ್ಯೇನ ಪತಾಕಾಭಿಶ್ಚ ವೇದಿಭಿಃ |
ಸಂವೃತೋ ರಾಜಮಾರ್ಗಶ್ಚ ಧೂಪನೈಶ್ಚ ಸುಧೂಪಿತಃ ॥46॥
ರಾಜಮಾರ್ಗದಲ್ಲಿ ಶ್ವೇತಪುಷ್ಪದ ಮಾಲೆಗಳು, ಪತಾಕೆಗಳು, ವೇದಿಕೆಗಳು, ಒಳ್ಳೆಯ ಧೂಪಗಳು ನಿಬಿಡವಾಗಿದ್ದವು.
ಅಥ ಚೂರ್ಣೈಶ್ಚ ಗಂಧಾನಾಂ ನಾನಾಪುಷ್ಪೈಃ ಪ್ರಿಯಂಗುಭಿಃ |
ಮಾಲ್ಯದಾಮಭಿರಾಸಕ್ತೈಃ ರಾಜವೇಶ್ಮಾಭಿಸಂವೃತಮ್ ॥47॥
ರಾಜಮಾರ್ಗವು ಗಂಧದ ಚೂರ್ಣಗಳು, ನಾನಾ ಪುಷ್ಪಗಳು, ಪ್ರಿಯಂಗು (ನವಣೆ) ಮೊದಲಾದ ಮಂಗಳಧಾನ್ಯಗಳು, ಹೂಮಾಲೆಗಳು ಇವುಗಳಿಂದ ಅಲಂಕೃತವಾಗಿದ್ದ ರಾಜರಿಗೆ ಯೋಗ್ಯವಾದ ಗೃಹಗಳಿಂದ ಕೂಡಿದ್ದಿತು.
ಕುಂಭಾಶ್ಚ ನಗರದ್ವಾರಿ ವಾರಿಪೂರ್ಣಾ ದೃಢಾ ನವಾಃ |
ಕನ್ಯಾಃ ಸುಮನಸಶ್ಚಾಗಾಃ ಸ್ಥಾಪಿತಾಸ್ತತ್ರ ತತ್ರ ಹ ॥48॥
ನಗರದ ಪ್ರವೇಶದ್ವಾರದಲ್ಲಿ ದೃಢವಾದ ಹೊಸದಾದ ಜಲಪೂರ್ಣವಾದ ಕುಂಭಗಳು, ಅಲಂಕೃತರಾದ ಕನ್ಯೆಯರು, ಪುಷ್ಪಗಳು, ಹೋತಗಳು ಅಲ್ಲಲ್ಲಿ ಇಡಲ್ಪಟ್ಟಿದ್ದವು.
ತಥಾ ಸ್ವಲಂಕೃತದ್ವಾರಂ ನಗರಂ ಪಾಂಡುನಂದನಃ |
ಸ್ತೂಯಮಾನಃ ಶುಭೈರ್ವಾಕ್ಯೈಃ ಪ್ರವಿವೇಶ ಸುಹೃದ್ವೃತಃ ॥49॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಅಷ್ಟತ್ರಿಂಶೋಽಧ್ಯಾಯಃ ॥38॥
ಪಾಂಡುನಂದನನಾದ ಯುಧಿಷ್ಠಿರನು ತನ್ನ ಸುಹೃಜ್ಜನಗಳಿಂದ ಕೂಡಿದವನಾಗಿ, ಶುಭವಾಕ್ಯಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಪ್ರವೇಶದ್ವಾರವನ್ನೇ ಅಷ್ಟು ಚೆನ್ನಾಗಿ ಅಲಂಕಾರ ಮಾಡಿದ ನಗರವನ್ನು ಪ್ರವೇಶಿಸಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು.
39. ಮೂವತ್ತೊಂಭತ್ತನೆಯ ಅಧ್ಯಾಯ
ಯುಧಿಷ್ಠಿರನ ರಾಜಗೃಹಪ್ರವೇಶ ಮತ್ತು ಸಭಾಪ್ರವೇಶ. ಚಾರ್ವಾಕರಾಕ್ಷಸನಿಂದ

ಯುಧಿಷ್ಠಿರನ ನಿಂದೆ. ಬ್ರಾಹ್ಮಣರಿಂದ ಚಾರ್ವಾಕನ ಭಸ್ಮೀಕರಣ.
ವೈಶಂಪಾಯನಃ
ಪ್ರವೇಶನೇ ತು ಪಾರ್ಥಾನಾಂ ಜನಸ್ಯ ಪುರವಾಸಿನಃ |
ದಿದೃಕ್ಷೂಣಾಂ ಸಹಸ್ರಾಣಿ ಸಮಾಜಗ್ಮುರ್ಬಹೂನ್ಯಥ ||1||
ವೈಶಂಪಾಯನರು ಪಾಂಡವರು ಪುರವನ್ನು ಪ್ರವೇಶಿಸುತ್ತಿರುವಾಗ ಅವರನ್ನು ನೋಡಲು ಬಯಸಿದ ಪುರಜನರು ಅನೇಕಸಹಸ್ರಸಂಖ್ಯೆಗಳಲ್ಲಿ ರಾಜಮಾರ್ಗದಲ್ಲಿ ನೆರೆದರು.
ಸ ರಾಜಮಾರ್ಗಃ ಶುಶುಭೇ ಸಮಲಂಕೃತಚತ್ವರಃ |
ಯಥಾ ಚಂದ್ರೋದಯೇ ರಾಜನ್ ವರ್ಧಮಾನೋ ಮಹೋದಧಿಃ ||2||
ಎಲೈ ರಾಜನೇ! ಚಂದ್ರೋದಯಕಾಲದಲ್ಲಿ ಉಕ್ಕುವ ಸಮುದ್ರದಂತೆ ಆ ರಾಜ- ಮಾರ್ಗವು ಅಲಂಕೃತವಾದ ಅಂಗಳಗಳಿಂದ ಮತ್ತು ಚತುಷ್ಪಥಗಳಿಂದ ಕೂಡಿ ಶೋಭಿಸಿತು.
ಗೃಹಾಣಿ ರಾಜಮಾರ್ಗೇ ತು ರತ್ನವಂತಿ ಬೃಹಂತಿ ಚ |
ಪ್ರಾಕಂಪಂತೇವ ಭಾರೇಣ ಸ್ತ್ರೀಣಾಂ ಪೂರ್ಣಾನಿ ಭಾರತ ||3||
ಎಲೈ ಭಾರತನೇ! ರಾಜಮಾರ್ಗದಲ್ಲಿದ್ದ ರತ್ನಪೂರ್ಣವಾದ ದೊಡ್ಡ ಗೃಹಗಳು ಸ್ತ್ರೀಯರ ಭಾರದಿಂದ ಕಂಪಿಸುವಂತೆ ತೋರುತ್ತಿದ್ದವು.
ತಾಃ ಶನೈರಿವ ಸವ್ರೀಡಂ ಪ್ರಶಶಂಸುರ್ಯುಧಿಷ್ಠಿರಮ್ |
ಭೀಮಸೇನಾರ್ಜುನೌ ಚೈವ ಮಾದ್ರೀಪುತ್ರೌ ಚ ಪಾಂಡವೌ ||4||
ಆ ಸ್ತ್ರೀಯರು ನಾಚಿಕೆಯಿಂದ ನಿಧಾನವಾಗಿ ಪಾಂಡವರಾದ ಯುಧಿಷ್ಠಿರನನ್ನೂ, ಭೀಮಸೇನಾರ್ಜುನರನ್ನೂ ಹಾಗೆಯೇ ಮಾದ್ರೀಪುತ್ರರನ್ನೂ ಪ್ರಶಂಸೆ ಮಾಡಿದರು.
ಧನ್ಯಾ ತ್ವಮಸಿ ಪಾಂಚಾಲಿ ಯಾ ತ್ವಂ ಪುರುಷಸತ್ತಮಾನ್ |
ಉಪತಿಷ್ಠಸಿ ಕಲ್ಯಾಣಿ ಮಹರ್ಷೀನಿವ ಗೌತಮೀ ||5||
ದ್ರೌಪದಿಯೇ! ಕಲ್ಯಾಣಿಯೇ! ಮಹರ್ಷಿಗಳಂತಿರುವ ಪುರುಷಶ್ರೇಷ್ಠರಾದ ಪಾಂಡವರನ್ನು ಅಹಲ್ಯೆಯಂತೆ ಸೇವಿಸುವ ನೀನು ಧನ್ಯಳಾದವಳು.
ತವ ಕರ್ಮಾಣ್ಯಮೋಘಾನಿ ವ್ರತಚರ್ಯಾ ಚ ಭಾಮಿನಿ |
ಇತಿ ಕೃಷ್ಣಾಂ ಮಹಾರಾಜ ಪ್ರಶಶಂಸುಸ್ತದಾ ಸ್ತ್ರಿಯಃ ||6||
ಎಲೌ ಭಾಮಿನಿಯೇ! ನಿನ್ನ ಕಾರ್ಯಗಳು ಮತ್ತು ವ್ರತಚರ್ಯೆಯು ಅಮೋಘ -ವಾದವುಗಳು ಎಂದು ಎಲೈ ಮಹಾರಾಜನೇ! ಸ್ತ್ರೀಯರು ಆಗ ದ್ರೌಪದಿಯನ್ನು ಪ್ರಶಂಸೆ ಮಾಡಿದರು.
ಪ್ರಶಂಸಾವಚನೈಸ್ತಾಸಾಂ ಮಿಥಃಶಬ್ದೈಶ್ಚ ಭಾರತ |
ಪ್ರೀತಿಜೈಶ್ಚ ತದಾ ಶಬ್ದೈಃ ಪುರಮಾಸೀತ್ ಸಮಾಕುಲಮ್ ||7||
ಎಲೈ ಭಾರತನೇ! ಆಗ ಅಂತಹ ಪ್ರಶಂಸಾವಚನಗಳಿಂದಲೂ, ಸಂತೋಷದಿಂದ ಪ್ರಜೆಗಳು ಪರಸ್ಪರ ಮಾತನಾಡುವ ಶಬ್ದಗಳಿಂದಲೂ ಆ ಪಟ್ಟಣವು ತುಂಬಿ ಹೋಯಿತು.
ತಮತೀತ್ಯ ಯಥಾಯುಕ್ತಂ ರಾಜಮಾರ್ಗಂ ಯುಧಿಷ್ಠಿರಃ |
ಅಲಂಕೃತಂ ಶೋಭಮಾನಮುಪಯಾದ್ ರಾಜವೇಶ್ಮ ಹ ||8||
ಯುಧಿಷ್ಠಿರನು ಆ ರೀತಿಯಲ್ಲಿ ಅಲಂಕೃತವಾಗಿದ್ದ ರಾಜಮಾರ್ಗವನ್ನು ದಾಟಿ, ಅಲಂಕೃತವಾಗಿ ಶೋಭಿಸುತ್ತಿದ್ದ ರಾಜಗೃಹದ ಸಮೀಪಕ್ಕೆ ಬಂದನು.
ತತಃ ಪ್ರಕೃತಯಃ ಸರ್ವಾಃ ಪೌರಜಾನಪದಾಸ್ತಥಾ |
ಊಚುಃ ಕಥಾಃ ಕರ್ಣಸುಖಾಃ ಸಮುಪೇತ್ಯ ತತಸ್ತತಃ ||9||
ಆಗ ರಾಜಧಾನಿಯ ಮತ್ತು ರಾಷ್ಟ್ರದ ಪ್ರಜೆಗಳೆಲ್ಲರೂ ಅಲ್ಲಲ್ಲಿಂದ ಬಂದು ಸೇರಿ, ಕರ್ಣಸುಖಕರವಾದ ಮಾತುಗಳನ್ನು ಆಡಿದರು.
ದಿಷ್ಟ್ಯಾ ಜಯಸಿ ರಾಜೇಂದ್ರ ಶತ್ರೂನ್ ಶತ್ರುನಿಷೂದನ |
ದಿಷ್ಟ್ಯಾರಾಜ್ಯಂ ಪುನಃ ಪ್ರಾಪ್ತಂ ಧರ್ಮೇಣ ಚ ಬಲೇನ ಚ ||10||
ಎಲೈ ರಾಜೇಂದ್ರನೇ! ದೇವರ ದಯದಿಂದ ನೀನು ಜಯವನ್ನು ಗಳಿಸಿದ್ದೀಯೆ. ಎಲೈ ಶತ್ರುಸಂಹಾರಕನೇ! ನೀನು ಶತ್ರುಗಳನ್ನು ಸಂಹರಿಸಿ, ದೇವರ ದಯದಿಂದ ಮತ್ತು ನಿನ್ನ ಧರ್ಮ ಮತ್ತು ಬಲದಿಂದ ರಾಜ್ಯವನ್ನು ಪುನಃ ಪಡೆದಿದ್ದೀಯೆ.
ಭವ ನಸ್ತ್ವಂ ಮಹಾರಾಜ ರಾಜೇಹ ಶರದಾಂ ಶತಮ್ |
ಪ್ರಜಾಃ ಪಾಲಯ ಧರ್ಮೇಣ ಯಥೇಂದ್ರಸ್ತ್ರಿದಿವಂ ನೃಪ ||11||
ಎಲೈ ಮಹಾರಾಜನೇ! ನೀನು ನೂರು ವರ್ಷಗಳ ಕಾಲ ಇಲ್ಲಿ ನಮಗೆ ರಾಜ- ನಾಗು. ಎಲೈ ರಾಜನೇ! ಇಂದ್ರನು ಸ್ವರ್ಗವನ್ನು ಆಳುವಂತೆ ಧರ್ಮದಿಂದ ನಮ್ಮನ್ನು ರಕ್ಷಿಸುವವನಾಗು.
ಏವಂ ರಾಜಕುಲದ್ವಾರಿ ಮಂಗಲ್ಯೈರಭಿಪೂಜಿತಃ |
ಆಶೀರ್ವಾದಾನ್ ದ್ವಿಜೈರುಕ್ತಾನ್ ಪ್ರತಿಗೃಹ್ಯ ಸಮಂತತಃ ||12||
ಪ್ರವಿಶ್ಯ ಭವನಂ ರಾಜಾ ದೇವರಾಜಗೃಹೋಪಮಮ್ |
ಶ್ರುತ್ವಾ ವಿಜಯಸಂಯುಕ್ತಂ ರಥಾತ್ ಪಶ್ಚಾದವಾತರತ್ ||13||
ಈ ರೀತಿಯಲ್ಲಿ ರಾಜಗೃಹದ ದ್ವಾರದಲ್ಲಿ ಮಂಗಳ ವಚನಗಳಿಂದ ಸತ್ಕೃತನಾಗಿ, ಎಲ್ಲ ಕಡೆಗಳಲ್ಲಿಯೂ ನೆರೆದ ಬ್ರಾಹ್ಮಣರಿಂದ ಹೇಳಲ್ಪಟ್ಟ ಆಶೀರ್ವಾದಗಳನ್ನು ಸ್ವೀಕರಿಸಿ, ದೇವರಾಜನಾದ ಇಂದ್ರನ ಮನೆಯಂತಿದ್ದ ರಾಜಭವನವನ್ನು ಪ್ರವೇಶಿಸಿ, ಜಯಕಾರದ

ವಚನಗಳನ್ನು ಕೇಳಿ ರಾಜನಾದ ಯುಧಿಷ್ಠಿರನು ತನ್ನ ರಥದಿಂದ ಇಳಿದನು.
ಪ್ರವಿಶ್ಯಾಭ್ಯಂತರಂ ಶ್ರೀಮಾನ್ ದೈವತಾನ್ಯಭಿಗಮ್ಯ ಚ |
ಪೂಜಯಾಮಾಸ ರತ್ನೈಶ್ಚ ಗಂಧೈರ್ಮಾಲ್ಯೈಶ್ಚ ಸರ್ವಶಃ ॥14॥
ಸಂಪದ್ಯುಕ್ತನಾದ ಅವನು ರಾಜಭವನದ ಒಳಭಾಗವನ್ನು ಪ್ರವೇಶಿಸಿ, ದೇವತೆ- ಗಳಿಗೆ ನಮಸ್ಕಾರವನ್ನು ಮಾಡಿ, ರತ್ನಗಳಿಂದಲೂ, ಗಂಧಮಾಲ್ಯಗಳಿಂದಲೂ ಎಲ್ಲ ಕಡೆಗಳಲ್ಲಿಯೂ ದೇವತೆಗಳನ್ನು ಪೂಜಿಸಿದನು.
ನಿಶ್ಚಕ್ರಾಮ ತತಃ ಶ್ರೀಮಾನ್ ಪುನರೇವ ಮಹಾಯಶಾಃ |
ದದರ್ಶ ಬ್ರಾಹ್ಮಣಾಂಶ್ಚೈವ ಸೋಽಭಿರೂಪಾನುಪಸ್ಥಿತಾನ್ ॥15॥
ಮಹಾಕೀರ್ತಿವಂತನೂ ಸಂಪದ್ಯುಕ್ತನೂ ಆದ ಯುಧಿಷ್ಠಿರನು ಅನಂತರ ಹೊರಗೆ ಬಂದು ಯೋಗ್ಯವಾದ ರೀತಿಯಲ್ಲಿ ಉಪಸ್ಥಿತರಾಗಿದ್ದ ಬ್ರಾಹ್ಮಣರನ್ನು ನೋಡಿದನು.
ಸ ಸಂವೃತಸ್ತದಾ ವಿಪ್ರೈರಾಶೀರ್ವಾದವಿವಕ್ಷುಭಿಃ |
ಶುಶುಭೇ ವಿಮಲಶ್ಚಂದ್ರಸ್ತಾರಾಗಣವೃತೋ ಯಥಾ ॥16॥
ಆಶೀರ್ವಾದ ವಚನಗಳನ್ನು ಹೇಳಲು ಬಯಸಿದ ಬ್ರಾಹ್ಮಣರಿಂದ ಸುತ್ತುವರಿ- ಯಲ್ಪಟ್ಟ ಅವನು ಆಗ ನಕ್ಷತ್ರಗಣಗಳಿಂದ ಸಂವೃತನಾದ ಪರಿಶುದ್ಧನಾದ ಚಂದ್ರನಂತೆ ಶೋಭಿಸಿದನು.
ತಾನ್ ಸ ಸಂಪೂಜಯಾಮಾಸ ಕೌಂತೇಯೋ ವಿಧಿವದ್ ದ್ವಿಜಾನ್ |
ಧೌಮ್ಯಂ ಗುರುಂ ಪುರಸ್ಕೃತ್ಯ ಜ್ಯೇಷ್ಠಂ ಪಿತರಮೇವ ಚ ॥17॥
ಸುಮನೋಮೋದಕೈ ರತ್ನೈರ್ಹಿರಣ್ಯೇನ ಚ ಭೂರಿಣಾ |
ಗೋಭಿರ್ವಸ್ತ್ರೈಶ್ಚ ರಾಜೇಂದ್ರ ವಿವಿಧೈಶ್ಚ ಕಿಮಿಚ್ಛಕೈಃ ॥18॥
ಎಲೈ ರಾಜೇಂದ್ರನೇ! ಆಗ ಕುಂತೀಪುತ್ರನಾದ ಯುಧಿಷ್ಠಿರನು ಗುರುಗಳಾದ ಧೌಮ್ಯರನ್ನು, ಮತ್ತು ಜ್ಯೇಷ್ಠನಾದ ತಂದೆಯಾದ ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ಪುಷ್ಪಗಳಿಂದಲೂ ಮೋದಕಗಳಿಂದಲೂ ಬಹುವಾದ ಸುವರ್ಣ- ರತ್ನಗಳಿಂದಲೂ ಗೋವುಗಳಿಂದಲೂ ವಸ್ತ್ರಗಳಿಂದಲೂ ಅವರು ಬಯಸಿದ ಇನ್ನೂ ಅನೇಕವಸ್ತುಗಳಿಂದಲೂ ಆ ಬ್ರಾಹ್ಮಣರನ್ನು ವಿಧಿವತ್ತಾಗಿ ಪೂಜಿಸಿದನು.
ತತಃ ಪುಣ್ಯಾಹಘೋಷೋಽಭೂದ್ ದಿವಂ ಸ್ತಬ್ಧ್ವೇವ ಭಾರತ |
ಸುಹೃದಾಂ ಹರ್ಷಜನನಃ ಪುಣ್ಯಃ ಶ್ರುತಿಸುಖಾವಹಃ ॥19॥
ಎಲೈ ಭಾರತನೇ! ಅನಂತರ ಸಹೃಜ್ಜನರ ಸಂತೋಷದಿಂದ ಉಂಟಾದ ಕರ್ಣ- ಸುಖಕರವಾದ ಪವಿತ್ರವಾದ ಪುಣ್ಯಾಹಘೋಷವು ಆಕಾಶವನ್ನು ಆವರಿಸುವಂತೆ ಕೇಳಿಬಂದಿತು.
ಹಂಸವನ್ನೇದುಷಾಂ ರಾಜನ್ ದ್ವಿಜಾನಾಂ ತತ್ರ ಭಾರತೀ |
ಶುಶ್ರುವೇ ವೇದವಿದುಷೋ ಪುಷ್ಕಲಾರ್ಥಪದಾಕ್ಷರಾ ॥20॥
ಎಲೈ ರಾಜನೇ! ಹಂಸದಂತೆ ಉಲಿಯುವ ವೇದವಿದ್ವಾಂಸರಾದ ಬ್ರಾಹ್ಮಣರ ಬಹ್ವರ್ಥಗರ್ಭಿತವಾದ ಪದಾಕ್ಷರಗಳಿಂದ ಕೂಡಿದ ಪುಣ್ಯಾಹಶಬ್ದವು ಕೇಳಿಬಂದಿತು.
ತತೋ ದುಂದುಭಿನಿರ್ಘೋಷಃ ಶಂಖಾನಾಂ ಚ ಮನೋರಮಃ |
ಜಯಂ ಪ್ರವದತಾಂ ತತ್ರ ಸ್ವನಃ ಪ್ರಾದುರಭೂನ್ನೃಪ ॥21॥
ಎಲೈ ರಾಜನೇ! ಅನಂತರ ಜಯಕಾರವನ್ನು ಮಾಡುವವರ ದುಂದುಭಿ- ಘೋಷವು ಮತ್ತು ಮನೋಹರವಾದ ಶಂಖಗಳ ಶಬ್ದವು ಕೇಳಿಬಂದಿತು.
ನಿಃಶಬ್ದೇ ಚ ಸ್ಥಿತೇ ತತ್ರ ತತೋ ವಿಪ್ರಜನೇ ಪುನಃ |
ರಾಜಾನಂ ಬ್ರಾಹ್ಮಣಚ್ಛದ್ಮಾ ಚಾರ್ವಾಕೋ ರಾಕ್ಷಸೋಽಬ್ರವೀತ್ ॥22॥
ಪುನಃ ಬ್ರಾಹ್ಮಣರು ಮೌನವಾಗಿ ನಿಂತು ನಿಃಶಬ್ದವಾಗಿರುವಾಗ ಕಪಟಬ್ರಾಹ್ಮಣ- ವೇಷದಲ್ಲಿದ್ದ ಚಾರ್ವಾಕರಾಕ್ಷಸನು ಯುಧಿಷ್ಠಿರನನ್ನು ಕುರಿತು ಹೇಳಿದನು.
ತತ್ರ ದುರ್ಯೋಧನಸಖಾ ಭಿಕ್ಷುರೂಪೇಣ ಸಂವೃತಃ |
ಸಾಕ್ಷಃ(ಸಾಂಖ್ಯಃ) ಶಿಖೀ ತ್ರಿದಂಡೀ ಚ ಧೃಷ್ಟೋ ವಿಗತಸಾಧ್ವಸಃ ॥23॥
ಅಲ್ಲಿ ಬ್ರಾಹ್ಮಣರ ಮಧ್ಯದಲ್ಲಿ ದುರ್ಯೋಧನನ ಸಖನಾದ ಸಾಂಖ್ಯಶಾಸ್ತ್ರವನ್ನು ಓದಿದ ಆ ಚಾರ್ವಾಕನು ಅಕ್ಷಮಾಲೆಯನ್ನು ಮತ್ತು ಶಿಖೆಯನ್ನು ಧರಿಸಿ, ತ್ರಿದಂಡಿ- ಯಾಗಿ, ನಿರ್ಭಯನಾಗಿ, ಧಾಷ್ಟ್ರ್ಯವನ್ನು ಹೊಂದಿ ಸನ್ಯಾಸಿಯ ರೂಪದಲ್ಲಿದ್ದನು.
ವೃತಃ ಸರ್ವೈಸ್ತದಾ ವಿಪ್ರೈರಾಶೀರ್ವಾದವಿವಕ್ಷುಭಿಃ |
ಪರಸಹಸ್ರೈಃ ರಾಜೇಂದ್ರ ತಪೋನಿಯಮಸಂಸ್ಥಿತೈಃ ॥24॥
ಎಲೈ ರಾಜೇಂದ್ರನೇ! ಅವನು ತಪೋನಿಯಮಯುಕ್ತರಾದ ಆಶೀರ್ವಾದವನ್ನು ಹೇಳಲು ಇಚ್ಛಿಸಿದ ಸಹಸ್ರಾರು ಬ್ರಾಹ್ಮಣರಿಂದ ಪರಿವೃತನಾಗಿದ್ದನು.
ಸ ದುಷ್ಟಃ ಪಾಪಮಾಶಂಸನ್ ಪಾಂಡವಾನಾಂ ಮಹಾತ್ಮನಾಮ್ |
ಅನಾಮಂತ್ರ್ಯೈವ ತಾನ್ ವಿಪ್ರಾಂಸ್ತಮುವಾಚ ಮಹೀಪತೀಮ್ ॥25॥
ಆ ದುಷ್ಟನು ಮಹಾತ್ಮರಾದ ಪಾಂಡವರಿಗೆ ಪಾಪವನ್ನು ಆಶಂಸಿಸುತ್ತಾ ಆ ಬ್ರಾಹ್ಮಣರ ಅನುಮತಿಯನ್ನು ಪಡೆಯದೆಯೇ ಯುಧಿಷ್ಠಿರನನ್ನು ಕುರಿತು ಹೇಳಿದನು.
ಇಮೇ ಪ್ರಾಹುರ್ದ್ವಿಜಾಃ ಸರ್ವೇ ಸಮಾರೋಪ್ಯ ವಚೋ ಮಯಿ |

ಧಿಗ್ ಭವಂತಂ ಕುನೃಪತಿಂ ಜ್ಞಾತಿಘಾತಿನಮಸ್ತು ವೈ ॥26॥
ಈ ಬ್ರಾಹ್ಮಣರೆಲ್ಲರೂ ತಮ್ಮ ಮಾತುಗಳನ್ನು ನನಗೆ ಒಪ್ಪಿಸಿ ನಿನಗೆ ಹೇಳು- ತ್ತಿದ್ದಾರೆ. ಜ್ಞಾತಿಗಳ ವಧೆಯನ್ನು ಮಾಡಿದ ಕೆಟ್ಟ ರಾಜನಾದ ನಿನಗೆ ಧಿಕ್ಕಾರವಿರಲಿ.
ಕಿಂ ತೇ ರಾಜ್ಯೇನ ಕೌಂತೇಯ ಕೃತ್ವೇಮಂ ಜ್ಞಾತಿಸಂಕ್ಷಯಮ್ ।
ಘಾತಯಿತ್ವಾ ಗುರೂಂಶ್ಚೈವ ಮೃತಂ ಶ್ರೇಯೋ ನ ಜೀವಿತಮ್ ॥27॥
ಎಲೈ ಕೌಂತೇಯನೇ! ಇಂತಹ ಜ್ಞಾತಿವಧೆಯನ್ನೂ, ಗುರುಜನವಧೆಯನ್ನೂ ಮಾಡಿ, ನಿನಗೆ ರಾಜ್ಯದಿಂದ ಆಗಬೇಕಾದುದೇನು? ನಿನಗೆ ಮರಣವೇ ಒಳ್ಳೆಯದೇ ಹೊರತು ಜೀವನವಲ್ಲ.
ಇತಿ ತೇ ವೈ ದ್ವಿಜಾಃ ಶ್ರುತ್ವಾ ತಸ್ಯ ಘೋರಸ್ಯ ರಕ್ಷಸಃ ।
ವಿವ್ಯಥುಶ್ಚುಕ್ರುಶುಶ್ಚೈವ ತಸ್ಯ ವಾಕ್ಯಪ್ರಧರ್ಷಿತಾಃ ॥28॥
ಹೀಗೆ ಆ ಬ್ರಾಹ್ಮಣರು ಆ ಘೋರರಾಕ್ಷಸನ ಮಾತುಗಳನ್ನು ಕೇಳಿ, ಅವನ ಮಾತುಗಳಿಂದ ಅವಮಾನಿತರಾಗಿ ವ್ಯಥೆಯನ್ನು ಪಟ್ಟು ದುಃಖದಿಂದ ಕಿರುಚಿದರು.
ತತಸ್ತೇ ಬ್ರಾಹ್ಮಣಾಃ ಸರ್ವೇ ಸ ಚ ರಾಜಾ ಯುಧಿಷ್ಠಿರಃ ।
ವ್ರೀಡಿತಾ ಪರಮೋದ್ವಿಗ್ನಾಸ್ತೂಷ್ಣೀಮಾಸನ್ ವಿಶಾಂಪತೇ ॥29॥
ಎಲೈ ರಾಜನೇ! ಆಗ ಆ ಬ್ರಾಹ್ಮಣರೆಲ್ಲರೂ ಮತ್ತು ರಾಜನಾದ ಯುಧಿಷ್ಠಿರನೂ ಸಹ ನಾಚಿಕೆಗೊಂಡು ಪರಮೋದ್ವಿಗ್ನರಾಗಿ ಮೌನವಾಗಿ ನಿಂತರು.
ಯುಧಿಷ್ಠಿರಃ
ಪ್ರಸೀದಂತು ಭವಂತೋ ಮೇ ಪ್ರಣತಸ್ಯಾಭಿಯಾಚತಃ ।
ಪ್ರತ್ಯಾಪನ್ನಂ ವ್ಯಸನಿನಂ ನ ಮಾಂ ಧಿಕ್ಕರ್ತುಮರ್ಹಥ ॥30॥
ಯುಧಿಷ್ಠಿರ ನಾನು ನಿಮ್ಮನ್ನು ನಮಸ್ಕರಿಸಿ ಬೇಡುತ್ತಿದ್ದೇನೆ. ನನ್ನ ಮೇಲೆ ಪ್ರಸನ್ನರಾಗಿ. ವ್ಯಸನದಲ್ಲಿ ಸಿಲುಕಿರುವ ನನ್ನನ್ನು ನೀವು ಧಿಕ್ಕರಿಸಬಾರದು.
ವೈಶಂಪಾಯನಃ
ತತೋ ರಾಜನ್ ಬ್ರಾಹ್ಮಣಾಸ್ತೇ ಸರ್ವ ಏವ ವಿಶಾಂಪತೇ ।
ಊಚುರ್ನೈತದ್ ವಚೋಽಸ್ಮಾಕಂ ಶ್ರೀರಸ್ತು ತವ ಪಾರ್ಥಿವ ॥31॥
ವೈಶಂಪಾಯನರು `ಎಲೈ ರಾಜನೇ! ಆಗ ಆ ಬ್ರಾಹ್ಮಣರೆಲ್ಲರೂ ಅವನನ್ನು ಕುರಿತು ರಾಜನೇ ನಿನಗೆ ಮಂಗಳವಾಗಲಿ. ಇದು ನಮ್ಮ ಮಾತಲ್ಲ' ಎಂದು ಹೇಳಿ- ದರು.
ಜಜ್ಞುಶ್ಚೈವ ಮಹಾತ್ಮಾನಸ್ತತಸ್ತಂ ಜ್ಞಾನಚಕ್ಷುಷಾ ।
ಬ್ರಾಹ್ಮಣಾ ವೇದವಿದ್ವಾಂಸಸ್ತಪೋಭಿರ್ವಿಮಲೀಕೃತಾಃ ॥32॥
ವೇದವಿದ್ವಾಂಸರೂ, ತಪಸ್ಸುಗಳಿಂದ ಪರಿಶುದ್ಧರಾದವರೂ, ಮಹಾತ್ಮರೂ ಆದ ಆ ಬ್ರಾಹ್ಮಣರು ತಮ್ಮ ಜ್ಞಾನದೃಷ್ಟಿಯಿಂದ ಆ ರಾಕ್ಷಸನನ್ನು ತಿಳಿದರು.
ಬ್ರಾಹ್ಮಣಾಃ
ಏಷ ದುರ್ಯೋಧನಸಖಾ ಚಾರ್ವಾಕೋ ನಾಮ ರಾಕ್ಷಸಃ ।
ಪರಿವ್ರಾಜಕರೂಪೇಣ ಹಿತಂ ತಸ್ಯ ಚಿಕೀರ್ಷತಿ ॥33॥
ಬ್ರಾಹ್ಮಣರು ಇವನು ದುರ್ಯೋಧನನ ಸ್ನೇಹಿತನಾದ ಚಾರ್ವಾಕನೆಂಬ ರಾಕ್ಷಸ. ಸನ್ಯಾಸಿಯ ರೂಪವನ್ನು ತಾಳಿ ದುರ್ಯೋಧನನಿಗೆ ಹಿತವನ್ನು ಮಾಡಲು ಬಯಸುತ್ತಿದ್ದಾನೆ.
ನ ವಯಂ ಬ್ರೂಮ ಧರ್ಮಾತ್ಮನ್ ವ್ಯೇತು ತೇ ಭಯಮೀದೃಶಮ್ ।
ಉಪತಿಷ್ಠತು ಕಲ್ಯಾಣಂ ಭವಂತಂ ಭ್ರಾತೃಭಿಃ ಸಹ ॥34॥
ಎಲೈ ಧರ್ಮಾತ್ಮನೇ! ನಿನ್ನ ಮನಸ್ಸಿನ ಭಯವನ್ನು ಬಿಡು. ಈ ಧಿಕ್ಕಾರದ ಮಾತುಗಳು ನಮ್ಮವಲ್ಲ. ನಿನಗೂ ಮತ್ತು ನಿನ್ನ ತಮ್ಮಂದಿರಿಗೂ ಕಲ್ಯಾಣವುಂಟಾಗಲಿ.
ವೈಶಂಪಾಯನಃ
ತತಸ್ತೇ ಬ್ರಾಹ್ಮಣಾಃ ಸರ್ವೇ ಹುಂಕಾರೈಃ ಕ್ರೋಧಮೂರ್ಚ್ಛಿತಾಃ ।
ನಿರ್ಭರ್ತ್ಸಯಂತಃ ಶುಚಯೋ ನಿಜಘ್ನುಃ ಪಾಪರಾಕ್ಷಸಮ್ ॥35॥
ವೈಶಂಪಾಯನರು ಅನಂತರ ಕ್ರೋಧಮೂರ್ಛಿತರೂ ಪರಿಶುದ್ಧರೂ ಆದ ಆ ಎಲ್ಲಾ ಬ್ರಾಹ್ಮಣರು ಹುಂಕಾರಗಳಿಂದ ಆ ಪಾಪರಾಕ್ಷಸನನ್ನು ಗದರಿಸಿ, ಅವನನ್ನು ಸಂಹರಿಸಿದರು.
ಸ ಪಪಾತ ವಿನಿರ್ದಗ್ಧಸ್ತೇಜಸಾ ಬ್ರಹ್ಮವಾದಿನಾಮ್ ।
ಮಹೇಂದ್ರಾಶನಿನಿರ್ದಗ್ಧಃ ಪಾದಪೋಽಂಕುರವಾನಿವ ॥36॥
ಬ್ರಹ್ಮವಾದಿಗಳಾದ ಬ್ರಾಹ್ಮಣರ ತೇಜಸ್ಸಿನಿಂದ ನಿರ್ದಗ್ಧನಾದ ಆ ರಾಕ್ಷಸನು ಇಂದ್ರನ ವಜ್ರಾಯುಧದಿಂದ ದಗ್ಧವಾದ ಅಂಕುರಸಹಿತವಾದ ವೃಕ್ಷದಂತೆ ಕೆಳಗೆ ಬಿದ್ದನು.
ಪೂಜಿತಾಶ್ಚ ಯಯುರ್ವಿಪ್ರಾ ರಾಜಾನಮಭಿನಂದ್ಯ ತಮ್ ।
ರಾಜಾ ಚ ಹರ್ಷಮಾಪೇದೇ ಪಾಂಡವಃ ಸಸುಹೃಜ್ಜನಃ ॥37॥
ಬ್ರಾಹ್ಮಣರು ರಾಜನಿಂದ ಪೂಜಿತರಾಗಿ ರಾಜನನ್ನು ಅಭಿನಂದಿಸಿ ಹೊರಟು ಹೋದರು. ಪಾಂಡುಪುತ್ರನಾದ ಯುಧಿಷ್ಠಿರನೂ

ಸುಹೃಜ್ಜನರ ಜೊತೆಯಲ್ಲಿ ಸಂತೋಷವನ್ನು ಹೊಂದಿದನು.
ತತಸ್ತತ್ರ ತು ರಾಜಾನಂ ತಿಷ್ಠಂತಂ ಭ್ರಾತೃಭಿಃ ಸಹ |
ಉವಾಚ ದೇವಕೀಪುತ್ರಃ ಸರ್ವದರ್ಶೀ ಜನಾರ್ದನಃ ||38||
ಆಗ ದೇವಕೀಪುತ್ರನೂ ಸರ್ವಜ್ಞನೂ ಆದ ಜನಾರ್ದನನು ತಮ್ಮಂದಿರ ಜೊತೆಯಲ್ಲಿದ್ದ ರಾಜನನ್ನು ಕುರಿತು ಮಾತನಾಡಿದನು.
ಶ್ರೀಭಗವಾನ್
ಬ್ರಾಹ್ಮಣಾಸ್ತಾತ ಲೋಕೇऽಸ್ಮಿನ್ನರ್ಚನೀಯಾಃ ಸದಾ ಮಮ |
ಏತೇ ಭೂಮಿಚರಾ ದೇವಾ ವಾಗ್ವಿಷಾಃ ಸುಪ್ರಸಾದಕಾಃ ||39||
ಶ್ರೀಭಗವಾನ್ ಎಲ್ಲೈ ಪ್ರೀತಿಪಾತ್ರನೇ! ಈ ಲೋಕದಲ್ಲಿ ಬ್ರಾಹ್ಮಣರು ನನಗೆ ಯಾವಾಗಲೂ ಪೂಜ್ಯರಾದವರು. ಇವರು ಮಾತಿನಲ್ಲಿ ವಿಷವನ್ನು ಧರಿಸಿದ ಮತ್ತು ಒಳ್ಳೆಯ ಅನುಗ್ರಹವನ್ನು ಮಾಡುವ ಭೂಮಿಚರರಾದ ದೇವತೆಗಳು.
ಪುರಾ ಕೃತಯುಗೇ ತಾತ ಚಾರ್ವಾಕೋ ನಾಮ ರಾಕ್ಷಸಃ |
ತಪಸ್ತೇಪೇ ಮಹಾಬಾಹೋ ಬದರ್ಯಾಂ ಬಹುವತ್ಸರಮ್ ||40||
ಎಲ್ಲೈ ಪ್ರೀತಿಪಾತ್ರನೇ! ಮಹಾಬಾಹುವೇ! ಹಿಂದೆ ಕೃತಯುಗದಲ್ಲಿ ಚಾರ್ವಾಕ- ನೆಂಬ ರಾಕ್ಷಸನು ಬದರೀಕ್ಷೇತ್ರದಲ್ಲಿ ಅನೇಕ ವರ್ಷಗಳ ಕಾಲ ತಪಸ್ಸನ್ನು ಮಾಡಿದನು.
ಛಂದ್ಯಮಾನೋ ವರೇಣಾಥ ಬ್ರಹ್ಮಣಾ ಸ ಪುನಃ ಪುನಃ |
ಅಭಯಂ ಸರ್ವಭೂತೇಭ್ಯಃ ವರಯಾಮಾಸ ಭಾರತ ||41||
ಎಲ್ಲೈ ಭಾರತನೇ! ಬ್ರಹ್ಮದೇವರಿಂದ ಪುನಃ ಪುನಃ ವರವನ್ನು ಕೇಳು ಎಂದು ಹೇಳಲ್ಪಟ್ಟ ಅವನು ಯಾವ ಪ್ರಾಣಿಗಳಿಂದಲೂ ತನಗೆ (ಮರಣ) ಭಯವುಂಟಾಗ- ಬಾರದೆಂಬ ವರವನ್ನು ಬೇಡಿದನು.
ದ್ವಿಜಾವಮಾನಾದನ್ಯತ್ರ ಪ್ರಾದಾದ್ ವರಮನುತ್ತಮಮ್ |
ಅಭಯಂ ಸರ್ವಭೂತೇಭ್ಯಸ್ತತಸ್ತಸ್ಮೈ ಜಗತ್ಪ್ರಭುಃ ||42||
`ಬ್ರಾಹ್ಮಣರ ಅವಮಾನವನ್ನು ಮಾಡುವ ಪ್ರಸಂಗವನ್ನು ಬಿಟ್ಟು ಬೇರೆ ಯಾವ ಪ್ರಾಣಿಯಿಂದಲೂ ನಿನಗೆ ಭಯವಿಲ್ಲ' ಎಂಬ ಶ್ರೇಷ್ಠವಾದ ವರವನ್ನು ಜಗತ್ಪ್ರಭು- ಗಳಾದ ಬ್ರಹ್ಮದೇವರು ಅವನಿಗೆ ಕೊಟ್ಟರು.
ಸ ತು ಲಬ್ಧವರಃ ಪಾಪೋ ದೇವಾನಮಿತವಿಕ್ರಮಃ |
ರಾಕ್ಷಸಸ್ತಾಪಯಾಮಾಸ ತೀವ್ರಕರ್ಮಾ ಮಹಾಬಲಃ||43||
ಅಮಿತಪರಾಕ್ರಮಿಯಾದ ಪಾಪಿಯಾದ ಅವನು ವರವನ್ನು ಪಡೆದು, ಮಹಾಬಲಿಷ್ಠನಾಗಿ ಘೋರವಾದ ಕರ್ಮಗಳನ್ನು ಮಾಡಿ ದೇವತೆಗಳಿಗೆ ತಾಪವನ್ನು ಉಂಟುಮಾಡಿದನು.
ತತೋ ದೇವಾಃ ಸಮೇತ್ಯಾಥ ಬ್ರಹ್ಮಾಣಮಿದಮಬ್ರುವನ್ |
ವಧಾಯ ರಕ್ಷಸಸ್ತಸ್ಯ ಬಲವಿಪ್ರಕೃತಾಸ್ತದಾ ||44||
ಆಗ ಅವನ ಬಲದಿಂದ ಅಪಕಾರಕ್ಕೆ ಒಳಗಾದ ದೇವತೆಗಳು ಬ್ರಹ್ಮದೇವರನ್ನು ಸಮೀಪಿಸಿ, ಆ ರಾಕ್ಷಸನ ವಧೆಯನ್ನು ಕುರಿತು ಪ್ರಾರ್ಥನೆಯನ್ನು ಮಾಡಿದರು.
ತಾನುವಾಚಾವ್ಯಯೋ ದೇವೋ ವಿಹಿತಂ ತತ್ರ ವೈ ಮಯಾ |
ಯಥಾಸ್ಯ ಭವಿತಾ ಮೃತ್ಯುರಚಿರೇಣೈವ ಭಾರತ ||45||
ಎಲ್ಲೈ ಭಾರತನೇ! ಆಗ ಅವ್ಯಯರಾದ ಆ ಬ್ರಹ್ಮದೇವರು ``ಈ ರಾಕ್ಷಸನ ಮರಣವು ಶೀಘ್ರದಲ್ಲೇ ಉಂಟಾಗುವಂತೆ ನಾನು ವ್ಯವಸ್ಥೆಯನ್ನು ಮಾಡಿದ್ದೇನೆ'' ಎಂದು ಹೇಳಿದರು.
ರಾಜಾ ದುರ್ಯೋಧನೋ ನಾಮ ಸಖಾऽಸ್ಯ ಭವಿತಾ ನೃಪ |
ತಸ್ಯ ಸ್ನೇಹಾವಬದ್ಧೋऽಸೌ ಬ್ರಾಹ್ಮಣಾನವಮಂಸ್ಯತೇ ||46||
ಎಲ್ಲೈ ರಾಜನೇ! ದುರ್ಯೋಧನನೆಂಬ ರಾಜನು ಇವನಿಗೆ ಸ್ನೇಹಿತನಾಗುವನು. ಅವನ ಸ್ನೇಹಕ್ಕೆ ವಶನಾಗಿ ಈ ರಾಕ್ಷಸನು ಬ್ರಾಹ್ಮಣರಿಗೆ ಅವಮಾನವನ್ನು ಮಾಡು- ವನು.
ತತ್ರೈನಂ ರುಷಿತಾ ವಿಪ್ರಾ ವಿಪ್ರಕಾರಪ್ರಧರ್ಷಿತಾಃ |
ಧಕ್ಷ್ಯಂತಿ ವಾಗ್ಬಲಾಃ ಪಾಪಂ ತತೋ ನಾಶಂ ಗಮಿಷ್ಯತಿ ||47||
ಅವನ ಅವಮಾನಕರವಾದ ಮಾತುಗಳಿಂದ ಪೀಡಿಸಲ್ಪಟ್ಟ ವಾಗ್ಬಲರಾದ ಬ್ರಾಹ್ಮಣರು ಕೋಪಗೊಂಡು ಆ ಪಾಪಿಯನ್ನು ಸುಟ್ಟು ಹಾಕುವರು. ಆಗ ಅವನು ನಾಶವನ್ನು ಹೊಂದುವನು. (ಎಂದು ಹೇಳಿದರು)
ಸ ಏಷ ನಿಹತಃ ಶೇತೇ ಬ್ರಹ್ಮದಂಡೇನ ರಾಕ್ಷಸಃ |
ಚಾರ್ವಾಕೋ ನೃಪತಿಶ್ರೇಷ್ಠ ಮಾ ಶುಚೋ ಭರತರ್ಷಭ ||48||
ಎಲ್ಲೈ ರಾಜಶ್ರೇಷ್ಠನೇ! ಅಂತಹ ಈ ಚಾರ್ವಾಕರಾಕ್ಷಸನು ಬ್ರಹ್ಮದಂಡದಿಂದ ನಿಹತನಾಗಿ ಸತ್ತು ಬಿದ್ದಿದ್ದಾನೆ. ಭರತರ್ಷಭನೇ! ಶೋಕಪಡಬೇಡ.
ಹತಾಸ್ತೇ ಕ್ಷತ್ರಧರ್ಮೇಣ ಜ್ಞಾತಯಸ್ತವ ಪಾರ್ಥಿವಾಃ |
ಸ್ವರ್ಗತಾಶ್ಚ ಮಹಾತ್ಮಾನೋ ವೀರಾ ಕ್ಷತ್ರಿಯಪುಂಗವಾಃ ||49||
ಎಲ್ಲೈ ರಾಜನೇ! ನಿನ್ನ ಬಂಧುಗಳು ಕ್ಷತ್ರಿಯಧರ್ಮಕ್ಕೆ ಅನುಗುಣವಾಗಿ ನಿನ್ನಿಂದ ಹತರಾಗಿದ್ದಾರೆ. ಕ್ಷತ್ರಿಯಶ್ರೇಷ್ಠರೂ, ಮಹಾತ್ಮರೂ, ವೀರರೂ ಆದ ಅವರು ಸ್ವರ್ಗ- ವನ್ನು ಪಡೆದಿದ್ದಾರೆ.
ಸ ತ್ವಮಾತಿಷ್ಠ ಕಲ್ಯಾಣಂ ಮಾ ತೇ ಭೂದ್ ಗ್ಲಾನಿರಚ್ಯುತ |

ಶತ್ರೂನ್ ಜಹಿ ಪ್ರಜಾ ರಕ್ಷ ದ್ವಿಜಾಂಶ್ಚ ಪ್ರತಿಪಾಲಯ ॥50॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಏಕೋನಚತ್ವಾರಿಂಶೋಽಧ್ಯಾಯಃ ॥39॥
ಅಂತಹ ನೀನು ಕಲ್ಯಾಣಕಾರ್ಯಗಳನ್ನುಮಾಡು. ಎಲೈ ಅಚ್ಯುತನೇ! ಮನಸ್ಸಿ- ನಲ್ಲಿ ಗ್ಲಾನಿಯನ್ನು ಹೊಂದಬೇಡ. ಶತ್ರುಗಳನ್ನು ಗೆಲ್ಲುವವನಾಗು. ಪ್ರಜೆಗಳನ್ನು ರಕ್ಷಿಸು. ಬ್ರಾಹ್ಮಣರನ್ನು ಪೂಜಿಸು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 39ಯ ಅಧ್ಯಾಯವು ಮುಗಿಯಿತು.
0
40. ನಲವತ್ತನೆಯ ಅಧ್ಯಾಯ
ಯುಧಿಷ್ಠಿರನಿಗೆ ಕೃಷ್ಣನಿಂದ ರಾಜ್ಯದಲ್ಲಿ ಅಭಿಷೇಕ
ವೈಶಂಪಾಯನಃ
ತತಃ ಕುಂತೀಸುತೋ ರಾಜಾ ಗತಮನ್ಯುರ್ಗತಜ್ವರಃ |
ಕಾಂಚನೇ ಪ್ರಾಙ್ಮುಖೋ ಹೃಷ್ಟೋ ನ್ಯಷೀದತ್ ಪರಮಾಸನೇ ॥1॥
ವೈಶಂಪಾಯನರು ಹೇಳುತ್ತಾರೆ ಅನಂತರ ಕುಂತಿಯ ಪುತ್ರನಾದ ಯುಧಿಷ್ಠಿರ ರಾಜನು ಮನಸ್ಸಿನ ಚಿಂತೆಯನ್ನು ಮತ್ತು ಸಂತಾಪವನ್ನು ಕಳೆದುಕೊಂಡು ಸುವರ್ಣ- ಮಯವಾದ ಶ್ರೇಷ್ಠವಾದ ಆಸನದಲ್ಲಿ ಸಂತೋಷದಿಂದ ಪೂರ್ವಾಭಿಮುಖವಾಗಿ ಕುಳಿತುಕೊಂಡನು.
ತಮೇವಾಭಿಮುಖೌ ಪೀಠೇ ದಿವ್ಯಾಸ್ತರಣಸಂವೃತೇ |
ಸಾತ್ಯಕಿರ್ವಾಸುದೇವಶ್ಚ ನಿಷೀದತುರರಿಂದಮೌ ॥2॥
ಅರಿಂದಮರಾದ ಸಾತ್ಯಕಿ ಮತ್ತು ಕೃಷ್ಣರು ದಿವ್ಯವಾದ ಹಾಸುಗಳನ್ನು ಹಾಸಿದ ಪೀಠದಲ್ಲಿ ಅವನಿಗೆ ಎದುರಾಗಿ ಕುಳಿತುಕೊಂಡರು.
ಮಧ್ಯೇ ಕೃತ್ವಾ ತು ರಾಜಾನಂ ಭೀಮಸೇನಾರ್ಜುನಾವುಭೌ |
ನಿಷೀದತುರ್ಮಹಾತ್ಮಾನೌ ಶ್ಲಕ್ಷ್ಣಯೋರ್ಮಣಿಪೀಠಯೋಃ ॥3॥
ಮಹಾತ್ಮರಾದ ಭೀಮಸೇನಾರ್ಜುನರು ರಾಜನನ್ನು ಮಧ್ಯೆ ಮಾಡಿಕೊಂಡು ಶ್ರೇಷ್ಠವಾದ ಮಣಿಪೀಠಗಳಲ್ಲಿ ಕುಳಿತುಕೊಂಡರು.
ದಾಂತೇ ಶಯ್ಯಾಸನೇ ಶುಭ್ರೇ ಜಾಂಬೂನದವಿಭೂಷಿತೇ |
ಪೃಥಾಽಪಿ ಸಹದೇವೇನ ಸಹಾಸ್ತೇ ನಕುಲೇನ ಚ ॥4॥
ಗಜದಂತಮಯವಾದ ಶುಭ್ರವಾದ ಸುವರ್ಣಾಲಂಕೃತವಾದ ಶಯ್ಯಾಸನದಲ್ಲಿ ಕುಂತಿಯೂ ಸಹ ನಕುಲಸಹದೇವರ ಜೊತೆಯಲ್ಲಿ ಕುಳಿತುಕೊಂಡಳು.
ಸುಧರ್ಮಾ ವಿದುರೋ ಧೌಮ್ಯೋ ಧೃತರಾಷ್ಟ್ರಶ್ಚ ಕೌರವಃ |
ನಿಷೇದುರ್ಜ್ವಲನಾಕಾರೇಷ್ವಾಸನೇಷು ಪೃಥಕ್ ಪೃಥಕ್ ॥5॥
ಧರ್ಮಶೀಲನಾದ ವಿದುರ, ಧೌಮ್ಯ, ಕೌರವನಾದ ಧೃತರಾಷ್ಟ್ರ ಇವರು ಅಗ್ನಿಯಂತೆ ಪ್ರಕಾಶಮಾನವಾಗಿದ್ದ ಬೇರೆ ಬೇರೆ ಆಸನಗಳಲ್ಲಿ ಕುಳಿತುಕೊಂಡರು.
ಯುಯುತ್ಸುಃ ಸಂಜಯಶ್ಚೈವ ಗಾಂಧಾರೀ ಚ ಯಶಸ್ವಿನೀ |
ಧೃತರಾಷ್ಟ್ರೋ ಯತೋ ರಾಜಾ ತತಃ ಸರ್ವ ಉಪಾವಿಶನ್ ॥6॥
ಯುಯುತ್ಸು, ಸಂಜಯ, ಕೀರ್ತಿಶಾಲಿನಿಯಾದ ಗಾಂಧಾರೀ ಇವರೆಲ್ಲರೂ ಧೃತರಾಷ್ಟ್ರನ ಬಳಿಯಲ್ಲಿ ಕುಳಿತುಕೊಂಡರು.
ತತ್ರೋಪವಿಷ್ಟೋ ಧರ್ಮಾತ್ಮಾ ಶ್ವೇತಾಃ ಸುಮನಸೋಽಸ್ಪೃಶತ್ |
ಸ್ವಸ್ತಿಕಾನಕ್ಷತಾನ್ ಭೂಮಿಂ ಸುವರ್ಣಂ ರಜತಂ ಮಣೀನ್ ॥7॥
ಅಲ್ಲಿ ಕುಳಿತುಕೊಂಡ ಧರ್ಮಾತ್ಮನಾದ ಯುಧಿಷ್ಠಿರನು ಮಂಗಳದ ಸಲುವಾಗಿ ಶ್ವೇತಪುಷ್ಪಗಳನ್ನು, ಸ್ವಸ್ತಿಕೆಗಳನ್ನು, ಅಕ್ಷತೆಗಳನ್ನು, ಗೋಶಾಲೆ ಮತ್ತು ವೃಂದಾವನದ ಮೃತ್ತಿಕೆಗಳನ್ನು, ಸುವರ್ಣರಜತಮಣಿಗಳನ್ನು ಸ್ಪರ್ಶ ಮಾಡಿದನು.
ತತಃ ಪ್ರಕೃತಯಃ ಸರ್ವಾಃ ಪುರಸ್ಕೃತ್ಯ ಪುರೋಹಿತಮ್ |
ಪೃಥಿವೀಂ ಚ ಸುವರ್ಣಂ ಚ ರತ್ನಾನಿ ಬಹು ಮಂಗಲಮ್ ॥8॥
ಅನಂತರ ಎಲ್ಲಾ ಪ್ರಜೆಗಳು ಪುರೋಹಿತರನ್ನು ಮುಂದೆ ಮಾಡಿಕೊಂಡು ಕೈಯಲ್ಲಿ ಮಂಗಳವಸ್ತುಗಳನ್ನು ಹಿಡಿದು ಧರ್ಮರಾಜನನ್ನು ನೋಡಿದರು.
ಪೃಥಿವೀಂ ಚ ಸುವರ್ಣಂ ಚ ರತ್ನಾನಿ ವಿವಿಧಾನಿ ಚ |
ಆಭಿಷೇಚನಿಕಂ ಭಾಂಡಂ ಸರ್ವಸಂಭಾರಸಂಭೃತಮ್ ॥9॥
ಮೃತ್ತಿಕೆ, ಸುವರ್ಣ, ವಿವಿಧವಾದ ರತ್ನಗಳು, ಅಭಿಷೇಕಕ್ಕೆ ಬೇಕಾದ ಪಾತ್ರೆಗಳು, ಮತ್ತು ಉಳಿದ ಎಲ್ಲಾ ಸಲಕರಣೆಗಳು ಸಿದ್ಧವಾದವು.
ಕಾಂಚನೌದುಂಬರಾಸ್ತತ್ರ ರಾಜತಾಃ ಪೃಥಿವೀಮಯಾಃ |
ಪೂರ್ಣಕುಂಭಾಃ ಸುಮನಸೋ ರಾಜಾ ಬರ್ಹೀಂಷಿ ಗೋರಸಾಃ ॥10॥
ಶಮೀಪಲಾಶಪುನ್ನಾಗಾಃ ಸಮಿಧೋ ಮಧುಸರ್ಪಿಷೀ |
ಸ್ರುವ ಔದುಂಬರಃ ಶಂಖಾಸ್ತಥಾ ಹೇಮವಿಭೂಷಿತಾಃ ॥11॥
ಅಲ್ಲಿ ಸುವರ್ಣಮಯವಾದ, ರಜತಮಯವಾದ, ಮೃಣ್ಮಯವಾದ, ಉದುಂಬರಮಯವಾದ ಪೂರ್ಣಕುಂಭಗಳು, ಪುಷ್ಪಗಳು, ಅರಳುಗಳು, ದರ್ಭೆ- ಗಳು, ಕ್ಷೀರಾದಿ ಗೋರಸಗಳು, ಶಮೀ, ಪಲಾಶ ಮತ್ತು ಪುನ್ನಾಗವೃಕ್ಷಗಳ ಸಮಿತ್ತು- ಗಳು, ಜೇನುತುಪ್ಪ, ತುಪ್ಪ, ಔದುಂಬರ ಸ್ರುವ, ಸುವರ್ಣಭೂಷಿತವಾದ ಶಂಖಗಳು ಎಲ್ಲವೂ ಅಣಿಗೊಂಡವು.

ದಾಶಾರ್ಹೇಣಾಭ್ಯನುಜ್ಞಾತಸ್ತತ್ರ ಧೌಮ್ಯಃ ಪುರೋಹಿತಃ |
ಪ್ರಾಗುದಕ್ಪ್ರವಣಾಂ ವೇದೀಂ ಲಕ್ಷಣೇನೋಪಲಿಪ್ಯ ಹ ॥12॥
ವ್ಯಾಘ್ರಚರ್ಮೋತ್ತರೇ ಶ್ಲಕ್ಷ್ಣೇ ಸರ್ವತೋಭದ್ರ ಆಸನೇ |
ದೃಢಪಾದಪ್ರತಿಷ್ಠಾನೇ ಹುತಾಶನಸಮತ್ವಿಷಿ ॥13॥
ಉಪವೇಶ್ಯ ಮಹಾತ್ಮಾನಂ ಕೃಷ್ಣಾಂ ಚ ದ್ರುಪದಾತ್ಮಜಾಮ್ |
ಜುಹಾವ ಪಾವಕಂ ಧೀಮಾನ್ ವಿಧಿಮಂತ್ರಪುರಸ್ಕೃತಮ್ |
ಆಗ ಪುರೋಹಿತರೂ ಮೇಧಾವಿಗಳೂ ಆದ ಧೌಮ್ಯರು ಕೃಷ್ಣನ ಅನುಜ್ಞೆ- ಯನ್ನು ಪಡೆದು ಅಲ್ಲಿ ಈಶಾನ್ಯದಿಕ್ಕಿನಲ್ಲಿ ಇಳಿಜಾರಾಗಿದ್ದ ವೇದಿಕೆಯನ್ನು ರಂಗ- ವಲ್ಲೀ, ಸಾರಣೆ ಮೊದಲಾದವುಗಳಿಂದ ಅಲಂಕರಿಸಿದರು. ವ್ಯಾಘ್ರಚರ್ಮದ ಮೇಲೆ ಹಾಸಿದ ಬೆಲೆಬಾಳುವ ದೃಢವಾದ ಪಾದಪೀಠವುಳ್ಳ ಅಗ್ನಿಯಂತೆ ಕಂಗೊಳಿಸುವ ಸರ್ವತೋಭದ್ರಾಸನದಲ್ಲಿ ದ್ರುಪದಪುತ್ರಿಯಾದ ಕೃಷ್ಣೆಯನ್ನು ಮತ್ತು ಮಹಾತ್ಮನಾದ ಧರ್ಮರಾಜನನ್ನು ಕುಳ್ಳಿರಿಸಿ, ವಿಧಿಮಂತ್ರಪುರಸ್ಸರವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದರು.
ತತ ಉತ್ಥಾಯ ದಾಶಾರ್ಹಃ ಶಂಖಮಾದಾಯ ಪೂಜಿತಮ್ ॥14॥
ಅಭ್ಯಷಿಂಚತ್ ಪತಿಂ ಪೃಥ್ವ್ಯಾಃ ಕುಂತೀಪುತ್ರಂ ಯುಧಿಷ್ಠಿರಮ್ |
ಧೃತರಾಷ್ಟ್ರಶ್ಚ ರಾಜರ್ಷಿಃ ಸರ್ವಾಃ ಪ್ರಕೃತಯಸ್ತಥಾ ॥15॥
ಅನಂತರ ದಾಶಾರ್ಹನಾದ ಕೃಷ್ಣನು ಎದ್ದು ಪೂಜಿಸಲ್ಪಟ್ಟ ಶಂಖವನ್ನು ತೆಗೆದು- ಕೊಂಡು ಕುಂತೀಪುತ್ರನಾದ ಯುಧಿಷ್ಠಿರನನ್ನು ಪೃಥಿವೀಪತಿಯಾಗಿ ಅಭಿಷೇಕ ಮಾಡಿದನು. ಅನಂತರ ಧೃತರಾಷ್ಟ್ರನೂ, ರಾಜರ್ಷಿಗಳೂ ಮತ್ತು ಪ್ರಜೆಗಳಲ್ಲಿ ಪ್ರಧಾನರಾದವರೂ ಅಭಿಷೇಕವನ್ನು ಮಾಡಿದರು.
ಸಮನುಜ್ಞಾಯ ಕೃಷ್ಣೇನ ಭ್ರಾತೃಭಿಃ ಸಹ ಪಾಂಡವ |
ಪಾಂಚಜನ್ಯಾಭಿಷಿಕ್ತಶ್ಚ ರಾಜಾಽಮೃತಮುಖೋಽಭವತ್ ॥16॥
ಎಲೈ ಪಾಂಡವನೇ! ಕೃಷ್ಣನ ಅನುಮತಿಯನ್ನು ಪಡೆದು ತಮ್ಮಂದಿರಿಂದಲೂ ಪಾಂಚಜನ್ಯಶಂಖದಿಂದ ಅಭಿಷೇಕ ಮಾಡಲ್ಪಟ್ಟ ಯುಧಿಷ್ಠಿರನು ಚಂದ್ರನಂತೆ ಪ್ರಸನ್ನ ಮುಖನಾದನು.
ತತೋಽನುವಾದಯಾಮಾಸುಃ ಪಣವಾನಕದುಂದುಭೀಃ |
ಧರ್ಮರಾಜೋಽಪಿ ತತ್ ಸರ್ವಂ ಪ್ರತಿಜಗ್ರಾಹ ಧರ್ಮತಃ ॥17॥
ಅನಂತರ ಪಣವ, ಆನಕ ಮತ್ತು ದುಂದುಭಿಗಳು ಮೊಳಗಿದವು. ಧರ್ಮ- ರಾಜನೂ ಸಹ ಅವೆಲ್ಲವನ್ನೂ ಧಾರ್ಮಿಕವಿಧಿಯಿಂದಲೇ ಸ್ವೀಕರಿಸಿದನು.
ಪೂಜಯಾಮಾಸ ತಾಂಶ್ಚಾಪಿ ವಿಧಿವದ್ ಭೂರಿದಕ್ಷಿಣಃ |
ತತೋ ನಿಷ್ಕಸಹಸ್ರೇಣ ಬ್ರಾಹ್ಮಣಾನ್ ಸ್ವಸ್ತಿ ವಾಚಯತ್ ॥18॥
ವೇದಾಧ್ಯಯನಸಂಪನ್ನಾನ್ ಶೀಲವೃತ್ತಸಮನ್ವಿತಾನ್ |
ಬಹಳ ದಕ್ಷಿಣೆಯನ್ನು ಕೊಡುವ ಸ್ವಭಾವವುಳ್ಳ ಅವನು ಅವರೆಲ್ಲರನ್ನೂ ವಿಧಿ- ವತ್ತಾಗಿ ಪೂಜಿಸಿದನು. ಅನಂತರ ವೇದಾಧ್ಯಯನಸಂಪನ್ನರೂ, ಶೀಲವೃತ್ತಗಳಿಂದ ಕೂಡಿದವರೂ ಆದ ಬ್ರಾಹ್ಮಣರಿಗೆ ಒಂದೊಂದು ಸಹಸ್ರ ನಿಷ್ಕಗಳನ್ನು ನೀಡಿ, ಸ್ವಸ್ತಿ- ವಾಚನವನ್ನು ಮಾಡಿಸಿದನು.
ತೇ ಪ್ರೀತಾ ಬ್ರಾಹ್ಮಣಾ ರಾಜನ್ ಸ್ವಸ್ತ್ಯೂಚುರ್ಜಯಮೇವ ಚ |
ಹಂಸಾ ಇವ ಚ ನರ್ದಂತಃ ಪ್ರಶಶಂಸುರ್ಯುಧಿಷ್ಠಿರಮ್ ॥19॥
ಎಲೈ ರಾಜನೇ! ಪ್ರಸನ್ನರಾದ ಬ್ರಾಹ್ಮಣರು ಅವನಿಗೆ ಮಂಗಳವನ್ನು ಮತ್ತು ಜಯವನ್ನು ಹಾರೈಸಿದರು. ಹಂಸಗಳಂತೆ ಧ್ವನಿಯನ್ನು ಮಾಡುತ್ತಾ ಅವರು ಯುಧಿ- ಷ್ಠಿರನನ್ನು ಪ್ರಶಂಸಿಸಿದರು.
ಯುಧಿಷ್ಠಿರ ಮಹಾಬಾಹೋ ದಿಷ್ಟ್ಯಾ ಜಯಸಿ ಪಾಂಡವ |
ದಿಷ್ಟ್ಯಾ ಸ್ವಧರ್ಮಂ ಪ್ರಾಪ್ತೋಽಸಿ ವಿಕ್ರಮೇಣ ಮಹಾದ್ಯುತೇ ॥20॥
ಮಹಾಬಾಹುವೇ ಪಾಂಡುಪುತ್ರನೇ! ಯುಧಿಷ್ಠಿರನೇ! ದೇವರ ದಯದಿಂದ ನೀನು ಜಯವನ್ನು ಸಂಪಾದಿಸಿದ್ದೀಯೆ. ಎಲೈ ಮಹಾದ್ಯುತಿಯೇ! ನಿನ್ನ ಪರಾಕ್ರಮ- ದಿಂದ ಮತ್ತು ದೇವರ ದಯದಿಂದ ನೀನು ಪುನಃ ನಿನ್ನ ಕ್ಷತ್ರಿಯಧರ್ಮದಲ್ಲಿಯೇ ತೊಡಗಿದ್ದೀಯೆ.

ದಿಷ್ಟ್ಯಾ ಗಾಂಡೀವಧನ್ವಾ ಚ ಭೀಮಸೇನಶ್ಚ ಪಾಂಡವಃ |
ತ್ವಂ ಚಾಪಿ ಕುಶಲೀ ರಾಜನ್ ಮಾದ್ರೀಪುತ್ರೌ ಚ ಪಾಂಡವೌ ॥21॥
ಎಲೈ ರಾಜನೇ ದೇವರ ದಯದಿಂದಲೇ ಗಾಂಡೀವಧನುರ್ಧಾರಿಯಾದ ಅರ್ಜುನನೂ, ಪಾಂಡುಪುತ್ರನಾದ ಭೀಮಸೇನನೂ, ನೀನೂ ಮತ್ತು ಮಾದ್ರಿ- ಪುತ್ರರಾದ ನಕುಲಸಹದೇವರೂ ಕುಶಲದಿಂದ ಇದ್ದೀರಿ.
ಮುಕ್ತಾ ವೀರಕ್ಷಯಾದಸ್ಮಾತ್ ಸಂಗ್ರಾಮಾನ್ನಿಹತದ್ವಿಷಃ |
ಕ್ಷಿಪ್ರಮುತ್ತರಕಾಲಾನಿ ಕುರು ಕಾರ್ಯಾಣಿ ಪಾಂಡವ ॥22॥
ಶತ್ರುಸಂಹಾರಕವಾದ ವೀರರ ಕ್ಷಯವನ್ನುಂಟು ಮಾಡಿದ ಈ ಸಂಗ್ರಾಮದಿಂದ ಬಿಡುಗಡೆಯನ್ನು ಹೊಂದಿದ್ದೀರಿ. ಎಲೈ ಪಾಂಡವನೇ! ಮುಂದೆ ಮಾಡಬೇಕಾದ ಕಾರ್ಯಗಳನ್ನು ಶೀಘ್ರವಾಗಿ ಮಾಡು. (ಎಂದು ಹೇಳಿದರು)
ತತ್ರ ಪ್ರತ್ಯರ್ಚಿತಃ ಸದ್ಭಿರ್ಧರ್ಮರಾಜೋ ಯುಧಿಷ್ಠಿರಃ |
ಪ್ರತಿಪೇದೇ ಮಹದ್ ರಾಜ್ಯಂ ಸುಹೃದ್ಭಿಃ ಸಹ ಭಾರತ ॥23॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ

ಚತ್ವಾರಿಂಶೋಽಧ್ಯಾಯಃ ॥40॥
ಎಲೈ ಭಾರತನೇ! ಆಗ ಧರ್ಮರಾಜನಾದ ಯುಧಿಷ್ಠಿರನು ಸಜ್ಜನರಿಂದ ಪೂಜಿಸಲ್ಪಟ್ಟು, ತನ್ನ ಸುಹೃಜ್ಜನರ ಜೊತೆಯಲ್ಲಿ ತನ್ನ ಶ್ರೇಷ್ಠವಾದ ರಾಜ್ಯವನ್ನು ಹೊಂದಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 40ನೆಯ ಅಧ್ಯಾಯವು ಮುಗಿಯಿತು.
0
41. ನಲವತ್ತೊಂದನೆಯ ಅಧ್ಯಾಯ
ಯುಧಿಷ್ಠಿರನ ಉತ್ತರ ಮತ್ತು ಯೌವರಾಜ್ಯಾದಿಗಳಲ್ಲಿ ಭೀಮಾದಿಗಳ ಸ್ಥಾಪನಾ
ವೈಶಂಪಾಯನಃ
ಪ್ರಕೃತೀನಾಂ ತು ತದ್ ವಾಕ್ಯಂ ದೇಶಕಾಲೋಪಸಂಹಿತಮ್ |
ಶ್ರುತ್ವಾ ಯುಧಿಷ್ಠಿರೋ ರಾಜಾಽಥೋತ್ತರಂ ಪ್ರತ್ಯಭಾಷತ ॥1॥
ವೈಶಂಪಾಯನರು ಪ್ರಜೆಗಳ ದೇಶಕಾಲೋಚಿತವಾದ ಆ ಮಾತುಗಳನ್ನು ಕೇಳಿದ ಯುಧಿಷ್ಠಿರರಾಜನು ಅನಂತರ ಉತ್ತರವನ್ನು ನೀಡಿದನು.
ಧನ್ಯಾಃ ಪಾಂಡುಸುತಾ ಲೋಕೇ ಯೇಷಾಂ ಬ್ರಾಹ್ಮಣಪುಂಗವಾಃ |
ತಥ್ಯಾನ್ ವಾಪ್ಯಥ ವಾಽತಥ್ಯಾನ್ ಗುಣಾನಾಹುಃ ಸಮಾಗತಾಃ ॥2॥
ಬ್ರಾಹ್ಮಣಪುಂಗವರಾದ ನೀವೆಲ್ಲರೂ ಇಲ್ಲಿಗೆ ಬಂದು ನಮ್ಮಲ್ಲಿ ಇರುವ ಅಥವಾ ಇಲ್ಲದಿರುವ ಗುಣಗಳನ್ನು ಹೀಗೆ ಹೇಳುವುದರಿಂದ ಪಾಂಡುಸುತರಾದ ನಾವು ಧನ್ಯರಾಗಿದ್ದೇವೆ.
ಅನುಗ್ರಾಹ್ಯಾ ವಯಂ ನೂನಂ ಭವತಾಮಿತಿ ಮೇ ಮತಿಃ |
ಯತ್ರೈವಂ ಗುಣಸಂಪನ್ನಾನಸ್ಮಾನ್ ಬ್ರೂಥ ವಿಮತ್ಸರಾಃ ॥3॥
ಯಾವ ಮಾತ್ಸರ್ಯವೂ ಇಲ್ಲದೆ ನಮ್ಮನ್ನು ಈ ರೀತಿಯಾಗಿ ಗುಣಸಂಪನ್ನ- ರೆಂದು ಹೇಳುತ್ತಿರುವ ನಿಮ್ಮ ಅನುಗ್ರಹವು ನಮ್ಮ ಮೇಲೆ ಯಾವಾಗಲೂ ಇರ- ಬೇಕೆಂದು ನನ್ನ ಅಭಿಪ್ರಾಯ.
ಧೃತರಾಷ್ಟ್ರೋ ಮಹಾರಾಜಃ ಪಿತಾ ನೋ ದೈವತಂ ಪರಮ್ |
ಶಾಸನೇಽಸ್ಯ ಪ್ರಿಯೇ ಚೈವ ಸ್ಥೇಯಂ ಮತ್ಪ್ರಿಯಕಾಂಕ್ಷಿಭಿಃ ॥4॥
ನಮ್ಮ ತಂದೆಯಾದ ಧೃತರಾಷ್ಟ್ರನೇ ಮಹಾರಾಜ. ಅವನು ನಮಗೆ ದೊಡ್ಡ ದೇವತೆ. ನನಗೆ ಪ್ರಿಯವನ್ನು ಮಾಡಲು ಬಯಸುವ ನೀವು ಯಾವಾಗಲೂ ಅವನ ಶಾಸನವನ್ನು ನೆರವೇರಿಸಿ ಅವನಿಗೆ ಪ್ರಿಯವನ್ನು ಮಾಡಬೇಕು.
ಏತದರ್ಥಂ ಹಿ ಜೀವಾಮಿ ಕೃತ್ವಾ ಜ್ಞಾತಿವಧಂ ಮಹತ್ |
ಅಸ್ಯ ಶು(ಶಿ)ಶ್ರೂಷಣಂ ಕಾರ್ಯಂ ಮಯಾ ನಿತ್ಯಮತಂದ್ರಿಣಾ ॥5॥
ದೊಡ್ಡ ಜ್ಞಾತಿವಧೆಯನ್ನು ಮಾಡಿ ನಾನು ಇದರ ಸಲುವಾಗಿ ಜೀವಿಸಿದ್ದೇನೆ. ನಾನು ಆಲಸ್ಯವಿಲ್ಲದೆ ಧೃತರಾಷ್ಟ್ರನ ಸೇವೆಯನ್ನು ಯಾವಾಗಲೂ ಮಾಡಬೇಕಾಗಿದೆ.
ಯದಿ ಚಾಹಮನುಗ್ರಾಹ್ಯೋ ಭವತಾಂ ಸುಹೃದಾಂ ತತಃ |
ಧೃತರಾಷ್ಟ್ರೇ ಯಥಾಪೂರ್ವಂ ವೃತ್ತಿಂ ವರ್ತಿತುಮರ್ಹಥ ॥6॥
ಸುಹೃಜ್ಜನರಾದ ನೀವೆಲ್ಲರೂ ನನಗೆ ಅನುಗ್ರಹವನ್ನು ಮಾಡುವುದಾದರೆ ನೀವೆಲ್ಲರೂ ಧೃತರಾಷ್ಟ್ರನ ವಿಷಯದಲ್ಲಿ ಮೊದಲಿನಂತೆಯೇ ನಡೆದುಕೊಳ್ಳಬೇಕು.
ಏಷ ನಾಥೋ ಹಿ ಜಗತೋ ಭವತಾಂ ಚ ಮಯಾ ಸಹ |
ಅಸ್ಯೈವ ಪೃಥಿವೀ ಕೃತ್ಸ್ನಾ ಪಾಂಡವಾಃ ಸರ್ವ ಏವ ಚ |
ಏತನ್ಮನಸಿ ಕರ್ತವ್ಯಂ ಭವದ್ಭಿರ್ವಚನಂ ಮಮ ॥7॥
ಅವನೇ ಜಗತ್ತಿಗೂ ನಿಮಗೂ ಮತ್ತು ನನಗೂ ಒಡೆಯನಾದವನು. ಸಮಗ್ರ- ವಾದ ಭೂಮಿಯು ಮತ್ತು ಎಲ್ಲಾ ಪಾಂಡವರೂ ಅವನಿಗೇ ಸೇರಿದವರು. ಈ ನನ್ನ ಮಾತನ್ನು ನೀವು ಯಾವಾಗಲೂ ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು. (ಎಂದು ಹೇಳಿ- ದನು).
ಅನುಗಮ್ಯ ಚ ರಾಜಾ ತಾನ್ ಯಥೇಷ್ಟಂ ಗಮ್ಯತಾಮಿತಿ |
ಪೌರಜನಪದಾನ್ ಸರ್ವಾನ್ ವಿಸೃಜ್ಯ ಕುರುನಂದನಃ |
ಯೌವರಾಜ್ಯೇನ ಕೌರವ್ಯೋ ಭೀಮಸೇನಮಯೋಜಯತ್ ॥8॥
ಕುರುನಂದನನಾದ ಯುಧಿಷ್ಠಿರನು ಪೌರಜಾನಪದರಿಗೆ ನಿಮಗೆ ಇಚ್ಛೆ ಬಂದಂತೆ ನೀವು ಹೋಗಬಹುದು ಎಂದು ಅನುಮತಿಯನ್ನು ನೀಡಿ, ಭೀಮಸೇನನಿಗೆ ಯುವ- ರಾಜಪದವಿಯನ್ನು ನೀಡಿದನು.
ಮಂತ್ರೇ ಚ ನಿಶ್ಚಯೇ ಚೈವ ಷಾಡ್ಗುಣ್ಯಸ್ಯ ಚ ಚಿಂತನೇ |
ವಿದುರಂ ಬುದ್ಧಿಸಂಪನ್ನಂ ಪ್ರೀತಿಮಾನ್ ವೈ ಸಮಾದಿಶತ್ ॥9॥
ಮಂತ್ರಾಲೋಚನೆಯಲ್ಲಿ ಮುಖ್ಯವಾದ ನಿರ್ಧಾರಗಳ ವಿಷಯದಲ್ಲಿ ಮತ್ತು ರಾಜನೀತಿಯ ಷಡಂಗಗಳಲ್ಲಿ ಬುದ್ಧಿಸಂಪನ್ನನಾದ ವಿದುರನನ್ನು ಸಂತೋಷದಿಂದ ಯೋಜಿಸಿದನು.
ಕೃತಾಕೃತಪರಿಜ್ಞಾನೇ ತಥಾಽಯವ್ಯಯಚಿಂತನೇ |
ಸಂಜಯಂ ಯೋಜಯಾಮಾಸ ಋದ್ಧಮೃದ್ಧೈರ್ಗುಣೈರ್ಯುತಮ್ ॥10॥
ಮಾಡಿದ ಮತ್ತು ಮಾಡಬೇಕಾದ ಕಾರ್ಯಗಳ ಪರಿಶೀಲನೆ ಮತ್ತು ಆಯವ್ಯಯದ ಚಿಂತನೆಯಲ್ಲಿ ಸಮೃದ್ಧವಾದ ಗುಣಗಳಿಂದ ಕೂಡಿದ ಸಮೃದ್ಧನಾದ ಸಂಜಯನನ್ನು ಯೋಜಿಸಿದನು.

ಬಲಸ್ಯ ಪರಿಮಾಣೇ ಚ ಭಕ್ತವೇತನಯೋಸ್ತಥಾ |
ನಕುಲಂ ವ್ಯಾದಿಶದ್ ರಾಜಾ ಕರ್ಮಿಣಾಮನ್ವವೇಕ್ಷಣೇ ||11||
ಸೈನ್ಯದ ಜಮಾವಣೆಯ ವಿಷಯದಲ್ಲಿ ಮತ್ತು ಸೈನಿಕರಿಗೆ ಭತ್ಯ ಮತ್ತು ವೇತನ- ವನ್ನು ಕೊಡುವ ವಿಷಯದಲ್ಲಿ ಮತ್ತು ಎಲ್ಲ ಕರ್ಮಕಾರರ ಮೇಲ್ವಿಚಾರಣೆಯಲ್ಲಿ ನಕುಲನನ್ನು ಯೋಜಿಸಿದನು.
ಪರಚಕ್ರೋಪರೋಧೇ ಚ ದೃಪ್ತಾನಾಂ ಚಾವಮರ್ದನೇ |
ಯುಧಿಷ್ಠಿರೋ ಮಹಾರಾಜ ಫಲ್ಗುನಂ ವ್ಯಾದಿದೇಶ ಹ ||12||
ಪರದೇಶಗಳನ್ನು ಮುತ್ತಿಗೆ ಹಾಕುವ ವಿಷಯದಲ್ಲಿ ಮತ್ತು ದರ್ಪವನ್ನು ಹೊಂದಿದ ರಾಜರನ್ನು ಸದೆಬಡಿಯುವ ವಿಷಯದಲ್ಲಿ ಮಹಾರಾಜನಾದ ಯುಧಿ- ಷ್ಠಿರನು ಅರ್ಜುನನಿಗೆ ಆದೇಶವನ್ನು ನೀಡಿದನು.
ದ್ವಿಜಾನಾಂ ವೇದಕಾರ್ಯೇಷು ಕಾರ್ಯೇಷ್ವನ್ಯೇಷು ಚೈವ ಹಿ |
ಧೌಮ್ಯಂ ಪುರೋಧಸಾಂ ಶ್ರೇಷ್ಠಂ ವ್ಯಾದಿದೇಶ ಪರಂತಪಃ ||13||
ಪರಂತಪನಾದ ಯುಧಿಷ್ಠಿರನು ಬ್ರಾಹ್ಮಣರ ವೈದಿಕಕಾರ್ಯಗಳಲ್ಲಿ ಮತ್ತು ಬೇರೆ ಕಾರ್ಯಗಳಲ್ಲಿಯೂ ಪುರೋಹಿತರಲ್ಲಿ ಶ್ರೇಷ್ಠರಾದ ಧೌಮ್ಯರನ್ನು ಆದೇಶಿಸಿದನು.
ಸಹದೇವಂ ಸಮೀಪಸ್ಥಂ ನಿತ್ಯಮೇವ ಸಮಾದಿಶತ್ |
ತೇನ ಗೋಪ್ಯೋ ಹಿ ನೃಪತಿಃ ಸರ್ವಾವಸ್ಥೋ ವಿಶಾಂಪತೇ ||14||
ಸಹದೇವನನ್ನು ಸಮೀಪದಲ್ಲಿ ಇದ್ದು, ಯಾವಾಗಲೂ ತನ್ನ ಅಂಗರಕ್ಷಕ- ನಾಗಿರುವಂತೆ ಆದೇಶಿಸಿದನು. ಎಲೈ ರಾಜನೇ! ಎಲ್ಲ ಕಾಲಗಳಲ್ಲಿಯೂ ರಾಜನು ಸಹದೇವನಿಂದ ರಕ್ಷಿಸಲ್ಪಡಬೇಕಾದವನು.
ಯಾನ್ ಯಾನಮನ್ಯದ್ ಯೋಗ್ಯಾಂಶ್ಚ ಯೇಷು ಯೇಷ್ವಿಹ ಕರ್ಮಸು |
ತಾಂಸ್ತಾಂಸ್ತೇಷ್ವೇವ ಯುಯುಜೇ ಪ್ರೀಯಮಾಣೋ ಮಹೀಪತಿಃ ||15||
ರಾಜನಾದ ಯುಧಿಷ್ಠಿರನು ಯಾವ ಯಾವ ಕಾರ್ಯಗಳಿಗೆ ಯಾರು ಯಾರು ಯೋಗ್ಯರೆಂದು ಭಾವಿಸಿದನೋ ಅಂತಹವರನ್ನು ಆಯಾ ಕಾರ್ಯಗಳಲ್ಲಿಯೇ ಸಂತೋಷದಿಂದ ನಿಯೋಜಿಸಿದನು.
ವಿದುರಂ ಸಂಜಯಂ ಚೈವ ಯುಯುತ್ಸುಂ ಚ ಮಹೀಪತಿಃ |
ಅಬ್ರವೀತ್ ಪರವೀರಘ್ನೋ ಧರ್ಮಾತ್ಮಾ ಧರ್ಮವತ್ಸಲಃ ||16||
ಉತ್ಥಾಯೋತ್ಥಾಯ ಯತ್ ಕಾರ್ಯಮಸ್ಯ ರಾಜ್ಞಃ ಪಿತುರ್ಮಮ |
ಸರ್ವಂ ಭವದ್ಭಿಃ ಕರ್ತವ್ಯಮಪ್ರಮತ್ತೈರ್ಯಥಾತಥಮ್ ||17||
ಪೌರಜಾನಪದಾನಾಂ ಚ ಯಾನಿ ಕಾರ್ಯಾಣಿ ನಿತ್ಯಶಃ |
ರಾಜಾನಂ ಸಮನುಜ್ಞಾಪ್ಯ ತಾನಿ ಕಾರ್ಯಾಣಿ ಧರ್ಮತಃ ||18||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಏಕಚತ್ವಾರಿಂಶೋಽಧ್ಯಾಯಃ ||41||
ವಿದುರ, ಸಂಜಯ ಮತ್ತು ಯುಯುತ್ಸುವನ್ನು ಕುರಿತು ಪರವೀರಘ್ನನೂ ಧರ್ಮಾತ್ಮನೂ ಧರ್ಮವತ್ಸಲನೂ ಆದ ರಾಜನು ನೀವು ಪ್ರತಿದಿನವೂ ಎದ್ದು ರಾಜನಾದ ನನ್ನ ತಂದೆಗೆ ಮಾಡಬೇಕಾದ ಕಾರ್ಯಗಳನ್ನು ಎಚ್ಚರಿಕೆಯಿಂದ ಸರಿಯಾಗಿ ಮಾಡಬೇಕು. ಪೌರಜಾನಪದರಿಗೆ ನಿತ್ಯವೂ ಯಾವ ಕಾರ್ಯವಾಗ- ಬೇಕಾಗಿದೆಯೋ ಅವುಗಳನ್ನೆಲ್ಲಾ ರಾಜನಾದ ಧೃತರಾಷ್ಟ್ರನ ಅನುಮತಿಯನ್ನು ಪಡೆದು ನೀವು ಧರ್ಮದಿಂದ ಮಾಡಬೇಕು ಎಂದು ಹೇಳಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 41ನೆಯ ಅಧ್ಯಾಯವು ಮುಗಿಯಿತು
0

## 42. ನಲವತ್ತೆರಡನೆಯ ಅಧ್ಯಾಯ
ಯುಧಿಷ್ಠಿರನಿಂದ ಜ್ಞಾತಿಗಳಿಗೆ ಶ್ರಾದ್ಧದಾನ
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ಜ್ಞಾತೀನಾಂ ಯೇ ಹತಾ ಮೃಧೇ |
ಶ್ರಾದ್ಧಾನಿ ಕಾರಯಾಮಾಸ ತೇಷಾಂ ಪೃಥಗುದಾರಧೀಃ ||1||
ವೈಶಂಪಾಯನರು ಅನಂತರ ರಾಜನಾದ ಯುಧಿಷ್ಠಿರನು ಉದಾರವಾದ ಬುದ್ಧಿಯುಳ್ಳವನಾಗಿ ಯುದ್ಧದಲ್ಲಿ ಹತರಾದ ಜ್ಞಾತಿಗಳಿಗೆ ಶ್ರಾದ್ಧಗಳನ್ನು ಮಾಡಿಸಿ- ದನು.
ಧೃತರಾಷ್ಟ್ರೋ ದದೌ ರಾಜಾ ಪುತ್ರಾಣಾಮೌರ್ಧ್ವದೇಹಿಕಮ್ |
ಸರ್ವಕಾಮಗುಣೋಪೇತಮನ್ನಂ ಗಾಶ್ಚ ಧನಾನಿ ಚ |
ರತ್ನಾನಿ ಚ ವಿಚಿತ್ರಾಣಿ ಮಹಾರ್ಹಾಣಿ ಮಹಾಯಶಾಃ ||2||
ರಾಜನಾದ ಧೃತರಾಷ್ಟ್ರನು ತನ್ನ ಪುತ್ರರಿಗೆ ಸರ್ವಾಪೇಕ್ಷಿತಗುಣಗಳಿಂದ ಕೂಡಿದ ಔರ್ಧ್ವದೈಹಿಕಕ್ರಿಯೆಯನ್ನು ಮಾಡಿ ಮಹಾಕೀರ್ತಿವಂತನಾದ ಅವನು ಅನ್ನವನ್ನೂ ಗೋವುಗಳನ್ನೂ, ಧನವನ್ನೂ, ವಿಚಿತ್ರವಾದ ಬೆಲೆ ಬಾಳುವ ರತ್ನಗಳನ್ನೂ ದಾನ ಮಾಡಿದನು.
ಯುಧಿಷ್ಠಿರಸ್ತು ಕರ್ಣಸ್ಯ ದ್ರೋಣಸ್ಯ ಚ ಮಹಾತ್ಮನಃ |
ಧೃಷ್ಟದ್ಯುಮ್ನಾಭಿಮನ್ಯುಭ್ಯಾಂ ಹೈಡಿಂಬಸ್ಯ ಚ ರಕ್ಷಸಃ ||3||

ವಿರಾಟಪ್ರಭೃತೀನಾಂ ಚ ಸುಹೃದಾಮುಪಕಾರಿಣಾಮ್ |
ದ್ರುಪದದ್ರೌಪದೇಯಾನಾಂ ದ್ರೌಪದ್ಯಾ ಸಹಿತೋ ದದೌ ॥4॥
ಯುಧಿಷ್ಠಿರನಾದರೋ ಕರ್ಣನಿಗೆ ಮಹಾತ್ಮರಾದ ದ್ರೋಣರಿಗೆ ಧೃಷ್ಟದ್ಯುಮ್ನ ಮತ್ತು ಅಭಿಮನ್ಯುಗಳಿಗೆ ರಾಕ್ಷಸನಾದ ಘಟೋತ್ಕಚನಿಗೆ ವಿರಾಟ ಮೊದಲಾದ ಉಪಕಾರಿಗಳಾದ ಸುಹೃಜ್ಜನರಿಗೆ ದ್ರುಪದನಿಗೆ ಮತ್ತು ದ್ರುಪದಪುತ್ರರಿಗೆ ದ್ರೌಪದಿ- ಯಿಂದ ಸಹಿತನಾಗಿ ಶ್ರಾದ್ಧವನ್ನು ಮಾಡಿದನು.
ಬ್ರಾಹ್ಮಣಾನಾಂ ಸಹಸ್ರಾಣಿ ಪೃಥಗೇಕೈಕಮುದ್ದಿಶನ್ |
ಧನೈಶ್ಚ ವಸ್ತ್ರೈ ರತ್ನೈಶ್ಚ ಗೋಭಿಶ್ಚ ಸಮತರ್ಪಯತ್ ॥5॥
ಹತರಾದ ಒಬ್ಬೊಬ್ಬರನ್ನೂ ಉದ್ದೇಶಿಸಿ ಸಹಸ್ರಬ್ರಾಹ್ಮಣರನ್ನು ಧನಗಳಿಂದಲೂ, ವಸ್ತ್ರಗಳಿಂದಲೂ, ರತ್ನಗಳಿಂದಲೂ, ಗೋವುಗಳಿಂದಲೂ ತೃಪ್ತಿಪಡಿಸಿದನು.
ಯೇ ಚಾನ್ಯೇ ಪೃಥಿವೀಪಾಲಾ ಯೇಷಾಂ ನಾಸ್ತಿ ಸುಹೃಜ್ಜನಃ |
ಉದ್ದಿಶ್ಯೋದ್ದಿಶ್ಯ ತೇಷಾಂ ಚ ಚಕ್ರೇ ರಾಜೌರ್ಧ್ವದೈಹಿಕಮ್ ॥6॥
ರಾಜನಾದ ಅವನು ಯುದ್ಧದಲ್ಲಿ ಮಡಿದ ಸುಹೃಜ್ಜನರಿಲ್ಲದ ರಾಜರನ್ನು ಪ್ರತಿ- ಯೊಬ್ಬರನ್ನೂ ಉದ್ದೇಶಿಸಿ ಉದ್ದೇಶಿಸಿ ಅವರಿಗೆ ಉತ್ತರಕ್ರಿಯೆಯನ್ನು ಮಾಡಿದನು.
ಸಭಾಃ ಪ್ರಪಾಶ್ಚ ವಿವಿಧಾಸ್ತಡಾಗಾನಿ ಚ ಪಾಂಡವಃ |
ಸುಹೃದಾಂ ಕಾರಯಾಮಾಸ ಸರ್ವೇಷಾಮೌರ್ಧ್ವದೈಹಿಕಮ್ ॥7॥
ಪಾಂಡವನಾದ ಅವನು ಸುಹೃಜ್ಜನರ ಔರ್ಧ್ವದೈಹಿಕಕ್ರಿಯೆಯ ಅಂಗವಾಗಿ ಸಭೆ- ಗಳನ್ನು, ಪಾನಶಾಲೆಗಳನ್ನು ವಿವಿಧವಾದ ಜಲಾಶಯಗಳನ್ನು ನಿರ್ಮಿಸಿದನು.
ಸ ತೇಷಾಮನೃಣೋ ಭೂತ್ವಾ ಗತ್ವಾ ಲೋಕೇಷ್ವವಾಚ್ಯತಾಮ್ |
ಕೃತಕೃತ್ಯೋಽಭವದ್ ರಾಜಾ ಪ್ರಜಾ ಧರ್ಮೇಣ ಪಾಲಯನ್ ॥8॥
ಅವನು ಅವರ ಋಣದಿಂದ ಮುಕ್ತನಾಗಿ, ಲೋಕದಲ್ಲಿ ನಿಂದ್ಯನಾಗದೆ ಪ್ರಜೆ- ಗಳನ್ನು ಧರ್ಮದಿಂದ ಪಾಲಿಸುತ್ತಾ ಕೃತಕೃತ್ಯನಾದನು.
ಧೃತರಾಷ್ಟ್ರಂ ಯಥಾಪೂರ್ವಂ ಗಾಂಧಾರೀಂ ವಿದುರಂ ತಥಾ |
ಸರ್ವಾಂಶ್ಚ ಕೌರವಾಮಾತ್ಯಾನ್ ಭೃತ್ಯಾಂಶ್ಚ ಸಮಪೂಜಯತ್ ॥9॥
ಧೃತರಾಷ್ಟ್ರನನ್ನೂ, ಗಾಂಧಾರಿಯನ್ನೂ, ವಿದುರನನ್ನೂ, ಕೌರವರ ಎಲ್ಲಾ ಮಂತ್ರಿಗಳನ್ನೂ ಮತ್ತು ಭೃತ್ಯರನ್ನೂ ಮೊದಲಿನಂತೆಯೇ ಪೂಜಿಸಿದನು.
ಯಾಶ್ಚ ತತ್ರ ಸ್ತ್ರಿಯಃ ಕಾಶ್ಚಿದ್ ಹತವೀರಾ ಹತಾತ್ಮಜಾಃ |
ಸರ್ವಾಸ್ತಾಃ ಕೌರವೋ ರಾಜಾ ಸಂಪೂಜ್ಯಾಪಾಲಯದ್ ಘೃಣೀ ॥10॥
ಕೌರವರಾಜನಾದ ಯುಧಿಷ್ಠಿರನು ದಯಾಪೂರ್ಣನಾಗಿ ಯುದ್ಧದಲ್ಲಿ ಪತಿ- ಗಳನ್ನೂ, ಪುತ್ರರನ್ನೂ ಕಳೆದುಕೊಂಡ ಎಲ್ಲಾ ಸ್ತ್ರೀಯರನ್ನೂ ಪೂಜಿಸಿ, ಅವರ ಪಾಲನೆಯನ್ನು ಮಾಡಿದನು.
ದೀನಾಂಧಕೃಪಣಾನಾಂ ಚ ಗೃಹಾಚ್ಛಾದನಭೋಜನೈಃ |
ಆನೃಂಶಸ್ಯಪರೋ ರಾಜಾ ಚಕಾರಾನುಗ್ರಹಂ ಪ್ರಭುಃ ॥11॥
ಪ್ರಭುವೂ ದಯಾಳುವೂ ಆದ ರಾಜನು ದೀನಾಂಧಕೃಪಣರಿಗೆ ಗೃಹಗಳನ್ನೂ, ವಸ್ತ್ರಗಳನ್ನೂ ಮತ್ತು ಭೋಜನವನ್ನೂ ಕಲ್ಪಿಸಿ ಅನುಗ್ರಹವನ್ನು ಮಾಡಿದನು.
ಸ ವಿಜಿತ್ಯ ಮಹೀಂ ಕೃತ್ಸ್ನಾಮಾನೃಣ್ಯಂ ಪ್ರಾಪ್ಯ ವೈರಿಷು |
ನಿಃಸಪತ್ನಃ ಸುಖೀ ರಾಜಾ ವಿಜಹಾರ ಯುಧಿಷ್ಠಿರಃ ॥12॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿಚತ್ವಾರಿಂಶೋಽಧ್ಯಾಯಃ ॥42॥
ರಾಜನಾದ ಯುಧಿಷ್ಠಿರನು ಸಮಗ್ರವಾದ ಭೂಮಿಯನ್ನು ಗೆದ್ದು ವೈರಿಗಳಿಗೂ ಶ್ರಾದ್ಧವನ್ನು ಮಾಡಿ ಅವರ ಋಣವನ್ನು ತೀರಿಸಿ, ಶತ್ರುರಹಿತನಾಗಿ ಸಂತೋಷದಿಂದ ವಿಹರಿಸಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 42ನೆಯ ಅಧ್ಯಾಯ ಮುಗಿಯಿತು.
0

43. ನಲವತ್ತಮೂರನೆಯ ಅಧ್ಯಾಯ
ಯುಧಿಷ್ಠಿರನು ಮಾಡಿದ ಕೃಷ್ಣಸ್ತೋತ್ರ
ವೈಶಂಪಾಯನಃ
ಅಭಿಷಿಕ್ತೋ ಮಹಾಪ್ರಾಜ್ಞೋ ರಾಜ್ಯಂ ಪ್ರಾಪ್ಯ ಯುಧಿಷ್ಠಿರಃ |
ದಾಶಾರ್ಹಂ ಪುಂಡರೀಕಾಕ್ಷಮುವಾಚ ಪ್ರಾಂಜಲಿಃ ಶುಚಿಃ ॥1॥
ವೈಶಂಪಾಯನರು  ಮಹಾಪ್ರಾಜ್ಞನಾದ ಯುಧಿಷ್ಠಿರನು ರಾಜ್ಯದಲ್ಲಿ ಅಭಿಷಿಕ್ತ- ನಾಗಿ ರಾಜ್ಯವನ್ನು ಪಡೆದು ಪುಂಡರೀಕಾಕ್ಷನಾದ ದಾಶಾರ್ಹನಾದ ಕೃಷ್ಣನಿಗೆ ಶುಚಿ- ಯಾಗಿ ಕೈಗಳನ್ನು ಮುಗಿದು ಮಾತನಾಡಿದನು.
ತವ ಕೃಷ್ಣ ಪ್ರಸಾದೇನ ನಯೇನ ಚ ಬಲೇನ ಚ |
ಬುದ್ಧ್ಯಾ ಚ ಯದುಶಾರ್ದೂಲ ತಥಾ ವಿಕ್ರಮಣೇನ ಚ ॥2॥

ಪುನಃ ಪ್ರಾಪ್ತಮಿದಂ ರಾಜ್ಯಂ ಪಿತೃಪೈತಾಮಹಂ ಮಯಾ |
ನಮಸ್ತೇ ಪುಂಡರೀಕಾಕ್ಷ ಪುನಃ ಪುನರರಿಂದಮ ॥3॥
ಕೃಷ್ಣನೇ ನಿನ್ನ ಅನುಗ್ರಹದಿಂದ, ನೀತಿಯಿಂದ, ಬಲದಿಂದ, ಬುದ್ಧಿಯಿಂದ ಮತ್ತು ಪರಾಕ್ರಮದಿಂದ ಪಿತೃಪಿತಾಮಹರಿಗೆ ಸೇರಿದ ಈ ರಾಜ್ಯವನ್ನು ನಾನು ಪುನಃ ಪಡೆದಿ- ದ್ದೇನೆ. ಎಲೈ ಯದುಶಾರ್ದೂಲನೇ! ಪುಂಡರೀಕಾಕ್ಷನೇ! ಅರಿಂದಮನೇ! ನಿನಗೆ ಪುನಃ ಪುನಃ ನಮಸ್ಕಾರ.
ತ್ವಾಮೇಕಮಾಹುಃ ಪುರುಷಂ ತ್ವಾಮಾಹುಃ ಸಾತ್ವತಾಂಪತಿಮ್ |
ನಾಮಭಿಸ್ತ್ವಂ ಬಹುವಿಧೈಃ ಸ್ತುವಂತಿ ಪರಮರ್ಷಯಃ ॥4॥
ನಿನ್ನನ್ನು ಸರ್ವೋತ್ತಮನೆಂದು ಕರೆಯುತ್ತಾರೆ. ಪೂರ್ಣಷಡ್ಗುಣಸಂಪನ್ನನೆಂದು ಕರೆಯುತ್ತಾರೆ. ಸಾತ್ವತರಿಗೆ ಪತಿಯೆಂದು ಕರೆಯುತ್ತಾರೆ. ಪರಮ ಋಷಿಗಳು ಅನೇಕ- ವಿಧವಾದ ನಾಮಗಳಿಂದ ನಿನ್ನ ಸ್ತೋತ್ರವನ್ನು ಮಾಡುತ್ತಾರೆ.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ |
ವಿಷ್ಣೋ ಜಿಷ್ಣೋ ಹರೇ ಕೃಷ್ಣ ವೈಕುಂಠ ಪುರುಷೋತ್ತಮ ॥5॥
ಎಲೈ ಎಲ್ಲ ಕರ್ಮಗಳನ್ನೂ ಮಾಡುವವನೇ! ನಿನಗೆ ನಮಸ್ಕಾರ. ವಿಶ್ವ- ವ್ಯಾಪಕನೇ! ವಿಶ್ವೋತ್ಪತ್ತಿಗೆ ಕಾರಣನೇ! ವಿಶೇಷವಾದ ಪ್ರಾಣಚೇಷ್ಟಾರೂಪನಾದ- ವನೇ! ಜಯಶೀಲನಾದವನೇ! ಪಾಪಪರಿಹಾರಕನೇ! ಕುಂದದ ಗುಣಗಳುಳ್ಳವನೇ! ಪುರುಷೋತ್ತಮನೇ! ಕೃಷ್ಣನೇ! (ನಿನಗೆ ನಮಸ್ಕಾರ).
ಅದಿತ್ಯಾಃ ಸಪ್ತಧಾ ತ್ವಂ ತು ಪುರಾಣೇ ಗರ್ಭತಾಂಗತಃ |
ಪೃಶ್ನಿಗರ್ಭಸ್ತ್ವಮೇವೈಕಸ್ತ್ರಿಯುಗಂ ತ್ವಾಂ ವದಂತ್ಯಪಿ ॥6॥
ಪುರಾಣಗಳಲ್ಲಿ ನೀನು ಅದಿತಿದೇವಿಯ ಗರ್ಭದಲ್ಲಿ ಏಳು ಬಾರಿ ಜನಿಸಿದ್ದೀಯೆ ಎಂದು ಹೇಳಲ್ಪಡುತ್ತದೆ. ನೀನೇ ಪೃಶ್ನಿಗರ್ಭನಾದವನು. ನಿನ್ನನ್ನು ಮೂರು ಯುಗ- ಗಳಲ್ಲಿ ಅವತಾರ ಮಾಡುವ ಕಾರಣದಿಂದ ತ್ರಿಯುಗನೆಂದು ಕರೆಯುತ್ತಾರೆ.
ಶುಚಿಶ್ರವಾ ಹೃಷೀಕೇಶೋ ಘೃತಾರ್ಚಿರ್ಹಂಸ ಉಚ್ಯಸೇ |
ತ್ರಿಚಕ್ಷುಃ ಶಂಭುರೇಕಸ್ತ್ವಂ ವಿಭುರ್ದಾಮೋದರೋಽಪಿ ಚ ॥7॥
ನೀನು ಪವಿತ್ರವಾದ ಕೀರ್ತಿಯುಳ್ಳವನು. ಇಂದ್ರಿಯಗಳಿಗೆ ಅಧಿಪತಿಯಾದ- ವನು. ಪ್ರಸರಿಸುವ ಜ್ಞಾನಾದಿ ಜ್ವಾಲೆಯುಳ್ಳವನು. ದೋಷದೂರನೂ ಮತ್ತು ಗುಣಪರಿಪೂರ್ಣನೂ ಆದ ಕಾರಣದಿಂದ ಶುಚಿಶ್ರವನೆಂದೂ, ಹೃಷೀಕೇಶನೆಂದೂ, ಘೃತಾರ್ಚಿ ಎಂದೂ, ಹಂಸನೆಂದೂ ಹೇಳಲ್ಪಡುತ್ತೀಯೆ. ನರಸಿಂಹರೂಪದಲ್ಲಿ ನೀನು ತ್ರಿನೇತ್ರನಾದವನು. ಪರಮಾನಂದಕ್ಕೆ ಆಶ್ರಯನಾದವನು ನೀನೊಬ್ಬನೇ. ನೀನು ವ್ಯಾಪ್ತನಾದವನು ಮತ್ತು ಯಶೋದೆಯಿಂದ ಉದರದಲ್ಲಿ ಕಟ್ಟಲ್ಪಟ್ಟವನು.
ವರಾಹೋಽಗ್ನಿರ್ಬೃಹದ್ಭಾನುರ್ವರ್ಷಣಸ್ತಾರ್ಕ್ಷ್ಯಲಕ್ಷಣಃ |
ಅನೀಕಸಾಹಃ ಪುರುಷಃ ಶಿಪಿವಿಷ್ಟ ಉರುಕ್ರಮಃ ॥8॥
ನೀನೇ ವರಾಹನಾದವನು. ಅಗ್ರನಾದ್ದರಿಂದ ಅಗ್ನಿಯೆಂದು ಕರೆಯಲ್ಪಡುವ- ವನು. ಅನಂತವಾದ ಜ್ಞಾನಕಿರಣವುಳ್ಳವನು. ಭಕ್ತರ ಅಭೀಷ್ಟವನ್ನು ಮಳೆಯಂತೆ ಸುರಿಸುವವನು. ಗರುಡಧ್ವಜನಾದವನು. ಯಾವ ಸೈನ್ಯವನ್ನೂ ತಡೆಯಲು ಸಮರ್ಥ -ನಾದವನು. ಗರುಡಾರೂಢನಾದವನು. ಮಹಾಪರಾಕ್ರಮವುಳ್ಳವನು.
ವಾಚಿಷ್ಠಃ ಉಗ್ರಃ ಸೇನಾನೀಃ ಸತ್ಯೋ ವಾಜಸನಿರ್ಗುಹಃ |
ಅಚ್ಯುತಶ್ಚ್ಯಾವನೋಽರೀಣಾಂ ಸಂಕೃತಿರ್ವಿಕೃತಿರ್ವೃಷಃ ॥9॥
ವಾಗಿಂದ್ರಿಯಸ್ಥಿತನಾದವನು. ಅಸುರರಿಗೆ ಘೋರರೂಪನಾದವನು. ಸೇನಾ ನಾಯಕನಾದವನು. ಮುಖ್ಯಪ್ರಾಣಪ್ರೇರಕನಾದವನು. ಎಲ್ಲರಿಗೂ ಅನ್ನವನ್ನು ನೀಡುವವನು. ಹೃದಯಗುಹೆಯಲ್ಲಿ ವಾಸಿಸುವವನು. ಚತುರ್ವಿಧನಾಶರಹಿತ- ನಾದವನು. ಶತ್ರುಗಳನ್ನು ನಾಶಪಡಿಸುವವನು. ಸಮೀಚೀನವಾದ ಕಾರ್ಯಗಳನ್ನು ಮಾಡುವವನು. ವಿವಿಧವಾದ ಕಾರ್ಯಗಳನ್ನು ಮಾಡುವವನು. ಸರ್ವಶ್ರೇಷ್ಠನಾ- ದವನು.
ಕೃತವರ್ತ್ಮಾ ತ್ವಮೇವಾದ್ರಿರ್ವೃಷಗರ್ಭೋ ವೃಷಾಕಪಿಃ |
ಸಿಂಧುಕ್ಷಿದೂರ್ಮಿಸ್ತ್ರಿಕಕುತ್ ತ್ರಿಧಾಮಾ ತ್ರಿವೃದಚ್ಯುತಃ ॥10॥
ವೇದಗಳಿಂದ ನಿನ್ನ ಪ್ರಾಪ್ತಿಗೆ ತೋರಿಸಲ್ಪಟ್ಟ ದಾರಿಯುಳ್ಳವನು. ನೀನೇ ಆದರಣೀಯನಾದವನು. ಶ್ರೇಷ್ಠವಾದ ಗರ್ಭವನ್ನು (ಬ್ರಹ್ಮಾಂಡವನ್ನು) ಧರಿಸಿದ- ವನು. ವೃಷಾಕಪಿ ಎನಿಸುವವನು. ಸಮುದ್ರಶಾಯಿಯಾದವನು. ಉತ್ಪತ್ತಿ ಸ್ಥಿತಿ ಸಂಹಾರಗಳ ತರಂಗಗಳನ್ನು ಪ್ರವರ್ತಿಸುವವನು. ಮೂರು ಶಿಖರಗಳನ್ನು ಹೊಂದಿ- ದವನು. ಶ್ವೇತದ್ವೀಪ ಅನಂತಾಸನ ಮತ್ತು ವೈಕುಂಠವೆಂಬ ಮೂರು ವಾಸಸ್ಥಾನ- ವುಳ್ಳವನು. ಮೂರು ವೇದಗಳಿಂದ ಪ್ರತಿಪಾದ್ಯನಾದವನು. ಚತುರ್ವಿಧನಾಶರಹಿತ- ನಾದವನು.
ಸಮ್ರಾಡ್ ವಿರಾಟ್ ಸ್ವರಾಟ್ ಚೈವ ಸುರರಾಟ್ ಧರ್ಮದೋ ಭವಃ |
ವಿಭುರ್ಭೂರಭಿಭೂಃ ಕೃಷ್ಣಃ ಕೃಷ್ಣವರ್ತ್ಮಾ ತ್ವಮೇವ ಚ ॥11॥
ಚೆನ್ನಾಗಿ ಪ್ರಕಾಶಿಸುವವನು. ವಿವಿಧವಾಗಿ ಪ್ರಕಾಶಿಸುವವನು. ಸ್ವತಂತ್ರನಾದವನು. ದೇವತೆಗಳಿಗೆ ಒಡೆಯನಾದವನು. ಧರ್ಮಪ್ರದನಾದವನು. ವೈಭವರೂಪನಾದ- ವನು. ವ್ಯಾಪ್ತನಾದವನು. ಸರ್ವಾಶ್ರಯನಾದವನು. ಶತ್ರುಗಳನ್ನು ಸೋಲಿಸುವವನು. ಎಲ್ಲರನ್ನೂ ಆಕರ್ಷಿಸುವವನು. ಎಲ್ಲರನ್ನೂ ನಿನ್ನೆಡೆಗೆ ಆಕರ್ಷಿಸುವ ಮಾರ್ಗ- ವುಳ್ಳವನು.
ಸ್ವಿಷ್ಟಕೃದ್ ಭಿಷಗಾವರ್ತಃ ಕಪಿಲಸ್ತ್ವಂ ಚ ವಾಮನಃ |
ಯಜ್ಞೋ ಧ್ರುವಃ ಪತಂಗಶ್ಚ ಜಯತ್ಸೇನಸ್ತ್ವಮುಚ್ಯತೇ ॥12॥
ಭಕ್ತರಿಗೆ ಬಹಳ ಇಷ್ಟವಾದ ವಸ್ತುಗಳನ್ನು ಕೊಡುವವನು. ಸಂಸಾರವೆಂಬ ರೋಗಕ್ಕೆ ವೈದ್ಯನಾದವನು. ಪುನಃ ಪುನಃ ಅವತಾರವನ್ನು ಮಾಡುವವನು. ನೀನೇ ಕಪಿಲನಾದವನು. ವಾಮನನಾದವನು. ಯಜನೀಯನಾದವನು. ಶಾಶ್ವತನಾದವನು. ಗರುಡಾದಿ ಪಕ್ಷಿಗಳ

ಅಂತರ್ಯಾಮಿಯಾದವನು. ಜಯಶೀಲವಾದ ಸೇನೆಯುಳ್ಳ- ವನು ಎಂದು ಕರೆಯಲ್ಪಡುತ್ತೀಯೆ.
ಶಿಖಂಡೀ ನಹುಷೋ ಬಭ್ರುರ್ದಿವಃಸ್ಪೃಕ್ ತ್ವಂ ಪುನರ್ವಸುಃ |
ಸುಬಭ್ರುರುಕ್ಮೋ ರುಗ್ಮಸ್ತ್ವಂ ಸುಷೇಣೋ ದುಂದುಭಿಸ್ತಥಾ ॥13॥
ನೀನೇ ಶಿಖೆಯನ್ನು ಧರಿಸಿದವನು. ನಹುಷಾದಿ ಚಕ್ರವರ್ತಿಗಳ ಅಂತ- ರ್ಯಾಮಿಯಾದವನು. ಸರ್ವವನ್ನೂ ಧರಿಸಿದವನು. ಅವ್ಯಾಕೃತಾಕಾಶದಲ್ಲಿ ವ್ಯಾಪಿಸಿ -ರುವವನು. ಪುನಃ ಪುನಃ ಭಕ್ತರಿಗೆ ಧನವನ್ನು ಕೊಡುವವನು. ಶ್ರೇಷ್ಠವಾದ ಧಾರಣ- ಶೀಲನಾದವನು. ಭಕ್ತರ ಅಭೀಷ್ಟವನ್ನು ಸುರಿಸುವವನು. ಕಾಂತಿಯಿಂದ ಬೆಳಗು- ವವನು. ಒಳ್ಳೆಯ ಸೈನ್ಯವುಳ್ಳವನು. ದುಂದುಭಿಮೊದಲಾದವುಗಳಲ್ಲಿ ಇದ್ದು ಅವುಗಳ ಕಾರ್ಯವನ್ನು ಮಾಡುವವನು.
ಗಭಸ್ತಿನೇಮಿಃ ಶ್ರೀಪದ್ಮಂ ಪುಷ್ಕರಂ ಪುಷ್ಪಧಾರಣಃ |
ಋಭುರ್ವಿಭುಃ ಸರ್ವಸೂಕ್ಷ್ಮಸ್ತ್ವಂ ಸಾವಿತ್ರಂ ಚ ಪಠ್ಯಸೇ ॥14॥
ಕಿರಣಗಳುಳ್ಳ ಸುದರ್ಶನಚಕ್ರವುಳ್ಳವನು. ಲಕ್ಷ್ಮಿಯಿಂದ ಅಭಿಮನ್ಯವಾದ ಪದ್ಮವನ್ನು ಧರಿಸಿದವನು. ಪುಷ್ಕಳನಾದವನು. ಪುಷ್ಪಗಳಿಂದ ಮಾಡಿದ ವನಮಾಲೆ- ಯನ್ನು ಧರಿಸಿದವನು. ದೇವತೆಗಳಿಗೆ ಒಡೆಯನಾದವನು. ವ್ಯಾಪ್ತನಾದವನು. ಅತ್ಯಂತ ಸೂಕ್ಷ್ಮನಾದವನು(ಅತೀಂದ್ರಿಯನಾದವನು). ನೀನೇ ಗಾಯತ್ರೀಮಂತ್ರ- ಪ್ರತಿಪಾದ್ಯನೆಂದು ಹೇಳಲ್ಪಡುತ್ತೀಯೆ.
ಅಂಭೋನಿಧಿಸ್ತ್ವಂ ಬ್ರಹ್ಮಾ ತ್ವಂ ಪವಿತ್ರಂ ಧಾಮ ಧನ್ವ ಚ |
ಹಿರಣ್ಯಗರ್ಭಂ ತ್ವಾಮಾಹುಃ ಸ್ವಧಾ ಸ್ವಾಹಾ ಚ ಕೇಶವ ॥15॥
ಎಲೈ ಕೇಶವನೇ! ಸಮುದ್ರಗಳು, ಬ್ರಹ್ಮಾದಿ ದೇವತೆಗಳು, ಪವಿತ್ರವಾದ ವಾಸಸ್ಥಾನಗಳು, ಮರುಭೂಮಿಗಳು ಹಿರಣ್ಯಗರ್ಭರೂಪವಾದ ಬ್ರಹ್ಮಾಂಡ, ದೇವತೆಗಳ ಅನ್ನ, ಪಿತೃಗಳ ಅನ್ನ ಎಲ್ಲವೂ ನಿನ್ನ ಅಧೀನವಾದುದು.
ಯೋನಿಸ್ತ್ವಮಸ್ಯ ಪ್ರಲಯಶ್ಚ ಕೃಷ್ಣ
ತ್ವಮೇವೇದಂ ಸೃಜಸಿ ವಿಶ್ವಮಗ್ರೇ |
ವಿಶ್ವಂ ಚೇದಂ ತ್ವದ್ವಶೇ ವಿಶ್ವಯೋನೇ
ನಮೋಽಸ್ತು ತೇ ಶಾರ್ಙ್ಗಚಕ್ರಾಸಿಪಾಣೇ ॥16॥
ಎಲೈ ಕೃಷ್ಣನೇ! ನೀನು ಈ ಜಗತ್ತಿಗೆ ಉತ್ಪತ್ತಿಕಾರಣ ಮತ್ತು ಸಂಹಾರ ಕಾರಣನಾದವನು. ಪ್ರಳಯಕಾಲದಲ್ಲಿ ನೀನೇ ಈ ಜಗತ್ತನ್ನು ಸೃಷ್ಟಿಸುವವನು. ಎಲೈ ವಿಶ್ವಯೋನಿಯೇ! ಈ ಜಗತ್ತು ನಿನ್ನ ಅಧೀನವಾಗಿದೆ. ಶಾರ್ಙ್ಗಧನುಸ್ಸನ್ನೂ, ಸುದರ್ಶನ ಚಕ್ರವನ್ನೂ, ನಂದಕ ಖಡ್ಗವನ್ನೂ ಹಸ್ತದಲ್ಲಿ ಹಿಡಿದ ನಿನಗೆ ನಮಸ್ಕಾರ.
ಏವಂ ಸ್ತುತೋ ಧರ್ಮರಾಜೇನ ಕೃಷ್ಣಃ
ಸಭಾಮಧ್ಯೇ ಪ್ರೀತಿಮಾನ್ ಪುಷ್ಕರಾಕ್ಷಃ |
ತಮಭ್ಯನಂದದ್ ಭಾರತಂ ಪುಷ್ಕಲಾಭಿಃ
ವಾಗ್ಭಿರ್ಜ್ಯೇಷ್ಠಂ ಪಾಂಡವಂ ಯಾದವಾಗ್ರ್ಯಃ ॥17॥
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಚತ್ವಾರಿಂಶೋಽಧ್ಯಾಯಃ ॥43॥
ಹೀಗೆ ಸಭಾಮಧ್ಯದಲ್ಲಿ ಧರ್ಮರಾಜನಿಂದ ಸ್ತೋತ್ರಮಾಡಲ್ಪಟ್ಟ ಪುಷ್ಕರಾಕ್ಷ- ನಾದ ಕೃಷ್ಣನು ಸಂತೋಷಗೊಂಡವನಾಗಿ, ಯಾದವಶ್ರೇಷ್ಠನಾದ ಅವನು ಪಾಂಡು- ಪುತ್ರರಲ್ಲಿ ಜ್ಯೇಷ್ಠನಾದ ಭರತವಂಶಪ್ರಸೂತನಾದ ಧರ್ಮರಾಜನನ್ನು ಪುಷ್ಕಳವಾದ ವಚನಗಳಿಂದ ಅಭಿನಂದಿಸಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 43ನೆಯ ಅಧ್ಯಾಯ ಮುಗಿಯಿತು.
0

44. ನಲವತ್ತನಾಲ್ಕನೆಯ ಅಧ್ಯಾಯ
ಯುಧಿಷ್ಠಿರನ ಆಜ್ಞೆಯಂತೆ ಭೀಮಾದಿಗಳಿಂದ ದುರ್ಯೋಧನಾದಿ ಗೃಹಪ್ರವೇಶ.
ವೈಶಂಪಾಯನಃ
ತತೋ ವಿಸರ್ಜಯಾಮಾಸ ಸರ್ವಾಃ ಪ್ರಕೃತಯೋ ನೃಪಃ |
ವಿವಿಶುಶ್ಚಾಭ್ಯನುಜ್ಞಾತಾ ಯಥಾಸ್ವಾನಿ ಗೃಹಾಣಿ ಚ ॥1॥
ವೈಶಂಪಾಯನರು ಅನಂತರ ರಾಜನಾದ ಯುಧಿಷ್ಠಿರನು ಎಲ್ಲ ಪ್ರಜೆಗಳನ್ನೂ ಬೀಳ್ಕೊಟ್ಟನು. ರಾಜನ ಅನುಮತಿಯನ್ನು ಪಡೆದ ಅವರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.
ತತೋ ಯುಧಿಷ್ಠಿರೋ ರಾಜಾ ಭೀಮಂ ಭೀಮಪರಾಕ್ರಮಮ್ |
ಸಾಂತ್ವಯನ್ನಬ್ರವೀದ್ ಧೀಮಾನರ್ಜುನಂ ಯಮಜೌ ತಥಾ ॥2॥
ಅನಂತರ ರಾಜನಾದ ಯುಧಿಷ್ಠಿರನು ಭಯಂಕರಪರಾಕ್ರಮವುಳ್ಳ ಭೀಮಸೇನ- ನನ್ನು ಮೇಧಾವಿಯಾದ ಅರ್ಜುನನನ್ನು ಮತ್ತು ನಕುಲ ಸಹದೇವರನ್ನು ಸಮಾಧಾನ ಪಡಿಸುತ್ತಾ ಮಾತನಾಡಿದನು.
ಶತ್ರುಭಿರ್ವಿವಿಧೈಃ ಶಸ್ತ್ರೈಃ ಕೃತ್ತದೇಹಾ ಮಹಾರಣೇ |
ಶ್ರಾಂತಾ ಭವಂತಃ ಸುಭೃಶಂ ತಾಪಿತಾಃ ಶೋಕಮನ್ಯುಭಿಃ ॥3॥
ನೀವು ದೊಡ್ಡ ಯುದ್ಧದಲ್ಲಿ ಶತ್ರುಗಳ ಅನೇಕವಿಧವಾದ ಶಸ್ತ್ರಗಳಿಂದ ಗಾಯ- ಗಳನ್ನು ಹೊಂದಿ ದಣಿದಿದ್ದೀರಿ. ಶೋಕ ಕೋಪಗಳಿಂದ ಬಹಳವಾಗಿ ತಪ್ತರಾಗಿದ್ದೀರಿ.

ಅರಣ್ಯೇ ದುಃಖವಸತೀರ್ಮತ್ಕೃತೇ ಪುರುಷೋತ್ತಮಾಃ |
ಭವದ್ಭಿರನುಭೂತಾಶ್ಚ ಯಥಾ ಕುಪುರುಷೈಸ್ತಥಾ ||4||
ಪುರುಷೋತ್ತಮರಾದ ನೀವು ನನ್ನ ಅಪರಾಧದಿಂದ ಕೆಟ್ಟಪುರುಷರಂತೆ ಅರಣ್ಯದಲ್ಲಿ ಕಷ್ಟವಾದ ವಾಸವನ್ನು ಮಾಡಿ ದುಃಖಗಳನ್ನು ಅನುಭವಿಸಿದ್ದೀರಿ.
ಯಥಾಸುಖಂ ಯಥಾಜೋಷಂ ಜಯೋಽಯಮನುಭೂಯತಾಮ್ |
ವಿಶ್ರಾಂತಾನ್ ಲಬ್ಧವಿಜ್ಞಾನಾನ್ ಶ್ವಃ ಸಮೇತಾಸ್ಮಿ ವಃ ಪುನಃ ||5||
ನಿಮ್ಮ ಅಭಿರುಚಿಗೆ ಅನುಗುಣವಾಗಿ ಮತ್ತು ನಿಮ್ಮ ಸುಖದ ಆಸೆಗೆ ಅನು- ಗುಣವಾಗಿ ಈ ವಿಜಯವನ್ನು ಅನುಭವಿಸಿ. ಈ ದಿನ ವಿಶ್ರಾಂತಿಯನ್ನು ಪಡೆದು ನಾಳೆ ಬೆಳಿಗ್ಗೆ ಪ್ರಸನ್ನವಾದ ಇಂದ್ರಿಯಗಳುಳ್ಳ ನಿಮ್ಮನ್ನು ನಾನು ಕಾಣುತ್ತೇನೆ. (ಎಂದು ಹೇಳಿದನು.)
ತತೋ ದುರ್ಯೋಧನಗೃಹಂ ಪ್ರಾಸಾದೈರುಪಶೋಭಿತಮ್ |
ಬಹುರತ್ನಸಮಾಕೀರ್ಣಂ ದಾಸೀದಾಸಸಮಾಕುಲಮ್ ||6||
ಧೃತರಾಷ್ಟ್ರಾಭ್ಯನುಜ್ಞಾತಂ ಭ್ರಾತ್ರಾ ದತ್ತಂ ವೃಕೋದರಃ |
ಪ್ರತಿಪೇದೇ ಮಹಾಬಾಹುರ್ಮಂದರಂ ಮಘವಾನಿವ ||7||
ಅನಂತರ ಅನೇಕ ಉಪ್ಪರಿಗೆಗಳಿಂದ ಶೋಭಿತವಾದ ಅನೇಕ ರತ್ನಗಳಿಂದ ನಿಬಿಡವಾದ ದಾಸೀ-ದಾಸರಿಂದ ಕೂಡಿದ ಅಣ್ಣನಾದ ಯುಧಿಷ್ಠಿರನಿಂದ ಕೊಡಲ್ಪಟ್ಟ ದುರ್ಯೋಧನನ ಗೃಹವನ್ನು ಧೃತರಾಷ್ಟ್ರನ ಅನುಮತಿಯನ್ನು ಪಡೆದು ಮಹಾ- ಬಾಹುವಾದ ಭೀಮಸೇನನು ಇಂದ್ರನು ಮಂದರಪರ್ವತವನ್ನು ಪ್ರವೇಶಿಸುವಂತೆ ಪ್ರವೇಶಿಸಿದನು.
ಯಥಾ ದುರ್ಯೋಧನಗೃಹಂ ತಥಾ ದುಃಶಾಸನಸ್ಯ ಚ |
ಪ್ರಾಸಾದಮಾಲಾಸಂಯುಕ್ತಂ ಹೇಮತೋರಣಭೂಷಿತಮ್ ||8||
ದಾಸೀದಾಸಸುಸಂಪೂರ್ಣಂ ಪ್ರಭೂತಧನಧಾನ್ಯವತ್ |
ಪ್ರತಿಪೇದೇ ಮಹಾಬಾಹುರರ್ಜುನೋ ರಾಜಶಾಸನಾತ್ ||9||
ದುರ್ಯೋಧನನ ಗೃಹದಂತೆಯೇ ದುಃಶಾಸನನ ಗೃಹವೂ ಸಹ ಉಪ್ಪರಿಗೆಗಳ ಶ್ರೇಣಿಗಳಿಂದ ಅಲಂಕೃತವಾಗಿ ಸುವರ್ಣಮಯವಾದ ತೋರಣಗಳನ್ನು ಹೊಂದಿ- ದ್ದಿತು. ದಾಸೀ-ದಾಸರ ಸಮೂಹದಿಂದ ನಿಬಿಡವಾದ ಧನಧಾನ್ಯಸಮೃದ್ಧವಾದ ಆ ಗೃಹವನ್ನು ರಾಜನ ಶಾಸನದಂತೆ ಮಹಾಬಾಹುವಾದ ಅರ್ಜುನನು ಪಡೆದನು.
ದುರ್ಮರ್ಷಣಸ್ಯ ಭವನಂ ದುಃಶಾಸನಗೃಹಾದ್ ವರಮ್ |
ಕುಬೇರಭವನಪ್ರಖ್ಯಂ ಮಣಿಹೇಮವಿಭೂಷಿತಮ್ ||10||
ನಕುಲಾಯ ವರಾರ್ಹಾಯ ಕರ್ಶಿತಾಯ ಮಹಾವನೇ |
ದದೌ ಪ್ರೀತೋ ಮಹಾರಾಜ ಧರ್ಮರಾಜೋ ಯುಧಿಷ್ಠಿರಃ ||11||
ದುರ್ಮರ್ಷಣನ ಭವನವಾದರೋ ದುಃಶಾಸನನ ಗೃಹಕ್ಕಿಂತಲೂ ಶ್ರೇಷ್ಠವಾ- ದುದು. ಕುಬೇರನ ಭವನಕ್ಕೆ ಸದೃಶವಾದ ಮಣಿಹೇಮವಿಭೂಷಿತವಾದ ಆ ಗೃಹ- ವನ್ನು ಧರ್ಮರಾಜನಾದ ಯುಧಿಷ್ಠಿರನು ಮಹಾರಣದಲ್ಲಿ ಕರ್ಶಿತನಾದ ವರಪ್ರಾಪ್ತಿಗೆ ಯೋಗ್ಯನಾದ ನಕುಲನಿಗೆ ಸಂತೋಷದಿಂದ ಕೊಟ್ಟನು.
ದುರ್ಮುಖಸ್ಯ ಚ ವೇಶ್ಮಾಗ್ರ್ಯಂ ಶ್ರೀಮತ್ಕನಕಭೂಷಿತಮ್ |
ಪೂರ್ಣಂ ಪದ್ಮದಲಾಕ್ಷೀಣಾಂ ಸ್ತ್ರೀಣಾಂ ಶಯನಸಂಕುಲಮ್ ||12||
ಪ್ರದದೌ ಸಹದೇವಾಯ ಸತತಂ ಪ್ರಿಯಕಾರಿಣೇ |
ಮುಮುದೇ ತಚ್ಚ ಲಬ್ಧ್ವಾ ಸ ಕೈಲಾಸಂ ಧನದೋ ಯಥಾ ||13||
ದುರ್ಮುಖನ ಶ್ರೇಷ್ಠವಾದ ಗೃಹವು ಕಾಂತಿಯುಕ್ತವಾಗಿ ಕನಕಭೂಷಿತವಾಗಿ ಪದ್ಮದಳನೇತ್ರೆಯರಾದ ಸ್ತ್ರೀಯರಿಂದ ಮತ್ತು ಶಯನಗಳಿಂದ ನಿಬಿಡವಾಗಿ ಪೂರ್ಣ- ವಾಗಿದ್ದಿತು. ತನಗೆ ಸತತವಾಗಿ ಪ್ರಿಯವನ್ನು ಮಾಡುವ ಸಹದೇವನಿಗೆ ಯುಧಿಷ್ಠಿರನು ಅದನ್ನು ಕೊಟ್ಟನು. ಸಹದೇವನು ಆ ಗೃಹವನ್ನು ಪಡೆದು, ಕುಬೇರನು ಕೈಲಾಸ- ಪರ್ವತವನ್ನು ಪಡೆದು ಸಂತೋಷವನ್ನು ಪಡುವಂತೆ ಸಂತೋಷಪಟ್ಟನು.
ಯುಯುತ್ಸುರ್ವಿದುರಶ್ಚೈವ ಸಂಜಯಶ್ಚ ಮಹಾಮತಿಃ |
ಸುಧರ್ಮಾ ಚೈವ ಧೌಮ್ಯಶ್ಚ ಯಥಾಸ್ವಂ ಜಗ್ಮುರಾಲಯಾನ್ ||14||
ಯುಯುತ್ಸು, ವಿದುರ, ಮಹಾಮತಿಯಾದ ಸಂಜಯ, ಧರ್ಮಿಷ್ಠರಾದ ಧೌಮ್ಯರು ಇವರು ತಮ್ಮ ತಮ್ಮ ಮನೆಗಳಿಗೆ ಹೋದರು.
ಸಹ ಸಾತ್ಯಕಿನಾ ಶೌರಿರರ್ಜುನಸ್ಯ ನಿವೇಶನಮ್ |
ವಿವೇಶ ಪುರುಷವ್ಯಾಘ್ರೋ ವ್ಯಾಘ್ರೋ ಗಿರಿಗುಹಾಮಿವ ||15||
ಪುರುಷವ್ಯಾಘ್ರನಾದ ಶೌರಿಯು ಸಾತ್ಯಕಿಯ ಜೊತೆಯಲ್ಲಿ ವ್ಯಾಘ್ರವು ಪರ್ವತದ ಗುಹೆಯನ್ನು ಪ್ರವೇಶಿಸುವಂತೆ ಅರ್ಜುನನ ಗೃಹವನ್ನು ಪ್ರವೇಶಿಸಿದನು.
ತತ್ರ ಭಕ್ಷಾನ್ನಪಾನೈಸ್ತೇ ಸಮುಪೇತಾಃ ಸುಖೋಷಿತಾಃ |
ಸುಖಪ್ರಬುದ್ಧಾ ರಾಜಾನಮುಪತಸ್ಥುರ್ಯುಧಿಷ್ಠಿರಮ್ ||16||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಶ್ಚತ್ವಾರಿಂಶೋಽಧ್ಯಾಯಃ ||44||
ಅಲ್ಲಿ ಭಕ್ಷ್ಯಾನ್ನಪಾನಗಳಿಂದ ಅವರು ಸಂತುಷ್ಟರಾಗಿ ರಾತ್ರಿಯನ್ನು ಸುಖವಾಗಿ ಕಳೆದು ಪ್ರಾತಃಕಾಲದಲ್ಲಿ ಸುಖವಾಗಿ ಎದ್ದು ರಾಜನಾದ ಯುಧಿಷ್ಠಿರನ ಬಳಿಗೆ ಬಂದರು.

ಇಲ್ಲಿಗೆ ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 44ನೆಯ ಅಧ್ಯಾಯವು ಮುಗಿಯಿತು
0
45. ನಲವತ್ತೈದನೆಯ ಅಧ್ಯಾಯ
ಕೃಷ್ಣನ ಬಳಿಗೆ ಬಂದು ಯುಧಿಷ್ಠಿರನಿಂದ ಕುಶಲಪ್ರಶ್ನೆ
ಜನಮೇಜಯಃ
ಪ್ರಾಪ್ಯ ರಾಜ್ಯಂ ಮಹಾತೇಜಾ ಧರ್ಮರಾಜೋ ಯುಧಿಷ್ಠಿರಃ |
ಯದನ್ಯದಕರೋದ್ ವಿಪ್ರ ತನ್ಮೇ ವಕ್ತುಮಿಹಾರ್ಹಸಿ ॥1॥
ಜನಮೇಜಯ ಎಲ್ಲೈ ಬ್ರಾಹ್ಮಣರೇ! ಮಹಾತೇಜಸ್ವಿಯಾದ ಧರ್ಮರಾಜನಾದ ಯುಧಿಷ್ಠಿರನು ರಾಜ್ಯವನ್ನು ಪಡೆದು ಬೇರೆ ಏನನ್ನು ಮಾಡಿದನೆಂದು ನನಗೆ ಹೇಳಬೇಕು.
ಭಗವಾನ್ ವಾ ಹೃಷೀಕೇಶಸ್ತ್ರೈಲೋಕ್ಯಸ್ಯ ಪರೋ ಗುರುಃ |
ಋಷೇ ಯದಕರೋದ್ ವೀರಸ್ತಚ್ಚ ವ್ಯಾಖ್ಯಾತುಮರ್ಹಸಿ ॥2॥
ಎಲ್ಲೈ ಋಷಿಗಳೇ! ಮೂರು ಲೋಕಗಳಿಗೂ ಪರಮಗುರುವೂ ವೀರನೂಆದ ಹೃಷೀಕೇಶನು ಏನು ಮಾಡಿದನೆಂದು ಹೇಳಬೇಕು.
ವೈಶಂಪಾಯನಃ
ಶೃಣು ರಾಜೇಂದ್ರ ತತ್ತ್ವೇನ ಕೀರ್ತ್ಯಮಾನಂ ಮಯಾಽನಘ |
ವಾಸುದೇವಂ ಪುರಸ್ಕೃತ್ಯ ಯದಕುರ್ವತ ಪಾಂಡವಾಃ ॥3॥
ವೈಶಂಪಾಯನರು ಎಲ್ಲೈ ರಾಜೇಂದ್ರನೇ! ವಾಸುದೇವನನ್ನು ಮುಂದೆ ಮಾಡಿ- ಕೊಂಡು ಪಾಂಡವರು ಏನು ಮಾಡಿದರೆಂದು ನಾನು ಹೇಳುವುದನ್ನು ಎಲ್ಲೈ ಅನಘನೇ! ನೀನು ಕೇಳು.
ಪ್ರಾಪ್ಯ ರಾಜ್ಯಂ ಮಹಾತೇಜಾ ಧರ್ಮರಾಜೋ ಯುಧಿಷ್ಠಿರಃ |
ಚಾತುರ್ವರ್ಣ್ಯಂ ಯಥಾಯೋಗಂ ಸ್ವೇ ಸ್ವೇ ಧರ್ಮೇ ನ್ಯವೇಶಯನ್ ॥4॥
ಮಹಾತೇಜಸ್ವಿಯಾದ ಧರ್ಮರಾಜನಾದ ಯುಧಿಷ್ಠಿರನು ರಾಜ್ಯವನ್ನು ಪಡೆದು ನಾಲ್ಕು ವರ್ಣಗಳಿಗೆ ಸಂಬಂಧಿಸಿದ ಪ್ರಜೆಗಳನ್ನು ಅವರಿಗೆ ಯೋಗ್ಯವಾದ ರೀತಿಯಲ್ಲಿ ತಮ್ಮ ತಮ್ಮ ಧರ್ಮಗಳಲ್ಲಿ ಇರಿಸಿದನು.
ಬ್ರಾಹ್ಮಣಾನಾಂ ಸಹಸ್ರಂ ಚ ಸ್ನಾತಕಾನಾಂ ಮಹಾತ್ಮನಾಮ್ |
ಸಹಸ್ರನಿಷ್ಕಮೇಕೈಕಂ ವಾಚಯಾಮಾಸ ಪಾಂಡವಃ ॥5॥
ಪಾಂಡವನಾದ ಯಧಿಷ್ಠಿರನು ಮಹಾತ್ಮರಾದ ವೇದವಿದ್ಯಾಪಾರಂಗತರಾದ ಸಹಸ್ರ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಸಹಸ್ರನಿಷ್ಕಗಳನ್ನು ಕೊಟ್ಟು ಸ್ವಸ್ತಿವಾಚನವನ್ನು ಮಾಡಿಸಿದನು.
ತಥಾನುಜೀವಿನೋ  ಭೃತ್ಯಾನ್ ಸಂಶ್ರಿತಾನತಿಥೀನಪಿ |
ಕಾಮೈಃ ಸಂತರ್ಪಯಾಮಾಸ ಕೃಪಣಾನ್ ಯಾಚಕಾನಪಿ ॥6॥
ಹಾಗೆಯೇ ತನ್ನನ್ನು ಅನುಸರಿಸಿ ಜೀವಿಸುವ ಸೇವಕರಿಗೂ, ಆಶ್ರಿತರಿಗೂ, ಅತಿಥಿಗಳಿಗೂ, ಕೃಪಣರಿಗೂ, ಯಾಚಕರಿಗೂ ಸಹ ಅವರವರಿಗೆ ಇಷ್ಟವಾದ ವಸ್ತುಗಳನ್ನು ನೀಡಿ ತೃಪ್ತಿ ಪಡಿಸಿದನು.
ಪುರೋಹಿತಾಯ ಧೌಮ್ಯಾಯ ಪ್ರಾದಾದಯುತಶಃ ಸ ಗಾಃ |
ಧನಂ ಸುವರ್ಣಂ ರಜತಂ ವಾಸಾಂಸಿ ವಿವಿಧಾನಿ ಚ ॥7॥
ಪುರೋಹಿತರಾದ ಧೌಮ್ಯರಿಗೆ ಹತ್ತುಸಾವಿರ ಸಂಖ್ಯೆಗಳಲ್ಲಿ ಗೋವುಗಳನ್ನೂ, ಧನವನ್ನೂ, ಸುವರ್ಣವನ್ನೂ, ರಜತವನ್ನೂ ಮತ್ತು ವಿವಿಧವಾದ ವಸ್ತುಗಳನ್ನೂ ಕೊಟ್ಟನು.
ಕೃಪಾಯ ಚ ಮಹಾರಾಜ ಗುರುವೃತ್ತಿಮವರ್ತತ |
ವಿದುರಾಯ ಚ ಧರ್ಮಾತ್ಮಾ ಪೂಜಾಂ ಚಕ್ರೇ ಯತವ್ರತಃ ॥8॥
ಎಲ್ಲೈ ಮಹಾರಾಜನೇ! ಕೃಪಾಚಾರ್ಯರಲ್ಲಿ ಗುರುವೃತ್ತಿಯನ್ನು ಹೊಂದಿದನು. ಧರ್ಮಾತ್ಮನಾದ ಅವನು ನಿಯತವ್ರತವುಳ್ಳವನಾಗಿ ವಿದುರನನ್ನು ಪೂಜಿಸಿದನು.
ಭಕ್ಷ್ಯಾನ್ನಪಾನೈರ್ವಿವಿಧೈರ್ವಾಸೋಭಿಃ ಶಯನಾಸನೈಃ |
ಸರ್ವಾನ್ ಸಂತೋಷಯಾಮಾಸ ಸಂಶ್ರಿತಾನ್ ದದತಾಂವರಃ ॥9॥
ದಾನ ಮಾಡುವವರಲ್ಲಿ ಶ್ರೇಷ್ಠನಾದ ಅವನು ತನ್ನನ್ನು ಆಶ್ರಯಿಸಿದ ಎಲ್ಲರನ್ನೂ ವಿವಿಧವಾದ ಭಕ್ಷ್ಯಾನ್ನಪಾನಗಳಿಂದಲೂ, ವಸ್ತ್ರಗಳಿಂದಲೂ, ಶಯನಾಸನಗಳಿಂದಲೂ ತೃಪ್ತಿ ಪಡಿಸಿದನು.
ಲಬ್ಧಪ್ರಶಮನಂ ಕೃತ್ವಾ ಸ ರಾಜಾ ರಾಜಸತ್ತಮ |
ಯುಯುತ್ಸೋರ್ಧಾರ್ತರಾಷ್ಟ್ರಸ್ಯ ಪೂಜಾಂ ಚಕ್ರೇ ಮಹಾಯಶಾಃ ॥10॥
ಎಲ್ಲೈ ರಾಜಶ್ರೇಷ್ಠನೇ! ರಾಜನಾದ ಅವನು ಪಡೆದುದನ್ನು ಯಥಾಯೋಗ್ಯವಾಗಿ ವಿಭಾಗವನ್ನು ಮಾಡಿ ಹಂಚಿ ಮಹಾಕೀರ್ತಿವಂತನಾದ ಅವನು ಧೃತರಾಷ್ಟ್ರಪುತ್ರನಾದ ಯುಯುತ್ಸುವಿಗೆ ಪೂಜೆಯನ್ನು ಮಾಡಿದನು.
ಧೃತರಾಷ್ಟ್ರಾಯ ತದ್ ರಾಜ್ಯಂ ಗಾಂಧಾರ್ಯೈ ವಿದುರಾಯ ಚ |
ನಿವೇದ್ಯ ಸ್ವಸ್ಥವದ್ ರಾಜನ್ನಾಸ್ತೇ ರಾಜಾ ಯುಧಿಷ್ಠಿರಃ ॥11॥
ಎಲ್ಲೈ ರಾಜನೇ! ರಾಜನಾದ ಯುಧಿಷ್ಠಿರನು ಧೃತರಾಷ್ಟ್ರನಿಗೂ, ಗಾಂಧಾರಿಗೂ ಮತ್ತು ವಿದುರನಿಗೂ ಆ ರಾಜ್ಯವನ್ನು ನಿವೇದಿಸಿ ನಿಶ್ಚಿಂತನಾದನು.
ತಥಾ ಸರ್ವಂ ಸ ನಗರಂ ಪ್ರಸಾದ್ಯ ಜನಮೇಜಯ |

ವಾಸುದೇವಂ ಮಹಾತ್ಮಾನಮಭ್ಯಗಚ್ಛತ್ ಕೃತಾಂಜಲಿಃ ॥12॥
ಎಲೈ ಜನಮೇಜಯನೇ! ಈ ರೀತಿಯಲ್ಲಿ ನಗರವಾಸಿಗಳೆಲ್ಲರನ್ನೂ ಸಂತೋಷ ಪಡಿಸಿ ಮಹಾತ್ಮನಾದ ವಾಸುದೇವನ ಬಳಿಗೆ ಬಂದು ಕೈಗಳನ್ನು ಮುಗಿದು ನಿಂತನು.
ತತೋ ಮಹತಿ ಪರ್ಯಂಕೇ ಮಣಿಕಾಂಚನಭೂಷಿತೇ |
ದದರ್ಶ ಕೃಷ್ಣಮಾಸೀನಂ ನೀಲಂ ಮೇರಾವಿವಾಂಬುದಮ್ ॥13॥
ಜಾಜ್ವಲ್ಯಮಾನಂ ವಪುಷಾ ದಿವ್ಯಾಭರಣಭೂಷಿತಮ್ |
ಪೀತಕೌಶೇಯಸಂವೀತಂ ಹೇಮ್ನೀವೋಪಹಿತಂ ಮಣಿಮ್ ॥14॥
ಕೌಸ್ತುಭೇನ ಉರಃಸ್ಥೇನ ಮಣಿನಾಽಭಿವಿರಾಜಿತಮ್ |
ಉದ್ಯತೇವೋದಯಂ ಶೈಲಂ ಸೂರ್ಯೇಣಾಪ್ತಕಿರೀಟಿನಮ್ |
ನೌಪಮ್ಯಂ ವಿದ್ಯತೇ ಯಸ್ಯ ತ್ರಿಷು ಲೋಕೇಷು ಕಿಂಚನ ॥15॥
ಅನಂತರ ಮಣಿಕಾಂಚನವಿಭೂಷಿತವಾದ ದೊಡ್ಡ ಮಂಚದಲ್ಲಿ, ಮೇರು ಪರ್ವತದ ಮೇಲೆ ಇರುವ ನೀಲವಾದ ಮೋಡದಂತೆ ದಿವ್ಯಾಭರಣಭೂಷಿತನಾಗಿ, ಚಿನ್ನದಲ್ಲಿಟ್ಟ ನೀಲಮಣಿಯಂತೆ ಪೀತಾಂಬರವನ್ನು ಧರಿಸಿ, ಜಾಜ್ವಲ್ಯಮಾನವಾದ ದೇಹದಿಂದಲೂ, ವಕ್ಷಸ್ಥಳದಲ್ಲಿದ್ದ ಕೌಸ್ತುಭಮಣಿಯಿಂದಲೂ ವಿರಾಜಿತನಾಗಿ ಉದಯಪರ್ವತದ ಮೇಲೆ ಉದಯಿಸುವ ಸೂರ್ಯನನ್ನು ಹೋಲುವ ಕಿರೀಟವನ್ನು ಧರಿಸಿ ಕುಳಿತಿದ್ದ ಮೂರು ಲೋಕಗಳಲ್ಲಿಯೂ ಉಪಮೆಯೇ ಇಲ್ಲದ ಕೃಷ್ಣನನ್ನು ನೋಡಿದನು.
ಸೋಽಭಿಗಮ್ಯ ಮಹಾತ್ಮಾನಂ ವಿಷ್ಣುಂ ಪುರುಷವಿಗ್ರಹಮ್ |
ಉವಾಚ ಮಧುರಾಭಾಷಃ ಸ್ಮಿತಪೂರ್ವಮಿದಂ ತದಾ ॥16॥
ಮಧುರವಾಗಿ ಮಾತನಾಡುವ ಅವನು ಮಹಾತ್ಮನಾದ ಪುರುಷವಿಗ್ರಹವನ್ನು ಧರಿಸಿದ ವಿಷ್ಣುವಾದ ಕೃಷ್ಣನ ಬಳಿಗೆ ಬಂದು ಆಗ ಮಂದಹಾಸಪೂರ್ವಕವಾಗಿ ಹೀಗೆ ಮಾತನಾಡಿದನು.
ಸುಖೇನ ತೇ ನಿಶಾ ಕಚ್ಚಿದ್ ವ್ಯುಷ್ಟಾ ಬುದ್ಧಿಮತಾಂವರ |
ಕಚ್ಚಿಜ್ ಜ್ಞಾನಾನಿ ಸರ್ವಾಣಿ ಪ್ರಸನ್ನಾನಿ ತವಾಚ್ಯುತ ॥17॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನಾದವನೇ! ನಿನಗೆ ರಾತ್ರಿಯು ಸುಖವಾಗಿ ಕಳೆಯಿತೇ? ಎಲೈ ಅಚ್ಯುತನೇ ನಿನ್ನ ಎಲ್ಲ ಇಂದ್ರಿಯಗಳೂ ಪ್ರಸನ್ನವಾಗಿವೆಯೇ?
ತವ ಹ್ಯಾಶ್ರಿತ್ಯ ತಾಂ ದೈವೀಂ ಬುದ್ಧಿಂ ಬುದ್ಧಿಮತಾಂವರ |
ವಯಂ ರಾಜ್ಯಮನುಪ್ರಾಪ್ತಾಃ ಪೃಥಿವೀ ಚ ವಶೇ ಸ್ಥಿತಾ ॥18॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನೇ! ನಿನ್ನ ಆ ದೈವೀಬುದ್ಧಿಯನ್ನು ಅವಲಂಬಿಸಿ, ನಾವು ರಾಜ್ಯವನ್ನು ಸಂಪಾದಿಸಿದೆವು. ಮತ್ತು ಪೃಥಿವಿಯು ನಮ್ಮ ವಶವಾಯಿತು.
ಭವತ್ಪ್ರಸಾದಾದ್ ಭಗವಂಸ್ತ್ರಿಲೋಕಗತಿವಿಕ್ರಮ |
ಜಯಃ ಪ್ರಾಪ್ತೋ ಯಶಶ್ಚಾಗ್ರ್ಯಂ ನ ಚ ಧರ್ಮಾಚ್ಚ್ಯುತಾ ವಯಮ್ ॥19॥
ಭಗವಂತನೇ! ತ್ರಿಲೋಕಕ್ಕೆ ಗತಿಯಾದವನೇ, ತ್ರಿವಿಕ್ರಮನೇ! ನಿನ್ನ ಅನುಗ್ರಹ- ದಿಂದ ನಾವು ಜಯವನ್ನೂ ಶ್ರೇಷ್ಠವಾದ ಕೀರ್ತಿಯನ್ನೂ ಪಡೆದೆವು. ಮತ್ತು ಎಂದೂ ಧರ್ಮದಿಂದ ಚ್ಯುತರಾಗಲಿಲ್ಲ.
ತಂ ತಥಾ ಭಾಷಮಾಣಂ ತು ಧರ್ಮರಾಜಂ ಯುಧಿಷ್ಠಿರಮ್ |
ನೋವಾಚ ಭಗವಾನ್ ಕಿಂಚಿದ್ ಧ್ಯಾನಮೇವಾನ್ವಪದ್ಯತ ॥20॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಚತ್ವಾರಿಂಶೋಽಧ್ಯಾಯಃ ॥45॥
ಧರ್ಮರಾಜನಾದ ಯುಧಿಷ್ಠಿರನು ಹಾಗೆ ಮಾತನಾಡುತ್ತಿರಲು, ಭಗವಂತನು ಏನನ್ನೂ ಮಾತನಾಡಲಿಲ್ಲ. ಕೇವಲ ಧ್ಯಾನಪರವಶನಾದನು.
ಇಲ್ಲಿಗೆ ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 45ನೆಯ ಅಧ್ಯಾಯವು ಮುಗಿಯಿತು

## 46. ನಲವತ್ತಾರನೆಯ ಅಧ್ಯಾಯ

ಯುಧಿಷ್ಠಿರನನ್ನು ಧರ್ಮೋಪದೇಶಶ್ರವಣಕ್ಕಾಗಿ ಭೀಷ್ಮರ ಬಳಿಗೆ
ಹೋಗುವಂತೆ ಪ್ರೇರಿಸಿ ಕೃಷ್ಣನ ಸಿದ್ಧತೆ
ಯುಧಿಷ್ಠಿರಃ
ಕಿಮಿದಂ ಪರಮಾಶ್ಚರ್ಯಂ ಧ್ಯಾಯಸ್ಯಮಿತವಿಕ್ರಮ |
ಕಚ್ಚಿಲ್ಲೋಕತ್ರಯಸ್ಯಾಸ್ಯ ಸ್ವಸ್ತಿ ಲೋಕಪರಾಯಣ ॥1॥
ಯುಧಿಷ್ಠಿರ ಎಲೈ ಅಮಿತವಿಕ್ರಮನೇ! ಲೋಕಕ್ಕೆ ಶ್ರೇಷ್ಠನಾದ ಆಶ್ರಯನಾದ- ವನೇ!. ಇದೇನು ಪರಮಾಶ್ಚರ್ಯ? ಮೂರು ಲೋಕಗಳಿಗೂ ಕ್ಷೇಮವಷ್ಟೆ?.
ಚತುರ್ಥಂ ಧ್ಯಾನಮಾರ್ಗಂ ತ್ವಮಾಲಂಬ್ಯ ಪುರುಷೋತ್ತಮ |
ಅಪಾಕ್ರಾಂತೋ ಯತೋ ದೇವ ತೇನ ಮೇ ವಿಸ್ಮಿತಂ ಮನಃ ॥2॥
ಎಲೈ ಪುರುಷೋತ್ತಮನೇ! ನೀನು ವೈರಾಗ್ಯ, ಭಕ್ತಿ, ಶಾಸ್ತ್ರಾಭ್ಯಾಸಮಾರ್ಗ- ಗಳನ್ನು ಮೀರಿದ ನಾಲ್ಕನೆಯ ಮಾರ್ಗವಾದ ಧ್ಯಾನಮಾರ್ಗವನ್ನು ಅವಲಂಬಿಸಿ ಬಾಹ್ಯಜಗತ್ತಿನಿಂದ ಹಿಂದೆ ಸರಿದಿದ್ದೀಯೆ. ದೇವನೇ! ಅದರಿಂದ ನನ್ನ ಮನಸ್ಸಿಗೆ ವಿಸ್ಮಯವುಂಟಾಗಿದೆ.

ನಿಗೃಹೀತೋ ಹಿ ವಾಯುಸ್ತೇ ಪಂಚಕರ್ಮಾ ಶರೀರಗಃ |
ಇಂದ್ರಿಯಾಣಿ ಚ ಸರ್ವಾಣಿ ಮನಸಿ ಸ್ಥಾಪಿತಾನಿ ತೇ ||3||
ಶರೀರದಲ್ಲಿ ಪಂಚವಿಧವಾದ ಕರ್ಮಗಳನ್ನು ಮಾಡುವ ವಾಯುವು ನಿನ್ನಿಂದ ನಿಗೃಹೀತವಾಗಿದೆ. ಎಲ್ಲ ಇಂದ್ರಿಯಗಳೂ ಮನಸ್ಸಿನಲ್ಲಿ ನೆಲೆಗೊಳಿಸಲ್ಪಟ್ಟಿವೆ.
ಇಂದ್ರಿಯಾಣಿ ಮನಶ್ಚೈವ ಬುದ್ಧೌ ಸಂವೇಶಿತಾನಿ ತೇ |
ಸರ್ವಶ್ಚೈವ ಗಣೋ ದೇವ ಕ್ಷೇತ್ರಜ್ಞೇ ತೇ ನಿವೇಶಿತಃ ||4||
ಇಂದ್ರಿಯಸಹಿತವಾದ ಮನಸ್ಸು ಬುದ್ಧಿಯಲ್ಲಿ ಇಡಲ್ಪಟ್ಟಿದೆ. ಎಲೈ ದೇವನೇ! ಈ ಎಲ್ಲ ಸಮೂಹವೂ ಕ್ಷೇತ್ರಜ್ಞನಾದ ಪರಮಾತ್ಮನಲ್ಲಿಯೇ ನೆಲೆಗೊಳಿಸಲ್ಪಟ್ಟಿದೆ.
ನೇಂಗಂತಿ ತವ ರೋಮಾಣಿ ಸ್ಥಿರಾ ಬುದ್ಧಿಸ್ತಥಾ ಮನಃ |
ಸ್ಥಾಣುಕುಡ್ಯಶಿಲಾಭೂತೋ ನಿರೀಹಶ್ಚಾಸಿ ಮಾಧವ ||5||
ನಿನ್ನ ರೋಮಗಳೂ ಅಲುಗಾಡುತ್ತಿಲ್ಲ. ನಿನ್ನ ಬುದ್ಧಿ ಮತ್ತು ಮನಸ್ಸು ಸ್ಥಿರ- ವಾಗಿವೆ. ಮಾಧವನೇ! ಮರದ ಬುಡದಂತೆ, ಗೋಡೆಯಂತೆ, ಅಥವಾ ಶಿಲೆಯಂತೆ ನಿಶ್ಚೇಷ್ಟನಾಗಿದ್ದೀಯೆ.
ಯಥಾ ದೀಪೋ ನಿವಾತಸ್ಥೋ ನಿರಿಂಗೋ ಜ್ವಲತೇಽಚ್ಯುತ |
ತಥಾಽಸಿ ಭಗವನ್ ದೇವ ನಿಶ್ಚಲೋ ದೃಢನಿಶ್ಚಯಃ ||6||
ಎಲೈ ಅಚ್ಯುತನೇ! ದೇವನೇ! ವಾತವಿಲ್ಲದ ಸ್ಥಳದಲ್ಲಿ ದೀಪವು ಹೇಗೆ ಅಲು- ಗಾಡುವುದಿಲ್ಲವೋ ಹಾಗೆ ಭಗವಂತನೇ! ದೃಢನಿಶ್ಚಯವನ್ನು ಹೊಂದಿ ನಿಶ್ಚಲನಾಗಿ- ದ್ದೀಯೆ.
ಯದಿ ಶ್ರೋತುಮಿಹಾರ್ಹಾಮಿ ನ ರಹಸ್ಯಂ ಚ ನ ತೇ ಯದಿ |
ಛಿಂಧಿ ಮೇ ಸಂಶಯಂ ದೇವ ಪ್ರಪನ್ನಾಯಾಭಿಯಾಚತೇ ||7||
ದೇವನೇ! ಈ ವಿಷಯವು ರಹಸ್ಯವಲ್ಲದಿದ್ದರೆ ಮತ್ತು ನಾನು ಅದನ್ನು ಕೇಳಲು ಅರ್ಹನಾಗುವುದಾದರೆ ನಿನಗೆ ಶರಣಾಗತನಾಗಿ ಯಾಚಿಸುತ್ತಿರುವ ನನ್ನ ಸಂಶಯ- ವನ್ನು ಪರಿಹರಿಸು.
ತ್ವಂ ಹಿ ಕರ್ತಾ ವಿಕರ್ತಾ ಚ ತ್ವಂ ಕ್ಷರಂ ಚಾಕ್ಷರಂ ಚ ಹಿ |
ಅನಾದಿನಿಧನಶ್ಚಾದ್ಯಸ್ತ್ವಮೇವ ಪುರುಷೋತ್ತಮ ||8||
ನೀನು ಎಲ್ಲವನ್ನೂ ಮಾಡುವವನು. ವಿವಿಧರೀತಿಯಲ್ಲಿ ಮಾಡುವವನು. ಕ್ಷರಾಕ್ಷರವಸ್ತುಗಳೆಲ್ಲವೂ ನಿನ್ನ ಅಧೀನವಾಗಿವೆ. ನೀನು ಆದ್ಯಂತಶೂನ್ಯನಾದವನು. ಎಲೈ ಪುರುಷೋತ್ತಮನೇ! ನೀನು ಜಗತ್ತಿನ ಸೃಷ್ಟಿಗಿಂತಲೂ ಮೊದಲು ಇರುವವನು.
ತ್ವತ್ಪ್ರಪನ್ನಾಯ ಭಕ್ತಾಯ ಶಿರಸಾ ಪ್ರಣತಾಯ ಚ |
ಧ್ಯಾನಸ್ಯಾಸ್ಯ ಯಥಾತತ್ತ್ವಂ ಬ್ರೂಹಿ ಧರ್ಮಭೃತಾಂವರ ||9||
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ನಿನ್ನ ಭಕ್ತನಾಗಿ ನಿನಗೆ ಶರಣಾಗತನಾಗಿ ಶಿರಸಾ ನಮಸ್ಕಾರವನ್ನು ಮಾಡಿದ ನನಗೆ ಈ ಧ್ಯಾನದ ನಿಜವಾದ ತತ್ತ್ವವನ್ನು ಹೇಳು.
ವೈಶಂಪಾಯನಃ
ತತಃ ಸ್ವಗೋಚರೇ ನ್ಯಸ್ಯ ಮನೋ ಬುದ್ಧೀಂದ್ರಿಯಾಣಿ ಚ |
ಸ್ಮಿತಪೂರ್ವಮುವಾಚೇದಂ ಭಗವಾನ್ ವಾಸವಾನುಜಃ ||10||
ವೈಶಂಪಾಯನರು ಅನಂತರ ಭಗವಂತನಾದ, ಇಂದ್ರಾನುಜನಾದ ಕೃಷ್ಣನು ತನ್ನ ಬುದ್ಧೀಂದ್ರಿಯಮನಸ್ಸುಗಳನ್ನು ಅವುಗಳ ವಿಷಯದಲ್ಲಿ ನೆಲೆಗೊಳಿಸಿ, ಮಂದ- ಹಾಸಪೂರ್ವಕವಾಗಿ ಈ ಮಾತನ್ನು ಆಡಿದನು.
ಶರತಲ್ಪಗತೋ ಭೀಷ್ಮಃ ಶಾಮ್ಯನ್ನಿವ ಹುತಾಶನಃ |
ಮಾಂ ಧ್ಯಾತಿ ಪುರುಷವ್ಯಾಘ್ರಸ್ತತೋ ಮೇ ತದ್ಗತಂ ಮನಃ ||11||
ನಂದಿಹೋಗುವ ಅಗ್ನಿಯಂತೆ ಇರುವ ಶರತಲ್ಪಗತನಾದ ಪುರುಷವ್ಯಾಘ್ರನಾದ ಭೀಷ್ಮನು ನನ್ನನ್ನು ಧ್ಯಾನಿಸುತ್ತಿದ್ದಾನೆ. ಆದ್ದರಿಂದ ನನ್ನ ಮನಸ್ಸು ಅವನಲ್ಲಿಗೆ ಹೋಯಿತು.
ಯಸ್ಯ ಜ್ಯಾತಳನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ನ ಸಹೇದ್ ದೇವರಾಜೋಽಪಿ ತಮಸ್ಮಿ ಮನಸಾ ಗತಃ ||12||
ಯಾವನ ಧನುಸ್ಸಿನ ಹೆದೆಯ ನಿರ್ಘೋಷವು ಸಿಡಿಲಿನ ಆರ್ಭಟದಂತಿದ್ದು, ದೇವರಾಜನಾದ ಇಂದ್ರನೂ ಸಹ ಸಹಿಸಲಾರನೋ ಅವನಲ್ಲಿ ನನ್ನ ಮನಸ್ಸು ಹೋಯಿತು.
ಯೇನಾಭಿದ್ರುತ್ಯ ತರಸಾ ಸಮಸ್ತಂ ರಾಜಮಂಡಲಮ್ |
ಊಢಾಸ್ತಿಸ್ರಃ ಪುರಾ ಕನ್ಯಾಸ್ತಮಸ್ಮಿ ಮನಸಾ ಗತಃ ||13||
ಯಾವನು ಶೀಘ್ರವಾಗಿ ಕಾಶೀದೇಶಕ್ಕೆ ಧಾವಿಸಿ, ಸಮಗ್ರವಾದ ರಾಜ- ಸಮೂಹವನ್ನು ಪರಾಭವಗೊಳಿಸಿ, ಮೂರು ಕನ್ಯೆಯರನ್ನು ತಂದು ತಮ್ಮನಿಗೆ ವಿವಾಹ ಮಾಡಿಸಿದನೋ ನನ್ನ ಮನಸ್ಸು ಅವನಲ್ಲಿ ಹೋಯಿತು.
ತ್ರಯೋವಿಂಶತಿರಾತ್ರಂ ಯೋ ಯೋಧಯಾಮಾಸ ಭಾರ್ಗವಮ್ |
ನ ಚ ರಾಮೇಣ ನಿಸ್ತೀರ್ಣಸ್ತಮಸ್ಮಿ ಮನಸಾ ಗತಃ ||14||
ಯಾವನು ಇಪ್ಪತ್ತಮೂರು ದಿನಗಳ ಕಾಲ ಭಾರ್ಗವರಾಮನ ಜೊತೆಯಲ್ಲಿ ಯುದ್ಧಮಾಡಿದರೂ ಅವನಿಗೆ ಸೋಲಲಿಲ್ಲವೋ ಅವನಲ್ಲಿ ನನ್ನ ಮನಸ್ಸು ಹೋಯಿತು.
ಯಾಂ ಗಂಗಾ ಗರ್ಭವಿಧಿನಾ ಧಾರಯಾಮಾಸ ಪಾರ್ಥಿವಮ್ |

ವಸಿಷ್ಠಶಿಷ್ಯಂ ತಂ ತಾತ ಮನಸಾಽಸ್ಮಿ ಗತೋ ನೃಪ ॥15॥
ಎಲೈ ರಾಜನೇ! ಪ್ರೀತಿಪಾತ್ರನೇ! ರಾಜನಾದ ಯಾವನನ್ನು ಗಂಗೆಯು ಗರ್ಭರೂಪದಲ್ಲಿ ಧರಿಸಿದಳೋ, ವಸಿಷ್ಠರ ಶಿಷ್ಯರಾದ ಆ ಭೀಷ್ಮನಲ್ಲಿಗೆ ನನ್ನ ಮನಸ್ಸು ಹೋಯಿತು.
ದಿವ್ಯಾಸ್ತ್ರಾಣಿ ಮಹಾತೇಜಾ ಯೋ ಧಾರಯತಿ ಬುದ್ಧಿಮಾನ್ |
ಸಾಂಗಾಂಶ್ಚ ಚತುರೋ ವೇದಾಂಸ್ತಮಸ್ಮಿ ಮನಸಾ ಗತಃ ॥16॥
ಮೇಧಾವಿಯೂ, ಮಹಾತೇಜಸ್ವಿಯೂ ಆದ ಯಾವನು ದಿವ್ಯಾಸ್ತ್ರಗಳನ್ನು ಹೊಂದಿದ್ದಾನೆಯೋ ಅಂಗಸಹಿತವಾದ ನಾಲ್ಕುವೇದಗಳನ್ನು ಹೊಂದಿದ್ದಾನೆಯೋ ಅವನೆಡೆಗೆ ನನ್ನ ಮನಸ್ಸು ಹೋಯಿತು.
ರಾಮಸ್ಯ ದಯಿತಂ ಶಿಷ್ಯಂ ಜಾಮದಗ್ನ್ಯಸ್ಯ ಪಾಂಡವ |
ಆಧಾರಂ ಸರ್ವವಿದ್ಯಾನಾಂ ತಮಸ್ಮಿ ಮನಸಾ ಗತಃ ॥17॥
ಎಲೈ ಪಾಂಡವನೇ! ಜಮದಗ್ನಿಯ ಪುತ್ರರಾದ ಪರಶುರಾಮರ ಪ್ರಿಯಶಿಷ್ಯನೂ, ಎಲ್ಲ ವಿದ್ಯೆಗಳಿಗೆ ಆಶ್ರಯನಾದವನೂ ಆದವನಲ್ಲಿ ನನ್ನ ಮನಸ್ಸು ಹೋಯಿತು.
ಏಕೀಕೃತ್ಯೇಂದ್ರಿಯಗ್ರಾಮಂ ಮನಃ ಸಂಯಮ್ಯ ಮೇಧಯಾ |
ಶರಣಂ ಮಾಮುಪಾಗಚ್ಛತ್ ತತೋ ಮೇ ತದ್ಗತಂ ಮನಃ ॥18॥
ಅವನು ತನ್ನ ಇಂದ್ರಿಯಸಮೂಹವನ್ನು ಏಕಾಗ್ರಗೊಳಿಸಿ, ಬುದ್ಧಿಯಿಂದ ಮನಸ್ಸನ್ನು ನಿಯಂತ್ರಿಸಿ, ನನಗೆ ಶರಣಾಗತನಾದನು. ಆದ್ದರಿಂದ ನನ್ನ ಮನಸ್ಸು ಅವನೆಡೆಗೆ ಹೋಯಿತು.
ಸ ಹಿ ಭೂತಂ ಚ ಭವ್ಯಂ ಚ ಭವಚ್ಚ ಪುರುಷರ್ಷಭ |
ವೇತ್ತಿ ಧರ್ಮಭೃತಾಂ ಶ್ರೇಷ್ಠಸ್ತತೋ ಮೇ ತದ್ಗತಂ ಮನಃ ॥19॥
ಎಲೈ ಪುರುಷಶ್ರೇಷ್ಠನೇ! ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಭೂತ, ಭವಿ- ಷ್ಯತ್, ವರ್ತಮಾನವಿಷಯವೆಲ್ಲವನ್ನೂ ತಿಳಿದಿದ್ದಾನೆ. ಆದ್ದರಿಂದ ನನ್ನ ಮನಸ್ಸು ಅವನಲ್ಲಿಗೆ ಹೋಯಿತು.
ತಸ್ಮಿನ್ ಹಿ ಪುರುಷವ್ಯಾಘ್ರೇ ಕರ್ಮಭಿಃ ಸ್ವೈರ್ದಿವಂ ಗತೇ |
ಭವಿಷ್ಯತಿ ಮಹೀ ಪಾರ್ಥ ನಷ್ಟಚಂದ್ರೇವ ಶರ್ವರೀ ॥20॥
ಎಲೈ ಪಾರ್ಥನೇ! ಪುರುಷವ್ಯಾಘ್ರನಾದ ಅವನು ತನ್ನ ಕರ್ಮಗಳಿಗೆ ಅನುಗುಣವಾಗಿ ಸ್ವರ್ಗತನಾದರೆ ಭೂಮಿಯು ಚಂದ್ರನಿಲ್ಲದ ರಾತ್ರಿಯಂತಾಗುತ್ತದೆ.
ತದ್ ಯುಧಿಷ್ಠಿರ ಗಾಂಗೇಯಂ ಭೀಷ್ಮಂ ಭೀಷ್ಮಪರಾಕ್ರಮಮ್ |
ಅಭಿಗಮ್ಯೋಪಸಂಗೃಹ್ಯ ಪೃಚ್ಛ ಯತ್ ತೇ ಮನೋಗತಮ್ ॥21॥
ಆದ್ದರಿಂದ ಎಲೈ ಯುಧಿಷ್ಠಿರನೇ! ಗಂಗಾಪುತ್ರನೂ, ಭಯಂಕರ ಪರಾಕ್ರಮ- ವುಳ್ಳವನೂ ಆದ ಭೀಷ್ಮನನ್ನು ಸಮೀಪಿಸಿ, ಉಪಸತ್ತಿಯನ್ನು ಮಾಡಿ, ನಿನ್ನ ಮನಸ್ಸಿ- ನಲ್ಲಿರುವ ವಿಷಯಗಳನ್ನು ಕೇಳುವವನಾಗು.
ಚಾತುರ್ವೇದ್ಯಂ ಚಾತುರ್ಹೋತ್ರಂ ಚಾತುರಾಶ್ರಮ್ಯಮೇವ ಚ |
ಚಾತುರ್ವರ್ಣ್ಯಸ್ಯ ಧರ್ಮಂ ಚ ಪೃಚ್ಛೈನಂ ಪೃಥಿವೀಪತೇ ॥22॥
ಎಲೈ ಪೃಥಿವೀಪತಿಯೇ! ಅವನನ್ನು ಕುರಿತು ನಾಲ್ಕು ವೇದಗಳಿಗೆ ಸಂಬಂಧಿಸಿದ, ನಾಲ್ಕು ಹೋತೃಗಳಿಗೆ ಸಂಬಂಧಿಸಿದ, ನಾಲ್ಕು ಆಶ್ರಮಗಳಿಗೆ ಸಂಬಂಧಿಸಿದ, ನಾಲ್ಕು ವರ್ಣಗಳಿಗೆ ಸಂಬಂಧಿಸಿದ ಧರ್ಮಗಳನ್ನು ಕೇಳುವವನಾಗು.
ತಸ್ಮಿನ್ನಸ್ತಮಿತೇ ಭೀಷ್ಮೇ ಕೌರವಾಣಾಂ ಧುರಂಧರೇ |
ಜ್ಞಾನಾನ್ಯಲ್ಪೀಭವಿಷ್ಯಂತಿ ತಸ್ಮಾತ್ ತ್ವಾಂ ಚೋದಯಾಮ್ಯಹಮ್ |
ಕೌರವರ ಧುರಂಧರನಾದ ಭೀಷ್ಮನು ಅಸ್ತವನ್ನು ಹೊಂದಿದರೆ ಈ ಲೋಕದಲ್ಲಿ ಜ್ಞಾನವು ಕೃಶವಾಗುವುದು. ಆದ್ದರಿಂದ ನಿನ್ನನ್ನು ಪ್ರೇರಿಸುತ್ತಿದ್ದೇನೆ.
ತಚ್ಛ್ರುತ್ವಾ ಚ ಸ ಧರ್ಮಜ್ಞೋ ಜನಾರ್ದನಮುವಾಚ ಹ ॥23॥
ಯದ್ ಭವಾನಾಹ ಭೀಷ್ಮಸ್ಯ ಪ್ರಭಾವಂ ಪ್ರತಿ ಮಾಧವ |
ತಥಾ ತನ್ನಾತ್ರ ಸಂದೇಹೋ ವಿದ್ಯತೇ ಮಮ ಮಾನದ ॥24॥
ಆ ಮಾತುಗಳನ್ನು ಕೇಳಿದ ಧರ್ಮಜ್ಞನಾದ ಯುಧಿಷ್ಠಿರನು ಜನಾರ್ದನನನ್ನು ಕುರಿತು ಮಾತನಾಡಿದನು ಮಾಧವನೇ! ಭೀಷ್ಮರ ಪ್ರಭಾವದ ವಿಷಯದಲ್ಲಿ ನೀನು ಏನು ಹೇಳಿದೆಯೋ ಅದು ಹಾಗೆಯೇ ಸರಿ. ಎಲೈ ಮಾನದನೇ! ಈ ವಿಷಯದಲ್ಲಿ ನನಗೆ ಸಂದೇಹವಿಲ್ಲ.
ಮಹಾಭಾಗ್ಯಂ ಹಿ ಭೀಷ್ಮಸ್ಯ ಪ್ರಭಾವಶ್ಚ ಮಹಾತ್ಮನಃ |
ಶ್ರುತಂ ಮಯಾ ಕಥಯತಾಂ ಬ್ರಾಹ್ಮಣಾನಾಂ ಮಹಾತ್ಮನಾಮ್ ॥25॥
ನಾನು ಮಹಾತ್ಮರಾದ ಬ್ರಾಹ್ಮಣರು ಮಾತನಾಡುವಾಗ ಮಹಾತ್ಮರಾದ ಭೀಷ್ಮರ ಮಹಾಭಾಗ್ಯವನ್ನೂ ಮತ್ತು ಪ್ರಭಾವವನ್ನೂ ಕೇಳಿದ್ದೇನೆ.
ಭವಾಂಶ್ಚ ಕರ್ತಾ ಲೋಕಾನಾಂ ಯದ್ ಬ್ರವೀತ್ಯರಿಸೂದನ |
ತಥಾ ತದನಭಿಧ್ಯೇಯಂ ವಾಕ್ಯಂ ಯಾದವನಂದನ ॥26॥
ಎಲೈ ಅರಿಸೂದನನೇ! ಯಾದವನಂದನನೇ! ಲೋಕಗಳನ್ನು ಸೃಷ್ಟಿಸುವ ನೀನು ಏನನ್ನು ಮಾತನಾಡುತ್ತೀಯೋ ಅದನ್ನು ಪುನಃ ವಿಚಾರಮಾಡುವ ಅಗತ್ಯವಿಲ್ಲ.
ಯತಸ್ತ್ವನುಗ್ರಹಕೃತಾ ಬುದ್ಧಿಸ್ತೇ ಮಯಿ ಮಾಧವ |

ತ್ವಾಮಗ್ರತಃ ಪುರಸ್ಕೃತ್ಯ ಭೀಷ್ಮಂ ಪಶ್ಯಾಮಹೇ ವಯಮ್ ॥27॥
ಎಲೈ ಮಾಧವನೇ! ನನ್ನ ಮೇಲೆ ನಿನಗೆ ಅನುಗ್ರಹಬುದ್ಧಿ ಇರುವುದರಿಂದ ನಿನ್ನನ್ನು ಮುಂದೆ ಮಾಡಿಕೊಂಡು ನಾವು ಭೀಷ್ಮರನ್ನು ನೋಡೋಣ.
ಆವೃತ್ತೇ ಭಗವತ್ಯರ್ಕೇ ಸ ಹಿ ಲೋಕಾನ್ ಗಮಿಷ್ಯತಿ |
ತ್ವದ್ದರ್ಶನಂ ಮಹಾಬಾಹೋ ತಸ್ಮಾದರ್ಹತಿ ಕೌರವಃ ॥28॥
ಸೂರ್ಯನು ದಿಕ್ಕನ್ನು ಬದಲಿಸಿದ ಮೇಲೆ ಭೀಷ್ಮರು ಲೋಕಾಂತರಗಳಿಗೆ ಹೋಗುವವರು. ಎಲೈ ಮಹಾಬಾಹುವೇ! ಅದರಿಂದ ಕೌರವರಾದ ಅವರು ನಿನ್ನ ದರ್ಶನಕ್ಕೆ ಅರ್ಹರಾದವರು - ಎಂದು ಭಾವಿಸುತ್ತೇನೆ.
ತವ ಹ್ಯಾದ್ಯಸ್ಯ ದೇವಸ್ಯ ಕ್ಷರಸ್ಯೈವಾಕ್ಷರಸ್ಯ ಚ |
ದರ್ಶನಂ ತಸ್ಯ ಲಾಭಃ ಸ್ಯಾತ್ ತ್ವಂ ಹಿ ಬ್ರಹ್ಮಮಯೋ ನಿಧಿಃ ॥29॥
ಕ್ಷರಾಕ್ಷರಗಳಿಗೆ ಒಡೆಯನಾದ ಆದಿದೇವನಾದ ನಿನ್ನ ದರ್ಶನವು ಅವರಿಗೆ ಲಾಭವಾದೀತು! ಏಕೆಂದರೆ ನೀನು ಬ್ರಹ್ಮಮಯನಾದ ನಿಧಿಯಾಗಿದ್ದೀಯೆ. (ಎಂದು ಯುಧಿಷ್ಠಿರನು ಹೇಳಿದನು).
ಶ್ರುತ್ವೈತದ್ ಧರ್ಮರಾಜಸ್ಯ ವಚನಂ ಮಧುಸೂದನಃ |
ಪಾರ್ಶ್ವಸ್ಥಂ ಸಾತ್ಯಕಿಂ ಪ್ರಾಹ ರಥೋ ಮೇ ಯುಜ್ಯತಾಮಿತಿ ॥30॥
ಮಧುಸೂದನನು ಧರ್ಮರಾಜನ ಈ ಮಾತುಗಳನ್ನು ಕೇಳಿ, ಪಾರ್ಶ್ವದಲ್ಲಿದ್ದ ಸಾತ್ಯಕಿಯನ್ನು ಕುರಿತು ನನ್ನ ರಥವನ್ನು ಅಣಿಗೊಳಿಸು ಎಂದು ಹೇಳಿದನು.
ಸಾತ್ಯಕಿಸ್ತೂಪನಿಷ್ಕ್ರಮ್ಯ ಕೇಶವಸ್ಯ ಸಮೀಪತಃ |
ದಾರುಕಂ ಪ್ರಾಹ ಕೃಷ್ಣಸ್ಯ ಯುಜ್ಯತಾಂ ರಥ ಇತ್ಯುತ ॥31॥
ಸಾತ್ಯಕಿಯಾದರೋ ಕೇಶವನ ಸಮೀಪದಿಂದ ಹೊರಬಂದು ದಾರುಕನನ್ನು ಕುರಿತು ಕೃಷ್ಣನ ರಥವನ್ನು ಹೂಡು ಎಂದು ಹೇಳಿದನು.
ಸ ಸಾತ್ಯಕೇರಾಶು ವಚೋ ನಿಶಮ್ಯ
ರಥೋತ್ತಮಂ ಕಾಂಚನಭೂಷಿತಾಂಗಮ್ |
ಮಸಾರಗಲ್ವರ್ಕಮಯೈರ್ವಿಭಂಗೈಃ
ವಿಭೂಷಿತಂ ಹೇಮಪಿನದ್ಧಚಕ್ರಮ್ ॥32॥
ದಿವಾಕರಾಂಶುಪ್ರಭಮಾಶುಗಾಮಿನಂ
ವಿಚಿತ್ರನಾನಾಮಣಿರತ್ನಭೂಷಿತಮ್ |
ನವೋದಿತಂ ಸೂರ್ಯಮಿವ ಪ್ರತಾಪಿನಂ
ವಿಚಿತ್ರತಾರ್ಕ್ಷ್ಯಧ್ವಜಿನಂ ಪತಾಕಿನಮ್ ॥33॥
ಸುಗ್ರೀವಸೈನ್ಯಪ್ರಮುಖೈರ್ವರಾಶ್ವೈಃ
ಮನೋಜವೈಃ ಕಾಂಚನಭೂಷಿತಾಂಗೈಃ |
ಸುಯುಕ್ತಮಾವೇದಯದಚ್ಯುತಾಯ
ಕೃತಾಂಜಲಿರ್ದಾರುಕೋ ರಾಜಸಿಂಹ ॥34॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಚತ್ವಾರಿಂಶೋಽಧ್ಯಾಯಃ ॥46॥
ಎಲೈ ರಾಜಸಿಂಹನೇ! ಆ ದಾರುಕನಾದರೋ ಸಾತ್ಯಕಿಯ ಮಾತುಗಳನ್ನು ಕೇಳಿ ಶೀಘ್ರವಾಗಿ ಸುವರ್ಣ ಭೂಷಿತವಾದ ಅಂಗಗಳನ್ನು ಹೊಂದಿದ, ಮರಕತ ಸೂರ್ಯ -ಕಾಂತ ಮತ್ತು ಚಂದ್ರಕಾಂತಮಣಿಗಳಿಂದ ಕೂಡಿದ ಆಯಾಮವುಳ್ಳ, ಸುವರ್ಣ- ವನ್ನು ಮೆಟ್ಟಿದ ಚಕ್ರಗಳನ್ನು ಹೊಂದಿದ, ಸೂರ್ಯನ ಕಿರಣಗಳ ಪ್ರಭೆಯನ್ನು ಹೊಂದಿದ, ಶೀಘ್ರಗಾಮಿಯಾದ, ವಿಚಿತ್ರವಾದ ನಾನಾ ಮಣಿಗಳಿಂದಲೂ ಮತ್ತು ರತ್ನಗಳಿಂದಲೂ ಭೂಷಿತವಾದ, ಆಗ ತಾನೇ ಉದಯಿಸುವ ಸೂರ್ಯನಂತೆ ಪ್ರತಾಪವನ್ನು ಹೊಂದಿದ, ವಿಚಿತ್ರವಾದ ಗರುಡಧ್ವಜವನ್ನು ಹೊಂದಿದ, ಪ್ರತಾಪದಿಂದ ಕೂಡಿದ, ಮನೋವೇಗವುಳ್ಳವೂ ಸುವರ್ಣಭೂಷಿತಾಂಗವುಳ್ಳವೂ ಆದ ಸುಗ್ರೀವಸೈನ್ಯ ಮೊದಲಾದ ಶ್ರೇಷ್ಠ ಅಶ್ವಗಳನ್ನು ಚೆನ್ನಾಗಿ ಹೂಡಿದ ರಥವು ಸಿದ್ಧವಾಗಿದೆ ಎಂದು ಕೈಗಳನ್ನು ಮುಗಿದು ಅಚ್ಯುತನಿಗೆ ಹೇಳಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 46ನೆಯ ಅಧ್ಯಾಯವು ಮುಗಿಯಿತು.
0

## 47. ನಲವತ್ತೇಳನೆಯ ಅಧ್ಯಾಯ
ಭೀಷ್ಮಸ್ತವರಾಜ
ಜನಮೇಜಯಃ
ಶರತಲ್ಪೇ ಶಯಾನಸ್ತು ಭರತಾನಾಂ ಪಿತಾಮಹಃ |
ಕಥಮುತ್ಸೃಷ್ಟವಾನ್ ದೇಹಂ ಕಂ ಚ ಯೋಗಮಧಾರಯತ್ ॥1॥
ಜನಮೇಜಯ ಶರತಲ್ಪದಲ್ಲಿ ಮಲಗಿದ್ದ ಭರತಪಿತಾಮಹರಾದ ಭೀಷ್ಮರು ದೇಹವನ್ನು ಹೇಗೆ ತ್ಯಜಿಸಿದರು? ಮತ್ತು ಯಾವ ಯೋಗಧಾರಣೆಯನ್ನು ಮಾಡಿ- ದರು?
ವೈಶಂಪಾಯನಃ

ಶೃಣುಷ್ವಾವಹಿತೋ ರಾಜನ್ ಶುಚಿರ್ಭೂತ್ವಾ ಸಮಾಹಿತಃ |
ಭೀಷ್ಮಸ್ಯ ಕುರುಶಾರ್ದೂಲ ದೇಹೋತ್ಸರ್ಗಂ ಮಹಾತ್ಮನಃ ||2||
ವೈಶಂಪಾಯನರು ರಾಜನೇ! ಕುರುಶಾರ್ದೂಲನೇ! ಮಹಾತ್ಮರಾದ ಭೀಷ್ಮರ ದೇಹತ್ಯಾಗವನ್ನು ಶುಚಿಯಾಗಿ, ಸಮಾಧಾನದಿಂದ, ಅವಧಾನದಿಂದ ಕೇಳು.
ನಿವೃತ್ತಮಾತ್ರೇ ತ್ವಯನೇ ಉತ್ತರೇ ವೈ ದಿವಾಕರೇ |
ಸಮಾವೇಶಯದಾತ್ಮಾನಮಾತ್ಮನ್ಯೇವ ಸಮಾಹಿತಃ ||3||
ಸೂರ್ಯನು ಉತ್ತರಾಯಣಗತಿಗೆ ತಿರುಗುತ್ತಿರಲು ಭೀಷ್ಮರು ಸಮಾಧಾನ- ದಿಂದ ತಮ್ಮ ಮನಸ್ಸನ್ನು ಪರಮಾತ್ಮನಲ್ಲಿ ಇರಿಸಿದರು.
ವಿಕೀರ್ಣಾಂಶುರಿವಾದಿತ್ಯೋ ಭೀಷ್ಮಃ ಶರಶತೈಶ್ಚಿತಃ |
ಶಿಶ್ಯೇ ಪರಮಯಾ ಲಕ್ಷ್ಮ್ಯಾ ವೃತೋ ಬ್ರಾಹ್ಮಣಸತ್ತಮೈಃ ||4||
ಸುತ್ತಲೂ ಹೊರಹೊಮ್ಮುವ ಕಿರಣಗಳಿಂದ ಕೂಡಿದ ಸೂರ್ಯನಂತೆ ನೂರಾರು ಬಾಣಗಳಿಂದ ಚುಚ್ಚಲ್ಪಟ್ಟ ಭೀಷ್ಮರು ಬಹಳ ಕಾಂತಿಯಿಂದ ಕೂಡಿದವ- ರಾಗಿ ಬ್ರಾಹ್ಮಣಶ್ರೇಷ್ಠರಿಂದ ಸುತ್ತುವರಿಯಲ್ಪಟ್ಟು ಮಲಗಿದ್ದರು.
ಶುಕ್ಲಪಕ್ಷಸ್ಯ ಚಾಷ್ಟಮ್ಯಾಂ ಮಾಘಮಾಸಸ್ಯ ಪಾರ್ಥಿವ |
ಪ್ರಾಜಾಪತ್ಯೇ ಚ ನಕ್ಷತ್ರೇ ಮಧ್ಯಂ ಪ್ರಾಪ್ತೇ ದಿವಾಕರೇ ||5||
ವ್ಯಾಸೇನ ವೇದಶ್ರವಸಾ ನಾರದೇನ ಸುರರ್ಷಿಣಾ |
ದೇವಸ್ಥಾನೇನ ವಾತ್ಸ್ಯೇನ ತಥಾಽಶ್ಮಕಸುಮಂತುನಾ ||6||
ತಥಾ ಜೈಮಿನಿನಾ ಚೈವ ಪೈಲೇನ ಚ ಮಹಾತ್ಮನಾ |
ಶಾಂಡಿಲ್ಯದೇವಲಾಭ್ಯಾಂ ಚ ಮೈತ್ರೇಯೇಣ ಚ ಧೀಮತಾ ||7||
ಅಸಿತೇನ ವಸಿಷ್ಠೇನ ಕೌಶಿಕೇನ ಮಹಾತ್ಮನಾ |
ಹಾರೀತಲೋಮಶಾಭ್ಯಾಂ ಚ ತಥಾಽಽತ್ರೇಯೇಣ ಧೀಮತಾ ||8||
ಬೃಹಸ್ಪತಿಶ್ಚ ಶುಕ್ರಶ್ಚ ಚ್ಯವನಶ್ಚ ಮಹಾಮುನಿಃ |
ಸನತ್ಕುಮಾರಃ ಕಪಿಲೋ ವಾಲ್ಮೀಕಿಸ್ತುಂಬುರುಃ ಕುರುಃ ||9||
ಮೌದ್ಗಲ್ಯೋ ಭಾರ್ಗವೋ ರಾಮಸ್ತೃಣಬಿಂದುರ್ಮಹಾಮುನಿಃ |
ಪಿಪ್ಪಲಾದಶ್ಚ ವಾಯುಶ್ಚ ಸಂವರ್ತಃ ಪುಲಹಃ ಕಚಃ ||10||
ಕಾಶ್ಯಪಶ್ಚ ಪುಲಸ್ತ್ಯಶ್ಚ ಕ್ರತುರ್ದಕ್ಷಃ ಪರಾಶರಃ |
ಮರೀಚಿರಂಗಿರಾ ಕಾಶ್ಯೋ ಗೌತಮೋ ಗಾಲವೋ ಮುನಿಃ ||11||
ಧೌಮ್ಯೋ ವಿಭಾಂಡೋ ಮಾಂಡವ್ಯೋ ಧೌತ್ರಃ ಕೃಷ್ಣಾನುಭೌತಿಕಃ |
ಉಲೂಕಃ ಪರಮೋ ವಿಪ್ರೋ ಮಾರ್ಕಂಡೇಯೋ ಮಹಾಮುನಿಃ |
ಭಾಸ್ಕರಿಃ ಪೂರಣಃ ಕೃಷ್ಣಃ ಸೂತಃ ಪರಮಧಾರ್ಮಿಕಃ ||12||
ಏತೈಶ್ಚಾನ್ಯೈರ್ಮುನಿಗಣೈರ್ಮಹಾಭಾಗೈರ್ಮಹಾತ್ಮಭಿಃ |
ಶ್ರದ್ಧಾದಮಪುರಸ್ಕಾರೈರ್ವೃತಶ್ಚಂದ್ರ ಇವ ಗ್ರಹೈಃ ||13||
ಎಲೈ ರಾಜನೇ! ಮಾಘಮಾಸದ ಶುಕ್ಲಪಕ್ಷದ ಅಷ್ಟಮಿಯಂದು ಚಂದ್ರನು ರೋಹಿಣೀನಕ್ಷತ್ರದಲ್ಲಿರುವಾಗ ಸೂರ್ಯನು ಮಧ್ಯಂದಿನದಲ್ಲಿರಲು ವ್ಯಾಸರು, ವೇದಶ್ರವಸ, ದೇವರ್ಷಿಗಳಾದ ನಾರದರು, ದೇವಸ್ಥಾನ, ವಾತ್ಸ್ಯ, ಅಶ್ಮಕ, ಸುಮಂತು, ಜೈಮಿನಿ, ಮಹಾತ್ಮನಾದ ಪೈಲ, ಶಾಂಡಿಲ್ಯ, ದೇವಲ, ಮೇಧಾವಿಯಾದ ಮೈತ್ರೇಯ, ಅಸಿತ, ವಸಿಷ್ಠ, ಮಹಾತ್ಮನಾದ ವಿಶ್ವಾಮಿತ್ರ, ಹಾರೀತ, ಲೋಮಶ, ಮೇಧಾವಿಯಾದ ಆತ್ರೇಯ, ಬೃಹಸ್ಪತಿ, ಶುಕ್ರ, ಮಹರ್ಷಿಗಳಾದ ಚ್ಯವನ, ಸನತ್ಕುಮಾರ, ಕಪಿಲ, ವಾಲ್ಮೀಕಿ, ತುಂಬುರು,ಪುರು, ಮೌದ್ಗಲ್ಯ, ಪರಶುರಾಮ, ಮಹಾಮುನಿಗಳಾದ ತೃಣಬಿಂದು, ಪಿಪ್ಪಲಾದ, ವಾಯು, ಸಂವರ್ತ, ಪುಲಹ, ಕಚ, ಕಾಶ್ಯಪ, ಪುಲಸ್ತ್ಯ, ಕ್ರತು, ದಕ್ಷ, ಪರಾಶರ, ಮರೀಚಿ, ಅಂಗಿರಸ್, ಕಾಶ್ಯ, ಗೌತಮ, ಗಾಲವ, ಧೌಮ್ಯ, ವಿಭಾಂಡ, ಮಾಂಡವ್ಯ, ಧೌತ್ರ, ಕೃಷ್ಣಾನುಭೌತಿಕ, ಪರಮ - ಬ್ರಾಹ್ಮಣರಾದ ಉಲೂಕ, ಮಹಾಮುನಿಗಳಾದ ಮಾರ್ಕಂಡೇಯ, ಭಾಸ್ಕರಿ, ಪೂರಣ, ಕೃಷ್ಣ, ಪರಮಧಾರ್ಮಿಕನಾದ ಸೂತ ಈ ಎಲ್ಲಾ ಮಹಾತ್ಮರೂ ಮಹಾ- ಭಾಗ್ಯವಂತರೂ ಆದ ಮುನಿಗಳ ಸಮೂಹದಿಂದ ಶ್ರದ್ಧಾ, ದಮ ಪುರಸ್ಸರವಾಗಿ ಗ್ರಹಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆ ಭೀಷ್ಮರು ಇದ್ದರು.
ಭೀಷ್ಮಸ್ತು ಪುರುಷವ್ಯಾಘ್ರಃ ಕರ್ಮಣಾ ಮನಸಾ ಗಿರಾ |
ಶರತಲ್ಪಗತಃ ಕೃಷ್ಣಂ ಪ್ರದಧ್ಯೌ ಪ್ರಾಂಜಲಿಃ ಸ್ಥಿತಃ ||14||
ಪುರುಷವ್ಯಾಘ್ರರಾದ ಶರತಲ್ಪಗತರಾದ ಭೀಷ್ಮರಾದರೋ ಕೈಗಳನ್ನು ಮುಗಿದು ಕರ್ಮದಿಂದಲೂ ಮನಸ್ಸಿನಿಂದಲೂ ಮತ್ತು ಮಾತಿನಿಂದಲೂ ಕೃಷ್ಣನನ್ನು ಧ್ಯಾನ ಮಾಡಿದರು.
ಸ್ವರೇಣ ಪುಷ್ಟನಾದೇನ ತುಷ್ಟಾವ ಮಧುಸೂದನಮ್ |
ಯೋಗೇಶ್ವರಂ ಪದ್ಮನಾಭಂ ವಿಷ್ಣುಂ ಜಿಷ್ಣುಂ ಜಗತ್ಪತಿಮ್ ||15||
ಅವರು ಯೋಗೇಶ್ವರನೂ ಪದ್ಮನಾಭನೂ ವಿಷ್ಣುವೂ ಜಿಷ್ಣುವೂ ಜಗತ್ಪತಿಯೂ ಆದ ಮಧುಸೂದನನನ್ನು ತುಂಬಿದ ಸ್ವರದಿಂದ ಸ್ತೋತ್ರಮಾಡಿದರು.
ಕೃತಾಂಜಲಿಃ ಶುಚಿರ್ಭೂತ್ವಾ ವಾಗ್ವಿದಾಂ ಪ್ರವರಃ ಪ್ರಭುಮ್ |
ಭೀಷ್ಮಃ ಪರಮಧರ್ಮಾತ್ಮಾ ವಾಸುದೇವಮಥಾಸ್ತುವತ್ ||16||
ಮಾತನಾಡುವವರಲ್ಲಿ ಶ್ರೇಷ್ಠರಾದ ಪರಮಧರ್ಮಾತ್ಮರಾದ ಭೀಷ್ಮರು ಶುಚಿಯಾಗಿ ಕೈಗಳನ್ನು ಮುಗಿದು ಪ್ರಭುವಾದ

ವಾಸುದೇವನನ್ನು ಆಗ ಸ್ತೋತ್ರ ಮಾಡಿದರು.
ಆರಿರಾಧಯಿಷುಃ ಕೃಷ್ಣಂ ವಾಚಂ ಜಿಗದಿಷಾಮಿ ಯಾಮ್ |
ತಥಾ ವ್ಯಾಸಸಮಾಸಿನ್ಯಾ ಪ್ರೀಯತಾಂ ಪುರುಷೋತ್ತಮಃ ॥17॥
ನಾನು ಕೃಷ್ಣನನ್ನು ಸ್ತೋತ್ರಮಾಡಲು ಬಯಸಿ ಯಾವ ಮಾತುಗಳನ್ನು ಆಡಲು ಇಚ್ಛಿಸುತ್ತಿದ್ದೇನೆಯೋ ಅಂತಹ ಸಂಕ್ಷಿಪ್ತ ಮತ್ತು ವಿಸ್ತಾರವಾದ ಮಾತುಗಳಿಂದ ಪುರುಷೋತ್ತಮನಾದ ಕೃಷ್ಣನು ಪ್ರಸನ್ನನಾಗಲಿ.
ಶುಚಿಃ ಶುಚಿಪದಂ ಹಂಸಂ ತತ್ಪರಃ ಪರಮೇಷ್ಠಿನಮ್ |
ಯುಕತ್ವಾ ಸರ್ವಾತ್ಮನಾಽಽತ್ಮಾನಂ ತಂ ಪ್ರಪದ್ಯೇ ಪ್ರಜಾಪತಿಮ್ ॥18॥
ನನ್ನ ಮನಸ್ಸನ್ನು ಶುಚಿಯೂ, ವಾಯ್ವಂತರ್ಯಾಮಿಯೂ, ದೋಷ- ದೂರನೂ, ಗುಣಪೂರ್ಣನೂ, ಪರಮೇಷ್ಠಿಯೂ ಆದ ಕೃಷ್ಣನಲ್ಲಿ ನಿಲ್ಲಿಸಿ ಪ್ರಜಾ- ಪತಿಯಾದ ಅವನಿಗೆ ನಾನು ಶರಣಾಗತನಾಗುತ್ತೇನೆ.
ಅನಾದ್ಯಂತಃ ಪರಂ ಬ್ರಹ್ಮ ನ ದೇವಾ ನರ್ಷಯೋ ವಿದುಃ |
ಏಕೋಽಯಂ ವೇದ ಭಗವಾನ್ ಧಾತಾ ನಾರಾಯಣೋ ಹರಿಃ ॥19॥
ಅವನು ಆದ್ಯಂತಶೂನ್ಯನಾದ ಪರಬ್ರಹ್ಮ. ದೇವತೆಗಳಾಗಲೀ ಋಷಿಗಳಾಗಲೀ ಅವನನ್ನು ಪೂರ್ಣವಾಗಿ ತಿಳಿದಿಲ್ಲ. ಜಗತ್ಸೃಷ್ಟಿಕರ್ತನಾದ ಭಗವಂತನಾದ ಹರಿ- ನಾರಾಯಣನೊಬ್ಬನೇ ಅವನನ್ನು ತಿಳಿದವನು.
ನಾರಾಯಣಾದೃಷಿಗಣಾಸ್ತಥಾ ಸಿದ್ಧಮಹೋರಗಾಃ |
ದೇವಾ ದೇವರ್ಷಯಶ್ಚೈವ ಯೇ ವಿದುಃ ಪರಮವ್ಯಯಮ್ ॥20॥
ದೇವತೆಗಳೂ, ದೇವಋಷಿಗಳೂ, ಋಷಿಗಣಗಳೂ, ಸಿದ್ಧರೂ, ಮಹೋರಗ- ಗಳೂ ಮೊದಲಾದ ಯಾರು ಸರ್ವೋತ್ತಮನೂ ಅವ್ಯಯನೂ ಆದ ಅವನನ್ನು ಅಲ್ಪಸ್ವಲ್ಪ ತಿಳಿದಿದ್ದಾರೆಯೋ ಅದೂ ಸಹ ನಾರಾಯಣನ ಉಪದೇಶದಿಂದಲೇ.
ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ |
ಯಂ ನ ಜಾನಂತಿ ಕೋ ಹ್ಯೇಷ ಕುತೋ ವಾ ಭಗವಾನಿತಿ ॥21॥
ಯಾವನನ್ನು ಇವನ ಸ್ವರೂಪವೇನು? ಭಗವಂತನಾದ ಇವನು ಎಲ್ಲಿಂದ ಬಂದಿದ್ದಾನೆ? ಎಂಬುದನ್ನು ದೇವದಾನವಗಂಧರ್ವರಾಗಲೀ, ಯಕ್ಷರಾಕ್ಷಸಸರ್ಪ- ಗಳಾಗಲೀ ತಿಳಿದಿಲ್ಲವೋ,
ಯಸ್ಮಿನ್ ವಿಶ್ವಾನಿ ಭೂತಾನಿ ತಿಷ್ಠಂತಿ ಚ ವಿಶಂತಿ ಚ |
ಗುಣಭೂತಾನಿ ಭೂತೇಶೇ ಸೂತ್ರೇ ಮಣಿಗಣಾ ಇವ ॥22॥
ಭೂತೇಶನಾದ ಯಾವನಲ್ಲಿ ಎಲ್ಲ ಪ್ರಾಣಿಗಳೂ ಸೂತ್ರದಲ್ಲಿ ಪೋಣಿಸಿದ ಮಣಿಗಣಗಳಂತೆ ಪ್ರವೇಶಿಸಿ, ಆಶ್ರಿತವಾಗಿ ಅಪ್ರಧಾನವಾಗಿವೆಯೋ,
ಯಸ್ಮಿನ್ ನಿತ್ಯೇ ತತೇ ತಂತೌ ದೃಢೇ ಸ್ರಗಿವ ತಿಷ್ಠತಿ |
ಸದಸದ್ ಗ್ರಥಿತಂ ವಿಶ್ವಂ ವಿಶ್ವಾಂಗೇ ವಿಶ್ವಕರ್ಮಣಿ ॥23॥
ನಿತ್ಯಾಂಗನಾದ ವಿಶ್ವಶರೀರನೂ, ವಿಶ್ವಕರ್ಮನೂ ಆದ ಯಾವನಲ್ಲಿ ಕಾರ್ಯ- ಕಾರಣಾತ್ಮಕವಾದ ಈ ಪ್ರಪಂಚವು ದೃಢವಾದ ತಂತುವಿನಲ್ಲಿ ಆಶ್ರಯಿಸಿದ ಹೂಮಾಲೆಯಂತಿದೆಯೋ,
ಹರಿಂ ಸಹಸ್ರಶಿರಸಂ ಸಹಸ್ರಚರಣೇಕ್ಷಣಮ್ |
ಪ್ರಾಹುರ್ನಾರಾಯಣಂ ದೇವಂ ಯಂ ವಿಶ್ವಸ್ಯ ಪರಾಯಣಮ್ ॥24॥
ಯಾವನನ್ನು ಹರಿಯೆಂದು, ಸಹಸ್ರಶೀರ್ಷನೆಂದು, ಸಹಸ್ರಪಾದನೆಂದು, ಸಹಸ್ರಾಕ್ಷನೆಂದು, ನಾರಾಯಣನೆಂದು, ವಿಶ್ವಕ್ಕೆ ಶ್ರೇಷ್ಠನಾದ ಆಶ್ರಯನಾದ ದೇವನೆಂದು ಹೇಳುತ್ತಾರೆಯೋ,
ಅಣೀಯಸಾಮಣೀಯಾಂಸಂ ಸ್ಥವಿಷ್ಠಂ ಚ ಸ್ಥವೀಯಸಾಮ್ |
ಗರೀಯಸಾಂ ಗರಿಷ್ಠಂ ಚ ಶ್ರೇಷ್ಠಂ ಚ ಶ್ರೇಯಸಾಮಪಿ ॥25॥
ಯಾವನು ಸೂಕ್ಷ್ಮವಾದ ವಸ್ತುವಿಗಿಂತಲೂ ಅತ್ಯಂತಸೂಕ್ಷ್ಮನೋ, ಸ್ಥೂಲವಾದ ವಸ್ತುಗಳಿಗಿಂತಲೂ ಅತ್ಯಂತಸ್ಥೂಲನೋ, ಭಾರವಾದ ವಸ್ತುಗಳಿಗಿಂತಲೂ ಹೆಚ್ಚು ಭಾರವುಳ್ಳವನೋ, ಶ್ರೇಷ್ಠವಾದ ವಸ್ತುಗಳಿಗಿಂತಲೂ ಅತ್ಯಂತ ಶ್ರೇಷ್ಠನಾದವನೋ,
ಯಂ ವಾಕೇಷ್ವನುವಾಕೇಷು ನಿಷತ್ಸೂಪನಿಷತ್ಸು ಚ |
ಗೃಣಂತಿ ಸತ್ಯಕರ್ಮಾಣಂ ಸತ್ಯಂ ಸತ್ಯೇಷು ನಾಮಸು ॥26॥
ಸತ್ಯಕರ್ಮನಾದ, ಸತ್ಯನಾದ, ಯಾವನನ್ನು ಸತ್ಯರೂಪವಾದ ನಾಮಾತ್ಮಕವಾದ ವಾಕ, ಅನುವಾಕ, ವೇದ ಮತ್ತು ಉಪನಿಷತ್ತುಗಳಿಂದ ಕೊಂಡಾಡುತ್ತಾರೆಯೋ,
ಚತುರ್ಭಿಶ್ಚತುರಾತ್ಮಾನಂ ಸತ್ತ್ವಸ್ಥಂ ಸಾತ್ವತಾಂಪತಿಮ್ |
ಯಂ ದಿವ್ಯೈರ್ದೇವಮರ್ಚಂತಿ ಗುಹ್ಯೈಃ ಪರಮನಾಮಭಿಃ ॥27॥
ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪವನ್ನು ಧರಿಸಿದವನಾಗಿ ಸಾತ್ವತರ ಪತಿಯೂ ಶುದ್ಧಾಂತಃಕರಣದಲ್ಲಿ ನೆಲೆಸಿರುವವನೂ ಆದ ಯಾವ ದೇವನನ್ನು ಶ್ರೇಷ್ಠವಾದ ಮತ್ತು ಪರಮರಹಸ್ಯವಾದ ದಿವ್ಯನಾಮಗಳಿಂದ ಜ್ಞಾನಿಗಳು ಅರ್ಚಿಸುತ್ತಾರೆಯೋ,
ಯಂ ದೇವಂ ದೇವಕೀದೇವೀ ವಸುದೇವಾದಜೀಜನತ್ |
ಭೌಮಸ್ಯ ಬ್ರಹ್ಮಣೋ ಗುಪ್ತ್ಯೈ ದೀಪ್ತಮಗ್ನಿಮಿವಾರಣಿಃ ॥28॥
ಭೂಮಿಯಲ್ಲಿ ವೇದರಕ್ಷಣೆಯನ್ನು ಮಾಡಲು ಅರಣಿಯಿಂದ ದೀಪ್ತವಾದ ಅಗ್ನಿಯನ್ನು ಪಡೆದಂತೆ ಯಾವನನ್ನು ದೇವಕೀದೇವಿಯು ವಸುದೇವನಿಂದ ಪಡೆ- ದಳೋ,

ಯಮನನ್ಯೋ ವ್ಯಪೇತಾಶೀರಾತ್ಮಾನಂ ವೀತಕಲ್ಮಷಮ್ |
ದೃಷ್ಟ್ವಾನಂತ್ಯಾಯ ಗೋವಿಂದಂ ಪಶ್ಯತ್ಯಾತ್ಮನ್ಯವಸ್ಥಿತಮ್ ॥29॥
ಯಾವನು ಸ್ವಾಮಿಯಾದ, ದೋಷದೂರನಾದ, ವೇದಪ್ರತಿಪಾದ್ಯನಾದ ಕೃಷ್ಣ- ನನ್ನು ಅನಂತವಾದ ಮೋಕ್ಷವನ್ನು ಪಡೆಯುವ ಸಲುವಾಗಿ ಎಲ್ಲ ಕಾಮಗಳನ್ನೂ ತೊರೆದು ಅನನ್ಯವಾದ ಭಕ್ತಿಯಿಂದ ತಮ್ಮ ಹೃದಯಗುಹೆಯಲ್ಲಿ ನೋಡು- ತ್ತಾನೆಯೋ,
ಪುರಾಣೇ ಪುರುಷಃ ಪ್ರೋಕ್ತೋ ಬ್ರಹ್ಮಾ ಪ್ರೋಕ್ತೋ ಯುಗಾದಿಷು |
ಕ್ಷಯೇ ಸಂಕರ್ಷಣಃ ಪ್ರೋಕ್ತಸ್ತಮುಪಾಸ್ಯಮುಪಾಸ್ಮಹೇ ॥30॥
ಯಾವನನ್ನು ಪುರಾಣಗಳಲ್ಲಿ ಪುರುಷನೆಂದೂ, ಯುಗದ ಪ್ರಾರಂಭದಲ್ಲಿ ಬ್ರಹ್ಮನೆಂದೂ, ಸಂಹಾರಕಾಲದಲ್ಲಿ ಸಂಕರ್ಷಣನೆಂದೂ ಹೇಳುತ್ತಾರೆಯೋ ಅಂತಹ ಉಪಾಸನೆಗೆ ಯೋಗ್ಯವಾದ ಕೃಷ್ಣನನ್ನು ಉಪಾಸನೆ ಮಾಡುತ್ತೇವೆ.
ಅತಿವಾಯ್ವಗ್ನಿಕರ್ಮಾಣಮತಿಸೂರ್ಯಾಗ್ನಿತೇಜಸಮ್ |
ಅತಿಬುದ್ಧೀಂದ್ರಿಯಾತ್ಮಾನಂ ತಂ ಪ್ರಪದ್ಯೇ ಪ್ರಜಾಪತಿಮ್ ॥31॥
ವಾಯು ಅಗ್ನಿಗಳನ್ನು ಮೀರಿದ ಕರ್ಮಗಳನ್ನು ಮಾಡುವ, ಸೂರ್ಯಾಗ್ನಿಗಳನ್ನು ಮೀರಿದ ತೇಜಸ್ಸನ್ನು ಹೊಂದಿದ, ಜೀವನ ಬುದ್ಧೀಂದ್ರಿಯಗಳಿಗೆ ನಿಲುಕದ ಸ್ವರೂಪವುಳ್ಳ ಆ ಪ್ರಜಾಪತಿಯನ್ನು ಶರಣು ಹೊಂದುತ್ತೇನೆ.
ಯಮೇಕಂ ಬಹುಧಾಮಾನಂ ಪ್ರಾದುರ್ಭೂತಮಧೋಕ್ಷಜಮ್ |
ನಾನ್ಯಭಕ್ತಾ ಕ್ರಿಯಾವಂತೋ ಯಜಂತೇ ಸರ್ವಕಾಮದಮ್ ॥32॥
ಅನೇಕ ವಾಸಸ್ಥಾನಗಳನ್ನು ಹೊಂದಿದ ಸರ್ವಕಾಮಪ್ರದನಾದ ಭೂಮಿಯಲ್ಲಿ ಅವತರಿಸಿದ ಯಾವ ಅಧೋಕ್ಷಜನನ್ನು ಸತ್ಕರ್ಮವನ್ನು ಮಾಡುವ ಜೀವರು ಅನನ್ಯಭಕ್ತಿಯಿಂದ ಪೂಜಿಸುತ್ತಾರೆಯೋ,
ಯಮಾಹುರ್ಜಗತಃ ಕೋಶಂ ಯಸ್ಮಿನ್ ಸನ್ನಿಹಿತಾ ಪ್ರಜಾಃ |
ಯಸ್ಮಿನ್ ಲೋಕಾ ಸ್ಫುರಂತೀಮೇ ಜಲೇ ಶಕುನಯೋ ಯಥಾ ॥33॥
ಯಾವನನ್ನು ಜಗತ್ತಿನ ಕೋಶವೆಂದು ಹೇಳುತ್ತಾರೆಯೋ, ಯಾವನಲ್ಲಿ ಎಲ್ಲ ಪ್ರಜೆಗಳೂ ಆಶ್ರಯಿಸಿಕೊಂಡಿದ್ದಾರೆಯೋ, ಯಾವನಲ್ಲಿ ಜಲದಲ್ಲಿ ಪಕ್ಷಿಗಳು (ಮೀನುಗಳು) ತೋರುವಂತೆ ಈ ಎಲ್ಲ ಲೋಕಗಳೂ ಪ್ರಕಾಶಿಸುತ್ತವೆಯೋ,
ಋತಮೇಕಾಕ್ಷರಂ ಬ್ರಹ್ಮ ಯತ್ ತತ್ ಸದಸತಃ ಪರಮ್ |
ಅನಾದಿಮಧ್ಯಪರ್ಯಂತಂ ನ ದೇವಾ ನರ್ಷಯೋ ವಿದುಃ ॥34॥
ಯಾವನು ಯಾವಾಗಲೂ ಒಂದೇ ರೀತಿಯಲ್ಲಿದ್ದಾನೆಯೋ ಪ್ರಣವಪ್ರತಿ- ಪಾದ್ಯನೋ, ಗುಣಪೂರ್ಣನೋ, ಕಾರ್ಯಕಾರಣಗಳಿಗಿಂತ ಶ್ರೇಷ್ಠನಾದವನೋ, ಆದಿಮಧ್ಯಾಂತಶೂನ್ಯನೋ, ಯಾವನನ್ನು ದೇವತೆಗಳಾಗಲೀ ಋಷಿಗಳಾಗಲೀ ತಿಳಿ- ದಿಲ್ಲವೋ,
ಯಂ ಸುರಾಸುರಗಂಧರ್ವಾಃ ಸಸಿದ್ಧರ್ಷಿಮಹೋರಗಾಃ |
ಪ್ರಯತಾ ನಿತ್ಯಮರ್ಚಂತಿ ಪರಮಂ ದುಃಖಭೇಷಜಮ್ ॥35॥
ದುಃಖಪರಿಹಾರಕನಾದ, ಸರ್ವೋತ್ತಮನಾದ ಯಾವನನ್ನು ಸುರಾಸುರ- ಗಂಧರ್ವರು ಸಿದ್ಧರ್ಷಿಮಹೋರಗರು ನಿತ್ಯವೂ ಶ್ರದ್ಧೆಯಿಂದ ಪೂಜಿಸುತ್ತಾರೆಯೋ
ಅನಾದಿನಿಧನಂ ದೇವಮಾತ್ಮಯೋನಿಂ ಸನಾತನಮ್ |
ಅಪ್ರತರ್ಕ್ಯಮವಿಜ್ಞೇಯಂ ಹರಿಂ ನಾರಾಯಣಂ ಪ್ರಭುಮ್ ॥36॥
ಆದ್ಯಂತರಹಿತನೂ, ಆತ್ಮಯೋನಿಯೂ, ವೇದಪ್ರತಿಪಾದ್ಯನೂ, ತರ್ಕವನ್ನು ಮೀರಿದವನೂ, ಪೂರ್ಣವಾಗಿ ತಿಳಿಯಲು ಅಸಾಧ್ಯನಾದವನೂ, ಪಾಪಪರಿ- ಹಾರಕನೂ ಪ್ರಭುವೂ ಆದ ಆ ನಾರಾಯಣನಿಗೆ ಶರಣಾಗತನಾಗುತ್ತೇನೆ.
ಹಿರಣ್ಯವರ್ಣಂ ಯಂ ಗರ್ಭಮದಿತಿರ್ದೈತ್ಯನಾಶನಮ್ |
ಏಕಂ ದ್ವಾದಶಧಾ ಜಜ್ಞೇ ತಸ್ಮೈ ಸೂರ್ಯಾತ್ಮನೇ ನಮಃ ॥37॥
ದೇವಮಾತೆಯಾದ ಅದಿತಿಯು ದೈತ್ಯನಾಶಕನಾದ ಹಿರಣ್ಯವರ್ಣದ ಗರ್ಭವನ್ನು ಧರಿಸಿ ಯಾವ ಒಬ್ಬನನ್ನು ದ್ವಾದಶ ಆದಿತ್ಯರಾಗಿ ಪ್ರಸವಿಸಿದಳೋ ಅಂತಹ ಸೂರ್ಯ -ನಲ್ಲಿ ವ್ಯಾಪ್ತನಾದ ದೇವನಿಗೆ ನಮಸ್ಕಾರ.
ಶುಕ್ಲೇ ದೇವಾನ್ ಪಿತ್ರೂನ್ ಕೃಷ್ಣೇ ತರ್ಪಯತ್ಯಮೃತೇನ ಯಃ |
ಯಶ್ಚ ರಾಜಾ ದ್ವಿಜಾತೀನಾಂ ತಸ್ಮೈ ಸೋಮಾತ್ಮನೇ ನಮಃ ॥38॥
ಯಾವನು ಚಂದ್ರನಲ್ಲಿ ಸನ್ನಿಹಿತನಾಗಿದ್ದು ಅಮೃತದಿಂದ ಶುಕ್ಲಪಕ್ಷದಲ್ಲಿ ದೇವತೆ- ಗಳನ್ನೂ, ಕೃಷ್ಣಪಕ್ಷದಲ್ಲಿ ಪಿತೃಗಳನ್ನೂ ತೃಪ್ತಿಪಡಿಸುತ್ತಾನೆಯೋ ಮತ್ತು ಬ್ರಾಹ್ಮಣ ಜಾತಿಗೆ ಅಧಿಪತಿಯಾಗಿದ್ದಾನೆಯೋ ಅಂತಹ ಚಂದ್ರಸ್ವಾಮಿಗೆ ನಮಸ್ಕಾರ.
ಹುತಾಶನಮುಖೈರ್ದೇವೈರ್ಧಾರ್ಯತೇ ಸಕಲಂ ಜಗತ್ |
ಹೃದಿ ಪ್ರಥಮಭೋಕ್ತಾ ಚ ತಸ್ಮೈ ಹೋತ್ರಾತ್ಮನೇ ನಮಃ ॥39॥
ಅಗ್ನಿಯೇ ಮೊದಲಾದ ದೇವತೆಗಳಿಂದ ಸಕಲಜಗತ್ತು ಧರಿಸಲ್ಪಡುತ್ತದೆ. ಪ್ರಥಮ ಹವಿರ್ಭೋಕ್ತನಾದ ಹೋತೃವಿನಲ್ಲಿ ವಿಶೇಷವಾಗಿ ಸನ್ನಿಹಿತನಾದ ಅವನಿಗೆ ನಮಸ್ಕಾರ.
ಮಹತಸ್ತಮಸಃ ಪಾರೇ ಪುರುಷಂ ಜ್ವಲನದ್ಯುತಿಮ್ |
ಯಂ ಜ್ಞಾತ್ವಾ ಮೃತ್ಯುಮತ್ಯೇತಿ ತಸ್ಮೈ ಜ್ಞೇಯಾತ್ಮನೇ ನಮಃ ॥40॥
ಮಹಾ ತಮಸ್ಸಿನ ಅಂಚಿನಲ್ಲಿ ಅಗ್ನಿಯ ಪ್ರಕಾಶವನ್ನು ಹೊಂದಿರುವ ಯಾವ ಪುರುಷನನ್ನು ನೋಡಿ ಜೀವನು ಮೃತ್ಯುವನ್ನು ದಾಟುತ್ತಾನೆಯೋ ಅಂತಹ ಜ್ಞೇಯ ವಸ್ತುವಿನಲ್ಲಿ ಶ್ರೇಷ್ಠನಾದ ಕೃಷ್ಣನಿಗೆ ನಮಸ್ಕಾರ.
ಯಂ ಬೃಹಂತಂ ಬೃಹತ್ಯುಕ್ಥೇ ಯಮಗ್ನೌ ಯಂ ಮಹಾಧ್ವರೇ |
ಯಂ ವಿಪ್ರಸಂಘಾ ಗಾಯಂತಿ ತಸ್ಮೈ ವೇದಾತ್ಮನೇ ನಮಃ ॥41॥

ಯಾವ ಮಹಾತ್ಮನನ್ನು ಮಹಾಯಜ್ಞಗಳಲ್ಲಿ ಬೃಹತ್ ಉಕ್ಥಗಳಲ್ಲಿ ಅಗ್ನಿಯಲ್ಲಿ ಬ್ರಾಹ್ಮಣರ ಸಮೂಹಗಳು ಗಾನಮಾಡುತ್ತವೆಯೋ ಅಂತಹ ವೇದಪ್ರತಿಪಾದ್ಯ- ನಾದವನಿಗೆ ನಮಸ್ಕಾರ.
ಋಗ್ಯಜುಃಸಾಮಧಾಮಾನಂ ದಶಾರ್ಧಹವಿರಾಕೃತಿಮ್ |
ಯಂ ಸಪ್ತತಂತುಂ ತನ್ವಂತಿ ತಸ್ಮೈ ಯಜ್ಞಾತ್ಮನೇ ನಮಃ ॥42॥
ಋಗ್ಯಜುಸ್ಸಾಮವೇದಗಳಲ್ಲಿ ಪ್ರತಿಪಾದ್ಯತಯಾ ಆಶಯವನ್ನು ಪಡೆದಿರುವ ಧಾನ, ಕರಂಭ, ಪರಿವಾಪ, ಪುರೋಡಾಶ ಮತ್ತು ಪಯಸ್ಯಗಳೆಂಬ ಐದುವಿಧವಾದ ಹವಿಸ್ಸುಗಳಲ್ಲಿ ಸನ್ನಿಹಿತನಾಗಿರುವ (ಹವಿಸ್ಸುಗಳ ಆಕಾರವನ್ನು ಹೊಂದಿರುವ) ಮತ್ತು ಯಾವನನ್ನು ಉದ್ದೇಶಿಸಿ ಯಜ್ಞಗಳನ್ನು ವಿಸ್ತಾರವಾಗಿ ಮಾಡುತ್ತಾರೆಯೋ ಅಂತಹ ಯಜ್ಞಾತ್ಮನಾದ ಕೃಷ್ಣನಿಗೆ ನಮಸ್ಕಾರ.
ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ |
ಹೂಯತೇ ಚ ಪುನರ್ದ್ವಾಭ್ಯಾಂ ತಸ್ಮೈ ಹೋಮಾತ್ಮನೇ ನಮಃ ॥43॥
ನಾಲ್ಕು ಅಕ್ಷರಗಳ ಮಂತ್ರದಿಂದ ಪುನಃ ನಾಲ್ಕು ಅಕ್ಷರಗಳ ಮಂತ್ರದಿಂದ, ಎರಡು ಅಕ್ಷರಗಳ ಮಂತ್ರದಿಂದ, ಐದು ಅಕ್ಷರಗಳ ಮಂತ್ರದಿಂದ ಪುನಃ ಎರಡು ಅಕ್ಷರಗಳ ಮಂತ್ರದಿಂದ ಯಾವನಲ್ಲಿ ಹೋಮ ಮಾಡಲ್ಪಡುತ್ತದೆಯೋ ಅಂತಹ ಹೋಮ-ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
``ಆಶ್ರಾವಯ, ಅಸ್ತು ಶ್ರೌಷಟ್, ಯಜ, ಯೇಯಜಾಮಹೇ, ವಷಟ್'' ಎಂಬುದು ಕ್ರಮವಾಗಿ ಆ ಮಂತ್ರಗಳು.
ಯಃ ಸುಪರ್ಣೋ ಯಜುರ್ನಾಮ ಛಂದೋಗಾತ್ರಸ್ತ್ರಿವೃಚ್ಛಿರಾಃ |
ರಥಂತರಬೃಹತ್ಯಕ್ಷಸ್ತಸ್ಮೈ ಸ್ತೋತ್ರಾತ್ಮನೇ ನಮಃ ॥44॥
ಯಾವ ಸುಪೂರ್ಣಾನಂದರೂಪನಾದ ಕೃಷ್ಣನು ಯಜನೀಯನಾದ್ದರಿಂದ ಯಜುರ್ನಾಮಕನಾಗಿದ್ದಾನೆಯೋ, ಛಂದಃಶರೀರವುಳ್ಳವನೋ, ತ್ರಿವೃತ್ ಸ್ತೋಮ- ವೇ ಶಿರಸ್ಸನ್ನಾಗಿ ಹೊಂದಿದವನೋ, ರಥಂತರ ಮತ್ತು ಬೃಹತೀ ಸಾಮಗಳನ್ನು ಚಕ್ಷುಸ್ಸಾಗಿ ಹೊಂದಿದ್ದಾನೆಯೋ ಅಂತಹ ಸ್ತೋತ್ರಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಃ ಸಹಸ್ರಸವೇ ಸತ್ರೇ ಜಜ್ಞೇ ವಿಶ್ವಸೃಜಾಮೃಷಿಃ |
ಹಿರಣ್ಯವರ್ಣಃ ಶಕುನಿಸ್ತಸ್ಮೈ ಹಂಸಾತ್ಮನೇ ನಮಃ ॥45॥
ಯಾವ ಸರ್ವಜ್ಞನಾದವನು ವಿಶ್ವಸೃಗ್ ದೇವತೆಗಳ ಸಹಸ್ರಸವನಾಮಕ ಯಜ್ಞದಲ್ಲಿ ಹಿರಣ್ಯವರ್ಣದ ಶಕುನಿಯಾಗಿ (ಪಕ್ಷಿಯಾಗಿ) ಪ್ರಾದುರ್ಭವಿಸಿದನೋ ಅಂತಹ ಹಂಸರೂಪನಾದ ಕೃಷ್ಣನಿಗೆ ನಮಸ್ಕಾರ. (ಹಿರಣ್ಮಯಶ್ಶಕುನಿಃ ಬ್ರಹ್ಮ ನಾಮ ಎಂಬ ವೇದವಾಕ್ಯವಿದೆ.)
ಯಜ್ಞಾಂಗೋ ಯೋ ವರಾಹೋ ವೈ ಭೂತ್ವಾ ಗಾಮುಜ್ಜಹಾರ ಹ |
ಲೋಕತ್ರಯಹಿತಾರ್ಥಾಯ ತಸ್ಮೈ ವೀರ್ಯಾತ್ಮನೇ ನಮಃ ॥46॥
ಯಾವನು ಯಜ್ಞವರಾಹನಾಗಿ ಅವತರಿಸಿ ಮೂರು ಲೋಕಗಳ ಹಿತಕ್ಕಾಗಿ ಭೂಮಿಯನ್ನು ಮೇಲಕ್ಕೆ ಎತ್ತಿದನೋ ಅಂತಹ ಪರಾಕ್ರಮರೂಪನಾದ ಅವನಿಗೆ ನಮಸ್ಕಾರ.
ಯಃ ಶೇತೇ ಯೋಗಮಾಸ್ಥಾಯ ಪರ್ಯಂಕೇ ನಾಗಭೂಷಿತೇ |
ಫಣಾಸಹಸ್ರಖಚಿತೇ ತಸ್ಮೈ ನಿದ್ರಾತ್ಮನೇ ನಮಃ ॥47॥
ಯಾವನು ಸಹಸ್ರಫಣಗಳಿಂದ ಖಚಿತವಾದ ಸರ್ಪಮಯವಾದ ಪರ್ಯಂಕ- ದಲ್ಲಿ ಯೋಗನಿದ್ರೆಯನ್ನು ಅವಲಂಬಿಸಿ ಮಲಗಿರುತ್ತಾನೆಯೋ ಅಂತಹ ಯೋಗ- ನಿದ್ರಾಸಕ್ತನಾದ ಕೃಷ್ಣನಿಗೆ ನಮಸ್ಕಾರ.
ಪದಾಂಗಂ ಸಂಧಿಪರ್ವಾಣಂ ಸ್ವರವ್ಯಂಜನಲಕ್ಷಣಮ್ |
ಯಮಾಹುರಕ್ಷರಂ ನಿತ್ಯಂ ತಸ್ಮೈ ವಾಗಾತ್ಮನೇ ನಮಃ ॥48॥
ಯಾವನಿಗೆ ಪದಗಳೇ ಶರೀರದ ಅವಯವಗಳೋ, ವರ್ಣ ಸಂಧಿಗಳು ಪರ್ವ- ಗಳೋ (ಗಿಣ್ಣುಗಳೋ) ಯಾವನನ್ನು ಸ್ವರವ್ಯಂಜನರೂಪವಾದ ಅಕ್ಷರನಿಯಾಮಕ- -ನೆಂದು ಹೇಳುತ್ತಾರೆಯೋ ಅಂತಹ ನಾಶರಹಿತನಾದ ನಿತ್ಯನಾದ ವಾಗ್ರೂಪನಾದ ಕೃಷ್ಣನಿಗೆ ನಮಸ್ಕಾರ.
ಯಶ್ಚಿನೋತಿ ಸತಾಂ ಸೇತುಮೃತೇನಾಮೃತಯೋನಿನಾ |
ಧರ್ಮಾರ್ಥವ್ಯವಹಾರಾಂಗೈಸ್ತಸ್ಮೈ ಮತ್ಯಾತ್ಮನೇ ನಮಃ ॥49॥
ಯಾವನು ಧರ್ಮಾರ್ಥವ್ಯವಹಾರ ಎಂಬ ಅಂಗಗಳಿಂದಲೂ, ಮೋಕ್ಷಕ್ಕೆ ಕಾರಣವಾದ ಯಥಾರ್ಥಜ್ಞಾನದಿಂದಲೂ, ಸಜ್ಜನರಿಗೆ ಸಂಸಾರವನ್ನು ದಾಟುವ ಸೇತುವೆಯನ್ನು ನಿರ್ಮಿಸುತ್ತಾನೆಯೋ ಅಂತಹ ಮತಿರೂಪನಾದ (ಮತಿಪ್ರೇರಕ- ನಾದ) ಕೃಷ್ಣನಿಗೆ ನಮಸ್ಕಾರ.
ಯಂ ಪೃಥಗ್ ಧರ್ಮಚರಣಾಃ ಪೃಥಗ್ ಧರ್ಮಫಲೈಷಿಣಃ |
ಪೃಥಗ್ ಧರ್ಮೈಃ ಸಮರ್ಚಂತಿ ತಸ್ಮೈ ಧರ್ಮಾತ್ಮನೇ ನಮಃ ॥50॥
ಬೇರೆ ಬೇರೆ ಫಲಗಳನ್ನು ಅಪೇಕ್ಷಿಸಿ ಬೇರೆ ಬೇರೆ ಧರ್ಮವನ್ನು ಅಚರಿಸುವವರು ಯಾವನನ್ನು ಬೇರೆ ಬೇರೆ ವಿಧಾನಗಳಿಂದ ಚೆನ್ನಾಗಿ ಅರ್ಚಿಸುತ್ತಾರೆಯೋ ಅಂತಹ ಧರ್ಮಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯತಃ ಸರ್ವೇ ಪ್ರಸೂಯಂತೇ ಹ್ಯನಂಗಾತ್ಮಾಂಗದೇಹಿನಃ |
ಉನ್ಮಾದಂ ಸರ್ವಭೂತಾನಾಂ ತಸ್ಮೈ ಕಾಮಾತ್ಮನೇ ನಮಃ ॥51॥
ಯಾವನಿಂದ ಎಲ್ಲ ಜೀವರೂ ಮನ್ಮಥನಿಂದ ವ್ಯಾಪ್ತವಾದ ದೇಹಾವಯವವುಳ್ಳ -ವರಾಗಿ ಪ್ರಸವಕ್ಕೆ ಕಾರಣರಾಗುತ್ತಾರೆಯೋ, ಯಾವನು ಸರ್ವಪ್ರಾಣಿಗಳಿಗೂ ಶ್ರೇಷ್ಠವಾದ ಹರ್ಷವನ್ನು ಕೊಡುತ್ತಾನೆಯೋ ಅಂತಹ ಕಾಮಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಂ ತಂ ವ್ಯಕ್ತಸ್ಥಮವ್ಯಕ್ತಂ ವಿಚಿನ್ವಂತಿ ಮಹರ್ಷಯಃ |
ಕ್ಷೇತ್ರೇ ಕ್ಷೇತ್ರಜ್ಞಮಾಸೀನಂ ತಸ್ಮೈ ಕ್ಷೇತ್ರಾತ್ಮನೇ ನಮಃ ॥52॥

ವ್ಯಕ್ತವಾದ ಶರೀರರೂಪವಾದ ಕ್ಷೇತ್ರದಲ್ಲಿ ಮಹರ್ಷಿಗಳು ಕ್ಷೇತ್ರಜ್ಞನಾದ ಮತ್ತು ಅವ್ಯಕ್ತನಾದ ಯಾವನನ್ನು ಹುಡುಕುತ್ತಾರೆಯೋ ಅಂತಹ ಕ್ಷೇತ್ರಸ್ವಾಮಿಯಾದ ಕೃಷ್ಣ- ನಿಗೆ ನಮಸ್ಕಾರ.
ಯಂ ದೃಗಾತ್ಮಾನಮಾತ್ಮಸ್ಥಂ ವೃತಂ ಷೋಡಶಭಿರ್ಗುಣೈಃ |
ಪ್ರಾಹುಃ ಸಪ್ತದಶಂ ಸಾಂಖ್ಯಾಸ್ತಸ್ಮೈ ಸಾಂಖ್ಯಾತ್ಮನೇ ನಮಃ ॥53॥
ಅಪ್ರಧಾನವಾದ ಪಂಚಭೂತಗಳು, ಮತ್ತು ಏಕಾದಶೇಂದ್ರಿಯಗಳಿಂದ ಪ್ರವೃತ್ತ- ನಾದ ಜ್ಞಾನರೂಪನಾಗಿ ಜೀವನಲ್ಲಿರುವ ಯಾವನನ್ನು ಸಾಂಖ್ಯರು ಹದಿನೇಳನೆಯ- ವನೆಂದು ಹೇಳುತ್ತಾರೆಯೋ ಅಂತಹ ಸಾಂಖ್ಯತತ್ವಪ್ರತಿಪಾದ್ಯನಾದ ಕೃಷ್ಣನಿಗೆ ನಮಸ್ಕಾರ.
ಯಂ ವಿನಿದ್ರಾ ಜಿತಶ್ವಾಸಾಃ ಸತ್ತ್ವಸ್ಥಾಃ ಸಂಯತೇಂದ್ರಿಯಾಃ |
ಜ್ಯೋತಿಃ ಪಶ್ಯಂತಿ ಯುಂಜಾನಾಸ್ತಸ್ಮೈ ಯೋಗಾತ್ಮನೇ ನಮಃ ॥54॥
ಯೋಗಿಗಳಾದವರು ನಿದ್ರೆಯನ್ನು ತೊರೆದು ಶ್ವಾಸವನ್ನು ಜಯಿಸಿ ಸತ್ವಗುಣ- ಪ್ರಧಾನರಾಗಿ ಇಂದ್ರಿಯಜಯವನ್ನು ಹೊಂದಿ, ಯೋಗವನ್ನು ಅನುಷ್ಠಾನ ಮಾಡಿ ಜ್ಯೋತೀರೂಪನಾದ ಯಾವನನ್ನು ನೋಡುತ್ತಾರೆಯೋ ಅಂತಹ ಯೋಗಾತ್ಮನಾದ ಕೃಷ್ಣನಿಗೆ ನಮಸ್ಕಾರ.
ಅಪುಣ್ಯಪುಣ್ಯೋಪರಮೇ ಯಂ ಪುನರ್ಭವನಿರ್ಭಯಾಃ |
ಶಾಂತಾಃ ಸನ್ನ್ಯಾಸಿನೋ ಯಾಂತಿ ತಸ್ಮೈ ಮೋಕ್ಷಾತ್ಮನೇ ನಮಃ ॥55॥
ಪುಣ್ಯಪಾಪಗಳೆರಡನ್ನೂ ಕಳೆದುಕೊಂಡು ಪುನರ್ಭವ(ಪುನರ್ಜನ್ಮ)ದ ಹೆದರಿಕೆ- ಯಿಂದ ಮುಕ್ತರಾದ ಶಾಂತರಾದ ಸನ್ನ್ಯಾಸಿಗಳು ಯಾವನನ್ನು ಹೊಂದುತ್ತಾರೆಯೋ ಅಂತಹ ಮೋಕ್ಷಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ |
ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರೇ ತಸ್ಮೈ ಲೋಕಾತ್ಮನೇ ನಮಃ ॥56॥
ಯಾವನ ಆಸ್ಯವು ಆಗ್ನಿಯೋ, ಶಿರಸ್ಸು ದ್ಯುಲೋಕವೋ, ನಾಭಿಯು ಅಂತ- ರಿಕ್ಷವೋ, ಪಾದಗಳು ಭೂಮಿಯೋ, ಸೂರ್ಯನು ಚಕ್ಷುಸ್ಸೋ, ದಿಕ್ಕುಗಳು ಶ್ರೋತ್ರವೋ ಅಂತಹ ಲೋಕವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.(ಅಗ್ನಿ ಮೊದಲಾದ ದೇವತೆಗಳು ಆಸ್ಯದಿಂದ ಜನ್ಮವನ್ನು ಪಡೆದು, ಆಸ್ಯವನ್ನು ಆಶ್ರಯಿಸಿಕೊಂಡಿದ್ದಾರೆ ಎಂದು ಅಭಿಪ್ರಾಯ).
ಯೋऽಸೌ ಯುಗಸಹಸ್ರಾಂತೇ ಪ್ರದೀಪ್ತಾರ್ಚಿರ್ವಿಭಾವಸುಃ |
ಸಂಭಕ್ಷಯತಿ ಭೂತಾನಿ ತಸ್ಮೈ ಘೋರಾತ್ಮನೇ ನಮಃ ॥57॥
ಯಾವನು ಸಹಸ್ರಯುಗಗಳ ಅಂತ್ಯದಲ್ಲಿ ದೀಪ್ತವಾದ ಜ್ವಾಲೆಗಳಿಂದ ಕೂಡಿದ ಅಗ್ನಿಯಾಗಿ ಎಲ್ಲ ಪ್ರಾಣಿಗಳನ್ನೂ ಭಕ್ಷಿಸುತ್ತಾನೆಯೋ ಅಂತಹ ಘೋರರೂಪನಾದ ಕೃಷ್ಣನಿಗೆ ನಮಸ್ಕಾರ.
ಸಂಭಕ್ಷ್ಯ ಸರ್ವಭೂತಾನಿ ಕೃತ್ವಾ ಚೈಕಾರ್ಣವಂ ಜಗತ್ |
ಬಾಲಃ ಸ್ವಪಿತಿ ಯಶ್ಚೈಕಸ್ತಸ್ಮೈ ಮಾಯಾತ್ಮನೇ ನಮಃ ॥58॥
ಎಲ್ಲ ಪ್ರಾಣಿಗಳನ್ನೂ ಭಕ್ಷಿಸಿ ಸಂಹಾರ ಮಾಡಿ, ಜಗತ್ತನ್ನು ಏಕಾರ್ಣವವನ್ನಾಗಿ ಮಾಡಿ ಬಾಲರೂಪವನ್ನು ಧರಿಸಿ ಒಬ್ಬನೇ ನಿದ್ರಿಸುವ ಸಾಮರ್ಥ್ಯರೂಪನಾದ ಕೃಷ್ಣನಿಗೆ ನಮಸ್ಕಾರ.
ಸಹಸ್ರಶಿರಸೇ ತಸ್ಮೈ ಪುರುಷಾಯಾಮಿತಾತ್ಮನೇ |
ಚತುಃಸಮುದ್ರಪಯಸಿ ಯೋಗನಿದ್ರಾತ್ಮನೇ ನಮಃ ॥59॥
ಸಹಸ್ರಶಿರಸ್ಸುಗಳನ್ನು ಹೊಂದಿದ, ಅಪರಿಮಿತವಾದ ಶರೀರವನ್ನು ಹೊಂದಿದ, ಚತುಃಸಮುದ್ರದ ನೀರಿನಲ್ಲಿ ಯೋಗನಿದ್ರಾರತನಾದ ಕೃಷ್ಣನಿಗೆ ನಮಸ್ಕಾರ.
ಆಜಸ್ಯ ನಾಭಾವಧ್ಯೇಕಂ ಯಸ್ಮಿನ್ ವಿಶ್ವಂ ಪ್ರತಿಷ್ಠಿತಮ್ |
ಪುಷ್ಕರಂ ಪುಷ್ಕರಾಕ್ಷಸ್ಯ ತಸ್ಮೈ ಪದ್ಮಾತ್ಮನೇ ನಮಃ ॥60॥
ಜನ್ಮರಹಿತನಾದ ಪುಂಡರೀಕಾಕ್ಷನಾದ ಯಾವನ ನಾಭಿಯಲ್ಲಿ ಲೋಕಾತ್ಮಕವಾದ ಪದ್ಮವು ಪ್ರತಿಷ್ಠಿತವಾಗಿದೆಯೋ ಅಂತಹ ಪದ್ಮವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.
ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಂಗಸಂಧಿಷು |
ಕುಕ್ಷೌ ಸಮುದ್ರಾಶ್ಚತ್ವಾರಸ್ತಸ್ಮೈ ತೋಯಾತ್ಮನೇ ನಮಃ ॥61॥
ಯಾವನ ತಲೆಕೂದಲುಗಳಲ್ಲಿ ಮೋಡಗಳೂ, ಸರ್ವಾಂಗಸಂಧಿಗಳಲ್ಲಿ ನದಿಗಳೂ, ಕುಕ್ಷಿಯಲ್ಲಿ ಸಮುದ್ರಗಳೂ ಇವೆಯೋ ಅಂತಹ ಜಲದಲ್ಲಿ ವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.
ಯಸ್ಮಾತ್ ಸರ್ವಾಃ ಪ್ರಸೂಯಂತೇ ಸರ್ಗಪ್ರಳಯವಿಕ್ರಿಯಾಃ |
ಯಸ್ಮಿಂಶ್ಚೈವ ಪ್ರಲೀಯಂತೇ ತಸ್ಮೈ ಹೇತ್ವಾತ್ಮನೇ ನಮಃ ॥62॥
ಯಾವನಿಂದ ಸರ್ಗಪ್ರಳಯಾದಿ ಎಲ್ಲ ವಿಕಾರಗಳೂ ಉಂಟಾಗುತ್ತವೆಯೋ, ಯಾವನಲ್ಲಿ ಪ್ರಪಂಚವು ಪ್ರಳಯವನ್ನು ಹೊಂದುತ್ತವೆಯೋ ಅಂತಹ ಸರ್ವ- ಕಾರಣನಾದ ಕೃಷ್ಣನಿಗೆ ನಮಸ್ಕಾರ.
ಯೋ ನಿಷಣ್ಣೋ ಭವೇದ್ ರಾತ್ರೌ ದಿವಾ ಭವತಿ ವಿಷ್ಠಿತಃ |
ಇಷ್ಟಾನಿಷ್ಟಸ್ಯ ಚ ದ್ರಷ್ಟಾ ತಸ್ಮೈ ದ್ರಷ್ಟಾತ್ಮನೇ ನಮಃ ॥63॥
ಯಾವನು ರಾತ್ರಿಯಲ್ಲಿ ಕುಳಿತು, ಹಗಲಿನಲ್ಲಿ ವಿಶೇಷವಾಗಿ ನಿಂತು ಜೀವರ ಇಷ್ಟಾನಿಷ್ಟಗಳನ್ನು ಸಾಕ್ಷಾತ್ತಾಗಿ ನೋಡುತ್ತಾನೆಯೋ ಅಂತಹ ಸಾಕ್ಷಿರೂಪನಾದ ಕೃಷ್ಣನಿಗೆ ನಮಸ್ಕಾರ.
ಅಕುಂಠಃ ಸರ್ವಕಾರ್ಯೇಷು ಧರ್ಮಕಾರ್ಯಾರ್ಥಮುದ್ಯತಮ್ |
ವೈಕುಂಠಸ್ಯ ಹಿ ತದ್ರೂಪಂ ತಸ್ಮೈ ಕಾರ್ಯಾತ್ಮನೇ ನಮಃ ॥64॥

ಯಾವ ಕಾರ್ಯಗಳಲ್ಲಿಯೂ ವಿಫಲನಾಗದೇ ಧರ್ಮಕಾರ್ಯಗಳಿಗಾಗಿ ಉದ್ಯುಕ್ತನಾದ ವೈಕುಂಠನಾದ ಕೃಷ್ಣರೂಪವೇನಿದೆಯೋ ಅಂತಹ ಸರ್ವಕಾರ್ಯ- ಸಾಧಕನಾದ ಕೃಷ್ಣನಿಗೆ ನಮಸ್ಕಾರ.
ತ್ರಿಃಸಪ್ತಕೃತ್ವೋ ಯಃ ಕ್ಷತ್ರಂ ಧರ್ಮವ್ಯುತ್ಕ್ರಾಂತಗೌರವಮ್ |
ಕ್ರುದ್ಧೋ ನಿಜ್ಘ್ನೇ ಸಮರೇ ತಸ್ಮೈ ಕ್ರೌರ್ಯಾತ್ಮನೇ ನಮಃ ॥65॥
ಯಾವನು ಧರ್ಮದ ಎಲ್ಲೆಯನ್ನು ಮೀರಿದ ಕ್ಷತ್ರಿಯರ ಮೇಲೆ ಕೋಪ- ಗೊಂಡು ಇಪ್ಪತ್ತೊಂದು ಬಾರಿ ಯುದ್ಧದಲ್ಲಿ ಕ್ಷತ್ರಿಯರನ್ನು ಸಂಹರಿಸಿದನೋ ಅಂತಹ ಕ್ರೌರ್ಯರೂಪನಾದ ಪರಶುರಾಮನಿಗೆ ನಮಸ್ಕಾರ.
ವಿಭಜ್ಯ ಪಂಚಧಾಽಽತ್ಮಾನಂ ವಾಯುರ್ಭೂತ್ವಾ ಶರೀರಗಃ |
ಯಶ್ಚೇಷ್ಟಯತಿ ಭೂತಾನಿ ತಸ್ಮೈ ವಾಯ್ವಾತ್ಮನೇ ನಮಃ ॥66॥
ಪ್ರಾಣಾಪಾನಾದಿ ಪಂಚವಾಯುಗಳಲ್ಲಿ ತಾನೂ ಪ್ರಾಣಾಪಾನಾದಿ ಪಂಚರೂಪ- ಗಳನ್ನು ಧರಿಸಿ ಯಾವನು ಎಲ್ಲ ಪ್ರಾಣಿಗಳಿಗೂ ಚೇಷ್ಟೆಯನ್ನು ಉಂಟುಮಾಡು- ತ್ತಾನೆಯೋ ಅಂತಹ ವಾಯುಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯುಗೇಷ್ವಾವರ್ತತೇ ಯೋಽಂಶೈರ್ದಿನರ್ತ್ವಯನಹಾಯನೈಃ |
ಸರ್ಗಪ್ರಲಯಯೋಃ ಕರ್ತಾ ತಸ್ಮೈ ಕಾಲಾತ್ಮನೇ ನಮಃ ॥67॥
ಯಾವನು ದಿನ, ಋತು, ಅಯನ, ಸಂವತ್ಸರ ಎಂಬ ಅಂಶಗಳಿಂದ ಯುಗ- ಗಳನ್ನು ತಿರುಗಿಸುತ್ತಾ ಸೃಷ್ಟಿಪ್ರಳಯಗಳನ್ನು ಮಾಡುತ್ತಾನೆಯೋ ಅಂತಹ ಕಾಲ- ರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಬ್ರಹ್ಮ ವಕ್ತ್ರಂ ಭುಜೌ ಕ್ಷತ್ರಂ ಕೃತ್ಸ್ನಮೂರೂದರಂ ವಿಶಃ |
ಪಾದೌ ಯಸ್ಯಾಶ್ರಿತಾ ಶೂದ್ರಾಸ್ತಸ್ಮೈ ವರ್ಣಾತ್ಮನೇ ನಮಃ ॥68॥
ಯಾವನ ಮುಖದಲ್ಲಿ ಬ್ರಾಹ್ಮಣಜಾತಿಯೂ, ಭುಜಗಳಲ್ಲಿ ಕ್ಷತ್ರಿಯ ಜಾತಿಯೂ, ಉದರ ಮತ್ತು ಊರುಗಳಲ್ಲಿ ವೈಶ್ಯಜಾತಿಯೂ, ಪಾದಗಳಲ್ಲಿ ಶೂದ್ರಜಾತಿಯೂ ಆಶ್ರಯಿಸಿಕೊಂಡಿವೆಯೋ ಅಂತಹ ವರ್ಣಗಳ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಪರಃ ಕಾಲಾತ್ ಪರೋ ಯಜ್ಞಾತ್ ಪರಂ ಸದಸತಶ್ಚ ಯಃ |
ಅನಾದಿರಾದಿರ್ವಿಶ್ವಸ್ಯ ತಸ್ಮೈ ವಿಶ್ವಾತ್ಮನೇ ನಮಃ ॥69॥
ಯಾವನು ಕಾಲಕ್ಕಿಂತಲೂ ಪರನೋ, ಯಜ್ಞಕ್ಕಿಂತಲೂ ಪರನೋ, ಕಾರ್ಯ- ಕಾರಣಗಳಿಗಿಂತಲೂ ಪರನೋ, ಯಾವನಿಗೆ ಆದಿಯಿಲ್ಲವೋ, ಮತ್ತು ಯಾವನು ವಿಶ್ವಕ್ಕೆ ಆದಿಯೋ ಅಂತಹ ವಿಶ್ವಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ವಿಷಯೇ ವರ್ತಮಾನಾನಾಂ ಯಂ ತಂ ವೈಶೇಷಿಕೈರ್ಗುಣೈಃ |
ಪ್ರಾಹುರ್ವಿಷಯಗೋಪ್ತಾರಂ ತಸ್ಮೈ ಗೋಪಾಶತ್ರುತ್ಮನೇ ನಮಃ ॥70॥
ವಿಷಯಗಳಲ್ಲಿ ಅಭಿಲಾಷೆಯುಳ್ಳವರಿಗೆ ವಿಶೇಷಗುಣಗಳಿಂದ ಕೂಡಿದ ವಿಷಯಗಳನ್ನು ಒದಗಿಸಿ ಯಾವನನ್ನು ವಿಷಯಗಳನ್ನು ರಕ್ಷಿಸುವವನೆಂದು ಹೇಳು- ತ್ತಾರೆಯೋ ಅಂತಹ ರಕ್ಷಕನಾದ ಕೃಷ್ಣನಿಗೆ ನಮಸ್ಕಾರ.
ಅನ್ನಪಾನೇಂಧನಮಯೋ ರಸಪ್ರಾಣವಿವರ್ಧನಃ |
ಯೋ ಧಾರಯತಿ ಭೂತಾನಿ ತಸ್ಮೈ ಪ್ರಾಣಾತ್ಮನೇ ನಮಃ ॥71॥
ಯಾವನು ಅನ್ನಪಾನಗಳೆಂಬ ಇಂಧನಗಳನ್ನು ಹೊಂದಿದವನಾಗಿ ಜೀವರ ರಸ ಮತ್ತು ಪ್ರಾಣಗಳನ್ನು ಅಭಿವೃದ್ಧಿಪಡಿಸುತ್ತಾನೆಯೋ, ಯಾವನು ಎಲ್ಲ ಭೂತಗಳನ್ನೂ ಧರಿಸುತ್ತಾನೆಯೋ ಅಂತಹ ಶರೀರಚೇಷ್ಟಕನಾದ ಕೃಷ್ಣನಿಗೆ ನಮಸ್ಕಾರ.
ಪ್ರಾಣಾನಾಂ ಧಾರಣಾರ್ಥಾಯ ಯೋಽನ್ನಂ ಭುಂಕ್ತೇ ಚತುರ್ವಿಧಮ್ |
ಅಂತರ್ಭೂತಃ ಪಚತ್ಯಗ್ನಿಸ್ತಸ್ಮೈ ಪಾಕಾತ್ಮನೇ ನಮಃ ॥72॥
ಜೀವರು ಪ್ರಾಣಗಳನ್ನು ಧರಿಸುವ ಸಲುವಾಗಿ ಯಾವನು ಭಕ್ಷ, ಭೋಜ್ಯ, ಲೇಹ್ಯ, ಪೇಯ ರೂಪವಾದ ನಾಲ್ಕುವಿಧವಾದ ಅನ್ನವನ್ನು ಭುಂಜಿಸುತ್ತಾನೆಯೋ, ಯಾವನು ಉದರದಲ್ಲಿ ವೈಶ್ವಾನರನಾಮಕ ಅಗ್ನಿಯಾಗಿದ್ದು ಆ ಅನ್ನವನ್ನು ಪಚನ ಮಾಡುತ್ತಾನೆಯೋ ಅಂತಹ ಪಾಕಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಅಪ್ರಮೇಯಶರೀರಾಯ ಸರ್ವತೋ ಬುದ್ಧಿಚಕ್ಷುಷೇ |
ಅಪಾರಪರಿಮಾಣಾಯ ತಸ್ಮೈ ದಿವ್ಯಾತ್ಮನೇ ನಮಃ ॥73॥
ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ ಶರೀರವನ್ನು ಹೊಂದಿದ, ವ್ಯಾಪ್ತವಾದ ಬುದ್ಧಿ ಮತ್ತು ಚಕ್ಷುರಾದಿ ಇಂದ್ರಿಯಗಳನ್ನು ಹೊಂದಿದ, ಎಲ್ಲೆಯೇ ಇಲ್ಲದ ಪರಿಮಾಣವನ್ನು ಹೊಂದಿದ ದಿವ್ಯರೂಪನಾದ ಕೃಷ್ಣನಿಗೆ ನಮಸ್ಕಾರ.
ರಸಸ್ಯಾಂತರ್ಗತೋ ಧೀಮಾನನಂತೋ ಭಗವಾನ್ ವಿಭುಃ |
ಜಗದ್ ಧಾರಯತೇ ಕೃತ್ಸ್ನಂ ತಸ್ಮೈ ಶೇಷಾತ್ಮನೇ ನಮಃ ॥74॥
ಭಗವಂತನೂ ವ್ಯಾಪ್ತನಾದವನೂ ಸಂಪದ್ಯುಕ್ತನಾದವನೂ ಆದ ಕೃಷ್ಣನು ಅನಂತನಾಮಕನಾಗಿ ಅನಂತನಾಮಕನಾದ ಶೇಷನ ಒಳಗಿದ್ದು, ರಸಾತಳರೂಪದಲ್ಲಿ ಇದ್ದು, ಸಮಸ್ತಜಗತ್ತನ್ನು ಧರಿಸುತ್ತಾನೆಯೋ ಅಂತಹ ಶೇಷಾತ್ಮಕನಾದ ಕೃಷ್ಣನಿಗೆ ನಮಸ್ಕಾರ.
ಜ್ವಲನಾರ್ಕೇಂದುತಾರಾಣಾಂ ಜ್ಯೋತಿಷಾಂ ದಿವ್ಯಮೂರ್ತಿನಾಮ್ |
ಯಸ್ತೇಜಯತಿ ತೇಜಾಂಸಿ ತಸ್ಮೈ ತೇಜಾತ್ಮನೇ ನಮಃ ॥75॥
ಯಾವನು ದಿವ್ಯಸ್ವರೂಪವುಳ್ಳ ಅಗ್ನಿ ಸೂರ್ಯ ಚಂದ್ರ ನಕ್ಷತ್ರಗಳು ಮೊದಲಾದ ಜ್ಯೋತಿಸ್ಸುಗಳಿಗೆ ಅವುಗಳ ಜ್ಯೋತಿಸ್ಸನ್ನು ಅಭಿವೃದ್ಧಿಪಡಿಸುತ್ತಾನೆಯೋ ಅಂತಹ ಸ್ವತಃ ತೇಜೋರೂಪನಾದ ಕೃಷ್ಣನಿಗೆ ನಮಸ್ಕಾರ.
ಯೋ ಮೋಹಯತಿ ಭೂತಾನಿ ಸ್ನೇಹರಾಗಾನುಬಂಧನೈಃ |
ಸರ್ಗಸ್ಯ ರಕ್ಷಣಾರ್ಥಾಯ ತಸ್ಮೈ ಮೋಹಾತ್ಮನೇ ನಮಃ ॥76॥
ಯಾವನು ಸೃಷ್ಟಿಯನ್ನು ರಕ್ಷಿಸುವುದಕ್ಕಾಗಿ ಪ್ರಾಣಿಗಳಿಗೆ ಸ್ನೇಹ, ರಾಗ, ಪ್ರೀತಿ- ಗಳನ್ನು ಕೊಟ್ಟು ಮೋಹ ಪಡಿಸುತ್ತಾನೆಯೋ ಅಂತಹ

ಮೋಹಪ್ರದನಾದ ಕೃಷ್ಣನಿಗೆ ನಮಸ್ಕಾರ.
ಆತ್ಮಜ್ಞಾನಮಿದಂ ಜ್ಞಾನಂ ಜ್ಞಾತ್ವಾ ಪಂಚಸ್ವವಸ್ಥಿತಮ್ |
ಯಂ ಜ್ಞಾನಿನೋಽಧಿಗಚ್ಛಂತಿ ತಸ್ಮೈ ಜ್ಞಾನಾತ್ಮನೇ ನಮಃ ॥77॥
ಶುದ್ಧವಾದ ಆತ್ಮಜ್ಞಾನವು ದೇವ ಋಷಿ ಪಿತೃ ಚಕ್ರವರ್ತಿ ಮನುಷ್ಯೋತ್ತಮರೆಂಬ ಐದು ವಿಧ ಜೀವರಲ್ಲಿ ಇದೆ ಎಂದು ತಿಳಿದು ಯಾವ ಜ್ಞಾನಿಗಳು ಅವನನ್ನು ಹೊಂದುತ್ತಾರೆಯೋ ಅಂತಹ ಜ್ಞಾನರೂಪನಾದ ಕೃಷ್ಣನಿಗೆ ನಮಸ್ಕಾರ.
ಜಟಿನೇ ದಂಡಿನೇ ನಿತ್ಯಂ ಲಂಬೋದರಶರೀರಿಣೇ |
ಕಮಂಡಲುನಿಷಂಗಾಯ ತಸ್ಮೈ ಬ್ರಹ್ಮಾತ್ಮನೇ ನಮಃ ॥78॥
ಜಟೆಯನ್ನು ಧರಿಸಿ, ದಂಡವನ್ನು ಹಿಡಿದು, ನಿತ್ಯವೂ ಲಂಬೋದರಶರೀರವುಳ್ಳ ಕಮಂಡಲು ಧಾರಿಯಾದ ಬ್ರಹ್ಮನ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಸಾಂಖ್ಯೈರ್ಯೋಗೈರ್ವಿನಿಶ್ಚಿತ್ಯ ಸಾಧ್ಯೈಶ್ಚ ಪರಮರ್ಷಿಭಿಃ |
ಯಸ್ಯ ನ ಜ್ಞಾಯತೇ ತತ್ತ್ವಂ ತಸ್ಮೈ ಗುಹ್ಯಾತ್ಮನೇ ನಮಃ ॥79॥
ಸಾಧ್ಯರು ಮತ್ತು ಪರಮ ಋಷಿಗಳು ಸಾಂಖ್ಯಶಾಸ್ತ್ರವನ್ನು ಯೋಗಶಾಸ್ತ್ರವನ್ನು ತಿಳಿದರೂ ಯಾವನ ಸ್ವರೂಪವನ್ನು ಸರಿಯಾಗಿ ತಿಳಿಯುವುದಿಲ್ಲವೋ ಅಂತಹ ರಹಸ್ಯರೂಪನಾದ ಕೃಷ್ಣನಿಗೆ ನಮಸ್ಕಾರ.
ಪಂಚಭೂತಾತ್ಮಭೂತಾಯ ಭೂತಾದಿನಿಧನಾತ್ಮನೇ |
ಅಕ್ರೋಧದ್ರೋಹಮೋಹಾಯ ತಸ್ಮೈ ಶಾಂತಾತ್ಮನೇ ನಮಃ ॥80॥
ಯಾವನು ಪಂಚಭೂತಗಳ ಅಂತರ್ಯಾಮಿಯಾಗಿ ಅವುಗಳ ಉತ್ಪತ್ತಿ ಮತ್ತು ಸಂಹಾರಕ್ಕೆ ಕಾರಣನಾಗಿದ್ದಾನೆಯೋ, ಕ್ರೋಧದ್ರೋಹಮೋಹಗಳಿಂದ ದೂರನಾಗಿ- ದ್ದಾನೆಯೋ ಅಂತಹ ಶಾಂತರೂಪನಾದ ಕೃಷ್ಣನಿಗೆ ನಮಸ್ಕಾರ.
ಯಸ್ಮಿನ್ ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವತಶ್ಚ ಯಃ |
ಯಶ್ಚ ಸರ್ವಮಯೋ ನಿತ್ಯಂ ತಸ್ಮೈ ಸರ್ವಾತ್ಮನೇ ನಮಃ ॥81॥
ಯಾವನಲ್ಲಿ ಎಲ್ಲವೂ ಆಶ್ರಿತವಾಗಿವೆಯೋ, ಯಾವನಿಂದ ಎಲ್ಲವೂ ಇವೆಯೋ, ಯಾವನು ಎಲ್ಲಕ್ಕೂ ಒಡೆಯನೋ, ಯಾವನು ಸರ್ವತ್ರವ್ಯಾಪ್ತನೋ, ಯಾವನು ನಿತ್ಯವೂ ಸರ್ವಪ್ರಧಾನನೋ ಅಂತಹ ಸರ್ವಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಂ ಹಿ ಸೂಕ್ಷ್ಮಂ ವಿಚಿನ್ವಂತಿ ಪರಂ ಸೂಕ್ಷ್ಮವಿದೋ ಜನಾಃ |
ಸೂಕ್ಷ್ಮಂ ತತ್ತ್ವಮಪಿ ಬ್ರಹ್ಮ ತಸ್ಮೈ ಸೂಕ್ಷ್ಮಾತ್ಮನೇ ನಮಃ ॥82॥
ಸೂಕ್ಷ್ಮಜ್ಞಾನಿಗಳಾದ ಜೀವರು ಅತ್ಯಂತಸೂಕ್ಷ್ಮನಾದ ಯಾವ ಬ್ರಹ್ಮತತ್ತ್ವವನ್ನು ಹುಡುಕುತ್ತಾರೆಯೋ ಅಂತಹ ಸೂಕ್ಷ್ಮರೂಪನಾದ ಕೃಷ್ಣನಿಗೆ ನಮಸ್ಕಾರ.
ಯಃ ಶೇತೇ ಕ್ಷೀರಪರ್ಯಂಕೇ ದಿವ್ಯೇ ನಾಗವಿಭೂಷಿತೇ |
ಫಣಾಸಹಸ್ರರುಚಿರೇ ತಸ್ಮೈ ನಿದ್ರಾತ್ಮನೇ ನಮಃ ॥83॥
ಯಾವನು ಕ್ಷೀರಸಮುದ್ರದಲ್ಲಿ ಸಹಸ್ರಫಣಗಳಿಂದ ಮನೋಹರವಾಗಿ ಕಾಣುವ ಶೇಷನಿಂದ ಭೂಷಿತವಾದ ದಿವ್ಯಪರ್ಯಂಕದಲ್ಲಿ ಮಲಗುತ್ತಾನೆಯೋ ಅಂತಹ ನಿದ್ರಾಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ವಿಶ್ವೇ ಚ ಮರುತಶ್ಚೈವ ರುದ್ರಾದಿತ್ಯಾಶ್ವಿನಾವಪಿ |
ವಸವಃ ಸಿದ್ಧಸಾಧ್ಯಾಶ್ಚ ತಸ್ಮೈ ದೇವಾತ್ಮನೇ ನಮಃ ॥84॥
ವಿಶ್ವೇದೇವತೆಗಳು, ಮರುತ್ತುಗಳು, ರುದ್ರರು, ಆದಿತ್ಯರು, ಅಶ್ವಿನಿಗಳು, ವಸು- ಗಳು, ಸಿದ್ಧರು, ಸಾಧ್ಯರು ಇಂತಹ ದೇವತೆಗಳ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಅವ್ಯಕ್ತಂ ಬುದ್ಧ್ಯಹಂಕಾರೋ ಮನೋಬುದ್ಧೀಂದ್ರಿಯಾಣಿ ಚ |
ತನ್ಮಾತ್ರಾಣಿ ವಿಶೇಷಾಶ್ಚ ತಸ್ಮೈ ತತ್ತತ್ತ್ವಾತ್ಮನೇ ನಮಃ ॥85॥
ಅವ್ಯಕ್ತತತ್ತ್ವ, ಬುದ್ಧಿ, ಅಹಂಕಾರ, ಮನಸ್ಸು, ಇಂದ್ರಿಯಗಳು, ಶಬ್ದಾದಿತನ್ಮಾತ್ರ- ಗಳು ಅವುಗಳ ವಿಶೇಷಗಳು ಯಾವನ ಅಧೀನವಾಗಿವೆಯೋ ಅಂತಹ ತತ್ತ್ವವ್ಯಾಪ್ತ- ನಾದ ಕೃಷ್ಣನಿಗೆ ನಮಸ್ಕಾರ.
ಭೂತಂ ಭವ್ಯಂ ಭವಿಷ್ಯಚ್ಚ ಭೂತಾದಿಪ್ರಭವಾಪ್ಯಯಃ |
ಯೋಽಗ್ರಜಃ ಸರ್ವಭೂತಾನಾಂ ತಸ್ಮೈ ಭೂತಾತ್ಮನೇ ನಮಃ ॥86॥
ಯಾವನು ಭೂತಭವ್ಯಭವಿಷ್ಯತ್ತುಗಳಿಗೆ ಒಡೆಯನೋ, ಎಲ್ಲ ಭೂತಗಳ ಉತ್ಪತ್ತಿ ಸಂಹಾರಗಳಿಗೆ ಕಾರಣನೋ, ಎಲ್ಲ ಭೂತಗಳ ಉತ್ಪತ್ತಿಗಿಂತ ಮೊದಲೇ ಇರುವವನೋ ಅಂತಹ ಭೂತವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.
ವಾರಾಹಂ ರೂಪಮಾಸ್ಥಾಯ ಮಹೀಂ ಸವನಪರ್ವತಾಮ್ |
ಉದ್ಧರತ್ಯೇಕದಂಷ್ಟ್ರೇಣ ತಸ್ಮೈ ಕ್ರೋಡಾತ್ಮನೇ ನಮಃ ॥87॥
ವರಾಹರೂಪವನ್ನು ಧರಿಸಿ ಕಾನನ ಪರ್ವತಗಳಿಂದ ಸಹಿತವಾದ ಭೂಮಿಯನ್ನು ಒಂದು ಕೋರೆದಾಡೆಯ ಮೇಲೆ ಎತ್ತಿದ ವರಾಹರೂಪನಾದ ಆ ಕೃಷ್ಣನಿಗೆ ನಮಸ್ಕಾರ.
ನಾರಸಿಂಹವಪುಃ ಕೃತ್ವಾ ಸರ್ವಲೋಕಭಯಂಕರಮ್ |
ಹಿರಣ್ಯಕಶಿಪುಂ ಜಘ್ನೇ ತಸ್ಮೈ ಸಿಂಹಾತ್ಮನೇ ನಮಃ ॥88॥
ಸರ್ವಲೋಕಭಯಂಕರವಾದ ನರಸಿಂಹರೂಪವನ್ನು ಧರಿಸಿ ಹಿರಣ್ಯಕಶಿಪುವನ್ನು ಸಂಹರಿಸಿದ ನರಸಿಂಹರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಪಿಂಗೇಕ್ಷಣಸಟಂ ಯಸ್ಯ ರೂಪಂ ದಂಷ್ಟ್ರಾನಖಾಯುಧಮ್ |

ದಾನವೇಂದ್ರಾಂತಕರಣಂ ತಸ್ಮೈ ದೃಪ್ತಾತ್ಮನೇ ನಮಃ ॥89॥
ಕಂದು ಬಣ್ಣದ ಕಣ್ಣುಗಳು ಮತ್ತು ಸಟೆಗಳನ್ನು ಹೊಂದಿದ ದಂಷ್ಟ್ರಾನಖಗಳಿಂದ ಕೂಡಿದ ಯಾವನ ರೂಪವು ದಾನವೇಂದ್ರನಾದ ಹಿರಣ್ಯಕಶಿಪುವನ್ನು ಸಂಹರಿಸಿತೋ ದರ್ಪಿಷ್ಠವಾದ ರೂಪವನ್ನು ಧರಿಸಿದ ಅಂತಹ ಕೃಷ್ಣನಿಗೆ ನಮಸ್ಕಾರ.
ವಾಮನಂ ರೂಪಮಾಸ್ಥಾಯ ಬಲಿಂ ಸಂಯಮ್ಯ ಮಾಯಯಾ |
ತ್ರೈಲೋಕ್ಯಂ ಕ್ರಾಂತವಾನ್ ಯಸ್ತು ತಸ್ಮೈ ಕ್ರಾಂತಾತ್ಮನೇ ನಮಃ ॥90॥
ವಾಮನರೂಪವನ್ನು ಧರಿಸಿ, ತನ್ನ ಸಾಮರ್ಥ್ಯದಿಂದ ಬಲಿಯನ್ನು ನಿಯಂತ್ರಿಸಿ, ಮೂರು ಲೋಕವನ್ನೂ ಅಳೆದ ತ್ರಿವಿಕ್ರಮರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಜಮದಗ್ನಿಸುತೋ ಭೂತ್ವಾ ರಾಮಃ ಶಸ್ತ್ರಭೃತಾಂವರಃ |
ಮಹೀಂ ನಿಃಕ್ಷತ್ರಿಯಾಂ ಚಕ್ರೇ ತಸ್ಮೈ ರಾಮಾತ್ಮನೇ ನಮಃ ॥91॥
ಜಮದಗ್ನಿಪುತ್ರನಾಗಿ ಜನಿಸಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪರಶುರಾಮನಾಗಿ ಭೂಮಿಯಲ್ಲಿ ಕ್ಷತ್ರಿಯರಿಲ್ಲದಿರುವಂತೆ ಮಾಡಿದ ಪರಶುರಾಮರೂಪಿಯಾದ ಕೃಷ್ಣನಿಗೆ ನಮಸ್ಕಾರ.
ತ್ರಿಃಸಪ್ತಕೃತ್ವೋ ಯಶ್ಚೈಕೋ ಧರ್ಮೇ ವ್ಯುತ್ಕ್ರಾಂತಿಗೌರವಾತ್ |
ಜಘಾನಕ್ಷತ್ರಿಯಾನ್ ಸಂಖೇ ತಸ್ಮೈ ಕ್ರೋಧಾತ್ಮನೇ ನಮಃ ॥92॥
ಯಾವ ಒಬ್ಬನೇ ಧರ್ಮಮಾರ್ಗವನ್ನು ಮೀರಿದ ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಸಂಚರಿಸಿ ಯುದ್ಧದಲ್ಲಿ ಸಂಹರಿಸಿದನೋ ಅಂತಹ ಕೃಷ್ಣನಿಗೆ ನಮಸ್ಕಾರ.
ರಾಮೋ ದಾಶರಥಿರ್ಭೂತ್ವಾ ಪುಲಸ್ತ್ಯಕುಲನಂದನಮ್ |
ಜಘಾನ ರಾವಣಂ ಸಂಖೇ ತಸ್ಮೈ ಕ್ಷತ್ರಾತ್ಮನೇ ನಮಃ ॥93॥
ದಶರಥನಪುತ್ರನಾಗಿ ರಾಮನಾಗಿ ಅವತರಿಸಿ ಪುಲಸ್ತ್ಯಕುಲನಂದನನಾದ ರಾವಣ -ನನ್ನು ಯುದ್ಧದಲ್ಲಿ ಸಂಹರಿಸಿದ ಕ್ಷತ್ರಿಯರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಯೋ ಹಲೀ ಮುಸಲೀ ಶ್ರೀಮಾನ್ ನೀಲಾಂಬರಧರಃ ಸ್ಥಿತಃ |
ರಾಮಾಯ ರೌಹಿಣೇಯಾಯ ತಸ್ಮೈ ಭೋಗಾತ್ಮನೇ ನಮಃ ॥94॥
ಯಾವನು ಹಲ ಮುಸಲಗಳನ್ನು ಧರಿಸಿ ಸಂಪದ್ಯುಕ್ತನಾಗಿ ನೀಲಾಂಬರಧಾರಿ- ಯಾಗಿದ್ದಾನೆಯೋ ಅಂತಹ ರೋಹಿಣೀ ಪುತ್ರನಾದ ಬಲರಾಮನಾದ ಶೇಷನ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಶಂಖಿನೇ ಚಕ್ರಿಣೇ ನಿತ್ಯಂ ಶಾರ್ಙ್ಗಿಣೇ ಪೀತವಾಸಸೇ |
ವನಮಾಲಾಧರಾಯೈವ ತಸ್ಮೈ ಕೃಷ್ಣಾತ್ಮನೇ ನಮಃ॥95॥
ಶಂಖಚಕ್ರಗಳನ್ನು ಧರಿಸಿ ನಿತ್ಯವೂ ಶಾರ್ಙ್ಗಧನುಸ್ಸನ್ನೂ, ಪೀತಾಂಬರವನ್ನೂ ವನಮಾಲೆಯನ್ನೂ ಧರಿಸಿದ ಕೃಷ್ಣರೂಪನಾದ ನಿನಗೆ ನಮಸ್ಕಾರ.
ವಾಸುದೇವತ್ವಮಾಗಮ್ಯ ಯದೋರ್ವಂಶಸಮುದ್ಭವಃ |
ಭೂಭಾರಹರಣಂ ಚಕ್ರೇ ತಸ್ಮೈ ಕೃಷ್ಣಾತ್ಮನೇ ನಮಃ ॥96॥
ಯದುವಂಶದಲ್ಲಿ ವಸುದೇವನ ಪುತ್ರನಾಗಿ ಅವತರಿಸಿ ಭೂಭಾರಹರಣವನ್ನು ಮಾಡಿದ ಕೃಷ್ಣರೂಪಿಯಾದ ನಿನಗೆ ನಮಸ್ಕಾರ.
ದಾನವಾಂಸ್ತು ವಶೇ ಕೃತ್ವಾ ಪುನರ್ಬುದ್ಧತ್ವಮಾಗತಃ |
ಸರ್ಗಸ್ಯ ರಕ್ಷಣಾರ್ಥಾಯ ತಸ್ಮೈ ಬುದ್ಧಾತ್ಮನೇ ನಮಃ ॥97॥
ಪುನಃ ಬುದ್ಧನಾಗಿ ಅವತರಿಸಿ ದಾನವರನ್ನು ವಶಪಡಿಸಿಕೊಂಡು ಜಗತ್ಸೃಷ್ಟಿ- ಯನ್ನು ರಕ್ಷಿಸಿದ ಬುದ್ಧರೂಪನಾದ ಕೃಷ್ಣನಿಗೆ ನಮಸ್ಕಾರ.
ಹನಿಷ್ಯತಿ ಕಲೌ ಪ್ರಾಪ್ತೇ ಮ್ಲೇಚ್ಛಾಂಸ್ತುರಗವಾಹನಃ |
ಧರ್ಮಸಂಸ್ಥಾಪಕೋ ಯಸ್ತು ತಸ್ಮೈ ಕಲ್ಕ್ಯಾತ್ಮನೇ ನಮಃ ॥98॥
ಯಾವನು ಕಲಿಯುಗವು ಪ್ರಾಪ್ತವಾದಾಗ ತುರಗವಾಹನನಾಗಿ ಮ್ಲೇಚ್ಛರನ್ನು ಸಂಹರಿಸಿ ಧರ್ಮಸಂಸ್ಥಾಪನೆಯನ್ನು ಮಾಡುವನೋ ಅಂತಹ ಕಲ್ಕಿರೂಪನಾದ ಕೃಷ್ಣನಿಗೆ ನಮಸ್ಕಾರ.
ತಾರಾನ್ವಯೇ ಕಾಲನೇಮಿಂ ಹತ್ವಾ ದಾನವಪುಂಗವಮ್ |
ದದೌ ರಾಜ್ಯಂ ಮಹೇಂದ್ರಾಯ ತಸ್ಮೈ ಸಾಂಖ್ಯಾತ್ಮನೇ ನಮಃ ॥99॥
ತಾರವಂಶದಲ್ಲಿ ಜನಿಸಿದ ದಾನವಪುಂಗವನಾದ ಕಾಲನೇಮಿಯನ್ನು ಕೊಂದು ಇಂದ್ರನಿಗೆ ರಾಜ್ಯವನ್ನು ಕೊಟ್ಟ ಯುದ್ಧಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಃ ಸರ್ವಪ್ರಾಣಿನಾಂ ದೇಹೇ ಸಾಕ್ಷಿಭೂತೋ ಹ್ಯವಸ್ಥಿತಃ |
ಅಕ್ಷರಃ ಕ್ಷರಮಾಣಾನಾಂ ತಸ್ಮೈ ಸಾಕ್ಷ್ಯಾತ್ಮನೇ ನಮಃ ॥100॥
ಯಾವನು ನಾಶವನ್ನು ಹೊಂದುವ ಸರ್ವಪ್ರಾಣಿಗಳ ಶರೀರದಲ್ಲಿ ಸ್ವತಃ ನಾಶ- ರಹಿತನಾಗಿ ಸಾಕ್ಷಿಯಾಗಿದ್ದಾನೆಯೋ ಅಂತಹ ಸಾಕ್ಷಿರೂಪನಾದ ಕೃಷ್ಣನಿಗೆ ನಮಸ್ಕಾರ.
ನಮೋಽಸ್ತು ತೇ ಮಹಾದೇವ ನಮಸ್ತೇ ಭಕ್ತವತ್ಸಲ |
ಸುಬ್ರಹ್ಮಣ್ಯ ನಮಸ್ತೇಽಸ್ತು ಪ್ರಸೀದ ಪರಮೇಶ್ವರ ॥101॥
ಎಲೈ ಮಹಾದೇವನೇ! ಭಕ್ತವತ್ಸಲನೇ! ನಿನಗೆ ನಮಸ್ಕಾರ. ಸುಬ್ರಹ್ಮಣ್ಯನೇ! ನಿನಗೆ ನಮಸ್ಕಾರ. ಪರಮೇಶ್ವರನೇ! ಪ್ರಸನ್ನನಾಗು.
ಅವ್ಯಕ್ತವ್ಯಕ್ತರೂಪೇಣ ವ್ಯಾಪ್ತಂ ಸರ್ವಂ ತ್ವಯಾ ವಿಭೋ |

ನಾರಾಯಣಂ ಸಹಸ್ರಾಕ್ಷಂ ಸರ್ವಲೋಕಮಹೇಶ್ವರಮ್ ॥102॥
ಹಿರಣ್ಯನಾಭಂ ಯಜ್ಞಾಂಗಮಮೃತಂ ವಿಶ್ವತೋಮುಖಮ್ ।
ಅವ್ಯಕ್ತ ಮತ್ತು ವ್ಯಕ್ತರೂಪದಿಂದ ನೀನು ಎಲ್ಲವನ್ನೂ ವ್ಯಾಪಿಸಿದ್ದೀಯೆ. ಎಲೈ ವಿಭುವೇ! ನಾರಾಯಣನೇ! ಸಹಸ್ರಾಕ್ಷನೇ! ಸರ್ವಲೋಕಮಹೇಶ್ವರನೇ! ಹಿರಣ್ಯ- ನಾಭನೇ! ಯಜ್ಞಾಂಗನೇ! ಅಮೃತನೇ! ವಿಶ್ವತೋಮುಖನೇ! ನಿನಗೆ ನಮಸ್ಕಾರ.
ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಳಮ್ ॥103॥
ಯೇಷಾಂ ಹೃದಿಸ್ಥೋ ದೇವೇಶೋ ಮಂಗಳಾಯತನಂ ಹರಿಃ ।
ಮಂಗಳಂ ಭಗವಾನ್ ವಿಷ್ಣುರ್ಮಂಗಳಂ ಮಧುಸೂದನಃ ॥104॥
ಮಂಗಳಂ ಪುಂಡರೀಕಾಕ್ಷೋ ಮಂಗಳಂ ಗರುಡಧ್ವಜಃ ।
ಯಾರ ಹೃದಯದಲ್ಲಿ ದೇವೇಶನೂ, ಮಂಗಳಾಶ್ರಯನೂ ಆದ ಹರಿಯಿ- ದ್ದಾನೆಯೋ ಅಂತಹವರಿಗೆ ಯಾವಾಗಲೂ ಯಾವ ಕಾರ್ಯಗಳಲ್ಲಿಯೂ ಅಮಂಗಳವಿಲ್ಲ. ಭಗವಂತನಾದ ವಿಷ್ಣುವು ಮಂಗಳಸ್ವರೂಪನಾದವನು. ಮಧು- ಸೂದನನು ಮಂಗಳಸ್ವರೂಪನಾದವನು. ಪುಂಡರೀಕಾಕ್ಷನು ಮಂಗಳಸ್ವರೂಪ- ನಾದವನು. ಗರುಡಧ್ವಜನು ಮಂಗಳಸ್ವರೂಪನಾದವನು.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ ॥105॥
ಅಪವರ್ಗಸ್ಥಭೂತಾನಾಂ ಪಂಚಾನಾಂ ಪರಮಾಸ್ಥಿತ ।
ನಮಸ್ತೇ ತ್ರಿಷುಲೋಕೇಷು ನಮಸ್ತೇ ಪರತಸ್ತ್ರಿಷು ॥106॥
ಎಲೈ ವಿಶ್ವಕರ್ಮನೇ! ವಿಶ್ವವ್ಯಾಪಕನೇ! ವಿಶ್ವಕಾರಣನೇ! ನಿನಗೆ ನಮಸ್ಕಾರ. ಮೋಕ್ಷದಲ್ಲಿರುವ ದೇವಾದಿಪಂಚವಿಧಜೀವರಿಂದ ಚೆನ್ನಾಗಿ ಆಶ್ರಯಿಸಲ್ಪಟ್ಟ ನಿನಗೆ ನಮಸ್ಕಾರ. ಮೂರು ಲೋಕಗಳಲ್ಲಿರುವ, ಮೂರುಲೋಕಗಳಿಂದಲೂ ಆಚೆಗಿರುವ ನಿನಗೆ ನಮಸ್ಕಾರ.
ನಮಸ್ತೇ ದಿಕ್ಷು ಸರ್ವಾಸು ತ್ವಂ ಹಿ ಸರ್ವಪರಾಯಣಮ್ ।
ನಮಸ್ತೇ ಭಗವನ್ ವಿಷ್ಣೋ ಲೋಕಾನಾಂ ಪ್ರಭವಾಪ್ಯಯಮ್ ॥107॥
ಎಲ್ಲ ದಿಕ್ಕುಗಳಲ್ಲಿಯೂ ನಿನಗೆ ನಮಸ್ಕಾರ. ನೀನು ಎಲ್ಲರಿಗೂ ಶ್ರೇಷ್ಠನಾದ ಆಶ್ರಯನಾಗಿದ್ದೀಯೆ. ಲೋಕಗಳ ಉತ್ಪತ್ತಿ ಸಂಹಾರಗಳಿಗೆ ಕಾರಣನಾಗಿದ್ದೀಯೆ. ಭಗವಂತನಾದ ವಿಷ್ಣುವೇ! ನಿನಗೆ ನಮಸ್ಕಾರ.
ತ್ವಂ ಹಿ ಕರ್ತಾ ಹೃಷೀಕೇಶಃ ಸಂಹರ್ತಾ ಚಾಪರಾಜಿತಃ ।
ತೇನ ಪಶ್ಯಾಮಿ ತೇ ದಿವ್ಯಾನ್ ಭಾವಾನ್ ಹಿ ತ್ರಿಷು ವರ್ತ್ಮಸು ॥108॥
ಎಲೈ ಹೃಷೀಕೇಶನೇ! ನೀನೇ ಸೃಷ್ಟಿಕರ್ತನಾದವನು. ಸಂಹಾರಕರ್ತನಾದವನು. ಅಪರಾಜಿತನಾದವನು. ಆದ್ದರಿಂದ ಎಲ್ಲ ಮಾರ್ಗಗಳಲ್ಲಿಯೂ ನಿನ್ನ ದಿವ್ಯವಾದ ಮಹಿಮೆಗಳನ್ನು ನೋಡುತ್ತಿದ್ದೇನೆ.
ತಚ್ಚ ಪಶ್ಯಾಮಿ ತತ್ತ್ವೇನ ಯತ್ ತೇ ರೂಪಂ ಸನಾತನಮ್ ।
ದಿವಂ ತೇ ಶಿರಸಾ ವ್ಯಾಪ್ತಂ ಪದ್ಭ್ಯಾಂ ದೇವೀವಸುಂಧರಾ ॥109॥
ವೇದಪ್ರತಿಪಾದ್ಯವಾದ ನಿನ್ನ ರೂಪವೇನಿದೆಯೋ ಅದನ್ನು ನೋಡುತ್ತಿದ್ದೇನೆ. ದ್ಯುಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ಭೂಮಿಯು ನಿನ್ನ ಪಾದಗಳಿಂದ ವ್ಯಾಪ್ತವಾಗಿದೆ.
ವಿಕ್ರಮೇಣ ತ್ರಯೋ ಲೋಕಾಃ ಪುರುಷೋಽಸಿ ಸನಾತನಃ ।
ದಿಶೋ ಭುಜಾ ರವಿಶ್ಚಕ್ಷುರ್ವೀರ್ಯೇ ಶುಕ್ರಃ ಪ್ರತಿಷ್ಠಿತಃ ।
ಸಪ್ತಮಾರ್ಗಾ ನಿರುದ್ಧಾಸ್ತೇ ವಾಯೋರಮಿತತೇಜಸಃ ॥110॥
ನಿನ್ನ ವಿಕ್ರಮದಿಂದ ಮೂರು ಲೋಕಗಳು ಅಳೆಯಲ್ಪಟ್ಟಿವೆ. ನೀನು ಸನಾತನ- ನಾದ ಪುರುಷನಾಗಿದ್ದೀಯೆ. ದಿಕ್ಕುಗಳು ನಿನ್ನ ಭುಜಗಳು. ಸೂರ್ಯನು ಚಕ್ಷುಸ್ಸು. ನಿನ್ನ ವೀರ್ಯದಲ್ಲಿ ಶುಕ್ರನಿದ್ದಾನೆ. ಅಮಿತತೇಜಸ್ವಿಯಾದ ನಿನ್ನಿಂದ ವಾಯುವಿನ ಸಪ್ತಮಾರ್ಗಗಳು ನಿರೋಧಿಸಲ್ಪಟ್ಟಿವೆ.
ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।
ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥111॥
ಅಗಸೆಯ ಪುಷ್ಪದ ಬಣ್ಣವನ್ನು ಹೊಂದಿರುವ, ಪೀತಾಂಬರಧಾರಿಯಾದ ಗೋವಿಂದನನ್ನು ಯಾರು ನಮಸ್ಕರಿಸುವರೋ ಅವರಿಗೆ ಭಯವಿಲ್ಲ.
ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮಃ ದಶಾಶ್ವಮೇಧಾವಭೃಥೇನ ತುಲ್ಯಃ ।
ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥112॥
ಕೃಷ್ಣನಿಗೆ ಮಾಡಿದ ಭಕ್ತಿಪೂರ್ವಕವಾದ ಒಂದು ಪ್ರಣಾಮವೂ ಸಹ ಹತ್ತು ಅಶ್ವಮೇಧಗಳ ಅವಭೃಥಸ್ನಾನಕ್ಕೆ ಸಮನಾದುದು. ಹತ್ತು ಅಶ್ವಮೇಧಯಜ್ಞಮಾಡಿ- ದವನು ಪುನಃ ಜನ್ಮ ಪಡೆಯುತ್ತಾನೆ. ಕೃಷ್ಣಪ್ರಣಾಮಮಾಡಿದವನು ಪುನಃ ಜನ್ಮವನ್ನು ಪಡೆಯುವುದಿಲ್ಲ.
ಕೃಷ್ಣವ್ರತಾಃ ಕೃಷ್ಣಮನುಸ್ಮರಂತೋ
ರಾತ್ರೌ ಚ ಕೃಷ್ಣಂ ಪುನರುತ್ಥಿತಾ ಯೇ ।
ತೇ ಕೃಷ್ಣದೇಹಾಃ ಪ್ರವಿಶಂತಿ ಕೃಷ್ಣಂ
ಆಜ್ಯಂ ಯಥಾ ಮಂತ್ರಹುತಂ ಹುತಾಶೇ ॥113॥
ಯಾರು ಕೃಷ್ಣವ್ರತವನ್ನು ಧರಿಸಿ, ಕೃಷ್ಣನನ್ನು ಸ್ಮರಿಸುತ್ತಾ, ರಾತ್ರಿಯಲ್ಲಿಯೂ ಎದ್ದು ಕೃಷ್ಣನನ್ನು ಸ್ಮರಿಸುತ್ತಾರೆಯೋ ಅವರು ಕೃಷ್ಣನ ಸನ್ನಿಧಾನಕ್ಕೆ ಪಾತ್ರವಾದ ದೇಹವುಳ್ಳ- ವರಾಗಿ ಮಂತ್ರಹುತವಾದ ಆಜ್ಯವು ಅಗ್ನಿಯನ್ನು ಪ್ರವೇಶಿಸುವಂತೆ ಕೃಷ್ಣನನ್ನು ಪ್ರವೇಶಿ- ಸುತ್ತಾರೆ.

ನಮೋ ನರಕಸಂತ್ರಾಸರಕ್ಷಾಮಂಡಲಕಾರಿಣೇ |
ಸಂಸಾರನಿಮ್ನಗಾವರ್ತತರಿಕಾಷ್ಠಾಯ ವಿಷ್ಣವೇ ॥114॥
ನರಕದ ಭಯದಿಂದ ರಕ್ಷಿಸುವ ನಿನಗೆ ನಮಸ್ಕಾರ. ಸಂಸಾರನದಿಯನ್ನು ದಾಟಿಸುವ ತೆಪ್ಪದಂತಿರುವ ವಿಷ್ಣುವಾದ ನಿನಗೆ ನಮಸ್ಕಾರ.
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥115॥
ಬ್ರಾಹ್ಮಣವತ್ಸಲನಾದ, ಗೋಬ್ರಾಹ್ಮಣಹಿತನಾದ ನಿನಗೆ ನಮಸ್ಕಾರ. ಜಗತ್ತಿಗೆ ಹಿತನಾದ, ವೇದಪ್ರತಿಪಾದ್ಯನಾದ, ಕೃಷ್ಣನಾದ ನಿನಗೆ ನಮಸ್ಕಾರ ನಮಸ್ಕಾರ.
ಪ್ರಾಣಕಾಂತಾರಪಾಥೇಯಂ ಸಂಸಾರೋಚ್ಛೇದಭೇಷಜಮ್ |
ದುಃಖಶೋಕಪರಿತ್ರಾಣಂ ಹರಿರಿತ್ಯಕ್ಷರದ್ವಯಮ್ ॥116॥
ಹರಿಯೆಂಬ ಎರಡು ಅಕ್ಷರವು ಸಂಸಾರದ ಕಾಡಿನಲ್ಲಿ ತಿರುಗುವವರಿಗೆ ಪಾಥೇಯವಾದುದು. ಸಂಸಾರವನ್ನು ಪರಿಹರಿಸುವ ಔಷಧರೂಪವಾದುದು. ದುಃಖ -ಶೋಕಗಳ ನಿವಾರಕವಾದುದು.
ನಾರಾಯಣಪರಂ ಬ್ರಹ್ಮ ನಾರಾಯಣಪರಂ ತಪಃ |
ನಾರಾಯಣಪರಂ ಸತ್ಯಂ ನಾರಾಯಣಪರಂ ಪರಮ್ ॥117॥
ವೇದಗಳು ನಾರಾಯಣಪರವಾದವುಗಳು. ತಪಸ್ಸು ನಾರಾಯಣನ ಪ್ರೀತಿಯ ಉದ್ದೇಶದಿಂದ ಇರುವಂಥಹದು. ಸತ್ಯವಚನವು ನಾರಾಯಣನ ಪರವಾದುದು. ಶ್ರೇಷ್ಠವಾದುದೆಲ್ಲವೂ ನಾರಾಯಣಪರವಾದವುಗಳು.
ಯಥಾ ವಿಷ್ಣುಮಯಂ ಸತ್ಯಂ ಯಥಾ ವಿಷ್ಣುಮಯಂ ಹವಿಃ |
ಯಥಾ ವಿಷ್ಣುಮಯಂ ಸರ್ವಂ ಪಾಪ್ಮಾ ಮೇ ನಶ್ಯತಾಂ ತಥಾ ॥118॥
ಹೇಗೆ ಸತ್ಯವು ವಿಷ್ಣುಮಯವಾದುದೋ, ಹವಿಸ್ಸು ವಿಷ್ಣುಮಯವಾದುದೋ, ಎಲ್ಲವೂ ವಿಷ್ಣುಮಯವಾದುದೋ ಈ ಮಾತಿನ ಸತ್ಯದಿಂದ ನನ್ನ ಪಾಪವು ನಾಶವನ್ನು ಹೊಂದಲಿ.
ತಸ್ಯ ಯಜ್ಞವರಾಹಸ್ಯ ವಿಷ್ಣೋರಮಿತತೇಜಸಃ |
ಪ್ರಣಾಮಂ ಯೇऽಪಿ ಕುರ್ವಂತಿ ತೇಷಾಮಪಿ ನಮೋನಮಃ ॥119॥
ಅಮಿತತೇಜಸ್ವಿಯಾದ, ಯಜ್ಞವರಾಹರೂಪಿಯಾದ ವಿಷ್ಣುವಿಗೆ ಯಾರು ನಮಸ್ಕಾರ ಮಾಡುತ್ತಾರೆಯೋ ಅವರಿಗೂ ಸಹ ನಮಸ್ಕಾರಗಳು, ನಮಸ್ಕಾರಗಳು.
ತ್ವಾಂ ಪ್ರಪನ್ನಾಯ ಭಕ್ತಾಯ ಗತಿಮಿಷ್ಟಾಂ ಜಿಗೀಷವೇ |
ಯಚ್ಛ್ರೇಯಃ ಪುಂಡರೀಕಾಕ್ಷ ತದ್ ಧ್ಯಾಯಸ್ವ ಸುರೋತ್ತಮ ॥120॥
ಇತಿ ವಿದ್ಯಾತಪೋಯೋನಿರಯೋನಿರ್ವಿಷ್ಣುರೀಡಿತಃ |
ವಾಗ್ಯಜ್ಞೇನಾರ್ಚಿತೋ ದೇವಃ ಪ್ರೀಯತಾಂ ಮೇ ಜನಾರ್ದನಃ ॥121॥
ಎಲೈ ಪುಂಡರೀಕಾಕ್ಷನೇ! ಎಲೈ ದೇವೋತ್ತಮನೇ! ಉತ್ತಮವಾದ ಗತಿಯನ್ನು ಹೊಂದಲು ಬಯಸಿ ನಿನಗೆ ಶರಣಾಗತನಾದ ನಿನ್ನ ಭಕ್ತನಾದ ನನಗೆ ಯಾವುದು ಶ್ರೇಯಸ್ಸೋ ಅದನ್ನು ಚಿಂತಿಸಿ ದಯಪಾಲಿಸು. ಹೀಗೆ ವಾಗ್ಯಜ್ಞದಿಂದ ನನ್ನಿಂದ ಅರ್ಚಿಸಲ್ಪಟ್ಟ ವಿದ್ಯಾತಪಸ್ಸುಗಳ ಉಗಮಸ್ಥಾನನೂ, ಅಯೋನಿಜನೂ, ದೇವನೂ, ಜನಾರ್ದನನೂ ಆದ ವಿಷ್ಣುವು ನನಗೆ ಪ್ರಸನ್ನನಾಗಲಿ.
ವೈಶಂಪಾಯನಃ
ಏತಾವದುಕತ್ವ ವಚನಂ ಭೀಷ್ಮಸ್ತದ್ಗತಮಾನಸಃ |
ನಮ ಇತ್ಯೇವ ಕೃಷ್ಣಾಯ ಪ್ರಣಾಮಮಕರೋತ್ ತದಾ ॥122॥
ವೈಶಂಪಾಯನರು ಭೀಷ್ಮರು ಹೀಗೆ ಕೃಷ್ಣನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ, ಇಷ್ಟು ಮಾತುಗಳನ್ನು ಹೇಳಿ, ನಮಸ್ಕಾರವೆಂದು ಹೇಳಿ ಕೃಷ್ಣನಿಗೆ ಪ್ರಣಾಮವನ್ನು ಮಾಡಿದರು.
ತಸ್ಮಿನ್ನುಪರತೇ ವಾಕ್ಯೇ ತತಸ್ತೇ ಬ್ರಹ್ಮವಾದಿನಃ |
ಭೀಷ್ಮಂ ವಾಗ್ಭಿರ್ಬಾಷ್ಪಗಲಾಸ್ತಮಾನರ್ಚುರ್ಮಹಾದ್ಯುತಿಮ್ ॥123॥
ಭೀಷ್ಮರು ತಮ್ಮ ಮಾತನ್ನು ನಿಲ್ಲಿಸುತ್ತಿರಲು, ಬ್ರಹ್ಮವಾದಿಗಳು ಬಾಷ್ಪಕಂಠರಾಗಿ ಮಹಾದ್ಯುತಿಯನ್ನು ಹೊಂದಿದ ಭೀಷ್ಮರನ್ನು ತಮ್ಮ ಮಾತುಗಳಿಂದ ಅರ್ಚಿಸಿದರು.
ತೇऽಸ್ತುವಂತಶ್ಚ ವಿಪ್ರೇಂದ್ರಾಃ ಕೇಶವಂ ಪುರುಷೋತ್ತಮಮ್ |
ಭೀಷ್ಮಂ ಚ ಶನಕೈಃ ಸರ್ವೇ ಪ್ರಶಶಂಸುಃ ಪುನಃಪುನಃ ॥124॥
ಆ ವಿಪ್ರೇಂದ್ರರು ಪುರುಷೋತ್ತಮನಾದ ಕೇಶವನನ್ನೂ, ಭೀಷ್ಮರನ್ನೂ ಮೃದು- ವಾದ ಸ್ವರದಲ್ಲಿ ಪುನಃ ಪುನಃ ಪ್ರಶಂಸಿದರು.
ಅಧಿಗಮ್ಯ ತು ಯೋಗೇನ ಭಕ್ತಿಂ ಭೀಷ್ಮಸ್ಯ ಮಾಧವಃ |
ತ್ರೈಲೋಕ್ಯದರ್ಶನಂ ಜ್ಞಾನಂ ದಿವ್ಯಂ ದತ್ವಾ ಯಯೌ ಹರಿಃ ॥125॥
ಮಾಧವನು ತನ್ನ ಯೋಗಶಕ್ತಿಯಿಂದ ಭೀಷ್ಮರ ಭಕ್ತಿಯೋಗವನ್ನು ತಿಳಿದು, ಅವರಿಗೆ ಮೂರು ಲೋಕಗಳನ್ನೂ ತೋರಿಸುವ ದಿವ್ಯಜ್ಞಾನವನ್ನು ಕರುಣಿಸಿ, ಹರಿ- ಯಾದ ಅವನು ಅಲ್ಲಿಂದ ಹೊರಟನು.
ವಿದಿತ್ವಾ ಭಕ್ತಿಯೋಗಂ ತಂ ಭೀಷ್ಮಸ್ಯ ಪುರುಷೋತ್ತಮಃ |
ಸಹಸೋತ್ಥಾಯ ತಂ ಹೃಷ್ಟೋ ಯಾನಮೇವಾನ್ವಪದ್ಯತ ॥126॥
ಪುರುಷೋತ್ತಮನಾದ ಕೃಷ್ಣನು ಭೀಷ್ಮರ ಭಕ್ತಿಯೋಗವನ್ನು ತಿಳಿದು ಸಂತೋಷಗೊಂಡು ತತ್‌ಕ್ಷಣದಲ್ಲಿಯೇ ಎದ್ದು ತನ್ನ ರಥವನ್ನು ಸೇರಿದನು.

ಕೇಶವಃ ಸಾತ್ಯಕಿಶ್ಚೈವ ರಥೇನೈಕೇನ ಜಗ್ಮತುಃ |
ಅಪರೇಣ ಮಹಾತ್ಮಾನೌ ಯುಧಿಷ್ಠಿರಧನಂಜಯೌ ||127||
ಕೇಶವ ಮತ್ತು ಸಾತ್ಯಕಿಯರು ಒಂದೇ ರಥದಲ್ಲಿ ಹೊರಟರು. ಮಹಾತ್ಮರಾದ ಯುಧಿಷ್ಠಿರ ಮತ್ತು ಅರ್ಜುನರು ಇನ್ನೊಂದು ರಥದಲ್ಲಿ ಹೊರಟರು.
ಭೀಮಸೇನೋ ಯಮೌ ಚೋಭೌ ರಥಮೇಕಂ ಸಮಾಸ್ಥಿತಾಃ |
ಕೃಪೋ ಯುಯುತ್ಸುಃ ಸೂತಶ್ಚ ಸಂಜಯಶ್ಚಾಪರಂ ರಥಮ್ ||128||
ಭೀಮಸೇನ ಮತ್ತು ನಕುಲಸಹದೇವರು ಒಂದು ರಥವನ್ನು ಏರಿದರು. ಕೃಪ, ಯುಯುತ್ಸು ಮತ್ತು ಸೂತನಾದ ಸಂಜಯ ಇವರು ಇನ್ನೊಂದು ರಥದಲ್ಲಿ ಹೊರಟರು.
ತೇ ರಥೈರ್ನಗರಾಕಾರೈಃ ಪ್ರಯಾತಾಃ ಪುರುಷರ್ಷಭಾಃ |
ನೇಮಿಘೋಷೇಣ ಮಹತಾ ಕಂಪಯಂತೋ ವಸುಂಧರಾಮ್ ||129||
ಪುರುಷಶ್ರೇಷ್ಠರಾದ ಅವರು ಚಕ್ರದ ಮಹಾಘೋಷದಿಂದ ಭೂಮಿಯನ್ನು ನಡುಗಿಸುತ್ತಾ, ನಗರದಂತಿದ್ದ ತಮ್ಮ ರಥಗಳಲ್ಲಿ ಹೊರಟರು.
ತತೋ ಗಿರಃ ಪುರುಷವರಸ್ತವೇರಿತಾ
ದ್ವಿಜೇರಿತಾ ಪಥಿಷು ಮನಾಕ್ ಸ ಶುಶ್ರುವೇ |
ಕೃತಾಂಜಲಿಂ ಪ್ರಣತಮಥಾಪರಂ ಜನಂ
ಸ ಕೇಶಿಹಾ ಮುದಿತಮನಾಶ್ಚ ನಂದತ ||130||
ಆಗ ಮಾರ್ಗಗಳಲ್ಲಿ ಶ್ರೇಷ್ಠಪುರುಷರಿಂದಲೂ, ಬ್ರಾಹ್ಮಣರಿಂದಲೂ ಉಚ್ಚರಿಸ- ಲ್ಪಟ್ಟ ಪರಮಾತ್ಮನ ಸ್ತೋತ್ರರೂಪವಾದ ಶಬ್ದಗಳು ಕೇಳಿಬಂದವು. ಕೇಶಿಸೂದನ- ನಾದ ಕೃಷ್ಣನು ಕೈಗಳನ್ನು ಮುಗಿದು ನಮಸ್ಕಾರ ಮಾಡಿ ನಿಂತಿದ್ದ ಉಳಿದ ಜನರನ್ನು ನೋಡಿ ಮನಸ್ಸಿನಲ್ಲಿ ಸಂತೋಷಗೊಂಡು ಅವರನ್ನು ಅಭಿನಂದಿಸಿದನು.
ಇತಿ ಸ್ಮರನ್ ಪಠತಿ ಚ ಶಾರ್ಙ್ಗಧನ್ವನಃ
ಶೃಣೋತಿ ವಾ ಯದುಕುಲನಂದನಸ್ತವಮ್ |
ಸ ಚಕ್ರಭೃತ್ ಪ್ರತಿಹತಸರ್ವಕಿಲ್ಬಿಷೋ
ಜನಾರ್ದನಂ ಪ್ರವಿಶತಿ ದೇಹಸಂಕ್ಷಯೇ ||131||
ಹೀಗೆ ಯಾರು ಕೃಷ್ಣನನ್ನು ಸ್ಮರಿಸಿ ಶಾರ್ಙ್ಗಧನುರ್ಧಾರಿಯಾದ ಯದುಕುಲ- ನಂದನನಾದ ಅವನ ಈ ಸ್ತೋತ್ರವನ್ನು ಪಠಿಸುತ್ತಾನೆಯೋ (ಕೇಳುತ್ತಾನೆಯೋ) ಅವನು ಸುದರ್ಶನಧಾರಿಯಾದ ಕೃಷ್ಣನಿಂದ ಎಲ್ಲ ಪಾಪಗಳನ್ನೂ ಕಳೆದುಕೊಂಡು ದೇಹತ್ಯಾಗವನ್ನು ಮಾಡಿ ಜನಾರ್ದನನನ್ನು ಪ್ರವೇಶಿಸುತ್ತಾನೆ.
ಯಂ ಯೋಗಿನಃ ಪ್ರಾಣವಿಯೋಗಕಾಲೇ
ಯತ್ನೇನ ಚಿತ್ತೇ ವಿನಿವೇಶಯಂತಿ |
ಸ ತಂ ಪುರಸ್ತಾದ್ ಹರಿಮೀಕ್ಷಮಾಣಃ
ಪ್ರಾಣಾನ್ ಜಹೌ ಪ್ರಾಪ್ತಫಲೋ ಹಿ ಭೀಷ್ಮಃ ||132||
ಯೋಗಿಗಳು ಪ್ರಾಣವಿಯೋಗಕಾಲದಲ್ಲಿ ಯಾವನನ್ನು ಪ್ರಯತ್ನಪೂರ್ವಕವಾಗಿ ಚಿತ್ತದಲ್ಲಿ ಸ್ಥಾಪಿಸಿಕೊಳ್ಳಲು ಪ್ರಯತ್ನಪಡುತ್ತಾರೆಯೋ ಅಂತಹ ಹರಿಯನ್ನು ತನ್ನ ಎದುರಿಗೆ ನೋಡುತ್ತಾ ಪ್ರಾಣಗಳನ್ನು ತ್ಯಜಿಸಿದ ಭೀಷ್ಮರು ಚಕ್ಷುಸ್ಸಿನ ಫಲವನ್ನು ಪಡೆದವರು.
ಸ್ತವರಾಜಃ ಸಮಾಪ್ತೋಽಯಂ ವಿಷ್ಣೋರದ್ಭುತಕರ್ಮಣಃ |
ಗಾಂಗೇಯೇನ ಪುರಾ ಗೀತೋ ಮಹಾಪಾತಕನಾಶನಃ ||133||
ಗಂಗಾಪುತ್ರರಾದ ಭೀಷ್ಮರಿಂದ ಮಾಡಲ್ಪಟ್ಟ ಮಹಾಪಾತಕನಾಶನವಾದ ಅದ್ಭುತ- ವಾದ ಈ ವಿಷ್ಣುಸ್ತವರಾಜವು ಸಮಾಪ್ತವಾಯಿತು.
ಇಮಂ ನರಃ ಸ್ತವರಾಜಂ ಮುಮುಕ್ಷುಃ
ಪಠನ್ ಶುಚಿಃ ಕಲುಷಿತಕಲ್ಮಷಾಪಹಮ್ |
ಅತೀತ್ಯ ಲೋಕಾನ್ ಮಲಿನಃ ಸಮಾಗತಾನ್
ಪದಂ ಸ ಗಚ್ಛತ್ಯಮೃತಂ ಮಹಾತ್ಮನಃ ||134||
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಸಪ್ತಚತ್ವಾರಿಂಶೋಽಧ್ಯಾಯಃ ||47||
ಮುಮುಕ್ಷುವಾದ ಯಾವ ಮನುಷ್ಯನು ಶುಚಿಯಾಗಿ ಕಲುಷಿತವಾದ ಮನಸ್ಸಿನ ಕಲ್ಮಶವನ್ನು ಕಳೆಯುವ ಈ ಸ್ತವರಾಜವನ್ನು ಪಠಿಸುತ್ತಾನೆಯೋ ಅವನು ಪ್ರಾಪ್ತವಾದ ಮಲಿನವಾದ ಲೋಕಗಳನ್ನು ದಾಟಿ, ಮಹಾತ್ಮನಾದ ಕೃಷ್ಣನ ಮೋಕ್ಷಸ್ಥಾನವನ್ನು ಪಡೆ- ಯುತ್ತಾನೆ.
ಇಲ್ಲಿಗೆ ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 47ನೆಯ ಅಧ್ಯಾಯವು ಮುಗಿಯಿತು.
0

48. ನಲವತ್ತೆಂಟನೆಯ ಅಧ್ಯಾಯ
ಕೃಷ್ಣಯುಧಿಷ್ಠಿರಾದಿಗಳಿಂದ ಕುರುಕ್ಷೇತ್ರಗಮನ, ಪರಶುರಾಮರ ಕಥೆಯನ್ನು

ಹೇಳುವಂತೆ ಯುಧಿಷ್ಠಿರನಿಂದ ಕೃಷ್ಣನ ಪ್ರಾರ್ಥನೆ

ವೈಶಂಪಾಯನಃ
ತತಃ ಸ ಚ ಹೃಷೀಕೇಶಃ ಸ ಚ ರಾಜಾ ಯುಧಿಷ್ಠಿರಃ |
ಕೃಪಾದಯಶ್ಚ ತೇ ಸರ್ವೇ ಚತ್ವಾರಃ ಪಾಂಡವಾಶ್ಚ ಹ ॥1॥
ರಥೈಸ್ತೇ ನಗರಾಕಾರೈಃ ಪತಾಕಾಧ್ವಜಶೋಭಿತೈಃ |
ಯಯುರಾಶು ಕುರುಕ್ಷೇತ್ರಂ ವಾಜಿಭಿಃ ಶೀಘ್ರಗಾಮಿಭಿಃ ॥2॥
ವೈಶಂಪಾಯನರು ಅನಂತರ ಆ ಹೃಷೀಕೇಶನೂ, ರಾಜನಾದ ಯುಧಿಷ್ಠಿರನೂ, ಕೃಪಾದಿಗಳೆಲ್ಲರೂ, ಉಳಿದ ನಾಲ್ವರು ಪಾಂಡವರೂ ಪತಾಕಾ ಧ್ವಜಗಳಿಂದ ಶೋಭಿತವಾದ ನಗರಾಕಾರವಾದ ರಥಗಳಲ್ಲಿ ಶೀಘ್ರಗಾಮಿಗಳಾದ ಅಶ್ವಗಳಿಂದ ಶೀಘ್ರವಾಗಿ ಕುರುಕ್ಷೇತ್ರಕ್ಕೆ ತಲುಪಿದರು.
ತೇಽವತೀರ್ಯ ಕುರುಕ್ಷೇತ್ರಂ ಕೇಶಮಜ್ಜಾಸ್ಥಿಸಂಕುಲಮ್ |
ದೇಹನ್ಯಾಸಃ ಕೃತೋ ಯತ್ರ ಕ್ಷತ್ರಿಯೈಸ್ತೈರ್ಮಹಾತ್ಮಭಿಃ ॥3॥
ಅವರು ಮಹಾತ್ಮರಾದ ಕ್ಷತ್ರಿಯರು ತಮ್ಮ ದೇಹವನ್ನು ಪರಿತ್ಯಜಿಸಿದ ಕೇಶ, ಮಜ್ಜ, ಅಸ್ಥಿಗಳಿಂದ ನಿಬಿಡವಾದ ಕುರುಕ್ಷೇತ್ರವನ್ನು ತಲುಪಿದರು.
ಗಜಾಶ್ವದೇಹಾಸ್ಥಿಚಯೈಃ ಪರ್ವತೈರಿವ ಸಂಚಿತಮ್ |
ನರಶೀರ್ಷಕಪಾಲೈಶ್ಚ ಶಂಖೈರಿವ ಸಮಾಚಿತಮ್ ॥4॥
ಭೂತಸಂಘಾನುಚರಿತಂ ರಕ್ಷೋಗಣನಿಷೇವಿತಮ್ |
ಆಪಾನಭೂಮಿಂ ಕಾಲಸ್ಯ ತದಾ ಭುಕ್ತೋಜ್ಝಿತಾಮಿವ ॥5॥
ಭೂತಸಂಘಾನುಚರಿತಂ ರಕ್ಷೋಗಣನಿಷೇವಿತಮ್ |
ಪಶ್ಯಂತಸ್ತೇ ಕುರುಕ್ಷೇತ್ರಂ ಯಯುರಾಶು ಮಹಾರಥಾಃ ॥6॥
ಗಜಾಶ್ವದೇಹಗಳ ಅಸ್ಥಿಗಳ ಪರ್ವತಾಕಾರವಾದ ರಾಶಿಯಿಂದ ಕೂಡಿದ್ದ, ಮನುಷ್ಯರ ತಲೆಬರುಡೆಗಳಿಂದ ಶಂಖಗಳಂತೆ ಎಲ್ಲೆಡೆಯೂ ಹರಡಿದ್ದ, ಸಹಸ್ರಾರು ಚಿತೆಗಳಿಂದ ತುಂಬಿದ, ಕವಚ ಮತ್ತು ಶಸ್ತ್ರಗಳು ಎಲ್ಲೆಲ್ಲಿಯೂ ಬಿದ್ದಿದ್ದ, ಮೃತ್ಯು- ದೇವತೆಯು ಆಗ ತಾನೆ ಕುಡಿದು ಬಿಟ್ಟಿದ್ದಂತಹ ಪಾನಭೂಮಿಯಂತಿದ್ದ, ಭೂತ- ಸಂಘಗಳ ಸಂಚಾರವನ್ನು ಹೊಂದಿದ ರಾಕ್ಷಸರ ಗಣಗಳಿಂದ ಸೇವಿತವಾದ ಕುರುಕ್ಷೇತ್ರ -ವನ್ನು ನೋಡುತ್ತಾ ಆ ಮಹಾರಥರು ಶೀಘ್ರವಾಗಿ ಮುಂದೆ ಸಾಗಿದರು.
ಗಚ್ಛನ್ನೇವ ಮಹಾಬಾಹುಃ ಸರ್ವಯಾದವನಂದನಃ |
ಯುಧಿಷ್ಠಿರಾಯ ಪ್ರೋವಾಚ ಜಾಮದಗ್ನ್ಯಸ್ಯ ವಿಕ್ರಮಮ್ ॥7॥
ಮಹಾಬಾಹುವೂ ಸರ್ವಯಾದವನಂದನನೂ ಆದ ಕೃಷ್ಣನು ಹೋಗುತ್ತಲೇ ಯುಧಿಷ್ಠಿರನಿಗೆ ಪರಶುರಾಮರ ಪರಾಕ್ರಮವನ್ನು ಹೇಳಿದನು.
ಅಮೀ ರಾಮಹ್ರದಾಃ ಪಂಚ ದೃಶ್ಯಂತೇ ಪಾರ್ಥ ದೂರತಃ |
ಯೇಷು ಸಂತರ್ಪಯಾಮಾಸ ಪೂರ್ವಾನ್ ಕ್ಷತ್ರಿಯಶೋಣಿತೈಃ ॥8॥
ಎಲೈ ಪಾರ್ಥನೇ! ದೂರದಲ್ಲಿ ಈ ಐದು ರಾಮಹ್ರದಗಳು ಕಾಣುತ್ತಿವೆಯಷ್ಟೇ. ಇಲ್ಲಿ ಪರಶುರಾಮರು ತಮ್ಮ ಪೂರ್ವಜರಿಗೆ ಕ್ಷತ್ರಿಯರಕ್ತದಿಂದ ತರ್ಪಣವನ್ನು ಕೊಟ್ಟರು.
ತ್ರಿಃಸಪ್ತಕೃತ್ವೋ ವಸುಧಾಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ |
ಇಹೇದಾನೀಂ ತತೋ ರಾಮಃ ಕರ್ಮಣೋ ವಿರರಾಮ ಹ ॥9॥
ಪ್ರಭುಗಳಾದ ಪರಶುರಾಮರು ಇಪ್ಪತ್ತೊಂದು ಬಾರಿ ಸಂಚರಿಸಿ, ಭೂಮಿ- ಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿ ಈ ಸ್ಥಳದಲ್ಲಿ ಆ ಕರ್ಮಕ್ಕೆ ಮುಕ್ತಾಯವನ್ನು ಹೇಳಿದರು.
ಯುಧಿಷ್ಠಿರಃ
ತ್ರಿಃ ಸಪ್ತಕೃತ್ವಃ ಪೃಥಿವೀ ಕೃತಾ ನಿಃಕ್ಷತ್ರಿಯಾ ತದಾ |
ರಾಮೇಣೇತಿ ಯದಾಽಽತ್ಥ ತ್ವಮತ್ರ ಮೇ ಸಂಶಯೋ ಮಹಾನ್ ॥10॥
ಯುಧಿಷ್ಠಿರ ಇಪ್ಪತ್ತೊಂದು ಬಾರಿ ಭೂಮಿಯನ್ನು ಪರಶುರಾಮರು ಕ್ಷತ್ರಿಯ- ರಹಿತವನ್ನಾಗಿ ಮಾಡಿದರು ಎಂದು ನೀನು ಹೇಳಿದ ವಿಷಯದಲ್ಲಿ ನನಗೆ ಬಹಳ ಸಂಶಯವಿದೆ.
ಕ್ಷತ್ರಬೀಜಂ ಯದಾ ದಗ್ಧಂ ರಾಮೇಣ ಯದುಪುಂಗವ |
ಕಥಂ ಭೂಯಃ ಸಮುತ್ಪತ್ತಿಃ ಕ್ಷತ್ರಸ್ಯಾಮಿತವಿಕ್ರಮ ॥11॥
ಎಲೈ ಯದುಪುಂಗವನೇ! ಅಮಿತವಿಕ್ರಮನೇ! ಪರಶುರಾಮರು ಕ್ಷತ್ರಿಯ- ಬೀಜವನ್ನೇ ಸುಟ್ಟುಹಾಕಿದ ಮೇಲೆ ಪುನಃ ಭೂಮಿಯಲ್ಲಿ ಕ್ಷತ್ರಿಯರ ಉತ್ಪತ್ತಿಯು ಹೇಗೆ ಉಂಟಾಯಿತು?
ಮಹಾತ್ಮನಾ ಭಗವತಾ ರಾಮೇಣ ಯದುಪುಂಗವ |
ಕಥಮುತ್ಸಾದಿತಂ ಕ್ಷತ್ರಂ ಕಥಂ ವೃದ್ಧಿಂ ಪುನರ್ಗತಮ್ ॥12॥
ಎಲೈ ಯದುಪುಂಗವನೇ! ಮಹಾತ್ಮರೂ ಭಗವತ್ಸ್ವರೂಪರೂ ಆದ ಪರಶು- ರಾಮರಿಂದ ಕ್ಷತ್ರಿಯಕುಲವು ಹೇಗೆ ಉತ್ಸನ್ನಗೊಂಡಿತು? ಮತ್ತು ಆ ಕುಲಕ್ಕೆ ಪುನಃ ಹೇಗೆ ವೃದ್ಧಿಯುಂಟಾಯಿತು?
ಮಹಾಭಾರತಯುದ್ಧೇ ಹಿ ಕೋಟಿಶಃ ಕ್ಷತ್ರಿಯಾ ಹತಾಃ |

ತಥಾಭೂಚ್ಚ ಮಹೀ ಕೀರ್ಣಾ ಕ್ಷತ್ರಿಯೈರ್ವದತಾಂವರ ॥13॥
ಮಹಾಭಾರತಯುದ್ಧದಲ್ಲಿ ಕ್ಷತ್ರಿಯರು ಕೋಟಿಸಂಖ್ಯೆಗಳಲ್ಲಿ ಹತರಾದರು. ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ಆದ್ದರಿಂದ ಆ ರೀತಿಯಲ್ಲಿ ಭೂಮಿಯು ಕ್ಷತ್ರಿಯ- ರಿಂದ ತುಂಬಿದ್ದಿತು.
ಕಿಮರ್ಥಂ ಭಾರ್ಗವೇಣೇದಂ ಕ್ಷತ್ರಮುತ್ಸಾದಿತಂ ಪುರಾ |
ರಾಮೇಣ ಯದುಶಾರ್ದೂಲ ಕುರುಕ್ಷೇತ್ರೇ ಮಹಾತ್ಮನಾ ॥14॥
ಎಲೈ ಯದುಶಾರ್ದೂಲನೇ! ಮಹಾತ್ಮರಾದ ಭಾರ್ಗವರಾದ ಪರಶುರಾಮರು ಏತಕ್ಕಾಗಿ ಕುರುಕ್ಷೇತ್ರದಲ್ಲಿ ಕ್ಷತ್ರಿಯರ ಸಂಹಾರವನ್ನು ಮಾಡಿದರು?
ಏತಂ ಮೇ ಛಿಂಧಿ ವಾರ್ಷ್ಣೇಯ ಸಂಶಯಂ ತಾರ್ಕ್ಷ್ಯಕೇತನ |
ಆಗಮೋ ಹಿ ಪರಃ ಕೃಷ್ಣ ತ್ವತ್ತೋ ನೋ ವಾಸವಾನುಜ ॥15॥
ಎಲೈ ವಾರ್ಷ್ಣೇಯನೇ! ಗರುಡಧ್ವಜನೇ! ಈ ನನ್ನ ಸಂಶಯವನ್ನು ಪರಿಹರಿಸು. ಎಲೈ ಇಂದ್ರಾನುಜನೇ! ಕೃಷ್ಣನೇ! ನಿನ್ನಿಂದಲೇ ನಮಗೆ ಎಲ್ಲ ಜ್ಞಾನದ ಪ್ರಾಪ್ತಿ ಉಂಟಾಗಬೇಕು.
ವೈಶಂಪಾಯನಃ
ತತೋ ವ್ರಜನ್ನೇವ ಗದಾಗ್ರಜಃ ಪ್ರಭುಃ
ಶಶಂಸ ತಸ್ಮೈ ನಿಖಿಲೇನ ತತ್ತ್ವತಃ |
ಯುಧಿಷ್ಠಿರಾಯಾಪ್ರತಿಮೌಜಸೇ ತದಾ
ಯಥಾಽಭವತ್ ಕ್ಷತ್ರಿಯಸಂಕುಲಾ ಮಹೀ ॥16॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಚತ್ವಾರಿಂಶೋಽಧ್ಯಾಯಃ ॥48॥
ಆಗ ಗದಾಗ್ರಜನಾದ ಪ್ರಭುವಾದ ಕೃಷ್ಣನು ಹೋಗುತ್ತಲೇ ಅಪ್ರತಿಮ- ಪರಾಕ್ರಮಿಯಾದ ಯುಧಿಷ್ಠಿರನನ್ನು ಕುರಿತು ಎಲ್ಲವೂ ಹೇಗೆ ನಡೆಯಿತು ಮತ್ತು ಪುನಃ ಭೂಮಿಯು ಹೇಗೆ ಕ್ಷತ್ರಿಯರಿಂದ ತುಂಬಿತು ಎಂಬ ವಿಷಯವನ್ನು ಯಥಾರ್ಥವಾಗಿ ಹೇಳಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 48ನೆಯ ಅಧ್ಯಾಯವು ಮುಗಿಯಿತು
0
49. ನಲವತ್ತೊಂಭತ್ತನೆಯ ಅಧ್ಯಾಯ
ಕೃಷ್ಣನಿಂದ ಪರಶುರಾಮಚರಿತೆಯ ಕಥನ
ಶ್ರೀಭಗವಾನ್
ಶೃಣು ಕೌಂತೇಯ ರಾಮಸ್ಯ ಮಯಾ ಯಾವತ್ ಪರಿಶ್ರುತಮ್ |
ಮಹರ್ಷೀಣಾಂ ಕಥಯತಾಂ ಕಾರಣಂ ತಸ್ಯ ಜನ್ಮ ಚ ॥1॥
ಶ್ರೀಭಗವಾನ್ ಎಲೈ ಕೌಂತೇಯನೇ! ಮಹರ್ಷಿಗಳು ಮಾತನಾಡುವಾಗ ನಾನು ಎಷ್ಟು ಅಂಶವನ್ನು ಪರಶುರಾಮರ ಜನ್ಮದ ಮತ್ತು ಕ್ಷತ್ರಿಯಸಂಹಾರದ ಕಾರಣದ ವಿಷಯದಲ್ಲಿ ಕೇಳಿದ್ದೇನೆಯೋ ಅಷ್ಟನ್ನು ಕೇಳು.
ಯಥಾ ಜಾಮದಗ್ನ್ಯೇನ ಕೋಟಿಶಃ ಕ್ಷತ್ರಿಯಾ ಹತಾಃ |
ಉದ್ಭೂತಾ ರಾಜವಂಶೇಷು ಯೇ ಭೂಯೋ ಭಾರತೇ ಹತಾಃ ॥2॥
ಪರಶುರಾಮರಿಂದ ಕೋಟಿಸಂಖ್ಯೆಯಲ್ಲಿ ಕ್ಷತ್ರಿಯರು ಹತರಾದರು. ಹೇಗೆ ಅವರು ಪುನಃ ರಾಜವಂಶಗಳಲ್ಲಿ ಜನಿಸಿ ಮಹಾಭಾರತಯುದ್ಧದಲ್ಲಿ ಹತರಾದರು ಎಂಬುದನ್ನು ಹೇಳುತ್ತೇನೆ.
ಜಹ್ನೋರಜಹ್ನುಸ್ತನಯೋ ಬಲ್ಲವಸ್ತಸ್ಯ ಚಾತ್ಮಜಃ |
ಕುಶಿಕೋ ನಾಮ ಧರ್ಮಜ್ಞಸ್ತಸ್ಯ ಪುತ್ರೋ ಮಹೀಪತಿಃ ॥3॥
ಜಹ್ನುವಿಗೆ ಅಜಹ್ನುವೆಂಬ ಪುತ್ರನು ಜನಿಸಿದನು. ಅವನ ಪುತ್ರನು ವಲ್ಲವ. ಅವನ ಪುತ್ರನಾದ ಕುಶಿಕನು ಧರ್ಮಜ್ಞನಾದ ರಾಜನಾದನು.

ಉಗ್ರಂ ತಪಃ ಸಮಾತಿಷ್ಠತ್ ಸಹಸ್ರಾಕ್ಷಸಮೋ ಭುವಿ |
ಪುತ್ರಂ ಲಭೇಯಮಜಿತಂ ತ್ರಿಲೋಕೇಶ್ವರಮಿತ್ಯುತ ॥4॥
ಭೂಮಿಯಲ್ಲಿ ಇಂದ್ರನಿಗೆ ಸಮನಾಗಿದ್ದ ಅವನು `ಯುದ್ಧದಲ್ಲಿ ಎಂದೂ ಸೋಲದ ತ್ರಿಲೋಕಪತಿಯಾದ ಪುತ್ರನನ್ನು ಪಡೆದೇನು' ಎಂದು ಉಗ್ರವಾದ ತಪಸ್ಸನ್ನು ಪ್ರಾರಂಭಿಸಿದನು.
ತಮುಗ್ರತಪಸಂ ದೃಷ್ಟ್ವಾ ಸಹಸ್ರಾಕ್ಷಃ ಪುರಂದರಃ |
ಸಮರ್ಥಂ ಪುತ್ರಜನನೇ ಸ್ವಯಮೇವೈತ್ಯ ಭಾರತ ॥5॥
ಪುತ್ರತ್ವಮಗಮದ್ ರಾಜಂಸ್ತಸ್ಯ ಲೋಕೇಶ್ವರೇಶ್ವರಃ |
ಗಾಧಿರ್ನಾಮಾಭವತ್ ಪುತ್ರಃ ಕೌಶಿಕಃ ಪಾಕಶಾಸನಃ ॥6॥
ಎಲೈ ಭಾರತನೇ! ಸಹಸ್ರಾಕ್ಷನಾದ ಪುರಂದರನು ಅವನು ಉಗ್ರತಪಸ್ಸಿನಲ್ಲಿ ನಿರತ -ನಾದುದನ್ನು ನೋಡಿ, ಅಂತಹ ಪುತ್ರನನ್ನು ಪಡೆಯಲು ಅವನು ಸಮರ್ಥನೆಂದು ತಿಳಿದು ತಾನಾಗಿಯೇ ಬಂದು ಲೋಕೇಶ್ವರೇಶ್ವರನಾದ ಅವನು ಅವನ ಪುತ್ರ- ನಾದನು. ರಾಜನೇ ಪಾಕಶಾಸನನಾದ ಇಂದ್ರನು ಗಾಧಿ ಎಂಬ ಹೆಸರಿನಿಂದ ಕುಶಿಕನ ಪುತ್ರನಾಗಿ ಕೌಶಿಕನೆನಿಸಿದನು.
ತಸ್ಯ ಕನ್ಯಾಽಭವದ್ ರಾಜನ್ ನಾಮ್ನಾ ಸತ್ಯವತೀ ಪ್ರಭೋ |
ತಾಂ ಗಾಧಿಃ ಕವಿಪುತ್ರಾಯ ಸೋಽರ್ಚೀಕಾಯ ದದೌ ಪ್ರಭುಃ ॥7॥

ಎಲೈ ಪ್ರಭುವೇ! ಗಾಧಿಗೆ ಸತ್ಯವತಿಯೆಂಬ ಮಗಳಿದ್ದಳು. ಅವನು ಅವಳನ್ನು ಭಾರ್ಗವವಂಶದ ಕವಿಪುತ್ರನಾದ ಋಚೀಕರಿಗೆ ಕೊಟ್ಟು ವಿವಾಹ ಮಾಡಿದನು.
ತತಃ ಪ್ರೀತಸ್ತು ಕೌಂತೇಯ ಭಾರ್ಗವಃ ಕುರುನಂದನ |
ಪುತ್ರಾರ್ಥೇ ಶ್ರಪಯಾಮಾಸ ಚರುಂ ಗಾಧೇಸ್ತಥೈವ ಚ ॥8॥
ಎಲೈ ಕೌಂತೇಯನೇ! ಕುರುನಂದನನೇ! ಸಂತೋಷಗೊಂಡ ಭಾರ್ಗವರಾದ ಋಚೀಕರು ಪುತ್ರರನ್ನು ಪಡೆಯಲು ತಮ್ಮ ಸಲುವಾಗಿ ಮತ್ತು ಗಾಧಿಯ ಸಲುವಾಗಿ ಚರುವನ್ನು ಸಿದ್ಧಪಡಿಸಿದರು.
ಆಹೂಯ ಚಾಹ ತಾಂ ಭಾರ್ಯಾಮೃಚೀಕೋ ಭಾರ್ಗವಸ್ತದಾ |
ಉಪಯೋಜ್ಯಶ್ಚರುರಯಂ ತ್ವಯಾ ಮಾತ್ರಾಪ್ಯಯಂ ತವ ॥9॥
ಭಾರ್ಗವರಾದ ಋಚೀಕರು ತಮ್ಮ ಪತ್ನಿಯನ್ನು ಕರೆದು ಈ ಎರಡು ಚರುಗಳಲ್ಲಿ ಈ ಚರುವನ್ನು ಮಾತ್ರ ನೀನು ಭುಂಜಿಸಬೇಕು. ನಿನ್ನ ತಾಯಿಯು ಮಾತ್ರ ಈ ಇನ್ನೊಂದು ಚರುವನ್ನೇ ಭುಂಜಿಸಬೇಕು.
ತಸ್ಯಾ ಜನಿಷ್ಯತೇ ಪುತ್ರೋ ದೀಪ್ತಿಮಾನ್ ಕ್ಷತ್ರಿಯರ್ಷಭಃ |
ಅಜಯ್ಯಃ ಕ್ಷತ್ರಿಯೈರ್ಲೋಕೇ ಕ್ಷತ್ರಿಯರ್ಷಭಸೂದನಃ ॥10॥
ಅವಳಿಗೆ ತೇಜಸ್ವಿಯಾದ ಕ್ಷತ್ರಿಯರ್ಷಭನು ಪುತ್ರನಾಗಿ ಜನಿಸುವನು. ಅವನು ಲೋಕದಲ್ಲಿ ಕ್ಷತ್ರಿಯರಿಂದ ಅಜೇಯನಾಗಿ ಶ್ರೇಷ್ಠರಾದ ಕ್ಷತ್ರಿಯರನ್ನು ಸಂಹರಿಸುವವ -ನಾಗುವನು.
ತವಾಪಿ ಪುತ್ರಂ ಕಲ್ಯಾಣಿ ಧೃತಿಮಂತಂ ತಪೋನ್ವಿತಮ್ |
ಶಮಾತ್ಮಕಂ ದ್ವಿಜಶ್ರೇಷ್ಠಂ ಚರುರೇಷ ವಿಧಾಸ್ಯತಿ ॥11॥
ಎಲೌ ಕಲ್ಯಾಣಿಯೇ! ನಿನಗೂ ಸಹ ಈ ಚರುವು ತಪಸ್ಸಿನಿಂದ ಕೂಡಿದ ಧೈರ್ಯಶಾಲಿಯಾದ ಶಾಂತನಾದ ಬ್ರಾಹ್ಮಣಶ್ರೇಷ್ಠನನ್ನು ಪುತ್ರನನ್ನಾಗಿ ಕೊಡುವುದು. (ಎಂದು ಹೇಳಿದರು).
ಇತ್ಯೇವಮುಕ್ತ್ವಾ ತಾಂ ಭಾರ್ಯಾಮೃಚೀಕೋ ಭೃಗುನಂದನಃ |
ತಪಸ್ಯಭಿರತೋ ಧೀಮಾನ್ ಜಗಾಮಾರಣ್ಯಮೇವ ಹ ॥12॥
ಭಾರ್ಯೆಯನ್ನು ಕುರಿತು ಹೀಗೆ ಹೇಳಿ ಮೇಧಾವಿಗಳಾದ ಭೃಗುನಂದನರಾದ ಋಚೀಕರು ತಪಸ್ಸಿನಲ್ಲಿ ನಿರತರಾಗಿ ಕಾಡಿಗೆ ಹೊರಟು ಹೋದರು.
ಏತಸ್ಮಿನ್ನೇವ ಕಾಲೇ ತು ತೀರ್ಥಯಾತ್ರಾಪರೋ ನೃಪಃ |
ಗಾಧಿಃ ಸದಾರಃ ಸಂಪ್ರಾಪ್ತ ಋಚೀಕಸ್ಯಾಶ್ರಮಂ ಪ್ರತಿ ॥13॥
ಆ ಸಮಯಕ್ಕೆ ಸರಿಯಾಗಿ ತೀರ್ಥಯಾತ್ರಾಪರನಾದ ಗಾಧಿರಾಜನು ಪತ್ನಿಯ ಸಹಿತನಾಗಿ ಋಚೀಕರ ಆಶ್ರಮಕ್ಕೆ ಬಂದನು.
ಚರುದ್ವಯಂ ಗೃಹೀತ್ವಾ ತು ರಾಜನ್ ಸತ್ಯವತೀ ತದಾ |
ಭರ್ತುರ್ವಾಕ್ಯಾದಥಾವ್ಯಗ್ರಾ ಮಾತ್ರೇ ಹೃಷ್ಟಾ ನ್ಯವೇದಯತ್ ॥14॥
ಎಲೈ ರಾಜನೇ! ಆಗ ಸತ್ಯವತಿಯು ಪತಿಯ ವಾಕ್ಯಕ್ಕೆ ಅನುಸಾರವಾಗಿ ಎರಡು ಚರುಗಳನ್ನೂ ಹಿಡಿದುಕೊಂಡು ತಪ್ಪಿಲ್ಲದಂತೆ ತಾಯಿಗೆ ಸಂತೋಷದಿಂದ ನಿವೇದಿ- ಸಿದಳು.
ಮಾತಾ ತು ತಸ್ಯಾಃ ಕೌಂತೇಯ ದುಹಿತ್ರೇ ಸ್ವಂ ಚರುಂ ದದೌ |
ತಸ್ಯಾಶ್ಚರುಮಥಾಜ್ಞಾತಮಾತ್ಮಸಂಸ್ಥಂ ಚಕಾರ ಹ ॥15॥
ಎಲೈ ಕೌಂತೇಯನೇ! ತಾಯಿಯಾದರೋ ತನ್ನ ಚರುವನ್ನು ಮಗಳಿಗೆ ಕೊಟ್ಟಳು. ಅವಳ ಚರುವನ್ನು ಅವಳಿಗೆ ತಿಳಿಯದಂತೆಯೇ ತಾನು ಉಪಯೋಗಿಸಿದಳು.
ಅಥ ಸತ್ಯವತೀ ಗರ್ಭಂ ಕ್ಷತ್ರಿಯಾಂತಕರಂ ತದಾ |
ಧಾರಯಾಮಾಸ ದೀಪ್ತೇನ ವಪುಷಾ ಘೋರದರ್ಶನಮ್ ॥16॥
ಅನಂತರ ಸತ್ಯವತಿಯು ಕ್ಷತ್ರಿಯಾಂತಕನಾದ ದೀಪ್ತವಾದ ಶರೀರವುಳ್ಳ ಘೋರ- ದರ್ಶನವನ್ನು ಹೊಂದಿದ ಗರ್ಭವನ್ನು ಧರಿಸಿದಳು.
ತಾಮೃಚೀಕಸ್ತದಾ ದೃಷ್ಟ್ವಾ ಧ್ಯಾನಯೋಗೇನ ವೈ ತತಃ |
ಅಬ್ರವೀದ್ ರಾಜಶಾರ್ದೂಲ ಸ್ವಾಂ ಭಾರ್ಯಾಂ ವರವರ್ಣಿನೀಮ್ ॥17
ಎಲೈ ರಾಜಶಾರ್ದೂಲನೇ! ಆಗ ಋಚೀಕರು ತಮ್ಮ ಧ್ಯಾನದೃಷ್ಟಿಯಿಂದ ಅದನ್ನು ತಿಳಿದು ಸುಂದರಿಯಾದ ತಮ್ಮ ಭಾರ್ಯೆಯನ್ನು ಕರೆದು ಹೇಳಿದರು.
ಮಾತ್ರಾಽಸಿ ವ್ಯಂಸಿತಾ ಭದ್ರೇ ಚರುವ್ಯತ್ಯಾಸಹೇತುನಾ |
ಜನಿಷ್ಯತೇ ಹಿ ತೇ ಪುತ್ರಃ ಕ್ರೂರಕರ್ಮಾ ಮಹಾಬಲಃ ॥18॥
ಎಲೌ ಮಂಗಳಸ್ವರೂಪಳೇ! ಚರುವನ್ನು ವ್ಯತ್ಯಾಸ ಮಾಡಿದ ಕಾರಣದಿಂದ ನಿನ್ನ ತಾಯಿಯು ನಿನಗೆ ಮೋಸ ಮಾಡಿದ್ದಾಳೆ. ನಿನಗೆ ಕ್ರೂರಕರ್ಮನೂ ಮಹಾಬಲನೂ ಆದ ಪುತ್ರನು ಜನಿಸುವನು.
ಜನಿಷ್ಯತೇ ಹಿ ತೇ ಭ್ರಾತಾ ಬ್ರಹ್ಮಭೂತಸ್ತಪೋಧನಃ |
ವಿಶ್ವಂ ಹಿ ಬ್ರಹ್ಮ ತಪಸಾ ಮಯಾ ತತ್ರ ಸಮರ್ಪಿತಮ್ ॥19॥
ನಿನ್ನ ತಮ್ಮನು ಬ್ರಹ್ಮಿಷ್ಠನಾಗಿ ತಪೋಧನನಾಗಿ ಜನಿಸುವನು. ನಾನು ಸಮಗ್ರ- ವಾದ ಬ್ರಹ್ಮತೇಜಸ್ಸನ್ನು ನನ್ನ ತಪಸ್ಸಿನ ಬಲದಿಂದ ಆ ಚರುವಿನಲ್ಲಿ ಆಧಾನ ಮಾಡಿ- ದ್ದೆನು.
ಕ್ಷತ್ರವೀರ್ಯಂ ಚ ಸಕಲಂ ತವ ಮಾತ್ರೇ ಸಮರ್ಪಿತಮ್ |
ವಿಪರ್ಯಯೇಣ ತೇ ಭದ್ರೇ ನೈತದೇವಂ ಭವಿಷ್ಯತಿ |

ಮಾತುಸ್ತೇ ಬ್ರಾಹ್ಮಣೋ ಭೂಯಾತ್ ತವ ಚ ಕ್ಷತ್ರಿಯಃ ಸುತಃ ॥20॥
ನಿನ್ನ ತಾಯಿಯ ಚರುವಿನಲ್ಲಿ ಸಕಲವಾದ ಕ್ಷತ್ರಿಯತೇಜಸ್ಸನ್ನು ಆಧಾನ ಮಾಡಿ- ದ್ದೆನು. ನೀವು ಚರುವನ್ನು ವ್ಯತ್ಯಾಸ ಮಾಡಿದುದರಿಂದ ಎಲೌ ಮಂಗಳಸ್ವರೂಪಳೇ! ನಾನು ಸಂಕಲ್ಪಿಸಿದಂತೆ ಆಗುವುದಿಲ್ಲ. ನಿನ್ನ ತಾಯಿಗೆ ಬ್ರಾಹ್ಮಣನೂ ಮತ್ತು ನಿನಗೆ ಕ್ಷತ್ರಿಯನೂ ಪುತ್ರರಾಗಿ ಜನಿಸುತ್ತಾರೆ.
ಸೈವಮುಕ್ತಾ ಮಹಾಭಾಗಾ ಭರ್ತ್ರಾ ಸತ್ಯವತೀ ತದಾ |
ಪಪಾತ ಶಿರಸಾ ತಸ್ಮೈ ವೇಪಂತೀ ಚಾಬ್ರುವೀದಿದಮ್ ॥21॥
ನಾಹೋರ್ಽಸಿ ಭಗವನ್ನದ್ಯ ವಕ್ತುಮೇವಂವಿಧಂ ವಚಃ |
ಬ್ರಾಹ್ಮಣಾಪಶದಂ ಪುತ್ರಂ ಪ್ರಾಪ್ಸ್ಯಸೀತಿ ಮಹಾಮುನೇ ॥22॥
ಪತಿಯಿಂದ ಈ ರೀತಿಯಲ್ಲಿ ಹೇಳಲ್ಪಟ್ಟ ಮಹಾನುಭಾವಳಾದ ಸತ್ಯವತಿಯು ಆಗ ನಡುಗುತ್ತಾ ಪತಿಯ ಪಾದಗಳ ಮೇಲೆ ಶಿರಸಾ ಬಿದ್ದು, ಪೂಜ್ಯರೇ! ಮಹರ್ಷಿ- ಗಳೇ! ನೀವು ಈ ರೀತಿಯಲ್ಲಿ ನೀಚಕ್ಷತ್ರಿಯನನ್ನು ಪುತ್ರನನ್ನಾಗಿ ಪಡೆಯುವಿ ಎಂದು ಹೇಳುವುದು ಯುಕ್ತವಲ್ಲ ಎಂದು ಹೇಳಿದಳು.
ಋಚೀಕಃ
ನೈಷ ಸಂಕಲ್ಪಿತಃ ಕಾಮೋ ಮಯಾ ಭದ್ರೇ ತಥಾ ತ್ವಯಿ |
ಉಗ್ರಕರ್ಮಾ ಭವೇತ್ ಪುತ್ರಶ್ಚರುರ್ಮಾತಾ ಚ ಕಾರಣಮ್ ॥23॥
ಋಚೀಕ ಎಲೌ ಭದ್ರೆ! ನಿನಗೆ ಉಗ್ರಕರ್ಮವನ್ನು ಮಾಡುವ ಪುತ್ರನಾಗ- ಬೇಕೆಂದು ನಾನು ಸಂಕಲ್ಪಿಸಿರಲಿಲ್ಲ. ಈ ವ್ಯತ್ಯಾಸಕ್ಕೆ ಚರುವೂ ಮತ್ತು ನಿನ್ನ ತಾಯಿಯೂ ಕಾರಣರಾಗಿದ್ದಾರೆ.
ಸತ್ಯವತೀ
ಇಚ್ಛನ್ ಲೋಕಾನಪಿ ಮುನೇ ಸೃಜೇಥಾಃ ಕಿಂ ಪುನರ್ಮಮ |
ಶಮಾತ್ಮಕಮೃಜುಂ ಪುತ್ರಂ ಲಭೇಯಂ ಜಪತಾಂವರ ॥24॥
ಸತ್ಯವತೀ ಎಲೈ ಋಷಿಗಳೇ! ನೀವು ಬಯಸಿದರೆ ಮೂರು ಲೋಕಗಳನ್ನೂ ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿದ್ದೀರಿ. ನನ್ನ ಇಷ್ಟವನ್ನು ಕೊಡುವ ಸಾಮರ್ಥ್ಯದ ವಿಷಯದಲ್ಲಿ ಏನು ಹೇಳಬೇಕು? ಜಪವನ್ನು ಮಾಡುವವರಲ್ಲಿ ಶ್ರೇಷ್ಠರೇ! ನಾನು ಶಾಂತನಾದ ಆರ್ಜವವನ್ನು ಹೊಂದಿದ ಪುತ್ರನನ್ನು ಪಡೆದೇನು!
ಋಚೀಕಃ
ನೋಕ್ತಪೂರ್ವಂ ಮಯಾ ಭದ್ರೇ ಸ್ವೈರೇಷ್ವಪ್ಯನೃತಂ ವಚಃ |
ಕಿಮುತಾಗ್ನಿಂ ಸಮಾಧಾಯ ಮಂತ್ರವಚ್ಚರುಸಾಧನೇ ॥25॥
ಋಷೀಕ ಭದ್ರೆಯೇ! ನಾನು ವಿನೋದಕ್ಕಾಗಿಯೂ ಹಿಂದೆ ಸುಳ್ಳು ಮಾತ- ನಾಡಿದವನಲ್ಲ. ಹೀಗಿರುವಾಗ ಅಗ್ನ್ಯಾಧಾನವನ್ನು ಮಾಡಿ ಮಂತ್ರಪೂರ್ವಕವಾಗಿ ಚರುವನ್ನು ಸಿದ್ಧಪಡಿಸುವಾಗ ಹೇಗೆ ಸುಳ್ಳನ್ನು ಮಾತನಾಡುವೆನು?
ಸತ್ಯವತೀ
ಕಾಮಮೇವಂ ಭವೇತ್ ಪೌತ್ರೋ ಮಮೇಹ ತವ ಚೈವ ಹ |
ಶಮಾತ್ಮಕಮೃಜುಂ ಪುತ್ರಂ ಲಭೇಯಂ ಜಪತಾಂವರ ॥26॥
ಸತ್ಯವತೀ ಎಲೈ ಜಪಿಸುವವರಲ್ಲಿ ಶ್ರೇಷ್ಠರಾದವರೇ! ಬೇಕಾದರೆ ನನ್ನ ಮತ್ತು ನಿಮ್ಮ ಪೌತ್ರನು ನೀವು ಹೇಳಿದಂತೆಯೇ ಆಗಲಿ. ಆದರೆ ಪುತ್ರನು ಮಾತ್ರ ಶಾಂತನೂ ಮತ್ತು ಋಜುವೂ ಆಗಿರಬೇಕು.
ಋಚೀಕಃ
ಪುತ್ರೇ ನಾಸ್ತಿ ವಿಶೇಷೋ ಮೇ ಪೌತ್ರೇ ವಾ ವರವರ್ಣಿನಿ |
ಯಥಾ ತ್ವಯೋಕ್ತಂ ತು ವಚಸ್ತಥಾ ಭದ್ರೇ ಭವಿಷ್ಯತಿ ॥27॥
ಋಚೀಕರು ಎಲೌ ಸುಂದರಿಯೇ! ನನಗೆ ಪುತ್ರನಲ್ಲಿ ಮತ್ತು ಪೌತ್ರನಲ್ಲಿ ಯಾವ ವಿಶೇಷವೂ ಕಾಣುವುದಿಲ್ಲ. ಎಲೌ ಭದ್ರೆಯೇ! ಆದ್ದರಿಂದ ನೀನು ಹೇಳಿ- ದಂತೆಯೇ ಆಗುವುದು.
ಶ್ರೀಭಗವಾನ್
ತತಃ ಸತ್ಯವತೀ ಪುತ್ರಂ ಜನಯಾಮಾಸ ಭಾರ್ಗವಮ್ |
ತಪಸ್ಯಭಿರತಂ ಶಾಂತಂ ಜಮದಗ್ನಿಂ ಶಮಾತ್ಮಕಮ್ ॥28॥
ಶ್ರೀಭಗವಾನ್ ಅನಂತರ ಸತ್ಯವತಿಯು ಭೃಗುಕುಲಕ್ಕೆ ಸೇರಿದ ತಪೋನಿಷ್ಠರಾದ ಶಾಂತರಾದ ಜಮದಗ್ನಿಗಳನ್ನು ಪುತ್ರರನ್ನಾಗಿ ಪಡೆದಳು.
ವಿಶ್ವಾಮಿತ್ರಂ ಚ ದಾಯಾದಂ ಗಾಧಿಃ ಕುಶಿಕನಂದನಃ |
ಪ್ರಾಪ ಬ್ರಹ್ಮರ್ಷಿಸಮಿತಂ ವಿಶ್ವೇನ ಬ್ರಹ್ಮಣಾ ಯುತಮ್ ॥29॥
ಕುಶಿಕನಂದನನಾದ ಗಾಧಿಯು ವಿಶ್ವಾಮಿತ್ರರನ್ನು ಪುತ್ರರನ್ನಾಗಿ ಪಡೆದನು. ವಿಶ್ವಾಮಿತ್ರರು ಮುಂದೆ ಬ್ರಹ್ಮರ್ಷಿಸಮಾನರಾಗಿ ಪರಿಗಣಿಸಲ್ಪಟ್ಟು ವಿಶ್ವನಾಮಕನಾದ ಪರಬ್ರಹ್ಮನ ಸನ್ನಿಧಾನದಿಂದ ಕೂಡಿದವರಾದರು.
ಆರ್ಚೀಕೋ ಜನಯಾಮಾಸ ಜಮದಗ್ನಿಃ ಸುದಾರುಣಮ್ |
ಸರ್ವವಿದ್ಯಾಂತಗಂ ಶ್ರೇಷ್ಠಂ ಧನುರ್ವೇದೇ ಚ ಪಾರಗಮ್ |
ರಾಮಂ ಕ್ಷತ್ರಿಯಹಂತಾರಂ ಪ್ರದೀಪ್ತಮಿವ ಪಾವಕಮ್ ॥30॥
ಋಚೀಕಪುತ್ರರಾದ ಜಮದಗ್ನಿಗಳು ಅತ್ಯಂತ ಘೋರನೂ, ಸರ್ವವಿದ್ಯಾ ಪಾರಂಗತನೂ, ಶ್ರೇಷ್ಠನೂ, ಧನುರ್ವೇದದಲ್ಲಿಯೂ

ಪಾರಂಗತನೂ, ಕ್ಷತ್ರಿಯ- ಸಂಹಾರಕನೂ, ಜ್ವಲಿಸುವ ಅಗ್ನಿಯಂತಿರುವವನೂ ಆದ ರಾಮನನ್ನು ಪುತ್ರನನ್ನಾಗಿ ಪಡೆದರು.
ತೋಷಯಿತ್ವಾ ಮಹಾದೇವಂ ಪರ್ವತೇ ಗಂಧಮಾದನೇ |
ಅಸ್ತ್ರಾಣಿ ವರಯಾಮಾಸ ಪರಶುಂ ಚಾತಿತೇಜಸಮ್ ||31||
ರಾಮನು ಗಂಧಮಾದನಪರ್ವತದಲ್ಲಿ ಮಹಾದೇವನನ್ನು ಸಂತೋಷಪಡಿಸಿ ಅವನಿಂದ ಅಸ್ತ್ರಗಳನ್ನೂ ಅತಿತೇಜಸ್ಸುಳ್ಳ ಪರಶುವನ್ನೂ ವರವನ್ನಾಗಿ ಪಡೆದನು. (ಅಲ್ಲಿಂದ ಅವನಿಗೆ ಪರಶುರಾಮನೆಂಬ ಹೆಸರು ಬಂದಿತು).
ಸ ತೇನಾಕುಂಠಧಾರೇಣ ಜ್ವಲಿತಾನಲವರ್ಚಸಾ |
ಕುಠಾರೇಣಾಪ್ರಮೇಯೇನ ಲೋಕೇಷ್ವಪ್ರತಿಮೋಽಭವತ್ ||32||
ಜ್ವಲಿಸುವ ಅಗ್ನಿಗೆ ಸಮವಾದ ನಿಶಿತವಾದ ಧಾರೆಯುಳ್ಳ ಅಪರಿಮಿತವಾದ ಶಕ್ತಿಯುಳ್ಳ ಆ ಪರಶುವಿನಿಂದ ಲೋಕದಲ್ಲಿ ಅವನು ಅಪ್ರತಿಮನಾದನು.
ಏತಸ್ಮಿನ್ನೇವ ಕಾಲೇ ತು ಕೃತವೀರ್ಯಾತ್ಮಜೋ ಬಲೀ |
ಅರ್ಜುನೋ ನಾಮ ತೇಜಸ್ವೀ ಕ್ಷತ್ರಿಯೋ ಹೈಹಯಾನ್ವಯಃ ||33||
ಅಜಯತ್ ಪೃಥಿವೀಂ ಸರ್ವಾಂ ಸಪ್ತದ್ವೀಪಾಂ ಸಪತ್ತನಾಮ್ |
ಸ್ವಬಾಹ್ವಸ್ತ್ರಬಲೇನಾಜೌ ಧರ್ಮೇಣ ಪರಮೇಣ ಚ ||34||
ಇದೇ ಸಮಯದಲ್ಲಿ ಕೃತವೀರ್ಯಪುತ್ರನಾದ ಅರ್ಜುನನೆಂಬ ಹೈಹಯಕುಲದ ತೇಜಸ್ವಿಯಾದ ಕ್ಷತ್ರಿಯನು ತನ್ನ ಬಾಹುಬಲದಿಂದ ಅಸ್ತ್ರಬಲದಿಂದ ಮತ್ತು ಶ್ರೇಷ್ಠ- ವಾದ ಧರ್ಮದ ಬಲದಿಂದ ಪಟ್ಟಣಗಳಿಂದ ಸಹಿತವಾದ ಸಪ್ತದ್ವೀಪವತಿಯಾದ ಭೂಮಿಯನ್ನು ಗೆದ್ದನು.
ತೃಷಿತೇನ ಸ ಕೌರವ್ಯ ಭಿಕ್ಷಿತಶ್ಚಿತ್ರಭಾನುನಾ |
ಸಹಸ್ರಬಾಹುರ್ವಿಕ್ರಾಂತಃ ಪ್ರಾದಾದ್ ಭಿಕ್ಷಾಮಥಾಗ್ನಯೇ ||35||
ಎಲೈ ಕೌರವ್ಯನೇ! ಸಹಸ್ರಬಾಹುವಾದ ಅವನು ಅಗ್ನಿಯು ಬಾಯಾರಿ ಬೇಡಿ- ದಾಗ ತನ್ನ ಪರಾಕ್ರಮದಿಂದ ಅಗ್ನಿಗೆ ಭಿಕ್ಷೆಯನ್ನು ನೀಡಿದನು.
ಗ್ರಾಮಾನ್ ಪುರಾಣಿ ಘೋಷಾಂಶ್ಚ ಪತ್ತನಾನಿ ಚ ವೀರ್ಯವಾನ್ |
ಜಜ್ವಾಲ ತಸ್ಯ ಬಾಣೈಸ್ತು ಚಿತ್ರಭಾನುರ್ದಿಧಕ್ಷಯಾ ||36||
ಕಾರ್ತವೀರ್ಯಾರ್ಜುನನು ಪ್ರಯೋಗಿಸಿದ ಬಾಣದಿಂದ ಉಂಟಾದ ಅಗ್ನಿ- ಯಿಂದ ಎಲ್ಲವನ್ನೂ ದಹಿಸಿ ಭಕ್ಷಿಸಲು ಬಯಸಿ ಅಗ್ನಿಯು ಗ್ರಾಮಗಳನ್ನೂ, ಪುರ- ಗಳನ್ನೂ, ಪಟ್ಟಣಗಳನ್ನೂ ಮತ್ತು ಹಳ್ಳಿಗಳನ್ನೂ ಜ್ವಲಿಸಿದನು.
ಸ ತಸ್ಯ ಪುರುಷೇಂದ್ರಸ್ಯ ಪ್ರಭಾವೇನ ಮಹಾತಪಾಃ |
ದದಾಹ ಕಾರ್ತವೀರ್ಯಸ್ಯ ಶೈಲಾನಥ ವನಾನಿ ಚ ||37||
ಮಹಾತಪಸ್ವಿಯಾದ ಅಗ್ನಿಯು ಪುರುಷೇಂದ್ರನಾದ ಕಾರ್ತವೀರ್ಯಾರ್ಜುನನ ಪ್ರಭಾವದಿಂದ ಕಾರ್ತವೀರ್ಯಾರ್ಜುನನ ಪರ್ವತಗಳನ್ನೂ ವನಗಳನ್ನೂ ಸುಟ್ಟು ಹಾಕಿದನು.
ಸ ಶೂನ್ಯಮಾಶ್ರಮಾರಣ್ಯಮ್ ಆಪವಸ್ಯ ಮಹಾತ್ಮನಃ |
ದದಾಹ ಪವನೇನೇದ್ಧಶ್ಚಿತ್ರಭಾನುಃ ಸಹೈಹಯಃ ||38||
ಅಗ್ನಿಯು ಹೈಹಯರಾಜನಿಂದ ಸಹಿತನಾಗಿ ಮಹಾತ್ಮರಾದ ವಸಿಷ್ಠರ ಶೂನ್ಯ- ವಾದ ಅರಣ್ಯಾಶ್ರಮವನ್ನು ವಾಯುವಿನ ಸಹಾಯದಿಂದ ಸುಟ್ಟುಹಾಕಿದನು.
ಆಪವಸ್ತಂ ತತೋ ರೋಷಾಚ್ಛಶಾಪಾರ್ಜುನಮಚ್ಯುತ |
ದಗ್ಧೇ ಶ್ರಮೇ ಮಹಾರಾಜ ಕಾರ್ತವೀರ್ಯೇಣ ವೀರ್ಯವಾನ್ ||39||
ಎಲೈ ಮಹಾರಾಜನೇ! ಅಚ್ಯುತನೇ! ಕಾರ್ತವೀರ್ಯನ ಸಹಾಯದಿಂದ ಅಗ್ನಿಯು ತಮ್ಮ ಆಶ್ರಮವನ್ನು ದಹಿಸಿದ ಕಾರಣದಿಂದ ಪರಾಕ್ರಮಶಾಲಿಗಳಾದ ವಸಿಷ್ಠರು ರೋಷದಿಂದ ಅರ್ಜುನನಿಗೆ ಶಾಪವನ್ನು ಕೊಟ್ಟರು.
ತ್ವಯಾ ನ ವರ್ಜಿತಂ ಮೋಹಾದ್ ಯಸ್ಮಾದ್ ವನಮಿದಂ ಮಮ |
ದಗ್ಧಂ ತಸ್ಮಾದ್ ರಣೇ ರಾಮೋ ಬಾಹೂಂಸ್ತೇ ಛೇತ್ಸ್ಯತೇಽರ್ಜುನ ||40||
ಎಲೈ ಅರ್ಜುನನೇ! ನೀನು ಮೋಹಕ್ಕೆ ವಶನಾಗಿ ನನ್ನ ಈ ಕಾನನಾಶ್ರಮವನ್ನು ಬಿಡದೆ ದಹಿಸಿದ ಕಾರಣದಿಂದ ಮುಂದೆ ಪರಶುರಾಮನು ಯುದ್ಧದಲ್ಲಿ ನಿನ್ನ ಬಾಹುಗಳನ್ನು ಕತ್ತರಿಸುವನು (ಎಂದು ಶಾಪವನ್ನು ನೀಡಿದರು).
ಅರ್ಜುನಸ್ತು ಮಹಾರಾಜ ಬಲೀ ನಿತ್ಯಂ ಶಮಾತ್ಮಕಃ |
ಬ್ರಹ್ಮಣ್ಯಶ್ಚ ಶರಣ್ಯಶ್ಚ ದಾತಾಶೂರಶ್ಚ ಭಾರತ ||41||
ಎಲೈ ಮಹಾರಾಜನೇ! ಭಾರತನೇ! ಅರ್ಜುನನಾದರೋ ಬಲಿಷ್ಠನೂ, ಯಾವಾಗಲೂ ಶಾಂತಸ್ವರೂಪನೂ, ಬ್ರಾಹ್ಮಣವತ್ಸಲನೂ, ಶರಣಾಗತವತ್ಸಲನೂ, ದಾತೃವೂ ಮತ್ತು ಶೂರನೂ ಆಗಿದ್ದನು.
ತಸ್ಯ ಪುತ್ರಾಃ ಸುಬಲಿನಃ ಶಾಪೇನಾಸನ್ ಪಿತುರ್ವಧೇ |
ನಿಮಿತ್ತಮವಲಿಪ್ತಾ ವೈ ನೃಶಂಸಾಶ್ಚೈವ ನಿತ್ಯದಾ ||42||
ಅವನ ಪುತ್ರರು ಬಲಿಷ್ಠರೂ ಕ್ರೂರಿಗಳೂ ದರ್ಪಿಷ್ಠರೂ ಆಗಿ ಶಾಪದಿಂದ ಪಿತೃ- ವಧೆಗೆ ಕಾರಣರಾದರು.
ಜಮದಗ್ನಿಧೇನ್ವಾಸ್ತೇ ವತ್ಸಮಾನಿನ್ಯುರ್ಭರತರ್ಷಭ |
ಅಜ್ಞಾತಂ ಕಾರ್ತವೀರ್ಯಸ್ಯ ಹೈಹಯೇಂದ್ರಸ್ಯ ಧೀಮತಃ ||43||
ಎಲೈ ಭರತರ್ಷಭನೇ! ಅವರು ಜಮದಗ್ನಿಋಷಿಗಳ ಧೇನುವಿನ ಕರುವನ್ನು ಮೇಧಾವಿಯಾದ ಹೈಹಯರಾಜನಾದ ಕಾರ್ತವೀರ್ಯನಿಗೆ

ತಿಳಿಯದಂತೆಯೇ ಎಳೆದುಕೊಂಡು ಬಂದರು.
ತತೋಽರ್ಜುನಸ್ಯ ಬಾಹೂಂಸ್ತು ಛಿತ್ವಾ ವೈ ಪೌರುಷಾನ್ವಿತಃ |
ತಂ ರುವಂತಂ ತತೋ ವತ್ಸಂ ಜಾಮದಗ್ನ್ಯಃ ಸ್ವಮಾಶ್ರಮಮ್ ॥44॥
ಎಲ್ಲೈ ರಾಜೇಂದ್ರನೇ! ಅನಂತರ ಪೌರುಷವನ್ನು ಹೊಂದಿದ ಪ್ರಭುಗಳಾದ ಪರಶುರಾಮರು ಅರ್ಜುನನ ಬಾಹುಗಳನ್ನು ಕತ್ತರಿಸಿ ಕಿರುಚಾಡುತ್ತಿದ್ದ ಆ ಕರುವನ್ನು ರಾಜನ ಅಂತಃಪುರದಿಂದ ತಮ್ಮ ಆಶ್ರಮಕ್ಕೆ ಹಿಂದಕ್ಕೆ ತೆಗೆದುಕೊಂಡು ಬಂದರು.
ಅರ್ಜುನಸ್ಯ ಸುತಾಸ್ತೇ ತು ಸಂಭೂಯಾಬುದ್ಧಯಸ್ತದಾ |
ಗತ್ವಾಽಽಶ್ರಮಮಸಂಬುದ್ಧಂ ಜಮದಗ್ನೇರ್ಮಹಾತ್ಮನಃ ॥45॥
ಅಪಾತಯಂತ ಭಲ್ಲಾಗ್ರೈಃ ಶಿರಃ ಕಾಯಾನ್ನರಾಧಿಪ |
ಸಮಿತ್ಕುಶಾರ್ಥಂ ರಾಮಸ್ಯ ನಿರ್ಗತಸ್ಯ ಮಹಾತ್ಮನಃ ॥46॥
ಆಗ ಆ ಅರ್ಜುನನ ಬುದ್ಧಿಹೀನರಾದ ಪುತ್ರರು ಮಹಾತ್ಮರಾದ ಜಮದಗ್ನಿಗಳ ಆಶ್ರಮಕ್ಕೆ ಯಾರಿಗೂ ತಿಳಿಯದಂತೆ ಹೋಗಿ ಭಲ್ಲೆಯಿಂದ ಅವರ ಶಿರಸ್ಸನ್ನು ಕತ್ತರಿಸಿ ಕೆಡವಿದರು. ಎಲ್ಲೈ ರಾಜನೇ! ಮಹಾತ್ಮರಾದ ಪರಶುರಾಮರು ಆಗ ಸಮಿತ್ತು ಮತ್ತು ಕುಶಗಳನ್ನು ತರಲು ಆಶ್ರಮದಿಂದ ಹೊರಗೆ ಹೋಗಿದ್ದರು.
ಪ್ರತ್ಯಕ್ಷಂ ರಾಮಮಾತುಶ್ಚ ತಥೈವಾಶ್ರಮವಾಸಿನಾಮ್ |
ಶ್ರುತ್ವಾ ರಾಮಸ್ತಮರ್ಥಂ ಚ ಕ್ರುದ್ಧಃ ಕಾಲಾನಲೋಪಮಃ ॥47॥
ರಾಮನ ತಾಯಿಯಾದ ರೇಣುಕೆಯ ಮತ್ತು ಆಶ್ರಮವಾಸಿಗಳ ಎದುರಿನಲ್ಲಿ ತಮ್ಮ ತಂದೆಯನ್ನು ಸಂಹರಿಸಿದುದನ್ನು ಕೇಳಿ ಪರಶುರಾಮರು ಕಾಲಾಗ್ನಿಯಂತೆ ಕೋಪಗೊಂಡರು.
ಧನುರ್ವೇದೇಽದ್ವಿತೀಯೋ ಹಿ ದಿವ್ಯಾಸ್ತ್ರೈಃ ಸಮಲಂಕೃತಃ |
ಚಂದ್ರಬಿಂಬಾರ್ಧಸಂಕಾಶಂ ಪರಶುಂ ಗೃಹ್ಯ ಭಾರ್ಗವಃ ॥48॥
ತತಃ ಪಿತೃವಧಾಮರ್ಷಾದ್ ರಾಮಃ ಪರಮಮನ್ಯುಮಾನ್ |
ನಿಃಕ್ಷತ್ರಿಯಾಂ ಪ್ರತಿಶ್ರುತ್ಯ ಮಹೀಂ ಶಸ್ತ್ರಮಗೃಹ್ಣತ ॥49॥
ಧನುರ್ವೇದದಲ್ಲಿ ಅದ್ವಿತೀಯರೂ ಮತ್ತು ದಿವ್ಯಾಸ್ತ್ರಗಳಿಂದ ಸಮಲಂಕೃತರೂ ಆದ ಪರಶುರಾಮರು ಅರ್ಧಚಂದ್ರಬಿಂಬದಂತಿದ್ದ ಪರಶುವನ್ನು ತೆಗೆದುಕೊಂಡು ತಂದೆಯ ವಧೆಯಿಂದ ಬಹಳ ಕೋಪಗೊಂಡವರಾಗಿ ಭೂಮಿಯನ್ನು ಕ್ಷತ್ರಿಯ- ರಹಿತವನ್ನಾಗಿ ಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ ಶಸ್ತ್ರಗ್ರಹಣವನ್ನು ಮಾಡಿ- ದರು.
ತತಃ ಸ ಭೃಗುಶಾರ್ದೂಲಃ ಕಾರ್ತವೀರ್ಯಸ್ಯ ವೀರ್ಯವಾನ್ |
ವಿಕ್ರಮ್ಯ ನಿಜಘಾನಾಶು ಪುತ್ರಾನ್ ಪೌತ್ರಾಂಶ್ಚ ಸರ್ವಶಃ ॥50॥
ಅನಂತರ ಪರಾಕ್ರಮಶಾಲಿಗಳಾದ ಭೃಗುಶಾರ್ದೂಲರಾದ ಅವರು ತಮ್ಮ ಪರಾ -ಕ್ರಮದಿಂದ ಕಾರ್ತವೀರ್ಯನ ಪುತ್ರಪೌತ್ರರೆಲ್ಲರನ್ನೂ ಶೀಘ್ರವಾಗಿ ಸಂಹರಿಸಿದರು.
ಸ ಹೈಹಯಸಹಸ್ರಾಣಿ ಹತ್ವಾ ಪರಮಮನ್ಯುಮಾನ್ |
ಚಕಾರ ಭಾರ್ಗವೋ ರಾಜನ್ ಮಹೀಂ ಶೋಣಿತಕರ್ದಮಾಮ್ ॥51॥
ಎಲ್ಲೈ ರಾಜನೇ! ಪರಮಕೋಪಿಷ್ಠರಾದ ಪರಶುರಾಮರು ಹೈಹಯಕುಲದ ಸಹಸ್ರಪುರುಷರನ್ನು ಕೊಂದು ಭೂಮಿಯನ್ನು ರಕ್ತದ ಕೆಸರುಳ್ಳದ್ದನ್ನಾಗಿ ಮಾಡಿದರು.
ಸ ತಥಾ ಸುಮಹಾತೇಜಾಃ ಕೃತ್ವಾ ನಿಃಕ್ಷತ್ರಿಯಾಂ ಮಹೀಮ್ |
ಕೃಪಯಾ ಪರಯಾವಿಷ್ಟೋ ವನಮೇವ ಜಗಾಮ ಹ ॥52॥
ಮಹಾತೇಜಸ್ವಿಗಳಾದ ಅವರು ಭೂಮಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡಿ ಶ್ರೇಷ್ಠ ಕೃಪೆಯಿಂದ ಕೂಡಿದವರಾಗಿ ಕಾಡಿಗೇ ಹೊರಟುಹೋದರು.
ತತೋ ವರ್ಷಸಹಸ್ರೇಷು ಸಮತೀತೇಷು ಕೇಷುಚಿತ್ |
ಕ್ಷೇಪಂ ಸಂಪ್ರಾಪ್ತವಾಂಸ್ತೀವ್ರಂ ಪ್ರಕೃತ್ಯಾ ಕೋಪನಃ ಪ್ರಭುಃ ॥53॥
ಅನಂತರ ಕೆಲವು ಸಹಸ್ರವರ್ಷಗಳು ಕಳೆದ ಮೇಲೆ ಸ್ವಭಾವದಿಂದಲೇ ಕೋಪ- ಶೀಲರಾದ ಪ್ರಭುಗಳಾದ ಅವರು ತೀವ್ರವಾದ ನಿಂದೆಗೆ ಗುರಿಯಾದರು.
ವಿಶ್ವಾಮಿತ್ರಸ್ಯ ಪೌತ್ರಸ್ತು ರೈಭ್ಯಪುತ್ರೋ ಮಹಾತಪಾಃ |
ಪರಾವಸುರ್ಮಹಾರಾಜ ಕ್ಷಿಪ್ತ್ವಾಹ ಜನಸಂಸದಿ ॥54॥
ಎಲ್ಲೈ ಮಹಾರಾಜನೇ! ವಿಶ್ವಾಮಿತ್ರನ ಪೌತ್ರನೂ ಮಹಾತಪಸ್ವಿಯೂ ರೈಭ್ಯ- ಪುತ್ರನೂ ಆದ ಪರಾವಸುವು ಜನರ ಸಭೆಯಲ್ಲಿ ಪರಶುರಾಮರನ್ನು ನಿಂದಿಸಿ ಮಾತನಾಡಿದನು.
ಯೇ ತೇ ಯಯಾತಿಪತನೇ ಯಜ್ಞೇ ಸಂತಃ ಸಮಾಗತಾಃ |
ಪ್ರತರ್ದನಪ್ರಭೃತಯೋ ರಾಮ ಕಿಂ ಕ್ಷತ್ರಿಯಾ ನ ತೇ ॥55॥
ಎಲ್ಲೈ ಪರಶುರಾಮನೇ! ಯಯಾತಿಪತನವೆಂಬ ಸ್ಥಳದಲ್ಲಿ ಯಜ್ಞವನ್ನು ಮಾಡಿ- ದಾಗ ಅಲ್ಲಿಗೆ ಸಮಾಗತರಾದ ಪ್ರತರ್ದನ ಮೊದಲಾದವರು ಕ್ಷತ್ರಿಯರಲ್ಲವೇ? (ಅವರನ್ನು ನೀನು ಏಕೆ ಕೊಲ್ಲಲಿಲ್ಲ?)
ಮಿಥ್ಯಾಪ್ರತಿಜ್ಞೋ ರಾಮ ತ್ವಂ ಕತ್ಥಸೇ ಜನಸಂಸದಿ |
ಭಯಾತ್ ಕ್ಷತ್ರಿಯವೀರಾಣಾಂ ಪರ್ವತಂ ಸಮುಪಾಶ್ರಿತಃ ॥56॥
ಎಲ್ಲೈ ಪರಶುರಾಮನೇ! ನೀನು ಮಿಥ್ಯಾ ಪ್ರತಿಜ್ಞೆಯನ್ನು ಮಾಡಿ ಜನರೆದುರಿನಲ್ಲಿ ನಿನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಿದ್ದೀಯೆ.

ಕ್ಷತ್ರಿಯವೀರರ ಭಯದಿಂದ ನೀನು ಪರ್ವತವನ್ನು ಸೇರಿದ್ದೀಯೆ.
ಸ ಪುನಃ ಕ್ಷತ್ರಿಯಶತೈಃ ಪೃಥಿವೀಮನುಸಂತತಾಮ್ |
ಪರಾವಸೋಸ್ತದಾ ಶ್ರುತ್ವಾ ಶಸ್ತ್ರಂ ಜಗ್ರಾಹ ಭಾರ್ಗವಃ ॥57॥
ಆಗ ಪರಶುರಾಮರು ಪರಾವಸುವಿನ ಆ ಮಾತನ್ನು ಕೇಳಿ, ಪುನಃ ಭೂಮಿಯಲ್ಲಿ ಕ್ಷತ್ರಿಯಜಾತಿಯು ನಿಬಿಡವಾಗಿ ಹರಡಿರುವುದನ್ನು ತಿಳಿದು ಪುನಃ ಶಸ್ತ್ರಗ್ರಹಣವನ್ನು ಮಾಡಿದರು.
ತತೋ ಯೇ ಕ್ಷತ್ರಿಯಾ ರಾಜನ್ ಶತಸ್ತೇನ ಜೀವಿತಾಃ |
ತೇ ವಿವೃದ್ಧಾ ಮಹಾವೀರ್ಯಾಃ ಪೃಥಿವೀಪತಯೋಽಭವನ್ ॥58॥
ಎಲೈ ರಾಜನೇ! ಆಗ ಮೊದಲು ಯಾವ ನೂರಾರು ಸಂಖ್ಯೆಯ ಕ್ಷತ್ರಿಯರನ್ನು ಅವರು ಕೊಲ್ಲದೆ ಜೀವಸಹಿತವಾಗಿ ಉಳಿಸಿದ್ದರೋ, ಅವರೆಲ್ಲರೂ ಬೆಳೆದು ಮಹಾ- ಪರಾಕ್ರಮಿಗಳಾಗಿ ರಾಜರಾಗಿದ್ದರು.
ಸ ಪುನಸ್ತಾನ್ ಜಘಾನಾಶು ಬಾಲಾನಪಿ ನರಾಧಿಪ |
ಗರ್ಭಸ್ಥೈಸ್ತು ಮಹೀ ವ್ಯಾಪ್ತಾ ಪುನರೇವಾಭವತ್ ತದಾ ॥59॥
ಎಲೈ ರಾಜನೇ! ಪರಶುರಾಮರು ಪುನಃ ಬಾಲಕರನ್ನೂ ಸೇರಿಸಿ ಅವರನ್ನು ಶೀಘ್ರವಾಗಿ ಕೊಂದರು. ಆದರೆ ಪುನಃ ಗರ್ಭದಲ್ಲಿದ್ದ ಕ್ಷತ್ರಿಯರಿಂದ ಭೂಮಿಯು ವ್ಯಾಪ್ತವಾಯಿತು.
ಜಾತಂ ಜಾತಂ ಸ ಗರ್ಭಂ ತು ಪುನರೇವ ಜಘಾನ ಹ |
ಅರಕ್ಷಂಶ್ಚ ಸುತಾನ್ ಕಾಶ್ಚಿತ್ ತದಾ ಕ್ಷತ್ರಿಯಯೋಷಿತಃ ॥60॥
ಪರಶುರಾಮರು ಪುನಃ ಗರ್ಭವು ಜನಿಸಿದಂತೆ, ಜನಿಸಿದಂತೆ ಶಿಶುಗಳನ್ನು ಸಂಹರಿಸಿದರು. ಆಗ ಕೆಲವು ಕ್ಷತ್ರಿಯಸ್ತ್ರೀಯರು ಮಾತ್ರ ತಮ್ಮ ಪುತ್ರರನ್ನು ರಕ್ಷಿಸಿದರು.
ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ |
ದಕ್ಷಿಣಾಮಶ್ವಮೇಧಾಂತೇ ಕಶ್ಯಪಾಯಾದದತ್ ತತಃ ॥61॥
ಪ್ರಭುಗಳಾದ ಪರಶುರಾಮರು ಇಪ್ಪತ್ತೊಂದು ಬಾರಿ ಭೂಮಿಯನ್ನು ಸುತ್ತಿ, ನಿಃಕ್ಷತ್ರಿಯವನ್ನಾಗಿ ಮಾಡಿ ಅಶ್ವಮೇಧವನ್ನು ಮಾಡಿ ಸಮಗ್ರವಾದ ಭೂಮಿಯನ್ನು ಕಶ್ಯಪರಿಗೆ ದಕ್ಷಿಣೆಯನ್ನಾಗಿ ನೀಡಿದರು.
ಕ್ಷತ್ರಿಯಾಣಾಂ ತು ಶೇಷಾರ್ಥಂ ಕರೇಣೋದ್ದಿಶ್ಯ ಕಶ್ಯಪಃ |
ಸುಕ್‌ಪ್ರಗ್ರಹವತಾ ರಾಜನ್ ಶ್ರೀಮಾನ್ ವಾಕ್ಯಮಥಾಬ್ರವೀತ್ ॥62॥
ಎಲೈ ರಾಜನೇ! ಕ್ಷತ್ರಿಯಕುಲವನ್ನು ಉಳಿಸುವ ಸಲುವಾಗಿ ಕಾಂತಿಯುಕ್ತರಾದ ಕಶ್ಯಪರು ಸ್ರುವವನ್ನು ಹಿಡಿದ ಹಸ್ತವನ್ನು ಮೇಲಕ್ಕೆ ಎತ್ತಿ ತೋರಿಸಿ ಈ ಮಾತನ್ನಾ- ಡಿದರು.
ಗಚ್ಛಂ ಪಾರಂ ಸಮುದ್ರಸ್ಯ ದಕ್ಷಿಣಸ್ಯ ಮಹಾಮುನೇ |
ನ ತೇ ಮದ್ವಿಷಯೇ ರಾಮ ವಸ್ತವ್ಯಮಿಹ ಕರ್ಹಿಚಿತ್ ॥63॥
ಎಲೈ ಮಹಾಮುನಿಯೇ! ದಕ್ಷಿಣಸಮುದ್ರದ ತೀರಕ್ಕೆ ಹೊರಟು ಹೋಗು. ಎಲೈ ರಾಮನೇ! ನನ್ನ ರಾಜ್ಯದಲ್ಲಿ ನೀನು ಯಾವ ಕಾರಣಕ್ಕೂ ವಾಸವನ್ನು ಮಾಡಬಾರದು - ಎಂದು ಹೇಳಿದರು.
ತತಃ ಶೂರ್ಪಾಕರೋದ್ದೇಶಂ ಸಾಗರಸ್ತಸ್ಯ ನಿರ್ಮಮೇ |
ಸಂತ್ರಾಸಾಜ್ಜಾಮದಗ್ನ್ಯಸ್ಯ ಸೋಽಪರಾಂತಮಹೀತಳಮ್ ॥64॥
ಆಗ ಪರಶುರಾಮರ ಭಯದಿಂದ ಸಾಗರನು ಪಶ್ಚಿಮಸಮುದ್ರದಲ್ಲಿ ಕನ್ಯಾ- ತೀರ್ಥದ ಸಮೀಪದಲ್ಲಿ ಪರಶುರಾಮರ ಶೂರ್ಪಾಕಾರವಾದ ಶರವು ಬಿದ್ದ ಕಾರಣ- ದಿಂದ ಶೂರ್ಪಾಕರವೆಂಬ ದೇಶದವರೆಗೆ ಭೂಮಿಯನ್ನು ನಿರ್ಮಿಸಿಕೊಟ್ಟನು.
ಕಶ್ಯಪಸ್ತು ಮಹಾರಾಜ ಪ್ರತಿಗೃಹ್ಯ ಮಹೀಮಿಮಾಮ್ |
ಕೃತ್ವಾ ಬ್ರಾಹ್ಮಣಸಂಸ್ಥಾಂ ವೈ ಪ್ರವಿವೇಶ ಮಹಾವನಮ್ ॥65॥
ಎಲೈ ಮಹಾರಾಜನೇ! ಕಶ್ಯಪರಾದರೋ ಈ ಭೂಮಿಯನ್ನು ದಾನವಾಗಿ ಸ್ವೀಕರಿಸಿ, ಅದನ್ನು ಬ್ರಾಹ್ಮಣರಿಗೆ ದಾನವನ್ನಾಗಿ ನೀಡಿ, ತಪಸ್ಸಿಗಾಗಿ ಮಹಾರಣ್ಯವನ್ನು ಪ್ರವೇಶಿಸಿದರು.
ತತಃ ಶೂದ್ರಾಶ್ಚ ವೈಶ್ಯಾಶ್ಚ ಯಥಾಸ್ವೈರಪ್ರಚಾರಿಣಃ |
ಅವರ್ತಂತ ದ್ವಿಜಾಗ್ರ್ಯಾಣಾಂ ದಾರೇಷು ಭರತರ್ಷಭ ॥66॥
ಎಲೈ ಭರತಶ್ರೇಷ್ಠನೇ! ಅನಂತರ ಶೂದ್ರರು ಮತ್ತು ವೈಶ್ಯರು ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಳ್ಳುತ್ತಾ ಶ್ರೇಷ್ಠರಾದ ಬ್ರಾಹ್ಮಣರ ಪತ್ನಿಯರ ಸಹವಾಸವನ್ನು ಮಾಡಿದರು.
ಅರಾಜಕೇ ಜೀವಲೋಕೇ ದುರ್ಬಲಾ ಬಲವತ್ತರೈಃ |
ಬಾಧ್ಯಂತೇ ನಚ ವಿತ್ತೇಷು ಪ್ರಭುತ್ವಮಿಹ ಕಸ್ಯಚಿತ್ ॥67॥
ಜೀವಲೋಕವು ಅರಾಜಕವಾದಾಗ ದುರ್ಬಲರು ಬಲಿಷ್ಠರಿಂದ ಪೀಡಿಸ- ಲ್ಪಟ್ಟರು. ಯಾರಿಗೂ ತಮ್ಮ ಧನದ ಮೇಲೆ ಒಡೆತನವಿರಲಿಲ್ಲ.
ಬ್ರಾಹ್ಮಣಾ ಮದ್ಯಪಾ ಕೇಚಿನ್ಮೂರ್ಖಾಃ ಪಂಡಿತಮಾನಿನಃ |
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಶ್ಚೋತ್ಪಥಗಾಮಿನಃ ॥68॥
ಬ್ರಾಹ್ಮಣರು ಮದ್ಯಪಾನರತರಾದರು. ಕೆಲವು ಮೂರ್ಖರು ತಮ್ಮನ್ನೇ ಪಂಡಿತ -ರೆಂದುಕೊಂಡರು.ಬ್ರಾಹ್ಮಣರು ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ದು- ರ್ಮಾರ್ಗಗಾಮಿಗಳಾದರು.
ಪರಸ್ಪರಂ ಸಮಾಶ್ರಿತ್ಯ ಘಾತಯಂತ್ಯಪಥಿ ಸ್ಥಿತಾಃ |
ಸ್ವಧರ್ಮಂ ಬ್ರಾಹ್ಮಣಾಸ್ತ್ಯಕ್ತ್ವಾ ಪಾಷಂಡಾಶ್ಚ ಸಮಾಶ್ರಿತಾಃ ॥69॥

ದುರ್ಮಾರ್ಗದಲ್ಲಿ ಪ್ರವೃತ್ತರಾಗಿ ಪರಸ್ಪರವಾಗಿ ಸಹಾಯವನ್ನು ಹೊಂದಿ ಪ್ರಜೆ- ಗಳನ್ನು ಕೊಲ್ಲಲು ಪ್ರಾರಂಭಿಸಿದರು. ಬ್ರಾಹ್ಮಣರು ತಮ್ಮ ಧರ್ಮವನ್ನು ತ್ಯಜಿಸಿ, ಪಾಷಂಡಮತಗಳನ್ನು ಆಶ್ರಯಿಸಿದರು.

ಚೌರಿಕಾನೃತಮಾಯಾಶ್ಚ ಸರ್ವೇ ಚೈವ ಪ್ರಕುರ್ವತೇ |
ಸ್ವಧರ್ಮಸ್ಥಾನ್ ದ್ವಿಜಾನ್ ಹತ್ವಾ ತಥಾಶ್ರಮನಿವಾಸಿನಃ ॥70॥

ಸ್ವಧರ್ಮನಿರತರಾದ ಆಶ್ರಮವಾಸಿಗಳಾದ ಬ್ರಾಹ್ಮಣರನ್ನು ಕೊಂದು ಎಲ್ಲರೂ ಕಳ್ಳತನ ಸುಳ್ಳುತನ ಮತ್ತು ಮೋಸಗಳಲ್ಲಿ ಪ್ರವೃತ್ತರಾದರು.

ವೈಶ್ಯಾ ಸತ್ಪಥಸಂಸ್ಥಾಶ್ಚ ಶೂದ್ರಾ ಯೇ ಚೈವ ಧಾರ್ಮಿಕಾಃ |
ತಾನ್ ಸರ್ವಾನ್ ಘಾತಯಂತಿ ಸ್ಮ ದುರಾಚಾರಾ ಸುನಿರ್ಭಯಾಃ ॥71॥
ಯಜ್ಞಾಧ್ಯಯನಶೀಲಾಂಶ್ಚ ಆಶ್ರಮಸ್ಥಾಂಸ್ತಪಸ್ವಿನಃ |
ಗೋಬಾಲವೃದ್ಧನಾರೀಣಾಂ ನಾಶಂ ಕುರ್ವಂತಿ ಚಾಪರೇ ॥72॥

ದುರಾಚಾರವುಳ್ಳ ನಿರ್ಭಯರಾದ ದುರ್ಜನರು ಸನ್ಮಾರ್ಗದಲ್ಲಿದ್ದು ಧಾರ್ಮಿಕ- ರಾದ ವೈಶ್ಯರನ್ನೂ ಶೂದ್ರರನ್ನೂ ಎಲ್ಲರನ್ನೂ ಕೊಲ್ಲಲು ಪ್ರಾರಂಭಿಸಿದರು. ಇನ್ನು ಕೆಲವರು ಆಶ್ರಮದಲ್ಲಿ ತಪಸ್ಸನ್ನು ಮಾಡುವ ಯಜ್ಞಾಧ್ಯಯನಶೀಲರಾದ ಬ್ರಾಹ್ಮಣ- ರನ್ನೂ, ಗೋವುಗಳನ್ನೂ, ಬಾಲಕರನ್ನೂ, ವೃದ್ಧರನ್ನೂ, ಸ್ತ್ರೀಯರನ್ನೂ ನಾಶ- ಮಾಡಿದರು.

ಆನ್ವೀಕ್ಷಕೀ ತ್ರಯೀ ವಾರ್ತಾ ನ ಚ ನೀತಿಃ ಪ್ರವರ್ತತೇ |
ವ್ರಾತ್ಯತಾಂ ಸಮನುಪ್ರಾಪ್ತಾ ಬಹವೋ ಹಿ ದ್ವಿಜಾತಯಃ |
ಅಧರೋತ್ತರಾಪಚಾರೇಣ ಮ್ಲೇಚ್ಛಭೂತಾಶ್ಚ ಸರ್ವಶಃ ॥73॥

ತರ್ಕವಿದ್ಯೆಯಾಗಲೀ, ವೇದವಿದ್ಯೆಯಾಗಲೀ, ವಾಣಿಜ್ಯನೀತಿಯಾಗಲೀ ಯಾವು -ದೂ ಪ್ರವೃತ್ತವಾಗಲಿಲ್ಲ. ಬಹಳ ಬ್ರಾಹ್ಮಣರು ವ್ರತಭ್ರಷ್ಟರಾದರು. ಅಧಮರಾದ ವೈಶ್ಯಶೂದ್ರರು ಉತ್ತಮಸ್ಥಾನಗಳನ್ನು ಹೊಂದಿ ಎಲ್ಲವೂ ಮ್ಲೇಚ್ಛಮಯವಾಯಿತು.

ತತಃ ಕಾಲೇನ ಪೃಥಿವೀ ಪ್ರವಿವೇಶ ರಸಾತಳಮ್ |
ಅರಕ್ಷ್ಯಮಾಣಾ ವಿಧಿವತ್ ಕ್ಷತ್ರಿಯೈರ್ಧರ್ಮರಕ್ಷಿಭಿಃ ॥74॥

ಆಗ ಧರ್ಮವನ್ನು ರಕ್ಷಿಸುವ ಕ್ಷತ್ರಿಯರಿಂದ ಶಾಸೊತ್ರೇಕ್ತರೀತಿಯಲ್ಲಿ ರಕ್ಷಿಸಲ್ಪಡದ ಭೂಮಿಯು ರಸಾತಳಲೋಕವನ್ನು ಸೇರಿತು.

ಊರುಣಾ ಧಾರಯಾಮಾಸ ಕಶ್ಯಪಃ ಪೃಥಿವೀಂ ತತಃ |
ನಿಮಜ್ಜಂತೀಂ ತದಾ ರಾಜಂಸ್ತೇನೋರ್ವೀತಿ ಮಹೀ ಸ್ಮೃತಾ ॥75॥

ಆಗ ಕಶ್ಯಪರು ಮುಳುಗುತ್ತಿದ್ದ ಭೂಮಿಯನ್ನು ತಮ್ಮ ತೊಡೆಗಳಿಂದ ತಡೆದು ನಿಲ್ಲಿಸಿದರು. ಎಲೈ ರಾಜನೇ! ಆ ಕಾರಣದಿಂದ ಭೂಮಿಗೆ ಉರ್ವೀ ಎಂಬ ಹೆಸರು ಬಂದಿತು.

ರಕ್ಷಿಣಶ್ಚ ಸಮುದ್ದಿಶ್ಯ ಪ್ರಾಯಾಚತ್ ಪೃಥಿವೀ ತದಾ |
ಪ್ರಸಾದ್ಯ ಕಶ್ಯಪಂ ದೇವೀ ಕ್ಷತ್ರಿಯಾನ್ ಬಾಹುಶಾಲಿನಃ ॥76॥

ಆಗ ಭೂದೇವಿಯು ಕಶ್ಯಪರನ್ನು ಪ್ರಸನ್ನೀಕರಿಸಿಕೊಂಡು ತನ್ನನ್ನು ರಕ್ಷಿಸಲು ಬಾಹುಶಾಲಿಗಳಾದ ಕ್ಷತ್ರಿಯರನ್ನು ದಯಪಾಲಿಸಬೇಕೆಂದು ಯಾಚಿಸಿದಳು.

ಸಂತಿ ಬ್ರಹ್ಮನ್ ಮಯಾ ಗುಪ್ತಾ ನೃಷು ಕ್ಷತ್ರಿಯಪುಂಗವಾಃ |
ಹೈಹಯಾನಾಂ ಕುಲೇ ಜಾತಾಸ್ತೇ ಸಂರಕ್ಷಂತು ಮಾಂ ಮುನೇ ॥77॥

ಎಲೈ ಬ್ರಾಹ್ಮಣಶ್ರೇಷ್ಠರೇ! ಹೈಹಯಕುಲದಲ್ಲಿ ಜನಿಸಿದ ಕ್ಷತ್ರಿಯಪುಂಗವರನ್ನು ನಾನು ಗೋಪ್ಯವಾಗಿ ರಕ್ಷಿಸಿಟ್ಟಿದ್ದೇನೆ. ಎಲೈ ಋಷಿಗಳೇ! ಅವರು ನನ್ನನ್ನು ರಕ್ಷಿಸಲಿ.

ಅಸ್ತಿ ಪೌರವದಾಯಾದೋ ವಿದೂರಥಸುತಃ ಪ್ರಭೋ |
ಋಕ್ಷೈಃ ಸಂವರ್ಧಿತೋ ವಿಪ್ರ ಋಕ್ಷವತ್ಯೇವ ಪರ್ವತೇ ॥78॥

ಎಲೈ ಪ್ರಭುಗಳೇ! ಪೌರವವಂಶದಲ್ಲಿ ಹುಟ್ಟಿದ, ವಿದೂರಥನ ಪುತ್ರನಾದ, ಕರಡಿಗಳಿಂದ ಪೋಷಿಸಲ್ಪಟ್ಟ ಒಬ್ಬ ಕ್ಷತ್ರಿಯನು ಋಕ್ಷವಾನ್ ಪರ್ವತದಲ್ಲಿದ್ದಾನೆ.

ತಥಾಽನುಕಂಪಮಾನೇನ ಯಜ್ವನಾಽಥಾಮಿತೌಜಸಾ |
ಪರಾಶರೇಣ ದಾಯಾದಃ ಸೌದಾಸಸ್ಯಾಭಿರಕ್ಷಿತಃ ॥79॥

ಹಾಗೆಯೇ ಅಮಿತಪರಾಕ್ರಮಿಗಳಾದ, ಯಜ್ಞಶೀಲರಾದ, ಪರಾಶರರ ಅನು- ಕಂಪೆಗೆ ಪಾತ್ರನಾದ ಸೌದಾಸನ ಪುತ್ರನು ಪರಾಶರರಿಂದ ರಕ್ಷಿಸಲ್ಪಟ್ಟಿದ್ದಾನೆ.

ಸರ್ವಕರ್ಮಾಣಿ ಕುರುತೇ ತಸ್ಯರ್ಷೇಃ ಶೂದ್ರವದ್ಧಿ ಸಃ |
ಸರ್ವಕರ್ಮೇತ್ಯಭಿಖ್ಯಾತಃ ಸ ಮಾಂ ರಕ್ಷತು ಪಾರ್ಥಿವಃ ॥80॥

ಅವನು ಆ ಪರಾಶರ ಋಷಿಗಳಿಗೆ ಶೂದ್ರನಂತೆ ಎಲ್ಲ ಕೆಲಸವನ್ನೂ ಮಾಡು- ತ್ತಾನೆ. ಆ ಕಾರಣದಿಂದ ಅವನು ಸರ್ವಕರ್ಮನೆಂದೇ ಪ್ರಸಿದ್ಧನಾಗಿದ್ದಾನೆ. ರಾಜನಾದ ಅವನು ನನ್ನನ್ನು ರಕ್ಷಿಸಲಿ.

ಶಿಬೇಃ ಪುತ್ರೋ ಮಹಾತೇಜಾ ಗೋಪತಿರ್ನಾಮ ನಾಮತಃ |
ವನೇ ಸಂರಕ್ಷಿತೋ ಗೋಭಿಃ ಸೋಽಭಿರಕ್ಷತು ಮಾಂ ಮುನೇ ॥81॥

ಶಿಬಿಯ ಪುತ್ರನೂ ಮಹಾತೇಜಸ್ವಿಯೂ ಆದ ಗೋಪತಿಯೆಂಬ ಕ್ಷತ್ರಿಯನು ಕಾಡಿನಲ್ಲಿ ಗೋವುಗಳಿಂದ ಸಂರಕ್ಷಿಸಲ್ಪಟ್ಟಿದ್ದಾನೆ. ಎಲೈ ಋಷಿಗಳೇ! ಅವನು ನನ್ನನ್ನು ರಕ್ಷಿಸಲಿ.

ಪ್ರತರ್ದನಸ್ಯ ಪುತ್ರಸ್ತು ವತ್ಸೋ ನಾಮ ಮಹಾಯಶಾಃ |

ವತ್ಸೈಃ ಸಂವರ್ಧಿತೋ ಗೋಷ್ಠೇ ಸ ಮಾಂ ರಕ್ಷತು ಪಾರ್ಥಿವಃ ॥82॥
ಪ್ರತರ್ದನನ ಪುತ್ರನೂ ಮಹಾಕೀರ್ತಿವಂತನೂ ಆದ ವತ್ಸನೆಂಬುವನು ಗೋ- ಶಾಲೆಯಲ್ಲಿ ಕರುಗಳಿಂದ ಪೋಷಿಸಲ್ಪಟ್ಟಿದ್ದಾನೆ. ರಾಜನಾದ ಅವನು ನನ್ನನ್ನು ರಕ್ಷಿಸಲಿ.
ದಧಿವಾಹನಪೌತ್ರಸ್ತು ಪುತ್ರೋ ದಿವಿರಥಸ್ಯ ಹ |
ಅಂಗಃ ಸ ಗೌತಮೇನಾಪಿ ಗಂಗಾಕೂಲೇಽಭಿರಕ್ಷಿತಃ ॥83॥
ದಧಿವಾಹನನ ಪೌತ್ರನೂ, ದಿವ್ಯರಥನ ಪುತ್ರನೂ ಆದ ಅಂಗನು ಗಂಗಾ- ತೀರದಲ್ಲಿ ಗೌತಮರಿಂದ ರಕ್ಷಿಸಲ್ಪಟ್ಟಿದ್ದಾನೆ.
ಬೃಹದ್ರಥೋ ಮಹಾಬಾಹುರ್ಭುವಿ ಭೂತಿಪುರಸ್ಕೃತಃ |
ಗೋಲಾಂಗೂಲೈರ್ಮಹಾಭಾಗೋ ಗೃಧ್ರಕೂಟೇಽಭಿರಕ್ಷಿತಃ ॥84॥
ಮಹಾಬಾಹುವೂ, ಮಹಾನುಭಾವನೂ ಆದ, ಭೂಮಿಯಲ್ಲಿ ಐಶ್ವರ್ಯ- ವಂತನೂ ಆದ ಬೃಹದ್ರಥನು ಮುಖದಲ್ಲಿ ಕಪ್ಪಾದ ದೊಡ್ಡ ಬಾಲವುಳ್ಳ ಗೋ- ಲಾಂಗೂಲ ಎಂಬ ಕಪಿಗಳಿಂದ ಗೃಧ್ರಕೂಟಪರ್ವತದಲ್ಲಿ ರಕ್ಷಿತನಾಗಿದ್ದಾನೆ.
ಮರುತ್ತಸ್ಯಾನ್ವವಾಯೇ ತು ಕ್ಷತ್ರಿಯಾಸ್ತುರ್ವಸೋಸ್ತ್ರಯಃ |
ಮರುತ್ಪತಿಸಮಾ ವೀರ್ಯೇ ಸಮುದ್ರೇಣಾಭಿರಕ್ಷಿತಃ ॥85॥
ಮರುತ್ತನ ಪುರದಲ್ಲಿ ತುರ್ವಸುವಿನ ವಂಶದಲ್ಲಿ ಮೂರು ಜನ ಕ್ಷತ್ರಿಯರು ಜನಿಸಿ, ಮರುತ್ಪತಿಯಾದ ಇಂದ್ರನಿಗೆ ಸಮಾನವಾದ ಪರಾಕ್ರಮವನ್ನು ಹೊಂದಿದ- ವರಾಗಿ ಸಮುದ್ರನಿಂದ ರಕ್ಷಿತರಾಗಿದ್ದಾರೆ.
ಏತೇ ಕ್ಷತ್ರಿಯದಾಯಾದಾಸ್ತತ್ರ ತತ್ರ ಪರಿಶ್ರುತಾಃ |
ವ್ಯೋಕಾರಹೇಮಕಾರಾದಿಜಾತೀಃ ನಿತ್ಯಂ ಸಮಾಶ್ರಿತಾಃ |
ಯದಿ ಮಾಮಭಿರಕ್ಷಂತಿ ತತಃ ಸ್ಥಾಸ್ಯಾಮಿ ನಿಶ್ಚಲಾ ॥86॥
ಕ್ಷತ್ರಿಯವಂಶದಲ್ಲಿ ಜನಿಸಿದ ಇವರು ಅಲ್ಲಲ್ಲಿ ಪ್ರಸಿದ್ಧರಾಗಿದ್ದಾರೆ. ಅವರು ಸದ್ಯ- ದಲ್ಲಿ ಲೋಹಕಾರರ ಮತ್ತು ಸ್ವರ್ಣಕಾರರ ವೃತ್ತಿಯನ್ನು ಅವಲಂಬಿಸಿದ್ದಾರೆ. ಅವರು ನನ್ನನ್ನು ರಕ್ಷಿಸುವುದಾದರೆ ನಾನು ಸ್ಥಿರವಾಗಿ ನಿಲ್ಲುವೆನು.
ಏತೇಷಾಂ ಪಿತರಶ್ಚೈವ ತಥೈವ ಚ ಪಿತಾಮಹಾಃ |
ಮದರ್ಥಂ ನಿಹತಾ ಯುದ್ಧೇ ರಾಮೇಣಾಕ್ಲಿಷ್ಟಕರ್ಮಣಾ ॥87॥
ನನ್ನನ್ನು ಉಳಿಸುವ ಸಲುವಾಗಿ ಹೋರಾಡಿದ ಇವರ ಪಿತೃ ಪಿತಾಮಹರು ಯುದ್ಧದಲ್ಲಿ ಲೀಲಾಜಾಲವಾಗಿ ಕಾರ್ಯವನ್ನು ಮಾಡುವ ಪರಶುರಾಮರಿಂದ ಹತರಾಗಿದ್ದಾರೆ.
ತೇಷಾಮಪಚಿತಿಶ್ಚೈವ ಮಯಾ ಕಾರ್ಯಾ ನ ಸಂಶಯಃ |
ನ ಹ್ಯಹಂ ಕಾಮಯೇ ನಿತ್ಯಮವಿಕ್ರಾಂತೇನ ರಕ್ಷಣಮ್ ॥88॥
ನಾನು ಅವರಿಗೆ ನಿಃಸಂಶಯವಾಗಿ ಪ್ರತ್ಯುಪಕಾರವನ್ನು ಮಾಡಬೇಕಾಗಿದೆ. ನಾನು ಪರಾಕ್ರಮಶಾಲಿಯಲ್ಲದವನಿಂದ ರಕ್ಷಿಸಲ್ಪಡುವುದನ್ನು ಬಯಸುವುದಿಲ್ಲ. (ಎಂದು ಹೇಳಿದಳು).
ತತಃ ಪೃಥಿವ್ಯಾ ನಿರ್ದಿಷ್ಟಾಂಸ್ತಾನ್ ಸಮಾನೀಯ ಕಶ್ಯಪಃ |
ಅಭ್ಯಷಿಂಚತ್ ಮಹೀಪಾಲಾನ್ ಕ್ಷತ್ರಿಯಾನ್ ವೀರ್ಯಸಮ್ಮತಾನ್ ॥89॥
ಅನಂತರ ಕಶ್ಯಪರು ಭೂದೇವಿಯು ಹೇಳಿದ ವೀರ್ಯಸಂಪನ್ನರಾದ ಆ ಕ್ಷತ್ರಿಯರೆಲ್ಲರನ್ನೂ ಕರೆತಂದು ಅವರನ್ನು ರಾಜರನ್ನಾಗಿ ಅಭಿಷೇಕ ಮಾಡಿದರು.
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯೇಷಾಂ ವಂಶಾಃ ಪ್ರತಿಷ್ಠಿತಾಃ |
ಏವಮೇತತ್ ಪುರಾ ವೃತ್ತಂ ಯನ್ಮಾಂ ಪೃಚ್ಛಸಿ ಪಾಂಡವ ॥90॥
ಅವರ ಮಕ್ಕಳು ಮತ್ತು ಮೊಮ್ಮಕ್ಕಳಿಂದ ಅವರ ವಂಶಗಳು ಪುನಃ ಪ್ರತಿಷ್ಠಿತ- ವಾಯಿತು. ಎಲೈ ಪಾಂಡವನೇ! ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಹಿಂದೆ ಹೀಗೆ ನಡೆಯಿತು ಎಂದು ಹೇಳುತ್ತಿದ್ದೇನೆ. (ಅದರಿಂದ ಪುನಃ ಭೂಲೋಕದಲ್ಲಿ ಕ್ಷತ್ರಿಯರು ಬಹುಸಂಖ್ಯಾತರಾದರು).
ವೈಶಂಪಾಯನಃ
ಏವಂ ಬ್ರುವನ್ನೇವ ಯದುಪ್ರವೀರೋ
ಯುಧಿಷ್ಠಿರಂ ಧರ್ಮಭೃತಾಂ ವರಿಷ್ಠಮ್ |
ರಥೇನ ತೇನಾಶು ಯಯೌ ಯಥಾರ್ಕೋ
ವಿಶನ್ ಪ್ರಭಾಭಿರ್ಭಗವಾಂಸ್ತ್ರಿಲೋಕಮ್ ॥91॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಪಂಚಾಶೋಽಧ್ಯಾಯಃ ॥49॥
ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡುತ್ತಲೇ ಯದುಪ್ರವೀರನಾದ ಕೃಷ್ಣನು ಪೂಜ್ಯನಾದ ಸೂರ್ಯನು ತನ್ನ ಪ್ರಭೆಯಿಂದ ಮೂರು ಲೋಕಗಳನ್ನೂ ಪ್ರವೇಶಿಸುವಂತೆ ಶೀಘ್ರವಾಗಿ ಮುಂದೆ ಸಾಗಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 49ನೆಯ ಅಧ್ಯಾಯವು ಮುಗಿಯಿತು.
0
50. ಐವತ್ತನೆಯ ಅಧ್ಯಾಯ
ಕೃಷ್ಣನಿಂದ ಭೀಷ್ಮರ ಪ್ರಶಂಸೆ ಮತ್ತು ಧರ್ಮರಾಜರಿಗೆ ಉಪದೇಶಮಾಡುವಂತೆ ಪ್ರೇರಣೆ
ವೈಶಂಪಾಯನಃ

ತತೋ ರಾಮಸ್ಯ ತತ್ ಕರ್ಮ ಶ್ರುತ್ವಾ ರಾಜಾ ಯುಧಿಷ್ಠಿರಃ |
ವಿಸ್ಮಯಂ ಪರಮಂ ಗತ್ವಾ ಪ್ರತ್ಯುವಾಚ ಜನಾರ್ದನಮ್ ॥1॥
ವೈಶಂಪಾಯನರು ಆಗ ರಾಜನಾದ ಯುಧಿಷ್ಠಿರನು ಪರಶುರಾಮರ ಆ ಕರ್ಮವನ್ನು ಕೇಳಿ ಬಹಳವಿಸ್ಮಯವನ್ನು ಹೊಂದಿ ಜನಾರ್ದನನಾದ ಕೃಷ್ಣನನ್ನು ಕುರಿತು ಮಾತನಾಡಿದನು.
ಅಹೋ ರಾಮಸ್ಯ ವಾರ್ಷ್ಣೇಯ ಶಕ್ರಸ್ಯೇವ ಮಹಾತ್ಮನಃ |
ವಿಕ್ರಮೋ ಯೇನ ವಸುಧಾ ಕ್ರೋಧಾನ್ನಿಃಕ್ಷತ್ರಿಯಾ ಕೃತಾ ॥2॥
ಎಲೈ ವಾರ್ಷ್ಣೇಯನೇ! ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿದ ಮಹಾತ್ಮರಾದ ಪರಶುರಾಮರ ವಿಕ್ರಮವು ಇಂದ್ರನ ವಿಕ್ರಮದಂತೆ ಎಷ್ಟು ಅದ್ಭುತ- ವಾದುದು!
ಗೋಭಿಃ ಸಮುದ್ರೇಣ ತಥಾ ಗೋಲಾಂಗೂಲರ್ಕ್ಷವಾನರೈಃ |
ಗುಪ್ತಾ ರಾಮಭಯೋದ್ವಿಗ್ನಾಃ ಕ್ಷತ್ರಿಯಾಣಾಂ ಕುಲೋದ್ವಹಾಃ ॥3॥
ಪರಶುರಾಮನ ಭಯದಿಂದ ಉದ್ವಿಗ್ನರಾದ ಕ್ಷತ್ರಿಯ ಕುಲಪ್ರವರ್ತಕರು, ಗೋವುಗಳಿಂದಲೂ ಸಮುದ್ರದಿಂದಲೂ ಕಪಿಗಳಿಂದಲೂ ಕರಡಿಗಳಿಂದಲೂ ಗೋ- ಲಾಂಗೂಲಗಳಿಂದಲೂ ರಕ್ಷಿಸಲ್ಪಟ್ಟರಷ್ಟೇ!
ಅಹೋ ಧನ್ಯೋ ಹಿ ಲೋಕೋಽಯಂ ಸಭಾಗ್ಯಾಶ್ಚ ನರಾ ಭುವಿ |
ಯತ್ರ ಕರ್ಮೇದೃಶಂ ಧರ್ಮ್ಯಂ ದ್ವಿಜೇನ ಕೃತಮಚ್ಯುತ ॥4॥
ಅಹೋ! ಈ ಲೋಕವು ಎಷ್ಟು ಧನ್ಯವಾದದು! ಭೂಮಿಯಲ್ಲಿರುವ ಮನುಷ್ಯರು ಎಂತಹ ಭಾಗ್ಯವಂತರು! ಎಲೈ ಅಚ್ಯುತನೇ! ಒಬ್ಬ ಬ್ರಾಹ್ಮಣನು ಇಂತಹ ಧಾರ್ಮಿಕವಾದ ಕಾರ್ಯವನ್ನು ಮಾಡಿದನಷ್ಟೇ?
ತಥಾ ಯಾಂತೌ ತದಾ ತಾತ ತಾವಚ್ಯುತಯುಧಿಷ್ಠಿರೌ |
ಜಗ್ಮತುರ್ಯತ್ರ ಗಾಂಗೇಯಃ ಶರತಲ್ಪಗತಃ ಪ್ರಭುಃ ॥5॥
ಎಲೈ ಪ್ರೀತಿಪಾತ್ರನೇ! ಕೃಷ್ಣ ಯುಧಿಷ್ಠಿರರಿಬ್ಬರೂ ಹಾಗೆಯೇ ಮುಂದೆ ಸಾಗುತ್ತಾ ಶರತಲ್ಪಗತರಾದ ಗಂಗಾಪುತ್ರರಾದ ಭೀಷ್ಮರು ಇದ್ದಲ್ಲಿಗೆ ಬಂದರು.
ತತಸ್ತೇ ದದೃಶುರ್ಭೀಷ್ಮಂ ಶರಪ್ರಸ್ತರಶಾಯಿನಮ್ |
ಸ್ವರಶ್ಮಿಜಾಲಸಂವೀತಂ ಸಾಯಂಸೂರ್ಯಸಮಪ್ರಭಮ್ ॥6॥
ಆಗ ಅವರು ಸಾಯಂಕಾಲದಲ್ಲಿ ತನ್ನ ರಶ್ಮಿಗಳಿಂದ ಕೂಡಿದ ಸೂರ್ಯನಂತೆ ಇದ್ದ ಶರಪಂಜರದಲ್ಲಿ ಮಲಗಿದ್ದ ಭೀಷ್ಮರನ್ನು ನೋಡಿದರು.
ಉಪಾಸ್ಯಮಾನಂ ಮುನಿಭಿರ್ದೇವೈರಿವ ಶತಕ್ರತುಮ್ |
ದೇಶೇ ಪರಮಧರ್ಮಿಷ್ಠೇ ನದೀಮೋಘವತೀಮನು ॥7॥
ಓಘವತೀ ನದಿಯ ಸಮೀಪದಲ್ಲಿ ಪರಮಧರ್ಮಿಷ್ಠವಾದ ದೇಶದಲ್ಲಿ ದೇವತೆ- ಗಳಿಂದ ಇಂದ್ರನು ಸುತ್ತುವರಿಯಲ್ಪಟ್ಟಂತೆ, ಋಷಿಗಳಿಂದ ಸುತ್ತುವರಿಯಲ್ಪಟ್ಟ ಭೀಷ್ಮ- ರನ್ನು ನೋಡಿದರು.
ದೂರಾದೇವ ತಮಾಲೋಕ್ಯ ಕೃಷ್ಣೋ ರಾಜಾ ಚ ಧರ್ಮರಾಟ್ |
ಚತ್ವಾರಃ ಪಾಂಡವಾಶ್ಚೈವ ತೇ ಚ ಶಾರದ್ವತಾದಯಃ ॥8॥
ಅವಸ್ಕಂದ್ಯಾಥ ವಾಹೇಭ್ಯಃ ಸಂಯಮ್ಯ ಪ್ರಚಲಂ ಮನಃ |
ಏಕೀಕೃತ್ಯೇಂದ್ರಿಯಗ್ರಾಮಮುಪತಸ್ಥುರ್ಮಹಾಮುನೀನ್ ॥9॥
ಕೃಷ್ಣನೂ, ರಾಜನಾದ ಯುಧಿಷ್ಠಿರನೂ, ನಾಲ್ವರು ಪಾಂಡವರೂ, ಕೃಪ ಮೊದ- ಲಾದವರೂ ದೂರದಿಂದಲೇ ಭೀಷ್ಮರನ್ನು ನೋಡಿ ತಮ್ಮ ವಾಹನಗಳಿಂದ ಇಳಿದು ಚಂಚಲವಾದ ಮನಸ್ಸನ್ನು ಸ್ಥಿರಗೊಳಿಸಿ ಇಂದ್ರಿಯಸಮೂಹವನ್ನು ಏಕಾಗ್ರವನ್ನಾಗಿ ಮಾಡಿ ಮಹಾಮುನಿಗಳ ಸಮೀಪಕ್ಕೆ ಬಂದರು.
ಅಭಿವಾದ್ಯ ಚ ಗೋವಿಂದಃ ಸಾತ್ಯಕಿಸ್ತೇ ಚ ಕೌರವಾಃ |
ವ್ಯಾಸಾದೀಂಸ್ತಾನ್ ಋಷೀನ್ ಪಶ್ಚಾದ್ ಗಾಂಗೇಯಮುಪತಸ್ಥಿರೇ ॥10॥
ಗೋವಿಂದನೂ, ಸಾತ್ಯಕಿಯೂ, ಆ ಕೌರವರೂ ವ್ಯಾಸಾದಿ ಋಷಿಗಳಿಗೆ ನಮ- ಸ್ಕರಿಸಿ ಅನಂತರ ಭೀಷ್ಮರ ಸಮೀಪಕ್ಕೆ ಬಂದರು.
ತಪೋವೃದ್ಧಿಂ ತತಃ ಪೃಷ್ಟ್ವಾ ಗಾಂಗೇಯಂ ಯದುಕೌರವಾಃ |
ಪರಿವಾರ್ಯ ತತಃ ಸರ್ವೇ ನಿಷೇದುಃ ಪುರುಷರ್ಷಭಾಃ ॥11॥
ಯದುಕೌರವರು ಭೀಷ್ಮರನ್ನು ಅವರ ತಪೋವೃದ್ಧಿಯನ್ನು ವಿಚಾರಿಸಿ, ಪುರುಷ- ಶ್ರೇಷ್ಠರಾದ ಅವರೆಲ್ಲರೂ ಅವರ ಸುತ್ತಲೂ ಕುಳಿತರು.
ತತೋ ನಿಶಾಮ್ಯ ಗಾಂಗೇಯಂ ಶಾಮ್ಯಮಾನಮಿವಾನಲಮ್ |
ಕಿಂಚಿದ್ ದೀನಮನಾ ಭೀಷ್ಮಮಿತಿ ಹೋವಾಚ ಕೇಶವಃ ॥12॥
ಆಗ ಆರಿಹೋಗುವ ಅಗ್ನಿಯಂತಿದ್ದ ಭೀಷ್ಮರನ್ನು ನೋಡಿ, ಕೇಶವನು ಮನಸ್ಸಿ- ನಲ್ಲಿ ಸ್ವಲ್ಪ ವ್ಯಥೆಯನ್ನು ಹೊಂದಿ ಭೀಷ್ಮರನ್ನು ಕುರಿತು ಹೀಗೆ ಮಾತನಾಡಿದನು.
ಕಚ್ಚಿಜ್ಜ್ಞಾನಾನಿ ತೇ ರಾಜನ್ ಪ್ರಸನ್ನಾನಿ ಯಥಾ ಪುರಾ |
ಕಚ್ಚಿದವ್ಯಾಕುಲಾ ಚೈವ ಬುದ್ಧಿಸ್ತೇ ವದತಾಂವರ ॥13॥
ಎಲೈ ರಾಜನೇ! ನಿನ್ನ ಇಂದ್ರಿಯಗಳು ಮೊದಲಿನಂತೆಯೇ ಪ್ರಸನ್ನವಾಗಿವೆ- ಯಷ್ಟೇ?. ಮಾತನಾಡುವವರಲ್ಲಿ ಶ್ರೇಷ್ಠನಾದವನೇ! ನಿನ್ನ ಬುದ್ಧಿಯು ವ್ಯಾಕುಲ- ವಾಗಿಲ್ಲವಷ್ಟೇ?

ಶರಾಭಿಘಾತದುಃಖಾತ್ ತೇ ಕಚ್ಚಿದ್ ಗಾತ್ರಂ ನ ದೂಯತೇ |
ಮಾನಸಾದಪಿ ದುಃಖಾದ್ಧಿ ಶರೀರಂ ಬಲವತ್ತರಮ್ ॥14॥
ಬಾಣಗಳ ಪ್ರಹಾರಕ್ಕೆ ಸಿಲುಕಿದ ನಿನ್ನ ದೇಹವು ದುಃಖದಿಂದ ತಪಿಸುತ್ತಿಲ್ಲ- ವಷ್ಟೇ? ಮಾನಸದುಃಖಕ್ಕಿಂತಲೂ ಶರೀರದ ದುಃಖವು ಪ್ರಬಲವಾದುದು.
ವರದಾನಾತ್ ಪಿತುಃ ಕಾಮಂ ಛಂದಮೃತ್ಯುರಸಿ ಪ್ರಭೋ |
ಶಂತನೋರ್ಧರ್ಮಶೀಲಸ್ಯ ನ ತ್ವೇತದಿಹ ಕಾರಣಮ್ ॥15॥
ಎಲೈ ಪ್ರಭುವೇ! ತಂದೆಯ ವರದಾನದಿಂದ ನೀವು ಸ್ವಚ್ಛಂದ ಮೃತ್ಯುಗಳಾಗಿ- ದ್ದೀರಿ. ಆದರೆ ಧರ್ಮಶೀಲನಾದ ಶಂತನುವಿನ ವರವು ಈ ದೇಹದ ಬಾಧೆಯನ್ನು ನಿವಾರಿಸಲು ಕಾರಣವಾಗುವುದಿಲ್ಲ.
ಸುಸೂಕ್ಷ್ಮೋಽಪೀಹ ದೇಹೇ ವೈ ಶಲ್ಯೋ ಜನಯತೇ ರುಜಮ್ |
ಕಿಂಪುನಃ ಶರಸಂಘಾತೈಶ್ಚಿತಸ್ಯ ತವ ಪಾರ್ಥಿವ ॥16॥
ಎಲೈ ರಾಜನೇ! ಒಂದು ಸಣ್ಣ ಮುಳ್ಳು ಚುಚ್ಚಿದರೂ ದೇಹಕ್ಕೆ ಬಾಧೆಯನ್ನು ಉಂಟುಮಾಡುತ್ತದೆ. ಹೀಗಿರುವಾಗ ಬಾಣಗಳ ಸಮೂಹವು ಶರೀರದಲ್ಲಿ ಪೋಣಿಸಿ -ಕೊಂಡಿರುವ ನಿಮ್ಮ ವಿಷಯದಲ್ಲಿ ಹೇಳುವುದೇನು?
ಕಾಮಂ ನೈತತ್ ತವಾಖ್ಯೇಯಂ ಪ್ರಾಣಿನಾಂ ಪ್ರಭವಾಪ್ಯಯೌ |
ಭವಾನ್ ಹ್ಯುಪದಿಶೇಚ್ಛ್ರೇಯೋ ದೇವಾನಾಮಪಿ ಭಾರತ ॥17॥
ಪ್ರಾಣಿಗಳ ಉತ್ಪತ್ತಿ ನಾಶಗಳ ವಿಷಯದಲ್ಲಿ ನಿಮಗೆ ಹೇಳಬೇಕಾದುದು ಏನೂ ಇಲ್ಲ. ಎಲೈ ಭಾರತರೇ! ನೀವು ದೇವತೆಗಳಿಗೂ ಸಹ ಶ್ರೇಯಸ್ಸನ್ನು ಉಪದೇಶಿಸಲು ಸಮರ್ಥರಾಗಿದ್ದೀರಿ.
ಯದ್ಧಿ ಭೂತಂ ಭವಿಷ್ಯಚ್ಚ ಭವಚ್ಚ ಪುರುಷರ್ಷಭ |
ಸರ್ವಂ ತಜ್ಜ್ಞಾನವೃದ್ಧಸ್ಯ ತವ ಪಾಣಾವಿವಾಹಿತಮ್ ॥18॥
ಎಲೈ ಪುರುಷಶ್ರೇಷ್ಠರೇ! ಭೂತ ವರ್ತಮಾನ ಭವಿಷ್ಯತ್ತುಗಳೆಲ್ಲವೂ ಜ್ಞಾನ- ವೃದ್ಧರಾದ ನಿಮ್ಮ ಅಂಗೈಮೇಲೆ ಇರುವಂತಿದೆ.
ಸಂಸಾರಶ್ಚೈವ ಭೂತಾನಾಂ ಧರ್ಮಸ್ಯ ಚ ಫಲೋದಯಃ |
ವಿದಿತಸ್ತೇ ಮಹಾಪ್ರಾಜ್ಞ ತ್ವಂ ಹಿ ಬ್ರಹ್ಮಮಯೋ ನಿಧಿಃ ॥19॥
ಮಹಾಪ್ರಾಜ್ಞರೇ! ಜೀವರ ಸಂಸಾರವು ಧರ್ಮಗಳ ಫಲೋದಯವು ನಿಮಗೆ ತಿಳಿದಿದೆ. ನೀವೇ ಧರ್ಮಮಯವಾದ ನಿಧಿಯಷ್ಟೇ?
ತ್ವಾಂ ಹಿ ರಾಜ್ಯೇ ಸ್ಥಿತಂ ಸ್ಫೀತೇ ಸಮಗ್ರಾಂಗಮರೋಗಿಣಮ್ |
ಸ್ತ್ರೀಸಹಸ್ರೈಃ ಪರಿವೃತಂ ಪಶ್ಯಾಮೀಹೋರ್ಧ್ವರೇತಸಮ್ ॥20॥
ಸಮೃದ್ಧವಾದ ರಾಜ್ಯದಲ್ಲಿ ಸ್ತ್ರೀಸಹಸ್ರದಿಂದ ಪರಿವೃತರಾಗಿ ಸಮಗ್ರವಾದ ಅವಯವಗಳಿಂದ ರೋಗರಹಿತರಾಗಿ ಇರುವ ನಿಮ್ಮನ್ನು ನೋಡಬೇಕಾಗಿದ್ದ ನಾನು ಇಲ್ಲಿ ಊರ್ಧ್ವರೇತಸ್ಕರಾಗಿರುವುದನ್ನು ನೋಡುತ್ತಿದ್ದೇನೆ.
ಋತೇ ಶಾಂತನವಾದ್ ಭೀಷ್ಮಾತ್ ತ್ರಿಷು ಲೋಕೇಷು ಪಾರ್ಥಿವ |
ಸತ್ಯಸಂಧಾನ್ಮಹಾವೀರ್ಯಾಚ್ಛೂರಾದ್ ಧರ್ಮೈಕತತ್ಪರಾತ್ ॥21॥
ಎಲೈ ಪ್ರೀತಿಪಾತ್ರರೇ! ಶಂತನು ಪುತ್ರರಾದ, ಸತ್ಯಸಂಧರಾದ, ಮಹಾಪರಾ- ಕ್ರಮಿಗಳಾದ ಶೂರಾದ ಧರ್ಮೈಕನಿಷ್ಠರಾದ, ಮೃತ್ಯುವನ್ನು ತಡೆದು ಶರಪಂಜರದಲ್ಲಿ ಮಲಗಿರುವ ಭೀಷ್ಮರೊಬ್ಬರನ್ನು ಬಿಟ್ಟು ಪ್ರಕೃತಿಯಲ್ಲಿ ಜನಿಸಿದ ಇನ್ನೊಬ್ಬ ಇಂತಹ ವ್ಯಕ್ತಿಯನ್ನು ನಾವು ಕೇಳಿಲ್ಲ.
ಮೃತ್ಯುಮವಾರ್ಯ ತಪಸಾ ಶರಪ್ರಸ್ತರಶಾಯಿನಃ |
ನಿಸರ್ಗಪ್ರಭವಂ ಕಿಂಚಿನ್ನ ಚ ತಾತಾನುಶುಶ್ರುಮ ॥22॥
ಸತ್ಯೇ ತಪಸಿ ದಾನೇ ಚ ಯಜ್ಞಾದಿಕರಣೇ ತಥಾ |
ಧನುರ್ವೇದೇ ಚ ವೇದೇ ಚ ನೀತ್ಯಾಂ ಚೈವಾನ್ವವೇಕ್ಷಣೇ ॥23॥
ಅನೃಶಂಸಂ ಶುಚಿಂ ದಾಂತಂ ಸರ್ವಭೂತಹಿತೇ ರತಮ್ |
ಮಹಾರಥಂ ತ್ವತ್ಸದೃಶಂ ನ ಕಂಚಿದನುಶುಶ್ರುಮ ॥24॥
ಸತ್ಯ, ತಪಸ್ಸು, ದಾನ, ಯಜ್ಞಾದಿ ಅನುಷ್ಠಾನ, ಧನುರ್ವೇದ, ವೇದ, ರಾಜ- ನೀತಿ, ರಾಜ್ಯಪಾಲನೆ, ದಯೆ, ಶೌಚ, ಇಂದ್ರಿಯನಿಗ್ರಹ, ಸರ್ವಭೂತಹಿತದಲ್ಲಿ ಆಸಕ್ತಿ ಈ ವಿಷಯಗಳಲ್ಲಿ ಮಹಾರಥರಾದ ನಿಮ್ಮನ್ನು ಬಿಟ್ಟು ನಿಮಗೆ ಸದೃಶರಾದ ಇನ್ನೊಬ್ಬರನ್ನು ನಾನು ಕೇಳುವುದಿಲ್ಲ.
ತ್ವಂ ಹಿ ದೇವಾನ್ ಸಗಂಧರ್ವಾನ್ ಸಸುರಾಸುರರಾಕ್ಷಸಾನ್ |
ಶಕ್ತ ಏಕರಥೇನೈವ ವಿಜೇತುಂ ನಾತ್ರ ಸಂಶಯಃ ॥25॥
ನೀವಾದರೋ ಗಂಧರ್ವರಿಂದ ಸಹಿತರಾದ ಸುರಾಸುರರಾಕ್ಷಸರಿಂದ ಸಹಿತ- ರಾದ ದೇವತೆಗಳನ್ನು ಒಂದು ರಥದಲ್ಲಿ ಕುಳಿತು ಜಯಿಸುವಿರೆಂಬ ವಿಷಯದಲ್ಲಿ ಸಂಶಯವಿಲ್ಲ.
ತ್ವಂ ಹಿ ಭೀಷ್ಮ ಮಹಾಬಾಹೋ ವಸೂನಾಂ ವಾಸವೋಪಮಃ |
ನಿತ್ಯಂ ವಿಪ್ರೈಃ ಸಮಾಖ್ಯಾತೋ ನವಮೋಽನವಮೋ ಗುಣೈಃ ॥26॥
ಎಲೈ ಮಹಾಬಾಹುಗಳಾದ ಭೀಷ್ಮರೇ! ನೀವು ಎಂಟು ವಸುಗಳ ಸನ್ನಿಧಾನ- ದಿಂದ ಕೂಡಿದ, ಗುಣಗಳಿಂದ ನ್ಯೂನರಾಗದ ಒಂಭತ್ತನೆಯ ವಸುವೆಂದು ಬ್ರಾಹ್ಮಣರು ನಿತ್ಯದಲ್ಲಿಯೂ ಹೇಳುತ್ತಾರೆ.
ಅಹಂ ಹಿ ತ್ವಾಽಭಿಜಾನಾಮಿ ಯಸ್ತ್ವಂ ಪುರುಷಸತ್ತಮ |
ತ್ರಿದಶೇಷ್ವಪಿ ವಿಖ್ಯಾತಃ ಸ್ವಶಕ್ತ್ಯಾ ಸುಮಹಾಬಲಃ ॥27॥

ಎಲ್ಲೈ ಪುರುಷಶ್ರೇಷ್ಠರೇ! ನೀವು ಯಾರೆಂದು ನಾನು ಚೆನ್ನಾಗಿ ತಿಳಿದಿದ್ದೇನೆ. ಮಹಾಬಲರಾದ ನೀವು ನಿಮ್ಮ ಶಕ್ತಿಯಿಂದ ದೇವತೆಗಳಲ್ಲೂ ಪ್ರಖ್ಯಾತರಾಗಿದ್ದೀರಿ.
ಮನುಷ್ಯೇಷು ಮನುಷ್ಯೇಂದ್ರ ನ ದೃಷ್ಟೋ ನ ಚ ಮೇ ಶ್ರುತಃ |
ಭವತೋ ಯೋ ಗುಣೈಸ್ತುಲ್ಯಃ ಪೃಥಿವ್ಯಾಂ ಪುರುಷಃ ಕ್ವಚಿತ್ ॥28॥
ಎಲ್ಲೈ ಮನುಷ್ಯೇಂದ್ರರೇ! ಭೂಮಿಯಲ್ಲಿ ಮನುಷ್ಯರಲ್ಲಿ ನಿಮಗೆ ಸದೃಶನಾದ ಇನ್ನೊಬ್ಬ ಮನುಷ್ಯನನ್ನು ನಾವು ಎಂದೂ ನೋಡಲಿಲ್ಲ ಅಥವಾ ಕೇಳಲಿಲ್ಲ.
ತ್ವಂ ಹಿ ಸರ್ವೈರ್ಗುಣೈ ರಾಜನ್ ದೇವಾನಪ್ಯತಿರಿಚ್ಯಸೇ |
ತಪಸಾ ಹಿ ಭವಾನ್ ಶಕ್ತಃ ಸ್ರಷ್ಟುಂ ಲೋಕಾಂಶ್ಚರಾಚರಾನ್ |
ಕಿಂಪುನಶ್ಚಾತ್ಮನೋ ಲೋಕಾನುತ್ತಮಾನುತ್ತಮೈರ್ಗುಣೈಃ ॥29॥
ಎಲ್ಲೈ ರಾಜರೇ! ನೀವು ಸರ್ವಗುಣಗಳಿಂದಲೂ ದೇವತೆಗಳನ್ನು ಮೀರುತ್ತೀರಿ. ನಿಮ್ಮ ತಪಸ್ಸಿನಿಂದ ಚರಾಚರಲೋಕಗಳನ್ನೂ ಸೃಷ್ಟಿಸಲು ಸಮರ್ಥರಾಗಿದ್ದೀರಿ. ಇನ್ನು ನಿಮ್ಮ ಉತ್ತಮಗುಣಗಳಿಂದ ನಿಮ್ಮ ಉತ್ತಮಲೋಕಗಳನ್ನು ಸಂಪಾದಿಸುವುದು ಯಾವ ದೊಡ್ಡ ವಿಷಯ?
ತದಸ್ಯ ತಪ್ಯಮಾನಸ್ಯ ಜ್ಞಾತೀನಾಂ ಸಂಕ್ಷಯೇಣ ವೈ |
ಜ್ಯೇಷ್ಠಸ್ಯ ಪಾಂಡುಪುತ್ರಸ್ಯ ಶೋಕಂ ಭೀಷ್ಮ ವ್ಯಪಾನುದ ॥30॥
ಎಲ್ಲೈ ಭೀಷ್ಮರೇ! ಜ್ಞಾತಿಗಳ ವಧೆಯಿಂದ ಸಂತಾಪಕ್ಕೆ ಒಳಗಾದ ಈ ಜ್ಯೇಷ್ಠ ಪಾಂಡುಪುತ್ರನ ಶೋಕವನ್ನು ನಿವಾರಿಸಿ.
ಚಾತುರ್ವರ್ಣ್ಯಸ್ಯ ಯಶ್ಚೋಕ್ತಃ ಸೇವ್ಯಮಾನೋಽನ್ಯ ಏವ ಚ |
ಚಾತುರಾಶ್ರಮ್ಯಸಂಸೃಷ್ಟಾಸ್ತೇ ಸರ್ವೇ ವಿದಿತಾಸ್ತವ ॥31॥
ಚಾತುರ್ವರ್ಣ್ಯದಿಂದ ಅನುಷ್ಠಾನ ಮಾಡಬೇಕಾದ ಧರ್ಮ, ಅದಕ್ಕೆ ವಿರುದ್ಧ- ವಾದ ಧರ್ಮ, ನಾಲ್ಕು ಆಶ್ರಮಗಳಿಗೆ ಸಂಬಂಧಿಸಿದ ಧರ್ಮ ಇವೆಲ್ಲವೂ ನಿಮಗೆ ತಿಳಿದಿವೆ.
ಚಾತುರ್ವಿದ್ಯೇ ಚ ಯೇ ಪ್ರೋಕ್ತಾಶ್ಚಾತುರ್ಹೋತ್ರೇ ಚ ಭಾರತ |
ಸಾಂಖ್ಯೇ ಯೋಗೇ ಚ ನಿಯತಾ ಯೇ ಚ ಧರ್ಮಾಃ ಸನಾತನಾಃ ॥32॥
ಚಾತುರ್ವರ್ಣ್ಯೇನ ಯಶ್ಚೈಕೋ ಧರ್ಮೋ ನ ಸ್ಮ ವಿರುದ್ಧ್ಯತೇ |
ಸೇವ್ಯಮಾನಃ ಸ ಚೈವಾದ್ಯೋ ಗಾಂಗೇಯ ವಿದಿತಸ್ತವ ॥33॥
ಎಲ್ಲೈ ಭಾರತರೇ! ಎಲ್ಲೈ ಗಂಗಾಪುತ್ರರೇ! ನಾಲ್ಕು ವೇದವಿದ್ಯೆಗಳಲ್ಲಿ ಹೇಳಲ್ಪಟ್ಟ ಧರ್ಮಗಳು, ನಾಲ್ಕು ಹೋತೃಗಳಿಗೆ ಹೇಳಲ್ಪಟ್ಟ ಧರ್ಮಗಳು, ಸಾಂಖ್ಯ ಮತ್ತು ಯೋಗಶಾಸ್ತ್ರದಲ್ಲಿ ವಿಹಿತವಾದ ಸನಾತನಧರ್ಮಗಳು, ಚಾತುರ್ವರ್ಣ್ಯದಿಂದಲೂ ಸೇವಿಸಲ್ಪಡಬೇಕಾದ ಅವಿರುದ್ಧವಾದ ಮುಖ್ಯವಾದ ಶ್ರೇಷ್ಠವಾದ ಧರ್ಮ ಎಲ್ಲವೂ ನಿಮಗೆ ತಿಳಿದಿದೆ.
ಪ್ರತಿಲೋಮಪ್ರಸೂತಾನಾಂ ಮ್ಲೇಚ್ಛಾನಾಂ ಚೈವ ಯಃ ಸ್ಮೃತಃ |
ದೇಶಜಾತಿಕುಲಾನಾಂ ಚ ಜಾನೀಷೇ ಧರ್ಮಲಕ್ಷಣಮ್ |
ವೇದೋಕ್ತೋ ಯಶ್ಚ ಶಿಷ್ಟೋಕ್ತಃ ಸ ಚೈವ ವಿದಿತಸ್ತವ ॥34॥
ಪ್ರತಿಲೋಮದಲ್ಲಿ ಜನಿಸಿದ ಮ್ಲೇಚ್ಛರ ಧರ್ಮಗಳು, ದೇಶಜಾತಿಕುಲಧರ್ಮ- ಗಳು , ಧರ್ಮದ ಲಕ್ಷಣ ಎಲ್ಲವನ್ನೂ ನೀವು ತಿಳಿದಿದ್ದೀರಿ. ವೇದೋಕ್ತವಾದ ಮತ್ತು ಶಿಷ್ಟಾಚಾರಪ್ರಾಪ್ತವಾದ ಧರ್ಮಗಳು ನಿಮಗೆ ತಿಳಿದಿವೆ.
ಇತಿಹಾಸಪುರಾಣಂ ಚ ಕಾರ್ತ್ಸ್ನ್ಯೇನ ವಿದಿತಂ ತವ |
ಧರ್ಮಶಾಸ್ತ್ರಂ ಚ ಸಕಲಂ ನಿತ್ಯಂ ಮನಸಿ ತೇ ಸ್ಥಿತಮ್ ॥35॥
ಇತಿಹಾಸ, ಪುರಾಣಗಳನ್ನು ನೀವು ಸಮಗ್ರವಾಗಿ ತಿಳಿದಿದ್ದೀರಿ. ಸಮಗ್ರವಾದ ಧರ್ಮಶಾಸ್ತ್ರವು ಯಾವಾಗಲೂ ನಿಮ್ಮ ಮನಸ್ಸಿನಲ್ಲಿ ಇದೆ.
ಯೇ ಚ ಕೇಚನ ಲೋಕೇಽಸ್ಮಿನ್ನರ್ಥಾಃ ಸಂಶಯಕಾರಕಾಃ |
ತೇಷಾಂ ಛೇತ್ತಾ ನಾಸ್ತಿ ಲೋಕೇ ತ್ವದನ್ಯಃ ಪುರುಷರ್ಷಭ ॥36॥
ಎಲ್ಲೈ ಪುರುಷಶ್ರೇಷ್ಠರೇ! ಈ ಲೋಕದಲ್ಲಿ ಸಂಶಯಕ್ಕೆ ಎಡೆಮಾಡಿಕೊಡುವ ವಿಷಯಗಳು ಯಾವವು ಇವೆಯೋ ಅವುಗಳ ವಿಷಯದಲ್ಲಿ ಸಂಶಯವನ್ನು ಪರಿ- ಹಾರ ಮಾಡುವವರು ನಿಮ್ಮನ್ನು ಬಿಟ್ಟು ಇನ್ನೊಬ್ಬರು ಇಲ್ಲ.
ಸ ಪಾಂಡವೇಯಸ್ಯ ಮನಃಸಮುತ್ಥಿತಂ
ನರೇಂದ್ರ ಶೋಕಂ ವ್ಯಪಕರ್ಷ ಮೇಧಯಾ |
ಭವದ್ವಿಧಾ ಹ್ಯುತ್ತಮಬುದ್ಧಿವಿಸ್ತರಾ
ವಿಮುಹ್ಯಮಾನಸ್ಯ ಜನಸ್ಯ ಶಾಂತಯೇ ॥37॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚಾಶೋಽಧ್ಯಾಯಃ ॥50॥
ಎಲ್ಲೈ ನರೇಂದ್ರರೇ! ಅಂತಹ ನೀವು ಪಾಂಡುಪುತ್ರನಾದ ಯುಧಿಷ್ಠಿರನ ಮನಸ್ಸಿನಲ್ಲಿ ಉಂಟಾಗಿರುವ ಶೋಕವನ್ನು ನಿಮ್ಮ ಬುದ್ಧಿಯಿಂದ ಪರಿಹರಿಸಿ. ಉತ್ತಮವಾದ ಬುದ್ಧಿವಿಸ್ತಾರವುಳ್ಳ ನಿಮ್ಮಂತಹವರು ಮೋಹಕ್ಕೆ ಒಳಗಾಗುವ ಜನರಿಗೆ ಶಾಂತಿಯನ್ನು ಕರುಣಿಸುವುದಕ್ಕಾಗಿ ಇರುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 50ನೆಯ ಅಧ್ಯಾಯವು ಮುಗಿಯಿತು.
0

51. ಐವತ್ತೊಂದನೆಯ ಅಧ್ಯಾಯ
ಕೃಷ್ಣನಿಂದ ಭೀಷ್ಮರಿಗೆ ಶ್ರೇಯಃಪ್ರದಾನ ಮತ್ತು ಧರ್ಮವನ್ನು ಹೇಳುವಂತೆ ಪ್ರೇರಣೆ
ವೈಶಂಪಾಯನಃ
ಶ್ರುತ್ವಾ ತು ವಚನಂ ಭೀಷ್ಮೋ ವಾಸುದೇವಸ್ಯ ಧೀಮತಃ |
ಕಿಂಚಿದುನ್ನಾಮ್ಯ ವದನಂ ಪ್ರಾಂಜಲಿರ್ವಾಕ್ಯಮಬ್ರವೀತ್ ||1||
ವೈಶಂಪಾಯನರು ಭೀಷ್ಮರು ಮೇಧಾವಿಯಾದ ಕೃಷ್ಣನ ಮಾತುಗಳನ್ನು ಕೇಳಿ ಮುಖವನ್ನು ಸ್ವಲ್ಪ ಮೇಲೆತ್ತಿ ಕೈಗಳನ್ನು ಮುಗಿದು ಮಾತನಾಡಿದರು.
ನಮಸ್ತೇ ಭಗವನ್ ವಿಷ್ಣೋ ಲೋಕಾನಾಂ ನಿಧನೋದ್ಭವ |
ತ್ವಂ ಹಿ ಕರ್ತಾ ಹೃಷೀಕೇಶ ಸಂಹರ್ತಾ ಚಾಪರಾಜಿತಃ ||2||
ಎಲೈ ವಿಷ್ಣುವೇ! ಭಗವಂತನೇ! ಲೋಕಗಳ ಸೃಷ್ಟಿ ಸಂಹಾರಕನೇ! ಹೃಷೀಕೇಶನೇ! ನೀನೇ ಕರ್ತೃವಾದವನು, ನೀನೇ ಸಂಹರ್ತೃವಾದವನು. ಮತ್ತು ಎಂದೂ ಪರಾಜಯವನ್ನು ಹೊಂದದವನು.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ |
ಅಪವರ್ಗೋಽಸಿ ಭೂತಾನಾಂ ಪಂಚಾನಾಂ ಪರತಃ ಸ್ಥಿತಃ ||3||
ವಿಶ್ವಕರ್ಮನೇ! ನಿನಗೆ ನಮಸ್ಕಾರ. ವಿಶ್ವಾತ್ಮನೇ! ವಿಶ್ವೋತ್ಪತ್ತಿಕಾರಣನೇ! ನಿನಗೆ ನಮಸ್ಕಾರ. ನೀನು ಜೀವರಿಗೆ ಮೋಕ್ಷಪ್ರದನಾದವನು. ಪಂಚಭೂತಗಳನ್ನು ಮೀರಿದವನು.
ನಮಸ್ತೇ ತ್ರಿಷು ಲೋಕೇಷು ನಮಸ್ತೇ ಪರತಸ್ತ್ರಿಷು |
ಯೋಗೇಶ್ವರ ನಮಸ್ತೇಽಸ್ತು ತ್ವಂ ಹಿ ಸರ್ವಪರಾಯಣಮ್ ||4||
ನಿನಗೆ ಮೂರು ಲೋಕಗಳಲ್ಲಿಯೂ ನಮಸ್ಕಾರ. ಮೂರುಲೋಕಗಳ ಆಚೆ- ಯಲ್ಲಿಯೂ ನಿನಗೆ ನಮಸ್ಕಾರ. ಯೋಗೇಶ್ವರನೇ! ನಿನಗೆ ನಮಸ್ಕಾರ. ನೀನು ಎಲ್ಲರಿಗೂ ಶ್ರೇಷ್ಠವಾದ ಆಶ್ರಯನಾದವನು.
ಮತ್ಸಂಶ್ರಿತಂ ಯದಾತ್ಥ ತ್ವಂ ವಚಃ ಪುರುಷಸತ್ತಮ |
ತೇನ ಪಶ್ಯಾಮಿ ತೇ ದಿವ್ಯಾನ್ ಭಾವಾನ್ ಹಿ ತ್ರಿಷು ವರ್ತ್ಮಸು ||5||
ಎಲೈ ಪುರುಷೋತ್ತಮನೇ! ನೀನು ನನ್ನ ವಿಷಯದಲ್ಲಿ ಏನು ಮಾತನಾ- ಡಿದೆಯೋ ಅದರ ಬಲದಿಂದ ಮೂರು ಮಾರ್ಗಗಳಲ್ಲಿಯೂ ಇರುವ (ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿರುವ) ದಿವ್ಯವಾದ ವಸ್ತುಗಳನ್ನು ನೋಡುತ್ತಿದ್ದೇನೆ.
ತಚ್ಚ ಪಶ್ಯಾಮಿ ತತ್ತ್ವೇನ ಯತ್ ತೇ ರೂಪಂ ಸನಾತನಮ್ |
ಸಪ್ತ ಮಾರ್ಗಾ ನಿರುದ್ಧಾಸ್ತೇ ವಾಯೋರಮಿತತೇಜಸಃ ||6||
ನಿನ್ನ ಸನಾತನವಾದ ರೂಪವನ್ನು ಸಹ ಯಥಾರ್ಥವಾಗಿ ನೋಡುತ್ತಿದ್ದೇನೆ. ಅಮಿತತೇಜಸ್ವಿಯಾದ ವಾಯುವಿನ ಸಪ್ತಮಾರ್ಗಗಳನ್ನೂ ನೀನು ತಡೆದಿದ್ದೀಯೆ.
ದಿವಂ ತೇ ಶಿರಸಾ ವ್ಯಾಪ್ತಂ ಪದ್ಭ್ಯಾಂ ದೇವೀ ವಸುಂಧರಾ |
ದಿಶೋ ಭುಜೌ ರವಿಶ್ಚಕ್ಷುರ್ವೀರ್ಯೇ ಶಕ್ರಃ ಪ್ರತಿಷ್ಠಿತಃ ||7||
ದ್ಯುಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ಭೂಮಿಯು ನಿನ್ನ ಪಾದಗಳಿಂದ ವ್ಯಾಪ್ತವಾಗಿದೆ. ದಿಕ್ಕುಗಳು ನಿನ್ನ ಭುಜಗಳನ್ನು ಆಶ್ರಯಿಸಿವೆ. ಸೂರ್ಯನು ಚಕ್ಷುಸ್ಸನ್ನೂ, ಇಂದ್ರನು ನಿನ್ನ ವೀರ್ಯವನ್ನೂ ಆಶ್ರಯಿಸಿದ್ದಾರೆ.
ಅಸತೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ |
ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ |
ವಪುರ್ಹ್ಯನುಮಿಮೀಮಸ್ತೇ ಮೇಘಸ್ಯೇವ ಸವಿದ್ಯುತಃ ||8||
ಅಗಸೇಪುಷ್ಪದ ಕಾಂತಿಯನ್ನು ಹೊಂದಿದ ಪೀತಾಂಬರಧಾರಿಯಾದ ಗೋವಿಂದ -ನನ್ನು ನಮಸ್ಕರಿಸುವವರು ಯಾವ ಭಯವನ್ನೂ ಹೊಂದುವುದಿಲ್ಲ. ನಿನ್ನ ಶರೀರವು ವಿದ್ಯುತ್ತಿನಿಂದ ಕೂಡಿದ ಮೇಘದಂತೆ ಕಂಡು ಬರುತ್ತದೆ.
ತ್ವತ್ಪ್ರಪನ್ನಾಯ ಭಕ್ತಾಯ ಗತಿಮಿಷ್ಟಾಂ ಜಿಗೀಷವೇ |
ಯಚ್ಛ್ರೇಯಃ ಪುಂಡರೀಕಾಕ್ಷ ತದ್ ಧ್ಯಾಯಸ್ವ ಸುರೋತ್ತಮ ||9||
ಪುಂಡರೀಕಾಕ್ಷನೇ! ಸುರೋತ್ತಮನೇ! ಶ್ರೇಷ್ಠವಾದ ಗತಿಯನ್ನು ಬಯಸುವ, ಶರಣಾಗತನಾದ ನಿನ್ನ ಭಕ್ತನಾದ ನನಗೆ ಶ್ರೇಯಸ್ಸನ್ನು ಚಿಂತಿಸು.
ಶ್ರೀಭಗವಾನ್
ಯತಃ ಖಲು ಪರಾ ಭಕ್ತಿರ್ಮಯಿ ತೇ ಪುರುಷರ್ಷಭ |
ತತೋ ವಪುರ್ಮಯಾ ದಿವ್ಯಂ ತವ ರಾಜನ್ ಪ್ರದರ್ಶಿತಮ್ ||10||
ಭಗವಾನ್ ಎಲೈ ಪುರುಷಶ್ರೇಷ್ಠನೇ! ರಾಜನೇ ನಿನಗೆ ನನ್ನಲ್ಲಿ ಶ್ರೇಷ್ಠವಾದ ಭಕ್ತಿಯಿರುವ ಕಾರಣದಿಂದ ನನ್ನ ದಿವ್ಯದೇಹವನ್ನು ನಿನಗೆ ತೋರಿಸಿದ್ದೇನೆ.
ನ ಹ್ಯಭಕ್ತಾಯ ರಾಜೇಂದ್ರ ಭಕ್ತಾಯಾನೃಜವೇ ನ ಚ |
ದರ್ಶಯಾಮ್ಯಹಮಾತ್ಮಾನಂ ನ ಚಾದಾಂತಾಯ ಭಾರತ ||11||
ಎಲೈ ಭಾರತನೇ! ರಾಜೇಂದ್ರನೇ! ಭಕ್ತನಲ್ಲದವನಿಗೆ ಭಕ್ತನಾದರೂ ವಕ್ರನಾದ- ವನಿಗೆ ಇಂದ್ರಿಯನಿಗ್ರಹವಿಲ್ಲದವನಿಗೆ ನಾನು ನನ್ನನ್ನು ತೋರಿಸುವುದಿಲ್ಲ.
ಭವಾಂಸ್ತು ಮಮ ಭಕ್ತಶ್ಚ ನಿತ್ಯಂ ಚಾರ್ಜವಮಾಸ್ಥಿತಃ |

ದಮೇ ತಪಸಿ ಸತ್ಯೇ ಚ ದಾನೇ ಚ ನಿರತಃ ಶುಚಿಃ ॥12॥
ನೀನಾದರೋ ನನ್ನ ಭಕ್ತನಾದವನು; ಯಾವಾಗಲೂ ನೇರಸ್ವಭಾವದವನು. ಇಂದ್ರಿಯನಿಗ್ರಹದಲ್ಲಿಯೂ ತಪಸ್ಸಿನಲ್ಲಿಯೂ ಸತ್ಯವಚನದಲ್ಲಿಯೂ ದಾನದ- ಲ್ಲಿಯೂ ನಿರತನಾಗಿ ಶುಚಿಯಾಗಿರುವವನು.
ಅರ್ಹಸ್ತ್ವಂ ಭೀಷ್ಮ ಮಾಂ ದ್ರಷ್ಟುಂ ತಪಸಾ ಸ್ವೇನ ಪಾರ್ಥಿವ |
ತವ ಹ್ಯುಪಸ್ಥಿತಾ ಲೋಕಾ ಯೇಭ್ಯೋ ನಾವರ್ತತೇ ಪುನಃ ॥13॥
ಎಲೈ ಭೀಷ್ಮನೇ! ರಾಜನೇ! ನಿನ್ನ ತಪಸ್ಸಿನ ಬಲದಿಂದ ನೀನು ನನ್ನನ್ನು ನೋಡಲು ಅರ್ಹನಾಗಿದ್ದೀಯೆ. ನಿನಗೆ ಪುನಃ ಹಿಂದಿರುಗದ ಲೋಕಗಳು ಸಿದ್ಧವಾಗಿವೆ.
ಪಂಚಾಶತಂ ಷಟ್ ಚ ಕುರುಪ್ರವೀರ
ಶೇಷಂ ದಿನಾನಾಂ ತವ ಜೀವಿತಸ್ಯ |
ತತಃ ಶುಭೈಃ ಕರ್ಮಫಲೋದಯೈಸ್ತ್ವಂ
ಸಮೇಷ್ಯಸೇ ಭೀಷ್ಮ ವಿಮುಚ್ಯ ದೇಹಮ್ ॥14॥
ಎಲೈ ಕುರುಪ್ರವೀರನೇ! ನಿನ್ನ ಜೀವನದಲ್ಲಿ ಇನ್ನೂ ಐವತ್ತಾರು ದಿವಸಗಳು ಉಳಿದಿವೆ. ಅನಂತರ ಎಲೈ ಭೀಷ್ಮನೇ! ನೀನು ಈ ದೇಹವನ್ನು ತ್ಯಜಿಸಿ, ಶುಭವಾದ ಕರ್ಮಫಲಗಳನ್ನು ಹೊಂದುವಿ.
ಏತೇ ಹಿ ದೇವಾ ವಸವೋ ವಿಮಾನಾನ್
ಆಸ್ಥಾಯ ಸರ್ವೇ ಜ್ವಲಿತಾಗ್ನಿಕಲ್ಪಾಃ |
ಅಂತರ್ಹಿತಾಸ್ತ್ವಾಂ ಪ್ರತಿಪಾಲಯಂತಿ
ಕಾಷ್ಠಾಂ ಪ್ರಪದ್ಯಂತಮುದಕ್ ಪತಂಗಮ್ ॥15॥
ಜ್ವಲಿಸುವ ಅಗ್ನಿಯ ಕಾಂತಿಯನ್ನು ಹೊಂದಿರುವ ಈ ದೇವತೆಗಳು ಮತ್ತು ವಸುಗಳೆಲ್ಲರೂ ತಮ್ಮ ವಿಮಾನಗಳಲ್ಲಿ ಕುಳಿತು ಅದೃಶ್ಯರಾಗಿ ಸೂರ್ಯನು ಉತ್ತರ ದಿಕ್ಕಿಗೆ ಗತಿಯನ್ನು ಬದಲಾಯಿಸುವವರೆಗೆ ರಕ್ಷಣೆ ಮಾಡುತ್ತಿದ್ದಾರೆ.
ವ್ಯಾವೃತ್ತಮಾತ್ರೇ ಭಗವತ್ಯುದೀಚೀಂ
ಸೂರ್ಯೇ ದಿಶಂ ಕಾಲವಶಾತ್ ಪ್ರಪನ್ನೇ |
ಗಂತಾಸಿ ಲೋಕಾನ್ ಪುರುಷಪ್ರವೀರ
ನಾವರ್ತತೇ ಯಾನುಪಲಭ್ಯ ವಿದ್ವಾನ್ ॥16॥
ಭಗವಂತನಾದ ಸೂರ್ಯನು ಉತ್ತರದಿಕ್ಕಿಗೆ ಹೊರಟಕೂಡಲೇ ಎಲೈ ಪುರುಷ- ಪ್ರವೀರನೇ! ನೀನು ಜ್ಞಾನಿಯಾದವನು ಯಾವ ಲೋಕಗಳನ್ನು ಪಡೆದು ಹಿಂದಿರು- ಗುವುದಿಲ್ಲವೋ ಅಂತಹ ಲೋಕಗಳಿಗೆ ಕಾಲವಶನಾಗಿ ಹೋಗುವವನಾಗುವಿ.
ಅಮುಂ ಚ ಲೋಕಂ ತ್ವಯಿ ಭೀಷ್ಮ ಯಾತೇ
ಜ್ಞಾನಾನಿ ನಂಕ್ಷ್ಯಂತ್ಯಖಿಲೇನ ವೀರ |
ಅತಃ ಸ್ಮ ಸರ್ವೇ ತ್ವಯಿ ಸನ್ನಿಕರ್ಷಂ
ಸಮಾಗತಾ ಧರ್ಮವಿವೇಚನಾಯ ॥17॥
ಎಲೈ ವೀರನೇ! ಭೀಷ್ಮನೇ! ನೀನು ಪರಲೋಕಕ್ಕೆ ಪ್ರಯಾಣಮಾಡಿದ ಮೇಲೆ ಈ ಲೋಕದಲ್ಲಿ ಜ್ಞಾನಗಳು ಪೂರ್ಣವಾಗಿ ನಾಶ ಹೊಂದುತ್ತವೆ. ಆದ್ದರಿಂದ ನಾವೆಲ್ಲರೂ ಧರ್ಮವಿವೇಚನೆಯನ್ನು ಮಾಡಲು ನಿನ್ನ ಬಳಿಗೆ ಬಂದಿದ್ದೇವೆ.
ತಜ್ಜ್ಞಾತಿಶೋಕೋಪಹತಶ್ರುತಾಯ
ಸತ್ಯಾಭಿಸಂಧಾಯ ಯುಧಿಷ್ಠಿರಾಯ |
ಪ್ರಬ್ರೂಹಿ ಧರ್ಮಾರ್ಥಸಮಾಧಿಯುಕ್ತ-
ಮರ್ಥ್ಯಂ ವಚೋಽಸ್ಯಾಪನುದಾಥ ಶೋಕಮ್ ॥18॥
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಪಂಚಾಶೋಽ ಧ್ಯಾಯಃ ॥51॥
ಆದ್ದರಿಂದ ಜ್ಞಾತಿವಧೆಯಿಂದುಂಟಾದ ಶೋಕದಿಂದ ಮಲಿನವಾದ ಜ್ಞಾನವನ್ನು ಹೊಂದಿರುವ ಸತ್ಯವಾದ ಅಭಿಪ್ರಾಯವುಳ್ಳ ಯುಧಿಷ್ಠಿರನಿಗೆ ಧರ್ಮಾರ್ಥ- ಸಮಾಧಾನಯುಕ್ತವಾದ ಪ್ರಾರ್ಥನೀಯವಾದ ಮಾತುಗಳನ್ನು ಹೇಳಿ ಅವನ ಶೋಕವನ್ನು ಪರಿಹರಿಸು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 51ನೆಯ ಅಧ್ಯಾಯವು ಮುಗಿಯಿತು
0
52. ಐವತ್ತೆರಡನೆಯ ಅಧ್ಯಾಯ
ಭೀಷ್ಮರಿಂದ ತಮ್ಮ ಅಸಾಮರ್ಥ್ಯದ ನಿವೇದನೆ; ಕೃಷ್ಣನ ಅನುಗ್ರಹದಿಂದ ದೇಹದಾರ್ಢ್ಯಪ್ರಾಪ್ತಿ
ವೈಶಂಪಾಯನಃ
ತತಃ ಕೃಷ್ಣಸ್ಯ ತದ್ ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ |
ಶ್ರುತ್ವಾ ಶಾಂತನವೋ ಭೀಷ್ಮಃ ಪ್ರತ್ಯುವಾಚ ಕೃತಾಂಜಲಿಃ ॥1॥
ವೈಶಂಪಾಯನರು ಆಗ ಧರ್ಮಾರ್ಥಸಹಿತವೂ ಹಿತವೂ ಆದ ಕೃಷ್ಣನ ಆ ಮಾತನ್ನು ಕೇಳಿ ಶಂತನುಪುತ್ರರಾದ ಆ ಭೀಷ್ಮರು ಕೈಗಳನ್ನು ಮುಗಿದು ಮಾತ- ನಾಡಿದರು.
ಲೋಕನಾಥ ಮಹಾಬಾಹೋ ಶಿವ ನಾರಾಯಣಾಚ್ಯುತ |
ತವ ವಾಕ್ಯಮಭಿಶ್ರುತ್ಯ ಹರ್ಷೇಣಾಸ್ಮಿ ಪರಿಪ್ಲುತಃ ॥2॥

ಲೋಕನಾಥನೇ! ಮಹಾಬಾಹುವೇ! ಶಿವನೇ! ನಾರಾಯಣನೇ! ಅಚ್ಯುತನೇ! ನಿನ್ನ ಮಾತನ್ನು ಕೇಳಿ ನಾನು ಸಂತೋಷದಿಂದ ತುಂಬಿಹೋಗಿದ್ದೇನೆ.
ಕಿಂ ಚಾಹಮಭಿಧಾಸ್ಯಾಮಿ ವಾಕ್ಪತೇ ತವ ಸನ್ನಿಧೌ |
ಯದಾ ವಾಚೋಗತಂ ಸರ್ವಂ ತವ ವಾಚಿ ಸಮಾಹಿತಮ್ ॥3॥
ಎಲ್ಯೆ ವಾಕ್ಪತಿಯೇ! ಮಾತಿನಿಂದ ಹೇಳಬೇಕಾದುದೆಲ್ಲವೂ ನಿನ್ನ ಮಾತಿನಲ್ಲಿಯೇ ಅಡಗಿರುವಾಗ ನಿನ್ನ ಸನ್ನಿಧಿಯಲ್ಲಿ ನಾನು ಏನನ್ನು ಹೇಳಲಿ?
ಯದ್ಧಿ ಕಿಂಚಿತ್ ಕೃತಂ ಲೋಕೇ ಕರ್ತವ್ಯಂ ಕ್ರಿಯತೇ ಚ ಯತ್ |
ತ್ವತ್ತಸ್ತನ್ನಿಃಸೃತಂ ದೇವ ಲೋಕಾ ಬುದ್ಧಿಮಯಾ ಹಿ ತೇ ॥4॥
ಲೋಕದಲ್ಲಿ ಮಾಡಬೇಕಾದ ಯಾವ ಕರ್ತವ್ಯವಿದೆಯೋ ಯಾವುದು ಮಾಡಲ್ಪಡುತ್ತದೆಯೋ ಎಲ್ಯೆ ದೇವನೇ! ಅದೆಲ್ಲವೂ ನಿನ್ನಿಂದಲೇ ಉಂಟಾಗುವುದು. ಎಲ್ಲ ಲೋಕಗಳೂ ನಿನ್ನ ಜ್ಞಾನವನ್ನು ಅವಲಂಬಿಸಿವೆ.
ಕಥಯೇದ್ ದೇವಲೋಕಂ ಯೋ ದೇವರಾಜಸಮೀಪತಃ |
ಧರ್ಮಕಾಮಾರ್ಥಶಾಸ್ತ್ರಾಣಾಂ ಸೋಽರ್ಥಾನ್ ಬ್ರೂಯಾತ್ ತವಾಗ್ರತಃ ॥
ಯಾವನು ದೇವರಾಜನಾದ ಇಂದ್ರನಿಗೆ ದೇವಲೋಕವನ್ನು ಪರಿಚಯಮಾಡಿ- ಕೊಡುತ್ತಾನೋ ಅಂತಹವನು ನಿನ್ನ ಎದುರಿನಲ್ಲಿ ಧರ್ಮ, ಅರ್ಥ, ಕಾಮಶಾಸ್ತ್ರಗಳ ಅರ್ಥವನ್ನು ಹೇಳಿಯಾನು!
ಶರಾಭಿಘಾತಾದ್ ವ್ಯಥಿತಂ ಮನೋ ಮೇ ಮಧುಸೂದನ |
ಗಾತ್ರಾಣಿ ಚಾವಸೀದಂತಿ ನ ಚ ಬುದ್ಧಿಃ ಪ್ರಸೀದತಿ ॥6॥
ಎಲ್ಯೆ ಮಧುಸೂದನನೇ! ಬಾಣಗಳಿಂದುಂಟಾದ ವೇದನೆಯಿಂದ ನನ್ನ ಮನಸ್ಸು ವ್ಯಥೆಯಿಂದ ಕೂಡಿದೆ. ಶರೀರವು ಕುಸಿದು ಹೋಗುತ್ತಿದೆ. ಬುದ್ಧಿಯು ಸ್ಪಷ್ಟವಾಗಿಲ್ಲ.
ನ ಚ ಮೇ ಪ್ರತಿಭಾ ಕಾಚಿದಸ್ತಿ ಕಿಂಚಿತ್ ಪ್ರಭಾಷಿತುಮ್ |
ಪೀಡ್ಯಮಾನಸ್ಯ ಗೋವಿಂದ ವಿಷಾನಲಸಮೈಃ ಶರೈಃ ॥7॥
ವಿಷಾಗ್ನಿಗಳಿಗೆ ಸಮಾನವಾದ ಬಾಣಗಳಿಂದ ಪೀಡಿತನಾದ ನನಗೆ ಮಾತ- ನಾಡಲು ಯಾವುದೂ ಹೊಳೆಯುತ್ತಿಲ್ಲ.
ಬಲಂ ಮೇಧಾಃ ಪ್ರಜರತಿ ಪ್ರಾಣಾಃ ಸಂತ್ವರಯಂತಿ ಚ |
ಮರ್ಮಾಣಿ ಪರಿತಪ್ಯಂತೇ ಭ್ರಾಂತಂ ಚೈತಸ್ತಥೈವ ಚ ॥8॥
ಬಲ ಮತ್ತು ಪ್ರತಿಭೆಗಳು ನಶಿಸಿ ಹೋಗುತ್ತಿವೆ. ಪ್ರಾಣಗಳು ಶರೀರವನ್ನು ಬಿಡಲು ತ್ವರೆ ಮಾಡುತ್ತಿವೆ. ಶರೀರದ ಮರ್ಮಸ್ಥಾನಗಳು ತಾಪಕ್ಕೊಳಗಾಗಿವೆ. ನನ್ನ ಮನಸ್ಸು ಭ್ರಾಂತಿಯಿಂದ ಕೂಡಿದೆ.
ದೌರ್ಬಲ್ಯಾತ್ ಸಜ್ಜತೇ ವಾಙ್ ಮೇ ಸ ಕಥಂ ವಕ್ತುಮುತ್ಸಹೇ |
ಸಾಧು ಮೇ ತ್ವಂ ಪ್ರಸೀದಸ್ವ ದಾಶಾರ್ಹಕುಲನಂದನ ॥9॥
ನಿಃಶಕ್ತಿಯಿಂದ ಮಾತು ಉಡುಗಿಹೋಗುತ್ತಿದೆ. ಅಂತಹ ನಾನು ಹೇಗೆ ಮಾತ- ನಾಡಲಿ? ದಾಶಾರ್ಹಕುಲನಂದನನೇ! ನೀನು ನನಗೆ ಪ್ರಸನ್ನನಾಗು.
ತತ್ ಕ್ಷಮಸ್ವ ಮಹಾಬಾಹೋ ನ ಬ್ರೂಯಾಂ ಕಿಂಚಿದಚ್ಯುತ |
ತ್ವತ್ಸನ್ನಿಧೌ ಚ ಸೀದೇತ ವಾಚಸ್ಪತಿರಪಿ ಬ್ರುವನ್ ॥10॥
ಎಲ್ಯೆ ಮಹಾಬಾಹುವೇ! ನನ್ನನ್ನು ಕ್ಷಮಿಸು. ಅಚ್ಯುತನೇ! ನಾನು ಏನನ್ನೂ ಹೇಳಲಾರೆ. ಅದರಲ್ಲೂ ನಿನ್ನ ಸನ್ನಿಧಿಯಲ್ಲಿ ವಾಚಸ್ಪತಿಯೂ ಮಾತನಾಡಲು ಹೊರ- ಟರೆ ಅವನ ಮಾತುಗಳು ನಶಿಸಿಹೋದಾವು!
ನ ದಿಶಃ ಸಂಪ್ರಜಾನಾಮಿ ನಾಕಾಶಂ ನಚ ಮೇದಿನೀಮ್ |
ಕೇವಲಂ ತವ ವೀರ್ಯೇಣ ತಿಷ್ಠಾಮಿ ಮಧುಸೂದನ ॥11॥
ನನಗೆ ದಿಕ್ಕುಗಳು ತಿಳಿಯುತ್ತಿಲ್ಲ. ಭೂಮಿ ಮತ್ತು ಆಕಾಶಗಳು ಗೋಚರಿ- ಸುತ್ತಿಲ್ಲ. ಎಲ್ಯೆ ಮಧುಸೂದನನೇ! ಕೇವಲ ನಿನ್ನ ಅನುಗ್ರಹದಿಂದ ನಾನು ಬದುಕಿ- ದ್ದೇನೆ.
ಸ್ವಯಮೇವ ಪ್ರಭೋ ತಸ್ಮಾದ್ ಧರ್ಮರಾಜಸ್ಯ ಯದ್ ಹಿತಮ್ |
ತದ್ ಬ್ರವೀಹ್ಯಾಶು ಸರ್ವೇಷಾಮಾಗಮಾನಾಂ ತ್ವಮಾಗಮಃ ॥12॥
ಎಲ್ಯೆ ಪ್ರಭುವೇ! ಆದ್ದರಿಂದ ನೀನೇ ಧರ್ಮರಾಜನಿಗೆ ಯಾವುದು ಹಿತವೋ ಅದನ್ನು ಹೇಳು. ಎಲ್ಲ ಆಗಮಗಳಿಗೆ ನೀನೇ ಮೂಲನಾದವನು (ನೀನೇ ಜ್ಞಾನಪ್ರದ- ನಾದವನು).
ಕಥಂ ತ್ವಯಿ ಸ್ಥಿತೇ ಲೋಕೇ ಶಾಶ್ವತೇ ಲೋಕಕರ್ತರಿ |
ಪ್ರಬ್ರೂಯಾನ್ಮದ್ವಿಧಃ ಕಶ್ಚಿದ್ ಗುರೌ ಶಿಷ್ಯ ಇವ ಸ್ಥಿತೇ ॥13॥
ಲೋಕಕರ್ತನೂ ಶಾಶ್ವತನೂ ಆದ ನಿನ್ನಂತಹವನು ಎದುರಿಗೆ ಇರುವಾಗ ಗುರುವಿನ ಎದುರಿನಲ್ಲಿ ಶಿಷ್ಯನು ಮಾತನಾಡಿದಂತೆ ನನ್ನಂತಹ ಯಾವನು ಮಾತ- ನಾಡಿಯಾನು?
ಶ್ರೀಭಗವಾನ್
ಉಪಪನ್ನಮಿದಂ ವಾಕ್ಯಂ ಕೌರವಾಣಾಂ ಧುರಂಧರೇ |
ಮಹಾವೀರ್ಯೇ ಮಹಾಸತ್ತ್ವೇ ಸ್ಥಿತೇ ಸರ್ವಾರ್ಥದರ್ಶಿನಿ ॥14॥
ಶ್ರೀಭಗವಾನ್ ಕೌರವರ ಧುರಂಧರನೂ, ಮಹಾಪರಾಕ್ರಮಿಯೂ, ಮಹಾ- ಧೈರ್ಯವಂತನೂ ಸರ್ವಜ್ಞನೂ ಆದ ನಿನ್ನಿಂದ ಇಂತಹ ಮಾತುಗಳು ಯೋಗ್ಯ- ವಾಗಿವೆ.

ಯಚ್ಚ ಮಾಮಾತ್ಥ ಗಾಂಗೇಯ ಬಾಣಘಾತರುಜಂ ಪ್ರತಿ |
ಗೃಹಾಣಾತ್ರ ವರಂ ಭೀಷ್ಮ ಮತ್ಪ್ರಸಾದಕೃತಂ ವಿಭೋ ॥15॥
ಎಲೈ ಗಾಂಗೇಯನೇ! ಬಾಣಗಳಿಂದ ಉಂಟಾದ ವೇದನೆಯ ವಿಷಯದಲ್ಲಿ ನೀನು ನನಗೆ ಹೇಳಿದೆಯಷ್ಟೇ. ಎಲೈ ಭೀಷ್ಮನೇ! ವಿಭುವೇ! ನನ್ನ ಅನುಗ್ರಹದಿಂದ ಉಂಟಾದ ವರವನ್ನು ಈ ವಿಷಯದಲ್ಲಿ ಸ್ವೀಕರಿಸು.
ನ ತೇ ಗ್ಲಾನಿರ್ನ ತೇ ಮೂರ್ಚ್ಛಾ ನ ದಾಹೋ ನ ಚ ತೇ ರುಜಾ |
ಪ್ರಭವಿಷ್ಯತಿ ಗಾಂಗೇಯ ಕ್ಷುತ್ಪಿಪಾಸೇ ನ ಚಾಪ್ಯುತ ॥16॥
ಎಲೈ ಗಾಂಗೇಯನೇ! ಅಚ್ಯುತನೇ! ನಿನಗೆ ಶ್ರಮವಾಗಲೀ, ಮೂರ್ಛೆ- ಯಾಗಲೀ, ಉರಿಯಾಗಲೀ, ವೇದನೆಯಾಗಲೀ, ಹಸಿವು ನೀರಡಿಕೆಗಳಾಗಲೀ ಉಂಟಾಗುವುದಿಲ್ಲ.
ಜ್ಞಾನಾನಿ ಚ ಸಮಗ್ರಾಣಿ ಪ್ರತಿಭಾಸ್ಯಂತಿ ತೇಽನಘ |
ನ ಚ ತೇ ಕ್ವಚಿದಾಸಕ್ತಿರ್ಬುದ್ಧೇಃ ಪ್ರಾದುರ್ಭವಿಷ್ಯತಿ ॥17॥
ಎಲೈ ಅನಘನೇ! ನಿನಗೆ ಎಲ್ಲ ಜ್ಞಾನಗಳೂ ಪ್ರಕಾಶಿಸುತ್ತವೆ. ನಿನ್ನ ಬುದ್ಧಿಯು ಸಂಕಲ್ಪ ಮಾಡಿದ ವಿಷಯವನ್ನು ಬಿಟ್ಟು ಬೇರೆ ಕಡೆಗೆ ಹೋಗುವುದಿಲ್ಲ.
ಸತ್ತ್ವಸ್ಥಂ ಚ ಮನೋ ನಿತ್ಯಂ ತವ ಭೀಷ್ಮ ಭವಿಷ್ಯತಿ |
ರಜಸ್ತಮೋಭ್ಯಾಂ ರಹಿತಂ ಘನೈರ್ಮುಕ್ತ ಇವೋಡುರಾಟ್ ॥18॥
ಎಲೈ ಭೀಷ್ಮನೇ! ನಿನ್ನ ಮನಸ್ಸು ರಜೋಗುಣ ಮತ್ತು ತಮೋಗುಣಗಳಿಂದ ರಹಿತವಾಗಿ ಮೋಡನಿಂದ ನಿರ್ಮುಕ್ತನಾದ ಚಂದ್ರನಂತೆ ಯಾವಾಗಲೂ ಸತ್ವಗುಣ- ದಲ್ಲಿ ನಿಲ್ಲುವುದು.
ಯದ್ ಯಚ್ಚ ಧರ್ಮಸಂಯುಕ್ತಮರ್ಥಯುಕ್ತಮಥಾಪಿ ವಾ |
ಚಿಂತಯಿಷ್ಯಸಿ ತತ್ರಾಗ್ರ್ಯಾ ಬುದ್ಧಿಸ್ತವ ಭವಿಷ್ಯತಿ ॥19॥
ಧರ್ಮದ ವಿಷಯದಲ್ಲಿ ಮತ್ತು ಅರ್ಥದ ವಿಷಯದಲ್ಲಿ ನೀನು ಏನೇನು ಚಿಂತಿಸುವಿಯೋ ಆ ವಿಷಯಗಳಲ್ಲಿ ನಿನ್ನ ಬುದ್ಧಿಯು ಬಹಳ ಶ್ರೇಷ್ಠವಾಗುವುದು.
ಇಮಂ ಚ ರಾಜಶಾರ್ದೂಲ ಭೂತಗ್ರಾಮಂ ಚತುರ್ವಿಧಮ್ |
ಚಕ್ಷುರ್ದಿವ್ಯಂ ಸಮಾಶ್ರಿತ್ಯ ದ್ರಕ್ಷ್ಯಸ್ಯಮಿತವಿಕ್ರಮ ॥20॥
ಎಲೈ ರಾಜಶಾರ್ದೂಲನೇ! ಅಮಿತವಿಕ್ರಮನೇ! ನೀನು ದಿವ್ಯವಾದ ಚಕ್ಷುಸ್ಸನ್ನು ಹೊಂದಿ, ಜರಾಯುಜಾದಿ ನಾಲ್ಕು ವಿಧವಾದ ಜೀವರನ್ನು ನೋಡುವಿ.
ಚತುರ್ವಿಧಂ ಪ್ರಜಾಜಾಲಂ ಸಂಯುಕ್ತೋ ಜ್ಞಾನಚಕ್ಷುಷಾ |
ಭೀಷ್ಮ ದ್ರಕ್ಷ್ಯಸಿ ತತ್ತ್ವೇನ ಜಲೇ ಮೀನ ಇವಾಮಲೇ ॥21॥
ಎಲೈ ಭೀಷ್ಮನೇ! ನೀನು ಸ್ವಚ್ಛವಾದ ನೀರಿನಲ್ಲಿ ಮೀನನ್ನು ನೋಡಿದಂತೆ ನಿನ್ನ ಜ್ಞಾನದೃಷ್ಟಿಯಿಂದ ಕೂಡಿದವನಾಗಿ ಎಲ್ಲ ಜೀವರನ್ನೂ ಯಥಾರ್ಥವಾಗಿ ನೋಡುವಿ (ಎಂದು ಹೇಳಿದನು).
ವೈಶಂಪಾಯನಃ
ತತಸ್ತೇ ವ್ಯಾಸಸಹಿತಾಃ ಸರ್ವ ಏವ ಮಹರ್ಷಯಃ |
ಋಗ್ಯಜುಃಸಾಮಸಂಯುಕ್ತೈರ್ವಚೋಭಿಃ ಕೃಷ್ಣಮಾರ್ಚಯನ್ ॥22॥
ವೈಶಂಪಾಯನರು ಅನಂತರ ವ್ಯಾಸರಿಂದ ಕೂಡಿದ ಎಲ್ಲ ಮಹರ್ಷಿಗಳೂ ಋಗ್ಯಜುಃಸಾಮವಾಕ್ಯಗಳಿಂದ ಕೃಷ್ಣನನ್ನು ಪೂಜಿಸಿದರು.
ತತಃ ಸರ್ವಾರ್ತವಂ ದಿವ್ಯಂ ಪುಷ್ಪವರ್ಷಂ ನಭಸ್ತಳಾತ್ |
ಪಪಾತ ಯತ್ರ ವಾರ್ಷ್ಣೇಯಃ ಸಗಾಂಗೇಯಃ ಸಪಾಂಡವಃ ॥23॥
ಆಗ ಕೃಷ್ಣನೂ ಭೀಷ್ಮರೂ ಮತ್ತು ಪಾಂಡವರೂ ಇದ್ದ ಸ್ಥಳದಲ್ಲಿ ಆಕಾಶದಿಂದ ದಿವ್ಯವಾದ ಸರ್ವ ಋತುಗಳ ಪುಷ್ಪಗಳ ವೃಷ್ಟಿಯು ಉಂಟಾಯಿತು.
ವಾದಿತ್ರಾಣಿ ಚ ದಿವ್ಯಾನಿ ಜಗುಶ್ಚಾಪ್ಸರಸಾಂ ಗಣಾಃ |
ನ ಚಾಹಿತಮನಿಷ್ಟಂ ವಾ ಕಿಂಚಿತ್ ತತ್ರ ವ್ಯದೃಶ್ಯತ ॥24॥
ಆಕಾಶದಲ್ಲಿ ದಿವ್ಯವಾದ ವಾದ್ಯಗಳು ಮೊಳಗಿದವು. ಅಪ್ಸರೆಯರ ಸಮೂಹ- ಗಳು ಗಾನವನ್ನು ಮಾಡಿದವು. ಅಲ್ಲಿ ಅಹಿತವಾದುದಾಗಲೀ, ಅನಿಷ್ಟವಾದುದಾಗಲೀ ಯಾವುದೂ ಕಂಡು ಬರಲಿಲ್ಲ.
ವವೌ ಶಿವಃ ಸುಖೋ ವಾಯುಃ ಸುಖಗಂಧವಹಃ ಶುಚಿಃ |
ಶಾಂತಾಯಾಂ ದಿಶಿ ಶಾಂತಾಶ್ಚ ಪ್ರಾವದನ್ ಮೃಗಪಕ್ಷಿಣಃ ॥25॥
ಅನಂತರ ಮಂಗಳಕರವಾದ ವಾಯುವು ಶುಚಿಯಾಗಿ ಸರ್ವಗಂಧಗಳನ್ನು ತೆಗೆದುಕೊಂಡು ಸುಖವಾಗಿ ಬೀಸಿತು. ದಕ್ಷಿಣದಿಕ್ಕಿನಲ್ಲಿ ಮೃಗಪಕ್ಷಿಗಳು ಶಾಂತವಾಗಿ ಕಿರುಚಿದವು.
ತತೋ ಮುಹೂರ್ತಾದ್ ಭಗವಾನ್ ಸಹಸ್ರಾಂಶುರ್ದಿವಾಕರಃ |
ದಹನ್ ವನಮಿವೈಕಾಂತೇ ಪ್ರತೀಚ್ಯಾಂ ಪ್ರತ್ಯದೃಶ್ಯತ ॥26॥
ಅನಂತರ ಒಂದು ಮುಹೂರ್ತದಲ್ಲಿ ಭಗವಂತನಾದ ಸಹಸ್ರಕಿರಣನಾದ ಸೂರ್ಯನು ಏಕಾಂತದಲ್ಲಿ ಆ ವನವನ್ನು ದಹಿಸುವವನಂತೆ ಪಶ್ಚಿಮದಿಕ್ಕಿನಲ್ಲಿ ಕಾಣಿಸಿ -ಕೊಂಡನು.
ತತೋ ಮಹರ್ಷಯಃ ಸರ್ವೇ ಸಮುತ್ಥಾಯ ಜನಾರ್ದನಮ್ |

ಭೀಷ್ಮಮಾಮಂತ್ರಯಾಂಚಕ್ರೂ ರಾಜಾನಂ ಚ ಯುಧಿಷ್ಠಿರಮ್ ॥27॥
ಆಗ ಮಹರ್ಷಿಗಳೆಲ್ಲರೂ ಎದ್ದು ಹೊರಡಲು ಜನಾರ್ದನನ, ಭೀಷ್ಮರ ಮತ್ತು ರಾಜನಾದ ಯುಧಿಷ್ಠಿರನ ಅನುಮತಿಯನ್ನು ತೆಗೆದುಕೊಂಡರು.
ತತಃ ಪ್ರಣಾಮಮಕರೋತ್ ಕೇಶವಃ ಪಾಂಡವಸ್ತಥಾ |
ಸಾತ್ಯಕಿಃ ಸಂಜಯಶ್ಚೈವ ಸ ಚ ಶಾರದ್ವತಃ ಕೃಪಃ ॥28॥
ಆಗ ಕೇಶವನೂ, ಪಾಂಡವನಾದ ಯುಧಿಷ್ಠಿರನೂ, ಸಾತ್ಯಕಿ, ಸಂಜಯ ಮತ್ತು ಶಾರದ್ವತರಾದ ಕೃಪರೂ ಋಷಿಗಳಿಗೆ ಪ್ರಣಾಮವನ್ನು ಮಾಡಿದರು.
ತತಸ್ತೇ ಧರ್ಮನಿರತಾಃ ಸಮ್ಯಕ್ ತೈರಭಿಪೂಜಿತಾಃ |
ಶ್ವಃ ಸಮೇಷ್ಯಾಮ ಇತ್ಯುಕ್ತ್ವಾ ಯಥೇಷ್ಟಂ ತ್ವರಿತಾ ಯಯುಃ ॥29॥
ಅನಂತರ ಅವರಿಂದ ಚೆನ್ನಾಗಿ ಪೂಜಿಸಲ್ಪಟ್ಟ ಧರ್ಮನಿರತರಾದ ಆ ಮಹರ್ಷಿ- ಗಳು ನಾಳೆ ಸಮಾಗಮವನ್ನು ಹೊಂದೋಣ ಎಂದು ಹೇಳಿ ಶೀಘ್ರವಾಗಿ ತಮಗೆ ಇಷ್ಟವಾದ ಸ್ಥಳಗಳಿಗೆ ಹೊರಟರು.
ತಥೈವಾಮಂತ್ರ್ಯ ಗಾಂಗೇಯಂ ಕೇಶವಸ್ತೇ ಚ ಪಾಂಡವಾಃ |
ಪ್ರದಕ್ಷಿಣಮುಪಾವೃತ್ಯ ರಥಾನಾರುರುಹುಃ ಶುಭಾನ್ ॥30॥
ಹಾಗೆಯೇ ಕೇಶವನು ಮತ್ತು ಪಾಂಡವರು ಭೀಷ್ಮರ ಅನುಮತಿಯನ್ನು ಪಡೆದು ಅವರಿಗೆ ಪ್ರದಕ್ಷಿಣೆಯನ್ನು ಮಾಡಿ ತಮ್ಮ ಶುಭವಾದ ರಥಗಳನ್ನು ಏರಿದರು.
ತತೋ ರಥೈಃ ಕಾಂಚನದಂತಕೂಬರೈಃ
ಮಹೀಧರಾಭೈಃ ಸಮದೈಶ್ಚ ದಂತಿಭಿಃ |
ಹಯೈಃ ಸುಪರ್ಣೈರಿವ ಚಾಶುಗಾಮಿಭಿಃ
ಪದಾತಿಭಿಶ್ಚಾತ್ತಶರಾಸನಾದಿಭಿಃ ॥31॥
ಯಯೌ ರಥಾನಾಂ ಪುರತೋ ಹಿ ಸಾ ಚಮೂಃ
ತಥೈವ ಪಶ್ಚಾದತಿಮಾತ್ರಸಾರಿಣೀ |
ಪುರಶ್ಚ ಪಶ್ಚಾಚ್ಚ ಯಥಾ ಮಹಾನದೀ
ಅಥರ್ಕ್ಷವಂತಂ ಗಿರಿಮೇತಿ ನರ್ಮದಾ ॥32॥
ಅನಂತರ ಸುವರ್ಣ ಮತ್ತು ಗಜದಂತಗಳಿಂದ ಅಲಂಕೃತವಾದ ರಥಗ- ಳಿಂದಲೂ, ಪರ್ವತಪ್ರಾಯವಾದ ಮದಿಸಿದ ಗಜಗಳಿಂದಲೂ, ಗರುಡನಂತೆ ವೇಗ- ಶಾಲಿಗಳಾದ ಹಯಗಳಿಂದಲೂ, ಧನುರ್ಧಾರಿಗಳಾದ ಪದಾತಿಗಳಿಂದಲೂ ಕೂಡಿದ ಆ ಸೈನ್ಯವು ನರ್ಮದಾ ನದಿಯು ಋಕ್ಷವಂತಪರ್ವತ(ವಿಂಧ್ಯಾಚಲ)ದ ಹಿಂದೆಯೂ ಮತ್ತು ಮುಂದೆಯೂ ಹರಿದಂತೆ ರಥಗಳ ಮುಂದೆಯೂ ಮತ್ತು ಹಿಂದೆಯೂ ಚಲಿಸಿತು.
ತತಃ ಪುರಸ್ತಾದ್ ಭಗವಾನ್ ನಿಶಾಕರಃ
ಸಮುತ್ಥಿತಸ್ತಾಮಭಿಹರ್ಷಯಂಶ್ಚಮೂಮ್ |
ದಿವಾಕರಾಪೀತರಸಾಸ್ತಥೌಷಧೀಃ
ಪುನಃ ಸ್ವಕೇನೈವ ಗುಣೇನ ಯೋಜಯನ್ ॥33॥
ಅನಂತರ ಅವರ ಮುಂಭಾಗದಲ್ಲಿ ಪೂಜ್ಯನಾದ ಚಂದ್ರನು ಆ ಸೈನ್ಯವನ್ನು ಸಂತೋಷವನ್ನುಂಟು ಮಾಡುತ್ತಾ ಸೂರ್ಯನು ಹೀರಿದ್ದ ಔಷಧಿಗಳ ರಸವನ್ನು ತನ್ನ ಗುಣಗಳಿಂದ ಪುನಃ ಅವುಗಳಿಗೆ ಕೊಡುತ್ತಾ ಉದಯಿಸಿದನು.
ತತಃ ಪುರಂ ಸುರಪುರಸನ್ನಿಭದ್ಯುತಿ
ಪ್ರವಿಶ್ಯ ತೇ ಯದುವೃಷಪಾಂಡವಾಸ್ತದಾ |
ಯಥೋಚಿತಾನ್ ಭವನವರಾನ್ ಸಮಾವಿಶನ್
ಶ್ರಮಾನ್ವಿತಾ ಮೃಗಪತಯೋ ಗುಹಾ ಇವ ॥34॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿಪಂಚಾಶೋಽಧ್ಯಾಯಃ ॥52॥
ಅನಂತರ ದೇವಲೋಕಕ್ಕೆ ಸಮಾನವಾದ ಕಾಂತಿಯುಳ್ಳ ಪಟ್ಟಣವನ್ನು ಪ್ರವೇಶಿಸಿ ಆ ಯದುಶ್ರೇಷ್ಠನು ಮತ್ತು ಪಾಂಡವರು ದಣಿದ ಸಿಂಹಗಳು ಗುಹೆಯನ್ನು ಪ್ರವೇಶಿಸುವಂತೆ ತಮಗೆ ಉಚಿತವಾದ ಶ್ರೇಷ್ಠವಾದ ಭವನಗಳನ್ನು ಪ್ರವೇಶಿಸಿದರು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 52ನೆಯ ಅಧ್ಯಾಯವು ಮುಗಿಯಿತು.
0
53. ಐವತ್ತಮೂರನೆಯ ಅಧ್ಯಾಯ
ಮರುದಿನ ಪ್ರಾತಃಕಾಲದಲ್ಲಿ ಕೃಷ್ಣಯುಧಿಷ್ಠಿರಾದಿಗಳಿಂದ ಭೀಷ್ಮಸಮೀಪಗಮನ
ವೈಶಂಪಾಯನಃ
ತತಃ ಪ್ರವಿಶ್ಯ ಭವನಂ ಪ್ರಸುಪ್ತೋ ಮಧುಸೂದನಃ |
ಯಾಮಮಾತ್ರಾವಶೇಷಾಯಾಂ ಯಾಮಿನ್ಯಾಂ ಪ್ರತ್ಯಬುಧ್ಯತ ॥1॥
ವೈಶಂಪಾಯನರು ಅನಂತರ ತನ್ನ ಭವನವನ್ನು ಪ್ರವೇಶಿಸಿ, ನಿದ್ರಿಸಿದ ಮಧು- ಸೂದನನು ರಾತ್ರಿಯಲ್ಲಿ ಇನ್ನೂ ಒಂದು ಯಾಮದ ಕಾಲ ಉಳಿದಿರುವಾಗ ಎಚ್ಚರ- ಗೊಂಡನು.

ಸ ಧ್ಯಾನಪಥಮಾಶ್ರಿತ್ಯ ಸರ್ವಜ್ಞಾನಾನಿ ಮಾಧವಃ |
ಅವಲೋಕ್ಯ ತತಃ ಪಶ್ಚಾದ್ ದಧ್ಯೌ ಬ್ರಹ್ಮ ಸನಾತನಮ್ ॥2॥
ಆ ಮಾಧವನು ಧ್ಯಾನಮಾರ್ಗವನ್ನು ಆಶ್ರಯಿಸಿ ಎಲ್ಲ ವಿಷಯಗಳನ್ನೂ ಅವಲೋಕಿಸಿ ಅನಂತರ ಸನಾತನನಾದ ಬ್ರಹ್ಮನಾದ ತನ್ನನ್ನೇ ಧ್ಯಾನ ಮಾಡಿದನು.
ತತಃ ಶ್ರುತಿಪುರಾಣಜ್ಞಾಃ ಶಿಕ್ಷಿತಾ ರಕ್ತಕಂಠಿನಃ |
ಅಸ್ತುವನ್ ವಿಶ್ವಕರ್ಮಾಣಂ ವಾಸುದೇವಂ ಪ್ರಜಾಪತಿಮ್ ॥3॥
ಅನಂತರ ಶ್ರುತಿಪುರಾಣಗಳನ್ನು ತಿಳಿದ, ಸುಶಿಕ್ಷಿತರಾದ, ಅನುರಾಗಪೂರ್ಣ- ವಾದ ಕಂಠದಿಂದ ಕೂಡಿದ ಬ್ರಾಹ್ಮಣರು ವಿಶ್ವಕರ್ಮನೂ ಪ್ರಜಾಪತಿಯೂ ಆದ ವಾಸುದೇವನನ್ನು ಸ್ತೋತ್ರ ಮಾಡಿದರು.
ಪಠಂತಿ ಪಾಣಿಕಾ ಗಾಥಾಸ್ತಥಾ ಗಾಯಂತಿ ಗಾಯನಾಃ |
ಶಂಖಾನಕಮೃದಂಗಾಶ್ಚ ಪ್ರವಾದ್ಯಂತ ಸಹಸ್ರಶಃ ॥4॥
ಕೈಗಳಲ್ಲಿ ತಾಳಗಳನ್ನು ಹಾಕುತ್ತಾ ಹಾಡುವವರು ಹಾಡಿದರು. ಗಾಯಕರು ಹಾಡಿದರು. ಶಂಖ, ಆನಕ ಮತ್ತು ಮೃದಂಗಗಳು ಸಹಸ್ರಸಂಖ್ಯೆಯಲ್ಲಿ ಮೊಳ- ಗಿದವು.
ವೀಣಾಪಣವವೇಣೂನಾಂ ಸ್ವನಶ್ಚಾತಿಮನೋರಮಃ |
ಪ್ರಹಾಸ ಇವ ವಿಸ್ತೀರ್ಣಃ ಶುಶ್ರುವೇ ತಸ್ಯ ವೇಶ್ಮನಃ ॥5॥
ಅತ್ಯಂತಮನೋಹರವಾದ ವೀಣಾಪಣವವೇಣುಗಳಿಂದ ಉಂಟಾದ ವಿಸ್ತೀ- ರ್ಣವಾದ ನಾದವು ಆ ಗೃಹದ ಅಟ್ಟಹಾಸದಂತೆ ಕೇಳಿಬಂದಿತು.
ತಥಾ ಯುಧಿಷ್ಠಿರಸ್ಯಾಪಿ ರಾಜ್ಞೋ ಮಂಗಲಸಂಹಿತಾಃ |
ಉಚ್ಚೇರುರ್ಮಧುರಾ ವಾಚೋ ಗೀತವಾದಿತ್ರಮಿಶ್ರಿತಾಃ ॥6॥
ಹಾಗೆಯೇ ರಾಜನಾದ ಯುಧಿಷ್ಠಿರನ ಮನೆಯಲ್ಲಿಯೂ ಮಂಗಳಸಂಯುಕ್ತ- ವಾದ ಗೀತವಾದಿತ್ರಮಿಶ್ರಿತವಾದ ಮಧುರವಾದ ಮಾತುಗಳು ಕೇಳಿ ಬಂದವು.
ತತ ಉತ್ಥಾಯ ದಾಶಾರ್ಹಃ ಸ್ನಾತಃ ಪ್ರಾಂಜಲಿರಚ್ಯುತಃ |
ಜಪತ್ವಾ ಗುಹ್ಯಂ ಮಹಾಬಾಹುರಗ್ನೀನಾಶ್ರಿತ್ಯ ತಸ್ಥಿವಾನ್ ॥7॥
ಅನಂತರ ಮಹಾಬಾಹುವೂ, ದಾಶಾರ್ಹನೂ ಆದ ಅಚ್ಯುತನು ಎದ್ದು ಸ್ನಾನವನ್ನು ಮಾಡಿ ಕೈಗಳನ್ನು ಮುಗಿದು ರಹಸ್ಯ ಮಂತ್ರಗಳನ್ನು ಜಪ ಮಾಡಿ ಅಗ್ನಿಕಾರ್ಯವನ್ನು ಮಾಡಿ ನಿಂತನು.
ತತಃ ಸಹಸ್ರಂ ವಿಪ್ರಾಣಾಂ ಚತುರ್ವೇದವಿದಾಂ ತಥಾ |
ಗವಾಂ ಸಹಸ್ರೇಣೈಕೈಕಂ ವಾಚಯಾಮಾಸ ಮಾಧವಃ ॥8॥
ಅನಂತರ ಚತುರ್ವೇದಗಳನ್ನು ಬಲ್ಲ ಸಹಸ್ರವಿಪ್ರರಿಗೆ ಒಬ್ಬೊಬ್ಬರಿಗೂ ಸಹಸ್ರ ಗೋವುಗಳನ್ನು ನೀಡಿ ಮಾಧವನು ಸಂತೋಷಪಡಿಸಿದನು.
ಮಂಗಲಾಲಂಭನಂ ಕೃತ್ವಾ ಆತ್ಮಾನಮವಲೋಕ್ಯ ಚ |
ಆದರ್ಶೇ ವಿಮಲೇ ಕೃಷ್ಣಸ್ತತಃ ಸಾತ್ಯಕಿಮಬ್ರವೀತ್ ॥9॥
ಗಚ್ಛ ಶೈನೇಯ ಜಾನೀಹಿ ಗತ್ವಾ ರಾಜನಿವೇಶನಮ್ |
ಅಪಿ ಸಜ್ಜೋ ಮಹಾತೇಜಾ ಭೀಷ್ಮಂ ದ್ರಷ್ಟುಂ ಯುಧಿಷ್ಠಿರಃ ॥10॥
ಕೃಷ್ಣನು ಮಂಗಳಪದಾರ್ಥಗಳನ್ನು ಸ್ಪರ್ಶಮಾಡಿ, ಕನ್ನಡಿಯಲ್ಲಿ ತನ್ನನ್ನು ನೋಡಿ- ಕೊಂಡು ಅನಂತರ ಸಾತ್ಯಕಿಯನ್ನು ಕುರಿತು `ಎಲೈ ಸಾತ್ಯಕಿಯೇ! ರಾಜಮಂದಿರಕ್ಕೆ ಹೋಗಿ ಮಹಾತೇಜಸ್ವಿಯಾದ ಯುಧಿಷ್ಠಿರನು ಭೀಷ್ಮರನ್ನು ನೋಡಲು ಸಿದ್ಧನಾಗಿ- ದ್ದಾನೆಯೇ ಎಂದು ತಿಳಿ' ಎಂದು ಹೇಳಿದನು.
ತತಃ ಕೃಷ್ಣಸ್ಯ ವಚನಾತ್ ಸಾತ್ಯಕಿಸ್ತ್ವರಿತೋ ಯಯೌ |
ಉಪಗಮ್ಯ ಚ ರಾಜಾನಂ ಯುಧಿಷ್ಠಿರಮುವಾಚ ಹ ॥11॥
ಯುಕ್ತೋ ರಥವರೋ ರಾಜನ್ ವಾಸುದೇವಸ್ಯ ಧೀಮತಃ |
ಸಮೀಪಮಾಪಗೇಯಸ್ಯ ಪ್ರಯಾಸ್ಯತಿ ಜನಾರ್ದನಃ ॥12॥
ಭವತ್ಪ್ರತೀಕ್ಷಃ ಕೃಷ್ಣೋಽಸೌ ಧರ್ಮರಾಜ ಮಹಾದ್ಯುತೇ |
ಯದತ್ರಾನಂತರಂ ಕೃತ್ಯಂ ತದ್ ಭವಾನ್ ಕರ್ತುಮರ್ಹತಿ ॥13॥
ಕೃಷ್ಣನ ವಚನದಂತೆ ಸಾತ್ಯಕಿಯು ಶೀಘ್ರವಾಗಿ ಹೋಗಿ ರಾಜನಾದ ಯುಧಿ- ಷ್ಠಿರನ ಗೃಹವನ್ನು ತಲುಪಿ ಅವನನ್ನು ಕುರಿತು `ರಾಜನೇ! ಮೇಧಾವಿಯಾದ ವಾಸುದೇವನ ಶ್ರೇಷ್ಠವಾದ ರಥವು ಸಿದ್ಧವಾಗಿದೆ. ಜನಾರ್ದನನು ಭೀಷ್ಮರ ಸಮೀಪಕ್ಕೆ ಹೊರಡುವನು. ಎಲೈ ಮಹಾದ್ಯುತಿಯಾದ ಧರ್ಮರಾಜನೇ! ಈ ಕೃಷ್ಣನು ನಿನ್ನನ್ನು ನಿರೀಕ್ಷಿಸುತ್ತಿದ್ದಾನೆ. ಈಗ ಮುಂದೆ ಮಾಡಬೇಕಾದ ಕಾರ್ಯವನ್ನು ನೀನು ಮಾಡು- ವುದು ಉಚಿತವಾದುದು' ಎಂದು ಹೇಳಿದನು.
ಯುಧಿಷ್ಠಿರಃ
ಯುಜ್ಯತಾಂ ಮೇ ರಥವರಃ ಫಲ್ಗುನಾಪ್ರತಿಮದ್ಯುತೇ |
ನ ಸೈನಿಕೈಶ್ಚ ಯಾತವ್ಯಂ ಯಾಸ್ಯಾಮೋ ವಯಮೇವ ಹಿ ॥14॥
ಯುಧಿಷ್ಠಿರ ಎಲೈ ಅಮಿತದ್ಯುತಿಯಾದ ಫಲ್ಗುನನೇ! ನನ್ನ ಶ್ರೇಷ್ಠವಾದ ರಥವು ಹೂಡಲ್ಪಡಲಿ. ಅಲ್ಲಿಗೆ ಸೈನಿಕರು ಹೋಗಬಾರದು. ನಾವೇ ಹೋಗುವೆವು.

ನ ಚ ಪೀಡಯಿತವ್ಯೋ ಮೇ ಭೀಷ್ಮೋ ಧರ್ಮಭೃತಾಂವರಃ |
ಅತಃ ಪುರಃಸರಾಶ್ಚಾಪಿ ನಿವರ್ತಂತು ಧನಂಜಯ ॥15॥
ಎಲೈ ಧನಂಜಯನೇ! ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಭೀಷ್ಮರು ಪೀಡಿಸಲ್ಪಡ- ಬಾರದು. ಆದ್ದರಿಂದ ನಮ್ಮ ಮುಂದೆ ಹೋಗುವ ಸೇವಕರೂ ಸಹ ಹಿಂದಿರುಗಲಿ.
ಅದ್ಯ ಪ್ರಭೃತಿ ಗಾಂಗೇಯಃ ಪರಂ ಗುಹ್ಯಂ ಪ್ರವಕ್ಷ್ಯತಿ |
ತತೋ ನೇಚ್ಛಾಮಿ ಕೌಂತೇಯ ಪೃಥಗ್ ಜನಸಮಾಗಮಮ್ ॥16॥
ಈ ದಿನದಿಂದ ಪ್ರಾರಂಭಿಸಿ ಭೀಷ್ಮರು ಪರಮರಹಸ್ಯವಾದ ವಿಷಯಗಳನ್ನು ಹೇಳುವರು. ಎಲೈ ಕೌಂತೇಯನೇ! ಆದ್ದರಿಂದ ಸಾಧಾರಣಜನರ ಸಮಾಗಮವನ್ನು ನಾನು ಅಲ್ಲಿ ಬಯಸುವುದಿಲ್ಲ.
ವೈಶಂಪಾಯನಃ
ತದ್ ವಾಕ್ಯಮಾಕರ್ಣ್ಯ ತಥಾ ಕುಂತೀಪುತ್ರೋ ಧನಂಜಯಃ |
ಯುಕ್ತಂ ರಥವರಂ ತಸ್ಮಾ ಆಚಚಕ್ಷೇ ನರರ್ಷಭ ॥17॥
ವೈಶಂಪಾಯನರು ಕುಂತೀಪುತ್ರನಾದ ಧನಂಜಯನು ಆ ರೀತಿಯಲ್ಲಿ ಆ ಮಾತನ್ನು ಕೇಳಿ `ಎಲೈ ನರಶ್ರೇಷ್ಠನೇ! ನಿನ್ನ ಶ್ರೇಷ್ಠವಾದ ರಥವು ಸಿದ್ಧವಾಗಿದೆ' ಎಂದು ಹೇಳಿದನು.
ತತೋ ಯುಧಿಷ್ಠಿರೋ ರಾಜಾ ಯಮೌ ಭೀಮಾರ್ಜುನಾವಪಿ |
ಭೂತಾನೀವ ಸಮಸ್ತಾನಿ ಯಯುಃ ಕೃಷ್ಣನಿವೇಶನಮ್ ॥18॥
ಅನಂತರ ರಾಜನಾದ ಯುಧಿಷ್ಠಿರನೂ, ನಕುಲ ಸಹದೇವರೂ ಮತ್ತು ಭೀಮಾರ್ಜುನರೂ ಸಮಸ್ತವಾದ ಪಂಚಭೂತಗಳಂತೆ ಕೃಷ್ಣನ ಗೃಹಕ್ಕೆ ಹೋದರು.
ಆಗಚ್ಛತ್ಸ್ವಥ ಕೃಷ್ಣೋಽಪಿ ಪಾಂಡವೇಷು ಮಹಾತ್ಮಸು |
ಶೈನೇಯಸಹಿತೋ ಧೀಮಾನ್ ರಥಮೇವಾನ್ವಪದ್ಯತ ॥19॥
ಮಹಾತ್ಮರಾದ ಪಾಂಡವರು ಬರುತ್ತಿರುವಂತೆಯೇ ಮೇಧಾವಿಯಾದ ಕೃಷ್ಣನು ಶೈನೇಯಸಹಿತನಾಗಿ ತನ್ನ ರಥವನ್ನು ಏರಿದನು.
ರಥಸ್ಥಾಃ ಸಂವಿದಂ ಕೃತ್ವಾ ಸುಖಾಂ ಪೃಷ್ಟ್ವಾ ಚ ಶರ್ವರೀಮ್ |
ಮೇಘಘೋಷೈಃ ರಥವರೈಃ ಪ್ರಯಯುಸ್ತೇ ಮಹಾರಥಾಃ ॥20॥
ರಥದಲ್ಲಿ ಕುಳಿತ ಆ ಮಹಾರಥರು ಪರಸ್ಪರ ಸಂಭಾಷಣೆಯನ್ನು ಮಾಡಿ ರಾತ್ರಿಯು ಕಳೆದ ವಿಷಯದಲ್ಲಿ ಕುಶಲಪ್ರಶ್ನೆಯನ್ನು ಮಾಡಿ ಮೇಘಗರ್ಜನೆಯ ನಾದವನ್ನು ಹೊಂದಿದ್ದ ಶ್ರೇಷ್ಠವಾದ ರಥಗಳಲ್ಲಿ ಅಲ್ಲಿಂದ ಹೊರಟರು.
ಮೇಘಪುಷ್ಪಂ ಬಲಾಹಂ ಚ ಸೈನ್ಯಂ ಸುಗ್ರೀವಮೇವ ಚ |
ದಾರುಕಶ್ಚೋದಯಾಮಾಸ ವಾಸುದೇವಸ್ಯ ವಾಜಿನಃ ॥21॥
ವಾಸುದೇವನ ಸಾರಥಿಯಾದ ದಾರುಕನು ಮೇಘಪುಷ್ಪ, ಬಲಾಹಕ, ಸೈನ್ಯ, ಸುಗ್ರೀವ ಅಶ್ವಗಳನ್ನು ಪ್ರಚೋದಿಸಿದನು.
ತೇ ಹಯಾ ವಾಸುದೇವಸ್ಯ ದಾರುಕೇಣ ಪ್ರಚೋದಿತಾಃ |
ಗಾಂ ಖುರಾಗ್ರೈಸ್ತಥಾ ರಾಜನ್ ಲಿಖಂತಃ ಪ್ರಯಯುಸ್ತದಾ ॥22॥
ಎಲೈ ರಾಜನೇ! ದಾರುಕನಿಂದ ಪ್ರಚೋದಿಸಲ್ಪಟ್ಟ ಕೃಷ್ಣನ ಆ ಅಶ್ವಗಳು ತಮ್ಮ ಗೊರಸುಗಳ ತುದಿಯಿಂದ ಭೂಮಿಯ ಮೇಲೆ ಬರೆಯುತ್ತಾ ಹೊರಟವು.
ತೇ ಗ್ರಸಂತ ಇವಾಕಾಶಂ ವೇಗವಂತೋ ಮಹಾಬಲಾಃ |
ಕ್ಷೇತ್ರಂ ಧರ್ಮಸ್ಯ ಕೃತ್ಸ್ನಸ್ಯ ಕುರುಕ್ಷೇತ್ರಮವಾತರನ್ ॥23॥
ಮಹಾ ಬಲಿಷ್ಠವಾದ ವೇಗಶಾಲಿಗಳಾದ ಆ ಅಶ್ವಗಳು ಆಕಾಶವನ್ನೇ ನುಂಗು- ವಂತೆ ಹೊರಟು ಸಮಗ್ರ ಧರ್ಮದ ಕ್ಷೇತ್ರವಾದ ಕುರುಕ್ಷೇತ್ರವನ್ನು ತಲುಪಿದವು.
ತತೋ ಯಯುರ್ಯತ್ರ ಭೀಷ್ಮಃ ಶರತಲ್ಪಗತಃ ಪ್ರಭುಃ |
ಆಸ್ತೇ ಬ್ರಹ್ಮರ್ಷಿಭಿಃ ಸಾರ್ಧಂ ಬ್ರಹ್ಮಾ ದೇವಗಣೈರ್ಯಥಾ ॥24॥
ಅನಂತರ ಪ್ರಭುಗಳಾದ ಭೀಷ್ಮರು ಶರತಲ್ಪಗತರಾಗಿ ದೇವಗಣಗಳಿಂದ ಬ್ರಹ್ಮ- ದೇವರು ಸುತ್ತುವರೆಯಲ್ಪಟ್ಟಂತೆ ಬ್ರಹ್ಮರ್ಷಿಗಳಿಂದ ಸುತ್ತುವರೆಯಲ್ಪಟ್ಟ ಸ್ಥಳಕ್ಕೆ ಹೋದರು.
ತತೋಽವತೀರ್ಯ ಗೋವಿಂದೋ ರಥಾತ್ ಸ ಚ ಯುಧಿಷ್ಠಿರಃ |
ಭೀಮೋ ಗಾಂಡೀವಧನ್ವಾ ಚ ಯಮೌ ಸಾತ್ಯಕಿರೇವ ಚ |
ಋಷೀನಭ್ಯರ್ಚಯಾಮಾಸುಃ ಕರಾನುದ್ಯಮ್ಯ ದಕ್ಷಿಣಾನ್ ॥25॥
ಸ ತೈಃ ಪರಿವೃತೋ ರಾಜಾ ನಕ್ಷತ್ರೈರಿವ ಚಂದ್ರಮಾಃ |
ಅಭ್ಯಾಜಗಾಮ ಗಾಂಗೇಯಂ ಬ್ರಹ್ಮಾಣಮಿವ ವಾಸವಃ ॥26॥
ಅನಂತರ ಗೋವಿಂದನು ಯುಧಿಷ್ಠಿರನು, ಭೀಮ,ಅರ್ಜುನರು, ನಕುಲ ಸಹದೇವರು, ಸಾತ್ಯಕಿಯು ತಮ್ಮ ರಥಗಳಿಂದ ಇಳಿದು ತಮ್ಮ ಬಲಗೈಯ್ಯನ್ನು ಎತ್ತಿ ಋಷಿಗಳಿಗೆ ಪೂಜೆಯನ್ನು ಸಲ್ಲಿಸಿದರು. ನಕ್ಷತ್ರಗಳಿಂದ ಸುತ್ತುವರೆಯಲ್ಪಟ್ಟ ಚಂದ್ರ- ನಂತೆ ಅವರಿಂದ ಪರಿವೃತನಾದ ರಾಜನು ಬ್ರಹ್ಮದೇವರ ಬಳಿಗೆ ಇಂದ್ರನು ಬಂದಂತೆ ಭೀಷ್ಮರ ಬಳಿಗೆ ಬಂದನು.
ಶರತಲ್ಪೇ ಶಯಾನಂ ತಮಾದಿತ್ಯಂ ಪತಿತಂ ಯಥಾ |
ದದರ್ಶ ಸ ಮಹಾಬಾಹುರ್ಭಯಾದಾಗತಸಾಧ್ವಸಃ ॥27॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ರಾಜಧರ್ಮೇ ತ್ರಿಪಂಚಾಶೋಽಧ್ಯಾಯಃ ॥53॥
ಮಹಾಬಾಹುವಾದ ಅವನು ಭೂಮಿಯ ಮೇಲೆ ಬಿದ್ದ ಸೂರ್ಯನಂತೆ ಶರ- ತಲ್ಪದಲ್ಲಿ ಮಲಗಿದ್ದ ಭೀಷ್ಮರನ್ನು ಮನಸ್ಸಿನಲ್ಲಿ ಭಯಗೊಂಡು ನೋಡಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 53ನೆಯ ಅಧ್ಯಾಯ ಮುಗಿಯಿತು
0
54. ಐವತ್ನಾಲ್ಕನೆಯ ಅಧ್ಯಾಯ
ಕೃಷ್ಣನಿಂದ ಧರ್ಮವನ್ನು ಉಪದೇಶಮಾಡುವಂತೆ ಭೀಷ್ಮರಿಗೆ ಪ್ರೇರಣೆ
ಜನಮೇಜಯಃ
ಧರ್ಮಾತ್ಮನಿ ಮಹಾಸತ್ತ್ವೇ ಸತ್ಯಸಂಧೇ ಜಿತಾತ್ಮನಿ |
ದೇವವ್ರತೇ ಮಹಾಭಾಗೇ ಶರತಲ್ಪಗತೇಽಚ್ಯುತೇ ॥1॥
ಶಯಾನೇ ವೀರಶಯನೇ ಭೀಷ್ಮೇ ಶಂತನುನಂದನೇ |
ಗಾಂಗೇಯೇ ಪುರುಷವ್ಯಾಘ್ರೇ ಪಾಂಡವೈಃ ಪರ್ಯುಪಸ್ಥಿತೇ ॥2॥
ಕಾಃ ಕಥಾಃ ಸಮವರ್ತಂತ ತಸ್ಮಿನ್ ವೀರಸಮಾಗಮೇ |
ಗತೇಷು ಸರ್ವಸೈನ್ಯೇಷು ತನ್ಮೇ ಶಂಸ ಮಹಾಮುನೇ ॥3॥
ಜನಮೇಜಯ ಧರ್ಮಿಷ್ಠರೂ, ಸತ್ಯಸಂಧರೂ, ಜಿತಮನಸ್ಕರೂ, ಮಹಾ- ಧೈರ್ಯಶಾಲಿಗಳೂ, ಮಹಾನುಭಾವರೂ ಆದ ತಮ್ಮ ಗುಣಗಳನ್ನು ಕಳೆದುಕೊಳ್ಳದ ದೇವವ್ರತರಾದ, ಶಂತನುಪುತ್ರರಾದ, ಗಂಗಾಪುತ್ರರಾದ ಪುರುಷವ್ಯಾಘ್ರರಾದ ಭೀಷ್ಮರು ವೀರಶಯ್ಯೆಯಿಂದ ಮಲಗಿ ಪಾಂಡವರಿಂದ ಸುತ್ತುವರಿಯಲ್ಪಟ್ಟಿರಲು ಆ ವೀರಸಮಾಗಮದಲ್ಲಿ ಎಲ್ಲ ಸೈನ್ಯಗಳೂ ಹೊರಟು ಹೋದ ಮೇಲೆ ಯಾವ ಕಥೆಗಳು ನಡೆದವು ಎಂಬುದನ್ನು ಎಲೈ ಮಹಾಮುನಿಯೇ! ನನಗೆ ಹೇಳಬೇಕು.
ವೈಶಂಪಾಯನಃ
ಶರತಲ್ಪಗತೇ ಭೀಷ್ಮೇ ಕೌರವಾಣಾಂ ಧುರಂಧರೇ |
ಆಜಗ್ಮುರ್ಋಷಯಃ ಸಿದ್ಧಾ ನಾರದಪ್ರಮುಖಾ ನೃಪ ॥4॥
ವೈಶಂಪಾಯನರು ಎಲೈ ರಾಜನೇ! ಕೌರವರ ಧುರಂಧರರಾದ ಭೀಷ್ಮರು ಶರತಲ್ಪದಲ್ಲಿ ಮಲಗಿರಲು ಸಿದ್ಧರು, ನಾರದರೇ ಮೊದಲಾದ ಋಷಿಗಳು ಅಲ್ಲಿಗೆ ಬಂದರು.
ಹತಶಿಷ್ಟಾಶ್ಚ ರಾಜಾನೋ ಯುಧಿಷ್ಠಿರಪುರೋಗಮಾಃ |
ಧೃತರಾಷ್ಟ್ರಶ್ಚ ಕೃಷ್ಣಶ್ಚ ಭೀಮಾರ್ಜುನಯಮಾಸ್ತಥಾ ॥5॥
ಅಳಿದುಳಿದ ರಾಜರು, ಯುಧಿಷ್ಠಿರ ಮೊದಲಾದವರು, ಧೃತರಾಷ್ಟ್ರ, ಕೃಷ್ಣ, ಭೀಮಾರ್ಜುನ ನಕುಲಸಹದೇವರು ಬಂದರು.
ತೇಽಭಿಗಮ್ಯ ಮಹಾತ್ಮಾನೋ ಭರತಾನಾಂ ಪಿತಾಮಹಮ್ |
ಅನ್ವಶೋಚಂತ ಗಾಂಗೇಯಮಾದಿತ್ಯಂ ಪತಿತಂ ತಥಾ ॥6॥
ಮಹಾತ್ಮರಾದ ಅವರು ಭರತರ ಪಿತಾಮಹರಾದ ಭೀಷ್ಮರ ಸಮೀಪಕ್ಕೆ ಬಂದು ಭೂಮಿಯ ಮೇಲೆ ಬಿದ್ದ ಸೂರ್ಯನಂತಿದ್ದ ಅವರನ್ನು ನೋಡಿ ಶೋಕಪಟ್ಟರು.
ಮುಹೂರ್ತಮಿವ ಚ ಧ್ಯಾತ್ವಾ ನಾರದೋ ದೇವದರ್ಶನಃ |
ಉವಾಚ ಪಾಂಡವಾನ್ ಸರ್ವಾನ್ ಹತಶಿಷ್ಟಾಂಶ್ಚ ಪಾರ್ಥಿವಾನ್ ॥7॥
ದೇವದರ್ಶನರಾದ ನಾರದರು ಒಂದು ಮುಹೂರ್ತಗಳಷ್ಟು ಕಾಲ ಧ್ಯಾನ- ರತರಾಗಿ ಪಾಂಡವರನ್ನೂ, ಅಳಿದುಳಿದ ಎಲ್ಲಾ ರಾಜರನ್ನೂ ಕುರಿತು ಮಾತ- ನಾಡಿದರು.
ಪ್ರಾಪ್ತಕಾಲಂ ಚ ಆಚಕ್ಷೇ ಭೀಷ್ಮೋಽಯಮನುಯುಜ್ಯತಾಮ್ |
ಅಸ್ತಮೇತಿ ಹಿ ಗಾಂಗೇಯೋ ಭಾನುಮಾನಿವ ಭಾರತ ॥8॥
ಎಲೈ ಭಾರತನೇ! ಯೋಗ್ಯವಾದ ಕಾಲವು ಸಮೀಪಿಸಿದೆ ಎಂದು ಹೇಳುತ್ತಿ- ದ್ದೇನೆ. ಈ ಭೀಷ್ಮರನ್ನು(ಲ್ಲಿ) ಪ್ರಶ್ನೆಯನ್ನು ಮಾಡು. ಸೂರ್ಯನಂತೆ ಭೀಷ್ಮರು ಅಸ್ತವನ್ನು ಹೊಂದಲಿದ್ದಾರೆ.
ಅಯಂ ಪ್ರಾಣಾನುತ್ಸಿಸೃಕ್ಷುಸ್ತಂ ಸರ್ವೇಽಭ್ಯೇತ್ಯ ಪೃಚ್ಛತ |
ಕೃತ್ಸ್ನಾನ್ ಹಿ ವಿವಿಧಾನ್ ಧರ್ಮಾಂಶ್ಚಾತುರ್ವರ್ಣ್ಯಸ್ಯ ವೇತ್ತ್ಯಯಮ್ ॥9॥
ಇವರು ಪ್ರಾಣಗಳನ್ನು ತೊರೆಯಲು ಬಯಸುತ್ತಿದ್ದಾರೆ. ನೀವೆಲ್ಲರೂ ಅವರ ಬಳಿಗೆ ಹೋಗಿ ಸಮಗ್ರವಾದ ಧರ್ಮಗಳನ್ನು ಪ್ರಶ್ನೆ ಮಾಡಿ ಕೇಳಿ. ಚಾತುರ್ವರ್ಣ್ಯದ ಎಲ್ಲ ಧರ್ಮಗಳನ್ನೂ ಅವರು ತಿಳಿದಿದ್ದಾರೆ.
ಏಷ ವೃದ್ಧಃ ಪುರಾ ಲೋಕಾನ್ ಸಂಪ್ರಾಪ್ನೋತಿ ಸುದುರ್ಲಭಾನ್ |
ತಂ ಶೀಘ್ರಮನುಯುಜ್ಯಧ್ವಂ ಸಂಶಯಾನ್ ಮನಸಿ ಸ್ಥಿತಾನ್ ॥10॥
ವೃದ್ಧರಾದ ಇವರು ಸುದುರ್ಲಭವಾದ ಪರಲೋಕಗಳನ್ನು ಹೊಂದುವುದಕ್ಕಿಂತ ಮೊದಲೇ ನೀವು ಶೀಘ್ರವಾಗಿ ಅವರ ಬಳಿಯಲ್ಲಿ ನಿಮ್ಮ ಮನಸ್ಸಿನಲ್ಲಿರುವ ಸಂಶಯ -ಗಳನ್ನು ಕೇಳಿ. (ಎಂದು ಹೇಳಿದರು).
ಏವಮುಕ್ತಾ ನಾರದೇನ ಭೀಷ್ಮಮೀಯುರ್ನರಾಧಿಪಾಃ |
ಪ್ರಷ್ಟುಂ ಚಾಶಕ್ನುವಂತಸ್ತೇ ವೀಕ್ಷಾಂಚಕ್ರುಃ ಪರಸ್ಪರಮ್ ॥11॥
ನಾರದರಿಂದ ಹೀಗೆ ಹೇಳಲ್ಪಟ್ಟ ರಾಜರು ಭೀಷ್ಮರ ಸಮೀಪಕ್ಕೆ ಹೋದರು. ಅವರನ್ನು ಮಾತನಾಡಿಸಲು ಧೈರ್ಯಸಾಲದೇ ಪರಸ್ಪರವಾಗಿ ನೋಡಿದರು.

ಅಥೋವಾಚ ಹೃಷೀಕೇಶಂ ಪಾಂಡುಪುತ್ರೋ ಯುಧಿಷ್ಠಿರಃ |
ನಾನ್ಯಸ್ತ್ವದ್ ದೇವಕೀಪುತ್ರ ಶಕ್ತಃ ಪ್ರಷ್ಟುಂ ಪಿತಾಮಹಮ್ ॥12॥
ಅನಂತರ ಪಾಂಡುಪುತ್ರನಾದ ಯುಧಿಷ್ಠಿರನು ಹೃಷೀಕೇಶನನ್ನು ಕುರಿತು ದೇವಕೀಪುತ್ರನೇ! ನಿನ್ನನ್ನು ಬಿಟ್ಟು ಇನ್ನೊಬ್ಬನು ಪಿತಾಮಹರಾದ ಭೀಷ್ಮರನ್ನು ಪ್ರಶ್ನೆ ಮಾಡಲಾರನು.
ಪ್ರವ್ಯಾಹಾರಯ ದುರ್ಧರ್ಷಂ ತ್ವಮಗ್ರೇ ಮಧುಸೂದನ |
ತ್ವಂ ಹಿ ನಸ್ತಾತ ಸರ್ವೇಷಾಂ ಸರ್ವಧರ್ಮವಿದುತ್ತಮಃ ॥13॥
ಎಲೈ ಮಧುಸೂದನನೇ! ನೀನೇ ದುರ್ಧರ್ಷರಾದ ಭೀಷ್ಮರನ್ನು ಮೊದಲು ಮಾತನಾಡಿಸು. ಎಲೈ ಪ್ರೀತಿಪಾತ್ರನೇ! ನಮ್ಮೆಲ್ಲರಲ್ಲಿಯೂ ನೀನೇ ಶ್ರೇಷ್ಠನಾದ ಸರ್ವ -ಧರ್ಮಜ್ಞನಾದವನು. (ಎಂದು ಹೇಳಿದನು.)
ಏವಮುಕ್ತಃ ಪಾಂಡವೇನ ಭಗವಾನ್ ಕೇಶವಸ್ತದಾ |
ಅಭಿಗಮ್ಯ ದುರಾಧರ್ಷಂ ಪ್ರವ್ಯಾಹಾರಯದಚ್ಯುತಃ ॥14॥
ಪಾಂಡವನಾದ ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ಭಗವಂತನೂ, ಅಚ್ಯುತನೂ ಆದ ಕೇಶವನು ದುರಾಧರ್ಷರಾದ ಭೀಷ್ಮರ ಬಳಿಗೆ ಹೋಗಿ ಅವರನ್ನು ಮಾತನಾ- ಡಿಸಿದನು.
ಶ್ರೀಭಗವಾನ್
ಕಚ್ಚಿತ್ ಸುಖೇನ ರಜನೀ ವ್ಯುಷ್ಟಾ ತೇ ರಾಜಸತ್ತಮ |
ವಿಸ್ಪಷ್ಟಲಕ್ಷಣಾ ಬುದ್ಧಿಃ ಕಚ್ಚಿಚ್ಚೋಪಸ್ಥಿತಾ ತವ ॥15॥
ಶ್ರೀಭಗವಾನ್ ಎಲೈ ರಾಜಶ್ರೇಷ್ಠನೇ! ನಿನಗೆ ರಾತ್ರಿಯು ಸುಖವಾಗಿ ಕಳೆ- ಯಿತೇ? ನಿನ್ನ ಬುದ್ಧಿಯು ಸ್ಪಷ್ಟವಾಗಿ ನಿನಗೆ ಗೋಚರಿಸುತ್ತಿದೆಯೇ?
ಕಚ್ಚಿಜ್ಜ್ಞಾನಾನಿ ಸರ್ವಾಣಿ ಪ್ರತಿಭಾಂತಿ ಚ ತೇಽನಘ |
ನ ಗ್ಲಾಯತೇ ಚ ಹೃದಯಂ ನ ಚ ತೇ ವ್ಯಾಕುಲಂ ಮನಃ ॥16॥
ಎಲೈ ಅನಘನೇ! ನಿನ್ನ ಎಲ್ಲ ಇಂದ್ರಿಯಗಳೂ ಚೆನ್ನಾಗಿ ಕೆಲಸ ಮಾಡುತ್ತಿ- ವೆಯೇ? ನಿನ್ನ ಹೃದಯದಲ್ಲಿ ಗ್ಲಾನಿಯಾಗಲೀ ಮನಸ್ಸಿನಲ್ಲಿ ವ್ಯಾಕುಲತೆಯಾಗಲೀ ಇಲ್ಲವಷ್ಟೇ?
ಭೀಷ್ಮಃ
ದಾಹೋ ಮೋಹಃ ಶ್ರಮಶ್ಚೈವ ಕ್ಲಮೋ ಗ್ಲಾನಿಸ್ತಥಾ ರುಜಾ |
ತವ ಪ್ರಸಾದಾದ್ ಗೋವಿಂದ ಸದ್ಯೋ ವ್ಯಪಗತಾನಘ ॥17॥
ಭೀಷ್ಮರು ಎಲೈ ಗೋವಿಂದನೇ! ಅನಘನೇ! ನಿನ್ನ ಅನುಗ್ರಹದಿಂದ ದಾಹ- ವಾಗಲೀ ಬುದ್ಧಿಯ ಮೋಹವಾಗಲೀ, ಶ್ರಮವಾಗಲೀ ದಣಿವಾಗಲೀ, ಬೇಸರ- ವಾಗಲೀ, ರೋಗವಾಗಲೀ ಎಲ್ಲವೂ ತತ್ಕ್ಷಣದಲ್ಲಿಯೇ ನಾಶವನ್ನು ಹೊಂದಿವೆ.
ಯಚ್ಚ ಭೂತಂ ಭವಿಷ್ಯಚ್ಚ ಭವಚ್ಚ ಪರಮದ್ಯುತೇ |
ತತ್ ಸರ್ವಮನುಪಶ್ಯಾಮಿ ಪಾಣೌ ಫಲಮಿವಾಹಿತಮ್ ॥18॥
ಎಲೈ ಪರಮದ್ಯುತಿಯೇ! ಭೂತಭವಿಷ್ಯದ್ವರ್ತಮಾನಗಳೆಲ್ಲವನ್ನೂ ಅಂಗೈಯಲ್ಲಿ ಹಿಡಿದ ಫಲದಂತೆ ನೋಡುತ್ತಿದ್ದೇನೆ.
ವೇದೋಕ್ತಾಶ್ಚೈವ ಯೇ ಧರ್ಮಾ ವೇದಾಂತನಿಹಿತಾಶ್ಚ ಯೇ |
ತಾನ್ ಸರ್ವಾನ್ ಸಂಪ್ರಪಶ್ಯಾಮಿ ವರದಾನಾತ್ ತವಾಚ್ಯುತ ॥19॥
ಎಲೈ ಅಚ್ಯುತನೇ! ನಿನ್ನ ವರಪ್ರದಾನದಿಂದ ನಾನು ವೇದೋಕ್ತವಾದ ಧರ್ಮ- ಗಳನ್ನು, ವೇದಾಂತವಿಹಿತವಾದ ಧರ್ಮಗಳನ್ನು ಎಲ್ಲವನ್ನೂ ಚೆನ್ನಾಗಿ ಕಾಣುತ್ತಿದ್ದೇನೆ.
ಶಿಷ್ಟೈಶ್ಚ ಧರ್ಮೋ ಯಃ ಪ್ರೋಕ್ತಃ ಸ ಚ ಮೇ ಹೃದಿ ವರ್ತತೇ |
ದೇಶಜಾತಿಕುಲಾನಾಂ ಚ ಧರ್ಮಜ್ಞೋಽಸ್ಮಿ ಜನಾರ್ದನ ॥20॥
ಶಿಷ್ಟಾಚಾರದಿಂದ ಪ್ರಾಪ್ತವಾದ ಧರ್ಮಗಳು ನನ್ನ ಮನಸ್ಸಿಗೆ ತೋರುತ್ತಿವೆ. ಎಲೈ ಜನಾರ್ದನನೇ! ದೇಶಧರ್ಮಗಳನ್ನು, ಜಾತಿಧರ್ಮಗಳನ್ನು ಮತ್ತು ಕುಲಧರ್ಮ- ಗಳನ್ನು ತಿಳಿದಿದ್ದೇನೆ.
ಚತುರ್ಷ್ವಾಶ್ರಮಧರ್ಮೇಷು ಯೋಽರ್ಥಃ ಸ ಚ ಹೃದಿ ಸ್ಥಿತಃ |
ರಾಜಧರ್ಮಾಂಶ್ಚ ಸಕಲಾನವಗಚ್ಛಾಮಿ ಕೇಶವ ॥21॥
ನಾಲ್ಕು ಆಶ್ರಮಗಳ ಧರ್ಮಗಳ ಫಲವು ಏನಿವೆಯೋ, ಅವೂ ನನ್ನ ಮನಸ್ಸಿ- ನಲ್ಲಿ ತೋರುತ್ತಿದೆ. ಕೇಶವನೇ! ಸಕಲವಾದ ರಾಜಧರ್ಮಗಳನ್ನು ತಿಳಿದಿದ್ದೇನೆ. (ಎಲ್ಲ ಧರ್ಮಗಳ ಫಲವೂ ನನ್ನ ಮನಸ್ಸಿಗೆ ಗೋಚರಿಸುತ್ತಿದೆ.)
ಯತ್ರ ಯತ್ರ ಚ ವಕ್ತವ್ಯಂ ತದ್ ವಕ್ಷ್ಯಾಮಿ ಜನಾರ್ದನ |
ತವ ಪ್ರಸಾದಾದ್ಧಿ ಶುಭಾ ಮನೋ ಮೇ ಬುದ್ಧಿರಾವಿಶತ್ ॥22॥
ಎಲೈ ಜನಾರ್ದನನೇ! ಏನೇನು ಹೇಳಬೇಕಾಗಿದೆಯೋ ಅದೆಲ್ಲವನ್ನೂ ಹೇಳು- ವೆನು. ನಿನ್ನ ಅನುಗ್ರಹದಿಂದ ಶುಭವಾದ ನನ್ನ ಮನಸ್ಸು ಬುದ್ಧಿಯನ್ನು ಆಶ್ರಯಿಸಿದೆ.
ಯುವೇವ ಚಾಸ್ಮಿ ಸಂವೃತ್ತಸ್ತ್ವದನುಧ್ಯಾನಬೃಂಹಿತಃ |
ವಕ್ತುಂ ಶ್ರೇಯಃ ಸಮರ್ಥೋಽಸ್ಮಿ ತ್ವತ್ಪ್ರಸಾದಾಜ್ಜನಾರ್ದನ ॥23॥
ನಿನ ಶುಭಾಶಂಸನೆಯಿಂದ ನಾನು ಯುವಕನಂತೆ ದೃಢನಾಗಿದ್ದೇನೆ. ಎಲೈ ಜನಾ- ರ್ದನನೇ! ನಿನ್ನ ಅನುಗ್ರಹದಿಂದ ಶ್ರೇಯಸ್ಸನ್ನು ಹೇಳಲು ಸಮರ್ಥನಾಗಿದ್ದೇನೆ.
ಸ್ವಯಂ ಕಿಮರ್ಥಂ ತು ಭವಾನ್ ಶ್ರೇಯೋ ನ ಪ್ರಾಹ ಪಾಂಡವಮ್ |

ಕಿಂ ತೇ ವಿವಕ್ಷಿತಂ ಚಾತ್ರ ತದಾಶು ವದ ಮಾಧವ ॥24॥
ಎಲೈ ಮಾಧವನೇ! ನೀನೇ ಸ್ವತಃ ಧರ್ಮರಾಜನಿಗೆ ಏಕೆ ಶ್ರೇಯಸ್ಸನ್ನು ಹೇಳ- ಲಿಲ್ಲ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ಎಂಬುದನ್ನು ಶೀಘ್ರವಾಗಿ ಹೇಳು.
ಶ್ರೀಭಗವಾನ್
ಯಶಸಃ ಶ್ರೇಯಸಶ್ಚೈವ ಮೂಲಂ ಮಾಂ ವಿದ್ಧಿ ಭಾರತ |
ಮತ್ತಃ ಸರ್ವೇಽಭಿನಿರ್ವೃತ್ತಾ ಭಾವಾಃ ಸದಸದಾತ್ಮಕಾಃ ॥25॥
ಶ್ರೀಭಗವಾನ್ ಎಲೈ ಭಾರತನೇ! ಶ್ರೇಯಸ್ಸಿಗೂ ಮತ್ತು ಯಶಸ್ಸಿಗೂ ನಾನು ಮೂಲಕಾರಣನೆಂದು ತಿಳಿ. ಕಾರ್ಯಕಾರಣಾತ್ಮಕವಾದ ಎಲ್ಲ ವಸ್ತುಗಳೂ ನನ್ನಿಂದಲೇ ಉಂಟಾಗುತ್ತವೆ.
ಶೀತಾಂಶುಶ್ಚಂದ್ರ ಇತ್ಯುಕ್ತೇ ಕೋ ಲೋಕೇ ವಿಸ್ಮಯಿಷ್ಯತಿ |
ತಥೈವ ಯಶಸಾ ಪೂರ್ಣೇ ಮಯಿ ಕೋ ವಿಸ್ಮಯಿಷ್ಯತಿ ॥26॥
`ಚಂದ್ರನು ಶೀತಕಿರಣ'ನೆಂದು ಹೇಳಿದರೆ ಲೋಕದಲ್ಲಿ ಯಾರಿಗೆ ಆಶ್ಚರ್ಯ- ವುಂಟಾಗುವುದು? ಆದ್ದರಿಂದ ಯಶಸ್ಸಿನಿಂದ ಪೂರ್ಣವಾದ ನಾನು ಏನನ್ನಾದರೂ ಹೇಳಿದರೆ ಅದರಲ್ಲಿ ಯಾರಿಗೆ ವಿಸ್ಮಯವುಂಟಾಗುವುದು? (ಅದರಲ್ಲಿ ಏನೂ ಆಶ್ಚರ್ಯವಿರುವುದಿಲ್ಲ.)
ಆಧೇಯಂ ತು ಮಯಾ ಭೂಯೋ ಯಶಸ್ತವ ಮಹಾದ್ಯುತೇ |
ತತೋ ಮೇ ವಿಪುಲಾ ಬುದ್ಧಿಸ್ತ್ವಯಿ ಭೀಷ್ಮ ಸಮಾಹಿತಾ ॥27॥
ಎಲೈ ಮಹಾದ್ಯುತಿಯೇ! ನಾನು ನಿನಗೆ ಇನ್ನೂ ಹೆಚ್ಚಿನ ಯಶಸ್ಸನ್ನು ದಯ- ಪಾಲಿಸಬೇಕು. ಆದ್ದರಿಂದ ಎಲೈ ಭೀಷ್ಮನೇ! ನನ್ನ ವಿಪುಲವಾದ ಬುದ್ಧಿಯು ನಿನ್ನಲ್ಲಿ ಕೇಂದ್ರೀಕೃತವಾಗಿದೆ. (ನೀನು ಧರ್ಮೋಪದೇಶವನ್ನು ಮಾಡಬೇಕೆಂದು ನಿರ್ಧರಿ- ಸಿದೆ.)
ಯಾವದ್ಧಿ ಪೃಥಿವೀಪಾಲ ಪೃಥಿವೀ ಸ್ಥಾಸ್ಯತೇ ಧ್ರುವಾ |
ತಾವತ್ ತಸ್ಯಾಕ್ಷಯಾ ಕೀರ್ತಿರ್ಲೋಕಾನನುಚರಿಷ್ಯತಿ ॥28॥
ಎಲೈ ರಾಜನೇ! ಎಲ್ಲಿಯವರೆಗೆ ಶಾಶ್ವತವಾದ ಭೂಮಿಯು ಇರುತ್ತದೆಯೋ ಅಲ್ಲಿಯವರೆಗೆ ಪರಲೋಕದಲ್ಲಿ ಅಕ್ಷಯವಾದ ಕೀರ್ತಿಯಿರುತ್ತದೆ.
ಯಚ್ಚ ತ್ವಂ ವಕ್ಷ್ಯಸೇ ಭೀಷ್ಮ ಪಾಂಡವಾಯಾನುಪೃಚ್ಛತೇ |
ವೇದಪ್ರವಾದಾ ಇವ ತೇ ಸ್ಥಾಸ್ಯಂತಿ ವಸುಧಾತಳೇ ॥29॥
ಎಲೈ ಭೀಷ್ಮನೇ! ಪ್ರಶ್ನೆಯನ್ನು ಮಾಡುವ ಪಾಂಡವನಿಗೆ ನೀನು ಏನು ಉತ್ತರ- ವನ್ನು ಹೇಳುವಿಯೋ ಅದು ವೇದವಾದಗಳಂತೆ ಭೂತಲದಲ್ಲಿ ಶಾಶ್ವತವಾಗಿ ಉಳಿಯುತ್ತದೆ.
ಯಶ್ಚೈತೇನ ಪ್ರಮಾಣೇನ ಯೋಕ್ಷ್ಯತ್ಯಾತ್ಮಾನಮಾತ್ಮನಾ |
ಸ ಫಲಂ ಸರ್ವಪುಣ್ಯಾನಾಂ ಪ್ರೇತ್ಯ ಚಾನುಭವಿಷ್ಯತಿ ॥30॥
ಯಾವನು ನೀನು ಹೇಳಿದುದನ್ನು ಪ್ರಮಾಣವಾಗಿ ಸ್ವೀಕರಿಸಿ ತಾನು ಅದರಂತೆ ನಡೆದುಕೊಳ್ಳುತ್ತಾನೆಯೋ ಅವನು ಮರಣವನ್ನು ಹೊಂದಿ ಸರ್ವಪುಣ್ಯಗಳ ಫಲ- ವನ್ನು ಅನುಭವಿಸುವನು.
ಏತಸ್ಮಾತ್ ಕಾರಣಾದ್ ಭೀಷ್ಮ ಮತಿರ್ದಿವ್ಯಾ ಮಯಾ ಹಿ ತೇ |
ದತ್ತಾ ಯಶೋ ವಿಪ್ರಥೇತ ಕಥಂ ಭೂಯಸ್ತವೇತಿ ಹ ॥31॥
ಎಲೈ ಭೀಷ್ಮನೇ! ಈ ಕಾರಣದಿಂದ ನಿನ್ನ ಕೀರ್ತಿಯು ಹೇಗೆ ಇನ್ನೂ ಹೆಚ್ಚು ವಿಸ್ತಾರವಾದೀತು ಎಂದು ಯೋಚಿಸಿ ನಾನು ನಿನಗೆ ದಿವ್ಯವಾದ ಬುದ್ಧಿಯನ್ನು ಕೊಟ್ಟಿ- ದ್ದೇನೆ.
ಯಾವದ್ಧಿ ಪ್ರಥತೇ ಲೋಕೇ ಪುರುಷಸ್ಯ ಯಶೋ ಭುವಿ |
ತಾವತ್ ತಸ್ಯಾಕ್ಷಯಂ ಸ್ಥಾನಂ ಭವತೀತಿ ವಿನಿಶ್ಚಿತಮ್ ॥32॥
ಎಲ್ಲಿಯವರೆಗೆ ಭೂಮಿಯಲ್ಲಿ ಒಬ್ಬ ಪುರುಷನ ಯಶಸ್ಸು ಹರಡುತ್ತದೆಯೋ ಅಲ್ಲಿಯವರೆಗೆ ಅವನಿಗೆ ಪರಲೋಕದಲ್ಲಿ ಅಕ್ಷಯಸ್ಥಾನವುಂಟಾಗುತ್ತದೆ ಎಂಬುದು ಸುನಿಶ್ಚಿತವಾದುದು.
ರಾಜಾನೋ ಹತಶಿಷ್ಟಾಸ್ತ್ವಾಂ ರಾಜನ್ನಭಿತ ಆಸತೇ |
ಧರ್ಮಾನನುಯುಯುಕ್ಷಂತಸ್ತೇಭ್ಯಃ ಪ್ರಬ್ರೂಹಿ ಭಾರತ ॥33॥
ಎಲೈ ರಾಜನೇ! ಯುದ್ಧದಲ್ಲಿ ಹತರಾಗಿ ಉಳಿದ ರಾಜರು ಧರ್ಮಗಳನ್ನು ಕೇಳಲು ಬಯಸಿ ನಿನ್ನನ್ನು ಸುತ್ತುವರಿದಿದ್ದಾರೆ. ಎಲೈ ಭಾರತನೇ! ಅವರಿಗೆ ಉಪ- ದೇಶವನ್ನು ಮಾಡು.
ಭವಾನ್ ಹಿ ವಯಸಾ ವೃದ್ಧಃ ಶ್ರುತಾಚಾರಸಮನ್ವಿತಃ |
ಕುಶಲೋ ರಾಜಧರ್ಮಾಣಾಂ ಪೂರ್ವೇಷಾಮಪರಾಶ್ಚ ಯೇ ॥34॥
ನೀನು ವಯೋವೃದ್ಧನಾಗಿದ್ದೀಯೆ. ವಿದ್ಯೆ ಮತ್ತು ಆಚಾರಸಂಪನ್ನನಾಗಿದ್ದೀಯೆ. ಪೂರ್ವರಾಜರ ಮತ್ತು ಅನಂತರ ಬಂದ ರಾಜರ ಎಲ್ಲ ಧರ್ಮಗಳನ್ನೂ ಚೆನ್ನಾಗಿ ತಿಳಿದಿದ್ದೀಯೆ.
ಜನ್ಮಪ್ರಭೃತಿ ತೇ ಕಶ್ಚಿದ್ ವೃಜಿನಂ ನ ದದರ್ಶ ಹ |
ಜ್ಞಾತಾರಂ ಮನುಧರ್ಮಾಣಾಂ ತ್ವಾಂ ವಿದುಃ ಸರ್ವಪಾರ್ಥಿವಾಃ ॥35॥
ನೀನು ಹುಟ್ಟಿದಾಗಿನಿಂದ ನಿನ್ನಲ್ಲಿ ಯಾವ ದೋಷವೂ ಕಂಡುಬರಲಿಲ್ಲ. ಎಲ್ಲ ರಾಜರೂ ನೀನು ಮನುಧರ್ಮಗಳನ್ನು ತಿಳಿದವನು ಎಂದು ತಿಳಿದಿದ್ದಾರೆ.
ತೇಭ್ಯಃ ಪಿತೇವ ಪುತ್ರೇಭ್ಯೋ ರಾಜನ್ ಬ್ರೂಹಿ ಪರಂ ನಯಮ್ |

ಋಷಯಶ್ಚ ಹಿ ದೇವಾಶ್ಚ ತ್ವಯಾ ನಿತ್ಯಮುಪಾಸಿತಾಃ ॥36॥
ಎಲೈ ರಾಜನೇ! ಮಕ್ಕಳಿಗೆ ತಂದೆಯು ಹೇಳಿದಂತೆ ಅವರಿಗೆ ಶ್ರೇಷ್ಠವಾದ ರಾಜ- ನೀತಿಯನ್ನು ಹೇಳು. ನೀನು ನಿತ್ಯವೂ ಋಷಿಗಳ ಮತ್ತು ದೇವತೆಗಳ ಸೇವೆಯನ್ನು ಮಾಡಿದ್ದೀಯೆ.
ತಸ್ಮಾದ್ ವಕ್ತವ್ಯಮೇವೇಹ ತ್ವಯಾ ಪಶ್ಯಾಮ್ಯಶೇಷತಃ |
ಧರ್ಮಾನ್ ಶುಶ್ರೂಷಮಾಣೇಭ್ಯಃ ಪೃಷ್ಟೇನ ಚ ಸತಾ ಪುನಃ ॥37॥
ಆದ್ದರಿಂದ ಕೇಳಲು ಬಯಸುವ ಈ ರಾಜರಿಗೆ ಅದರಲ್ಲಿಯೂ ಸಜ್ಜನನಾದ ಯುಧಿಷ್ಠಿರನಿಂದ ಪ್ರಶ್ನೆ ಮಾಡಲ್ಪಟ್ಟ ನೀನು ಎಲ್ಲವನ್ನೂ ಪೂರ್ಣವಾಗಿ ಹೇಳಲೇ ಬೇಕು - ಎಂದು ನಾನು ತಿಳಿಯುತ್ತೇನೆ.
ವಕ್ತವ್ಯಂ ವಿದುಷಾ ಚೇತಿ ಧರ್ಮಮಾಹುರ್ಮನೀಷಿಣಃ |
ಅಪ್ರತಿಬ್ರುವತಃ ಕಷ್ಟೋ ದೋಷೋ ಹಿ ಭವತಿ ಪ್ರಭೋ ॥38॥
ಸಜ್ಜನರು ಪ್ರಶ್ನೆ ಮಾಡಿದಾಗ ವಿದ್ವಾಂಸನಾದವನು ಉತ್ತರವನ್ನು ನೀಡುವುದು ಧರ್ಮವೆಂದು ಜ್ಞಾನಿಗಳು ಹೇಳುತ್ತಾರೆ. ಎಲೈ ಪ್ರಭುವೇ! ಉತ್ತರವನ್ನು ನೀಡದಿದ್ದರೆ ಕಷ್ಟಕರವಾದ ದೋಷವುಂಟಾಗುವುದಷ್ಟೇ!
ತಸ್ಮಾತ್ ಪುತ್ರೈಶ್ಚ ಪೌತ್ರೈಶ್ಚ ಧರ್ಮಾನ್ ಪೃಷ್ಟಃ ಸನಾತನಾನ್ |
ವಿದ್ವಾನ್ ಜಿಜ್ಞಾಸಮಾನೈಸ್ತ್ವಂ ಪ್ರಬ್ರೂಹಿ ಭರತರ್ಷಭ ॥39॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಃಪಂಚಾಶೋಽಧ್ಯಾಯಃ ॥54॥
ಎಲೈ ಭರತಶ್ರೇಷ್ಠನೇ! ಆದ್ದರಿಂದ ಪುತ್ರರಿಂದಲೂ ಮತ್ತು ಪೌತ್ರರಿಂದಲೂ ಸನಾತನಧರ್ಮಗಳ ವಿಷಯದಲ್ಲಿ ಪ್ರಶ್ನೆಮಾಡಲ್ಪಟ್ಟ ನೀನು ಎಲ್ಲವನ್ನೂ ತಿಳಿದವ- ನಾಗಿ ತಿಳಿಯಲು ಬಯಸುವ ಅವರಿಗೆ ಉಪದೇಶವನ್ನು ಮಾಡು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 54ನೆಯಅಧ್ಯಾಯವು ಮುಗಿಯಿತು
0
55. ಪಂಚಪಂಚಾಶೋಽಧ್ಯಾಯಃ
ಯುಧಿಷ್ಠಿರನ ಉಪಸತ್ತಿಯನ್ನು ಕುರಿತು ಕೃಷ್ಣನಿಂದ ಕಾರಣನಿರೂಪಣೆ;
ಭೀಷ್ಮರಿಂದ ಯುಧಿಷ್ಠಿರನಿಗೆ ಪ್ರಶ್ನೆಯನ್ನು ಕೇಳಲು ಅನುಮತಿ
ವೈಶಂಪಾಯನಃ
ಅಥಾಬ್ರವೀನ್ಮಹಾತೇಜಾ ವಾಕ್ಯಂ ಕೌರವನಂದನಃ |
ಹಂತ ಧರ್ಮಾನ್ ಪ್ರವಕ್ಷ್ಯಾಮಿ ದೃಢೇ ವಾಙ್ಮನಸೀ ಮಮ |
ತವ ಪ್ರಸಾದಾದ್ ಗೋವಿಂದ ಭೂತಾತ್ಮಾ ಹ್ಯಸಿ ಶಾಶ್ವತಃ ॥1॥
ವೈಶಂಪಾಯನರು ಆಗ ಮಹಾತೇಜಸ್ವಿಗಳಾದ ಕೌರವನಂದನರಾದ ಭೀಷ್ಮರು ಮಾತನಾಡಿದರು. ಸಂತೋಷ. ಧರ್ಮಗಳನ್ನು ಹೇಳುವೆನು. ಎಲೈ ಗೋವಿಂದನೇ! ನಿನ್ನ ಅನುಗ್ರಹದಿಂದ ನನ್ನ ಮಾತು ಮತ್ತು ಮನಸ್ಸುಗಳು ದೃಢವಾಗಿವೆ. ಗೋವಿಂದನೇ! ನೀನು ಶಾಶ್ವತನಾದ ಸರ್ವಾಂತರ್ಯಾಮಿಯಾಗಿದ್ದೀಯೆ.
ಯುಧಿಷ್ಠಿರಸ್ತು ಮಾಂ ರಾಜಾ ಧರ್ಮಾನ್ ಸಮನುಪೃಚ್ಛತು |
ಏವಂ ಪ್ರೀತೋ ಭವಿಷ್ಯಾಮಿ ಧರ್ಮಾನ್ ವಕ್ಷ್ಯಾಮಿ ಚಾನಘ ॥2॥
ರಾಜನಾದ ಯುಧಿಷ್ಠಿರನು ಧರ್ಮಗಳ ವಿಷಯದಲ್ಲಿ ನನ್ನನ್ನು ಪ್ರಶ್ನಿಸಲಿ. ಎಲೈ ಅನಘನೇ! ಹಾಗೆ ಮಾಡಿದರೆ ನಾನು ಸಂತೋಷಗೊಳ್ಳುವೆನು ಮತ್ತು ಧರ್ಮ- ಗಳನ್ನು ನಿರೂಪಿಸುವೆನು.
ಯಸ್ಮಿನ್ ರಾಜರ್ಷಭೇ ಜಾತೇ ಧರ್ಮಾತ್ಮನಿ ಮಹಾತ್ಮನಿ |
ಅಹೃಷ್ಯನ್ ಋಷಯಃ ಸರ್ವೇ ಸ ಮಾಂ ಪೃಚ್ಛತು ಪಾಂಡವಃ ॥3॥
ಯಾವ ಧರ್ಮಾತ್ಮನಾದ ಮಹಾತ್ಮನಾದ ರಾಜಶ್ರೇಷ್ಠನು ಜನಿಸಿದಾಗ ಎಲ್ಲ ಋಷಿಗಳೂ ಸಂತೋಷಗೊಂಡರೋ ಅಂತಹ ಪಾಂಡವನು ನನ್ನನ್ನು ಪ್ರಶ್ನಿಸಲಿ.
ಸರ್ವೇಷಾಂ ದೀಪ್ತಯಶಸಾಂ ಕುರೂಣಾಂ ಧರ್ಮಚಾರಿಣಾಮ್ |
ಯಸ್ಯ ನಾಸ್ತಿ ಸಮಃ ಕಶ್ಚಿತ್ ಸ ಮಾಂ ಪೃಚ್ಛತು ಪಾಂಡವಃ ॥4॥
ಯಾವ ಯುಧಿಷ್ಠಿರನಿಗೆ ದೀಪ್ತವಾದ ಕೀರ್ತಿಯುಳ್ಳ, ಧರ್ಮಚಾರಿಗಳಾದ, ಎಲ್ಲ ಕುರುಗಳಲ್ಲಿ ಸಮಾನನಾದವನು ಯಾವನೂ ಇಲ್ಲವೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಧೃತಿರ್ದಮೋ ಬ್ರಹ್ಮಚರ್ಯಂ ಕ್ಷಮಾ ಧರ್ಮಶ್ಚ ನಿತ್ಯದಾ |
ಯಸ್ಮಿನ್ನೋಜಶ್ಚ ತೇಜಶ್ಚ ಸ ಮಾಂ ಪೃಚ್ಛತು ಪಾಂಡವಃ ॥5॥
ಯಾವನಲ್ಲಿ ಧೈರ್ಯ, ಇಂದ್ರಿಯನಿಗ್ರಹ, ಬ್ರಹ್ಮಚರ್ಯ, ಕ್ಷಮೆ ನಿತ್ಯವೂ ಧರ್ಮಾಚರಣೆ, ಅವಷ್ಟಂಭಶಕ್ತಿ, ತೇಜಸ್ಸುಗಳು ಇವೆಯೋ ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನೆ ಮಾಡಲಿ.
ಸತ್ಯಂ ದಾನಂ ತಪಃ ಶೌಚಂ ಶಾಂತಿರ್ದಾಕ್ಷ್ಯಮಸಂಭ್ರಮಃ |
ಯಸ್ಮಿನ್ನೇತಾನಿ ಸರ್ವಾಣಿ ಸ ಮಾಂ ಪೃಚ್ಛತು ಪಾಂಡವಃ ॥6॥
ಯಾವನಲ್ಲಿ ಸತ್ಯ, ದಾನ, ತಪಸ್ಸು, ಶೌಚ, ಶಾಂತಿ, ದಕ್ಷತೆ ಮತ್ತು ಅಪ್ರಮಾದ -ಗಳು ಇವೆಲ್ಲವೂ ಇವೆಯೋ ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನೆ ಮಾಡಲಿ.
ಯೋ ನ ಕಾಮಾನ್ನ ಸಂರಂಭಾನ್ನ ಭಯಾನ್ನಾರ್ಥಕಾರಣಾತ್ |

ಕುರ್ಯಾದಧರ್ಮಂ ಧರ್ಮಾತ್ಮಾ ಸ ಮಾಂ ಪೃಚ್ಛತು ಪಾಂಡವಃ ॥7॥
ಧರ್ಮಾತ್ಮನಾದ ಯಾವನು ಕಾಮದಿಂದಾಗಲೀ, ಕ್ರೋಧದಿಂದಾಗಲೀ, ಭಯ- ದಿಂದಾಗಲೀ, ಅರ್ಥಪ್ರಾಪ್ತಿಯ ಕಾರಣದಿಂದಾಗಲೀ ಅಧರ್ಮವನ್ನು ಮಾಡು- ವುದಿಲ್ಲವೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಸಂಬಂಧಿನೋಽತಿಥೀನ್ ಭೃತ್ಯಾನ್ ಸಂಶ್ರಿತೋಪಾಶ್ರಿತಾಂಶ್ಚ ಯಃ |
ಸಮ್ಮಾನಯತಿ ಸತ್ಕೃತ್ಯ ಸ ಮಾಂ ಪೃಚ್ಛತು ಪಾಂಡವಃ ॥8॥
ಯಾವನು ಸಂಬಂಧಿಗಳನ್ನು ಅತಿಥಿಗಳನ್ನು, ಭೃತ್ಯರನ್ನು, ಆಶ್ರಿತರನ್ನು, ಆಶ್ರಿತರ ಸಂಬಂಧಿಗಳನ್ನು ಸತ್ಕರಿಸಿ ಪೂಜಿಸುತ್ತಾನೆಯೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಸತ್ಯನಿತ್ಯಃ ಕ್ಷಮಾನಿತ್ಯೋ ಜ್ಞಾನನಿತ್ಯೋಽತಿಥಿಪ್ರಿಯಃ |
ಯೋ ದದಾತಿ ಸತಾಂ ನಿತ್ಯಂ ಸ ಮಾಂ ಪೃಚ್ಛತು ಪಾಂಡವಃ ॥9॥
ಯಾವನು ನಿತ್ಯವೂ ಸತ್ಯವಚನನೋ, ನಿತ್ಯವೂ ಕ್ಷಮಾಶೀಲನೋ, ನಿತ್ಯವೂ ಜ್ಞಾನರತನೋ, ಅತಿಥಿಪ್ರಿಯನೋ, ಸಜ್ಜನರಿಗೆ ನಿತ್ಯವೂ ದಾನವನ್ನು ಮಾಡು- ತ್ತಾನೆಯೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಇಜ್ಯಾಧ್ಯಯನನಿತ್ಯಶ್ಚ ಧರ್ಮೇ ಚ ನಿರತಃ ಸದಾ |
ಶಾಂತಃ ಶ್ರುತರಹಸ್ಯಶ್ಚ ಸ ಮಾಂ ಪೃಚ್ಛತು ಪಾಂಡವಃ ॥10॥
ಯಾವನು ಅರ್ಚನೆ ಮತ್ತು ಅಧ್ಯಯನಗಳಲ್ಲಿ ನಿತ್ಯವೂ ರತನಾಗಿದ್ದಾನೋ, ಧರ್ಮಗಳಲ್ಲಿ ನಿರತನೋ ಶಾಂತನೋ, ರಹಸ್ಯತತ್ವಗಳನ್ನು ತಿಳಿದವನೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಶ್ರೀಭಗವಾನ್
ಲಜ್ಜಯಾ ಪರಯೋಪೇತೋ ಧರ್ಮಾತ್ಮಾ ಸ ಯುಧಿಷ್ಠಿರಃ |
ಅಭಿಶಾಪಭಯಾದ್ ಭೀತೋ ಭವಂತಂ ನೋಪಸರ್ಪತಿ ॥11॥
ಶ್ರೀಭಗವಾನ್ ಧರ್ಮಾತ್ಮನಾದ ಆ ಯುಧಿಷ್ಠಿರನು ಬಹಳ ನಾಚಿಕೆಯಿಂದ ಕೂಡಿ ನೀನು ಶಾಪವನ್ನು ಕೊಡಬಹುದೆಂದು ಹೆದರಿ ನಿನ್ನ ಬಳಿಗೆ ಬರುತ್ತಿಲ್ಲ.
ಲೋಕಸ್ಯ ಕದನಂ ಕೃತ್ವಾ ಲೋಕನಾಥೋ ವಿಶಾಂಪತೇ |
ಅಭಿಶಾಪಭಯಾದ್ ಭೀತೋ ಭವಂತಂ ನೋಪಸರ್ಪತಿ ॥12॥
ಎಲೈ ರಾಜನೇ! ಲೋಕನಾಥನಾದ ಅವನು ಘೋರವಾದ ಯುದ್ಧವನ್ನು ಮಾಡಿ, ನಿನ್ನಿಂದ ಶಾಪವುಂಟಾಗಬಹುದೆಂಬ ಭಯದಿಂದ ನಿನ್ನ ಬಳಿಗೆ ಬರುತ್ತಿಲ್ಲ.
ಪೂಜ್ಯಾನ್ ಮಾನ್ಯಾಂಶ್ಚ ಭಕ್ತಾಂಶ್ಚ ಗುರೂನ್ ಸಂಬಂಧಿಬಾಂಧವಾನ್ |
ಅರ್ಘ್ಯಾರ್ಹಾನಿಷುಭಿರ್ಹತ್ವಾ ಭವಂತಂ ನೋಪಸರ್ಪತಿ ॥13॥
ಪೂಜ್ಯರೂ, ಮಾನ್ಯರೂ, ಭಕ್ತರೂ, ಗುರುಗಳೂ, ಸಂಬಂಧಿಬಾಂಧವರೂ, ಪೂಜಾರ್ಹರೂ ಆದವರನ್ನು ಬಾಣಗಳಿಂದ ಕೊಂದು ನಿನ್ನ ಬಳಿಗೆ ಬರುತ್ತಿಲ್ಲ.
ಭೀಷ್ಮಃ
ಬ್ರಾಹ್ಮಣಾನಾಂ ಯಥಾ ಧರ್ಮೋ ದಾನಮಧ್ಯಯನಂ ತಪಃ |
ಕ್ಷತ್ರಿಯಾಣಾಂ ತಥಾ ಕೃಷ್ಣ ಸಮರೇ ದೇಹಪಾತನಮ್ ॥14॥
ಭೀಷ್ಮರು ಕೃಷ್ಣನೇ! ಬ್ರಾಹ್ಮಣರಿಗೆ ದಾನ, ಅಧ್ಯಯನ ಮತ್ತು ತಪಸ್ಸುಗಳು ಹೇಗೆ ಧರ್ಮವೋ ಹಾಗೆ ಕ್ಷತ್ರಿಯರಿಗೆ ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವುದು ಧರ್ಮವಾದುದು.
ಪಿತೄನ್ ಪಿತಾಮಹಾನ್ ಪುತ್ರಾನ್ ಗುರೂನ್ ಸಂಬಂಧಿಬಾಂಧವಾನ್ |
ಮಿಥ್ಯಾಪ್ರವೃತ್ತಾನ್ ಯಃ ಸಂಖ್ಯೇ ನಿಹನ್ಯಾದ್ ಧರ್ಮ ಏವ ಸಃ ॥15॥
ಅನ್ಯಾಯದ ಕಾರಣದಿಂದ ಪ್ರವೃತ್ತರಾದ ಪಿತೃಗಳನ್ನೂ, ಪಿತಾಮಹರನ್ನೂ, ಪುತ್ರರನ್ನೂ, ಗುರುಗಳನ್ನೂ, ಸಂಬಂಧಿಬಾಂಧವರನ್ನು ಯುದ್ಧದಲ್ಲಿ ಕೊಲ್ಲುವುದು ಕ್ಷತ್ರಿಯರಿಗೆ ಧರ್ಮವೇ ಆಗುತ್ತದೆ.
ಸಮಯತ್ಯಾಗಿನೋ ಲುಬ್ಧಾನ್ ಗುರೂನಪಿ ಚ ಕೇಶವ |
ನಿಹಂತಿ ಸಮರೇಪಾಪಾನ್ ಕ್ಷತ್ರಿಯೋ ಯಃ ಸ ಧರ್ಮವಿತ್ ॥16॥
ಎಲೈ ಕೇಶವನೇ! ಧರ್ಮವನ್ನು ತಿಳಿದ ಕ್ಷತ್ರಿಯನು ಮಾಡಿಕೊಂಡ ಒಪ್ಪಂದ- ವನ್ನು ಮುರಿದ ಲೋಭಿಗಳಾದ ಪಾಪಿಗಳಾದ ಗುರುಗಳನ್ನೂ ಯುದ್ಧದಲ್ಲಿ ಕೊಲ್ಲು- ತ್ತಾನೆ.
ಲೋಹಿತೋದಾಂ ಕೇಶತೃಣಾಂ ಗಜಶೈಲಾಂ ಧ್ವಜದ್ರುಮಾಮ್ |
ಮಹೀಂ ಕರೋತಿ ಯುದ್ಧೇಷು ಕ್ಷತ್ರಿಯೋ ಯಃ ಸ ಧರ್ಮವಿತ್ ॥17॥
ಯಾವನು ಭೂಮಿಯಲ್ಲಿ ರಕ್ತದ ಪ್ರವಾಹವಿರುವ, ಕೇಶವೆಂಬ ತೃಣಗಳನ್ನು ಹೊಂದಿದ, ಗಜಗಳೆಂಬ ಪರ್ವತಗಳನ್ನು ಹೊಂದಿದ, ಧ್ವಜಗಳೆಂಬ ದ್ರುಮವನ್ನು ಹೊಂದಿದೆ ನದಿಯನ್ನು ಹರಿಸುತ್ತಾನೆಯೋ ಅಂತಹ ಕ್ಷತ್ರಿಯನು ಧರ್ಮವನ್ನು ತಿಳಿದವನಾಗುತ್ತಾನೆ.
ಆಹೂತೇನ ರಣೇ ನಿತ್ಯಂ ಯೋದ್ಧವ್ಯಂ ಕ್ಷತ್ರಬಂಧುನಾ |
ಧರ್ಮ್ಯಂ ಸ್ವರ್ಗ್ಯಂ ಚ ಲೋಕ್ಯಂ ಚ ಯುದ್ಧಂ ಹಿ ಮನುರಬ್ರವೀತ್ ॥18॥
ಕ್ಷತ್ರಿಯನಾದವನು ಯುದ್ಧಕ್ಕೆ ಆಹ್ವಾನಿಸಲ್ಪಟ್ಟರೆ ಅವಶ್ಯವಾಗಿ ಯುದ್ಧವನ್ನು ಮಾಡಬೇಕು. ಅಂತಹ ಯುದ್ಧವು ಧರ್ಮಪ್ರದವಾದುದು, ಸ್ವರ್ಗಪ್ರದವಾದುದು, ಮತ್ತು ಪರಲೋಕಪ್ರದವೂ ಆದುದು ಎಂದು ಮನುವು ಹೇಳಿದ್ದಾನೆ.
ವೈಶಂಪಾಯನಃ

ಏವಮುಕ್ತಸ್ತು ಭೀಷ್ಮೇಣ ಧರ್ಮರಾಜೋ ಯುಧಿಷ್ಠಿರಃ |
ವಿನೀತವದುಪಾಗಮ್ಯ ತಸ್ಥೌ ಸಂದರ್ಶನೇಽಗ್ರತಃ ||19||
ವೈಶಂಪಾಯನರು ಭೀಷ್ಮರಿಂದ ಹೀಗೆ ಹೇಳಲ್ಪಟ್ಟ ಧರ್ಮರಾಜನಾದ ಯುಧಿ-ಷ್ಠಿರನು ವಿನಯದಿಂದ ಮುಂದೆ ಬಂದು ಅವರ ದೃಷ್ಟಿಗೆ ಗೋಚರವಾಗುವಂತೆ ಎದುರಿಗೆ ನಿಂತನು.
ಅಥಾಸ್ಯ ಪಾದೌ ಜಗ್ರಾಹ ಭೀಷ್ಮಶ್ಚಾಭಿನನಂದ ತಮ್ |
ಮೂರ್ಧ್ನಿ ಚೈನಮುಪಾಘ್ರಾಯ ನಿಷೀದೇತ್ಯಬ್ರವೀತ್ ತದಾ ||20||
ಅನಂತರ ಅವನು ಅವರ ಪಾದಗಳಿಗೆ ನಮಸ್ಕರಿಸಿದನು. ಭೀಷ್ಮರು ಅವನನ್ನು ಅಭಿನಂದಿಸಿದರು. ಅವನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ, ಕುಳಿತುಕೋ ಎಂದು ಹೇಳಿದರು.
ತಮುವಾಚಾಥ ಗಾಂಗೇಯ ಋಷಭಃ ಸರ್ವಧನ್ವಿನಾಮ್ |
ಪೃಚ್ಛ ಮಾಂ ತಾತ ವಿಸ್ರಬ್ಧಂ ಮಾ ಭೈಸ್ತ್ವಂ ಕುರುಸತ್ತಮ ||21||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಪಂಚಾಶೋಽಧ್ಯಾಯಃ ||55||
ಅನಂತರ ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠರಾದ, ಗಂಗಾಪುತ್ರರಾದ ಭೀಷ್ಮರು ಎಲೈ ಪ್ರೀತಿಪಾತ್ರನೇ! ಕುರುಶ್ರೇಷ್ಠನೇ! ಹೆದರಬೇಡ. ವಿಶ್ವಾಸದಿಂದ ಪ್ರಶ್ನೆಗಳನ್ನು ಕೇಳು ಎಂದು ಅವನನ್ನು ಕುರಿತು ಹೇಳಿದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 55ನೆಯ ಅಧ್ಯಾಯವು ಮುಗಿಯಿತು.
0
56. ಐವತ್ತಾರನೆಯ ಅಧ್ಯಾಯ
ವೈಶಂಪಾಯನಃ
ಭೀಷ್ಮರಿಂದ ರಾಜಧರ್ಮಕಥನ
ಪ್ರಣಿಪತ್ಯ ಹೃಷೀಕೇಶಮಭಿವಾದ್ಯ ಪಿತಾಮಹಮ್ |
ಅನುಮಾನ್ಯ ಗುರೂನ್ ಸರ್ವಾನ್ ಪರ್ಯಪೃಚ್ಛದ್ ಯುಧಿಷ್ಠಿರಃ ||1||
ವೈಶಂಪಾಯನರು ಯುಧಿಷ್ಠಿರನು ಹೃಷೀಕೇಶನಾದ ಕೃಷ್ಣನಿಗೆ ನಮಸ್ಕರಿಸಿ, ಪಿತಾಮಹರಾದ ಭೀಷ್ಮರನ್ನು ನಮಸ್ಕರಿಸಿ, ಎಲ್ಲ ಗುರುಗಳ ಅನುಮತಿಯನ್ನು ಪಡೆದು ಪ್ರಶ್ನೆಯನ್ನು ಮಾಡಿದನು.
ರಾಜ್ಯಂ ವೈ ಪರಮೋ ಧರ್ಮ ಇತಿ ಧರ್ಮವಿದೋ ವಿದುಃ |
ಮಹಾಂತಮೇತಂ ಭಾರಂ ಚ ಮನ್ಯೇ ತದ್ ಬ್ರೂಹಿ ಪಾರ್ಥಿವ ||2||
ಧರ್ಮವನ್ನು ತಿಳಿದವರು ರಾಜ್ಯಪಾಲನೆಯು ಶ್ರೇಷ್ಠವಾದ ಧರ್ಮವೆಂದು ತಿಳಿ- ಯುತ್ತಾರೆ (ಹೇಳುತ್ತಾರೆ). ಈ ಭಾರವು ಬಹಳ ದೊಡ್ಡದಾದುದು ಎಂದು ನನ್ನ ಅಭಿಪ್ರಾಯ. ಎಲೈ ರಾಜನೇ! ಅದನ್ನು ನನಗೆ ಹೇಳು.
ರಾಜಧರ್ಮಾನ್ ವಿಶೇಷೇಣ ಕಥಯಸ್ವ ಪಿತಾಮಹ |
ಸರ್ವಸ್ಯ ಜೀವಲೋಕಸ್ಯ ರಾಜಧರ್ಮಾಃ ಪರಾಯಣಮ್ ||3||
ಎಲೈ ಪಿತಾಮಹನೇ! ರಾಜಧರ್ಮವನ್ನು ವಿಶೇಷವಾಗಿ ಹೇಳು. ಎಲ್ಲ ಜೀವ- ಲೋಕಕ್ಕೆ ರಾಜಧರ್ಮಗಳೇ ಶ್ರೇಷ್ಠವಾದ ಆಸರೆ.
ತ್ರಿವರ್ಗೋಽತ್ರ ಸಮಾಸಕ್ತೋ ರಾಜಧರ್ಮೇಷು ಕೌರವ |
ಮೋಕ್ಷಧರ್ಮಶ್ಚ ವಿಸ್ಪಷ್ಟಃ ಸಕಲೋಽತ್ರ ಸಮಾಹಿತಃ ||4||
ಎಲೈ ಕೌರವನೇ! ರಾಜಧರ್ಮವನ್ನು ಧರ್ಮಾರ್ಥಕಾಮರೂಪವಾದ ತ್ರಿ- ವರ್ಗವು ಅವಲಂಬಿಸಿದೆ. ಸಕಲವಾದ ಮೋಕ್ಷಧರ್ಮವೂ ಕೂಡ ಸ್ಪಷ್ಟವಾಗಿ ರಾಜ- ಧರ್ಮವನ್ನು ಅವಲಂಬಿಸಿದೆ.
ಯಥಾ ಹಿ ರಶ್ಮಯೋಽಶ್ವಸ್ಯ ದ್ವಿರದಸ್ಯಾಂಕುಶೋ ಯಥಾ |
ನರೇಂದ್ರಧರ್ಮೋ ಲೋಕಸ್ಯ ತಥಾ ಪ್ರಗ್ರಹಣಂ ಸ್ಮೃತಮ್ ||5||
ಕುದುರೆಗೆ ಕಡಿವಾಣಗಳಿದ್ದಂತೆ, ಆನೆಗೆ ಅಂಕುಶವಿದ್ದಂತೆ ರಾಜಧರ್ಮವು ಲೋಕಕ್ಕೆ ಕಡಿವಾಣವೆಂದು ಹೇಳಲ್ಪಡುತ್ತದೆ.
ಅತ್ರ ವೈ ಸಂಪ್ರಮೂಢೇ ತು ಧರ್ಮೇ ರಾಜರ್ಷಿಸೇವಿತೇ |
ಲೋಕಸ್ಯ ಸಂಸ್ಥಾ ನ ಭವೇತ್ ಸರ್ವಂ ಚ ವ್ಯಾಕುಲಂ ಭವೇತ್ ||6||
ರಾಜರ್ಷಿಗಳಿಂದ ಸೇವಿತವಾದ ಅಂತಹ ರಾಜಧರ್ಮವು ಮಲಿನವಾದರೆ ಲೋಕಯಾತ್ರೆಯು ನಡೆಯಲಾರದು. ಎಲ್ಲವೂ ವ್ಯಾಕುಲಗೊಂಡೀತು!
ಉದಯನ್ ಹಿ ಯಥಾ ಸೂರ್ಯೋ ನಾಶಯತ್ಯಾಸುರಂ ತಮಃ |
ರಾಜಧರ್ಮಾಸ್ತಥಾಲೋಕ್ಯಾಮಾಕ್ಷಿಪಂತ್ಯಶುಭಾಂ ಗತಿಮ್ ||7||
ಸೂರ್ಯನು ಉದಯಿಸುತ್ತಾ ಹೇಗೆ ಕತ್ತಲೆಯನ್ನು ನಾಶ ಪಡಿಸುತ್ತಾನೋ, ಅದರಂತೆ ರಾಜಧರ್ಮಗಳು ಲೋಕಸಂಬಂಧಿಯಾದ ಅಶುಭಗತಿಯನ್ನು ನಿವಾ- ರಿಸುತ್ತವೆ.
ತದಗ್ರೇ ರಾಜಧರ್ಮಾಣಾಮರ್ಥತತ್ತ್ವಂ ಪಿತಾಮಹ |
ಪ್ರಬ್ರೂಹಿ ಭರತಶ್ರೇಷ್ಠ ತ್ವಂ ಹಿ ಬುದ್ಧಿಮತಾಂ ವರಃ ||8||
ಆದ್ದರಿಂದ ಎಲೈ ಪಿತಾಮಹನೇ! ಭರತಶ್ರೇಷ್ಠನೇ! ರಾಜಧರ್ಮಗಳ ಸರಿಯಾದ ತತ್ವವನ್ನು ಹೇಳುವವನಾಗು. ನೀನು ಬುದ್ಧಿವಂತರಲ್ಲಿ ಶ್ರೇಷ್ಠನಾದವನಷ್ಟೇ.
ಆಗಮಶ್ಚ ಪರಸ್ತ್ವತ್ತಃ ಸರ್ವೇಷಾಂ ನಃ ಪರಂತಪ |

ಭವಂತಂ ಹಿ ಪರಂ ಬುದ್ಧೌ ವಾಸುದೇವೋಽಭಿಮನ್ಯತೇ ॥9॥
ಎಲೈ ಪರಂತಪನೇ! ನಿನ್ನಿಂದಲೇ ನಮ್ಮೆಲ್ಲರಿಗೂ ಜ್ಞಾನಲಾಭವಾಗಬೇಕಾಗಿದೆ. ಕೃಷ್ಣನು ನಿನ್ನನ್ನು ಬುದ್ಧಿಯಲ್ಲಿ ಶ್ರೇಷ್ಠನಾದವನೆಂದು ಅಭಿಪ್ರಾಯ ಪಡುತ್ತಾನೆ.
ಭೀಷ್ಮ:
ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ |
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ॥10॥
ಭೀಷ್ಮರು ಮಹತ್ತಾದ ಧರ್ಮಕ್ಕೆ ನಮಸ್ಕಾರ. ಸರ್ವಕರ್ತನಾದ ಕೃಷ್ಣನಿಗೆ ನಮಸ್ಕಾರ. ಬ್ರಾಹ್ಮಣರನ್ನು ನಮಸ್ಕರಿಸಿ ಶಾಶ್ವತವಾದ ಧರ್ಮಗಳನ್ನು ಹೇಳುವೆನು.
ಶೃಣು ಕಾರ್ತ್ಸ್ನ್ಯೇನ ಮತ್ತಸ್ತ್ವಂ ರಾಜಧರ್ಮಾನ್ ಯುಧಿಷ್ಠಿರ |
ನಿರುಚ್ಯಮಾನಾನ್ ನಿಯತೋ ಯಚ್ಚಾನ್ಯದಭಿವಾಂಛಸಿ ॥11॥
ಎಲೈ ಯುಧಿಷ್ಠಿರನೇ! ನೀನು ನಾನು ಹೇಳುವ ರಾಜಧರ್ಮಗಳನ್ನು ಮತ್ತು ನೀನು ಬಯಸುವ ಬೇರೆ ವಿಷಯಗಳನ್ನು ಸಮಗ್ರವಾಗಿ ಹೇಳುವುದನ್ನು ನಿಯಮ- ದಿಂದ ಕೂಡಿದವನಾಗಿ ಕೇಳು.
ಆದಾವೇವ ಕುರುಶ್ರೇಷ್ಠ ರಾಜಾ ರಂಜನಕಾಮ್ಯಯಾ |
ದೇವತಾನಾಂ ದ್ವಿಜಾನಾಂ ಚ ವರ್ತಿತವ್ಯಂ ಯಥಾವಿಧಿ ॥12॥
ಎಲೈ ಕುರುಶ್ರೇಷ್ಠನೇ! ರಾಜನು ಪ್ರಜೆಗಳನ್ನು ರಂಜಿಸುವ ಕಾಮನೆಯಿಂದ ಮೊದಲು ದೇವತೆಗಳ ಮತ್ತು ಬ್ರಾಹ್ಮಣರ ವಿಷಯದಲ್ಲಿ ಸರಿಯಾದ ವಿಧಾನದಿಂದ ನಡೆದುಕೊಳ್ಳಬೇಕು.
ದೇವತಾನ್ಯರ್ಚಯಿತ್ವಾ ಹಿ ಬ್ರಾಹ್ಮಣಾಂಶ್ಚ ಕುರೂದ್ವಹ |
ಆನೃಣ್ಯಂ ಯಾತಿ ಧರ್ಮಸ್ಯ ಲೋಕೇನ ಚ ಸ ಮಾನ್ಯತೇ ॥13॥
ಎಲೈ ಕುರೂದ್ವಹನೇ! ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ಪೂಜಿಸುವವನು ಧರ್ಮದ ಋಣದಿಂದ ಮುಕ್ತನಾಗುತ್ತಾನೆ. ಮತ್ತು ಲೋಕವು ಅವನನ್ನು ಗೌರವಿ- ಸುತ್ತದೆ.
ಉತ್ಥಾನೇ ಚ ಸದಾ ಪುತ್ರ ಪ್ರಯತೇಥಾ ಯುಧಿಷ್ಠಿರ |
ನಹ್ಯುತ್ಥಾನಮೃತೇ ದೈವಂ ರಾಜ್ಞಾಮರ್ಥಂ ಪ್ರಸಾಧಯೇತ್ ॥14॥
ಎಲೈ ಯುಧಿಷ್ಠಿರನೇ! ಪುತ್ರನೇ! ಯಾವಾಗಲೂ ರಾಜಯೋಗ್ಯವಾದ ರಾಜ್ಯ- ಪಾಲನಾದಿ ಪುರುಷಪ್ರಯತ್ನದಲ್ಲಿ ಯಾವಾಗಲೂ ಪ್ರಯತ್ನಿಸು. ಇಲ್ಲದಿದ್ದರೆ ದೈವವು ರಾಜರಿಗೆ ಅರ್ಥವನ್ನು ಸಾಧಿಸಿಕೊಡಲಾರದು.
ಸಾಧಾರಣಂ ದ್ವಯಂ ಹ್ಯೇತತ್ ದೈವಮುತ್ಥಾನಮೇವ ಚ |
ಪೌರುಷಂ ಹಿ ಪರಂ ಮನ್ಯೇ ದೈವಂ ನಿಶ್ಚಿತ್ಯಮುಚ್ಯತೇ ॥15॥
ಎಲ್ಲ ಕರ್ಮಗಳಿಗೂ ದೈವ ಮತ್ತು ಪುರುಷಪ್ರಯತ್ನಗಳು ಸಾಧಾರಣವಾದ ಕಾರಣವಾಗಿವೆ. ಅವುಗಳಲ್ಲಿ ಪುರುಷಪ್ರಯತ್ನವು ಶ್ರೇಷ್ಠವಾದುದೆಂದು ತಿಳಿಯುತ್ತೇನೆ. ಪುರುಷಪ್ರಯತ್ನವನ್ನು ಮಾಡಿ ದೈವವನ್ನು ಹುಡುಕಬೇಕು. (ನಿರೀಕ್ಷಿಸಬೇಕು).
ವಿಪನ್ನೇ ಚ ಸಮಾರಂಭೇ ಸಂತಾಪಂ ಮಾ ಸ್ಮ ವೈ ಕೃಥಾಃ |
ಘಟೇತ ಚ ಸದಾಽಽತ್ಮಾನಂ ರಾಜ್ಞಾಮೇಷ ನಯಃ ಪರಃ ॥16॥
ಒಂದು ಪ್ರಯತ್ನವು ವಿಫಲವಾದರೆ ಸಂತಾಪ ಪಡಬೇಡ. ಅದನ್ನು ಮಾಡಲು ಪುನಃ ಪ್ರಯತ್ನಿಸು. ಇದು ರಾಜರ ಶ್ರೇಷ್ಠವಾದ ನೀತಿ.
ನ ಹಿ ಸತ್ಯಾದೃತೇ ಕಿಂಚಿದ್ ರಾಜ್ಞಾಂ ವೈ ಸಿದ್ಧಿಕಾರಣಮ್ |
ಸತ್ಯೇ ಹಿ ರಾಜಾ ನಿರತಃ ಪ್ರೇತ್ಯ ಚೇಹ ಹಿ ನಂದತಿ ॥17॥
ಸತ್ಯವನ್ನು ಬಿಟ್ಟು ರಾಜರಿಗೆ ಸಿದ್ಧಿಯನ್ನುಂಟುಮಾಡುವ ಬೇರೆ ಯಾವ ಕಾರಣವೂ ಇಲ್ಲ. ಸತ್ಯದಲ್ಲಿ ನಿರತನಾದ ರಾಜನು ಈ ಲೋಕದಲ್ಲಿಯೂ ಮತ್ತು ಮರಣಾನಂತರ ಪರಲೋಕದಲ್ಲಿಯೂ ಸುಖದಿಂದಿರುತ್ತಾನೆ.
ಋಷೀಣಾಮಪಿ ರಾಜೇಂದ್ರ ಸತ್ಯಮೇವ ಪರಂ ಧನಮ್ |
ತಥಾ ರಾಜ್ಞಃ ಪರಂ ಸತ್ಯಾನ್ನಾನ್ಯದ್ ವಿಶ್ವಾಸಕಾರಣಮ್ ॥18॥
ಎಲೈ ರಾಜೇಂದ್ರನೇ! ಋಷಿಗಳಿಗೂ ಸಹ ಸತ್ಯವೇ ಶ್ರೇಷ್ಠವಾದ ಧನ. ಹಾಗೆಯೇ ರಾಜನಲ್ಲಿ ವಿಶ್ವಾಸ ಮಾಡುವುದಕ್ಕೆ ಸತ್ಯಕ್ಕಿಂತ ಶ್ರೇಷ್ಠವಾದುದು ಬೇರೆ ಯಾವುದೂ ಇಲ್ಲ.
ಗುಣವಾನ್ ಶೀಲವಾನ್ ದಾಂತೋ ಮೃದುರ್ಧರ್ಮ್ಯೋ ಜಿತೇಂದ್ರಿಯಃ |
ಸುದರ್ಶಃ ಸ್ಥೂಲಲಕ್ಷ್ಯಶ್ಚ ನ ಭ್ರಶ್ಯೇತ ಸದಾ ಶ್ರಿಯಃ ॥19॥
ಗುಣವಂತನೂ ಶೀಲವಂತನೂ ಇಂದ್ರಿಯನಿಗ್ರಹವುಳ್ಳವನೂ ಮೃದುವೂ ಧರ್ಮಶೀಲನೂ ಜಿತೇಂದ್ರಿಯನೂ ಸುಲಭವಾಗಿ ನೋಡಲು ಸಾಧ್ಯವಾಗುವವನೂ ಪುಣ್ಯಕೀರ್ತಿಯುಳ್ಳವನೂ ಆದ ರಾಜನು ಸಂಪತ್ತನ್ನು ಕಳೆದುಕೊಳ್ಳುವುದಿಲ್ಲ. (ಲಕ್ಷ್ಮಾಲಂಕಾರ)
ಆರ್ಜವಂ ಸರ್ವಕಾರ್ಯೇಷು ಶ್ರಯೇಥಾಃ ಕುರುನಂದನ |
ಪುನರ್ನಯವಿಚಾರೇಣ ತ್ರಯೀಸಂವರಣೇನ ಚ ॥20॥
ಎಲೈ ಕುರುನಂದನನೇ! ಎಲ್ಲ ಕಾರ್ಯಗಳಲ್ಲಿಯೂ ರಾಜನೀತಿಯನ್ನು ವಿಚಾರ ಮಾಡಿ ವಿವಿಧಮಾರ್ಗವನ್ನು ವಿಚಾರ ಮಾಡಿ ಆರ್ಜವವನ್ನು (ನೇರತನವನ್ನು) ಹೊಂದುವವನಾಗು. ಶಾಂತರಾಗಿರುವ ದ್ವಿಜಶ್ರೇಷ್ಠರು ಭೂಮಿಯಲ್ಲಿ ವೇದವನ್ನು ಧರಿಸಿರುತ್ತಾರೆ.
ಮೃದುರ್ಹಿ ರಾಜಾ ಸತತಂ ಲಂಘ್ಯೋ ಭವತಿ ಸರ್ವಶಃ |
ತೀಕ್ಷ್ಣಾಚ್ಚೋದ್ವಿಜತೇ ಲೋಕಸ್ತಸ್ಮಾದುಭಯಮಾಚರ ॥21॥
ಮೃದುವಾದ ರಾಜನು ಯಾವಾಗಲೂ ಎಲ್ಲರಿಂದಲೂ ಉಲ್ಲಂಘಿಸಲ್ಪಡುತ್ತಾನೆ. ರಾಜನು ಉಗ್ರನಾಗಿದ್ದರೆ ಲೋಕವು ಹೆದರುತ್ತದೆ.

ಆದ್ದರಿಂದ ಬಹಳ ಮೃದು- ವಾಗದೆ ಬಹಳ ಉಗ್ರನಾಗದೆ ಮೃದುವೂ ಉಗ್ರನೂ ಆಗಿರಬೇಕು.
ಅದಂಡ್ಯಾಶ್ಚೈವ ತೇ ನಿತ್ಯಂ ವಿಪ್ರಾಃ ಸ್ಯುರ್ದದತಾಂವರ |
ಭೂತಮೇತತ್ ಪರಂ ಲೋಕೇ ಬ್ರಾಹ್ಮಣಾ ನಾಮ ಭಾರತ ॥22॥
ಎಲೈ ದಾನಮಾಡುವವರಲ್ಲಿ ಶ್ರೇಷ್ಠನಾದವನೇ! ಬ್ರಾಹ್ಮಣರು ದಂಡನೆಗೆ ಅರ್ಹರಾದವರಲ್ಲ. ಎಲೈ ಭಾರತನೇ! ಬ್ರಾಹ್ಮಣರು ಲೋಕದಲ್ಲಿ ದೊಡ್ಡ ವಸ್ತು- ಗಳೆನಿಸುವವರು.
ಮನುನಾ ಚಾಪಿ ರಾಜೇಂದ್ರ ಗೀತೌ ಶ್ಲೋಕೌ ಮಹಾತ್ಮನಾ |
ಧರ್ಮೇಷು ಸ್ವೇಷು ಕೌರವ್ಯ ಹೃದಿ ತೌ ಕರ್ತುಮರ್ಹಸಿ ॥23॥
ಎಲೈ ರಾಜೇಂದ್ರನೇ! ಮಹಾತ್ಮನಾದ ಮನುವೂ ಸಹ ಈ ವಿಷಯದಲ್ಲಿ ಎರಡು ಶ್ಲೋಕಗಳನ್ನು ಹಾಡಿದ್ದಾನೆ. ಎಲೈ ಕೌರವ್ಯನೇ! ನಿನ್ನ ಧರ್ಮಾಚರಣೆಗಳಲ್ಲಿ ಆ ಎರಡು ಶ್ಲೋಕಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರು.
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥24॥
ಜಲದಿಂದ ಅಗ್ನಿಯು, ಬ್ರಾಹ್ಮಣರಿಂದ ಕ್ಷತ್ರಿಯರು, ಶಿಲೆಯಿಂದ ಲೋಹವು ಉತ್ಪನ್ನವಾಗುತ್ತವೆ. ಉಳಿದೆಲ್ಲ ಕಡೆ ಇರುವ ಅವುಗಳ ತೇಜಸ್ಸುಗಳು ತಮ್ಮ ಮೂಲ ಕಾರಣದಲ್ಲಿ ನಾಶವನ್ನು ಹೊಂದುತ್ತವೆ.
ಅಯೋ ಹಂತಿ ಯದಾಶ್ಮಾನಮಗ್ನಿಶ್ಚಾಪೋಽಭಿಪದ್ಯತೇ |
ಬ್ರಹ್ಮ ಚ ಕ್ಷತ್ರಿಯೋ ದ್ವೇಷ್ಟಿ ತದಾ ಸೀದಂತಿ ತೇ ತ್ರಯಃ ॥25॥
ಕಬ್ಬಿಣವು ಯಾವಾಗ ಶಿಲೆಯನ್ನು ಹೊಡೆಯುತ್ತದೆಯೋ, ಅಗ್ನಿಯು ಯಾವಾಗ ನೀರಿನಲ್ಲಿ ಸೇರುತ್ತದೆಯೋ, ಕ್ಷತ್ರಿಯನು ಬ್ರಾಹ್ಮಣನ ದ್ವೇಷ ಮಾಡುತ್ತಾನೆಯೋ ಆಗ ಕಬ್ಬಿಣವು ಅಗ್ನಿಯೂ ಮತ್ತು ಕ್ಷತ್ರಿಯನೂ ನಾಶವನ್ನು ಹೊಂದುತ್ತಾರೆ.
ಏತಜ್ಜ್ಞಾತ್ವಾ ಮಹಾರಾಜ ನಮಸ್ಯಾ ಏವ ತೇ ದ್ವಿಜಾಃ |
ಭೌಮಂ ಬ್ರಹ್ಮ ದ್ವಿಜಶ್ರೇಷ್ಠಾ ಧಾರಯಂತಿ ಶಮಾನ್ವಿತಾಃ ॥26॥
ಎಲೈ ಮಹಾರಾಜನೇ! ಇದನ್ನು ತಿಳಿದು ನೀನು ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡಲೇಬೇಕು. ಶಾಂತರಾದ ಬ್ರಾಹ್ಮಣಶ್ರೇಷ್ಠರು ಭೂಮಿಯಲ್ಲಿರುವ ವೇದವನ್ನು ಧರಿಸಿರುತ್ತಾರೆ.
ಏವಂ ಚೈವ ನರವ್ಯಾಘ್ರ ಲೋಕತಂತ್ರವಿಘಾತಕಾಃ |
ನಿಗ್ರಾಹ್ಯಾ ಏವ ಸತತಂ ಬಾಹುಭ್ಯಾಂ ಯೇ ಸ್ಯುರೀದೃಶಾಃ ॥27॥
ಆದರೂ ಸಹ ಎಲೈ ನರವ್ಯಾಘ್ರನೇ! ಬ್ರಾಹ್ಮಣರು ಲೋಕಯಾತ್ರಾವಿನಾಶಕ- ರಾದರೆ ಅವರನ್ನು ಬಾಹುಬಲದಿಂದ ಸತತವಾಗಿ ನಿಗ್ರಹಿಸಲೇ ಬೇಕು.
ಶ್ಲೋಕೌ ಚೌಶನಸಾ ಗೀತೌ ಪುರಾ ತಾತ ಮಹರ್ಷಿಣಾ |
ತೌ ನಿಬೋಧ ಮಹಾಪ್ರಾಜ್ಞ ತ್ವಮೇಕಾಗ್ರಮನಾ ನೃಪ ॥28॥
ಎಲೈ ಪ್ರೀತಿಪಾತ್ರನೇ! ಮಹರ್ಷಿಗಳಾದ ಶುಕ್ರಾಚಾರ್ಯರು ಈ ವಿಷಯದಲ್ಲಿ ಎರಡು ಶ್ಲೋಕಗಳನ್ನು ಹೇಳಿದ್ದಾರೆ. ಎಲೈ ಮಹಾಪ್ರಾಜ್ಞನೇ! ರಾಜನೇ! ಏಕಾಗ್ರವಾದ ಮನಸ್ಸಿನಿಂದ ಅವುಗಳನ್ನು ಕೇಳು.
ಉದ್ಯಮ್ಯ ಶಸ್ತ್ರಮಾಯಾಂತಮಪಿ ವೇದಾಂತಗಂ ರಣೇ |
ನಿಗೃಹ್ಣೀಯಾತ್ ಸ್ವಧರ್ಮೇಣ ಧರ್ಮಾಪೇಕ್ಷೀ ನರೇಶ್ವರಃ ॥29॥
ವೇದಾಂತಪಾರಂಗತನಾದ ಬ್ರಾಹ್ಮಣನು ಶಸ್ತ್ರವನ್ನು ಹಿಡಿದು ಯುದ್ಧದಲ್ಲಿ ಎದುರಾಗಿ ಬಂದರೆ ಧರ್ಮಾಪೇಕ್ಷಿಯಾದ ರಾಜನು ತನ್ನ ಧರ್ಮಕ್ಕೆ ಅನುಸಾರವಾಗಿ ಅವನನ್ನು ನಿಗ್ರಹಿಸಬೇಕು. ಯುದ್ಧವನ್ನು ಬಿಟ್ಟು ಬೇರೆ ಸಂದರ್ಭದಲ್ಲಿ ಶಸ್ತ್ರವನ್ನು ಹಿಡಿದು ಬಂದ ಬ್ರಾಹ್ಮಣನನ್ನು ಬಂಧಿಸಬೇಕು. (ಯುದ್ಧದಲ್ಲಿ ಮಾತ್ರ ಅಂತಹ ಬ್ರಾಹ್ಮಣನು ಕ್ಷತ್ರಿಯ ವೃತ್ತಿಯನ್ನು ಅನುಸರಿಸುವುದರಿಂದ ಅವನನ್ನು ಕೊಲ್ಲಬಹುದು ಎಂದು ಅಭಿಪ್ರಾಯ.)
ವಿನಶ್ಯಮಾನಂ ಧರ್ಮಂ ಹಿ ಯೋ ರಕ್ಷತಿ ಸ ಧರ್ಮವಿತ್ |
ನ ತೇನ ಧರ್ಮಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮೃಚ್ಛತಿ ॥30॥
ಆ ರೀತಿಯಲ್ಲಿ ಬ್ರಾಹ್ಮಣವಧೆಯನ್ನು ಮಾಡುವುದರಿಂದ ರಾಜನು ಧರ್ಮ- ನಾಶವನ್ನು ಮಾಡಿದವನಾಗುವುದಿಲ್ಲ. ರಾಜನ ಕೋಪವು ಬ್ರಾಹ್ಮಣನ ಕೋಪವನ್ನು ನುಂಗುತ್ತದೆ. ವಿನಾಶಗೊಳ್ಳುತ್ತಿರುವ ಧರ್ಮವನ್ನು ಯಾವನು ರಕ್ಷಿಸುತ್ತಾನೋ ಅವನೇ ಧರ್ಮವನ್ನು ತಿಳಿದವನು.
ಏವಂ ಚೈವ ನರಶ್ರೇಷ್ಠ ರಕ್ಷ್ಯಾ ಏವ ದ್ವಿಜಾತಯಃ |
ಸ್ವಪರಾದ್ಧಾನಪಿ ಹಿ ತಾನ್ ವಿಷಯಾಂತೇ ಸಮುತ್ಸೃಜೇತ್ ॥31॥
ಎಲೈ ನರಶ್ರೇಷ್ಠನೇ! ಹಾಗಾದರೂ ಬ್ರಾಹ್ಮಣರು ರಕ್ಷಿಸಲ್ಪಡಬೇಕಾದವರೇ. ಬಹಳ ಅಪರಾಧವನ್ನು ಮಾಡಿದ ಬ್ರಾಹ್ಮಣರನ್ನು ರಾಜ್ಯದಿಂದ ಹೊರಗೆ ಕಳುಹಿಸ- ಬೇಕು. ಯುದ್ಧಪ್ರಸಂಗವಿಲ್ಲದಿದ್ದರೆ ಅವರನ್ನು ಕೊಲ್ಲಬಾರದು ಎಂದು ಅಭಿಪ್ರಾಯ.
ಅಭಿಶಸ್ತಮಪಿ ಹ್ಯೇಷಾಂ ಕೃಪಾಯೀತ ವಿಶಾಂಪತೇ |
ಬ್ರಹ್ಮಘ್ನೇ ಗುರುತಲ್ಪೇ ಚ ಭ್ರೂಣಹತ್ಯೇ ತಥೈವ ಚ ॥32॥
ಎಲೈ ರಾಜನೇ! ಅವನು ಬ್ರಹ್ಮಹತ್ಯವನ್ನಾಗಲೀ, ಗುರುತಲ್ಪಗಮನವನ್ನಾಗಲೀ, ಭ್ರೂಣಹತ್ಯೆಯನ್ನಾಗಲೀ ಮಾಡಿ ಎಲ್ಲ ರೀತಿಯಿಂದಲೂ ಶಾಸನಕ್ಕೆ ಯೋಗ್ಯನಾಗಿ- ದ್ದರೂ ಅವನ ಮೇಲೆ ಕೃಪೆಯನ್ನು ತೋರಿಸಬೇಕು.
ರಾಜದ್ವಿಷ್ಟೇ ಚ ವಿಪ್ರಸ್ಯ ವಿಷಯಾಂತೇ ವಿವಾಸನಮ್ |
ವಿಧೀಯತೇ ನ ಶಾರೀರಂ ಭಯಮೇಷಾಂ ಕಥಂಚನ ॥33॥

ರಾಜನಿಗೆ ಅಪಚಾರವನ್ನು ಮಾಡಿದರೆ ಬ್ರಾಹ್ಮಣನನ್ನು ದೇಶದಿಂದ ಗಡೀಪಾರು ಮಾಡಬೇಕೆಂದು ವಿಧಿಸಲ್ಪಡುತ್ತದೆ. ಅವರಿಗೆ ಎಂದೂ ದೇಹದಂಡನೆಯನ್ನು ಉಂಟು ಮಾಡಬಾರದು.
ದಯಿತಾಶ್ಚ ನರಾಸ್ತೇ ಸ್ಯುರ್ನಿತ್ಯಂ ಪುರುಷಸತ್ತಮ |
ನ ಕೋಶಃ ಪರಮೋ ಹ್ಯನ್ಯೋ ರಾಜ್ಞಾಂ ಪುರುಷಸಂಚಯಾತ್ ||34||
ಎಲೈ ಪುರುಷಶ್ರೇಷ್ಠನೇ! ಬ್ರಾಹ್ಮಣರು ನಿತ್ಯವೂ ರಾಜನಿಗೆ ಪ್ರಿಯರಾದವ- ರಾಗಿರಬೇಕು. ರಾಜರಿಗೆ ತಮ್ಮಲ್ಲಿ ಪ್ರೀತಿಯುಳ್ಳ ಪುರುಷರನ್ನು ಸಂಗ್ರಹಿಸುವುದಕ್ಕಿಂತ ಶ್ರೇಷ್ಠವಾದ ಇನ್ನೊಂದು ಕೋಶವು ಇರುವುದಿಲ್ಲ.
ದುರ್ಗೇಷು ಚ ಮಹಾರಾಜ ಷಟ್ಸು ಯೇ ಶಾಸ್ತ್ರನಿಶ್ಚಿತಾಃ |
ಸರ್ವೇಷು ತೇಷು ಮನ್ಯಂತೇ ನರದುರ್ಗಂ ಸುದುಸ್ತರಮ್ ||35||
ಎಲೈ ಮಹಾರಾಜನೇ! ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ ಎಂಬ ಆರು ದುರ್ಗಗಳಿಗಿಂತಲೂ ದಾಟಲು ಅಸಾಧ್ಯವಾದ ಸೇನಾರೂಪವಾದ ಏಳನೆಯ ನರದುರ್ಗವು ಅತ್ಯಂತ ಶ್ರೇಷ್ಠವಾದುದೆಂದು ತಿಳಿಯುತ್ತಾರೆ.
ತಸ್ಮಾನ್ನಿತ್ಯಂ ದಯಾ ಕಾರ್ಯಾ ಚಾತುರ್ವರ್ಣ್ಯೇ ವಿಪಶ್ಚಿತಾ |
ಧರ್ಮಾತ್ಮಾ ಸತ್ಯವಾಕ್ ಚೈವ ರಾಜಾ ರಂಜಯತಿ ಪ್ರಜಾಃ ||36||
ಆದ್ದರಿಂದ ವಿವೇಕಿಯಾದ ರಾಜನು ನಾಲ್ಕುವರ್ಣದವರ ಮೇಲೆಯೂ ಯಾವಾಗಲೂ ದಯೆಯನ್ನು ತೋರಿಸಬೇಕು. ಧರ್ಮಾತ್ಮನೂ ಸತ್ಯವಚನನೂ ಆದ ರಾಜನು ಪ್ರಜೆಗಳನ್ನು ರಂಜಿಸುತ್ತಾನೆ.
ನ ಚ ಕ್ಷಾಂತೇನ ತೇ ಭಾವ್ಯಂ ನಿತ್ಯಂ ಪುರುಷಸತ್ತಮ |
ಸುಧರ್ಷೋ ಹಿ ಮೃದೂ ರಾಜಾ ಕ್ಷಮಾವಾನಿವ ಕುಂಜರಃ ||37||
ಎಲೈ ಪುರುಷಶ್ರೇಷ್ಠನೇ! ನೀನು ಯಾವಾಗಲೂ ಬಹಳ ಮೃದುವಾಗಿರಬಾರದು. ಮೃದುವಾಗಿರುವ ರಾಜನು ಶಾಂತವಾದ ಆನೆಯಂತೆ ಸುಲಭವಾಗಿ ಅವಮಾನ- ಗೊಳಿಸಲ್ಪಡುತ್ತಾನೆ.
ಬಾರ್ಹಸ್ಪತ್ಯೇ ಚ ಶಾಸ್ತ್ರೇ ವೈ ಶ್ಲೋಕೋ ವೈ ಗೀಯತೇ ಪುರಾ |
ಅಸ್ಮಿನ್ನರ್ಥೇ ಮಹಾರಾಜ ತನ್ಮೇ ನಿಗದತಃ ಶೃಣು ||38||
ಎಲೈ ಮಹಾರಾಜನೇ! ಬೃಹಸ್ಪತ್ಯಾಚಾರ್ಯರು ರಚಿಸಿದ ಶಾಸ್ತ್ರದಲ್ಲಿ ಹಿಂದೆ ಈ ವಿಷಯದಲ್ಲಿ ಒಂದು ಶ್ಲೋಕವು ಹಾಡಲ್ಪಡುತ್ತದೆ. ನಾನು ಹೇಳುವ ಆ ಶ್ಲೋಕವನ್ನು ನೀನು ಕೇಳುವವನಾಗು.
ಕ್ಷಮಮಾಣಂ ನೃಪಂ ನಿತ್ಯಂ ನೀಚಃ ಪರಿಭವೇಜ್ಜನಃ |
ಹಸ್ತಿಯಂತಾ ಗಜಸ್ಯೇವ ಶಿರ ಏವಾರುರುಕ್ಷತಿ ||39||
ಯಾವಾಗಲೂ ಕ್ಷಮಾಶೀಲನಾದ ರಾಜನನ್ನು ನೀಚರಾದ ಜನರು ಅವಮಾನ- ಗೊಳಿಸುತ್ತಾರೆ. ಮಾವುತನು ಆನೆಯ ಶಿರಸ್ಸನ್ನು ಏರಿದಂತೆ ಅವರು ರಾಜನ ಶಿರಸ್ಸನ್ನು ಏರಲು ಬಯಸುತ್ತಾರೆ.
ತಸ್ಮಾನ್ನೈವ ಮೃದುರ್ನಿತ್ಯಂ ತೀಕ್ಷ್ಣೋ ವಾಪಿ ಭವೇನ್ನೃಪಃ |
ವಸಂತೇಽರ್ಕ ಇವ ಶ್ರೀಮಾನ್ನ ಶೀತೋ ನ ಚ ಘರ್ಮದಃ ||40||
ಆದ್ದರಿಂದ ರಾಜನಾದವನು ಬಹಳ ಮೃದುವೂ ಆಗಿರಬಾರದು; ಬಹಳ ತೀಕ್ಷ್ಣನೂ ಆಗಿರಬಾರದು. ವಸಂತಕಾಲದ ಸೂರ್ಯನಂತೆ ಸಂಪದ್ಯುಕ್ತನಾಗಿ ಬಹಳ ಶೀತನಾಗದೇ ಬಹಳ ತಾಪವನ್ನೂ ಕೊಡದೇ ಇರುವವನಾಗಬೇಕು.
ಪ್ರತ್ಯಕ್ಷೇಣಾನುಮಾನೇನ ತಥೌಪಮ್ಯೋಪದೇಶತಃ |
ಪರೀಕ್ಷ್ಯಾಸ್ತೇ ಮಹಾರಾಜ ಸ್ವೇ ಪರೇ ಚೈವ ಸರ್ವದಾ ||41||
ಎಲೈ ಮಹಾರಾಜನೇ! ನಿನ್ನವರನ್ನೂ ಮತ್ತು ಶತ್ರುವರ್ಗದವರನ್ನೂ ಪ್ರತ್ಯಕ್ಷ- ದಿಂದಲೂ ಅನುಮಾನದಿಂದಲೂ ಮತ್ತು ಆಪ್ತರ ಉಪದೇಶಗಳಿಂದಲೂ ಯಾವಾ- ಗಲೂ ಪರೀಕ್ಷಿಸುತ್ತಿರಬೇಕು.
ವ್ಯಸನಾನಿ ಚ ಸರ್ವಾಣಿ ತ್ಯಜೇಥಾ ಭೂರಿದಕ್ಷಿಣ |
ನ ಚೈತಾನಿ ಪ್ರಯುಂಜೀತ ಸಂಗಂ ತು ಪರಿವರ್ಜಯೇತ್ ||42||
ಎಲೈ ಬಹಳ ದಕ್ಷಿಣೆಯನ್ನು ಕೊಡುವವನೇ! ಎಲ್ಲ ಚಟಗಳನ್ನೂ ಪರಿತ್ಯಜಿಸ- ಬೇಕು. ಚಟಗಳಲ್ಲಿ ಆಸಕ್ತನಾಗಬಾರದು. ಎಲ್ಲರ ಸಹವಾಸವನ್ನು ಪರಿತ್ಯಜಿಸಬೇಕು.
ನಿತ್ಯಂ ಹಿ ವ್ಯಸನೀ ಲೋಕೇ ಪರಿಭೂತೋ ಭವತ್ಯುತ |
ಉದ್ವೇಜಯತಿ ಲೋಕಂ ಚಾಪ್ಯತಿದ್ವೇಷೀ ಮಹೀಪತಿಃ ||43||
ಚಟಗಳಿಗೆ ಬಲಿಯಾದ ರಾಜನು ಲೋಕದಲ್ಲಿ ಪರಾಭವವನ್ನು ಹೊಂದುತ್ತಾನೆ. ಲೋಕದ ಜನರನ್ನು ಬಹಳವಾಗಿ ದ್ವೇಷಿಸಿ, ಅವರಿಗೆ ಭಯವನ್ನುಂಟು ಮಾಡುತ್ತಾನೆ.
ಭವಿತವ್ಯಂ ಸದಾ ರಾಜ್ಞಾ ಗರ್ಭಿಣೀಸಹಧರ್ಮಿಣಾ |
ಕಾರಣಂ ಚ ಮಹಾರಾಜ ಶೃಣು ಯೇನೇದಮಿಷ್ಯತೇ ||44||
ರಾಜನು ಯಾವಾಗಲೂ ಗರ್ಭಿಣಿಯ ಧರ್ಮವನ್ನು ಆಚರಿಸಬೇಕು. ಎಲೈ ಮಹಾರಾಜನೇ! ನಾನು ಹೀಗೆ ಹೇಳುವುದಕ್ಕೆ ಕಾರಣವನ್ನು ಕೇಳು.
ಯಥಾ ಹಿ ಗರ್ಭಿಣೀ ಹಿತ್ವಾ ಸ್ವಂ ಪ್ರಿಯಂ ಮನಸೋಽನುಗಮ್ |
ಗರ್ಭಸ್ಯ ಹಿತಮಾಧತ್ತೇ ತಥಾ ರಾಜ್ಞಾಪ್ಯಸಂಶಯಮ್ ||45||
ಹೇಗೆ ಗರ್ಭಿಣಿಯು ತನ್ನ ಮನಸ್ಸಿಗೆ ಪ್ರಿಯವಾದುದನ್ನು ಬಿಟ್ಟು ಗರ್ಭಕ್ಕೆ ಹಿತ- ವಾದುದನ್ನೇ ಮಾಡುತ್ತಾಳೆಯೋ ಅದರಂತೆ ರಾಜನೂ ನಿಸ್ಸಂಶಯವಾಗಿ ತನ್ನ ಪ್ರಿಯವನ್ನು ಬಿಟ್ಟು ಪ್ರಜೆಗಳಿಗೆ ಹಿತವನ್ನುಂಟು ಮಾಡಬೇಕು.

ವರ್ತಿತವ್ಯಂ ಕುರುಶ್ರೇಷ್ಠ ನಿತ್ಯಂ ಧರ್ಮಾನುವರ್ತಿನಾ |
ಸ್ವಂ ಪ್ರಿಯಂ ಸಮಭಿತ್ಯಜ್ಯ ಯದ್ಯಲ್ಲೋಕಹಿತಂ ಭವೇತ್ ॥46॥
ಎಲೈ ಕುರುಶ್ರೇಷ್ಠನೇ! ರಾಜನು ಯಾವಾಗಲೂ ಧರ್ಮವನ್ನು ಅನುಸರಿಸುವ- ವನಾಗಬೇಕು. ತನ್ನ ಪ್ರಿಯವನ್ನು ಪರಿತ್ಯಜಿಸಿ ಲೋಕದ ಹಿತವನ್ನು ಸಾಧಿಸುವವ- ನಾಗಬೇಕು.
ನ ಸಂತ್ಯಾಜ್ಯಂ ಚ ತೇ ಧೈರ್ಯಂ ಕದಾಚಿದಪಿ ಪಾಂಡವ |
ಧೀರಸ್ಯ ಸ್ಪಷ್ಟದಂಡಸ್ಯ ನ ಹ್ಯಾಜ್ಞಾ ಪ್ರತಿಹನ್ಯತೇ ॥47॥
ಎಲೈ ಪಾಂಡವನೇ! ಧೈರ್ಯವನ್ನು ಎಂದೂ ನೀನು ಕಳೆದುಕೊಳ್ಳಬಾರದು.
ಧೀರನಾದ ಮತ್ತು ಸ್ಪಷ್ಟವಾಗಿ ಶಿಕ್ಷೆಯನ್ನು ವಿಧಿಸುವ ರಾಜನ ಆಜ್ಞೆಯು ತಿರಸ್ಕೃತ- ವಾಗುವುದಿಲ್ಲ.
ಪರಿಹಾಸಶ್ಚ ಭೃತ್ಯೈಸ್ತೇ ನ ನಿತ್ಯಂ ದದತಾಂವರ |
ಕರ್ತವ್ಯೋ ರಾಜಶಾರ್ದೂಲ ದೋಷಮತ್ರ ಹಿ ಮೇ ಶೃಣು ॥48॥
ಎಲೈ ದಾನಮಾಡುವವರಲ್ಲಿ ಶ್ರೇಷ್ಠನೇ! ಭೃತ್ಯರ ಜೊತೆಯಲ್ಲಿ ಯಾವಾಗಲೂ ಹಾಸ್ಯವನ್ನು ಮಾಡಿಕೊಂಡಿರಬಾರದು. ಎಲೈ ರಾಜಶಾರ್ದೂಲನೇ! ಹಾಗೆ ಮಾಡಿ- ದರೆ ಉಂಟಾಗುವ ದೋಷವನ್ನು ನನ್ನಿಂದ ಕೇಳು.
ಅವಮನ್ಯಂತಿ ಭರ್ತಾರಂ ಸಂಹರ್ಷಾದುಪಜೀವಿನಃ |
ಸ್ವೇ ಸ್ಥಾನೇ ನ ಚ ತಿಷ್ಠಂತಿ ಲಂಘಯಂತಿ ಹಿ ತದ್ವಚಃ ॥49॥
ರಾಜನನ್ನು ಉಪಜೀವಿಸಿ ಬದುಕುವ ಭೃತ್ಯರು ಹಾಸ್ಯದಿಂದುಂಟಾದ ಸಂತೋ- ಷದಿಂದ ಸ್ವಾಮಿಯಾದ ರಾಜನನ್ನು ಅವಮಾನ ಮಾಡುತ್ತಾರೆ. ತಮ್ಮ ತಮ್ಮ ಸ್ಥಾನ- ಗಳಲ್ಲಿ ಅವರು ಇರುವುದಿಲ್ಲ. ಮತ್ತು ರಾಜನ ಆಜ್ಞೆಯನ್ನು ಮೀರುತ್ತಾರೆ.
ಪ್ರೇಷ್ಯಮಾಣಾ ವಿಕಲ್ಪಂತೇ ಗುಹ್ಯಂ ಚಾಪ್ಯನುಯುಂಜತೇ |
ಅಯಾಚ್ಯಂ ಚೈವ ಯಾಚಂತೇಽಭೋಜ್ಯಾನ್ಯಾಹಾರಯಂತಿ ಚ ॥50॥
ಒಂದು ಕಾರ್ಯಕ್ಕಾಗಿ ಕಳುಹಿಸಿದರೆ ಅನೇಕ ಪ್ರಶ್ನೆಗಳನ್ನು ಮಾಡುತ್ತಾರೆ. ರಹಸ್ಯ -ವಾದುದನ್ನು ಕೇಳುತ್ತಾರೆ. ಬೇಡಬಾರದ ವಸ್ತುಗಳನ್ನು ಬೇಡುತ್ತಾರೆ. ರಾಜನು ತಿನ್ನ ಬಾರದ ವಸ್ತುಗಳನ್ನು ತಂದು ಕೊಡುತ್ತಾರೆ.
ಕ್ರುದ್ಧ್ಯಂತಿ ಪರಿದೀಪ್ಯಂತಿ ಭೂತಿಮಧ್ಯಾಸತೇಽಸ್ಯ ಚ |
ಉತ್ಕೋಚೈರ್ವಂಚನಾಭಿಶ್ಚ ಕಾರ್ಯಾಣ್ಯನುವಿಹಂತಿ ಚ ॥51॥
ಕೋಪಗೊಳ್ಳುತ್ತಾರೆ; ಕೋಪದಿಂದ ಜ್ವಲಿಸುತ್ತಾರೆ; ರಾಜನ ವೈಭವವನ್ನು ಉಪ- ಯೋಗಿಸುತ್ತಾರೆ; ನಿಂದಾ ಮತ್ತು ವಂಚನೆಗಳಿಂದ ರಾಜನ ಕಾರ್ಯಗಳನ್ನು ನಾಶ ಮಾಡುತ್ತಾರೆ.
ಜರ್ಜರಂ ಚಾಸ್ಯ ವಿಷಯಂ ಕುರ್ವಂತಿ ಪ್ರತಿರೂಪಕೈಃ |
ಸ್ತ್ರೀರಕ್ಷಿಭಿಶ್ಚ ಸಜ್ಜಂತೇ ತುಲ್ಯವೇಷಾ ಭವಂತಿ ಚ ॥52॥
ರಾಜನ ಪ್ರತಿರೂಪಗಳನ್ನು ನಿರ್ಮಿಸಿ ರಾಜ್ಯವನ್ನು ಶಿಥಿಲಗೊಳಿಸುತ್ತಾರೆ. ರಾಜನ ಸ್ತ್ರೀರಕ್ಷಕರಾದ ನಪುಂಸಕರ ಜೊತೆಯಲ್ಲಿ ಕಂಚುಕಾದಿಗಳನ್ನು ಧರಿಸಿ ಸಮಾನವೇಷ- ವುಳ್ಳವರಾಗಿ ಬೆರೆಯುತ್ತಾರೆ.
ವಾತಂ ನಿಷ್ಠೀವನಂ ಚೈವ ಕುರ್ವತೇ ಚಾಸ್ಯ ಸನ್ನಿಧೌ |
ನಿರ್ಲಜ್ಜಾ ನರಶಾರ್ದೂಲ ವ್ಯಾಹರಂತಿ ಚ ದುರ್ವಚಃ ॥53॥
ರಾಜನೆದುರಿನಲ್ಲಿ ಉಗುಳುವುದು, ವಾಯುವನ್ನು ಬಿಡುವುದು ಮೊದಲಾದ- ವುಗಳನ್ನು ಮಾಡುತ್ತಾರೆ. ಎಲೈ ನರಶಾರ್ದೂಲನೇ! ಲಜ್ಜಾಹೀನರಾಗಿ ದುರ್ವಚನ- ಗಳನ್ನು ಆಡುತ್ತಾರೆ.
ಹಯಂ ವಾ ದಂತಿನಂ ವಾಪಿ ರಥಂ ನೃಪತಿಸಮ್ಮತಮ್ |
ಅಧಿರೋಹಂತ್ಯನಾದೃತ್ಯ ಹರ್ಷಲೇ ಪಾರ್ಥಿವೇ ಮೃದೌ ॥54॥
ರಾಜನು ಹರ್ಷಶೀಲನಾಗಿ ಮೃದುವಾಗಿದ್ದರೆ ಭೃತ್ಯರು ರಾಜನನ್ನು ಲೆಕ್ಕಿಸದೆ ಅವನಿಗೆ ಯೋಗ್ಯವಾದ ಯುದ್ಧದ ಅಶ್ವವನ್ನು ಅಥವಾ ಗಜವನ್ನು ಅಥವಾ ರಥವನ್ನು ಏರುತ್ತಾರೆ.
ಇದಂ ತೇ ದುಷ್ಕರಂ ರಾಜನ್ನಿದಂ ತೇ ದುರ್ವಿಚೇಷ್ಟಿತಮ್ |
ಇತ್ಯೇವಂ ಸುಹೃದೋ ನಾಮ ಬ್ರುವಂತಿ ಪರಿಷದ್ಗತಾಃ ॥55॥
``ರಾಜನೇ! ಇದು ನಿನ್ನಿಂದ ಅಸಾಧ್ಯವಾದ ಕಾರ್ಯ, ರಾಜನೇ! ಇದು ನೀನು ಮಾಡಿದ ದುಷ್ಟಕಾರ್ಯ'' ಎಂದು ಸುಹೃಜ್ಜನರಂತೆ ಸಭೆಯಲ್ಲಿ ರಾಜನಿಗೆ ಹೇಳು- ತ್ತಾರೆ.
ಕ್ರುದ್ಧೇ ಚಾಸ್ಮಿನ್ ಹಸಂತ್ಯೇವ ನ ಚ ಹೃಷ್ಯಂತಿ ಪೂಜಿತಾಃ |
ಸಂಘರ್ಷಶೀಲಾಶ್ಚ ಸದಾ ಭವಂತ್ಯನ್ಯೋನ್ಯಕಾರಣಾತ್ ॥56॥
ರಾಜನು ಕ್ರುದ್ಧನಾದರೆ ನಗುತ್ತಾರೆ. ರಾಜನು ಅವರನ್ನು ಪೂಜಿಸಿದರೆ ಸಂತೋಷ ಪಡುವುದಿಲ್ಲ. ಅವರು ತಮ್ಮ ತಮ್ಮಲ್ಲಿಯೇ ಪರಸ್ಪರವಾಗಿ ಕಲಹಶೀಲರಾಗುತ್ತಾರೆ.
ವಿಸ್ರಂಸಯಂತಿ ಮಂತ್ರಂ ಚ ವಿವೃಣ್ವಂತಿ ಚ ದುಷ್ಕೃತಮ್ |
ಲೀಲಯಾ ಚೈವ ಕುರ್ವಂತಿ ಸಾವಜ್ಞಾಸ್ತಸ್ಯ ಶಾಸನಮ್ |
ರಾಜನ ಮಂತ್ರಾಲೋಚನೆಯನ್ನು ಶಿಥಿಲಗೊಳಿಸುತ್ತಾರೆ. ರಾಜನು ಯಾವುದಾ- ದರೂ ದುಷ್ಕಾರ್ಯವನ್ನು ಮಾಡಿದ್ದರೆ ಅದನ್ನು ಬಹಿರಂಗಪಡಿಸುತ್ತಾರೆ. ರಾಜನ ಶಾಸನವನ್ನು ವಿನೋದದಿಂದ ಅಥವಾ ತಿರಸ್ಕಾರದಿಂದ ಅನುಷ್ಠಾನ ಮಾಡುತ್ತಾರೆ.
ಅಲಂಕರಣಭೋಜ್ಯಂ ಚ ತಥಾ ಸ್ನಾನಾನುಲೇಪನಮ್ ॥57॥
ಹೇಲಮಾನಾ ನರವ್ಯಾಘ್ರ ಸ್ವಸ್ಥಾಸ್ತಸ್ಯೋಪಶೃಣ್ವತೇ |

ನಿಂದಂತಿ ಸ್ಥಾನಧೀಕಾರಾನ್ ಸಂತ್ಯಜತಿ ಚ ಭಾರತ ||58||
ಎಲೈ ನರವ್ಯಾಘ್ರನೇ! ರಾಜನ ಅಲಂಕಾರಗಳನ್ನು ಅವನ ಭೋಜ್ಯವಸ್ತುಗಳನ್ನು ಅವನ ಸ್ನಾನಾನುಲೇಪನಗಳನ್ನು ರಾಜನನ್ನು ಅವಹೇಳನ ಮಾಡುತ್ತಾ ನಿಶ್ಚಿಂತೆಯಾಗಿ ಉಪಯೋಗಿಸುತ್ತಾರೆ. ಎಲೈ ಭಾರತನೇ! ತಮಗೆ ಕೊಟ್ಟ ಸ್ಥಾನವನ್ನು ತಮ್ಮ ಯೋಗ್ಯತೆಗೆ ಸಾಲದೆಂದು ನಿಂದಿಸುತ್ತಾರೆ. ಸಮಯದಲ್ಲಿ ರಾಜನನ್ನು ತೊರೆಯು- ತ್ತಾರೆ.
ನ ವೃತ್ತ್ಯಾ ಪರಿತುಷ್ಯಂತಿ ರಾಜದೇಯಂ ಹರಂತಿ ಚ |
ಕ್ರೀಡಿತುಂ ತೇನ ಚೇಚ್ಛಂತಿ ಸಸೂತ್ರೇಣೇವ ಪಕ್ಷಿಣಾ ||59||
ತಮಗೆ ಕೊಡುವ ವೇತನದಿಂದ ಸಂತೋಷ ಪಡುವುದಿಲ್ಲ. ರಾಜನಿಗೆ ಸಲ್ಲ- ಬೇಕಾದುದನ್ನು ಅಪಹರಿಸುತ್ತಾರೆ. ದಾರವನ್ನು ಕಟ್ಟಿದ ಪಕ್ಷಿಯಂತೆ ರಾಜನ ಜೊತೆ- ಯಲ್ಲಿ ಆಡಲು ಬಯಸುತ್ತಾರೆ. `ರಾಜನು ನಾವು ಹೇಳಿದಂತೆ ಕೇಳುತ್ತಾನೆ' ಎಂದು ಲೋಕದ ಜನರಲ್ಲಿ ಪ್ರಚಾರ ಮಾಡುತ್ತಾರೆ.
ಏತೇ ಚೈವಾಪರೇ ಚೈವ ದೋಷಾಃ ಪ್ರಾದುರ್ಭವಂತ್ಯುತ |
ನೃಪತೌ ಮಾರ್ದವೋಪೇತೇ ಹರ್ಷಲೇ ಚ ಯುಧಿಷ್ಠಿರ ||60||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಪಂಚಾಶೋಽಧ್ಯಾಯಃ ||56||
ಎಲೈ ಯುಧಿಷ್ಠಿರನೇ! ರಾಜನು ಮೃದುವಾಗಿ ಹರ್ಷಶೀಲನಾಗಿದ್ದರೆ ಇವು ಮತ್ತು ಇನ್ನೂ ಅನೇಕ ದೋಷಗಳು ಉಂಟಾಗುತ್ತವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 56ನೆಯ ಅಧ್ಯಾಯವು ಮುಗಿಯಿತು
0

57. ಐವತ್ತೇಳನೆಯ ಅಧ್ಯಾಯ
ರಾಜಧರ್ಮಕಥನ
ಭೀಷ್ಮ
ನಿತ್ಯೋದ್ಯುಕ್ತೇನ ವೈ ರಾಜ್ಞಾ ಭವಿತವ್ಯಂ ಯುಧಿಷ್ಠಿರ |
ಪ್ರಶಾಮ್ಯತೇ ಚ ರಾಜಾ ಹಿ ನಾರೀವೋದ್ಯಮವರ್ಜಿತಃ ||1||
ಭೀಷ್ಮರು ಎಲೈ ಯುಧಿಷ್ಠಿರನೇ! ರಾಜನು ಯಾವಾಗಲೂ ಉದ್ಯಮಶೀಲ- ನಾಗಬೇಕು. ಪ್ರಯತ್ನಶೀಲನಲ್ಲದ ರಾಜನು ಹೆಂಗಸಿನಂತೆ ವಿನಾಶವನ್ನು ಹೊಂದು- ತ್ತಾನೆ.
ಭಗವಾನುಶನಾ ಚಾಹ ಶ್ಲೋಕಮತ್ರ ವಿಶಾಂಪತೇ |
ತಮಿಹೈಕಮನಾ ರಾಜನ್ ಗದತಸ್ತ್ವಂ ನಿಬೋಧ ಮೇ ||2||
ಎಲೈ ರಾಜನೇ! ಪೂಜ್ಯರಾದ ಶುಕ್ರಾಚಾರ್ಯರು ಈ ವಿಷಯದಲ್ಲಿ ಒಂದು ಶ್ಲೋಕವನ್ನು ಹೇಳಿದ್ದಾರೆ. ರಾಜನೇ ನಾನು ಹೇಳುವ ಆ ಶ್ಲೋಕವನ್ನು ನೀನು ಏಕಾಗ್ರನಾಗಿ ಕೇಳು.
ದ್ವಾವೇತೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ |
ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ||3||
ಶತ್ರುಗಳಿಗೆ ವಿರೋಧ ಮಾಡದಿರುವ ರಾಜ ಮತ್ತು ಪ್ರವಾಸ ಹೋಗದಿರುವ ಬ್ರಾಹ್ಮಣ ಇವರಿಬ್ಬರನ್ನು ಸರ್ಪವು ಮೂಷಿಕಗಳನ್ನು ನುಂಗುವಂತೆ ಭೂಮಿಯು ನುಂಗುತ್ತದೆ.
ತದೇತನ್ನರಶಾರ್ದೂಲ ಹೃದಿ ತ್ವಂ ಕರ್ತುಮರ್ಹಸಿ |
ಸಂಧೇಯಾನಪಿ ಸಂಧತ್ಸ್ವ ವಿರೋಧ್ಯಾಂಶ್ಚ ವಿರೋಧಯ ||4||
ಎಲೈ ನರಶಾರ್ದೂಲನೇ! ಇದನ್ನು ನೀನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಸಂಧಿ- ಯನ್ನು ಮಾಡಿಕೊಳ್ಳಬೇಕಾದವರ ಜೊತೆಯಲ್ಲಿ ಸಂಧಿಯನ್ನು ಮಾಡು. ವಿರೋಧ -ವನ್ನು ಮಾಡಬೇಕಾದವರ ಜೊತೆಯಲ್ಲಿ ವಿರೋಧವನ್ನು ಮಾಡು.
ಸಪ್ತಾಂಗೇ ಯಶ್ಚ ತೇ ರಾಜ್ಯೇ ವೈಪರೀತ್ಯಂ ಸಮಾಚರೇತ್ |
ಗುರುರ್ವಾ ಯದಿ ವಾ ಮಿತ್ರಂ ಪ್ರತಿಹಂತವ್ಯ ಏವ ಸಃ ||5||
ಸಪ್ತಾಂಗಗಳುಳ್ಳ ನಿನ್ನ ರಾಜ್ಯದಲ್ಲಿ ಯಾರಾದರೂ ವಿಪರೀತವಾಗಿ ನಡೆದು- ಕೊಂಡರೆ ಅವನು ಗುರುವಾಗಲೀ, ಅಥವಾ ಮಿತ್ರನಾಗಲೀ ಅದನ್ನು ಪರಿಹರಿಸಲೇ ಬೇಕು.
ಮರುತ್ತೇನ ಹಿ ರಾಜ್ಞಾಽಯಂ ಗೀತಃ ಶ್ಲೋಕಃ ಪುರಾತನಃ |
ರಾಜ್ಯಾಧಿಕಾರೇ ರಾಜೇಂದ್ರ ಬೃಹಸ್ಪತಿಮತಃ ಪುರಾ ||6||
ಎಲೈ ರಾಜೇಂದ್ರನೇ! ಬೃಹಸ್ಪತಿಗೆ ಸಮ್ಮತನಾದ ಮರುತ್ತನೆಂಬ ರಾಜನು ರಾಜ್ಯಪಾಲನೆಯ ವಿಷಯದಲ್ಲಿ ಹಾಡಿದ ಒಂದು ಪುರಾತನವಾದ ಈ ಶ್ಲೋಕವನ್ನು ಕೇಳು.
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ |
ಉತ್ಪಥಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ ||7||
ಗುರುವಾದರೂ ಸಹ ಅಹಂಕಾರದಿಂದ ಕೂಡಿ ಕಾರ್ಯಾಕಾರ್ಯಗಳನ್ನು ತಿಳಿ- ಯದೆ ದುರ್ಮಾರ್ಗದಲ್ಲಿ ಪ್ರವೃತ್ತನಾದರೆ ಅವನ ಪರಿತ್ಯಾಗವು ವಿಹಿತವಾಗುತ್ತದೆ.
ಬಾಹೋಃ ಪುತ್ರೇಣ ರಾಜ್ಞಾ ಚ ಸಗರೇಣೇಹ ಧೀಮತಾ |
ಅಸಮಂಜಾಃ ಸುತೋ ಜ್ಯೇಷ್ಠಸ್ತ್ಯಕ್ತಃ ಪೌರಹಿತೈಷಿಣಾ ||8||

ಬಾಹುಕನ ಪುತ್ರನಾದ ಮೇಧಾವಿಯಾದ ಸಗರರಾಜನು ಪ್ರಜೆಗಳ ಹಿತವನ್ನು ಬಯಸಿ ತನ್ನ ಜ್ಯೇಷ್ಠಪುತ್ರನಾದ ಅಸಮಂಜನನ್ನು ಪರಿತ್ಯಜಿಸಿದನು.
ಅಸಮಂಜಾಃ ಸರವ್ಯಾಂ ಪ್ರಾಕ್ ಪೌರಾಣಾಂ ಬಾಲಕಾನ್ ನೃಪ |
ನ್ಯಮಜ್ಜಯದತಃ ಪಿತ್ರಾ ನಿರ್ಭರ್ತ್ಸ್ಯ ಸ ವಿವಾಸಿತಃ ॥9॥
ಎಲೈ ರಾಜನೇ! ಹಿಂದೆ ಅಸಮಂಜನು ಪ್ರಜೆಗಳ ಬಾಲಕರನ್ನು ಹಿಡಿದು ಸರಯೂ ನದಿಯಲ್ಲಿ ಮುಳುಗಿಸುತ್ತಿದ್ದನು. ಆದ್ದರಿಂದ ತಂದೆಯಾದ ಸಗರನು ಅವನನ್ನು ಗದರಿಸಿ ಗಡೀಪಾರು ಮಾಡಿದನು.
ಋಷೀಣೋದ್ದಾಲಕೇನಾಪಿ ಶ್ವೇತಕೇತುರ್ಮಹಾತಪಾಃ |
ಮಿಥ್ಯಾ ವಿಪ್ರಾನುಪಚರನ್ ಸಂತ್ಯಕ್ತೋ ದಯಿತಃ ಸುತಃ ॥10॥
ಉದ್ದಾಲಕ ಋಷಿಗಳೂ ಕೂಡ ತಮ್ಮ ಪ್ರಿಯಪುತ್ರನಾದ ಮಹಾತಪಸ್ವಿಯಾದ ಶ್ವೇತಕೇತುವು ಬ್ರಾಹ್ಮಣರನ್ನು ಸುಳ್ಳಾಗಿ ಉಪಚರಿಸುತ್ತಿರಲು ಅವನನ್ನು ಪರಿತ್ಯಜಿಸಿ- ದರು.
ಲೋಕರಂಜನಮೇವಾತ್ರ ರಾಜ್ಞಾಂ ಧರ್ಮಃ ಸನಾತನಃ |
ಸತ್ಯಸ್ಯ ರಕ್ಷಣಂ ಚೈವ ವ್ಯವಹಾರೇಷು ಚಾರ್ಜವಮ್ ॥11॥
ಲೋಕವನ್ನು ಸಂತೋಷಪಡಿಸುವುದೇ ರಾಜರ ಸನಾತನವಾದ ಧರ್ಮ. ಸತ್ಯದ ರಕ್ಷಣೆ ಮತ್ತು ವ್ಯವಹಾರಗಳಲ್ಲಿ ಕಪಟವಿಲ್ಲದಿರುವಿಕೆ ಇವು ರಾಜನ ಕರ್ತವ್ಯಗಳು.
ನ ಹಿಂಸ್ಯಾತ್ ಪರವಿತ್ತಾನಿ ದೇಯಂ ಕಾಲೇ ಚ ದಾಪಯೇತ್ |
ವಿಕ್ರಾಂತಃ ಸತ್ಯವಾಕ್ ಕ್ಷಾಂತೋ ನೃಪೋ ನ ಚ್ಯವತೇ ಪಥಃ ॥12॥
ಪ್ರಜೆಗಳ ಧನಕ್ಕೆ ಹಿಂಸೆಯನ್ನುಂಟು ಮಾಡಬಾರದು. ಕೊಡಬೇಕಾದ ಧನವನ್ನು ಯೋಗ್ಯವಾದ ಕಾಲದಲ್ಲಿ ಕೊಡಿಸಬೇಕು. ಪರಾಕ್ರಮಶಾಲಿಯೂ ಸತ್ಯವಚನನೂ ಕ್ಷಮಾವಂತನೂ ಆದ ರಾಜನು ಸನ್ಮಾರ್ಗದಿಂದ ಚ್ಯುತನಾಗುವುದಿಲ್ಲ.
ಗುಪ್ತಮಂತ್ರೋ ಜಿತಕ್ರೋಧೋ ಶಾಸ್ತ್ರಾರ್ಥಗತನಿಶ್ಚಯಃ |
ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಸತತಂ ರತಃ ॥13॥
ತ್ರಯ್ಯಾ ಸಂವೃತರಂಧ್ರಶ್ಚ ರಾಜಾ ಭವಿತುಮರ್ಹತಿ |
ವೃಜಿನಸ್ಯ ನರೇಂದ್ರಾಣಾಂ ನಾನ್ಯತ್ ಸಂವರಣಾತ್ ಪರಮ್ ॥14॥
ತನ್ನ ಮಂತ್ರಾಲೋಚನೆಯನ್ನು ರಹಸ್ಯವಾಗಿಟ್ಟು, ಕ್ರೋಧವನ್ನು ಜಯಿಸಿ, ಶಾಸ್ತ್ರಕ್ಕೆ ಅನುಗುಣವಾಗಿ ನಿರ್ಧಾರವನ್ನು ಮಾಡಿ ಧರ್ಮಾರ್ಥಕಾಮಮೋಕ್ಷಗಳಲ್ಲಿ ಸತತವಾಗಿ ರತನಾಗಿ ತನ್ನ ದೋಷಗಳನ್ನು ವೇದೋಕ್ತಮಾರ್ಗದಿಂದ ತಿದ್ದಿಕೊಂಡ ಅವನು ರಾಜನಾಗಲು ಅರ್ಹನಾಗುತ್ತಾನೆ. ರಾಜರಿಗೆ ತಪ್ಪುಗಳನ್ನು ಮುಚ್ಚಿಕೊಳ್ಳುವು- ದಕ್ಕಿಂತ ಶ್ರೇಷ್ಠವಾದ ಕಾರ್ಯವು ಇನ್ನೊಂದಿಲ್ಲ.
ಚಾತುರ್ವರ್ಣ್ಯಸ್ಯ ಧರ್ಮಾಶ್ಚ ರಕ್ಷಿತವ್ಯಾ ಮಹೀಕ್ಷಿತಾ |
ಧರ್ಮಸಂಕರರಕ್ಷಾ ಹಿ ರಾಜ್ಞಾಂ ಧರ್ಮಃ ಸನಾತನಃ ॥15॥
ರಾಜನಾದವನು ಚಾತುರ್ವರ್ಣ್ಯದ ಧರ್ಮಗಳನ್ನು ರಕ್ಷಿಸಬೇಕು. ಧರ್ಮ- ಸಂಕರವಾಗದಂತೆ ರಕ್ಷಣೆ ಮಾಡುವುದು ರಾಜರ ಸನಾತನವಾದ ಧರ್ಮ.
ನ ವಿಶ್ವಸೇಚ್ಚ ನೃಪತಿರ್ನ ಚಾತ್ಯರ್ಥಂ ನ ವಿಶ್ವಸೇತ್ |
ಷಾಡ್ಗುಣ್ಯದೋಷಾಂಶ್ಚ ನಿತ್ಯಂ ಬುದ್ಧ್ಯಾಽವಲೋಕಯೇತ್ ॥16॥
ರಾಜನಾದವನು ಯಾರಲ್ಲಿಯೂ ಬಹಳ ವಿಶ್ವಾಸವನ್ನು ಮಾಡಬಾರದು. ಬಹಳ ಅವಿಶ್ವಾಸವನ್ನೂ ಮಾಡಬಾರದು. ರಾಜ್ಯಪಾಲನೆಯ ಅಂಗವಾದ ಆರು ಗುಣಗಳು ಮತ್ತು ಅವುಗಳ ದೋಷಗಳನ್ನು ಯಾವಾಗಲೂ ಆಲೋಚಿಸುತ್ತಿರಬೇಕು.
ದ್ವಿಟ್ಛಿದ್ರದರ್ಶೀ ನೃಪತಿರ್ನಿತ್ಯಮೇವ ಪ್ರಶಸ್ಯತೇ |
ತ್ರಿವರ್ಗವಿದಿತಾರ್ಥಶ್ಚ ಯುಕ್ತಾಚಾರೋಪಧಿಶ್ಚ ಯಃ ॥17॥
ತ್ರಿವರ್ಗದ ಅರ್ಥಗಳನ್ನು ತಿಳಿದು ಒಳ್ಳೆಯ ಗೂಢಚಾರರನ್ನು ಮತ್ತು ಭೃತ್ಯ- ರನ್ನು ಹೊಂದಿದ ರಾಜನಿಗೆ ಶತ್ರುಗಳ ದೋಷವನ್ನು ನೋಡುವುದು ಯಾವಾಗಲೂ ಪ್ರಶಂಸಿಸಲ್ಪಡುತ್ತದೆ.
ಕೋಶಸ್ಯೋಪಾರ್ಜನರತಿರ್ಯಮವೈಶ್ರವಣೋಪಮಃ |
ವೇತ್ತಾ ಚ ದಶವರ್ಗಸ್ಯ ಸ್ಥಾನವೃದ್ಧಿಕ್ಷಯಾತ್ಮನಃ ॥18॥
ಕೋಶವನ್ನು ಅಭಿವೃದ್ಧಿಪಡಿಸುವುದರಲ್ಲಿ ಆಸಕ್ತಿ, ಯಮನಿಗೆ ಮತ್ತು ಕುಬೇರ- ನಿಗೆ ಸದೃಶವಾಗಿರುವುದು. ಸ್ಥಾನವೃದ್ಧಿ ಮತ್ತುಕ್ಷಯಗಳಿಗೆ ಸಂಬಂಧಿಸಿದ ಹತ್ತು ಅಂಶಗಳ ಸಮೂಹವನ್ನು ತಿಳಿಯುವುದು ರಾಜನಿಗೆ ಪ್ರಶಂಸಿಸಲ್ಪಡುತ್ತದೆ. ಸ್ಥಾನ- ವೆಂದರೆ ರಾಜ್ಯ, ಅದರ ವೃದ್ಧಿ ಎಂದರೆ ಅಭಿವೃದ್ಧಿ. ಕ್ಷಯವೆಂದರೆ ರಾಜ್ಯವಿರೋಧಿಗಳ ವಿನಾಶ. ಸ್ಥಾನವೆಂದರೆ ಧನ, ಅದರ ವೃದ್ಧಿಯೆಂದರೆ ಕೋಶದ ದೃಢೀಕರಣ. ಕ್ಷಯ- ವೆಂದರೆ ಕೋಶಕ್ಕೆ ವಿರುದ್ಧರಾದ ಚೋರಾದಿಗಳ ವಿನಾಶ. ಕ್ಷಯವೆಂದರೆ ಶತ್ರುಕ್ಷಯ. ಶತ್ರುಗಳ ಸ್ಥಾನಕ್ಷಯ. ಅವರ ಅಭಿವೃದ್ಧಿಯ ಕ್ಷಯ. ಅವರು ಶರಣಾಗತರಾದರೆ ಅವರ ಭಯದ ವಿನಾಶ. ಹೀಗೆ ಸ್ಥಾನವೃದ್ಧಿಕ್ಷಯರೂಪವಾದ ಹತ್ತು ಅಂಶಗಳ ಸಮೂಹವನ್ನು ತಿಳಿದ ರಾಜನು ಯಾವಾಗಲೂ ಪ್ರಶಂಸಿಸಲ್ಪಡುತ್ತಾನೆ. ( ಲಕ್ಷ್ಮಾ- ಲಂಕಾರ)
ಅಭೃತಾನಾಂ ಭವೇದ್ ಭರ್ತಾ ಭೃತಾನಾಂ ಚಾನ್ವವೇಕ್ಷಕಃ |
ನೃಪತಿಃ ಸುಮುಖಶ್ಚ ಸ್ಯಾತ್ ಸ್ಮಿತಪೂರ್ವಾಭಿಭಾಷಿತಾ ॥19॥
ರಾಜನು ವೃತ್ತಿ ಇಲ್ಲದವರಿಗೆ ಪೋಷಕನಾಗಬೇಕು. ವೃತ್ತಿಯನ್ನು ಹೊಂದಿದವರ ಮೇಲ್ವಿಚಾರಣೆಯನ್ನು ಮಾಡಬೇಕು. ಯಾವಾಗಲೂ ಪ್ರಸನ್ನಮುಖನಾಗಿದ್ದು ಮಂದಹಾಸಪೂರ್ವಕವಾಗಿ ಮಾತನಾಡಬೇಕು.
ಉಪಾಸಿತಾ ಚ ವೃದ್ಧಾನಾಂ ಜಿತತಂದ್ರೀರಲೋಲುಪಃ |

ಸತಾಂ ವೃತ್ತೇ ಸ್ಥಿತಮತಿಃ ಸಂತೋ ಹ್ಯಾಚಾರದರ್ಶಿನಃ ॥20॥
ಹಿರಿಯರ ಸೇವೆಯನ್ನು ಮಾಡಬೇಕು. ಆಲಸ್ಯವನ್ನು ಬಿಡಬೇಕು. ಇಂದ್ರಿಯ- ಲೋಲುಪನಾಗಿರಬಾರದು. ಸಜ್ಜನರ ನಡವಳಿಕೆಯಲ್ಲಿಯೇ ನೆಟ್ಟ ಮನಸ್ಸುಳ್ಳವ- ನಾಗಿರಬೇಕು ಏಕೆಂದರೆ, ಸಜ್ಜನರೇ ಆಚಾರವನ್ನು ತೋರಿಸಿಕೊಡುವವರು.
ನ ಚಾದದೀತ ವಿತ್ತಾನಿ ಸತಾಂ ಹಸ್ತಾತ್ ಕದಾಚನ |
ಅಸದ್ಭ್ಯಸ್ತು ಸಮಾದದ್ಯಾತ್ ಸದ್ಭ್ಯಃ ಸಂಪ್ರತಿಪಾದಯೇತ್ ॥21॥
ಸಜ್ಜನರ ಹಸ್ತದಿಂದ ಎಂದೂ ಧನವನ್ನು ಸ್ವೀಕರಿಸಬಾರದು. ಅಸಜ್ಜನರಿಂದ ಧನ -ವನ್ನು ತೆಗೆದುಕೊಂಡು ಅದನ್ನು ಸಜ್ಜನರಿಗೆ ಹಂಚಬೇಕು.
ಸ್ವಯಂ ಪ್ರಹರ್ತಾದಾತಾ ಚ ವಶ್ಯಾತ್ಮಾ ವಶ್ಯಸಾಧನಃ |
ಕಾಲೇ ದಾತಾ ಚ ಭೋಕ್ತಾ ಚ ಶುದ್ಧಾಚಾರಸ್ತಥೈವ ಚ ॥22॥
ತಾನೇ ಧನವನ್ನು ತೆಗೆದುಕೊಳ್ಳುವವನು, ಸಜ್ಜನರಿಗೆ ಧನವನ್ನು ಕೊಡುವವನು, ಜಿತವಾದ ಮನಸ್ಸುಳ್ಳವನು, ಜಿತವಾದ ಸಾಧನಗಳುಳ್ಳವನು ಯೋಗ್ಯವಾದ ಕಾಲ- ದಲ್ಲಿ ದಾನವನ್ನೂ ಭೋಗವನ್ನೂ ಮಾಡುವವನು ಮತ್ತು ಶುದ್ಧವಾದ ಆಚಾರವುಳ್ಳ ರಾಜನು. (ಪ್ರಶಂಸಿಸಲ್ಪಡುತ್ತಾನೆ).
ಶೂರಾನ್ ಭಕ್ತಾನಸಂಹಾರ್ಯಾನ್ ಮಾನಿನೋಽನವಮಾನಿನಃ |
ಶಿಷ್ಟಾನ್ ಶಿಷ್ಟಾಭಿಸಂಬಂಧಾನ್ ಕುಲೇ ಜಾತಾನರೋಗಿಣಃ ॥23॥
ವಿದ್ಯಾವಿದೋ ಲೋಕವಿದಃ ಪರಲೋಕಾನ್ವವೇಕ್ಷಕಾನ್ |
ಧರ್ಮೇಷು ನಿರತಾನ್ ಸಾಧೂನಚಲಾನಚಲಾನಿವ ॥24॥
ಸಹಾಯಾನ್ ಸತತಂ ಕುರ್ಯಾದ್ ರಾಜಾ ಭೂತಿಪುರಸ್ಕೃತಃ |
ತೈಸ್ತುಲ್ಯಶ್ಚ ಭವೇದ್ ಭೋಗೈಶ್ಛತ್ರಮಾತ್ರಾಜ್ಞಯಾಧಿಕಃ ॥25॥
ಶೂರರು, ನಿಷ್ಠೆಯುಳ್ಳವರು, ಶತ್ರುಗಳಿಂದ ಅಪಹರಿಸಲ್ಪಡದವರು, ಆತ್ಮಾ- ಭಿಮಾನವುಳ್ಳವರು, ರಾಜನನ್ನು ಮತ್ತು ಸಜ್ಜನರನ್ನು ಅವಮಾನಮಾಡದವರು, ಸತ್ಕುಲದಲ್ಲಿ ಜನಿಸಿ ಆರೋಗ್ಯದಿಂದಿರುವವರು, ಶಿಷ್ಟರು, ಶಿಷ್ಟರ ಸಂಬಂಧವನ್ನು ಹೊಂದಿದವರು, ವಿದ್ಯೆಗಳನ್ನು ಬಲ್ಲವರು, ಲೋಕವೃತ್ತವನ್ನು ಬಲ್ಲವರು, ಪರ- ಲೋಕದ ನಿರೀಕ್ಷೆ ಉಳ್ಳವರು, ಧರ್ಮನಿರತರು, ಸಾಧುಗಳು, ಪರ್ವತದಂತೆ ಅಚಲರಾದವರು ಆದ ಭಟರನ್ನು ಸಮೃದ್ಧಿಯುಳ್ಳ ರಾಜನು ತನ್ನ ಸಹಾಯಕರನ್ನಾಗಿ ಮಾಡಿಕೊಳ್ಳಬೇಕು. ಅಂತಹ ಭಟರ ಜೊತೆಯಲ್ಲಿ ಸಮಾನವಾದ ಭೋಗವನ್ನು ಹೊಂದಿ ಛತ್ರಚಾಮರಾದಿಗಳಿಂದ ಮಾತ್ರ ಅತಿಶಯವನ್ನು ಹೊಂದಿರಬೇಕು.
ಪ್ರತ್ಯಕ್ಷಾ ಚ ಪರೋಕ್ಷಾ ಚ ವೃತ್ತಿಶ್ಚಾಸ್ಯ ಭವೇತ್ ಸದಾ |
ಏವಂ ಕೃತ್ವಾ ನರೇಂದ್ರೋ ಹಿ ನ ಖೇದಮಿಹ ವಿಂದತಿ ॥26॥
ರಾಜನು ಪ್ರತ್ಯಕ್ಷವಾದ ಮತ್ತು ಪರೋಕ್ಷವಾದ ನಡೆವಳಿಕೆಗಳನ್ನು ಹೊಂದಿ- ರಬೇಕು. ಹಾಗೆ ಮಾಡುವ ನರೇಂದ್ರನು ಈ ಲೋಕದಲ್ಲಿ ದುಃಖವನ್ನು ಹೊಂದು- ವುದಿಲ್ಲ.
ಸಭೆಯಲ್ಲಿ ಕುಳಿತು ಮಾಡುವ ಧರ್ಮವಿಚಾರಾದಿ ನಡೆವಳಿಕೆಯು ಪ್ರತ್ಯಕ್ಷ- ರೂಪವಾದದು. ಅಂತಃಪುರದ ನಡೆವಳಿಕೆಯು ಪರೋಕ್ಷವಾದುದು (ಲಕ್ಷಾ- ಲಂಕಾರ)
ಸರ್ವಾತಿಶಂಕೀ ನೃಪತಿರ್ಯಶ್ಚ ಸರ್ವಹರೋ ಭವೇತ್ |
ಸ ಕ್ಷಿಪ್ರಮನೃಜುರ್ಲುಬ್ಧಃ ಸ್ವಜನೇನೈವ ಬಾಧ್ಯತೇ ॥27॥
ಯಾವ ರಾಜನು ಎಲ್ಲರನ್ನೂ ಶಂಕಿಸುತ್ತಾನೆಯೋ ಪ್ರಜೆಗಳಿಂದ ಎಲ್ಲವನ್ನೂ ಅಪಹರಿಸುತ್ತಾನೆಯೋ ಅಂತಹ ವಕ್ರನೂ, ಲೋಭಿಯೂ ಆದ ರಾಜನು ಸ್ವಜನ- ರಿಂದಲೇ ಶೀಘ್ರವಾಗಿ ಬಾಧಿಸಲ್ಪಡುತ್ತಾನೆ.
ಶುಚಿಸ್ತು ಪೃಥಿವೀಪಾಲೋ ಲೋಕಚಿತ್ತಗ್ರಹೇ ರತಃ |
ನ ಪತತ್ಯರಿಭಿರ್ಗ್ರಸ್ತಃ ಪತಿತಶ್ಚಾವತಿಷ್ಠತೇ ॥28॥
ಶುಚಿಯೂ, ಪ್ರಜೆಗಳ ಚಿತ್ತಗ್ರಹದಲ್ಲಿ ನಿರತನೂ ಆದ ರಾಜನು ಶತ್ರುಗಳಿಂದ ಗ್ರಸ್ತನಾದರೂ ಕೆಳಗೆ ಬೀಳುವುದಿಲ್ಲ. ಕೆಳಗೆ ಬಿದ್ದರೂ ಪುನಃ ಎದ್ದು ನಿಲ್ಲುತ್ತಾನೆ.
ಅಕ್ರೋಧನೋಽಥಾವ್ಯಸನೀ ಮೃದುದಂಡೋ ಜಿತೇಂದ್ರಿಯಃ |
ರಾಜಾ ಭವತಿ ಭೂತಾನಾಂ ವಿಶ್ವಾಸ್ಯೋ ಹಿಮವಾನಿವ ॥29॥
ಕ್ರೋಧಶೀಲನಲ್ಲದ, ದುಶ್ಚಟಗಳಿಗೆ ಬಲಿಯಾಗದ, ಮೃದುವಾದ ಶಿಕ್ಷೆಯನ್ನು ಕೊಡುವ, ಜಿತೇಂದ್ರಿಯನಾದ ರಾಜನು ಹಿಮಾಲಯದಂತೆ ಪ್ರಜೆಗಳ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ.
ಪ್ರಾಜ್ಞೋ ನ್ಯಾಯಗುಣೋಪೇತಃ ಪರರಂಧ್ರೇಷು ತತ್ಪರಃ |
ಸುದರ್ಶಃ ಸರ್ವವರ್ಣಾನಾಂ ನಯಾಪನಯವಿತ್ ತಥಾ ॥30॥
ಕ್ಷಿಪ್ರಕಾರೀ ಜಿತಕ್ರೋಧಃ ಸುಪ್ರಸಾದೋ ಮಹಾಮನಾಃ |
ಅರೋಷಪ್ರಕೃತಿರ್ಯುಕ್ತಃ ಕ್ರಿಯಾವಾನವಿಕತ್ಥನಃ ॥31॥
ಪ್ರಾಜ್ಞನೂ, ನ್ಯಾಯಗುಣದಿಂದ ಕೂಡಿದವನೂ, ಶತ್ರುಗಳ ದೌರ್ಬಲ್ಯವನ್ನು ಹುಡುಕುವುದರಲ್ಲಿ ತತ್ಪರನೂ, ಎಲ್ಲ ವರ್ಣದವರಿಗೂ ಸುಲಭವಾಗಿ ದರ್ಶನವನ್ನು ಕೊಡುವವನು, ನ್ಯಾಯಾನ್ಯಾಯಗಳನ್ನು ತಿಳಿದವನೂ, ಶೀಘ್ರವಾಗಿ ಕಾರ್ಯವನ್ನು ಮಾಡುವವನೂ, ಕ್ರೋಧವನ್ನು ಜಯಿಸಿದವನೂ, ಧೈರ್ಯಶಾಲಿಯೂ, ಒಳ್ಳೆಯ ಅನುಗ್ರಹವನ್ನು ಮಾಡುವವನೂ, ರೋಷಪ್ರಕೃತಿಯನ್ನು ಹೊಂದದವನೂ, ಕ್ರಿಯಾ- ಶೀಲನಾದವನೂ, ತನ್ನನ್ನು ತಾನು ಹೊಗಳಿಕೊಳ್ಳದವನೂ ಆದ ರಾಜನು (ಸಮೃದ್ಧಿ- ಯನ್ನು ಹೊಂದುತ್ತಾನೆ).

ಆರಬ್ಧಾನ್ಯೇವ ಕಾರ್ಯಾಣಿ ನ ಪರ್ಯವಸಿತಾನಿ ಚ |
ಯಸ್ಯ ರಾಜ್ಞಃ ಪ್ರದೃಶ್ಯಂತೇ ಸ ರಾಜಾ ರಾಜಸತ್ತಮಃ ॥32॥
ಯಾವ ರಾಜನು ಆರಂಭಿಸಿರುವ ಕಾರ್ಯಗಳು ಮಾತ್ರ ಕಂಡುಬರುತ್ತ- ವೆಯೋ, ಮಾಡಿ ಮುಗಿಸಿದ ಕಾರ್ಯಗಳು ಕಂಡುಬರುವುದಿಲ್ಲವೋ ಅಂತಹ ರಾಜನೇ ಶ್ರೇಷ್ಠರಾಜನೆನಿಸುತ್ತಾನೆ.
ಪುತ್ರಾ ಇವ ಪಿತುರ್ಗೇಹೇ ವಿಷಯೇ ಯಸ್ಯ ಮಾನವಾಃ |
ನಿರ್ಭಯಾ ವಿಚರಿಷ್ಯಂತಿ ಸ ರಾಜಾ ರಾಜಸತ್ತಮಃ ॥33॥
ಯಾವನ ರಾಜ್ಯದಲ್ಲಿ ಪ್ರಜೆಗಳು ತಂದೆಯ ಮನೆಯಲ್ಲಿರುವ ಮಕ್ಕಳಂತೆ ನಿರ್ಭಯವಾಗಿ ಸಂಚರಿಸುವರೋ ಅವನೇ ಶ್ರೇಷ್ಠನಾದ ರಾಜನಾದವನು.
ಅಗೂಢವಿಭವಾ ಯಸ್ಯ ಪೌರಾ ರಾಷ್ಟ್ರನಿವಾಸಿನಃ |
ನಯಾಪನಯವೇತ್ತಾರಃ ಸ ರಾಜಾ ರಾಜಸತ್ತಮಃ ॥34॥
ಯಾವನ ರಾಜ್ಯದಲ್ಲಿ ರಾಷ್ಟ್ರನಿವಾಸಿಗಳಾದ ಪೌರರು ತಮ್ಮ ಐಶ್ವರ್ಯವನ್ನು ಮುಚ್ಚಿಕೊಳ್ಳಬೇಕಾದ ಪ್ರಸಂಗವಿಲ್ಲದೆ ನ್ಯಾಯಾನ್ಯಾಯಗಳನ್ನು ತಿಳಿದಿರುತ್ತಾರೆಯೋ ಅಂತಹ ರಾಜನೇ ಶ್ರೇಷ್ಠನಾದ ರಾಜನಾದವನು.
ಸ್ವಕರ್ಮನಿರತಾ ಯಸ್ಯ ಜನಾ ವಿಷಯವಾಸಿನಃ |
ಅಸಂಘಾತರತಾ ದಾಂತಾಃ ಪಾಲ್ಯಮಾನಾ ಯಥಾವಿಧಿ ॥35॥
ವಶ್ಯಾ ನೇಯಾ ವಿನೀತಾಶ್ಚ ನ ಚ ಸಂಘರ್ಷಶೀಲಿನಃ |
ವಿಷಯೇ ದಾನರುಚಯೋ ನರಾ ಯಸ್ಯ ಸ ಪಾರ್ಥಿವಃ ॥36॥
ಯಾವ ರಾಜನ ರಾಜ್ಯದಲ್ಲಿರುವ ಜನರು ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾ- ಗಿರುತ್ತಾರೆಯೋ, ಗುಂಪುಗಾರಿಕೆಯಲ್ಲಿ ನಿರತರಾಗಿರುವುದಿಲ್ಲವೋ, ಇಂದ್ರಿಯ- ನಿಗ್ರಹವನ್ನು ಹೊಂದಿರುತ್ತಾರೆಯೋ, ರಾಜನಿಂದ ಶಾಸ್ತ್ರಕ್ಕನುಗುಣವಾಗಿ ಪಾಲಿಸ- ಲ್ಪಡುತ್ತಾರೆಯೋ, ರಾಜನಿಗೆ ವಶನಾಗಿರುತ್ತಾರೆಯೋ, ರಾಜನು ಹೇಳಿದಂತೆ ವಿನಯ -ದಿಂದ ನಡೆದುಕೊಳ್ಳುತ್ತಾರೆಯೋ, ಪರಸ್ಪರವಿರೋಧವನ್ನು ಮಾಡುವುದರಲ್ಲಿ ಆಸಕ್ತರಾಗಿರುವುದಿಲ್ಲವೋ, ದಾನ ಮಾಡುವುದರಲ್ಲಿ ಅಭಿರುಚಿಯನ್ನು ಹೊಂದಿರು- ತ್ತಾರೆಯೋ ಅವನೇ ನಿಜವಾದ ರಾಜ.
ನ ಯಸ್ಯ ಕೂಟಂ ಕಪಟಂ ನ ಮಾಯಾ ನ ಚ ಮತ್ಸರಃ |
ವಿಷಯೇ ಭೂಮಿಪಾಲಸ್ಯ ತಸ್ಯ ಧರ್ಮಃ ಸನಾತನಃ ॥37॥
ಯಾವ ರಾಜನ ರಾಜ್ಯದಲ್ಲಿ ಗುಂಪುಗಾರಿಕೆಯಾಗಲೀ, ಮೋಸವಾಗಲೀ, ಸುಳ್ಳಾಗಲೀ, ಮಾತ್ಸರ್ಯವಾಗಲೀ ಇರುವುದಿಲ್ಲವೋ ಅಂತಹ ರಾಜನ ಧರ್ಮವು ಸನಾತನವೆನಿಸುತ್ತದೆ.
ಯಃ ಸತ್ಕರೋತಿ ಜ್ಞಾತೀನಿ ನೇಯಃ ಪೌರಹಿತೇ ರತಃ |
ಸತಾಂ ಧರ್ಮಾನುಗಸ್ತ್ಯಾಗೀ ಸ ರಾಜಾ ರಾಜ್ಯಮರ್ಹತಿ ॥38॥
ಯಾವನು ಜ್ಞಾತಿಗಳನ್ನು ಸತ್ಕರಿಸುತ್ತಾನೆಯೋ, ಪ್ರಜೆಗಳ ಹಿತದಲ್ಲಿ ರತನಾಗಿ ಮುಂದುವರೆಯುತ್ತಾನೆಯೋ, ಸಜ್ಜನರ ಧರ್ಮವನ್ನು ಅನುಸರಿಸುತ್ತಾನೆಯೋ, ಸಮಯದಲ್ಲಿ ಧನವನ್ನು ತ್ಯಾಗ ಮಾಡುತ್ತಾನೆಯೋ ಅಂತಹ ರಾಜನೇ ರಾಜ್ಯಕ್ಕೆ ಅರ್ಹನಾದವನು.
ಯಸ್ಯ ಚಾರಶ್ಚ ಮಂತ್ರಶ್ಚ ನಿತ್ಯಂ ಚೈವ ಕೃತಾಕೃತೇ |
ನ ಜ್ಞಾಯತೇ ಹಿ ರಿಪುಭಿಃ ಸ ರಾಜಾ ರಾಜ್ಯಮರ್ಹತಿ ॥39॥
ಯಾವ ರಾಜನ ಚಾರರಾಗಲೀ, ಮಂತ್ರವಾಗಲೀ, ಮಾಡಿದ ಅಥವಾ ಮಾಡದ ಕಾರ್ಯಗಳಾಗಲೀ ಶತ್ರುಗಳಿಗೆ ಎಂದೂ ತಿಳಿಯುವುದಿಲ್ಲವೋ ಅಂತಹ ರಾಜನು ರಾಜ್ಯಕ್ಕೆ ಅರ್ಹನಾಗುತ್ತಾನೆ.
ಶ್ಲೋಕಶ್ಚಾಯಂ ಪುರಾ ಗೀತೋ ಭಾರ್ಗವೇಣ ಮಹಾತ್ಮನಾ |
ಆಖ್ಯಾತೇ ರಾಮಚರಿತೇ ನೃಪತಿಂ ಪ್ರತಿ ಭಾರತ ॥40॥
ಎಲೈ ಭಾರತನೇ! ರಾಜನನ್ನು ಕುರಿತು ಪರಶುರಾಮಚರಿತ್ರೆಯನ್ನು ಹೇಳಿದ ಮೇಲೆ ಮಹಾತ್ಮರಾದ ಶುಕ್ರಾಚಾರ್ಯರು ಹಿಂದೆ ಈ ಶ್ಲೋಕವನ್ನು ಗಾನ ಮಾಡಿ- ದರು.
ರಾಜಾನಂ ಪ್ರಥಮಂ ವಿಂದೇತ್ ತತೋ ಭಾರ್ಯಾಂ ತತೋ ಧನಮ್ |
ಅಸತ್ಯಸ್ಮಿನ್ ಮಹೀಪಾಲೇ ಕುತೋ ಭಾರ್ಯಾ ಕುತೋ ಧನಮ್ ॥41॥
ಮೊದಲು ರಾಜನನ್ನು ಸಂಪಾದಿಸಬೇಕು. ಅನಂತರ ಪತ್ನಿಯನ್ನು, ಅನಂತರ ಧನವನ್ನು ಸಂಪಾದಿಸಬೇಕು. ರಾಜನೇ ಇಲ್ಲದಿದ್ದರೆ ಎಲ್ಲಿಯ ಪತ್ನಿ ಮತ್ತು ಎಲ್ಲಿಯ ಧನ?
ತದ್ ರಾಜನ್ ರಾಜ್ಯಕಾಮಾನಾಂ ನಾನ್ಯೋ ಧರ್ಮಃ ಸನಾತನಃ |
ಋತೇ ರಕ್ಷಾಂ ಸುವಿಸ್ಪಷ್ಟಾಂ ರಕ್ಷಾ ಲೋಕಸ್ಯ ಧಾರಣಮ್ ॥42॥
ಎಲೈ ರಾಜನೇ! ಆದ್ದರಿಂದ ರಾಜ್ಯವನ್ನು ಬಯಸುವವರಿಗೆ ಪ್ರಜೆಗಳ ರಕ್ಷಣೆ- ಯನ್ನು ಬಿಟ್ಟು, ಸನಾತನವಾದ ಬೇರೆ ಯಾವ ಧರ್ಮವೂ ಇಲ್ಲ. ಅತ್ಯಂತ ಸ್ಪಷ್ಟ- ವಾದ ರಕ್ಷಣೆಯೇ ಲೋಕವನ್ನು ಧರಿಸುತ್ತದೆ.
ಪ್ರಾಚೇತಸೇನ ಮನುನಾ ಶ್ಲೋಕೌ ಚೇಮಾವುದಾಹೃತೌ |
ರಾಜಧರ್ಮೇಷು ರಾಜೇಂದ್ರ ತಾವಿಹೈಕಮನಾಃ ಶೃಣು ॥43॥
ಎಲೈ ರಾಜೇಂದ್ರನೇ! ಪ್ರಚೇತಸರ ಪುತ್ರನಾದ ಮನುವಿನಿಂದ ರಾಜಧರ್ಮಗಳ ವಿಷಯದಲ್ಲಿ ಈ ಎರಡು ಶ್ಲೋಕಗಳು ಹೇಳಲ್ಪಟ್ಟಿವೆ. ಅವುಗಳನ್ನು ಅವಧಾನದಿಂದ ಕೇಳುವವನಾಗು.
ಷಡೇತಾನ್ ಪುರುಷೋ ಜಹ್ಯಾದ್ ಭಿನ್ನಾಂ ನಾವಮಿವಾರ್ಣವೇ |

ಅಪ್ರವಕ್ತಾರಮಾಚಾರ್ಯಮನಧೀಯಾನಮೃತ್ವಿಜಮ್ ॥44॥
ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಮ್ |
ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಮ್ ॥45॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತಪಂಚಾಶೋಽಧ್ಯಾಯಃ ॥57॥
ಉಪದೇಶ ಮಾಡದಿರುವ ಆಚಾರ್ಯ, ಅಧ್ಯಯನಮಾಡದಿರುವ ಋತ್ವಿಕ್, ರಕ್ಷಣೆಯನ್ನು ಮಾಡದಿರುವ ರಾಜ, ಪ್ರತಿಕೂಲವಾಗಿ ಮಾತನಾಡುವ ಭಾರ್ಯೆ, ಗ್ರಾಮದಲ್ಲಿಯೇ ಇರಲು ಬಯಸುವ ಗೋಪಾಲ ಮತ್ತು ಕಾಡಿನಲ್ಲಿ ಇರಲು ಬಯಸುವ ಕ್ಷೌರಿಕ ಈ ಆರು ಜನರನ್ನು ಸಮುದ್ರದಲ್ಲಿ ಒಡೆದು ಹೋದ ದೋಣಿ- ಯನ್ನು ಬಿಡುವಂತೆ ಪುರುಷನು ಪರಿತ್ಯಜಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 57ನೆಯ ಅಧ್ಯಾಯವು ಮುಗಿಯಿತು.
0

58. ಐವತ್ತೆಂಟನೆಯ ಅಧ್ಯಾಯ
ಪ್ರಥಮದಿನದ ಉಪದೇಶದ ಅನಂತರ ಸಾಯಂಕಾಲದಲ್ಲಿ
ಕೃಷ್ಣಾದಿಗಳ ಹಿಂದಿರುವಿಕೆ
ವೈಶಂಪಾಯನಃ
ಏತಾವದುಕತ್ವ ಭೂಯೋಽಪಿ ಭೀಷ್ಮಃ ಕುರುಪಿತಾಮಹಃ |
ಉವಾಚ ವಚನಂ ಧೀಮಾನ್ ಸರ್ವತಃ ಸಾರಸಂಗ್ರಹಮ್ ॥1॥
ವೈಶಂಪಾಯನರು ಇಷ್ಟು ಮಾತುಗಳನ್ನಾಡಿ ಕುರುಪಿತಾಮಹರಾದ ಮೇಧಾವಿಗಳಾದ ಭೀಷ್ಮರು ಪುನಃ ಸರ್ವಸಾರಸಂಗ್ರಹರೂಪವಾದ ಮಾತುಗಳನ್ನು ಆಡಿದರು.
ಏತತ್ ತೇ ರಾಜಧರ್ಮಾಣಾಂ ನವನೀತಂ ಯುಧಿಷ್ಠಿರ |
ಬೃಹಸ್ಪತಿರ್ಹಿ ಭಗವಾನ್ ನಾನ್ಯಂ ಧರ್ಮಂ ಪ್ರಶಂಸತಿ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ರಾಜಧರ್ಮಗಳ ಈ ಸಾರವನ್ನು ನಾನು ನಿನಗೆ ಹೇಳಿದ್ದೇನೆ. ಪೂಜ್ಯರಾದ ಬೃಹಸ್ಪತಿಗಳೂ ಸಹ ಬೇರೆಯ ಧರ್ಮವನ್ನು ಪ್ರಶಂಸಿಸುವುದಿಲ್ಲ.
ವಿಶಾಲಾಕ್ಷಶ್ಚ ಭಗವಾನ್ ಕಾವ್ಯಶ್ಚೈವ ಮಹಾತಪಾಃ |
ಸಹಸ್ರಾಕ್ಷೋ ಮಹೇಂದ್ರಶ್ಚ ತಥಾ ಪ್ರಾಚೇತಸೋ ಮನುಃ ॥3॥
ಭರದ್ವಾಜಶ್ಚ ಭಗವಾಂಸ್ತಥಾ ಗೌರಶಿರಾ ಮುನಿಃ |
ರಾಜಶಾಸ್ತ್ರಪ್ರಣೇತಾರೋ ಬ್ರಾಹ್ಮಣಾ ಸತ್ಯವಾದಿನಃ ॥4॥
ರಕ್ಷಾಮೇವ ಪ್ರಶಂಸಂತಿ ಧರ್ಮಂ ಧರ್ಮಭೃತಾಂವರ |
ರಾಜ್ಞಾಂ ರಾಜೀವತಾಮ್ರಾಕ್ಷ ಸಾಧನಂ ಚಾತ್ರ ವೈ ಶೃಣು ॥5॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ಪೂಜ್ಯರಾದ ವಿಶಾಲಾಕ್ಷನು, ಮಹಾತಪಸ್ವಿ- ಯಾದ ಶುಕ್ರನು, ಸಹಸ್ರಾಕ್ಷನಾದ ದೇವೇಂದ್ರನು, ಪ್ರಚೇತಸರ ಪುತ್ರರಾದ ಮನುವು, ಪೂಜ್ಯನಾದ ಭರದ್ವಾಜನು, ಗೌರಶಿರಾ ಋಷಿಯು ಮತ್ತು ರಾಜಶಾಸ್ತ್ರವನ್ನು ರಚಿಸಿದ ಸತ್ಯವಾದಿಗಳಾದ ಬ್ರಾಹ್ಮಣರು ರಕ್ಷಣೆಯನ್ನೇ ರಾಜರಿಗೆ ಶ್ರೇಷ್ಠವಾದ ಧರ್ಮವೆಂದು ಪ್ರಶಂಸಿಸುತ್ತಾರೆ. ಎಲೈ ರಾಜೀವನೇತ್ರನೇ! ಅದಕ್ಕೆ ಸಾಧನೆಯನ್ನು ಕೇಳುವವನಾಗು.
ಚಾರಶ್ಚ ಪ್ರಣಿಧಿಶ್ಚೈವ ಕಾಲೇ ದಾನಮಮತ್ಸರಃ |
ಯುಕ್ತ್ಯಾಽಽದಾನಂ ನ ಚಾದಾನಮಯೋಗೇನ ಯುಧಿಷ್ಠಿರ ॥6॥
ಸತಾಂ ಸಂಗ್ರಹಣಂ ಶೌರ್ಯಂ ದಾಕ್ಷ್ಯಂ ಸತ್ಯಂ ಪ್ರಜಾಹಿತಮ್ |
ಅನಾರ್ಜವೈರಾರ್ಜವೈಶ್ಚ ಶತ್ರುಪಕ್ಷಸ್ಯ ಭೇದನಮ್ ॥7॥
ಸಾಧೂನಾಮಪರಿತ್ಯಾಗಃ ಕುಲೀನಾನಾಂ ಚ ಧಾರಣಮ್ |
ನಿಚಯಶ್ಚ ನಿಚೇಯಾನಾಂ ಸೇವಾ ಬುದ್ಧಿಮತಾಮಪಿ ॥8॥
ಬಲಾನಾಂ ಹರ್ಷಣಂ ನಿತ್ಯಂ ಪ್ರಜಾನಾಮನ್ವವೇಕ್ಷಣಮ್ |
ಕಾರ್ಯೇಷ್ವಖೇದಃ ಕೋಶಸ್ಯ ತಥೈವ ಚ ವಿವರ್ಧನಮ್ ॥9॥
ಎಲೈ ಯುಧಿಷ್ಠಿರನೇ! ಚಾರರು, ಗುರುದೇವತಾಪ್ರಾರ್ಥನೆ, ಯೋಗ್ಯವಾದ ಕಾಲದಲ್ಲಿ ದಾನ, ಮಾತ್ಸರ್ಯರಾಹಿತ್ಯ, ಯುಕ್ತವಾದ ಕಾಲದಲ್ಲಿ ಪ್ರಜೆಗಳಿಂದ ದಾನದ ಸ್ವೀಕಾರ, ಅನ್ಯಾಯದಿಂದ ಪ್ರಜೆಗಳ ಧನವನ್ನು ಸ್ವೀಕರಿಸದಿರುವುದು, ಸಜ್ಜನರನ್ನು ಸಂಗ್ರಹಿಸುವುದು, ಶೌರ್ಯ, ದಕ್ಷತೆ, ಸತ್ಯ, ಪ್ರಜಾಹಿತ, ನೇರ ಮತ್ತು ವಕ್ರಮಾರ್ಗಗಳಿಂದ ಶತ್ರುಪಕ್ಷವನ್ನು ಭೇದಿಸುವುದು. ಸಜ್ಜನರನ್ನು ಪರಿತ್ಯಾಗ ಮಾಡದಿರುವುದು, ಕುಲೀನರಾದವರನ್ನು ಪೋಷಿಸುವುದು, ಸಂಗ್ರಹಮಾಡಬೇಕಾದ ವಸ್ತುವನ್ನು ಸಂಗ್ರಹಿಸುವುದು, ಮೇಧಾವಿಗಳ ಸೇವೆಯನ್ನು ಮಾಡುವುದು, ಸೈನ್ಯವನ್ನು ಸಂತೋಷಪಡಿಸುವುದು, ನಿತ್ಯವೂ ಪ್ರಜೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು, ಕಾರ್ಯಗಳನ್ನು ಮಾಡುವುದರಲ್ಲಿ ದಣಿಯದಿರುವುದು, ಕೋಶವನ್ನು ಅಭಿವೃದ್ಧಿಪಡಿಸುವುದು.
ಪುರಗುಪ್ತಿರವಿಶ್ವಾಸಃ ಪೌರಸಂಘಾತಭೇದನಮ್ |

ಕೇತನಾನಾಂ ಚ ಜೀರ್ಣಾನಾಮವೇಕ್ಷಾ ಚೈವ ಸೀದತಾಮ್ ॥10॥
ದ್ವಿವಿಧಸ್ಯ ಚ ದಂಡಸ್ಯ ಪ್ರಯೋಗಃ ಕಾಲಚೋದಿತಃ।
ಅರಿಮಧ್ಯಸ್ಥಮಿತ್ರಾಣಾಂ ಯಥಾವಚ್ಚಾನ್ವವೇಕ್ಷಣಮ್ ॥11॥
ಉಪಜಾಪಶ್ಚ ಭೃತ್ಯಾನಾಮಾತ್ಮನಃ ಪುರದರ್ಶನಮ್।
ಅವಿಶ್ವಾಸಃ ಸ್ವಯಂ ಚೈವ ಪರಸ್ಯಾಶ್ವಾಸನಂ ತಥಾ ॥12॥
ನೀತಿಧರ್ಮಾನುಸರಣಂ ನಿತ್ಯಮುತ್ಥಾನಮೇವ ಚ।
ರಿಪೂಣಾಮನವಜ್ಞಾನಂ ನಿತ್ಯಂ ಚಾನಾರ್ಯವರ್ಜನಮ್ ॥13॥
ಉತ್ಥಾನಂ ಹಿ ನರೇಂದ್ರಾಣಾಂ ಬೃಹಸ್ಪತಿರಭಾಷತ।
ರಾಜಧರ್ಮಸ್ಯ ಯನ್ಮೂಲಂ ಶ್ಲೋಕಶ್ಚಾತ್ರ ನಿಬೋಧ ಮೇ ॥14॥
ರಾಜಧಾನಿಯನ್ನು ರಕ್ಷಿಸುವುದು, ಯಾರನ್ನೂ ಬಹಳವಾಗಿ ನಂಬದಿರುವುದು, ಪ್ರಜೆಗಳ ಗುಂಪುಗಾರಿಕೆಯನ್ನು ಭೇದಿಸುವುದು, ಹಳೆಯದಾದ ಮನೆಗಳ ಉಜ್ಜೀವನ -ವನ್ನು ಮಾಡುವುದು, ಕಷ್ಟದಲ್ಲಿದ್ದವರನ್ನು ನೋಡಿಕೊಳ್ಳುವುದು, ವಾಗ್ದಂಡ ಮತ್ತು ಧನದಂಡರೂಪವಾದ ಎರಡು ದಂಡಗಳನ್ನು ಯೋಗ್ಯವಾದ ಕಾಲದಲ್ಲಿ ಪ್ರಯೋ- ಗಿಸುವುದು, ಶತ್ರುಗಳನ್ನು ಮಿತ್ರರನ್ನು ಮತ್ತು ಮಧ್ಯಸ್ಥರನ್ನು ಅವರವರ ಸ್ವಭಾವಕ್ಕೆ ತಕ್ಕಂತೆ ನೋಡಿಕೊಳ್ಳುವುದು, ಭೃತ್ಯರನ್ನು ಕುರಿತು ಪ್ರಿಯವಾಗಿ ಮಾತನಾಡುವುದು, ತಾನೇ ನಗರದ ಅನ್ವೇಕ್ಷಣೆಯನ್ನು ಮಾಡುವುದು, ತಾನು ಸ್ವತಃ ವಿಶ್ವಾಸವನ್ನು ಮಾಡದೇ ಇನ್ನೊಬ್ಬರು ತನ್ನಲ್ಲಿ ವಿಶ್ವಾಸವನ್ನು ಮಾಡುವಂತೆ ಮಾಡುವುದು, ರಾಜನೀತಿಯ ಧರ್ಮಗಳನ್ನು ಅನುಸರಿಸುವುದು, ನಿತ್ಯವೂ ಉದ್ಯಮಶೀಲನಾಗಿ- ರುವುದು, ಶತ್ರುಗಳನ್ನು ಕಡೆಗಣಿಸದಿರುವುದು, ಯಾವಾಗಲೂ ಅನಾರ್ಯರನ್ನು ಮತ್ತು ಅನಾರ್ಯಕಾರ್ಯಗಳನ್ನು ಪರಿತ್ಯಾಗ ಮಾಡುವುದು ಇವುಗಳೆಲ್ಲ ಉದ್ಯಮ- ಶೀಲತೆಯೆಂದು ಬೃಹಸ್ಪತಿಗಳು ಹೇಳಿದ್ದಾರೆ. ಇವು ರಾಜಧರ್ಮಕ್ಕೆ ಮೂಲಭೂತ- ವಾದುದು. ಈ ವಿಷಯದಲ್ಲಿ ನಾನು ಹೇಳುವ ಒಂದು ಶ್ಲೋಕವನ್ನು ಕೇಳು.
ಉತ್ಥಾನೇನಾಮೃತಂ ಲಬ್ಧಮುತ್ಥಾನೇನಾಸುರಾ ಹತಾಃ।
ಉತ್ಥಾನೇನ ಮಹೇಂದ್ರೇಣ ಶ್ರೈಷ್ಠ್ಯಂ ಪ್ರಾಪ್ತಂ ದಿವೀಹ ಚ ॥15॥
ಉದ್ಯಮಶೀಲತೆಯಿಂದ ಅಮೃತವು ಲಬ್ಧವಾಯಿತು. ಉದ್ಯಮಶೀಲತೆಯಿಂದ ಅಸುರರು ಹತರಾದರು. ಉದ್ಯಮಶೀಲನಾದ ಮಹೇಂದ್ರನಿಂದ ಈ ಲೋಕದ- ಲ್ಲಿಯೂ ಮತ್ತು ಪರಲೋಕದಲ್ಲಿಯೂ ಶ್ರೇಷ್ಠತ್ವವು ಪಡೆಯಲ್ಪಟ್ಟಿತು.
ಉತ್ಥಾನಧೀರಃ ಪುರುಷೋ ವಾಗ್ಮಿನಾನಧಿತಿಷ್ಠತಿ।
ಉತ್ಥಾನಧೀರಂ ವಾಗ್ಮೀರಾ ರಮಯಂತ ಉಪಾಸತೇ ॥16॥
ಉದ್ಯಮ ಎಂದರೆ ಪ್ರಯತ್ನಧೀರನಾದ ಪುರುಷನು ವಾಗ್ಮೀರರಾದ ಪುರುಷರ ಮೇಲೆ ನಿಲ್ಲುತ್ತಾನೆ. ಉತ್ಥಾನಧೀರನಾದ ಪುರುಷನನ್ನು ವಾಗ್ಮೀರರಾದವರು ಸಂತೋ- ಷಪಡಿಸುತ್ತಾ ಉಪಾಸನೆ ಮಾಡುತ್ತಾರೆ.
ಉತ್ಥಾನಹೀನೋ ರಾಜಾ ಹಿ ಬುದ್ಧಿಮಾನಪಿ ನಿತ್ಯಶಃ।
ಧರ್ಷಣೀಯೋ ರಿಪೂಣಾಂ ಸ್ಯಾದ್ ಭುಜಂಗ ಇವ ನಿರ್ವಿಷಃ ॥17॥
ರಾಜನು ಬುದ್ಧಿವಂತನಾಗಿದ್ದರೂ ನಿತ್ಯವೂ ಉದ್ಯಮರಹಿತನಾಗಿದ್ದರೆ ವಿಷವಿ- ಲ್ಲದ ಸರ್ಪದಂತೆ ಅವನು ಶತ್ರುಗಳಿಂದ ಪರಾಭವಾದಿ ಅವಮಾನಗಳಿಗೆ ಒಳ- ಗಾಗುತ್ತಾನೆ.
ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ।
ಅಲ್ಪೋಽಪಿ ಹಿ ದಹತ್ಯಗ್ನಿರ್ವಿಷಮಲ್ಪಂ ಹಿನಸ್ತಿ ಚ ॥18॥
ಬಲಿಷ್ಠನಾದ ರಾಜನು ದುರ್ಬಲನಾದ ಶತ್ರುವನ್ನೂ ಉಪೇಕ್ಷೆ ಮಾಡಬಾರದು. ಅಲ್ಪವಾದ ಅಗ್ನಿಯೂ ಸುಡುತ್ತದೆಯಷ್ಟೇ!. ಅಲ್ಪವಾದ ವಿಷವೂ ಕೊಲ್ಲುತ್ತದೆ- ಯಷ್ಟೇ!
ಏಕಾಂಗೇನಾಪಿ ಸಂಭೂತಃ ಶತ್ರುರ್ದುರ್ಗಸಮಾಶ್ರಿತಃ।
ಸರ್ವಂ ತಾಪಯತೇ ದೇಶಮಪಿ ರಾಜ್ಞಃ ಸಮೃದ್ಧಿನಃ ॥19॥
ರಾಜ್ಯದ ಆರು ಅಂಗಗಳಿವೆ. ಒಂದು ಅಂಗದಿಂದ ಸಹಿತನಾದ ಶತ್ರುವೂ ಸಹ ರಾಜನ ಕೋಟೆಯನ್ನು ಆಶ್ರಯಿಸಿದರೆ ಸಮೃದ್ಧಿಯುಳ್ಳ ರಾಜನ ಎಲ್ಲ ದೇಶವನ್ನೂ ಸಂತಾಪಗೊಳಿಸುತ್ತಾನೆ.
ರಾಜ್ಞೋ ರಹಸ್ಯಂ ಯದ್ ವಾಕ್ಯಂ ಜಯಾರ್ಥಂ ಲೋಕಸಂಗ್ರಹಃ।
ಹೃದಿ ಯಚ್ಚಾಸ್ಯ ಜಿಹ್ಮಂ ಸ್ಯಾತ್ ಕಾರಣಾರ್ಥಂ ಚ ಯದ್ ಭವೇತ್ ॥20॥
ರಾಜನು ಶತ್ರುಜಯಾರ್ಥವಾಗಿ ಯಾವ ರಹಸ್ಯ ಮಾತುಗಳನ್ನಾಡುತ್ತಾನೆಯೋ, ಜಯಾರ್ಥವಾಗಿ ಯಾವ ಲೋಕಸಂಗ್ರಹವನ್ನು ಸಂಗ್ರಹಿಸಲು ಮಾಡುತ್ತಾನೆಯೋ (ಲೋಕಸಂಗ್ರಹ - ಪ್ರಜೆಗಳನ್ನು ಸಂಗ್ರಹ ಮಾಡುವುದಕ್ಕಾಗಿ ಏಕಾಂತದಲ್ಲಿ ಯಾವ ಮಾತುಗಳನ್ನಾಡುತ್ತಾನೆಯೋ) ಅದೆಲ್ಲವನ್ನೂ ಮರೆ ಮಾಡಿ ಸಭೆಯಲ್ಲಿ ಯಾವ ಒಳ್ಳೆಯ ಮಾತುಗಳನ್ನಾಡುತ್ತಾನೆಯೋ, ಅವನ ಹೃದಯದಲ್ಲಿ ಯಾವ ಕುಟಿಲತೆ ಇದೆಯೋ ಅವೆಲ್ಲವೂ ಶತ್ರುಗಳನ್ನು ಜಯಿಸುವ ಉದ್ದೇಶದಿಂದ ತನ್ನ ಭಟರು ಮಾಡಬೇಕಾದ ಕಾರ್ಯದ ಸಲುವಾಗಿ ಇರುತ್ತದೆ ಹೊರತು ರಾಜನು ಯಾವಾ- ಗಲೂ ಅಂತಹ ವಕ್ರತೆಯನ್ನು ಮತ್ತು ಕಪಟತನವನ್ನು ಹೊಂದಿರಬಾರದು. (ಲಕ್ಷಾಲಂಕಾರ).
ಯಚ್ಚಾಸ್ಯ ಕಾರ್ಯಂ ವೃಜಿನಮಾರ್ಜವೇನೈವ ಧಾರ್ಯತೇ।
ದಂಭನಾರ್ಥಾಯ ಲೋಕಸ್ಯ ಧರ್ಮಿಷ್ಠಾಮಾಚರೇತ್ ಕ್ರಿಯಾಮ್ ॥21॥
ಶತ್ರುಗಳನ್ನು ಜಯಿಸುವುದಕ್ಕಾಗಿ ಒಂದು ಪಾಪಕಾರ್ಯವನ್ನು ಮಾಡಬೇಕಾ- ದರೂ ಅದನ್ನು ಸರಳತೆಯಿಂದಲೇ ಮಾಡಬೇಕು. ಪ್ರಜೆಗಳನ್ನು ರಂಜಿಸುವುದಕ್ಕಾಗಿ ಧರ್ಮಿಷ್ಠವಾದ ಕಾರ್ಯಗಳನ್ನು ಮಾಡಬೇಕು.

ರಾಜ್ಯಂ ಹಿ ಸುಮಹತ್ತಂತ್ರಂ ದುರ್ಧಾರ್ಯಮಕೃತಾತ್ಮಭಿಃ |
ನ ಶಕ್ಯಂ ಮೃದುನಾ ವೋಢುಮಾಘಾತಸ್ಥಾನಮುಲ್ಬಣಮ್ ॥22॥
ರಾಜ್ಯವು ಅನೇಕ ತಂತ್ರಗಳಿಗೆ ಅಧೀನವಾದುದು. ಮೃದುವಾದ ಮಾತುಗಳಿಂದ ಉಲ್ಬಣವಾದ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವುದು ಹೇಗೆ ಸಾಧ್ಯವಿಲ್ಲವೋ ಅದರಂತೆ ಮನೋಜಯವಿಲ್ಲದವರಿಂದ ರಾಜ್ಯವನ್ನು ಧರಿಸುವುದು ಸಾಧ್ಯವಿಲ್ಲವು. ಲಕ್ಷ್ಮಾಲಂಕಾರ.
ರಾಜ್ಯಂ ಸರ್ವಾಮಿಷಂ ನಿತ್ಯಮಾರ್ಜವೇನೇಹ ಧಾರ್ಯತೇ |
ತಸ್ಮಾನ್ಮಿಶ್ರೇಣ ಸತತಂ ವರ್ತಿತವ್ಯಂ ಯುಧಿಷ್ಠಿರ ॥23॥
ಸರ್ವರಿಗೂ ಪ್ರಿಯವಾದ ರಾಜ್ಯವನ್ನು ಕೇವಲ ಋಜುತನದಿಂದಲೇ ಆಳಲು ಸಾಧ್ಯವಿಲ್ಲ. ಎಲೈ ಯುಧಿಷ್ಠಿರನೇ! ಆದ್ದರಿಂದ ಮಾರ್ದವಕಾಠಿನ್ಯಗಳನ್ನು ಮಿಶ್ರ- ಗೊಳಿಸಿ ಕಾರ್ಯಗಳನ್ನು ಮಾಡಬೇಕು. ಲಕ್ಷ್ಮಾಲಂಕಾರ.
ಯದ್ಯಪ್ಯಸ್ಯ ವಿಪತ್ತಿಃ ಸ್ಯಾದ್ ರಕ್ಷಮಾಣಸ್ಯ ವೈ ಪ್ರಜಾಃ |
ಸೋಽಪ್ಯಸ್ಯ ವಿಪುಲೋ ಧರ್ಮ ಏವಂವೃತ್ತಾ ಹಿ ಭೂಮಿಪಾಃ ॥24॥
ಪ್ರಜೆಗಳ ರಕ್ಷಣೆಯನ್ನು ಮಾಡುತ್ತಾ ರಾಜನಿಗೆ ವಿಪತ್ತುಂಟಾದರೂ ಅದು ಅವನಿಗೆ ವಿಪುಲವಾದ ಧರ್ಮವೇ ಆಗುತ್ತದೆ. ಹಿಂದಿನ ರಾಜರು ಇಂತಹ ನಡತೆ- ಯನ್ನೇ ಹೊಂದಿದ್ದರು.
ಏಷ ತೇ ರಾಜಧರ್ಮಾಣಾಂ ಲೇಶಃ ಸಮನುವರ್ಣಿತಃ |
ಭೂಯಸ್ತೇ ಯತ್ರ ಸಂದೇಹಸ್ತದ್ ಬ್ರೂಹಿ ಕುರುಸತ್ತಮ ॥25॥
ಎಲೈ ಕುರುಶ್ರೇಷ್ಠನೇ! ನಾನು ನಿನಗೆ ರಾಜಧರ್ಮಗಳ ಒಂದು ಲೇಶವನ್ನು ಮಾತ್ರ ವರ್ಣಿಸಿದ್ದೇನೆ. ನಿನಗೆ ಪುನಃ ಸಂದೇಹವಿದ್ದಲ್ಲಿ ಅದನ್ನು ಹೇಳು.
ವೈಶಂಪಾಯನಃ
ತತೋ ವ್ಯಾಸಶ್ಚ ಭಗವಾನ್ ದೇವಸ್ಥಾನೋಽಶ್ಮನಾ ಸಹ |
ವಾಸುದೇವಃ ಕೃಪಶ್ಚೈವ ಸಾತ್ಯಕಿಃ ಸಂಜಯಸ್ತಥಾ ॥26॥
ಸಾಧು ಸಾಧ್ವಿತಿ ಸಂಹೃಷ್ಟಾಃ ಪುಷ್ಯಮಾಣೈರಿವಾನನೈಃ |
ಅಸ್ತುವಂಸ್ತೇ ನರವ್ಯಾಘ್ರಂ ಭೀಷ್ಮಂ ಧರ್ಮಭೃತಾಂವರಮ್ ॥27॥
ವೈಶಂಪಾಯನರು ಆಗ ಪೂಜ್ಯರಾದ ವ್ಯಾಸರು ದೇವಸ್ಥಾನನು, ಅಶ್ಮನು, ಕೃಷ್ಣನು, ಕೃಪರು, ಸಾತ್ಯಕಿಯು ಮತ್ತು ಸಂಜಯನು ಸಂತೋಷಗೊಂಡು ಅರಳಿದ ಮುಖವುಳ್ಳವರಾಗಿ ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಭೀಷ್ಮರನ್ನು ಸಾಧು ಸಾಧು ಎಂದು ಪ್ರಶಂಸಿಸಿದರು.
ತತೋ ದೀನಮನಾ ಭೀಷ್ಮಮುವಾಚ ಕುರುಸತ್ತಮಃ |
ನೇತ್ರಾಭ್ಯಾಮಶ್ರುಪೂರ್ಣಾಭ್ಯಾಂ ಪಾದೌ ತಸ್ಯ ಶನೈಃ ಸ್ಪೃಶನ್ ॥28॥
ಅನಂತರ ಕುರುಶ್ರೇಷ್ಠನಾದ ಯುಧಿಷ್ಠಿರನು ನೀರು ತುಂಬಿದ ಕಣ್ಣುಗಳಿಂದ ಕೂಡಿ ಭೀಷ್ಮರ ಪಾದವನ್ನು ನಿಧಾನವಾಗಿ ಸ್ಪರ್ಶಿಸಿ ಮನಸ್ಸಿನಲ್ಲಿ ದೈನ್ಯವನ್ನು ಹೊಂದಿ ಅವರನ್ನು ಕುರಿತು ಮಾತನಾಡಿದನು.
ಶ್ವ ಇದಾನೀಂ ಸ್ವಸಂದೇಹಂ ಪ್ರಕ್ಷ್ಯಾಮಿ ತ್ವಾ ಪಿತಾಮಹ|
ಉಪೈತಿ ಸವಿತಾಪ್ಯಸ್ತಂ ರಸಮಾಪೀಯ ಪಾರ್ಥಿವಮ್ ॥29॥
ಎಲೈ ಪಿತಾಮಹನೇ! ಈಗ ಇರುವ ನನ್ನ ಸಂದೇಹವನ್ನು ನಾಳೆಯ ದಿನ ಪ್ರಶ್ನೆ ಮಾಡುವೆನು. ಸೂರ್ಯನು ಭೂಮಿಯ ರಸವನ್ನು ಹೀರಿ ಅಸ್ತಂಗತನಾಗುತ್ತಿದ್ದಾನೆ. (ಎಂದು ಹೇಳಿದನು).
ತತೋ ದ್ವಿಜಾತೀನಾಮಭಿವಾದ್ಯ ಕೇಶವಃ
ಕೃಪಶ್ಚ ತೇ ಚೈವ ಯುಧಿಷ್ಠಿರಾದಯಃ |
ಪ್ರದಕ್ಷಿಣೀಕೃತ್ಯ ಮಹಾನದೀಸುತಂ
ತತೋ ರಥಾನಾರುರುಹುರ್ಮುದಾ ಯುತಾಃ ॥30॥
ಅನಂತರ ಕೃಷ್ಣನೂ, ಕೃಪರೂ, ಯುಧಿಷ್ಠಿರಾದಿಗಳೂ, ಬ್ರಾಹ್ಮಣರನ್ನು ನಮ- ಸ್ಕರಿಸಿ ಮಹಾನದೀಪುತ್ರರಾದ ಭೀಷ್ಮರಿಗೆ ಪ್ರದಕ್ಷಿಣೆಯನ್ನು ಮಾಡಿ, ಸಂತೋಷದಿಂದ ಕೂಡಿ ತಮ್ಮ ತಮ್ಮ ರಥಗಳನ್ನು ಏರಿದರು.
ದೃಷದ್ವತೀಂ ಚಾಪ್ಯವಗಾಹ್ಯ ಸುವ್ರತಾಃ
ಕೃತೋದಕಾರ್ಯಾಃ ಕೃತಜಪ್ಯಮಂಗಲಾಃ |
ಉಪಾಸ್ಯಸಂಧ್ಯಾಂ ವಿಧಿವತ್ ಪರಂತಪಾಃ
ತತಃ ಪುರಂ ತೇ ವಿವಿಶುರ್ಗಜಾಹ್ವಯಮ್ ॥31॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಪಂಚಾಶೋಽಧ್ಯಾಯಃ ॥58॥
ಒಳ್ಳೆಯ ವ್ರತಧಾರಿಗಳಾದ ಅವರು ವೃಷದ್ವತೀನದಿಯನ್ನು ಸಮೀಪಿಸಿ, ಜಲ- ತರ್ಪಣಾದಿಗಳನ್ನು ಜಪಗಳನ್ನು ಮಂಗಳಕಾರ್ಯಗಳನ್ನು ಮಾಡಿ, ವಿಧಿವತ್ತಾಗಿ ಸಂಧ್ಯಾವಂದನೆಯನ್ನು ಆಚರಿಸಿ, ಅನಂತರ ಪರಂತಪರಾದ ಅವರು ಹಸ್ತಿನಪುರ- ವನ್ನು ಪ್ರವೇಶಿಸಿದರು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 58ನೆಯ ಅಧ್ಯಾಯವು ಮುಗಿಯಿತು
0
59. ಐವತ್ತೊಂಭತ್ತನೆಯ ಅಧ್ಯಾಯ

ಭೀಷ್ಮರಿಂದ ರಾಜೋತ್ಪತ್ತಿಯ ಬ್ರಹ್ಮಕೃತದಂಡನೀತಿಶಾಸ್ತ್ರದ
ಮತ್ತು ಪೃಥುರಾಜಚರಿತ್ರೆಯ ಕಥನ
ವೈಶಂಪಾಯನಃ
ತತಃ ಕಾಲ್ಯಂ ಸಮುತ್ಥಾಯ ಕೃತಪೌರ್ವಾಹ್ಣಿಕಕ್ರಿಯಾಃ |
ಯಯುಸ್ತೇ ನಗರಾಕಾರೈ ರಥೈಃ ಪಾಂಡವಯಾದವಾಃ ॥1॥
ವೈಶಂಪಾಯನರು  ಅನಂತರ ಪಾಂಡವ-ಯಾದವರು ಪ್ರಾತಃಕಾಲದಲ್ಲಿ ಬೇಗ ಎದ್ದು ಪೂರ್ವಾಹ್ಣಿಕಕ್ರಿಯೆಗಳನ್ನು ಮಾಡಿ ನಗರದಂತಿದ್ದ ರಥಗಳಿಂದ ಹೊರಟರು.
ಪ್ರಪದ್ಯ ಚ ಕುರುಕ್ಷೇತ್ರಂ ಭೀಷ್ಮಮಾಸಾದ್ಯ ಚಾನಘಮ್ |
ಸುಖಾಂ ಚ ರಜನೀಂ ಪೃಷ್ಟ್ವಾ  ಗಾಂಗೇಯಂ ರಥಿನಾಂವರಮ್ ॥2॥
ವ್ಯಾಸಾದೀನಭಿವಾದ್ಯರ್ಷೀನ್ ಸರ್ವೈಸ್ತೈಶ್ಚಾಭಿನಂದಿತಾಃ |
ನಿಷೇದುರಭಿತೋ ಭೀಷ್ಮಂ ಪರಿವಾರ್ಯ ಸಮಂತತಃ ॥3॥
ಕುರುಕ್ಷೇತ್ರವನ್ನು ತಲುಪಿ, ಅನಘರಾದ ಭೀಷ್ಮರನ್ನು ಸಮೀಪಿಸಿ, ರಥಿಕರಲ್ಲಿ ಶ್ರೇಷ್ಠರಾದ ಭೀಷ್ಮರನ್ನು ರಾತ್ರಿಯ ಕುಶಲಪ್ರಶ್ನೆಯನ್ನು ಮಾಡಿ, ವ್ಯಾಸಾದಿ ಮಹರ್ಷಿ -ಗಳನ್ನು ನಮಸ್ಕರಿಸಿ, ಅವರೆಲ್ಲರಿಂದಲೂ ಅಭಿನಂದಿಸಲ್ಪಟ್ಟು ಭೀಷ್ಮರನ್ನು ಸುತ್ತು- ವರಿದು ಕುಳಿತುಕೊಂಡರು.
ತತೋ ರಾಜಾ ಮಹಾತೇಜಾ ಧರ್ಮರಾಜೋ ಯುಧಿಷ್ಠಿರಃ |
ಅಬ್ರವೀತ್ ಪ್ರಾಂಜಲಿರ್ಭೀಷ್ಮಂ ಪ್ರತಿಪೂಜ್ಯಾಭಿವಾದ್ಯ ಚ ॥4॥
ಅನಂತರ ಮಹಾತೇಜಸ್ವಿಯೂ ಧರ್ಮರಾಜನೂ ಆದ ಯುಧಿಷ್ಠಿರನು ಭೀಷ್ಮರನ್ನು ನಮಸ್ಕರಿಸಿ, ಕೈಗಳನ್ನು ಮುಗಿದು ಮಾತನಾಡಿದನು.
ಯ ಏಷ ರಾಜಾ ರಾಜೇತಿ ಶಬ್ದಶ್ಚರತಿ ಭಾರತ |
ಕಥಮೇಷ ಸಮುತ್ಪನ್ನಸ್ತನ್ಮೇ ಬ್ರೂಹಿ ಪಿತಾಮಹ ॥5॥
ಎಲೈ ಭಾರತನೇ! ಪಿತಾಮಹನೇ! `ಈ ರಾಜ ರಾಜ ಎಂಬ ಶಬ್ದವು ಬಳಕೆ- ಯಲ್ಲಿದೆಯಷ್ಟೇ! ಈ ಶಬ್ದವು ಹೇಗೆ ಉತ್ಪನ್ನವಾಯಿತು?' ಎಂಬುದನ್ನು ನನಗೆ ಹೇಳು.
ತುಲ್ಯಪಾಣಿಶಿರೋಗ್ರೀವಸ್ತುಲ್ಯಬುದ್ಧೀಂದ್ರಿಯಾತ್ಮಕಃ |
ತುಲ್ಯದುಃಖಸುಖಾತ್ಮಾ ಚ ತುಲ್ಯಪೃಷ್ಠಭುಜೋದರಃ ॥6॥
ತುಲ್ಯಶುಕ್ರಾಸ್ಥಿಮಜ್ಜಶ್ಚ ತುಲ್ಯಮಾಂಸಾಸೃಗೇವ ಚ |
ನಿಃಶ್ವಾಸೋಚ್ಛ್ವಾಸತುಲ್ಯಶ್ಚ ತುಲ್ಯಪ್ರಾಣಶರೀರವಾನ್ ॥7॥
ಸಮಾನಜನ್ಮಮರಣಃ ಸಮಃ ಸರ್ವಗುಣೈರ್ನೃಣಾಮ್ |
ವಿಶಿಷ್ಟಬುದ್ಧೀನ್ ಶೂರಾಂಶ್ಚ  ಕಥಮೇಕೋಽಧಿತಿಷ್ಠತಿ ॥8॥
ಸಮಾನವಾದ ಹಸ್ತಶಿರೋಗ್ರೀವಗಳು, ಸಮಾನವಾದ ಬುದ್ಧೀಂದ್ರಿಯಗಳು, ಸಮಾನವಾದ ಸುಖದುಃಖಗಳು, ಸಮಾನವಾದ ಬೆನ್ನು ಭುಜ ಮತ್ತು ಉದರಗಳು, ಸಮಾನವಾದ ಶುಕ್ಲ ಅಸ್ಥಿ ಮಜ್ಜಗಳು, ಸಮಾನವಾದ ಮಾಂಸರಕ್ತಗಳು, ಸಮಾನ- ವಾದ ಉಚ್ಛ್ವಾಸ ನಿಶ್ವಾಸಗಳು, ಸಮಾನವಾದ ಪ್ರಾಣಶರೀರಗಳು, ಸಮಾನವಾದ ಜನ್ಮಮರಣಗಳು ಹೀಗಿದ್ದು ಎಲ್ಲ ಗುಣಗಳಿಂದಲೂ ಉಳಿದ ಮನುಷ್ಯರಿಗೆ ಸಮಾನನಾಗಿರುವ ಒಬ್ಬನು ಮೇಧಾವಿಗಳಾದ ಶೂರರಾದ ಅನೇಕರ ಮೇಲೆ ಹೇಗೆ ಅವರನ್ನು ಮೆಟ್ಟಿ ನಿಲ್ಲುತ್ತಾನೆ?
ಕಥಮೇಕೋ ಮಹೀಂ ಕೃತ್ಸ್ನಾಂ ವೀರಶೂರಾರ್ಯಸಂಕುಲಾಮ್ |
ರಕ್ಷತ್ಯಪಿ ಚ ಲೋಕೋಽಸ್ಯ ಪ್ರಸಾದಮಭಿವಾಂಛತಿ ॥9॥
ವೀರ, ಶೂರ ಮತ್ತು ಶ್ರೇಷ್ಠರಿಂದ ನಿಬಿಡವಾದ ಸಮಗ್ರವಾದ ಭೂಮಿಯನ್ನು ಒಬ್ಬನೇ ಹೇಗೆ ರಕ್ಷಿಸುತ್ತಾನೆ? ಲೋಕವಾದರೂ ಅವನ ಅನುಗ್ರಹವನ್ನು ಹೇಗೆ ಬಯಸುತ್ತದೆ?
ಏಕಸ್ಯ ಚ ಪ್ರಸಾದೇನ ಕೃತ್ಸ್ನೋ ಲೋಕಃ ಪ್ರಸೀದತಿ |
ವ್ಯಾಕುಲೇನಾಕುಲಃ ಸರ್ವೋ ಭವತೀತಿ ವಿನಿಶ್ಚಿತಃ ॥10॥
ಅವನೊಬ್ಬನು ಪ್ರಸನ್ನನಾದರೆ ಲೋಕವೆಲ್ಲವೂ ಪ್ರಸನ್ನವಾಗುತ್ತದೆ. ಅವನು ವ್ಯಾಕುಲಗೊಂಡರೆ ಸರ್ವವೂ ವ್ಯಾಕುಲವಾಗುತ್ತದೆ ಎಂಬುದು ನಿಶ್ಚಿತವಾದುದು.
ಏತದಿಚ್ಛಾಮ್ಯಹಂ ಸರ್ವಂ ತತ್ತ್ವೇನ ಭರತರ್ಷಭ |
ಶ್ರೋತುಂ ತನ್ಮೇ ಯಥಾತತ್ತ್ವಂ ಪ್ರಬ್ರೂಹಿ ವದತಾಂವರ ॥11॥
ಎಲೈ ಭರತರ್ಷಭನೇ! ಇದನ್ನು ನಾನು ಯಥಾರ್ಥವಾಗಿ ತಿಳಿಯಲು ಬಯ- ಸುತ್ತೇನೆ. ಎಲೈ ಮಾತನಾಡುವವರಲ್ಲಿ  ಶ್ರೇಷ್ಠನೇ! ಅದನ್ನು ನನಗೆ ಯಥಾರ್ಥ- ವಾಗಿ ಹೇಳುವವನಾಗು.
ನೈತತ್ ಕಾರಣಮಲ್ಪಂ ಹಿ ಭವಿಷ್ಯತಿ ವಿಶಾಂಪತೇ |
ಯದೇಕಸ್ಮಿನ್ ಜಗತ್ ಸರ್ವಂ ದೇವವದ್ ಯಾತಿ ಸನ್ನತಿಮ್ ॥12॥
ಎಲೈ ರಾಜನೇ! ಒಬ್ಬ ವ್ಯಕ್ತಿಯಲ್ಲಿ ಸಮಸ್ತವಾದ ಜಗತ್ತು ದೇವನಂತೆ ಸನ್ನತಿ- ಯನ್ನು ಹೊಂದುವುದಕ್ಕೆ ಅಲ್ಪವಾದ ಕಾರಣವು ಇರಲಾರದು.
ಭೀಷ್ಮಃ
ನಿಯತಸ್ತ್ವಂ ನರಶ್ರೇಷ್ಠ ಶೃಣು ಸರ್ವಮಶೇಷತಃ |

ಯಥಾ ರಾಜ್ಯಂ ಸಮುತ್ಪನ್ನಮಾದೌ ಕೃತಯುಗೇಽಭವತ್ ॥13॥
ಭೀಷ್ಮರು ಎಲೈ ನರಶ್ರೇಷ್ಠನೇ! ನೀನು ಕೃತಯುಗದಲ್ಲಿ ಮೊದಲು ಹೇಗೆ ರಾಜ್ಯವು ಉತ್ಪನ್ನವಾಯಿತು ಎಂಬುದನ್ನು ನಿಯಮಬದ್ಧನಾಗಿ ಕೇಳು.
ನೈವ ರಾಜ್ಯಂ ನ ರಾಜಾಸೀನ್ನ ದಂಡೋ ನ ಚ ದಾಂಡಿಕಃ |
ಧರ್ಮೇಣೈವ ಪ್ರಜಾಃ ಸರ್ವಾ ರಕ್ಷಂತಿ ಚ ಪರಸ್ಪರಮ್ ॥14॥
ಆಗ ರಾಜ್ಯವಾಗಲೀ, ರಾಜನಾಗಲೀ, ದಂಡವಾಗಲೀ, ದಂಡವನ್ನು ಕೊಡು- ವವನಾಗಲೀ ಇರಲಿಲ್ಲ. ಪ್ರಜೆಗಳು ಧರ್ಮದಿಂದಲೇ ಪರಸ್ಪರವಾಗಿ ರಕ್ಷಿಸಿಕೊಳ್ಳು- ತ್ತಿದ್ದರು.
ಪಾಲಯಾನಾಸ್ತಥಾನ್ಯೋನ್ಯಂ ನರಾ ಧರ್ಮೇಣ ಭಾರತ |
ಖೇದಂ ಪರಮಮಾಜಗ್ಮುಸ್ತತಸ್ತಾನ್ ಮೋಹ ಆವಿಶತ್ ॥15॥
ಎಲೈ ಭಾರತನೇ! ಮನುಷ್ಯರು ಧರ್ಮದಿಂದ ಅನ್ಯೋನ್ಯವಾಗಿ ಪಾಲನೆ ಮಾಡುತ್ತಿದ್ದಾಗ ಅವರಿಗೆ ಬಹಳ ಖೇದವುಂಟಾಯಿತು. ಅನಂತರ ಅದರಿಂದ ಮೋಹ ಎಂದರೆ ಭ್ರಾಂತಿಯುಂಟಾಯಿತು.
ತೇ ಮೋಹವಶಮಾಪನ್ನಾ ಮಾನವಾ ಮನುಜರ್ಷಭ |
ಪ್ರತಿಪತ್ತಿವಿಮೋಹಾಚ್ಚ ಧರ್ಮಸ್ತೇಷಾಮನೀನಶತ್ ॥16॥
ಎಲೈ ಮನುಜಶ್ರೇಷ್ಠನೇ! ಮೋಹವಶರಾದ ಮಾನವರು ಕರ್ತವ್ಯ ಅಕರ್ತವ್ಯ ಪ್ರಜ್ಞೆಯನ್ನು ಕಳೆದುಕೊಂಡರು. ಅದರಿಂದ ಅವರ ಧರ್ಮವು ನಾಶವನ್ನು ಹೊಂದಿತು.
ನಷ್ಟಾಯಾಂ ಪ್ರತಿಪತ್ತೌ ತು ಮೋಹವಶ್ಯಾ ನರಾಸ್ತದಾ |
ಲೋಭಸ್ಯ ವಶಮಾಪನ್ನಾಃ ಸರ್ವೇ ಭರತಸತ್ತಮ ॥17॥
ಎಲೈ ಭಾರತಶ್ರೇಷ್ಠನೇ! ಆಗ ಅಂತಹ ವಿವೇಕವು ನಷ್ಟವಾಗುತ್ತಿರಲು ಮೋಹಕ್ಕೆ ವಶರಾದ ಮಾನವರೆಲ್ಲರೂ ಹೊಸದಾಗಿ ಲೋಭಕ್ಕೆ ವಶರಾದರು.
ಅಪ್ರಾಪ್ತಸ್ಯಾಭಿಮರ್ಶಂ ತು ಕುರ್ವಂತೋ ಮನುಜಾಸ್ತತಃ |
ಕಾಮೋ ನಾಮಾಪರಸ್ತತ್ರ ಸಮಪದ್ಯತ ವೈ ಪ್ರಭೋ ॥18॥
ಮನುಷ್ಯರು ಆಗ ತಮಗೆ ದೊರೆಯದ ವಸ್ತುವನ್ನು ಪಡೆಯಲು ಪ್ರಯತ್ನ ಮಾಡಿದರು. ಎಲೈ ಪ್ರಭುವೇ! ಆಗ ಕಾಮ ಎಂಬ ಇನ್ನೊಂದು ದೋಷವು ಜನಿಸಿತು.
ತಾಂಸ್ತು ಕಾಮವಶಂ ಪ್ರಾಪ್ತಾನ್ ರಾಗೋ ನಾಮ ಸಮಸ್ಪೃಶತ್ |
ರಕ್ತಾಶ್ಚ ನಾಭ್ಯಜಾನಂತ ಕಾರ್ಯಾಕಾರ್ಯೇ ಯುಧಿಷ್ಠಿರ ॥19॥
ಕಾಮವಶರಾದ ಆ ಮಾನವರನ್ನು ರಾಗ (ಅತಿಯಾಸೆ) ಎಂಬ ಇನ್ನೊಂದು ದೋಷವು ಸೇರಿಕೊಂಡಿತು. ಎಲೈ ಯುಧಿಷ್ಠಿರನೇ! ಅಂತಹ ರಾಗಕ್ಕೆ ವಶರಾದ ಮಾನವರು ಕಾರ್ಯಾಕಾರ್ಯಗಳನ್ನು ತಿಳಿಯಲಿಲ್ಲ.
ಅಗಮ್ಯಾಗಮನಂ ಚೈವ ವಾಚ್ಯಾವಾಚ್ಯಂ ತಥೈವ ಚ |
ಭಕ್ಷ್ಯಾಭಕ್ಷ್ಯಂ ಚ ರಾಜೇಂದ್ರ ದೋಷಾದೋಷಂ ಚ ನಾತ್ಯಜನ್ ॥20॥
ಎಲೈ ರಾಜೇಂದ್ರನೇ! ಅವರು ಗಮ್ಯ-ಅಗಮ್ಯಗಮನಗಳನ್ನು, ವಾಚ್ಯ-ಅವಾಚ್ಯ -ಗಳನ್ನು, ಭಕ್ಷ್ಯ-ಅಭಕ್ಷ್ಯಗಳನ್ನು,
ದೋಷ-ಅದೋಷಗಳನ್ನು ಯಾವುದನ್ನೂ ಬಿಡಲಿಲ್ಲ.
ವಿಪ್ಲುತೇ ನರಲೋಕೇಽಸ್ಮಿಂಸ್ತತೋ ಬ್ರಹ್ಮ ನನಾಶ ಹ |
ನಾಶಾಚ್ಚ ಬ್ರಹ್ಮಣೋ ರಾಜನ್ ಧರ್ಮೋ ನಾಶಮಥಾಗಮತ್ ॥21॥
ಈ ನರಲೋಕವು ವಿಪ್ಲವಕ್ಕೆ ಒಳಗಾಗುತ್ತಿರಲು ವೇದವು ನಾಶವನ್ನು ಹೊಂದಿತು. ಎಲೈ ರಾಜನೇ! ವೇದಗಳ ನಾಶದಿಂದ ಧರ್ಮವು ನಾಶವನ್ನು ಹೊಂದಿತು.
ನಷ್ಟೇ ಬ್ರಹ್ಮಣಿ ಧರ್ಮೇ ಚ ದೇವಾಸ್ತ್ರಾಸಮಥಾಗಮನ್ |
ತೇ ತ್ರಸ್ತಾ ನರಶಾರ್ದೂಲ ಬ್ರಹ್ಮಾಣಂ ಶರಣಂ ಯಯುಃ ॥22॥
ವೇದವು ಮತ್ತು ಧರ್ಮವು ನಾಶವನ್ನು ಹೊಂದುತ್ತಿರಲು ದೇವತೆಗಳು ಗಾಬರಿ -ಗೊಂಡರು. ಎಲೈ ನರಶಾರ್ದೂಲನೇ! ಗಾಬರಿಗೊಂಡ ಅವರು ಬ್ರಹ್ಮದೇವರಿಗೆ ಶರಣಾಗತರಾದರು.
ಪ್ರಪದ್ಯ ಭಗವಂತಂ ತೇ ದೇವಾ ಲೋಕಪಿತಾಮಹಮ್ |
ಊಚುಃ ಪ್ರಾಂಜಲಯಃ ಸರ್ವೇ ದುಃಖಶೋಕಭಯಾರ್ದಿತಾಃ ॥23॥
ದುಃಖಶೋಕಭಯಗಳಿಂದ ಕೂಡಿದ ಆ ದೇವತೆಗಳೆಲ್ಲರೂ ಪೂಜ್ಯರಾದ ಲೋಕಪಿತಾಮಹರಾದ ಬ್ರಹ್ಮದೇವರ ಬಳಿಯಲ್ಲಿ ಹೋಗಿ, ಕೈಗಳನ್ನು ಮುಗಿದು ಮಾತನಾಡಿದರು.
ಭಗವನ್ ನರಲೋಕಸ್ಥಂ ನಷ್ಟಂ ಬ್ರಹ್ಮ ಸನಾತನಮ್ |
ಲೋಭಮೋಹಾದಿಭಿರ್ಭಾವೈಸ್ತತೋ ನೋ ಭಯಮಾವಿಶತ್ ॥24॥
ಪೂಜ್ಯನೇ! ಮನುಷ್ಯಲೋಕದಲ್ಲಿದ್ದ ಶಾಶ್ವತವಾದ ವೇದವು ಲೋಭ, ಮೋಹ ಮೊದಲಾದ ದುಷ್ಟಭಾವನೆಗಳಿಂದ ನಷ್ಟವಾಗಿದೆ. ಅದರಿಂದ ನಮಗೆ ಭಯ- ವುಂಟಾಗಿದೆ.
ಬ್ರಹ್ಮಣಶ್ಚ ಪ್ರಣಾಶೇನ ಧರ್ಮೋಽಪ್ಯನಶದೀಶ್ವರ |
ತತಃ ಸ್ಮ ಸಮತಾಂ ಯಾತಾ ಮರ್ತ್ಯೈಸ್ತ್ರಿಭುವನೇಶ್ವರ ॥25॥
ಎಲೈ ಈಶ್ವರನೇ! ವೇದಗಳ ನಾಶದಿಂದ ಧರ್ಮವು ನಾಶವನ್ನು ಹೊಂದಿದೆ. ಎಲೈ ತ್ರಿಭುವನೇಶ್ವರನೇ! ಅದರಿಂದ ನಾವು ಮನುಷ್ಯರಿಗೆ

ಸಮಾನರಾಗಿ ಮಾಡ- ಲ್ಪಟ್ಟಿದ್ದೇವೆ.
ಅಧೋ ಹಿ ವರ್ಷಮಸ್ಮಾಕಂ ಭೌಮಾಸ್ತೂರ್ಧ್ವಪ್ರಹರ್ಷಿಣಃ |
ಕ್ರಿಯಾವ್ಯುಪರಮಾತ್ ತೇಷಾಂ ತತೋಽಗಚ್ಛಾಮ ಸಂಶಯಮ್ ॥26॥
ನಾವು ಕೆಳಗಡೆಗೆ ಎಲ್ಲವನ್ನೂ ಸುರಿಸುವವರು. ಭೂಮಿಯಲ್ಲಿರುವವರು ಯಜ್ಞಾದಿಗಳಿಂದ ಊರ್ಧ್ವಲೋಕದಲ್ಲಿರುವ ದೇವತೆಗಳನ್ನು ಸಂತೋಷಗೊಳಿಸು- ವವರು. ಆದರೆ ಭೂಮಿಯಲ್ಲಿರುವ ಮನುಷ್ಯರ ಕ್ರಿಯಾಲೋಪದಿಂದ ನಾವು ಈಗ ಸಂಶಯಕ್ಕೆ ಒಳಗಾಗಿದ್ದೇವೆ.
ಅತ್ರ ನಿಶ್ರೇಯಸಂ ಯನ್ನಸ್ತದ್ ಧ್ಯಾಯಸ್ವ ಪಿತಾಮಹ |
ತ್ವತ್ಪ್ರಸಾದಸಮುತ್ಥೋಽಸೌ ಪ್ರಭಾವೋ ನೋ ವಿನಶ್ಯತಿ ॥27॥
ಎಲೈ ಪಿತಾಮಹರೇ! ಈ ವಿಷಯದಲ್ಲಿ ಯಾವುದು ನಮಗೆ ಶ್ರೇಯಸ್ಕರವೋ ಅದನ್ನು ಚಿಂತಿಸಿ. ಇಲ್ಲದಿದ್ದರೆ ನಿಮ್ಮ ಅನುಗ್ರಹದಿಂದ ಉಂಟಾದ ನಮ್ಮ ಈ ಮಹಿಮೆಯು ನಾಶವನ್ನು ಹೊಂದುತ್ತದೆ ಎಂದು ಹೇಳಿದರು.
ತಾನುವಾಚ ಸುರಾನ್ ಸರ್ವಾನ್ ಸ್ವಯಂಭೂರ್ಭಗವಾಂಸ್ತತಃ |
ಶ್ರೇಯೋಽಹಂ ಚಿಂತಯಿಷ್ಯಾಮಿ ವ್ಯೇತು ವೋ ಭೀಃ ಸುರರ್ಷಭಾಃ ॥28॥
ಸ್ವಯಂಭುಗಳಾದ ಪೂಜ್ಯರಾದ ಬ್ರಹ್ಮದೇವರು ಆ ಎಲ್ಲ ದೇವತೆಗಳನ್ನು ಕುರಿತು ಎಲೈ ದೇವಶ್ರೇಷ್ಠರೇ! ನಿಮ್ಮ ಮನಸ್ಸಿನ ಭಯವನ್ನು ಬಿಡಿ. ನಿಮ್ಮ ಶ್ರೇಯಸ್ಸನ್ನು ನಾನು ಚಿಂತಿಸುವೆನು. (ಎಂದು ಹೇಳಿದರು).
ತತೋಽಧ್ಯಾಯಸಹಸ್ರಾಣಾಂ ಶತಂ ಚಕ್ರೇ ಸ್ವಬುದ್ಧಿಜಮ್ |
ಯತ್ರ ಧರ್ಮಸ್ತಥೈವಾರ್ಥಃ ಕಾಮಶ್ಚೈವಾನುವರ್ಣಿತಃ ॥29॥
ಅನಂತರ ಒಂದು ಲಕ್ಷಗ್ರಂಥಪರಿಮಿತವಾದ ಪಂಚರಾತ್ರಶಾಸ್ತ್ರವನ್ನು ಅವರು ತಮ್ಮ ಬುದ್ಧಿಯಿಂದ ರಚಿಸಿದರು. ಅದರಲ್ಲಿ ಧರ್ಮವೂ, ಅರ್ಥವೂ ಮತ್ತು ಕಾಮವೂ ಚೆನ್ನಾಗಿ ವರ್ಣಿತವಾಗಿದೆ. (ಲಕ್ಷಾಲಂಕಾರ)
ತ್ರಿವರ್ಗ ಇತಿ ವಿಖ್ಯಾತೋ ಗಣ ಏಷ ಸ್ವಯಂಭುವಾ |
ಚತುರ್ಥೋ ಮೋಕ್ಷ ಇತ್ಯೇವ ಪೃಥಗರ್ಥಃ ಪೃಥಗ್ ಗಣಃ ॥30॥
ತ್ರಿವರ್ಗ ಎಂದು ಪ್ರಖ್ಯಾತವಾದ ಈ ಗಣವು ಬ್ರಹ್ಮದೇವರಿಂದ ವಿಭಜಿಸಲ್ಪಟ್ಟಿದೆ. ನಾಲ್ಕನೆಯದಾದ ಮೋಕ್ಷವು ಇನ್ನೊಂದು ಪುರುಷಾರ್ಥ. ಅದರ ಗಣವೇ ಪ್ರತ್ಯೇಕ- ವಾದುದು.
ಮೋಕ್ಷಸ್ಯಾಪಿ ತ್ರಿವರ್ಗೋಽನ್ಯಃ ಪ್ರೋಕ್ತಃ ಸತ್ತ್ವಂ ರಜಸ್ತಮಃ |
ಸ್ಥಾನಂ ವೃದ್ಧಿಃ ಕ್ಷಯಶ್ಚೈವ ತ್ರಿವರ್ಗಶ್ಚೈವ ದಂಡಜಃ ॥31॥
ಮೋಕ್ಷಕ್ಕೂ ಸಹ ಶಾಸ್ತ್ರಾಭ್ಯಾಸ, ಧ್ಯಾನ, ಅಪರೋಕ್ಷಜ್ಞಾನ ಎಂಬ ಬೇರೆಯ ತ್ರಿವರ್ಗವಿದೆ. ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಇನ್ನೊಂದು ತ್ರಿವರ್ಗವಿದೆ. ಸ್ಥಾನ, ವೃದ್ಧಿ ಮತ್ತು ಕ್ಷಯ ಎಂಬ ದಂಡನೀತಿಗೆ ಸಂಬಂಧಿಸಿದ ಇನ್ನೊಂದು ತ್ರಿವರ್ಗ- ವೂ ಇದೆ.
ಆತ್ಮಾ ದೇಶಶ್ಚ ಕಾಲಶ್ಚಾಪ್ಯುಪಾಯಾಃ ಕೃತ್ಯಮೇವ ಚ |
ಸಹಾಯಾಃ ಕಾರಣಂ ಚೈವ ಷಡ್ವರ್ಗೋ ನೀತಿಜಃ ಸ್ಮೃತಃ ॥32॥
ಆತ್ಮಾ ಅಂದರೆ ತಾನು, ದೇಶ, ಕಾಲ, ಉಪಾಯ, ಕಾರ್ಯ, ಸಹಾಯಗಳೆಂಬ ಕಾರಣ ಎಂಬ ಷಡ್ವರ್ಗವು ರಾಜನೀತಿಗೆ ಸಂಬಂಧಿಸಿವೆ.
ತ್ರಯೀ ಚಾನ್ವೀಕ್ಷಿಕೀ ಚೈವ ವಾರ್ತಾ ಚ ಭರತರ್ಷಭ |
ದಂಡನೀತಿಶ್ಚ ವಿಪುಲಾ ವಿದ್ಯಾಸ್ತತ್ರ ನಿದರ್ಶಿತಾಃ ॥33॥
ಎಲೈ ಭರತಶ್ರೇಷ್ಠನೇ! ವೇದವಿದ್ಯೆ, ತರ್ಕವಿದ್ಯೆ, ವಾಣಿಜ್ಯವಿದ್ಯೆ, ದಂಡನೀತಿ ಈ ವಿಪುಲವಾದ ವಿದ್ಯೆಗಳು ಬ್ರಹ್ಮದೇವರು ರಚಿಸಿದ ದಂಡನೀತಿಶಾಸ್ತ್ರದಲ್ಲಿ ಪ್ರದರ್ಶಿಸಲ್ಪಟ್ಟಿವೆ.
ಅಮಾತ್ಯರಕ್ಷಾಪ್ರಣಿಧೀ ರಾಜಪುತ್ರಸ್ಯ ರಕ್ಷಣಮ್ |
ಚಾರಶ್ಚ ವಿವಿಧೋಪಾಯಃ ಪ್ರಣಿಧಿಶ್ಚ ಪೃಥಗ್ವಿಧಃ ॥34॥
ಸಾಮ ಚೋಪಪ್ರದಾನಂ ಚ ಭೇದೋ ದಂಡಶ್ಚ ಪಾಂಡವ |
ಉಪೇಕ್ಷಾ ಪಂಚಮೀ ಚಾತ್ರ ಕಾರ್ತ್ಸ್ನ್ಯೇನ ಸಮುದಾಹೃತಾ ॥35॥
ಅಮಾತ್ಯರು, ರಕ್ಷಣೆ, ದೇವತಾಪ್ರಾರ್ಥನೆ, ರಾಜಪುತ್ರನ ರಕ್ಷಣೆ, ಗೂಢ- ಚಾರರು(ಭಟರು), ವಿವಿಧೋಪಾಯಗಳು, ವಿವಿಧವಾದ ಗೂಢಚಾರರು, ಸಾಮ, ದಾನ, ಭೇದ, ದಂಡ, ಉಪೇಕ್ಷಾ ಎಂಬ ಐದನೆಯ ಉಪಾಯ ಎಲ್ಲವೂ ಸಮಗ್ರ- ವಾಗಿ ಅಲ್ಲಿ ನಿರೂಪಿಸಲ್ಪಟ್ಟಿವೆ.
ಮಂತ್ರಶ್ಚ ವರ್ಣಿತಃ ಕೃತ್ಸ್ನಸ್ತಥಾ ಭೇದಾರ್ಥ ಏವ ಚ |
ವಿಭ್ರಂಶಶ್ಚೈವ ಮಂತ್ರಸ್ಯ ಸಿದ್ಧ್ಯಸಿದ್ಧ್ಯೋಶ್ಚ ಯತ್ ಫಲಮ್ ॥36॥
ಸಂಧಿಶ್ಚ ತ್ರಿವಿಧಾಭಿಖ್ಯೋ ಹೀನೋ ಮಧ್ಯಸ್ತಥೋತ್ತಮಃ |
ಭಯಸತ್ಕಾರವಿತ್ತಾಖ್ಯಃ ಕಾರ್ತ್ಸ್ನ್ಯೇನ ಪರಿವರ್ಣಿತಃ ॥37॥
ಮಂತ್ರಾಲೋಚನೆಗಳು ಸಮಗ್ರವಾಗಿ ಅಲ್ಲಿ ವರ್ಣಿತವಾಗಿವೆ. ಅದರಂತೆ ಭೇದ -ರೂಪ ಉಪಾಯವು, ಮಂತ್ರದ ಭ್ರಂಶದಿಂದುಂಟಾಗುವ ಸಿದ್ಧ್ಯಸಿದ್ಧಿಗಳು, ಅದರ ಫಲ ಉತ್ತಮ ಮಧ್ಯಮ ಮತ್ತು ಅಧಮ ಎಂಬ ಭಯ, ಸತ್ಕಾರ ಮತ್ತು ಧನದಿಂದ ಉಂಟುಮಾಡಿದ ಮೂರು ವಿಧವಾದ ಸಂಧಿಗಳು ಅಲ್ಲಿ ಸಮಗ್ರವಾಗಿ ವರ್ಣಿತ- ವಾಗಿವೆ. (ಧನವನ್ನು ಕೊಟ್ಟು ಸಂಧಿಮಾಡಿಕೊಳ್ಳುವುದು ಉತ್ತಮವಾದುದು. ಸತ್ಕಾರವನ್ನು ಪಡೆದು ಸಂಧಿಯನ್ನು ಮಾಡಿಕೊಳ್ಳುವುದು ಮಧ್ಯಮವಾದುದು. ಭಯದಿಂದ ಸಂಧಿಯನ್ನು ಮಾಡಿಕೊಳ್ಳುವುದು ಅಧಮವಾದುದು)
ಯಾತ್ರಾಕಾಲಾಶ್ಚ ಚತ್ವಾರಸ್ತ್ರಿವರ್ಗಸ್ಯ ಚ ವಿಸ್ತರಃ |
ವಿಜಯೋ ಧರ್ಮಯುಕ್ತಶ್ಚ ತಥಾರ್ಥವಿಜಯಶ್ಚ ಹ ॥38॥

ನಾಲ್ಕು ವಿಧವಾದ ಯಾತ್ರಾ ಕಾಲಗಳು, ಧರ್ಮಾರ್ಥಕಾಮರೂಪವಾದ ತ್ರಿವರ್ಗದ ವಿಸ್ತಾರವು, ಧರ್ಮೋಕ್ತವಾದ ವಿಜಯವು ಅರ್ಥವಿಜಯವು ಅಲ್ಲಿ ಹೇಳಲ್ಪಟ್ಟಿದೆ. (ಮಿತ್ರರ ವೃದ್ಧಿ, ತನ್ನ ಕೋಶದ ವೃದ್ಧಿ, ತನ್ನ ಶತ್ರುಗಳ ದೌರ್ಬಲ್ಯ ಅವರ ಕೋಶನಾಶ ಇವು ಯಾತ್ರಾಕಾಲ ಎಂದರೆ ಯುದ್ಧಕ್ಕೆ ಹೊರಡಲು ಉಚಿತ- ವಾದ ನಾಲ್ಕು ಕಾಲಗಳು)
ಆಸುರಶ್ಚೈವ ವಿಜಯಸ್ತಥಾ ಕಾರ್ತ್ಸ್ನ್ಯೇನ ವರ್ಣಿತಃ |
ಲಕ್ಷಣಂ ಪಂಚವರ್ಗಸ್ಯ ತ್ರಿವಿಧಂ ಚಾತ್ರ ವರ್ಣಿತಮ್ ॥39॥
ಆಸುರವಿಧಾನದ ವಿಜಯವು ಅಲ್ಲಿ ಸಮಗ್ರವಾಗಿ ವರ್ಣಿತವಾಗಿದೆ. ಉತ್ತಮ- ಮಧ್ಯಮಾಧಮರೂಪವಾದ ಅಮಾತ್ಯ, ರಾಷ್ಟ್ರ, ದುರ್ಗ, ಸೇನೆ ಮತ್ತು ಕೋಶ- ವೆಂಬ ಪಂಚವರ್ಗದ ಲಕ್ಷಣವು ಅಲ್ಲಿ ಹೇಳಲ್ಪಟ್ಟಿದೆ.
ಪ್ರಕಾಶಶ್ಚಾಪ್ರಕಾಶಶ್ಚ ದಂಡೋಽಥ ಪರಿಶಬ್ದಿತಃ |
ಪ್ರಕಾಶೋಽಷ್ಟವಿಧಸ್ತತ್ರ ಗುಹ್ಯಸ್ತು ಬಹುವಿಸ್ತರಃ ॥40॥
ಪ್ರಕಾಶವಾದ ಮತ್ತು ರಹಸ್ಯವಾದ ದಂಡಗಳು ಅಲ್ಲಿ ಹೇಳಲ್ಪಟ್ಟಿವೆ. ಪ್ರಕಾಶ- ವಾದ ದಂಡವು ಅಷ್ಟವಿಧವಾದುದು, ರಹಸ್ಯವಾದ ದಂಡವು ಬಹಳ ವಿಸ್ತಾರವಾ- ದುದು.
ರಥಾ ನಾಗಾ ಹಯಾಶ್ಚೈವ ಪಾದಾತಾಶ್ಚೈವ ಪಾಂಡವ |
ವಿಷ್ಟಿರ್ನಾವಶ್ಚರಾಶ್ಚೈವ ದೇಶಿಕಾಃ ಇತಿ ಚಾಷ್ಟಕಮ್ ॥41॥
ಪ್ರಕಾಶರೂಪವಾದ ದಂಡವು(ಸೈನ್ಯವು) ರಥಗಳು, ಗಜಗಳು, ಅಶ್ವಗಳು, ಪದಾತಿಗಳು, ಭಾರವನ್ನು ಹೊರುವವರು, ನಾವಿಕರು, ಗೂಢಚಾರರು, ಆಚಾ- ರ್ಯರು ಎಂಬ ಎಂಟು ಅಂಗಗಳನ್ನು ಒಳಗೊಂಡಿದೆ.
ಅಂಗಾನ್ಯೇತಾನಿ ಕೌರವ್ಯ ಪ್ರಕಾಶಾನಿ ಬಲಸ್ಯ ತು |
ಜಂಗಮಾಜಂಗಮಾಶ್ಚೋಕ್ತಾಶ್ಚೂರ್ಣಯೋಗಾ ವಿಷಾದಯಃ ॥42॥
ಎಲೈ ಕೌರವ್ಯನೇ! ಇವು ಸೈನ್ಯದ ಪ್ರಕಾಶವಾದ ಅಂಗಗಳು. ಸರ್ಪ ಮೊದಲಾದ ಚಲಿಸುವ ಪ್ರಾಣಿಗಳ ವಿಷಗಳು, ಚೂರ್ಣಯೋಗ ಮೊದಲಾದ ಚಲಿಸದ ವಿಷಗಳು ಇವು ಸೈನ್ಯದ ರಹಸ್ಯವಾದ ಅಂಗಗಳು.
ಸ್ಪರ್ಶೇ ಚಾಭ್ಯವಹಾರ್ಯೇ ಚಾಪ್ಯುಪಾಂಶುರ್ವಿವಿಧಃ ಸ್ಮೃತಃ |
ಅರಿರ್ಮಿತ್ರಮುದಾಸೀನ ಇತ್ಯೇತೇಽಪ್ಯನುವರ್ಣಿತಾಃ ॥43॥
ದೇಹದ ಸಂಬಂಧದಿಂದ ಮರಣವನ್ನು ಉಂಟುಮಾಡುವ, ಅಥವಾ ಆಹಾರದಲ್ಲಿ ಬೆರೆತು ಮರಣವನ್ನು ಉಂಟುಮಾಡುವ ಈ ರಹಸ್ಯವಾದ ಅಂಗವು ಅನೇಕ ವಿಧವಾಗಿವೆ. ಶತ್ರು, ಮಿತ್ರ ಮತ್ತು ಉದಾಸೀನರು ಅದರಲ್ಲಿ ವರ್ಣಿಸಲ್ಪ- ಟ್ಟಿದ್ದಾರೆ.
ಕ್ರೀಡಾಪೂರ್ವೇ ರಣೇ ದ್ಯೂತೇ ವಿಸ್ರಂಭೇಣ ಸಮನ್ವಿತಮ್ |
ಉಕ್ತಂ ಕೈತವ್ಯಮಿತ್ಯೇತದುಪಾಯೋ ನವಮೋ ಬುಧೈಃ ॥44॥
ಕ್ರೀಡಾರೂಪವಾದ ರಣದಲ್ಲಿ ಅಥವಾ ದ್ಯೂತದಲ್ಲಿ ವಿಶ್ವಾಸದಿಂದ ಪಾಲ್ಗೊಂ- ಡವನನ್ನು ಕೊಲ್ಲುವ ಉಪಾಯಕ್ಕೆ ಕೈತವ್ಯ ಎಂದು ಹೆಸರು. ಇದನ್ನು ಜ್ಞಾನಿಗಳು ಒಂಬತ್ತನೆಯ ಉಪಾಯವೆಂದು ಕರೆಯುತ್ತಾರೆ.
ಉಪೇಕ್ಷಾ ಸರ್ವಕಾರ್ಯೇಷು ಕರ್ಮಣಾಂ ಕರಣೇಷು ಚ |
ಅನಿಷ್ಟಾನಾಂ ಸಮುತ್ಥಾನೇ ತ್ರಿವರ್ಗೋ ನಶ್ಯತೇ ಯಥಾ ॥45॥
ಎಲ್ಲ ಕಾರ್ಯಗಳ ವಿಷಯದಲ್ಲಿ ತನಗೆ ಸರಿಯಾದ ಸಂದರ್ಭವು ಒದಗುವವ -ವರೆಗೆ ಏನೂ ಮಾಡದೇ ಉದಾಸೀನವಾಗಿರುವುದು ಉಪೇಕ್ಷೆ. ಶತ್ರುಗಳಿಗೆ ಅನಿಷ್ಟವುಂಟಾಗಿ ತ್ರಿವರ್ಗವು ನಾಶವಾಗುವ ಸಮಯದವರೆಗೆ ಉಪೇಕ್ಷೆಯನ್ನು ಮಾಡಬೇಕು. (ಲಕ್ಷಾಲಂಕಾರ)
ಇಂದ್ರಜಾಲಾದಿಕಾ ಮಾಯಾ ವಾಗ್ಜೀವನಕುಶೀಲವೈಃ |
ಸುನಿಮಿತ್ತೈರ್ದುರ್ನಿಮಿತ್ತೈರುತ್ಪಾತೈಶ್ಚ ಸಮನ್ವಿತಮ್ ॥46॥
ಮಾತನ್ನು ಅವಲಂಬಿಸಿ ಜೀವನ ಮಾಡುವವರಿಂದ ಮತ್ತು ನಟರಿಂದ ಮಾಡ- ಲ್ಪಡುವ ಇಂದ್ರಜಾಲಾದಿರೂಪವಾದ ಮಾಯೆಗಳು ತನಗೆ ಒಳ್ಳೆಯ ಶಕುನಗಳು, ಶತ್ರುವಿಗೆ ಅಪಶಕುನಗಳು, ಮತ್ತು ತನ್ನ ಶುಭಗಳು ಶತ್ರುವಿನ ಅಶುಭಗಳು ಇವು ವರ್ಣಿಸಲ್ಪಟ್ಟಿವೆ.
ಡಂಭೋ ಲಿಂಗಂ ಸಮಾಶ್ರಿತ್ಯ ಶತ್ರುವರ್ಗೇ ಪ್ರಯುಜ್ಯತೇ |
ಶಾಠ್ಯೇ ನಿಶ್ಚೇಷ್ಟತಾ ಪ್ರೋಕ್ತಾ ಚಿತ್ತದೋಷಪ್ರದೂಷಿತಾ ॥47॥
ಸನ್ನ್ಯಾಸಾದಿ ವೇಷವನ್ನು ಧರಿಸಿ ಶತ್ರುವರ್ಗದಲ್ಲಿ ಪ್ರಯೋಗಿಸುವುದು; ಶತ್ರುವು ಶಾಠ್ಯವನ್ನು ಹೊಂದಿದಾಗ ತನಗೆ ಸರಿಯಾದ ಸಮಯವು ದೊರಕುವವರೆಗೂ ಏನನ್ನೂ ಮಾಡದೇ ನಿಶ್ಚೇಷ್ಟಿತನಾಗಿರುವುದು ವರ್ಣಿತವಾಗಿದೆ.
ಕೃತ್ಸ್ನಾ ಮಾರ್ಗಗುಣಾಶ್ಚೈವ ತಥಾ ಭೂಮಿಗುಣಾಶ್ಚ ಹ |
ಆತ್ಮರಕ್ಷಣಮಾಶ್ವಾಸಃ ಸ್ಪರ್ಶಾನಾಂ ಚಾನ್ವವೇಕ್ಷಣಮ್ ॥48॥
ಸಮಗ್ರವಾದ ಮಾರ್ಗಗುಣಗಳು, ಹಾಗೆಯೇ ಭೂಮಿಗುಣಗಳು, ತನ್ನನ್ನು ರಕ್ಷಣೆ ಮಾಡಿಕೊಳ್ಳುವ ವಿಧಾನ, ಪ್ರಜೆಗಳಲ್ಲಿ ವಿಶ್ವಾಸವು ಮೂಡುವಂತೆ ಮಾಡುವುದು, ಗೂಢಚಾರರ ಮೇಲ್ವಿಚಾರಣೆ,
ಕಲ್ಪನಾ ವಿವಿಧಾಶ್ಚಾಪಿ ನೃನಾಗರಥವಾಜಿನಾಮ್ |
ವ್ಯೂಹಾಶ್ಚ ವಿವಿಧಾಭಿಖ್ಯಾ ವಿಚಿತ್ರಂ ಯುದ್ಧಕೌಶಲಮ್ ॥49॥
ಪದಾತಿಗಳ, ಗಜಗಳ, ರಥಗಳ ಮತ್ತು ಅಶ್ವಗಳ ವಿವಿಧವಾದ ಅಭಿವೃದ್ಧಿ, ಚಕ್ರ -ವ್ಯೂಹ ಪದ್ಮವ್ಯೂಹ ಶ್ಯೇನವ್ಯೂಹ ಎಂಬ ಅನೇಕ ಹೆಸರಿನ ವ್ಯೂಹಗಳು, ವಿಚಿತ್ರ- ವಾದ ಯುದ್ಧಕೌಶಲ,
ಉತ್ಪಾತಾಶ್ಚ ನಿಪಾತಾಶ್ಚ ಸುಯುದ್ಧಂ ಸುಪಲಾಯನಮ್ |
ಶಸ್ತ್ರಾಣಾಂ ಪಾತನಜ್ಞಾನಂ ತಥೈವ ಭರತರ್ಷಭ ॥50॥
ಎಲೈ ಭರತರ್ಷಭನೇ! ಉತ್ಪಾತಗಳು, ನಿಪಾತಗಳು, ಒಳ್ಳೆಯ ಯುದ್ಧವನ್ನು ಮಾಡುವ ರೀತಿ, ಚೆನ್ನಾಗಿ ಪಲಾಯನವನ್ನು ಮಾಡುವ

ರೀತಿ, ಶಸ್ತ್ರಗಳಿಂದ ಪ್ರಹಾರ ಮಾಡುವ ರೀತಿ,
ಬಲವ್ಯಸನಮುಕ್ತಂ ಚ ತಥೈವ ಬಲಹರ್ಷಣಮ್ |
ಪೀಡನಾಸ್ಕಂದಕಾಲಶ್ಚ ಭಯಕಾಲಶ್ಚ ಪಾಂಡವ ||51||
ಎಲೈ ಪಾಂಡವನೇ! ಸೈನ್ಯದ ವ್ಯಸನಗಳು, ಸೈನ್ಯದ ಬಲವನ್ನು ಅಭಿವೃದ್ಧಿ- ಪಡಿಸುವುದು, ಶತ್ರುಗಳನ್ನು ಪೀಡಿಸಿ ನಾಶಮಾಡುವ ಕಾಲ, ಶತ್ರುಗಳಿಗೆ ಭಯ- ವನ್ನುಂಟು ಮಾಡುವ ಕಾಲ ಇವು ಹೇಳಲ್ಪಟ್ಟಿವೆ.
ತಥಾ ಯಾನತದಾತ್ವಂ ಚ ಯೋಗಸಂಚಾರ ಏವ ಚ |
ಚೌರಾಟವ್ಯಬಲೈಶ್ಚೋಗ್ರೈಃ ಪರರಾಷ್ಟ್ರಸ್ಯ ಪೀಡನಮ್ ||52||
ಹಾಗೆಯೇ ಯಾನಗಳನ್ನು ಯಾವಾಗಲೂ ಸಿದ್ಧವಾಗಿಟ್ಟಿರುವುದು, ಯೋಗ- ಗಳನ್ನು ಪ್ರಯೋಗಿಸುವುದು, ಕಳ್ಳರಿಂದ ವನವಾಸಿಗಳಿಂದ ಉಗ್ರವಾದ ಸೈನ್ಯದಿಂದ ಶತ್ರುರಾಷ್ಟ್ರದ ಪೀಡನೆಯನ್ನು ಮಾಡುವುದು,
ಅಗ್ನಿದೈರ್ಗರದೈಶ್ಚೈವ ಪ್ರತಿರೂಪಕಚಾರಕೈಃ |
ಶ್ರೇಣಿಮುಖ್ಯೋಪಜಾಪೇನ ವೀರುಧಶ್ಛೇದನೇನ ಚ ||53||
ಶತ್ರುದೇಶದಲ್ಲಿ ಭೃತ್ಯರ ವೇಷವನ್ನು ಧರಿಸುವವರಿಂದ ಅಗ್ನಿ ಮತ್ತು ವಿಷಗಳ ಪ್ರಯೋಗ. ಶತ್ರುರಾಜನ ಅಂಗರಕ್ಷಕರಲ್ಲಿ ಶ್ರೇಷ್ಠರಾದವರನ್ನು ಪ್ರಿಯವಚನಗಳಿಂದ ವಶಪಡಿಸಿಕೊಳ್ಳುವುದು. ವೃಕ್ಷಾದಿಗಳ ಛೇದನೆ, (ಲಕ್ಷಾಲಂಕಾರ)
ದೂಷಣೇನ ಚ ನಾಗಾನಾಮಾಶಂಕಾಜನನೇನ ಚ |
ಆರೋಧನೇನ ಭಕ್ತಸ್ಯ ಪಥಶ್ಚೋಪಾರ್ಜನೇನ ಚ ||54||
ಶತ್ರುಗಳ ಗಜಗಳಿಗೆ ಕೇಡನ್ನುಂಟುಮಾಡುವುದು, ಶತ್ರುಪ್ರಜೆಗಳಿಗೆ ಭಯವನ್ನು ಉಂಟುಮಾಡುವುದು, ಪ್ರಜೆಗಳಿಗೆ ದೊರೆಯುವ ಆಹಾರವನ್ನು ಅವರಿಗೆ ದೊರೆಯ -ದಂತೆ ತಡೆಯುವುದು. ಮಾರ್ಗಗಳನ್ನು ದೂಷಿಸುವುದು,
ಸಪ್ತಾಂಗಸ್ಯ ಚ ರಾಜ್ಯಸ್ಯ ಹ್ರಾಸವೃದ್ಧೀ ಸಮಂಜಸಮ್ |
ದೂತಸಾಮರ್ಥ್ಯಯೋಗಶ್ಚ ರಾಷ್ಟ್ರಸ್ಯ ಚ ವಿವರ್ಧನಮ್ ||55||
ಸಪ್ತಾಂಗಸಹಿತವಾದ ಪರರಾಜ್ಯದ ಹ್ರಾಸ, ಸಪ್ತಾಂಗವುಳ್ಳ ತನ್ನ ರಾಜ್ಯದ ವೃದ್ಧಿ, ಸರಿಯಾದ ನಡವಳಿಕೆ, ದೂತರ ಸಾಮರ್ಥ್ಯ, ದೂತರು ಮಾಡಬೇಕಾದ ಉಪಾಯಗಳು, ರಾಷ್ಟ್ರದ ಅಭಿವೃದ್ಧಿ.
ಅರಿಮಧ್ಯಸ್ಥಮಿತ್ರಾಣಾಂ ಸಮ್ಯಕ್ ಚೋಕ್ತಂ ಪ್ರಪಂಚನಮ್ |
ಅವಮರ್ದಃ ಪ್ರತೀಘಾತಸ್ತಥೈವ ಚ ಬಲೀಯಸಾಮ್ ||56||
ಶತ್ರು, ತಟಸ್ಥ ಮತ್ತು ಮಿತ್ರರ ವಿಸ್ತಾರ, ತನಗಿಂತ ಬಲಿಷ್ಠರಾದ ರಾಜರನ್ನು ಮರ್ದಿಸಿ ಅವರಿಗೆ ಪ್ರತೀಕಾರವನ್ನು ಮಾಡುವುದು ಇವು ಹೇಳಲ್ಪಟ್ಟಿವೆ.
ವ್ಯವಹಾರಃ ಸುಸೂಕ್ಷ್ಮಶ್ಚ ತಥಾ ಕಂಟಕಶೋಧನಮ್ |
ಶಮೋ ವ್ಯಾಯಾಮಯೋಗಶ್ಚ ಯೋಗೋ ದ್ರವ್ಯಸ್ಯ ಸಂಚಯಃ ||57||
ಅತ್ಯಂತಸೂಕ್ಷ್ಮವಾದ ವ್ಯವಹಾರಗಳು, ಎಲ್ಲ ವಿಷಯಗಳಲ್ಲೂ ಉಂಟಾಗ- ಬಹುದಾದ ಪ್ರತಿರೋಧಗಳ ನಿವಾರಣೆ, ಶಾಂತಿ, ವ್ಯಾಯಾಮಪ್ರಕಾರಗಳು, ದ್ರವ್ಯ- ವನ್ನು ಕೂಡಿಡುವ ರೀತಿ,
ಅಭೃತಾನಾಂ ಚ ಭರಣಂ ಭೃತಾನಾಂ ಚಾನ್ವವೇಕ್ಷಣಮ್ |
ಅರ್ಥಕಾಲೇ ಪ್ರದಾನಂ ಚ ವ್ಯಸನೇಷ್ವಪ್ರಸಂಗಿತಾ ||58||
ನೇರವಾಗಿ ತನ್ನ ಭಟರಲ್ಲದವರನ್ನು ಪೋಷಣೆ ಮಾಡುವುದು, ವೇತನವನ್ನು ತೆಗೆದುಕೊಳ್ಳುವ ಭಟರನ್ನು ನೋಡಿಕೊಳ್ಳುವುದು. ಧನದ ವೃದ್ಧಿ ಇದ್ದಾಗ ದಾನವನ್ನು ಮಾಡುವುದು. ಕಷ್ಟಕಾಲವು ಬಂದಾಗ ಹೊಸದಾಗಿ ಏನನ್ನೂ ಮಾಡಲು ಹೊರಡ- ದಿರುವುದು.
ತಥಾ ರಾಜಗುಣಾಶ್ಚೈವ ಸೇನಾಪತಿಗುಣಾಶ್ಚ ಯೇ |
ಕರಣಸ್ಯ ಚ ಕರ್ತುಶ್ಚ ಗುಣದೋಷಾಸ್ತಥೈವ ಚ ||59||
ಹಾಗೆಯೇ ರಾಜನ ಗುಣಗಳು, ಸೇನಾಪತಿಯ ಗುಣಗಳು, ಕರ್ತೃವಿನ ಮತ್ತು ಕರಣಗಳ ಗುಣದೋಷಗಳು,
ದುಷ್ಟೇಂಗಿತಂ ಚ ವಿವಿಧಂ ವೃತ್ತಿಶ್ಚೈವಾನುಜೀವಿನಾಮ್ |
ಶಂಕಿತತ್ವಂ ಚ ಸರ್ವಸ್ಯ ಪ್ರಮಾದಸ್ಯ ಚ ವರ್ಜನಮ್ ||60||
ವಿವಿಧವಾದ ದುಷ್ಟವಾದ ಮನೋಭಿಪ್ರಾಯಗಳು, ತನ್ನನ್ನು ಆಶ್ರಯಿಸಿದವರ ಜೀವನೋಪಾಯ, ಸರ್ವತ್ರ ಶಂಕೆಯನ್ನು ಮಾಡುವುದು, ಪ್ರಮಾದವನ್ನು ಮಾಡ- ದಿರುವುದು,
ಅಲಬ್ಧಲಿಪ್ಸಾ ಲಬ್ಧಸ್ಯ ತಥೈವ ಚ ವಿವರ್ಧನಮ್ |
ಪ್ರದಾನಂ ಚ ವಿವೃದ್ಧಸ್ಯ ಪಾತ್ರೇಭ್ಯೋ ವಿಧಿವತ್ ತಥಾ ||61||
ಪಡೆಯದಿರುವುದನ್ನು ಪಡೆಯಲು ಬಯಸುವುದು. ಪಡೆದುದನ್ನು ಅಭಿವೃದ್ಧಿ ಪಡಿಸುವುದು. ಅಭಿವೃದ್ಧಿಯಾದ ಧನವನ್ನು ಪಾತ್ರರಲ್ಲಿ ವಿಧಿವತ್ತಾಗಿ ದಾನ ಮಾಡು- ವುದು.
ವಿಸರ್ಗೋಽರ್ಥಸ್ಯ ಧರ್ಮಾರ್ಥಮರ್ಥಾರ್ಥಂ ಕಾಮಹೇತುನಾ |
ಚತುರ್ಥೋ ವ್ಯಸನಾಘಾತೇ ತಥೈವಾತ್ರಾನುವರ್ಣಿತಃ ||62||
ಕೋಶದ ಧನವನ್ನು ಧರ್ಮಾರ್ಥವಾಗಿ ಅರ್ಥಾರ್ಥವಾಗಿ ಮತ್ತು ಕಾಮಾರ್ಥ -ವಾಗಿ ವ್ಯಯಮಾಡುವುದು ಮತ್ತು ನಾಲ್ಕನೆಯದಾಗಿ ಆಪತ್ಕಾಲಕ್ಕಾಗಿ ಸಂಗ್ರಹಿಸಿ- ಡುವುದು ಇವೆಲ್ಲವೂ ಇಲ್ಲಿ ವರ್ಣಿತವಾಗಿವೆ.
ಕ್ರೋಧಜಾನಿ ತಥೋಗ್ರಾಣಿ ಕಾಮಜಾನಿ ತಥೈವ ಚ |
ದಶೋಕ್ತಾನಿ ಕುರುಶ್ರೇಷ್ಠ ವ್ಯಸನಾನ್ಯರ್ಥ ಏವ ಚ ||63||

ಎಲೈ ಕುರುಶ್ರೇಷ್ಠನೇ! ಕ್ರೋಧದಿಂದುಂಟಾಗುವ ಉಗ್ರವಾದ ವ್ಯಸನಗಳು, ಹಾಗೆಯೇ ಕಾಮದಿಂದುಂಟಾಗುವ ವ್ಯಸನಗಳು ಹೀಗೆ ಹತ್ತು ವ್ಯಸನಗಳು ಹೇಳ- ಲ್ಪಟ್ಟಿವೆ.
ಮೃಗಯಾಽಕ್ಷಾಸ್ತಥಾ ಪಾನಂ ಸ್ತ್ರಿಯಶ್ಚ ಭರತರ್ಷಭ |
ಕಾಮಜಾನ್ಯಾಹುರಾಚಾರ್ಯಾಃ ಪ್ರೋಕ್ತಾನೀಹ ಸ್ವಯಂಭುವಾ ॥64॥
ಬೇಟೆ, ದ್ಯೂತ, ಮದ್ಯಪಾನ ಮತ್ತು ಸ್ತ್ರೀಯರು ಎಲೈ ಭರತರ್ಷಭನೇ! ಇವುಗಳನ್ನು ಕಾಮಜನ್ಯವಾದ ವ್ಯಸನಗಳೆಂದು ಆಚಾರ್ಯರು ಹೇಳುತ್ತಾರೆ. ಬ್ರಹ್ಮ- ದೇವರು ರಚಿಸಿದ ದಂಡನೀತಿಯಲ್ಲಿ ಇವುಗಳು ಹೇಳಲ್ಪಟ್ಟಿವೆ.
ವಾಕ್ಪಾರುಷ್ಯಂ ತಥೋಗ್ರತ್ವಂ ದಂಡಪಾರುಷ್ಯಮೇವ ಚ |
ಆತ್ಮನೋ ನಿಗ್ರಹಸ್ತ್ಯಾಗೋಽಥಾರ್ಥದೂಷಣಮೇವ ಚ ॥65॥
ಕಠೋರವಾದ ಮಾತುಗಳು, ಉಗ್ರತೆ, ಕಠೋರವಾದ ಶಿಕ್ಷೆ, ತನ್ನನ್ನು ತಾನೇ ನಿಗ್ರಹಿಸಿಕೊಳ್ಳುವುದು, ಧನವನ್ನು ತ್ಯಾಗಮಾಡುವುದು, ಶತ್ರುಗಳ ಧನವನ್ನು ನಾಶ ಮಾಡುವುದು,
ಯಂತ್ರಾಣಿ ವಿವಿಧಾನ್ಯೇವ ಕ್ರಿಯಾಸ್ತೇಷಾಂ ಚ ವರ್ಣಿತಾಃ |
ಅವಮರ್ದಃ ಪ್ರತೀಘಾತಃ ಕೇತನಾನಾಂ ಚ ಭಂಜನಮ್ ॥66॥
ಅನೇಕ ವಿಧವಾದ ಯಂತ್ರಗಳು, ಅವುಗಳು ಕಾರ್ಯವನ್ನು ಮಾಡುವ ರೀತಿ, ಶತ್ರುಗಳ ಮೇಲೆ ಎರಗಿ ಪ್ರತೀಕಾರವನ್ನು ಮಾಡುವುದು, ಶತ್ರುರಾಜ್ಯದ ಗೃಹಗಳ ಧ್ವಂಸ,
ಚೈತ್ಯದ್ರುಮಾಣಾಮಾಮರ್ದೋ ರೋಧಃ ಕರ್ಮಾಂತನಾಶನಮ್ |
ಅಪಸ್ಕರೋಽಥ ಗಮನಂ ತಥೋಪಾಸ್ಯಾ ಚ ವರ್ಣಿತಾಃ ॥67॥
ಶತ್ರುದೇಶದ ಪೂಜ್ಯವೃಕ್ಷಗಳ ಭಂಜನ, ಶತ್ರುವು ಪ್ರಜಾಹಿತಕ್ಕಾಗಿ ಆರಂಭಿಸಿದ ದೊಡ್ಡ ಕಾರ್ಯಗಳನ್ನು ಮಧ್ಯದಲ್ಲಿಯೇ ನಾಶಮಾಡುವುದು, ಅಪಸ್ಕರ = ಶತ್ರುವಿನ ಮೇಲೆ ಯುದ್ಧಕ್ಕಾಗಿ ಪ್ರಯಾಣ, ಸಂಗ್ರಹಿಸಬೇಕಾದ ಜನರು ಎಲ್ಲವೂ ವರ್ಣಿತ- ವಾಗಿವೆ.
ಪಣವಾನಕಶಂಖಾನಾಂ ಭೇರೀಣಾಂ ಚ ಯುಧಾಂವರ |
ಉಪಾರ್ಜನಂ ಚ ದ್ರವ್ಯಾಣಾಂ ಪರಮರ್ಮ ಚ ತಾನಿ ಷಟ್ ॥68॥
ಪಣವ, ಆನಕ, ಶಂಖಗಳು, ಭೇರಿಗಳು ಇವುಗಳನ್ನು ಸಂಪಾದಿಸುವುದು. ಮತ್ತು ದ್ರವ್ಯಗಳ ಆರು ರಹಸ್ಯಗಳು ವರ್ಣಿತವಾಗಿವೆ.
ಲಬ್ಧಸ್ಯ ಚ ಪ್ರಶಮನಂ ಸತಾಂ ಚೈವ ಹಿ ಪೂಜನಮ್ |
ವಿದ್ವದ್ಭಿರೇಕೀಭಾವಶ್ಚ ಪ್ರಾತರ್ಹೋಮವಿಧಿಜ್ಞತಾ ॥69॥
ಲಬ್ಧವಾದುದರ ರಕ್ಷಣೆ, ಸಜ್ಜನರ ಪೂಜೆ, ವಿದ್ವಾಂಸರ ಜೊತೆಯಲ್ಲಿ ಸಹಮತಿ- ಯನ್ನು ಹೊಂದುವುದು, ಪ್ರಾತಃಕಾಲದ ಹೋಮಪ್ರಕಾರಗಳನ್ನು ತಿಳಿದಿರುವುದು.
ಮಂಗಲಾಲಂಭನಂ ಚೈವ ಶರೀರಸ್ಯ ಪ್ರತಿಕ್ರಿಯಾ |
ಆಹಾರಯೋಜನಂ ಚೈವ ನಿತ್ಯಮಾಸ್ತಿಕ್ಯಮೇವ ಚ ॥70॥
ಪ್ರಾತಃಕಾಲದಲ್ಲಿ ಮಂಗಳವಸ್ತುಗಳ ಸ್ಪರ್ಶ, ಶರೀರದ ಅಸ್ವಸ್ಥತೆ ಉಂಟಾದಾಗ ಅವುಗಳ ಪರಿಹಾರ, ಆಹಾರವನ್ನು ತೆಗೆದುಕೊಳ್ಳುವ ರೀತಿ, ನಿತ್ಯವೂ ಆಸ್ತಿಕ್ಯಭಾವನೆ
ಏಕೇನ ಚ ಯಥೋತ್ಥೇಯಂ ಸತ್ಯತ್ವಂ ಮಧುರಾ ಗಿರಃ |
ಉತ್ಸವಾನಾಂ ಸಮಾಜಾನಾಂ ಕ್ರಿಯಾಃ ಕೇತನಜಾಸ್ತಥಾ ॥71॥
ಏಕಾಕಿಯಾದರೂ ಪ್ರಯತ್ನಪಟ್ಟು ಮೇಲೆ ಬರುವ ರೀತಿ, ಸತ್ಯವಚನ, ಮಧುರವಾದ ಮಾತುಗಳು, ಉತ್ಸವ ಮತ್ತು ಸಭೆಗಳನ್ನು ಏರ್ಪಡಿಸುವುದು, ಅರಮನೆಯಲ್ಲಿ ಮಾಡಬೇಕಾದ ಕ್ರಿಯೆಗಳು,
ಪ್ರತ್ಯಕ್ಷಾ ಚ ಪರೋಕ್ಷಾ ಚ ಸರ್ವಾಧಿಕರಣೇಷು ಚ |
ವೃತ್ತಿರ್ಭರತಶಾರ್ದೂಲ ನಿತ್ಯಂ ಚೈವಾನ್ವವೇಕ್ಷಣಮ್ ॥72॥
ಎಲೈ ಭರತಶಾರ್ದೂಲನೇ! ರಾಜ್ಯಪಾಲನೆಗೆ ಸಂಬಂಧಪಟ್ಟ ಅಧಿಕಾರಿಗಳ ಸರ್ವಕಾರ್ಯಾಲಯಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅವರ ನಡತೆ- ಯನ್ನು ಯಾವಾಗಲೂ ನೋಡಿಕೊಳ್ಳುವುದು.
ಅದಂಡ್ಯತ್ವಂ ಚ ವಿಪ್ರಾಣಾಂ ಯುಕ್ತ್ಯಾ ದಂಡನಿಪಾತನಮ್ |
ಅನುಜೀವಿಸ್ವಜಾತಿಭ್ಯೋ ಗುಣೇಷು ಪರಿರಕ್ಷಣಮ್ ॥73॥
ಬ್ರಾಹ್ಮಣರಿಗೆ ಶರೀರದಂಡನೆಯನ್ನು ಕೊಡದಿರುವುದು, ಯೋಗ್ಯಕಾಲದಲ್ಲಿ ಅರ್ಹರಾದವರಿಗೆ ದಂಡನೆಯನ್ನು ಕೊಡುವುದು. ತನ್ನ ಜಾತಿಗೆ ಸೇರಿದ ತನ್ನ ಆಶ್ರಿತರನ್ನು ಗುಣವಂತರಾಗುವಂತೆ ರಕ್ಷಣೆಯನ್ನು ಮಾಡುವುದು.
ರಕ್ಷಣಂ ಚೈವ ಪೌರಾಣಾಂ ಸ್ವರಾಷ್ಟ್ರಸ್ಯ ವಿವರ್ಧನಮ್ |
ಮಂಡಲಸ್ಥಾ ಚ ಯಾ ಚಿಂತಾ ರಾಜನ್ ದ್ವಾದಶರಾಜಿಕಾ ॥74॥
ಎಲೈ ರಾಜನೇ! ಪ್ರಜೆಗಳ ರಕ್ಷಣೆ, ತನ್ನ ರಾಷ್ಟ್ರದ ಅಭಿವೃದ್ಧಿ, ಸಾಮಂತ- ರಾಜರುಗಳ ವಿಷಯದಲ್ಲಿ ಹನ್ನೆರಡುವಿಧವಾದ ಚಿಂತನೆಗಳು.
ದ್ವಾಸಪ್ತತಿಮತಿಶ್ಚೈವ ಪ್ರೋಕ್ತಾ ಯಾ ಚ ಸ್ವಯಂಭುವಾ |
ದೇಶಜಾತಿಕುಲಾನಾಂ ಚ ಧರ್ಮಾಃ ಸಮನುವರ್ಣಿತಾಃ ॥75॥
ರಾಜ್ಯಪಾಲನೆ ವಿಷಯದಲ್ಲಿ ಹೊಂದಬೇಕಾದ ಎಪ್ಪತ್ತೆರಡು ವಿಧವಾದ ಚಿಂತನೆಗಳು, ದೇಶಜಾತಿ ಕುಲಧರ್ಮಗಳು ಎಲ್ಲವೂ ಬ್ರಹ್ಮದೇವರು ರಚಿಸಿದ ದಂಡನೀತಿಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಿವೆ.
ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚಾತ್ರಾನುವರ್ಣಿತಃ |

ಉಪಾಯಶ್ಚಾರ್ಥಲಿಪ್ಸಾ ಚ ವಿವಿಧಾ ಭೂರಿದಕ್ಷಿಣಾಃ ॥76॥
ಇದರಲ್ಲಿ ಧರ್ಮಾರ್ಥಕಾಮಮೋಕ್ಷಗಳು, ರಾಜ್ಯಪಾಲನೆಯ ಅನೇಕ ಉಪಾಯಗಳು, ಅನೇಕವಿಧವಾದ ಅರ್ಥಪ್ರಾಪ್ತಿಪ್ರಕಾರಗಳು, ಭೂರಿದಕ್ಷಿಣೆಯನ್ನು ಕೊಡುವ ವಿಧಾನವು ವರ್ಣಿತವಾಗಿದೆ.
ಮೂಲಕರ್ಮಕ್ರಿಯಾ ಚಾತ್ರ ಮಾಯಾಯೋಗಶ್ಚ ವರ್ಣಿತಃ |
ದೂಷಣಂ ಸ್ರೋತಸಾಮತ್ರ ವರ್ಣಿತಂ ಚ ಸ್ಥಿರಾಂಭಸಾಮ್ ॥77॥
ತನ್ನ ರಾಜ್ಯದ ಅಭಿವೃದ್ಧಿಗೆ ಕಾರಣವಾದ ಮೂಲಕ್ರಿಯೆಗಳಾದ ಕೃಷಿ- ವಾಣಿಜ್ಯಾದಿಗಳು, ಶತ್ರುಗಳ ಮೇಲೆ ಪ್ರಯೋಗಿಸಬೇಕಾದ ಮಾಯಾಯೋಗಗಳು (ಕಪಟೋಪಾಯಗಳು), ಶತ್ರುದೇಶದ ನದಿಗಳನ್ನು ಮತ್ತು ಸರೋವರಗಳನ್ನು ದೂಷಿಸುವುದು ಎಲ್ಲವೂ ವರ್ಣಿತವಾಗಿವೆ.
ಯೈರ್ಯೈರುಪಾಯೈರ್ಲೋಕಶ್ಚ ನ ಚಲೇದಾರ್ಯವರ್ತ್ಮನಃ |
ತತ್ ಸರ್ವಂ ರಾಜಶಾರ್ದೂಲ ನೀತಿಶಾಸ್ತ್ರೇಽನುವರ್ಣಿತಮ್ ॥78॥
ಎಲೈ ರಾಜಶಾರ್ದೂಲನೇ! ಯಾವ ಯಾವ ಉಪಾಯಗಳಿಂದ ಪ್ರಜೆಗಳು ಆರ್ಯಮಾರ್ಗದಿಂದ ಭ್ರಷ್ಟರಾಗುವುದಿಲ್ಲವೋ, ಅವೆಲ್ಲವೂ ಈ ನೀತಿಶಾಸ್ತ್ರದಲ್ಲಿ ವರ್ಣಿತವಾಗಿವೆ.
ಏತತ್ ಕೃತ್ವಾ ಶುಭಂ ಶಾಸ್ತ್ರಂ ತತಃ ಸ ಭಗವಾನ್ ಪ್ರಭುಃ |
ದೇವಾನುವಾಚ ಸಂಹೃಷ್ಟಃ ಸರ್ವಾನ್ ಶಕ್ರಪುರೋಗಮಾನ್ ॥79॥
ಪೂಜ್ಯರಾದ ಪ್ರಭುಗಳಾದ ಬ್ರಹ್ಮದೇವರು ಈ ಶುಭವಾದ ಶಾಸ್ತ್ರವನ್ನು ರಚಿಸಿ, ಸಂತೋಷಗೊಂಡು ಇಂದ್ರಮೊದಲಾದ ಎಲ್ಲ ದೇವತೆಗಳನ್ನು ಕುರಿತು ಹೇಳಿದರು.
ಉಪಕಾರಾಯ ಲೋಕಸ್ಯ ತ್ರಿವರ್ಗಸ್ಥಾಪನಾಯ ಚ |
ನವನೀತಂ ಸರಸ್ವತ್ಯಾ ಬುದ್ಧಿರೇಷಾ ಪ್ರಭಾವಿತಾ ॥80॥
ಲೋಕದ ಉಪಕಾರಕ್ಕಾಗಿ ಮತ್ತು ಧರ್ಮಾರ್ಥಕಾಮಗಳ ಸ್ಥಾಪನೆಗಾಗಿ ವಿದ್ಯೆಯ ಸಾರವಾಗಿ ಬುದ್ಧಿಯಿಂದ ಪ್ರಭಾವಿತವಾಗಿ ಈ ಶಾಸ್ತ್ರವು ರಚಿತವಾಗಿದೆ.
ದಂಡೇನ ಸಹಿತಾ ಹ್ಯೇಷಾ ಲೋಕರಕ್ಷಣಕಾರಿಕಾ |
ನಿಗ್ರಹಾನುಗ್ರಹರತಾ ಲೋಕಾನನು ಚರಿಷ್ಯತಿ ॥81॥
ದಂಡದಿಂದ ಸಹಿತವಾದ ಈ ನೀತಿಯು ಲೋಕರಕ್ಷಣೆಯನ್ನು ಮಾಡುವುದಾಗಿ ದುಷ್ಟರ ನಿಗ್ರಹ, ಶಿಷ್ಟರ ಅನುಗ್ರಹದಲ್ಲಿ ರತವಾಗಿ ಲೋಕಗಳಲ್ಲಿ ಪ್ರಚಾರದಲ್ಲಿ- ರುತ್ತದೆ.
ದಂಡೇನ ನೀಯತೇ ಚೇಯಂ ದಂಡಂ ನಯತಿ ಚಾಪ್ಯುತ |
ದಂಡನೀತಿರಿತಿ ಪ್ರೋಕ್ತಾ ತ್ರೀನ್ಲೋಕಾನನುವರ್ತತೇ |
ಷಾಡ್ಗುಣ್ಯಗುಣಸಾರೈಷಾ ಸ್ಥಾಸ್ಯತ್ಯಗ್ರಾ ಮಹಾತ್ಮಸು ॥82॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಷಷ್ಟಿತಮೋಽಧ್ಯಾಯಃ ॥59॥
ಇದು ದಂಡದಿಂದ ಮುಂದುವರಿಸಲ್ಪಡುತ್ತದೆ. ಮತ್ತು ದಂಡವನ್ನು ವಿವೇಚನೆ ಮಾಡುತ್ತದೆ. ಆದ್ದರಿಂದ ದಂಡನೀತಿ ಎಂದು ಕರೆಯಲ್ಪಡುತ್ತದೆ. ಇದು ಮೂರು ಲೋಕಗಳಲ್ಲಿಯೂ ಪ್ರಚಾರದಲ್ಲಿರುತ್ತದೆ. ಷಾಡ್ಗುಣ್ಯಸಾರರೂಪವಾದ ಉಗ್ರವಾದ ಈ ದಂಡನೀತಿಯು ಮಹಾತ್ಮರಲ್ಲಿ ಶಾಶ್ವತವಾಗಿ ಉಳಿಯುತ್ತದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 59ನೆಯ ಅಧ್ಯಾಯವು ಮುಗಿಯಿತು
0
60. ಅರವತ್ತನೆಯ ಅಧ್ಯಾಯ
ಶಿವಾದಿಗಳಿಂದ ಬ್ರಹ್ಮದೇವರಿಂದ ರಚಿತವಾದ ದಂಡನೀತಿಶಾಸ್ತ್ರದ ಸಂಕ್ಷೇಪಕರಣ
ವೈಶಂಪಾಯನಃ
ಮಹತತ್ತ್ವತ್ ತಸ್ಯ ದಂಡಸ್ಯ ನೀತಿರ್ವಿಸ್ಪಷ್ಟಲಕ್ಷಣಾ |
ನಯಚಾರಶ್ಚ ವಿಪುಲೋ ಯೇನ ಸರ್ವಮಿದಂ ತತಮ್ |
ಆಗಮಶ್ಚ ಪುರಾಣಾನಾಂ ಮಹರ್ಷೀಣಾಂ ಚ ಸಂಭವಃ ॥1॥
ವೈಶಂಪಾಯನರು ಬ್ರಹ್ಮದೇವರಿಂದ ರಚಿತವಾದ ದಂಡನೀತಿಶಾಸ್ತ್ರವು ವಿಸ್ತಾರ -ವಾಗಿರುವುದರಿಂದ ಅಲ್ಲಿ ದಂಡನೀತಿಯು ಬಹಳ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಈ ಲೋಕವೆಲ್ಲವನ್ನೂ ವ್ಯಾಪಿಸಿರುವ ವಿಪುಲವಾದ ನ್ಯಾಯಸಂಚಾರಗಳು, ಪುರಾಣಗಳ ಜ್ಞಾನ, ಮಹರ್ಷಿಗಳ ಉತ್ಪತ್ತಿ,
ತೀರ್ಥವಂಶಶ್ಚ ವಂಶಶ್ಚ ಕ್ಷತ್ರಿಯಾಣಾಂ ಯುಧಿಷ್ಠಿರ |
ಸಕಲಂ ಚಾತುರಾಶ್ರಮ್ಯಂ ಚಾತುರ್ಹೋತ್ರಂ ತಥೈವ ಚ ॥2॥
ಚಾತುರ್ವರ್ಣ್ಯಂ ತಥೈವಾತ್ರ ಚಾತುರ್ವೇದ್ಯಂ ಚ ವರ್ಣಿತಮ್ |
ಇತಿಹಾಸೋಪವೇದಾಶ್ಚ ನ್ಯಾಯಃ ಕೃತ್ಸ್ನಸ್ಯ ವರ್ಣಿತಃ ॥3॥
ಎಲೈ ಯುಧಿಷ್ಠಿರನೇ! ತೀರ್ಥವಂಶಗಳು, ಕ್ಷತ್ರಿಯರ ವಂಶಗಳು, ಚತುರಾ- ಶ್ರಮಗಳಿಗೆ, ಮತ್ತು ಚತುರ್ಹೋತೃಗಳಿಗೆ ಸಂಬಂಧಿಸಿದ ಎಲ್ಲ ಧರ್ಮಗಳು, ಚಾತುರ್ವರ್ಣ್ಯಕ್ಕೆ ಸಂಬಂಧಿಸಿದ ಮತ್ತು ನಾಲ್ಕುವೇದಗಳಿಗೆ ಸಂಬಂಧಿಸಿದ ಧರ್ಮ- ಗಳು, ಇತಿಹಾಸಗಳು, ಉಪವೇದವೆನಿಸುವ ಪುರಾಣಗಳು, ಸಮಗ್ರವಾದ ನ್ಯಾಯ- ಗಳು ಎಲ್ಲವೂ ವರ್ಣಿಸಲ್ಪಟ್ಟಿವೆ.

ತಪೋ ಜ್ಞಾನಮಹಿಂಸಾ ಚ ಸತ್ಯಾಸತ್ಯೇ ನಯಃ ಪರಃ |
ವೃದ್ಧೋಪಸೇವಾ ದಾನಂ ಚ ಶೌಚಮುತ್ಥಾನಮೇವ ಚ ||4||
ಸರ್ವಭೂತಾನುಕಂಪಾ ಚ ಸರ್ವಮತ್ರೋಪವರ್ಣಿತಮ್ |
ಭುವಿ ವಾಚೋಗತಂ ಯಚ್ಚ ತಚ್ಚ ಸರ್ವಂ ಸಮರ್ಪಿತಮ್ ||5||
ತಪಸ್ಸು, ಜ್ಞಾನ, ಅಹಿಂಸೆ, ಸತ್ಯಾಸತ್ಯಗಳು, ಉತ್ತಮವಾದ ನ್ಯಾಯ, ವೃದ್ಧರ ಸೇವೆ, ದಾನ, ಶೌಚ, ಉದ್ಯಮಶೀಲತೆ, ಸರ್ವಭೂತಗಳಲ್ಲಿ ದಯೆ ಎಲ್ಲವೂ ಇಲ್ಲಿ ವರ್ಣಿಸಲ್ಪಟ್ಟಿವೆ. ಭೂಮಿಯಲ್ಲಿ ಮಾತುಗಳಿಂದ ಹೇಳಬಹುದಾದುದೆಲ್ಲವೂ ಇಲ್ಲಿ ಅಡಕವಾಗಿವೆ.
ತಸ್ಮಿನ್ ಪೈತಾಮಹೇ ಶಾಸ್ತ್ರೇ ಪಾಂಡವೈತದಸಂಶಯಮ್ |
ಧರ್ಮಾರ್ಥಕಾಮಮೋಕ್ಷಾಶ್ಚ ಸಕಲಾ ಹ್ಯತ್ರ ಶಬ್ದಿತಾಃ ||6||
ಎಲೈ ಪಾಂಡುಪುತ್ರನಾದ ಯುಧಿಷ್ಠಿರನೇ! ಬ್ರಹ್ಮದೇವರು ರಚಿಸಿದ ಆ ಶಾಸ್ತ್ರದಲ್ಲಿ ಧರ್ಮಾರ್ಥಕಾಮಮೋಕ್ಷಗಳೆಲ್ಲವೂ ನಿಃಸಂಶಯವಾಗಿ ವರ್ಣಿಸಲ್ಪಟ್ಟಿವೆ.
ಅನಾದಿನಿಧನೋ ದೇವಶ್ಚೈತನ್ಯಾದಿಸಮನ್ವಿತಃ |
ಜ್ಞಾನಾನಿ ಚ ವಶೇ ಯಸ್ಯ ತಾರಕಾದೀನ್ಯಶೇಷತಃ ||7||
ಅನಾದಿನಿಧನನಾದ ಜ್ಞಾನಾದಿ ಗುಣಗಳಿಂದ ಕೂಡಿದ ದೇವನಾದ ನಾರಾ- ಯಣ, ಅವನ ವಶದಲ್ಲಿರುವ ಜ್ಞಾನಗಳು, ತಾರಕಬ್ರಹ್ಮಮಂತ್ರಾದಿಗಳು ಎಲ್ಲವೂ ವರ್ಣಿಸಲ್ಪಟ್ಟಿವೆ.
ಅಣಿಮಾದಿಗುಣೋಪೇತಮೈಶ್ವರ್ಯಂ ನ ಚ ಕೃತ್ರಿಮಮ್ |
ತುಷ್ಟ್ಯರ್ಥಂ ಬ್ರಹ್ಮಣಃ ಪುತ್ರೋ ಲಲಾಟಾದುತ್ಥಿತಃ ಪ್ರಭುಃ ||8||
ಅರುದತ್ ಸಸ್ವನಂ ಘೋರಂ ಜಗತಃ ಪ್ರಭುರವ್ಯಯಃ |
ಜಾಯಮಾನಂ ಪಿತಾ ಪುತ್ರೇ ಪುತ್ರಃ ಪಿತರಿ ಚೈವ ಹಿ ||9||
ನಾರಾಯಣನ ಸ್ವಾಭಾವಿಕವಾದ (ಕೃತ್ರಿಮವಲ್ಲದ) ಅಣಿಮಾದಿ ಐಶ್ವರ್ಯವು ಪ್ರಜೆಗಳ ಸಂತೋಷಕ್ಕಾಗಿ ವರ್ಣಿಸಲ್ಪಟ್ಟಿದೆ. ಬ್ರಹ್ಮದೇವರ ಲಲಾಟದಿಂದ ಜಗತ್ತಿನ ಪ್ರಭುವೂ ಅವ್ಯಯನೂ ಆದ ರುದ್ರನು ಜನಿಸಿ ಗಟ್ಟಿಯಾಗಿ ಘೋರವಾಗಿ ಅತ್ತನು. ತಂದೆಯು ಸಂಪಾದಿಸಿದ ಧನಾದಿಗಳನ್ನು ಪುತ್ರನೂ ಪುತ್ರನು ಸಂಪಾದಿಸಿದ ಧನಾದಿಗಳನ್ನು ತಂದೆಯೂ ಪಡೆಯಬೇಕೆಂದು (ಅತ್ತನು)
ಬುದ್ಧಿಂ ವಿಶ್ವಸೃಜೇ ದತ್ವಾ ಬ್ರಹ್ಮಾಂಡಂ ಯೇನ ನಿರ್ಮಿತಮ್ |
ಯಸ್ಮಿನ್ ಹಿರಣ್ಮಯೋ ಹಂಸಃ ಶಕುನಿಃ ಸಮಪದ್ಯತ ||10||
ವಿಶ್ವಸೃಷ್ಟಿಕರ್ತನಾದ ರುದ್ರನಿಗೆ ಸುಬುದ್ಧಿಯನ್ನು ಕೊಟ್ಟು, ಅಳಬೇಡವೆಂದು ಹೇಳಿ ಬ್ರಹ್ಮದೇವರು ಬ್ರಹ್ಮಾಂಡವನ್ನು ನಿರ್ಮಿಸಿದರು. ಅದರಲ್ಲಿ ಸುವರ್ಣಮಯ- ವಾದ ಹಂಸಪಕ್ಷಿರೂಪದಲ್ಲಿ ನಾರಾಯಣನು ಅವತರಿಸಿದನು.
ಕರ್ತಾ ಸರ್ವಸ್ಯ ಲೋಕಸ್ಯ ಬ್ರಹ್ಮಾ ಲೋಕಪಿತಾಮಹಃ |
ಸ ದೇವಃ ಸರ್ವಭೂತಾತ್ಮಾ ಮಹಾದೇವಃ ಸನಾತನಃ |
ಅಸಂಖ್ಯಾತಸಹಸ್ರಾಣಾಂ ರುದ್ರಾಣಾಂ ಸ್ಥಾನಮವ್ಯಯಮ್ ||11||
ಲೋಕಪಿತಾಮಹರಾದ, ಸರ್ವಲೋಕದ ಸೃಷ್ಟಿಕರ್ತರಾದ ಬ್ರಹ್ಮದೇವರು ವೇದಪ್ರತಿಪಾದ್ಯರಾದವರು. ಶ್ರೇಷ್ಠವಾದ ದೇವತೆಯಾದ ಅವರು ಎಲ್ಲ ಪ್ರಾಣಿ- ಗಳಲ್ಲಿಯೂ ವ್ಯಾಪಿಸಿದ್ದಾರೆ. ಮತ್ತು ಸಂಖ್ಯೆಯಿಲ್ಲದಷ್ಟು ಸಹಸ್ರಾರು ರುದ್ರರೂಪ- ಗಳಿಗೆ ಅವರು ಶಾಶ್ವತವಾದ ಆಶ್ರಯರಾಗಿದ್ದಾರೆ.
ತತಸ್ತಾಂ ಭಗವಾನ್ನೀತಿಂ ಪೂರ್ವಂ ಜಗ್ರಾಹ ಶಂಕರಃ |
ಬಹುರೂಪೋ ವಿಶಾಲಾಕ್ಷಃ ಶಿವಃ ಸ್ಥಾಣುರುಮಾಪತಿಃ ||12||
ಅನಂತರ ಬಹುರೂಪವುಳ್ಳ ವಿರೂಪಾಕ್ಷನಾದ (ವಿಶಾಲಾಕ್ಷನಾದ), ಸ್ಥಾಣುವೂ, ಶಿವನೂ ಆದ ಪೂಜ್ಯನಾದ ಉಮಾಪತಿಯು ಆ ದಂಡನೀತಿಶಾಸ್ತ್ರವನ್ನು ಬ್ರಹ್ಮ- ದೇವರಿಂದ ಸ್ವೀಕರಿಸಿದನು.
ಯುಗಾನಾಮಾಯುಷೋ ಹ್ರಾಸಂ ವಿಜ್ಞಾಯ ಭಗವಾನ್ ಶಿವಃ |
ಸಂಚಿಕ್ಷೇಪ ತತಃ ಶಾಸ್ತ್ರಂ ಮಹಾರ್ಥಂ ಬ್ರಹ್ಮಣಾ ಕೃತಮ್ ||13||
ಯುಗಗಳು ಕಳೆದಂತೆ ಮನುಷ್ಯರ ಆಯುಷ್ಯವು ಹ್ರಾಸಹೊಂದುವುದನ್ನು ತಿಳಿದು ಪೂಜ್ಯನಾದ ಶಿವನು ಬ್ರಹ್ಮದೇವರಿಂದ ರಚಿತವಾದ ಮಹಾರ್ಥಗಳನ್ನೊಳ- ಗೊಂಡ ಆ ಶಾಸ್ತ್ರವನ್ನು ಸಂಕ್ಷೇಪಗೊಳಿಸಿ ಇಂದ್ರಾದಿ ದೇವತೆಗಳಿಗೆ ಉಪದೇಶಿಸಿ- ದನು. (ಲಕ್ಷಾಲಂಕಾರ)
ವೈಶಾಲಾಕ್ಷಮಿತಿ ಪ್ರೋಕ್ತಂ ತದಿಂದ್ರಃ ಪ್ರತ್ಯಪದ್ಯತ |
ದಶಾಧ್ಯಾಯಸಹಸ್ರಾಣಿ ಸುಬ್ರಹ್ಮಣ್ಯೋ ಮಹಾತಪಾಃ ||14||
ಅದಕ್ಕೆ ವೈಶಾಲಾಕ್ಷವೆಂದು ಹೆಸರು. ಅದರಲ್ಲಿ ಹತ್ತುಸಹಸ್ರ ಅಧ್ಯಾಯಗಳಿವೆ. ಅತ್ಯಂತ ಬ್ರಾಹ್ಮಣವತ್ಸಲನೂ, ಮಹಾತಪಸ್ವಿಯೂ ಆದ ಇಂದ್ರನು ಅದನ್ನು ಅಧ್ಯ- ಯನ ಮಾಡಿದನು.
ಭಗವಾನಪಿ ತಚ್ಛಾಸ್ತ್ರಂ ಸಂಚಿಕ್ಷೇಪ ಪುರಂದರಃ |
ಸಹಸ್ರೈಃ ಪಂಚಭಿಸ್ತಾತ ಯದುಕ್ತಂ ಬಾಹುದಂಡಿಕಃ ||15||
ಪ್ರೀತಿಪಾತ್ರನೇ! ಪೂಜ್ಯನಾದ ಪುರಂದರನೂ ಸಹ ರಾಜನು ತನ್ನ ಬಾಹು- ಗಳಿಂದ ದಂಡವನ್ನು ವಿಧಿಸುವ ರೀತಿಯನ್ನು ತಿಳಿಸುವ ಆ ಶಾಸ್ತ್ರವನ್ನು ಐದು ಸಹಸ್ರಶ್ಲೋಕಗಳಿಗೆ ಸಂಕ್ಷೇಪಗೊಳಿಸಿದನು.
ಅಧ್ಯಾಯಾನಾಂ ಸಹಸ್ರೈಸ್ತು ತ್ರಿಭಿರೇವ ಬೃಹಸ್ಪತಿಃ |
ಸಂಚಿಕ್ಷೇಪೇಶ್ವರೋ ಬುದ್ಧ್ಯಾ ಬಾರ್ಹಸ್ಪತ್ಯಂ ತದುಚ್ಯತೇ ||16||
ಪ್ರಭುಗಳಾದ ಬೃಹಸ್ಪತ್ಯಾಚಾರ್ಯರು ಅದನ್ನು ಮೂರು ಸಹಸ್ರ ಅಧ್ಯಾಯ- ಗಳಿಗೆ ಸಂಕ್ಷೇಪಗೊಳಿಸಿದರು. ಅದಕ್ಕೆ

ಬಾರ್ಹಸ್ಪತ್ಯವೆಂದು ಹೆಸರು.
ಅಧ್ಯಾಯಾನಾಂ ಸಹಸ್ರೇಣ ಕಾವ್ಯಃ ಸಂಕ್ಷೇಪಮಬ್ರವೀತ್ |
ತಚ್ಛಾಸ್ತ್ರಮಮಿತಪ್ರಜ್ಞೋ ಯೋಗಾಚಾರ್ಯೋ ಮಹಾತಪಾಃ ॥17॥
ಅಮಿತಪ್ರಜ್ಞೆಯುಳ್ಳವರೂ, ಯೋಗಾಚಾರ್ಯರೂ, ಮಹಾತಪಸ್ವಿಗಳೂ ಆದ ಶುಕ್ರಾಚಾರ್ಯರು ಅದನ್ನು ಒಂದು ಸಹಸ್ರ ಅಧ್ಯಾಯಗಳಿಗೆ ಸಂಕ್ಷೇಪಗೊಳಿಸಿದರು.
ಏವಂ ಲೋಕಾನುರೋಧೇನ ಶಾಸ್ತ್ರಮೇತನ್ಮಹರ್ಷಿಭಿಃ |
ಸಂಕ್ಷಿಪ್ತಮಾಯುರ್ವಿಜ್ಞಾಯ ಮರ್ತ್ಯಾನಾಂ ಹ್ರಾಸಿ ಪಾಂಡವ ॥18॥
ಎಲೈ ಪಾಂಡವನೇ! ಹೀಗೆ ಪ್ರಜೆಗಳ ಹ್ರಾಸವನ್ನು ಹೊಂದುವ ಆಯುಸ್ಸನ್ನು ಗಮನಿಸಿ ಮಹರ್ಷಿಗಳು ಪ್ರಜೆಗಳ ಹಿತಕ್ಕಾಗಿ ಬ್ರಹ್ಮದೇವರು ರಚಿಸಿದ ಶಾಸ್ತ್ರವನ್ನು ಸಂಕ್ಷೇಪಗೊಳಿಸಿದರು.
ಅಥ ದೇವಾಃ ಸಮಾಗಮ್ಯ ವಿಷ್ಣುಮೂಚುಃ ಪ್ರಜಾಪತಿಮ್ |
ಏಕೋ ಯೋಽರ್ಹತಿ ಮರ್ತ್ಯೇಭ್ಯಃ ಶ್ರೈಷ್ಠ್ಯಂ ತಂ ವೈ ಸಮಾದಿಶ ॥19॥
ಅನಂತರ ದೇವತೆಗಳು ಪ್ರಜಾಪತಿಯಾದ ವಿಷ್ಣುವಿನ ಸಮೀಪದಲ್ಲಿ ಬಂದು ಮನುಷ್ಯರಲ್ಲಿ ಯಾವನು ಎಲ್ಲರಿಗಿಂತಲೂ ಶ್ರೇಷ್ಠತೆಯನ್ನು ಹೊಂದಲು ಅರ್ಹ- ನಾಗುತ್ತಾನೆಯೋ ಅಂತಹವನನ್ನು ನಮಗೆ ನೀಡು ಎಂದು ಕೇಳಿದರು.
ತತಃ ಸಂಚಿಂತ್ಯ ಭಗವಾನ್ ದೇವೋ ನಾರಾಯಣಃ ಪ್ರಭುಃ |
ತೈಜಸಂ ವೈ ವಿರಜಸಂ ಸೋಽಸೃಜನ್ಮಾನಸಂ ಸುತಮ್ ॥20॥
ಆಗ ಭಗವಂತನೂ ಪ್ರಭುವೂ ಆದ ನಾರಾಯಣದೇವನು ಚೆನ್ನಾಗಿ ಚಿಂತಿಸಿ, ತೇಜೋರೂಪನಾದ ವಿರಜನೆಂಬ ಮಾನಸಪುತ್ರನನ್ನು ಸೃಷ್ಟಿಸಿದನು.
ವಿರಜಾಸ್ತು ಮಹಾಭಾಗ ವಿಭುತ್ವಂ ಭುವಿ ನೈಚ್ಛತ |
ನ್ಯಾಸಾಯೈವಾಭವದ್ ಬುದ್ಧಿಃ ಪ್ರಣೀತಾ ತಸ್ಯ ಪಾಂಡವ ॥21॥
ಎಲೈ ಮಹಾನುಭಾವನೇ! ವಿರಜನಾದರೋ ಭೂಮಿಯ ಒಡೆತನವನ್ನು ಬಯಸಲಿಲ್ಲ. ಎಲೈ ಪಾಂಡವನೇ! ಅವನ ಬುದ್ಧಿಯು ಸನ್ನ್ಯಾಸಸ್ವೀಕಾರದಲ್ಲಿಯೇ ಹೋಯಿತು.
ಕೀರ್ತಿಮಾಂಸ್ತಸ್ಯ ಪುತ್ರೋಽಭೂತ್ ಸೋಽಪಿ ಪಂಚಾತಿಗೋಽಭವತ್ |
ಕರ್ದಮಸ್ತಸ್ಯ ಚ ಸುತಃ ಸೋಽಪ್ಯತಪ್ಯನ್ಮಹತ್ ತಪಃ ॥22॥
ಕೀರ್ತಿಮಂತನು ಅವನ ಮಗನಾಗಿ ಜನಿಸಿದನು. ಅವನೂ ಪ್ರಪಂಚವನ್ನು ದಾಟಿ (ಪ್ರಪಂಚದ ಆಸೆಗಳನ್ನು ದಾಟಿ) ವಿರಕ್ತನಾದನು. ಅವನ ಪುತ್ರನಾದ ಕರ್ದಮನೂ ಸಹ ದೊಡ್ಡ ತಪಸ್ಸನ್ನು ಮಾಡಿದನು.
ಪ್ರಜಾಪತೇಃ ಕರ್ದಮಸ್ಯ ಅನಂಗೋ ನಾಮ ವೈ ಸುತಃ |
ಪ್ರಜಾನಾಂ ರಕ್ಷಿತಾ ಸಾಧುರ್ದಂಡನೀತಿವಿಶಾರದಃ ॥23॥
ಕರ್ದಮಪ್ರಜಾಪತಿಯ ಪುತ್ರನಾದ ಅನಂಗನು ದಂಡನೀತಿಯಲ್ಲಿ ವಿಶಾರದ- ನಾಗಿ ಚೆನ್ನಾಗಿ ಪ್ರಜೆಗಳನ್ನು ರಕ್ಷಿಸುವವನಾದನು.
ಅನಂಗಪುತ್ರೋಽತಿಬಲೋ ನೀತಿಮಾನಧಿಗಮ್ಯ ವೈ |
ಅಭಿಪೇದೇ ಮಹೀರಾಜ್ಯಮಥೇಂದ್ರಿಯವಶೋಽಭವತ್ ॥24॥
ಅನಂಗಪುತ್ರನೂ ಅತಿಬಲನೂ ಆದ ನೀತಿವಂತನು ಭೂಮಿಯ ರಾಜ್ಯದ ಒಡೆತನವನ್ನು ಹೊಂದಿ, ಅನಂತರ ಇಂದ್ರಿಯವಶನಾದನು.
ಪ್ರಾಪ್ಯ ನಾರೀಂ ಮಹಾಭಾಗಾಂ ರೂಪಿಣೀಂ ಕಾಮಮೋಹಿತಾಮ್ |
ಸೌಭಾಗ್ಯೇನ ಚ ಸಂಪನ್ನಾಂ ಗುಣೈಶ್ಚಾನುತ್ತಮಾಂ ಸತೀಮ್ ॥25॥
ಅವನು ಮಹಾನುಭಾವಳೂ, ಸುಂದರಳೂ, ಸೌಭಾಗ್ಯಯುಕ್ತಳೂ, ಶ್ರೇಷ್ಠವಾದ ಗುಣಗಳಿಂದ ಕೂಡಿದವಳೂ, ಕಾಮಮೋಹಿತಳೂ ಆದ ಸ್ತ್ರೀಯನ್ನು ಪತ್ನಿಯನ್ನಾಗಿ ಪಡೆದನು.
ಮೃತ್ಯೋಸ್ತು ದುಹಿತಾ ರಾಜನ್ ಸುನೀಥಾ ನಾಮ ಮಾನಸೀ |
ಪ್ರಖ್ಯಾತಾ ತ್ರಿಷು ಲೋಕೇಷು ಯಾ ಸಾ ವೇನಮಜೀಜನತ್ ॥26॥
ಎಲೈ ರಾಜನೇ! ಮೃತ್ಯುವಿನ ಮಾನಸಪುತ್ರಿಯಾದ ಸುನೀಥಾ ಎಂಬ ಹೆಸರಿ- ನಿಂದ ಮೂರುಲೋಕದಲ್ಲಿ ಪ್ರಖ್ಯಾತಳಾದ ಅವಳು ವೇನನನ್ನು ಪುತ್ರನನ್ನಾಗಿ ಪಡೆದಳು.
ತಂ ಪ್ರಜಾಸು ವಿಧರ್ಮಾಣಂ ರಾಗದ್ವೇಷವಶಾನುಗಮ್ |
ಮಂತ್ರಪೂತೈಃ ಕುಶೈರ್ಜಘ್ನುರ್ಋಷಯೋ ಬ್ರಹ್ಮವಾದಿನಃ ॥27॥
ರಾಗದ್ವೇಷಗಳಿಗೆ ವಶನಾಗಿ ಪ್ರಜೆಗಳಿಗೆ ವಿರುದ್ಧವಾದ ಧರ್ಮಗಳನ್ನು ಆಚರಿಸುತ್ತಿದ್ದ ಅವನನ್ನು ಬ್ರಹ್ಮವಾದಿಗಳಾದ ಋಷಿಗಳು ಅಭಿಮಂತ್ರಿತವಾದ ಕುಶ- ಗಳಿಂದ ಸಂಹಾರ ಮಾಡಿದರು.
ಮಮಂಥುರ್ದಕ್ಷಿಣಂ ಚೋರುಮೃಷಯಸ್ತಸ್ಯ ಮಂತ್ರತಃ |
ತತೋಽಸ್ಯ ವಿಕೃತೋ ಜಜ್ಞೇ ಹ್ರಸ್ವಾಂಗಃ ಪುರುಷೋ ಭುವಿ ॥28॥
ನಂತರ ಋಷಿಗಳು ಮಂತ್ರಪೂರ್ವಕವಾಗಿ ಅವನ ಬಲತೊಡೆಯನ್ನು ಮಥಿಸಿ- ದರು. ಆಗ ವಿಕೃತವಾದ ರೂಪವನ್ನು ಹೊಂದಿದ್ದ, ಕುಬ್ಜನಾದ ಪುರುಷನು ಭೂಮಿ- ಯಲ್ಲಿ ಜನಿಸಿದನು.
ದಗ್ಧಸ್ಥಾಣುಪ್ರತೀಕಾಶೋ ರಕ್ತಾಕ್ಷಃ ಕೃಷ್ಣಮೂರ್ಧಜಃ |
ನಿಷೀದೇತ್ಯೇವಮೂಚುಸ್ತಮೃಷಯೋ ಬ್ರಹ್ಮವಾದಿನಃ ॥29॥
ಅವನು ಸುಟ್ಟು ಹೋದ ಮರದ ಬುಡದಂತೆ ಕಾಂತಿಯನ್ನು ಹೊಂದಿ, ಕೆಂಪಾದ ಕಣ್ಣುಗಳನ್ನು, ಕಪ್ಪಾದ ಕೇಶಗಳನ್ನೂ

ಹೊಂದಿದ್ದನು. ಬ್ರಹ್ಮವಾದಿಗಳಾದ ಋಷಿಗಳು ಅವನನ್ನು `ನಿಷೀದ - ಕುಳಿತುಕೋ' ಎಂದು ಹೇಳಿದರು.
ತಸ್ಮಾನ್ನಿಷಾದಾಃ ಸಂಭೂತಾಃ ಕ್ರೂರಾ ಶೈಲವನಾಶ್ರಯಾಃ |
ಯೇ ಚಾನ್ಯೇ ವಿಂಧ್ಯನಿಲಯಾ ಮ್ಲೇಚ್ಛಾಃ ಶತಸಹಸ್ರಶಃ ॥30॥
ಅವನಿಂದ ನಿಷಾದರು ಉತ್ಪನ್ನರಾದರು. ಅವರು ಕ್ರೂರರು ಮತ್ತು ಪರ್ವತ ಮತ್ತು ಅರಣ್ಯಗಳಲ್ಲಿ ವಾಸಿಸುವವರು.
ವಿಂಧ್ಯಪರ್ವತದಲ್ಲಿ ವಾಸಿಸುವ ಸಾವಿರಾರು ಸಂಖ್ಯೆಯ ಮ್ಲೇಚ್ಛರೂ ಸಹ ಅವನ ಜಾತಿಗೇ ಸೇರಿದವರು.
ಭೂಯೋಽಸ್ಯ ದಕ್ಷಿಣಂ ಪಾಣಿಂ ಮಮಂಥುಸ್ತೇ ಮಹರ್ಷಯಃ |
ತತಃ ಪುರುಷ ಉತ್ಪನ್ನೋ ರೂಪೇಣೇಂದ್ರ ಇವಾಪರಃ ॥31॥
ಆ ಮಹರ್ಷಿಗಳು ಪುನಃ ವೇನನ ದಕ್ಷಿಣಬಾಹುವನ್ನು ಮಥಿಸಿದರು. ಆಗ ರೂಪದಲ್ಲಿ ಇಂದ್ರನನ್ನು ಹೋಲುವ ಪುರುಷನು ಉದಯಿಸಿದನು.
ಕವಚೀ ಬದ್ಧನಿಸ್ತ್ರಿಂಶಃ ಸಶರಃ ಸಶರಾಸನಃ |
ವೇದವೇದಾಂಗವಿಚ್ಚೈವ ಧನುರ್ವೇದೇ ಚ ಪಾರಗಃ ॥32॥
ಅವನು ಕವಚವನ್ನು ಧರಿಸಿ, ಖಡ್ಗವನ್ನು ಬಿಗಿದು, ಧನುರ್ಬಾಣಗಳನ್ನು ಹಿಡಿದು, ಧನುರ್ವೇದದಲ್ಲಿ ಪಾರಂಗತನಾಗಿ, ವೇದವೇದಾಂಗಜ್ಞಾನಿಯೂ ಆಗಿ- ದ್ದನು.
ತಂ ದಂಡನೀತಿಃ ಸಕಲಾ ಶ್ರಿತಾ ರಾಜನ್ ನರೋತ್ತಮಮ್ |
ತತಃ ಸ ಪ್ರಾಂಜಲಿರ್ವೈನ್ಯೋ ಮಹರ್ಷೀಂಸ್ತಾನುವಾಚ ಹ ॥33॥
ಎಲೈ ರಾಜನೇ! ಆಗ ಸಮಗ್ರವಾದ ದಂಡನೀತಿಯು ಆ ನರಶ್ರೇಷ್ಠನನ್ನು ಆಶ್ರಯಿಸಿತು. ಅನಂತರ ವೇನಪುತ್ರನಾದ ಅವನು ಕೈಗಳನ್ನು ಮುಗಿದು ಮಹರ್ಷಿ- ಗಳನ್ನು ಕುರಿತು ಹೀಗೆ ಹೇಳಿದನು.
ಸುಸೂಕ್ಷ್ಮಾ ಮೇ ಸಮುತ್ಪನ್ನಾ ಬುದ್ಧಿರ್ಧರ್ಮಾರ್ಥದರ್ಶಿನೀ |
ಅನಯಾ ಕಿಂ ಮಯಾ ಕಾರ್ಯಂ ತನ್ಮೇ ತತ್ತ್ವೇನ ಶಂಸತ ॥34॥
ನನಗೆ ಧರ್ಮಾರ್ಥಗಳನ್ನು ತೋರಿಸುವ ಸೂಕ್ಷ್ಮಬುದ್ಧಿಯುಂಟಾಗಿದೆ. ಈ ಬುದ್ಧಿಯಿಂದ ನಾನು ಏನನ್ನು ಮಾಡಬೇಕೆಂದು ನನಗೆ ಸರಿಯಾಗಿ ತಿಳಿಸಿ.
ಯನ್ಮಾಂ ಭವಂತೋ ವಕ್ಷ್ಯಂತಿ ಕಾರ್ಯಮರ್ಥಸಮನ್ವಿತಮ್ |
ತದಹಂ ವೈ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥35॥
ಅರ್ಥಸಾಧಕವಾದ ಯಾವ ಕಾರ್ಯವನ್ನು ಮಾಡಬೇಕೆಂದು ನೀವು ನನಗೆ ಹೇಳುವಿರೋ ಅದನ್ನು ನಾನು ಮಾಡುವೆನು. ಇದರಲ್ಲಿ ಬೇರೆ ವಿಚಾರವಿಲ್ಲ. (ಎಂದು ಹೇಳಿದನು).
ತಮೂಚುರಥ ದೇವಾಸ್ತೇ ತೇ ಚೈವ ಪರಮರ್ಷಯಃ |
ನಿಯತೋ ಯತ್ರ ಧರ್ಮೋ ವೈ ತಮಶಂಕಃ ಸಮಾಚರ ॥36॥
ಆಗ ದೇವತೆಗಳು ಮತ್ತು ಪರಮ ಋಷಿಗಳು ಅವನನ್ನು ಕುರಿತು ಯಾವುದ- ರಿಂದ ನಿಯಮೇನ ಧರ್ಮಪ್ರಾಪ್ತಿಯಾಗುವುದೋ ಅದನ್ನು ನಿಃಶಂಕವಾಗಿ ಆಚರಿಸು ಎಂದು ಹೇಳಿದರು.
ಪ್ರಿಯಾಪ್ರಿಯೇ ಪರಿತ್ಯಜ್ಯ ಸಮಃ ಸರ್ವೇಷು ಜಂತುಷು |
ಕಾಮಕ್ರೋಧೌ ಚ ಲೋಭಂ ಚ ಮಾನಂ ಚೋತ್ಸೃಜ್ಯ ದೂರತಃ ॥37॥
ಯಶ್ಚ ಧರ್ಮಾತ್ ಪ್ರವಿಚಲೇಲ್ಲೋಕೇ ಕಶ್ಚನ ಮಾನವಃ |
ನಿಗ್ರಾಹ್ಯಸ್ತೇ ಸ ಬಾಹುಭ್ಯಾಂ ಶಶ್ವದ್ ಧರ್ಮಮವೇಕ್ಷತಃ ॥38॥
ಪ್ರಿಯಾಪ್ರಿಯಗಳನ್ನು ಪರಿತ್ಯಜಿಸಿ, ಸರ್ವಪ್ರಾಣಿಗಳಲ್ಲಿಯೂ ಸಮಾನವಾಗಿ ನಡೆದುಕೊಂಡು, ಕಾಮಕ್ರೋಧಗಳನ್ನೂ, ಲೋಭವನ್ನೂ ಮತ್ತು ಅಹಂಕಾರ- ವನ್ನೂ ದೂರದಲ್ಲಿಯೇ ತ್ಯಜಿಸಿ ಲೋಕದಲ್ಲಿ ಯಾವ ಮನುಷ್ಯನು ಧರ್ಮದಿಂದ ಭ್ರಷ್ಟನಾಗುತ್ತಾನೆಯೋ ಅವನನ್ನು ಶಾಶ್ವತವಾಗಿ ಧರ್ಮವನ್ನು ಪರಿಶೀಲಿಸುವ ನೀನು ನಿನ್ನ ಬಾಹುಗಳಿಂದ ನಿಗ್ರಹಿಸಬೇಕು.
ಪ್ರತಿಜ್ಞಾಂ ಚಾಧಿರೋಹಸ್ವ ಮನಸಾ ಕರ್ಮಣಾ ಗಿರಾ |
ಪಾಲಿಯಷ್ಯಾಮ್ಯಹಂ ಭೌಮಂ ಬ್ರಹ್ಮ ಇತ್ಯೇವ ಚಾಸಕೃತ್ ॥39॥
ಯಶ್ಚಾತ್ರ ಧರ್ಮ ಇತ್ಯುಕ್ತೋ ದಂಡನೀತಿವ್ಯಪಾಶ್ರಯಃ |
ತಮಶಂಕಃ ಕರಿಷ್ಯಾಮಿ ಸ್ವವಶೋ ನ ಕದಾಚನ ॥40॥
ಅದಂಡ್ಯಾ ಮೇ ದ್ವಿಜಾಶ್ಚೇತಿ ಪ್ರತಿಜಾನೀಷ್ವ ಚಾಭಿಭೋ |
ಲೋಕಂ ಚ ಸಂಕರಾತ್ ಕೃತ್ಸ್ನಾತ್ ತ್ರಾತಾಸ್ಮೀತಿ ಪರಂತಪ ॥41॥
ಎಲೈ ಪರಂತಪನೇ! ಶತ್ರುಗಳನ್ನು ಸೋಲಿಸುವವನೇ! ನಾನು ಮನಸ್ಸಿನಿಂದಲೂ ಕರ್ಮದಿಂದಲೂ ಮತ್ತು ಮಾತಿನಿಂದಲೂ ಭೂಮಿಯಲ್ಲಿರುವ ವೇದವನ್ನು ರಕ್ಷಿಸುತ್ತೇನೆ ಎಂದು ಅನೇಕ ಬಾರಿ ಪ್ರತಿಜ್ಞೆಯನ್ನು ಮಾಡು. ನಾನು ನನ್ನ ಮನಸ್ಸಿಗೆ ಬಂದಂತೆ ನಡೆದುಕೊಳ್ಳದೆ, ದಂಡನೀತಿಯನ್ನು ಆಧರಿಸಿ, ಯಾವುದು ಧರ್ಮ- ವೆಂದು ಹೇಳಲ್ಪಡುತ್ತದೆಯೋ ಅದನ್ನು ನಿಃಶಂಕೆಯಿಂದ ಮಾಡುವೆನು. ನನಗೆ ಬ್ರಾಹ್ಮಣರು ಶಿಕ್ಷಾರ್ಹರಲ್ಲ. ಲೋಕದಲ್ಲಿ ಉಂಟಾಗಬಹುದಾದ ಧರ್ಮಸಂಕರ- ವೆಲ್ಲವನ್ನೂ ನಾನು ಉಂಟಾಗದಂತೆ ರಕ್ಷಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡು (ಎಂದು ಹೇಳಿದರು.)
ವೈನ್ಯಸ್ತತಸ್ತಾನುವಾಚ ದೇವಾನೃಷಿಪುರೋಗಮಾನ್ |
ಬ್ರಾಹ್ಮಣಾ ಮೇ ಸಹಾಯಾಶ್ಚೇದೇವಮಸ್ತು ಸುರರ್ಷಭಾಃ ॥42॥
ವೈನ್ಯನು ಆಗ ಅವರನ್ನು ಕುರಿತು `ಎಲೈ ಸುರಶ್ರೇಷ್ಠರೇ! ಬ್ರಾಹ್ಮಣರು ನನಗೆ ಸಹಾಯವಾಗಿದ್ದರೆ ಹಾಗೆಯೇ ಆಗಲಿ' ಎಂದು ಹೇಳಿದನು.

ಏವಮಸಿತ್ವತಿ ವೈನ್ಯಸ್ತು ತೈರುಕ್ತೋ ಬ್ರಹ್ಮವಾದಿಭಿಃ |
ಪುರೋಧಾಶ್ಚಾಭವತ್ ತಸ್ಯ ಶುಕ್ರೋ ಬ್ರಹ್ಮಮಯೋ ನಿಧಿಃ ॥43॥
ಬ್ರಹ್ಮವಾದಿಗಳಾದ ಋಷಿಗಳು ವೈನ್ಯನನ್ನು ಕುರಿತು ತಥಾಸ್ತು ಎಂದು ಹೇಳಿ- ದರು. ಆಗ ವೇದನಿಧಿಯಾದ ಶುಕ್ರಾಚಾರ್ಯರು ಅವನಿಗೆ ಪುರೋಹಿತರಾದರು.
ಮಂತ್ರಿಣೋ ವಾಲಖಿಲ್ಯಾಸ್ತು ಸಾರಸ್ವತ್ಯೋ ಗಣೋ ಹ್ಯಭೂತ್ |
ಮಹರ್ಷಿರ್ಭಗವಾನ್ ಗರ್ಗಸ್ತಸ್ಯ ಸಾಂವತ್ಸರೋಽಭವತ್ ॥44॥
ಸರಸ್ವತೀನದಿಯ ತೀರದಲ್ಲಿ ವಾಸಿಸುವ ವಾಲಖಿಲ್ಯ ಋಷಿಗಳ ಗಣವು ಮಂತ್ರಿ- ಗಳಾದರು. ಮಹರ್ಷಿಗಳೂ ಪೂಜ್ಯರೂ ಆದ ಗರ್ಗರು ಜ್ಯೋತಿಃಶಾಸ್ತ್ರಫಲವನ್ನು ಹೇಳುವವರಾದರು.
ಆತ್ಮನಾಽಷ್ಟಮ ಇತ್ಯೇವ ಶ್ರುತಿರೇಷಾ ಪರಾ ನೃಷು |
ಉತ್ಪನ್ನೌ ವಂದಿನೌ ಚಾಸ್ಯ ತತ್ಪೂರ್ವೌ ಸೂತಮಾಗಧೌ ॥45॥
ರಾಜನು ತನ್ನನ್ನು ಸೇರಿಸಿ ಎಂಟನೆಯವನು ಎಂಬ ಈ ಶ್ರುತಿಯು ಪ್ರಜೆಗಳಲ್ಲಿ ಪ್ರಸಿದ್ಧವಾಗಿದೆ. ಪುರೋಹಿತ, ಮಂತ್ರಿ, ಜ್ಯೋತಿಷಿಕ, ಇಬ್ಬರು ಬಂದಿಗಳು, ಸೂತ- ಮಾಗಧರು ಇವರು ಏಳು ರಾಜನನ್ನು ಸೇರಿಸಿ ರಾಜನು ಎಂಟನೆಯವನು. ಅವನಿಗೆ ಇಬ್ಬರು ವಂದಿಗಳು ಮತ್ತು ಅದಕ್ಕಿಂತಲೂ ಪೂರ್ವದಲ್ಲಿ ಸೂತಮಾಗಧರು ಉತ್ಪನ್ನ- ರಾದರು.
ತಯೋಃ ಪ್ರೀತೋ ದದೌ ರಾಜಾ ಪೃಥುರ್ವೈನ್ಯಃ ಪ್ರತಾಪವಾನ್ |
ಅನೂಪದೇಶಂ ಸೂತಾಯ ಮಗಧಂ ಮಾಗಧಾಯ ಚ ॥46॥
ಪ್ರತಾಪಶಾಲಿಯಾದ ವೇನಪುತ್ರನಾದ ಪೃಥುರಾಜನು ಸಂತೋಷದಿಂದ ಅವ- ರಲ್ಲಿ ಸೂತನಿಗೆ ಸಮುದ್ರಪ್ರಾಂತದೇಶವನ್ನು ಮತ್ತು ಮಾಗಧನಿಗೆ ಮಗಧದೇಶವನ್ನು ಕೊಟ್ಟನು.
ಸಮತಾಂ ವಸುಧಾಯಾಶ್ಚ ಸ ಸಮ್ಯಗುಪಪಾದಯತ್ |
ವೈಷಮ್ಯಂ ಹಿ ಪರಂ ಭೂಮೇರಾಸೀದಿತಿ ಹ ನಃ ಶ್ರುತಮ್ ॥47॥
ಭೂಮಿಯನ್ನು ಹೆಚ್ಚು ಕಡಿಮೆ ಸಮತಟ್ಟನ್ನಾಗಿಮಾಡಿದನು. ಮೊದಲು ಭೂಮಿಯು ಬಹಳ ಉಬ್ಬುತಗ್ಗುಗಳಿಂದ ಕೂಡಿದ್ದಿತು ಎಂದು ಕೇಳಿದ್ದೇವೆ.
ಮನ್ವಂತರೇಷು ಸರ್ವೇಷು ವಿಷಮಾ ಜಾಯತೇ ಮಹೀ |
ಉಜ್ಜಹಾರ ತತೋ ವೈನ್ಯಃ ಶಿಲಾಜಾಲಾನ್ ಸಮಂತತಃ ॥48॥
ಎಲ್ಲಾ ಮನ್ವಂತರಗಳಲ್ಲಿಯೂ ಭೂಮಿಯು ಹೀಗೆಯೇ ಉಬ್ಬು ತಗ್ಗುಗ- ಳಿಂದಲೇ ಸೃಷ್ಟಿಸಲ್ಪಡುತ್ತದೆ. ಆದ್ದರಿಂದ ವೈನ್ಯನು ಅಲ್ಲಲ್ಲಿದ್ದ ಶಿಲಾಸಮೂಹಗಳನ್ನು ತೆಗೆದು ಸಮತಟ್ಟನ್ನಾಗಿ ಮಾಡಿದನು.
ಸ ವಿಷ್ಣುನಾ ಚ ದೇವೇನ ಶಕ್ರೇಣ ವಿಬುಧೈಃ ಸಹ |
ಋಷಿಭಿಶ್ಚ ಪ್ರಜಾಪಾಲ್ಯೇ ಬ್ರಹ್ಮಣಾ ಚಾಭಿಷೇಚಿತಃ ॥49॥
ವಿಷ್ಣುವೂ, ಇಂದ್ರನೂ, ದೇವತೆಗಳೂ, ಋಷಿಗಳೂ ಮತ್ತು ಬ್ರಹ್ಮದೇವರೂ ಸೇರಿ ಅವನನ್ನು ಪ್ರಜಾಪಾಲಕನೆಂದು ಅಭಿಷೇಕ ಮಾಡಿದರು.
ತಂ ಸಾಕ್ಷಾತ್ ಪೃಥಿವೀ ಭೇಜೇ ರತ್ನಾನ್ಯಾದಾಯ ಪಾಂಡವ |
ಸಾಗರಃ ಸರಿತಾಂ ಭರ್ತಾ ಹಿಮವಾಂಶ್ಚಾಚಲೋತ್ತಮಃ ॥50॥
ಎಲೈ ಪಾಂಡವನೇ! ಭೂದೇವಿಯು ಸಾಕ್ಷಾತ್ತಾಗಿ ರತ್ನಗಳನ್ನು ತೆಗೆದುಕೊಂಡು ಬಂದು ಅವನನ್ನು ಸೇವಿಸಿದಳು. ಸರಿತ್ಪತಿಯಾದ ಸಾಗರನು ಮತ್ತು ಪರ್ವತಶ್ರೇಷ್ಠ- ನಾದ ಹಿಮಾಲಯನು ರತ್ನಗಳನ್ನು ನೀಡಿದರು.
ಶಕ್ರಶ್ಚ ಧನಮಕ್ಷಯ್ಯಂ ಪ್ರಾದಾತ್ ತಸ್ಯ ಯುಧಿಷ್ಠಿರ |
ರುಗ್ಮಂ ಚಾಪಿ ಮಹಾಮೇರುಃ ಸ್ವಯಂ ಕನಕಪರ್ವತಃ ॥51॥
ಎಲೈ ಯುಧಿಷ್ಠಿರನೇ! ಇಂದ್ರನು ತಾನೇ ಬಂದು ಅವನಿಗೆ ಅಕ್ಷಯವಾದ ಧನವನ್ನು ಕೊಟ್ಟನು. ಸುವರ್ಣಪರ್ವತವಾದ ಮೇರುವು ತಾನೇ ಸುವರ್ಣವನ್ನು ಕೊಟ್ಟನು.
ಯಕ್ಷರಾಕ್ಷಸಭರ್ತಾ ಚ ಭಗವಾನ್ ನರವಾಹನಃ |
ಧರ್ಮೇ ಚಾರ್ಥೇ ಚ ಕಾಮೇ ಚ ಸಮರ್ಥಂ ಪ್ರದದೌ ಧನಮ್ ॥52॥
ಯಕ್ಷರಾಕ್ಷಸರ ಪತಿಯಾದ, ಪೂಜ್ಯನಾದ, ನರವಾಹನನಾದ ಕುಬೇರನು ಅವನಿಗೆ ಧರ್ಮಾರ್ಥಕಾಮಗಳಿಗೆ ಬೇಕಾಗುವಷ್ಟು ಧನವನ್ನು ಕೊಟ್ಟನು.
ಹಯಾ ರಥಾಶ್ಚ ನಾಗಾಶ್ಚ ಕೋಟಿಶಃ ಪುರುಷಾಸ್ತಥಾ |
ಪ್ರಾದುರ್ಬಭೂವುರ್ವೈನ್ಯಸ್ಯ ಚಿಂತನಾದೇವ ಪಾಂಡವ |
ನ ಜರಾ ನ ಚ ದುರ್ಭಿಕ್ಷಂ ನಾಧಯೋ ವ್ಯಾಧಯಸ್ತಥಾ ॥53॥
ಸರೀಸೃಪೇಭ್ಯಃ ಸ್ತೇನೇಭ್ಯೋ ನ ಚಾನ್ಯೋನ್ಯಾತ್ ಕದಾಚನ |
ಭಯಮುತ್ಪದ್ಯತೇ ತತ್ರ ತಸ್ಯ ರಾಜ್ಞೋಽಭಿರಕ್ಷಣಾತ್ ॥54॥
ಅಶ್ವಗಳು, ರಥಗಳು, ಗಜಗಳು, ಮತ್ತು ಕೋಟಿಗಟ್ಟಲೆ ಪುರುಷರು ಸಹ ಅವನ ಮನಸ್ಸಿನ ಚಿಂತನೆಯಿಂದಲೇ ಪ್ರಾದುರ್ಭವಿಸಿದರು. ಎಲೈ ಪಾಂಡವನೇ! ಅವನ ರಾಜ್ಯದಲ್ಲಿ ಜರೆಯಾಗಲೀ, ದುರ್ಭಿಕ್ಷವಾಗಲೀ, ಆಧಿವ್ಯಾಧಿಗಳಾಗಲೀ, ಸರ್ಪ- ಭಯವಾಗಲೀ, ಚೋರಭಯವಾಗಲೀ, ಪರಸ್ಪರಭಯವಾಗಲೀ ಉಂಟಾಗಲಿಲ್ಲ. ಆ ರಾಜನ ರಕ್ಷಣೆಯು ಆ ರೀತಿ ಇದ್ದಿತು.
ಆಪಸ್ತಸ್ತಂಭಿರೇ ಚಾಸ್ಯ ಸಮುದ್ರಮಭಿಯಾಸ್ಯತಃ |

ಪರ್ವತಾಶ್ಚ ದದುರ್ಮಾರ್ಗಂ ಧ್ವಜಭಂಗಶ್ಚ ನಾಭವತ್ ॥55॥
ಸಮುದ್ರವನ್ನು ಹೋಗಿ ಸೇರುವ ನದಿಗಳು ಅಲ್ಲಲ್ಲಿ ನಿಂತವು. ಪರ್ವತಗಳು ಅವನಿಗೆ ಮಾರ್ಗವನ್ನು ನೀಡಿದವು. ಅವನ ರಥದ ಧ್ವಜವು ಭಗ್ನವಾಗಲಿಲ್ಲ.
ತೇನೇಯಂ ಪೃಥಿವೀ ದುಗ್ಧಾ ಸಸ್ಯಾನಿ ದಶ ಸಪ್ತ ಚ |
ಯಕ್ಷರಾಕ್ಷಸನಾಗೈಶ್ಚಾಭೀಪ್ಸಿತಂ ಯಸ್ಯ ಯಸ್ಯ ಯತ್ ॥56॥
ಅವನು ಈ ಭೂಮಿಯನ್ನು ದೋಹನ ಮಾಡಿ ಯಕ್ಷ, ರಾಕ್ಷಸ, ಸರ್ಪಗಳಲ್ಲಿ ಅವರವರಿಗೆ ಇಷ್ಟವಾದ ಹದಿನೇಳು ವಿಧವಾದ ಸಸ್ಯಗಳನ್ನು ಮತ್ತು ಹದಿನೆಂಟು ವಿಧವಾದ ಧಾನ್ಯಗಳನ್ನು ದೋಹನ ಮಾಡಿದನು. (ಲಕ್ಷ್ಮಾಲಂಕಾರ)
ತೇನ ಧರ್ಮೋತ್ತರಶ್ಚಾಯಂ ಕೃತೋ ಲೋಕೋ ಮಹಾತ್ಮನಾ |
ರಂಜಿತಾಶ್ಚ ಪ್ರಜಾಃ ಸರ್ವಾಸ್ತೇನ ರಾಜೇತಿ ಶಬ್ದ್ಯತೇ ॥57॥
ಮಹಾತ್ಮನಾದ ಅವನು ಈ ಲೋಕವನ್ನು ಧರ್ಮೋತ್ತರವನ್ನಾಗಿ ಮಾಡಿದನು. ಎಲ್ಲಾ ಪ್ರಜೆಗಳನ್ನು ರಂಜನೆ ಮಾಡಿದುದರಿಂದ ಅವನಿಗೆ ರಾಜ ಎಂಬ ಶಬ್ದವು ಬಂದಿತು.
ಬ್ರಾಹ್ಮಣಾನಾಂ ಕ್ಷತತ್ರಾಣಾತ್ ತತಃ ಕ್ಷತ್ರಿಯ ಉಚ್ಯತೇ |
ಪ್ರಥಿತಾ ಧನತಶ್ಚೇಯಂ ಪೃಥಿವೀ ಸಾಧುಭಿಃ ಸ್ಮೃತಾ ॥58॥
ಬ್ರಾಹ್ಮಣರಿಗೆ ಗಾಯವಾಗದಂತೆ ರಕ್ಷಣೆ ಮಾಡಿದುದರಿಂದ ಕ್ಷತ್ರಿಯನೆಂದು ಕರೆಯುತ್ತಾರೆ. ಅವನ ಆಳ್ವಿಕೆಯಲ್ಲಿ ಈ ಭೂಮಿಯು ಸಂಪತ್ತಿನಿಂದ ವಿಸ್ತಾರ- ಗೊಂಡಿತು. ಆದ್ದರಿಂದ ಸಜ್ಜನರು ಭೂಮಿಯನ್ನು ಪೃಥಿವೀ ಎಂದು ಕರೆಯುತ್ತಾರೆ.
ಸ್ಥಾಪನಂ ಚಾಕರೋದ್ ವಿಷ್ಣುಃ ಸ್ವಯಮೇವ ಸನಾತನಃ |
ನಾತಿವರ್ತಿಷ್ಯತೇ ಕಶ್ಚಿದ್ ರಾಜಂಸ್ತ್ವಾಮಿತಿ ಪಾರ್ಥಿವ ॥59॥
ಎಲೈ ಪಾರ್ಥಿವನೇ! ಸನಾತನನಾದ ವಿಷ್ಣುವು ತಾನಾಗಿಯೇ ``ಎಲೈ ರಾಜನೇ ನಿನ್ನನ್ನು ಯಾರೂ ಅತಿಕ್ರಮಿಸುವುದಿಲ್ಲ'' ಎಂದು ಕಟ್ಟಳೆಯನ್ನು ವಿಧಿಸಿದನು.
ತೇಜಸಾ ಭಗವಾನ್ ವಿಷ್ಣುರಾವಿವೇಶ ಚ ಭೂಮಿಪಮ್ |
ದೇವವನ್ನರದೇವಾನಾಂ ನಮತೇ ಯಜ್ಜಗನ್ನೃಪ ॥60॥
ಭಗವಂತನಾದ ವಿಷ್ಣುವು ಆ ರಾಜನನ್ನು ತನ್ನ ತೇಜೋಂಶದಿಂದ ಪ್ರವೇಶಿಸಿ- ದನು. ಆದ್ದರಿಂದ ಎಲೈ ರಾಜನೇ! ಜಗತ್ತು ದೇವತೆಯಂತೆ ನರದೇವನಾದ ರಾಜನಿಗೆ ನಮಸ್ಕರಿಸುತ್ತದೆ.
ದಂಡನೀತ್ಯಾ ಚ ಸತತಂ ರಕ್ಷಿತಂ ತಂ ನರೇಶ್ವರ |
ನಾಧರ್ಷಯತ್ ತತಃ ಕಶ್ಚಿಚ್ಚಾರನಿತ್ಯಾಚ್ಚ ದರ್ಶನಾತ್ ॥61॥
ಎಲೈ ನರೇಶ್ವರನೇ! ದಂಡನೀತಿಯಿಂದ ಸತತವಾಗಿ ರಕ್ಷಿಸಲ್ಪಡುವುದರಿಂದಲೂ ಮತ್ತು ನಿತ್ಯವೂ ಚಾರರ ಮೂಲಕ ಎಲ್ಲವನ್ನೂ ನೋಡುವುದರಿಂದಲೂ ಅವನನ್ನು ಯಾರೂ ಅವಮಾನಗೊಳಿಸಲಿಲ್ಲ.
ಆತ್ಮನಾ ಕರಣೈಶ್ಚೈವ ಸಮಸ್ಯೇಹ ಮಹೀಕ್ಷಿತಃ |
ಕೋ ಹೇತುರ್ಯದ್ವಶೇ ತಿಷ್ಠೇಲ್ಲೋಕೋ ದೈವಾದೃತೇ ಗುಣಾತ್ ॥62॥
ತಾನು ಮತ್ತು ತನ್ನ ಸಹಾಯಕರು ನಿಷ್ಪಕ್ಷಪಾತವಾಗಿ ವರ್ತಿಸುವ ರಾಜನಿಗೆ ದೈವಾನುಗ್ರಹವನ್ನು ಬಿಟ್ಟು ಜಗತ್ತು ವಶವಾಗುವುದಕ್ಕೆ ಬೇರೆ ಯಾವ ಕಾರಣವಿದೆ?
ವಿಷ್ಣೋರ್ಲಲಾಟಾತ್ ಕಮಲಂ ಸೌವರ್ಣಮಭವತ್ ತದಾ |
ಶ್ರೀಃ ಸಂಭೂತಾ ಯತೋ ದೇವೀ ಪತ್ನೀ ಧರ್ಮಸ್ಯ ಧೀಮತಃ ॥63॥
ವಿಷ್ಣುವಿನ ಲಲಾಟದಿಂದ ಸುವರ್ಣಮಯವಾದ ಕಮಲವು ಆಗ ಜನಿಸಿತು. ಅದರಲ್ಲಿ ಮೇಧಾವಿಯಾದ ಧರ್ಮನ ಪತ್ನಿಯಾದ ಶ್ರೀದೇವಿಯು ಜನಿಸಿದಳು.
ಶ್ರಿಯಃ ಸಕಾಶಾದರ್ಥಶ್ಚ ಜಾತೋ ಧರ್ಮೇಣ ಪಾಂಡವ |
ಅಥ ಧರ್ಮಸ್ತಥೈವಾರ್ಥಃ ಶ್ರೀಶ್ಚ ರಾಜ್ಯೇ ಪ್ರತಿಷ್ಠಿತಾ ॥64॥
ಎಲೈ ಪಾಂಡವನೇ! ಧರ್ಮದಿಂದ ಶ್ರೀದೇವಿಯ ಮೂಲಕ ಅರ್ಥವು ಜನಿಸಿತು. ಅನಂತರ ಧರ್ಮ,ಅರ್ಥ ಮತ್ತು ಸಂಪತ್ತುಗಳು ರಾಜ್ಯದಲ್ಲಿ ಪ್ರತಿಷ್ಠಿತವಾದವು.
ಸುಕೃತಸ್ಯ ಕ್ಷಯಾಚ್ಚೈವ ಸ್ವರ್ಲೋಕಾದೇತ್ಯ ಮೇದಿನೀಮ್ |
ಪಾರ್ಥಿವೋ ಜಾಯತೇ ತಾತ ದಂಡನೀತಿವಶಾನುಗಃ ॥65॥
ಪ್ರೀತಿಪಾತ್ರನೇ! ಶ್ರೇಷ್ಠರಾದ ಜೀವರು ಸ್ವರ್ಗವಾಸಕ್ಕೆ ಕಾರಣವಾದ ಪುಣ್ಯವನ್ನು ಭೋಗದಿಂದ ಕಳೆದುಕೊಂಡು ಸ್ವರ್ಗದಿಂದ ಭೂಮಿಗೆ ಬಂದು ರಾಜರಾಗಿ ದಂಡ- ನೀತಿಯ ವಶವರ್ತಿಗಳಾಗುತ್ತಾರೆ.
ಮಹತ್ತ್ವೇನ ಚ ಸಂಯುಕ್ತೋ ವೈಷ್ಣವೇನ ನರೋ ಭುವಿ |
ಬುದ್ಧ್ಯಾ ಭವತಿ ಸಂಯುಕ್ತೋ ಮಾಹಾತ್ಮ್ಯಂ ಚಾಧಿಗಚ್ಛತಿ ॥66॥
ಶ್ರೇಷ್ಠತೆಯಿಂದಲೂ ಮತ್ತು ವಿಷ್ಣುವಿನ ಸನ್ನಿಧಾನದಿಂದಲೂ ಕೂಡಿದ ಅಂತಹ ಮಾನವರು ಒಳ್ಳೆಯ ಬುದ್ಧಿಯನ್ನು ಹೊಂದಿ, ಮಾಹಾತ್ಮ್ಯವನ್ನು ಪಡೆಯುತ್ತಾರೆ.
ಸ್ಥಾಪನಾಮಥ ದೇವಾನಾಂ ನ ಕಶ್ಚಿದತಿವರ್ತತೇ |
ತಿಷ್ಠತ್ಯೇಕಸ್ಯ ಚ ವಶೇ ತಂ ಚೇದನುವಿಧೀಯತೇ ॥67॥
ದೇವತೆಗಳು ವಿಧಿಸಿದ ಕಟ್ಟಳೆಯನ್ನು ಯಾರೂ ಮೀರುವುದಿಲ್ಲ. ಅವನನ್ನು ಅನುಸರಿಸುವ ಪ್ರಜೆಗಳೆಲ್ಲರೂ ಅವನ ವಶದಲ್ಲಿ

ಇರುತ್ತಾರೆ.
ಶುಭಂ ಹಿ ಕರ್ಮ ರಾಜೇಂದ್ರ ಶುಭತ್ವಾಯೋಪಕಲ್ಪತೇ |
ತುಲ್ಯಸ್ಯೈಕಸ್ಯ ಯಸ್ಯಾಯಂ ಲೋಕೋ ವಚಸಿ ತಿಷ್ಠತಿ ||68||
ಎಲ್ಲೈ ರಾಜೇಂದ್ರನೇ! ಶುಭಕರ್ಮವು ಶುಭಫಲವನ್ನೇ ಕೊಡುತ್ತದೆ. ಆದ್ದರಿಂದ ಅಂತಹ ತಮಗೆ ಶರೀರಾದಿಗಳಿಂದ ಸಮಾನನಾದ ಒಬ್ಬನ ವಶದಲ್ಲಿ ಲೋಕವು ಇರುತ್ತದೆ.
ಯೋ ಹ್ಯಸ್ಯ ಮುಖಮದ್ರಾಕ್ಷೀತ್ ಸೋಮ್ಯ ಸೋಽಸ್ಯ ವಶಾನುಗಃ |
ಸುಭಗಂ ಚಾರ್ಥವಂತಂ ಚ ರೂಪವಂತಂ ಚ ಪಶ್ಯತಿ ||69||
ಯಾವನು ಸುಭಗನೂ, ರೂಪವಂತನೂ, ಶ್ರೀಮಂತನೂ ಆದ ರಾಜನ ಮುಖ -ವನ್ನು ನೋಡುತ್ತಾನೆಯೋ ಅವನು ಎಲ್ಲೈ ಸೌಮ್ಯನೇ! ಅವನಿಗೆ ವಶನಾಗುತ್ತಾನೆ.
ತತೋ ಜಗತಿ ರಾಜೇಂದ್ರ ಸತತಂ ಶಬ್ದಿತಂ ಬುಧೈಃ |
ದೇವಾಶ್ಚ ನರದೇವಾಶ್ಚ ತುಲ್ಯಾ ಇತಿ ವಿಶಾಂಪತೇ ||70||
ಎಲ್ಲೈ ರಾಜೇಂದ್ರನೇ! ಆಗ ಜಗತ್ತಿನಲ್ಲಿ ಜ್ಞಾನಿಗಳು `ದೇವತೆಗಳು ಮತ್ತು ರಾಜರು ಸಮಾನರಾದವರು' ಎಂಬ ಪ್ರಥೆಯನ್ನು ಉಂಟು ಮಾಡಿದರು.
ಏತತ್ ತೇ ಸರ್ವಮಾಖ್ಯಾತಂ ಮಹತ್ತ್ವಂ ಪ್ರತಿ ರಾಜಸು |
ಕಾರ್ತ್ಸ್ನ್ಯೇನ ಭರತಶ್ರೇಷ್ಠ ಕಿಮನ್ಯದಿಹ ವರ್ತತಾಮ್ ||71||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಷ್ಟಿತಮೋಽಧ್ಯಾಯಃ ||60||
ಎಲ್ಲೈ ಭರತಶ್ರೇಷ್ಠನೇ! ರಾಜರಲ್ಲಿರುವ ಶ್ರೇಷ್ಠತೆಯ ವಿಷಯದಲ್ಲಿ ನಾನು ನಿನಗೆ ಎಲ್ಲವನ್ನೂ ಸಂಪೂರ್ಣವಾಗಿ ಹೇಳಿದ್ದೇನೆ. ಬೇರೆ ಏನನ್ನು ಹೇಳಲಿ?
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 60ನೆಯ ಅಧ್ಯಾಯವು ಮುಗಿಯಿತು.
0

61. ಅರವತ್ತೊಂದನೆಯ ಅಧ್ಯಾಯ
ಚಾತುರ್ವರ್ಣ್ಯಧರ್ಮಕಥನ
ವೈಶಂಪಾಯನಃ
ತತಃ ಪುನಃ ಸ ಗಾಂಗೇಯಮಭಿವಾದ್ಯ ಪಿತಾಮಹಮ್ |
ಪ್ರಾಂಜಲಿರ್ನಿಯತೋ ಭೂತ್ವಾ ಪರ್ಯಪೃಚ್ಛದ್ ಯುಧಿಷ್ಠಿರಃ ||1||
ವೈಶಂಪಾಯನರು ಅನಂತರ ಯುಧಿಷ್ಠಿರನು ಪುನಃ ಗಂಗಾಪುತ್ರರೂ ಪಿತಾಮಹರೂ ಆದ ಭೀಷ್ಮರಿಗೆ ಅಭಿವಂದಿಸಿ, ಕೈಗಳನ್ನು ಮುಗಿದು ಶ್ರದ್ಧೆಯಿಂದ ಪ್ರಶ್ನೆ ಮಾಡಿದನು.
ಕೇ ಧರ್ಮಾಃ ಸರ್ವವರ್ಣಾನಾಂ ಚಾತುರ್ವರ್ಣ್ಯಸ್ಯ ಕೇ ಪೃಥಕ್ |
ಚತುರ್ಣಾಮಾಶ್ರಮಾಣಾಂ ಚ ರಾಜಧರ್ಮಾಶ್ಚ ಕೇ ಮತಾಃ ||2||
ಅನುಲೋಮಪ್ರತಿಲೋಮವರ್ಣದವರಿಗೆ ಯಾವ ಧರ್ಮಗಳು? ಚಾತು- ರ್ವಣ್ಯಕ್ಕೆ ಸಂಬಂಧಿಸಿದ ಧರ್ಮಗಳು ಯಾವವು? ನಾಲ್ಕು ಆಶ್ರಮಗಳಿಗೂ ಮತ್ತು ರಾಜರಿಗೂ ಸಂಬಂಧಿಸಿದ ಧರ್ಮಗಳು ಯಾವವು?
ಕೇನಸ್ವಿದ್ ವರ್ಧತೇ ರಾಷ್ಟ್ರಂ ರಾಜಾ ಕೇನ ವಿವರ್ಧತೇ |
ಕೇನ ಪೌರಾಶ್ಚ ಭೃತ್ಯಾಶ್ಚ ವರ್ಧಂತೇ ಭರತರ್ಷಭ ||3||
ರಾಷ್ಟ್ರವು ಯಾವುದರಿಂದ ಅಭಿವೃದ್ಧಿ ಹೊಂದುತ್ತದೆ? ರಾಜನು ಯಾವುದರಿಂದ ಅಭಿವೃದ್ಧಿಯನ್ನು ಹೊಂದುತ್ತಾನೆ? ಎಲ್ಲೈ ಭರತರ್ಷಭನೇ! ಪೌರರು ಮತ್ತು ಭೃತ್ಯರು ಯಾವುದರಿಂದ ಅಭಿವೃದ್ಧಿಯನ್ನು ಹೊಂದುತ್ತಾರೆ?
ಕೋಶಂ ದಂಡಂ ಚ ದುರ್ಗಂ ಚ ಸಹಾಯಾನ್ ಮಂತ್ರಿಣಸ್ತಥಾ |
ಋತ್ವಿಕ್ಪುರೋಹಿತಾಚಾರ್ಯಾನ್ ಕೀದೃಶಾನ್ ವರ್ಜಯೇನ್ನೃಪಃ ||4||
ಕೋಶ, ದಂಡ, ಕೋಟೆ, ಸಹಾಯಕರು, ಮಂತ್ರಿಗಳು, ಋತ್ವಿಜರು, ಪುರೋಹಿತರು, ಆಚಾರ್ಯರು ಇವರಲ್ಲಿ ಎಂತಹವರನ್ನು ಅಥವಾ ಎಂತಹದನ್ನು ರಾಜನು ವರ್ಜಿಸಬೇಕು?
ಕೇಷು ವಿಶ್ವಸಿತವ್ಯಂ ಸ್ಯಾದ್ ರಾಜ್ಞಾಂ ಕಸ್ಯಾಂಚಿದಾಪದಿ |
ಕುತೋ ವಾಽಽತ್ಮಾ ದೃಢೋ ರಕ್ಷ್ಯಸ್ತನ್ಮೇ ಬ್ರೂಹಿ ಪಿತಾಮಹ ||5||
ರಾಜನಿಗೆ ಯಾವುದಾದರೂ ಆಪತ್ತು ಸಂಭವಿಸಿದರೆ ಅವನು ಯಾರಲ್ಲಿ ವಿಶ್ವಾಸವನ್ನು ಮಾಡಬೇಕು? ಎಲ್ಲೈ ಪಿತಾಮಹನೇ! ರಾಜನು ತನ್ನನ್ನು ಏಕೆ ದೃಢವಾಗಿ ರಕ್ಷಿಸಿಕೊಳ್ಳಬೇಕೆಂದು ನನಗೆ ಹೇಳು.
ದ್ವೈಧೀಭಾವೇ ಚ ಭೂತಾನಾಂ ಶಪಥಂ ಕೀದೃಶೋ ಭವೇತ್ |
ಅಧರ್ಮಸ್ಯ ಫಲಂ ಯಚ್ಚ ಶಪಥಸ್ಯ ವಿಲಂಘನೇ ||6||
ಇಬ್ಬರು ಪ್ರಜೆಗಳಿಗೆ ಕಲಹವುಂಟಾದಾಗ ಮಾಡುವ ಪ್ರಮಾಣರೂಪವಾದ ಶಪಥವು ಹೇಗಿರಬೇಕು? ಅಂತಹ ಶಪಥವನ್ನು ಮೀರಿದರೆ ಉಂಟಾಗುವ ಅಧರ್ಮದ ಫಲವೇನು?
ಸರ್ವಮೇತದ್ ಯಥಾತತ್ತ್ವಂ ವ್ಯವಹಾರಂ ಚ ತಾದೃಶಮ್ |

ಸಮಾಸವ್ಯಾಸಯೋಗೇನ ಕಥಯಸ್ವ ಪಿತಾಮಹ ॥7॥
ಎಲ್ಲೈ ಪಿತಾಮಹನೇ! ಇವೆಲ್ಲವನ್ನೂ ಮತ್ತು ಅಂತಹ ಎಲ್ಲ ವ್ಯವಹಾರಗಳನ್ನೂ ಸಂಕ್ಷೇಪವಿಸ್ತಾರಗಳಿಂದ ನನಗೆ ಹೇಳಬೇಕು.
ಭೀಷ್ಮಃ
ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ |
ಬ್ರಾಹ್ಮಣೇಭ್ಯೋ ನಮಸ್ಕೃತ್ವಾ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ॥8॥
ಭೀಷ್ಮರು ಮಹತ್ತಾದ ಧರ್ಮಕ್ಕೆ ನಮಸ್ಕಾರ. ಸರ್ವಸಾಧಕನಾದ ಕೃಷ್ಣನಿಗೆ ನಮಸ್ಕಾರ. ಬ್ರಾಹ್ಮಣರನ್ನು ನಮಸ್ಕರಿಸಿ ಶಾಶ್ವತವಾದ ಧರ್ಮಗಳನ್ನು ಹೇಳುವೆನು.
ಅಕ್ರೋಧಃ ಸತ್ಯವಚನಂ ಸಂವಿಭಾಗಃ ಕ್ಷಮಾ ತಥಾ |
ಪ್ರಜನಃ ಸ್ವೇಷು ದಾರೇಷು ಶೌಚಮದ್ರೋಹ ಏವ ಚ ॥9॥
ಆರ್ಜವಂ ಭೃತ್ಯಭರಣಂ ನವೈತೇ ಸಾರ್ವವರ್ಣಿಕಾಃ |
ಬ್ರಾಹ್ಮಣಸ್ಯ ತು ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಕೇವಲಮ್ ॥10॥
ಅಕ್ರೋಧ, ಸತ್ಯವಚನ, ತನ್ನಲ್ಲಿರುವ ದ್ರವ್ಯವನ್ನು ಹಂಚಿಕೊಳ್ಳುವುದು, ಕ್ಷಮೆ, ತನ್ನ ಪತ್ನಿಯಲ್ಲಿ ಪುತ್ರರನ್ನು ಪಡೆಯುವುದು, ಶೌಚ, ಅದ್ರೋಹ, ನೇರತನ, ಸೇವಕರ ಪೋಷಣೆ ಈ ಒಂಭತ್ತು ಧರ್ಮಗಳು ಸರ್ವವರ್ಣದವರಿಗೂ ಸಮಾನವಾದ- ವುಗಳು. ಇನ್ನು ಬ್ರಾಹ್ಮಣರಿಗೆ ಮಾತ್ರ ಅಸಾಧಾರಣವಾದ ಧರ್ಮಗಳನ್ನು ನಿನಗೆ ಹೇಳುವೆನು.
ದಮಮೇವ ಮಹಾರಾಜ ಧರ್ಮಮಾಹುಃ ಪುರಾತನಮ್ |
ಸ್ವಾಧ್ಯಾಯೋಽಧ್ಯಾಪನಂ ಚೈವ ತತ್ರ ಕರ್ಮ ಸಮಾಪ್ಯತೇ ॥11॥
ಎಲ್ಲೈ ಮಹಾರಾಜನೇ! ದಮವೇ (ಇಂದ್ರಿಯನಿಗ್ರಹವೇ) ಬ್ರಾಹ್ಮಣರಿಗೆ ಶ್ರೇಷ್ಠ- ವಾದ ಪ್ರಾಚೀನಧರ್ಮವೆಂದು ಜ್ಞಾನಿಗಳು ಹೇಳುತ್ತಾರೆ. ಅದರ ಜೊತೆಯಲ್ಲಿ ಅಧ್ಯಯನ ಮತ್ತು ಅಧ್ಯಾಪನ ಇಷ್ಟರಲ್ಲಿ ಬ್ರಾಹ್ಮಣನ ಕರ್ಮವು ಸಮಾಪ್ತಿಗೊಳ್ಳು- ತ್ತದೆ.
ತಂ ಚೇದ್ ವಿತ್ತಮುಪಾಗಚ್ಛೇದ್ ವರ್ತಮಾನಂ ಸ್ವಕರ್ಮಣಿ |
ಅಕುರ್ವಾಣಂ ವಿಕರ್ಮಾಣಿ ಶಾಂತಂ ಪ್ರಜ್ಞಾನತರ್ಪಿತಮ್ ॥12॥
ಕುರ್ವೀತಾಪತ್ಯಸಂತಾನಮಥೋ ದದ್ಯಾತ್ ಯಜೇತ ಚ |
ಸಂವಿಭಜ್ಯ ಹಿ ಭೋಕ್ತವ್ಯಂ ಧನಂ ಸದ್ಭಿರಿತೀಷ್ಯತೇ ॥13॥
ತನ್ನ ಕರ್ಮಗಳಲ್ಲಿ ತಾನು ನಿರತನಾಗಿ, ವಿರುದ್ಧಕರ್ಮಗಳನ್ನು ಮಾಡದೆ, ಶಾಂತನಾದ, ತನ್ನ ಜ್ಞಾನದಿಂದ ತೃಪ್ತನಾದ ಬ್ರಾಹ್ಮಣರಿಗೆ ವಿತ್ತವು ದೊರಕಿದರೆ ಪತ್ನಿಯಲ್ಲಿ ಅಪತ್ಯರನ್ನು ಪಡೆದು, ದಾನವನ್ನು ಮಾಡಬೇಕು ಮತ್ತು ಯಾಗವನ್ನು ಮಾಡಬೇಕು. ಸಜ್ಜನರಾದವರು ತಮ್ಮ ಧನವನ್ನು ಹಂಚಿಕೊಂಡು ಭೋಗಿಸಬೇಕು ಎಂದು ಹೇಳಲ್ಪಡುತ್ತದೆ.
ಪರಿನಿಷ್ಠಿತಕಾರ್ಯಸ್ತು ಸ್ವಾಧ್ಯಾಯೇನೈವ ಬ್ರಾಹ್ಮಣಃ |
ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥14॥
ಬ್ರಾಹ್ಮಣನು ತನ್ನ ಸ್ವಾಧ್ಯಾಯದಿಂದಲೇ ತನ್ನ ಎಲ್ಲಾ ಕಾರ್ಯವನ್ನು ಪೂರ್ಣ- ಗೊಳಿಸುವವನಾಗುತ್ತಾನೆ. ಉಳಿದುದನ್ನು ಮಾಡಲಿ ಅಥವಾ ಮಾಡದೆ ಇರಲಿ ಬ್ರಾಹ್ಮಣನು ಗಾಯತ್ರಿಯನ್ನು ಜಪಿಸಬೇಕು.
ಕ್ಷತ್ರಿಯಸ್ಯಾಪಿ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ |
ದದ್ಯಾದ್ ರಾಜಾ ನ ಯಾಚೇತ ಯಜೇತ ನತು ಯಾಜಯೇತ್ ॥15॥
ನಾಧ್ಯಾಪಯೇದಧೀಯೇತ ಪ್ರಜಾಶ್ಚ ಪರಿಪಾಲಯೇತ್ |
ನಿತ್ಯೋದ್ಯುಕ್ತೋ ದಸ್ಯುವಧೇ ರಣೇ ಕುರ್ಯಾತ್ ಪರಾಕ್ರಮಮ್ ॥16॥
ಎಲ್ಲೈ ಭಾರತನೇ! ಕ್ಷತ್ರಿಯನ ಧರ್ಮಗಳನ್ನು ನಿನಗೆ ಹೇಳುವೆನು. ರಾಜನಾದ- ವನು ದಾನ ಮಾಡಬೇಕು. ಯಾಚಿಸಬಾರದು. ಯಾಗವನ್ನು ಮಾಡಬೇಕು. ಮಾಡಿಸಬಾರದು. ಅಧ್ಯಯನವನ್ನು ಮಾಡಬೇಕು. ಅಧ್ಯಾಪನವನ್ನು ಮಾಡ- ಬಾರದು. ಪ್ರಜೆಗಳನ್ನು ರಕ್ಷಿಸಬೇಕು. ದುಷ್ಟರ ವಧೆಯಲ್ಲಿ ನಿತ್ಯವೂ ಉದ್ಯಮಶೀಲ- ನಾಗಬೇಕು. ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿಸಬೇಕು.
ಯೇ ಚ ಕ್ರತುಭಿರೀಜಾನಾಃ ಶ್ರುತವಂತಶ್ಚ ಭೂಮಿಪಾಃ |
ಯ ಏವಾಹವಜೇತಾರಸ್ತ ಏಷಾಂ ಲೋಕಜಿತ್ತಮಾಃ ॥17॥
ಯಾವ ರಾಜರು ವಿದ್ಯೆಯನ್ನು ಸಂಪಾದಿಸಿ, ಯಜ್ಞಗಳನ್ನು ಆಚರಿಸುವರೋ ಅವರೇ ಯುದ್ಧಗಳಲ್ಲಿ ಗೆಲ್ಲುವವರು. ಅಂತಹವರು ಲೋಕವನ್ನು ಜಯಿಸಿದವರಲ್ಲಿ ಶ್ರೇಷ್ಠರಾದವರು.
ಅವಿಕ್ಷತೇನ ದೇಹೇನ ಸಮರಾದ್ ಯೋ ನಿವರ್ತತೇ |
ಕ್ಷತ್ರಿಯೋ ನಾಸ್ಯ ತತ್ ಕರ್ಮ ಪ್ರಶಂಸಂತಿ ಪುರಾವಿದಃ ॥18॥
ಕ್ಷತ್ರಿಯನಾದವನು ಗಾಯವಿಲ್ಲದ ದೇಹದಿಂದ ಯುದ್ಧದಿಂದ ಹಿಂದಿರುಗಿದರೆ ಅವನ ಕರ್ಮವನ್ನು ಪ್ರಾಚೀನರು ಪ್ರಶಂಸಿಸುವುದಿಲ್ಲ.
ವಧಂ ಹಿ ಕ್ಷತ್ರಬಂಧೂನಾಂ ಧರ್ಮಮಾಹುಃ ಪ್ರಧಾನತಃ |
ನಾಸ್ಯ ಕೃತ್ಯತಮಂ ಕಿಂಚಿದನ್ಯದ್ ದಸ್ಯುನಿಬರ್ಹಣಾತ್ ॥19॥
ಕ್ಷತ್ರಬಂಧುಗಳಿಗೆ ದುಷ್ಟರ ವಧೆಯು ಪ್ರಧಾನವಾದ ಧರ್ಮವೆಂದು ಹೇಳು- ತ್ತಾರೆ. ದುಷ್ಟವಿನಾಶಕ್ಕಿಂತಲೂ ಅಧಿಕವಾದ ಕ್ಷತ್ರಿಯನು ಮಾಡಬೇಕಾದ ಕಾರ್ಯವು ಯಾವುದೂ ಇಲ್ಲ.
ದಾನಮಧ್ಯಯನಂ ಯಜ್ಞೋ ಯೋಗಃ ಕ್ಷೇಮೋ ವಿಧೀಯತೇ |
ತಸ್ಮಾದ್ ರಾಜ್ಞಾ ವಿಶೇಷೇಣ ಯೋದ್ಧವ್ಯಂ ಧರ್ಮಮೀಪ್ಸತಾ ॥20॥
ದಾನ, ಅಧ್ಯಯನ ಮತ್ತು ಯಜ್ಞಗಳು ರಾಜರಿಗೆ ಯೋಗಕ್ಷೇಮವೆಂದು ಹೇಳ- ಲ್ಪಡುತ್ತದೆ. ಆದ್ದರಿಂದ ಧರ್ಮವನ್ನು ಬಯಸುವ

ರಾಜನು ವಿಶೇಷವಾಗಿ ಯುದ್ಧವನ್ನು ಮಾಡಬೇಕು.
ಸ್ವೇಷು ಧರ್ಮೇಷ್ವವಸ್ಥಾಪ್ಯ ಪ್ರಜಾಃ ಸರ್ವಾ ಮಹೀಪತಿಃ |
ಧರ್ಮೇಣ ಸರ್ವಕೃತ್ಯಾನಿ ಸಮನಿಷ್ಠಾನಿ ಕಾರಯೇತ್ ॥21॥
ರಾಜನಾದವನು ಎಲ್ಲ ಪ್ರಜೆಗಳನ್ನೂ ಅವರವರ ಧರ್ಮಗಳಲ್ಲಿ ನಿಯೋಜಿಸಿ, ಎಲ್ಲ ಕಾರ್ಯಗಳನ್ನು ಸಮಾನಶ್ರದ್ಧೆಯಿಂದ ಅವರಿಂದ ಮಾಡಿಸಬೇಕು.
ಪರಿನಿಷ್ಠಿತಕಾರ್ಯಃ ಸ್ಯಾನ್ನೃಪತಿಃ ಪರಿಪಾಲನಾತ್ |
ಕುರ್ಯಾದನ್ಯನ್ನ ವಾ ಕುರ್ಯಾದೈಂದ್ರೋ ರಾಜನ್ಯ ಉಚ್ಯತೇ ॥22॥
ರಾಜನು ಪ್ರಜಾರಕ್ಷಣೆಯನ್ನು ಮಾಡುವುದರಿಂದ ತನ್ನ ಕಾರ್ಯವನ್ನು ಪೂರ್ಣ- ಗೊಳಿಸುವವನಾಗುತ್ತಾನೆ. ರಾಜನು ಇನ್ನೊಂದು ಕಾರ್ಯವನ್ನು ಮಾಡಲಿ ಅಥವಾ ಬಿಡಲಿ ರಕ್ಷಣೆಯನ್ನು ಮಾತ್ರ ಮಾಡಲೇ ಬೇಕು ಎಂದು ಹೇಳಲ್ಪಡುತ್ತದೆ.
ವೈಶ್ಯಸ್ಯಾಪೀಹ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ |
ದಾನಮಧ್ಯಯನಂ ಯಜ್ಞಃ ಶೌಚೇನ ಧನಸಂಚಯಃ ॥23॥
ಎಲೈ ಭಾರತನೇ! ವೈಶ್ಯನ ಧರ್ಮಗಳನ್ನು ನಿನಗೆ ಹೇಳುವೆನು. ದಾನ, ಅಧ್ಯ- ಯನ, ಯಜ್ಞ ಮತ್ತು ಶುಚಿಯಾಗಿ ಧನಸಂಚಯ - ಇವು ವೈಶ್ಯನ ಧರ್ಮಗಳು.
ಪಿತೃವತ್ ಪಾಲಯೇದ್ ವೈಶ್ಯೋ ಯುಕ್ತಃ ಸರ್ವಪಶೂನಿಹ |
ವಿಕರ್ಮ ತದ್ ಭವೇದನ್ಯತ್ ಕರ್ಮ ಯದ್ಯತ್ ಸಮಾಚರೇತ್ ॥24॥
ವೈಶ್ಯನು ಶ್ರದ್ಧೆಯಿಂದ ಎಲ್ಲ ಪಶುಗಳನ್ನೂ ತಂದೆಯಂತೆ ರಕ್ಷಿಸಬೇಕು. ಅದನ್ನು ಬಿಟ್ಟು, ಅವನು ಬೇರೆ ಏನನ್ನು ಮಾಡಿದರೂ ಅದು ಅವನಿಗೆ ವಿಕರ್ಮವೆನಿಸುತ್ತದೆ.
ರಕ್ಷಯಾ ಸ ಹಿ ತೇಷಾಂ ವೈ ಮಹತ್ ಸುಖಮವಾಪ್ನುಯಾತ್ |
ಪ್ರಜಾಪತಿರ್ಹಿ ವೈಶ್ಯಾಯ ಸೃಷ್ಟ್ವಾ ಪರಿದದೇ ಪ್ರಜಾಃ ॥25॥
ಪಶುಗಳನ್ನು ರಕ್ಷಣೆ ಮಾಡುವುದರಿಂದ ಅವನಿಗೆ ದೊಡ್ಡ ಸುಖವುಂಟಾಗುತ್ತದೆ. ಬ್ರಹ್ಮದೇವರು ಪ್ರಜೆಗಳನ್ನು (ಪಶುಗಳನ್ನು) ಸೃಷ್ಟಿಸಿ ಅವುಗಳನ್ನು ಪಾಲನೆಗಾಗಿ ವೈಶ್ಯನಿಗೆ ಕೊಟ್ಟರು.
ತಸ್ಯ ವೃತ್ತಿಂ ಪ್ರವಕ್ಷ್ಯಾಮಿ ಯಚ್ಚ ತಸ್ಯೋಪಜೀವನಮ್ |
ಷಣ್ಣಾಮೇಕಾಂ ಪಿಬೇದ್ ಧೇನುಂ ಶತಾಚ್ಚ ಮಿಥುನಂ ಹರೇತ್ ॥26॥
ಅವನ ವೃತ್ತಿಯನ್ನು ಮತ್ತು ಜೀವನೋಪಾಯವನ್ನು ಹೇಳುವೆನು. ಆರು ಹಸುಗಳನ್ನು ಪಾಲಿಸಿದರೆ ಅವನು ಒಂದು ಹಸುವಿನ ಕ್ಷೀರವನ್ನು ತನ್ನ ಜೀವನಕ್ಕಾಗಿ ಉಪಯೋಗಿಸಬಹುದು. ನೂರು ಹಸುಗಳನ್ನು ಪಾಲಿಸಿದರೆ ಒಂದು ಹಸು ಮತ್ತು ಒಂದು ವೃಷಭವನ್ನು ತನ್ನದಾಗಿ ಮಾಡಿಕೊಳ್ಳಬಹುದು.
ಲಯೇ ಚೇತ್ ಸಪ್ತಮೋ ಭಾಗಸ್ತಥಾ ಶೃಂಗೇ ಕಲಾ ಖುರೇ |
ಸಸ್ಯಾನಿ ಸರ್ವಬೀಜಾನಾಮೇಷಾಂ ಸಾಂವತ್ಸರೀ ಭೃತಿಃ ॥27॥
ಎರಡು ಮೂರು ಧೇನುಗಳು ಮೃತವಾದರೆ ವೈಶ್ಯನಿಗೆ ಜೀವನವೃತ್ತಿಯುಂಟಾ- ಗುವುದಿಲ್ಲವಾದ್ದರಿಂದ ರಾಜನು ವೈಶ್ಯನ ಆದಾಯದ ಏಳನೆಯ ಒಂದು ಭಾಗವನ್ನು ತೆಗೆದುಕೊಳ್ಳಬೇಕು. ಮತ್ತು ರಾಜನಿಗೆ ಕೊಂಬಿನ ಅಥವಾ ಗೊರಸಿನ ಚಿಹ್ನೆಗಳನ್ನು ತೋರಿಸಬೇಕು. ಕೃಷೀವಲರಿಗೆ ಕೃಷಿಯ ವಿನಾಶವುಂಟಾದರೆ ಒಂದು ಸಂವತ್ಸರಕ್ಕೆ ಆಗುವಷ್ಟು ಧಾನ್ಯವನ್ನು ಮತ್ತು ಅವರು ಬೆಳೆಯುವ ಸರ್ವಬೀಜಗಳನ್ನು ಅವರಿಗೆ ಕೊಡಬೇಕು.
ನ ಚ ವೈಶ್ಯಸ್ಯ ಕಾಮಃ ಸ್ಯಾನ್ನ ರಕ್ಷೇಯಂ ಪಶೂನಿತಿ |
ವೈಶ್ಯೇ ಚೇಚ್ಛತಿ ನಾನ್ಯೇನ ರಕ್ಷಿತವ್ಯಾಃ ಕಥಂಚನ ॥28॥
ವೈಶ್ಯನಾದವನು ತಾನು ಪಶುಗಳನ್ನು ರಕ್ಷಿಸುವುದಿಲ್ಲ ಎಂದು ಎಂದೂ ಬಯಸ- ಬಾರದು. ವೈಶ್ಯನು ಪಶುಗಳನ್ನು ರಕ್ಷಿಸಲು ಇಚ್ಛಿಸಿದರೆ ಇನ್ನೊಬ್ಬನು ರಕ್ಷಿಸಬಾರದು.
ಶೂದ್ರಸ್ಯಾಪಿ ಹಿ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ |
ಪ್ರಜಾಪತಿರ್ಹಿ ವರ್ಣಾನಾಂ ದಾಸಂ ಶೂದ್ರಮಕಲ್ಪಯತ್ ॥29॥
ಎಲೈ ಭಾರತನೇ! ಶೂದ್ರನ ಧರ್ಮವನ್ನು ನಿನಗೆ ಹೇಳುವೆನು. ಬ್ರಹ್ಮದೇವರು ಶೂದ್ರರನ್ನು ಉಳಿದವರ್ಣದವರ ದಾಸರನ್ನಾಗಿ ಕಲ್ಪಿಸಿದರು.
ತಸ್ಮಾಚ್ಛೂದ್ರಸ್ಯ ವರ್ಣಾನಾಂ ಪರಿಚರ್ಯಾ ವಿಧೀಯತೇ |
ತೇಷಾಂ ಶುಶ್ರೂಷಣಾಚ್ಚೈವ ಮಹತ್ ಸುಖಮವಾಪ್ನುಯಾತ್ ॥30॥
ಆದ್ದರಿಂದ ಶೂದ್ರನಿಗೆ ಉಳಿದ ವರ್ಣಗಳ ಪರಿಚರ್ಯವೇ ಧರ್ಮವೆಂದು ಹೇಳಲ್ಪಡುತ್ತದೆ. ಅವರ ಸೇವೆ ಮಾಡುವುದರಿಂದ ಅವನಿಗೆ ದೊಡ್ಡ ಸುಖ- ವುಂಟಾಗುವುದು.
ಶೂದ್ರ ಏತಾನ್ ಪರಿಚರೇತ್ ತ್ರೀನ್ ವರ್ಣಾನನಸೂಯಕಃ |
ಸಂಚಯಾಂಶ್ಚ ನ ಕುರ್ವೀತ ಜಾತು ಶೂದ್ರಃ ಕಥಂಚನ ॥31॥
ಶೂದ್ರನು ಅಸೂಯೆಪಡದೆ ಉಳಿದ ಮೂರು ವರ್ಣದವರನ್ನು ಪರಿಚರಿಸ- ಬೇಕು. ಶೂದ್ರನಾದವನು ಯಾವ ಕಾರಣದಿಂದಲೂ ಧನಸಂಚಯವನ್ನು ಮಾಡ- ಬಾರದು.
ಪಾಪೀಯಾನ್ ಹಿ ಧನಂ ಲಬ್ಧ್ವಾ ವಶೇ ಕುರ್ಯಾದ್ ಗರೀಯಸಃ |
ರಾಜ್ಞಾ ವಾ ಸಮನುಜ್ಞಾತಃ ಕಾಮಂ ಕುರ್ವೀತ ಧಾರ್ಮಿಕಃ ॥32॥

ಶೂದ್ರನು ಧನಸಂಚಯವನ್ನು ಮಾಡಿದರೆ ಧನಲಾಭದಿಂದ ಪಾಪಿಷ್ಠನಾಗಿ ತನಗಿಂತ ಉತ್ತಮರಾದವರನ್ನು ತನ್ನ ವಶದಲ್ಲಿ ಇಟ್ಟುಕೊಳ್ಳಬಹುದು. (ಆದ್ದರಿಂದ ಧನಸಂಚಯವನ್ನು ಮಾಡಬಾರದು) ಅಥವಾ ರಾಜನ ಅನುಮತಿಯನ್ನು ಪಡೆದು ತನಗೆ ಇಷ್ಟವಾದಂತೆ ಧಾರ್ಮಿಕವಾದ ಕಾರ್ಯಗಳನ್ನು ಮಾಡಬಹುದು.

ತಸ್ಯ ವೃತ್ತಿಂ ಪ್ರವಕ್ಷ್ಯಾಮಿ ಯಚ್ಚ ತಸ್ಯೋಪಜೀವನಮ್ |
ಅವಶ್ಯಭರಣೀಯೋ ಹಿ ವರ್ಣಾನಾಂ ಶೂದ್ರ ಉಚ್ಯತೇ ॥33॥

ಅವನ ಜೀವನ ವೃತ್ತಿಯನ್ನು ಮತ್ತು ಜೀವನೋಪಾಯವನ್ನು ನಿನಗೆ ಹೇಳು- ವೆನು. ಶೂದ್ರನಾದವನನ್ನು ಉಳಿದ ಮೂರು ವರ್ಣದವರು ಅವಶ್ಯವಾಗಿ ಪೋಷಿ- ಸಬೇಕು ಎಂದು ಹೇಳಲ್ಪಡುತ್ತದೆ.

ಛತ್ರಂ ವೇಷ್ಟನಮೌಶೀರಮುಪಾನದ್ ವ್ಯಂಜನಾನಿ ಚ |
ಯಾತಯಾಮಾನಿ ದೇಯಾನಿ ಶೂದ್ರಾಯ ಪರಿಚಾರಿಣೇ ॥34॥

ತಾವು ಉಪಯೋಗಿಸಿದ ಛತ್ರಿ, ಉಡುವ ವಸ್ತ್ರಗಳು, ಶಯನವಸ್ತ್ರಗಳು, ಪಾದರಕ್ಷೆಗಳು ಮತ್ತು ವ್ಯಂಜನಗಳು ಹಳೆಯದಾದ ಮೇಲೆ ತಮ್ಮನ್ನು ಪರಿಚರಿಸುವ ಶೂದ್ರನಿಗೆ ಅವುಗಳನ್ನು ಕೊಡಬೇಕು.

ಅಧಾರ್ಯಾಣಿ ವಿಶೀರ್ಣಾನಿ ವಸನಾನಿ ದ್ವಿಜಾತಿಭಿಃ |
ಶೂದ್ರಾಯೈವ ವಿಧೇಯಾನಿ ತಸ್ಯ ಧರ್ಮಧನಂ ಹಿ ತತ್ ॥35॥

ಮೂರು ವರ್ಣಗಳಿಗೆ ಸೇರಿದ ದ್ವಿಜರು ಹರಿದ ವಸ್ತ್ರಗಳನ್ನು ಧರಿಸಬಾರದು. ಅವುಗಳನ್ನು ಶೂದ್ರನಿಗೆ ಕೊಡಬೇಕು. ಅದು ಅವನ ಧರ್ಮಧನ.

ಯಶ್ಚ  ಕಶ್ಚಿದ್ ದ್ವಿಜಾತೀನಾಂ ಶೂದ್ರಃ ಶುಶ್ರೂಷುರಾವ್ರಜೇತ್ |
ಕಲ್ಪ್ಯಾಂ ತಸ್ಯ ತು ತೇನಾಹುರ್ವೃತ್ತಿಂ ಧರ್ಮವಿದೋ ಜನಾಃ |
ದೇಯಃ ಪಿಂಡೋಽನಪೇತಾಯ ಭರ್ತವ್ಯೌ ವೃದ್ಧದುರ್ಬಲೌ ॥36॥

ಯಾವನಾದರೂ ಶೂದ್ರನು ದ್ವಿಜಾತಿಯವರ ಬಳಿಗೆ ಸೇವೆ ಮಾಡಲು ಬಯಸಿ ಬಂದರೆ, ಅವನಿಗೆ ಜೀವನೋಪಾಯವನ್ನು ಕಲ್ಪಿಸಿಕೊಡಬೇಕೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ. ಏಕಾಕಿಯಾದ ಅವನಿಗೆ ಭೋಜನವನ್ನು ಕೊಡಬೇಕು. ಅವನು ವೃದ್ಧನೂ ದುರ್ಬಲನೂ ಆದರೆ ಅವನನ್ನು ಪೋಷಿಸಬೇಕು.

ಶೂದ್ರೇಣ ಚ ನ ಹಾತವ್ಯೋ ಭರ್ತಾ ಕಸ್ಯಾಂಚಿದಾಪದಿ |
ಅತಿರೇಕೇಣ ಭರ್ತವ್ಯೋ ಭರ್ತಾ ದ್ರವ್ಯಪರಿಕ್ಷಯೇ |
ನಹಿ ಸ್ವಮಸ್ತಿ ಶೂದ್ರಸ್ಯ ಭರ್ತೃಹಾರ್ಯಧನೋ ಹ್ಯಸೌ ॥37॥

ತನ್ನ ಸ್ವಾಮಿಗೆ ಏನಾದರೂ ವಿಪತ್ತು ಸಂಭವಿಸಿದರೆ ಸೇವೆ ಮಾಡುವ ಶೂದ್ರನು ಅವನನ್ನು ಬಿಟ್ಟು ಹೋಗಬಾರದು. ತನ್ನ ಬಳಿ ಇರುವ ಧನದಿಂದ ಧನವನ್ನು ಕಳೆದುಕೊಂಡ ಸ್ವಾಮಿಯನ್ನು ರಕ್ಷಿಸಬೇಕು. ಶೂದ್ರನಿಗೆ ಸ್ವತಃ ಧನವೆಂಬುದಿಲ್ಲ. ಅವನ ಧನಕ್ಕೆ ಅವನ ಸ್ವಾಮಿಯೇ ಒಡೆಯನಾಗುತ್ತಾನೆ.

ಉಕ್ತಸ್ತ್ರಯಾಣಾಂ ವರ್ಣಾನಾಂ ಯಜ್ಞಸ್ತ್ರಯ್ಯೇವ ಭಾರತ |
ಸ್ವಾಹಾಕಾರನಮಸ್ಕಾರೌ ಮಂತ್ರಃ ಶೂದ್ರೇ ನ ವಿದ್ಯತೇ ॥38॥

ಎಲೈ ಭಾರತನೇ! ಮೂರು ವರ್ಣಗಳಿಗೂ ಯಜ್ಞವೂ ಮತ್ತು ತ್ರಯೀವಿದ್ಯೆ- ಯೂ ಹೇಳಲ್ಪಡುತ್ತದೆ. ಸ್ವಾಹಾ ಶಬ್ದಗಳು, ನಮಃ ಶಬ್ದಗಳು ಮತ್ತು ಮಂತ್ರಗಳು ಶೂದ್ರನಿಗೆ ಇರುವುದಿಲ್ಲ.

ತಸ್ಮಾಚ್ಛೂದ್ರಃ ಪಾಕಯಜ್ಞೈರ್ಯಜೇತಾವ್ರತವಾನ್ ಸ್ವಯಮ್ |
ಪೂರ್ಣಪಾತ್ರಮಯೀಮಾಹುಃ ಪಾಕಯಜ್ಞಸ್ಯ ದಕ್ಷಿಣಾಮ್ ॥39॥

ಆದ್ದರಿಂದ ಶೂದ್ರನು ವ್ರತವನ್ನು ಧರಿಸದಿರುವುದರಿಂದ ಸ್ವತಃ ಯಜ್ಞವನ್ನು ಮಾಡದೆ ತನ್ನ ಬಳಿ ಇರುವ ದ್ರವ್ಯದಿಂದ ಬ್ರಾಹ್ಮಣರಿಂದ ಪಾಕವನ್ನು ಮಾಡಿಸಿ, ಅದರಿಂದ ಯಜ್ಞವನ್ನು ಮಾಡಿಸಿ, ಅನ್ನದಿಂದ ಪೂರ್ಣವಾದ ಒಂದು ಪಾತ್ರೆಯನ್ನು ಪಾಕಯಜ್ಞದ ದಕ್ಷಿಣೆಯನ್ನಾಗಿ ಕೊಡಬೇಕು. (ಲಕ್ಷಾಲಂಕಾರ)

ಶೂದ್ರಃ ಪೈಜವನೋ ನಾಮ ಸಹಸ್ರಾಣಾಂ ಶತಂ ದದೌ |
ಐಂದ್ರಾಗ್ನೇನ ವಿಧಾನೇನ ದಕ್ಷಿಣಾಮಿತಿ ನಃ ಶ್ರುತಮ್ ॥40॥

ಪೈಜವನನೆಂಬ ಶೂದ್ರನು ಇಂದ್ರಾಗ್ನಿದೇವತಾಕವಾದ ಯಾಗವನ್ನು ಮಾಡಿಸಿ, ಒಂದು ಲಕ್ಷ ಪೂರ್ಣಪಾತ್ರೆಗಳನ್ನು ದಕ್ಷಿಣೆಯನ್ನಾಗಿ ಕೊಟ್ಟನು ಎಂದು ನಾವು ಕೇಳಿದ್ದೇವೆ.

ಅತೋ ಹಿ ಸರ್ವವರ್ಣಾನಾಂ ಶ್ರದ್ಧಾಯಜ್ಞೋ ವಿಧೀಯತೇ |
ದೈವತಂ ಹಿ ಮಹಚ್ಛ್ರದ್ಧಾ ಪವಿತ್ರಂ ಯಜತಾಂ ಚ ಯತ್ ॥41॥

ಆದ್ದರಿಂದ ಎಲ್ಲ ವರ್ಣದವರಿಗೂ ಶ್ರದ್ಧಾಯಜ್ಞವು ವಿಧಿಸಲ್ಪಡುತ್ತದೆ. ಯಾಗ- ವನ್ನು ಮಾಡುವ ಎಲ್ಲರಿಗೂ ಶ್ರದ್ಧೆ ಎಂಬುದೇ ಪವಿತ್ರವಾದ ದೊಡ್ಡದಾದ ದೇವತೆ.

ದೈವತಂ ಪರಮಂ ವಿಪ್ರಾಃ ಸ್ವೇನ ಸ್ವೇನ ಪರಸ್ಪರಮ್ |
ಅಯಜನ್ನಿಹ ಸತ್ರೈಸ್ತೇ ತೈಸ್ತೈಃ ಕಾಮೈಃ ಸನಾತನೈಃ ॥42॥

ಬ್ರಾಹ್ಮಣರು ಪರಮದೇವತೆಗಳು. ಅವರು ವೇದೋಕ್ತವಾದ ಕಾಮಗಳಿಂದ ಪರಸ್ಪರವಾಗಿ ಸಹಕರಿಸಿ ಇಲ್ಲಿ ಅನೇಕ ಸತ್ರಯಾಗಗಳನ್ನು ಮಾಡಿದರು.

ಸಂಸೃಷ್ಟಾ ಬ್ರಾಹ್ಮಣೈರೇವ ತ್ರಿಷು ವರ್ಣೇಷು ಸೃಷ್ಟಯಃ |
ದೇವಾನಾಮಪಿ ಯೇ ದೇವಾ ಯದ್ ಬ್ರೂಯುಸ್ತೇ ಪರಂ ಹಿ ತತ್ |

ತಸ್ಮಾದ್ ವರ್ಣೈಃ ಸರ್ವಯಜ್ಞಾಃ ಸಂಸೃಜ್ಯಂತೇ ನ ಕಾಮ್ಯಯಾ ॥43॥
ಉಳಿದ ಮೂರು ವರ್ಣಗಳಲ್ಲಿ ಜನಿಸಿದವರೂ ಸಹ ಬ್ರಾಹ್ಮಣರ ಸಂಬಂಧ- ವನ್ನು ಹೊಂದಿದ್ದಾರೆ. ದೇವತೆಗಳಿಗೂ ದೇವತೆಗಳೆನಿಸಿದ ಬ್ರಾಹ್ಮಣರು ಏನು ಹೇಳುವರೋ ಅದು ಶ್ರೇಷ್ಠವಾದುದು. ಆದ್ದರಿಂದ ನಾಲ್ಕು ವರ್ಣದವರಿಗೆ ಪರಸ್ಪರ ಸಂಬಂಧವಿರುವುದರಿಂದ ಎಲ್ಲ ಯಜ್ಞಗಳ ಫಲಗಳು ನಾಲ್ಕು ವರ್ಣದವರಿಂದಲೂ ಹೊಂದಲ್ಪಡುತ್ತವೆ. ಫಲಕಾಮನೆಯಿಂದ ಮಾಡಿದ ಯಜ್ಞಗಳ ಫಲವು ಮಾತ್ರ ಎಲ್ಲರಿಗೂ ದೊರೆಯುವುದಿಲ್ಲ.
ಋಗ್ಯಜುಃಸಾಮವಿತ್ ಪೂಜ್ಯೋ ನಿತ್ಯಂ ಸ್ಯಾದ್ ದೇವವದ್ ದ್ವಿಜಃ |
ಅನೃಗ್ಯಜುರಸಾಮಾ ತು ಪ್ರಾಜಾಪತ್ಯ ಉಪದ್ರವಃ ॥44॥
ಋಗ್ವೇದ ಯಜುರ್ವೇದ ಮತ್ತು ಸಾಮವೇದವನ್ನು ತಿಳಿದ ಬ್ರಾಹ್ಮಣನು ಯಾವಾಗಲೂ ದೇವತೆಯಂತೆ ಪೂಜಿಸಲ್ಪಡಬೇಕು. ಋಗಾದಿವೇದಗಳನ್ನು ಅಧ್ಯ- ಯನ ಮಾಡದ ಬ್ರಾಹ್ಮಣನು ಬ್ರಹ್ಮದೇವರು ಸೃಷ್ಟಿಸಿದ ಸಮಾಜದ ಉಪದ್ರವ- ವೆಂದು ತಿಳಿಯಬೇಕು.
ಯಜ್ಞೋ ಮನೀಷಯಾ ತಾತ ಸರ್ವವರ್ಣೇಷು ಭಾರತ |
ನಾಸ್ಯ ಯಜ್ಞಹನೋ ದೇವಾ ಈಹಂತೇ ನೇತರೇ ಜನಾಃ |
ತಸ್ಮಾತ್ ಸರ್ವೇಷು ವರ್ಣೇಷು ಶ್ರದ್ಧಾಯಜ್ಞೋ ವಿಧೀಯತೇ ॥45॥
ಎಲೈ ಭಾರತನೇ! ಪ್ರೀತಿಪಾತ್ರನೇ! ಯಜ್ಞವು ಎಲ್ಲ ವರ್ಣದವರಿಗೂ ಬುದ್ಧಿ- ಯಿಂದಲೇ ಉಂಟಾಗುತ್ತದೆ. ಅಂತಹ ಯಜ್ಞಕ್ಕೆ ದೇವತೆಗಳಾಗಲೀ ಅಥವಾ ಉಳಿದ ಜನರಾಗಲೀ ವಿಘ್ನವನ್ನುಂಟು ಮಾಡಿ ಯಜ್ಞವನ್ನು ನಾಶಪಡಿಸುವುದಿಲ್ಲ. ಆದ್ದರಿಂದ ಶ್ರದ್ಧಾಯಜ್ಞವೆಂಬುದು ಎಲ್ಲ ವರ್ಣದವರಿಗೂ ಹೇಳಲ್ಪಡುತ್ತದೆ.
ಸ್ವಂ ದೈವತಂ ಬ್ರಾಹ್ಮಣ ಸ್ವೇನ ನಿತ್ಯಂ
ಪರಾನ್ ವರ್ಣಾನಾಯಜನ್ನೇವಮಾಸೀತ್ |
ಅಧರೋ ವಿತಾನಸ್ತ್ವಥ ತತ್ರ ಸೃಷ್ಟಃ
ನ ಬ್ರಹ್ಮಣಸ್ತ್ರಿಷು ವರ್ಣೇಷು ರಾಜನ್ ॥46॥
ಬ್ರಾಹ್ಮಣನಾದವನು ತನ್ನ ದೇವತೆಯಾದ ನಾರಾಯಣನನ್ನು ತನ್ನ ದ್ರವ್ಯದಿಂದ ಮತ್ತು ಇನ್ನೊಂದು ವರ್ಣದವನ ದ್ರವ್ಯದಿಂದಲೂ ಹಿಂದೆ ಹೇಳಿದ ರೀತಿಯಲ್ಲಿ ಯಾಗವನ್ನು ಮಾಡಿ ತೃಪ್ತಿಪಡಿಸುತ್ತಿದ್ದನು. ಕ್ಷತ್ರಿಯ, ವೈಶ್ಯ, ಶೂದ್ರರಾದ ಅಧಮ ವರ್ಣಗಳ ವಿಸ್ತಾರವು ಬ್ರಾಹ್ಮಣನನ್ನು ಆಶ್ರಯಿಸಿಕೊಂಡಿದೆ. ಎಲೈ ರಾಜನೇ! ಬ್ರಾಹ್ಮಣನು ಆ ಮೂರು ವರ್ಣಗಳನ್ನು ಆಶ್ರಯಿಸಿಕೊಂಡಿಲ್ಲ.
ತಸ್ಮಾದ್ ವರ್ಣಾ ಋಜವೋ ಜಾತಿಧರ್ಮಾಃ
ಸಂಸೃಜ್ಯಂತೇ ತಸ್ಯ ವಿಪಾಕ ಏಷಃ |
ಏಕಂ ಸಾಮ ಯಜುರೇಕಮೃಗೇಕಾ
ವಿಪ್ರಶ್ಚೈಕೋ ನಿಶ್ಚಯಸ್ತೇಷು ದೃಷ್ಟಃ ॥47॥
ಆದ್ದರಿಂದ ಎಲ್ಲ ವರ್ಣಗಳೂ ಮತ್ತು ನೇರವಾದ ಎಲ್ಲ ಜಾತಿಧರ್ಮಗಳೂ ಪರಸ್ಪರಸಂಬದ್ಧವಾಗಿವೆ. ಯಜ್ಞಾದಿ ಕ್ರಿಯೆಗಳು ಅದರ ಪರಿಣಾಮ. ಸಾಮವೇದವು ಒಂದೇ. ಯಜುರ್ವೇದವು ಒಂದೇ. ಋಗ್ವೇದವು ಒಂದೇ. ಬ್ರಾಹ್ಮಣಸಮೂಹವೂ ಒಂದೇ. ಅವುಗಳಲ್ಲಿರುವ ನಿಶ್ಚಯವೂ ಸಹ ಏಕರೂಪವಾಗಿರುವುದು ಕಂಡು ಬರುತ್ತದೆ.
ಅತ್ರ ಗಾಥಾ ಯಜ್ಞಗೀತಾಃ ಕೀರ್ತಯಂತಿ ಪುರಾವಿದಃ |
ವೈಖಾನಸಾನಾಂ ರಾಜೇಂದ್ರ ಮುನೀನಾಂ ಯಷ್ಟುಮಿಚ್ಛತಾಮ್॥48॥
ಎಲೈ ರಾಜೇಂದ್ರನೇ! ಯಜ್ಞವನ್ನು ಮಾಡಲು ಬಯಸಿದ ವೈಖಾನಸಮುನಿ- ಗಳು ಹಾಡಿದ ಯಜ್ಞಸಂಬಂಧಿಯಾದ ಗೀತೆಗಳನ್ನು ಪ್ರಾಚೀನ ಇತಿಹಾಸವನ್ನು ತಿಳಿದವರು ಹೇಳುತ್ತಾರೆ.
ಉದಿತೇಽನುದಿತೇ ವಾಪಿ ಶ್ರದ್ದಧಾನೋ ಜಿತೇಂದ್ರಿಯಃ |
ವಹ್ನಿಂ ಜುಹೋತಿ ಧರ್ಮೇಣ ಶ್ರದ್ಧಾ ವೈ ಕಾರಣಂ ಮಹತ್ ॥49॥
ಜಿತೇಂದ್ರಿಯನಾದವನು ಸೂರ್ಯೋದಯವಾದ ಮೇಲೆ ಅಥವಾ ಸೂರ್ಯೋದಯಕ್ಕಿಂತ ಮೊದಲೇ ಧರ್ಮದಿಂದ ವಹ್ನಿಯಲ್ಲಿ ಹೋಮ ಮಾಡು- ತ್ತಾನೆ. ಕಾಲಕ್ಕಿಂತ ಅಲ್ಲಿ ಶ್ರದ್ಧೆಯು ದೊಡ್ಡ ಕಾರಣವಾದುದು.
ಯತ್ ಸ್ಕನ್ನಮಸ್ಯ ತತ್ ಪೂರ್ವಂ ಯದಸ್ಕನ್ನಂ ತದುತ್ತರಮ್ |
ಬಹೂನಿ ಯಜ್ಞರೂಪಾಣಿ ನಾನಾಕರ್ಮಫಲಾನಿ ಚ ॥50॥
ಸೂರ್ಯನ ತೇಜಸ್ಸು ಅಗ್ನಿಯನ್ನು ಪ್ರವೇಶಿಸಿರುವಾಗ ಹೋಮವನ್ನು ಮಾಡು- ವುದು ಯಾವ ಶಾಖೆಗಳಿಗೆ ಇಷ್ಟವೋ ಅವರು `ಅನುದಿತೇ ಜುಹೋತಿ' ಎಂಬ ವಾಕ್ಯವನ್ನು ಆಧರಿಸಿ ಸೂರ್ಯೋದಯಕ್ಕಿಂತ ಮೊದಲು ಹೋಮವನ್ನು ಮಾಡು- ತ್ತಾರೆ. ಯಾವ ಶಾಖೆಯವರಿಗೆ ಪುನಃ ಅಗ್ನಿಯಿಂದ ಹೊರಬಂದು ಸೂರ್ಯನನ್ನು ಸೇರಿದ ತೇಜಸ್ಸು ಪ್ರಿಯವಾದುದೋ ಅವರು `ಉದಿತೇ ಜುಹೋತಿ' ಎಂಬ ವಾಕ್ಯವನ್ನನುಸರಿಸಿ ಸೂರ್ಯೋದಯವಾದ ಮೇಲೆ ಹೋಮವನ್ನು ಮಾಡುತ್ತಾರೆ. ಯಜ್ಞವಿಧಾನಗಳು ಅನೇಕವಾಗಿವೆ. ಅವುಗಳ ಫಲವೂ ಸಹ ನಾನಾವಿಧವಾಗಿದೆ. (ಲಕ್ಷಾಲಂಕಾರ)
ತಾನಿ ಯಃ ಸಂವಿಜಾನಾತಿ ಜ್ಞಾನನಿಶ್ಚಯನಿಶ್ಚಿತಃ |
ದ್ವಿಜಾತಿಃ ಶ್ರದ್ಧಯೋಪೇತೋ ಸ ಯಷ್ಟುಂ ಪುರುಷೋಽರ್ಹತಿ ॥51॥
ಯಾವ ದ್ವಿಜನು ನಿಶ್ಚಿತವಾದ ಜ್ಞಾನವನ್ನು ಹೊಂದಿ, ಅವೆಲ್ಲವನ್ನೂ ತಿಳಿದು, ಶ್ರದ್ಧೆಯಿಂದ ಕೂಡಿರುತ್ತಾನೆಯೋ ಅವನೇ ಯಜ್ಞಮಾಡಲು ಅರ್ಹನಾದವನು.
ಸ್ತೇನೋ ವಾ ಯದಿ ವಾ ಪಾಪೋ ಯದಿ ವಾ ಪಾಪಕೃತ್ತಮಃ |
ಯಷ್ಟುಮಿಚ್ಛತಿ ಯಜ್ಞಂ ಯಃ ಸಾಧುಮೇವ ವದಂತಿ ತಮ್ ॥52॥

ಕಳ್ಳನಾಗಲೀ, ಅಥವಾ ಪಾಪವನ್ನುಮಾಡಿದವನಾಗಲೀ ಅಥವಾ ಪಾಪವನ್ನು ಮಾಡಿದವರಲ್ಲಿ ಅಗ್ರೇಸರನಾಗಲೀ ಯಜ್ಞವನ್ನು ಮಾಡಲು ಬಯಸಿದರೆ ಅವನನ್ನು ಸಜ್ಜನನೆಂದೇ ಹೇಳುತ್ತಾರೆ.
ಋಷಯಸ್ತಂ ಪ್ರಶಂಸಂತಿ ಸಾಧು ಚೈತದಸಂಶಯಮ್ |
ಸರ್ವಥಾ ಸರ್ವವರ್ಣೈರ್ಹಿ ಯಷ್ಟವ್ಯಮಿತಿ ನಿಶ್ಚಯಃ |
ನಹಿ ಯಜ್ಞಸಮಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ ॥53॥
ಋಷಿಗಳು ನಿಃಸಂಶಯವಾಗಿ ಒಳ್ಳೆಯದೆಂದು ಅವನನ್ನು ಪ್ರಶಂಸಿಸುತ್ತಾರೆ. ಸರ್ವಥಾ ಯಜ್ಞವನ್ನು ಮಾಡಬೇಕೆಂಬುದು ನಿಶ್ಚಯ. ಮೂರುಲೋಕಗಳಲ್ಲಿಯೂ ಯಜ್ಞಕ್ಕೆ ಸಮಾನವಾದುದು ಯಾವುದೂ ಇಲ್ಲ.
ತಸ್ಮಾದ್ ಯಷ್ಟವ್ಯಮಿತ್ಯಾಹುಃ ಪುರುಷೇಣಾನಸೂಯತಾ |
ಶ್ರದ್ಧಾಪವಿತ್ರಮಾಶ್ರಿತ್ಯ ಯಥಾಶಕ್ತಿ ಪ್ರಯಚ್ಛತಾ ॥54॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಷಷ್ಟಿತಮೋಽಧ್ಯಾಯಃ ॥61॥
ಮನುಷ್ಯನಾದವನು ಅಸೂಯಾರಹಿತನಾಗಿ ಪವಿತ್ರವಾದ ಶ್ರದ್ಧೆಯನ್ನು ಹೊಂದಿ, ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು, ಯಾಗವನ್ನು ಮಾಡಬೇಕೆಂದು ಜ್ಞಾನಿಗಳು ಹೇಳುತ್ತಾರೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 61ನೆಯ ಅಧ್ಯಾಯವು ಮುಗಿಯಿತು.
0
62. ಅರವತ್ತೆರಡನೆಯ ಅಧ್ಯಾಯ
ಚತುರಾಶ್ರಮಧರ್ಮಗಳ ನಿರೂಪಣೆ
ಭೀಷ್ಮಃ
ಆಶ್ರಮಾಣಾಂ ಮಹಾಬಾಹೋ ಶೃಣು ಸತ್ಯಪರಾಕ್ರಮ |
ಚತುರ್ಣಾಂ ನಾಮಧೇಯಾನಿ ಕರ್ಮಾಣಿ ಚ ಯುಧಿಷ್ಠಿರ ॥1॥
ಭೀಷ್ಮರು ಮಹಾಬಾಹುವೇ! ಸತ್ಯಪರಾಕ್ರಮನೇ! ಯುಧಿಷ್ಠಿರನೇ! ನಾಲ್ಕು ಆಶ್ರಮಗಳ ಹೆಸರುಗಳನ್ನು ಮತ್ತು ಕರ್ಮಗಳನ್ನೂ ಕೇಳುವವನಾಗು.
ವಾನಪ್ರಸ್ಥಂ ಭೈಕ್ಷಚರ್ಯಾಂ ಗಾರ್ಹಸ್ಥ್ಯಂ ಚ ಮಹಾಶ್ರಮಮ್ |
ಬ್ರಹ್ಮಚರ್ಯಾಶ್ರಮಂ ಪ್ರಾಹುಶ್ಚತುರ್ಥಂ ಬ್ರಾಹ್ಮಣೈರ್ವೃತಮ್ ॥2॥
ವಾನಪ್ರಸ್ಥ, ಸನ್ಯಾಸ, ಶ್ರೇಷ್ಠವಾದ ಗಾರ್ಹಸ್ಥ್ಯ, ಮತ್ತು ಬ್ರಹ್ಮಚರ್ಯಾ- ಶ್ರಮಗಳು ಬ್ರಾಹ್ಮಣರು ಸ್ವೀಕರಿಸುವ ಆಶ್ರಮಗಳೆಂದು ಹೇಳುತ್ತಾರೆ.
ಜಟಾಕರಣಸಂಸ್ಕಾರಂ ದ್ವಿಜಾತಿತತ್ವಮವಾಪ್ಯ ಚ |
ಆಧಾನಾದೀನಿ ಕರ್ಮಾಣಿ ಪ್ರಾಪ್ಯ ವೇದಮಧೀತ್ಯ ಚ ॥3॥
ಸದಾರೋ ವಾಪ್ಯದಾರೋ ವಾ ಆತ್ಮವಾನ್ ಸಂಯತೇಂದ್ರಿಯಃ |
ವಾನಪ್ರಸ್ಥಾಶ್ರಮಂ ಗಚ್ಛೇತ್ ಕೃತಕೃತ್ಯೋ ಗೃಹಾಶ್ರಮಾತ್ ॥4॥
ಚೂಡಾಕರ್ಮವನ್ನುಮಾಡಿಕೊಂಡು, ಅನಂತರ ಉಪನಯನದಿಂದ ದ್ವಿಜತ್ವ- ವನ್ನು ಹೊಂದಿ, ಅಗ್ನಿಕಾರ್ಯಗಳನ್ನುಮಾಡಿ, ವೇದಾಧ್ಯಯನವನ್ನು ಮಾಡಿ, ಗೃಹಸ್ಥಾ -ಶ್ರಮದಲ್ಲಿ ಕೃತಕೃತ್ಯನಾಗಿ, ಪತ್ನೀಸಹಿತನಾಗಿ ಅಥವಾ ಪತ್ನೀರಹಿತನಾಗಿ, ಇಂದ್ರಿಯ- ಜಯವುಳ್ಳವನಾಗಿ, ಧೈರ್ಯಶಾಲಿಯಾಗಿ, ವಾನಪ್ರಸ್ಥಾಶ್ರಮವನ್ನು ಹೊಂದಬೇಕು.
ತತ್ರಾರಣ್ಯಕಶಾಸ್ತ್ರಾಣಿ ಸಮಧೀತ್ಯ ಸ ಧರ್ಮವಿತ್ |
ಊರ್ಧ್ವರೇತಾಃ ಪ್ರವ್ರಜಿತ್ವಾ ಗಚ್ಛತ್ಯಕ್ಷರಸಾತ್ಮತಾಮ್ ॥5॥
ಅಲ್ಲಿಧರ್ಮಜ್ಞನಾದ ಅವನು ಆರಣ್ಯಕಶಾಸ್ತ್ರಗಳ ಅಧ್ಯಯನವನ್ನು ಮಾಡಿ, ಊರ್ಧ್ವರೇತಸ್ಕನಾಗಿ, ಸನ್ಯಾಸವನ್ನು ಸ್ವೀಕರಿಸಿ, ಪರಮಾತ್ಮನ ಸಾದೃಶ್ಯವನ್ನು ಹೊಂದುತ್ತಾನೆ.
ಏತಾನ್ಯೇವ ನಿಮಿತ್ತಾನಿ ಮುನೀನಾಮೂರ್ಧ್ವರೇತಸಾಮ್ |
ಕರ್ತವ್ಯಾನೀಹ ವಿಪ್ರೇಣ ರಾಜನ್ನಾದೌ ವಿಪಶ್ಚಿತಾ ॥6॥
ಎಲೈ ರಾಜನೇ! ಜ್ಞಾನಿಯಾದ ಬ್ರಾಹ್ಮಣನು ಊರ್ಧ್ವರೇತಸ್ಕರಾದ ಮುನಿಗಳ ಈ ಕರ್ಮಗಳನ್ನೇ ಮಾಡಬೇಕೆಂದು ಹೇಳಲ್ಪಡುತ್ತದೆ.
ಚರಿತಬ್ರಹ್ಮಚರ್ಯಸ್ಯ ಬ್ರಾಹ್ಮಣಸ್ಯ ವಿಶಾಂಪತೇ |
ಭೈಕ್ಷಚರ್ಯಾಸ್ವಧೀಕಾರಃ ಪ್ರಶಸ್ತ ಇಹ ಮೋಕ್ಷಿಣಃ ॥7॥
ಎಲೈ ರಾಜನೇ! ಬ್ರಹ್ಮಚರ್ಯಾಶ್ರಮವನ್ನು ಪೂರೈಸಿದ ಮುಮುಕ್ಷುವಾದ ಬ್ರಾಹ್ಮಣನಿಗೆ ಈ ಲೋಕದಲ್ಲಿ ಸನ್ಯಾಸಾಶ್ರಮದಲ್ಲಿ ಪ್ರಶಸ್ತವಾದ ಅಧಿಕಾರವುಂಟಾ- ಗುತ್ತದೆ.
ಯತ್ರಾಸ್ತಮಿತಶಾಯೀ ಸ್ಯಾನ್ನಿರಗ್ನಿರನಿಕೇತನಃ |
ಯಥೋಪಲಬ್ಧಜೀವೀ ಸ್ಯಾನ್ಮುನಿರ್ದಾಂತೋ ಜಿತೇಂದ್ರಿಯಃ ॥8॥
ಅಗ್ನಿಯನ್ನು ಹೊಂದದೆ, ನಿವಾಸವನ್ನು ಹೊಂದದೆ, ಸೂರ್ಯಾಸ್ತವಾಗುವ ಸಮಯದಲ್ಲಿ ಇದ್ದ ಸ್ಥಳದಲ್ಲಿ ಮಲಗಿ, ಸಹಜವಾಗಿ ದೊರೆತ ಆಹಾರದಿಂದ ಜಿತೇಂದ್ರಿಯನಾಗಿ, ಮುನಿಯಾಗಿ ಜೀವಿಸಬೇಕು.
ನಿರಾಶೀಃ ಸ್ಯಾತ್ ಸರ್ವಸಮೋ ನಿರ್ಭೋಗೋ ನಿರ್ವಿಕಾರವಾನ್ |
ವಿಪ್ರಃ ಕ್ಷೇಮಾಶ್ರಮಂ ಪ್ರಾಪ್ತೋ ಗಚ್ಛತ್ಯಕ್ಷರಸಾತ್ಮತಾಮ್ ॥9॥

ಯಾವ ಆಸೆಯನ್ನೂ ಮಾಡಬಾರದು. ಯಾವಾಗಲೂ ಮನಸ್ಸಿನ ಸಾಮ್ಯವನ್ನು ಹೊಂದಿರಬೇಕು. ನಿರ್ವಿಕಾರನಾಗಿ ಎಲ್ಲಾ ಭೋಗಗಳನ್ನೂ ತೊರೆಯಬೇಕು. ಹೀಗೆ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಿದ ಬ್ರಾಹ್ಮಣನು ಅಕ್ಷರನಾದ ಪರಮಾತ್ಮನ ಸಾಮ್ಯವನ್ನು ಹೊಂದುತ್ತಾನೆ.

ಅಧೀತ್ಯ ವೇದಾನ್ ಕೃತಸರ್ವಕೃತ್ಯಃ
ಸಂತಾನಮುತ್ಪಾದ್ಯ ಸುಖಾನಿ ಭುಕ್ತ್ವಾ ।
ಸಮಾಹಿತಃ ಪ್ರಚರೇದ್ ದುಶ್ಚರಂ ತಂ
ಗಾರ್ಹಸ್ಥ್ಯಧರ್ಮಂ ಮುನಿಧರ್ಮದೃಷ್ಟಮ್ ॥10॥

ವೇದಗಳನ್ನು ಅಧ್ಯಯನ ಮಾಡಿ, ಮಾತಾಪಿತೃಗಳಿಗೆ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಿ, ಸಂತಾನವನ್ನು ಪಡೆದು, ಸುಖಗಳನ್ನು ಭೋಗಿಸಿ, ಸಮಾಧಾನಚಿತ್ತನಾಗಿ ಮುನಿಗಳಿಂದ ದೃಷ್ಟವಾದ ದುಶ್ಚರವಾದ ಗಾರ್ಹಸ್ಥ್ಯಧರ್ಮ- ವನ್ನು ಆಚರಿಸಬೇಕು.

ಸ್ವದಾರತುಷ್ಟ ಋತುಕಾಲಗಾಮೀ
ನಿಯೋಗಸೇವೀ ನ ಶಠೋ ನ ಜಿಹ್ಮಃ ।
ಮಿತಾಶನೋ ದೇವಪರಃ ಕೃತಜ್ಞಃ
ಸತ್ಯೋ ಮೃದುಶ್ಚಾನೃಶಂಸಃ ಕ್ಷಮಾವಾನ್ ॥11॥

ತನ್ನ ಪತ್ನಿಯಲ್ಲಿ ತೃಪ್ತನಾಗಿ, ಋತುಕಾಲದಲ್ಲಿ ಮಾತ್ರ ಗಮನವನ್ನು ಮಾಡುವ- ವನಾಗಿ, ಹಿರಿಯರ ಮಾತನ್ನು ಕೇಳುತ್ತಾ, ಶಾಠ್ಯವನ್ನು ಮತ್ತು ಕಪಟತೆಯನ್ನು ಬಿಟ್ಟು, ಅಲ್ಪಾಹಾರನಾಗಿ, ದೇವಧ್ಯಾನಪರನಾಗಿ, ಕೃತಜ್ಞನಾಗಿ, ಸತ್ಯವಚನನಾಗಿ, ಮೃದು- ವಾಗಿ, ಕ್ರೌರ್ಯವನ್ನು ತ್ಯಜಿಸಿ, ಕ್ಷಮೆಯಿಂದ ಕೂಡಿದವನಾಗಿರಬೇಕು.

ದಾಂತೋ ವಿಧೇಯೋ ಹವ್ಯಕವ್ಯೇಽಪ್ರಮತ್ತೋ
ಅನ್ನಸ್ಯ ದಾತಾ ಸತತಂ ದ್ವಿಜೇಭ್ಯಃ ।
ಅಮತ್ಸರೀ ಸರ್ವಲಿಂಗಿಪ್ರದಾತಾ
ವೈತಾನನಿತ್ಯಶ್ಚ ಗೃಹಾಶ್ರಮೀ ಸ್ಯಾತ್ ॥12॥

ಇಂದ್ರಿಯನಿಗ್ರಹವುಳ್ಳವನಾಗಿ, ಹಿರಿಯರಿಗೆ ವಿಧೇಯನಾಗಿ, ಜಾಗರೂಕನಾಗಿ ಹವ್ಯಕವ್ಯಗಳನ್ನು ಮಾಡಿ, ಬ್ರಾಹ್ಮಣರಿಗೆ ಸತತವಾಗಿ ಅನ್ನದಾನವನ್ನು ಮಾಡಬೇಕು. ಗೃಹಾಶ್ರಮಿಯಾದವನು ಮಾತ್ಸರ್ಯರಹಿತನಾಗಿ, ಸರ್ವಾಶ್ರಮದವರಿಗೂ ದಾನ- ವನ್ನು ಮಾಡುತ್ತಾ, ನಿತ್ಯವೂ ಯಜ್ಞಪರನಾಗಿರಬೇಕು.

ಅಥಾತ್ರ ನಾರಾಯಣಗೀತಮಾಹುಃ
ಮಹರ್ಷಯಸ್ತಾತ ಮಹಾನುಭಾವಾಃ ।
ಮಹಾರ್ಥಮತ್ಯರ್ಥತಪಃಪ್ರಯುಕ್ತಂ
ತದುಚ್ಯಮಾನಂ ಹಿ ಮಯಾ ನಿಬೋಧ ॥13॥

ಎಲೈ ಪ್ರೀತಿಪಾತ್ರನೇ! ಈ ವಿಷಯದಲ್ಲಿ ಮಹಾನುಭಾವರಾದ ಮಹರ್ಷಿಗಳು ನಾರಾಯಣನಿಂದ ಹೇಳಲ್ಪಟ್ಟ ಮಹಾರ್ಥವುಳ್ಳ ಅತ್ಯಂತ ತಪಸ್ಸಿನಿಂದ ಉಂಟಾದ ಮಾತುಗಳನ್ನು ಹೇಳುತ್ತಾರೆ. ಅದನ್ನು ನನ್ನಿಂದ ಕೇಳು.

ಸತ್ಯಾರ್ಜವಂ ಚಾತಿಥಿಪೂಜನಂ ಚ
ಧರ್ಮಸ್ತಥಾಽರ್ಥಶ್ಚ ರತಿಶ್ಚ ದಾರೇ ।
ನಿಷೇವಿತವ್ಯಾನಿ ಸುಖಾನಿ ಲೋಕೇ
ಹ್ಯಸ್ಮಿನ್ ಪರೇ ಚೈವ ಮತಂ ಮಮೈತತ್ ॥14॥

ಸತ್ಯವಚನ, ಆರ್ಜವ (ಮನೋವಾಕ್ಕಾಯಗಳಲ್ಲಿ ಕಪಟವಿಲ್ಲದಿರುವಿಕೆ), ಅತಿಥಿಪೂಜೆ, ಧರ್ಮಾರ್ಥಗಳ ಸಂಪಾದನೆ, ಪತ್ನಿಯಲ್ಲಿ ರತಿ ಮತ್ತು ಲೋಕದ ಸುಖಗಳು ಇವುಗಳನ್ನು ಸೇವಿಸಬೇಕು. ಅಂತಹವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಾಗಿರುತ್ತಾನೆ ಎಂಬುದು ನನ್ನ (ನಾರಾಯಣನ) ಅಭಿಪ್ರಾಯ.

ಭರಣಂ ಪುತ್ರದಾರಾಣಾಂ ವೇದಾನಾಂ ಪಾರಣಂ ತಥಾ ।
ವಸತಾಮಾಶ್ರಮಂ ಶ್ರೇಷ್ಠಂ ವದಂತಿ ಪರಮರ್ಷಯಃ ॥15॥

ಶ್ರೇಷ್ಠವಾದ ಗೃಹಸ್ಥಾಶ್ರಮವನ್ನು ಸ್ವೀಕರಿಸುವವರಿಗೆ ಪತ್ನೀಪುತ್ರರ ರಕ್ಷಣೆ, ವೇದ- ಗಳ ಪಾರಾಯಣ ಇವುಗಳು ಶ್ರೇಷ್ಠವಾದ ಕರ್ತವ್ಯಗಳೆಂದು ಪರಮ ಋಷಿಗಳು ಹೇಳುತ್ತಾರೆ.

ಏವಂ ಹಿ ಯೋ ಬ್ರಾಹ್ಮಣೋ ಯಜ್ಞಶೀಲೋ
ಗಾರ್ಹಸ್ಥ್ಯಮಧ್ಯಾವಸತೇ ಯಥಾವತ್ ।
ಗೃಹಸ್ಥವೃತ್ತಿಃ ಪ್ರವಿಶೋಧ್ಯ ಸಮ್ಯಕ್
ಸ್ವರ್ಗೇ ವಿಶುದ್ಧಂ ಫಲಮಾಪ್ನುತೇ ಸಃ ॥16॥

ಈ ರೀತಿಯಲ್ಲಿ ಯಾವ ಬ್ರಾಹ್ಮಣನು ಯಜ್ಞಶೀಲನಾಗಿ, ಗೃಹಸ್ಥಧರ್ಮಗಳನ್ನು ಶಾಸ್ತ್ರೋಕ್ತವಾಗಿ ಅನುಷ್ಠಾನ ಮಾಡುತ್ತಾನೆಯೋ ಅವನು ತನ್ನನ್ನು ಪವಿತ್ರೀಕರಿಸಿ- ಕೊಂಡು ಸ್ವರ್ಗದಲ್ಲಿ ವಿಶುದ್ಧವಾದ ಫಲವನ್ನು ಪಡೆಯುತ್ತಾನೆ.

ತಸ್ಯ ದೇಹಪರಿತ್ಯಾಗಾದಿಷ್ಟಾಃ ಕಾಮಾಕ್ಷಯಾ ಮತಾಃ ।
ಆನಂತ್ಯಾಯೋಪತಿಷ್ಠಂತಿ ಸರ್ವತೋಽಕ್ಷಿಶಿರೋಮುಖಾಃ ॥17॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿಷಷ್ಟಿತಮೋಽಧ್ಯಾಯಃ ॥62॥

ಅವನು ದೇಹಪರಿತ್ಯಾಗವನ್ನು ಮಾಡಿದ ಮೇಲೆ ಅಕ್ಷಯವಾದ ಕಾಮ್ಯವಾದ ಫಲಗಳನ್ನು ಹೊಂದುತ್ತಾನೆ. ಆ ಕಾಮ್ಯಫಲಕ್ಕೆ ಅಭಿಮಾನಿಗಳಾದ ದೇವತೆಗಳು ಎಲ್ಲ ಕಡೆಗಳಲ್ಲಿಯೂ ಅಕ್ಷಿಶಿರೋಮುಖಗಳನ್ನು ಹೊಂದಿದವರಾಗಿ ಅವನಿಗೆ ಅನಂತ- ವಾದ ಸುಖವನ್ನು ಉಂಟುಮಾಡುತ್ತಾರೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 62ನೆಯ ಅಧ್ಯಾಯವು ಮುಗಿಯಿತು
0

63. ಅರವತ್ತಮೂರನೆಯ ಅಧ್ಯಾಯ
ಬ್ರಾಹ್ಮಣಧರ್ಮಕಥನ
ಭೀಷ್ಮಃ
ವಸನ್ನೇಕೋ ಜಪನ್ನೇಕಃ ಸರ್ಪನ್ನೇಕೋ ಯುಧಿಷ್ಠಿರ |
ಏಕಸ್ಮಿನ್ನೇವ ಆಚಾರ್ಯೇ ಶುಶ್ರೂಷುರ್ಮಲಪಂಕವಾನ್ ॥1॥
ಭೀಷ್ಮರು ಎಲೈ ಯುಧಿಷ್ಠಿರನೇ! ಬ್ರಹ್ಮಚಾರಿಯಾದವನು ಶರೀರದಲ್ಲಿ ಮಲ, ಪಂಕಗಳನ್ನು ಧರಿಸಿ ಒಬ್ಬನೇ ವಾಸ ಮಾಡುತ್ತಾ, ಒಬ್ಬನೇ ಜಪವನ್ನು ಮಾಡುತ್ತಾ, ಒಬ್ಬನೇ ಸಂಚರಿಸುತ್ತಾ, ಒಬ್ಬ ಗುರುವಿನ ಬಳಿಯಲ್ಲಿಯೇ ಸೇವೆಯನ್ನು ಮಾಡ- ಬೇಕು.
ಬ್ರಹ್ಮಚಾರೀ ವ್ರತೀ ನಿತ್ಯಂ ನಿತ್ಯಂ ದೀಕ್ಷಾಪರೋ ವಶೀ |
ಅವಧಾರ್ಯ ತಥಾ ವೇದಂ ಕೃತ್ಯಂ ಕುರ್ವನ್ ವಸೇತ್ ಸದಾ ॥2॥
ಬ್ರಹ್ಮಚಾರಿಯಾದವನು ನಿತ್ಯವೂ ವ್ರತವನ್ನು ಧರಿಸಿ, ನಿತ್ಯವೂ ದೀಕ್ಷಾಪರನಾಗಿ, ಗುರುಗಳಿಗೆ ಅಧೀನನಾಗಿದ್ದು, ವೇದಾಧ್ಯಯನವನ್ನು ಮಾಡಿ, ಉಳಿದ ಕಾರ್ಯ- ಗಳನ್ನು ಮಾಡುತ್ತಾ, ಗುರುವಿನ ಜೊತೆಯಲ್ಲಿ ವಾಸಿಸಬೇಕು.
ಶುಶ್ರೂಷಾಂ ಸತತಂ ಕುರ್ವನ್ ಗುರೋಃ ಸಂಪ್ರಣಮೇತ ಚ |
ಷಟ್ ಕರ್ಮಸ್ವನಿವೃತ್ತಶ್ಚ ನ ಪ್ರವೃತ್ತಶ್ಚ ಸರ್ವಶಃ ॥3॥
ಸತತವಾಗಿ ಗುರುಗಳ ಸೇವೆಯನ್ನು ಮಾಡುತ್ತಾ ಗುರುಗಳಿಗೆ ನಮಸ್ಕರಿಸಬೇಕು. ಷಟ್ಕರ್ಮಗಳಲ್ಲಿ ನಿರತನಾಗಿ ಬೇರೆ ಯಾವ ಕಾರ್ಯಗಳನ್ನೂ ಮಾಡಲು ತೊಡಗ- ಬಾರದು.
ನ ಚರತ್ಯಧಿಕಾರೇಣ ಸೇವತೇ ದ್ವಿಷತೋ ನ ಚ |
ಏಷೋಽಽಶ್ರಮಪದಸ್ತಾತ ಬ್ರಹ್ಮಚಾರಿಣ ಇಷ್ಯತೇ ॥4॥
ಯಾರಮೇಲೆಯೂ ತನ್ನ ಅಧಿಕಾರವನ್ನು ತೋರಿಸಬಾರದು. ಗುರುಗಳನ್ನು ದ್ವೇಷಿಸುವವರನ್ನು ಸೇವಿಸಬಾರದು. ಎಲೈ ಪ್ರೀತಿಪಾತ್ರನೇ! ಇದು ಬ್ರಹ್ಮಚರ್ಯಾ- ಶ್ರಮದ ಧರ್ಮವೆಂದು ಹೇಳಲ್ಪಡುತ್ತದೆ.
ಯುಧಿಷ್ಠಿರಃ
ಶಿವಾನ್ ಸರ್ವಾನ್ ಮಹೋದರ್ಕಾನಹಿಂಸ್ರಾನ್ ಲೋಕಸಮ್ಮತಾನ್ |
ಬ್ರೂಹಿ ಧರ್ಮಾನ್ ಸುಖೋಪಾಯಾನ್ ಮದ್ವಿಧಾನಾಂ ಸುಖಾವಹಾನ್ ॥
ಯುಧಿಷ್ಠಿರ ಮಂಗಳಕರವೂ, ಮಹಾಫಲಪ್ರದವೂ, ಅಹಿಂಸಾರೂಪವೂ, ಲೋಕಸಮ್ಮತವೂ, ಸುಖವಾಗಿ ಮಾಡಲು ಸಾಧ್ಯವಾದವೂ, ನನ್ನಂತಹವನಿಗೆ ಸುಖವನ್ನು ತಂದುಕೊಡುವಂತಹವೂ ಆದ ಎಲ್ಲಾ ಧರ್ಮಗಳನ್ನು ಹೇಳು.
ಭೀಷ್ಮಃ
ಬ್ರಾಹ್ಮಣಸ್ಯೇಹ ಚತ್ವಾರ ಆಶ್ರಮಾ ವಿಹಿತಾಃ ಪ್ರಭೋ |
ವರ್ಣಾಸ್ತಾನನುವರ್ತಂತೇ ತ್ರಯೋ ಭರತಸತ್ತಮ ॥6॥
ಭೀಷ್ಮರು ಎಲೈ ಪ್ರಭುವೇ! ಭರತಸತ್ತಮನೇ! ಬ್ರಾಹ್ಮಣರಿಗೆ ಈ ಲೋಕದಲ್ಲಿ ನಾಲ್ಕು ಆಶ್ರಮಗಳು ವಿಹಿತವಾಗಿವೆ. ಉಳಿದ ಮೂರು ವರ್ಣದವರು ಬ್ರಾಹ್ಮಣ- ನನ್ನು ಅನುಸರಿಸುತ್ತಾರೆ.
ಉಕ್ತಾನಿ ಕರ್ಮಾಣಿ ಬಹೂನಿ ರಾಜನ್
ಸ್ವರ್ಗ್ಯಾಣಿ ರಾಜನ್ಯಪರಾಯಣಾನಿ |
ನೇಮಾನಿ ದೃಷ್ಟಾಂತವಿಧೌ ಸ್ಮೃತಾನಿ
ಕ್ಷಾತ್ರೇ ಹಿ ಸರ್ವಂ ವಿಹಿತಂ ಯಥಾವತ್ ॥7॥
ಎಲೈ ರಾಜನೇ! ರಾಜರಿಗೆ ಸಂಬಂಧಿಸಿದ, ಬಹುವಿಧವಾದ, ಸ್ವರ್ಗಪ್ರದವಾದ ಕರ್ಮಗಳು ಹೇಳಲ್ಪಟ್ಟಿವೆ. ಇವುಗಳನ್ನು ಬ್ರಾಹ್ಮಣರು ಮಾಡಬೇಕೆಂದು ದೃಷ್ಟಾಂತ ರೀತಿಯಲ್ಲಿ ಇವು ಹೇಳಲ್ಪಟ್ಟವಲ್ಲ. ಇವೆಲ್ಲವೂ ಕ್ಷತ್ರಿಯರಿಗೆ ಮಾತ್ರ ಯಥಾವತ್ತಾಗಿ ವಿಹಿತವಾಗಿವೆ.
ಕ್ಷಾತ್ರಾಣಿ ವೈಶ್ಯಾನಿ ಚ ಸೇವಮಾನಃ
ಶೌದ್ರಾಣಿ ಕರ್ಮಾಣಿ ಚ ಬ್ರಾಹ್ಮಣಃ ಸನ್ |
ಅಸ್ಮಿನ್ ಲೋಕೇ ನಿಂದಿತೋ ಮಂದಚೇತಾಃ
ಪರೇ ಚ ಲೋಕೇ ನಿರಯಂ ಪ್ರಯಾತಿ ॥8॥
ಬ್ರಾಹ್ಮಣನಾಗಿ ಮಂದಮತಿಯುಳ್ಳವನಾಗಿ ಕ್ಷತ್ರಿಯರ ವೈಶ್ಯರ ಅಥವಾ ಶೂದ್ರರ ಕರ್ಮಗಳನ್ನು ಮಾಡುವವನು ಈ ಲೋಕದಲ್ಲಿ ನಿಂದಿತನಾಗುತ್ತಾನೆ. ಮತ್ತು ಪರ- ಲೋಕದಲ್ಲಿ ನರಕವನ್ನು ಹೊಂದುತ್ತಾನೆ.
ಯಾ ಸಂಜ್ಞಾ ವಿಹಿತಾ ಲೋಕೇ ದಾಸೇ ಶುನಿ ವೃಕೇ ಪಶೌ |
ವಿಕರ್ಮಣಿ ಸ್ಥಿತೇ ವಿಪ್ರೇ ತಾಂ ಸಂಜ್ಞಾಂ ಕುರು ಪಾಂಡವ ॥9॥
ಎಲೈ ಪಾಂಡವನೇ! ಲೋಕದಲ್ಲಿ ದಾಸನನ್ನು, ನಾಯಿಯನ್ನು, ತೋಳವನ್ನು, ಪಶುವನ್ನು ಯಾವ ಹೀನಶಬ್ದದಿಂದ

ಕರೆಯುತ್ತಾರೆಯೋ ವಿಕರ್ಮನಿರತನಾದ ಬ್ರಾಹ್ಮಣನನ್ನು ಅದೇ ಶಬ್ದವುಳ್ಳವನೆಂದು ತಿಳಿ.
ಷಟ್ಕರ್ಮಸಂಪ್ರವೃತ್ತಸ್ಯ ಆಶ್ರಮೇಷು ಚತುರ್ಷ್ವಪಿ |
ಸರ್ವಧರ್ಮೋಪಪನ್ನಸ್ಯ ಸಂಭೂತಸ್ಯ ಕೃತಾತ್ಮನಃ ॥10॥
ಬ್ರಾಹ್ಮಣಸ್ಯ ವಿಶುದ್ಧಸ್ಯ ತಪಸ್ಯಭಿರತಸ್ಯ ಚ |
ನಿರಾಶಿಷೋ ವದಾನ್ಯಸ್ಯ ಲೋಕಾ ಹ್ಯಕ್ಷರಸಂಜ್ಞಿತಾಃ ॥11॥
ಷಟ್ಕರ್ಮಗಳಲ್ಲಿ ಪ್ರವೃತ್ತನಾದ, ಸರ್ವಧರ್ಮೋಪಪನ್ನನಾದ, ಕೃತಕೃತ್ಯನಾದ, ವಿಶುದ್ಧನಾದ, ತಪೋನಿಷ್ಠನಾದ, ಆಸೆಗಳನ್ನು ತೊರೆದು ಉದಾರಿಯಾದ ನಾಲ್ಕು ಆಶ್ರಮಗಳಿಗೂ ಸೇರಿದ ಬ್ರಾಹ್ಮಣನಿಗೆ ಅಕ್ಷರವೆಂಬ ಹೆಸರಿನ ಅಕ್ಷಯವಾದ ಲೋಕ- ಗಳಿವೆ.
ಯೋ ಯಸ್ಮಿನ್ ಕುರುತೇ ಕರ್ಮ ಯಾದೃಶಂ ಯೇನ ಯತ್ರ ಚ |
ತಾದೃಶಂ ತಾದೃಶೇನೈವ ಸಗುಣಂ ಪ್ರತಿಪದ್ಯತೇ ॥12॥
ಯಾವನು ಎಲ್ಲಿ ಹೇಗೆ ಎಂತಹ ಕರ್ಮವನ್ನು ಮಾಡುತ್ತಾನೆಯೋ, ಅಂತಹ ಕರ್ಮಕ್ಕೆ ಅನುಗುಣವಾದ ಅಂತಹ ಫಲವನ್ನೇ ಅವನು ಪಡೆಯುತ್ತಾನೆ.
ವೃದ್ಧ್ಯಾ ಕೃಷಿವಣಿಕ್ತ್ವೇನ ಜೀವಸಂಜೀವನೇನ ಚ |
ವೇತ್ತುಮರ್ಹಸಿ ರಾಜೇಂದ್ರ ಸ್ವಾಧ್ಯಾಯಗಣಿತಂ ಮಹತ್ ॥13॥
ಎಲೈ ರಾಜೇಂದ್ರನೇ! ವೈಶ್ಯನ ಸಂಪತ್ತಿನ ವೃದ್ಧಿಯಿಂದಲೂ, ಕೃಷಿವಾಣಿಜ್ಯ- ದಿಂದಲೂ, ಗೋರಕ್ಷಣದಿಂದಲೂ ಅವನು ಮಾಡಿರುವ ಶ್ರೇಷ್ಠವಾದ ವೇದಾಧ್ಯ- ಯನವನ್ನು ನೀನು ತಿಳಿಯುವವನಾಗಬೇಕು.
ಕಾಲಸಂಚೋದಿತಃ ಕಾಲೇ ಕಾಲಪರ್ಯಾಯನಿಶ್ಚಿತಃ |
ಉತ್ತಮಾಧಮಮಧ್ಯಾನಿ ಕರ್ಮಾಣಿ ಕುರುತೇಽವಶಃ ॥14॥
ಕಾಲನಿಯಾಮಕ ಪರಮಾತ್ಮನಿಂದ ಪ್ರೇರಿತನಾಗಿ, ಕಾಲಕ್ರಮದಲ್ಲಿ ಪಕ್ವವಾಗುವ ತನ್ನ ಕರ್ಮಗಳಿಗೆ ಅಧೀನನಾಗಿ ಆಯಾ ಕಾಲದಲ್ಲಿ ಜೀವನು ಅಸ್ವತಂತ್ರನಾಗಿ ಉತ್ತಮ, ಅಧಮ, ಮಧ್ಯಮಕರ್ಮಗಳನ್ನು ಮಾಡುತ್ತಾನೆ.
ಅಂತವಂತಿ ಪ್ರದಾನಾನಿ ಪುರಾ ಶ್ರೇಯಸ್ಕರಾಣಿ ಚ |
ಸ್ವಕರ್ಮನಿರತೋ ಲೋಕೋ ಹ್ಯಕ್ಷರಃ ಸರ್ವತೋಮುಖಃ ॥15॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಷಷ್ಟಿತಮೋಽಧ್ಯಾಯಃ ॥63॥
ಹಿಂದೆ ಹೇಳಿದ ಶ್ರೇಷ್ಠವಾದ ದಾನ ಮೊದಲಾದವುಗಳು ಅನಿತ್ಯವಾದ ಶ್ರೇಯಸ್ಸನ್ನುಂಟು ಮಾಡುತ್ತವೆ. ಆದರೆ ಸ್ವಕರ್ಮನಿರತನಾದವನು ಸರ್ವಸುಖಮಯ -ವಾದ ಶಾಶ್ವತವಾದ ಲೋಕವನ್ನು ಪಡೆಯುತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 63ನೇ ಅಧ್ಯಾಯವು ಮುಗಿಯಿತು.

## 64. ಅರವತ್ನಾಲ್ಕನೆಯ ಅಧ್ಯಾಯ

ಬ್ರಾಹ್ಮಣರಿಗೆ ನಿಂದ್ಯವಾದ ಕರ್ಮಗಳ ಮತ್ತು ಕ್ಷತ್ರಿಯಧರ್ಮಗಳ ನಿರೂಪ

ಯುಧಿಷ್ಠಿರಃ
ಜ್ಯಾಕರ್ಷಣಂ ಶತ್ರುನಿಬರ್ಹಣಂ ಚ
ಕೃಷಿರ್ವಣಿಜ್ಯಾ ಪಶುಪಾಲನಂ ಚ |
ಶುಶ್ರೂಷಣಂ ಚಾಪಿ ತಥಾರ್ಥಹೇತೋ-
ರಕಾರ್ಯಮೇತತ್ ಪರಮಂ ದ್ವಿಜಸ್ಯ ॥1॥
ಭೀಷ್ಮರು ಬ್ರಾಹ್ಮಣನಾದವನು ಶಸ್ತ್ರವಿದ್ಯೆಯನ್ನು ಅವಲಂಬಿಸುವುದು, ಶತ್ರು ಸಂಹಾರವನ್ನು ಮಾಡುವುದು, ಕೃಷಿ ವಾಣಿಜ್ಯ ಪಶುಪಾಲನೆಯನ್ನು ಮಾಡುವುದು, ಧನಕ್ಕಾಗಿ ಇನ್ನೊಬ್ಬರ ಸೇವೆಯನ್ನು ಮಾಡುವುದು ಇವುಗಳನ್ನು ಖಂಡಿತವಾಗಿ ಮಾಡಬಾರದು.
ಸೇವ್ಯಂ ತು ಬ್ರಹ್ಮ ಷಟ್ ಕರ್ಮ ಗೃಹಸ್ಥೇನ ಮನೀಷಿಣಾ |
ಕೃತಕೃತ್ಯಸ್ಯ ಚಾರಣ್ಯೇ ವಾಸೋ ವಿಪ್ರಸ್ಯ ಶಸ್ಯತೇ ॥2॥
ವಿವೇಕಿಯಾದ ಗೃಹಸ್ಥ ಬ್ರಾಹ್ಮಣನು ವೇದವನ್ನು ಅವಲಂಬಿಸಿ ಷಟ್ಕರ್ಮ- ನಿರತನಾಗಬೇಕು. ಗೃಹದಲ್ಲಿ ಕೃತಕೃತ್ಯನಾದ ಅವನಿಗೆ ಅರಣ್ಯವಾಸವು ಹೇಳಲ್ಪಡು- ತ್ತದೆ.
ರಾಜಪ್ರೈಷ್ಯಂ ಕೃಷಿಧನಂ ಜೀವನಂ ಚ ವಣಿಜ್ಯಯಾ |
ಕೌಲಟ್ಯಂ ಕೌಲಟೇಯತ್ವಂ ಕುಸೀದಂ ಚ ವಿವರ್ಜಯೇತ್ ॥3॥
ಬ್ರಾಹ್ಮಣನು ರಾಜಸೇವೆ, ಕೃಷಿಧನ, ವ್ಯಾಪಾರದಿಂದ ಜೀವನ, ವೇಶ್ಯಾಪತಿತ್ವ, ಭಿಕ್ಷುಕೀಪತಿತ್ವ, ಬಡ್ಡಿಯಿಂದ ಜೀವನ ಇವುಗಳನ್ನು ವರ್ಜಿಸಬೇಕು.
ಶೂದ್ರೋ ರಾಜನ್ ಭವತಿ ಬ್ರಹ್ಮಬಂಧುಃ
ದುಶ್ಚಾರಿತ್ರ್ಯೋ ಯಶ್ಚ ಧರ್ಮಾದಪೇತಃ |
ವೃಷಲೀಪತಿಃ ಪಿಶುನೋ ನರ್ತಕಶ್ಚ
ಗ್ರಾಮಪ್ರೈಷ್ಯೋ ಯಶ್ಚ ಭವೇದ್ ವಿಕರ್ಮಾ ॥4॥
ಎಲೈ ರಾಜನೇ! ದುಷ್ಟನಡತೆಯನ್ನು ಹೊಂದಿ, ಧರ್ಮದಿಂದ ದೂರ ಸರಿದ ಬ್ರಾಹ್ಮಣ, ವೃಷಲೀಪತಿ (ಶೂದ್ರಸ್ತ್ರೀಪತಿ) ಚಾಡಿಕೋರ, ನರ್ತಕ, ಗ್ರಾಮಸೇವಕ, ಅಥವಾ ವಿಕರ್ಮನಿರತನಾದ ಬ್ರಾಹ್ಮಣನು ಶೂದ್ರಸಮನಾಗುತ್ತಾನೆ.

ಜಪನ್ ವೇದಾನಜಪಂಶ್ಚಾಪಿ ರಾಜನ್
ಸಮಃ ಶೂದ್ರೈರ್ದಾಸವಚ್ಚಾಪಿ ಭೋಜ್ಯಃ |
ಏತೇ ಸರ್ವೇ ಶೂದ್ರಸಮಾ ಭವಂತಿ
ರಾಜನ್ನೇತಾನ್ ವರ್ಜಯೇದ್ ದೈವಕೃತ್ಯೇ ॥5॥
ಎಲೈ ರಾಜನೇ! ಅಂತಹ ಬ್ರಾಹ್ಮಣನು ವೇದಗಳನ್ನು ಜಪಮಾಡಲಿ ಅಥವಾ ಜಪ ಮಾಡದೇ ಇರಲಿ ಶೂದ್ರರಿಗೆ ಸಮನಾಗುತ್ತಾನೆ. ಅವನಿಗೆ ದಾಸನಿಗೆ ನೀಡು- ವಂತೆ ಅನ್ನವನ್ನು ನೀಡಬೇಕು. ಎಲೈ ರಾಜನೇ! ಇವರೆಲ್ಲರೂ ಶೂದ್ರಸಮರಾಗು- ತ್ತಾರೆ. ದೇವಕಾರ್ಯಗಳಲ್ಲಿ ಇವರನ್ನು ವರ್ಜಿಸಬೇಕು.
ನಿರ್ಮರ್ಯಾದೇ ವಾಕ್ಶಠೇ ಕ್ರೂರವೃತ್ತೌ
ಹಿಂಸಾತ್ಮಕೇ ತ್ಯಕ್ತಧರ್ಮಸ್ವವೃತ್ತೇ |
ಹವ್ಯಂ ಕವ್ಯಂ ಯಾನಿ ಚಾನ್ಯಾನಿ ರಾಜನ್
ದೇಯಾನ್ಯದೇಯಾನಿ ಭವಂತಿ ತಸ್ಮಿನ್ ॥6॥
ಎಲೈ ರಾಜನೇ! ಬ್ರಾಹ್ಮಣನಿಗೆ ಕೊಡಬೇಕಾದ ಹವ್ಯಕವ್ಯಗಳನ್ನು ಮರ್ಯಾ- ದೆಯನ್ನು ಮೀರಿದ, ಅಹಂಕಾರದಿಂದ ಮಾತನಾಡುವ, ಕ್ರೂರವಾದ ನಡತೆಯುಳ್ಳ, ಹಿಂಸಾಶೀಲನಾದ, ತನ್ನ ಧರ್ಮವನ್ನು ಮತ್ತು ನಡತೆಯನ್ನು ಬಿಟ್ಟ ಬ್ರಾಹ್ಮಣನಿಗೆ ಕೊಡಬಾರದು.
ತಸ್ಮಾದ್ ಧರ್ಮೋ ವಿಹಿತೋ ಬ್ರಾಹ್ಮಣಸ್ಯ
ದಮಃ ಶೌಚಂ ಚಾರ್ಜವಂ ಚಾಪಿ ರಾಜನ್ |
ತಥಾ ವಿಪ್ರಸ್ಯಾಶ್ರಮಾಃ ಸರ್ವ ಏವ
ಪುರಾ ರಾಜನ್ ಬ್ರಹ್ಮಣಾ ವೈ ನಿಸೃಷ್ಟಾಃ ॥7॥
ಎಲೈ ರಾಜನೇ! ಆದ್ದರಿಂದ ಇಂದ್ರಿಯನಿಗ್ರಹ, ಶೌಚ ಮತ್ತು ಆರ್ಜವಗಳು ಬ್ರಾಹ್ಮಣನ ಧರ್ಮಗಳೆಂದು ವಿಹಿತವಾಗಿವೆ. ರಾಜನೇ! ನಾಲ್ಕು ಆಶ್ರಮಗಳನ್ನೂ ಸಹ ಇಂತಹ ಧರ್ಮವಿಶಿಷ್ಟಗಳನ್ನಾಗಿ ಬ್ರಹ್ಮದೇವರು ಸೃಷ್ಟಿಸಿದ್ದಾರೆ.
ಯಃ ಸ್ಯಾದ್ ದಾಂತಃ ಸೋಮಪ ಆರ್ಯಶೀಲಃ
ಸಾನುಕ್ರೋಶಃ ಸರ್ವಸಹೋ ನಿರಾಶೀಃ |
ಋಜುರ್ಮೃದುರನೃಶಂಸಃ ಕ್ಷಮಾವಾನ್
ಸ ವೈ ವಿಪ್ರೋ ನೇತರಃ ಪಾಪಕರ್ಮಾ ॥8॥
ಯಾವನು ಇಂದ್ರಿಯನಿಗ್ರಹವುಳ್ಳವನೋ, ಸೋಮಪಾನವನ್ನು ಮಾಡುವ- ವನೋ, ಉದಾತ್ತವಾದ ಶೀಲವುಳ್ಳವನೋ, ದಯಾಪರನೋ, ದ್ವಂದ್ವಸಹಿಷ್ಣು- ವೋ, ಆಶಾರಹಿತನೋ, ಋಜುವೋ, ಮೃದುವೋ, ಅಕ್ರೂರಿಯೋ, ಕ್ಷಮೆಯುಳ್ಳ- ವನೋ ಅವನೇ ಬ್ರಾಹ್ಮಣ. ಪಾಪಕರ್ಮವನ್ನು ಮಾಡುವವನು ಬ್ರಾಹ್ಮಣನಲ್ಲ.
ಶೂದ್ರಂ ವೈಶ್ಯಂ ರಾಜಪುತ್ರಂ ಚ ರಾಜನ್
ಲೋಕಾಃ ಸರ್ವೇ ಸಂಶ್ರಿತಾಃ ಧರ್ಮಕಾಮಾಃ |
ತಸ್ಮಾದ್ ವರ್ಣಾನ್ ಜಾತಿಧರ್ಮೇಷು ಸಕ್ತಾನ್
ಕೃತ್ವಾ ಬುದ್ಧ್ಯಾ ಶಾಧಿ ತಾನ್ ಪಾಂಡುಪುತ್ರ ॥9॥
ಎಲೈ ರಾಜನೇ! ಧರ್ಮವನ್ನು ಮಾಡಲು ಬಯಸುವವರೆಲ್ಲರೂ ಶೂದ್ರನನ್ನು, ವೈಶ್ಯನನ್ನು ಮತ್ತು ಕ್ಷತ್ರಿಯನನ್ನೂ ಆಶ್ರಯಿಸಿರುತ್ತಾರೆ. ಎಲೈ ಪಾಂಡುಪುತ್ರನೇ! ಆದ್ದರಿಂದ ಆಯಾ ವರ್ಣದವರು ತಮ್ಮ ತಮ್ಮ ಜಾತಿಧರ್ಮಗಳಲ್ಲಿ ನಿರತ- ರಾಗಿರುವಂತೆ ಮಾಡಿ, ನಿನ್ನ ಬುದ್ಧಿಯಿಂದ ಅವರನ್ನು ಪಾಲಿಸುವವನಾಗು.
ಲೋಕೇ ಚೇದಂ ಸರ್ವಲೋಕಸ್ಯ ನ ಸ್ಯಾತ್
ಚಾತುರ್ವರ್ಣ್ಯಂ ವೇದವಾದಾಶ್ಚ ನ ಸ್ಯುಃ |
ಸರ್ವಾಶ್ಚೇಜ್ಯಾಃ ಸರ್ವಲೋಕಕ್ರಿಯಾಶ್ಚ
ಸದ್ಯಃ ಸರ್ವೇ ಚಾಶ್ರಮಸ್ಥಾ ನ ವೈ ಸ್ಯುಃ ॥10॥
ಆಯಾ ವರ್ಣದವರು ತಮ್ಮ ಧರ್ಮಗಳನ್ನು ಪಾಲಿಸದಿದ್ದರೆ ಲೋಕದಲ್ಲಿ ಈ ಯಾವ ಧರ್ಮವೂ ಉಳಿಯಲಾರದು. ಚಾತುರ್ವರ್ಣ್ಯವ್ಯವಸ್ಥೆಯಾಗಲೀ, ವೇದ- ವಾದಗಳಾಗಲೀ ಇರಲಾರವು. ಎಲ್ಲ ಯಜ್ಞಗಳೂ ಅರ್ಚನೆಗಳೂ ಲೋಕದ ಎಲ್ಲಾ ಕ್ರಿಯೆಗಳೂ, ಆಶ್ರಮಗಳ ಎಲ್ಲಾ ಕ್ರಿಯೆಗಳೂ ತತ್ಕ್ಷಣದಲ್ಲೇ ನಾಶವನ್ನು ಹೊಂದು- ವವು.
ಯಶ್ಚ ತ್ರಯಾಣಾಂ ವರ್ಣಾನಾಮಿಚ್ಛೇದಾಶ್ರಮಸೇವನಮ್ |
ಚತುರಾಶ್ರಮದೃಷ್ಟಾಂಶ್ಚ ಧರ್ಮಾಂಸ್ತಾನ್ ಶೃಣು ಪಾಂಡವ ॥11॥
ಎಲೈ ಪಾಂಡವನೇ! ಕ್ಷತ್ರಿಯವೈಶ್ಯಶೂದ್ರರಲ್ಲಿ ಯಾವನು ತನಗೆ ವಿಹಿತವಾದ ಆಶ್ರಮವನ್ನು ಸೇವಿಸಲು ಬಯಸುತ್ತಾನೆಯೋ ಅಥವಾ ಬ್ರಾಹ್ಮಣನು ತನಗೆ ವಿಹಿತವಾದ ನಾಲ್ಕು ಆಶ್ರಮಗಳಲ್ಲಿ ಶಾಸ್ತ್ರದೃಷ್ಟವಾದ ಯಾವ ಧರ್ಮಗಳನ್ನು ಆಚರಿ- ಸಲು ಬಯಸುತ್ತಾನೆಯೋ ಆ ಧರ್ಮಗಳನ್ನು ಕೇಳುವವನಾಗು. (ಲಕ್ಷ್ಮಾಲಂಕಾರ).
ಶುಶ್ರೂಷಾಕೃತಕೃತ್ಯಸ್ಯ ಕೃತಸಂತಾನಕರ್ಮಣಃ |
ಅಭ್ಯನುಜ್ಞಾಪ್ಯ ರಾಜಾನಂ ಶೂದ್ರಸ್ಯ ಜಗತೀಪತೇ ॥12॥
ಕಲ್ಪಾಂತರಗತಸ್ಯಾಪಿ ದಶಧರ್ಮಗತಸ್ಯ ವಾ |
ಆಶ್ರಮಾ ವಿಹಿತಾಃ ಸರ್ವೇ ವರ್ಜಯಿತ್ವಾ ನಿರಾಶಿಷಮ್ ॥13॥
ಎಲೈ ಜಗತೀಪತಿಯೇ! ತ್ರಿವರ್ಣದವರ ಸೇವೆಯಿಂದ ಕೃತಕೃತ್ಯನಾದ, ಪುತ್ರರನ್ನು ಪಡೆದ ಶೂದ್ರನಾದವನು (ವೃದ್ಧನಾದವನು)

ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಧರ್ಮ- ವನ್ನು ಬಿಟ್ಟು ಬೇರೆ ಸದ್ಧರ್ಮವನ್ನು ಆಶ್ರಯಿಸಲು ಬಯಸಿದರೆ ಅವನಿಗೆ ಯತ್ಯಾ- ಶ್ರಮವನ್ನು ಬಿಟ್ಟು ಉಳಿದ ಎಲ್ಲಾ ಆಶ್ರಮಗಳೂ ವಿಹಿತವಾಗುತ್ತವೆ.
ಭೈಕ್ಷಚರ್ಯಾಂ ನ ತು ಪ್ರಾಹುಸ್ತಸ್ಯ ತದ್ಧರ್ಮಚಾರಿಣಃ |
ತಥಾ ವೈಶ್ಯಸ್ಯ ರಾಜೇಂದ್ರ ರಾಜಪುತ್ರಸ್ಯ ಚೈವ ಹಿ ॥14॥
ಅವನಿಗೆ ಸನ್ಯಾಸಾಶ್ರಮವು ಎಂದೂ ಯುಕ್ತವಾದುದಲ್ಲವೆಂದು ಧರ್ಮಚಾರಿ- ಗಳು ಹೇಳುತ್ತಾರೆ. ಎಲೈ ರಾಜೇಂದ್ರನೇ! ಹಾಗೆಯೇ ವೈಶ್ಯನಿಗೂ ಮತ್ತು ಕ್ಷತ್ರಿಯ- ನಿಗೂ ಸಹ,
ಕೃತಕೃತ್ಯೋ ವಯೋತೀತೋ ರಾಜ್ಞಃ ಕೃತಪರಿಶ್ರಮಃ |
ವೈಶ್ಯೋ ಗಚ್ಛೇದನುಜ್ಞಾತೋ ನೃಪೇಣಾಶ್ರಮಮಂಡಲಮ್ ॥15॥
ತನ್ನ ವೃತ್ತಿಯಿಂದ ಕೃತಕೃತ್ಯನಾದವನು, ವಯಸ್ಸಾದವನು, ಜೀವನದಲ್ಲಿ ತನ್ನ ರಾಜನ ಸೇವೆಯನ್ನು ಮಾಡಿದವನಾದ ವೈಶ್ಯನು ರಾಜನಿಂದ ಅನುಮತಿಯನ್ನು ಪಡೆದು ಆಶ್ರಮಮಂಡಲಕ್ಕೆ ಹೋಗಬಹುದು.
ವೇದಾನಧೀತ್ಯ ಧರ್ಮೇಣ ರಾಜಶಾಸ್ತ್ರಾಣಿ ಚಾನಘ |
ಸಂತಾನಾದೀನಿ ಕರ್ಮಾಣಿ ಕೃತ್ವಾ ಸೋಮಂ ನಿಷೇವ್ಯ ಚ ॥16॥
ಪಾಲಯಿತ್ವಾ ಪ್ರಜಾಃ ಸರ್ವಾ ಧರ್ಮೇಣ ವದತಾಂವರ |
ರಾಜಸೂಯಾಶ್ವಮೇಧಾದೀನ್ ಮಖಾನನ್ಯಾಂಸ್ತಥೈವ ಚ ॥17॥
ಸಮಾನೀಯ ಯಥಾಪಾಠಂ ವಿಪ್ರೇಭ್ಯೋ ದತ್ತದಕ್ಷಿಣಃ |
ಸಂಗ್ರಾಮೇ ವಿಜಯಂ ಪ್ರಾಪ್ಯ ತಥಾಲ್ಪಂ ಯದಿ ವಾ ಬಹು ॥18॥
ಸ್ಥಾಪಯಿತ್ವಾ ಪ್ರಜಾಪಾಲಂ ಪುತ್ರಂ ರಾಜ್ಯೇ ಚ ಪಾಂಡವ |
ಅನ್ಯಗೋತ್ರಂ ಪ್ರಶಸ್ತಂ ವಾ ಕ್ಷತ್ರಿಯಂ ಕ್ಷತ್ರಿಯರ್ಷಭ ॥19॥
ಅರ್ಚಯಿತ್ವಾ ಪಿತೄನ್ ಸಮ್ಯಕ್ ಪಿತೃಯಜ್ಞೈರ್ಯಥಾವಿಧಿ |
ದೇವಾನ್ ಯಜ್ಞೈರ್ಋಷೀನ್ ವೇದೈರರ್ಚಿತ್ವಾ ಚೈವ ಯತ್ನತಃ ॥20॥
ಅಂತಕಾಲೇ ಚ ಸಂಪ್ರಾಪ್ತೇ ಯ ಇಚ್ಛೇದಾಶ್ರಮಾಂತರಮ್ |
ಆನುಪೂರ್ವ್ಯಾಶ್ರಮಾನ್ ರಾಜನ್ ಗತ್ವಾ ಸಿದ್ಧಿಮವಾಪ್ನುಯಾತ್ ॥21॥
ಎಲೈ ಅನಘನೇ! ಮಾತನಾಡುವವರಲ್ಲಿ ಶ್ರೇಷ್ಠನೇ! ಪಾಂಡವನೇ, ಕ್ಷತ್ರಿಯ- ಶ್ರೇಷ್ಠನೇ! ಕ್ಷತ್ರಿಯನಾದವನು ಧರ್ಮವಿಧಾನದಿಂದ ವೇದಗಳನ್ನು ರಾಜನೀತಿಶಾಸ್ತ್ರ- ಗಳನ್ನು ಅಧ್ಯಯನ ಮಾಡಿ, ಸಂತಾನಾದಿ ಕರ್ಮಗಳನ್ನು ಮಾಡಿ, ಸೋಮಪಾನ- ವನ್ನು ಮಾಡಿ, ಧರ್ಮದಿಂದ ಪ್ರಜೆಗಳನ್ನುರಕ್ಷಿಸಿ, ರಾಜಸೂಯಾಶ್ವಮೇಧ ಮೊದಲಾದ ಯಾಗಗಳನ್ನು ಶಾಸೊತ್ರೇಕ್ತರೀತಿಯಲ್ಲಿ ಮಾಡಿ, ಬ್ರಾಹ್ಮಣರಿಗೆ ಭೂರಿ ದಕ್ಷಿಣೆಯನ್ನು ಕೊಟ್ಟು, ಯುದ್ಧದಲ್ಲಿ ವಿಜಯವನ್ನು ಸಂಪಾದಿಸಿ, ಅಲ್ಪವಾದ ಅಥವಾ ಬಹುವಾದ ಕೋಶವನ್ನು ಸಂಪಾದಿಸಿ, ರಾಜ್ಯದಲ್ಲಿ ತನ್ನ ಪುತ್ರನನ್ನಾಗಲೀ ಅಥವಾ ಬೇರೆಯ ಗೋತ್ರಕ್ಕೆ ಸೇರಿದ ಕ್ಷತ್ರಿಯನನ್ನಾಗಲೀ ರಾಜನನ್ನಾಗಿ ಸ್ಥಾಪಿಸಿ, ಶಾಸೊತ್ರೇಕ್ತ- ರೀತಿಯಲ್ಲಿ ಪಿತೃಯಜ್ಞಗಳನ್ನು ಮಾಡಿ, ಪಿತೃಗಳನ್ನು ಚೆನ್ನಾಗಿ ಪೂಜಿಸಿ, ವೇದಗಳಿಂದ ಪ್ರಯತ್ನಪೂರ್ವಕವಾಗಿ ಋಷಿಗಳನ್ನೂ, ಯಜ್ಞಗಳಿಂದ ದೇವತೆಗಳನ್ನೂ ಪೂಜಿಸಿ ಸಂತೋಷಪಡಿಸಿ, ಅಂತಕಾಲವು ಪ್ರಾಪ್ತವಾದಾಗ ಬೇರೆಯ ಆಶ್ರಮವನ್ನು ಹೊಂದಲು ಬಯಸಿದರೆ ಅವನು ಪರಮಹಂಸಾಶ್ರಮವನ್ನು ಬಿಟ್ಟು ಉಳಿದ ಹಂಸಾದಿ ಆಶ್ರಮ- ವನ್ನು ಸ್ವೀಕರಿಸಬಹುದು. ಅದರಿಂದ ಅವನು ಸಿದ್ಧಿಯನ್ನು ಹೊಂದಿಯಾನು!
ರಾಜರ್ಷಿತ್ವೇನ ರಾಜೇಂದ್ರ ಭೈಕ್ಷಚರ್ಯಂ ನ ಸೇವಯಾ |
ಅಪೇತಗೃಹಧರ್ಮೋಽಪಿ ಚರೇಜ್ಜೀವಿತಕಾಮ್ಯಯಾ ॥22॥
ಎಲೈ ರಾಜೇಂದ್ರನೇ! ಅಂತಹವನು ಗೃಹಸ್ಥಧರ್ಮದಿಂದ ವಿಯುಕ್ತನಾಗಿದ್ದರೂ ಸಹ ಶರೀರಯಾತ್ರೆಯನ್ನು ಮುಂದುವರಿಸುವ ಉದ್ದೇಶದಿಂದ, ರಾಜರ್ಷಿಯಾದ ಕಾರಣದಿಂದ ಭೈಕ್ಷಚರ್ಯೆಯನ್ನು ಮಾಡಬಹುದು. ಆದರೆ ಇನ್ನೊಬ್ಬರ ಸೇವೆ- ಯಿಂದ ಜೀವನವನ್ನು ನಡೆಸಬಾರದು.
ನ ಚೈತನ್ನೈಷ್ಠಿಕಂ ಕರ್ಮ ತ್ರಯಾಣಾಂ ಭರತರ್ಷಭ |
ಚತುರ್ಣಾಂ ರಾಜಶಾರ್ದೂಲ ಪ್ರಾಹುರಾಶ್ರಮವಾಸಿನಾಮ್ ॥23॥
ಎಲೈ ರಾಜಶಾರ್ದೂಲನೇ! ಭರತಶ್ರೇಷ್ಠನೇ! ಬ್ರಾಹ್ಮಣಕ್ಷತ್ರಿಯವೈಶ್ಯರಿಗೂ ಅಥವಾ ಆಶ್ರಮವಾಸಿಗಳಾದ ಬ್ರಾಹ್ಮಣರಿಗೂ ಕೊನೆಯಲ್ಲಿ ಹೀಗೆಯೇ ಮಾಡ- ಬೇಕೆಂಬ ಕಡ್ಡಾಯವಿಲ್ಲ.
ಬಾಹ್ವಂ ಪತ್ಯಂ ಕ್ಷತ್ರಿಯೈರ್ಮಾನವಾನಾಂ
ಲೋಕಶ್ರೇಷ್ಠಂ ಧರ್ಮಮಾಸೇವಮಾನೈಃ |
ಸರ್ವೇ ಧರ್ಮಾಃ ಸೋಪಧರ್ಮಾಸ್ತ್ರಯಾಣಾಂ
ರಾಜ್ಞೋ ಧರ್ಮಾದಿತಿ ವೇದಾಚ್ಛೃಣೋಮಿ ॥24॥
ಲೋಕದಲ್ಲಿ ಶ್ರೇಷ್ಠವಾದ ಧರ್ಮವನ್ನು ಸೇವಿಸುವ ಕ್ಷತ್ರಿಯರಿಗೆ ಬಾಹು- ಸಂಬಂಧಿಯಾದ ಮತ್ತು ಪ್ರಜಾರಕ್ಷಣರೂಪವಾದ ಧರ್ಮವಿದೆ. ರಾಜನ ಧರ್ಮ- ದಿಂದ ಎಲ್ಲಾ ಧರ್ಮಗಳು ಮತ್ತು ಉಪಧರ್ಮಗಳು ಉಂಟಾಗುತ್ತವೆ ಎಂದು ನಾನು ವೇದದಿಂದ ತಿಳಿದಿದ್ದೇನೆ.
ಯಥಾ ರಾಜನ್ ಹಸ್ತಿಪದೇ ಪದಾನಿ
ಸಂಲೀಯಂತೇ ಸರ್ವಸತೊತ್ವೇದ್ಭವಾನಿ |
ಏವಂ ಧರ್ಮಾನ್ ರಾಜಧರ್ಮೇಷು ಸರ್ವಾನ್

ಸರ್ವಾವಸ್ಥಂ ಸಂಪ್ರಲೀನಾನ್ ನಿಬೋಧ ॥25॥
ಎಲೈ ರಾಜನೇ! ಉಳಿದ ಎಲ್ಲಾ ಪ್ರಾಣಿಗಳ ಹೆಜ್ಜೆಗಳು ಆನೆಯ ಹೆಜ್ಜೆಯಲ್ಲಿ ಮುಳುಗಿಹೋಗುವಂತೆ, ಉಳಿದ ಸರ್ವಾವಸ್ಥೆಯನ್ನು ಹೊಂದಿದ ಎಲ್ಲ ಧರ್ಮ- ಗಳೂ ರಾಜಧರ್ಮಗಳಲ್ಲಿ ಮುಳುಗಿಹೋಗುತ್ತವೆ ಎಂದು ತಿಳಿ.
ಅಲ್ಪಾಶ್ರಯಾನಲ್ಪಫಲಾನ್ ವದಂತಿ
ಧರ್ಮಾನನ್ಯಾನ್ ಧರ್ಮವಿದೋ ಮನುಷ್ಯಾಃ |
ಮಹಾಶ್ರಯಂ ಬಹುಕಲ್ಯಾಣರೂಪಂ
ಕ್ಷಾತ್ರಂ ಧರ್ಮಂ ನೇತರಂ ಪ್ರಾಹುರಾರ್ಯಾಃ ॥26॥
ಧರ್ಮವನ್ನು ತಿಳಿದ ವಿವೇಕಿಗಳು ಉಳಿದ ಧರ್ಮಗಳು ಅಲ್ಪಸಂಬಂಧಿ- ಯಾದವು, ಮತ್ತು ಅಲ್ಪಫಲವನ್ನು ಕೊಡುವವು ಎಂದು ಹೇಳುತ್ತಾರೆ. ಕ್ಷತ್ರಿಯ ಧರ್ಮವು ಮಾತ್ರ ಶ್ರೇಷ್ಠರಾದವರನ್ನು ಆಶ್ರಯಿಸಿರುವುದು ಮತ್ತು ಬಹುಕಲ್ಯಾಣ- ರೂಪವಾದುದು; ಬೇರೆ ಧರ್ಮಗಳು ಹಾಗಲ್ಲ ಎಂದು ಆರ್ಯರು ಹೇಳುತ್ತಾರೆ.
ಸರ್ವೇ ಧರ್ಮಾ ರಾಜಧರ್ಮಪ್ರಧಾನಾಃ
ಸರ್ವೇ ಧರ್ಮಾ ಪಾಲ್ಯಮಾನಾ ಭವಂತಿ |
ಸರ್ವತ್ಯಾಗೋ ರಾಜಧರ್ಮೇಷು ರಾಜನ್
ತ್ಯಾಗೇ ಚಾಹುರ್ಧರ್ಮಮಗ್ರ್ಯಂ ಪುರಾಣಮ್ ॥27॥
ಎಲ್ಲ ಧರ್ಮಗಳೂ ರಾಜಧರ್ಮವನ್ನೇ ಪ್ರಧಾನವಾಗಿ ಆಶ್ರಯಿಸಿವೆ. ರಾಜ- ನಿಂದ ಪಾಲಿಸಲ್ಪಟ್ಟರೆ ಎಲ್ಲ ಧರ್ಮಾಚರಣೆಗಳೂ ನಡೆಯುತ್ತವೆ. ರಾಜನೇ! ಎಲ್ಲ ವಿಧವಾದ ತ್ಯಾಗವೂ ರಾಜಧರ್ಮಗಳಲ್ಲಿ ಅಡಕವಾಗಿವೆ. ತ್ಯಾಗವು ಪ್ರಾಚೀನವಾದ ಶ್ರೇಷ್ಠವಾದ ಧರ್ಮವೆಂದು ಹೇಳುತ್ತಾರೆ.
ಮಜ್ಜೇತ್ ತ್ರಯೀದಂಡನೀತೌ ಹತಾಯಾಂ
ಸರ್ವೇ ಧರ್ಮಾ ನ ಭವೇಯುರ್ವಿರುದ್ಧಾಃ |
ಸರ್ವೇ ಧರ್ಮಾಶ್ಚಾಶ್ರಮಾಣಾಂ ಗತಾಃ ಸ್ಯುಃ
ಕ್ಷಾತ್ರೇ ತ್ಯಕ್ತೇ ರಾಜಧರ್ಮೇ ಪುರಾಣೇ ॥28॥
ದಂಡನೀತಿಯು ಹತವಾದರೆ ವೇದವಿದ್ಯೆಯು ಮುಳುಗಿ ಹೋಗುತ್ತದೆ. ಎಲ್ಲ ಧರ್ಮಗಳೂ ವಿಶೇಷವಾಗಿ ಪ್ರತಿಬದ್ಧವಾಗಿ ಯಾವ ಧರ್ಮಾಚರಣೆಯೂ ನಡೆ- ಯಲಾರದು. ರಾಜನಾದವನು ಪುರಾತನವಾದ ರಾಜಧರ್ಮವನ್ನು ತ್ಯಜಿಸಿದರೆ ಎಲ್ಲ ಆಶ್ರಮಧರ್ಮಗಳೂ ನಶಿಸಿಹೋದಾವು!
ಸರ್ವೇ ತ್ಯಾಗಾ ರಾಜಧರ್ಮೇಷು ದೃಷ್ಟಾಃ
ಸರ್ವಾ ದೀಕ್ಷಾ ರಾಜಧರ್ಮೇಷು ಚೋಕ್ತಾಃ |
ಸರ್ವೇ ಯೋಗಾ ರಾಜಧರ್ಮೇಷು ಚೋಕ್ತಾಃ
ಸರ್ವೇ ಲೋಕಾ ರಾಜಧರ್ಮಾನ್ ಪ್ರವಿಷ್ಟಾಃ ॥29॥
ರಾಜಧರ್ಮಗಳಲ್ಲಿ ಎಲ್ಲವಿಧವಾದ ತ್ಯಾಗಗಳೂ ದೃಷ್ಟವಾಗಿವೆ. ರಾಜಧರ್ಮ- ಗಳಲ್ಲಿ ಎಲ್ಲ ವಿಧವಾದ ದೀಕ್ಷೆಗಳು ಹೇಳಲ್ಪಟ್ಟಿವೆ. ರಾಜಧರ್ಮಗಳಲ್ಲಿ ಎಲ್ಲ ವಿಧವಾದ ಯೋಗಗಳು ಹೇಳಲ್ಪಟ್ಟಿವೆ. ಎಲ್ಲ ಲೋಕಗಳೂ ರಾಜಧರ್ಮಗಳಲ್ಲಿ ಸೇರಿಕೊಂಡಿವೆ.
ಯಥಾ ಜೀವಾಃ ಪ್ರಾಕೃತೈರ್ಬಾಧ್ಯಮಾನಃ
ಧರ್ಮಾಶ್ರಿತಾನಾಮುಪಪೀಡನಾಯ |
ಏವಂ ಧರ್ಮಾನ್ ರಾಜಧರ್ಮೈರ್ವಿಯುಕ್ತಾಃ
ಸಂಚಿನ್ವಂತೋ ನಾದ್ರಿಯಂತೇ ಸ್ವಧರ್ಮಮ್ ॥30॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಃಷಷ್ಟಿತಮೋಽಧ್ಯಾಯಃ ॥64॥
ಪ್ರಾಕೃತಜನರಿಂದ ಪಶುಪಕ್ಷಿಜೀವರು ಬಂಧಿಸಿ ಪೀಡಿಸಲ್ಪಟ್ಟರೆ ಧರ್ಮಿಷ್ಠರಾದ- ವರಿಗೆ ದುಃಖವುಂಟಾಗುತ್ತದೆ. ಅದರಂತೆ ಧರ್ಮವನ್ನು ಮಾಡಲು ಬಯಸುವವರು ರಾಜಧರ್ಮಗಳಿಂದ ವಿಯುಕ್ತರಾಗಿ ಆದರದಿಂದ ತಮ್ಮ ಧರ್ಮವನ್ನು ಆಚರಿಸ- ದಿದ್ದರೆ ಸಜ್ಜನರಿಗೆ ಖೇದವುಂಟಾಗುತ್ತದೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 64ನೆಯ ಅಧ್ಯಾಯವು ಮುಗಿಯಿತು.
65. ಅರವತ್ತೈದನೆಯ ಅಧ್ಯಾಯ
ರಾಜಧರ್ಮಪ್ರಶಂಸಾರೂಪವಾದ ಇಂದ್ರಮಾಂಧಾತೃಸಂವಾದಕಥನ
ಭೀಷ್ಮಃ
ಚಾತುರಾಶ್ರಮ್ಯಧರ್ಮಾಶ್ಚ ಜಾತಿಧರ್ಮಾಶ್ಚ ಪಾಂಡವ |
ಲೋಕವೇದೋತ್ತರಾಶ್ಚೈವ ಕ್ಷಾತ್ರೇ ಧರ್ಮೇ ವ್ಯವಸ್ಥಿತಾಃ ॥1॥
ಭೀಷ್ಮರು ಎಲೈ ಪಾಂಡವನೇ! ನಾಲ್ಕು ಆಶ್ರಮದ ಧರ್ಮಗಳು, ನಾಲ್ಕು ಜಾತಿಧರ್ಮಗಳು, ಲೋಕದಲ್ಲಿ ಆಚರಣೆಯಲ್ಲಿರುವ ಮತ್ತು ವೇದೋಕ್ತವಾದ ಧರ್ಮಗಳೂ ಸಹ ಕ್ಷತ್ರಿಯಧರ್ಮದಲ್ಲಿ ನೆಲೆಗೊಂಡಿವೆ.
ಸರ್ವಾಣ್ಯೇತಾನಿ ಧರ್ಮಾಣಿ ಕ್ಷಾತ್ರೇ ಭರತಸತ್ತಮ |
ನಿರಾಶಿಷೋ ಜೀವಲೋಕಾಃ ಕ್ಷಾತ್ರೇ ಧರ್ಮೇಽವ್ಯವಸ್ಥಿತೇ ॥2॥
ಎಲೈ ಭರತಶ್ರೇಷ್ಠನೇ! ಈ ಎಲ್ಲ ಧರ್ಮಗಳೂ ಕ್ಷತ್ರಿಯಧರ್ಮದಲ್ಲಿ ಸೇರಿವೆ. ಅಂತಹ ಕ್ಷತ್ರಿಯಧರ್ಮವು ಅವ್ಯವಸ್ಥಿತವಾದರೆ

ಜೀವಲೋಕವೆಲ್ಲವೂ ತಮ್ಮ ಆಸೆ- ಗಳನ್ನು ಬಿಡಬೇಕಾಗುತ್ತದೆ.
ಅಪ್ರತ್ಯಕ್ಷಂ ಬಹುದ್ವಾರಂ ಧರ್ಮಮಾಶ್ರಮವಾಸಿನಾಮ್ |
ಪ್ರದೂಷಯಂತಿ ತದ್ಭಾವಮಾಗಮೈರೇವ ಶಾಶ್ವತಮ್ ॥3॥
ಆಶ್ರಮವಾಸಿಗಳ ಧರ್ಮವು ಅಗೋಚರವಾದುದು ಮತ್ತು ಬಹುಮುಖ- ವಾದುದು. ಯಜ್ಞ, ಅಧ್ಯಯನ, ದಾನಾದಿಗಳ ಬಹುಪ್ರಕಾರವನ್ನು ಪ್ರತಿಪಾದಿಸುವ ವೇದಗಳಿಂದಲೇ ಶಾಶ್ವತವಾದ ಆ ಧರ್ಮದ ಇರುವಿಕೆಯು ತಿಳಿಯುತ್ತದೆ. ಅದನ್ನು ತಿಳಿಯದ ಜನರು ದೂಷಿಸುತ್ತಾರೆ.
ಅಪರೇ ವಚನೈಃ ಪುಣ್ಯೈರ್ವಾದಿನೋ ಲೋಕನಿಶ್ಚಯೇ |
ಅನಿಶ್ಚಯಜ್ಞಾ ಧರ್ಮಾಣಾಮದೃಷ್ಟಾಂತೇ ಪರೇ ರತಾಃ ॥4॥
ಇನ್ನು ಕೆಲವರು ಸ್ವತಃ ಧರ್ಮವನ್ನು ನಿಶ್ಚಯಿಸಲು ಸಾಧ್ಯವಾಗದೇ ವೇದಗ- ಳಿಂದಲೂ, ಸಜ್ಜನರ ವಚನಗಳಿಂದಲೂ ಲೋಕದಲ್ಲಿ ಮಾಡಬೇಕಾದ ಧರ್ಮ- ಗಳನ್ನು ನಿಶ್ಚಯಿಸಿ ಧರ್ಮದಲ್ಲಿ ರತರಾಗಿರುತ್ತಾರೆ. ಇನ್ನು ಕೆಲವರು ಲೋಕ- ದೃಷ್ಟಾಂತರಹಿತವಾದ ಸ್ವೇಚ್ಛಾಚಾರದಲ್ಲಿ ತೊಡಗುತ್ತಾರೆ.
ಪ್ರತ್ಯಕ್ಷಸುಖಭೂಯಿಷ್ಠಮಾತ್ಮಸಾಕ್ಷಿಕಮಚ್ಛಲಮ್ |
ಸರ್ವಲೋಕಹಿತಂ ಧರ್ಮಂ ಕ್ಷತ್ರಿಯೇಷು ಪ್ರತಿಷ್ಠಿತಮ್ ॥5॥
ಬಹಳವಾದ ಪ್ರತ್ಯಕ್ಷಫಲವನ್ನು ಕೊಡುವ, ಆತ್ಮಸಾಕ್ಷಿಕವಾದ, ಪರಿಶುದ್ಧವಾದ, ಸರ್ವಲೋಕಹಿತವಾದ ಧರ್ಮವು ಕ್ಷತ್ರಿಯರಲ್ಲಿ ಪ್ರತಿಷ್ಠಿತವಾಗಿದೆ.
ಧರ್ಮಾಶ್ರಮವ್ಯವಸಿನಾಂ ಬ್ರಾಹ್ಮಣಾನಾಂ ಯುಧಿಷ್ಠಿರ |
ಯಥಾ ತ್ರಯಾಣಾಂ ವರ್ಣಾನಾಂ ಸಂಖ್ಯಾತೋಪಶ್ರುತಿಃ ಪುರಾ |
ರಾಜಧರ್ಮೇಷ್ವನುಪಮಾ ಲೋಕ್ಯಾ ಸುಚರಿತೈರಿಹ ॥6॥
ಎಲೈ ಯುಧಿಷ್ಠಿರನೇ! ಆಶ್ರಮಧರ್ಮವನ್ನು ಅನುಷ್ಠಾನಮಾಡಲು ಬಯಸುವ ಮೂರುವರ್ಣಗಳು ಬ್ರಾಹ್ಮಣರ ಧರ್ಮಗಳಿಗೆ ಅಧೀನವಾಗಿ ನಡೆಯುತ್ತವೆ ಎಂದು ಹಿಂದೆ ಹೇಳಿದಂತೆ, ಒಳ್ಳೆಯ ನಡತೆಯಿಂದುಂಟಾಗುವ ಲೋಕಧರ್ಮಗಳೆಲ್ಲವೂ ರಾಜಧರ್ಮಗಳನ್ನು ಅಸದೃಶವಾಗಿ ಅವಲಂಬಿಸುತ್ತವೆ.
ಉದಾಹೃತಂ ತೇ ರಾಜೇಂದ್ರ ಯಥಾ ವಿಷ್ಣುಂ ಮಹೌಜಸಮ್ |
ಸರ್ವಭೂತೇಶ್ವರಂ ದೇವಂ ಪ್ರಭುಂ ನಾರಾಯಣಂ ಪುರಾ |
ಜಗ್ಮುಃ ಸುಬಹವಃ ಶೂರಾ ರಾಜಾನೋ ದಂಡನೀತಯೇ ॥7॥
ಎಲೈ ರಾಜೇಂದ್ರನೇ! ಹಿಂದೆ ಶೂರರಾದ ಅನೇಕರಾಜರು ದಂಡನೀತಿಯನ್ನು ತಿಳಿಯಲು ಹೇಗೆ ಮಹಾಸಾಮರ್ಥ್ಯಶಾಲಿಯೂ, ಸರ್ವಭೂತೇಶ್ವರನೂ, ಪ್ರಭು- ವೂ, ಸರ್ವವ್ಯಾಪ್ತನೂ ಆದ ನಾರಾಯಣನನ್ನು ಸಮೀಪಿಸಿದರೆಂದು ನಿನಗೆ ಹೇಳಿ- ದ್ದೇನೆ.
ಏಕೈಕಮಾತ್ಮನಃ ಕರ್ಮ ತುಲಯಿತ್ವಾಶ್ರಮೇ ಪುರಾ |
ರಾಜಾನಃ ಪರ್ಯುಪಾತಿಷ್ಠನ್ ದೃಷ್ಟಾಂತವಚನೇ ಸ್ಥಿತಾಃ ॥8॥
ಒಬ್ಬೊಬ್ಬ ರಾಜರೂ ಹಿಂದೆ ತಮ್ಮ ಆಶ್ರಮಧರ್ಮಗಳನ್ನು ಉಳಿದ ಧರ್ಮಗಳ ಜೊತೆಗೆ ಹೋಲಿಸುತ್ತಾ ವಿಷ್ಣುವಿನ ವಚನವನ್ನು ನಿರೀಕ್ಷಿಸುತ್ತಾ, ಅವನ ಉಪಾಸನೆ- ಯನ್ನು ಮಾಡಿದರು.
ಸಾಧ್ಯಾ ದೇವಾ ವಸವಶ್ಚಾಶ್ವಿನೌ ಚ
ರುದ್ರಾಶ್ಚ ವಿಶ್ವೇ ಮರುತಾಂ ಗಣಾಶ್ಚ |
ಸೃಷ್ಟಾಃ ಪುರಾ ಆದಿದೇವೇನ ದೇವಾ
ಕ್ಷಾತ್ರೇ ಧರ್ಮೇ ವರ್ತಯಂತೇ ಚ ಸಿದ್ಧಾಃ ॥9॥
ಹಿಂದೆ ಆದಿದೇವನಾದ ನಾರಾಯಣನಿಂದ ಸೃಷ್ಟರಾದ ಸಾಧ್ಯರು, ವಸುಗಳು, ಅಶ್ವಿನಿಗಳು, ರುದ್ರರು, ವಿಶ್ವೇದೇವತೆಗಳು, ಮರುದ್ಗಣಗಳು ಮತ್ತು ಸಿದ್ಧರು ಮುಂತಾದ ದೇವತೆಗಳು ಕ್ಷತ್ರಿಯಧರ್ಮವನ್ನು ಅನುಸರಿಸಿ ಚಾಲನೆ ಮಾಡುತ್ತಾರೆ.
ಅತ್ರ ತೇ ವರ್ತಯಿಷ್ಯಾಮಿ ಧರ್ಮಮರ್ಥವಿನಿಶ್ಚಯಮ್ |
ನಿರ್ಮರ್ಯಾದೇ ವರ್ತಮಾನೇ ದಾನವೈಕಾಯನೇ ಕೃತೇ |
ಬಭೂವ ರಾಜಾ ರಾಜೇಂದ್ರ ಮಾಂಧಾತಾ ನಾಮ ವೀರ್ಯವಾನ್ ॥10॥
ಈ ವಿಷಯದಲ್ಲಿ ನಾನು ನಿನಗೆ ಧರ್ಮಾರ್ಥನಿಶ್ಚಾಯಕವಾದ ಒಂದು ಸಂವಾದ -ವನ್ನು ಹೇಳುವೆನು. ಎಲೈ ರಾಜೇಂದ್ರನೇ! ಲೋಕದಲ್ಲಿ ದಾನವರೇ ಹೆಚ್ಚಾಗಿ ಎಲ್ಲ ಧರ್ಮದ ಎಲ್ಲೆಗಳು ಮೀರಲ್ಪಟ್ಟಾಗ ಮಾಂಧಾತನೆಂಬ ಪರಾಕ್ರಮಶಾಲಿಯಾದ ರಾಜನು ಜನಿಸಿದನು.
ಪುರಾ ವಸುಮತೀಪಾಲೋ ಯಜ್ಞಂ ಚಕ್ರೇ ದಿದೃಕ್ಷಯಾ |
ಅನಾದಿಮಧ್ಯನಿಧನಂ ದೇವಂ ನಾರಾಯಣಂ ಪ್ರಭುಮ್ ॥11॥
ಹಿಂದೆ ಆಗ ಭೂಪಾಲನಾದ ಅವನು ಅನಾದಿಮಧ್ಯನಿಧನನೂ, ಪ್ರಭುವೂ, ದೇವನೂ ಆದ ನಾರಾಯಣನನ್ನು ನೋಡಲು ಬಯಸಿ ಯಜ್ಞವನ್ನು ಮಾಡಿದನು.
ಸ ರಾಜಾ ರಾಜಶಾರ್ದೂಲ ಮಾಂಧಾತಾ ಪರಮೇಷ್ಠಿನಃ |
ಜಗ್ರಾಹ ಶಿರಸಾ ಪಾದೌ ಯಜ್ಞೇ ವಿಷ್ಣೋರ್ಮಹಾತ್ಮನಃ ॥12॥
ಎಲೈ ರಾಜಶಾರ್ದೂಲನೇ! ಆ ಮಾಂಧಾತೃರಾಜನು ಯಜ್ಞದಲ್ಲಿ ಸರ್ವೋ- ತ್ತಮನಾದ ಮಹಾತ್ಮನಾದ ವಿಷ್ಣುವಿನ ಪಾದಗಳನ್ನು ಶಿರಸಾ ನಮಸ್ಕರಿಸಿ ಧ್ಯಾನಿಸಿ- ದನು.

ದರ್ಶಯಾಮಾಸ ತಂ ವಿಷ್ಣೂ ರೂಪಮಾಸ್ಥಾಯ ವಾಸವಮ್ |
ಸ ಪಾರ್ಥಿವೈರ್ವೃತಃ ಸದ್ಭಿರರ್ಚಯಾಮಾಸ ತಂ ಪ್ರಭುಮ್ ॥13॥
ವಿಷ್ಣುವು ಇಂದ್ರನ ರೂಪವನ್ನು ಧರಿಸಿ ಇಂದ್ರನ ಅಂತರ್ಯಾಮಿಯಾಗಿ ಅವನಿಗೆ ದರ್ಶನವನ್ನು ನೀಡಿದನು. ಮಾಂಧಾತೃವು ಉಳಿದ ರಾಜರುಗಳ ಜೊತೆ- ಯಲ್ಲಿ ಸೇರಿ ಆ ಪ್ರಭುವನ್ನು ಪೂಜಿಸಿದನು.
ತಸ್ಯ ಪಾರ್ಥಿವಸಂಘಸ್ಯ ತಸ್ಯ ಚೈವ ಮಹಾತ್ಮನಃ |
ಸಂವಾದೋಽಯಂ ಮಹಾನಾಸೀದ್ ವಿಷ್ಣುಂ ಪ್ರತಿ ಮಹಾದ್ಯುತೇ ॥14॥
ಎಲೈ ಮಹಾದ್ಯುತಿಯೇ! ಆ ರಾಜಸಂಘಕ್ಕೂ ಮತ್ತು ಮಹಾತ್ಮನಾದ ಇಂದ್ರ- ಅಂತರ್ಯಾಮಿಯಾದ ವಿಷ್ಣುವಿಗೂ ವಿಷ್ಣುವಿನ ಸ್ವರೂಪದ ವಿಷಯದಲ್ಲಿ ದೊಡ್ಡ ಸಂವಾದ ಉಂಟಾಯಿತು.
ಇಂದ್ರಃ
ಕಿಮಿಷ್ಯತೇ ಧರ್ಮಭೃತಾಂ ವರಿಷ್ಠ
ಯದ್ ದ್ರಷ್ಟುಕಾಮೋಽಸಿ ತಮಪ್ರಮೇಯಮ್ |
ಅನಂತಮಾಯಾಮಿತಸತ್ತ್ವವೀರ್ಯಂ
ನಾರಾಯಣಂ ಹ್ಯಾದಿದೇವಂ ಪುರಾಣಮ್ ॥15॥
ಇಂದ್ರ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ಅಪ್ರಮೇಯನೂ, ಅನಂತಸಾಮ- ರ್ಥ್ಯೋಪೇತನೂ, ಅಮಿತಬಲಪರಾಕ್ರಮವುಳ್ಳವನೂ, ಪುರಾತನನೂ ಆದಿ- ದೇವನೂ ಆದ ನಾರಾಯಣನನ್ನು ನೋಡಲು ಇಚ್ಛಿಸುತ್ತಿದ್ದೀಯೆ. ಅವನಿಂದ ಏನನ್ನು ಬಯಸುತ್ತೀಯೆ?
ನಾಸೌ ದೇವೋ ವಿಶ್ವರೂಪೋ ಮಯಾಪಿ
ಶಕ್ಯೋ ದ್ರಷ್ಟುಂ ಬ್ರಹ್ಮಣಾ ವಾಪಿ ಸಾಕ್ಷಾತ್ |
ಯೇಽನ್ಯೇ ಕಾಮಾಸ್ತವ ರಾಜನ್ ಹೃದಿಸ್ಥಾ
ದಾಸ್ಯಾಮಿ ತಾಂಸ್ತ್ವಂ ಹಿ ಮರ್ತ್ಯೇಷು ರಾಜಾ ॥16॥
ವಿಶ್ವರೂಪನಾದ ಆ ದೇವನನ್ನು ನಾನಾಗಲೀ, ಸಾಕ್ಷಾತ್ ಬ್ರಹ್ಮದೇವರೇ ಆಗಲಿ ನೋಡಲಾರೆವು. ಎಲೈ ರಾಜನೇ! ನಿನ್ನ ಮನಸ್ಸಿನಲ್ಲಿರುವ ಕಾಮನೆಗಳನ್ನು ನಾನು ನಿನಗೆ ಕೊಡುವೆನು. ಏಕೆಂದರೆ, ನೀನು ಮನುಷ್ಯರಲ್ಲಿ ರಾಜನಾಗಿದ್ದೀಯೆ.
ಸತ್ಯೇ ಸ್ಥಿತೋ ಧರ್ಮಪರೋ ಜಿತೇಂದ್ರಿಯಃ
ಶೂರೋ ದೃಢಂ ಪ್ರೀತಿರತಃ ಸುರಾಣಾಮ್ |
ಬುದ್ಧ್ಯಾ ಭಕ್ತ್ಯಾ ಚೋತ್ತಮಶ್ರದ್ಧಯಾ ಚ
ತತಸ್ತೇಽಹಂ ದದ್ಮಿ ವರಂ ಯಥೇಷ್ಟಮ್ ॥17॥
ನೀನು ಸತ್ಯದಲ್ಲಿ ರತನಾಗಿ, ಧರ್ಮಪರನಾಗಿ, ಜಿತೇಂದ್ರಿಯನಾಗಿ, ಶೂರನಾ- ಗಿದ್ದೀಯೆ. ಅವುಗಳಿಂದಲೂ ನಿನ್ನ ಬುದ್ಧಿ, ಭಕ್ತಿ ಮತ್ತು ಉತ್ತಮಶ್ರದ್ಧೆಯಿಂದಲೂ ದೇವತೆಗಳಿಗೆ ನಿನ್ನ ಮೇಲೆ ದೃಢವಾದ ಪ್ರೀತಿಯಿದೆ. ಆದ್ದರಿಂದ ನಾನು ನಿನಗೆ ಅಭೀಷ್ಟವಾದ ವರವನ್ನು ಕೊಡುತ್ತೇನೆ.
ಮಾಂಧಾತಾ
ಅಸಂಶಯಂ ಭಗವನ್ನಾದಿದೇವಂ
ದ್ರಕ್ಷ್ಯಾಮ್ಯಹಂ ಶಿರಸಾಽಹಂ ಪ್ರಪದ್ಯೇ |
ತ್ಯಕ್ತ್ವಾ ಭೋಗಾನ್ ಧರ್ಮಕಾಮೋ ಹ್ಯರಣ್ಯಮ್
ಇಚ್ಛೇ ಗಂತುಂ ಸತ್ಪಥಂ ಲೋಕಜುಷ್ಟಮ್ ॥18॥
ಮಾಂಧಾತಾ ಪೂಜ್ಯನೇ! ನಾನು ನಿಸ್ಸಂಶಯವಾಗಿ ಆದಿದೇವನಾದ ನಾರಾ- ಯಣನನ್ನು ನೋಡಲು ಬಯಸುತ್ತೇನೆ. ನಾನು ಅವನಿಗೆ ಶಿರಸಾ ಶರಣಾ- ಗತನಾಗುತ್ತೇನೆ. ನಾನು ಎಲ್ಲ ಭೋಗಗಳನ್ನೂ ತೊರೆದು ಧರ್ಮದ ಉದ್ದೇಶ- ವುಳ್ಳವನಾಗಿ ಲೋಕದಲ್ಲಿ ಸಜ್ಜನರು ಅನುಸರಿಸುವ ಅರಣ್ಯವಾಸವನ್ನು ಮಾಡಲು ಬಯಸುತ್ತೇನೆ.
ಕ್ಷಾತ್ರಾದ್ ಧರ್ಮಾದ್ ವಿಪುಲಾದಪ್ರಮೇಯಾ-
ಲ್ಲೋಕಾಃ ಪ್ರಾಪ್ತಾಃ ಸ್ಥಾಪಿತಂ ಸ್ವಂ ಯಶಶ್ಚ |
ಧರ್ಮೋ ಯೋಽಸಾವಾದಿದೇವಾತ್ ಪ್ರವೃತ್ತೋ
ಲೋಕಜ್ಯೇಷ್ಠಸ್ತಂ ನ ಜಾನಾಮಿ ಕರ್ತುಮ್ ॥19॥
ಅಪ್ರಮೇಯವಾದ ವಿಪುಲವಾದ ಕ್ಷತ್ರಿಯಧರ್ಮದಿಂದ ನನಗೆ ಲೋಕಗಳು ಪ್ರಾಪ್ತವಾಗಿವೆ. ನನ್ನ ಕೀರ್ತಿಯನ್ನು ಸ್ಥಾಪಿಸಿದ್ದೇನೆ. ಆದರೆ ಆದಿದೇವನಾದ ನಾರಾಯಣನಿಂದ ಪ್ರವೃತ್ತವಾದ ಸರ್ವಶ್ರೇಷ್ಠವಾದ ಧರ್ಮವನ್ನು ಆಚರಿಸಲು ನಾನು ತಿಳಿದಿಲ್ಲ.
ಇಂದ್ರಃ
ಅಸೈನಿಕಾ ಧರ್ಮಪರಾಶ್ಚ ಧರ್ಮೇ
ಪರಾಂ ಗತಿಂ ನ ನಯಂತೇಽಮುತ್ರ |
ಕ್ಷಾತ್ರೋ ಧರ್ಮೋ ಹ್ಯಾದಿದೇವಾತ್ ಪ್ರವೃತ್ತಃ
ಪಶ್ಚಾದನ್ಯೇ ಶೇಷಭೂತಾಶ್ಚ ಧರ್ಮಾಃ ॥20॥
ಇಂದ್ರ ಧರ್ಮಪರರಾದ ರಾಜರು ಸೇನೆ ಮೊದಲಾದ ರಾಜ್ಯವನ್ನು ಬಿಟ್ಟು ಅರಣ್ಯಕ್ಕೆ ಹೋಗಿ ಧರ್ಮಾನುಷ್ಠಾನಮಾಡಿದರೂ ಅವರಿಗೆ ಪರಲೋಕದಲ್ಲಿ ಶ್ರೇಷ್ಠವಾದ ಗತಿಯಾಗುವುದಿಲ್ಲ. ಕ್ಷತ್ರಿಯಧರ್ಮವು ಆದಿದೇವನಾದ ನಾರಾಯಣ- ನಿಂದ ಪ್ರವೃತ್ತವಾದುದು. ಉಳಿದ ಧರ್ಮಗಳು ಅನಂತರ ರಾಜಧರ್ಮಕ್ಕೆ ಅಂಗವಾಗಿ ಪ್ರವೃತ್ತವಾದವು.

ಶೇಷಾಃ ಸೃಷ್ಟಾ ಹ್ಯಂತವಂತೋ ಹ್ಯನಂತಾಃ
ಸುಪ್ರಸ್ಥಾನಾಃ ಕ್ಷತ್ರಧರ್ಮಾ ವಿಶಿಷ್ಟಾಃ |
ಅಸ್ಮಿನ್ ಧರ್ಮೇ ಸರ್ವಧರ್ಮಾಃ ಪ್ರವಿಷ್ಟಾಃ
ತಸ್ಮಾದ್ ಧರ್ಮಂ ಶ್ರೇಷ್ಠಮಿಮಂ ವದಂತಿ ॥21॥
ಉಳಿದ ಧರ್ಮಗಳ ಫಲವು ಅಂತವುಳ್ಳದ್ದು. ಕ್ಷತ್ರಿಯಧರ್ಮವು ಅನೇಕ ಅಂಗಭೂತವಾದ ಧರ್ಮಗಳ ವಿಸ್ತಾರಕ್ಕೆ ಕಾರಣವಾಗಿದೆ. ಕ್ಷತ್ರಿಯ ಧರ್ಮದಲ್ಲಿ ಎಲ್ಲಾ ಧರ್ಮಗಳೂ ಅಂತರ್ಭೂತವಾಗಿವೆ. ಆದ್ದರಿಂದ ಅದನ್ನು ಶ್ರೇಷ್ಠವೆಂದು ಹೇಳುತ್ತಾರೆ.
ಕರ್ಮಣಾ ವೈ ಪುರಾ ದೇವಾ ಋಷಯಶ್ಚಾಮಿತೌಜಸಃ |
ತ್ರಾತಾಃ ಸರ್ವೇ ಪ್ರಸಾದ್ಯಾರೀನ್ ಕ್ಷತ್ರಧರ್ಮೇಣ ವಿಷ್ಣುನಾ ॥22॥
ಕ್ಷತ್ರಧರ್ಮವನ್ನು ಅನುಸರಿಸಿದ ವಿಷ್ಣುವು ಹಿಂದೆ ತನ್ನ ಕ್ರಿಯೆಯಿಂದ ಶತ್ರುಗಳನ್ನು ಸಂಹರಿಸಿ ಎಲ್ಲಾ ಋಷಿಗಳನ್ನೂ ಮತ್ತು ಅಮಿತಪರಾಕ್ರಮಿಗಳಾದ ದೇವತೆಗಳನ್ನೂ ರಕ್ಷಿಸಿದನು.
ಯದಿ ಹ್ಯಸೌ ಭಗವಾನ್ನಾಹನಿಷ್ಯದ್
ರಿಪೂನ್ ಸರ್ವಾನ್ ವಸುಮಾನಪ್ರಮೇಯಃ |
ನ ಚ ಬ್ರಹ್ಮಾ ನ ಚ ಲೋಕಾಧಿಕರ್ತಾ
ನ ಸದ್ಧರ್ಮಾ ನಾದಿಧರ್ಮಾ ಭವೇಯುಃ ॥23॥
ಶ್ರೀಮಂತನೂ, ಅಪ್ರಮೇಯನೂ ಆದ ಈ ಭಗವಂತನು ಎಲ್ಲಾ ಶತ್ರುಗಳನ್ನೂ ಸಂಹರಿಸದಿದ್ದರೆ ಲೋಕಾಧಿಪತಿಯಾದ ಬ್ರಹ್ಮನಾಗಲೀ ಸದ್ಧರ್ಮಗಳಾಗಲೀ ಅನಾದಿ ಧರ್ಮಗಳಾಗಲೀ ಉಳಿಯುತ್ತಿರಲಿಲ್ಲ.
ಇಮಾಮುರ್ವೀಂ ನ ಜಯೇದ್ ವಿಕ್ರಮೇಣ
ದೇವಶ್ರೇಷ್ಠೋಽಸೌ ಪುರಾ ಚೇದಮೇಯಃ |
ಚಾತುರ್ವರ್ಣ್ಯಂ ಚಾತುರಾಶ್ರಮ್ಯಧರ್ಮಾಃ
ಸರ್ವೇ ನ ಸ್ಯುರ್ಬ್ರಹ್ಮಣೋ ವೈ ವಿನಾಶಾತ್ ॥24॥
ದೇವಶ್ರೇಷ್ಠನೂ, ಅಪ್ರಮೇಯನೂ ಆದ ಇವನು ತನ್ನ ಪರಾಕ್ರಮದಿಂದ ಈ ಭೂಮಿಯನ್ನು ಜಯಿಸದಿದ್ದರೆ ವೇದಗಳು ನಾಶವನ್ನು ಹೊಂದಿ ಎಲ್ಲಾ ಚಾತುರ್ವರ್- ಣ್ಯಧರ್ಮಗಳೂ, ಚಾತುರಾಶ್ರಮ್ಯಧರ್ಮಗಳೂ ವಿನಾಶವನ್ನು ಹೊಂದುತ್ತಿದ್ದವು.
ದೃಷ್ಟಾ ಧರ್ಮಾಃ ಶತಧಾ ಶಾಶ್ವತೇನ
ಕ್ಷಾತ್ರೇಣ ಧರ್ಮೇಣ ಪುನಃ ಪ್ರವೃತ್ತಾಃ |
ಯುಗೇ ಯುಗೇ ಹ್ಯಾದಿದೇವಾತ್ ಪ್ರವೃತ್ತಾಃ
ಲೋಕಜ್ಯೇಷ್ಠಂ ಕ್ಷತ್ರಧರ್ಮಂ ವದಂತಿ ॥25॥
ಶಾಶ್ವತನಾದ ಇವನು ಆಲೋಚಿಸಿದ ನೂರಾರು ಧರ್ಮಗಳನ್ನು ಇವನು ಕ್ಷಾತ್ರಧರ್ಮವನ್ನು ಅವಲಂಬಿಸಿ ಪುನಃ ಪ್ರವರ್ತಿಸಿದನು. ಪ್ರತಿಯೊಂದು ಯುಗದ- ಲ್ಲಿಯೂ ಆದಿದೇವನಿಂದ ಲೋಕಜ್ಯೇಷ್ಠವಾದ ಕ್ಷತ್ರಿಯ ಧರ್ಮವು ಪ್ರವೃತ್ತವಾಗು- ತ್ತದೆ ಎಂದು ಹೇಳುತ್ತಾರೆ.
ಆತ್ಮತ್ಯಾಗಃ ಸರ್ವಭೂತಾನುಕಂಪಾ
ಲೋಕಜ್ಞಾನಂ ಮೋಕ್ಷಣಂ ಪಾಲನಂ ಚ |
ವಿಷಣ್ಣಾನಾಂ ಮೋಕ್ಷಣಂ ಪೀಡಿತಾನಾಂ
ಕ್ಷಾತ್ರೇ ಧರ್ಮೇ ವಿದ್ಯತೇ ಪಾರ್ಥಿವಾನಾಮ್ ॥26॥
ದೇಹತ್ಯಾಗ, ಸರ್ವಭೂತಗಳಲ್ಲಿ ದಯೆ, ಲೋಕಜ್ಞಾನ, ಕಷ್ಟಗಳಿಂದ ಬಿಡಿಸು- ವುದು, ರಕ್ಷಣೆಯನ್ನು ಮಾಡುವುದು, ವಿಷಾದದಿಂದ ಪೀಡಿತರಾದವರಿಗೆ ವಿಷಾದ- ವನ್ನು ಪರಿಹಾರ ಮಾಡುವುದು. ಇವೆಲ್ಲವೂ ರಾಜರಿಗೆ ಇರುವ ಕ್ಷತ್ರಿಯಧರ್ಮದಲ್ಲಿ ಇವೆ.
ನಿರ್ಮರ್ಯಾದಾಃ ಕಾಮಮನ್ಯುಪ್ರವೃತ್ತಾ
ಭೀತಾ ರಾಜ್ಞೋ ನಾಧಿಗಚ್ಛಂತಿ ಪಾಪಮ್ |
ಶಿಷ್ಟಶ್ಚಾನ್ಯೇ ಸರ್ವಧರ್ಮೋಪಪನ್ನಾಃ
ಸಾಧ್ವಾಚಾರಾಃ ಸಾಧು ಧರ್ಮಂ ಚರಂತಿ ॥27॥
ಮರ್ಯಾದೆಯನ್ನು ಮೀರಿ, ಕಾಮಕ್ರೋಧಗಳಿಗೆ ವಶರಾಗಿ, ದುಷ್ಕಾರ್ಯ- ಗಳನ್ನು ಮಾಡುವವರೂ ಸಹ ರಾಜನಿಗೆ ಹೆದರಿ ದುಷ್ಕರ್ಮಗಳನ್ನು ಮಾಡುವುದನ್ನು ನಿಲ್ಲಿಸುತ್ತಾರೆ. ಉಳಿದ ಶಿಷ್ಟರಂತೂ ಎಲ್ಲ ಧರ್ಮಗಳಿಂದ ಕೂಡಿದವರಾಗಿ ಒಳ್ಳೆಯ ಆಚಾರವಂತರಾಗಿ ಒಳ್ಳೆಯ ಧರ್ಮವನ್ನೇ ಆಚರಿಸುತ್ತಾರೆ.
ಪುತ್ರವತ್ ಪರಿಪಾಲ್ಯಾನಿ ಲಿಂಗಧರ್ಮೇಣ ಪಾರ್ಥಿವೈಃ |
ಲೋಕೇ ಭೂತಾನಿ ಸರ್ವಾಣಿ ವಿಚರಂತಿ ನ ಸಂಶಯಃ ॥28॥
ರಾಜರು ತಮ್ಮ ಕ್ಷತ್ರಿಯಧರ್ಮದಿಂದ ಎಲ್ಲರನ್ನೂ ಪುತ್ರರಂತೆ ಪರಿಪಾಲಿಸ- ಬೇಕು. ಹಾಗೆ ಮಾಡಿದರೆ ಲೋಕದಲ್ಲಿ ಎಲ್ಲರೂ ನಿರ್ಭಯವಾಗಿ ಸಂಚರಿಸುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ.
ಸರ್ವಧರ್ಮಪರಂ ಕ್ಷತ್ರಂ ಲೋಕಜ್ಯೇಷ್ಠಂ ಸನಾತನಮ್ |
ಶಶ್ವದಕ್ಷರಪರ್ಯಂತಮಕ್ಷರಂ ಸರ್ವತೋಮುಖಮ್ ॥29॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಧರ್ಮಣಿ ರಾಜಧರ್ಮೇ ಪಂಚಷಷ್ಟಿತಮೋಽಧ್ಯಾಯಃ ॥65॥
ಕ್ಷತ್ರಿಯಧರ್ಮವು ಲೋಕದಲ್ಲಿ ಶ್ರೇಷ್ಠವಾದುದು. ಸನಾತನವಾದುದು ಮತ್ತು ಸರ್ವಧರ್ಮಕ್ಕಿಂತಲೂ ಉತ್ತಮವಾದುದು.

ಶಾಶ್ವತವಾದುದು. ಅದು ಸರ್ವತೋ- ಮುಖವಾಗಿ ಅಂತ್ಯದಲ್ಲಿ ಅಕ್ಷರನಾದ ಪರಮಾತ್ಮನ ಪ್ರಾಪ್ತಿಯವರೆಗೂ ಕರೆದು- ಕೊಂಡು ಹೋಗುವಂತಹದು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 65ನೆಯ ಅಧ್ಯಾಯವು ಮುಗಿಯಿತು
0

66. ಅರವತ್ತಾರನೆಯ ಅಧ್ಯಾಯ
ಇಂದ್ರಮಾಂಧಾತೃಸಂವಾದಾನುವಾದ
ಇಂದ್ರಃ
ಏವಂವೀರ್ಯಃ ಸರ್ವಧರ್ಮೋಪಪನ್ನಃ
ಕ್ಷಾತ್ರಃ ಶ್ರೇಷ್ಠಃ ಸರ್ವಧರ್ಮೇಷು ಧರ್ಮಃ |
ಉತ್ಕೃಷ್ಟವ್ಯಾಃ ಕ್ಷತ್ರಿಯೈರೇಷ ಧರ್ಮಃ
ವಿಪರ್ಯಯೇ ಸ್ಯಾದಭಾವಃ ಪ್ರಜಾನಾಮ್ ॥1॥
ಇಂದ್ರ ಇಂತಹ ಸಾಮರ್ಥ್ಯವನ್ನು ಹೊಂದಿ ಸರ್ವಧರ್ಮಗಳಿಂದ ಕೂಡಿ- ರುವ ಕ್ಷತ್ರಿಯಧರ್ಮವು ಎಲ್ಲ ಧರ್ಮಗಳಲ್ಲಿಯೂ ಶ್ರೇಷ್ಠವಾದುದು. ಕ್ಷತ್ರಿಯರು ಈ ಧರ್ಮಗಳನ್ನು ಉತ್ಕರ್ಷಸ್ಥಿತಿಗೆ ಏರಿಸಬೇಕು. ಇಲ್ಲದಿದ್ದರೆ ಪ್ರಜೆಗಳ ನಾಶವುಂಟಾ- ದೀತು.
ಭುವಃ ಸಂಸ್ಕಾರಂ ರಾಜಸಂಸ್ಕಾರಯೋಗಮ್
ಅಭೈಕ್ಷಚರ್ಯಾ ಪಾಲನಂ ಚ ಪ್ರಜಾನಾಮ್ |
ವಿದ್ಯಾದ್ ರಾಜಾ ಸರ್ವಭೂತಾನುಕಂಪಾ
ದೇಹತ್ಯಾಗಂ ಚಾಹವೇ ಧರ್ಮಮಗ್ರ್ಯಮ್ ॥2॥
ಭೂಮಿಯ ಫಲವತ್ತತೆಯನ್ನು ಕಾಪಾಡುವುದು, ಕ್ಷತ್ರಿಯನಿಗೆ ಯೋಗ್ಯವಾದ ಸಂಸ್ಕಾರಗಳನ್ನು ಮಾಡುವುದು, ಭಿಕ್ಷೆಯನ್ನು ಬೇಡದಿರುವುದು, ಪ್ರಜಾಪಾಲನೆಯನ್ನು ಮಾಡುವುದು, ಸರ್ವಭೂತದಯೆ ಇವು ಕ್ಷತ್ರಿಯರ ಧರ್ಮಗಳು. ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವುದು ಕ್ಷತ್ರಿಯನಿಗೆ ಅತ್ಯಂತ ಶ್ರೇಷ್ಠವಾದ ಧರ್ಮವೆಂದು ತಿಳಿಯಬೇಕು.
ತ್ಯಾಗಂ ಶ್ರೇಷ್ಠಂ ಮುನಯೋ ವೈ ವದಂತಿ
ಸರ್ವಶ್ರೇಷ್ಠೋ ಯಃ ಶರೀರಂ ತ್ಯಜೇತ |
ನಿತ್ಯಂ ತ್ಯಕ್ತಂ ರಾಜಧರ್ಮೇಷು ಸರ್ವಂ
ಪ್ರತ್ಯಕ್ಷಂ ತೇ ಭೂಮಿಪಾಲಾಃ ಸದೈತೇ ॥3॥
ತ್ಯಾಗವು ಶ್ರೇಷ್ಠವಾದುದೆಂದು ಋಷಿಗಳು ಹೇಳುತ್ತಾರೆ. ಅದರಲ್ಲಿಯೂ (ಧರ್ಮಯುದ್ಧದಲ್ಲಿ) ಶರೀರತ್ಯಾಗವು ಅತ್ಯಂತಶ್ರೇಷ್ಠವಾದುದು. ರಾಜಧರ್ಮ- ಗಳಲ್ಲಿ ಪ್ರವೃತ್ತರಾದವರು ನಿತ್ಯವೂ ಎಲ್ಲವನ್ನೂ ತ್ಯಜಿಸಿರುತ್ತಾರೆ. ಅಂತಹ ಈ ರಾಜರು ನಿನ್ನ ಕಣ್ಣೆದುರಿಗೇ ಇದ್ದಾರೆ.
ಬಹುಶ್ರುತ್ಯಾ ಗುರುಶುಶ್ರೂಷಯಾ ವಾ
ಪರಸ್ಯ ವಾ ಸಂಹನನಾದ್ ವದಂತಿ |
ನಿತ್ಯಂ ಧರ್ಮಂ ಕ್ಷತ್ರಿಯೋ ಬ್ರಹ್ಮಚಾರೀ
ಚರೇದೇಕೋ ಹ್ಯಾಶ್ರಮಂ ಧರ್ಮಕಾಮಃ ॥4॥
ಬಹಳವಾಗಿ ಶ್ರವಣ ಮಾಡುವುದರಿಂದ, ಗುರುಶುಶ್ರೂಷೆಯಿಂದ ಮತ್ತು ಸಹಾಧ್ಯಾಯಿಗಳ ಜೊತೆಯಲ್ಲಿ ಚರ್ಚಿಸುವುದರಿಂದ ಧರ್ಮದ ಜ್ಞಾನವುಂಟಾ- ಗುತ್ತದೆ ಎಂದು ಹೇಳುತ್ತಾರೆ. ಧರ್ಮಕಾಮನೆಯುಳ್ಳ ಕ್ಷತ್ರಿಯ ಬ್ರಹ್ಮಚಾರಿಯು ಏಕಾಕಿಯಾಗಿ ತನ್ನ ಆಶ್ರಮಧರ್ಮಗಳನ್ನು ಅನುಷ್ಠಾನ ಮಾಡಬೇಕು.
ಸಾಮಾನ್ಯಾರ್ಥೇ ವ್ಯವಹಾರೇ ಪ್ರವೃತ್ತೇ
ಪ್ರಿಯಾಪ್ರಿಯೇ ವರ್ಜಯನ್ನೇವ ಯತ್ನಾತ್ |
ಚಾತುರ್ವರ್ಣ್ಯಸ್ಥಾಪನಾತ್ ಪಾಲನಾಚ್ಚ
ತೈಸ್ತೈರ್ಯೋಗೈರ್ನಿಯಮೈರೌರಸೈಶ್ಚ ॥5॥
ರಾಜ್ಯದ ಪ್ರಜೆಗಳ ಸಾಮಾನ್ಯ ವ್ಯವಹಾರಗಳಲ್ಲಿ ಪ್ರಿಯಾಪ್ರಿಯಗಳನ್ನು ಪ್ರಯತ್ನ -ಪೂರ್ವಕವಾಗಿ ವರ್ಜಿಸಿ (ಪಕ್ಷಪಾತವನ್ನು ಮಾಡದೇ), ಆಯಾ ಸ್ವಾಭಾವಿಕ ನಿಯಮಗಳಿಂದ ಉಪಾಯಗಳಿಂದ ಮತ್ತು ತನ್ನ ಸಾಮರ್ಥ್ಯದಿಂದ ಚಾತುರ್ವರ್ಣ್ಯ -ಧರ್ಮವನ್ನು ಸ್ಥಾಪನೆ ಮಾಡಿ ರಕ್ಷಣೆ ಮಾಡುವುದರಿಂದ (ಕ್ಷತ್ರಿಯಧರ್ಮವು ಶ್ರೇಷ್ಠವಾಗುತ್ತದೆ).
ಸರ್ವೋದ್ಯೋಗೈರಾಶ್ರಮಂ ಧರ್ಮಮಾಹುಃ
ಕ್ಷಾತ್ರಂ ಜ್ಯೇಷ್ಠಂ ಸರ್ವಧರ್ಮೋಪಪನ್ನಮ್ |
ಸ್ವಂ ಸ್ವಂ ಧರ್ಮಂ ಯೇ ನ ಚರಂತಿ ವರ್ಣಾಃ
ತಾಂಸ್ತಾನ್ ಧರ್ಮಾನಯಥಾವದ್ ವದಂತಿ ॥6॥
ಸರ್ವಪ್ರಯತ್ನದಿಂದಲೂ ಆಯಾ ಆಶ್ರಮಧರ್ಮಗಳನ್ನು ಪಾಲಿಸುವುದು ಧರ್ಮವೆಂದು ಹೇಳುತ್ತಾರೆ. ಸರ್ವಧರ್ಮಗಳಿಂದ ಕೂಡಿದ ಕ್ಷತ್ರಿಯಧರ್ಮವು ಅದರಲ್ಲಿ ಶ್ರೇಷ್ಠವಾದುದು. ಯಾವ ವರ್ಣದವರು ತಮ್ಮ ತಮ್ಮ ಧರ್ಮಗಳನ್ನು ಆಚರಿಸುವುದಿಲ್ಲವೋ ಅಂತಹವರಿಗೆ ಆಚರಿಸದ ಧರ್ಮಗಳು ವಿಪರೀತಫಲವನ್ನು ಕೊಡುತ್ತವೆ.
ನಿರ್ಮರ್ಯಾದೇ ನಿತ್ಯಮರ್ಥೇ ನಿವಿಷ್ಟಾನ್
ಆಹುಸ್ತಾನ್ ವೈ ಪಶುಭೂತಾನ್ ಮನುಷ್ಯಾನ್ |

ಯಥಾ ನೀತಿಂ ಗಮಯತ್ಯರ್ಥಯೋಗಾತ್
ಶ್ರೇಯಾಂಸ್ತಸ್ಮಾದಾಶ್ರಮಾತ್ ಕ್ಷತ್ರಧರ್ಮಃ ॥7॥
ಎಲ್ಲ ಮರ್ಯಾದೆಯನ್ನೂ ಮೀರಿ, ನಿತ್ಯವೂ ಧನಾರ್ಜನೆಯಲ್ಲಿಯೇ ನಿರತರಾದ ಮನುಷ್ಯರನ್ನು ಪಶುಗಳೆಂದು ಹೇಳುತ್ತಾರೆ. ಕ್ಷತ್ರಿಯಧರ್ಮವನ್ನು ಸರಿಯಾಗಿ ಪಾಲಿಸಿದರೆ ಅಂತಹವರನ್ನು ಧನಾದಿದಾನದಿಂದ ಸನ್ಮಾರ್ಗಕ್ಕೆ ತರುವು- ದರಿಂದ ಉಳಿದ ಎಲ್ಲಾ ಆಶ್ರಮಧರ್ಮಗಳಿಗಿಂತ ಕ್ಷತ್ರಿಯಧರ್ಮವು ಶ್ರೇಷ್ಠವಾ- ದುದು.
ತ್ರೈವಿದ್ಯಾನಾಂ ಯಾ ಗತಿರ್ಬ್ರಾಹ್ಮಣಾನಾಂ
ಯಥೈವೋಕ್ತೋಽಥಾಶ್ರಮೋ ಬ್ರಾಹ್ಮಣಾನಾಮ್ ।
ಏತತ್ ಕರ್ಮ ಬ್ರಾಹ್ಮಣಸ್ಯಾಹುರಗ್ರ್ಯಮ್
ಅನ್ಯತ್ ಕುರ್ವನ್ ಶೂದ್ರವಚ್ಛಸ್ತ್ರವಧ್ಯಃ ॥8॥
ಮೂರು ವೇದಗಳನ್ನು ಅಧ್ಯಯನ ಮಾಡಿದ ಬ್ರಾಹ್ಮಣರಿಗೆ ಯಾವ ಯಜ್ಞಾದಿ ಆಚಾರವಿದೆಯೋ ಮತ್ತು ಬ್ರಾಹ್ಮಣರಿಗೆ ವೇದಗಳಲ್ಲಿ ಹೇಳಿದ ಯಾವ ಆಶ್ರಮ- ಧರ್ಮಗಳಿವೆಯೋ ಅವೇ ಬ್ರಾಹ್ಮಣರ ಶ್ರೇಷ್ಠವಾದ ಕರ್ತವ್ಯ ಕರ್ಮವು. ಬ್ರಾಹ್ಮಣನು ಅವುಗಳನ್ನು ಬಿಟ್ಟು ಬೇರೆ ಕರ್ಮವನ್ನು ಮಾಡಿದರೆ ಅವನು ಶೂದ್ರ- ನಂತೆ ಶಸ್ತ್ರದಿಂದ ವಧೆಗೆ ಅರ್ಹನಾಗುತ್ತಾನೆ.
ಚಾತುರಾಶ್ರಮ್ಯಧರ್ಮಾಶ್ಚ ವೇದಧರ್ಮಾಶ್ಚ ಪಾರ್ಥಿವ ।
ಬ್ರಾಹ್ಮಣೇನಾನುಗಂತವ್ಯಾ ನಾನ್ಯೋ ವಿದ್ಯಾತ್ ಕಥಂಚನ ॥9॥
ಎಲೈ ರಾಜನೇ! ಚತುರಾಶ್ರಮಧರ್ಮಗಳನ್ನು ಮತ್ತು ವೇದಧರ್ಮಗಳನ್ನು ಬ್ರಾಹ್ಮಣನು ತಿಳಿದು ಅನುಸರಿಸಬೇಕು. ಬ್ರಾಹ್ಮಣನನ್ನು ಬಿಟ್ಟು ಅವುಗಳನ್ನು ಇನ್ನೊಬ್ಬನು ತಿಳಿಯಲಾರನು.
ಅನ್ಯಥಾ ವರ್ತಮಾನಸ್ಯ ನ ಸಾ ವೃತ್ತಿಃ ಪ್ರಕಲ್ಪ್ಯತೇ ।
ಕರ್ಮಣಾ ವ್ಯಜ್ಯತೇ ಧರ್ಮೋ ಯಥಾ ಧರ್ಮಸ್ತಥೈವ ಸಃ ॥10॥
ಶಾಸ್ತ್ರೋಕ್ತಮಾರ್ಗಕ್ಕಿಂತ ಭಿನ್ನರೀತಿಯಲ್ಲಿ ನಡೆದುಕೊಳ್ಳುವ ಮನುಷ್ಯನಿಗೆ ಅವನ ವೃತ್ತಿಯು ಇರುವುದಿಲ್ಲ. ಅವನು ಮಾಡುವ ಕರ್ಮದಿಂದ ಅವನ ಧರ್ಮವು ತಿಳಿದು ಬರುತ್ತದೆ. ಮನುಷ್ಯನ ಧರ್ಮವು ಹೇಗೆ ಇರುತ್ತದೆಯೋ ಅವನ ಸ್ವಭಾವವೂ ಅಂತಹುದೇ ಆಗಿರುತ್ತದೆ.
ಯೋ ವಿಕರ್ಮಸ್ಥಿತೋ ವಿಪ್ರೋ ನ ಸ ಸನ್ಮಾನಮರ್ಹತಿ ।
ಕರ್ಮಸ್ವನುಪಯುಂಜಾನಮವಿಶ್ವಾಸ್ಯಂ ಹಿ ತಂ ವಿದುಃ ॥11॥
ವಿಕರ್ಮನಿರತನಾದ ಬ್ರಾಹ್ಮಣನು ಸನ್ಮಾನಕ್ಕೆ ಯೋಗ್ಯನಾಗುವುದಿಲ್ಲ. ತನ್ನ ಕರ್ಮಗಳನ್ನು ಮಾಡದಿರುವ ಬ್ರಾಹ್ಮಣನು ವಿಶ್ವಾಸಕ್ಕೂ ಪಾತ್ರನಾಗುವುದಿಲ್ಲ ಎಂದು ಹೇಳುತ್ತಾರೆ.
ಏತೇ ಧರ್ಮಾಃ ಸರ್ವವರ್ಣಾಶ್ಚ ವೀರೈ-
ರುತ್ಕೃಷ್ಟವ್ಯಾಃ ಕ್ಷತ್ರಿಯೈರೇಷ ಧರ್ಮಃ ।
ತಸ್ಮಾಜ್ಜ್ಯೇಷ್ಠಾ ರಾಜಧರ್ಮಾ ನ ಚಾನ್ಯೇ
ವೀರ್ಯಜ್ಯೇಷ್ಠಾ ವೀರಧರ್ಮಾ ಮತಾ ಮೇ ॥12॥
ಈ ಧರ್ಮಗಳು ಮತ್ತು ಸರ್ವವರ್ಣಗಳೂ ವೀರರಾದ ಕ್ಷತ್ರಿಯರಿಂದಲೇ ಉನ್ನತಸ್ಥಿತಿಗೆ ತರಲ್ಪಡಬೇಕು. ಇದು ಕ್ಷತ್ರಿಯರ ಧರ್ಮ. ಆದ್ದರಿಂದ ರಾಜಧರ್ಮವೇ ಶ್ರೇಷ್ಠವಾದುದು. ಉಳಿದ ಧರ್ಮಗಳಲ್ಲ. ಪರಾಕ್ರಮದಿಂದ ಅನುಷ್ಠಾನಗೊಳಿಸ - ಬೇಕಾದ ಧರ್ಮವು ಶ್ರೇಷ್ಠವಾದ ಧರ್ಮವೆಂದು ನನ್ನ ಅಭಿಪ್ರಾಯ.
ಮಾಂಧಾತಾ
ಯವನಾಃ ಕಿರಾತಾಃ ಗಾಂಧಾರಾಶ್ಚೀನಾಃ ಶಬರಬರ್ಬರಾಃ ।
ಶಕಾಸ್ತುಷಾರಾಃ ಕಹ್ವಾಶ್ಚ ಪಹ್ಲವಾಶ್ಚಾಂಧ್ರಮದ್ರಕಾಃ ॥13॥
ಓಢ್ರಾಃ ಪುಲಿಂದಾ ರಮಠಾಃ ಕಾಚಾ ಮ್ಲೇಚ್ಛಾಶ್ಚ ಸರ್ವಶಃ ।
ಬ್ರಹ್ಮಕ್ಷತ್ರಪ್ರಸೂತಾಶ್ಚ ವೈಶ್ಯಾಃ ಶೂದ್ರಾಶ್ಚ ಮಾನವಾಃ ॥14॥
ಕಥಂ ಧರ್ಮಂ ಚರೇಯುಸ್ತೇ ಸರ್ವೇ ವಿಷಯವಾಸಿನಃ ।
ಮದ್ವಿಧೈಶ್ಚ ಕಥಂ ಸ್ಥಾಪ್ಯಾಃ ಸರ್ವೇ ತೇ ದಸ್ಯುಜೀವಿನಃ ॥15॥
ಯವನರು, ಕಿರಾತರು, ಗಾಂಧಾರರು, ಚೀನರು, ಶಬರರು, ಬರ್ಬರರು, ಶಕರು, ತುಷಾರರು, ಕಹ್ವರು, ಪಹ್ಲವರು, ಆಂಧ್ರರು, ಮದ್ರಕರು, ಓಢ್ರರು, ಪುಲಿಂದರು, ರಮಠರು, ಕಾಚರು, ಎಲ್ಲಾ ಮ್ಲೇಚ್ಛರು, ಬ್ರಾಹ್ಮಣಕ್ಷತ್ರಿಯಪ್ರಸೂತ- ರಾದ ವೈಶ್ಯ, ಶೂದ್ರರು, ಮಾನವರು ಇವರೆಲ್ಲರೂ ನನ್ನ ರಾಜ್ಯದಲ್ಲಿ ವಾಸಿಸುತ್ತಾರೆ. ಇವರೆಲ್ಲರೂ ದಸ್ಯುಜೀವಿಗಳು. ಕಳ್ಳತನ, ದರೋಡೆಗಳಿಂದ ಜೀವಿಸುವವರು. ಇಂತಹವರನ್ನು ನನ್ನಂತಹವನು ಧರ್ಮಮಾರ್ಗದಲ್ಲಿ ಸ್ಥಾಪಿಸುವುದು ಹೇಗೆ?
ಏತದಿಚ್ಛಾಮ್ಯಹಂ ಶ್ರೋತುಂ ಭಗವಂಸ್ತದ್ ಬ್ರವೀಹಿ ಮೇ ।
ತ್ವಂ ಬಂಧುಭೂತೋ ಹ್ಯಸ್ಮಾಕಂ ಕ್ಷತ್ರಿಯಾಣಾಂ ಸುರೇಶ್ವರ ॥16॥
ಪೂಜ್ಯನೇ! ನಾನು ಇದನ್ನು ತಿಳಿಯಲು ಬಯಸುತ್ತೇನೆ. ಅದನ್ನು ನನಗೆ ಹೇಳು. ಎಲೈ ಸುರೇಶ್ವರನೇ! ಕ್ಷತ್ರಿಯರಾದ ನಮಗೆ ನೀನು ಬಂಧುವಾದವನು.
ಇಂದ್ರಃ
ಮಾತಾಪಿತ್ರೋರ್ಹಿ ಕರ್ತವ್ಯಾ ಶುಶ್ರೂಷಾ ಸರ್ವದಸ್ಯುಭಿಃ ।
ಆಚಾರ್ಯಗುರುಶುಶ್ರೂಷಾ ತಥೈವಾಶ್ರಮವಾಸಿನಾಮ್ ॥17॥

ಇಂದ್ರ  ಎಲ್ಲ ದಸ್ಯುಗಳೂ ಸಹ ತಂದೆತಾಯಿಗಳ ಸೇವೆಯನ್ನು, ಆಚಾರ್ಯ ಗುರುಗಳ ಸೇವೆಯನ್ನು ಮತ್ತು ಆಶ್ರಮವಾಸಿಗಳ ಸೇವೆಯನ್ನು ಮಾಡಬೇಕು.
ಭೂಮಿಪಾನಾಂ ಚ ಶುಶ್ರೂಷಾ ಕರ್ತವ್ಯಾ ಸರ್ವದಸ್ಯುಭಿಃ |
ದೇಶಧರ್ಮಕ್ರಿಯಾಶ್ಚೈವ ತೇಷಾಂ ಧರ್ಮೋ ವಿಧೀಯತೇ  ॥18॥
ಎಲ್ಲ ದಸ್ಯುಗಳು ತಾವು ವಾಸಿಸುವ ದೇಶದ ರಾಜನ ಸೇವೆಯನ್ನು ಮಾಡಬೇಕು. ಆಯಾ ದೇಶದ ಧರ್ಮಗಳು ಮತ್ತು ಕ್ರಿಯೆಗಳು ಅವರು ಆಚರಿಸಬೇಕಾದ ಧರ್ಮವೆಂದು ಹೇಳಲ್ಪಡುತ್ತವೆ.
ಪಿತೃಯಜ್ಞಾಸ್ತಥಾ ಕೂಪಾಃ ಪ್ರಪಾಶ್ಚ ಶಯನಾನಿ ಚ |
ದಾನಾನಿ ಚ ಯಥಾಕಾಲಂ ದ್ವಿಜೇಷು ದದ್ಯುರೇವ ತೇ  ॥19॥
ಅವರೂ ಸಹ ಪಿತೃಯಜ್ಞಗಳನ್ನು ಮಾಡಬೇಕು. ಬಾವಿಗಳನ್ನು ತೋಡಿಸಿ, ಅರವಟ್ಟಿಗೆಗಳನ್ನು ಕಟ್ಟಿಸಿ, ಯೋಗ್ಯವಾದ ಕಾಲದಲ್ಲಿ ಬ್ರಾಹ್ಮಣರಿಗೆ ಶಯನಾದಿ ದಾನಗಳನ್ನು ಕೊಡಬೇಕು.
ಅಹಿಂಸಾ ಸತ್ಯಮಕ್ರೋಧೋ ವೃತ್ತಿದಾಯಾನುಪಾಲನಮ್ |
ಭರಣಂ ಪುತ್ರದಾರಾಣಾಂ ಶೌಚಮದ್ರೋಹ ಏವ ಚ  ॥20॥
ಅಹಿಂಸೆ, ಸತ್ಯ, ಅಕ್ರೋಧ, ತಮ್ಮ ವೃತ್ತಿಯಿಂದ ಸಂಪಾದಿಸಿದ ಆಸ್ತಿಯ ಪಾಲನೆ, ಪತ್ನೀಪುತ್ರರ ಪೋಷಣೆ, ಶೌಚ, ಅದ್ರೋಹ ಇವುಗಳನ್ನು ಹೊಂದಿರಬೇಕು.
ದಕ್ಷಿಣಾ ಸರ್ವಯಜ್ಞಾನಾಂ ದಾತವ್ಯಾ ಭೂತಿಮಿಚ್ಛತಾ |
ಪಾಕಯಜ್ಞಾ  ಮಹಾರ್ಹಾಶ್ಚ  ದಾತವ್ಯಾಃ ಸರ್ವದಸ್ಯುಭಿಃ  ॥21॥
ತಮ್ಮ ಏಳಿಗೆಯನ್ನು ಅಪೇಕ್ಷಿಸುವವರು ಎಲ್ಲ ಯಜ್ಞಗಳಲ್ಲಿಯೂ ದಕ್ಷಿಣೆಯನ್ನು ಕೊಡಬೇಕು. ಪಾಕಯಜ್ಞಗಳನ್ನು ಮಾಡಿಸಿ,ಅರ್ಹರಾದ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.
ಏತಾನ್ಯೇವಂಪ್ರಕಾರಾಣಿ ವಿಹಿತಾನಿ ಪುರಾನಘ |
ಸರ್ವಲೋಕಸ್ಯ ಕರ್ಮಾಣಿ ಕರ್ತವ್ಯಾನೀಹ ಪಾರ್ಥಿವ  ॥22॥
ಎಲೈ ಅನಘನೇ! ಪಾರ್ಥಿವನೇ! ಸರ್ವಲೋಕಕ್ಕೆ ಇಂತಹ ವಿಧವಾದ ಕರ್ಮ- ಗಳು ಮಾಡಲ್ಪಡಬೇಕೆಂದು ವಿಹಿತವಾಗಿವೆ.
ಮಾಂಧಾತಾ
ದೃಶ್ಯಂತೇ ಮಾನುಷೇ ಲೋಕೇ ಸರ್ವವರ್ಣೇಷು ದಸ್ಯವಃ |
ಲಿಂಗಾಂತರೇ ವರ್ತಮಾನಾ ಆಶ್ರಮೇಷು ಚತುರ್ಷ್ವಪಿ  ॥23॥
ಮಾಂಧಾತಾ  ಮನುಷ್ಯಲೋಕದಲ್ಲಿ ಎಲ್ಲ ವರ್ಣಗಳಲ್ಲಿಯೂ ಮತ್ತು ಎಲ್ಲ ಆಶ್ರಮಗಳಲ್ಲಿಯೂ ಬೇರೆ ಬೇರೆ ಕಪಟವೇಷವನ್ನು ಧರಿಸಿದ ದಸ್ಯುಗಳು ಕಂಡು ಬರುತ್ತಾರೆ.
ಇಂದ್ರಃ
ವಿನಷ್ಟಾಯಾಂ ದಂಡನೀತೌ ರಾಜಧರ್ಮೇ ನಿರಾಕೃತೇ |
ಸಂಪ್ರಮುಹ್ಯಂತಿ ಭೂತಾನಿ ರಾಜದೌರಾತ್ಮ್ಯತೋ ನೃಪ  ॥24॥
ಇಂದ್ರ  ಎಲೈ ರಾಜನೇ! ದಂಡನೀತಿಯು ವಿನಷ್ಟವಾಗಿ ರಾಜಧರ್ಮವು ನಶಿಸಿ ಹೋದಾಗ ಅಥವಾ ರಾಜನೇ ದುಷ್ಟನಾದಾಗ ಕಾರ್ಯಾಕಾರ್ಯವಿಷಯದಲ್ಲಿ ಪ್ರಜೆಗಳಿಗೆ ಭ್ರಾಂತಿ ಉಂಟಾಗುತ್ತದೆ.
ಅಸಂಖ್ಯಾತಾ ಭವಿಷ್ಯಂತಿ ಭಿಕ್ಷವೋ ಲಿಂಗಿನಸ್ತಥಾ |
ಆಶ್ರಮಾಣಾಂ ವಿಕಲ್ಪಾಶ್ಚ  ನಿವೃತ್ತೇಽಸ್ಮಿನ್ ಕೃತೇ ಯುಗೇ  ॥25॥
ಭಿಕ್ಷುಗಳು ಮತ್ತು ಬೇರೆ ಬೇರೆ ಚಿಹ್ನೆಗಳನ್ನು ಧರಿಸಿದವರು ಅಸಂಖ್ಯಾತರಾಗು- ತ್ತಾರೆ. ಈ ಕೃತಯುಗವು ನಿವೃತ್ತವಾದ ಮೇಲೆ ಆಶ್ರಮಗಳೂ ಸಹ ಅನೇಕಪ್ರಕಾರ- ಗಳನ್ನು ತಾಳುತ್ತವೆ.
ಅಶೃಣ್ವಾನಾಃ ಪುರಾಣಾನಾಂ ಧರ್ಮಾಣಾಂ ಪ್ರವರಾ ಗತೀಃ |
ಉತ್ಪಥಂ ಪ್ರತಿಪತ್ಸ್ಯಂತೇ ಕಾಮಮನ್ಯುಸಮೀರಿತಾಃ  ॥26॥
ಪುರಾಣಗಳನ್ನು ಕೇಳದೇ, ಧರ್ಮಗಳ ಶ್ರೇಷ್ಠಮಾರ್ಗದ ಗತಿಯನ್ನು ತಿಳಿ- ಯದೇ, ಕಾಮಕ್ರೋಧಪ್ರೇರಿತರಾಗಿ ಮನುಷ್ಯರು ದುರ್ಮಾರ್ಗವನ್ನು ಹಿಡಿಯು- ವರು.
ಯದಾ ನಿವರ್ತ್ಯತೇ ಪಾಪೋ ದಂಡನೀತ್ಯಾ ಮಹಾತ್ಮಭಿಃ |
ತದಾ ಧರ್ಮೋ ನ ಚಲತೇ ಸದ್ಭೂತಃ ಶಾಶ್ವತಃ ಪರಃ  ॥27॥
ಮಹಾತ್ಮರಾದ ರಾಜರು ದಂಡನೀತಿಯಿಂದ ಪಾಪಿಗಳನ್ನು ದುರ್ಮಾರ್ಗದಿಂದ ಹಿಂದಿರುಗಿಸಿದರೆ ಆಗ ಶಾಶ್ವತವಾದ ಶ್ರೇಷ್ಠವಾದ ಸತ್ಯವಾದ ಧರ್ಮವು ನಿಶ್ಚಲವಾಗಿ ನಿಲ್ಲುತ್ತದೆ.
ಸರ್ವಲೋಕಗುರುಂ ಚೈವ ರಾಜಾನಂ ಯೋಽವಮನ್ಯತೇ |
ನ ತಸ್ಯ ದತ್ತಂ ನ ಹುತಂ ನ ಶ್ರಾದ್ಧಂ ಫಲತಿ ಕ್ವಚಿತ್  ॥28॥
ಯಾವನು ಸರ್ವಲೋಕಗುರುಪ್ರಾಯನಾದ ರಾಜನಿಗೆ ಅವಮಾನ ಮಾಡು- ತ್ತಾನೆಯೋ ಅವನು ಮಾಡಿದ ದಾನವಾಗಲೀ, ಹೋಮವಾಗಲೀ, ಶ್ರಾದ್ಧವಾಗಲೀ ಯಾವ ಫಲವನ್ನೂ ಕೊಡುವುದಿಲ್ಲ.
ಮಾನುಷಾಣಾಮಧಿಪತಿಂ ದೇವಭೂತಂ ಸನಾತನಮ್ |
ದೇವಾಶ್ಚ ಬಹು ಮನ್ಯಂತೇ ಧರ್ಮಕಾಮಂ ನರೇಶ್ವರಮ್  ॥29॥
ಮನುಷ್ಯನಿಗೆ ಅಧಿಪತಿಯಾದ, ದೇವತೆಯ ಸ್ಥಾನವನ್ನು ಹೊಂದಿದ, ಸನಾತನ- ನಾದ, ಧರ್ಮಕಾಮನಾದ, ರಾಜನನ್ನು ದೇವತೆಗಳೂ

ಗೌರವಿಸುತ್ತಾರೆ.
ಪ್ರಜಾಪತಿರ್ಹಿ ಭಗವಾನ್ ಯಃ ಸರ್ವಮಸೃಜಜ್ಜಗತ್ |
ಸ ಪ್ರವೃತ್ತಿನಿವೃತ್ತ್ಯರ್ಥಂ ಧರ್ಮಾಣಾಂ ಕ್ಷತ್ರಮಿಚ್ಛತಿ ||30||
ಎಲ್ಲ ಜಗತ್ತನ್ನು ಸೃಷ್ಟಿಸಿದ, ಪೂಜ್ಯರಾದ, ಪ್ರಜಾಪತಿಗಳಾದ ಬ್ರಹ್ಮದೇವರು ಧರ್ಮಗಳ ಪ್ರವೃತ್ತಿ ಮತ್ತು ಅಧರ್ಮಗಳ ನಿವೃತ್ತಿಗಾಗಿ ಕ್ಷತ್ರಿಯರು ಇರಬೇಕೆಂದು ಬಯಸುತ್ತಾರೆ.
ಪ್ರವೃತ್ತಸ್ಯ ಹಿ ಧರ್ಮಸ್ಯ ಬುದ್ಧ್ಯಾ ಯಃ ಸ್ಮರತೇ ಗತಿಮ್ |
ಸ ಮೇ ಮಾನ್ಯಶ್ಚ ಪೂಜ್ಯಶ್ಚ ತತ್ರ ಕ್ಷತ್ರಂ ಪ್ರತಿಷ್ಠಿತಮ್ ||31||
ಯಾವನು ಲೋಕದ ಪ್ರವೃತ್ತಿಗಾಗಿ ತನ್ನ ಬುದ್ಧಿಯಿಂದ ಧರ್ಮದ ಗತಿಯನ್ನು ತಿಳಿಯುತ್ತಾನೆಯೋ ಅಂತಹವನು ನನಗೆ ಮಾನ್ಯನೂ ಪೂಜ್ಯನೂ ಆದವನು. ಆ ಸ್ಥಾನದಲ್ಲಿ ಕ್ಷತ್ರಿಯನಿರುತ್ತಾನೆ.
ಭೀಷ್ಮ ಃ
ಏವಮುಕ್ತ್ವಾ ಸ ಭಗವಾನ್ ಮರುದ್ಗಣವೃತಃ ಪ್ರಭುಃ |
ಜಗಾಮ ಭವನಂ ವಿಷ್ಣೋರಕ್ಷರಂ ಪರಮಂ ಪದಮ್ ||32||
ಭೀಷ್ಮರು ಹೀಗೆ ಹೇಳಿ ಪೂಜ್ಯನೂ, ಮರುದ್ಗಣಗಳಿಂದ ಸಹಿತನಾದವನೂ, ಪ್ರಭುವೂ ಆದ ಇಂದ್ರಾಂತರ್ಯಾಮಿಯಾದ ವಿಷ್ಣುವು ತನ್ನ ಶಾಶ್ವತವಾದ ಪರಮ ಪದಕ್ಕೆ ಹೊರಟುಹೋದನು.
ಏವಂ ಪ್ರವರ್ತಿತೇ ಧರ್ಮೇ ಪುರಾ ಸುಚರಿತೇಽನಘ |
ಕಃ ಕ್ಷತ್ರಮವಮನ್ಯೇತ ಚೇತನಾವಾನ್ ಬಹುಶ್ರುತಃ ||33||
ಎಲೈ ಅನಘನೇ! ಹೀಗೆ ಹಿಂದೆ ಚೆನ್ನಾಗಿ ಆಚರಿಸಲ್ಪಡುತ್ತಿದ್ದ ಧರ್ಮವು ಭೂಮಿಯಲ್ಲಿ ಪ್ರವೃತ್ತವಾಗುವಂತೆ ಮಾಡುವ ಕ್ಷತ್ರಿಯನನ್ನು ವಿವೇಕಿಯಾದವನೂ ಬಹುಶ್ರುತನೂ ಆದ ಯಾವನು ಅವಮಾನ ಮಾಡಿಯಾನು?
ಅನ್ಯಾಯೇನ ಪ್ರವೃತ್ತಾನಿ ನಿವೃತ್ತಾನಿ ತಥೈವ ಚ |
ಅಂತರಾ ವಿಲಯಂ ಯಾಂತಿ ಯಥಾ ಪಥಿ ವಿಚಕ್ಷುಷಃ ||34||
ಅನ್ಯಾಯದಿಂದ ಉಂಟಾದ ಪ್ರವೃತ್ತಕರ್ಮಗಳಾಗಲೀ, ನಿವೃತ್ತಕರ್ಮಗಳಾಗಲೀ ಕುರುಡನು ಮಾರ್ಗದಲ್ಲಿ ನಾಶವನ್ನು ಹೊಂದುವಂತೆ ಮಧ್ಯದಲ್ಲಿಯೇ ನಾಶವನ್ನು ಹೊಂದುತ್ತವೆ.
ಆದೌ ಪ್ರವರ್ತಿತೇ ಚಕ್ರೇ ತಥೈವಾದಿಪರಾಯಣೇ |
ವರ್ತಸ್ವ ಪುರುಷವ್ಯಾಘ್ರ ಸಂವಿಜಾನಾಮಿ ತೇಽನಘ ||35||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಷಷ್ಟಿತಮೋಽಧ್ಯಾಯಃ ||66||
ಎಲೈ ಪುರುಷವ್ಯಾಘ್ರನೇ! ಆದಿಕಾಲದಿಂದಲೂ ಶ್ರೇಷ್ಠವಾದ ಆಶ್ರಯವಾದ ಮತ್ತು ಪ್ರವೃತ್ತವಾದ ಈ ಧರ್ಮಚಕ್ರದಲ್ಲಿ ನೀನು ಇರುವವನಾಗು. ಅನಘನೇ! ನಾನು ನಿನ್ನನ್ನು ಚೆನ್ನಾಗಿ ತಿಳಿದಿದ್ದೇನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 66ನೇ ಅಧ್ಯಾಯವು ಮುಗಿಯಿತು
0
67. ಅರವತ್ತೇಳನೆಯ ಅಧ್ಯಾಯ
ರಾಜ್ಯಪಾಲನೆಯಿಂದ ಸರ್ವಾಶ್ರಮಧರ್ಮಫಲಪ್ರಾಪ್ತಿಕಥನ
ಯುಧಿಷ್ಠಿರಃ
ಶ್ರುತಾ ಮೇ ಕಥಿತಾಃ ಪೂರ್ವೈಶ್ಚತ್ವಾರೋ ಮಾನವಾಶ್ರಮಾಃ |
ವ್ಯಾಖ್ಯಾನಮೇಷಾಮಾಚಕ್ಷ್ವ ಪೃಚ್ಛತೋ ಮೇ ಪಿತಾಮಹ ||1||
ಯುಧಿಷ್ಠಿರ ನಾನು ಪ್ರಾಚೀನರು ಹೇಳಿದ ನಾಲ್ಕು (ಮಾನವಾ)ಆಶ್ರಮಗಳನ್ನು ಕೇಳಿದ್ದೇನೆ. ಪಿತಾಮಹನೇ! ಪ್ರಶ್ನೆಮಾಡುತ್ತಿರುವ ನನಗೆ ಅವುಗಳನ್ನು ವಿಸ್ತಾರವಾಗಿ ಹೇಳು.
ಭೀಷ್ಮ ಃ
ವಿದಿತಾಃ ಸರ್ವ ಏವೇಹ ಧರ್ಮಾಸ್ತವ ಯುಧಿಷ್ಠಿರ |
ಯಥಾ ಮಮ ಮಹಾಬಾಹೋ ವಿದಿತಾಃ ಸಾಧುಸಮ್ಮತಾಃ ||2||
ಭೀಷ್ಮರು ಎಲೈ ಯುಧಿಷ್ಠಿರನೇ! ಮಹಾಬಾಹುವೇ! ನನಗೆ ತಿಳಿದಿರುವಂತೆ ಸಾಧುಸಮ್ಮತವಾದ ಎಲ್ಲ ಧರ್ಮಗಳೂ ನಿನಗೆ ತಿಳಿದಿವೆ.
ಯತ್ತು ಲಿಂಗಾಂತರಗತಂ ಪೃಚ್ಛಸೇ ಮಾಂ ಯುಧಿಷ್ಠಿರ |
ಧರ್ಮಂ ಧರ್ಮಭೃತಾಂ ಶ್ರೇಷ್ಠ ತನ್ನಿಬೋಧ ನರಾಧಿಪ ||3||
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ನರಾಧಿಪನೇ! ಯುಧಿಷ್ಠಿರನೇ! ಬ್ರಹ್ಮ- ಚರ್ಯಾದಿ ಭಿನ್ನಭಿನ್ನ ಚಿಹ್ನೆಯನ್ನು ಧರಿಸಿದವರ ಧರ್ಮದ ಫಲವನ್ನು ಕೇಳುತ್ತಿರು- ವಿಯಷ್ಟೇ? ಅದನ್ನು ತಿಳಿಯುವವನಾಗು.
ಸರ್ವಾಣ್ಯೇತಾನಿ ಕೌಂತೇಯ ವಿದ್ಯಂತೇ ಮನುಜರ್ಷಭ |
ಸಾಧ್ವಾಚಾರಪ್ರವೃತ್ತಾನಾಂ ಚಾತುರಾಶ್ರಮ್ಯಕರ್ಮಣಾಮ್ ||4||
ಎಲೈ ಮನುಜಶ್ರೇಷ್ಠನೇ! ಚೆನ್ನಾಗಿ ರಾಜ್ಯಪರಿಪಾಲನೆಯನ್ನು ಮಾಡುವ ನಿನಗೆ, ಒಳ್ಳೆಯ ಆಚಾರಶೀಲರಾದ ಚತುರಾಶ್ರಮಕರ್ಮಿಗಳು ಮಾಡುವ ಎಲ್ಲ ಧರ್ಮಗಳ ಫಲವೂ ಉಂಟಾಗುತ್ತದೆ.
ಅಕಾಮದ್ವೇಷಯುಕ್ತಸ್ಯ ದಂಡನೀತ್ಯಾ ಯುಧಿಷ್ಠಿರ |

ಸಮೇಕ್ಷಿಣಶ್ಚ ಭೂತೇಷು ಭೈಕ್ಷಾಶ್ರಮಪದಂ ಭವೇತ್ ॥5॥
ಎಲೈ ಯುಧಿಷ್ಠಿರನೇ! ರಾಗದ್ವೇಷಗಳನ್ನು ತ್ಯಜಿಸಿ ದಂಡನೀತಿಯಿಂದ ಎಲ್ಲ ಪ್ರಜೆಗಳನ್ನೂ ಸಮಾನವಾಗಿ ನೋಡಿಕೊಳ್ಳುವವನಿಗೆ ಬ್ರಹ್ಮಚರ್ಯಾಶ್ರಮಫಲವು ದೊರೆಯುವುದು.
ವೇತ್ರ್ಯಾದಾನವಿಸರ್ಗಂ ಯೋ ನಿಗ್ರಹಾನುಗ್ರಹೌ ತಥಾ |
ಯಥೋಕ್ತವೃತ್ತೇರ್ವೀರಸ್ಯ ಕ್ಷೇಮಾಶ್ರಮಪದಂ ಭವೇತ್ ॥6॥
ಪ್ರಜೆಗಳಿಂದ ಧನವನ್ನು ಸ್ವೀಕಾರ ಮಾಡುವುದನ್ನು ಮತ್ತು ಪುನಃ ಅವರಿಗೆ ಕೊಡುವುದನ್ನು ಯಾವನು ತಿಳಿದಿದ್ದಾನೆಯೋ, ಯಾವನು ದುಷ್ಟರ ನಿಗ್ರಹವನ್ನು ಶಿಷ್ಟರ ಅನುಗ್ರಹವನ್ನು ಮಾಡುವನೋ ಅಂತಹ ಶಾಸೋತ್ರೋಕ್ತರೀತಿಯಲ್ಲಿ ನಡೆದು- ಕೊಳ್ಳುವ ವೀರನಿಗೆ ಗೃಹಸ್ಥಾಶ್ರಮಫಲವು ದೊರೆಯುತ್ತದೆ.
ಅರ್ಹಾನ್ ಪೂಜಯತೋ ನಿತ್ಯಂ ಸಂವಿಭಾಗೇನ ಪಾಂಡವ |
ಸರ್ವತಸ್ತಸ್ಯ ಕೌಂತೇಯ ಭೈಕ್ಷ್ಯಾಶ್ರಮಪದಂ ಭವೇತ್ ॥7॥
ಎಲೈ ಪಾಂಡವನೇ! ಕೌಂತೇಯನೇ! ನಿತ್ಯವೂ ತನ್ನಲ್ಲಿರುವ ದ್ರವ್ಯವನ್ನು ವಿಭಾಗ ಮಾಡಿ ಅರ್ಹನಾದವನನ್ನು ಪೂಜಿಸುವವನಿಗೆ ಬ್ರಹ್ಮಚರ್ಯಾಶ್ರಮಫಲವು ದೊರೆ- ಯುತ್ತದೆ.
ಜ್ಞಾತಿಸಂಬಂಧಿಮಿತ್ರಾಣಿ ವ್ಯಾಪನ್ನಾನಿ ಯುಧಿಷ್ಠಿರ |
ಸಮಭ್ಯುದ್ಧರಮಾಣಸ್ಯ ದೀಕ್ಷಾಶ್ರಮಪದಂ ಭವೇತ್ ॥8॥
ಎಲೈ ಯುಧಿಷ್ಠಿರನೇ! ವಿಪತ್ತಿಗೆ ಒಳಗಾದ ಜ್ಞಾತಿಸಂಬಂಧಿಮಿತ್ರರನ್ನು ವಿಪತ್ತಿ- ನಿಂದ ಉದ್ಧಾರ ಮಾಡುವವನಿಗೆ ಗೃಹಸ್ಥಾಶ್ರಮಫಲವು ದೊರೆಯುವುದು.
ಲೋಕಮುಖ್ಯೇಷು ಸತ್ಕಾರಂ ಲಿಂಗಮುಖ್ಯೇಷು ಚಾನಘ |
ಕುರ್ವತಸ್ತಸ್ಯ ಕೌಂತೇಯ ವನ್ಯಾಶ್ರಮಪದಂ ಭವೇತ್ ॥9॥
ವಾನಪ್ರಸ್ಥಾಶ್ರಮಧಾರಿಗಳಲ್ಲಿ ಮುಖ್ಯರಾದವರನ್ನು ಸತ್ಕರಿಸುವವನಿಗೆ ಎಲೈ ಕೌಂತೇಯನೇ! ವಾನಪ್ರಸ್ಥಾಶ್ರಮಫಲವು ದೊರೆಯುತ್ತದೆ.

ಆಹ್ನಿಕಂ ಭೂತಯಜ್ಞಾಂಶ್ಚ ಪಿತೃಯಜ್ಞಾಂಶ್ಚ ಮಾನುಷಾನ್ |
ಕುರ್ವತಃ ಪಾರ್ಥ ವಿಪುಲಾನ್ ಸತ್ಯಾಶ್ರಮಪದಂ ಭವೇತ್ ॥10॥
ಎಲೈ ಪಾರ್ಥನೇ! ಆಹ್ನಿಕವನ್ನು ಭೂತಯಜ್ಞಗಳನ್ನು ಪಿತೃಯಜ್ಞಗಳನ್ನು ವಿಪುಲವಾದ ಮಾನುಷಯಜ್ಞಗಳನ್ನು ಮಾಡುವ ರಾಜನಿಗೆ ಯತ್ಯಾಶ್ರಮಫಲವು ದೊರೆಯುತ್ತದೆ.
ಸಂವಿಭಾಗೇನ ಭೂತಾನಾಮತಿಥೀನಾಂ ತಥಾರ್ಚನಾತ್ |
ದೈವಯಜ್ಞೈಶ್ಚ ರಾಜೇಂದ್ರ ವನ್ಯಾಶ್ರಮಪದಂ ಭವೇತ್ ॥11॥
ಎಲ್ಲರಿಗೂ ತನ್ನ ದ್ರವ್ಯವನ್ನು ಹಂಚಿ, ಅತಿಥಿಗಳನ್ನು ಅರ್ಚಿಸಿ, ದೇವಯಜ್ಞ- ಗಳನ್ನು ಮಾಡುವವನಿಗೆ ಎಲೈ ರಾಜೇಂದ್ರನೇ! ವಾನಪ್ರಸ್ಥಾಶ್ರಮಫಲವು ದೊರೆ- ಯುತ್ತದೆ.
ಮರ್ದನಂ ಪರರಾಷ್ಟ್ರಾಣಾಂ ಶಿಷ್ಟಾರ್ಥಂ ಸತ್ಯವಿಕ್ರಮ |
ಕುರ್ವತಃ ಪುರುಷವ್ಯಾಘ್ರ ವನ್ಯಾಶ್ರಮಪದಂ ಭವೇತ್ ॥12॥
ಎಲೈ ಪುರುಷವ್ಯಾಘ್ರನೇ! ಸತ್ಯವಿಕ್ರಮನೇ! ಪರರಾಷ್ಟ್ರದಲ್ಲಿರುವ ಶಿಷ್ಟರ ಹಿತಕ್ಕಾಗಿ ಪರರಾಷ್ಟ್ರವನ್ನು ಮರ್ದಿಸುವವನಿಗೆ ವಾನಪ್ರಸ್ಥಾಶ್ರಮಫಲವು ದೊರೆಯು- ತ್ತದೆ.
ಪಾಲನಾತ್ ಸರ್ವಭೂತಾನಾಂ ಸ್ವರಾಷ್ಟ್ರಪರಿಪಾಲನಾತ್ |
ದೀಕ್ಷಾ ಬಹುವಿಧಾ ರಾಜ್ಞೋ ವನ್ಯಾಶ್ರಮಪದಂ ಭವೇತ್ ॥13॥
ಎಲ್ಲ ಪ್ರಜೆಗಳನ್ನೂ ಪಾಲನೆ ಮಾಡಿ, ತನ್ನ ರಾಷ್ಟ್ರವನ್ನು ಪರಿಪಾಲನೆ ಮಾಡಿ, ಅನೇಕ ವಿಧವಾದ ದೀಕ್ಷೆಗಳನ್ನು ಧರಿಸಿದ ರಾಜನಿಗೆ ವಾನಪ್ರಸ್ಥಾಶ್ರಮಫಲವು ದೊರೆಯುತ್ತದೆ.
ವೇದಾಧ್ಯಯನನಿತ್ಯತ್ವಂ ಕ್ಷಮಾಥಾಚಾರ್ಯಪೂಜನಮ್ |
ತಥೋಪಾಧ್ಯಾಯಶುಶ್ರೂಷಾ ಬ್ರಹ್ಮಾಶ್ರಮಪದಂ ಭವೇತ್ ॥14॥
ನಿತ್ಯವೂ ವೇದಾಧ್ಯಯನವನ್ನು ಮಾಡಿ, ಕ್ಷಮೆಯನ್ನು ಹೊಂದಿ, ಆಚಾರ್ಯ- ರನ್ನು ಪೂಜಿಸಿ, ಗುರುಶುಶ್ರೂಷೆಯನ್ನು ಮಾಡುವ ರಾಜನಿಗೆ ಬ್ರಹ್ಮಚರ್ಯಾಶ್ರಮ- ಫಲವು ದೊರೆಯುತ್ತದೆ.
ಆಹ್ನಿಕಂ ಜಪಮಾನಸ್ಯ ದೇವಾನ್ ಪೂಜಯತಃ ಸದಾ |
ಧರ್ಮೇಣ ಪುರುಷವ್ಯಾಘ್ರ ಧರ್ಮಾಶ್ರಮಪದಂ ಭವೇತ್ ॥15॥
ಎಲೈ ಪುರುಷವ್ಯಾಘ್ರನೇ! ಸದಾ ಮಂತ್ರಗಳನ್ನು ಜಪಿಸಿ, ದೇವತೆಗಳನ್ನು ಧರ್ಮದಿಂದ ಪೂಜಿಸುವ ರಾಜನಿಗೆ ಯತ್ಯಾಶ್ರಮಫಲವು ದೊರೆಯುತ್ತದೆ.
ಮೃತ್ಯುರ್ವಾ ರಕ್ಷಣಂ ವೇತಿ ಯಸ್ಯ ರಾಜ್ಞೋ ವಿನಿಶ್ಚಯಃ |
ಪ್ರಾಣದ್ಯೂತೇ ತತಸ್ತಸ್ಯ ಬ್ರಹ್ಮಾಶ್ರಮಪದಂ ಭವೇತ್ ॥16॥
ಯಾವನು ತನ್ನ ಮರಣ ಅಥವಾ ತನ್ನ ಪ್ರಜೆಗಳ ರಕ್ಷಣೆಯನ್ನು ನಿರ್ಧರಿಸಿ, ಪ್ರಾಣದ್ಯೂತವಿರುವ ಸಮರದಲ್ಲಿ ಭಾಗವಹಿಸುತ್ತಾನೆಯೋ ಅವನಿಗೆ ಬ್ರಹ್ಮ- ಚರ್ಯಾಶ್ರಮಫಲವು ದೊರೆಯುತ್ತದೆ.
ಅಜಿಹ್ಮಮಶಠಂ ಮಾರ್ಗಂ ಸೇವಮಾನಸ್ಯ ಭಾರತ |
ಸರ್ವದಾ ಸರ್ವಭೂತೇಷು ಬ್ರಹ್ಮಾಶ್ರಮಪದಂ ಭವೇತ್ ॥17॥

ಎಲೈ ಭಾರತನೇ! ಎಲ್ಲ ಪ್ರಜೆಗಳ ವಿಷಯದಲ್ಲಿ ವಕ್ರವಲ್ಲದ ಶಾಠ್ಯವಿಲ್ಲದ ಮಾರ್ಗವನ್ನು ಸದಾ ಸೇವಿಸುವವನಿಗೆ ಬ್ರಹ್ಮಚರ್ಯಾಶ್ರಮಫಲವು ದೊರೆಯುತ್ತದೆ.
ವಾನಪ್ರಸ್ಥೇಷು ವಿಪ್ರೇಷು ತ್ರೈವಿದ್ಯೇಷು ಚ ಭಾರತ |
ಪ್ರಯಚ್ಛತೋಽರ್ಥಾನ್ ವಿಪುಲಾನ್ ವನ್ಯಾಶ್ರಮಪದಂ ಭವೇತ್ ॥18॥
ಎಲೈ ಭಾರತನೇ! ವಾನಪ್ರಸ್ಥರಾದ ಬ್ರಾಹ್ಮಣರಿಗೆ ಮತ್ತು ವೇದವಿದ್ಯಾಸಂಪನ್ನ- ರಾದ ಬ್ರಾಹ್ಮಣರಿಗೆ ವಿಪುಲವಾದ ಧನವನ್ನು ದಾನ ಮಾಡುವವನಿಗೆ ವಾನಪ್ರಸ್ಥಾ- ಶ್ರಮಫಲವು ದೊರೆಯುತ್ತದೆ.
ಸರ್ವಭೂತೇಷ್ವನುಕ್ರೋಶಂ ಕುರ್ವತಸ್ತಸ್ಯ ಭಾರತ |
ಆನೃಶಂಸ್ಯಪ್ರವೃತ್ತಸ್ಯ ಸರ್ವಾವಸ್ಥಂ ಪದಂ ಭವೇತ್ ॥19॥
ಎಲೈ ಭಾರತನೇ! ಎಲ್ಲ ಭೂತಗಳಲ್ಲಿಯೂ ದಯವನ್ನು ಹೊಂದಿ, ಮಾರ್ದ- ವದಿಂದ ನಡೆದುಕೊಳ್ಳುವವನಿಗೆ ಎಲ್ಲ ಆಶ್ರಮಗಳ ಧರ್ಮಗಳಿಂದ ಪಡೆಯಬಹು- ದಾದ ಸ್ಥಾನವು ದೊರೆಯುತ್ತದೆ.
ಬಾಲವೃದ್ಧೇಷು ಕೌರವ್ಯ ಸರ್ವಾವಸ್ಥಂ ಯುಧಿಷ್ಠಿರ |
ಅನುಕ್ರೋಶಂ ವಿದಧತಃ ಸರ್ವಾವಸ್ಥಂ ಪದಂ ಭವೇತ್ ॥20॥
ಎಲೈ ಕೌರವ್ಯನೇ! ಯುಧಿಷ್ಠಿರನೇ! ಸರ್ವಕಾಲದಲ್ಲಿಯೂ ಬಾಲಕರಲ್ಲಿಯೂ ಮತ್ತು ವೃದ್ಧರಲ್ಲಿಯೂ ದಯೆಯನ್ನು ತೋರುವ ರಾಜನಿಗೆ ಸರ್ವಾಶ್ರಮಧರ್ಮಾ- ನುಷ್ಠಾನಗಳಿಂದ ಪ್ರಾಪ್ಯವಾದ ಸ್ಥಾನವು ದೊರೆಯುತ್ತದೆ.
ಬಲಾತ್ಕೃತೇಷು ಭೂತೇಷು ಪರಿತ್ರಾಣಂ ಕುರೂದ್ವಹ |
ಶರಣಾಗತೇಷು ಕೌರವ್ಯ ಕುರ್ವನ್ ಗಾರ್ಹಸ್ಥ್ಯಮಾವಸೇತ್ ॥21॥
ಎಲೈ ಕುರೂದ್ವಹನೇ! ಕೌರವ್ಯನೇ! ಬಲಾತ್ಕಾರಕ್ಕೆ ಒಳಗಾದ ಪ್ರಜೆಗಳು ಶರಣಾಗತರಾದಾಗ ಅವರನ್ನು ರಕ್ಷಿಸುವವನು ಗೃಹಸ್ಥಾಶ್ರಮಫಲವನ್ನು ಪಡೆಯು- ತ್ತಾನೆ.
ಚರಾಚರಾಣಾಂ ಭೂತಾನಾಂ ರಕ್ಷಾಮಪಿ ಚ ಸರ್ವಶಃ |
ಯಥಾರ್ಹಪೂಜಾಂ ಚ ಸದಾ ಕುರ್ವನ್ ಗಾರ್ಹಸ್ಥ್ಯಮಾವಸೇತ್ ॥22॥
ಚಲಿಸುವ ಮತ್ತು ಚಲಿಸದಿರುವ ಪ್ರಾಣಿಗಳ ಸರ್ವಪ್ರಕಾರವಾದ ರಕ್ಷಣೆಯನ್ನು ಮತ್ತು ಯಥಾಯೋಗ್ಯವಾದ ಪೂಜೆಯನ್ನು ಯಾವಾಗಲೂ ಮಾಡುವವನು ಗೃಹಸ್ಥಾಶ್ರಮಧರ್ಮಾನುಷ್ಠಾನದ ಫಲವನ್ನು ಹೊಂದುತ್ತಾನೆ.
ಜ್ಯೇಷ್ಠಾನುಜ್ಯೇಷ್ಠಪತ್ನೀನಾಂ ಭ್ರಾತೃಣಾಂ ಪುತ್ರನಪ್ತೃಣಾಮ್ |
ನಿಗ್ರಹಾನುಗ್ರಹೌ ಪಾರ್ಥ ಗಾರ್ಹಸ್ಥ್ಯಮಿತಿ ತತ್ ತಪಃ ॥23॥
ಎಲೈ ಪಾರ್ಥನೇ! ಅಣ್ಣತಮ್ಮಂದಿರ ಪತ್ನಿಯರ ಮತ್ತು ಸಹೋದರರ ಪುತ್ರ ಪೌತ್ರರ ನಿಗ್ರಹಾನುಗ್ರಹಗಳು ಗೃಹಸ್ಥಧರ್ಮವೆಂದು ಹೇಳಲ್ಪಡುತ್ತದೆ. ಅದು ಒಂದು ತಪಸ್ಸೇ.
ಸಾಧೂನಾಮರ್ಚನೀಯಾನಾಂ ಪ್ರಜಾಸು ವಿದಿತಾತ್ಮನಾಮ್ |
ಪಾಲನಂ ಪುರುಷವ್ಯಾಘ್ರ ಗೃಹಾಶ್ರಮಪದಂ ಭವೇತ್ ॥24॥
ಎಲೈ ಪುರುಷವ್ಯಾಘ್ರನೇ! ಪ್ರಜೆಗಳಲ್ಲಿ ಪೂಜಾರ್ಹರಾದ ಜ್ಞಾನಿಗಳಾದ ಸಜ್ಜನರನ್ನು ರಕ್ಷಿಸುವವನು ಗೃಹಸ್ಥಾಶ್ರಮಫಲವನ್ನು ಹೊಂದುತ್ತಾನೆ.
ಆಶ್ರಮಸ್ಥಾನಿ ಸರ್ವಾಣಿ ಯಸ್ತು ವೇಶ್ಮನಿ ಭಾರತ |
ಆದದೀತೇಹ ಭೋಜ್ಯೇನ ತದ್ ಗಾರ್ಹಸ್ಥ್ಯಂ ಯುಧಿಷ್ಠಿರ ॥25॥
ಎಲೈ ಯುಧಿಷ್ಠಿರನೇ! ಭಾರತನೇ! ಆಶ್ರಮದಲ್ಲಿರುವವರು ಭೋಜನವಿಷಯ- ದಲ್ಲಿ ಅನುಸರಿಸುವ ಎಲ್ಲಾ ನಿಯಮಗಳನ್ನೂ ಯಾರು ತನ್ನ ಮನೆಯಲ್ಲಿಯೇ ಅನುಷ್ಠಾನಮಾಡುತ್ತಾನೆಯೋ ಅದು ಒಳ್ಳೆಯ ಗಾರ್ಹಸ್ಥ್ಯ.
ಯಃ ಸ್ಥಿತಃ ಪುರುಷೋ ಧರ್ಮೇ ಧಾತ್ರಾ ಸೃಷ್ಟೇ ಯಥಾರ್ಥವತ್ |
ಆಶ್ರಮಾಣಾಂ ಸ ಸರ್ವೇಷಾಂ ಫಲಂ ಪ್ರಾಪ್ನೋತ್ಯನುತ್ತಮಮ್ ॥26॥
ಯಾವನು ತನಗೆ ಬ್ರಹ್ಮದೇವರು ವಿಧಾನ ಮಾಡಿದ ಧರ್ಮದಲ್ಲಿ ಯಥಾರ್ಥ- ವಾಗಿ ನಿಲ್ಲುತ್ತಾನೆಯೋ ಅವನು ಎಲ್ಲಾ ಆಶ್ರಮಗಳ ಉತ್ತಮವಾದ ಫಲವನ್ನು ಹೊಂದುತ್ತಾನೆ.
ಯಸ್ಮಿನ್ನ ನಶ್ಯಂತಿ ಗುಣಾಃ ಕೌಂತೇಯ ಪುರುಷೇ ಸದಾ |
ಆಶ್ರಮಸ್ಥಂ ತಮಪ್ಯಾಹುರ್ನರಶ್ರೇಷ್ಠಂ ಯುಧಿಷ್ಠಿರ ॥27॥
ಎಲೈ ಕೌಂತೇಯನೇ! ಯುಧಿಷ್ಠಿರನೇ! ಯಾವ ಪುರುಷನಲ್ಲಿ ಗುಣಗಳು ಎಂದಿಗೂ ನಾಶವನ್ನು ಹೊಂದುವುದಿಲ್ಲವೋ ಅಂತಹ ಶ್ರೇಷ್ಠಪುರುಷನನ್ನು ಆಶ್ರಮ- ವಾಸಿಯೆಂದೇ ಜ್ಞಾನಿಗಳು ಹೇಳುತ್ತಾರೆ.
ಸ್ಥಾನಮಾನಂ ವಯೋಮಾನಂ ಕುಲಮಾನಂ ತಥೈವ ಚ |
ಕುರ್ವನ್ ವಸತಿ ಸರ್ವೇಷು ಹ್ಯಾಶ್ರಮೇಷು ಯುಧಿಷ್ಠಿರ ॥28॥
ಎಲೈ ಯುಧಿಷ್ಠಿರನೇ! ಯಾವನು ಉನ್ನತಸ್ಥಾನಕ್ಕೆ, ವಯಸ್ಸಿಗೆ ಹಾಗೆಯೇ ಕುಲಕ್ಕೆ ಮರ್ಯಾದೆಯನ್ನು ಕೊಡುತ್ತಾನೆಯೋ ಅವನು ಸರ್ವಾಶ್ರಮಫಲವನ್ನು ಹೊಂದು- ತ್ತಾನೆ.
ದೇಶಧರ್ಮಾಂಶ್ಚ ಕೌಂತೇಯ ಕುಲಧರ್ಮಾಂಸ್ತಥೈವ ಚ |
ಪಾಲಯನ್ ಪುರುಷವ್ಯಾಘ್ರ ರಾಜಾ ಸರ್ವಾಶ್ರಮೀ ಭವೇತ್ ॥29॥
ಎಲೈ ಕೌಂತೇಯನೇ! ಪುರುಷವ್ಯಾಘ್ರನೇ! ದೇಶಧರ್ಮಗಳನ್ನು ಮತ್ತು ಕುಲ- ಧರ್ಮಗಳನ್ನು ಪಾಲಿಸುವ ರಾಜನು ಸರ್ವಾಶ್ರಮಫಲವನ್ನು ಹೊಂದುತ್ತಾನೆ.

ಕಾಲೇ ವಿಭೂತಿಂ ಭೂತಾನಾಮುಪಹಾರಾಂಸ್ತಥೈವ ಚ |
ಅರ್ಹಯನ್ ಪುರುಷವ್ಯಾಘ್ರ ಸಾಧೂನಾಮಾಶ್ರಮೇ ವಸೇತ್ ॥30॥
ಎಲೈ ಪುರುಷವ್ಯಾಘ್ರನೇ! ಯೋಗ್ಯವಾದ ಕಾಲದಲ್ಲಿ ಪ್ರಜೆಗಳಿಗೆ ಸಂಪತ್ತನ್ನೂ ಹಾಗೆಯೇ ಉಡುಗೊರೆಗಳನ್ನೂ ಕೊಟ್ಟು ಸನ್ಮಾನಿಸುವ ರಾಜನು ಯತ್ಯಾಶ್ರಮ- ಫಲವನ್ನು ಹೊಂದುತ್ತಾನೆ.
ದಶಧರ್ಮಗತಶ್ಚಾಪಿ ಯೋ ಧರ್ಮಂ ಪ್ರತ್ಯವೇಕ್ಷತೇ |
ಸರ್ವಲೋಕಸ್ಯ ಕೌಂತೇಯ ರಾಜಾ ಭವತಿ ಸೋಽಽಶ್ರಮೀ ॥31॥
ಎಲೈ ಕೌಂತೇಯನೇ! ಯಾವ ರಾಜನು ಸರ್ವಲೋಕಗಳ (ಸರ್ವಪ್ರಜೆಗಳ) ಮತ್ತು ವಿಶೇಷವಾಗಿ ವೃದ್ಧರಾದವರ ಧರ್ಮವನ್ನು ನೋಡಿಕೊಳ್ಳುತ್ತಾನೆಯೋ ಅವನು ಎಲ್ಲಾ ಆಶ್ರಮಗಳ ಫಲವನ್ನು ಪಡೆಯುತ್ತಾನೆ.
ಯೇ ಧರ್ಮಕುಶಲಾ ಲೋಕೇ ಧರ್ಮಂ ಕುರ್ವಂತಿ ಸಾಧವಃ |
ಪಾಲಿತಾ ಯಸ್ಯ ವಿಷಯೇ ಪಾದೋಽಂಶಸ್ತಸ್ಯ ಭೂಪತೇಃ ॥32॥
ಯಾವ ರಾಜನ ರಾಜ್ಯದಲ್ಲಿ ಧರ್ಮಕುಶಲರಾದ ಸಜ್ಜನರು ರಕ್ಷಿಸಲ್ಪಟ್ಟು, ಧರ್ಮಗಳನ್ನು ಆಚರಿಸುತ್ತಾರೆಯೋ ಆ ಧರ್ಮಗಳ ನಾಲ್ಕನೆಯ ಒಂದು ಭಾಗವು ರಾಜನಿಗೆ ಸೇರುತ್ತದೆ.
ಧರ್ಮಾರಾಮಾನ್ ಧರ್ಮಪರಾನ್ ಯೇ ನ ರಕ್ಷಂತಿ ಮಾನವಾನ್ |
ಪಾರ್ಥಿವಾಃ ಪುರುಷವ್ಯಾಘ್ರ ತೇಷಾಂ ಪಾಪಂ ಹರಂತಿ ತೇ ॥33॥
ಎಲೈ ಪುರುಷವ್ಯಾಘ್ರನೇ! ಯಾವ ರಾಜರು ಧರ್ಮದಲ್ಲಿಯೇ ಸಂತೋಷ- ಪಡುವ ಧರ್ಮಪರರಾದ ಪ್ರಜೆಗಳನ್ನು ರಕ್ಷಿಸುವುದಿಲ್ಲವೋ ಅಂತಹ ರಾಜರು ಆ ಪ್ರಜೆಗಳ ಪಾಪವನ್ನು ತಾವೇ ತೆಗೆದುಕೊಳ್ಳುತ್ತಾರೆ.
ಯೇ ಚ ರಕ್ಷಾಸಹಾಯಾಃ ಸ್ಯುಃ ಪಾರ್ಥಿವಾನಾಂ ಯುಧಿಷ್ಠಿರ |
ತೇ ಚೈವಾಂಶಹರಾಃ ಸರ್ವೇ ಧರ್ಮೇ ಪರಕೃತೇಽನಘ ॥34॥
ಎಲೈ ಯುಧಿಷ್ಠಿರನೇ! ಅನಘನೇ! ರಾಜನು ರಕ್ಷಣೆಯನ್ನು ಮಾಡುವಾಗ ಯಾರು ಅವನಿಗೆ ಸಹಾಯಕರಾಗಿರುತ್ತಾರೋ ಅವರೂ ಸಹ ಇನ್ನೊಬ್ಬರು ಮಾಡಿದ ಧರ್ಮದಲ್ಲಿ ಒಂದು ಭಾಗಕ್ಕೆ ಅರ್ಹರಾಗುತ್ತಾರೆ.
ಸರ್ವಾಶ್ರಮಪದೇ ಹ್ಯಾಹುರ್ಗಾರ್ಹಸ್ಥ್ಯಂ ದೀಪ್ತನಿರ್ಣಯಮ್ |
ಪಾವನಂ ಪುರುಷವ್ಯಾಘ್ರ ಯಂ ವಯಂ ಪರ್ಯುಪಾಸ್ಮಹೇ ॥35॥
ಎಲೈ ಪುರುಷವ್ಯಾಘ್ರನೇ! ಎಲ್ಲ ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಪವಿತ್ರವಾ- ದುದು. ಮತ್ತು ಒಳ್ಳೆಯ ನಿರ್ಣಯಗಳನ್ನು ಹೊಂದಿರುವುದು ಎಂದು ಹೇಳುತ್ತಾರೆ. ನಾವು ಅಂತಹ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದೇವೆ.
ಆತ್ಮೋಪಮಸ್ತು ಭೂತೇಷು ಯೋ ವೈ ಭವತಿ ಮಾನವಃ |
ನ್ಯಸ್ತದಂಡೋ ಜಿತಕ್ರೋಧಃ ಸ ಪ್ರೇತ್ಯ ಲಭತೇ ಸುಖಮ್ ॥36॥
ಯಾವ ಮನುಷ್ಯನು ಎಲ್ಲ ಪ್ರಾಣಿಗಳನ್ನೂ ತನಗೆ ಸಮಾನವಾಗಿ ನೋಡಿ ಅವು- ಗಳಲ್ಲಿ ಕ್ರೋಧವನ್ನು ಮತ್ತು ದಂಡನೆಯನ್ನು ತ್ಯಜಿಸುತ್ತಾನೆಯೋ ಅವನು ಮರಣಾನಂತರದಲ್ಲಿ ಸುಖವನ್ನು ಹೊಂದುತ್ತಾನೆ.
ಧರ್ಮೋತ್ಥಿತಾ ಸತ್ತ್ವವೀರ್ಯಾ ಧರ್ಮಸೇತುವಟಾರಕಾ |
ತ್ಯಾಗವಾತಾಧ್ವಗಾ ಶೀಘ್ರಾ ನೌಸ್ತ್ವಾ ಸಂತಾರಯಿಷ್ಯತಿ ॥37॥
ಧರ್ಮದಿಂದ ಮೇಲೆ ತೇಲುವ, ಸದ್ಗುಣವೆಂಬ ಸಾಮರ್ಥ್ಯವುಳ್ಳ, ಧರ್ಮ- ಸೇತುವೆಂಬ ಹಗ್ಗಗಳಿಂದ ಬಿಗಿದ, ತ್ಯಾಗವೆಂಬ ವಾಯುಮಾರ್ಗದಲ್ಲಿ ಶೀಘ್ರವಾಗಿ ಸಂಚರಿಸುವ ನೌಕೆಯು ನಿನ್ನನ್ನು ಎಲ್ಲ ವಿಪತ್ತುಗಳಿಂದಲೂ ದಾಟಿಸುವುದು.
ಯದಾ ನಿವೃತ್ತಃ ಸರ್ವಸ್ಮಾತ್ ಕಾಮೋ ಯೋಽಸ್ಯ ಹೃದಿ ಸ್ಥಿತಃ |
ತದಾ ಭವತಿ ಸತ್ತ್ವಸ್ಥಸ್ತತೋ ಬ್ರಹ್ಮ ಸಮಶ್ನುತೇ ॥38॥
ಮನುಷ್ಯನ ಹೃದಯದಲ್ಲಿರುವ ಎಲ್ಲ ಆಸೆಗಳೂ ನಿವೃತ್ತವಾದ ಮೇಲೆ ಅವನು ಶುದ್ಧಾಂತಃಕರಣನಾಗುತ್ತಾನೆ. ಅನಂತರ ಬ್ರಹ್ಮಪ್ರಾಪ್ತಿಯನ್ನು ಪಡೆಯುತ್ತಾನೆ.
ಸುಪ್ರಸನ್ನಸ್ತು ಭಾವೇನ ಯೋಗೇನ ಚ ನರಾಧಿಪ |
ಧರ್ಮಂ ಪುರುಷಶಾರ್ದೂಲ ಪ್ರಾಪ್ಸ್ಯತೇ ಪಾಲನೇ ರತಃ ॥39॥
ಎಲೈ ನರಾಧಿಪನೇ! ಪುರುಷಶಾರ್ದೂಲನೇ! ಯಾವ ರಾಜನು ಸುಪ್ರಸನ್ನವಾದ ಮನಸ್ಸಿನಿಂದ ಒಳ್ಳೆಯ ಉಪಾಯದಿಂದ ಪ್ರಜೆಗಳ ಪಾಲನೆಯಲ್ಲಿ ರತನಾಗಿರು- ತ್ತಾನೆಯೋ ಅವನು ಧರ್ಮವನ್ನು ಪಡೆಯುವನು.
ವೇದಾಧ್ಯಯನಶೀಲಾನಾಂ ವಿಪ್ರಾಣಾಂ ಸಾಧುಕರ್ಮಣಾಮ್ |
ಪಾಲನೇ ಯತ್ನಮಾತಿಷ್ಠ ಸರ್ವಲೋಕಸ್ಯ ಚಾನಘ ॥40॥
ಎಲೈ ಅನಘನೇ! ವೇದಾಧ್ಯಯನಶೀಲರಾದ ಸತ್ಕರ್ಮವನ್ನು ಮಾಡುವ ವಿಪ್ರ- ರನ್ನು ಪಾಲನೆ ಮಾಡುವುದರಲ್ಲಿ ಮತ್ತು ಸರ್ವಪ್ರಜೆಗಳನ್ನು ಪಾಲನೆ ಮಾಡು- ವುದರಲ್ಲಿ ಪ್ರಯತ್ನವನ್ನು ಮಾಡುವವನಾಗು.
ವನೇ ಚರತಿ ಯೋ ಧರ್ಮಮಾಶ್ರಮೇಷು ಚ ಭಾರತ |
ರಕ್ಷಯಾ ತಚ್ಛತಗುಣಂ ಧರ್ಮಂ ಪ್ರಾಪ್ನೋತಿ ಪಾರ್ಥಿವಃ ॥41॥
ಎಲೈ ಭಾರತನೇ! ಯಾವನು ಅರಣ್ಯದಲ್ಲಿ ವಾಸಮಾಡಿ ಆಶ್ರಮದಲ್ಲಿ ವಾಸ- ವನ್ನು ಮಾಡಿ ಯಾವ ಧರ್ಮವನ್ನು ಪಡೆಯುತ್ತಾನೆಯೋ ರಾಜನಾದವನು ಪ್ರಜೆಗಳ ರಕ್ಷಣೆಯನ್ನು ಮಾಡುವುದರಿಂದ ಅದರ ನೂರುಪಟ್ಟು ಧರ್ಮವನ್ನು ಪಡೆ- ಯುತ್ತಾನೆ.
ಏಷ ತೇ ವಿವಿಧೋ ಧರ್ಮಃ ಪಾಂಡವಶ್ರೇಷ್ಠ ಕೀರ್ತಿತಃ |

ಅನುತಿಷ್ಠ ತ್ವಮೇನಂ ವೈ ಪೂರ್ವೈರ್ದೃಷ್ಟಂ ಸನಾತನಮ್ ॥42॥
ಎಲೈ ಪಾಂಡವಶ್ರೇಷ್ಠನೇ! ಈ ವಿವಿಧವಾದ ಧರ್ಮಗಳನ್ನು ನಿನಗೆ ಹೇಳಿದ್ದೇನೆ. ವೇದಪ್ರತಿಪಾದ್ಯವಾದ ಪೂರ್ವಜ್ಞಾನಿಗಳಿಂದ ದೃಷ್ಟವಾದ ಈ ಧರ್ಮಗಳನ್ನು ಅನು- ಷ್ಠಾನಮಾಡು.
ಚಾತುರಾಶ್ರಮ್ಯಮೇಕಾಗ್ರಃ ಚಾತುರ್ವರ್ಣ್ಯಂ ಚ ಪಾಂಡವ |
ಧರ್ಮಂ ಪುರುಷಶಾರ್ದೂಲ ಪ್ರಾಪ್ಸ್ಯಸೇ ಪಾಲನೇ ರತಃ ॥43॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತಷಷ್ಟಿತಮೋಽಧ್ಯಾಯಃ ॥67॥
ಎಲೈ ಪಾಂಡವನೇ ಪುರುಷಶಾರ್ದೂಲನೇ! ಏಕಾಗ್ರತೆಯಿಂದ ಚತುರ್ವರ್ಣ- ಗಳನ್ನು, ಚತುರಾಶ್ರಮಗಳನ್ನು ಪಾಲಿಸುವುದರಲ್ಲಿ ನಿರತನಾಗಿ ನೀನು ಎಲ್ಲ ವರ್ಣ- ಗಳ ಮತ್ತು ಆಶ್ರಮಗಳ ಧರ್ಮಗಳ ಫಲವನ್ನು ಪಡೆಯುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 67ನೆಯ ಅಧ್ಯಾಯವು ಮುಗಿಯಿತು.
0

68. ಅರವತ್ತೆಂಟನೆಯ ಅಧ್ಯಾಯ
ರಾಜನ ಮಹತ್ವದ ಕಥನ
ಯುಧಿಷ್ಠಿರಃ
ಚಾತುರಾಶ್ರಮ್ಯ ಉಕ್ತೋಽತ್ರ ಚಾತುರ್ವರ್ಣ್ಯಸ್ತಥೈವ ಚ |
ರಾಷ್ಟ್ರಸ್ಯ ಯತ್ ಕೃತ್ಯತಮಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಚತುರಾಶ್ರಮಕ್ಕೆ ಸಂಬಂಧಿಸಿದ ಮತ್ತು ಚತುರ್ವರ್ಣಗಳಿಗೆ ಸಂಬಂಧಿಸಿದ ಧರ್ಮಗಳು ಹೇಳಲ್ಪಟ್ಟವು. ಎಲೈ ಪಿತಾಮಹನೇ! ರಾಷ್ಟ್ರಕ್ಕೆ ಅವಶ್ಯಕ- ವಾಗಿ ಮಾಡಬೇಕಾದ ಕಾರ್ಯಗಳು ಯಾವುವೋ ಅವನ್ನು ನನಗೆ ಹೇಳು.
ಭೀಷ್ಮಃ
ರಾಷ್ಟ್ರಸ್ಯೈತತ್ ಕೃತ್ಯತಮಂ ರಾಜ್ಞ ಏವಾಭಿಷೇಚನಮ್ |
ಅನಿಂದ್ರಮಬಲಂ ರಾಷ್ಟ್ರಂ ದಸ್ಯವೋಽಭಿಭವಂತಿ ಚ ॥2॥
ಭೀಷ್ಮರು ರಾಷ್ಟ್ರಕ್ಕೆ ಅವಶ್ಯವಾಗಿ ಮಾಡಬೇಕಾದ ಕಾರ್ಯವೆಂದರೆ ರಾಜನ ಪಟ್ಟಾಭಿಷೇಕ. ನಾಯಕನಿಲ್ಲದ ದುರ್ಬಲವಾದ ರಾಷ್ಟ್ರವನ್ನು ದಸ್ಯುಗಳು ಕೊಳ್ಳೆ ಹೊಡೆಯುತ್ತಾರೆ.
ಅರಾಜಕೇಷು ರಾಷ್ಟ್ರೇಷು ಧರ್ಮೋ ನ ವ್ಯವತಿಷ್ಠತೇ |
ಪರಸ್ಪರಂ ಚ ಖಾದಂತಿ ಸರ್ವಥಾ ಧಿಗರಾಜಕಮ್ ॥3॥
ರಾಜನಿಲ್ಲದ ರಾಷ್ಟ್ರಗಳಲ್ಲಿ ಧರ್ಮವು ಉಳಿಯುವುದಿಲ್ಲ. ಪ್ರಜೆಗಳು ಒಬ್ಬರ- ನ್ನೊಬ್ಬರು ತಿನ್ನುತ್ತಾರೆ. ರಾಜನಿಲ್ಲದ ರಾಷ್ಟ್ರಕ್ಕೆ ಧಿಕ್ಕಾರವಿರಲಿ.
ಇಂದ್ರಮೇನಂ ಪ್ರವೃಣುತೇ ಯದ್ ರಾಜಾನಮಿತಿ ಶ್ರುತಿಃ |
ಯಥೈವೇಂದ್ರಸ್ತಥಾ ರಾಜಾ ಸಂಪೂಜ್ಯೋ ಭೂತಿಮಿಚ್ಛತಾ ॥4॥
ರಾಜನನ್ನು ಸ್ವೀಕರಿಸುವವನು ಇಂದ್ರನನ್ನೇ ಸ್ವೀಕರಿಸುತ್ತಾನೆ ಎಂದು ಶ್ರುತಿ ಇದೆ. ತನ್ನ ಕಲ್ಯಾಣವನ್ನು ಬಯಸುವವನು ಇಂದ್ರನನ್ನು ಪೂಜಿಸಿದಂತೆ ರಾಜನನ್ನು ಚೆನ್ನಾಗಿ ಪೂಜಿಸಬೇಕು.
ನಾರಾಜಕೇಷು ರಾಷ್ಟ್ರೇಷು ವಸ್ತವ್ಯಮಿತಿ ವೈದಿಕಮ್ |
ನಾರಾಜಕೇಷು ರಾಷ್ಟ್ರೇಷು ಹವ್ಯಮಗ್ನಿರ್ವಹತ್ಯಪಿ ॥5॥
ರಾಜನಿಲ್ಲದ ರಾಷ್ಟ್ರಗಳಲ್ಲಿ ವಾಸ ಮಾಡಬಾರದು ಎಂದು ವೇದದ ಆದೇಶ. ರಾಜನಿಲ್ಲದ ರಾಷ್ಟ್ರಗಳಲ್ಲಿ ಅಗ್ನಿಯು ಹವ್ಯವನ್ನು (ಹವಿಸ್ಸನ್ನು) ಸ್ವೀಕರಿಸಿ ದೇವತೆ- ಗಳಿಗೆ ತಲುಪಿಸುವುದಿಲ್ಲ.
ಅಥ ಚೇದಭಿವರ್ತೇತ ರಾಜ್ಯಾರ್ಥೀ ಬಲವತ್ತರಃ |
ಅರಾಜಕಾನಿ ರಾಷ್ಟ್ರಾಣಿ ಹತವೀರಾಣಿ ವಾ ಪುನಃ ॥6॥
ಪ್ರತ್ಯುದ್ಗಮ್ಯಾಭಿಪೂಜ್ಯಃ ಸ್ಯಾದೇತದತ್ರ ಸುಮಂತ್ರಿತಮ್ |
ನ ಹಿ ಪಾಪಾತ್ ಪಾಪತರಮಸ್ತಿ ಕಿಂಚಿದರಾಜಕಾತ್ ॥7॥
ರಾಜನಿಲ್ಲದೆ ವೀರರಿಲ್ಲದ ರಾಷ್ಟ್ರಗಳಲ್ಲಿ ಬಲಿಷ್ಠನಾದ ರಾಜ್ಯಾರ್ಥಿಯಾದ ಒಬ್ಬನು ಮೇಲೆದ್ದು ಅಧಿಕಾರವನ್ನು ವಹಿಸಿಕೊಂಡರೆ ಅವನನ್ನು ಪೂಜಿಸಬೇಕು. ಈ ವಿಷಯದಲ್ಲಿ ಇದು ಒಳ್ಳೆಯ ಆಲೋಚನೆಯಾಗುತ್ತದೆ. ಅರಾಜಕತೆಗಿಂತಲೂ ಹೆಚ್ಚಿನ ಪಾಪಕರವಾದುದು ಯಾವುದೂ ಇಲ್ಲ.
ಸ ಚೇತ್ ಸಮನುಪಶ್ಯೇತ ಸಮಗ್ರಂ ಕುಶಲಂ ಭವೇತ್ |
ಬಲವಾನ್ ಹಿ ಪ್ರಕುಪಿತಃ ಕುರ್ಯಾನ್ನಿಃಶೇಷತಾಮಪಿ ॥8॥
ಅವನು ಒಳ್ಳೆಯ ದೃಷ್ಟಿಯಿಂದ ನೋಡಿಕೊಂಡರೆ ಸಮಗ್ರವಾದ ಕುಶಲವಾ- ದೀತು. ಬಲಿಷ್ಠನಾಗಿ ಕೋಪಗೊಂಡರೆ ಎಲ್ಲವನ್ನೂ ನಿಃಶೇಷವಾಗಿ ನಾಶವನ್ನು ಮಾಡಿಯಾನು.
ಭೂಯಾಂಸಂ ಲಭತೇ ಕ್ಲೇಶಂ ಯಾ ಗೌರ್ಭವತಿ ದುರ್ದುಹಾ |
ಸುದುಹಾ ಯಾ ತು ಭವತಿ ನೈವ ತಾಂ ಕ್ಲೇಶಯಂತ್ಯುತ ॥9॥
ಹಾಲನ್ನು ಕರೆಯುವುದಕ್ಕೆ ತೊಂದರೆಯನ್ನು ಕೊಡುವ ಧೇನುವು ಬಹಳ ಕ್ಲೇಶ- ಗಳಿಗೆ ಗುರಿಯಾಗುತ್ತದೆ. ಸುಲಭವಾಗಿ ಹಾಲನ್ನು

ಕೊಡುವ ಧೇನುವನ್ನು ಯಾರೂ ಕ್ಲೇಶಕ್ಕೆ ಒಳಪಡಿಸುವುದಿಲ್ಲ.
ಯದತಪ್ತಂ ಪ್ರಣಮತಿ ನ ತತ್ ಸಂತಾಪಯತ್ಯುತ |
ಯಚ್ಚ ಸ್ವಯಂ ನತಂ ದಾರು ನ ತತ್ ಸನ್ನಾಮಯಂತ್ಯಪಿ ॥10॥
ಅಗ್ನಿಯಲ್ಲಿ ಕಾಯಿಸದೆ ಬಾಗುವುದನ್ನು ಯಾರೂ ಕಾಯಿಸುವುದಿಲ್ಲ. ತಾನಾ- ಗಿಯೇ ಬಾಗಿದ ಮರವನ್ನು (ಬೆತ್ತವನ್ನು) ಯಾರೂ ಬಗ್ಗಿಸುವುದೂ ಇಲ್ಲ.
ಏತಯೋಪಮಯಾ ಧೀರಃ ಸನ್ನಮೇತ ಬಲೀಯಸೇ |
ಇಂದ್ರಾಯ ಸ ಪ್ರಣಮತೇ ನಮತೇ ಯೋ ಬಲೀಯಸೇ ॥11॥
ಧೀರನಾದವನು ಈ ದೃಷ್ಟಾಂತದಿಂದ ಬಲಿಷ್ಠನಾದವನಿಗೆ ಬಾಗಬೇಕು. ಯಾವನು ಬಲಿಷ್ಠನಾದವನಿಗೆ ನಮಸ್ಕಾರವನ್ನು ಮಾಡುತ್ತಾನೆಯೋ ಅವನು ಇಂದ್ರ- ನಿಗೆ ನಮಸ್ಕಾರವನ್ನು ಮಾಡುತ್ತಾನೆ.
ತಸ್ಮಾದ್ ರಾಜೈವ ಕರ್ತವ್ಯಃ ಸತತಂ ಭೂತಿಮಿಚ್ಛತಾ |
ನ ಧನಾರ್ಥೋ ನ ದಾರಾರ್ಥಸ್ತೇಷಾಂ ಯೇಷಾಮರಾಜಕಮ್ ॥12॥
ಆದ್ದರಿಂದ ತನ್ನ ಸತತವಾದ ಕಲ್ಯಾಣವನ್ನು ಅಪೇಕ್ಷಿಸುವವನು ಮೊದಲು ರಾಜನನ್ನು ಮಾಡಬೇಕು. ರಾಜನಿಲ್ಲದ ರಾಷ್ಟ್ರದಲ್ಲಿ ಧನದಿಂದಲಾಗಲೀ, ಪತ್ನಿ- ಯಿಂದಾಗಲೀ ಯಾವ ಪ್ರಯೋಜನವೂ ಇಲ್ಲ.
ಪ್ರೀಯತೇ ಹಿ ಹರನ್ ಪಾಪಃ ಪರವಿತ್ತಮರಾಜಕೇ |
ಯದಾಸ್ಯ ಉದ್ಧರಂತ್ಯನ್ಯೇ ತದಾ ರಾಜಾನಮಿಚ್ಛತಿ ॥13॥
ಅರಾಜಕವಾದ ರಾಷ್ಟ್ರದಲ್ಲಿ ಪಾಪಿಯಾದವನು ಇನ್ನೊಬ್ಬರ ಧನವನ್ನು ಅಪ- ಹರಿಸಿ ಸಂತೋಷಪಡುತ್ತಾನೆ. ಬೇರೆಯವರು ಅವನ ಧನವನ್ನು ಅಪಹರಿಸಿದಾಗ ಅವನೂ ರಾಜನನ್ನು ಬಯಸುತ್ತಾನೆ.
ಪಾಪಾ ಅಪಿ ತದಾ ಕ್ಷೇಮಂ ನ ಲಭಂತೇ ಕದಾಚನ |
ಏಕಸ್ಯ ಹಿ ದ್ವೌ ಹರತೋ ದ್ವಯೋಶ್ಚ ಬಹವೋಽಪರೇ ॥14॥
ರಾಜನಿಲ್ಲದಿದ್ದರೆ ಪಾಪಿಗಳಿಗೂ ಸಹ ಎಂದೂ ಕ್ಷೇಮವುಂಟಾಗುವುದಿಲ್ಲ. ಒಬ್ಬನ ಹಣವನ್ನು ಇಬ್ಬರು ಕದಿಯುತ್ತಾರೆ. ಇಬ್ಬರ ಹಣವನ್ನು ಬೇರೆ ಅನೇಕರು ಕದಿಯುತ್ತಾರೆ.
ಅದಾಸಃ ಕ್ರಿಯತೇ ದಾಸೋ ಹ್ರಿಯಂತೇ ಚ ಬಲಾತ್ ಸ್ತ್ರಿಯಃ |
ಏತಸ್ಮಾತ್ ಕಾರಣಾದ್ ದೇವಾಃ ಪ್ರಜಾಪಾಲಾನ್ ಪ್ರಚಕ್ರಿರೇ ॥15॥
ದಾಸನಲ್ಲದವನನ್ನು ದಾಸನನ್ನಾಗಿ ಮಾಡುತ್ತಾರೆ. ಬಲಾತ್ಕಾರದಿಂದ ಸ್ತ್ರೀಯರನ್ನು ಅಪಹರಿಸುತ್ತಾರೆ. ಈ ಕಾರಣದಿಂದ ದೇವತೆಗಳು ಪ್ರಜಾಪಾಲಕನಾದ ರಾಜನನ್ನು ಸೃಷ್ಟಿಸಿದರು.
ರಾಜಾ ಚೇನ್ನ ಭವೇಲ್ಲೋಕೇ ಪೃಥಿವ್ಯಾಂ ದಂಡಧಾರಕಃ |
ಶೂಲೇ ಮತ್ಸ್ಯಾನಿವಾಪಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥16॥
ಲೋಕದಲ್ಲಿ ದಂಡಧಾರಕನಾದ ರಾಜನಿಲ್ಲದಿದ್ದರೆ ಶೂಲದಲ್ಲಿ ಪೋಣಿಸಿದ ಮೀನುಗಳಂತೆ ಬಲಿಷ್ಠರಾದವರು ದುರ್ಬಲರಾದವರನ್ನು ಬೇಯಿಸಿಬಿಡುತ್ತಿದ್ದರು.
ಅರಾಜಕಾಃ ಪ್ರಜಾಃ ಪೂರ್ವಂ ವಿನೇಶುರಿತಿ ನಃ ಶ್ರುತಮ್ |
ಪರಸ್ಪರಂ ಭಕ್ಷಯಂತೋ ಮತ್ಸ್ಯಾ ಇವ ಜಲೇ ಕೃಶಾನ್ ॥17॥
ಅರಾಜಕರಾದ ಪ್ರಜೆಗಳು ಒಬ್ಬರನ್ನೊಬ್ಬರು ನೀರಿನಲ್ಲಿ ಸಣ್ಣಮೀನುಗಳನ್ನು ದೊಡ್ಡಮೀನುಗಳು ನುಂಗಿದಂತೆ ಹಿಂದೆ ಪರಸ್ಪರವಾಗಿ ಭಕ್ಷಿಸುತ್ತಾ ವಿನಾಶವನ್ನು ಹೊಂದಿದರು ಎಂದು ನಾವು ಕೇಳಿದ್ದೇವೆ.
ತಾಃ ಸಮೇತ್ಯ ತತಶ್ಚಕ್ರುಃ ಸಮಯಾನಿತಿ ನಃ ಶ್ರುತಮ್ |
ವಾಕ್‌ಕ್ರೂರೋ ದಂಡಪರುಷೋ ಯಶ್ಚ ಸ್ಯಾತ್ ಪಾರದಾರಿಕಃ |
ಯಶ್ಚ ನಃ ಸ್ವಮಥಾದದ್ಯಾತ್ ತ್ಯಾಜ್ಯಾ ನಸ್ತಾದೃಶಾ ಇತಿ ॥18॥
ಆಗ ಅವರೆಲ್ಲರೂ ಸೇರಿ ಒಂದು ಒಪ್ಪಂದವನ್ನು ಮಾಡಿಕೊಂಡರು ಎಂದು ಕೇಳಿದ್ದೇವೆ. ಯಾವನು ಕ್ರೂರವಾದ ಮಾತನ್ನಾಡಿ ಕ್ರೂರವಾದ ಶಿಕ್ಷೆಯನ್ನು ವಿಧಿ- ಸುತ್ತಾ, ಪರಸ್ತ್ರೀಯರಲ್ಲಿ ನಿರತನಾಗಿರುತ್ತಾನೆಯೋ, ಯಾವನು ನಮ್ಮಧನವನ್ನು ಅಪಹರಿಸುತ್ತಾನೆಯೋ ಅಂತಹವರನ್ನು ನಾವು ಪರಿತ್ಯಜಿಸಬೇಕು ಎಂದು ಒಪ್ಪಂದ- ವನ್ನು ಮಾಡಿಕೊಂಡರು.
ವಿಶ್ವಾಸನಾರ್ಥಂ ವರ್ಣಾನಾಂ ಸರ್ವೇಷಾಮವಿಶೇಷತಃ |
ತಾಸ್ತಥಾ ಸಮಯಂ ಕೃತ್ವಾ ಸಮಯೇನಾವತಸ್ಥಿರೇ ॥19॥
ಎಲ್ಲ ವರ್ಣದವರಿಗೂ ಸಮಾನವಾಗಿ ವಿಶ್ವಾಸವನ್ನು ಮೂಡಿಸುವುದಕ್ಕಾಗಿ ಅವರು ಅಂತಹ ಒಪ್ಪಂದವನ್ನು ಮಾಡಿಕೊಂಡು ಅದರಂತೆ ನಡೆದುಕೊಂಡರು.
ಸಹಿತಾಸ್ತಾಸ್ತದಾ ಜಗ್ಮುರಸುಖಾರ್ತಾಃ ಪಿತಾಮಹಮ್ |
ಅನೀಶ್ವರಾ ವಿನಶ್ಯಾಮೋ ಭಗವನ್ನೀಶ್ವರಂ ದಿಶ ॥20॥
ಯಂ ಪೂಜಯೇಮ ಸಂಭೂಯ ಯಶ್ಚ ನಃ ಪರಿಪಾಲಯೇತ್ |
ತಾಭ್ಯೋ ಮನುಂ ವ್ಯಾದಿದೇಶ ಮನುರ್ನಾಭಿನನಂದ ತಾಃ ॥21॥
ಅವರೆಲ್ಲರೂ ಆಗ ದುಃಖಭರಿತರಾಗಿ ಪಿತಾಮಹರಾದ ಬ್ರಹ್ಮದೇವರ ಬಳಿಗೆ ಒಟ್ಟಿಗೆ ಹೋಗಿ `ಪೂಜ್ಯನೇ! ಪ್ರಭುವಿಲ್ಲದೇ ನಾವು ವಿನಾಶವನ್ನು ಹೊಂದಿದ್ದೇವೆ. ನಾವೆಲ್ಲರೂ ಯಾರನ್ನು ಪೂಜಿಸಬಹುದೋ ಯಾರು ನಮ್ಮನ್ನು ರಕ್ಷಿಸುತ್ತಾನೆಯೋ ಅಂತಹ ಒಬ್ಬ ಪ್ರಭುವನ್ನು ಕೊಡು' ಎಂದು ಕೇಳಿದರು. ಬ್ರಹ್ಮದೇವರು ಅವರಿಗೆ ಮನುವನ್ನು ನೀಡಿದರು. ಆದರೆ ಮನುವು ಆ ಪ್ರಜೆಗಳನ್ನು ನೋಡಿ

ಸಂತೋಷ ಪಡಲಿಲ್ಲ.
ಮನುಃ
ಬಿಭೇಮಿ ಕರ್ಮಣಃ ಕ್ರೂರಾದ್ ರಾಜ್ಯಂ ಹಿ ಭೃಶದುಷ್ಕರಮ್ |
ವಿಶೇಷತೋ ಮನುಷ್ಯೇಷು ಮಿಥ್ಯಾವೃತ್ತಿಷು ನಿತ್ಯದಾ ॥22॥
ಮನು ಈ ಕ್ರೂರಕರ್ಮಕ್ಕೆ ನಾನು ಹೆದರುತ್ತೇನೆ. ರಾಜ್ಯಪಾಲನೆಯು ಬಹಳ ಕಷ್ಟಕರವಾದುದು. ಅದರಲ್ಲಿಯೂ ನಿತ್ಯವೂ ಮಿಥ್ಯಾಚಾರಗಳನ್ನುಳ್ಳ ಮನುಷ್ಯರನ್ನು ಪಾಲಿಸುವುದು ಇನ್ನೂ ಕಷ್ಟವಾದುದು.
ಭೀಷ್ಮಃ
ತಮಬ್ರುವನ್ ಪ್ರಜಾ ಮಾ ಭೈಃ ಕರ್ಮಣೈನೋ ಗಮಿಷ್ಯತಿ |
ಪಶೂನಾಮಧಿಪಂಚಾಶದ್ ಹಿರಣ್ಯಸ್ಯ ತಥೈವ ಚ |
ಧಾನ್ಯಸ್ಯ ದಶಮಂ ಭಾಗಂ ದಾಸ್ಯಾಮಃ ಕೋಶವರ್ಧನಮ್ ॥23॥
ಭೀಷ್ಮ ಆಗ ಪ್ರಜೆಗಳು ಅವನನ್ನು ಕುರಿತು `ನೀನು ಹೆದರಬೇಡ. ನಿನ್ನ ಕರ್ಮದಿಂದ ನಿನಗೆ ಪಾಪವು ಪರಿಹಾರವಾಗುವುದು. ನಿನ್ನ ಕೋಶವನ್ನು ಅಭಿವೃದ್ಧಿ- ಪಡಿಸುವುದಕ್ಕಾಗಿ ನಾವು ನಮ್ಮ ಪಶುಗಳ ಆದಾಯದ ಮತ್ತು ಹಿರಣ್ಯದ ಐವತ್ತನೆಯ ಒಂದು ಭಾಗವನ್ನು ಮತ್ತು ಧಾನ್ಯಗಳ ಹತ್ತನೆಯ ಒಂದು ಭಾಗವನ್ನು ನಿನಗೆ ಕೊಡುವೆವು.
ಕನ್ಯಾಂ ಮುಖ್ಯಾಂ ಚಾರುರೂಪಾಂ ವಿವಾಹೇಷೂದ್ಯತಾಸು ಚ |
ಮುಖ್ಯೇನ ಶಸ್ತ್ರಪತ್ರೇಣ ಯೇ ಮನುಷ್ಯಾಃ ಪ್ರಧಾನತಃ |
ಭವಂತಂ ತೇಽನುಯಾಸ್ಯಂತಿ ಮಹೇಂದ್ರಮಿವ ದೇವತಾಃ ॥24॥
ಶ್ರೇಷ್ಠಳಾದ ಸುಂದರಿಯಾದ ಕನ್ಯೆಯನ್ನು ವಿವಾಹ ಮಾಡಿಕೊಡುವೆವು. ಶ್ರೇಷ್ಠ- ವಾದ ಶಸ್ತ್ರಗಳನ್ನು ಮತ್ತು ವಾಹನಗಳನ್ನು ಹೊಂದಿದ ಪ್ರಧಾನರಾದ ಮನುಷ್ಯರು ದೇವತೆಗಳು ಮಹೇಂದ್ರನನ್ನು ಹಿಂಬಾಲಿಸುವಂತೆ ನಿನ್ನನ್ನು ಹಿಂಬಾಲಿಸುವರು.
ಸ ತ್ವಂ ಜಾತಬಲೋ ರಾಜನ್ ದುಷ್ಪ್ರಧರ್ಷಃ ಪ್ರತಾಪವಾನ್ |
ಸುಖೇ ಧಾಸ್ಯತಿ ನಃ ಸರ್ವಾನ್ ಕುಬೇರ ಇವ ನೈರ್ಋತಾನ್ ॥25॥
ಎಲೈ ರಾಜನೇ! ನೀನು ಬಲವನ್ನು ಹೊಂದಿದವನಾಗಿ, ಪ್ರತಾಪಶಾಲಿಯಾಗಿ, ಸೋಲಿಸಲು ಅಸಾಧ್ಯನಾಗಿ, ಕುಬೇರನು ನೈರ್ಋತರನ್ನು ರಕ್ಷಿಸಿದಂತೆ ನಮ್ಮೆಲ್ಲರನ್ನೂ ಸುಖದಲ್ಲಿ ಇಡುವವನಾಗಬೇಕು.
ಯಂ ಚ ಧರ್ಮಂ ಚರಿಷ್ಯಂತಿ ಪ್ರಜಾ ರಾಜ್ಞಾ ಸುರಕ್ಷಿತಾಃ |
ಚತುರ್ಥಂ ತಸ್ಯ ಧರ್ಮಸ್ಯ ತ್ವತ್ಸಂಸ್ಥಂ ನೋ ಭವಿಷ್ಯತಿ ॥26॥
ರಾಜನಿಂದ ಸುರಕ್ಷಿತರಾದ ಪ್ರಜೆಗಳಾದ ನಾವು ಯಾವ ಧರ್ಮವನ್ನು ಆಚ- ರಿಸುತ್ತೇವೆಯೋ ಆ ಧರ್ಮದ ನಾಲ್ಕನೆಯ ಒಂದು ಭಾಗವು ನಿನಗೆ ಸೇರುವುದು.
ತೇನ ಧರ್ಮೇಣ ಮಹತಾ ಸುಖಲುಬ್ಧೇನ ಭಾವಿತಃ |
ಪಾಹ್ಯಸ್ಮಾನ್ ಸರ್ವತೋ ರಾಜನ್ ದೇವಾನಿವ ಶತಕ್ರತುಃ ॥27॥
ಎಲೈ ರಾಜನೇ! ಆ ದೊಡ್ಡ ಸುಖಪ್ರದವಾದ ಧರ್ಮದಿಂದ ಪರಿಶುದ್ಧನಾಗಿ ಇಂದ್ರನು ದೇವತೆಗಳನ್ನು ರಕ್ಷಿಸಿದಂತೆ ನಮ್ಮನ್ನು ಎಲ್ಲ ವಿಪತ್ತುಗಳಿಂದಲೂ ರಕ್ಷಿಸು- ವವನಾಗು.
ವಿಜಯಾಯಾಶು ನಿರ್ಯಾಹಿ ಪ್ರತಪನ್ ರಶ್ಮಿಮಾನಿವ |
ಮಾನಂ ವಿಧಮ ಶತ್ರೂಣಾಂ ಧರ್ಮೋ ಜಯತು ನಸ್ತದಾ ॥28॥
ತನ್ನ ಕಿರಣಗಳಿಂದ ಸುಡುವ ಸೂರ್ಯನಂತೆ ನೀನು ಶತ್ರುಗಳನ್ನು ಜಯಿಸಲು ಶೀಘ್ರವಾಗಿ ದಿಗ್ವಿಜಯಕ್ಕೆ ಹೊರಡುವವನಾಗು. ಶತ್ರುಗಳ ಅಹಂಕಾರವನ್ನು ನಾಶ- ಪಡಿಸು. ನಮ್ಮ ಧರ್ಮಕ್ಕೆ ಆಗ ಜಯವುಂಟಾಗಲಿ. (ಎಂದು ಹೇಳಿದರು)
ಸ ನಿರ್ಯಯೌ ಮಹಾತೇಜಾ ಬಲೇನ ಮಹತಾ ವೃತಃ |
ಮಹಾಭಿಜನಸಂಪನ್ನಸ್ತೇಜಸಾ ಪ್ರಜ್ವಲನ್ನಿವ ॥29॥
ಆಗ ಮಹಾತೇಜಸ್ವಿಯಾದ ಮನುವು ತೇಜಸ್ಸಿನಿಂದ ಬೆಳಗುವವನಂತೆ ಮಹಾ- ಭಿಜನಸಂಪನ್ನನಾಗಿ ದೊಡ್ಡ ಸೇನೆಯಿಂದ ಕೂಡಿಕೊಂಡು ವಿಜಯಕ್ಕೆ ಹೊರಟನು.
ತಸ್ಯ ತಾಂ ಮಹಿಮಾಂ ದೃಷ್ಟ್ವಾ ಮಹೇಂದ್ರಸ್ಯೇವ ದೇವತಾಃ |
ಅಪತತ್ರಸಿರೇ ಸರ್ವೇ ಸ್ವಧರ್ಮೇ ಚ ದಧುರ್ಮನಃ ॥30॥
ಮಹೇಂದ್ರನ ಮಹಿಮೆಯನ್ನು ನೋಡಿದ ದೇವತೆಗಳಂತೆ ಅವನ ಮಹಿಮೆ- ಯನ್ನು ನೋಡಿದ ಪ್ರಜೆಗಳೆಲ್ಲರೂ ಹೆದರಿ ತಮ್ಮ ತಮ್ಮ ಧರ್ಮಗಳಲ್ಲಿ ನಿರತರಾ- ದರು.
ತತೋ ಮಹೀಂ ಪರಿಯಯೌ ಪರ್ಜನ್ಯ ಇವ ವೃಷ್ಟಿಮಾನ್ |
ಶಮಯನ್ ಸರ್ವತಃ ಪಾಪಾನ್ ಸ್ವಕರ್ಮಸು ಚ ಯೋಜಯನ್ ॥31॥
ಆಗ ಮನುವು ಎಲ್ಲ ಕಡೆಗಳಲ್ಲಿಯೂ ಪಾಪಗಳನ್ನು ಶಾಂತಗೊಳಿಸುತ್ತಾ, ಅವರವರ ಕರ್ಮಗಳಲ್ಲಿ ನಿಯೋಜಿಸುತ್ತಾ ಮಳೆಯನ್ನು ಕರೆಯುವ ಪರ್ಜನ್ಯನಂತೆ ಭೂಮಿಯಲ್ಲಿ ಸಂಚರಿಸಿದನು.
ಏವಂ ಯೇ ಭೂತಿಮಿಚ್ಛೇಯುಃ ಪೃಥಿವ್ಯಾಂ ಮಾನವಾಃ ಕ್ವಚಿತ್ |
ಕುರ್ಯೂ ರಾಜಾನಮೇವಾಗ್ರೇ ಪ್ರಜಾನುಗ್ರಹಕಾರಣಾತ್ ॥32॥
ಹೀಗೆ ತಮ್ಮ ಕಲ್ಯಾಣವನ್ನು ಬಯಸುವ ಮಾನವರು ಪ್ರಜೆಗಳಿಗೆ ಅನುಗ್ರಹವನ್ನು ಸಂಪಾದಿಸುವ ದೃಷ್ಟಿಯಿಂದ ಮೊದಲು ರಾಜನನ್ನೇ ಮಾಡಬೇಕು.

ನಮಸ್യೇಯುಶ್ಚ ತಂ ಭಕ್ತ್ಯಾ ಶಿಷ್ಯಾ ಇವ ಗುರುಂ ಸದಾ |
ದೇವಾ ಇವ ಸಹಸ್ರಾಕ್ಷಂ ಪ್ರಜಾ ರಾಜಾನಮಂತಿಕೇ ॥33॥
ಶಿಷ್ಯರು ಗುರುವಿಗೆ ಸದಾ ನಮಸ್ಕಾರ ಮಾಡುವಂತೆ ದೇವತೆಗಳು ಇಂದ್ರನಿಗೆ ನಮಸ್ಕಾರ ಮಾಡುವಂತೆ ಪ್ರಜೆಗಳು ಸಮೀಪದಿಂದ ಯಾವಾಗಲೂ ರಾಜನಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡಬೇಕು.
ಸತ್ಕೃತಂ ಸ್ವಜನೇನೇಹ ಪರೋಽಪಿ ಬಹು ಮನ್ಯತೇ |
ಸ್ವಜನೇನ ತ್ವವಜ್ಞಾತಂ ಪರೇ ಪರಿಭವಂತ್ಯುತ ॥34॥
ತನ್ನ ಜನರಿಂದ ಸತ್ಕೃತನಾದವನನ್ನು ಇನ್ನೊಬ್ಬನೂ ಗೌರವಿಸುತ್ತಾನೆ. ತನ್ನ ಜನ- ರಿಂದ ತಿರಸ್ಕರಿಸಲ್ಪಟ್ಟರೆ ಬೇರೆಯವರೂ ಅವನನ್ನು ಅವಮಾನಗೊಳಿಸುತ್ತಾರೆ.
ರಾಜ್ಞಃ ಪರೈಃ ಪರಿಭವಃ ಸರ್ವೇಷಾಮಸುಖಾವಹಃ |
ತಸ್ಮಾಚ್ಛಸ್ತ್ರಂ ಚ ಪತ್ರಂ ಚ ವಾಸಾಂಸ್ಯಾಭರಣಾನಿ ಚ ॥35॥
ಭೋಜನಾನ್ಯಥ ಪಾನಾನಿ ರಾಜ್ಞೇ ದದ್ಯುರ್ಗೃಹಾಣಿ ಚ |
ಆಸನಾನಿ ಚ ಶಯ್ಯಾಶ್ಚ ಸರ್ವೋಪಕರಣಾನಿ ಚ ॥36॥
ಬೇರೆಯವರಿಂದ ರಾಜನ ಪರಿಭವವು ಎಲ್ಲರಿಗೂ ದುಃಖವನ್ನು ತರುವಂತ- ಹದು. ಆದ್ದರಿಂದ ರಾಜನಿಗೆ ಆಯುಧಗಳನ್ನು, ವಾಹನಗಳನ್ನು, ಶ್ರೇಷ್ಠವಾದ ವಸತ್ರ- ಭರಣಗಳನ್ನು, ಭೋಜನಪಾನಗಳನ್ನು, ಗೃಹಗಳನ್ನು, ಆಸನಗಳನ್ನು, ಶಯನ- ಗಳನ್ನು, ಸರ್ವೋಪಕರಣಗಳನ್ನು ಕೊಡಬೇಕು.
ಗುಪ್ತಾತ್ಮಾ ಸ್ಯಾದ್ ದುರಾಧರ್ಷಃ ಸ್ಮಿತಪೂರ್ವಾಭಿಭಾಷಿತಾ |
ಆಭಾಷಿತಶ್ಚ ಮಧುರಂ ಪ್ರತಿಭಾಷೇತ ಮಾನವಾನ್ ॥37॥
ರಾಜನು ಯಾವಾಗಲೂ ತಾನು ರಕ್ಷಿತನಾಗಿದ್ದು, ಶತ್ರುಗಳಿಂದ ಸೋಲಿಸಲು ಅಸಾಧ್ಯನಾಗಿ, ಮಂದಹಾಸಪೂರ್ವಕವಾಗಿ ಮಾತನಾಡಬೇಕು. ಪ್ರಜೆಗಳು ಮಾತ- ನಾಡಿಸಿದಾಗ ಮಧುರವಾಗಿ ಅವರಿಗೆ ಉತ್ತರವನ್ನು ಕೊಡಬೇಕು.
ಕೃತಜ್ಞೋ ದೃಢಭಕ್ತಿಃ ಸ್ಯಾತ್ ಸಂವಿಭಾಗೀ ಜಿತೇಂದ್ರಿಯಃ |
ಈಕ್ಷಿತಃ ಪ್ರತಿವೀಕ್ಷೇತ ಮೃದು ಚರ್ಜು ಚ ವಲ್ಗು ಚ ॥38॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಷಷ್ಟಿತಮೋಽಧ್ಯಾಯಃ ॥68॥
ರಾಜನು ಕೃತಜ್ಞನೂ, ದೃಢವಾದ ಇಷ್ಟವುಳ್ಳವನೂ, ಜಿತೇಂದ್ರಿಯನೂ, ತನ್ನ ಸಂಪತ್ತನ್ನು ಹಂಚುವವನೂ ಆಗಿರಬೇಕು. ತನ್ನನ್ನು ನೋಡುವವರನ್ನು ಮೃದುವಾಗಿ ನೇರವಾಗಿ ಮತ್ತು ಸುಂದರವಾಗಿ ಪ್ರತಿಯಾಗಿ ನೋಡಬೇಕು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 68ನೆಯ ಅಧ್ಯಾಯವು ಮುಗಿಯಿತು.
0
69. ಅರವತ್ತೊಂಬತ್ತನೆಯ ಅಧ್ಯಾಯ
ಬೃಹಸ್ಪತಿ ಮತ್ತು ವಸುಮನಸರ ಸಂವಾದದಲ್ಲಿ ರಾಜಧರ್ಮಗಳ ವರ್ಣನೆ
ಯುಧಿಷ್ಠಿರಃ
ಕಿಮಾಹುರ್ದೈವತಂ ವಿಪ್ರಾ ರಾಜಾನಂ ಭರತರ್ಷಭ |
ಮನುಷ್ಯಾಣಾಮಧಿಪತಿಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ! ಪಿತಾಮಹನೇ! ಮನುಷ್ಯರ ಅಧಿಪತಿ- ಯಾದ ರಾಜನನ್ನು ಬ್ರಾಹ್ಮಣರು ಏಕೆ ದೇವತೆ ಎಂಬುದಾಗಿ ಹೇಳುತ್ತಾರೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತಿಂ ವಸುಮನಾ ಯಥಾ ಪಪ್ರಚ್ಛ ಭಾರತ ॥2॥
ಭೀಷ್ಮರು ಎಲೈ ಭಾರತನೇ! ಈ ವಿಷಯದಲ್ಲಿಯೂ ಸಹ ವಸುಮನನು ಬೃಹಸ್ಪತಿಗಳನ್ನು ಪ್ರಶ್ನೆ ಮಾಡಿದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ರಾಜಾ ವಸುಮನಾ ನಾಮ ಕೌಸಲ್ಯೋ ಧೀಮತಾಂವರಃ |
ಮಹರ್ಷಿಂ ಪರಿಪಪ್ರಚ್ಛ ಕೃತಪ್ರಜ್ಞೋ(ಜ್ಞಂ) ಬೃಹಸ್ಪತಿಮ್ ॥3॥
ಕೋಸಲದೇಶದ ವಸುಮನನೆಂಬ ಮೇಧಾವಿಗಳಲ್ಲಿ ಶ್ರೇಷ್ಠನಾದ ರಾಜನು ಕೃತಪ್ರಜ್ಞರಾದ ಮಹರ್ಷಿಗಳಾದ ಬೃಹಸ್ಪತಿಗಳನ್ನು ಕುರಿತು ಪ್ರಶ್ನೆ ಮಾಡಿದನು.
ಸರ್ವಂ ವೈನಯಿಕಂ ಕೃತ್ವಾ ವಿನಯಜ್ಞೋ ಬೃಹಸ್ಪತೇಃ |
ದಕ್ಷಿಣಾನಂತರೋ ಭೂತ್ವಾ ಪ್ರಣಮ್ಯ ವಿಧಿಪೂರ್ವಕಮ್ ॥4॥
ವಿಧಿಂ ಪಪ್ರಚ್ಛ ರಾಜ್ಯಸ್ಯ ಸರ್ವಭೂತಹಿತೇ ರತಃ |
ಪ್ರಜಾನಾಂ ಹಿತಮನ್ವಿಚ್ಛನ್ ಧರ್ಮಮೂಲಂ ವಿಶಾಂಪತೇ ॥5॥
ಎಲೈ ರಾಜನೇ! ವಿನಯವನ್ನು ತೋರಿಸುವ ರೀತಿಯನ್ನು ತಿಳಿದ ಅವನು ಬೃಹಸ್ಪತಿಗಳಿಗೆ ವಿನಯವನ್ನು ತೋರಿಸಿ, ಬಹುದಕ್ಷಿಣೆಯನ್ನು ನೀಡಿ, ವಿಧಿಪೂರ್ವಕ- ವಾಗಿ ನಮಸ್ಕಾರವನ್ನು ಮಾಡಿ, ಪ್ರಜೆಗಳ ಧರ್ಮಮೂಲಕವಾದ ಹಿತವನ್ನು ಬಯಸಿ, ಸರ್ವಭೂತಹಿತದಲ್ಲಿ ರತನಾಗಿ ರಾಜ್ಯಪಾಲನೆಯ ಪ್ರಕಾರವನ್ನು ಪ್ರಶ್ನೆ ಮಾಡಿದನು.

ಕೇನ ಭೂತಾನಿ ವರ್ಧಂತೇ ಕ್ಷಯಂ ಗಚ್ಛಂತಿ ಕೇನ ಚ |
ಕಮರ್ಚಂತೋ ಮಹಾಪ್ರಾಜ್ಞ ಸುಖಮತ್ಯಂತಮಾಪ್ನುಯುಃ ॥6॥
ಏತನ್ಮೇ ಶಂಸ ದೇವರ್ಷೇ ಧರ್ಮಕಾಮಾರ್ಥಸಂಶಯಮ್ |
ಎಲೈ ಮಹಾಪ್ರಾಜ್ಞರೇ! ಜೀವರು (ಪ್ರಜೆಗಳು) ಯಾವುದರಿಂದ ಅಭಿವೃದ್ಧಿ- ಯನ್ನು ಹೊಂದುತ್ತಾರೆ? ಯಾವುದರಿಂದ ನಾಶವನ್ನು ಹೊಂದುತ್ತಾರೆ? ಯಾವನನ್ನು ಪೂಜಿಸಿ ಅತ್ಯಂತಸುಖವನ್ನು ಹೊಂದಿಯಾರು? ಎಲೈ ದೇವಋಷಿಗಳೇ! ಧರ್ಮ- ಕಾಮಾರ್ಥಗಳಿಗೆ ಸಂಬಂಧಿಸಿದ ನನ್ನ ಈ ಸಂಶಯವನ್ನು ಪರಿಹರಿಸಿ.
ಇತಿ ಪೃಷ್ಟೋ ಮಹಾರಾಜ್ಞಾ ಕೌಸಲ್ಯೇನಾಮಿತೌಜಸಾ |
ರಾಜಸತ್ಕಾರಮವ್ಯಗ್ರಃ ಶಶಂಸಾಸ್ಮೈ ಬೃಹಸ್ಪತಿಃ ॥7॥
ಅಮಿತಪರಾಕ್ರಮಿಯಾದ ಕೋಸಲಾಧಿಪತಿಯಾದ ಮಹಾರಾಜನಿಂದ ಹೀಗೆ ಪ್ರಶ್ನೆ ಮಾಡಲ್ಪಟ್ಟ ಬೃಹಸ್ಪತಿಗಳು ಅವನಿಗೆ ಸಮಾಧಾನದಿಂದ ರಾಜನನ್ನು ಪೂಜಿಸು- ವುದಕ್ಕೆ ಕಾರಣವನ್ನು ತಿಳಿಸಿದರು.
ರಾಜಮೂಲೋ ಮಹಾರಾಜ ಧರ್ಮೋ ಲೋಕಸ್ಯ ಲಕ್ಷ್ಯತೇ |
ಪ್ರಜಾ ರಾಜಭಯಾದೇವ ನ ಖಾದಂತಿ ಪರಸ್ಪರಮ್ ॥8॥
ಎಲೈ ಮಹಾರಾಜನೇ! ಪ್ರಜೆಗಳ ಧರ್ಮವು ಲೋಕದಲ್ಲಿ ರಾಜನ ಮೂಲಕ- ವಾದುದು ಎಂದು ಕಂಡುಬರುತ್ತದೆ. ರಾಜನ ಭಯದಿಂದಲೇ ಪ್ರಜೆಗಳು ಒಬ್ಬರ- ನ್ನೊಬ್ಬರು ತಿನ್ನುವುದಿಲ್ಲ.
ರಾಜಾ ಹ್ಯೇವಾಖಿಲಂ ಲೋಕಂ ಸಮುದೀರ್ಣಂ ಸಮುತ್ಸುಕಮ್ |
ಪ್ರಸಾದಯತಿ ಧರ್ಮೇಣ ಪ್ರಸಾದ್ಯ ಚ ವಿರಾಜತೇ ॥9॥
ರಾಜನೇ ಸಮೃದ್ಧಿಯಿಂದ ಬೀಗಿದ ಉತ್ಸುಕರಾದ ಎಲ್ಲ ಪ್ರಜೆಗಳನ್ನೂ ಪ್ರಸನ್ನ- ಗೊಳಿಸುತ್ತಾನೆ ಮತ್ತು ಧರ್ಮದಿಂದ ಪ್ರಸನ್ನಗೊಳಿಸಿ ತಾನು ಪ್ರಕಾಶಿಸುತ್ತಾನೆ.
ಯಥಾ ಹ್ಯನುದಯೇ ರಾಜನ್ ಭೂತಾನಿ ಶಶಿಸೂರ್ಯಯೋಃ |
ಅಂಧೇ ತಮಸಿ ಮಜ್ಜೇಯುರಪಶ್ಯಂತಃ ಪರಸ್ಪರಮ್ ॥10॥
ಯಥಾ ಹ್ಯನುದಕೇ ಮತ್ಸ್ಯಾ ನಿರಾಕ್ರಂದೇ ವಿಹಂಗಮಾಃ |
ವಿಹರೇಯುರ್ಯಥಾಕಾಮಮಭಿಸೃತ್ಯ ಪುನಃ ಪುನಃ ॥11॥
ವಿಮಥ್ನ್ಯಾತಿಕ್ರಮೇರಂಶ್ಚ ವಿಷಹ್ಯಾಪಿ ಪರಸ್ಪರಮ್ |
ಅಭಾವಮಚಿರೇಣೈವ ಗಚ್ಛೇಯುರ್ನಾತ್ರ ಸಂಶಯಃ ॥12॥
ಏವಮೇವ ವಿನಾ ರಾಜ್ಞಾ ವಿನಶ್ಯೇಯುರಿಮಾಃ ಪ್ರಜಾಃ |
ಅಂಧೇ ತಮಸಿ ಮಜ್ಜೇಯುರಗೋಪಾಃ ಪಶವೋ ಯಥಾ ॥13॥
ಎಲೈ ರಾಜನೇ! ಚಂದ್ರಸೂರ್ಯರು ಉದಯಿಸದಿದ್ದಾಗ ಪ್ರಜೆಗಳು ಒಬ್ಬರ- ನ್ನೊಬ್ಬರು ಕಾಣದೆ ಹೇಗೆ ಕತ್ತಲೆಯಲ್ಲಿ ಮುಳುಗುತ್ತಾರೆಯೋ, ಹೇಗೆ ನೀರಿಲ್ಲದ ಸ್ಥಳದಲ್ಲಿ ಮತ್ಸ್ಯಗಳು ನಾಶವನ್ನು ಹೊಂದುತ್ತವೆಯೋ, ಹೇಗೆ ಹಿಂಸ್ರಪ್ರಾಣಿಗಳಿರುವ ಆಕಾಶದಲ್ಲಿ ಪಕ್ಷಿಗಳು ಪುನಃ ಪುನಃ ಒಂದನ್ನೊಂದು ಸಮೀಪಿಸಿ ವಿಹಾರಮಾಡಿ- ದರೂ ಪರಸ್ಪರವಾಗಿ ಆಕ್ರಮಿಸಿ ಇನ್ನೊಂದು ಪಕ್ಷಿಯ ಆಕ್ರಮಣವನ್ನು ತಡೆದು- ಕೊಂಡು ಶೀಘ್ರವಾಗಿ ನಿಃಸಂಶಯವಾಗಿ ನಾಶವನ್ನು ಹೊಂದುತ್ತವೆಯೋ, ಹೇಗೆ ಗೋಪಾಲಕನಿಲ್ಲದ ಪಶುಗಳು ಕತ್ತಲೆಯಲ್ಲಿ ಮುಳುಗುತ್ತವೆಯೋ ಅದರಂತೆ ರಾಜನಿಲ್ಲದ ಈ ಪ್ರಜೆಗಳು ನಾಶವನ್ನು ಹೊಂದಿಯಾರು!
ಹರೇಯುರ್ಬಲವಂತೋ ಹಿ ದುರ್ಬಲಾನಾಂ ಪರಿಗ್ರಹಾನ್ |
ಹನ್ಯುರ್ವ್ಯಾಯಚ್ಛಮಾನಾಶ್ಚ ಯದಿ ರಾಜಾ ನ ಪಾಲಯೇತ್ ॥14॥
ರಾಜನು ಪಾಲಿಸದಿದ್ದರೆ ಬಲಿಷ್ಠರಾದ ಪ್ರಜೆಗಳು ದುರ್ಬಲರ ಸ್ವತ್ತುಗಳನ್ನು ಅಪಹರಿಸಿಯಾರು! ಪರಾಕ್ರಮವನ್ನು ಆಶ್ರಯಿಸಿ ಕೊಂದಾರು!
ಯಾನಂ ವಸ್ತ್ರಮಲಂಕಾರಾನ್ ರತ್ನಾನಿ ವಿವಿಧಾನಿ ಚ |
ಹರೇಯುಃ ಸಹಸಾ ಪಾಪಾ ಯದಿ ರಾಜಾ ನ ಪಾಲಯೇತ್ ॥15॥
ರಾಜನು ರಕ್ಷಿಸದಿದ್ದರೆ ಪಾಪಿಗಳಾದವರು ವಾಹನ, ವಸ್ತ್ರ, ಅಲಂಕಾರಗಳು ವಿವಿಧವಾದ ರತ್ನಗಳು ಎಲ್ಲವನ್ನೂ ಬಲಾತ್ಕಾರದಿಂದ ಅಪಹರಿಸಿಯಾರು!
ಮಮೇದಮಿತಿ ಲೋಕೇಽಸ್ಮಿನ್ನ ಭವೇತ್ ಸಂಪರಿಗ್ರಹಃ |
ನ ದಾರಾ ನ ಚ ಪುತ್ರಃ ಸ್ಯಾನ್ನ ಧನಂ ನ ಪರಿಗ್ರಹಃ ॥16॥
ಲೋಕದಲ್ಲಿ ಇದು ನನ್ನದು ಎಂದು ಹೇಳುವ ಸ್ವತ್ತು ಅದು ಪತ್ನಿಯಾಗಲೀ, ಪುತ್ರನಾಗಲೀ, ಧನವಾಗಲೀ, ಉಳಿದ ಸಾಧನಗಳಾಗಲೀ ಯಾವದೂ ಇರಲಾರದು. ರಾಜನು ಪಾಲಿಸದಿದ್ದರೆ ಸರ್ವಲೋಪವುಂಟಾದೀತು!
ಮಾತರಂ ಪಿತರಂ ವೃದ್ಧಮಾಚಾರ್ಯಮತಿಥಿಂ ಗುರುಮ್ |
ಕ್ಲಿಶ್ನೀಯುರಪಿ ಹಿಂಸ್ಯುರ್ವಾ ಯದಿ ರಾಜಾ ನ ಪಾಲಯೇತ್ ॥17॥
ರಾಜನು ರಕ್ಷಿಸದಿದ್ದರೆ ತಂದೆಯನ್ನು, ತಾಯಿಯನ್ನು, ವೃದ್ಧನನ್ನು, ಆಚಾರ್ಯ -ನನ್ನು, ಅತಿಥಿಯನ್ನು, ಗುರುವನ್ನು ಕ್ಲೇಶಗೊಳಿಸಿಯಾರು! ಅಥವಾ ಕೊಂದಾರು!
ಪತೇದ್ ಬಹುವಿಧಂ ಶಸ್ತ್ರಂ ಬಹುಧಾ ಧರ್ಮಚಾರಿಷು |
ಅಧರ್ಮಃ ಪ್ರಗೃಹೀತಃ ಸ್ಯಾದ್ ಯದಿ ರಾಜಾ ನ ಪಾಲಯೇತ್ ॥18॥
ರಾಜನು ಪಾಲಿಸದಿದ್ದರೆ ಧರ್ಮಾಚರಣೆಯನ್ನು ಮಾಡುವವರ ಮೇಲೆ ಅನೇಕ ವಿಧವಾದ ಶಸ್ತ್ರಗಳು ಅನೇಕ ರೀತಿಯಲ್ಲಿ ಬಿದ್ದಾವು!

ಅಧರ್ಮವು ಒಳ್ಳೆಯ ಸ್ವೀಕಾರ -ವನ್ನು ಪಡೆದೀತು!
ವಧಬಂಧಪರಿಕ್ಲೇಶೋ ನಿತ್ಯಮರ್ಥವತಾಂ ಭವೇತ್ |
ಮಮತ್ವಂ ಚ ನ ವಿಂದೇಯುರ್ಯದಿ ರಾಜಾ ನ ಪಾಲಯೇತ್ ॥19॥
ಧನವುಳ್ಳವರಿಗೆ ನಿತ್ಯವೂ ವಧೆ, ಬಂಧ ಪರಿಕ್ಲೇಶಗಳು ಉಂಟಾದಾವು. ರಾಜನು ಪಾಲಿಸದಿದ್ದರೆ ನನ್ನದು ಎಂದು ಹೇಳುವ ಯಾವ ಸ್ವತ್ತೂ ಉಳಿಯಲಾರದು.
ಅಂತಶ್ಚಾಕಾಶಮೇವ ಸ್ಯಾಲ್ಲೋಕೋಽಯಂ ದಸ್ಯುಸಾದ್ ಭವೇತ್ |
ಪತೇಚ್ಚ ನರಕಂ ಘೋರಂ ಯದಿ ರಾಜಾ ನ ಪಾಲಯೇತ್ ॥20॥
ಇಂತಹ ಅಪಚಾರಗಳಿಗೆ ಆಕಾಶವೇ ಎಲ್ಲೆಯಾದೀತು! ಈ ಲೋಕವು ದಸ್ಯುಗಳ ವಶವಾದೀತು! ರಾಜನು ಪಾಲಿಸದಿದ್ದರೆ ಇಲ್ಲಿಯೇ ಘೋರವಾದ ನರಕವುಂಟಾ- ದೀತು!
ನ ಯೋನಿದೋಷೋ ವರ್ತೇತ ನ ಕೃಷಿರ್ನ ವಣಿಕ್ಪಥಃ |
ಮಜ್ಜೇದ್ ಧರ್ಮಸ್ತ್ರಯೀ ನ ಸ್ಯಾದ್ ಯದಿ ರಾಜಾ ನ ಪಾಲಯೇತ್ ॥21॥
ರಾಜನು ಪಾಲಿಸದಿದ್ದರೆ ಯೋನಿದೋಷವೆಂಬುದೇ ಇರಲಾರದು. ಕೃಷಿ- ಯಾಗಲೀ ವಾಣಿಜ್ಯಮಾರ್ಗಗಳಾಗಲೀ ಇರಲಾರವು! ಧರ್ಮವು ನಶಿಸಿ ಹೋದೀತು! ಮೂರು ವೇದಗಳು ಇರಲಾರವು!
ನ ಯಜ್ಞಾಃ ಸಂಪ್ರವರ್ತೇರನ್ ವಿಧಿವತ್ ಸ್ವಾಪ್ತದಕ್ಷಿಣಾಃ |
ನ ವಿವಾಹಾಃ ಸಮಾಜೋ ವಾ ಯದಿ ರಾಜಾ ನ ಪಾಲಯೇತ್ ॥22॥
ಬಹಳ ದಕ್ಷಿಣೆಯನ್ನು ಕೊಟ್ಟು ವಿಧಿವತ್ತಾಗಿ ಮಾಡುವ ಯಜ್ಞಗಳು ನಡೆ- ಯಲಾರವು. ರಾಜನು ಪಾಲಿಸದಿದ್ದರೆ ವಿವಾಹಗಳಾಗಲೀ, ಸಭೆಗಳಾಗಲೀ ನಡೆಯ- ಲಾರವು.
ನ ವೃಷಾಃ ಸಂಪ್ರವರ್ತೇರನ್ನ ಮಥ್ಯೇರಂಶ್ಚ ಗರ್ಗರಾಃ |
ಘೋಷಾಃ ಪ್ರಣಾಶಂ ಗಚ್ಛೇಯುರ್ಯದಿ ರಾಜಾ ನ ಪಾಲಯೇತ್ ॥23॥
(ರಾಜನು ಪಾಲಿಸದಿದ್ದರೆ) ಹಳ್ಳಿಗಳಲ್ಲಿ ಹೋರಿಗಳು ಹಸುಗಳಲ್ಲಿ ಗರ್ಭಾಧಾನ ಮಾಡಲಾರವು. ಮೊಸರಿನ ಪಾತ್ರೆಗಳು ಕಡೆಯಲ್ಪಡಲಾರವು. ಗೋಪಾಲಕರ ಹಳ್ಳಿ- ಗಳು ನಾಶವನ್ನು ಹೊಂದಿಯಾವು!
ತ್ರಸ್ತಮುದ್ವಿಗ್ನಹೃದಯಂ ಹಾಹಾಭೂತಮಚೇತನಮ್ |
ಕ್ಷಣೇನ ವಿನಶೇತ್ ಸರ್ವಂ ಯದಿ ರಾಜಾ ನ ಪಾಲಯೇತ್ ॥24॥
ರಾಜನು ಪಾಲಿಸದಿದ್ದರೆ ಎಲ್ಲವೂ ಒಂದು ಕ್ಷಣದಲ್ಲಿ ಮನಸ್ಸಿನ ಉದ್ವೇಗದಿಂದ ಕೂಡಿ ಹಾಹಾಕಾರವನ್ನು ಮಾಡಿ ಪ್ರಜ್ಞಾಶೂನ್ಯವಾಗಿ ನಶಿಸಿಹೋದೀತು!
ನ ಸಂವತ್ಸರಸತ್ರಾಣಿ ತಿಷ್ಠೇಯುರಕುತೋಭಯಾಃ |
ವಿಧಿವದ್ ದಕ್ಷಿಣಾವಂತಿ ಯದಿ ರಾಜಾ ನ ಪಾಲಯೇತ್ ॥25॥
ರಾಜನು ಪಾಲಿಸದಿದ್ದರೆ ವಿಧಿಪೂರ್ವಕವಾಗಿ ದಕ್ಷಿಣಾಯುಕ್ತವಾಗಿ ಮಾಡುವ ಸಂವತ್ಸರಸತ್ರಗಳು ನಿರ್ಭಯವಾಗಿ ನಡೆಯಲಾರವು.
ಬ್ರಾಹ್ಮಣಾಶ್ಚತುರೋ ವೇದಾನ್ ನಾಧೀಯೇರಂಸ್ತಪಸ್ವಿನಃ |
ವಿದ್ಯಾಸ್ನಾತಾಸ್ತಪಃ ಸ್ನಾತಾ ಯದಿ ರಾಜಾ ನ ಪಾಲಯೇತ್ ॥26॥
ರಾಜನು ಪಾಲಿಸದಿದ್ದರೆ ತಪಸ್ವಿಗಳೂ, ವಿದ್ಯಾಪಾರಂಗತರೂ, ತಪಃ ಪಾರಂ- ಗತರೂ ಆದ ಬ್ರಾಹ್ಮಣರು ನಾಲ್ಕುವೇದಗಳನ್ನು ಅಧ್ಯಯನ ಮಾಡಲಾರರು.
ಹಸ್ತಾಹಸ್ತಂ ಸ ಪರಿಮೃಶೇತ್ ಭಿದ್ಯೇರನ್ ಸರ್ವಸೇತವಃ |
ಭಯಾರ್ತಂ ವಿದ್ರವೇತ್ ಸರ್ವಂ ಯದಿ ರಾಜಾ ನ ಪಾಲಯೇತ್ ॥27॥
ಮುಷ್ಟಾಮುಷ್ಟಿಕಲಹವು ಪ್ರಾರಂಭವಾದೀತು! ಎಲ್ಲ ಕಟ್ಟುಪಾಡುಗಳೂ ಭಗ್ನ- ವಾದಾವು! ರಾಜನು ಪಾಲಿಸದಿದ್ದರೆ ಭಯದಿಂದ ಹೆದರಿ ಎಲ್ಲವೂ ಓಡಿ- ಹೋದೀತು!
ನ ಲಭೇದ್ ಧರ್ಮಸಂಶ್ಲೇಷಂ ಹತವಿಗ್ರಹತೋ ಜನಃ |
ಹರ್ತಾ ಸ್ವಸ್ವೇಂದ್ರಿಯೋ ಗಚ್ಛೇದ್ ಯದಿ ರಾಜಾ ನ ಪಾಲಯೇತ್ ॥28॥
ಮೋಹಕ್ಕೂ ಕಲಹಕ್ಕೂ ಸಿಲುಕಿದ ಜನರು ಧರ್ಮದ ಸಂಬಂಧವನ್ನೇ ಹೊಂದ- ಲಾರರು! ರಾಜನು ಪಾಲಿಸದಿದ್ದರೆ ಧನಾದಿಗಳ ಅಪಹಾರವನ್ನು ಮಾಡುವವನು ನಿಶ್ಚಿಂತೆಯಿಂದ ಹೋದಾನು!
ಅನಯಾಃ ಸಂಪ್ರವರ್ತೇರನ್ ಭವೇದ್ ವೈ ವರ್ಣಸಂಕರಃ |
ದುರ್ಭಿಕ್ಷಮಾವಿಶೇದ್ ರಾಷ್ಟ್ರಂ ಯದಿ ರಾಜಾ ನ ಪಾಲಯೇತ್ ॥29॥
ರಾಜನು ಪಾಲಿಸದಿದ್ದರೆ ಅನ್ಯಾಯಗಳು ಉಂಟಾದಾವು. ವರ್ಣಸಂಕರವು ಉಂಟಾದೀತು! ರಾಜ್ಯಕ್ಕೆ ದುರ್ಭಿಕ್ಷವು ಬಂದೀತು!
ವಿವೃತ್ಯ ಹಿ ಯಥಾಕಾಮಂ ಗೃಹದ್ವಾರಾಣಿ ಶೇರತೇ |
ಮನುಷ್ಯಾ ರಕ್ಷಿತಾ ರಾಜ್ಞಾ ಸಮಂತಾದಕುತೋಭಯಾಃ ॥30॥
ರಾಜನು ರಕ್ಷಿಸಿದರೆ ಪ್ರಜೆಗಳು ಎಲ್ಲ ಕಡೆಗಳಲ್ಲಿಯೂ ಮನೆಯ ಬಾಗಿಲನ್ನು ತೆರೆದು ತಮ್ಮ ಮನಸ್ಸಿಗೆ ಬಂದಂತೆ ನಿದ್ರೆಯನ್ನು ಮಾಡುತ್ತಾರೆ.
ನಾಕ್ರುಷ್ಟಂ ಸಹತೇ ಕಶ್ಚಿತ್ ಕುತೋ ಹಸ್ತಸ್ಯ ಲಂಘನಮ್ |
ಯದಿ ರಾಜಾ ನ ಸಮ್ಯಗ್ ಗಾಂ ರಕ್ಷಯತ್ಯತಿಧಾರ್ಮಿಕಃ |
ಯದಿ ರಾಜಾ ಮನುಷ್ಯೇಷು ತ್ರಾತಾ ಭವತಿ ಧಾರ್ಮಿಕಃ ॥31॥

ರಾಜನು ಅತಿಧಾರ್ಮಿಕನಾಗಿ ಭೂಮಿಯನ್ನು ರಕ್ಷಿಸದಿದ್ದರೆ ಒಬ್ಬನ ಮಾತನ್ನು ಇನ್ನೊಬ್ಬನು ಸಹಿಸಲಾರನು. ಪ್ರೀತಿಯ ಹಸ್ತಲಾಘವವು ಎಲ್ಲಿಂದ ಬರಬೇಕು. ರಾಜನು ಧಾರ್ಮಿಕನಾದರೆ ಮನುಷ್ಯರನ್ನು ರಕ್ಷಿಸುವನು.
ಸ್ತ್ರಿಯಶ್ಚಾಪುರುಷಾ ಮಾರ್ಗಂ ಸರ್ವಾಲಂಕಾರಭೂಷಿತಾಃ |
ನಿರ್ಭಯಾಃ ಪ್ರತಿಪದ್ಯಂತೇ ಯದಾ ರಕ್ಷತಿ ಭೂಮಿಪಃ ॥32॥
ರಾಜನು ಧಾರ್ಮಿಕನಾಗಿ ಮನುಷ್ಯರನ್ನು ರಕ್ಷಿಸುವವನಾದರೆ ಸ್ತ್ರೀಯರು ಮತ್ತು ಪುರುಷರು ಸರ್ವಾಲಂಕಾರಭೂಷಿತರಾಗಿ ಮಾರ್ಗಗಳಲ್ಲಿ ನಿರ್ಭಯರಾಗಿ ಸಂಚ- ರಿಸುವರು.
ಧರ್ಮಮೇವ ಪ್ರಪದ್ಯಂತೇ ನ ಹಿಂಸಂತಿ ಪರಸ್ಪರಮ್ |
ಅನುಗೃಹ್ಣಂತಿ ಚಾನ್ಯೋನ್ಯಂ ಯದಾ ರಕ್ಷತಿ ಭೂಮಿಪಃ ॥33॥
ರಾಜನು ರಕ್ಷಣೆ ಮಾಡುವ ಕಾಲದಲ್ಲಿ ಪ್ರಜೆಗಳು ಧರ್ಮವನ್ನೇ ಆಶ್ರಯಿಸು- ತ್ತಾರೆ. ಪರಸ್ಪರವಾಗಿ ಹಿಂಸಿಸುವುದಿಲ್ಲ. ಪರಸ್ಪರವಾಗಿ ಉಪಕಾರವನ್ನು ಮಾಡುತ್ತಾರೆ.
ಯಜಂತೇ ಚ ತ್ರಯೋ ವರ್ಣಾ ಮಹಾಯಜ್ಞೈಃ ಪೃಥಗ್ವಿಧೈಃ |
ಯುಕ್ತಾಶ್ಚಾಧೀಯತೇ ಶಾಸ್ತ್ರಂ ಯದಾ ರಕ್ಷತಿ ಭೂಮಿಪಃ ॥34॥
ಬಹುವಿಧವಾದ ದೊಡ್ಡ ಯಜ್ಞಗಳಿಂದ ಮೂರು ವರ್ಣದವರೂ ಯಾಗ- ವನ್ನು ಮಾಡುತ್ತಾರೆ. ರಾಜನು ಭೂಮಿಯನ್ನು ರಕ್ಷಿಸುವಾಗ ಯೋಗ್ಯರಾದವರು ಶಾಸ್ತ್ರಾಧ್ಯಯನವನ್ನು ಮಾಡುತ್ತಾರೆ.
ವಾರ್ತಾಮೂಲೋ ಹ್ಯಯಂ ಲೋಕಸ್ತ್ರಯ್ಯಾ ವೈ ಧಾರ್ಯತೇ ಸದಾ |
ತತ್ ಸರ್ವಂ ವರ್ತತೇ ಸಮ್ಯಗ್ ಯದಾ ರಕ್ಷತಿ ಭೂಮಿಪಃ ॥35॥
ವಾಣಿಜ್ಯಮೂಲವಾದ ಈ ಲೋಕವು ಮೂರು ವೇದಗಳಿಂದ ಧರಿಸಲ್ಪಡುತ್ತದೆ. ರಾಜನು ರಕ್ಷಿಸುವವನಾದರೆ ಅವೆಲ್ಲವೂ ಸರಿಯಾಗಿ ನಡೆಯುತ್ತದೆ.
ಯದಾ ರಾಜಾ ಧುರಂ ಶ್ರೇಷ್ಠಾಮಾದಾಯ ವಹತಿ ಪ್ರಜಾಃ |
ಮಹತಾ ಬಲಯೋಗೇನ ತದಾ ಲೋಕಃ ಪ್ರಸೀದತಿ ॥36॥
ಯಾವಾಗ ರಾಜನು ಶ್ರೇಷ್ಠವಾದ ಭಾರವನ್ನು ಹೊತ್ತು, ದೊಡ್ಡ ಸೈನ್ಯದೊಂದಿಗೆ ಪ್ರಜೆಗಳ ರಕ್ಷಣೆಯ ಭಾರವನ್ನು ಹೊರುತ್ತಾನೆಯೋ ಆಗ ಲೋಕವು ಪ್ರಸನ್ನ- ವಾಗುತ್ತದೆ.
ಯಸ್ಯಾಭಾವೇ ಚ ಭೂತಾನಾಮಭಾವಃ ಸ್ಯಾತ್ ಸಮಂತತಃ |
ಭಾವೇ ಚ ಭಾವೋ ನಿತ್ಯಃ ಸ್ಯಾತ್ ಕಸ್ತಂ ನ ಪ್ರತಿಪೂಜಯೇತ್ ॥37॥
ಯಾವನಿಲ್ಲದಿದ್ದರೆ ಎಲ್ಲ ಕಡೆಗಳಲ್ಲಿಯೂ ಎಲ್ಲ ಮನುಷ್ಯರು ಮತ್ತು ಪಶುಗಳು ನಾಶವನ್ನು ಹೊಂದುವವೋ, ಯಾವನಿದ್ದರೆ ನಿತ್ಯವೂ ಎಲ್ಲವೂ ಉಳಿಯುವವೋ ಅಂತಹ ರಾಜನನ್ನು ಯಾವನು ಪೂಜಿಸಲಾರ?
ತಸ್ಯ ಯೋ ವಹತೇ ಭಾರಂ ಸರ್ವಲೋಕಸುಖಾವಹಮ್ |
ತಿಷ್ಠನ್ ಪ್ರಿಯಹಿತೇ ರಾಜ್ಞ ಉಭೌ ಲೋಕಾವಿಮೌ ಜಯೇತ್ ॥38॥
ರಾಜನಿಗೆ ಪ್ರಿಯನೂ ಹಿತನೂ, ಆಗಿದ್ದು ರಾಜನು ಹೊರುವ, ಸರ್ವಲೋಕಕ್ಕೆ ಸುಖವನ್ನು ತಂದುಕೊಡುವ, ಭಾರದಲ್ಲಿ ಯಾವನು ಸಹಕಾರಿಯಾಗಿ ಭಾರವನ್ನು ಹೊರುತ್ತಾನೆಯೋ ಅವನೂ ಈ ಎರಡು ಲೋಕಗಳನ್ನು ಹೊಂದಿಯಾನು!
ಯಸ್ತಸ್ಯ ಪುರುಷಃ ಪಾಪಂ ಮನಸಾಪ್ಯನುಚಿಂತಯೇತ್ |
ಅಸಂಶಯಮಿಹ ಕ್ಲಿಷ್ಟಃ ಪ್ರೇತ್ಯಾಪಿ ನರಕಂ ಪತೇತ್ ॥39॥
ಯಾವ ಪುರುಷನು ಅಂತಹ ರಾಜನಿಗೆ ಮನಸ್ಸಿನಲ್ಲಿಯಾದರೂ ಪಾಪವನ್ನು ಚಿಂತಿಸುತ್ತಾನೆಯೋ ಅವನು ನಿಃಸಂಶಯವಾಗಿ ಇಲ್ಲಿ ಕ್ಲೇಶವನ್ನು ಹೊಂದಿ ಮರಣಾ- ನಂತರದಲ್ಲಿಯೂ ನರಕದಲ್ಲಿ ಬಿದ್ದಾನು?
ನ ಹಿ ಜಾತ್ವವಮಂತವ್ಯೋ ಮನುಷ್ಯ ಇತಿ ಭೂಮಿಪಃ |
ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥40॥
ರಾಜನನ್ನು ಮನುಷ್ಯನೆಂಬ ಭಾವನೆಯಿಂದ ಎಂದೂ ಅವಮಾನ ಮಾಡ- ಬಾರದು. ರಾಜನೆಂದರೆ ಮನುಷ್ಯರೂಪದಲ್ಲಿರುವ ದೊಡ್ಡ ದೇವತೆ ಎಂದು ತಿಳಿಯ -ಬೇಕು.
ಕುರುತೇ ಪಂಚ ರೂಪಾಣಿ ಕಾಲಯುಕ್ತಾನಿ ಯಃ ಸದಾ |
ಭವತ್ಯಗ್ನಿಸ್ತಥಾದಿತ್ಯೋ ಮೃತ್ಯುರ್ವೈಶ್ರವಣೋ ಯಮಃ ॥41॥
ರಾಜನು ಯಾವಾಗಲೂ ಆಯಾಕಾಲಕ್ಕೆ ತಕ್ಕಂತೆ ಐದು ರೂಪಗಳನ್ನು ಧರಿಸು- ತ್ತಾನೆ. ಅವನು ಅಗ್ನಿಯಾಗುತ್ತಾನೆ; ಸೂರ್ಯನಾಗುತ್ತಾನೆ; ಮೃತ್ಯುವೂ, ಕುಬೇರನೂ, ಯಮನೂ ಆಗುತ್ತಾನೆ.
ಯದಾ ಹ್ಯಾಸೀದತಃ ಪಾಪಾನ್ ದಹತ್ಯುಗ್ರೇಣ ತೇಜಸಾ |
ಮಿಥ್ಯೋಪಚರಿತೋ ರಾಜಾ ತದಾ ಭವತಿ ಪಾವಕಃ ॥42॥
ಪಾಪಿಗಳಾದವರು ತನ್ನ ಸಮೀಪಕ್ಕೆ ಬಂದರೆ ಅವರನ್ನು ತನ್ನ ತೇಜಸ್ಸಿನಿಂದ ದಹಿಸುತ್ತಾನೆ. ಸುಳ್ಳಿನಿಂದ ವ್ಯವಹರಿಸಲ್ಪಟ್ಟಾಗ ರಾಜನು ಅಗ್ನಿಯಾಗುತ್ತಾನೆ.
ಯದಾ ಪಶ್ಯತಿ ಚಾರೇಣ ಸರ್ವಭೂತಾನಿ ಭೂಮಿಪಃ |
ಕ್ಷೇಮಂ ಚ ಕೃತ್ವಾ ವ್ರಜತಿ ತದಾ ಭವತಿ ಭಾಸ್ಕರಃ ॥43॥
ಯಾವಾಗ ರಾಜನಾದವನು ಚಾರರ ಮೂಲಕ ಎಲ್ಲ ಪ್ರಜೆಗಳನ್ನು ನೋಡಿ, ಕ್ಷೇಮವನ್ನು ಮಾಡಿ ಮುಂದೆ ಸಾಗುತ್ತಾನೆಯೋ ಆಗ ಅವನು ಸೂರ್ಯನಾಗು- ತ್ತಾನೆ.

ಅಶುಚೀಂಶ್ಚ ಯದಾ ಕ್ರುದ್ಧಃ ಕ್ಷಿಣೋತಿ ಶತಶೋ ನರಾನ್ |
ಸಪುತ್ರಪೌತ್ರಾನ್ ಸಾಮಾತ್ಯಾಂಸ್ತಥಾ ಭವತಿ ಸೋಽಂತಕಃ ॥44॥
ಅಶುಚಿಗಳಾದ ಜನರ ಮೇಲೆ ಕೋಪಗೊಂಡು ನೂರಾರು ಸಂಖ್ಯೆಯಲ್ಲಿ ಪುತ್ರಪೌತ್ರರಿಂದ ಮತ್ತು ಅಮಾತ್ಯರಿಂದ ಕೂಡಿದ ಅಂತಹ ನರರನ್ನು ಅಥವಾ ರಾಜರನ್ನು ನಾಶಮಾಡುವಾಗ ಅವನು ಮೃತ್ಯುವಾಗುತ್ತಾನೆ.
ಯದಾ ತ್ವಧಾರ್ಮಿಕಾನ್ ಸರ್ವಾಂಸ್ತೀಕ್ಷ್ಣೈರ್ದಂಡೈರ್ನಿಯಚ್ಛತಿ |
ಧಾರ್ಮಿಕಾಂಶ್ಚಾನುಗೃಹ್ಣಾತಿ ಭವತ್ಯಥ ಯಮಸ್ತಥಾ ॥45॥
ಯಾವಾಗ ಅಧಾರ್ಮಿಕರೆಲ್ಲರನ್ನೂ ತೀಕ್ಷ್ಣವಾದ ಶಿಕ್ಷೆಯಿಂದ ನಿಯಂತ್ರಿಸಿ, ಧಾರ್ಮಿಕರಿಗೆ ಅನುಗ್ರಹವನ್ನು ಮಾಡುತ್ತಾನೆಯೋ ಆಗ ಅವನು ಯಮನಾಗು- ತ್ತಾನೆ.
ಯದಾ ತು ಧನಧಾರಾಭಿಸ್ತರ್ಪಯತ್ಯುಪಕಾರಿಣಃ |
ಆಚ್ಛಿನತ್ತಿ ಚ ರತ್ನಾನಿ ವಿವಿಧಾನ್ಯಪಕಾರಿಣಾಮ್ ॥46॥
ಶ್ರಿಯಂ ದದಾತಿ ಕಸ್ಮೈಚಿತ್ ಕಸ್ಮಾಚ್ಚಿದಪಕರ್ಷತಿ |
ತದಾ ವೈಶ್ರವಣೋ ರಾಜನ್ಲೋಕೇ ಭವತಿ ಭೂಮಿಪಃ ॥47॥
ಯಾವಾಗ ಉಪಕಾರ ಮಾಡಿದವರಿಗೆ ಧನದ ಮಳೆಯನ್ನು ಸುರಿಸುತ್ತಾನೆಯೋ, ಅಪಕಾರವನ್ನು ಮಾಡಿದವರ ವಿವಿಧರತ್ನಗಳನ್ನು ಅವರಿಂದ ಸೆಳೆದುಕೊಳ್ಳು- ತ್ತಾನೆಯೋ, ಒಬ್ಬನಿಗೆ ಸಂಪತ್ತನ್ನುನೀಡಿ, ಇನ್ನೊಬ್ಬರಿಂದ ಸಂಪತ್ತನ್ನು ಕಸಿದುಕೊಳ್ಳು- ತ್ತಾನೆಯೋ ಎಲೈ ರಾಜನೇ! ಆಗ ರಾಜನು ಕುಬೇರನಾಗುತ್ತಾನೆ.
ನಾಸ್ಯಾಪವಾದೇ ಸ್ಥಾತವ್ಯಂ ದಕ್ಷೇಣಾಕ್ಲಿಷ್ಟಕರ್ಮಣಾ |
ಧರ್ಮ್ಯಮಾಕಾಂಕ್ಷತಾ ಲಾಭಮೀಶ್ವರಸ್ಯಾನಸೂಯತಾ ॥48॥
ದಕ್ಷನೂ, ಅಕ್ಲಿಷ್ಟಕಾರಿಯೂ, ಧರ್ಮವನ್ನು ಬಯಸುವವನೂ, ಅಸೂಯಾ- ರಹಿತನೂ, ರಾಜನ ಅನುಗ್ರಹವನ್ನು ಬಯಸುವವನೂ ಆದವನು ರಾಜನನ್ನು ನಿಂದಿಸುತ್ತಿರುವಾಗ ಅಲ್ಲಿ ನಿಲ್ಲಬಾರದು.
ನ ಹಿ ರಾಜ್ಞಃ ಪ್ರತೀಪಾನಿ ಕುರ್ವನ್ ಸುಖಮವಾಪ್ನುಯಾತ್ |
ಪುತ್ರೋಭ್ರಾತಾ ವಯಸ್ಯೋ ವಾ ಯದ್ಯಪ್ಯಾತ್ಮಸಮೋ ಭವೇತ್ ॥49॥
ರಾಜನಿಗೆ ವಿರೋಧಮಾಡುವವನು ಪುತ್ರನಾಗಲಿ, ಸಹೋದರನಾಗಲಿ, ಸ್ನೇಹಿತ -ನಾಗಲಿ, ರಾಜನಿಗೆ ಸಮಾನನಾದವನಾದವನೇ ಆಗಲಿ ಅವನಿಗೆ ಸುಖವುಂಟಾಗ- ಲಾರದು.
ಕುರ್ಯಾತ್ ಕೃಷ್ಣಗತಿಃ ಶೇಷಂ ಜ್ವಲಿತೋಽನಿಲಸಾರಥಿಃ |
ನ ತು ರಾಜ್ಞಾಽಭಿಪನ್ನಸ್ಯ ಶೇಷಂ ಕ್ವಚನ ವಿದ್ಯತೇ ॥50॥
ವಾಯುಸಹಾಯವುಳ್ಳ ಅಗ್ನಿಯು ಜ್ವಲಿಸಿದರೆ ಸ್ವಲ್ಪಭಾಗವನ್ನು ಉಳಿಸಬಹುದು. ಆದರೆ ರಾಜನಿಗೆ ವಿರೋಧಮಾಡಿದವರಿಗೆ ಅಲ್ಪಭಾಗವೂ ಉಳಿಯುವುದಿಲ್ಲ.
ತಸ್ಯ ಸರ್ವಾಣಿ ರಕ್ಷ್ಯಾಣಿ ದೂರತಃ ಪರಿವರ್ಜಯೇತ್ |
ಮೃತ್ಯೋರಿವ ಜುಗುಪ್ಸೇತ ರಾಜಸ್ವಹರಣಾನ್ನರಃ ॥51॥
ರಾಜನಿಗೆ ಸಂಬಂಧಿಸಿದ ಕೋಶ-ಧನಾದಿಗಳನ್ನು ದೂರದಿಂದಲೇ ಪರಿತ್ಯಜಿಸ- ಬೇಕು. ಮೃತ್ಯುವನ್ನು ನೋಡಿ ಹೆದರುವಂತೆ ರಾಜಸ್ವವನ್ನು ಅಪಹರಣಮಾಡುವವ- ರಿಂದ ಜುಗುಪ್ಸೆಗೊಂಡು ದೂರವಿರಬೇಕು.
ನಶ್ಯೇದವಿಮೃಶನ್ ಸದ್ಯೋ ಮೃಗಃ ಕೂಟಮಿವ ಸ್ಪೃಶನ್ |
ಆತ್ಮಸ್ವಮಿವ ಸಂರಕ್ಷೇದ್ ರಾಜಸ್ವಮಿಹ ಬುದ್ಧಿಮಾನ್ ॥52॥
ವಿಚಾರಮಾಡದೇ ರಾಜನ ಸ್ವತ್ತನ್ನು ಸ್ಪರ್ಶಿಸುವವನು ಕಪಟಯಂತ್ರವನ್ನು ಪ್ರವೇಶಿಸುವ ಮೃಗದಂತೆ ನಾಶವನ್ನು ಹೊಂದಿಯಾನು! ವಿವೇಕಿಯಾದವನು ರಾಜಸ್ವ -ವನ್ನು ತನ್ನ ಆಸ್ತಿಯಂತೆ ರಕ್ಷಿಸಬೇಕು.
ಮಹಾಂತಂ ನರಕಂ ಘೋರಮಪ್ರತಿಷ್ಠಮಚೇತಸಃ |
ಪತಂತಿ ಚಿರರಾತ್ರಾಯ ರಾಜವಿತ್ತಾಪಹಾರಿಣಃ ॥53॥
ರಾಜವಿತ್ತವನ್ನು ಅಪಹಾರಮಾಡುವವರು ದೊಡ್ಡ, ಘೋರವಾದ, ನೆಲೆ ಇಲ್ಲದ, ಪ್ರಜ್ಞಾನಾಶಕವಾದ ನರಕದಲ್ಲಿ ಬಹುಕಾಲದವರೆಗೆ ಬೀಳುತ್ತಾರೆ.
ರಾಜಾ ಭೋಜೋ ವಿರಾಟ್ ಸಮ್ರಾಟ್ ಕ್ಷತ್ರಿಯೋ ಭೂಪತಿರ್ನೃಪಃ |
ಯ ಏವಂ ಸ್ತೂಯತೇ ಶಬ್ದೈಃ ಕಸ್ತಂ ನಾರ್ಚಿತುಮಿಚ್ಛತಿ ॥54॥
ರಾಜನಾದವನು ಎಲ್ಲ ಜನರಿಗೂ ಸುಖವನ್ನು ಕೊಡುವುದರಿಂದ ಭೋಜ ಎನಿಸುವನು. ವಿಶೇಷವಾಗಿ ಪ್ರಕಾಶಿಸುವುದರಿಂದ ವಿರಾಟ್ ಎನಿಸುವನು. ಚೆನ್ನಾಗಿ ಪ್ರಕಾಶಿಸುವುದರಿಂದ ಸಮ್ರಾಟ್ ಎನಿಸುವನು. ಪ್ರಜೆಗಳನ್ನು ಉಂಟಾಗಬಹುದಾದ ಗಾಯಗಳಿಂದ ರಕ್ಷಿಸುವುದರಿಂದ ಕ್ಷತ್ರಿಯನೆನಿಸುವನು. ಭೂಮಿಗೆ ಒಡೆಯನಾ- ದವನು. ಪ್ರಜೆಗಳಿಗೆ ಒಡೆಯನಾದವನು. ಯಾವ ರಾಜನನ್ನು ಹೀಗೆ ಅನೇಕ ಶಬ್ದ- ಗಳಿಂದ ಸ್ತೋತ್ರ ಮಾಡುತ್ತಾರೆಯೋ ಅಂತಹವನನ್ನು ಪೂಜಿಸಲು ಯಾವನು ಬಯಸುವುದಿಲ್ಲ?
ತಸ್ಮಾದ್ ಬುಭೂಷುರ್ನಿಯತೋ ಜಿತಾತ್ಮಾ ಸಂಯತೇಂದ್ರಿಯಃ |
ಮೇಧಾವೀ ಸ್ಮೃತಿಮಾನ್ ದಕ್ಷಃ ಸಂಶ್ರಯೇತ ಮಹೀಪತಿಮ್ ॥55॥
ಆದ್ದರಿಂದ ತನ್ನ ಕಲ್ಯಾಣವನ್ನು ಬಯಸುವವನು ನಿಯಮದಿಂದ ಕೂಡಿ ಇಂದ್ರಿಯಜಯವನ್ನು ಹಾಗೂ ಮನೋಜಯವನ್ನು ಹೊಂದಿದವನಾಗಿ ಮೇಧಾವಿ- ಯಾಗಿ, ದಕ್ಷನಾಗಿ ಒಳ್ಳೆಯ ಸ್ಮೃತಿಯನ್ನು ಹೊಂದಿ ರಾಜನನ್ನು ಆಶ್ರಯಿಸಬೇಕು.
ಕೃತಜ್ಞಂ ಪ್ರಾಜ್ಞಮಕ್ಷುದ್ರಂ ದೃಢಭಕ್ತಿಂ ಜಿತೇಂದ್ರಿಯಮ್ |

ಧರ್ಮನಿತ್ಯಂ ಸ್ಥಿತಂ ಸ್ಥಿತ್ಯಾಂ ಮಂತ್ರಿಣಂ ಪೂಜಯೇನ್ನೃಪಃ ॥56॥
ರಾಜನಾದರೋ ಕೃತಜ್ಞನೂ, ಪ್ರಾಜ್ಞನೂ, ಕ್ಷುದ್ರವ್ರತನವಿಲ್ಲದವನೂ, ತನ್ನಲ್ಲಿ ದೃಢಭಕ್ತಿಯುಳ್ಳವನೂ, ಜಿತೇಂದ್ರಿಯನೂ, ನಿತ್ಯವೂ ಧರ್ಮರತನೂ, ಒಳ್ಳೆಯ ಸ್ಥಿತಿವಂತನೂ ಆದ ಮಂತ್ರಿಯನ್ನು ಪೂಜಿಸಬೇಕು.
ದೃಢಭಕ್ತಿಂ ಕೃತಪ್ರಜ್ಞಂ ಧರ್ಮಜ್ಞಂ ಸಂಯತೇಂದ್ರಿಯಮ್ |
ಶೂರಮಕ್ಷುದ್ರಕರ್ಮಾಣಂ ಪ್ರಸಿದ್ಧಜನಮಾಶ್ರಯೇತ್ ॥57॥
ಮತ್ತು ದೃಢಭಕ್ತಿಯುಳ್ಳ, ಸ್ಥಿತಪ್ರಜ್ಞನಾದ, ಧರ್ಮಜ್ಞನಾದ, ಇಂದ್ರಿಯ ಜಯವುಳ್ಳ, ಉದಾರಕರ್ಮವನ್ನು ಮಾಡುವ, ಶೂರನಾದ, ಪ್ರಸಿದ್ಧನಾದ ಪ್ರಜೆಯನ್ನು(ಪ್ರಜೆಗಳನ್ನು) ಆಶ್ರಯಿಸಬೇಕು.
ರಾಜಾ ಪ್ರಗಲ್ಭಂ ಪುರುಷಂ ಕರೋತಿ
ರಾಜಾ ಕೃಶಂ ಬೃಂಹಯತೇ ಮನುಷ್ಯಮ್ |
ರಾಜಾಭಿಪನ್ನಸ್ಯ ಕುತಃ ಸುಖಾನಿ
ರಾಜಾಭ್ಯುಪೇತಂ ಸುಖಿನಂ ಕರೋತಿ ॥58॥
ರಾಜನು ಒಬ್ಬ ಸಾಮಾನ್ಯಪುರುಷನನ್ನು ವಿದ್ವಾಂಸನನ್ನಾಗಿ ಮಾಡುತ್ತಾನೆ. ಕೃಶ- ನಾದ ಪುರುಷನನ್ನು ಅಭಿವೃದ್ಧಿಪಡಿಸುತ್ತಾನೆ. ರಾಜನಿಗೆ ವಿರೋಧ ಮಾಡಿದರೆ ಸುಖವು ಎಲ್ಲಿಂದ ಬಂದೀತು? ರಾಜನು ತನ್ನನ್ನು ಆಶ್ರಯಿಸಿದವರನ್ನು ಸುಖಿಗಳನ್ನಾಗಿ ಮಾಡುತ್ತಾನೆ.
ರಾಜಾ ಪ್ರಜಾನಾಂ ಪ್ರಥಮಂ ಶರೀರಂ
ಪ್ರಜಾಶ್ಚ ರಾಜ್ಞೋಽಪ್ರತಿಮಂ ಶರೀರಮ್ |
ರಾಜ್ಞಾ ವಿಹೀನಾ ನ ಭವಂತಿ ದೇಶಾ
ದೇಶೈರ್ವಿಹೀನಾ ನ ನೃಪಾ ಭವಂತಿ ॥59॥
ರಾಜನು ಪ್ರಜೆಗಳಿಗೆ ಶ್ರೇಷ್ಠವಾದ ಶರೀರದಂತಿರುವವನು. ಪ್ರಜೆಗಳೂ ಸಹ ರಾಜನಿಗೆ ಅಸದೃಶವಾದ ಶರೀರದಂತೆ. ರಾಜನಿಲ್ಲದೆ ದೇಶಗಳು ಉಳಿಯುವುದಿಲ್ಲ. ದೇಶಗಳಿಲ್ಲದೆ ರಾಜನೂ ಉಳಿಯುವುದಿಲ್ಲ.
ನರಾಧಿಪಶ್ಚಾಪ್ಯನುಶಿಷ್ಯ ಮೇದಿನೀಂ
ದಮೇನ ಸತ್ಯೇನ ಚ ಸೌಹೃದೇನ |
ಮಹದ್ಭಿರಿಷ್ಟ್ವಾ ಕ್ರತುಭಿರ್ಮಹಾಯಶಾಃ
ತ್ರಿವಿಷ್ಟಪೇ ಸ್ಥಾನಮುಪೈತಿ ಸತ್ಕೃತಮ್ ॥60॥
ರಾಜರು ಭೂಮಿಯನ್ನು ಇಂದ್ರಿಯನಿಗ್ರಹದಿಂದಲೂ, ಸತ್ಯದಿಂದಲೂ ಮತ್ತು ಪ್ರೀತಿಯಿಂದಲೂ ಆಳಿ ಮಹಾಯಜ್ಞಗಳನ್ನು ಆಚರಿಸಿ, ಸ್ವರ್ಗಲೋಕದಲ್ಲಿ ಗೌರವ ಯುತವಾದ ಸ್ಥಾನವನ್ನು ಹೊಂದುತ್ತಾರೆ.
ಸ ಏವಮುಕ್ತೋ ಗುರುಣಾ ಕೌಸಲ್ಯೋ ರಾಜಸತ್ತಮಃ |
ಪ್ರಯತ್ನಾತ್ ಕೃತವಾನ್ ವೀರಃ ಪ್ರಜಾನಾಂ ಪರಿಪಾಲನಮ್ ॥61॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಸಪ್ತತಿತಮೋಽಧ್ಯಾಯಃ ॥69॥
ಬೃಹಸ್ಪತ್ಯಾಚಾರ್ಯರಿಂದ ಹೀಗೆ ಹೇಳಲ್ಪಟ್ಟ ಕೋಸಲಾಧಿಪತಿಯಾದ, ರಾಜ- ಶ್ರೇಷ್ಠನಾದ, ವೀರನಾದ ವಸುಮನನು ಪ್ರಜೆಗಳ ಪರಿಪಾಲನೆಯ ವಿಷಯದಲ್ಲಿ ಬಹಳ ಪ್ರಯತ್ನವನ್ನು ಮಾಡಿದನು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 69ನೆಯ ಅಧ್ಯಾಯವು ಮುಗಿಯಿತು.
0
70. ಎಪ್ಪತ್ತನೆಯ ಅಧ್ಯಾಯ
ಯುದ್ಧಕಾಲದಲ್ಲಿ ಮತ್ತು ಕ್ಷೇಮಕಾಲದಲ್ಲಿ ರಾಜವೃತ್ತಕಥನ
ಯುಧಿಷ್ಠಿರಃ
ಪಾರ್ಥಿವೇನ ವಿಶೇಷೇಣ ಕಿಂ ಕಾರ್ಯಮವಶಿಷ್ಯತೇ |
ಕಥಂ ರಕ್ಷ್ಯೋ ಜನಪದಃ ಕಥಂ ವಧ್ಯಾಶ್ಚ ಶತ್ರವಃ ॥1॥
ಕಥಂ ಚಾರಂ ಪ್ರಯುಂಜೀತ ವರ್ಣಾನ್ ವಿಶ್ವಾಸಯೇತ್ ಕಥಮ್ |
ಕಥಂ ಭೃತ್ಯಾನ್ ಕಥಂ ದಾರಾನ್ ಕಥಂ ಪುತ್ರಾಂಶ್ಚ ಭಾರತ ॥2॥
ಯುಧಿಷ್ಠಿರ ಎಲೈ ಭಾರತನೇ! ರಾಜನಾದವನು ವಿಶೇಷವಾಗಿ ಮಾಡಬೇಕಾದ ಕಾರ್ಯವು ಯಾವುದು? ರಾಜ್ಯವನ್ನು ಹೇಗೆ ರಕ್ಷಿಸಬೇಕು? ಮತ್ತು ಶತ್ರುಗಳನ್ನು ಹೇಗೆ ಸಂಹರಿಸಬೇಕು? ಚಾರರನ್ನು ಹೇಗೆ ನಿಯೋಜಿಸಬೇಕು? ನಾಲ್ಕು ವರ್ಣದ- ವರನ್ನು ಹೇಗೆ ವಿಶ್ವಾಸಪಾತ್ರರನ್ನಾಗಿ ಮಾಡಬೇಕು? ಭೃತ್ಯರನ್ನು, ಪತ್ನಿಯರನ್ನು ಮತ್ತು ಪುತ್ರರನ್ನು ಹೇಗೆ ನೋಡಿಕೊಳ್ಳಬೇಕು?
ಭೀಷ್ಮಃ
ರಾಜವೃತ್ತಂ ಮಹಾರಾಜ ಶೃಣುಷ್ವಾವಹಿತೋಽಖಿಲಮ್ |
ಯತ್ ಕಾರ್ಯಂ ಪಾರ್ಥಿವೇನಾದೌ ಪಾರ್ಥಿವಪ್ರಕೃತೇನ ವಾ ॥3॥
ಭೀಷ್ಮರು ಎಲೈ ಮಹಾರಾಜನೇ! ರಾಜನಾದವನು ಅಥವಾ ರಾಜನ ಸಪ್ತ- ಪ್ರಕೃತಿಗಳಲ್ಲಿ ಸೇರಿದ ಅಮಾತ್ಯಮೊದಲಾದವರು ಮೊದಲು ಏನು ಮಾಡಬೇಕೆಂಬ ರಾಜವೃತ್ತವನ್ನು ಸಮಗ್ರವಾಗಿ ಅವಧಾನದಿಂದ ಕೇಳು.
ಆತ್ಮಾ ಜೇಯಃ ಸದಾ ರಾಜ್ಞಾ ತತೋ ಜೇಯಾಶ್ಚ ಶತ್ರವಃ |
ಅಜಿತಾತ್ಮಾ ನರಪತಿರ್ವಿಜಯೇತ ಕಥಂ ಪರಾನ್ ॥4॥

ರಾಜನು ಮೊದಲು ತನ್ನನ್ನು ತಾನು ಜಯಿಸಿಕೊಳ್ಳಬೇಕು. ಅನಂತರ ಶತ್ರುವನ್ನು ಜಯಿಸಬೇಕು. ತನ್ನನ್ನೇ ಜಯಿಸಿಕೊಳ್ಳಲಾರದ ರಾಜನು ಇನ್ನೊಬ್ಬರನ್ನು ಹೇಗೆ ಜಯಿಸಿಯಾನು?

ಏತಾವಾನಾತ್ಮಜಿತಃ ಪಂಚವರ್ಗವಿನಿಗ್ರಹಃ |
ಜಿತೇಂದ್ರಿಯೋ ನರಪತಿರ್ಬಾಧಿತುಂ ಶಕ್ನುಯಾದರೀನ್ ||5||

ತನ್ನನ್ನು ತಾನು ಜಯಿಸುವುದು ಎಂದರೆ ಶಬ್ದಸ್ಪರ್ಶಾದಿಪಂಚವರ್ಗವನ್ನು ನಿಯಂತ್ರದಲ್ಲಿಟ್ಟುಕೊಳ್ಳುವುದು ಎಂದರ್ಥ. ಎಂದರೆ ಜಿತೇಂದ್ರಿಯನಾಗಿರಬೇಕು ಎಂದರ್ಥ. ಜಿತೇಂದ್ರಿಯನಾದ ರಾಜನು ಶತ್ರುಗಳನ್ನು ಬಾಧಿಸಲು ಸಮರ್ಥ- ನಾದಾನು!

ನ್ಯಸೇತ ಗುಲ್ಮಾನ್ ದುರ್ಗೇಷು ಸಂಧೌ ಚ ಕುರುನಂದನ |
ನಗರೋಪವನೇ ಚೈವ ಪುರೋದ್ಯಾನೇಷು ಚೈವ ಹ ||6||
ಸಂಸ್ಥಾನೇಷು ಚ ಸರ್ವೇಷು ಕುಟೇಷು ನಗರಸ್ಯ ಚ |
ಮಧ್ಯೇ ಚ ನರಶಾರ್ದೂಲ ತಥಾ ರಾಜನಿವೇಶನೇ ||7||

ಎಲೈ ಕುರುನಂದನನನೇ! ಕೋಟೆಗಳಲ್ಲಿ, ಆಯಕಟ್ಟಿನ ಪ್ರದೇಶದಲ್ಲಿ, ನಗರದ ಬಾಹ್ಯವನಗಳಲ್ಲಿ, ನಗರದ ಒಳಗಿರುವ ಉದ್ಯಾನವನಗಳಲ್ಲಿ, ಎಲ್ಲ ಪ್ರಾಂತಗಳಲ್ಲಿ, ನಗರದ ಮಧ್ಯ ಮತ್ತು ಬೇರೆ ಬೇರೆ ಭಾಗಗಳಲ್ಲಿ, ಅರಮನೆಯಲ್ಲಿ, ಸೈನ್ಯದ ತುಕಡಿಗಳನ್ನು ನಿಯೋಜಿಸಬೇಕು.

ಪ್ರಣಧೀಂಶ್ಚ ತತಃ ಕುರ್ಯಾಜ್ಜಡಾಂಧಬಧಿರಾಕೃತೀನ್ |
ಪುಂಸಃ ಪರೀಕ್ಷಿತಾನ್ ಪ್ರಾಜ್ಞಾನ್ ಕ್ಷುತ್ಪಿಪಾಸಾತಪಕ್ಷಮಾನ್ ||8||

ಅನಂತರ ಪರೀಕ್ಷಿತರಾದ, ಪ್ರಾಜ್ಞರಾದ, ಹಸಿವು ನೀರಡಿಕೆ ಮತ್ತು ಬಿಸಿಲು- ಗಳನ್ನು ತಡೆಯಲು ಸಮರ್ಥರಾದ, ಜಡಾಂಧಬಧಿರರ ಆಕೃತಿಯನ್ನು ಧರಿಸಿದ ಗೂಢಚಾರರನ್ನು ನಿಯೋಜಿಸಬೇಕು.

ಅಮಾತ್ಯೇಷು ಚ ಸರ್ವೇಷು ಮಿತ್ರೇಷು ತ್ರಿವಿಧೇಷು ಚ |
ಪುತ್ರೇಷು ಚ ಮಹಾರಾಜ ಪ್ರಣಿದಧ್ಯಾತ್ ಸಮಾಹಿತಃ ||9||

ಎಲೈ ಮಹಾರಾಜನೇ! ಅಮಾತ್ಯರು, ಎಲ್ಲ ಸ್ನೇಹಿತರು, ಶತ್ರುಮಿತ್ರ ಉದಾ- ಸೀನರು, ಪುತ್ರರು ಎಲ್ಲರಲ್ಲಿಯೂ ಗೂಢಚಾರರನ್ನು ನಿಯಮಿಸಬೇಕು.

ಪುರೇ ಜನಪದೇ ಚೈವ ತಥಾ ಸಾಮಂತರಾಜಸು |
ಯಥಾ ನ ವಿದ್ಯುರನ್ಯೋನ್ಯಂ ಪ್ರಣಿಧೇಯಾಸ್ತಥಾ ಹಿ ತೇ ||10||

ಹಾಗೆಯೇ ರಾಜಧಾನಿಯಲ್ಲಿಯೂ, ಸಾಮಂತರಾಜರಲ್ಲಿಯೂ, ಬೇರೆ ಬೇರೆ ಭಾಗಗಳಲ್ಲಿಯೂ ಗೂಢಚಾರರು ಪರಸ್ಪರವಾಗಿ ತಿಳಿಯದಂತೆ ಅವರನ್ನು ನಿಯೋ- ಜಿಸಬೇಕು.

ಚಾರಾಂಶ್ಚ ವಿದ್ಯಾತ್ ಪ್ರಹಿತಾನ್ ಪರೇಣ ಭರತರ್ಷಭ |
ಆಪಣೇಷು ವಿಹಾರೇಷು ಸಮವಾಯೇಷು ಭಿಕ್ಷುಷು ||11||
ಆರಾಮೇಷು ತಥೋದ್ಯಾನೇ ಪಂಡಿತಾನಾಂ ಸಮಾಗಮೇ |
ವೇಶೇಷು ಚತ್ವರೇ ಚೈವ ಸಭಾಸ್ವಾವಸಥೇಷು ಚ ||12||

ಎಲೈ ಭರತರ್ಷಭನೇ! ಮಾರುಕಟ್ಟೆಗಳಲ್ಲಿ, ವಿಹಾರಸ್ಥಾನಗಳಲ್ಲಿ, ಜನಗಳ ಗುಂಪುಗಳಲ್ಲಿ, ಭಿಕ್ಷುಕರ ಸಮೂಹದಲ್ಲಿ, ಉದ್ಯಾನವನಗಳಲ್ಲಿ, ಉಪವನಗಳಲ್ಲಿ, ಪಂಡಿತರ ಸಮೂಹದಲ್ಲಿ, ವೇಶ್ಯಾವಾಟಿಕೆಗಳಲ್ಲಿ, ಸಭೆಗಳಲ್ಲಿ, ಮನೆಗಳಲ್ಲಿ ಮತ್ತು ಚತ್ವರಗಳಲ್ಲಿ ಪರರಾಜರು ನೇಮಿಸಿರಬಹುದಾದ ಗೂಢಚಾರರನ್ನು ತಿಳಿದುಕೊಳ್ಳ- ಬೇಕು.

ಏವಂ ವಿಹನ್ಯಾಚ್ಚಾರೇಣ ಪರಚಾರಂ ವಿಚಕ್ಷಣಃ |
ಚಾರೇಣ ವಿಹಿತಂ ಸರ್ವಂ ಹತಂ ಭವತಿ ಪಾಂಡವ ||13||

ವಿಚಕ್ಷಣನಾದವನು ಈ ರೀತಿಯಲ್ಲಿ ಇನ್ನೊಬ್ಬರ ಚಾರರನ್ನು ತನ್ನ ಚಾರರಿಂದ ನಾಶಗೊಳಿಸಬೇಕು. ಎಲೈ ಪಾಂಡವನೇ! ಚಾರರಿಂದ ಹತರಾದರೆ ಎಲ್ಲವೂ (ವಿರೋಧವೆಲ್ಲವೂ) ಹತವಾಗುತ್ತದೆ.

ಯದಾ ತು ಹೀನಂ ನೃಪತಿರ್ವಿದ್ಯಾದಾತ್ಮಾನಮಾತ್ಮನಾ |
ಅಮಾತ್ಯೈಃ ಸಹ ಸಮ್ಮಂತ್ರ್ಯ ಕುರ್ಯಾತ್ ಸಂಧಿಂ ಬಲೀಯಸಾ ||14||

ಯಾವಾಗ ರಾಜನು ಬಲಿಷ್ಠನಾದ ಶತ್ರುವಿಗಿಂತ ತಾನು ಹೀನನಾಗಿದ್ದೇನೆಂದು ಭಾವಿಸುವನೋ ಆಗ ಅಮಾತ್ಯರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಬಲಿಷ್ಠರಾಜನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳಬೇಕು.

ವಿದ್ವಾಂಸಃ ಕ್ಷತ್ರಿಯಾ ವೈಶ್ಯಾ ಬ್ರಾಹ್ಮಣಾಶ್ಚ ಬಹುಶ್ರುತಾಃ |
ದಂಡನೀತೌ ತು ನಿಷ್ಪನ್ನಾ ಮಂತ್ರಿಣಃ ಪೃಥಿವೀಪತೇಃ ||15||

ವಿದ್ವಾಂಸರೂ, ಬಹುಶ್ರುತರೂ, ದಂಡನೀತಿಯಲ್ಲಿ ನಿಪುಣರೂ ಆದ ಬ್ರಾಹ್ಮಣರು. ಕ್ಷತ್ರಿಯರು ಮತ್ತು ವೈಶ್ಯರು ರಾಜನಿಗೆ ಮಂತ್ರಿಗಳಾಗುತ್ತಾರೆ.

ಪ್ರಷ್ಟವ್ಯೋ ಬ್ರಾಹ್ಮಣಃ ಪೂರ್ವಂ ನೀತಿಶಾಸ್ತ್ರಾರ್ಥತತ್ತ್ವವಿತ್ |
ಪಶ್ಚಾತ್ ಪೃಚ್ಛೇತ ಭೂಪಾಲಂ ಕ್ಷತ್ರಿಯಂ ನೀತಿಕೋವಿದಮ್ |
ವೈಶ್ಯಶೂದ್ರೌ ತಥಾ ಭೂಯಃ ಶಾಸ್ತ್ರಜ್ಞೌ ಹಿತಕಾರಿಣೌ ||16||

ಮಂತ್ರಾಲೋಚನೆಯ ಸಂದರ್ಭದಲ್ಲಿ ನೀತಿಶಾಸ್ತ್ರತತ್ತ್ವವನ್ನು ತಿಳಿದ ಬ್ರಾಹ್ಮಣ- ನನ್ನು ಮೊದಲು ಕೇಳಬೇಕು. ಅನಂತರ ನೀತಿಕೋವಿದನಾದ ಕ್ಷತ್ರಿಯನಾದ ರಾಜ- ನನ್ನು ಕೇಳಬೇಕು. ಅನಂತರ ಹಿತಕಾರಿಗಳಾದ ಶಾಸ್ತ್ರಜ್ಞರಾದ ವೈಶ್ಯಶೂದ್ರರನ್ನು ಪುನಃ ಕೇಳಬೇಕು.

ಅಜ್ಞಾಯಮಾನೇ ಹೀನತ್ವೇ ಕುರ್ಯಾತ್ ಸಂಧಿಂ ಪರೇಣ ವೈ |
ಲಿಪ್ಸುರ್ವಾ ಕಂಚಿದೇವಾರ್ಥಂ ತ್ವರಮಾಣೋ ವಿಚಕ್ಷಣಃ ॥17॥
ತನ್ನ ದೌರ್ಬಲ್ಯವು ಶತ್ರುವಿಗೆ ತಿಳಿಯುವುದಕ್ಕಿಂತ ಮೊದಲೇ ಅಥವಾ ಶತ್ರು - ರಾಜನಿಂದ ಏನಾದರೂ ಪ್ರಯೋಜನವನ್ನು ಪಡೆಯಬೇಕಾಗಿದ್ದಲ್ಲಿ ವಿಚಕ್ಷಣನಾದ- ವನು ಶತ್ರುವಿನ ಜೊತೆಯಲ್ಲಿ ಮೊದಲೇ ಸಂಧಿಯನ್ನು ಮಾಡಿಕೊಳ್ಳಬೇಕು.
ಗುಣವಂತೋ ಮಹೋತ್ಸಾಹಾ ಧರ್ಮಜ್ಞಾಃ ಸಾಧವಶ್ಚ ಯೇ |
ಸಂದಧೀತ ನೃಪಸ್ತೈಶ್ಚ ರಾಷ್ಟ್ರಂ ಧರ್ಮೇಣ ಪಾಲಯನ್ ॥18॥
ಧರ್ಮದಿಂದ ರಾಜ್ಯವನ್ನು ಪಾಲಿಸುವ ರಾಜನು, ತನ್ನ ದೌರ್ಬಲ್ಯಾದಿಗಳನ್ನು ಗಮನಿಸದೇ ಗುಣವಂತರೂ ಮಹೋತ್ಸಾಹಭರಿತರೂ ಧರ್ಮಜ್ಞರೂ ಸಾಧು- ಸ್ವಭಾವದವರೂ ಆದ ರಾಜರ ಜೊತೆಯಲ್ಲಿ ಯಾವಾಗಲೂ ಸಂಧಿಯನ್ನು ಮಾಡಿ- ಕೊಳ್ಳಬೇಕು.
ಉಚ್ಛಿದ್ಯಮಾನಮಾತ್ಮಾನಂ ಜ್ಞಾತ್ವಾ ರಾಜಾ ಮಹಾಮತಿಃ |
ಪೂರ್ವಾಪಕಾರಿಣೋ ಹನ್ಯಾಲ್ಲೋಕದ್ವಿಷ್ಟಾಂಶ್ಚ ಸರ್ವಶಃ ॥19॥
ಮಹಾಬುದ್ಧಿಯುಳ್ಳ ರಾಜನು ತನ್ನ ಪ್ರಾಣಕ್ಕೆ ಅಪಾಯವಿದೆಯೆಂದು ಗೂಢ- ಚಾರರ ಮೂಲಕ ತಿಳಿದ ತತ್ಕ್ಷಣ ಹಿಂದೆ ತನಗೆ ಅಪಕಾರಮಾಡಿದವರನ್ನು ಮತ್ತು ಪ್ರಜೆಗಳ ದ್ವೇಷಿಗಳನ್ನು ಸಂಪೂರ್ಣವಾಗಿ ನಾಶಗೊಳಿಸಬೇಕು.
ಯೋ ನೋಪಕರ್ತುಂ ಶಕ್ನೋತಿ ನಾಪಕರ್ತುಂ ಮಹೀಪತಿಃ |
ಅಶಕ್ಯರೂಪಶ್ಚೋದ್ಧರ್ತುಮುಪೇಕ್ಷ್ಯಸ್ತಾದೃಶೋ ಭವೇತ್ ॥20॥
ಯಾವ ರಾಜನು ಪ್ರಜೆಗಳಿಗೆ ಉಪಕಾರವನ್ನಾಗಲೀ ಅಥವಾ ಅಪಕಾರವನ್ನಾ- ಗಲೀ ಮಾಡಲು ಅಸಮರ್ಥನೋ ಮತ್ತು ತಿದ್ದಲು ಸಾಧ್ಯವಿಲ್ಲದವನೋ ಅಂತಹವನನ್ನು ಪ್ರಜೆಗಳು ಉಪೇಕ್ಷೆ ಮಾಡುತ್ತಾರೆ.
ಯಾತ್ರಾಯಾಂ ಯದಿ ವಿಜ್ಞಾತಮನಾಕ್ರಂದಮನಂತರಮ್ |
ವ್ಯಾಸಕ್ತಂ ಚ ಪ್ರಮತ್ತಂ ಚ ದುರ್ಬಲಂ ಚ ವಿಚಕ್ಷಣಃ ॥21॥
ಯಾತ್ರಾಮಾಜ್ಞಾಪಯೇದ್ ವೀರಃ ಕಲ್ಯಪುಷ್ಟಬಲಃ ಸುಖೀ |
ಪೂರ್ವಂ ಕೃತ್ವಾ ವಿಧಾನಂ ಚ ಯಾತ್ರಾಯಾಂ ನಗರೇ ತಥಾ |
ಅಂತಃಪುರೇ ಚ ರಾಷ್ಟ್ರೇ ಚ ಅಧ್ಯಕ್ಷೇಷು ಚ ಸರ್ವಶಃ ॥22॥
ತನ್ನ ಯುದ್ಧಯಾತ್ರೆಯು ಶತ್ರುವಿಗೆ ತಿಳಿದರೆ ಆಗ ಯೋಧರನ್ನು ಯುದ್ಧ- ಪ್ರಸಂಗವಿಲ್ಲದಂತೆ ಸುಮ್ಮನಾಗಿಸಬೇಕು. ವಿಚಕ್ಷಣನಾದ ರಾಜನು ತನ್ನ ಶತ್ರುವು ಬೇರೆಯ ಕಾರ್ಯದಲ್ಲಿ ನಿರತನಾಗಿದ್ದಾನೆಂದು, ಪ್ರಮಾದದಿಂದ ಕೂಡಿದ್ದಾನೆಂದು, ಅಥವಾ ದುರ್ಬಲನೆಂದು ತಿಳಿದಾಗ ತಾನು ಶ್ರೇಷ್ಠವಾದ, ಪುಷ್ಟವಾದ ಸೈನ್ಯವುಳ್ಳ- ವನಾಗಿ ವೀರನಾಗಿ, ಸುಖಿಯಾಗಿ ಯಾತ್ರೆಯನ್ನು ಆಜ್ಞಾಪಿಸಬೇಕು. ಅದಕ್ಕಿಂತ ಮೊದಲು ನಗರದಲ್ಲಿಯೂ, ಅಂತಃಪುರದಲ್ಲಿಯೂ, ರಾಷ್ಟ್ರದಲ್ಲಿಯೂ, ಪ್ರಧಾನ ಪುರುಷರಲ್ಲಿಯೂ ಸರ್ವರಕ್ಷಣೆಯ ವ್ಯವಸ್ಥೆಯನ್ನು ಮಾಡಿ ಅನಂತರ ಯಾತ್ರೆಯನ್ನು ಆಜ್ಞಾಪಿಸಬೇಕು.
ನ ಚ ವಶ್ಯೋ ಭವೇದಸ್ಯ ನೃಪೋ ಯದ್ಯಪಿ ವೀರ್ಯವಾನ್ |
ಹೀನಶ್ಚ ಬಲವೀರ್ಯಾಭ್ಯಾಂ ಕರ್ಶಯಂಸ್ತತ್ಪರೋ ವಸೇತ್ ॥23॥
ತನಗಿಂತ ಪರಾಕ್ರಮಶಾಲಿಯಾದ ರಾಜನು ತನಗೆ ವಶನಾಗದಿದ್ದರೂ, ಹೀನ- ನಾದ ರಾಜನು ತನ್ನ ಸಾಮರ್ಥ್ಯ ಮತ್ತು ಪರಾಕ್ರಮಗಳಿಂದ ಅವನನ್ನು ನಿಧಾನವಾಗಿ ಪೀಡಿಸುತ್ತಾ, ಅವನ ಜೊತೆಯಲ್ಲಿ ಸ್ನೇಹವನ್ನೇ ಹೊಂದಿ ಸಮಯವನ್ನು ನಿರೀಕ್ಷಿಸ- ಬೇಕು.
ರಾಷ್ಟ್ರಂ ಚ ಪೀಡಯೇತ್ ತಸ್ಯ ಶಸ್ತ್ರಾಗ್ನಿವಿಷಮೂರ್ಚ್ಛನೈಃ |
ಅಮಾತ್ಯವಲ್ಲಭಾನಾಂ ಚ ವಿವಾದಾಂಸ್ತಸ್ಯ ಕಾರಯೇತ್ |
ವರ್ಜನೀಯಂ ಸದಾ ಯುದ್ಧಂ ರಾಜ್ಯಕಾಮೇನ ಧೀಮತಾ ॥24॥
ಅಂತಹ ಶತ್ರುವಿನ ರಾಷ್ಟ್ರವನ್ನು ಶಸ್ತ್ರಾಗ್ನಿವಿಷಪ್ರಯೋಗಗಳಿಂದ ಪೀಡಿಸಬೇಕು. ಅವನ ಅಮಾತ್ಯರಿಗೂ ಮತ್ತು ಪ್ರಿಯರಾದವರಿಗೂ ವಿವಾದಗಳನ್ನು ಉಂಟು ಮಾಡಬೇಕು. ಮೇಧಾವಿಯಾದ, ರಾಜ್ಯವನ್ನು ಬಯಸುವ ರಾಜನು ಯುದ್ಧವನ್ನು ಯಾವಾಗಲೂ ವರ್ಜಿಸಬೇಕು.
ಉಪಾಯೈಸ್ತ್ರಿಭಿರಾದಾನಮರ್ಥಸ್ಯಾಹ ಬೃಹಸ್ಪತಿಃ |
ಸಾಂತ್ವೇನಾನುಪ್ರದಾನೇನ ಭೇದೇನ ಚ ನರಾಧಿಪ |
ಯಮರ್ಥಂ ಶಕ್ನುಯಾತ್ ಪ್ರಾಪ್ತುಂ ತೇನ ತುಷ್ಯೇದ್ಧಿ ಪಂಡಿತಃ ॥25॥
ಎಲೈ ರಾಜನೇ! ಬೃಹಸ್ಪತಿಗಳು ಸಾಮ, ದಾನ ಮತ್ತು ಭೇದ ಈ ಮೂರೂ ಉಪಾಯಗಳಿಂದ ಅರ್ಥದ ಸಂಪಾದನೆಯನ್ನು ಹೇಳಿದ್ದಾರೆ. ಈ ಮೂರು ಉಪಾಯ -ಗಳಿಂದ ಎಷ್ಟು ಧನವನ್ನು ಸಂಪಾದಿಸಲು ಸಾಧ್ಯವೋ ಅದರಿಂದ ವಿವೇಕಿಯಾದ- ವನು ತೃಪ್ತಿಪಡಬೇಕು.
ಆದದೀತ ಬಲಿಂ ಚೈವ ಪ್ರಜಾಭ್ಯಃ ಕುರುನಂದನ |
ಷಡ್ಭಾಗಮಮಿತಪ್ರಜ್ಞಸ್ತಾಸಾಮೇವಾಭಿಗುಪ್ತಯೇ ॥26॥
ಎಲೈ ಕುರುನಂದನನೇ! ಅಮಿತಪ್ರಜ್ಞೆಯುಳ್ಳ ರಾಜನು ಪ್ರಜೆಗಳ ಆದಾಯದ ಆರನೆಯ ಒಂದು ಭಾಗವನ್ನು ಪ್ರಜೆಗಳ ರಕ್ಷಣೆಗಾಗಿಯೇ ಅವರಿಂದ ಕರವಾಗಿ ತೆಗೆದುಕೊಳ್ಳಬೇಕು.
ದಶಾಧರ್ಮಗತೇಭ್ಯೋ ಯದ್ ವಸು ಬಹ್ವಲ್ಪಮೇವ ಚ |
ತಾನ್ನಾದದೀತ ಸಹಸಾ ಪೌರಾಣಾಂ ರಕ್ಷಣಾಯ ವೈ ॥27॥
ನಿಧಾನವಾಗಿ ತೈಲವನ್ನು ಎಳೆದು ಉರಿಯುವ ದೀಪದ ಬತ್ತಿಯಂತೆ ರಾಜನು ಪ್ರಜೆಗಳಿಂದ ಅಲ್ಪವಾದ ಅಥವಾ ಬಹುವಾದ ಧನವನ್ನು ಒಟ್ಟಿಗೆ ತೆಗೆದುಕೊಳ್ಳದೆ ಅವರ ರಕ್ಷಣೆಗಾಗಿಯೇ ನಿಧಾನವಾಗಿ ತೆಗೆದುಕೊಳ್ಳಬೇಕು.

ಯಥಾ ಪುತ್ರಸ್ತಥಾ ಪೌರಾ ದ್ರಷ್ಟವ್ಯಾಸ್ತೇ ನ ಸಂಶಯಃ |
ಭಕ್ತಿಶ್ಚೈಷಾಂ ಪ್ರಕರ್ತವ್ಯಾ ವ್ಯವಹಾರೇ ಪ್ರದರ್ಶಿತೇ ॥28॥
ರಾಜನು ಪ್ರಜೆಗಳನ್ನು ತನ್ನ ಪುತ್ರರಂತೆಯೇ ನೋಡಿಕೊಳ್ಳಬೇಕು ಎಂಬ ವಿಷಯದಲ್ಲಿ ಸಂಶಯವಿಲ್ಲ. ಕ್ರಯವಿಕ್ರಯಾದಿ ವ್ಯವಹಾರಗಳಲ್ಲಿ ಯಾರಲ್ಲಿಯೂ ಪಕ್ಷಪಾತವನ್ನು ಮಾಡಬಾರದು.
ಸುತಂ ಚ ಸ್ಥಾಪಯೇದ್ ರಾಜಾ ಪ್ರಾಜ್ಞಂ ಸರ್ವಾರ್ಥದರ್ಶಿನಮ್ |
ವ್ಯವಹಾರೇಷು ಸತತಂ ತತ್ರ ರಾಜ್ಯಂ ವ್ಯವಸ್ಥಿತಮ್ ॥29॥
ರಾಜನು ತನ್ನ ವ್ಯವಹಾರಗಳಲ್ಲಿ ಸರ್ವಾರ್ಥವನ್ನು ತಿಳಿದು ಪ್ರಾಜ್ಞನಾದ ತನ್ನ ಪುತ್ರನನ್ನು ಸತತವಾಗಿ ಸ್ಥಾಪಿಸಬೇಕು. ಏಕೆಂದರೆ, ರಾಜ್ಯವು ಮುಂದೆ ಅವನಲ್ಲಿಯೇ ಹೋಗುವುದಿದೆ.
ಆಕರೇ ಲವಣೇ ಶುಲ್ಕೇ ತರೇ ನಾಗವನೇ ತಥಾ |
ನ್ಯಸೇದಮಾತ್ಯಾನ್ ನೃಪತಿಃ ಸ್ವಾಪ್ತಾನ್ ವಾ ಪುರುಷಾನ್ ಹಿತಾನ್ ॥30॥
ಗಣಿಗಳಲ್ಲಿ, ಲವಣವನ್ನು ಉತ್ಪಾದಿಸುವ ಸ್ಥಳದಲ್ಲಿ, ತೆರಿಗೆಯನ್ನು ತೆಗೆದು- ಕೊಳ್ಳುವ ಸ್ಥಳದಲ್ಲಿ, ನದಿಗಳನ್ನು ದಾಟಿಸುವ ನೌಕಾದಿಸ್ಥಳಗಳಲ್ಲಿ, ಗಜಸೇನೆ- ಯಲ್ಲಿ ರಾಜನು ತನಗೆ ಆಪ್ತರೂ ಹಿತರೂ ಆದ ಪುರುಷರನ್ನು ಅಮಾತ್ಯರನ್ನಾಗಿ ನೇಮಿಸಬೇಕು.
ಸಮ್ಯಗ್ ದಂಡಧರೋ ನಿತ್ಯಂ ರಾಜಾ ಧರ್ಮಮವಾಪ್ನುಯಾತ್ |
ನೃಪಸ್ಯ ಸತತಂ ದಂಡಃ ಸಮ್ಯಗ್ ಧರ್ಮೇ ಪ್ರಶಸ್ಯತೇ ॥31॥
ಸರಿಯಾದ ರೀತಿಯಲ್ಲಿ ದಂಡವನ್ನು ನಿತ್ಯವೂ ವಿಧಿಸುವ ರಾಜನು ಧರ್ಮವನ್ನು ಗಳಿಸುತ್ತಾನೆ. ರಾಜನು ಸತತವಾಗಿ ದಂಡಧರನಾಗಿರುವುದು ಧರ್ಮಶಾಸ್ತ್ರದಲ್ಲಿ ಪ್ರಶಂಸಿಲ್ಪಡುತ್ತದೆ.
ವೇದವೇದಾಂಗವಿತ್ ಪ್ರಾಜ್ಞಃ ಸುತಪಸ್ವೀ ನೃಪೋ ಭವೇತ್ |
ದಾನಶೀಲಶ್ಚ ಸತತಂ ಯಜ್ಞಶೀಲಶ್ಚ ಭಾರತ ॥32॥
ಎಲೈ ಭಾರತನೇ! ರಾಜನು ವೇದವೇದಾಂಗತತ್ತ್ವಜ್ಞನೂ, ಪ್ರಾಜ್ಞನೂ, ಸತತ- ವಾಗಿ ತಪಸ್ವಿಯೂ, ದಾನಶೀಲನೂ ಮತ್ತು ಯಜ್ಞಶೀಲನೂ ಆಗಿರಬೇಕು.
ಏತೇ ಗುಣಾಃ ಸಮಸ್ತಾಃ ಸ್ಯುರ್ನೃಪಸ್ಯ ಸತತಂ ಸ್ಥಿರಾಃ |
ಕ್ರಿಯಾಲೋಪೇ ತು ನೃಪತೇಃ ಕುತಃ ಸ್ವರ್ಗಃ ಕುತೋ ಯಶಃ ॥33॥
ಈ ಎಲ್ಲ ಗುಣಗಳೂ ರಾಜನಲ್ಲಿ ಸ್ಥಿರವಾಗಿ, ಸತತವಾಗಿ ಇರಬೇಕು. ರಾಜನಿಗೆ ಕ್ರಿಯಾಲೋಪವುಂಟಾದರೆ ಅವನಿಗೆ ಸ್ವರ್ಗವಾಗಲೀ ಅಥವಾ ಈ ಲೋಕದಲ್ಲಿ ಕೀರ್ತಿಯಾಗಲೀ ಎಲ್ಲಿಂದ ಬಂದೀತು?
ಯದಾ ತು ಪೀಡಿತೋ ರಾಜಾ ಭವೇದ್ ರಾಜ್ಞಾ ಬಲೀಯಸಾ |
ತ್ರಿಧಾ ತ್ವಾಕ್ರಂದ್ಯ ಮಿತ್ರಾಣಿ ವಿಧಾನಮುಪಕಲ್ಪಯೇತ್ |
ತದಾಽಭಿಸಂಶ್ರಯೇದ್ ದುರ್ಗಂ ಬುದ್ಧಿಮಾನ್ ಪೃಥಿವೀಪತಿಃ ॥34॥
ರಾಜನು ಬಲಿಷ್ಠನಾದ ರಾಜನಿಂದ ಪೀಡಿತನಾದಾಗ ಮಿತ್ರರ ಜೊತೆಯಲ್ಲಿ ಮೂರು ಬಾರಿ ಮಂತ್ರಾಲೋಚನೆಯನ್ನು ಮಾಡಿ, ಮಾಡಬೇಕಾದ ವಿಧಿಯನ್ನು ನಿರ್ಧರಿಸಬೇಕು. ಬುದ್ಧಿವಂತನಾದ ರಾಜನು ಆಗ ಕೋಟೆಯನ್ನು ಆಶ್ರಯಿಸಬೇಕು.
ಘೋಷಾನ್ ನ್ಯಸೇತ ಮಾರ್ಗೇಷು ಗ್ರಾಮಾನುತ್ಥಾಪಯೇದಪಿ |
ಪ್ರವೇಶಯೇಚ್ಚ ತಾನ್ ಸರ್ವಾನ್ ಶಾಖಾನಗರಕೇಷ್ವಪಿ ॥35॥
ಶತ್ರುಗಳು ಬರುವ ಮಾರ್ಗದಲ್ಲಿ ಘೋಷಗಳನ್ನು (ಗೋಪಾಲರ ಹಳ್ಳಿಗಳನ್ನು) ನಿರ್ಮಿಸಬೇಕು. ಉಳಿದ ಗ್ರಾಮಗಳನ್ನು ಶೂನ್ಯಗೊಳಿಸಬೇಕು. ಆ ಗ್ರಾಮಸ್ಥರೆಲ್ಲ- ರನ್ನೂ ನಗರದ ಬಾಹ್ಯ ಉಪನಗರಗಳಲ್ಲಿ ನೆಲೆಸುವಂತೆ ಮಾಡಬೇಕು.
ಯೇ ಗುಪ್ತಾಶ್ಚೈವ ದುರ್ಗಾಶ್ಚ ದೇಶಾಸ್ತೇಷು ಪ್ರವೇಶಯೇತ್ |
ಧನಿನೋ ಬಲಮುಖ್ಯಾಂಶ್ಚ ಸಾಂತ್ವಯಿತ್ವಾ ಪುನಃ ಪುನಃ ॥36॥
ಶ್ರೀಮಂತರನ್ನು ಮತ್ತು ಸೇನಾನಾಯಕರನ್ನು ಪುನಃ ಪುನಃ ಸಮಾಧಾನಗೊಳಿಸಿ ರಕ್ಷಿತವಾದ ಕೋಟೆಗಳಲ್ಲಿಯೂ ಮತ್ತು ಬೇರೆ ದುರ್ಗಮವಾದ ಪ್ರದೇಶಗಳ- ಲ್ಲಿಯೂ ಪ್ರವೇಶಿಸುವಂತೆ ಮಾಡಬೇಕು.
ಸಸ್ಯಾಪಹಾರಂ ಕುರ್ಯಾಚ್ಚ ಸ್ವಯಮೇವ ನರಾಧಿಪಃ |
ಅಸಂಭವೇ ಪ್ರವೇಶಸ್ಯ ದಾಹಯೇದಗ್ನಿನಾ ಭೃಶಮ್ ॥37॥
ಶತ್ರುವಿನ ದೇಶದ ಸಸ್ಯಗಳ ವಿನಾಶವನ್ನು ತಾನು(ನೇ) ಮಾಡಿಸಬೇಕು. ಶತ್ರುಗಳ ದೇಶದಲ್ಲಿ ಪ್ರವೇಶಿಸಲು ಸಾಧ್ಯವಾಗದಿದ್ದರೆ ತನ್ನ ಚಾರರ ಮೂಲಕ ಶತ್ರುಗಳ ದೇಶದಲ್ಲಿ ಕಡಿದು ಶೇಖರಿಸಿಟ್ಟ ಬೆಳೆಗಳಿಗೆ ಬೆಂಕಿಯನ್ನು ಕೊಡಬೇಕು.
ಕ್ಷೇತ್ರಸ್ಥೇಷು ಚ ಸಸ್ಯೇಷು ಶತ್ರೋರುಪಜಪೇನ್ನರಾನ್ |
ವಿನಾಶಯೇದ್ ವಾ ಸರ್ವಸ್ವಂ ಬಲೇನಾಥ ಸ್ವಕೇನ ವೈ ॥38॥
ನದೀಷು ಮಾರ್ಗೇಷು ಸದಾ ಸಂಕ್ರಮಾನವಸಾದಯೇತ್ |
ಜಲಂ ನಿಸ್ರಾವಯೇತ್ ಸರ್ವಮನಿಸ್ರಾವ್ಯಂ ಚ ದೂಷಯೇತ್ ॥39॥
ಶತ್ರುವಿನ ಸಮೀಪಸ್ಥ ಜನರಲ್ಲಿ ಒಡಕ್ಕನ್ನುಂಟುಮಾಡಬೇಕು. ಅಥವಾ ತನ್ನ ಸೈನ್ಯದಿಂದ ಶತ್ರುವಿನ ಸರ್ವಸ್ವವನ್ನು ನಾಶಗೊಳಿಸಬೇಕು. ನದಿಗಳಲ್ಲಿ ಮತ್ತು ಮಾರ್ಗಗಳಲ್ಲಿರುವ ಸೇತುವೆಗಳನ್ನು ಭಗ್ನಗೊಳಿಸಬೇಕು. ಶೇಖರಿಸಿರುವ ಜಲವನ್ನು ಹೊರಗೆ ಹರಿಯುವಂತೆ ಮಾಡಬೇಕು. ಹೊರಗೆ ಹರಿಸಲಾಗದ ಜಲವನ್ನು ವಿಷಾದಿ- ಗಳಿಂದ ದೂಷಿಸಬೇಕು.
ತದಾತ್ವೇನಾಯತೀಭಿಶ್ಚ ನಿವಸೇದ್ ಭೂಮ್ಯನಂತರಮ್ |
ಪ್ರತೀಘಾತಃ ಪರಸ್ಯಾಜೌ ಯುದ್ಧಕಾಲೇಽಪ್ಯುಪಸ್ಥಿತೇ ॥40॥

ಆ ಕಾಲದಲ್ಲಿಯೂ ಮತ್ತು ಉತ್ತರಕಾಲದಲ್ಲಿಯೂ ದೇಶದ ಪ್ರಾಂತಭಾಗಕ್ಕೆ ಹೋಗದೆ ದೇಶದ ಮಧ್ಯದಲ್ಲಿಯೇ ವಾಸಿಸಬೇಕು. ಯುದ್ಧಕಾಲವು ಪ್ರಾಪ್ತವಾದಾಗ ಶತ್ರುವಿಗೆ ಪ್ರತಿಘಾತವನ್ನುಂಟು ಮಾಡಬೇಕು.

ದ್ರುಮಾಣಾಂ ಚಾಭಿತೋ ರಾಜಾ ಮೂಲಚ್ಛೇದಂ ಪ್ರಕಾರಯೇತ್ |
ಸರ್ವೇಷಾಂ ಕ್ಷುದ್ರವೃಕ್ಷಾಣಾಂ ಚೈತ್ಯವೃಕ್ಷಾನ್ ವಿವರ್ಜಯೇತ್ ॥41॥
ರಾಜನು ಸುತ್ತಲೂ ಇರುವ ಮರಗಳನ್ನು ಬುಡದಲ್ಲಿಯೇ ಕತ್ತರಿಸಬೇಕು. ಆದರೆ ಪೂಜಾವೃಕ್ಷಗಳನ್ನು ಮತ್ತು ದೇವಸ್ಥಾನದ ವೃಕ್ಷಗಳನ್ನು ಬಿಡಬೇಕು.

ಪ್ರವೃದ್ಧಾನಾಂ ಚ ವೃಕ್ಷಾಣಾಂ ಶಾಖಾಃ ಪ್ರಚ್ಛೇದಯೇತ್ ತಥಾ |
ಚೈತ್ಯಾನಾಂ ಸರ್ವಥಾ ವರ್ಜ್ಯಮಪಿ ಪತ್ರಸ್ಯ ಪಾತನಮ್ ॥42॥
ವೃಕ್ಷಗಳು ಬಹಳ ದೊಡ್ಡದಾಗಿದ್ದರೆ ಅವುಗಳ ಕೊಂಬೆಗಳನ್ನು ಮಾತ್ರ ಕತ್ತರಿಸ- ಬೇಕು. ಆದರೆ ಪೂಜಾವೃಕ್ಷದ ಒಂದು ಎಲೆಯನ್ನೂ ಕತ್ತರಿಸಬಾರದು.

ದೈವಾನಾಮಾಶ್ರಯಾಶ್ಚೈತ್ಯಾ ಯಕ್ಷರಾಕ್ಷಸಭೋಗಿನಾಮ್ |
ಪಿಶಾಚಪನ್ನಗಾನಾಂ ಚ ಗಂಧರ್ವಾಪ್ಸರಸಾಮಪಿ ॥43॥
ರೌದ್ರಾಣಾಂ ಚೈವ ಭೂತಾನಾಂ ತಸ್ಮಾತ್ ತಾನ್ ಪರಿವರ್ಜಯೇತ್ |
ಶ್ರೂಯತೇ ಹಿ ನಿಕುಂಭೇನ ಸೌದಾಸಸ್ಯ ಬಲಂ ಹತಮ್ |
ಮಹೇಶ್ವರಗಣೇಶೇನ ವಾರಾಣಸ್ಯಾಂ ನರಾಧಿಪ ॥44॥
ಚೈತ್ಯವೃಕ್ಷಗಳು ದೇವತೆಗಳಿಗೆ, ಯಕ್ಷರಿಗೆ, ರಾಕ್ಷಸರಿಗೆ, ಸರ್ಪಗಳಿಗೆ, ಪಿಶಾಚಿ- ಗಳಿಗೆ, ಗಂಧರ್ವಾಪ್ಸರಸರಿಗೆ, ಭಯಂಕರವಾದ ಭೂತಗಳಿಗೆ ಆಶ್ರಯವಾಗಿ- ರುತ್ತವೆ. ಆದ್ದರಿಂದ ಅವುಗಳನ್ನು ವರ್ಜಿಸಬೇಕು. ಎಲೈ ರಾಜನೇ! ಚೈತ್ಯವೃಕ್ಷವನ್ನು ಕತ್ತರಿಸಿದ ಕಾರಣದಿಂದಾಗಿ ಸೌದಾಸನ ಸೈನ್ಯವು ಮಹೇಶ್ವರನ ಗಣನಾಯಕನಾದ ನಿಕುಂಭನಿಂದ ವಾರಾಣಸಿಯಲ್ಲಿ ವಿನಾಶವನ್ನು ಹೊಂದಿತು ಎಂದು ನಾವು ಕೇಳಿ- ದ್ದೇವೆ.

ಪ್ರಖಂಡೀಃ ಕಾರಯೇದ್ ಸಮ್ಯಗಾಕಾಶಜನನೀಸ್ತಥಾ |
ಆಪೂರಯೇಚ್ಚ ಪರಿಖಾಂ ಸ್ಥಾಣುನಕ್ರಝಷಾಕುಲಾಃ ॥45॥
ಕೋಟೆಗಳಲ್ಲಿ ತುರ್ತುಪರಿಸ್ಥಿತಿಯಲ್ಲಿ ಹೊರಗೆ ಹೋಗಲು ಕಿಂಡಿಗಳನ್ನು ನಿರ್ಮಿಸಬೇಕು. ಮೀನು ಮೊಸಳೆಗಳಿಂದ ಕಂದಕಗಳನ್ನು ತುಂಬಬೇಕು. (ಕಲ್ಲು ಮತ್ತು ಮರಗಳಿಂದ ತುಂಬಬೇಕು).

ಸಂಕಟದ್ವಾರಕಾಣಿ ಸ್ಯುರುಚ್ಛ್ವಾಸಾರ್ಥೇ ಪುರಸ್ಯ ಹ |
ತೇಷಾಂ ಚ ದ್ವಾರವದ್ ಗುಪ್ತಿಃ ಕಾರ್ಯಾ ಸರ್ವಾತ್ಮನಾ ಭವೇತ್ ॥46॥
ಆಪತ್ತಿನ ಸಮಯದಲ್ಲಿ ನಗರದಿಂದ ಹೊರಗೆ ಹೋಗಲು ತುರ್ತುದ್ವಾರ- ಗಳನ್ನು ನಿರ್ಮಿಸಬೇಕು. ಮಹಾದ್ವಾರವನ್ನು ಕಾಯ್ದಂತೆಯೇ ಅಂತಹ ದ್ವಾರಗಳ ಬಳಿಯಲ್ಲಿಯೂ ಸಹ ಸರ್ವಾತ್ಮನಾ ರಕ್ಷಣಾಕಾರ್ಯವನ್ನು ಮಾಡಬೇಕು.

ದ್ವಾರೇಷು ಚ ಗುರೂಣ್ಯೇವ ಯಂತ್ರಾಣಿ ಸ್ಥಾಪಯೇತ್ ಸದಾ |
ಆರೋಪಯೇಚ್ಛತಘ್ನೀಶ್ಚ ಸ್ವಾಧೀನಾ ಏವ ಕಾರಯೇತ್ ॥50॥
ಎಲ್ಲ ದ್ವಾರಗಳಲ್ಲಿಯೂ ಭಾರವಾದ ಯಂತ್ರಗಳನ್ನು ಜೋಡಿಸಬೇಕು. ಶತಘ್ನೀ- ಗಳನ್ನು ಏರಿಸಿ ಅವುಗಳನ್ನು ಸ್ವಾಧೀನವಾಗಿಟ್ಟುಕೊಳ್ಳಬೇಕು.

ಕಾಷ್ಠಾನಿ ಚಾಭಿಹಾರ್ಯಾಣಿ ತಥಾ ಕೂಪಾಂಶ್ಚ ಖಾನಯೇತ್ |
ಸಂಶೋಧಯೇತ್ ತಥಾ ಕೂಪಾನ್ ಕೃತಾನ್ ಪೂರ್ವಂ ಪಯೋರ್ಥಿಭಿಃ ॥
ನಗರದ ಒಳಗೆ ಕಾಷ್ಠಗಳನ್ನು ಶೇಖರಿಸಬೇಕು. ಭಾವಿಗಳನ್ನು ತೋಡಿಸಬೇಕು. ಜಲಾರ್ಥಿಗಳು ಹಿಂದೆ ತೋಡಿಸಿ ಮುಚ್ಚಿಹೋದ ಭಾವಿಗಳನ್ನು ಶೋಧಿಸಬೇಕು.

ತೃಣಾಚ್ಛನ್ನಾನಿ ವೇಶ್ಮಾನಿ ಪಂಕೇನಾಪಿ ಪ್ರಲೇಪಯೇತ್ |
ನಿರ್ಹರೇಚ್ಚ ತೃಣಂ ಮಾಸೇ ಚೈತ್ರೇ ವಹ್ನಿಭಯಾತ್ ಪುರಃ ॥49॥
ಹುಲ್ಲಿನ ಛಾವಣಿಗಳಿರುವ ಮನೆಗಳನ್ನು ಕೆಸರಿನಿಂದಾದರೂ ಲೇಪಿಸಬೇಕು. ಪಟ್ಟಣಕ್ಕೆ ಉಂಟಾಗಬಹುದಾದ ವಹ್ನಿಯ ಭಯದಿಂದ ಚೈತ್ರಮಾಸದಲ್ಲಿ ಛಾವಣಿ- ಗಳ ಹುಲ್ಲನ್ನು ತೆಗೆಸಬೇಕು.

ನಕ್ತಮೇವ ಚ ಭಕ್ತಾನಿ ಪಾಚಯೇತ ನರಾಧಿಪಃ |
ನ ದಿವಾಽಗ್ನಿರ್ಜ್ವಲೇದ್ ಗೇಹೇ ವರ್ಜಯಿತ್ವಾಽಗ್ನಿಹೋತ್ರಿಕಮ್ ॥50॥
ರಾಜನಾದವನು ರಾತ್ರಿಯಲ್ಲಿಯೇ ಅಡಿಗೆಯನ್ನು ಮಾಡಿಸಬೇಕು. ಅಗ್ನಿ- ಹೋತ್ರದ ಅಗ್ನಿಯನ್ನು ಬಿಟ್ಟು ಬೇರೆ ಯಾವ ಅಗ್ನಿಯೂ ಹಗಲಿನಲ್ಲಿ ಮನೆಗಳಲ್ಲಿ ಜ್ವಲಿಸಬಾರದು.

ಸಂಭವೇ ಸತಿ ಶೈಲಾನಿ ಐಷ್ಟಕಾನಿ ಚ ಕಾರಯೇತ್ |
ಮೃನ್ಮಯಾನಿ ಚ ಕುರ್ವೀತ ಜ್ಞಾತ್ವಾ ದೇಶೇ ಬಲಾಬಲಮ್ ॥51॥
ದ್ರವ್ಯಾದಿಅನುಕೂಲವಿದ್ದರೆ ಕಲ್ಲುಗಳ, ಇಟ್ಟಿಗೆಗಳ ಅಥವಾ ಮಣ್ಣಿನ ಗೋಪುರ -ಗಳನ್ನು ಆ ಸ್ಥಳದ ಬಲಾಬಲಗಳನ್ನು ತಿಳಿದು ನಿರ್ಮಿಸಬೇಕು.

ಕರ್ಮಾರಾರಿಷ್ಟಶಾಲಾಸು ಜ್ವಲೇದಗ್ನಿಃ ಸಮಾಹಿತಃ |
ಗೃಹಾಣಿ ಚ ಪ್ರವಿಶ್ಯಾಥ ಪಿಧೇಯಃ ಸ್ಯಾದ್ಧುತಾಶನಃ ॥52॥
ಕರ್ಮ್ಮಾರನ ಮನೆಯಲ್ಲಿ ಮತ್ತು ಸೂತಿಕಾಗೃಹದಲ್ಲಿ ಅಗ್ನಿಯು ನಿರಾತಂಕವಾಗಿ ಜ್ವಲಿಸಬಹುದು. ಗೃಹಗಳನ್ನು ಪ್ರವೇಶಿಸಿದ ಮೇಲೆ

ಒಳಗೆ ಅಗ್ನಿಯು ಉರಿಯುತ್ತಿದ್ದರೆ ಅದನ್ನು ಭಸ್ಮಾದಿಗಳಿಂದ ಮುಚ್ಚಬೇಕು.
ಮಹಾದಂಡಶ್ಚ ತಸ್ಯ ಸ್ಯಾದ್ ಯಸ್ಯಾಗ್ನಿರ್ವೈ ದಿವಾ ಭವೇತ್ |
ಪ್ರಘೋಷಯೇದಥೈವಂ ಚ ರಕ್ಷಣಾರ್ಥಂ ಪುರಸ್ಯ ವೈ ॥53॥
ಪುರವನ್ನು ರಕ್ಷಿಸುವುದಕ್ಕೋಸ್ಕರ ಹಗಲಿನಲ್ಲಿ ಯಾರು ಅಗ್ನಿಯನ್ನು ಉರಿಸು- ತ್ತಾರೆಯೋ ಅವರಿಗೆ ದೊಡ್ಡ ದಂಡವನ್ನು ವಿಧಿಸುತ್ತೇನೆ ಎಂದು ಘೋಷಣೆಯನ್ನು ಮಾಡಿಸಬೇಕು.
ಭಿಕ್ಷುಕಾಂಶ್ಚಾಕ್ರಿಕಾಂಶ್ಚೈವ ಕ್ಷೀಬೋನ್ಮತ್ತಾನ್ ಕುಶೀಲವಾನ್ |
ಬಾಹ್ಯಾನ್ ಕುರ್ಯಾನ್ನರಶ್ರೇಷ್ಠ ದೋಷಾಯ ಸ್ಯುರ್ಹಿ ತೇಽನ್ಯಥಾ ॥54॥
ಎಲೈ ನರಶ್ರೇಷ್ಠನೇ! (ಯುದ್ಧಕಾಲದಲ್ಲಿ) ಭಿಕ್ಷುಕರನ್ನು, ಜ್ಯೋತಿಷಕರನ್ನು, ಪಾನಮತ್ತರನ್ನು, ಹುಚ್ಚರನ್ನು, ನಟರನ್ನು ನಗರದಿಂದ ಹೊರಗೆ ಕಳುಹಿಸಬೇಕು. ಇಲ್ಲದಿದ್ದರೆ ದೋಷವುಂಟಾದೀತು.
ಚತ್ವರೇಷು ಚ ತೀರ್ಥೇಷು ಸಭಾಸ್ವಾವಸಥೇಷು ಚ |
ಯಥಾರ್ಹವರ್ಣಂ ಪ್ರಣಿಧಿಂ ಕುರ್ಯಾನ್ಮಾಯಾವಿಶಾರದಮ್ ॥55॥
ಚೌಕಗಳಲ್ಲಿ (ಚತುಷ್ಪಥಗಳಲ್ಲಿ), ತೀರ್ಥಗಳಲ್ಲಿ, ಸಭೆಗಳಲ್ಲಿ ಮತ್ತು ಗೃಹ- ಗಳಲ್ಲಿ ಮಾಯಾವಿಶಾರದರಾದ ಸಮಯಕ್ಕೆ ತಕ್ಕಂತೆ ಜಾತಿಯನ್ನು ಬದಲಾಯಿಸಿ- ಕೊಳ್ಳುವ ಗೂಢಚಾರರನ್ನು ನೇಮಿಸಬೇಕು (ಗೂಢಚಾರನು ಬ್ರಾಹ್ಮಣರಲ್ಲಿ ಬ್ರಾಹ್ಮಣನಂತೆಯೂ, ಕ್ಷತ್ರಿಯರಲ್ಲಿ ಕ್ಷತ್ರಿಯನಂತೆಯೂ, ವೈಶ್ಯರಲ್ಲಿ ವೈಶ್ಯರಂತೆಯೂ, ಶೂದ್ರನಲ್ಲಿ ಶೂದ್ರನಂತೆಯೂ ವರ್ತಿಸಬೇಕು. ಅದಕ್ಕಾಗಿ ಅವನು ಮಾಯಾ- ವಿಶಾರದನಾಗಿರಬೇಕು. ಅಂತಹ ಗೂಢಚಾರರಿಗೆ ಯಥಾರ್ಹವರ್ಣ ಎಂದು ಹೆಸರು ಲಕ್ಷ್ಮಾಲಂಕಾರ).
ವಿಶಾಲಾನ್ ರಾಜಮಾರ್ಗಾಂಶ್ಚ ಕಾರಯೇತ ನರಾಧಿಪಃ |
ಪ್ರಪಾಶ್ಚ ವಿಪಣೀಶ್ಚೈವ ಯಥೋದ್ದೇಶಂ ಸಮಾದಿಶೇತ್ ॥56॥
ರಾಜನಾದವನು ವಿಶಾಲವಾದ ರಾಜಮಾರ್ಗಗಳನ್ನು, ಪಾನಶಾಲೆಗಳನ್ನು, ಅಂಗಡಿಯ ಸಾಲುಗಳನ್ನು ಯೋಗ್ಯವಾದ ಉನ್ನತ ಸ್ಥಳಗಳಲ್ಲಿ ನಿರ್ಮಿಸುವಂತೆ ಆದೇಶ ಕೊಡಬೇಕು.
ಭಾಂಡಾಗಾರಾಯುಧಾಗಾರಾನ್ ಧಾನ್ಯಾಗಾರಾಂಶ್ಚ ಸರ್ವಶಃ |
ಅಶ್ವಾಗಾರಾನ್ ಗಜಾಗಾರಾನ್ ಬಲಾಧಿಕರಣಾನಿ ಚ ॥57॥
ಪಾತ್ರೆಗಳ ಉಗ್ರಾಣ (ಅಶ್ವಾದಿವಾಹನಗಳ ಆಭರಣಗಳ ಉಗ್ರಾಣ), ಆಯುಧ -ಗಳ ಉಗ್ರಾಣ, ಧಾನ್ಯಗಳ ಉಗ್ರಾಣ, ಅಶ್ವಶಾಲೆಗಳು, ಗಜಶಾಲೆಗಳು, ಸೇನಾ- ನಿವೇಶಸ್ಥಳಗಳು ಇವುಗಳನ್ನು ಅನೇಕ ಕಡೆ ನಿರ್ಮಿಸಬೇಕು.
ಪರಿಖಾಶ್ಚೈವ ಕೌರವ್ಯ ಪ್ರತೋಲೀಃ ನಿಷ್ಕುಟಾನಿ ಚ |
ನ ಜಾತು ಕಶ್ಚಿತ್ ಪಶ್ಯೇತ್ ತು ಗುಹ್ಯಮೇತದ್ ಯುಧಿಷ್ಠಿರ ॥58॥
ಎಲೈ ಕೌರವ್ಯನೇ! ಯುಧಿಷ್ಠಿರನೇ! ಕಂದಕಗಳು, ರಥಮಾರ್ಗಗಳು, ಬಾಣ- ಪ್ರಯೋಗವನ್ನು ಅಭ್ಯಾಸ ಮಾಡುವ ರಂಧ್ರಗಳು ಇವುಗಳನ್ನು ರಾಜನು ಗೋಪ್ಯ- ವಾಗಿಡಬೇಕು. ಇವುಗಳನ್ನು ಯಾರೂ ನೋಡಬಾರದು.
ಅಥ ಸನ್ನಿಚಯಂ ಕುರ್ಯಾದ್ ರಾಜಾ ಪರಬಲಾರ್ದಿನಃ |
ತೈಲಂ ಮಧು ಘೃತಂ ಸಸ್ಯಮೌಷಧಾನಿ ಚ ಸರ್ವಶಃ ॥59॥
ಶತ್ರುಸೈನ್ಯದ ಪೀಡೆಗೆ ಒಳಗಾದ ರಾಜನು ತೈಲ, ಮಧು, ಘೃತ, ಸಸ್ಯ, ಎಲ್ಲ ರೀತಿಯ ಔಷಧಿಗಳು ಇವುಗಳ ಸಂಗ್ರಹವನ್ನು ಮಾಡಿರಬೇಕು.
ಅಂಗಾರಕುಶಮುಂಜಾನಾಂ ಪಲಾಶಶರಪರ್ಣಿನಾಮ್ |
ಯವಸೇಂಧನದಿಗ್ಧಾನಾಂ ಕಾರಯೇತ ಚ ಸಂಚಯಾನ್ ॥60॥
ಇದ್ದಿಲು, ಕುಶ, ಮುಂಜ ಎಂಬ ಹುಲ್ಲು, ಪಲಾಶಪತ್ರಗಳು, ಬಾಣಗಳು, ಉಪಯೋಗಿಸುವ ಪರ್ಣಗಳುಳ್ಳ ಲತೌಷಧಿಗಳು, ಗೋವುಗಳ ಆಹಾರ ಇವು- ಗಳನ್ನು ಸಂಗ್ರಹಿಸಿ ಅವುಗಳನ್ನು ಹುಲ್ಲುಗಳಿಂದ ಅಥವಾ ಕಟ್ಟಿಗೆಗಳಿಂದ ಮುಚ್ಚಬೇಕು.
ಆಯುಧಾನಾಂ ಚ ಸರ್ವೇಷಾಂ ಶಕ್ತ್ಯೃಷ್ಟಿಪ್ರಾಸವರ್ಮಣಾಮ್ |
ಸಂಚಯಾನೇವಮಾದೀನಾಂ ಕಾರಯೇತ ನರಾಧಿಪಃ ॥61॥
ರಾಜನು ಇದೇ ರೀತಿಯಲ್ಲಿ ಶಕ್ತಿ, ಋಷ್ಟಿ, ಪ್ರಾಸ ಮೊದಲಾದ ಎಲ್ಲಾ ಆಯುಧಗಳ ಮತ್ತು ಕವಚಗಳ ಸಂಗ್ರಹವನ್ನು ಮಾಡಿಸಬೇಕು.
ಔಷಧಾನಿ ಚ ಸರ್ವಾಣಿ ಮೂಲಾನಿ ಚ ಫಲಾನಿ ಚ |
ಚತುರ್ವಿಧಾಂಶ್ಚ ವೈದ್ಯಾನ್ ವೈ ಸಂಗೃಹ್ಣೀಯಾದ್ ವಿಶೇಷತಃ ॥62॥
ಎಲ್ಲ ಔಷಧಿಗಳನ್ನೂ, ಮೂಲಫಲಗಳನ್ನೂ, ವಿಶೇಷವಾಗಿ ಅಶ್ವವೈದ್ಯ ಗಜವೈದ್ಯ ನರವೈದ್ಯ ಮತ್ತು ಶಸ್ತ್ರವೈದ್ಯರನ್ನು ಸಂಗ್ರಹಿಸಬೇಕು.
ನಟಾಶ್ಚ ನರ್ತಕಾಶ್ಚೈವ ಮಲ್ಲಾ ಮಾಯಾವಿನಸ್ತಥಾ |
ಶೋಭಯೇಯುಃ ಪುರವರಂ ಮೋದಯೇಯುಶ್ಚ ಸರ್ವಶಃ ॥63॥
ನಟರೂ, ನರ್ತಕರೂ, ಜಟ್ಟಿಗಳೂ, ಮಾಯಾವಿಗಳೂ ಪುರಕ್ಕೆ ಶೋಭೆಯನ್ನು ತಂದು ಪ್ರಜೆಗಳನ್ನು ಎಲ್ಲ ರೀತಿಯಿಂದಲೂ ಸಂತೋಷಪಡಿಸುವಂತೆ ಮಾಡಬೇಕು.
ಯತಃ ಶಂಕಾ ಭವೇಚ್ಚಾಪಿ ಭೃತ್ಯತೋ ವಾಪಿ ಮಂತ್ರಿತಃ |
ಪೌರೇಭ್ಯೋ ನೃಪತೇರ್ವಾಪಿ ಸ್ವಾಧೀನಾನ್ ಕಾರಯೇತ ತಾನ್ ॥64॥
ಯಾರಿಂದ ಶಂಕೆಯುಂಟಾಗುತ್ತದೆಯೋ ಅವನು ಭೃತ್ಯನಾಗಲೀ, ಮಂತ್ರಿ- ಯಾಗಲೀ ಪ್ರಜೆಯಾಗಲೀ ಅಥವಾ ಸಾಮಂತರಾಜನೇ ಆಗಲಿ ಅವನನ್ನು ತನ್ನ
ಅಧೀನಕ್ಕೆ ತೆಗೆದುಕೊಂಡು ಬಂಧಿಸಬೇಕು.

ಕೃತೇ ಕರ್ಮಣಿ ರಾಜೇಂದ್ರ ಪೂಜಯೇದ್ ಧನಸಂಚಯೈಃ |
ಮಾನೇನ ಚ ಯಥಾರ್ಹೇಣ ಸಾಂತ್ವೇನ ವಿವಿಧೇನ ಚ ॥65॥
ಕಾರ್ಯವನ್ನು ಮಾಡಿದವನಿಗೆ ಧನಸಂಚಯವನ್ನು ಕೊಟ್ಟು ಅವನನ್ನು ಪೂಜಿಸ -ಬೇಕು. ಅವನಿಗೆ ಯೋಗ್ಯವಾದ ಸನ್ಮಾನವನ್ನು ಮತ್ತು ಅನೇಕ ವಿಧವಾದ ಸಾಂತ್ವನ (ಮಾತುಗಳನ್ನು) ನೀಡಬೇಕು.
ನಿರ್ವೇದಯಿತ್ವಾ ತು ಪರಂ ಹತ್ವಾ ವಾ ಕುರುನಂದನ |
ಗತಾನೃಣ್ಯೋ ಭವೇದ್ ರಾಜಾ ಯಥಾ ಶಾಸ್ತ್ರೇಷು ದರ್ಶಿತಮ್ ॥66॥
ಎಲೈ ಕುರುನಂದನನೇ! ಶತ್ರುವಿಗೆ ವೈರಾಗ್ಯಬರುವಂತೆ ಮಾಡಿ ಅಥವಾ ಅವನನ್ನು ಕೊಂದು ರಾಜನು ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ ಋಣಮುಕ್ತನಾಗ- ಬೇಕು.
ರಾಜ್ಞಾ ಸಪ್ತೈವ ರಕ್ಷ್ಯಾಣಿ ತಾನಿ ಚಾಪಿ ನಿಬೋಧ ಮೇ |
ಆತ್ಮಾಽಮಾತ್ಯಾಶ್ಚ ಕೋಶಶ್ಚ ದಂಡೋ ಮಿತ್ರಾಣಿ ಚೈವ ಹಿ ॥67॥
ತಥಾ ಜನಪದಶ್ಚೈವ ಪುರಂ ಚ ಕುರುನಂದನ |
ಏತತ್ ಸಪ್ತಾತ್ಮಕಂ ರಾಜ್ಯಂ ಪರಿಪಾಲ್ಯಂ ಪ್ರಯತ್ನತಃ ॥68॥
ರಾಜನು ಈ ಏಳುಪದಾರ್ಥಗಳನ್ನು ರಕ್ಷಿಸಬೇಕು. ಅವುಗಳನ್ನು ನನ್ನಿಂದ ಕೇಳು, ಎಲೈ ಕುರುನಂದನನೇ! ಅವು ತಾನು, ಅಮಾತ್ಯ, ಕೋಶ, ದಂಡ, ಮಿತ್ರರು, ಜನ- ಪದ(ದೇಶ) ಮತ್ತು ಪುರ (ರಾಜಧಾನಿ) - ಈ ಸಪ್ತಾಂಗಯುಕ್ತವಾದ ರಾಜ್ಯವನ್ನು ಪ್ರಯತ್ನಪೂರ್ವಕವಾಗಿ ಚೆನ್ನಾಗಿ ರಕ್ಷಿಸಬೇಕು.
ಷಾಡ್ಗುಣ್ಯಂ ಚ ತ್ರಿವರ್ಗಂ ಚ ತ್ರಿವರ್ಗಮಪರಂ ತಥಾ |
ಯೋ ವೇತ್ತಿ ಪುರುಷವ್ಯಾಘ್ರ ಸ ಭುನಕ್ತಿ ಮಹೀಮಿಮಾಮ್ ॥69॥
ಎಲೈ ಪುರುಷವ್ಯಾಘ್ರನೇ! ಯಾವನುಷಾಡ್ಗುಣ್ಯವನ್ನು, ತ್ರಿವರ್ಗವನ್ನು ಮತ್ತು ಇನ್ನೊಂದು ತ್ರಿವರ್ಗವನ್ನು ತಿಳಿದಿರುತ್ತಾನೆಯೋ ಅವನು ಈ ಭೂಮಿಯನ್ನು ಭೋಗಿಸುತ್ತಾನೆ.
ಷಾಡ್ಗುಣ್ಯಮಿತಿ ಯತ್ ಪ್ರೋಕ್ತಂ ತನ್ನಿಬೋಧ ಯುಧಿಷ್ಠಿರ |
ಸಂಧಾನಾಸನಮಿತ್ಯೇವ ಯಾತ್ರಾಸಂಧಾನಮೇವ ಚ ॥70॥
ವಿಗೃಹ್ಯಾಸನಮಿತ್ಯೇವ ಯಾತ್ರಾ ಸಂಪರಿಗೃಹ್ಯ ಚ |
ದ್ವೈಧೀಭಾವಸ್ತಥಾನ್ಯೇಷಾಂ ಸಂಶ್ರಯೋಽಥ ಪರಸ್ಯ ಚ ॥71॥
ಎಲೈ ಯುಧಿಷ್ಠಿರನೇ! ನಾನು ಷಾಡ್ಗುಣ್ಯವೆಂದು ಹೇಳಿದ ವಿಷಯವನ್ನು ಕೇಳು. ಸಂಧಾನಾಸನ (ಸಂಧಿಯ ಸಲುವಾಗಿ ತನ್ನ ಪಟ್ಟಣದಲ್ಲಿಯೇ ವಾಸವನ್ನು ಮಾಡು- ವುದು. ಇದು ಮಹಾಶಕ್ತಿವಂತನ ಗುಣ). ಯಾತ್ರಾಸಂಧಾನ (ಪರರಾಷ್ಟ್ರಕ್ಕೆ ಯಾತ್ರೆ- ಯನ್ನು ಮಾಡಿ ಸಂಧಿಯನ್ನು ಮಾಡಿಕೊಳ್ಳುವುದು), ವಿಗೃಹ್ಯಾಸನ (ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿ ಕೋಟೆಯ ಬಳಿ ಜಯ ದೊರೆಯುವವರೆಗೆ ಕುಳಿತಿರುವುದು), ಸಂಪರಿಗೃಹ್ಯ ಯಾತ್ರಾ (ಶತ್ರುವನ್ನು ಸೆರೆ ಹಿಡಿದು ತನ್ನ ಪಟ್ಟಣಕ್ಕೆ ಬರುವುದು), ದ್ವೈಧೀಭಾವ (ಶತ್ರುವಿನಲ್ಲಿ ಅವನ ಅಮಾತ್ಯಾದಿಗಳಲ್ಲಿ ಪರಸ್ಪರ- ವಿರೋಧವನ್ನುಂಟು ಮಾಡುವುದು), ಸಂಶ್ರಯ (ಶತ್ರುವು ಶರಣಾಗತನಾದರೆ ಅವನಿಗೆ ಒಳ್ಳೆಯ ಆಶ್ರಯವನ್ನು ನೀಡುವುದು) - ಇವು ಷಾಡ್ಗುಣ್ಯವೆನಿಸುತ್ತವೆ.
ತ್ರಿವರ್ಗಶ್ಚಾಪಿ ಯಃ ಪ್ರೋಕ್ತಸ್ತಮಿಹೈಕಮನಾಃ ಶೃಣು |
ಕ್ಷಯಃ ಸ್ಥಾನಂ ಚ ವೃದ್ಧಿಶ್ಚ ತ್ರಿವರ್ಗಮಪರಂ ತಥಾ ॥72॥
ನಾನು ತ್ರಿವರ್ಗವೆಂದು ಹೇಳಿದುದನ್ನು ಒಂದೇ ಮನಸ್ಸಿನಿಂದ ಕೇಳು. ಅವು ಕ್ಷಯ, ಸ್ಥಾನ ಮತ್ತು ವೃದ್ಧಿ ಎಂಬುವುಗಳು. ಇನ್ನೊಂದು ತ್ರಿವರ್ಗವನ್ನು ಕೇಳು.
ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗೋ ವೈ ಸನಾತನಃ |
ಮಂತ್ರಶ್ಚೈವ ಪ್ರಭಾವಶ್ಚ ಉತ್ಸಾಹಶ್ಚೈವ ತಾಂತ್ರಿಕಃ ॥73॥
ಧರ್ಮ, ಅರ್ಥ ಮತ್ತು ಕಾಮಗಳೆಂಬುದು ಸನಾತನವಾದ ಇನ್ನೊಂದು ತ್ರಿವರ್ಗ. ಮಂತ್ರ, ಪ್ರಭಾವ ಮತ್ತು ಉತ್ಸಾಹ ಎಂಬುವುಗಳು ರಾಜನೀತಿಗೆ ಸಂಬಂಧಿಸಿದ ಇನ್ನೊಂದು ತ್ರಿವರ್ಗ.
ಶಕ್ತಿತ್ರಯಂ ಸಮಾಖ್ಯಾತಂ ತ್ರಿವರ್ಗಸ್ಯ ಚ ತತ್ಪರಮ್ |
ಕಾರ್ಯಂ ಚ ಕಾರಣಂ ಚೈವ ಕರ್ತಾ ಚ ಪರಿಕೀರ್ತಿತಮ್ ॥74॥
ಈ ಕೊನೆಯ ತ್ರಿವರ್ಗವನ್ನು ಮಂತ್ರಶಕ್ತಿ, ಪ್ರಭುಶಕ್ತಿ ಮತ್ತು ಉತ್ಸಾಹಶಕ್ತಿ ಎಂದೂ ಕರೆಯುತ್ತಾರೆ. ಅದು ಮೊದಲಿನ ತ್ರಿವರ್ಗಕ್ಕಿಂತ ಶ್ರೇಷ್ಠವಾದುದು. ಕಾರ್ಯ, ಕಾರಣ ಮತ್ತು ಕರ್ತಾ ಎಂದು ಹೇಳಲ್ಪಡುವ ಇನ್ನೊಂದು ತ್ರಿವರ್ಗವೂ ಇದೆ.
ಏತತ್ ಪರತರಂ ವಿದ್ಯಾದ್ ತ್ರಿವರ್ಗಾದಪಿ ಭಾರತ |
ಸರ್ವೇಷಾಂ ಚ ಕ್ಷಯೇ ರಾಜನ್ ಯಸ್ತ್ರಿವರ್ಗಂ ಸನಾತನಮ್ ॥75॥
ಸತ್ತ್ವಂ ರಜಸ್ತಮಶ್ಚೈವ ತ್ರಿವರ್ಗಂ ಕಾರಣಂ ಸ್ಮೃತಮ್ |
ತೇನಾತ್ಯಂತವಿಮುಕ್ತಶ್ಚ ಮುಕ್ತಃ ಪುರುಷ ಇಷ್ಯತೇ ॥76॥
ಎಲೈ ಭಾರತನೇ! ಇದು ಹಿಂದಿನ ತ್ರಿವರ್ಗಕ್ಕಿಂತಲೂ ಶ್ರೇಷ್ಠವಾದುದು. ರಾಜನೇ! ಎಲ್ಲ ಕಾರ್ಯಗಳೂ ನಾಶವನ್ನು ಹೊಂದಿದ ಮೇಲೆ ಯಾವ ಸನಾತನ- ವಾದ ತ್ರಿವರ್ಗವು ಉಳಿಯುತ್ತದೆಯೋ ಅದು ಸತ್ತ್ವ, ರಜಸ್, ತಮೋಗುಣ- ರೂಪವಾದ ತ್ರಿವರ್ಗ. ಅದು ಎಲ್ಲದಕ್ಕೂ ಮೂಲಕಾರಣವಾದುದು. ಅದರಿಂದ ಸಂಪೂರ್ಣವಾಗಿ ಬಿಡುಗಡೆಯನ್ನು ಹೊಂದಿದ ಪುರುಷನು ಮುಕ್ತನೆನಿಸುತ್ತಾನೆ.
ಕಾರ್ಯಸ್ಯ ಸರ್ವಥಾ ನಾಶೋ ಮೋಕ್ಷ ಇತ್ಯಭಿಧೀಯತೇ |
ತೇನ ಮೋಕ್ಷಪರಶ್ಚೈವ ದೇವದೇವಃ ಪಿತಾಮಹಃ ॥77॥

ತುಷ್ಟ್ಯರ್ಥಸ್ಯ ತ್ರಿವರ್ಗಸ್ಯ ರಕ್ಷಾಮಾಹ ನರಾಧಿಪ |
ಜಗತೋ ಲೌಕಿಕೀ ಯಾತ್ರಾ ಯತ್ರ ನಿತ್ಯಂ ಪ್ರತಿಷ್ಠಿತಾ ॥78॥
ಎಲ್ಲ ಕಾರ್ಯಗಳ ಪೂರ್ಣನಾಶವು ಮೋಕ್ಷವೆಂದು ಹೇಳಲ್ಪಡುತ್ತದೆ. ಎಲೈ ನರಾಧಿಪನೇ! ಮುಮುಕ್ಷುಪರನಾದ ದೇವದೇವನಾದ, ಪಿತಾಮಹನಾದ ಬ್ರಹ್ಮ- ದೇವನು ಜಗತ್ತಿನ ತುಷ್ಟಿಗಾಗಿ ಇರುವ ತ್ರಿವರ್ಗವನ್ನು ರಕ್ಷಣೆ ಎಂದು ಹೇಳಿದ್ದಾನೆ. ಆ ರಕ್ಷಣೆಯಲ್ಲಿ ಜಗತ್ತಿನ ಲೌಕಿಕಯಾತ್ರೆಯು ನಿತ್ಯವೂ ಪ್ರತಿಷ್ಠಿತವಾಗಿದೆ.
ಧರ್ಮಶ್ಚಾರ್ಥಶ್ಚ ಕಾಮಶ್ಚ ಸೇವಿತವ್ಯೋಽಥ ಕಾಲತಃ |
ಧರ್ಮೇಣ ಹಿ ಮಹೀಪಾಲಶ್ಚಿರಂ ಪಾಲಯತೇ ಮಹೀಮ್ ॥79॥
ರಾಜನು ಧರ್ಮಾರ್ಥಕಾಮಗಳನ್ನು ಅವುಗಳಿಗೆ ಯೋಗ್ಯವಾದ ಕಾಲದಲ್ಲಿ ಸೇವಿಸಬೇಕು. ಧರ್ಮದಿಂದ ಆಳುವ ರಾಜನು ಬಹುಕಾಲ ಭೂಮಿಯನ್ನು ಆಳು- ತ್ತಾನೆ.
ಅಸ್ಮಿನ್ನರ್ಥೇ ಚ ಯೌ ಶ್ಲೋಕೌ ಗೀತಾವಂಗಿರಸಾ ಸ್ವಯಮ್ |
ಯಾದವೀಪುತ್ರ ಭದ್ರಂ ತೇ ಶ್ರೋತುಮರ್ಹಸಿ ತಾವಪಿ ॥80॥
ಈ ವಿಷಯದಲ್ಲಿ ಆಂಗಿರಸರಾದ ಬೃಹಸ್ಪತಿಗಳು ಎರಡು ಶ್ಲೋಕಗಳನ್ನು ತಾವೇ ಹಾಡಿದ್ದಾರೆ. ಎಲೈ ಕುಂತೀಪುತ್ರನೇ! ನಿನಗೆ ಮಂಗಳವಾಗಲಿ. ಆ ಶ್ಲೋಕಗಳನ್ನು ಕೇಳುವವನಾಗು.
ಕೃತ್ವಾ ಸರ್ವಾಣಿ ಕಾರ್ಯಾಣಿ ಸಮ್ಯಕ್ ಸಂಪಾಲ್ಯ ಮೇದಿನೀಮ್ |
ಪಾಲಯಿತ್ವಾ ಯಥಾ ಪೌರಾನ್ ಪರತ್ರ ಸುಖಮೇಧತೇ ॥81॥
ಭೂಮಿಯನ್ನು ಚೆನ್ನಾಗಿ ಪಾಲಿಸಿ, ಪ್ರಜೆಗಳನ್ನೂ ಚೆನ್ನಾಗಿ ಪಾಲಿಸಿ, ಎಲ್ಲಾ ಕಾರ್ಯಗಳನ್ನು ಮಾಡಿ ಪರಲೋಕದಲ್ಲಿ ಸುಖವನ್ನು ಹೊಂದುತ್ತಾನೆ.
ಕಿಂ ತಸ್ಯ ತಪಸಾ ರಾಜ್ಞಃ ಕಿಂಚ ತಸ್ಯಾಧ್ವರೈರಪಿ |
ಅಪಾಲಯಿತಾಃ ಪ್ರಜಾ ಯಸ್ಯ ಸರ್ವಾ ಧರ್ಮವಿನಾಕೃತಾಃ ॥82॥
ಯಾವನು ಪ್ರಜೆಗಳನ್ನು ಪಾಲಿಸದೇ ಎಲ್ಲ ಪ್ರಜೆಗಳೂ ಧರ್ಮಬಹಿರ್ಭೂತ- ರಾಗುತ್ತಾರೆಯೋ ಅಂತಹ ರಾಜನಿಗೆ ತಪಸ್ಸಿನಿಂದಾಗಲೀ, ಯಜ್ಞಗಳಿಂದಾಗಲೀ ಯಾವ ಫಲ ಉಂಟಾದೀತು?
ಶ್ಲೋಕಾಶ್ಚೋಶನಸಾ ಗೀತಾಸ್ತಾನ್ ನಿಬೋಧ ಯುಧಿಷ್ಠಿರ |
ದಂಡನೀತೇಶ್ಚ ತೇ ಮೂಲಂ ತ್ರಿವರ್ಗಸ್ಯ ಚ ಭೂಪತೇ ॥83॥
ಎಲೈ ಯುಧಿಷ್ಠಿರನೇ! ಶುಕ್ರಾಚಾರ್ಯರು ಗಾನ ಮಾಡಿದ ಶ್ಲೋಕಗಳನ್ನು ಕೇಳು. ಭೂಪತಿಯೇ! ದಂಡನೀತಿಗೂ ಮತ್ತು ತ್ರಿವರ್ಗಕ್ಕೂ ಆ ಶ್ಲೋಕಗಳು ಮೂಲಭೂತವಾದವುಗಳು.
ಭಾರ್ಗವಾಂಗಿರಸಂ ಕರ್ಮ ಷೋಡಶಾಂಗಂ ಚ ಯದ್ ಬಲಮ್ |
ವಿಷಹ್ಯತಾ ಚ ದೈವಂ ಚ ಪೌರುಷಂ ಚಾರ್ಥಸಿದ್ಧಯೇ ॥84॥
ಶುಕ್ರ ಮತ್ತು ಬೃಹಸ್ಪತಿಗಳಿಗೆ ಸಂಬಂಧಿಸಿದ ನೀತಿಗಳು, ರಾಜರಿಗೆ ಉಚಿತವಾದ ಕರ್ಮಗಳು, ಹದಿನಾರು ಅಂಗಗಳುಳ್ಳ ಬಲ ನಾಲ್ಕು ವಿಧವಾದ ಸೇನೆ, ಸಾಮಾದಿ ನಾಲ್ಕು ಉಪಾಯಗಳು, ಹಿಂದೆ ಹೇಳಿದ ಷಡ್ಗುಣಗಳು, ಸಮಯಾಸಮಯವಿಚಾರ, ಸಾಧ್ಯಾಸಾಧ್ಯವಿಚಾರ ಇವು ಹದಿನಾರು ಅಂಗಗಳು - ಶತ್ರುಗಳ ಉಪದ್ರವವನ್ನು ಸಹಿಸುವ ಯೋಗ್ಯತೆ, ದೈವಾನುಗ್ರಹ ಮತ್ತು ಪುರುಷಪ್ರಯತ್ನ ಇವು ಅರ್ಥಸಿದ್ಧಿಗೆ ಕಾರಣಗಳಾಗುತ್ತವೆ.
ಪ್ರಾಗುದಕ್ಪ್ರವಣಂ ದುರ್ಗಂ ಸಮಾಸಾದ್ಯ ಮಹೀಪತಿಃ |
ತ್ರಿವರ್ಗತ್ರಯಸಂಪೂರ್ಣಮುಪಾದಾಯ ಸಮುದ್ವಹೇತ್ ॥85॥
ರಾಜನು ಈಶಾನ್ಯದಿಕ್ಕಿನಲ್ಲಿ ಇಳಿಜಾರಾಗಿರುವ ಕೋಟೆಯನ್ನು ಆಶ್ರಯಿಸಿ, ಈ ಮೂರುವಿಧವಾದ ತ್ರಿವರ್ಗಗಳನ್ನು ಸಂಪೂರ್ಣವಾಗಿ ಸ್ವೀಕರಿಸಿ, ಅವುಗಳನ್ನು ಉದ್ಧರಿಸಬೇಕು.
ಷಟ್‌ಪಂಚ ಚ ವಿನಿರ್ಜಿತ್ಯ ದಶ ಚಾಷ್ಟೌ ಚ ಭೂಪತಿಮ್ |
ತ್ರಿವರ್ಗೈರ್ದಶಭಿರ್ಯುಕ್ತಃ ಸುರೈರಪಿ ನ ಜೀಯತೇ ॥86॥
ಕಾಮಾದಿ ಆರು ವೈರಿಗಳನ್ನು, ಭೂಮ್ಯಾದಿ ಪಂಚಮಹಾಭೂತಾತ್ಮಕವಾದ ದೇಹವನ್ನು, ಹತ್ತು ಇಂದ್ರಿಯಗಳನ್ನು, ಅಷ್ಟಮದಗಳನ್ನು ಜಯಿಸಿ, ಧರ್ಮ ಅರ್ಥ ಕಾಮಾದಿ ತ್ರಿವರ್ಗಗಳಿಂದಲೂ, ಅಮಾತ್ಯಾದಿ ಷಟ್ಕ, ಯಜ್ಞ ಅಧ್ಯಯನ ದಾನ ಪ್ರಜಾಪಾಲನ ಎಂಬ ಹತ್ತರಿಂದಲೂ ಯುಕ್ತನಾದ ರಾಜನು ದೇವತೆಗಳಿಂದಲೂ ಪರಾಭವವನ್ನು ಹೊಂದುವುದಿಲ್ಲ.
ನ ಬುದ್ಧಿಂ ಪರಿಗೃಹ್ಣೀತ ಸ್ತ್ರೀಣಾಂ ಮೂರ್ಖಜನಸ್ಯ ಚ |
ದೈವೋಪಹತಬುದ್ಧೀನಾಂ ಯೇ ಚ ವೇದೈರ್ವಿವರ್ಜಿತಾಃ ॥87॥
ನ ತೇಷಾಂ ಶೃಣುಯಾದ್ ರಾಜಾ ಬುದ್ಧಿಸ್ತೇಷಾಂ ಪರಾಙ್ಮುಖೀ |
ಸ್ತ್ರೀಪ್ರಧಾನಾನಿ ರಾಜ್ಯಾನಿ ವಿದ್ವದ್ಭಿರ್ವರ್ಜಿತಾನಿ ಚ ॥88॥
ಮೂರ್ಖಾಮಾತ್ಯಪ್ರತಪ್ತಾನಿ ಶುಷ್ಯಂತೇ ಜಲಬಿಂದುವತ್ |
ಸ್ತ್ರೀಯರಿಂದಲೂ, ಮೂರ್ಖಜನರಿಂದಲೂ, ದೈವದಿಂದ ಉಪಹತವಾದ ಬುದ್ಧಿಯುಳ್ಳವರಿಂದಲೂ, ವೇದಬಾಹಿರರಿಂದಲೂ ಉಪದೇಶವನ್ನು ಸ್ವೀಕರಿಸ- ಬಾರದು. ರಾಜನು ಅವರ ಹಿತವಚನವನ್ನು ಕೇಳಬಾರದು. ಅವರ ಬುದ್ಧಿಯು ಹಿತಕ್ಕೆ ಪರಾಙ್ಮುಖವಾಗಿರುತ್ತದೆ. ವಿವೇಕಿಗಳಾದವರು ಸ್ತ್ರೀಪ್ರಧಾನವಾದ ರಾಜ್ಯಗಳನ್ನು ವರ್ಜಿಸುತ್ತಾರೆ. ಮೂರ್ಖರಾದ ಅಮಾತ್ಯರಿಂದ ಉಪದ್ರವಕ್ಕೆ ಒಳಗಾದ ರಾಜ್ಯಗಳು ನೀರಿನ ಹನಿಗಳಂತೆ ಒಣಗಿ ಹೋಗುತ್ತವೆ.
ವಿದ್ವಾಂಸಃ ಪ್ರಥಿತಾ ಯೇ ಚ ಯೇ ಚಾಪ್ತಾಃ ಸರ್ವಕರ್ಮಸು ॥89॥

ಯುದ್ಧೇಷು ದೃಷ್ಟಕರ್ಮಾಣಸ್ತೇಷಾಂ ಚ ಶೃಣುಯಾನ್ನೃಪ |
ದೈವಂ ಪುರುಷಕಾರಂ ಚ ತ್ರಿವರ್ಗಂ ಚ ಸಮಾಶ್ರಿತಮ್ |
ದೈವತಾನಿ ಚ ವಿಪ್ರಾಂಶ್ಚ ಪ್ರಣಮ್ಯ ವಿಜಯೀ ಭವೇತ್ ||90||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತತಿತಮೋಽಧ್ಯಾಯಃ ||70||
ಯಾರು ಪ್ರಸಿದ್ಧರಾದ ವಿದ್ವಾಂಸರೋ, ಯಾರು ಸರ್ವಕರ್ಮಗಳಲ್ಲಿ ಆಪ್ತರೋ, ಯಾರ ವಿಕ್ರಮವು ಯುದ್ಧಗಳಲ್ಲಿ ದೃಷ್ಟವಾಗಿದೆಯೋ ಅಂತಹವರ ಮಾತನ್ನು ಕೇಳಬೇಕು. ಎಲೈ ರಾಜನೇ! ದೈವವು ಪುರುಷಪ್ರಯತ್ನ ಮತ್ತು ತ್ರಿವರ್ಗಗಳನ್ನು ಅವಲಂಬಿಸಿದೆ. ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ನಮಸ್ಕರಿಸುವ ರಾಜನು ವಿಜಯಶಾಲಿಯಾಗುತ್ತಾನೆ.
ರಾಜಧರ್ಮಕನ್ನಡಾನುವಾದದಲ್ಲಿ 70ನೆಯ ಅಧ್ಯಾಯವು ಮುಗಿಯಿತು.
0

## 71. ಎಪ್ಪತ್ತೊಂದನೆಯ ಅಧ್ಯಾಯ

### ಕೃತಾದಿಯುಗಗಳ ಗುಣನಿರೂಪಣೆ

ಯುಧಿಷ್ಠಿರಃ
ದಂಡನೀತಿಶ್ಚ ರಾಜಾ ಚ ಸಮಸ್ತೌ ತಾವುಭಾವಪಿ |
ಕಸ್ಯ ಕಿಂ ಕುರ್ವತಃ ಸಿದ್ಧ್ಯೈ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲೈ ಪಿತಾಮಹನೇ! ದಂಡನೀತಿ ಮತ್ತು ರಾಜ ಇಬ್ಬರೂ ಸೇರಿ ಯಾರಿಗೆ ಯಾವ ಸಿದ್ಧಿಯನ್ನು ಉಂಟು ಮಾಡಿಕೊಳ್ಳುತ್ತಾರೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ಮಹಾಭಾಗ್ಯಂ ದಂಡನೀತ್ಯಾಃ ಸಾಧ್ಯಂ ಶಬ್ದೈಃ ಸಹೇತುಕೈಃ |
ಶೃಣು ಮೇ ಶಂಸತೋ ರಾಜನ್ ಯಥಾವದಿಹ ಭಾರತ ||2||
ಭೀಷ್ಮರು ದಂಡನೀತಿಯಿಂದ ಉಂಟಾಗುವ ಮಹಾಭಾಗ್ಯವನ್ನು ಯುಕ್ತಿ- ಸಹಿತವಾದ ಶಬ್ದಗಳಿಂದ ಸಾಧಿಸುತ್ತೇನೆ. ಎಲೈ ರಾಜನೇ! ಭಾರತನೇ! ನಾನು ಹೇಳುವಂತೆ ಅದನ್ನು ಸರಿಯಾಗಿ ಕೇಳು.
ದಂಡನೀತಿಃ ಸ್ವಧರ್ಮೇಭ್ಯಶ್ಚಾತುರ್ವರ್ಣ್ಯಂ ನಿಯಚ್ಛತಿ |
ಪ್ರಯುಕ್ತಾ ಸ್ವಾಮಿನಾಽಸಮ್ಯಗಧರ್ಮೇಭ್ಯಶ್ಚ ಯಚ್ಛತಿ ||3||
ದಂಡನೀತಿಯು ನಾಲ್ಕು ವರ್ಣಗಳಿಗೆ ಸೇರಿದ ಪ್ರಜೆಗಳನ್ನು ಅವರವರ ಧರ್ಮದಲ್ಲಿ ನಿಯಂತ್ರಿಸುತ್ತದೆ. ರಾಜನು ದಂಡನೀತಿಯನ್ನು ತಪ್ಪಾಗಿ ಪ್ರಯೋಗಿಸಿ- ದರೆ ಆ ದಂಡನೀತಿಯು ಪ್ರಜೆಗಳನ್ನು ಅಧರ್ಮಗಳಿಗೆ ಕೊಟ್ಟು ಬಿಡುತ್ತದೆ.
ಚಾತುರ್ವರ್ಣ್ಯೇ ಸ್ವಧರ್ಮಸ್ಥೇ ಮರ್ಯಾದಾನಾಮಸಂಕರೇ |
ದಂಡನೀತಿಕೃತೇ ಕ್ಷೇಮೇ ಪ್ರಜಾನಾಮಕುತೋಭಯೇ ||4||
ಸೋಮೇ ಪ್ರಯತ್ನಂ ಕುರ್ವಂತಿ ತ್ರಯೋ ವರ್ಣಾ ಯಥಾವಿಧಿ |
ತಸ್ಮಾದ್ ದೇವಮನುಷ್ಯಾಣಾಂ ಸುಖಂ ವಿದ್ಧಿ ಸಮಾಹಿತಮ್ ||5||
ಚಾತುರ್ವರ್ಣ್ಯವು ತನ್ನ ಧರ್ಮದಲ್ಲಿ ನಿರತವಾಗಿ ಸಮಾಜದ ಮರ್ಯಾದೆ- ಗಳು ಕದಡಿಹೋಗದೇ ದಂಡನೀತಿಯಿಂದ ಕ್ಷೇಮವುಂಟಾಗಿ ಪ್ರಜೆಗಳು ನಿರ್ಭಯ- ವಾಗಿದ್ದರೆ ಮೂರುವರ್ಣದವರೂ ವಿಧಿಗನುಸಾರವಾಗಿ ಸೋಮಾದಿಯಾಗಗಳಲ್ಲಿ ಪ್ರಯತ್ನಪಡುತ್ತಾರೆ. ಅದರಲ್ಲಿ ದೇವತೆಗಳ ಮತ್ತು ಮನುಷ್ಯರ ಸುಖವು ಪ್ರತಿಷ್ಠಿತ- ವಾಗಿದೆ ಎಂಬುದನ್ನು ತಿಳಿ.
ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ |
ಇತಿ ತೇ ಸಂಶಯೋ ಮಾ ಭೂದ್ ರಾಜಾ ಕಾಲಸ್ಯ ಕಾರಣಮ್ ||6||
ಕಾಲವು ರಾಜನಿಗೆ ಕಾರಣವೇ ಅಥವಾ ರಾಜನೇ ಕಾಲಕ್ಕೆ ಕಾರಣನೇ ಎಂಬ ಸಂಶಯವು ನಿನಗೆ ಬೇಡ. ರಾಜನು ಕಾಲಕ್ಕೆ ಕಾರಣ.
ದಂಡನೀತ್ಯಾ ಯದಾ ರಾಜಾ ಸಮ್ಯಕ್ ಕಾರ್ತ್ಸ್ನ್ಯೇನ ವರ್ತತೇ |
ತದಾ ಕೃತಯುಗಂ ನಾಮ ಕಾಲಃ ಶ್ರೇಷ್ಠಃ ಪ್ರವರ್ತತೇ ||7||
ರಾಜನು ದಂಡನೀತಿಯನ್ನು ಪೂರ್ಣವಾಗಿ ಚೆನ್ನಾಗಿ ಪ್ರಯೋಗಿಸಿದರೆ ಆಗ ಕೃತಯುಗವೆಂಬ ಶ್ರೇಷ್ಠಕಾಲವು ಪ್ರವೃತ್ತವಾಗುತ್ತದೆ.
ಭವೇತ್ ಕೃತಯುಗೇ ಧರ್ಮೋ ನಾಧರ್ಮೋ ವಿದ್ಯತೇ ಕ್ವಚಿತ್ |
ಸರ್ವೇಷಾಮೇವ ವರ್ಣಾನಾಂ ನಾಧರ್ಮೇ ರಮತೇ ಮನಃ ||8||
ಕೃತಯುಗದಲ್ಲಿ ಧರ್ಮವೇ ಇರುತ್ತದೆ. ಎಲ್ಲಿಯೂ ಅಧರ್ಮವಿರುವುದಿಲ್ಲ. ಯಾವ ವರ್ಣದವರಿಗೂ ಮನಸ್ಸಿನಲ್ಲಿ ಅಧರ್ಮದಲ್ಲಿ ಅಭಿರುಚಿ ಉಂಟಾಗುವು- ದಿಲ್ಲ.
ಯೋಗಕ್ಷೇಮಾಃ ಪ್ರವರ್ತಂತೇ ಪ್ರಜಾನಾಂ ನಾತ್ರ ಸಂಶಯಃ |
ವೈದಿಕಾನಿ ಚ ಕರ್ಮಾಣಿ ಭವಂತ್ಯವಿಗುಣಾನ್ಯುತ ||9||
ಪ್ರಜೆಗಳಿಗೆ ಅಪೇಕ್ಷಿತವಾದ ಯೋಗಕ್ಷೇಮಗಳು ಉಂಟಾಗುತ್ತವೆ. ಇದರಲ್ಲಿ ಸಂಶಯವಿಲ್ಲ. ವೈದಿಕವಾದ ಕರ್ಮಗಳು ನಿರ್ದುಷ್ಟವಾಗಿ ನಡೆಯುತ್ತವೆ.
ಋತವಶ್ಚ ಸುಖಾಃ ಸರ್ವೇ ಭವಂತ್ಯುತ ನಿರಾಮಯಾಃ |
ಪ್ರಸೀದಂತಿ ನರಾಣಾಂ ಚ ಸ್ವರವರ್ಣಮನಾಂಸಿ ಚ ||10||
ಎಲ್ಲ ಋತುಗಳೂ ದೋಷರಹಿತವಾಗಿ ಸುಖಪ್ರದವಾಗಿರುತ್ತವೆ. ಮನುಷ್ಯರ ಸ್ವರವರ್ಣಮನಸ್ಸುಗಳು ಪ್ರಸನ್ನವಾಗಿರುತ್ತವೆ.

ವ್ಯಾಧಯೋ ನ ಭವಂತ್ಯತ್ರ ನಾಲ್ಪಾಯುರ್ದೃಶ್ಯತೇ ನರಃ |
ವಿಧವಾ ನ ಭವಂತ್ಯತ್ರ ನೃಶಂಸೋ ನಾಭಿಜಾಯತೇ ॥11॥
ಕೃತಯುಗದಲ್ಲಿ ವ್ಯಾಧಿಗಳಿರುವುದಿಲ್ಲ. ಮನುಷ್ಯರು ಅಲ್ಪಾಯುಷಿಗಳಾಗಿ ಕಂಡು ಬರುವುದಿಲ್ಲ. ವಿಧವೆಯರು ಇರುವುದಿಲ್ಲ. ಕ್ರೂರನಾದ ಪುರುಷನು ಜನಿಸು -ವುದಿಲ್ಲ.
ಅಕೃಷ್ಟಪಚ್ಯಾ ಪೃಥಿವೀ ಭವಂತ್ಯೋಷಧಯಸ್ತಥಾ |
ತ್ವಕ್ಪತ್ರಫಲಮೂಲಾನಿ ವೀರ್ಯವಂತಿ ಭವಂತಿ ಚ ॥12॥
ಭೂಮಿಯು ಕೃಷಿಯನ್ನು ಮಾಡದೆಯೇ ಫಲವನ್ನು ಕೊಡುತ್ತದೆ. ಓಷಧಿ- ವನಸ್ಪತಿಗಳು ತಾವಾಗಿಯೇ ಫಲವನ್ನು ಕೊಡುತ್ತವೆ. ತೊಗಟೆಗಳು, ಎಲೆಗಳು, ಫಲ- ಮೂಲಗಳು ಸಾರವತ್ತಾಗಿರುತ್ತವೆ.
ನಾಧರ್ಮೋ ವಿದ್ಯತೇ ತತ್ರ ಧರ್ಮ ಏವ ತು ಕೇವಲಃ |
ಇತಿ ಕಾರ್ತಯುಗಾನೇತಾನ್ ಗುಣಾನ್ ವಿದ್ಧಿ ಯುಧಿಷ್ಠಿರ ॥13॥
ಆಗ ಅಧರ್ಮವು ಇರುವುದಿಲ್ಲ. ಕೇವಲ ಧರ್ಮವೇ ಇರುತ್ತದೆ. ಎಲೈ ಯುಧಿ-ಷ್ಠಿರನೇ! ಇವುಗಳನ್ನು ಕೃತಯುಗದ ಗುಣಗಳೆಂದು ತಿಳಿ.
ದಂಡನೀತ್ಯಾ ಯದಾ ರಾಜಾ ತ್ರೀನಂಶಾನನುವರ್ತತೇ |
ಚತುರ್ಥಮಂಶಮುತ್ಸೃಜ್ಯ ತದಾ ತ್ರೇತಾ ಪ್ರವರ್ತತೇ ॥14॥
ರಾಜನು ದಂಡನೀತಿಯಲ್ಲಿ ನಾಲ್ಕನೆಯ ಒಂದಂಶವನ್ನು ಬಿಟ್ಟು ಮೂರು ಅಂಶಗಳನ್ನು ಮಾತ್ರ ಅನುಸರಿಸುವಾಗ ತ್ರೇತಾಯುಗವು ಪ್ರವೃತ್ತವಾಗುತ್ತದೆ.
ಅಧರ್ಮಸ್ಯ ಚತುರ್ಥಾಂಶಸ್ತ್ರೀನಂಶಾನನುವರ್ತತೇ |
ಕೃಷ್ಟಪಚ್ಯೈವ ಪೃಥಿವೀ ಭವಂತ್ಯೋಷಧಯಸ್ತಥಾ ॥15॥
ಅಧರ್ಮದ ನಾಲ್ಕನೆಯ ಅಂಶವು ಧರ್ಮದ ಮೂರು ಅಂಶಗಳನ್ನುಅನುಸರಿಸಿ ನಡೆಯುತ್ತದೆ. ಉತ್ತು, ಬಿತ್ತಿದರೆ ಮಾತ್ರ ಭೂಮಿಯು ಧಾನ್ಯವನ್ನು ಕೊಡುತ್ತದೆ. ಕೃಷಿ ಮಾಡಿದರೆ ಮಾತ್ರ ಓಷಧಿವನಸ್ಪತಿಗಳು ಫಲವನ್ನು ಕೊಡುತ್ತವೆ.
ಅರ್ಧಂ ತ್ಯಕ್ತ್ವಾ ಯದಾ ರಾಜಾ ನೀತ್ಯರ್ಧಮನುವರ್ತತೇ |
ತತಸ್ತು ದ್ವಾಪರಂ ನಾಮ ಸ ಕಾಲಃ ಸಂಪ್ರವರ್ತತೇ ॥16॥
ರಾಜನು ರಾಜನೀತಿಯ ಅರ್ಧಭಾಗವನ್ನು ತ್ಯಜಿಸಿ ಉಳಿದ ಅರ್ಧಭಾಗವನ್ನು ಮಾತ್ರ ಆಶ್ರಯಿಸಿದರೆ ಆಗ ದ್ವಾಪರ ಎಂಬ ಕಾಲವು ಪ್ರವೃತ್ತವಾಗುತ್ತದೆ.
ಅಶುಭಸ್ಯ ತದಾ ತ್ವರ್ಧಂ ದ್ವಾವಂಶಾವನುವರ್ತತೇ |
ಕೃಷ್ಟಪಚ್ಯೈವ ಪೃಥಿವೀ ಭವತ್ಯಲ್ಪಫಲಾ ತಥಾ ॥17॥
ಆಗ ಅಶುಭದ ಎರಡು ಅಂಶಗಳು ಮತ್ತು ಶುಭದ ಎರಡು ಅಂಶಗಳನ್ನು ಅನುಸರಿಸುತ್ತವೆ. ಕೃಷಿ ಮಾಡಿದರೆ ಮಾತ್ರ ಭೂಮಿಯು ಅಲ್ಪಫಲವನ್ನು ಕೊಡುತ್ತದೆ.
ದಂಡನೀತಿಂ ಪರಿತ್ಯಜ್ಯ ಯದಾ ಕಾರ್ತ್ಸ್ನ್ಯೇನ ಭೂಮಿಪಃ |
ಪ್ರಜಾಃ ಕ್ಲಿಶ್ನಾತ್ಯಯೋಗೇನ ಪ್ರವಿಶ್ಯತಿ ತದಾ ಕಲಿಃ ॥18॥
ರಾಜನು ದಂಡನೀತಿಯನ್ನು ಸಂಪೂರ್ಣವಾಗಿ ತ್ಯಜಿಸಿದರೆ ಪ್ರಜೆಗಳು ದುಃಖಕ್ಕೆ ಈಡಾಗುತ್ತಾರೆ. ಆಗ ಕಲಿಯುಗವು ಪ್ರವೇಶಮಾಡುತ್ತದೆ.
ಕಲಾವಧರ್ಮೋ ಭೂಯಿಷ್ಠಂ ಧರ್ಮೋ ಭವತಿ ತು ಕ್ವಚಿತ್ |
ಸರ್ವೇಷಾಮೇವ ವರ್ಣಾನಾಂ ಸ್ವಧರ್ಮಾಽಚ್ಚ್ಯವತೇ ಮನಃ ॥19॥
ಕಲಿಯುಗದಲ್ಲಿ ಅಧರ್ಮವೇ ಬಹಳವಾಗಿ ನಡೆಯುತ್ತದೆ. ಎಲ್ಲೋ ಒಂದೊಂದು ಕಡೆ ಧರ್ಮವು ನಡೆಯುತ್ತದೆ. ಎಲ್ಲ ವರ್ಣದವರಿಗೂ ತಮ್ಮ ಧರ್ಮ -ಗಳಿಂದ ಮನಸ್ಸು ಜಾರಿಹೋಗುತ್ತದೆ.
ಶೂದ್ರಾ ಭೈಕ್ಷೇಣ ಜೀವಂತಿ ಬ್ರಾಹ್ಮಣಾಃ ಪರಿಚರ್ಯಯಾ |
ಯೋಗಕ್ಷೇಮಸ್ಯ ನಾಶಶ್ಚ ವರ್ತತೇ ವರ್ಣಸಂಕರಃ ॥20॥
ಶೂದ್ರರು ಸನ್ಯಾಸಿಗಳಾಗಿ ಜೀವಿಸುತ್ತಾರೆ. ಬ್ರಾಹ್ಮಣರು ಸೇವೆಯನ್ನು ಮಾಡಿ- ಕೊಂಡು ಜೀವಿಸುತ್ತಾರೆ. ಪ್ರಜೆಗಳ ಯೋಗಕ್ಷೇಮವು ನಾಶವನ್ನು ಹೊಂದುತ್ತದೆ. ವರ್ಣಸಂಕರವುಂಟಾಗುತ್ತದೆ.
ವೈದಿಕಾನಿ ಚ ಕರ್ಮಾಣಿ ಭವಂತಿ ವಿಗುಣಾನ್ಯುತ |
ಋತವೋ ನಸುಖಾಃ ಸರ್ವೇ ಭವಂತ್ಯಾಮಯಿನಸ್ತಥಾ ॥21॥
ವೈದಿಕಕರ್ಮಗಳು ಗುಣರಹಿತವಾಗುತ್ತವೆ. ಋತುಗಳು ಸುಖಪ್ರದಗಳಾಗು- ವುದಿಲ್ಲ. ಪ್ರಜೆಗಳು ರೋಗಗ್ರಸ್ತರಾಗುತ್ತಾರೆ.
ಹ್ರಸಂತಿ ಚ ಮನುಷ್ಯಾಣಾಂ ಸ್ವರವರ್ಣಮನಾಂಸ್ಯುತ |
ವ್ಯಾಧಯಶ್ಚ ಭವಂತ್ಯತ್ರ ಮ್ರಿಯಂತೇ ಚಾಶತಾಯುಷಃ ॥22॥
ಪ್ರಜೆಗಳ ಸ್ವರ, ವರ್ಣ, ಮನಸ್ಸುಗಳು ಕುಗ್ಗಿಹೋಗುತ್ತವೆ. ವ್ಯಾಧಿಗಳು ಉಂಟಾ -ಗುತ್ತವೆ. ನೂರುವರ್ಷ ತುಂಬದೆಯೇ ಪ್ರಜೆಗಳು ಮರಣವನ್ನು ಹೊಂದುತ್ತಾರೆ.
ವಿಧವಾಶ್ಚ ಭವಂತ್ಯತ್ರ ನೃಶಂಸಾ ಜಾಯತೇ ಪ್ರಜಾ |
ಕ್ವಚಿದ್ ವರ್ಷತಿ ಪರ್ಜನ್ಯಃ ಕ್ವಚಿತ್ ಸಸ್ಯಂ ಪ್ರರೋಹತಿ ॥23॥
ನಾರಿಯರು ವಿಧವೆಯರಾಗುತ್ತಾರೆ. ಪ್ರಜೆಗಳು ಕ್ರೂರಿಗಳಾಗುತ್ತಾರೆ. ಪರ್ಜ- ನ್ಯನು ಕೆಲವು ಕಡೆ ಮಾತ್ರ ಮಳೆಯನ್ನು ಸುರಿಸುತ್ತಾನೆ. ಕೆಲವು ಕಡೆ ಮಾತ್ರ ಸಸ್ಯಗಳು ಬೆಳೆಯುತ್ತವೆ.
ರಸಾಃ ಸರ್ವೇ ಕ್ಷಯಂ ಯಾಂತಿ ಯದಾ ನೇಚ್ಛತಿ ಭೂಮಿಪಃ |

ಪ್ರಜಾಃ ಸಂರಕ್ಷಿತುಂ ಸಮ್ಯಗ್ ದಂಡನೀತಿಸಮನ್ವಿತಃ ॥24॥
ರಾಜನು ದಂಡನೀತಿಸಮನ್ವಿತನಾಗಿ ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಲು ಬಯಸ- ದಿದ್ದರೆ ಭೂಮಿಯ ಎಲ್ಲ ರಸಗಳೂ ನಾಶವನ್ನು ಹೊಂದುತ್ತವೆ.
ರಾಜಾ ಕೃತಯುಗಸ್ರಷ್ಟಾ ತ್ರೇತಾಯಾ ದ್ವಾಪರಸ್ಯ ಚ |
ಯುಗಸ್ಯ ಚ ಚತುರ್ಥಸ್ಯ ರಾಜಾ ಭವತಿ ಕಾರಣಮ್ ॥25॥
ರಾಜನೇ ಕೃತಯುಗವನ್ನು ಸೃಷ್ಟಿಸುವವನು. ತ್ರೇತಾಯುಗ, ದ್ವಾಪರಯುಗ ಮತ್ತು ನಾಲ್ಕನೆಯದಾದ ಕಲಿಯುಗಕ್ಕೂ ರಾಜನೇ ಕಾರಣನಾಗುತ್ತಾನೆ.
ಕೃತಸ್ಯ ಕರಣಾದ್ ರಾಜಾ ಸ್ವರ್ಗಮತ್ಯಂತಮಶ್ನುತೇ |
ತ್ರೇತಾಯಾಃ ಕರಣಾದ್ ರಾಜಾ ಸ್ವರ್ಗಂ ನಾತ್ಯಂತಮಶ್ನುತೇ ॥26॥
ಕೃತಯುಗವನ್ನು ಸೃಷ್ಟಿಮಾಡುವುದರಿಂದ ರಾಜನು ಅತಿಶಯವಾದ ಸ್ವರ್ಗವನ್ನು ಪಡೆಯುತ್ತಾನೆ. ತ್ರೇತಾಯುಗವನ್ನು ಸೃಷ್ಟಿಸಿದ ರಾಜನು ಸ್ವರ್ಗವನ್ನು ಪಡೆದರೂ ಅದರಲ್ಲಿ ಅಷ್ಟು ಅತಿಶಯವಿರುವುದಿಲ್ಲ.
ಪ್ರವರ್ತನಾದ್ ದ್ವಾಪರಸ್ಯ ಯಥಾಭಾಗಮುಪಾಶ್ನುತೇ |
ಕಲೇಃ ಪ್ರವರ್ತನಾದ್ ರಾಜಾ ಪಾಪಮತ್ಯಂತಮಶ್ನುತೇ ॥27॥
ದ್ವಾಪರಯುಗವನ್ನು ಪ್ರವರ್ತಿಸುವುದರಿಂದ ಧರ್ಮದ ಅರ್ಧಭಾಗಕ್ಕನು- ಗುಣವಾಗಿ ಅಷ್ಟೇ ಫಲವನ್ನು ಪಡೆಯುತ್ತಾನೆ. ಕಲಿಯುಗವನ್ನು ಪ್ರವರ್ತಿಸುವುದ- ರಿಂದ ರಾಜನು ಬಹಳ ಪಾಪವನ್ನು ಹೊಂದುತ್ತಾನೆ.
ತತೋ ವಸತಿ ದುಷ್ಕರ್ಮಾ ನರಕೇ ಶಾಶ್ವತೀಃ ಸಮಾಃ |
ಪ್ರಜಾನಾಂ ಕಲ್ಮಷೇ ಮಗ್ನೋಽಕೀರ್ತಿಂ ಪಾಪಂ ಚ ವಿಂದತಿ ॥28॥
ಅನೇಕದುಷ್ಕರ್ಮಗಳನ್ನು ಮಾಡಿ ಅನಂತರ ಶಾಶ್ವತವಾಗಿ ನರಕದಲ್ಲಿ ವಾಸ ಮಾಡುತ್ತಾನೆ. ಪ್ರಜೆಗಳ ದೋಷದಲ್ಲಿ ಮುಳುಗಿ ಹೋಗಿ ಅಕೀರ್ತಿಯನ್ನೂ ಮತ್ತು ಪಾಪವನ್ನೂ ಸಂಪಾದಿಸುತ್ತಾನೆ.
ದಂಡನೀತಿಂ ಪುರಸ್ಕೃತ್ಯ ಕ್ಷತ್ರಿಯೇಣ ವಿಜಾನತಾ |
ಲಿಪ್ಸಿತವ್ಯಮಲಬ್ಧಂ ಚ ಲಬ್ಧಂ ರಕ್ಷ್ಯಂ ಚ ಭಾರತ ॥29॥
ಎಲೈ ಭಾರತನೇ! ವಿವೇಕಿಯಾದ ಕ್ಷತ್ರಿಯನಾದವನು ದಂಡನೀತಿಯನ್ನು ಪುರಸ್ಕರಿಸಿ ಪಡೆಯದಿದ್ದುದನ್ನು ಪಡೆಯಬೇಕು ಮತ್ತು ಪಡೆದುದನ್ನು ರಕ್ಷಿಸಬೇಕು.
ಲೋಕಸ್ಯ ಸೀಮಂತಕರೀ ಮರ್ಯಾದಾ ಲೋಕಭಾವನೀ |
ಸಮ್ಯಙ್ನೀತಾ ದಂಡನೀತಿರ್ಯಥಾ ಮಾತಾ ಯಥಾ ಪಿತಾ ॥30॥
ಪ್ರಜೆಗಳಿಗೆ ಎಲ್ಲೆಯನ್ನು ಗುರುತಿಸುವ, ಲೋಕವನ್ನು ಶುದ್ಧಗೊಳಿಸುವ, ಚೆನ್ನಾಗಿ ಪ್ರಯೋಗಿಸಲ್ಪಟ್ಟ ದಂಡನೀತಿಯು ತಾಯಿಯಿದ್ದಂತೆ ಮತ್ತು ತಂದೆಯಿದ್ದಂತೆ.
ಯಸ್ಯಾಂ ಭವಂತಿ ಭೂತಾನಿ ತದ್ ವಿದ್ಧಿ ಭರತರ್ಷಭ |
ಏಷ ಏವ ಪರೋ ಧರ್ಮೋ ಯದ್ ರಾಜಾ ದಂಡನೀತಿಮಾನ್ ॥31॥
ಎಲೈ ಭರತರ್ಷಭನೇ! ಅಂತಹ ದಂಡನೀತಿಯ ಪ್ರಯೋಗವಿದ್ದಾಗ ಪ್ರಜೆಗಳು ವೈಭವವನ್ನು ಪಡೆಯುತ್ತಾರೆಂದು ತಿಳಿ. ರಾಜನಿಗೆ ದಂಡನೀತಿಯನ್ನು ಅನು- ಸರಿಸುವುದೇ ಶ್ರೇಷ್ಠವಾದ ಧರ್ಮ.
ತಸ್ಮಾತ್ ಕೌರವ್ಯ ಧರ್ಮೇಣ ಪ್ರಜಾಃ ಪಾಲಯ ನೀತಿಮಾನ್ |
ಏವಂವೃತ್ತಃ ಪ್ರಜಾ ರಕ್ಷನ್ ಸ್ವರ್ಗಂ ಜೇಷ್ಯಸಿ ದುರ್ಜಯಮ್ ॥32॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಸಪ್ತತಿತಮೋಽಧ್ಯಾಯಃ ॥71॥
ಎಲೈ ಕೌರವ್ಯನೇ! ಆದ್ದರಿಂದ ರಾಜನೀತಿಯನ್ನು ಅನುಷ್ಠಾನ ಮಾಡುವವನಾಗಿ ಪ್ರಜೆಗಳನ್ನು ಧರ್ಮದಿಂದ ಪಾಲಿಸು. ಇಂತಹ ನಡತೆಯಿಂದ ಪ್ರಜೆಗಳನ್ನು ರಕ್ಷಿಸುವ ನೀನು ದುರ್ಜಯವಾದ ಸ್ವರ್ಗವನ್ನು ಜಯಿಸುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 71ನೆಯ ಅಧ್ಯಾಯವು ಮುಗಿಯಿತು.
0

72. ಎಪ್ಪತ್ತೆರಡನೆಯ ಅಧ್ಯಾಯ
ರಾಜನಲ್ಲಿರಬೇಕಾದ ಗುಣಗಳು
ಯುಧಿಷ್ಠಿರಃ
ಕೇನ ವೃತ್ತೇನ ವೃತ್ತಜ್ಞ ವರ್ತಮಾನೋ ಮಹೀಪತಿಃ |
ಸುಖೇನಾರ್ಥಾನ್ ಸುಖೋದರ್ಕಾನಿಹ ಚ ಪ್ರೇತ್ಯ ಚಾಪ್ನುಯಾತ್ ॥1॥
ಯುಧಿಷ್ಠಿರ ಎಲೈ ನಡತೆಯನ್ನು ತಿಳಿದವನೇ! ಯಾವ ನಡತೆಯನ್ನು ಹೊಂದಿದ ರಾಜನು ಅನಾಯಾಸವಾಗಿ ಈ ಲೋಕದಲ್ಲಿ ಸುಖಫಲವನ್ನು ಕೊಡುವ ಅರ್ಥಗಳನ್ನೂ ಮತ್ತು ಪರಲೋಕದಲ್ಲಿ ಸುಖವನ್ನೂ ಹೊಂದಿಯಾನು?
ಭೀಷ್ಮಃ
ಇಯಂ ಗುಣಾನಾಂ ಷಟ್ತ್ರಿಂಶೀ ಷಟ್ತ್ರಿಂಶದ್ ಗುಣಸಂಯುತಾ |
ಯಾನ್ ಗುಣಾಂಸ್ತು ಗುಣೋಪೇತಃ ಕುರ್ವನ್ ಗುಣಮವಾಪ್ನುಯಾತ್ ॥2॥

ಭೀಷ್ಮರು  ಇವು ಮೂವತ್ತಾರು ಶ್ರೇಷ್ಠವಾದ ಗುಣಗಳು. ಈ ಗುಣಗಳಿಂದ ವಿಶಿಷ್ಟನಾಗಿ ರಾಜನು ಕಾರ್ಯವನ್ನು ಮಾಡಿದರೆ ಒಳ್ಳೆಯ ಫಲವನ್ನು ಹೊಂದಿ- ಯಾನು!
ಚರೇದ್ ಧರ್ಮಾನಕಟುಕೋ ಮುಂಚೇತ್ ಸ್ನೇಹಂ ನ ನಾಸ್ತಿಕಃ |
ಅನೃಶಂಸಶ್ಚರೇದರ್ಥಂ ಚರೇತ್ ಕಾಮಮನುದ್ಧತಃ ॥3॥
ಉಗ್ರವಾಗಿ ಮಾತನ್ನಾಡದೇ ಧರ್ಮವನ್ನು ಆಚರಿಸಬೇಕು. ಸ್ನೇಹವನ್ನು ಹರಿ- ಯಲು ಬಿಡಬೇಕು. (ಸ್ನೇಹಶೀಲನಾಗಿರಬೇಕು). ನಾಸ್ತಿಕನಾಗಿರಬಾರದು. ಕ್ರೂರಿ- ಯಾಗದೇ ಅರ್ಥವನ್ನು ಸಂಪಾದಿಸಬೇಕು. ಅಹಂಕಾರ ಪಡದೇ ಕಾಮವನ್ನು ಭೋಗಿಸಬೇಕು.
ಪ್ರಿಯಂ ಬ್ರೂಯಾದಕೃಪಣಃ ಶೂರಃ ಸ್ಯಾದವಿಕತ್ಥನಃ |
ದಾತಾ ನಾಪಾತ್ರವರ್ಷೀ ಸ್ಯಾತ್ ಪ್ರಗಲ್ಭಃ ಸ್ಯಾದನಿಷ್ಠುರಃ ॥4॥
ಲೋಭಿಯಾಗದೇ ಪ್ರಿಯವಾಗಿ ಮಾತನಾಡಬೇಕು. ಶೂರನಾಗಿ ತನ್ನನ್ನು ತಾನು ಹೊಗಳಿಕೊಳ್ಳಬಾರದು. ಅಪಾತ್ರರಿಗೆ ದಾನಮಾಡದೇ ದಾನಿಯಾಗಬೇಕು. ನಿಷ್ಠುರ- ನಾಗಿರದೇ ವಿಚಕ್ಷಣನಾಗಿರಬೇಕು.
ಸಂದಧೀತ ನ ಚಾನಾರ್ಯೈರ್ವಿಗೃಹ್ಣೀಯಾನ್ನ ಬಂಧುಭಿಃ |
ನಾನಾಪ್ತೈಃ ಕಾರಯೇಚ್ಚಾರಂ ಕುರ್ಯಾತ್ ಕಾರ್ಯಮಪೀಡಯಾ ॥5॥
ದುಷ್ಟರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳಬಾರದು. ಬಂಧುಗಳ ಜೊತೆ ವಿರೋಧವನ್ನು ಮಾಡಿಕೊಳ್ಳಬಾರದು. ಆಪ್ತರಲ್ಲದವರಿಂದ ಯಾವ ಕಾರ್ಯವನ್ನೂ ಮಾಡಿಸಿಕೊಳ್ಳಬಾರದು. ಚಾರರಿಗೆ ಪೀಡೆಯುಂಟಾಗದಂತೆ ಕಾರ್ಯಗಳನ್ನು ಮಾಡಿಸಿಕೊಳ್ಳಬೇಕು.
ಅರ್ಥಾನ್ ಬ್ರೂಯಾನ್ನ ಚಾರೇಷು ಗುಣಾನ್ ಬ್ರೂಯಾನ್ನ ಚಾತ್ಮನಃ |
ಆದದ್ಯಾನ್ನ ಚ ಸಾಧುಭ್ಯೋ ನಾಸತ್ಪುರುಷಮಾಶ್ರಯೇತ್ ॥6॥
ಚಾರರಿಗೆ ತನ್ನ ಅಭಿಪ್ರಾಯಗಳನ್ನು ತಿಳಿಸಬಾರದು. ತನ್ನ ಗುಣಗಳನ್ನು ಹೇಳಿಕೊಳ್ಳಬಾರದು. ಸಜ್ಜನರಿಂದ ವಿತ್ತಾದಿಗಳನ್ನು ಸ್ವೀಕರಿಸಬಾರದು. ಅಸಜ್ಜನರನ್ನು ಆಶ್ರಯಿಸಬಾರದು.
ನಾಪರೀಕ್ಷ್ಯ ನಯೇದ್ ದಂಡಂ ನ ಚ ಮಂತ್ರಂ ಪ್ರಕಾಶಯೇತ್ |
ವಿಸೃಜೇನ್ನಚ ಲುಬ್ಧೇಭ್ಯೋ ವಿಶ್ವಸೇನ್ನಾಪಕಾರಿಷು ॥7॥
ಪರೀಕ್ಷೆಯನ್ನು ಮಾಡದೇ ಶಿಕ್ಷೆಯನ್ನು ವಿಧಿಸಬಾರದು. ಮಂತ್ರಾಲೋಚನೆ- ಯನ್ನು ಬಹಿರಂಗಪಡಿಸಬಾರದು. ಲೋಭಿಗಳಿಗೆ ಧನವನ್ನು ಕೊಡಬಾರದು. ಅಪಕಾರವನ್ನು ಮಾಡಿದವರನ್ನು ನಂಬಬಾರದು.
ಅನೀರ್ಷುರ್ಗುಪ್ತದಾರಃ ಸ್ಯಾಚ್ಚೋಕ್ಷಃ ಸ್ಯಾದಘೃಣೀ ನೃಪಃ |
ಸ್ತ್ರಿಯಂ ಸೇವೇತ ನಾತ್ಯರ್ಥಂ ಮೃಷ್ಟಂ ಭುಂಜೀತ ನಾಹಿತಮ್ ॥8॥
ರಾಜನು ಅಸೂಯಾರಹಿತನೂ, ತನ್ನ ಪತ್ನಿಯನ್ನು ರಕ್ಷಿಸುವವನೂ, ದಕ್ಷನೂ ಮತ್ತು ಅನ್ಯಾಯರೂಪವಾದ ದಯೆಯನ್ನು ಹೊಂದದವನೂ ಆಗಿರಬೇಕು. ಅತಿಯಾಗಿ ಸ್ತ್ರೀಲೋಲುಪನಾಗಿರಬಾರದು. ಮೃಷ್ಟಾನ್ನವನ್ನು ಭುಂಜಿಸಬೇಕು. ಅಹಿತ- ವಾದುದನ್ನು ಭುಂಜಿಸಬಾರದು.
ಅಸ್ತಬ್ಧಃ ಪೂಜಯೇನ್ಮಾನ್ಯಾನ್ ಗುರೂನ್ ಸೇವೇದಮಾಯಯಾ |
ಅರ್ಚೇದ್ ದೇವಾನ್ನ ದಂಭೇನ ಶ್ರಿಯಮಿಚ್ಛೇದಕುತ್ಸಿತಾಮ್ ॥9॥
ಅಹಂಕಾರವಿಲ್ಲದೇ ಮಾನ್ಯರನ್ನು ಪೂಜಿಸಬೇಕು. ಕಪಟವಿಲ್ಲದೇ ಗುರುಗಳ ಸೇವೆಯನ್ನು ಮಾಡಬೇಕು. ದಂಭತನವನ್ನು ಬಿಟ್ಟು ದೇವತೆಗಳನ್ನು ಅರ್ಚಿಸಬೇಕು. ಕೆಟ್ಟ ಸಂಪತ್ತನ್ನು ಅಪೇಕ್ಷಿಸಬಾರದು.
ಸೇವೇತ ಪ್ರಣಯಂ ಹಿತ್ವಾ ದಕ್ಷಃ ಸ್ಯಾನ್ನ ತ್ವಕಾಲವಿತ್ |
ಸಾಂತ್ವಯೇನ್ನಚ ಭೋಗಾರ್ಥಮನುಗೃಹ್ಣನ್ನ ಚಾಕ್ಷಿಪೇತ್ ॥10॥
ಪಕ್ಷಪಾತವನ್ನು ಬಿಟ್ಟು ರಾಜನೀತಿಯನ್ನು ಅನುಷ್ಠಾನ ಮಾಡಬೇಕು. ದಕ್ಷತೆ- ಯಿಂದ ಕೂಡಿರಬೇಕು. ಕಾಲಜ್ಞಾನವನ್ನು ಹೊಂದಿರಬೇಕು. ತನ್ನ ಭೋಗಾರ್ಥವಾಗಿ ಸಮಾಧಾನದ ಮಾತುಗಳನ್ನಾಡಬಾರದು. ಇನ್ನೊಬ್ಬರಿಗೆ ಅನುಗ್ರಹವನ್ನು ಮಾಡುತ್ತಾ ನಿಂದಿಸಬಾರದು. (ನಿಂದಿಸುತ್ತಾ ಅನುಗ್ರಹವನ್ನು ಮಾಡಬಾರದು).
ಪ್ರಹರೇನ್ನ ತ್ವವಿಜ್ಞಾಯ ಹತ್ವಾ ಶತ್ರೂನ್ನ ಶೇಷಯೇತ್ |
ಕ್ರೋಧಂ ಕುರ್ಯಾನ್ನ ಚಾಕಸ್ಮಾನ್ಮೃದುಃ ಸ್ಯಾನ್ನಾಪಕಾರಿಷು ॥11॥
ಚೆನ್ನಾಗಿ ಪರೀಕ್ಷಿಸದೇ ಪ್ರಹಾರವನ್ನು ಮಾಡಬಾರದು. ಶತ್ರುಗಳ ಮೇಲೆ ಪ್ರಹಾರವನ್ನು ಮಾಡಿದರೆ ಯಾರನ್ನೂ ಉಳಿಸಬಾರದು. ನಿಷ್ಕಾರಣವಾಗಿ ಕೋಪ- ವನ್ನು ಮಾಡಬಾರದು. ಅಪಕಾರವನ್ನು ಮಾಡಿದವರ ವಿಷಯದಲ್ಲಿ ಮೃದುವಾಗಿ- ರಬಾರದು.
ಏವಂ ಚರಸ್ವ ರಾಜ್ಯಸ್ಥೋ ಯದಿ ಶ್ರೇಯ ಇಹೇಚ್ಛಸಿ |
ಅತೋಽನ್ಯಥಾ ನರಪತಿರ್ಭಯಮೃಚ್ಛತ್ಯನುತ್ತಮಮ್ ॥12॥
ನೀನು ರಾಜ್ಯದಲ್ಲಿದ್ದವನಾಗಿ ಶ್ರೇಯಸ್ಸನ್ನು ಬಯಸುವವನಾದರೆ ಈ ರೀತಿ ನಡೆದುಕೋ. ಬೇರೆ ರೀತಿಯಲ್ಲಿ ನಡೆದುಕೊಂಡ ರಾಜನು ಉತ್ತಮವಾದ ಭಯ- ವನ್ನು ಹೊಂದುತ್ತಾನೆ.
ಇತಿ ಸರ್ವಾನ್ ಗುಣಾನೇತಾನ್ ಯಥೋಕ್ತಾನ್ ಯೋಽನುವರ್ತತೇ |
ಅನುಭೂಯೇಹ ಭದ್ರಾಣಿ ಪ್ರೇತ್ಯ ಸ್ವರ್ಗೇ ಮಹೀಯತೇ ॥13॥
ಹೀಗೆ ನಾನು ಹೇಳಿದ ಈ ಎಲ್ಲ ಗುಣಗಳನ್ನೂ ಯಾವನು ಅನುಸರಿಸು- ತ್ತಾನೆಯೋ ಅವನು ಈ ಲೋಕದಲ್ಲಿ ಶುಭವನ್ನು ಅನುಭವಿಸಿ, ಮರಣವನ್ನು ಹೊಂದಿ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ವೈಶಂಪಾಯನಃ

ಇದಂ ವಚಃ ಶಾಂತನವಸ್ಯ ಶುಶ್ರುವಾನ್
ಯುಧಿಷ್ಠಿರಃ ಪಾಂಡವಮುಖ್ಯಸಂವೃತಃ |
ತದಾ ವವಂದೇ ಚ ಪಿತಾಮಹಂ ನೃಪೋ
ಯಥೋಕ್ತಮೇತಚ್ಚ ಚಕಾರ ಬುದ್ಧಿಮಾನ್ ||14||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಾಸಪ್ತತಿತಮೋಽಧ್ಯಾಯಃ ||72||
ವೈಶಂಪಾಯನರು ಹೀಗೆ ಶಂತನುಪುತ್ರರಾದ ಭೀಷ್ಮರ ವಚನಗಳನ್ನು ಪಾಂಡವಮುಖ್ಯರ ಜೊತೆಯಲ್ಲಿ ಯುಧಿಷ್ಠಿರನು ಕೇಳಿದನು.
ಆಗ ಮೇಧಾವಿಯಾದ ರಾಜನು ಪಿತಾಮಹರಾದ ಭೀಷ್ಮರಿಗೆ ನಮಸ್ಕರಿಸಿ ಅವರು ಹೇಳಿದಂತೆಯೇ ಮಾಡಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 72ನೆಯ ಅಧ್ಯಾಯವು ಮುಗಿಯಿತು
0

73. ಎಪ್ಪತ್ತಮೂರನೆಯ ಅಧ್ಯಾಯ
ರಾಜನ ಕರ್ತವ್ಯಗಳ ಕಥನ
ಯುಧಿಷ್ಠಿರಃ
ಕಥಂ ರಾಜಾ ಪ್ರಜಾ ರಕ್ಷನ್ ನಾಧಿಬಂಧೇನ ಯುಜ್ಯತೇ |
ಧರ್ಮೇ ಚ ನಾಪರಾಧ್ನೋತಿ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲ್ಲೈ ಪಿತಾಮಹನೇ! ಪ್ರಜೆಗಳನ್ನು ರಕ್ಷಿಸುವ ರಾಜನು ಹೇಗೆ ಮಹಾವ್ಯಥೆಯನ್ನು (ಚಿಂತೆಯನ್ನು)
ಹೊಂದುವನಾಗುವುದಿಲ್ಲ ಮತ್ತು ಧರ್ಮದ ವಿಷಯದಲ್ಲೂ ಅಪರಾಧ ಮಾಡುವುದಿಲ್ಲ - ಎಂಬುದನ್ನು ನನಗೆ ಹೇಳು.
ಭೀಷ್ಮಃ
ಸಮಾಸೇನೈವ ತೇ ತಾತ ಧರ್ಮಾನ್ ವಕ್ಷ್ಯಾಮಿ ನಿಶ್ಚಿತಾನ್ |
ವಿಸ್ತರೇಣ ಹಿ ಧರ್ಮಾಣಾಂ ನ ಜಾತ್ವಂತಮವಾಪ್ನುಯಾತ್ ||2||
ಭೀಷ್ಮರು ಪ್ರೀತಿಪಾತ್ರನೇ! ಅಂತಹ ನಿಶ್ಚಿತವಾದ ಧರ್ಮಗಳನ್ನು ಪ್ರಶ್ನೆ- ಮಾಡುವ ನಿನಗೆ ಸಂಕ್ಷೇಪವಾಗಿ ಹೇಳುವೆನು. ಧರ್ಮಗಳನ್ನು
ವಿಸ್ತಾರವಾಗಿ ಹೇಳಿ- ದರೆ ಅದಕ್ಕೆ ಕೊನೆಯೇ ದೊರೆಯಲಾರದು.
ಧರ್ಮನಿಷ್ಠಾನ್ ಶ್ರುತವತೋ ವೇದವ್ರತಸಮಾಹಿತಾನ್ |
ಅರ್ಚಿತಾನ್ ವಾಸಯೇಥಾಸ್ತ್ವಂ ಗೃಹೇ ಗುಣವತೋ ದ್ವಿಜಾನ್ ||3||
ಧರ್ಮನಿಷ್ಠರೂ, ವಿದ್ಯಾಸಂಪನ್ನರೂ, ವೇದವ್ರತನಿಷ್ಠರೂ, ಮಾನ್ಯರೂ, ಗುಣ- ವಂತರೂ ಆದ ಬ್ರಾಹ್ಮಣರನ್ನು ನಿನ್ನ ಮನೆಯಲ್ಲಿ
ವಾಸಮಾಡಿಸಿಕೋ.
ಪ್ರತ್ಯುತ್ಥಾಯೋಪಸಂಗೃಹ್ಯ ಚರಣಾವಭಿವಾದ್ಯ ಚ |
ಅಥ ಸರ್ವಾಣಿ ಕುರ್ವೀಥಾಃ ಕಾರ್ಯಾಣಿ ಸಪುರೋಹಿತಃ ||4||
ಪ್ರಾತಃಕಾಲದಲ್ಲಿ ಎದ್ದು ಅವರ ಸಮೀಪಕ್ಕೆ ಹೋಗಿ ಅವರ ಚರಣಗಳಿಗೆ ನಮಸ್ಕರಿಸಿ ಅನಂತರ ಎಲ್ಲ ಕಾರ್ಯಗಳನ್ನೂ ಪುರೋಹಿತನ
ಜೊತೆಯಲ್ಲಿ ಮಾಡು.
ಧರ್ಮಕಾರ್ಯಾಣಿ ನಿರ್ವರ್ತ್ಯ ಮಂಗಲಾನಿ ಪ್ರಯುಜ್ಯ ಚ |
ಬ್ರಾಹ್ಮಣಾನ್ ವಾಚಯೇಥಾಸ್ತ್ವಮರ್ಥಸಿದ್ಧಿಜಯಾಶಿಷಃ ||5||
ಮಂಗಳವಾದ ಧರ್ಮಕಾರ್ಯಗಳನ್ನು ನೆರವೇರಿಸಿ, ಮಂಗಳಗಳನ್ನು ಎಸಗಿ, ಬ್ರಾಹ್ಮಣರಿಂದ ನಿನ್ನ ಅರ್ಥಸಿದ್ಧಿಯ ಮತ್ತು ಜಯದ
ಆಶೀರ್ವಾದಗಳನ್ನು ಪಡೆಯುವವನಾಗು.
ಆರ್ಜವೇನ ಚ ಸಂಪನ್ನೋ ಧೃತ್ಯಾ ಬುದ್ಧ್ಯಾ ಚ ಭಾರತ |
ಅರ್ಥಾರ್ಥಂ ಪ್ರತಿಗೃಹ್ಣೀಯಾತ್ ಕಾಮಕ್ರೋಧೌ ಚ ವರ್ಜಯೇತ್ ||6||
ಎಲ್ಲೈ ಭಾರತನೇ! ಋಜುತನದಿಂದಲೂ ಧೈರ್ಯ ಮುತ್ತು ಬುದ್ಧಿಗಳಿಂದಲೂ ಕೂಡಿದವನಾಗಿ ಕಾಮಕ್ರೋಧಗಳನ್ನು ವರ್ಜಿಸಿ
ಅರ್ಥಪ್ರಾಪ್ತಿಗಾಗಿ ಪ್ರಯತ್ನಪಡು.
ಕಾಮಕ್ರೋಧೌ ಪುರಸ್ಕೃತ್ಯ ಯೋಽರ್ಥಂ ರಾಜಾನುತಿಷ್ಠತಿ |
ನ ಸ ಧರ್ಮಂ ನ ಚಾಪ್ಯರ್ಥಂ ಪರಿಗೃಹ್ಣಾತಿ ಬಾಲಿಶಃ ||7||
ಯಾವ ರಾಜನು ಕಾಮಕ್ರೋಧಗಳನ್ನು ಮುಂದೆ ಮಾಡಿಕೊಂಡು, ಅರ್ಥಾ- ರ್ಥವಾಗಿ ಪ್ರಯತ್ನಪಡುತ್ತಾನೆಯೋ ಬಾಲಿಶನಾದ
ಅವನು ಧರ್ಮವನ್ನಾಗಲೀ ಅರ್ಥವನ್ನಾಗಲೀ ಸಂಪಾದಿಸುವುದಿಲ್ಲ.
ಮಾ ಸ್ಮ ಲುಬ್ಧಾಂಶ್ಚ ಮೂರ್ಖಾಂಶ್ಚ ಕಾಮೇ ಚಾರ್ಥೇಷು ಯೂಯುಜಃ |
ಅಲುಬ್ಧಾನ್ ಬುದ್ಧಿಸಂಪನ್ನಾನ್ ಸರ್ವಕರ್ಮಸು ಯೋಜಯೇತ್ ||8||
ಲೋಭಿಗಳನ್ನೂ ಮತ್ತು ಮೂರ್ಖರನ್ನೂ ಯಾವ ಕಾರ್ಯದಲ್ಲಿಯೂ ನಿಯೋಜಿಸಬೇಡ. ಎಲ್ಲ ಕಾರ್ಯಗಳಲ್ಲಿಯೂ ಲೋಭಿಗಳಲ್ಲದ
ಮೇಧಾವಿಗಳನ್ನು ನಿಯೋಜಿಸು.
ಮೂರ್ಖೋ ಹ್ಯಧಿಕೃತೋಽರ್ಥೇಷು ಕಾರ್ಯಾಣಾಮವಿಶಾರದಃ |
ಪ್ರಜಾಃ ಕ್ಲಿಶ್ನಾತ್ಯಯೋಗೇನ ಕಾಮದ್ವೇಷಸಮನ್ವಿತಃ ||9||
ಕಾರ್ಯವನ್ನು ತಿಳಿಯದ ಮೂರ್ಖನನ್ನು ಅಧಿಕಾರದಲ್ಲಿ ನಿಯೋಜಿಸಿದರೆ ಕಾಮದ್ವೇಷಗಳಿಂದ ಕೂಡಿದ ಅವನು ಅನ್ಯಾಯದ

ಮಾರ್ಗದಲ್ಲಿ ಪ್ರಜೆಗಳನ್ನು ಪೀಡಿಸುತ್ತಾನೆ.
ಬಲಿಷಷ್ಠೇನ ಶುಲ್ಕೇನ ದಂಡೇನಾಥಾಪರಾಧಿನಮ್ ।
ಶಸ್ತ್ರಭೀತೇನ ಲಿಪ್ಸೇಥಾ ವೇತನೇನ ಧನಾಗಮಮ್ ॥10॥
ಅಪರಾಧವನ್ನು ಮಾಡಿದವನಿಗೆ ಅವನ ಆದಾಯದ ಆರನೆಯ ಒಂದು ಭಾಗ- ವನ್ನು ದಂಡವಾಗಿ ತೆಗೆದುಕೊಂಡು, ಸೇವಕನು ಅಪರಾಧವನ್ನು ಮಾಡಿದರೆ ಶಸ್ತ್ರ- ಭೀತನಾದ ಅವನ ವೇತನವನ್ನು ಹಿಡಿದು ಧನವನ್ನು ಸಂಪಾದಿಸಲು ಪ್ರಯತ್ನಿಸ- ಬೇಕು.
ದಾಪಯಿತ್ವಾ ಕರಂ ಧರ್ಮ್ಯಂ ರಾಷ್ಟ್ರಂ ನಿತ್ಯಂ ಯಥಾವಿಧಿ ।
ಅಶೇಷಾನ್ ಕಲ್ಪಯೇದ್ ರಾಜಾ ಯೋಗಕ್ಷೇಮಾನತಂದ್ರಿತಃ ॥11॥
ರಾಷ್ಟ್ರಕ್ಕೆ ಸಲ್ಲಬೇಕಾದ ಧಾರ್ಮಿಕವಾದ ಕರ(ಕಂದಾಯ)ವನ್ನು ಶಾಸ್ತ್ರರೀತಿ- ಯಿಂದ ಪ್ರಜೆಗಳು ಕೊಡುವಂತೆ ಮಾಡಿ ರಾಜನು ಯಾವ ಆಲಸ್ಯವೂ ಇಲ್ಲದೆ ಅವರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು.
ಗೋಪಾಯಿತಾರಂ ದಾತಾರಂ ಧರ್ಮನಿತ್ಯಮತಂದ್ರಿತಮ್ ।
ಅಕಾಮದ್ವೇಷಸಂಯುಕ್ತಮನುರಜ್ಯಂತಿ ಮಾನವಾಃ ॥12॥
ತಮ್ಮನ್ನು ರಕ್ಷಿಸುವ ಮತ್ತು ತಮಗೆ ಎಲ್ಲವನ್ನೂ ಆಲಸ್ಯವಿಲ್ಲದೇ ಕಲ್ಪಿಸಿಕೊಡುವ ಕಾಮದ್ವೇಷರಹಿತನಾದ ರಾಜನಲ್ಲಿ ಪ್ರಜೆಗಳು ಪ್ರೀತಿಯುಳ್ಳವರಾಗುತ್ತಾರೆ.
ಮಾ ಸ್ಮಾಧರ್ಮೇಣ ಲಾಭೇನ ಲಿಪ್ಸೇಥಾಸ್ತ್ವಂ ಧನಾಗಮಮ್ ।
ಧರ್ಮಾರ್ಥಾವಧ್ರುವೌ ತಸ್ಯ ಯೋಽಪಶಾಸ್ತ್ರಪರೋ ಭವೇತ್ ॥13॥
ನೀನು ಅಧರ್ಮದಿಂದ ಧನವನ್ನು ಸಂಪಾದಿಸಲು ಎಂದೂ ಬಯಸಬೇಡ. ಶಾಸ್ತ್ರವಿರುದ್ಧವಾಗಿ ನಡೆದುಕೊಳ್ಳುವ ರಾಜನ ಧರ್ಮ ಮತ್ತು ಅರ್ಥಗಳು ಅನಿತ್ಯ- ವಾದವುಗಳು.
ಅಪಶಾಸ್ತ್ರಪರೋ ರಾಜಾ ಸಂಚಯಾನ್ ನಾಧಿಗಚ್ಛತಿ ।
ಅಸ್ಥಾನೇ ಚಾಸ್ಯ ತದ್ ವಿತ್ತಂ ಸರ್ವಮೇವ ವಿನಶ್ಯತಿ ॥14॥
ಶಾಸ್ತ್ರವಿರುದ್ಧವಾಗಿ ನಡೆದುಕೊಳ್ಳುವ ರಾಜನು ಧನಸಂಚಯವನ್ನು ಹೊಂದು- ವುದಿಲ್ಲ. ಅಲ್ಲದೇ ಅವನು ಸಂಪಾದಿಸಿದ ಧನವೂ ಸಹ ಅಪಮಾರ್ಗದಲ್ಲಿ ನಾಶ- ವನ್ನು ಹೊಂದುತ್ತದೆ.
ಅರ್ಥಮೂಲೋಽಪಹಿಂಸಾಂ ಚ ಕುರುತೇ ಸ್ವಯಮಾತ್ಮನಃ ।
ಕರೈರಶಾಸ್ತ್ರದೃಷ್ಟೈರ್ಹಿ ಮೋಹಾತ್ ಸಂಪೀಡಯನ್ ಪ್ರಜಾಃ ॥15॥
ಧನಸಂಪಾದನೆಯಲ್ಲಿಯೇ ಆಸಕ್ತನಾದ ರಾಜನು ಲೋಭಮೋಹಗಳಿಂದ ಪ್ರಜೆ -ಗಳನ್ನು ಅನ್ಯಾಯವಾದ ಕರಗಳನ್ನು ಹೇರಿ ಪೀಡಿಸಿ ತನ್ನ ಹಿಂಸೆಯನ್ನೇ(ನಾಶವನ್ನೇ) ತಂದುಕೊಳ್ಳುತ್ತಾನೆ.
ಊಧಶ್ಛಿಂದ್ಯಾದ್ಧಿ ಯೋ ಧೇನ್ವಾಃ ಕ್ಷೀರಾರ್ಥೀ ನ ಲಭೇತ್ ಪಯಃ ।
ಏವಂ ರಾಷ್ಟ್ರಮಯೋಗೇನ ಪೀಡಿತಂ ನ ವಿವರ್ಧತೇ ॥16॥
ಕ್ಷೀರಾರ್ಥಿಯಾದ ಯಾವನು ಹಸುವಿನ ಕೆಚ್ಚಲನ್ನೇ ಕತ್ತರಿಸಿದರೆ ಹಾಲನ್ನು ಪಡೆದಾನು? ಈ ರೀತಿಯಲ್ಲಿ ಅನುಪಾಯದಿಂದ ರಾಷ್ಟ್ರವನ್ನು ಪೀಡಿಸಿದರೆ ಆ ರಾಷ್ಟ್ರವು ವೃದ್ಧಿಯನ್ನು ಪಡೆಯುವುದಿಲ್ಲ.
ಯೋ ಹಿ ದೋಗ್ಧ್ರೀಮುಪಾಸ್ತೇ ತು ಸ ನಿತ್ಯಂ ಲಭತೇ ಪಯಃ ।
ಏವಂ ರಾಷ್ಟ್ರಮುಪಾಯೇನ ಭುಂಜಾನೋ ಲಭತೇ ಫಲಮ್ ॥17॥
ಯಾವನು ಹಾಲು ಕೊಡುವ ಹಸುವನ್ನು ಸೇವಿಸುತ್ತಾನೆಯೋ ಅವನು ನಿತ್ಯವೂ ಹಾಲನ್ನು ಪಡೆಯುತ್ತಾನೆ. ಅದೇ ರೀತಿ ಉಪಾಯದಿಂದ ರಾಷ್ಟ್ರವನ್ನು ಭೋಗಿಸು- ವವನು ರಾಷ್ಟ್ರದ ಫಲವನ್ನು ಪಡೆಯುತ್ತಾನೆ.
ಅಥ ರಾಷ್ಟ್ರಮುಪಾಯೇನ ಭುಜ್ಯಮಾನಂ ಸುರಕ್ಷಿತಮ್ ।
ಜನಯತ್ಯತುಲಾಂ ನಿತ್ಯಂ ಕೋಶವೃದ್ಧಿಂ ಯುಧಿಷ್ಠಿರ ॥18॥
ಆಗ ಶಾಸ್ತ್ರರೀತಿಯಿಂದ ಭೋಗಿಸಲ್ಪಡುವ, ತನ್ನನ್ನು ಸುರಕ್ಷಿತವಾಗಿ ಇಟ್ಟ ರಾಷ್ಟ್ರವು ಎಲೈ ಯುಧಿಷ್ಠಿರನೇ! ನಿತ್ಯವೂ ಆ ರಾಜನಿಗೆ ಅಸದೃಶವಾದ ಕೋಶವೃದ್ಧಿ- ಯನ್ನು ಉಂಟು ಮಾಡುತ್ತದೆ.
ದೋಗ್ಧ್ರಿ ಧಾನ್ಯಂ ಹಿರಣ್ಯಂ ಚ ಪ್ರಜಾ ರಾಜ್ಞಿ ಸುರಕ್ಷಿತಾ ।
ನಿತ್ಯಂ ಸ್ವೇಭ್ಯಃ ಪರೇಭ್ಯಶ್ಚ ತೃಪ್ತಾ ಮಾತಾ ಯಥಾ ಪಯಃ ॥19॥
ನಿತ್ಯವೂ ತನ್ನವರಿಂದಲೂ ಮತ್ತು ಪರರಿಂದಲೂ ತೃಪ್ತಳಾದ ತಾಯಿಯು ಶಿಶುವಿಗೆ ಹಾಲನ್ನು ಸುರಿಸಿದಂತೆ ರಾಜನಿಂದ ಸುರಕ್ಷಿತವಾದ ರಾಷ್ಟ್ರವು (ರಾಷ್ಟ್ರದ ಪ್ರಜೆಗಳು) ರಾಜನ ಮೇಲೆ ಧಾನ್ಯದ ಮತ್ತು ಹಿರಣ್ಯದ ಮಳೆಯನ್ನು ಸುರಿಸುತ್ತಾರೆ.
ಮಾಲಾಕಾರೋಪಮೋ ರಾಜನ್ ಭವ ಮಾಂಗಾರಿಕೋಪಮಃ ।
ಯಥಾ ಯುಕ್ತಶ್ಚಿರಂ ರಾಷ್ಟ್ರಂ ಭೋಕ್ತುಂ ಶಕ್ಯಸಿ ಪಾಲಯನ್ ॥20॥
ಎಲೈ ರಾಜನೇ! ನೀನು ಪುಷ್ಪಮಾಲೆಯನ್ನು ಕಟ್ಟುವವನಿಗೆ ಸದೃಶನಾಗಿರು. ಇದ್ದಿಲನ್ನು ಮಾಡುವವನಿಗೆ ಸದೃಶನಾಗಿರಬೇಡ. ಹಾಗಿದ್ದರೆ ಮಾತ್ರ ರಾಜ್ಯವನ್ನು ರಕ್ಷಿಸುತ್ತಾ ಬಹುಕಾಲ ಶುಭವನ್ನು ಭೋಗಿಸಲು ಸಮರ್ಥನಾಗುವಿ.
ಪರಚಕ್ರಾಭಿಯಾನೇನ ಯದಿ ತೇ ಸ್ಯಾದ್ ಧನಕ್ಷಯಃ ।
ಅಥ ಸಾಮ್ನೈವ ಲಿಪ್ಸೇಥಾ ಧನಮಬ್ರಾಹ್ಮಣೇಷು ಯತ್ ॥21॥
ಶತ್ರುಗಳ ಮೇಲೆ ದಂಡೆತ್ತಿ ಹೋಗುವುದರಿಂದ ಧನಕ್ಷಯವುಂಟಾಗುವುದೆಂಬ ಚಿಂತೆಯಿದ್ದರೆ ಒಳ್ಳೆಯ ಮಾತುಗಳಿಂದ (ಸಾಮೋಪಾಯದಿಂದ) ಬ್ರಾಹ್ಮಣರಲ್ಲ- ದವರಿಂದ ಧನವನ್ನು ಪಡೆಯಲು ಪ್ರಯತ್ನಿಸು.
ಮಾ ಸ್ಮ ತೇ ಬ್ರಾಹ್ಮಣಂ ದೃಷ್ಟ್ವಾ ಧನಸ್ಥಂ ಪ್ರಚಲೇನ್ಮನಃ ।

ಅಂತ್ಯಾಯಾಮಪ್ಯವಸ್ಥಾಯಾಂ ಕಿಮು ಸ್ಫೀತಸ್ಯ ಭಾರತ ॥22॥
ಅಂತ್ಯಾವಸ್ಥೆಯಲ್ಲಿಯೂ (ದಾರಿದ್ರ್ಯಾವಸ್ಥೆಯಲ್ಲಿಯೂ) ಶ್ರೀಮಂತನಾದ ಬ್ರಾಹ್ಮಣನನ್ನು ನೋಡಿ ನಿನ್ನ ಮನಸ್ಸು ವಿಚಲಿತವಾಗದಿರಲಿ. ಎಲೈ ಭಾರತನೇ! ಇನ್ನು ಸಮೃದ್ಧನಾದ ರಾಜನ ಮನಸ್ಸು ವಿಚಲಿತವಾಗುವುದು ಹೇಗೆ?
ಧನಾನಿ ತೇಭ್ಯೋ ದದ್ಯಾಸ್ತ್ವಂ ಯಥಾಶಕ್ತಿ ಯಥಾರ್ಹತಃ।
ಸಾಂತ್ವಯನ್ ಪರಿರಕ್ಷಂಶ್ಚ ಸ್ವರ್ಗಮಾಪ್ಸ್ಯಸಿ ದುರ್ಜಯಮ್ ॥23॥
ಅಂತಹ ಬ್ರಾಹ್ಮಣರಿಗೆ ಅವರ ಯೋಗ್ಯತೆಯನ್ನು ಮತ್ತು ಶಕ್ತಿಯನ್ನು ನೋಡಿ ಧನವನ್ನು ಕೊಡುವವನಾಗು. ಅವರನ್ನು ಸಮಾಧಾನ ಮಾಡುವವನಾಗಿ ಚೆನ್ನಾಗಿ ರಕ್ಷಣೆಯನ್ನು ಮಾಡಿದರೆ ನೀನು ದುರ್ಜಯವಾದ ಸ್ವರ್ಗವನ್ನು ಹೊಂದುವಿ.
ಏವಂ ಧರ್ಮೇಣ ವೃತ್ತೇನ ಪ್ರಜಾಸ್ತ್ವಂ ಪರಿಪಾಲಯನ್।
ಸ್ವಂತಂ ಪುಣ್ಯಂ ಯಶೋವಂತಂ ಪ್ರಾಪ್ಸ್ಯಸೇ ಕುರುನಂದನ ॥24॥
ಎಲೈ ಕುರುನಂದನನೇ! ಈ ರೀತಿಯಲ್ಲಿ ನೀನು ಧರ್ಮದ ನಡತೆಯಿಂದ ಕೂಡಿದವನಾಗಿ ಪ್ರಜೆಗಳನ್ನು ಪಾಲಿಸುತ್ತಾ ಕೀರ್ತಿಯುತವಾದ ಸುಖೋದಕವಾದ  ಪುಣ್ಯವನ್ನು ಸಂಪಾದಿಸುವಿ.
ಧರ್ಮೇಣ ವ್ಯವಹಾರೇಣ ಪ್ರಜಾಃ ಪಾಲಯ ಪಾಂಡವ।
ಯುಧಿಷ್ಠಿರ ತಥಾ ಯುಕ್ತೋ ನಾಧಿಬಂಧೇನ ಯೋಕ್ಷ್ಯಸೇ ॥25॥
ಎಲೈ ಪಾಂಡವನೇ! ಧರ್ಮಯುಕ್ತವಾದ ವ್ಯವಹಾರದಿಂದ ಪ್ರಜೆಗಳನ್ನು ಪಾಲಿಸು. ಯುಧಿಷ್ಠಿರನೇ! ಹಾಗೆ ಮಾಡಿದರೆ ನೀನು ಚಿಂತೆಯ ಬಂಧನಕ್ಕೆ ಈಡಾ- ಗುವುದಿಲ್ಲ.
ಏಷ ಏವ ಪರೋ ಧರ್ಮೋ ಯದ್ ರಾಜಾ ರಕ್ಷತೇ ಪ್ರಜಾಃ।
ಭೂತಾನಾಂ ಹಿ ಪರಂ ಧರ್ಮಂ ರಕ್ಷಣಂ ಚ ಪರಾ ದಯಾ ॥26॥
ಪ್ರಜೆಗಳನ್ನು ರಕ್ಷಣೆ ಮಾಡುವುದೇ ರಾಜನ ಪರಮ ಧರ್ಮ. ಭೂತಗಳಿಗೆ (ಪ್ರಜೆಗಳಿಗೆ) ರಕ್ಷಣೆ ಮತ್ತು ದಯವೇ ಅಪೇಕ್ಷಿತವಾದ ಪರಮಧರ್ಮ.
ತಸ್ಮಾದೇವ ಪರಂ ಧರ್ಮಂ ಮನ್ಯತೇ ಧರ್ಮಕೋವಿದಾಃ।
ಯದ್ ರಾಜಾ ರಕ್ಷಣೇ ಯುಕ್ತೋ ಭೂತೇಷು ಕುರುತೇ ದಯಾಮ್॥27॥
ಆದ್ದರಿಂದ ರಾಜನು ಪ್ರಜೆಗಳ ರಕ್ಷಣೆಯನ್ನು ಮಾಡಿ ಎಲ್ಲ ಭೂತಗಳಲ್ಲಿ ದಯೆಯನ್ನು ತೋರಿಸುವುದೇ ಪರಮಧರ್ಮವೆಂದು ಧರ್ಮಕೋವಿದರು ತಿಳಿಯುತ್ತಾರೆ.
ಯದಹ್ನಾ ಕುರುತೇ ಪಾಪಮರಕ್ಷನ್ ಭಯತಃ ಪ್ರಜಾಃ।
ರಾಜಾ ವರ್ಷಸಹಸ್ರೇಣ ತಸ್ಯಾಂತಮಧಿಗಚ್ಛತಿ ॥28॥
ಪ್ರಜೆಗಳನ್ನು ಒಂದು ದಿನದಲ್ಲಿ ಭಯಗಳಿಂದ ರಕ್ಷಿಸದೇ ರಾಜನು ಏನು ಪಾಪವನ್ನು ಮಾಡುತ್ತಾನೆಯೋ ಅದರ ಫಲವನ್ನು ಸಹಸ್ರವರ್ಷಗಳವರೆಗೆ ಅನು- ಭವಿಸುತ್ತಾನೆ.
ಯದಹ್ನಾ ಕುರುತೇ ಪುಣ್ಯಂ ಪ್ರಜಾ ಧರ್ಮೇಣ ಪಾಲಯನ್।
ದಶ ವರ್ಷಸಹಸ್ರಾಣಿ ತಸ್ಯ ಭುಂಕ್ತೇ ಫಲಂ ದಿವಿ ॥29॥
ಪ್ರಜೆಗಳನ್ನು ಒಂದು ದಿನ ರಕ್ಷಿಸುವ ರಾಜನು ಆ ಪುಣ್ಯದಿಂದ ಸ್ವರ್ಗದಲ್ಲಿ ಹತ್ತುಸಹಸ್ರವರ್ಷಗಳ ಕಾಲ ಅದರ ಶುಭಫಲವನ್ನು ಅನುಭವಿಸುತ್ತಾನೆ.
ಸ್ವಿಷ್ಟಃ ಸ್ವಧೀತಃ ಸುತಪಾ ಲೋಕಾನ್ ಜಯತಿ ಯಾವತಃ।
ಕ್ಷಣೇನ ತಾನವಾಪ್ನೋತಿ ಪ್ರಜಾ ಧರ್ಮೇಣ ಪಾಲಯನ್ ॥30॥
ರಾಜನು ಪ್ರಜೆಗಳನ್ನು ಧರ್ಮದಿಂದ ಪಾಲಿಸಿದರೆ ಒಳ್ಳೆಯ ಯಾಗವನ್ನು ಮಾಡಿ, ಒಳ್ಳೆಯ ಅಧ್ಯಯನವನ್ನು ಮಾಡಿ, ಒಳ್ಳೆಯ ತಪಸ್ಸನ್ನು ಮಾಡಿದವನು ಎಷ್ಟು ಲೋಕಗಳನ್ನು ಜಯಿಸುತ್ತಾನೋ ಅಷ್ಟು ಲೋಕಗಳನ್ನು ರಾಜನು ಒಂದೇ ಕ್ಷಣದಲ್ಲಿ ಜಯಿಸುತ್ತಾನೆ.
ಏವಂಧರ್ಮಂ ಪ್ರಯತ್ನೇನ ಕೌಂತೇಯ ಪರಿಪಾಲಯನ್।
ಇಹ ಪುಣ್ಯಫಲಂ ಲಬ್ಧ್ವಾ ನಾಧಿಬಂಧೇನ ಯೋಕ್ಷ್ಯಸೇ ॥31॥
ಎಲೈ ಕೌಂತೇಯನೇ! ಹೀಗೆ ಪ್ರಯತ್ನಪಟ್ಟು ಧರ್ಮವನ್ನು ಪಾಲಿಸುವವನು ಈ ಲೋಕದಲ್ಲಿ ಪುಣ್ಯಫಲವನ್ನು ಹೊಂದಿ ಚಿಂತೆಗಳಿಂದ ದೂರನಾಗುತ್ತಾನೆ. (ನೀನೂ ಸಹ ಹೀಗೆ ಮಾಡಿದರೆ ಚಿಂತೆಗಳಿಂದ ದೂರನಾಗುವಿ)
ಸ್ವರ್ಗಲೋಕೇ ಚ ಮಹತೀಂ ಶ್ರಿಯಂ ಪ್ರಾಪ್ಸ್ಯಸಿ ಪಾಂಡವ।
ಅಸಂಭವಶ್ಚ ಧರ್ಮಾಣಾಮೀದೃಶಾನಾಮರಾಜಸು।
ತಸ್ಮಾದ್ ರಾಜೈವ ನಾನ್ಯೋಽಸ್ತಿ ಯೋ ಮಹತ್ ಫಲಮಾಪ್ನುಯಾತ್ ॥32॥
ಎಲೈ ಪಾಂಡವನೇ! ಸ್ವರ್ಗಲೋಕದಲ್ಲಿಯೂ ಕೂಡ ದೊಡ್ಡ ಸಂಪತ್ತನ್ನು ಪಡೆಯುವಿ. ಇಂತಹ ಧರ್ಮಾನುಷ್ಠಾನವು ರಾಜರಲ್ಲದವರಿಂದ ಮಾಡಲು ಅಸಾಧ್ಯ -ವಾದುದು. ಆದ್ದರಿಂದ ರಾಜನೇ ಮಹಾಫಲವನ್ನು ಪಡೆದಾನೆಯೇ ಹೊರತು ಇನ್ನೊಬ್ಬನು ಪಡೆಯಲಾರ.
ಸ ರಾಜ್ಯಮೃದ್ಧಿಮತ್ ಪ್ರಾಪ್ಯ ಧರ್ಮೇಣ ಪರಿಪಾಲಯನ್।
ಇಂದ್ರಂ ತರ್ಪಯ ಸೋಮೇನ ಕಾಮೈಶ್ಚ ಸುಹೃದೋ ಜನಾನ್ ॥33॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಸಪ್ತತಿತಮೋಽಧ್ಯಾಯಃ ॥73॥

ಅಂತಹ ನೀನು ಸಂಪದ್ಯುಕ್ತವಾದ ರಾಜ್ಯವನ್ನು ಪಡೆದು, ಧರ್ಮದಿಂದ ಅದನ್ನು ಪರಿಪಾಲಿಸಿ, ಸೋಮರಸದಿಂದ ಇಂದ್ರನನ್ನೂ ಕಾಮ್ಯವಸ್ತುಗಳಿಂದ ಸುಹೃಜ್ಜನರನ್ನೂ ತೃಪ್ತಿಪಡಿಸು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 73ನೆಯ ಅಧ್ಯಾಯವು ಮುಗಿಯಿತು.
0

74. ಎಪ್ಪತ್ನಾಲ್ಕನೆಯ ಅಧ್ಯಾಯ
ಬ್ರಾಹ್ಮಣನ ಶ್ರೇಷ್ಠತ್ವ ಕಥನ. ಐಲ-ವಾಯುಸಂವಾದ
ಯುಧಿಷ್ಠಿರಃ
ಕೀದೃಶೋ ಬ್ರಾಹ್ಮಣೋ ರಾಜ್ಞಾ ಕಾರ್ಯಾಕಾರ್ಯವಿಚಾರಣೇ |
ಕ್ಷಮಃ ಕರ್ತುಂ ಸಮರ್ಥೋ ವಾ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ರಾಜನು ಎಂತಹ ಬ್ರಾಹ್ಮಣನನ್ನು ಕಾರ್ಯಾ- ಕಾರ್ಯವಿಚಾರಣೆಯಲ್ಲಿ ಅಧಿಕೃತನನ್ನಾಗಿ ಮಾಡಲು ಶಕ್ತನಾಗುತ್ತಾನೆ ಎಂದು ನನಗೆ ಹೇಳು.
ಭೀಷ್ಮಃ
ಯ ಏವ ತು ಸತೋ ರಕ್ಷೇದಸತಶ್ಚ ನಿಬರ್ಹಯೇತ್ |
ಸ ಏವ ರಾಜ್ಞಾ ಕರ್ತವ್ಯೋ ರಾಜನ್ ರಾಜಪುರೋಹಿತಃ ॥2॥
ಭೀಷ್ಮರು ಎಲೈ ರಾಜನೇ! ಯಾವನು ಸಜ್ಜನರನ್ನು ರಕ್ಷಿಸುತ್ತಾನೆಯೋ, ದುಷ್ಟರನ್ನು ವಿನಾಶಗೊಳಿಸುತ್ತಾನೆಯೋ ಅಂತಹವನನ್ನೇ ರಾಜನು ರಾಜಪುರೋಹಿತ -ನನ್ನಾಗಿ ಮಾಡಬೇಕು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪುರೂರವಸ ಐಲಸ್ಯ ಸಂವಾದಂ ಮಾತರಿಶ್ವನಃ ॥3॥
ಈ ವಿಷಯದಲ್ಲಿಯೂ ಸಹ ಇಲಾಪುತ್ರನಾದ ಪುರೂರವನ ಮತ್ತು ವಾಯು- ವಿನ ಸಂವಾದರೂಪವಾದ ಈ ಪ್ರಾಚೀನವಾದ ಇತಿಹಾಸವನ್ನು ಹೇಳುತ್ತಾರೆ.
ಐಲಃ
ಕುತಃಸ್ವಿದ್ ಬ್ರಾಹ್ಮಣೋ ಜಾತೋ ವರ್ಣಾಶ್ಚಾಪಿ ಕುತಸ್ತ್ರಯಃ |
ಕಸ್ಮಾಚ್ಚ ಭವತಿ ಶ್ರೇಯಾನೇತದ್ ವಾಯೋ ವಿಚಕ್ಷ್ವ ಮೇ ॥4॥
ಐಲ ಬ್ರಾಹ್ಮಣನು ಹೇಗೆ ಹುಟ್ಟಿದನು? ಉಳಿದ ಮೂರುವರ್ಣಗಳೂ ಹೇಗೆ ಹುಟ್ಟಿದವು? ವಾಯುವೇ! ಬ್ರಾಹ್ಮಣನು ಹೇಗೆ ಶ್ರೇಷ್ಠನಾಗುತ್ತಾನೆ ಎಂಬುದನ್ನು ನನಗೆ ಹೇಳು.
ವಾಯುಃ
ಬ್ರಹ್ಮಣೋ ಮುಖತಃ ಸೃಷ್ಟೋ ಬ್ರಾಹ್ಮಣೋ ರಾಜಸತ್ತಮ |
ಬಾಹುಭ್ಯಾಂ ಕ್ಷತ್ರಿಯಃ ಸೃಷ್ಟ ಊರುಭ್ಯಾಂ ವೈಶ್ಯ ಉಚ್ಯತೇ ॥5॥
ಎಲೈ ರಾಜಶ್ರೇಷ್ಠನೇ! ಬ್ರಹ್ಮನ ಮುಖದಿಂದ ಬ್ರಾಹ್ಮಣನು ಜನಿಸಿದನು. ಬಾಹು -ಗಳಿಂದ ಕ್ಷತ್ರಿಯರು. ಮತ್ತು ಊರುಗಳಿಂದ ವೈಶ್ಯರು ಜನಿಸಿದರು ಎಂದು ಹೇಳ- ಲ್ಪಡುತ್ತದೆ.
ವರ್ಣಾನಾಂ ಪರಿಚರ್ಯಾರ್ಥಂ ತ್ರಯಾಣಾಂ ಪುರುಷರ್ಷಭ |
ವರ್ಣಶ್ಚತುರ್ಥಃ ಪಶ್ಚಾತ್ ತು ಪದ್ಭ್ಯಾಂ ಶೂದ್ರೋ ವಿನಿರ್ಮಿತಃ ॥6॥
ಎಲೈ ಪುರುಷರ್ಷಭನೇ! ಈ ವರ್ಣಗಳ ಪರಿಚರ್ಯೆಗಾಗಿ ನಾಲ್ಕನೆಯ ವರ್ಣದವನಾದ ಶೂದ್ರನು ಅನಂತರ ಬ್ರಹ್ಮದೇವರ ಪಾದಗಳಿಂದ ಸೃಷ್ಟಿಸಲ್ಪಟ್ಟನು.
ಬ್ರಾಹ್ಮಣೋ ಜಾತಮಾತ್ರಸ್ತು ಪೃಥಿವೀಮಧ್ಯಜಾಯತ |
ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ ॥7॥
ಬ್ರಾಹ್ಮಣನು ಹುಟ್ಟಿದ ತತ್ಕ್ಷಣವೇ ಭೂಮಿಯಲ್ಲಿ ಶ್ರೇಷ್ಠನಾದನು. ಅವನು ಧರ್ಮದ ರಕ್ಷಣೆಯ ಸಲುವಾಗಿ ಎಲ್ಲ ಜೀವರಿಗೂ ಪ್ರಭುವಾದನು.
ಸರ್ವಸ್ವಂ ಬ್ರಾಹ್ಮಣಸ್ಯೇದಂ ಯತ್ ಕಿಂಚಿದಿಹ ದೃಶ್ಯತೇ |
ಧರ್ಮಯುಕ್ತಂ ಪ್ರಶಸ್ತಂ ಚ ಜಗತ್ಯಸ್ಮಿನ್ ನೃಪಾತ್ಮಜ ॥8॥
ಎಲೈ ರಾಜಕುಮಾರನೇ! ಈ ಜಗತ್ತಿನಲ್ಲಿ ಧರ್ಮಯುಕ್ತವಾದ ಮತ್ತು ಪ್ರಶಸ್ತ ವಾದ ಯಾವ ಯಾವ ಸ್ವತ್ತುಗಳು ಕಂಡುಬರುತ್ತವೆಯೋ ಅವೆಲ್ಲವೂ ಬ್ರಾಹ್ಮಣನಿಗೇ ಸೇರಿದುದು.
ತತಃ ಪೃಥಿವ್ಯಾ ಗೋಪ್ತಾರಂ ಕ್ಷತ್ರಿಯಂ ದಂಡಧಾರಿಣಮ್ |
ದ್ವಿತೀಯಂ ವರ್ಣಮಕರೋತ್ ಪ್ರಜಾನಾಮನುಗುಪ್ತಯೇ ॥9॥
ಅನಂತರ ಭೂಮಿಯ ರಕ್ಷಕನಾಗಿ, ದಂಡಧಾರಿಯಾಗಿ ಪ್ರಜೆಗಳನ್ನು ರಕ್ಷಿಸಲು ಎರಡನೆಯ ಕ್ಷತ್ರಿಯವರ್ಣವು ಸೃಷ್ಟಿಸಲ್ಪಟ್ಟಿತು.
ವೈಶ್ಯಸ್ತು ಧನಧಾನ್ಯೇನ ತ್ರೀನ್ ವರ್ಣಾನ್ ಬಿಭೃಯಾದಿಮಾನ್ |
ಶೂದ್ರೋ ಹ್ಯೇನಾನ್ ಪರಿಚರೇದಿತಿ ಬ್ರಹ್ಮಾನುಶಾಸನಮ್ ॥10॥
ವೈಶ್ಯನು ಧನಧಾನ್ಯಗಳಿಂದ ಈ ಮೂರು ವರ್ಣಗಳನ್ನೂ ಪೋಷಿಸಬೇಕು. ಶೂದ್ರನು ಈ ಮೂರು ವರ್ಣಗಳನ್ನೂ ಪರಿಚರಿಸಬೇಕು ಎಂಬುದು ಬ್ರಹ್ಮದೇವರ ಶಾಸನ.

ಐಲಃ
ದ್ವಿಜಸ್ಯ ಕ್ಷತ್ರಬಂಧೋರ್ವಾ ಕಸ್ಯೇಯಂ ಪೃಥಿವೀ ಭವೇತ್ |
ಧರ್ಮತಃ ಸಹ ವಿತ್ತೇನ ಸಮ್ಯಗ್ ವಾಯೋ ಪ್ರಚಕ್ಷ್ವ ಮೇ ॥11॥
ಐಲ ಎಲೈ ವಾಯುವೇ! ವಿತ್ತಸಹಿತವಾದ ಈ ಭೂಮಿಯು ಧರ್ಮದಿಂದ ಬ್ರಾಹ್ಮಣನಿಗೆ ಸೇರುತ್ತದೆಯೋ ಅಥವಾ ಕ್ಷತ್ರಿಯನಿಗೆ ಸೇರುತ್ತದೆಯೋ ಎಂಬು- ದನ್ನು ನನಗೆ ಸರಿಯಾಗಿ ಹೇಳು.
ವಾಯುಃ
ವಿಪ್ರಸ್ಯ ಸರ್ವಮೇವೈತದ್ ಯತ್ಕಿಂಚಿಜ್ಜಗತೀಗತಮ್ |
ಜ್ಯೇಷ್ಠೇನಾಭಿಜನೇನೇಹ ತದ್ ಧರ್ಮಕುಶಲಾ ವಿದುಃ ॥12॥
ವಾಯು ಈ ಜಗತ್ತಿನಲ್ಲಿರುವ ಎಲ್ಲವೂ ಜ್ಯೇಷ್ಠಜನ್ಮವನ್ನು ಪಡೆದ ಬ್ರಾಹ್ಮಣ -ನಿಗೇ ಸೇರಿದುದು ಎಂದು ಧರ್ಮಕುಶಲರು ತಿಳಿಯುತ್ತಾರೆ.
ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ |
ಗುರುರ್ಹಿ ಸರ್ವವರ್ಣಾನಾಂ ಜ್ಯೇಷ್ಠಃ ಶ್ರೇಷ್ಠಶ್ಚ ವೈ ದ್ವಿಜಃ ॥13॥
ಬ್ರಾಹ್ಮಣನು ತನ್ನ ಸ್ವತ್ತನ್ನೇ ಭುಂಜಿಸುತ್ತಾನೆ. ತನ್ನ ಭೂಮಿಯಲ್ಲೇ ವಾಸ ಮಾಡುತ್ತಾನೆ. ತನ್ನ ಧನವನ್ನೇ ದಾನ ಮಾಡುತ್ತಾನೆ. ಏಕೆಂದರೆ ಬ್ರಾಹ್ಮಣನು ಎಲ್ಲ ವರ್ಣಗಳಿಗೂ ಗುರು ಮತ್ತು ವಯಸ್ಸಿನಿಂದ ಜ್ಯೇಷ್ಠನಾದವನು ಮತ್ತು ಗುಣಗಳಿಂದ ಶ್ರೇಷ್ಠನಾದವನು.
ಪತ್ಯಭಾವೇ ಯಥಾ ಸ್ತ್ರೀ ಹಿ ದೇವರಂ ಕುರುತೇ ಪತಿಮ್ |
ಆನಂತರ್ಯಾತ್ ತಥಾ ಕ್ಷತ್ರಂ ಪೃಥಿವೀ ಕುರುತೇ ಪತಿಮ್ ॥14॥
ಪತಿಯು ಇಲ್ಲದಿದ್ದರೆ ನಾರಿಯು ಹೇಗೆ ಅನಂತರದ ಮೈದುನನನ್ನು ಪತಿ- ಯನ್ನಾಗಿ ಮಾಡಿಕೊಳ್ಳುತ್ತಾಳೆಯೋ ಅದರಂತೆ ಭೂಮಿಯು ಕ್ಷತ್ರಿಯನನ್ನು ಪತಿ- ಯನ್ನಾಗಿ ಮಾಡಿಕೊಳ್ಳುತ್ತದೆ.
ಏಷ ತೇ ಪ್ರಥಮಃ ಕಲ್ಪ ಆಪದ್ಯನ್ಯೋ ಭವೇದತಃ |
ಯದಿ ಸ್ವರ್ಗೇ ಪರಂ ಸ್ಥಾನಂ ಧರ್ಮತಃ ಪರಿಮಾರ್ಗಸಿ ॥15॥
ನೀನು ಧರ್ಮದಿಂದ ಸ್ವರ್ಗದಲ್ಲಿ ಶ್ರೇಷ್ಠಸ್ಥಾನವನ್ನು ಬಯಸುವುದಾದರೆ ಇದು ಶ್ರೇಷ್ಠವಾದ ಕಲ್ಪ. ಆಪತ್ತಿನಲ್ಲಿ ಇದಕ್ಕಿಂತ ಭಿನ್ನವಾದ ವಿಧಾನವಿದೆ.
ಯಃ ಕಶ್ಚಿದ್ ವಿಜಯೇದ್ ಭೂಮಿಂ ಬ್ರಾಹ್ಮಣಾಯ ನಿವೇದಯೇತ್ |
ಶ್ರುತವೃತ್ತೋಪಪನ್ನಾಯ ಧರ್ಮಜ್ಞಾಯ ತಪಸ್ವಿನೇ ॥16॥
(ಅದೇನೆಂದರೆ) ಯಾವನು ಭೂಮಿಯನ್ನು ಗೆದ್ದರೂ ಅದನ್ನು ಧರ್ಮಜ್ಞನೂ ತಪಸ್ವಿಯೂ ವಿದ್ಯಾಶೀಲತೆಯನ್ನು ಹೊಂದಿದವನೂ ಆದ ಬ್ರಾಹ್ಮಣನಿಗೆ ನಿವೇದಿಸ- ಬೇಕು.
ಸ್ವಧರ್ಮಪರಿತೃಪ್ತಾಯ ಯೋ ನ ವಿತ್ತಪರೋ ಭವೇತ್ |
ಯೋ ರಾಜಾನಂ ನಯೇದ್ ಬುದ್ಧ್ಯಾ ಸರ್ವತಃ ಪರಿಪೂರ್ಣಯಾ ॥17॥
ಯಾವ ಬ್ರಾಹ್ಮಣನು ವಿತ್ತದ ಆಸೆಯನ್ನು ಹೊಂದಿರುವುದಿಲ್ಲವೋ, ತನ್ನ ಧರ್ಮಾಚರಣೆಯಿಂದ ತೃಪ್ತನಾಗಿರುತ್ತಾನೆಯೋ, ತನ್ನ ಪರಿಪೂರ್ಣವಾದ ಬುದ್ಧಿ- ಯಿಂದ ರಾಜನನ್ನು ಸನ್ಮಾರ್ಗದಲ್ಲಿ ನಡೆಸುತ್ತಾನೆಯೋ (ಅಂತಹ ಬ್ರಾಹ್ಮಣನಿಗೆ ನಿವೇದಿಸಬೇಕು).
ಬ್ರಾಹ್ಮಣೋ ಹಿ ಕುಲೇ ಜಾತಃ ಕೃತಪ್ರಜ್ಞೋ ವಿನೀತವಾಕ್ |
ಶ್ರೇಯೋ ನಯತಿ ರಾಜಾನಂ ಬ್ರುವಂಶ್ಚಿತ್ರಾಂ ಸರಸ್ವತೀಮ್ ॥18॥
ಬ್ರಾಹ್ಮಣನಾದರೂ ಒಳ್ಳೆಯ ಕುಲದಲ್ಲಿ ಜನಿಸಿದವನಾಗಿ, ವಿವೇಕವನ್ನು ಹೊಂದಿ -ದವನಾಗಿ, ವಿನೀತವಾದ ವಾಕ್ಯವನ್ನು ಹೊಂದಿ, ವಿಚಿತ್ರವಾದ ಕಥೆಗಳನ್ನು ಹೇಳಿ ರಾಜನನ್ನು ಶ್ರೇಯಸ್ಸಿನ ಮಾರ್ಗದಲ್ಲಿ ನಡೆಸುತ್ತಾನೆ.
ರಾಜಾ ಚರತಿ ಯಂ ಧರ್ಮಂ ಬ್ರಾಹ್ಮಣೇನ ನಿದರ್ಶಿತಮ್ |
ಶುಶ್ರೂಷುರನಹಂವಾದೀ ಕ್ಷತ್ರಧರ್ಮವ್ರತೇ ಸ್ಥಿತಃ ॥19॥
ತಾವತಾ ಸ ಕೃತಪ್ರಜ್ಞಶ್ಚಿರಂ ಯಶಸಿ ತಿಷ್ಠತಿ |
ತಸ್ಯ ಧರ್ಮಸ್ಯ ಸರ್ವಸ್ಯ ಭಾಗೀ ರಾಜಪುರೋಹಿತಃ ॥20॥
ಕ್ಷತ್ರಿಯಧರ್ಮದಲ್ಲಿ ರತನಾದ ರಾಜನು ಬ್ರಾಹ್ಮಣನ ಮಾತನ್ನು ಕೇಳಿ ಅಹಂ- ಕಾರರಹಿತನಾಗಿ ಬ್ರಾಹ್ಮಣನು ತೋರಿಸಿದಂತೆ ಧರ್ಮಾಚರಣೆಯನ್ನು ಮಾಡಿದರೆ ಅವನು ಅಷ್ಟರಿಂದಲೇ ಕೃತಕೃತ್ಯನಾಗಿ ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆ. ರಾಜಪುರೋಹಿತನು ರಾಜನು ಆಚರಿಸಿದ ಎಲ್ಲ ಧರ್ಮಗಳ ಫಲದ ಒಂದು ಅಂಶಕ್ಕೆ ಭಾಗಿಯಾಗುತ್ತಾನೆ.
ಏವಮೇವ ಪ್ರಜಾಃ ಸರ್ವಾ ರಾಜಾನಮಭಿಸಂಶ್ರಿತಾಃ |
ಬ್ರಾಹ್ಮಣಂ ಚ ಸುವಿದ್ವಾಂಸಃ ರಾಜಶಾಸ್ತ್ರವಿಪಶ್ಚಿತಮ್ |
ಸಮ್ಯಗ್ವೃತ್ತಾಃ ಸ್ವಧರ್ಮಸ್ಥಾ ನ ಕುತಶ್ಚಿದ್ ಭಯಾನ್ವಿತಾಃ ॥21॥
ಈ ರೀತಿಯಲ್ಲಿ ಎಲ್ಲ ಪ್ರಜೆಗಳೂ ರಾಜನನ್ನು ಆಶ್ರಯಿಸಿರುತ್ತಾರೆ. ಒಳ್ಳೆಯ ನಡತೆಯುಳ್ಳ, ಸ್ವಧರ್ಮನಿಷ್ಠರಾದ, ನಿರ್ಭಯರಾದ ವಿದ್ವಾಂಸರಾದವರು ರಾಜ- ಶಾಸ್ತ್ರವನ್ನು ತಿಳಿದ ಬ್ರಾಹ್ಮಣನನ್ನು ಆಶ್ರಯಿಸಿರುತ್ತಾರೆ.
ರಾಷ್ಟ್ರೇ ಚರಂತಿ ಯಂ ಧರ್ಮಂ ರಾಜ್ಞಾ ಸಾಧ್ವಭಿರಕ್ಷಿತಾಃ |
ಚತುರ್ಥಂ ತಸ್ಯ ಧರ್ಮಸ್ಯ ರಾಜಾ ಭಾಗಂ ಸ ವಿಂದತಿ ॥22॥
ರಾಜನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ ಪ್ರಜೆಗಳು ರಾಷ್ಟ್ರದಲ್ಲಿ ಯಾವ ಧರ್ಮವನ್ನು ಆಚರಿಸುತ್ತಾರೆಯೋ ರಾಜನು ಆ ಧರ್ಮದ ಫಲದ ನಾಲ್ಕನೆಯ ಒಂದು ಭಾಗವನ್ನು ಪಡೆಯುತ್ತಾನೆ.

ದೇವಾ ಮನುಷ್ಯಾಃ ಪಿತರೋ ಗಂಧರ್ವೋರಗರಾಕ್ಷಸಾಃ |
ಯಜ್ಞಮೇವೋಪಜೀವಂತಿ ನಾಸ್ತಿ ಚೇಷ್ಟಮರಾಜಕೇ ||23||
ದೇವತೆಗಳು, ಮನುಷ್ಯರು, ಪಿತೃಗಳು, ಗಂಧರ್ವೋರಗರಾಕ್ಷಸರು ಇವರು ಯಜ್ಞವನ್ನು ಉಪಜೀವಿಸುತ್ತಾರೆ. ರಾಜನಿಲ್ಲದ ದೇಶದಲ್ಲಿ ಯಜ್ಞಾದಿಗಳು ನಡೆಯು- ವುದಿಲ್ಲ.
ಇತೋ ದತ್ತೇನ ಜೀವಂತಿ ದೇವತಾಃ ಪಿತರಸ್ತಥಾ |
ರಾಜನ್ಯೇವಾಸ್ಯ ಧರ್ಮಸ್ಯ ಯೋಗಕ್ಷೇಮಃ ಪ್ರತಿಷ್ಠಿತಃ ||24||
ಭೂಮಿಯಲ್ಲಿ ಕೊಟ್ಟ ಹವಿರಾದಿಗಳಿಂದ ದೇವತೆಗಳು ಮತ್ತು ಪಿತೃಗಳು ಜೀವಿ- ಸುತ್ತಾರೆ. ಆದ್ದರಿಂದ ಈ ಧರ್ಮದ ಯೋಗಕ್ಷೇಮವು ರಾಜನನ್ನೇ ಆಶ್ರಯಿಸಿದೆ.
ಛಾಯಾಯಾಮಪ್ಸು ವಾಯೌ ಚ ಸುಖಮುಷ್ಣೇಽಧಿಗಚ್ಛತಿ |
ಅಗ್ನೌ ವಾಸಸಿ ಸೂರ್ಯೇ ಚ ಸುಖಂ ಶೀತೇಽಧಿಗಚ್ಛತಿ ||25||
ಉಷ್ಣಕಾಲದಲ್ಲಿ ನೆರಳಿನಲ್ಲಿಯೂ, ನೀರಿನಲ್ಲಿಯೂ ಮತ್ತು ತಂಗಾಳಿಯಲ್ಲಿ- ಯೂ ಸುಖವನ್ನು ಪಡೆಯುತ್ತಾರೆ. ಶೀತಕಾಲದಲ್ಲಿ ಅಗ್ನಿಯಿಂದಲೂ, ವಸ್ತ್ರದಿಂದಲೂ ಸೂರ್ಯನಿಂದಲೂ ಪ್ರಜೆಗಳು ಸುಖವನ್ನು ಪಡೆಯುತ್ತಾರೆ.
ಶಬ್ದೇ ಸ್ಪರ್ಶೇ ರಸೇ ರೂಪೇ ಗಂಧೇ ಚ ರಮತೇ ಮನಃ |
ತೇಷು ಭೋಗೇಷು ಸರ್ವೇಷು ನ ಭೀತೋ ಲಭತೇ ಸುಖಮ್ ||26||
ಪ್ರಜೆಗಳ ಮನಸ್ಸು ಶಬ್ದ ಸ್ಪರ್ಶ ರೂಪ ರಸ ಗಂಧಗಳಲ್ಲಿ ಸಂತೋಷ ಪಡುತ್ತದೆ. ಆದರೆ ಭಯವನ್ನು ಹೊಂದಿದವರು ಈ ಎಲ್ಲಾ ಭೋಗಗಳಿಂದ ಸುಖವನ್ನು ಹೊಂದುವುದಿಲ್ಲ.
ಅಭಯಸ್ಯೈವ ಯೋ ದಾತಾ ತಸ್ಯೈವ ಸುಮಹತ್ ಫಲಮ್ |
ನಹಿ ಪ್ರಾಣಸಮಂ ದಾನಂ ತ್ರಿಷು ಲೋಕೇಷು ವಿದ್ಯತೇ ||27||
ಅಂತಹ ಪರಿಸ್ಥಿತಿಯಲ್ಲಿ ಯಾವನು ಅಭಯವನ್ನುಕೊಡುತ್ತಾನೆಯೋ ಅವನಿಗೆ ಮಹಾಫಲವು ಉಂಟಾಗುತ್ತದೆ. ಪ್ರಾಣದಾನಕ್ಕೆ ಸಮನಾದ ದಾನವು ಮೂರು ಲೋಕಗಳಲ್ಲಿ ಬೇರೆ ಯಾವುದೂ ಇಲ್ಲವಷ್ಟೇ?
ಇಂದ್ರೋ ರಾಜಾ ಯಮೋ ರಾಜಾ ಧರ್ಮೋ ರಾಜಾ ತಥೈವ ಚ |
ರಾಜಾ ಬಿಭರ್ತಿ ರೂಪಾಣಿ ರಾಜ್ಞಾ ಸರ್ವಮಿದಂ ಧೃತಮ್ ||28||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಃಸಪ್ತತಿತಮೋಽಧ್ಯಾಯಃ ||74||
ರಾಜನೇ ಇಂದ್ರ. ರಾಜನೇ ಯಮ. ಹಾಗೆಯೇ ರಾಜನೇ ಧರ್ಮ. (ಹೀಗೆ) ರಾಜನು ಅನೇಕರೂಪಗಳನ್ನು ಧರಿಸುತ್ತಾನೆ. ರಾಜನು ಇದೆಲ್ಲವನ್ನೂ (ರಾಷ್ಟ್ರವನ್ನು) ಧರಿಸಿರುತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 74ನೆಯ ಅಧ್ಯಾಯವು ಮುಗಿಯಿತು
0

75. ಎಪ್ಪತ್ತೈದನೆಯ ಅಧ್ಯಾಯ
ರಾಜಪುರೋಹಿತನ ಲಕ್ಷಣ; ಐಲ-ಕಾಶ್ಯಪಸಂವಾದಾನುವಾದ
ಯುಧಿಷ್ಠಿರಃ
ರಾಜ್ಞಾ ಪುರೋಹಿತಃ ಕಾರ್ಯಃ ಕೀದೃಶೋ ವರ್ಣತೋ ಭವೇತ್ |
ಪುರೋಧಾ ಯಾದೃಶಃ ಕಾರ್ಯಃ ಕಥಯಸ್ವ ಪಿತಾಮಹ ||1||
ಯುಧಿಷ್ಠಿರ ಪಿತಾಮಹನೇ! ರಾಜನು ನಿಯೋಜಿಸುವ ಪುರೋಹಿತನ ಬಣ್ಣವು ಹೇಗಿರಬೇಕು. ಪುರೋಹಿತನು ಎಂತಹವನಾಗಿರಬೇಕು ಎಂಬುದನ್ನು ನನಗೆ ಹೇಳು.
ಭೀಷ್ಮಃ
ಗೌರೋ ವಾ ಲೋಹಿತೋ ವಾಪಿ ಶ್ಯಾಮೋ ವಾ ನೀರುಜಃ ಸುಖೀ |
ಅಕ್ರೋಧನೋ ನ ಚಪಲಃ ಸರ್ವತಶ್ಚ ಜಿತೇಂದ್ರಿಯಃ ||2||
ಭೀಷ್ಮರು ಬಿಳಿಯ ಬಣ್ಣದವನಾಗಲೀ, ಕೆಂಪು ಬಣ್ಣದವನಾಗಲೀ, ಕಂದು ಬಣ್ಣದವನಾಗಲೀ ಆಗಿರಬಹುದು.
ಕಡುಕಪ್ಪುಬಣ್ಣದವನನ್ನು ಪುರೋಹಿತನನ್ನಾಗಿ ಮಾಡಬಾರದು. ಪುರೋಹಿತನು ನೀರೋಗಿಯೂ, ಅಕ್ರೋಧಪರನೂ, ಚಂಚಲ- ಸ್ವಭಾವವಿಲ್ಲದವನೂ, ಜಿತೇಂದ್ರಿಯನೂ ಮತ್ತು ಸುಖಶೀಲನೂ ಆಗಿರಬೇಕು.
ರಾಜ್ಞಾ ಪುರೋಹಿತಃ ಕಾರ್ಯೋ ಭವೇತ್ ವಿದ್ವಾನ್ ಬಹುಶ್ರುತಃ |
ಉಭೌ ಸಮೀಕ್ಷ್ಯ ಧರ್ಮಾರ್ಥಾವಪ್ರಮೇಯಾವನಂತರಮ್ ||3||
ರಾಜನು ಅಪ್ರಮೇಯಗಳಾದ ಧರ್ಮಾರ್ಥಕಾಮಗಳೆರಡನ್ನೂ ನೋಡಿ, ಅನಂತರ ಬಹುಶ್ರುತನಾದ ವಿದ್ವಾಂಸನನ್ನು ಪುರೋಹಿತನನ್ನಾಗಿ ಮಾಡಬೇಕು.
ಧರ್ಮಾತ್ಮಾ ಧರ್ಮವಿದ್ ಯೇಷಾಂ ರಾಜ್ಞಾಂ ರಾಜನ್ ಪುರೋಹಿತಃ |
ತೇಷಾಮರ್ಥಶ್ಚ ಕಾಮಶ್ಚ ಧರ್ಮಶ್ಚೇತಿ ವಿನಿಶ್ಚಯಃ ||4||
ಎಲೈ ರಾಜನೇ! ರಾಜನ ಪುರೋಹಿತನು ಧರ್ಮಾತ್ಮನೂ ಧರ್ಮಜ್ಞನೂ ಆಗಿದ್ದರೆ ಅಂತಹ ರಾಜನಿಗೆ ಧರ್ಮಾರ್ಥಕಾಮಗಳು ಉಂಟಾಗುತ್ತವೆ ಎಂಬುದು ನಿಶ್ಚಿತವು.

ಶ್ಲೋಕಾಶ್ಚೋಶನಸಾ ಗೀತಾಸ್ತಾನ್ ನಿಬೋಧ ಯುಧಿಷ್ಠಿರ |
ಉಚ್ಛಿಷ್ಟಃ ಸ ಭವೇದ್ ರಾಜಾ ಯಸ್ಯ ನಾಸ್ತಿ ಪುರೋಹಿತಃ ||5||
ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿ ಶುಕ್ರಾಚಾರ್ಯರು ಹಾಡಿದ ಶ್ಲೋಕಗಳನ್ನು ಕೇಳು ಯಾವ ರಾಜನಿಗೆ ಪುರೋಹಿತನಿರುವುದಿಲ್ಲವೋ ಅವನು ಉಚ್ಛಿಷ್ಟನಾಗುತ್ತಾನೆ.
ರಕ್ಷಸಾಮಸುರಾಣಾಂ ಚ ಪಿಶಾಚೋರಗಪಕ್ಷಿಣಾಮ್ |
ಶತ್ರೂಣಾಂ ಚ ಭವೇದ್ ವಧ್ಯೋ ಯಸ್ಯ ನಾಸ್ತಿ ಪುರೋಹಿತಃ ||6||
ಯಾವ ರಾಜನಿಗೆ ಪುರೋಹಿತನಿಲ್ಲವೋ ಅವನು ರಾಕ್ಷಸರಿಂದಲೂ, ಅಸುರ- ರಿಂದಲೂ, ಪಿಶಾಚಸರ್ಪಪಕ್ಷಿಗಳಿಂದಲೂ ಮತ್ತು ಶತ್ರುಗಳಿಂದಲೂ ವಧ್ಯನಾಗು- ತ್ತಾನೆ.
ಬ್ರಹ್ಮತ್ವಂ ಸರ್ವಯಜ್ಞೇಷು ಕುರ್ವೀರ್ಥಾಥರ್ವಣೋ ದ್ವಿಜಃ |
ರಾಜ್ಞಾಶ್ಚಾಥರ್ವವೇದೇನ ಸರ್ವಕರ್ಮಾಣಿ ಕಾರಯೇತ್ ||7||
ರಾಜನ ಎಲ್ಲ ಯಜ್ಞಗಳಲ್ಲಿ ಅಥರ್ವಣವೇದಜ್ಞನಾದ ಬ್ರಾಹ್ಮಣನೇ ಬ್ರಹ್ಮ- ಸ್ಥಾನವನ್ನು ಹೊಂದಬೇಕು. ರಾಜನಿಗೆ ಎಲ್ಲ ಕರ್ಮಗಳನ್ನೂ ಅಥರ್ವವೇದದಿಂದ ಮಾಡಿಸಬೇಕು.
ಭೂಯೋ ಗೃಹ್ಯಾಣಿ ಸತತಂ ಮಹೋತ್ಪಾತಾನ್ಯಥಾನಿ ಚ |
ಇಷ್ಟಾಮಂಗಲಯುಕ್ತಾನಿ ತಥಾಽಂತಃಪುರಿಕಾಣೀ ಚ ||8||
ಗೀತನೃತ್ತಾಧಿಕಾರೇಷು ಸಾಮಂತೇಷು ಮಹೀಪತೇಃ |
ಕರ್ತವ್ಯಂ ಕರಣೀಯಂ ವೈ ವೈಶ್ವದೇವಬಲಿಸ್ತಥಾ ||9||
ಮನೆಯಲ್ಲಿ ಸಂಭವಿಸುವ ಭೋಜನಸಮಯದ ದೀಪನಾಶಾದಿ ಅಮಂಗಳ- ಗಳು, ಬಾಹ್ಯವಾದ ಉಲ್ಕಾಪಾತಾದಿ ಅಮಂಗಳಗಳು, ಸುಹೃದರಿಗೆ ಉಂಟಾಗುವ ಅಮಂಗಳಗಳು, ಹಾಗೆಯೇ ರಾಜಧಾನಿಯೊಳಗೆ ಉಂಟಾಗುವ ಅಮಂಗಳಗಳು, ಗೀತನೃತ್ಯಾದಿ ಸ್ಥಳಗಳಲ್ಲಿ ಆಗುವ ಅಮಂಗಳಗಳು, ರಾಜನ ಸಾಮಂತರಾಜರುಗಳಿಗೆ ಆಗುವ ಅಮಂಗಳಗಳು ಇವುಗಳನ್ನು ಗಮನಿಸಿ ಪುರೋಹಿತನು ವೈಶ್ವದೇವ, ಬಲಿ ಮೊದಲಾದ ಪ್ರಾಯಶ್ಚಿತ್ತಗಳನ್ನು ಮಾಡುವವನಾಗಿರಬೇಕು.
ಪಕ್ಷಸಂಧಿಷು ಕುರ್ವೀತ ಮಹಾಶಾಂತಿಂ ಪುರೋಹಿತಃ |
ರೌದ್ರಹೋಮಸಹಸ್ರಂ ಚ ಸ್ವಸ್ಯ ರಾಜ್ಞಃ ಪ್ರಿಯಂ ಹಿತಮ್ ||10||
ಪಕ್ಷಸಂಧಿಗಳಾದ ಹುಣ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ರಾಜನಿಗೂ ಮತ್ತು ತನಗೂ ಹಿತಕಾರಕವಾದ ಸಹಸ್ರಾಹುತಿಗಳಿಂದ ಕೂಡಿದ ರುದ್ರದೇವತಾಕವಾದ ಹೋಮವನ್ನು ಪುರೋಹಿತನು ಮಾಡಬೇಕು.
ರಾಜ್ಞಃ ಪಾಪಮಲಾಃ ಸಪ್ತ ಯಾನ್ ನುತ್ಸ್ಯತಿ ಪುರೋಹಿತಃ |
ಅಮಾತ್ಯಾಶ್ಚ ಕುಕರ್ಮಾಣೋ ಮಂತ್ರಿಣಶ್ಚಾಪ್ಯುಪೇಕ್ಷಕಾಃ ||11||
ಚೌರ್ಯಮವ್ಯವಹಾರಶ್ಚ ವ್ಯವಹಾರೋಪಸೇವನಮ್ |
ಅದಂಡ್ಯದಂಡನಂ ಚೈವ ದಂಡ್ಯಾನಾಂ ಚಾಪ್ಯದಂಡನಮ್ ||12||
ಹಿಂಸಾ ಚಾನ್ಯತ್ರ ಸಂಗ್ರಾಮಾದ್ ರಾಜ್ಞಶ್ಚ ಮಲ ಉಚ್ಯತೇ |
ಕುಭೃತ್ಯೈಸ್ತು ಪ್ರಜಾನಾಶಃ ಸಪ್ತಮಸ್ತು ಮಹಾಮಲಃ ||13||
ರಾಜನಿಗೆ ಏಳು ಪಾಪಮಲಗಳಿರುತ್ತವೆ. ಅವುಗಳನ್ನು ಪುರೋಹಿತನು ನಾಶ- ಗೊಳಿಸುವನು. ಏಳು ಮಲಗಳೆಂದರೆ ಕೆಟ್ಟ ಕೆಲಸವನ್ನು ಮಾಡುವ ಮತ್ತು ಮಂತ್ರಾ- ಲೋಚನೆಯ ಸಮಯದಲ್ಲಿ ಉಪೇಕ್ಷೆಯನ್ನು ಮಾಡುವ ಮಂತ್ರಿಗಳು; ಚೌರ್ಯ, ಅವ್ಯವಹಾರ, ವೈಶ್ಯನಂತೆ ಕ್ರಯವಿಕ್ರಯಾದಿ ವ್ಯವಹಾರವನ್ನು ಸೇವಿಸುವುದು, ಶಿಕ್ಷಾ ಅನರ್ಹರಿಗೆ ಶಿಕ್ಷೆಯನ್ನು ಕೊಡುವುದು, ಶಿಕ್ಷಾರ್ಹರಿಗೆ ಶಿಕ್ಷೆಯನ್ನು ಕೊಡದಿರುವುದು, ಯುದ್ಧವನ್ನು ಬಿಟ್ಟು ಬೇರೆಯ ಸ್ಥಳದಲ್ಲಿ ಹಿಂಸೆಯನ್ನು ಮಾಡುವುದು. ಇವುಗಳು ರಾಜನ ಮಲಗಳೆಂದು ಹೇಳಲ್ಪಡುತ್ತವೆ. ಕೆಟ್ಟ ಭೃತ್ಯರಿಂದ ಪ್ರಜೆಗಳ ನಾಶವು ರಾಜನ ಏಳನೆಯ ದೊಡ್ಡ ಮಲವೆನಿಸುತ್ತದೆ.
ರೌದ್ರೈಹೋರ್ಮೈರ್ಮಹಾಶಾಂತ್ಯಾ ಧೃತಕಂಬಲಕರ್ಮಣಾ |
ಭೃಗ್ವಂಗಿರೋ ವಿಧಿಜ್ಞೋ ವೈ ಪುರೋಧಾ ನಿರ್ಣುದೇ ಮಲಾತ್ ||14||
ರುದ್ರದೇವತಾಕವಾದ ಹೋಮಗಳಿಂದಲೂ, ಮಹಾ ಶಾಂತಿಯಿಂದಲೂ, ಶುಕ್ರಬೃಹಸ್ಪತಿಗಳ ವಿಧಾನವನ್ನು ತಿಳಿದ ಪುರೋಹಿತನು ಧೃತಕಂಬಲಕರ್ಮ- ದಿಂದಲೂ ಆ ಮಲವನ್ನು ನಾಶಗೊಳಿಸಬೇಕು.
ಏತಾನ್ ಹಿತ್ವಾ ದಿವಂ ಯಾತಿ ರಾಜಾ ಸಪ್ತ ಮಹಾಮಲಾನ್ |
ಸಾಮಾತ್ಯಃ ಸಪುರೋಧಾಶ್ಚ ಪ್ರಜಾನಾಂ ಪಾಲನೇ ರತಃ ||15||
ಪ್ರಜಾಪಾಲನೆಯಲ್ಲಿ ರತನಾದ ರಾಜನು ಈ ಸಪ್ತಮಹಾಮಲಗಳನ್ನು ತೊರೆದು ಅಮಾತ್ಯ ಹಾಗೂ ಪುರೋಹಿತನ ಜೊತೆಯಲ್ಲಿ ಸ್ವರ್ಗಕ್ಕೆ ಹೋಗುತ್ತಾನೆ.
ಏತಸ್ಮಿನ್ನೇವ ಕೌರವ್ಯ ಪೌರೋಹಿತ್ಯೇ ಮಹಾಮತೇ |
ಶ್ಲೋಕಾನಾಹ ಮಹೇಂದ್ರಸ್ಯ ಗುರುರ್ದೇವೋ ಬೃಹಸ್ಪತಿಃ ||16||
ತಾನ್ ನಿಬೋಧ ಮಹೀಪಾಲ ಮಹಾಭಾಗ ಹಿತಾನ್ ಶುಭಾನ್ |
ಎಲೈ ಕೌರವ್ಯನೇ! ಮಹಾಮತಿಯೇ! ಇದೇ ಪೌರೋಹಿತ್ಯದ ವಿಷಯದಲ್ಲಿ ದೇವತೆಗಳ ಗುರುಗಳಾದ ಬೃಹಸ್ಪತಿಗಳು ಶ್ಲೋಕಗಳನ್ನು ಹೇಳಿದ್ದಾರೆ. ಎಲೈ ರಾಜನೇ! ಮಹಾಭಾಗನೇ! ಅಂತಹ ಹಿತವಾದ ಮತ್ತು ಶುಭವಾದ ಶ್ಲೋಕಗಳನ್ನು ಕೇಳು.
ಋಗ್ವೇದೇ ಸಾಮವೇದೇ ಚ ಯಜುರ್ವೇದೇ ಚ ವಾಜಿನಾಮ್ ||17||
ನ ನಿರ್ದಿಷ್ಟಾನಿ ಕರ್ಮಾಣಿ ತ್ರಿಷು ಸ್ಥಾನೇಷು ಭೂಭೃತಾಮ್ |

ಶಾಂತಿಕಂ ಪೌಷ್ಟಿಕಂ ಚೈವ ಅರಿಷ್ಟಾನಾಂ ಚ ಶಾತನಮ್ ॥18॥
ಋಗ್ವೇದ, ಸಾಮವೇದ ಮತ್ತು ಯಜುರ್ವೇದ ಈ ಮೂರರಲ್ಲಿ ವಾಜ- ಸನೇಯಶಾಖೆಗಳಲ್ಲಿ ಹೇಳಲ್ಪಟ್ಟ ರಾಜರ ಶಾಂತಿಕ, ಪೌಷ್ಟಿಕ ಮತ್ತು ಅರಿಷ್ಟ- ನಿವಾರಕವಾದ ಅಭಿಚಾರಾದಿಕರ್ಮಗಳು ಹೇಳಲ್ಪಟ್ಟಿಲ್ಲ. ಆದರೆ(ಅತಃ) ರಾಜ- ಪುರೋಹಿತನು ವಾಜಸನೇಯಶಾಖೆಯವನೇ ಆಗಿರಬೇಕು.
ಶಬ್ದಿತಾ ಯಾಜ್ಞವಲ್ಕ್ಯೇನ ಯಜ್ಞಾ ಆಹವಮೀಹತಾ |
ಪ್ರಶಿಷ್ಟಾನಾಂ ವರಿಷ್ಠೇನ ಬ್ರಹ್ಮಣಃ ಸಮ್ಮತೇ ವಿಭೋಃ ॥19॥
ಮಾಧ್ಯಂದಿನಶಾಖಾಪ್ರವರ್ತಕರಾದ ಶ್ರೇಷ್ಠರಾದ ಯಾಜ್ಞವಲ್ಕ್ಯರು ಯುದ್ಧವನ್ನು ಬಯಸುವ ರಾಜನಿಗೆ ಮಾಡಬೇಕಾದ ಶಾಂತಿಕ, ಪೌಷ್ಟಿಕ ಮತ್ತು ಆಭಿಚಾರಿಕಾದಿ ಕರ್ಮಗಳನ್ನು ಬ್ರಹ್ಮದೇವರ ಸಮ್ಮತಿಗೆ ಅನುಗುಣವಾಗಿ ಹೇಳಿದ್ದಾರೆ. (ರಾಜನು ತನ್ನ ಪಾಪಗಳನ್ನು ಮತ್ತು ಕಷ್ಟಗಳನ್ನು ಪರಿಹರಿಸಿಕೊಳ್ಳಲು ಮಾಡುವ ಹೋಮಗಳು ಶಾಂತಿಕ ಹೋಮಗಳು; ತನಗೂ ಮತ್ತು ತನ್ನ ರಾಜ್ಯಕ್ಕೂ ಕ್ಷೇಮಲಾಭಗಳನ್ನುಂಟು ಮಾಡುವ ಕರ್ಮಗಳು ಪೌಷ್ಟಿಕಗಳು; ಶತ್ರುನಿಗ್ರಹಕಾರ್ಯಮಾಡುವ ಹೋಮಾದಿ ಕರ್ಮಗಳು ಆಭಿಚಾರಿಕ ಎಂದು ಹೇಳಲ್ಪಡುತ್ತವೆ).
ಬಹ್ವೃಚಂ ಸಾಮಗಂ ಚೈವ ವಾಜಿನಂ ಚ ವಿವರ್ಜಯೇತ್ |
ಬಹ್ವೃಚೋ ರಾಷ್ಟ್ರನಾಶಾಯ ರಾಜನಾಶಾಯ ಸಾಮಗಃ |
ಅಧ್ವರ್ಯುರ್ಬಲನಾಶಾಯ ಪ್ರೋಕ್ತಾ ವಾಜಸನೇಯಕಾಃ ॥20॥
ಋಗ್ವೇದಿಯಾದ ಯಜುರ್ವೇದಿಯಾದ ಅಥವಾ ಸಾಮವೇದಿಯಾದ ಪುರೋ -ಹಿತನನ್ನು ವರ್ಜಿಸಬೇಕು. ಋಗ್ವೇದಿಯು ಪುರೋಹಿತನಾದರೆ ರಾಷ್ಟ್ರನಾಶ- ವಾಗುತ್ತದೆ. ಸಾಮವೇದಿಯು ಪುರೋಹಿತನಾದರೆ ರಾಜನೇ ನಾಶಹೊಂದುತ್ತಾನೆ. ಯಜುರ್ವೇದಿಯು ಪುರೋಹಿತನಾದರೆ ಸೈನ್ಯವು ನಾಶವನ್ನು ಹೊಂದುತ್ತದೆ. ಆದ್ದರಿಂದ ಮಾಧ್ಯಂದಿನಶಾಖೆಯಾದ ವಾಜಸನೇಯಶಾಖೆಯವನೇ ಪುರೋಹಿತ- ನಾಗಬೇಕು.
ಅಬ್ರಾಹ್ಮಣೇಷು ವರ್ಣೇಷು ಮಂತ್ರಾನ್ ವಾಜಸನೇಯಕಮ್ |
ಶಾಂತಿಕೇ ಪೌಷ್ಟಿಕೇ ಚೈವ ನಿತ್ಯಂ ಕರ್ಮಣಿ ವರ್ಜಯೇತ್ ॥21॥
ಬ್ರಾಹ್ಮಣೇತರವರ್ಣಗಳಿಗೆ ಶಾಂತಿಕ ಮತ್ತು ಪೌಷ್ಟಿಕಕರ್ಮಗಳನ್ನು ಮಾಡು- ವಾಗ ನಿತ್ಯವೂ ವಾಜಸನೇಯಶಾಖೆಯ ಮಂತ್ರಗಳನ್ನು ವರ್ಜಿಸಬೇಕು.
ಬ್ರಾಹ್ಮಣಸ್ಯ ಮಹೀಪಸ್ಯ ಸರ್ವಥಾ ನ ವಿರೋಧಿನಃ |
ವೇದಾಶ್ಚತ್ವಾರ ಇತ್ಯೇತೇ ಬಾಹ್ಮಣಾ ಯೇ ಚ ತದ್ ವಿದುಃ ॥22॥
ಪೌರೋಹಿತ್ಯೇ ಪ್ರಮಾಣಂ ತು ಬ್ರಾಹ್ಮಣಶ್ಚ ಮಹೀಪತೇಃ |
ಜಾತ್ಯಾ ನ ಕ್ಷತ್ರಿಯಃ ಪ್ರೋಕ್ತಃ ಕ್ರೂರಃ ಪ್ರಾಣಂ ಕರೋತಿ ಯಃ ॥23॥
ನಾಲ್ಕುವೇದಗಳು ಬ್ರಾಹ್ಮಣನಿಗಾಗಲೀ, ರಾಜನಿಗಾಗಲೀ ವಿರೋಧಿಗಳಲ್ಲ ಎಂಬುದನ್ನು ಬ್ರಾಹ್ಮಣರು ತಿಳಿದಿದ್ದಾರೆ. ರಾಜನಿಗೆ ಪೌರೋಹಿತ್ಯವಿಷಯದಲ್ಲಿ ಬ್ರಾಹ್ಮಣನ ವಚನವೇ ಪ್ರಮಾಣವಾಗುತ್ತದೆ. ಯಾವನು ದುಷ್ಟರಿಗೆ ಕ್ರೂರನಾಗಿದ್ದು, ಸಜ್ಜನರ ಪ್ರಾಣವನ್ನು ರಕ್ಷಿಸುತ್ತಾನೆಯೋ ಅವನು ಜಾತಿಯಿಂದ ಕ್ಷತ್ರಿಯನಾಗದಿ- ದ್ದರೂ ಕರ್ಮದಿಂದ ಕ್ಷತ್ರಿಯ ಎಂದೇ ಕರೆಯಲ್ಪಡುತ್ತಾನೆ.
ಚಾತುರ್ವರ್ಣ್ಯಬಹಿಷ್ಕೋಽಪಿ ಸ ಏವ ಕ್ಷತ್ರಿಯಃ ಸ್ಮೃತಃ |
ಭಾರ್ಗವಾಂಗಿರಸೈರ್ಮಂತ್ರೈಸ್ತೇಷಾಂ ಕರ್ಮ ವಿಧೀಯತೇ ॥24॥
ಅಂತಹ ನಾಲ್ಕು ವರ್ಣಬಾಹ್ಯರಾದ ಕ್ಷತ್ರಿಯರಿಗೆ ಶುಕ್ರಬೃಹಸ್ಪತಿಗಳ ಮಂತ್ರ- ದಿಂದ ಕರ್ಮಗಳು ವಿಧಿಸಲ್ಪಡುತ್ತವೆ.
ವೈತಾನಂ ಕರ್ಮ ಯಚ್ಚೈವ ಗಾರ್ಹ್ಯಂ ಕರ್ಮ ಚ ಯತ್ ಸ್ಮೃತಮ್ |
ದ್ವಿಜಾತೀನಾಂ ತ್ರಯಾಣಾಂ ತು ಸರ್ವಕರ್ಮ ವಿಧೀಯತೇ ॥25॥
ಮೂರು ವರ್ಣದ ದ್ವಿಜರಿಗೂ ಯಜ್ಞಸಂಬಂಧಿಯಾದ ಕರ್ಮಗಳು ಗೃಹ- ಸಂಬಂಧಿಯಾದ ಎಲ್ಲ ಕರ್ಮಗಳೂ ವಿಧಿಸಲ್ಪಡುತ್ತವೆ.
ರಾಜಶಬ್ದಪ್ರವೃತ್ತಾನಾಂ ಹಿತಾರ್ಥಂ ತ್ರೀಣಿ ಕಾರಯೇತ್ |
ಶಾಂತಿಕಂ ಪೌಷ್ಟಿಕಂ ಚೈವ ತಥಾಽಭಿಚರಣಂ ಚ ಯತ್ ॥26॥
ರಾಜಶಬ್ದವನ್ನು ಹೊಂದಿದವರಿಗೆ ಅವರ ಹಿತಕ್ಕಾಗಿ (ಅವರು ಕ್ಷತ್ರಿಯರಾಗಲೀ ಅಥವಾ ವರ್ಣಬಾಹ್ಯರಾಗಲೀ) ಶಾಂತಿಕ ಪೌಷ್ಟಿಕ ಮತ್ತು ಅಭಿಚರಣ ಕರ್ಮಗಳನ್ನು ಮಾಡಿಸಬೇಕು.
ಅಗ್ನಿಷ್ಟೋಮಮುಖ್ಯೈರ್ಯಜ್ಞೈರ್ದೂಷಿತಾ ಭೂಪಕರ್ಮಭಿಃ |
ನ ಸಮ್ಯಕ್ ಫಲಮೃಚ್ಛಂತಿ ಯೇ ಯಜಂತಿ ದ್ವಿಜಾತಯಃ ॥27॥
ಪೌರೋಹಿತ್ಯಂ ತು ಕುರ್ವಾಣಾ ನಾಸಂಯಾಸ್ಯಂತಿ ಭೂಭೃತಾಮ್ |
ಯಜ್ಞಕರ್ಮಾಣಿ ಕುರ್ವಾಣಾ ಋತ್ವಿಜಸ್ತು ವಿರೋಧಿನಃ ॥28॥
ಅಂತಹ ವರ್ಣಬಾಹ್ಯರಿಗೆ ರಾಜನಿಗೆ ಉಚಿತವಾದ ಅಗ್ನಿಷ್ಟೋಮಾದಿ ಯಾಗ- ಗಳನ್ನು ಮಾಡಿಸುವ ಬ್ರಾಹ್ಮಣರು ಆ ಕರ್ಮದೋಷದಿಂದ ಒಳ್ಳೆಯ ಫಲವನ್ನು ಪಡೆಯುವುದಿಲ್ಲ. ಪೌರೋಹಿತ್ಯವನ್ನು ಮಾಡುವ ಬ್ರಾಹ್ಮಣರು ರಾಜರಿಗೆ ಅನು- ಕೂಲವಾಗಿರುತ್ತಾರೆ. ಆದರೆ ಅಗ್ನಿಷ್ಟೋಮಾದಿ ಅಗ್ನಿಕರ್ಮಗಳನ್ನು ಮಾಡಿಸುವ ದ್ವಿಜರು ರಾಜನಿಗೆ ವಿರೋಧಿಗಳಾಗುತ್ತಾರೆ.
ಬ್ರಹ್ಮಕ್ಷತ್ರವಿಶಃ ಸರ್ವೇ ಪೌರೋಹಿತ್ಯೇ ವಿವರ್ಜಿತಾಃ |
ತದಭಾವೇ ಚ ಪಾರಕ್ಯಂ ನಿರ್ದಿಷ್ಟಂ ರಾಜಕರ್ಮಸು ॥29॥
ಋಷಿಣಾ ಯಾಜ್ಞವಲ್ಕ್ಯೇನ ತತ್ ತಥಾ ನ ತದನ್ಯಥಾ |
ವಾಜಸನೇಯಶಾಖೆಯನ್ನು ತಿಳಿಯದ ಬ್ರಾಹ್ಮಣ, ಕ್ಷತ್ರಿಯ ವೈಶ್ಯರು ರಾಜ- ಪೌರೋಹಿತ್ಯದಿಂದ ಹೊರಗೆ ಉಳಿಯುತ್ತಾರೆ.

ರಾಜಪುರೋಹಿತನಿಲ್ಲದಿದ್ದರೂ ರಾಜನು ಮಾಡುವ ಸತ್ಕರ್ಮಗಳಿಗೆ ಪರಲೋಕದಲ್ಲಿ ಫಲವು ದೊರಕುತ್ತದೆ. ಋಷಿಗಳಾದ ಯಾಜ್ಞವಲ್ಕ್ಯರು ಅದು ಇದೇ ರೀತಿ, ಬೇರೆ ರೀತಿಯಲ್ಲ ಎಂದು ಸ್ಥಾಪಿಸಿದ್ದಾರೆ.

ಭಾರ್ಗವಾಂಗಿರಸೇ ವೇದೇ ಕೃತವಿದ್ಯಃ ಷಡಂಗವಿತ್ ॥30॥
ಯಜ್ಞಕರ್ಮವಿಧಿಜ್ಞಸ್ತು ವಿಧಿಜ್ಞಃ ಪೌಷ್ಟಿಕೇಷು ಚ |
ಅಷ್ಟಾದಶವಿಕಲ್ಪಾನಾಂ ವಿಧಿಜ್ಞಃ ಶಾಂತಿಕರ್ಮಣಾಮ್ ॥31॥
ಸರ್ವರೋಗವಿಹೀನಶ್ಚ ಸಂಯತಃ ಸಂಯತೇಂದ್ರಿಯಃ ॥32॥

ಶುಕ್ರಬೃಹಸ್ಪತಿಗಳ ಶಾಸ್ತ್ರವನ್ನು ಬಲ್ಲವನೂ, ಷಡಂಗರಾಜವಿದ್ಯೆಯನ್ನು ಬಲ್ಲ- ವನೂ, ಯಜ್ಞಕರ್ಮದ ವಿಧಿಯನ್ನು ಬಲ್ಲವನೂ, ಪೌಷ್ಟಿಕಕರ್ಮಗಳ ವಿಧಿಯನ್ನು ಬಲ್ಲವನೂ, ಶಾಂತಿಕರ್ಮಗಳ ಅಷ್ಟಾದಶಪ್ರಭೇದಗಳನ್ನು ಬಲ್ಲವನೂ, ಸರ್ವ- ರೋಗರಹಿತನೂ, ಜಿತೇಂದ್ರಿಯನೂ, ಗಂಭೀರನೂ ಆದವನನ್ನು ಪುರೋಹಿತನ- ನ್ನಾಗಿ ಮಾಡಬೇಕು.

ಶ್ವಿತ್ರಕುಷ್ಠಕ್ಷಯಕ್ಷೀಣೈರ್ಗ್ರಹಾಪಸ್ಮಾರದೂಷಿತೈಃ |
ಅಶಸ್ತೈರ್ವಾತದುಷ್ಟೈಶ್ಚ ದೂರಸ್ಥೈಃ ಸಂವದೇನ್ನೃಪಃ |
ರೋಗಿಣಂ ಋತ್ವಿಜಂ ಚೈವ ವರ್ಜಯೇಚ್ಚ ಪುರೋಹಿತಮ್ ॥33॥

ರಾಜನು ಶ್ವಿತ್ರ, ಕುಷ್ಠ, ಕ್ಷಯ, ಗ್ರಹಪೀಡೆ, ಅಪಸ್ಮಾರ ಇವುಗಳಿಂದ ದೂಷಿತ- ರಾದವರ ಜೊತೆಯಲ್ಲಿ, ಅಪ್ರಶಸ್ತರಾದ ಜನರ ಜೊತೆಯಲ್ಲಿ ಮತ್ತು ವಾತ- ದೋಷಯುಕ್ತರಾದ ಜನರ ಜೊತೆಯಲ್ಲಿ ಮಾತನಾಡುವಾಗ ಅವರನ್ನು ದೂರದಲ್ಲಿ ನಿಲ್ಲಿಸಿ ಮಾತನಾಡಬೇಕು. ರಾಜನು ರೋಗಿಯಾದ ಋತ್ವಿಜನನ್ನು ಮತ್ತು ಪುರೋ- ಹಿತನನ್ನು ವರ್ಜಿಸಬೇಕು.

ನ ಚಾನ್ಯಸ್ಯ ಕೃತಂ ಯೇನ ಪೌರೋಹಿತ್ಯಂ ಕದಾಚನ |
ಯಸ್ಯ ಯಾಜ್ಯೋ ಮೃತಶ್ಚೈವ ಭ್ರಷ್ಟಃ ಪ್ರವ್ರಜಿತೋ ಯಥಾ ॥34॥
ಯುದ್ಧೇ ಪರಾಜಿತಶ್ಚೈವ ಸರ್ವಾಂಸ್ತಾನ್ ವರ್ಜಯೇನ್ನೃಪಃ |

ಇನ್ನೊಬ್ಬ ರಾಜನಿಗೆ ಯಾವಾಗಲಾದರೂ ಪೌರೋಹಿತ್ಯವನ್ನು ಮಾಡಿದವನನ್ನು ಯಾವನು ರಾಜನಿಗೆ ಪೌರೋಹಿತ್ಯವನ್ನು ಮಾಡಿದ ಮೇಲೆ ರಾಜನು ಮೃತನಾಗಿ- ದ್ದಾನೆಯೋ ಅಂತಹವನನ್ನು, ಭ್ರಷ್ಟನನ್ನು, ಸನ್ನ್ಯಾಸಿಯನ್ನು, ಯುದ್ಧದಲ್ಲಿ ಪರಾ- ಜಿತನಾದವನನ್ನು ಪೌರೋಹಿತ್ಯಕರ್ಮದಲ್ಲಿ ರಾಜನು ವರ್ಜಿಸಬೇಕು.

ನಕ್ಷತ್ರಸ್ಯಾನುಕೂಲ್ಯೇನ ಯಸ್ಮಿನ್ ಜಾತೋ ಜನೇಶ್ವರಃ ॥35॥
ರಾಜಶಾಸ್ತ್ರವಿನೀತಶ್ಚ ಶ್ರೇಯಾನ್ ರಾಜ್ಞಃ ಪುರೋಹಿತಃ |

ಯಾವನು ಪುರೋಹಿತನಾಗಿದ್ದಾಗ ಒಳ್ಳೆಯ ನಕ್ಷತ್ರದಲ್ಲಿ ತಾನು ರಾಜನಾ- ದನೋ, ಯಾವನು ರಾಜ್ಯಶಾಸ್ತ್ರದಲ್ಲಿ ನಿಪುಣನೋ ಅಂತಹ ಪುರೋಹಿತನು ರಾಜನಿಗೆ ಶ್ರೇಯಸ್ಕರನಾದವನು.

ಅಧನ್ಯಾನಾಂ ನಿಮಿತ್ತಾನಾಮುತ್ಪಾತಾನಾಮಥಾರ್ಥವಿತ್ ॥36॥
ಶತ್ರುಪಕ್ಷಕ್ಷಯಜ್ಞಶ್ಚ ಶ್ರೇಯಾನ್ ರಾಜ್ಞಃ ಪುರೋಹಿತಃ |

ಅಮಂಗಳ ಸೂಚನೆಗಳ ಮತ್ತು ಉತ್ಪಾತಗಳ ಅರ್ಥಗಳನ್ನು ತಿಳಿಯುವ, ಶತ್ರುಪಕ್ಷವನ್ನು ನಾಶಮಾಡುವ ವಿಧಾನವನ್ನು ತಿಳಿಯುವ ಪುರೋಹಿತನು ರಾಜನಿಗೆ ಶ್ರೇಯಸ್ಕರನಾದವನು.

ವಾಜಿನಂ ತದಭಾವೇ ಚ ಚಾರಕಾಧ್ವರ್ಯಕಾ ಅಪಿ ॥37॥
ಬಹ್ವೃಚಂ ಸಾಮಗಂ ಚೈವ ನೀತಶಾಸ್ತ್ರಕೃತಶ್ರಮಾನ್ |
ಕೃತಿನೋಽಥರ್ವಣೋ ವೇದೇ ಸ್ಥಾಪಯೇತ್ ತು ಪುರೋಹಿತಾನ್ ॥38॥

ವಾಜಸನೇಯ ಶಾಖೆಯನ್ನು ತಿಳಿದ ಬ್ರಾಹ್ಮಣನು ಸಿಗದಿದ್ದರೆ ರಾಜನೀತಿ- ಶಾಸ್ತ್ರವನ್ನು ಅಭ್ಯಾಸ ಮಾಡಿದ, ಯಜ್ಞವನ್ನು ಪ್ರವರ್ತಿಸುವ ಯಜುರ್ವೇದಿಯನ್ನು ಋಗ್ವೇದಿಯನ್ನು ಸಾಮವೇದಿಯನ್ನು ಅಥರ್ವವೇದಿಯನ್ನು ಪುರೋಹಿತನನ್ನಾಗಿ ಮಾಡಬಹುದು.

ಹಿಂಸಾಂಗಾ ಯೇ ಚ ನಿರ್ದಿಷ್ಟಾ ಮಂತ್ರಾ ವೈತಾನಿಕೈರ್ದ್ವಿಜೈಃ |
ನ ತಾನುಚ್ಚಾರಯೇತ್ ಪ್ರಾಜ್ಞಃ ಕ್ಷಾತ್ರಧರ್ಮವಿರೋಧಿನಃ ॥39॥

ಯಾಗವನ್ನು ಮಾಡಿಸುವ ಬ್ರಾಹ್ಮಣರು ಮಾರಣಾದಿ ಹಿಂಸಾಜನಕವಾದ ಮಂತ್ರವೆಂದು ಯಾವುದನ್ನು ನಿರ್ದೇಶಿಸಿರುತ್ತಾರೆಯೋ ಅವು ಕ್ಷತ್ರಿಯ ಧರ್ಮಕ್ಕೆ ವಿರೋಧಿಗಳಾದವು. ಪ್ರಾಜ್ಞನಾದ ಪುರೋಹಿತನು ಅವುಗಳನ್ನು ಉಚ್ಚರಿಸಬಾರದು.

ಪ್ರಜಾಗುಣಾಃ ಪುರೋಧಾಶ್ಚ ಪುರೋಹಿತಗುಣಾಃ ಪ್ರಜಾಃ |
ರಾಜಾ ಚೈವಂಗುಣೋ ಯೇಷಾಂ ಕುಶಲಂ ತೇಷು ಸರ್ವಶಃ ॥40॥

ಎಲ್ಲಿ ಪ್ರಜೆಗಳ ಗುಣವು ಪುರೋಹಿತನಿಗೂ, ಪುರೋಹಿತನ ಗುಣಗಳು ಪ್ರಜೆಗಳಿಗೂ ಉಂಟಾಗುತ್ತವೆಯೋ ಮತ್ತು ರಾಜನೂ ಅಂತಹ ಗುಣವುಳ್ಳವನಾಗಿ- ರುತ್ತಾನೆಯೋ ಅಲ್ಲಿ ಎಲ್ಲರಿಗೂ ಕುಶಲವುಂಟಾಗುತ್ತದೆ.

ಉಭೌ ಪ್ರಜಾ ವರ್ಧಯತೋ ದೇವಾನ್ ಪೂರ್ವಾನ್ ಪರಾನ್ ಪಿತೄನ್ |
ಯೌ ಸಮೇಯಾವಸ್ಥಿತೌ ಧರ್ಮೇ ಶ್ರದ್ಧೇಯೌ ಸುತಪಸ್ವಿನೌ ॥41॥

ರಾಜಾ ಮತ್ತು ಪುರೋಹಿತರಿಬ್ಬರೂ ಶ್ರದ್ಧಾಯುಕ್ತರಾಗಿ, ಒಳ್ಳೆಯ ತಪಸ್ವಿಗಳಾಗಿ ಮಿಲಿತರಾಗಿ ಧರ್ಮಾಚರಣೆಯನ್ನು ಮಾಡಿದರೆ ಅವರು ದೇವತೆಗಳನ್ನೂ, ಪೂರ್ವ ಪಿತೃಗಳನ್ನೂ ಸಂತೋಷಪಡಿಸುತ್ತಾರೆ. ಮತ್ತು ಪ್ರಜೆಗಳ ಸಂತತಿಯನ್ನೂ ಅಭಿವೃದ್ಧಿ ಪಡಿಸುತ್ತಾರೆ.

ಪರಸ್ಪರಸ್ಯ ಸುಹೃದೌ ಸಮ್ಮತೌ ಸಮಚೇತಸೌ |
ಬ್ರಹ್ಮಕ್ಷತ್ರಸ್ಯ ಸಮ್ಮಾನಾತ್ ಪ್ರಜಾಃ ಸುಖಮವಾಪ್ನುಯುಃ ॥42॥

ಅವರಿಬ್ಬರೂ ಪರಸ್ಪರ ಸುಹೃದರಾಗಿ, ಪ್ರಜೆಗಳಿಗೆ ಸಮ್ಮತರಾಗಿ, ಸಮಾನದೃಷ್ಟಿ- ಯುಳ್ಳವರಾಗಿ, ಬ್ರಾಹ್ಮಣ ಮತ್ತು ಕ್ಷತ್ರಿಯರನ್ನು ಸಮ್ಮಾನ ಮಾಡುವುದರಿಂದ ಪ್ರಜೆ- ಗಳು ಸುಖವನ್ನು ಪಡೆಯುವರು.

ವಿಮಾನನಾತ್ ತಯೋರೇವ ಪ್ರಜಾ ನಶ್ಯೇಯುರೇವ ಹ |
ಬ್ರಹ್ಮಕ್ಷತ್ರಂ ಹಿ ಸರ್ವೇಷಾಂ ಧರ್ಮಾಣಾಂ ಮೂಲಮುಚ್ಯತೇ ||43||
ಬ್ರಾಹ್ಮಣಕ್ಷತ್ರಿಯರನ್ನು ಅವಮಾನಗೊಳಿಸಿದರೆ ಪ್ರಜೆಗಳು ನಾಶವನ್ನೇ ಹೊಂದು -ತ್ತಾರೆ. ಏಕೆಂದರೆ ಬ್ರಾಹ್ಮಣಕ್ಷತ್ರಿಯರ ಸಮುದಾಯವು ಎಲ್ಲ ಧರ್ಮಗಳಿಗೂ ಮೂಲವೆಂದು ಹೇಳಲ್ಪಡುತ್ತದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಐಲಕಶ್ಯಪಸಂವಾದಂ ತಂ ನಿಬೋಧ ಯುಧಿಷ್ಠಿರ ||44||
ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಪುರೂರವನಿಗೂ ಕಶ್ಯಪರಿಗೂ ನಡೆದ ಸಂವಾದವನ್ನು ಹೇಳುತ್ತಾರೆ. ಅದನ್ನು ಕೇಳು.
ಐಲಃ
ಯದಾ ಹಿ ಬ್ರಹ್ಮ ಪ್ರಜಹಾತಿ ಕ್ಷತ್ರಂ
ಕ್ಷತ್ರಂ ಯದಾ ವಾ ಪ್ರಜಹಾತಿ ಬ್ರಹ್ಮ |
ಅನ್ವಗ್ ಬಲಂ ದಸ್ಯವಸ್ತದ್ ಭಜಂತೇಽ-
ಬಲ್ಯಂ ತಥಾ ತತ್ರ ವಿಯಂತಿ ಸಂತಃ ||45||
ಐಲ ಬ್ರಾಹ್ಮಣರು ಕ್ಷತ್ರಿಯನನ್ನು ತೊರೆದರೆ ಅಥವಾ ಕ್ಷತ್ರಿಯನೇ ಬ್ರಾಹ್ಮಣ- ರನ್ನು ತೊರೆದರೆ ಉತ್ತಮವಾದ ಬಲವು ಇವೆರಡರಲ್ಲಿ ಯಾವುದರಲ್ಲಿ ಇರುತ್ತದೆ? ಹಾಗೆಯೇ ಆಗ ದುರ್ಬಲತೆಯನ್ನು ಯಾರು ಧರಿಸುತ್ತಾರೆ?
ಕಶ್ಯಪಃ
ವ್ಯೃದ್ಧಂ ರಾಷ್ಟ್ರಂ ಭವತಿ ಕ್ಷತ್ರಿಯಸ್ಯ
ಬ್ರಹ್ಮ ಕ್ಷತ್ರಂ ಯತ್ರ ವಿರುದ್ಧ್ಯತೇ ಹ |
ಅನ್ವಗ್ ಬಲಂ ದಸ್ಯವಸ್ತದ್ ಭಜಂತೇ
ಅಬಲ್ಯಂ ತಥಾ ತತ್ರ ವಿಯಂತಿ ಸಂತಃ ||46||
ಬ್ರಾಹ್ಮಣ ಕ್ಷತ್ರಿಯರಿಗೆ ವಿರೋಧವುಂಟಾದರೆ ಕ್ಷತ್ರಿಯನ ರಾಷ್ಟ್ರವು ಸಮೃದ್ಧಿ- ಯನ್ನು ಕಳೆದುಕೊಳ್ಳುತ್ತದೆ. ದಸ್ಯುಗಳು ಅಧಿಕಬಲವುಳ್ಳವರಾಗುತ್ತಾರೆ. ಸಜ್ಜನರ ಬಲವು ಕಡಿಮೆಯಾಗುತ್ತದೆ.
ನೈಷಾಮುಕ್ಷಾ ವರ್ಧತೇ ನೋತ ಉಸ್ರಾ
ನ ಗರ್ಗರೀ ಮಥ್ಯತೇ ನೋ ಯಜಂತೇ |
ನೈಷಾಂ ಪುತ್ರಾ ವೇದಮಧೀಯತೇ ಚ
ಯದಾ ಬ್ರಹ್ಮ ಕ್ಷತ್ರಿಯಾ ಸಂತ್ಯಜಂತಿ ||47||
ಕ್ಷತ್ರಿಯರು ಬ್ರಾಹ್ಮಣರನ್ನು ತ್ಯಜಿಸಿದಾಗ ಅಂತಹ ರಾಜ್ಯದಲ್ಲಿ ಹೋರಿಗಳು ಅಭಿವೃದ್ಧಿಯನ್ನು ಮಾಡುವುದಿಲ್ಲ. ಧೇನುಗಳು ಹಾಲು ಕರೆಯುವುದಿಲ್ಲ. ಮೊಸರಿನ ಪಾತ್ರೆಗಳು ಮಥಿಸಲ್ಪಡುವುದಿಲ್ಲ. ಯಜ್ಞಗಳು ನಡೆಯುವುದಿಲ್ಲ. ಬ್ರಾಹ್ಮಣರ ಪುತ್ರರು ವೇದಾಧ್ಯಯನವನ್ನು ಮಾಡುವುದಿಲ್ಲ.
ನೈಷಾಮುಕ್ಷಾ ವರ್ಧತೇ ಜಾತು ಗೇಹೇ
ನಾಧೀಯತೇ ಸುಪ್ರಜಾ ನೋ ಯಜಂತೇ |
ಅಪಧ್ವಸ್ತಾ ದಸ್ಯುಭೂತಾ ಭವಂತಿ
ಯೇ ಬ್ರಾಹ್ಮಣಾಃ ಕ್ಷತ್ರಿಯಾನ್ ಸಂತ್ಯಜಂತಿ ||48||
ಅಲ್ಲಿ ಎತ್ತುಗಳು ಅಭಿವೃದ್ಧಿಯನ್ನು ಹೊಂದುವುದಿಲ್ಲ. ಒಳ್ಳೆಯ ವಂಶದ ಪ್ರಜೆ- ಗಳು ಅಧ್ಯಯನ ಮಾಡುವುದಿಲ್ಲ. ಯಾಗವನ್ನು ಮಾಡುವುದಿಲ್ಲ. ಬ್ರಾಹ್ಮಣರು ಕ್ಷತ್ರಿಯರನ್ನು ತ್ಯಾಗ ಮಾಡಿದರೆ ಪ್ರಜೆಗಳು ಧರ್ಮಮಾರ್ಗದಿಂದ ಧ್ವಸ್ತರಾಗಿ ದಸ್ಯು- ಗಳಂತೆ ಆಗುತ್ತಾರೆ.
ಏತೌ ಹಿ ನಿತ್ಯಸಂಯುಕ್ತಾವಿತರೇತರಧಾರಣೇ |
ಕ್ಷತ್ರಂ ಹಿ ಬ್ರಹ್ಮಣೋ ಯೋನಿರ್ಯೋನಿಃ ಕ್ಷತ್ರಸ್ಯ ಚ ದ್ವಿಜಾಃ ||49||
ಇವೆರಡು ವರ್ಣಗಳೂ ಪರಸ್ಪರಧಾರಣೆಗಾಗಿ ಯಾವಾಗಲೂ ಜೊತೆಗೂಡಿವೆ. ಕ್ಷತ್ರಿಯಯೋನಿಯು ಬ್ರಾಹ್ಮಣಯೋನಿಗೆ ಮೂಲವಾದದು. ಬ್ರಾಹ್ಮಣಯೋನಿಯು ಕ್ಷತ್ರಿಯಯೋನಿಗೆ ಮೂಲವಾದುದು.
ಉಭಾವೇತೌ ನಿತ್ಯಮಭಿಪ್ರಪನ್ನೌ
ಸಂಪ್ರಾಪತುರ್ಮಹತೀಂ ಶ್ರೀಪ್ರತಿಷ್ಠಾಮ್ |
ತಯೋಃ ಸಂಧಿರ್ಭಿದ್ಯತೇ ಚೇತ್ ಪುರಾಣಃ
ತತಃ ಸರ್ವಂ ಭವತಿ ಹಿ ಸಂಪ್ರಮೂಢಮ್ ||50||
ಇವೆರಡು ವರ್ಣಗಳೂ ಪರಸ್ಪರ ಸೌಹಾರ್ದದಿಂದ ಇದ್ದು, ದೊಡ್ಡ ಸಂಪತ್ತನ್ನು ಮತ್ತು ಪ್ರತಿಷ್ಠೆಯನ್ನೂ ಪಡೆದವು. ಪ್ರಾಚೀನಕಾಲದಿಂದ ಬಂದ ಅವರ ಸೌಹಾರ್ದ- ವು ಭಿನ್ನವಾದರೆ ಎಲ್ಲವೂ ಮೋಹವಶವಾಗುತ್ತದೆ.
ನಾತ್ರ ಪ್ಲವಂ ಲಭತೇ ಪಾರಗಾಮೀ
ಮಹಾಗಾಧೇ ನೌರಿವ ಸಂಪ್ರಣುನ್ನಾ |
ಚಾತುರ್ವರ್ಣ್ಯಂ ಭವತಿ ಚ ಸಂಪ್ರಮೂಢಂ
ತತಃ ಪ್ರಜಾಃ ಕ್ಷಯಸಂಸ್ಥಾ ಭವಂತಿ ||51||
ಅಂತಹ ಸ್ಥಳದಲ್ಲಿ ದೊಡ್ಡ ಸಮುದ್ರದಲ್ಲಿ ವಾಯುವಿನಿಂದ ಹೊಡೆಯಲ್ಪಡುವ ನೌಕೆಯಂತೆ ಕಾರ್ಯವನ್ನು ಆರಂಭಿಸಿದ ಯಾವುದೂ ಅಂತವನ್ನು ತಲಪುವುದಿಲ್ಲ. ಚಾತುರ್ವರ್ಣ್ಯದವರು ಬಹಳ ಮೂಢರಾಗುತ್ತಾರೆ. ಅನಂತರ ಪ್ರಜೆಗಳು ಕ್ಷಯವನ್ನು

ಹೊಂದುತ್ತಾರೆ.
ಬ್ರಹ್ಮವೃಕ್ಷೋ ರಕ್ಷ್ಯಮಾಣೋ ಮಧು ಹೇಮ ಚ ವರ್ಷತಿ |
ಅರಕ್ಷ್ಯಮಾಣಃ ಸತತಮಶ್ರು ಪಾಪಂ ಚ ವರ್ಷತಿ ॥52॥
ಬ್ರಹ್ಮವೆಂಬ ವೃಕ್ಷವು ಚೆನ್ನಾಗಿ ರಕ್ಷಿಸಲ್ಪಟ್ಟರೆ ಸುಖಸಂಪತ್ತುಗಳನ್ನು ಮಳೆಗರೆ- ಯುತ್ತದೆ. ರಕ್ಷಿಸದಿದ್ದರೆ ಸತತವಾಗಿ ಕಣ್ಣೀರಿನ ಮತ್ತು ಪಾಪಗಳ ಮಳೆಯನ್ನು ಸುರಿಸುತ್ತದೆ.
ಅಬ್ರಹ್ಮಚಾರೀ ಚರಣಾದಪೇತೋ
ಯದಾ ಬ್ರಹ್ಮಾಬ್ರಹ್ಮಣಿ ತ್ರಾಣಮಿಚ್ಛೇತ್ |
ಉತ್ಪಾದವತ್ ವರ್ಷತಿ ತತ್ರ ದೇವಃ
ತತ್ರಾಭೀಕ್ಷ್ಣಂ ದುಷ್ಪ್ರಭಾಶ್ಚಾವಿಶಂತಿ ॥53॥
ಯಾವಾಗ ಬ್ರಾಹ್ಮಣನು ಕ್ಷತ್ರಿಯನಿಂದ ರಕ್ಷಣೆಯನ್ನು ಬಯಸುವುದಿಲ್ಲವೋ ಅವನು ಬ್ರಾಹ್ಮಣಾಚಾರಹೀನನಾದ ಕ್ಷತ್ರಿಯನಾಗುತ್ತಾನೆ. ಅಲ್ಲಿ ದೇವರು ಉತ್ಪಾತ- ಗಳನ್ನು ಸೃಷ್ಟಿಸುತ್ತಾನೆ. ಅದರಿಂದ ಎಲ್ಲ ಕಡೆಯಲ್ಲಿ ದುಷ್ಪ್ರಭೆಯು ಆವರಿಸುತ್ತದೆ.
ಸ್ತ್ರಿಯಂ ಹತ್ವಾ ಬ್ರಾಹ್ಮಣಂ ವಾಪಿ ಪಾಪಃ
ಸಭಾಯಾಂ ಯತ್ರ ಲಭತೇಽನುವಾದಮ್ |
ರಾಜ್ಞಃ ಸಕಾಶೇ ನ ಬಿಭೇತಿ ಚಾಪಿ
ತತೋ ಭಯಂ ಜಾಯತೇ ಕ್ಷತ್ರಿಯಸ್ಯ ॥54॥
ಎಲ್ಲಿ ಪಾಪಿಯಾದವನು ಸ್ತ್ರೀಯರನ್ನು ಅಥವಾ ಬ್ರಾಹ್ಮಣರನ್ನು ಕೊಂದು ಸಭೆಯಲ್ಲಿ ರಾಜನ ಭಯವಿಲ್ಲದೇ ಹೊಗಳಿಕೆಯ ಮಾತುಗಳನ್ನು ಕೇಳುತ್ತಾನೆಯೋ ಆಗ ಅಲ್ಲಿ ಕ್ಷತ್ರಿಯನಿಗೆ ಭಯವುಂಟಾಗುತ್ತದೆ.
ಪಾಪೈಃ ಪಾಪೇ ಕ್ರಿಯಮಾಣೇಽತಿವೇಲಂ
ತತೋ ರುದ್ರೋ ಜಾಯತೇ ದೇವ ಏಷಃ |
ಪಾಪೈಃ ಪಾಪಾ ಸಂಜನಯಂತಿ ರುದ್ರಂ
ತತಃ ಸರ್ವಾನ್ ಸಾಧ್ವಸಾಧೂನ್ ಹಿನಸ್ತಿ ॥55॥
ಪಾಪಿಗಳು ಬಹಳ ಪಾಪಕಾರ್ಯವನ್ನು ಮಾಡಿದರೆ ರೋಗಪರಿಹಾರಕನಾದ ಈ ನಾರಾಯಣನು ಕೋಪಗೊಳ್ಳುತ್ತಾನೆ. ಪಾಪವನ್ನು ಮಾಡುವ ಪಾಪಿಗಳು ಅವನಿಗೆ ಕೋಪವನ್ನುಂಟುಮಾಡಿದಾಗ ಅವನು ಎಲ್ಲಾ ದುಷ್ಟರನ್ನೂ ಸಂಹಾರ ಮಾಡುತ್ತಾನೆ. (ಲಕ್ಷ್ಮಾಲಂಕಾರ)
ಐಲಃ
ಕುತೋ ರುದ್ರಃ ಕೀದೃಶೋ ವಾಪಿ ರುದ್ರಃ
ಸತ್ತ್ವೈಃ ಸತ್ತ್ವಂ ದೃಶ್ಯತೇ ವಧ್ಯಮಾನಮ್ |
ಏತದ್ ವಿದ್ವನ್ ಕಶ್ಯಪ ಮೇ ಪ್ರಚಕ್ಷ್ವ
ಯತೋ ರುದ್ರೋ ಜಾಯತೇ ದೇವ ಏಷಃ ॥56॥
ಐಲ ಈ ರುದ್ರನು ಎಲ್ಲಿಯವನು ಮತ್ತು ಎಂತಹವನು? ಪ್ರಜೆಗಳಿಂದ ಪ್ರಜೆಗಳು ವಧಿಸಲ್ಪಡುವುದು ಮಾತ್ರ ಕಾಣುವುದಷ್ಟೇ? ಎಲೈ ವಿದ್ವಾಂಸರಾದ ಕಶ್ಯಪರೇ! ಈ ರುದ್ರನೆನಿಸುವ ನಾರಾಯಣನು ಹೇಗೆ ಅಭಿವ್ಯಕ್ತನಾಗುವನೆಂದು ನನಗೆ ಹೇಳಿ.
ಕಶ್ಯಪಃ
ಆತ್ಮಾ ರುದ್ರೋ ಹೃದಯೇ ಮಾನವಾನಾಂ
ಸ್ವಂ ಸ್ವಂ ದೇಹಂ ಪರದೇಹಂ ಚ ಹಂತಿ |
ವಾತೋತ್ಪಾತೈಃ ಸದೃಶಂ ರುದ್ರಮಾಶು-
ರ್ದಾವೈರ್ಜೀಮೂತೈಃ ಸದೃಶಂ ರೂಪಮಸ್ಯ ॥57॥
ಕಶ್ಯಪರು ಈ ರುದ್ರನು ಸರ್ವರ ಅಂತರ್ಯಾಮಿ. ಮಾನವರ ಹೃದಯದಲ್ಲಿ ಇರುತ್ತಾನೆ. ತನಗೆ ಆಶ್ರಯವಾದ ಆ ದೇಹವನ್ನೂ ಮತ್ತು ತನಗೆ ಆಶ್ರಯವಾದ ಇನ್ನೊಂದು ದೇಹವನ್ನೂ ನಾಶ ಮಾಡುತ್ತಾನೆ. ಅವನು ಬಿರುಗಾಳಿಗೆ ಮತ್ತು ಉತ್ಪಾತಗಳಿಗೆ ಸದೃಶನಾದವನು. ಅವನ ರೂಪವು ದಾವಾಗ್ನಿಯ ಮತ್ತು ಮೋಡ- ಗಳ ರೂಪವನ್ನು ಹೋಲುತ್ತದೆ.
ವಾಯುವಿನಂತೆ ಸರ್ವತ್ರ ವ್ಯಾಪ್ತನಾಗಿರುತ್ತಾನೆ. ರೂಪೋಪದ್ರವಕಾರಿಗಳಾದ ದೈತ್ಯರನ್ನು ದಾವಾಗ್ನಿಯಂತೆ ನಾಶಗೊಳಿಸುತ್ತಾನೆ. ಜಗತ್ತಿನ ಉಗ್ರತೆಯನ್ನು ಶಮನ ಮಾಡುವ ಇಂದ್ರಾದಿ ದೇವತೆಗಳಲ್ಲಿ ಇದ್ದು ಮೋಡವು ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸಿ ಅವರಿಗೆ ದೈತ್ಯದಮನಶಕ್ತಿಯನ್ನು ಕೊಡುತ್ತಾನೆ. (ಲಕ್ಷ್ಮಾಲಂಕಾರ)
ಐಲಃ
ನ ವೈ ವಾತಂ ಪರಿವೃಣೋತಿ ಕಶ್ಚಿ-
ನ್ನ ಜೀಮೂತೋ ವರ್ಷತಿ ನೈವ ದಾವಃ |
ತಥಾಽಯುಕ್ತೋ ದೃಶ್ಯತೇ ಮಾನವೇಷು
ಕಾಮದ್ವೇಷಾದ್ ಬದ್ಧ್ಯತೇ ಮುಚ್ಯತೇ ಚ ॥58॥
ಐಲ ಯಾರೂ ಅಂತಹ ಬಿರುಗಾಳಿಯಂತಹ ವಾಯುವನ್ನು ಕಾಣುವುದಿಲ್ಲ. ಅಂತಹ ಮೋಡವು ಮಳೆಯನ್ನು ಸುರಿಸುವುದಿಲ್ಲ. ದಾವಾಗ್ನಿಯು ಕಂಡು ಬರು- ವುದಿಲ್ಲ. ರಾಗದ್ವೇಷಗಳಿಂದ ಜೀವರು ಬಂಧನಕ್ಕೆ ಮತ್ತು ಮೋಕ್ಷಕ್ಕೆ ಒಳಗಾಗು- ತ್ತಾರೆ. ನೀವು ಹೇಳಿದುದು ಮನುಷ್ಯರಲ್ಲಿ ಅಯುಕ್ತವಾಗಿ ಕಾಣುತ್ತದೆ.

ಕಶ್ಯಪಃ
ಯಥೈವ ಗೇಹೇ ಜಾತವೇದಾಃ ಪ್ರದೀಪ್ತಃ
ಕೃತ್ಸ್ನಂ ಗ್ರಾಮಂ ಪ್ರದಹೇತ್ ಸ ತ್ವರಾವಾನ್ |
ವಿಮೋಹನಂ ಕುರುತೇ ದೇವ ಏಷಃ
ತತಃ ಸರ್ವಂ ಸ್ಪೃಶ್ಯತೇ ಪುಣ್ಯಪಾಪೈಃ ॥59॥
ಕಶ್ಯಪರು ಹೇಗೆ ಮನೆಯಲ್ಲಿ ಜನಿಸಿದ ದೀಪ್ತವಾದ ಅಗ್ನಿಯು ಶೀಘ್ರವಾಗಿ ಸಮಸ್ತಗ್ರಾಮವನ್ನು ಸುಡುತ್ತದೆಯೋ ಅದರಂತೆ ದೇವನಾದ ನಾರಾಯಣನು ಜೀವರಿಗೆ ಮೋಹವನ್ನು ಉಂಟು ಮಾಡುತ್ತಾನೆ. ಅದರಿಂದ ಪರಮಾತ್ಮನಿಂದಲೇ ಎಲ್ಲರೂ ಪುಣ್ಯಪಾಪಗಳ ಸಂಬಂಧವನ್ನು ಪಡೆಯುತ್ತಾರೆ. ನಾನು ಕೇವಲ ದೃಷ್ಟಾಂತ- ರೂಪವಾಗಿ ವಾಯು ಮತ್ತು ದಾವಾಗ್ನಿಗಳನ್ನು ಹೇಳಿದೆನು.
ಐಲಃ
ಯದಿ ದಂಡಃ ಸ್ಪೃಶ್ಯತೇ ಪುಣ್ಯಪಾಪೈಃ
ಪಾಪೈಃ ಪಾಪೇ ಕ್ರಿಯಮಾಣೇಽವಿಶೇಷಾತ್ |
ಕಸ್ಯ ಹೇತೋಃ ಸುಕೃತಂ ನಾಮ ಕುರ್ಯಾದ್
ದುಷ್ಕೃತಂ ವಾ ಕಸ್ಯ ಹೇತೋರ್ನ ಕುರ್ಯಾತ್ ॥60॥
ಐಲ ಪಾಪಿಗಳು ಪಾಪವನ್ನು ಮಾಡಿದರೆ ಅವಿಶೇಷವಾಗಿ ಪುಣ್ಯಪಾಪ- ಗಳೆರಡನ್ನು ಮಾಡಿದವರಿಗೆ ದಂಡದಿಂದ ಶಿಕ್ಷೆ ಉಂಟಾಗುವುದಾದರೆ ಪುಣ್ಯವನ್ನು ಏಕೆ ಮಾಡಬೇಕು? ಪಾಪವನ್ನಾದರೂ ಏಕೆ ಬಿಡಬೇಕು? (ಪಾಪಮಿಶ್ರಿತವಾದ ಪುಣ್ಯವು ಅಪ್ರಯೋಜಕವಾದ್ದರಿಂದ ಪಾಪಮಿಶ್ರಿತವಲ್ಲದ ಕೇವಲ ಪುಣ್ಯವು ಹೇಗೆ ಉಂಟಾ- ಗುತ್ತದೆಂಬುದು ಪ್ರಶ್ನೆಯ ಅಭಿಪ್ರಾಯ - ಲಕ್ಷಾಲಂಕಾರ)
ಕಶ್ಯಪಃ
ಅಸಂತ್ಯಾಗಾತ್ ಪಾಪಕೃತಾಮಪಾಪಾಂ-
ಸ್ತುಲ್ಯೋ ದಂಡಃ ಸ್ಪೃಶ್ಯತೇ ಮಿಶ್ರಭಾವಾತ್ |
ಶುಷ್ಕೇಣಾರ್ದ್ರಂ ದಹ್ಯತೇ ಮಿಶ್ರಭಾವಾ-
ನ್ನ ಮಿಶ್ರಃ ಸ್ಯಾತ್ ಪಾಪಕೃದ್ಭಿಃ ಕಥಂಚಿತ್ ॥61॥
ಕಶ್ಯಪರು ಅಸಜ್ಜನರ ಜೊತೆಯಲ್ಲಿ ಬೆರೆಯುವುದರಿಂದ ಪಾಪವನ್ನು ಮಾಡದವರಿಗೂ ಪಾಪಿಗಳ ದರ್ಶನಸ್ಪರ್ಶನಾದಿಗಳಿಂದ ಕ್ಷಣಕ್ಷಣದಲ್ಲಿ ಪಾಪವು ಉಂಟಾಗಿಯೇ ಆಗುತ್ತದೆ. ಆದ್ದರಿಂದ ಅವರಿಗೆ ಪುಣ್ಯವು ವ್ಯರ್ಥವಾಗುತ್ತದೆ. ಆದ್ದ- ರಿಂದ ಪುಣ್ಯವನ್ನು ಸಂಪಾದಿಸಲು ಬಯಸುವವರು ದುರ್ಜನಸಂಗವನ್ನೇ ಬಿಡಬೇಕು ಎಂಬ ಅಭಿಪ್ರಾಯದಿಂದ ಈ ಶ್ಲೋಕವು ಹೊರಟಿದೆ. ಪಾಪಿಗಳ ಸಹವಾಸವನ್ನು ಬಿಡದಿರುವುದರಿಂದ ಅವರ ಜೊತೆಯಲ್ಲಿ ಮಿಶ್ರಣ- ವನ್ನು ಹೊಂದಿದ ಕಾರಣದಿಂದ ಪಾಪವನ್ನು ಮಾಡದವರಿಗೂ ಸಮಾನವಾದ ದಂಡವುಂಟಾಗುತ್ತದೆ. ಒಣಕಟ್ಟಿಗೆಯ ಜೊತೆಯಲ್ಲಿ ಬೆರೆತ ಹಸಿಯ ಕಟ್ಟಿಗೆಯೂ ಉರಿಯುತ್ತದೆ. ಆದ್ದರಿಂದ ಪಾಪಿಗಳ ಜೊತೆಯಲ್ಲಿ ಯಾವಾಗಲೂ ಮಿಶ್ರಣವನ್ನು ಹೊಂದಬಾರದು.
ಐಲಃ
ಸಾಧ್ವಸಾಧೂನ್ ಧಾರಯತೀಹ ಭೂಮಿಃ
ಸಾಧ್ವಸಾಧೂಂಸ್ತಾಪಯತೀಹ ಸೂರ್ಯಃ |
ಸಾಧ್ವಸಾಧೂನ್ ವಾತಯತೀಹ ವಾಯು-
ರಾಪಸ್ತಥಾ ಸಾಧ್ವಸಾಧೂನ್ ವಹಂತಿ ॥62॥
ಐಲ ಭೂಮಿಯು ಸಜ್ಜನರನ್ನೂ ಮತ್ತು ಅಸಜ್ಜನರನ್ನೂ ಧರಿಸುತ್ತದೆ. ಸೂರ್ಯನು ಸಜ್ಜನರಿಗೂ ಮತ್ತು ಅಸಜ್ಜನರಿಗೂ ಶಾಖವನ್ನು ಕೊಡುತ್ತಾನೆ. ವಾಯುವು ಸಜ್ಜನರ ಮೇಲೂ ಮತ್ತುಅಸಜ್ಜನರ ಮೇಲೂ ಬೀಸುತ್ತದೆ. ಜಲವು ಸಜ್ಜನರಿಗೂ ಮತ್ತು ಅಸಜ್ಜನರಿಗೂ ಹರಿಯುತ್ತದೆ. (ಪಾಪಿಷ್ಠರ ಸಹವಾಸದಿಂದ ಪುಣ್ಯಾತ್ಮರಿಗೂ ಹಾನಿಯುಂಟಾಗುವುದಾದರೆ ಭೂಮ್ಯಾದಿಗಳು ಏಕೆ ಪಾಪಿಷ್ಠರನ್ನು ಧರಿಸುತ್ತವೆ ಎಂಬುದು ಪ್ರಶ್ನೆಯ ಅಭಿಪ್ರಾಯ)
ಕಶ್ಯಪಃ
ಏವಮಸ್ಮಿನ್ ವರ್ತತೇ ಲೋಕ ಏವ
ನಾಮುತ್ರೈವಂ ವರ್ತತೇ ರಾಜಪುತ್ರ |
ಪ್ರೇತ್ಯೈತಯೋರಂತರವಾನ್ ವಿಶೇಷೋ
ಯೋ ವೈ ಪುಣ್ಯಂ ಚರತೇ ಯಶ್ಚ ಪಾಪಮ್ ॥63॥
ಕಶ್ಯಪರು ಎಲೈ ರಾಜಪುತ್ರನೇ! ಈ ಲೋಕದಲ್ಲಿ ಹೀಗೆಯೇ ನಡೆಯುತ್ತದೆ. ಆದರೆ ಪರಲೋಕದಲ್ಲಿ ಹೀಗೆ ನಡೆಯುವುದಿಲ್ಲ. ಮರಣಾನಂತರದಲ್ಲಿ ಪುಣ್ಯವನ್ನು ಮಾಡಿದವನಿಗೂ ಮತ್ತು ಪಾಪವನ್ನು ಮಾಡಿದವನಿಗೂ ವಿಶೇಷವಾದ ವ್ಯತ್ಯಾಸ- ವಿರುತ್ತದೆ.
ಪುಣ್ಯಸ್ಯ ಲೋಕೋ ಮಧುಮಾನ್ ಘೃತಾರ್ಚಿ-
ರ್ಹಿರಣ್ಯಜ್ಯೋತಿರಮೃತಸ್ಯ ನಾಭಿಃ |
ತತ್ರ ಪ್ರೇತ್ಯ ಮೋದತೇ ಪುಣ್ಯಕಾರೀ
ನ ತತ್ರ ಮೃತ್ಯುರ್ನ ಜರಾ ನೋತ ದುಃಖಮ್ ॥64॥
ಪುಣ್ಯದಿಂದ ಸಂಪಾದಿಸಲ್ಪಡುವ ಲೋಕವು ಸುಖಮಯವೂ, ಸತತಪ್ರಕಾಶ- ದಿಂದ ಕೂಡಿರುವುದೂ, ಸುವರ್ಣಮಯವಾದ ಜ್ಯೋತಿಯುಳ್ಳದ್ದೂ, ಅಮೃತಕ್ಕೆ ಆಶ್ರಯವೂ ಆಗಿರುತ್ತದೆ. ಪುಣ್ಯವನ್ನು ಮಾಡಿದವನು ಮರಣಾನಂತರದಲ್ಲಿ ಅಲ್ಲಿ ಸಂತೋಷ

ಪಡೆಯುತ್ತಾನೆ. ಅಲ್ಲಿ ಮೃತ್ಯುವಾಗಲೀ ಮುಪ್ಪಾಗಲೀ ದುಃಖವಾಗಲೀ ಇರುವುದಿಲ್ಲ. (ಇದು ಮೋಕ್ಷದ ವರ್ಣನೆ - ಲಕ್ಷ್ಯಾಲಂಕಾರ)
ಪಾಪಸ್ಯ ಲೋಕೋ ನಿರಯೋಽಪ್ರಕಾಶೋ
ನಿತ್ಯದುಃಖಂ ಶೋಕಭೂಯಿಷ್ಠಮೇವ |
ತತ್ರಾತ್ಮಾನಂ ಶೋಚತೇ ಪಾಪಕರ್ಮಾ
ಬಹ್ವೀಃ ಸಮಾಃ ಪ್ರಪತನ್ನಪ್ರತಿಷ್ಠಾಃ ||65||
ಪಾಪದಿಂದ ಸಂಪಾದಿಸಲ್ಪಡುವ ಲೋಕವು ನರಕರೂಪವಾದದ್ದು. ಕತ್ತಲೆ ರೂಪವಾಗಿರುತ್ತದೆ. ನಿತ್ಯದುಃಖ ಮತ್ತು ಶೋಕಪೂರ್ಣವಾಗಿರುತ್ತದೆ. ಪಾಪ- ಕರ್ಮವನ್ನು ಮಾಡಿದವನು ಅಲ್ಲಿ ಯಾವ ನೆಲೆಯೂ ಇಲ್ಲದೇ ಅನೇಕಾನೇಕ ವರ್ಷಗಳ ಕಾಲ ಶೋಕಪಡುತ್ತಾನೆ. (ಇದು ಅಂಧಂತಮಸ್ಸಿನ ವರ್ಣನೆ - ಲಕ್ಷ್ಯಾ- ಲಂಕಾರ).
ಮಿಥೋ ಭೇದಾದ್ ಬ್ರಾಹ್ಮಣಕ್ಷತ್ರಿಯಾಣಾಂ
ಪ್ರಜಾ ದುಃಖಂ ದುಃಸಹಂ ಚಾವಿಶಂತಿ |
ಏವಂ ಜ್ಞಾತ್ವಾ ಕಾರ್ಯ ಏವೇಹ ನಿತ್ಯಂ
ಪುರೋಹಿತೋ ನೈಕವಿದ್ಯೋ ನೃಪೇಣ ||66||
ಬ್ರಾಹ್ಮಣಕ್ಷತ್ರಿಯರಿಗೆ ಪರಸ್ಪರ ಭೇದವುಂಟಾದರೆ ಪ್ರಜೆಗಳು ದುಃಸಹವಾದ ದುಃಖವನ್ನು ಹೊಂದುತ್ತಾರೆ. ಇದನ್ನು ತಿಳಿದು ಯಾವಾಗಲೂ ರಾಜನಾದವನು ಅನೇಕ ವಿದ್ಯೆಗಳನ್ನು ಬಲ್ಲವನನ್ನೇ ಪುರೋಹಿತನನ್ನಾಗಿ ಮಾಡಬೇಕು.
ತಂ ಚೈವಾನ್ವಭಿಷಿಂಚೇತ ತಥಾ ಧರ್ಮೋ ವಿಧೀಯತೇ |
ಅಗ್ರ್ಯೋ ಹಿ ಬ್ರಾಹ್ಮಣಃ ಪ್ರೋಕ್ತಃ ಸರ್ವಸ್ಯೈವೇಹ ಧರ್ಮತಃ ||67||
ಅಂತಹವನನ್ನು ಪುರೋಹಿತನ ಸ್ಥಾನದಲ್ಲಿ ಅನುಕೂಲವಾಗಿ ಅಭಿಷೇಕ ಮಾಡ- ಬೇಕು. ಹಾಗೆ ಮಾಡುವುದು ಧರ್ಮವನ್ನು ಅಭಿವೃದ್ಧಿಪಡಿಸುತ್ತದೆ. ಧರ್ಮದ ದೃಷ್ಟಿ- ಯಿಂದ ಬ್ರಾಹ್ಮಣನು ಎಲ್ಲರಿಗಿಂತ ಶ್ರೇಷ್ಠನೆಂದು ಹೇಳಲ್ಪಡುತ್ತಾನೆ.
ಪೂರ್ವಂ ಹಿ ಬ್ರಾಹ್ಮಣಾಃ ಸೃಷ್ಟಾ ಇತಿ ಧರ್ಮವಿದೋ ವಿದುಃ |
ಜ್ಯೇಷ್ಠೇನಾಭಿಜನೇನಾಸ್ಯ ಪ್ರಾಪ್ತಂ ಸರ್ವಂ ಯದುತ್ತಮಮ್ ||68||
ಬ್ರಾಹ್ಮಣನು ಮೊದಲು ಸೃಷ್ಟನಾದವನು ಎಂದು ಧರ್ಮಜ್ಞರು ಹೇಳುತ್ತಾರೆ. ಜ್ಯೇಷ್ಠವಾದ ಜನ್ಮದಿಂದ ಬ್ರಾಹ್ಮಣನು ಭೂಮಿಯಲ್ಲಿರುವ ಉತ್ತಮವಾದುದೆಲ್ಲ- ವನ್ನೂ ಪಡೆಯುತ್ತಾನೆ.
ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ಬ್ರಾಹ್ಮಣಃ ಪ್ರಸೃತಾಗ್ರಭುಕ್ |
ಸರ್ವಂ ಶ್ರೇಷ್ಠಂ ವರಿಷ್ಠಂ ಚ ನಿವೇದ್ಯಂ ತಸ್ಯ ಧರ್ಮತಃ ||69||
ಆದ್ದರಿಂದ ಘೃತ ಮಧು ಮೊದಲಾದವುಗಳ ಅಗ್ರಭೋಜಿಯಾದ ಬ್ರಾಹ್ಮಣನು ಮಾನ್ಯನೂ ಪೂಜ್ಯನೂ ಆದವನು. ಶ್ರೇಷ್ಠವಾದ ಮತ್ತು ಉತ್ತಮವಾದ ಎಲ್ಲ ವಸ್ತುಗಳನ್ನೂ ಧರ್ಮದ ದೃಷ್ಟಿಯಿಂದ ಅವನಿಗೆ ನಿವೇದಿಸಬೇಕು.
ಅವಶ್ಯಮೇತತ್ ಕರ್ತವ್ಯಂ ರಾಜ್ಞಾ ಬಲವತಾಽಪಿ ಹಿ |
ಬ್ರಹ್ಮ ವರ್ಧಯತಿ ಕ್ಷತ್ರಂ ಕ್ಷತ್ರತೋ ಬ್ರಹ್ಮ ವರ್ಧತೇ |
ರಾಜ್ಞಃ ಸರ್ವಸ್ಯ ಚಾನ್ಯಸ್ಯ ಸ್ವಾಮೀ ರಾಜಪುರೋಹಿತಃ ||70||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಸಪ್ತತಿತಮೋಽಧ್ಯಾಯಃ ||75||
ರಾಜನು ಬಲಿಷ್ಠನಾದರೂ ಅವಶ್ಯವಾಗಿ ಇದನ್ನು ಮಾಡಲೇ ಬೇಕು. ಬ್ರಹ್ಮ- ಕುಲವು ಕ್ಷತ್ರಿಯಕುಲವನ್ನು ಅಭಿವೃದ್ಧಿ ಪಡಿಸುತ್ತದೆ. ಕ್ಷತ್ರಿಯಕುಲವು ಬ್ರಹ್ಮಕುಲವನ್ನು ಅಭಿವೃದ್ಧಿ ಪಡಿಸುತ್ತದೆ. ರಾಜನ ಉಳಿದ ಎಲ್ಲ ವಸ್ತುಗಳಿಗೂ ರಾಜಪುರೋಹಿತನು ಸ್ವಾಮಿಯಾಗುತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 75ನೆಯ ಅಧ್ಯಾಯವು ಮುಗಿಯಿತು
0

76. ಎಪ್ಪತ್ತಾರನೆಯ ಅಧ್ಯಾಯ
ಮುಚುಕುಂದಚರಿತಕಥನ, ಕ್ಷತ್ರಿಯನ ಬ್ರಹ್ಮಾಧೀನತ್ವಸಮರ್ಥನ
ಯುಧಿಷ್ಠಿರಃ
ಬ್ರಹ್ಮಕ್ಷತ್ರಸ್ಯ ಸಾಮರ್ಥ್ಯಂ ಕಥಿತಂ ತೇ ಪಿತಾಮಹ |
ಪುರೋಹಿತಪ್ರಭಾವಶ್ಚ ಲಕ್ಷಣಂ ಚ ಪುರೋಧಸಃ ||1||
ಇದಾನೀಂ ಶ್ರೋತುಮಿಚ್ಛಾಮಿ ಬ್ರಹ್ಮಕ್ಷತ್ರವಿನಿರ್ಣಯಮ್ |
ಬ್ರಹ್ಮಕ್ಷತ್ರಂ ಹಿ ಸರ್ವಸ್ಯ ಕಾರಣಂ ಜಗತಃ ಪರಮ್ |
ಯೋಗಕ್ಷೇಮೋ ಹಿ ರಾಷ್ಟ್ರಸ್ಯ ತಾಭ್ಯಾಮಾಯತ್ತ ಏವ ಹಿ ||2||
ಯುಧಿಷ್ಠಿರ ಪಿತಾಮಹನೇ! ನೀವು ಬ್ರಾಹ್ಮಣ ಮತ್ತು ಕ್ಷತ್ರಿಯರ ಸಾಮ- ರ್ಥ್ಯವನ್ನು ಪುರೋಹಿತರ ಪ್ರಭಾವ ಮತ್ತು ಲಕ್ಷಣಗಳನ್ನು ಹೇಳಿದ್ದೀರಿ. ಈಗ ಬ್ರಾಹ್ಮಣರ ಮತ್ತು ಕ್ಷತ್ರಿಯರ ಬಲಾಬಲಗಳ ನಿರ್ಣಯವನ್ನು ತಿಳಿಯಲು ಇಚ್ಛೆ ಪಡುತ್ತೇನೆ. ಜಗತ್ತಿಗೆ ಬ್ರಾಹ್ಮಣಕ್ಷತ್ರಿಯಸಮುದಾಯವು ಎಲ್ಲದಕ್ಕೂ ಶ್ರೇಷ್ಠವಾದ ಕಾರಣವಾಗಿದೆ. ರಾಷ್ಟ್ರದ ಯೋಗಕ್ಷೇಮಗಳು ಅವರಿಬ್ಬರನ್ನು ಅವಲಂಬಿಸಿವೆಯಷ್ಟೆ.
ಭೀಷ್ಮಃ

ಯೋಗಕ್ಷೇಮೋ ಹಿ ರಾಷ್ಟ್ರಸ್ಯ ರಾಜನ್ಯಾಯತ್ತ ಉಚ್ಯತೇ |
ಯೋಗಕ್ಷೇಮಶ್ಚ ರಾಜ್ಞೋಽಪಿ ಸಮಾಯತ್ತಃ ಪುರೋಹಿತೇ ॥3॥
ಯತ್ರಾದೃಷ್ಟಂ ಭಯಂ ಬ್ರಹ್ಮ ಪ್ರಜಾನಾಂ ಶಮಯತ್ಯುತ |
ದೃಷ್ಟಂ ಚ ರಾಜಾ ಬಾಹುಭ್ಯಾಂ ತದ್ ರಾಷ್ಟ್ರಂ ಸುಖಮೇಧತೇ ॥4॥
ಭೀಷ್ಮರು ರಾಷ್ಟ್ರದ ಯೋಗಕ್ಷೇಮವು ರಾಜನನ್ನು ಅವಲಂಬಿಸಿದೆ ಎಂದು ಹೇಳಲ್ಪಡುತ್ತದೆ. ರಾಜನ ಯೋಗಕ್ಷೇಮವಾದರೋ ಪುರೋಹಿತನನ್ನು ಅವಲಂಬಿ- ಸಿರುತ್ತದೆ. ಎಲ್ಲಿ ಬ್ರಾಹ್ಮಣರು ಪ್ರಜೆಗಳ ಭೂತಪ್ರೇತಾದಿಭಯಗಳನ್ನು ಪರಿಹಾರ ಮಾಡುತ್ತಾರೋ ದೃಷ್ಟವಾದ ಭಯಗಳನ್ನು ರಾಜನು ಬಾಹುಬಲದಿಂದ ಪರಿಹಾರ ಮಾಡುತ್ತಾನೆಯೋ ಅಲ್ಲಿ ರಾಷ್ಟ್ರವು ಸುಖವನ್ನು ಹೊಂದುತ್ತದೆ.
ಅತ್ರಾಪ್ಯುದಾರಹಂತೀಮಮಿತಿಹಾಸಂ ಪುರಾತನಮ್ |
ಮುಚುಕುಂದಸ್ಯ ಸಂವಾದಂ ರಾಜ್ಞೋ ವೈಶ್ರವಣಸ್ಯ ಚ ॥5॥
ಈ ವಿಷಯದಲ್ಲಿಯೂ ಸಹ ಮುಚುಕುಂದನ ಮತ್ತು ರಾಜನಾದ ಕುಬೇರನ ಸಂವಾದರೂಪವಾದ ಈ ಇತಿಹಾಸವನ್ನು ಹೇಳುತ್ತಾರೆ.
ಮುಚುಕುಂದೋ ವಿಜಿತ್ಯೇಮಾಂ ಪೃಥಿವೀಂ ಪೃಥಿವೀಪತಿಃ |
ಜಿಜ್ಞಾಸಮಾನಃ ಸ್ವಬಲಮಭ್ಯಯಾದಲಕಾಧಿಪಮ್ ॥6॥
ರಾಜನಾದ ಮುಚುಕುಂದನು ಈ ಭೂಮಿಯನ್ನು ಗೆದ್ದು ತನ್ನ ಬಲವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಅಲಕಾಧಿಪತಿಯಾದ ಕುಬೇರನ ಮೇಲೆ ದಂಡೆತ್ತಿ ಹೋದನು.
ತತೋ ವೈಶ್ರವಣೋ ರಾಜಾ ರಕ್ಷಾಂಸಿ ಸಮವಾಸೃಜತ್ |
ತೇ ಬಲಾನ್ಯವಮೃದ್ನಂತಃ ಪ್ರಾಚರಂಸ್ತಸ್ಯ ನೈರ್ಋತಾಃ ॥7॥
ರಾಜನಾದ ಕುಬೇರನು ರಾಕ್ಷಸರನ್ನು ನಿಯೋಜಿಸಿದನು. ಆ ರಾಕ್ಷಸರು ಮುಚು- ಕುಂದನ ಸೈನ್ಯದಲ್ಲಿ ಸಂಚರಿಸುತ್ತಾ, ಆ ಸೈನ್ಯವನ್ನು ನಾಶಗೊಳಿಸಿದರು.
ಸ ಹನ್ಯಮಾನೇ ಸೈನ್ಯೇ ಸ್ವೇ ಮುಚುಕುಂದೋ ನರಾಧಿಪಃ |
ಗರ್ಹಯಾಮಾಸ ವಿದ್ವಾಂಸಂ ಪುರೋಹಿತಮರಿಂದಮಃ ॥8॥
ತನ್ನ ಸೈನ್ಯವು ನಾಶವನ್ನು ಹೊಂದುತ್ತಿರಲು ಅರಿಂದಮನಾದ ಮುಚುಕುಂದ ರಾಜನು ವಿದ್ವಾಂಸನಾದ ತನ್ನ ಪುರೋಹಿತನನ್ನು ನಿಂದಿಸಿದನು.
ತತ ಉಗ್ರಂ ತಪಸ್ತಪ್ತ್ವಾ ವಸಿಷ್ಠೋ ಬ್ರಹ್ಮವಿತ್ತಮಃ |
ರಕ್ಷಾಂಸ್ಯಪಾವಧೀತ್ ತತ್ರ ಪಂಥಾನಂ ಚಾಪ್ಯವಿಂದತ ॥9॥
ಆಗ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ವಸಿಷ್ಠರು ಉಗ್ರವಾದ ತಪಸ್ಸನ್ನು ಮಾಡಿ, ರಾಕ್ಷಸರನ್ನು ಸಂಹರಿಸಿ, ಅಲ್ಲಿ ಮಾರ್ಗವನ್ನು ಮಾಡಿಕೊಟ್ಟರು.
ತತೋ ವೈಶ್ರವಣೋ ರಾಜಾ ಮುಚುಕುಂದಮಗರ್ಹಯತ್ |
ವಧ್ಯಮಾನೇಷು ಸೈನ್ಯೇಷು ವಚನಂ ಚೇದಮಬ್ರವೀತ್ ॥10॥
ತನ್ನ ಸೈನ್ಯವು ವಧಿಸಲ್ಪಡುತ್ತಿರಲು ರಾಜನಾದ ಕುಬೇರನು ಮುಚುಕುಂದನನ್ನು ನಿಂದಿಸಿ ಈ ಮಾತನ್ನು ಆಡಿದನು.
ತ್ವತ್ತೋ ಹಿ ಬಲಿನಃ ಪೂರ್ವೇ ರಾಜಾನಃ ಸಪುರೋಹಿತಾಃ |
ನ ಚೈವಂ ಸಮವರ್ತಂಸ್ತೇ ಯಥಾ ತ್ವಮಿಹ ವರ್ತಸೇ ॥11॥
ತೇ ಖಲ್ವಪಿ ಕೃತಾಸ್ತ್ರಾಶ್ಚ ಬಲವಂತಶ್ಚ ಭೂಮಿಪಾಃ |
ಆಗಮ್ಯ ಪರ್ಯುಪಾಸಂತೇ ಮಾಮೀಶಂ ಸುಖದುಃಖಯೋಃ ॥12॥
ನಿನಗಿಂತ ಪೂರ್ವಿಕರಾದ ಪುರೋಹಿತಸಹಿತರಾಜರು ನಿನಗಿಂತ ಬಲಿಷ್ಠರಾ- ಗಿದ್ದರು. ಅವರು ನೀನು ಈಗ ನಡೆದುಕೊಳ್ಳುತ್ತಿರುವಂತೆ ನಡೆದುಕೊಳ್ಳಲಿಲ್ಲ. ಆ ರಾಜರು ಅಸ್ತ್ರವಿದ್ಯೆಯನ್ನು ಹೊಂದಿ ಬಲಿಷ್ಠರಾಗಿದ್ದರು. ನನ್ನ ಬಳಿಗೆ ಬಂದು ಸುಖ- ದುಃಖಗಳಿಗೆ ಒಡೆಯನಾದ ನನ್ನನ್ನು ಉಪಾಸನೆ ಮಾಡುತ್ತಿದ್ದರು.
ಯದ್ಯಸ್ತಿ ಬಾಹುವೀರ್ಯಂ ತೇ ತದ್ ದರ್ಶಯಿತುಮರ್ಹಸಿ |
ಕಿಂ ಬ್ರಾಹ್ಮಣಬಲೇನ ತ್ವಮತಿಮಾತ್ರಂ ಪ್ರವರ್ತಸೇ ॥13॥
ನಿನಗೆ ಬಾಹುಬಲವಿದ್ದರೆ ಅದನ್ನು ತೋರಿಸು; ಬ್ರಾಹ್ಮಣರ ಬಲವನ್ನು ಆಶ್ರಯಿಸಿ ಏಕೆ ಬಹಳವಾಗಿ ಪ್ರವೃತ್ತಿಯನ್ನು ಮಾಡುತ್ತಿದ್ದೀಯೆ? (ಎಂದು ಕೇಳಿದನು)
ಮುಚುಕುಂದಸ್ತತಃ ಕ್ರುದ್ಧಃ ಪ್ರತ್ಯುವಾಚ ಧನೇಶ್ವರಮ್ |
ನ್ಯಾಯಪೂರ್ವಮಸಂರಬ್ಧಮಸಂಭ್ರಾಂತಮಿದಂ ವಚಃ ॥14॥
ಆಗ ಕೋಪಗೊಂಡ ಮುಚುಕುಂದನು ಧನೇಶ್ವರನನ್ನು ಕುರಿತು ನ್ಯಾಯಸಹಿತ- ವಾದ ಶಾಂತವಾದ ಭ್ರಾಂತವಲ್ಲದ ಈ ಮಾತನ್ನು ಉತ್ತರರೂಪವಾಗಿ ಹೇಳಿದನು.
ಬ್ರಹ್ಮಕ್ಷತ್ರಮಿದಂ ಸೃಷ್ಟಮೇಕಯೋನಿ ಸ್ವಯಂಭುವಾ |
ಪೃಥಗ್ ಬಲವಿಧಾನಂ ಚ ತಲ್ಲೋಕಂ ಪರಿರಕ್ಷತಿ ॥15॥
ಬ್ರಹ್ಮದೇವರು ಬ್ರಾಹ್ಮಣ ಮತ್ತು ಕ್ಷತ್ರಿಯರನ್ನು ಒಂದೇ ಯೋನಿಯವರನ್ನಾಗಿ ಸೃಷ್ಟಿಮಾಡಿದ್ದಾರೆ. ಅವರ ಬಲಗಳು ಬೇರೆ ಬೇರೆ ರೀತಿಯವು. ಆ ಬಲವು ಲೋಕ- ವನ್ನು ರಕ್ಷಿಸುತ್ತವೆ.
ತಪೋಮಂತ್ರಬಲಂ ನಿತ್ಯಂ ಬ್ರಾಹ್ಮಣೇಷು ಪ್ರತಿಷ್ಠಿತಮ್ |
ಅಸ್ತ್ರಬಾಹುಬಲಂ ನಿತ್ಯಂ ಕ್ಷತ್ರಿಯೇಷು ಪ್ರತಿಷ್ಠಿತಮ್ ॥16॥

ಬ್ರಾಹ್ಮಣರಲ್ಲಿ ನಿತ್ಯವೂ ತಪಸ್ಸು ಮತ್ತು ಮಂತ್ರಬಲವು ಪ್ರತಿಷ್ಠಿತವಾಗಿದೆ. ಕ್ಷತ್ರಿಯರಲ್ಲಿ ಅಸ್ತ್ರಬಲ ಮತ್ತು ಬಾಹುಬಲಗಳು ಪ್ರತಿಷ್ಠಿತವಾಗಿವೆ.
ತಾಭ್ಯಾಂ ಸಂಭೂಯ ಕರ್ತವ್ಯಂ ಪ್ರಜಾನಾಂ ಪರಿಪಾಲನಮ್ |
ತಥಾ ಚ ಮಾಂ ಪ್ರವರ್ತಂತಂ ಗರ್ಹಯಸ್ಯಲಕಾಧಿಪ ॥17॥
ಅವರಿಬ್ಬರೂ ಸೇರಿ ಪ್ರಜೆಗಳ ಪಾಲನೆಯನ್ನು ಮಾಡಬೇಕು. ಎಲೈ ಅಲಕಾಧಿ- ಪತಿಯೇ! ಆ ರೀತಿಯಲ್ಲಿ ಪ್ರವೃತ್ತನಾದ ನನ್ನನ್ನು ಏಕೆ ನಿಂದಿಸುತ್ತಿರುವೆ? (ಎಂದು ಕೇಳಿದನು.)
ತತೋಽಬ್ರವೀತ್ ವೈಶ್ರವಣೋ ರಾಜಾನಂ ಸಪುರೋಹಿತಮ್ |
ನಾಹಂ ರಾಜ್ಯಮನಿರ್ದಿಷ್ಟಂ ಕಸ್ಮೈಚಿದ್ ವಿದಧಾಮ್ಯುತ ॥18॥
ಆಗ ಕುಬೇರನು ಪುರೋಹಿತಸಹಿತನಾದ ಆ ರಾಜನನ್ನು ಕುರಿತು ಹೇಳಿದನು ನಾನು ಯಾರಿಗೆ ಎಷ್ಟು ನಿರ್ದಿಷ್ಟವಾಗಿದೆಯೋ ಅಷ್ಟೇ ರಾಜ್ಯವನ್ನು ಕೊಡುವೆನು. ಅದಕ್ಕಿಂತ ಅಧಿಕವಾಗಿ ಕೊಡುವುದಿಲ್ಲ.
ನಾಚ್ಛಿಂದೇ ಚಾಪಿ ನಿರ್ದಿಷ್ಟಮಿತಿ ಜಾನೀಹಿ ಪಾರ್ಥಿವ |
ಪ್ರಶಾಧಿ ಪೃಥಿವೀಂ ವೀರ ಮದ್ದತ್ತಾಮಖಿಲಾಮಿಮಾಮ್ ॥19॥
ನಿರ್ದಿಷ್ಟವಾದುದನ್ನು ನಾನು ಕಡಿಮೆಯೂ ಮಾಡುವುದಿಲ್ಲ ಎಂದು ತಿಳಿಯು- ವವನಾಗು. ಎಲೈ ರಾಜನೇ! ವೀರನೇ! ನಾನು ನೀಡಿದ ಅಖಿಲವಾದ ಈ ಭೂಮಿ- ಯನ್ನು ಆಳುವವನಾಗು.
ಮುಚುಕುಂದಃ
ನಾಹಂ ರಾಜ್ಯಂ ಭವದ್ದತ್ತಂ ಭೋಕ್ತುಮಿಚ್ಛಾಮಿ ಪಾರ್ಥಿವ |
ಬಾಹುವೀರ್ಯಜಿತಂ ರಾಜ್ಯಮಶ್ನೀಯಾಮಿತಿ ಕಾಮಯೇ ॥20॥
ಮುಚುಕುಂದ ಎಲೈ ರಾಜನೇ! ನೀನು ನೀಡಿದ ರಾಜ್ಯವನ್ನು ನಾನು ಭೋಗಿಸಲು ಬಯಸುವುದಿಲ್ಲ. ನನ್ನ ಬಾಹುಬಲದಿಂದ ಸಂಪಾದಿಸಿದ ರಾಜ್ಯವನ್ನೇ ನಾನು ಭೋಗಿಸಬೇಕೆಂದು ಆಶಿಸುತ್ತೇನೆ.
ಭೀಷ್ಮಃ
ತತೋ ವೈಶ್ರವಣೋ ರಾಜಾ ವಿಸ್ಮಯಂ ಪರಮಂ ಯಯೌ |
ಕ್ಷತ್ರಧರ್ಮೇ ಸ್ಥಿತಂ ದೃಷ್ಟ್ವಾ ಮುಚುಕುಂದಮಸಂಭ್ರಮಮ್ ॥21॥
ಭೀಷ್ಮರು ಆಗ ಮುಚುಕುಂದನು ಯಾವ ಭ್ರಾಂತಿಯಿಲ್ಲದೇ ಕ್ಷತ್ರಿಯ ಧರ್ಮ -ದಲ್ಲಿ ನಿರತನಾಗಿರುವುದನ್ನು ನೋಡಿ ರಾಜನಾದ ಕುಬೇರನು ಬಹಳ ವಿಸ್ಮಯವನ್ನು ಹೊಂದಿದನು.
ತತೋ ರಾಜಾ ಮುಚುಕುಂದಃ ಸೋಽನ್ವಶಾಸದ್ ವಸುಂಧರಾಮ್ |
ಬಾಹುವೀರ್ಯಾರ್ಜಿತಾಂ ಸಮ್ಯಕ್ ಕ್ಷತ್ರಧರ್ಮಮನುವ್ರತಃ ॥22॥
ಅನಂತರ ರಾಜನಾದ ಮುಚುಕುಂದನು ಕ್ಷತ್ರಿಯಧರ್ಮವನ್ನು ಪಾಲಿಸುವವ- ನಾಗಿ ಬಾಹುವೀರ್ಯದಿಂದ ಸಂಪಾದಿಸಿದ ಭೂಮಿಯನ್ನು ಚೆನ್ನಾಗಿ ಆಳಿದನು.
ಏವಂ ಯೋ ಬ್ರಹ್ಮವಿದ್ ರಾಜಾ ಬ್ರಹ್ಮಪೂರ್ವಂ ಪ್ರವರ್ತತೇ |
ಜಯತ್ಯವಿಜಿತಾಮುರ್ವೀಂ ಯಶಶ್ಚ ಮಹದಶ್ನುತೇ॥23॥
ಹೀಗೆ ಯಾವ ರಾಜನು ಬ್ರಾಹ್ಮಣರ ಸಾಮರ್ಥ್ಯವನ್ನು ತಿಳಿದು ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಪ್ರವೃತ್ತಿಮಾಡುತ್ತಾನೆಯೋ ಅವನು ಜಯಿಸದಿದ್ದ ಭೂಮಿ- ಯನ್ನೂ ಜಯಿಸುತ್ತಾನೆ. ದೊಡ್ಡ ಕೀರ್ತಿಯನ್ನು ಪಡೆಯುತ್ತಾನೆ.
ನಿತ್ಯೋದಕೋ ಬ್ರಾಹ್ಮಣಃ ಸ್ಯಾನ್ನಿತ್ಯಶಸ್ತ್ರಶ್ಚ ಕ್ಷತ್ರಿಯಃ |
ತಯೋರ್ಹಿ ಸರ್ವಮಾಯತ್ತಂ ಯತ್ಕಿಂಚಿಜ್ಜಗತೀಗತಮ್ ॥24॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಸಪ್ತತಿತಮೋಽಧ್ಯಾಯಃ ॥76॥
ಬ್ರಾಹ್ಮಣನು ನಿತ್ಯವೂ ಜಪ ತರ್ಪಣಶೀಲನಾಗಬೇಕು. ಕ್ಷತ್ರಿಯನು ನಿತ್ಯವೂ ಶಸ್ತ್ರಶೀಲನಾಗಬೇಕು. ಈ ಭೂಮಿಯಲ್ಲಿರುವ ಎಲ್ಲವೂ ಅವರಿಬ್ಬರನ್ನು ಅವಲಂಬಿ- ಸಿದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 76ನೆಯ ಅಧ್ಯಾಯವು ಮುಗಿಯಿತು
0
77. ಸಪ್ತಸಪ್ತತಿತಮೋಽಧ್ಯಾಯಃ
ಯುಧಿಷ್ಠಿರನನ್ನು ಕುರಿತು ರಾಜ್ಯಸ್ವೀಕಾರವು ಧರ್ಮವೆಂದು ಪ್ರತಿಪಾದನೆ
ಯುಧಿಷ್ಠಿರಃ
ಯಯಾ ವೃತ್ತ್ಯಾ ಮಹೀಪಾಲೋ ವಿವರ್ಧಯತಿ ಮಾನವಾನ್ |
ಪುಣ್ಯಾಂಶ್ಚ ಲೋಕಾನ್ ಜಯತಿ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ರಾಜನು ಯಾವ ನಡತೆಯಿಂದ ಪ್ರಜೆಗಳಿಗೆ ಅಭಿವೃದ್ಧಿಯನ್ನು ಮಾಡಿ ಪುಣ್ಯಲೋಕಗಳನ್ನು ಪಡೆಯುತ್ತಾನೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ದಾನಶೀಲೋ ಭವೇದ್ ರಾಜಾ ಯಜ್ಞಶೀಲಶ್ಚ ಭಾರತ |
ಉಪವಾಸತಪಃಶೀಲಃ ಪ್ರಜಾನಾಂ ಪಾಲನೇ ರತಃ ॥2॥

ಭೀಷ್ಮರು  ಭಾರತನೇ! ಪ್ರಜೆಗಳ ಪಾಲನೆಯಲ್ಲಿ ರತನಾದ ರಾಜನು ದಾನಶೀಲನಾಗಿರಬೇಕು. ಯಜ್ಞಶೀಲನಾಗಿರಬೇಕು. ಉಪವಾಸ-ತಪಃಶೀಲನಾಗಿರ- ಬೇಕು.
ಸರ್ವಾಶ್ಚೈವ ಪ್ರಜಾ ನಿತ್ಯಂ ರಾಜಾ ಧರ್ಮೇಣ ಪಾಲಯೇತ್ |
ಉತ್ಥಾನೇನ ಪ್ರದಾನೇನ ಪೂಜಯೇಚ್ಚೈವ ಧಾರ್ಮಿಕಾನ್ ॥3॥
ರಾಜನು ಎಲ್ಲಾ ಪ್ರಜೆಗಳನ್ನೂ ಧರ್ಮದಿಂದ ಪಾಲಿಸಬೇಕು. ಧಾರ್ಮಿಕರು ಬಂದಾಗ ಎದ್ದು ಅವರಿಗೆ ದಾನವನ್ನು ನೀಡಿ ಅವರನ್ನು ಪೂಜಿಸಬೇಕು.
ರಾಜ್ಞಾ ಹಿ ಪೂಜಿತೋ ಧರ್ಮಸ್ತತಃ ಸರ್ವತ್ರ ಪೂಜ್ಯತೇ |
ಯದ್ಯದಾಚರತೇ ರಾಜಾ ತತ್ ಪ್ರಜಾನಾಂ ಹಿ ರೋಚತೇ ॥4॥
ರಾಜನಿಂದ ಪೂಜಿಸಲ್ಪಡುವ ಧರ್ಮವು ಅನಂತರ ಎಲ್ಲರಿಂದಲೂ ಪೂಜಿಸಲ್ಪ- ಡುತ್ತದೆ. ರಾಜನು ಮಾಡುವುದೆಲ್ಲವೂ ಪ್ರಜೆಗಳಿಗೆ ಇಷ್ಟವಾಗುತ್ತದೆ.
ನಿತ್ಯಮುದ್ಯತದಂಡಶ್ಚ  ಭವೇನ್ಮೃತ್ಯುರಿವಾರಿಷು |
ನಿಹನ್ಯಾತ್ ಸರ್ವತೋ ದಸ್ಯೂನ್ನ ಕಾಮಾತ್ ಕಸ್ಯಚಿತ್ ಕ್ಷಮೇತ್ ॥5॥
ಉದ್ಯತದಂಡನಾಗಿ ಶತ್ರುಗಳ ವಿಷಯದಲ್ಲಿ ಮೃತ್ಯುವಿನಂತಿರಬೇಕು. ದಸ್ಯು- ಗಳನ್ನು ಸರ್ವತ್ರ ನಾಶಗೊಳಿಸಬೇಕು. ಪಕ್ಷಪಾತವನ್ನು ಮಾಡಿ ಯಾರಿಗೂ ಕ್ಷಮೆ- ಯನ್ನು ನೀಡಬಾರದು.
ಯಂ ಹಿ ಧರ್ಮಂ ಚರಂತೀಹ ಪ್ರಜಾ ರಾಜ್ಞಾ ಸುರಕ್ಷಿತಾಃ |
ಚತುರ್ಥಂ ತಸ್ಯ ಧರ್ಮಸ್ಯ ರಾಜಾ ಭಾರತ ವಿಂದತಿ ॥6॥
ರಾಜನಿಂದ ಸುರಕ್ಷಿತರಾದ ಪ್ರಜೆಗಳು ಈ ಲೋಕದಲ್ಲಿ ಯಾವ ಧರ್ಮವನ್ನು ಮಾಡುತ್ತಾರೆಯೋ, ಎಲೈ ಭಾರತನೇ! ರಾಜನು ಆ ಧರ್ಮದ ನಾಲ್ಕನೆಯ ಒಂದು ಭಾಗದ ಫಲವನ್ನು ಹೊಂದುತ್ತಾನೆ.
ಯದಧೀತೇ ಯದ್ ಯಜತೇ ಯದ್ ದದಾತಿ ಯದರ್ಚತಿ |
ರಾಜಾ ಚತುರ್ಥಭಾಕ್ ತಸ್ಯ ಪ್ರಜಾ ಧರ್ಮೇಣ ಪಾಲಯನ್ ॥7॥
ಪ್ರಜೆಗಳನ್ನು ಧರ್ಮದಿಂದ ಪಾಲಿಸುವ ರಾಜನು ಪ್ರಜೆಗಳು ಮಾಡಿದ ಅಧ್ಯಯನದ, ಯಾಗದ, ದಾನದ, ಪೂಜೆಯ ಫಲದ ನಾಲ್ಕನೆಯ ಒಂದು ಅಂಶ- ವನ್ನು ಪಡೆಯುತ್ತಾನೆ.
ಯದ್ ರಾಷ್ಟ್ರೇಽಕುಶಲಂ ಕಿಂಚಿದ್ ರಾಜ್ಞೋಽರಕ್ಷಯತಃ ಪ್ರಜಾಃ |
ಚತುರ್ಥಂ ತಸ್ಯ ಪಾಪಸ್ಯ ರಾಜಾ ಭಾರತ ವಿಂದತಿ |
ಅಪ್ಯಾಹುಃ ಸರ್ವಮೇವೇತಿ ಭೂಯೋಽರ್ಧಮಿತಿ ನಿಶ್ಚಯಃ ॥8॥
ಪ್ರಜೆಗಳನ್ನು ರಕ್ಷಿಸದ ರಾಜನ ರಾಷ್ಟ್ರದಲ್ಲಿ ಯಾವ ಅನ್ಯಾಯವು ನಡೆಯು- ತ್ತದೆಯೋ ಎಲೈ ಭಾರತನೇ! ರಾಜನು ಆ ಪಾಪದ ನಾಲ್ಕನೆಯ ಒಂದು ಭಾಗಕ್ಕೆ ಭಾಗಿಯಾಗುತ್ತಾನೆ. ಕೆಲವರು ಪೂರ್ಣವಾಗಿಯೇ ಭಾಗಿಯಾಗುವನೆಂದು ಹೇಳು- ತ್ತಾರೆ. ಆದರೆ ಆ ಪಾಪದ ಅರ್ಧಭಾಗಕ್ಕೆ ಭಾಗಿಯಾಗುವನೆಂಬುದು ನಿಶ್ಚಿತವಾ- ದುದು.
ಕರ್ಮಣಃ ಪೃಥಿವೀಪಾಲ ನೃಶಂಸೋಽನೃತವಾಗಪಿ |
ತಾದೃಶಾತ್ ಕಿಲ್ಬಿಷಾತ್ ರಾಜಾ ಶೃಣು ಯೇನ ಪ್ರಮುಚ್ಯತೇ ॥9॥
ಎಲೈ ರಾಜನೇ! ಕ್ರೂರಿಯೂ ಅನೃತವಚನನೂ ಆದ ರಾಜನು ಅಂತಹ ಪಾಪ- ಕರ್ಮದಿಂದ ನಿರ್ಮುಕ್ತನಾಗುವ ಬಗೆಯನ್ನು ಹೇಳು.
ಪ್ರತ್ಯಾಹರ್ತುಮಶಕ್ಯಂ ಸ್ಯಾದ್ ಧನಂ ಚೋರೈರ್ಹೃತಂ ಯದಿ |
ಸ್ವಕೋಶಾತ್ ತತ್ ಪ್ರದೇಯಂ ಸ್ಯಾದಶಕ್ತೇನೋಪಜೀವತಾ ॥10॥
ಪ್ರಜೆಗಳ ಧನವು ಅಪಹರಿಸಲ್ಪಟ್ಟಾಗ ರಾಜನು ಅದನ್ನು ಹಿಂದೆ ಪಡೆಯಲು ಸಾಧ್ಯವಾಗದಿದ್ದರೆ ಪ್ರಜೆಗಳ ಕರವನ್ನು ಉಪಜೀವಿಸುವ ರಾಜನು ತನ್ನ ಕೋಶದಿಂದ ಆ ಧನವನ್ನು ಪ್ರಜೆಗಳಿಗೆ ಕೊಡಬೇಕು.
ಸರ್ವವರ್ಣೈಃ ಸದಾ ರಕ್ಷ್ಯಂ ಬ್ರಹ್ಮಸ್ವಂ ಬ್ರಾಹ್ಮಣಾಸ್ತಥಾ |
ನ ಸ್ಥೇಯಂ ವಿಷಯೇ ತೇಷು ಯೋಽಪಕುರ್ಯಾದ್ ದ್ವಿಜಾತಿಷು ॥11॥
ಎಲ್ಲ ವರ್ಣದವರೂ ಬ್ರಾಹ್ಮಣರನ್ನೂ ಮತ್ತು ಬ್ರಾಹ್ಮಣರ ಸ್ವತ್ತನ್ನೂ ಸಂರ- ಕ್ಷಿಸಬೇಕು. ಬ್ರಾಹ್ಮಣರಿಗೆ ಅಪಕಾರವನ್ನು ಮಾಡುವ ರಾಜನ ದೇಶದಲ್ಲಿ ವಾಸಿಸ- ಬಾರದು.
ಬ್ರಹ್ಮಸ್ವೇ ರಕ್ಷ್ಯಮಾಣೇ ಹಿ ಸರ್ವಂ ಭವತಿ ರಕ್ಷಿತಮ್ |
ತೇಷಾಂ ಪ್ರಸಾದೇ ನಿರ್ವೃತ್ತೇ ಕೃತಕೃತ್ಯೋ ಭವೇನ್ನೃಪಃ ॥12॥
ಬ್ರಹ್ಮಸ್ವವು ರಕ್ಷಿತವಾದರೆ ಎಲ್ಲವೂ ರಕ್ಷಿತವಾಗುತ್ತದೆ. ಬ್ರಾಹ್ಮಣರು ಪ್ರಸನ್ನರಾದರೆ ರಾಜನು ಕೃತಕೃತ್ಯನಾಗುತ್ತಾನೆ.
ಪರ್ಜನ್ಯಮಿವ ಭೂತಾನಿ ಮಹಾದ್ರುಮಮಿವ ದ್ವಿಜಾಃ |
ನರಾಸ್ತಮುಪಜೀವಂತಿ ನೃಪಂ ಸರ್ವಾರ್ಥಸಾಧಕಮ್ ॥13॥
ಎಲ್ಲ ಪ್ರಾಣಿಗಳೂ ಮತ್ತು ಸಸ್ಯಗಳೂ ಮಳೆಯನ್ನು ಉಪಜೀವಿಸುವಂತೆ, ಪಕ್ಷಿಗಳು ಮಹಾವೃಕ್ಷವನ್ನು ಉಪಜೀವಿಸುವಂತೆ ಮನುಷ್ಯರು ಸರ್ವಾರ್ಥಸಾಧಕನಾದ ರಾಜನನ್ನು ಉಪಜೀವಿಸುತ್ತಾರೆ.
ನಹಿ ಕಾಮಾತ್ಮನಾ ರಾಜ್ಞಾ ಸತತಂ ಶಠಬುದ್ಧಿನಾ |
ನೃಶಂಸೇನಾತಿಲುಬ್ಧೇನ ಶಕ್ಯಾಃ ಪಾಲಯಿತುಂ ಪ್ರಜಾಃ ॥14॥
ಕಾಮಾತ್ಮನೂ, ಶಾಠ್ಯಬುದ್ಧಿಯುಳ್ಳವನೂ, ಕ್ರೂರಿಯೂ, ಲೋಭಿಯೂ ಆದ ರಾಜನಿಂದ ಪ್ರಜಾಪಾಲನೆಯು ಸಾಧ್ಯವಿಲ್ಲ.
ಯುಧಿಷ್ಠಿರಃ

ನಾಹಂ ಶಾಸ್ತುಂ ಸುಖಾನ್ವೇಷೀ ರಾಜ್ಯಮಿಚ್ಛಾಮ್ಯಪಿ ಕ್ಷಣಮ್ |
ಧರ್ಮಾರ್ಥಂ ರೋಚಯೇ ರಾಜ್ಯಂ ಧರ್ಮಶ್ಚಾತ್ರ ನ ವಿದ್ಯತೇ ॥15॥
ಯುಧಿಷ್ಠಿರ ನಾನು ಸುಖವನ್ನು ಪಡೆಯಲು ಬಯಸಿ ರಾಜ್ಯವನ್ನು ಪಾಲನೆ ಮಾಡಲು ಒಂದು ಕ್ಷಣವೂ ಇಚ್ಛಿಸುವುದಿಲ್ಲ. ಧರ್ಮದ ಸಲುವಾಗಿ ರಾಜ್ಯವನ್ನು ಆಶಿಸಬೇಕು. ಆದರೆ ರಾಜ್ಯಪಾಲನೆಯಲ್ಲಿ ಧರ್ಮವಿಲ್ಲ.
ತದಲಂ ಮಮ ರಾಜ್ಯೇನ ಯತ್ರ ಧರ್ಮೋ ನ ವಿದ್ಯತೇ |
ವನಮೇವ ಗಮಿಷ್ಯಾಮಿ ತಸ್ಮಾದ್ ಧರ್ಮಚಿಕೀರ್ಷಯಾ ॥16॥
ಧರ್ಮವಿಲ್ಲದಿರುವ ರಾಜ್ಯಪಾಲನೆಯು ನನಗೆ ಬೇಡ. ಆದ್ದರಿಂದ ಧರ್ಮಾ- ಚರಣೆಯನ್ನು ಬಯಸಿ ನಾನು ಕಾಡಿಗೇ ಹೋಗುವೆನು.
ತತ್ರ ಮೇಧ್ಯೇಷ್ವರಣ್ಯೇಷು ನ್ಯಸ್ತದಂಡೋ ಜಿತೇಂದ್ರಿಯಃ |
ಧರ್ಮಮಾರಾಧಯಿಷ್ಯಾಮಿ ಮುನಿರ್ಮೂಲಫಲಾಶನಃ ॥17॥
ಪವಿತ್ರವಾದ ಅರಣ್ಯಗಳಲ್ಲಿ ಎಲ್ಲ ದಂಡವನ್ನೂ ತ್ಯಜಿಸಿ, ಜಿತೇಂದ್ರಿಯನಾಗಿ, ಮೂಲಫಲ ಆಹಾರವುಳ್ಳವನಾಗಿ ಧರ್ಮವನ್ನು ಆರಾಧಿಸುವೆನು.
ಭೀಷ್ಮಃ
ವೇದಾಹಂ ತವ ಯಾ ಬುದ್ಧಿರಾನೃಶಂಸ್ಯಗುಣೈವ ಸಾ |
ನ ಚ ಶುದ್ಧಾನೃಶಂಸ್ಯೇನ ಶಕ್ಯಂ ಮಹದುಪಾಸಿತುಮ್ ॥18॥
ಭೀಷ್ಮರು ನಿನ್ನ ಬುದ್ಧಿಯನ್ನು ನಾನು ತಿಳಿದಿದ್ದೇನೆ. ಅದು ನಿನ್ನ ಮಾರ್ದವ ಗುಣ. ಶುದ್ಧ ಮಾರ್ದವಗುಣದಿಂದ ದೊಡ್ಡದನ್ನು ಸಂಪಾದಿಸಲು ಸಾಧ್ಯವಿಲ್ಲ.
ಅಪಿ ತು ತ್ವಾ ಮೃದುಂ ದಾಂತಮನ್ಯಾಯ್ಯಮತಿಧಾರ್ಮಿಕಮ್ |
ಕ್ಲೀಬಂ ಧರ್ಮಘೃಣಾಯುಕ್ತಂ ನ ಲೋಕೋ ಬಹು ಮನ್ಯತೇ ॥19॥
ಕ್ಷತ್ರಿಯಧರ್ಮದಿಂದ ರಹಿತನಾಗಿ, ಅತಿಧಾರ್ಮಿಕನಾಗಿ, ಮೃದುವಾಗಿ, ಇಂದ್ರಿಯನಿಗ್ರಹವುಳ್ಳವನಾಗಿ, ಧರ್ಮದ ಆಸೆಯಿಂದ ನಪುಂಸಕನಂತಿರುವ ನಿನ್ನನ್ನು ಲೋಕವು ಗೌರವಿಸುವುದಿಲ್ಲ. (ಲಕ್ಷ್ಯಾಲಂಕಾರ)
ರಾಜಧರ್ಮಾನವೇಕ್ಷಸ್ವ ಪಿತೃಪೈತಮಹೋಚಿತಾನ್ |
ನೈತದ್ ರಾಜ್ಞಾಮಥೋ ವೃತ್ತಂ ಯಥಾ ತ್ವಂ ಸ್ಥಾತುಮಿಚ್ಛಸಿ ॥20॥
ಪಿತೃಪಿತಾಮಹರು ಅನುಸರಿಸಿದ ರಾಜಧರ್ಮಗಳನ್ನು ನೋಡು; ನೀನು ಹೇಗೆ ಮಾಡಬೇಕೆಂದು ಬಯಸುತ್ತೀಯೋ ಅದು ರಾಜರ ನಡತೆಯಲ್ಲ.
ನ ಹಿ ವೈಕ್ಲವ್ಯಸಂಸೃಷ್ಟಮಾನೃಶಂಸ್ಯಮಿಹಾಸ್ಥಿತಃ |
ಪ್ರಜಾಪಾಲನಸಂಭೂತಂ ಪ್ರಾಪ್ತಾ ಧರ್ಮಫಲಂ ಹ್ಯಸಿ ॥21॥
ಮನಸ್ಸಿನಲ್ಲಿ ಭಯಗ್ರಸ್ತನಾಗಿ ಮಾರ್ದವವನ್ನು ಹೊಂದಿದ ರಾಜನಾದ ನೀನು ಪ್ರಜಾಪಾಲನೆಯಿಂದ ಉಂಟಾಗುವ ಧರ್ಮಫಲವನ್ನು ಹೊಂದುವುದಿಲ್ಲ.
ನ ಹ್ಯೇತಾಮಾಶಿಷಂ ಪಾಂಡುರ್ನ ಚ ಕುಂತ್ಯನ್ವಯಾಚತ |
ನ ಚೈತಾಂ ಪ್ರಾಜ್ಞತಾಂ ತಾತ ಯಯಾ ಚರಸಿ ಮೇಧಯಾ ॥22॥
ಪಾಂಡುವಾಗಲೀ, ಅಥವಾ ಕುಂತಿಯಾಗಲೀ ಇಂತಹ ಒಂದು ಆಶಂಸನೆಯನ್ನು ಮಾಡಲಿಲ್ಲ. ಎಲೈ ಪ್ರೀತಿಪಾತ್ರನೇ! ನೀನು ನಿನ್ನ ಬುದ್ಧಿಯಿಂದ ಏನು ಮಾಡಲು ನಿರ್ಧರಿಸಿದ್ದೀಯೋ ಅದು ವಿವೇಕವಲ್ಲ. (ಅದನ್ನೂ ಪಾಂಡುಕುಂತಿಯರು ಆಶಿಸ- ಲಿಲ್ಲ).
ಶೌರ್ಯಂ ಬಲಂ ಚ ಸತ್ತ್ವಂ ಚ ಪಿತಾ ತವ ಸದಾಬ್ರವೀತ್ |
ಮಾಹಾತ್ಮ್ಯಂ ಬಲಮೌದಾರ್ಯಂ ತವ ಕುಂತ್ಯನ್ವಯಾಚತ ॥23॥
ನಿನ್ನ ತಂದೆಯು ಶೌರ್ಯ, ಬಲ ಮತ್ತು ಧೈರ್ಯಗಳನ್ನು ಯಾವಾಗಲೂ ಹೇಳುತ್ತಿದ್ದನು. ಕುಂತಿಯು ಮಾಹಾತ್ಮ್ಯವನ್ನು, ಬಲವನ್ನು ಮತ್ತು ಔದಾರ್ಯವನ್ನು ಬೇಡುತ್ತಿದ್ದಳು.
ನಿತ್ಯಂ ಸ್ವಾಹಾ ಸ್ವಧಾ ನಿತ್ಯಮುಭೇ ಮಾನುಷದೈವತೇ |
ಪುತ್ರೇಷ್ವಾಶಾಸತೇ ನಿತ್ಯಂ ಪಿತರೋ ದೈವತಾನಿ ಚ ॥24॥
ಪಿತೃಗಳು ಮತ್ತು ದೇವತೆಗಳು ತಮ್ಮ ಪುತ್ರರಲ್ಲಿ ಯಾವಾಗಲೂ ದೇವತಾ- ಸಂಬಂಧಿಯಾದ ಸ್ವಾಹಾಕಾರಗಳನ್ನು ಪಿತೃಸಂಬಂಧಿಯಾದ ಸ್ವಧಾಕಾರಗಳನ್ನು ಆಶಿಸುತ್ತಾರೆ.
ದಾನಮಧ್ಯಯನಂ ಯಜ್ಞಃ ಪ್ರಜಾನಾಂ ಪರಿಪಾಲನಮ್ |
ಧರ್ಮಮೇತಮಧರ್ಮಂ ವಾ ಜನ್ಮನೈವಾಭ್ಯಜಾಯಥಾಃ ॥25॥
ದಾನ, ಅಧ್ಯಯನ, ಯಜ್ಞ, ಪ್ರಜಾಪಲನೆ ಇವು ಧರ್ಮವಾಗಲೀ ಅಥವಾ ಅಧರ್ಮವಾಗಲೀ ನೀನು ಜನ್ಮದಿಂದಲೇ ಅದನ್ನು ಪಡೆದು ಹುಟ್ಟಿದ್ದೀಯೆ.
ಕಾಲೇ ಧುರಿ ನಿಯುಕ್ತಾನಾಂ ವಹತಾಂ ಭಾರ ಆಹಿತೇ |
ಸೀದತಾಮಪಿ ಕೌಂತೇಯ ನ ಕೀರ್ತಿರವಸೀದತಿ ॥26॥
ಎಲೈ ಕೌಂತೇಯನೇ! ಭಾರವನ್ನು ಹೊತ್ತು ನಡೆಯುವ ರಾಜರು ಕಾಲಕ್ರಮ- ದಲ್ಲಿ ನಾಶವನ್ನು ಹೊಂದಿದರೂ ಅವರ ಕೀರ್ತಿಯು ನಾಶವನ್ನು ಹೊಂದುವುದಿಲ್ಲ.
ಸಮಂತತೋ ವಿನಿಯತೋ ವಹತ್ಯಸ್ಖಲಿತೋ ಹಿ ಯಃ |
ನಿರ್ದೋಷಕರ್ಮವಚನಾತ್ ಸಿದ್ಧಿಃ ಕರ್ಮಣ ಏವ ಸಾ ॥27॥

ಎಲ್ಲ ರೀತಿಯಿಂದಲೂ ನಿಯಮಬದ್ಧನಾಗಿ ಎಡವದೇ ಅಂತಹ ಪ್ರಜಾ- ಪಾಲನೆಯ ಭಾರವನ್ನು ಹೊತ್ತು ನಡೆಯುವ ರಾಜನು ಶತ್ರುಶಿಕ್ಷಣಾದಿಗಳು ನಿರ್ದೋಷವಾದವುಗಳು ಎಂಬ ವಚನದ ಬಲದಿಂದ ತಾನು ಮಾಡುವ ಆ ಕರ್ಮ- ದಿಂದ ಸಿದ್ಧಿಯನ್ನು ಪಡೆಯುತ್ತಾನೆ.
ನೈಕಾಂತವಿನಿಪಾತೇನ ವಿಚಚಾರೇಹ ಕಶ್ಚನ |
ಧರ್ಮೀ ಗೃಹೀ ವಾ ರಾಜಾ ವಾ ಬ್ರಹ್ಮಚಾರ್ಯಥ ವಾ ಪುನಃ ॥28॥
ಧರ್ಮವನ್ನು ಆಚರಿಸುವ ರಾಜನಾಗಲೀ, ಗೃಹಸ್ಥನಾಗಲೀ ಅಥವಾ ಬ್ರಹ್ಮಚಾರಿ -ಯಾಗಲೀ ಒಂದೇ ಕಾರ್ಯವನ್ನು ಮಾಡುತ್ತಾ ಮರಣದವರೆಗೂ ಹಠದಿಂದ ಅದರಲ್ಲಿಯೇ ಉಳಿದಿರುವುದಿಲ್ಲ.
ಅಲ್ಪಂ ತು ಸಾಧುಭೂಯಿಷ್ಠಂ ಯತ್ ಕರ್ಮೋದಾರಮೇವ ತತ್ |
ಕೃತಮೇವಾಕೃತಾಚ್ಛ್ರೇಯೋ ನ ಪಾಪೀಯೋಽಸ್ತ್ಯಕರ್ಮಣಃ ॥29॥
ಸತ್ಫಲವನ್ನು ಕೊಡುವ ಉದಾರವಾದ ಕರ್ಮವು ಅಲ್ಪವಾದರೂ ಕರ್ಮವನ್ನು ಮಾಡದಿರುವುದಕ್ಕಿಂತ ಅದು ಶ್ರೇಷ್ಠವಾದುದು. ಕರ್ಮವನ್ನು ಮಾಡದಿರುವುದಕ್ಕಿಂತ ಪಾಪತರವಾದುದು ಇನ್ನೊಂದು ಇಲ್ಲ.
ಯದಾ ಕುಲೀನೋ ಧರ್ಮಜ್ಞಃ ಪ್ರಾಪ್ನೋತ್ಯೈಶ್ವರ್ಯಮುತ್ತಮಮ್ |
ಯೋಗಕ್ಷೇಮಸ್ತದಾ ರಾಜನ್ ಕುಶಲಾಯೈವ ಕಲ್ಪತೇ ॥30॥
ಎಲೈ ರಾಜನೇ! ಕುಲೀನನೂ ಧರ್ಮಜ್ಞನೂ ಆದ ರಾಜನು ಒಳ್ಳೆಯ ಐಶ್ವ- ರ್ಯವನ್ನು ಪಡೆದರೆ ಆಗ ಪ್ರಜೆಗಳ ಯೋಗಕ್ಷೇಮವೆಲ್ಲವೂ ಕುಶಲವೇ ಆಗುತ್ತವೆ.
ದಾನೇನಾನ್ಯಂ ಬಲೇನಾನ್ಯಮನ್ಯಂ ಸೂನೃತಯಾ ಗಿರಾ |
ಸರ್ವತಃ ಪರಿಗೃಹ್ಣೀಯಾತ್ ರಾಜ್ಯಂ ಪ್ರಾಪ್ಯೇಹ ಧಾರ್ಮಿಕಃ ॥31॥
ಧಾರ್ಮಿಕನಾದ ರಾಜನು ರಾಜ್ಯವನ್ನು ಪಡೆದು ಕೆಲವರನ್ನು ದಾನದಿಂದಲೂ, ಕೆಲವರನ್ನು ಬಲದಿಂದಲೂ, ಕೆಲವರನ್ನು ಒಳ್ಳೆಯ ಮಾತುಗಳಿಂದಲೂ ಎಲ್ಲ ಕಡೆಗಳಿಂದಲೂ ಸಂಗ್ರಹಿಸಬೇಕು.
ಯೇ ಹಿ ವೈದ್ಯಾಃ ಕುಲೇ ಜಾತಾ ಅವೃತ್ತಿಭಯಪೀಡಿತಾಃ |
ಪ್ರಾಪ್ಯತೃಪ್ತಾಃ ಪ್ರತಿಷ್ಠಂತಿ ಧರ್ಮಃ ಕೋಽಭ್ಯಧಿಕಸ್ತತಃ ॥32॥
ಸತ್ಕುಲದಲ್ಲಿ ಪ್ರಸೂತರಾದ ಜೀವನೋಪಾಯವಿಲ್ಲದೆ ಭಯದಿಂದ ಪೀಡಿತ- ರಾದ ವಿದ್ಯಾವಂತರು ಎಲ್ಲಿ ತಾವು ಪಡೆಯಬೇಕಾದುದನ್ನು ಯದೃಚ್ಛಯಾ ಪಡೆದು ತೃಪ್ತರಾಗಿರುತ್ತಾರೆಯೋ ರಾಜನಿಗೆ ಅದಕ್ಕಿಂತ ದೊಡ್ಡ ಧರ್ಮವು ಯಾವುದು?
ಯುಧಿಷ್ಠಿರಃ
ಕಿಂ ತತಃ ಪರಮಂ ಸ್ವರ್ಗ್ಯಂ ಕಾ ತತಃ ಪ್ರೀತಿರುತ್ತಮಾ |
ಕಿಂ ತತಃ ಪರಮೈಶ್ವರ್ಯಂ ಬ್ರೂಹಿ ಮೇ ಯದಿ ಮನ್ಯಸೇ ॥33॥
ಯುಧಿಷ್ಠಿರ ವೈರಾಗ್ಯಕ್ಕಿಂತಲೂ ಸ್ವರ್ಗಸಾಧಕವಾದುದು ಯಾವುದು? ವೈರಾಗ್ಯಕ್ಕಿಂತಲೂ ಸುಖ(ಪ್ರೀತಿ)ಜನಕವಾದುದು ಯಾವುದು? ವೈರಾಗ್ಯಕ್ಕಿಂತಲೂ ದೊಡ್ಡ ಐಶ್ವರ್ಯವ್ಯಾವುದು? ಅಂತಹದು ಏನಾದರೂ ಇದ್ದರೆ ನನಗೆ ಹೇಳು?
ಭೀಷ್ಮಃ
ಯಸ್ಮಿನ್ ಪ್ರತಿಷ್ಠಿತಾಃ ಸಮ್ಯಕ್ ಕ್ಷೇಮಂ ವಿಂದಂತಿ ತತ್ಕ್ಷಣಮ್ |
ಸ ಸ್ವರ್ಗಜಿತ್ತಮೋಽಸ್ಮಾಕಂ ಸತ್ಯಮೇತದ್ ಬ್ರವೀಮಿ ತೇ ॥34॥
ಭೀಷ್ಮರು ಯಾವನು ರಾಜ್ಯಪಾಲನೆಯನ್ನು ಮಾಡಿದರೆ ಪ್ರಜೆಗಳು ತಮ್ಮ ಭಯವನ್ನು ಕಳೆದುಕೊಂಡು ತತ್ಕ್ಷಣದಲ್ಲಿಯೇ ಕ್ಷೇಮವನ್ನು ಹೊಂದುತ್ತಾರೆಯೋ ಅಂತಹ ರಾಜನು ನನ್ನ ದೃಷ್ಟಿಯಲ್ಲಿ ಸ್ವರ್ಗವನ್ನು ಜಯಿಸಿದವರಲ್ಲಿ ಅತ್ಯಂತ ಶ್ರೇಷ್ಠ- ನಾದವನು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ತ್ವಮೇವ ಪ್ರೀತಿಮಾಂಸ್ತಸ್ಮಾತ್ ಕುರೂಣಾಂ ಕುರುಸತ್ತಮ |
ಭವ ರಾಜಾ ಜಯ ಸ್ವರ್ಗಂ ಸತೋ ರಕ್ಷಾಸತೋ ಜಹಿ ॥35॥
ಎಲೈ ಕುರುಸತ್ತಮನೇ! ನೀನೇ ಸಂತೋಷದಿಂದ ಕುರುಗಳಿಗೆ ರಾಜನಾಗು. ಸ್ವರ್ಗವನ್ನು ಜಯಿಸು. ಸಜ್ಜನರನ್ನು ರಕ್ಷಿಸು. ದುಷ್ಟರನ್ನು ವಿನಾಶಗೊಳಿಸು.
ಅನು ತ್ವಾ ತಾತ ಜೀವಂತು ಸುಹೃದಃ ಸಾಧುಭಿಃ ಸಹ |
ಪರ್ಜನ್ಯಮಿವ ಭೂತಾನಿ ಸ್ವಾದುದ್ರುಮಮಿವಾಂಡಜಾಃ ॥36॥
ಎಲೈ ಪ್ರೀತಿಪಾತ್ರನೇ! ಎಲ್ಲ ಪ್ರಾಣಿಗಳು ಮತ್ತು ಸಸ್ಯಗಳು ಪರ್ಜನ್ಯನನ್ನು ಉಪಜೀವಿಸುವಂತೆ, ಪಕ್ಷಿಗಳು ಒಳ್ಳೆಯ ಹಣ್ಣಿನ ಮರವನ್ನು ಉಪಜೀವಿಸುವಂತೆ, ಸುಹೃಜ್ಜನರು ಮತ್ತು ಸಜ್ಜನರು ನಿನ್ನನ್ನು ಉಪಜೀವಿಸಲಿ.
ಧೃಷ್ಟಂ ಶೂರಂ ಪ್ರಹರ್ತಾರಮನೃಶಂಸಂ ಜಿತೇಂದ್ರಿಯಮ್ |
ವತ್ಸಲಂ ಸಂವಿಭಕ್ತಾರಮನು ಜೀವಂತು ತ್ವಾಂ ಜನಾಃ ॥37॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತಸಪ್ತತಿತಮೋಽಧ್ಯಾಯಃ ॥77॥
ಧೈರ್ಯಶಾಲಿಯೂ, ಶೂರನೂ, ದುಷ್ಟರನ್ನು ಶಿಕ್ಷಿಸುವವನೂ, ಮೃದುವೂ, ಜಿತೇಂದ್ರಿಯನೂ, ಪ್ರಜಾವತ್ಸಲನೂ, ಐಶ್ವರ್ಯವನ್ನು ಪ್ರಜೆಗಳಿಗೆ ಹಂಚಿ ಭೋಗಿ- ಸುವವನೂ ಆದ ನಿನ್ನನ್ನು ಪ್ರಜೆಗಳು ಉಪಜೀವಿಸಲಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 77ನೆಯ ಅಧ್ಯಾಯವು ಮುಗಿಯಿತು
0

78. ಎಪ್ಪತ್ತೆಂಟನೆಯ ಅಧ್ಯಾಯ
ಬ್ರಾಹ್ಮಣರ ಪ್ರಭೇದಕಥನ
ಯುಧಿಷ್ಠಿರಃ
ಸ್ವಕರ್ಮಣ್ಯಪರೇ ಯುಕ್ತಾಸ್ತಥೈವಾನ್ಯೇ ವಿಕರ್ಮಣಿ |
ತೇಷಾಂ ವಿಶೇಷಮಾಚಕ್ಷ್ವ ಬ್ರಾಹ್ಮಣಾನಾಂ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ ಕೆಲವರು ಬ್ರಾಹ್ಮಣರು ಸ್ವಕರ್ಮದಲ್ಲಿಯೂ, ಇನ್ನು ಕೆಲವರು ವಿಕರ್ಮದಲ್ಲಿಯೂ ನಿರತರಾಗಿರುತ್ತಾರೆ. ಅಂತಹ ಬ್ರಾಹ್ಮಣರ ವಿಶೇಷವನ್ನು ಹೇಳು.
ಭೀಷ್ಮಃ
ವಿದ್ಯಾಲಕ್ಷಣಸಂಪನ್ನಾಃ ಸರ್ವತ್ರಾಮ್ನಾಯದರ್ಶಿನಃ |
ಏತೇ ಬ್ರಹ್ಮಸಮಾ ರಾಜನ್ ಬ್ರಾಹ್ಮಣಾಃ ಪರಿಕೀರ್ತಿತಾಃ ॥2॥
ಭೀಷ್ಮರು ಎಲೈ ರಾಜನೇ! ವಿದ್ಯಾಲಕ್ಷಣಸಂಪನ್ನರಾಗಿ, ಸರ್ವತ್ರ ವೇದಗಳನ್ನು ಪ್ರದರ್ಶಿಸುವ ಬ್ರಾಹ್ಮಣರು ಬ್ರಹ್ಮಸಮರು ಎಂದು ಹೇಳಲ್ಪಡುತ್ತಾರೆ.
ಋಗ್ಯಜುಃಸಾಮಸಂಪನ್ನಾಃ ಸ್ವೇಷು ಕರ್ಮಸ್ವವಸ್ಥಿತಾಃ |
ಏತೇ ದೇವಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥3॥
ಋಗ್ಯಜುಃಸಾಮವೇದಸಂಪನ್ನರಾಗಿ ತಮ್ಮ ಕರ್ಮಗಳಲ್ಲಿ ನಿರತರಾದ ಬ್ರಾಹ್ಮಣ- ರು ಎಲೈ ರಾಜನೇ! ದೇವಸಮರಾಗುತ್ತಾರೆ.
ಋತ್ವಿಕ್ ಪುರೋಹಿತೋ ಮಂತ್ರೀ ದೂತೋऽಥಾರ್ಥಾನುಶಾಸಕಃ |
ಏತೇ ಕ್ಷತ್ರಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥4॥
ಎಲೈ ರಾಜನೇ! ಋತ್ವಿಕ್, ಪುರೋಹಿತ, ಮಂತ್ರಿ, ದೂತ ಹಾಗೂ ರಾಜನ ಅನುಶಾಸನವನ್ನು ನೆರವೇರಿಸುವವನು ಇವರು ಬ್ರಾಹ್ಮಣರಲ್ಲಿ ಕ್ಷತ್ರಿಯಸಮಾನ- ರಾಗುತ್ತಾರೆ.
ಅಶ್ವಾರೋಹಾ ಗಜಾರೋಹಾ ರಥಿನೋऽಥ ಪದಾತಯಃ |
ಏತೇ ವೈಶ್ಯಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥5॥
ಎಲೈ ರಾಜನೇ! ಅಶ್ವಾರೋಹಿಗಳು, ಗಜಾರೋಹಿಗಳು, ರಥಿಕರು, ಪದಾತಿಗಳು ಇವರು ಬ್ರಾಹ್ಮಣರಲ್ಲಿ ವೈಶ್ಯಸಮರಾಗುತ್ತಾರೆ.
ಜನ್ಮಕರ್ಮವಿಹೀನಾ ಯೇ ಕದರ್ಯಾ ಬ್ರಹ್ಮಬಂಧವಃ |
ಏತೇ ಶೂದ್ರಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥6॥
ಎಲೈ ರಾಜನೇ! ಜಾತಿಕರ್ಮರಹಿತರಾಗಿ ಕೃಪಣರಾಗಿ ಇರುವ ಬ್ರಹ್ಮಬಂಧುಗಳು ಬ್ರಾಹ್ಮಣರಲ್ಲಿ ಶೂದ್ರಸಮರಾಗುತ್ತಾರೆ.
ಅಶ್ರೋತ್ರಿಯಾಃ ಸರ್ವ ಏವ ಸರ್ವೇ ಚಾನಾಹಿತಾಗ್ನಯಃ |
ತಾನ್ ಸರ್ವಾನ್ ಧಾರ್ಮಿಕೋ ರಾಜಾ ಬಲಿಂ ವಿಷ್ಟಿಂ ಚ ಕಾರಯೇತ್ ॥7
ಧಾರ್ಮಿಕನಾದ ರಾಜನು ಶ್ರೋತ್ರಿಯರಲ್ಲದ, ಆಹಿತಾಗ್ನಿಗಳಲ್ಲದ ಎಲ್ಲ ಬ್ರಾಹ್ಮಣರಿಂದಲೂ ಕಪ್ಪವನ್ನು ಮತ್ತು ಬಿಟ್ಟಿ ಕೆಲಸವನ್ನು ತೆಗೆದುಕೊಳ್ಳಬೇಕು.
ಆಹ್ವಾಯಕಾ ದೇವಲಕಾ ನಾಕ್ಷತ್ರಾ ಗ್ರಾಮಯಾಜಕಾಃ |
ಏತೇ ಬ್ರಾಹ್ಮಣಚಂಡಾಲಾ ಮಹಾಪಥಿಕಪಂಚಮಾಃ ॥8॥
ಇನ್ನೊಬ್ಬರನ್ನು ಕರೆಯುವವರು, ಸಂಬಳ ತೆಗೆದುಕೊಂಡು ದೇವಸ್ಥಾನದಲ್ಲಿ ಪೂಜೆಯನ್ನು ಮಾಡುವವರು, ಜ್ಯೋತಿಷ್ಕರು, ಗ್ರಾಮಪುರೋಹಿತರು ಮತ್ತು ಮಹಾಪಥದಲ್ಲಿ ಹೋಗುವವರು (ಸಮುದ್ರಯಾನ ಮತ್ತು ವಿಮಾನಯಾನವನ್ನು ಮಾಡುವವರು?) ಇವರು ಬ್ರಾಹ್ಮಣಚಂಡಾಲರು.
ಏತೇಭ್ಯೋ ಬಲಿಮಾದದ್ಯಾದ್ ಹೀನಕೋಶೋ ಮಹೀಪತಿಃ |
ಋತೇ ಬ್ರಹ್ಮಸಮೇಭ್ಯಶ್ಚ ದೇವಕಲ್ಪೇಭ್ಯ ಏವ ಚ ॥9॥
ಅಲ್ಪಕೋಶವುಳ್ಳ ರಾಜನು ಬ್ರಹ್ಮಸಮರನ್ನು ಮತ್ತು ದೇವಸಮರನ್ನು ಬಿಟ್ಟು ಉಳಿದ ಈ ಬ್ರಾಹ್ಮಣರಿಂದ ಕಪ್ಪವನ್ನು ತೆಗೆದುಕೊಳ್ಳಬೇಕು.
ಅಬ್ರಾಹ್ಮಣಾನಾಂ ವಿತ್ತಸ್ಯ ಸ್ವಾಮೀ ರಾಜೇತಿ ವೈದಿಕಮ್ |
ಬ್ರಾಹ್ಮಣಾನಾಂ ಚ ಯೇ ಕೇಚಿದ್ ವಿಕರ್ಮಸ್ಥಾ ಭವಂತ್ಯುತ ॥10॥
ಬ್ರಾಹ್ಮಣರಲ್ಲದವರ ಧನಕ್ಕೆ ರಾಜನೇ ಒಡೆಯನೆಂಬುದು ವೇದದ ಶಾಸನ. ಬ್ರಾಹ್ಮಣರಲ್ಲಿಯೇ ಯಾವ ಕೆಲವರು ವಿಕರ್ಮಸ್ಥರಾಗುತ್ತಾರೆಯೋ ಅವರ ಧನಕ್ಕೂ ರಾಜನೇ ಒಡೆಯನಾಗುತ್ತಾನೆ.
ವಿಕರ್ಮಸ್ಥಾಸ್ತು ನೋಪೇಕ್ಷ್ಯಾ ಜಾತು ರಾಜ್ಞಾ ಕಥಂಚನ |
ಪಥಿಕಃ ಸಂವಿಭಜ್ಯಶ್ಚ ಧರ್ಮಾನುಗ್ರಹಕಾರಣಾತ್ ॥11॥
ವಿಕರ್ಮಸ್ಥರಾದ ಯಾರನ್ನೂ ರಾಜನು ಯಾವರೀತಿಯಿಂದಲೂ ಉದಾಸೀನ- ಮಾಡಬಾರದು. ವಾಣಿಜ್ಯಸ್ಥಳಗಳಲ್ಲಿ ತೆರಿಗೆಯನ್ನು ರಾಜನ ಪರವಾಗಿ ತೆಗೆದು- ಕೊಳ್ಳುವ ಬ್ರಾಹ್ಮಣನು ಧರ್ಮಾನುಗ್ರಹಕಾರಣದಿಂದ ಅದರಲ್ಲಿ ಒಂದು ಭಾಗಕ್ಕೆ ಅರ್ಹನಾಗುತ್ತಾನೆ. (ಲಕ್ಷಾಲಂಕಾರ)
ಯಸ್ಯ ಸ್ಮ ವಿಷಯೇ ರಾಜ್ಞಃ ಸ್ತೇನೋ ಭವತಿ ವೈ ದ್ವಿಜಃ |
ರಾಜ್ಞ ಏವಾಪರಾಧಂ ತಂ ಮನ್ಯಂತೇ ತದ್ವಿದೋ ಜನಾಃ ॥12॥
ಯಾವ ರಾಜನ ರಾಷ್ಟ್ರದಲ್ಲಿ ಬ್ರಾಹ್ಮಣನು ಕಳ್ಳನಾಗುತ್ತಾನೋ ಅದನ್ನು ಜನರು ರಾಜನ ಅಪರಾಧವೆಂದೇ ತಿಳಿಯುತ್ತಾರೆ.

ಅವೃತ್ತ್ಯಾ ಯೋ ಭವೇತ್ ಸ್ತೇನೋ ವೇದವಿತ್ ಸ್ನಾತಕಸ್ತಥಾ |
ರಾಜನ್ ಸ ರಾಜ್ಞಾ ಭರ್ತವ್ಯ ಇತಿ ಧರ್ಮವಿದೋ ವಿದುಃ ॥13॥
ವೇದವಿದ್ಯಾಪಾರಂಗತನಾಗಿ, ಸ್ನಾತಕನಾಗಿ ಯಾವ ಬ್ರಾಹ್ಮಣನು ಜೀವನೋ- ಪಾಯವಿಲ್ಲದೇ ಕಳ್ಳನಾಗುತ್ತಾನೆಯೋ ಎಲ್ಲೈ ರಾಜನೇ! ಅವನನ್ನು ರಾಜನು ಪೋಷಿಸ -ಬೇಕು ಎಂದು ಧರ್ಮಜ್ಞರು ತಿಳಿಯುತ್ತಾರೆ.
ಸ ಚೇನ್ನೋಪರಿವರ್ತೇತ ಕೃತವೃತ್ತಿಃ ಪರಂತಪ |
ತತೋ ನಿರ್ವಾಸನೀಯಃ ಸ್ಯಾತ್ ತಸ್ಮಾದ್ ದೇಶಾತ್ ಸಬಾಂಧವಃ ॥14॥
ಎಲ್ಲೈ ಪರಂತಪನೇ! ಜೀವನೋಪಾಯವನ್ನು ಕಲ್ಪಿಸಿದರೂ ಅವನು ತನ್ನ ಹಿಂದಿನ ವೃತ್ತಿಯನ್ನು ಬಿಡದಿದ್ದರೆ ಆಗ ಅವನನ್ನು ಬಂಧುಸಹಿತನಾಗಿ ಆ ದೇಶದಿಂದ ಹೊರಗೆ ಕಳುಹಿಸಬೇಕು.
ಯಜ್ಞಃ ಶ್ರುತಮಪೈಶುನ್ಯಮಹಿಂಸಾತಿಥಿಪೂಜನಮ್ |
ದಮಃ ಸತ್ಯಂ ತಪೋ ದಾನಮೇತದ್ ಬ್ರಾಹ್ಮಣಲಕ್ಷಣಮ್ ॥15॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಸಪ್ತತಿತಮೋಽಧ್ಯಾಯಃ ॥78॥
ಯಜ್ಞ, ವಿದ್ಯೆ, ಚಾಡಿಹೇಳದಿರುವಿಕೆ, ಅಹಿಂಸೆ, ಅತಿಥಿಪೂಜೆ, ಇಂದ್ರಿಯ- ನಿಗ್ರಹ, ಸತ್ಯವಚನ, ತಪಸ್ಸು ಮತ್ತು ದಾನ ಇವುಗಳು ಬ್ರಾಹ್ಮಣನ ಲಕ್ಷಣಗಳು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 78ನೆಯ ಅಧ್ಯಾಯ ಮುಗಿಯಿತು.
0
79. ಎಪ್ಪತ್ತೊಂಬತ್ತನೆಯ ಅಧ್ಯಾಯ
ಕೇಕಯರಾಜ-ರಾಕ್ಷಸಸಂವಾದದಲ್ಲಿ ಪ್ರಜೆಗಳ ಧರ್ಮಕಥನ
ಯುಧಿಷ್ಠಿರಃ
ಕೇಷಾಂ ರಾಜಾ ಪ್ರಭವತಿ ವಿತ್ತಸ್ಯ ಭರತರ್ಷಭ |
ಕಯಾ ಚ ವೃತ್ತ್ಯಾ ವರ್ತೇತ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ- ಎಲ್ಲೈ ಭರತರ್ಷಭನೇ! ಯಾರ ವಿತ್ತದ ಮೇಲೆ ರಾಜನಿಗೆ ಅಧಿ- ಕಾರವಿರುತ್ತದೆ. ರಾಜನು ಎಂತಹ ನಡತೆಯಿಂದ ಜೀವಿಸಬೇಕು ಎಂಬುದನ್ನು ನನಗೆ ಹೇಳು.
ಭೀಷ್ಮ
ಅಬ್ರಾಹ್ಮಣಾನಾಂ ವಿತ್ತಸ್ಯ ಸ್ವಾಮೀ ರಾಜೇತಿ ವೈದಿಕಮ್ |
ಬ್ರಾಹ್ಮಣಾನಾಂ ಚ ಯೇ ಕೇಚಿದ್ ವಿಕರ್ಮಸ್ಥಾ ಭವಂತ್ಯುತ ॥2॥
ಭೀಷ್ಮರು ಬ್ರಾಹ್ಮಣರಲ್ಲದವರ ವಿತ್ತಕ್ಕೆ ರಾಜನು ಒಡೆಯನೆಂಬುದು ವೇದಾ- ನುಶಾಸನ. ವಿಕರ್ಮಸ್ಥರಾದ ಬ್ರಾಹ್ಮಣರ ವಿತ್ತಕ್ಕೂ ಅವನು ಒಡೆಯನಾಗುತ್ತಾನೆ.
ವಿಕರ್ಮಸ್ಥಾಶ್ಚ ನೋಪೇಕ್ಷ್ಯಾ ವಿಪ್ರಾ ರಾಜ್ಞಾ ಕಥಂಚನ |
ಇತಿ ರಾಜ್ಞಾಂ ಪುರಾವೃತ್ತಮಭಿಜಲ್ಪಂತಿ ಸಾಧವಃ ॥3॥
ರಾಜನು ವಿಕರ್ಮಸ್ಥರಾದ ಬ್ರಾಹ್ಮಣರನ್ನು ಉಪೇಕ್ಷೆ ಮಾಡಬಾರದು. ಇದು ಪ್ರಾಚೀನರಾಜರ ನಡತೆಯೆಂದು ಸಜ್ಜನರು ಹೇಳುತ್ತಾರೆ.
ಯಸ್ಯ ಸ್ಮ ವಿಷಯೇ ರಾಜ್ಞಃ ಸ್ತೇನೋ ಭವತಿ ವೈ ದ್ವಿಜಃ |
ರಾಜ್ಞ ಏವಾಪರಾಧಂ ತಂ ಮನ್ಯಂತೇ ಕಿಲ್ಬಿಷಂ ನೃಪ ॥4॥
ಯಾವ ರಾಜನ ರಾಜ್ಯದಲ್ಲಿ ಬ್ರಾಹ್ಮಣನು ಕಳ್ಳನಾಗುತ್ತಾನೆಯೋ ಆ ದೋಷ- ವನ್ನು ರಾಜನ ದೋಷವೆಂದೇ ಹೇಳುತ್ತಾರೆ.
ಅಭಿಶಸ್ತಮಿವಾತ್ಮಾನಂ ಮನ್ಯಂತೇ ತೇನ ಕರ್ಮಣಾ |
ತಸ್ಮಾದ್ ರಾಜರ್ಷಯಃ ಸರ್ವೇ ಬ್ರಾಹ್ಮಣಾನನ್ವಪಾಲಯನ್ ॥5॥
ಅಂತಹ ದೋಷದಿಂದ ರಾಜನು ತನ್ನನ್ನೇ ನಿಂದಿತನನ್ನಾಗಿ ಭಾವಿಸುತ್ತಾನೆ. ಆದರಿಂದ ಎಲ್ಲ ರಾಜರ್ಷಿಗಳೂ ಬ್ರಾಹ್ಮಣರನ್ನು ಚೆನ್ನಾಗಿ ಪಾಲಿಸಿದರು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ಕೇಕಯರಾಜೇನ ಹ್ರಿಯಮಾಣೇನ ರಕ್ಷಸಾ ॥6॥
ಈ ವಿಷಯದಲ್ಲಿಯೂ ಸಹ ರಾಕ್ಷಸನಿಂದ ಅಪಹರಿಸಲ್ಪಡುತ್ತಿದ್ದ ಕೇಕಯ ರಾಜನಿಗೂ ಮತ್ತು ರಾಕ್ಷಸನಿಗೂ ನಡೆದ ಸಂವಾದರೂಪವಾದ ಈ ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ.
ಕೇಕಯಾನಾಮಧಿಪತಿಂ ರಕ್ಷೋ ಜಗ್ರಾಹ ದಾರುಣಮ್ |
ಸ್ವಾಧ್ಯಾಯೇನಾನ್ವಿತಂ ರಾಜನ್ನರಣ್ಯೇ ಸಂಶಿತವ್ರತಮ್ ॥7॥
ಎಲ್ಲೈ ರಾಜನೇ! ಸ್ವಾಧ್ಯಾಯಶೀಲನಾದ ಒಳ್ಳೆಯ ವ್ರತಧಾರಿಯಾದ ಕೇಕಯ ರಾಜನನ್ನು ಕಾಡಿನಲ್ಲಿ ಒಬ್ಬ ರಾಕ್ಷಸನು ಹಿಡಿದು ಅವನ ಮನಸ್ಸನ್ನು ಪ್ರವೇಶಿಸಿದನು.
ರಾಜಾ
ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪಃ |
ನಾನಾಹಿತಾಗ್ನಿರ್ನಾಯಜ್ವಾ ಮಾ ಮಮಾಂತರಮಾವಿಶಃ ॥8॥
ರಾಜ ನನ್ನ ರಾಜ್ಯದಲ್ಲಿ ಕಳ್ಳರಿಲ್ಲ, ಕೃಪಣರಿಲ್ಲ, ಮದ್ಯಪಾನಿಗಳಿಲ್ಲ, ಅಗ್ನ್ಯಾ- ಧಾನ ಮಾಡದವರಿಲ್ಲ, ಯಾಗವನ್ನು ಮಾಡಿದವರಿಲ್ಲ

ಆದ್ದರಿಂದ ನನ್ನ ಒಳಗೆ ಪ್ರವೇಶಿಸಬೇಡ.
ನ ಚ ಮೇ ಬ್ರಾಹ್ಮಣೋಽವಿದ್ವಾನ್ ನಾವ್ರತೀ ನಾಪ್ಯಸೋಮಪಃ |
ನಾನಾಹಿತಾಗ್ನಿರ್ವಿಷಯೇ ಮಾ ಮಮಾಂತರಮಾವಿಶಃ ॥9॥
ನನ್ನ ರಾಜ್ಯದಲ್ಲಿ ವಿದ್ವಾಂಸನಲ್ಲದ, ವ್ರತಧಾರಿಯಲ್ಲದ, ಸೋಮಪಾನವನ್ನು ಮಾಡದ, ಅಗ್ನ್ಯಾಧಾನವನ್ನು ಮಾಡದ ಯಾವ ಬ್ರಾಹ್ಮಣನೂ ಇಲ್ಲ. ನನ್ನೊಳಗೆ ಪ್ರವೇಶಿಸಬೇಡ.
ನಾನಾಪ್ತದಕ್ಷಿಣೈರ್ಯಜ್ಞೈರ್ಯಜಂತೇ ವಿಷಯೇ ಮಮ |
ಅಧೀತೇ ನಾವ್ರತೀ ಕಶ್ಚಿನ್ಮಾ ಮಮಾಂತರಮಾವಿಶಃ ॥10॥
ನನ್ನ ರಾಜ್ಯದಲ್ಲಿ ಭೂರಿದಕ್ಷಿಣೆಗಳನ್ನು ಕೊಡದೇ ಯಜ್ಞಗಳನ್ನು ಮಾಡು- ವುದಿಲ್ಲ. ಎಲ್ಲರೂ ಅಧ್ಯಯನವನ್ನು ಮಾಡುತ್ತಾರೆ. ವ್ರತವನ್ನು ಧರಿಸದವನು ಯಾವನೂ ಇಲ್ಲ. ನನ್ನೊಳಗೆ ಪ್ರವೇಶಿಸಬೇಡ.
ಅಧೀಯತೇಽಧ್ಯಾಪಯಂತಿ ಯಜಂತೇ ಯಾಜಯಂತಿ ಚ |
ದದತಿ ಪ್ರತಿಗೃಹ್ಣಂತಿ ಷಟ್ಸು ಕರ್ಮಸ್ವವಸ್ಥಿತಾಃ ॥11॥
ಬ್ರಾಹ್ಮಣರು ಅಧ್ಯಯನ-ಅಧ್ಯಾಪನ, ಯಜನ-ಯಾಜನ, ದಾನ-ಪ್ರತಿಗ್ರಹ ಈ ಆರು ಕರ್ಮಗಳಲ್ಲಿ ನಿರತರಾಗಿದ್ದಾರೆ.
ಪೂಜಿತಾಃ ಸಂವಿಭಕ್ತಾಶ್ಚ ಮೃದವಃ ಸತ್ಯವಾದಿನಃ |
ಬ್ರಾಹ್ಮಣಾ ಯೇ ಸ್ವಕರ್ಮಸ್ಥಾ ಮಾ ಮಮಾಂತರಮಾವಿಶಃ ॥12॥
ಬ್ರಾಹ್ಮಣರು ನನ್ನಿಂದ ಪೂಜಿಸಲ್ಪಟ್ಟು, ಯಥಾಯೋಗ್ಯವಾಗಿ ನನ್ನ ಧನವನ್ನು ಸ್ವೀಕರಿಸಿ, ಋಜುಗಳೂ ಸತ್ಯವಾದಿಗಳೂ ಆಗಿ ತಮ್ಮ ಕರ್ಮಗಳಲ್ಲಿ ನಿರತರಾಗಿದ್ದಾರೆ. ನನ್ನೊಳಗೆ ಪ್ರವೇಶಿಸಬೇಡ.
ನ ಯಾಚಂತೇ ಪ್ರಯಚ್ಛಂತಿ ಸತ್ಯಧರ್ಮವಿಶಾರದಾಃ |
ನಾಧ್ಯಾಪಯಂತ್ಯಧೀಯಂತೇ ಯಜಂತೇ ನ ಚ ಯಾಜಕಾಃ ॥13॥
ಬ್ರಾಹ್ಮಣಾನ್ ಪರಿರಕ್ಷಂತಿ ಸಂಗ್ರಾಮೇಷ್ವಪಲಾಯಿನಃ |
ಕ್ಷತ್ರಿಯಾ ಮೇ ಸ್ವಕರ್ಮಸ್ಥಾ ಮಾ ಮಮಾಂತರಮಾವಿಶಃ ॥14॥
ಕ್ಷತ್ರಿಯರು ಯಾಚಿಸುವುದಿಲ್ಲ; ದಾನವನ್ನು ಕೊಡುತ್ತಾರೆ. ಸತ್ಯಧರ್ಮವಿಶಾ- ರದರು. ಅಧ್ಯಯನ ಮಾಡುತ್ತಾರೆ. ಅಧ್ಯಾಪನವನ್ನು ಮಾಡುವುದಿಲ್ಲ. ಯಾಗವನ್ನು ಮಾಡುತ್ತಾರೆ. ಮಾಡಿಸುವುದಿಲ್ಲ. ಬ್ರಾಹ್ಮಣರನ್ನು ರಕ್ಷಿಸುತ್ತಾರೆ. ಯುದ್ಧದಿಂದ ಹಿಮ್ಮೆಟ್ಟುವುದಿಲ್ಲ. ಸ್ವಕರ್ಮನಿರತರಾಗಿದ್ದಾರೆ. ನನ್ನೊಳಗೆ ಪ್ರವೇಶಿಸಬೇಡ.
ಕೃಷಿಗೋರಕ್ಷವಾಣಿಜ್ಯಮುಪಜೀವಂತ್ಯಮಾಯಯಾ |
ಅಪ್ರಮತ್ತಾಃ ಕ್ರಿಯಾವಂತಃ ಸುವ್ರತಾಃ ಸತ್ಯವಾದಿನಃ ॥15॥
ಸಂವಿಭಾಗಂ ದಮಂ ಶೌಚಂ ಸೌಹೃದಂ ಚ ವ್ಯಪಾಶ್ರಿತಾಃ |
ಮಮ ವೈಶ್ಯಾಃ ಸ್ವಕರ್ಮಸ್ಥಾಃ ಮಾ ಮಮಾಂತರಮಾವಿಶಃ ॥16॥
ನನ್ನ ದೇಶದ ವೈಶ್ಯರು ಕೃಷಿ, ಗೋರಕ್ಷಣೆ, ವಾಣಿಜ್ಯಗಳನ್ನು ನಿಷ್ಕಪಟವಾಗಿ ಉಪಜೀವಿಸುತ್ತಾರೆ. ಜಾಗರೂಕರಾಗಿ ಸತ್ಕರ್ಮಗಳನ್ನು ಮಾಡುತ್ತಾರೆ. ಒಳ್ಳೆಯ ವ್ರತಗಳನ್ನು ಹೊಂದಿದ್ದಾರೆ, ಸತ್ಯವಾದಿಗಳಾಗಿದ್ದಾರೆ. ಸಂವಿಭಾಗ, ಇಂದ್ರಿಯನಿಗ್ರಹ, ಶೌಚ, ಸೌಹಾರ್ದಗಳನ್ನು ಆಶ್ರಯಿಸಿದ್ದಾರೆ. ಸ್ವಕರ್ಮನಿರತರಾಗಿದ್ದಾರೆ. ನನ್ನೊಳಗೆ ಪ್ರವೇಶಿಸಬೇಡ.
ತ್ರೀನ್ ವರ್ಣಾನನುತಿಷ್ಠಂತಿ ಯಥಾವದನಸೂಯಕಾಃ |
ಮಮ ಶೂದ್ರಾಃ ಸ್ವಕರ್ಮಸ್ಥಾ ಮಾ ಮಮಾಂತರಮಾವಿಶಃ ॥17॥
ನನ್ನ ದೇಶದಲ್ಲಿ ಶೂದ್ರರು ಅಸೂಯೆಯಿಲ್ಲದೇ ಮೂರು ವರ್ಣದವರನ್ನೂ ಚೆನ್ನಾಗಿ ಅನುಸರಿಸುತ್ತಾರೆ. ನನ್ನೊಳಗೆ ಪ್ರವೇಶಿಸಬೇಡ.
ಕೃಪಣಾನಾಥವೃದ್ಧಾನಾಂ ದುರ್ಬಲಾತುರಯೋಷಿತಾಮ್ |
ಸಂವಿಭಕ್ತಾಸ್ಮಿ ಸರ್ವೇಷಾಂ ಮಾ ಮಮಾಂತರಮಾವಿಶಃ ॥18॥
ನಾನು ಕೃಪಣರಿಗೂ, ಅನಾಥರಿಗೂ, ವೃದ್ಧರಿಗೂ, ದುರ್ಬಲರಿಗೂ, ರೋಗಿ- ಗಳಿಗೂ ಮತ್ತು ಸ್ತ್ರೀಯರಿಗೂ ನನ್ನ ಐಶ್ವರ್ಯವನ್ನು ಹಂಚುತ್ತೇನೆ. ನನ್ನೊಳಗೆ ಪ್ರವೇಶಿಸಬೇಡ.
ಕುಲದೇಶಾದಿಧರ್ಮಾಣಾಂ ಪ್ರಥಿತಾನಾಂ ಯಥಾವಿಧಿ |
ಅವ್ಯುಚ್ಛೇತ್ತಾಸ್ಮಿ ಸರ್ವೇಷಾಂ ಮಾ ಮಮಾಂತರಮಾವಿಶಃ ॥19॥
ಪ್ರಸಿದ್ಧವಾದ ಕುಲಧರ್ಮಗಳನ್ನು, ದೇಶಧರ್ಮಗಳನ್ನು, ವಿಧಿಗೆ ಅನು- ಗುಣವಾಗಿ ಲೋಪಗೊಳಿಸದೇ ಪ್ರವರ್ತಿಸುತ್ತೇನೆ. ನನ್ನೊಳಗೆ ಪ್ರವೇಶಿಸಬೇಡ.
ತಪಸ್ವಿನೋ ಮೇ ವಿಷಯೇ ಪೂಜಿತಾಃ ಪರಿಪಾಲಿತಾಃ |
ಸಂವಿಭಕ್ತಾಶ್ಚ ಸತ್ಕೃತ್ಯ ಮಾ ಮಮಾಂತರಮಾವಿಶಃ ॥20॥
ನನ್ನ ದೇಶದಲ್ಲಿರುವ ತಪಸ್ವಿಗಳು ಸತ್ಕೃತರಾಗಿ, ರಕ್ಷಿತರಾಗಿ ನನ್ನ ಐಶ್ವರ್ಯವನ್ನು ಹಂಚಿಕೊಳ್ಳುತ್ತಾರೆ. ನನ್ನೊಳಗೆ ಪ್ರವೇಶಿಸಬೇಡ.
ನಾಸಂವಿಭಜ್ಯ ಭೋಕ್ತಾಸ್ಮಿ ನ ವಿಶಾಮಿ ಪರಸ್ತ್ರಿಯಮ್ |
ಸ್ವತಂತ್ರೋ ಜಾತು ನ ಕ್ರೀಡೇ ಮಾ ಮಮಾಂತರಮಾವಿಶಃ ॥21॥
ಇನ್ನೊಬ್ಬರಿಗೆ ಕೊಡದೇ ನಾನು ಏನನ್ನೂ ಭೋಗಿಸುವುದಿಲ್ಲ; ಪರಸ್ತ್ರೀಯರ ಸಂಬಂಧವನ್ನು ಮಾಡುವುದಿಲ್ಲ. ಒಬ್ಬನೇ ಯಾವ ಕ್ರೀಡೆಯನ್ನೂ ಮಾಡುವುದಿಲ್ಲ. ನನ್ನೊಳಗೆ ಪ್ರವೇಶಿಸಬೇಡ.
ನಾಬ್ರಹ್ಮಚಾರೀ ಭಿಕ್ಷಾವಾನ್ ಭಿಕ್ಷುರ್ವಾಽಬ್ರಹ್ಮಚಾರಿಕಃ |
ಅನೃತ್ವಿಜಂ ಹುತಂ ನಾಸ್ತಿ ಮಾ ಮಮಾಂತರಮಾವಿಶಃ ॥22॥

ನನ್ನ ರಾಜ್ಯದಲ್ಲಿ ಬ್ರಹ್ಮಚಾರಿಯಲ್ಲದವನು ಭಿಕ್ಷೆಯನ್ನು ಬೇಡುವುದಿಲ್ಲ; ಬ್ರಹ್ಮಚಾರಿಯಲ್ಲದ ಸನ್ಯಾಸಿಯೂ ಇಲ್ಲ. ಋತ್ವಿಜರಿಲ್ಲದೇ ಯಾವ ಹೋಮವೂ ನಡೆಯುವುದಿಲ್ಲ. ನನ್ನೊಳಗೆ ಪ್ರವೇಶಿಸಬೇಡ.

ನಾವಜಾನಾಮ್ಯಹಂ ವೃದ್ಧಾನ್ನ ವೈದ್ಯಾನ್ನ ತಪಸ್ವಿನಃ |
ರಾಷ್ಟ್ರೇ ಸ್ವಪತಿ ಜಾಗರ್ಮಿ ಮಾ ಮಮಾಂತರಮಾವಿಶಃ ॥23॥

ನಾನು ವೃದ್ಧರನ್ನೂ, ವಿದ್ಯಾವಂತರನ್ನೂ, ತಪಸ್ವಿಗಳನ್ನೂ ಅವಮಾನಗೊಳಿಸು- ವುದಿಲ್ಲ. ರಾಷ್ಟ್ರವು ನಿದ್ರಿಸುವಾಗ ನಾನು ಎಚ್ಚರದಿಂದಿರುತ್ತೇನೆ. ನನ್ನೊಳಗೆ ಪ್ರವೇಶಿ- ಸಬೇಡ.

ಶುಕ್ಲಕರ್ಮಾಸ್ಮಿ ಸರ್ವತ್ರ ನ ದುರ್ಗತಿಭಯಂ ಮಮ |
ಧರ್ಮಚಾರೀ ಗೃಹಸ್ಥಶ್ಚ ಮಾ ಮಮಾಂತರಮಾವಿಶಃ ॥24॥

ನಾನು ಎಲ್ಲ ಕಡೆಗಳಲ್ಲಿಯೂ ಶುದ್ಧವಾದ ಕರ್ಮವನ್ನೇ ಮಾಡಿದ್ದೇನೆ. ನನಗೆ ದುರ್ಗತಿಯ ಭಯವಿಲ್ಲ. ನಾನು ಬ್ರಹ್ಮಚಾರಿಯಾದ ಗೃಹಸ್ಥನಾಗಿದ್ದೇನೆ. ನನ್ನೊಳಗೆ ಪ್ರವೇಶಿಸಬೇಡ.

ವೇದಾಧ್ಯಯನಸಂಪನ್ನಸ್ತಪಸ್ವೀ ಸರ್ವಧರ್ಮವಿತ್ |
ಸ್ವಾಮೀ ಸರ್ವಸ್ಯ ರಾಜ್ಯಸ್ಯ ಶ್ರೀಮಾನ್ ಮಮ ಪುರೋಹಿತಃ ॥25॥

ನನ್ನ ಪುರೋಹಿತನು ವೇದಾಧ್ಯಯನಸಂಪನ್ನನಾದವನು, ತಪಸ್ವಿಯಾದವನು, ಸರ್ವಧರ್ಮವನ್ನೂ ತಿಳಿದವನು, ಎಲ್ಲ ರಾಜ್ಯಕ್ಕೂ ಸ್ವಾಮಿಯಾದವನು ಮತ್ತು ಸಂಪದ್ಯುಕ್ತನಾದವನು.

ದಾನೇನ ದಿವ್ಯಾನಭಿವಾಂಛಾಮಿ ಲೋಕಾನ್
ಸತ್ಯೇನಾಥೋ ಬ್ರಾಹ್ಮಣಾನಾಂ ಚ ಗುಪ್ತ್ಯಾ |
ಶುಶ್ರೂಷಯಾ ಚಾಪಿ ಗುರೂನುಪೈಮಿ
ನ ಮೇ ಭಯಂ ವಿದ್ಯತೇ ರಾಕ್ಷಸೇಭ್ಯಃ ॥26॥

ನಾನು ದಾನದಿಂದಲೂ, ಸತ್ಯವಚನದಿಂದಲೂ ಮತ್ತು ಬ್ರಾಹ್ಮಣರ ರಕ್ಷೆ- ಯಿಂದಲೂ ದಿವ್ಯಲೋಕಗಳನ್ನು ಪಡೆಯಲು ಬಯಸುತ್ತೇನೆ. ನಾನು ಹಿರಿಯರ ಸೇವೆಯನ್ನು ಮಾಡುತ್ತೇನೆ. ನನಗೆ ರಾಕ್ಷಸರಿಂದ ಭಯವಿಲ್ಲ.

ನ ಮೇ ರಾಷ್ಟ್ರೇ ವಿಧವಾ ಬ್ರಹ್ಮಬಂಧುಃ
ನ ಬ್ರಾಹ್ಮಣಃ ಕೃಪಣೋ ನೋತ ಚೋರಃ |
ನ ಪಾರಜಾಯೀ ನ ಚ ಪಾಪಕರ್ಮಾ
ನ ಮೇ ಭಯಂ ವಿದ್ಯತೇ ರಾಕ್ಷಸೇಭ್ಯಃ ॥27॥

ನನ್ನ ರಾಜ್ಯದಲ್ಲಿ ವಿಧವೆಯರಿಲ್ಲ; ಬ್ರಹ್ಮಬಂಧುಗಳಿಲ್ಲ; ಕೃಪಣರಾದ ಅಥವಾ ಚೋರನಾದ ಬ್ರಾಹ್ಮಣನಿಲ್ಲ; ಪರಸ್ತ್ರೀಸಂಗವನ್ನು ಮಾಡುವವನಿಲ್ಲ; ಪಾಪಕರ್ಮ- ಗಳನ್ನು ಮಾಡುವವನಿಲ್ಲ. ನನಗೆ ರಾಕ್ಷಸರಿಂದ ಭಯವಿಲ್ಲ.

ನ ಮೇ ಶಸ್ತ್ರೈರನಿರ್ಭಿನ್ನಮಂಗೇ ದ್ವ್ಯಂಗುಲಮಂತರಮ್ |
ಧರ್ಮಾರ್ಥಂ ಯುದ್ಧ್ಯಮಾನಸ್ಯ ಮಾ ಮಮಾಂತರಮಾವಿಶಃ ॥28॥

ಧರ್ಮಯುದ್ಧವನ್ನು ಮಾಡುವ ನನಗೆ ದೇಹದಲ್ಲಿ ಶಸ್ತ್ರದಿಂದ ವ್ರಣಗೊಳ್ಳದ ಎರಡು ಅಂಗುಲಪ್ರದೇಶವೂ ಇಲ್ಲ. ನನ್ನೊಳಗೆ ಪ್ರವೇಶಿಸಬೇಡ.

ಗೋಬ್ರಾಹ್ಮಣೇ ಚ ಯಜ್ಞೇ ಚ ನಿತ್ಯಂ ಸ್ವಸ್ತ್ಯಯನಂ ಮಮ |
ಆಶಾಸತೇ ಜನಾ ರಾಷ್ಟ್ರೇ ಮಾ ಮಮಾಂತರಮಾವಿಶಃ ॥29॥

ನನ್ನ ರಾಷ್ಟ್ರದ ಪ್ರಜೆಗಳು ಯಜ್ಞಗಳಲ್ಲಿ ಮತ್ತು ಗೋಬ್ರಾಹ್ಮಣಸಮುದಾಯ- ದಲ್ಲಿ ನನಗೆ ನಿತ್ಯವೂ ಶುಭವನ್ನು ಹಾರೈಸುತ್ತಾರೆ. ನನ್ನೊಳಗೆ ಪ್ರವೇಶಿಸಬೇಡ.

ನಾರೀಣಾಂ ವ್ಯಭಿಚಾರಾಚ್ಚ ಅನ್ಯಾಯಾಚ್ಚ ಮಹೀಕ್ಷಿತಾಮ್ |
ವಿಪ್ರಾಣಾಂ ಕರ್ಮದೋಷಾಚ್ಚ ಪ್ರಜಾನಾಂ ಜಾಯತೇ ಭಯಮ್ ॥30॥

ಪ್ರಜೆಗಳಿಗೆ ನಾರಿಯರ ವ್ಯಭಿಚಾರದಿಂದಲೂ, ರಾಜರ ಅನ್ಯಾಯದಿಂದಲೂ, ವಿಪ್ರರ ಕರ್ಮದೋಷದಿಂದಲೂ ಭಯವುಂಟಾಗುತ್ತದೆ.

ಅವೃಷ್ಟಿರ್ಮಾರಕೋ ರೋಗಃ ಸತತಂ ಕ್ಷುದ್ಭಯಾನಿ ಚ |
ವಿಗ್ರಹಶ್ಚ ಸದಾ ತಸ್ಮಿನ್ ದೇಶೇ ಭವತಿ ದಾರುಣೇ ॥31॥

ಅಂತಹ ದಾರುಣವಾದ ದೇಶದಲ್ಲಿ ಅನಾವೃಷ್ಟಿ, ಮಾರಕರೋಗಗಳು, ಸತತವಾಗಿ ಹಸಿವಿನ ಭಯ, ಕಲಹಗಳು ಯಾವಾಗಲೂ ಇರುತ್ತವೆ.

ಯಕ್ಷರಕ್ಷಃಪಿಶಾಚೇಭ್ಯೋ ನಾಸುರೇಭ್ಯಃ ಕಥಂಚನ |
ಭಯಮುತ್ಪದ್ಯತೇ ತತ್ರ ಯತ್ರ ವಿಪ್ರಾಃ ಸುಸಂಯತಾಃ ॥32॥

ಎಲ್ಲಿ ವಿಪ್ರರು ಸಂಯಮಶೀಲರಾಗಿರುತ್ತಾರೆಯೋ ಅಲ್ಲಿ ಯಕ್ಷರಾಕ್ಷಸ- ಪಿಶಾಚಿಗಳಿಂದಾಗಲೀ, ಅಸುರರಿಂದಾಗಲೀ ಯಾವ ರೀತಿಯಿಂದಲೂ ಭಯ- ವುಂಟಾಗುವುದಿಲ್ಲ.

ಗಂಧರ್ವಾಪ್ಸರಸಃ ಸಿದ್ಧಾಃ ಪನ್ನಗಾಶ್ಚ ಸರೀಸೃಪಾಃ |
ಮಾನವಾನ್ನ ಜಿಘಾಂಸಂತಿ ಯತ್ರ ನಾರ್ಯಃ ಪತಿವ್ರತಾಃ ॥33॥

ಎಲ್ಲಿನಾರಿಯರು ಪತಿವ್ರತೆಯರಾಗಿರುತ್ತಾರೆಯೋ ಅಲ್ಲಿ ಗಂಧರ್ವಾಪ್ಸರೆಯ- ರಾಗಲೀ, ಸಿದ್ಧರಾಗಲೀ, ಸರ್ಪಗಳಾಗಲೀ ಮಾನವರನ್ನು ಕೊಲ್ಲಲು ಬಯಸು- ವುದಿಲ್ಲ.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಯತ್ರ ಶೂದ್ರಾಶ್ಚ ಧಾರ್ಮಿಕಾಃ |

ನಾನಾವೃಷ್ಟಿಭಯಂ ತತ್ರ ನ ದುರ್ಭಿಕ್ಷಂ ನ ವಿಭ್ರಮಃ ॥34॥
ಯಾವ ರಾಷ್ಟ್ರದಲ್ಲಿ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರೆಲ್ಲರೂ ಧಾರ್ಮಿಕರಾಗಿರು- ತ್ತಾರೆಯೋ ಅಲ್ಲಿ ಅನಾವೃಷ್ಟಿಭಯವಾಗಲೀ, ದುರ್ಭಿಕ್ಷವಾಗಲೀ, ಉನ್ಮಾದಾದಿ ರೋಗಗಳಾಗಲೀ ಇರುವುದಿಲ್ಲ.
ಧಾರ್ಮಿಕೋ ಯತ್ರ ಭೂಪಾಲೋ ನ ತತ್ರಾಸ್ತಿ ಪರಾಭವಃ |
ಉತ್ಪಾತಾ ನ ಚ ದೃಶ್ಯಂತೇ ನ ದಿವ್ಯಾ ನ ಚ ಮಾನುಷಾಃ ॥35॥
ರಾಜನು ಧಾರ್ಮಿಕನಾಗಿದ್ದ ಸ್ಥಳದಲ್ಲಿ ಪರಾಭವವುಂಟಾಗುವುದಿಲ್ಲ. ದಿವ್ಯವಾದ ಅಥವಾ ಮಾನುಷವಾದ ಅಪಶಕುನಗಳು ಅಲ್ಲಿ ಕಂಡುಬರುವುದಿಲ್ಲ.
ರಾಕ್ಷಸಃ
ಯಸ್ಮಾತ್ ಸರ್ವಾಸ್ವವಸ್ಥಾಸು ಧರ್ಮಮೇವಾನ್ವವೇಕ್ಷಸೇ |
ತಸ್ಮಾತ್ ಪ್ರಾಪ್ನುಹಿ ಕೈಕೇಯ ಗೃಹಾನ್ ಸ್ವಸ್ತಿ ವ್ರಜಾಮ್ಯಹಮ್ ॥36॥
ರಾಕ್ಷಸ ಎಲೈ ಕೇಕಯನೇ! ಯಾವ ಕಾರಣದಿಂದ ಎಲ್ಲ ಅವಸ್ಥೆಗಳಲ್ಲೂ ಧರ್ಮವನ್ನೇ ನೀನು ಯೋಚಿಸುತ್ತಿದ್ದೀಯೋ ಆದ್ದರಿಂದ ಸುಖವಾಗಿ ಮನೆಗೆ ಹೋಗು. ನಾನು ನನ್ನ ದಾರಿಯಲ್ಲಿ ಹೋಗುತ್ತೇನೆ.
ಯೇಷಾಂ ಗೋಬ್ರಾಹ್ಮಣಾ ರಕ್ಷ್ಯಾಃ ಪ್ರಜಾ ರಕ್ಷ್ಯಾಶ್ಚ ಕೇಕಯ |
ನ ರಕ್ಷೋಭ್ಯೋ ಭಯಂ ತೇಷಾಂ ಕುತ ಏವ ತು ಮಾನುಷಾತ್ ॥37॥
ಎಲೈ ಕೇಕಯನೇ! ಯಾರು ಗೋಬ್ರಾಹ್ಮಣರನ್ನು ಮತ್ತು ಪ್ರಜೆಗಳನ್ನು ರಕ್ಷಿಸು- ತ್ತಾರೆಯೋ ಅವರಿಗೆ ರಾಕ್ಷಸರ ಭಯವಿಲ್ಲ. ಇನ್ನು ಮನುಷ್ಯರಿಂದ ಭಯವು ಎಲ್ಲಿಂದ ಬಂದೀತು?
ಯೇಷಾಂ ಪುರೋಗಮಾ ವಿಪ್ರಾ ಯೇಷಾಂ ಬ್ರಹ್ಮಬಲಂ ಬಲಮ್ |
ಪ್ರಿಯಾತಿಥ್ಯಾಸ್ತಥಾ ದಾರಾಸ್ತೇ ವೈ ಸ್ವರ್ಗಜಿತೋ ನರಾಃ ॥38॥
ಯಾರಿಗೆ ಬ್ರಾಹ್ಮಣರೇ ಪುರಸ್ಸರರೋ, ಯಾರಿಗೆ ಬ್ರಾಹ್ಮಣಬಲವೇ ಬಲವೋ, ಯಾರು ಅತಿಥಿಪ್ರಿಯರೋ ಮತ್ತು ತಮ್ಮ ಪತ್ನಿಯರಿಗೆ ಪ್ರಿಯರೋ ಅಂತಹ ಮನುಷ್ಯರು ಸ್ವರ್ಗವನ್ನು ಜಯಿಸಿದವರು.
ಭೀಷ್ಮಃ
ತಸ್ಮಾದ್ ದ್ವಿಜಾತೀನ್ ರಕ್ಷೇತ ತೇ ಹಿ ರಕ್ಷಂತಿ ರಕ್ಷಿತಾಃ |
ಆಶೀರೇಷಾಂ ಭವೇದ್ ರಾಜ್ಞಾಂ ರಾಷ್ಟ್ರಂ ಸಮ್ಯಕ್ ಪ್ರವರ್ಧತೇ ॥39॥
ಭೀಷ್ಮರು ಆದ್ದರಿಂದ ಬ್ರಾಹ್ಮಣರನ್ನು ರಕ್ಷಿಸಬೇಕು. ಅವರನ್ನು ರಕ್ಷಿಸಿದರೆ ಅವರು ನಿನ್ನನ್ನು ರಕ್ಷಿಸುತ್ತಾರೆ. ರಾಜನಿಗೆ ತನ್ನ ರಾಷ್ಟ್ರವು ಸರಿಯಾಗಿ ಪ್ರವೃದ್ಧಿಯನ್ನು ಹೊಂದಲಿ ಎಂಬ ಆಸೆಯು ಇರಬೇಕು.
ತಸ್ಮಾದ್ ರಾಜ್ಞಾ ವಿಶೇಷೇಣ ವಿಕರ್ಮಸ್ಥಾ ದ್ವಿಜಾತಯಃ |
ನಿಯಮ್ಯಾಃ ಸಂವಿಭಜ್ಯಾಶ್ಚ ಪ್ರಜಾನುಗ್ರಹಕಾರಣಾತ್ ॥40॥
ಆದ್ದರಿಂದ ರಾಜನಾದವನು ಪ್ರಜೆಗಳನ್ನು ಅನುಗ್ರಹಿಸುವ ದೃಷ್ಟಿಯಿಂದ ವಿ- ಕರ್ಮಸ್ಥರಾದ ಬ್ರಾಹ್ಮಣರನ್ನು ನಿಯಂತ್ರಿಸಿ, ಅವರಿಗೂ ಯೋಗ್ಯವಾದ ಧನಾದಿ- ಗಳನ್ನು ಕೊಡಬೇಕು.
ಯ ಏವಂ ವರ್ತತೇ ರಾಜಾ ಪೌರಜಾನಪದೇಷ್ವಿಹ |
ಅನುಭೂಯೇಹ ಭದ್ರಾಣಿ ಪ್ರಾಪ್ನೋತೀಂದ್ರಸಲೋಕತಾಮ್ ॥41॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಾಶೀತಿತಮೋಽಧ್ಯಾಯಃ ॥79॥
ಯಾವ ರಾಜನು ರಾಜಧಾನಿಯಲ್ಲಿರುವ ಪೌರರ ಮತ್ತು ಜಾನಪದರ (ದೇಶದಲ್ಲಿ ವಾಸಿಸುವವರ ವಿಷಯಗಳಲ್ಲಿ) ಇಲ್ಲಿ ಹೀಗೆ ನಡೆದುಕೊಳ್ಳುತ್ತಾನೆಯೋ ಅವನು ಇಲ್ಲಿ ಶುಭಗಳನ್ನು ಅನುಭವಿಸಿ ಇಂದ್ರನ ಸಮಾನಲೋಕವನ್ನು ಪಡೆಯು- ತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 79ನೆಯ ಅಧ್ಯಾಯವು ಮುಗಿಯಿತು.
0

80. ಎಂಬತ್ತನೆಯ ಅಧ್ಯಾಯ
ಬ್ರಾಹ್ಮಣಾದಿಗಳ ಆಪದ್ಧರ್ಮಕಥನ

ಯುಧಿಷ್ಠಿರಃ
ವ್ಯಾಖ್ಯಾತಾ ಕ್ಷತ್ರಧರ್ಮೇಣ ವೃತ್ತಿರಾಪತ್ಸು ಭಾರತ |
ಕಥಂಚಿದ್ ವೈಶ್ಯಧರ್ಮೇಣ ಜೀವೇದ್ ವಾ ಬ್ರಾಹ್ಮಣೋ ನ ವಾ ॥1॥
ಯುಧಿಷ್ಠಿರ ಎಲೈ ಭಾರತನೇ! ಬ್ರಾಹ್ಮಣನು ಆಪತ್ತು ಬಂದಾಗ ಕ್ಷತ್ರಿಯ- ಧರ್ಮದಿಂದ ವರ್ತಿಸಬೇಕು ಎಂದು ಶಾಸ್ತ್ರದಲ್ಲಿ ಹೇಳಲಾಯಿತು. ಬ್ರಾಹ್ಮಣನು ಯಾವುದಾದರೂ ಸಂದರ್ಭದಲ್ಲಿ ವೈಶ್ಯಧರ್ಮದಿಂದ ಜೀವಿಸಬಹುದೇ ಇಲ್ಲವೇ?
ಭೀಷ್ಮಃ
ಅಶಕ್ತಃ ಕ್ಷತ್ರಧರ್ಮೇಣ ವೈಶ್ಯಧರ್ಮೇಣ ವರ್ತಯೇತ್ |
ಕೃಷಿಗೋರಕ್ಷಮಾಸ್ಥಾಯ ವ್ಯಸನೇ ವೃತ್ತಿಸಂಕ್ಷಯೇ ॥2॥
ಭೀಷ್ಮರು ರಾಷ್ಟ್ರಕ್ಕೆ ವ್ಯಸನವುಂಟಾದಾಗ ಅಥವಾ ತನಗೆ ಜೀವನೋಪಾಯ- ವಿಲ್ಲದಿದ್ದಾಗ ಕ್ಷತ್ರಿಯಧರ್ಮದಿಂದ ಜೀವಿಸಲು

ಸಾಧ್ಯವಿಲ್ಲದಿದ್ದರೆ ಕೃಷಿ ಗೋ- ರಕ್ಷಣೆಗಳನ್ನು ಆಶ್ರಯಿಸಿ ವೈಶ್ಯಧರ್ಮದಿಂದ ಜೀವಿಸಬೇಕು.
ಯುಧಿಷ್ಠಿರಃ
ಕಾನಿ ಪಣ್ಯಾನಿ ವಿಕ್ರೀಣನ್ ಸ್ವರ್ಗಲೋಕಾನ್ನ ಹೀಯತೇ |
ಬ್ರಾಹ್ಮಣೋ ವೈಶ್ಯಧರ್ಮೇಣ ವರ್ತಯನ್ ಭರತರ್ಷಭ ॥3॥
ಯುಧಿಷ್ಠಿರ ಎಲೈ ಭರತರ್ಷಭನೇ! ವೈಶ್ಯಧರ್ಮದಿಂದ ಜೀವಿಸುವ ಬ್ರಾಹ್ಮಣನು ಎಂತಹ ವಸ್ತುಗಳನ್ನು ಮಾರಿದರೆ ಸ್ವರ್ಗಲೋಕದಿಂದ ಚ್ಯುತನಾಗುವು- ದಿಲ್ಲ.
ಭೀಷ್ಮಃ
ಸುರಾ ಲವಣಮಿತ್ಯೇವ ತಿಲಾನ್ ಕೇಸರಿಣಃ ಪಶೂನ್ |
ವೃಷಭಾನ್ ಮಧು ಮಾಂಸಂ ಚ ಕೃತಾನ್ನಂ ಚ ಯುಧಿಷ್ಠಿರ ॥4॥
ಸರ್ವಾಸ್ವವಸ್ಥಾಸ್ವೇತಾನಿ ಬ್ರಾಹ್ಮಣಃ ಪರಿವರ್ಜಯೇತ್ |
ಏತೇಷಾಂ ವಿಕ್ರಯಾತ್ ತಾತ ಬ್ರಾಹ್ಮಣೋ ನರಕಂ ವ್ರಜೇತ್ ॥5॥
ಭೀಷ್ಮರು ಯುಧಿಷ್ಠಿರನೇ! ಮದ್ಯ, ಲವಣ, ಎಳ್ಳು, ರೋಮವಿರುವ ಪಶುಗಳು, ಎತ್ತುಗಳು, ಜೇನುತುಪ್ಪ, ಮಾಂಸ ಹಾಗೂ ಸಿದ್ಧವಾದ ಅನ್ನ ಇವುಗಳನ್ನು ಮಾರುವುದನ್ನು ಬ್ರಾಹ್ಮಣನು ಎಲ್ಲಾ ಅವಸ್ಥೆಗಳಲ್ಲೂ ವರ್ಜಿಸಬೇಕು. ಎಲೈ ಪ್ರೀತಿ- ಪಾತ್ರನೇ! ಇವುಗಳನ್ನು ಮಾರುವುದರಿಂದ ಬ್ರಾಹ್ಮಣನು ನರಕಕ್ಕೆ ಹೋಗುತ್ತಾನೆ.
ಅಜೋಽಗ್ನಿರ್ವರುಣೋ ಮೇಷಃ ಸೂರ್ಯೋಽಶ್ವಃ ಪೃಥಿವೀ ವಿರಾಟ್ |
ಧೇನುರ್ಯಜ್ಞಶ್ಚ ಸೋಮಶ್ಚ ನ ವಿಕ್ರೇಯಾಃ ಕಥಂಚನ ॥6॥
ಆಡಿನಲ್ಲಿ ಅಗ್ನಿಯ ಸನ್ನಿಧಾನ; ಹೋತದಲ್ಲಿ ವರುಣನ ಸನ್ನಿಧಾನ; ಅಶ್ವದಲ್ಲಿ ಸೂರ್ಯನ ಸನ್ನಿಧಾನ; ಪೃಥಿವಿಯಲ್ಲಿ ಬ್ರಹ್ಮನ ಸನ್ನಿಧಾನ; ಧೇನುವಿನಲ್ಲಿ ಯಜ್ಞ ಮತ್ತು ಸೋಮಗಳ ಸನ್ನಿಧಾನವಿದೆ. ಆದ್ದರಿಂದ ಅವುಗಳನ್ನು ಯಾವ ಕಾರಣ- ದಿಂದಲೂ ಮಾರಬಾರದು.
ಪಕ್ವೇನಾಮಸ್ಯ ನಿಮಯಂ ನ ಪ್ರಶಂಸಂತಿ ಸಾಧವಃ |
ನಿಮಯೇತ್ ಪಕ್ವಮಾಮೇನ ಭೋಜನಾರ್ಥಾಯ ಭಾರತ ॥7॥
ಪಕ್ವಪದಾರ್ಥವನ್ನು ಕೊಟ್ಟು ಹಸಿಯ ಪದಾರ್ಥಗಳನ್ನು ತೆಗೆದುಕೊಳ್ಳುವುದನ್ನು ಸಜ್ಜನರು ಪ್ರಶಂಸಿಸುವುದಿಲ್ಲ. ಎಲೈ ಭಾರತನೇ! ಭೋಜನದ ಸಲುವಾಗಿ ಹಸಿಯ ಪದಾರ್ಥವನ್ನು ಕೊಟ್ಟು ಪಕ್ವವಾದ ಪದಾರ್ಥವನ್ನು ತೆಗೆದುಕೊಳ್ಳಬಹುದು.
ವಯಂ ಸಿದ್ಧಮಶಿಷ್ಯಾಮೋ ಭವಾನ್ ಸಾಧಯತಾಮಿದಮ್ |
ಏವಂ ಸಮೀಕ್ಷ್ಯ ನಿಮಯನ್ ನಾಧರ್ಮೋಽಸ್ತಿ ಕದಾಚನ ॥8॥
ನಾವು ಸಿದ್ಧವಾದ ಅನ್ನವನ್ನು ಸ್ವೀಕರಿಸುತ್ತೇವೆ. ನೀವು ಇದರಿಂದ ಅನ್ನವನ್ನು ಸಿದ್ಧಪಡಿಸಿ ಸ್ವೀಕರಿಸಿ ಎಂದು ಹಸಿಯ ಪದಾರ್ಥವನ್ನು ಕೊಡಬಹುದು - ಈ ರೀತಿಯಲ್ಲಿ ವಿನಿಮಯವನ್ನು ಮಾಡಿಕೊಂಡರೆ ಅದರಲ್ಲಿ ಎಂದೂ ಅಧರ್ಮ- ವಿರುವುದಿಲ್ಲ.
ಅತ್ರ ತೇ ವರ್ತಯಿಷ್ಯಾಮಿ ಯಥಾ ಧರ್ಮಃ ಪುರಾತನಃ |
ವ್ಯವಹಾರಪ್ರವೃತ್ತಾನಾಂ ತನ್ನಿಬೋಧ ಯುಧಿಷ್ಠಿರ ॥9॥
ಎಲೈ ಯುಧಿಷ್ಠಿರನೇ! ವ್ಯವಹಾರದಲ್ಲಿ ಪ್ರವೃತ್ತರಾದವರಿಗೆ ಹಿಂದೆ ಧರ್ಮವು ಹೇಗಿದ್ದಿತು ಎಂದು ನಾನು ನಿನಗೆ ಹೇಳುವೆನು. ಅದನ್ನು ಕೇಳು.
ಭವತೇಽಹಂ ದದಾನೀದಂ ಭವಾನೇತತ್ ಪ್ರಯಚ್ಛತು |
ರುಚಿತೇ ವರ್ತತೇ ಧರ್ಮೋ ನ ಬಲಾತ್ ಸಂಪ್ರವರ್ತಿತೇ ॥10॥
`ನಾನು ಇದನ್ನು ನಿನಗೆ ಕೊಡುತ್ತೇನೆ; ಇದನ್ನು ನೀನು ನನಗೆ ಕೊಡು' ಹೀಗೆ ಪರಸ್ಪರಸಮ್ಮತಿಯಿಂದ ಮಾಡಿದ ವಿನಿಮಯವ್ಯವಹಾರದಲ್ಲಿ ಧರ್ಮವಿದೆ. ಬಲಾ- ತ್ಕಾರದಿಂದ ನಡೆಯುವುದರಲ್ಲಿ ಧರ್ಮವಿಲ್ಲ.
ಇತ್ಯೇವಂ ಸಂಪ್ರವರ್ತಂತ ವ್ಯವಹಾರಾಃ ಪುರಾತನಾಃ |
ಋಷೀಣಾಮಿತರೇಷಾಂ ಚ ಸಾಧು ಚೇದಮಸಂಶಯಮ್ ॥11॥
ಪುರಾತನಕಾಲದಲ್ಲಿ ಈ ರೀತಿಯ ವ್ಯವಹಾರವು ನಡೆಯುತ್ತಿದ್ದಿತು. ಇಂತಹ ವ್ಯವಹಾರವು ಋಷಿಗಳಿಗೂ ಮತ್ತು ಇತರರಿಗೂ ಬಹಳ ಸಮ್ಮತವಾದವು ಎಂಬು- ದರಲ್ಲಿ ಸಂಶಯವಿಲ್ಲ.
ಯುಧಿಷ್ಠಿರಃ
ಅಥ ತಾತ ಯದಾ ಸರ್ವಾಃ ಶಸ್ತ್ರಮಾದದತೇ ಪ್ರಜಾಃ |
ವ್ಯುತ್ಕ್ರಾಮಂತಿ ಸ್ವಧರ್ಮೇಭ್ಯಃ ಕ್ಷತ್ರಸ್ಯ ಕ್ಷೀಯತೇ ಬಲಮ್ ॥12॥
ರಾಜಾ ತ್ರಾತಾ ನ ಲೋಕೇ ಸ್ಯಾತ್ ಕಿಂ ತದಾ ಸ್ಯಾತ್ ಪರಾಯಣಮ್ |
ಏತನ್ಮೇ ಸಂಶಯಂ ಬ್ರೂಹಿ ವಿಸ್ತರೇಣ ಪಿತಾಮಹ ॥13॥
ಯುಧಿಷ್ಠಿರ ಎಲೈ ಪ್ರೀತಿಪಾತ್ರನೇ! ಕ್ಷತ್ರಿಯರ ಬಲವು ಕ್ಷೀಣಿಸಿ, ಅವರು ತಮ್ಮ ಧರ್ಮದಿಂದ ಚ್ಯುತರಾಗಿ ಯಾವಾಗ ಎಲ್ಲ ಪ್ರಜೆಗಳೂ ಶಸ್ತ್ರವನ್ನು ಹಿಡಿಯು- ತ್ತಾರೆಯೋ ಲೋಕವನ್ನು ರಕ್ಷಿಸುವ ರಾಜನು ಇರುವುದಿಲ್ಲವೋ ಆಗ ಲೋಕಕ್ಕೆ ಯಾವುದು ಆಶ್ರಯವಾಗುತ್ತದೆ? ಪಿತಾಮಹನೇ! ಈ ನನ್ನ ಸಂಶಯವನ್ನು ವಿಸ್ತಾರ- ವಾಗಿ ಪರಿಹರಿಸು.
ಭೀಷ್ಮಃ
ದಾನೇನ ತಪಸಾ ಯಜ್ಞೈರದ್ರೋಹೇಣ ದಮೇನ ಚ |
ಬ್ರಾಹ್ಮಣಪ್ರಮುಖಾ ವರ್ಣಾಃ ಕ್ಷೇಮಮಿಚ್ಛೇಯುರಾತ್ಮನಃ ॥14॥

ಭೀಷ್ಮರು  ಬ್ರಾಹ್ಮಣಪ್ರಮುಖವಾದ ವರ್ಣಗಳು ದಾನದಿಂದ, ತಪಸ್ಸಿನಿಂದ, ಯಜ್ಞಗಳಿಂದ, ಅದ್ರೋಹದಿಂದ ಮತ್ತು ಇಂದ್ರಿಯನಿಗ್ರಹದಿಂದ ತಮ್ಮ ಕ್ಷೇಮವನ್ನು ಬಯಸುತ್ತವೆ.
ತೇಷಾಂ ಯೇ ವೇದಬಲಿನಸ್ತ ಉತ್ಥಾಯ ಸಮಂತತಃ |
ರಾಜ್ಞೋ ಬಲಂ ವರ್ಧಯೇಯುರ್ಮಹೇಂದ್ರಸ್ಯೇವ ದೇವತಾಃ    ॥15॥
ಅವರಲ್ಲಿ ಯಾರು ವೇದಬಲವುಳ್ಳವರೋ ಅವರು ಎಲ್ಲ ಕಡೆಗಳಿಂದಲೂ ಎದ್ದು ದೇವತೆಗಳು ಇಂದ್ರನ ಬಲವನ್ನು ಅಭಿವೃದ್ಧಿಪಡಿಸಿದಂತೆ ರಾಜನ ಬಲವನ್ನು ಅಭಿವೃದ್ಧಿಪಡಿಸಬೇಕು.
ರಾಜ್ಞೋ ಹಿ ಕ್ಷೀಯಮಾಣಸ್ಯ ಬ್ರಹ್ಮೈವಾಹುಃ ಪರಾಯಣಮ್ |
ತಸ್ಮಾದ್ ಬ್ರಹ್ಮಬಲೇನೈವ ಸಮುತ್ಥೇಯಂ ವಿಜಾನತಾ    ॥16॥
ದುರ್ಬಲನಾಗುತ್ತಿರುವ ರಾಜನಿಗೆ ಬ್ರಾಹ್ಮಣರೇ ಶ್ರೇಷ್ಠವಾದ ಆಶ್ರಯ. ಆದ್ದರಿಂದ ವಿವೇಕಿಯಾದವನು ಬ್ರಹ್ಮಬಲದಿಂದಲೇ ಪುನಃ ಮೇಲೆ ಬರಬೇಕು.
ಯದಾ ತು ವಿಜಯೀ ರಾಜಾ ಕ್ಷೇಮಂ ರಾಷ್ಟ್ರೇಽಭಿಸಂದಧೇತ್ |
ತದಾ ವರ್ಣಾ ಯಥಾಧರ್ಮಮಾವಿಶೇಯುಃ ಸ್ವಕರ್ಮಸು    ॥17॥
ಯಾವಾಗ ರಾಜನು ವಿಜಯವನ್ನು ಹೊಂದಿ, ರಾಷ್ಟ್ರದಲ್ಲಿ ಕ್ಷೇಮವನ್ನು ಉಂಟು ಮಾಡುವನೋ ಆಗ ವರ್ಣಗಳು ತಮ್ಮ ತಮ್ಮ ಧರ್ಮಗಳಿಗೆ ಅನುಸಾರವಾಗಿ ತಮ್ಮ ತಮ್ಮ ಕರ್ಮಗಳಲ್ಲಿ ನಿರತವಾದಾವು!
ಉನ್ಮರ್ಯಾದೇ ಪ್ರವೃತ್ತೇ ತು ದಸ್ಯುಭಿಃ ಸಂಕರೇ ಕೃತೇ |
ಸರ್ವೇ ವರ್ಣಾ ನ ದುಷ್ಯೇಯುಃ ಶಸ್ತ್ರವಂತೋ ಯುಧಿಷ್ಠಿರ    ॥18॥
ಎಲೈ ಯುಧಿಷ್ಠಿರನೇ! ದಸ್ಯುಗಳು ಮರ್ಯಾದೆಯನ್ನು ಮೀರಿ ಪ್ರವೃತ್ತರಾದಾಗ ಧರ್ಮಸಂಕರಗಳನ್ನು ಮಾಡಿದಾಗ ಎಲ್ಲ ವರ್ಣದವರೂ ಶಸ್ತ್ರವನ್ನು ಹಿಡಿದರೆ ದೋಷವಿಲ್ಲ.
ಯುಧಿಷ್ಠಿರಃ
ಅಥ ಚೇತ್ ಸರ್ವತಃ ಕ್ಷತ್ರಂ ಪ್ರದುಷ್ಯೇದ್ ಬ್ರಾಹ್ಮಣಾನ್ ಪ್ರತಿ |
ಕಸ್ತಸ್ಯ ಬ್ರಾಹ್ಮಣಸ್ತ್ರಾತಾ ಕೋ ಧರ್ಮಃ ಕಿಂ ಪರಾಯಣಮ್    ॥19॥
ಯುಧಿಷ್ಠಿರ  ಒಂದು ಪಕ್ಷ ಎಲ್ಲ  ಕ್ಷತ್ರಿಯರೂ ಬ್ರಾಹ್ಮಣರಿಗೆ ವಿರುದ್ಧವಾಗಿ ನಡೆದುಕೊಂಡರೆ ಆಗ ಬ್ರಾಹ್ಮಣರನ್ನು ರಕ್ಷಿಸುವವನು ಯಾವನು? ಆಗ ಯಾವುದು ಧರ್ಮ? ಯಾವುದು ಆಶ್ರಯವಾಗುತ್ತದೆ?
ಭೀಷ್ಮಃ
ತಪಸಾ ಬ್ರಹ್ಮಚರ್ಯೇಣ ಶಸ್ತ್ರೇಣ ಚ ಬಲೇನ ಚ |
ಅಮಾಯಯಾ ಮಾಯಯಾ ಚ ನಿಯಂತವ್ಯಂ ತದಾ ಭವೇತ್  ॥20॥
ಭೀಷ್ಮರು  ಆಗ ತಪಸ್ಸಿನಿಂದಲೂ, ಬ್ರಹ್ಮಚರ್ಯೆಯಿಂದಲೂ, ಶಸ್ತ್ರದಿಂದಲೂ, ಬಲದಿಂದಲೂ, ನಿಷ್ಕಪಟವಾದ ಉಪಾಯಗಳಿಂದಲೂ, ಕಪಟೋಪಾಯಗ- ಳಿಂದಲೂ ಕ್ಷತ್ರಿಯರನ್ನು ನಿಯಂತ್ರಿಸಬೇಕು.
ಕ್ಷತ್ರಿಯಸ್ಯಾತಿವೃತ್ತಸ್ಯ ಬ್ರಾಹ್ಮಣೇಷು ವಿಶೇಷತಃ |
ಬ್ರಹ್ಮೈವ ಸನ್ನಿಯಂತೃ ಸ್ಯಾತ್ ಕ್ಷತ್ರಂ ಹಿ ಬ್ರಹ್ಮಸಂಭವಮ್    ॥21॥
ಕ್ಷತ್ರಿಯರು ತಮ್ಮ ಎಲ್ಲೆಯನ್ನು ಮೀರಿ ನಡೆದರೆ ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರಿಗೆ ಅಪಚಾರವನ್ನು ಮಾಡಿದರೆ ಬ್ರಾಹ್ಮಣಜಾತಿಯೇ ಅವರನ್ನು ನಿಯಂತ್ರಿ- ಸಬೇಕು. ಏಕೆಂದರೆ, ಕ್ಷತ್ರಿಯರು ಬ್ರಾಹ್ಮಣಜಾತಿಯಿಂದ ಹುಟ್ಟಿದವರು.
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ    ॥22॥
ಜಲದಿಂದ ಅಗ್ನಿ, ಬ್ರಾಹ್ಮಣರಿಂದ ಕ್ಷತ್ರಿಯರು, ಶಿಲೆಯಿಂದ ಲೋಹ ಉತ್ಪನ್ನ- ವಾಗಿವೆ. ಉಳಿದ ಎಲ್ಲ ಕಡೆ ಇರುವ ಅವುಗಳ ಸಾಮರ್ಥ್ಯವು ತಮ್ಮ ಮೂಲ ಕಾರಣಗಳಲ್ಲಿ ನಾಶವನ್ನು ಹೊಂದುತ್ತದೆ.
ಯದಾ ಛಿನತ್ತ್ಯಯೋಽಶ್ಮಾನಮಗ್ನಿಶ್ಚಾಪೋಽಭಿಪದ್ಯತೇ |
ಕ್ಷತ್ರಂ ಚ ಬ್ರಾಹ್ಮಣಂ ದ್ವೇಷ್ಟಿ ತದಾ ಶಾಮ್ಯಂತಿ ತೇ ತ್ರಯಃ    ॥23॥
ಕಬ್ಬಿಣವು ಕಲ್ಲನ್ನು ಛೇದಿಸಿದರೆ, ಅಗ್ನಿಯು ಜಲವನ್ನು ಪ್ರವೇಶಿಸಿದರೆ, ಕ್ಷತ್ರಿಯನು ಬ್ರಾಹ್ಮಣನನ್ನು ದ್ವೇಷಿಸಿದರೆ ಆಗ ಆ ಮೂವರೂ ನಾಶವನ್ನು ಹೊಂದುತ್ತಾರೆ.
ತಸ್ಮಾದ್ ಬ್ರಹ್ಮಣಿ ಶಾಮ್ಯಂತಿ ಕ್ಷತ್ರಿಯಾಣಾಂ ಯುಧಿಷ್ಠಿರ |
ಸಮುದೀರ್ಣಾನ್ಯಜೇಯಾನಿ ತೇಜಾಂಸಿ ಚ ಬಲಾನಿ ಚ    ॥24॥
ಎಲೈ ಯುಧಿಷ್ಠಿರನೇ! ಆದ್ದರಿಂದ ಕ್ಷತ್ರಿಯರ ಉನ್ನತವಾದ ತೇಜಸ್ಸು ಮತ್ತು ಬಲಗಳು ಬ್ರಾಹ್ಮಣರಲ್ಲಿ ನಾಶವನ್ನು ಹೊಂದುತ್ತವೆ.
ಬ್ರಹ್ಮವೀರ್ಯೇ ಮೃದೂಭೂತೇ ಕ್ಷತ್ರವೀರ್ಯೇ ಚ ದುರ್ಬಲೇ |
ದುಷ್ಟೇಷು ಸರ್ವವರ್ಣೇಷು ಬ್ರಾಹ್ಮಣಾನ್ ಪ್ರತಿ ಸರ್ವಶಃ    ॥25॥
ಯೇ ತತ್ರ ಯುದ್ಧಂ ಕುರ್ವಂತಿ ತ್ಯಕ್ತ್ವಾ  ಜೀವಿತಮಾತ್ಮನಃ |
ಬ್ರಾಹ್ಮಣಾನ್ ಪರಿರಕ್ಷಂತೋ ಧರ್ಮಮಾತ್ಮಾನಮೇವ ಚ    ॥26॥
ಮನಸ್ವಿನೋ ಮನ್ಯುಮಂತಃ ಪುಣ್ಯಲೋಕಾ ಭವಂತಿ ತೇ |
ಬ್ರಾಹ್ಮಣಾರ್ಥಂ ಹಿ ಸರ್ವೇಷಾಂ ಶಸ್ತ್ರಗ್ರಹಣಮಿಷ್ಯತೇ    ॥27॥
ಬ್ರಹ್ಮಸಾಮರ್ಥ್ಯವು ಮೃದುವಾಗಿ, ಕ್ಷತ್ರಿಯಸಾಮರ್ಥ್ಯವು ದುರ್ಬಲವಾಗಿ ಎಲ್ಲ ವರ್ಣದವರೂ ಬ್ರಾಹ್ಮಣರಿಗೆ ವಿರೋಧಿಗಳಾಗಿ ಇರುವ

ಸಂದರ್ಭದಲ್ಲಿ ಯಾರು ತಮ್ಮ ಜೀವಿತದ ಹಂಗನ್ನು ತೊರೆದು ಬ್ರಾಹ್ಮಣರನ್ನು ತಮ್ಮನ್ನು ಮತ್ತು ಧರ್ಮವನ್ನು ರಕ್ಷಿಸುತ್ತಾ ಯುದ್ಧವನ್ನು ಮಾಡುತ್ತಾರೆಯೋ ಅಂತಹ ಧೈರ್ಯಶಾಲಿಗಳೂ ಕೋಪ- ವುಳ್ಳವರೂ ಆದವರು ಪುಣ್ಯಲೋಕವನ್ನು ಪಡೆಯುತ್ತಾರೆ. ಬ್ರಾಹ್ಮಣರ ರಕ್ಷಣೆಯ ಸಲುವಾಗಿ ಎಲ್ಲರೂ ಶಸ್ತ್ರಗ್ರಹಣವನ್ನು ಮಾಡಬೇಕೆಂದು ಹೇಳಲ್ಪಡುತ್ತದೆ.
ಅತಿ ಸ್ವಿಷ್ಟಸ್ವಧೀತಾನಾಂ ಲೋಕಾನತಿ ತಪಸ್ವಿನಾಮ್ |
ಅನಾಶಕಾಗ್ನ್ಯೋರ್ವಿಶತಾಂ ಶೂರಾ ಯಾಂತಿ ಪರಾಂ ಗತಿಮ್ |
ಏವಮೇವಾತ್ಮನಸ್ತ್ಯಾಗಾನ್ನಾನ್ಯಂ ಧರ್ಮಂ ವಿದುರ್ಜನಾಃ ||28||
ಶೂರರಾದವರು ಯಾಗ ಮತ್ತು ಅಧ್ಯಯನ ಮಾಡಿದವರಿಗಿಂತಲೂ ಉತ್ತಮ- ವಾದ ಲೋಕಗಳನ್ನು ತಪಸ್ವಿಗಳಿಗಿಂತಲೂ ಉತ್ತಮವಾದ ಲೋಕಗಳನ್ನು ಉಪವಾಸ ಮತ್ತು ಯಾಗಗಳನ್ನು ಮಾಡಿದವರಿಗಿಂತಲೂ ಉತ್ತಮವಾದ ಲೋಕಗಳನ್ನು ಪಡೆಯುತ್ತಾರೆ. ಬ್ರಾಹ್ಮಣರ ಸಲುವಾಗಿ ಆತ್ಮತ್ಯಾಗವನ್ನು ಮಾಡುವುದಕ್ಕಿಂತಲೂ ದೊಡ್ಡದಾದ ಇನ್ನೊಂದು ಧರ್ಮವಿಲ್ಲವೆಂದು ವಿವೇಕಿಗಳು ತಿಳಿಯುತ್ತಾರೆ.
ತೇಭ್ಯೋ ನಮಶ್ಚ ಭದ್ರಂ ಚ ಯೇ ಶರೀರಾಣಿ ಜುಹ್ವತಿ |
ಬ್ರಹ್ಮದ್ವಿಷೋ ನಿಯಚ್ಛಂತಸ್ತೇಷಾಂ ನೋಽಸ್ತು ಸಲೋಕತಾ |
ಬ್ರಹ್ಮಲೋಕಜಿತಃ ಸ್ವರ್ಗ್ಯಾನ್ ವೀರಾಂಸ್ತಾನ್ ಮನುರಬ್ರವೀತ್ ||29||
ನಿಮಗೆ ಮಂಗಳವಾಗಲಿ, ಯಾರು ಅದಕ್ಕಾಗಿ ತಮ್ಮ ಶರೀರವನ್ನು ಹೋಮ ಮಾಡುತ್ತಾರೆಯೋ ಅವರಿಗೆ ನನ್ನ ನಮಸ್ಕಾರ. ಬ್ರಾಹ್ಮಣದ್ವೇಷವನ್ನು ಮಾಡುವ- ವರನ್ನು ನಿಯಂತ್ರಿಸುವವರಿಗೆ ಯಾವ ಲೋಕಗಳು ಉಂಟಾಗುತ್ತವೆಯೋ ನಮಗೂ ಆ ಲೋಕಗಳು ಉಂಟಾಗಲಿ. ಅಂತಹ ವೀರರು ಬ್ರಹ್ಮಲೋಕವನ್ನು ಜಯಿಸಿ ಸ್ವರ್ಗದಲ್ಲಿ ವಾಸಿಸುವವರು ಎಂದು ಮನುವು ಹೇಳಿದ್ದಾನೆ.
ಯಥಾಶ್ವಮೇಧಾವಭೃಥೇ ಸ್ನಾತಾಃ ಪೂತಾ ಭವಂತ್ಯುತ |
ದುಷ್ಕೃತಃ ಸುಕೃತಶ್ಚೈವ ತಥಾ ಶಸ್ತ್ರಹತಾ ರಣೇ ||30||
ಅಶ್ವಮೇಧಯಾಗದ ಅವಭೃಥಸ್ನಾನವನ್ನು ಮಾಡಿದವರು ಹೇಗೆ ಪವಿತ್ರರಾಗು- ತ್ತಾರೆಯೋ ಅದರಂತೆ ದುಷ್ಕರ್ಮವನ್ನು ಮಾಡಿದವರಾಗಲೀ, ಸತ್ಕರ್ಮವನ್ನು ಮಾಡಿದವರಾಗಲೀ ಯುದ್ಧದಲ್ಲಿ ಶಸ್ತ್ರದಿಂದ ಹತರಾದರೆ ಪವಿತ್ರರಾಗುತ್ತಾರೆ.
ಭವತ್ಯಧರ್ಮೋ ಧರ್ಮೋ ಹಿ ಧರ್ಮಾಧರ್ಮಾವುಭಾವಪಿ |
ಕಾರಣಾದ್ ದೇಶಕಾಲಸ್ಯ ದೇಶಕಾಲಃ ಸ ತಾದೃಶಃ ||31||
ದೇಶಕಾಲಗಳ ನಿಮಿತ್ತದಿಂದ ಅಧರ್ಮವು ಧರ್ಮವೂ ಧರ್ಮವು ಅ- ಧರ್ಮವೂ ಆಗುತ್ತದೆ. ದೇಶಕಾಲಗಳ ಪ್ರಭಾವವು ಅಂತಹದು.
ಮೈತ್ರಾಃ ಕ್ರೂರಾಣಿ ಕುರ್ವಂತೋ ಜಯಂತಿ ಸ್ವರ್ಗಮುತ್ತಮಮ್ |
ಧರ್ಮ್ಯಾಃ ಪಾಪಾನಿ ಕುರ್ವಂತೋ ಗಚ್ಛಂತಿ ಪರಮಾಂ ಗತಿಮ್ ||32||
ಮೊದಲು ಸರ್ವಜನಮಿತ್ರರಾದವರು ದೇವಬ್ರಾಹ್ಮಣರ ಸಲುವಾಗಿ ಭರ್ತ್ಸನ ತಾಡನಾದಿಗಳನ್ನು ಮಾಡಿದರೆ ಅವರು ಉತ್ತಮಸ್ವರ್ಗವನ್ನೇ ಪಡೆಯುತ್ತಾರೆ. ತಮ್ಮ ಧರ್ಮದಲ್ಲಿ ಇರುವವರು ದೇವಬ್ರಾಹ್ಮಣರ ಸಲುವಾಗಿ ದುಷ್ಟಹನನಾದಿ ಕರ್ಮ- ಗಳನ್ನು ಮಾಡಿದರೂ ಅದರಿಂದ ಅವರು ಶ್ರೇಷ್ಠವಾದ ಗತಿಯನ್ನೇ ಹೊಂದುತ್ತಾರೆ. ಬ್ರಾಹ್ಮಣೋಪದ್ರವಕಾಲದಲ್ಲಿ ಧರ್ಮವು ಅಧರ್ಮವಾಯಿತು. ಬ್ರಾಹ್ಮಣರ ಉಪ- ದ್ರವವನ್ನು ಮಾಡುವ ವ್ಯಕ್ತಿಯಲ್ಲಿ ಸ್ನೇಹವನ್ನು ಮಾಡಿದರೆ ಅದು ಅಧರ್ಮ- ವಾಯಿತು ಎಂದು ಅಭಿಪ್ರಾಯ ಲಕ್ಷಾಲಂಕಾರ.
ಬ್ರಾಹ್ಮಣಸ್ತ್ರಿಷು ಕಾಲೇಷು ಶಸ್ತ್ರಂ ಗೃಹ್ಣನ್ನ ದುಷ್ಯತಿ |
ಆತ್ಮತ್ರಾಣೇ ವರ್ಣದೋಷೇ ದುರ್ಗಸ್ಯ ನಿಯಮೇಷು ಚ ||33||
ತನ್ನನ್ನು ರಕ್ಷಿಸಿಕೊಳ್ಳಲು ಅಥವಾ ಬ್ರಾಹ್ಮಣರಿಗೆ ವಿಪತ್ತು ಒದಗಿದಾಗ ಅಥವಾ ದುರ್ಗದ ನಿಯಮಗಳಂತೆ (ಸರ್ವಸ್ವಹರಣಕಾಲದಲ್ಲಿ) ಈ ಮೂರು ಸಮಯ- ಗಳಲ್ಲಿ ಶಸ್ತ್ರವನ್ನು ಹಿಡಿಯುವ ಬ್ರಾಹ್ಮಣನು ದೋಷಕ್ಕೆ ಒಳಗಾಗುವುದಿಲ್ಲ.
ಯುಧಿಷ್ಠಿರಃ
ಅಭ್ಯುತ್ಥಿತೇ ದಸ್ಯುಬಲೇ ಕ್ಷತ್ರಾರ್ಥೇ ವರ್ಣಸಂಕರೇ |
ಸಂಪ್ರಮೂಢೇಷು ವರ್ಣೇಷು ಯದ್ಯನ್ಯೋಽಭಿಭವೇದ್ ಬಲೀ ||34||
ಬ್ರಾಹ್ಮಣೋ ಯದಿ ವಾ ವೈಶ್ಯಃ ಶೂದ್ರೋ ವಾ ರಾಜಸತ್ತಮ |
ದಸ್ಯುಭ್ಯೋಽಥ ಪ್ರಜಾ ರಕ್ಷೇದ್ ದಂಡಂ ಧರ್ಮೇಣ ಧಾರಯನ್ ||35||
ಕಾರ್ಯಂ ಕುರ್ಯಾನ್ನ ವಾ ಕುರ್ಯಾತ್ ಸಂವಾರ್ಯೋ ವಾ ಭವೇನ್ನ ವಾ |
ತಸ್ಮಾಚ್ಛಸ್ತ್ರಂ ಗ್ರಹೀತವ್ಯಮನ್ಯತ್ರ ಕ್ಷತ್ರಬಂಧುತಃ ||36||
ಯುಧಿಷ್ಠಿರ ಕ್ಷತ್ರಿಯರ ವಿರುದ್ಧವಾಗಿ ದಸ್ಯುಬಲವು ಉನ್ನದ್ಧವಾದಾಗ ವರ್ಣ -ಸಂಕರವುಂಟಾಗಿ ಎಲ್ಲ ವರ್ಣದವರೂ ದಿಗ್ಭ್ರಾಂತರಾದಾಗ ಬ್ರಾಹ್ಮಣನಾಗಲೀ, ವೈಶ್ಯನಾಗಲೀ ಅಥವಾ ಶೂದ್ರನಾಗಲೀ ಬಲಿಷ್ಠನಾದ ಇನ್ನೊಬ್ಬನು ದಂಡವನ್ನು ಧರ್ಮದಿಂದ ಪ್ರಯೋಗಿಸುತ್ತಾ ದಸ್ಯುಗಳಿಂದ ಪ್ರಜೆಗಳನ್ನು ರಕ್ಷಿಸಿದರೆ ಅವನು ಕ್ಷತ್ರಿಯನ ಬೇರೆ ಕಾರ್ಯವನ್ನು ಮಾಡಲಿ ಅಥವಾ ಬಿಡಲಿ ಅವನನ್ನು ತಡೆಯಬೇಕೇ ಬೇಡವೇ? ಅವನು ಕ್ಷತ್ರಿಯನಲ್ಲದಿದ್ದರೆ ಅವನಿಂದ ಶಸ್ತ್ರವನ್ನು ಕಸಿದುಕೊಳ್ಳಬೇಕೇ ಬೇಡವೇ?
ಭೀಷ್ಮಃ
ಅಪಾರೇ ಯೋ ಭವೇತ್ ಪಾರಮಪ್ಲವೇ ಯಃ ಪ್ಲವೋ ಭವೇತ್ |
ಶೂದ್ರೋ ವಾ ಯದಿ ವಾಪ್ಯನ್ಯಃ ಸರ್ವಥಾ ಮಾನಮರ್ಹತಿ ||37||
ಭೀಷ್ಮರು ಶೂದ್ರನಾಗಲೀ ಅಥವಾ ಇನ್ನೊಬ್ಬನಾಗಲೀ ದಡವಿಲ್ಲದ ಕಡೆಯಲ್ಲಿ ದಡವಾದರೆ, ನೌಕೆಯಲ್ಲಿದ ಸ್ಥಳದಲ್ಲಿ ನೌಕೆಯಾದರೆ ಅವನು ಸರ್ವಥಾ ಸಮ್ಮಾನಕ್ಕೆ ಅರ್ಹನಾಗುತ್ತಾನೆ.

ಯಮಾಶ್ರಿತ್ಯ ನರಾ ರಾಜನ್ ವರ್ತಯೇಯುರ್ಯಥಾಸುಖಮ್ |
ಅನಾಥಾಃ ಪಾಲ್ಯಮಾನಾ ವೈ ದಸ್ಯುಭಿಃ ಪರಿಪೀಡಿತಾಃ ||38||
ತಮೇವ ಪೂಜಯೇರಂಸ್ತೇ ಪ್ರೀತ್ಯಾ ಸ್ವಮಿವ ಬಾಂಧವಮ್ |
ಮಹದ್ ಹ್ಯಭೀಕ್ಷ್ಣಂ ಕೌರವ್ಯ ಕರ್ತಾ ಸನ್ಮಾನಮರ್ಹತಿ ||39||
ಎಲೈ ರಾಜನ್! ಅನಾಥರಾದ ದಸ್ಯುಗಳಿಂದ ಪೀಡಿತರಾದ ಯಾವ ಜನರು ಯಾವನಿಂದ ಪಾಲಿಸಲ್ಪಟ್ಟು ಯಾವನನ್ನು ಆಶ್ರಯಿಸಿ ಸುಖದಿಂದ ಜೀವಿಸು- ತ್ತಾರೆಯೋ ಅವನನ್ನೇ ತಮ್ಮ ಬಂಧುವಿನಂತೆ ಪ್ರೀತಿಯಿಂದ ಪೂಜಿಸುತ್ತಾರೆ. ಎಲೈ ಕೌರವ್ಯನೇ! ಅಂತಹ ಕಾರ್ಯವನ್ನು ಮಾಡುವವನು ಸತತವಾಗಿ ದೊಡ್ಡ ಸನ್ಮಾನಕ್ಕೆ ಅರ್ಹನಾಗುತ್ತಾನೆ.
ಕಿಮುಕ್ಷ್ಣಾ ಽವಹತಾ ಕೃತ್ಯಂ ಕಿಂ ಧೇನ್ವಾ ಚಾಪ್ಯದುಗ್ಧಯಾ |
ವಂಧ್ಯಯಾ ಭಾರ್ಯಯಾ ಕೋಽರ್ಥಃ ಕೋಽರ್ಥೋ ರಾಜ್ಞಾಪ್ಯರಕ್ಷತಾ ||
ಭಾರವನ್ನು ಹೊರದ ಎತ್ತಿನಿಂದಾಗಲೀ, ಹಾಲನ್ನು ಕೊಡದ ಹಸುವಿನಿಂದಾ- ಗಲೀ, ವಂಧ್ಯೆಯಾದ ಪತ್ನಿಯಿಂದಾಗಲೀ ಏನು ಪ್ರಯೋಜನ? ಹಾಗೆಯೇ ರಕ್ಷಿಸದಿರುವ ರಾಜನಿಂದಲಾದರೂ ಏನು ಪ್ರಯೋಜನ?
ಯಥಾ ದಾರುಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ |
ಯಥಾ ಹ್ಯನೇತ್ರಃ ಶಕಟಃ ಪಥಿ ಕ್ಷೇತ್ರಂ ಯಥೋಷರಮ್ ||41||
ಏವಂ ಬ್ರಹ್ಮಾನಧೀಯಾನಂ ರಾಜಾ ಯಶ್ಚ ನ ರಕ್ಷಿತಾ |
ನ ವರ್ಷತಿ ಚ ಯೋ ಮೇಘಃ ಸರ್ವ ಏತೇ ನಿರರ್ಥಕಾಃ ||42||
ಕಟ್ಟಿಗೆಯ ಆನೆಯಂತೆ, ಚರ್ಮಮಯವಾದ ಮೃಗದಂತೆ, ದಾರಿಯಲ್ಲಿರುವ ನಾಯಕನಿಲ್ಲದ ಶಕಟದಂತೆ, ಬಿತ್ತಿದುದು ಬೆಳೆಯದಿರುವ ಮರುಭೂಮಿಯಂತೆ, ವೇದಾಧ್ಯಯನವನ್ನು ಮಾಡದ ಬ್ರಾಹ್ಮಣನಂತೆ, ಮಳೆಯನ್ನು ಸುರಿಸದಿರುವ ಮೇಘದಂತೆ ರಕ್ಷಣೆಯನ್ನು ಮಾಡದಿರುವ ರಾಜನಿಂದ ಏನು ಪ್ರಯೋಜನ? ಇವರೆಲ್ಲರೂ ನಿರರ್ಥಕರಾದವರು.
ನಿತ್ಯಂ ಯಸ್ತು ಸತೋ ರಕ್ಷೇದಸತಶ್ಚ ನಿಬರ್ಹಯೇತ್ |
ಸ ಏವ ರಾಜಾ ಕರ್ತವ್ಯಸ್ತೇನ ಸರ್ವಮಿದಂ ಧೃತಮ್ ||43||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಶೀತಿತಮೋಽಧ್ಯಾಯಃ ||80||
ಆದ್ದರಿಂದ ಯಾವನು ನಿತ್ಯವೂ ಅಸಜ್ಜನರನ್ನು ವಿನಾಶಗೊಳಿಸಿ ಸಜ್ಜನರನ್ನು ರಕ್ಷಿಸುತ್ತಾನೆಯೋ ಅವನನ್ನೇ ರಾಜನನ್ನಾಗಿ ಮಾಡಬೇಕು. ಅವನು ಈ ರಾಜ್ಯವೆಲ್ಲ- ವನ್ನೂ ಧರಿಸುತ್ತಾನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 80ನೆಯ ಅಧ್ಯಾಯವು ಮುಗಿಯಿತು.
0
81. ಎಂಬತ್ತೊಂದನೆಯ ಅಧ್ಯಾಯ
ಋತ್ವಿಗ್ಲಕ್ಷಣಾದಿ ಕಥನ
ಯುಧಿಷ್ಠಿರಃ
ಕ್ವಸಮುತ್ಥಾಃ ಕಥಂಶೀಲಾಃ ಋತ್ವಿಜಃ ಸ್ಯುಃ ಪಿತಾಮಹ |
ಕಥಂವಿಧಾಶ್ಚ ರಾಜೇಂದ್ರ ತದ್ ಬ್ರೂಹಿ ವದತಾಂವರ ||1||
ಯುಧಿಷ್ಠಿರ ಪಿತಾಮಹನೇ! ಋತ್ವಿಜರು ಹೇಗೆ ಉತ್ಪನ್ನರಾದರು? ಅವರ ಸ್ವಭಾವವು ಹೇಗಿರಬೇಕು? ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ರಾಜೇಂದ್ರನೇ! ಅವರ ರೀತಿಯು ಹೇಗಿರಬೇಕು ಎಂದು ನನಗೆ ಹೇಳು.
ಭೀಷ್ಮಃ
ಪ್ರತಿಕರ್ಮ ಪುರಾಚಾರ ಋತ್ವಿಜಾಂ ಸ್ಮ ವಿಧೀಯತೇ |
ಆದೌ ಛಂದಾಂಸಿ ವಿಜ್ಞಾಯ ದ್ವಿಜಾನಾಂ ಶ್ರುತಮೇವ ಚ ||2||
ಭೀಷ್ಮರು ಋತ್ವಿಜರು ಪ್ರತಿಕರ್ಮದಲ್ಲಿಯೂ ಹಿಂದಿನಿಂದ ಬಂದ ಆಚಾರ- ವನ್ನು ನಡೆಸಿಕೊಂಡು ಬರಬೇಕು. ಮೊದಲು ವೇದಾಧ್ಯಯನವನ್ನು ಮಾಡಿ ಬ್ರಾಹ್ಮಣರಿಂದ ಜ್ಞಾನವನ್ನು ಸಂಪಾದಿಸಬೇಕು.
ಯೇ ತ್ವೇಕರತಯೋ ನಿತ್ಯಂ ಧೀರಾ ನಾಪ್ರಿಯವಾದಿನಃ |
ಪರಸ್ಪರಸ್ಯ ಸುಹೃದಃ ಸಮ್ಮತಾಃ ಸಮದರ್ಶಿನಃ ||3||
ಯೇಷ್ವಾನೃಶಂಸ್ಯಂ ಸತ್ಯಂ ಚಾಪ್ಯಹಿಂಸಾ ತಪ ಆರ್ಜವಮ್ |
ಅದ್ರೋಹೋ ನಾಭಿಮಾನಶ್ಚ ಹ್ರೀಸ್ತಿತಿಕ್ಷಾ ದಮಃ ಶಮಃ ||4||
ಹ್ರೀಮಾನ್ ಸತ್ಯಧೃತಿರ್ದಾಂತೋ ಭೂತಾನಾಮವಿಹಿಂಸಕಃ |
ಅಕಾಮದ್ವೇಷಸಂಯುಕ್ತಸ್ತ್ರಿಭಿಃ ಶುಕ್ಲೈಃ ಸಮನ್ವಿತಃ ||5||
ಅಹಿಂಸಕೋ ಜ್ಞಾನತೃಪ್ತಃ ಸ ಬ್ರಹ್ಮಾಸನಮರ್ಹತಿ |
ಏತೇ ಮಹರ್ತ್ವಿಜಸ್ತಾತ ಸರ್ವೇ ಮಾನ್ಯಾ ಯಥಾತಥಮ್ ||6||
ಯಾರು ಒಂದೇ ರೀತಿಯ ಅಭಿರುಚಿಯುಳ್ಳವರಾಗಿರುತ್ತಾರೋ, ಯಾವಾ- ಗಲೂ ಧೀರರೋ, ಅಪ್ರಿಯವಾಗಿ ಮಾತನಾಡುವುದಿಲ್ಲವೋ, ಪರಸ್ಪರ ಸುಹೃದರೋ, ಪರಸ್ಪರವಾಗಿ ಸಮ್ಮತರೋ, ಸಮಾನವಾದ ದೃಷ್ಟಿಯುಳ್ಳವರೋ, ಯಾರಲ್ಲಿ ದಯೆ, ಸತ್ಯ, ಅಹಿಂಸಾ, ತಪಸ್ಸು, ಆರ್ಜವ, ಅದ್ರೋಹ, ಅನಹಂಕಾರ, ನಾಚಿಕೆ, ಸಹಿಷ್ಣುತೆ, ಶಮ, ದಮ, ಸತ್ಯವಾದ ಧೈರ್ಯ, ಭೂತದಯೆ, ಕಾಮದ್ವೇಷ ರಾಹಿತ್ಯ, ಮೂರು ವೇದಗಳ ಅಧ್ಯಯನ, ಜ್ಞಾನದಿಂದ ತೃಪ್ತಿ ಇರುತ್ತವೆಯೋ ಅಂತಹವರು ಬ್ರಹ್ಮಾಸನದಲ್ಲಿ ಕುಳಿತುಕೊಳ್ಳಲು

ಅರ್ಹರಾಗುತ್ತಾರೆ. ಎಲೈ ಪ್ರೀತಿ- ಪಾತ್ರನೇ! ಮಹಾ ಋತ್ವಿಜರಾದ ಇವರೆಲ್ಲರೂ ಚೆನ್ನಾಗಿ ಮಾನ್ಯರಾದವರು.
ಯುಧಿಷ್ಠಿರಃ
ಯದಿದಂ ವೇದವಚನಂ ದಕ್ಷಿಣಾಸು ವಿಧೀಯತೇ |
ಇದಂ ದೇಯಮಿದಂ ದೇಯಂ ನ ಕ್ವಚಿದ್ ವ್ಯವತಿಷ್ಠತೇ ॥7॥
ಯುಧಿಷ್ಠಿರ ವೇದಗಳಲ್ಲಿ ಇದನ್ನು ಕೊಡಬೇಕು, ಇದನ್ನು ಕೊಡಬೇಕು ಎಂದೇನು ವಚನವಿದೆಯೋ ಅದು ಎಲ್ಲಿಯೂ ಪರ್ಯವಸಾನವನ್ನು ಹೊಂದು- ವುದಿಲ್ಲ.
ನೇದಂ ಪ್ರತಿಧನಂ ಶಾಸ್ತ್ರಮಾಪದ್ಧರ್ಮಾಶ್ಚ ಶಾಸ್ತ್ರತಃ |
ಆಜ್ಞಾ ಶಾಸ್ತ್ರಸ್ಯ ಘೋರೇಯಂ ನ ಶಕ್ತಿಂ ಸಮವೇಕ್ಷತೇ ॥8॥
ಯಜಮಾನನ ಬಳಿಯಿರುವ ಧನವನ್ನು ನೋಡಿ ದಕ್ಷಿಣಾಶಾಸ್ತ್ರವು ಪ್ರವೃತ್ತವಾ- ಗುವುದಿಲ್ಲ. ದಕ್ಷಿಣೆಯನ್ನು ಹೇಳಿದ ಕಡೆಯಲ್ಲಿ ಶಾಸ್ತ್ರದಲ್ಲಿ ಆಪದ್ಧರ್ಮಗಳನ್ನು ಹೇಳಿಲ್ಲ. ಶಾಸ್ತ್ರದ ಘೋರವಾದ ಈ ಆಜ್ಞೆಯು ಯಜಮಾನನ ಶಕ್ತಿಯನ್ನು ಗಮನಿಸುವುದಿಲ್ಲ.
ಶ್ರದ್ಧಾಮಾರಭ್ಯ ಯಷ್ಟವ್ಯಮಿತ್ಯೇಷಾ ವೈದಿಕೀ ಶ್ರುತಿಃ |
ಮಿಥ್ಯೋಪೇತಸ್ಯ ಯಜ್ಞಸ್ಯ ಕಿಮು ಶ್ರದ್ಧಾ ಕರಿಷ್ಯತಿ ॥9॥
ಶ್ರದ್ಧೆಯಿಂದ ಯಜ್ಞವನ್ನು ಮಾಡಬೇಕೆಂಬುದು ವೇದಾನುಶಾಸನ. ಇಷ್ಟು ದಕ್ಷಿಣೆಯನ್ನು ಕೊಡುತ್ತೇನೆಂದು ಸಂಕಲ್ಪಮಾಡಿ ಅದನ್ನು ಕೊಡಲಾರದೇ ಯಜ್ಞ- ವನ್ನು ಮುಗಿಸಿದರೆ ಆಗ ಶ್ರದ್ಧೆಯಿಂದ ಏನಾಗುತ್ತದೆ?
ಭೀಷ್ಮಃ
ನ ವೇದಾನಾಂ ಪರಿಭವಾನ್ನ ಶಾಠ್ಯೇನ ನ ಮಾಯಯಾ |
ಕಶ್ಚಿನ್ಮಹದವಾಪ್ನೋತಿ ಮಾ ತೇ ಭೂದ್ ಬುದ್ಧಿರೀದೃಶೀ ॥10॥
ಭೀಷ್ಮರು ವೇದಗಳನ್ನು ನಿಂದಿಸುವುದರಿಂದಲಾಗಲೀ, ಶಾಠ್ಯದಿಂದಾಗಲೀ, ಕಪಟದಿಂದಾಗಲೀ ಯಾರೂ ಯಾವ ದೊಡ್ಡದನ್ನೂ ಸಂಪಾದಿಸುವುದಿಲ್ಲ. ಆದ್ದ- ರಿಂದ ನಿನ್ನ ಬುದ್ಧಿಯು ಹೀಗಿರುವುದು ಬೇಡ.
ಯಜ್ಞಾಂಗಂ ದಕ್ಷಿಣಾಸ್ತಾತ ವೇದಾನಾಂ ಪರಿಬೃಂಹಣಮ್ |
ನ ಮಂತ್ರಾ ದಕ್ಷಿಣಾಹೀನಾಸ್ತಾರಯಂತಿ ಕಥಂಚನ ॥11॥
ಪ್ರೀತಿಪಾತ್ರನೇ! ದಕ್ಷಿಣೆಯು ಯಜ್ಞಾಂಗವಾದುದು. ಅದರಿಂದ ವೇದಗಳು ವಿಸ್ತಾರವನ್ನು ಹೊಂದುತ್ತವೆ. ದಕ್ಷಿಣಾರಹಿತವಾದ ಮಂತ್ರಗಳು ಯಾವ ರೀತಿ- ಯಿಂದಲೂ ಆಪತ್ತಿನಿಂದ ದಾಟಿಸುವುದಿಲ್ಲ.
ಶಕ್ತಿಸ್ತು ಪೂರ್ಣಪಾತ್ರೇಣ ಸಮ್ಮಿತಾ ನಾವಮಾ ಭವೇತ್ |
ಅವಶ್ಯಂ ತಾತ ಯಷ್ಟವ್ಯಂ ತ್ರಿಭಿರ್ವರ್ಣೈರ್ಯಥಾವಿಧಿ ॥12॥
ಪೂರ್ಣಪಾತ್ರರೂಪವಾದ ದಕ್ಷಿಣೆಯು ಶಕ್ತಿಯನ್ನು ನೋಡಿ ಹೇಳಲ್ಪಟ್ಟಿದೆ. ದಕ್ಷಿಣೆಯು ಅದಕ್ಕಿಂತಲೂ ಕಡಿಮೆಯಾಗಬಾರದು. ಪ್ರೀತಿಪಾತ್ರನೇ! ಮೂರು ವರ್ಣದವರೂ ವಿಧಿಗೆ ಅನುಸಾರವಾಗಿ ಅವಶ್ಯವಾಗಿ ಯಾಗವನ್ನು ಮಾಡಬೇಕು.
ಆಗ್ನೇಯಸ್ಥಾಲಿಪಾಕಪ್ರಕರಣದಲ್ಲಿ `ವೃಷಭವನ್ನು ದಾನ ಮಾಡಬೇಕು' ಅಥವಾ ಪೂರ್ಣಪಾತ್ರವನ್ನು ದಾನ ಮಾಡಬೇಕು' ಎಂದಿದೆ. ಪೂರ್ಣಪಾತ್ರವೆಂದರೆ 108, ಅಥವಾ 8 ಅಥವಾ 4 ಪೂರ್ಣಮುಷ್ಟಿಧಾನ್ಯಗಳಿಂದ ತುಂಬಿದ ಪಾತ್ರೆ. ವೃಷಭ- ವನ್ನು ದಾನ ಮಾಡಬೇಕು ಎಂದು ಹೇಳಿದ ಸ್ಥಳದಲ್ಲಿಯೇ ಯಜಮಾನನ ಅಶಕ್ತಿ- ಯನ್ನು ಗಮನಿಸಿ ಪೂರ್ಣಪಾತ್ರೆಯ ದಾನವನ್ನು ಹೇಳಿದೆ. ಅದರಿಂದ ವೇದವು ಯಜಮಾನನ ಶಕ್ತಿಯನ್ನು ಗಮನಿಸುವುದಿಲ್ಲ ಎಂದು ನೀನು ಹೇಳಿದುದು ಸರಿ- ಯಲ್ಲ. ಹಾಗೆ ಹೇಳಿ ವೇದಕ್ಕೆ ಅವಮಾನವನ್ನು ಮಾಡಬಾರದು ಎಂದು ಅಭಿಪ್ರಾಯ ಲಕ್ಷ್ಮಾಲಂಕಾರ.
ಸೋಮೋ ರಾಜಾ ಬ್ರಾಹ್ಮಣಾನಾಮಿತ್ಯೇಷಾ ವೈದಿಕೀ ಶ್ರುತಿಃ |
ತಂ ಚ ವಿಕ್ರೇತುಮಿಚ್ಛಂತಿ ನ ವೃಥಾವೃತ್ತಿರಿಷ್ಯತೇ |
ತೇನ ಕ್ರೀತೇನ ಧರ್ಮೇಣ ತತೋ ಯಜ್ಞಃ ಪ್ರವರ್ತತೇ ॥13॥
ಬ್ರಾಹ್ಮಣರಿಗೆ ಸೋಮಾಭಿಮಾನಿಯಾದ ಚಂದ್ರನು ರಾಜ ಎಂಬುದು ವೇದ- ವಚನ. ಯಾಗದಲ್ಲಿ ಆ ಸೋಮರಸವನ್ನು ಕೊಂಡುಕೊಳ್ಳಲು ಯೋಗ್ಯವಾದ ದ್ರವ್ಯವನ್ನು ಕೊಡದೇ ಮಿತ್ರಾದಿಗಳ ಮನೆಯಿಂದ ತಂದ ಸೋಮರಸದಲ್ಲಿ ಯಾಗವನ್ನು ಮಾಡಬಾರದು. ಧರ್ಮದಿಂದ ಕ್ರಯವನ್ನು ಕೊಟ್ಟು ತಂದ ಸೋಮ- ರಸದಿಂದಲೇ ಯಜ್ಞವನ್ನು ಮಾಡಬೇಕು.
ಇತ್ಯೇವಂ ಧರ್ಮತಃ ಖ್ಯಾತಮೃಷಿಭಿರ್ಧರ್ಮವಾದಿಭಿಃ |
ಪುಮಾನ್ ಯಜ್ಞಶ್ಚ ಸೋಮಶ್ಚ ನ್ಯಾಯವೃತ್ತೋ ಯಥಾ ಭವೇತ್ |
ಅನ್ಯಾಯವೃತ್ತಃ ಪುರುಷೋ ನ ಪರಸ್ಯ ನ ಚಾತ್ಮನಃ॥14॥
ಹೀಗೆ ಧರ್ಮವಾದಿಗಳಾದ ಋಷಿಗಳು ಧರ್ಮದ ದೃಷ್ಟಿಯಿಂದ ಹೇಳಿದ್ದಾರೆ. ಯಜಮಾನನೂ, ಯಜ್ಞವೂ, ಸೋಮವೂ ನ್ಯಾಯದಿಂದ ಕೂಡಿರಬೇಕು. ಅನ್ಯಾಯದಿಂದ ಕೂಡಿದ ಮನುಷ್ಯನು ತನಗಾಗಲೀ ಇನ್ನೊಬ್ಬನಿಗಾಗಲೀ ಯಾವ ಪ್ರಯೋಜನಕ್ಕೂ ಬಾರದವನು.
ಶರೀರಂ ಯಜ್ಞಪಾತ್ರಾಣಿ ಇತ್ಯೇಷಾ ಶ್ರೂಯತೇ ಶ್ರುತಿಃ |
ತಾನಿ ಸಮ್ಯಕ್ ಪ್ರಣೀತಾನಿ ಬ್ರಾಹ್ಮಣಾನಾಂ ಮಹಾತ್ಮನಾಮ್ ॥15॥
ಶರೀರವೇ ಯಜ್ಞಪಾತ್ರೆಯು ಎಂಬ ಶ್ರುತಿಯು ಕೇಳಿ ಬರುತ್ತದೆ. ಮಹಾತ್ಮರಾದ ಬ್ರಾಹ್ಮಣರು ಆ ಯಜ್ಞಪಾತ್ರೆಗಳನ್ನು ಸದಾಚಾರಸಂಪತ್ತಿನಿಂದ ಚೆನ್ನಾಗಿ ಇಟ್ಟುಕೊಂಡಿ -ರುತ್ತಾರೆ.
ಬೆನ್ನು ವೇದಿ, ರೋಮಗಳು ದರ್ಭೆಗಳು, ಜಿಹ್ವೆಯು ಸ್ರುಕ್ ಸ್ರುವಗಳು, ಎಂಬ ವೇದವಚನದಿಂದ ಶರೀರವೇ ಯಜ್ಞಪಾತ್ರೆ ಎಂದು ಹೇಳಲಾಗಿದೆ. - ಲಕ್ಷ್ಮಾಲಂಕಾರ.
ತಪೋ ಯಜ್ಞಾದಪಿ ಶ್ರೇಷ್ಠಮಿತ್ಯೇಷಾ ಪರಮಾ ಶ್ರುತಿಃ |

ತತ್ ತೇ ತಪಃ ಪ್ರವಕ್ಷ್ಯಾಮಿ ವಿದ್ವಂಸ್ತದಪಿ ಮೇ ಶೃಣು ॥16॥
ತಪಸ್ಸು ಯಜ್ಞಕ್ಕಿಂತಲೂ ಶ್ರೇಷ್ಠವಾದುದು ಎಂದೂ ಶ್ರೇಷ್ಠವಾದ ಶ್ರುತಿಯಿದೆ. ಎಲೈ ವಿದ್ವಾಂಸನೇ! ಅಂತಹ ತಪಸ್ಸನ್ನು ಹೇಳುವೆನು. ಅದನ್ನು ನನ್ನಿಂದ ಕೇಳು.
ಅಹಿಂಸಾ ಸತ್ಯವಚನಮಾನೃಶಂಸ್ಯಂ ದಮೋ ಘೃಣಾ |
ಏತತ್ ತಪೋ ವಿದುರ್ಧೀರಾ ನ ಶರೀರಸ್ಯ ಶೋಷಣಮ್ ॥17॥
ಅಹಿಂಸೆ, ಸತ್ಯವಚನ, ಅಸ್ತೇಯ, ದಯಾ, ದಮ, ಅಕ್ರೌರ್ಯ ಇವುಗಳನ್ನು
ಧೀರರು ತಪಸ್ಸೆಂದು ತಿಳಿಯುತ್ತಾರೆ. ಶರೀರಶೋಷಣೆಯನ್ನು ಮಾಡುವುದು ತಪಸ್ಸಲ್ಲ.
ಅಪ್ರಾಮಾಣ್ಯಂ ಚ ವೇದಾನಾಂ ಶಾಸ್ತ್ರಾಣಾಂ ಚಾತಿಲಂಘನಮ್ |
ಅವ್ಯವಸ್ಥಾ ಚ ಸರ್ವತ್ರ ತದ್ ವೈ ನಾಶನಮಾತ್ಮನಃ ॥18॥
ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು, ಶಾಸ್ತ್ರಗಳನ್ನು ಮೀರುವುದು, ಎಲ್ಲ ಕಾರ್ಯಗಳನ್ನು ಅವ್ಯವಸ್ಥೆಯಿಂದ ಮಾಡುವುದು ಇವೇ ಆ ವ್ಯಕ್ತಿಯ ನಾಶಕ್ಕೆ ಕಾರಣಗಳಾಗುತ್ತವೆ.
ನಿಬೋಧ ದಶಹೋತ್ರೄಣಾಂ ವಿಧಾನಂ ಪಾರ್ಥ ಯಾದೃಶಮ್ |
ಚಿತ್ತಂ ಸ್ರುಕ್ ಚಿತ್ತಮಾಜ್ಯಂ ಚ ಪವಿತ್ರಂ ಜ್ಞಾನಮುತ್ತಮಮ್ ॥19॥
ಎಲೈ ಪಾರ್ಥನೇ! ಹತ್ತು ಹೋತೃಗಳನ್ನು ವೇದವು ಯಾವ ರೀತಿಯಲ್ಲಿ ವಿಧಾನ ಮಾಡಿದೆ ಎಂಬುದನ್ನು ತಿಳಿಯುವವನಾಗು. ಚಿತ್ತ, ಸ್ರುಕ್, ಚಿತ್ತ, ಆಜ್ಯ, ಪವಿತ್ರ, ಜ್ಞಾನ, ಶೂದ್ರಾದಿ ಸ್ಪರ್ಶಾಭಾವ, ಕುಟಿಲತೆಯ ಅಭಾವ, ದೇಶ ಮತ್ತು ಕಾಲಗಳು ಆ ಹತ್ತು ಹೋತ್ರಗಳು.
ಸರ್ವಂ ಜಿಹ್ಮಂ ಮೃತ್ಯುಪದಮಾರ್ಜವಂ ಬ್ರಹ್ಮಣಃ ಪದಮ್ |
ಏತಾವಾನ್ ಜ್ಞಾನವಿಷಯಃ ಕಿಂ ಪ್ರಲಾಪಃ ಕರಿಷ್ಯತಿ ॥20॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಾಶೀತಿತಮೋಽಧ್ಯಾಯಃ ॥81॥
ಕಪಟದಿಂದ ಕೂಡಿದುದೆಲ್ಲವೂ ಮೃತ್ಯುಪದವಾಚ್ಯವಾದುದು. ಆರ್ಜವವು ಬ್ರಹ್ಮಪದದಿಂದ ವಾಚ್ಯವಾದುದು. ಇದೇ ಜ್ಞಾನದ ಸಾರ. ಹೆಚ್ಚು ಮಾತನಾಡಿ ಏನು ಪ್ರಯೋಜನ?
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 81ನೆಯ ಅಧ್ಯಾಯವು ಮುಗಿಯಿತು.
0
82. ಎಂಬತ್ತೆರಡನೆಯ ಅಧ್ಯಾಯ
ಅಮಾತ್ಯ ಮತ್ತು ಜ್ಞಾತಿಗಳ ಸ್ವರೂಪಕಥನ
ಯುಧಿಷ್ಠಿರಃ
ಯದಪ್ಯಲ್ಪತರಂ ಕರ್ಮ ತದಪ್ಯೇಕೇನ ದುಷ್ಕರಮ್ |
ಪುರುಷೇಣಾಸಹಾಯೇನ ಕಿಮು ರಾಜ್ಯಂ ಪಿತಾಮಹ ॥1॥
ಕಿಂಶೀಲಃ ಕಿಂಸಮಾಚಾರಃ ರಾಜ್ಞೋಽರ್ಥಸಚಿವೋ ಭವೇತ್ |
ಕೀದೃಶೇ ವಿಶ್ವಸೇದ್ ರಾಜಾ ಕೀದೃಶೇ ನಾಪಿ ವಿಶ್ವಸೇತ್ ॥2॥
ಯುಧಿಷ್ಠಿರ ಪಿತಾಮಹನೇ! ಒಂದು ಸಣ್ಣಕಾರ್ಯವನ್ನೂ ಸಹ ಸಹಾಯ- ವಿಲ್ಲದೇ ಒಬ್ಬನೇ ಮಾಡಲು ಸಾಧ್ಯವಾಗುವುದಿಲ್ಲ. ಇನ್ನು ರಾಜ್ಯವನ್ನು ಸಹಾಯ- ವಿಲ್ಲದೇ ಪಾಲಿಸುವುದು ಹೇಗೆ? ಆದ್ದರಿಂದ ರಾಜನ ಅರ್ಥಸಚಿವನಾದವನು ಎಂತಹ ಸ್ವಭಾವವನ್ನು ಹೊಂದಿರಬೇಕು? ಎಂತಹ ಆಚಾರವನ್ನು ಹೊಂದಿರ- ಬೇಕು? ರಾಜನು ಯಾರಲ್ಲಿ ವಿಶ್ವಾಸವನ್ನು ಮಾಡಬೇಕು, ಯಾರಲ್ಲಿ ವಿಶ್ವಾಸವನ್ನು ಮಾಡಬಾರದು?
ಭೀಷ್ಮಃ
ಚತುರ್ವಿಧಾನಿ ಮಿತ್ರಾಣಿ ರಾಜ್ಞಾಂ ರಾಜನ್ ಭವಂತ್ಯುತ |
ಸಹಾರ್ಥೋ ಭಜಮಾನಶ್ಚ ಸಹಜಃ ಕೃತ್ರಿಮಸ್ತಥಾ ॥3॥
ಭೀಷ್ಮರು ರಾಜನೇ ರಾಜನಿಗೆ ಸಹಾರ್ಥ, ಭಜಮಾನ, ಸಹಜ, ಮತ್ತು ಕೃತ್ರಿಮ ಎಂದು ನಾಲ್ಕುವಿಧವಾದ ಮಿತ್ರರಿರುತ್ತಾರೆ. ಸಹಾರ್ಥ ಎಂದರೆ ಒಂದೇ ಗ್ರಾಮಕ್ಕೆ ನಡೆದುಕೊಂಡು ಹೋಗುವ ಇಬ್ಬರಿಗೆ ಉಂಟಾಗುವ ಮೈತ್ರಿ. ಭಜಮಾನ ಎಂದರೆ ತನ್ನ ಪ್ರಯೋಜನಕ್ಕಾಗಿ ರಾಜನನ್ನು ಸೇವಿಸುವವನು. ರಾಜನ ಶರೀರಸಂಬಂಧಿಯಾದವನು ಸಹಜ. ಸಂಬಳಕ್ಕೆ ಇಟ್ಟು- ಕೊಂಡವನು ಕೃತ್ರಿಮ ಲಕ್ಷ್ಯಾಲಂಕಾರ.
ಧರ್ಮಾತ್ಮಾ ಪಂಚಮಂ ಮಿತ್ರಂ ಸ ತು ನೈಕಸ್ಯ ನ ದ್ವಯೋಃ |
ಯತೋ ಧರ್ಮಸ್ತತೋ ವಾ ಸ್ಯಾದ್ ಧರ್ಮಸ್ಥೋ ವಾ ತತೋ ಭವೇತ್ ॥
ಧರ್ಮಾತ್ಮನಾದವನು ಐದನೆಯ ಮಿತ್ರ. ಅವನು ಒಬ್ಬನಿಗೆ ಅಥವಾ ಇಬ್ಬರಿಗೆ ಮಿತ್ರನಲ್ಲ. ಎಲ್ಲರಿಗೂ ಮಿತ್ರನಾದವನು. ಎಲ್ಲಿ ಧರ್ಮವಿದೆಯೋ ಅವನನ್ನು ರಾಜನು ಮಿತ್ರನನ್ನಾಗಿ ಮಾಡಿಕೊಳ್ಳಬೇಕು. ಆ ಧರ್ಮಾತ್ಮನ ಸಂಬಂಧದಿಂದ ಇನ್ನೊಬ್ಬನೂ ಧರ್ಮಸ್ಥನಾದಾನು!
ಯಸ್ತಸ್ಯಾರ್ಥೋ ನ ರೋಚೇತ ನ ತಂ ತಸ್ಯ ಪ್ರಕಾಶಯೇತ್ |
ಮಿತ್ರಾಣಾಂ ಪ್ರಕೃತಿರ್ನಾಸ್ತಿ ತ್ವಮಿತ್ರಾಣಾಂ ಚ ಭಾರತ |
ಉಪಕಾರಾದ್ ಭವೇನ್ಮಿತ್ರಮಪಕಾರಾದ್ ಭವೇದರಿಃ ॥5॥
ಯಾರಿಗೆ ತನ್ನ ಅಭಿಪ್ರಾಯವು ಹಿಡಿಸುವುದಿಲ್ಲವೋ ಅವರಿಗೆ ಅದನ್ನು ಹೇಳ- ಬಾರದು. ಎಲೈ ಭಾರತನೇ! ಮಿತ್ರನಿಗಾಗಲೀ,

ಶತ್ರುಗಳಿಗಾಗಲೀ, ಒಂದು ಸ್ವಭಾವ- ವೆಂಬುದು ಇಲ್ಲ. ಉಪಕಾರದಿಂದ ಮಿತ್ರರಾಗುತ್ತಾರೆ. ಅಪಕಾರದಿಂದ ಶತ್ರುಗಳಾ- ಗುತ್ತಾರೆ.
ಯಸ್ಯೈವ ಹಿ ಮನುಷ್ಯಸ್ಯ ನರೋ ಮರಣಮಿಚ್ಛತಿ |
ತಸ್ಯ ಪರ್ಯಾಗತೇ ಕಾಲೇ ಪುನರ್ಜೀವಿತಮಿಚ್ಛತಿ |
ಧರ್ಮಾಧರ್ಮೇಣ ರಾಜಾನಶ್ಚರಂತಿ ವಿಜಿಗೀಷವಃ ॥6॥
ಯಾವ ಮನುಷ್ಯನಿಗೆ ಒಬ್ಬನು ಮರಣವನ್ನು ಬಯಸುತ್ತಾನೆಯೋ ಅದೇ ಮನುಷ್ಯನು ಕಾಲಕ್ರಮದಲ್ಲಿ ಪುನಃ ಅದೇ ವ್ಯಕ್ತಿಯ ಜೀವನವನ್ನು ಬಯಸುತ್ತಾನೆ. ಧರ್ಮರಕ್ಷಣೆಯ ಅಧರ್ಮಶಿಕ್ಷಣೆಯ ನಿಮಿತ್ತದಿಂದಾಗಿ ಜಯವನ್ನು ಹೊಂದಲು ಬಯಸುವ ರಾಜರು ಪ್ರವೃತ್ತಿಯನ್ನು ಮಾಡುತ್ತಾರೆ.
ಚತುರ್ಣಾಂ ಮಧ್ಯಮೌ ಶ್ರೇಷ್ಠೌ ನಿತ್ಯಂ ಶಂಕ್ಯೌ ತಥಾಪರೌ |
ಸರ್ವೈರ್ನಿತ್ಯಂ ಶಂಕಿತವ್ಯಂ ಪ್ರತ್ಯಕ್ಷಂ ಕಾರ್ಯಮಾತ್ಮನಃ ॥7॥
ನಾಲ್ಕು ಜನ ಮಿತ್ರರ ಮಧ್ಯೆ ಮಧ್ಯದ ಇಬ್ಬರು ಶ್ರೇಷ್ಠರಾದವರು. ಉಳಿದ ಇಬ್ಬರನ್ನು ಯಾವಾಗಲೂ ಶಂಕಿಸಬೇಕು. ಯಾವ ಕಾರ್ಯವು ತನಗೆ ಮಾತ್ರ ಸಾಕ್ಷಿಸಿದ್ಧವಾಗಿದೆಯೋ ಅದನ್ನು ಎಲ್ಲರನ್ನೂ ಶಂಕಿಸಿ ಯಾರಿಗೂ ಹೇಳಬಾರದು. (ಲಕ್ಷ್ಮಾಲಂಕಾರ)
ನಹಿ ರಾಜ್ಞಾ ಪ್ರಮಾದೋ ವೈ ಕರ್ತವ್ಯೋ ಮಿತ್ರರಕ್ಷಣೇ |
ಪ್ರಮಾದಿನಂ ಹಿ ರಾಜಾನಂ ಲೋಕಾಃ ಪರಿಭವಂತ್ಯುತ ॥8॥
ರಾಜನು ಮಿತ್ರರಕ್ಷಣೆಯ ವಿಷಯದಲ್ಲಿ ಪ್ರಮಾದವನ್ನು ಮಾಡಬಾರದು. ಪ್ರಮಾದಶೀಲನಾದ ರಾಜನನ್ನು ಪ್ರಜೆಗಳು ಅವಮಾನಗೊಳಿಸುತ್ತಾರೆ.
ಅಸಾಧುಃ ಸಾಧುತಾಮೇತಿ ಸಾಧುರ್ಭವತಿ ದಾರುಣಃ |
ಅರಿಶ್ಚ ಮಿತ್ರಂ ಭವತಿ ಮಿತ್ರಂ ಚಾಪಿ ಪ್ರದುಷ್ಯತಿ ॥9॥
ಅನಿತ್ಯಚಿತ್ತಃ ಪುರುಷಸ್ತಸ್ಮಿನ್ ಕೋ ಜಾತು ವಿಶ್ವಸೇತ್ |
ತಸ್ಮಾತ್ ಪ್ರಧಾನಂ ಯತ್ ಕಾರ್ಯಂ ಪ್ರತ್ಯಕ್ಷಂ ತತ್ ಸಮಾಚರೇತ್ ॥10॥
ಅಸಾಧುವು ಸಾಧುವಾಗುತ್ತಾನೆ. ಸಾಧುವು ಕ್ರೂರನಾಗುತ್ತಾನೆ. ಶತ್ರುವು ಮಿತ್ರ- ನಾಗುತ್ತಾನೆ. ಮಿತ್ರನು ದುಷ್ಟನಾಗುತ್ತಾನೆ. ಪುರುಷನ ಮನಸ್ಸು ಚಂಚಲವಾದುದು. ಅವನಲ್ಲಿ ಯಾರು ವಿಶ್ವಾಸಮಾಡಿಯಾರು? ಆದ್ದರಿಂದ ದಂಡಯಾತ್ರೆಯೇ ಮೊದ- ಲಾದ ಪ್ರಧಾನ ಕಾರ್ಯಗಳನ್ನು ಪ್ರತ್ಯಕ್ಷವಾಗಿಯೇ ಮಾಡಬೇಕು. (ಲಕ್ಷ್ಮಾಲಂಕಾರ)
ಏಕಾಂತೇನ ಹಿ ವಿಶ್ವಾಸಃ ಕೃತ್ಸ್ನೋ ಧರ್ಮಾರ್ಥನಾಶಕಃ |
ಅವಿಶ್ವಾಸಶ್ಚ ಸರ್ವತ್ರ ಮೃತ್ಯುನಾ ನ ವಿಶಿಷ್ಯತೇ ॥11॥
ಒಂದು ವ್ಯಕ್ತಿಯಲ್ಲಿ ಯಾವಾಗಲೂ ವಿಶ್ವಾಸವನ್ನು ಮಾಡುವುದು ಧರ್ಮಾ- ರ್ಥಗಳನ್ನು ಸಮಗ್ರವಾಗಿ ನಾಶಮಾಡುವಂತಹದು. ಯಾವಾಗಲೂ ಅವಿಶ್ವಾಸವನ್ನು ಮಾಡುವುದು ಮೃತ್ಯುವಿಗಿಂತ ಬೇರೆಯಲ್ಲ.
ಅಕಾಲಮೃತ್ಯುರ್ವಿಶ್ವಾಸೋ ವಿಶ್ವಸನ್ ಹಿ ವಿಪದ್ಯತೇ |
ಯಸ್ಮಿನ್ ಕರೋತಿ ವಿಶ್ವಾಸಮಿಚ್ಛಾತಸ್ತಸ್ಯ ಜೀವತಿ ॥12॥
ವಿಶ್ವಾಸವೆಂಬುದು ಅಕಾಲಮೃತ್ಯುಪ್ರದವಾದುದು. ವಿಶ್ವಾಸವನ್ನು ಮಾಡುವ- ವನು ವಿಪತ್ತಿಗೆ ಒಳಗಾಗುತ್ತಾನಷ್ಟೇ! ಯಾವನಲ್ಲಿ ವಿಶ್ವಾಸ ಮಾಡುತ್ತಾನೆಯೋ ಅವನ ಇಚ್ಛೆಯಿಂದ ರಾಜನು (ಇನ್ನೊಬ್ಬನು) ಜೀವಿಸುತ್ತಾನೆ.
ತಸ್ಮಾದ್ ವಿಶ್ವಸಿತವ್ಯಂ ಚ ಶಂಕಿತವ್ಯಂ ಚ ಕೇಷುಚಿತ್ |
ಏಷಾ ನೀತಿಗತಿಸ್ತಾತ ಲಕ್ಷ್ಮೀಶ್ಚೈವ ಸನಾತನೀ ॥13॥
ಆದ್ದರಿಂದ ಕೆಲವರಲ್ಲಿ ವಿಶ್ವಾಸ ಮಾಡಬೇಕು. ಕೆಲವರಲ್ಲಿ ವಿಶ್ವಾಸವನ್ನು ಮಾಡದೇ ಅವರನ್ನು ಶಂಕಿಸಬೇಕು. ಪ್ರೀತಿಪಾತ್ರನೇ! ಇದು ನೀತಿಯ ಮಾರ್ಗ. ಸನಾತನವಾದ ಸಂಪತ್ತಿಗೆ ಕಾರಣವಾದುದು.
ಯಂ ಮನ್ಯೇತ ಮಮಾಭಾವಾದಿಮಮರ್ಥಾಗಮಃ ಸ್ಪೃಶೇತ್ |
ನಿತ್ಯಂ ತಸ್ಮಾಚ್ಛಂಕಿತವ್ಯಮಮಿತ್ರಂ ತಂ ವಿದುರ್ಬುಧಾಃ ॥14॥
ನಾನಿಲ್ಲದಿದ್ದರೆ ನನ್ನ ಎಲ್ಲ ಸಂಪತ್ತೂ ಇವನಲ್ಲಿ ಸೇರುತ್ತದೆ ಎಂದು ಯಾವನನ್ನು ತಿಳಿಯುತ್ತಾನೆಯೋ ಅವನನ್ನು ಯಾವಾಗಲೂ ಶಂಕಿಸಬೇಕು. ವಿವೇಕಿಗಳು ಅಂತಹ- ವನನ್ನು ಶತ್ರುವೆಂದು ಹೇಳುತ್ತಾರೆ.
ಯಸ್ಯ ಕ್ಷೇತ್ರಾದಪ್ಯುದಕಂ ಕ್ಷೇತ್ರಮನ್ಯಸ್ಯ ಗಚ್ಛತಿ |
ನ ತತ್ರಾನಿಚ್ಛತಸ್ತಸ್ಯ ಭಿದ್ಯೇರನ್ ಸರ್ವಸೇತವಃ ॥15॥
ತಥೈವಾತ್ಯುದಕಾದ್ ಭೀತಸ್ತಸ್ಯ ಭೇದನಮಿಚ್ಛತಿ |
ಯಮೇವಂಲಕ್ಷಣಂ ವಿದ್ಯಾತ್ ತಮಮಿತ್ರಂ ವಿದುರ್ಬುಧಾಃ ॥16॥
ಯಃ ಸಮೃದ್ಧ್ಯಾ ನ ತುಷ್ಯೇತ ಕ್ಷಯೇ ದೀನತರೋ ಭವೇತ್ |
ಏತದುತ್ತಮಮಿತ್ರಸ್ಯ ನಿಮಿತ್ತಮಭಿಚಕ್ಷತೇ ॥17॥
ಯಾವನ ಭೂಮಿಯಿಂದ ಇನ್ನೊಬ್ಬನ ಭೂಮಿಗೆ ನೀರು ಹರಿಯುತ್ತದೆಯೋ ಅಲ್ಲಿಯೂ ಸಹ ಮೇಲಿನ ಭೂಮಿಯವನು ಇಷ್ಟಪಡದಿದ್ದರೆ ಕಟ್ಟೆಗಳನ್ನು ಒಡೆದು ಕೆಳಗಿನ ಭೂಮಿಯವನಿಗೆ ನೀರು ಹರಿಯುವುದಿಲ್ಲ. ಮೊದಲನೆಯವನ ಕ್ಷೇತ್ರದಲ್ಲಿ ಬಹಳ ಜಲಪ್ರವಾಹ ಉಂಟಾದರೆ ತನ್ನ ಕ್ಷೇತ್ರದ ನಾಶದ ಭಯದಿಂದ ಅವನು ಕಟ್ಟೆಗಳನ್ನು ಒಡೆದು ಇನ್ನೊಬ್ಬನ ಕ್ಷೇತ್ರಕ್ಕೆ ಅದೂ ಹಾಳಾಗಲಿ ಎಂಬ ಅಭಿಪ್ರಾಯ- ದಿಂದ ನೀರನ್ನು ಬಿಡುತ್ತಾನೆ. ಅಂತಹ ಸ್ವಭಾವವುಳ್ಳವನನ್ನು ವಿವೇಕಿಗಳು ಶತ್ರುವೆಂದು ತಿಳಿಯುತ್ತಾರೆ. ಯಾವನು ಇನ್ನೊಬ್ಬನ ಸಮೃದ್ಧಿಯಿಂದ ತೃಪ್ತನಾಗುವುದಿಲ್ಲವೋ ಕ್ಷಯವುಂಟಾದರೆ ಬಹಳ ದೀನನಾಗುತ್ತಾನೆಯೋ ಅದು ಉತ್ತಮಮಿತ್ರನ ಲಕ್ಷಣ- ವೆಂದು ಹೇಳಲ್ಪಡುತ್ತದೆ.

ಯಂ ಮನ್ಯೇತ ಮಮಾಭಾವಾದಸ್ಯಾಭಾವೋ ಭವೇದಿತಿ |
ತಸ್ಮಿನ್ ಕುರ್ವೀತ ವಿಶ್ವಾಸಂ ಯಥಾ ಪಿತರಿ ವೈ ತಥಾ ॥18॥
ಯಾವನ ವಿಷಯದಲ್ಲಿ ನಾನು ಇಲ್ಲದಿದ್ದರೆ ಇವನೂ ಇರುವುದಿಲ್ಲ ಎಂದು ತಿಳಿಯುತ್ತಾನೆಯೋ ಅಂತಹ ವ್ಯಕ್ತಿಯಲ್ಲಿ ಪುತ್ರನು ತಂದೆಯಲ್ಲಿ ವಿಶ್ವಾಸ ಮಾಡಿ- ದಂತೆ ವಿಶ್ವಾಸವನ್ನು ಮಾಡಬೇಕು.
ತಂ ಶಕ್ತ್ಯಾ ವರ್ಧಮಾನಶ್ಚ ಸರ್ವತಃ ಪರಿಬೃಂಹಯೇತ್ |
ನಿತ್ಯಂ ಕ್ಷತಾದ್ ವಾರಯತಿ ಯೋ ಧರ್ಮೇಷ್ವಪಿ ಕರ್ಮಸು ॥19॥
ಯಾವನು ನಿತ್ಯವೂ ತನ್ನನ್ನು ವ್ರಣಗಳಿಂದ (ನಷ್ಟಗಳಿಂದ) ವಾರಣೆ ಮಾಡು- ತ್ತಾನೆಯೋ ಧರ್ಮಕಾರ್ಯಗಳಲ್ಲೂ ಸಹಾಯವಾಗಿರುತ್ತಾನೆಯೋ ಅಂತಹವನನ್ನು ತಾನು ಶಕ್ತಿಯಿಂದ ಬೆಳೆದಂತೆ ಸರ್ವಪ್ರಕಾರದಿಂದ ಬೆಳೆಸಬೇಕು.
ಕ್ಷತಾದ್ ಭೀತಂ ವಿಜಾನೀಯಾದುತ್ತಮಂ ಮಿತ್ರಲಕ್ಷಣಮ್ |
ಯೇ ತಸ್ಯ ಕ್ಷತಮಿಚ್ಛಂತಿ ತೇ ತಸ್ಯ ರಿಪವಃ ಸ್ಮೃತಾಃ ॥20॥
ಯಾವನು ಮಿತ್ರನ ಕೇಡಿಗೆ ಹೆದರುತ್ತಾನೆಯೋ ಅವನೇ ಉತ್ತಮನಾದ ಮಿತ್ರ. ಯಾರು ಅವನಿಗೆ ಕೇಡನ್ನು ಬಯಸುತ್ತಾರೆಯೋ ಅವರು ಶತ್ರುಗಳೆಂದು ಹೇಳಲ್ಪಡುತ್ತಾರೆ.
ವ್ಯಸನಾನ್ನಿತ್ಯಭೀತೋಽಸೌ ಸಮೃದ್ಧ್ಯಾಮೇವ ತೃಪ್ಯತೇ |
ಯತ್ ಸ್ಯಾದೇವಂವಿಧಂ ಮಿತ್ರಂ ತದಾತ್ಮಸಮಮುಚ್ಯತೇ ॥21॥
ಯಾವನು ಇನ್ನೊಬ್ಬನಿಗೆ ಉಂಟಾಗಬಹುದಾದ ವ್ಯಸನದಿಂದ ನಿತ್ಯವೂ ಹೆದರಿ ಸಮೃದ್ಧಿಯಲ್ಲಿ ಮಾತ್ರ ತೃಪ್ತಿಪಡುತ್ತಾನೆಯೋ ಅಂತಹವನನ್ನು ಆತ್ಮಸಮನಾದ ಮಿತ್ರ ಎಂದು ಕರೆಯುತ್ತಾರೆ.
ರೂಪವರ್ಣಸ್ವರೋಪೇತಸ್ತಿತಿಕ್ಷುರನಸೂಯಕಃ |
ಕುಲೀನಃ ಶೀಲಸಂಪನ್ನಃ ಸ ತೇ ಸ್ಯಾತ್ ಪ್ರತ್ಯನಂತರಃ ॥22॥
(ಇನ್ನು ಅಮಾತ್ಯರ ಸ್ವರೂಪವು ಹೇಳಲ್ಪಡುತ್ತದೆ) ಎಲೈ ಯುಧಿಷ್ಠಿರನೇ! ಯಾವನು ರೂಪವರ್ಣಸ್ವರದಿಂದ ಕೂಡಿದವನಾಗಿ, ಕಷ್ಟಸಹಿಷ್ಣುವಾಗಿ, ಅಸೂಯಾರಹಿತನಾಗಿ, ಒಳ್ಳೆಯ ಕುಲದಲ್ಲಿ ಜನಿಸಿ ಶೀಲಸಂಪನ್ನನಾಗಿರುತ್ತಾನೆಯೋ ಅವನು ನಿನ್ನ ಅಮಾತ್ಯನಾಗಲಿ.
ಮೇಧಾವೀ ಸ್ಮೃತಿಮಾನ್ ದಕ್ಷಃ ಪ್ರಕೃತ್ಯಾ ಚಾನೃಶಂಸವಾನ್ |
ಯೋ ಮಾನಿತೋಽಮಾನಿತೋ ವಾ ನ ಸಂದೂಷ್ಯೇತ್ ಕದಾಚನ ॥23॥
ಮೇಧಾವಿಯೂ, ಸ್ಮೃತಿವಂತನೂ, ದಕ್ಷನೂ, ಸ್ವಭಾವದಿಂದಲೇ ದಯಾ- ಪರನೂ, ಸನ್ಮಾನವನ್ನು ಮಾಡಿದರೂ ಅಥವಾ ಅವಮಾನವನ್ನು ಮಾಡಿದರೂ ಎಂದೂ ದೂಷಿಸದಿದ್ದವನು ನಿನ್ನ ಅಮಾತ್ಯನಾಗಲಿ.
ಋತ್ವಿಗ್ ವಾ ಯದಿ ವಾಚಾರ್ಯಃ ಸಖಾ ವಾತ್ಯಂತಸಂಸ್ತುತಃ |
ಗೃಹೇ ವಸೇದಮಾತ್ಯಸ್ತೇ ಯಃ ಸ್ಯಾತ್ ಪರಮಪೂಜಿತಃ ॥24॥
ಋತ್ವಿಜನಾಗಲೀ ಅಥವಾ ಆಚಾರ್ಯನಾಗಲೀ ಅಥವಾ ಅತ್ಯಂತಸಂಬದ್ಧನಾದ ಮಿತ್ರನಾಗಲೀ ಅಥವಾ ಪರಮಪೂಜಿತನಾದ ಅಮಾತ್ಯನಾಗಲೀ ಅವನು ನಿನ್ನ ಮನೆಯಲ್ಲಿ ವಾಸಿಸಲಿ.
ಸ ತೇ ವಿದ್ಯಾತ್ ಪರಂ ಮಂತ್ರಂ ಪ್ರಕೃತಿಂ ಚಾರ್ಥಧರ್ಮಯೋಃ |
ವಿಶ್ವಾಸಸ್ತೇ ಭವೇತ್ ತತ್ರ ಯಥಾ ಪಿತರಿ ವೈ ತಥಾ ॥25॥
ಅವರು ಅರ್ಥ ಮತ್ತು ಧರ್ಮಗಳ ವಿಷಯದಲ್ಲಿ ನಿನ್ನ ಮಂತ್ರಾಲೋಚನೆ- ಯನ್ನು ಮತ್ತು ಸ್ವಭಾವವನ್ನು ತಿಳಿಯಬೇಕು. ಅವರಲ್ಲಿ ನೀನು ತಂದೆಯಲ್ಲಿ ಮಾಡಿದಂತೆ ವಿಶ್ವಾಸವನ್ನು ಮಾಡಬೇಕು.
ನೈವ ದ್ವೌ ನ ತ್ರಯಃ ಕಾರ್ಯಾ ನ ಮೃಷ್ಯೇರನ್ ಪರಸ್ಪರಮ್ |
ಏಕಾರ್ಥಾದಿಹ ಭೂತಾನಾಂ ಭೇದೋ ಭವತಿ ಸರ್ವಥಾ ॥26॥
ಇಬ್ಬರನ್ನು ಅಥವಾ ಮೂವರನ್ನು ಅಮಾತ್ಯರನ್ನಾಗಿ ಮಾಡಬಾರದು. ಅವರು ಪರಸ್ಪರವಾಗಿ ಸಹಿಸುವುದಿಲ್ಲ. ಎಲ್ಲರೂ ಒಂದೇ ಕಾರ್ಯವನ್ನು ಮಾಡಲು ಹೊರಟಾಗ ಅವರಲ್ಲಿ ಸರ್ವಥಾ ವಿರೋಧವುಂಟಾಗುತ್ತದೆ.
ಕೀರ್ತಿಪ್ರದಾನೋ ಯಶ್ಚ ಸ್ಯಾದ್ ಯಶ್ಚ ಸ್ಯಾತ್ ಸಮಯೇ ಸ್ಥಿತಃ |
ಸಮರ್ಥಾನ್ ಯಶ್ಚ ನ ದ್ವೇಷ್ಟಿ ಸಮರ್ಥಾನ್ ಕುರುತೇ ಚ ಯಃ ॥27॥
ಯೋ ನ ಕಾಮಾದ್ ಭಯಾಲ್ಲೋಭಾತ್ ಕ್ರೋಧಾದ್ ವಾ
ಧರ್ಮಮುತ್ಸೃಜೇತ್ |
ದಕ್ಷಃ ಪರ್ಯಾಪ್ತವಚನಃ ಸ ತೇ ಸ್ಯಾತ್ ಪ್ರತ್ಯನಂತರಃ ॥28॥
ಯಾವನು ನಿನಗೆ ಕೀರ್ತಿಯನ್ನು ಉಂಟುಮಾಡುತ್ತಾನೆಯೋ, ಯಾವನು ಕಟ್ಟಳೆಯಂತೆ ನಡೆದುಕೊಳ್ಳುತ್ತಾನೆಯೋ, ಯಾವನು ಸಮರ್ಥರನ್ನು ದ್ವೇಷಿಸುವು- ದಿಲ್ಲವೋ, ಅಶಕ್ತರನ್ನು ಸಮರ್ಥರನ್ನಾಗಿ ಮಾಡುತ್ತಾನೆಯೋ, ಯಾವನು ಕಾಮ- ದಿಂದಲಾಗಲೀ ಕ್ರೋಧದಿಂದಾಗಲೀ ಭಯದಿಂದಾಗಲೀ ಲೋಭದಿಂದಾಗಲೀ ಧರ್ಮವನ್ನು ತ್ಯಜಿಸುವುದಿಲ್ಲವೋ ಅಂತಹ ದಕ್ಷನು ಒಳ್ಳೆಯ ಮಾತನಾಡುವವನು ಆದವನು ನಿನಗೆ ಅಮಾತ್ಯನಾಗಲಿ.
ಶೂರಶ್ಚಾರ್ಯಶ್ಚ ವಿದ್ವಾಂಶ್ಚ ಪ್ರತಿಪತ್ತಿವಿಶಾರದಃ |
ಕುಲೀನಃ ಶೀಲಸಂಪನ್ನಸ್ತಿತಿಕ್ಷುರನಸೂಯಕಃ ॥29॥
ಏತೇ ಹ್ಯಮಾತ್ಯಾಃ ಕರ್ತವ್ಯಾಃ ಸರ್ವಕರ್ಮಸ್ವವಸ್ಥಿತಾಃ |
ಪೂಜಿತಾಃ ಸಂವಿಭಕ್ತಾಶ್ಚ ಸುಸಹಾಯಾಃ ಸ್ವನುಷ್ಠಿತಾಃ ॥30॥

ಶೂರರೂ, ಉದಾರವಾದ ನಡತೆಯುಳ್ಳವರೂ, ವಿದ್ವಾಂಸರೂ, ಶೀಘ್ರವಾಗಿ ತಿಳಿದುಕೊಳ್ಳುವುದರಲ್ಲಿ ಸಮರ್ಥರಾದವರೂ, ಸತ್ಕುಲದಲ್ಲಿ ಜನಿಸಿದವರೂ, ಶೀಲ- ಸಂಪನ್ನರೂ, ಕಷ್ಟ ಸಹಿಷ್ಣುಗಳೂ, ಅಸೂಯಾರಹಿತರೂ ಆದವರನ್ನು ಸರ್ವ- ಕರ್ಮಗಳಲ್ಲಿ ಅಮಾತ್ಯರನ್ನಾಗಿ ಮಾಡಬೇಕು. ಅವರು ಪೂಜಿತರಾಗಿ ರಾಜನ ಸಂಪತ್ತನ್ನು ಹಂಚಿಕೊಂಡು ಒಳ್ಳೆಯ ಸಹಾಯದಿಂದ ಕೂಡಿದವರಾಗಿ ಒಳ್ಳೆಯ ಕಾರ್ಯಾನುಷ್ಠಾನವನ್ನು ಮಾಡುವಂತೆ ಮಾಡಬೇಕು.

ಕೃತ್ಸ್ನಮೇತೇ ವಿನಿಕ್ಷಿಪ್ತಾಃ ಪ್ರತಿರೂಪೇಷು ಕರ್ಮಸು |
ಯುಕ್ತಾ ಮಹತ್ಸು ಕಾರ್ಯೇಷು ಶ್ರೇಯಾಂಸ್ಯುತ್ಪಾದಯಂತಿ ಚ ||31||

ಅವರೆಲ್ಲರನ್ನೂ ಅವರವರಿಗೆ ಯೋಗ್ಯವಾದ ಕಾರ್ಯಗಳಲ್ಲಿ ನಿಯೋಜಿ- ಸಬೇಕು. (ಒಂದೇ ಕಾರ್ಯದಲ್ಲಿ ಅನೇಕರನ್ನು ನಿಯೋಜಿಸಬಾರದು). ದೊಡ್ಡ ಕಾರ್ಯಗಳಲ್ಲಿ ನಿಯೋಜಿಸಲ್ಪಟ್ಟರೆ ಅವರು ರಾಜನಿಗೆ ಶ್ರೇಯಸ್ಸನ್ನು ಉಂಟು ಮಾಡುವರು.

ಏತೇ ಕರ್ಮಾಣಿ ಕುರ್ವಂತಿ ಸ್ಪರ್ಧಮಾನಾ ಮಿಥಃ ಸದಾ |
ಅನುತಿಷ್ಠಂತಿ ಚೈವಾರ್ಥಾನಾಚಕ್ಷಾಣಾಃ ಪರಸ್ಪರಮ್ ||32||

ಅಂತಹವರು ಪರಸ್ಪರವಾಗಿ ಸ್ಪರ್ಧೆ ಮಾಡುತ್ತಾ ಕಾರ್ಯಗಳನ್ನು ಮಾಡುವರು. ಪರಸ್ಪರವಾಗಿ ಮಾತನಾಡಿಕೊಂಡು ತಮಗೆ ಒಪ್ಪಿಸಿದ ಕಾರ್ಯಗಳನ್ನು ಅನುಷ್ಠಾನಕ್ಕೆ ತರುವರು.

ಜ್ಞಾತಿಭ್ಯೋ ಬಿಭಿಯಾಚ್ಚೈವ ಮೃತ್ಯೋರಿವ ಯತಃ ಸದಾ |
ಉಪರಾಜೇವ ರಾಜರ್ಧಿಂ ಜ್ಞಾತಿರ್ನ ಸಹತೇ ಸದಾ ||33||

(ಇನ್ನು ಜ್ಞಾತಿಗಳ ಸ್ವರೂಪವನ್ನು ಹೇಳುತ್ತಾರೆ) ರಾಜನು ಮೃತ್ಯುವಿಗೆ ಹೆದರಿ- ದಂತೆ ದುಷ್ಟ ಜ್ಞಾತಿಗಳಿಗೆ ಯಾವಾಗಲೂ ಹೆದರಬೇಕು. ಸಾಮಂತರಾಜನು ರಾಜನ ಸಮೃದ್ಧಿಯನ್ನು ನೋಡಿ ಸಹಿಸದಂತೆ ಜ್ಞಾತಿಯು ರಾಜನ ಸಮೃದ್ಧಿಯನ್ನು ಸಹಿಸು- ವುದಿಲ್ಲ.

ಋಜೋರ್ಮೃದೋರ್ವದಾನ್ಯಸ್ಯ ಹ್ರೀಮತಃ ಸತ್ಯವಾದಿನಃ |
ನಾನ್ಯೋ ಜ್ಞಾತೇರ್ಮಹಾಬಾಹೋ ವಿನಾಶಮಭಿನಂದತಿ ||34||

ಎಲೈ ಮಹಾಬಾಹುವೇ! ಋಜುವೂ, ಮೃದುವೂ, ಉದಾರಿಯೂ, ನಾಚಿಕೆ- ಯುಳ್ಳವನೂ, ಸತ್ಯವಾದಿಯೂ ಆದ ರಾಜನಿಗೆ ಜ್ಞಾತಿಯನ್ನು ಬಿಟ್ಟು ಬೇರೆ ಯಾವನೂ ವಿನಾಶವನ್ನು ಬಯಸುವುದಿಲ್ಲ.

ಅಜ್ಞಾತಿತಾ ನಾತಿಸುಖಾ ಜ್ಞಾತಯೋಽಪಿ ಸುಖಾವಹಾಃ |
ಅಜ್ಞಾತಿಮಂತಂ ಪುರುಷಂ ಪರೇ ಪರಿಭವಂತ್ಯುತ ||35||

ಜ್ಞಾತಿಗಳು ಇಲ್ಲದಿರುವುದೇ ದೊಡ್ಡ ಸುಖವಲ್ಲ. ಜ್ಞಾತಿಗಳು ದೊಡ್ಡ ಸುಖವನ್ನು ಉಂಟುಮಾಡಲು ಸಮರ್ಥರು. ಜ್ಞಾತಿಗಳು ಇಲ್ಲದಿರುವ ಪುರುಷನನ್ನು ಶತ್ರುಗಳು (ಅಥವಾ ಬೇರೆಯವರು) ಸೋಲಿಸುತ್ತಾರೆ.

ನಿಕೃತಸ್ಯ ನರೈರನ್ಯೈರ್ಜ್ಞಾತಿರೇವ ಪರಾಯಣಮ್ |
ನಾನ್ಯೈರ್ನಿಕಾರಂ ಸಹತೇ ಜ್ಞಾತೇರ್ಜ್ಞಾತಿಃ ಕದಾಚನ ||36||

ಇನ್ನೊಬ್ಬರಿಂದ ಅವಮಾನಕ್ಕೊಳಗಾದರೆ ಆಗ ಜ್ಞಾತಿಯೇ ಶ್ರೇಷ್ಠನಾದ ಆಶ್ರಯ- ನಾಗುತ್ತಾನೆ. ಜ್ಞಾತಿಯಾದವನು ತನ್ನ ಜ್ಞಾತಿಗೆ ಇನ್ನೊಬ್ಬನಿಂದಾಗುವ ಅವಮಾನವನ್ನು ಎಂದೂ ಸಹಿಸುವುದಿಲ್ಲ.

ಆತ್ಮಾನಮೇವ ಜಾನಾತಿ ನಿಕೃತಂ ಬಾಂಧವೈರಪಿ |
ತೇಷು ಸಂತಿ ಗುಣಾಶ್ಚೈವ ನೈರ್ಗುಣ್ಯಂ ಚೈವ ಲಕ್ಷ್ಯತೇ ||37||

ಬಾಂಧವರು ಜ್ಞಾತಿಗೆ ಅವಮಾನವನ್ನು ಮಾಡಿದರೂ ಅದು ತನಗೇ ಆದ ಅವಮಾನವೆಂದು ತಿಳಿಯುತ್ತಾನೆ. ಜ್ಞಾತಿಗಳಲ್ಲಿ ಗುಣಗಳೂ ಇವೆ. ದೋಷಗಳೂ ಕಂಡುಬರುತ್ತವೆ.

ನಾಜ್ಞಾತಿರನುಗೃಹ್ಣಾತಿ ನಾಜ್ಞಾತಿರ್ದಿಗ್ಧಮಸ್ಯತಿ |
ಉಭಯಂ ಜ್ಞಾತಿಲೋಕೇಷು ದೃಶ್ಯತೇ ಸಾಧ್ವಸಾಧು ಚ ||38||

ಜ್ಞಾತಿಯಲ್ಲದವನು ಅನುಗ್ರಹವನ್ನೂ ಮಾಡುವುದಿಲ್ಲ. ಜ್ಞಾತಿಯಲ್ಲದವನು ದ್ರೋಹವನ್ನೂ ಮಾಡುವುದಿಲ್ಲ. (ವಿಷದ ಬಾಣವನ್ನು ಪ್ರಯೋಗಿಸುವುದಿಲ್ಲ) ಜ್ಞಾತಿ ಸಮೂಹದಲ್ಲಿ ಒಳ್ಳೆಯದು ಮತ್ತು ಕೆಟ್ಟುದು ಎರಡೂ ಕಂಡು ಬರುತ್ತದೆ.

ತಾನ್ ಮಾನಯೇತ್ ಪೂಜಯೇಚ್ಚ ನಿತ್ಯಂ ವಾಚಾ ಚ ಕರ್ಮಣಾ |
ಕುರ್ಯಾಚ್ಚ ಪ್ರಿಯಮೇತೇಭ್ಯೋ ನಾಪ್ರಿಯಂ ಕಿಂಚಿದಾಚರೇತ್ ||39||

ಜ್ಞಾತಿಗಳನ್ನು ಮಾತಿನಿಂದಲೂ, ಕ್ರಿಯೆಯಿಂದಲೂ ನಿತ್ಯವೂ ಸನ್ಮಾನಿಸಬೇಕು; ಪೂಜಿಸಬೇಕು. ಅವರಿಗೆ ಪ್ರಿಯವನ್ನುಂಟುಮಾಡಬೇಕು. ಸ್ವಲ್ಪವೂ ಅಪ್ರಿಯವನ್ನು ಮಾಡಬಾರದು.

ವಿಶ್ವಸ್ತವದವಿಶ್ವಸ್ತಸ್ತೇಷು ವರ್ತೇತ ಸರ್ವದಾ |
ನಹಿ ದೋಷೋ ಗುಣೋ ವೇತಿ ನಿರೂಪ್ಯಸ್ತೇಷು ದೃಶ್ಯತೇ ||40||

ಅವರಲ್ಲಿ ಪೂರ್ಣವಿಶ್ವಾಸವನ್ನು ಮಾಡದೇ ವಿಶ್ವಾಸವನ್ನು ಮಾಡಿದವನಂತೆ ನಡೆದುಕೊಳ್ಳಬೇಕು. ಅವರಲ್ಲಿ ಹೇಳಬಹುದಾದ ಗುಣವೆಂಬುದಾಗಲೀ, ದೋಷ- ವೆಂಬುದಾಗಲೀ ಕಂಡು ಬರುವುದಿಲ್ಲ.

ತಸ್ಯೈವಂ ವರ್ತಮಾನಸ್ಯ ಪುರುಷಸ್ಯಾಪ್ರಮಾದಿನಃ |
ಅಮಿತ್ರಾಃ ಸಂಪ್ರಸೀದಂತಿ ತಥಾ ಮಿತ್ರೀಭವಂತ್ಯಪಿ ||41||

ಈ ರೀತಿಯಲ್ಲಿ ಪ್ರಮಾದರಹಿತನಾಗಿ ನಡೆದುಕೊಳ್ಳುವ ರಾಜರಿಗೆ ಶತ್ರುಗಳು ಪ್ರಸನ್ನರಾಗಿ ಮಿತ್ರರಾಗುತ್ತಾರೆ.

ಯ ಏವಂ ವರ್ತತೇ ನಿತ್ಯಂ ಜ್ಞಾತಿಸಂಬಂಧಿಮಂಡಲೇ |
ಮಿತ್ರೇಷ್ವಮಿತ್ರೇಽಪ್ಯೈಶ್ವರ್ಯೇ ಚಿರಂ ಯಶಸಿ ತಿಷ್ಠತಿ ||42||

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ರಾಜಧರ್ಮೇ ದ್ವ್ಯಶೀತಿತಮೋಽಧ್ಯಾಯಃ ॥82॥
ಜ್ಞಾತಿ ಮತ್ತು ಸಂಬಂಧಿಗಳ ಸಮೂಹದಲ್ಲಿ ಮಿತ್ರಾಮಿತ್ರರ ವಿಷಯದಲ್ಲಿ ಯಾವನು ಹೀಗೆ ನಡೆದುಕೊಳ್ಳುತ್ತಾನೆಯೋ ಅವನು ಬಹುಕಾಲ ಐಶ್ವರ್ಯವನ್ನು ಮತ್ತು ಕೀರ್ತಿಯನ್ನು ಪಡೆಯುತ್ತಾನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 82ನೆಯ ಅಧ್ಯಾಯವು ಮುಗಿಯಿತು.
* * * * * *

॥ ಶ್ರೀಮಧ್ವೇಶಾರ್ಪಣಮಸ್ತು ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ
ಶ್ರೀಮನ್ಮಹಾಭಾರತೇ ಶಾಂತಿಪರ್ವ
ರಾಜಧರ್ಮಪರ್ವ
83. ಎಂಬತ್ತಮೂರನೆಯ ಅಧ್ಯಾಯ
ಜ್ಞಾತಿಸಂಬಂಧಿಗಳ ಸ್ವಭಾವದ ವಿಷಯದಲ್ಲಿ ಕೃಷ್ಣ-ನಾರದರ ಸಂವಾದ
ಯುಧಿಷ್ಠಿರಃ
ಏವಮಗ್ರಾಹ್ಯಕೇ ತಸ್ಮಿನ್ ಜ್ಞಾತಿಸಂಬಂಧಿಮಂಡಲೇ |
ಮಿತ್ರೇಷ್ವಮಿತ್ರೇಷ್ವಪಿ ಚ ಕಥಂ ಭಾವೋ ವಿಭಾವ್ಯತೇ ॥1॥
ಯುಧಿಷ್ಠಿರ ಈ ರೀತಿಯಲ್ಲಿ ಜ್ಞಾತಿಗಳ ಮತ್ತು ಸಂಬಂಧಿಗಳ ಸಮೂಹವು ಬಹಳವಿಶ್ವಾಸಕ್ಕೆ ಯೋಗ್ಯವಲ್ಲದಿರುವಾಗ ಮಿತ್ರರನ್ನು ಮತ್ತು ಶತ್ರುಗಳನ್ನು ಹೇಗೆ ಸುಧಾರಿಸುವುದು?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವಾಸುದೇವಸ್ಯ ಸಂವಾದಂ ಸುರರ್ಷೇರ್ನಾರದಸ್ಯ ಚ ॥2॥
ಭೀಷ್ಮರು ಈ ವಿಷಯದಲ್ಲಿಯೂ ಕೃಷ್ಣನಿಗೂ ಮತ್ತು ದೇವರ್ಷಿಗಳಾದ ನಾರದರಿಗೂ ನಡೆದ ಪ್ರಾಚೀನವಾದ ಈ ಇತಿಹಾಸವನ್ನು ಹೇಳುತ್ತಾರೆ.
ಶ್ರೀವಾಸುದೇವಃ
ನಾಸುಹೃತ್ ಪರಮಂ ಮಂತ್ರಂ ನಾರದಾರ್ಹತಿ ವೇದಿತುಮ್ |
ಅಪಂಡಿತೋ ವಾಪಿ ಸುಹೃತ್ ಪಂಡಿತೋ ವಾಪಿ ನಾತ್ಮವಾನ್ ॥3॥
ಶ್ರೀವಾಸುದೇವ ನಾರದರೇ! ಸುಹೃಜ್ಜನನಲ್ಲದವನು ರಾಜನ ಮಂತ್ರಾಲೋ- ಚನೆಯನ್ನು ತಿಳಿಯಲು ಯೋಗ್ಯನಲ್ಲ. ಸುಹೃಜ್ಜನನು ಅಪಂಡಿತನಾದರೂ ಪಂಡಿತ- ನಾಗಿ ಒಳ್ಳೆಯ ಮನಸ್ಸನ್ನು ಹೊಂದಿಲ್ಲದಿದ್ದರೂ ರಾಜನ ಮಂತ್ರವನ್ನು ತಿಳಿಯ- ಬಾರದು.
ಸ ತೇ ಸೌಹೃದಮಾಸ್ಥಾಯ ಕಿಂಚಿದ್ ವಕ್ಷ್ಯಾಮಿ ನಾರದ |
ಕೃತ್ಸ್ನಾಂ ಚ ಬುದ್ಧಿಂ ಸಂಪ್ರೇಕ್ಷ್ಯ ಸಂಪೃಚ್ಛೇ ತ್ರಿದಿವಂಗಮ ॥4॥
ಎಲೈ ನಾರದರೇ! ತ್ರಿಲೋಕಸಂಚಾರಿಗಳೇ! ನಿಮ್ಮಲ್ಲಿ ವಿಶ್ವಾಸದಿಂದ ನಿಮ್ಮ ಪೂರ್ಣವಾದ ಬುದ್ಧಿಯನ್ನು ಗಮನಿಸಿ ನಿಮ್ಮಲ್ಲಿ ಸ್ವಲ್ಪ ಮಾತನಾಡುವೆನು.
ದಾಸ್ಯಮೈಶ್ವರ್ಯವಾದೇನ ಜ್ಞಾತೀನಾಂ ವೈ ಕರೋಮ್ಯಹಮ್ |
ಅರ್ಧಭೋಕ್ತಾಸ್ಮಿ ಭೋಗಾನಾಂ ವಾಗ್ದುರುಕ್ತಾನಿ ಚ ಕ್ಷಮೇ ॥5॥
ನಾನು ಐಶ್ವರ್ಯವನ್ನು ಹೊಂದಿದವನಾದರೂ ಜ್ಞಾತಿಗಳ ದಾಸ್ಯವನ್ನು ಮಾಡು- ತ್ತೇನೆ. ಭೋಗಗಳನ್ನು ಅರ್ಧಮಾತ್ರ ಭೋಗಿಸುತ್ತೇನೆ. ಜ್ಞಾತಿಗಳ ದುರ್ವಚನಗಳನ್ನು ಕ್ಷಮಿಸುತ್ತೇನೆ.
ಅರಣೀಮಗ್ನಿಕಾಮೋ ವಾ ಮಥ್ನಾತಿ ಹೃದಯಂ ಮಮ |
ವಾಚಾ ದುರುಕ್ತಂ ದೇವರ್ಷೇ ತನ್ಮೇ ದಹತಿ ನಿತ್ಯದಾ ॥6॥
ಎಲೈ ದೇವರ್ಷಿಯೇ! ಜ್ಞಾತಿಗಳ ದುರ್ವಚನಗಳು ಅಗ್ನಿಕಾಮನಾದವನು ಅರಣಿಯನ್ನು ಮಥನ ಮಾಡಿದಂತೆ ನನ್ನ ಹೃದಯವನ್ನು ಮಥನ ಮಾಡುತ್ತವೆ. ಅವು ಯಾವಾಗಲೂ ನನಗೆ ತಾಪವನ್ನು ಕೊಡುತ್ತವೆ.
ಬಲಂ ಸಂಕರ್ಷಣೇ ನಿತ್ಯಂ ಸೌಕುಮಾರ್ಯಂ ಪುನರ್ಗದೇ |
ರೂಪೇಣ ಮತ್ತಃ ಪ್ರದ್ಯುಮ್ನಃ ಸೋಽಸಹಾಯೋಽಸ್ಮಿ ನಾರದ ॥7॥
ಬಲರಾಮನಲ್ಲಿ ನಿತ್ಯವೂ ಬಲವಿದೆ. ಗದನಲ್ಲಿ ಸೌಕುಮಾರ್ಯವಿದೆ. ರೂಪ- ದಲ್ಲಿ ನನಗಿಂತ ಪ್ರದ್ಯುಮ್ನನು ಅಧಿಕನಾದವನು. ನಾರದರೇ! ಅಂತಹ ನಾನು ಅಸಹಾಯನಾಗಿದ್ದೇನೆ.
ಅನ್ಯೇ ಹಿ ಸುಮಹಾಭಾಗಾ ಬಲವಂತೋ ದುರಾಸದಾಃ |
ನಿತ್ಯೋತ್ಥಾನೇನ ಸಂಪನ್ನಾ ನಾರದಾಂಧಕವೃಷ್ಣಯಃ ॥8॥
ಎಲೈ ನಾರದರೇ! ಜ್ಞಾತಿಗಳಲ್ಲಿ ಉಳಿದ ಮಹಾನುಭಾವರು ಬಲಿಷ್ಠರೂ ಮತ್ತು ಸಮೀಪಿಸಲು ಅಸಾಧ್ಯರೂ ಆಗಿದ್ದಾರೆ. ಅಂಧಕವೃಷ್ಣಿಗಳು ನಿತ್ಯವೂ ಉದ್ಯಮಶೀಲ- ರಾಗಿದ್ದಾರೆ.

ಯಸ್ಯ ನ ಸ್ಯುರ್ನ ವೈ ಸ ಸ್ಯಾದ್ ಯಸ್ಯ ಸ್ಯುಃ ಕೃತ್ಸ್ನಮೇವ ತತ್ |
ದ್ವಯೋರೇವ ಪ್ರಚಲತೋರ್ನಿತ್ಯಂ ವೃಣೋಮ್ಯೇಕತರಂ ನ ಚ ॥9॥
ಯಾರಿಗೆ ಜ್ಞಾತಿಗಳು ಇರುವುದಿಲ್ಲವೋ ಅವನು ಹೇಗೆ ಸುಖಿಯಾದಾನು? ಯಾರಿಗೆ ಜ್ಞಾತಿಗಳು ಇರುತ್ತಾರೆಯೋ ಅವನೂ ಸಹ ಹೇಗೆ ಪೂರ್ಣ ಸುಖಿ- ಯಾದಾನು? ಇಬ್ಬರು ಜ್ಞಾತಿಗಳು ಕೋಪದಿಂದ ಚಲಿಸುತ್ತಿದ್ದರೆ ನಾವು ಅವರಲ್ಲಿ ಯಾರ ಪಕ್ಷವನ್ನೂ ವಹಿಸುವುದಿಲ್ಲ.
ಸ್ಯಾತಾಂ ಯಸ್ಯಾಹುಕಾಕ್ರೂರೌ ಕಿನ್ನು ದುಃಖತರಂ ತತಃ |
ಯಸ್ಯ ವಾಪಿ ನ ತೌ ಸ್ಯಾತಾಂ ಕಿನ್ನು ದುಃಖತರಂ ತತಃ ॥10॥
ಯಾರಿಗೆ ಆಹುಕ, ಅಕ್ರೂರರು ಜ್ಞಾತಿಗಳಾಗಿರುತ್ತಾರೆಯೋ ಅವರಿಗೆ ಅದಕ್ಕಿಂತ ದುಃಖತರವಾದುದು ಯಾವುದು? ಯಾರಿಗೆ ಅಂತಹವರು ಜ್ಞಾತಿಗಳಾಗಿರುವುದಿ- ಲ್ಲವೋ ಅದಕ್ಕಿಂತಲೂ ದುಃಖತರವಾದುದು ಯಾವುದು?
ಸೋಽಹಂ ಕಿತವಮಾತೇವ ದ್ವಯೋರಪಿ ಮಹಾಮುನೇ |
ನೈಕಸ್ಯ ಜಯಮಾಶಾಸೇ ದ್ವಿತೀಯಸ್ಯ ಪರಾಜಯಮ್ ॥11॥
ಎಲೈ ಮಹಾಮುನಿಯೇ! ಆದ್ದರಿಂದ ನಾನು ದ್ಯೂತಮಾಡುವ ಎರಡು ಮಕ್ಕಳ ತಾಯಿಯಂತೆ ಒಬ್ಬನಿಗೆ ಜಯವನ್ನಾಗಲೀ, ಇನ್ನೊಬ್ಬನಿಗೆ ಪರಾಜಯವನ್ನಾಗಲೀ ಆಶಿಸುವುದಿಲ್ಲ.
ಮಮ್ಯೈವಂ ಕ್ಲಿಶ್ಯಮಾನಸ್ಯ ನಾರದೋಭಯತಃ ಸದಾ |
ವಕ್ತುಮರ್ಹಸಿ ಯಚ್ಛ್ರೇಯೋ ಜ್ಞಾತೀನಾಮಾತ್ಮನಸ್ತಥಾ ॥12॥
ನಾರದರೇ! ಹೀಗೆ ಎರಡು ರೀತಿಯಿಂದಲೂ ಕ್ಲೇಶಪಡುತ್ತಿರುವ ನನಗೆ ನನಗೂ ಮತ್ತು ಜ್ಞಾತಿಗಳಿಗೂ ಯಾವುದು ಶ್ರೇಯಸ್ಕರವಾದುದು ಎಂಬುದನ್ನು ನೀವು ಹೇಳಬೇಕು.
ನಾರದಃ
ಆಪದೋ ದ್ವಿವಿಧಾಃ ಕೃಷ್ಣ ಬಾಹ್ಯಾಶ್ಚಾಭ್ಯಂತರಾಶ್ಚ ಹ |
ಪ್ರಾದುರ್ಭವಂತಿ ವಾರ್ಷ್ಣೇಯ ಸ್ವಕೃತಾ ಯದಿ ವಾಽನ್ಯತಃ ॥13॥
ನಾರದರು ಎಲೈ ಕೃಷ್ಣನೇ! ಆಪತ್ತುಗಳು ಹೊರಗಿನಿಂದ ಬಂದವು ಮತ್ತು ಒಳಗಿನಿಂದ ಬಂದವು ಎಂದು ಎರಡು ವಿಧವಾದವು ಉಂಟಾಗುತ್ತವೆ. ಎಲೈ ವಾರ್ಷ್ಣೇಯನೇ! ಅವು ತನ್ನಿಂದಲಾಗಲೀ ಅಥವಾ ಬೇರೆಯವರಿಂದಾಗಲೀ ಉಂಟಾ -ಗುತ್ತವೆ.
ಸೇಯಮಾಭ್ಯಂತರಾ ತುಭ್ಯಮಾಪತ್ ಕೃಚ್ಛ್ರಾ ಸ್ವಕರ್ಮಜಾ |
ಅಕ್ರೂರಭೋಜಪ್ರಭವಾಃ ಸರ್ವೇ ಹ್ಯೇತೇ ತದನ್ವಯಾಃ ॥14॥
ನಿನಗೆ ಒಳಗಿನವರಿಂದ ಉಂಟಾಗಿರುವ ಆಪತ್ತು ನಿನ್ನ ಕರ್ಮದಿಂದಲೇ ಉಂಟಾದುದು. ಅಕ್ರೂರ, ಭೋಜ ಇವರ ಪರಿವರಾದವರೆಲ್ಲರೂ ನಿನ್ನ ಕರ್ಮ- ಗಳಿಗೆ(ಕಾರ್ಯಗಳಿಗೆ) ಅನುಸಾರವಾಗಿಯೇ ವರ್ತಿಸುತ್ತಾರೆ.
ಅರ್ಥಹೇತೋರ್ಹಿ ಕಾಮಾದ್ವಾ ದ್ವಾರಾ ಬೀಭತ್ಸಯಾಪಿ ವಾ |
ಆತ್ಮನಾ ಪ್ರಾಪ್ತಮೈಶ್ವರ್ಯಮನ್ಯತ್ರ ಪ್ರತಿಪಾದಿತಮ್ ॥15॥
ಧನದ ಕಾರಣದಿಂದಾಗಲೀ ಇಚ್ಛಾಪೂರ್ವಕವಾಗಿಯೇ ಆಗಲಿ ಅಥವಾ ಭಯದಿಂದಾಗಲೀ ನೀನು ಸಂಪಾದಿಸಿದ ಐಶ್ವರ್ಯವನ್ನು ಬೇರೆಯವರಿಗೆ ಕೊಟ್ಟಿ- ದ್ದೀಯೆ.
ಕೃತಮೂಲಮಿದಾನೀಂ ತಜ್ಜ್ಞಾತಿವೃದ್ಧಂ ಸಹಾಯವತ್ |
ನ ಶಕ್ಯಂ ಪುನರಾದಾತುಂ ವಾಂತಮನ್ನಮಿವ ತ್ವಯಾ ॥16॥
ನೀನೇ ಮೂಲನಾಗಿ ಕೊಟ್ಟ ಆ ಐಶ್ವರ್ಯವು ಈಗ ಜ್ಞಾತಿಗಳಲ್ಲಿ ಬೆಳೆದು ಸಹಾಯವುಳ್ಳದ್ದಾಗಿದೆ. ವಾಂತಿಮಾಡಿದ ಅನ್ನವನ್ನು ಪುನಃ ತೆಗೆದುಕೊಳ್ಳಲು ಸಾಧ್ಯ- ವಿಲ್ಲದಂತೆ ಆ ಐಶ್ವರ್ಯವನ್ನು ಪುನಃ ಹಿಂತೆಗೆದುಕೊಳ್ಳಲು ಸಾಧ್ಯವಿಲ್ಲ.
ಬಭ್ರೂಗ್ರಸೇನಯೋ ರಾಜ್ಯಂ ನಾಪ್ತುಂ ಶಕ್ಯಂ ಕಥಂಚನ |
ಜ್ಞಾತಿಭೇದಭಯಾತ್ ಕೃಷ್ಣ ತ್ವಯಾ ಚಾಪಿ ವಿಶೇಷತಃ ॥17॥
ಜ್ಞಾತಿಗಳಲ್ಲಿ ವಿರೋಧವುಂಟಾಗುವ ಭಯದಿಂದ ಬಭ್ರು, ಉಗ್ರಸೇನರ ರಾಜ್ಯವನ್ನು ವಿಶೇಷವಾಗಿ ನಿನ್ನಿಂದಲೂ ಪುನಃ ಪಡೆಯುವುದು ಸಾಧ್ಯವಿಲ್ಲ.
ತಚ್ಚೇತ್ ಸಿದ್ಧ್ಯೇತ್ ಪ್ರಯತ್ನೇನ ಕೃತ್ವಾ ಕರ್ಮ ಸುದುಷ್ಕರಮ್ |
ಮಹತ್ ಕ್ಷಯಂ ವ್ಯಯಂ ವಾ ಸ್ಯಾದ್ ವಿನಾಶೋ ವಾ ಪುನರ್ಭವೇತ್ ॥18
ಪ್ರಯತ್ನದಿಂದ ದುಷ್ಕರವಾದ ಕರ್ಮವನ್ನು ಮಾಡಿ ಅದನ್ನು ಸಾಧಿಸಿದರೆ ದೊಡ್ಡ ಧನವ್ಯಯವು ಮತ್ತು ದೇಹನಾಶವು ಉಂಟಾದೀತು.
ಅನಾಯಸೇನ ಶಸ್ತ್ರೇಣ ಮೃದುನಾ ಹೃದಯಚ್ಛಿದಾ |
ಜಿಹ್ವಾಮುದ್ಧರ ಸರ್ವೇಷಾಂ ಪರಿಮೃಜ್ಯಾನುಮೃಜ್ಯ ಚ ॥19॥
ಕಬ್ಬಿಣದಿಂದ ಮಾಡದ ಮೃದುವಾದ ಹೃದಯಭೇದಕವಾದ ಶಸ್ತ್ರದಿಂದ ಜ್ಞಾತಿ- ಗಳ ನಾಲಿಗೆಯಲ್ಲಿ ಸವರಿ ಸವರಿ ಅದನ್ನು ಕತ್ತರಿಸಬೇಕು.
ವಾಸುದೇವಃ
ಅನಾಯಸಂ ಮುನೇ ಶಸ್ತ್ರಂ ಮೃದು ವಿದ್ಯಾಮಹಂ ಕಥಮ್ |
ಯೇನೈಷಾಮುದ್ಧರೇ ಜಿಹ್ವಾಂ ಪರಿಮೃಜ್ಯಾನುಮೃಜ್ಯ ಚ ॥20॥
ವಾಸುದೇವ ಕಬ್ಬಿಣದಿಂದ ಮಾಡದ ಮೃದುವಾದ ಶಸ್ತ್ರವನ್ನು ಎಲೈ ಮುನಿಯೇ! ನಾನು ಹೇಗೆ ತಿಳಿಯಲಿ? ಯಾವುದರಿಂದ ಜ್ಞಾತಿಗಳ ನಾಲಿಗೆಯನ್ನು ಸವರಿ ಉದ್ಧರಿಸಬಹುದೋ ಅಂತಹ ಶಸ್ತ್ರವನ್ನು ಹೇಗೆ ತಿಳಿಯಲಿ?

ನಾರದಃ
ಶಕ್ತ್ಯಾನ್ನದಾನಂ ಸತತಂ ತಿತಿಕ್ಷಾ ದಮ ಆರ್ಜವಮ್ |
ಯಥಾರ್ಹಪ್ರತಿಪೂಜಾ ಚ ಶಸ್ತ್ರಮೇತದನಾಯಸಮ್ ॥21॥
ನಾರದರು ಸತತವಾಗಿ ಶಕ್ತಿಯಿದ್ದಷ್ಟು ಅನ್ನದಾನ, ತಿತಿಕ್ಷಾ, ಇಂದ್ರಿಯನಿಗ್ರಹ, ಆರ್ಜವ, ಅವರವರ ಯೋಗ್ಯತೆಗೆ ಅನುಗುಣವಾಗಿ ಅವರ ಪೂಜೆ ಇದು ಕಬ್ಬಿಣ- ದಿಂದ ಮಾಡದ ಶಸ್ತ್ರ.
ಜ್ಞಾತೀನಾಂ ವಕ್ತುಕಾಮಾನಾಂ ಕಟೂನಿ ಚ ಲಘೂನಿ ಚ |
ಗಿರಾ ತ್ವಂ ಹೃದಯಂ ವಾಚಂ ಶಮಯಸ್ವ ಮನಾಂಸಿ ಚ ॥22॥
ಕಟುವಾಗಿ ಮತ್ತು ಶೀಘ್ರವಾಗಿ ಮಾತನಾಡಲು ಬಯಸುವ ಜ್ಞಾತಿಗಳ ಮನಸ್ಸನ್ನು ಮತ್ತು ಮಾತನ್ನು ನೀನು ಒಳ್ಳೆಯ ಮಾತುಗಳಿಂದ ಶಮನಗೊಳಿಸು.
ನಾಮಹಾಪುರುಷಃ ಕಶ್ಚಿನ್ನಾನಾತ್ಮಾ ನಾಸಹಾಯವಾನ್ |
ಮಹತೀಂ ಧುರಮಾದತ್ತೇ ತಾಮುದ್ಯಮ್ಯೋರಸಾ ವಹ ॥23॥
ಮಹಾಪುರುಷನಲ್ಲದವನು, ಮನೋಜಯವಿಲ್ಲದವನು, ಸಹಾಯರಹಿತ- ನಾದವನು ದೊಡ್ಡ ಭಾರವನ್ನು ಹೊತ್ತು ಸಾಗುವುದಿಲ್ಲ. ನೀನು ಆ ದೊಡ್ಡ ಭಾರ- ವನ್ನು ಎದೆಯ ಮೇಲೆ ಹೊರುವವನಾಗು.
ಸರ್ವ ಏವ ಗುರುಂ ಭಾರಮನಡ್ವಾನ್ ವಹತೇ ಸಮೇ |
ದುರ್ಗೇ ಪ್ರತೀಕಃ ಸುಗವೋ ಭಾರಂ ವಹತಿ ದುರ್ವಹಮ್ ॥24॥
ಸಮತಟ್ಟಾದ ಪ್ರದೇಶದಲ್ಲಿ ಎಲ್ಲ ಎತ್ತುಗಳೂ ಗುರುವಾದ ಭಾರವನ್ನು ಹೊರು- ತ್ತವೆ. ಆದರೆ ಒಳ್ಳೆಯ ಹಸುವಿನಿಂದ ಹುಟ್ಟಿದ ಎತ್ತುಮಾತ್ರ ದುರ್ಗಮವಾದ ಪ್ರದೇಶಗಳಲ್ಲಿ ಹೊರಲು ಅಸಾಧ್ಯವಾದ ಭಾರಗಳನ್ನು ಹೊರುತ್ತದೆ.
ಭೇದಾದ್ ವಿನಾಶಃ ಸಂಘಾನಾಂ ಸಂಘಮುಖ್ಯೋಽಸಿ ಕೇಶವ |
ಯಥಾ ತ್ವಾಂ ಪ್ರಾಪ್ಯ ನೋತ್ಸೀದೇದಯಂ ಸಂಘಸ್ತಥಾ ಕುರು ॥25॥
ಎಲೈ ಕೇಶವನೇ! ನೀನು ನಿನ್ನ ಸಮೂಹದಲ್ಲಿ ಪ್ರಧಾನನಾಗಿದ್ದೀಯೆ. ವಿರೋಧವುಂಟಾದರೆ ಸಮೂಹವು ನಾಶವನ್ನು ಹೊಂದುತ್ತದೆ. ನಿನ್ನನ್ನು ಪ್ರಧಾನ- ನನ್ನಾಗಿ ಹೊಂದಿ ಈ ಸಮೂಹವು ನಾಶಹೊಂದದಿರುವಂತೆ ಮಾಡು.
ನಾನ್ಯತ್ರ ಬುದ್ಧಿಕ್ಷಾಂತಿಭ್ಯಾಂ ನಾನ್ಯತ್ರೇಂದ್ರಿಯನಿಗ್ರಹಾತ್ |
ನಾನ್ಯತ್ರ ಧನಸಂತ್ಯಾಗಾದ್ ಗಣಃ ಪ್ರಾಜ್ಞೇಽವತಿಷ್ಠತೇ ॥26॥
ಬುದ್ಧಿ ಮತ್ತು ಕ್ಷಮೆಗಳಿಲ್ಲದಿದ್ದರೆ, ಇಂದ್ರಿಯನಿಗ್ರಹವಿಲ್ಲದಿದ್ದರೆ, ಧನತ್ಯಾಗವನ್ನು ಮಾಡದಿದ್ದರೆ ಜ್ಞಾತಿಗಳ ಸಮೂಹವು ಪ್ರಾಜ್ಞನ ಜೊತೆಯಲ್ಲಿ ನಿಲ್ಲುವುದಿಲ್ಲ.
ಧನ್ಯಂ ಯಶಸ್ಯಮಾಯುಷ್ಯಂ ಸ್ವಪಕ್ಷೋದ್ಭಾವನಂ ಶುಭಮ್ |
ಜ್ಞಾತೀನಾಮವಿನಾಶಃ ಸ್ಯಾದ್ ಯಥಾ ಕೃಷ್ಣ ತಥಾ ಕುರು ॥27॥
ಎಲೈ ಕೃಷ್ಣನೇ! ಜ್ಞಾತಿಗಳಿಗೆ ಧನಪ್ರದವೂ, ಯಶಃಪ್ರದವೂ, ಆಯುಷ್ಯಪ್ರದವೂ, ಶುಭವಾದ ಉನ್ನತಿಯೂ, ಅವಿನಾಶವೂ ಉಂಟಾಗುವಂತೆ ಮಾಡು.
ಆಯತ್ಯಾಂ ಚ ತದಾತ್ವೇ ಚ ನ ತೇಽಸ್ತ್ಯವಿದಿತಂ ಪ್ರಭೋ |
ಷಾಡ್ಗುಣ್ಯಸ್ಯ ವಿಧಾನೇನ ಯಾತ್ರಾಯಾನವಿಧೌ ತಥಾ ॥28॥
ಎಲೈ ಪ್ರಭುವೇ! ವರ್ತಮಾನಕಾಲದಲ್ಲಾಗಲೀ ಅಥವಾ ಭವಿಷ್ಯತ್ಕಾಲದ- ಲ್ಲಾಗಲೀ ರಾಜನ ಷಾಡ್ಗುಣ್ಯವಿಷಯದಲ್ಲಿ ಆಗಲೀ, ಯಾತ್ರಾಯಾನಾದಿ ವಿಷಯ- ಗಳಲ್ಲಾಗಲೀ ನೀನು ತಿಳಿಯದಿರುವುದು ಯಾವುದೂ ಇಲ್ಲ.
ಮಾಧವಾಃ ಕುಕುರಾ ಭೋಜಾಃ ಸರ್ವೇ ಚಾಂಧಕವೃಷ್ಣಯಃ |
ತ್ವಯ್ಯಾಸಕ್ತಾ ಮಹಾಬಾಹೋ ಲೋಕಾ ಲೋಕೇಶ್ವರಾಶ್ಚ ಯೇ ॥29॥
ಎಲೈ ಮಹಾಬಾಹುವೇ! ಮಾಧವರು, ಕುಕುರರು, ಭೋಜರು ಮತ್ತು ಎಲ್ಲಾ ಅಂಧಕವೃಷ್ಣಿಗಳು ಮತ್ತು ಲೋಕಗಳು ಮತ್ತು ಲೋಕೇಶ್ವರರೂ ಸಹ ನಿನ್ನನ್ನು ಆಶ್ರಯಿಸಿದ್ದಾರೆ.
ಉಪಾಸತೇ ಹಿ ತ್ವದ್ಬುದ್ಧಿಮೃಷಯಶ್ಚಾಪಿ ಮಾಧವ |
ತ್ವಂ ಗುರುಃ ಸರ್ವಭೂತಾನಾಂ ಜಾನೀಷೇ ತ್ವಂ ಗತಾಗತಮ್ |
ತ್ವಾಮಾಸಾದ್ಯ ಯದುಶ್ರೇಷ್ಠಮೇಧಂತೇ ಜ್ಞಾತಿನಃ ಸುಖಮ್ ॥30॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರ್ಯಶೀತಿತಮೋಽಧ್ಯಾಯಃ ॥83॥
ಎಲೈ ಮಾಧವನೇ! ಋಷಿಗಳು ನಿನ್ನ ಬುದ್ಧಿಯನ್ನು ಉಪಾಸನೆ ಮಾಡುತ್ತಾರೆ. ಸರ್ವಜೀವರಿಗೂ ನೀನೇ ಗುರು. ನೀನು ಭೂತಭವಿಷ್ಯತ್ತೆಲ್ಲವನ್ನೂ ತಿಳಿದಿದ್ದೀಯೆ. ಯದುಶ್ರೇಷ್ಠನಾದ ನಿನ್ನನ್ನು ಹೊಂದಿ ಜ್ಞಾತಿಗಳು ಸುಖವನ್ನು ಪಡೆಯುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 83ನೆಯ ಅಧ್ಯಾಯವು ಮುಗಿಯಿತು.
0
84. ಎಂಬತ್ತನಾಲ್ಕನೆಯ ಅಧ್ಯಾಯ
ಅಮಾತ್ಯಪರೀಕ್ಷೆಯ ವಿಷಯದಲ್ಲಿ ಕಾಲಕವೃಕ್ಷೀಯೋಪಾಖ್ಯಾನ
ಭೀಷ್ಮಃ
ಏಷಾ ಪ್ರಥಮತೋ ವೃತ್ತಿರ್ದ್ವಿತೀಯಾಂ ಶೃಣು ಭಾರತ |

ಯ ಕಶ್ಚಿಜ್ಜನಯೇದರ್ಥಂ ರಾಜ್ಞಾ ರಕ್ಷ್ಯಃ ಸ ಮಾನವಃ ॥1॥
ಭೀಷ್ಮರು ಎಲೈ ಭಾರತನೇ! ಇದು ಮೊದಲು ಮಾಡಬೇಕಾದ ಕೆಲಸ. ಎರಡನೆಯ ಕಾರ್ಯವನ್ನು ಹೇಳುತ್ತೇನೆ. ರಾಜನಿಗೆ ಯಾವನು ಅರ್ಥವೃದ್ಧಿಯನ್ನು ಉಂಟು ಮಾಡುತ್ತಾನೆಯೋ ಅವನು ರಾಜನಿಂದ ರಕ್ಷಿಸಲ್ಪಡಬೇಕು.
ಹ್ರಿಯಮಾಣಮಮಾತ್ಯೇನ ಭೃತೋ ವಾ ಯದಿ ವಾऽಭೃತಃ |
ಯೋ ರಾಜಕೋಶಂ ನಶ್ಯಂತಮಾಚಕ್ಷೀತ ಯುಧಿಷ್ಠಿರ ॥2॥
ಶ್ರೋತವ್ಯಂ ತಸ್ಯ ಚ ರಹೋ ರಕ್ಷ್ಯಶ್ಚಾಮಾತ್ಯತೋ ಭವೇತ್ |
ಅಮಾತ್ಯಾಶ್ಚಾಪಹರ್ತಾರಃ ಭೂಯಿಷ್ಠಂ ಘ್ನಂತಿ ಭಾರತ ॥3॥
ರಾಜನ ನೌಕರನಾಗಲೀ ಅಥವಾ ನಗರವಾಸಿಯಾಗಲೀ ಯಾವನಾದರೂ ಅಮಾತ್ಯನು ರಾಜಕೋಶವನ್ನು ಅಪಹರಿಸುತ್ತಿದ್ದಾನೆ ಎಂದು ಹೇಳಿದರೆ ಅವನ ಮಾತನ್ನು ರಹಸ್ಯವಾಗಿ ಕೇಳಬೇಕು. ಅವನನ್ನು ಅಮಾತ್ಯನಿಂದ ರಕ್ಷಿಸಬೇಕು. ಎಲೈ ಭಾರತನೇ! ಯುಧಿಷ್ಠಿರನೇ! ರಾಜಕೋಶವನ್ನು ಲೂಟಿ ಮಾಡುವ ಅಮಾತ್ಯರು ಬಹಳವಾಗಿ ರಾಜ್ಯವನ್ನು ನಾಶ ಮಾಡುತ್ತಾರೆ.
ರಾಜಕೋಶಸ್ಯ ಗೋಪ್ತಾರೋ ರಾಜಕೋಶವಿಲೋಪಕಾಃ |
ಸಮೇತ್ಯ ಸರ್ವೇ ಬಾಧಂತೇ ಸ ವಿನಶ್ಯತ್ಯರಕ್ಷಿತಃ ॥4॥
ಅಮಾತ್ಯರು ರಾಜಕೋಶವನ್ನು ರಕ್ಷಿಸುವವರು; ಆದರೆ ಉದಾಸೀನ ಮಾಡಿ ಅವರೇ ರಾಜಕೋಶವನ್ನು ನಾಶ ಮಾಡುತ್ತಾರೆ. (ರಾಜಕೋಶದ ಕಾವಲುಗಾರರು ಮತ್ತು ರಾಜಕೋಶದ ಅಪಹರಣಕಾರರು ಇಬ್ಬರೂ ಸೇರಿ ರಾಜಕೋಶವನ್ನು ನಾಶ ಮಾಡುತ್ತಾರೆ) ಎಲ್ಲ ಅಮಾತ್ಯರೂ ಸೇರಿ ರಾಜನನ್ನು ಬಾಧಿಸುತ್ತಾರೆ. ರಾಜಕೋಶವು ರಕ್ಷಣೆಯಿಲ್ಲದೆ ನಾಶವನ್ನು ಹೊಂದುತ್ತದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮುನಿಃ ಕಾಲಕವೃಕ್ಷೀಯಃ ಕೌಸಲ್ಯಂ ಯದುವಾಚ ಹ ॥5॥
ಈ ವಿಷಯದಲ್ಲಿಯೂ ಸಹ ಕೋಸಲರಾಜನಿಗೂ ಮತ್ತು ಕಾಲಕವೃಕ್ಷೀಯ ಋಷಿಗೂ ನಡೆದ ಸಂವಾದರೂಪವಾದ ಪುರಾತನವಾದ ಈ ಇತಿಹಾಸವನ್ನು ಹೇಳು- ತ್ತಾರೆ.
ಕೋಸಲಾನಾಮಾಧಿಪತ್ಯಂ ಸಂಪ್ರಾಪ್ತೇ ಕ್ಷೇಮದರ್ಶಿನಿ |
ಮುನಿಃ ಕಾಲಕವೃಕ್ಷೀಯ ಆಜಗಾಮೇತಿ ನಃ ಶ್ರುತಮ್ ॥6॥
ಕ್ಷೇಮದರ್ಶಿ ಎಂಬ ರಾಜನು ಕೋಸಲದೇಶದ ರಾಜನಾಗಿದ್ದಾಗ ಕಾಲಕ- ವೃಕ್ಷೀಯ ಎಂಬ ಋಷಿಯು ಅಲ್ಲಿಗೆ ಬಂದನು ಎಂದು ನಾವು ಕೇಳಿದ್ದೇವೆ.
ಸ ಕಾಕಂ ಪಂಜರೇ ಬದ್ಧ್ವಾ ವಿಷಯಂ ಕ್ಷೇಮದರ್ಶಿನಃ |
ಪೂರ್ವಂ ಪರ್ಯಚರದ್ ಯುಕ್ತಃ ಪ್ರವೃತ್ತ್ಯರ್ಥೀ ಪುನಃ ಪುನಃ ॥7॥
ಅವನು ಕ್ಷೇಮದರ್ಶಿಯ ಬಳಿಗೆ ಬರುವುದಕ್ಕಿಂತ ಮೊದಲು ಪಂಜರದಲ್ಲಿ ಒಂದು ಕಾಗೆಯನ್ನು ಇಟ್ಟು ನಗರದಲ್ಲಿ ಅಲ್ಲಲ್ಲಿ ತಿರುಗಾಡಿ ಅಮಾತ್ಯಾದಿಗಳ ಪ್ರವೃತ್ತಿ- ಯನ್ನು ತಿಳಿದುಕೊಂಡನು.
ಅಧೀಯೇ ವಾಯಸೀಂ ವಿದ್ಯಾಂ ಶಂಸಂತಿ ಮಮ ವಾಯಸಾಃ |
ಅನಾಗತಮತೀತಂ ಚ ಯಚ್ಚ ಸಂಪ್ರತಿ ವರ್ತತೇ ॥8॥
ಇತಿ ರಾಷ್ಟ್ರೇ ಪರಿಪತನ್ ಬಹುಶಃ ಪುರುಷೈಃ ಸಹ |
ಸರ್ವೇಷಾಂ ರಾಜಯುಕ್ತಾನಾಂ ದುಷ್ಕೃತಂ ಪರಿಪೃಷ್ಟವಾನ್ ॥9॥
ನಾನು ವಾಯಸವಿದ್ಯೆಯನ್ನು ಅಭ್ಯಾಸ ಮಾಡುತ್ತಿದ್ದೇನೆ. ವಾಯಸಗಳು ನನಗೆ ಭೂತ, ಭವಿಷ್ಯತ್ ವರ್ತಮಾನವೆಲ್ಲವನ್ನೂ ಹೇಳುತ್ತವೆ ಎಂದು ಹೇಳುತ್ತಾ ರಾಷ್ಟ್ರ- ದಲ್ಲಿ ಬಹಳವಾಗಿ ತಿರುಗಾಡಿ ಅನೇಕಪುರುಷರನ್ನು ನೋಡಿ ರಾಜನಿಂದ ನಿಯುಕ್ತ- ರಾದ ಎಲ್ಲರ ದುಷ್ಕಾರ್ಯಗಳನ್ನು ಕೇಳಿ ತಿಳಿದುಕೊಂಡನು.
ಸ ಬುದ್ಧ್ವಾ ತಸ್ಯ ರಾಷ್ಟ್ರಸ್ಯ ವ್ಯವಸಾರಂ ಹಿ ಸರ್ವಶಃ |
ರಾಜಯುಕ್ತಾಪಚಾರಾಂಶ್ಚ ಸರ್ವಾನ್ ಬುದ್ಧ್ವಾ ತತಸ್ತತಃ ॥10॥
ತಮೇವ ಕಾಕಮಾದಾಯ ರಾಜಾನಂ ದ್ರಷ್ಟುಮಾಗತಮ್ |
ಸರ್ವಜ್ಞೋऽಸ್ಮೀತಿ ವಚನಂ ಬ್ರುವಾಣಃ ಸಂಶಿತವ್ರತಃ ॥11॥
ಅವನು ಆ ರಾಷ್ಟ್ರವು ಅವನತಿಯನ್ನು ಹೊಂದುತ್ತಿರುವುದನ್ನು ತಿಳಿದು ರಾಜ- ನಿಂದ ಕಾರ್ಯಗಳಲ್ಲಿ ನಿಯಮಿತರಾದ ಎಲ್ಲರ ಅಪಚಾರಗಳನ್ನು ಕೇಳಿ ನಾನು ಸರ್ವಜ್ಞನು ಎಂದು ಹೇಳುತ್ತಾ ಒಳ್ಳೆಯ ವ್ರತಧಾರಿಯಾದ ಅವನು ಅದೇ ಕಾಗೆ- ಯನ್ನು ತೆಗೆದುಕೊಂಡು ರಾಜನನ್ನು ನೋಡಲು ಬಂದನು.
ಸ ಸ್ಮ ಕೌಸಲ್ಯಮಾಗಮ್ಯ ರಾಜಾಮಾತ್ಯಮಲಂಕೃತಮ್ |
ಪ್ರಾಹ ಕಾಕಸ್ಯ ವಚನಾದಮುತ್ರೇದಂ ತ್ವಯಾ ಕೃತಮ್ ॥12॥
ಅವನು ಕೋಸಲರಾಜನ ಸಭೆಗೆ ಬಂದು ಅಲಂಕೃತನಾದ ರಾಜಾಮಾತ್ಯನನ್ನು ಕುರಿತು ನನ್ನ ಕಾಗೆಯು ಹೇಳುತ್ತಿದೆ. ನೀನು ಇಂತಹ ಸ್ಥಳದಲ್ಲಿ ಇಂತಹ ಅಪ- ಚಾರವನ್ನು ಮಾಡಿದ್ದೀಯೆ ಎಂದು ಹೇಳಿದನು.
ಅಸೌ ಚಾಸೌ ಚ ಜಾನೀತೇ ರಾಜಕೋಶಸ್ತ್ವಯಾ ಹೃತಃ |
ಏವಮಾಖ್ಯಾತಿ ಕಾಕೋऽಯಂ ತಚ್ಛೀಘ್ರಮನುಗಮ್ಯತಾಮ್ ॥13॥
ಈ ವಿಷಯವನ್ನು ಇಂತಹವರು ಇಂತಹವರು ತಿಳಿದಿದ್ದಾರೆ. ಈ ರಾಜ- ಕೋಶವನ್ನು ಅಪಹರಿಸಿದ್ದೀಯೆ. ಹೀಗೆ ಈ ಕಾಗೆಯು ಹೇಳುತ್ತಿದೆ. ಅದನ್ನು ಒಪ್ಪಿಕೋ. (ಎಂದು ಹೇಳಿದನು)
ತಥಾನ್ಯಾನಪಿ ಸ ಪ್ರಾಹ ರಾಜಕೋಶಹರಾನ್ ಸದಾ |

ನ ಚಾಸ್ಯ ವಚನಂ ಕಿಂಚಿದನೃತಂ ಶ್ರೂಯತೇ ಕ್ವಚಿತ್ ॥14॥
ಹಾಗೆಯೇ ರಾಜಕೋಶವನ್ನು ಅಪಹಾರಮಾಡಿದ ಉಳಿದವರ ವಿಷಯದ- ಲ್ಲಿಯೂ ಹೇಳಿದನು. ಅವನ ಯಾವ ಮಾತೂ ಸುಳ್ಳಾಗಿರುವುದು ಕಂಡುಬರಲಿಲ್ಲ.
ತೇನ ವಿಪ್ರಕೃತಾಃ ಸರ್ವೇ ರಾಜಯುಕ್ತಾಃ ಕುರೂದ್ವಹ |
ತಮತಿಕ್ರಮ್ಯ ಸುಪ್ತಸ್ಯ ನಿಶಿ ಕಾಕಮಪೋಥಯನ್ ॥15॥
ಎಲೈ ಕುರೂದ್ವಹನೇ! ಹೀಗೆ ಅವನಿಂದ ಅಪಚಾರಕ್ಕೆ ಒಳಗಾದ ರಾಜಸೇವಕರು ರಾತ್ರಿಯಲ್ಲಿ ಅವನು ಮಲಗಿದ್ದಾಗ ಅವನನ್ನು ಮೀರಿ ಅವನ ಕಾಗೆಯನ್ನು ಕೊಂದರು.
ವಾಯಸಂ ತು ವಿನಿರ್ಭಿನ್ನಂ ದೃಷ್ಟ್ವಾ ಬಾಣೇನ ಪಂಜರೇ |
ಪೂರ್ವಾಹ್ಣೇ ಬ್ರಾಹ್ಮಣೋ ವಾಕ್ಯಂ ಕ್ಷೇಮದರ್ಶಿನಮಬ್ರವೀತ್ ॥16॥
ಪಂಜರದಲ್ಲಿದ್ದ ಕಾಗೆಯು ಬಾಣದಿಂದ ಹತವಾದುದನ್ನು ನೋಡಿ, ಆ ಬ್ರಾಹ್ಮಣನು ಪ್ರಾತಃಕಾಲದಲ್ಲಿ ಕ್ಷೇಮದರ್ಶಿಯನ್ನು ಕುರಿತು ಹೇಳಿದನು.
ರಾಜಂಸ್ತ್ವಾಮಭಯಂ ಯಾಚೇ ಪ್ರಭುಂ ಪ್ರಾಣಧನೇಶ್ವರಮ್ |
ಅನುಜ್ಞಾತಸ್ತ್ವಯಾ ಬ್ರೂಯಾಂ ವಚನಂ ತ್ವತ್ಪುರೋ ಹಿತಮ್ ॥17॥
ಎಲೈ ರಾಜನೇ! ಪ್ರಭುವೂ ಪ್ರಾಣಧನೇಶ್ವರನೂ ಆದ ನಿನ್ನನ್ನು ಅಭಯವನ್ನು ಯಾಚಿಸುತ್ತಿದ್ದೇನೆ. ನೀನು ಅನುಮತಿಯನ್ನು ಕೊಟ್ಟರೆ ನಿನ್ನ ಎದುರಿಗೆ ನಿನಗೆ ಹಿತವಚನವನ್ನು ಹೇಳುವೆನು.
ಮಿತ್ರಾರ್ಥಮಭಿಸಂತಪ್ತೋ ಭಕ್ತ್ಯಾ ಸರ್ವಾತ್ಮನಾ ಗತಃ |
ಅಯಂ ತವಾರ್ಥೋ ಹ್ರಿಯತೇ ಯೋ ಬ್ರೂಯಾದಕ್ಷಮಾನ್ವಿತಃ ॥18॥
ನನ್ನ ಮಿತ್ರನಾದ ನಿನ್ನ ವಿಷಯದಲ್ಲಿ ಮನಸ್ಸಿನಲ್ಲಿ ತಾಪವನ್ನು ಹೊಂದಿ, ನಿನ್ನ ಮೇಲಿನ ಸ್ನೇಹದಿಂದ ಬಂದಿದ್ದೇನೆ. ನಿನ್ನ ಅರ್ಥಸಾಧಕನಾದ ಬ್ರಾಹ್ಮಣನಾದ ಈ ನನ್ನನ್ನು ಮಂತ್ರಿಗಳು ಅಪಹರಿಸಲು ಯತ್ನಿಸುತ್ತಿದ್ದಾರೆ.
ಸಂಬುಬೋಧಯಿಷುರ್ಮಿತ್ರಂ ಸದಶ್ವಮಿವ ಸಾರಥಿಃ |
ಅತಿಮನ್ಯುಪ್ರಸಕ್ತೋ ಹಿ ಪ್ರಸಜ್ಯ ಹಿತಕಾರಣಮ್ ॥19॥
ತಥಾವಿಧಸ್ಯ ಸುಹೃದಃ ಕ್ಷಂತವ್ಯಂ ಸಂವಿಜಾನತಾ |
ಐಶ್ವರ್ಯಮಿಚ್ಛತಾ ನಿತ್ಯಂ ಪುರುಷೇಣ ಬುಭೂಷತಾ ॥20॥
ಸಾರಥಿಯು ಸದಶ್ವವನ್ನು ಎಚ್ಚರಿಸುವಂತೆ ನಿನ್ನ ಹಿತವನ್ನು ಆಲೋಚಿಸಿ, ನಿನ- ಗಾಗಿರುವ ಅಪಚಾರದಿಂದ ಬಹಳ ಕೋಪಗೊಂಡು, ನಿತ್ಯವೂ ನಿನ್ನ ಅಭಿವೃದ್ಧಿಯನ್ನು ಇಚ್ಛಿಸಿ ಮಾತನಾಡುತ್ತೇನೆ. ತಿಳಿದವನೂ ಶ್ರೇಯೋಕಾಂಕ್ಷಿಯೂ ಆದ ನೀನು ಅಂತಹ ಸ್ನೇಹಿತನ ಮಾತನ್ನು ಕ್ಷಮಿಸಬೇಕು. (ಎಂದು ಹೇಳಿದನು)
ತಂ ರಾಜಾ ಪ್ರತ್ಯುವಾಚೇದಂ ಯನ್ಮಾಂ ಕಿಂಚಿದ್ ಭವಾನ್ ವದೇತ್ |
ಕಸ್ಮಾದಹಂ ನ ಕ್ಷಮೇಯಮಾಕಾಂಕ್ಷನ್ನಾತ್ಮನೋ ಹಿತಮ್ ॥21॥
ರಾಜನು ಅವನನ್ನು ಕುರಿತು ನನ್ನ ಹಿತವನ್ನು ಬಯಸುವ ನೀನು ಹೇಳುವ ಮಾತನ್ನು ನಾನು (ಅದನ್ನು) ಹೇಗೆ ಕ್ಷಮಿಸದಿರಲಿ ಎಂದು ಹೇಳಿದನು.
ಬ್ರಾಹ್ಮಣ ಪ್ರತಿಜಾನೀಹಿ ಪ್ರಬ್ರೂಹಿ ಯದಿ ಚೇಚ್ಛಸಿ |
ಕರಿಷ್ಯಾಮಿ ಹಿ ತೇ ವಾಕ್ಯಂ ಯದ್ಯನ್ಮಾಂ ವಿಪ್ರ ವಕ್ಷ್ಯಸಿ ॥22॥
ಬ್ರಾಹ್ಮಣನೇ! ಪ್ರತಿಜ್ಞೆಯನ್ನು ಮಾಡುತ್ತೇನೆ. ನೀನು ಬಯಸಿದುದನ್ನು ಹೇಳು. ಎಲೈ ಬ್ರಾಹ್ಮಣನೇ! ನೀನು ಹೇಳಿದಂತೆಯೇ ನಾನು ನಡೆದುಕೊಳ್ಳುವೆನು.
ಮುನಿಃ
ಜ್ಞಾತ್ವಾ ನಯಾನಪಾಯಾಂಶ್ಚ ಭೃತ್ಯತಸ್ತೇ ಭಯಾನಿ ಚ |
ಭಕ್ತ್ಯಾ ವೃತ್ತಿಂ ಸಮಾಖ್ಯಾತುಂ ಭವತೋಽಂತಿಕಮಾಗಮಮ್ ॥23॥
ಮುನಿ ನಿನ್ನ ರಾಜ್ಯದಲ್ಲಿ ನಿನ್ನ ಭೃತ್ಯರಿಂದ ನಡೆಯುವ ನ್ಯಾಯಾನ್ಯಾಯಗಳನ್ನು ಮತ್ತು ನಿನಗೆ ಉಂಟಾಗಿರುವ ಭಯವನ್ನು ತಿಳಿದು ನಿನ್ನ ಮೇಲಿನ ಸ್ನೇಹದಿಂದ ಅದನ್ನು ನಿನಗೆ ತಿಳಿಸಲು ನಿನ್ನ ಸಮೀಪಕ್ಕೆ ಬಂದಿದ್ದೇನೆ.
ಪ್ರಾಗೇವೋಕ್ತಶ್ಚ ದೋಷೋಽಯಮಾಚಾರ್ಯೈರ್ನೃಪಸೇವಿತಮ್ |
ಅಗತಾ ಕುಗತಿರ್ಹ್ಯೇಷಾ ಯಾ ರಾಜ್ಞಾ ಸಹ ಜೀವಿಕಾ ॥24॥
ಆಚಾರ್ಯರು ರಾಜನ ಸೇವೆಯನ್ನು ಮಾಡುವವರಿಗೆ ಈ ದೋಷವಿರುತ್ತದೆ ಎಂದು ಮೊದಲೇ ಹೇಳಿದ್ದಾರೆ. ರಾಜನ ಜೊತೆಯಲ್ಲಿ ಜೀವನ ಮಾಡುವವರಿಗೆ ಯಾರಿಂದಲೂ ತಿಳಿಯಲಾರದ ಇಂತಹ ದುರ್ಗತಿ ಉಂಟಾಗುತ್ತದೆ.
ಆಶೀವಿಷೈಶ್ಚ ತಸ್ಯಾಹುಃ ಸಂಗತಂ ಯಸ್ಯ ರಾಜಭಿಃ |
ಬಹುಮಿತ್ರಾಶ್ಚ ರಾಜಾನೋ ಬಹ್ವಮಿತ್ರಾಸ್ತಥೈವ ಚ ॥25॥
ರಾಜನ ಸಹವಾಸವು ಸರ್ಪದ ಸಹವಾಸವೆಂದು ಹೇಳುತ್ತಾರೆ. ರಾಜನಿಗೆ ಅನೇಕ ಮಿತ್ರರೂ ಅನೇಕ ಶತ್ರುಗಳೂ ಇರುತ್ತಾರೆ.
ತೇಭ್ಯಃ ಸರ್ವೇಭ್ಯ ಏವಾಹುರ್ಭಯಂ ರಾಜೋಪಸೇವಿತಮ್ |
ಅಥೈಷಾಮೇಕತೋ ರಾಜನ್ ಮುಹೂರ್ತಾದೇವ ಭೀರ್ಭವೇತ್ ॥26॥
ರಾಜಸೇವಕರಾದವರಿಗೆ ಅವರೆಲ್ಲರಿಂದಲೂ ಭಯವಿರುತ್ತದೆ. ಎಲೈ ರಾಜನೇ! ಅವರಲ್ಲಿ ಒಬ್ಬನೂ ಸಹ ಒಂದೇ ಮುಹೂರ್ತದಲ್ಲಿ ಭಯವನ್ನುಂಟು ಮಾಡ- ಬಹುದು.

ನೈಕಾಂತೇನಾಪ್ರಮಾದೋ ಹಿ ಕರ್ತುಂ ಶಕ್ಯೋ ಮಹೀಪತೌ |
ನ ತು ಪ್ರಮಾದಃ ಕರ್ತವ್ಯಃ ಕಥಂಚಿದ್ ಗತಿಮಿಚ್ಛತಾ ॥27॥
ರಾಜನ ಸೇವೆಯಲ್ಲಿರುವವನು ಎಂದೂ ಎಚ್ಚರ ತಪ್ಪಿ ನಡೆದುಕೊಳ್ಳಬಾರದು. ತನ್ನ ಶುಭಗತಿಯನ್ನು ಬಯಸುವವನು ನಿಯಮೇನ ಪ್ರಮಾದವನ್ನು ಮಾಡ- ಬಾರದು.
ಪ್ರಮಾದಾದ್ಧಿ ಸ್ಖಲೇದ್ ರಾಜಾ ಸ್ಖಲಿತೇ ನಾಸ್ತಿ ಜೀವಿತಮ್ |
ಅಗ್ನಿಂ ದೀಪ್ತಮಿವಾಸೀದೇದ್ ರಾಜಾನಮುಪಶಿಕ್ಷಿತಃ ॥28॥
ಪ್ರಮಾದವನ್ನು ಮಾಡಿದರೆ ರಾಜನು ಒಂದು ತಪ್ಪನ್ನು ಮಾಡಬಹುದು. ರಾಜನು ತಪ್ಪನ್ನು ಮಾಡಿದರೆ ಸೇವಕನ ಜೀವಿತವೇ ಉಳಿಯಲಾರದು. ವಿದ್ಯಾ- ವಂತನಾದವನು ಉರಿಯುವ ಅಗ್ನಿಯ ಬಳಿಗೆ ಹೋದಂತೆ ರಾಜನ ಬಳಿಗೆ ಹೋಗ- ಬೇಕು.
ಆಶೀವಿಷಮಿವ ಕ್ರುದ್ಧಂ ಪ್ರಭುಂ ಪ್ರಾಣಧನೇಶ್ವರಮ್ |
ಯತ್ನೇನೋಪಚರೇನ್ನಿತ್ಯಂ ನಾಹಮಸ್ಮೀತಿ ಮಾನವಃ ॥29॥
ಪ್ರಭುವೂ, ಪ್ರಾಣಧನೇಶ್ವರನೂ ಆದ ರಾಜನನ್ನು ಕೋಪಗೊಂಡ ಸರ್ಪದಂತೆ ಮನುಷ್ಯನು ನಾನು ಉಳಿಯುವುದಿಲ್ಲ ಎಂದು ತಿಳಿದೇ ಪ್ರಯತ್ನಪೂರ್ವಕವಾಗಿ ಉಪಚರಿಸಬೇಕು.
ದುರ್ವ್ಯಾಹೃತಾಚ್ಛಂಕಮಾನೋ ದುಷ್ಕೃತಾದ್ ದುರಧಿಷ್ಠಿತಾತ್ |
ದುರಾಸಿತಾದ್ ದುರ್ವ್ರಜಿತಾದಿಂಗಿತಾದಂಗಚೇಷ್ಟಿತಾತ್ ॥30॥
ದುರ್ವಚನಗಳಿಂದ ಶಂಕಿಸುತ್ತಾ, ದುಷ್ಕಾರ್ಯಗಳಿಂದಲೂ ಅಯೋಗ್ಯ- ಸ್ಥಾನದಲ್ಲಿ ನಿಲ್ಲುವುದರಿಂದಲೂ ಕೂಡುವುದರಿಂದಲೂ ನಡೆಯುವುದರಿಂದಲೂ ಇಂಗಿತಗಳಿಂದಲೂ ಅಂಗಚೇಷ್ಟೆಗಳಿಂದಲೂ ತನ್ನನ್ನು ರಕ್ಷಿಸಿಕೊಳ್ಳಬೇಕು.
ದೇವತೇವ ಹಿ ಸರ್ವಾರ್ಥಾನ್ ಕುರ್ಯಾದ್ ರಾಜಾ ಪ್ರಸಾದಿತಃ |
ವೈಶ್ವಾನರ ಇವ ಕ್ರುದ್ಧಃ ಸಮೂಲಮಪಿ ನಿರ್ದಹೇತ್ |
ಇತಿ ರಾಜನ್ ಮಯಃ ಪ್ರಾಹ ವರ್ತತೇ ಚ ತಥೈವ ತತ್ ॥31॥
ರಾಜನು ಪ್ರಸನ್ನನಾದರೆ ದೇವತೆಯಂತೆ ಎಲ್ಲಾ ಅರ್ಥವನ್ನೂ ಕೊಡುತ್ತಾನೆ. ಕೋಪಗೊಂಡರೆ ಅಗ್ನಿಯಂತೆ ಮೂಲಸಹಿತವಾಗಿ ಸುಟ್ಟುಬಿಡುತ್ತಾನೆ. ಎಲೈ ರಾಜನೇ! ಮಯನು ಹೀಗೆ ಹೇಳಿದ್ದಾನೆ. ಅದು ಹಾಗೆಯೇ ಸರಿ.
ಅಥ ಭೂಯಾಂಸಮೇವಾರ್ಥಂ ಕರಿಷ್ಯಾಮಿ ಪುನಃಪುನಃ |
ದದಾತ್ಯಸ್ಮದ್ವಿಧೋಽಮಾತ್ಯೋ ಬುದ್ಧಿಸಾಹಾಯ್ಯಮಾಪದಿ ॥32॥
ನಿನಗೆ ಇದಕ್ಕಿಂತ ಹೆಚ್ಚಿನ ಹಿತವನ್ನು ಪುನಃ ಪುನಃ ಮಾಡುತ್ತೇನೆ. ನನ್ನಂತಹ ಅಮಾತ್ಯರು ಆಪತ್ಕಾಲದಲ್ಲಿ ರಾಜನಿಗೆ ಬುದ್ಧಿಸಹಾಯವನ್ನು ನೀಡುತ್ತಾರೆ.
ವಾಯಸಶ್ಚೈವ ಮೇ ರಾಜನ್ನಂತಕಾಯಾಭಿಸಂಹಿತಃ |
ನ ಚ ಮೇಽತ್ರ ಭವಾನ್ ಗರ್ಹ್ಯೋ ನ ಚ ಯೇಷಾಂ ಭವಾನ್ ಪ್ರಿಯಃ |
ಹಿತಾಹಿತಾಂಸ್ತು ಬುಧ್ಯೇಥಾ ಮಾ ಪರೋಕ್ಷಮತಿರ್ಭವ ॥33॥
ಎಲೈ ರಾಜನೇ! ನನ್ನ ಕಾಗೆಯು ಯಮಲೋಕಕ್ಕೆ ಕಳುಹಿಸಲ್ಪಟ್ಟಿತು. ಅದಕ್ಕಾಗಿ ನಾನು ನಿನ್ನನ್ನಾಗಲೀ, ನೀನು ಯಾರಿಗೆ ಪ್ರಿಯನೋ ಅವರನ್ನಾಗಲೀ ನಿಂದಿಸು- ವುದಿಲ್ಲ. ಹಿತಾಹಿತಗಳನ್ನು ತಿಳಿದುಕೋ. ಕಣ್ಣುಮುಚ್ಚಿ ಕುಳಿತಿರಬೇಡ.
ಯೇ ತ್ವಾದಾನಪರಾ ಏವ ವಸಂತಿ ಭವತೋ ಗೃಹೇ |
ಅಭೂತಿಕಾಮಾ ಭೂತಾನಾಂ ತಾದೃಶೈರ್ಮೇಽಭಿಸಂಹಿತಮ್ ॥34॥
ಯಾರು ನಿನ್ನ ಮನೆಯಲ್ಲೇ ವಾಸ ಮಾಡಿ, ನಿನ್ನ ಅನ್ಯೈಶ್ವರ್ಯವನ್ನು ಬಯಸಿ, ನಿನ್ನ ಹಣವನ್ನು ಅಪಹರಿಸುತ್ತಿದ್ದಾರೆಯೋ ಅಂತಹವರಿಂದ ನನ್ನ ಕಾಗೆಯು ಕೊಲ್ಲಲ್ಪಟ್ಟಿತು.
ಯೇ ವಾ ಭವದ್ವಿನಾಶೇನ ರಾಜ್ಯಮಿಚ್ಛಂತ್ಯನಂತರಮ್ |
ಆಂತರ್ಯೈರಭಿಸಂಧಾಯ ರಾಜನ್ ಸಿದ್ಧ್ಯಂತಿ ನಾನ್ಯಥಾ ॥35॥
ಎಲೈ ರಾಜನೇ! ಯಾರು ಒಳಗಿನವರ ಜೊತೆಯಲ್ಲಿ ಸಂಧಾನ ಮಾಡಿ, ನಿನ್ನನ್ನು ವಿನಾಶ ಮಾಡಿ, ನಿನ್ನ ಅನಂತರದಲ್ಲಿ ರಾಜ್ಯವನ್ನು ಬಯಸುತ್ತಾರೆಯೋ (ಅವರಿಂದ ಅಂತಹ ಕೆಲಸವು ಮಾಡಲ್ಪಟ್ಟಿತು). ಆದರೆ ಅವರಿಗೆ ಆ ರೀತಿ ಸಿದ್ಧಿಸುವುದಿಲ್ಲ.
ತೇಷಾಮಹಂ ಭಯಾದ್ ರಾಜನ್ ಗಮಿಷ್ಯಾಮ್ಯನ್ಯಮಾಶ್ರಮಮ್ |
ತೈರ್ಹಿ ಮೇ ಸಂಧಿತೋ ಬಾಣಃ ಕಾಕೇ ನಿಪತಿತಃ ಪ್ರಭೋ ॥36॥
ಎಲೈ ರಾಜನೇ! ಅವರ ಭಯದಿಂದ ನಾನು ಇನ್ನೊಂದು ಆಶ್ರಮಕ್ಕೆ ಹೋಗು- ವೆನು. ಎಲೈ ಪ್ರಭುವೇ! ಅವರು ನನ್ನ ಮೇಲೆ ಪ್ರಯೋಗಿಸಿದ ಬಾಣವು ಕಾಗೆಯ ಮೇಲೆ ಬಿದ್ದಿತು.
ಛದ್ಮನಾ ಮಮ ಕಾಕಶ್ಚ ಗಮಿತೋ ಯಮಸಾದನಮ್ |
ದೃಷ್ಟಂ ಹ್ಯೇತನ್ಮಯಾ ರಾಜಂಸ್ತಪೋದೀರ್ಘೇಣ ಚಕ್ಷುಷಾ ॥37॥
ಎಲೈ ರಾಜನೇ! ನನ್ನ ಕಾಗೆಯು ಮೋಸದಿಂದ ಕೊಲ್ಲಲ್ಪಟ್ಟಿತು. ಇದನ್ನು ನಾನು ತಪಸ್ಸಿನಿಂದ ಕೂಡಿದ ನನ್ನ ಚಕ್ಷುಸ್ಸಿನಿಂದ ನೋಡಿದ್ದೇನೆ.
ಬಹುನಕ್ರಝಷಗ್ರಾಹಾಂ ತಿಮಿಂಗಿಲಗಣಾಯುತಾಮ್ |
ಕಾಕೇನ ಬಾಲಿಶೇನೇಮಾಮತಾರ್ಷಂ ತ್ವಾಮಹಂ ನದೀಮ್ ॥38॥
ಸ್ಥಾಣ್ವಶ್ಮಕಂಟಕವತೀಂ ವ್ಯಾಘ್ರಸಿಂಹಗಜಾಕುಲಾಮ್ |
ದುರಾಸದಾಂ ದುಷ್ಪ್ರವೇಶಾಂ ಗುಹಾಂ ಹೈಮವತೀಮಿವ ॥39॥

ಅನೇಕ ಮೀನು ಮೊಸಳೆಗಳು ಇರುವ, ತಿಮಿಂಗಿಲಗಣಗಳಿಂದ ಕೂಡಿರುವ, ಬಂಡೆಗಳು ಸಣ್ಣಕಲ್ಲುಗಳು ಮತ್ತು ಮುಳ್ಳುಗಳಿಂದ ಕೂಡಿರುವ, ಸಿಂಹವ್ಯಾಘ್ರ ಗಜಗಳಿಂದ ಕೂಡಿರುವ, ಸಮೀಪಿಸಲು ಮತ್ತು ಪ್ರವೇಶಿಸಲು ಅಸಾಧ್ಯವಾದ ಹಿಮಾಲಯಪರ್ವತದ ಗುಹೆಯಂತಿರುವ, ನದಿಯಂತಿರುವ ರಾಜನಾದ ನಿನ್ನನ್ನು ನಾನು ಬಡಪಾಯಿಯಾದ ಕಾಗೆಯಿಂದ ದಾಟಿದ್ದೇನೆ.

ಅಗ್ನಿನಾ ತಾಮಸಂ ದುರ್ಗಂ ನೌಭಿರಾಪ್ಯಂ ಚ ಗಮ್ಯತೇ |
ರಾಜದುರ್ಗಾವತರಣೇ ನೋಪಾಯಂ ಪಂಡಿತಾ ವಿದುಃ ॥40॥

ಕತ್ತಲಿರುವ ಕೋಟೆಯನ್ನು ಅಗ್ನಿಯಿಂದಲೂ, ಜಲಮಯವಾದ ಕೋಟೆಯನ್ನು ನೌಕೆಯಿಂದಲೂ ಸಮೀಪಿಸಬಹುದು. ಆದರೆ ರಾಜನೆಂಬ ಕೋಟೆಯನ್ನು ಪ್ರವೇಶಿ- ಸಲು ಯಾವ ಉಪಾಯವೂ ಪಂಡಿತರಿಗೆ ತಿಳಿದಿಲ್ಲ.

ಗಹನಂ ಭವತೋ ರಾಜ್ಯಮಂಧಕಾರಂ ತಮೋವೃತಮ್ |
ನೇಹ ವಿಶ್ವಸಿತುಂ ಶಕ್ಯಂ ಭವತಾಪಿ ಕುತೋ ಮಯಾ ॥41॥

ನಿನ್ನ ರಾಜ್ಯವು ಕತ್ತಲಿನಿಂದ ಕೂಡಿದ ದೊಡ್ಡ ಕಾಡಾಗಿದೆ. ಇಲ್ಲಿ ನೀನೂ ಸಹ ವಿಶ್ವಾಸದಿಂದ ಇರಲಾರೆ. ಇನ್ನು ನಾನು ಹೇಗೆ ವಿಶ್ವಾಸದಿಂದ ಇರುವೆನು?

ಅತೋ ನಾಯಂ ಶುಭೋ ವಾಸಸ್ತುಲ್ಯೇ ಸದಸತೀ ಇಹ |
ವಧೋ ಹ್ಯೇವಾತ್ರ ಸುಕೃತೋ ದುಷ್ಕೃತೇ ನ ಚ ಸಂಶಯಃ ॥42॥

ಆದ್ದರಿಂದ ಇಲ್ಲಿ ವಾಸ ಮಾಡುವುದು ಶುಭವಲ್ಲ. ಇಲ್ಲಿ ಸದಸತ್ಕಾರ್ಯಗಳು ಸಮಾನವಾಗಿವೆ. ಒಳ್ಳೆಯ ಕಾರ್ಯವನ್ನು ಮಾಡಿದವನಿಗೆ ವಧೆಯೇ ಉಂಟಾಗು- ತ್ತಿದೆ. ದುಷ್ಕಾರ್ಯವನ್ನು ಮಾಡಿದವನಿಗೆ ವಧೆಯುಂಟಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ನ್ಯಾಯತೋ ದುಷ್ಕೃತೇ ಘಾತಃ ಸುಕೃತೇ ಸ್ಯಾತ್ ಕಥಂ ವಧಃ |
ನೇಹ ಯುಕ್ತಂ ಚಿರಂ ಸ್ಥಾತುಂ ಜವೇನಾತೋ ವ್ರಜೇದ್ ಬುಧಃ ॥43॥

ನ್ಯಾಯವಾಗಿ ನೋಡಿದರೆ ದುಷ್ಕಾರ್ಯವನ್ನು ಮಾಡಿದವನಿಗೆ ವಧೆಯಾಗ- ಬೇಕು. ಸತ್ಕಾರ್ಯವನ್ನು ಮಾಡಿದವನಿಗೆ ಹೇಗೆ ವಧೆಯಾದೀತು? ಇಲ್ಲಿ ಬಹಳಕಾಲ ನಿಲ್ಲುವುದು ಯೋಗ್ಯವಲ್ಲ. ಆದ್ದರಿಂದ ವಿವೇಕಿಯಾದವನು ಶೀಘ್ರವಾಗಿ ಹೊರಟು -ಹೋಗಬೇಕು.

ಸೀತಾ ನಾಮ ನದೀ ರಾಜನ್ ಪ್ಲವೋ ಯಸ್ಯಾಂ ನಿಮಜ್ಜತಿ |
ತಥೋಪಮಾಮಿಮಾಂ ಮನ್ಯೇ ವಾಗುರಾಂ ಸರ್ವಘಾತಿನೀಮ್ ॥44॥

ಎಲೈ ರಾಜನೇ! ಸೀತಾ ಎಂಬ ನದಿಯಿದೆ. ಅದರಲ್ಲಿ ದೋಣಿಗಳು ಮುಳು- ಗುತ್ತವೆ. ನಿನ್ನ ರಾಜ್ಯವು ಅದರಂತೆ ಸರ್ವಘಾತುಕವಾದ ಬಲೆಯಂತೆ ಇದೆ ಎಂದು ನಾನು ತಿಳಿಯುತ್ತೇನೆ.

ಮಧುಪ್ರಪಾತೋ ಹಿ ಭವಾನ್ ಭೋಜನಂ ವಿಷಸಂಯುತಮ್ |
ಅಸತಾಮಿವ ತೇ ಭಾವೋ ವರ್ತತೇ ನ ಸತಾಮಿವ |
ಆಶೀವಿಷೈಃ ಪರಿವೃತಃ ಕೂಪಸ್ತ್ವಮಿವ ಪಾರ್ಥಿವ ॥45॥

ನೀನು ಮಧುಪ್ರಪಾತದಂತೆ ಇದ್ದೀಯೆ. ನಿನ್ನ ಭೋಜನವು ವಿಷಸಂಯುತ- ವಾಗಿದೆ. ನಿನ್ನಅಭಿಪ್ರಾಯವು ಅಸಜ್ಜನರ ಅಭಿಪ್ರಾಯದಂತೆ ಇದೆಯೇ ಹೊರತು ಸಜ್ಜನರ ಅಭಿಪ್ರಾಯದಂತೆ ಇಲ್ಲ. ಎಲೈ ರಾಜನೇ! ನೀನು ಸರ್ಪಗಳಿಂದ ಸುತ್ತು- ವರಿಯಲ್ಪಟ್ಟ ಕೂಪದಂತೆ ಇದ್ದೀಯೆ.

ದುರ್ಗತೀರ್ಥಾ ಬೃಹತ್ಕೂಲಾ ಕರೀರೀವೇತ್ರಸಂಯುತಾ |
ನದೀ ಮಧುರಪಾನೀಯಾ ಯಥಾ ರಾಜಂಸ್ತಥಾ ಭವಾನ್ |
ಶ್ವಗೃಧ್ರಗೋಮಾಯುಯುತೋ ರಾಜಹಂಸಸಮೋ ಹ್ಯಸಿ ॥46॥

ಪಡೆಯಲು ಅಸಾಧ್ಯವಾದ ಜಲ, ದೊಡ್ಡ ದಡ, ಬೆತ್ತ ಮೊದಲಾದ ಗಿಡ- ಗಂಟೆಗಳ ಪೊದೆ, ಮಧುರವಾದ ಜಲವಿರುವ ನದಿಯಂತೆ ನೀನು ಇದ್ದೀಯೆ. ಎಲೈ ರಾಜನೇ! ನೀನು ನಾಯಿ, ನರಿ ಮತ್ತು ಹದ್ದುಗಳಿಂದ ಸುತ್ತುವರಿಯಲ್ಪಟ್ಟ ರಾಜ- ಹಂಸಕ್ಕೆ ಸಮನಾಗಿದ್ದೀಯೆ.

ಯಥಾಶ್ರಿತ್ಯ ಮಹಾವೃಕ್ಷಂ ಕಕ್ಷಃ ಸಂವರ್ಧತೇ ಮಹಾನ್ |
ತತಸ್ತಂ ಸಂವೃಣೋತ್ಯೇವ ತಮತೀತ್ಯ ಚ ವರ್ಧತೇ ॥47॥
ತೇನೈವೋಪೇಂಧನೋ ನೂನಂ ದಾವೋ ದಹತಿ ದಾರುಣಃ |
ತಥೋಪಮಾ ಹ್ಯಮಾತ್ಯಾಸ್ತೇ ರಾಜಂಸ್ತಾನ್ ಪರಿಶೋಧಯ ॥48॥

ಹೇಗೆ ಪೊದೆಗಳು ದೊಡ್ಡ ವೃಕ್ಷವನ್ನು ಆಶ್ರಯಿಸಿ ಚೆನ್ನಾಗಿ ಬೆಳೆದು ಅದನ್ನು ಅವರಿಸಿ ಅದಕ್ಕಿಂತ ಮೇಲೆ ಬೆಳೆಯುತ್ತವೆಯೋ, ವೃಕ್ಷಕ್ಕೆ ಬೆಂಕಿಯು ತಗುಲಿದಾಗ ಇವು ಸೌದೆಗಳಾಗಿ ದಾವವಾಗಿ ಮಹಾವೃಕ್ಷವನ್ನು ದಹಿಸುತ್ತವೆಯೋ ಎಲೈ ರಾಜನೇ! ನಿನ್ನ ಅಮಾತ್ಯರು ಆ ರೀತಿಯಲ್ಲಿದ್ದಾರೆ. ಅವರನ್ನು ಚೆನ್ನಾಗಿ ಶೋಧಿಸು.

ಭವತೈವ ಕೃತಾ ರಾಜನ್ ಭವತಾ ಪರಿಪಾಲಿತಾಃ |
ಭವಂತಂ ಪರ್ಯವಜ್ಞಾಯ ಜಿಘಾಂಸಂತಿ ಭವತ್ಪ್ರಿಯಮ್ ॥49॥

ಎಲೈ ರಾಜನೇ! ನೀನೇ ನೇಮಿಸಿದವರು, ನಿನ್ನಿಂದಲೇ ರಕ್ಷಿತರಾದವರು ಅಂತಹವರು ನಿನ್ನನ್ನು ತಿರಸ್ಕರಿಸಿ ನಿನಗೆ ಪ್ರಿಯರಾದವರನ್ನು ಕೊಲ್ಲಲು ಬಯಸುತ್ತಾರೆ.

ಉಷಿತಂ ಶಂಕಮಾನೇನ ಪ್ರಮಾದಂ ಪರಿರಕ್ಷತಾ |
ಅಂತಃಸರ್ಪ ಇವಾಗಾರೇ ವೀರಪತ್ನ್ಯಾ ಇವಾಲಯೇ |
ಶೀಲಂ ಜಿಜ್ಞಾಸಮಾನೇನ ರಾಜ್ಞಶ್ಚ ಸಹಜೀವಿನಾ ॥50॥

ನಿನ್ನ ಶೀಲವನ್ನು ತಿಳಿದುಕೊಳ್ಳಲು ಬಯಸಿ, ಯಾವ ಪ್ರಮಾದವನ್ನೂ ಮಾಡ- ದಂತೆ ಸರ್ಪವಿರುವ ಮನೆಯಲ್ಲಿ ಜೀವಿಸಿದಂತೆ, ವೀರಪತ್ನಿಯ ಮನೆಯಲ್ಲಿ ಜೀವಿಸಿ- ದಂತೆ ನಿನ್ನ ಜೊತೆಯಲ್ಲಿ ಜೀವಿಸಿದೆ.

ಕಚ್ಚಿಜ್ಜಿತೇಂದ್ರಿಯೋ ರಾಜಾ ಕಚ್ಚಿದಸ್ಯಾಂತರಾ ಜಿತಾಃ |
ಕಚ್ಚಿದೇಷಾಂ ಪ್ರಿಯೋ ರಾಜಾ ಕಚ್ಚಿದ್ ರಾಜ್ಞಃ ಪ್ರಿಯಾ ಪ್ರಜಾಃ ॥51॥
ಜಿಜ್ಞಾಸುರಿಹ ಸಂಪ್ರಾಪ್ತಸ್ತವಾಹಂ ರಾಜಸತ್ತಮ |
ತಸ್ಯ ಮೇ ರೋಚತೇ ರಾಜನ್ ಕ್ಷುಧಿತಸ್ಯೇವ ಭೋಜನಮ್ ॥52॥
ರಾಜನು ಜಿತೇಂದ್ರಿಯನಾಗಿದ್ದಾನೆಯೇ. ಅವನ ಒಳಗಿನ ಜನರು ಜಿತರಾಗಿ- ದ್ದಾರೆಯೇ, ರಾಜನು ಅವರಿಗೆ ಪ್ರಿಯನಾಗಿದ್ದಾನೆಯೇ, ಪ್ರಜೆಗಳು ಅವನಿಗೆ ಪ್ರಿಯ- ರಾಗಿದ್ದಾರೆಯೇ, ಎಲೈ ರಾಜಶ್ರೇಷ್ಠನೇ! ಇವುಗಳನ್ನು ತಿಳಿದುಕೊಳ್ಳಲು ನಾನು ನಿನ್ನ ಸಮೀಪಕ್ಕೆ ಬಂದೆ. ರಾಜನೇ! ನಿನ್ನ ಸ್ವಭಾವವು ಹಸಿದವನಿಗೆ ಭೋಜನವು ಇಷ್ಟ- ವಾಗುವಂತೆ ನನಗೆ ಇಷ್ಟವಾಗುತ್ತದೆ.
ಅಮಾತ್ಯಾ ಮೇ ನ ರೋಚಂತೇ ವಿತೃಷ್ಣಸ್ಯ ಯಥೋದಕಮ್ |
ಭವತೋಽರ್ಥಕೃದಿತ್ಯೇವ ಮಯಿ ದೋಷೋ ಹಿ ತೈಃ ಕೃತಃ |
ವಿದ್ಯತೇ ಕಾರಣಂ ನಾನ್ಯದಿತಿ ಮೇ ನಾತ್ರ ಸಂಶಯಃ ॥53॥
ನಿನ್ನ ಅಮಾತ್ಯರು ಮಾತ್ರ ಬಾಯಾರಿಕೆಯಿಲ್ಲದವನಿಗೆ ನೀರು ಇಷ್ಟವಾಗದಂತೆ ನನಗೆ ಇಷ್ಟವಾಗುವುದಿಲ್ಲ. ನಿನಗೆ ಹಿತಕಾರಿಯಾದವನು ಎಂಬ ಒಂದೇ ಕಾರಣಕ್ಕಾಗಿ ಅವರು ನನಗೆ ಅಪಚಾರವನ್ನು ಮಾಡಿದ್ದಾರೆ. ಬೇರೆ ಯಾವುದೂ ಕಾರಣವಿಲ್ಲ ಎಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ.
ನ ಹಿ ತೇಷಾಮಹಂ ದ್ರುಗ್ಧಸ್ತತ್ ತೇಷಾಂ ದೋಷವದ್ ಗತಮ್ |
ಅರೇರ್ಹಿ ದುರ್ಹೃದಾದ್ ಭೇಯಂ ಭಗ್ನಪೃಷ್ಠಾದಿವೋರಗಾತ್ ॥54॥
ನಾನು ಅವರಿಗೆ ಯಾವ ದ್ರೋಹವನ್ನೂ ಮಾಡಿಲ್ಲ. ಅವರು ಅದನ್ನೂ ದೋಷವೆಂದು ಎಣಿಸುತ್ತಾರೆ. ಕೆಟ್ಟಮನಸ್ಸುಳ್ಳ ಶತ್ರುವಿನಿಂದ ಸೊಂಟವು ಮುರಿದ ಹಾವಿಗೆ ಹೆದರಿದಂತೆ ಹೆದರಬೇಕು.
ರಾಜಾ
ಭೂಯಸೋ ಪರಿಬರ್ಹೇಣ ಸತ್ಕಾರೇಣ ಚ ಭೂಯಸಾ |
ಪೂಜಿತೋ ಬ್ರಾಹ್ಮಣಶ್ರೇಷ್ಠ ಭೂಯೋ ವಸ ಗೃಹೇ ಮಮ ॥55॥
ರಾಜ ಎಲೈ ಬ್ರಾಹ್ಮಣಶ್ರೇಷ್ಠನೇ! ಇನ್ನೂ ಹೆಚ್ಚಿನ ಉಡುಗೊರೆಗಳಿಂದ ಇನ್ನೂ ಹೆಚ್ಚಿನ ಸತ್ಕಾರಗಳಿಂದ ಪೂಜಿತನಾಗಿ ನನ್ನ ಮನೆಯಲ್ಲಿ ಇನ್ನೂ ವಾಸ ಮಾಡು.
ಯೇ ತ್ವಾ ಬ್ರಾಹ್ಮಣ ನೇಚ್ಛಂತಿ ನ ತೇ ವತ್ಸ್ಯಂತಿ ಮೇ ಗೃಹೇ |
ಭವತೈವ ಹಿ ತಜ್ಜ್ಞೇಯಂ ಯದಿದಾನೀಮನಂತರಮ್ ॥56॥
ಎಲೈ ಬ್ರಾಹ್ಮಣನೇ! ಯಾರು ನಿನ್ನನ್ನು ಬಯಸುವುದಿಲ್ಲವೋ ಅವರು ನನ್ನ ಮನೆಯಲ್ಲಿ ವಾಸಿಸುವುದಿಲ್ಲ. ನಾನು ಈಗ ಮುಂದೆ ಏನು ಮಾಡಬೇಕೆಂಬುದನ್ನು ನೀನೇ ತಿಳಿದು ಹೇಳಬೇಕು.
ಯಥಾ ಸ್ಯಾದ್ ದುಷ್ಕೃತೋ ದಂಡೋ ಯಥಾ ಚ ಸುಕೃತಂ ಕೃತಮ್ |
ತಥಾ ಸಮೀಕ್ಷ್ಯ ಭಗವನ್ ಶ್ರೇಯಸೇ ವಿನಿಯುಂಕ್ಷ್ವ ಮಾಮ್ ॥57॥
ಹೇಗೆ ದುಷ್ಕರ್ಮಗಳಿಗೆ ದಂಡವು ಉಂಟಾಗುತ್ತದೆಯೋ, ಹೇಗೆ ಒಳ್ಳೆಯ ಕಾರ್ಯವನ್ನು ಮಾಡಿದಂತಾಗುತ್ತದೆಯೋ, ಪೂಜ್ಯನೇ ಹಾಗೆ ವಿಚಾರ ಮಾಡಿ, ನನ್ನನ್ನು ಶ್ರೇಯೋಮಾರ್ಗದಲ್ಲಿ ಸ್ಥಾಪಿಸುವವನಾಗು.
ಮುನಿಃ
ಅದರ್ಶಯನ್ನಿಮಂ ದೋಷಮೇಕೈಕಂ ದುರ್ಬಲಂ ಕುರು |
ತತಃ ಕಾರಣಮಾಜ್ಞಾಯ ಪುರುಷಂ ಪುರುಷಂ ಜಹಿ ॥58॥
ಮುನಿ ಈ ದೋಷವನ್ನು ನಿನಗೆ ತೋರಿಸಿದ್ದೇನೆ. ಒಬ್ಬೊಬ್ಬನನ್ನೂ ದುರ್ಬಲ- ನನ್ನಾಗಿ ಮಾಡು. ಅನಂತರ ಕಾರಣವನ್ನು ತಿಳಿದು ಒಬ್ಬೊಬ್ಬ ಪುರುಷನನ್ನೂ ದೂರ- ಮಾಡು.
ಏಕದೋಷಾ ಹಿ ಬಹವೋ ಮೃದ್ನೀಯುರಪಿ ಕಂಟಕಾನ್ |
ಮಂತ್ರಭೇದಭಯಾದ್ ರಾಜಂಸ್ತಸ್ಮಾದೇತದ್ ಬ್ರವೀಮಿ ತೇ ॥59॥
ಒಂದೇ ದೋಷವಿರುವ ಅನೇಕ ಜನರು ಸೇರಿದರೆ ಅವರು ಒಟ್ಟಾಗಿ ಕಂಟಕ- ಗಳನ್ನು ತುಳಿದು ನಾಶ ಮಾಡಬಹುದು. ರಾಜನೇ ಮಂತ್ರಭೇದಭಯದಿಂದ ನಾನು ಇದನ್ನು ನಿನಗೆ ಹೇಳುತ್ತಿದ್ದೇನೆ.
ಅರ್ಥೇ ಸರ್ವಂ ಜಗದ್ ದ್ವಂದ್ವಮರ್ಥೇನ ಚ ನಿಬಧ್ಯತೇ |
ಅರ್ಥೇ ದರ್ಪೋ ಮನುಷ್ಯಾಣಾಂ ತಸ್ಮಾದರ್ಥಂ ವಿರೇಚಯ ॥60॥
ಜಗತ್ತಿನ ಎಲ್ಲ ಕಲಹಗಳು ಅರ್ಥದಿಂದ ಉಂಟಾಗುತ್ತವೆ. ಅರ್ಥದಿಂದ ಎಲ್ಲರೂ ಬದ್ಧರಾಗುತ್ತಾರೆ. ಅರ್ಥವು ಮನುಷ್ಯರಿಗೆ ದರ್ಪವನ್ನುಂಟು ಮಾಡುತ್ತದೆ. ಆದ್ದರಿಂದ ದುಷ್ಟರಾದ ಅಮಾತ್ಯರು ಅರ್ಥಹೀನರಾಗುವಂತೆ ಮಾಡು.
ಏಕೇನೈಕಸ್ಯ ದೋಷೇಣ ತದ್ವಿರುದ್ಧಂ ಪ್ರಚೋದಯ |
ಸ ತಸ್ಯ ದೋಷಾನುದ್ಧಾವ್ಯ ತಸ್ಯಾರ್ಥಂ ಗ್ರಾಹಯಿಷ್ಯತಿ ॥61॥
ಒಂದು ದೋಷವಿರುವ ಒಬ್ಬನ ಮೇಲೆ ಅವನಿಗೆ ವಿರುದ್ಧನಾದವನನ್ನು ಪ್ರಚೋದಿಸು. ಅವನು ಅವನ ಬೇರೆ ದೋಷಗಳನ್ನು ಹೊರಗೆಳೆದು ರಾಜನು ಅವನ ಅರ್ಥವನ್ನು ತೆಗೆದುಕೊಳ್ಳುವಂತೆ ಮಾಡುವನು.
ಸಾಮಪೂರ್ವಂ ಚ ಕೇಷಾಂಚಿದ್ ಭೇದೇನ ಚ ಪರಸ್ಪರಮ್ |
ವೈರಂ ಕಾರಯ ಭೂಪಾಲ ಪಶ್ಚಾದ್ ದಂಡಂ ಪ್ರಯೋಜಯ ॥62॥
ಎಲೈ ರಾಜನೇ! ಕೆಲವರಿಗೆ ಸಾಮದಿಂದ, ಕೆಲವರಿಗೆ ಭೇದದಿಂದ ವೈರವನ್ನು ಉಂಟುಮಾಡು. ಅನಂತರ ದಂಡವನ್ನು ಪ್ರಯೋಗಿಸು.

ಬಿಲ್ವೇನ ಚ ಯಥಾ ಬಿಲ್ವಮಾಕಾರಂ ಛಾದ್ಯ ಬುದ್ಧಿಮಾನ್ |
ಅಶುದ್ಧಂ ಸಚಿವಂ ರಾಜನ್ನಶುದ್ಧೇನೈವ ನಾಶಯ ॥63॥
ಬಿಲ್ವಫಲದಿಂದ ಬಿಲ್ವಫಲವನ್ನು ನಾಶಮಾಡಿದಂತೆ ಬುದ್ಧಿವಂತನಾದ ನೀನು ನಿನ್ನ ಅಭಿಪ್ರಾಯವನ್ನು ಮರೆಮಾಡಿ ಅಶುದ್ಧನಾದ ಸಚಿವನನ್ನು ಅಶುದ್ಧನಾದ ಸಚಿವ- ನಿಂದಲೇ ನಾಶಮಾಡು.
ವಯಂ ತು ಬ್ರಾಹ್ಮಣಾ ರಾಜನ್ ಮೃದುದಂಡಾಃ ಕೃಪಾಲವಃ |
ಸ್ವಸ್ತಿ ಚೇಚ್ಛಾಮಿ ಭವತಃ ಪರೇಷಾಂ ಚ ಯಥಾತ್ಮನಃ ॥64॥
ಎಲೈ ರಾಜನೇ! ನಾವು ಬ್ರಾಹ್ಮಣರು; ಕೃಪಾಳುಗಳು ಮತ್ತು ಮೃದುವಾದ ದಂಡವುಳ್ಳವರು. ನಿನಗೂ ಉಳಿದವರಿಗೂ ನನ್ನಂತೆಯೇ ಕ್ಷೇಮವನ್ನು ಬಯಸು- ತ್ತೇನೆ.
ರಾಜನ್ನಾತ್ಮಾನಮಾಚಕ್ಷೇ ಸಂಬಂಧೀ ಭವತೋ ಹ್ಯಹಮ್ |
ಮುನಿಃ ಕಾಲಕವೃಕ್ಷೀಯ ಇತ್ಯೇವಮಭಿಸಂಜ್ಞಿತಃ ॥65॥
ರಾಜನೇ! ನಿನಗೆ ನಾನು ಯಾರೆಂದು ತಿಳಿಸುತ್ತೇನೆ. ನಾನು ನಿನ್ನ ಸಂಬಂಧಿ- ಯಾದ ಕಾಲಕವೃಕ್ಷೀಯ ಎಂಬ ಹೆಸರಿನ ಮುನಿ.
ಪಿತುಃ ಸಖಾ ಚ ಭವತಃ ಸಮ್ಮತಃ ಸತ್ಯಸಂಗರಃ |
ವ್ಯಾಪನ್ನೇ ಭವತೋ ರಾಜ್ಯೇ ರಾಜನ್ ಪಿತರಿ ಸಂಸ್ಥಿತೇ ॥66॥
ಸರ್ವಕಾಮಾನ್ ಪರಿತ್ಯಜ್ಯ ತಪಸ್ತಪ್ತಂ ತದಾ ಮಯಾ |
ಸ್ನೇಹಾತ್ ತ್ವಾಂ ಪ್ರಬ್ರವೀಮ್ಯೇತನ್ಮಾ ಭೂಯೋ ವಿಭ್ರಮೇದಿತಿ ॥67॥
ನಿನ್ನ ತಂದೆಯ ಸ್ನೇಹಿತ. ಸತ್ಯಸಂಗರನೆಂದು ಎಲ್ಲರಿಗೂ ಸಮ್ಮತನಾದವನು. ನಿನ್ನ ತಂದೆಯು ಮರಣವನ್ನು ಹೊಂದಿ ನಿನ್ನ ರಾಜ್ಯವು ವಿಪತ್ತಿಗೆ ಒಳಗಾದಾಗ ನಾನು ಎಲ್ಲ ಕಾಮಗಳನ್ನೂ ತ್ಯಜಿಸಿ ತಪಸ್ಸನ್ನು ಆಚರಿಸಿದೆ. ನಿನ್ನ ಮೇಲಿನ ಸ್ನೇಹದಿಂದ ಇನ್ನೊಮ್ಮೆ ನೀನು ಪ್ರಮಾದವನ್ನು ಮಾಡಬಾರದು ಎಂದು ಭಾವಿಸಿ ನಿನಗೆ ಹೇಳುತ್ತಿದ್ದೇನೆ.
ಉಭೇ ದೃಷ್ಟ್ವಾ ದುಃಖಸುಖೇ ರಾಜ್ಯಂ ಪ್ರಾಪ್ಯ ಯದೃಚ್ಛಯಾ |
ರಾಜ್ಯೇನಾಮಾತ್ಯಸಂಸ್ಥೇನ ಕಥಂ ರಾಜನ್ ಪ್ರಮಾದ್ಯಸಿ ॥68॥
ರಾಜನೇ! ಸುಖದುಃಖಗಳೆರಡನ್ನೂ ನೋಡಿ, ಭಗವದಿಚ್ಛೆಯಿಂದ ರಾಜ್ಯವನ್ನು ಪಡೆದು, ರಾಜ್ಯವು ಅಮಾತ್ಯರ ಕೈಯ್ಯಲ್ಲಿ ಇರುವಾಗ ನೀನು ಹೇಗೆ ಪ್ರಮಾದವನ್ನು ಮಾಡುವಿ?
ಭೀಷ್ಮಃ
ತತೋ ರಾಜಕುಲೇ ನಂದೀ ಸಂಜಜ್ಞೇ ಭೂಯಸೀ ಪುನಃ |
ಪುರೋಹಿತಕುಲೇ ಚೈವ ಸಂಪ್ರಾಪ್ತೇ ಬ್ರಾಹ್ಮಣರ್ಷಭೇ ॥69॥
ಆಗ ಅಂತಹ ಬ್ರಾಹ್ಮಣರ್ಷಭನು ಸಂಪ್ರಾಪ್ತನಾದಾಗ ರಾಜಕುಲದಲ್ಲಿಯೂ ಮತ್ತು ಪುರೋಹಿತಕುಲದಲ್ಲಿಯೂ ದೊಡ್ಡ ಆನಂದದ ಶಬ್ದವು ಉಂಟಾಯಿತು.
ಏಕಚ್ಛತ್ರಾಂ ಮಹೀಂ ಕೃತ್ವಾ ಕೌಸಲ್ಯಾಯ ಯಶಸ್ವಿನೇ |
ಮುನಿಃ ಕಾಲಕವೃಕ್ಷೀಯ ಈಜೇ ಕ್ರತುಭಿರುತ್ತಮೈಃ ॥70॥
ಕಾಲಕವೃಕ್ಷೀಯ ಮುನಿಯು ಯಶಸ್ವಿಯಾದ ಕೌಸಲ್ಯನಿಗೆ ಏಕಚ್ಛತ್ರವಾದ ಮಹಿಯನ್ನು ಸಂಪಾದಿಸಿಕೊಟ್ಟು ಉತ್ತಮವಾದ ಯಜ್ಞಗಳಿಂದ ಯಾಗವನ್ನು ಮಾಡಿ- ಸಿದನು.
ಹಿತಂ ತದ್ ವಚನಂ ಶ್ರುತ್ವಾ ಕೌಸಲ್ಯೋಽನ್ವಶಸನ್ಮಹೀಮ್ |
ತಥಾಚ ಕೃತವಾನ್ ರಾಜಾ ಯಥೋಕ್ತಂ ತೇನ ಭಾರತ ॥71॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರಶೀತಿತಮೋಽಧ್ಯಾಯಃ ॥84॥
ಅವನ ಹಿತವಚನಗಳನ್ನು ಕೇಳಿ ಕೌಸಲ್ಯನು ಭೂಮಿಯನ್ನು ಆಳಿದನು. ಎಲೈ ಭಾರತನೇ! ರಾಜನು ಅವನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 84ನೆಯಅಧ್ಯಾಯವು ಮುಗಿಯಿತು.

## 85. ಎಂಬತ್ತೈದನೆಯ ಅಧ್ಯಾಯ

### ಮಂತ್ರಿಮೊದಲಾದವರ ಲಕ್ಷಣಕಥನ

ಯುಧಿಷ್ಠಿರಃ
ಸಭಾಸದಸಹಾಯಾಶ್ಚ ಸುಹೃದಶ್ಚ ವಿಶಾಂಪತೇ |
ಪರಿಚ್ಛದಾಸ್ತಥಾಮಾತ್ಯಾಃ ಕೀದೃಶಾಃ ಸ್ಯುಃ ಪಿತಾಮಹ ॥1॥
ಎಲೈ ಪಿತಾಮಹನೇ! ಸಭಾಸದರು, ಸಹಾಯಕರು, ಸುಹೃಜ್ಜನರು, ಪರಿ- ವಾರವು, ಅಮಾತ್ಯರು ಎಂತಹವರಾಗಿರಬೇಕು?
ಭೀಷ್ಮಃ
ಹ್ರೀನಿಷೇಧಾಃ ಸದಾ ಸಂತಃ ಸತ್ಯಾರ್ಜವಸಮನ್ವಿತಾಃ |
ಶಕ್ತಾಃ ಕಥಯಿತುಂ ಸಮ್ಯಕ್ ತೇ ತವ ಸ್ಯುಃ ಸಭಾಸದಃ ॥2॥
ಭೀಷ್ಮರು ಕೆಟ್ಟ ಕೆಲಸವನ್ನು ಮಾಡುವುದಕ್ಕೆ ನಾಚುವವರಾಗಿ, ಸದಾ ಸಜ್ಜನರಾಗಿ, ಸತ್ಯಾರ್ಜವಯುಕ್ತರಾಗಿ, ಚೆನ್ನಾಗಿ ಮಾತನಾಡಲು ಬರುವವರು ನಿನ್ನ ಸಭಾಸದರಾಗಲಿ.
ಅತ್ಯಾಢ್ಯಾಂಶ್ಚಾತಿಶೂರಾಂಶ್ಚ ಬ್ರಾಹ್ಮಣಾಂಶ್ಚ ಬಹುಶ್ರುತಾನ್ |

ಸುಸಂತುಷ್ಟಾಂಶ್ಚ ಕೌಂತೇಯ ಮಹೋತ್ಸಾಹಾಂಶ್ಚ ಕರ್ಮಸು ॥3॥
ಏತಾನ್ ಸಹಾಯಾನ್ ಲಿಪ್ಸೇಥಾಃ ಸರ್ವಾಸ್ವಾಪತ್ಸು ಭಾರತ |
ಕುಲೀನಃ ಪೂಜಿತೋ ನಿತ್ಯಂ ನಹಿ ಶಕ್ತಿಂ ನಿಗೂಹತಿ ॥4॥
ಬಹಳವಾಗಿ ಧನಾಢ್ಯರಾದವರನ್ನು, ಅತಿ ಶೂರರನ್ನು, ಬಹುಶ್ರುತರಾದ ಬ್ರಾಹ್ಮಣರನ್ನು, ಮಹೋತ್ಸಾಹವನ್ನು ಹೊಂದಿ ಒಳ್ಳೆಯ ಸಂತೋಷದಿಂದಿರು- ವವರನ್ನು, ಎಲೈ ಕೌಂತೇಯನೇ! ನಿನ್ನ ಕರ್ಮಗಳಲ್ಲಿ ಸಹಾಯಕರನ್ನಾಗಿ ಬಯಸು- ವವನಾಗು. ಎಲೈ ಭಾರತನೇ! ಕುಲೀನನಾಗಿ ಸತ್ಕರಿಸಲ್ಪಟ್ಟವನು ಯಾವ ಆಪತ್ತಿ- ನಲ್ಲಿಯೂ ತನ್ನ ಶಕ್ತಿಯನ್ನು ಮುಚ್ಚಿಡುವುದಿಲ್ಲ.
ಪ್ರಸನ್ನಂ ಹ್ಯಪ್ರಸನ್ನಂ ವಾ ಪೀಡಿತಂ ಹೃತಮೇವ ವಾ |
ಆವರ್ತಯತಿ ಭೂಯಿಷ್ಠಂ ಸ ಏಕೋ ಹ್ಯನುಪಾಲಿತಃ ॥5॥
ಅಂತಹ ಒಬ್ಬನು ಚೆನ್ನಾಗಿ ರಕ್ಷಿಸಲ್ಪಟ್ಟರೆ ಪ್ರಸನ್ನನಾದ ಅಥವಾ ಅಪ್ರಸನ್ನನಾದ ಇನ್ನೊಬ್ಬರನ್ನು ಹಿಂದಿರುಗಿಸುತ್ತಾನೆ. ಪೀಡಿತವಾದ ಅಥವಾ ಅಪಹೃತವಾದ ಧನವನ್ನು ಹಿಂದಿರುಗಿಸುತ್ತಾನೆ.
ಕುಲೀನಾ ದೇಶಜಾಃ ಪ್ರಾಜ್ಞಾ ರೂಪವಂತೋ ಬಹುಶ್ರುತಾಃ |
ಪ್ರಗಲ್ಭಾಶ್ಚಾನುರಕ್ತಾಶ್ಚ ತೇ ತವ ಸ್ಯುಃ ಪರಿಚ್ಛದಾಃ ॥6॥
ಕುಲೀನರು, ಒಳ್ಳೆಯ ದೇಶದಲ್ಲಿ ಜನಿಸಿದವರು,ಪ್ರಾಜ್ಞರು, ರೂಪವಂತರು, ಬಹುಶ್ರುತರು, ವಿದ್ವಾಂಸರು, ನಿನ್ನಲ್ಲಿ ಪ್ರೀತಿಯುಳ್ಳವರು ಆದವರು ನಿನಗೆ ಪರಿ- ವಾರವಾಗಲಿ.
ದೌಷ್ಕುಲೇಯಾಶ್ಚ ಲುಬ್ಧಾಶ್ಚ ನೃಶಂಸಾ ನಿರಪತ್ರಪಾಃ |
ತೇ ತ್ವಾಂ ತಾತ ನಿಷೇವೇಯುರ್ಯಾವದಾರ್ದ್ರಕಪಾಣಯಃ ॥7॥
ಪ್ರೀತಿಪಾತ್ರನೇ! ದುಷ್ಕುಲದಲ್ಲಿ ಜನಿಸಿದವರು, ಲೋಭಿಗಳು, ಕ್ರೂರಿಗಳು, ನಾಚಿಕೆಗೆಟ್ಟವರು, ದಾನವನ್ನು ಸ್ವೀಕರಿಸಿದ ಹಸ್ತವು ಒದ್ದೆಯಾಗಿರುವವರೆಗೆ ಮಾತ್ರ ನಿನ್ನ ಸೇವೆಯನ್ನು ಮಾಡುವವರು ನಿನ್ನ ಪರಿವಾರದಲ್ಲಿ ಇಲ್ಲದಿರಲಿ.
ಅರ್ಥಮಾನಾರ್ಘ್ಯಸತ್ಕಾರೈರ್ಭೋಗೈರುಚ್ಚಾವಚೈಃ ಪ್ರಿಯಾನ್ |
ಯಾನರ್ಥಭಾಜೋ ಮನ್ಯೇಥಾಸ್ತೇ ಸ್ಯುಃ ಸುಖಭಾಗಿನಃ ॥8॥
ಅರ್ಥ-ಮಾನಗಳನ್ನು, ಅರ್ಘ್ಯ-ಸತ್ಕಾರಗಳನ್ನು, ಪ್ರಿಯವಾದ ಶ್ರೇಷ್ಠವಾದ ಭೋಗಗಳನ್ನು ಕೊಟ್ಟು ಯಾರು ಅಂತಹ ಸಂಪತ್ತಿಗೆ ಯೋಗ್ಯರೆಂದು ಭಾವಿಸು- ತ್ತೀಯೋ ಅಂತಹವರು ನಿನ್ನ ಸುಖದಲ್ಲಿ ಭಾಗಿಗಳಾಗುತ್ತಾರೆ.
ಅಭಿನ್ನವೃತ್ತಾ ವಿದ್ವಾಂಸಃ ಸದ್ವೃತ್ತಾಶ್ಚರಿತವ್ರತಾಃ |
ನ ತ್ವಾ ನಿತ್ಯಾರ್ಥಿನೋ ಜಹ್ಯುರಕ್ಷುದ್ರಾಃ ಸತ್ಯವಾದಿನಃ ॥9॥
ಒಂದೇ ವಿಧವಾದ ನಡತೆಯುಳ್ಳ, ಸನ್ನಡತೆಯುಳ್ಳ, ವ್ರತಗಳನ್ನು ಆಚರಿಸುವ, ಮೋಕ್ಷಾಭಿಲಾಷಿಗಳಾದ, ಸತ್ಯವಾದಿಗಳಾದ, ಕ್ಷುದ್ರರಲ್ಲದ ವಿದ್ವಾಂಸರು ನಿನ್ನನ್ನು ಎಂದೂ ಬಿಡಲಾರರು.
ಅನಾರ್ಯಾ ಯೇ ನ ಜಾನಂತಿ ಸಮಯಂ ಮಂದಚೇತಸಃ |
ತೇಭ್ಯಃ ಪ್ರತಿಜುಗುಪ್ಸೇಥಾ ಜಾನೀಯಾಃ ಸಮಯಚ್ಯುತಾನ್ ॥10॥
ಅನಾರ್ಯರಾದ ಯಾರು ಮಂದಬುದ್ಧಿಯುಳ್ಳವರಾಗಿ ರಾಜನ ಸಮಯವನ್ನು ತಿಳಿಯುವುದಿಲ್ಲವೋ ಅವರ ವಿಷಯದಲ್ಲಿ ನೀನು ಅಸಹ್ಯ ಪಡಬೇಕು. ಅವರು ಸಮಯಜ್ಞಾನಶೂನ್ಯರು ಎಂದು ತಿಳಿಯಬೇಕು.
ನೈಕಮಿಚ್ಛೇದ್ ಗಣಂ ಹಿತ್ವಾ ಸ್ಯಾಚ್ಚೇದನ್ಯತರಗ್ರಹಃ |
ಯಸ್ತ್ವೇಕೋ ಬಹುಭಿಃ ಶ್ರೇಯಾನ್ ಕಾಮಂ ತೇನ ಗಣಂ ತ್ಯಜೇತ್ ॥11॥
ಒಬ್ಬರನ್ನು ಅಥವಾ ಒಂದು ಗಣವನ್ನು ಸ್ವೀಕರಿಸಬೇಕಾಗಿ ಬಂದಾಗ ಗಣವನ್ನು ಬಿಟ್ಟು ಒಬ್ಬನನ್ನು ಸ್ವೀಕರಿಸಬಾರದು. ಆದರೆ ಅಂತಹ ಒಬ್ಬನು ಸಮಗ್ರವಾದ ಗಣ- ಕ್ಕಿಂತಲೂ ಶ್ರೇಷ್ಠನಾದರೆ ಆಗ ಗಣವನ್ನು ಬಿಡಬೇಕು.
ಶ್ರೇಯಸೋ ಲಕ್ಷಣಂ ಹ್ಯೇತದ್ ವಿಕ್ರಮೋ ಯಸ್ಯ ದೃಶ್ಯತೇ |
ಕೀರ್ತಿಪ್ರಧಾನೋ ಯಶ್ಚ ಸ್ಯಾತ್ ಸಮಯೇ ಯಶ್ಚ ತಿಷ್ಠತಿ ॥12॥
ಸಮರ್ಥಾನ್ ಪೂಜಯೇದ್ ಯಶ್ಚ ನಾಸ್ಪರ್ಧ್ಯೈಃ ಸ್ಪರ್ಧತೇ ಚ ಯಃ |
ನ ಚ ಕಾಮಾದ್ ಭಯಾತ್ ಕ್ರೋಧಾಲ್ಲೋಭಾದ್
ವಾ ಧರ್ಮಮುತ್ಸೃಜೇತ್ ॥13॥
ಅಮಾನೀ ಸತ್ಯವಾಕ್ ಶಕ್ತೋ ಜಿತಾತ್ಮಾ ಮಾನ್ಯಮಾನಿತಾ |
ಸ ತೇ ಮಂತ್ರಸಹಾಯಃ ಸ್ಯಾತ್ ಸರ್ವಾವಸ್ಥಂ ಪರೀಕ್ಷತಃ ॥14॥
ಇದು ಶ್ರೇಯಸ್ಸಿನ ಲಕ್ಷಣ. ಎಲ್ಲಿ ವಿಕ್ರಮವು ಕಾಣುತ್ತದೆಯೋ, ಯಾವನು ಕೀರ್ತಿಪ್ರಧಾನನೋ, ಯಾವನು ಮಾಡಿಕೊಂಡ ಒಪ್ಪಂದದಂತೆ ನಡೆದುಕೊಳ್ಳು- ತ್ತಾನೆಯೋ, ಸಮರ್ಥರನ್ನು ಪೂಜಿಸುತ್ತಾನೆಯೋ, ಸ್ಪರ್ಧಿಸಲು ಯೋಗ್ಯರಲ್ಲದವರ ಜೊತೆಯಲ್ಲಿ ಸ್ಪರ್ಧಿಸುವುದಿಲ್ಲವೋ, ಕಾಮದಿಂದಾಗಲೀ ಭಯದಿಂದಾಗಲೀ ಕ್ರೋಧದಿಂದಾಗಲೀ ಲೋಭದಿಂದಾಗಲೀ ಧರ್ಮವನ್ನು ಬಿಡುವುದಿಲ್ಲವೋ, ನಿರಹಂಕಾರಿಯಾಗಿ ಸತ್ಯವಚನನಾಗಿ ಸಮರ್ಥನಾಗಿ ಜಿತಮನಸ್ಕನಾಗಿ ಮಾನ್ಯರನ್ನು ಸತ್ಕರಿಸುವವನಾಗಿ ಇರುತ್ತಾನೆಯೋ ಅಂತಹವನು ಸರ್ವಾವಸ್ಥೆಯಲ್ಲಿಯೂ ನಿನಗೆ ಮಂತ್ರಸಹಾಯನಾಗಲಿ.
ಕುಲೀನಃ ಸತ್ಯಸಂಪನ್ನಸ್ತಿತಿಕ್ಷುರ್ದಕ್ಷ ಆತ್ಮವಾನ್ |
ಶೂರಃ ಕೃತಜ್ಞಃ ಸತ್ಯಶ್ಚ ಶ್ರೇಯಸಃ ಪಾರ್ಥ ಲಕ್ಷಣಮ್ ॥15॥
ಎಲೈ ಪಾರ್ಥನೇ! ಸತ್ಕುಲದಲ್ಲಿ ಜನ್ಮ, ಸತ್ಯಸಂಕಲ್ಪತೆ, ದ್ವಂದ್ವಸಹಿಷ್ಣುತೆ, ದಕ್ಷತೆ, ಮನೋಜಯ, ಶೌರ್ಯ, ಕೃತಜ್ಞತೆ ಇವು ಶ್ರೇಯಸ್ಸಿನ ಲಕ್ಷಣಗಳು.

ತಸ್ಯೈವಂ ವರ್ತಮಾನಸ್ಯ ಪುರುಷಸ್ಯ ವಿಜಾನತಃ |
ಅಮಿತ್ರಾಃ ಸಂಪ್ರಸೀದಂತಿ ತತೋ ಮಿತ್ರೀಭವಂತ್ಯಪಿ ॥16॥
ರಾಜನು ಜ್ಞಾನಪೂರ್ವಕವಾಗಿ ಹೀಗೆ ನಡೆದುಕೊಂಡರೆ ಶತ್ರುಗಳೂ ಪ್ರಸನ್ನರಾಗಿ ಅನಂತರ ಮಿತ್ರರಾಗುತ್ತಾರೆ.
ಅತ ಊರ್ಧ್ವಮಮಾತ್ಯಾನಾಂ ಪರೀಕ್ಷೇತ ಗುಣಾಗುಣಾನ್ |
ಸಂಯಮಾತ್ಮಾ ಕೃತಪ್ರಜ್ಞೋ ಭೂತಿಕಾಮಶ್ಚ ಭೂಮಿಪಃ ॥17॥
ಇನ್ನು ಮುಂದೆ ಮನೋನಿಗ್ರಹವುಳ್ಳವನೂ, ಕೃತಪ್ರಜ್ಞನೂ, ಐಶ್ವರ್ಯ- ಕಾಮನೂ ಆದ ರಾಜನು ಅಮಾತ್ಯರ ಗುಣದೋಷಗಳನ್ನು ಪರೀಕ್ಷಿಸಬೇಕು.
ಸಂಬದ್ಧಾಃ ಪುರುಷೈರಾಪ್ತೈರಭಿಜಾತೈಃ ಸ್ವದೇಶಜೈಃ |
ಅಹಾರ್ಯೈರವ್ಯಭೀಚಾರೈಃ ಸರ್ವತಃ ಸುಪರೀಕ್ಷಿತೈಃ॥18॥
ಯೋಧಾಃ ಸೌವಾಸ್ತಥಾ ಪೌಲಾಸ್ತಥೈವಾನ್ಯೇಽಪ್ಯವಸ್ಕೃತಾಃ |
ಕರ್ತವ್ಯಾ ಭೂತಿಕಾಮೇನ ಪುರುಷೇಣ ಬುಭೂಷತಾ ॥19॥
ಆಪ್ತಪುರುಷರ ಸಂಬಂಧವನ್ನು ಹೊಂದಿ, ಸತ್ಕುಲದಲ್ಲಿ ಸ್ವದೇಶದಲ್ಲಿ ಜನಿಸಿ, ಶತ್ರುಗಳಿಂದ ಹಾರಿಸಲ್ಪಡಲು ಅಸಾಧ್ಯರಾಗಿ, ಸತತವಾಗಿ ನಿಷ್ಠೆಯನ್ನು ಹೊಂದಿ, ಎಲ್ಲ ರೀತಿಯಲ್ಲೂ ಚೆನ್ನಾಗಿ ಪರೀಕ್ಷಿತರಾದ, ಸೌವರು, ಪೌಲರು ಮತ್ತು ತಿರ- ಸ್ಕೃತರಾದವರು ಇವರನ್ನು ಭೂತಿಕಾಮನಾದ ರಾಜನು ಯೋಧರನ್ನಾಗಿ ಮಾಡ- ಬೇಕು.
ಯೇಷಾಂ ವೈನಯಿಕೀ ಬುದ್ಧಿಃ ಪ್ರಕೃತಾ ಚೈವ ಶೋಭನಾ |
ತೇಜೋ ಧೈರ್ಯಂ ಕ್ಷಮಾ ಶೌಚಮನುರಾಗಃ ಸ್ಥಿತಿರ್ಧೃತಿಃ ॥20॥
ಪರೀಕ್ಷಿತಗುಣಾನ್ ನಿತ್ಯಂ ಪ್ರೌಢಭಾವಾನ್ ಧುರಂಧರಾನ್ |
ಪಂಚೋಪಧಾವ್ಯತೀತಾಂಶ್ಚ ಕುರ್ಯಾದ್ ರಾಜಾಽರ್ಥಕಾರಿಣಃ ॥21॥
ಯಾರಿಗೆ ವಿನಯಬುದ್ಧಿ ಇರುತ್ತದೆಯೋ ಮತ್ತುಪ್ರಕೃತವಾದ ಕಾರ್ಯಗಳಲ್ಲಿ ಶೋಭನವಾದ ಬುದ್ಧಿಯಿರುತ್ತದೆಯೋ, ತೇಜಸ್ಸು-ಧೈರ್ಯ-ಕ್ಷಮೆ-ಶೌಚ-ಅನು- ರಾಗ-ಸ್ಥೈರ್ಯ ಮತ್ತು ಧೈರ್ಯಗಳಿರುತ್ತವೆಯೋ, ಅಂತಹ ಗುಣಗಳುಳ್ಳ ಪ್ರೌಢ ಅಭಿಪ್ರಾಯವುಳ್ಳವರನ್ನು, ಭಾರವನ್ನು ಹೊರಲು ಸಮರ್ಥರಾದವರನ್ನು ನಿತ್ಯವೂ ಅವರ ಗುಣಗಳನ್ನು ಪರೀಕ್ಷೆ ಮಾಡಿ, ಎಲ್ಲಾ ಕಪಟವನ್ನೂ ಮೀರಿದ ಅಂತಹ ಐದು ಜನರನ್ನು ರಾಜನು ಅರ್ಥಸಾಧಕರಾದ ಮಂತ್ರಿಗಳನ್ನಾಗಿ ಮಾಡಬೇಕು.
ಪರ್ಯಾಪ್ತವಚನಾನ್ ವೀರಾನ್ ಪ್ರತಿಪತ್ತಿವಿಶಾರದಾನ್ |
ಕುಲೀನಾನ್ ಸತ್ಯಸಂಪನ್ನಾನಿಂಗಿತಜ್ಞಾನನಿಷ್ಠುರಾನ್ ॥22॥
ದೇಶಕಾಲವಿಧಾನಜ್ಞಾನ್ ಭರ್ತೃಕಾರ್ಯಹಿತೈಷಿಣಃ |
ನಿತ್ಯಮರ್ಥೇಷು ಸರ್ವೇಷು ರಾಜಾ ಕುರ್ವೀತ ಮಂತ್ರಿಣಃ ॥23॥
ಚೆನ್ನಾಗಿ ಮಾತನಾಡಲು ಬರುವ, ವೀರರಾದ, ಶೀಘ್ರವಾಗಿ ತಿಳಿದುಕೊಳ್ಳುವ, ಕುಲೀನರಾದ, ಸತ್ಯಸಂಪನ್ನರಾದ, ಇಂಗಿತಜ್ಞರಾದ, ನಿಷ್ಠುರರಲ್ಲದ ದೇಶಕಾಲ- ವಿಧಾನಗಳನ್ನು ತಿಳಿದ, ಸ್ವಾಮಿಯ ಕಾರ್ಯದಲ್ಲಿ ಮತ್ತು ಹಿತದಲ್ಲಿ ಆಸೆಯುಳ್ಳ ಮಂತ್ರಿಗಳನ್ನು ರಾಜನು ಯಾವಾಗಲೂ ಸರ್ವಕಾರ್ಯಗಳಲ್ಲಿ ನಿಯೋಜಿಸಬೇಕು.
ಹೀನತೇಜಾ ಹ್ಯಸಂತುಷ್ಟೋ ನೈವ ಜಾತು ವ್ಯವಸ್ಯತಿ |
ಅವಶ್ಯಂ ಜನಯತ್ಯೇವ ಸರ್ವಕರ್ಮಸು ಸಂಶಯಾನ್ ॥24॥
ತೇಜೋಹೀನನಾದವನು ಮತ್ತು ಅತೃಪ್ತನಾದವನು ಯಾವ ಕಾರ್ಯವನ್ನೂ ಮಾಡುವುದಿಲ್ಲ. ಎಲ್ಲ ಕರ್ಮಗಳಲ್ಲಿಯೂ ಅವಶ್ಯವಾಗಿ ಸಂಶಯವನ್ನೇ ಉಂಟು- ಮಾಡುತ್ತಾನೆ.
ಏವಮಲ್ಪಶ್ರುತೋ ಮಂತ್ರೀ ಕಲ್ಯಾಣಾಭಿಜನೋಽಪ್ಯುತ |
ಧರ್ಮಾರ್ಥಕಾಮಯುಕ್ತೋಽಪಿ ನಾಲಂ ಮಂತ್ರಂ ಪರೀಕ್ಷಿತುಮ್ ॥25॥
ಇದೇ ರೀತಿಯಲ್ಲಿ ಅಲ್ಪಶ್ರುತನಾದ ಮಂತ್ರಿಯು ಒಳ್ಳೆಯ ಕುಲದಲ್ಲಿ ಜನಿಸಿ- ದ್ದರೂ, ಧರ್ಮಾರ್ಥಕಾಮಯುಕ್ತನಾದರೂ ಅವನು ಮಂತ್ರವನ್ನು ಪರೀಕ್ಷಿಸಲು ಸಮರ್ಥನಲ್ಲ.
ತಥೈವಾನಭಿಜಾತೋಽಪಿ ಕಾಮಮಸ್ತು ಬಹುಶ್ರುತಃ |
ಅನಾಯಕ ಇವಾಚಕ್ಷುರ್ಮುಹ್ಯತ್ಯೂಹ್ಯೇಷು ಕರ್ಮಸು ॥26॥
ಅದರಂತೆಯೇ ಸತ್ಕುಲದಲ್ಲಿ ಜನಿಸದವನು, ಬೇಕಾದಂತೆ ಬಹುಶ್ರುತನಾದರೂ ಅನಾಯಕನಂತೆ ಚಕ್ಷುಹೀನನಂತೆ ಆಲೋಚನೆ ಮಾಡಬೇಕಾದ ಕಾರ್ಯಗಳಲ್ಲಿ ಮೋಹಕ್ಕೆ ಒಳಗಾಗುತ್ತಾನೆ.
ಯೋ ವಾ ಹ್ಯಸ್ಥಿರಸಂಕಲ್ಪೋ ಬುದ್ಧಿಮಾನಾಗತಾಗಮಃ |
ಉಪಾಯಜ್ಞೋಽಪಿ ನಾಲಂ ಸ ಕರ್ಮ ಯಾಪಯಿತುಂ ಚಿರಮ್ ॥27॥
ಯಾವನು ಚಂಚಲಸಂಕಲ್ಪವುಳ್ಳವನೋ ಅಂತಹವನು ಬುದ್ಧಿವಂತನಾದರೂ, ಶಾಸ್ತ್ರಜ್ಞನಾದರೂ, ಉಪಾಯಜ್ಞನಾದರೂ ಒಂದು ಕಾರ್ಯವನ್ನು ಕೊನೆಯ- ವರೆಗೂ ಸಾಧಿಸಲು ಸಮರ್ಥನಲ್ಲ.
ಕೇವಲಾತ್ ಪುನರಾಚಾರಾತ್ ಕರ್ಮಣಾಂ ನೋಪಪದ್ಯತೇ |
ಪರಿಮರ್ಶೋ ವಿಶೇಷಾಣಾಮಶ್ರುತಸ್ಯೇಹ ದುರ್ಮತೇಃ ॥28॥
ದುರ್ಮತಿಯಾಗಿ, ಶಾಸ್ತ್ರಶ್ರವಣರಹಿತನಾದ ರಾಜನು ಕೇವಲ ಮಂತ್ರಿಪುರುಷ- ರಿಂದ ಕರ್ಮಗಳ ವಿಶೇಷವನ್ನು ಪರಾಮರ್ಶೆ ಮಾಡಲು ಅಸಮರ್ಥನಾಗುತ್ತಾನೆ. (ರಾಜನು ಅತಿಮೂರ್ಖನಾದರೆ ಮಂತ್ರಿಗಳ ಮಾತನ್ನು ಕೇಳುವುದಿಲ್ಲ ಎಂದು ಅಭಿ- ಪ್ರಾಯ - ಲಕ್ಷಾಲಂಕಾರ).

ಮಂತ್ರಿಣ್ಯನನುರಕ್ತೇ ತು ವಿಶ್ವಾಸೋ ನ ಹಿ ವಿದ್ಯತೇ |
ತಸ್ಮಾದನನುರಕ್ತಾಯ ನೈವ ಮಂತ್ರಂ ಪ್ರಕಾಶಯೇತ್ ॥29॥
ಮಂತ್ರಿಗೆ ರಾಜನಲ್ಲಿ ಅನುರಾಗವಿಲ್ಲದಿದ್ದರೆ ರಾಜನು ಅವನಲ್ಲಿ ವಿಶ್ವಾಸವನ್ನು ಮಾಡಬಾರದು. ಆದ್ದರಿಂದ ಅನುರಾಗವಿಲ್ಲದವನಿಗೆ ರಾಜನು ತನ್ನ ಮಂತ್ರವನ್ನು ಪ್ರಕಾಶಿಸಬಾರದು.
ವ್ಯಥಯೇದ್ಧಿ ಸ ರಾಜಾನಂ ಮಂತ್ರಿಭಿಃ ಸಹಿತೋಽನೃಜುಃ |
ಮಾರುತೋಪಹತಾಚ್ಛಿದ್ರೈಃ ಪ್ರವಿಶ್ಯಾಗ್ನಿರಿವ ದ್ರುಮಮ್ ॥30॥
ಅಂತಹ ವಕ್ರಸ್ವಭಾವದವನು ಉಳಿದ ಮಂತ್ರಿಗಳ ಜೊತೆಯಲ್ಲಿ ಸೇರಿ ವೃಕ್ಷ- ಚ್ಛಿದ್ರದಿಂದ ಪ್ರವೇಶಿಸಿದ ಅಗ್ನಿಯು ವೃಕ್ಷವನ್ನೇ ದಹಿಸುವಂತೆ ರಾಜನನ್ನು ವ್ಯಥೆಗೊಳಿ- ಸುತ್ತಾನೆ.
ಸಂಕ್ರುದ್ಧ್ಯತ್ಯೇಕದಾ ಸ್ವಾಮೀ ಸ್ಥಾನಾಚ್ಚೈವಾಪಕರ್ಷತಿ |
ವಾಚಾ ಕ್ಷಿಪತಿ ಸಂರಬ್ಧಸ್ತತಃ ಪಶ್ಚಾತ್ ಪ್ರಸೀದತಿ ॥31॥
ಸ್ವಾಮಿಯಾದವನು ಒಮ್ಮೆ ಕ್ರುದ್ಧನಾಗುತ್ತಾನೆ. ಸ್ಥಾನದಿಂದ ತೆಗೆಯುತ್ತಾನೆ. ಕೋಪಗೊಂಡು ಮಾತಿನಿಂದ ನಿಂದಿಸುತ್ತಾನೆ. ಅನಂತರ ಪ್ರಸನ್ನನಾಗುತ್ತಾನೆ.
ತಾನಿ ತಾನ್ಯನುರಕ್ತೇನ ಶಕ್ಯಾನ್ಯನುತಿತಿಕ್ಷಿತುಮ್ |
ಮಂತ್ರಿಣಾಂ ಚ ಭವೇದ್ ಕ್ರೋಧೋ ವಿಸ್ಫೂರ್ಜಿತಮಿವಾಶನೇಃ ॥32॥
ಅನುರಕ್ತನಾದವನು ಅವೆಲ್ಲವನ್ನೂ ಸಹಿಸಲು ಸಮರ್ಥನಾಗುತ್ತಾನೆ. ಮಂತ್ರಿಗಳ ಕ್ರೋಧವೂ ಸಹ ಸಿಡಿಲಿನ ಆರ್ಭಟದಂತೆ ಇರುತ್ತದೆ.
ಯಸ್ತು ಸಂಹರತೇ ತಾನಿ ಭರ್ತುಃ ಪ್ರಿಯಚಿಕೀರ್ಷಯಾ |
ಸಮಾನಸುಖದುಃಖಂ ತಂ ಪೃಚ್ಛೇದರ್ಥೇಷು ಮಾನವಮ್ ॥33॥
ಯಾವ ಮಂತ್ರಿಯು ಸ್ವಾಮಿಗೆ ಪ್ರಿಯವನ್ನು ಮಾಡಲು ಬಯಸಿ ಅಂತಹ ಕ್ರೋಧವನ್ನು ತಡೆದುಕೊಳ್ಳುತ್ತಾನೆಯೋ, ಸಮಾನಸುಖದುಃಖನಾದ ಅಂತಹ ಮಂತ್ರಿಯನ್ನು ಅರ್ಥಗಳಲ್ಲಿ ಪ್ರಶ್ನಿಸಬೇಕು.
ಅನೃಜುಸ್ತ್ವನುರಕ್ತೋಽಪಿ ಸಂಪನ್ನಶ್ಚೇತರೈರ್ಗುಣೈಃ |
ರಾಜ್ಞಃ ಪ್ರಜ್ಞಾನಯುಕ್ತೋಽಪಿ ನ ಮಂತ್ರಂ ಶ್ರೋತುಮರ್ಹತಿ ॥34॥
ವಕ್ರನಾದವನು ರಾಜನಲ್ಲಿ ಅನುರಾಗವನ್ನು ಹೊಂದಿದ್ದರೂ, ಇತರ ಗುಣ- ಗಳಿಂದ ಕೂಡಿದ್ದರೂ, ರಾಜನನ್ನು ಚೆನ್ನಾಗಿ ತಿಳಿದಿದ್ದರೂ ಅವನು ಮಂತ್ರವನ್ನು ಕೇಳಲು ಅರ್ಹನಲ್ಲ.
ಯೋಽಮಿತ್ರೈಃ ಸಹ ಸಂಬದ್ಧೋ ನ ಪೌರಾನ್ ಬಹು ಮನ್ಯತೇ |
ಸ ಸುಹೃತ್ ತಾದೃಶೋ ರಾಜ್ಞೋ ನ ಮಂತ್ರಂ ಶ್ರೋತುಮರ್ಹತಿ ॥35॥
ಯಾವನು ರಾಜನ ಸುಹೃಜ್ಜನನಾದರೂ ಶತ್ರುಗಳ ಜೊತೆಯಲ್ಲಿ ಸಂಬದ್ಧನಾಗಿ, ಪೌರರನ್ನು ಗೌರವಿಸುವುದಿಲ್ಲವೋ ಅವನೂ ಸಹ ಮಂತ್ರವನ್ನು ಕೇಳಲು ಅನರ್ಹ- ನಾದವನು
ಅವಿದ್ವಾನಶುಚಿಃ ಸ್ತಬ್ಧಃ ಶತ್ರುಸೇವೀ ವಿಕತ್ಥನಃ |
ಸ ಸುಹೃತ್ ಕ್ರೋಧನೋ ಲುಬ್ಧೋ ನ ಮಂತ್ರಂ ಶ್ರೋತುಮರ್ಹತಿ ॥36॥
ವಿದ್ಯೆಯಿಲ್ಲದವನು, ಅಶುಚಿಯಾದವನು, ಅಹಂಕಾರಿಯಾದವನು, ಶತ್ರು- ಗಳನ್ನು ಸೇವಿಸುವವನು, ತನ್ನನ್ನು ತಾನು ಹೊಗಳಿಕೊಳ್ಳುವವನು, ಕ್ರೋಧಶೀಲ- ನಾದವನು, ಲೋಭಿಯಾದವನು ಸುಹೃಜ್ಜನನಾದರೂ ಮಂತ್ರವನ್ನು ಕೇಳಲು ಅರ್ಹನಲ್ಲ.
ಆಗಂತುಃ ಸಾನುರಕ್ತೋಽಪಿ ಕಾಮಮಸ್ತು ಬಹುಶ್ರುತಃ |
ಸತ್ಕೃತಃ ಸಂವಿಭಕ್ತೋ ವಾ ನ ಮಂತ್ರಂ ಶ್ರೋತುಮರ್ಹತಿ ॥37॥
ಆಗಂತುಕನಾದವನು ಅನುರಾಗವನ್ನು ಹೊಂದಿದ್ದರೂ, ಬಹುಶ್ರುತನಾದರೂ, ಸತ್ಕರಿಸಲ್ಪಟ್ಟು ಐಶ್ವರ್ಯವನ್ನು ಪಡೆದರೂ ಮಂತ್ರಶ್ರವಣಕ್ಕೆ ಅರ್ಹನಲ್ಲ.
ಯಸ್ತ್ವಲ್ಪೇನಾಪಿ ಕಾರ್ಯೇಣ ಸಕೃದಾಕಾರಿತೋ ಭವೇತ್ |
ಪುನರನ್ಯೈರ್ಗುಣೈರ್ಯುಕ್ತೋ ನ ಮಂತ್ರಂ ಶ್ರೋತುಮರ್ಹತಿ ॥38॥
ಯಾವನು ಅಲ್ಪಕಾರ್ಯಕ್ಕಾಗಿ ರಾಜನಿಂದ ಒಮ್ಮೆ ಆಹ್ವಾನಿಸಲ್ಪಟ್ಟ ಕಾರಣದಿಂದ ರಾಜನನ್ನು ಯಾಚನೆ ಮಾಡಲು ಪ್ರಾರಂಭಿಸುತ್ತಾನೆಯೋ ಅವನು ಬೇರೆಯ ಗುಣಗಳಿಂದ ಕೂಡಿದ್ದರೂ ಮಂತ್ರಶ್ರವಣಕ್ಕೆ ಅರ್ಹನಲ್ಲ.
ಕೃತಪ್ರಜ್ಞಶ್ಚ ಮೇಧಾವೀ ಬುಧೋ ಜಾನಪದಃ ಶುಚಿಃ |
ಸರ್ವಕರ್ಮಸು ಯಃ ಶುದ್ಧಃ ಸ ಮಂತ್ರಂ ಶ್ರೋತುಮರ್ಹತಿ ॥39॥
ಕೃತಪ್ರಜ್ಞನೂ, ಮೇಧಾವಿಯೂ, ವಿದ್ವಾಂಸನೂ, ಅದೇ ದೇಶದಲ್ಲಿ ಜನಿಸಿ- ದವನೂ, ಶುಚಿಯೂ, ಸರ್ವಕರ್ಮಗಳಲ್ಲಿಯೂ ಶುದ್ಧನಾದವನೂ ಆದ ಪುರು- ಷನು ಮಂತ್ರವನ್ನು ಕೇಳಲು ಅರ್ಹನಾಗುತ್ತಾನೆ.
ಜ್ಞಾನವಿಜ್ಞಾನಸಂಪನ್ನಃ ಪ್ರಕೃತಿಜ್ಞಃ ಪರಾತ್ಮನೋಃ |
ಸುಹೃದಾತ್ಮಸಮೋ ರಾಜ್ಞಃ ಸ ಮಂತ್ರಂ ಶ್ರೋತುಮರ್ಹತಿ ॥40॥
ಜ್ಞಾನವಿಜ್ಞಾನಸಂಪನ್ನನಾಗಿ, ತನ್ನ ಮತ್ತು ಪರರ ಸ್ವಭಾವವನ್ನು ತಿಳಿದು ರಾಜನಿಗೆ ಸುಹೃಜ್ಜನನಾಗಿ, ರಾಜನಿಗೆ ಆತ್ಮಸಮನಾಗಿರುವವನು ಮಂತ್ರವನ್ನು ಕೇಳಲು ಅರ್ಹ- ನಾಗುತ್ತಾನೆ.
ಸತ್ಯವಾಕ್ ಶೀಲಸಂಪನ್ನೋ ಗಂಭೀರಃ ಸತ್ರಪೋ ಮೃದುಃ |
ಪಿತೃಪೈತಾಮಹೋ ಯಃ ಸ್ಯಾತ್ ಸ ಮಂತ್ರಂ ಶ್ರೋತುಮರ್ಹತಿ ॥41॥
ಸತ್ಯವಚನನೂ, ಶೀಲಸಂಪನ್ನನೂ, ಎಲ್ಲವನ್ನೂ ಮಾತನಾಡದೇ ಗಂಭೀರ- ನಾಗಿರುವವನು, ನಾಚಿಕೆಯಿಂದ ಕೂಡಿದವನೂ,

ಮೃದುವೂ, ಪಿತೃಪಿತಾಮಹರ ಮಾರ್ಗವನ್ನು ಅನುಸರಿಸುವವನೂ ಆದವನು ಮಂತ್ರಶ್ರವಣಕ್ಕೆ ಅರ್ಹನಾಗುತ್ತಾನೆ.
ಸಂತುಷ್ಟಃ ಸಮ್ಮತಃ ಸತ್ಯಃ ಶೌಟೀರೋ ದ್ವೇಷ್ಯಪಾವಕಃ |
ಮಂತ್ರವಿತ್ ಕಾಲವಿಚ್ಛೂರಃ ಸ ಮಂತ್ರಂ ಶ್ರೋತುಮರ್ಹತಿ ॥42॥
ತಾನು ಸಂತೃಪ್ತನಾಗಿ, ಪ್ರಜೆಗಳಿಗೆ ಸಮ್ಮತನಾಗಿ, ಸತ್ಯವಚನನಾಗಿ, ನಿಪುಣನಾಗಿ, ಶತ್ರುವಿಗೆ ಅಗ್ನಿಯಂತೆ ಇದ್ದು ಮಂತ್ರವನ್ನು ಮತ್ತು ಕಾಲವನ್ನು ತಿಳಿದ ಶೂರನು ಮಂತ್ರವನ್ನು ಕೇಳಲು ಅರ್ಹನಾಗುತ್ತಾನೆ.
ಸರ್ವಲೋಕಮಿಮಂ ಶಕ್ತಃ ಸಾಂತ್ವೇನ ಕುರುತೇ ವಶೇ |
ತಸ್ಮೈ ಮಂತ್ರಃ ಪ್ರಯೋಕ್ತವ್ಯೋ ದಂಡಮಾಧಿತ್ಸತಾ ನೃಪ ॥43॥
ಸಮರ್ಥನಾದವನು ಎಲ್ಲ ಪ್ರಜೆಗಳನ್ನೂ ಸಾಂತ್ವವಚನಗಳಿಂದಲೇ ವಶಪಡಿಸಿ- ಕೊಳ್ಳುತ್ತಾನೆ. ಎಲೈ ರಾಜನೇ! ದಂಡಧಾರಿಯಾದ ರಾಜನು ಅಂತಹವನಿಗೆ ಮಂತ್ರವನ್ನು ಹೇಳಬೇಕು.
ಪೌರಜಾನಪದಾ ಯಸ್ಮಿನ್ ವಿಶ್ವಾಸಂ ಧರ್ಮತೋ ಗತಾಃ |
ಯೋದ್ಧಾ ನಯವಿಪಶ್ಚಿಚ್ಚ ಸ ಮಂತ್ರಂಶ್ರೋತುಮರ್ಹತಿ ॥44॥
ಪೌರಜಾನಪದರು ಯಾವನಲ್ಲಿ ಧರ್ಮದಿಂದ ವಿಶ್ವಾಸವನ್ನು ಮಾಡು- ತ್ತಾರೆಯೋ, ಯಾವನು ಯುದ್ಧಮಾಡಲು ಬಲ್ಲವನೋ, ರಾಜನೀತಿಯನ್ನು ತಿಳಿದ- ವನೋ ಅಂತಹವನು ಮಂತ್ರವನ್ನು ಕೇಳಲು ಅರ್ಹನಾಗುತ್ತಾನೆ.
ತಸ್ಮಾತ್ ಸರ್ವೈರ್ಗುಣೈರೇತೈರುಪಪನ್ನಾಃ ಸುಪೂಜಿತಾಃ |
ಮಂತ್ರಿಣಃ ಪ್ರಕೃತಿಜ್ಞಾಃ ಸ್ಯುಸ್ತ್ರ್ಯವರಾ ಮಹದೀಪ್ಸವಃ ॥45॥
ಆದ್ದರಿಂದ ಇಂತಹ ಎಲ್ಲ ಗುಣಗಳಿಂದಲೂ ಸಂಪನ್ನರಾದ, ಚೆನ್ನಾಗಿ ಪೂಜಿಸ- ಲ್ಪಡುವ, ದೊಡ್ಡ ಕಾರ್ಯವನ್ನು ಸಾಧಿಸಲು ಬಯಸುವ, ಪ್ರಜೆಗಳ ಸ್ವಭಾವವನ್ನು ತಿಳಿದ ಮಂತ್ರಿಗಳನ್ನು ಮೂರುಜನರಿಗೆ ಕಡಿಮೆಯಿಲ್ಲದಂತೆ ನೇಮಿಸಬೇಕು.
ಸ್ವಾಸು ಪ್ರಕೃತಿಷು ಛಿದ್ರಂ ಲಕ್ಷಯೇರನ್ ಪರಸ್ಯ ಚ |
ಮಂತ್ರಿಣೋ ಮಂತ್ರಮೂಲಂ ಹಿ ರಾಜ್ಞೋ ರಾಷ್ಟ್ರಂ ವಿವರ್ಧತೇ ॥46॥
ಮಂತ್ರಿಗಳು ತಮ್ಮ ಪ್ರಜೆಗಳಲ್ಲಿ ಇರುವ ದೋಷವನ್ನು ಶತ್ರುಪಕ್ಷದಲ್ಲಿರುವ ನ್ಯೂನತೆಗಳನ್ನು ಗಮನಿಸಬೇಕು. ಮಂತ್ರಮೂಲವಾದ ರಾಷ್ಟ್ರವೇ ಅಭಿವೃದ್ಧಿಯನ್ನು ಹೊಂದುವುದಷ್ಟೇ?
ನಾಸ್ಯ ಛಿದ್ರಂ ಪರಃ ಪಶ್ಯೇಚ್ಛಿದ್ರೇಷು ಪರಮನ್ವಿಯಾತ್ |
ಗೂಹೇತ್ ಕೂರ್ಮ ಇವಾಂಗಾನಿ ರಕ್ಷೇದ್ ವಿವರಮಾತ್ಮನಃ ॥47॥
ತನ್ನ ನ್ಯೂನತೆಯನ್ನು ಶತ್ರುವು ನೋಡಬಾರದು. ಶತ್ರುಗಳ ನ್ಯೂನತೆಯಲ್ಲಿ ಅವರನ್ನು ಆಕ್ರಮಿಸಬೇಕು. ಆಮೆಯು ತನ್ನ ಅಂಗಗಳನ್ನು ಮುಚ್ಚಿಕೊಳ್ಳುವಂತೆ ತನ್ನ ದೋಷಗಳನ್ನು ಮುಚ್ಚಿಕೊಳ್ಳಬೇಕು.
ಮಂತ್ರಗೂಢಾ ಹಿ ರಾಜ್ಯಸ್ಯ ಮಂತ್ರಿಣೋ ಯೇ ಮನೀಷಿಣಃ |
ಮಂತ್ರಸಂಹನನೋ ರಾಜಾ ಮಂತ್ರಾಂಗಾನೀತರೋ ಜನಃ ॥48॥
ವಿವೇಕಿಗಳಾದ ಮಂತ್ರಿಗಳು ರಾಜ್ಯದ ಹಿತಕ್ಕಾಗಿ ಗೂಢವಾದ ಮಂತ್ರವನ್ನು ಹೊಂದಿರುತ್ತಾರೆ. ರಾಜನು ಮಂತ್ರಶರೀರವೇ ಆಗಿರುತ್ತಾನೆ. ಉಳಿದ ಜನರು ಮಂತ್ರದ ಅಂಗಗಳಾಗಿರುತ್ತಾರೆ.
ರಾಜ್ಯಂ ಪ್ರಣಿಧಿಮೂಲಂ ಹಿ ಮಂತ್ರಸಾರಂ ಪ್ರಚಕ್ಷತೇ |
ಸ್ವಾಮಿನಂ ತ್ವನುವರ್ತಂತಿ ವೃತ್ತ್ಯರ್ಥಮಿಹ ಮಂತ್ರಿಣಃ ॥49॥
ರಾಜ್ಯವು ಚಾರರನ್ನು ಮೂಲವಾಗಿ ಮತ್ತು ಮಂತ್ರವನ್ನು ಬಲವಾಗಿ ಹೊಂದಿ- ರುವುದು ಎಂದು ಹೇಳುತ್ತಾರೆ. ಮಂತ್ರಿಗಳು ತಮ್ಮ ಜೀವನೋಪಾಯದ ಸಲುವಾಗಿ ಇಲ್ಲಿ ಸ್ವಾಮಿಯಾದ ರಾಜನನ್ನು ಅನುಸರಿಸುತ್ತಾರೆ.
ಸ ವಿನೀಯ ಮದಕ್ರೋಧೌ ಮಾನಮೀರ್ಷ್ಯಾಂ ಚ ನಿರ್ವೃತಃ |
ನಿತ್ಯಂ ಪಂಚೋಪಧಾತೀತೈರ್ಮಂತ್ರಯೇತ್ ಸಹ ಮಂತ್ರಿಭಿಃ ॥50॥
ರಾಜನು ಮದಕ್ರೋಧಗಳನ್ನು ಅಹಂಕಾರ ಈರ್ಷ್ಯೆಗಳನ್ನು ತ್ಯಜಿಸಿ, ಸಂತುಷ್ಟ- ಚಿತ್ತನಾಗಿ ನಿತ್ಯವೂ ಆಮಿಷದಿಂದ ದೂರವಾದ ಐದು ಮಂತ್ರಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಬೇಕು.
ತೇಷಾಂ ತ್ರಯಾಣಾಂ ತ್ರಿವಿಧಂ ವಿಮರ್ಶ್ಯಂ
ಬುದ್ಧ್ಯೇತ ಚಿತ್ತಂ ವಿನಿವೇಶ್ಯ ತತ್ರ|
ಸ್ವನಿಶ್ಚಯಂ ತಂ ಪರನಿಶ್ಚಯಂ ಚ
ವಿನೇದಯೇದುತ್ತರಮಂತ್ರಕಾಲೇ ॥51॥
ಅವರಲ್ಲಿ ವಿಮರ್ಶೆ ಮಾಡಿ, ಮೂರು ಮಂತ್ರಿಗಳ ಅಭಿಪ್ರಾಯವನ್ನು ತಿಳಿದು, ತನ್ನ ನಿಶ್ಚಯವನ್ನು ಅವರ ನಿಶ್ಚಯವನ್ನು ಪರೀಕ್ಷಿಸಿ ಮುಂದಿನ ಮಂತ್ರಾಲೋಚನೆಯ ಕಾಲದಲ್ಲಿ ಅದನ್ನು ಹೇಳಬೇಕು.
ಧರ್ಮಾರ್ಥಕಾಮಜ್ಞಮುಪೇತ್ಯ ಪೃಚ್ಛೇದ್
ಯುಕ್ತೋ ಗುರುಂ ಬ್ರಾಹ್ಮಣಮುತ್ತರಾರ್ಥಮ್ |
ನಿಷ್ಠಾ ಕೃತಾ ತೇನ ಯದಾ ಸಹ ಸ್ಯಾತ್
ತಂ ತತ್ರ ಮಾರ್ಗಂ ಪ್ರಣಯೇದಸಕ್ತಮ್ ॥52॥
ಧರ್ಮಾರ್ಥಕಾಮಗಳನ್ನು ತಿಳಿದ ಗುರುವಾದ ಬ್ರಾಹ್ಮಣನನ್ನು ಸಮೀಪಿಸಿ ತನ್ನ ಸಂಶಯಗಳಿಗೆ ಪರಿಹಾರವನ್ನು ಕೇಳಬೇಕು. ಅವನು ತೋರಿಸಿದ ಮಾರ್ಗದಲ್ಲಿ ಉಳಿದವರನ್ನು ನಡೆಸಬೇಕು.
ಏವಂ ಸದಾ ಮಂತ್ರಯಿತವ್ಯಮಾಹು-

ಯೇ ಮಂತ್ರತತ್ತ್ವಾರ್ಥವಿನಿಶ್ಚಯಜ್ಞಾಃ |
ತಸ್ಮಾತ್ ತ್ವಮೇವಂ ಪ್ರಣಯೇಃ ಸದೈವ
ಮಂತ್ರಂ ಪ್ರಜಾಸಂಗ್ರಹಣೇ ಸಮರ್ಥಮ್ ॥53॥
ಮಂತ್ರತತ್ತ್ವಾರ್ಥವನ್ನು ತಿಳಿದ ಜ್ಞಾನಿಗಳು ಯಾವಾಗಲೂ ಹೀಗೆ ಮಂತ್ರಾ- ಲೋಚನೆಯನ್ನು ಮಾಡಬೇಕೆಂದು ಹೇಳುತ್ತಾರೆ. ಆದ್ದರಿಂದ ನೀನೂ ಸಹ ಪ್ರಜಾ- ಸಂಗ್ರಹದಲ್ಲಿ ಸಮರ್ಥವಾದ ಇಂತಹ ಮಂತ್ರಾಲೋಚನೆಯನ್ನು ಯಾವಾಗಲೂ ಮಾಡುವವನಾಗು.
ನ ವಾಮನಾಃ ಕುಬ್ಜಕೃಶಾ ನ ಖಂಜಾ
ನಾಂಧಾ ಜಡಾಃ ಸ್ತ್ರೀ ನ ನಪುಂಸಕಂ ಚ |
ನ ಚಾತ್ರ ತಿರ್ಯಙ್ ನ ಪುರೋ ನ ಪಶ್ಚಾತ್
ನೋರ್ಧ್ವಂ ನ ಚಾಧಃ ಪ್ರಚರೇತ ಕಶ್ಚಿತ್ ॥54॥
ಮಂತ್ರಾಲೋಚನೆಯ ಸ್ಥಳದಲ್ಲಿ ವಾಮನರಾಗಲೀ, ಕುಬ್ಜರಾಗಲೀ, ಕೃಶ- ರಾಗಲೀ, ಕುಂಟರಾಗಲೀ, ಕುರುಡರಾಗಲೀ, ಜಡರಾಗಲೀ, ಸ್ತ್ರೀಯಾಗಲೀ, ನಪುಂಸಕರಾಗಲೀ ಇರಬಾರದು. ಹಿಂಭಾಗದಲ್ಲಿ ಅಥವಾ ಮುಂಭಾಗದಲ್ಲಿ ಮೇಲೆ ಅಥವಾ ಕೆಳಗೆ ಯಾವ ಪ್ರಾಣಿಯೂ ತಿರುಗಾಡಬಾರದು.
ಆರುಹ್ಯ ವಾತಾಯನಮೇವ ಶೂನ್ಯಂ
ಸ್ಥಲಂ ಪ್ರಕಾಶಂ ಕುಶಕಾಶಹೀನಮ್ |
ವಾಗಂಗದೋಷಾನ್ ಪರಿಹೃತ್ಯ ಮಂತ್ರಂ
ಸಮ್ಮಂತ್ರಯೇತ್ ಕಾರ್ಯಮಹೀನಕಾಲಮ್ ॥55॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚಾಶೀತಿತಮೋಽಧ್ಯಾಯಃ ॥85॥
ನಿರ್ಜನವಾದ ಚೆನ್ನಾಗಿ ಗಾಳಿಯಾಡುವ ಒಳ್ಳೆಯ ಬೆಳಕಿರುವ, ಕುಶಕಾಶ- ರಹಿತವಾದ ಪ್ರದೇಶವನ್ನು ಏರಿ, ವಾಗ್ದೋಷಗಳನ್ನು ಅಂಗದೋಷಗಳನ್ನು ಪರಿಹರಿಸಿ ಸಂದರ್ಭ ಒದಗಿದಾಗ ಶೀಘ್ರವಾಗಿ ಮಂತ್ರಾಲೋಚನೆಯನ್ನು ಮಾಡಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 85ನೆಯ ಅಧ್ಯಾಯವು ಮುಗಿಯಿತು.
0

## 86. ಎಂಬತ್ತಾರನೆಯ ಅಧ್ಯಾಯ

### ಸಾಂತ್ವವಿಷಯದಲ್ಲಿ ಇಂದ್ರಬೃಹಸ್ಪತಿಗಳ ಸಂವಾದ

ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತೇಶ್ಚ ಸಂವಾದಂ ಶಕ್ರಸ್ಯ ಚ ಯುಧಿಷ್ಠಿರ ॥1॥
ಭೀಷ್ಮರು ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಇಂದ್ರಬೃಹಸ್ಪತಿಗಳ ನಡುವೆ ನಡೆದ ಪುರಾತನವಾದ ಈ ಸಂವಾದವನ್ನು ಹೇಳುತ್ತಾರೆ.
ಶಕ್ರಃ
ಕಿಂಸ್ವಿದೇಕಪದಂ ಬ್ರಹ್ಮನ್ ಪುರುಷಃ ಸಮ್ಯಗಾಚರನ್ |
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ॥2॥
ಶಕ್ರ ಬ್ರಾಹ್ಮಣರೇ! ಯಾವ ಒಂದು ಪದದಿಂದ ಹೇಳಲ್ಪಡುವ ವಸ್ತುವನ್ನು ಪುರುಷನು ಚೆನ್ನಾಗಿ ಆಚರಿಸಿದರೆ ಎಲ್ಲ ಪ್ರಜೆಗಳಿಗೂ ಪ್ರಮಾಣಭೂತನಾಗಿ ಕೀರ್ತಿ- ಯನ್ನು ಪಡೆದಾನು?
ಬೃಹಸ್ಪತಿಃ
ಸಾಂತ್ವಮೇಕಪದಂ ಶಕ್ರ ಪುರುಷಃ ಸಮ್ಯಗಾಚರನ್ |
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ॥3॥
ಬೃಹಸ್ಪತಿಗಳು ಇಂದ್ರನೇ! ಅಂತಹ ಒಂದು ಪದದಿಂದ ಹೇಳಲ್ಪಡುವುದು ಸಾಂತ್ವ. ಅದನ್ನು ಚೆನ್ನಾಗಿ ಆಚರಿಸುವವನು ಸರ್ವಭೂತಗಳಿಗೂ ಪ್ರಮಾಣನಾಗಿ ಕೀರ್ತಿಯನ್ನು ಪಡೆಯುತ್ತಾನೆ.
ಏತದೇಕಪದಂ ಶಕ್ರ ಸರ್ವಲೋಕಸುಖಾವಹಮ್ |
ಆಚರನ್ ಸರ್ವಭೂತೇಷು ಪ್ರಿಯೋ ಭವತಿ ಸರ್ವದಾ ॥4॥
ಇಂದ್ರನೇ! ಸರ್ವಲೋಕಕ್ಕೆ ಸುಖವನ್ನು ತಂದುಕೊಡುವಂತಹದು ಇದೊಂದೇ ಪದ. ಎಲ್ಲ ಪ್ರಜೆಗಳಲ್ಲಿಯೂ ಇದನ್ನು ಆಚರಿಸುವವನು ಯಾವಾಗಲೂ ಪ್ರಜೆಗಳಿಗೆ ಪ್ರಿಯನಾಗುತ್ತಾನೆ.
ಯೋ ಹಿ ನಾಭಾಷತೇ ಕಿಂಚಿತ್ ಸತತಂ ಭ್ರುಕುಟೀಮುಖಃ |
ದ್ವೇಷ್ಯೋ ಭವತಿ ಭೂತಾನಾಂ ಸ ಸಾಂತ್ವಮಿಹ ನಾಚರನ್ ॥5॥
ಯಾವನು ಸತತವಾಗಿ ಹುಬ್ಬುಗಳನ್ನು ಗಂಟಿಕ್ಕಿ, ಯಾರ ಜೊತೆಯಲ್ಲಿಯೂ ಮಾತನಾಡದೆ, ಸಾಂತ್ವವಚನವನ್ನು ಹೇಳುವುದಿಲ್ಲವೋ ಅವನು ಜನರಿಂದ ದ್ವೇಷ್ಯ- ನಾಗುತ್ತಾನೆ.
ಯಸ್ತು ಪೂರ್ವಮಭಿಪ್ರೇಕ್ಷ್ಯ ಪೂರ್ವಮೇವಾಭಿಭಾಷತೇ |
ಸ್ಮಿತಪೂರ್ವಾಭಿಭಾಷೀ ಚ ತಸ್ಯ ಲೋಕಃ ಪ್ರಸೀದತಿ ॥6॥
ಯಾವನು ಮೊದಲೇ ನೋಡಿ, ಮೊದಲೇ ಮಂದಹಾಸಪೂರ್ವಕವಾಗಿ ಮಾತನಾಡುತ್ತಾನೆಯೋ ಅವನಿಗೆ ಜನರು ಪ್ರಸನ್ನರಾಗುತ್ತಾರೆ.

ದಾನಮೇವ ಹಿ ಸರ್ವತ್ರ ಸಾಂತ್ವೇನಾನಭಿಜಲ್ಪಿತಮ್ |
ನ ಪ್ರೀಣಯತಿ ಭೂತಾನಿ ನಿರ್ವ್ಯಂಜನಮಿವಾಶನಮ್ ॥7॥
ದಾನವೇ ಎಲ್ಲ ಕಡೆಗಳಲ್ಲಿಯೂ ಸಾಂತ್ವದ ಜೊತೆಯಲ್ಲಿ ಸೇರಬೇಕು. ಸಾಂತ್ವ- ವಚನವಿಲ್ಲದ ದಾನವು ವ್ಯಂಜನವಿಲ್ಲದ ಭೋಜನದಂತೆ ಯಾರಿಗೂ ಸುಖವನ್ನು ಕೊಡುವುದಿಲ್ಲ.
ಅದಾತಾ ಹ್ಯಪಿ ಭೂತಾನಾಂ ಮಧುರಾಮೀರಯನ್ ಗಿರಮ್ |
ಸರ್ವಲೋಕಮಿಮಂ ಶಕ್ರ ಸಾಂತ್ವೇನ ಕುರುತೇ ವಶೇ ॥8॥
ಯಾರಿಗೂ ಏನನ್ನೂ ಕೊಡದಿದ್ದರೂ ಎಲೈ ಶಕ್ರನೇ! ಮಧುರವಾದ ಮಾತ- ನ್ನಾಡುವವನು ಈ ಎಲ್ಲ ಲೋಕವನ್ನೂ ಸಾಂತ್ವದಿಂದ ವಶಪಡಿಸಿಕೊಳ್ಳುತ್ತಾನೆ.
ತಸ್ಮಾತ್ ಸಾಂತ್ವಂ ಪ್ರಯೋಕ್ತವ್ಯಂ ದಂಡಮಾಧಿತ್ಸತಾಮಿಹ |
ಫಲಂ ಚ ಜನಯತ್ಯೇವಂ ನ ಚಾಸ್ಯೋದ್ವಿಜತೇ ಜನಃ ॥9॥
ಆದ್ದರಿಂದ ದಂಡಧಾರಿಯಾದವನು ಸಾಂತ್ವವನ್ನು ಪ್ರಯೋಗಿಸಬೇಕು. ಅದು ಇಂತಹ ಫಲವನ್ನು ಉಂಟುಮಾಡುತ್ತದೆ ಮತ್ತು ಪ್ರಜೆಗಳು ಅಂತಹವನಿಗೆ ಹೆದರುವುದಿಲ್ಲ.
ಸುಕೃತಸ್ಯ ಹಿ ಸಾಂತ್ವಸ್ಯ ಶ್ಲಕ್ಷ್ಣಸ್ಯ ಮಧುರಸ್ಯ ಚ |
ಸಮ್ಯಗಾಸೇವ್ಯಮಾನಸ್ಯ ತುಲ್ಯಂ ಜಾತು ನ ವಿದ್ಯತೇ ॥10॥
ಚೆನ್ನಾಗಿ ಅನುಷ್ಠಾನ ಮಾಡಿದ, ಮಧುರವಾದ, ಸೂಕ್ಷ್ಮವಾದ ಸಾಂತ್ವವನ್ನು ಪ್ರಯೋಗಿಸುವವನಿಗೆ ಅದಕ್ಕೆ ಸಮಾನವಾದುದು ಬೇರೆ ಯಾವುದೂ ಇಲ್ಲ.
ಭೀಷ್ಮಃ
ಇತ್ಯುಕ್ತಃ ಕೃತವಾನ್ ಸರ್ವಂ ತಥಾ ಶಕ್ರಃ ಪುರೋಧಸಾ |
ತಥಾ ತ್ವಮಪಿ ಕೌಂತೇಯ ಸಮ್ಯಗೇತತ್ ಸಮಾಚರ ॥11॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಡಶೀತಿತಮೋಽಧ್ಯಾಯಃ ॥86॥
ಭೀಷ್ಮರು ಹೀಗೆ ಇಂದ್ರನು ಪುರೋಹಿತರಾದ ಬೃಹಸ್ಪತಿಗಳಿಂದ ಹೇಳಲ್ಪಟ್ಟು ಎಲ್ಲವನ್ನೂ ಹಾಗೆಯೇ ಮಾಡಿದನು. ಎಲೈ ಕೌಂತೇಯನೇ! ನೀನೂ ಸಹ ಇದನ್ನು ಚೆನ್ನಾಗಿ ಆಚರಿಸುವವನಾಗು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 86ನೆಯ ಅಧ್ಯಾಯವು ಮುಗಿಯಿತು.
87. ಎಂಬತ್ತೇಳನೆಯ ಅಧ್ಯಾಯ
ಅಮಾತ್ಯಾದಿಲಕ್ಷಣಕಥನ
ಯುಧಿಷ್ಠಿರಃ
ಕಥಂಸ್ವಿದಿಹ ರಾಜೇಂದ್ರ ಪಾಲಯನ್ ಪಾರ್ಥಿವಃ ಪ್ರಜಾಃ |
ಪ್ರೈತಿ ಧರ್ಮಂ ವಿಶೇಷೇಣ ಕೀರ್ತಿಮಾಪ್ನೋತಿ ಶಾಶ್ವತೀಮ್ ॥1॥
ಯುಧಿಷ್ಠಿರ ಎಲೈ ರಾಜೇಂದ್ರನೇ! ರಾಜನು ಪ್ರಜೆಗಳನ್ನು ಹೇಗೆ ಪಾಲಿಸುತ್ತಾ, ಧರ್ಮವನ್ನು ಮತ್ತು ಶಾಶ್ವತವಾದ ವಿಶೇಷವಾದ ಕೀರ್ತಿಯನ್ನು ಪಡೆಯುತ್ತಾನೆ.
ಭೀಷ್ಮಃ
ವ್ಯವಹಾರೇಣ ಶುದ್ಧೇನ ಪ್ರಜಪಾಲನತತ್ಪರಃ |
ಪ್ರಾಪ್ಯ ಧರ್ಮಂ ಚ ಕೀರ್ತಿಂ ಚ ಲೋಕಾವಾಪ್ನೋತ್ಯುಭೌ ಶುಚಿಃ ॥2॥
ಭೀಷ್ಮರು ಪ್ರಜಾಪಾಲನತತ್ಪರನಾದ ರಾಜನು ಶುದ್ಧವ್ಯವಹಾರದಿಂದ ಧರ್ಮ- ವನ್ನೂ ಕೀರ್ತಿಯನ್ನೂ ಪಡೆದು ಶುಚಿಯಾಗಿ ಎರಡು ಲೋಕಗಳನ್ನೂ ಹೊಂದು- ತ್ತಾನೆ.
ಯುಧಿಷ್ಠಿರಃ
ಕೀದೃಶಂ ವ್ಯವಹಾರಂ ತು ಕೈಶ್ಚ ವ್ಯವಹರೇನ್ನೃಪಃ |
ಏತತ್ಪೃಷ್ಟೋ ಮಹಾಪ್ರಾಜ್ಞ ಯಥಾವದ್ ವಕ್ತುಮರ್ಹಸಿ ॥3॥
ಯುಧಿಷ್ಠಿರ ಎಂತಹ ವ್ಯವಹಾರವನ್ನು ರಾಜನು ಯಾರ ಜೊತೆಯಲ್ಲಿ ಮಾಡಬೇಕು? ಎಲೈ ಮಹಾಪ್ರಾಜ್ಞನೇ! ಈ ನನ್ನ ಪ್ರಶ್ನೆಗೆ ಸರಿಯಾಗಿ ಉತ್ತರವನ್ನು ಹೇಳಬೇಕು.
ಯೇ ಚೈತೇ ಪೂರ್ವಕಥಿತಾ ಗುಣಾಸ್ತೇ ಪುರುಷಂ ಪ್ರತಿ |
ನೈಕಸ್ಮಿನ್ ಪುರುಷೇ ಹ್ಯೇತೇ ವಿದ್ಯಂತ ಇತಿ ಮೇ ಮತಿಃ ॥4॥
ಪುರುಷನಲ್ಲಿರಬೇಕೆಂದು ಹೇಳಿದ ಈ ಗುಣಗಳು ಒಬ್ಬ ಪುರುಷನಲ್ಲಿ ಇರು- ವುದಿಲ್ಲ ಎಂದು ನನ್ನ ಅಭಿಪ್ರಾಯ.
ಭೀಷ್ಮಃ
ಏವಮೇತನ್ಮಹಾಪ್ರಾಜ್ಞ ಯಥಾ ವದಸಿ ಬುದ್ಧಿಮಾನ್ |
ದುರ್ಲಭಃ ಪುರುಷಃ ಕಶ್ಚಿದೇಭಿರ್ಗುಣಗಣೈರ್ಯುತಃ ॥5॥
ಭೀಷ್ಮರು ಎಲೈ ಮಹಾಪ್ರಾಜ್ಞನೇ! ಮೇಧಾವಿಯೇ ನೀನು ಹೇಳಿದಂತೆಯೇ ಸರಿ. ಇಂತಹ ಗುಣಗಳಿಂದ ಕೂಡಿದ ಮನುಷ್ಯನು ದುರ್ಲಭನಾದವನು.
ಕಿಂತು ಸಂಕ್ಷೇಪತಃ ಶೀಲಂ ಪ್ರಯತ್ನೇ ನೇಹ ದುರ್ಲಭಮ್ |

ವಕ್ಷ್ಯಾಮಿ ತು ಯಥಾಮಾತ್ಯಾನ್ ಯಾದೃಶಾಂಶ್ಚ ಕರಿಷ್ಯಸಿ ॥6॥
ಆದರೆ ಪ್ರಯತ್ನಪಟ್ಟರೆ ಸಂಕ್ಷೇಪವಾಗಿ ಶೀಲವುಳ್ಳ ಪುರುಷನು ದುರ್ಲಭನಲ್ಲ. ನೀನು ಎಂತಹ ಅಮಾತ್ಯರನ್ನು ಸಂಪಾದಿಸಬೇಕೆಂದು ನಾನು ನಿನಗೆ ಹೇಳುವೆನು.
ಚತುರೋ ಬ್ರಾಹ್ಮಣಾನ್ ವೈದ್ಯಾನ್ ಪ್ರಗಲ್ಭಾನ್ ಸಾತ್ವಿಕಾನ್ ಶುಚೀನ್ |
ಕ್ಷತ್ರಿಯಾಂಶ್ಚ ತಥಾ ಚಾಷ್ಟೌ ಬಲಿನಃ ಶಸ್ತ್ರಪಾಣಿನಃ ॥7॥
ವಿದ್ಯಾವಂತರೂ ಕುಶಲರೂ ಸಾತ್ವಿಕರೂ ಶುಚಿಗಳೂ ಆದ ನಾಲ್ಕು ಬ್ರಾಹ್ಮಣರು, ಬಲಿಷ್ಠರೂ ಶಸ್ತ್ರಪಾಣಿಗಳೂ ಆದ ಎಂಟು ಕ್ಷತ್ರಿಯರು.
ವೈಶ್ಯಾನ್ ವಿತ್ತೇನ ಸಂಪನ್ನಾನೇಕವಿಂಶತಿ ಸಂಖ್ಯಯಾ |
ತ್ರೀಂಶ್ಚ ಶೂದ್ರಾನ್ ವಿನೀತಾಂಶ್ಚ ಶುಚೀನ್ ಕರ್ಮಣಿ ಪೂರ್ವಕೇ ॥8॥
ಧನಾಢ್ಯರಾದ ಇಪ್ಪತ್ತೊಂದು ವೈಶ್ಯರು, ಮತ್ತುಶುಚಿಗಳೂ ವಿನೀತರೂ ಆದ ಮೂರು ಶೂದ್ರರನ್ನು ಸೇರಿಸಿ ಕರ್ಮವನ್ನು ಮಾಡುವುದಕ್ಕಿಂತ ಮೊದಲು ಒಂದು ಮಂಡಲವನ್ನು ರಚಿಸಬೇಕು.
ಅಷ್ಟಾಭಿಶ್ಚ ಗುಣೈರ್ಯುಕ್ತಃ ಸೂತಃ ಪೌರಾಣಿಕೋ ಭವೇತ್ |
ಪಂಚಾಶದ್ವರ್ಷವಯಸಂ ಪ್ರಗಲ್ಭಮನಸೂಯಕಮ್ ॥9॥
ಪುರಾಣವನ್ನು ಹೇಳುವ ಸೂತನು ಎಂಟುಗುಣಗಳಿಂದ ಕೂಡಿದ್ದು ಐವತ್ತು ವರ್ಷವಯಸ್ಸಿನವನೂ ಅಸೂಯಾರಹಿತನೂ ವಿದಗ್ಧನೂ ಆಗಿರಬೇಕು. (ಪೌರಾ- ಣಿಕಸೂತನಿಗೆ ಇರಬೇಕಾದ ಎಂಟುಗುಣಗಳೆಂದರೆ ಶುಶ್ರೂಷೆ, ಶ್ರವಣ, ಗ್ರಹಣ, ಧಾರಣ, ಊಹ, ಅಪೋಹನ, ವಿಜ್ಞಾನ ಮತ್ತು ತತ್ತ್ವಜ್ಞಾನ).
ಮತಿಸ್ಮೃತಿಸಮಾಯುಕ್ತಂ ವಿನೀತಂ ಸಮದರ್ಶನಮ್ |
ಕಲ್ಪಯೇದ್ ವದಮಾನಾನಾಂ ಶಕ್ತಮರ್ಥೇಷ್ವಲೋಲುಪಮ್ ॥10॥
ಸ್ಮರಣಶಕ್ತಿ, ಒಳ್ಳೆಯ ಬುದ್ಧಿ, ವಿನಯ, ಸಮದೃಷ್ಟಿ, ಮಾತನಾಡುವ ಸಾಮರ್ಥ್ಯ, ಧನಲೋಭವಿಲ್ಲದಿರುವಿಕೆ ಇವುಗಳನ್ನು ನೋಡಿ ಪೌರಾಣಿಕಸೂತ- ನನ್ನು ನಿಯಮಿಸಬೇಕು.
ವಿವರ್ಜಿತಾನಾಂ ವ್ಯಸನೈಃ ಸುಘೋರೈಃ ಸಪ್ತಭಿರ್ಭೃಶಮ್ |
ಅಷ್ಟಾನಾಂ ಮಂತ್ರಿಣಾಂ ಮಧ್ಯೇ ಮಂತ್ರಂ ರಾಜೋಪಧಾರಯೇತ್ ॥11॥
ಏಳು ಘೋರವ್ಯಸನಗಳಿಂದ ರಹಿತರಾದ ಎಂಟು ಮಂತ್ರಿಗಳ ಮಧ್ಯದಲ್ಲಿ ರಾಜನು ಮಂತ್ರಾಲೋಚನೆಯನ್ನು ಮಾಡಬೇಕು. (ಮಂತ್ರಿಗಳ ಏಳು ವ್ಯಸನ- ವೆಂದರೆ ಬೇಟೆ, ಜೂಜು, ಸ್ತ್ರೀಸಹವಾಸ, ಮದ್ಯಪಾನ, ಕ್ರೂರದಂಡ, ಕಠಿಣವಾದ ಮಾತು ಮತ್ತು ಅರ್ಥದೂಷಣ).
ತತಃ ಸಂಪ್ರೇಷಯೇದ್ ರಾಷ್ಟ್ರೇ ರಾಷ್ಟ್ರಿಯಾಯ ಚ ದರ್ಶಯೇತ್ |
ಅನೇನ ವ್ಯವಹಾರೇಣ ದ್ರಷ್ಟವ್ಯಾಸ್ತೇ ಪ್ರಜಾಃ ಸದಾ ॥12॥
ಅನಂತರ ಆ ವಿಷಯವನ್ನು ರಾಷ್ಟ್ರಕ್ಕೂ ಮತ್ತು ರಾಜನ ಬಂಧುಗಳಿಗೂ ತಿಳಿಸಬೇಕು. ಇಂತಹ ವ್ಯವಹಾರದಿಂದ ನೀನು ಯಾವಾಗಲೂ ಪ್ರಜೆಗಳನ್ನು ನೋಡಿ -ಕೊಳ್ಳಬೇಕು.
ನ ಚಾಪಿ ಗೂಢಂ ಕಾರ್ಯಂ ತೇ ಗ್ರಾಹ್ಯಂ ಕಾರ್ಯೋಪಘಾತಕಮ್ |
ಕಾರ್ಯೇ ಖಲು ವಿಪನ್ನೇ ತ್ವಾಂ ಸೋಽಧರ್ಮಸ್ತಾಂಶ್ಚ ಪೀಡಯೇತ್ ॥13॥
ಯಾವ ಕಾರ್ಯವನ್ನೂ ಗೂಢವಾಗಿ ಮಾಡಬಾರದು. ಮಾಡಲಿರುವ ಕಾರ್ಯಕ್ಕೆ ವಿರೋಧಿಯಾದ ಯಾವುದನ್ನೂ ಮಾಡಬಾರದು. ಕಾರ್ಯವು ಕೆಟ್ಟು- ಹೋದರೆ ನಿನಗೂ ಮತ್ತು ಮಂತ್ರಿಗಳಿಗೂ ಅಧರ್ಮದ ಪೀಡೆಯುಂಟಾದೀತು!
ವಿದ್ರವೇಚ್ಚೈವ ರಾಷ್ಟ್ರಂ ತೇ ಶ್ಯೇನಾತ್ ಪಕ್ಷಿಗಣಾ ಇವ |
ಪರಿಸ್ರವೇಚ್ಚ ಸತತಂ ನೌರ್ವಿಶೀರ್ಣೇವ ಸಾಗರೇ ॥14॥
ಹದ್ದಿಗೆ ಹೆದರಿ ಪಕ್ಷಿಗಳ ಸಮೂಹವು ಓಡಿಹೋದಂತೆ ನಿನ್ನ ರಾಷ್ಟ್ರವು ಓಡಿ ಹೋದೀತು! ಸಾಗರದಲ್ಲಿ ಒಡೆದ ನೌಕೆಯಂತೆ ಸತತವಾಗಿ ಪರಿಸ್ರವಣವನ್ನು ಹೊಂದೀತು!
ಪ್ರಜಾಃ ಪಾಲಯತೋಽಸಮ್ಯಗಧರ್ಮೇಣೇಹ ಭೂಪತೇಃ |
ಹಾರ್ದಂ ಭಯಂ ಸಂಭವತಿ ಸ್ವರ್ಗಶ್ಚಾಸ್ಯ ವಿರುಧ್ಯತೇ ॥15॥
ಅಧರ್ಮದಿಂದ ಪ್ರಜೆಗಳನ್ನು ಪಾಲಿಸುವ ರಾಜನಿಗೆ ಹೃದಯದಲ್ಲಿ ಭಯ- ವುಂಟಾಗುತ್ತದೆ. ಮತ್ತು ಸ್ವರ್ಗವು ದೂರವಾಗುತ್ತದೆ.
ಅಥ ಯೋಽಧರ್ಮತಃ ಪಾತಿ ರಾಜಾಽಮಾತ್ಯೋಽಥ ವಾತ್ಮಜಃ |
ಧರ್ಮಾಸನೇ ನಿಯುಕ್ತಃ ಸನ್ ಧರ್ಮಮೂಲಂ ನರರ್ಷಭ ॥16॥
ಕಾರ್ಯೇಷ್ವಧಿಕೃತಾಃ ಸಮ್ಯಗಕುರ್ವಂತೋ ನೃಪಾನುಗಾಃ |
ಆತ್ಮಾನಂ ಪುರತಃ ಕೃತ್ವಾ ಯಾಂತ್ಯಧಃ ಸಹಪಾರ್ಥಿವಾಃ ॥17॥
ಎಲೈ ನರರ್ಷಭನೇ! ರಾಜನಾಗಲೀ ಅಥವಾ ಧರ್ಮಾಸನದಲ್ಲಿ ನಿಯುಕ್ತರಾದ ಕಾರ್ಯಗಳಲ್ಲಿ ಅಧಿಕೃತರಾದ ಅಮಾತ್ಯ, ರಾಜಪುತ್ರ ಅಥವಾ ರಾಜಾನು- ಯಾಯಿಗಳಾಗಲೀ ಅಧರ್ಮದಿಂದ ಪ್ರಜೆಗಳನ್ನು ಪಾಲಿಸಿದರೆ ಅವರು ರಾಜನನ್ನೂ ಎಳೆದುಕೊಂಡು ಅಧಃಪತನವನ್ನು ಹೊಂದುತ್ತಾರೆ.
ಬಲಾತ್ಕೃತಾನಾಂ ಬಲಿಭಿಃ ಕೃಪಣಂ ಬಹು ಜಲ್ಪತಾಮ್ |
ನಾಥೋ ವೈ ಭೂಮಿಪೋ ನಿತ್ಯಮನಾಥಾನಾಂ ನೃಣಾಂ ಭವೇತ್ ॥18॥
ಬಲಿಷ್ಠರಿಂದ ಬಲಾತ್ಕಾರಕ್ಕೆ ಒಳಗಾಗಿ ಕರುಣಾಜನಕವಾಗಿ ಬಹಳವಾಗಿ ಗೋಳಾಡುವ ಅನಾಥರಾದ ಮನುಷ್ಯರಿಗೆ ರಾಜನೇ ನಿತ್ಯವೂ

ನಾಥನಾದವನು.
ತತಃ ಸಾಕ್ಷಿಬಲಂ ಸಾಧು ದ್ವೈತವಾದೇ ಕೃತಂ ಭವೇತ್ |
ಅಸಾಕ್ಷಿಕಮನಾಥಂ ವಾ ಪರೀಕ್ಷ್ಯಂ ತದ್ ವಿಶೇಷತಃ ॥19॥
ಹಾಗೆಯೇ ವಿವಾದಗಳು ಬಂದಾಗ ಸಾಕ್ಷಿಗಳ ಬಲವನ್ನು ಚೆನ್ನಾಗಿ ವಿಮರ್ಶೆ ಮಾಡದೇ, ಸಾಕ್ಷಿಯಿಲ್ಲದ ಸ್ಥಳದ ನಾಥರೂ ಇಲ್ಲದ ಸ್ಥಳದ ವಿವಾದವಚನಗಳನ್ನು ವಿಶೇಷವಾಗಿ ಪರೀಕ್ಷೆ ಮಾಡಬೇಕು.
ಅಪರಾಧಾನುರೂಪಂ ಚ ದಂಡಂ ಪಾಪೇಷು ಪಾತಯೇತ್ |
ಉದ್ವೇಜಯೇದ್ ಧನೈರ್ಋದ್ಧಾನ್ ದರಿದ್ರಾನ್ ವಧಬಂಧನೈಃ ॥20॥
ಅಪರಾಧವನ್ನು ಮಾಡಿದವರಲ್ಲಿ ಅಪರಾಧಕ್ಕೆ ಅನುಗುಣವಾಗಿ ಶಿಕ್ಷೆಯನ್ನು ವಿಧಿ-ಸಬೇಕು. ಶ್ರೀಮಂತರನ್ನು ಧನದ ವಿಷಯದಲ್ಲಿ ಉದ್ವೇಗಗೊಳಿಸಬೇಕು. ದರಿದ್ರ- ರನ್ನು ವಧೆ ಮತ್ತು ಬಂಧನಗಳಿಂದ ಶಿಕ್ಷಿಸಬೇಕು.
ವಿನಯ್ಯೆರಪಿ ದುರ್ವೃತ್ತಾನ್ ಪ್ರಹಾರೈರಪಿ ಪಾರ್ಥಿವಃ |
ಸಾಂತ್ವೇನೋಪಪ್ರದಾನೇನ ಶಿಷ್ಟಾಂಶ್ಚ ಪರಿಪಾಲಯೇತ್ ॥21॥
ರಾಜನು ದುರ್ನಡತೆಯುಳ್ಳವರನ್ನು ಪ್ರಹಾರದಿಂದಾದರೂ ದಾರಿಗೆ ತರಬೇಕು. ಸಜ್ಜನರಾದವರನ್ನು ಸಾಂತ್ವವಚನಗಳಿಂದ ಮತ್ತು ಉಪಪನ್ನವಾದ ವಸ್ತುಗಳ ದಾನದಿಂದ ಪರಿಪಾಲಿಸಬೇಕು.
ರಾಜ್ಞೋ ವಧಂ ಚಿಕೀರ್ಷೇದ್ ಯಸ್ತಸ್ಯ ಚಿತ್ರೋ ವಧೋ ಭವೇತ್ |
ಆದೀಪಕಸ್ಯ ಸ್ತೇನಸ್ಯ ವರ್ಣಸಂಕರಕಸ್ಯ ಚ ॥22॥
ರಾಜನ ವಧೆಯನ್ನು ಮಾಡಲು ಬಯಸುವವನಿಗೆ, ಗೃಹಗಳಿಗೆ ಅಗ್ನಿಯನ್ನು ಕೊಡುವವನಿಗೆ, ಕಳ್ಳನಿಗೆ, ವರ್ಣಸಂಕರವನ್ನು ಮಾಡುವವನಿಗೆ ಚಿತ್ರವಧೆಯನ್ನು ಮಾಡಿಸಬೇಕು.
ಸಮ್ಯಕ್ ಪ್ರಣಯತೋ ದಂಡಂ ಭೂಮಿಪಸ್ಯ ವಿಶಾಂಪತೇ |
ಯುಕ್ತಸ್ಯ ವಾ ನಾಸ್ತ್ಯಧರ್ಮೋ ಧರ್ಮ ಏವೇಹ ಶಾಶ್ವತಃ ॥23॥
ಎಲೈ ರಾಜನೇ! ಸರಿಯಾದ ರೀತಿಯಲ್ಲಿ ದಂಡಪ್ರಯೋಗವನ್ನು ಮಾಡುವ ರಾಜನಿಗೆ ಅಧರ್ಮವು ಉಂಟಾಗುವುದಿಲ್ಲ. ಇಲ್ಲಿ ಶಾಶ್ವತವಾದ ಧರ್ಮವೇ ಉಂಟಾಗುತ್ತದೆ.
ಕಾಮಕಾರೇಣ ದಂಡಂ ತು ಯಃ ಕುರ್ಯಾದವಿಚಕ್ಷಣಃ |
ಸ ಇಹಾಕೀರ್ತಿಸಂಯುಕ್ತೋ ಮೃತೋ ನರಕಮಾಪ್ನುಯಾತ್ ॥24॥
ಆದರೆ ಯಾವನು ಅಕುಶಲನಾಗಿ, ತನ್ನ ಮನಸ್ಸಿಗೆ ಬಂದಂತೆ ದಂಡವನ್ನು ವಿಧಿ- ಸುತ್ತಾನೆಯೋ ಅವನು ಈ ಲೋಕದಲ್ಲಿ ಅಕೀರ್ತಿಯನ್ನು ಹೊಂದಿ, ಮೃತನಾಗಿ ನರಕವನ್ನು ಸೇರುತ್ತಾನೆ.
ನ ಪರಸ್ಯ ಶ್ರವಾದೇವ ಪರೇಷಾಂ ದಂಡಮರ್ಪಯೇತ್ |
ಆಗಮಾನುಗಮಂ ಕೃತ್ವಾ ಬಧ್ನೀಯಾನ್ಮೋಕ್ಷಯೇತ ವಾ ॥25॥
ಕೇವಲ ಇನ್ನೊಬ್ಬರ ಮಾತನ್ನು ಕೇಳಿ ಯಾರಿಗೂ ದಂಡವನ್ನು ವಿಧಿಸಬಾರದು. ಅಂತಹ ದೂರುಗಳನ್ನು ಶಾಸ್ತ್ರಗಳ ಒರೆಗೆ ಹಚ್ಚಿ, ಆರೋಪಿಯನ್ನು ಬಂಧಿಸಬೇಕು ಅಥವಾ ಬಿಡುಗಡೆ ಮಾಡಬೇಕು.
ನ ತು ಹನ್ಯಾನ್ನೃಪೋ ಜಾತು ದೂತಂ ಕಸ್ಯಾಂಚಿದಾಪದಿ |
ದೂತಸ್ಯ ಹಂತಾ ನಿರಯಮಾವಿಶೇತ್ ಸಚಿವೈಃ ಸಹ ॥26॥
ರಾಜನು ಯಾವ ಆಪತ್ತಿನಲ್ಲಿಯೂ ದೂತನನ್ನು ಕೊಲ್ಲಬಾರದು. ದೂತನನ್ನು ಕೊಲ್ಲುವ ರಾಜನು ಸಚಿವರ ಜೊತೆಯಲ್ಲಿ ನರಕಕ್ಕೆ ಹೋಗುತ್ತಾನೆ.
ಯಥೋಕ್ತವಾದಿನಂ ದೂತಂ ಕ್ಷತ್ರಧರ್ಮರತೋ ನೃಪಃ |
ಯೋ ಹನ್ಯಾದ್ ಪಿತರಸ್ತಸ್ಯ ಭ್ರೂಣಹತ್ಯಾಮವಾಪ್ನುಯುಃ ॥27॥
ಕ್ಷತ್ರಿಯಧರ್ಮದಲ್ಲಿ ರತನಾದ ರಾಜನು ತನ್ನ ಸ್ವಾಮಿಯು ಹೇಳಿದಂತೆ ಸಂದೇಶವನ್ನು ತಲುಪಿಸುವ ದೂತನನ್ನು ಕೊಂದರೆ ರಾಜನ ತಂದೆತಾಯಿಗಳು ಭ್ರೂಣಹತ್ಯಾದೋಷಕ್ಕೆ ಗುರಿಯಾಗುತ್ತಾರೆ.
ಕುಲೀನಃ ಶೀಲಸಂಪನ್ನೋ ವಾಗ್ಮೀ ದಕ್ಷಃ ಪ್ರಿಯಂವದಃ |
ಯಥೋಕ್ತವಾದೀ ಸ್ಮೃತಿಮಾನ್ ದೂತಃ ಸ್ಯಾತ್ ಸಪ್ತಭಿರ್ಗುಣೈಃ ॥28॥
ಒಳ್ಳೆಯ ಕುಲದಲ್ಲಿಜನಿಸಿದವನೂ, ಶೀಲಸಂಪನ್ನನೂ, ವಾಗ್ಮಿಯೂ, ದಕ್ಷನೂ, ಪ್ರಿಯವಾದ ಮಾತನ್ನಾಡುವವನೂ, ಒಳ್ಳೆಯ ಸ್ಮೃತಿಯನ್ನುಳ್ಳವನೂ, ಸಂದೇಶವನ್ನು ಸರಿಯಾಗಿ ಹೇಳುವವನೂ ಆದ ಈ ಏಳು ಗುಣಗಳಿಂದ ಕೂಡಿದವನು ದೂತ- ನಾಗುತ್ತಾನೆ.
ಏತೈರೇವ ಗುಣೈರ್ಯುಕ್ತಃ ಪ್ರತೀಹಾರೋಽಸ್ಯ ರಕ್ಷಿತಾ |
ಶಿರೋರಕ್ಷಶ್ಚ ಭವತಿ ಗುಣೈರೇತೈಃ ಸಮನ್ವಿತಃ ॥29॥
ದ್ವಾರಪಾಲಕನಾಗಿ ರಕ್ಷಣೆಯನ್ನು ಮಾಡುವವನೂ ಸಹ ಇವೇ ಗುಣಗಳಿಂದ ಕೂಡಿರಬೇಕು. ಅಂಗರಕ್ಷಕನೂ ಸಹ ಈ ಗುಣಗಳಿಂದ ಕೂಡಿರಬೇಕು.
ಧರ್ಮಾರ್ಥಶಾಸ್ತ್ರತತ್ತ್ವಜ್ಞಃ ಸಂಧಿವಿಗ್ರಹಕೋವಿದಃ |
ಮತಿಮಾನ್ ಧೃತಿಮಾನ್ ಧೀಮಾನ್ ರಹಸ್ಯವಿನಿಗೂಹಿತಾ ॥30॥
ಕುಲೀನಃ ಸತ್ಯಸಂಪನ್ನಃ ಶಕ್ತೋಽಮಾತ್ಯಃ ಪ್ರಶಂಸಿತಃ |
ಧರ್ಮಾರ್ಥಶಾಸ್ತ್ರತತ್ತ್ವಜ್ಞನೂ, ಸಂಧಿ-ವಿಗ್ರಹಗಳಲ್ಲಿ ಕೋವಿದನೂ, ಒಳ್ಳೆಯ ಬುದ್ಧಿಯನ್ನೂ ಧೈರ್ಯವನ್ನೂ ಹೊಂದಿದವನೂ, ಮೇಧಾವಿಯೂ, ರಹಸ್ಯವನ್ನು ಮುಚ್ಚಿಡುವವನೂ, ಸತ್ಕುಲಪ್ರಸೂತನೂ, ಸತ್ಯಸಂಪನ್ನನೂ, ಸಮರ್ಥನೂ ಆದ ಅಮಾತ್ಯನು

ಪ್ರಶಂಸಿಸಲ್ಪಡುತ್ತಾನೆ.
ಏತೈರೇವ ಗುಣೈರ್ಯುಕ್ತಸ್ತಥಾ ಸೇನಾಪತಿರ್ಭವೇತ್॥31॥
ವ್ಯೂಹಯಂತ್ರಾಯುಧೀಯಾನಾಂ ತತ್ತ್ವಜ್ಞೋ ವಿಕ್ರಮಾನ್ವಿತಃ।
ವರ್ಷಶೀತೋಷ್ಣವಾತಾನಾಂ ಸಹಿಷ್ಣುಃ ಪರರಂಧ್ರವಿತ್ ॥32॥
ಹಾಗೆಯೇ ಸೇನಾಪತಿಯೂ ಸಹ ಈ ಗುಣಗಳಿಂದಲೇ ಕೂಡಿದವನಾಗಿರ- ಬೇಕು. ಜೊತೆಗೆ ವ್ಯೂಹಗಳ, ಯಂತ್ರಗಳ ಮತ್ತು ಆಯುಧಗಳ ತತ್ತ್ವಗಳನ್ನು ತಿಳಿದಿರಬೇಕು. ಪರಾಕ್ರಮಶಾಲಿಯಾಗಿರಬೇಕು. ಶೀತೋಷ್ಣವಾತವರ್ಷಗಳನ್ನು ಸಹಿ- ಸುವವನಾಗಿರಬೇಕು. ಶತ್ರುವಿನ ದೌರ್ಬಲ್ಯವನ್ನು ತಿಳಿಯುವವನಾಗಿರಬೇಕು.
ವಿಶ್ವಾಸಯೇತ್ ಪರಾಂಶ್ಚೈವ ವಿಶ್ವಸೇನ್ನ ತು ಕಸ್ಯಚಿತ್।
ಪುತ್ರೇಷ್ವಪಿ ಹಿ ರಾಜೇಂದ್ರ ವಿಶ್ವಾಸೋ ನ ಪ್ರಶಸ್ಯತೇ ॥33॥
ರಾಜನು ಇನ್ನೊಬ್ಬರು ತನ್ನಲ್ಲಿ ವಿಶ್ವಾಸ ಮಾಡುವಂತೆ ಮಾಡಬೇಕು. ತಾನು ಯಾರನ್ನೂ ನಂಬಬಾರದು. ಎಲೈ ರಾಜೇಂದ್ರನೇ! ಪುತ್ರರಲ್ಲಿ ವಿಶ್ವಾಸ ಮಾಡು- ವುದೂ ಸಹ ರಾಜನಿಗೆ ಪ್ರಶಸ್ತವಲ್ಲ.
ಏತಚ್ಛಾಸ್ತ್ರಾರ್ಥತತ್ತ್ವಂ ತು ತವಾಖ್ಯಾತಂ ಮಯಾಽನಘ।
ಅವಿಶ್ವಾಸೋ ನರೇಂದ್ರಾಣಾಂ ಗುಹ್ಯಂ ಪರಮಮುಚ್ಯತೇ ॥33॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥87॥
ಎಲೈ ಅನಘನೇ! ಈ ಶಾಸ್ತ್ರಾರ್ಥತತ್ವವನ್ನು ನಾನು ನಿನಗೆ ಹೇಳಿದ್ದೇನೆ. ರಾಜರಿಗೆ ಅವಿಶ್ವಾಸವು ಪರಮಗುಹ್ಯವಾದ ತತ್ತ್ವವೆಂದು ಹೇಳಲ್ಪಡುತ್ತದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 87ನೆಯ ಅಧ್ಯಾಯವು ಮುಗಿಯಿತು
0

88. ಎಂಬತ್ತೆಂಟನೆಯ ಅಧ್ಯಾಯ
ಪುರಲಕ್ಷಣಾದಿ ಕಥನ
ಯುಧಿಷ್ಠಿರಃ
ಕಥಂವಿಧಂ ಪುರಂ ರಾಜಾ ಸ್ವಯಮಾವಸ್ತುಮರ್ಹತಿ।
ಕೃತಂ ವಾ ಕಾರಯಿತ್ವಾ ವಾ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ರಾಜನು ಮೊದಲೇ ಸಿದ್ಧವಾದ ಅಥವಾ ತಾನು ಹೊಸದಾಗಿ ಸಿದ್ಧಪಡಿಸುವ ಎಂತಹ ಪುರದಲ್ಲಿ ವಾಸ ಮಾಡಬೇಕು ಎಂದು ನನಗೆ ಹೇಳು.
ಭೀಷ್ಮಃ
ಯತ್ರ ಕೌಂತೇಯ ವಸ್ತವ್ಯಂ ಸಪುತ್ರಭ್ರಾತೃಬಂಧುನಾ।
ನ್ಯಾಯ್ಯಂ ತತ್ರ ಪರಿಪ್ರಷ್ಟುಂ ಗುಪ್ತಿಂ ವೃತ್ತಿಂ ಚ ಭಾರತ ॥2॥
ಭೀಷ್ಮರು ಕೌಂತೇಯನೇ! ಭಾರತನೇ! ರಾಜನು ಪುತ್ರಭ್ರಾತೃಬಂಧು- ಸಹಿತನಾಗಿ ಎಲ್ಲಿ ವಾಸ ಮಾಡಬೇಕೋ ಅಲ್ಲಿಯ ರಕ್ಷಣೆ ಮತ್ತು ಜೀವನಕ್ರಮವು ಹೇಗಿರಬೇಕು ಎಂದು ನೀನು ಕೇಳುವುದು ನ್ಯಾಯವಾಗಿದೆ.
ತಸ್ಮಾತ್ ತೇ ವರ್ತಯಿಷ್ಯಾಮಿ ದುರ್ಗಕರ್ಮ ವಿಶೇಷತಃ।
ಶ್ರುತ್ವಾ ತಥಾ ವಿಧಾತವ್ಯಮನುಷ್ಠೇಯಂ ಚ ಯತ್ನತಃ ॥3॥
ಆದುದರಿಂದ ನಿನಗೆ ದುರ್ಗವನ್ನು ಮಾಡುವ ರೀತಿಯನ್ನು ವಿಶೇಷವಾಗಿ ಹೇಳುವೆನು. ಅದನ್ನು ಕೇಳಿ ಹಾಗೆಯೇ ಮಾಡಿಸಿ ಪ್ರಯತ್ನಪೂರ್ವಕವಾಗಿ ಅನುಷ್ಠಾನ ಮಾಡಬೇಕು.
ಷಡ್ವಿಧಂ ದುರ್ಗಮಾಸ್ಥಾಯ ಪುರಾಣ್ಯಥ ನಿವೇಶಯೇತ್।
ಸರ್ವಸಂಪತ್ಪ್ರಧಾನಂ ಯದ್ ಬಾಹುಲ್ಯಂ ವಾಪಿ ಸಂಭವೇತ್ ॥4॥
ಆರುವಿಧವಾದ ದುರ್ಗಗಳನ್ನು ನಿರ್ಮಿಸಿ, ಸರ್ವಸಂಪತ್ ಪ್ರಧಾನವಾದ ವಿಸ್ತಾರವಾದ ಪ್ರದೇಶದಲ್ಲಿ ಪುರಗಳನ್ನು ನಿರ್ಮಿಸಬೇಕು.
ಧನ್ವದುರ್ಗಂ ಮಹೀದುರ್ಗಂ ಗಿರಿದುರ್ಗಂ ತಥೈವ ಚ।
ಮನುಷ್ಯದುರ್ಗಮಬ್ದುರ್ಗಂ ವನದುರ್ಗಂ ಚ ತಾನಿ ಷಟ್ ॥5॥
ಧನ್ವದುರ್ಗ(ಪುರದ ಸುತ್ತಲೂ ಹೊರಭಾಗದಲ್ಲಿ ಮರುಭೂಮಿಯಿರು- ವುದು), ಮಹೀದುರ್ಗ (ಕೋಟೆ ಕೊತ್ತಲುಗಳನ್ನು ನಿರ್ಮಿಸುವುದು), ಗಿರಿದುರ್ಗ (ಸುತ್ತಲೂ ಪರ್ವತವಿರುವ ಪ್ರದೇಶದಲ್ಲಿ ನಿರ್ಮಿಸುವುದು), ಮನುಷ್ಯದುರ್ಗ (ಬಹಳ ಸೈನಿಕರನ್ನು ರಕ್ಷಣೆಗಾಗಿ ಹೊಂದಿರುವುದು), ಜಲದುರ್ಗ (ಕಂದಕಗಳನ್ನು ನಿರ್ಮಿಸುವುದು), ವನದುರ್ಗ (ಅರಣ್ಯಗಳನ್ನು ನಿರ್ಮಿಸುವುದು) ಇವು ಆ ಆರು ವಿಧವಾದ ದುರ್ಗಗಳು.
ಯತ್ ಪುರಂ ದುರ್ಗಸಂಪನ್ನಂ ಧಾನ್ಯಾಯುಧಸಮನ್ವಿತಮ್।
ದೃಢಪ್ರಾಕಾರಪರಿಖಂ ಹಸ್ತ್ಯಶ್ವರಥಸಂಕುಲಮ್ ॥6॥
ವಿದ್ವಾಂಸಃ ಶಿಲ್ಪಿನೋ ಯತ್ರ ನಿಚಯಾಶ್ಚ ಸುಸಂಚಿತಾಃ।
ಧಾರ್ಮಿಕಾಶ್ಚ ಜನೋ ಯತ್ರ ದಾಕ್ಷ್ಯಮುತ್ತಮಮಾಸ್ಥಿತಾಃ ॥7॥
ಊರ್ಜಸ್ವಿನರನಾಗಾಶ್ವಂ ಚತ್ವಾರಾಪಣಶೋಭಿತಮ್।

ಪ್ರಸಿದ್ಧವ್ಯವಹಾರಂ ಚ ಪ್ರಶಾಂತಮಕುತೋಭಯಮ್ ॥8॥
ಸುಪ್ರಭಂ ಸಸುನಾದಂ ಚ ಸುಪ್ರಶಸ್ತನಿವೇಶನಮ್ ।
ಶೂರಾಢ್ಯಜನಸಂಪನ್ನಂ ಬ್ರಹ್ಮಘೋಷಾನುನಾದಿತಮ್ ॥9॥
ಸಮಾಜೋತ್ಸವಸಂಪನ್ನಂ ಸದಾ ಪೂಜಿತದೈವತಮ್ ।
ವಶ್ಯಾಮಾತ್ಯಬಲೋ ರಾಜಾ ತತ್ಪುರಂ ಸ್ವಯಮಾವಸೇತ್ ॥10॥
ಯಾವ ಪಟ್ಟಣವು ದುರ್ಗಗಳಿಂದಲೂ, ಧನಧಾನ್ಯ ಆಯುಧಗಳಿಂದಲೂ, ದೃಢವಾದ ಕೋಟೆ ಮತ್ತು ಕಂದಕಗಳಿಂದಲೂ ಕೂಡಿದುದಾಗಿ ಗಜ, ಅಶ್ವ, ರಥಗಳಿಂದ ನಿಬಿಡವಾಗಿರುತ್ತದೆಯೋ, ಎಲ್ಲಿ ವಿದ್ವಾಂಸರು ಕುಶಲಕರ್ಮಿಗಳು ಮತ್ತು ಧಾನ್ಯಾದಿಗಳು ಚೆನ್ನಾಗಿ ಸಂಗ್ರಹವಾಗಿರುತ್ತವೆಯೋ, ಎಲ್ಲಿ ಜನರು ಧಾರ್ಮಿಕರಾಗಿ ಉತ್ತಮವಾದ ದಕ್ಷತೆಯನ್ನು ಹೊಂದಿರುತ್ತಾರೆಯೋ, ಬಲಿಷ್ಠವಾದ ನರ-ಆನೆ-ಅಶ್ವಗಳು ಇರುತ್ತವೆಯೋ, ಚತುಷ್ಪಥ ಮತ್ತು ಅಂಗಡಿ ಬೀದಿಗಳಿಂದ ಶೋಭಿತವಾಗಿರುತ್ತದೆಯೋ, ಕ್ರಯವಿಕ್ರಯಾದಿ ವ್ಯವಹಾರಗಳಿಗೆ ಅನುಕೂಲ- ವಾಗಿರುತ್ತದೆಯೋ, ನಿರ್ಭಯವಾಗಿರುತ್ತದೆಯೋ, ಪ್ರಶಾಂತವಾಗಿರುತ್ತದೆಯೋ, ಒಳ್ಳೆಯ ಬೆಳಕು ಒಳ್ಳೆಯ ಶಬ್ದಗಳು ಒಳ್ಳೆಯ ಮನೆಗಳಿಂದ ಕೂಡಿರುತ್ತದೆಯೋ, ಶೂರರೂ ಆಢ್ಯರೂ ಆದ ಜನರಿಂದ ತುಂಬಿರುತ್ತದೆಯೋ, ವೇದಘೋಷ- ವಿರುತ್ತದೆಯೋ ಅಂತಹ ಪಟ್ಟಣದಲ್ಲಿ ತನ್ನ ವಶದಲ್ಲಿ ಅಮಾತ್ಯ ಮತ್ತು ಸೈನಿಕರನ್ನು ಇಟ್ಟುಕೊಂಡ ರಾಜನು ವಾಸ ಮಾಡಬೇಕು.
ತತ್ರ ಕೋಶಂ ಬಲಂ ಮಿತ್ರಂ ವ್ಯವಹಾರಂ ಚ ವರ್ಧಯೇತ್ ।
ಪುರೇ ಜನಪದೇ ಚೈವ ಸರ್ವದೋಷಾನ್ ನಿವರ್ತಯೇತ್ ॥11॥
ಅಲ್ಲಿ ಕೋಶ, ಸೈನ್ಯ, ಮಿತ್ರ ಮತ್ತು ಕ್ರಯವಿಕ್ರಯಾದಿ ವ್ಯವಹಾರಗಳನ್ನು ಅಭಿವೃದ್ಧಿಪಡಿಸಬೇಕು. ರಾಜಧಾನಿಯಲ್ಲಿ ಮತ್ತು ರಾಜ್ಯದಲ್ಲಿ ಉಂಟಾಗುವ ಎಲ್ಲ ದೋಷಗಳನ್ನೂ ಪರಿಹರಿಸಬೇಕು.
ಭಾಂಡಾಗಾರಾಯುಧಾಗಾರಾನ್ ಪ್ರಯತ್ನೇನಾಭಿವರ್ಧಯೇತ್ ।
ನಿಚಯಾನ್ ವರ್ಧಯೇತ್ ಸರ್ವಾಂಸ್ತಥಾ ಯಂತ್ರಗದಾಗದಾನ್ ॥12॥
ಅಶ್ವಸಲಕರಣೆಗಳ ಆಗಾರವನ್ನು ಮತ್ತು ಆಯುಧಾಗಾರವನ್ನು ಪ್ರಯತ್ನ- ಪೂರ್ವಕವಾಗಿ ಅಭಿವೃದ್ಧಿ ಪಡಿಸಬೇಕು. ಹಾಗೆಯೇ ಯಂತ್ರಗಳ ಆಯುಧಗಳ ಮತ್ತು ಔಷಧಿಗಳ ಸಂಚಯವನ್ನು ಅಭಿವೃದ್ಧಿಪಡಿಸಬೇಕು.
ಕಾಷ್ಠಲೋಹತುಷಾಂಗಾರದಾರುಶೃಂಗಾಸ್ಥಿವೈಣವಾನ್ ।
ಮಜ್ಜಾಸ್ನೇಹವಸಾಕ್ಷೌದ್ರಮೌಷಧಗ್ರಾಮಮೇವ ಚ ॥13॥
ಶಣಂ ಸರ್ಜರಸಂ ಧಾನ್ಯಮಾಯುಧಾನಿ ಶರಾಂಸ್ತಥಾ ।
ಚರ್ಮ ಸ್ನಾಯು ತಥಾ ವೇತ್ರಂ ಮುಂಜಬಲ್ವಜಧನ್ವನಾನ್ ॥14॥
ಕಟ್ಟಿಗೆಗಳು, ಲೋಹಗಳು, ಹೊಟ್ಟು, ಇದ್ದಿಲು, ಗೃಹನಿರ್ಮಾಣಕ್ಕೆ ಉಪ- ಯೋಗಿಸುವ ಮರಗಳು, ಕೊಂಬುಗಳು, ಮೂಳೆಗಳು, ಬಿದಿರು, ಮಜ್ಜೆ, ತೈಲ, ವಸ, ಜೇನುತುಪ್ಪ, ಔಷಧಸಮೂಹಗಳು, ಸೆಣಬು, ಬೇಗ ಉರಿಯುವ ಸರ್ಜರಸ, ಧಾನ್ಯಗಳು, ಆಯುಧಗಳು, ಬಾಣಗಳು, ಚರ್ಮ, ಸ್ನಾಯುಗಳು, ಬೆತ್ತಗಳು, ಮುಂಜ ಹುಲ್ಲು ಮತ್ತು ಕರಡಿ ಹುಲ್ಲುಗಳು ಇವುಗಳನ್ನು ಸಂಗ್ರಹಿಸಬೇಕು.
ಆಶಯಾಶ್ಚೋದಪಾನಾಶ್ಚ ಪ್ರಭೂತಸಲಿಲಾಕರಾಃ ।
ನಿರೋದ್ಧವ್ಯಾಃ ಸದಾ ರಾಜ್ಞಾ ಕ್ಷೀರಿಣಶ್ಚ ಮಹೀರುಹಾಃ ॥15॥
ಜಲಾಶಯಗಳು, ಭಾವಿಗಳು, ದೊಡ್ಡ ದೊಡ್ಡ ಸರೋವರಗಳು, ಹಾಲಿನಂತಹ ದ್ರವವನ್ನು ಸುರಿಸುವ ವೃಕ್ಷಗಳು ಇವುಗಳನ್ನು ರಾಜನು ಯಾವಾಗಲೂ ರಕ್ಷಿಸಬೇಕು.
ಸತ್ಕೃತಾಶ್ಚ ಪ್ರಯತ್ನೇನ ಆಚಾರ್ಯರ್ತ್ವಿಕ್‌ಪುರೋಹಿತಾಃ ।
ಮಹೇಷ್ವಾಸಾಃ ಸ್ಥಪತಯಃ ಸಾಂವತ್ಸರಚಿಕಿತ್ಸಕಾಃ ॥16॥
ಪ್ರಾಜ್ಞಾ ಮೇಧಾವಿನೋ ದಾಂತಾ ದಕ್ಷಾಃ ಶೂರಾ ಬಹುಶ್ರುತಾಃ ।
ಕುಲೀನಾಃ ಸತ್ತ್ವಸಂಪನ್ನಾ ಯುಕ್ತಾಃ ಸರ್ವೇಷು ಕರ್ಮಸು ॥17॥
ಆಚಾರ್ಯ ಋತ್ವಿಕ್ ಪುರೋಹಿತರು, ಮಹಾಧನುರ್ಧಾರಿಗಳು, ಬಡಗಿಗಳು, ಜ್ಯೋತಿಷ್ಕರು, ವೈದ್ಯರು, ಪ್ರಾಜ್ಞರು, ಮೇಧಾವಿಗಳು, ಇಂದ್ರಿಯನಿಗ್ರಹವುಳ್ಳವರು, ದಕ್ಷರು, ಶೂರರು, ಬಹುಶ್ರುತರು, ಸತ್ಕುಲಪ್ರಸೂತರು, ಧೈರ್ಯಶಾಲಿಗಳು ಆದವರನ್ನು ಎಲ್ಲ ಕಾರ್ಯಗಳಲ್ಲಿ ನಿಯೋಜಿಸಿ, ಪ್ರಯತ್ನಪೂರ್ವಕವಾಗಿ ಅವರಿಗೆ ಸತ್ಕಾರವನ್ನು ಮಾಡಬೇಕು.
ಪೂಜಯೇದ್ ಧಾರ್ಮಿಕಾನ್ ರಾಜಾ ನಿಗೃಹ್ಣೀಯಾದಧಾರ್ಮಿಕಾನ್ ।
ನಿಯುಂಜ್ಯಾಚ್ಚ ಪ್ರಯತ್ನೇನ ಸರ್ವವರ್ಣಾನ್ ಸ್ವಕರ್ಮಸು ॥18॥
ರಾಜನು ಧಾರ್ಮಿಕರನ್ನು ಪೂಜಿಸಬೇಕು. ಅಧಾರ್ಮಿಕರನ್ನು ನಿಗ್ರಹಿಸಬೇಕು. ಎಲ್ಲ ವರ್ಣದವರೂ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿರುವಂತೆ ನಿಯೋ- ಜಿಸಬೇಕು.
ಬಾಹ್ಯಮಾಭ್ಯಂತರಂ ಚೈವ ಪೌರಜಾನಪದಂ ಜನಮ್ ।
ಚಾರೈಃ ಸುವಿದಿತಂ ಕೃತ್ವಾ ತತಃ ಕರ್ಮ ಪ್ರಯೋಜಯೇತ್ ॥19॥
ಅರಮನೆಯ ಹೊರಗೆ ಮತ್ತು ಒಳಗೆ ಇರುವವರನ್ನು ರಾಜಧಾನಿಯಲ್ಲಿ ಮತ್ತು ರಾಷ್ಟ್ರದಲ್ಲಿರುವವರನ್ನು ಚಾರರ ಮೂಲಕವಾಗಿ ಚೆನ್ನಾಗಿ ತಿಳಿದು ಅನಂತರ ಕಾರ್ಯಗಳನ್ನು ಮಾಡಿಸಬೇಕು.
ಚಾರಾನ್ ಮಂತ್ರಂ ಚ ಕೋಶಂ ಚ ಮಂತ್ರಂ ಚೈವ ವಿಶೇಷತಃ ।
ಅನುತಿಷ್ಠೇತ್ ಸ್ವಯಂ ರಾಜಾ ಸರ್ವಂ ಹ್ಯತ್ರ ಪ್ರತಿಷ್ಠಿತಮ್ ॥20॥
ಚಾರರು, ಮಂತ್ರಗಳು ಮತ್ತು ಕೋಶ ಅದರಲ್ಲಿಯೂ ವಿಶೇಷವಾಗಿ ಮಂತ್ರ- ಗಳು ಇವನ್ನು ರಾಜ ಸ್ವತಃ ನೋಡಿಕೊಳ್ಳಬೇಕು. ಏಕೆಂದರೆ

ರಾಜ್ಯದ ಹಿತವೆಲ್ಲವೂ ಅಲ್ಲಿಯೇ ಪ್ರತಿಷ್ಠಿತವಾಗಿದೆ.
ಉದಾಸೀನಾರಿಮಿತ್ರಾಣಾಂ ಸರ್ವಮೇವ ಚಿಕೀರ್ಷಿತಮ್ |
ಪುರೇ ಜನಪದೇ ಚೈವ ಜ್ಞಾತವ್ಯಂ ಚಾರಚಕ್ಷುಷಾ ॥21॥
ಪುರದಲ್ಲಿ ಮತ್ತು ಜನಪದದಲ್ಲಿ ಶತ್ರು-ಮಿತ್ರ-ಉದಾಸೀನರು ಮಾಡಲು ಅಪೇಕ್ಷಿಸಿರುವ ಸರ್ವಕಾರ್ಯಗಳನ್ನು ಚಾರರ ಮೂಲಕವಾಗಿ ತಿಳಿಯಬೇಕು.
ತತಸ್ತಥಾ ವಿಧಾತವ್ಯಂ ಸರ್ವಮೇವಾಪ್ರಮಾದತಃ |
ಭಕ್ತಾನ್ ಪೂಜಯತಾ ನಿತ್ಯಂ ದ್ವಿಷತಶ್ಚ ನಿಗೃಹ್ಣತಾ ॥22॥
ಅನಂತರ ಅದಕ್ಕೆ ಅನುಗುಣವಾಗಿ ಎಚ್ಚರಿಕೆಯಿಂದ ತನ್ನಲ್ಲಿ ನಿಷ್ಠೆಯುಳ್ಳವರನ್ನು ಪೂಜಿಸುತ್ತಾ, ತನ್ನ ಶತ್ರುಗಳನ್ನು ನಿಗ್ರಹಿಸುತ್ತಾ ಎಲ್ಲವನ್ನೂ ಪ್ರಯೋಜಿಸಬೇಕು.
ಯಷ್ಟವ್ಯಂ ಕ್ರತುಭಿರ್ನಿತ್ಯಂ ದಾತವ್ಯಂ ಚಾಪ್ಯಪೀಡಯಾ |
ಪ್ರಜಾನಾಂ ರಕ್ಷಣಂ ಕಾರ್ಯಂ ನ ಕಾರ್ಯಂ ಕರ್ಮ ಗರ್ಹಿತಮ್ ॥23॥
ನಿತ್ಯವೂ ಯಾಗಗಳನ್ನು ಮಾಡಬೇಕು. ಪ್ರಜೆಗಳನ್ನು ಪೀಡಿಸದೇ ದಾನವನ್ನು ಮಾಡಬೇಕು. ಪ್ರಜೆಗಳ ರಕ್ಷಣೆಯನ್ನು ಮಾಡಬೇಕು. ನಿಂದ್ಯವಾದ ಯಾವ ಕರ್ಮ- ಗಳನ್ನೂ ಮಾಡಬಾರದು.
ಕೃಪಣಾನಾಥವೃದ್ಧಾನಾಂ ವಿಧವಾನಾಂ ಚ ಯೋಷಿತಾಮ್ |
ಯೋಗಕ್ಷೇಮಂ ಚ ವೃತ್ತಿಂ ಚ ನಿತ್ಯಮೇವ ಪ್ರಕಲ್ಪಯೇತ್ ॥24॥
ಕೃಪಣರು, ಅನಾಥರು, ವೃದ್ಧರು, ವಿಧವಾಸ್ತ್ರೀಯರು ಇವರ ಯೋಗಕ್ಷೇಮ- ವನ್ನು ತಿಳಿದು ಸತತವಾಗಿ ಜೀವನೋಪಾಯವನ್ನು ಕಲ್ಪಿಸಬೇಕು.
ಆಶ್ರಮೇಷು ಯಥಾಕಾಲಂ ಚೇಲಭಾಜನಭೋಜನಮ್ |
ಸದೈವೋಪಹರೇತ್ ರಾಜಾ ಸತ್ಕೃತ್ಯಾನವಮನ್ಯ ಚ ॥25॥
ರಾಜನು ಆಶ್ರಮಗಳಲ್ಲಿ ಆಯಾ ಕಾಲಕ್ಕೆ ಅನುಗುಣವಾಗಿ ಕಂಬಳಿ ಮೊದಲಾದ ಚೇಲವನ್ನು, ಕಮಂಡಲು ಮೊದಲಾದ ಪಾತ್ರೆಗಳನ್ನು ಮತ್ತು ಭೋಜನಸಾಮಗ್ರಿ- ಯನ್ನು ಆಶ್ರಮವಾಸಿಗಳನ್ನು ಸತ್ಕರಿಸಿ, ಅವಮಾನ ಮಾಡದೇ ಯಾವಾಗಲೂ ಒದಗಿಸಬೇಕು.
ಆತ್ಮಾನಂ ಸರ್ವಕಾರ್ಯಾಣಿ ತಾಪಸೇ ರಾಜ್ಯಮೇವ ಚ |
ನಿವೇದಯೇತ್ ಪ್ರಯತ್ನೇನ ತಿಷ್ಠೇತ್ ಪ್ರಹ್ವಶ್ಚ ಸರ್ವದಾ ॥26॥
ಆಶ್ರಮವಾಸಿಯಾದ ತಪಸ್ವಿಗೆ ತನ್ನನ್ನು, ತನ್ನ ರಾಜ್ಯವನ್ನು, ತಾನು ಮಾಡುವ ಎಲ್ಲ ಕಾರ್ಯಗಳನ್ನು ನಿವೇದಿಸಬೇಕು. ಪ್ರಯತ್ನಪೂರ್ವಕವಾಗಿ ಅವನ ಬಳಿಯಲ್ಲಿ ಯಾವಾಗಲೂ ವಿನಯದಿಂದ ಇರಬೇಕು.
ಸರ್ವಾರ್ಥತ್ಯಾಗಿನಂ ರಾಜಾ ಕುಲೇ ಜಾತಂ ಬಹುಶ್ರುತಮ್ |
ಪೂಜಯೇತ್ ತಾದೃಶಂ ದೃಷ್ಟ್ವಾ ಶಯನಾಸನಭೋಜನೈಃ ॥27॥
ಸತ್ಕುಲದಲ್ಲಿ ಜನಿಸಿ, ವಿದ್ಯಾವಂತನಾಗಿ, ಸರ್ವಾರ್ಥತ್ಯಾಗವನ್ನು ಮಾಡಿ, ಸನ್ಯಾಸಿಯಾದವನನ್ನು ನೋಡಿ ರಾಜನು ಅವನನ್ನು ಶಯನಾಸನಭೋಜನಗಳಿಂದ ಪೂಜಿಸಬೇಕು.
ತಸ್ಮಿನ್ ಕುರ್ವೀತ ವಿಶ್ವಾಸಂ ರಾಜಾ ಕಸ್ಯಾಂಚಿದಾಪದಿ |
ತಾಪಸೇಷು ಹಿ ವಿಶ್ವಾಸಮಪಿ ಕುರ್ವಂತಿ ದಸ್ಯವಃ ॥28॥
ಆಪತ್ತು ಒದಗಿದಾಗ ರಾಜನು ಅಂತಹ ತಪಸ್ವಿಯಲ್ಲಿ ವಿಶ್ವಾಸವನ್ನು ಮಾಡ- ಬೇಕು. ಏಕೆಂದರೆ ದಸ್ಯುಗಳೂ ಸಹ ತಾಪಸರಲ್ಲಿ ವಿಶ್ವಾಸವನ್ನು ಮಾಡುತ್ತಾರೆ.
ತಸ್ಮಿನ್ ನಿಧೀನಾದಧೀತ ಪ್ರಜ್ಞಾಂ ಪರ್ಯಾದದೀತ ಚ |
ನ ಚಾಪ್ಯಭೀಕ್ಷ್ಣಂ ಸೇವೇತ ಭೃಶಂ ವಾ ಪ್ರತಿಪೂಜಯೇತ್ ॥29॥
ಆಪತ್ಕಾಲದಲ್ಲಿ ತನ್ನ ಬಳಿಯಿರುವ ನಿಧಿಯನ್ನು ತಪಸ್ವಿಯ ಬಳಿಯಲ್ಲಿ ಇಟ್ಟು ಅವನಿಂದ ವಿವೇಕವನ್ನು ಸಂಗ್ರಹಿಸಬೇಕು. ಪುನಃ ಪುನಃ ತಾಪಸರ ಬಳಿಗೆ ಹೋಗ- ಬಾರದು. ಮತ್ತು ಎಲ್ಲರಿಗೂ ತಿಳಿಯುವಂತೆ ಬಹಳವಾಗಿ ಪೂಜೆಯನ್ನೂ ಮಾಡ- ಬಾರದು.
ಅನ್ಯಃ ಕಾರ್ಯಃ ಸ್ವರಾಷ್ಟ್ರೇಷು ಪರರಾಷ್ಟ್ರೇಷು ಚಾಪರಃ |
ಅಟವೀಷ್ವಪರಃ ಕಾರ್ಯಃ ಸಾಮಂತನಗರೇಷು ಚ ॥30॥
ರಾಜನು ತನ್ನ ರಾಷ್ಟ್ರದಲ್ಲಿ ಬೇರೆಯ ಕಾರ್ಯವನ್ನು ಮಾಡಬೇಕು; ಪರರಾಷ್ಟ್ರ- ಗಳಲ್ಲಿ ಬೇರೆಯ ಕಾರ್ಯ; ಅಡವಿಗಳಲ್ಲಿ ಬೇರೆಯ ಕಾರ್ಯ ಮತ್ತು ಸಾಮಂತ- ರಾಜರ ನಗರಗಳಲ್ಲಿ ಬೇರೆಯ ಕಾರ್ಯವನ್ನು ಮಾಡಬೇಕು.
ತೇಷು ಸತ್ಕಾರಸಂಸ್ಕಾರಾನ್ ಸಂವಿಭಾಗಾಂಶ್ಚ ಕಾರಯೇತ್ |
ಪರರಾಷ್ಟ್ರಾಟವೀಸ್ಥೇಷು ಯಥಾ ಸ್ವವಿಷಯೇ ತಥಾ ॥31॥
ಪರರಾಷ್ಟ್ರಗಳಲ್ಲಿ ಮತ್ತು ಅಡವಿಗಳಲ್ಲಿ ಕಾರ್ಯವನ್ನು ಮಾಡುವವರಿಗೆ ತನ್ನ ರಾಜ್ಯದಲ್ಲಿ ಕಾರ್ಯವನ್ನು ಮಾಡುವವರಂತೆಯೇ ಸತ್ಕಾರವನ್ನು, ಸಂಸ್ಕಾರಗಳನ್ನು ಮತ್ತು ಧನಾದಿದಾನವನ್ನು ಮಾಡಬೇಕು.
ತೇ ಕಸ್ಯಾಂಚಿದವಸ್ಥಾಯಾಂ ಶರಣಂ ಶರಣಾರ್ಥಿನೇ |
ರಾಜ್ಞೇ ದದ್ಯುರ್ಯಥಾಕಾಮಂ ತಾಪಸಾಃ ಸಂಶಿತವ್ರತಾಃ ॥32॥
ಒಳ್ಳೆಯ ವ್ರತಧಾರಿಗಳಾದ ತಾಪಸರು ರಾಜನಿಗೆ ಯಾವಾಗಲಾದರೂ ಒಂದು ಆಪತ್ತು ಒದಗಿ ಅವನು ಶರಣಾರ್ಥಿಯಾಗಿ ಬಂದಾಗ ಅವನಿಗೆ ಆಶ್ರಯವನ್ನು ಕೊಡುವರು.
ಏಷ ತೇ ಲಕ್ಷಣೋದ್ದೇಶಃ ಸಂಕ್ಷೇಪೇಣ ಪ್ರಕೀರ್ತಿತಃ |

ಯಾದೃಶಂ ನಗರಂ ರಾಜಾ ಸ್ವಯಮಾವಸ್ತುಮರ್ಹತಿ ॥33॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಾಶೀತಿತಮೋಽಧ್ಯಾಯಃ ॥88॥
ರಾಜನು ಎಂತಹ ನಗರದಲ್ಲಿ ವಾಸಮಾಡಬೇಕೆಂಬ ವಿಷಯದಲ್ಲಿ ನಿನಗೆ ಸಂಕ್ಷೇಪವಾಗಿ ನಗರದ ಲಕ್ಷಣಗಳನ್ನು ಹೇಳಿದ್ದೇನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 88ನೆಯ ಅಧ್ಯಾಯವು ಮುಗಿಯಿತು.

## 89. ಎಂಬತ್ತೊಂಬತ್ತನೆಯ ಅಧ್ಯಾಯ

### ರಾಷ್ಟ್ರದ ರಕ್ಷಣೆಯ ಪ್ರಕಾರ ಕಥನ

ಯುಧಿಷ್ಠಿರಃ
ರಾಷ್ಟ್ರಗುಪ್ತಿಂ ಚ ಮೇ ರಾಜನ್ ರಾಷ್ಟ್ರಸ್ಯೈವ ಚ ಸಂಗ್ರಹಮ್ |
ಸಮ್ಯಗ್ ಜಿಜ್ಞಾಸಮಾನಾಯ ಪ್ರಬ್ರೂಹಿ ಭರತರ್ಷಭ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ! ರಾಷ್ಟ್ರದ ರಕ್ಷಣೆಯ ಪ್ರಕಾರವನ್ನು ಮತ್ತು ರಾಷ್ಟ್ರವನ್ನು ಚೆನ್ನಾಗಿ ವಶದಲ್ಲಿಟ್ಟುಕೊಳ್ಳುವ ಪ್ರಕಾರವನ್ನು ತಿಳಿಯಲು ಬಯಸುವ ನನಗೆ ಅದನ್ನು ಚೆನ್ನಾಗಿ ಹೇಳು.
ಭೀಷ್ಮಃ
ರಾಷ್ಟ್ರಗುಪ್ತಿಂ ಚ ತೇ ಸಮ್ಯಗ್ ರಾಷ್ಟ್ರಸ್ಯೈವ ಚ ಸಂಗ್ರಹಮ್ |
ಹಂತ ಸರ್ವಂ ಪ್ರವಕ್ಷ್ಯಾಮಿ ತತ್ ತ್ವಮೇಕಮನಾಃ ಶೃಣು ॥2॥
ಭೀಷ್ಮರು ಸಂತೋಷ. ರಾಷ್ಟ್ರದ ರಕ್ಷಣೆ ಮತ್ತು ಚೆನ್ನಾಗಿ ರಾಷ್ಟ್ರದ ಸಂಗ್ರಹ ಇದೆಲ್ಲವನ್ನೂ ಹೇಳುವೆನು. ಅದನ್ನು ಒಂದೇ ಮನಸ್ಸಿನಿಂದ ಕೇಳು.
ಗ್ರಾಮಸ್ಯಾಧಿಪತಿಃ ಕಾರ್ಯೋ ದಶಗ್ರಾಮ್ಯಸ್ತಥಾಪರಃ |
ದ್ವಿಗುಣಾಯಾಃ ಶತಸ್ಯೈವಂ ಸಹಸ್ರಸ್ಯ ಚ ಕಾರಯೇತ್ ॥3॥
ಒಂದು ಗ್ರಾಮಕ್ಕೆ ಒಬ್ಬ ಅಧಿಪತಿಯನ್ನು ಮಾಡಬೇಕು. ಹತ್ತುಗ್ರಾಮಗಳಿಗೆ ಇನ್ನೊಬ್ಬ ಅಧಿಪತಿಯನ್ನು ಮಾಡಬೇಕು. ಹೀಗೆ ಇಪ್ಪತ್ತು ಗ್ರಾಮಗಳಿಗೆ, ನೂರು ಗ್ರಾಮಗಳಿಗೆ, ಸಹಸ್ರಗ್ರಾಮಗಳಿಗೆ ಒಬ್ಬೊಬ್ಬ ಅಧಿಪತಿಯನ್ನು ಮಾಡಬೇಕು.
ಗ್ರಾಮೇ ಯಾನ್ ಗ್ರಾಮದೋಷಾಂಶ್ಚ ಗ್ರಾಮಿಕಃ ಪ್ರತಿಭಾವಯೇತ್ |
ತಾನ್ ಬ್ರೂಯಾದ್ ದಶಪಾಯಾಸೌ ಸ ತು ವಿಂಶತಿಪಾಯ ವೈ ॥4॥
ಒಂದು ಗ್ರಾಮದ ಅಧಿಪತಿಯು ತನ್ನ ಗ್ರಾಮದಲ್ಲಿ ಯಾವ ದೋಷಗಳನ್ನು ಗಮನಿಸುತ್ತಾನೆಯೋ ಅವನು ಅದನ್ನು ದಶಗ್ರಾಮಾಧಿಪತಿಗೆ ಹೇಳಬೇಕು. ದಶ- ಗ್ರಾಮಾಧಿಪತಿಯು ಅದನ್ನು ಇಪ್ಪತ್ತು ಗ್ರಾಮಗಳ ಅಧಿಪತಿಗೆ ಹೇಳಬೇಕು.
ಸೋಽಪಿ ವಿಂಶತ್ಯಧಿಪತಿರ್ವೃತ್ತಂ ಜಾನಪದೇ ಜನೇ |
ಗ್ರಾಮಾಣಾಂ ಶತಪಾಲಾಯ ಸರ್ವಮೇವ ನಿವೇದಯೇತ್ ॥5॥
ಇಪ್ಪತ್ತು ಗ್ರಾಮಗಳ ಅಧಿಪತಿಯೂ ಸಹ ಗ್ರಾಮದ ಪರಿಸ್ಥಿತಿಯೆಲ್ಲವನ್ನೂ ನೂರು ಗ್ರಾಮಗಳ ಅಧಿಪತಿಗೆ ಹೇಳಬೇಕು.
ಯಾನಿ ಗ್ರಾಮೀಣಭೋಜ್ಯಾನಿ ಗ್ರಾಮಿಕಸ್ತಾನುಪಾಶ್ನುಯಾತ್ |
ದಶಪಸ್ತೇನ ಭರ್ತವ್ಯಸ್ತೇನಾಪಿ ದ್ವಿಗುಣಾಧಿಕಃ ॥6॥
ಗ್ರಾಮದಲ್ಲಿ ಬೆಳೆಯುವ ಆಹಾರಧಾನ್ಯಗಳನ್ನು ಆಯಾ ಗ್ರಾಮದವರು ಉಪ- ಯೋಗಿಸಬೇಕು. ಮತ್ತು ಅದರ ಒಂದು ಭಾಗವನ್ನು ಹತ್ತುಗ್ರಾಮಗಳ ಅಧಿ- ಪತಿಗೂ, ಇಪ್ಪತ್ತು ಗ್ರಾಮಗಳ ಅಧಿಪತಿಗೂ ಅವರ ಪೋಷಣೆಗಾಗಿ ಕೊಡಬೇಕು.
ಗ್ರಾಮಂ ಗ್ರಾಮಶತಾಧ್ಯಕ್ಷೋ ಭೋಕ್ತುಮರ್ಹತಿ ಸತ್ಕೃತಃ |
ಮಹಾಂತಂ ಭರತಶ್ರೇಷ್ಠ ಸುಸ್ಫೀತಜನಸಂಕುಲಮ್ |
ತತ್ರ ಹ್ಯನೇಕಪಾಯತ್ತಂ ರಾಜ್ಞೋ ಭವತಿ ಭಾರತ ॥7॥
ನೂರು ಗ್ರಾಮಗಳ ಅಧಿಪತಿಯು ಸಮೃದ್ಧವಾದ ಒಂದು ಒಳ್ಳೆಯ ಗ್ರಾಮದ ಪೂರ್ಣವಾದ ಆದಾಯವನ್ನು ತೆಗೆದುಕೊಳ್ಳಲು ಅರ್ಹನಾಗುತ್ತಾನೆ. ಅದರಿಂದ ರಾಜನಿಗೆ ಒಂದು ಗ್ರಾಮದಿಂದ ಬರುವ ಆದಾಯವು ಎಲೈ ಭರತಶ್ರೇಷ್ಠನೇ! ಗ್ರಾಮಾಧಿಪತಿ, ದಶಗ್ರಾಮಾಧಿಪತಿ, ವಿಂಶತಿಗ್ರಾಮಾಧಿಪತಿ ಮೊದಲಾದ ಅನೇಕ- ರನ್ನು ಅವಲಂಬಿಸಿರುತ್ತದೆ.
ಶಾಖಾನಗರಮರ್ಹಸ್ತು ಸಹಸ್ರಪತಿರುತ್ತಮಮ್ |
ಧಾನ್ಯಹೈರಣ್ಯಭೋಗೇನ ಭೋಕ್ತುಂ ರಾಷ್ಟ್ರಿಯ ಉದ್ಯತಃ ॥8॥
ಸಹಸ್ರಗ್ರಾಮಾಧಿಪತಿಯು ಶ್ರೇಷ್ಠವಾದ ಒಂದು ಶಾಖಾನಗರದ ಉತ್ಪತ್ತಿಯನ್ನು ಭೋಗಿಸಲು ಅರ್ಹನಾಗುತ್ತಾನೆ. ರಾಜನ ಭಾವಮೈದುನ ಮೊದಲಾದವರೂ ಸಹ ಅಂತಹ ಆದಾಯದಿಂದ ಬರುವ ಧಾನ್ಯವನ್ನು ಮತ್ತು ಸುವರ್ಣವನ್ನು ಭೋಗಿಸಲು ಅರ್ಹರಾಗುತ್ತಾರೆ.
ಯಥಾ ಯದ್ ಗ್ರಾಮಕೃತ್ಯಂ ಸ್ಯಾದ್ ಗ್ರಾಮಿಕೃತ್ಯಂ ಚ ತೇ ಸ್ವಯಮ್ |
ಧರ್ಮಜ್ಞಃ ಸಚಿವಃ ಕಶ್ಚಿತ್ ತತ್ ಪ್ರಪಶ್ಯೇದತಂದ್ರಿತಃ ॥9॥
ಹಾಗೆಯೇ ಒಂದು ಗ್ರಾಮಕ್ಕೆ ಮಾಡಬೇಕಾದ ಕಾರ್ಯವನ್ನು ಮತ್ತು ಗ್ರಾಮಸ್ಥ -ರಿಗೆ ಮಾಡಬೇಕಾದ ಕಾರ್ಯವನ್ನು ಧರ್ಮಜ್ಞನಾದ ಒಬ್ಬ ಸಚಿವನು ಆಲಸ್ಯ- ವಿಲ್ಲದೇ ಸ್ವತಃ ನೋಡಿಕೊಳ್ಳಬೇಕು.
ನಗರೇ ನಗರೇ ಚ ಸ್ಯಾದೇಕಃ ಸರ್ವಾರ್ಥಚಿಂತಕಃ |
ಉಚ್ಚೈಃಸ್ಥಾನೇಽಘೋರರೂಪೋ ನಕ್ಷತ್ರಾಣಾಮಿವ ಗ್ರಹಃ |
ಭವೇತ್ ಸ ತಾನ್ ಪರಿಕ್ರಾಮೇತ್ ಸರ್ವಾನೇವ ಸದಾ ಸ್ವಯಮ್ ॥10॥

ಒಂದೊಂದು ಗ್ರಾಮದಲ್ಲಿಯೂ ಎಲ್ಲ ವಿಷಯಗಳನ್ನು ನೋಡಿಕೊಳ್ಳುವ ಒಬ್ಬೊಬ್ಬ ಅಧಿಕಾರಿ ಇರಬೇಕು. ಅವನು ಉಚ್ಛಸ್ಥಾನದಲ್ಲಿದ್ದು, ಶಾಂತರೂಪವನ್ನು ಹೊಂದಿದ್ದು, ನಕ್ಷತ್ರಗಳ ಮಧ್ಯೆ ಇರುವ ಗ್ರಹದಂತೆ ಇರಬೇಕು. ಅವನು ನಗರ- ವೆಲ್ಲವನ್ನೂ ತಾನೇ ಸಂಚರಿಸಿ, ವಿಷಯಗಳನ್ನು ತಿಳಿದುಕೊಳ್ಳಬೇಕು.

ತೇಷಾಂ ವೃತ್ತಂ ಪರಿಣಯೇತ್ ಕ್ವಚಿದ್ ರಾಷ್ಟ್ರೇಷು ತಚ್ಚರಃ |
ಜಿಘಾಂಸವಃ ಪಾಪಕಾಮಾ ಪರಸ್ವಾದಾಯಿನಃ ಶಠಾಃ |
ರಕ್ಷಾಮ್ಯಧಿಕೃತಾ ನಾಮ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥11॥

ರಾಜನ ಗೂಢಚಾರನು ಅಂತಹವರ ನಡತೆಯನ್ನೆಲ್ಲ ರಾಜನಿಗೆ ತಿಳಿಸಬೇಕು. ರಕ್ಷಣಾಧಿಕಾರಿಗಳಲ್ಲಿ ಕೆಲವರು ಪಾಪಬುದ್ಧಿಯುಳ್ಳವರೂ, ಇನ್ನೊಬ್ಬರ ಸ್ವತ್ತನ್ನು ಅಪಹರಿಸುವವರೂ, ಶಠರೂ ಮತ್ತು ಪ್ರಜೆಗಳನ್ನು ಕೊಲ್ಲಲು ಬಯಸುವವರೂ ಇರುತ್ತಾರೆ. ಅಂತಹವರಿಂದ ಉಳಿದ ಪ್ರಜೆಗಳನ್ನು ರಕ್ಷಿಸಬೇಕು.

ವಿಕ್ರಯಂ ಕ್ರಮಮಧ್ವಾನಂ ಭಕ್ತಂ ಚ ಸಪರಿವ್ಯಯಮ್ |
ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ವಣಿಜಃ ಕಾರಯೇತ್ ಕರಾನ್ ॥12॥

ವ್ಯಾಪಾರವನ್ನು ಮಾಡುವ ವೈಶ್ಯರಿಗೆ ಅವರ ಕ್ರಯವಿಕ್ರಯಗಳನ್ನು, ಅವರು ಸಂಚರಿಸಬೇಕಾದ ಮಾರ್ಗವನ್ನು, ಅವರ ಯೋಗಕ್ಷೇಮವನ್ನು ಮತ್ತು ಅವಶ್ಯಕತೆ- ಯನ್ನು ನೋಡಿ ಕರವನ್ನು ವಿಧಿಸಬೇಕು.

ಉತ್ಪತ್ತಿಂ ದಾನವೃತ್ತಿಂ ಚ ಶಿಲ್ಪಂ ಸಂಪ್ರೇಕ್ಷ್ಯ ಚಾಸಕೃತ್ |
ಶಿಲ್ಪಂ ಪ್ರತಿ ಕರಾನೇವ ಶಿಲ್ಪಿನಃ ಪ್ರತಿ ಕಾರಯೇತ್ ॥13॥

ಕುಶಲಕರ್ಮಿಗಳಿಗೆ ಅವರ ಉತ್ಪತ್ತಿ, ದಾನ, ಕೌಶಲ ಇವುಗಳನ್ನು ಅನೇಕ ಬಾರಿ ನೋಡಿ ಅವರ ಕೌಶಲಕ್ಕೆ ಅನುಕೂಲವಾದ ಕರಗಳನ್ನು ವಿಧಿಸಬೇಕು.

ಉಚ್ಚಾವಚಕರಾ ನ್ಯಾಯ್ಯಾಃ ಪೂರ್ವರಾಜ್ಞಾಂ ಯುಧಿಷ್ಠಿರ |
ಯಥಾ ಯಥಾ ನ ಹೀಯೇರಂಸ್ತಥಾ ಕುರ್ಯಾನ್ಮಹೀಪತಿಃ ॥14॥

ಎಲೈ ಯುಧಿಷ್ಠಿರನೇ! ರಾಜ್ಯದಲ್ಲಿ ತೆರಿಗೆಗಳು ಹೆಚ್ಚು ಕಡಿಮೆ ಇರುವುದು ನ್ಯಾಯವಾಗಿದೆ. ಅದು ಪೂರ್ವರಾಜರಿಗೂ ಸಮ್ಮತವಾಗಿದ್ದಿತು. ಎಲ್ಲ ಪ್ರಜೆಗಳಿಗೂ ಒಂದೇ ವಿಧವಾದ ತೆರಿಗೆ ಅಲ್ಲ. ರಾಜನು ಪ್ರಜೆಗಳಿಗೆ ವಿನಾಶವುಂಟಾಗದಂತೆ ತೆರಿಗೆ- ಯನ್ನು ವಿಧಿಸಬೇಕು.

ಫಲಂ ಕರ್ಮ ಚ ಸಂಪ್ರೇಕ್ಷ್ಯ ತತಃ ಸರ್ವಂ ಪ್ರಕಲ್ಪಯೇತ್ |
ಫಲಂ ಕರ್ಮ ಚ ನಿರ್ಹೇತುಂ ನ ಕಶ್ಚಿತ್ ಸಂಪ್ರವರ್ತಯೇತ್ ॥15॥

ಪ್ರಜೆಗಳ ಕರ್ಮ ಮತ್ತು ಅದರಿಂದ ಅವರಿಗೆ ಉಂಟಾಗುವ ಫಲ ಇವುಗಳನ್ನು ಚೆನ್ನಾಗಿ ನೋಡಿ ತೆರಿಗೆಗಳನ್ನು ಕಲ್ಪಿಸಬೇಕು. ಅವರ ಫಲಕ್ಕೆ ಅನುಕೂಲವಾದ ಉಚಿತವಾದ ದ್ರವ್ಯದಾನವನ್ನು ಮಾಡದೇ ತೆರಿಗೆಗಳನ್ನು ವಿಧಿಸಬಾರದು. (ವಣಿಜ- ರಿಗೆ ಅಥವಾ ವೈಶ್ಯರಿಗೆ ಅವರ ವ್ಯಾಪಾರಕ್ಕೆ ಅನುಕೂಲ ಮಾಡಿಕೊಡಲು ರಾಜನು ದ್ರವ್ಯದಾನವನ್ನು ಮಾಡಿರಬೇಕು).

ಯಥಾ ರಾಜಾ ಚ ಕರ್ತಾ ಚ ಸ್ಯಾತಾಂ ಕರ್ಮಣಿ ಭಾಗಿನೌ |
ಸಮವೇಕ್ಷ್ಯ ತಥಾ ರಾಜ್ಞಾ ಪ್ರಣೇಯಾಃ ಸತತಂ ಕರಾಃ ॥16॥

ಅಂತಹ ವಾಣಿಜ್ಯಾದಿಗಳಿಂದ ಉಂಟಾದ ಫಲದಲ್ಲಿ ರಾಜನೂ ಆ ವ್ಯಾಪಾರ- ವನ್ನು ಮಾಡಿದ ವರ್ತಕನೂ ಭಾಗಿಗಳಾಗುವಂತೆ ನೋಡಿಕೊಂಡು, ರಾಜನು ತೆರಿಗೆಗಳನ್ನು ವಿಧಿಸಬೇಕು.

ನೋಚ್ಛಿಂದ್ಯಾದಾತ್ಮನೋ ಮೂಲಂ ಪರೇಷಾಂ ವಾಪಿ ತೃಷ್ಣಯಾ |
ಈಹಾದ್ವಾರಾಣಿ ಸಂರುದ್ಧ್ಯ ರಾಜಾ ಸಂಪ್ರೀತಿದರ್ಶನಃ ॥17॥

ವರ್ತಕರು ಮಾಡುವ ವ್ಯಾಪಾರಾದಿಕಾರ್ಯಗಳ ದ್ವಾರವನ್ನು ಮುಚ್ಚಿ ರಾಜನು ಆಸೆಯಿಂದ ತನ್ನ ಮೂಲವನ್ನು ಮತ್ತು ಇನ್ನೊಬ್ಬರ ಮೂಲವನ್ನು ನಾಶ ಮಾಡ- ಬಾರದು. ಪ್ರಜೆಗಳಿಗೆ ರಾಜನಲ್ಲಿ ಪ್ರೀತಿಯಿದ್ದರೆ ಮಾತ್ರ ಅವನ ದರ್ಶನವನ್ನು ಮಾಡುತ್ತಾರೆ.

ಪ್ರದ್ವಿಷಂತಿ ಪರಿಖ್ಯಾತಂ ರಾಜಾನಮತಿಖಾದಿನಮ್ |
ಪ್ರದ್ವಿಷ್ಟಸ್ಯ ಕುತಃ ಶ್ರೇಯಃ ಸಂಪ್ರಿಯೋ ಲಭತೇ ಪ್ರಿಯಮ್ ॥18॥

ಬಹಳ ತೆರಿಗೆಯನ್ನು ಸ್ವೀಕರಿಸಿ ಉಪಯೋಗಿಸುವವನು ಎಂದು ಪ್ರಸಿದ್ಧನಾದ ರಾಜನನ್ನು ಪ್ರಜೆಗಳು ಬಹಳವಾಗಿ ದ್ವೇಷಿಸುತ್ತಾರೆ. ಪ್ರಜೆಗಳ ದ್ವೇಷಕ್ಕೆ ವಿಷಯನಾದ ರಾಜನಿಗೆ ಎಲ್ಲಿಂದ ಶ್ರೇಯಸ್ಸು ಉಂಟಾದೀತು? ಪ್ರಜೆಗಳಿಗೆ ಪ್ರಿಯನಾದವನು ಮಾತ್ರ ತನ್ನ ಪ್ರಿಯವನ್ನು ಸಂಪಾದಿಸುತ್ತಾನೆ.

ವತ್ಸೌಪಮ್ಯೇನ ದೋಗ್ಧವ್ಯಂ ರಾಷ್ಟ್ರಮಕ್ಷೀಣಬುದ್ಧಿನಾ |
ಭೃತೋ ವತ್ಸೋ ಜಾತಬಲಃ ಪೀಡಾಂ ಸಹತಿ ಭಾರತ ॥19॥

ಒಳ್ಳೆಯ ಬುದ್ಧಿಯುಳ್ಳ ರಾಜನು ರಾಷ್ಟ್ರವನ್ನು ಕರುವಿನಂತೆ ಹಾಲು ಕರೆಯ- ಬೇಕು. ಎಲೈ ಭಾರತನೇ! ಚೆನ್ನಾಗಿ ಹಾಲು ಕುಡಿದ ಕರುವು ಬಲವನ್ನು ಹೊಂದಿ ಭಾರವನ್ನು ಹೊರುವಾಗ ಉಂಟಾಗುವ ಪೀಡೆಯನ್ನು ಸಹಿಸಲು ಸಮರ್ಥವಾಗು- ತ್ತದೆ.

ನ ಕರ್ಮ ಕುರುತೇ ವತ್ಸೋ ಭೃಶದುಗ್ಧೋ ಯುಧಿಷ್ಠಿರ |
ರಾಷ್ಟ್ರಮಪ್ಯತಿದುಗ್ಧಂ ಹಿ ನ ಕರ್ಮ ಕುರುತೇ ಮಹತ್ ॥20॥

ಯುಧಿಷ್ಠಿರನೇ! ಬಹಳ ಹಾಲನ್ನು ಕುಡಿದ ಕರುವು ಯಾವ ಕೆಲಸವನ್ನೂ ಮಾಡುವುದಿಲ್ಲ. ಅಜೀರ್ಣದಿಂದ ರೋಗಗ್ರಸ್ತವಾಗುತ್ತದೆ. ಅಥವಾ ಮರಣವನ್ನು ಹೊಂದುತ್ತದೆ. ಹಾಗೆಯೇ ರಾಷ್ಟ್ರವನ್ನು ಬಹಳವಾಗಿ ಕರೆಯುವ ರಾಜನು ಮುಂದೆ ಪ್ರಜೆಗಳಿಂದ ದ್ರವ್ಯಾದಾನರೂಪವಾದ ಕರ್ಮವನ್ನಾಗಲೀ ಪ್ರಜಾಪಾಲನರೂಪವಾದ ಕರ್ಮವನ್ನಾಗಲೀ ಮಾಡಲು ಅಸಮರ್ಥನಾಗುತ್ತಾನೆ.
(-ಲಕ್ಷ್ಮಾಲಂಕಾರ)

ಯೋ ರಾಷ್ಟ್ರಮನುಗೃಹ್ಣಾತಿ ಪರಿಗೃಹ್ಯ ಸ್ವಯಂ ನೃಪಃ |
ಸಂಜಾತಮುಪಜೀವನ್ ಸ ಲಭತೇ ಸುಮಹತ್ ಫಲಮ್ ||21||
ಯಾವ ರಾಜನು ಪ್ರಜೆಗಳಿಂದ ತೆರಿಗೆಯನ್ನು ತೆಗೆದುಕೊಂಡು, ನ್ಯಾಯವಾಗಿ ತನಗೆ ದೊರಕಿದುದರಲ್ಲಿ ಜೀವಿಸಿ ಪ್ರಜೆಗಳಿಗೆ ಅನುಗ್ರಹವನ್ನು ಮಾಡುತ್ತಾನೆಯೋ ಅವನು ಶ್ರೇಷ್ಠವಾದ ಫಲವನ್ನು ಪಡೆಯುತ್ತಾನೆ.
ಆಪದರ್ಥಂ ಚ ನಿರ್ಯಾತಂ ರಾಜಾನ ಇಹ ಚಿನ್ವತೇ |
ರಾಷ್ಟ್ರಂ ಚ ಕೋಶಭೂತಂ ಸ್ಯಾತ್ ಕೋಶೋ ವೇಶ್ಮಗತಸ್ತಥಾ ||22||
ಪ್ರಜೆಗಳಿಂದ ಪಡೆದ ಧನವು ಆಪತ್ಕಾಲಕ್ಕಾಗಿ ಇರಬೇಕು ಎಂದು ಬಯಸಿ ರಾಜರು ಸಂಗ್ರಹಿಸುತ್ತಾರೆ. ರಾಜರಿಗೆ ರಾಷ್ಟ್ರವೇ ಕೋಶ. ಅಂತಹ ಕೋಶವು ಪ್ರಜೆಗಳ ಮನೆಗಳಲ್ಲಿರುತ್ತದೆ (ಎಂದು ರಾಜನು ತಿಳಿಯಬೇಕು).
ಪೌರಜಾನಪದಾನ್ ಸರ್ವಾನ್ ಸಂಶ್ರಿತೋಪಾಶ್ರಿತಾಂಸ್ತಥಾ |
ಯಥಾಶಕ್ತ್ಯನುಕಂಪೇತ ಸರ್ವಾನಭ್ಯಂತರಾನಪಿ ||23||
ಬಾಹ್ಯಂ ಜನಂ ಭೋಜಯಿತ್ವಾ ಭೋಕ್ತವ್ಯಂ ಮಧ್ಯಮಂ ಸುಖಮ್ |
ಏವಂ ನ ಸಂಪ್ರಕುಪ್ಯಂತೇ ಜನಾಃ ಸುಖಿತದುಃಖಿತಾಃ ||24||
ಪೌರಜಾನಪದರನ್ನು ತನ್ನನ್ನು ಆಶ್ರಯಿಸಿದವರನ್ನು ಮತ್ತು ಅವರನ್ನು ಆಶ್ರಯಿಸಿದವರನ್ನು, ತನ್ನ ಅರಮನೆಯ ಒಳಗಿನ ಜನರನ್ನು, ಹೊರಗಿನ ಜನರನ್ನು ತನ್ನ ಶಕ್ತಿ ಇದ್ದಷ್ಟು ಅನುಕಂಪದಿಂದ ಸುಖಪಡಿಸಿ (ಭೋಗಿಸುವಂತೆ ಮಾಡಿ) ರಾಜನು ಸರ್ವೋತ್ತಮವಲ್ಲದ, ಹೀನವಲ್ಲದ ಮಧ್ಯಮವಾದ ಸುಖವನ್ನು ಭೋಗಿಸಬೇಕು. ಹಾಗೆ ಮಾಡಿದರೆ ತೆರಿಗೆಗಳನ್ನು ತೆಗೆದುಕೊಳ್ಳುವ ರಾಜನಿಂದ ಹೆಚ್ಚು ಸುಖವನ್ನು ಪಡೆಯುವ ಪ್ರಜೆಗಳು ರಾಜನ ಮೇಲೆ ಕೋಪಗೊಳ್ಳುವುದಿಲ್ಲ.
ಪ್ರಾಗೇವ ತು ಕರಾದಾನಮನುಭಾಷ್ಯ ಪುನಃ ಪುನಃ |
ಸನ್ನಿಪತ್ಯ ಸ್ವವಿಷಯೇ ಭಯಂ ರಾಷ್ಟ್ರೇ ಪ್ರದರ್ಶಯೇತ್ ||25||
ಹೆಚ್ಚಿನ ತೆರಿಗೆಗಳನ್ನು ವಿಧಿಸುವುದಕ್ಕೆ ಮೊದಲೇ ತನ್ನ ರಾಜ್ಯದಲ್ಲಿ ಪುನಃ ಪುನಃ ಸಂಚರಿಸಿ, ರಾಷ್ಟ್ರದಲ್ಲಿ ಉಂಟಾಗಿರುವ ಭಯವನ್ನು ವರ್ಣಿಸಿ ಪ್ರದರ್ಶಿಸಬೇಕು.
ಇಯಮಾಪತ್ ಸಮುತ್ಪನ್ನಾ ಪರಚಕ್ರಭಯಂ ಮಹತ್ |
ಅಪಿ ನಾಂತಾಯ ಕಲ್ಪೇತ ವೇಣೋರಿವ ಫಲಾಗಮಃ ||26||
ಇಂತಹ ಆಪತ್ತು ಬಂದೊದಗಿದೆ; ಶತ್ರುಗಳ ಭಯವು ಅಧಿಕವಾಗಿದೆ. ಬಿದಿರು ವೃಕ್ಷದಲ್ಲಿ ಫಲವು ಬಂದಂತೆ ಈ ಆಪತ್ತು ನಮ್ಮ ವಿನಾಶಕ್ಕೆ ಕಾರಣವಾಗಲಿದೆ.
ಅರಯೋ ಮೇ ಸಮುತ್ಥಾಯ ಬಹುಭಿರ್ದಸ್ಯುಭಿಃ ಸಹ |
ಇದಮಾತ್ಮವಧಾಯೈವ ರಾಷ್ಟ್ರಮಿಚ್ಛಂತಿ ಬಾಧಿತುಮ್ ||27||
ನನ್ನ ಶತ್ರುಗಳು ಅನೇಕ ದಸ್ಯುಗಳ ಜೊತೆ ಸೇರಿಕೊಂಡು ತಮ್ಮ ಆತ್ಮವಿನಾಶ- ಕ್ಕಾಗಿಯೇ ನಮ್ಮ ರಾಷ್ಟ್ರವನ್ನು ಪೀಡಿಸಲು ಬಯಸುತ್ತಿದ್ದಾರೆ.
ಅಸ್ಯಾಮಾಪದಿ ಘೋರಾಯಾಂ ಸಂಪ್ರಾಪ್ತೇ ದಾರುಣೇ ಭಯೇ |
ಪರಿತ್ರಾಣಾಯ ಭವತಾಂ ಪ್ರಾರ್ಥಯಿಷ್ಯೇ ಧನಾನಿ ವಃ ||28||
ಇಂತಹ ಘೋರವಾದ ಆಪತ್ತಿನಲ್ಲಿ ದಾರುಣವಾದ ಭಯವು ಉಂಟಾಗಿ- ರುವಾಗ ನಿಮ್ಮನ್ನು ರಕ್ಷಿಸುವುದಕ್ಕಾಗಿ ನಿಮ್ಮ ಧನವನ್ನು ಕೇಳುತ್ತಿದ್ದೇನೆ.
ಪ್ರತಿದಾಸ್ಯೇ ಚ ಭವತಾಂ ಸರ್ವಂ ಚಾಹಂ ಭಯಕ್ಷಯೇ |
ನಾರಯಃ ಪ್ರತಿದಾಸ್ಯಂತಿ ಯದ್ ಹರೇಯುರ್ಬಲಾದಿತಃ ||29||
ಭಯವು ಪರಿಹಾರವಾದ ಮೇಲೆ ನಿಮ್ಮ ಧನವನ್ನೆಲ್ಲಾ ನಿಮಗೇ ಹಿಂದಿರುಗಿ- ಸುತ್ತೇನೆ. ಹಾಗಲ್ಲದೇ ಶತ್ರುಗಳು ಧನವನ್ನು ದೋಚಿಕೊಂಡು ಹೋದರೆ ಅವರು ಧನವನ್ನು ಹಿಂದೆ ಕೊಡುವುದಿಲ್ಲವಷ್ಟೇ!
ಕಳತ್ರಮಾದಿತಃ ಕೃತ್ವಾ ನಶ್ಯೇತ್ ಸ್ವಂ ಸ್ವಯಮೇವ ಹಿ |
ಅಪಿ ಚೇತ್ ಪುತ್ರದಾರಾರ್ಥಮರ್ಥಸಂಚಯ ಇಷ್ಯತೇ ||30||
ಹೆಂಡತಿ ಮತ್ತು ಮಕ್ಕಳ ಸಲುವಾಗಿ ಎಲ್ಲರೂ ಧನಸಂಚಯವನ್ನು ಬಯಸು- ತ್ತಾರೆ. ನಿಮ್ಮ ರಕ್ಷಣೆಯನ್ನು ಮಾಡದಿದ್ದರೆ ನಿಮ್ಮ ಪತ್ನಿ, ಸ್ವತ್ತುಗಳು, ನೀವೂ ಸಹ ನಾಶವನ್ನು ಹೊಂದುವಿರಿ.
ನಂದಾಮಿ ವಃ ಪ್ರಭಾವೇನ ಪುತ್ರಾಣಾಮಿವ ಚೋದಯೇ |
ಯಥಾಶಕ್ತ್ಯನುಗೃಹ್ಣಾಮಿ ರಾಷ್ಟ್ರಸ್ಯಾಪೀಡಯಾ ಚ ವಃ ||31||
ಪುತ್ರರ ಅಭ್ಯುದಯವನ್ನು ನೋಡಿ ಸಂತೋಷಪಡುವಂತೆ ನಿಮ್ಮ ಪ್ರಭಾವ- ದಿಂದ ನಾನು ಸಂತೋಷದಿಂದಿದ್ದೇನೆ. ಭಯವು ಪರಿಹಾರವಾದಮೇಲೆ ರಾಷ್ಟ್ರವನ್ನು ಮತ್ತು ನಿಮ್ಮನ್ನು ಪೀಡಿಸದೇ ನನ್ನ ಶಕ್ತಿ ಇದ್ದಷ್ಟು ನಿಮಗೆ ಅನುಗ್ರಹವನ್ನು ಮಾಡು- ತ್ತೇನೆ.
ಆಪತ್ಸ್ವೇವ ಚ ವೋಢವ್ಯಂ ಭವದ್ಭಿಃ ಪುಂಗವೈರಿವ |
ನ ವಃ ಪ್ರಿಯತರಂ ಕಾರ್ಯಂ ಧನಂ ಕಸ್ಯಾಂಚಿದಾಪದಿ ||32||
ನೀವು ಒಳ್ಳೆಯ ಎತ್ತುಗಳಂತೆ ಆಪತ್ತಿನಲ್ಲಿ ನನ್ನ ಭಾರವನ್ನು ಹೊರಬೇಕಾಗಿದೆ. ನೀವು ನಿಮ್ಮ ಧನದಿಂದ ಈ ಆಪತ್ತಿನಲ್ಲಿ ಸಹಾಯ ಮಾಡುವುದಕ್ಕಿಂತ ಹೆಚ್ಚಿನ ಪ್ರಿಯವಾದ ಕಾರ್ಯವನ್ನು ಮಾಡಲಾರಿರಿ.
ಇತಿ ವಾಚಾ ಮಧುರಯಾ ಶ್ಲಕ್ಷ್ಣಯಾ ಸೋಪಚಾರಯಾ |
ಸ್ವರಶ್ಮೀನಭ್ಯವಸೃಜೇದ್ ಯುಗಮಾದಾಯ ಕಾಲವಿತ್ ||33||

ಹೀಗೆ ಮಧುರವಾದ, ಉಪಚಾರಸಹಿತವಾದ, ನಿಪುಣವಾದ ಮಾತುಗಳನ್ನು ಆಡುತ್ತಾ ಕಾಲವನ್ನು ತಿಳಿದ ರಾಜನು ತಾನು ನೊಗದ ಮೇಲೆ ಕುಳಿತು ತನ್ನ ತೆರಿಗೆಯ ಪಾಶಗಳನ್ನು ಪ್ರಜೆಗಳ ಮೇಲೆ ಹಾಕಬೇಕು.
ಪ್ರಚಾರಂ ಭೃತ್ಯಭರಣಂ ವ್ಯಯಂ ಗೋಗ್ರಾಮತೋ ಭಯಮ್ |
ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ಗೋಮಿನಃ ಕಾರಯೇತ್ ಕರಾನ್ ॥34॥
ಗೋಸ್ವಾಮಿಗಳಾದ ವೈಶ್ಯರಿಗೆ ಅವರು ಮಾಡುವ ಸಂಚಾರವನ್ನು ಅವರ ಸೇವಕರ ಪೋಷಣೆಯನ್ನು ವ್ಯಯವನ್ನು ಗೋಸಮೂಹಗಳಲ್ಲಿ ಉಂಟಾಗುವ ಭಯವನ್ನು ಯೋಗಕ್ಷೇಮವನ್ನು ನೋಡಿ ತೆರಿಗೆಯನ್ನು ವಿಧಿಸಬೇಕು.
ಉಪೇಕ್ಷಿತಾ ಹಿ ನಶ್ಯೇಯುರ್ಗೋಮಿನೋಽರಣ್ಯವಾಸಿನಃ |
ತಸ್ಮಾತ್ ತೇಷು ವಿಶೇಷೇಣ ಮೃದುಪೂರ್ವಂ ಸಮಾಚರೇತ್ ॥35॥
ಅರಣ್ಯದಲ್ಲಿ ವಾಸಿಸುವ ಗೋಸ್ವಾಮಿಗಳು ಉದಾಸೀನವನ್ನು ಮಾಡಿದರೆ ನಾಶವನ್ನು ಹೊಂದಬಹುದು. ಆದ್ದರಿಂದ ಅವರ ವಿಷಯದಲ್ಲಿ ಬಹಳ ಮೃದುವಾಗಿ ನಡೆದುಕೊಳ್ಳಬೇಕು.
ಸಾಂತ್ವನಂ ರಕ್ಷಣಂ ದಾನಮವಸ್ಥಾ ಚಾಪ್ಯಭೀಕ್ಷ್ಣಶಃ |
ಗೋಮಿನಾಂ ಪಾರ್ಥ ಕರ್ತವ್ಯಂ ಸಂವಿಭಾಗಾಃ ಪ್ರಿಯಾಣಿ ಚ ॥36॥
ಎಲೈ ಪಾರ್ಥನೇ! ಅವರ ಸಾಂತ್ವನ, ರಕ್ಷಣೆ, ದಾನ, ಸತತವಾಗಿ ಅವರ ವ್ಯವಹಾರಕ್ಕೆ ಅನುಕೂಲತೆಯನ್ನು ಕಲ್ಪಿಸುವುದು, ಅವರಿಗೆ ಪ್ರಿಯವನ್ನು ಉಂಟು ಮಾಡುವುದು, ಬಂದ ಆದಾಯದಲ್ಲಿ ಅವರಿಗೆ ಯೋಗ್ಯಭಾಗವನ್ನು ಕೊಡುವುದು ಹೀಗೆ ಗೋಪಾಲಕರನ್ನು ಯಾವಾಗಲೂ ನೋಡಿಕೊಳ್ಳಬೇಕು.
ಅಜಸ್ರಮುಪಯೋಕ್ತವ್ಯಂ ಫಲಂ ಗೋಮಿಷು ಸರ್ವತಃ |
ಪ್ರಭಾವಯತಿ ರಾಷ್ಟ್ರಂ ಚ ವ್ಯವಹಾರಂ ಕೃಷಿಂ ತಥಾ ॥37॥
ಗೋಸ್ವಾಮಿಗಳಿಂದುಂಟಾದ ಫಲವನ್ನು ಸತತವಾಗಿ ಉಪಯೋಗಿಸಬೇಕು. ಅದರಿಂದ ರಾಷ್ಟ್ರವೂ ವ್ಯವಹಾರವೂ ಮತ್ತು ಕೃಷಿಯೂ ಅಭಿವೃದ್ಧಿಯನ್ನು ಹೊಂದು- ತ್ತದೆ.
ತಸ್ಮಾದ್ ಗೋಮಿಷು ಯತ್ನೇನ ಪ್ರೀತಿಂ ಕುರ್ಯಾದ್ ವಿಚಕ್ಷಣಃ |
ದಯಾವಾನಪ್ರಮತ್ತಶ್ಚ ಕರಾನ್ ಸಂಪ್ರಣಯನ್ ಮೃದೂನ್ ॥38॥
ಆದ್ದರಿಂದ ಗೋಸ್ವಾಮಿಗಳಾದ ವೈಶ್ಯರಿಗೆ ವಿವೇಕಿಯಾದ ರಾಜನು ಸುಲಭ- ವಾದ ತೆರಿಗೆಗಳನ್ನು ಹಾಕಿ, ಅವರಲ್ಲಿ ದಯೆಯನ್ನು ಹೊಂದಿ, ಪ್ರಯತ್ನಪೂರ್ವಕ- ವಾಗಿ ಆಲಸ್ಯವಿಲ್ಲದೇ ಪ್ರೀತಿಯನ್ನು ಮಾಡಬೇಕು.
ಸರ್ವತ್ರ ಕ್ಷೇಮಚರಣಂ ಸುಲಭಂ ತಾತ ಗೋಮಿಭಿಃ |
ನ ಹ್ಯತಃ ಸದೃಶಂ ಕಿಂಚಿದ್ ಧನಮಸ್ತಿ ಯುಧಿಷ್ಠಿರ ॥39॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನನವತಿತಮೋಽಧ್ಯಾಯಃ ॥89॥
ಎಲೈ ಪ್ರೀತಿಪಾತ್ರನೇ! ಗೋಪಾಲನೆಯನ್ನು ಮಾಡುವವರು ಎಲ್ಲ ಕಡೆಗಳ- ಲ್ಲಿಯೂ ಸುಲಭವಾಗಿ ಕ್ಷೇಮವನ್ನುಂಟುಮಾಡಬಲ್ಲರು. ಎಲೈ ಯುಧಿಷ್ಠಿರನೇ! ರಾಷ್ಟ್ರಕ್ಕೆ ಗೋಧನಕ್ಕೆ ಸದೃಶವಾದ ಧನವು ಇನ್ನೊಂದು ಇರುವುದಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 89ನೆಯ ಅಧ್ಯಾಯವು ಮುಗಿಯಿತು.
0
90. ತೊಂಬತ್ತನೆಯ ಅಧ್ಯಾಯ
ಪ್ರಜೆಗಳಿಂದ ತೆರಿಗೆಯನ್ನು ಸಂಗ್ರಹಿಸುವ ಪ್ರಕಾರ ಕಥನ
ಯುಧಿಷ್ಠಿರಃ
ಯದಾ ರಾಜಾ ಸಮರ್ಥೋಽಪಿ ಕೋಶಾರ್ಥೀ ಸ್ಯಾನ್ಮಹಾಮತೇ |
ಕಥಂ ಪ್ರವರ್ತೇತ ತದಾ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ಮಹಾಮತಿಯೇ! ರಾಜನು ಸಮರ್ಥನಾಗಿ- ದ್ದರೂ ಕೋಶವನ್ನು ವೃದ್ಧಿಪಡಿಸಲು ಇಚ್ಛೆ ಮಾಡಿದರೆ ಅವನು ಹೇಗೆ ಪ್ರವೃತ್ತನಾಗ- ಬೇಕೆಂದು ನನಗೆ ಹೇಳು.
ಭೀಷ್ಮಃ
ಯಥಾದೇಶಂ ಯಥಾಕಾಲಮಪಿ ಚೈವ ಯಥಾಬಲಮ್ |
ಅನುಶಿಷ್ಯಾತ್ ಪ್ರಜಾ ರಾಜಾ ಧರ್ಮಾರ್ಥೀ ತದ್ಧಿತೇ ರತಃ ॥2॥
ಭೀಷ್ಮರು ರಾಜನು ಧರ್ಮಾರ್ಥಿಯಾಗಿ ಪ್ರಜೆಗಳ ಹಿತದಲ್ಲಿ ರತನಾಗಿ ದೇಶಕಾಲಗಳಿಗೆ ಅನುಗುಣವಾಗಿ ಮತ್ತು ತನ್ನ ಶಕ್ತಿಗೆ ಅನುಗುಣವಾಗಿ ಪ್ರಜೆಗಳನ್ನು ಪಾಲಿಸಬೇಕು.
ಯಥಾ ತಾಸಾಂ ಚ ಮನ್ಯೇತ ಶ್ರೇಯ ಆತ್ಮನ ಏವ ಚ |
ತಥಾ ಧರ್ಮ್ಯಾಣಿ ಸರ್ವಾಣಿ ರಾಜಾ ರಾಷ್ಟ್ರೇ ಪ್ರವರ್ತಯೇತ್ ॥3॥
ತನಗೂ ಮತ್ತು ಪ್ರಜೆಗಳಿಗೂ ಯಾವುದು ಶ್ರೇಯಸ್ಕರವೆಂದು ಭಾವಿಸು- ತ್ತಾನೆಯೋ ಅಂತಹ ಧರ್ಮಕಾರ್ಯಗಳನ್ನು ರಾಜನು ರಾಜ್ಯದಲ್ಲಿ ಪ್ರವರ್ತಿಸ- ಬೇಕು.
ಮಧುದೋಹಂ ದುಹೇದ್ ರಾಷ್ಟ್ರಂ ಭ್ರಮರಾನ್ನ ವಿಪಾತಯೇತ್ |
ವತ್ಸಾಪೇಕ್ಷೀ ದುಹೇಚ್ಚೈವ ಸ್ತನಾಂಶ್ಚ ನ ವಿಕುಟ್ಟಯೇತ್ ॥4॥
ಜೇನುತುಪ್ಪವನ್ನು ಮಾತ್ರ ಸಂಗ್ರಹಿಸಬೇಕು; ಜೇನುಹುಳುಗಳನ್ನು ಕೊಲ್ಲ- ಬಾರದು. ಕರುವಿನ ಕ್ಷೇಮವನ್ನು ಬಯಸಿ ಹಾಲು

ಕರೆಯಬೇಕು. ಹಸುವಿನ ಮೊಲೆ- ಗಳನ್ನು ಘಾಸಿಗೊಳಿಸಬಾರದು.
ಜಲೌಕಾವತ್ ಪಿಬೇತ್ ರಾಷ್ಟ್ರಂ ಮೃದುನೈವ ನರಾಧಿಪ |
ವ್ಯಾಘ್ರೀವ ಚ ಹರೇತ್ ಪುತ್ರಮದಷ್ಟ್ವಾ ಮಾ ಪತೇದಿತಿ ॥5॥
ಎಲೈ ರಾಜನ್! ರಾಜನು ರಾಜ್ಯದಿಂದ ತೆರಿಗೆಯನ್ನು ಜಿಗಣೆಯಂತೆ (ಪ್ರಜೆಗಳಿಗೆ ನೋವನ್ನು ಉಂಟುಮಾಡದಂತೆ) ಸಂಗ್ರಹಿಸಬೇಕು. ಹೆಣ್ಣುಹುಲಿಯು ತನ್ನ ಮರಿ- ಯನ್ನು ಕಚ್ಚದೇ ಬೀಳದಿರಲಿ ಎಂದು ಬಾಯಲ್ಲಿ ಹಿಡಿದುಕೊಂಡು ಹೋಗುವಂತೆ ಪ್ರಜೆಗಳನ್ನು ಮುಂದೆ ನಡೆಸಬೇಕು.
ಅಲ್ಪೇನಾಲ್ಪೇನ ದೇಯೇನ ವರ್ಧಮಾನಂ ಪ್ರದಾಪಯೇತ್ |
ತತೋ ಭೂಯಸ್ತತೋ ಭೂಯಃ ಕಾಮಂ ವೃದ್ಧಿಂ ಸಮಾಚರೇತ್ ॥6॥
ವಾಣಿಜ್ಯದಲ್ಲಿ ಅಭಿವೃದ್ಧಿಯನ್ನು ಹೊಂದುತ್ತಿರುವವನಿಗೆ ಸ್ವಲ್ಪಸ್ವಲ್ಪವಾಗಿ ತೆರಿಗೆ- ಯನ್ನು ಏರಿಸಿ ಕೊಡುವಂತೆ ಮಾಡಬೇಕು. ಅನಂತರ ಅವರು ಬೆಳೆದಂತೆ ಬೆಳೆದಂತೆ ಕ್ರಮವಾಗಿ ಅದನ್ನು ಹೆಚ್ಚಿಸಿಕೊಂಡು ಹೋಗಬೇಕು.
ದಮಯನ್ನಿವ ದಮ್ಯಾನಾಂ ಶಶ್ವದ್ ಭಾರಂ ಪ್ರವರ್ಧಯೇತ್ |
ಮೃದುಪೂರ್ವಂ ಪ್ರಯತ್ನೇನ ಪಾಶಾನಭ್ಯವಹಾರಯೇತ್ ॥7॥
ಪ್ರಾಣಿಗಳನ್ನು ಪಳಗಿಸುವವನಂತೆ ತೆರಿಗೆಯ ಭಾರವನ್ನು ಕ್ರಮವಾಗಿ ಹೆಚ್ಚಿಸಿ- ಕೊಂಡು ಹೋಗಬೇಕು. ಪ್ರಯತ್ನಪೂರ್ವಕವಾಗಿ ಮೃದುವಾಗಿಯೇ ತೆರಿಗೆಯ ಪಾಶಗಳನ್ನು ಅವರಿಗೆ ಹಾಕಬೇಕು.
ಸಕೃತ್ ಪಾಶಾವಕೀರ್ಣಾಸ್ತೇ ಭವಿಷ್ಯಂತಿ ಹಿ ದುರ್ದಮಾಃ |
ಉಚಿತೇನೈವ ಭೋಕ್ತವ್ಯಾಸ್ತೇ ಭವಿಷ್ಯಂತಿ ಯತ್ನತಃ ॥8॥
ಒಂದು ಸಲ ಅವರು ಪಾಶಗಳಿಂದ ಮುಕ್ತರಾದರೆ ಪುನಃ ಬಗ್ಗಿಸಲು ಅಸಾಧ್ಯ- ರಾಗುತ್ತಾರೆ. ಆದ್ದರಿಂದ ಯೋಗ್ಯವಾದ ತೆರಿಗೆಗಳನ್ನು ಪ್ರಯತ್ನಪೂರ್ವಕವಾಗಿ ಹಾಕಿ ಅವರ ಧನವನ್ನು ಭೋಗಿಸಬೇಕು.
ತಸ್ಮಾತ್ ಸರ್ವಸಮಾರಂಭೋ ದುರ್ಲಭಃ ಪುರುಷಂ ಪ್ರತಿ |
ಯಥಾ ಮುಖ್ಯಾನ್ ಸಾಂತ್ವಯಿತ್ವಾ ಭೋಕ್ತವ್ಯ ಇತರೋ ಜನಃ ॥9॥
ಒಬ್ಬೊಬ್ಬ ಪುರುಷನನ್ನೂ ಕರೆದು ಅವನನ್ನು ಸಮಾಧಾನಪಡಿಸಿ ಎಲ್ಲ ಕಾರ್ಯ- ವನ್ನೂ ಆರಂಭಿಸುವುದು ಅಸಾಧ್ಯವಾದುದು. ಆದ್ದರಿಂದ ಮುಖ್ಯವಾದವರನ್ನು ಕರೆಸಿ ಸಮಾಧಾನ ಮಾಡಿ ಅವರಿಗೆ ತೆರಿಗೆಗಳನ್ನು ವಿಧಿಸಿ ಅವರಂತೆ ಇತರ ಜನಗಳಿಗೂ ವಿಧಿಸಿ, ಭೋಗಿಸಬೇಕು.
ತತಸ್ತಾನ್ ಭೋಜಯಿತ್ವಾಥ ಪರಸ್ಪರವಿವಕ್ಷಿತಾನ್ |
ಭುಂಜೀತ ಸಾಂತ್ವಯಿತ್ವೈವ ಯಥಾಸುಖಮಯತ್ನತಃ ॥10॥
ಅನಂತರ ಪರಸ್ಪರವಾಗಿ ಮಾತನಾಡಲು ಅಪೇಕ್ಷಿಸುವ ಅಂತಹ ಮುಖ್ಯ- ರಾದವರನ್ನು ಕರೆಸಿ, ಅವರನ್ನು ಸಮಾಧಾನ ಪಡಿಸಿ, ಭೋಜನಾದಿಗಳನ್ನು ನೀಡಿ, ತನಗೆ ಬರಬೇಕಾದ ಅಂಶವನ್ನು ಅನಾಯಾಸವಾಗಿ ಸುಖವಾಗಿ ಭೋಗಿಸಬೇಕು.
ನ ಚಾಸ್ಥಾನೇ ನ ಚಾಕಾಲೇ ಕರಾನೇಭ್ಯೋಽನುಪಾತಯೇತ್ |
ಆನುಪೂರ್ವ್ಯೇಣ ಸಾಂತ್ವೇನ ಯಥಾಕಾಲಂ ಯಥಾವಿಧಿ ॥11॥
ಅನುಚಿತವಾಗಿ ಮತ್ತು ಅಕಾಲದಲ್ಲಿ ಅವರಿಗೆ ತೆರಿಗೆಗಳನ್ನು ಹೇರಬಾರದು. ಉಚಿತವಾದ ಕಾಲದಲ್ಲಿ ವಿಧಿಗೆ ಅನುಗುಣವಾಗಿ ಸಮಾಧಾನಮಾತುಗಳಿಂದ ಕ್ರಮವಾಗಿ ತೆರಿಗೆಯನ್ನು ವಿಧಿಸಬೇಕು.
ಉಪಾಯಾನ್ ಪ್ರಬ್ರುವೀಮ್ಯೇತಾನ್ನ ಮೇ ಮಾಯಾ ವಿವಕ್ಷಿತಾ |
ಅನುಪಾಯೇನ ದಮಯನ್ ಪ್ರಕೋಪಯತಿ ವಾಜಿನಃ ॥12॥
ನಾನು ನಿನಗೆ ಉಪಾಯಗಳನ್ನು ಹೇಳುತ್ತಿದ್ದೇನೆ. ಕಪಟವನ್ನು ಮಾಡಬೇಕೆಂ- ಬುದು ನನ್ನ ಅಭಿಪ್ರಾಯವಲ್ಲ. ಉಪಾಯವನ್ನು ಬಿಟ್ಟು ಪಳಗಿಸಲು ಪ್ರಾರಂಭಿಸಿದರೆ ಅಶ್ವಗಳು ಕೋಪಗೊಳ್ಳುತ್ತವೆ.
ಪಾನಾಗಾರಾಣಿ ವೇಶ್ಯಾಶ್ಚ ವೇಶ್ಯಪ್ರಾಪಣಿಕಾಸ್ತಥಾ |
ಕುಶೀಲವಾಃ ಸಕಿತವಾ ಯೇ ಚಾನ್ಯೇ ಕೇಚಿದೀದೃಶಾಃ ॥13॥
ನಿಯಮ್ಯಾಃ ಸರ್ವ ಏವೈತೇ ಯೇ ರಾಷ್ಟ್ರಸ್ಯೋಪಘಾತಕಾಃ |
ಏತೇ ರಾಷ್ಟ್ರೇ ಹಿ ತಿಷ್ಠಂತೋ ಬಾಧಂತೇ ಭದ್ರಿಕಾಃ ಪ್ರಜಾಃ ॥14॥
ಪಾನಾಗಾರವನ್ನು ನಡೆಸುವವರು, ವೇಶ್ಯೆಯರು, ವೇಶ್ಯೆಯರ ದಳ್ಳಾಳಿಗಳು, ನಟರು, ಜೂಜುಕೋರರು ಮತ್ತು ಇವರಿಗೆ ಸದೃಶರಾದವರು ಇವರೆಲ್ಲರೂ ರಾಷ್ಟ್ರವನ್ನು ನಾಶಮಾಡುವವರು. ಇವರೆಲ್ಲರನ್ನೂ ನಿಯಂತ್ರಿಸಬೇಕು. ಇವರು ರಾಷ್ಟ್ರದಲ್ಲಿದ್ದರೆ ಸಾಧುಗಳಾದ ಪ್ರಜೆಗಳನ್ನು ಪೀಡಿಸುತ್ತಾರೆ.
ನ ಕೇನಚಿದ್ ಯಾಚಿತವ್ಯಃ ಕಶ್ಚಿತ್ ಕಿಂಚಿದನಾಪದಿ |
ಇತಿ ವ್ಯವಸ್ಥಾ ಭೂತಾನಾಂ ಪುರಸ್ತಾನ್ಮನುನಾ ಕೃತಾ ॥15॥
``ಆಪತ್ತು ಇಲ್ಲದಿದ್ದಾಗ ಯಾರೂ ಯಾರನ್ನೂ ಏನನ್ನೂ ಬೇಡಬಾರದು'' ಎಂಬ ವ್ಯವಸ್ಥೆಯನ್ನು ಮನುಷ್ಯರಿಗೆ ಮನುವು ಹಿಂದೆಯೇ ಮಾಡಿದ್ದಾನೆ.
ಸರ್ವೇ ತಥಾ ನ ಜೀವೇಯುರ್ನ ಕುರ್ಯುಃ ಕರ್ಮ ಚೇದಿಹ |
ಸರ್ವ ಏವ ತ್ರಯೋ ಲೋಕಾ ನ ಭವೇಯುರಸಂಶಯಮ್ ॥16॥
ಈ ಲೋಕದಲ್ಲಿ ಕರ್ಮವನ್ನು ಮಾಡದಿದ್ದರೆ ಯಾರೂ ಜೀವಿಸಲಾರರು. ಮೂರು ಲೋಕಗಳೂ ನಿಃಸಂಶಯವಾಗಿ ನಷ್ಟವಾದಾವು!
ಪ್ರಭುರ್ನಿಯಮನೇ ರಾಜಾ ಯ ಏತಾನ್ನ ನಿಯಚ್ಛತಿ |

ಭುಂಕ್ತೇ ಸ ತಸ್ಯ ಪಾಪಸ್ಯ ಚತುರ್ಭಾಗಮಿತಿ ಶ್ರುತಿಃ ॥17॥
ಪ್ರಭುವೂ ನಿಯಮವನ್ನು ಮಾಡಬೇಕಾದವನೂ ಆದ ರಾಜನು ಇವರನ್ನು ನಿಯಂತ್ರಿಸದಿದ್ದರೆ, ಇವರನ್ನು ನಿಯಮಿಸದೆ ಯಾವ ಕರ್ಮವನ್ನೂ ಮಾಡದ ಅವನು ಆ ಪಾಪದ ನಾಲ್ಕನೇ ಒಂದು ಭಾಗವನ್ನು ಅನುಭವಿಸುತ್ತಾನೆ ಎಂದು ಶ್ರುತಿ ಇದೆ. ಹಾಗೆಯೇ ಪ್ರಜೆಗಳು ಮಾಡಿದ ಧರ್ಮದ ನಾಲ್ಕನೆಯ ಒಂದು ಭಾಗವನ್ನೂ ರಾಜನು ಭೋಗಿಸುತ್ತಾನೆ.
ಸ್ಥಾನಾನ್ಯೇತಾನಿ ಸಂಗಮ್ಯ ಪ್ರಸಂಗೋ ಭೂತಿನಾಶನಃ |
ಕಾಮಪ್ರಸಕ್ತಃ ಪುರುಷಃ ಕಿಮಕಾರ್ಯಂ ವಿವರ್ಜಯೇತ್ ॥18॥
ಪಾನಾಗಾರ, ವೇಶ್ಯಾವಾಟಿಕೆ ಮೊದಲಾದ ಈ ಸ್ಥಾನಗಳಿಗೆ ಹೋಗಿ ಅಲ್ಲಿ ಆಸಕ್ತನಾಗುವುದು ಮನುಷ್ಯನ ಐಶ್ವರ್ಯವನ್ನು ನಾಶಗೊಳಿಸುತ್ತದೆ. ಕಾಮಾಸಕ್ತನಾದ ಪುರುಷನು ಯಾವ ಅಕಾರ್ಯವನ್ನು ಮಾಡದೇ ಬಿಡುತ್ತಾನೆ?
ಆಪದ್ಯೇವ ತು ಯಾಚೇರನ್ ಯೇಷಾಂ ನಾಸ್ತಿ ಪರಿಗ್ರಹಃ |
ದಾತವ್ಯಂ ಧರ್ಮತಸ್ತೇಭ್ಯಸ್ತ್ವನುಕ್ರೋಶಾದ್ ಭಯಾನ್ನ ತು ॥19॥
ಯಾರ ಬಳಿ ಏನೂ ಇಲ್ಲವೋ ಅವರು ಆಪತ್ತಿನಲ್ಲಿ ಮಾತ್ರ ಯಾಚಿಸಬೇಕು. ಅವರಿಗೆ ದಯೆಯಿಂದಲೇ ಧರ್ಮದ ದೃಷ್ಟಿಯಿಂದ ದಾನವನ್ನು ಮಾಡಬೇಕು. ಭಯ -ದಿಂದ ದಾನಮಾಡಬಾರದು.
ಮಾ ತೇ ರಾಷ್ಟ್ರೇ ಯಾಚನಕಾ ಮಾ ತೇ ಭೂಯುಶ್ಚ ದಸ್ಯವಃ |
ಇಷ್ಟ್ವಾದಾತಾರ ಏವೈತೇ ನೈತೇ ಭೂತಸ್ಯ ಭಾವಕಾಃ ॥20॥
ಎಲೈ ರಾಜನೇ! ನಿನ್ನ ರಾಷ್ಟ್ರದಲ್ಲಿ ಬೇಡುವವರು ಮತ್ತು ದಸ್ಯುಗಳು ಇಲ್ಲದಿರಲಿ. ಇಂತಹವರು ಪ್ರಜೆಗಳಿಗೆ ಇಷ್ಟವಾದುದನ್ನು ತೆಗೆದುಕೊಳ್ಳುವವರೇ ಹೊರತು ಇರುವುದನ್ನು ಅಭಿವೃದ್ಧಿ ಪಡಿಸುವವರಲ್ಲ.
ಯೇ ಭೂತಾನ್ಯನುಗೃಹ್ಣಂತಿ ವರ್ಧಯಂತಿ ಚ ಯೇ ಪ್ರಜಾಃ |
ತೇ ತೇ ರಾಷ್ಟ್ರೇ ಪ್ರವರ್ತಂತಾಂ ಮಾ ಭೂತಾನಾಮಭಾವಕಾಃ ॥21॥
ಯಾರು ಪ್ರಜೆಗಳಿಗೆ ಅನುಗ್ರಹಮಾಡಿ ಅವರನ್ನು ಅಭಿವೃದ್ಧಿಪಡಿಸುತ್ತಾರೆಯೋ ಅಂತಹವರು ನಿನ್ನ ರಾಷ್ಟ್ರದಲ್ಲಿರಲಿ. ಪ್ರಜೆಗಳ ನಾಶವನ್ನು ಮಾಡುವವರು ನಿನ್ನ ರಾಷ್ಟ್ರದಲ್ಲಿರುವುದು ಬೇಡ.
ದಂಡ್ಯಾಸ್ತೇ ಚ ಮಹಾರಾಜ ಧನಾದಾನಪ್ರಯೋಜನಾಃ |
ಪ್ರಯೋಗಂ ಕಾರಯೇಯುಸ್ತಾನ್ ಯಥಾ ಬಲಿಕರಾಂಸ್ತಥಾ ॥22॥
ಎಲೈ ಮಹಾರಾಜನೇ! ರಾಜನಿಂದ ನಿಯುಕ್ತರಾದ ಅಧಿಕಾರಿಗಳಾಗಿ ಪ್ರಜೆ- ಗಳಿಂದ ಹೆಚ್ಚು ಧನವನ್ನು ತೆಗೆದುಕೊಳ್ಳುವವರು ಶಿಕ್ಷೆಗೆ ಅರ್ಹರಾದವರು. ನಿನ್ನ ನಿಷ್ಠಾವಂತ ಅಧಿಕಾರಿಗಳಿಂದ ಪ್ರಯೋಗವನ್ನು ಮಾಡಿಸಿ ಅಂತಹ ಅಪ್ರಾಮಾಣಿಕ ಅಧಿಕಾರಿಗಳು ತೆರಿಗೆಯನ್ನು ಕೊಡುವಂತೆ ಮಾಡಬೇಕು.
ಕೃಷಿಗೋರಕ್ಷ್ಯವಾಣಿಜ್ಯಂ ಯಚ್ಚಾನ್ಯತ್ ಕಿಂಚಿದೀದೃಶಮ್ |
ಪುರುಷೈಃ ಕಾರಯೇತ್ ಕರ್ಮ ಬಹುಭಿಃ ಸಹ ಕರ್ಮಿಭಿಃ ॥23॥
ಕೃಷಿ, ಗೋರಕ್ಷ್ಯ, ವಾಣಿಜ್ಯ ಮತ್ತು ಇಂತಹ ಕಾರ್ಯಗಳನ್ನು ಅನೇಕ ಪುರುಷ- ರಿಂದ ಒಟ್ಟಾಗಿ ಮಾಡಿಸಬೇಕು.
ನ ರಕ್ಷ್ಯೇಚ್ಚೇತ್ ಕೃಷಿಗೋರಕ್ಷಂ ವಾಣಿಜ್ಯಂ ಚಾಪ್ಯನುಷ್ಠಿತಃ |
ಸಂಶಯಂ ಲಭತೇ ಕಿಂಚಿತ್ ತೇನ ರಾಜಾ ವಿಗರ್ಹ್ಯತೇ ॥24॥
ರಾಜನು ಇವರಿಗೆ ಅನುಕೂಲನಾಗಿದ್ದು, ಕೃಷಿ ಗೋರಕ್ಷಣೆ ವಾಣಿಜ್ಯಗಳನ್ನು ರಕ್ಷಣೆ ಮಾಡದಿದ್ದರೆ ರಾಜನು ಇದ್ದಾನೋ ಇಲ್ಲವೋ ಎಂಬ ಸಂಶಯಕ್ಕೆ ಗುರಿಯಾ- ಗುತ್ತಾನೆ. ಅದರಿಂದ ಅವನು ನಿಂದೆಗೆ ಒಳಗಾಗುತ್ತಾನೆ.
ಧನಿನಃ ಪೂಜಯೇನ್ನಿತ್ಯಂ ಯಾನಾಚ್ಛಾದನಭೋಜನೈಃ |
ವಕ್ತವ್ಯಾಶ್ಚಾನುಗೃಹ್ಣೀಧ್ವಂ ಪ್ರಜಾಃ ಸಹ ಮಯೇತಿ ಹ ॥25॥
ಧನಾಢ್ಯರಾದವರನ್ನು ವಾಹನವಸ್ತ್ರಭೋಜನಗಳನ್ನು ನೀಡಿ ನಿತ್ಯವೂ ಪೂಜಿಸ- ಬೇಕು. `ನೀವು ಪ್ರಜೆಗಳಿಗೂ ಮತ್ತು ನನಗೂ ಅನುಗ್ರಹವನ್ನು ಮಾಡಿ' ಎಂದು ಅವರಿಗೆ ಹೇಳಬೇಕು.
ಅಂಗಮೇತನ್ಮಹದ್ ರಾಜ್ಞಾಂ ಧನಿನೋ ನಾಮ ಭಾರತ |
ಕಕುದಃ ಸರ್ವಭೂತಾನಾಂ ಧನಸ್ಥೋ ನಾತ್ರ ಸಂಶಯಃ ॥26॥
ಎಲೈ ಭಾರತನೇ! ಧನಾಢ್ಯರಾದವರು ರಾಜನಿಗೆ ಪ್ರಧಾನವಾದ ಅಂಗ. ಧನಾಢ್ಯರಾದವರು ಎಲ್ಲ ಪ್ರಜೆಗಳಲ್ಲಿ ಶಿಖರಪ್ರಾಯರಾದವರು ಎಂಬುದರಲ್ಲಿ ಸಂಶಯವಿಲ್ಲ.
ಪ್ರಾಜ್ಞಃ ಶೂರೋ ಧನಸ್ಥಶ್ಚ ಸ್ವಾಮೀ ಧಾರ್ಮಿಕ ಏವ ಚ |
ತಪಸ್ವೀ ಸತ್ಯವಾದೀ ಚ ಬುದ್ಧಿಮಾಂಶ್ಚಾಭಿರಕ್ಷತಿ ॥27॥
ಪ್ರಾಜ್ಞ, ಶೂರ, ಧನಾಢ್ಯ, ಪ್ರಭು, ಧಾರ್ಮಿಕ, ತಪಸ್ವಿ, ಸತ್ಯವಾದಿ, ಮೇಧಾವಿ - ಇವರು ರಾಷ್ಟ್ರವನ್ನು ರಕ್ಷಿಸುತ್ತಾರೆ.
ತಸ್ಮಾದೇತೇಷು ಸರ್ವೇಷು ಪ್ರೀತಿಮಾನ್ ಭವ ಪಾರ್ಥಿವ |
ಸತ್ಯಮಾರ್ಜವಮಕ್ರೋಧಮಾನೃಶಂಸ್ಯಂ ಚ ಪಾಲಯ ॥28॥
ಎಲೈ ರಾಜನೇ! ಆದ್ದರಿಂದ ಇಂತಹ ಎಲ್ಲರಲ್ಲಿಯೂ ಪ್ರೀತಿಯುಳ್ಳವನಾಗು. ಸತ್ಯ, ಆರ್ಜವ, ಅಕ್ರೋಧ ಮತ್ತು ಮಾರ್ದವಗಳನ್ನು ಪಾಲಿಸು.
ಏವಂ ದಂಡಂ ಚ ಕೋಶಂ ಚ ಮಿತ್ರಂ ಭೂಮಿಂ ಚ ಲಪ್ಸ್ಯಸೇ |
ಸತ್ಯಾರ್ಜವಪರೋ ರಾಜನ್ ಮಿತ್ರಕೋಶಸಮನ್ವಿತಃ ॥29॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ರಾಜಧರ್ಮೇ ನವತಿತಮೋಽಧ್ಯಾಯಃ ॥90॥
ಎಲೈ ರಾಜನೇ! ಸತ್ಯ ಮತ್ತು ಋಜುತನದಿಂದ ಕೂಡಿ ನೀನು ಹೀಗೆ ಮಾಡಿದರೆ ದಂಡವನ್ನು, ಕೋಶವನ್ನು, ಮಿತ್ರರನ್ನು ಮತ್ತು ಭೂಮಿಯನ್ನು ಪಡೆಯುವೆ. ಮಿತ್ರರಿಂದ ಮತ್ತು ಕೋಶದಿಂದ ಯುಕ್ತನಾಗುವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 90ನೆಯ ಅಧ್ಯಾಯ ಮುಗಿಯಿತು.
0
91. ತೊಂಬತ್ತೊಂದನೆಯ ಅಧ್ಯಾಯ
ಪುನಃ ರಾಜನೀತಿ ಕಥನ
ಭೀಷ್ಮಃ
ವನಸ್ಪತೀನ್ ಭಕ್ಷ್ಯಫಲಾನ್ನ ಛಿಂದ್ಯುರ್ವಿಷಯೇ ತವ |
ಬ್ರಾಹ್ಮಣಾನಾಂ ಮೂಲಫಲಂ ಧರ್ಮ್ಯಮಾಹುರ್ಮನೀಷಿಣಃ ॥1॥
ಭೀಷ್ಮರು ಫಲವನ್ನು ಕೊಡುವ ವನಸ್ಪತಿಗಳನ್ನು ನಿನ್ನ ರಾಜ್ಯದಲ್ಲಿ ಯಾರೂ ಕತ್ತರಿಸದಿರಲಿ. ಬ್ರಾಹ್ಮಣರಿಗೆ ಫಲಮೂಲಗಳು ಧಾರ್ಮಿಕವಾದ ಆಹಾರವೆಂದು ಜ್ಞಾನಿಗಳು ಹೇಳುತ್ತಾರೆ.
ಬ್ರಾಹ್ಮಣೇಭ್ಯೋಽತಿರಿಕ್ತಂ ಚ ಭುಂಜೀರನ್ನಿತರೇ ಜನಾಃ |
ನ ಬ್ರಾಹ್ಮಣೋಪರೋಧೇನ ಹರೇದನ್ಯಃ ಕಥಂಚನ ॥2॥
ಬ್ರಾಹ್ಮಣರು ಉಪಯೋಗಿಸಿ ಉಳಿದುದನ್ನು ಇತರ ಜನರು ಉಪಯೋಗಿಸ- ಬೇಕು. ಬ್ರಾಹ್ಮಣರಿಗೆ ತೊಂದರೆಯನ್ನು ಮಾಡಿ ಬೇರೆ ಯಾವನೂ ಫಲಮೂಲ- ಗಳನ್ನು ತೆಗೆದುಕೊಳ್ಳಬಾರದು.
ವಿಪ್ರಶ್ಚೇತ್ ತ್ಯಾಗಮಾತಿಷ್ಠೇದಾಖ್ಯಾಯಾವೃತ್ತಿಕರ್ಶಿತಃ |
ಪರಿಕಲ್ಪ್ಯೋಽಸ್ಯ ವೃತ್ತಿಃ ಸ್ಯಾತ್ ಸದಾರಸ್ಯ ನರಾಧಿಪ ॥3॥
ಬ್ರಾಹ್ಮಣನು ತನ್ನ ಜೀವನೋಪಾಯವಿಲ್ಲದ ಕಾರಣದಿಂದ ಕರ್ಶಿತನಾಗಿ ದೇಶ- ತ್ಯಾಗವನ್ನು ಮಾಡಲು ಬಯಸಿದರೆ ಎಲೈ ರಾಜನೇ! ಪತ್ನೀಸಹಿತನಾದ ಅವನಿಗೆ ಜೀವನೋಪಾಯವನ್ನು ಕಲ್ಪಿಸಬೇಕು.
ಸ ಚೇನ್ನೋ ಪರಿವರ್ತೇತ ವಾಚ್ಯೋ ಬ್ರಾಹ್ಮಣಸಂಸದಿ |
ಕಸ್ಮಿನ್ನಿದಾನೀಂ ಮರ್ಯಾದಾಮಯಂ ಲೋಕಃ ಕರಿಷ್ಯತಿ ॥4॥
ಆದರೂ ಅವನು ತನ್ನ ನಿರ್ಧಾರವನ್ನು ಬದಲಾಯಿಸದಿದ್ದರೆ ಬ್ರಾಹ್ಮಣರ ಸಭೆಯಲ್ಲಿ ಅವನನ್ನು ಕುರಿತು ನಿನ್ನಂತಹವರು ದೇಶತ್ಯಾಗವನ್ನು ಮಾಡಿದರೆ ಈಗ ಪ್ರಜೆಗಳು ಯಾರನ್ನು ರಕ್ಷಿಸುವರು ಎಂದು ಹೇಳಬೇಕು.
ಅಸಂಶಯಂ ನಿವರ್ತೇತ ನ ಚೇದ್ ವಕ್ಷ್ಯತ್ಯತಃ ಪರಮ್ |
ಪೂರ್ವಂ ಪರೋಕ್ಷಂ ಕರ್ತವ್ಯಮೇತತ್ ಕೌಂತೇಯ ಶಾಸನಮ್ ॥5॥
ರಾಜನು ಹೀಗೆ ಮೃದುವಾಗಿ ಹೇಳಿದರೆ ಅವನು ದೇಶತ್ಯಾಗಮಾಡುವುದನ್ನು ಬಿಡುತ್ತಾನೆ. ಎಲೈ ಕೌಂತೇಯನೇ! ಮೊದಲು ಈ ರೀತಿಯಾಗಿ ತನ್ನ ಅಭಿಪ್ರಾಯ- ವನ್ನು ಇನ್ನೊಬ್ಬರಿಂದ ಹೇಳಿಸಬೇಕು.
ಆಹುರೇತಜ್ಜನಾ ಬ್ರಹ್ಮನ್ ನ ಚೈತದ್ ಶ್ರದ್ದಧಾಮ್ಯಹಮ್ |
ನಿಮಂತ್ರ್ಯಶ್ಚ ಭವೇದ್ ಭೋಗೈರವೃತ್ತ್ಯಾ ಚೇತ್ ತದಾಚರೇತ್ ॥6॥
ಅನಂತರ ಜೀವನೋಪಾಯವಿಲ್ಲದೇ ಅವನು ಹಾಗೆ ಮಾಡುತ್ತಿದ್ದರೆ, ಅವನನ್ನು ಆಮಂತ್ರಿಸಿ ಭೋಗಗಳನ್ನು ನೀಡಿ ಜನರು ಹೀಗೆ ಹೇಳುತ್ತಿದ್ದಾರೆ ಎಲೈ ಬ್ರಾಹ್ಮಣನೇ! ಆದರೆ ಅದರಲ್ಲಿ ನನಗೆ ನಂಬಿಕೆಯಿಲ್ಲ ಎಂದು ಹೇಳಬೇಕು. (ಅದರಿಂದ ಬ್ರಾಹ್ಮಣನು ದೇಶತ್ಯಾಗದ ನಿರ್ಧಾರವನ್ನು ಬಿಡಬಹುದು).
ಕೃಷಿಗೋರಕ್ಷ್ಯವಾಣಿಜ್ಯಂ ಲೋಕಾನಾಮಿಹ ಜೀವನಮ್ |
ಊರ್ಧ್ವಂ ಚೈವ ತ್ರಯೀ ವಿದ್ಯಾ ಸಾ ಭೂತಾನ್ ಭಾವಯತ್ಯುತ ॥7॥
ಕೃಷಿಗೋರಕ್ಷ್ಯವಾಣಿಜ್ಯಗಳು ಪ್ರಜೆಗಳ ಜೀವನೋಪಾಯ. ಇವುಗಳಿಗಿಂತ ಮಿಗಿಲಾದುದು ವೇದವಿದ್ಯೆ. ಅದು ಪ್ರಜೆಗಳನ್ನು ಪರಿಶುದ್ಧಗೊಳಿಸುತ್ತದೆ.
ತಸ್ಯಾಂ ವೈ ವರ್ತಮಾನಾಯಾಂ ಯೇ ಸ್ಯುಸ್ತತ್ಪರಿಪಂಥಿನಃ |
ದಸ್ಯವಸ್ತದ್ವಧಾಯೇಹ ಬ್ರಹ್ಮಾ ಕ್ಷತ್ರಮಥಾಸೃಜತ್ ॥8॥
ಅಂತಹ ವೇದವಿದ್ಯೆಯು ಪ್ರಸಕ್ತವಾಗಿರುವಾಗ ಅದಕ್ಕೆ ವಿರೋಧಿಗಳಾದ ದಸ್ಯು- ಗಳು ಯಾರಿದ್ದಾರೋ ಅವರ ವಧೆಗಾಗಿ ಬ್ರಹ್ಮದೇವರು ಕ್ಷತ್ರಿಯರನ್ನು ಸೃಷ್ಟಿಸಿದರು.
ಶತ್ರೂನ್ ಜಹಿ ಪ್ರಜಾ ರಕ್ಷ ಯಜಸ್ವ ಕ್ರತುಭಿರ್ನೃಪ |
ಯುದ್ಧ್ಯಸ್ವ ಸಮರೇ ವೀರೋ ಭೂತ್ವಾ ಕೌರವನಂದನ ॥9॥
ಎಲೈ ರಾಜನೇ! ಕೌರವನಂದನನೇ! ಶತ್ರುಗಳನ್ನು ಜಯಿಸು. ಪ್ರಜೆಗಳನ್ನು ರಕ್ಷಿಸು. ಯಾಗಗಳನ್ನು ಮಾಡು. ವೀರನಾಗಿ ಯುದ್ಧವನ್ನು ಮಾಡು.
ಸಂರಕ್ಷ್ಯಾನ್ ಪಾಲಯೇದ್ ರಾಜಾ ಯಃ ಸ ರಾಜಾರ್ಯಕೃತ್ತಮಃ |
ಯೇ ಕೇಚಿತ್ ತಾನ್ ನ ರಕ್ಷ್ಯಂತಿ ತೈರರ್ಥೋ ನಾಸ್ತಿ ಕಶ್ಚನ ॥10॥
ಶ್ರೇಷ್ಠವಾದ ಕಾರ್ಯವನ್ನು ಮಾಡುವವರಲ್ಲಿ ಶ್ರೇಷ್ಠನಾದ ರಾಜನು ರಕ್ಷಿಸಲ್ಪಡ- ಬೇಕಾದವರನ್ನು ಸಂರಕ್ಷಿಸಬೇಕು. ಯಾವ ರಾಜರು ಅವರನ್ನು ರಕ್ಷಿಸುವುದಿಲ್ಲವೋ ಅವರಿಂದ ಯಾವ ಪ್ರಯೋಜನವೂ ಇಲ್ಲ.
ಸದೈವ ರಾಜ್ಞಾ ಯೋದ್ಧವ್ಯಂ ಸರ್ವಲೋಕಾದ್ ಯುಧಿಷ್ಠಿರ |

ತಸ್ಮಾದ್ ಹೇತೋರ್ಹಿ ಭುಂಜೀತ ಮನುಷ್ಯಾನೇವ ಮಾನವಃ ॥11॥
ಎಲೈ ಯುಧಿಷ್ಠಿರನೇ! ಸರ್ವಲೋಕದ ಹಿತಕ್ಕಾಗಿ ರಾಜನು ಸದಾ ಯುದ್ಧ- ಸನ್ನದ್ಧನಾಗಿರಬೇಕು. ಆ ಕಾರಣದಿಂದ ರಾಜನು ಸೈನಿಕರನ್ನು ಪಾಲಿಸಬೇಕು.
ಅಂತರೇಭ್ಯಃ ಪರಾನ್ ರಕ್ಷನ್ ಪರೇಭ್ಯಃ ಪುನರಂತರಾನ್ |
ಪರಾನ್ ಪರೇಭ್ಯಃ ಸ್ವಾನ್ ಸ್ವೇಭ್ಯಃ ಸರ್ವಾನ್ ಪಾಲಯ ನಿತ್ಯದಾ ॥12॥
ಒಳಗಿನವರನ್ನು ಹೊರಗಿನವರಿಂದಲೂ, ಹೊರಗಿನವರನ್ನು ಒಳಗಿನವ- ರಿಂದಲೂ, ಹೊರಗಿನವರನ್ನು ಹೊರಗಿನವರಿಂದಲೂ, ಒಳಗಿನವರನ್ನು ಒಳಗಿನವ- ರಿಂದಲೂ ಎಲ್ಲರನ್ನೂ ನಿತ್ಯವೂ ಪಾಲಿಸುವವನಾಗು.
ಆತ್ಮಾನಂ ಸರ್ವತೋ ರಕ್ಷನ್ ರಾಜಾ ರಕ್ಷೇತ ಮೇದಿನೀಮ್ |
ಆತ್ಮಮೂಲಮಿದಂ ಸರ್ವಮಾಹುರ್ಹಿ ವಿದುಷೋ ಜನಾಃ ॥13॥
ರಾಜನು ತನ್ನನ್ನು ರಕ್ಷಿಸಿಕೊಂಡು ಭೂಮಿಯನ್ನು ರಕ್ಷಿಸಬೇಕು. ಎಲ್ಲ ಕಾರ್ಯ- ವೂ ಆತ್ಮಮೂಲವಾದುದೆಂದು ವಿದ್ವಾಂಸರು ಹೇಳುತ್ತಾರೆ.
ಕಿಂ ಛಿದ್ರಂ ಕೋಽನುಷಂಗೋ ಮೇ ಕಿಂ ವಾಸ್ತ್ಯವಿನಿಪಾತಿತಮ್ |
ಕುತೋ ಮಾಮಾಸ್ರವೇದ್ ದೋಷ ಇತಿ ನಿತ್ಯಂ ವಿಚಿಂತಯೇತ್ ॥14॥
ನನ್ನ ದೋಷವೇನು? ನನ್ನ ದುರಾಸಕ್ತಿ ಏನು? ನಾನು ಪರಿಹಾರಮಾಡದಿರುವ ಪ್ರತಿಬಂಧಕವೇನು? ದೋಷವು ನನ್ನ ಕಡೆಗೆ ಎಲ್ಲಿಂದ ಹರಿದು ಬರುತ್ತದೆ ಎಂದು ನಿತ್ಯವೂ ಚಿಂತಿಸಬೇಕು.
ಗುಪ್ತೈಶ್ಚಾರೈರನುಮತೈಃ ಪೃಥಿವೀಮನುಚಾರಯೇತ್ |
ಸುನೀತಂ ಯದಿ ಮೇ ವೃತ್ತಂ ಪ್ರಶಂಸಂತಿ ನವಾ ಪುನಃ |
ಕಚ್ಚಿದ್ ರೋಚೇಜ್ಜನಪದೇ ಕಚ್ಚಿದ್ ರಾಷ್ಟ್ರೇ ಚ ಮೇ ಯಶಃ ॥15॥
ಗುಪ್ತವಾದ ಮತ್ತು ಸಮ್ಮತರಾದ ಗೂಢಚಾರರಿಂದ ರಾಷ್ಟ್ರದಲ್ಲಿ ಸಂಚಾರವನ್ನು ಮಾಡಿಸಿ ತನ್ನ ರಾಜನೀತಿಯು ಚೆನ್ನಾಗಿದೆಯೇ ಇಲ್ಲವೇ ಪ್ರಜೆಗಳು ಪ್ರಶಂಸಿಸು- ತ್ತಾರೆಯೇ ಇಲ್ಲವೇ, ರಾಷ್ಟ್ರದಲ್ಲಿ ಇಷ್ಟಪಡುತ್ತಾರೆಯೇ ಇಲ್ಲವೇ, ರಾಷ್ಟ್ರದಲ್ಲಿ ನನ್ನ ಕೀರ್ತಿಯು ಇದೆಯೇ ಇಲ್ಲವೇ ಎಂದು ತಿಳಿದುಕೊಳ್ಳಬೇಕು.
ಧರ್ಮಜ್ಞಾನಾಂ ಧೃತಿಮತಾಂ ಸಂಗ್ರಾಮೇಷ್ವಪಲಾಯಿನಾಮ್ |
ರಾಷ್ಟ್ರಂ ಚ ಯೇಽನುಜೀವಂತಿ ಯೇ ಚ ರಾಜ್ಞೋಽನುಜೀವಿನಃ ॥16॥
ಧರ್ಮಜ್ಞರೂ, ಧೈರ್ಯಶಾಲಿಗಳೂ, ಯುದ್ಧದಲ್ಲಿ ಹಿಮ್ಮೆಟ್ಟದವರೂ ಆದವ- ರಲ್ಲಿ ಯಾರು ರಾಷ್ಟ್ರವನ್ನು ಉಪಜೀವಿಸಿಕೊಂಡಿದ್ದಾರೆ. ಯಾರು ರಾಜನನ್ನು ಉಪಜೀವಿಸುತ್ತಾರೆ ಎಂಬುದನ್ನೂ ಚಾರರಿಂದ ತಿಳಿಯಬೇಕು.
ಅಮಾತ್ಯಾನಾಂ ಚ ಸರ್ವೇಷಾಂ ಮಧ್ಯಸ್ಥಾನಾಂ ಚ ಸರ್ವಶಃ |
ಯೇ ಚ ತ್ವಾಭಿಪ್ರಶಂಸೇಯುರ್ನಿಂದೇಯುರಥ ವಾ ಪುನಃ |
ಸರ್ವಾನ್ ಸುಪರಿಣೀತಾಂಸ್ತಾನ್ ಕಾರಯೇತ ಯುಧಿಷ್ಠಿರ ॥17॥
ಎಲೈ ಯುಧಿಷ್ಠಿರನೇ! ಎಲ್ಲ ಅಮಾತ್ಯರಲ್ಲಿ ಮತ್ತು ಮಧ್ಯಸ್ಥರಲ್ಲಿ ಯಾರು ನಿನ್ನನ್ನು ಪ್ರಶಂಸೆ ಮಾಡುತ್ತಾರೆಯೋ, ಅಥವಾ ನಿಂದಿಸುತ್ತಾರೆಯೋ ಅವರೆಲ್ಲರನ್ನೂ ಸರಿಯಾದ ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕು.
ಏಕಾಂತೇನ ಹಿ ಸರ್ವೇಷಾಂ ನ ಶಕ್ಯಂ ತಾತ ರೋಚಿತುಮ್ |
ಮಿತ್ರಾಮಿತ್ರಮಥೋ ಮಧ್ಯಂ ಸರ್ವಭೂತೇಷು ಭಾರತ ॥18॥
ಎಲೈ ಪ್ರೀತಿಪಾತ್ರನೇ! ನಿಯಮೇನ ಎಲ್ಲರನ್ನೂ ಸಂತೋಷಪಡಿಸುವುದು ಸಾಧ್ಯವಿಲ್ಲ. ಎಲೈ ಭಾರತನೇ! ಎಲ್ಲರಿಗೂ ಶತ್ರುಮಿತ್ರ ಉದಾಸೀನರು ಇರುತ್ತಾರೆ.
ಯುಧಿಷ್ಠಿರಃ
ತುಲ್ಯಬಾಹುಬಲಾನಾಂ ಚ ತುಲ್ಯಾನಾಂ ಚ ಗುಣೈರಪಿ |
ಕಥಂ ಸ್ಯಾದಧಿಕಃ ಕಶ್ಚಿತ್ ಸ ತು ಭುಂಜೀತ ಮಾನವಾನ್ ॥19॥
ಯುಧಿಷ್ಠಿರ ಸಮಾನವಾದ ಬಾಹುಬಲವನ್ನು, ಸಮಾನವಾದ ಗುಣವನ್ನು ಹೊಂದಿದವರಲ್ಲಿ ಒಬ್ಬನು ಹೇಗೆ ಅಧಿಕನಾಗಿ ಉಳಿದ ಮಾನವರನ್ನು ಪಾಲಿಸು- ತ್ತಾನೆ?
ಭೀಷ್ಮಃ
ಯೇ ಚರಾ ಹ್ಯಚರಾನದ್ಯುರದಂಷ್ಟ್ರಾನ್ ದಂಷ್ಟ್ರಿಣಸ್ತಥಾ |
ಆಶೀವಿಷಾ ಇವ ಕ್ರುದ್ಧಾ ಭುಜಗಾ ಭುಜಗಾನಿವ ॥20॥
ಭೀಷ್ಮರು ಚಲಿಸುವ ಪ್ರಾಣಿಗಳು ಚಲಿಸದಿರುವ ಪ್ರಾಣಿಗಳನ್ನು ತಿನ್ನುತ್ತವೆ. ಕೋರೆದಾಡೆ ಇರುವ ಪ್ರಾಣಿಗಳು ಕೋರೆದಾಡೆ ಇಲ್ಲದಿರುವ ಪ್ರಾಣಿಗಳನ್ನು ತಿನ್ನು- ತ್ತವೆ. ದೃಷ್ಟಿವಿಷವುಳ್ಳ ಸರ್ಪಗಳು ಸರ್ಪಗಳನ್ನೇ ತಿನ್ನುತ್ತವೆ. (ಅದರಂತೆ ಪ್ರಬಲನಾ- ದವನು ದುರ್ಬಲರನ್ನು ತಿನ್ನುತ್ತಾನೆ/ಪಾಲಿಸುತ್ತಾನೆ).
ಏತೇಭ್ಯಶ್ಚಾಪ್ರಮತ್ತಃ ಸ್ಯಾತ್ ಸದಾ ಯತ್ತೋ ಯುಧಿಷ್ಠಿರ |
ಭಾರುಂಡಸದೃಶಾ ಹ್ಯೇತೇ ನಿಪತಂತಿ ಪ್ರಮಾದ್ಯತಃ ॥21॥
ಎಲೈ ಯುಧಿಷ್ಠಿರನೇ! ಅಂತಹ ಪ್ರಬಲರಾದವರ ವಿಷಯದಲ್ಲಿ ಯಾವಾಗಲೂ ಜಾಗರೂಕನಾಗಿರಬೇಕು. ರಾಜನು ಪ್ರಮಾದವನ್ನು ಮಾಡಿದರೆ ಭೇರುಂಡಪಕ್ಷಿ- ಯಂತೆ ಅವರು ರಾಜನ ಮೇಲೆ ಎರಗುತ್ತಾರೆ.
ಕಚ್ಚಿತ್ ತೇ ವಣಿಜೋ ರಾಷ್ಟ್ರೇ ನೋದ್ವಿಜಂತೇ ಕರಾರ್ದಿತಾಃ |

ಕ್ರೀಣಂತೋ ಬಹು ವಾಲ್ಪೇನ ಕಾಂತಾರಕೃತನಿಶ್ಚಯಾಃ ॥22॥
ನಿನ್ನ ರಾಜ್ಯದಲ್ಲಿ ವರ್ತಕರು ಅಲ್ಪವ್ಯಾಪಾರವನ್ನು ಮಾಡಲಿ ಅಥವಾ ಬಹಳ ವ್ಯಾಪಾರವನ್ನು ಮಾಡಲಿ ನಿನ್ನ ತೆರಿಗೆಗಳಿಂದ ಪೀಡಿತರಾಗಿ ವೈರಾಗ್ಯವನ್ನು ಹೊಂದಿ ಕಾಡಿನಲ್ಲಿ ವಾಸಮಾಡುವುದೇ ಒಳ್ಳೆಯದು ಎಂಬ ನಿಶ್ಚಯವನ್ನು ಹೊಂದುವುದಿಲ್ಲ- ವಷ್ಟೇ?
ಕಚ್ಚಿತ್ ಕೃಷಿಕರಾ ರಾಷ್ಟ್ರಂ ನ ಜಹತ್ಯತಿಪೀಡಿತಾಃ |
ಯೇ ವಹಂತಿ ಧುರಂ ರಾಜ್ಞಾಂ ಸಂಭರಂತೀತರಾನಪಿ ॥23॥
ರಾಜನ ಕಾರ್ಯವನ್ನು ಹೊರುವ ಎಲ್ಲ ಪ್ರಜೆಗಳನ್ನು ಪೋಷಿಸುವ ಕೃಷೀವಲರು ನಿನ್ನ ರಾಜ್ಯದಲ್ಲಿ ಬಹಳ ಪೀಡಿತರಾಗಿ ರಾಜ್ಯತ್ಯಾಗವನ್ನು ಮಾಡಲು ಬಯಸುವು- ದಿಲ್ಲವಷ್ಟೇ!
ಇತೋ ದತ್ತೇನ ಜೀವಂತಿ ದೇವಾಃ ಪಿತೃಗಣಾಸ್ತಥಾ |
ಮನುಷ್ಯೋರಗರಕ್ಷಾಂಸಿ ವಯಾಂಸಿ ಪಶವಸ್ತಥಾ ॥24॥
ದೇವತೆಗಳು, ಪಿತೃಗಣಗಳು, ಮನುಷ್ಯೋರಗರಾಕ್ಷಸರು, ಪಶುಪಕ್ಷಿಗಳು ಇಲ್ಲಿ ಮಾಡಿದ ದಾನದಿಂದ ಜೀವಿಸುತ್ತಾರೆ.
ಏಷಾ ತೇ ರಾಷ್ಟ್ರವೃತ್ತಿಶ್ಚ ರಾಷ್ಟ್ರಗುಪ್ತಿಶ್ಚ ಭಾರತ |
ಏತಮೇವಾರ್ಥಮಾಶ್ರಿತ್ಯ ಭೂಯೋ ವಕ್ಷ್ಯಾಮಿ ಪಾಂಡವ ॥25॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕನವತಿತಮೋಽಧ್ಯಾಯಃ ॥91॥
ಎಲೈ ಭಾರತನೇ! ಇದು ನಿನ್ನ ರಾಷ್ಟ್ರವೃತ್ತಿಯ ಮತ್ತು ರಾಷ್ಟ್ರರಕ್ಷಣೆಯ ಕ್ರಮ. ಎಲೈ ಪಾಂಡವನೇ! ಇದೇ ವಿಷಯವನ್ನಾಧರಿಸಿ ನಾನು ಇನ್ನೂ ನಿನಗೆ ಹೇಳುವೆನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 91ನೆಯ ಅಧ್ಯಾಯವು ಮುಗಿಯಿತು.
0
92. ತೊಂಬತ್ತೆರಡನೆಯ ಅಧ್ಯಾಯ
ಉಚಥ್ಯಮಾಂಧಾತೃಸಂವಾದಾನುವಾದ
ಭೀಷ್ಮಃ
ಯಾನಂಗಿರಾಃ ಕ್ಷತ್ರಧರ್ಮಾನುಚಥ್ಯೋ ಬ್ರಹ್ಮವಿತ್ತಮಃ |
ಮಾಂಧಾತ್ರೇ ಯೌವನಾಶ್ವಾಯ ಪ್ರೀತಮಾನಭ್ಯಭಾಷತ ॥1॥
ಸ ಯಥಾನುಶಶಾಸೈನಮುಚಥ್ಯೋ ಬ್ರಹ್ಮವಿತ್ತಮಃ |
ತತ್ ತೇ ಸರ್ವಂ ಪ್ರವಕ್ಷ್ಯಾಮಿ ನಿಖಿಲೇನ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಅಂಗಿರಸಗೋತ್ರೋತ್ಪನ್ನರಾದ ಬ್ರಹ್ಮ- ಜ್ಞಾನಿಗಳಲ್ಲಿ ಶ್ರೇಷ್ಠರಾದ ಉಚಥ್ಯರು ಯುವನಾಶ್ವನ ಪುತ್ರರಾದ ಮಾಂಧಾತೃವಿಗೆ ಯಾವ ಕ್ಷತ್ರಿಯ ಧರ್ಮಗಳನ್ನು ಪ್ರೀತಿಯಿಂದ ಹೇಳಿದರೋ ಅವರು ಅವನಿಗೆ ಹೇಗೆ ಅನುಶಾಸನವನ್ನು ಮಾಡಿದರೋ ಅದನ್ನು ನಿನಗೆ ಪೂರ್ಣವಾಗಿ ಹೇಳುವೆನು.
ಉಚಥ್ಯಃ
ಧರ್ಮಾಯ ರಾಜಾ ಭವತಿ ನ ಕಾಮಕರಣಾಯ ತು |
ಮಾಂಧಾತರೇವಂ ಜಾನೀಹಿ ರಾಜಾ ಲೋಕಸ್ಯ ರಕ್ಷಿತಾ ॥3॥
ಉಚಥ್ಯರು ಎಲೈ ಮಾಂಧಾತನೇ! ರಾಜನು ಧರ್ಮಸಂಪಾದನೆಗಾಗಿ ಇರು- ತ್ತಾನೆ. ಹೊರತು ಕಾಮಭೋಗಕ್ಕಾಗಿ ಅಲ್ಲ. ರಾಜನು ಲೋಕವನ್ನು ರಕ್ಷಿಸುವವನು ಎಂದು ತಿಳಿ.
ರಾಜಾ ಚರತಿ ವೈ ಧರ್ಮಂ ದೇವತ್ವಾಯೈವ ಗಚ್ಛತಿ |
ನ ಚೇದ್ ಧರ್ಮಂ ಸ ಚರತಿ ನರಕಾಯೈವ ಗಚ್ಛತಿ ॥4॥
ರಾಜನು ಧರ್ಮವನ್ನು ಆಚರಿಸುತ್ತಾನೆ. ಮತ್ತು ಅದರಿಂದ ದೇವತ್ವವನ್ನೇ ಹೊಂದುತ್ತಾನೆ. ಅವನು ಧರ್ಮವನ್ನು ಆಚರಿಸದಿದ್ದರೆ ನರಕವನ್ನೇ ಹೊಂದುತ್ತಾನೆ.
ಧರ್ಮೇ ತಿಷ್ಠಂತಿ ಭೂತಾನಿ ಧರ್ಮೋ ರಾಜನಿ ತಿಷ್ಠತಿ |
ತಂ ರಾಜಾ ಸಾಧು ಯಃ ಶಾಸ್ತಿ ಸ ರಾಜಾ ಪೃಥಿವೀಪತಿಃ ॥5॥
ಎಲ್ಲ ಪ್ರಜೆಗಳೂ ಧರ್ಮವನ್ನು ಆಶ್ರಯಿಸಿಕೊಂಡಿದ್ದಾರೆ. ಧರ್ಮವು ರಾಜನನ್ನು ಆಶ್ರಯಿಸಿರುತ್ತದೆ. ಯಾವ ರಾಜನು ಆ ಧರ್ಮವನ್ನು ಚೆನ್ನಾಗಿ ಪಾಲಿಸುತ್ತಾನೋ ಅವನೇ ಪೃಥಿವೀಪತಿ.
ರಾಜಾ ಪರಮಧರ್ಮಾತ್ಮಾ ಲಕ್ಷ್ಮೀವಾನ್ ಪಾಪ ಉಚ್ಯತೇ |
ದೇವಾಶ್ಚ ಗರ್ಹಾಂ ಗಚ್ಛಂತಿ ಧರ್ಮೋ ನಾಸ್ತೀತಿ ಚೋಚ್ಯತೇ ॥6॥
ಆದರೆ ರಾಜನು ಅಧರ್ಮಿಷ್ಠನಾಗಿ ಸಂಪದ್ಯುಕ್ತನಾದರೆ ಅವನನ್ನು ಪಾಪ ಎಂದು ಕರೆಯುತ್ತಾರೆ. ದೇವತೆಗಳು ಅವನನ್ನು ನಿಂದಿಸುತ್ತಾರೆ. ಅವನ ರಾಜ್ಯದಲ್ಲಿ ಧರ್ಮ- ವಿಲ್ಲವೆಂದು ಹೇಳಲ್ಪಡುತ್ತದೆ.
ಸ್ವಧರ್ಮೇ ವರ್ತಮಾನಾನಾಮರ್ಥಸಿದ್ಧಿಃ ಪ್ರದೃಶ್ಯತೇ |
ತದೇವ ಮಂಗಲಂ ಸರ್ವಂ ಲೋಕಃ ಸಮನುವರ್ತತೇ ॥7॥
ಸ್ವಧರ್ಮದಲ್ಲಿ ಇರುವವರಿಗೆ ಲೋಕದಲ್ಲಿ ಅರ್ಥಸಿದ್ಧಿಯು ಕಂಡು ಬರುತ್ತದೆ. ಅದೇ ಮಂಗಳವಾದುದು. ಅದನ್ನು ಎಲ್ಲ ಲೋಕವೂ ಅನುಸರಿಸುತ್ತದೆ.
ಉಚ್ಛಿದ್ಯತೇ ಧರ್ಮವೃತ್ತಮಧರ್ಮೋ ವರ್ತತೇ ಮಹಾನ್ |

ಭಯಮಾಹುರ್ದಿವಾರಾತ್ರಂ ಯದಾ ಪಾಪೋ ನ ವಾರ್ಯತೇ ॥8॥
ಪಾಪವನ್ನು ತಡೆಯದಿದ್ದರೆ ಧರ್ಮದ ನಡತೆಯು ನಾಶವನ್ನು ಹೊಂದುತ್ತದೆ. ದೊಡ್ಡ ಅಧರ್ಮವುಂಟಾಗುತ್ತದೆ. ಹಗಲೂ ರಾತ್ರಿಯೂ ಭಯವುಂಟಾಗುತ್ತದೆ ಎಂದು ಹೇಳುತ್ತಾರೆ.
ಮಮೇದಮಿತಿ ನೇದಂ ಚ ಸಾಧೂನಾಂ ತಾತ ಧರ್ಮತಃ |
ನೈವ ವ್ಯವಸ್ಥಾ ಭವತಿ ಯದಾ ಪಾಪೋ ನ ವಾರ್ಯತೇ ॥9॥
ಪಾಪವನ್ನು ತಡೆಯದಿದ್ದಾಗ `ಇದು ನನ್ನದು ಇದು ನನ್ನದಲ್ಲ' ಎಂಬ ಸಜ್ಜನರ ಧರ್ಮಮೂಲವಾದ ವ್ಯವಸ್ಥೆಯು ಇರುವುದಿಲ್ಲ.
ನೈವ ಭಾರ್ಯಾ ನ ಪಶವೋ ನ ಕ್ಷೇತ್ರಂ ನ ನಿವೇಶನಮ್ |
ಸಂದೃಶ್ಯೇತ ಮನುಷ್ಯಾಣಾಂ ಯದಾ ಪಾಪಬಲಂ ಭವೇತ್ ॥10॥
ಪಾಪವು ಬಲಿಷ್ಠವಾದರೆ ಮನುಷ್ಯರಿಗೆ ಪತ್ನಿಯಾಗಲೀ, ಪಶುಗಳಾಗಲೀ, ಕ್ಷೇತ್ರವಾಗಲೀ, ನಿವೇಶನವಾಗಲೀ ಯಾವುದೂ ಕಂಡುಬರುವುದಿಲ್ಲ.
ದೇವಾ ಪೂಜಾಂ ನ ಜಾನಂತಿ ನ ಸ್ವಧಾಂ ಪಿತರಸ್ತಥಾ |
ನ ಪೂಜ್ಯಂತೇ ಹ್ಯತಿಥಯೋ ಯದಾ ಪಾಪೋ ನ ವಾರ್ಯತೇ ॥11॥
ಪಾಪಕರ್ಮವನ್ನು ತಡೆಯದಿದ್ದರೆ ದೇವತೆಗಳಿಗೆ ಪೂಜೆಯು ಸಲ್ಲುವುದಿಲ್ಲ. ಪಿತೃಗಳಿಗೆ ಸ್ವಧಾಕಾರವಿಲ್ಲ. ಅತಿಥಿಗಳು ಪೂಜಿಸಲ್ಪಡುವುದಿಲ್ಲ.
ನ ವೇದಾನನುವರ್ತಂತಿ ವ್ರತವಂತೋ ದ್ವಿಜಾತಯಃ |
ನ ಯಜ್ಞಾಂಸ್ತನ್ವತೇ ವಿಪ್ರಾ ಯದಾ ಪಾಪೋ ನ ವಾರ್ಯತೇ ॥12॥
ಪಾಪಕರ್ಮವನ್ನು ತಡೆಯದಿದ್ದರೆ ವ್ರತನಿಷ್ಠರಾದ ಬ್ರಾಹ್ಮಣರು ವೇದಾ- ಧ್ಯಯನವನ್ನು ಮಾಡುವುದಿಲ್ಲ. ಯಜ್ಞಗಳನ್ನು ಮಾಡುವುದಿಲ್ಲ.
ವೃದ್ಧಾನಾಮಿವ ಸತ್ವಾನಾಂ ಮನೋ ಭವತಿ ವಿಹ್ವಲಮ್ |
ಮನುಷ್ಯಾಣಾಂ ಮಹಾರಾಜ ಯದಾ ಪಾಪೋ ನ ವಾರ್ಯತೇ ॥13॥
ಎಲೈ ಮಹಾರಾಜನೇ! ಪಾಪಕರ್ಮವನ್ನು ತಡೆಯದಿದ್ದರೆ ಮನುಷ್ಯನ ಮನಸ್ಸು ಮುದಿಪ್ರಾಣಿಗಳ (ಮುದುಕರ) ಮನಸ್ಸಿನಂತೆ ಭಯಕ್ಕೆ ಒಳಗಾಗುತ್ತದೆ.
ಉಭೌ ಲೋಕಾವಭಿಪ್ರೇಕ್ಷ್ಯ ರಾಜಾನಮೃಷಯಃ ಸ್ವಯಮ್ |
ಮುನಯೋಽಥ ಮಹದ್ಭೂತಮಯಂ ಧರ್ಮೋ ಭವಿಷ್ಯತಿ ॥14॥
ಋಷಿಗಳು ಎರಡು ಲೋಕಗಳ ಹಿತವನ್ನು ಗಮನಿಸಿ, ರಾಜನೆಂಬ ಮಹದ್- ಭೂತವು ಧಾರಕನಾಗುತ್ತಾನೆಂದು ತಿಳಿದು ರಾಜನನ್ನು ಸೃಷ್ಟಿಸಿದರು.
ಯಸ್ಮಿನ್ ಧರ್ಮೋ ವಿರಾಜೇತ ತಂ ರಾಜಾನಂ ಪ್ರಚಕ್ಷತೇ |
ಯಸ್ಮಿನ್ ವಿಲೀಯತೇ ಧರ್ಮಸ್ತಂ ದೇವಾ ವೃಷಲಂ ವಿದುಃ ॥15॥
ಯಾವನಲ್ಲಿ ಧರ್ಮವು ವಿರಾಜಿಸುತ್ತದೆಯೋ ಅವನನ್ನು ರಾಜನೆಂದು ಕರೆ- ಯುತ್ತಾರೆ. ಯಾವನಿಂದ ಧರ್ಮವು ನಾಶ ಹೊಂದುತ್ತದೆಯೋ ಅವನನ್ನು ದೇವತೆ- ಗಳು ವೃಷಲನೆಂದು ತಿಳಿಯುತ್ತಾರೆ.
ವೃಷೋ ಹಿ ಭಗವಾನ್ ಧರ್ಮೋ ಯಸ್ತಸ್ಯ ಕುರುತೇ ಹ್ಯಲಮ್ |
ವೃಷಲಂ ತಂ ವಿದುರ್ದೇವಾಸ್ತಸ್ಮಾದ್ ಧರ್ಮಂ ನ ಲೋಪಯೇತ್ ॥16॥
ವೃಷ ಎಂದರೆ ಪೂಜ್ಯವಾದ ಧರ್ಮ. ಅದಕ್ಕೆ ಅಲಂ ಎಂದರೆ ಸಮಾಪ್ತಿಯನ್ನು ಯಾವನು ಮಾಡುತ್ತಾನೆಯೋ ಅವನನ್ನು ದೇವತೆಗಳು ವೃಷಲ ಎಂದು ಕರೆಯು- ತ್ತಾರೆ. ಆದ್ದರಿಂದ ಧರ್ಮಲೋಪವನ್ನು ಮಾಡಬಾರದು.
ಧರ್ಮೇ ವರ್ಧತಿ ವರ್ಧಂತಿ ಸರ್ವಭೂತಾನಿ ಸರ್ವದಾ |
ತಸ್ಮಿನ್ ಹ್ರಸತಿ ಹೀಯಂತೇ ತಸ್ಮಾದ್ ಧರ್ಮಂ ಪ್ರವರ್ಧಯೇತ್ ॥17॥
ಧರ್ಮವು ಅಭಿವೃದ್ಧಿಯನ್ನು ಹೊಂದಿದರೆ ಎಲ್ಲ ಪ್ರಾಣಿಗಳೂ ಯಾವಾಗಲೂ ಅಭಿವೃದ್ಧಿಯನ್ನು ಹೊಂದುತ್ತಾರೆ. ಧರ್ಮವು ಹ್ರಾಸಗೊಂಡರೆ ಎಲ್ಲರೂ ಅವನತಿ- ಯನ್ನು ಹೊಂದುತ್ತಾರೆ. ಆದ್ದರಿಂದ ಧರ್ಮವನ್ನು ಅಭಿವೃದ್ಧಿಪಡಿಸಬೇಕು.
ಧನಾನಿ ಸ್ರೌತಿ ಧರ್ಮಸ್ತು ಧಾರಣಾದ್ ವೇತಿ ನಿಶ್ಚಯಃ |
ಅಕಾರ್ಯಾಣಾಂ ಮನುಷ್ಯೇಂದ್ರ ಸ ಸೀಮಾಂತಕರಃ ಸ್ಮೃತಃ ॥18॥
ಧರ್ಮವು ಜಗತ್ತನ್ನು ಧರಿಸುವ ಕಾರಣದಿಂದ ಧನವನ್ನು ಸುರಿಸುತ್ತದೆ ಎಂಬುದು ನಿಶ್ಚಯವಾದುದು. ಎಲೈ ಮನುಷ್ಯೇಂದ್ರನೇ! ಧರ್ಮವು ಅಕಾರ್ಯ- ಗಳಿಗೆ ಒಂದು ಎಲ್ಲೆಯನ್ನು ಹಾಕುವುದು ಎಂದು ಹೇಳಲ್ಪಡುತ್ತದೆ.
ಪ್ರಭವಾರ್ಥಂ ಹಿ ಭೂತಾನಾಂ ಧರ್ಮಃ ಸೃಷ್ಟಃ ಸ್ವಯಂಭುವಾ |
ತಸ್ಮಾತ್ ಪ್ರವರ್ಧಯೇದ್ ಧರ್ಮಂ ಪ್ರಜಾನುಗ್ರಹಕಾರಣಾತ್ ॥19॥
ಬ್ರಹ್ಮದೇವರು ಪ್ರಜೆಗಳ ಏಳಿಗೆಗಾಗಿ ಧರ್ಮವನ್ನು ಸೃಷ್ಟಿಮಾಡಿದರು. ಆದ್ದರಿಂದ ಪ್ರಜೆಗಳಿಗೆ ಅನುಗ್ರಹ ಮಾಡುವ ದೃಷ್ಟಿಯಿಂದ ಧರ್ಮವನ್ನು ಬೆಳೆಸಬೇಕು.
ತಸ್ಮಾದ್ಧಿ ರಾಜಶಾರ್ದೂಲ ಧರ್ಮಃ ಶ್ರೇಷ್ಠ ಇತಿ ಸ್ಮೃತಃ |
ಸ ರಾಜಾ ಯಃ ಪ್ರಜಾಃ ಶಾಸ್ತಿ ಸಾಧುಕೃತ್ ಪುರುಷರ್ಷಭಃ ॥20॥
ಎಲೈ ರಾಜಶಾರ್ದೂಲನೇ! ಆ ಕಾರಣದಿಂದ ಧರ್ಮವು ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಯಾವನು ಪ್ರಜೆಗಳನ್ನು ಅನುಶಾಸನಮಾಡಿ ಸಾಧುಕರ್ಮವನ್ನು ಮಾಡುತ್ತಾನೆಯೋ ಅಂತಹ ಪುರುಷಶ್ರೇಷ್ಠನೇ ರಾಜನಾಗುವನು.

ಕಾಮಕ್ರೋಧಾವನಾದೃತ್ಯ ಧರ್ಮಮೇವಾನುಪಾಲಯೇತ್ |
ಧರ್ಮಃ ಶ್ರೇಯಸ್ಕರತಮೋ ರಾಜ್ಞಾಂ ಭರತಸತ್ತಮ ||21||
ಎಲೈ ಭರತಸತ್ತಮನೇ! ಕಾಮಕ್ರೋಧಗಳನ್ನು ದೂರಮಾಡಿ, ಧರ್ಮವನ್ನೇ ಅನುಸರಿಸಬೇಕು. ರಾಜರಿಗೆ ಧರ್ಮವು ಅತ್ಯಂತ ಶ್ರೇಯಸ್ಕರವಾದುದು.
ಧರ್ಮಸ್ಯ ಬ್ರಾಹ್ಮಣಾ ಯೋನಿಸ್ತಸ್ಮಾತ್ ತಾನ್ ಪೂಜಯೇತ್ ಸದಾ |
ಬ್ರಾಹ್ಮಣಾನಾಂ ಚ ಮಾಂಧಾತಃ ಕಾಮಾನ್ ಕುರ್ಯಾದಮತ್ಸರೀ ||22||
ಬ್ರಾಹ್ಮಣರು ಧರ್ಮಕ್ಕೆ ಮೂಲರಾದವರು. ಆದ್ದರಿಂದ ಬ್ರಾಹ್ಮಣರನ್ನು ಯಾವಾಗಲೂ ಪೂಜಿಸಬೇಕು. ಎಲೈ ಮಾಂಧಾತೃವೇ! ಬ್ರಾಹ್ಮಣರ ಆಸೆಗಳನ್ನು ಮಾತ್ಸರ್ಯವಿಲ್ಲದೇ ಪೂರೈಸಬೇಕು.
ತೇಷಾಂ ಹ್ಯಕಾಮಕರಣಾದ್ ರಾಜ್ಞಃ ಸಂಜಾಯತೇ ಭಯಮ್ |
ಮಿತ್ರಾಣಿ ಚ ನ ವರ್ಧಂತೇ ತಥಾಮಿತ್ರೀಭವಂತ್ಯಪಿ ||23||
ಅವರ ಆಸೆಯನ್ನು ಈಡೇರಿಸದಿರುವುದರಿಂದ ರಾಜನಿಗೆ ಭಯವುಂಟಾಗುತ್ತದೆ. ಮಿತ್ರರು ಬೆಳೆಯುವುದಿಲ್ಲ; ಮತ್ತು ಮಿತ್ರರು ಶತ್ರುಗಳಾಗುತ್ತಾರೆ.
ಬ್ರಾಹ್ಮಣಾನ್ ವೈ ತದಾಸೂಯಾದ್ ಯದಾ ವೈರೋಚನೋ ಬಲಿಃ |
ಅಥಾಸ್ಮಾಚ್ಚ್ರೀರಪಾಕ್ರಾಮದ್ ಯಾಽಸ್ಮಿನ್ನಾಸೀತ್ ಪ್ರತಾಪಿನೀ ||24||
ವಿರೋಚನನ ಪುತ್ರನಾದ ಬಲಿಯು ಬ್ರಾಹ್ಮಣರನ್ನು ನೋಡಿ ಅಸೂಯೆ- ಪಟ್ಟಾಗ ಶತ್ರುಗಳಿಗೆ ತಾಪವನ್ನುಂಟುಮಾಡುವ ಅವನ ಸಂಪತ್ತು ಅವನಿಂದ ಹೊರಟುಹೋಯಿತು.
ತತಸ್ತಸ್ಮಾದಪಾಕ್ರಮ್ಯ ಸಾಽಗಚ್ಛದ್ ಪಾಕಶಾಸನಮ್ |
ಅಥ ಸೋಽನ್ವತಪತ್ ಪಶ್ಚಾಚ್ಚ್ರಿಯಂ ದೃಷ್ಟ್ವಾ ಪುರಂದರೇ ||25||
ಅವನನ್ನು ತ್ಯಜಿಸಿದ ಸಂಪತ್ತು ಪಾಕಶಾಸನನಾದ ಇಂದ್ರನನ್ನು ಸೇರಿತು. ಆಗ ಪುರಂದರನಾದ  ಇಂದ್ರನಲ್ಲಿ ಸಂಪತ್ತನ್ನು ನೋಡಿದ ಬಲಿಯು ಪಶ್ಚಾತ್ತಾಪಪಟ್ಟನು.
ಏತತ್ ಫಲಮಸೂಯಾಯಾ ಅಭಿಮಾನಸ್ಯ ಚಾಭಿಭೋ |
ತಸ್ಮಾದ್ ಬುಧ್ಯಸ್ವ ಮಾಂಧಾತರ್ಮಾ ತ್ವಾ  ಜಹ್ಯಾತ್ ಪ್ರತಾಪಿನೀ ||26||
ಎಲೈ ಶತ್ರುಗಳನ್ನು ಸೋಲಿಸುವವನೇ! ಇದು ಅಸೂಯೆ ಮತ್ತು ಅಹಂಕಾರದ ಫಲ. ಆದ್ದರಿಂದ ತಿಳಿದುಕೋ! ಎಲೈ ಮಾಂಧಾತೃವೇ! ಶತ್ರುಗಳಿಗೆ ತಾಪವನ್ನು ಕೊಡುವ ನಿನ್ನ ಸಂಪತ್ತು ನಿನ್ನನ್ನು ತ್ಯಜಿಸದಿರಲಿ.
ದರ್ಪೋ ನಾಮ ಶ್ರಿಯಃ ಪುತ್ರೋ ಜಜ್ಞೇಽಧರ್ಮಾದಿತಿ ಶ್ರುತಿಃ |
ತೇನ ದೇವಾಸುರಾ ರಾಜನ್ ನೀತಾಃ ಸುಬಹುಶೋ ವಶಮ್ ||27||
`ದರ್ಪ ಎಂಬುದು ಸಂಪತ್ತಿನ ಪುತ್ರನಾಗಿ ಅಧರ್ಮದಿಂದ ಜನಿಸಿತು' ಎಂದು ನಾವು ಕೇಳಿದ್ದೇವೆ. ಎಲೈ ರಾಜನೇ! ದೇವತೆಗಳು ಮತ್ತು ಅಸುರರು ಅನೇಕಬಾರಿ ಆ ದರ್ಪದ ವಶರಾಗಿದ್ದಾರೆ.
ರಾಜರ್ಷಯಶ್ಚ  ಬಹವಸ್ತಸ್ಮಾದ್ ಬುಧ್ಯಸ್ವ ಪಾರ್ಥಿವ |
ರಾಜಾ ಭವತಿ ತಂ ಜಿತ್ವಾ ದಾಸಸ್ತೇನ ಪರಾಜಿತಃ ||28||
ಅನೇಕ ರಾಜರ್ಷಿಗಳು ದರ್ಪದ ವಶವಾಗಿದ್ದಾರೆ. ಆದ್ದರಿಂದ ಎಲೈ ರಾಜನೇ! ಆ ದರ್ಪವನ್ನು ಗೆದ್ದವನು ರಾಜನಾಗುತ್ತಾನೆ. ದರ್ಪಕ್ಕೆ ಸೋತವನು ದಾಸನಾಗು- ತ್ತಾನೆ.
ಸ ಯಥಾ ದರ್ಪಸಹಿತಮಧರ್ಮಂ ನಾನುಸೇವಸೇ |
ತಥಾ ವರ್ತಸ್ವ ಮಾಂಧಾತಶ್ಚಿರಂ ಚೇತ್ ಸ್ಥಾತುಮಿಚ್ಛಸಿ ||29||
ಎಲೈ ಮಾಂಧಾತೃವೇ! ನೀನು ಬಹುಕಾಲ ರಾಜ್ಯವನ್ನು ಆಳಲು ಬಯಸಿದರೆ ದರ್ಪಸಹಿತವಾದ ಅಧರ್ಮವನ್ನು ಸೇವಿಸದಂತೆ ನಡೆದುಕೋ.
ಮತ್ತಾತ್ ಪ್ರಮತ್ತಾತ್ ಪೌಗಂಡಾದುನ್ಮತ್ತಾಚ್ಚ  ವಿಶೇಷತಃ |
ಕದಭ್ಯಾಶಾದುದಾವರ್ತಾದಹಿತಾನಾಂ ಚ ಸೇವನಾತ್ ||30||
ನಿಗೃಹೀತಾದಮಾತ್ಯಾಚ್ಚ ಸ್ತ್ರೀಭ್ಯಶ್ಚೈವ ವಿಶೇಷತಃ |
ಪರ್ವತಾದ್ ವಿಷಮಾದ್ ದುರ್ಗಾದ್ಧಸ್ತಿನೋಽಶ್ವಾತ್ ಸರೀಸೃಪಾತ್ ||31||
ಏತೇಭ್ಯೋ ನಿತ್ಯಯತ್ತಃ ಸ್ಯಾನ್ನಕ್ತಂಚರ್ಯಾಂ ಚ ವರ್ಜಯೇತ್ |
ಅತ್ಯಾಯಂ ಚಾತಿಮಾನಂ ಚ ದಂಭಂ ಕ್ರೋಧಂ ಚ ವರ್ಜಯೇತ್ ||32||
ಪಾನಮತ್ತರು, ಹುಚ್ಚರು, ಅಂಗವಿಕಲರು, ಪ್ರಮಾದಕ್ಕೆ ಒಳಗಾಗುವವರು, ದುರ್ಜನರ ಸಹವಾಸ, ನೀರಿನ ಸುಳಿಗಳು, ಅಹಿತರ ಸೇವೆ, ಕಾರಾಗೃಹವಾಸವನ್ನು ಅನುಭವಿಸಿದವರು, ಅಮಾತ್ಯರು, ವಿಶೇಷವಾಗಿ ಸ್ತ್ರೀಯರು, ಪರ್ವತಗಳು, ವಿಷಮವಾದ ದುರ್ಗಗಳು, ಗಜಗಳು, ಅಶ್ವಗಳು, ಸರ್ಪಗಳು  ಇವುಗಳ ವಿಷಯದಲ್ಲಿ ನಿತ್ಯವೂ ಜಾಗರೂಕನಾಗಿರಬೇಕು. ರಾತ್ರಿಯ ಸಂಚಾರವನ್ನು ವರ್ಜಿ- ಸಬೇಕು. ಬಹಳ ಆದಾಯವನ್ನು, ಬಹಳ ಅಹಂಕಾರವನ್ನು, ಡಂಭವನ್ನು ಮತ್ತು ಕ್ರೋಧವನ್ನು ವರ್ಜಿಸಬೇಕು.
ಅವಿಜ್ಞಾತಾಸು ಚ ಸ್ತ್ರೀಷು ಕ್ಲೀಬಾಸು ಸ್ವೈರಿಣೀಷು ಚ |
ಪರಭಾರ್ಯಾಸು ಕನ್ಯಾಸು ನಾಚರೇನ್ಮೈಥುನಂ ನೃಪಃ ||33||
ಅಪರಿಚಿತರಾದ ಸ್ತ್ರೀಯರು, ನಪುಂಸಕರು, ವೇಶ್ಯೆಯರು, ಪರಪತ್ನಿಯರು, ಕನ್ಯೆಯರು ಇವರ ಜೊತೆಯಲ್ಲಿ ರಾಜನು ಮೈಥುನವನ್ನು ಮಾಡಬಾರದು.

ಕುಲೇಷು ಪಾಪರಕ್ಷಾಂಸಿ ಜಾಯಂತೇ ವರ್ಣಸಂಕರಾತ್ |
ಅಪುಮಾಂಸೋಽಂಗಹೀನಾಶ್ಚ ಸ್ಥೂಲಜಿಹ್ವಾ ವಿಚೇತಸಃ ||34||
ಹಾಗೆ ಮಾಡಿದರೆ ವರ್ಣಸಾಂಕರ್ಯದಿಂದ ಪಾಪಿಗಳಾದ ರಾಕ್ಷಸರು, ನಪುಂಸಕರು, ಅಂಗಹೀನರು, ಸ್ಥೂಲಜಿಹ್ವೆಯುಳ್ಳವರು, ಬುದ್ಧಿಮಂದರು ಜನಿಸು- ತ್ತಾರೆ.
ಏತೇ ಚಾನ್ಯೇ ಚ ಜಾಯಂತೇ ಯದಾ ರಾಜಾ ಪ್ರಮಾದ್ಯತಿ |
ತಸ್ಮಾದ್ ರಾಜ್ಞಾ ವಿಶೇಷೇಣ ವರ್ತಿತವ್ಯಂ ಪ್ರಜಾಹಿತೇ ||35||
ರಾಜನು ಪ್ರಮಾದವನ್ನು ಮಾಡಿದರೆ ಇಂತಹವರು ಮತ್ತು ಇಂತಹ ಅನೇಕರು ಜನಿಸುತ್ತಾರೆ. ಆದ್ದರಿಂದ ರಾಜನು ವಿಶೇಷವಾಗಿ ಪ್ರಜೆಗಳ ಹಿತದಲ್ಲಿ ಆಸಕ್ತನಾಗಿ- ರಬೇಕು.
ಕ್ಷತ್ರಿಯಸ್ಯ ಪ್ರಮತ್ತಸ್ಯ ದೋಷಃ ಸಂಜಾಯತೇ ಮಹಾನ್ |
ಅಧರ್ಮಾಃ ಸಂಪ್ರವರ್ತಂತೇ ಪ್ರಜಾಸಂಕರಕಾರಕಾಃ ||36||
ರಾಜನು ಪ್ರಮಾದಕ್ಕೆ ಒಳಗಾದರೆ ದೊಡ್ಡ ದೋಷವುಂಟಾಗುತ್ತದೆ. ಪ್ರಜೆಗಳಲ್ಲಿ ಸಾಂಕರ್ಯವನ್ನುಂಟುಮಾಡುವ ಅಧರ್ಮಗಳು ಬೆಳೆಯುತ್ತವೆ.
ಅಶೀತೇ ವಿದ್ಯತೇ ಶೀತಂ ಶೀತೇ ಶೀತಂ ನ ವಿದ್ಯತೇ |
ಅವೃಷ್ಟಿರತಿವೃಷ್ಟಿಶ್ಚ ವ್ಯಾಧಿಶ್ಚಾವಿಶತಿ ಪ್ರಜಾಃ ||37||
ಉಷ್ಣಕಾಲದಲ್ಲಿ ಶೀತವುಂಟಾಗುತ್ತದೆ. ಶೀತಕಾಲದಲ್ಲಿ ಶೀತವುಂಟಾಗುವುದಿಲ್ಲ. ಅವೃಷ್ಟಿ, ಅತಿವೃಷ್ಟಿ, ವ್ಯಾಧಿಗಳು ಇವುಗಳು ಪ್ರಜೆಗಳನ್ನು ಆವರಿಸುತ್ತವೆ.
ನಕ್ಷತ್ರಾಣ್ಯುಪತಿಷ್ಠಂತಿ ಗ್ರಹಾ ಘೋರಾಸ್ತಥಾ ಗತೇ |
ಉತ್ಪಾತಾಶ್ಚಾತ್ರ ದೃಶ್ಯಂತೇ ಬಹವೋ ರಾಜನಾಶನಾಃ ||38||
ನಕ್ಷತ್ರಗಳು ಎದುರಾಗಿ ನಿಲ್ಲುತ್ತವೆ. ಗ್ರಹಗಳು ತಮ್ಮ ಗತಿಯಲ್ಲಿ ಘೋರವಾಗು- ತ್ತವೆ. ರಾಜನಾಶವನ್ನು ಸೂಚಿಸುವ ಅನೇಕ ಅಪಶಕುನಗಳು ಇಲ್ಲಿ ಕಂಡುಬರುತ್ತವೆ.
ಅರಕ್ಷಿತಾತ್ಮಾ ಯೋ ರಾಜಾ ಪ್ರಜಾಶ್ಚಾಪಿ ನ ರಕ್ಷತಿ |
ಪ್ರಜಾಶ್ಚ ತಸ್ಯಕ್ಷೀಯಂತೇ ತಾಶ್ಚ ಸೋಽನು ವಿನಶ್ಯತಿ ||39||
ಯಾವ ರಾಜನು ತನ್ನನ್ನು ರಕ್ಷಿಸಿಕೊಳ್ಳುವುದಿಲ್ಲವೋ ಅವನು ಪ್ರಜೆಗಳನ್ನೂ ರಕ್ಷಿಸುವುದಿಲ್ಲ. ಅವನ ಪ್ರಜೆಗಳು ನಾಶವನ್ನು ಹೊಂದುತ್ತಾರೆ. ಅನಂತರ ರಾಜನೂ ನಾಶವನ್ನು ಹೊಂದುತ್ತಾನೆ.
ದ್ವಾವಾದದಾತೇ ಹ್ಯೇಕಸ್ವಂ ದ್ವಯೋಶ್ಚ ಬಹವೋಽಪರೇ |
ಕುಮಾರ್ಯಃ ಸಂಪ್ರಲುಪ್ಯಂತೇ ತದಾಹುರ್ನೃಪದೂಷಣಮ್ ||40||
ಒಬ್ಬನ ಸ್ವತ್ತನ್ನು ಇಬ್ಬರು ಅಪಹರಿಸುತ್ತಾರೆ. ಆ ಇಬ್ಬರ ಸ್ವತ್ತನ್ನು ಬೇರೆ ಅನೇಕ ಜನರು ಅಪಹರಿಸುತ್ತಾರೆ. ಕುಮಾರಿಯರನ್ನು ಕೆಡಿಸುತ್ತಾರೆ. ಇದೆಲ್ಲಾ ರಾಜನ ದೋಷವೆಂದು ಹೇಳಲ್ಪಡುತ್ತದೆ.
ಮಮೈತದಿತಿ ನೈಕಸ್ಯ ಮನುಷ್ಯೇಷ್ವವತಿಷ್ಠತೇ |
ತ್ಯಕ್ತ್ವಾ ಧರ್ಮಂ ಯದಾ ರಾಜಾ ಪ್ರಮಾದಮನುತಿಷ್ಠತಿ ||41||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿನವತಿತಮೋಽಧ್ಯಾಯಃ ||92||
ರಾಜನು ಧರ್ಮವನ್ನು ಬಿಟ್ಟು ಪ್ರಮಾದಕ್ಕೆ ಒಳಗಾದರೆ ಯಾವ ಮನುಷ್ಯನಿಗೂ ಇದು ನನ್ನದು ಎಂಬ ಭಾವನೆಯು ಉಳಿಯುವುದಿಲ್ಲ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 92ನೆಯ ಅಧ್ಯಾಯವು ಮುಗಿಯಿತು
0

## 93. ತೊಂಬತ್ತಮೂರನೆಯ ಅಧ್ಯಾಯ
### ಉಚಥ್ಯಮಾಂಧಾತೃಸಂವಾದಾನುವಾದ

ಉಚಥ್ಯಃ
ಕಾಲವರ್ಷೀ ಚ ಪರ್ಜನ್ಯೋ ಧರ್ಮಚಾರೀ ಚ ಪಾರ್ಥಿವಃ |
ಸಂಪದ್ ಯದ್ಯೈಷಾ ಭವತಿ ಸಾ ಬಿಭರ್ತಿ ಸುಖಂ ಪ್ರಜಾಃ ||1||
ಉಚಥ್ಯರು ಸಕಾಲದಲ್ಲಿ ಮಳೆಯನ್ನು ಕೊಡುವ ಪರ್ಜನ್ಯ ಮತ್ತು ಧರ್ಮ- ಚಾರಿಯಾದ ರಾಜ ಇಂತಹ ಸಂಪತ್ತು ಉಂಟಾದರೆ ಈ ಸಂಪತ್ತು ಪ್ರಜೆಗಳನ್ನು ಸುಖವಾಗಿ ಪೋಷಿಸುತ್ತದೆ.
ಯೋ ನ ಜಾನಾತಿ ನಿರ್ಹಂತುಂ ವಸತ್ರಾಣಾಂ ರಜಕೋ ಮಲಮ್ |
ರಕ್ತಾನಿ ವಾ ಶೋಧಯಿತುಂ ಯಥಾ ನಾಸ್ತಿ ತಥೈವ ಸಃ ||2||
ಯಾವ ರಜಕನು ವಸ್ತ್ರಗಳ ಕೊಳೆಯನ್ನಾಗಲೀ ಬಣ್ಣವನ್ನಾಗಲೀ ಶೋಧಿಸಲು ತಿಳಿದಿಲ್ಲವೋ ಅವನು ಇದ್ದರೂ ಇಲ್ಲದಂತೆಯೇ ಸರಿ.
ಏವಮೇವ ದ್ವಿಜೇಂದ್ರಾಣಾಂ ಕ್ಷತ್ರಿಯಾಣಾಂ ವಿಶಾಮಪಿ |
ಶೂದ್ರಾಶ್ಚತುರ್ಣಾಂ ವರ್ಣಾನಾಂ ನಾನಾಕರ್ಮಸ್ವವಸ್ಥಿತಾಃ ||3||
ಅದರಂತೆಯೇ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ನಾಲ್ಕುವರ್ಣಗಳ ನಾನಾ ಕರ್ಮಗಳಲ್ಲಿ ನಿಯುಕ್ತರಾದ ಶೂದ್ರರೂ ಸಹ -
ಕರ್ಮ ಶೂದ್ರೇ ಕೃಷಿರ್ವೈಶ್ಯೇ ದಂಡನೀತಿಶ್ಚ ರಾಜನಿ |

ಬ್ರಹ್ಮಚರ್ಯಂ ತಪೋ ಮಂತ್ರಾಃ ಸತ್ಯಂ ಚಾಪಿ ದ್ವಿಜಾತಿಷು ॥4॥
ಶೂದ್ರನಲ್ಲಿ ಕರ್ಮ, ವೈಶ್ಯನಲ್ಲಿ ಕೃಷಿ, ರಾಜನಲ್ಲಿ ದಂಡನೀತಿ, ಬ್ರಾಹ್ಮಣರಲ್ಲಿ ಬ್ರಹ್ಮಚರ್ಯ, ತಪಸ್ಸು, ಮಂತ್ರ ಮತ್ತು ಸತ್ಯಗಳು ಇರಬೇಕಾದುದು.
ತೇಷಾಂ ಯಃ ಕ್ಷತ್ರಿಯೋ ವೇದ ವಸ್ತ್ರಾಣಾಮಿವ ಶೋಧನಮ್ |
ಶೀಲದೋಷಾನ್ ವಿನಿರ್ಹಂತುಂ ಸ ಪಿತಾ ಸ ಪ್ರಜಾಪತಿಃ ॥5॥
ಅವರಲ್ಲಿ ರಜಕನು ವಸ್ತ್ರಗಳನ್ನು ಶೋಧಿಸಿದಂತೆ ಯಾವ ಕ್ಷತ್ರಿಯನು ಪ್ರಜೆಗಳ ಶೀಲದೋಷಗಳನ್ನು ಪರಿಹರಿಸಲು ತಿಳಿದಿರುತ್ತಾನೆಯೋ ಅವನೇ ತಂದೆ ಅವನೇ ಪ್ರಜಾಪತಿ.
ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚ ಭರತರ್ಷಭ |
ರಾಜವೃತ್ತಾನಿ ಸರ್ವಾಣಿ ರಾಜೈವ ಯುಗಮುಚ್ಯತೇ ॥6॥
ಎಲೈ ಭರತರ್ಷಭನೇ! ಕೃತ, ತ್ರೇತಾ, ದ್ವಾಪರ ಮತ್ತು ಕಲಿಯೆಲ್ಲವೂ ರಾಜನ ನಡತೆಯನ್ನೇ ಅವಲಂಬಿಸಿದೆ. ಆದ್ದರಿಂದ ರಾಜನನ್ನೇ ಯುಗವೆಂದು ಹೇಳುತ್ತಾರೆ.
ಚಾತುರ್ವರ್ಣ್ಯಂ ತಥಾ ವೇದಾಶ್ಚಾತುರಾಶ್ರಮ್ಯಮೇವ ಚ |
ಸರ್ವಂ ಪ್ರಮುಹ್ಯತೇ ಹ್ಯೇತದ್ ಯದಾ ರಾಜಾ ಪ್ರಮಾದ್ಯತಿ ॥7॥
ರಾಜನು ಪ್ರಮಾದಕ್ಕೆ ಒಳಗಾದರೆ ನಾಲ್ಕುವರ್ಣಗಳ ಧರ್ಮಗಳು, ನಾಲ್ಕು ಆಶ್ರಮಗಳ ಧರ್ಮಗಳು, ವೇದಗಳು ಎಲ್ಲವೂ ಅವನತಿಯನ್ನು ಹೊಂದುತ್ತವೆ.
ಅಗ್ನಿತ್ರೇತಾ ತ್ರಯೀ ವಿದ್ಯಾ ಯಜ್ಞಾಶ್ಚ ಸಹದಕ್ಷಿಣಾಃ |
ಸರ್ವ ಏವ ಪ್ರಮಾದ್ಯಂತಿ ಯದಾ ರಾಜಾ ಪ್ರಮಾದ್ಯತಿ ॥8॥
ರಾಜನು ಪ್ರಮಾದಕ್ಕೆ ಒಳಗಾದಾಗ ತ್ರೇತಾಗ್ನಿಗಳು, ಮೂರು ವೇದಗಳ ವಿದ್ಯೆ, ದಕ್ಷಿಣಾಯುತವಾದ ಯಜ್ಞಗಳು ಎಲ್ಲವೂ ನಾಶವನ್ನು ಹೊಂದುತ್ತವೆ.
ರಾಜೈವ ಕರ್ತಾಭೂತಾನಾಂ ರಾಜೈವ ಚ ವಿನಾಶಕಃ |
ಧರ್ಮಾತ್ಮಾ ಯಃ ಸ ಕರ್ತಾ ಸ್ಯಾದಧರ್ಮಾತ್ಮಾ ವಿನಾಶಕಃ ॥9॥
ಪ್ರಜೆಗಳಿಗೆ ಶ್ರೇಯಸ್ಸನ್ನು ಉಂಟುಮಾಡುವವನು ರಾಜನೇ. ವಿನಾಶವನ್ನು ಉಂಟುಮಾಡುವವನೂ ರಾಜನೇ. ಧರ್ಮಾತ್ಮನಾದ ರಾಜನು ಶ್ರೇಯಸ್ಕರನಾಗು- ತ್ತಾನೆ. ಅಧರ್ಮಾತ್ಮನಾದವನು ವಿನಾಶಕನಾಗುತ್ತಾನೆ.
ರಾಜ್ಞೋ ಭಾರ್ಯಾಶ್ಚ ಪುತ್ರಾಶ್ಚ ಬಾಂಧವಾಃ ಸುಹೃದಸ್ತಥಾ |
ಸಮೇತ್ಯ ಸರ್ವೇ ಶೋಚಂತಿ ಯದಾ ರಾಜಾ ಪ್ರಮಾದ್ಯತಿ ॥10॥
ರಾಜನು ಪ್ರಮಾದಕ್ಕೆ ಒಳಗಾದರೆ ರಾಜನ ಭಾರ್ಯೆಯರು, ಪುತ್ರರು, ಬಾಂಧವರು, ಸುಹೃಜ್ಜನರು ಎಲ್ಲರೂ ಒಟ್ಟಾಗಿ ಶೋಕಪಡುತ್ತಾರೆ.
ಹಸ್ತಿನೋಽಶ್ವಾಶ್ಚ ಗಾವಶ್ಚಾಪ್ಯುಷ್ಟ್ರಾಶ್ವತರಗರ್ದಭಾಃ |
ಅಧರ್ಮವೃತ್ತೇ ನೃಪತೌ ಸರ್ವೇ ಸೀದಂತಿ ಪಾರ್ಥಿವ ॥11॥
ಎಲೈ ಪಾರ್ಥಿವನೇ! ಆನೆಗಳು, ಅಶ್ವಗಳು, ಗೋವುಗಳು, ಒಂಟೆಗಳು, ಹೇಸರ -ಗತ್ತೆಗಳು, ಕತ್ತೆಗಳು ಎಲ್ಲವೂ ರಾಜನು ಅಧರ್ಮಶೀಲನಾದರೆ ಅವನತಿಯನ್ನು ಹೊಂದುತ್ತವೆ.
ಯಚ್ಚ ಭೂತಂ ಸಂಭಜತೇ ಭೂತಾ ಯೇ ಚ ತದನ್ವಯಾಃ |
ಅಧರ್ಮಸ್ಥೇ ಹಿ ನೃಪತೌ ಸರ್ವೇ ಸೀದಂತಿ ಪಾರ್ಥಿವ ॥12॥
ಎಲೈ ರಾಜನೇ! ರಾಜನು ಅಧರ್ಮಸ್ಥನಾದರೆ ರಾಜನನ್ನು ಆಶ್ರಯಿಸಿರುವ ಪ್ರಾಣಿಗಳು ಮತ್ತು ರಾಜನನ್ನು ಅನುಸರಿಸುವವರೆಲ್ಲರೂ ಅವನತಿಯನ್ನು ಹೊಂದು- ತ್ತಾರೆ.
ದುರ್ಬಲಾರ್ಥಂ ಬಲಂ ಸೃಷ್ಟಂ ಧಾತ್ರಾ ಮಾಂಧಾತರುಚ್ಯತೇ |
ಅಬಲಂ ತನ್ಮಹದ್ಭೂತಂ ಯಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥13॥
ಎಲೈ ಮಾಂಧಾತನೇ! ದುರ್ಬಲರನ್ನು ರಕ್ಷಣೆ ಮಾಡುವುದಕ್ಕಾಗಿ ಬ್ರಹ್ಮದೇವರು ಬಲವನ್ನು ಸೃಷ್ಟಿಮಾಡಿದ್ದಾರೆ. ದುರ್ಬಲವರ್ಗವು ಬಹಳ ದೊಡ್ಡದಾದುದು ಮತ್ತು ಎಲ್ಲವೂ ಅದರಲ್ಲಿ ಆಶ್ರಿತವಾಗಿದೆ.
ದುರ್ಬಲಸ್ಯ ಹಿ ಯಚ್ಚಕ್ಷುರ್ಮುನೇರಾಶೀವಿಷಸ್ಯ ಚ |
ಅವಿಷಹ್ಯತಮಂ ಮನ್ಯೇ ಮಾ ಸ್ಮ ದುರ್ಬಲಮಾಸದಃ ॥14॥
ದುರ್ಬಲನ, ಋಷಿಯ ಮತ್ತು ಸರ್ಪದ ದೃಷ್ಟಿಯು ಸಹಿಸಲು ಅಸಾಧ್ಯವಾ- ದುದು ಎಂದು ತಿಳಿಯುತ್ತೇನೆ. ದುರ್ಬಲನ ಸಮೀಪಕ್ಕೆ ಹೋಗಬೇಡ.
ದುರ್ಬಲಾಂಸ್ತಾತ ಬುದ್ಧ್ಯೇಥಾ ನಿತ್ಯಮೇವಾವಿಮಾನಿತಾನ್ |
ಮಾ ತ್ವಾಂ ದುರ್ಬಲಚಕ್ಷೂಂಷಿ ಪ್ರದಹೇಯುಃ ಸಬಾಂಧವಮ್ ॥15॥
ಎಲೈ ಪ್ರೀತಿಪಾತ್ರನೇ! ದುರ್ಬಲರಿಗೆ ಅವಮಾನವಾಗದಂತೆ ಯಾವಾಗಲೂ ನೋಡಿಕೊಳ್ಳುವವನಾಗು. ದುರ್ಬಲರ ಕಣ್ಣುಗಳು ನಿನ್ನನ್ನು ಬಾಂಧವರ ಜೊತೆ- ಯಲ್ಲಿ ಸುಡದಿರಲಿ.
ನ ಹಿ ದುರ್ಬಲದಗ್ಧಸ್ಯ ಕುಲೇ ಕಿಂಚಿತ್ ಪ್ರರೋಹತಿ |
ಆಮೂಲಂ ನಿರ್ದಹತ್ಯೇವ ಮಾ ಸ್ಮ ದುರ್ಬಲಮಾಸದಃ ॥16॥
ದುರ್ಬಲರ ದೃಷ್ಟಿಯಿಂದ ದಗ್ಧವಾದ ಕುಲದಲ್ಲಿ ಯಾವುದೂ ಬೆಳೆಯು- ವುದಿಲ್ಲ. ಆ ದೃಷ್ಟಿಯು ಮೂಲಸಹಿತವಾಗಿ ಎಲ್ಲವನ್ನೂ ಸುಟ್ಟೇ ಸುಡುತ್ತದೆ. ದುರ್ಬಲರ ಸಮೀಪಕ್ಕೆ ಹೋಗಬೇಡ.

ಅಬಲಂ ವೈ ಬಲಾಚ್ಛ್ರೇಯೋ ಯಚ್ಚಾತಿಬಲವದ್ ಬಲಮ್ |
ಬಲಸ್ಯಾಬಲದಗ್ಧಸ್ಯ ನ ಕಿಂಚಿದವಶಿಷ್ಯತೇ ॥17॥
ಅಬಲವರ್ಗವು ಬಲವನ್ನು ಹೊಂದಿದವರಿಗಿಂತ ಶ್ರೇಷ್ಠವಾದುದು. ಅದು ಬಹಳ ಬಲವನ್ನು ಹೊಂದಿದವರಿಗಿಂತಲೂ ಶ್ರೇಷ್ಠವಾದುದು. ಅಬಲರಿಂದ ಬಲವು ದಗ್ಧ- ವಾದರೆ ಅದರಲ್ಲಿ ಯಾವುದೂ ಉಳಿಯುವುದಿಲ್ಲ.
ವಿಮಾನಿತೋ ಹತೋತ್ಕ್ರುಷ್ಟಸ್ತ್ರಾತಾರಂ ಚೇನ್ನ ವಿಂದತಿ |
ಅಮಾನುಷಕೃತಸ್ತತ್ರ ದಂಡೋ ಹಂತಿ ನರಾಧಿಪಮ್ ॥18॥
ಅವಮಾನಿತನಾದವನು, ಪ್ರಹಾರಕ್ಕೆ ಸಿಲುಕಿದವನು, ನಿಂದಿಸಲ್ಪಡುವವನು ರಕ್ಷಕನನ್ನು ಪಡೆಯದಿದ್ದರೆ ಅಲ್ಲಿ ರಾಜನನ್ನು ದೈವಕೃತವಾದ ದಂಡವು ನಾಶ- ಗೊಳಿಸುತ್ತದೆ.
ಮಾ ಸ್ಮ ತಾತ ಬಲಸ್ಥಾನ್ ವೈ ಯುಂಜೀಥಾ ದುರ್ಬಲಂ ಜನಮ್ |
ಮಾ ತ್ವಾ ದುರ್ಬಲಚಕ್ಷೂಂಷಿ ಧಕ್ಷ್ಯಂತ್ವಗ್ನಿರಿವಾಶ್ರಯಮ್ ॥19॥
ಎಲೈ ಪ್ರೀತಿಪಾತ್ರನೇ! ಬಲವುಳ್ಳವರ ಜೊತೆಯಲ್ಲಿ ಸೇರು. ದುರ್ಬಲಜನರ ಸಮೀಪಕ್ಕೆ ಹೋಗಬೇಡ. ಅಗ್ನಿಯು ತನ್ನ ಆಶ್ರಯವನ್ನು ಸುಟ್ಟಂತೆ ದುರ್ಬಲರ ಕಣ್ಣುಗಳು ನಿನ್ನನ್ನು ಸುಡದಿರಲಿ. (ಲಕ್ಷಾಲಂಕಾರ)
ಯಾನಿ ಮಿಥ್ಯಾಭಿಶಸ್ತಾನಾಂ ಪತಂತ್ಯಶ್ರೂಣಿ ರೋದತಾಮ್ |
ತಾನಿ ಪುತ್ರಾನ್ ಪಶೂನ್ ಘ್ನಂತಿ ತೇಷಾಂ ಮಿಥ್ಯಾಭಿಶಾಸನಾತ್ ॥20॥
ಮಿಥ್ಯಾರೋಪಕ್ಕೆ ಒಳಗಾಗಿ ಅಳುವವರ ಕಣ್ಣಿನಿಂದ ಯಾವ ಕಣ್ಣೀರಿನ ಹನಿಗಳು ಬೀಳುತ್ತವೆಯೋ ಅವು ಮಿಥ್ಯಾರೋಪವನ್ನು ಹೊರಸಿದವರ ಪುತ್ರರನ್ನು ಮತ್ತು ಪಶುಗಳನ್ನು ಕೊಲ್ಲುತ್ತವೆ.
ಯದಿ ನಾತ್ಮನಿ ಪುತ್ರೇಷು ನ ಚೇತ್ ಪೌತ್ರೇಷು ನಪ್ತೃಷು |
ನಹಿ ಪಾಪಂ ಕೃತಂ ಕರ್ಮ ಸದ್ಯಃ ಫಲತಿ ಗೌರಿವ ॥21॥
ಒಂದು ಪಕ್ಷ ತನಗೆ ದುಷ್ಫಲವನ್ನು ಕೊಡದಿದ್ದರೆ ಅದು ಮಕ್ಕಳಿಗೋ, ಮೊಮ್ಮಕ್ಕಳಿಗೋ ದುಷ್ಟಫಲವನ್ನು ಕೊಡುತ್ತದೆ. ಮಾಡಿದ ಪಾಪಕರ್ಮವು ಭೂಮಿ- ಯಂತೆ ತತ್ಕಣದಲ್ಲಿಯೇ ಫಲವನ್ನು ಕೊಡುವುದಿಲ್ಲ. (ಭೂಮಿಯಲ್ಲಿ ಬೀಜವನ್ನು ಬಿತ್ತಿದರೆ ಎಷ್ಟೋ ಸಮಯದ ನಂತರ ಫಲವನ್ನು ಕೊಡುತ್ತದೆ. ಅದರಂತೆಯೇ ಪಾಪಕರ್ಮವು ಪಾಕಗೊಂಡಮೇಲೆ ಫಲವನ್ನು ಕೊಡುತ್ತದೆ).
ಯತ್ರಾಬಲೋ ವಧ್ಯಮಾನಸ್ತ್ರಾತಾರಂ ನಾಧಿಗಚ್ಛತಿ |
ಮಹಾನ್ ದೈವಕೃತಸ್ತತ್ರ ದಂಡಃ ಪತತಿ ದಾರುಣಃ ॥22॥
ಅಬಲನಾದವನು ಪೀಡಿಸಲ್ಪಟ್ಟು ರಕ್ಷಕನನ್ನು ಪಡೆಯದಿದ್ದರೆ ಅಲ್ಲಿ ರಾಜನ ಮೇಲೆ ದೈವಕೃತವಾದ ದಾರುಣವಾದ ದೊಡ್ಡದಂಡವು ಎರಗುತ್ತದೆ.
ಯುಕ್ತಾ ಯದಾ ಜಾನಪದಾ ಭಿಕ್ಷಂತೇ ಬ್ರಾಹ್ಮಣಾ ಇವ |
ಅಭೀಕ್ಷ್ಣಂ ಭಿಕ್ಷುರೂಪೇಣ ರಾಜಾನಂ ಘ್ನಂತಿ ತಾದೃಶಾಃ ॥23॥
ಯೋಗ್ಯವಾದ ನಡತೆಯುಳ್ಳ ಜಾನಪದರು (ಪ್ರಜೆಗಳು) ಬ್ರಾಹ್ಮಣರಂತೆ ಸತತವಾಗಿ ಭಿಕ್ಷೆಯನ್ನು ಬೇಡಲು ಪ್ರಾರಂಭಿಸಿದರೆ ಅಂತಹವರು ರಾಜನನ್ನು ಕೊಲ್ಲುತ್ತಾರೆ.
ರಾಜ್ಞೋ ಯದಾ ಜನಪದೇ ಬಹವೋ ರಾಜಪೂರುಷಾಃ |
ಅನಯೇನೋಪವರ್ತಂತೇ ತದ್ ರಾಜ್ಞಃ ಕಿಲ್ಬಿಷಂ ಮಹತ್ ॥24॥
ರಾಜನ ಅನೇಕ ಅಧಿಕಾರಿಗಳು ರಾಜ್ಯದಲ್ಲಿ ಅನ್ಯಾಯದಿಂದ ವರ್ತಿಸಲು ಪ್ರಾರಂಭಿಸಿದರೆ ಅದು ರಾಜನದೇ ದೊಡ್ಡ ದೋಷ.
ಯದಾ ಯುಕ್ತಾ ನಯಂತ್ಯರ್ಥಾನ್ ಕಾಮಾದರ್ಥವಶೇನ ವಾ |
ಕೃಪಣಂ ಯಾಚಮಾನಾನಾಂ ತದ್ ರಾಜ್ಞೋ ವೈಶಸಂ ಮಹತ್ ॥25॥
ರಾಜನಿಂದ ನಿಯುಕ್ತರಾದ ಅಧಿಕಾರಿಗಳು ಪ್ರಜೆಗಳು ಕಾರ್ಪಣ್ಯದಿಂದ ಬೇಡು- ತ್ತಿದ್ದರೂ ಅವರ ಧನವನ್ನು ತಮ್ಮ ಮನಸ್ಸಿಗೆ ಬಂದಂತೆ ಅಥವಾ ಲೋಭದಿಂದ ದೋಚುತ್ತಿದ್ದರೆ ಅದು ರಾಜನಿಂದಲೇ ಉಂಟಾದ ದೊಡ್ಡ ಹಿಂಸೆ.
ಮಹಾವೃಕ್ಷೋ ಜಾಯತೇ ವರ್ಧತೇ ಚ
ತಂ ಚೈವ ಭೂತಾನಿ ಸಮಾಶ್ರಯಂತಿ |
ಯದಾ ವೃಕ್ಷಶ್ಛಿದ್ಯತೇ ದಹ್ಯತೇ ವಾ
ತದಾಶ್ರಯಾ ಅನಿಕೇತಾ ಭವಂತಿ ॥26॥
ದೊಡ್ಡ ವೃಕ್ಷವು ಬೆಳೆದು ಅಭಿವೃದ್ಧಿಯನ್ನು ಹೊಂದುತ್ತದೆ. ಅನೇಕ ಪ್ರಾಣಿಗಳು ಅದನ್ನು ಆಶ್ರಯಿಸುತ್ತವೆ. ಆ ವೃಕ್ಷವು ಕಡಿಯಲ್ಪಟ್ಟಾಗ ಅಥವಾ ಸುಡಲ್ಪಟ್ಟಾಗ ಅದನ್ನು ಆಶ್ರಯಿಸಿದ ಪ್ರಾಣಿಗಳೆಲ್ಲವೂ ಆಶ್ರಯ(ತಮ್ಮ ನಿವಾಸ)ವನ್ನು ಕಳೆದುಕೊಳ್ಳುತ್ತವೆ.

ಯದಾ ರಾಷ್ಟ್ರೇ ಧರ್ಮಮಗ್ರ್ಯಂ ಚರಂತಿ
ಸಂಸ್ಕಾರಂ ವಾ ರಾಜಗುಣಂ ಬ್ರುವಾಣಾಃ |
ತೈರೇವಾಧರ್ಮಶ್ಚರಿತೋ ಧರ್ಮಮೋಹಾತ್
ತೂರ್ಣಂ ದಹ್ಯಾತ್ ಸುಕೃತಂ ದುಷ್ಕೃತಂ ಚ ॥27॥
ಪ್ರಜೆಗಳು ರಾಜನ ಗುಣವೆಂದು ಹೇಳುತ್ತಾ ರಾಷ್ಟ್ರದಲ್ಲಿ ಯಾವಾಗ ಮೊದಲು ಶ್ರೇಷ್ಠವಾದ ಧರ್ಮಗಳನ್ನು ಮತ್ತು ಸಂಸ್ಕಾರಗಳನ್ನು ಆಚರಿಸುತ್ತಾ, ಅನಂತರ ಧರ್ಮಮೋಹದಿಂದ ಅವರೇ ಅಧರ್ಮವನ್ನು ಆಚರಿಸಿದರೆ ಅನಂತರ ಆಚರಿಸಿದ ಅಧರ್ಮವು ಮೊದಲು ಆಚರಿಸಿದ ಧರ್ಮವನ್ನು ಶೀಘ್ರವಾಗಿ ಸುಟ್ಟುಬಿಡುತ್ತದೆ. (ಲಕ್ಷಾಲಂಕಾರ)

ಯತ್ರ ಪಾಪಾ ಜ್ಞಾಯಮಾನಾಶ್ಚರಂತಿ
ಸಭಾಂ ಕಲಿರ್ವಿಂದತಿ ತತ್ರ ರಾಜ್ಞಃ |
ಯದಾ ರಾಜಾ ಶಾಸ್ತಿ ನರಾನ್ ನ ಶಕ್ತ್ಯಾ
ನ ತದ್ ರಾಜ್ಯಂ ವರ್ಧತೇ ಭೂಮಿಪಾಲ ॥28॥
ಎಲ್ಲಿ ಪಾಪಗಳಿಂದ ಪ್ರಸಿದ್ಧರಾದವರು ನಿಃಶಂಕೆಯಿಂದ ತಿರುಗಾಡುತ್ತಾರೋ ಅಲ್ಲಿ ಕಲಿಯು ರಾಜಸಭೆಯನ್ನು ಪ್ರವೇಶಿಸುತ್ತಾನೆ. ರಾಜನು ಅಪರಾಧಿಗಳನ್ನು ತನ್ನ ಶಕ್ತಿಗೆ ಅನುಗುಣವಾಗಿ ಶಿಕ್ಷಿಸದಿದ್ದಾಗ ಎಲೈ ರಾಜನೇ! ಆ ರಾಜ್ಯವು ಅಭಿವೃದ್ಧಿಯನ್ನು ಹೊಂದುವುದಿಲ್ಲ.
ಯಶ್ಚಾಮಾತ್ಯಂ ಮಾನಯಿತ್ವಾ ಯಥಾರ್ಹಂ
ಮಂತ್ರೇ ಚ ಯುದ್ಧೇ ಚ ನೃಪೋ ನಿಯುಂಜ್ಯಾತ್ |
ಪ್ರವರ್ಧತೇ ತಸ್ಯ ರಾಷ್ಟ್ರಂ ನೃಪಸ್ಯ
ಭುಂಕ್ತೇ ಮಹೀಂ ಚಾಪ್ಯಖಿಲಾಂ ಚಿರಾಯ ॥29॥
ಯಾವ ರಾಜ್ಯದಲ್ಲಿ ರಾಜನು ಮಂತ್ರಿಯನ್ನು ಯಥಾಯೋಗ್ಯವಾಗಿ ಸನ್ಮಾನಿಸಿ ಮಂತ್ರದಲ್ಲಿಯೂ ಮತ್ತು ಯುದ್ಧದಲ್ಲಿಯೂ ನಿಯೋಜಿಸುತ್ತಾನೆಯೋ ಅಂತಹ ರಾಜನ ರಾಷ್ಟ್ರವು ಅಭಿವೃದ್ಧಿಯನ್ನು ಹೊಂದುತ್ತದೆ. ಮತ್ತು ಆ ರಾಜನು ಬಹು- ಕಾಲದವರೆಗೆ ಭೂಮಿಯನ್ನು ಭೋಗಿಸುತ್ತಾನೆ.
ಅತ್ರಾಪಿ ಸುಕೃತಂ ಕರ್ಮ ವಾಚಂ ಚೈವ ಸುಭಾಷಿತಮ್ |
ಸಮೀಕ್ಷ್ಯ ಪೂಜಯನ್ ರಾಜಾ ಧರ್ಮಂ ಪ್ರಾಪ್ನೋತ್ಯನುತ್ತಮಮ್ ॥30॥
ಇಲ್ಲಿಯೂ ಸಹ ಒಳ್ಳೆಯ ಕರ್ಮಗಳನ್ನು ಮಾಡಿದವರನ್ನು ಮತ್ತು ಒಳ್ಳೆಯ ಮಾತನಾಡುವವರನ್ನು ನೋಡಿ ಪೂಜಿಸುವ ರಾಜನು ಶ್ರೇಷ್ಠವಾದ ಧರ್ಮವನ್ನು ಪಡೆಯುವನು.
ಸಂವಿಭಜ್ಯ ಯದಾ ಭುಂಕ್ತೇ ನ ಚಾನ್ಯಾನವಮನ್ಯತೇ |
ನಿಹಂತಿ ಬಲಿನಂ ದೃಪ್ತಂ ಸ ರಾಜ್ಞೋ ಧರ್ಮ ಉಚ್ಯತೇ ॥31॥
ತನ್ನ ಐಶ್ವರ್ಯವನ್ನು ಪ್ರಜೆಗಳಿಗೆ ಹಂಚಿ ಭೋಗಿಸುವುದು, ಇನ್ನೊಬ್ಬರಿಗೆ ಅವಮಾನವನ್ನು ಮಾಡದಿರುವುದು, ಬಲಿಷ್ಠನೂ ಅಹಂಕಾರಿಯೂ ಆದವನನ್ನು ವಿನಾಶ ಮಾಡುವುದು ರಾಜನ ಧರ್ಮವೆನಿಸುತ್ತದೆ.
ಸ ವಿಭಜ್ಯ ಯದಾ ಭುಂಕ್ತೇ ನೃಪತಿರ್ದುರ್ಬಲಾನ್ ನರಾನ್ |
ತದಾ ಭವಂತಿ ಬಲಿನಃ ಸ ರಾಜ್ಞೋ ಧರ್ಮ ಉಚ್ಯತೇ ॥32॥
ರಾಜನು ದುರ್ಬಲರಿಗೆ ತನ್ನ ಐಶ್ವರ್ಯವನ್ನು ಹಂಚಿ ಭೋಗಿಸಿದರೆ ದುರ್ಬ- ಲರು ಪ್ರಬಲರಾಗುತ್ತಾರೆ. ಅದು ರಾಜನ ಧರ್ಮವೆನಿಸುತ್ತದೆ.
ತ್ರಾಯತೇ ಹಿ ಯದಾ ಸರ್ವಂ ವಾಚಾ ಕಾಯೇನ ಕರ್ಮಣಾ |
ಪುತ್ರಸ್ಯಾಪಿ ನ ಮೃಷ್ಯೇಚ್ಚ ಸ ರಾಜ್ಞೋ ಧರ್ಮ ಉಚ್ಯತೇ ॥33॥
ಎಲ್ಲವನ್ನೂ ಮಾತಿನಿಂದಲೂ, ಶರೀರದಿಂದಲೂ ಮತ್ತು ಕರ್ಮದಿಂದಲೂ ರಕ್ಷಿಸುವುದು ಅಪರಾಧ ಮಾಡಿದ ಪುತ್ರನನ್ನೂ ನೋಡಿ ಸಹಿಸದಿರುವುದು ರಾಜನ ಧರ್ಮವೆನಿಸುತ್ತದೆ.
ಯದಾ ರಕ್ಷತಿ ರಾಷ್ಟ್ರಾಣಿ ಯದಾ ದಸ್ಯೂನಪೋಹತಿ |
ಯದಾ ಜಯತಿ ಸಂಗ್ರಾಮೇ ಸ ರಾಜ್ಞೋ ಧರ್ಮ ಉಚ್ಯತೇ ॥34॥
ರಾಷ್ಟ್ರವನ್ನು ರಕ್ಷಿಸುವುದು, ದಸ್ಯುಗಳನ್ನು ವಿನಾಶಗೊಳಿಸುವುದು, ಯುದ್ಧದಲ್ಲಿ ಜಯಗಳಿಸುವುದು ರಾಜನ ಧರ್ಮವೆನಿಸುತ್ತದೆ.
ಪಾಪಮಾಚರತೋ ಯತ್ರ ಕರ್ಮಣಾ ವ್ಯಾಹೃತೇನ ವಾ |
ಪ್ರಿಯಸ್ಯಾಪಿ ನ ಮೃಷ್ಯೇತ ಸ ರಾಜ್ಞೋ ಧರ್ಮ ಉಚ್ಯತೇ ॥35॥
ಕರ್ಮದಿಂದಾಗಲೀ ಅಥವಾ ಮಾತಿನಿಂದಾಗಲೀ ಪಾಪಕಾರ್ಯವನ್ನು ಮಾಡಿ- ದವನು ಪ್ರಿಯವ್ಯಕ್ತಿಯಾದರೂ ಅವನನ್ನು ಸಹಿಸದಿರುವುದು ರಾಜನ ಧರ್ಮವೆನಿ- ಸುತ್ತದೆ.
ಯದಾ ಶಾರಣಿಕಾನ್ ರಾಜಾ ಪುತ್ರವತ್ ಪರಿರಕ್ಷತಿ |
ಭಿನತ್ತಿ ನ ಚ ಮರ್ಯಾದಾಂ ಸ ರಾಜ್ಞೋ ಧರ್ಮ ಉಚ್ಯತೇ ॥36॥
ಶರಣಾಗತರಾದವರನ್ನು ಪುತ್ರರಂತೆ ರಕ್ಷಿಸುವುದು ಮತ್ತು ಧರ್ಮದ ಎಲ್ಲೆ- ಯನ್ನು ಮೀರದಿರುವುದು ರಾಜನ ಧರ್ಮವೆನಿಸುತ್ತದೆ.
ಯದಾಪ್ತದಕ್ಷಿಣೈರ್ಯಜ್ಞೈರ್ಯಜತೇ ಶ್ರದ್ಧಯಾಽನ್ವಿತಃ |
ಕಾಮದ್ವೇಷಾವನಾದೃತ್ಯ ಸ ರಾಜ್ಞೋ ಧರ್ಮ ಉಚ್ಯತೇ ॥37॥
ರಾಗದ್ವೇಷಗಳನ್ನು ತ್ಯಜಿಸಿ ಶ್ರದ್ಧೆಯಿಂದ ಪೂರ್ಣದಕ್ಷಿಣೆಯನ್ನು ಕೊಟ್ಟು ಯಜ್ಞ- ಗಳನ್ನು ಮಾಡುವುದು ರಾಜನ ಧರ್ಮವೆನಿಸುತ್ತದೆ.

ಕೃಪಣಾನಾಥವೃದ್ಧಾನಾಂ ಯದಾಶ್ರು ವ್ಯಪಮಾರ್ಷ್ಟಿ ವೈ |
ಹರ್ಷಂ ಸಂಜನಯನ್ ನೃಣಾಂ ಸ ರಾಜ್ಞೋ ಧರ್ಮ ಉಚ್ಯತೇ ॥38॥
ಕೃಪಣರು ಅನಾಥರು, ವೃದ್ಧರೂ ಆದವರ ಕಣ್ಣೀರನ್ನು ಒರೆಸಿ ಪ್ರಜೆಗಳಿಗೆ ಸಂತೋಷವನ್ನು ಉಂಟುಮಾಡುವುದು ರಾಜನ ಧರ್ಮವೆನಿಸುತ್ತದೆ.
ವಿವರ್ಧಯತಿ ಮಿತ್ರಾಣಿ ತಥಾರೀಂಶ್ಚಾಪಕರ್ಷತಿ |
ಸಂಪೂಜಯತಿ ಸಾಧೂಂಶ್ಚ ಸ ರಾಜ್ಞೋ ಧರ್ಮ ಉಚ್ಯತೇ ॥39॥

ಮಿತ್ರರನ್ನು ಅಭಿವೃದ್ಧಿಪಡಿಸುವುದು, ಹಾಗೆಯೇ ಶತ್ರುಗಳನ್ನು ಅಪಕರ್ಷಣ- ಗೊಳಿಸುವುದು ಮತ್ತು ಸಜ್ಜನರನ್ನು ಪೂಜಿಸುವುದು ರಾಜನ ಧರ್ಮವೆಂದು ಹೇಳಲ್ಪಡುತ್ತದೆ.
ಸತ್ಯಂ ಪಾಲಯತಿ ಪ್ರೀತ್ಯಾ ನಿತ್ಯಂ ಭೂಮಿಂ ಪ್ರಯಚ್ಛತಿ |
ಪೂಜಯತ್ಯತಿಥೀನ್ ಭೃತ್ಯಾನ್ ಸ ರಾಜ್ಞೋ ಧರ್ಮ ಉಚ್ಯತೇ ॥40॥
ಸತ್ಯವನ್ನು ಸಂತೋಷದಿಂದ ಪಾಲಿಸುವುದು, ನಿತ್ಯವೂ ಭೂದಾನವನ್ನು ಮಾಡು- ವುದು, ಅತಿಥಿಗಳನ್ನು ಮತ್ತು ಭೃತ್ಯರನ್ನು ಪೂಜಿಸುವುದು ರಾಜನ ಧರ್ಮವೆನಿಸುತ್ತದೆ.
ನಿಗ್ರಹಾನುಗ್ರಹೌ ಚೋಭೌ ಯತ್ರ ಸ್ಯಾತಾಂ ಪ್ರತಿಷ್ಠಿತೌ |
ಅಸ್ಮಿಂಲ್ಲೋಕೇ ಪರೇ ಚೈವ ರಾಜಾ ತತ್ ಪ್ರಾಪ್ನುತೇ ಫಲಮ್ ॥41॥
ಯಾವ ರಾಜನಲ್ಲಿ ದುಷ್ಟರ ನಿಗ್ರಹ ಮತ್ತು ಶಿಷ್ಟರ ಅನುಗ್ರಹ ಎರಡೂ ಪ್ರತಿ- ಷ್ಠಿತವಾಗಿರುತ್ತವೆಯೋ ಆ ರಾಜನು ಈ ಲೋಕದಲ್ಲಿಯೂ ಮತ್ತು ಪರಲೋಕ- ದಲ್ಲಿಯೂ ಶುಭಫಲವನ್ನು ಹೊಂದುತ್ತಾನೆ.
ಯಮೋ ರಾಜಾ ಧಾರ್ಮಿಕಾಣಾಂ ಮಾಂಧಾತಃ ಪರಮೇಶ್ವರಃ |
ಸಂಯಚ್ಛನ್ ಭವತಿ ಪ್ರಾಣಾನ್ನ ಸಂಯಚ್ಛಂಸ್ತು ಪಾಪಕಃ ॥42॥
ಎಲೈ ಮಾಂಧಾತೃವೇ! ರಾಜನು ಯಮನಂತೆ ಸಜ್ಜನರಿಗೆ ಪ್ರಾಣದಾನವನ್ನು ಮಾಡಿದರೆ ಧಾರ್ಮಿಕರ ದೃಷ್ಟಿಯಲ್ಲಿ ಅವನು ಪರಮೇಶ್ವರನೆನಿಸುತ್ತಾನೆ. ಹಾಗೆ ಮಾಡದಿದ್ದರೆ ಅವನು ಪಾಪಿಯಾಗುತ್ತಾನೆ.
ಋತ್ವಿಕ್ಪುರೋಹಿತಾಚಾರ್ಯಾನ್ ಸತ್ಕೃತ್ಯಾನವಮನ್ಯ ಚ |
ಯದಾ ಸಮ್ಯಕ್ ಪ್ರಗೃಹ್ಣಾತಿ ಸ ರಾಜ್ಞೋ ಧರ್ಮ ಉಚ್ಯತೇ ॥43॥
ಋತ್ವಿಕ್, ಪುರೋಹಿತ ಮತ್ತು ಆಚಾರ್ಯರನ್ನು ಸನ್ಮಾನಿಸಿ, ಅವಮಾನ ಮಾಡದೇ ಸರಿಯಾಗಿ ಸ್ವೀಕರಿಸುವುದು ರಾಜನ ಧರ್ಮವೆನಿಸುತ್ತದೆ.
ಯಮೋ ಯಚ್ಛತಿ ಭೂತಾನಿ ಸರ್ವಾಣ್ಯೇವಾವಿಶೇಷತಃ |
ತಸ್ಯ ರಾಜ್ಞಾಽನುಕರ್ತವ್ಯಂ ಯಂತವ್ಯಾ ವಿಧಿವತ್ ಪ್ರಜಾಃ ॥44॥
ಯಮನು ಎಲ್ಲ ಜೀವರನ್ನೂ ಒಂದೇ ರೀತಿಯಲ್ಲಿ ನಿಯಂತ್ರಿಸುತ್ತಾನೆ. ರಾಜನು ಯಮನನ್ನು ಅನುಸರಿಸಬೇಕು. ಎಲ್ಲ ಪ್ರಜೆಗಳನ್ನೂ ಶಾಸ್ತ್ರರೀತಿಯಲ್ಲಿ ನಿಯಂತ್ರಿಸ- ಬೇಕು.
ಸಹಸ್ರಾಕ್ಷೇಣ ರಾಜಾ ಹಿ ಸರ್ವ ಏವೋಪಮೀಯತೇ |
ಸ ಪಶ್ಯತಿ ಹಿ ಯಂ ಧರ್ಮಂ ಸ ಧರ್ಮಃ ಪುರುಷರ್ಷಭ ॥45॥
ರಾಜನನ್ನು ಎಲ್ಲರೂ ಸಹಸ್ರಾಕ್ಷನಿಗೆ ಹೋಲಿಸುತ್ತಾರೆ. ಎಲೈ ಪುರುಷಶ್ರೇಷ್ಠನೇ! ಅವನು ಯಾವುದನ್ನು ಧರ್ಮವೆಂದು ತಿಳಿಯುತ್ತಾನೆಯೋ ಅದು ಧರ್ಮ- ವಾಗುತ್ತದೆ.
ಅಪ್ರಮಾದೇನ ಶಿಕ್ಷೇಥಾಃ ಕ್ಷಮಾಂ ಬುದ್ಧಿಂ ಧೃತಿಂ ಮತಿಮ್ |
ಭೂತಾನಾಂ ಸತ್ತ್ವಜಿಜ್ಞಾಸಾಂ ಸಾಧ್ವಸಾಧು ಚ ಸರ್ವದಾ ॥46॥
ಕ್ಷಮೆ, ಸದ್ಬುದ್ಧಿ, ಧೈರ್ಯ, ಸ್ಮೃತಿ, ಪ್ರಜೆಗಳ ಬಲಾಬಲಜಿಜ್ಞಾಸೆ, ಸಜ್ಜನರ ಮತ್ತು ಅಸಜ್ಜನರ ಜಿಜ್ಞಾಸೆ ಇವುಗಳನ್ನು ಯಾವಾಗಲೂ ಎಚ್ಚರಿಕೆಯಿಂದ ಮಾಡ- ಬೇಕು.
ಸಂಗ್ರಹಃ ಸರ್ವಭೂತಾನಾಂ ದಾನಂ ಚ ಮಧುರಾ ಚ ವಾಕ್ |
ಪೌರಜಾನಪದಾಶ್ಚೈವ ಗೋಪ್ತವ್ಯಾಃ ಸ್ವಾ ಯಥಾ ಪ್ರಜಾಃ ॥47॥
ಎಲ್ಲ ಪ್ರಜೆಗಳನ್ನೂ ಸಂಗ್ರಹಿಸಬೇಕು, ದಾನ ಮಾಡಬೇಕು, ಮಧುರವಾಗಿ ಮಾತನಾಡಬೇಕು. ಪೌರಜಾನಪದರನ್ನು ತನ್ನ ಮಕ್ಕಳಂತೆ ರಕ್ಷಿಸಬೇಕು.
ನ ಜಾತ್ವದಕ್ಷೋ ನೃಪತಿಃ ಪ್ರಜಾಃ ಶಕ್ನೋತಿ ರಕ್ಷಿತುಮ್ |
ಭಾರೋ ಹಿ ಸುಮಹಾಂಸ್ತಾತ ರಾಜ್ಯಂ ನಾಮ ಸುದುಷ್ಕರಮ್ ॥48॥
ಅದಕ್ಷನಾದ ರಾಜನು ಪ್ರಜೆಗಳನ್ನು ರಕ್ಷಿಸಲು ಎಂದೂ ಸಮರ್ಥನಾಗುವುದಿಲ್ಲ. ಎಲೈ ಪ್ರೀತಿಪಾತ್ರನೇ! ಏಕೆಂದರೆ, ರಾಜ್ಯವು ಹೊರಲು ಕಷ್ಟಸಾಧ್ಯವಾದ ದೊಡ್ಡ ಭಾರ.
ತದ್ ದಂಡವನ್ನೃಪಃ ಪ್ರಾಜ್ಞಃ ಶೂರಃ ಶಕ್ನೋತಿ ರಕ್ಷಿತುಮ್ |
ನ ಹಿ ಶಕ್ಯಮದಂಡೇನ ಕ್ಲೀಬೇನಾಬುದ್ಧಿನಾಪಿ ವಾ ॥49॥
ದಂಡನೀತಿಯನ್ನು ತಿಳಿದ ಪ್ರಾಜ್ಞನೂ, ಶೂರನೂ ಆದ ರಾಜನು ರಕ್ಷಿಸಲು ಸಮರ್ಥನಾಗುತ್ತಾನೆ. ದಂಡನೀತಿಯನ್ನು ತಿಳಿಯದ ಶೂರನಲ್ಲದ ಬುದ್ಧಿಹೀನನಾದ ರಾಜನಿಂದ ಪ್ರಜೆಗಳ ರಕ್ಷಣೆಯು ಸಾಧ್ಯವಿಲ್ಲ.
ಅಭಿರೂಪೈಃ ಕುಲೇ ಜಾತೈರ್ದಕ್ಷೈರ್ಭಕ್ತೈರ್ಬಹುಶ್ರುತೈಃ |
ಸರ್ವಾ ಬುದ್ಧೀಃ ಪರೀಕ್ಷೇಥಾಸ್ತಾಪಸಾಶ್ರಮಿಣಾಮಪಿ ॥50॥
ಸತ್ಕುಲಪ್ರಸೂತರಾದ, ಯೋಗ್ಯವಾದ ರೂಪವನ್ನು ಹೊಂದಿದ, ದಕ್ಷರಾದ, ಬಹುಶ್ರುತರಾದ, ಅನುರಕ್ತರಾದ ಅಧಿಕಾರಿಗಳಿಂದ ಆಶ್ರಮವಾಸಿಗಳ ಮತ್ತು ತಾಪಸರ ಬುದ್ಧಿಗಳನ್ನೂ ಸೇರಿ ಎಲ್ಲರ ಬುದ್ಧಿಗಳನ್ನೂ ಪರೀಕ್ಷಿಸಬೇಕು.
ತತಸ್ತ್ವಂ ಸರ್ವಭೂತಾನಾಂ ಧರ್ಮಂ ವೇತ್ಸ್ಯಸಿ ವೈ ಪರಮ್ |
ಸ್ವದೇಶೇ ಪರದೇಶೇ ವಾ ನ ತೇ ಧರ್ಮೋ ವಿನಶ್ಯತಿ ॥51॥
ಆಗ ನೀನು ಎಲ್ಲ ಪ್ರಜೆಗಳ ಶ್ರೇಷ್ಠವಾದ ಧರ್ಮವನ್ನು ತಿಳಿಯುವಿ. ಸ್ವದೇಶದ- ಲ್ಲಾಗಲೀ ಹೊರದೇಶದಲ್ಲಾಗಲೀ ನಿನ್ನ ಧರ್ಮವು ವಿನಾಶವನ್ನು ಹೊಂದುವುದಿಲ್ಲ.

ಧರ್ಮೇ ಚಾರ್ಥೇ ಚ ಕಾಮೇ ಚ ಧರ್ಮ ಏವೋತ್ತರೋ ಭವೇತ್ |
ಅಸ್ಮಿಂಲ್ಲೋಕೇ ಪರೇ ಚೈವ ಧರ್ಮವಿತ್ ಸುಖಮೇಧತೇ ||52||
ಧರ್ಮಾರ್ಥಕಾಮಗಳಲ್ಲಿ ಧರ್ಮವೇ ಶ್ರೇಷ್ಠವಾದುದು; ಧರ್ಮವನ್ನು ಸಂಪಾ- ದಿಸುವವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಹೊಂದು- ತ್ತಾನೆ.
ತ್ಯಜಂತಿ ದಾರಾನ್ ಪ್ರಾಣಾಂಶ್ಚ ಮನುಷ್ಯಾಃ ಪ್ರತಿಪೂಜಿತಾಃ ||53||
ಪ್ರಜೆಗಳನ್ನು ಸರಿಯಾಗಿ ಪೂಜಿಸಿದರೆ ಅವರು ರಾಜನ ಸಲುವಾಗಿ ಪತ್ನಿಯ- ರನ್ನೂ, ಪ್ರಾಣವನ್ನೂ ತೊರೆಯುತ್ತಾರೆ.
ಅಪ್ರಮಾದಶ್ಚ ಶೌಚಂ ಚ ತಾತ ಭೂತಿಕರಂ ಮಹತ್ |
ಏತೇಭ್ಯಶ್ಚೈವ ಮಾಂಧಾತಃ ಸತತಂ ಮಾ ಪ್ರಮಾದಿಥಾಃ ||54||
ಎಲೈ ಪ್ರೀತಿಪಾತ್ರನೇ! ಅಪ್ರಮಾದ ಮತ್ತು ಶೌಚ ಇವು ಏಳಿಗೆಗೆ ದೊಡ್ಡ ಕಾರಣವಾದವುಗಳು. ಎಲೈ ಮಾಂಧಾತೃವೇ! ಇವುಗಳ ವಿಷಯದಲ್ಲಿ ಎಂದೂ ಪ್ರಮಾದವನ್ನು ಮಾಡಬೇಡ.
ಅಪ್ರಮತ್ತೋ ಭವೇದ್ ರಾಜಾ ಛಿದ್ರದರ್ಶೀ ಪರಾತ್ಮನೋಃ |
ನಾಸ್ಯ ಚ್ಛಿದ್ರಂ ಪರಃ ಪಶ್ಯೇಚ್ಛಿದ್ರೇಷು ಪರಮನ್ವಿಯಾತ್ ||55||
ರಾಜನು ಯಾವಾಗಲೂ ಎಚ್ಚರಿಕೆಯಿಂದಿದ್ದು, ಶತ್ರುಗಳ ಮತ್ತು ತನ್ನ ದೌರ್ಬಲ್ಯವನ್ನು ಗಮನಿಸಬೇಕು. ತನ್ನ ದೌರ್ಬಲ್ಯಗಳು ಇನ್ನೊಬ್ಬರಿಗೆ ತಿಳಿಯದಂತೆ ಶತ್ರುವಿನ ದೌರ್ಬಲ್ಯವನ್ನು ಗಮನಿಸಿ ಅವನ ಮೇಲೆ ಎರಗಬೇಕು.
ಏತದ್ ವೃತ್ತಂ ವಾಸವಸ್ಯ ಯಮಸ್ಯ ವರುಣಸ್ಯ ಚ |
ರಾಜರ್ಷೀಣಾಂ ಮಹಾರಾಜ ವೃತ್ತಂ ರಾಜರ್ಷಿಸೇವಿತಮ್ ||56||
ಎಲೈ ಮಹಾರಾಜನೇ! ಇದು ಇಂದ್ರನ, ಯಮನ, ವರುಣನ ಮತ್ತು ರಾಜರ್ಷಿಗಳ ನಡವಳಿಕೆ. ಈ ನಡವಳಿಕೆಯು ರಾಜರ್ಷಿಗಳಿಂದ ಸೇವಿತವಾದುದು.
ತತ್ ಕುರುಷ್ವ ಮಹಾರಾಜ ವೃತ್ತಂ ರಾಜರ್ಷಿಸೇವಿತಮ್ |
ಆತಿಷ್ಠ ದಿವ್ಯಂ ಪಂಥಾನಮಹ್ನಾಯ ಭರತರ್ಷಭ ||57||
ಎಲೈ ಮಹಾರಾಜನೇ! ರಾಜರ್ಷಿಗಳಿಂದ ಸೇವಿತವಾದ ಅಂತಹ ನಡತೆಯನ್ನು ಹೊಂದಿ, ಎಲೈ ಭರತರ್ಷಭನೇ ನಿಶ್ಚಯವಾಗಿ ದಿವ್ಯಮಾರ್ಗದಲ್ಲಿ ಹೋಗುವವ- ನಾಗು.
ಧರ್ಮವೃತ್ತಂ ಹಿ ರಾಜಾನಂ ಪ್ರೇತ್ಯ ಚೇಹ ಚ ಭಾರತ |
ದೇವರ್ಷಿಪಿತೃಗಂಧರ್ವಾಃ ಕೀರ್ತಯಂತ್ಯಮಿತೌಜಸಃ ||58||
ಎಲೈ ಭಾರತನೇ! ಧರ್ಮವನ್ನು ಅನುಸರಿಸುವ ರಾಜನನ್ನು ಈ ಲೋಕ- ದಲ್ಲಿಯೂ ಮತ್ತು ಪರಲೋಕದಲ್ಲಿಯೂ ಅಮಿತಪರಾಕ್ರಮಿಗಳಾದ ದೇವರ್ಷಿ- ಪಿತೃ-ಗಂಧರ್ವರು ಕೀರ್ತಿಸುತ್ತಾರೆ.
ಸ ಏವಮುಕ್ತೋ ಮಾಂಧಾತಾ ತೇನೋಚಥ್ಯೇನ ಭಾರತ |
ಕೃತವಾನವಿಶಂಕಸ್ತದೇಕಃ ಪ್ರಾಪ ಚ ಮೇದಿನೀಮ್ ||59||
ಎಲೈ ಭಾರತನೇ! ಉಚಥ್ಯರಿಂದ ಹೀಗೆ ಹೇಳಲ್ಪಟ್ಟ ಮಾಂಧಾತೃವು ನಿಃಶಂಕೆ- ಯಿಂದ ಹಾಗೆಯೇ ಮಾಡಿ ಒಬ್ಬನೇ ಸಮಗ್ರವಾದ ಭೂಮಿಯನ್ನು ಪಡೆದನು.
ಭವಾನಪಿ ತಥಾ ಸಮ್ಯಕ್ ಮಾಂಧಾತೇವ ಮಹೀಪತಿಃ |
ಧರ್ಮಂ ಕೃತ್ವಾ ಮಹೀಂ ರಕ್ಷನ್ ಸ್ವರ್ಗೇ ಸ್ಥಾನಮವಾಪ್ಸ್ಯಸಿ ||60||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿನವತಿತಮೋಽಧ್ಯಾಯಃ ||93||
ನೀನೂ ಸಹ ಮಾಂಧಾತೃರಾಜನಂತೆ ಧರ್ಮವನ್ನು ಚೆನ್ನಾಗಿ ಆಚರಿಸಿ, ಭೂಮಿ- ಯನ್ನು ಚೆನ್ನಾಗಿ ರಕ್ಷಿಸಿ, ಸ್ವರ್ಗದಲ್ಲಿ ಸ್ಥಾನವನ್ನು ಹೊಂದುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 93ನೆಯ ಅಧ್ಯಾಯವು ಮುಗಿಯಿತು.
0
94. ತೊಂಬತ್ತನಾಲ್ಕನೆಯ ಅಧ್ಯಾಯ
ವಾಮದೇವವಸುಮನಸ್ ಸಂವಾದದಲ್ಲಿ ರಾಜಧರ್ಮಕಥನ
ಯುಧಿಷ್ಠಿರಃ
ಕಥಂ ಧರ್ಮೇ ಸ್ಥಾತುಮಿಚ್ಛನ್ ರಾಜಾ ವರ್ತೇತ ಧಾರ್ಮಿಕಃ |
ಪೃಚ್ಛಾಮಿ ತ್ವಾ ಕುರುಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲೈ ಪಿತಾಮಹನೇ! ಕುರುಶ್ರೇಷ್ಠನೇ! ಧರ್ಮದಲ್ಲಿ ಇರಲು ಬಯಸುವ ಧಾರ್ಮಿಕನಾದ ರಾಜನು ಹೇಗೆ ನಡೆದುಕೊಳ್ಳಬೇಕೆಂದು ನಿನ್ನನ್ನು ಕೇಳುತ್ತಿದ್ದೇನೆ. ಅದನ್ನು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ದೃಷ್ಟಾರ್ಥತತ್ತ್ವೇನ ವಾಮದೇವೇನ ಧೀಮತಾ ||2||
ಭೀಷ್ಮರು ಈ ವಿಷಯದಲ್ಲಿಯೂ ಸಹ ಸರ್ವಜ್ಞರೂ ಮೇಧಾವಿಗಳೂ ಆದ ವಾಮದೇವ ಋಷಿಗಳು ಹಾಡಿದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.

ರಾಜಾ ವಸುಮನಾ ನಾಮ ಕೌಸಲ್ಯೋ ಬಲವಾನ್ ಶುಚಿಃ |
ಮಹರ್ಷಿಂ ಪರಿಪಪ್ರಚ್ಛ ವಾಮದೇವಂ ಯಶಸ್ವಿನಮ್ ॥3॥
ಕೋಸಲದೇಶದ ರಾಜನಾದ, ಬಲಿಷ್ಠನೂ, ಶುಚಿಯೂ ಆದ ವಸುಮನನು ಕೀರ್ತಿಶಾಲಿಗಳಾದ ವಾಮದೇವಮಹರ್ಷಿಗಳನ್ನು ಪ್ರಶ್ನೆ ಮಾಡಿದನು.
ಧರ್ಮಾರ್ಥಸಹಿತಂ ವಾಕ್ಯಂ ಭಗವನ್ನನುಶಾಧಿ ಮಾಮ್ |
ಯೇನ ವೃತ್ತೇನ ವೈ ತಿಷ್ಠನ್ ನ ಚ್ಯವೇಯಂ ಸ್ವಧರ್ಮತಃ ॥4॥
ಪೂಜ್ಯರೇ! ಧರ್ಮಾರ್ಥಸಹಿತವಾದ ವಚನಗಳನ್ನು ನನಗೆ ಉಪದೇಶ ಮಾಡಿ. ಎಂತಹ ನಡತೆಯನ್ನು ಅಡವಳಿಸಿಕೊಂಡರೆ ನಾನು ನನ್ನ ಧರ್ಮದಿಂದ ಚ್ಯುತ- ನಾಗುವುದಿಲ್ಲವೋ ಅಂತಹ ಮಾತನ್ನು ಹೇಳಿರಿ. (ಎಂದು ಕೇಳಿದನು).
ತಮಬ್ರವೀದ್ ವಾಮದೇವಸ್ತಪಸ್ವೀ ಜಪತಾಂವರಃ |
ಹೇಮವರ್ಣಂ ಸುಖಾಸೀನಂ ಯಯಾತಿಮಿವ ನಾಹುಷಮ್ ॥5॥
ಆಗ ತಪಸ್ವಿಗಳೂ ಜಪವನ್ನು ಮಾಡುವವರಲ್ಲಿ ಶ್ರೇಷ್ಠರೂ ಆದ ವಾಮ- ದೇವರು ನಹುಷಪುತ್ರನಾದ ಯಯಾತಿಯಂತೆ ಸುವರ್ಣವರ್ಣನಾಗಿ ಸುಖಾಸೀನ- ನಾಗಿದ್ದ ಅವನನ್ನು ಕುರಿತು ಹೇಳಿದರು.
ಧರ್ಮಮೇವಾನುವರ್ತಸ್ವ ನ ಧರ್ಮಾದ್ ವಿದ್ಯತೇ ಪರಮ್ |
ಧರ್ಮೇ ಸ್ಥಿತಾ ಹಿ ರಾಜಾನೋ ಜಯಂತಿ ಪೃಥಿವೀಮಿಮಾಮ್ ॥6॥
ಧರ್ಮವನ್ನೇ ಅನುಸರಿಸು, ಧರ್ಮಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಧರ್ಮವನ್ನು ಆಚರಿಸುವ ರಾಜರು ಈ ಭೂಮಿಯನ್ನು ಗೆಲ್ಲುತ್ತಾರೆ.
ಅರ್ಥಸಿದ್ಧೇಃ ಪರಂ ಧರ್ಮಂ ಮನ್ಯತೇ ಯೋ ಮಹೀಪತಿಃ |
ಋತಾಂ ಚ ಕುರುತೇ ಬುದ್ಧಿಂ ಸ ಧರ್ಮೇಣ ವಿರೋಚತೇ ॥7॥
ಅರ್ಥಸಿದ್ಧಿಗಿಂತಲೂ ಧರ್ಮಸಿದ್ಧಿಯೇ ಶ್ರೇಷ್ಠವೆಂದು ಯಾವ ರಾಜನು ತಿಳಿ- ಯುತ್ತಾನೆಯೋ ಅಂತಹ ಸತ್ಯವಾದ ಬುದ್ಧಿಯನ್ನು ಹೊಂದಿದ ರಾಜನು ಧರ್ಮ- ದಿಂದ ವಿರಾಜಿಸುತ್ತಾನೆ.
ಅಧರ್ಮದರ್ಶೀ ಯೋ ರಾಜಾ ಬಲಾದೇವ ಪ್ರವರ್ತತೇ |
ಕ್ಷಿಪ್ರಮೇವಾಪಯಾತೋಽಸ್ಮಾದುಭೌ ಪ್ರಥಮಮಧ್ಯಮೌ ॥8॥
ಧರ್ಮಜ್ಞಾನವಿಲ್ಲದೇ ಯಾವ ರಾಜನು ಕೇವಲ ಬಲದಿಂದಲೇ ಪ್ರವೃತ್ತಿಯನ್ನು ಮಾಡುತ್ತಾನೆಯೋ ಅವನು ಶೀಘ್ರವಾಗಿ ಧರ್ಮವನ್ನೂ ಮತ್ತು ಮಧ್ಯಮವಾದ ಅರ್ಥಕಾಮಗಳನ್ನೂ ಕಳೆದುಕೊಳ್ಳುತ್ತಾನೆ.
ಅಸತ್ಪಾಪಿಷ್ಠಸಚಿವೋ ವಧ್ಯೋ ಲೋಕಸ್ಯ ಧರ್ಮಹಾ |
ಸಹೈವ ಪರಿವಾರೇಣ ಕ್ಷಿಪ್ರಮೇವಾವಸೀದತಿ ॥9॥
ದುರ್ಜನನೂ ಪಾಪಿಷ್ಠನೂ ಧರ್ಮಘಾತಕನೂ ಆದ ಸಚಿವನು (ಸಚಿವನನ್ನು ಹೊಂದಿದ ರಾಜನು) ಲೋಕದಲ್ಲಿ ವಧ್ಯನಾಗುತ್ತಾನೆ. ಅವನು ಪರಿವಾರಸಹಿತನಾಗಿ ಶೀಘ್ರವಾಗಿ ನಾಶವನ್ನು ಹೊಂದುತ್ತಾನೆ.
ಅರ್ಥಾನಾಮನನುಷ್ಠಾತಾ ಕಾಮಚಾರೀ ವಿಕತ್ಥನಃ |
ಅಪಿ ಸರ್ವಾಂ ಮಹೀಂ ಲಬ್ಧ್ವಾ ಕ್ಷಿಪ್ರಮೇವ ವಿನಶ್ಯತಿ ॥10॥
ಪ್ರಜೆಗಳ ಅರ್ಥಗಳನ್ನು ಅನುಷ್ಠಾನ ಮಾಡದ ಕಾಮಚಾರಿಯೂ, ತನ್ನನ್ನೇ ತಾನು ಹೊಗಳಿಕೊಳ್ಳುವವನೂ ಆದ ರಾಜನು ಸಮಗ್ರವಾದ ಭೂಮಿಯನ್ನು ಪಡೆ- ದರೂ ಕ್ಷಿಪ್ರವಾಗಿ ನಾಶವನ್ನು ಹೊಂದುತ್ತಾನೆ.
ಅಥಾದದಾನಃ ಕಲ್ಯಾಣಮನಸೂಯುರ್ಜಿತೇಂದ್ರಿಯಃ |
ವರ್ಧತೇ ಮತಿಮಾನ್ ರಾಜಾ ಸ್ರೋತೋಭಿರಿವ ಸಾಗರಃ ॥11॥
ಹಾಗಲ್ಲದೇ ಇನ್ನೊಬ್ಬರ ಹಿತವಚನವನ್ನು ಕೇಳಿ, ಜಿತೇಂದ್ರಿಯನಾಗಿ, ಅಸೂಯಾ -ರಹಿತನಾಗಿ ಶುಭವನ್ನು ಆಚರಿಸುವ ಬುದ್ಧಿವಂತನಾದ ರಾಜನು ನದಿಗಳ ಪ್ರವಾಹ- ದಿಂದ ಸಾಗರವು ಉಕ್ಕುವಂತೆ ಅಭಿವೃದ್ಧಿಯನ್ನು ಪಡೆಯುತ್ತಾನೆ.
ನ ಪೂರ್ಣೋಽಸ್ಮೀತಿ ಮನ್ಯೇತ ಧರ್ಮತಃ ಕಾಮತೋಽರ್ಥತಃ |
ಬುದ್ಧಿತೋ ಮಿತ್ರತಶ್ಚಾಪಿ ಸತತಂ ವಸುಧಾಧಿಪಃ ॥12॥
ರಾಜನು ಧರ್ಮದಿಂದಾಗಲೀ, ಕಾಮದಿಂದಾಗಲೀ, ಅರ್ಥದಿಂದಾಗಲೀ, ಬುದ್ಧಿ -ಯಿಂದಾಗಲೀ, ಮಿತ್ರರಿಂದಾಗಲೀ ನಾನು ಪರಿಪೂರ್ಣನಾಗಿದ್ದೇನೆಂದು ಎಂದೂ ಚಿಂತಿಸಬಾರದು.
ಏತೇಷ್ವೇವ ಹಿ ಸರ್ವೇಷು ಲೋಕಯಾತ್ರಾ ಪ್ರತಿಷ್ಠಿತಾ |
ಏತಾನಿ ಶೃಣ್ವನ್ ಲಭತೇ ಯಶಃ ಕೀರ್ತಿಂ ಶ್ರಿಯಃ ಪ್ರಜಾಃ ॥13॥
ಇವುಗಳಲ್ಲಿಯೇ ಲೋಕಯಾತ್ರೆಯು ಪ್ರತಿಷ್ಠಿತವಾಗಿದೆ. ಇವುಗಳನ್ನು ಕೇಳಿ ಅದರಂತೆ ನಡೆದುಕೊಳ್ಳುವ ರಾಜನು ಈ ಲೋಕದಲ್ಲಿ ಯಶಸ್ಸನ್ನೂ, ಸಂಪತ್ತನ್ನೂ, ಪ್ರಜೆಗಳನ್ನೂ ಪರಲೋಕದಲ್ಲಿ ಕೀರ್ತಿಯನ್ನೂ ಪಡೆಯುತ್ತಾನೆ.
ಏವಂ ಯೋ ಧರ್ಮಸಂರಂಭೀ ಧರ್ಮಾರ್ಥಪರಿಚಿಂತಕಃ |
ಅರ್ಥಾನ್ ಸಮೀಕ್ಷ್ಯಾರಭತೇ ಸ ಧ್ರುವಂ ಮಹದಶ್ನುತೇ ॥14॥
ಈ ರೀತಿಯಲ್ಲಿ ಧರ್ಮದಲ್ಲಿ ಹಠವುಳ್ಳವನಾಗಿ ಧರ್ಮಾರ್ಥಗಳನ್ನು ಚೆನ್ನಾಗಿ ಚಿಂತಿಸಿ ಅರ್ಥಗಳನ್ನು ವಿಮರ್ಶಿಸಿ ಆರಂಭಿಸುವನು ನಿಶ್ಚಿತವಾಗಿ ದೊಡ್ಡದನ್ನು ಸಾಧಿ-ಸುತ್ತಾನೆ.
ಅದಾತಾ ಹ್ಯನತಿಸ್ನೇಹೋ ದಂಡೇನಾವರ್ತಯನ್ ಪ್ರಜಾಃ |
ಸಾಹಸಪ್ರಕೃತೀ ರಾಜಾ ಕ್ಷಿಪ್ರಮೇವ ವಿನಶ್ಯತಿ ॥15॥

ದಾನವನ್ನು ಮಾಡದ, ಪ್ರಜೆಗಳಲ್ಲಿ ಬಹಳ ಸ್ನೇಹವನ್ನು ಹೊಂದದ, ಪ್ರಜೆಗಳಿಗೆ ದಂಡವನ್ನು ವಿಧಿಸುವ ಸಾಹಸಪ್ರಕೃತಿಯ ರಾಜನು ಶೀಘ್ರವಾಗಿ ವಿನಾಶವನ್ನು ಹೊಂದುತ್ತಾನೆ.
ಅಥ ಪಾಪಂ ಕೃತಂ ಬುದ್ಧ್ವಾ ನ ಚ ಪಶ್ಯತ್ಯಬುದ್ಧಿಮಾನ್ |
ಅಕೀರ್ತ್ಯಾಪಿ ಸಮಾಯುಕ್ತೋ ಮೃತೋ ನರಕಮಶ್ನುತೇ ||16||
ಅಲ್ಲದೇ ಪಾಪವನ್ನು ಮಾಡಿ, ತನ್ನ ಬುದ್ಧಿಯಿಂದ ವಿಮರ್ಶಿಸಿ ಇದು ಪಾಪ- ವೆಂದು ತಿಳಿಯದ ಬುದ್ಧಿಹೀನನಾದ ರಾಜನು ಅಪಕೀರ್ತಿಯಿಂದಲೂ ಕೂಡಿದ- ವನಾಗಿ ಮೃತನಾಗಿ ನರಕವನ್ನು ಹೊಂದುತ್ತಾನೆ.
ಅಥ ಮಾನಯಿತುರ್ದಾತುಃ ಶುಕ್ಲಸ್ಯ ರಸವೇದಿನಃ |
ವ್ಯಸನಂ ಸ್ವಮಿವೋತ್ಪನ್ನಂ ವಿಜಿಘಾಂಸಂತಿ ಮಾನವಾಃ ||17||
ಇನ್ನು ಪ್ರಜೆಗಳನ್ನು ಸನ್ಮಾನಿಸುವ, ಪ್ರಜೆಗಳಿಗೆ ದಾನವನ್ನು ಮಾಡುವ, ಶುದ್ಧನಾದ, ಸಾರಗ್ರಾಹಿಯಾದ ರಾಜನಿಗೆ ಉಂಟಾಗುವ ವ್ಯಸನವನ್ನು ಪ್ರಜೆಗಳು ತಮ್ಮ ವ್ಯಸನವೆಂದೇ ತಿಳಿದು ಅದನ್ನು ಪರಿಹರಿಸಲು ಬಯಸುತ್ತಾರೆ.
ಯಸ್ಯ ನಾಸ್ತಿ ಗುರುರ್ಧರ್ಮೇ ನ ಚಾನ್ಯಾನನುಪೃಚ್ಛತಿ |
ಸುಖತಂತ್ರೋಽರ್ಥಲಾಭೇಷು ನ ಚಿರಂ ಮಹದಶ್ನುತೇ ||18||
ಯಾವನಿಗೆ ಧರ್ಮವನ್ನು ಉಪದೇಶಿಸುವ ಗುರುವಿಲ್ಲವೋ, ಅಥವಾ ಅವನು ಇನ್ನೊಬ್ಬರನ್ನು ಕೇಳುವುದಿಲ್ಲವೋ, ಸುಖದಿಂದ ಪ್ರೇರಿತನಾಗಿ ಅರ್ಥಲಾಭದಲ್ಲಿ ಆಸಕ್ತನಾಗಿರುತ್ತಾನೆಯೋ ಅವನು ಬಹಳಕಾಲ ಯಾವ ದೊಡ್ಡದನ್ನೂ ಅನು- ಭವಿಸುವುದಿಲ್ಲ.
ಗುರುಪ್ರಧಾನೋ ಧರ್ಮೇಷು ಸ್ವಯಮರ್ಥಾನ್ವವೇಕ್ಷಿತಾ |
ಧರ್ಮಪ್ರಧಾನೋ ಲೋಕೇಷು ಸುಚಿರಂ ಮಹದಶ್ನುತೇ ||19||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರ್ನವತಿತಮೋಽಧ್ಯಾಯಃ ||94||
ಧರ್ಮದ ವಿಷಯದಲ್ಲಿ ಗುರುಗಳ ಉಪದೇಶವನ್ನು ಪ್ರಧಾನವಾಗಿ ಹೊಂದಿ, ಅರ್ಥಗಳನ್ನು ತಾನೇ ಪರೀಕ್ಷಿಸಿ, ಧರ್ಮಪ್ರಧಾನನಾದ ರಾಜನು ಲೋಕದಲ್ಲಿ ಬಹುಕಾಲ ಶ್ರೇಷ್ಠವಾದುದನ್ನು ಪಡೆಯುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 94ನೆಯ ಅಧ್ಯಾಯವು ಮುಗಿಯಿತು.
0

95. ತೊಂಬತ್ತೈದನೆಯ ಅಧ್ಯಾಯ
ವಾಮದೇವವಸುಮನಸ್ ಸಂವಾದ
ವಾಮದೇವಃ
ಯತ್ರಾಧರ್ಮಂ ಪ್ರಣಯತೇ ದುರ್ಬಲೇ ಬಲವತ್ತರಃ |
ತಾಂ ವೃತ್ತಿಮುಪಜೀವಂತಿ ಯೇ ಭವಂತಿ ತದನ್ವಯಾಃ ||1||
ರಾಜಾನಮನುವರ್ತಂತೇ ತಂ ಪಾಪಾಭಿಪ್ರವರ್ತಕಮ್ |
ಅವಿನೀತಮನುಷ್ಯಂ ತತ್ ಕ್ಷಿಪ್ರಂ ರಾಷ್ಟ್ರಂ ವಿನಶ್ಯತಿ ||2||
ವಾಮದೇವ ಎಲ್ಲಿ ಬಲಿಷ್ಠನಾದ ರಾಜನು ದುರ್ಬಲನಾದವನ ಮೇಲೆ ಅಧರ್ಮವನ್ನು ಪ್ರಯೋಗಿಸುತ್ತಾನೆಯೋ ಮತ್ತು ರಾಜಕುಲಕ್ಕೆ ಸೇರಿದವರು ಅದೇ ನಡತೆಯನ್ನು ಉಪಜೀವಿಸುತ್ತಾರೆಯೋ ಮತ್ತು ಪ್ರಜೆಗಳು ಪಾಪಪ್ರವರ್ತಕನಾದ ರಾಜನನ್ನು ಅನುಸರಿಸುತ್ತಾರೆಯೋ ಅಂತಹ ಅವಿನೀತರಾದ ಮನುಷ್ಯರಿಗಿರುವ ರಾಷ್ಟ್ರವು ಶೀಘ್ರವಾಗಿ ವಿನಾಶವನ್ನು ಹೊಂದುತ್ತದೆ.
ಯದ್ವೃತ್ತಿಮುಪಜೀವಂತಿ ಪ್ರಕೃತಿಸ್ಥಸ್ಯ ಮಾನವಾಃ |
ತದೇವ ವಿಷಮಸ್ಥಸ್ಯ ಸ್ವಜನೋಽಪಿ ನ ಮೃಷ್ಯತೇ ||3||
ಮನುಷ್ಯರು ಸಂವೃದ್ಧನಾದವನ ಯಾವ ನಡತೆಯನ್ನು ಉಪಜೀವಿಸಿಕೊಂಡು ಬದುಕುತ್ತಾರೆಯೋ ಆ ವ್ಯಕ್ತಿಯು ವಿಷಮಸನ್ನಿವೇಶಕ್ಕೆ ಒಳಗಾದಾಗ ಅದೇ ಮಾನವರು ಮತ್ತು ಸ್ವಜನರು ಅದೇ ನಡತೆಯನ್ನು ಸಹಿಸುವುದಿಲ್ಲ.
ಸಾಹಸಪ್ರಕೃತಿರ್ಯತ್ರ ಕುರುತೇ ಕಿಂಚಿದುಲ್ಬಣಮ್ |
ಅಶಾಸ್ತ್ರಲಕ್ಷಣೋ ರಾಜಾ ಕ್ಷಿಪ್ರಮೇವ ವಿನಶ್ಯತಿ ||4||
ವಿಚಾರಮಾಡದೇ ಕಾರ್ಯವನ್ನು ಮಾಡುವ ರಾಜನು ಶಾಸ್ತ್ರವಿಹಿತವಲ್ಲದ ಒಂದು ಉಲ್ಬಣವಾದ ಕಾರ್ಯವನ್ನು ಮಾಡಿದರೆ ತತ್ಕ್ಷಣ ನಾಶವನ್ನು ಹೊಂದು- ತ್ತಾನೆ.
ಯೋಽತ್ಯಂತಾಚರಿತಾಂ ವೃತ್ತಿಂ ಕ್ಷತ್ರಿಯೋ ನಾನುವರ್ತತೇ |
ಜಿತಾನಾಮಜಿತಾನಾಂ ಚ ಕ್ಷತ್ರಧರ್ಮಾದಪೈತಿ ಸಃ ||5||
ಯಾವ ರಾಜನು ಯುದ್ಧದಲ್ಲಿ ಜಿತರಾದವರ ಮತ್ತು ಜಿತರಾಗದವರ ವಿಷಯದಲ್ಲಿ ಹಿಂದಿನಿಂದ ನಡೆಸಿಕೊಂಡು ಬಂದ ವೃತ್ತಿಯನ್ನು ಅನುಸರಿಸುವು- ದಿಲ್ಲವೋ ಅವನು ಕ್ಷತ್ರಿಯಧರ್ಮದಿಂದ ದೂರನಾಗುತ್ತಾನೆ.
ದ್ವಿಷಂತಂ ಕೃತಕಲ್ಯಾಣಂ ಗೃಹೀತ್ವಾ ನೃಪತೀ ರಣೇ |
ಯೋ ನ ಮಾನಯತೇ ದ್ವೇಷಾತ್ ಕ್ಷತ್ರಧರ್ಮಾದಪೈತಿ ಸಃ ||6||
ತನ್ನ ರಾಜ್ಯದಲ್ಲಿ ಪ್ರಜೆಗಳಿಗೆ ಶುಭವನ್ನು ಮಾಡಿದ ಶತ್ರುರಾಜನನ್ನು ಯುದ್ಧದಲ್ಲಿ ಸೆರೆ ಹಿಡಿದು ಯಾವ ರಾಜನು ದ್ವೇಷದಿಂದ ಅವನನ್ನು ಸತ್ಕರಿಸುವುದಿಲ್ಲವೋ ಅವನು ಕ್ಷತ್ರಿಯಧರ್ಮದಿಂದ ಚ್ಯುತನಾಗುತ್ತಾನೆ.
ಶಕ್ತಃ ಸ್ಯಾತ್ ಸುಮುಖೋ ರಾಜಾ ಕುರ್ಯಾತ್ ಕಾರುಣ್ಯಮಾಪದಿ |

ಪ್ರಿಯೋ ಭವತಿ ಭೂತಾನಾಂ ನ ಚ ವಿಭ್ರಶ್ಯತೇ ಶ್ರಿಯಃ ॥7॥
ಶಕ್ತನಾದ ರಾಜನು ಪ್ರಸನ್ನಮುಖನಾಗಿರಬೇಕು. ಆಪತ್ತಿನಲ್ಲಿ ಕರುಣೆಯನ್ನು ತೋರಿಸಬೇಕು. ಹಾಗೆ ಮಾಡಿದರೆ ಪ್ರಜೆಗಳಿಗೆ ಪ್ರಿಯನಾಗುತ್ತಾನೆ. ಮತ್ತು ಸಂಪತ್ತಿ- ನಿಂದ ಚ್ಯುತನಾಗುವುದಿಲ್ಲ.
ಅಪ್ರಿಯಂ ಯಸ್ಯ ಕುರ್ವೀತ ಭೂಯಸ್ತಸ್ಯ ಪ್ರಿಯಂ ಚರೇತ್ |
ನಚಿರೇಣ ಪ್ರಿಯಃ ಸ ಸ್ಯಾದ್ ಯೋಽಪ್ರಿಯಃ ಪ್ರಿಯಮಾಚರೇತ್ ॥8॥
ರಾಜನು ಹಿಂದೆ ಯಾವನಿಗಾದರೂ ಅಪ್ರಿಯವನ್ನು ಮಾಡಿದ್ದರೆ ಪುನಃ ಒಂದು ಒಳ್ಳೆಯ ಸಂದರ್ಭದಲ್ಲಿ ಅವನಿಗೆ ಪ್ರಿಯವನ್ನು ಮಾಡಬೇಕು. ಅಪ್ರಿಯನಿಗೂ ಪ್ರಿಯವನ್ನು ಮಾಡುವ ರಾಜನು ಶೀಘ್ರವಾಗಿ ಅವನಿಗೂ ಪ್ರಿಯನಾಗುತ್ತಾನೆ.
ಮೃಷಾವಾದಂ ಪರಿಹರೇತ್ ಕುರ್ಯಾತ್ ಪ್ರಿಯಮಯಾಚಿತಃ |
ನ ಚ ಕಾಮಾನ್ನ ಸಂರಂಭಾನ್ನ ದ್ವೇಷಾದ್ ಧರ್ಮಮುತ್ಸೃಜೇತ್ ॥9॥
ರಾಜನು ಸುಳ್ಳಾದ ಆಶ್ವಾಸನೆಗಳನ್ನು ಕೊಡುವುದನ್ನು ವರ್ಜಿಸಬೇಕು. ಪ್ರಾರ್ಥಿ -ತನಾಗದಿದ್ದರೂ ತಾನೇ ತಿಳಿದು ಪ್ರಜೆಗಳಿಗೆ ಹಿತವನ್ನು ಮಾಡಬೇಕು. ಕಾಮ- ದಿಂದಾಗಲೀ, ಕ್ರೋಧದಿಂದಾಗಲೀ, ದ್ವೇಷದಿಂದಾಗಲೀ ಧರ್ಮವನ್ನು ಬಿಡಬಾರದು.
ನಾಪತ್ರಪೇತ ಪ್ರಶ್ನೇಷು ನಾಭಿಭವ್ಯಾಂ ಗಿರಂ ಸೃಜೇತ್ |
ನ ತ್ವರೇತ ನ ಚಾಸೂಯೇತ್ ತಥಾ ಸಂಗೃಹ್ಯತೇ ಪರಃ ॥10॥
ಪ್ರಶ್ನೆಯನ್ನು ಕೇಳಿದರೆ ಹಿಂಜರಿಯಬಾರದು. ಇನ್ನೊಬ್ಬರು ನಿರಾಕರಿಸುವಂತಹ ಮಾತುಗಳನ್ನಾಡಬಾರದು. ತ್ವರೆಯಿಂದ ಏನನ್ನೂ ಮಾಡಬಾರದು. ಯಾರಲ್ಲೂ ಅಸೂಯೆಯನ್ನು ಮಾಡಬಾರದು. ಹಾಗೆ ಮಾಡಿದರೆ ಪರನು ರಾಜನಿಗೆ ವಶ- ನಾಗುತ್ತಾನೆ.
ಪ್ರಿಯೇ ನಾತಿಭೃಶಂ ಹೃಷ್ಯೇದಪ್ರಿಯೇ ನ ಚ ಸಂಜ್ವರೇತ್ |
ನ ಮುಹ್ಯೇತದರ್ಥಕೃಚ್ಛ್ರೇಷು ಪ್ರಜಾಹಿತಮನುಸ್ಮರನ್ ॥11॥
ಪ್ರಿಯವುಂಟಾದಾಗ ಬಹಳವಾಗಿ ಸಂತೋಷಪಡಬಾರದು. ಅಪ್ರಿಯವುಂಟಾ- ದಾಗ ವಿಹ್ವಲನಾಗಬಾರದು. ಕಷ್ಟಸಂದರ್ಭಗಳಲ್ಲಿ ಪ್ರಮಾದಕ್ಕೆ ಒಳಗಾಗಬಾರದು. ಪ್ರಜೆಗಳ ಹಿತವನ್ನು ಯಾವಾಗಲೂ ಚಿಂತಿಸಬೇಕು.
ಯಃ ಪ್ರಿಯಂ ಕುರುತೇ ನಿತ್ಯಂ ಗುಣತೋ ವಸುಧಾಧಿಪಃ |
ತಸ್ಯ ಕರ್ಮಾಣಿ ಸಿದ್ಧ್ಯಂತಿ ನ ಚ ಸಂತ್ಯಜ್ಯತೇ ಶ್ರಿಯಾ ॥12॥
ಯಾವ ರಾಜನು ತನ್ನ ಗುಣಗಳಿಂದ ಪ್ರಜೆಗಳಿಗೆ ನಿತ್ಯವೂ ಪ್ರಿಯವನ್ನು ಮಾಡುತ್ತಾನೆಯೋ ಅವನ ಕಾರ್ಯಗಳು ಸಿದ್ಧಿಸುತ್ತವೆ. ಮತ್ತು ಅವನು ಸಂಪತ್ತಿ- ನಿಂದ ಚ್ಯುತನಾಗುವುದಿಲ್ಲ.
ನಿವೃತ್ತಂ ಪ್ರತಿಕೂಲೇಭ್ಯೋ ವರ್ತಮಾನಮನುಪ್ರಿಯೇ |
ಭಕ್ತಂ ಭಜೇತ ನೃಪತಿಸ್ತದ್ ವೈ ವೃತ್ತಂ ಸತಾಮಿಹ ॥13॥
ತನಗೆ ಪ್ರತಿಕೂಲವನ್ನು ಮಾಡದೇ ತನ್ನ ಪ್ರಿಯದಲ್ಲಿ ನಿರತನಾದ ಅನುರಕ್ತನಾದ ವ್ಯಕ್ತಿಯನ್ನು ರಾಜನು ಆದರಿಸಬೇಕು. ಅದೇ ಸಜ್ಜನರ ನಡೆವಳಿಕೆ.
ಅಪ್ರಕೀರ್ಣೇಂದ್ರಿಯಂ ಪ್ರಾಜ್ಞಮತ್ಯಂತಾನುಗತಂ ಶುಚಿಮ್ |
ಶಕ್ತಂ ಚೈವಾನುರಕ್ತಂ ಚ ಯುಂಜ್ಯಾನ್ಮಹತಿ ಕರ್ಮಣಿ ॥14॥
ಇಂದ್ರಿಯಲೋಲುಪನಲ್ಲದ, ಪ್ರಾಜ್ಞನಾದ, ಅತ್ಯಂತವಾಗಿ ಹಿಂಬಾಲಿಸುವ, ಶುಚಿಯಾದ, ಸಮರ್ಥನಾದ, ಅನುರಾಗವುಳ್ಳ ಪುರುಷನನ್ನು ದೊಡ್ಡ ಕಾರ್ಯದಲ್ಲಿ ನಿಯೋಜಿಸಬೇಕು.
ಏವಮೇವ ಗುಣೈರ್ಯುಕ್ತೋ ಯೋ ನ ರಜ್ಯತಿ ಭೂಮಿಪಮ್ |
ಭರ್ತುರರ್ಥೇಷ್ವಸೂಯಂತಂ ನ ತಂ ಯುಂಜೀತ ಕರ್ಮಣಿ ॥15॥
ಇಂತಹ ಗುಣಗಳನ್ನು ಹೊಂದಿದ್ದರೂ ಯಾವನಿಗೆ ರಾಜನಲ್ಲಿ ಅನುರಾಗ- ವಿಲ್ಲವೋ ರಾಜನ ಸಂಪತ್ತಿನಲ್ಲಿ ಅಸೂಯೆಯನ್ನು ಪಡುತ್ತಾನೆಯೋ ಅಂತಹವನನ್ನು ಕಾರ್ಯಗಳಲ್ಲಿ ನಿಯೋಜಿಸಬಾರದು.
ಮೂಢಮೈಂದ್ರಿಯಕಂ ಲುಬ್ಧಮನಾರ್ಯಚರಿತಂ ಶಠಮ್ |
ಅನತೀತೋಪಧಂ ಹಿಂಸ್ರಂ ದುರ್ಬುದ್ಧಿಮಬಹುಶ್ರುತಮ್ ॥16॥
ತ್ಯಕ್ತೋಪಾಂತಂ ಮದ್ಯಹತಂ ದ್ಯೂತಸ್ತ್ರೀಮೃಗಯಾಪರಮ್ |
ಕಾರ್ಯೇ ಮಹತಿ ಯೋ ಯುಂಜ್ಯಾದ್ ಹೀಯತೇ ಸ ನೃಪಃ ಶ್ರಿಯಃ ॥17॥
ಮೂಢನೂ, ಇಂದ್ರಿಯಲೋಲುಪನೂ, ಲೋಭಿಯೂ, ಅಸಭ್ಯನಡೆವಳಿಕೆ- ಯುಳ್ಳವನೂ, ಶಠನೂ, ವಂಚಕನೂ, ಹಿಂಸಕನೂ, ದುರ್ಬುದ್ಧಿಯೂ, ಬಹು- ಶ್ರುತನಲ್ಲದವನೂ, ರಾಜನ ಸಾಮೀಪ್ಯವನ್ನು ತೊರೆದವನೂ, ಮದ್ಯಪಾನರತನೂ, ದ್ಯೂತ ಸ್ತ್ರೀ ಮತ್ತು ಬೇಟೆಗಳಲ್ಲಿ ರತನಾದವನೂ ಆದವನನ್ನು ರಾಜನು ದೊಡ್ಡ ಕಾರ್ಯಗಳಲ್ಲಿ ನಿಯೋಜಿಸಿದರೆ ತನ್ನ ಸಂಪತ್ತಿನಿಂದ ಚ್ಯುತನಾಗುತ್ತಾನೆ.
ರಕ್ಷಿತಾತ್ಮಾ ತು ಯೋ ರಾಜಾ ರಕ್ಷ್ಯಾನ್ ಯಶ್ಚಾನುರಕ್ಷತಿ |
ಪ್ರಜಾಶ್ಚ ತಸ್ಯ ವರ್ಧಂತೇ ಧ್ರುವಂ ಚ ಮಹದಶ್ನುತೇ ॥18॥
ಯಾವ ರಾಜನು ತನ್ನನ್ನು ರಕ್ಷಿಸಿಕೊಂಡು ರಕ್ಷಿಸಲ್ಪಡಬೇಕಾದ ಪ್ರಜೆಗಳನ್ನು ರಕ್ಷಿಸುತ್ತಾನೆಯೋ ಅವನ ಪ್ರಜೆಗಳು ಅಭಿವೃದ್ಧಿಯನ್ನು ಹೊಂದುತ್ತಾರೆ. ಅವನು ನಿಶ್ಚಯವಾಗಿ ದೊಡ್ಡ ಕಾರ್ಯವನ್ನು ಸಾಧಿಸುತ್ತಾನೆ.
ಯೇ ಕೇಚಿದ್ ಭೂಮಿಪತಯಸ್ತಾನ್ ಸರ್ವಾನನ್ವವೇಕ್ಷಯೇತ್ |
ಸುಹೃದ್ಭಿರನಭಿಖ್ಯಾತೈಸ್ತೇನ ರಾಜಾ ನ ರಿಷ್ಯತೇ ॥19॥
ಸುತ್ತಮುತ್ತಲೂ ಯಾವ ರಾಜರಿದ್ದಾರೆಯೋ ಅಂತಹವರನ್ನು ಅವರಿಗೆ ತಿಳಿ- ಯದಂತೆ ತನ್ನ ಸುಹೃಜ್ಜನರಿಂದ ಅವರ ನಡೆವಳಿಕೆಯನ್ನು ನೋಡಿಕೊಂಡಿರಬೇಕು. ಅಂತಹ ರಾಜನು ಅವನತಿಯನ್ನು ಹೊಂದುವುದಿಲ್ಲ.

ಅಪಕೃತ್ಯ ಬಲಸ್ಥಸ್ಯ ದೂರಸ್ಥೋಽಸ್ಮೀತಿ ನಾಶ್ವಸೇತ್ |
ಶ್ಯೇನಾನುಚರಿತೈರ್ಹ್ಯೇತೇ ನಿಪತಂತಿ ಪ್ರಮಾದ್ಯತಃ ॥20॥
ಬಲಿಷ್ಠನಾದವನಿಗೆ ಅಪಕಾರವನ್ನು ಮಾಡಿ ನಾನು ದೂರದಲ್ಲಿದ್ದೇನೆಂದು ಸಮಾಧಾನದಿಂದಿರಬಾರದು. ಅಂತಹವರು ರಾಜನು ಎಚ್ಚರ ತಪ್ಪಿದರೆ ಹದ್ದುಗಳಂತೆ ಮೇಲೆರಗುತ್ತಾರೆ.
ದೃಢಮೂಲಸ್ತ್ವದುಷ್ಟಾತ್ಮಾ ವಿದಿತ್ವಾ ಬಲಮಾತ್ಮನಃ |
ಅಬಲಾನಭಿಯುಂಜೀತ ನ ತು ಯೇ ಬಲವತ್ತರಾಃ ॥21॥
ತನ್ನ ಮೂಲವನ್ನು ಭದ್ರಮಾಡಿಕೊಂಡು, ದುಷ್ಟಸ್ವಭಾವವನ್ನು ಹೊಂದದೆ ತನ್ನ ಸಾಮರ್ಥ್ಯವನ್ನು ತಿಳಿದುಕೊಂಡು ದುರ್ಬಲನಾದವನ ಮೇಲೆ ದಂಡೆತ್ತಿ ಹೋಗ- ಬೇಕು. ತನಗಿಂತ ಬಲಿಷ್ಠರ ಮೇಲೆ ದಂಡೆತ್ತಿ ಹೋಗಬಾರದು.
ವಿಕ್ರಮೇಣ ಮಹೀಂ ಲಬ್ಧ್ವಾ ಪ್ರಜಾ ಧರ್ಮೇಣ ಪಾಲಯನ್ |
ಆಹವೇ ನಿಧನಂ ಕುರ್ಯಾದ್ ರಾಜಾ ಧರ್ಮಪರಾಯಣಃ ॥22॥
ಧರ್ಮಪರಾಯಣನಾದ ರಾಜನು ಪರಾಕ್ರಮದಿಂದ ಭೂಮಿಯನ್ನು ಸಂಪಾದಿಸಿ, ಪ್ರಜೆಗಳನ್ನು ಧರ್ಮದಿಂದ ಸಂಪಾದಿಸಿ, ಯುದ್ಧದಲ್ಲಿ ಶತ್ರುಗಳನ್ನು ಕೊಂದು ತಾನು ಯುದ್ಧದಲ್ಲಿ ಮೃತನಾಗಬೇಕು.
ಮರಣಾಂತಮಿದಂ ಸರ್ವಂ ನೇಹ ಕಿಂಚಿದನಾಮಯಮ್ |
ತಸ್ಮಾದ್ ಧರ್ಮೇ ಸ್ಥಿತೋ ರಾಜಾ ಪ್ರಜಾ ಧರ್ಮೇಣ ಪಾಲಯೇತ್ ॥23॥
ಎಲ್ಲವೂ ಮರಣದಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿ ದೋಷವಿಲ್ಲದಿರುವ ವಸ್ತು ಯಾವುದೂ ಇಲ್ಲ. ಆದ್ದರಿಂದ ರಾಜನು ಧರ್ಮದಲ್ಲಿ ನೆಲೆಸಿ ಪ್ರಜೆಗಳನ್ನು ಧರ್ಮ- ದಿಂದ ಪಾಲಿಸಬೇಕು.
ರಕ್ಷಾಧಿಕರಣಂ ಯುದ್ಧಂ ತಥಾ ಧರ್ಮಾನುಶಾಸನಮ್ |
ಮಂತ್ರಚಿಂತಾ ಸುಖಂ ಕಾಲೇ ಪಂಚಭಿರ್ವರ್ಧತೇ ಮಹೀ ॥24॥
ರಕ್ಷಣೆಯ ಸ್ಥಾನಗಳು, ಯುದ್ಧ, ಧರ್ಮಪಾಲನೆ, ಮಂತ್ರಾಲೋಚನೆ ಮತ್ತು ಪ್ರಜೆಗಳಿಗೆ ಯೋಗ್ಯವಾದ ಕಾಲದಲ್ಲಿ ಸಾಮರ್ಥ್ಯವಿದ್ದಷ್ಟು ಸುಖವನ್ನುಂಟುಮಾಡು- ವುದು ಈ ಐದರಿಂದ ರಾಜ್ಯವು ಅಭಿವೃದ್ಧಿಯನ್ನು ಹೊಂದುತ್ತದೆ.
ಏತಾನಿ ಯಸ್ಯ ಗುಪ್ತಾನಿ ಸ ರಾಜಾ ರಾಜಸತ್ತಮಃ |
ಸತತಂ ವರ್ತಮಾನೋಽತ್ರ ರಾಜಾ ಭುಂಕ್ತೇ ಮಹೀಮಿಮಾಮ್ ॥25॥
ಯಾವ ರಾಜನಿಗೆ ಇವುಗಳೆಲ್ಲವೂ ಗುಪ್ತವಾಗಿರುತ್ತವೆಯೋ ಅವನು ಶ್ರೇಷ್ಠನಾದ ರಾಜನಾದವನು. ಈ ಐದರಲ್ಲಿ ಸತತವಾಗಿ ನಿರತನಾದ ರಾಜನು ಈ ಭೂಮಿಯನ್ನು ಭೋಗಿಸುತ್ತಾನೆ.
ನೈತಾನ್ಯೇಕೇನ ಶಕ್ಯಾನಿ ಸಾತತ್ಯೇನಾನ್ವವೇಕ್ಷಿತುಮ್ |
ಏತೇಷ್ವಾಪ್ತಾನ್ ಪ್ರತಿಷ್ಠಾಪ್ಯ ರಾಜಾ ಭುಂಕ್ತೇ ಮಹೀಂ ಚಿರಮ್ ॥26॥
ಇವೆಲ್ಲವನ್ನೂ ಒಬ್ಬನೇ ಸತತವಾಗಿ ನೋಡಿಕೊಳ್ಳುವುದು ಸಾಧ್ಯವಿಲ್ಲ. ಈ ಕಾರ್ಯಗಳಲ್ಲಿ ಆಪ್ತರನ್ನು ನಿಯೋಜಿಸಿ, ರಾಜನು ಬಹುಕಾಲದವರೆಗೆ ಭೂಮಿ- ಯನ್ನು ಭೋಗಿಸುತ್ತಾನೆ.
ದಾತಾರಂ ಸಂವಿಭಕ್ತಾರಂ ಮಾರ್ದವೋಪಗತಂ ಶುಚಿಮ್ |
ಅಸಂತ್ಯಕ್ತಮನುಷ್ಯಂ ಚ ತಂ ಜನಾಃ ಕುರ್ವತೇ ಪ್ರಿಯಮ್ ॥27॥
ದಾನವನ್ನು ಮಾಡುವ, ಪ್ರಜೆಗಳಿಗೆ ತನ್ನ ಐಶ್ವರ್ಯವನ್ನು ಹಂಚುವ, ಮೃದು- ವಾದ, ಶುಚಿಯಾದ, ಆಶ್ರಯಿಸಿದವರನ್ನು ತ್ಯಜಿಸದಿರುವ ರಾಜನನ್ನು ಜನರು ಪ್ರೀತಿಸುತ್ತಾರೆ.
ಯಸ್ತು ನಿಶ್ರೇಯಸಂ ಜ್ಞಾತ್ವಾ ಜ್ಞಾನಂ ತತ್ ಪ್ರತಿಪದ್ಯತೇ |
ಆತ್ಮನೋ ಮತಮುತ್ಸೃಜ್ಯ ತಂ ಲೋಕೋಽನುವಿಧೀಯತೇ ॥28॥
ಯಾವನು ಒಳ್ಳೆಯ ಜ್ಞಾನವನ್ನು ಸಂಪಾದಿಸಿ, ತನ್ನ ಹಿತವನ್ನಾದರೂ ತ್ಯಜಿಸಿ, ರಾಜ್ಯಕ್ಕೆ ಶ್ರೇಯಸ್ಸನ್ನು ಉಂಟು ಮಾಡುತ್ತಾನೆಯೋ ಲೋಕವು ಅವನನ್ನು ಅನು- ಸರಿಸುತ್ತದೆ.
ಯೋಽರ್ಥಕಾಮಸ್ಯ ವಚನಂ ಪ್ರಾತಿಕೂಲ್ಯಾನ್ನ ಮೃಷ್ಯತೇ |
ಶೃಣೋತಿ ಪ್ರತಿಕೂಲಾನಿ ವಿಮನಾ ನಚಿರಾದಿವ ॥29॥
ಅಗ್ರಾಮ್ಯಚರಿತಾಂ ಬುದ್ಧಿಮತ್ಯಂತಂ ಯೋ ನ ಬುದ್ಧ್ಯತೇ |
ಜಿತಾನಾಮಜಿತಾನಾಂ ಚ ಕ್ಷತ್ರಧರ್ಮಾದಪೈತಿ ಸಃ ॥30॥
ಯಾವನು ತನ್ನ ಹಿತವನ್ನು ಬಯಸುವವನ ಮಾತುಗಳನ್ನು ಆ ಕಾಲದಲ್ಲಿ ಪ್ರತಿಕೂಲವಾಗಿದೆ ಎಂಬ ಕಾರಣದಿಂದ ಕೇಳಿ ಸಹಿಸುವುದಿಲ್ಲವೋ, ತನಗೆ ಪ್ರತಿಕೂಲವಾದ ತತ್ಕಾಲದಲ್ಲಿ ಹಿತವಾದ ಮಾತುಗಳನ್ನು ಕೇಳುತ್ತಾನೆಯೋ, ಪುರ- ವಾಸಿಗಳ ಉದಾತ್ತವಾದ ಬುದ್ಧಿಯನ್ನು ಯಾವನು ತಿಳಿಯುವುದಿಲ್ಲವೋ, ಪರಾ- ಜಿತರ ಮತ್ತು ಇತರರ ವಿಷಯದಲ್ಲಿ ಯಾವನು ಸರಿಯಾಗಿ ನಡೆದುಕೊಳ್ಳುವು- ದಿಲ್ಲವೋ ಅವನು ಕ್ಷತ್ರಿಯಧರ್ಮದಿಂದ ಚ್ಯುತನಾಗುತ್ತಾನೆ.
ಮುಖ್ಯಾನಮಾತ್ಯಾನ್ ಯೋ ಹಿತ್ವಾ ನಿಹೀನಾನ್ ಕುರುತೇ ಪ್ರಿಯಾನ್ |
ಸ ವೈ ವ್ಯಸನಮಾಸಾದ್ಯ ಗಾಧಮಾರ್ತೋ ನ ವಿಂದತಿ ॥31॥
ಯಾವ ರಾಜನು ಮುಖ್ಯರಾದ ಅಮಾತ್ಯರನ್ನು ಬಿಟ್ಟು ಹೀನರಾದವರನ್ನು ಪ್ರಿಯರನ್ನಾಗಿ ಮಾಡಿಕೊಳ್ಳುತ್ತಾನೆಯೋ ಅವನು ವ್ಯಸನಗಳಿಗೆ ಸಿಲುಕಿ ಯಾವ ನೆಲೆಯನ್ನೂ ಹೊಂದುವುದಿಲ್ಲ.
ಯಃ ಕಲ್ಯಾಣಗುಣಾನ್ ಜ್ಞಾತೀನ್ ದ್ವೇಷಾನ್ನೈವಾಭಿಮನ್ಯತೇ |
ಅದೃಢಾತ್ಮಾ ದೃಢಕ್ರೋಧೋ ನಾಸ್ಯಾರ್ಥೋ ರಮತೇಽಂತಿಕೇ ॥32॥

ಯಾವನು ಚಂಚಲಚಿತ್ತನಾಗಿ, ದೃಢವಾದ ಕೋಪವುಳ್ಳವನಾಗಿ, ಒಳ್ಳೆಯ ಗುಣವನ್ನು ಹೊಂದಿದ ಜ್ಞಾತಿಗಳನ್ನು ದ್ವೇಷದಿಂದ ಸತ್ಕರಿಸುವುದಿಲ್ಲವೋ ಅವನಲ್ಲಿ ಸಂಪತ್ತು ಸಂತೋಷಪಡುವುದಿಲ್ಲ.
ಅಥ ಯೋ ಗುಣಸಂಪನ್ನಾನ್ ಹೃದಯಸ್ಯಾಪ್ರಿಯಾನಪಿ |
ಪ್ರಿಯೇಣ ಕುರುತೇ ವಶ್ಯಾಂಶ್ಚಿರಂ ಯಶಸಿ ತಿಷ್ಠತಿ ॥33॥
ಹಾಗಲ್ಲದೇ ಯಾವನು ಗುಣಸಂಪನ್ನರಾದವರು ತನ್ನ ಮನಸ್ಸಿಗೆ ಅಪ್ರಿಯ- ರಾಗಿದ್ದರೂ ಅವರಿಗೆ ಪ್ರಿಯವನ್ನು ಮಾಡಿ ವಶಪಡಿಸಿಕೊಳ್ಳುತ್ತಾನೆಯೋ ಅಂತಹ- ವನು ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆ.
ನಾಕಾಲೇ ಪ್ರಣಯೇದರ್ಥಾನ್ನಾಪ್ರಿಯೇ ಜಾತು ಸಂಜ್ವರೇತ್ |
ಪ್ರಿಯೇ ನಾತಿಭೃಶಂ ಹೃಷ್ಯೇದ್ ಯುಜ್ಯೇತಾರೋಗ್ಯಕರ್ಮಣಿ ॥34॥
ಅಕಾಲದಲ್ಲಿ ಧನಸಂಗ್ರಹವನ್ನು ಮಾಡಬಾರದು. ಅಪ್ರಿಯವುಂಟಾದಾಗ ವಿಹ್ವಲನಾಗಬಾರದು. ಪ್ರಿಯವುಂಟಾದಾಗ ಬಹಳ ಸಂತೋಷಪಡಬಾರದು. ತನ್ನ ದೇಹದ ಆರೋಗ್ಯವನ್ನು ರಕ್ಷಿಸುವುದರಲ್ಲಿ ನಿರತನಾಗಿರಬೇಕು.
ಕೇ ಚಾನುರಕ್ತಾ ರಾಜಾನಃ ಕೇ ಭಯಾತ್ ಸಮುಪಾಶ್ರಿತಾಃ |
ಮಧ್ಯಸ್ಥದೋಷಾಃ ಕೇ ಚೈಷಾಮಿತಿ ನಿತ್ಯಂ ವಿಚಿಂತಯೇತ್ ॥35॥
ನನ್ನಲ್ಲಿ ಅನುರಾಗ ಹೊಂದಿರುವ ರಾಜರು ಯಾರು? ಭಯದಿಂದ ನನ್ನನ್ನು ಆಶ್ರಯಿಸಿರುವವರು ಯಾರು? ಅವರಲ್ಲಿ ತಟಸ್ಥರಾದವರು ಯಾರು? ಅವರ ದೋಷಗಳೇನು? ಎಂದು ನಿತ್ಯವೂ ಚಿಂತಿಸಬೇಕು.
ನ ಜಾತು ಬಲವಾನ್ ಭೂತ್ವಾ ದುರ್ಬಲೇ ವಿಶ್ವಸೇತ್ ಕ್ವಚಿತ್ |
ಭಾರುಂಡಸದೃಶಾ ಹ್ಯೇತೇ ನಿಪತಂತಿ ಪ್ರಮಾದ್ಯತಃ ॥36॥
ತಾನು ಬಲಿಷ್ಠನಾಗಿದ್ದೇನೆಂದು ತಿಳಿದು ದುರ್ಬಲರು ನನಗೆ ಅಪಾಯಕಾರಿ- ಗಳಲ್ಲವೆಂಬ ವಿಶ್ವಾಸದಿಂದ ಇರಬಾರದು. ಅಂತಹವರು ಭೇರುಂಡಪಕ್ಷಿಗೆ ಸದೃಶ- ರಾದವರು. ಪ್ರಮಾದ ಮಾಡಿದರೆ ರಾಜನ ಮೇಲೆ ಎರಗುತ್ತಾರೆ.
ಅಪಿ ಸರ್ವೈರ್ಗುಣೈರ್ಯುಕ್ತಂ ಭರ್ತಾರಂ ಪ್ರಿಯವಾದಿನಮ್ |
ಅಭಿದ್ರುಹ್ಯತಿ ಪಾಪಾತ್ಮಾ ನ ತಸ್ಮಾದ್ ವಿಶ್ವಸೇಜ್ಜನಾನ್ ॥37॥
ತಮ್ಮ ಸ್ವಾಮಿಯು ಎಲ್ಲ ಗುಣಗಳಿಂದ ಕೂಡಿದ್ದರೂ ಪ್ರಿಯವಚನನಾಗಿದ್ದರೂ ಪಾಪಾತ್ಮನಾದವನು ಅವನಿಗೆ ದ್ರೋಹವನ್ನು ಮಾಡುತ್ತಾನೆ. ಆದ್ದರಿಂದ ಅಂತಹ ಜನರಲ್ಲಿ ವಿಶ್ವಾಸವನ್ನು ಮಾಡಬಾರದು.
ಏತಾಂ ರಾಜೋಪನಿಷದಂ ಯಯಾತಿಃ ಸ್ಮಾಹ ನಾಹುಷಃ |
ಮನುಷ್ಯವಿಜಯೇ ಯುಕ್ತೋ ಹಂತಿ ಶತ್ರೂನನುತ್ತಮಾನ್ ॥38॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚನವತಿತಮೋಽಧ್ಯಾಯಃ ॥95॥
ನಹುಷಪುತ್ರನಾದ ಯಯಾತಿಯು ಹೇಳಿದ ರಾಜರಹಸ್ಯಗಳನ್ನು ತಿಳಿದು ಅದನ್ನು ಅನುಷ್ಠಾನ ಮಾಡುವ ಮನುಷ್ಯವಿಜಯದಲ್ಲಿ ನಿರತನಾದ ರಾಜನು ತನ್ನ ಶ್ರೇಷ್ಠರಾದ ಶತ್ರುಗಳನ್ನು ವಿನಾಶಗೊಳಿಸುತ್ತಾನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 95ನೆಯ ಅಧ್ಯಾಯವು ಮುಗಿಯಿತು
0
96. ತೊಂಬತ್ತಾರನೆಯ ಅಧ್ಯಾಯ
ವಾಮದೇವವಸುಮನಸ್ ಸಂವಾದ
ವಾಮದೇವಃ
ಅಯುದ್ಧೇನೈವ ವಿಜಯಂ ವರ್ಧಯೇದ್ ವಸುಧಾಧಿಪಃ |
ಜಘನ್ಯಮಾಹುರ್ವಿಜಯಂ ಯೋ ಯುದ್ಧೇನ ನರಾಧಿಪ ॥1॥
ವಾಮದೇವ ಎಲೈ ನರಾಧಿಪನೇ! ರಾಜನು ಯುದ್ಧವನ್ನು ಮಾಡದೆಯೇ ವಿಜಯವನ್ನು ಸಂಪಾದಿಸಬೇಕು. ಯುದ್ಧದಿಂದ ಸಂಪಾದಿಸಿದ ವಿಜಯವು ಹೀನ- ವಾದುದೆಂದು ಹೇಳುತ್ತಾರೆ.
ನ ಚಾಪ್ಯಲಬ್ಧಂ ಲಿಪ್ಸೇತ ಮೂಲೇ ನಾತಿದೃಢೇ ಸತಿ |
ನ ಹಿ ದುರ್ಬಲಮೂಲಸ್ಯ ರಾಜ್ಞೋ ಲಾಭೋ ವಿಧೀಯತೇ ॥2॥
ತನ್ನ ಮೂಲವು (ಅತಿ)ದೃಢವಿಲ್ಲದಿದ್ದಾಗ ತಾನು ಪಡೆಯದಿದ್ದುದನ್ನು ಪಡೆ- ಯಲು ಆಸೆ ಪಡಬಾರದು. ರಾಜನ ಮೂಲವು ದುರ್ಬಲವಾಗಿದ್ದಾಗ ಅವನಿಗೆ ಯಾವ ಲಾಭವೂ ಉಂಟಾಗುವುದಿಲ್ಲ.
ಯಸ್ಯ ಸ್ಫೀತೋ ಜನಪದಃ ಸಂಪನ್ನಃ ಪ್ರಿಯರಾಜಕಃ |
ಸಂತುಷ್ಟಪುಷ್ಟಸಚಿವೋ ದೃಢಮೂಲಃ ಸ ಪಾರ್ಥಿವಃ ॥3॥
ಯಾವ ರಾಜನ ದೇಶವು ಸಮೃದ್ಧಿಯಿಂದ ಕೂಡಿರುತ್ತದೆಯೋ, ಸಂಪತ್ತಿನಿಂದ ಕೂಡಿರುತ್ತದೆಯೋ, ರಾಜ್ಯದಲ್ಲಿ ಪ್ರಜೆಗಳು ಪ್ರಿಯರಾಗಿರುತ್ತಾರೆಯೋ, ಸಚಿವರು ಸಂತೋಷ ಮತ್ತು ಪುಷ್ಟಿಗಳಿಂದ ಕೂಡಿರುತ್ತಾರೆಯೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ.
ಯಸ್ಯ ಯೋಧಾಃ ಸುಸಂತುಷ್ಟಾಃ ಸಾಂತ್ವಿತಾಃ ಸೂಪವಾಸಿತಾಃ |
ಅಲ್ಪೇನಾಪಿ ಸ ದಂಡೇನ ಮಹೀಂ ಜಯತಿ ಭೂಮಿಪಃ ॥4॥
ಯಾವ ರಾಜನು ತನ್ನ ಯೋಧರನ್ನು ತನ್ನ ಸಮೀಪದಲ್ಲಿ ಇರಿಸಿಕೊಂಡು, ಅವರಿಗೆ ಸಾಂತ್ವನವನ್ನು ಹೇಳಿ ಸಂತೋಷಪಡಿಸುತ್ತಾನೆಯೋ ಅಂತಹ ರಾಜನು ಅಲ್ಪಸೈನ್ಯದಿಂದಲೇ ಭೂಮಿಯನ್ನು ಜಯಿಸುತ್ತಾನೆ.

ಪೌರಜಾನಪದಾ ಯಸ್ಯ ಸ್ವನುರಕ್ತಾಃ ಸುಪೂಜಿತಾಃ |
ಸಧನಾ ಧಾನ್ಯವಂತಶ್ಚ ದೃಢಮೂಲಃ ಸ ಪಾರ್ಥಿವಃ ॥5॥
ಯಾವ ರಾಜನ ಪೌರರು ಮತ್ತು ಜಾನಪದರು ರಾಜನಿಂದ ಚೆನ್ನಾಗಿ ಪೂಜಿತ- ರಾಗಿ ರಾಜನಲ್ಲಿ ಬಹಳ ಅನುರಕ್ತರಾಗಿ ಧನಧಾನ್ಯದಿಂದ ಕೂಡಿರುತ್ತಾರೆಯೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ.
ರಾಷ್ಟ್ರಕರ್ಮಕರಾ ಹ್ಯೇತೇ ರಾಷ್ಟ್ರಸ್ಯ ಚ ವಿರೋಧಿನಃ |
ದುರ್ವಿನೀತಾ ವಿನೀತಾಶ್ಚ ಸರ್ವೇ ಸಾಧ್ಯಾಃ ಪ್ರಯತ್ನತಃ ॥6॥
ಚಂಡಾಲಮ್ಲೇಚ್ಛಜಾತ್ಯಾಶ್ಚ ಪಾಷಂಡಾಶ್ಚ ವಿಕರ್ಮಿಣಃ |
ಬಲಿನಶ್ಚಾಶ್ರಮಾಶ್ಚೈವ ತಥಾ ಗಾಯಕನರ್ತಕಾಃ ॥7॥
ಪೌರಜಾನಪದರು ವಿನೀತರಾದರೆ ರಾಷ್ಟ್ರದ ಏಳಿಗೆಯನ್ನುಂಟು ಮಾಡುತ್ತಾರೆ. ದುರ್ವಿನೀತರಾದರೆ ರಾಷ್ಟ್ರದ ವಿರೋಧಿಗಳಾಗುತ್ತಾರೆ. ಚಂಡಾಲರು ಮ್ಲೇಚ್ಛ- ಜಾತಿಯವರು, ಪಾಷಂಡರು, ದುಷ್ಕರ್ಮಗಳನ್ನು ಮಾಡುವವರು, ಬಲಿಷ್ಠರಾ- ದವರು, ಆಶ್ರಮವಾಸಿಗಳು, ಗಾಯಕರು, ನರ್ತಕರು ಇವರೆಲ್ಲರನ್ನೂ ರಾಜನು ಪ್ರಯತ್ನಪೂರ್ವಕವಾಗಿ ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳಬೇಕು.
ಪ್ರಭಾವಕಾಲಾವಧಿಕೌ ಯದಾ ಮನ್ಯೇತ ಚಾತ್ಮನಃ |
ತದಾ ಲಿಪ್ಸೇತ ಮೇಧಾವೀ ಪರಭೂಮಿಂ ಧನಾನ್ಯುತ ॥8॥
ತನ್ನ ಸಾಮರ್ಥ್ಯ ಮತ್ತು ಕಾಲ ಎರಡೂ ಶ್ರೇಷ್ಠವಾಗಿದೆಯೆಂದು ತಿಳಿದಾಗ ಮೇಧಾವಿಯಾದ ರಾಜನು ಶತ್ರುರಾಜರ ಭೂಮಿಯನ್ನು ಮತ್ತು ಧನವನ್ನೂ ಪಡೆ- ಯಲು ಪ್ರಯತ್ನಿಸಬೇಕು.
ಭೋಗೇಷ್ವದಯಮಾನಸ್ಯ ಭೂತೇಷು ಚ ದಯಾವತಃ |
ವರ್ಧತೇ ತ್ವರಮಾಣಸ್ಯ ವಿಷಯೋ ರಕ್ಷಿತಾತ್ಮನಃ ॥9॥
ಭೋಗಗಳಲ್ಲಿ ಆಸಕ್ತನಾಗದೇ, ಎಲ್ಲ ಪ್ರಜೆಗಳಲ್ಲಿ ದಯೆಯನ್ನು ತೋರಿಸಿ, ತನ್ನನ್ನು ರಕ್ಷಿಸಿಕೊಂಡು, ಶೀಘ್ರವಾಗಿ ಕಾರ್ಯವನ್ನು ಮಾಡುವವನ ದೇಶವು ಅಭಿವೃದ್ಧಿಯನ್ನು ಹೊಂದುತ್ತದೆ.
ತಕ್ಷತ್ಯಾತ್ಮಾನಮೇವೈಷ ವನಂ ಪರಶುನಾ ಯಥಾ |
ಯಃ ಸಮ್ಯಗ್ ವರ್ತಮಾನೇಷು ಸ್ವೇಷು ಮಿಥ್ಯಾ ಪ್ರವರ್ತತೇ ॥10॥
ಯಾವ ರಾಜನು ಸರಿಯಾಗಿ ನಡೆದುಕೊಳ್ಳುವ ತನ್ನ ಪ್ರಜೆಗಳಲ್ಲಿ ಸುಳ್ಳಿನಿಂದ ವರ್ತಿಸುತ್ತಾನೆಯೋ ಅವನು ಕೊಡಲಿಯಿಂದ ಕಾಡನ್ನು ಕಡಿದಂತೆ ತನ್ನನ್ನು ತಾನೇ ಕಡಿದುಕೊಳ್ಳುತ್ತಾನೆ.
ನ ವೈ ದ್ವಿಷಂತಃ ಕ್ಷೀಯಂತೇ ರಾಜ್ಞೋ ನಿತ್ಯಮಪಿ ಘ್ನತಃ |
ಕ್ರೋಧಂ ನಿಯಂತುಂ ಯೋ ವೇದ ತಸ್ಯ ದ್ವೇಷ್ಟಾ ನ ವಿದ್ಯತೇ ॥11॥
ನಿತ್ಯವೂ ಪ್ರಜೆಗಳನ್ನು ಹಿಂಸಿಸುವ ರಾಜನಿಗೆ ದ್ವೇಷಿಗಳ ಸಂಖ್ಯೆಯು ಕಡಿಮೆ- ಯಾಗುವುದಿಲ್ಲ. ಯಾವ ರಾಜನು ತನ್ನ ಕ್ರೋಧವನ್ನು ನಿಯಂತ್ರಿಸಿಕೊಳ್ಳಲು ತಿಳಿದಿ- ರುತ್ತಾನೆಯೋ ಅವನಿಗೆ ದ್ವೇಷಿಯು ಇರುವುದಿಲ್ಲ.
ಯದಾರ್ಯಜನವಿದ್ವಿಷ್ಟಂ ಕರ್ಮ ತನ್ನಾಚರೇದ್ ಬುಧಃ |
ಯತ್ ಕಲ್ಯಾಣಮಭಿಧ್ಯಾಯೇತ್ ತತ್ರಾತ್ಮಾನಂ ನಿಯೋಜಯೇತ್ ॥12॥
ಯಾವುದು ಆರ್ಯಜನರಿಂದ ನಿಂದಿತವಾದುದೋ ವಿವೇಕಿಯಾದವನು ಅಂತಹ ಕಾರ್ಯವನ್ನು ಮಾಡಬಾರದು. ಯಾವುದು ಶುಭಕರ್ಮವೆಂದು ತೋರು- ತ್ತದೆಯೋ ಅಂತಹ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು.
ನೈನಮನ್ಯೇಽವಜಾನಂತಿ ನಾತ್ಮನಾ ಪರಿತಪ್ಯತೇ |
ಕೃತ್ಯಶೇಷೇಣ ಯೋ ರಾಜಾ ಸುಖಾನ್ಯನುಬುಭೂಷತಿ ॥13॥
ಯಾವ ರಾಜನು ಎಲ್ಲಾ ಕಾರ್ಯಗಳನ್ನು ಮಾಡಿ ಸುಖವನ್ನು ಅನುಭವಿಸಲು ಬಯಸುತ್ತಾನೆಯೋ ಅಂತಹ ರಾಜನು ತಾನೂ ಪಶ್ಚಾತ್ತಾಪ ಪಡುವುದಿಲ್ಲ. ಪ್ರಜೆ- ಗಳೂ ಅವನನ್ನು ಅವಮಾನ ಮಾಡುವುದಿಲ್ಲ.
ಇದಂ ವೃತ್ತಂ ಮನುಷ್ಯೇಷು ವರ್ತತೇ ಯೋ ಮಹೀಪತಿಃ |
ಉಭೌ ಲೋಕೌ ವಿನಿರ್ಜಿತ್ಯ ವಿಜಯೇ ಸಂಪ್ರತಿತಿಷ್ಠತೇ ॥14॥
ಯಾವ ರಾಜನು ಪ್ರಜೆಗಳಲ್ಲಿ ಇಂತಹ ನಡತೆಯನ್ನು ಪ್ರವರ್ತಿಸುತ್ತಾನೆಯೋ, ಅಂತಹವನು ಇಹಲೋಕ ಮತ್ತು ಪರಲೋಕಗಳನ್ನು ಗೆದ್ದು ವಿಜಯದಲ್ಲಿ ಪ್ರತಿ- ಷ್ಠಿತನಾಗುತ್ತಾನೆ.
ಭೀಷ್ಮಃ
ಇತ್ಯುಕ್ತೋ ವಾಮದೇವೇನ ಸರ್ವಂ ತತ್ ಕೃತವಾನ್ ನೃಪಃ |
ತಥಾ ಕುರ್ವಂಸ್ತ್ವಮಪ್ಯೇತೌ ಲೋಕೌ ಜೇತಾ ನ ಸಂಶಯಃ ॥15॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಣ್ಣವತಿತಮೋಽಧ್ಯಾಯಃ ॥96॥
ಭೀಷ್ಮರು ಹೀಗೆ ವಾಮದೇವಋಷಿಗಳಿಂದ ಹೇಳಲ್ಪಟ್ಟ ವಸುಮನಸ್ ರಾಜನು ಎಲ್ಲವನ್ನೂ ಹಾಗೆಯೇ ಮಾಡಿದನು. ನೀನೂ ಸಹ ಹಾಗೆಯೇ ಮಾಡಿ ಎರಡು ಲೋಕಗಳನ್ನೂ ಜಯಿಸುವುದರಲ್ಲಿ ಸಂಶಯವಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 96ನೆಯ ಅಧ್ಯಾಯವು ಮುಗಿಯಿತು.
0
97. ತೊಂಬತ್ತೇಳನೆಯ ಅಧ್ಯಾಯ
ಯುಧಿಷ್ಠಿರಃ

ಅಥ ಯೋ ವಿಜಿಗೀಷೇತ ಕ್ಷತ್ರಿಯಃ ಕ್ಷತ್ರಿಯಂ ಯುಧಿ |
ಕಸ್ತಸ್ಯ ಧರ್ಮ್ಯೋ ವಿಜಯ ಏತತ್ ಪೃಷ್ಟೋ ಬ್ರವೀಹಿ ಮೇ ॥1॥
ಯುಧಿಷ್ಠಿರ ಒಬ್ಬ ಕ್ಷತ್ರಿಯನು ಇನ್ನೊಬ್ಬ ಕ್ಷತ್ರಿಯನನ್ನು ಯುದ್ಧದಲ್ಲಿ ಗೆಲ್ಲಲು ಬಯಸಿದರೆ ಧರ್ಮಾನುಗುಣವಾದ ವಿಜಯವು ಯಾವುದು ಎಂಬ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳು.
ಭೀಷ್ಮಃ
ಸಸಹಾಯೋಽಸಹಾಯೋ ವಾ ರಾಷ್ಟ್ರಮಾಗಮ್ಯ ಭೂಮಿಪಃ |
ಬ್ರೂಯಾದಹಂ ವೋ ರಾಜೇತಿ ರಕ್ಷಿಷ್ಯಾಮ ಚ ವಃ ಸದಾ ॥2॥
ಭೀಷ್ಮರು ಸಹಾಯಸಹಿತನಾಗಲೀ ಸಹಾಯರಹಿತನಾಗಲೀ ರಾಜನು ಪರರಾಷ್ಟ್ರಕ್ಕೆ ಬಂದು ನಾನು ನಿಮ್ಮ ರಾಜ, ಯಾವಾಗಲೂ ನಿಮ್ಮನ್ನು ರಕ್ಷಿಸುವೆನು ಎಂದು ಹೇಳಬೇಕು.
ಮಮ ಧರ್ಮ್ಯಂ ಬಲಿಂ ದತ್ತ ಕಿಂ ವಾ ಮಾಂ ಪ್ರತಿಪತ್ಸ್ಯಥ |
ತೇ ಚೇತ್ ತಮಾಗತಂ ತತ್ರ ವೃಣುಯುಃ ಕುಶಲಂ ಭವೇತ್ ॥3॥
ನನಗೆ ನ್ಯಾಯಯುಕ್ತವಾದ ಕಪ್ಪವನ್ನು ಕೊಡಿ; ನನ್ನನ್ನು ಹೇಗೆ ಭಾವಿಸುತ್ತೀರಿ ಎಂದು ಕೇಳಬೇಕು. ಅಲ್ಲಿಗೆ ಬಂದ ರಾಜನನ್ನು ಅವರು ಸ್ವೀಕರಿಸಿದರೆ ಎಲ್ಲವೂ ಕ್ಷೇಮವಾಗುತ್ತದೆ.
ತೇ ಚೇದಕ್ಷತ್ರಿಯಾಃ ಸಂತೋ ವಿರುದ್ಧ್ಯೇಯುಃ ಕಥಂಚನ |
ಸರ್ವೋಪಾಯೈರ್ನಿಯಂತವ್ಯಾ ವಿಕರ್ಮಸ್ಥಾ ನರಾಧಿಪ ॥4॥
ಎಲೈ ನರಾಧಿಪನೇ! ಅವರು ಕ್ಷತ್ರಿಯಧರ್ಮವನ್ನು ತಿಳಿಯದೇ ವಿರೋಧವನ್ನು ಮಾಡಿದರೆ ಎಲ್ಲ ಉಪಾಯಗಳಿಂದಲೂ ವಿಕರ್ಮಸ್ಥರಾದ ಅವರನ್ನು ನಿಯಂತ್ರಿಸ- ಬೇಕು.
ಅಶಕ್ತಂ ಕ್ಷತ್ರಿಯಂ ಮತ್ವಾ ಶಸ್ತ್ರಂ ಗೃಹ್ಣಾತ್ಯಥಾಪರಃ |
ತ್ರಾಣಾಯಾಪ್ಯಸಮರ್ಥಂ ತಂ ಮನ್ಯಮಾನಮತೀವ ಚ ॥5॥
ಆ ಕ್ಷತ್ರಿಯನು ತನ್ನ ರಾಜ್ಯವನ್ನು ರಕ್ಷಣೆ ಮಾಡಲು ಅಸಮರ್ಥನಾಗಿ ಅಶಕ್ತ- ನಾಗಿದ್ದಾನೆಂದು ತಿಳಿದು ಇನ್ನೊಬ್ಬ ಕ್ಷತ್ರಿಯನು ಅವನ ವಿರುದ್ಧವಾಗಿ ಶಸ್ತ್ರವನ್ನು ಹಿಡಿಯುತ್ತಾನೆ.
ಯುಧಿಷ್ಠಿರಃ
ಅಥ ಯಃ ಕ್ಷತ್ರಿಯೋ ರಾಜಾ ಕ್ಷತ್ರಿಯಂ ಪ್ರತ್ಯುಪಾವ್ರಜೇತ್ |
ಕಥಂ ಸ ಪ್ರತಿಯೋದ್ಧವ್ಯಸ್ತನ್ಮೇ ಬ್ರೂಹಿ ಪಿತಾಮಹ ॥6॥
ಯುಧಿಷ್ಠಿರ ಒಬ್ಬ ಕ್ಷತ್ರಿಯರಾಜನು ಇನ್ನೊಬ್ಬ ಕ್ಷತ್ರಿಯರಾಜನ ಜೊತೆಯಲ್ಲಿ ಯುದ್ಧವನ್ನು ಮಾಡಬೇಕಾದರೆ, ಎಲೈ ಪಿತಾಮಹನೇ! ಹೇಗೆ ಯುದ್ಧವನ್ನು ಮಾಡ- ಬೇಕೆಂದು ಹೇಳು.
ಭೀಷ್ಮಃ
ನಾಸನ್ನದ್ಧೋ ನಾಕವಚೋ ಯೋದ್ಧವ್ಯಃ ಕ್ಷತ್ರಿಯೋ ರಣೇ |
ಏಕ ಏಕೇನ ವಾಚ್ಯಶ್ಚ ವಿಸೃಜಸ್ವ ಕ್ಷಿಪಾಮಿ ಚ ॥7॥
ಭೀಷ್ಮರು ಶಸಶತ್ರುದಿ ಸನ್ನಾಹವಿಲ್ಲದೇ ಕವಚವನ್ನು ಧರಿಸದೇ ಕ್ಷತ್ರಿಯನು ಯುದ್ಧ ಮಾಡಬಾರದು. ಒಬ್ಬನು ಶತ್ರುವಾದ ಒಬ್ಬನನ್ನು ಕುರಿತು ನನಗೆ ಬಾಣಪ್ರಯೋಗ ವನ್ನು ಮಾಡು; ನಾನು ನಿನಗೆ ಪ್ರಹಾರ ಮಾಡುತ್ತೇನೆ ಎಂದು ಹೇಳಬೇಕು.
ಸ ಚೇತ್ ಸನ್ನದ್ಧ ಆಗಚ್ಛೇತ್ ಸನ್ನದ್ಧವ್ಯಂ ತತೋ ಭವೇತ್ |
ಸ ಚೇತ್ ಸಸೈನ್ಯ ಆಗಚ್ಛೇತ್ ಸಸೈನ್ಯಸ್ತಮಥಾಹ್ವಯೇತ್ ॥8॥
ಶತ್ರುವು ಸನ್ನದ್ಧನಾಗಿಯೇ ಬಂದ ಅನಂತರ ತಾನೂ ಸನ್ನದ್ಧನಾಗಬೇಕು. ಶತ್ರುವು ಸೈನ್ಯಸಹಿತನಾಗಿ ಬಂದರೆ ತಾನೂ ಸೈನ್ಯಸಹಿತನಾಗಿ ಅವನನ್ನು ಆಹ್ವಾನಿಸಬೇಕು.
ಸ ಚೇನ್ನಿಕೃತ್ಯಾ ಯುದ್ಧ್ಯೇತ ನಿಕೃತ್ಯಾ ತಂ ಪ್ರಯೋಧಯೇತ್ |
ಅಥ ಚೇದ್ ಧರ್ಮತೋ ಯುದ್ಧ್ಯೇದ್ ಧರ್ಮೇಣೈವ ನಿವಾರಯೇತ್ ॥9
ಅವನು ಮೋಸದಿಂದ ಯುದ್ಧಮಾಡಿದರೆ ಮೋಸದಿಂದಲೇ ಅವನ ಜೊತೆ- ಯಲ್ಲಿ ಯುದ್ಧಮಾಡಬೇಕು. ಅದನ್ನು ಬಿಟ್ಟು ಧರ್ಮಯುದ್ಧವನ್ನು ಮಾಡಿದರೆ ಧರ್ಮಯುದ್ಧದಿಂದಲೇ ಅವನನ್ನು ತಡೆಯಬೇಕು.
ನಾಶ್ವೇನ ರಥಿನಂ ಯಾಯಾದುದಿಯಾದ್ ರಥಿನಂ ರಥೀ |
ವ್ಯಸನೇ ನ ಪ್ರಹರ್ತವ್ಯಂ ನ ಭೀತಾಯ ಜಿತಾಯ ಚ ॥10॥
ಅಶ್ವದಿಂದ ರಥಿಕನ ಮೇಲೆ ಎರಗಬಾರದು; ರಥಿಕನು ರಥಿಕನ ಮೇಲೆ ಹೋಗಬೇಕು. ಸಂಕಟಕ್ಕೆ ಒಳಗಾದ ಭೀತನಾದ ಪರಾಜಿತನಾದ ಶತ್ರುವಿಗೆ ಪ್ರಹಾರ ಮಾಡಬಾರದು.
ನೇಷುರ್ಲಿಪ್ತೋ ನ ಕರ್ಣೀ ಸ್ಯಾದಸತಾಮೇತದಾಯುಧಮ್ |
ಜಯಾರ್ಥಮೇವ ಯೋದ್ಧವ್ಯಂ ನ ಕ್ರುದ್ಧ್ಯೇದಜಿಘಾಂಸತಃ ॥11॥
ವಿಷಲಿಪ್ತವಾದ ಬಾಣಗಳನ್ನು, ಮೋಸದ ಬಾಣಗಳನ್ನು ಉಪಯೋಗಿಸ- ಬಾರದು. ಇದು ಅಸಜ್ಜನರ ಆಯುಧ. ಜಯವನ್ನು ಪಡೆಯುವ ಸಲುವಾಗಿಯೇ ಯುದ್ಧವನ್ನು ಮಾಡಬೇಕು. ಪ್ರಹಾರವನ್ನು ಮಾಡದಿರುವವನ ಮೇಲೆ ಕೋಪ- ಗೊಳ್ಳಬಾರದು.
ನಾಸ್ತ್ಯೇಕಸ್ಯ ಗಜೋ ಯುದ್ಧೇ ಗಜಶ್ಚೈಕಸ್ಯ ವಿದ್ಯತೇ |
ನ ಪದಾತಿರ್ಗಜಂ ಯುದ್ಧ್ಯೇನ್ನ ಗಜೇನ ಪದಾತಿನಮ್ ॥12॥
ಹಸ್ತಿನಾ ಯೋಧಯೇನ್ನಾಗಂ ಕದಾಚಿಚ್ಛಿಕ್ಷಿತೋ ಹಯಮ್ |

ದಿವ್ಯಾಸ್ತ್ರಬಲಸಂಪನ್ನಃ ಕಾಮಂ ಯುಧ್ಯೇತ ಸರ್ವದಾ ॥13॥
ನಾಗೇ ಭೂಮೌ ಸಮೇ ಚೈವ ರಥೇನಾಶ್ವೇನ ವಾ ಪುನಃ।
ರಾಮರಾವಣಯೋರ್ಯುದ್ಧೇ ಹರಯೋ ವೈ ಪದಾತಯಃ ॥14॥
ಲಕ್ಷ್ಮಣಶ್ಚ ಮಹಾಭಾಗಸ್ತಥಾ ರಾಜನ್ ವಿಭೀಷಣಃ।
ಒಬ್ಬನೇ ಯುದ್ಧವನ್ನು ಮಾಡುವಾಗ ಗಜಾರೋಹಿಯಾಗಿ ಯುದ್ಧವನ್ನು ಮಾಡಬಾರದು. ಪದಾತಿಯು ಗಜಾರೋಹಿಯ ಜೊತೆಯಲ್ಲಿ ಯುದ್ಧವನ್ನು ಮಾಡ -ಬಾರದು. ಗಜಾರೋಹಿಯು ಪದಾತಿಯ ಜೊತೆಯಲ್ಲಿ ಯುದ್ಧವನ್ನು ಮಾಡ- ಬಾರದು. ಗಜಾರೋಹಿಯು ಗಜಾರೋಹಿಯ ಜೊತೆಯಲ್ಲಿಯೇ ಯುದ್ಧವನ್ನು ಮಾಡಬೇಕು. ಚೆನ್ನಾಗಿ ಯುದ್ಧಶಿಕ್ಷಿತನಾಗಿದ್ದರೆ ಅಶ್ವಾರೋಹಿಯ ಜೊತೆಯಲ್ಲೂ ಯುದ್ಧವನ್ನು ಮಾಡಬಹುದು. ದಿವ್ಯಾಸ್ತ್ರಬಲದಿಂದ ಕೂಡಿದವನು ಮಾತ್ರ ತನ್ನ ಇಷ್ಟಬಂದಂತೆ (ತಾನು ಪದಾತಿಯಾಗಿದ್ದರೂ) ಅಶ್ವಾರೋಹಿಯ ಜೊತೆಯ- ಲ್ಲಾಗಲೀ ಸಮವಾದ ಭೂಮಿಯಲ್ಲಾಗಲೀ ರಥಿಕನ ಜೊತೆಯಲ್ಲಾಗಲೀ ಅಶ್ವಾರೋಹಿಯ ಜೊತೆಯಲ್ಲಾಗಲೀ ಯುದ್ಧವನ್ನು ಮಾಡಬಹುದು. ರಾಮ- ರಾವಣರ ಯುದ್ಧದಲ್ಲಿ ಕಪಿಗಳೂ, ಮಹಾನುಭಾವನಾದ ಲಕ್ಷ್ಮಣನೂ ಮತ್ತು ವಿಭೀಷಣನೂ ಪದಾತಿಗಳಾಗಿದ್ದರು.
ರಾವಣಸ್ಯಾಂತಕಾಲೇ ಚ ರಥೇನೈಂದ್ರೇಣ ರಾಘವಃ।
ನಿಜಘಾನ ದುರಾಚಾರಂ ರಾವಣಂ ಪಾಪಕಾರಿಣಮ್ ॥15॥
ರಾವಣನ ಅವಸಾನಕಾಲದಲ್ಲಿ ರಾಮನು ಇಂದ್ರನು ಕಳುಹಿಸಿದ ರಥದಲ್ಲಿ ಕುಳಿತು ದುರಾಚಾರಿಯೂ ಪಾಪಕರ್ಮವನ್ನು ಮಾಡುವವನೂ ಆದ ರಾವಣನನ್ನು ಸಂಹರಿಸಿದನು.
ದಿವ್ಯಾಸ್ತ್ರಬಲಸಂಪನ್ನೇ ಸರ್ವಮೇತದ್ ವಿಧೀಯತೇ।
ದೇವಾಸುರೇಷು ಯುದ್ಧೇಷು ದೃಷ್ಟಮೇತತ್ ಪುರಾತನೇ ॥16॥
ದಿವ್ಯಾಸ್ತ್ರಬಲದಿಂದ ಕೂಡಿದವನಿಗೆ ಎಲ್ಲವೂ ವಿಹಿತವಾಗುತ್ತದೆ. ಇಂತಹ ಪ್ರಸಂಗಗಳು ಪುರಾತನವಾದ ದೇವಾಸುರಯುದ್ಧಗಳಲ್ಲಿ ಕಂಡುಬರುತ್ತವೆ.
ಸಾಧೂನಾಂ ತು ಮಿಥೋ ಭೇದಾತ್ ಸಾಧುಶ್ಚೇದ್ ವ್ಯಸನೀ ಭವೇತ್।
ಸವ್ರಣೋ ನಾಭಿಹಂತವ್ಯೋ ನಾನಪತ್ಯಃ ಕಥಂಚನ ॥17॥
ಇಬ್ಬರು ಸತ್ಪುರುಷರು ಯುದ್ಧಮಾಡುವಾಗ ಒಬ್ಬ ಸತ್ಪುರುಷನು ಸಂಕಷ್ಟಕ್ಕೆ ಸಿಲುಕಿದರೆ ಅಥವಾ ಗಾಯಗೊಂಡರೆ ಅವನಿಗೆ ಪ್ರಹಾರವನ್ನು ಮಾಡಬಾರದು. ಪುತ್ರನಿಲ್ಲದವನಿಗೂ ಪ್ರಹಾರವನ್ನು ಮಾಡಬಾರದು.
ಭಗ್ನಶಸ್ತ್ರೋ ವಿಪನ್ನಾಶ್ವಶ್ಛಿನ್ನಜ್ಯೋ ಹತವಾಹನಃ।
ಚಿಕಿತ್ಸ್ಯಃ ಸ್ಯಾತ್ ಸ್ವವಿಷಯೇ ಪ್ರಾಪ್ಯೋ ವಾ ಸ್ವಗೃಹಾನ್ ಭವೇತ್।
ನಿರ್ವ್ರಣೋಽಪಿ ಚ ಮೋಕ್ತವ್ಯ ಏಷ ಧರ್ಮಃ ಸನಾತನಃ ॥18॥
ಶಸ್ತ್ರವನ್ನು ಮುರಿದುಕೊಂಡವನು, ವಿಪತ್ತಿಗೆ ಒಳಗಾದ ಅಶ್ವವುಳ್ಳವನು, ಕತ್ತರಿಸಿದ ಹೆದೆಯುಳ್ಳವನು, ಮೃತವಾದ ವಾಹನವುಳ್ಳವನು ಅಂತಹವರನ್ನು ತನ್ನ ರಾಜ್ಯದಲ್ಲಿ ಚಿಕಿತ್ಸೆ ಮಾಡಬೇಕು. ಅಥವಾ ಅವನ ಮನೆಗೆ ಹಿಂದಿರುಗಿಸಬೇಕು. ಅವನ ದೇಹದಲ್ಲಿ ಗಾಯವಿಲ್ಲದಿದ್ದರೂ ಅವನನ್ನು ಕಳುಹಿಸಿಕೊಡಬೇಕು. ಇದು ಸನಾತನವಾದ ಧರ್ಮ.
ತಸ್ಮಾದ್ ಧರ್ಮೇಣ ಯೋದ್ಧವ್ಯಂ ಮನುಃ ಸ್ವಾಯಂಭುವೋಽಬ್ರವೀತ್।
ಸತ್ಸು ನಿತ್ಯಂ ಸತಾಂ ಧರ್ಮಸ್ತಮಾಸ್ಥಾಯ ನ ನಾಶಯೇತ್ ॥19॥
ಆದ್ದರಿಂದ ಸಜ್ಜನರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಧರ್ಮ- ದಿಂದಲೇ ಯುದ್ಧವನ್ನು ಮಾಡಬೇಕೆಂದು ಸ್ವಾಯಂಭುವಮನುವು ಹೇಳಿದ್ದಾನೆ. ಧರ್ಮವನ್ನು ಅವಲಂಬಿಸಿದವನು ಧರ್ಮವನ್ನು ನಾಶಮಾಡಬಾರದು.
ಯೋ ವೈ ಜಯತ್ಯಧರ್ಮೇಣ ಕ್ಷತ್ರಿಯೋ ಧರ್ಮಸಂಗರಃ।
ಆತ್ಮಾನಮಾತ್ಮನಾ ಹಂತಿ ಪಾಪೋ ನಿಕೃತಿಜೀವನಃ ॥20॥
ಯಾವ ಕ್ಷತ್ರಿಯನು ಧರ್ಮಯುದ್ಧದಲ್ಲಿ ಅಧರ್ಮದಿಂದ ಜಯಿಸುತ್ತಾನೆಯೋ ಅವನು ಪಾಪಿಯೂ, ಹೀನಜೀವನನೂ ಆಗಿ ತನ್ನನ್ನು ತಾನೇ ಕೊಂದುಕೊಳ್ಳುತ್ತಾನೆ.
ಕರ್ಮ ಚೈತದಸಾಧೂನಾಮಸಾಧುಂ ಸಾಧುನಾ ಜಯೇತ್।
ಧರ್ಮೇಣ ನಿಧನಂ ಶ್ರೇಯೋ ನ ಜಯಃ ಪಾಪಕರ್ಮಣಾ ॥21॥
ಅಂತಹದು ಅಸಜ್ಜನರ ಕಾರ್ಯ. ಅಸಾಧುವನ್ನೂ ಸನ್ಮಾರ್ಗದಿಂದಲೇ ಜಯಿ- ಸಬೇಕು. ಧರ್ಮದಿಂದ ಮರಣವಾದರೂ ಲೇಸು. ಪಾಪಕರ್ಮದಿಂದ ಗಳಿಸಿದ ಜಯವು ಶೋಭಿಸುವುದಿಲ್ಲ.
ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿ ಗೌರಿವ।
ಮೂಲಾನ್ಯಸ್ಯ ಪ್ರಶಾಖಾಶ್ಚ ದಹನ್ ಸಮನುಗಚ್ಛತಿ॥22॥
ಎಲೈ ರಾಜನೇ! ಆಚರಿಸಿದ ಅಧರ್ಮವು ಭೂಮಿಯಂತೆ ತತ್ಕ್ಷಣದಲ್ಲಿಯೇ ಫಲವನ್ನು ಕೊಡುವುದಿಲ್ಲ. ಪಾಪಾಚಾರಿಯಾದವನ ಮೂಲವನ್ನು ಅವನ ಶಾಖೆಗಳನ್ನು (ಸಂತತಿಯನ್ನು) ಸುಡುತ್ತಾ ಎಲ್ಲ ಕಡೆಯಲ್ಲಿಯೂ ವ್ಯಾಪಿಸುತ್ತದೆ.
ಪಾಪೇನ ಕರ್ಮಣಾ ವಿತ್ತಂ ಲಬ್ಧ್ವಾ ಪಾಪಃ ಪ್ರಹೃಷ್ಯತಿ।
ಸ ವರ್ಧಮಾನಃ ಸ್ತೇಯೇನ ಪಾಪಃ ಪಾಪೇ ಪ್ರಸಜ್ಜತಿ ॥23॥
ಪಾಪಿಯು ಪಾಪಕರ್ಮದಿಂದ ಧನವನ್ನು ಗಳಿಸಿ ಸಂತೋಷಪಡುತ್ತಾನೆ. ಅವನು ಕಳ್ಳತನದಿಂದ ಅಭಿವೃದ್ಧಿಯನ್ನು ಹೊಂದುತ್ತಾ ಪಾಪದಲ್ಲಿಯೇ ನಿರತ- ನಾಗುತ್ತಾನೆ.
ನ ಧರ್ಮೋಽಸ್ತೀತಿ ಮನ್ವಾನಃ ಶುಚೀನವಹಸನ್ನಿವ।

ಅಶ್ರದ್ಧಧಾನಭಾವಾಚ್ಚ ವಿನಾಶಮುಪಗಚ್ಛತಿ ॥24॥
ಧರ್ಮವು ಇಲ್ಲ ಎಂದು ತಿಳಿಯುತ್ತಾ ಶುದ್ಧರಾದವರನ್ನು ಅಪಹಾಸ್ಯ ಮಾಡು- ತ್ತಾನೆ. ಧರ್ಮದಲ್ಲಿ ಶ್ರದ್ಧೆಯಿಲ್ಲದ ಅವನು ವಿನಾಶವನ್ನು ಹೊಂದುತ್ತಾನೆ.
ಸ ಬದ್ಧೋ ವಾರುಣೈಃ ಪಾಶೈರಮರ್ತ್ಯ ಇವ ಮನ್ಯತೇ |
ಮಹಾದೃತಿರಿವಾಧ್ಮಾತಾ ಸ್ವಕೃತೇನ ವಿವರ್ಧತೇ ॥25॥
ತನ್ನ ಪಾಪಕರ್ಮಗಳಿಂದ ಅವನು ವರುಣಪಾಶಗಳಿಂದ ಬಂಧಿಸಲ್ಪಡುತ್ತಾನೆ. ಅದನ್ನು ತಿಳಿಯದೇ ಅವನು ಗಾಳಿಯು ತುಂಬಿದ ದೊಡ್ಡ ತಿದಿಯಂತೆ ತನ್ನ ಕರ್ಮದಿಂದ ತಾನು ಅಭಿವೃದ್ಧಿಯನ್ನು ಹೊಂದುತ್ತಿದ್ದೇನೆ ಎಂದು ತಿಳಿಯುತ್ತಾನೆ.
ತತಃ ಸಮೂಲೋ ಹ್ರಿಯತೇ ನದೀಕೂಲಾದಿವ ದ್ರುಮಃ |
ಅಥೈನಮಭಿನಂದಂತಿ ಭಿನ್ನಂ ಕುಂಭಮಿವಾಶ್ಮನಿ |
ತಸ್ಮಾದ್ ಧರ್ಮೇಣ ವಿಜಯಂ ಕಾಮಂ ಲಿಪ್ಸೇತ ಭೂಮಿಪಃ ॥26॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತನವತಿತಮೋಽಧ್ಯಾಯಃ ॥97॥
ಅನಂತರ ನದಿಯ ದಡದಲ್ಲಿರುವ ವೃಕ್ಷದಂತೆ ಅವನು ಬುಡಸಹಿತವಾಗಿ ಸೆಳೆದೊಯ್ಯಲ್ಪಡುತ್ತಾನೆ. ಆಗ ಕಲ್ಲಿನ ಮೇಲೆ ಒಡೆದ ಮಡಕೆಯಂತೆ ಇರುವ ಅವನನ್ನು ನೋಡಿ ಸಜ್ಜನರು ಸಂತೋಷಪಡುತ್ತಾರೆ. ಆದ್ದರಿಂದ ರಾಜನಾದವನು ಧರ್ಮದಿಂದಲೇ ವಿಜಯವನ್ನು ಪಡೆಯಲು ಆಶಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 97ನೆಯ ಅಧ್ಯಾಯವು ಮುಗಿಯಿತು.
0

98. ತೊಂಬತ್ತೆಂಟನೆಯ ಅಧ್ಯಾಯ
ಯುದ್ಧಧರ್ಮಕಥನ
ಭೀಷ್ಮಃ
ನಾಧರ್ಮೇಣ ಮಹೀಂ ಜೇತುಂ ಲಿಪ್ಸೇತ ಜಗತೀಪತಿಃ |
ಅಧರ್ಮವಿಜಯಂ ಲಬ್ಧ್ವಾ ಕೋಽನುಮನ್ಯೇತ ಭೂಮಿಪಃ ॥1॥
ಭೀಷ್ಮರು ರಾಜನು ಅಧರ್ಮದಿಂದ ಭೂಮಿಯನ್ನು ಜಯಿಸಲು ಬಯಸ- ಬಾರದು. ಅಧರ್ಮದಿಂದ ವಿಜಯವನ್ನು ಪಡೆದವನು ತನ್ನನ್ನು ಹೇಗೆ ಭೂಮಿ- ಪಾಲನೆಂದು ಕರೆದುಕೊಳ್ಳುತ್ತಾನೆ.
ಅಧರ್ಮಯುಕ್ತೋ ವಿಜಯೋ ಹ್ಯಧ್ರುವೋಽಸ್ವರ್ಗ್ಯ ಏವ ಚ |
ಸಾದಯತ್ಯೇಷ ರಾಜಾನಂ ಮಹೀಂ ಚ ಭರತರ್ಷಭ॥2॥
ಅಧರ್ಮದಿಂದ ಸಂಪಾದಿಸಿದ ವಿಜಯವು ಅಸ್ಥಿರವಾದುದು ಮತ್ತು ಸ್ವರ್ಗ- ಪ್ರದವಾದುದಲ್ಲ. ಎಲೈ ಭರತರ್ಷಭನೇ! ರಾಜನನ್ನು ಮತ್ತು ಅವನ ಭೂಮಿಯನ್ನು ನಾಶಮಾಡುತ್ತದೆ.
ವಿಶೀರ್ಣಕವಚಂ ಚೈವ ತವಾಸ್ಮೀತಿ ಚ ವಾದಿನಮ್ |
ಕೃತಾಂಜಲಿಂ ನ್ಯಸ್ತಶಸ್ತ್ರಂ ಗೃಹೀತ್ವಾ ನ ವಿಹಿಂಸಯೇತ್ ॥3॥
ಕವಚವು ಹರಿದುಹೋದವನನ್ನು, ನಾನು ನಿನ್ನ ದಾಸನಾಗಿದ್ದೇನೆ ಎಂದು ಹೇಳಿದವನನ್ನು, ಕೈಮುಗಿದವನನ್ನು, ಶಸ್ತ್ರತ್ಯಾಗವನ್ನು ಮಾಡಿದವನನ್ನು ಹಿಡಿದು ಹಿಂಸಿಸಬಾರದು.
ಬಲೇನ ವರ್ಜಿತೋ ಯಶ್ಚ ನ ತಂ ಯುದ್ಧ್ಯೇತ ಭೂಮಿಪಃ |
ಸಂವತ್ಸರಂ ವಿಪ್ರಣಯೇತ್ ತಸ್ಮಾಜ್ಜಾತಃ ಪುನರ್ಭವೇತ್ ॥4॥
ದುರ್ಬಲನಾದವನು ವೈರವನ್ನು ಮಾಡಿದರೆ ಒಂದು ಸಂವತ್ಸರದವರೆಗೆ ಅವನ ಜೊತೆ ಯುದ್ಧವನ್ನು ಮಾಡಬಾರದು. ಅಲ್ಲಿಯವರೆಗೆ ವಿವಿಧಪ್ರಕಾರಗಳಿಂದ ಅವ- ನಲ್ಲಿ ಸ್ನೇಹವನ್ನು ಮಾಡಬೇಕು. ಪುನಃ ಅವನನ್ನು ಪರೀಕ್ಷಿಸಿ ತನ್ನ ಪಾದಾಕ್ರಾಂತ- ನನ್ನಾಗಿ ಮಾಡಿಕೊಳ್ಳಬೇಕು. (ಲಕ್ಷ್ಮಾಲಂಕಾರ)
ನಾರ್ವಾಕ್ ಸಂವತ್ಸರಾತ್ ಕನ್ಯಾ ಸ್ಪ್ರಷ್ಟವ್ಯಾ ವಿಕ್ರಮಾಹೃತಾ |
ಏವಮೇವ ಧನಂ ಸರ್ವಂ ಯಚ್ಚಾನ್ಯತ್ ಸಹಸಾಹೃತಮ್ ॥5॥
ಯುದ್ಧದಲ್ಲಿ ಜಯಿಸಿದ ಕನ್ಯೆಯರನ್ನು ಒಂದು ವರ್ಷದವರೆಗೆ ಸ್ಪರ್ಶಿಸ- ಬಾರದು. ಜಯಿಸಿ ತಂದ ಧನದ ವಿಷಯದಲ್ಲಿಯೂ ಉಳಿದ ಸ್ವತ್ತುಗಳ ವಿಷಯ- ದಲ್ಲಿಯೂ ಹೀಗೆಯೇ ನಡೆದುಕೊಳ್ಳಬೇಕು.
ನ ತು ವಧ್ಯೇ ಧನಂ ತಿಷ್ಠೇತ್ ಪಿಬೇಯುರ್ಬ್ರಾಹ್ಮಣಾಃ ಪಯಃ |
ಯುಂಜೀರನ್ ವಾಪ್ಯನಡುಹಃ ಕ್ಷಂತವ್ಯಂ ವಾ ತದಾ ಭವೇತ್ ॥6॥
ವೈಶ್ಯನು ಅಪರಾಧವನ್ನು ಮಾಡಿದರೆ ಅವನ ಧನವನ್ನು ಕಸಿದುಕೊಳ್ಳಬೇಕು. ಹೊರತು ಅವನನ್ನು ಕೊಲ್ಲಬಾರದು. ಅವನ ಬಳಿ ಗೋವುಗಳಿದ್ದರೆ ಅದನ್ನು ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು. ವೈಶ್ಯನು ಅಲ್ಪಾಪರಾಧವನ್ನು ಮಾಡಿದರೆ ಅವನನ್ನು ಕ್ಷಮಿಸಿ ಅವನ ಎತ್ತುಗಳನ್ನು ಅವನೇ ಉಪಯೋಗಿಸುವಂತೆ ಮಾಡ- ಬೇಕು. ಸ್ಥೂಲಾಪರಾಧವನ್ನು ಮಾಡಿದರೆ ದೇಶದಿಂದ ಗಡೀಪಾರು ಮಾಡಬೇಕು. (ಲಕ್ಷ್ಮಾಲಂಕಾರ)
ರಾಜ್ಞಾ ರಾಜ್ಞೈವ ಯೋದ್ಧವ್ಯಸ್ತಥಾ ಧರ್ಮೋ ವಿಧೀಯತೇ |
ನಾನ್ಯೋ ರಾಜಾನಮಭ್ಯಸ್ಯೇದರಾಜನ್ಯಃ ಕಥಂಚನ ॥7॥

ರಾಜನು ರಾಜನ ಜೊತೆಯಲ್ಲಿಯೇ ಯುದ್ಧವನ್ನು ಮಾಡಬೇಕು. ಇದು ಧರ್ಮವೆಂದು ಹೇಳಲ್ಪಡುತ್ತದೆ. ರಾಜನಲ್ಲದವನು ರಾಜನ ಜೊತೆಯಲ್ಲಿ ಯಾವ ಕಾರಣದಿಂದಲೂ ಯುದ್ಧಕ್ಕೆ ಹೋಗಬಾರದು.
ಅನೀಕಯೋಃ ಸಂಹತಯೋರ್ಯದೀಯಾದ್ ಬ್ರಾಹ್ಮಣೋಽಂತರಾ |
ಶಾಂತಿಮಿಚ್ಛನ್ನುಭಯತೋ ನ ಯೋದ್ಧವ್ಯಂ ತದಾ ಭವೇತ್ |
ಮರ್ಯಾದಾಂ ಶಾಶ್ವತೀಂ ಭಿಂದ್ಯಾದ್ ಬ್ರಾಹ್ಮಣಂ
ಯೋಽಭಿಲಂಘಯೇತ್ ||8||
ಎರಡು ಸೈನ್ಯಗಳು ಯುದ್ಧಕ್ಕೆ ಸನ್ನದ್ಧವಾಗಿ ಎದುರಾಗಿ ನಿಂತಿರುವಾಗ ಮಧ್ಯೆ ಒಬ್ಬ ಬ್ರಾಹ್ಮಣನು ಶಾಂತಿಯನ್ನು ಬಯಸಿ ನಡೆದರೆ ಆಗ ಯುದ್ಧವನ್ನು ಮಾಡ- ಬಾರದು. ಆ ಬ್ರಾಹ್ಮಣನ ಅಭಿಪ್ರಾಯವನ್ನು ಮೀರುವವನು ಶಾಶ್ವತವಾದ ಧರ್ಮದ ಎಲ್ಲೆಯನ್ನು ಮೀರುತ್ತಾನೆ.
ಅಥ ಚೇಲ್ಲಂಘಯೇದೇನಾಂ ಮರ್ಯಾದಾಂ ಕ್ಷತ್ರಿಯಬ್ರುವಃ |
ಅಸಂಖ್ಯೇಯಸ್ತದೂರ್ಧ್ವಂ ಸ್ಯಾದನಾದೇಯಶ್ಚ ಸಂಸದಿ ||9||
ಒಂದು ಪಕ್ಷ ಕ್ಷತ್ರಿಯನಾದವನು ಅಂತಹ ಎಲ್ಲೆಯನ್ನು ಮೀರಿದರೆ ಅವನನ್ನು ರಾಜರ ಗಣನೆಯಲ್ಲಿ ಪರಿಗಣಿಸಬಾರದು. ಮತ್ತು ಸಭೆಯಲ್ಲಿ ಅವನನ್ನು ಸ್ವೀಕರಿಸ- ಬಾರದು.
ಯಾ ತು ಧರ್ಮವಿಲೋಪೇನ ಮರ್ಯಾದಾಭೇದನೇನ ಚ |
ತಾಂ ವೃತ್ತಿಂ ನಾನುವರ್ತೇತ ವಿಜಿಗೀಷುರ್ಮಹೀಪತಿಃ |
ಧರ್ಮಲಬ್ಧಾದ್ಧಿ ವಿಜಯಾತ್ ಕೋ ಲಾಭೋಽಭ್ಯಧಿಕೋ ಭವೇತ್ ||10||
ಜಯವನ್ನು ಬಯಸುವ ರಾಜನು ಧರ್ಮವಿರೋಧದಿಂದಾಗಲೀ ಅಥವಾ ಮರ್ಯಾದಾಭಂಗದಿಂದಾಗಲೀ ಅಂತಹ ಜಯವನ್ನು ಸಾಧಿಸಬಾರದು. ಧರ್ಮ- ದಿಂದ ಸಂಪಾದಿಸಿದ ವಿಜಯಕ್ಕಿಂತಲೂ ಯಾವುದು ಅಧಿಕವಾದೀತು?
ಸಹಸಾ ನ್ಯಾಯಭೂತಾನಿ ಕ್ಷಿಪ್ರಮೇವ ಪ್ರಸಾದಯೇತ್ |
ಸಾಂತ್ವೇನ ಭೋಗದಾನೇನ ಸ ರಾಜ್ಞಾಂ ಪರಮೋ ನಯಃ ||11||
ನ್ಯಾಯದಿಂದ ನಡೆದುಕೊಳ್ಳುವ ಪ್ರಜೆಗಳನ್ನು ಶೀಘ್ರವಾಗಿ ಸಾಂತ್ವವಚನ- ಗಳಿಂದಲೂ ಭೋಗಸಾಮಗ್ರಿಗಳ ದಾನದಿಂದಲೂ ಪ್ರಸನ್ನಗೊಳಿಸಬೇಕು. ಅದು ಶ್ರೇಷ್ಠವಾದ ರಾಜನೀತಿ.
ಭುಜ್ಯಮಾನಾ ಹ್ಯಭೋಗೇನ ಸ್ವರಾಷ್ಟ್ರಾದಭಿತಾಪಿತಾಃ |
ಅಮಿತ್ರಾನ್ ಪರ್ಯುಪಾಸೀರನ್ ವ್ಯಸನೌಘಪ್ರತೀಕ್ಷಿಣಃ ||12||
ಹಿಂದೆ ಭೋಗದಿಂದ ಕೂಡಿದ್ದ ಪ್ರಜೆಗಳು ರಾಜನ ಉಪದ್ರವದಿಂದ ಭೋಗ- ರಹಿತರಾಗಿ ರಾಜನಿಂದ ತನ್ನ ರಾಷ್ಟ್ರದಲ್ಲಿ ಪೀಡಿತರಾದರೆ ವ್ಯಸನಗಳ ಸಮೂಹವನ್ನೇ ಅವರು ಮುಂದೆ ನಿರೀಕ್ಷಿಸುತ್ತಾ ಆ ರಾಜನ ಶತ್ರುಗಳ ಜೊತೆಯಲ್ಲಿ ಹೋದಾರು!
ಅಮಿತ್ರೋಪಗ್ರಹಂ ಚಾಸ್ಯ ತೇ ಕುರ್ಯುಃ ಕ್ಷಿಪ್ರಮಾಪದಿ |
ಸಂದುಷ್ಟಾಃ ಸರ್ವತೋ ರಾಜನ್ ರಾಜವ್ಯಸನಕಾಂಕ್ಷಿಣಃ ||13||
ಎಲೈ ರಾಜನೇ! ಅವರಲ್ಲಿ ದುಷ್ಟರಾದ ಪ್ರಜೆಗಳು ರಾಜನ ವ್ಯಸನವನ್ನೇ ಬಯ- ಸುತ್ತಾ ಈ ರಾಜನ ಆಪತ್ತಿನಲ್ಲಿ ಶತ್ರುರಾಜರಿಂದ ಅವರು ಶೀಘ್ರವಾಗಿ ಪರಾಜಿತನಾ- ಗುವಂತೆ ಮಾಡಬಹುದು.
ನಾಮಿತ್ರೋ ವಿನಿಕರ್ತವ್ಯೋ ನಾತಿಚ್ಛೇದ್ಯಃ ಕಥಂಚನ |
ಜೀವಿತಂ ಹ್ಯಪ್ಯತಿಚ್ಛಿನ್ನಃ ಸಂತ್ಯಜತ್ಯೇಕದಾ ನರಃ ||14||
ಶತ್ರುವಿಗೆ ಅಪಕಾರವನ್ನು ಮಾಡಬಾರದು. ಸಂಪೂರ್ಣನಾಶವನ್ನೂ ಮಾಡ- ಬಾರದು. ಶತ್ರುವು ಸಂಪೂರ್ಣನಷ್ಟವನ್ನು ಹೊಂದಿದರೆ ಒಮ್ಮೊಮ್ಮೆ ಜೀವಿತವನ್ನೂ ತೊರೆಯಬಹುದು.
ಅಲ್ಪೇನಾಪಿ ಹಿ ಸಂಯುಕ್ತಸ್ತುಷ್ಯತ್ಯೇವಾಪರಾಧಿಕಃ |
ಶುದ್ಧಂ ಜೀವಿತಮೇವಾಪಿ ತಾದೃಶೋ ಬಹು ಮನ್ಯತೇ ||15||
ಅಪರಾಧವನ್ನು ಮಾಡಿದವನಿಗೆ ಸ್ವಲ್ಪ ಉಪಕಾರವನ್ನು ಮಾಡಿದರೂ ಅವನು ಸಂತುಷ್ಟನಾಗುತ್ತಾನೆ. ಅನಂತರ ಅವನು ಶುದ್ಧಜೀವನವೇ ಶ್ರೇಷ್ಠವೆಂದು ಭಾವಿಸ- ಬಹುದು.
ಯಸ್ಯ ಸ್ಫೀತೋ ಜನಪದಃ ಸಂಪನ್ನಃ ಪ್ರಿಯರಾಜಕಃ |
ಸಂತುಷ್ಟಭೃತ್ಯಸಚಿವೋ ದೃಢಮೂಲಃ ಸ ಪಾರ್ಥಿವಃ ||16||
ಯಾವ ರಾಜನ ರಾಜ್ಯವು ಧಾನ್ಯಸಮೃದ್ಧವಾದ ಜನಪದದಿಂದ ಕೂಡಿ, ರಾಜನಿಗೆ ಪ್ರಿಯರಾದ ಪ್ರಜೆಗಳಿಂದ ಕೂಡಿ, ಸಂತುಷ್ಟರಾದ ಭೃತ್ಯರಿಂದ ಮತ್ತು ಸಚಿವರಿಂದ ಕೂಡಿರುತ್ತದೆಯೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ.
ಋತ್ವಿಕ್ಪುರೋಹಿತಾಚಾರ್ಯಾ ಯೇ ಚಾನ್ಯೇ ಶ್ರುತಸಮ್ಮತಾಃ |
ಪೂಜಾರ್ಹಾಃ ಪೂಜಿತಾ ಯಸ್ಯ ಸ ವೈ ಲೋಕಜಿದುಚ್ಯತೇ ||17||
ಜ್ಞಾನಿಗಳಿಗೆ ಸಮ್ಮತರಾದ ಪೂಜಾರ್ಹರಾದ ಋತ್ವಿಕ್ ಪುರೋಹಿತ ಆಚಾ- ರ್ಯರು ಯಾವನಿಂದ ಪೂಜಿಸಲ್ಪಡುತ್ತಾರೆಯೋ ಅವನು ಲೋಕವನ್ನು ಜಯಿಸಿದ- ವನು ಎಂದು ಹೇಳಲ್ಪಡುತ್ತಾನೆ.
ಏತೇನೈವ ಚ ವೃತ್ತೇನ ಮಹೀಂ ಪ್ರಾಪ ಸುರೋತ್ತಮಃ |
ಅನ್ಯೇಪಿ ಚೈವ ವಿಜಯಂ ವಿಜಿಗೀಷಂತಿ ಪಾರ್ಥಿವಾಃ ||18||
ದೇವಶ್ರೇಷ್ಠನಾದ ಇಂದ್ರನು ಇಂತಹದೇ ನಡತೆಯಿಂದ ರಾಜ್ಯವನ್ನು ಪಡೆದನು. ಉಳಿದ ರಾಜರೂ ಸಹ ಇದೇ ರೀತಿಯಲ್ಲಿ ವಿಜಯವನ್ನು ಪಡೆಯಲು ಬಯ- ಸುತ್ತಾರೆ.

ಭೂಮಿವರ್ಜಂ ಧನಂ ರಾಜಾ ಜಿತ್ವಾ ರಾಜನ್ ಮಹಾಹವೇ |
ಅಪಿ ಚಾನ್ನೌಷಧೀಃ ಶಶ್ವದಾಜಹಾರ ಪ್ರತರ್ದನಃ ||19||
ಎಲೈ ರಾಜನೇ! ಪ್ರತರ್ದನನು ದೊಡ್ಡ ಯುದ್ಧದಲ್ಲಿ ಭೂಮಿಯನ್ನು ಬಿಟ್ಟು ಉಳಿದ ಎಲ್ಲಾ ಧನವನ್ನೂ ಗೆದ್ದು, ಅನ್ನೌಷಧಿಗಳನ್ನು ಸತತವಾಗಿ ತೆಗೆದುಕೊಳ್ಳು- ತ್ತಿದ್ದನು.
ಅಗ್ನಿಹೋತ್ರಾಗ್ನಿಶೇಷಂ ಚ ಹವಿರ್ಭೋಜನಮೇವ ಚ |
ಆಜಹಾರ ದಿವೋದಾಸಃ ತತೋ ವಿಪ್ರಕೃತೋಭವತ್ ||20||
ದಿವೋದಾಸನು ಅಗ್ನಿಹೋತ್ರದ ಶೇಷವನ್ನು ಮತ್ತು ಹವಿರ್ಭೋಜನವನ್ನು ತೆಗೆದುಕೊಂಡು ಬಂದನು. ಅದರಿಂದ ಅವನು ಪ್ರಜೆಗಳಿಂದ ತಿರಸ್ಕೃತನಾದನು.
ಸರಾಜಕಾಣಿ ರಾಷ್ಟ್ರಾಣಿ ನಾಭಾಗೋ ದಕ್ಷಿಣಾಂ ದದೌ |
ಅನ್ಯತ್ರ ಶ್ರೋತ್ರಿಯಾರ್ಥಾಚ್ಚ ತಾಪಸಸ್ವಾಚ್ಚ ಭಾರತ ||21||
ಎಲೈ ಭಾರತನೇ! ನಾಭಾಗನು ರಾಜರಿಂದ ಕೂಡಿದ ರಾಷ್ಟ್ರಗಳನ್ನು, ಬ್ರಾಹ್ಮಣ ಸ್ವತ್ತನ್ನು ಮತ್ತು ತಾಪಸಸ್ವತ್ತನ್ನು ಬಿಟ್ಟು, ದಕ್ಷಿಣೆಯಾಗಿ ನೀಡಿದನು.
ಉಚ್ಚಾವಚಾನಿ ವೃತ್ತಾನಿ ಧರ್ಮಜ್ಞಾನಾಂ ಯುಧಿಷ್ಠಿರ |
ಆಸನ್ ರಾಜ್ಞಾಂ ಪುರಾಣಾನಾಂ ಸರ್ವಂ ತನ್ಮಮ ರೋಚತೇ ||22||
ಎಲೈ ಯುಧಿಷ್ಠಿರನೇ! ಧರ್ಮಜ್ಞರಾದ ರಾಜರ ನಡತೆಗಳು ಹೀಗೆ ಸ್ವಲ್ಪ ಹೆಚ್ಚು ಕಡಿಮೆಯಾಗಿರುತ್ತವೆ. ಪ್ರಾಚೀನರಾಜರಿಗೆ ಅಂತಹ ನಡವಳಿಕೆ ಇದ್ದಿತು. ಅವೆಲ್ಲವೂ ನನಗೆ ಇಷ್ಟವಾಗುತ್ತದೆ.
ಸರ್ವವಿದ್ಯಾತಿರೇಕಾದ್ ವಾ ಜಯಮಿಚ್ಛೇನ್ಮಹೀಪತಿಃ |
ನ ಮಾಯಯಾ ನ ದಂಭೇನ ಸ ಇಚ್ಛೇದ್ ಭೂತಿಮಾತ್ಮನಃ ||23||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟನವತಿತಮೋಽಧ್ಯಾಯಃ ||98||
ಅಥವಾ ರಾಜನು ಎಲ್ಲ ವಿದ್ಯೆಗಳಲ್ಲೂ ಅತಿಶಯವಾಗಿ ಪಾರಂಗತನಾಗಿ ಆ ಬಲದಿಂದ ಜಯಿಸಲು ಇಚ್ಛಿಸಬೇಕು. ಕಪಟದಿಂದಾಗಲೀ, ಡಂಭದಿಂದಾಗಲೀ, ತನ್ನ ಶ್ರೀಮಂತಿಕೆಯನ್ನು ಬಯಸಬಾರದು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 98ನೆಯ ಅಧ್ಯಾಯವು ಮುಗಿಯಿತು.
0

99. ತೊಂಬತ್ತೊಂಬತ್ತನೆಯ ಅಧ್ಯಾಯ
ಯುದ್ಧದ ಧಾರ್ಮಿಕತ್ವಕಥನ
ಯುಧಿಷ್ಠಿರಃ
ಕ್ಷತ್ರಧರ್ಮಾನ್ನ ಪಾಪೀಯಾನ್ ಧರ್ಮೋಽಸ್ತಿ ಭರತರ್ಷಭ |
ಅಭಿಯಾನೇ ಚ ಯುದ್ಧೇ ಚ ರಾಜಾ ಹಂತಿ ಮಹಾಜನಮ್ ||1||
ಅಥ ಸ್ಮ ಕರ್ಮಣಾ ಯೇನ ಲೋಕಾನ್ ಜಯತಿ ಪಾರ್ಥಿವಃ |
ವಿದ್ವನ್ ಜಿಜ್ಞಾಸಮಾನಾಯ ಪ್ರಬ್ರೂಹಿ ಭರತರ್ಷಭ ||2||
ಯುಧಿಷ್ಠಿರ ಎಲೈ ಭರತರ್ಷಭನೇ! ಕ್ಷತ್ರಧರ್ಮಕ್ಕಿಂತ ಪಾಪಕರವಾದ ಧರ್ಮವು ಇನ್ನೊಂದಿಲ್ಲ. ರಾಜನು ದಂಡೆತ್ತಿ ಹೋಗುವಾಗಲೂ ಮತ್ತು ಯುದ್ಧದ- ಲ್ಲಿಯೂ ಮಹಾಜನರನ್ನು ಕೊಲ್ಲುತ್ತಾನೆ. ಎಲೈ ಭರತರ್ಷಭನೇ! ವಿದ್ವಾಂಸನೇ! ಅಂತಹ ರಾಜನು ಯಾವ ಕರ್ಮದಿಂದ ಸ್ವರ್ಗಾದಿಲೋಕಗಳನ್ನು ಜಯಿಸುತ್ತಾನೆ ಎಂದು ನಿನ್ನನ್ನು ಕೇಳುತ್ತಿರುವ ನನಗೆ ಉತ್ತರವನ್ನು ಹೇಳು.
ಭೀಷ್ಮಃ
ನಿಗ್ರಹೇಣ ಚ ಪಾಪಾನಾಂ ಸಾಧೂನಾಂ ಪ್ರಗ್ರಹೇಣ ಚ |
ಯಜ್ಞೈರ್ದಾನೈಶ್ಚ ರಾಜಾನೋ ಭವಂತಿ ಶುಚಯೋಽಮಲಾಃ ||3||
ಭೀಷ್ಮರು ಪಾಪವನ್ನು ಮಾಡುವವರನ್ನು ನಿಗ್ರಹಿಸುವುದರಿಂದ ಮತ್ತು ಸಜ್ಜನರನ್ನು ಅನುಗ್ರಹಿಸುವುದರಿಂದ ಮತ್ತು ಯಜ್ಞದಾನಗಳಿಂದ ರಾಜರು ಶುಚಿ- ಗಳೂ ನಿರ್ಮಲರೂ ಆಗುತ್ತಾರೆ.
ಉಪರುಂಧಂತಿ ರಾಜಾನೋ ಭೂತಾನಿ ವಿಜಯಾರ್ಥಿನಃ |
ತ ಏವ ವಿಜಯಂ ಪ್ರಾಪ್ಯ ವರ್ಧಯಂತಿ ಪುನಃ ಪ್ರಜಾಃ ||4||
ವಿಜಯವನ್ನು ಬಯಸುವ ರಾಜರು ತಮ್ಮ ಪ್ರಜೆಗಳಿಗೆ (ಧನಸಂಗ್ರಹದಿಂದ) ಉಪದ್ರವವನ್ನು ಕೊಡುತ್ತಾರೆ. ಅದೇ ರಾಜರು ವಿಜಯವನ್ನು ಪಡೆದ ಮೇಲೆ ಪ್ರಜೆಗಳನ್ನು ಪುನಃ ಸಮೃದ್ಧಿಗೊಳಿಸುತ್ತಾರೆ.
ಅಪವಿದ್ಧ್ಯಂತಿ ಪಾಪಾನಿ ದಾನಯಜ್ಞತಪೋಬಲೈಃ |
ಅನುಗ್ರಹೇಣ ಭೂತಾನಾಂ ಪುಣ್ಯಮೇಷಾಂ ಪ್ರವರ್ಧತೇ ||5||
ತಾವು ಮಾಡಿದ ಪಾಪಗಳನ್ನು ದಾನ ಯಜ್ಞ ಮತ್ತು ತಪಸ್ಸುಗಳ ಬಲದಿಂದ ನಿವಾರಿಸಿಕೊಳ್ಳುತ್ತಾರೆ. ಪ್ರಜೆಗಳಿಗೆ ಅನುಗ್ರಹವನ್ನು ಮಾಡುವುದರಿಂದ ಅವರಿಗೆ ಪುಣ್ಯವೃದ್ಧಿಯಾಗುತ್ತದೆ.
ಯಥೈವ ಕ್ಷೇತ್ರನಿರ್ದಾತಾ ನಿರ್ದನ್ ವೈ ಕ್ಷೇತ್ರಮೇಕದಾ |
ಹಿನಸ್ತಿ ಧಾನ್ಯಂ ಕಕ್ಷಂ ವಾ ನ ಚ ಧಾನ್ಯಂ ವಿನಶ್ಯತಿ ||6||

ಹೇಗೆ ಕ್ಷೇತ್ರಕ್ಕೆ ಅಗ್ನಿಯನ್ನು ಕೊಡುವವನು ಒಮ್ಮೆ ಧಾನ್ಯವು ಬೆಳೆಯಲು ಯೋಗ್ಯವಾದ ಕ್ಷೇತ್ರಕ್ಕೆ ಹಿಂಸೆಯನ್ನು ಕೊಡುತ್ತಾನೆ. ಆದರೆ ಪುನಃ ಅಲ್ಲಿ ಬೆಳೆಯುವ ಧಾನ್ಯಕ್ಕೆ ವಿನಾಶವನ್ನು ಉಂಟುಮಾಡುವುದಿಲ್ಲ.
ಏವಂ ಶಸತ್ರಾಣಿ ಮುಂಚಂತೋ ಘ್ನಂತಿ ವಧ್ಯಾನನೇಕಧಾ |
ತಸ್ಯೈಷಾ ನಿಷ್ಕೃತಿಃ ಕೃತ್ಸ್ನಾ ಭೂತಾನಾಂ ಭಾವನಂ ಪುನಃ ॥7॥
ಹೀಗೆಯೇ ಶಸ್ತ್ರಪ್ರಯೋಗವನ್ನು ಮಾಡುವವರು ವಧೆಗೆ ಯೋಗ್ಯರಾದ ಅನೇಕರನ್ನು ಅನೇಕರೀತಿಯಲ್ಲಿ ಕೊಲ್ಲುತ್ತಾರೆ. ಆ ಪಾಪದ ಸಮಗ್ರಪ್ರಾಯಶ್ಚಿತ್ತ- ವೆಂದರೆ ಪುನಃ ಪ್ರಜೆಗಳನ್ನು ಸಮೃದ್ಧಿಗೊಳಿಸುವುದು.
ಯೋ ಭೂತಾನಿ ಸದಾಽನರ್ಥಾದ್ ವಧಾತ್ ಕ್ಲೇಶಾಚ್ಚ ರಕ್ಷತಿ |
ದಸ್ಯುಭ್ಯಃ ಪ್ರಾಣದಾನಾತ್ ಸ ಧನದಃ ಸುಖದೋ ವಿರಾಟ್ ॥8॥
ಯಾವನು ಪ್ರಜೆಗಳನ್ನು ಅನರ್ಥಗಳಿಂದಲೂ, ವಧೆಯಿಂದಲೂ, ಕ್ಲೇಶ- ದಿಂದಲೂ, ದಸ್ಯುಗಳಿಂದಲೂ ರಕ್ಷಿಸಿ ಪ್ರಾಣದಾನವನ್ನು ಮಾಡುತ್ತಾನೆಯೋ ಅವನೇ ಧನವನ್ನು ಮತ್ತು ಸುಖವನ್ನು ಕೊಡುವ ಬ್ರಹ್ಮದೇವ.
ಸ ಸರ್ವಯಜ್ಞೈರೀಜಾನೋ ರಾಜಾಥಾಭಯದಕ್ಷಿಣೈಃ |
ಅನುಭೂಯೇಹ ಭದ್ರಾಣಿ ಪ್ರಾಪ್ನೋತೀಂದ್ರಸಲೋಕತಾಮ್ ॥9॥
ಪ್ರಜೆಗಳಿಗೆ ಅಭಯರೂಪವಾದ ದಕ್ಷಿಣೆಯನ್ನು ಕೊಟ್ಟು, ಸರ್ವಯಜ್ಞಗಳನ್ನು ಆಚರಿಸುವ ರಾಜನು ಇಲ್ಲಿ ಶುಭಗಳನ್ನು ಅನುಭವಿಸಿ, ಪರಲೋಕದಲ್ಲಿ ಇಂದ್ರನ ಸಾಲೋಕ್ಯವನ್ನು ಪಡೆಯುತ್ತಾನೆ.
ಬ್ರಾಹ್ಮಣಾರ್ಥೇ ಸಮುತ್ಪನ್ನೇ ಯೋಽಭಿನಿಃಸೃತ್ಯ ಯುದ್ಧ್ಯತೇ |
ಆತ್ಮಾನಂ ಯೂಪಮುಚ್ಛ್ರಿತ್ಯ ಸ ಯಜ್ಞೋಽನಂತದಕ್ಷಿಣಃ ॥10॥
ಬ್ರಾಹ್ಮಣನ ಕಾರ್ಯವಾಗಬೇಕಾದಾಗ ಯಾವನು ಹೊರಗೆ ಬಂದು ತನ್ನನ್ನೇ ಎತ್ತಿದ ಯೂಪವನ್ನಾಗಿ ಮಾಡಿ ಯುದ್ಧವನ್ನು ಮಾಡುತ್ತಾನೆಯೋ ಆ ಯುದ್ಧವು ಅನಂತದಕ್ಷಿಣೆಯುಳ್ಳ ಯಜ್ಞರೂಪವಾದುದು.
ಅಭೀತೋ ವಿಕಿರನ್ ಶತ್ರೂನ್ ಪ್ರತಿಗೃಹ್ಣನ್ ಶರಾಂಸ್ತಥಾ |
ನ ತಸ್ಮಾತ್ ತ್ರಿದಶಾಃ ಶ್ರೇಯೋ ಭುವಿ ಪಶ್ಯಂತಿ ಕಿಂಚನ ॥11॥
ನಿರ್ಭೀತನಾಗಿ ಶತ್ರುಗಳ ಮೇಲೆ ಬಾಣಗಳನ್ನು ಸುರಿಸುತ್ತಾ, ತನ್ನ ಶರೀರದಲ್ಲಿ ಶತ್ರುಗಳ ಬಾಣವನ್ನು ಹಾಗೆಯೇ ಸ್ವೀಕರಿಸುವುದಕ್ಕಿಂತ ಕ್ಷತ್ರಿಯನಿಗೆ ಭೂಮಿಯಲ್ಲಿ ಶ್ರೇಯಸ್ಕರವಾದುದು ಯಾವುದೂ ಇಲ್ಲವೆಂದು ದೇವತೆಗಳು ತಿಳಿಯುತ್ತಾರೆ.
ತಸ್ಯ ಯಾವಂತಿ ಶಸತ್ರಾಣಿ ತ್ವಚಂ ಭಿಂದಂತಿ ಸಂಯುಗೇ |
ತಾವತಃ ಸೋಽಶ್ನುತೇ ಲೋಕಾನ್ ಸರ್ವಕಾಮದುಹೋಽಕ್ಷಯಾನ್ ॥12
ಯುದ್ಧದಲ್ಲಿ ಎಷ್ಟು ಶಸ್ತ್ರಗಳು ಅವನ ಚರ್ಮವನ್ನು ಭೇದಿಸುತ್ತವೆಯೋ ಸರ್ವ- ಕಾಮವನ್ನು ಕೊಡುವ ಅಕ್ಷಯವಾದ ಅಷ್ಟು ಲೋಕಗಳನ್ನು ಅವನು ಹೊಂದುತ್ತಾನೆ.
ಯದಸ್ಯ ರುಧಿರಂ ಗಾತ್ರಾದಾವೇಧೇಭ್ಯಃ ಪ್ರವರ್ತತೇ |
ಸ ಹ ತೇನೈವ ರಕ್ತೇನ ಸರ್ವಪಾಪೈಃ ಪ್ರಮುಚ್ಯತೇ ॥13॥
ಯಾವ ರಕ್ತವು ಅವನ ಶರೀರವ್ರಣಗಳಿಂದ ಹರಿಯುತ್ತದೆಯೋ ಅವನು ಅದೇ ರಕ್ತಸ್ರಾವದಿಂದ ಸರ್ವಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಯಾನಿ ದುಃಖಾನಿ ಸಹತೇ ವ್ರಣಾನಾಮಭಿತಾಪನೇ |
ನ ತತೋಽಸ್ತಿ ತಪೋ ಭೂಯ ಇತಿ ಧರ್ಮವಿದೋ ವಿದುಃ ॥14॥
ವ್ರಣಗಳು ಉರಿಯುವಾಗ ಉಂಟಾಗುವ ಯಾವ ದುಃಖಗಳನ್ನು ಸಹಿಸು- ತ್ತಾನೆಯೋ, ಅವನಿಗೆ ಅದಕ್ಕಿಂತ ದೊಡ್ಡ ತಪಸ್ಸಿಲ್ಲವೆಂದು ಧರ್ಮಜ್ಞರು ತಿಳಿಯು- ತ್ತಾರೆ.
ಪೃಷ್ಠತೋ ಭೀರವಃ ಸಂಖ್ಯೇ ವರ್ತಂತೇಽಧಮಪೂರುಷಾಃ |
ಶೂರಾಚ್ಛರಣಮಿಚ್ಛಂತಃ ಪರ್ಜನ್ಯಾದಿವ ಜೀವನಮ್ ॥15॥
ಭೀರು(ಹೇಡಿ)ಗಳಾದ ಅಧಮಪುರುಷರು ಪರ್ಜನ್ಯನಿಂದ ಜೀವನವನ್ನು ಬಯಸಿದಂತೆ ಶೂರನಿಂದ ರಕ್ಷಣೆಯನ್ನು ಬಯಸಿ ರಣರಂಗದಲ್ಲಿ ಶೂರನ ಹಿಂದೆಯೇ ಇರುತ್ತಾರೆ.
ಯದಿ ಶೂರಂ ತಥಾ ಕ್ಷೇಮೇ ಪ್ರತೀಕ್ಷೇರನ್ ಯಥಾ ಭಯೇ |
ಪ್ರತಿ ಶೂರಂ ಜನಾಃ ಕುರ್ಯುರ್ನಚ ತದ್ ವರ್ತತೇ ತಥಾ ॥16॥
ಅಶಕ್ತಪುರುಷರು ಭಯಕಾಲದಲ್ಲಿ ಶೂರನನ್ನು ಬಯಸುವಂತೆ ಕ್ಷೇಮಕಾಲ- ದಲ್ಲಿಯೂ ಒಬ್ಬ ಶೂರನನ್ನು ನಿರೀಕ್ಷಿಸಬೇಕಾದೀತು. ಆದರೆ ಅವರು ಹಾಗೆ ಮಾಡುವುದಿಲ್ಲ. ಏಕೆಂದರೆ ಒಮ್ಮೆ ಉಂಟಾದ ಭಯವು ಹಾಗೆಯೇ ಉಳಿಯುವು- ದಿಲ್ಲ.
ಯದಿ ತೇ ಕೃತಮಾಜ್ಞಾಯ ನಮಸ್ಕುರ್ಯುಃ ಸದೈವ ತಮ್ |
ಯುಕ್ತಂ ನ್ಯಾಯ್ಯಂ ಚ ಕುರ್ಯುಸ್ತೇ ನ ಚ ತದ್ ವರ್ತತೇ ತಥಾ ॥17॥
ಶೂರನು ತಮಗೆ ಮಾಡಿದ ಉಪಕಾರವನ್ನು ಸ್ಮರಿಸಿ, ಅವರು ಯಾವಾಗಲೂ ಅವನಿಗೆ ನಮಸ್ಕರಿಸಿದರೆ ಅದು ನ್ಯಾಯವೂ ಮತ್ತು ಯುಕ್ತವೂ ಆದೀತು! ಆದರೆ ಅವರು ಹಾಗೆ ಮಾಡುವುದಿಲ್ಲ.
ಪುರುಷಾಣಾಂ ಸಮಾನಾನಾಂ ದೃಶ್ಯತೇ ಮಹದಂತರಮ್ |
ಸಂಗ್ರಾಮೇಽನೀಕವೇಲಾಯಾಮುತ್ಕೃಷ್ಟೇಽಭಿಪತತ್ಸು ಚ ॥18॥
ಒಂದೇ ರೀತಿಯಿಲ್ಲಿ ಕಾಣುವ ಪುರುಷರಲ್ಲಿ ಯುದ್ಧದಲ್ಲಿ ಸೈನ್ಯದಲ್ಲಿ ಶತ್ರುಗಳು ಸಿಂಹಗರ್ಜನೆಯಿಂದ ಮೇಲೆರೆಗುತ್ತಿರುವಾಗ ದೊಡ್ಡ ವ್ಯತ್ಯಾಸವು ಕಂಡು ಬರುತ್ತದೆ.

ಪತತ್ಯಭಿಮುಖಃ ಶೂರಃ ಪರಾನ್ ಭೀರುಃ ಪಲಾಯತೇ |
ಆಸ್ಥಾಯಾಸ್ವರ್ಗ್ಯಮಧ್ವಾನಂ ಸಹಾಯಾನ್ ವಿಷಮೇ ತ್ಯಜನ್ ॥19॥
ಶೂರನು ಶತ್ರುಗಳ ಮೇಲೆ ಅಭಿಮುಖನಾಗಿ ಎರಗುತ್ತಾನೆ. ಹೇಡಿಯಾದವನು ಅಸ್ವರ್ಗ್ಯವಾದ ಮಾರ್ಗವನ್ನು ಆಶ್ರಯಿಸಿ ಸಂಕಟಪರಿಸ್ಥಿತಿಯಲ್ಲಿ ಸಹಾಯಕರನ್ನು ಬಿಟ್ಟು ಪಲಾಯನ ಮಾಡುತ್ತಾನೆ.
ಮಾ ಸ್ಮ ತಾಂಸ್ತಾದೃಶಾಂಸ್ತಾತ ಜನಿಷ್ಠಾಃ ಪುರುಷಾಧಮಾನ್ |
ಯೇ ಸಹಾಯಾನ್ ರಣೇ ಹಿತ್ವಾ ಸ್ವಸ್ತಿಮಂತೋ ಗೃಹಾನ್ ಯಯುಃ ॥20॥
ಎಲೈ ಪ್ರೀತಿಪಾತ್ರನೇ! ಯಾರು ತಮ್ಮ ಸಹಾಯಕರನ್ನು ಯುದ್ಧಭೂಮಿಯಲ್ಲಿ ಬಿಟ್ಟು, ತಾವು ಕ್ಷೇಮವಾಗಿ ಮನೆಗೆ ತೆರಳುತ್ತಾರೋ ಅಂತಹ ಪುರುಷಾಧಮರನ್ನು ನಿನ್ನ ವಂಶದಲ್ಲಿ ಸೃಷ್ಟಿಸಬೇಡ.
ಅಸ್ವಸ್ತಿ ತೇಭ್ಯಃ ಕುರ್ವಂತಿ ದೇವಾ ಇಂದ್ರಪುರೋಗಮಾಃ |
ತ್ಯಾಗೇನ ಯಃ ಸಹಾಯಾನಾಂ ಸ್ವಾನ್ ಪ್ರಾಣಾಂಸತ್ರತುಮಿಚ್ಛತಿ ॥21॥
ತನ್ನ ಸಹಾಯಕರನ್ನು ತ್ಯಜಿಸಿ ಯಾವನು ತನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳು- ತ್ತಾನೆಯೋ ಅವನಿಗೆ ಇಂದ್ರನೇ ಮೊದಲಾದ ದೇವತೆಗಳು ಅಶುಭವನ್ನು ಉಂಟು- ಮಾಡುತ್ತಾರೆ.
ತಂ ಹನ್ಯುಃ ಕಾಷ್ಠಲೋಷ್ಟೈರ್ವಾ ದಹೇಯುರ್ವಾ ಕಟಾಗ್ನಿನಾ |
ಪಶುವನ್ಮಾರಯೇಯುರ್ವಾ ಕ್ಷತ್ರಿಯಾ ಯೇ ಸ್ಯುರೀದೃಶಾಃ ॥22॥
ಮೊದಲು ಹೇಳಿದ ವೀರರಾದ ಕ್ಷತ್ರಿಯರು ಅವನನ್ನು ಕಾಷ್ಠಲೋಷ್ಠಗಳಿಂದ ಹೊಡೆದಾರು! ಚಿತಾಗ್ನಿಯಿಂದ ಸುಟ್ಟಾರು! ಅಥವಾ ಪಶುಗಳಂತೆ ಕೊಂದಾರು!
ಅಧರ್ಮಃ ಕ್ಷತ್ರಿಯಸ್ಯೈಷ ಯಚ್ಛಯ್ಯಾಮರಣಂ ಭವೇತ್ |
ವಿಸೃಜನ್ ಶ್ಲೇಷ್ಮಪಿತ್ತಾನಿ ಕೃಪಣಂ ಪರಿದೇವನಮ್ ॥23॥
ಕ್ಷತ್ರಿಯನಾದವನಿಗೆ ಹಾಸಿಗೆಯಲ್ಲಿ ಮಲಗಿ, ಶ್ಲೇಷ್ಮಾದಿಗಳನ್ನು ಉಗುಳುತ್ತಾ, ಕರುಣಾಜನಕವಾಗಿ ಗೋಳಾಡುತ್ತಾ ಮರಣವನ್ನು ಹೊಂದುವುದು ಅಧರ್ಮ- ವಾದುದು.
ಅವಿಕ್ಷತೇನ ದೇಹೇನ ಪ್ರಲಯಂ ಯೋಽಧಿಗಚ್ಛತಿ |
ಕ್ಷತ್ರಿಯೋ ನಾಸ್ಯ ತತ್ ಕರ್ಮ ಪ್ರಶಂಸಂತಿ ಪುರಾವಿದಃ ॥24॥
ಯಾವ ಕ್ಷತ್ರಿಯನು ಗಾಯವಿಲ್ಲದ ದೇಹದಿಂದ ಮರಣವನ್ನು ಹೊಂದು- ತ್ತಾನೆಯೋ ಅವನ ಆ ಕರ್ಮವನ್ನು ಪ್ರಾಚೀನರು ಪ್ರಶಂಸಿಸುವುದಿಲ್ಲ.
ನ ಗೃಹೇ ಮರಣಂ ತಾತ ಕ್ಷತ್ರಿಯಾಣಾಂ ಪ್ರಶಸ್ಯತೇ |
ಶೌಂಡೀರಾಣಾಮಶೌಂಡೀರ್ಯಮಧರ್ಮ್ಯಂ ಕೃಪಣಂ ಚ ತತ್ ॥25॥
ಎಲೈ ಪ್ರೀತಿಪಾತ್ರನೇ! ಕ್ಷತ್ರಿಯರಿಗೆ ಗೃಹದಲ್ಲಿ ಮರಣವು ಪ್ರಶಸ್ತವಲ್ಲ. ಯುದ್ಧ- ಕುಶಲರಾದವರಿಗೆ ಅಕೌಶಲವು ಅಧರ್ಮಪ್ರದವಾದುದು ಮತ್ತು ದರಿದ್ರವಾದುದು.
ಇದಂ ದುಃಖಮಹೋ ಕಷ್ಟಂ ಪಾಪೀಯಮಿತಿ ನಿಷ್ಟನನ್ |
ಪ್ರತಿಧ್ವಸ್ತಮುಖಃ ಪೂತಿರಮಾತ್ಯಾನ್ ಬಹು ಶೋಚಯನ್ ॥26॥
ಅರೋಗಾಣಾಂ ಸ್ಪೃಹಯತೇ ಮುಹುರ್ಮೃತ್ಯುಮಪೀಚ್ಛತಿ |
ವೀರೋ ದೃಪ್ತೋಽಭಿಮಾನೀ ಚ ನೇದೃಶಂ ಮೃತ್ಯುಮರ್ಹತಿ ॥27॥
ಅಯ್ಯೋ ಎಂಥಾ ಕಷ್ಟ! ಎಂಥಾ ಪಾಪಸ್ಥಿತಿಯ ಅವಸ್ಥೆ ಉಂಟಾಯಿತು! ಎಂದು ಗಟ್ಟಿಯಾಗಿ ಗೋಳಾಡುತ್ತಾ, ಮುಖದ ಕಾಂತಿಯನ್ನು ಕಳೆದುಕೊಂಡು, ದುರ್ಗಂಧ -ವನ್ನು ಸೂಸುತ್ತಾ, ಕಳೆದು ಹೋದ ಅಮಾತ್ಯರನ್ನು ಸ್ಮರಿಸಿ ಬಹಳವಾಗಿ ಶೋಕ- ಪಡುತ್ತಾ, ಮತ್ತೆ ಮತ್ತೆ ಆರೋಗ್ಯವನ್ನು ಅನಂತರ ಮೃತ್ಯುವನ್ನು ಬಯಸುವವನ ಮರಣಕ್ಕೆ ಸದೃಶವಾದ ಮೃತ್ಯುವನ್ನು ಆತ್ಮಾಭಿಮಾನವುಳ್ಳ ವೀರನಾದವನು ಹೊಂದಲು ಅನರ್ಹನಾದವನು.
ರಣೇಷು ಕದನಂ ಕೃತ್ವಾ ಜ್ಞಾತಿಭಿಃ ಪರಿವಾರಿತಃ |
ತೀಕ್ಷ್ಣೈಃ ಶಸ್ತ್ರೈಃ ಸುವಿಕ್ಲಿಷ್ಟಃ ಕ್ಷತ್ರಿಯೋ ಮೃತ್ಯುಮರ್ಹತಿ ॥28॥
ಕ್ಷತ್ರಿಯನು ಜ್ಞಾತಿಗಳಿಂದ ಪರಿವಾರಿತನಾಗಿ ರಣರಂಗದಲ್ಲಿ ಹೋರಾಡಿ ತೀಕ್ಷ್ಣ- ವಾದ ಶಸ್ತ್ರಗಳಿಂದ ಗಾಯಗೊಂಡು ಮರಣವನ್ನು ಹೊಂದುವುದಕ್ಕೆ ಅರ್ಹನಾದ- ವನು.
ಶೂರೋ ಹಿ ಸತ್ಯಮನ್ಯುಭ್ಯಾಮಾವಿಷ್ಟೋ ಯುಧ್ಯತೇ ಭೃಶಮ್ |
ಕೃತ್ಯಮಾನಾನಿ ಗಾತ್ರಾಣಿ ಪರೈರ್ನೈವಾವಬುಧ್ಯತೇ॥29॥
ಶೂರನಾದವನು ಸತ್ಯ ಮತ್ತುಕೋಪಗಳಿಂದ ಆವಿಷ್ಟನಾಗಿ ತೀವ್ರವಾಗಿ ಯುದ್ಧ ಮಾಡುತ್ತಾನೆ. ಶತ್ರುಗಳ ಶಸ್ತ್ರಗಳಿಂದ ಕತ್ತರಿಸಲ್ಪಡುತ್ತಿರುವ ತನ್ನ ದೇಹವನ್ನು ಅವನು ಗಮನಿಸುವುದೇ ಇಲ್ಲ.
ಸ ಸಂಖ್ಯೇ ನಿಧನಂ ಪ್ರಾಪ್ಯ ಪ್ರಶಸ್ತಂ ಲೋಕಪೂಜಿತಮ್ |
ಸ್ವಧರ್ಮಂ ವಿಪುಲಂ ಪ್ರಾಪ್ಯ ಶಕ್ರಸ್ಯೈತಿ ಸಲೋಕತಾಮ್ ॥30॥
ಅವನು ಯುದ್ಧದಲ್ಲಿ ಲೋಕಪೂಜಿತವಾದ ಪ್ರಶಸ್ತವಾದ ಮರಣವನ್ನು ಹೊಂದಿ, ವಿಪುಲವಾದ ಸ್ವಧರ್ಮವನ್ನು ಸಂಪಾದಿಸಿ, ಇಂದ್ರನ ಸಾಲೋಕ್ಯವನ್ನು ಪಡೆಯು- ತ್ತಾನೆ.
ಸರ್ವೋ ಯೋಧಃ ಪರಂ ತ್ಯಕ್ತುಮಾವಿಷ್ಟಸ್ತ್ಯಕ್ತಜೀವಿತಃ |
ಪ್ರಾಪ್ನೋತೀಂದ್ರಸ್ಯ ಸಾಲೋಕ್ಯಂ ಶೂರಃ ಪೃಷ್ಠಮದರ್ಶಯನ್ ॥31॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಶತತಮೋಽಧ್ಯಾಯಃ ॥99॥
ಶೂರನಾದವನು ಶತ್ರುಗಳಿಗೆ ತನ್ನ ಬೆನ್ನನ್ನು ತೋರಿಸದೇ, ಸರ್ವೋಪಾಯ- ಗಳಿಂದ ರಣರಂಗದಲ್ಲಿ ಮುಂಭಾಗದಲ್ಲಿಯೇ ನಿಂತು, ತನ್ನ ಜೀವಿತದ ಹಂಗನ್ನು ತೊರೆದು, ಯುದ್ಧವನ್ನು ಮಾಡಿ ಮರಣವನ್ನು ಹೊಂದಿ ಇಂದ್ರನ ಸಾಲೋಕ್ಯವನ್ನು ಪಡೆಯುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 99ನೆಯ ಅಧ್ಯಾಯವು ಮುಗಿಯಿತು.
0

100. ನೂರನೆಯ ಅಧ್ಯಾಯ
ಇಂದ್ರಾಂಬರೀಷಸಂವಾದಾನುವಾದ; ಸೇನಾಪತಿಯಾದ ಸುದೇವನ ಸ್ವರ್ಗವೈಭವ
ಯುಧಿಷ್ಠಿರಃ
ಕೇ ಲೋಕಾ ಯುದ್ಧ್ಯಮಾನಾನಾಂ ಶೂರಾಣಾಮನಿವರ್ತಿನಾಮ್ |
ಭವಂತಿ ನಿಧನಂ ಪ್ರಾಪ್ಯ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ಶೂರರಾಗಿ ಯುದ್ಧವನ್ನು ಮಾಡುತ್ತಾ ಹಿಮ್ಮೆಟ್ಟದೇ ನಿಧನವನ್ನು ಹೊಂದುವವರಿಗೆ ಯಾವ ಲೋಕಗಳು ಲಭಿಸುತ್ತವೆ ಎಂದು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಂಬರೀಷಸ್ಯ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಅಂಬರೀಷ- ನಿಗೂ ಮತ್ತು ಇಂದ್ರನಿಗೂ ನಡೆದ ಸಂವಾದರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಅಂಬರೀಷೋ ಹಿ ನಾಭಾಗಃ ಸ್ವರ್ಗಂ ಗತ್ವಾ ಸುದುರ್ಲಭಮ್ |
ದದರ್ಶ ಸುರಲೋಕಸ್ಥಂ ಶಕ್ರೇಣ ಸಚಿವಂ ಸಹ ॥3॥
ಸರ್ವತೇಜೋಮಯಂ ದಿವ್ಯಂ ವಿಮಾನವರಮಾಸ್ಥಿತಮ್ |
ಉಪರ್ಯುಪರಿ ಗಚ್ಛಂತಂ ಸ್ವಂ ವೈ ಸೇನಾಪತಿಂ ಪ್ರಭುಮ್ ॥4॥
ನಾಭಾಗಪುತ್ರನಾದ ಅಂಬರೀಷನು ಅತ್ಯಂತ ದುರ್ಲಭವಾದ ಸ್ವರ್ಗಕ್ಕೆ ಹೋಗಿ ಸ್ವರ್ಗಲೋಕದಲ್ಲಿ ಇಂದ್ರನ ಜೊತೆಯಲ್ಲಿ ಇದ್ದ ಪ್ರಕಾಶಮಾನವಾದ ದಿವ್ಯವಾದ ವಿಮಾನದಲ್ಲಿ ಕುಳಿತಿದ್ದ ಮೇಲೆ ಮೇಲೆ ಹೋಗುತ್ತಿದ್ದಂತಹ ಪ್ರಭುವಾದ ತನ್ನ ಸೇನಾಪತಿಯನ್ನು ನೋಡಿದನು.
ಸ ದೃಷ್ಟ್ವೋಪರಿ ಗಚ್ಛಂತಂ ಸೇನಾಪತಿಮುದಾರಧೀಃ |
ಋದ್ಧಿಂ ದೃಷ್ಟ್ವಾ ಸುದೇವಸ್ಯ ವಿಸ್ಮಿತಃ ಪ್ರಾಹ ವಾಸವಮ್ ॥5॥
ಉದಾರಬುದ್ಧಿಯುಳ್ಳ ಅಂಬರೀಷನು ಸುದೇವನ ವೈಭವವನ್ನೂ ಅವನು ತನಗಿಂತ ಮೇಲೆ ಹೋಗುತ್ತಿದ್ದುದನ್ನೂ ನೋಡಿ ವಿಸ್ಮಿತನಾಗಿ ಇಂದ್ರನನ್ನು ಕುರಿತು ಹೇಳಿದನು.
ಸಾಗರಾಂತಾಂ ಮಹೀಂ ಕೃತ್ಸ್ನಾಮನುಶಿಷ್ಯ ಯಥಾವಿಧಿ |
ಚಾತುರ್ವರ್ಣ್ಯೇ ಯಥಾಶಾಸ್ತ್ರಂ ಪ್ರವೃತ್ತೋ ಧರ್ಮಕಾಮ್ಯಯಾ ॥6॥
ನಾನು ಸಾಗರಾಂತವಾದ ಸಮಗ್ರವಾದ ಭೂಮಿಯನ್ನು ಶಾಸೊತ್ರೇಕ್ತರೀತಿಯಲ್ಲಿ ಪಾಲಿಸಿ, ಚಾತುರ್ವರ್ಣ್ಯದವರನ್ನು ಶಾಸೊತ್ರೇಕ್ತರೀತಿಯಲ್ಲಿಯೇ ಅವರ ಧರ್ಮದಲ್ಲಿ ತೊಡಗಿಸಿ, ಧರ್ಮವನ್ನು ಬಯಸಿ ಪ್ರವೃತ್ತನಾದೆನು.
ಬ್ರಹ್ಮಚರ್ಯೇಣ ಘೋರೇಣ ಆಚಾರ್ಯಕುಲಸೇವಯಾ |
ವೇದಾನಧೀತ್ಯ ಧರ್ಮೇಣ ರಾಜಶಾಸ್ತ್ರಂ ಚ ಕೇವಲಮ್ ॥7॥
ಅತಿಥೀನನ್ನಪಾನೇನ ಪಿತೄಂಶ್ಚ ಸ್ವಧಯಾ ತಥಾ |
ಋಷೀನ್ ಸ್ವಾಧ್ಯಾಯದೀಕ್ಷಾಭಿರ್ದೇವಾನ್ ಯಜ್ಞೈರನುತ್ತಮೈಃ ॥8॥
ಕ್ಷತ್ರಧರ್ಮೇ ಸ್ಥಿತೋ ಭೂತ್ವಾ ಯಥಾಶಾಸ್ತ್ರಂ ಯಥಾವಿಧಿ |
ಉದೀಕ್ಷಮಾಣಃ ಪೃತನಾಂ ಜಯಾಮಿ ಯುಧಿ ವಾಸವ ॥9॥
ಎಲೈ ವಾಸವನೇ! ಗುರುಕುಲದಲ್ಲಿ ಘೋರವಾದ ಬ್ರಹ್ಮಚರ್ಯದಿಂದ ಆಚಾರ್ಯಸೇವೆಯನ್ನು ಮಾಡಿ, ಧರ್ಮದಿಂದಲೇ ವೇದಾಧ್ಯಯನವನ್ನು ಮಾಡಿ, ರಾಜನೀತಿಶಾಸ್ತ್ರವನ್ನು ಅಧ್ಯಯನ ಮಾಡಿ, ಅತಿಥಿಗಳನ್ನು ಅನ್ನಪಾನಗಳಿಂದಲೂ, ಪಿತೃಗಳನ್ನು ಸ್ವಧೆಯಿಂದಲೂ, ಋಷಿಗಳನ್ನು ಸ್ವಾಧ್ಯಾಯ-ದೀಕ್ಷೆಗಳಿಂದಲೂ, ದೇವತೆ -ಗಳನ್ನು ಶ್ರೇಷ್ಠವಾದ ಯಜ್ಞಗಳಿಂದಲೂ ತೃಪ್ತಿಪಡಿಸಿ, ಶಾಸ್ತ್ರವಿಧಿಗಳಂತೆ ಕ್ಷತ್ರಿಯ- ಧರ್ಮದಲ್ಲೇ ನಿರತನಾಗಿ, ಸೈನ್ಯದ ಮೇಲ್ವಿಚಾರಣೆಯನ್ನು ಮಾಡಿಕೊಂಡು, ಯುದ್ಧದಲ್ಲಿ ಜಯಶೀಲನಾಗಿರುವೆನು.
ದೇವರಾಜ ಸುದೇವೋಽಯಂ ಮಮ ಸೇನಾಪತಿಃ ಪುರಾ |
ಆಸೀದ್ ಯೋಧಃ ಪ್ರಶಾಂತಾತ್ಮಾ ಸೋಽಯಂ ಕಸ್ಮಾದತೀವ ಮಾಮ್॥10
ಎಲೈ ದೇವರಾಜನೇ! ಈ ಸುದೇವನು ಹಿಂದೆ ನನ್ನ ಸೇನಾಪತಿಯಾಗಿದ್ದವನು. ಪ್ರಶಾಂತಮನಸ್ಸುಳ್ಳ ಒಬ್ಬ ಯೋಧನಾಗಿದ್ದನು. ಅಂತಹವನು ಏಕೆ ನನ್ನನ್ನೂ ಮೀರಿ- ದ್ದಾನೆ?
ನಾನೇನ ಕ್ರತುಭಿರ್ಮುಖ್ಯೈರಿಷ್ಟಂ ನೈವ ದ್ವಿಜಾತಯಃ |

ತರ್ಪಿತಾ ವಿಧಿವಚ್ಚಕ್ರ ಸೋಽಯಂ ಕಸ್ಮಾದತೀವ ಮೇ ॥11॥
ಅವನು ಶ್ರೇಷ್ಠವಾದ ಕ್ರತು(ಯಜ್ಞ)ಗಳನ್ನು ಮಾಡಿದವನಲ್ಲ. ವಿಧಿವತ್ತಾಗಿ ಬ್ರಾಹ್ಮಣರನ್ನು ತೃಪ್ತಿಪಡಿಸಿದವನಲ್ಲ. ಎಲೈ ಇಂದ್ರನೇ! ಅಂತಹ ಇವನು ಏಕೆ ನನ್ನ ಮೇಲಿದ್ದಾನೆ?
ಇಂದ್ರಃ
ಯದನೇನ ಕೃತಂ ಕರ್ಮ ಪ್ರತ್ಯಕ್ಷಂ ತೇ ಮಹೀಪತೇ |
ಪುರಾ ಪಾಲಯತಃ ಸಮ್ಯಕ್ ಪೃಥಿವೀಂ ಧರ್ಮತೋ ನೃಪ ॥12॥
ಇಂದ್ರ ಎಲೈ ರಾಜನೇ! ನೀನು ಹಿಂದೆ ಭೂಮಿಯನ್ನು ಧರ್ಮದಿಂದ ಚೆನ್ನಾಗಿ ಆಳುತ್ತಿದ್ದಾಗ ನಿನ್ನ ಎದುರಿಗೆ ಇವನು ಎಂತಹ ಕರ್ಮವನ್ನು ಮಾಡಿದನೆಂದು ಕೇಳು.
ಶತ್ರವೋ ನಿರ್ಜಿತಾಃ ಸರ್ವೇ ಯೇ ತವಾಹಿತಕಾರಿಣಃ |
ಸಂಯಮೋ ವಿಷಮಶ್ಚೈವ ಸುಯಮಶ್ಚ ಮಹಾಬಲಃ ॥13॥
ರಾಕ್ಷಸಾ ದುರ್ಜಯಾ ಲೋಕೇ ತ್ರಯಸ್ತೇ ಯುದ್ಧದುರ್ಮದಾಃ |
ಪುತ್ರಾಸ್ತೇ ಶತಶೃಂಗಸ್ಯ ರಾಕ್ಷಸಸ್ಯ ಮಹೀಪತೇಃ ॥14॥
ನಿನಗೆ ಅಹಿತವನ್ನು ಉಂಟುಮಾಡುವ ಶತ್ರುಗಳಾದ ರಾಕ್ಷಸಾಧಿಪತಿಯಾದ ಶತಶೃಂಗನ ಪುತ್ರರಾದ ಮಹಾಬಲರಾದ ಯುದ್ಧದುರ್ಮದರಾದ ದುರ್ಜಯರಾದ ಸಂಯಮ, ವಿಷಮ ಮತ್ತು ಸುಯಮ ಎಂಬ ಮೂರು ರಾಕ್ಷಸರು ಇವನಿಂದ ಕೊಲ್ಲಲ್ಪಟ್ಟರು.
(ಲಕ್ಷ್ಮಾಲಂಕಾರ)
ತಥಾ ತಸ್ಮಿನ್ ಶುಭೇ ಕಾಲೇ ಯಜ್ಞೇ ಯಜ್ಞಂ ವಿತನ್ವತಃ |
ಅಶ್ವಮೇಧಂ ಮಹಾಯಾಗಂ ದೇವಾನಾಂ ಹಿತಕಾಮ್ಯಯಾ ॥15॥
ತಸ್ಯ ತೇ ಖಲು ವಿಘ್ನಾರ್ಥಮಾಗತಾ ರಾಕ್ಷಸಾಸ್ತ್ರಯಃ |
ಕೋಟೀಶತಪರೀವಾರಾಂ ರಾಕ್ಷಸಾನಾಂ ಮಹಾಚಮೂಮ್ ॥16॥
ಹಾಗೆಯೇ ಶುಭಕಾಲದಲ್ಲಿ ದೇವತೆಗಳನ್ನು ಸಂತೋಷಪಡಿಸುವ ಉದ್ದೇಶದಿಂದ ಅಶ್ವಮೇಧಮಹಾಯಾಗವನ್ನು ಮಾಡುತ್ತಿದ್ದ ನಿನ್ನ ಯಜ್ಞಕ್ಕೆ ವಿಘ್ನವನ್ನು ಉಂಟು ಮಾಡಲು ನೂರುಕೋಟಿ ಪರಿಮಿತವಾದ ರಾಕ್ಷಸರ ದೊಡ್ಡ ಸೈನ್ಯವನ್ನು ತೆಗೆದು- ಕೊಂಡು ಆ ಮೂವರು ಬಂದರು.
ಪರಿಗೃಹ್ಯ ತತಃ ಸರ್ವಾಃ ಪ್ರಜಾ ಬಂದೀಕೃತಾಸ್ತವ |
ವಿಹ್ವಲಾಶ್ಚ ಪ್ರಜಾಃ ಸರ್ವಾಃ ಸರ್ವೇ ಚ ತವ ಸೈನಿಕಾಃ |
ನಿರಾಕೃತಸ್ತಯಾ ಚಾಸೀತ್ ಸುದೇವಃ ಸೈನ್ಯನಾಯಕಃ ॥17॥
ಅವರು ನಿನ್ನ ಪ್ರಜೆಗಳೆಲ್ಲರನ್ನೂ ಹಿಡಿದು ಬಂದಿಗಳನ್ನಾಗಿ ಮಾಡಿಕೊಂಡರು. ಎಲ್ಲ ಪ್ರಜೆಗಳೂ ಮತ್ತು ನಿನ್ನ ಸೈನಿಕರು ವಿಹ್ವಲರಾದರು. ನಿನ್ನ ಸೇನಾಪತಿಯಾದ ಸುದೇವನು ಆ ರಾಕ್ಷಸಸೇನೆಯಿಂದ ಪರಾಜಿತನಾದನು.
ತತ್ರಾಮಾತ್ಯವಚಃ ಶ್ರುತ್ವಾ ನಿರಸ್ತಃ ಸರ್ವಕರ್ಮಸು |
ಶ್ರುತ್ವಾ ತೇಷಾಂ ವಚೋ ಭೂಯಃ ಸೋಪಧಂ ವಸುಧಾಧಿಪ ॥18॥
ಸರ್ವಸೈನ್ಯಸಮಾಯುಕ್ತಃ ಸುದೇವಃ ಪ್ರಹಿತಸ್ತ್ವಯಾ |
ರಾಕ್ಷಸಾನಾಂ ವಧಾರ್ಥಾಯ ದುರ್ಜಯಾನಾಂ ನರಾಧಿಪ ॥19॥
ಆಗ ಅಮಾತ್ಯರ ಮಾತುಗಳನ್ನು ಕೇಳಿ ನೀನು ಸುದೇವನನ್ನು ಎಲ್ಲ ಕರ್ಮ- ಗಳಿಂದಲೂ ಬಹಿಷ್ಕರಿಸಿದೆ. ಎಲೈ ರಾಜನೇ ಪುನಃ ಅಮಾತ್ಯರ ಮಾತಿನಂತೆ ನೀನು ಸುದೇವನನ್ನು ಸರ್ವಸೈನ್ಯಸಮಾಯುಕ್ತನಾಗಿ ಯುದ್ಧಕ್ಕೆ ಕಳುಹಿಸಿದೆ. ಎಲೈ ರಾಜನೇ! ದುರ್ಜಯರಾದ ರಾಕ್ಷಸರ ವಧೆಗಾಗಿ ನೀನು ಅವನನ್ನು ಕಳುಹಿಸಿದೆ.
ನಾಜಿತ್ವಾ ರಾಕ್ಷಸೀಂ ಸೇನಾಂ ಪುನರಾಗಮನಂ ತವ |
ಬಂದಾನ್ಮೋಕ್ಷಮಕೃತ್ವಾ ಚ ನ ಚಾಗಮನಮಿಷ್ಯತೇ ॥20॥
`ರಾಕ್ಷಸಸೇನೆಯನ್ನು ಸೋಲಿಸದೇ ಬಂದೀಕೃತರಾದ ನನ್ನ ಪ್ರಜೆಗಳನ್ನು ಬಿಡುಗಡೆ ಮಾಡದೇ ನೀನು ಹಿಂದಿರುಗಕೂಡದು' (ಎಂದು ಅವನಿಗೆ ಹೇಳಿದೆ).
ಸುದೇವಸ್ತದ್ವಚಃ ಶ್ರುತ್ವಾ ಪ್ರಸ್ಥಾನಮಕರೋನ್ನೃಪ |
ಸಂಪ್ರಾಪ್ತಶ್ಚ ಸ ತಂ ದೇಶಂ ಯತ್ರ ಬಂದೀಕೃತಾಃ ಪ್ರಜಾಃ ॥21॥
ಎಲೈ ರಾಜನೇ! ಸುದೇವನು ಆ ಮಾತನ್ನು ಕೇಳಿ ಹೊರಟು ಸೆರೆ ಹಿಡಿಯಲ್ಪಟ್ಟ ಪ್ರಜೆಗಳಿದ್ದ ಆ ಸ್ಥಳಕ್ಕೆ ಬಂದನು.
ಪಶ್ಯತಿ ಸ್ಮ ಚಮೂರ್ಜೇತುಮಪಿ ಸೇಂದ್ರೈಃ ಸುರಾಸುರೈಃ |
ನಾಂಬರೀಷಃ ಕಲಾಮೇಕಾಮೇಷಾಂ ಕ್ಷಪಯಿತುಂ ಕ್ಷಮಃ |
ದಿವ್ಯಾಸ್ತ್ರಬಲಭೂಯಿಷ್ಠಃ ಕಿಮಂಗಃ ಪುನರೀದೃಶಃ ॥22॥
ಸೇನಾಪತಿಯಾದ ಸುದೇವನು ರಾಕ್ಷಸರ ಮಹಾಘೋರವಾದ ಮಹಾಸೈನ್ಯ- ವನ್ನು ನೋಡಿ ಚಿಂತಿಸಿದನು. ಇಂದ್ರಸಹಿತರಾದ ಸುರಾಸುರರಿಂದಲೂ ಈ ಸೈನ್ಯ- ವನ್ನು ಗೆಲ್ಲಲು ಸಾಧ್ಯವಿಲ್ಲ. ದಿವ್ಯಾಸ್ತ್ರಬಲಸಂಪನ್ನನಾದ ಅಂಬರೀಷನು ಈ ಸೈನ್ಯದ ಒಂದು ಭಾಗವನ್ನೂ ವಿನಾಶ ಮಾಡಲಾರ. ಇನ್ನು ಅವನ ಸಹಾಯಕನಾದ ನನ್ನಿಂದ ಇಂತಹ ಸೈನ್ಯವು ಹೇಗೆ ಸೋಲಿಸಲ್ಪಡುತ್ತದೆ?
ತತಃ ಸೇನಾಂ ಪುನಃ ಸರ್ವಾಂ ಪ್ರೇಷಯಾಮಾಸ ಪಾರ್ಥಿವ |
ಯಚ್ಚ ತ್ವಂ ವಿಜಿತಃ ಸರ್ವೈಮಂತ್ರಿಭಿಃ ಸೋಪಧೈಃ ಸಹ ॥24॥
ಎಲೈ ರಾಜನೇ! ಅನಂತರ ಎಲ್ಲ ಮಂತ್ರಿಗಳೂ ಸೇರಿ ಪುನಃ ಹೆಚ್ಚಿನ ಸೈನ್ಯವನ್ನು ಕಳುಹಿಸಿದರು. ಆಗ ಸೇನೆಯ ಜೊತೆಯಲ್ಲಿ ನೀನೂ

ಪರಾಜಿತನಾದೆ.
ತತೋ ರುದ್ರಂ ಮಹಾದೇವಂ ಪ್ರಪನ್ನೋ ಜಗತಃ ಪತಿಮ್ |
ಶ್ಮಶಾನನಿಲಯಂ ದೇವಂ ತುಷ್ಟಾವ ವೃಷಭಧ್ವಜಮ್ ॥25॥
ಸ್ತುತ್ವಾ ಶಸ್ತ್ರಂ ಸಮಾದಾಯ ಸ್ವಶಿರಶ್ಛೇತ್ತುಮುದ್ಯತಃ ॥26॥
ಆಗ ಸುದೇವನು ಜಗತ್ಪತಿಯೂ, ಮಹಾದೇವನೂ, ಶ್ಮಶಾನವಾಸಿಯೂ ವೃಷಭಧ್ವಜನೂ ಆದ ಶಂಕರನಿಗೆ ಶರಣಾಗತನಾಗಿ ಅವನ ಸ್ತೋತ್ರವನ್ನು ಮಾಡಿ- ದನು. ಸ್ತೋತ್ರವನ್ನು ಮಾಡಿ ಶಸ್ತ್ರವನ್ನು ತೆಗೆದುಕೊಂಡು ತನ್ನ ಶಿರಸ್ಸನ್ನು ಕತ್ತರಿಸಿ- ಕೊಳ್ಳಲು ಉದ್ಯುಕ್ತನಾದನು.
ಕಾರುಣ್ಯಾದ್ ದೇವದೇವೇನ ಗೃಹೀತಸ್ತಸ್ಯ ದಕ್ಷಿಣಃ |
ಸ ಪಾಣಿಃ ಸಹ ಶಸ್ತ್ರೇಣ ದೃಷ್ಟ್ವಾ ಚೇದಮುವಾಚ ಹ ॥27॥
ದೇವದೇವನಾದ ಶಂಕರನು ಕರುಣೆಯಿಂದ ಅದನ್ನು ನೋಡಿ ಶಸ್ತ್ರಸಹಿತವಾದ ಅವನ ಬಲಗೈಯ್ಯನ್ನು ಹಿಡಿದು ಹೀಗೆ ಮಾತನಾಡಿದನಷ್ಟೇ!
ಕಿಮಿದಂ ಸಾಹಸಂ ಪುತ್ರ ಕರ್ತುಕಾಮೋ ವದಸ್ವ ಮೇ |
ಸ ಉವಾಚ ಮಹಾದೇವಂ ಶಿರಸಾ ತ್ವವನೀಂ ಗತಃ ॥28॥
ಎಲೈ ಪುತ್ರನೇ! ಇದೇನು ಸಾಹಸವನ್ನು ಮಾಡಲು ಹೊರಟಿರುವೆ ಎಂದು ನನಗೆ ಹೇಳು. (ಎಂದು ಹೇಳಿದನು). ಸುದೇವನು ಮಹಾದೇವನಿಗೆ ಭೂಮಿಯ ಮೇಲೆ ಶಿರಸಾ ನಮಸ್ಕಾರವನ್ನು ಮಾಡಿ ಹೇಳಿದನು.
ಭಗವನ್ ವಾಹಿನೀಮೇನಾಂ ರಾಕ್ಷಸಾನಾಂ ಸುರೇಶ್ವರ |
ಅಶಕ್ತೋಽಹಂ ರಣೇ ಜೇತುಂ ತಸ್ಮಾತ್ ತ್ಯಕ್ಷ್ಯಾಮಿ ಜೀವಿತಮ್ |
ಗತಿರ್ಭವ ಮಹಾದೇವ ಮಮಾರ್ತಸ್ಯ ಜಗತ್ಪತೇ ॥29॥
ಭಗವಂತನೇ! ಸುರೇಶ್ವರನೇ! ಈ ರಾಕ್ಷಸರ ಸೈನ್ಯವನ್ನು ಯುದ್ಧದಲ್ಲಿ ಗೆಲ್ಲಲು ನಾನು ಅಸಮರ್ಥನಾಗಿದ್ದೇನೆ. ಆದ್ದರಿಂದ ಪ್ರಾಣವನ್ನು ಬಿಡುವೆನು. ಜಗತ್ಪತಿಯೇ! ಮಹಾದೇವನೇ! ಆರ್ತನಾದ ನನಗೆ ಗತಿಯಾಗು.
ನಾಗಂತವ್ಯಮಜಿತ್ವಾ ಚ ಮಾಮಾಹ ಜಗತೀಪತಿಃ|
ಅಂಬರೀಷೋ ಮಹಾದೇವ ಕ್ಷಾರಿತಃ ಸಚಿವೈಃ ಸಹ ॥30॥
ಮಹಾದೇವ! ಜಗತ್ಪತಿಯಾದ ಅಂಬರೀಷನು ಸಚಿವರ ಮಾತುಗಳಿಂದ ಪ್ರಭಾ- ವಿತನಾಗಿ ರಾಕ್ಷಸಸೈನ್ಯವನ್ನು ಗೆಲ್ಲದೇ ಹಿಂದಕ್ಕೆ ಬರಬಾರದೆಂದು ನನಗೆ ಹೇಳಿದ್ದಾನೆ (ಎಂದು ಹೇಳಿದನು).
ತಮುವಾಚ ಮಹಾದೇವಃ ಸುದೇವಂ ಪತಿತಂ ಕ್ಷಿತೌ |
ಅಧೋಮುಖಂ ಮಹಾತ್ಮಾನಂ ಸತತತ್ವನಾಂ ಹಿತಕಾಮ್ಯಯಾ ॥31॥
ಭೂಮಿಯ ಮೇಲೆ ಬಿದ್ದು ಅಧೋಮುಖನಾಗಿ ನಮಸ್ಕಾರವನ್ನು ಮಾಡಿ ಪ್ರಜೆಗಳ ಹಿತವನ್ನು ಬಯಸುತ್ತಿದ್ದ ಮಹಾತ್ಮನಾದ ಸುದೇವನನ್ನು ಕುರಿತು ಮಹಾ- ದೇವನು ಹೇಳಿದನು.
ಧನುರ್ವೇದಂ ಸಮಾಹೂಯ ಸಗಣಂ ಸಹವಿಗ್ರಹಮ್ |
ರಥನಾಗಾಶ್ವಕಲಿಲಂ ದಿವ್ಯಾಸ್ತ್ರಸಮಲಂಕೃತಮ್ ॥32॥
ರಥಂ ಚ ಸುಮಹಾಭಾಗಂ ಯೇನ ತತ್ ತ್ರಿಪುರಂ ಹತಮ್ |
ಧನುಃ ಪಿನಾಕಂ ಖಡ್ಗಂ ಚ ರೌದ್ರಮಸ್ತ್ರಂ ಚ ಶಂಕರಃ |
ನಿಜಘಾನಾಸುರಾನ್ ಸರ್ವಾನ್ ಯೇನ ದೇವಸ್ತ್ರಿಯಂಬಕಃ ॥33॥
ಉವಾಚ ಚ ಮಹಾದೇವಃ ಸುದೇವಂ ವಾಹಿನೀಪತಿಮ್ |
ರಥಾದಸ್ಮಾತ್ ಸುದೇವ ತ್ವಂ ದುರ್ಜಯಃ ಸ ಸುರಾಸುರೈಃ ॥34॥
ಮಹಾದೇವನು ಶರೀರವನ್ನು ಧರಿಸಿದ ಅಂಗಸಹಿತವಾದ ಧನುರ್ವೇದವನ್ನು ಕರೆದು ರಥಗಜಾಶ್ವಗಳಿಂದ ಕೂಡಿದ ದಿವ್ಯಾಸ್ತ್ರಗಳಿಂದ ಅಲಂಕೃತವಾದ ತ್ರಿಪುರಾ- ಸುರರನ್ನು ಸಂಹಾರಮಾಡಿದ ರಥವನ್ನೂ, ಪಿನಾಕಧನುಸ್ಸನ್ನೂ, ಖಡ್ಗವನ್ನೂ, ಯಾವ ತನ್ನ ಅಸ್ತ್ರದಿಂದ ತ್ರ್ಯಂಬಕನಾದ ಶಂಕರನು ಎಲ್ಲ ಅಸುರರನ್ನು ಸಂಹರಿಸಿ- ದನೋ ಅಂತಹ ಅಸ್ತ್ರವನ್ನೂ ಸುದೇವನಿಗೆ ಕೊಟ್ಟು, ಸೇನಾಪತಿಯಾದ ಸುದೇವ- ನನ್ನು ಕುರಿತು ``ಎಲೈ ಸುದೇವನೇ! ಇಂತಹ ಸಲಕರಣೆಗಳಿಂದ ಕೂಡಿದ ರಥದಿಂದ ಯುದ್ಧವನ್ನು ಮಾಡಿದರೆ ನೀನು ದೇವಾಸುರರಿಂದಲೂ ದುರ್ಜನಾಗುವಿ''.
ಮಾಯಯಾ ಮೋಹಿತೋ ಭೂಮೌ ನ ಪದಂ ಕರ್ತುಮರ್ಹಸಿ |
ರಥಸ್ಥಸ್ತ್ರಿದಶಾನ್ ಸರ್ವಾನ್ ಜೇಷ್ಯಸಿ ತ್ವಂ ಸದಾನವಾನ್ ॥35॥
ಪ್ರಮಾದಕ್ಕೆ ಒಳಗಾಗಿ ಭೂಮಿಯ ಮೇಲೆ ಕಾಲಿಡಬೇಡ. ಈ ರಥದಲ್ಲಿ ಕುಳಿತು ಯುದ್ಧವನ್ನು ಮಾಡಿದರೆ ನೀನು ಎಲ್ಲಾ ದೇವತೆಗಳನ್ನೂ ಮತ್ತು ದಾನವರನ್ನೂ ಗೆಲ್ಲುವಿ.
ರಾಕ್ಷಸಾಶ್ಚ ಪಿಶಾಚಾಶ್ಚ ನ ಶಕ್ತಾ ದ್ರಷ್ಟುಮೀದೃಶಮ್ |
ರಥಂ ಸೂರ್ಯಸಹಸ್ರಾಭಂ ಕಿಮು ಯೋದ್ಧುಂ ತ್ವಯಾ ಸಹ ॥36॥
ರಾಕ್ಷಸರು ಮತ್ತು ಪಿಶಾಚಿಗಳು ಸಹಸ್ರಸೂರ್ಯರ ಪ್ರಭೆಯುಳ್ಳ ಈ ರಥವನ್ನು ನೋಡಲೂ ಸಹ ಸಾಧ್ಯವಿಲ್ಲ. ಇನ್ನು ನಿನ್ನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿ ಯಾರು? (ಎಂದು ಹೇಳಿದನು)
ಸ ಜಿತ್ವಾ ರಾಕ್ಷಸಾನ್ ಸರ್ವಾನ್ ಕೃತ್ವಾ ಬಂದೀವಿಮೋಕ್ಷಣಮ್ |
ಘಾತಯಿತ್ವಾ ಚ ತಾನ್ ಸರ್ವಾನ್ ಬಾಹುಯುದ್ಧೇ ತ್ವಯಂ ಹತಃ |

ವಿಷಮಂ ಪ್ರಾಪ್ಯ ಭೂಪಾಲ ವಿಷಮಶ್ಚ ನಿಪಾತಿತಃ ॥37॥
ಸುದೇವನಾದರೋ ರಾಕ್ಷಸರೆಲ್ಲರನ್ನೂ ಗೆದ್ದು, ಬಂದೀಕೃತರಾದ ಪ್ರಜೆಗಳನ್ನು ವಿಮೋಚನೆಗೊಳಿಸಿ, ತನ್ನ ಸೈನ್ಯದಿಂದ ಆ ರಾಕ್ಷಸರೆಲ್ಲರನ್ನೂ ಕೊಲ್ಲಿಸಿ, ಬಾಹು- ಯುದ್ಧದಲ್ಲಿ ವಿಷಮನೆಂಬ ರಾಕ್ಷಸನನ್ನು ಭೂಮಿಯಲ್ಲಿ ಕೆಡವಿ ಅವನನ್ನೂ ಕೊಂದು ತಾನೂ ಹತನಾದನು.
ಏತಸ್ಯ ವಿತತಸ್ತಾತ ಸುದೇವಸ್ಯ ಬಭೂವ ಹ |
ಸಂಗ್ರಾಮಯಜ್ಞಃ ಸುಮಹಾನ್ ಯಶ್ಚಾನ್ಯೋ ಯುದ್ಧ್ಯತೇ ನರಃ ॥38॥
ಎಲೈ ಪ್ರೀತಿಪಾತ್ರನೇ! ಈ ಸುದೇವನ ಸಂಗ್ರಾಮಯಜ್ಞವು ಬಹಳ ದೊಡ್ಡದಾಗಿ ಮತ್ತು ವಿಸ್ತಾರವಾಗಿ ನಡೆಯಿತು. ಬೇರೆ ಯಾವ ಮನುಷ್ಯನು ಯುದ್ಧವನ್ನು ಮಾಡಿ- ದರೂ ಹಾಗೆಯೇ ನಡೆಯುತ್ತದೆ.
ಸನ್ನದ್ಧೋ ದೀಕ್ಷಿತಃ ಸರ್ವೋ ಯೋಧಃ ಪ್ರಾಪ್ಯ ಚಮೂಮುಖಮ್ |
ಯುದ್ಧಯಜ್ಞಾಧಿಕಾರಸ್ಥೋ ಭವತೀತಿ ವಿನಿಶ್ಚಯಃ ॥39॥
ಶಸ್ತ್ರಸನ್ನದ್ಧನಾಗಿ ಯುದ್ಧದೀಕ್ಷೆಯನ್ನು ಪಡೆದ ಪ್ರತಿಯೊಬ್ಬ ಯೋಧನೂ ಸೇನಾಮುಖವನ್ನು ತಲುಪಿ ಯುದ್ಧಯಜ್ಞದಲ್ಲಿ ಅಧಿಕಾರಿಯಾಗುತ್ತಾನೆ ಎಂಬುದು ಅತ್ಯಂತ ನಿಶ್ಚಿತವಾದುದು. (ಎಂದು ಹೇಳಿದನು)
ಅಂಬರೀಷಃ
ಕಾನಿ ಯಜ್ಞೇ ಹವೀಂಷ್ಯತ್ರ ಕಿಮಾಜ್ಯಂ ಕಾ ಚ ದಕ್ಷಿಣಾ |
ಋತ್ವಿಜಶ್ಚಾತ್ರ ಕೇ ಪ್ರೋಕ್ತಾಸ್ತನ್ಮೇ ಬ್ರೂಹಿ ಶತಕ್ರತೋ ॥40॥
ಅಂಬರೀಷ ಈ ಯಜ್ಞದಲ್ಲಿ ಹವಿಸ್ಸು ಯಾವುದು? ಆಜ್ಯವು ಯಾವುದು? ದಕ್ಷಿಣೆಯು ಯಾವುದು? ಋತ್ವಿಜರು ಯಾರು? ಎಲೈ ಇಂದ್ರನೇ! ಇದನ್ನು ನನಗೆ ಹೇಳು.
ಇಂದ್ರಃ
ಋತ್ವಿಜಃ ಕುಂಜರಾಸ್ತತ್ರ ವಾಜಿನೋಽಧ್ವರ್ಯವಸ್ತಥಾ |
ಹವೀಂಷಿ ಪರಮಾಂಸಾನಿ ರುಧಿರಂ ತ್ವಾಜ್ಯಮೇವ ಚ ॥41॥
ಇಂದ್ರ ಆ ಯಜ್ಞದಲ್ಲಿ ಗಜಗಳು ಋತ್ವಿಜರು. ಅಶ್ವಗಳು ಅಧ್ವರ್ಯುಗಳು. ಶತ್ರುಗಳ ಮಾಂಸವು ಹವಿಸ್ಸು. ಮತ್ತು ರಕ್ತವು ಆಜ್ಯ.
ಸೃಗಾಲಗೃಧ್ರಕಾಕೋಲಾಃ ಸದಸ್ಯಾಸ್ತತ್ರ ಸತ್ರಿಣಃ |
ಆಜ್ಯಶೇಷಂ ಪಿಬಂತ್ಯೇತೇ ಹವಿಃ ಪ್ರಾಶ್ನಂತಿ ಚಾಧ್ವರೇ ॥42॥
ನರಿ, ಹದ್ದು, ಕಾಗೆ, ಗೂಬೆಗಳು ಯಜ್ಞದಲ್ಲಿರುವ ಸದಸ್ಯರು. ಇವರು ಆಜ್ಯ- ಶೇಷವನ್ನು ಪಾನ ಮಾಡುತ್ತಾರೆ. ಯಜ್ಞದಲ್ಲಿ ಹವಿಸ್ಸನ್ನು ತಿನ್ನುತ್ತಾರೆ.
ಪ್ರಾಸತೋಮರಸಂಘಾತಾಃ ಖಡ್ಗಶಕ್ತಿಪರಶ್ವಧಾಃ |
ಜ್ವಲಂತೋ ನಿಶಿತಾಃ ಪೀತಾಃ ಸ್ರುಚಸ್ತಸ್ಯಾಥ ಸತ್ರಿಣಃ ॥43॥
ಪ್ರಕಾಶಿಸುವ ಹರಿತವಾದ ನೀರನ್ನು ಕುಡಿಸಿ ಹದಮಾಡಿದ ಪ್ರಾಸತೋಮರಗಳ ಸಮೂಹಗಳು, ಖಡ್ಗಶಕ್ತಿಪರಶುಗಳು ವೀರನ ಆ ಯಜ್ಞದಲ್ಲಿ ಸ್ರುಕ್ಕುಗಳು.
ಚಾಪವೇಗಾಯತಸ್ತೀಕ್ಷ್ಣಃ ಪರಕಾಯಾವದಾರಣಃ|
ಋಜುಃ ಸುನಿಶಿತಃ ಪೀತಃ ಸಾಯಕೋಽಸ್ಯ ಸ್ರುವೋ ಮಹಾನ್ ॥44॥
ಬಿಲ್ಲಿನ ವೇಗದಿಂದ ಹೊರಹೊಮ್ಮುವ ತೀಕ್ಷ್ಣವಾದ, ಶತ್ರುಶರೀರಭೇದಕವಾದ, ನೇರವಾದ, ಹರಿತವಾದ, ನೀರುಕುಡಿಸಿದ ಬಾಣವು ಅಲ್ಲಿ ದೊಡ್ಡ ಸ್ರುವ.
ದ್ವೀಪಿಚರ್ಮಾವನದ್ಧಶ್ಚ ನಾಗದಂತಕೃತತ್ಸರುಃ |
ಹಸ್ತಿಹಸ್ತಗತಃ ಖಡ್ಗಃ ಸ್ಫ್ಯೋ ಭವೇತ್ ತಸ್ಯ ಸಂಯುಗೇ ॥45॥
ಆನೆಯ ದಂತದಿಂದ ಮಾಡಿದ ಹಿಡಿಯನ್ನು ಹೊಂದಿ, ವ್ಯಾಘ್ರಚರ್ಮದಿಂದ ಸುತ್ತಲ್ಪಟ್ಟಿರುವ, ಗಜಾರೋಹಿಯ ಹಸ್ತದಲ್ಲಿರುವ ಖಡ್ಗವು ಆ ಯುದ್ಧರೂಪವಾದ ಯಜ್ಞದಲ್ಲಿ ಸ್ಫ್ಯ ಎಂಬ ಖದಿರವೃಕ್ಷದ ಆಯುಧವಿಶೇಷ.
ಜ್ವಲಿತೈರ್ನಿಶಿತೈಃ ಪೀತೈಃ ಪ್ರಾಸಶಕ್ತಿಪರಶ್ವಧೈಃ |
ಶೈಕ್ಯಾಯಸಮಯೈಸ್ತೀಕ್ಷ್ಣೈರಭಿಘಾತೋ ಭವೇದ್ ವಸು ॥46॥
ಪ್ರಕಾಶಿಸುವ, ಹರಿತವಾದ, ನೀರನ್ನು ಕುಡಿಸಿ ಹದಮಾಡಿದ, ಪೂರ್ಣವಾಗಿ ಕಬ್ಬಿಣದಿಂದ ಮಾಡಿದ, ತೀಕ್ಷ್ಣವಾದ ಪ್ರಾಸಶಕ್ತಿಪರಶುಗಳ ಪ್ರಹಾರವು ಧನವಾಗು- ತ್ತದೆ.
ಆವೇಗಾದ್ ಯತ್ತು ರುಧಿರಂ ಸಂಗ್ರಾಮೇ ಸ್ಯಂದತೇ ಭುವಿ |
ಸಾಽಸ್ಯ ಪೂರ್ಣಾಹುತಿರ್ಹೋತ್ರೇ ಸಮೃದ್ಧಾ ಸರ್ವಕಾಮಧುಕ್ ॥47॥
ಯುದ್ಧದಲ್ಲಿ ಭೂಮಿಯ ಮೇಲೆ ವೇಗದಿಂದ ಹರಿಯುವ ರಕ್ತದ ನದಿಯು ಆ ಯಜ್ಞದ ಪೂರ್ಣಾಹುತಿ. ಅದು ಹೋತೃವಿಗೆ ಸಮೃದ್ಧವಾದ ಸರ್ವಫಲವನ್ನೂ ಕೊಡುವಂತಹದು.
ಛಿಂಧಿ ಭಿಂಧೀತಿ ಯಸ್ಯೈತಚ್ಛ್ರೂಯತೇ ವಾಹಿನೀಮುಖೇ |
ಸಾಮಾನಿ ಸಾಮಗಾಸ್ತಸ್ಯ ಗಾಯಂತಿ ಯಮಸಾದನೇ ॥48॥
ಯುದ್ಧದಲ್ಲಿ ಸೇನಾಮುಖದಲ್ಲಿ ಕೇಳಿಬರುವ `ಹೊಡೆ, ಕತ್ತರಿಸು' ಮೊದಲಾದ ಶಬ್ದಗಳು ಸಾಮಗಳು. ಅದನ್ನು ಹೇಳುವ ಯೋಧರು ಯುದ್ಧದಲ್ಲಿ ಸಾಮ- ಗಾಯನವನ್ನು ಮಾಡುವವರು. (ಲಕ್ಷ್ಯಾಲಂಕಾರ)
ಹವಿರ್ಧಾನಂ ತು ತಸ್ಯಾಹುಃ ಪರೇಷಾಂ ವಾಹಿನೀಮುಖಮ್ |

ಕುಂಜರಾಣಾಂ ಹಯಾನಾಂ ಚ ವರ್ಮಿಣಾಂ ಚ ಸಮುಚ್ಚಯಃ ॥49॥
ಅಗ್ನಿಃ ಶ್ಯೇನಚಿತೋ ನಾಮ ತಸ್ಯ ಯಜ್ಞೇ ವಿಧೀಯತೇ |
ಶತ್ರುಸೈನ್ಯದ ಮುಂಭಾಗವು ಹವಿರ್ಧಾನ ಎಂದು ಹೇಳಲ್ಪಡುತ್ತದೆ. ಗಜಗಳ ಅಶ್ವಗಳ ಕವಚಧಾರಿಯೋಧರ ಸಮೂಹವು ಆ ಯಜ್ಞದಲ್ಲಿ ಶ್ಯೇನಚಿತ ಎಂಬ ಅಗ್ನಿಯೆಂದು ಹೇಳಲ್ಪಡುತ್ತದೆ.
ಉತ್ತಿಷ್ಠತಿ ಕಬಂಧೋಽತ್ರ ಸಹಸ್ರೇ ನಿಹತೇ ತು ಯಃ |
ಸ ಯೂಪಸ್ತಸ್ಯ ಶೂರಸ್ಯ ಖಾದಿರೋಽಷ್ಟಾಶ್ರಿರುಚ್ಯತೇ ॥50॥
ಸಹಸ್ರಯೋಧರು ಹತರಾದಾಗ ಯಾವ ಶೂರನ ಮುಂಡ ಮೇಲೇಳು- ತ್ತದೆಯೋ ಅದು ಖದಿರವೃಕ್ಷದ ಎಂಟು ಮೂಲೆಗಳಿರುವ ಯೂಪ.
ಇಹೋಪಹೂತಂ ಕ್ರೋಶಂತಿ ಕುಂಜರಾ ಅಂಕುಶೇರಿತಾಃ |
ವ್ಯಾಘುಷ್ಟತಳನಾದೇನ ವಷಟ್ಕಾರೇಣ ಪಾರ್ಥಿವ |
ಉದ್ಗಾತಾ ತತ್ರ ಸಂಗ್ರಾಮೇ ತ್ರಿಸಾಮಾ ದುಂದುಭಿಃ ಸ್ಮೃತಃ ॥51॥
ಈ ಯುದ್ಧದಲ್ಲಿ ಅಂಕುಶದಿಂದ ಪ್ರೇರೇಪಿಸಲ್ಪಟ್ಟ ಗಜಗಳ ಗರ್ಜನೆಯು ದೇವತಾಹ್ವಾನ. ಎಲೈ ರಾಜನೇ! ಗಟ್ಟಿಯಾಗಿ ಹೊಡೆದ ಚಪ್ಪಾಳೆಯು ವಷಟ್ಕಾರ. ದುಂದುಭಿಯು ಅಲ್ಲಿ ಮೂರು ಸಾಮಗಳನ್ನು ಗಾನ ಮಾಡುವ ಉದ್ಗಾತೃವೆಂದು ಹೇಳಲ್ಪಡುತ್ತದೆ.
ಬ್ರಹ್ಮಸ್ವೇ ಹ್ರಿಯಮಾಣೇ ಯಃ ಪ್ರಿಯಾಂ ಯುದ್ಧೇ ತನುಂ ತ್ಯಜೇತ್ |
ಆತ್ಮಾನಂ ಯೂಪಮುಚ್ಛ್ರಿತ್ಯ ಸ ಯಜ್ಞೋಽನಂತದಕ್ಷಿಣಃ ॥52॥
ಬ್ರಾಹ್ಮಣನ ಸ್ವತ್ತು ಅಪಹಾರವಾದಾಗ ಯಾವನು ಯುದ್ಧಮಾಡಿ ತನ್ನನ್ನೇ ಯೂಪವಾಗಿಸಿಕೊಂಡು ಎತ್ತಿ ತನಗೆ ಪ್ರಿಯವಾದ ಶರೀರವನ್ನು ತ್ಯಜಿಸುತ್ತಾನೆಯೋ ಅದು ಅನಂತದಕ್ಷಿಣೆಯುಳ್ಳ ಯಜ್ಞ.
ಭರ್ತುರರ್ಥೇ ತು ಯಃ ಶೂರೋ ವಿಕ್ರಮೇದ್ ವಾಹಿನೀಮುಖೇ |
ಭಯಾನ್ನ ಚ ನಿವರ್ತೇತ ತಸ್ಯ ಲೋಕಾ ಯಥಾ ಮಮ ॥53॥
ತನ್ನ ಪ್ರಭುವಿನ ಸಲುವಾಗಿ ಯಾವ ಶೂರನು ರಣರಂಗದಲ್ಲಿ ವಿಕ್ರಮವನ್ನು ತೋರಿಸುವನೋ, ಭಯದಿಂದ ಹಿಂದಿರುಗುವುದಿಲ್ಲವೋ ಅವನಿಗೆ ಲಭ್ಯವಾಗುವ ಲೋಕಗಳು ನನ್ನ ಲೋಕಗಳಂತೆಯೇ ಇರುತ್ತವೆ.
ನೀಲಚಂದ್ರಾಕೃತೈಃ ಖಡ್ಗೈರ್ಬಾಹುಭಿಃ ಪರಿಘೋಪಮೈಃ |
ಯಸ್ಯ ವೇದಿರುಪಸ್ತೀರ್ಣಾ ತಸ್ಯ ಲೋಕಾ ಯಥಾ ಮಮ ॥54॥
ನೀಲಮಣಿ ಮತ್ತು ಚಂದ್ರಚಿಹ್ನೆಗಳಿಂದ ಅಲಂಕೃತವಾದ ಖಡ್ಗಸಹಿತವಾದ ಒನಕೆ -ಯಂತಹ ಶತ್ರುಗಳ ಬಾಹುಗಳಿಂದ ಯಾವನ ರಣಭೂಮಿಯು ಹರಡಲ್ಪಡು- ತ್ತದೆಯೋ ಅವನ ಲೋಕಗಳು ನನ್ನ ಲೋಕಗಳಂತೆಯೇ.
ಯಸ್ತು ನಾವೇಕ್ಷತೇ ಕಂಚಿತ್ ಸಹಾಯಂ ವಿಜಯೇ ಸ್ಥಿತಃ |
ವಿಗಾಹ್ಯ ವಾಹಿನೀಮಧ್ಯಂ ತಸ್ಯ ಲೋಕಾ ಯಥಾ ಮಮ ॥55॥
ಯಾವನು ವಿಜಯದಲ್ಲಿ ನಿರತನಾಗಿ ಯಾವ ಸಹಾಯವನ್ನೂ ನಿರೀಕ್ಷಿಸದೇ ಶತ್ರುಸೈನ್ಯಮಧ್ಯವನ್ನು ಪ್ರವೇಶಿಸುತ್ತಾನೆಯೋ ಅವನ ಲೋಕಗಳು ನನ್ನ ಲೋಕಗ- ಳಂತೆಯೇ.
ಯಸ್ಯ ತೋಮರಸಂಘಾಟಾ ಭೇರೀಮಂಡೂಕಕಚ್ಛಪಾ |
ವೀರಾಸ್ಥಿಶರ್ಕರಾ ದುರ್ಗಾ ಮಾಂಸಶೋಣಿತಕರ್ದಮಾ ॥56॥
ಅಸಿಚರ್ಮಪ್ಲವಾ ಸಿಂಧುಃ ಕೇಶಶೈವಲಶಾದ್ವಲಾ |
ಅಶ್ವನಾಗರಥೈಶ್ಚೈವ ಸಂಭಿನ್ನೈಃ ಕೃತಸಂಕ್ರಮಾ ॥57॥
ಪತಾಕಾಧ್ವಜವಾನೀರಾ ಹತವಾಹನವಾಹಿನೀ |
ಶೋಣಿತೋದಾ ಸುಸಂಪೂರ್ಣಾ ದುಸ್ತರಾ ಪಾರಗೈರ್ನರೈಃ ॥58॥
ಹತನಾಗಮಹಾನಕ್ರಾ ಪರಲೋಕವಹಾಶಿವಾ |
ಋಷ್ಟಿಖಡ್ಗಧ್ವಜಾನೂಕಾ ಗೃಧ್ರಕಂಕವಡಪ್ಲವಾ ॥59॥
ಪುರುಷಾದಾನುಚರಿತಾ ಭೀರೂಣಾಂ ಕಶ್ಮಲಾವಹಾ |
ನದೀ ಯೋಧಮಹಾಯಜ್ಞೇ ತದಸ್ಯಾವಭೃಥಂ ಸ್ಮೃತಮ್ ॥60॥
ಯಾವ ಯೋಧನ ಯುದ್ಧರೂಪವಾದ ಮಹಾಯಜ್ಞದಲ್ಲಿ ತೋಮರ- ಗಳೆಂಬ ದೊಡ್ಡ ಕಲ್ಲುಗಳಿಂದ ಕೂಡಿದ, ಭೇರಿಗಳೆಂಬ ಮಂಡೂಕ ಮತ್ತು ಆಮೆಗಳಿಂದ ಕೂಡಿದ, ವೀರರ ಅಸ್ಥಿಗಳೆಂಬ ಮರಳುಗಳಿಂದ ಕೂಡಿದ, ದಾಟಲು ಅಸಾಧ್ಯವಾದ ರಕ್ತಮಾಂಸಗಳೆಂಬ ಕೆಸರಿನಿಂದ ಕೂಡಿದ, ಖಡ್ಗಚರ್ಮಗಳೆಂಬ ದೋಣಿಗಳನ್ನು ಹೊಂದಿದ, ಯೋಧರ ತಲೆಕೂದಲುಗಳೆಂಬ ಶೈವಲದಿಂದ ಮೃದುವಾದ, ಕತ್ತರಿಸಲ್ಪಟ್ಟ ಅಶ್ವಗಜರಥಗಳ ಭಾಗಗಳಿಂದ ಮಿಶ್ರಿತವಾದ, ಪತಾಕೆಗಳು ಮತ್ತು ಧ್ವಜಗಳು ಎಂಬ ಬೆತ್ತದ ಮರಗಳುಳ್ಳ, ಹತವಾದ ಅಶ್ವಾದಿವಾಹನಗಳನ್ನು ಸೆಳೆದೊಯ್ಯುವ, ರಕ್ತಜಲದಿಂದ ಸಂಪೂರ್ಣವಾಗಿ ಕೂಡಿದ, ದಡದಲ್ಲಿರುವ ನರರು ದಾಟಲು ಸಾಧ್ಯವಾಗದ, ಹತವಾದ ಆನೆಗಳೆಂಬ ದೊಡ್ಡ ಮೊಸಳೆಗಳಿಂದ ಕೂಡಿದ, ಪರಲೋಕದ ಎಡೆಗೆ ಹರಿಯುವ, ನೋಡಲು ಅಮಂಗಳವಾದ, ಋಷ್ಟಿಗಳು ಖಡ್ಗಗಳು ಧ್ವಜಗಳೆಂಬ ಶಿಲೆಗಳಿಂದ ಕೂಡಿದ, ಹದ್ದು-ಕಾಗೆ-ಕಂಕ ಮೊದಲಾದ ಸಣ್ಣದೋಣಿಗಳಿಂದ ಕೂಡಿದ, ರಾಕ್ಷಸರಿಂದ ಸಂಚರಿಸಲ್ಪಡುವ, ಭೀರುಗಳಿಗೆ ಹೆದರಿಕೆಯನ್ನುಂಟು ಮಾಡುವ ನದಿಯು ಹರಿಯುತ್ತದೆಯೋ ಅದು ಅವಭೃಥ- ಸ್ನಾನವೆಂದು ಹೇಳಲ್ಪಡುತ್ತದೆ.
ವೇದೀ ಯಸ್ಯ ತ್ವಮಿತ್ರಾಣಾಂ ಶಿರೋಭಿರವಕೀರ್ಯತೇ |
ಅಶ್ವಸ್ಕಂಧೈರ್ಗಜಸ್ಕಂಧೈಸ್ತಸ್ಯ ಲೋಕಾ ಯಥಾ ಮಮ ॥61॥

ಯಾವ ಯೋಧನ ರಣವೇದಿಕೆಯು ಶತ್ರುಗಳ ತಲೆಬುರುಡೆಗಳಿಂದಲೂ, ಅಶ್ವಸ್ಕಂಧಗಳಿಂದಲೂ, ಗಜಸ್ಕಂಧಗಳಿಂದಲೂ ಹರಡಲ್ಪಡುತ್ತದೆಯೋ ಅವನು ಪಡೆಯುವ ಲೋಕಗಳು ನನ್ನ ಲೋಕಗಳಂತೆಯೇ.
ಪತ್ನೀಶಾಲಾ ಕೃತಾ ಯಸ್ಯ ಪರೇಷಾಂ ವಾಹಿನೀಮುಖಮ್ |
ಹವಿರ್ಧಾನಂ ಸ್ವವಾಹಿನ್ಯಸ್ತದಸ್ಯಾಹುರ್ಮನೀಷಿಣಃ ॥62॥
ಯಾವನಿಗೆ ಶತ್ರುಸೈನ್ಯದ ಮುಂಭಾಗವು ಪತ್ನೀಶಾಲೆಯೋ ಅವನಿಗೆ ಜ್ಞಾನಿಗಳು ತನ್ನ ಸೈನ್ಯವು ಹವಿರ್ಧಾನವೆಂದು ಹೇಳುತ್ತಾರೆ.
ಸದಸ್ಯೋತ್ತರಯೋಧಾಗ್ನಿರಾಗ್ನೀಧ್ರಸ್ಯೋತ್ತರಾಂ ದಿಶಮ್ |
ಶತ್ರುಸೇನಾಕಲತ್ರಸ್ಯ ಸರ್ವಲೋಕಾನದೂರತಃ ॥63॥
ಸದಸ್ಯರ ಉತ್ತರದಲ್ಲಿರುವ ಯೋಧರೆಂಬ ಅಗ್ನಿಯೇನಿದೆಯೋ ಅದು ಆಗ್ನೀಧ್ರನ ಉತ್ತರದಿಕ್ಕಿನಲ್ಲಿ ಶತ್ರುಸೇನೆಯನ್ನು ಭಾರ್ಯೆಯಾಗಿ ಹೊಂದಿದ ಯೋಧ- ನಿಗೆ ಅವನು ಪಡೆಯುವ ಸರ್ವಲೋಕಗಳಿಗೆ ಸಮೀಪದಲ್ಲಿರುವಂತಹದು.
ಯದಾ ತೂಭಯತೋ ವ್ಯೂಹೋ ಭವತ್ಯಾಕಾಶಮಗ್ರತಃ |
ಸಾಽಸ್ಯ ವೇದೀ ತಥಾ ಯಜ್ಞೇ ಯಸ್ಯ ವೇದಾಸ್ತ್ರಯೋಽಗ್ನಯಃ ॥64॥
ಯಾವಾಗ ಎರಡು ಕಡೆಗಳಲ್ಲಿಯೂ ಸೈನ್ಯವು ಸೇರಿ ಅದರ ಮಧ್ಯದಲ್ಲಿ ಯೋಧನ ಮುಂಭಾಗದಲ್ಲಿ ಅವಕಾಶವು ಇರುವುದೋ ಅದು ಅವನ ವೇದಿ. ಆ ಯಜ್ಞದಲ್ಲಿ ಧನುರ್ವೇದವು ಮೂರು ಅಗ್ನಿಗಳು.
ಯಸ್ತು ಯೋಧಃ ಪರಾವೃತಃ ಸಂತ್ರಸ್ತೋ ಹನ್ಯತೇ ಪರೈಃ |
ಅಪ್ರತಿಷ್ಠಂ ಸ ನರಕಂ ಯಾತಿ ನಾಸ್ತ್ಯತ್ರ ಸಂಶಯಃ ॥65॥
ಯಾವ ಯೋಧನು ಯುದ್ಧಕ್ಕೆ ಹೆದರಿ ಹಿಂದಿರುಗುತ್ತಾ ಶತ್ರುಗಳಿಂದ ಕೊಲ್ಲ- ಲ್ಪಡುತ್ತಾನೆಯೋ ಅಂತಹವನು ನೆಲೆಯಿಲ್ಲದ ನರಕವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ಯಸ್ಯ ಶೋಣಿತವೇಗೇನ ನದೀ ಸ್ಯಾತ್ ಸಮಭಿಪ್ಲುತಾ |
ಕೇಶಮಾಂಸಾಸ್ಥಿಸಂಕೀರ್ಣಾ ಸ ಗಚ್ಛೇತ್ ಪರಮಾಂ ಗತಿಮ್ ॥66॥
ಯುದ್ಧದಲ್ಲಿ ಮೊದಲೇ ಹರಿಯುವ ಕೇಶ-ಮಾಂಸ-ಅಸ್ಥಿಗಳಿಂದ ಕೂಡಿದ ನದಿಯು ಯಾವನ ರಕ್ತದಿಂದ ಬೆರೆತು ವೇಗವಾಗಿ ಹರಿಯುತ್ತದೆಯೋ ಅಂತಹ- ವನು ಶ್ರೇಷ್ಠವಾದ ಗತಿಯನ್ನು ಹೊಂದುವನು.
ಯಸ್ತು ಸೇನಾಪತಿಂ ಹತ್ವಾ ತದ್ಯಾನಮಧಿರೋಹತಿ |
ಸ ವಿಷ್ಣುವಿಕ್ರಮಕ್ರಾಮೀ ಬೃಹಸ್ಪತಿಸಮಃ ಕ್ರತುಃ ॥67॥
ಯಾವನು ಶತ್ರುಸೇನಾಪತಿಯನ್ನು ಕೊಂದು ಅವನ ರಥವನ್ನು ಏರುತ್ತಾನೆಯೋ ಅವನು ವಿಷ್ಣುವಿನ ವಿಕ್ರಮಕ್ಕೆ ಸಮನಾದ ವಿಕ್ರಮವುಳ್ಳವನು. ಅವನು ಮಾಡುವ ಯಜ್ಞವು ಬೃಹಸ್ಪತಿಯಜ್ಞಕ್ಕೆ ಸಮಾನವಾದುದು.
ನಾಯಕಂ ವಾ ಪ್ರಮಾಣಂ ವಾ ಯೋ ವಾ ಸ್ಯಾತ್ ತತ್ರ ಪೂಜಿತಃ |
ಜೀವಗ್ರಾಹಂ ನಿಗೃಹ್ಣಾತಿ ತಸ್ಯ ಲೋಕಾ ಯಥಾ ಮಮ ॥68॥
ಯಾವನು ಶತ್ರುಸೈನ್ಯದ ನಾಯಕನನ್ನಾಗಲೀ, ಅಥವಾ ಪೂಜಿತನಾದ ಮುಖ್ಯ- ವ್ಯಕ್ತಿಯನ್ನಾಗಲೀ ಜೀವಸಹಿತವಾಗಿ ಸೆರೆ ಹಿಡಿಯುತ್ತಾನೆಯೋ ಅವನ ಲೋಕಗಳು ನನ್ನ ಲೋಕಗಳಂತೆಯೇ.
ಆಹವೇ ನಿಹತಂ ಶೂರಂ ನ ಶೋಚೇತ ಕದಾಚನ |
ಅಶೋಚ್ಯೋ ಹಿ ಹತಃ ಶೂರಃ ಸ್ವರ್ಗಲೋಕೇ ಮಹೀಯತೇ ॥69॥
ಯುದ್ಧದಲ್ಲಿ ನಿಹತನಾದ ಶೂರನ ವಿಷಯದಲ್ಲಿ ಎಂದೂ ಶೋಕಪಡ- ಬಾರದು. ಏಕೆಂದರೆ, ಹತನಾದ ಶೂರನು ಸ್ವರ್ಗಲೋಕದಲ್ಲಿ ಸಂತೋಷದಿಂದ ಇರುತ್ತಾನೆ.
ನ ಹ್ಯನ್ನಂ ನೋದಕಂ ತಸ್ಯ ನ ಸ್ನಾನಂ ನಾಪ್ಯಶೌಚಕಮ್ |
ಹತಸ್ಯ ಕರ್ತುಮಿಚ್ಛಂತಿ ತಸ್ಯ ಲೋಕಾನ್ ಶೃಣುಷ್ವ ಮೇ ॥70॥
ಅಂತಹ ವೀರನಿಗೆ ಬಂಧುಗಳು ಅನ್ನದಾನವನ್ನಾಗಲೀ, ಉದಕಕ್ರಿಯೆಯ- ನ್ನಾಗಲೀ, ಸ್ನಾನವನ್ನಾಗಲೀ, ಆಶೌಚಾಚರಣೆಯನ್ನಾಗಲೀ ಮಾಡಲು ಇಷ್ಟಪಡು- ವುದಿಲ್ಲ. ಅಂತಹ ವೀರನಿಗೆ ದೊರೆಯುವ ಲೋಕಗಳನ್ನು ನನ್ನಿಂದ ಕೇಳು.
ವರಾಪ್ಸರಃಸಹಸ್ರಾಣಿ ಶೂರಮಾಯೋಧನೇ ಹತಮ್ |
ತ್ವರಮಾಣಾ ಹಿ ಧಾವಂತಿ ಮಮ ಭರ್ತಾ ಭವೇದಿತಿ ॥71॥
ಯುದ್ಧದಲ್ಲಿ ಹತನಾದ ಶೂರನ ಬಳಿಗೆ ಶ್ರೇಷ್ಠರಾದ ಸಹಸ್ರ ಅಪ್ಸರೆಯರು ನನ್ನ ಪತಿಯಾಗು ಎಂದು ಹೇಳುತ್ತಾ ಓಡಿ ಬರುತ್ತಾರೆ.
ಏತತ್ ತಪಶ್ಚ ಪುಣ್ಯಂ ಚ ಧರ್ಮಶ್ಚೈವ ಸನಾತನಃ |
ಚತ್ವಾರಶ್ಚಾಶ್ರಮಾಸ್ತಸ್ಯ ಯೋ ಯುದ್ಧೇ ನ ಪಲಾಯತೇ ॥72॥
ಯುದ್ಧದಲ್ಲಿ ಪಲಾಯನವನ್ನು ಮಾಡದಿರುವುದು ತಪಸ್ಸು, ಪುಣ್ಯಪ್ರದ, ಸನಾತನವಾದ ಧರ್ಮ. ಮತ್ತು ನಾಲ್ಕು ಆಶ್ರಮದ ಧರ್ಮಾಚರಣೆ.
ವೃದ್ಧಬಾಲೌ ನ ಹಂತವ್ಯೌ ನೈವ ಸ್ತ್ರೀ ನ ಚ ವೈ ದ್ವಿಜಃ |
ತೃಣಪೂರ್ಣಮುಖಶ್ಚೈವ ತವಾಸ್ಮೀತಿ ಚ ಯೋ ವದೇತ್ ॥73॥
ವೃದ್ಧರನ್ನು ಮತ್ತು ಬಾಲಕರನ್ನು ಹಾಗೆಯೇ ಸ್ತ್ರೀಯರನ್ನು ಮತ್ತು ಬ್ರಾಹ್ಮಣರನ್ನು ಕೊಲ್ಲಬಾರದು. ಹಾಗೆಯೇ ಬಾಯಿಯಲ್ಲಿ ತೃಣವನ್ನಿಟ್ಟುಕೊಂಡು ನಾನು ನಿನ್ನ ದಾಸ- ನೆಂದು ಹೇಳುವವನನ್ನೂ ಕೊಲ್ಲಬಾರದು.
ಅಹಂ ವೃತ್ರಂ ಬಲಂ ಪಾಕಂ ಶತಮಾಯಂ ವಿರೋಚನಮ್ |
ದುರಾವಾರ್ಯಂ ಚ ನಮುಚಿಂ ನೈಕಮಾಯಂ ಚ ಶಂಬರಮ್ ॥74॥

ವಿಪ್ರಚಿತ್ತಿಂ ಚ ದೈತೇಯಂ ದನೋಃ ಪುತ್ರಾಂಶ್ಚ ಸರ್ವಶಃ |
ಪ್ರಹ್ಲಾದಂ ಚ ನಿಹತ್ಯಾಜೌ ತತೋ ದೇವಾಧಿಪೋಽಭವಮ್ ॥75॥
ನಾನು ವೃತ್ರನನ್ನೂ, ಬಲನನ್ನೂ, ಪಾಕನನ್ನೂ, ನೂರು ಮಾಯೆಗಳುಳ್ಳ ವಿರೋಚನನನ್ನೂ, ನಿವಾರಿಸಲು ಅಸಾಧ್ಯನಾದ ನಮುಚಿಯನ್ನೂ, ಅನೇಕ ಮಾಯೆಗಳನ್ನು ಹೊಂದಿದ ಶಂಬರನನ್ನೂ, ದಿತಿಪುತ್ರನಾದ ವಿಪ್ರಚಿತ್ತಿಯನ್ನೂ, ದನುಪುತ್ರರೆಲ್ಲರನ್ನೂ ಮತ್ತು ಪ್ರಹ್ಲಾದನನ್ನೂ ಯುದ್ಧದಲ್ಲಿ ಜಯಿಸಿ ಅನಂತರ ದೇವರಾಜನಾದೆನು.
ಭೀಷ್ಮಃ
ಇತ್ಯೇತಚ್ಚಕ್ರವಚನಂ ನಿಶಮ್ಯ ಪ್ರತಿಗೃಹ್ಯ ಚ |
ಯೋಧಾನಾಮಾತ್ಮನಃ ಸಿದ್ಧಿಮಂಬರೀಷೋಽಭಿಪನ್ನವಾನ್ ॥76॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಶತತಮೋಽಧ್ಯಾಯಃ ॥100॥
ಭೀಷ್ಮರು ಅಂಬರೀಷನು ಇಂದ್ರನ ಈ ಮಾತುಗಳನ್ನು ಕೇಳಿ ಸ್ವೀಕರಿಸಿ ಯೋಧರು ಮತ್ತು ತಾನೂ ಪಡೆಯುವ ಸಿದ್ಧಿಯನ್ನು ಪಡೆದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 100ನೆಯ ಅಧ್ಯಾಯವು ಮುಗಿಯಿತು.
0
101. ನೂರೊಂದನೆಯ ಅಧ್ಯಾಯ
ತನ್ನ ಸೈನಿಕರಿಗೆ ಸ್ವರ್ಗನರಕಗಳನ್ನು ತೋರಿಸಿ ಜನಕರಾಜನಿಂದ ಯುದ್ಧಕ್ಕೆ ಪ್ರೋತ್ಸಾಹ
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪ್ರತರ್ದನೋ ಮೈಥಿಲಶ್ಚ ಸಂಗ್ರಾಮಂ ಯತ್ರ ಚಕ್ರತುಃ ॥1॥
ಭೀಷ್ಮರು ಪ್ರತರ್ದನನು ಮತ್ತು ಮಿಥಿಲಾಧಿಪತಿಯಾದ ಜನಕನು ಯುದ್ಧ- ವನ್ನು ಮಾಡಿದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ಯಥೋಪವೃತ್ತೇ ಸಂಗ್ರಾಮೇ ಜನಕೋ ಮೈಥಿಲೋ ಯಥಾ |
ಯೋಧಾನುದ್ಧರ್ಷಯಾಮಾಸ ತನ್ನಿಬೋಧ ಯುಧಿಷ್ಠಿರ ॥2॥
ಎಲೈ ಯುಧಿಷ್ಠಿರನೇ! ಯುದ್ಧವು ಯಥಾಸ್ಥಿತಿಯಲ್ಲಿ ನಡೆಯುತ್ತಿರುವಾಗ ಮಿಥಿಲಾಧಿಪತಿಯಾದ ಜನಕನು ಹೇಗೆ ತನ್ನ ಯೋಧರನ್ನು ಪ್ರೋತ್ಸಾಹಗೊಳಿಸಿದ- ನೆಂದು ತಿಳಿ.
ಜನಕೋ ಮೈಥಿಲೋ ರಾಜಾ ಮಹಾತ್ಮಾ ಸರ್ವತತ್ತ್ವವಿತ್ |
ಯೋಧಾನ್ ಸ್ವಾನ್ ದರ್ಶಯಾಮಾಸ ಸ್ವರ್ಗಂ ನರಕಮೇವ ಚ ॥3॥
ಮಹಾತ್ಮನೂ, ಸರ್ವತತ್ತ್ವವೇತ್ತನೂ, ಮಿಥಿಲಾಧಿಪತಿಯೂ ಆದ ಜನಕನು ತನ್ನ ಯೋಧರಿಗೆ ಸ್ವರ್ಗ ಮತ್ತು ನರಕಗಳನ್ನು ತೋರಿಸಿದನು.
ಅಭೀತಾನಾಮಿಮೇ ಲೋಕಾ ಭಾಸ್ವಂತೋ ಹಂತ ಪಶ್ಯತ |
ಪೂರ್ಣಾ ಗಂಧರ್ವಕನ್ಯಾಭಿಃ ಸರ್ವಕಾಮದುಹೋಽಕ್ಷಯಾಃ ॥4॥
ನಿರ್ಭಯವಾಗಿ ಯುದ್ಧವನ್ನು ಮಾಡುವವರಿಗೆ ಪ್ರಕಾಶಮಾನವಾದ ಗಂಧರ್ವ -ಕನ್ಯೆಯರಿಂದ ಪೂರ್ಣವಾದ ಸರ್ವಕಾಮಗಳನ್ನು ಕೊಡುವ ಅಕ್ಷಯವಾದ ಈ ಲೋಕಗಳಿವೆ. ಸಂತೋಷದಿಂದ ನೋಡಿ.
ಇಮೇ ಪಲಾಯಮಾನಾನಾಂ ನರಕಾಃ ಪ್ರತ್ಯುಪಸ್ಥಿತಾಃ |
ಅಕೀರ್ತಿಃ ಶಾಶ್ವತೀ ಚೈವ ಪತಿತವ್ಯಮನಂತರಮ್ ॥5॥
ಯುದ್ಧದಿಂದ ಓಡುವವರಿಗೆ ಈ ನರಕಲೋಕಗಳು ಸಿದ್ಧವಾಗಿವೆ. ಇಲ್ಲಿ ಶಾಶ್ವತ- ವಾದ ಅಪಕೀರ್ತಿಯನ್ನು ಪಡೆದು ಅನಂತರ ಇಂತಹ ಲೋಕಗಳಲ್ಲಿ ಬೀಳಬೇಕು.
ತಾನ್ ದೃಷ್ಟ್ವಾರೀನ್ ವಿಜಯತೋ ಭೂತ್ವಾ ಸಂತ್ಯಾಗಬುದ್ಧಯಃ |
ನರಕಸ್ಯಾಪ್ರತಿಷ್ಠಸ್ಯ ಮಾ ಭೂತ ವಶವರ್ತಿನಃ ॥6॥
ನೀವು ನೆಲೆಯಿಲ್ಲದ ನರಕದ ವಶವರ್ತಿಗಳಾಗಬೇಡಿ. ಜಯಿಸುತ್ತಿರುವ ಶತ್ರುಗಳನ್ನು ನೋಡಿ ಪ್ರಾಣತ್ಯಾಗವನ್ನು ನಿಶ್ಚಯಿಸಿ ಯುದ್ಧವನ್ನು ಮಾಡಿ.
ತ್ಯಾಗಮೂಲಂ ಹಿ ಶೂರಾಣಾಂ ಸ್ವರ್ಗದ್ವಾರಮನುತ್ತಮಮ್ |
ಇತ್ಯುಕ್ತಾಸ್ತೇ ನೃಪತಿನಾ ಯೋಧಾಃ ಪರಪುರಂಜಯ ॥7॥
ವ್ಯಜಯಂತ ರಣೇ ಶತ್ರೂನ್ ಹರ್ಷಯಂತೋ ಜನೇಶ್ವರಮ್ |
ತಸ್ಮಾದಾತ್ಮವತಾ ನಿತ್ಯಂ ಸ್ಥಾತವ್ಯಂ ರಣಮೂರ್ಧನಿ ॥8॥
ಶೂರನಿಗೆ ತ್ಯಾಗಮೂಲಕವಾಗಿ ಸ್ವರ್ಗದ್ವಾರವು ತೆರೆದಿರುತ್ತದೆ. ಎಲೈ ಶತ್ರು- ಪುರಂಜಯನೇ! ಹೀಗೆ ರಾಜನಿಂದ ಹೇಳಲ್ಪಟ್ಟ ಆ ಯೋಧರು ರಾಜನಿಗೆ ಸಂತೋಷ -ವನ್ನುಂಟುಮಾಡುತ್ತಾ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದರು. ಆದ್ದರಿಂದ ರಣ- ರಂಗದಲ್ಲಿ ಯಾವಾಗಲೂ ಧೈರ್ಯದಿಂದ ನಿಲ್ಲಬೇಕು.
ಗಜಾನಾಂ ರಥಿನೋ ಮಧ್ಯೇ ರಥಾನಾಮನು ಸಾದಿನಃ |
ಸಾದಿನಾಮಂತರಾ ಸ್ಥಾಪ್ಯಂ ಪದಾತಮಿಹ ದಂಸಿತಮ್ ॥9॥

ಗಜಗಳ ಮತ್ತು ರಥಗಳ ಮಧ್ಯದಲ್ಲಿ, ರಥಗಳ ಮತ್ತು ಅಶ್ವಾರೋಹಿಗಳ ಮಧ್ಯದಲ್ಲಿ, ಮತ್ತು ಅಶ್ವಾರೋಹಿಗಳ ಮಧ್ಯದಲ್ಲಿ ಶಸ್ತ್ರಕವಚಸನ್ನದ್ಧವಾದ ಪದಾತಿಗಳ ಬಲವನ್ನು ನಿಲ್ಲಿಸಬೇಕು.
ಯ ಏವಂ ವ್ಯೂಹತೇ ರಾಜಾ ಸ ನಿತ್ಯಂ ಜಯತೇ ದ್ವಿಷಃ |
ತಸ್ಮಾದೇವಂ ವಿಧಾತವ್ಯಂ ನಿತ್ಯಮೇವ ಯುಧಿಷ್ಠಿರ ||10||
ಯಾವ ರಾಜನು ಹೀಗೆ ವ್ಯೂಹವನ್ನು ರಚಿಸುತ್ತಾನೆಯೋ ಅವನು ಯಾವಾ- ಗಲೂ ಶತ್ರುಗಳನ್ನು ಜಯಿಸುತ್ತಾನೆ. ಎಲೈ ಯುಧಿಷ್ಠಿರನೇ! ಆದ್ದರಿಂದ ಯಾವಾ- ಗಲೂ ಹೀಗೆಯೇ ಮಾಡಬೇಕು.
ಸರ್ವೇ ಸುಕೃತಮಿಚ್ಛಂತಃ ಸುಯುದ್ಧೇನಾತಿಮನ್ಯವಃ |
ಕ್ಷೋಭಯೇಯುರನೀಕಾನಿ ಸಾಗರಂ ಮಕರಾ ಇವ ||11||
ಬಹಳ ಕೋಪದಿಂದ ಒಳ್ಳೆಯ ಯುದ್ಧವನ್ನು ಮಾಡಿ ಪುಣ್ಯವನ್ನು ಗಳಿಸಲು ಬಯಸುವ ಎಲ್ಲರೂ ಮೊಸಳೆಗಳು ಸಾಗರವನ್ನು ಕಲಕಿದಂತೆ ಶತ್ರುಸೈನ್ಯವನ್ನು ಕಲಕುವರು.
ಹರ್ಷಯೇಯುರ್ವಿಷಣ್ಣಾಂಶ್ಚ ವ್ಯವಸ್ಥಾಪ್ಯ ಪರಸ್ಪರಮ್ |
ಜಿತಾಂ ಚ ಭೂಮಿಂ ರಕ್ಷೇತ ಭಗ್ನಾನ್ ನಾತ್ಯನುಸಾರಯೇತ್ ||12||
ಪರಸ್ಪರವಾಗಿ ನಿಲ್ಲುವಂತೆ ಮಾಡುತ್ತಾ ವಿಷಾದಕ್ಕೆ ಒಳಗಾದವರನ್ನು ಉತ್ಸಾಹ- ಗೊಳಿಸುವರು. ರಾಜನು ಜಿತವಾದ ಭೂಮಿಯನ್ನು ರಕ್ಷಿಸಬೇಕು. ಪಲಾಯನ ಮಾಡುವ ಶತ್ರುಯೋಧರನ್ನು ಬಹಳವಾಗಿ ಹಿಂಬಾಲಿಸಬಾರದು.
ಪುನರಾವರ್ತಮಾನಾನಾಂ ನಿರಾಶಾನಾಂ ಚ ಜೀವಿತೇ |
ನ ವೇಗಃ ಸುಸಹೋ ರಾಜಂಸ್ತಸ್ಮಾನ್ನಾತ್ಯನುಸಾರಯೇತ್ ||13||
ತಮ್ಮ ಜೀವನದಲ್ಲಿ ಆಸೆಯನ್ನು ತೊರೆದು ಅವರು ಹಿಂದಿರುಗಿ ಬಂದರೆ ಎಲೈ ರಾಜನೇ! ಅವರ ವೇಗವು ಸಹಿಸಲು ಅಸಾಧ್ಯವಾಗಿರುತ್ತದೆ. ಆದ್ದರಿಂದ ಅವರನ್ನು ಬಹಳ ಹಿಂಬಾಲಿಸಬಾರದು.
ನ ಹಿ ಪ್ರಹರ್ತುಮಿಚ್ಛಂತಿ ಶೂರಾ ಪ್ರಾದ್ರವತಾಂ ಭಯಾತ್ |
ತಸ್ಮಾತ್ ಪಲಾಯಮಾನಾನಾಂ ಕುರ್ಯಾನ್ನಾತ್ಯನುಸಾರಣಮ್ ||14||
ಅಲ್ಲದೇ ಭಯದಿಂದ ಪಲಾಯನ ಮಾಡುವವರ ಮೇಲೆ ಶೂರರು ಪ್ರಹಾರ- ವನ್ನು ಮಾಡಲು ಬಯಸುವುದಿಲ್ಲ. ಆದ್ದರಿಂದಲೂ ಪಲಾಯನ ಮಾಡುವವರನ್ನು ಬಹಳ ಹಿಂಬಾಲಿಸಬಾರದು.
ಚರಾಣಾಮಚರಾ ಹ್ಯನ್ನಮದಂಷ್ಟ್ರಾ ದಂಷ್ಟ್ರಿಣಾಮಪಿ |
ಅಪಾಣಯಃ ಪಾಣಿಮತಾಮನ್ನಂ ಶೂರಸ್ಯ ಕಾತರಾಃ ||15||
ಚಲಿಸುವ ಪ್ರಾಣಿಗಳಿಗೆ ಚಲಿಸದಿರುವ ಪ್ರಾಣಿಗಳು ಆಹಾರವಾಗುತ್ತವೆ; ಕೋರೆ- ದಾಡೆಯುಳ್ಳ ಪ್ರಾಣಿಗಳಿಗೆ ಕೋರೆದಾಡೆ ಇರದ ಪ್ರಾಣಿಗಳು, ಹಸ್ತವುಳ್ಳ ಪ್ರಾಣಿಗಳಿಗೆ ಹಸ್ತವಿಲ್ಲದ ಪ್ರಾಣಿಗಳು, ಶೂರರಿಗೆ ಭಯಗ್ರಸ್ತರು ಆಹಾರವಾಗುತ್ತಾರೆ.
ಸಮಾನಪೃಷ್ಠೋದರಪಾಣಿಪಾದಾಃ
ಪಶ್ಚಾಚ್ಛೂರಂ ಭೀರವೋಽನುವ್ರಜಂತಿ |
ಅತೋ ಭಯಾರ್ತಾಃ ಪ್ರಣಿಪತ್ಯ ಭೂಯಃ |
ಕೃತ್ವಾಽಂಜಲೀನುಪತಿಷ್ಠಂತಿ ಶೂರಾನ್ ||16||
ಸಮಾನವಾದ ಬೆನ್ನು, ಉದರ, ಪಾಣಿ, ಪಾದಗಳನ್ನು ಹೊಂದಿದ್ದರೂ ಹೇಡಿ- ಗಳು ಶೂರನ ಹಿಂದೆಯೇ ನಡೆದು ಹೋಗುತ್ತಾರೆ. ಮತ್ತು ಭಯಾರ್ತರಾಗಿ ಪುನಃ ಶೂರರಿಗೆ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿ ಅವರನ್ನು ಸ್ತೋತ್ರ ಮಾಡುತ್ತಾರೆ.
ಶೂರಬಾಹುಷುಲೋಕೋಽಯಂ ಲಂಬತೇ ಪುತ್ರವತ್ ಸದಾ |
ತಸ್ಮಾತ್ ಸರ್ವಾಸ್ವವಸ್ಥಾಸು ಶೂರಃ ಸಮ್ಮಾನಮರ್ಹತಿ ||17||
ಈ ಲೋಕವು ತಂದೆಯ ಬಾಹುವಿನಲ್ಲಿರುವ ಮಗನಂತೆ ಶೂರರ ಬಾಹು- ಗಳಲ್ಲಿ ಆಶ್ರಯವನ್ನು ಹೊಂದಿದೆ. ಆದ್ದರಿಂದ ಎಲ್ಲಾ ಕಾಲಗಳಲ್ಲಿಯೂ ಶೂರನು ಸಮ್ಮಾನಕ್ಕೆ ಅರ್ಹರಾಗುತ್ತಾರೆ.
ನ ಹಿ ಶೌರ್ಯಾತ್ ಪರಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ |
ಶೂರಃ ಸರ್ವಂ ಪಾಲಯತಿ ಸರ್ವಂ ಶೂರೇ ಪ್ರತಿಷ್ಠಿತಮ್ ||18||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಏಕಾಧಿಕಶತತಮೋಽಧ್ಯಾಯಃ ||101||
ಶೌರ್ಯಕ್ಕಿಂತ ಅಧಿಕವಾದುದು ಮೂರು ಲೋಕಗಳಲ್ಲಿ ಯಾವುದೂ ಇಲ್ಲ; ಶೂರನು ಎಲ್ಲವನ್ನೂ ರಕ್ಷಿಸುತ್ತಾನೆ. ಎಲ್ಲವೂ ಶೂರನನ್ನು ಆಶ್ರಯಿಸಿದೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 101ನೆಯ ಅಧ್ಯಾಯವು ಮುಗಿಯಿತು.
0
102. ನೂರ ಎರಡನೆಯ ಅಧ್ಯಾಯ
ಯುದ್ಧಪ್ರಕಾರಾದಿಕಥನ
ಯುಧಿಷ್ಠಿರಃ
ಯಥಾ ಜಯಾರ್ಥಿನಃ ಸೇನಾಂ ನಯಂತಿ ಭರತರ್ಷಭ |
ಈಷದ್ ಧರ್ಮಂ ಪ್ರಪೀಡ್ಯಾಪಿ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲೈ ಭರತರ್ಷಭನೇ! ಪಿತಾಮಹನೇ! ಜಯಾರ್ಥಿಯಾದ ರಾಜನು ಧರ್ಮಕ್ಕೆ ಸ್ವಲ್ಪ ಪೀಡೆಯುಂಟಾದರೂ ಹೇಗೆ

ಸೈನ್ಯವನ್ನು ಮುಂದೆ ತೆಗೆದುಕೊಂಡು ಹೋಗುತ್ತಾನೆಂದು ನನಗೆ ಹೇಳು.
ಭೀಷ್ಮಃ
ಸತ್ಯೇನ ಹಿ ಸ್ಥಿತಾ ಧರ್ಮಾ ಉಪಪತ್ತ್ಯಾ ತಥಾಪರೇ |
ಸಾಧ್ವಾಚಾರತಯಾ ಕೇಚಿತ್ ತಥೈವೌಪಾಯಿಕಾ ಅಪಿ |
ಉಪಾಯಧರ್ಮಾನ್ ವಕ್ಷ್ಯಾಮಿ ಸಿದ್ಧಾರ್ಥಾನರ್ಥಧರ್ಮಯೋಃ ॥2॥
ಭೀಷ್ಮರು ಕೆಲವು ಧರ್ಮಗಳು ಸತ್ಯದಲ್ಲಿ ನೆಲೆಸಿವೆ. ಇನ್ನು ಕೆಲವು ಧರ್ಮ- ಗಳು ಯುಕ್ತಿಯಿಂದ ಸಿದ್ಧವಾಗುತ್ತವೆ. ಇನ್ನು ಕೆಲವು ಧರ್ಮಗಳು ಶಿಷ್ಟಾಚಾರದಿಂದ ದೊರೆಯುತ್ತವೆ. ಇನ್ನು ಕೆಲವು ಧರ್ಮಗಳು ತತ್ಕಾಲದ ಉಪಾಯಗಳನ್ನು (ಅನು- ಕೂಲತೆಗಳನ್ನು) ಅನುಸರಿಸಿರುತ್ತವೆ. ಅರ್ಥಧರ್ಮಗಳ ವಿಷಯದಲ್ಲಿ ಸಿದ್ಧವಾದ ಅಂತಹ ಉಪಾಯಧರ್ಮಗಳನ್ನು ಹೇಳುವೆನು.
ನಿರ್ಮರ್ಯಾದಾ ದಸ್ಯವಸ್ತು ಭವಂತಿ ಪರಿಪಂಥಿನಃ |
ತೇಷಾಂ ಪ್ರತಿವಿಘಾತಾರ್ಥಂ ಪ್ರವಕ್ಷ್ಯಾಮ್ಯಥ ನೈಗಮಮ್ |
ಕಾರ್ಯಾಣಾಂ ಸಂಪ್ರಸಿದ್ಧ್ಯರ್ಥಂ ತಾನುಪಾಯಾನ್ ನಿಬೋಧ ಮೇ ॥3॥
ಎಲ್ಲ ಎಲ್ಲೆಯನ್ನು ಮೀರಿದ ದಸ್ಯುಗಳು ಯಾವಾಗಲೂ ವಿರೋಧಿಗಳಾಗಿರು- ತ್ತಾರೆ. ಅವರನ್ನು ಪ್ರತಿಘಾತಮಾಡಿ ಕಾರ್ಯಸಿದ್ಧಿಯನ್ನು ಪಡೆಯಲು ಶಾಸ್ತ್ರಸಿದ್ಧವಾದ ಆ ಉಪಾಯಗಳನ್ನು ನೀನು ನನ್ನಿಂದ ತಿಳಿ.
ಉಭೇ ಪ್ರಜ್ಞೇ ವೇದಿತವ್ಯೇ ಋಜ್ವೀ ವಕ್ರಾ ಚ ಭಾರತ |
ಜಾನನ್ ವಕ್ರಾಂ ನ ಸೇವೇತ ಪ್ರತಿಬಾಧೇತ ಚಾಗತಾಮ್ ॥4॥
ಎಲೈ ಭಾರತನೇ! ಋಜುಬುದ್ಧಿ ಮತ್ತು ವಕ್ರಬುದ್ಧಿ ಎರಡನ್ನೂ ತಿಳಿದು, ವಕ್ರ- ಬುದ್ಧಿಯನ್ನು ಆಶ್ರಯಿಸಬಾರದು. ಶತ್ರುಗಳು ಪ್ರಯೋಗಿಸಿದ ವಕ್ರಬುದ್ಧಿಯನ್ನು
ಬಾಧಿಸಬೇಕು.
ಅಮಿತ್ರಾ ಏವ ರಾಜಾನಂ ಭೇದೇನೋಪಚರಂತ್ಯುತ |
ತಾನ್ ರಾಜಾ ನಿಕೃತಾನ್ ಜಾನನ್ ಯಥಾಮಿತ್ರಾನ್ ಪ್ರಬಾಧತೇ ॥5॥
ಶತ್ರುಗಳಾದವರೇ ರಾಜನನ್ನು ಭೇದೋಪಾಯಗಳಿಂದ ಉಪಚರಿಸುತ್ತಾರೆ. ರಾಜನು ಅವರ ಮೋಸದ ಬುದ್ಧಿಯನ್ನು ತಿಳಿದು ಶತ್ರುಗಳಂತೆ (ತನ್ನ ರಾಜ್ಯದಲ್ಲಿ- ರುವ ಅವರನ್ನು) ಬಾಧಿಸಬೇಕು.
ಗಜಾನಾಂ ಪಾರ್ಶ್ವಚರ್ಮಾಣಿ ಗೋವೃಷಾಜಗರಾಣಿ ಚ |
ಶಲ್ಯಕಂಟಕಲೋಹಾನಿ ತನುತ್ರಾಣಿ ಮತಾನಿ ಚ ॥6॥
ಶಿತಪೀತಾನಿ ಶಸತ್ರಣಿ ಸನ್ನಾಹಾಃ ಪೀತಲೋಹಿತಾಃ |
ನಾನಾರಂಜನರಕ್ತಾಃ ಸ್ಯುಃ ಪತಾಕಾಃ ಕೇತವಶ್ಚ ತೇ ॥7॥
ಋಷ್ಟಯಸ್ತೋಮರಾಃ ಖಡ್ಗಾ ನಿಶಿತಾಶ್ಚ ಪರಶ್ವಧಾಃ |
ಫಲಕಾನ್ಯಥ ಚರ್ಮಾಣಿ ಪ್ರತಿಕಲ್ಪ್ಯಾನ್ಯನೇಕಶಃ |
ಅಭಿನೀತಾನಿ ಶಸತ್ರಣಿ ಯೋಧಾಶ್ಚ ಕೃತನಿಶ್ರಮಾಃ ॥8॥
ಗಜಗಳ ಪಾರ್ಶ್ವಚರ್ಮಗಳಿಂದ, ವೃಷಭಗಳ ಮತ್ತು ಹೆಬ್ಬಾವುಗಳ ಚರ್ಮ- ಗಳಿಂದ ಕವಚಗಳನ್ನು ನಿರ್ಮಿಸುವುದು ಶ್ರೇಷ್ಠವಾದುದು. ಶಲ್ಯ(ಈಟಿಗಳು) ಲೋಹದ ಮುಳ್ಳುಗಳು, ಉಳಿದ ಲೋಹಗಳು, ನಿಶಿತವಾದ ಹಾಗೂ ನೀರು ಕುಡಿಸಿದ ಶಸ್ತ್ರಗಳು, ನೀರು ಕುಡಿಸಿ ಹದ ಮಾಡಿದ ಕವಚಗಳು, ಪತಾಕೆಗಳು ಮತ್ತು ಬಾವುಟಗಳು, ಅನೇಕ ಕೆಂಪುಬಣ್ಣಗಳಿಂದ ಕೂಡಿರಬೇಕು; ಋಷ್ಟಿಗಳು, ತೋಮರ- ಗಳು, ನಿಶಿತವಾದ ಖಡ್ಗಗಳು, ಪರಶುಗಳು, ಫಲಕಗಳು, ಗುರಾಣಿಗಳು ಇವುಗಳನ್ನು ಬಹುಸಂಖ್ಯೆಯಲ್ಲಿ ಸಿದ್ಧಪಡಿಸಬೇಕು. ಶಸ್ತ್ರಗಳು ಯಾವಾಗಲೂ ಉಪಯೋಗಿಸು- ವುದಕ್ಕೆ ಯೋಗ್ಯವಾಗಿರಬೇಕು. ಮತ್ತು ಯೋಧರು ಶಸ್ತ್ರಗಳ ಉಪಯೋಗದಲ್ಲಿ ಪರಿಶ್ರಮವನ್ನು ಹೊಂದಿದವರಾಗಬೇಕು.
ಚೈತ್ರ್ಯಾಂ ವಾ ಮಾರ್ಗಶೀರ್ಷ್ಯಾಂ ವಾ ಸೇನಾಯೋಗಃ ಪ್ರಶಸ್ಯತೇ |
ಪಕ್ವಸಸ್ಯಾ ಹಿ ಪೃಥಿವೀ ಭವತ್ಯಂಬುವತೀ ತಥಾ ॥9॥
ನೈವಾತಿಶೀತೋ ನಾತ್ಯುಷ್ಣಃ ಕಾಲೋ ಭವತಿ ಭಾರತ |
ಚೈತ್ರಪೂರ್ಣಿಮೆ ಅಥವಾ ಮಾರ್ಗಶೀರ್ಷಪೂರ್ಣಿಮೆಯಂದು ದಂಡೆತ್ತಿ ಹೋಗುವುದು ಪ್ರಶಸ್ತವಾದುದು. ಆಗ ಭೂಮಿಯಲ್ಲಿ ಸಸ್ಯಗಳು ಪಕ್ವವಾಗಿರುತ್ತವೆ. ಮತ್ತು ಜಲವೂ ಸಮೃದ್ಧವಾಗಿರುತ್ತದೆ. ಎಲೈ ಭಾರತನೇ! ಆ ಕಾಲದಲ್ಲಿ ಬಹಳ ಉಷ್ಣತೆಯಾಗಲೀ ಬಹಳ ಶೈತ್ಯವಾಗಲೀ ಇರುವುದಿಲ್ಲ.
ತಸ್ಮಾದ್ ತದಾ ಯೋಧಯೇತ ಪರೇಷಾಂ ವ್ಯಸನೇಷು ವಾ |
ಏತೇಷು ಯೋಗಾಃ ಸೇನಾಯಾಃ ಪ್ರಶಸ್ತಾಃ ಪರಬಾಧನೇ ॥10॥
ಆದ್ದರಿಂದ ಆ ಕಾಲದಲ್ಲಿ ಯುದ್ಧಕ್ಕಾಗಿ ಹೊರಡಬೇಕು. ಅಥವಾ ಶತ್ರುಗಳ ವ್ಯಸನಕಾಲವನ್ನು ತಿಳಿದು ಆಗ ಯುದ್ಧವನ್ನು ಮಾಡಬೇಕು. ಇಂತಹ ದೇಶ-ಕಾಲಗಳ ಅನುಕೂಲವಿರುವಾಗ ಸೇನೆಯ ಉದ್ಯೋಗವು ಶತ್ರುವನ್ನು ಬಾಧಿಸುವುದಕ್ಕೆ ಪ್ರಶಸ್ತ- ವಾಗಿರುತ್ತದೆ.
ಜಲವಾಂಸ್ತೃಣವಾನ್ ಮಾರ್ಗಃ ಸಮೋ ಗಮ್ಯಃ ಪ್ರಶಸ್ಯತೇ |
ಚಾರೈರ್ಹಿ ವಿಹಿತಾಭ್ಯಾಸಃ ಕುಶಲೈರ್ವನಗೋಚರೈಃ॥11॥
ನ ಹ್ಯರಣ್ಯಾನಿ ಶಕ್ಯಂತೇ ಗಂತುಂ ಮೃಗಗಣೈರಿವ |
ಸೈನ್ಯವು ಹೋಗುವ ಮಾರ್ಗವು ಸಮತಟ್ಟಾಗಿದ್ದು, ತೃಣಜಲಗಳಿಂದ ಕೂಡಿದ್ದು, ನಿಪುಣರಾದ ವನವಾಸಿಗಳಿಂದ ಮತ್ತು

ಚಾರರುಗಳಿಂದ ಚೆನ್ನಾಗಿ ಪರಿಚಿತವಾಗಿರಬೇಕು. ಅರಣ್ಯಮಾರ್ಗದಲ್ಲಿ ಮೃಗಸಮೂಹಗಳಂತೆ ಸಂಚರಿಸಲು ಸಾಧ್ಯವಿಲ್ಲ.
ತಸ್ಮಾತ್ ಸರ್ವಾಸು ಸೇನಾಸು ಯೋಜಯಂತಿ ಜಯಾರ್ಥಿನಃ |
ಅಗ್ರತಃ ಪುರುಷಾನೀಕಂ ಶಕ್ತಂ ಭಕ್ತಂ ಕುಲೋದ್ಗತಮ್ ॥12॥
ಆದ್ದರಿಂದ ಜಯಾರ್ಥಿಗಳಾದವರು ಎಲ್ಲ ಸೇನಾಪ್ರಸ್ಥಾನದಲ್ಲಿ ಮುಂಭಾಗದಲ್ಲಿ ಸತ್ಕುಲಪ್ರಸೂತರಾದ ಸಮರ್ಥರಾದ ಅನುರಾಗವುಳ್ಳ ಪುರುಷಸಮೂಹವನ್ನು ನಿಯೋಜಿಸುತ್ತಾರೆ.
ಆವಾಸಸ್ತೋಯವಾನ್ ದುರ್ಗಃ ಪರ್ಯಾಕಾಶಃ ಪ್ರಶಸ್ಯತೇ |
ಪರೇಷಾಮುಪಸರ್ಗಾಣಾಂ ಪ್ರತಿಷೇಧಸ್ತಥಾ ಭವೇತ್ ॥13॥
ಸೈನ್ಯವು ಬೀಡುಬಿಡುವ ಸ್ಥಾನವು ಕೋಟೆಯಂತೆ ಸುತ್ತಲೂ ಮರಗಿಡಗಳಿಲ್ಲದೇ ಅವಕಾಶವನ್ನು ಹೊಂದಿರುವುದು ಪ್ರಶಸ್ತವಾಗುತ್ತದೆ. ಹಾಗೆ ಮಾಡಿದರೆ ಶತ್ರುಗಳು ಮಾಡುವ ಉಪದ್ರವಗಳನ್ನು ನಿವಾರಿಸಲು ಅನುಕೂಲವಾಗುತ್ತದೆ.
ಆಕಾಶಂ ತು ವನಾಭ್ಯಾಶೇ ಮನ್ಯಂತೇ ಗುಣವತ್ತರಮ್ |
ಬಹುಭಿರ್ಗುಣಜಾತೈಸ್ತು ಯೇ ಯುದ್ಧಕುಶಲಾ ಜನಾಃ ॥14॥
ಅರಣ್ಯದ ಸಮೀಪದಲ್ಲಿ ಸುತ್ತಲೂ ಅವಕಾಶವಿರುವ ಪ್ರದೇಶದಲ್ಲಿ ಸೈನ್ಯವು ಬೀಡು ಬಿಡುವುದು ಅನೇಕ ಗುಣಗಳಿಂದ ಕೂಡಿರುವುದೆಂದು ಯುದ್ಧಕುಶಲರಾದ ಜನರು ತಿಳಿಯುತ್ತಾರೆ.
ಉಪನ್ಯಾಸಾವತರಣಂ ಪದಾತೀನಾಂ ಚ ಗೂಹನಮ್ |
ಅಥ ಶತ್ರುಪ್ರತೀಘಾತಮಾಪದರ್ಥಂ ಪರಾಯಣಮ್ ॥15॥
ನಾಲ್ಕು ದಿಕ್ಕುಗಳಲ್ಲಿಯೂ ರಕ್ಷಕಭಟರನ್ನು ನಿಯಮಿಸಿ, ಸೇನೆಯು ಬೀಡು ಬಿಡುವಂತೆ ಮಾಡಿ, ಪದಾತಿಗಳನ್ನು ಗೂಹನ ಮಾಡಬೇಕು. ಮತ್ತು ಶತ್ರುಗಳ ಮೇಲೆ ಎರಗಲು ಶತ್ರುಗಳಿಗೆ ಆಪತ್ತು ಒದಗುವವರೆಗೆ ನಿರೀಕ್ಷಿಸಿ ಅನಂತರ ಶತ್ರುಗಳ ಮೇಲೆ ದಾಳಿ ಮಾಡಬೇಕು.
ಸಪ್ತರ್ಷೀನ್ ಪೃಷ್ಠತಃ ಕೃತ್ವಾ ಯುದ್ಧ್ಯೇರನ್ನಚಲಾ ಇವ |
ಅನೇನ ವಿಧಿನಾ ರಾಜನ್ ಜಿಗೀಷೇತಾಪಿ ದುರ್ಜಯಾನ್ ॥16॥
ಸಪ್ತರ್ಷಿಮಂಡಲವನ್ನು ಹಿಂದೆ ಮಾಡಿಕೊಂಡು ಸ್ಥಿರವಾಗಿ ಯುದ್ಧವನ್ನು ಮಾಡ- ಬೇಕು. ಎಲೈ ರಾಜನೇ! ಈ ವಿಧಾನದಿಂದ ಜಯಿಸಲು ಕಷ್ಟಸಾಧ್ಯರಾದವರನ್ನೂ ಗೆಲ್ಲಬಹುದು.
ಯತೋ ವಾಯುರ್ಯತಃ ಸೂರ್ಯೋ ಯತಃ ಶುಕ್ರಸ್ತತೋ ಜಯಃ |
ಪೂರ್ವಂ ಪೂರ್ವಂ ಜ್ಯಾಯ ಏಷಾಂ ಸನ್ನಿಪಾತೇ ಯುಧಿಷ್ಠಿರ ॥17॥
ಯಾವ ಸೈನ್ಯಕ್ಕೆ ಹಿಂದಿನಿಂದ ವಾಯುವು ಬೀಸುತ್ತದೆಯೋ, ಸೂರ್ಯ ಅಥವಾ ಶುಕ್ರರು ಹಿಂದೆ ಇರುತ್ತಾರೋ ಅವರಿಗೆ ಜಯವಾಗುತ್ತದೆ. ಎಲೈ ಯುಧಿಷ್ಠಿರನೇ! ಈ ಮೂರರ ಸಮೂಹದಲ್ಲಿ ಹಿಂದಿನದು ಮುಂದಿನದಕ್ಕಿಂತ ಶ್ರೇಷ್ಠವಾದುದು.
ಅಕರ್ದಮಾಮನುದಕಾಮಮರ್ಯಾದಾಮಲೋಷ್ಟಕಾಮ್ |
ಅಶ್ವಭೂಮಿಂ ಪ್ರಶಂಸಂತಿ ಯೇ ಯುದ್ಧಕುಶಲಾ ಜನಾಃ ॥18॥
ಯುದ್ಧಕುಶಲರಾದ ಜನರು ಕೆಸರಿಲ್ಲದ, ಅಲ್ಲಲ್ಲಿ ನೀರಿಲ್ಲದ, ಮಣ್ಣಿನ ಹೆಂಟೆ- ಗಳಿಲ್ಲದ ವಿಸ್ತಾರವಾದ ಅಶ್ವಭೂಮಿಯನ್ನು ಪ್ರಶಂಸೆ ಮಾಡುತ್ತಾರೆ.
ಸಮಾ ನಿರುದಕಾಕಾಶಾ ರಥಭೂಮಿಃ ಪ್ರಶಸ್ಯತೇ |
ನೀಚದ್ರುಮಾ ಮಹಾಕಕ್ಷಾ ಸೋದಕಾ ಹಸ್ತಿಯೋಧಿನಾಮ್ ॥19॥
ಸಮವಾದ, ಮಧ್ಯೆ ಮಧ್ಯೆ ನೀರು ಮತ್ತು ಗುಂಡಿಗಳಿಲ್ಲದ ರಥಭೂಮಿಯು ಪ್ರಶಸ್ತವಾಗುತ್ತದೆ. ಗಜಯೋಧಿಗಳಿಗೆ ಸಣ್ಣವೃಕ್ಷಗಳು, ದೊಡ್ಡ ಪೊದೆಗಳು ಮತ್ತು ಜಲವೂ ಇರುವ ಪ್ರದೇಶವು ಪ್ರಶಸ್ತವಾಗುತ್ತದೆ.
ಬಹುದುರ್ಗಾ ಮಹಾವೃಕ್ಷಾ ವೇತ್ರವೇಣುಭಿರಾಸ್ತೃತಾ |
ಪದಾತೀನಾಂ ಕ್ಷಮಾ ಭೂಮಿಃ ಪರ್ವತೋಪವನಾನಿ ಚ ॥20॥
ಅನೇಕ ಕೋಟೆಗಳು (ರಕ್ಷಣಾಸ್ಥಾನಗಳು), ದೊಡ್ಡ ವೃಕ್ಷಗಳು, ಬಿದುರು ಬೆತ್ತ ಮೊದಲಾದವುಗಳಿಂದ ತುಂಬಿದ ಭೂಮಿಯು, ಪರ್ವತಗಳು ಮತ್ತು ಉಪ- ವನಗಳು ಪದಾತಿಗಳಿಗೆ ಯೋಗ್ಯವಾದ ಭೂಮಿಯಾಗುತ್ತದೆ.
ಪದಾತಿಬಹುಲಾ ಸೇನಾ ದೃಢಾ ಭವತಿ ಭಾರತ |
ರಥಾಶ್ವಬಹುಲಾ ಸೇನಾ ಸುದಿನೇಷು ಚ ಶಸ್ಯತೇ ॥21॥
ಎಲೈ ಭಾರತನೇ! ಪದಾತಿಗಳನ್ನು ಬಹುಸಂಖ್ಯೆಯಲ್ಲಿ ಹೊಂದಿರುವ ಸೈನ್ಯವು ದೃಢವಾಗುತ್ತದೆ. ರಥಾಶ್ವಗಳು ಪ್ರಧಾನವಾಗಿರುವ ಸೈನ್ಯವು ಹೇಮಂತ, ಶಿಶಿರ, ವಸಂತ ಋತುವಿನ ದಿನಗಳಲ್ಲಿ ಪ್ರಶಸ್ತವಾಗುತ್ತದೆ.
ಪದಾತಿನಾಗಬಹುಲಾ ಪ್ರಾವೃಟ್ಕಾಲೇ ಪ್ರಶಸ್ಯತೇ |
ಗುಣಾನೇತಾನ್ ಪ್ರಸಂಖ್ಯಾಯ ದೇಶಕಾಲೌ ಪ್ರಯೋಜಯೇತ್ ॥22॥
ಪದಾತಿಗಳು ಮತ್ತು ಗಜಗಳು ಪ್ರಧಾನವಾಗಿರುವ ಸೈನ್ಯಕ್ಕೆ ಮಳೆಗಾಲವು ಪ್ರಶಸ್ತವಾಗುತ್ತದೆ. ದೇಶಕಾಲಗಳ ಈ ಗುಣಗಳನ್ನು ಎಣಿಸಿ ಸೈನ್ಯದ ನಡೆಯನ್ನು ನಿಯೋಜಿಸಬೇಕು.
ಏವಂ ಸಂಚಿಂತ್ಯ ಯೋ ಯಾತಿ ತಿಥಿನಕ್ಷತ್ರಪೂಜಿತಃ |
ವಿಜಯಂ ಲಭತೇ ನಿತ್ಯಂ ಸೇನಾಂ ಸಮ್ಯಕ್ ಪ್ರಯೋಜಯನ್ ॥23॥
ಯಾವನು ಹೀಗೆ ಚಿಂತಿಸಿ, ತಿಥಿನಕ್ಷತ್ರಗಳ ಆನುಕೂಲ್ಯವನ್ನು ಹೊಂದಿ, ಸೈನ್ಯ- ವನ್ನು ಚೆನ್ನಾಗಿ ನಿಯೋಜಿಸಿ ಮುಂದೆ ಸಾಗುತ್ತಾನೋ ಅವನು ಯಾವಾಗಲೂ ಜಯವನ್ನು ಹೊಂದುತ್ತಾನೆ.
ಪ್ರಸುಪ್ತಾಂಸ್ತೃಷಿತಾನ್ ಶ್ರಾಂತಾನ್ ಪ್ರಕೀರ್ಣಾನ್ ನಾಭಿಘಾತಯೇತ್ |

ಮೋಕ್ಷೇ ಪ್ರಯಾಣೇ ಚಲನೇ ಯಾನಭೋಜನಕಾಲಯೋಃ |
ಸಂಧಿಕ್ಷಿಪ್ತಾನತಿಕ್ಷಿಪ್ತಾನ್ ವಿಹತಾನ್ ಪ್ರತನೂಕೃತಾನ್ ॥24॥
ಅವಶ್ರದ್ಧಾನ್ ಕೃತಾರಂಭಾನುಪನ್ಯಾಸಪ್ರತಾಪಿತಾನ್ |
ಬಹಿಶ್ಚರಾನುಪನ್ಯಾಸಾನ್ ಕೃತವೇಶ್ಮಾನುಸಾರಿಣಃ ॥25॥
ನಿದ್ದೆ ಮಾಡುವವರು, ಬಾಯಾರಿದವರು, ದಣಿದವರು, ಚದುರಿ ಹೋದವರು ಇವರನ್ನು ಸೇನೆಯು ಯುದ್ಧವನ್ನು ನಿಲ್ಲಿಸಿರುವ ಕಾಲದಲ್ಲಾಗಲೀ ಪ್ರಯಾಣದ ಕಾಲದಲ್ಲಾಗಲೀ ಅಥವಾ ಅವರು ಪಲಾಯನ ಮಾಡುವಾಗಲಾಗಲೀ ಅವರ ಪಾನಭೋಜನಕಾಲಗಳಲ್ಲಾಗಲೀ ಹೊಡೆಯಬಾರದು. ಬಹಳ ತಿರಸ್ಕೃತರಾದವರು, `ಈದಿನ ನನಗೆ ಬಹಳ ಕೆಲಸವಿದೆ ನಾಳೆಯ ದಿವಸ ಯುದ್ಧವನ್ನು ಮಾಡುತ್ತೇನೆ' ಎಂದು ಹೇಳುವವರು, ಗಾಯಗೊಂಡವರು, ಹೆಚ್ಚಿನ ಸೈನ್ಯವು ಹಿಂದೆ ಹೋಗಿ ರಣರಂಗದಲ್ಲಿ ಕೆಲವರು ಮಾತ್ರ ಉಳಿದವರು, ಯುದ್ಧದ ಉತ್ಸಾಹವನ್ನು ಕಳೆದು- ಕೊಂಡವರು, ಕಾರ್ಯಾಂತರವನ್ನು ಮಾಡುವವರು, ಸಮೀಪದವರು ಹತರಾದು- ದರಿಂದ ಮೂರ್ಛೆ ಹೊಂದಿದವರು, ಸಂಧ್ಯಾವಂದನಾದಿನಿತ್ಯಕಾರ್ಯಗಳಿಗಾಗಿ ಹೊರಗೆ ಹೋದವರು, ಆಯುಧವನ್ನು ಕೆಳಗಿಟ್ಟವರು, ಸೇನಾಬಿಡಾರದ ಕಡೆಗೆ ಹೋಗುವವರು ಇಂತಹ ಯಾರನ್ನೂ ಹೊಡೆಯಬಾರದು.
ಪಾರಂಪರ್ಯಾಗತೇ ದ್ವಾರೇ ಯೇ ಕೇಚಿದನುವರ್ತಿನಃ |
ಪರಿಚರ್ಯಾವರೋದ್ಧಾರೋ ಯೇ ಚ ಕೇಚನ ವಲ್ಗಿನಃ ॥26॥
ಅನೀಕಂ ಯೇ ಪ್ರಭಿಂದಂತಿ ಭಿನ್ನಂ ಯೇ ಸ್ಥಗಯಂತಿ ಚ |
ಸಮಾನಾಶನಪಾನಾಸ್ತೇ ಕಾರ್ಯಾ ದ್ವಿಗುಣವೇತನಾಃ ॥27॥
ಪರಂಪರಾಗತವಾದ ಸೇನಾಮುಖದಲ್ಲಿ ನಿಂತು ಚೆನ್ನಾಗಿ ಮಾತನಾಡಿ ಶತ್ರುಗಳ ಪ್ರವೇಶವನ್ನು ತಡೆಯುವ ಯಾವ ಯೋಧರಿದ್ದಾರೆಯೋ ಯಾರು ಶತ್ರುಗಳ ಸೈನ್ಯವನ್ನು ಭೇದಿಸುತ್ತಾರೆಯೋ ಭಿನ್ನವಾದ ತಮ್ಮ ಸೈನ್ಯವನ್ನು ನಿಲ್ಲಿಸುತ್ತಾರೆಯೋ ಅವರು ಮೊದಲು ಉಳಿದವರಿಗೆ ಸಮಾನವಾದ ಅಶನಪಾನಗಳನ್ನು ಸ್ವೀಕರಿಸು- ತ್ತಿದ್ದರೂ ಅವರ ವೇತನವನ್ನು ದ್ವಿಗುಣಗೊಳಿಸಬೇಕು.
ಜಾತಿಗೋತ್ರಂ ಚ ವಿಜ್ಞಾಯ ಕರ್ಮ ಚಾನುತ್ತಮಂ ಶುಭಮ್ |
ಸಮಾನದೇಹರಕ್ಷಾರ್ಥೇ ಕಾರ್ಯಾ ದ್ವಿಗುಣವೇತನಾ |
ತ್ರಿಗುಣಂ ಚತುರ್ಗುಣಂ ಚೈವ ವೇತನಂ ತೇಷು ಕಾರಯೇತ್ ॥28॥
ಅವರ ಜಾತಿ-ಗೋತ್ರಗಳನ್ನು ತಿಳಿದು, ಅವರ ಶ್ರೇಷ್ಠವಾದ ಕರ್ಮಗಳನ್ನು ತಿಳಿದು ಸಮಾನವಾದ ಕುಟುಂಬಾದಿ ರಕ್ಷಣೆಗಾಗಿ ಅವರ ಸಂಬಳವನ್ನು ಎರಡು- ಪಟ್ಟು ಅಥವಾ ಮೂರುಪಟ್ಟು ಅಥವಾ ನಾಲ್ಕುಪಟ್ಟು ಹೆಚ್ಚಿಸಬೇಕು.
ದಶಾಧಿಪತಯಃ ಕಾರ್ಯಾಃ ಶತಾಧಿಪತಯಸ್ತಥಾ |
ತೇಷಾಂ ಸಹಸ್ರಾಧಿಪತಿಂ ಕುರ್ಯಾಚ್ಛೂರಮತಂದ್ರಿತಮ್ ॥29॥
ಹತ್ತುಜನಯೋಧರಿಗೆ ಒಬ್ಬ ಅಧಿಪತಿಯನ್ನು ಮಾಡಬೇಕು. ನೂರು ಜನರಿಗೆ ಒಬ್ಬ ಅಧಿಪತಿಯನ್ನು ಮಾಡಬೇಕು. ಹಾಗೆಯೇ ಸಹಸ್ರಯೋಧರಿಗೆ ಆಲಸ್ಯ- ರಹಿತನೂ ಶೂರನೂ ಆದ ಒಬ್ಬನನ್ನು ಅಧಿಪತಿಯನ್ನಾಗಿ ಮಾಡಬೇಕು.
ಯಥಾಮುಖ್ಯಾಃ ಸನ್ನಿಪತ್ಯ ವಕ್ತವ್ಯಾಃ ಸಂಶಯಾಮಹೇ |
ಯಥಾ ಜಯಾರ್ಥಂ ಸಂಗ್ರಾಮೇ ನ ಜಹ್ಯಾಮ ಪರಸ್ಪರಮ್ ॥30॥
ಇಹೈವ ತೇ ನಿವರ್ತಂತಾಂ ಯೇ ನಃ ಕೇಚನ ಭೀರವಃ |
ನ ಘಾತಯೇಯುಃ ಪ್ರದರಂ ಕುರ್ವಾಣಾಸ್ತುಮುಲೇ ಸತಿ |
ನ ಸನ್ನಿಪಾತೇ ಪ್ರದರಂ ವಧಂ ವಾ ಕುರ್ಯುರೀದೃಶಾಃ ॥31॥
ತನ್ನ ಸೇನೆಯಲ್ಲಿ ಮುಖ್ಯರಾದವರನ್ನು ಸಂಧಿಸಿ ಹೀಗೆ ಮಾತನಾಡಬೇಕು `ಯುದ್ಧದಲ್ಲಿ ಜಯದ ವಿಷಯದಲ್ಲಿ ನಮಗೆ ಸಂಶಯವುಂಟಾಗಿದೆ. ನಾವು ಒಬ್ಬರ- ನ್ನೊಬ್ಬರು ಬಿಡುವುದು ಬೇಡ. ನಮ್ಮಲ್ಲಿ ಯಾರಾದರೂ ಭೀರುಗಳಿದ್ದರೆ ಅವರು ಇಲ್ಲಿಯೇ ಹಿಂದಿರುಗಲಿ. ಹೆದರಿದವರು ತೀವ್ರವಾದ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲಲಾರರು. ಅಂತಹವರು ಶತ್ರುಗಳು ಎರಗಿದಾಗ ಅವರಿಗೆ ಭಯವನ್ನಾಗಲೀ, ವಧೆಯನ್ನಾಗಲೀ ಉಂಟುಮಾಡಲಾರರು.
ಆತ್ಮಾನಂ ಚ ಸ್ವಪಕ್ಷಂ ಚ ಪಲಾಯನ್ ಹಂತಿ ಸಂಯುಗೇ |
ದ್ರವ್ಯನಾಶೋ ವಧೋಽಕೀರ್ತಿರಯಶಶ್ಚ ಪಲಾಯನೇ ॥32॥
ಯುದ್ಧವನ್ನು ಬಿಟ್ಟು ಓಡುವವನು ತನ್ನನ್ನೂ ತನ್ನ ಪಕ್ಷವನ್ನೂ ನಾಶಗೊಳಿಸು- ತ್ತಾನೆ. ಪಲಾಯನ ಮಾಡಿದರೆ ದ್ರವ್ಯನಾಶ, ವಧೆ, ಈ ಲೋಕದಲ್ಲಿ ಅಕೀರ್ತಿ, ಪರಲೋಕದಲ್ಲಿ ಯಶೋಹಾನಿ ಉಂಟಾಗುತ್ತದೆ (ಎಂದು ಹೇಳಬೇಕು).
ಅಮನೋಜ್ಞಾಸುಖಾ ವಾಚಃ ಪುರುಷಸ್ಯ ಪಲಾಯತಃ |
ಪ್ರತಿಸ್ಪಂದೌಷ್ಠದಂತಶ್ಚ ನ್ಯಸ್ತಸರ್ವಾಯುಧಸ್ಯ ಚ ॥33॥
ಪಲಾಯನ ಮಾಡುವ ಪುರುಷನು ಮನೋಹರವಲ್ಲದ ದುಃಖಕರವಾದ ಮಾತುಗಳನ್ನು ಆಡುತ್ತಾನೆ. ಅವನ ತುಟಿಗಳು ಮತ್ತು ದಂತಗಳು ಅದುರುತ್ತವೆ. ಅವನು ಎಲ್ಲಾ ಆಯುಧಗಳನ್ನೂ ಕೆಳಗಿಡುತ್ತಾನೆ.
ಹಿತ್ವಾ ಪಲಾಯಮಾನಸ್ಯ ಸಹಾಯಾನ್ ಪ್ರಾಣಸಂಶಯೇ |
ಅಮಿತ್ರೈರನುಬದ್ಧಸ್ಯ ದ್ವಿಷತಾಮಸ್ತು ನಸ್ತಥಾ ॥34॥
ಪ್ರಾಣಸಂಶಯವುಂಟಾದಾಗ, ತನ್ನ ಸಹಾಯಕರನ್ನು ಬಿಟ್ಟು ಓಡುವವನ ಪರಿಸ್ಥಿತಿಯು ಓಡುತ್ತಾ ಶತ್ರುಗಳಿಂದ ಹಿಂಬಾಲಿಸಲ್ಪಡುವವನ ಪರಿಸ್ಥಿತಿಯು ನಮ್ಮ ಶತ್ರುಗಳಿಗಾಗಲಿ (ನಮಗೆ ಬೇಡ).
ಮನುಷ್ಯಾಪಶದಾ ಹ್ಯೇತೇ ಯೇ ಭವಂತಿ ಪರಾಙ್ಮುಖಾಃ |
ರಾಶಿವರ್ಧನಮಾತ್ರಾಸ್ತೇ ನೈವ ತೇ ಪ್ರೇತ್ಯ ನೋ ಇಹ ॥35॥

ಯುದ್ಧಕ್ಕೆ ವಿಮುಖರಾಗಿ ಓಡುವವರು ನೀಚರಾದ ಮನುಷ್ಯರು. ಅವರು ಪಾಚಕರು ಅನ್ನದ ರಾಶಿಯನ್ನು ಹೆಚ್ಚು ಮಾಡುವುದಕ್ಕೆ ಮಾತ್ರ ನಿಮಿತ್ತರಾದವರು. ಅವರಿಗೆ ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಸ್ಥಾನವಿಲ್ಲ.
ಅಮಿತ್ರಾ ಹೃಷ್ಟಮನಸಃ ಪ್ರತ್ಯುದ್ಯಾಂತಿ ಪಲಾಯಿನಮ್ |
ಜಯಿನಂ ಸುಹೃದಸ್ತಾತ ವಂದನೈರ್ಮಂಗಲೇನ ಚ ॥36॥
ಪಲಾಯನ ಮಾಡುವವನನ್ನು ನೋಡಿ ಶತ್ರುಗಳು ಸಂತೋಷದಿಂದ ಕೂಡಿ ಮೇಲೆರಗುತ್ತಾರೆ. ಎಲೈ ಪ್ರೀತಿಪಾತ್ರನೇ! ಜಯಶಾಲಿಯಾದವನನ್ನು ಸುಹೃಜ್ಜನರು ನಮಸ್ಕಾರಗಳಿಂದಲೂ, ಮಂಗಲಪದಾರ್ಥಗಳಿಂದಲೂ ಪೂಜಿಸುತ್ತಾರೆ.
ಯಸ್ಯ ಸ್ಮ ವ್ಯಸನೇ ರಾಜನ್ನನುಮೋದಂತಿ ಶತ್ರವಃ |
ತದಸಹ್ಯತರಂ ದುಃಖಮಹಂ ಮನ್ಯೇ ವಧಾದಪಿ ॥37॥
ಎಲೈ ರಾಜನೇ! ಯಾವನಿಗೆ ವ್ಯಸನವುಂಟಾದಾಗ ಶತ್ರುಗಳು ಸಂತೋಷ ಪಡುತ್ತಾರೆಯೋ ವ್ಯಸನಕ್ಕೀಡಾದ ಆ ರಾಜನ ಅವಸ್ಥೆಯು ಮರಣಕ್ಕಿಂತ ಹೆಚ್ಚು ದುಃಖಕರವಾದುದು ಮತ್ತು ಸಹಿಸಲು ಅಸಾಧ್ಯವಾದುದು ಎಂದು ತಿಳಿಯುತ್ತೇನೆ.
ಶ್ರಿಯಂ ಜಾನೀತ ಧರ್ಮಸ್ಯ ಮೂಲಂ ಸರ್ವಸುಖಸ್ಯ ಚ |
ಸಾ ಭೀರೂನವಜಾನಾತಿ ಶೂರಸ್ತಾಮಧಿಗಚ್ಛತಿ ॥38॥
ಧರ್ಮಕ್ಕೂ ಮತ್ತು ಎಲ್ಲ ಸುಖಕ್ಕೂ ಸಂಪತ್ತು ಮೂಲವಾದುದು ಎಂದು ತಿಳಿಯಿರಿ. ಆ ಸಂಪತ್ತು ಹೇಡಿಯನ್ನು ತಿರಸ್ಕರಿಸಿ ಶೂರನನ್ನು ಸೇರುತ್ತದೆ.
ತೇ ವಯಂ ಸ್ವರ್ಗಮಿಚ್ಛಂತಃ ಸಂಗ್ರಾಮೇ ತ್ಯಕ್ತಜೀವಿತಾಃ |
ಜಯಂತೋ ವಧ್ಯಮಾನಾ ವಾ ಪ್ರಾಪ್ತುಮರ್ಹಾಮ ಸದ್ಗತಿಮ್ ॥39॥
ಅಂತಹ ನಾವು ಸ್ವರ್ಗವನ್ನು ಬಯಸುತ್ತಾ ಯುದ್ಧದಲ್ಲಿ ಜೀವದ ಹಂಗನ್ನು ತೊರೆದು ಜಯವನ್ನು ಪಡೆದು ಅಥವಾ ಹತರಾಗಿ ಸದ್ಗತಿಯನ್ನು ಹೊಂದೋಣ (ಎಂದು ಹೇಳಬೇಕು).
ಏವಂ ಸಂಶಪ್ತಶಪಥಾಃ ಸಮಭಿತ್ಯಕ್ತಜೀವಿತಾಃ |
ಅಮಿತ್ರವಾಹಿನೀಂ ವೀರಾಃ ಸಂಪ್ರಗಾಹಂತ್ಯಭೀರವಃ ॥40॥
ಹೀಗೆ ಶಪಥವನ್ನು ಮಾಡಿ ಜೀವನದ ಹಂಗನ್ನು ತೊರೆದು ವೀರರು ನಿರ್ಭ- ಯರಾಗಿ ಶತ್ರುಸೈನ್ಯವನ್ನು ಪ್ರವೇಶಿಸುತ್ತಾರೆ.
ಅಗ್ರತಃ ಪುರುಷಾನೀಕಮಸಿಚರ್ಮವತಾಂ ಭವೇತ್ |
ಪೃಷ್ಠತಃ ಶಕಟಾನೀಕಂ ಕಲತ್ರಂ ಮಧ್ಯತಸ್ತಥಾ ॥41॥
ಸೈನ್ಯದ ಮುಂಭಾಗದಲ್ಲಿ ಖಡ್ಗಚರ್ಮಗಳನ್ನು ಹಿಡಿದ ಪದಾತಿಗಳ ಸಮೂಹವು, ಹಿಂಭಾಗದಲ್ಲಿ ರಥಗಳು, ಮಧ್ಯಭಾಗದಲ್ಲಿ ಧಾವನೋತ್ಸುಕವಾದ ಸೈನ್ಯವನ್ನು ರಕ್ಷಿಸುವ ಸೇನಾಪತಿಗಳು ಇರಬೇಕು- (ಲಕ್ಷ್ಮಾಲಂಕಾರ)
ಪರೇಷಾಂ ಪ್ರತಿಘಾತಾರ್ಥಂ ಪದಾತೀನಾಂ ಚ ಗೂಹನಮ್ |
ಅಪಿ ಹ್ಯಸ್ಮಿನ್ ಪರೇ ಗೃಧ್ರಾ ಭವೇಯುರ್ಯೇ ಪುರೋಗಮಾಃ ॥42॥
ಶತ್ರುಗಳ ಪ್ರತಿಘಾತಕ್ಕಾಗಿ ಇರುವ ಪದಾತಿಗಳನ್ನು ರಕ್ಷಿಸಬೇಕು. ಶತ್ರುಸೈನ್ಯದ ಮುಂಭಾಗದಲ್ಲಿರುವವರು ಅಂತಹ ಪದಾತಿಗಳನ್ನು ವಶಪಡಿಸಿಕೊಳ್ಳಲು ಬಯಸ- ಬಹುದು.
ಯೇ ಪುರಸ್ತಾದಭಿಮತಾಃ ಸತ್ತ್ವಂತೋ ಹಿ ಮನಸ್ವಿನಃ |
ತೇ ಪೂರ್ವಮಭಿವರ್ತೇರಂಸ್ತಾನ್ ಅನ್ವಗಿತರೇ ಜನಾಃ ॥43॥
ಯಾರಿಗೆ ಅಧಿಕವಾದ ಬಲ ಮತ್ತು ಧೈರ್ಯಗಳಿವೆಯೋ ಅವರು ಸೇನೆಯ ಮುಂಭಾಗದಲ್ಲಿರಬೇಕು. ಉಳಿದ ಯೋಧರು ಅವರನ್ನು ಅನುಸರಿಸಬೇಕು.
ಅಪಿ ಚೋದ್ಧರ್ಷಣಂ ಕಾರ್ಯಂ ಭೀರೂಣಾಮಪಿ ಯತ್ನತಃ |
ಸ್ಕಂಧದರ್ಶನಮಾತ್ರಂ ತು ತಿಷ್ಠೇಯುರ್ವಾ ಸಮೀಪತಃ ॥44॥
ಭಯಗ್ರಸ್ತರಾದವರಿಗೂ ಪ್ರಯತ್ನಪಟ್ಟು ಉತ್ತೇಜನವನ್ನು ನೀಡಬೇಕು. ಶತ್ರುಗಳ ಸೈನ್ಯದ ಒಂದು ಭಾಗವನ್ನು ನೋಡುವವರೆಗೂ ಅವರ ಜೊತೆಯಲ್ಲಿ ಇರಬೇಕು.
ಸಂಹತಾನ್ ಯೋಧಯೇದಲ್ಪಾನ್ ಕಾಮಂ ವಿಸ್ತಾರಯೇದ್ ಬಹೂನ್ |
ಸೂಚೀಮುಖಮನೀಕಂ ಸ್ಯಾದಲ್ಪಾನಾಂ ಬಹುಭಿಃ ಸಹ ॥45॥
ತನ್ನ ಸೈನ್ಯವು ಅಲ್ಪವಾಗಿದ್ದರೆ ಸೂಚೀಮುಖವ್ಯೂಹವನ್ನು ಮಾಡಿ ಅವರನ್ನು ಒಟ್ಟಿಗೆ ಸೇರಿಸಿ ಯುದ್ಧವನ್ನು ಮಾಡಬೇಕು. ಸೈನ್ಯವು ದೊಡ್ಡದಾಗಿದ್ದರೆ ಅವರನ್ನು ನಮ್ಮ ಇಚ್ಛೆಗೆ ತಕ್ಕಂತೆ ವಿಸ್ತಾರಮಾಡಿ ಯುದ್ಧವನ್ನು ಮಾಡಬೇಕು. ಅಲ್ಪರು ಅನೇಕರ ಜೊತೆ ಯುದ್ಧವನ್ನು ಮಾಡುವಾಗ ಸೂಚೀಮುಖವ್ಯೂಹವನ್ನು ರಚಿಸಬೇಕೆಂದು ಹೇಳುತ್ತಾರೆ.
ಸನ್ನಿಕೃಷ್ಟೇ ನಿಕೃಷ್ಟೇ ವಾ ಸತ್ಯಂ ವಾ ಯದಿ ವಾಽನೃತಮ್ |
ಪ್ರಗೃಹ್ಯ ಬಾಹೂನ್ ಕ್ರೋಶೇತ ಭಗ್ನಾ ಭಗ್ನಾಃ ಪರಾ ಇತಿ ॥46॥
ಸಮೀಪದಲ್ಲಾಗಲೀ ದೂರದಲ್ಲಾಗಲೀ ಈ ಮಾತು ಸತ್ಯವಾಗಲೀ ಅಥವಾ ಸುಳ್ಳಾಗಲೀ ಬಾಹುಗಳನ್ನು ಎತ್ತಿ ``ಶತ್ರುಗಳು ಭಗ್ನರಾಗಿದ್ದಾರೆ, ಭಗ್ನರಾಗಿದ್ದಾರೆ'' ಎಂದು ಕಿರುಚಬೇಕು.
ಆಗತಂ ನೋ ಮಿತ್ರಬಲಂ ಪ್ರಹರಧ್ವಮಭೀತವತ್ |
ಶಬ್ದವಂತೋಽನುಧಾವೇಯುಃ ಕುರ್ವಂತೋ ಭೈರವಂ ರವಮ್ ॥47॥
`ನಮ್ಮ ಮಿತ್ರಸೈನ್ಯವು ಬಂದಿದೆ; ನಿರ್ಭಯವಾಗಿ ಪ್ರಹಾರ ಮಾಡಿ' ಎಂದು ಹೇಳುತ್ತಾ ಭೈರವನಾದವನ್ನು ಮಾಡುತ್ತಾ ಯೋಧರ ಹಿಂದೆ ಓಡಬೇಕು.

ಕ್ಷ್ವೇಡಾಃ ಕಿಲಕಿಲಾಃ ಶಂಖಾಃ ಕ್ರಕಚಾ ಗೋವಿಷಾಣಿಕಾನ್ |
ಭೇರೀಮೃದಂಗಪಣವಾನ್ ನಾದಯೇಯುಶ್ಚ ಕುಂಜರಾನ್ ॥48॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವ್ಯಧಿಕಶತತಮೋಽಧ್ಯಾಯಃ ॥102॥
ಯುದ್ಧದ ಸಿಂಹನಾದಗಳು, ಕಿಲಕಿಲಶಬ್ದಗಳು ಇವುಗಳನ್ನು ಮಾಡಬೇಕು. ಶಂಖ, ಕ್ರಕಚ, ಗೋವಿಷಾಣ, ಭೇರಿ, ಮೃದಂಗ, ಪಣವಗಳನ್ನು ಮೊಳಗಿಸಬೇಕು. ಗಜಗಳು ಬೃಂಹಣವನ್ನು ಮಾಡುವಂತೆ ಮಾಡಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 102ನೆಯ ಅಧ್ಯಾಯವು ಮುಗಿಯಿತು.
0

103. ನೂರಮೂರನೆಯ ಅಧ್ಯಾಯ
ಯೋಧರ ಯುದ್ಧಪ್ರಕಾರಾದಿ ಕಥನ
ಯುಧಿಷ್ಠಿರಃ
ಕಿಂಶೀಲಾಃ ಕಿಂಸಮುತ್ಥಾನಾಃ ಕಥಂರೂಪಾಶ್ಚ ಭಾರತ |
ಕಿಂಸನ್ನಾಹಾಃ ಕಥಂಶಸ್ತ್ರಾ ಜನಾಃ ಸ್ಯುಃ ಸಂಯುಗೇ ನೃಪ ॥1॥
ಯುಧಿಷ್ಠಿರ ಎಲೈ ಭಾರತನೇ! ಯೋಧರ ನಡತೆ ಅವರ ಆಚಾರ ಅವರ ರೂಪಗಳು ಹೇಗಿರಬೇಕು? ಎಲೈ ರಾಜನೇ! ಅವರ ಸನ್ನಾಹ ಶಸ್ತ್ರಗಳು ಯುದ್ಧದಲ್ಲಿ ಹೇಗಿರಬೇಕು?
ಭೀಷ್ಮಃ
ಯಥಾಽಚರಿತಮೇವಾತ್ರ ಶಸ್ತ್ರಪತ್ರಂ ವಿಧೀಯತೇ |
ಆಚಾರಾದೇವ ಪುರುಷಸ್ತಥಾ ಕರ್ಮಸು ವರ್ತತೇ ॥2॥
ಭೀಷ್ಮರು ಅವರವರ ದೇಶಾಚಾರಕ್ಕೆ ತಕ್ಕಂತೆ ಶಸ್ತ್ರಗಳು ಮತ್ತು ವಾಹನಗಳು ವಿಹಿತವಾಗುತ್ತವೆ. ಯೋಧಪುರುಷನು ತನ್ನ ದೇಶಾಚಾರದಂತೆಯೇ ಯುದ್ಧಕರ್ಮ- ದಲ್ಲಿ ಪ್ರವೃತ್ತನಾಗುತ್ತಾನೆ.
ಗಾಂಧಾರಾಃ ಸಿಂಧುಸೌವೀರಾ ನಖರಪ್ರಾಸಯೋಧಿನಃ |
ಆಭೀರವಃ ಸುಬಲಿನಸ್ತದ್ಬಲಂ ಸರ್ವಪಾರಗಮ್ ॥3॥
ಗಾಂಧಾರರು ಮತ್ತು ಸಿಂಧುಸೌವೀರರು ನಖರ ಮತ್ತು ಪ್ರಾಸಗಳಿಂದ ಯುದ್ಧವನ್ನು ಮಾಡುವವರು. ಆಭೀರರು ಬಲಿಷ್ಠರಾದವರು. ಅವರು ಸರ್ವಶಸ್ತ್ರ- ಗಳಲ್ಲಿಯೂ ಪಾರಂಗತರು.
ಸರ್ವಶಸ್ತ್ರೇಷು ಕುಶಲಾಃ ಸತ್ತ್ವವಂತೋ ಹ್ಯುಶೀನರಾಃ |
ಪ್ರಾಚ್ಯಾ ಮಾತಂಗಯುದ್ಧೇಷು ಕುಶಲಾಃ ಶಠಯೋಧಿನಃ ॥4॥
ಉಶೀನರರು ಎಲ್ಲ ಶಸ್ತ್ರಗಳಲ್ಲಿಯೂ ಕುಶಲರು ಮತ್ತು ಬಲಶಾಲಿಗಳು. ಪ್ರಾಚ್ಯರು (ಪೂರ್ವದಿಕ್ಕಿನವರು) ಗಜಯುದ್ಧಗಳಲ್ಲಿ ಕುಶಲರು ಮತ್ತು ಹಠದಿಂದ ಯುದ್ಧವನ್ನು ಮಾಡುವವರು.
ತಥಾ ಯವನಕಾಂಭೋಜಾ ಮಥುರಾಮಭಿತಶ್ಚ ಯೇ |
ಏತೇ ನಿಯುದ್ಧಕುಶಲಾ ದಾಕ್ಷಿಣಾತ್ಯಾಸಿಚರ್ಮಿಣಃ ॥5॥
ಹಾಗೆಯೇ ಯವನರು ಕಾಂಭೋಜರು ಮತ್ತು ಮಧುರೆಯ ಸಮೀಪದವರು - ಇವರು ಬಾಹುಯುದ್ಧದಲ್ಲಿ ಕುಶಲರು. ದಾಕ್ಷಿಣಾತ್ಯರು ಖಡ್ಗಚರ್ಮಯುದ್ಧದಲ್ಲಿ ಕುಶಲರು.
ಸರ್ವತ್ರ ಶೂರಾ ಜಾಯಂತೇ ಮಹಾಸತ್ತ್ವಾ ಮಹಾಬಲಾಃ |
ಪ್ರಾಯ ಏಷ ಸಮುದ್ದಿಷ್ಟೋ ಲಕ್ಷಣಾನಿ ತು ಮೇ ಶೃಣು ॥6॥
ಮಹಾಧೈರ್ಯ ಮತ್ತು ಮಹಾಬಲವುಳ್ಳ ಶೂರರು ಎಲ್ಲ ದೇಶಗಳಲ್ಲಿಯೂ ಜನಿಸುತ್ತಾರೆ. ಅವರಲ್ಲಿ ಸ್ಥೂಲವಾಗಿ ಕಾಣುವ ಮುಖ್ಯಲಕ್ಷಣಗಳನ್ನು ನನ್ನಿಂದ ಕೇಳುವವನಾಗು.
ಸಿಂಹಶಾರ್ದೂಲವಾಙ್ನೇತ್ರಾಃ ಸಿಂಹಶಾರ್ದೂಲಗಾಮಿನಃ |
ಪಾರಾವತಕುಳಿಂಗಾಕ್ಷಾಃ ಸರ್ವೇ ಶೂರಾಃ ಪ್ರಮಾಥಿನಃ ॥7॥
ಸಿಂಹಶಾರ್ದೂಲಸ್ವರವನ್ನು ಹೊಂದಿದ, ಸಿಂಹಶಾರ್ದೂಲನಡಿಗೆಯನ್ನು ಹೊಂದಿದ ಪಾರಿವಾಳ ಮತ್ತು ಕುಳಿಂಗಪಕ್ಷಿಗಳ ಕಣ್ಣುಗಳಂತೆ ಕಣ್ಣುಳ್ಳ ಎಲ್ಲ ಶೂರರೂ ಶತ್ರುಪಕ್ಷವನ್ನು ಕಲಕಾಡುವವರು.
ಮೃಗಸ್ವರಾ ದ್ವೀಪಿನೇತ್ರಾ ಋಷಭಾಕ್ಷಾಸ್ತಥಾಪರೇ |
ಪ್ರವಾದಿನಃ ಸುಚಂಡಾಶ್ಚ ಕ್ರೋಧಿನಃ ಕಿನ್ನರೀಸ್ವನಾಃ ॥8॥
ಇನ್ನು ಕೆಲವರು ಜಿಂಕೆಯ ಸ್ವರವನ್ನು, ಚಿರತೆಯ ಕಣ್ಣುಗಳನ್ನು, ಅಥವಾ ವೃಷಭನೇತ್ರಗಳನ್ನು, ಕಿನ್ನರೀ ವಾದ್ಯಸ್ವರವನ್ನು ಹೊಂದಿ ಕ್ರೋಧಶೀಲರೂ ಉಗ್ರರೂ ಮತ್ತು ಉಚ್ಚಘೋಷವನ್ನೂ ಮಾಡುವವರೂ ಆಗಿರುತ್ತಾರೆ.
ಮೇಘಸ್ವನಾಃ ಕ್ರುದ್ಧಮುಖಾಃ ಕೇಚಿತ್ ಕಳಭನಿಸ್ವನಾಃ |
ಜಿಹ್ಮನಾಸಾನುಜಂಘಾಶ್ಚ ದೂರಗಾ ದೂರಪಾತಿನಃ ॥9॥
ಕೆಲವರು ಮೇಘಗಂಭೀರನಾದವನ್ನು ಹೊಂದಿ, ಕೋಪಗೊಂಡ ಮುಖವನ್ನು ಹೊಂದಿ, ಒಂಟೆಯ (ಅಥವಾ ಮರಿಆನೆಯ) ಸ್ವರವನ್ನು ಹೊಂದಿರುತ್ತಾರೆ. ವಕ್ರವಾದ ನಾಸಿಕೆ ಮತ್ತು ಜಂಗಳನ್ನು ಹೊಂದಿರುವ ಅವರು ದೂರದವರೆಗೂ ಹೋಗಬಲ್ಲರು ಮತ್ತು ಅವರ ಬಾಣಗಳು ಬಹಳ ದೂರ ಸಾಗುತ್ತವೆ.

ಬಿಡಾಲಕುಬ್ಜಾಸ್ತನವಸ್ತನುಕೇಶಾಸ್ತನುತ್ವಚಃ |
ಶೂರಾಶ್ಚಪಲಚಿತ್ತಾಶ್ಚ ತೇ ಭವಂತಿ ದುರಾಸದಾಃ ॥10॥
ಬೆಕ್ಕಿನಂತೆ ಕುಳ್ಳರಾದವರು, ಕೃಶರಾದವರು, ಮೃದುವಾದ ಕೇಶ ಮತ್ತು ಚರ್ಮ- ವನ್ನು ಹೊಂದಿದವರು, ಶೂರರಾದವರು, ರಣರಂಗವನ್ನು ಬಿಟ್ಟು ಓಡದವರು ಅವರ ಸಮೀಪಕ್ಕೆ ಹೋಗುವುದು ಕಷ್ಟಸಾಧ್ಯವಾದುದು.
ಗೋಧಾನಿಮೀಲಿತಾಃ ಕೇಚಿನ್ಮೃದುಪ್ರಕೃತಯೋಽಪಿ ಚ |
ತುರಂಗಗತಿನಿರ್ಘೋಷಾಸ್ತೇ ನರಾಃ ಪಾರಯಿಷ್ಣವಃ ॥11॥
ಉಡದ ಮುಚ್ಚಿದ ಕಣ್ಣುಗಳಂತೆ ಕಣ್ಣುಗಳನ್ನು ಹೊಂದಿದ, ಮೃದುಸ್ವಭಾವದ ಕೆಲವರು ಅಶ್ವವೇಗವನ್ನೂ, ಅಶ್ವಘೋಷವನ್ನೂ ಹೊಂದಿರುತ್ತಾರೆ. ಅವರು ಯುದ್ಧದ ಕೊನೆಯನ್ನು ತಲುಪುವವರು.
ಸುಸಂಹತಾಃ ಪ್ರತನವೋ ವ್ಯೂಢೋರಸ್ಕಾಃ ಸುಸಂಸ್ಥಿತಾಃ |
ಪ್ರವಾದಿತೇನ ನೃತ್ಯಂತಿ ಹೃಷ್ಯಂತಿ ಕಲಹೇಷು ಚ ॥12॥
ಗಂಭೀರಾಕ್ಷಾ ನಿಃಸೃತಾಕ್ಷಾಃ ಪಿಂಗಲಾ ಭ್ರುಕುಟೀಮುಖಾಃ |
ನಕುಲಾಕ್ಷಾಸ್ತಥಾ ಚೈವ ಸರ್ವೇ ಶೂರಾಸ್ತನುತ್ಯಜಃ ॥13॥
ಗಟ್ಟಿಯಾದ ಮೈಕಟ್ಟು, ಕೃಶವಾದ ದೇಹ, ವಿಸ್ತಾರವಾದ ಎದೆಗಳನ್ನು ಹೊಂದಿ- ದವರು ವಾದ್ಯಗಳ ಧ್ವನಿಯನ್ನು ಕೇಳಿ ನರ್ತನವನ್ನು ಮಾಡುತ್ತಾರೆ ಮತ್ತು ಯುದ್ಧ- ಗಳಲ್ಲಿ ಸಂತೋಷಪಡುತ್ತಾರೆ. ಆಳವಾದ ಕಣ್ಣುಗಳನ್ನು ಹೊಂದಿ ಅಥವಾ ಉಬ್ಬಿದ ಕಣ್ಣುಗಳನ್ನು ಹೊಂದಿ, ಕಂದು ಬಣ್ಣವನ್ನು ಹೊಂದಿ, ಹುಬ್ಬು ಗಂಟಿಕ್ಕಿದ ಮುಖ- ವುಳ್ಳವರಾದವರು, ಮುಂಗುಸಿಯ ಕಣ್ಣುಳ್ಳವರು ಎಲ್ಲರೂ ಯುದ್ಧದಲ್ಲಿ ಶರೀರವನ್ನು ತ್ಯಾಗಮಾಡುವ ಶೂರರು.
ಜಿಹ್ಮಾಕ್ಷಾಃ ಪ್ರಲಲಾಟಾಶ್ಚ ನಿರ್ಮಾಂಸಹನವೋಽಪಿ ಚ |
ವಕ್ರಬಾಹ್ವಂಸನಾಸಾಕ್ಷಾಃ ಕೃಶಾ ಧಮನಿಸಂತತಾಃ ॥14॥
ಪ್ರವಿಶಂತ್ಯತಿವೇಗೇನ ಸಂಪರಾಯೇಽಭ್ಯುಪಸ್ಥಿತೇ |
ವಾರಣಾ ಇವ ಸಮ್ಮತ್ತಾಸ್ತೇ ಭವಂತಿ ದುರಾಸದಾಃ ॥15॥
ವಕ್ರವಾದ ಕಣ್ಣು, ವಿಸ್ತಾರವಾದ ಹಣೆ, ಮಾಂಸರಹಿತವಾದ ಗಲ್ಲ, ವಕ್ರವಾದ ಬಾಹುಭುಜನಾಸಿಕ ಮತ್ತು ಕಣ್ಣುಗಳು, ಕೃಶತೆ, ನರಗಳು ಎದ್ದು ಕಾಣುವುದು- ಇಂತಹವರು ಯುದ್ಧವು ಉಪಸ್ಥಿತವಾದಾಗ ಅತಿವೇಗದಿಂದ ಶತ್ರುಸೈನ್ಯವನ್ನು ಪ್ರವೇಶಿಸುತ್ತಾರೆ. ಮದಿಸಿದ ಆನೆಗಳಂತೆ ಅವರು ಶತ್ರುಗಳಿಗೆ ದುರಾಸದರಾಗುತ್ತಾರೆ.
ದೀಪ್ತಸ್ಫುಟಿತಕೇಶಾಂತಾಃ ಸ್ಥೂಲಪಾರ್ಶ್ವಹನೂಮುಖಾಃ |
ಉನ್ನತಾಂಸಾ ಪೃಥುಗ್ರೀವಾ ವಿಕಟಾಃ ಸ್ಥೂಲಪಿಂಡಿಕಾಃ ॥16॥
ಉದ್ವೃತ್ತಾಶ್ಚೈವ ಸುಗ್ರೀವಾ ವಿನತಾ ವಿಹಗಾ ಇವ |
ಪಿಂಡಶೀರ್ಷಾಹಿವಕ್ತ್ರಶ್ಚ ವೃಷದಂಶಮುಖಾ ಇವ ॥17॥
ಉಗ್ರಸ್ವನಾ ಮನ್ಯುಮಂತೋ ಯುದ್ಧೇಷ್ವಾರಾವಸಾರಿಣಃ |
ಅಧರ್ಮಜ್ಞಾವಲಿಪ್ತಾಶ್ಚ ಘೋರಾ ರೌದ್ರಪ್ರದರ್ಶಿನಃ ॥18॥
ಹೊಳೆಯುವ ಮತ್ತು ತುದಿಯಲ್ಲಿ ಒಡೆದ ತಲೆಕೂದಲನ್ನು ಉಳ್ಳವರು, ಪಕ್ಕೆ ಹನು ಮತ್ತು ಮುಖಗಳು ಸ್ಥೂಲವಾಗಿರುವವರು, ಉನ್ನತವಾದ ಎದೆ ವಿಸ್ತಾರವಾದ ಕತ್ತು ಮತ್ತು ಸ್ಥೂಲವಾದ ದೇಹವನ್ನು ಹೊಂದಿದವರು, ಮೇಲ್ಮುಖವಾಗಿ ಅಥವಾ ಉದ್ಧಟರಾಗಿ ಒಳ್ಳೆಯ ಕತ್ತನ್ನು ಹೊಂದಿದವರು, ಎತ್ತರವಾಗಿ ಬಾಗಿ ಪಕ್ಷಿಗಳಂತೆ ಇರುವವರು, ಗುಂಡಾದ ಶಿರಸ್ಸು ಮತ್ತು ಸರ್ಪದ ತಲೆಗಳಂತೆ ತಲೆ ಉಳ್ಳವರು, ವೃಷಭದಂತಹ ಮುಖವುಳ್ಳವರು, ಉಗ್ರವಾದ ಸ್ವರವುಳ್ಳವರು, ಕೋಪವನ್ನು ಹೊಂದಿದವರು, ಯುದ್ಧದಲ್ಲಿ ಗರ್ಜಿಸುತ್ತಾ ಮುಂದೆ ಸಾಗುವವರು ಇವರೆಲ್ಲರೂ ಅಧರ್ಮಜ್ಞರು, ಅಹಂಕಾರಿಗಳು, ಘೋರರು ಮತ್ತು ಭಯಂಕರ ಕಾರ್ಯವನ್ನು ತೋರಿಸುವವರು.
ತ್ಯಕ್ತಾತ್ಮಾನಃ ಸರ್ವ ಏತ ಉದ್ವಗ್ರಾ ಹ್ಯನಿವರ್ತಿನಃ |
ಪುರಸ್ಕಾರ್ಯಾಃ ಸದಾ ಸೈನ್ಯೇ ಹನ್ಯಂತೇ ಘ್ನಂತಿ ಚಾಪಿ ತೇ ॥19॥
ಇವರೆಲ್ಲರೂ ಪ್ರಾಣವನ್ನು ತ್ಯಜಿಸಿ ಯುದ್ಧವನ್ನು ಮಾಡುವವರು. ರಣರಂಗ- ದಲ್ಲಿ ಹಿಮ್ಮೆಟ್ಟದವರು ಮತ್ತು ಯುದ್ಧದಲ್ಲಿ ಶ್ರೇಷ್ಠರಾದವರು. ಇವರನ್ನು ಸೈನ್ಯದಲ್ಲಿ ಯಾವಾಗಲೂ ಪುರಸ್ಕರಿಸಬೇಕು. ಇವರು ಶತ್ರುಗಳನ್ನು ಕೊಲ್ಲುತ್ತಾರೆ ಮತ್ತು ತಾವೂ ಹತರಾಗುತ್ತಾರೆ.
ಅಧಾರ್ಮಿಕಾ ಭಿನ್ನವೃತ್ತಾಃ ಸಾಧ್ವೇವೈಷಾಂ ಪರಾಭವಃ |
ಏವಮೇವ ಪ್ರಕುಪ್ಯಂತಿ ರಾಜ್ಞೋಽಪ್ಯೇತೇ ಹ್ಯಭೀಕ್ಷ್ಣಶಃ ॥20॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರ್ಯಧಿಕಶತತಮೋಽಧ್ಯಾಯಃ ॥103॥
ಅಧಾರ್ಮಿಕರು, ಭಿನ್ನವಾದ ನಡತೆಯುಳ್ಳವರೂ ಆದವರಿಗೆ ಸೋಲು ನ್ಯಾಯವಾದುದೇ ಆಗಿದೆ. ಅಂತಹವರು ರಾಜನ ಮೇಲೆಯೂ ಸತತವಾಗಿ ಕಾರಣ- ವಿಲ್ಲದೇ ಕೋಪಗೊಳ್ಳುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 103ನೆಯ ಅಧ್ಯಾಯವು ಮುಗಿಯಿತು
0
104. ನೂರನಾಲ್ಕನೆಯ ಅಧ್ಯಾಯ
ಸೇನೆಯ ಜಯಚಿಹ್ನೆಗಳ ಮತ್ತು ರಾಜನೀತಿಯ ಕಥನ

ಯುಧಿಷ್ಠಿರಃ
ಜೈತ್ರ್ಯಾ ವಾ ಕಾನಿ ರೂಪಾಣಿ ಭವಂತಿ ಪುರುಷರ್ಷಭ |
ಪೃತನಾಯಾಃ ಪ್ರಶಸ್ತಾನಿ ತಾನೀಹೇಚ್ಛಾಮಿ ವೇದಿತುಮ್ ||1||
ಯುಧಿಷ್ಠಿರ ಎಲೈ ಪುರುಷಶ್ರೇಷ್ಠನೇ! ಜಯಶೀಲವಾದ ಸೈನ್ಯಕ್ಕೆ ಯಾವ ಪ್ರಶಸ್ತವಾದ ಸೂಚನೆಗಳು ಉಂಟಾಗುತ್ತವೆಂದು ನಾನು ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಜೈತ್ರ್ಯಾ ವಾ ಯಾನಿ ರೂಪಾಣಿ ಭವಂತಿ ಪುರುಷರ್ಷಭ |
ಪೃಥನಾಯಾಃ ಪ್ರಶಸ್ತಾನಿ ತಾನಿ ವಕ್ಷ್ಯಾಮಿ ಸರ್ವಶಃ ||2||
ಭೀಷ್ಮರು ಎಲೈ ಪುರುಷಶ್ರೇಷ್ಠನೇ! ಜಯಶೀಲವಾದ ಸೈನ್ಯಕ್ಕೆ ಎಂತಹ ಶುಭಸೂಚನೆಗಳು ಉಂಟಾಗುತ್ತವೆಯೋ ಅವುಗಳೆಲ್ಲವನ್ನೂ ನಾನು ಹೇಳುವೆನು.
ದೈವಂ ಪೂರ್ವಂ ವಿಕುರುತೇ ಮಾನುಷೇ ಕಾಲಚೋದಿತೇ |
ತದ್ ವಿದ್ವಾಂಸೋಽನುಪಶ್ಯಂತಿ ಜ್ಞಾನದೀರ್ಘೇಣ ಚಕ್ಷುಷಾ ||3||
ಮನುಷ್ಯರು ಕಾಲಚೋದಿತರಾದಾಗ ಮೊದಲು ದೈವವು ವಿಕೋಪಗೊಳ್ಳು- ತ್ತದೆ. ಅದನ್ನು ದೀರ್ಘದೃಷ್ಟಿಯುಳ್ಳ ವಿದ್ವಾಂಸರು ತಮ್ಮ ಜ್ಞಾನದೃಷ್ಟಿಯಿಂದ ನೋಡುತ್ತಾರೆ.
ಪ್ರಾಯಶ್ಚಿತ್ತವಿಧಿಂ ಚಾತ್ರ ಜಪಹೋಮಾಂಶ್ಚ ತದ್ವಿದಃ |
ಮಂಗಲಾನಿ ಚ ಕುರ್ವಂತಃ ಶಮಯಂತ್ಯಹಿತಾನ್ಯಪಿ ||4||
ಆಗ ಅದನ್ನು ತಿಳಿದವರು ಪ್ರಾಯಶ್ಚಿತ್ತವಿಧಿಗಳನ್ನು, ಜಪಹೋಮಗಳನ್ನು, ಮಂಗಳಗಳನ್ನೂ ಮಾಡಿ ಅಶುಭವನ್ನು ಶಮನಗೊಳಿಸುತ್ತಾರೆ.
ಉದೀರ್ಣಮನಸೋ ಯೋಧಾ ವಾಹನಾನಿ ಚ ಭಾರತ |
ಯಸ್ಯಾಂ ಭವಂತಿ ಸೇನಾಯಾಂ ಧ್ರುವಂ ತಸ್ಯಾಂ ಜಯೋ ವದೇತ್ ||5||
ಎಲೈ ಭಾರತನೇ! ಯಾವ ಸೈನ್ಯದಲ್ಲಿ ಯೋಧರು ಮತ್ತು ವಾಹನಗಳು ಸಂತೋಷದಿಂದ ಉಬ್ಬಿದ ಮನಸ್ಸುಳ್ಳವರಾಗುತ್ತಾರೆಯೋ ಆ ಸೈನ್ಯಕ್ಕೆ ನಿಶ್ಚಯವಾಗಿ ಜಯವುಂಟಾಗುವುದು.
ಅನ್ವೇನಾಂ ವಾಯವೋ ವಾಂತಿ ತಥೈವೇಂದ್ರಧನೂಂಷಿ ಚ |
ಅನುಪ್ಲವಂತೇ ಮೇಘಾಶ್ಚ ತಥಾದಿತ್ಯಸ್ಯ ರಶ್ಮಯಃ ||6||
ಅವರಿಗೆ ಹಿಂಭಾಗದಿಂದ ವಾಯುವು ಬೀಸುವುದು. ಕಾಮನಬಿಲ್ಲು ಹಿಂಭಾಗ- ದಲ್ಲಿರುವುದು. ಮೇಘಗಳು ಮತ್ತು ಸೂರ್ಯರಶ್ಮಿಗಳು ಅವರನ್ನು ಹಿಂಬಾಲಿ- ಸುವುವು.
ಗೋಮಾಯವಶ್ಚಾನುಲೋಮಾ ವಡಾ ಗೃಧ್ರಾಶ್ಚ ಸರ್ವಶಃ |
ಆಚರೇಯುರ್ಯದಾ ಸೇನಾಂ ತದಾ ಸಿದ್ಧಿರನುತ್ತಮಾ ||7||
ನರಿಗಳು, ಬಕಗಳು, ಹದ್ದುಗಳು ಎಲ್ಲವೂ ಅನುಕೂಲವಾಗಿದ್ದು ಸೈನ್ಯದ ಮೇಲೆ ತಿರುಗಾಡುವವು. ಆಗ ಒಳ್ಳೆಯ ಸಿದ್ಧಿಯುಂಟಾಗುವುದು.

ಪ್ರಸನ್ನಭಾಃ ಪಾವಕ ಊರ್ಧ್ವರಶ್ಮಿಃ
ಪ್ರದಕ್ಷಿಣಾವರ್ತಶಿಖೋ ವಿಧೂಮಃ |
ಪುಣ್ಯಾ ಗಂಧಾಶ್ಚಾಹುತೀನಾಂ ಪ್ರವಾಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ||8||
ಅಗ್ನಿಯ ಕಾಂತಿಯು ಪ್ರಸನ್ನವಾಗಿದ್ದು, ಊರ್ಧ್ವಕಿರಣಗಳನ್ನು ಹೊಂದಿದ್ದು, ಪ್ರದಕ್ಷಿಣಾಕಾರದ ದ್ವಾರಗಳನ್ನು ಹೊಂದಿ ಧೂಮರಹಿತವಾಗಿರುತ್ತದೆ. ಆಹುತಿಗಳ ದಿವ್ಯಗಂಧವು ಬೀಸಿ ಬರುತ್ತದೆ. ಇದು ಮುಂದೆ ಉಂಟಾಗಲಿರುವ ಜಯದ ಸೂಚನೆ ಎಂದು ಹೇಳುತ್ತಾರೆ.
ಗಂಭೀರಶಬ್ದಾಶ್ಚ ಮಹಾಸ್ವನಾಶ್ಚ
ಶಂಖಾಶ್ಚ ಭೇರ್ಯಶ್ಚ ನದಂತಿ ಯತ್ರ |
ಯುಯುತ್ಸವಃ ಸಂಪ್ರತೀತಾ ಭವಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ||9||
ಶಂಖಭೇರಿಗಳು ಗಂಭೀರವಾದ ಮತ್ತು ದೊಡ್ಡದಾದ ಶಬ್ದವನ್ನುಂಟು- ಮಾಡುತ್ತವೆ. ಯೋಧರು ಯುದ್ಧಮಾಡುವ ಆಸೆಯನ್ನು ಹೊಂದಿ ಸಂತೋಷದಿಂದ ಕೂಡಿರುತ್ತಾರೆ. ಇದು ಮುಂದೆ ಉಂಟಾಗಲಿರುವ ಜಯದ ಲಕ್ಷಣವೆಂದು ಹೇಳು- ತ್ತಾರೆ.
ಇಷ್ಟಾ ಮೃಗಾಃ ಪೃಷ್ಠತೋ ವಾಮತಶ್ಚ
ಸಂಪ್ರಸ್ಥಿತಾನಾಂ ಚ ಗಮಿಷ್ಯತಾಂ ಚ |
ಜಿಘಾಂಸತಾಂ ದಕ್ಷಿಣಾಃ ಸಿದ್ಧಿಮಾಹು-
ರ್ಯೇ ತ್ವಗ್ರತಸ್ತೇ ಪ್ರತಿಷೇಧಯಂತಿ ||10||
ಯುದ್ಧಕ್ಕೆ ಹೊರಡುವುದಕ್ಕಿಂತ ಮುಂಚೆ ಅಥವಾ ಹೊರಟಮೇಲೆ ಇಷ್ಟವಾದ ಮೃಗಗಳು ಹಿಂದಿನಿಂದಲೂ ಮತ್ತು ಎಡಗಡೆಯಿಂದಲೂ ಬರುತ್ತವೆ. ಯುದ್ಧವನ್ನು ಮಾಡುವಾಗ ಬಲಭಾಗದಲ್ಲಿ ಬಂದರೆ ಅದರಿಂದ ಜಯಸಿದ್ಧಿಯನ್ನು ಹೇಳುತ್ತಾರೆ. ಮುಂಭಾಗದಲ್ಲಿ ಬರುವ ಮೃಗಗಳು ಜಯವನ್ನು ಪ್ರತಿಷೇಧಿಸುತ್ತವೆ.

ಮಂಗಲ್ಯಶಬ್ದಾಃ ಶಕುನಾ ವದಂತಿ
ಹಂಸಾಃ ಕ್ರೌಂಚಾ ಶತಪತ್ರಾಶ್ಚ ಭಾಸಾಃ |
ಹೃಷ್ಟಾ ಯೋಧಾಃ ಸತ್ತ್ವವಂತೋ ಭವಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ॥11॥
ಹಂಸ, ಕ್ರೌಂಚ, ಶತಪತ್ರ (ಮರಕುಟುಕನ ಹಕ್ಕಿ), ಭಾಸಪಕ್ಷಿಗಳು ಮಂಗಳ- ಶಬ್ದವನ್ನು ಉಚ್ಛರಿಸುತ್ತವೆ. ಸಂತೋಷದಿಂದ ಕೂಡಿದ ಯೋಧರು ಧೈರ್ಯಶಾಲಿ- ಗಳಾಗಿರುತ್ತಾರೆ. ಇದು ಮುಂದೆ ಉಂಟಾಗಲಿರುವ ಜಯದ ಸೂಚನೆಯೆಂದು ಹೇಳುತ್ತಾರೆ.
ಶಸ್ತ್ರೈಃ ಪತ್ರೈಃ ಕವಚೈಃ ಕೇತುಭಿಶ್ಚ
ಸುಭಾನುಭಿರ್ಮುಖವರ್ಣೈಶ್ಚ ಯೂನಾಮ್ |
ಭ್ರಾಜಿಷ್ಮತೀ ದುಷ್ಪ್ರತೀಪ್ರೇಕ್ಷಣೀಯಾ
ಯೇಷಾಂ ಚಮೂಸ್ತೇಽಭಿಭವಂತಿ ಶತ್ರೂನ್ ॥12॥
ಯಾರ ಸೈನ್ಯದಲ್ಲಿ ಶಸ್ತ್ರಗಳು, ವಾಹನಗಳು, ಕವಚಗಳು, ಧ್ವಜಗಳು ಮತ್ತು ಯುವಕರ ಮುಖವರ್ಣವು ಪ್ರಕಾಶಮಾನವಾಗಿರುತ್ತವೆಯೋ; ಶತ್ರುಗಳಿಗೆ ನೋಡಲು ಅಸಾಧ್ಯವಾಗಿರುತ್ತವೆಯೋ ಅಂತಹ ಸೈನ್ಯವು ಶತ್ರುಗಳನ್ನು ಪರಾಭವ- ಗೊಳಿಸುತ್ತದೆ.
ಶುಶ್ರೂಷವಶ್ಚಾನಭಿಮಾನಿನಶ್ಚ
ಪರಸ್ಪರಂ ಸೌಹೃದಮಾಸ್ಥಿತಾಶ್ಚ |
ಯೇಷಾಂ ಯೋಧಾಃ ಶೌಚಮನುಷ್ಠಿತಾಶ್ಚ
ಜಯಸ್ಯೈತದ್ ಭಾವಿನೋ ರೂಪಮಾಹುಃ ॥13॥
ಯಾರ ಯೋಧರು ಪರಸ್ಪರ ಮಾತನ್ನು ಕೇಳುವವರೋ, ನಿರಹಂಕಾರಿಗಳೋ, ಪರಸ್ಪರವಾಗಿ ಸ್ನೇಹದಿಂದಿರುತ್ತಾರೆಯೋ, ಶೌಚಾನುಷ್ಠಾನಪರರೋ ಅದು ಮುಂದೆ ಬರಲಿರುವ ಜಯದ ಸೂಚನೆಯೆಂದು ಹೇಳುತ್ತಾರೆ.
ಶಬ್ದಾಃ ಸ್ಪರ್ಶಾಸ್ತಥಾ ಗಂಧಾ ವಿಚರಂತಿ ಮನಃಪ್ರಿಯಾಃ |
ಧೈರ್ಯಂ ಚಾವಿಶತೇ ಯೋಧಾನ್ ವಿಜಯಸ್ಯ ಮುಖಂ ತು ತತ್ ॥14॥
ಮನಃಪ್ರಿಯವಾದ ಶಬ್ದಸ್ಪರ್ಶಗಂಧಗಳು ಎಲ್ಲೆಡೆಯೂ ಸಂಚರಿಸುತ್ತವೆ. ಯೋಧರಲ್ಲಿ ಧೈರ್ಯವು ಹೆಚ್ಚುತ್ತದೆ. ಇದು ವಿಜಯದ ಮುನ್ಸೂಚನೆ.
ಶಬ್ದೋ ವಾಮೇ ಪ್ರವಿಷ್ಟಸ್ಯ ದಕ್ಷಿಣಃ ಪ್ರವಿವಿಕ್ಷತಃ |
ಪಶ್ಚಾತ್ ಸಂಬೋಧಯತ್ಯರ್ಥಂ ಪುರಸ್ತಾತ್ ಪ್ರತಿಷೇಧತಿ ॥15॥
ರಣಭೂಮಿಯನ್ನು ಪ್ರವೇಶಿಸಲು ಬಯಸುವವನಿಗೆ ಬಲಭಾಗದಲ್ಲಿ, ರಣರಂಗವನ್ನು ಪ್ರವೇಶಿಸಿದವನಿಗೆ ಎಡಭಾಗದಲ್ಲಿ ಮತ್ತು ಯುದ್ಧಮಾಡುವವನಿಗೆ ಹಿಂಬದಿಯಿಂದ ಬರುವ ಶಬ್ದಗಳು ಜಯಸಿದ್ಧಿಯನ್ನು ಸೂಚಿಸುತ್ತವೆ. ಮುಂದಿನಿಂದ ಬರುವ ಶಬ್ದಗಳು ಜಯವನ್ನು ಪ್ರತಿಷೇಧಿಸುತ್ತವೆ.
ಸಂಭೃತ್ಯ ಮಹತೀಂ ಸೇನಾಂ ಚತುರಂಗಾಂ ಯುಧಿಷ್ಠಿರಃ |
ಸಾಮ್ನೈವಾವರ್ತನೇ ಪೂರ್ವಂ ಪ್ರಯತೇಥಾಸ್ತತೋ ಯುಧಿ ॥16॥
ಎಲೈ ಯುಧಿಷ್ಠಿರನೇ! ದೊಡ್ಡದಾದ ಚತುರಂಗಸೈನ್ಯವನ್ನು ಜಮಾಯಿಸಿ ಸಾಮೋಪಾಯದಿಂದಲೇ ಮೊದಲು ಪ್ರವೃತ್ತಿಯನ್ನು ಮಾಡಬೇಕು. ಅದು ಫಲಿಸ- ದಿದ್ದರೆ ಕೊನೆಯಲ್ಲಿ ಯುದ್ಧವನ್ನು ಮಾಡಬೇಕು.
ಜಘನ್ಯ ಏಷ ವಿಜಯೋ ಯದ್ ಯುದ್ಧಂ ನಾಮ ಭಾರತ |
ಯಾದೃಚ್ಛಿಕೋ ಯುಧಿ ಜಯೋ ದೈವೋ ವೇತಿ ವಿಚಾರಣಮ್ ॥17॥
ಎಲೈ ಭಾರತನೇ! ಯುದ್ಧದಿಂದ ಸಂಪಾದಿಸಿದ ವಿಜಯವು ಹೀನವಾದುದು. ಯುದ್ಧದಲ್ಲಿ ಜಯವು ಆಕಸ್ಮಿಕವೋ ಅಥವಾ ದೈವವನ್ನು ಅವಲಂಬಿಸಿದೆಯೋ ಎಂದು ವಿಚಾರಮಾಡಬೇಕಾಗುವುದು.
ಅಪಾಮಿವ ಮಹಾವೇಗಸ್ತ್ರಸ್ತಾ ಮೃಗಗಣಾ ಇವ |
ದುರ್ನಿವಾರ್ಯತಮಾ ಚೈವ ಪ್ರಭಗ್ನಾ ಮಹತೀ ಚಮೂಃ ॥18॥
ಭಗ್ನಗೊಂಡ ದೊಡ್ಡ ಸೈನ್ಯವು ದೊಡ್ಡ ಜಲಪ್ರವಾಹದಂತೆ ಅಥವಾ ಹೆದರಿದ ಮೃಗಗಣಗಳಂತೆ ತಡೆದು ನಿಲ್ಲಿಸಲು ಅಸಾಧ್ಯವಾದುದು.
ಭಗ್ನಾ ಇತ್ಯೇವ ಭಜ್ಯಂತೇ ವಿದ್ವಾಂಸೋಽಪಿ ನ ಕಾರಣಮ್ |
ಉದಾರಸಾರಾ ಮಹತೀ ರುರುಸಂಘೋಪಮಾ ಚಮೂಃ ॥19॥
ಸೈನ್ಯವು ಭಗ್ನವಾಗಿದೆ ಎಂಬ ವಾರ್ತೆಯಿಂದಲೇ ಪುನಃ ಭಗ್ನವಾಗುತ್ತದೆ. ಶ್ರೇಷ್ಠವಾದ ಬಲವುಳ್ಳ ದೊಡ್ಡದಾದ ಸೈನ್ಯವೂ ಸಹ ರುರುಗಳ ಸಮೂಹದಂತೆ ಭಗ್ನವಾಗುತ್ತದೆ. ಯುದ್ಧಕುಶಲರೂ ಸಹ ಅದನ್ನು ತಡೆದು ನಿಲ್ಲಿಸಲು ಸಾಧ್ಯವಿಲ್ಲ.
ಪರಸ್ಪರಜ್ಞಾಃ ಸಂಹೃಷ್ಟಾಸ್ತ್ಯಕ್ತಪ್ರಾಣಾಃ ಸುನಿಶ್ಚಯಾಃ |
ಅಪಿ ಪಂಚಾಶತಿಃ ಶೂರಾ ಮೃದ್ನಂತಿ ಪರವಾಹಿನೀಮ್ ॥20॥
ಪರಸ್ಪರ ಮನಸ್ಸನ್ನು ತಿಳಿದ ಸಂತೋಷಗೊಂಡ, ತಮ್ಮ ಪ್ರಾಣವನ್ನು ತ್ಯಜಿಸಲು ಸಿದ್ಧರಾದ, ಯುದ್ಧದಲ್ಲಿ ದೃಢನಿಶ್ಚಯವುಳ್ಳ ಐವತ್ತು ಮಂದಿ ಶೂರರು ದೊಡ್ಡ ಶತ್ರುಸೇನೆಯನ್ನು ವಿನಾಶಗೊಳಿಸಬಲ್ಲರು.
ಅಥವಾ ಪಂಚ ಷಟ್ ಸಪ್ತ ಸಹಿತಾಃ ಕೃತನಿಶ್ಚಯಾಃ |
ಕುಲೀನಾಃ ಪೂಜಿತಾಃ ಸಮ್ಯಗ್ ವಿಜಯಂತೀಹ ಶಾತ್ರವಾನ್ ॥21॥

ಅಥವಾ ದೃಢನಿರ್ಧಾರವುಳ್ಳ, ಒಗ್ಗಟ್ಟಿನಿಂದ ಕೂಡಿದ, ಸತ್ಕುಲಪ್ರಸೂತರಾದ, ಸತ್ಕೃತರಾದ ಐದು, ಆರು, ಏಳು ವೀರರು ಶತ್ರುಗಳನ್ನು ಚೆನ್ನಾಗಿ ಸೋಲಿಸಬಲ್ಲರು.
ಸನ್ನಿಪಾತೋ ನ ಮಂತವ್ಯಃ ಶಕ್ಯೇ ಸತಿ ಕಥಂಚನ |
ಸಾಂತ್ವಭೇದಪ್ರದಾನಾನಾಂ ಯುದ್ಧಮುತ್ತರಮುಚ್ಯತೇ ॥22॥
ಸಾಮಭೇದದಾನಗಳಿಂದ ಅರ್ಥವನ್ನು ಸಾಧಿಸಲು ಸಾಧ್ಯವಾದರೆ ಸಂಘರ್ಷ- ವನ್ನು ಮಾಡಬೇಕೆಂದು ಯಾವರೀತಿಯಿಂದಲೂ ಯೋಚಿಸಬಾರದು. ಯುದ್ಧವು ಕೊನೆಯ ಉಪಾಯವೆಂದು ಹೇಳಲ್ಪಡುತ್ತದೆ.
ಸಂಸರ್ಪಣಾದ್ಧಿ ಸೇನಾಯಾ ಭಯಂ ಭೀರೂನ್ ಪ್ರಬಾಧತೇ |
ವಜ್ರಾದಿವ ಪ್ರಜ್ವಲಿತಾದಿಯಂ ಕ್ವ ನು ಪತಿಷ್ಯತಿ ॥23॥
ಸೈನ್ಯದ ಚಲನೆಯಿಂದ ಭೀರುಗಳಿಗೆ ಜ್ವಲಿಸುವ ವಜ್ರಾಯುಧದಿಂದ ಉಂಟಾ- ಗುವಂತೆ ಇದು ಎಲ್ಲಿ ಎರಗುವುದೋ ಎಂಬ ಭಯವು ಕಾಡುತ್ತದೆ.
ಅಭಿಪ್ರಯತಾಂ ಸಮಿತಿಂ ಜ್ಞಾತ್ವಾ ಯೇ ಪ್ರತಿಯಾಂತ್ಯಥ |
ತೇಷಾಂ ಸ್ಯಂದಂತಿ ಗಾತ್ರಾಣಿ ಯೋಧಾನಾಂ ವಿಷಯಸ್ಯ ಚ ॥24॥
ಸೈನ್ಯವು ಹೊರಟಿದೆಯೆಂದು ತಿಳಿದು ಯಾವ ಶತ್ರುಗಳು ಎದುರಾಗಿ ಬರು- ತ್ತಾರೆಯೋ ಅವರ ಯೋಧರ ಶರೀರವೂ ಮತ್ತು ದೇಶವೂ ಸಹ ನಡುಗುತ್ತದೆ.
ವಿಜಯಾದ್ ವ್ಯಥತೇ ರಾಜನ್ ಸರ್ವಃ ಸಸ್ಥಾಸ್ನುಜಂಗಮಃ |
ಶಸ್ತ್ರಪ್ರತಾಪತಪ್ತಾನಾಂ ಮಜ್ಜಾ ಸೀದತಿ ದೇಹಿನಾಮ್ ॥25॥
ಎಲೈ ರಾಜನೇ! ವಿರುದ್ಧಪಕ್ಷದ ಜಯದಿಂದ ಸ್ಥಾವರಜಂಗಮಾತ್ಮಕವಾದ ಪ್ರಾಣಿಗಳಿಗೆ ವ್ಯಥೆಯುಂಟಾಗುತ್ತದೆ. ಶಸ್ತ್ರಪ್ರತಾಪಕ್ಕೆ ಸಿಲುಕಿದವರ ಮಜ್ಜೆಯು ನಾಶವನ್ನು ಹೊಂದುತ್ತದೆ. (ಲಕ್ಷ್ಯಾಲಂಕಾರ)
ತೇಷಾಂ ಸಾಂತ್ವಂ ಕ್ರೂರಮಿಶ್ರಂ ಪ್ರಣೇತವ್ಯಂ ಪುನಃಪುನಃ |
ಸಂಪೀಡ್ಯಮಾನಾ ಹಿ ಪರೇ ಯೋಗಮಾಯಾಂತಿ ಸರ್ವಶಃ ॥26॥
ಅವರಿಗೆ ಪುನಃ ಪುನಃ ಕ್ರೂರಮಿಶ್ರಿತವಾದ ಸಾಂತ್ವವಚನವನ್ನು ಹೇಳಬೇಕು. ಹಾಗಲ್ಲದೇ ಹೆಚ್ಚಾಗಿ ಪೀಡಿಸಿದರೆ ಶತ್ರುಗಳು ಇವನ ಬೇರೆಯ ಶತ್ರುಗಳ ಜೊತೆ- ಯಲ್ಲಿ ಸೇರುತ್ತಾರೆ.
ಆಂತರಾಣಾಂ ಚ ಭೇದಾರ್ಥಂ ಚಾರಾನಭ್ಯವಚಾರಯೇತ್ |
ಯಶ್ಚ ತಸ್ಮಾತ್ ಪರೋ ರಾಜಾ ತೇನ ಸಂಧಿಃ ಪ್ರಶಸ್ಯತೇ ॥27॥
ಶತ್ರುಪಕ್ಷದ ಒಳಗಿನ ಜನರ ಭೇದಾರ್ಥವಾಗಿ ಗೂಢಚಾರರನ್ನು ನಿಯಮಿಸ- ಬೇಕು. ತನಗಿಂತ ಬಲಿಷ್ಠನಾದ ರಾಜನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳು- ವುದು ಪ್ರಶಸ್ತವಾದುದು.
ನಹಿ ತಸ್ಯಾನ್ಯಥಾ ಪೀಡಾ ಶಕ್ಯಾ ಕರ್ತುಂ ತಥಾವಿಧಾ |
ಯಥಾ ಸಾರ್ಧಮಮಿತ್ರೇಣ ಸರ್ವತಃ ಪ್ರತಿಬಾಧನಮ್ ॥28॥
ಅವನ ಶತ್ರುಗಳ ಜೊತೆಯಲ್ಲಿ ಸೇರಿ ಅವನನ್ನು ಪೀಡಿಸುವುದನ್ನು ಬಿಟ್ಟು, ಬೇರೆಯ ವಿಧಾನದಿಂದ ಅವನನ್ನು ಪೀಡಿಸಲು ಸಾಧ್ಯವಿಲ್ಲ.
ಕ್ಷಮಾ ವೈ ಸಾಧ್ವಮಾಯಾನಾಂ ನಹಿ ಸಾಧ್ವಕ್ಷಮಾ ಸದಾ |
ಕ್ಷಮಾಯಾಶ್ಚಾಕ್ಷಮಾಯಾಶ್ಚ ವಿದ್ಧಿ ಪಾರ್ಥ ಪ್ರಯೋಜನಮ್ ॥29॥
ಸಾಧುವಿಗೆ ಕ್ಷಮೆಯನ್ನು ತೋರಿಸದೆ ಯಾವಾಗಲೂ ಕ್ಷಮಿಸದಿರುವುದು ಸಾಧುವಲ್ಲ. ಎಲೈ ಪಾರ್ಥನೇ! ಕ್ಷಮೆ ಮತ್ತು ಅಕ್ಷಮೆಗಳ ಪ್ರಯೋಜನವನ್ನು ನೀನು ತಿಳಿಯಬೇಕು.
ವಿಜಿತ್ಯ ಕ್ಷಮಮಾಣಸ್ಯ ಯಶೋ ರಾಜ್ಞೋ ವಿವರ್ಧತೇ |
ಮಹಾಪರಾಧೇ ಹ್ಯಪ್ಯಸ್ಮಿನ್ ವಿಶ್ವಸಂತ್ಯಪಿ ಶತ್ರವಃ ॥30॥
ಶತ್ರುವನ್ನು ಜಯಿಸಿ ಕ್ಷಮಿಸುವ ರಾಜನ ಯಶಸ್ಸು ಹೆಚ್ಚುತ್ತದೆ. ಅವನು ಮಹಾ- ಪರಾಧವನ್ನು ಮಾಡಿದ್ದರೂ ಶತ್ರುಗಳು ಅವನಲ್ಲಿ ವಿಶ್ವಾಸವನ್ನು ಮಾಡುತ್ತಾರೆ.
ಮನ್ಯಂತೇ ಕರ್ಶಯಿತ್ವಾ ತು ಕ್ಷಮಾ ಸಾಧ್ವೀತಿ ಶಾಂಬರಾಃ |
ಅಸಂತಪ್ತಂ ತು ಯದ್ ದಾರು ಪ್ರತ್ಯೇತಿ ಪ್ರಕೃತಿಂ ಪುನಃ ॥31॥
ಶಾಂಬರರು ಮೊದಲು ದುಃಖಕ್ಕೆ ಈಡು ಮಾಡಿ ಅನಂತರ ಕ್ಷಮಿಸುವುದು ಒಳ್ಳೆಯದು ಎಂದು ತಿಳಿಯುತ್ತಾರೆ. ಕಾಯಿಸದಿದ್ದ ಮರವು ಮೊದಲಿನ ಸ್ಥಿತಿಗೆ ಬರುತ್ತದೆ. (ಎಂದು ಅವರ ವಾದ)
ನೈತತ್ ಪ್ರಶಂಸಂತ್ಯಾಚಾರ್ಯಾ ನ ಚೈತತ್ ಸಾಧು ದರ್ಶನಮ್ |
ಅಕ್ರೋಧೇನಾವಿನಾಶೇನ ನಿಯಂತವ್ಯಾಃ ಸ್ವಪುತ್ರವತ್ ॥32॥
ಆದರೆ ಆಚಾರ್ಯರು ಇದನ್ನು ಪ್ರಶಂಸಿಸುವುದಿಲ್ಲ. ಇದು ಸರಿಯಾದ ನೀತಿ- ಯಲ್ಲ. ವಿನಾಶವನ್ನು ಮಾಡದೇ ಕ್ರೋಧವನ್ನು ಮಾಡದೇ ಶತ್ರುಗಳನ್ನು ತನ್ನ ಮಕ್ಕ- ಳಂತೆ ನಿಯಂತ್ರಿಸಬೇಕು.
ದ್ವೇಷ್ಯೋ ಭವತಿ ಭೂತಾನಾಮುಗ್ರೋ ರಾಜಾ ಯುಧಿಷ್ಠಿರ |
ಮೃದುಮಪ್ಯವಮನ್ಯಂತೇ ತಸ್ಮಾದುಭಯಭಾಗ್ ಭವೇತ್ ॥33॥
ಎಲೈ ಯುಧಿಷ್ಠಿರನೇ! ಉಗ್ರನಾದ ರಾಜನು ಎಲ್ಲರಿಗೂ ದ್ವೇಷವಿಷಯನಾಗು- ತ್ತಾನೆ. ಮೃದುವು ಅವಮಾನಿತವಾಗುತ್ತಾನೆ. ಆದ್ದರಿಂದ ಉಗ್ರತೆಯನ್ನು, ಮಾರ್ದ- ವವನ್ನು ಎರಡನ್ನೂ ಹೊಂದಬೇಕು.

ಪ್ರಹರಿಷ್ಯನ್ ಪ್ರಿಯಂ ಬ್ರೂಯಾತ್ ಪ್ರಹರನ್ನಪಿ ಭಾರತ |
ಪ್ರಹೃತ್ಯ ಚ ಪ್ರಿಯಂ ಬ್ರೂಯಾಚ್ಚೋಚನ್ನಿವ ರುದನ್ನಿವ ॥34॥
ಮುಂದೆ ಪ್ರಹಾರವನ್ನು ಮಾಡುವುದಿದ್ದರೂ ಪ್ರಿಯವನ್ನು ಮಾತನಾಡಬೇಕು. ಪ್ರಹಾರವನ್ನು ಮಾಡುತ್ತಾ ಪ್ರಿಯವನ್ನು ಮಾತನಾಡಬೇಕು. ಪ್ರಹಾರವನ್ನು ಮಾಡುತ್ತಾ ಶೋಕಿಸುವವನಂತೆ ಪ್ರಿಯವನ್ನು ಮಾತನಾಡಬೇಕು.
ನ ಮೇ ಪ್ರಿಯಂ ಯನ್ನಿಹತಾಃ ಸಂಗ್ರಾಮೇ ಮಾಮಕೈರ್ನರೈಃ |
ನ ಚ ಕುರ್ವಂತಿ ಮೇ ವಾಕ್ಯಮುಚ್ಯಮಾನಂ ಪುನಃ ಪುನಃ ॥35॥
ಅಹೋ ಜೀವಿತಮಾಕಾಂಕ್ಷೇನ್ನೇದೃಶೋ ವಧಮರ್ಹತಿ |
ಸುದುರ್ಲಭಾಃ ಸುಪುರುಷಾಃ ಸಂಗ್ರಾಮೇಷ್ವಪಲಾಯಿನಃ ॥36॥
ಕೃತಂ ಮಮಾಪ್ರಿಯಂ ತೇನ ಯೇನಾಯಂ ನಿಹತೋ ಮೃಧೇ |
ಇತಿ ವಾಚಾ ವದನ್ ಹಂತ್ರೂನ್ ಪೂಜಯೇತ ರಹೋಗತಃ ॥37॥
``ಶತ್ರುಪಕ್ಷದ ಈ ಯೋಧರು ನನ್ನವರಿಂದ ಯುದ್ಧದಲ್ಲಿ ಹತರಾಗುವುದು ನನಗೆ ಪ್ರಿಯವಲ್ಲ. ನನ್ನ ಯೋಧರು ಪುನಃ ಪುನಃ ನಾನು ಹೇಳಿದರೂ ನನ್ನ ಮಾತನ್ನು ಕೇಳುವುದಿಲ್ಲ. ಅಯ್ಯೋ ಇಂತಹವರು ಜೀವಿಸಿರಬೇಕು. ಇಂತಹವರು ವಧೆಗೆ ಯೋಗ್ಯರಲ್ಲ. ಯುದ್ಧದಲ್ಲಿ ಹಿಮ್ಮೆಟ್ಟದಿರುವ ಸತ್ಪುರುಷರು ಬಹಳ ದುರ್ಲಭ- ರಾದವರು. ಯಾವ ನನ್ನ ಯೋಧನು ಇವನನ್ನು ಕೊಂದಿದ್ದಾನೆಯೋ ಅವನು ನನಗೆ ಅಪ್ರಿಯವನ್ನು ಮಾಡಿದ್ದಾನೆ'' ಹೀಗೆ ಮಾತನಾಡುತ್ತಾ ವಧೆಯನ್ನು ಮಾಡಿದವರನ್ನು ರಹಸ್ಯದಲ್ಲಿ ಸತ್ಕರಿಸಬೇಕು.
ಹಂತ್ರೂಣಾಂ ಚ ಹತಾನಾಂ ಚ ಪೂಜಾಂ ಕುರ್ಯಾದ್ ಯಥಾರ್ಥತಃ |
ಕ್ರೋಶೇದ್ ಬಾಹುಂ ಪ್ರಗೃಹ್ಯಾಪಿ ಚಿಕೀರ್ಷನ್ ಜನಸಂಗ್ರಹಮ್ ॥38॥
ವಧೆ ಮಾಡಿದವರನ್ನು ಮತ್ತು ಮೃತರಾದವರನ್ನು ಯಥಾಯೋಗ್ಯವಾಗಿ ಪೂಜಿಸಬೇಕು. ಜನಸಂಗ್ರಹವನ್ನು ಮಾಡುವ ದೃಷ್ಟಿಯಿಂದ ಬಾಹುಗಳನ್ನು ಎತ್ತಿ ಕಿರುಚಬೇಕು.
ಏವಂ ಸರ್ವಾಸ್ವವಸ್ಥಾಸು ಸಾಂತ್ವಪೂರ್ವಂ ಸಮಾಚರನ್ |
ಪ್ರಿಯೋ ಭವತಿ ಭೂತಾನಾಂ ಧರ್ಮಜ್ಞೋ ವೀತಭೀರ್ನೃಪಃ ॥39॥
ಹೀಗೆ ಎಲ್ಲ ಅವಸ್ಥೆಗಳಲ್ಲಿಯೂ ಸಾಂತ್ವಪೂರ್ವಕವಾಗಿಯೇ ವರ್ತಿಸುವ ಧರ್ಮಜ್ಞನಾದ ರಾಜನು ಎಲ್ಲರಿಗೂ ಪ್ರಿಯನೂ ಮತ್ತು ವೀತಭಯನೂ ಆಗುವನು.
ವಿಶ್ವಾಸಂ ಚಾತ್ರ ಗಚ್ಛಂತಿ ಸರ್ವಭೂತಾನಿ ಭಾರತ |
ವಿಶ್ವಸ್ತಃ ಶಕ್ಯತೇ ಭೋಕ್ತುಂ ಯಥಾಕಾಮಮುಪಸ್ಥಿತಃ ॥40॥
ಎಲೈ ಭಾರತನೇ! ಅಂತಹ ರಾಜನಲ್ಲಿ ಎಲ್ಲರೂ ವಿಶ್ವಾಸವನ್ನು ಮಾಡುತ್ತಾರೆ. ಪ್ರಜೆಗಳಲ್ಲಿ ವಿಶ್ವಾಸವನ್ನು ಹೊಂದಿದ ರಾಜನು ಭೂಮಿಯನ್ನು ತನ್ನ ಇಚ್ಛೆಗೆ ಅನುಗುಣವಾಗಿ ಭೋಗಿಸಲು ಸಮರ್ಥನಾಗುತ್ತಾನೆ.
ತಸ್ಮಾದ್ ವಿಶ್ವಾಸಯೇದ್ ರಾಜಾ ಸರ್ವಭೂತಾನ್ಯಮಾಯಯಾ |
ಸರ್ವತಃ ಪರಿರಕ್ಷೇಚ್ಚ ಯೋ ಮಹೀಂ ಭೋಕ್ತುಮಿಚ್ಛತಿ ॥41॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರಧಿಕಶತತಮೋಽಧ್ಯಾಯಃ ॥104॥
ಆದ್ದರಿಂದ ಯಾವ ರಾಜನು ಭೂಮಿಯನ್ನು ಭೋಗಿಸಲು ಇಚ್ಛಿಸುತ್ತಾನೆಯೋ ಅವನು ತನ್ನನ್ನು ಎಲ್ಲ ರೀತಿಯಲ್ಲಿಯೂ ರಕ್ಷಿಸಿಕೊಂಡು ಸರ್ವಜೀವರನ್ನು ನಿಷ್ಕಪಟ- ವೃತ್ತಿಯಿಂದ ತನ್ನಲ್ಲಿ ವಿಶ್ವಾಸ ಹೊಂದುವಂತೆ ಮಾಡಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 104ನೆಯ ಅಧ್ಯಾಯವು ಮುಗಿಯಿತು.
0
105. ನೂರ ಐದನೆಯ ಅಧ್ಯಾಯ
ಶತ್ರುಜಯಸಂಪಾದಕ ಇಂದ್ರಬೃಹಸ್ಪತಿಸಂವಾದಾನುವಾದ
ಯುಧಿಷ್ಠಿರಃ
ಕಥಂ ಮೃದೌ ಕಥಂ ತೀಕ್ಷ್ಣೇ ಮಹಾಪಕ್ಷೇ ಚ ಪಾರ್ಥಿವ |
ಅರೌ ವರ್ತೇತ ನೃಪತಿಸ್ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ರಾಜನೇ! ಪಿತಾಮಹನೇ! ಮೃದುವಾದ ತೀಕ್ಷ್ಣವಾದ ಮಹಾಸೈನ್ಯವುಳ್ಳ ಶತ್ರುವಿನ ವಿಷಯದಲ್ಲಿ ರಾಜನು ಹೇಗೆ ನಡೆದುಕೊಳ್ಳಬೇಕೆಂದು ನನಗೆ ಹೇಳು
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತೇಶ್ಚ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಇಂದ್ರನಿಗೂ ಮತ್ತು ಬೃಹಸ್ಪತಿಗೂ ನಡೆದ ಸಂವಾದರೂಪವಾದ ಪ್ರಾಚೀನವಾದ ಈ ಇತಿಹಾಸ- ವನ್ನು ಹೇಳುತ್ತಾರೆ.
ಬೃಹಸ್ಪತಿಂ ದೇವಪತಿರಭಿವಾದ್ಯ ಕೃತಾಂಜಲಿಃ |
ಉಪಸಂಗಮ್ಯ ಪಪ್ರಚ್ಛ ವಾಸವಃ ಪರವೀರಹಾ ॥3॥
ದೇವಪತಿಯೂ ಪರವೀರಘಾತಕನೂ ಆದ ಇಂದ್ರನು ಬೃಹಸ್ಪತಿಗಳನ್ನು ಸಮೀ- ಪಿಸಿ ಕೈಮುಗಿದು ಪ್ರಶ್ನೆ ಮಾಡಿದನು.
ಅಹಿತೇಷು ಕಥಂ ಬ್ರಹ್ಮನ್ ವರ್ತಯೇಯಮತಂದ್ರಿತಃ |

ಅಸಮುಚ್ಛಿದ್ಯ ಚೈವೇನಾನ್ ನಿಯಚ್ಛೇಯಮುಪಾಯತಃ ॥4॥
ಎಲೈ ಬ್ರಾಹ್ಮಣರೇ! ಶತ್ರುಗಳ ವಿಷಯದಲ್ಲಿ ಎಚ್ಚರಿಕೆಯಿಂದ ಹೇಗೆ ನಡೆದು- ಕೊಳ್ಳಲಿ? ಅವರನ್ನು ಸಂಪೂರ್ಣವಾಗಿ ನಾಶಮಾಡದೇ ಉಪಾಯದಿಂದ ನಿಯಂತ್ರಿಸುವ ಬಗೆ ಹೇಗೆ?
ಸೇನಯೋರ್ವ್ಯತಿಷಂಗೇಣ ಜಯಃ ಸಾಧಾರಣೋ ಭವೇತ್ |
ಕಿಂ ಕುರ್ವಾಣಂ ನ ಮಾಂ ಜಹ್ಯಾಜ್ಜ್ವಲಿತಾ ಶ್ರೀಃ ಪ್ರತಾಪಿನೀ ॥5॥
ಸೇನಾಕಾರ್ಯಾಚರಣೆಯಿಂದ ಉಂಟಾಗುವ ಜಯವು ಉಭಯಸಾಧಾರಣ- ವಾಗಿರುತ್ತದೆ. ನಾನು ಏನನ್ನು ಮಾಡಿದರೆ ಶತ್ರುತಾಪಕವಾದ ಜ್ವಲಿಸುವ ಈ ಸಂಪತ್ತು ನನ್ನನ್ನು ಬಿಟ್ಟು ಹೋಗಲಾರದು? (ಎಂದು ಹೇಳಿದನು).
ತತೋ ಧರ್ಮಾರ್ಥಕಾಮಾನಾಂ ಕುಶಲಃ ಪ್ರತಿಮಾನವಾನ್ |
ರಾಜಧರ್ಮವಿಧಾನಜ್ಞಃ ಪ್ರತ್ಯುವಾಚ ಪುರಂದರಮ್ ॥6॥
ಆಗ ಧರ್ಮಾರ್ಥಕಾಮಗಳಲ್ಲಿ ಕುಶಲರೂ, ಪ್ರಮಾಣಜ್ಞರೂ, ರಾಜಧರ್ಮ- ವಿಧಾನಗಳನ್ನು ತಿಳಿದವರೂ ಆದ ಬೃಹಸ್ಪತಿಗಳು ಇಂದ್ರನಿಗೆ ಉತ್ತರವನ್ನು ಕೊಟ್ಟರು.
ನ ಜಾತು ಕಲಹೇನೇಚ್ಛೇನ್ನಿಯಂತುಮಪಕಾರಿಣಃ |
ಬಾಲಸಂಸೇವಿತಂ ಹ್ಯೇತದ್ ಯದಮರ್ಷೋ ಯದಕ್ಷಮಾ |
ನ ಶತ್ರುರ್ವಿವೃತಃ ಕಾರ್ಯೋ ವಧಮಸ್ಯಾಭಿಕಾಂಕ್ಷತಾ ॥7॥
ಅಪಕಾರಿಗಳನ್ನು ಎಂದೂ ಕಲಹವನ್ನು ಮಾಡಿ ನಿಯಂತ್ರಿಸಲು ಬಯಸ- ಬಾರದು. ಕ್ರೋಧ ಮತ್ತು ಅಸಹನೆ ಎಂಬುದು ಬಾಲಕರಿಂದ ಸೇವಿತವಾದ ಮಾರ್ಗ. ಶತ್ರುವಿನ ವಧೆಯನ್ನು ಅಪೇಕ್ಷಿಸುವವನು ಶತ್ರುವಿಗೆ ಅದು ತಿಳಿಯದಂತೆ ವ್ಯವಹರಿಸಬೇಕು.
ಕ್ರೋಧಂ ಬಲಮಮರ್ಷಂ ಚ ನಿಯಮ್ಯಾತ್ಮಜಮಾತ್ಮನಿ |
ಅಮಿತ್ರಮುಪಸೇವೇತ ವಿಶ್ವಸ್ತವದವಿಶ್ವಸನ್ ॥8॥
ತನ್ನಲ್ಲಿ ಉಂಟಾದ ಕ್ರೋಧ, ಅಸಹನೆಗಳನ್ನು ತನ್ನಲ್ಲಿಯೇ ನಿಯಂತ್ರಿಸಿ ಶತ್ರುವಿನಲ್ಲಿ ವಿಶ್ವಾಸ ಮಾಡದೇ ವಿಶ್ವಾಸ ಮಾಡುವವನಂತೆ ಅವನನ್ನು ಸೇವಿಸಬೇಕು.
ಪ್ರಿಯಮೇವ ವದೇನ್ನಿತ್ಯಂ ನಾಪ್ರಿಯಂ ಕಿಂಚಿದಾಚರೇತ್ |
ವಿರಮೇಚ್ಛುಷ್ಕವೈರೇಭ್ಯಃ ಕಂಠಾಯಾಸಂ ಚ ವರ್ಜಯೇತ್ ॥9॥
ಅವನಿಗೆ ಪ್ರಿಯವನ್ನೇ ಮಾತನಾಡಬೇಕು. ಅಪ್ರಿಯವಾದ ಏನನ್ನೂ ಮಾಡ- ಬಾರದು. ವ್ಯರ್ಥಕಲಹಗಳನ್ನೂ ಮತ್ತು ಕಂಠಶೋಷಣೆಗಳನ್ನೂ ವರ್ಜಿಸಬೇಕು.
ಯಥಾ ವೈತಂಸಿಕೋ ಯುಕ್ತೋ ದ್ವಿಜಾನಾಂ ಸದೃಶಸ್ವನಃ |
ತಾನ್ ದ್ವಿಜಾನ್ ಕುರುತೇ ವಶ್ಯಾಂಸ್ತಥಾ ಯುಕ್ತೋ ಮಹೀಪತಿಃ ॥10॥
ಹಕ್ಕಿಗಳನ್ನು ಹಿಡಿಯುವವನು ಹೇಗೆ ಹಕ್ಕಿಯ ಸ್ವರದಿಂದಲೇ ಕೂಡಿದವನಾಗಿ ಅವುಗಳನ್ನು ವಶಪಡಿಸಿಕೊಳ್ಳುತ್ತಾನೆಯೋ ರಾಜನು ಅದರಂತೆ ಮಾಡಬೇಕು.
ವಶಂ ಚೋಪನಯೇಚ್ಛತ್ರೂನ್ ನಿಹನ್ಯಾಚ್ಚ ಪುರಂದರ |
ನ ನಿತ್ಯಂ ಪರಿಭೂಯಾರೀನ್ ಸುಖಂ ಸ್ವಪಿತಿ ವಾಸವ |
ಜಾಗರ್ತ್ಯೇವ ಚ ದುಷ್ಟಾತ್ಮಾ ಸಂಕರೇಽಗ್ನಿರಿವೋತ್ಥಿತಃ ॥11॥
ಎಲೈ ಪುರಂದರನೇ! ಶತ್ರುಗಳನ್ನು ವಶಪಡಿಸಿಕೊಂಡು ಅನಂತರ ಕೊಲ್ಲಬೇಕು. ಎಲೈ ಇಂದ್ರನೇ! ಶತ್ರುಗಳನ್ನು ಯುದ್ಧದಲ್ಲಿ ಸೋಲಿಸಿದವನು ಎಂದೂ ಸುಖವಾಗಿ ನಿದ್ರಿಸುವುದಿಲ್ಲ. ದುಷ್ಟನಾದ ಶತ್ರುವು ತಿಪ್ಪೆಯಲ್ಲಿನ ಅಗ್ನಿಯಂತೆ ಯಾವಾಗಲೂ ಎಚ್ಚರಿಕೆಯಿಂದಿರುತ್ತಾನೆ.
ನ ಸನ್ನಿಪಾತಃ ಕರ್ತವ್ಯಃ ಸಾಮಾನ್ಯೇ ವಿಜಯೇ ಸತಿ |
ವಿಶ್ವಾಸ್ಯೈವೋಪಸನ್ನಾಮ್ಯಸ್ತೋ ವಶೇ ಕೃತ್ವಾ ರಿಪುಃ ಪ್ರಭೋ ॥12॥
ಜಯವು ಉಭಯಸಾಧಾರಣವಾಗಬಹುದಾದಾಗ ಸಂಘರ್ಷವನ್ನು ಮಾಡ- ಬಾರದು. ಎಲೈ ಪ್ರಭುವೇ! ಶತ್ರುವನ್ನು ವಿಶ್ವಾಸಗೊಳಿಸಿ ವಶಪಡಿಸಿಕೊಂಡು ಅನಂತರ ಅವನನ್ನು ಬಗ್ಗಿಸಬೇಕು.
ಸಂಪ್ರಧಾರ್ಯ ಸಹಾಮಾತ್ಯೈರ್ಮಂತ್ರವಿದ್ಭಿರ್ಮಹಾತ್ಮಭಿಃ |
ಉಪೇಕ್ಷ್ಯಮಾಣೋಽವಜ್ಞಾತೋ ಹೃದಯೇನಾಪರಾಜಿತಃ ॥13॥
ಶತ್ರುವಿನಿಂದ ಅವಮಾನಕ್ಕೆ ಒಳಗಾದರೂ, ಉಪೇಕ್ಷೆಗೆ ಒಳಗಾದರೂ ರಾಜನು ಮನಸ್ಸಿನಲ್ಲಿ ಧೈರ್ಯವನ್ನು ಕಳೆದುಕೊಳ್ಳದೇ ಅಪರಾಜಿತನಾಗಿ ಮಹಾತ್ಮರೂ, ಮಂತ್ರವೇತ್ತರೂ ಆದ ಅಮಾತ್ಯರ ಜೊತೆಯಲ್ಲಿ ಚರ್ಚೆಯನ್ನು ಮಾಡಿ ವ್ಯವಹರಿಸ- ಬೇಕು.
ಅಥಾಸ್ಯ ಪ್ರಹರೇತ್ ಕಾಲೇ ಕಿಂಚಿದ್ ವಿಚಲಿತೇ ಪದೇ |
ದಂಡಂ ಚ ದೂಷಯೇದಸ್ಯ ಪುರುಷೈರಾಪ್ತಕಾರಿಭಿಃ ॥14॥
ಅನಂತರ ಶತ್ರುವು ಒಂದು ತಪ್ಪು ಹೆಜ್ಜೆಯನ್ನು ಇಟ್ಟಾಗ, ಯೋಗ್ಯವಾದ ಆ ಕಾಲದಲ್ಲಿ ಅವನ ಮೇಲೆ ಎರಗಬೇಕು. ಆಪ್ತಕಾರಿಗಳಾದ ಭಟರಿಂದ ಅವನ ಸೈನ್ಯ- ವನ್ನು ದೂಷಿಸಬೇಕು.
ಆದಿಮಧ್ಯಾವಸಾನಜ್ಞಃ ಪ್ರಚ್ಛನ್ನಂ ಚ ವಿಚಾರಯೇತ್ |
ಬಲಾನಿ ದೂಷಯೇದಸ್ಯ ಜಾನಂಶ್ಚೈವ ಪ್ರಮಾಣತಃ ॥15॥
ಭೇದೇನೋಪಪ್ರದಾನೇನ ಸಂಸೃಜನ್ನೌಷಧೈಸ್ತಥಾ |
ನ ತ್ವೇವ ಖಲು ಸಂಸರ್ಗಂ ರೋಚಯೇದರಿಭಿಃ ಸಹ ॥16॥

ಮಾಡಬೇಕಾದ ಕಾರ್ಯದ ಆದಿ-ಮಧ್ಯಾಂತ್ಯಗಳನ್ನು ಯಾರಿಗೂ ತಿಳಿಯದಂತೆ ವಿಚಾರ ಮಾಡಬೇಕು. ಅವನ ಸೈನ್ಯದ ಪ್ರಮಾಣವನ್ನು ತಿಳಿದು ಅದನ್ನು ಭೇದೋ- ಪಾಯದಿಂದಲೂ ದಾನೋಪಾಯದಿಂದಲೂ ಔಷಧಪ್ರಯೋಗಗಳಿಂದಲೂ ದೂಷಿಸಬೇಕು. ಶತ್ರುಗಳ ಜೊತೆಯಲ್ಲಿ ಯಾವಾಗಲೂ ಸಂಘರ್ಷವನ್ನು ಬಯಸ- ಬಾರದು
ದೀರ್ಘಕಾಲಮಪಿ ಕ್ಷಾಂತ್ವಾ ವಿಹನ್ಯಾದೇವ ಶಾತ್ರವಾನ್ |
ಕಾಲಕಾಂಕ್ಷೀ ಯಾಪಯೇಚ್ಚ ಯಥಾ ವಿಸ್ರಂಭಮಾಪ್ನುಯುಃ ॥17॥
ದೀರ್ಘಕಾಲದವರೆಗೂ ಕ್ಷಮಿಸಿ ಅನಂತರ ಶತ್ರುಗಳನ್ನು ಕೊಲ್ಲಬೇಕು. ಕಾಲ- ವನ್ನು ನಿರೀಕ್ಷಿಸುವವನು ಶತ್ರುಗಳು ತನ್ನಲ್ಲಿ ವಿಶ್ವಾಸವನ್ನು ತಾಳುವವರೆಗೆ ಕಾಲವನ್ನು ಕಳೆಯಬೇಕು.
ನ ಸದ್ಯೋಽರೀನ್ ವಿನಿರ್ಹನ್ಯಾದ್ ದೃಷ್ಟಸ್ಯೋ ವಿಜಯೋ ಧ್ರುವಃ |
ನ ಯಃ ಶಲ್ಯಂ ಘಟ್ಟಯತಿ ನವಂ ಚ ಕುರುತೇ ವ್ರಣಮ್ ॥18॥
ತನಗೆ ನಿಶ್ಚಯವಾಗಿ ವಿಜಯವುಂಟಾಗುತ್ತದೆ ಎಂದು ತಿಳಿದು ಶತ್ರುವಿನ ಮೇಲೆ ದಾಳಿ ಮಾಡಬೇಕು. ಸುಮ್ಮನೇ ತತ್ಕ್ಷಣದಲ್ಲಿ ದಾಳಿ ಮಾಡಬಾರದು. ಶತ್ರುವನ್ನು ಕೊಲ್ಲದೇ ದಾಳಿಯನ್ನು ಮಾಡಿದರೆ ಈಟಿಯಿಂದ ಇರಿದು ಇನ್ನೊಂದು ಹೊಸ ವ್ರಣವನ್ನು ಮಾಡಿದಂತೆ. (ಆಗ ಶತ್ರುವು ಇನ್ನೂ ವಿರೋಧಿಯಾಗುತ್ತಾನೆ).
ಪ್ರಾಪ್ತೇ ಚ ಪ್ರಹರೇತ್ ಕಾಲೇ ನ ಸ ಸಂವರ್ತತೇ ಪುನಃ |
ಹಂತುಕಾಮಸ್ಯ ದೇವೇಂದ್ರ ಪುರುಷಸ್ಯ ರಿಪುಂ ಪ್ರತಿ ॥19॥
ಯಃ ಕಾಲೋ ಹಿ ವ್ಯತಿಕ್ರಾಮೇತ್ ಪುರುಷಂ ಕಾಲಕಾಂಕ್ಷಿಣಮ್ |
ದುರ್ಲಭಃ ಸ ಪುನಃ ಕಾಲಃ ಕಾಲಧರ್ಮಚಿಕೀರ್ಷುಣಾ ॥20॥
ಯೋಗ್ಯವಾದ ಕಾಲವು ಪ್ರಾಪ್ತವಾದಾಗ ಶತ್ರುವು ಪುನಃ ಹಿಂದಿರುಗದಂತೆ ಅವನಿಗೆ ಪ್ರಹಾರವನ್ನು ಮಾಡಬೇಕು. ಎಲ್ಲೈ ದೇವೇಂದ್ರನೇ! ಶತ್ರುವನ್ನು ಕೊಲ್ಲಲು ಬಯಸಿದ ರಾಜನು ಕಾಲವನ್ನು ನಿರೀಕ್ಷಿಸುತ್ತಾ ಯೋಗ್ಯವಾದ ಆ ಕಾಲವು ಒದಗಿದಾಗ ಅದನ್ನು ಉಪಯೋಗಿಸಿಕೊಳ್ಳದೇ ಕಾಲವು ಅತಿಕ್ರಾಂತವಾದರೆ ಅಂತಹ ಕರ್ಮವನ್ನು ಮಾಡಲು ಅಪೇಕ್ಷಿಸಿದ ರಾಜನಿಗೆ ಇನ್ನೊಮ್ಮೆ ಅಂತಹ ಕಾಲವು ದೊರೆಯಲಾರದು.
ಔರ್ಜಸ್ಥ್ಯಂ ವಿಜಯೇದೇವಂ ಸಂಗೃಹ್ಣನ್ ಸಾಧುಸಮ್ಮತಾನ್ |
ಕಾಲೇನ ಸಾಧಯೇನ್ನಿತ್ಯಂ ನಾಪ್ರಾಪ್ತೇಽಭಿನಿಪೀಡಯೇತ್ ॥21॥
ಸಜ್ಜನರಾದವರನ್ನು ಸಂಗ್ರಹಿಸಿ ಬಲಿಷ್ಠನಾದ ಶತ್ರುವನ್ನು ಹೀಗೆ ಜಯಿಸಬೇಕು. ಯೋಗ್ಯವಾದ ಕಾಲದಲ್ಲಿ ಕಾರ್ಯವನ್ನು ಸಾಧಿಸಬೇಕು. ಅಂತಹ ಕಾಲವು ಪ್ರಾಪ್ತವಾಗದಿದ್ದಾಗ ಶತ್ರುವನ್ನು ಪೀಡಿಸಬಾರದು.
ವಿಹಾಯ ಕಾಮಂ ಕ್ರೋಧಂ ಚ ತಥಾಽಹಂಕಾರಮೇವ ಚ |
ಯುಕ್ತೋ ವಿವರಮನ್ವಿಚ್ಛೇದಹಿತಾನಾಂ ಪುರಂದರ ॥22॥
ಎಲ್ಲೈ ಪುರಂದರನೇ! ಕಾಮಕ್ರೋಧಾಹಂಕಾರಗಳನ್ನು ಬಿಟ್ಟು ಎಚ್ಚರಿಕೆಯಿಂದಿದ್ದು ಶತ್ರುಗಳ ಛಿದ್ರವನ್ನು ಅನ್ವೇಷಣೆ ಮಾಡಬೇಕು.
ಮಾರ್ದವಂ ದಂಡ ಆಲಸ್ಯಂ ಪ್ರಮಾದಶ್ಚ ಸುರೋತ್ತಮ |
ಮಾಯಾಶ್ಚ ವಿವಿಧಾಃ ಶಕ್ರ ಸಾದಯಂತ್ಯವಿಚಕ್ಷಣಮ್ ॥23॥
ಎಲ್ಲೈ ಸುರೋತ್ತಮನೇ! ಇಂದ್ರನೇ! ಮೃದುತನ, ದಂಡ, ಆಲಸ್ಯ ಮತ್ತು ಪ್ರಮಾದಗಳು ಮತ್ತು ವಿವಿಧವಾದ ಕಪಟಗಳು ಅವಿವೇಕಿಯನ್ನು ಕೊಲ್ಲುತ್ತವೆ.
ನಿಹತ್ಯೈತಾನಿ ಚತ್ವಾರಿ ಮಾಯಾಂ ಪ್ರತಿವಿಧಾಯ ಚ |
ತತಃ ಶಕ್ನೋತಿ ಶತ್ರೂಣಾಂ ಪ್ರಹರ್ತುಮವಿಚಾರಯನ್ ॥24॥
ಮಾರ್ದವ, ದಂಡ, ಆಲಸ್ಯ ಮತ್ತು ಪ್ರಮಾದ ಈ ನಾಲ್ಕನ್ನು ಪರಿತ್ಯಜಿಸಿ ಶತ್ರುವಿನ ಮಾಯೆಗೆ ಪ್ರತಿಮಾಯೆಯನ್ನು ಮಾಡಿ ರಾಜನು ಬೇರೆ ಏನನ್ನೂ ವಿಚಾರ ಮಾಡದೇ ಶತ್ರುಗಳ ಮೇಲೆ ಪ್ರಹಾರ ಮಾಡಲು ಶಕ್ತನಾಗುತ್ತಾನೆ.
ಯದ್ಯೈವೈಕೇನ ಶಕ್ಯೇತ ಗುಹ್ಯಂ ಕರ್ತುಂ ತದಾಚರೇತ್ |
ಯಚ್ಛಂತಿ ಸಚಿವಾ ಗುಹ್ಯಂ ಮಿಥೋ ವಿದ್ರಾವಯಂತ್ಯಪಿ ॥25॥
ಒಬ್ಬನೇ ಮಾಡಲು ಸಾಧ್ಯವಾಗುವ ಕೆಲಸವನ್ನು ಗುಪ್ತವಾಗಿಯೇ ಮಾಡಬೇಕು. ಸಚಿವರು ಪರಸ್ಪರವಾಗಿ ಮಾತನಾಡಿಕೊಂಡು ಅಂತಹ ಗುಪ್ತವಾದ ಸಲಹೆಯನ್ನು ಕೊಡುತ್ತಾರೆ.
ಅಶಕ್ಯಮಿತಿ ಕೃತ್ವಾ ವಾ ತತೋಽನ್ಯೈಃ ಸಂವಿದಂ ಚರೇತ್ |
ಬ್ರಹ್ಮದಂಡಮದೃಷ್ಟೇಷು ದೃಷ್ಟೇಷು ಚತುರಂಗಿಣೀಮ್ ॥26॥
ಒಬ್ಬರಿಂದ ಮಾಡಲು ಸಾಧ್ಯವಾಗದಿದ್ದರೆ ಮಾತ್ರ ಬೇರೆಯವರ ಜೊತೆಯಲ್ಲಿ ವಿಚಾರ ಮಾಡಬೇಕು. ಕಣ್ಣಿಗೆ ಕಾಣದ ಪ್ರತಿರೋಧಗಳಿಗೆ ಬ್ರಾಹ್ಮಣರಿಂದ ಶಾಂತಿ- ಹೋಮಾದಿಗಳನ್ನೂ ಕಣ್ಣಿಗೆ ಕಾಣುವಂತೆ ಪ್ರತಿರೋಧ ಮಾಡುವವರಿಗೆ ಚತು- ರಂಗಸೈನ್ಯವನ್ನೂ ನಿಯೋಜಿಸಬೇಕು.
ಭೇದಂ ಚ ಪ್ರಥಮಂ ಯುಂಜ್ಯಾತ್ ತೂಷ್ಣೀಂ ದಂಡಂ ತಥೈವ ಚ |
ಕಾಲೇ ಪ್ರಯೋಜಯೇದ್ ರಾಜಾ ತಸ್ಮಿಂಸ್ತಸ್ಮಿಂಸ್ತದಾ ತದಾ ॥27॥
ಮೊದಲು ಭೇದೋಪಾಯವನ್ನು ಪ್ರಯೋಗಿಸಬೇಕು (ಶತ್ರುವಿಗೂ ಅವನ ಮಿತ್ರರಿಗೂ ವಿರೋಧವುಂಟಾಗುವಂತೆ ಮಾಡಬೇಕು). ಅನಂತರ ಮಾತನಾಡದೇ ಯೋಗ್ಯವಾದ ಕಾಲದಲ್ಲಿ ದಂಡಪ್ರಯೋಗವನ್ನು ಮಾಡಬೇಕು. ರಾಜನು ಆಯಾ ಉಪಾಯಗಳಿಗೆ ಯೋಗ್ಯವಾದ ಕಾಲದಲ್ಲಿ ಆಯಾ ಉಪಾಯಗಳನ್ನು ಮಾಡಬೇಕು.
ಪ್ರಣಿಪಾತಂ ಚ ಗಚ್ಛೇತ ಕಾಲೇ ಶತ್ರೋರ್ಬಲೀಯಸಃ |

ಯುಕ್ತೋಽಸ್ಯ ವಧಮನ್ವಿಚ್ಛೇದಪ್ರಮತ್ತಃ ಪ್ರಮಾದ್ಯತಃ ॥28॥
ಶತ್ರುವು ಬಲಿಷ್ಠನಾದರೆ ಅವನಿಗೆ ಒಂದು ಕಾಲದಲ್ಲಿ ಪ್ರಣಾಮವನ್ನು ಮಾಡ- ಬೇಕು. ಅವನ ಜೊತೆಯಲ್ಲಿ ಕೂಡಿದ್ದರೂ ಎಚ್ಚರಿಕೆಯಲ್ಲಿದ್ದು ಅವನು ಪ್ರಮಾದ- ವನ್ನು ಮಾಡಿದಾಗ ಅವನ ವಧೆಯನ್ನು ಮಾಡಲು ಬಯಸಬೇಕು.
ಪ್ರಣಿಪಾತೇನ ದಾನೇನ ವಾಚಾ ಮಧುರಯಾ ಬ್ರುವನ್ ।
ಅಮಿತ್ರಮುಪಸೇವೇತ ನ ತು ಜಾತು ವಿಶಂಕಯೇತ್ ॥29॥
ಪ್ರಣಾಮ, ದಾನ, ಮತ್ತು ಮಧುರವಾದ ಮಾತುಗಳಿಂದ ಶತ್ರುವನ್ನು ಸೇವಿಸ- ಬೇಕು. ಅವನು ಎಂದೂ ನಿನ್ನನ್ನು ಶಂಕಿಸುವಂತೆ ಮಾಡಬಾರದು.
ಸ್ಥಾನಾನಿ ಶಂಕಿತಾನಾಂ ಚ ನಿತ್ಯಮೇವ ವಿವರ್ಜಯೇತ್ ।
ನ ಚ ತೇಷ್ವಾಶ್ವಸೇದ್ ದ್ರುಗ್ಧ್ವಾ ಜಾಗ್ರತೀಹ ನಿರಾಕೃತಾಃ ॥30॥
ಶಂಕಿತರ ಸ್ಥಾನಗಳನ್ನು ಯಾವಾಗಲೂ ವರ್ಜಿಸಬೇಕು. ಒಮ್ಮೆ ಅವರಿಗೆ ದ್ರೋಹವನ್ನು ಮಾಡಿದ ರಾಜನು ಅವರಲ್ಲಿ ವಿಶ್ವಾಸವನ್ನು ಮಾಡಬಾರದು. ದ್ರೋಹಕ್ಕೆ ಒಳಗಾದವರು ಯಾವಾಗಲೂ ಎಚ್ಚರಿಕೆಯಿಂದಿರುತ್ತಾರೆ.
ನ ಹ್ಯತೋ ದುಷ್ಕರಂ ಕರ್ಮ ಕಿಂಚಿದಸ್ತಿ ಸುರೋತ್ತಮ ।
ಯಥಾ ವಿವಿಧವೃತ್ತಾನಾಮೈಶ್ವರ್ಯಮಮರಾಧಿಪ ॥31॥
ಎಲೈ ಸುರೋತ್ತಮನೇ! ಅಮರಾಧಿಪನೇ! ವಿವಿಧಶೀಲಗಳನ್ನು ಹೊಂದಿದ ಪುರುಷನನ್ನು ನಿಯಂತ್ರಿಸುವುದಕ್ಕಿಂತ ದೊಡ್ಡ ದುಷ್ಕರವಾದ ಕಾರ್ಯವಿಲ್ಲ.
ತಥಾ ವಿವಿಧಶೀಲಾನಾಮಪಿ ಸಂಭವ ಉಚ್ಯತೇ ।
ಯತೇತ ಯೋಗಮಾಸ್ಥಾಯ ಮಿತ್ರಾಮಿತ್ರಾನವಾರಯನ್ ॥32॥
ಹಾಗೆಯೇ ವಿವಿಧಶೀಲವುಳ್ಳ ಜನರ ಜೊತೆಯಲ್ಲಿ ವ್ಯವಹರಿಸುವುದು ದುಷ್ಕರ ವಾದುದು. ಶತ್ರುಮಿತ್ರರನ್ನು ಯಾರನ್ನೂ ತ್ಯಜಿಸದೇ ಉಪಾಯದಿಂದ ಪ್ರಯತ್ನವನ್ನು ಮಾಡಬೇಕು.
ಮೃದುಮಪ್ಯವಮನ್ಯಂತೇ ತೀಕ್ಷ್ಣಾದುದ್ವಿಜತೇ ಜನಃ ।
ಮಾ ತೀಕ್ಷ್ಣೋ ಮಾ ಮೃದುರ್ಭೂಸ್ತ್ವಂ ತೀಕ್ಷ್ಣೋ ಭವ ಮೃದುರ್ಭವ ॥33॥
ಮೃದುವಾದವನನ್ನು ಪ್ರಜೆಗಳು ಅವಮಾನಗೊಳಿಸುತ್ತಾರೆ. ತೀಕ್ಷ್ಣನಾದವನನ್ನು ನೋಡಿ ಹೆದರುತ್ತಾರೆ. ನೀನು ತೀಕ್ಷ್ಣನೂ ಆಗಬೇಡ. ಮೃದುವೂ ಆಗಬೇಡ. ತೀಕ್ಷ್ಣನೂ ಆಗು ಮೃದುವೂ ಆಗು.
ಯಥಾ ವಪ್ರೇ ವೇಧವತಿ ಸರ್ವತಃ ಸಂಪ್ಲುತೋದಕೇ ।
ನಿತ್ಯಂ ವಿದಾರಣಾದ್ ಬಾಧಸ್ತಥಾ ರಾಜ್ಯಂ ಪ್ರಮಾದ್ಯತಃ ॥34॥
ಹೇಗೆ ನೀರಿನಿಂದ ಸುತ್ತುವರೆಯಲ್ಪಟ್ಟ ಕೋಟೆಯ ಗೋಡೆಯ ಬಿರುಕಿನಿಂದ ನಿತ್ಯವೂ ಒಡೆದು ಹೋಗುವ ಭಯವಿರುತ್ತದೆಯೋ ರಾಜ್ಯವು ಎಚ್ಚರ ತಪ್ಪಿದರೆ ಅದರಂತೆ ಆಗುತ್ತದೆ.
ನ ಬಹೂನಭಿಯುಂಜೀತ ಯೌಗಪದ್ಯೇನ ಶಾತ್ರವಾನ್ ।
ಸಾಮ್ನಾ ದಾನೇನ ಭೇದೇನ ದಂಡೇನ ಚ ಪುರಂದರ ॥35॥
ಎಲೈ ಪುರಂದರನೇ! ಅನೇಕಶತ್ರುಗಳ ಜೊತೆ ಒಂದೇ ಕಾಲದಲ್ಲಿ ಸಾಮ- ದಿಂದಾಗಲೀ, ದಾನದಿಂದಾಗಲೀ, ಭೇದದಿಂದಾಗಲೀ, ದಂಡದಿಂದಾಗಲೀ ವ್ಯವ- ಹರಿಸಬೇಡ.
ಏಕೈಕಮೇಷಾಂ ನಿಷ್ಪಿಂಷನ್ ಶಿಷ್ಟೇಷು ನಿಪುಣಂ ಚರೇತ್ ।
ನ ಚ ಶಕ್ತೋಽಪಿ ಮೇಧಾವೀ ಸರ್ವಾನೇವಾರಭೇನ್ನೃಪಃ ॥36॥
ಅವರಲ್ಲಿ ಒಬ್ಬೊಬ್ಬರನ್ನು ವಿನಾಶಗೊಳಿಸುತ್ತಾ, ಉಳಿದವರ ವಿಷಯದಲ್ಲಿ ನಿಪುಣತೆಯಿಂದ ವ್ಯವಹರಿಸಬೇಕು. ರಾಜನು ಸಮರ್ಥನಾದರೂ ಮೇಧಾವಿ- ಯಾದರೂ ಎಲ್ಲರ ಜೊತೆಯಲ್ಲಿಯೂ ಒಟ್ಟಿಗೆ ವ್ಯವಹರಿಸಬಾರದು.
ಯದಾ ಸ್ಯಾನ್ಮಹತೀ ಸೇನಾ ಹಯನಾಗರಥಾಕುಲಾ ।
ಪದಾತಿಯಂತ್ರಬಹುಲಾ ಸ್ವನುರಕ್ತಾ ಪತಾಕಿನೀ ॥37॥
ಯದಾ ಬಹುವಿಧಾಂ ವೃದ್ಧಿಂ ಮನ್ಯತೇ ಪ್ರತಿಲೋಮತಃ ।
ತದಾ ವಿವೃತ್ಯ ಪ್ರಹರೇದ್ ಅರೀಣಾಮವಿಚಾರಯನ್ ॥38॥
ಹಯಗಜರಥಗಳಿಂದ ನಿಬಿಡವಾದ, ಪದಾತಿ ಮತ್ತು ಯಂತ್ರಗಳ ಬಾಹುಲ್ಯ- ದಿಂದ ಕೂಡಿದ, ಬಹಳ ಅನುರಕ್ತವಾದ, ದೊಡ್ಡ ಸೈನ್ಯವಿದ್ದರೆ ಶತ್ರುಗಳಿಗಿಂತ ತನ್ನ ಬಲವು ಸಮೃದ್ಧಿ ಹಾಗೂ ಅಧಿಕವಾಗಿದೆಯೆಂದು ಭಾವಿಸಿದರೆ ಆಗ ಮಾತ್ರ ಬೇರೆ ಏನೂ ವಿಚಾರಮಾಡದೇ ಸ್ಪಷ್ಟವಾಗಿ ಶತ್ರುಗಳ ಮೇಲೆ ಎರಗಬೇಕು.
ನ ಸಾಮ ದಂಡೋಪನಿಷತ್ ಪ್ರಶಸ್ಯತೇ
ನ ಮಾರ್ದವಂ ಶತ್ರುಷು ಯಾತ್ರಿಕಂ ಸದಾ ।
ನ ಸಸ್ಯಘಾತೋ ನ ಚ ಸಂಕರಕ್ರಿಯಾ
ನ ಚಾಸ್ಯ ಭೂಯಃ ಪ್ರಕೃತೇರ್ವಿಚಾರಣಾ ॥39॥
ಯಾವಾಗಲೂ ಸಾಮವಾಗಲೀ ಅಥವಾ ದಂಡವಾಗಲೀ ಅಥವಾ ಮೃದುತನ- ವಾಗಲೀ ಅಥವಾ ಶತ್ರುಗಳ ಮೇಲೆ ಎರಗುವುದಾಗಲೀ ಶೋಭಿಸುವುದಿಲ್ಲ. ಶತ್ರುಗಳ ಸಸ್ಯಗಳನ್ನು ನಾಶಮಾಡುವುದಾಗಲೀ, ಜಲಾಶಯಗಳನ್ನು ವಿಷದಿಂದ ದೂಷಿಸುವುದಾಗಲೀ, ಶತ್ರುರಾಜನ ಸಪ್ತಪ್ರಕೃತಿಗಳನ್ನು ಯಾವಾಗಲೂ ವಿಮರ್ಶೆ ಮಾಡುವುದಾಗಲೀ ಶೋಭಿಸುವುದಿಲ್ಲ.
ಮಾಯಾವಿಭೇದಾನುಪಸರ್ಜನಾನಿ

ಪಾಪಂ ತಥೈವ ಸ್ಪೃಶಸಂಪ್ರಯೋಗಾತ್ |
ಆಪ್ತೈರ್ಮನುಷ್ಯೈರುಪಚಾರಯೇತ
ಪುರೇಷು ರಾಷ್ಟ್ರೇಷು ಚ ಸಂಪ್ರಯುಕ್ತಾನ್ ॥40॥
ತನ್ನ ಗೂಢಚಾರರನ್ನು ಶತ್ರುವಿನ ಪಟ್ಟಣಗಳಲ್ಲಿಯೂ ಮತ್ತು ರಾಷ್ಟ್ರದಲ್ಲಿಯೂ ಪ್ರಯೋಗಿಸಿ ಅಂತಹ ಆಪ್ತಮನುಷ್ಯರಿಂದ ಶತ್ರುರಾಜ್ಯದಲ್ಲಿ ಮಾಯೆ, ಕಪಟಗಳು, ಧನದ ಅವಿತರಣೆಯು ಮತ್ತು ಪಾಪಕಾರ್ಯಗಳು ಆಗುವಂತೆ ನೋಡಿಕೊಳ್ಳ- ಬೇಕು.
ಪುರಾಪಿ ಚೈಷಾಮನುಸೃತ್ಯ ಭೂಮಿಪಾಃ
ಪುರೇಷು ಭೋಗಾನ್ ನಿಖಿಲಾನಿಹಾಜಯನ್ |
ಪುರೇಷು ನೀತಿಂ ವಿಹಿತಾಂ ಯಥಾವಿಧಿ
ಪ್ರಯೋಜಯಂತೋ ಬಲವೃತ್ರಸೂದನ ॥41॥
ಎಲೈ ಬಲವೃತ್ರಸೂದನನೇ! ಹಿಂದಿನ ಕಾಲದಲ್ಲಿಯೂ ಸಹ ರಾಜನು ಶತ್ರುಗಳ ಪಟ್ಟಣಗಳಲ್ಲಿ ಶಾಸ್ತ್ರೋಕ್ತರೀತಿಯಲ್ಲಿ ಇಂತಹ ನೀತಿಗಳನ್ನು ಪ್ರಯೋಗಿಸಿ, ಆ ಪಟ್ಟಣಗಳಲ್ಲಿದ್ದ ಅಖಿಲಭೋಗಗಳನ್ನು ಜಯಿಸಿದರು.
ಪ್ರದಾಯ ಗೂಢಾನಿ ವಸೂನಿ ನಾಮ
ಪ್ರಚ್ಛಿದ್ಯ ಭೋಗಾನವಧಾಯ ಚ ಸ್ವಾನ್ |
ದುಷ್ಟಾಃ ಸ್ವದೋಷೈರಿತಿ ಕೀರ್ತಯಿತ್ವಾ
ಪುರೇಷು ರಾಷ್ಟ್ರೇಷು ಚ ಯೋಜಯಂತಿ ॥42॥
ತನ್ನ ಅಮಾತ್ಯಾದಿಗಳಿಗೆ ರಹಸ್ಯವಾಗಿ ಧನವನ್ನು ನೀಡಿ, ಅವರಿಗೆ ಕೊಡುತ್ತಿದ್ದ ಭೋಗಸಾಮಗ್ರಿಗಳನ್ನು ಎಲ್ಲರಿಗೂ ತಿಳಿಯುವಂತೆ ನಿಲ್ಲಿಸಿ, `ಇವರು ತಮ್ಮ ದೋಷಗಳಿಂದಲೇ ದುಷ್ಟರಾದವರು, ಆದ್ದರಿಂದ ನನ್ನನ್ನು ಬಿಡುತ್ತಿದ್ದಾರೆ' ಎಂದುಘೋಷಿಸಿ ಶತ್ರುಗಳ ಪಟ್ಟಣಗಳಲ್ಲಿಯೂ ರಾಷ್ಟ್ರಗಳಲ್ಲಿಯೂ ಅವರನ್ನು ನಿಯೋ- ಜಿಸಬೇಕು.
ತಥೈವ ಚಾನ್ಯೈರಪಿ ಶಾಸ್ತ್ರವೇದಿಭಿಃ
ಸ್ವಲಂಕೃತೈಃ ಶಾಸ್ತ್ರವಿಧಾನದೃಷ್ಟಿಭಿಃ |
ಸುಶಿಕ್ಷಿತೈರ್ಭಾಷ್ಯಕಥಾವಿಶಾರದೈಃ
ಪರೇಷು ಕೃತ್ಯಾನುಪಧಾರಯಸ್ವ ॥43॥
ಹಾಗೆಯೇ ಶಾಸ್ತ್ರಜ್ಞರಾದ, ಅಲಂಕೃತರಾದ, ಶಾಸ್ತ್ರವಿಹಿತವಾದ ದೃಷ್ಟಿಯುಳ್ಳ, ಸುಶಿಕ್ಷಿತರಾದ, ವಾಗ್ಮಿಗಳಾದ ಜನರನ್ನು ನಿಯೋಜಿಸಿ ಶತ್ರುದೇಶದ ಕಾರ್ಯಗಳನ್ನು ತಿಳಿದುಕೊಳ್ಳಬೇಕು.
ಇಂದ್ರಃ
ಕಾನಿ ಲಿಂಗಾನಿ ದುಷ್ಟಸ್ಯ ಭವಂತಿ ದ್ವಿಜಸತ್ತಮ |
ಕಥಂ ದುಷ್ಟಂ ವಿಜಾನೀಯಾದೇತತ್ ಪೃಷ್ಟೋ ಬ್ರವೀಹಿ ಮೇ ॥44॥
ಇಂದ್ರ ಎಲೈ ದ್ವಿಜಶ್ರೇಷ್ಠರೇ! ದುಷ್ಟರ ಚಿಹ್ನೆಗಳು ಯಾವುವು? ದುಷ್ಟರನ್ನು ತಿಳಿಯುವ ಬಗೆ ಹೇಗೆ ಎಂಬ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿ.
ಬೃಹಸ್ಪತಿಃ
ಪರೋಕ್ಷಮಗುಣಾನಾಹ ಸದ್ಗುಣಾನಭ್ಯಸೂಯತಿ |
ಪರೈರ್ವಾ ಕೀರ್ತ್ಯಮಾನೇಷು ತೂಷ್ಣೀಮಾಸ್ತೇ ಪರಾಙ್ಮುಖಃ ॥45॥
ಬೃಹಸ್ಪತಿಗಳು ದುಷ್ಟನು ಪರೋಕ್ಷದಲ್ಲಿ ನಿಂದಿಸುತ್ತಾನೆ. ಸದ್ಗುಣಗಳನ್ನು ಹೇಳಿದರೆ ಅಸೂಯೆಪಡುತ್ತಾನೆ. ಬೇರೆಯವರು ಆ ವ್ಯಕ್ತಿಯ ಗುಣಗಳನ್ನು ಹೇಳಿದರೆ ಮುಖವನ್ನು ತಿರುಗಿಸಿ ಮೌನವಾಗಿರುತ್ತಾನೆ.
ತೂಷ್ಣೀಂಭಾವೇಽಪಿ ವಿಜ್ಞೇಯಂ ನ ಚೇದ್ ಭವತಿ ದಾರಣಮ್ |
ನಿಃಶ್ವಾಸಮೋಷ್ಠಸಂದಂಶಂ ಶಿರಸಶ್ಚ ಪ್ರಕಂಪಯನ್ ॥46॥
ಅವನು ಸುಮ್ಮನಿದ್ದರೂ, ತುಟಿಗಳನ್ನು ಬಿಡಿಸಿ ಮಾತನಾಡದಿದ್ದರೂ, ನಿಃ- ಶ್ವಾಸದಿಂದ, ತುಟಿಗಳನ್ನು ಕಚ್ಚುವುದರಿಂದ ಮತ್ತು ತಲೆಯನ್ನು ಅಲ್ಲಾಡಿಸುವುದ- ರಿಂದ ಅವನ ಮನಸ್ಸಿನ ಅಭಿಪ್ರಾಯವು ತಿಳಿದುಬರುತ್ತದೆ.
ಕರೋತ್ಯಭೀಕ್ಷ್ಣಂ ಸಂಸೃಷ್ಟಮಸಂಸೃಷ್ಟಶ್ಚ ಭಾಷತೇ |
ಅದೃಷ್ಟಿತೋ ವಿಕುರುತೇ ದೃಷ್ಟ್ವಾ ವಾ ನಾಭಿಭಾಷತೇ ॥47॥
ಪುನಃ ಪುನಃ ನೋಡಲು ಬರುತ್ತಾನೆ. ಮಾತನಾಡಿಸದಿದ್ದರೂ ಮಾತನಾಡಿಸು- ತ್ತಾನೆ. ಎದುರಿಗೆ ಸಿಕ್ಕಿದಾಗ ದೃಷ್ಟಿಯನ್ನು ಬೇರೆಡೆ ತಿರುಗಿಸುತ್ತಾನೆ. ಅಥವಾ ನೋಡಿ- ದರೂ ಮಾತನಾಡುವುದಿಲ್ಲ.
ಪೃಥಗೇತ್ಯ ಸಮಶ್ನಾತಿ ನೇದಮದ್ಯ ಯಥಾವಿಧಿ |
ಆಸನೇ ಶಯನೇ ಯಾನೇ ಭಾವಾ ಲಕ್ಷ್ಯಾ ವಿಶೇಷತಃ ॥48॥
ಒಬ್ಬನೇ ಬಂದು ಊಟ ಮಾಡುತ್ತಾನೆ. ಭೋಜನವು ಹಿಂದಿನಂತೆ ಚೆನ್ನಾಗಿಲ್ಲ ಎಂದು ಹೇಳುತ್ತಾನೆ. ಕೂಡುವುದರಲ್ಲಿ ಮಲಗುವುದರಲ್ಲಿ ನಡೆಯುವುದರಲ್ಲಿ ಅವನ ಭಾವನೆಗಳನ್ನು ಗಮನಿಸಬೇಕು.
ಆರ್ತಿರಾರ್ತೇ ಪ್ರಿಯೇ ಪ್ರೀತಿರೇತಾವನ್ಮಿತ್ರಲಕ್ಷಣಮ್ |
ವಿಪರೀತಂ ತು ಬೋದ್ಧವ್ಯಮರಿಲಕ್ಷಣಮೇವ ತತ್ ॥49॥
ಇನ್ನೊಬ್ಬನು ದುಃಖಗೊಂಡಾಗ ದುಃಖಗೊಳ್ಳುವುದು, ಇನ್ನೊಬ್ಬನು ಸಂತೋಷ -ಗೊಂಡಾಗ ಸಂತೋಷಗೊಳ್ಳುವುದು ಮಿತ್ರನ ಲಕ್ಷಣ. ಶತ್ರುಗಳ ಲಕ್ಷಣವು ಇದಕ್ಕೆ ವಿರುದ್ಧವಾದುದೆಂದು ತಿಳಿಯಬೇಕು.

ಏತಾನ್ಯೇವಂ ಯಥೋಕ್ತಾನಿ ಬುದ್ಧ್ಯೇಥಾಸ್ತ್ರಿದಶಾಧಿಪ|
ಪುರುಷಾಣಾಂ ಪ್ರದುಷ್ಟಾನಾಂ ಸ್ವಭಾವೋ ಬಲವತ್ತರಃ ॥50॥
ಎಲೈ ದೇವರಾಜನೇ! ನಾನು ಹೇಳಿದ ಈ ಲಕ್ಷಣಗಳನ್ನು ಈ ರೀತಿಯಲ್ಲಿ ತಿಳಿದುಕೊಳ್ಳಬೇಕು. ದುಷ್ಟಪುರುಷರ ಸ್ವಭಾವವು ಬಹಳ ಬಲಿಷ್ಠವಾಗಿರುತ್ತದೆ.
ಇತಿ ದುಷ್ಟಸ್ಯ ವಿಜ್ಞಾನಮುಕ್ತಂ ತೇ ಸುರಸತ್ತಮ |
ನಿಶಾಮ್ಯ ಶಾಸ್ತ್ರತತ್ತತ್ವಾರ್ಥಂ ಯಥಾವದಮರೇಶ್ವರ ॥51॥
ಎಲೈ ಸುರೋತ್ತಮನೇ! ಅಮರೇಶ್ವರನೇ! ನಾನು ಶಾಸ್ತ್ರತತ್ತತ್ವಾರ್ಥವನ್ನು ತಿಳಿದು ನಿನಗೆ ಯಥಾರ್ಥವಾಗಿ ದುಷ್ಟರ ಲಕ್ಷಣಗಳನ್ನು ಹೇಳಿದ್ದೇನೆ.
ಭೀಷ್ಮಃ
ಸ ತದ್ವಚಃ ಶತ್ರುನಿಬರ್ಹಣೇ ರತ-
ಸ್ತಥಾ ಚಕಾರಾವಿತಥಂ ಬೃಹಸ್ಪತೇಃ |
ಚಚಾರ ಕಾಲೇ ವಿಜಯಾಯ ಚಾರಿಹಾ
ವಶಂ ಚ ಶತ್ರೂನನಯತ್ ಪುರಂದರಃ॥52॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಾಧಿಕಶತತಮೋಽಧ್ಯಾಯಃ ॥105॥
ಭೀಷ್ಮರು ಶತ್ರುವಿನಾಶದಲ್ಲಿ ರತನಾದ ಇಂದ್ರನು ಬೃಹಸ್ಪತಿಗಳ ಆ ಮಾತುಗಳನ್ನು ಕೇಳಿ, ಅದನ್ನು ವ್ಯರ್ಥವನ್ನು ಮಾಡದೇ ನಡೆದುಕೊಂಡನು. ಶತ್ರುಸೂದನನಾದ ಪುರಂದರನು ಯೋಗ್ಯವಾದ ಕಾಲದಲ್ಲಿ ವಿಜಯಯಾತ್ರೆಯನ್ನು ಮಾಡಿ ಶತ್ರುಗಳನ್ನು ವಶಪಡಿಸಿಕೊಂಡನು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 105ನೆಯ ಅಧ್ಯಾಯವು ಮುಗಿಯಿತು.
0
106. ನೂರ ಆರನೆಯ ಅಧ್ಯಾಯ
ಕೌಸಲ್ಯ-ಕಾಲಕವೃಕ್ಷೀಯಸಂವಾದ; ಎಲ್ಲರನ್ನೂ ಕಳೆದುಕೊಂಡ ರಾಜನು ಜೀವಿಸುವ ರೀತಿ
ಯುಧಿಷ್ಠಿರಃ
ಧಾರ್ಮಿಕೋಽರ್ಥಾನಸಂಪ್ರಾಪ್ಯ ರಾಜಾಽಮಾತ್ಯೈಃ ಪ್ರಬಾಧಿತಃ |
ಚ್ಯುತಃ ಕೋಶಾಚ್ಚ ದಂಡಾಚ್ಚ ಸುಖಮಿಚ್ಛನ್ ಕಥಂ ಚರೇತ್ ॥1॥
ಯುಧಿಷ್ಠಿರ ಧಾರ್ಮಿಕನಾದ ರಾಜನು ಅಮಾತ್ಯರಿಂದ ಬಾಧಿತನಾಗಿ, ತನ್ನ ಕಾರ್ಯಗಳು ಸಿದ್ಧಿಸದೇ, ಕೋಶದಿಂದಲೂ ಸೈನ್ಯದಿಂದಲೂ ಚ್ಯುತನಾಗಿ ಸುಖವನ್ನು ಬಯಸಿದರೆ ಹೇಗೆ ನಡೆದುಕೊಳ್ಳಬೇಕು?
ಭೀಷ್ಮಃ
ಅತ್ರಾಯಂ ಕ್ಷೇಮದರ್ಶೀಯಮಿತಿಹಾಸೋಽನುಗೀಯತೇ |
ತತ್ ತೇಽಹಂ ಸಂಪ್ರವಕ್ಷ್ಯಾಮಿ ತನ್ನಿಬೋಧ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿ ಕ್ಷೇಮದರ್ಶ ಮಹಾ- ರಾಜನ ಒಂದು ಇತಿಹಾಸವನ್ನು ಹೇಳುತ್ತಾರೆ. ನಾನು ಅದನ್ನು ನಿನಗೆ ಹೇಳುವೆನು. ಅದನ್ನು ಕೇಳು.
ಕ್ಷೇಮದರ್ಶಂ ನೃಪಸುತಂ ಯತ್ರ ಕ್ಷೀಣಬಲಂ ಪುರಾ |
ಮುನಿಃ ಕಾಲಕವೃಕ್ಷೀಯ ಆಜಗಾಮೇತಿ ನಃ ಶ್ರುತಮ್ |
ತಂ ಪಪ್ರಚ್ಛೋಪಸಂಗೃಹ್ಯ ಕೃಚ್ಛ್ರಾಮಾಪದಮಾಸ್ಥಿತಃ ॥3॥
ಹಿಂದೆ ದುರ್ಬಲನಾದ ಕ್ಷೇಮದರ್ಶ ರಾಜಕುಮಾರನ ಬಳಿಗೆ ಕಾಲಕವೃಕ್ಷೀಯ ಎಂಬ ಮುನಿಯು ಬಂದನೆಂದು ನಾವು ಕೇಳಿದ್ದೇವೆ. ಬಹಳಕಷ್ಟಕ್ಕೆ ಸಿಲುಕಿದ ಕ್ಷೇಮ- ದರ್ಶನು ಅವನನ್ನು ಸಮೀಪಿಸಿ ಪ್ರಶ್ನೆಮಾಡಿದನು.
ಅರ್ಥೇಷು ಭಾಗೀ ಪುರುಷ ಈಹಮಾನಃ ಪುನಃ ಪುನಃ |
ಅಲಬ್ಧ್ವಾ ಮದ್ವಿಧೋ ರಾಜ್ಯಂ ಬ್ರಹ್ಮನ್ ಕಿಂ ಕರ್ತುಮರ್ಹತಿ ॥4॥
ಎಲೈ ಬ್ರಾಹ್ಮಣರೇ! ಪುನಃ ಪುನಃ ಪ್ರಯತ್ನವನ್ನು ಮಾಡಿ ಅರ್ಥವನ್ನು ಸಂಪಾದಿ- ಸಲು ಪ್ರಯತ್ನಿಸಿ ಅಂತಹ ಅರ್ಥವನ್ನು ರಾಜ್ಯವನ್ನು ಪಡೆಯದ ನನ್ನಂತಹವನು ಏನು ಮಾಡಬೇಕು?
ಅನ್ಯತ್ರ ಮರಣಾತ್ ಸ್ತೇಯಾದನ್ಯತ್ರ ಪರಸಂಶ್ರಯಾತ್ |
ಕ್ಷುದ್ರಾದನ್ಯತ್ರ ಚಾಚಾರಾತ್ ತನ್ಮಮಾಚಕ್ಷ್ವ ಸತ್ತಮ ॥5॥
ಎಲೈ ಸಜ್ಜನರಲ್ಲಿ ಶ್ರೇಷ್ಠರೇ! ಮರಣವನ್ನು ಬಿಟ್ಟು ಇನ್ನೊಬ್ಬರನ್ನು ಆಶ್ರಯಿಸು- ವುದನ್ನು ಬಿಟ್ಟು, ಕಳ್ಳತನವನ್ನು ಮಾಡುವುದನ್ನು ಬಿಟ್ಟು, ಬೇರೆ ಯಾವ ಕ್ಷುದ್ರಾ- ಚಾರವನ್ನು ಮಾಡುವುದನ್ನೂ ಬಿಟ್ಟು ಏನು ಮಾಡಬೇಕೆಂಬುದನ್ನು ನನಗೆ ತಿಳಿಸಿ.
ವ್ಯಾಧಿನಾ ಚಾಭಿಪನ್ನಸ್ಯ ಮಾನಸೇನೇತರೇಣ ವಾ |
ಬಹುಶ್ರುತಃ ಕೃತಪ್ರಜ್ಞಸ್ತ್ವದ್ವಿಧಃ ಶರಣಂ ವ್ರಜೇತ್ ॥6॥
ಮಾನಸವಾದ ಅಥವಾ ದೈಹಿಕವಾದ ವ್ಯಾಧಿಗೆ ತುತ್ತಾದವನಿಗೆ ಬಹುಶ್ರುತರೂ ಕೃತಪ್ರಜ್ಞರೂ (ಬುದ್ಧಿಶಾಲಿಗಳೂ) ಆದ ನಿಮ್ಮಂತಹವರು ಆಶ್ರಯರಾಗುತ್ತಾರೆ.
ನಿರ್ವಿದ್ಯ ಹಿ ನರಃ ಕಾಮಾನ್ನಿಯಮ್ಯ ಸುಖಮೇಧತೇ |

ತ್ಯಕತ್ವ ಪ್ರೀತಿಂ ಚ ಶೋಕಂ ಚ ಲಬ್ಧ್ವಾ ಬುದ್ಧಿಮಯಂ ವಸು ॥7॥
ಮನುಷ್ಯನು ವೈರಾಗ್ಯವನ್ನು ಹೊಂದಿ, ತನ್ನ ಆಸೆಗಳನ್ನು ನಿಯಂತ್ರಿಸಿ, ಹರ್ಷ- ಶೋಕಗಳನ್ನು ತ್ಯಜಿಸಿ, ಬುದ್ಧಿರೂಪವಾದ ಸಂಪತ್ತನ್ನು ಹೊಂದಿ ಸುಖಪಡುತ್ತಾನೆ.
ಸುಖಮರ್ಥಾಶ್ರಯಂ ಯೇಷಾಮನುಶೋಚಾಮಿ ತಾನಹಮ್ |
ಮಮ ಹ್ಯರ್ಥಾಃ ಸುಬಹವೋ ನಷ್ಟಾಃ ಸ್ವಪ್ನ ಇವಾಗತಾಃ ॥8॥
ಸುಖವು ಸಂಪತ್ತನ್ನು ಅವಲಂಬಿಸಿದೆ ಎಂದು ತಿಳಿಯುವವರನ್ನು ಕುರಿತು ನಾನು ಕನಿಕರಪಡುತ್ತೇನೆ. ನನ್ನ ಅಪಾರವಾದ ಸಂಪತ್ತು ಸ್ವಪ್ನದಂತೆ ಹೊರಟು ಹೋಯಿತು.
ದುಷ್ಕರಂ ಬತ ಕುರ್ವಂತಿ ಮಹತೋಽರ್ಥಾಂಸ್ತ್ಯಜಂತಿ ಯೇ |
ವಯಂ ತ್ವೇನಾನ್ ಪರಿತ್ಯಕ್ತುಮಸತೋಽಪಿ ನ ಶಕ್ನುಮಃ ॥9॥
ಮಹಾತ್ಮರು ಮಹಾಸಂಪತ್ತನ್ನು ತೊರೆದು ದುಷ್ಕರವಾದ ಕಾರ್ಯವನ್ನು ಮಾಡುತ್ತಾರೆ. ನಾವು ಅರ್ಥವನ್ನು ದುಷ್ಟವೆಂದು ತಿಳಿದಿದ್ದರೂ ಅದನ್ನು ತ್ಯಜಿಸಲು ಶಕ್ತರಾಗಿಲ್ಲ.
ಇಮಾಮವಸ್ಥಾಂ ಸಂಪ್ರಾಪ್ತಂ ದೀನಮಾರ್ತಂ ಶ್ರಿಯಶ್ಚ್ಯುತಮ್ |
ಯದನ್ಯತ್ ಸುಖಮಸ್ತೀಹ ತದ್ ಬ್ರಹ್ಮನ್ ಅನುಶಾಧಿ ಮಾಮ್ ॥10॥
ಎಲೈ ಬ್ರಾಹ್ಮಣರೇ! ಇಂತಹ ದುರವಸ್ಥೆಯನ್ನು ಹೊಂದಿ, ದೀನನೂ ಆರ್ತನೂ ಸಂಪತ್ತಿನಿಂದ ಹೀನನೂ ಆದ ನನಗೆ ಬೇರೆ ಯಾವ ಸುಖಸಾಧನವಿದೆಯೆಂದು ನೀವು ಉಪದೇಶಿಸಿ.
ಕೌಸಲ್ಯೇನೈವಮುಕ್ತಸ್ತು ರಾಜಪುತ್ರೇಣ ಧೀಮತಾ |
ಮುನಿಃ ಕಾಲಕವೃಕ್ಷೀಯಃ ಪ್ರತ್ಯುವಾಚ ಮಹಾದ್ಯುತಿಃ ॥11॥
ಮೇಧಾವಿಯಾದ ಕೋಸಲರಾಜಕುಮಾರನಿಂದ ಹೀಗೆ ಹೇಳಲ್ಪಟ್ಟ ಮಹಾ ತೇಜಸ್ಸುಳ್ಳ ಕಾಲಕವೃಕ್ಷೀಯ ಮುನಿಯು ಉತ್ತರವನ್ನು ಕೊಟ್ಟನು.
ಪುರಸ್ತಾದೇವ ತೇ ಬುದ್ಧಿರಿಯಂ ಕಾರ್ಯಾ ವಿಜಾನತಃ |
ಅನಿತ್ಯಂ ಸರ್ವಮೇವೇದಮಹಂ ಚ ಮಮ ಚಾಸ್ತಿ ಯತ್ ॥12॥
ಯತ್ಕಿಂಚಿನ್ಮನ್ಯಸೇಽಸ್ತೀತಿ ಸರ್ವಂ ನಾಸ್ತೀತಿ ವಿದ್ಧಿ ತತ್ |
ಏವಂ ನ ವ್ಯಥತೇ ಪ್ರಾಜ್ಞಃ ಕೃಚ್ಛ್ರಾಮಪ್ಯಾಪದಂ ಗತಃ ॥13॥
`ನನ್ನ ಬಳಿ ಏನಿದೆಯೋ ಇದೆಲ್ಲವೂ ಅನಿತ್ಯವಾದುದು' ಎಂದು ಬುದ್ಧಿವಂತ- ನಾದ ನೀನು ಮೊದಲೇ ತಿಳಿಯಬೇಕು. ಯಾವ ಯಾವುದು ಇದೆಯೋ ಅದೆಲ್ಲವೂ ಇಲ್ಲವೆಂದು ತಿಳಿ. ಹಾಗೆ ಮಾಡಿದರೆ ದುರವಸ್ಥೆಯನ್ನು ಹೊಂದಿದರೂ ಪ್ರಾಜ್ಞನು ವ್ಯಥೆ ಪಡುವುದಿಲ್ಲ.
ಯದ್ಧಿ ಭೂತಂ ಭವಿಷ್ಯಚ್ಚ ಧ್ರುವಂ ತನ್ನ ಭವಿಷ್ಯತಿ |
ಏವಂ ವಿದಿತವೇದ್ಯಸ್ತ್ವಮನರ್ಥೇಭ್ಯಃ ಪ್ರಮೋಕ್ಷ್ಯಸೇ ॥14॥
ಯಾವುದು ಇದೆಯೋ, ಯಾವುದು ಮುಂದೆ ಉಂಟಾಗುವುದೋ ಖಂಡಿತ- ವಾಗಿ ಅದು ಉಳಿಯುವುದಿಲ್ಲ. ಈ ರೀತಿಯಲ್ಲಿ ತಿಳಿದರೆ ನೀನು ಅನರ್ಥಗಳಿಂದ ಬಿಡುಗಡೆಯನ್ನು ಹೊಂದುವಿ.
ಯಚ್ಚ ಪೂರ್ವಂ ಸಮಾಹಾರೇ ಯಚ್ಚ ಪೂರ್ವತರೇ ಪರೇ |
ಸರ್ವಂ ತನ್ನಾಸ್ತಿ ತಚ್ಚೈವ ತಜ್ಜ್ಞಾತ್ವಾ ಕೋಽನುಸಂಜ್ವರೇತ್ ॥15॥
ಜನಸಮುದಾಯದಲ್ಲಿ ಈಗ ಏನಿದೆಯೋ, ಹಿಂದಿನ ಜನಸಮುದಾಯದಲ್ಲಿ ಏನಿದ್ದಿತೋ, ಮುಂದಿನ ಜನಸಮುದಾಯದಲ್ಲಿ ಏನಿರುವುದೋ ಅದು ಯಾವುದೂ ಉಳಿಯುವುದಿಲ್ಲ ಎಂದು ತಿಳಿದ ಯಾವನು ವ್ಯಥೆಪಡುತ್ತಾನೆ?
ಭೂತ್ವಾ ಚ ನ ಭವತ್ಯೇತದಭೂತ್ವಾ ಚ ಭವತ್ಯಪಿ |
ಶೋಕೇ ನ ಹ್ಯಸ್ತಿ ಸಾಮರ್ಥ್ಯಂ ಶೋಕಂ ಕುರ್ಯಾತ್ ಕಥಂ ನರಃ ॥16॥
ಕೆಲವಸ್ತುಗಳು ಜೊತೆಯಲ್ಲಿದ್ದವು ನಾಶವನ್ನು ಹೊಂದುತ್ತವೆ. ಇನ್ನು ಕೆಲವು ವಸ್ತುಗಳು ಮೊದಲು ಇಲ್ಲದೇ ಅನಂತರ ಬರುತ್ತವೆ. ಶೋಕ ಮಾಡುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಇದನ್ನು ತಿಳಿದ ಮನುಷ್ಯನು ಹೇಗೆ ಶೋಕವನ್ನು ಮಾಡಿಯಾನು?
ಕ್ವ ನು ತೇಽದ್ಯ ಪಿತಾ ರಾಜನ್ ಕ್ವ ನು ತೇಽದ್ಯ ಪಿತಾಮಹಃ |
ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯಂತಿ ತೇಽಪಿ ಚ ॥17॥
ಎಲೈ ರಾಜನೇ! ಈಗ ನಿನ್ನ ತಂದೆಯು ಎಲ್ಲಿ? ಈಗ ನಿನ್ನ ತಾತನು ಎಲ್ಲಿ? ನೀನು ಅವರನ್ನು ನೋಡುತ್ತಿಲ್ಲ. ಅವರೂ ನಿನ್ನನ್ನು ನೋಡುತ್ತಿಲ್ಲ.
ಆತ್ಮನೋಽಧ್ರುವತಾಂ ಪಶ್ಯಂಸ್ತಾಸ್ತ್ವಂ ಕಿಮನುಶೋಚಸಿ |
ಬುದ್ಧ್ಯಾ ಚೈವಾನುಬುದ್ಧ್ಯಸ್ವ ಧ್ರುವಂ ಹಿ ನ ಭವಿಷ್ಯಸಿ ॥18॥
ನಿನ್ನ ಅನಿತ್ಯತ್ವವನ್ನು ತಿಳಿದ ನೀನು ಅವರನ್ನು ಕುರಿತು ಏಕೆ ಶೋಕಪಡು- ತ್ತಿದ್ದೀಯೆ? ಒಳ್ಳೆಯ ಬುದ್ಧಿಯನ್ನು ಹೊಂದು. ಖಂಡಿತವಾಗಿ ನೀನೂ ಇರುವು- ದಿಲ್ಲ.
ಅಹಂ ಚ ತ್ವಂ ಚ ನೃಪತೇ ಶತ್ರವಃ ಸುಹೃದಶ್ಚ ತೇ |
ಅವಶ್ಯಂ ನ ಭವಿಷ್ಯಾಮಃ ಸರ್ವಂ ಚ ನ ಭವಿಷ್ಯತಿ ॥19॥
ಎಲೈ ರಾಜನೇ! ನಾನು, ನೀನು, ನಿನ್ನ ಶತ್ರುಗಳು, ನಿನ್ನ ಸುಹೃಜ್ಜನರು ಅವಶ್ಯವಾಗಿ ನಾಶವನ್ನು ಹೊಂದುತ್ತೇವೆ. ಯಾವುದೂ ಉಳಿಯುವುದಿಲ್ಲ.

ಯೇ ತು ವಿಂಶತಿವರ್ಷಾ ವೈ ತ್ರಿಂಶದ್ವರ್ಷಾಶ್ಚ ಮಾನವಾಃ |
ಅರ್ವಾಗೇವ ಹಿ ತೇ ಸರ್ವೇ ಮರಿಷ್ಯಂತಿ ಶರಚ್ಛತಾತ್ ॥20॥
ಇಪ್ಪತ್ತು ವರ್ಷದ, ಮೂವತ್ತು ವರ್ಷದ ಮನುಷ್ಯರೂ ಸಹ ನೂರು ವರ್ಷಗಳಿಗಿಂತ ಮೊದಲೇ ಮರಣವನ್ನು ಹೊಂದುತ್ತಾರೆ.
ಅಪಿ ಚೇನ್ಮಹತೋ ವಿತ್ತಾದ್ ವಿಪ್ರಮುಚ್ಯೇತ ಪೂರುಷಃ |
ನೈತನ್ಮಮೇತಿ ತನ್ಮತ್ವಾ ಕುರ್ವೀತ ಪ್ರಿಯಮಾತ್ಮನಃ ॥21॥
ಮನುಷ್ಯನು ದೊಡ್ಡ ಸಂಪತ್ತನ್ನು ಕಳೆದುಕೊಂಡರೂ ಇದು ನನ್ನದಲ್ಲ ಎಂದು ತಿಳಿದು ಬುದ್ಧಿಯಿಂದ ತನಗೆ ಪ್ರಿಯವನ್ನು ಮಾಡಿಕೊಳ್ಳಬೇಕು.
ಅನಾಗತಂ ಯನ್ನ ಮಮೇತಿ ವಿದ್ಯಾ-
ದತಿಕ್ರಾಂತಂ ಯನ್ನ ಮಮೇತಿ ವಿದ್ಯಾತ್ |
ದಿಷ್ಟಂ ಬಲೀಯ ಇತಿ ಮನ್ಯಮಾನಾಃ
ತೇ ಪಂಡಿತಾಸ್ತತ್ ಸತಾಂ ವೃತ್ತಮಾಹುಃ ॥22॥
ಇನ್ನೂ ಪ್ರಾಪ್ತವಾಗದಿರುವುದು ನನ್ನದಲ್ಲ ಎಂದು ತಿಳಿಯಬೇಕು. ಕಳೆದು ಹೋದುದು ನನ್ನದಲ್ಲ ಎಂದು ತಿಳಿಯಬೇಕು. ಯಾರು ವಿಧಿಯು ಪ್ರಬಲವಾದುದು ಎಂದು ತಿಳಿಯುತ್ತಾರೋ ಅವರು ಪಂಡಿತರು. ಅದು ಸಜ್ಜನರ ನಡತೆಯೆಂದು ಹೇಳುತ್ತಾರೆ.
ಅನಾಢ್ಯಾಶ್ಚಾಪಿ ಜೀವಂತಿ ರಾಜ್ಯಂ ಚಾಪ್ಯನುಶಾಸತೇ |
ಬುದ್ಧಿಪೌರುಷಸಂಪನ್ನಾಸ್ತ್ವಯಾ ತುಲ್ಯಾಧಿಕಾ ಜನಾಃ ॥23॥
ಲೋಕದಲ್ಲಿ ಬುದ್ಧಿಪೌರುಷಸಂಪನ್ನರಾದ ನಿನಗೆ ಸಮಾನರಾದ ಅಥವಾ ನಿನಗಿಂತ ಅಧಿಕರಾದ ಜನರು ಧನಾಢ್ಯರಲ್ಲದಿದ್ದರೂ ಬದುಕುತ್ತಾರೆ ಮತ್ತು ರಾಜ್ಯ- ವನ್ನು ಆಳುತ್ತಾರೆ.
ನ ಚ ತ್ವಮಿವ ಶೋಚಂತಿ ತಸ್ಮಾತ್ ತ್ವಮಪಿ ಮಾ ಶುಚಃ |
ಕಿನ್ನು ತ್ವಂ ತೈರ್ನ ವೈ ಶ್ರೇಯಾಂಸ್ತುಲ್ಯೋ ವಾ ಬುದ್ಧಿಪೌರುಷೈಃ ॥24॥
ಅವರು ನಿನ್ನಂತೆ ಶೋಕಪಡುವುದಿಲ್ಲ. ಆದ್ದರಿಂದ ನೀನೂ ಶೋಕಪಡಬೇಡ. ಬುದ್ಧಿಪೌರುಷಗಳ ದೃಷ್ಟಿಯಿಂದ ನೀನು ಅವರಿಗೆ ಸಮಾನನಾದವನಲ್ಲವೇ? ಅಥವಾ ಅಧಿಕನಾದವನಲ್ಲವೇ?
ರಾಜಪುತ್ರಃ
ಯಾದೃಚ್ಛಿಕಂ ಮಮಾಸೀತ್ ತದ್ ರಾಜ್ಯಮಿತ್ಯೇವ ಚಿಂತಯೇ |
ಹ್ರಿಯತೇ ಸರ್ವಮೇವೇದಂ ಕಾಲೇನ ಮಹತಾ ದ್ವಿಜ ॥25॥
ತಸ್ಯೈವಂ ಹ್ರಿಯಮಾಣಸ್ಯ ಸ್ರೋತಸೇವ ತಪೋಧನ |
ಫಲಮೇತತ್ ಪ್ರಪಶ್ಯಾಮಿ ಯಥಾಲಬ್ಧೇನ ವರ್ತಯೇ ॥26॥
ರಾಜಪುತ್ರ ನನಗೆ ದೊರೆತ ರಾಜ್ಯವು ಅಕಸ್ಮಾತ್ತಾಗಿ ದೊರೆಯಿತು ಎಂದೇ ತಿಳಿಯುತ್ತೇನೆ. ಎಲೈ ಬ್ರಾಹ್ಮಣರೇ! ಮಹತ್ತಾದ ಕಾಲವು ಇದೆಲ್ಲವನ್ನೂ ಸೆಳೆ- ದೊಯ್ಯುತ್ತದೆ. ಎಲೈ ತಪೋಧನರೇ! ನನಗೆ ಒದಗಿರುವ ದುರವಸ್ಥೆಯು ನದಿಯ ಪ್ರವಾಹದಂತೆ ಸೆಳೆದೊಯ್ಯುವ ಕಾಲದ ಫಲವೆಂದು ತಿಳಿಯುತ್ತೇನೆ. ಇದ್ದುದರ- ಲ್ಲಿಯೇ ಜೀವನವನ್ನು ಮಾಡುತ್ತೇನೆ.
ಮುನಿಃ
ಅನಾಗತಮತೀತಂ ಚ ಯಥಾತಥ್ಯವಿನಿಶ್ಚಯಾತ್ |
ನಾನುಶೋಚಸಿ ಕೌಸಲ್ಯ ಸರ್ವಾರ್ಥೇಷು ತಥಾ ಭವ ॥27॥
ಮುನಿಗಳು ಎಲೈ ಕೌಸಲ್ಯನೇ! ಅನಾಗತವಾದ ಅಥವಾ ಅತೀತವಾದ ವಸ್ತು- ಗಳ ಸರಿಯಾದ ಸ್ವರೂಪವನ್ನು ತಿಳಿದರೆ ನೀನು ಶೋಕಪಡುವುದಿಲ್ಲ. ಎಲ್ಲ ವಿಷಯಗಳಲ್ಲಿಯೂ ಹಾಗೆಯೇ ಇರು.
ಅವಾಪ್ಯಾನ್ ಕಾಮಯ ಸ್ವಾರ್ಥಾನ್ ನಾನವಾಪ್ಯಾನ್ ಕದಾಚನ |
ಪ್ರತ್ಯುತ್ಪನ್ನಾನನುಭವನ್ ಮಾ ಶುಚಸ್ತ್ವಮನಾಗತಾಮ್ ॥28॥
ಪಡೆಯಬಹುದಾದ ವಸ್ತುಗಳನ್ನು ಆಶಿಸು; ಪಡೆಯಲಾರದ ವಸ್ತುಗಳನ್ನು ಎಂದೂ ಆಶಿಸಬೇಡ. ಸದ್ಯದಲ್ಲಿ ಸಮೀಪದಲ್ಲಿರುವ ವಸ್ತುಗಳನ್ನು ಭೋಗಿಸುತ್ತಾ ಪಡೆಯದಿರುವ ವಸ್ತುಗಳ ವಿಷಯದಲ್ಲಿ ಶೋಕಪಡಬೇಡ.
ಯಥಾಲಬ್ಧೋಪಪನ್ನಾರ್ಥಸ್ತಥಾ ಕೌಸಲ್ಯ ರಂಸ್ಯಸೇ |
ಕಚ್ಚಿಚ್ಛುದ್ಧಸ್ವಭಾವೇನ ಶ್ರಿಯಾ ಹೀನೋ ನ ಶೋಚಸಿ ॥29॥
ಎಲೈ ಕೌಸಲ್ಯನೇ! ಸಹಜವಾಗಿ ದೊರೆತವಸ್ತುಗಳಿಂದ ನೀನು ಸುಖವನ್ನು ಪಡುವವನಾಗು. ಸಂಪತ್ತಿನಿಂದ ಹೀನನಾದ ನೀನು ಶುದ್ಧಸ್ವಭಾವವನ್ನು ಹೊಂದಿ ಶೋಕವನ್ನು ತ್ಯಜಿಸು.
ಪುರಸ್ತಾದ್ ಭೂತಪೂರ್ವತ್ವಾದ್ ವೀತಭಾಗ್ಯೋಽಪಿ ದುರ್ಮತಿಃ |
ಧಾತಾರಂ ಗರ್ಹತೇ ನಿತ್ಯಂ ಲಬ್ಧಾರ್ಥಶ್ಚ ನ ಮೃಷ್ಯತೇ ॥30॥
ಮುಂದೆ ಬರುವ ದಾರಿದ್ರ್ಯಾದಿಗಳು ಹಿಂದೆ ಮಾಡಿದ ದುಷ್ಕೃತಾದಿಗಳ ಫಲ- ವೆಂದು ತಿಳಿಯದೇ ದುರ್ಮತಿಯಾದವನು ಭಾಗ್ಯವನ್ನು ಕಳೆದುಕೊಂಡಾಗ ಯಾವಾಗಲೂ ವಿಧಿಯನ್ನು ನಿಂದಿಸುತ್ತಾನೆ. ಸಂಪತ್ತನ್ನು ಪಡೆದರೂ ಇದು ಸಾಲದು ಎಂದು ತಿಳಿದು ಸಹನೆಯನ್ನು ಕಳೆದುಕೊಳ್ಳುತ್ತಾನೆ.
ಅನರ್ಹಾನಪಿ ಚೈವಾನ್ಯಾನ್ ಮನ್ಯತೇ ಶ್ರೀಮತೋ ಜನಾನ್ |
ಏತಸ್ಮಾತ್ ಕಾರಣಾದೇತತ್ ದುಃಖಂ ಭೂಯೋಽನುವರ್ತತೇ ॥31॥
ಅನರ್ಹರಾದ ಬೇರೆಯವರೂ ಸಹ ಶ್ರೀಮಂತರಾಗಿದ್ದಾರೆ ಎಂದು ನೀನು ತಿಳಿಯುತ್ತಿದ್ದೀಯೆ. ಈ ಕಾರಣದಿಂದ ನಿನ್ನ ದುಃಖವು ಇನ್ನೂ

ಮುಂದುವರಿಯು- ತ್ತಿದೆ.
ಈರ್ಷ್ಯಾತಿಚ್ಛೇದಸಂಪನ್ನಾ ರಾಜನ್ ಪುರುಷಮಾನಿನಃ |
ಕಚ್ಚಿತ್ತ್ವಂ ನ ತಥಾ ಪ್ರಾಜ್ಞ ಮತ್ಸರೀ ಕೋಸಲಾಧಿಪ ॥32॥
ಎಲೈ ರಾಜ್ಯನೇ! ತಮ್ಮನ್ನು ಶ್ರೇಷ್ಠಪುರುಷರೆಂದು ತಿಳಿದುಕೊಳ್ಳುವವರು ಅಸೂಯೆ ಮತ್ತು ಅತಿವ್ಯಥೆಗಳಿಂದ ಕೂಡಿರುತ್ತಾರೆ. ಎಲೈ ಪ್ರಾಜ್ಞನೇ! ಕೋಸಲಾಧಿ-ಪತಿಯೇ! ನೀನು ಅವರಂತೆ ಮಾತ್ಸರ್ಯವನ್ನು ಹೊಂದಿಲ್ಲವಷ್ಟೇ?
ಸಹಸ್ವ ಶ್ರಿಯಮನ್ಯೇಷಾಂ ಯದ್ಯಪಿ ತ್ವಯಿ ನಾಸ್ತಿ ಸಾ |
ಅನ್ಯತ್ರಾಪಿ ಸತೀಂ ಲಕ್ಷ್ಮೀಂ ಕುಶಲಾ ಭುಂಜತೇ ಜನಾಃ |
ಅಭಿವಿಷ್ಯಂದತೇ ಶ್ರೀರ್ಹಿ ಸತ್ಯಪಿ ದ್ವಿಷತೋ ಜನಾತ್ ॥33॥
ನಿನ್ನಲ್ಲಿ ಸಂಪತ್ತಿಲ್ಲದಿದ್ದರೂ ಇನ್ನೊಬ್ಬರ ಸಂಪತ್ತನ್ನು ನೋಡಿ ಸಹಿಸಿಕೋ. ನಿಪುಣರಾದ ಜನರು ಇನ್ನೊಬ್ಬರ ಬಳಿ ಇರುವ ಸಂಪತ್ತನ್ನು ಭೋಗಿಸುತ್ತಾರೆ. ಸಂಪತ್ತು ಇದ್ದರೂ ಸಹ ಇನ್ನೊಬ್ಬರನ್ನು ದ್ವೇಷಿಸುವ ಮನುಷ್ಯನಿಂದ ಅದು ಹರಿದು ಹೋಗುತ್ತದೆ.
ಶ್ರಿಯಂ ಚ ಪುತ್ರಪೌತ್ರಂ ಚ ಮನುಷ್ಯಾ ಧರ್ಮಚಾರಿಣಃ |
ತ್ಯಾಗಧರ್ಮವಿದೋ ವೀರಾಃ ಸ್ವಯಮೇವ ತ್ಯಜಂತ್ಯುತ ॥34॥
ತ್ಯಾಗಧರ್ಮವನ್ನು ತಿಳಿದ, ಧರ್ಮಚಾರಿಗಳಾದ, ವೀರರಾದ ಮನುಷ್ಯರು ತಾವಾಗಿಯೇ ಸಂಪತ್ತನ್ನೂ ಪುತ್ರಪೌತ್ರರನ್ನೂ ತ್ಯಜಿಸುತ್ತಾರೆ.
ಬಹು ಸಂಕಸುಕಂ ದೃಷ್ಟ್ವಾ ವಿವಿತ್ಸಾಸಾಧನೇನ ಚ |
ತಥಾನ್ಯೇ ಸಂತ್ಯಜಂತ್ಯೇವಂ ಮತ್ವಾ ಪರಮದುರ್ಲಭಮ್ ॥35॥
ಸಂಪತ್ತಿನ ಸಾಧನೆಯು ಬಹಳ ಕಷ್ಟದಿಂದ ಕೂಡಿದೆ ಎಂದು ತಿಳಿದ ಕೆಲವರು ಅದು ಬಹಳ ದುರ್ಲಭವಾದುದೆಂದು ತಿಳಿದು ಸಂಪತ್ತಿನ ಆಸೆಯನ್ನೇ ತ್ಯಜಿಸುತ್ತಾರೆ.
ತ್ವಂ ಪುನಃ ಪ್ರಾಜ್ಞರೂಪಃ ಸನ್ ಕೃಪಣಂ ಪರಿತಪ್ಯಸೇ |
ಅಕಾಮ್ಯಾನ್ ಕಾಮಯಾನೋಽರ್ಥಾನ್ ಪರಾಧೀನಾನುಪದ್ರುತಾನ್ 36
ನೀನು ಪ್ರಾಜ್ಞನಾಗಿದ್ದರೂ ಆಸೆಪಡಬಾರದ, ಪರಾಧೀನವಾದ, ಉಪದ್ರುವಕ್ಕೆ ಒಳಗಾದ ವಸ್ತುಗಳಲ್ಲಿ ಆಸೆಯನ್ನು ಮಾಡುತ್ತಾ ಶೋಚನೀಯನಾಗಿ ಪರಿತಾಪ ಪಡುತ್ತಿದ್ದೀಯೆ.
ತಾಂ ಬುದ್ಧಿಮನುವಿಜ್ಞಾಯ ತ್ವಮೇವೈನಾನ್ ಪರಿತ್ಯಜ |
ಅನರ್ಥಾಂಶ್ಚಾರ್ಥರೂಪೇಣ ಅರ್ಥಾಂಶ್ಚಾನರ್ಥರೂಪತಃ ॥37॥
ಅಂತಹ ಬುದ್ಧಿಯನ್ನು ಹೊಂದಿ ನೀನೇ ಅಂತಹ ಅರ್ಥಗಳನ್ನು ಪರಿತ್ಯಜಿಸು. ಅರ್ಥಗಳು ಅನರ್ಥರೂಪದಲ್ಲಿಯೂ ಅನರ್ಥಗಳು ಅರ್ಥರೂಪದಲ್ಲಿಯೂ ತೋರುತ್ತವೆ. ಅವುಗಳನ್ನು ಪರಿತ್ಯಜಿಸು.
ಅರ್ಥಾಯೈವ ಹಿ ಕೇಷಾಂಚಿದ್ ಧನನಾಶೋ ಭವತ್ಯುತ |
ಅನಿತ್ಯಂ ತಂ ಸುಖಂ ಮತ್ವಾ ಶ್ರಿಯಮನ್ಯೇ ನ ಲಿಪ್ಸತೇ ॥38॥
ಧನನಾಶವು ಕೆಲವರಿಗೆ ದೊಡ್ಡ ಪ್ರಯೋಜನವನ್ನೇ ಉಂಟುಮಾಡುತ್ತದೆ. ಸಂಪತ್ತಿನಿಂದ ಉಂಟಾಗುವ ಸುಖವು ಅನಿತ್ಯವೆಂದು ತಿಳಿದು ಇನ್ನು ಕೆಲವರು ಸಂಪತ್ತನ್ನೇ ಬಯಸುವುದಿಲ್ಲ.
ರಮಮಾಣಃ ಶ್ರಿಯಾ ಕಶ್ಚಿನ್ನಾನ್ಯಚ್ಛ್ರೇಯೋಽಭಿಮನ್ಯತೇ |
ತಥಾ ತಸ್ಯೇಹಮಾನಸ್ಯ ಸಮಾರಂಭೋ ವಿನಶ್ಯತಿ ॥39॥
ಸಂಪತ್ತಿನಿಂದ ಸುಖಭೋಗದಲ್ಲಿರುವವನು ಅದಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲವೆಂದು ತಿಳಿಯುತ್ತಾನೆ. ಅಂತಹ ಕಾರ್ಯಗಳಲ್ಲಿ ತೊಡಗಿರುವ ಅವನಿಗೆ ಅವನ ಪ್ರಯತ್ನಗಳು ವಿಫಲವಾಗುತ್ತವೆ.
ಕೃಚ್ಛ್ರಾಲ್ಲಬ್ಧಮಭಿಪ್ರೇತಂ ಯದಾ ಕೌಸಲ್ಯ ನಶ್ಯತಿ |
ತದಾ ನಿರ್ವಿದ್ಯತೇ ಸೋಽರ್ಥಾತ್ ಪರಿಭಗ್ನಕ್ರಮೋ ನರಃ ॥40॥
ಎಲೈ ಕೌಸಲ್ಯನೇ! ಆಸೆಪಟ್ಟು ಕಷ್ಟಪಟ್ಟು ಸಂಪಾದಿಸಿದ ವಸ್ತುವು ನಾಶವನ್ನು ಹೊಂದಿದಾಗ ತನ್ನ ಪ್ರಯತ್ನವು ತಲೆಕೆಳಗಾಗಿ ಮನುಷ್ಯನು ಸಂಪತ್ತಿನ ಮೇಲೆ ವೈರಾಗ್ಯವನ್ನು ಹೊಂದುತ್ತಾನೆ.
ಧರ್ಮಮೇಕೇಽಭಿಪದ್ಯಂತೇ ಕಲ್ಯಾಣಾಭಿರತಾ ನರಾಃ |
ಪರತ್ರ ಸುಖಮಿಚ್ಛಂತೋ ನಿರ್ವಿದ್ಯೇಯುಶ್ಚ ಲೌಕಿಕಾತ್ ॥41॥
ತಮ್ಮ ಕಲ್ಯಾಣದಲ್ಲಿ ಆಸಕ್ತರಾದ ಕೆಲವರು ಧರ್ಮಮಾರ್ಗವನ್ನು ಆಶ್ರಯಿ- ಸುತ್ತಾರೆ. ಪರಲೋಕದಲ್ಲಿ ಸುಖವನ್ನು ಬಯಸುತ್ತಾ ಲೋಕದ ಪರಿಶ್ರಮದಿಂದ ಹಿಂದೆಗೆಯುತ್ತಾರೆ.
ಜೀವಿತಂ ಸಂತ್ಯಜಂತ್ಯೇಕೇ ಧನಲೋಭಪರಾ ನರಾಃ |
ನ ಜೀವಿತಾರ್ಥಂ ಮನ್ಯಂತೇ ಪುರುಷಾ ಹಿ ಧನಾದೃತೇ ॥42॥
ಧನಲೋಭವುಳ್ಳ ಕೆಲವರು ಜೀವಿತವನ್ನೇ ತೊರೆಯುತ್ತಾರೆ. ಅಂತಹ ಪುರುಷರು ಧನವಿಲ್ಲದೆ ಜೀವಿಸುವುದರಲ್ಲಿ ಯಾವ ಪ್ರಯೋಜನವೂ ಇಲ್ಲವೆಂದು ತಿಳಿಯುತ್ತಾರೆ.
ಪಶ್ಯ ತೇಷಾಂ ಕೃಪಣತಾಂ ಪಶ್ಯ ತೇಷಾಮಬುದ್ಧಿತಾಮ್ |
ಅಧ್ರುವೇ ಜೀವಿತೇ ಮೋಹಾದರ್ಥತೃಷ್ಣಾಮುಪಾಶ್ರಿತಾಃ ॥43॥
ಅವರ ಕಾರ್ಪಣ್ಯವನ್ನು ಮತ್ತು ಬುದ್ಧಿಗೇಡಿತನವನ್ನು ನೋಡು. ಅನಿತ್ಯವಾದ ಜೀವನದಲ್ಲಿ ಮೋಹದಿಂದ ಸಂಪತ್ತಿನ ಆಸೆಗೆ ಸಿಲುಕಿದ್ದಾರೆ.
ಸಂಚಯೇ ಚ ವಿನಾಶಾಂತೇ ಮರಣಾಂತೇ ಚ ಜೀವಿತೇ |

ಸಂಯೋಗೇ ವಿಪ್ರಯೋಗಾಂತೇ ಕೋ ನು ವಿಪ್ರಣಯೇನ್ಮನಃ ॥44॥
ನಾಶವನ್ನು ಹೊಂದಲಿರುವ ಧನಸಂಗ್ರಹದಲ್ಲಿ, ಮರಣವನ್ನು ಹೊಂದಿರುವ ಜೀವನದಲ್ಲಿ, ವಿಯೋಗವನ್ನು ಹೊಂದಲಿರುವ ಸಂಯೋಗದಲ್ಲಿ ಯಾವನು ತಾನೇ  ಮನಸ್ಸನ್ನು ಇಟ್ಟಾನು?
ಧನಂ ವಾ ಪುರುಷಂ ರಾಜನ್ ಪುರುಷೋ ವಾ ಪುನರ್ಧನಮ್ |
ಅವಶ್ಯಂ ಪ್ರಜಹಾತ್ಯೇತತ್ ತದ್ ವಿದ್ವಾನ್ ಕೋಽನುಸಂಜ್ವರೇತ್ ॥45॥
ರಾಜನ್! ಧನವು ಪುರುಷನನ್ನಾಗಲೀ ಅಥವಾ ಪುರುಷನೇ ಧನವನ್ನಾಗಲೀ ಅವಶ್ಯವಾಗಿ ಬಿಡುತ್ತಾನೆ. ಇದನ್ನು ತಿಳಿದ ಯಾವನು ವ್ಯಥೆಪಟ್ಟಾನು?
ಅನ್ಯತ್ರೋಪನತಾ ಹ್ಯಾಪತ್ ಪುರುಷಂ ತೋಷಯತ್ಯುತ |
ತೇನ ಶಾಂತಿಂ ಸ ಲಭತೇ ನಾಹಮೇವೇತಿ ಕಾರಣಾತ್ ॥46॥
ಇನ್ನೊಬ್ಬನಿಗೆ ಆಪತ್ತು ಉಂಟಾದಾಗ ಪುರುಷನಿಗೆ ಸಂತೋಷವಾಗುತ್ತದೆ. ನಾನೊಬ್ಬನೇ ಆಪತ್ತಿಗೆ ಸಿಲುಕಿದವನಲ್ಲ ಎಂಬ ಕಾರಣದಿಂದ ಅವನು ಸಮಾಧಾನ- ವನ್ನು ಪಡೆಯುತ್ತಾನೆ.
ಅನ್ಯೇಷಾಮಪಿ ನಶ್ಯಂತಿ ಸುಹೃದಶ್ಚ ಧನಾನಿ ಚ |
ಪಶ್ಯ ಬುದ್ಧ್ಯಾ ಮನುಷ್ಯಾಣಾಂ ತುಲ್ಯಮಾಪದಮಾತ್ಮನಃ |
ಬೇರೆಯವರಿಗೂ ಸುಹೃಜ್ಜನರೂ ಮತ್ತು ಧನವೂ ನಾಶವನ್ನು ಹೊಂದುತ್ತವೆ. ನಿನಗೆ ಸಮಾನರಾದ ಮನುಷ್ಯರಿಗೆ ಉಂಟಾಗುವ ಆಪತ್ತುಗಳನ್ನು ನೀನು ಬುದ್ಧಿಯಿಂದ ನೋಡು.
ನಿಯಚ್ಛ ಯಚ್ಛ  ಸಂಯಚ್ಛ ಇಂದ್ರಿಯಾಣಿ ಮನೋ ಗಿರಮ್ ॥47॥
ಪ್ರತಿಷಿದ್ಧಾನಿ ಚಾಪ್ಯೇಷು ದುರ್ಲಭೇಷ್ವಹಿತೇಷು ಚ |
ದುರ್ಲಭವಾದ, ಅಹಿತವಾದ, ಇಂದ್ರಿಯಮನೋವಚನಕಾರ್ಯಗಳಲ್ಲಿ ನಿಷಿದ್ಧ -ವಾದ ಅಗಮ್ಯಾಗಮನಾದಿಗಳಿಂದ ಇಂದ್ರಿಯವನ್ನು ನಿಯಂತ್ರಿಸು. ಮನಸ್ಸನ್ನು ಸಂಯಮಗೊಳಿಸು. ಮಾತನ್ನು ನಿಯಂತ್ರಿಸು.
ಪ್ರತಿಕೃಷ್ಟೇಷು ಭಾವೇಷು ವ್ಯತಿಕೃಷ್ಟೇಷ್ವಸಂಭವೇ |
ಪ್ರಜ್ಞಾನತೃಪ್ತೋ ವಿಕ್ರಾಂತಸ್ತ್ವದ್ವಿಧೋ ನಾನುಶೋಚತಿ ॥48॥
ಪಡೆಯಲು ಅಸಾಧ್ಯವಾದ ಸಂಪತ್ತು ನಾಶಹೊಂದಿದಾಗ ನಿನ್ನಂತಹವನು ಜ್ಞಾನದಿಂದ ತೃಪ್ತಿಯನ್ನು ಹೊಂದಿ ಧೈರ್ಯದಿಂದಿರಬೇಕು. ಶೋಕಪಡಬಾರದು.
ಅಲ್ಪಮಿಚ್ಛನ್ನಚಪಲೋ ಮೃದುರ್ದಾಂತಃ ಸುಸಂಯತಃ |
ಬ್ರಹ್ಮಚರ್ಯೋಪಪನ್ನಶ್ಚ ತ್ವದ್ವಿಧೋ ನೈವ ಮುಹ್ಯತಿ ॥49॥
ಚಂಚಲನಲ್ಲದೇ ಮೃದುವೂ, ದಾಂತನೂ, ಆತ್ಮನಿಗ್ರಹವುಳ್ಳವನೂ, ಬ್ರಹ್ಮ- ಚರ್ಯದಿಂದ ಕೂಡಿದವನೂ ಆದ ನಿನ್ನಂತಹವನು ಅಲ್ಪವನ್ನೇ ಬಯಸುತ್ತಾ ಮೋಹಕ್ಕೆ ಒಳಗಾಗಬಾರದು.
ನ ತ್ವೇವ ಜಾಲ್ಮೀಂ ಕಾಪಾಲೀಂ ವೃತ್ತಿಮೇಷಿತುಮರ್ಹತಿ |
ನೃಶಂಸವೃತ್ತಿಂ ಪಾಪಿಷ್ಠಾಂ ದುಃಖಾಂ ಕಾಪುರುಷೋಚಿತಾಮ್ ॥50॥
ಕಪಟವೃತ್ತಿಯನ್ನಾಗಲೀ, ಭಿಕ್ಷಾವೃತ್ತಿಯನ್ನಾಗಲೀ, ಕ್ರೂರವೃತ್ತಿಯನ್ನಾಗಲೀ, ದುಷ್ಟಪುರುಷರಿಗೆ ಉಚಿತವಾದ ದುಃಖಕರವಾದ ಪಾಪಿಷ್ಠವಾದ ವೃತ್ತಿಯನ್ನಾಗಲೀ ಎಂದೂ ಆಶಿಸಬಾರದು.
ಅಪಿ ಮೂಲಫಲಾಜೀವೋ ರಮಸ್ವೈಕೋ ಮಹಾವನೇ |
ವಾಗ್ಯತಃ ಸಂಗೃಹೀತಾತ್ಮಾ ಸರ್ವಭೂತದಯಾನ್ವಿತಃ ॥51॥
ಮಾತನ್ನು ನಿಯಂತ್ರಿಸಿ, ಮನೋಜಯವನ್ನು ಹೊಂದಿ, ಸರ್ವಭೂತದಯೆ- ಯಿಂದ ಕೂಡಿದವನಾಗಿ ದೊಡ್ಡ ಅರಣ್ಯದಲ್ಲಿ ಮೂಲಫಲಗಳನ್ನು ಸೇವಿಸಿ- ಯಾದರೂ ಒಬ್ಬನೇ ಸಂತೋಷದಿಂದಿರು.
ಸದೃಶಂ ಪಂಡಿತಸ್ಯೈತದೀಷಾದಂತೇನ ದಂತಿನಾ |
ಯದೇಕೋ ರಮತೇಽರಣ್ಯೇ ಯಚ್ಚಾಪ್ಯಲ್ಪೇನ ತುಷ್ಯತಿ ॥52॥
ಇದು ಪಂಡಿತನಿಗೆ ಯೋಗ್ಯವಾದುದು. ಬಹಳ ದೊಡ್ಡದಾದ ದಂತವನ್ನು ಹೊಂದಿದ್ದರೂ ಆನೆಯು ಏಕಾಕಿಯಾಗಿ ಅರಣ್ಯದಲ್ಲಿ ದೊರೆಯುವ ಅಲ್ಪವಸ್ತು- ಗಳಿಂದ ಸಂತೋಷಪಡುತ್ತದೆ.
ಮಹಾಹ್ರದಃ ಸಂಕ್ಷುಭಿತ ಆತ್ಮನೈವ ಪ್ರಸೀದತಿ |
ಏತದೇವಂಗತಸ್ಯಾಹಂ ಸುಖಂ ಪಶ್ಯಾಮಿ ಕೇವಲಮ್ ॥53॥
ಕ್ಷೋಭೆಗೊಂಡ ದೊಡ್ಡ ಸರೋವರವು ತಾನಾಗಿಯೇ ಪ್ರಸನ್ನವಾಗುತ್ತದೆ. ಅದೇ ರೀತಿಯಲ್ಲಿ ವಿತ್ತವನ್ನು ಕಳೆದುಕೊಂಡವನಿಗೂ ನಾನು ಕೇವಲ ಸುಖವನ್ನೇ ಕಾಣು- ತ್ತೇನೆ.
ಅಸಂಭವೇ ಶ್ರಿಯೋ ರಾಜನ್ ಹೀನಸ್ಯ ಸಚಿವಾದಿಭಿಃ |
ದೈವೇ ಪ್ರತಿನಿವಿಷ್ಟೇ ಚ ಕಿಂ ಶ್ರೇಯೋ ಮನ್ಯತೇ ಭವಾನ್ ॥54॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಡಧಿಕಶತತಮೋಽಧ್ಯಾಯಃ ॥106॥
ಎಲೈ ರಾಜನೇ! ಸಂಪತ್ತನ್ನು ಪಡೆಯುವುದು ಅಸಾಧ್ಯವಾದಾಗ, ಸಚಿವಾದಿಗಳು ಇಲ್ಲದಿರುವಾಗ, ದೈವವು ಪ್ರತಿಕೂಲವಾಗಿರುವಾಗ ನೀನು ಬೇರೆ ಯಾವ ಶ್ರೇಯಸ್ಸನ್ನು ಬಯಸುವಿ?
ರಾಜಧರ್ಮಪರ್ವಕನ್ನಡಾನುವಾದದಲ್ಲಿ 106ನೆಯ ಅಧ್ಯಾಯವು ಮುಗಿಯಿತು

0

107. ನೂರ ಏಳನೆಯ ಅಧ್ಯಾಯ

ಶತ್ರುಜಯೋಪಾಯವಿಷಯದಲ್ಲಿ ಕೌಸಲ್ಯನಿಗೆ ಕಾಲಕವೃಕ್ಷೀಯ ಉಪದೇಶ

ಮುನಿಃ

ಅಥ ಚೈತದ್ ಪೌರುಷಂ ಕಿಂಚಿತ್ ಕ್ಷತ್ರಿಯಾತ್ಮನಿ ಪಶ್ಯಸಿ |
ಬ್ರವೀಮಿ ಹಂತ ತೇ ನೀತಿಂ ರಾಜ್ಯಸ್ಯ ಪ್ರತಿಪತ್ತಯೇ ||1||
ತಾಂ ಚೇಚ್ಛಕ್ಷ್ಯಸ್ಯನುಷ್ಠಾತುಂ ಕರ್ಮ ಚೈವ ಕರಿಷ್ಯಸಿ |
ಶೃಣು ಸರ್ವಮಶೇಷೇಣ ಯತ್ ತ್ವಾ ವಕ್ಷ್ಯಾಮಿ ತತ್ತ್ವತಃ ||2||

ಮುನಿಗಳು ಅಥವಾ ಎಲೈ ಕ್ಷತ್ರಿಯನೇ! ನೀನು ಪೌರುಷವನ್ನೇನಾದರೂ ಹೊಂದಿರುವುದಾದರೆ ಸಂತೋಷ! ರಾಜ್ಯವನ್ನು ಸಂಪಾದಿಸುವ ನೀತಿಯನ್ನು ಹೇಳು- ತ್ತೇನೆ. ಅದನ್ನು ಅನುಷ್ಠಾನಮಾಡಲು ಸಮರ್ಥನಾಗಿ ಅನುಷ್ಠಾನಮಾಡುವುದಾದರೆ ಹೇಳುತ್ತೇನೆ. ನಾನು ನಿನಗೆ ಹೇಳುವುದನ್ನು ಸಮಗ್ರವಾಗಿ ಕೇಳು.

ಆಚರಿಷ್ಯಸಿ ಚೇತ್ ಕರ್ಮ ಮಹತೋಽರ್ಥಾನವಾಪ್ಸ್ಯಸಿ |
ರಾಜ್ಯಂ ರಾಜ್ಯಸ್ಯ ಮಂತ್ರಂ ವಾ ಮಹತೀಂ ವಾ ಪುನಃ ಶ್ರಿಯಮ್ |
ಯದ್ಯೇತದ್ ರೋಚತೇ ರಾಜನ್ ಪುನರ್ಬ್ರೂಹಿ ಬ್ರವೀಮಿ ತೇ ||3||

ನಾನು ಹೇಳಿದ ಕಾರ್ಯವನ್ನು ಮಾಡಿದರೆ ಶ್ರೇಷ್ಠವಾದ ಅರ್ಥವನ್ನು ಹೊಂದುವಿ. ರಾಜ್ಯವಾಗಲೀ, ರಾಜ್ಯದ ಮಂತ್ರಾಲೋಚನೆಯಾಗಲೀ, ಮಹತ್ತಾದ ಸಂಪತ್ತಾಗಲೀ ನಿನಗೆ ಇಷ್ಟವಾಗುವುದಾದರೆ ಎಲೈ ರಾಜನೇ! ನನಗೆ ಹೇಳು. ಅದನ್ನೂ ಸಂಪಾದಿಸುವ ಉಪಾಯವನ್ನು ನಿನಗೆ ಹೇಳುತ್ತೇನೆ.

ರಾಜಪುತ್ರಃ

ಬ್ರವೀತು ಭಗವಾನ್ ನೀತಿಮುಪಪನ್ನೋಽಸ್ಮ್ಯಹಂ ಪ್ರಭೋ |
ಅಮೋಘಮಿದಮದ್ಯಾಸ್ತು ತ್ವಯಾ ಸಹ ಸಮಾಗತಮ್ ||4||

ರಾಜಪುತ್ರ ಪ್ರಭುಗಳೇ! ಪೂಜ್ಯರಾದ ನೀವು ನನಗೆ ಅದನ್ನು ಹೇಳಬೇಕು. ನಾನು ನಿಮಗೆ ಶರಣಾಗತನಾಗಿದ್ದೇನೆ. ಈ ದಿನ ನಿಮ್ಮ ಈ ಸಮಾಗಮವು ವ್ಯರ್ಥ- ವಾಗದಿರಲಿ.

ಮುನಿಃ

ಹಿತ್ವಾ ಸ್ತಂಭಂ ಚ ಮಾನಂ ಚ ಕ್ರೋಧಹರ್ಷೌ ಭಯಂ ತಥಾ |
ಪ್ರತ್ಯಮಿತ್ರಂ ನಿಷೇವಸ್ವ ಪ್ರಣಿಪತ್ಯ ಕೃತಾಂಜಲಿಃ ||5||

ಮುನಿಗಳು ದರ್ಪವನ್ನು ಅಹಂಕಾರವನ್ನು, ಕ್ರೋಧಹರ್ಷಗಳನ್ನು, ಭಯ- ವನ್ನು ತ್ಯಜಿಸಿ, ಶತ್ರುವಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ಅವನನ್ನು ಸೇವಿಸು.

ತಮುತ್ತಮೇನ ಶೌಚೇನ ಕರ್ಮಣಾ ಚಾಭಿರಾಧಯ |
ದಾತುಮರ್ಹತಿ ತೇ ವೃತ್ತಿಂ ವೈದೇಹಃ ಸತ್ಯಸಂಗರಃ ||6||

ಅವನನ್ನು ಉತ್ತಮವಾದ ಶೌಚದಿಂದಲೂ ಕರ್ಮದಿಂದಲೂ ಆರಾಧಿಸು. ಸತ್ಯ- ಸಂಗರನಾದ ಜನಕನು ನಿನಗೆ ಜೀವನೋಪಾಯವನ್ನು ಕಲ್ಪಿಸಿಕೊಡಲು ಸಮರ್ಥ- ನಾಗಿದ್ದಾನೆ.

ಪ್ರಮಾಣಂ ಸರ್ವಭೂತೇಷು ಪ್ರಗ್ರಹಂ ಚ ಗಮಿಷ್ಯಸಿ |
ತತಃ ಸಹಾಯಾನ್ ಸೋತ್ಸಾಹಾನ್ ಲಪ್ಸ್ಯಸೇಽವ್ಯಸನಾನ್ ಶುಚೀನ್ ||7||

ನೀನು ಎಲ್ಲ ಪ್ರಜೆಗಳಿಂದ ಪೂಜ್ಯನಾಗುವಿ. ಮತ್ತು ಸ್ವೀಕರಿಸಲ್ಪಡುವಿ. ಅನಂತರ ಶುಚಿಗಳಾದ, ಚಟಗಳಿಲ್ಲದ, ಉತ್ಸಾಹಭರಿತರಾದ ಸಹಾಯಕರನ್ನು ಪಡೆಯುವಿ.

ವರ್ತಮಾನಃ ಸ್ವಶಾಸ್ತ್ರೇ ವೈ ಸಂಯತಾತ್ಮಾ ಜಿತೇಂದ್ರಿಯಃ |
ಅಭ್ಯುದ್ಧರತಿ ಚಾತ್ಮಾನಂ ಪ್ರಸಾದಯತಿ ಚ ಪ್ರಜಾಃ ||8||

ತನ್ನ ರಾಜ್ಯದಲ್ಲಿಯೇ ಜಿತಮನಸ್ಕನಾಗಿ ಜಿತೇಂದ್ರಿಯನಾಗಿ ಇದ್ದು ರಾಜನು ತನ್ನನ್ನು ಉದ್ಧರಿಸಿಕೊಳ್ಳುತ್ತಾನೆ. ಮತ್ತು ಪ್ರಜೆಗಳನ್ನು ಸಂತೋಷಪಡಿಸುತ್ತಾನೆ.

ತೇನೈವ ತ್ವಂ ಧೃತಿಮತಾ ಶ್ರೀಮತಾ ಚಾಭಿಸತ್ಕೃತಃ |
ಪ್ರಮಾಣಂ ಸರ್ವಭೂತೇಷು ಗತ್ವಾ ಪ್ರಗ್ರಹಣಂ ಮಹತ್ ||9||
ತತಃ ಸುಹೃದ್ಬಲಂ ಲಬ್ಧ್ವಾ ಮಂತ್ರಯಿತ್ವಾ ಸುಮಂತ್ರಿತಮ್ |
ಅಂತರೈರ್ಭೇದಯಿತ್ವಾರೀನ್ ಬಿಲ್ವಂ ಬಿಲ್ವೇನ ಶಾತಯ |
ಪರೈರ್ವಾ ಸಂವಿದಂ ಕೃತ್ವಾ ಬಲಮಪ್ಯಸ್ಯ ಘಾತಯ ||10||

ಧೈರ್ಯಶಾಲಿಯೂ ಸಂಪದ್ಯುಕ್ತನೂ ಆದ ಅವನಿಂದಲೇ ನೀನು ಪೂಜಿತನಾಗಿ ಎಲ್ಲ ಪ್ರಜೆಗಳಿಗೂ ಪೂಜ್ಯನಾಗಿ ಎಲ್ಲರಿಂದಲೂ ಸ್ವೀಕರಿಸಲ್ಪಡುವಿ. ಅನಂತರ ಸುಹೃಜ್ಜನರ ಬಲವನ್ನು ಪಡೆದು, ಒಳ್ಳೆಯ ಮಂತ್ರಾಲೋಚನೆಯನ್ನು ಮಾಡಿ, ಶತ್ರುಗಳ ಒಳಗಿನವರಿಂದಲೇ ಬಿಲ್ವಫಲವನ್ನು ಬಿಲ್ವಫಲದಿಂದ ಹೊಡೆದಂತೆ ಶತ್ರು- ಗಳನ್ನು ನಾಶಗೊಳಿಸು. ಅಥವಾ ಅವನ ಶತ್ರುಗಳ ಜೊತೆಯಲ್ಲಿ ಸಂಭಾಷಣೆಯನ್ನು ಮಾಡಿ ಅವನ ಸೈನ್ಯವನ್ನು ವಿನಾಶಗೊಳಿಸು.

ಅಲಭ್ಯಾ ಯೇ ಶುಭಾ ಭಾವಾಃ ಸ್ತ್ರಿಯಶ್ಚಾಚ್ಛಾದನಾನಿ ಚ |
ಶಯ್ಯಾಸನಾನಿ ಯಾನಾನಿ ಮಹಾರ್ಹಾಣಿ ಗೃಹಾಣಿ ಚ ||11||

ಪಕ್ಷಿಣೋ ಮೃಗಜಾತಾನಿ ರಸಾ ಗಂಧಾಃ ಫಲಾನಿ ಚ |
ತೇಷ್ವೇವ ಸಜ್ಜಯೇಥಾಸ್ತ್ವಂ ಯಥಾ ನಶ್ಯೇತ್ ಸ್ವಯಂ ಪರಃ ॥12॥
ಶುಭವಾದ ವಸ್ತುಗಳು, ಸುಂದರಿಯರು, ಒಳ್ಳೆಯ ವಸ್ತುಗಳು, ಶಯ್ಯಾಸನ- ಯಾನಗಳು, ಬೆಲೆಬಾಳುವ ಗೃಹಗಳು, ಪಕ್ಷಿಗಳು, ಮೃಗಗಳು, ರಸಗಂಧಗಳು, ಫಲಗಳು ಇವೆಲ್ಲವೂ ದುರ್ಲಭವಾದವು. ಅವನನ್ನು ಅವುಗಳಲ್ಲಿಯೇ ಆಸಕ್ತನಾ- ಗಿರುವಂತೆ ಮಾಡಿ ಅವನು ತಾನೇ ನಾಶವನ್ನು ಹೊಂದುವಂತೆ ಮಾಡು.
ಯದ್ಯೇವ ಪ್ರತಿಷೇದ್ಧವ್ಯೋ ಯದ್ಯುಪೇಕ್ಷಣಮರ್ಹತಿ |
ನ ಜಾತು ವಿವೃತಃ ಕಾರ್ಯಃ ಶತ್ರುರ್ವಿನಯಮಿಚ್ಛತಾ ॥13॥
ಶತ್ರುವನ್ನು ಯುದ್ಧದಲ್ಲಿ ಎದುರಿಸಬೇಕಾದರೆ ಅಥವಾ ಉಪೇಕ್ಷೆ ಮಾಡ- ಬೇಕಾದರೆ ಶತ್ರುವನ್ನು ಬಗ್ಗಿಸಲು ಬಯಸುವವನು ಅದನ್ನು ಗೌಪ್ಯವಾಗಿ ಮಾಡ- ಬೇಕು.
ವಸಸ್ವ ಪರಮಾಮಿತ್ರಂ ವಿಷಯೇ ಪ್ರಾಜ್ಞಸಮ್ಮತೇ |
ಭಜಸ್ವ ಶ್ವೇತಕಾಕೀಯೈರ್ಮಿಥ್ಯಾಧರ್ಮಮನರ್ಥಕೈಃ ॥14॥
ದೊಡ್ಡ ವೈರಿಯಾದವನನ್ನು ಪ್ರಾಜ್ಞಸಮ್ಮತವಾದ ವಿಷಯಗಳನ್ನು ಭೋಗಿ- ಸುವಂತೆ ಮಾಡಬೇಕು. ಅವನಿಗೆ ಅನರ್ಥಪ್ರಾಪಕವಾದ ಅನುಕೂಲವಾದ ಮಾತು- ಗಳನ್ನು ಆಡಬೇಕು.
ಆರಂಭಾಶ್ಚಾಸ್ಯ ಮಹತೋ ದುಷ್ಕರಾಂಸ್ತ್ವಂ ಪ್ರಯೋಜಯ |
ನದೀವಚ್ಚ ವಿರೋಧೇಽಸ್ಯ ಬಲವದ್ಭಿರ್ವಿರುದ್ಧ್ಯತಾಮ್ ॥15॥
ಅವನು ದುಷ್ಕರವಾದ ದೊಡ್ಡ ಕಾರ್ಯವನ್ನು ಮಾಡುವಂತೆ ಅವನನ್ನು ಪ್ರೇರಿಸಬೇಕು. ಬಲಿಷ್ಠರಾಜರ ಜೊತೆಯಲ್ಲಿ ವಿರೋಧವನ್ನು ಮಾಡುವಂತೆ ಮಾಡ- ಬೇಕು. ಆಗ ಬಲವಾದ ವಿರೋಧವನ್ನು ಮಾಡಿದರೆ ನದಿಯು ಪಾರ್ಶ್ವದಲ್ಲಿ ಹರಿದುಹೋಗುವಂತೆ ಅವನ ಸಂಪತ್ತು ಹರಿದು ಹೋಗುತ್ತದೆ.
ಉದ್ಯಾನಾನಿ ಮಹಾರ್ಹಾಣಿ ಶಯನಾನ್ಯಾಸನಾನಿ ಚ |
ಪ್ರತಿಭೋಗಸುಖೇನೈವ ಕೋಶಮಸ್ಯ ವಿರೇಚಯ ॥16॥
ಅವನಿಂದ ಭೋಗಸುಖಕ್ಕಾಗಿ ಬೆಲೆಬಾಳುವ ಉದ್ಯಾನಗಳನ್ನು, ಶಯನಾಸನ- ಗಳನ್ನು ಅವನು ನಿರ್ಮಿಸುವಂತೆ ಮಾಡಿ ಅವನ ಕೋಶವನ್ನು ಬರಿದುಮಾಡು.
ಯಜ್ಞದಾನಪ್ರಶಂಸಾಽಸ್ಮೈ ಬ್ರಾಹ್ಮಣೇಷ್ವನುವರ್ಣ್ಯತಾಮ್ |
ತೇ ತ್ವತ್ಪ್ರಿಯಂ ಕರಿಷ್ಯಂತಿ ತಂ ಛೇತ್ಸ್ಯಂತಿ ವೃಕಾ ಇವ ॥17॥
ಬ್ರಾಹ್ಮಣರಲ್ಲಿ ಅವನ ಯಜ್ಞದಾನಗಳನ್ನು ಪ್ರಶಂಸೆ ಮಾಡು. ಅವರು ನಿನಗೆ ಪ್ರಿಯವನ್ನು ಮಾಡಿ, ತೋಳಗಳಂತೆ ಅವನನ್ನು (ಅವನ ಸಂಪತ್ತನ್ನು) ಹರಿದು ಹಾಕುತ್ತಾರೆ.
ಅಸಂಶಯಂ ಪುಣ್ಯಶೀಲಃ ಪ್ರಾಪ್ನೋತಿ ಪರಮಾಂ ಗತಿಮ್ |
ತ್ರಿವಿಷ್ಟಪೇ ಪುಣ್ಯತಮಂ ಸ್ಥಾನಂ ಪ್ರಾಪ್ನೋತಿ ಪಾರ್ಥಿವಃ |
ಕೋಶಕ್ಷಯೇ ತ್ವಮಿತ್ರಾಣಾಂ ವಶಂ ಕೌಸಲ್ಯ ಗಚ್ಛತಿ ॥18॥
ಪುಣ್ಯಶೀಲನಾದ ರಾಜನು ನಿಃಸಂಶಯವಾಗಿ ಶ್ರೇಷ್ಠಗತಿಯನ್ನು ಸ್ವರ್ಗದಲ್ಲಿ ಉನ್ನತಸ್ಥಾನವನ್ನು ಪಡೆಯುತ್ತಾನೆ. ಆದರೆ ಎಲೈ ಕೌಸಲ್ಯನೇ! ಕೋಶವು ಬರಿದಾದಾಗ ಶತ್ರುಗಳಿಗೆ ವಶನಾಗುತ್ತಾನೆ.
ಉಭಯತ್ರ ಪ್ರಸಕ್ತಸ್ಯ ಧರ್ಮೇ ಚಾಧರ್ಮ ಏವ ಚ |
ಮೂಲಂ ಫಲಾರ್ಥಮುಚ್ಛಿದ್ಯೇತ್ ತೇನ ನಂದಂತಿ ಶತ್ರವಃ ॥19॥
ಧರ್ಮ ಮತ್ತು ಅಧರ್ಮಗಳು ಎರಡಲ್ಲಿಯೂ ಪ್ರಸಕ್ತನಾದವನಿಗೆ ಅದರಿಂದ ಅವನ ಮೂಲಭೂತವಾದ ಕೋಶವು ನಾಶವನ್ನು ಹೊಂದುತ್ತದೆ. ಅದರಿಂದ ಶತ್ರುಗಳು ಸಂತೋಷಪಡುತ್ತಾರೆ.
ನಿಂದ್ಯಾಸ್ಯ ಮಾನುಷಂ ಕರ್ಮ ದೈವಮಸ್ಯೋಪವರ್ಣಯ |
ಅಸಂಶಯಂ ದೈವಪರಃ ಕ್ಷಿಪ್ರಮೇವ ವಿನಶ್ಯತಿ ॥20॥
ಅವನ ಮಾನುಷಕರ್ಮಗಳನ್ನು ನಿಂದಿಸಿ, ಅವನಿಗೆ ದೈವಪ್ರೀತಿಕರವಾದ ಕರ್ಮಗಳನ್ನು ವರ್ಣಿಸು. ದೈವಪರನಾದ ರಾಜನು ನಿಃಸಂಶಯವಾಗಿ ಶೀಘ್ರವಾಗಿ ವಿನಾಶವನ್ನು ಹೊಂದುತ್ತಾನೆ.
ಯಾಜಯೈನಂ ವಿಶ್ವಜಿತಾ ಸರ್ವಸ್ವೇನ ವಿಯುಜ್ಯತಾಮ್ |
ತತೋ ಗಚ್ಛತ್ವಸಿದ್ಧಾರ್ಥಃ ಭಿಕ್ಷಮಾಣೋ ಮಹಾಜನಮ್ ॥21॥
ಅವನಿಂದ ವಿಶ್ವಜಿತ್ ಯಾಗವನ್ನು ಮಾಡಿಸಿ ಸರ್ವಸ್ವದಕ್ಷಿಣೆಯನ್ನು ಕೊಡಿಸು. ಅವನ ಸರ್ವಸಂಪತ್ತೂ ವಿಯೋಗವನ್ನು ಹೊಂದಲಿ. ಅನಂತರ ಅವನು ಇಷ್ಟಾರ್ಥವು ನೆರವೇರದೇ ಪ್ರಜೆಗಳ ಎದುರಿಗೆ ಹೋಗಿ ಭಿಕ್ಷೆಯನ್ನು ಬೇಡಲಿ.
ತ್ಯಾಗಧರ್ಮವಿದಂ ಮುಂಡಂ ಕಂಚಿದಸ್ಯೋಪವರ್ಣಯ |
ಅಪಿ ತ್ಯಾಗಂ ಬುಭೂಷೇತ ಕಚ್ಚಿದ್ ಗಚ್ಛೇದನಾಶ್ರಯಮ್ ॥22॥
ಅಥವಾ ತ್ಯಾಗಧರ್ಮವನ್ನು ತಿಳಿದ ಒಬ್ಬ ಸನ್ಯಾಸಿಯನ್ನು ಅವನಿಗೆ ವರ್ಣಿಸು. (ಪರಿಚಯಿಸು). ಅವನು ತ್ಯಾಗಧರ್ಮದಲ್ಲಿ ಆಸಕ್ತನಾಗಿ ಆಶ್ರಯರಹಿತನಾಗಲಿ.
ಸಿದ್ಧೇನೌಷಧಯೋಗೇನ ಸರ್ವಶತ್ರುವಿನಾಶಿನಾ |
ನಾಗಾನಶ್ವಾನ್ ಮನುಷ್ಯಾಂಶ್ಚ ಕೃತಕೈರುಪಘಾತಯ ॥23॥
ಮೋಸಮಾಡುವ ಜನರನ್ನು ನಿಯೋಜಿಸಿ ಸರ್ವಶತ್ರುವಿನಾಶಕವಾದ ಶಾಸ್ತ್ರ- ಸಿದ್ಧವಾದ ಔಷಧಪ್ರಯೋಗಗಳಿಂದ ಅವನ

ಅಶ್ವಗಳನ್ನು ಮತ್ತು ಗಜಗಳನ್ನು ನಾಶ- ಪಡಿಸು.
ಏತೇ ಚಾನ್ಯೇ ಚ ಬಹವೋ ದಂಭಯೋಗಾಃ ಸುನಿಶ್ಚಿತಾಃ |
ಶಕ್ಯಾ ವಿಷಹತಾ ಕರ್ತುಂ ನ ಕ್ಲೀಬೇನ ನೃಪಾತ್ಮಜ ॥24॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಸಪ್ತಾಧಿಕಶತತಮೋಽಧ್ಯಾಯಃ ॥107॥
ಎಲೈ ರಾಜಕುಮಾರನೇ! ಮೋಸದಿಂದ ಮಾಡುವ ಉಪಾಯಗಳು ಇವೂ ಮತ್ತು ಇನ್ನೂ ಅನೇಕವೂ ಶಾಸ್ತ್ರದಲ್ಲಿ ನಿಶ್ಚಿತವಾಗಿವೆ. ಅವುಗಳನ್ನು ಮಾಡಲು ಸಾಧ್ಯವಾದರೆ ಮಾಡಬಹುದು. ಹೇಡಿಯಾದವನು ಮಾಡಲಾರ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 107ನೆಯ ಅಧ್ಯಾಯವು ಮುಗಿಯಿತು
0
108. ನೂರ ಎಂಟನೆಯ ಅಧ್ಯಾಯ
ಕಾಲಕವೃಕ್ಷೀಯಮುನಿಯ ಆದೇಶದಂತೆ ಕೋಸಲರಾಜನ ರಾಜ್ಯಪ್ರಾಪ್ತಿ
ರಾಜಪುತ್ರಃ
ನ ನಿಕೃತ್ಯಾ ನ ದಂಭೇನ ಬ್ರಹ್ಮನ್ನಿಚ್ಛಾಮಿ ಜೀವಿತುಮ್ |
ನಾಧರ್ಮಯುಕ್ತಾನಿಚ್ಛೇಯಮರ್ಥಾನ್ ಸುಮಹತೋಽಪ್ಯಹಮ್ ॥1॥
ರಾಜಪುತ್ರ ಎಲೈ ಬ್ರಾಹ್ಮಣರೇ! ನಾನು ಡಂಭದಿಂದಾಗಲೀ ಮೋಸದಿಂದಾ- ಗಲೀ ಜೀವಿಸಲು ಬಯಸುವುದಿಲ್ಲ. ಅಧರ್ಮಮೂಲವಾದ ವಸ್ತು ಎಷ್ಟೇ ದೊಡ್ಡ- ದಾದರೂ ಅದನ್ನು ನಾನು ಬಯಸುವುದಿಲ್ಲ.
ಪುರಸ್ತಾದೇವ ಭಗವನ್ ಮಯ್ಯೆತದಪವರ್ಜಿತಮ್ |
ಯೇನ ಮಾಂ ನಾಭಿಶಂಕೇತ ಯದ್ವಾ ಕೃತ್ಸ್ನಂ ಹಿತಂ ಭವೇತ್ ॥2॥
ಎಲೈ ಪೂಜ್ಯರೇ! ನಾನು ಅಂತಹ ಮಾರ್ಗವನ್ನು ಮೊದಲೇ ಬಿಟ್ಟಿದ್ದೇನೆ. ಏನು ಮಾಡಿದರೆ ಪ್ರಜೆಗಳು ನನ್ನನ್ನು ಶಂಕಿಸುವುದಿಲ್ಲವೋ ಸಮಗ್ರವಾದ ಹಿತವುಂಟಾಗು- ತ್ತದೆಯೋ ಅದನ್ನು ಮಾತ್ರ ಮಾಡುತ್ತೇನೆ.
ಆನೃಶಂಸ್ಯೇನ ಧರ್ಮೇಣ ಲೋಕೇ ಹ್ಯಸ್ಮಿನ್ ಜಿಜೀವಿಷುಃ |
ನಾಹಮೇತದಲಂ ಕರ್ತುಂ ನೈತನ್ಮಯ್ಯುಪಪದ್ಯತೇ ॥3॥
ಮಾರ್ದವಯುಕ್ತವಾದ ಧರ್ಮದಿಂದ ಈ ಲೋಕದಲ್ಲಿ ಜೀವಿಸಲು ಇಷ್ಟ ಪಡುತ್ತೇನೆ. ನೀವು ಹೇಳಿದ ಕಾರ್ಯಗಳನ್ನು ನಾನು ಮಾಡಲಾರೆ. ಅದು ನನಗೆ ಹೊಂದುವುದಿಲ್ಲ.
ಮುನಿಃ
ಉಪಪನ್ನಸ್ತ್ವಮೇತೇನ ಯಥಾ ಕ್ಷತ್ರಿಯ ಭಾಷಸೇ |
ಪ್ರಕೃತ್ಯಾ ಹ್ಯುಪಪನ್ನೋಽಸಿ ಬುದ್ಧ್ಯಾ ಚಾದ್ಭುತದರ್ಶನ ॥4॥
ಮುನಿಗಳು ಎಲೈ ಕ್ಷತ್ರಿಯನೇ! ನೀನು ಮಾತನಾಡುವ ರೀತಿಯು ನಿನಗೆ ಯೋಗ್ಯವಾಗಿಯೇ ಇದೆ. ಎಲೈ ಅದ್ಭುತದರ್ಶನನೇ! ನೀನು ಸ್ವಾಭಾವಿಕವಾಗಿಯೇ ಸದ್ಬುದ್ಧಿಯನ್ನು ಹೊಂದಿದ್ದೀಯೆ.
ಉಭಯೋರೇವ ವಾಮರ್ಥೇ ಯತಿಷ್ಯೇ ತವ ತಸ್ಯ ಚ |
ಸಂಶ್ಲೇಷಂ ವಾ ಕರಿಷ್ಯಾಮಿ ಶಾಶ್ವತಂ ಹ್ಯನಪಾಯಿನಮ್ ॥5॥
ನಿಮ್ಮಿಬ್ಬರ ಎಂದರೆ, ನಿನ್ನ ಮತ್ತು ವೈದೇಹರಾಜನ ಹಿತಕ್ಕಾಗಿ ನಾನು ಪ್ರಯತ್ನ ಪಡುವೆನು. ಶಾಶ್ವತವಾದ ಕಡಿದು ಹೋಗದ ಸ್ನೇಹಸಂಬಂಧವನ್ನಾದರೂ ಉಂಟು ಮಾಡುವೆನು.
ತ್ವಾದೃಶಂ ಹಿ ಕುಲೇ ಜಾತಮನೃಶಂಸಂ ಬಹುಶ್ರುತಮ್ |
ಅಮಾತ್ಯಂ ಕೋ ನ ಕುರ್ವೀತ ರಾಜ್ಯಪ್ರಣಯಕೋವಿದಮ್ ॥6॥
ನಿನ್ನಂತಹ ಸತ್ಕುಲಪ್ರಸೂತನಾದ, ಮೃದುವಾದ, ಬಹುಶ್ರುತನಾದ, ರಾಜ್ಯನೀತಿ- ವಿಶಾರದನಾದವನನ್ನು ಯಾವನು ತಾನೇ ಮಂತ್ರಿಯಾಗಿ ಮಾಡಿಕೊಳ್ಳುವುದಿಲ್ಲ?
ಯಸ್ತ್ವಂ ಪ್ರವ್ರಾಜಿತೋ ರಾಜ್ಯಾದ್ ವ್ಯಸನಂ ಚೋತ್ತಮಂ ಗತಃ |
ಆನೃಶಂಸ್ಯೇನ ವೃತ್ತೇನ ಕ್ಷತ್ರಿಯೇಚ್ಛಸಿ ಜೀವಿತುಮ್ ॥7॥
ಏಕೆಂದರೆ ನೀನು ರಾಜ್ಯವು ಬಿಟ್ಟು ಹೋಗಿ ದೊಡ್ಡದಾದ ವ್ಯಸನವನ್ನು ಹೊಂದಿದರೂ ಮೃದುವಾದ ನಡತೆಯಿಂದ ಜೀವಿಸಲು ಬಯಸುತ್ತೀಯೆ.
ಆಗಂತಾ ಮದ್ಗೃಹಂ ತಾತ ವೈದೇಹಃ ಸತ್ಯಸಂಗರಃ |
ಯಥಾಹಂ ತಂ ನಿಯೋಕ್ಷ್ಯಾಮಿ ತತ್ ಕರಿಷ್ಯತ್ಯಸಂಶಯಮ್ ॥8॥
ಎಲೈ ಪ್ರೀತಿಪಾತ್ರನೇ! ಸತ್ಯಸಂಗರನಾದ ವಿದೇಹರಾಜನು ನನ್ನ ಆಶ್ರಮಕ್ಕೆ ಬರುವನು. ನಾನು ಅವನಿಗೆ ನಿದೇಶವನ್ನು ನೀಡಿದಂತೆ ಅವನು ನಿಃಸಂಶಯವಾಗಿ ಮಾಡುವನು.
ಭೀಷ್ಮಃ
ತತ ಆಹೂಯ ವೈದೇಹಂ ಮುನಿರ್ವಚನಮಬ್ರವೀತ್ |
ಅಯಂ ರಾಜಕುಲೇ ಜಾತೋ ವಿದಿತಾಭ್ಯಂತರೋ ಮಮ ॥9॥
ಭೀಷ್ಮರು ಅನಂತರ ಮುನಿಯು ವಿದೇಹರಾಜನನ್ನು ಕರೆಸಿ, ಅವನ ಜೊತೆ- ಯಲ್ಲಿ ಮಾತನಾಡಿದನು. `ಇವನು (ಕೋಸಲರಾಜಕುಮಾರನು) ರಾಜಕುಲದಲ್ಲಿ ಜನಿಸಿದವನು. ಅವನ ಒಳಗಿನ ವಿಷಯವೆಲ್ಲವೂ ನನಗೆ ತಿಳಿದಿದೆ..'

ಆದರ್ಶ ಇವ ಶುದ್ಧಾತ್ಮಾ ಶಾರದಶ್ಚಂದ್ರಮಾ ಇವ |
ನಾಸ್ಮಿನ್ ಪಶ್ಯಾಮಿ ವೃಜಿನಂ ಸರ್ವತೋ ಮೇ ಪರೀಕ್ಷಿತಃ ॥10॥
`ಕನ್ನಡಿಯಂತೆ ಶರತ್ಕಾಲದ ಚಂದ್ರನಂತೆ ಶುದ್ಧವಾದ ಮನಸ್ಸನ್ನು ಹೊಂದಿದ್ದಾನೆ. ಎಲ್ಲ ರೀತಿಯಿಂದ ಪರೀಕ್ಷೆ ಮಾಡಿದರೂ ನಾನು ಅವನಲ್ಲಿ ಒಂದು ದೋಷವನ್ನೂ ಕಾಣುವುದಿಲ್ಲ'.
ತೇನ ತೇ ಸಂಧಿರೇವಾಸ್ತು ವಿಶ್ವಸಾಸ್ಮಿನ್ ಯಥಾ ಮಯಿ |
ನ ರಾಜ್ಯಮನಮಾತ್ಯೇನ ಶಕ್ಯಂ ಶಾಸ್ತುಮಮಿತ್ರಹನ್ ॥11॥
`ಅವನ ಜೊತೆಯಲ್ಲಿ ನಿನಗೆ ಸಂಧಿಯುಂಟಾಗಲಿ, ನನ್ನಲ್ಲಿ ವಿಶ್ವಾಸ ಮಾಡಿ- ದಂತೆ ಅವನಲ್ಲಿಯೂ ವಿಶ್ವಾಸವನ್ನು ಮಾಡು. ಎಲೈ ಶತ್ರುನಾಶಕನೇ! ಅಮಾತ್ಯ- ನಿಲ್ಲದೇ ರಾಜ್ಯವನ್ನು ಪಾಲನೆ ಮಾಡುವುದು ಸಾಧ್ಯವಿಲ್ಲ'.
ಅಮಾತ್ಯಃ ಶೂರ ಏವ ಸ್ಯಾದ್ ಬುದ್ಧಿಸಂಪನ್ನ ಏವ ಚ |
ತಸ್ಮಾಚ್ಚೈವ ಭಯಂ ರಾಜ್ಞಃ ಪಶ್ಯ ರಾಜ್ಯಸ್ಯ ಯೋಜನಮ್ |
ಧರ್ಮಾತ್ಮಾನಂ ಕ್ವಚಿಲ್ಲೋಕೇ ನಾನ್ಯಾಸ್ತಿ ಗತಿರೀದೃಶೀ ॥12॥
ಅಮಾತ್ಯನು ಶೂರನೂ ಮೇಧಾವಿಯೂ ಆಗಿರಬೇಕು. ಶೂರನಿಂದಲೇ ಮತ್ತು ಮೇಧಾವಿಗಳಿಂದಲೇ ರಾಜನಿಗೆ ಭಯವುಂಟಾಗುತ್ತದೆ. ರಾಜ್ಯದ ವಿಧಾನ- ವನ್ನು ನೋಡು. ಧರ್ಮಾತ್ಮರಾದವರಿಗೆ ಲೋಕದಲ್ಲಿ ಅಂತಹ ಅಮಾತ್ಯನನ್ನು ಹೊಂದದೇ ಬೇರೆ ಮಾರ್ಗವಿಲ್ಲ.
ಕೃತಾತ್ಮಾ ರಾಜಪುತ್ರೋಽಯಂ ಸತಾಂ ಮಾರ್ಗಮನುಷ್ಠಿತಃ |
ಸುಸಂಗೃಹೀತಸ್ತ್ವೇವೈಷ ತ್ವಯಾ ಧರ್ಮಪುರೋಗಮಃ |
ಸಂಸೇವ್ಯಮಾನಃ ಪುತ್ರಸ್ತೇ ಗೃಹ್ಣೀಯಾದ್ ವದತೋ ಗುಣಾನ್ ॥13॥
ಈ ರಾಜಕುಮಾರನು ಒಳ್ಳೆಯ ಮನಸ್ಸನ್ನು ಹೊಂದಿದವನು. ಸನ್ಮಾರ್ಗದಲ್ಲಿ ನಡೆಯುವವನು. ಧರ್ಮಪ್ರಧಾನನಾದ ಇವನನ್ನು ನೀನು ಚೆನ್ನಾಗಿ ಸಂಗ್ರಹಿಸಿ ಅವನನ್ನು ಸೇವಿಸಿದರೆ ನಿನ್ನ ಪುತ್ರನು ಅವನಿಂದ ಒಳ್ಳೆಯ ಗುಣಗಳನ್ನು ಸಂಪಾದಿಸಿ- ಯಾನು!
ಯದ್ಯಯಂ ಪ್ರತಿಯುದ್ಧ್ಯೇತ್ ತ್ವಾಂ ಸ್ವಕರ್ಮ ಕ್ಷತ್ರಿಯಸ್ಯ ತತ್ |
ಜಿಗೀಷಮಾಣಸ್ತತ್ವಂ ಯುದ್ಧೇ ಪಿತೃಪೈತಾಮಹೇ ಪದೇ ॥14॥
ತ್ವಂ ಚಾಪಿ ಪ್ರತಿಯುದ್ಧ್ಯೇಥಾ ವಿಜಿಗೀಷುವ್ರತೇ ಸ್ಥಿತಃ |
ಅಯುದ್ಧ್ವೈವ ನಿಯೋಗಾನ್ಮೇ ವಶೇ ವೈದೇಹ ತೇ ಸ್ಥಿತಃ ॥15॥
ನೀನು ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ಕ್ಷತ್ರಿಯಧರ್ಮವನ್ನು ಅನುಸರಿಸಿ ಪಿತೃಪಿತಾಮಹರ ಮಾರ್ಗದಲ್ಲಿ ನಡೆದು ಅವನು ನಿನ್ನನ್ನು ಯುದ್ಧದಲ್ಲಿ ಜಯಿಸಲು ಬಯಸಬಹುದು. ನೀನೂ ಸಹ ಅಂತಹ ಜಯದ ಇಚ್ಛೆಯ ವ್ರತದಲ್ಲಿಯೇ ಇರುವವನಾಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಬಹುದು. ಆದರೆ ಎಲೈ ವೈದೇಹನೇ! ಅವನು ಯುದ್ಧವನ್ನು ಮಾಡದೆಯೇ ನನ್ನ ಮಾತಿನಂತೆ ನಿನ್ನ ವಶವಾಗಿದ್ದಾನೆ.
ಸ ತ್ವಂ ಧರ್ಮಮವೇಕ್ಷಸ್ವ ತ್ಯಕ್ತತ್ವಾಽಧರ್ಮಮಸಾಂಪ್ರತಮ್ |
ನ ಹಿ ಕಾಮಾನ್ನ ಚ ದ್ರೋಹಾತ್ ಸ್ವಧರ್ಮಂ ಹಾತುಮರ್ಹಸಿ ॥16॥
ಅಂತಹ ನೀನು ಅಯೋಗ್ಯವಾದ ಅಧರ್ಮವನ್ನು ತ್ಯಜಿಸಿ ಧರ್ಮವನ್ನು ನೋಡು. ಕಾಮದಿಂದಾಗಲೀ ಅಥವಾ ದ್ರೋಹವನ್ನು ಮಾಡುವ ಉದ್ದೇಶ- ದಿಂದಾಗಲೀ ನಿನ್ನ ಸ್ವಧರ್ಮವನ್ನು ಬಿಡಬೇಡ.
ನೈವ ನಿತ್ಯಂ ಜಯಸ್ತಾತ ನೈವ ನಿತ್ಯಂ ಪರಾಜಯಃ |
ತಸ್ಮಾದ್ ಭೋಜಯಿತವ್ಯಶ್ಚ ಭೋಕ್ತವ್ಯಶ್ಚ ಪರೋ ಜನಃ ॥17॥
ಎಲೈ ಪ್ರೀತಿಪಾತ್ರನೇ! ಜಯವೂ ನಿತ್ಯವಲ್ಲ. (ನಿಯಮೇನ ಸಿಗುವುದಲ್ಲ). ಪರಾಜಯವೂ ನಿತ್ಯವಲ್ಲ. ಆದ್ದರಿಂದ ಇನ್ನೊಬ್ಬನನ್ನು (ಶತ್ರುವನ್ನು) ಒಳ್ಳೆಯ ಭೋಗಯುಕ್ತನನ್ನಾಗಿ ಮಾಡಬೇಕು. ತಾನೂ ಒಳ್ಳೆಯ ಭೋಗಯುಕ್ತನಾಗಿರಬೇಕು.
ಆತ್ಮನ್ಯೇವ ಹಿ ಸಂದೃಶ್ಯಾವುಭೌ ಜಯಪರಾಜಯೌ |
ನಿಃಶೇಷಕಾರಿಣಾಂ ತಾತ ನಿಃಶೇಷಕರಣಾದ್ ಭಯಮ್ ॥18॥
ಜಯಪರಾಜಯಗಳೆರಡನ್ನೂ ತನ್ನಲ್ಲಿಯೇ ನೋಡಿಕೊಳ್ಳಬೇಕು. ಎಲೈ ಪ್ರೀತಿಪಾತ್ರನೇ! ಶತ್ರುವನ್ನು ನಿರ್ಮೂಲಗೊಳಿಸುವವರಿಗೆ ತಮ್ಮನ್ನು ಇನ್ನೊಬ್ಬರು ನಿರ್ಮೂಲಗೊಳಿಸಬಹುದು ಎಂಬ ಭಯವು ಯಾವಾಗಲೂ ಇರುತ್ತದೆ. (ಎಂದು ಹೇಳಿದರು)
ಇತ್ಯುಕ್ತಃ ಪ್ರತ್ಯುವಾಚೇದಂ ವಚನಂ ಬ್ರಾಹ್ಮಣರ್ಷಭಮ್ |
ಅಭಿಪೂಜ್ಯಾಭಿಸತ್ಕೃತ್ಯ ಪೂಜಾರ್ಹಮನುಮಾನ್ಯ ಚ ॥19॥
ಹೀಗೆ ಹೇಳಲ್ಪಟ್ಟ ವಿದೇಹನು ಬ್ರಾಹ್ಮಣಶ್ರೇಷ್ಠರಾದ ಆ ಮುನಿಯನ್ನು ಸತ್ಕರಿಸಿ, ಪೂಜಿಸಿ, ಪೂಜಾರ್ಹರಾದ ಅವರ ಮಾತನ್ನು ಸಮ್ಮತಿಸಿ ಪ್ರತ್ಯುತ್ತರವನ್ನು ನೀಡಿದನು.
ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾದ್ ಬಹುಶ್ರುತಃ |
ಶ್ರೇಯಸ್ಕಾಮೋ ಯಥಾ ಬ್ರೂಯಾದುಭಯೋರ್ಯತ್ ಕ್ಷಮಂ ಭವೇತ್ ॥
ತಥಾ ವಚನಮುಕ್ತೋಽಸ್ಮಿ ಕರಿಷ್ಯಾಮಿ ಚ ತತ್ ತಥಾ |
ಏತದ್ಧಿ ಪರಮಂ ಶ್ರೇಯೋ ನ ಮೇಽತ್ರಾಸ್ತಿ ವಿಚಾರಣಾ ॥21॥
ಮಹಾಪ್ರಾಜ್ಞನಾದವನು ಏನು ಹೇಳಬಹುದೋ, ಬಹುಶ್ರುತನಾದವನು ಏನು ಹೇಳಬಹುದೋ, ಶ್ರೇಯಸ್ಕಾಮನಾದವನು ಇಬ್ಬರಿಗೂ ಏನು ಹೇಳಬಹುದೋ ಅಂತಹ ಮಾತುಗಳನ್ನು ನೀವು ನನಗೆ ಹೇಳಿದ್ದೀರಿ. ನಾನು ಹಾಗೆಯೇ ನಡೆದು- ಕೊಳ್ಳುವೆನು. ಹಾಗೆ ನಡೆದುಕೊಳ್ಳುವುದು ನನಗೆ ಪರಮಶ್ರೇಯಸ್ಕರ. ಇದರಲ್ಲಿ ನಾನು ಯಾವ ವಿಚಾರವನ್ನೂ ಮಾಡುವುದಿಲ್ಲ. (ಎಂದು ಹೇಳಿದನು).
ತತಃ ಕೌಸಲ್ಯಮಾಹೂಯ ವೈದೇಹೋ ವಾಕ್ಯಮಬ್ರವೀತ್ |

ಧರ್ಮತೋ ನೀತಿತಶ್ಚೈವ ಬಲೇನ ಚ ಜಿತೋ ಮಯಾ ॥22॥
ಅನಂತರ ಕೌಸಲ್ಯನನ್ನು ಕರೆದು ಜನಕನು ಮಾತನಾಡಿದನು. ನೀನು ಧರ್ಮ- ದಿಂದಲೂ ರಾಜನೀತಿಯಿಂದಲೂ ಸೈನ್ಯದಿಂದಲೂ ನನ್ನಿಂದ ಪರಾಜಿತನಾಗಿದ್ದೀಯೆ.
ಸೋಽಹಂ ತ್ವಯಾ ತ್ವಾತ್ಮಗುಣೈರ್ಜಿತಃ ಪಾರ್ಥಿವಸತ್ತಮ |
ಆತ್ಮಾನಮನವಜ್ಞಾಯ ಜಿತವದ್ ವರ್ತತಾಂ ಭವಾನ್ ॥23॥
ಎಲೈ ರಾಜಶ್ರೇಷ್ಠನೇ! ನಾನು ನಿನ್ನ ಗುಣಗಳಿಂದ ನಿನ್ನಿಂದ ಪರಾಜಿತನಾಗಿದ್ದೇನೆ. ನಿನ್ನನ್ನು ನೀನು ಹೀನನೆಂದು ತಿಳಿದುಕೊಳ್ಳದೇ ಪರಾಜಿತನಾದವನಂತೆ ನನ್ನ ಜೊತೆ- ಯಲ್ಲಿ ಇರು.
ನಾವಮನ್ಯೇ ಚ ತೇ ಬುದ್ಧಿಂ ನಾವಮನ್ಯೇ ಚ ಪೌರುಷಮ್ |
ನಾವಮನ್ಯೇ ಜಯಾಮೀತಿ ಜಿತವದ್ ವರ್ತತಾಂ ಭವಾನ್ ॥24॥
ನಾನು ನಿನ್ನ ಬುದ್ಧಿಯನ್ನು ತಿರಸ್ಕರಿಸುವುದಿಲ್ಲ; ನಿನ್ನ ಪೌರುಷವನ್ನು ಅವಮಾನ -ಗೊಳಿಸುವುದಿಲ್ಲ. ನಾನು ಜಯಿಸಿದ್ದೇನೆ ಎಂದು ನಿನ್ನನ್ನು ಅವಮಾನ ಮಾಡು- ವುದಿಲ್ಲ. ಪರಾಜಿತನಾದವನಂತೆ ಇರು.
ಯಥಾವತ್ ಪೂಜಿತೋ ರಾಜನ್ ಗೃಹಂ ಗಂತಾಸಿ ಮೇ ಗೃಹಾತ್ |
ತತಃ ಸಂಪೂಜ್ಯ ತೌ ವಿಪ್ರಂ ವಿಶ್ವಸ್ತೌ ಜಗ್ಮತುರ್ಗೃಹಾನ್ ॥25॥
ಎಲೈ ರಾಜನೇ! ವಿಧಿಗೆ ಅನುಗುಣವಾಗಿ ನನ್ನಿಂದ ಪೂಜಿತನಾಗಿ ನೀನು ನಿನ್ನ ಮನೆಗೆ ಹಿಂದಿರುಗುವಿ. (ಎಂದು ಹೇಳಿದನು). ಅನಂತರ ಅವರಿಬ್ಬರೂ ಆ ಬ್ರಾಹ್ಮಣರನ್ನು ಪೂಜಿಸಿ ಮನೆಗಳಿಗೆ ಹೋದರು.
ವೈದೇಹಸ್ತ್ವಥ ಕೌಸಲ್ಯಂ ಪ್ರವೇಶ್ಯ ಗೃಹಮಂಜಸಾ |
ಪಾದ್ಯಾರ್ಘ್ಯಮಧುಪರ್ಕೈಸ್ತಂ ಪೂಜಾರ್ಹಂ ಪ್ರತ್ಯಪೂಜಯತ್ ॥26॥
ವೈದೇಹನು ಕೋಸಲರಾಜಕುಮಾರನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಪಾದ್ಯ, ಅರ್ಘ್ಯ, ಮಧುಪರ್ಕಗಳನ್ನು ಚೆನ್ನಾಗಿ ನೀಡಿ ಪೂಜಾರ್ಹನಾದ ಅವನನ್ನು ಪೂಜಿಸಿದನು.
ದದೌ ದುಹಿತರಂ ಚಾಸ್ಮೈ ರತ್ನಾನಿ ವಿವಿಧಾನಿ ಚ |
ಏಷ ರಾಜ್ಞಾಂ ಪರೋ ಧರ್ಮಃ ಸಹ್ಯೌ ಜಯಪರಾಜಯೌ ॥27॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಾಧಿಕಶತತಮೋಽಧ್ಯಾಯಃ ॥108॥
ತನ್ನ ಮಗಳನ್ನೂ ಅವನಿಗೆ ಕೊಟ್ಟನು. ವಿಧವಿಧವಾದ ರತ್ನಗಳನ್ನು ಕೊಟ್ಟನು. ಇದು ರಾಜರ ಶ್ರೇಷ್ಠವಾದ ಧರ್ಮ.
ಜಯಪರಾಜಯಗಳನ್ನು ಸಹಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 108ನೆಯ ಅಧ್ಯಾಯವು ಮುಗಿಯಿತು.
0
109. ನೂರ ಒಂಭತ್ತನೆಯ ಅಧ್ಯಾಯ
ಚತುರಂಗಾದಿಗಣಗಳ ನಡತೆ
ಯುಧಿಷ್ಠಿರಃ
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ |
ಧರ್ಮವೃತ್ತಶ್ಚ ವೃತ್ತಿಶ್ಚ ವೃತ್ತ್ಯುಪಾಯಫಲಾನಿ ಚ ॥1॥
ಎಲೈ ಪರಂತಪನೇ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಧರ್ಮದ ನಡವಳಿಕೆಯನ್ನು, ಜೀವನೋಪಾಯವನ್ನು ಸಂಪಾದಿಸುವ ಕ್ರಮ ಮತ್ತು ಫಲಗಳನ್ನು ಹೇಳಿದ್ದೀಯೆ.
ರಾಜ್ಞಾಂ ವೃತ್ತಂ ಚ ಕೋಶಶ್ಚ ಕೋಶಸಂಜನನಂ ಮಹತ್ |
ಅಮಾತ್ಯಗುಣವೃದ್ಧಿಶ್ಚ ಪ್ರಕೃತೀನಾಂ ಚ ವರ್ಧನಮ್ ॥2॥
ರಾಜರ ನಡತೆ, ಕೋಶ, ಕೋಶದ ಅಭಿವೃದ್ಧಿ, ಅಮಾತ್ಯರ ಗುಣ, ವೃದ್ಧಿ, ಪ್ರಜೆಗಳ ಅಭಿವೃದ್ಧಿ -
ಷಾಡ್ಗುಣ್ಯಗುಣಕಲ್ಪಶ್ಚ ಸೇನಾನೀತಿಸ್ತಥೈವ ಚ |
ದುಷ್ಟಸ್ಯ ಚ ಪರಿಜ್ಞಾನಮದುಷ್ಟಸ್ಯ ಚ ಲಕ್ಷಣಮ್ ॥3॥
ಷಾಡ್ಗುಣ್ಯಗಳ ನಿರೂಪಣೆ, ಸೇನೆಯ ನೀತಿ, ದುಷ್ಟರನ್ನು ತಿಳಿಯುವ ಕ್ರಮ, ಅದುಷ್ಟರ ಲಕ್ಷಣ -
ಸಮಹೀನಾಧಿಕಾನಾಂ ಚ ಯಥಾವಲ್ಲಕ್ಷಣೋಚ್ಚಯಃ |
ಮಧ್ಯಮಸ್ಯ ಚ ತುಷ್ಟ್ಯರ್ಥಂ ಯಥಾ ಸ್ಥೇಯಂ ವಿವರ್ಧತಾ ॥4॥
ಸಮರ, ಅಧಮರ ಮತ್ತು ಉತ್ತಮರ ಯಥಾರ್ಥವಾದ ಲಕ್ಷಣಸಮೂಹ- ಗಳು, ಮಧ್ಯಮರ ಸಂತೋಷಕ್ಕಾಗಿ ಅಭಿವೃದ್ಧಿಯನ್ನು ಹೊಂದುವ ರಾಜನು ಅನುಸರಿಸಬೇಕಾದ ಕ್ರಮ,
ಕ್ಷೀಣಸಂಗ್ರಹವೃತ್ತಿಶ್ಚ ಯಥಾವತ್ ಸಂಪ್ರಕೀರ್ತಿತಾ |
ಲಘುನಾಽಽದೇಶರೂಪೇಣ ಗ್ರಂಥಯೋಗೇನ ಭಾರತ ॥5॥
ಎಲೈ ಭಾರತನೇ! ದುರ್ಬಲನಾದ ರಾಜನನ್ನು ಸಂಗ್ರಹಿಸುವ ರೀತಿ ಇವೆಲ್ಲವನ್ನೂ ಲಘುವಾದ ಉಪದೇಶದಿಂದ ಗ್ರಂಥಗಳಿಗೆ ಅನುಸಾರವಾಗಿ ಹೇಳಿದ್ದೀಯೆ.
ವಿಜಿಗೀಷೋಸ್ತಥಾ ವೃತ್ತಮುಕ್ತಂ ಚೈವ ತಥೈವ ತೇ |
ಗಣಾನಾಂ ವೃತ್ತಿಮಿಚ್ಛಾಮಿ ಶ್ರೋತುಂ ಮತಿಮತಾಂವರ ॥6॥

ಜಯವನ್ನು ಬಯಸುವ ರಾಜನ ನಡತೆಯನ್ನು ನೀವು ಹೇಳಿದ್ದೀಯೆ. ಎಲ್ಲೈ ಬುದ್ಧಿವಂತರಲ್ಲಿ ಶ್ರೇಷ್ಠನೇ! ಈಗ ಗಣಗಳ (ಚತುರಂಗಾದಿಗಣಗಳ) ನಡತೆಯನ್ನು ಕೇಳಲು ಬಯಸುತ್ತೇನೆ.
ಯಥಾ ಗಣಾಃ ಪ್ರವರ್ಧಂತೇ ನ ಭಿದ್ಯಂತೇ ಚ ಭಾರತ |
ಅರೀನ್ ಹಿ ವಿಜಿಗೀಷಂತೇ ಸುಹೃದಃ ಪ್ರಾಪ್ನುವಂತಿ ಚ ॥7॥
ಎಲ್ಲೈ ಭಾರತನೇ! ಗಣಗಳು ಹೇಗೆ ಅಭಿವೃದ್ಧಿಯನ್ನು ಹೊಂದುತ್ತವೆ. ಹೇಗೆ ಭೇದವನ್ನು ಹೊಂದುವುದಿಲ್ಲ. ಹೇಗೆ ಶತ್ರುಗಳನ್ನು ಗೆಲ್ಲಲು ಬಯಸುತ್ತವೆ. ಮತ್ತು ಸುಹೃಜ್ಜನರನ್ನು ಸಂಪಾದಿಸುತ್ತವೆ (ಎಂದು ಕೇಳಲು ಬಯಸುತ್ತೇನೆ).
ಭೇದಮೂಲೋ ವಿನಾಶೋ ಹಿ ಗಣಾನಾಮುಪಲಕ್ಷಯೇ |
ಮಂತ್ರಸಂವರಣಂ ದುಃಖಂ ಬಹೂನಾಮಿತಿ ಮೇ ಮತಿಃ ॥8॥
ಗಣಗಳ ವಿನಾಶವು ಆಂತರಿಕಭೇದಮೂಲವಾದುದು ಎಂದು ನಾನು ತಿಳಿ- ಯುತ್ತೇನೆ. ಗಣಗಳಲ್ಲಿ ಅನೇಕರು ಇರುವಾಗ ಮಂತ್ರವನ್ನು ಮುಚ್ಚಿಡುವುದು
ದುಃಖಕರವಾದ ಕಾರ್ಯವೆಂದು ನನ್ನ ಅಭಿಪ್ರಾಯ.
ಏತದಿಚ್ಛಾಮ್ಯಹಂ ಶ್ರೋತುಂ ನಿಖಿಲೇನ ಪರಂತಪ |
ಯಥಾ ಚ ತೇ ನ ಭಿದ್ಯೇರಂಸ್ತಚ್ಚ ಮೇ ಬ್ರೂಹಿ ಪಾರ್ಥಿವ ॥9॥
ಎಲ್ಲೈ ಪರಂತಪನೇ! ಇವೆಲ್ಲವನ್ನೂ ನಾನು ಸಂಪೂರ್ಣವಾಗಿ ಕೇಳಲು ಬಯಸುತ್ತೇನೆ. ಎಲ್ಲೈ ಪಾರ್ಥಿವನೇ! ಗಣಗಳು ಹೇಗೆ ಒಡೆದು ಹೋಗುವುದಿಲ್ಲ ಎಂಬುದನ್ನು ನನಗೆ ಹೇಳು.
ಭೀಷ್ಮ ಃ
ಗಣಾನಾಂ ಚ ಕುಲಾನಾಂ ಚ ರಾಜ್ಞಾಂ ಚ ಭರತರ್ಷಭ |
ವೈರಸಂದೀಪನಾವೇತೌ ಲೋಭಾಮರ್ಷೌ ಜನಾಧಿಪ ॥10॥
ಭೀಷ್ಮರು ಎಲ್ಲೈ ಭರತರ್ಷಭನೇ! ರಾಜನೇ! ಗಣಗಳಿಗೆ ಕುಲಗಳಿಗೆ ಮತ್ತು ರಾಜರಿಗೆ ವೈರವನ್ನು ಹಚ್ಚುವಂತಹವುಗಳು ಲೋಭ ಮತ್ತು ಕ್ರೋಧ ಇವೆರಡು.
ಲೋಭಮೇಕೋ ಹಿ ವೃಣುತೇ ತತೋಽಮರ್ಷಮನಂತರಮ್ |
ತೌ ಕ್ಷಯವ್ಯಯಸಂಯುಕ್ತಾವನ್ಯೋನ್ಯಜನಿತಾಶ್ರಯೌ ॥11॥
ಒಬ್ಬನು ಲೋಭವನ್ನು ಆಶ್ರಯಿಸುತ್ತಾನೆ. ಅನಂತರ (ಲೋಭವನ್ನು ಆಶ್ರಯಿಸಿ ಬಯಸಿದ ವಸ್ತುವು ದೊರೆಯದಿದ್ದರೆ) ಕ್ರೋಧವನ್ನು ಆಶ್ರಯಿಸುತ್ತಾನೆ. ಲೋಭ ಮತ್ತು ಕ್ರೋಧಗಳು ಕ್ಷಯ ಮತ್ತು ವ್ಯಯಗಳಿಂದ ಕೂಡಿ, ಪರಸ್ಪರವಾಗಿ ಆಶ್ರಯ- ವಾಗುತ್ತವೆ.
ಚಾರಮಂತ್ರಬಲಾದಾನೈಃ ಸಾಮದಾನವಿಭೇದನೈಃ |
ಕ್ಷಯವ್ಯಯಭಯೋಪಾಯೈಃ ಕರ್ಶಯಂತೀತರೇತರಮ್ ॥12॥
ರಾಜರು ಚಾರರ ಮತ್ತು ಮಂತ್ರಗಳ ಬಲವನ್ನು ದುರ್ಬಲಗೊಳಿಸಿ ಕ್ಷಯವ್ಯಯ -ಭಯಗಳಿಂದ ಕೂಡಿದ ಸಾಮದಾನಭೇದೋಪಾಯಗಳಿಂದ ಪರಸ್ಪರವಾಗಿ ಹಿಂಸಿಸುತ್ತಾರೆ.
ತತ್ರ ದಾನೇನ ಭಿದ್ಯಂತೇ ಗಣಾಃ ಸಂಘಾತವೃತ್ತಯಃ|
ಭಿನ್ನಾ ವಿಮನಸಃ ಸರ್ವೇ ಗಚ್ಛಂತ್ಯರಿವಶಂ ಭಯಾತ್ ॥13॥
ಅವುಗಳಲ್ಲಿ ಒಟ್ಟಿಗೆ ನಡೆದುಕೊಳ್ಳುವ ಗಣಗಳು ದಾನದಿಂದ ಭಿನ್ನವಾಗುತ್ತವೆ. ಭಿನ್ನವಾದವರೆಲ್ಲರೂ ಗಣಕಾರ್ಯದಲ್ಲಿ ವಿಮುಖರಾಗಿ ಭಯದಿಂದ ಶತ್ರುಗಳಿಗೆ ವಶರಾಗುತ್ತಾರೆ.
ಭೇದಾದ್ ಗಣಾ ವಿನಶ್ಯಂತಿ ಭಿನ್ನಾಃ ಸೂಪಜಪಾಃ ಪರೈಃ |
ತಸ್ಮಾತ್ ಸಂಘಾತಯೋಗೇಷು ಪ್ರಯತೇರನ್ ಗಣಾಃ ಸದಾ ॥14॥
ಭೇದದಿಂದ ಗಣಗಳು ನಾಶ ಹೊಂದುತ್ತವೆ. ಭೇದೋಪಾಯಕ್ಕೆ ಸಿಲುಕಿದವರು ಶತ್ರುಗಳಿಂದ ಬೇರೆ ದಾರಿಗೆ ಒಳ್ಳೆಯ ಮಾತುಗಳಿಂದ ಎಳೆಯಲ್ಪಡುತ್ತಾರೆ. ಆದ್ದರಿಂದ ಗಣಗಳು ಯಾವಾಗಲೂ ಒಟ್ಟಿಗೇ ಇರುವುದಕ್ಕೆ ಪ್ರಯತ್ನವನ್ನು ಮಾಡಬೇಕು.
ಅರ್ಥಾ ಹ್ಯೇವಾಧಿಗಮ್ಯಂತೇ ಸಂಘಾತಬಲಪೌರುಷಾತ್ |
ಬಾಹ್ಯಾಶ್ಚ ಮೈತ್ರೀಂ ಕುರ್ವಂತಿ ತೇಷು ಸಂಘಾತವೃತ್ತಿಷು ॥15॥
ಗಣಗಳು ಒಟ್ಟಿಗಿದ್ದರೆ ಗಣಗಳ ಬಲ ಮತ್ತು ಪೌರುಷಗಳಿಂದ ಅರ್ಥಪ್ರಾಪ್ತಿ- ಯಾಗುತ್ತದೆ. ಗಣಗಳ ಹೊರಗಿದ್ದವರು ಗಣಗಳ ಜೊತೆಯಲ್ಲಿ ಸ್ನೇಹವನ್ನು ಮಾಡುತ್ತಾರೆ.
ಜ್ಞಾನವೃದ್ಧಾನ್ ಪ್ರಶಂಸಂತಃ ಶುಶ್ರೂಷಂತಃ ಪರಸ್ಪರಮ್ |
ವಿನಿವೃತ್ತಾಭಿ(ನು)ಸಂಘಾತಾಃ ಸುಖಮೇಧಂತಿ ಸರ್ವಶಃ ॥16॥
ಜ್ಞಾನವೃದ್ಧರನ್ನು ಸೇವಿಸುತ್ತಾ, ಅವರ ಮಾತುಗಳನ್ನು ಕೇಳುತ್ತಾ, ಪರಸ್ಪರವಾಗಿ ಸಂಘರ್ಷವನ್ನು ತ್ಯಜಿಸಿ ಗಣಗಳು ಎಲ್ಲ ರೀತಿಯಿಂದಲೂ ಸುಖವನ್ನು ಹೊಂದುತ್ತವೆ.
ಧರ್ಮಿಷ್ಠಾನ್ ವ್ಯವಹಾರಾಂಶ್ಚ ಸ್ಥಾಪಯಂತಶ್ಚ ಶಾಸ್ತ್ರತಃ |
ಯಥಾವತ್ ಸಂಪ್ರವರ್ತಂತೋ ವಿವರ್ಧಂತೇ ಗಣೋತ್ತಮಾಃ ॥17॥
ಧರ್ಮಾನುಗುಣವಾದ (ವ್ಯವಹಾರಾಂಶ್ಚ) ಶಾಸ್ತ್ರಕ್ಕೆ ಅನುಗುಣವಾಗಿ ಸ್ಥಾಪಿಸುತ್ತಾ ಸರಿಯಾದ ರೀತಿಯಲ್ಲಿ ಪ್ರವೃತ್ತಿಯನ್ನು ಮಾಡುತ್ತಾ, ಗಣಗಳಲ್ಲಿ ಶ್ರೇಷ್ಠರಾದವರು ಗಣಗಳನ್ನು ಅಭಿವೃದ್ಧಿ ಪಡಿಸುತ್ತಾರೆ.
ಪುತ್ರಾನ್ ಭ್ರಾತೄನ್ ನಿಗೃಹ್ಣಂತೋ ವಿನಯೇ ಚ ಸದಾ ರತಾಃ |
ವಿನೀತಾಂಶ್ಚ ಪ್ರಗೃಹ್ಣಂತೋ ವಿವರ್ಧಂತೇ ಗಣೋತ್ತಮಾಃ ॥18॥

ಪುತ್ರರನ್ನು ಸಹೋದರರನ್ನುನಿಗ್ರಹಿಸುತ್ತಾ, ಸದಾ ವಿನಯಶೀಲರಾಗಿ ವಿನೀತ- ರಾದವರನ್ನು ಸಂಗ್ರಹಿಸುತ್ತಾ ಉತ್ತಮವಾದ ಗಣಗಳು ಅಭಿವೃದ್ಧಿಯನ್ನು ಹೊಂದು- ತ್ತವೆ.

ಚಾರಮಂತ್ರವಿಧಾನೇಷು ಕೋಶಸನ್ನಿಚಯೇಷು ಚ |
ನಿತ್ಯಯುಕ್ತಾ ಮಹಾಬಾಹೋ ವರ್ಧಂತೇ ಸರ್ವತೋ ಗಣಾಃ ॥19॥
ಎಲೈ ಮಹಾಬಾಹುವೇ! ಚಾರಮಂತ್ರವಿಧಿಗಳಲ್ಲಿಯೂ ಕೋಶಾಭಿವೃದ್ಧಿ- ಯಲ್ಲಿಯೂ ನಿತ್ಯವೂ ರತವಾದ ಗಣಗಳು ಎಲ್ಲ ರೀತಿಯಲ್ಲಿಯೂ ಬೆಳಯುತ್ತವೆ.

ಪ್ರಾಜ್ಞಾನ್ ಶೂರಾನ್ ಮಹೋತ್ಸಾಹಾನ್ ಕರ್ಮಸು ಸ್ಥಿರಪೌರುಷಾನ್ |
ಮಾನಯಂತಃ ಸದಾ ಯುಕ್ತಾ ವಿವರ್ಧಂತೇ ಗಣಾ ನೃಪ ॥20॥
ಎಲೈ ರಾಜನೇ! ಪ್ರಾಜ್ಞರನ್ನೂ, ಶೂರರನ್ನೂ, ಮಹೋತ್ಸಾಹವುಳ್ಳವರನ್ನೂ, ಕರ್ಮಗಳಲ್ಲಿ ಸ್ಥಿರವಾದ ಪೌರುಷವುಳ್ಳವರನ್ನೂ ಸನ್ಮಾನಿಸುತ್ತಾ ಸದಾ ಯುಕ್ತಗಳಾಗಿ ಗಣಗಳು ಬೆಳೆಯುತ್ತವೆ.

ದ್ರವ್ಯವಂತಶ್ಚ ಶೂರಾಶ್ಚ ಶಸ್ತ್ರಜ್ಞಾಃ ಶಾಸ್ತ್ರಪಾರಗಾಃ |
ಕೃಚ್ಛ್ರಾಸ್ವಾಪತ್ಸು ಸಮ್ಮೂಢಾನ್ ಗಣಾನುತ್ತಾರಯಂತಿ ತೇ ॥21॥
ದ್ರವ್ಯವಂತರೂ, ಶೂರರೂ, ಶಸ್ತ್ರಜ್ಞರೂ, ಶಾಸ್ತ್ರಪಾರಂಗತರೂ ಆದವರು ಪ್ರಮಾದಕ್ಕೆ ಒಳಗಾದ ಗಣಗಳನ್ನು ಕಷ್ಟಕರವಾದ ಆಪತ್ತುಗಳಿಂದ ದಾಟಿಸುತ್ತಾರೆ.

ಕ್ರೋಧೋ ಭೇದೋ ಭಯೋ ದಂಡಃ ಕರ್ಶನಂ ನಿಗ್ರಹೋ ವಧಃ |
ನಯತ್ಯರಿವಶಂ ಸದ್ಯೋ ಗಣಾನ್ ಭರತಸತ್ತಮ ॥22॥
ಎಲೈ ಭರತಶ್ರೇಷ್ಠನೇ! ಕ್ರೋಧ, ಭೇದ, ಭಯ, ದಂಡ, ಹಿಂಸೆ, ನಿಗ್ರಹ ಮತ್ತು ವಧೆಗಳು ಗಣಗಳನ್ನು ತತ್ಕ್ಷಣದಲ್ಲಿಯೇ ಶತ್ರುವಶವನ್ನಾಗಿ ಮಾಡುತ್ತವೆ.

ತಸ್ಮಾನ್ಮಾನಯಿತವ್ಯಾಸ್ತೇ ಗಣಮುಖ್ಯಾಃ ಪ್ರಧಾನತಃ |
ಲೋಕಯಾತ್ರಾ ಸಮಾಯತ್ತಾ ಭೂಯಸೀ ತೇಷು ಪಾರ್ಥಿವ ॥23॥
ಆದ್ದರಿಂದ ಗಣಗಳಲ್ಲಿ ಮುಖ್ಯರಾದವರನ್ನು ಪ್ರಯತ್ನಪೂರ್ವಕವಾಗಿ ಸನ್ಮಾನಿಸ- ಬೇಕು. ಎಲೈ ರಾಜನೇ! ಲೋಕಯಾತ್ರೆಯು ಬಹಳವಾಗಿ ಅವರನ್ನೇ ಅವಲಂಬಿಸಿದೆ.

ಮಂತ್ರಗುಪ್ತಿಃ ಪ್ರಧಾನೇಷು ಚಾರಶ್ಚಾಮಿತ್ರಕರ್ಶನ |
ನ ಗಣಾಃ ಕೃತ್ಸ್ನಶೋ ಮಂತ್ರಂ ಶ್ರೋತುಮರ್ಹಂತಿ ಭಾರತ ॥24॥
ಎಲೈ ಶತ್ರುಕರ್ಶನನೇ! ಮಂತ್ರದ ರಕ್ಷಣೆ ಮತ್ತು ಚಾರರ ನಿಯೋಜನೆ ಇವು ಪ್ರಧಾನರಾದವರನ್ನೇ ಆಶ್ರಯಿಸಿರುತ್ತದೆ.

ಗಣಮುಖ್ಯೈಸ್ತು ಸಂಭೂಯ ಕಾರ್ಯಂ ಗಣಹಿತಂ ಮಿಥಃ |
ಪೃಥಗ್ಗಣಸ್ಯ ಭಿನ್ನಸ್ಯ ವಿಮತಸ್ಯ ತತೋಽನ್ಯಥಾ |
ಅರ್ಥಾಃ ಪ್ರತ್ಯವಸೀದಂತಿ ತಥಾಽನರ್ಥಾ ಭವಂತಿ ಚ ॥25॥
ಎಲೈ ಭಾರತನೇ! ಗಣಗಳಲ್ಲಿ ಇದ್ದವರೆಲ್ಲರೂ ಮಂತ್ರವನ್ನು ತಿಳಿಯಲು ಅರ್ಹರಲ್ಲ. ಇಲ್ಲದಿದ್ದರೆ ಅರ್ಥವು ನಾಶವನ್ನು ಹೊಂದುತ್ತದೆ. ಮತ್ತು ಅನರ್ಥವು ಉಂಟಾಗುತ್ತದೆ.

ತೇಷಾಮನ್ಯೋನ್ಯಭಿನ್ನಾನಾಂ ಸ್ವಶಕ್ತಿಮನುತಿಷ್ಠತಾಮ್ |
ನಿಗ್ರಹಃ ಪಂಡಿತೈಃ ಕಾರ್ಯಃ ಕ್ಷಿಪ್ರಮೇವ ಪ್ರಧಾನತಃ ॥26॥
ಪರಸ್ಪರವಾಗಿ ಭಿನ್ನರಾಗಿ, ತಮ್ಮ ಶಕ್ತಿಯಿಂದ ಕಾರ್ಯವನ್ನು ಮಾಡುವ ಗಣದ ವ್ಯಕ್ತಿಗಳನ್ನು ಪಂಡಿತರು ತತ್ಕ್ಷಣದಲ್ಲಿಯೇ ಪ್ರಧಾನರನ್ನು ಆರಂಭಿಸಿ ನಿಗ್ರಹವನ್ನು ಮಾಡಬೇಕು.

ಕುಲೇಷು ಕಲಹಾ ಜಾತಾಃ ಕುಲವೃದ್ಧೈರುಪೇಕ್ಷಿತಾಃ |
ಗೋತ್ರಸ್ಯ ನಾಶಂ ಕುರ್ವಂತಿ ಗಣಸಂಭೇದಕಾರಕಮ್ ॥27॥
ಕುಲಗಳಲ್ಲಿ ಕಲಹಗಳುಂಟಾಗಿ ಕುಲವೃದ್ಧರು ಅದನ್ನು ಉಪೇಕ್ಷಿಸಿದರೆ ಆ ಕಲಹಗಳು ಗೋತ್ರನಾಶವನ್ನೇ ಮಾಡುತ್ತವೆ. ಅದು ಪುನಃ ಗಣದ ಭೇದವನ್ನು ಉಂಟುಮಾಡುತ್ತದೆ.

ಆಭ್ಯಂತರಂ ಭಯಂ ರಕ್ಷ್ಯಂ ಸುರಕ್ಷ್ಯಂ ಬಾಹ್ಯತೋ ಭಯಮ್ |
ಆಭ್ಯಂತರಾದ್ ಭಯಂ ಜಾತಂ ಸದ್ಯೋ ಮೂಲಂ ನಿಕೃಂತತಿ ॥28॥
ಒಳಗಿನಿಂದುಂಟಾಗುವ ಭಯವನ್ನು ಪರಿಹರಿಸಬೇಕು. ಹೊರಗಿನಿಂದ ಉಂಟಾ -ಗುವ ಭಯವನ್ನು ಇನ್ನೂ ಚೆನ್ನಾಗಿ ಪರಿಹರಿಸಬೇಕು. ಒಳಗಿನವರಿಂದಲೇ ಭಯ- ವುಂಟಾದರೆ ಅದು ತತ್ಕ್ಷಣವೇ ಮೂಲವನ್ನೇ ನಾಶಮಾಡುತ್ತದೆ.

ಅಕಸ್ಮಾತ್ ಕ್ರೋಧಲೋಭಾದ್ ವಾ ಮೋಹಾದ್ ವಾಪಿ ಸ್ವಭಾವಜಾತ್ |
ಅನ್ಯೋನ್ಯಂ ನಾಭಿಭಾಷಂತೇ ತತ್ಪರಾಭಾವಲಕ್ಷಣಮ್ ॥29॥
ಗಣಗಳಲ್ಲಿದ್ದವರು ಅಕಸ್ಮಾತ್ತಾಗಲೀ, ಕ್ರೋಧಲೋಭಗಳಿಂದಾಗಲೀ, ಸ್ವಾಭಾ- ವಿಕವಾದ ಮೋಹದಿಂದಾಗಲೀ ಪರಸ್ಪರವಾಗಿ ಮಾತನಾಡದಿದ್ದರೆ ಅದು ಪರಾ- ಭವದ ಲಕ್ಷಣ.

ಜಾತ್ಯಾ ಚ ಸದೃಶಾಃ ಸರ್ವೇ ಕುಲೇನ ಸದೃಶಾಸ್ತಥಾ |
ನ ತು ಶೌರ್ಯೇಣ ಬುದ್ಧ್ಯಾ ವಾ ರೂಪದ್ರವ್ಯೇಣ ವಾ ಪುನಃ ॥30॥
ಎಲ್ಲರೂ ಜಾತಿಯಿಂದಲೂ, ಕುಲದಿಂದಲೂ ಸದೃಶರಾಗಿರುತ್ತಾರೆ. ಆದರೆ ಶೌರ್ಯದಿಂದಾಗಲೀ, ಬುದ್ಧಿಯಿಂದಾಗಲೀ, ರೂಪಸಂಪತ್ತಿನಿಂದಾಗಲೀ ಸದೃಶ- ರಾಗಿರುವುದಿಲ್ಲ.

ಭೇದಾಚ್ಚೈವ ಪ್ರಮಾದಾಚ್ಚ ನಾಮ್ಯಂತೇ ರಿಪುಭಿರ್ಗಣಾಃ |
ತಸ್ಮಾತ್ ಸಂಘಾತಮೇವಾಹುರ್ಗಣಾನಾಂ ಶರಣಂ ಮಹತ್ ॥31॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ನವಾಧಿಕಶತತಮೋಽಧ್ಯಾಯಃ ॥109॥
ಗಣಗಳಲ್ಲಿ ಉಂಟಾಗುವ ಭೇದದಿಂದಲೂ ಮತ್ತು ಪ್ರಮಾದದಿಂದಲೂ ಶತ್ರುಗಳು ಗಣಗಳನ್ನು ಬಗ್ಗಿಸುತ್ತಾರೆ. ಆದ್ದರಿಂದ ಒಡೆಯದೇ ಒಟ್ಟಿಗಿರುವುದೇ ಗಣ- ಗಳಿಗೆ ದೊಡ್ಡ ಆಶ್ರಯವಾದುದು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 109ನೆಯ ಅಧ್ಯಾಯ ಮುಗಿಯಿತು
0
110. ನೂರಹತ್ತನೆಯ ಅಧ್ಯಾಯ
ಪಿತೃಮಾತೃಗುರುಮಹಿಮಾಕಥನ
ಯುಧಿಷ್ಠಿರಃ
ಮಹಾನಯಂ ಧರ್ಮಪಥೋ ಬಹುಶಾಖಶ್ಚ ಭಾರತ |
ಕಿಂಸ್ವಿದೇವೇಹ ಧರ್ಮಾಣಾಮನುಷ್ಠೇಯತಮಂ ಮತಮ್ ॥1॥
ಕಿಂ ಕಾರ್ಯಂ ಸರ್ವಧರ್ಮಾಣಾಂ ಗರೀಯೋ ಭವತೋ ಮತಮ್ |
ಯಥಾಯಂ ಪುರುಷೋ ಧರ್ಮಮಿಹ ಚ ಪ್ರೇತ್ಯ ಚಾಪ್ನುಯಾತ್ ॥2॥
ಯುಧಿಷ್ಠಿರ ಎಲೈ ಭಾರತನೇ! ಈ ಧರ್ಮಮಾರ್ಗವು ಬಹಳ ವಿಸ್ತಾರವಾ- ದುದು. ಮತ್ತು ಅನೇಕ ಕವಲುಗಳಿಂದ ಕೂಡಿದುದು. ಈ ಧರ್ಮಗಳಲ್ಲಿ ಅನುಷ್ಠಾನ ಮಾಡಬೇಕಾದ ಶ್ರೇಷ್ಠವಾದ ಧರ್ಮವು ಯಾವುದೆಂದು ನಿನ್ನ ಅಭಿಪ್ರಾಯ? ಯಾವ ಕಾರ್ಯವು ಸರ್ವಧರ್ಮಗಳಿಗಿಂತ ಗುರುತರವಾದುದೆಂದು ನಿನ್ನ ಅಭಿಪ್ರಾಯ? ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ ಪುರುಷನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಧರ್ಮವನ್ನು ಬಯಸುತ್ತಾನೆಯೋ (ಅಂತಹ ಕಾರ್ಯವನ್ನು ಹೇಳು)
ಭೀಷ್ಮಃ
ಮಾತಾಪಿತ್ರೋರ್ಗುರೂಣಾಂ ಚ ಪೂಜಾ ಬಹುಮತಾ ಮಮ |
ಅತ್ರ ಯುಕ್ತೋ ನರೋ ಲೋಕಾನ್ ಯಶಶ್ಚ ಮಹದಶ್ನುತೇ ॥3॥
ಭೀಷ್ಮರು ತಂದೆ ತಾಯಿಯರ ಮತ್ತು ಗುರುಗಳ ಪೂಜೆಯು ಶ್ರೇಷ್ಠವಾ- ದುದು ಎಂದು ನನ್ನ ಅಭಿಪ್ರಾಯ. ಇವುಗಳಲ್ಲಿ ನಿರತನಾದ ಮನುಷ್ಯನು ಅಪಾರ- ವಾದ ಕೀರ್ತಿಯನ್ನೂ ಮತ್ತು ಶುಭಲೋಕಗಳನ್ನೂ ಹೊಂದುತ್ತಾನೆ.
ಯದೇತೇ ಹ್ಯಭಿಜಾನೀಯುಃ ಕರ್ಮ ತಾತ ಸುಪೂಜಿತಾಃ |
ಧರ್ಮ್ಯಂ ಧರ್ಮವಿರುದ್ಧಂ ವಾ ತತ್ ಕರ್ತವ್ಯಂ ಯುಧಿಷ್ಠಿರ ॥4॥
ಎಲೈ ಪ್ರೀತಿಪಾತ್ರನೇ! ಯುಧಿಷ್ಠಿರನೇ! ಚೆನ್ನಾಗಿ ಪೂಜಿತರಾದ ಈ ಮೂವರು ಏನನ್ನು ಹೇಳುತ್ತಾರೆಯೋ ಅದು ಧರ್ಮವಾಗಿರಲಿ ಧರ್ಮವಿರುದ್ಧವಾಗಿರಲಿ ಅದನ್ನು ಮಾಡಬೇಕು.
ನ ತೈರನಭ್ಯನುಜ್ಞಾತೋ ಧರ್ಮಮನ್ಯಂ ಪ್ರಕಲ್ಪಯೇತ್ |
ಯಮೇತೇಽಭ್ಯನುಜಾನೀಯುಃ ಸ ಧರ್ಮ ಇತಿ ನಿಶ್ಚಯಃ ॥5॥
ಅವರ ಅನುಮತಿಯನ್ನು ಪಡೆಯದೇ ಬೇರೆ ಧರ್ಮವನ್ನು ಆಚರಿಸಬಾರದು. ಯಾವುದಕ್ಕೆ ಅವರು ಅನುಮತಿಯನ್ನು ಕೊಡುತ್ತಾರೋ ಅದು ಧರ್ಮ ಎಂಬುದು ನಿಶ್ಚಿತವಾದುದು.
ಏತ ಏವ ತ್ರಯೋ ಲೋಕಾ ಏತ ಏವಾಶ್ರಮಾಸ್ತ್ರಯಃ |
ಏತ ಏವ ತ್ರಯೋ ವೇದಾ ಏತ ಏವ ತ್ರಯೋಽಗ್ನಯಃ ॥6॥
ಇವರೇ ಮೂರು ಲೋಕಗಳು, ಮೂರು ಆಶ್ರಮಗಳು, ಮೂರು ವೇದಗಳು, ಮೂರು ಅಗ್ನಿಗಳು.
ಪಿತಾ ಹ್ಯಗ್ನಿರ್ಗಾರ್ಹಪತ್ಯೋ ಮಾತಾಽಗ್ನಿರ್ದಕ್ಷಿಣಃ ಸ್ಮೃತಃ |
ಗುರುರಾಹವನೀಯಸ್ತು ಸಾಽಗ್ನಿತ್ರೇತಾ ಗರೀಯಸೀ ॥7॥
ತಂದೆಯು ಗಾರ್ಹಪತ್ಯಾಗ್ನಿ, ತಾಯಿಯು ದಕ್ಷಿಣಾಗ್ನಿ, ಗುರುವು ಆಹವನೀ- ಯಾಗ್ನಿ - ಈ ತ್ರೇತಾಗ್ನಿಯು ಬಹಳ ಗರಿಷ್ಠವಾದುದು.
ತ್ರಿಷ್ವಪ್ರಮಾದ್ಯನ್ನೇತೇಷು ತ್ರೀನ್ ಲೋಕಾನವಜೇಷ್ಯಸಿ |
ಪಿತೃವೃತ್ತ್ಯಾ ತ್ವಿಮಂ ಲೋಕಂ ಮಾತೃವೃತ್ತ್ಯಾ ತಥಾಽಪರಮ್ |
ಬ್ರಹ್ಮಲೋಕಂ ಗುರೋರ್ವೃತ್ತ್ಯಾ ನಿತ್ಯಮೇವ ಚರಿಷ್ಯಸಿ ॥8॥
ಈ ಮೂವರ ವಿಷಯದಲ್ಲಿ ಎಚ್ಚರಿಕೆಯಿಂದ ನಡೆದುಕೊಂಡರೆ ನೀನು ಮೂರು ಲೋಕಗಳನ್ನೂ ಜಯಿಸುವಿ. ತಂದೆಯ ಸೇವೆಯಿಂದ ಈ ಲೋಕವನ್ನೂ, ತಾಯಿಯ ಸೇವೆಯಿಂದ ಪರಲೋಕವನ್ನೂ, ಗುರುವಿನ ಸೇವೆಯಿಂದ ಬ್ರಹ್ಮ- ಲೋಕವನ್ನು ಪಡೆದು ಅಲ್ಲಿ ಯಾವಾಗಲೂ ಸಂಚರಿಸುವಿ.
ಸಮ್ಯಗೇತೇಷು ವರ್ತಸ್ವ ತ್ರಿಷು ಲೋಕೇಷು ಭಾರತ |
ಯಶಃ ಪ್ರಾಪ್ಸ್ಯಸಿ ಭದ್ರಂ ತೇ ಧರ್ಮಂ ಚ ಸುಮಹಾಫಲಮ್ ॥9॥
ಎಲೈ ಭಾರತನೇ! ಈ ಮೂರು ಲೋಕಗಳ ಪ್ರಾಪಕರಾದ ಇವರಲ್ಲಿ ಸರಿಯಾಗಿ ನಡೆದುಕೋ. ನಿನಗೆ ಮಂಗಳವಾಗಲಿ. ಕೀರ್ತಿಯನ್ನೂ ಮತ್ತು ಮಹಾಫಲವುಳ್ಳ ಧರ್ಮವನ್ನೂ ಪಡೆಯುವಿ.
ನೈತಾನತಿಶಯೇಜ್ಜಾತು ನಾಶ್ನೀಯಾನ್ನ ಚ ದೂಷಯೇತ್ |
ನಿತ್ಯಂ ಪರಿಚರೇಚ್ಚೈವ ತದ್ ವೈ ಸುಕೃತಮುತ್ತಮಮ್ |

ಕೀರ್ತಿಂ ಪುಣ್ಯಂ ಯಶೋ ಲೋಕಾನ್ ಪ್ರಾಪ್ಸ್ಯಸೇ ಚ ಜನಾಧಿಪ ॥10॥
ಇವರನ್ನು ಯಾವಾಗಲೂ ಮೀರಬಾರದು. ಅವರಿಗಿಂತ ಮೊದಲು ಭೋಜನ- ವನ್ನು ಮಾಡಬಾರದು. ನಿತ್ಯವೂ ಅವರ ಸೇವೆಯನ್ನು ಮಾಡಬೇಕು. ಅದೇ ಶ್ರೇಷ್ಠ- ವಾದ ಪುಣ್ಯಕಾರ್ಯ. ಎಲೈ ಜನಾಧಿಪನೇ! ಹಾಗೆ ಮಾಡಿದರೆ ನೀನು ಈ ಲೋಕ- ದಲ್ಲಿ ಕೀರ್ತಿಯನ್ನೂ ಪರಲೋಕದಲ್ಲಿ ಯಶಸ್ಸನ್ನೂ ಪುಣ್ಯವನ್ನೂ ಪಡೆಯುವಿ.
ಸರ್ವೇ ತಸ್ಯಾದೃತಾ ಲೋಕಾ ಯಸ್ಯೈತೇ ತ್ರಯ ಆದೃತಾಃ |
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥11॥
ಈ ಮೂವರೂ ಯಾವನಿಂದ ಆದರಿಸಲ್ಪಡುತ್ತಾರೆಯೋ ಅವರಿಂದ ಎಲ್ಲ ಲೋಕಗಳೂ ಆದರಿಸಲ್ಪಡುತ್ತವೆ. ಈ ಮೂವರನ್ನು ಅದರಿಸದವನು ಮಾಡಿದ ಎಲ್ಲಾ ಕಾರ್ಯಗಳೂ ನಿಷ್ಫಲವಾಗುತ್ತವೆ.
ನೈವಾಯಂ ನ ಪರೋ ಲೋಕಸ್ತಸ್ಯ ಚೈವ ಪರಂತಪ |
ಅಮಾನಿತಾ ನಿತ್ಯಮೇವ ಯಸ್ಯೈತೇ ಗುರವಸ್ತ್ರಯಃ ॥12॥
ಎಲೈ ಪರಂತಪನೇ! ಯಾವನಿಂದ ಗುರುಗಳಾದ ಈ ಮೂವರು ಸನ್ಮಾನಿಸ- ಲ್ಪಡುವುದಿಲ್ಲವೋ ಅವನಿಗೆ ಈ ಲೋಕವೂ ಇಲ್ಲ; ಪರಲೋಕವೂ ಇಲ್ಲ.
ನ ಚಾಸ್ಮಿನ್ನ ಪರೇ ಲೋಕೇ ಯಶಸ್ತಸ್ಯ ಪ್ರಕಾಶತೇ |
ನ ಚಾನ್ಯದಪಿ ಕಲ್ಯಾಣಂ ಪಾರತ್ರಂ ಸಮುದಾಹೃತಮ್ ॥13॥
ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಅವನ ಕೀರ್ತಿಯು ಪ್ರಕಾಶಿ- ಸುವುದಿಲ್ಲ. ಮತ್ತು ಪರಲೋಕದಲ್ಲಿ ಅವನಿಗೆ ಬೇರೆ ಯಾವ ಶುಭವೂ ಉಂಟಾಗು- ವುದಿಲ್ಲ.
ಏಭ್ಯ ಏವಾಸ್ಮಿ ಯತ್ಸರ್ವಂ ಕೃತ್ವಾ ಯದ್ ವಿಸೃಜಾಮ್ಯಹಮ್ |
ತದಾಸೀನ್ಮೇ ಶತಗುಣಂ ಸಹಸ್ರಗುಣಮೇವ ಚ |
ತಸ್ಮಾನ್ಮೇ ಸಂಪ್ರಕಾಶಂತೇ ತ್ರಯೋ ಲೋಕಾ ಯುಧಿಷ್ಠಿರ ॥14॥
ನಾನು ಈ ಮೂವರ ಸೇವೆಯಿಂದಲೇ ಅಭಿವೃದ್ಧನಾಗಿದ್ದೇನೆ. ಇವರ ಉಪ- ದೇಶದಿಂದಲೇ ಎಲ್ಲ ಪುಣ್ಯಕಾರ್ಯಗಳನ್ನು ಮಾಡಿ ಪಾಪವನ್ನು ತ್ಯಜಿಸಿದ್ದೇನೆ. ಇವರ ಸಲುವಾಗಿಯೇ ಎಲ್ಲ ಹಿತವನ್ನೂ ಮಾಡಿ ಊರ್ಧ್ವರೇತಸ್ಕನಾಗಿ ರಾಜ್ಯವನ್ನು ತ್ಯಜಿಸಿದ್ದೇನೆ. ಎಲೈ ಯುಧಿಷ್ಠಿರನೇ! ಅದರಿಂದ ಆ ಪುಣ್ಯವು ನೂರು ಪಟ್ಟು, ಸಾವಿರಪಟ್ಟು ಅಧಿಕವಾಗಿದೆ.  ಲಕ್ಷ್ಮಾಲಂಕಾರ
ದಶೈವ ತು ಸದಾಚಾರ್ಯಃ ಶ್ರೋತ್ರಿಯಾನತಿರಿಚ್ಯತೇ |
ದಶಾಚಾರ್ಯಾನುಪಾಧ್ಯಾಯ ಉಪಾಧ್ಯಾಯಾನ್ ಪಿತಾ ದಶ ॥15॥
ಆಚಾರ್ಯನು ಹತ್ತು ಶ್ರೋತ್ರಿಯರಿಗಿಂತಲೂ ಶ್ರೇಷ್ಠನಾದವನು. ಉಪಾ- ಧ್ಯಾಯನು ಹತ್ತು ಆಚಾರ್ಯರನ್ನು ಮೀರಿಸಿದವನು. ತಂದೆಯು ಹತ್ತು ಉಪಾ- ಧ್ಯಾಯರನ್ನು ಮೀರಿಸಿದವನು.
ಪಿತ್ರೂನ್ ದಶ ತು ಮಾತೈಕಾ ಸರ್ವಾಂ ವಾ ಪೃಥಿವೀಮಪಿ |
ಗುರುತ್ವೇನಾಭಿಭವತಿ ನಾಸ್ತಿ ಮಾತೃಸಮೋ ಗುರುಃ |
ಗುರುರ್ಗರೀಯಾನ್ ಪಿತೃತೋ ಮಾತೃತಶ್ಚೇತಿ ಮೇ ಮತಿಃ ॥16॥
ತಾಯಿಯೊಬ್ಬಳೇ ಹತ್ತು ತಂದೆಗಳನ್ನು ಮೀರಿದವಳು. ಅಥವಾ ಸಮಗ್ರವಾದ ಭೂಮಿಯನ್ನೂ ಮೀರಿದವಳು. ಅವಳು ತನ್ನ ಗುರುತ್ವದಿಂದ ಎಲ್ಲರನ್ನೂ ಹಿಂದೆ ಹಾಕುತ್ತಾಳೆ. ತಾಯಿಗೆ ಸಮಾನವಾದ ಗುರುವಿಲ್ಲ. ವಿದ್ಯೋಪದೇಶವನ್ನು ಮಾಡುವ ಗುರುವು ತಂದೆಗಿಂತಲೂ ಮತ್ತು ತಾಯಿಗಿಂತಲೂ ಶ್ರೇಷ್ಠನಾದವನೆಂದು ನನ್ನ ಅಭಿಪ್ರಾಯ.
ಉಭೌ ಹಿ ಮಾತಾಪಿತರೌ ಜನ್ಮನ್ಯೇವೋಪಯುಜ್ಯತಃ |
ಶರೀರಮೇತೌ ಸೃಜತಃ ಪಿತಾ ಮಾತಾ ಚ ಭಾರತ |
ಆಚಾರ್ಯಶಿಷ್ಟಾ ಯಾ ಜಾತಿಃ ಸಾ ದಿವ್ಯಾ ಸಾಽಜರಾಮರಾ ॥17॥
ತಂದೆ ತಾಯಿಗಳಿಬ್ಬರೂ ಪುರುಷನ ಜನ್ಮದಲ್ಲಿ ಮಾತ್ರ ಉಪಯುಕ್ತರಾಗುತ್ತಾರೆ. ಎಲೈ ಭಾರತನೇ! ಈ ತಂದೆತಾಯಿಗಳು ಪುರುಷನ ಶರೀರವನ್ನು ಸೃಷ್ಟಿಸುತ್ತಾರೆ. ಆದರೆ ಆಚಾರ್ಯನಿಂದ ಉಂಟಾದ ಜನ್ಮವು ದಿವ್ಯವಾದುದು ಮತ್ತು ಅಜರಾಮರವಾ- ದುದು.
ಅವಧ್ಯಾ ಹಿ ಸದಾ ಮಾತಾ ಪಿತಾ ಚಾಪ್ಯಪಕಾರಿಣೌ |
ನ ಸ ದುಷ್ಯತಿ ತತ್ ಕೃತ್ವಾ ನ ಚ ತೇ ದೂಷಯಂತಿ ತಮ್ |
ಧರ್ಮಾಯ ಯತಮಾನಾನಾಂ ಪಿತೃದೇವಾಃ ಸಹರ್ಷಿಭಿಃ ॥18॥
ತಂದೆ ತಾಯಿಗಳು ಅಪಕಾರವನ್ನು ಮಾಡಿದರೂ ಅವರನ್ನು ಹೊಡೆಯ- ಬಾರದು. ಅವರು ಹೇಳಿದ ಕಾರ್ಯವನ್ನು ಮಾಡಿ ಅವರಿಗೆ ಹಿತವನ್ನು ಮಾಡು- ವುದರಲ್ಲಿ ಯಾವ ದೋಷವೂ ಇಲ್ಲ. ಅವರು ಅವನಿಗೆ ದೋಷವನ್ನುಂಟು ಮಾಡುವುದಿಲ್ಲ. ಧರ್ಮಕ್ಕಾಗಿ ಪ್ರಯತ್ನಪಡುವವನಿಗೆ ಪಿತೃದೇವತೆಗಳು ಋಷಿಗಳ ಜೊತೆಯಲ್ಲಿ ಸಹಾಯ ಮಾಡುತ್ತಾರೆ.
ಯ ಆವೃಣೋತ್ಯವಿತಥೇನ ಕರ್ಣಾ-
ವೃತಂ ಬ್ರುವನ್ನಮೃತಂ ಸಂಪ್ರಯಚ್ಛನ್ |
ತಂ ವೈ ಮನ್ಯೇ ಪಿತರಂ ಮಾತರಂ ಚ
ತಸ್ಮೈ ನ ದ್ರುಹ್ಯೇತ್ ಕೃತಮಸ್ಯ ಜಾನನ್ ॥19॥
ಯಾವ ಗುರುವು ಸತ್ಯವಾದ ಉಪದೇಶವನ್ನು ಮಾಡಿ, ಅಮೃತಪ್ರದಾನವನ್ನು ಮಾಡಿ ಕಿವಿಗಳನ್ನು ತುಂಬುತ್ತಾನೆಯೋ ಅವನೇ ತಂದೆ ಮತ್ತು ತಾಯಿಯೆಂದು ತಿಳಿಯುತ್ತೇನೆ. ಅವನು ಮಾಡಿದ ಉಪಕಾರವನ್ನು ತಿಳಿದವನು ಎಂದೂ ಅವನಿಗೆ ದ್ರೋಹವನ್ನು ಮಾಡಬಾರದು.

ವಿದ್ಯಾಂ ಶ್ರುತ್ವಾಯೇ ಗುರುಂ ನಾದ್ರಿಯಂತೇ
ಪ್ರತ್ಯಾಪನ್ನಾ ಮನಸಾ ಕರ್ಮಣಾ ವಾ |
ಯಥೈವ ತೇ ಗುರುಭಿರ್ಭಾವನೀಯಾ-
ಸ್ತಥಾ ತೇಷಾಂ ಗುರವೋಽಪ್ಯರ್ಚನೀಯಾಃ ||20||
ಗುರುವಿನಿಂದ ವಿದ್ಯೆಯನ್ನು ಪಡೆದು ಯಾರು ಮನಸ್ಸಿನಿಂದಾಗಲೀ ಕರ್ಮ- ದಿಂದಾಗಲೀ ಅವನಿಗೆ ಆದರವನ್ನು ಮಾಡುವುದಿಲ್ಲವೋ ಅವರು ಹೆಜ್ಜೆ ಹೆಜ್ಜೆಗೆ ಆಪತ್ತಿಗೆ ಸಿಲುಕುತ್ತಾರೆ. ಪುರುಷರು ತಮ್ಮನ್ನು ಹೇಗೆ ಶುಭದೃಷ್ಟಿಯಿಂದ ನೋಡ- ಬಯಸುತ್ತಾರೆಯೋ ಹಾಗೆ ಶಿಷ್ಯರೂ ಸಹ ಗುರುಗಳನ್ನು ಶುಭದೃಷ್ಟಿಯಿಂದ ಅರ್ಚಿಸಬೇಕು.
ತಸ್ಮಾತ್ ಪೂಜಯಿತವ್ಯಾಶ್ಚ ಸಂವಿಭಜ್ಯಾಶ್ಚ ಯತ್ನತಃ |
ಗುರವೋಽರ್ಚಯಿತವ್ಯಾಶ್ಚ ಪುರಾಣಂ ಧರ್ಮಮಿಚ್ಛತಾ ||21||
ಆದ್ದರಿಂದ ಗುರುಗಳಿಗೆ ತಮ್ಮ ಸಂಪತ್ತನ್ನು ಹಂಚಿ ಪೂಜಿಸಬೇಕು. ಪ್ರಾಚೀನ- ವಾದ ಧರ್ಮವನ್ನು ಬಯಸುವವನು ಗುರುಗಳನ್ನು ಅರ್ಚಿಸಬೇಕು.
ಯೇನ ಪ್ರೀತಾಶ್ಚ ಪಿತರಸ್ತೇನ ಪ್ರೀತಃ ಪಿತಾಮಹಃ |
ಪ್ರೀಣಾತಿ ಮಾತರಂ ಯೇನ ಪೃಥಿವೀ ತೇನ ಪೂಜಿತಾ ||22||
ಯಾವನು ತಂದೆಯನ್ನು ಪ್ರಸನ್ನಗೊಳಿಸುತ್ತಾನೆಯೋ ಅದರಿಂದ ಅವನು ಪಿತಾಮಹನನ್ನು ಸಂತೋಷಗೊಳಿಸುತ್ತಾನೆ. ಯಾವನು ತಾಯಿಯನ್ನು ಸಂತೋಷ- ಗೊಳಿಸುತ್ತಾನೆಯೋ ಅವನು ಪೃಥಿವಿಯನ್ನೇ ಪೂಜಿಸುತ್ತಾನೆ.
ಯೇನ ಪ್ರೀಣಾತ್ಯುಪಾಧ್ಯಾಯಂ ತೇನ ಸ್ಯಾದ್ ಬ್ರಹ್ಮ ಪೂಜಿತಮ್ |
ಮಾತೃತಃ ಪಿತೃತಶ್ಚೈವ ತಸ್ಮಾತ್ ಪೂಜ್ಯತಮೋ ಗುರುಃ |
ಋಷಯಶ್ಚ ಹಿ ದೇವಾಶ್ಚ ಪ್ರೀಯಂತೇ ಪಿತೃಭಿಃ ಸಹ ||23||
ಯಾವನು ಆಚಾರ್ಯನನ್ನು ಪೂಜಿಸುತ್ತಾನೆಯೋ ಅವನು ಬ್ರಹ್ಮನನ್ನೇ ಪೂಜಿ- ಸುತ್ತಾನೆ. ಆದ್ದರಿಂದ ಗುರುವು ತಂದೆಗಿಂತಲೂ, ತಾಯಿಗಿಂತಲೂ ಅತ್ಯಂತ ಪೂಜ್ಯ- ನಾದವನು. ಋಷಿಗಳು ಮತ್ತು ದೇವತೆಗಳು ಪಿತೃಗಳ ಜೊತೆಯಲ್ಲಿ ಗುರುಪೂಜೆ- ಯನ್ನು ಮಾಡಿದವನ ಮೇಲೆ ಪ್ರಸನ್ನರಾಗುತ್ತಾರೆ.
ನ ಕೇನಚನ ವೃತ್ತೇನ ಹ್ಯವಜ್ಞೇಯೋ ಗುರುರ್ಭವೇತ್ |
ನ ಚ ಮಾತಾ ನ ಚ ಪಿತಾ ತಾದೃಶೋ ಯಾದೃಶೋ ಗುರುಃ ||24||
ಯಾವ ನಡತೆಯಿಂದಲೂ ಗುರುವಿಗೆ ಅವಮಾನ ಮಾಡಬಾರದು. ಗುರುವಿನ ಮಹಿಮೆಯಂತಹದೋ ತಾಯಿಯ ಅಥವಾ ತಂದೆಯ ಮಹಿಮೆಯು ಅಂತಹು- ದಲ್ಲ.
ನ ತೇಽವಮಾನಮರ್ಹಂತಿ ನ ಚ ತೇ ದೂಷಯಂತಿ ತಮ್ |
ಗುರೂಣಾಮೇವ ಸತ್ಕಾರಂ ವಿದುರ್ದೇವಾಃ ಸಹರ್ಷಿಭಿಃ ||25||
ಅವರು ಅವಮಾನಕ್ಕೆ ಅರ್ಹರಲ್ಲ. ಅವರು ಆ ಪುರುಷನನ್ನು ದೂಷಿಸುವುದಿಲ್ಲ. ದೇವತೆಗಳು ಮತ್ತು ಋಷಿಗಳು ಗುರುಗಳ ಸತ್ಕಾರವನ್ನೇ ದೊಡ್ಡ ಧರ್ಮವೆಂದು ತಿಳಿಯುತ್ತಾರೆ.
ಉಪಾಧ್ಯಾಯಂ ಪಿತರಂ ಮಾತರಂ ಚ
ಯೇಽಭಿದ್ರುಹ್ಯಂತಿ ಮನಸಾ ಕರ್ಮಣಾ ವಾ |
ತೇಷಾಂ ಪಾಪಂ ಭ್ರೂಣಹತ್ಯಾವಿಶಿಷ್ಟಂ
ತಸ್ಮಾನ್ನಾನ್ಯಃ ಪಾಪಕೃದಸ್ತಿ ಲೋಕೇ ||26||
ಯಾರು ಉಪಾಧ್ಯಾಯನನ್ನಾಗಲೀ ತಂದೆತಾಯಿಗಳನ್ನಾಗಲೀ ಮನಸ್ಸಿನಿಂದ ಅಥವಾ ಕ್ರಿಯೆಯಿಂದ ದ್ರೋಹಕ್ಕೆ ಒಳಪಡಿಸುತ್ತಾರೆಯೋ ಅವರಿಗೆ ಭ್ರೂಣಹತ್ಯೆ- ಗಿಂತಲೂ ಅಧಿಕವಾದ ಪಾಪವು ಉಂಟಾಗುತ್ತದೆ. ಲೋಕದಲ್ಲಿ ಅವನಿಗಿಂತ ಹೆಚ್ಚು ಪಾಪವನ್ನು ಮಾಡಿದವನು ಇರುವುದಿಲ್ಲ.
ಮಿತ್ರದ್ರುಹಃ ಕೃತಘ್ನಸ್ಯ ಸ್ತ್ರೀಘ್ನಸ್ಯ ಪಿಶುನಸ್ಯ ಚ |
ಚತುರ್ಣಾಂ ವಯಮೇತೇಷಾಂ ನಿಷ್ಕೃತಿಂ ನಾನುಶುಶ್ರುಮಃ ||17||
ಮಿತ್ರದ್ರೋಹ, ಕೃತಘ್ನತೆ, ಸ್ತ್ರೀಹತ್ಯೆ, ಚಾಡಿಯನ್ನು ಹೇಳುವುದು ಈ ನಾಲ್ಕು ಪಾಪಗಳಿಗೆ ನಾವು ಪ್ರಾಯಶ್ಚಿತ್ತವನ್ನು ಕೇಳಿಲ್ಲ.
ಏತತ್ ಸರ್ವಮತಿದೇಶೇನ ಸೃಷ್ಟಂ
ಯತ್ ಕರ್ತವ್ಯಂ ಪುರುಷೇಣೇಹ ಲೋಕೇ |
ಏತಚ್ಛ್ರೇಯೋ ನಾನ್ಯದಸ್ಮಾದ್ ವಿಶಿಷ್ಟಂ
ಸರ್ವಾನ್ ಧರ್ಮಾನನುಸೃತ್ಯೈತದುಕ್ತಮ್ ||28||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದಶಾಧಿಕಶತತಮೋಽಧ್ಯಾಯಃ ||110||
ಮನುಷ್ಯನು ಈ ಲೋಕದಲ್ಲಿ ಏನು ಮಾಡಬೇಕೆಂಬ ಇದೆಲ್ಲವನ್ನೂ ಶಾಸ್ತ್ರದ ಆದೇಶಕ್ಕೆ ಅನುಸಾರವಾಗಿ ಹೇಳಿದ್ದೇನೆ. ಇದೇ ಶ್ರೇಯಸ್ಕರವಾದುದು. ಇದಕ್ಕಿಂತ ದೊಡ್ಡ ಶ್ರೇಯಸ್ಕರವಾದುದು ಇನ್ನೊಂದಿಲ್ಲ. ಎಲ್ಲ ಧರ್ಮಗಳನ್ನೂ ಅನುಸರಿಸಿ ನಾನು ಈ ವಿಷಯವನ್ನು ನಿನಗೆ ಹೇಳಿದ್ದೇನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 110ನೆಯ ಅಧ್ಯಾಯವು ಮುಗಿಯಿತು.
0

111. ನೂರಹನ್ನೊಂದನೆಯ ಅಧ್ಯಾಯ
ಸತ್ಯಾನೃತವಿವೇಚನೆ
ಯುಧಿಷ್ಠಿರಃ
ಕಥಂ ಧರ್ಮೇ ಸ್ಥಾತುಮಿಚ್ಛನ್ ನರೋ ವರ್ತೇತ ಭಾರತ |
ವಿದ್ವನ್ ಜಿಜ್ಞಾಸಮಾನಾಯ ಪ್ರಬ್ರೂಹಿ ಭರತರ್ಷಭ ||1||
ಯುಧಿಷ್ಠಿರ ಎಲೈ ಭರತರ್ಷಭನೇ! ಧರ್ಮದಲ್ಲಿಯೇ ಇರಬೇಕೆಂದು ಬಯಸುವ ಮನುಷ್ಯನು ಹೇಗೆ ನಡೆದುಕೊಳ್ಳಬೇಕು? ಇದನ್ನು ನನಗೆ ಹೇಳು.
ಸತ್ಯಂ ಚೈವಾನೃತಂ ಚೋಭೇ ಲೋಕಾನಾವೃತ್ಯ ತಿಷ್ಠತಃ |
ತಯೋಃ ಕಿಮಾಚರೇದ್ ರಾಜನ್ ಪುರುಷೋ ಧರ್ಮನಿಶ್ಚಿತಃ ||2||
ಎಲೈ ರಾಜನೇ! ಲೋಕವನ್ನು ಸತ್ಯ ಮತ್ತು ಅನೃತಗಳೆರಡೂ ಆವರಿಸಿ ನಿಂತಿವೆ. ಧರ್ಮನಿಶ್ಚಯವನ್ನುಳ್ಳ ಪುರುಷನು ಅವುಗಳಲ್ಲಿ ಯಾವುದನ್ನು ಮಾಡಬೇಕು?
ಕಿಂಸ್ವಿತ್ ಸತ್ಯಂ ಕಿಮನೃತಂ ಕಿಂಸ್ವಿದ್ ಧರ್ಮ್ಯಂ ಸನಾತನಮ್ |
ಕಸ್ಮಿನ್ ಕಾಲೇ ವದೇತ್ ಸತ್ಯಂ ಕಸ್ಮಿನ್ ಕಾಲೇಽನೃತಂ ವದೇತ್ ||3||
ಸತ್ಯವು ಯಾವುದು? ಅನೃತವು ಯಾವುದು? ಸನಾತನಧರ್ಮ ಯಾವುದು? ಯಾವ ಕಾಲದಲ್ಲಿ ಸತ್ಯವನ್ನು ನುಡಿಯಬೇಕು? ಯಾವ ಕಾಲದಲ್ಲಿ ಅನೃತವನ್ನು ನುಡಿಯಬೇಕು?
ಭೀಷ್ಮಃ
ಸತ್ಯಸ್ಯ ವಚನಂ ಸಾಧು ನ ಸತ್ಯಾದ್ ವಿದ್ಯತೇ ಪರಮ್ |
ಯದ್ ಭೂಲೋಕೇ ಸುದುರ್ಜ್ಞಾತಂ ತತ್ ತೇ ವಕ್ಷ್ಯಾಮಿ ಭಾರತ ||4||
ಭೀಷ್ಮರು ಸತ್ಯವನ್ನು ಮಾತನಾಡುವುದು ಒಳ್ಳೆಯದು (ಸುಲಭ); ಸತ್ಯಕ್ಕಿಂತ ಶ್ರೇಷ್ಠವಾದುದು ಇಲ್ಲ. ಎಲೈ ಭಾರತನೇ! ಭೂಲೋಕದಲ್ಲಿ ಯಾವುದು ಅತ್ಯಂತ ದುರ್ಜ್ಞೇಯವೋ ಅದನ್ನು ನಾನು ನಿನಗೆ ಹೇಳುವೆನು.
ಭವೇತ್ ಸತ್ಯಂ ನ ವಕ್ತವ್ಯಂ ವಕ್ತವ್ಯಮನೃತಂ ಭವೇತ್ |
ಯತ್ರಾನೃತಂ ಭವೇತ್ ಸತ್ಯಂ ಸತ್ಯಂ ವಾಪ್ಯನೃತಂ ಭವೇತ್ ||5||
ಎಲ್ಲಿ ಸತ್ಯವೇ ಅನೃತವಾಗುತ್ತದೆಯೋ, ಅಥವಾ ಅನೃತವೇ ಸತ್ಯವಾಗು- ತ್ತದೆಯೋ ಅಂತಹ ಕಡೆಯಲ್ಲಿ ಸತ್ಯವನ್ನು ಹೇಳಬಾರದು. ಅನೃತವನ್ನೇ ಹೇಳಬೇಕು.
ತಾದೃಶೇ ಮುಹ್ಯತೇ ಬಾಲೋ ಯತ್ರ ಸತ್ಯಮನಿಶ್ಚಿತಮ್ |
ಸತ್ಯಾನೃತೇ ವಿನಿಶ್ಚಿತ್ಯ ತತೋ ಭವತಿ ಧರ್ಮವಿತ್ ||6||
ಸತ್ಯವು ಅನುಷ್ಠಿತವಾದ ಅಂತಹ ಸ್ಥಳದಲ್ಲಿ ಬಾಲಕನು ಮೋಹಕ್ಕೆ ಒಳಗಾಗು- ತ್ತಾನೆ. ಸತ್ಯಾನೃತಗಳನ್ನು ನಿಶ್ಚಯಿಸಿದವನು ಧರ್ಮಜ್ಞನಾಗುತ್ತಾನೆ.
ಅಪ್ಯನಾರ್ಯೋಽಕೃತಪ್ರಜ್ಞಃ ಪುರುಷೋಽಪಿ ಸುದಾರುಣಃ |
ಸುಮಹತ್ ಪ್ರಾಪ್ನುಯಾತ್ ಪುಣ್ಯಂ ಬಲಾಕೋಽಂಧವಧಾದಿವ ||7||
ಅನಾರ್ಯನೂ, ಸುಶಿಕ್ಷಿತಪ್ರಜ್ಞೆಯಿಲ್ಲದವನೂ, ಕ್ರೂರಿಯೂ ಆದ ಪುರುಷನೂ ಸಹ ಬಲಾಕನೆಂಬ ಬೇಡನು ಅಂಧಪ್ರಾಣಿಯನ್ನು ಕೊಂದು ಸಂಪಾದಿಸಿದಂತೆ ದೊಡ್ಡ ಪುಣ್ಯವನ್ನು ಸಂಪಾದಿಸಿಯಾನು! (ಇದು ಕರ್ಣಪರ್ವದಲ್ಲಿ ಬರುವ ಕಥೆ - ಒಂದು ಕುರುಡಾದ ಮೃಗವು ಉಳಿದ ಪ್ರಾಣಿಗಳನ್ನೆಲ್ಲ ಅವುಗಳ ವಾಸನೆಯಿಂದಲೇ ತಿಳಿದು ಅವುಗಳನ್ನು ಕೊಲ್ಲುತ್ತಿದ್ದಿತು. ಬಲಾಕನೆಂಬ ವ್ಯಾಧನು ಆ ಕುರುಡುಪ್ರಾಣಿಯನ್ನು ಕೊಂದು ಉಳಿದ ಪ್ರಾಣಿಗಳಿಗೆ ಕ್ಷೇಮವನ್ನುಂಟುಮಾಡಿದನು.).
ಕಿಮಾಶ್ಚರ್ಯಂ ಚ ಯನ್ಮೂಢೋ ಧರ್ಮಕಾಮೋಽಪ್ಯಧರ್ಮವಿತ್ |
ಸುಮಹತ್ ಪ್ರಾಪ್ನುಯಾತ್ ಪುಣ್ಯಂ ಗಂಗಾಯಾಮಿವ ಕೌಶಿಕಃ ||8||
ಧರ್ಮವನ್ನು ಬಯಸುವವನು ಮೂಢನಾಗಿ ಅಧರ್ಮವನ್ನು ಸಂಪಾದಿಸುವು- ದರಲ್ಲಿ ಆಶ್ಚರ್ಯವಿಲ್ಲ. ಹಾಗೆಯೇ ಕ್ರೂರಿಯಾದವನೂ ಸಹ ಗಂಗಾತೀರದಲ್ಲಿನ ಗೂಬೆಯಂತೆ ದೊಡ್ಡ ಪುಣ್ಯವನ್ನು ಪಡೆದಾನು! (ಇದೂ ಕರ್ಣಪರ್ವದಲ್ಲಿ ಬರುವ ಕಥೆ ಗಂಗಾತೀರದಲ್ಲಿ ಒಂದು ವಿಷಸರ್ಪವು ತನ್ನ ಮೊಟ್ಟೆಗಳನ್ನು ಇಟ್ಟಿದ್ದಿತು. ಒಂದು ಗೂಬೆಯು ಅಲ್ಲಿಗೆ ಬಂದು ಆ ಮೊಟ್ಟೆಗಳನ್ನು ತಿಂದು ಅವುಗಳಿಂದ ಉಂಟಾಗಬಹುದಾಗಿದ್ದ ಅಪಾಯವನ್ನು ತಪ್ಪಿಸಿತು).
ತಾದೃಶೋಽಯಮನುಪ್ರಶ್ನೋ ಯತ್ರ ಧರ್ಮಃ ಸುದುರ್ವಚಃ |
ದುಷ್ಕರಃ ಪ್ರತಿಸಂಖ್ಯಾತುಂ ತರ್ಕೇಣಾತ್ರ ವ್ಯವಸ್ಯತಿ ||9||
ಎಲ್ಲಿ ಧರ್ಮವನ್ನು ತಿಳಿಯುವುದು ಕಷ್ಟವಾಗುತ್ತದೆಯೋ ಅಂತಹ ಸ್ಥಳದಲ್ಲಿ ನೀನು ಪ್ರಶ್ನೆಯನ್ನು ಮಾಡಿದ್ದೀಯೆ. ಇದು ಧರ್ಮ ಇದು ಅಧರ್ಮ ಎಂದು ಪಟ್ಟಿ ಮಾಡುವುದು ಸಾಧ್ಯವಿಲ್ಲ. ವಿಮರ್ಶೆ ಮಾಡಿ ಯಾವುದು ಧರ್ಮ ಯಾವುದು ಅಧರ್ಮ ಎಂದು ತಿಳಿಯಬೇಕು.
ಪ್ರಭವಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ |
ಯತ್ ಸ್ಯಾದಹಿಂಸಾಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ||10||
ಮನುಷ್ಯನ ಏಳಿಗೆಗಾಗಿ ಶಾಸ್ತ್ರಗಳಲ್ಲಿ ಧರ್ಮವು ಹೇಳಲ್ಪಟ್ಟಿದೆ. ಯಾವುದು ಅಹಿಂಸಾಯುಕ್ತವಾದುದೋ ಅದು ಧರ್ಮ ಎಂಬುದು ನಿಶ್ಚಿತವಾದುದು.
ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ |

ಯತ್ ಸ್ಯಾದಹಿಂಸಾಯುಕ್ತಶ್ಚ ಸ ಧರ್ಮ ಇತಿ ನಿಶ್ಚಯಃ ॥11॥
ಅಹಿಂಸಾ ಸತ್ಯಮಕ್ರೋಧಸ್ತಪೋ ದಾನಂ ದಮೋ ಮತಿಃ |
ಅನಸೂಯಾಪ್ಯಮಾತ್ಸರ್ಯಮನೀರ್ಷ್ಯಾ ಶೀಲಮೇವ ಚ ॥12॥
ಏಷ ಧರ್ಮಃ ಕುರುಶ್ರೇಷ್ಠ ಕಥಿತಃ ಪರಮೇಷ್ಠಿನಾ |
ಬ್ರಹ್ಮಣಾ ದೇವದೇವೇನ ಅಯಂ ಚೈವ ಸನಾತನಃ ॥13॥
ಅಹಿಂಸೆ, ಸತ್ಯ, ಅಕ್ರೋಧ, ತಪಸ್ಸು, ದಾನ, ದಮ, ಜ್ಞಾನ, ಅಸೂಯಾ- ರಾಹಿತ್ಯ, ಅಮಾತ್ಸರ್ಯ, ಶೀಲ ಎಲೈ ಕುರುಶ್ರೇಷ್ಠನೇ! ಇವು ದೇವ-
ದೇವನೂ ಪರಮೇಷ್ಠಿಯೂ ಆದ ಬ್ರಹ್ಮನಿಂದ ಹೇಳಲ್ಪಟ್ಟಿವೆ. ಇದು ಸನಾತನವಾದ ಧರ್ಮ.
ಅಸ್ಮಿನ್ ಧರ್ಮೇ ಸ್ಥಿತೋ ರಾಜನ್ ನರೋ ಭದ್ರಾಣಿ ಪಶ್ಯತಿ |
ಶ್ರೌತೋ ವಧಾತ್ಮಕೋ ಧರ್ಮ ಅಹಿಂಸಾ ಪಾರಮಾರ್ಥಿಕಃ ॥14॥
ಎಲೈ ರಾಜನೇ! ಈ ಧರ್ಮದಲ್ಲಿ ವ್ಯವಸ್ಥಿತನಾದವನು ಶುಭವನ್ನು ಕಾಣುತ್ತಾನೆ. ಅಹಿಂಸೆಯು ಶ್ರೇಷ್ಠವಾದ ಧರ್ಮ. ಆದರೂ ಶ್ರುತಿಯಲ್ಲಿ ಯಜ್ಞಗಳಲ್ಲಿ ಹೇಳಿದ ಪ್ರಾಣಿವಧೆಯು ಧರ್ಮವಾಗುತ್ತದೆ.
ಧಾರಣಾದ್ ಧರ್ಮ ಇತ್ಯಾಹುರ್ಧರ್ಮೇಣ ವಿಧೃತಾಃ ಪ್ರಜಾಃ |
ಯತ್ ಸ್ಯಾದ್ ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥15॥
ಧಾರಣೆಯನ್ನು ಮಾಡುವುದು ಧರ್ಮ ಎಂದು ಹೇಳುತ್ತಾರೆ. ಧರ್ಮದಿಂದಲೇ ಎಲ್ಲಾ ಪ್ರಜೆಗಳೂ ಧರಿಸಲ್ಪಟ್ಟಿದ್ದಾರೆ. ಯಾವುದು ಜಗತ್ತಿನ ಧಾರಣೆಗೆ ಪ್ರಯೋ- ಜಕವೋ ಅದು ಧರ್ಮವೆಂಬುದಾಗಿ ನಿಶ್ಚಿತವಾದುದು.
ಶ್ರುತಿರ್ಧರ್ಮ ಇತಿ ಹ್ಯೇಕೇ ನೇತ್ಯಾಹುರಪರೇ ಜನಾಃ |
ನ ತು ತತ್ಪ್ರತ್ಯಸೂಯಾಮೋ ನ ಹಿ ಸರ್ವಂ ವಿಧೀಯತೇ ॥16॥
ಶ್ರುತಿಯಲ್ಲಿ ಹೇಳಿದುದು ಧರ್ಮ ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಹಾಗಲ್ಲ ಎಂದು ಹೇಳುತ್ತಾರೆ. ನಾನು ಇಬ್ಬರನ್ನೂ ನಿರಾಕರಿಸುವುದಿಲ್ಲ. ಏಕೆಂದರೆ ಶ್ರುತಿಯಲ್ಲಿ ಎಲ್ಲವೂ ಹೇಳಲ್ಪಟ್ಟಿರುವುದಿಲ್ಲ.
ಯೇಽನ್ಯಾಯೇನ ಜಿಹೀರ್ಷಂತೋ ಧನಮಿಚ್ಛಂತಿ ಕರ್ಹಿಚಿತ್ |
ತೇಭ್ಯಸ್ತನ್ನ ತದಾಖ್ಯೇಯಂ ಸ ಧರ್ಮ ಇತಿ ನಿಶ್ಚಯಃ ॥17॥
ಯಾವನು ಅನ್ಯಾಯದಿಂದ ಇನ್ನೊಬ್ಬರ ಧನವನ್ನು ಅಪಹಾರ ಮಾಡುತ್ತಾ ಧನವನ್ನು ಬಯಸುತ್ತಾನೆಯೋ ಅವನಿಗೆ ನನ್ನ ಬಳಿ ಧನವಿಲ್ಲ ಎಂದು ಹೇಳಬೇಕು. ಆ ವಚನವು ಅನೃತವಾದರೂ ಧರ್ಮವೆಂಬುದು ನಿಶ್ಚಿತವಾದುದು.
ಅಕೂಜನೇನ ಚೇನ್ಮೋಕ್ಷೋ ನಾತ್ರ ಕೂಜೇತ್ ಕಥಂಚನ |
ಅವಶ್ಯಂ ಕೂಜಿತವ್ಯೇ ವಾ ಶಂಕೇರನ್ ವಾಪ್ಯಕೂಜನಾತ್ ॥18॥
ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ವಿಚಾರಿತಮ್ |
ಯಃ ಪಾಪೈಃ ಸಹ ಸಂಬಂಧಾನ್ಮುಚ್ಯತೇ ಶಪಥಾದಪಿ ॥19॥
ಚೋರರು ಬಂದು ಧನಿಕನೆಲ್ಲಿ ಎಂದು ಕೇಳಿದಾಗ ಮಾತನಾಡದೇ ಸುಮ್ಮ- ನಿದ್ದರೆ ಕಳ್ಳರಿಂದ ಬಿಡುಗಡೆ ಹೊಂದುವುದಾದರೆ ಏನೂ ಮಾತನಾಡದೇ ಮೌನವಾಗಿರಬೇಕು. ಮಾತನಾಡದಿದ್ದರೆ ಕಳ್ಳರು (ಚೋರರು) ಶಂಕಿಸುತ್ತಾರೆ ಎಂದು ತಿಳಿದು ಮಾತನಾಡಲೇ ಬೇಕಾದರೆ ಧನಿಕನು ಹಣವನ್ನು ಬೇರೆ ಕಡೆ ಇಟ್ಟಿದ್ದಾನೆಂದು ಅಥವಾ ಧನಿಕನ ಬಳಿ ಈಗ ಹಣವೇ ಇಲ್ಲವೆಂದು ಹೇಳಬೇಕು. ಅಲ್ಲಿ ಸತ್ಯವನ್ನು ಹೇಳುವುದಕ್ಕಿಂತ ಸುಳ್ಳನ್ನು ಹೇಳುವುದೇ ಶ್ರೇಯಸ್ಕರವೆಂದು ನಿಶ್ಚಿತವಾದುದು. ಕಾಡಿನಲ್ಲಿ ಹಣಕ್ಕಾಗಿ ಕಳ್ಳರಿಂದ ಹಿಡಿಯಲ್ಪಟ್ಟಾಗ ನನ್ನನ್ನು ಬಿಟ್ಟು ಬಿಡು. ಅನಂತರ ಧನವನ್ನು ಕೊಡುತ್ತೇನೆ ಎಂದು ಶಪಥಮಾಡಿ ಹೇಳಬೇಕು. ಅನಂತರ ಆ ಧನವನ್ನು ಕೊಡದಿದ್ದರೂ ಆ ಶಪಥವು ಅನೃತವಚನದೋಷಕ್ಕೆ ಗುರಿಯಾಗುವುದಿಲ್ಲ ಲಕ್ಷಾಲಂಕಾರ.
ಅಕ್ಷಯೋಽಸೌ ವರ್ಧಯೇಚ್ಚೇತ್ ಕುರ್ಯಾದೇವಾವಿಚಾರಯನ್ |
ಅಬುದ್ಧ್ವಾಽನುಸರೇದ್ ದೋಷಂ ಶ್ರೇಯಸ್ತತ್ರಾನೃತಂ ಭವೇತ್ ॥20॥
ಪಾಪಿಗಳಿಗೆ ಧನವನ್ನು ಕೊಟ್ಟರೆ ತನ್ನ ಶರೀರಕ್ಕೆ ಬಾಧೆಯಿಲ್ಲದಂತಾಗುತ್ತದೆ ಎಂದಾದರೆ ಪಾಪಿಷ್ಠರಿಗೂ ದ್ರವ್ಯವನ್ನು ಕೊಡಬೇಕು. ಅದು ಪುಣ್ಯವನ್ನೇ ಹೆಚ್ಚಿಸು- ತ್ತದೆ. ದೋಷದಿಂದ ಉಂಟಾಗುವ ಧನಾಪಹಾರಾದಿದೋಷಗಳನ್ನು ಮನಸ್ಸಿಗೆ ತಂದುಕೊಳ್ಳದೇ ಅವರನ್ನು ಅನುಸರಿಸಬೇಕು. ಪಾಪವೆಂಬ ನಿಶ್ಚಯವನ್ನು ಹೊಂದಿ ಚೋರರ ಭಯದಿಂದ ಅನೃತವನ್ನು ಹೇಳಿದರೂ ಅದು ದೋಷವಾಗುವುದಿಲ್ಲ ಲಕ್ಷಾಲಂಕಾರ.
ನ ಸ್ತೇನೈಃ ಸಹ ಸಂಬಂಧಾನ್ಮುಚ್ಯತೇ ಶಪಥಾದಪಿ |
ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ಹಿ ಧಾರಣಾ ॥21॥
ಚೋರರ ಕೈಯಲ್ಲಿ ಸಿಲುಕಿದಾಗ ಸತ್ಯಶಪಥವನ್ನು ಮಾಡಿದರೂ ಅವರಿಂದ ಬಿಡುಗಡೆ ದೊರೆಯದಿದ್ದರೆ ಅಲ್ಲಿ ಸತ್ಯಕ್ಕಿಂತಲೂ ಸುಳ್ಳನ್ನು ಹೇಳುವುದೇ ಶ್ರೇಷ್ಠವೆಂದು ನಿಶ್ಚಿತವಾದುದು.
ನ ಚ ತೇಭ್ಯೋ ಧನಂ ದೇಯಂ ಶಕ್ಯೇ ಸತಿ ಕಥಂಚನ |
ಪಾಪೇಭ್ಯೋ ಹಿ ಧನಂ ದತ್ತಂ ದಾತಾರಮಪಿ ಪೀಡಯೇತ್ ॥22॥
ಸಾಧ್ಯವಾದರೆ ಚೋರರಿಗೆ ಧನವನ್ನು ಕೊಡಬಾರದು. ಪಾಪಿಗಳಿಗೆ ಕೊಟ್ಟ ಧನವು ಕೊಟ್ಟವನನ್ನು ಪೀಡಿಸುತ್ತದೆ.
ಸ್ವಶರೀರೋಪರೋಧೇನ ಧನಮಾದಾತುಮಿಚ್ಛತಃ |
ಸತ್ಯಸಂಪ್ರತಿಪತ್ತ್ಯರ್ಥಂ ಯೇ ಬ್ರೂಯುಃ ಸಾಕ್ಷಿಣಃ ಕ್ವಚಿತ್ |
ಅನುಕತ್ವಾ ತತ್ರ ತದ್ ವಾಚ್ಯಂ ಸರ್ವೇ ತೇಽನೃತವಾದಿನಃ ॥23॥

ತನ್ನವರ ಬಂಧನಾದಿಗಳನ್ನು ಮಾಡಿ ಧನವನ್ನು ಅಪಹರಿಸಲು ಬಂದ ಚೋರ- ರನ್ನು ಕುರಿತು ಅವರು(ರಿಗೆ) ನನಗೆ ಧನವಿಲ್ಲ ಎಂಬ ವಿಷಯದಲ್ಲಿ ಇವರೆಲ್ಲರೂ ಸಾಕ್ಷಿಗಳು ಎಂದು ಹೇಳಬೇಕು. ಅವರೆಲ್ಲರೂ ಹೌದು ಎಂದು ಹೇಳಬೇಕು. ಇಲ್ಲದಿದ್ದರೆ (ಸುಮ್ಮನಿದ್ದರೆ) ಅವರಿಗೆಲ್ಲಾ ಅನೃತವಚನದೋಷವು ಬರುವುದು  ಲಕ್ಷಾಲಂಕಾರ.
ಪ್ರಾಣಾತ್ಯಯೇ ವಿವಾಹೇ ಚ ವಕ್ತವ್ಯಮನೃತಂ ಭವೇತ್ |
ಅರ್ಥಸ್ಯ ರಕ್ಷಣಾರ್ಥಾಯ ಪರೇಷಾಂ ಧರ್ಮಕಾರಣಾತ್ |
ಪರೇಷಾಂ ಧರ್ಮಮಾಕಾಂಕ್ಷನ್ ನೀಚಃ ಸ್ಯಾದ್ ಧರ್ಮಭಿಕ್ಷುಕಃ ॥24॥
ಪ್ರಾಣಸಂಕಟಕಾಲದಲ್ಲಿ (ಪ್ರಾಣವನ್ನು ಉಳಿಸಲು) ಮತ್ತು ವಿವಾಹ- ಸಂದರ್ಭದಲ್ಲಿ (ವಿವಾಹವನ್ನು ಸಂಘಟಿಸಲು) ಅನೃತವನ್ನು ಹೇಳಬಹುದು. ಧರ್ಮಕ್ಕಾಗಿ ತೆಗೆದಿಟ್ಟ ಇನ್ನೊಬ್ಬರ ಧನವನ್ನು ರಕ್ಷಿಸುವುದಕ್ಕಾಗಿಯೂ ಅನೃತವನ್ನು ಹೇಳಬಹುದು. ಆದರೆ ಇನ್ನೊಬ್ಬರಿಗೆ ಧರ್ಮವುಂಟಾಗಲಿ ಎಂಬ ಅಭಿಪ್ರಾಯದಿಂದ ಧನವನ್ನು ತೆಗೆದುಕೊಂಡು ಧರ್ಮಾನುಷ್ಠಾನ ಮಾಡಿ ಅದನ್ನು ಮಾರುವ ನೀಚನು ಧರ್ಮಭಿಕ್ಷುಕ ಎನಿಸುತ್ತಾನೆ.
ಪ್ರತಿಶ್ರುತ್ಯ ತು ದಾತವ್ಯಂ ಸ್ವಕಾರ್ಯಶ್ಚೇದ್ ಬಲಾತ್ಕೃತಃ |
ಧನಬಲದಿಂದ ಇನ್ನೊಬ್ಬನಿಂದ ಕಾರ್ಯವನ್ನು ಮಾಡಿಸಿಕೊಂಡವನು ಮೊದಲು ವಾಗ್ದಾನ ಮಾಡಿದ ಧನವನ್ನು ಕೊಡಬೇಕು. ಇನ್ನೊಬ್ಬನ ಕೈಯ್ಯಲ್ಲಿ ದುಡಿಸಿ- ಕೊಂಡವನು ಅವನಿಗೆ ಯೋಗ್ಯವಾದ ಧನವನ್ನು ಮೊದಲು ಮಾತನಾಡಿದಂತೆ ಕೊಡಬೇಕು ಎಂದು ಅಭಿಪ್ರಾಯ.
ಯಃ ಕಶ್ಚಿದ್ ಧರ್ಮಸಮಯಾತ್ ಪ್ರಚ್ಯುತೋಽಧರ್ಮಮಾಸ್ಥಿತಃ ॥25॥
ಶಠಃ ಸ್ವಧರ್ಮಮುತ್ಸೃಜ್ಯ ತಮಿಚ್ಛೇದುಪಜೀವಿತುಮ್ |
ಸರ್ವೋಪಾಯೈರ್ನಿಯಂತವ್ಯಃ ಪಾಪೋ ನಿಕೃತಿಜೀವನಃ ॥26॥
ಯಾವನು ಧರ್ಮಮಾರ್ಗವನ್ನು ಬಿಟ್ಟು ಅಧರ್ಮಮಾರ್ಗವನ್ನು ಆಶ್ರಯಿಸು- ತ್ತಾನೆಯೋ ಅವನು ತನ್ನ ಧರ್ಮವನ್ನು ಬಿಟ್ಟು ತನ್ನ ಜೀವನೋಪಾಯಕ್ಕಾಗಿ ಇನ್ನೊಬ್ಬನಿಗಾಗಿ ಧರ್ಮವನ್ನು ಆಚರಿಸುವುದಿದ್ದರೆ ಅವನನ್ನು ಸರ್ವೋಪಾಯ- ಗಳಿಂದಲೂ ನಿಯಂತ್ರಿಸಬೇಕು. ಅಂತಹವನು ಪಾಪಿಯಾದವನು ಮತ್ತು ನೀಚ ಜೀವನವನ್ನು ಮಾಡುವವನು. (ತಾನೂ ಧರ್ಮಾಚರಣೆಯನ್ನು ಮಾಡಿ ಇನ್ನೊಬ್ಬ- ನಿಗಾಗಿಯೂ ಧರ್ಮಾಚರಣೆಯನ್ನು ಮಾಡಬಹುದು. ತನಗೆ ಮಂತ್ರಾದಿಗಳು ತಿಳಿದಿವೆ ಎಂಬ ಕಾರಣದಿಂದ ತಾನು ಭ್ರಷ್ಟನಾದರೂ ಇನ್ನೊಬ್ಬನಿಗಾಗಿ ಮಾಡುವ- ವನು ನೀಚನಾದವನು ಎಂದು ಅಭಿಪ್ರಾಯ).
ಧನಮಿತ್ಯೇವ ಪಾಪಾನಾಂ ಸರ್ವೇಷಾಮಿಹ ನಿಶ್ಚಯಃ |
ಯೇಽವಿಷಹ್ಯಾ ಹ್ಯಸಂಭೋಜ್ಯಾ ನಿಕೃತ್ಯಾ ಪತನಂ ಗತಾಃ ॥27॥
ಯಾರು ಸಹಿಸಲು ಅಸಾಧ್ಯರಾಗಿ ಮೋಸಗಾರರಾಗಿ ಪತನವನ್ನು ಹೊಂದಿ- ರುತ್ತಾರೆಯೋ ಅಂತಹ ಪಾಪಿಗಳಿಗೆಲ್ಲರಿಗೂ ಧನವನ್ನು ಸಂಪಾದಿಸಿದರೆ ಆಯಿತು ಅದು ಹೇಗಾದರೂ ಬರಲಿ ಎಂಬ ನಿಶ್ಚಯವಿರುತ್ತದೆ.
ಚ್ಯುತಾ ದೇವಮನುಷ್ಯೇಭ್ಯೋ ಯಥಾ ಪ್ರೇತಾಸ್ತಥೈವ ತೇ |
ಧನಾದಾನಾದ್ ದುಃಖತರಂ ಜೀವಿತಾದ್ ವಿಪ್ರಯೋಜನಮ್ ॥28॥
ಅವರು ದೇವಲೋಕದಿಂದಲೂ ಮತ್ತು ಮನುಷ್ಯಲೋಕದಿಂದಲೂ ಚ್ಯುತ- ರಾಗಿ ಪ್ರೇತಗಳಂತೆ ಇರುತ್ತಾರೆ. ಧನಾಪಹಾರಕ್ಕಿಂತ ದುಃಖಕರವಾದುದು ವಧೆ.
ಅಯಂ ವೋ ರೋಚತಾಂ ಧರ್ಮ ಇತಿ ವಾಚ್ಯಃ ಪ್ರಯತ್ನತಃ |
ನ ಕಶ್ಚಿದಸ್ತಿ ಪಾಪಾನಾಂ ಧರ್ಮ ಇತ್ಯೇಷ ನಿಶ್ಚಯಃ ॥29॥
ಪಾಪಿಗಳಿಗೆ ಯಾವ ಧರ್ಮವೂ ಇಲ್ಲ ಎಂಬುದು ನಿಶ್ಚಿತವಾದುದು. ಆದರೂ ಪ್ರಯತ್ನಪಟ್ಟು ನೀವು ಈ ಧರ್ಮವನ್ನು ಆಶ್ರಯಿಸಿ ಎಂದು ಅವರಿಗೆ ಹೇಳಬೇಕು.
ತಥಾಗತಂ ಚ ಯೋ ಹನ್ಯಾನ್ನಾಸೌ ಪಾಪೇನ ಲಿಪ್ಯತೇ |
ಸ್ವಕರ್ಮಣಾ ಹತಂ ಹಂತಿ ಹತ ಏವ ಸ ಹನ್ಯತೇ |
ತೇಷು ಯಃ ಸಮಯಂ ಕಶ್ಚಿತ್ ಕುರ್ವೀತ ಹತಬುದ್ಧಿಷು ॥30॥
ಅಂತಹ ಪಾಪಿಗಳನ್ನು ಯಾವನು (ಯಾವ ರಾಜನು) ಕೊಲ್ಲುತ್ತಾನೆಯೋ ಅಂತಹವನಿಗೆ ಪಾಪಲೇಪವು ಉಂಟಾಗುವುದಿಲ್ಲ. ಏಕೆಂದರೆ, ತನ್ನ ನೀಚಕರ್ಮ- ದಿಂದ ಮೊದಲೇ ಹತನಾದ ಅವನನ್ನು ಇವನು ಕೊಂದಿರುತ್ತಾನೆ. ಕೆಲವರು ಒಟ್ಟಿಗೆ ಸೇರಿ ನಾವು ಈ ಅಧರ್ಮಿಗೆ ಶಿಕ್ಷೆಯನ್ನು ಮಾಡಲು ಅವಕಾಶ ಕೊಡುವುದಿಲ್ಲ ಎಂದು ನಿಶ್ಚಯವನ್ನು ಮಾಡಿಕೊಂಡರೆ ಅಂತಹ ದುರ್ಬುದ್ಧಿಯುಳ್ಳವರು ಪಾಪಿಗಳೇ ಸರಿ. (ಅಂತಹ ದುರ್ಬುದ್ಧಿಯುಳ್ಳ ಪಾಪಿಗಳನ್ನು ಕೊಲ್ಲುವ ಪ್ರತಿಜ್ಞೆಯನ್ನು ಮಾಡುವವರು ಧರ್ಮಾತ್ಮರಾದವರು).
ಯಥಾ ಕಾಕಶ್ಚ ಗೃಧ್ರಶ್ಚ ತಥೈವೋಪಧಿಜೀವಿನಃ |
ಊರ್ಧ್ವಂ ದೇಹವಿಮೋಕ್ಷಾಂತೇ ಭವಂತ್ಯೇತಾಸು ಯೋನಿಷು ॥31॥
ಕಳ್ಳರು ಕಾಗೆಗಳಂತೆ ಮತ್ತು ಗೂಬೆಗಳಂತೆ ಇರುವವರು. ಅವರು ದೇಹ- ತ್ಯಾಗವನ್ನು ಮಾಡಿದ ಮೇಲೆ ಆ ಯೋನಿಗಳಲ್ಲಿಯೇ ಜನಿಸುತ್ತಾರೆ.
ಯಸ್ಮಿನ್ ಯಥಾ ವರ್ತತೇ ಯೋ ಮನುಷ್ಯ-
ಸ್ತಸ್ಮಿಂಸ್ತಥಾ ವರ್ತಿತವ್ಯಂ ಸ ಧರ್ಮಃ |
ಮಾಯಾಚಾರೋ ಮಾಯಯಾ ವರ್ತಿತವ್ಯಃ
ಸಾಧ್ವಾಚಾರಃ ಸಾಧುನಾ ಪ್ರತ್ಯುದೇಯಃ ॥32॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕದಶಾಧಿಕಶತತಮೋಽಧ್ಯಾಯಃ ॥111॥
ಯಾವನು ತನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಾನೆಯೋ ಅವನ ವಿಷಯದಲ್ಲಿ ಹಾಗೆಯೇ ನಡೆದುಕೊಳ್ಳುವುದು ಧರ್ಮ. ಕಪಟವನ್ನು ಮಾಡುವವನ ಜೊತೆಯಲ್ಲಿ ಕಪಟದಿಂದಲೇ ನಡೆದುಕೊಳ್ಳಬೇಕು. ಒಳ್ಳೆಯ ರೀತಿ ನಡೆದುಕೊಳ್ಳು- ವವನ ಜೊತೆಯಲ್ಲಿ ಒಳ್ಳೆಯ ರೀತಿಯಿಂದಲೇ ನಡೆದುಕೊಳ್ಳಬೇಕು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 111ನೆಯ ಅಧ್ಯಾಯವು ಮುಗಿಯಿತು.
0

112. ನೂರಹನ್ನೆರಡನೆಯ ಅಧ್ಯಾಯ
ಕಷ್ಟಗಳನ್ನು ದಾಟುವ ಉಪಾಯಕಥನ

ಯುಧಿಷ್ಠಿರಃ
ಕ್ಲಿಶ್ಯಮಾನೇಷು ಭೂತೇಷು ತೈಸ್ತೈರ್ಭಾವೈಸ್ತತಸ್ತತಃ |
ದುರ್ಗಾಣ್ಯತಿತರೇದ್ ಯೇನ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ಬೇರೆ ಬೇರೆ ಕಾರಣಗಳಿಂದ ಎಲ್ಲ ಮಾನವರೂ ಕ್ಲೇಶಕ್ಕೆ ಒಳಗಾಗಿರುವಾಗ ಯಾವುದರಿಂದ ಅಂತಹ ಕಷ್ಟವನ್ನು ದಾಟುತ್ತಾರೆ ಎಂದು ನನಗೆ ಹೇಳು.
ಭೀಷ್ಮಃ
ಆಶ್ರಮೇಷು ಯಥೋಕ್ತೇಷು ಯಥೋಕ್ತಂ ಯೇ ದ್ವಿಜಾತಯಃ |
ವರ್ತಂತೇ ಸಂಯತಾತ್ಮಾನೋ ದುರ್ಗಾಣ್ಯತಿತರಂತಿ ತೇ ॥2॥
ಭೀಷ್ಮರು ಯಾವ ಬ್ರಾಹ್ಮಣರು ವೇದಾ(ಶಾಸ್ತ್ರಾ)ನುಸಾರಿಯಾದ ಆಶ್ರಮ- ಗಳಲ್ಲಿ ಶಾಸ್ತ್ರರೀತಿಯಲ್ಲಿ ಸಂಯಮದಿಂದ ವಾಸಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ದಂಭಾನ್ನ ಜಪಂತಿ ಸ್ಮ ಯೇಷಾಂ ವೃತ್ತಿಶ್ಚ ಸಂಯತಾ |
ವಿಷಯಾಂಶ್ಚ ನಿಗೃಹ್ಣಂತಿ ದುರ್ಗಾಣ್ಯತಿತರಂತಿ ತೇ ॥3॥
ಯಾರು ಡಂಭದಿಂದ ಜಪವನ್ನು ಮಾಡುವುದಿಲ್ಲವೋ (ಪ್ರಾಮಾಣಿಕವಾಗಿ ಜಪವನ್ನುಮಾಡುತ್ತಾರೆಯೋ) ಯಾರ ಜೀವನ ರೀತಿಯು ಸಂಯಮದಿಂದ ಕೂಡಿ- ರುತ್ತದೆಯೋ, ಯಾರು ಇಂದ್ರಿಯಗಳನ್ನು ವಿಷಯಗಳಿಂದ ನಿಗ್ರಹಿಸುತ್ತಾರೆಯೋ ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ವಾಸಯಂತ್ಯತಿಥೀನ್ ನಿತ್ಯಂ ನಿತ್ಯಂ ಯೇ ಚಾನಸೂಯಕಾಃ |
ನಿತ್ಯಂ ಸ್ವಾಧ್ಯಾಯಶೀಲಾಶ್ಚ ದುರ್ಗಾಣ್ಯತಿತರಂತಿ ತೇ ॥4॥
ಯಾರು ಮನೆಯಲ್ಲಿ ಅತಿಥಿಗಳನ್ನು ವಾಸಿಸುವಂತೆ ಮಾಡುತ್ತಾರೆಯೋ, ನಿತ್ಯವೂ ಅಸೂಯಾರಹಿತರಾಗಿರುತ್ತಾರೆಯೋ, ನಿತ್ಯವೂ ಸ್ವಾಧ್ಯಾಯಶೀಲರಾಗಿ- ರುತ್ತಾರೆಯೋ ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ಮಾತಾಪಿತ್ರೋಶ್ಚ ಯೇ ವೃತ್ತಿಂ ವರ್ತಂತೇ ಧರ್ಮಕೋವಿದಾಃ |
ವರ್ಜಯಂತಿ ದಿವಾಸ್ವಪ್ನಂ ದುರ್ಗಾಣ್ಯತಿತರಂತಿ ತೇ ॥5॥
ಧರ್ಮಕೋವಿದರಾದ ಯಾರು ತಂದೆತಾಯಿಗಳ ಸೇವೆಯನ್ನು ಮಾಡು- ತ್ತಾರೋ, ದಿವಾಸ್ವಾಪವನ್ನು ಪರಿತ್ಯಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಸ್ವೇಷು ದಾರೇಷು ವರ್ತಂತೇ ನ್ಯಾಯವೃತ್ತಿಷ್ವೃತಾವೃತೌ |
ಅಗ್ನಿಹೋತ್ರಪರಾಃ ಸಂತೋ ದುರ್ಗಾಣ್ಯತಿತರಂತಿ ತೇ ॥6॥
ಯಾರು ನ್ಯಾಯವಾದ ನಡತೆಯನ್ನು ಹೊಂದಿದ ತಮ್ಮ ಪತ್ನಿಯರಲ್ಲಿ ಋತು- ಗಾಮಿಗಳಾಗಿರುತ್ತಾರೆಯೋ, ಅಗ್ನಿಹೋತ್ರಪರರಾಗಿರುತ್ತಾರೆಯೋ ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ಯೇ ನ ಲೋಭಾನ್ನಯಂತ್ಯರ್ಥಾನ್ ರಾಜಾನೋ ರಜಸಾವೃತಾಃ |
ವಿಷಯಾನ್ ಪರಿರಕ್ಷಂತೋ ದುರ್ಗಾಣ್ಯತಿತರಂತಿ ತೇ ॥7॥
ಯಾವ ರಾಜರು ಆಸೆಗೆ ಒಳಗಾಗಿ ಲೋಭದಿಂದ ಪ್ರಜೆಗಳ ಧನವನ್ನು ಸಂಗ್ರಹಿಸದೆ ದೇಶವನ್ನು ರಕ್ಷಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಆಹವೇಷು ಚ ಯೇ ಶೂರಾಸ್ತ್ಯಕ್ತ್ವಾ ಮರಣಜಂ ಭಯಮ್ |
ಧರ್ಮೇಣ ಜಯಮಿಚ್ಛಂತೋ ದುರ್ಗಾಣ್ಯತಿತರಂತಿ ತೇ ॥8॥
ಯಾರು ಯುದ್ಧದಲ್ಲಿ ಶೂರರೋ ಮರಣಭಯವನ್ನು ತ್ಯಜಿಸಿ ಧರ್ಮ- ಯುದ್ಧದಿಂದ ಜಯವನ್ನು ಬಯಸುವರೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಪಾಪಾನಿ ನ ಕುರ್ವಂತಿ ಕರ್ಮಣಾ ಮನಸಾ ಗಿರಾ |
ನಿಕ್ಷಿಪ್ತದಂಡಾ ಭೂತೇಷು ದುರ್ಗಾಣ್ಯತಿತರಂತಿ ತೇ ॥9॥
ಯಾರು ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ, ಕರ್ಮದಿಂದಾಗಲೀ ಪಾಪವನ್ನು ಮಾಡುವುದಿಲ್ಲವೋ ಪ್ರಾಣಿಗಳಿಗೆ ಹಿಂಸೆಯನ್ನುಂಟುಮಾಡುವುದಿ- ಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.

ಯೇ ವದಂತೀಹ ಸತ್ಯಾನಿ ಪ್ರಾಣತ್ಯಾಗೇಪ್ಯುಪಸ್ಥಿತೇ |
ಪ್ರಮಾಣಭೂತಾ ಭೂತಾನಾಂ ದುರ್ಗಾಣ್ಯತಿತರಂತಿ ತೇ ॥10॥
ಯಾರು ಪ್ರಾಣತ್ಯಾಗವು ಸನ್ನಿಹಿತವಾದರೂ ಸತ್ಯವನ್ನೇ ನುಡಿಯುತ್ತಾರೆಯೋ, ಎಲ್ಲಾ ಜೀವರಿಗೂ ಆದರ್ಶಪ್ರಾಯರಾಗಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಅನಧ್ಯಾಯೇಷು ಯೇ ವಿಪ್ರಾಃ ಸ್ವಾಧ್ಯಾಯಂ ನೈವ ಕುರ್ವತೇ |
ತಪೋನಿತ್ಯಾಃ ಸುಮನಸಃ ದುರ್ಗಾಣ್ಯತಿತರಂತಿ ತೇ ॥11॥
ಯಾವ ವಿಪ್ರರು ಅನಧ್ಯಯನಕಾಲದಲ್ಲಿ ವೇದಾಧ್ಯಯನವನ್ನು ಮಾಡದೇ ತಪಸ್ಸಿನಲ್ಲಿ ನಿರತರಾಗಿ ಒಳ್ಳೆಯ ಮನಸ್ಸನ್ನು ಹೊಂದಿರುತ್ತಾರೆಯೋ ಅವರು ಕಷ್ಟ- ಗಳನ್ನು ದಾಟುತ್ತಾರೆ.
ಕರ್ಮಾಣ್ಯಕುಹಕಾರ್ಥಾನಿ ಯೇಷಾಂ ವಾಚಶ್ಚ ಸೂನೃತಾಃ |
ಯೇಷಾಮರ್ಥಾಶ್ಚ ಸಾಧ್ವರ್ಥಾ ದುರ್ಗಾಣ್ಯತಿತರಂತಿ ತೇ ॥12॥
ಯಾರ ಕಾರ್ಯಗಳು ಕುಹಕದಿಂದ ಕೂಡಿರುವುದಿಲ್ಲವೋ, ಯಾರ ವಚನಗಳು ಮೃದುವಾಗಿರುತ್ತವೆಯೋ, ಯಾರ ಧನವು ಸಜ್ಜನರ ಸಲುವಾಗಿ ಇರುತ್ತದೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ತಪಶ್ಚ ತಪಸ್ಯಂತಿ ಕೌಮಾರಬ್ರಹ್ಮಚಾರಿಣಃ |
ವಿದ್ಯಾವೇದವ್ರತಸ್ನಾತಾ ದುರ್ಗಾಣ್ಯತಿತರಂತಿ ತೇ ॥13॥
ಯಾರು ಕೌಮಾರ ಬ್ರಹ್ಮಚಾರಿಗಳಾಗಿ ವಿದ್ಯಾ,ವೇದ, ವ್ರತಸ್ನಾತರಾಗಿ ತಪಸ್ಸನ್ನು ಮಾಡುತ್ತಾರೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಚ ಸಂಶಾಂತರಜಸಃ ಸಂಶಾಂತತಮಸಶ್ಚ ಯೇ |
ಸತ್ವೇ ಸ್ಥಿತಾ ಮಹಾತ್ಮಾನೋ ದುರ್ಗಾಣ್ಯತಿತರಂತಿ ತೇ ॥14॥
ಯಾವ ಮಹಾತ್ಮರು ರಜೋಗುಣತಮೋಗುಣಗಳಿಂದ ದೂರರಾಗಿ ಸತ್ವ- ಗುಣವನ್ನು ಆಶ್ರಯಿಸಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇಷಾಂ ನ ಕಶ್ಚಿತ್ ತ್ರಸತಿ ತ್ರಸಂತಿ ನ ಚ ಕಸ್ಯಚಿತ್ |
ಯೇಷಾಮಾತ್ಮಸಮೋ ಲೋಕೋ ದುರ್ಗಾಣ್ಯತಿತರಂತಿ ತೇ ॥15॥
ಯಾರಿಗೆ ಯಾವೊಬ್ಬನೂ ಹೆದರುವುದಿಲ್ಲವೋ, ಯಾರು ಯಾವನಿಗೂ ಹೆದರುವುದಿಲ್ಲವೋ, ಯಾರಿಗೆ ಎಲ್ಲ ಜನರೂ ತಮ್ಮ ಸಮಾನರೋ, ಅವರು ಕಷ್ಟಗಳನ್ನು ದಾಟುತ್ತಾರೆ.
ಪರಶ್ರಿಯಾ ನ ತಪ್ಯಂತೇ ಯೇ ಸಂತಃ ಪುರುಷರ್ಷಭಾಃ |
ಗ್ರಾಮ್ಯಾದನ್ನಾನ್ನಿವೃತ್ತಾಶ್ಚ ದುರ್ಗಾಣ್ಯತಿತರಂತಿ ತೇ ॥16॥
ಯಾವ ಪುರುಷಶ್ರೇಷ್ಠರಾದ ಸಜ್ಜನರು ಇನ್ನೊಬ್ಬರ ಸಂಪತ್ತನ್ನು ನೋಡಿ ತಾಪ ಪಡುವುದಿಲ್ಲವೋ, ಗ್ರಾಮ್ಯಭೋಗಗಳಿಂದ ನಿವೃತ್ತರಾಗಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಸರ್ವಾನ್ ದೇವಾನ್ ನಮಸ್ಯಂತಿ ಸರ್ವಾನ್ ಧರ್ಮಾಂಶ್ಚ ಶೃಣ್ವತೇ |
ಯೇ ಶ್ರದ್ದಧಾನಾ ದಾಂತಾಶ್ಚ ದುರ್ಗಾಣ್ಯತಿತರಂತಿ ತೇ ॥17॥
ಯಾರು ಎಲ್ಲ ದೇವತೆಗಳಿಗೂ ನಮಸ್ಕಾರವನ್ನು ಮಾಡುತ್ತಾರೆಯೋ, ಎಲ್ಲ ಧರ್ಮಗಳನ್ನೂ ಕೇಳುತ್ತಾರೆಯೋ, ಶ್ರದ್ಧೆಯಿಂದ ಕೂಡಿ ಇಂದ್ರಿಯನಿಗ್ರಹವನ್ನು ಹೊಂದಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ನ ಮಾನಿತಮಿಚ್ಛಂತಿ ಮಾನಯಂತಿ ಚ ಯೇ ಪರಮ್ |
ಮಾನ್ಯಮಾನಾ ನ ಮನ್ಯಂತೇ ದುರ್ಗಾಣ್ಯತಿತರಂತಿ ತೇ ॥18॥
ಯಾರು ಸನ್ಮಾನವನ್ನು ಬಯಸುವುದಿಲ್ಲವೋ, ಇನ್ನೊಬ್ಬರಿಗೆ ಸನ್ಮಾನವನ್ನು ಮಾಡುತ್ತಾರೆಯೋ, ಅಥವಾ ತಮಗೆ ಸನ್ಮಾನವನ್ನು ಮಾಡಿದರೂ ಅಹಂಕಾರ ಪಡುವುದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಶ್ರಾದ್ಧಾನಿ ಚ ಕುರ್ವಂತಿ ತಿಥ್ಯಾಂ ತಿಥ್ಯಾಂ ಪ್ರಜಾರ್ಥಿನಃ |
ಸುವಿಶುದ್ಧೇನ ಮನಸಾ ದುರ್ಗಾಣ್ಯತಿತರಂತಿ ತೇ ॥19॥
ಯಾರು ಸಂತತಿಯನ್ನು ಬಯಸಿ ತಿಥಿ ತಿಥಿಗಳಲ್ಲಿ ಒಳ್ಳೆಯ ಮನಸ್ಸಿನಿಂದ ಶ್ರಾದ್ಧಗಳನ್ನು ಮಾಡುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಕ್ರೋಧಂ ನೈವ ಕುರ್ವಂತಿ ಕ್ರುದ್ಧಾನ್ ಸಂಶಮಯಂತಿ ಚ |
ನ ಚ ಕುಪ್ಯಂತಿ ಭೃತ್ಯೇಭ್ಯೋ ದುರ್ಗಾಣ್ಯತಿತರಂತಿ ತೇ ॥20॥
ಯಾರು ಕೋಪವನ್ನು ಮಾಡುವುದಿಲ್ಲವೋ, ಕೋಪಗೊಂಡವರನ್ನು ಸಮಾ- ಧಾನಪಡಿಸುತ್ತಾರೋ, ಸೇವಕರ ಮೇಲೆ ಕೋಪಗೊಳ್ಳುವುದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಮಧು ಮಾಂಸಂ ಚ ಯೇ ನಿತ್ಯಂ ವರ್ಜಯಂತೀಹ ಮಾನವಾಃ |
ಜನ್ಮಪ್ರಭೃತಿ ಮದ್ಯಂ ಚ ದುರ್ಗಾಣ್ಯತಿತರಂತಿ ತೇ ॥21॥
ಯಾವ ಮನುಷ್ಯರು ಇಲ್ಲಿ ಯಾವಾಗಲೂ ಮಧು ಮಾಂಸಗಳನ್ನು ವರ್ಜಿಸು- ತ್ತಾರೆಯೋ ಹುಟ್ಟಿದಾಗಿನಿಂದಲೂ ಮದ್ಯವನ್ನು ವರ್ಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯಾತ್ರಾರ್ಥಂ ಭೋಜನಂ ಯೇಷಾಂ ಸಂತಾನಾರ್ಥಂ ಚ ಮೈಥುನಮ್ |
ವಾಕ್‌ಸತ್ಯವಚನಾರ್ಥಾಯ ದುರ್ಗಾಣ್ಯತಿತರಂತಿ ತೇ ॥22॥
ಯಾರಿಗೆ ಭೋಜನವು ಶರೀರರಕ್ಷಣೆಯ ಸಲುವಾಗಿ ಇರುತ್ತದೆಯೋ, ಮೈಥುನವು ಸಂತಾನದ ಸಲುವಾಗಿ ಇರುತ್ತದೆಯೋ,

ವಾಗಿಂದ್ರಿಯವು ಸತ್ಯವನ್ನು ನುಡಿಯುವುದಕ್ಕಾಗಿ ಇರುತ್ತದೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಈಶ್ವರಂ ಸರ್ವಭೂತಾನಾಂ ಜಗತಃ ಪ್ರಭವಾಪ್ಯಯಮ್ |
ಭಕ್ತಾ ನಾರಾಯಣಂ ದೇವಂ ದುರ್ಗಾಣ್ಯತಿತರಂತಿ ತೇ ||23||
ಸರ್ವ ಜೀವರಿಗೂ ಪ್ರಭುವಾದ ಜಗತ್ತಿನ ಸೃಷ್ಟಿಸಂಹಾರಗಳಿಗೆ ಕಾರಣನಾದ ದೇವನಾದ ನಾರಾಯಣನನ್ನು ಯಾರು ಭಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯ ಏಷ ರಕ್ತಪದ್ಮಾಕ್ಷಃ ಪೀತವಾಸಾ ಮಹಾಭುಜಃ |
ಸುಹೃದ್ ಭ್ರಾತಾ ಚ ಮಿತ್ರಂ ಚ ಸಂಬಂಧೀ ಚ ತವಾಚ್ಯುತಃ ||24||
ಯ ಇಮಾನ್ ಸಕಲಾನ್ ಲೋಕಾಂಶ್ಚರ್ಮವತ್ ಪರಿವೇಷ್ಟಯೇತ್ |
ಇಚ್ಛನ್ ಪ್ರಭುರಚಿಂತ್ಯಾತ್ಮಾ ಗೋವಿಂದಃ ಪುರುಷೋತ್ತಮಃ ||25||
ಸ್ಥಿತಃ ಪ್ರಿಯಹಿತೇ ಜಿಷ್ಣೋಃ ಸ ಏವ ಪುರುಷರ್ಷಭಃ |
ರಾಜಂಸ್ತವ ಯದುಶ್ರೇಷ್ಠೋ ವೈಕುಂಠಃ ಪುರುಷೋತ್ತಮಃ ||26||
ಎಲೈ ರಾಜನೇ! ಈ ರಕ್ತಪದ್ಮಾಕ್ಷನೂ, ಪೀತಾಂಬರಧಾರಿಯೂ, ಮಹಾ- ಭುಜನೂ, ನಿನಗೆ ಸುಹೃಜ್ಜನನೂ, ಭ್ರಾತೃವೂ, ಮಿತ್ರನೂ, ಸಂಬಂಧಿಯೂ ಆದ ಅಚ್ಯುತನು ಏನಿದ್ದಾನೆಯೋ, ಯಾವ ಇವನು ಎಲ್ಲ ಲೋಕಗಳನ್ನೂ ಬಯಸಿದರೆ ಚರ್ಮದಂತೆ ಸುತ್ತಿಬಿಡಲು ಶಕ್ತನಾಗಿದ್ದಾನೆಯೋ, ಅಂತಹ ಪ್ರಭುವೂ ಅಚಿಂತ್ಯ- ಸ್ವರೂಪನೂ ಗೋವಿಂದನೂ ಪುರುಷಶ್ರೇಷ್ಠನೂ ಅರ್ಜುನನ ಪ್ರಿಯ ಹಿತಗಳಲ್ಲಿ ರತನಾದವನೂ, ಯದುಶ್ರೇಷ್ಠನೂ, ವೈಕುಂಠನಾಮಕನೂ ಪುರುಷೋತ್ತಮನೂ ಆದ -
ಯ ಏನಂ ಸಂಶ್ರಯಂತೀಹ ಭಕ್ತ್ಯಾ ನಾರಾಯಣಂ ಹರಿಮ್ |
ತೇ ತರಂತೀಹ ದುರ್ಗಾಣಿ ನ ಮೇಽತ್ರಾಸ್ತಿ ವಿಚಾರಣಾ ||27||
ಅಂತಹ ಈ ಪಾಪಪರಿಹಾರಕನಾದ ನಾರಾಯಣನನ್ನು ಭಕ್ತಿಯಿಂದ ಆಶ್ರಯಿಸಿದವರು ಇಲ್ಲಿ ಎಲ್ಲ ಕಷ್ಟಗಳನ್ನೂ ದಾಟುತ್ತಾರೆ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಅಸ್ಮಿನ್ನರ್ಪಿತಕರ್ಮಾಣಃ ಸರ್ವಭಾವೇನ ಭಾರತ |
ಕೃಷ್ಣೇ ಕಮಲಪತ್ರಾಕ್ಷೇ ದುರ್ಗಾಣ್ಯತಿತರಂತಿ ತೇ |
ಎಲೈ ಭಾರತನೇ! ಸರ್ವಭಾವಗಳಿಂದಲೂ ಕಮಲದಳಾಯತಾಕ್ಷನಾದ ಕೃಷ್ಣನಲ್ಲಿ ತಮ್ಮ ಕರ್ಮಗಳನ್ನು ಅರ್ಪಿಸಿದವರು ಕಷ್ಟಗಳನ್ನು ದಾಟುತ್ತಾರೆ.
ಲೋಕರಕ್ಷಾರ್ಥಮುತ್ಪನ್ನಮದಿತ್ಯಾಂ ಕಶ್ಯಪಾತ್ಮಜಮ್ ||28||
ದೇವಮಿಂದ್ರಂ ನ ಪಶ್ಯಂತಿ ದುರ್ಗಾಣ್ಯತಿತರಂತಿ ತೇ |
ಲೋಕರಕ್ಷಾರ್ಥವಾಗಿ ಕಶ್ಯಪರಿಂದ ಅದಿತಿಯಲ್ಲಿ ಅವತರಿಸಿದ ಇವನನ್ನು ಇಂದ್ರನಿಗೂ ದೇವನಾದವನೆಂದು ಯಾರು ತಿಳಿಯುತ್ತಾರೆಯೋ, ಅಣ್ಣನಾದ ಕಾರಣದಿಂದ ದೇವೇಂದ್ರನು ಕೃಷ್ಣನಿಗಿಂತ ಶ್ರೇಷ್ಠನೆಂದು ಯಾರು ತಿಳಿಯುವು- ದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ ಲಕ್ಷಾಲಂಕಾರ.
ಬ್ರಹ್ಮಾಣಂ ಲೋಕಕರ್ತಾರಂ ಯೇ ನ ಪಶ್ಯಂತಿ ತತ್ಪತಿಮ್ ||29||
ಯಷ್ಟವ್ಯಂ ಕ್ರತುಭಿರ್ದೇವ ದುರ್ಗಾಣ್ಯತಿತರಂತಿ ತೇ |
ಯಾರು ಲೋಕಕರ್ತೃವೂ, ಯಜ್ಞಗಳಲ್ಲಿ ಯಷ್ಟವ್ಯನೂ ಆದ ಬ್ರಹ್ಮನನ್ನು ಕೃಷ್ಣನ ಸ್ವಾಮಿಯೆಂದು ತಿಳಿಯುವುದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ವಿಷ್ಣುಮಿಂದ್ರಂ ಶಂಭುಂ ಚ ಬ್ರಹ್ಮಾಣಂ ಲೋಕಪೂಜಿತಮ್ ||30||
ಸ್ತುವಂತಿ ವೈದಿಕೈಃ ಸ್ತೋತ್ರೈರ್ದೇವದೇವಂ ಮಹೇಶ್ವರಮ್ |
ತಮರ್ಚಯಂತಿ ಯೇ ಶಶ್ವದ್ ದುರ್ಗಾಣ್ಯತಿತರಂತಿ ತೇ ||31||
ದೇವದೇವನೂ, ಮಹೇಶ್ವರನೂ ಆದ ವಿಷ್ಣುವನ್ನು ವೈದಿಕಸ್ತೋತ್ರಗಳಿಂದ ಇಂದ್ರನೆಂದು ಶಂಭುವೆಂದು ಲೋಕಪೂಜಿತನಾದ ಬ್ರಹ್ಮನೆಂದು ಯಾರು ಸ್ತೋತ್ರ ಮಾಡುತ್ತಾರೆಯೋ ಇಂದ್ರ ಬ್ರಹ್ಮ ಶಂಭು ಮೊದಲಾದ ಶಬ್ದಗಳಿಂದ ವಿಷ್ಣುವೇ ವಾಚ್ಯನೆಂದು ತಿಳಿದು ಯಜ್ಞಗಳಲ್ಲಿ ಅವನನ್ನು ಪೂಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ದುರ್ಗಾತಿತರಣಂ ಯೇ ಚ ಪಠಂತಿ ಶ್ರಾವಯಂತಿ ಚ |
ಪಾಠಯಂತಿ ಚ ವಿಪ್ರೇಭ್ಯೋ ದುರ್ಗಾಣ್ಯತಿತರಂತಿ ತೇ ||32||
ದುರ್ಗಾತಿತರಣವೆಂಬ ಈ ಅಧ್ಯಾಯವನ್ನು ಯಾರು ಪಾರಾಯಣ ಮಾಡು- ತ್ತಾರೆಯೋ ಇನ್ನೊಬ್ಬರಿಗೆ ಶ್ರವಣ ಮಾಡಿಸುತ್ತಾರೆಯೋ ಮತ್ತು ಬ್ರಾಹ್ಮಣರಿಗೆ ಪಾಠ ಮಾಡುತ್ತಾರರೆಯೋ,ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ಇತಿ ಕೃತ್ಯಸಮುದ್ದೇಶಃ ಕೀರ್ತಿತಸ್ತೇ ಮಯಾಽನಘ |
ಸಂತರೇದ್ ಯೇನ ದುರ್ಗಾಣಿ ಪರತ್ರೇಹ ಚ ಮಾನವಃ ||33||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಾದಶಾಧಿಕಶತತಮೋಽಧ್ಯಾಯಃ ||112||
ಎಲೈ ಅನಘನೇ! ಯಾವ ಕಾರ್ಯವನ್ನು ಮಾಡಿದರೆ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಮನುಷ್ಯನು ಕಷ್ಟಗಳನ್ನು ದಾಟುತ್ತಾನೆಯೋ ಅಂತಹ ಮಾಡಬೇಕಾದ ಕಾರ್ಯಗಳ ಸಮೂಹವನ್ನೇ ನಿನಗೆ ಹೇಳಿದ್ದೇನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 112ನೆಯ ಅಧ್ಯಾಯವು ಮುಗಿಯಿತು.
0

113. ನೂರ ಹದಿಮೂರನೆಯ ಅಧ್ಯಾಯ
ಪರೀಕ್ಷೆಯಿಂದ ಸ್ವಭಾವನಿರ್ಣಯವಿಷಯದಲ್ಲಿ ವ್ಯಾಘ್ರಗೋಮಾಯು ಕಥೆ
ಯುಧಿಷ್ಠಿರಃ
ಅಸೌಮ್ಯಾಃ ಸೌಮ್ಯರೂಪೇಣ ಸೌಮ್ಯಾಶ್ಚಾಸೌಮ್ಯದರ್ಶಿನಃ |
ಈದೃಶಾನ್ ಪುರುಷಾಂಸ್ತಾತ ಕಥಂ ವಿದ್ಯಾಮಹೇ ವಯಮ್ ॥1॥
ಯುಧಿಷ್ಠಿರ ಎಲೈ ಪ್ರೀತಿಪಾತ್ರನೇ ಕ್ರೂರರಾದವರು ಸೌಮ್ಯರೂಪದಿಂದಲೂ, ಸೌಮ್ಯರಾದವರು ಕ್ರೂರರೂಪದಿಂದಲೂ ಕಾಣಿಸುತ್ತಾರೆ. ಇಂತಹವರನ್ನು ನಾವು ತಿಳಿಯುವ ಬಗೆ ಹೇಗೆ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವ್ಯಾಘ್ರಗೋಮಾಯುಸಂವಾದಂ ತಂ ನಿಬೋಧ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಒಂದು ಹುಲಿ ಮತ್ತು ನರಿಗಳಿಗೆ ನಡೆದ ಸಂವಾದರೂಪವಾದ ಈ ಇತಿಹಾಸವನ್ನು ಹೇಳುತ್ತಾರೆ. ಅದನ್ನು ಕೇಳು.
ಪುರೀಕಾಯಾಂ ಪುರಿ ಪುರಾ ಶ್ರೀಮತ್ಯಾಂ ಪೌರಿಕೋ ನೃಪಃ |
ಪರಹಿಂಸಾರುಚಿಃ ಕ್ರೂರೋ ಬಭೂವ ಪುರುಷಾಧಮಃ ॥3॥
ಪುರೀಕಾ ಎಂಬ ಸಂಪದ್ಯುಕ್ತವಾದ ಪಟ್ಟಣದಲ್ಲಿ ಪೌರಿಕನೆಂಬ ರಾಜನಿದ್ದನು. ಪುರುಷಾಧಮನಾದ ಅವನು ಕ್ರೂರನಾಗಿ ಪರಹಿಂಸೆಯಲ್ಲಿಯೇ ಅಭಿರುಚಿಯುಳ್ಳ- ವನಾಗಿದ್ದನು.
ಸ ತ್ವಾಯುಷಿ ಪರಿಕ್ಷೀಣೇ ಜಗಾಮಾನೀಪ್ಸಿತಾಂ ಗತಿಮ್ |
ಗೋಮಾಯುತ್ವಂ ಚ ಸಂಪ್ರಾಪ್ತೋ ದೂಷಿತಃ ಪೂರ್ವಕರ್ಮಣಾ ॥4॥
ಆಯುಸ್ಸು ಮುಗಿಯುತ್ತಿರಲು ಅವನು ದುರ್ಗತಿಯನ್ನು ಹೊಂದಿ, ಪೂರ್ವ- ಕರ್ಮದೋಷದಿಂದ ನರಿಯಾಗಿ ಜನಿಸಿದನು.
ಸಂಸ್ಮೃತ್ಯ ಪೂರ್ವಜಾತಿಂ ಸ ನಿರ್ವೇದಂ ಪರಮಂ ಗತಃ |
ನ ಭಕ್ಷಯತಿ ಮಾಂಸಾನಿ ಪರೈರುಪಹೃತಾನ್ಯಪಿ ॥5॥
ಪೂರ್ವಜನ್ಮಸ್ಮರಣೆಯನ್ನು ಹೊಂದಿದ ಅವನು ಬಹಳ ಬೇಸರಗೊಂಡನು. ಇನ್ನೊಬ್ಬರು ತಂದುಕೊಟ್ಟ ಮಾಂಸವನ್ನೂ ತಿನ್ನುತ್ತಿರಲಿಲ್ಲ.
ಅಹಿಂಸ್ರಃ ಸರ್ವಭೂತೇಷು ಸತ್ಯವಾಕ್ ಸುದೃಢವ್ರತಃ |
ಚಕಾರ ಚ ಯಥಾಕಾಲಮಾಹಾರಂ ಪತಿತೈಃ ಫಲೈಃ ॥6॥
ಯಾವ ಪ್ರಾಣಿಯನ್ನೂ ಹಿಂಸಿಸದೇ ಸತ್ಯವಚನನಾಗಿ ದೃಢವಾದ ವ್ರತವನ್ನು ಧರಿಸಿ ಆಯಾ ಕಾಲದಲ್ಲಿ ಭೂಮಿಯ ಮೇಲೆ ಬಿದ್ದ ಫಲಗಳಿಂದ ಜೀವನವನ್ನು ಮಾಡಿದನು.
ಶ್ಮಶಾನೇ ತಸ್ಯ ಚಾವಾಸೋ ಗೋಮಾಯೋಃ ಸಮ್ಮತೋಽಭವತ್ |
ಜನ್ಮಭೂಮ್ಯನುರೋಧಾಚ್ಚ ನಾನ್ಯದ್ ವಾಸಮರೋಚಯತ್ ॥7॥
ಆ ನರಿಗೆ ಸ್ಮಶಾನವಾಸವು ಪ್ರಿಯವಾಗಿದ್ದಿತು. ಅದು ಅಲ್ಲಿಯೇ ಹುಟ್ಟಿದು- ದರಿಂದ ಬೇರೆ ಕಡೆಯಲ್ಲಿ ವಾಸವನ್ನು ಮಾಡಲು ಬಯಸಲಿಲ್ಲ.
ತಸ್ಯ ಶೌಚಮಮೃಷ್ಯಂತಃ ಸರ್ವೇ ತೇ ಸಹಜಾತಯಃ |
ಚಾಲಯಂತಿ ಸ್ಮ ತಾಂ ಬುದ್ಧಿಂ ವಚನೈಃ ಪ್ರಶ್ರಯೋತ್ತರೈಃ ॥8॥
ಅವನ ಶೀಲವನ್ನು ಸಹಿಸದ ಅವನ ಜಾತಿಯ ಉಳಿದ ನರಿಗಳು ವಿನಯ- ಪೂರ್ವಕವಾದ ಮಾತುಗಳಿಂದ ಅವನ ಬುದ್ಧಿಯನ್ನು ಕೆಡಿಸಲು ಪ್ರಯತ್ನಪಟ್ಟವು.
ವಸನ್ ಪಿತೃವನೇ ರೌದ್ರೇ ಶೌಚಂ ಲಪ್ಸಿತುಮಿಚ್ಛಸಿ |
ಇಯಂ ವಿಪ್ರತಿಪತ್ತಿಸ್ತೇ ಯದಾ ತ್ವಂ ಪಿಶಿತಾಶನಃ ॥9॥
ಘೋರವಾದ ಸ್ಮಶಾನದಲ್ಲಿ ವಾಸ ಮಾಡಿ, ಶುಚಿಯಾಗಿರಲು ಬಯಸುತ್ತಿ- ದ್ದೀಯೆ. ಮಾಂಸಾಹಾರಿಯಾದ ನಿನಗೆ ಇದು ವಿರುದ್ಧವಾದ ವರ್ತನೆ.
ತತ್ ಸಮೋ ವಾ ಭವಾಸ್ಮಾಭಿರ್ಭಕ್ಷ್ಯಾನ್ ದಾಸ್ಯಾಮಹೇ ವಯಮ್ |
ಭುಂಕ್ಷ್ವ ಶೌಚಂ ಪರಿತ್ಯಜ್ಯ ಯದ್ಧಿ ಭುಕ್ತಂ ತದಸ್ತಿ ತೇ ॥10॥
ಆದ್ದರಿಂದ ನಮ್ಮಂತೆಯೇ ಇರುವವನಾಗು. ನಾವು ನಿನಗೆ ಆಹಾರವನ್ನು ಒದಗಿಸುವೆವು. ಈ ಶೌಚವನ್ನು ಪರಿತ್ಯಜಿಸಿ ನಿನ್ನ ಜಾತಿಗೆ ಯಾವ ಆಹಾರವಿದೆಯೋ ಅದು ನಿನಗೂ ಇರಲಿ - (ಎಂದು ಹೇಳಿದವು).
ಇತಿ ತೇಷಾಂ ವಚಃ ಶ್ರುತ್ವಾ ಪ್ರತ್ಯುವಾಚ ಸಮಾಹಿತಃ |
ಮಧುರೈಃ ಪ್ರಶ್ರಿತೈರ್ವಾಕ್ಯೈರ್ಹೇತುಮದ್ಭಿರನಿಷ್ಠುರೈಃ ॥11॥
ಅವುಗಳ ಈ ಮಾತನ್ನು ಕೇಳಿ ರಾಜನರಿಯು ಸಮಾಧಾನದಿಂದ ಮಧುರವಾದ ವಿನಯಪೂರ್ವಕವಾದ ಯುಕ್ತಿಯುಕ್ತವಾದ ನಿಷ್ಠುರವಲ್ಲದ ಮಾತುಗಳಿಂದ ಉತ್ತರ- ವನ್ನು ಕೊಟ್ಟಿತು.
ಅಪ್ರಮಾಣಂ ಪ್ರಸೂತಿರ್ಮೇ ಶೀಲತಃ ಕ್ರಿಯತೇ ಕುಲಮ್ |
ಪ್ರಾರ್ಥಯಿಷ್ಯೇ ತು ತತ್ ಕರ್ಮ ಯೇನ ವಿಸ್ತೀರ್ಯತೇ ಯಶಃ ॥12॥
ನಾನು ಎಲ್ಲಿ ಹುಟ್ಟಿದೆನೆಂಬುದು ಅಪ್ರಯೋಜಕವಾದುದು. ಶೀಲದಿಂದ ಕುಲವುಂಟಾಗುತ್ತದೆ. ಏನನ್ನು ಮಾಡಿದರೆ ಕೀರ್ತಿಯು

ವಿಸ್ತಾರವಾಗುವುದೋ ಅಂತಹ ಕರ್ಮವನ್ನು ಮಾಡಲು ಬಯಸುತ್ತೇನೆ.
ಶ್ಮಶಾನೇ ಯದಿ ವಾಸೋ ಮೇ ಸಮಾಧಿರ್ಮೇ ನಿಶಮ್ಯತಾಮ್ |
ಆತ್ಮಾ ಫಲತಿ ಕರ್ಮಾಣಿ ನಾಶ್ರಮೋ ಧರ್ಮಲಕ್ಷಣಮ್ ॥13॥
ನಾನು ಸ್ಮಶಾನದಲ್ಲಿ ವಾಸ ಮಾಡುವುದಕ್ಕೆ ನನ್ನ ಸಮರ್ಥನೆಯನ್ನು ಕೇಳಿ. ಆಶ್ರಮವು ಧರ್ಮಕ್ಕೆ ಕಾರಣವಲ್ಲ. ಕರ್ಮವನ್ನು ಮಾಡುವವನು ಮತ್ತು ಅನು- ಭವಿಸುವವನು ಜೀವ.
ಆಶ್ರಮೇ ಯೋ ದ್ವಿಜಂ ಹನ್ಯಾದ್ ಗಾಂ ವಾ ದದ್ಯಾದನಾಶ್ರಮೇ |
ಕಿನ್ನು ತತ್ ಪಾತಕಂ ನ ಸ್ಯಾತ್ ತದ್ವಾ ದತ್ತಂ ವೃಥಾ ಭವೇತ್ ॥14॥
ಆಶ್ರಮದಲ್ಲಿ ಒಬ್ಬ ಬ್ರಾಹ್ಮಣನನ್ನು ಕೊಂದರೆ ಅದು ಪಾತಕವಾಗುವುದಿಲ್ಲವೇ? ಆಶ್ರಮವಲ್ಲದ ಸ್ಥಳದಲ್ಲಿ ಗೋದಾನವನ್ನು ಮಾಡಿದರೆ ಅದು ವ್ಯರ್ಥವಾಗುವುದೇ?
ಭವಂತಃ ಸರ್ವಲೋಭೇನ ಕೇವಲಂ ಭಕ್ಷಣೇ ರತಾಃ |
ಅನುಬಂಧೇ ತು ಯೇ ದೋಷಾಸ್ತಾನ್ ನ ಪಶ್ಯಂತಿ ಮೋಹಿತಾಃ ॥15॥
ನೀವು ಎಲ್ಲವನ್ನೂ ಆಸೆ ಪಡುತ್ತಾ ಕೇವಲ ಭೋಜನದಲ್ಲಿ ನಿರತರಾಗಿದ್ದೀರಿ. ಮೋಹಕ್ಕೆ ಒಳಗಾದ ನೀವು ಅದರ ಪರಿಣಾಮವಾದ ದೋಷಗಳನ್ನು ಕಾಣುತ್ತಿಲ್ಲ.
ಅಪ್ರತ್ಯಯಕೃತಾಂ ಗರ್ಹ್ಯಾಮರ್ಥಾಪನಯದೂಷಿತಾಮ್ |
ಇಹ ಚಾಮುತ್ರ ಚಾನಿಷ್ಟಾಂ ತಸ್ಮಾದ್ ವೃತ್ತಿಂ ನ ರೋಚಯೇ ॥16॥
ನೀವು ಅನುಸರಿಸುತ್ತಿರುವ ವೃತ್ತಿಯು ಅಜ್ಞಾನಮೂಲಕವಾದುದು, ನಿಂದನೀಯವಾದುದು, ದ್ರವ್ಯನಾಶಕವಾದುದು, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅನಿಷ್ಟವನ್ನು ಉಂಟುಮಾಡುವಂತಹದು. ಆದ್ದರಿಂದ ಅದನ್ನು ನಾನು ಬಯಸುವುದಿಲ್ಲ (ಎಂದು ಹೇಳಿತು).
ತಂ ಶುಚಿಂ ಪಂಡಿತಂ ಮತ್ವಾ ಶಾರ್ದೂಲಃ ಖ್ಯಾತವಿಕ್ರಮಃ |
ಕೃತ್ವಾಽಽತ್ಮಸದೃಶಾಂ ಪೂಜಾಂ ಸಾಚಿವ್ಯೇಽವರ್ಧಯತ್ ಸ್ವಯಮ್ ॥17॥
ಪ್ರಸಿದ್ಧವಾದ ಪರಾಕ್ರಮವುಳ್ಳ ಆ ವ್ಯಾಘ್ರವು ಶುಚಿಯಾದ ಆ ನರಿಯನ್ನು ವಿದ್ವಾಂಸನೆಂದು ತಿಳಿದು ತನಗೆ ಅನುಗುಣವಾದ ಪೂಜೆಯನ್ನು ಮಾಡಿ ತಾನೇ ಆ ನರಿಗೆ ಸಚಿವಪದವಿಯನ್ನು ಕೊಟ್ಟು ಬೆಳೆಸಿತು.
ಸೌಮ್ಯ ವಿಜ್ಞಾತರೂಪಸ್ತ್ವಂ ಗಚ್ಛ ಯಾತ್ರಾಂ ಮಯಾ ಸಹ |
ವ್ರಿಯಂತಾಮೀಪ್ಸಿತಾ ಭೋಗಾಃ ಪರಿಹಾರ್ಯಾಶ್ಚ ಪುಷ್ಕಳಾಃ ॥18॥
ಎಲೈ ಸೌಮ್ಯನೇ! ನಿನ್ನ ಸ್ವಭಾವವು ತಿಳಿದಿದೆ. ನನ್ನ ಜೊತೆಯಲ್ಲಿ ಸಂಚಾರ ಮಾಡು. ಇಷ್ಟವಾದ ಭೋಗಗಳನ್ನು ಅನುಭವಿಸು. ಹೆಚ್ಚಿನ ವಸ್ತುಗಳು ನಿನಗೆ ಬೇಡವಾದರೆ ಅವುಗಳನ್ನು ಬಿಟ್ಟುಬಿಡು.
ತೀಕ್ಷ್ಣಾ ವಯಮಿತಿ ಖ್ಯಾತಾ ಭವಂತಂ ಜ್ಞಾಪಯಾಮಹೇ |
ಮೃದುಪೂರ್ವಂ ಘಾತಿನಸ್ತೇ ಶ್ರೇಯಶ್ಚಾಧಿಗಮಿಷ್ಯತಿ ॥19॥
ನಾವುಕ್ರೂರರಾದವರು ಎಂದು ಪ್ರಸಿದ್ಧರಾಗಿದ್ದೇವೆ ಎಂದು ನಿನಗೆ ಜ್ಞಾಪಿಸು- ತ್ತಿದ್ದೇನೆ. ನೀನು ಮಾರ್ದವದಿಂದ ವರ್ತಿಸಿ ಪ್ರಾಣಿಗಳನ್ನು ಕೊಂದರೆ ನಿನಗೆ ಶ್ರೇಯಸ್ಸು ಲಭಿಸುವುದು (ಎಂದು ಹೇಳಿತು).
ಅಥ ಸಂಪೂಜ್ಯ ತದ್ ವಾಕ್ಯಂ ಮೃಗೇಂದ್ರಸ್ಯ ಮಹಾತ್ಮನಃ |
ಗೋಮಾಯುಃ ಪ್ರಶ್ರಿತಂ ವಾಕ್ಯಂ ಬಭಾಷೇ ಕಿಂಚಿದಾನತಃ ॥20॥
ಅನಂತರ ನರಿಯು ಮಹಾತ್ಮನಾದ ಆ ಮೃಗೇಂದ್ರನ ಮಾತನ್ನು ಪೂಜಿಸಿ, ತಲೆಯನ್ನು ಬಗ್ಗಿಸಿ, ವಿನಯಪೂರ್ವಕವಾದ ಮಾತನ್ನಾಡಿತು.
ಸದೃಶಂ ಮೃಗರಾಜೈತತ್ ತವ ವಾಕ್ಯಂ ಮದಂತರೇ |
ಯತ್ ಸಹಾಯಾನ್ಮೃಗಯಸೇ ಧರ್ಮಾರ್ಥಕುಶಲಾನ್ ಶುಚೀನ್ ॥21॥
ಎಲೈ ಮೃಗರಾಜನೇ! ಧರ್ಮಾರ್ಥಕುಶಲರೂ ಶುಚಿಗಳೂ ಆದವರ ಸಹಾಯವನ್ನು ಬಯಸಿ ನನ್ನ ವಿಷಯದಲ್ಲಿ ನೀನು ಹೇಳಿದ ಮಾತುಗಳು ನಿನಗೆ ಯೋಗ್ಯವಾಗಿಯೇ ಇವೆ.
ನ ಶಕ್ಯಮನಮಾತ್ಯೇನ ಮಹತ್ತ್ವಮನುಶಾಸಿತುಮ್ |
ದುಷ್ಟಾಮಾತ್ಯೇನ ವಾ ವೀರ ಶರೀರಪರಿಪಂಥಿನಾ ॥22॥
ಅಮಾತ್ಯನಿಲ್ಲದೇ ದೊಡ್ಡ ರಾಜ್ಯವನ್ನು ಆಳುವುದು ಸಾಧ್ಯವಿಲ್ಲ. ಎಲೈ ವೀರನೇ ತನ್ನ ಶರೀರಕ್ಕೆ ವಿರೋಧವನ್ನು ಮಾಡುವ ದುಷ್ಟ ಅಮಾತ್ಯನ ಸಹಾಯದಿಂದಲೂ ದೊಡ್ಡರಾಜ್ಯವನ್ನು ಆಳಲು ಸಾಧ್ಯವಿಲ್ಲ.
ಸಹಾಯಾನುರಕ್ತಾಂಸ್ತು ಯತೇತಾನುಪಸಂಹಿತಾನ್ |
ಪರಸ್ಪರಮಸಂಘುಷ್ಟಾನ್ ವಿಜಿಗೀಷೂನಲೋಲುಪಾನ್ ॥23॥
ಪರಸ್ಪರ ಗುಂಪುಗೂಡದ ಇಂದ್ರಿಯಲೋಲುಪರಲ್ಲದ, ಸ್ವಾಮಿಯ ಹಿತವನ್ನು ಬಯಸುವ, ಅನುರಾಗವುಳ್ಳ, ನಿಷ್ಕಪಟರಾದ ಸಹಾಯಕರನ್ನು ಪಡೆಯಲು ಪ್ರಯತ್ನಿಸಬೇಕು.
ತಾನತೀತೋಪಧಾನ್ ಪ್ರಾಜ್ಞಾನ್ ಹಿತೇ ಯುಕ್ತಾನ್ ನ ತು ಪ್ರಿಯೇ |
ಪೂಜಯೇಥಾ ಮಹಾಭಾಗಾನ್ ಯಥಾಚಾರ್ಯಾನ್ ಯಥಾ ಪಿತ್ರೂನ್ ॥
ನಿಷ್ಕಪಟರಾದ ಪ್ರಾಜ್ಞರಾದ ನಿನ್ನ ಹಿತದಲ್ಲಿ ನಿರತರಾದ ತಮ್ಮ ಪ್ರಿಯದಲ್ಲಿ ನಿರತರಾಗದ ಮಹಾನುಭಾವರನ್ನು ನೀನು ಗುರುಗಳನ್ನು ಪೂಜಿಸುವಂತೆ ತಂದೆಯನ್ನು ಪೂಜಿಸುವಂತೆ ಪೂಜಿಸಬೇಕು.

ನ ತ್ವೇವಂ ಮಮ ಸಂತೋಷಾದ್ ರೋಚತೇಽನ್ಯನ್ಮೃಗಾಧಿಪ |
ನ ಕಾಮಯೇ ಸುಖಾನ್ ಭೋಗಾನೈಶ್ವರ್ಯಂ ವಾ ತ್ವದಾಶ್ರಯಮ್ ॥25
ಆದರೆ ಎಲೈ ಮೃಗಾಧಿಪನೇ! ನನಗೆ ಆತ್ಮತೃಪ್ತಿಪೂರ್ವಕವಾಗಿ ಇದು ಯಾವುದೂ ರುಚಿಸುವುದಿಲ್ಲ. ನಿನ್ನನ್ನು ಆಶ್ರಯಿಸಿದ ಸುಖಗಳನ್ನಾಗಲೀ, ಭೋಗ- ಗಳನ್ನಾಗಲೀ, ಐಶ್ವರ್ಯವನ್ನಾಗಲೀ ನಾನು ಬಯಸುವುದಿಲ್ಲ.
ನ ಯೋಕ್ಷ್ಯತಿ ಹಿ ಮೇ ಶೀಲಂ ತವ ಭೃತ್ಯೈಃ ಪುರಾತನೈಃ |
ತೇ ತ್ವಾಂ ವಿಭೇದಯಿಷ್ಯಂತಿ ದುಃಶೀಲಾಶ್ಚ ಮದಂತರೇ ॥26॥
ನಿನ್ನ ಹಿಂದಿನ ಭೃತ್ಯರಿಗೂ ಮತ್ತು ನನ್ನ ಸ್ವಭಾವಕ್ಕೂ ಸರಿ ಹೊಂದುವುದಿಲ್ಲ. ದುಷ್ಟಸ್ವಭಾವವುಳ್ಳ ಅವರು ನನ್ನ ವಿಷಯದಲ್ಲಿ ನಿನಗೆ ಭೇದಬುದ್ಧಿಯನ್ನು ಉಂಟು ಮಾಡುತ್ತಾರೆ. (ನಮ್ಮ ಮೈತ್ರಿಯನ್ನು ನಾಶಗೊಳಿಸುತ್ತಾರೆ).
ಸಂಶ್ರಯಃ ಶ್ಲಾಘನೀಯಸ್ತ್ವಮನ್ಯೇಷಾಮಪಿ ಭಾಸ್ವತಾಮ್ |
ಕೃತಾತ್ಮಾ ಸುಮಹಾಭಾಗಃ ಪಾಪಕೇಷ್ವಪ್ಯದಾರುಣಃ ॥27॥
ನೀನು ಒಳ್ಳೆಯ ಮನಸ್ಸುಳ್ಳವನು; ಮಹಾನುಭಾವನಾದವನು; ಅಪರಾಧ ಮಾಡಿದವರಲ್ಲಿಯೂ ದಯೆಯಿಂದ ವರ್ತಿಸುವವನು. ಬೇರೆಯ ಬಲಿಷ್ಠಪ್ರಾಣಿ- ಗಳಿಗೂ ನಿನ್ನನ್ನು ಆಶ್ರಯಿಸುವುದು ಪ್ರಶಂಸನೀಯವಾಗುತ್ತದೆ.
ದೀರ್ಘದರ್ಶೀ ಮಹೋತ್ಸಾಹಃ ಸ್ಥೂಲಲಕ್ಷ್ಯೋ ಮಹಾಬಲಃ |
ಕೃತೀ ಚಾಮೋಘಕರ್ತಾಸಿ ಭಾವ್ಯೈಶ್ಚ ಸಮಲಂಕೃತಃ ॥28॥
ನೀನು ದೀರ್ಘದೃಷ್ಟಿಯುಳ್ಳವನು; ಬಹಳ ಉತ್ಸಾಹವುಳ್ಳವನು; ಬಹುಪ್ರದ- ನಾದವನು, ಮಹಾಬಲವುಳ್ಳವನು, ನಿಪುಣನಾದವನು, ವ್ಯರ್ಥವಲ್ಲದ ಕಾರ್ಯ- ವನ್ನು ಮಾಡುವವನು. ಶುಭಫಲಗಳಿಂದ ಕೂಡಿರುವವನು.
ಕಿಂತು ಸ್ವೇನಾಸ್ಮಿ ಸಂತುಷ್ಟೋ ದುಃಖಾ ವೃತ್ತಿರನುಷ್ಠಿತಾ |
ಸೇವಾಯಾಶ್ಚಾಪಿ ನಾಭಿಜ್ಞಃ ಸ್ವಚ್ಛಂದೇನ ವನೇಚರಃ ॥29॥
ಆದರೆ ನಾನು ನನ್ನ ಪಾಡಿಗೆ ತೃಪ್ತಿಯಿಂದ ಇದ್ದೇನೆ. ಸಂತೋಷದಿಂದಲೇ ಈ ದುಃಖಕರವಾದ ಜೀವನವೃತ್ತಿಯನ್ನು ಅನುಸರಿಸುತ್ತಿದ್ದೇನೆ. ನನ್ನ ಮನಸ್ಸಿಗೆ ಬಂದಂತೆ ಕಾಡಿನಲ್ಲಿ ತಿರುಗುವ ನಾನು ಸ್ವಾಮಿಗೆ ಸೇವೆಯನ್ನು ಮಾಡುವ ಪ್ರಕಾರವನ್ನು ತಿಳಿದವನಲ್ಲ.
ರಾಜೋಪಕ್ರೋಶದೋಷಾಶ್ಚ ಸರ್ವೇ ಸಂಶ್ರಯವಾಸಿನಾಮ್ |
ವನಚರ್ಯಾ ಚ ನಿಃಸಂಗಾ ನಿರ್ಭಯಾ ನಿರವಗ್ರಹಾ ॥30॥
ರಾಜನನ್ನು ಆಶ್ರಯಿಸಿ ಇರುವವರೆಲ್ಲರಿಗೂ ರಾಜನಿಗೆ ಉಂಟಾಗಬಹುದಾದ ಕ್ರೋಧದಿಂದ ಉಂಟಾಗುವ ಪರಿಣಾಮದ ದೋಷಗಳು ಇದ್ದೇ ಇರುತ್ತವೆ. ಕಾಡಿನಲ್ಲಿ ಸಂಚರಿಸುವುದಾದರೂ ನಿರ್ಭಯವಾದುದು, ಪ್ರತಿರೋಧರಹಿತ- ವಾದುದು ಮತ್ತು ನಿಃಸಂಗವಾದುದು.
ನೃಪೇಣಾಹೂಯಮಾನಸ್ಯ ಯತ್ ತಿಷ್ಠತಿ ಭಯಂ ಹೃದಿ |
ನ ತತ್ ತಿಷ್ಠತಿ ತುಷ್ಟಾನಾಂ ವನೇ ಮೂಲಫಲಾಶಿನಾಮ್ ॥31॥
ರಾಜನಿಂದ ಆಹ್ವಾನ ಮಾಡಲ್ಪಟ್ಟವನಿಗೆ ಮನಸ್ಸಿನಲ್ಲಿ ಯಾವ ಭಯವಿರು- ತ್ತದೆಯೋ ಅದು ಕಾಡಿನಲ್ಲಿ ಮೂಲಫಲಗಳನ್ನು ತಿಂದು ಸಂತೃಪ್ತರಾದವರಿಗೆ ಇರುವುದಿಲ್ಲ.
ಪಾನೀಯಂ ವಾ ನಿರಾಯಾಸಂ ಸ್ವಾದ್ವನ್ನಂ ವಾ ಭಯೋತ್ತರಮ್ |
ವಿಚಾರ್ಯ ಖಲು ಪಶ್ಯಾಮಿ ತತ್ ಸುಖಂ ಯತ್ರ ನಿರ್ವೃತಿಃ ॥32॥
ಒಂದು ಕಡೆ ನಿರಾಯಾಸವಾದ ನೀರು ಮಾತ್ರ. ಇನ್ನೊಂದು ಕಡೆ ಭಯದಿಂದ ಕೂಡಿದ ರುಚಿಕರವಾದ ಅನ್ನ. ಇವೆರಡನ್ನೂ ವಿಚಾರ ಮಾಡಿದರೆ ಎಲ್ಲಿ ನಿರಾಯಾಸವಿರುತ್ತದೆಯೋ ಅದೇ ಸುಖವೆಂದು ಭಾವಿಸುತ್ತೇನೆ.
ಅಪರಾಧೈರ್ನ ತಾವಂತೋ ಭೃತ್ಯಾಃ ಶಿಷ್ಟಾ ನರಾಧಿಪೈಃ |
ಉಪಘಾತೈರ್ಯಥಾ ಭೃತ್ಯಾ ದೂಷಿತಾ ನಿಧನಂ ಗತಾಃ ॥33॥
ರಾಜನ ಕೋಪದಿಂದ ದೂಷಿತರಾಗಿ ಎಷ್ಟು ಸೇವಕರು ಮೃತರಾಗುತ್ತಾರೆಯೋ ಅಷ್ಟು ಸೇವಕರು ರಾಜನಿಗೆ ಅಪರಾಧವನ್ನು ಮಾಡಿ ಮೃತರಾಗುವುದಿಲ್ಲ.
ಯದಿ ತ್ವೇತನ್ಮಯಾ ಕಾರ್ಯಂ ಮೃಗೇಂದ್ರ ಯದಿ ಮನ್ಯಸೇ |
ಸಮಯಂ ಕೃತಮಿಚ್ಛಾಮಿ ವರ್ತಿತವ್ಯಂ ಯಥಾ ಮಯಿ ॥34॥
ಎಲೈ ಮೃಗೇಂದ್ರನೇ! ನಿನ್ನ ಸಾಚಿವ್ಯವನ್ನು ನಾನುಮಾಡಲೇಬೇಕೆಂದು ನೀನು ತಿಳಿದರೆ ನೀನು ನನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ವಿಷಯದಲ್ಲಿ ಒಂದು ನಿಬಂಧನೆಯನ್ನು ಮಾಡುವೆನು.
ಮದೀಯಾ ಮಾನನೀಯಾಸ್ತೇ ಶ್ರೋತವ್ಯಂ ಚ ಹಿತಂ ವಚಃ |
ಕಲ್ಪಿತಾ ಯಾ ಚ ತೇ ವೃತ್ತಿಃ ಸಾ ಭವೇತ್ ತವ ಸುಸ್ಥಿರಾ ॥35॥
ನನ್ನವರನ್ನು ನೀನು ಸನ್ಮಾನಿಸಬೇಕು. ಹಿತವಚನಗಳನ್ನು ಕೇಳಬೇಕು. ನಿನಗೆ ಯಾವ ಜೀವನೋಪಾಯವು ಕಲ್ಪಿತವಾಗಿದೆಯೋ ಅದೇ ನಿನಗೆ ಇರಲಿ. (ಆ ವಿಷಯದಲ್ಲಿ ನನಗೆ ಬಲಾತ್ಕಾರವನ್ನು ಮಾಡಬಾರದು).
ನ ಮಂತ್ರಯೇಯಮನ್ಯೈಸ್ತೇ ಸಚಿವೈಃ ಸಹ ಕರ್ಹಿಚಿತ್ |
ನೀತಿಮಂತಃ ಪರೀಪ್ಸಂತೋ ವೃಥಾ ಬ್ರೂಯುಃ ಪರೇ ಮಯಿ ॥36॥
ನಾನು ನಿನ್ನ ಉಳಿದ ಮಂತ್ರಿಗಳ ಜೊತೆಯಲ್ಲಿ ಯಾವ ಕಾರಣದಿಂದಲೂ ಮಂತ್ರಾಲೋಚನೆಯನ್ನು ಮಾಡುವುದಿಲ್ಲ. ನನ್ನ ಒಳಗಿನ ವಿಷಯಗಳನ್ನು ವಿಚಾರ ಮಾಡುತ್ತಾ ಅವರು ನನ್ನ ವಿಷಯದಲ್ಲಿ ನಿನ್ನ ಬಳಿ ಸುಳ್ಳು ಮಾತುಗಳನ್ನು ಹೇಳಬಹುದು.
ಏಕ ಏಕೇನ ಸಂಗಮ್ಯ ರಹೋ ಬ್ರೂಯಾಂ ಹಿತಂ ತವ |

ನ ಚ ತೇ ಜ್ಞಾತಿಕಾರ್ಯೇಷು ಪ್ರಷ್ಟವ್ಯೋಽಹಂ ಹಿತಾಹಿತೇ ॥37॥
ನಾನೊಬ್ಬನೇ ನಿನ್ನೊಬ್ಬನ ಜೊತೆಯಲ್ಲಿ ಸೇರಿ ರಹಸ್ಯವಾಗಿ ನಿನ್ನ ಹಿತವನ್ನು ಹೇಳುವೆನು. ನಿನ್ನ ಜ್ಞಾತಿಗಳ ಹಿತಾಹಿತವಿಷಯದಲ್ಲಿ ನೀನು ನನ್ನನ್ನು ಪ್ರಶ್ನಿಸಬಾರದು.
ಮಯಾ ಸಮ್ಮಂತ್ರ್ಯ ಪಶ್ಚಾಚ್ಚ ನ ಹಿಂಸ್ಯಾಃ ಸಚಿವಾಸ್ತ್ವಯಾ |
ಮದೀಯಾನಾಂ ಚ ಕುಪಿತೋ ಮಾ ತ್ವಂ ದಂಡಂ ನಿಪಾತಯೇಃ ॥38॥
ನನ್ನ ಜೊತೆಯಲ್ಲಿ ಮಂತ್ರರಹಸ್ಯವನ್ನು ಮಾಡಿ ಅನಂತರ ನಿನ್ನ ಉಳಿದ ಸಚಿವರನ್ನು ಹಿಂಸಿಸಬಾರದು. ನನ್ನವರ ಮೇಲೆ ಕೋಪಗೊಂಡು ನೀನು ಶಿಕ್ಷೆಯನ್ನು ವಿಧಿಸಬಾರದು (ಎಂದು ಹೇಳಿತು).
ಏವಮಸ್ತ್ವಿತಿ ತೇನಾಸೌ ಮೃಗೇಂದ್ರೇಣಾಭಿಪೂಜಿತಃ |
ಪ್ರಾಪ್ತವಾನ್ ಮತಿಸಾಚಿವ್ಯಂ ಗೋಮಾಯುರ್ವ್ಯಾಘ್ರಯೋನಿತಃ॥39॥
ಮೃಗೇಂದ್ರನು ಹಾಗೆಯೇ ಆಗಲಿ ಎಂದು ಹೇಳಿ ಆ ನರಿಯನ್ನು ಪೂಜಿಸಿದನು. ನರಿಯು ಆ ವ್ಯಾಘ್ರಕುಮಾರನ ಸಚಿವಪದವಿಯನ್ನು ಹೊಂದಿತು.
ತಂ ತಥಾ ಸತ್ಕೃತಂ ದೃಷ್ಟ್ವಾ ಯುಜ್ಯಮಾನಂ ಚ ಕರ್ಮಣಿ |
ಪ್ರಾದ್ವಿಷನ್ ಕೃತಸಂಘಾತಾಃ ಪೂರ್ವಭೃತ್ಯಾ ಮುಹುರ್ಮುಹುಃ ॥40॥
ಆ ನರಿಯು ಹಾಗೆ ಪೂಜಿತವಾದುದನ್ನು ನೋಡಿ ಮತ್ತು ರಾಜಕಾರ್ಯಗಳಲ್ಲಿ ಭಾಗವಹಿಸುವುದನ್ನು ನೋಡಿ ಆ ಮೃಗರಾಜನ ಮೊದಲನೆಯ ಸೇವಕರೆಲ್ಲರೂ ಮತ್ತೆ ಮತ್ತೆ ಗುಂಪುಗೂಡಿ ಆ ನರಿಯನ್ನು ದ್ವೇಷಿಸಲು ಪ್ರಾರಂಭಿಸಿದವು.
ಮಿತ್ರಬುದ್ಧ್ಯಾ ಚ ಗೋಮಾಯುಂ ಸಾಂತ್ವಯಿತ್ವಾ ಪ್ರವೇಶ್ಯ ಚ |
ದೋಷೇಷು ಸಮತಾಂ ನೇತುಮೈಚ್ಛನ್ನಶುಭಬುದ್ಧಯಃ ॥41॥
ದುಷ್ಟಬುದ್ಧಿಯುಳ್ಳ ಆ ನರಿಗಳು ಮಿತ್ರಬುದ್ಧಿಯಿಂದ ಆ ನರಿಯನ್ನು ತಮ್ಮ ಗುಂಪಿಗೆ ಸೇರಿಸಿಕೊಂಡು ಸಮಾಧಾನ ಮಾಡಿ ತಮ್ಮ ದೋಷಗಳನ್ನು ಆ ನರಿಗೂ ಉಂಟುಮಾಡಲು ಪ್ರಯತ್ನಿಸಿದವು.
ಅನ್ಯಥಾಭ್ಯುಚಿತಾಃ ಪೂರ್ವಂ ಪರದ್ರವ್ಯಾಪಹಾರಿಣಃ |
ಅಶಕ್ತಾಃ ಕಿಂಚಿದಾದಾತುಂ ದ್ರವ್ಯಂ ಗೋಮಾಯುಯಂತ್ರಿತಾಃ ॥42॥
ಹಿಂದೆ ಪರದ್ರವ್ಯಗಳನ್ನು ಅಪಹರಿಸಿ ಬೇರೆ ರೀತಿಯಲ್ಲಿ ಜೀವನ ಮಾಡಿದ ಅವು ಈಗ ರಾಜ-ನರಿಯ ನಿಯಂತ್ರಣಕ್ಕೆ ಒಳಪಟ್ಟು ಬೇರೆಯವರ ದ್ರವ್ಯವನ್ನು ಅಪಹರಿಸಲು ಸಾಧ್ಯವಾಗಲಿಲ್ಲ.
ವ್ಯುತ್ಥಾನಂ ಚಾತ್ರ ಕಾಂಕ್ಷದ್ಭಿಃ ಕಥಾಭಿಃ ಪ್ರವಿಲೋಭ್ಯತೇ |
ನ ಚಾಪಿ ಸ ಮಹಾಪ್ರಾಜ್ಞಸ್ತಸ್ಮಾದ್ ಧೈರ್ಯಾಚ್ಚಚಾಲ ಹ |
ಅಥಾಸ್ಯ ಸಮಯಂ ಕೃತ್ವಾ ವಿನಾಶಾಯ ಸ್ಥಿತಾಃ ಪರೇ ॥44॥
ಆ ರಾಜನರಿಯನ್ನು ಅಲ್ಲಿಂದ ಎಬ್ಬಿಸಲು ಬಯಸಿದ ಅವು ಬೇರೆ ಬೇರೆ ಕಥೆಗಳನ್ನು ಹೇಳಿ ಅದನ್ನು ಲೋಭಗೊಳಿಸಲು ಪ್ರಯತ್ನಿಸಿದವು. ಬಹಳ ಧನವನ್ನು ನೀಡಿ ಅದರ ಬುದ್ಧಿಯನ್ನು ಕೆಡಿಸಲು ಪ್ರಯತ್ನಪಟ್ಟವು. ಮಹಾಪ್ರಾಜ್ಞನಾದ ಆ ರಾಜನರಿಯು ಮಾತ್ರ ತನ್ನ ಧೈರ್ಯವನ್ನು ಬಿಟ್ಟು ಅಲುಗಾಡಲಿಲ್ಲ. ಉಳಿದ ಸೇವಕರು ಆ ನರಿಯನ್ನು ವಿನಾಶಮಾಡುವುದಾಗಿ ನಿಶ್ಚಯಿಸಿ ಪ್ರತಿಜ್ಞೆಯನ್ನು ಮಾಡಿದವು.
ಈಪ್ಸಿತಂ ಚ ಮೃಗೇಂದ್ರಸ್ಯ ಮಾಂಸಂ ಯತ್ ತತ್ರ ಸಂಸ್ಕೃತಮ್ |
ಅಪನೀಯ ಸ್ವಯಂ ತದ್ಧಿ ತೈರ್ನ್ಯಸ್ತಂ ತಸ್ಯ ವೇಶ್ಮನಿ ॥45॥
ಮೃಗೇಂದ್ರನಿಗೆ ಇಷ್ಟವಾದ ಪಕ್ವವಾದ ಮಾಂಸವನ್ನು ತಾವೇ ತೆಗೆದು ಆ ರಾಜನರಿಯ ಗೃಹದಲ್ಲಿ ಇಟ್ಟವು.
ಯದರ್ಥಂ ಚಾಪ್ಯಪಹೃತಂ ಯೇನ ಯಚ್ಚೈವ ಮಂತ್ರಿತಮ್ |
ತಸ್ಯ ತದ್ ವಿದಿತಂ ಸರ್ವಂ ಕಾರಣಾರ್ಥಂ ಚ ಮರ್ಷಿತಮ್ ॥46॥
ರಾಜನರಿಗೆ ಉಳಿದವರು ಮಾಡಿದ ಮಂತ್ರಾಲೋಚನೆಯನ್ನು, ಮಾಂಸವನ್ನು ತೆಗೆದವರು ಯಾರು? ತೆಗೆದ ಉದ್ದೇಶವೇನು? ಎಂದು ಎಲ್ಲವೂ ತಿಳಿದಿದ್ದರೂ ಅದು ಒಂದು ಕಾರಣದಿಂದ ಕ್ಷಮಿಸಿ ಸುಮ್ಮನಿದ್ದಿತು.
ಸಮಯೋಽಯಂ ಕೃತಸ್ತೇನ ಸಾಚಿವ್ಯಮುಪಗಚ್ಛತಾ |
ನೋಪಘಾತಸ್ತ್ವಯಾ ಕಾರ್ಯೋ ರಾಜನ್ ಮೈತ್ರೀಮಿಹೇಚ್ಛತಾ ॥47॥
ಸಚಿವಪದವಿಯನ್ನು ಒಪ್ಪಿಕೊಳ್ಳುವಾಗ `ಎಲೈ ರಾಜನೇ! ನನ್ನ ಜೊತೆಯಲ್ಲಿ ಸ್ನೇಹವನ್ನು ಬಯಸುವ ನೀನು ನನ್ನನ್ನು ಹಿಂಸಿಸಬಾರದು' ಎಂದು ನಿಬಂಧನೆಯನ್ನು ಮಾಡಿಕೊಂಡಿದ್ದಿತು.
ಭೋಜನೇ ಚೋಪಹರ್ತವ್ಯೇ ತನ್ಮಾಂಸಂ ನ ಸ್ಮ ದೃಶ್ಯತೇ |
ಮೃಗರಾಜೇನ ಚಾಜ್ಞಪ್ತಂ ಮೃಗ್ಯತಾಂ ಚೋರ ಇತ್ಯುತ ॥48॥
ಮೃಗರಾಜನಿಗೆ ಭೋಜನವನ್ನು ತಲುಪಿಸಬೇಕಾದಾಗ ಆ ಮಾಂಸವು ಕಂಡು ಬರಲಿಲ್ಲ. ಮೃಗರಾಜನು ಕಳ್ಳನು ಯಾರೆಂದು ಹುಡುಕಿ ಎಂದು ಆಜ್ಞೆಯನ್ನು ಮಾಡಿದನು.
ಕೃತಕೈಶ್ಚಾಪಿ ತನ್ಮಾಂಸಂ ಮೃಗೇಂದ್ರಾಯೋಪವರ್ಣಿತಮ್ |
ಸಚಿವೇನೋಪನೀತಂ ತೇ ವಿದುಷಾ ಪ್ರಾಜ್ಞಮಾನಿನಾ ॥49॥
ಕಪಟವನ್ನು ಮಾಡಿದ ಅವನ ಸೇವಕರೆಲ್ಲರೂ ವಿದ್ವಾಂಸನೂ, ಪ್ರಾಜ್ಞನೂ ಆದ ನಿನ್ನ ಸಚಿವನಿಂದ ಆ ಮಾಂಸವು ಅಪಹೃತವಾಗಿದೆ ಎಂದು ಮೃಗೇಂದ್ರನಿಗೆ ತಿಳಿಸಿದರು.
ಸರೋಷಸ್ತ್ವಥ ಶಾರ್ದೂಲಃ ಶ್ರುತ್ವಾ ಗೋಮಾಯುಚಾಪಲಮ್ |

ಬಭೂವಾಮರ್ಷಿತೋ ರಾಜಾ ವಧಂ ಚಾಸ್ಯಾಭ್ಯರೋಚಯತ್ ॥50॥
ಆ ಹುಲಿಯು ನರಿಯ ಚಪಲತೆಯನ್ನು ಕೇಳಿ, ರೋಷದಿಂದ ಕೂಡಿ, ಅದರ ವಧೆಯನ್ನು ಬಯಸಿತು.
ಛಿದ್ರಂ ತು ತಸ್ಯ ತದ್ ದೃಷ್ಟ್ವಾ ಪ್ರೋಚುಸ್ತೇ ಪೂರ್ವಮಂತ್ರಿಣಃ |
ಸರ್ವೇಷಾಮೇವ ಸೋಽಸ್ಮಾಕಂ ವೃತ್ತಿಭಂಗೇಷು ವರ್ತತೇ ॥51॥
ಮೃಗರಾಜನ ಆ ಛಿದ್ರವನ್ನು ನೋಡಿ ಪೂರ್ವಮಂತ್ರಿಗಳು ಹೀಗೆ ಮಾತ- ನಾಡಿದವು. ಈ ರಾಜನರಿಯು ನಮ್ಮೆಲ್ಲರ ಜೀವನೋಪಾಯವನ್ನು ಭಗ್ನ- ಗೊಳಿಸುವುದರಲ್ಲಿ ನಿರತವಾಗಿದೆ.
ಇದಂ ಚಾಸ್ಯೇದೃಶಂ ಕರ್ಮ ವಾಲ್ಲಭ್ಯೇನ ತು ರಕ್ಷ್ಯತೇ |
ಶ್ರುತಶ್ಚ ಸ್ವಾಮಿನಾ ಪೂರ್ವಂ ಯಾದೃಶೋ ನೈಷ ತಾದೃಶಃ ॥52॥
ಅದು ಮಾಡುವ ಇಂತಹ ಕರ್ಮಗಳನ್ನು ನೀನು ಪ್ರೀತಿಯಿಂದ ರಕ್ಷಿಸುತ್ತಿದ್ದೀಯೆ. ಸ್ವಾಮಿಯಾದ ನೀನು ಅವನ ವಿಷಯದಲ್ಲಿ ಹಿಂದೆ ಹೇಗೆ ಕೇಳಿದ್ದೀಯೋ ಅವನು ಅಂತಹ ಸ್ವಭಾವದವನಲ್ಲ.
ವಾಙ್ಮಾತ್ರೇಣೈವ ಧರ್ಮಿಷ್ಠಃ ಸ್ವಭಾವೇನ ತು ದಾರುಣಃ |
ಧರ್ಮಚ್ಛದ್ಮಾ ಹ್ಯಯಂ ಪಾಪೋ ವೃಥಾಚಾರಪರಿಗ್ರಹಃ |
ಕಾರ್ಯಾರ್ಥಂ ಭೋಜನಾದ್ಯೇಷು ವ್ರತೇಷು ಕೃತವಾನ್ ಶ್ರಮಮ್ ॥53॥
ಮಾತಿನಲ್ಲಿ ಮಾತ್ರ ಧರ್ಮಿಷ್ಠನಾಗಿದ್ದಾನೆ. ಸ್ವಭಾವ ಮಾತ್ರ ದಾರುಣವಾದುದು. ಈ ಪಾಪಿಯು ಧರ್ಮದ ನಾಟಕವನ್ನು ಆಡುವವನು. ಸುಳ್ಳಾದ ಆಚಾರವನ್ನು ತೋರಿಸುತ್ತಾನೆ. ತನ್ನ ಭೋಜನಾದಿಗಳನ್ನು ದೊರಕಿಸಿಕೊಳ್ಳುವ ಸಲುವಾಗಿ ಇಂತಹ ವ್ರತಗಳನ್ನು ಧರಿಸಿದ್ದಾನೆ.
ಯದಿ ವಿಪ್ರತ್ಯಯೋ ಹ್ಯೇಷ ತದಿದಂ ದರ್ಶಯಾಮ ತೇ |
ತನ್ಮಾಂಸಂ ಚೈವ ಗೋಮಾಯೋಸ್ತತ್ಕ್ಷಣಾತ್ ತೈಸ್ತು ಢೌಕಿತಮ್ ॥54॥
ನಿನಗೆ ನಮ್ಮಲ್ಲಿ ವಿಶ್ವಾಸವಿಲ್ಲದಿದ್ದರೆ ಅದನ್ನು ಈಗ ತೋರಿಸುತ್ತೇವೆ ಎಂದು ಹೇಳಿ ಆ ಕ್ಷಣದಲ್ಲಿ ರಾಜನರಿಯ ಗೃಹದಿಂದ ಮಾಂಸವನ್ನು ತಂದು ಮೃಗರಾಜನ ಮುಂದೆ ಇಟ್ಟವು.
ಮಾಂಸಾಪನಯನಂ ಜ್ಞಾತ್ವಾ ವ್ಯಾಘ್ರಸ್ತೇಷಾಂ ತು ತದ್ವಚಃ |
ಆಜ್ಞಾಪಯಾಮಾಸ ತದಾ ಗೋಮಾಯುರ್ವಧ್ಯತಾಮಿತಿ ॥55॥
ಹುಲಿಯು ಅವರ ಮಾತುಗಳನ್ನು ಕೇಳಿ ನರಿಯೇ ಮಾಂಸವನ್ನು ಅಪಹರಿಸಿ- ರುವುದು ಎಂದು ನಿಶ್ಚಯಿಸಿ `ನರಿಯನ್ನು ಕೊಲ್ಲಿ' ಎಂದು ಆಜ್ಞೆ ಮಾಡಿತು.
ಶಾರ್ದೂಲವಚನಂ ಶ್ರುತ್ವಾ ಶಾರ್ದೂಲಜನನೀ ತತಃ |
ಮೃಗರಾಜಂ ಹಿತೈರ್ವಾಕ್ಯೈಃ ಸಂಬೋಧಯಿತುಮಾಗಮತ್ ॥56॥
ವ್ಯಾಘ್ರನ ಮಾತುಗಳನ್ನು ಕೇಳಿ ವ್ಯಾಘ್ರನ ತಾಯಿಯು ಮೃಗರಾಜನನ್ನು ಹಿತ- ವಾಕ್ಯಗಳಿಂದ ಎಚ್ಚರಿಸಲು ಆಗ ಅಲ್ಲಿಗೆ ಬಂದಿತು.
ಪುತ್ರ ನೈತತ್ ತ್ವಯಾ ಗ್ರಾಹ್ಯಂ ಕಪಟಾರಂಭಸಂವೃತಮ್ |
ಕರ್ಮಸಂಘರ್ಷಜೈರ್ದೋಷೈರ್ದುಷ್ಯತ್ಯಶುಚಿಭಿಃ ಶುಚಿಃ ॥57॥
ಎಲೈ ಪುತ್ರನೇ! ನಿನ್ನ ಉಳಿದ ಸೇವಕರು ಹೇಳುವ ಮಾತು ಕಪಟದಿಂದ ಕೂಡಿದೆ. ಅದನ್ನು ನೀನು ಸ್ವೀಕರಿಸಬಾರದು. ತಮ್ಮ ಕಾರ್ಯಕ್ಕೆ ವಿರೋಧವುಂಟಾದ ಕಾರಣ ಅಶುಚಿಗಳಾದ ಅವರು ಶುಚಿಯನ್ನು ದೂಷಿಸುತ್ತಿದ್ದಾರೆ.
ನೋಚ್ಛ್ರಿತಂ ಸಹತೇ ಕಶ್ಚಿತ್ ಪ್ರಕ್ರಿಯಾ ವೈರಕಾರಿಕಾ |
ಶುಚೇರಪಿ ಹಿ ಯುಕ್ತಸ್ಯ ದೋಷ ಏವ ನಿಪಾತ್ಯತೇ ॥58॥
ಇನ್ನೊಬ್ಬರ ಉನ್ನತಿಯನ್ನು ಸಹಿಸುವುದಿಲ್ಲ. ಇದು ನಿನಗೂ ಮತ್ತು ಆ ರಾಜನರಿಗೂ ವೈರವನ್ನು ಉಂಟುಮಾಡುವ ಪ್ರಕ್ರಿಯೆಯಾಗಿದೆ. ಶುಚಿಯಾಗಿದ್ದ- ವನಿಗೂ ದೋಷವು ಆರೋಪಿಸಲ್ಪಡುತ್ತಿದೆ.
ಲುಬ್ಧಾನಾಂ ಶುಚಯೋ ದ್ವೇಷ್ಯಾಃ ಕಾತರಾಣಾಂ ತರಸ್ವಿನಃ |
ಮೂರ್ಖಾಣಾಂ ಪಂಡಿತಾ ದ್ವೇಷ್ಯಾ ದರಿದ್ರಾಣಾಂ ಮಹಾಧನಾಃ |
ಅಧಾರ್ಮಿಕಾಣಾಂ ಧರ್ಮಿಷ್ಠಾ ವಿರೂಪಾಣಾಂ ಸುರೂಪಕಾಃ ॥59॥
ಲೋಭಿಗಳಿಗೆ ಶುಚಿಗಳು ದ್ವೇಷ್ಯರಾದವರು. ಹೇಡಿಗಳಿಗೆ ವಿವೇಕಶಾಲಿಗಳಾದ ವೀರರು ದ್ವೇಷ್ಯರು. ಮೂರ್ಖರಿಗೆ ಪಂಡಿತರು ದ್ವೇಷ್ಯರು. ದರಿದ್ರರಿಗೆ ಶ್ರೀಮಂತರು ದ್ವೇಷ್ಯರು. ಅಧಾರ್ಮಿಕರಿಗೆ ಧರ್ಮಿಷ್ಠರು ದ್ವೇಷ್ಯರು. ರೂಪಹೀನರಿಗೆ ರೂಪ- ವಂತರು ದ್ವೇಷ್ಯರು.
ಮುನೇರಪಿ ವನಸ್ಥಸ್ಯ ಸ್ವಾನಿ ಕರ್ಮಾಣಿ ಕುರ್ವತಃ |
ಉತ್ಪದ್ಯಂತೇ ತ್ರಯಃ ಪಕ್ಷಾಃ ಮಿತ್ರೋದಾಸೀನಶತ್ರವಃ ॥60॥
ಕಾಡಿನಲ್ಲಿ ವಾಸಿಸಿ, ತನ್ನ ಕರ್ಮಗಳನ್ನು ತಾನು ಮಾಡಿಕೊಂಡಿರುವ ಮುನಿಗೂ ಮಿತ್ರರು ಶತ್ರುಗಳು ಮತ್ತು ಉದಾಸೀನರು ಎಂಬ ಮೂರು ಪಕ್ಷಗಳು ಉಂಟಾ- ಗುತ್ತವೆ.
ಬಹವಃ ಪಂಡಿತಾಃ ಲುಬ್ಧಾಃ ಸರ್ವೇ ಮಾಯೋಪಜೀವಿನಃ |
ಕುರ್ಯುರ್ದೋಷಮದೋಷಸ್ಯ ಬೃಹಸ್ಪತಿಮತೇರಪಿ ॥61॥
ಅನೇಕ ಪಂಡಿತರು ಲೋಭಿಗಳಾಗಿರುತ್ತಾರೆ. ಕಪಟದಿಂದ ಜೀವನವನ್ನು ಮಾಡುತ್ತಾರೆ. ಬೃಹಸ್ಪತಿಮತಿಯನ್ನು ಹೊಂದಿ ನಿರ್ದೋಷನಾದವನಿಗೂ ದೋಷಾ- ರೋಪಣೆಯನ್ನು ಮಾಡುತ್ತಾರೆ.
ಶೂನ್ಯಾತ್ ತಚ್ಚ ಗೃಹಾನ್ಮಾಂಸಂ ಯದದ್ಯಾಪಹೃತಂ ತವ |
ನೇಚ್ಛತೇ ದೀಯಮಾನಂ ಚ ಸಾಧು ತಾವದ್ ವಿಮೃಶ್ಯತಾಮ್ ॥62॥

ಶೂನ್ಯವಾಗಿದ್ದ ನಿನ್ನ ಗೃಹದಿಂದ ಮಾಂಸವು ಅಪಹರಿಸಲ್ಪಟ್ಟಿದೆ. ಇನ್ನೊಂದು ಕಡೆ ಮಾಂಸವನ್ನು ನೀಡಿದರೂ ಅವನು ಮಾಂಸವನ್ನು ತೆಗೆದುಕೊಳ್ಳಲು ಬಯಸುತ್ತಿಲ್ಲ. ಈ ವಿಷಯವನ್ನು ಚೆನ್ನಾಗಿ ವಿಚಾರಮಾಡು.
ಅಸತ್ಯಾಃ ಸತ್ಯಸಂಕಾಶಾಃ ಸತ್ಯಾಶ್ಚಾಸತ್ಯದರ್ಶಿನಃ |
ದೃಶ್ಯಂತೇ ವಿವಿಧಾ ಭಾವಾಸ್ತೇಷು ಯುಕ್ತಂ ಪರೀಕ್ಷಣಮ್ ॥63॥
ಅಸತ್ಯವನ್ನು ನುಡಿಯುವವರು ಸತ್ಯವಾದಿಗಳಂತೆಯೂ, ಸತ್ಯವನ್ನು ನುಡಿಯುವವರು ಅಸತ್ಯವಾದಿಗಳಂತೆಯೂ ಕಂಡು ಬರುತ್ತಾರೆ. ಅವರಲ್ಲಿ ಅನೇಕ ಅಭಿಪ್ರಾಯಗಳಿರುತ್ತವೆ. ಅದರಲ್ಲಿ ಯುಕ್ತವಾದುದು ಯಾವುದು ಎಂದು ಪರೀಕ್ಷಿಸಬೇಕು.
ತಳವದ್ ದೃಶ್ಯತೇ ವ್ಯೋಮ ಖದ್ಯೋತೋ ಹವ್ಯವಾಡಿವ |
ನ ಚೈವಾಸ್ತಿ ತಳಂ ವ್ಯೋಮ್ನಿ ನ ಖದ್ಯೋತೇ ಹುತಾಶನಃ ॥64॥
ಆಕಾಶವು ಭೂತಳದಂತೆ ಕಾಣುತ್ತದೆ. ಮಿಣುಕುಹುಳುವು ಅಗ್ನಿಯಂತೆ ಕಾಣು- ತ್ತದೆ. ಆದರೆ ಆಕಾಶದಲ್ಲಿ ಭೂಮಿಯಾಗಲೀ, ಮಿಣುಕುಹುಳುವಿನಲ್ಲಿ ಅಗ್ನಿ- ಯಾಗಲೀ ಇಲ್ಲ.
ತಸ್ಮಾತ್ ಪ್ರತ್ಯಕ್ಷದೃಷ್ಟೋಽಪಿ ಯುಕ್ತೋ ಹ್ಯರ್ಥಃ ಪರೀಕ್ಷಿತುಮ್ |
ಪರೀಕ್ಷ್ಯ ಜ್ಞಾಪಯನ್ ಹ್ಯರ್ಥಾನ್ನ ಪಶ್ಚಾತ್ ಪರಿತಪ್ಯತೇ ॥65॥
ಆದ್ದರಿಂದ ಪ್ರತ್ಯಕ್ಷದೃಷ್ಟವಾದರೂ ಆ ವಿಷಯವನ್ನು ಪರೀಕ್ಷಿಸುವುದು ಯೋಗ್ಯ- ವಾದುದು. ಪರೀಕ್ಷೆಯನ್ನು ಮಾಡಿ ವಿಷಯವನ್ನು ತಿಳಿಯುವವನು ಪಶ್ಚಾತ್ತಾಪ ಪಡುವುದಿಲ್ಲ.
ನ ದುಷ್ಕರಮಿದಂ ಪುತ್ರ ಯತ್ ಪ್ರಭುರ್ಘಾತಯೇತ್ ಪರಮ್ |
ಶ್ಲಾಘನೀಯಾ ಚ ವರ್ಯಾ ಚ ಲೋಕೇ ಪ್ರಭವತಾಂ ಕ್ಷಮಾ ॥66॥
ಎಲೈ ಪುತ್ರನೇ! ಪ್ರಭುವಾದವನು ಇನ್ನೊಬ್ಬನನ್ನು ಕೊಲ್ಲಿಸುವುದು ದುಷ್ಕರ- ವಾದುದಲ್ಲ. ಆದರೆ ಪ್ರಭುತ್ವವಿದ್ದವರು ಕ್ಷಮಿಸುವುದು ಲೋಕದಲ್ಲಿ ಶ್ಲಾಘನೀಯ- ವಾದುದು ಮತ್ತು ಅಪೇಕ್ಷಿತವಾದುದು.
ಸ್ಥಾಪಿತೋಽಯಂ ಪುತ್ರ ತ್ವಯಾ ಸಾಮಂತೇಷ್ವಪಿ ವಿಶ್ರುತಃ |
ದುಃಖೇನಾಸಾದ್ಯತೇ ಚಾತ್ರ ಧಾರ್ಯತಾಮೇಷ ತೇ ಸುಹೃತ್ ॥67॥
ಎಲೈ ಪುತ್ರನೇ! ನೀನು ಅವನನ್ನು ಸಚಿವಪದವಿಯಲ್ಲಿ ಸ್ಥಾಪಿಸಿದ್ದೀಯೆ. ನಿನ್ನ ಸಾಮಂತರಲ್ಲಿಯೂ ಅವನು ಖ್ಯಾತನಾಗಿದ್ದಾನೆ. ಅವನು ದುಃಖದಿಂದ ಈ ಕಡೆ ಬರುತ್ತಿದ್ದಾನೆ. ಈ ಸುಹೃಜ್ಜನನನ್ನು ನಿನ್ನ ಬಳಿಯಲ್ಲಿ ಇರಿಸಿಕೋ.
ದೂಷಿತಂ ಪರದೋಷೈರ್ಹಿ ಗೃಹ್ಣೀತೇ ಯೋಽನ್ಯಥಾ ಶುಚಿಮ್ |
ಸ್ವಯಂ ಸನ್ ದೂಷಿತಾಮಾತ್ಯಃ ಕ್ಷಿಪ್ರಮೇವ ವಿನಶ್ಯತಿ ॥68॥
ಶುಚಿಯಾದವನು ಪರದೋಷಗಳಿಂದ ದೂಷಿಸಲ್ಪಟ್ಟರೆ ಅದನ್ನು ಹಾಗೆಯೇ ಗ್ರಹಿಸುವವನು ಸ್ವತಃ ಸಜ್ಜನನಾದರೂ ದುಷ್ಟರಾದ ಸಚಿವರನ್ನುಳ್ಳವನು ಶೀಘ್ರವಾಗಿ ವಿನಾಶವನ್ನು ಹೊಂದುತ್ತಾನೆ.
ತಸ್ಮಾದಥಾರಿಸಂಘಾತಾದ್ ಗೋಮಾಯೋಃ ಕಶ್ಚಿದಾಗತಃ |
ಧರ್ಮಾತ್ಮಾ ತೇನ ಚಾಖ್ಯಾತಂ ಯಥೈತದ್ ಕಪಟಂ ಕೃತಮ್ ॥69॥
ಆ ನರಿಯ ಸಮೂಹದಿಂದ ಧರ್ಮಾತ್ಮನಾದ ಒಂದು ನರಿಯು ಬಂದು ನನಗೆ ಈ ಕಪಟವನ್ನು ಹೀಗೆ ಆಚರಿಸಿದ್ದಾರೆ ಎಂಬ ವಿಷಯವನ್ನು ಹೇಳಿತು.
ತತೋ ವಿಜ್ಞಾತಚಾರಿತ್ರಃ ಸತ್ಕೃತ್ಯ ಚ ವಿಮೋಕ್ಷಿತಃ |
ಪರಿಷ್ವಕ್ತಶ್ಚ ಸಸ್ನೇಹಂ ಮೃಗೇಂದ್ರೇಣ ಪುನಃ ಪುನಃ ॥70॥
ಆಗ ರಾಜನರಿಯ ಸ್ವಭಾವವನ್ನು ತಿಳಿದ ಮೃಗರಾಜನು ಅದನ್ನು ಸತ್ಕರಿಸಿ, ದೋಷಾರೋಪದಿಂದ ಬಿಡುಗಡೆಗೊಳಿಸಿ, ಪುನಃ ಪುನಃ ಸ್ನೇಹಪೂರ್ವಕವಾಗಿ ಆಲಿಂಗಿಸಿದನು.
ಅನುಜ್ಞಾಪ್ಯ ಮೃಗೇಂದ್ರಂ ತು ಗೋಮಾಯುರ್ನೀತಿಶಾಸ್ತ್ರವಿತ್ |
ತೇನಾಮರ್ಷೇಣ ಸಂತಪ್ತಃ ಪ್ರಾಯಮಾಸಿತುಮೈಕ್ಷತ ॥71॥
ನೀತಿಶಾಸ್ತ್ರವನ್ನು ತಿಳಿದ ಆ ರಾಜನರಿಯು ಮೃಗೇಂದ್ರನ ಅನುಮತಿಯನ್ನು ಪಡೆದು, ಮೃಗೇಂದ್ರನ ಕೋಪದಿಂದ ತಪ್ತವಾಗಿ ಪ್ರಾಯೋಪವೇಶವನ್ನು ಮಾಡಲು ಬಯಸಿತು.
ಶಾರ್ದೂಲಸ್ತತ್ರ ಗೋಮಾಯುಂ ಸ್ನೇಹಾತ್ ಪ್ರಸ್ರುತಲೋಚನಃ |
ಅವಾರಯತ್ ಸ ಧರ್ಮಿಷ್ಠಂ ಪೂಜಯಾ ಪ್ರತಿಪೂಜಯತ್ ॥72॥
ಆಗ ಆ ವ್ಯಾಘ್ರವು ಸ್ನೇಹದಿಂದ ಅಳುತ್ತಾ ಧರ್ಮಿಷ್ಠವಾದ ಆ ನರಿಯನ್ನು ತಡೆದು ಅದನ್ನು ಪೂಜಿಸಿತು.
ತಂ ಸ ಗೋಮಾಯುರಾಲೋಕ್ಯ ಸ್ನೇಹಾದಾಗತಸಂಭ್ರಮಮ್ |
ಬಭಾಷೇ ಪ್ರಣತೋ ವಾಕ್ಯಂ ಬಾಷ್ಪಗದ್ಗದಯಾ ಗಿರಾ ॥73॥
ಸ್ನೇಹದಿಂದ ಆ ವ್ಯಾಘ್ರನಿಗೆ ಉಂಟಾದ ಗಾಬರಿಯನ್ನು ನೋಡಿ ಆ ನರಿಯು ಅದನ್ನು ನಮಸ್ಕರಿಸಿ ಬಾಷ್ಪಗದ್ಗದವಾದ ಕಂಠದಿಂದ ಮಾತನಾಡಿತು.
ಪೂಜಿತೋಽಹಂ ತ್ವಯಾ ಪೂರ್ವಂ ಪಶ್ಚಾಚ್ಚೈವ ವಿಮಾನಿತಃ |
ಪರೇಷಾಮಾಸ್ಪದಂ ನೀತೋ ವಸ್ತುಂ ನಾರ್ಹಾಮ್ಯಹಂ ತ್ವಯಿ ॥74॥
ನೀನು ನನ್ನನ್ನು ಮೊದಲು ಪೂಜಿಸಿ, ಅನಂತರ ಅವಮಾನಗೊಳಿಸಿದೆ. ನಾನು ಇನ್ನೊಬ್ಬರ ದೋಷಾರೋಪಣೆಗೆ ಗುರಿಯಾಗುವಂತೆ ಮಾಡಿದೆ. ನಾನು ನಿನ್ನ ಜೊತೆಯಲ್ಲಿ ವಾಸಿಸುವುದು ಯೋಗ್ಯವಲ್ಲ.
ಸ್ವಸಂತುಷ್ಟಾಶ್ಚ್ಯುತಾಃ ಸ್ಥಾನಾನ್ಮಾನಾತ್ ಪ್ರತ್ಯವರೋಪಿತಾಃ |

ಸ್ವಯಂ ಚೋಪಹೃತಾ ಭೃತ್ಯಾ ಯೇ ಚಾಪ್ಯುಪಹೃತಾಃ ಪರೈಃ ॥75॥
ಪರಿಕ್ಷೀಣಾಶ್ಚ ಲುಬ್ಧಾಶ್ಚ ಕ್ರೂರಾಃ ಕಾರಾಭಿತಾಪಿತಾಃ |
ಹೃತಸ್ವಾ ಮಾನಿನೋ ಯೇ ಚ ತ್ಯಕ್ತೋಪಾತ್ತಾ ಮಹೇಚ್ಛವಃ ॥76॥
ಸಂತಾಪಿತಾಶ್ಚ ಯೇ ಕೇಚಿದ್ ವ್ಯಸನೌಘಪ್ರತೀಕ್ಷಿಣಃ |
ಅಂತರ್ಹಿತಾಃ ಸ್ವೋಪಹೃತಾಃ ಸರ್ವೇ ತೇ ಪರಸಾಧನಾಃ ॥77॥
ಬಹಳ ಅಸಂತುಷ್ಟರಾದ, ತಮ್ಮ ಸ್ಥಾನದಿಂದ ಚ್ಯುತರಾದ, ಮಾನದಿಂದ ಚ್ಯುತರಾದ, ತಾನಾಗಿಯೇ ಸಂಪಾದಿಸಿದ ಅಥವಾ ಬೇರೆಯವರು ನೀಡಿದ, ಕ್ಷೀಣರೂ ಲೋಭಿಗಳೂ ಕ್ರೂರರೂ ಕಾರಾಗೃಹದಲ್ಲಿ ಹಾಕಲ್ಪಟ್ಟವರು ಸರ್ವಸ್ವವೂ ರಾಜನಿಂದ ದೋಚಲ್ಪಟ್ಟವರು, ಆತ್ಮಾಭಿಮಾನವುಳ್ಳವರು, ತಮ್ಮ ಉತ್ಸವದ ಆಸೆ ಉಳ್ಳವರು. ಒಮ್ಮೆ ಸೇವೆಯಿಂದ ಚ್ಯುತಿಗೊಳಿಸಲ್ಪಟ್ಟು ಪುನಃ ಸೇವೆಗೆ ತೆಗೆದುಕೊಂಡವರು, ಹಿಂದೆ ಸಂತಾಪಕ್ಕೆ ಒಳಗಾದವರು. ವ್ಯಸನಗಳ ಸಮೂಹವನ್ನೇ ನೋಡುವವರು, ಮರೆಯಲ್ಲಿ ಕೆಲಸ ಮಾಡುವ ಇಂತಹ ಎಲ್ಲರೂ ಇನ್ನೊಬ್ಬರ ಕಾರ್ಯವನ್ನು ಸಾಧಿಸುತ್ತಾರೆ. ತಮ್ಮ ಸ್ವಾಮಿಯ ಕಾರ್ಯವನ್ನು ಸಾಧಿಸುವುದಿಲ್ಲ.
ಅವಮಾನೇನ ಯುಕ್ತಸ್ಯ ಸ್ಥಾಪಿತಸ್ಯ ಚ ಮೇ ಪುನಃ |
ಕಥಂ ಯಾಸ್ಯಸಿ ವಿಶ್ವಾಸಮಹಮೇಷ್ಯಾಮಿ ವಾ ಪುನಃ ॥78॥
ಅವಮಾನದಿಂದ ಕೂಡಿ ಪುನಃ ಸ್ಥಾಪಿತನಾದ ನನ್ನಲ್ಲಿ ನೀನು ಹೇಗೆ ವಿಶ್ವಾಸವನ್ನು ಹೊಂದುವಿ? ಅಥವಾ ನಾನಾದರೂ ನಿನ್ನ ಬಳಿ ಪುನಃ ಹೇಗೆ ಬರುವೆ?
ಸಮರ್ಥ ಇತಿ ಸಂಗೃಹ್ಯ ಸ್ಥಾಪಯಿತ್ವಾ ಪರೀಕ್ಷ್ಯ ಚ |
ಕೃತಂ ಚ ಸಮಯಂ ಭಿತ್ತ್ವಾ ತ್ವಯಾಽಹಮವಮಾನಿನಃ ॥79॥
ನಾನು ಸಮರ್ಥನಾದವನೆಂದು ತಿಳಿದು ನನ್ನನ್ನು ಸಂಗ್ರಹಿಸಿ, ಪರೀಕ್ಷಿಸಿ, ಸಚಿವಸ್ಥಾನದಲ್ಲಿಟ್ಟು, ಮಾಡಿಕೊಂಡ ಒಪ್ಪಂದವನ್ನು ಮುರಿದು ನೀನು ನನಗೆ ಅವಮಾನವನ್ನು ಮಾಡಿದ್ದೀಯೆ.
ಪ್ರಥಮಂ ಯಃ ಸಮಾಖ್ಯಾತಃ ಶೀಲವಾನಿತಿ ಸಂಸದಿ |
ನ ವಾಚ್ಯಂ ತಸ್ಯ ವೈಗುಣ್ಯಂ ಪ್ರತಿಜ್ಞಾಂ ಪರಿರಕ್ಷತಾ ॥80॥
ಮೊದಲು ಸಭೆಯಲ್ಲಿ ಇವನು ಶೀಲವಂತನೆಂದು ಘೋಷಿಸಿದ ಮೇಲೆ ತನ್ನ ಪ್ರತಿಜ್ಞೆಯನ್ನು ರಕ್ಷಿಸಿಕೊಳ್ಳುವವನು ಅವನಲ್ಲಿ ದೋಷವುಂಟಾದರೂ ಅದನ್ನು ಹೇಳಬಾರದು.
ಏವಂ ಚಾವಮತಸ್ಯೇಹ ವಿಶ್ವಾಸಂ ಕಿಂ ಪ್ರಯಾಸ್ಯಸಿ |
ತ್ವಯಿ ಚೈವ ಹ್ಯವಿಶ್ವಾಸೇ ಮಮೋದ್ವೇಗೋ ಭವಿಷ್ಯತಿ ॥81॥
ಹೀಗೆ ಅವಮಾನಕ್ಕೆ ಒಳಗಾದ ನನ್ನಲ್ಲಿ ನೀನು ಹೇಗೆ ವಿಶ್ವಾಸವನ್ನು ಮಾಡುವಿ? ನಿನಗೆ ನನ್ನಲ್ಲಿ ವಿಶ್ವಾಸವಿಲ್ಲದಿದ್ದರೆ ನನಗೂ ಉದ್ವೇಗವುಂಟಾಗುವುದು.
ಶಂಕಿತಸ್ತ್ವದಹಂ ಭೀತಃ ಪರೇ ಛಿದ್ರಾನುದರ್ಶಿನಃ |
ಅಸ್ನಿಗ್ಧಾಶ್ಚೈವ ದುಸ್ತೋಷಾಃ ಕರ್ಮ ಚೈತದ್ ಬಹುಚ್ಛಲಮ್ ॥82॥
ನಾನು ನಿನ್ನಿಂದ ಶಂಕಿಸಲ್ಪಟ್ಟಿದ್ದೇನೆ. ಉಳಿದ ನಿನ್ನ ಸೇವಕರು ನನ್ನ ದೋಷವನ್ನು ಹುಡುಕಲು ಪ್ರಯತ್ನಿಸುತ್ತಿದ್ದಾರೆ. ಅವರು ಸ್ನೇಹಶೂನ್ಯರಾದವರು ಮತ್ತು ಸಂತೋಷ ಪಡಿಸಲು ಅಸಾಧ್ಯರಾದವರು. ನಿನ್ನ ಸಚಿವಸ್ಥಾನವು ಬಹಳ ದೋಷಗಳಿಂದ ಕೂಡಿದೆ.
ದುಃಖೇನ ಶ್ಲಿಷ್ಯತೇ ಭಿನ್ನಂ ಶ್ಲಿಷ್ಟಂ ದುಃಖೇ ನ ಭಿದ್ಯತೇ |
ಭಿನ್ನಶ್ಲಿಷ್ಟಾ ತು ಯಾ ಪ್ರೀತಿರ್ನ ಸಾ ಸ್ನೇಹೇನ ವರ್ತತೇ ॥83॥
ಒಡೆದು ಹೋದ ವಸ್ತುವನ್ನು ಬಹಳ ಕಷ್ಟಪಟ್ಟು ಪುನಃ ಕೂಡಿಸಬೇಕು. ನಿಜ- ವಾಗಿ ಸಂಬದ್ಧವಾದ ವಸ್ತುವು/ಸ್ನೇಹಿತರು ಕಷ್ಟ ಒದಗಿದಾಗ ಭಿನ್ನರಾಗುವುದಿಲ್ಲ. ಮೊದಲು ಭಿನ್ನವಾಗಿ ಅನಂತರ ಒಂದು ಗೂಡಿಸಿದ ವಸ್ತುವಿನಲ್ಲಿ ಇರುವ ಪ್ರೀತಿಯು ಸ್ನೇಹಪೂರ್ವಕವಾಗಿ ಇರುವುದಿಲ್ಲ.
ಕಶ್ಚಿದೇವ ಹಿತೇ ಭರ್ತುಃ ದೃಶ್ಯತೇ ನ ಪರಾತ್ಮನಃ |
ಕಾರ್ಯಾಪೇಕ್ಷಾ ಹಿ ವರ್ತಂತೇ ಭಾವಾಃ ಸ್ನಿಗ್ಧಾಸ್ತು ದುರ್ಲಭಾಃ ॥84॥
ಯಾವನೋ ಒಬ್ಬನು ಮಾತ್ರ ಸ್ವಾಮಿಯ ಹಿತದಲ್ಲಿ ರತನಾಗಿರುವುದು ಕಂಡು ಬರುತ್ತದೆ. ಇನ್ನೊಬ್ಬರ ಹಿತದಲ್ಲಿ ಆಸಕ್ತನಾದವನು ಸ್ವಾಮಿಯ ಹಿತದಲ್ಲಿ ಆಸಕ್ತನಾಗಿ ರುವುದಿಲ್ಲ. ಪ್ರತಿಯೊಬ್ಬರಿಗೂ ಸ್ವಾರ್ಥವಿರುತ್ತದೆ. ನಿಜವಾದ ಸ್ನೇಹವಿರುವ ಜನರು (ವಸ್ತುಗಳು) ದುರ್ಲಭರಾದವರು.
ಸುದುಃಖಂ ಪುರುಷಜ್ಞಾನಂ ಚಿತ್ತಂ ಹ್ಯೇಷಾಂ ಚಲಾಚಲಮ್ |
ಸಮರ್ಥೋ ವಾಪ್ಯಶಕ್ತೋ ವಾ ಶತೇಷ್ವೇಕೋಽಧಿಗಮ್ಯತೇ ॥85॥
ಪುರುಷರ ಸ್ವಭಾವವನ್ನು ತಿಳಿಯುವುದು ಬಹಳ ಕಷ್ಟಸಾಧ್ಯವಾದುದು. ಅವರ ಮನಸ್ಸು ಚಂಚಲವಾಗಿರುತ್ತದೆ. ಅವನು ಸಮರ್ಥನಾಗಿರಲಿ ಅಥವಾ ಅಸಮರ್ಥ- ನಾಗಿರಲಿ ನೂರರಲ್ಲಿ ಒಬ್ಬನನ್ನು ಮಾತ್ರ ಸರಿಯಾಗಿ ತಿಳಿಯಬಹುದು.
ಅಕಸ್ಮಾತ್ ಪ್ರಕ್ರಿಯಾ ನೃಣಾಮಕಸ್ಮಾಚ್ಚಾಪಕರ್ಷಣಮ್ |
ಶುಭಾಶುಭೇ ಮಹತ್ತ್ವಂ ಚ ಪ್ರಕರ್ತುಂ ಬುದ್ಧಿಲಾಘವಾತ್ ॥86॥
ಇದ್ದಕ್ಕಿದ್ದಂತೆಯೇ ಮನುಷ್ಯರಿಗೆ ಒಂದು ಕಾರ್ಯವು ಉಪಕ್ರಮಗೊಳ್ಳುತ್ತದೆ. ಇದ್ದಕ್ಕಿದ್ದಂತೆಯೇ ನಿಂತು ಹೋಗುತ್ತದೆ. ಒಬ್ಬನಿಗೆ ಶುಭವನ್ನು ಉಂಟುಮಾಡುವುದು, ಅಶುಭವನ್ನು ಉಂಟುಮಾಡುವುದು, ಮಹತ್ವವನ್ನು ಉಂಟುಮಾಡವುದು ಇವೆಲ್ಲವೂ ಬುದ್ಧಿದೋಷದಿಂದ ಉಂಟಾಗುವಂತಹವುಗಳು. (ಆದ್ದರಿಂದ ಅನಿತ್ಯ- ವಾದವುಗಳು).
ಏವಂ ಬಹುವಿಧಂ ಸಾಂತ್ವಮುಕ್ತ್ವಾ ಧರ್ಮಾರ್ಥಹೇತುಮತ್ |

ಪ್ರಸಾದಯಿತ್ವಾ ರಾಜಾನಂ ಗೋಮಾಯುರ್ವನಮಭ್ಯಗಾತ್ ॥87॥
ಹೀಗೆ ಧರ್ಮಾರ್ಥಯುಕ್ತವಾದ ಯುಕ್ತಿಯುಕ್ತವಾದ ಅನೇಕ ವಿಧವಾದ ಸಮಾಧಾನವಚನಗಳನ್ನು ಹೇಳಿ, ಮೃಗರಾಜನನ್ನು ಪ್ರಸನ್ನಗೊಳಿಸಿ ರಾಜನರಿಯು ಕಾಡಿಗೆ ಹೊರಟು ಹೋಯಿತು.
ಅಗೃಹ್ಯಾನುನಯಂ ತಸ್ಯ ಮೃಗೇಂದ್ರಸ್ಯ ಸ ಬುದ್ಧಿಮಾನ್ |
ಗೋಮಾಯುಃ ಪ್ರಾಯಮಾಸೀನಸ್ತ್ಯಕ್ತ್ವಾ ದೇಹಂ ದಿವಂ ಯಯೌ ॥88॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಯೋದಶಾಧಿಕಶತತಮೋಽಧ್ಯಾಯಃ ॥113॥
ಮೃಗೇಂದ್ರನ ಒಲಿಸುವ ಮಾತುಗಳನ್ನು ಕೇಳದೇ ಮೇಧಾವಿಯಾದ ಆ ನರಿಯು ಪ್ರಾಯೋಪವೇಶವನ್ನು ಮಾಡಿ ದೇಹವನ್ನು ತ್ಯಜಿಸಿ ಸ್ವರ್ಗಕ್ಕೆ ಹೋಯಿತು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 113ನೆಯ ಅಧ್ಯಾಯವು ಮುಗಿಯಿತು.
0

114. ನೂರಹದಿನಾಲ್ಕನೆಯ ಅಧ್ಯಾಯ
ಆಲಸ್ಯದಿಂದ ಉಂಟಾಗುವ ಅನರ್ಥದ ವಿಷಯದಲ್ಲಿ ಒಂಟೆಯ ಕಥೆ
ಯುಧಿಷ್ಠಿರಃ
ಕಿಂ ಪಾರ್ಥಿವೇನ ಕರ್ತವ್ಯಂ ಕಿಂಚ ಕೃತ್ವಾ ಸುಖೀ ಭವೇತ್ |
ತನ್ಮಮಾಚಕ್ಷ್ವ ತತ್ತ್ವೇನ ಸರ್ವಂ ಧರ್ಮಭೃತಾಂವರ ॥1॥
ಯುಧಿಷ್ಠಿರ ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ರಾಜನು ಏನು ಮಾಡಬೇಕು? ಏನು ಮಾಡಿದರೆ ಸುಖಿಯಾಗಿರುತ್ತಾನೆ ಎಂಬುದೆಲ್ಲವನ್ನೂ ನನಗೆ ಸರಿಯಾಗಿ ಹೇಳು.
ಭೀಷ್ಮಃ
ಹಂತ ತೇಽಹಂ ಪ್ರವಕ್ಷ್ಯಾಮಿ ಶೃಣು ಕಾರ್ಯೈಕನಿಶ್ಚಯಮ್ |
ಯಥಾ ರಾಜ್ಞೇಹ ಕರ್ತವ್ಯಂ ಯಚ್ಚ ಕೃತ್ವಾ ಸುಖೀ ಭವೇತ್ ॥2॥
ಭೀಷ್ಮರು ಸಂತೋಷ! ರಾಜನು ಇಲ್ಲಿ ಹೇಗೆ ನಡೆದುಕೊಳ್ಳಬೇಕು? ಏನು ಮಾಡಿದರೆ ಸುಖಿಯಾಗುತ್ತಾನೆ ಎಂದು ಕಾರ್ಯನಿಶ್ಚಯವನ್ನು ನಿನಗೆ ಹೇಳುವೆನು ಅದನ್ನು ಕೇಳು.
ನ ತ್ವೇವಂ ವರ್ತಿತವ್ಯಂ ಸ್ಮ ಯಥೇದಮನುಶುಶ್ರುಮಃ |
ಉಷ್ಟ್ರಸ್ಯ ಸುಮಹದ್ ವೃತ್ತಂ ತನ್ನಿಬೋಧ ಯುಧಿಷ್ಠಿರ ॥3॥
ನಾವು ಕೇಳಿದ ಒಂಟೆಯ ಕಥೆಯಂತೆ ನೀನು ನಡೆದುಕೊಳ್ಳಬಾರದು. ಎಲೈ ಯುಧಿಷ್ಠಿರನೇ! ಒಂಟೆಯ ಒಂದು ದೊಡ್ಡ ಕಥೆಯನ್ನು ಕೇಳು.
ಜಾತಿಸ್ಮರೋ ಮಹಾನುಷ್ಟ್ರಃ ಪ್ರಾಜಾಪತ್ಯಯುಗೋದ್ಭವಃ |
ತಪಃ ಸುಮಹದಾತಿಷ್ಠದರಣ್ಯೇ ಸಂಶಿತವ್ರತಃ ॥4॥
ಕೃತಯುಗದಲ್ಲಿ ಪೂರ್ವಜನ್ಮದ ಸ್ಮರಣೆಯುಳ್ಳ ಒಂದು ದೊಡ್ಡ ಒಂಟೆಯು ವ್ರತವನ್ನು ಧರಿಸಿ, ಅರಣ್ಯದಲ್ಲಿ ದೊಡ್ಡ ತಪಸ್ಸನ್ನು ಮಾಡಿತು.
ತಪಸಸ್ತಸ್ಯ ಚಾಂತೇ ವೈ ಪ್ರೀತಿಮಾನಭವತ್ ಪ್ರಭುಃ |
ವರೇಣ ಚ್ಛಂದಯಾಮಾಸ ತತಶ್ಚೈನಂ ಪಿತಾಮಹಃ ॥5॥
ತಪಸ್ಸಿನ ಅಂತ್ಯದಲ್ಲಿ ಪ್ರಸನ್ನರಾದ ಪ್ರಭುಗಳಾದ ಬ್ರಹ್ಮದೇವರು ಆ ಒಂಟೆಗೆ ವರವನ್ನು ಕೇಳುವಂತೆ ಹೇಳಿದರು.
ಉಷ್ಟ್ರಃ
ಭಗವಂಸ್ತ್ವತ್ಪ್ರಸಾದಾನ್ಮೇ ದೀರ್ಘಾ ಗ್ರೀವಾ ಭವೇದಿಯಮ್ |
ಯೋಜನಾನಾಂ ಶತಂ ಸಾಗ್ರಂ ಯಾ ಗಚ್ಛೇಚ್ಚರಿತುಂ ವಿಭೋ ॥6॥
ಒಂಟೆ ಎಲೈ ಪೂಜ್ಯನೇ! ನಿನ್ನ ಅನುಗ್ರಹದಿಂದ ನನ್ನ ಈ ಕತ್ತು ದೀರ್ಘವಾಗಲಿ. ಎಲೈ ವಿಭುವೇ! ಭಕ್ಷಿಸುವುದಕ್ಕಾಗಿ ನನ್ನ ಈ ಕತ್ತು ನೂರು ಯೋಜನಗಳಿಗಿಂತ ಹೆಚ್ಚು ದೂರವೂ ಹೋಗುವಂತಾಗಲಿ.
ಭೀಷ್ಮಃ
ಏವಮಸ್ತ್ವಿತಿ ಚೋಕ್ತಃ ಸ ವರದೇನ ಮಹಾತ್ಮನಾ |
ಪ್ರತಿಲಭ್ಯ ವರಂ ಶ್ರೇಷ್ಠಂ ಯಯಾವುಷ್ಟ್ರಃ ಸ್ವಕಂ ವನಮ್ ॥7॥
ಭೀಷ್ಮರು ವರಪ್ರದರಾದ ಮಹಾತ್ಮರಾದ ಬ್ರಹ್ಮದೇವರು ಹಾಗೆಯೇ ಆಗಲಿ ಎಂದು ಹೇಳಿದರು. ಶ್ರೇಷ್ಠವಾದ ವರವನ್ನು ಪಡೆದು ಒಂಟೆಯು ತನ್ನ ಕಾಡಿಗೆ ಹೊರಟು ಹೋಯಿತು.
ಸ ಚಕಾರ ತದಾಽಽಲಸ್ಯಂ ವರದಾನಾತ್ ಸ ದುರ್ಮತಿಃ |
ನ ಚೈಚ್ಛಚ್ಚರಿತುಂ ಗಂತುಂ ದುರಾತ್ಮಾ ಕಾಲಮೋಹಿತಃ ॥8॥
ದುರ್ಮತಿಯಾದ ಆ ಒಂಟೆಯು ವರದಾನದ ಬಲದಿಂದ ಆಲಸ್ಯವನ್ನು ಮಾಡಿತು. ಕಾಲಮೋಹಿತವಾದ ದುಷ್ಟಮನಸ್ಸುಳ್ಳ ಆ ಒಂಟೆಯು ಆಹಾರವನ್ನು ಭಕ್ಷಿಸಲು ಹೊರಗೆ ಹೋಗಲು ಬಯಸಲಿಲ್ಲ.
ಸ ಕದಾಚಿತ್ ಪ್ರಸಾರ್ಯೈವಂ ತಾಂ ಗ್ರೀವಾಂ ಶತಯೋಜನಾಮ್ |

ಚಚಾರ ಶ್ರಾಂತಹೃದಯೋ ವಾತಶ್ಚಾಗಾತ್ ತತೋ ಮಹಾನ್ ॥9॥
ದೀರ್ಘಕಾಲದ ಉಪವಾಸದಿಂದ ಬಳಲಿದ ಆ ಒಂಟೆಯು ಒಮ್ಮೆ ತನ್ನ ಕತ್ತನ್ನು ನೂರು ಯೋಜನ ಉದ್ದ ಮಾಡಿ ಸಂಚರಿಸಿತು. ಆಗ ದೊಡ್ಡ ಬಿರುಗಾಳಿಯು ಉಂಟಾಯಿತು.
ಸ ಗುಹಾಯಾಂ ಶಿರೋಗ್ರೀವಂ ನಿಧಾಯ ಪಶುರಾತ್ಮನಃ।
ಆಸ್ತಾಥ ವರ್ಷಮಭ್ಯಾಗಾತ್ ಸುಮಹತ್ ಪ್ಲಾವಯಜ್ಜಗತ್ ॥10॥
ಆ ಪಶುವು ತನ್ನ ತಲೆಯನ್ನು ಮತ್ತು ಕತ್ತನ್ನು ಒಂದು ಗುಹೆಯೊಳಗೆ ಇಟ್ಟು- ಕೊಂಡಿತು. ಆಗ ಪ್ರಪಂಚವನ್ನೇ ಕೊಚ್ಚಿ ಹಾಕುವಂತಹ ದೊಡ್ಡ ಮಳೆಯು ಉಂಟಾಯಿತು.
ಅಥ ಶೀತಪರೀತಾಂಗೋ ಜಂಬುಕಃ ಕ್ಷುಚ್ಛ್ರಮಾನ್ವಿತಃ।
ಸದಾರಸ್ತಾಂ ಗುಹಾಮಾಶು ಪ್ರವಿವೇಶ ಜಲಾರ್ದಿತಃ ॥11॥
ಆಗ ಹಸಿವಿನಿಂದ ಬಳಲಿ ಶೀತದಿಂದ ನಡುಗುತ್ತಿದ್ದ ಒಂದು ನರಿಯು ಜ್ವರ- ದಿಂದ ಪೀಡಿತವಾಗಿ ತನ್ನ ಪತ್ನೀಸಹಿತವಾಗಿ ಶೀಘ್ರವಾಗಿ ಆ ಗುಹೆಯನ್ನು ಪ್ರವೇಶಿ- ಸಿತು.
ಸ ದೃಷ್ಟ್ವಾ ಮಾಂಸಜೀವೀ ತು ಸುಭೃಶಂ ಕ್ಷುಚ್ಛ್ರಮಾನ್ವಿತಃ।
ಅಭಕ್ಷಯತ್ ತತೋ ಗ್ರೀವಾಮುಷ್ಟ್ರಸ್ಯ ಭರತರ್ಷಭ ॥12॥
ಬಹಳವಾಗಿ ಹಸಿದು ಬಳಲಿದ ಮಾಂಸಜೀವಿಯಾದ ಆ ನರಿಯು ಎಲೈ ಭರತ- ರ್ಷಭನೇ! ಆ ಒಂಟೆಯ ಕತ್ತನ್ನು ನೋಡಿ ಅದನ್ನು ತಿಂದುಹಾಕಿತು.
ಯದಾ ತ್ವಬುದ್ಧ್ಯತಾತ್ಮಾನಂ ಭಕ್ಷ್ಯಮಾಣಂ ಸ ವೈ ಪಶುಃ।
ತದಾ ಸಂಕೋಚನೇ ಯತ್ನಮಕರೋದ್ ಭೃಶದುಃಖಿತಃ ॥13॥
ಒಂಟೆಗೆ ತಾನು ತಿನ್ನಲ್ಪಡುತ್ತಿದ್ದೇನೆ ಎಂದು ತಿಳಿದಾಗ ಅದು ಬಹಳ ದುಃಖದಿಂದ ಕೂಡಿ ತನ್ನ ಕತ್ತನ್ನು ಹಿಂದಕ್ಕೆ ಎಳೆದುಕೊಳ್ಳಲು ಪ್ರಯತ್ನಮಾಡಿತು.
ಯಾವದೂರ್ಧ್ವಮಧಶ್ಚೈವ ಗ್ರೀವಾಂ ಸಂಕ್ಷಪತೇ ಪಶುಃ।
ತಾವತ್ ತೇನ ಸದಾರೇಣ ಜಂಬುಕೇನ ಸ ಭಕ್ಷಿತಃ ॥14॥
ಮೇಲ್ಭಾಗವಿದ್ದ ಗುಹೆಯಿಂದ ತನ್ನ ಕತ್ತನ್ನು ಅರ್ಧಭಾಗ ಎಳೆದುಕೊಳ್ಳುವಷ್ಟರಲ್ಲಿ ಪತ್ನೀಸಹಿತವಾದ ಆ ನರಿಯು ಅದನ್ನು ತಿಂದುಬಿಟ್ಟಿತು.
ಸ ಹತ್ವಾ ಭಕ್ಷಯಿತ್ವಾ ಚ ಉಷ್ಟ್ರಂ ತಂ ಜಂಬುಕಸ್ತದಾ।
ವಿಗತೇ ವಾತವರ್ಷೇ ಚ ನಿಶ್ಚಕ್ರಾಮ ಗುಹಾಮುಖಾತ್ ॥15॥
ಆ ನರಿಯು ಆ ಒಂಟೆಯನ್ನು ಕೊಂದು ತಿಂದು ಮಳೆಗಾಳಿಯು ನಿಲ್ಲುತ್ತಿರಲು ಗುಹೆಯ ಮುಂಭಾಗದಿಂದ ಹೊರಟುಹೋಯಿತು.
ಏವಂ ದುರ್ಬುದ್ಧಿನಾ ಪ್ರಾಪ್ತಮುಷ್ಟ್ರೇಣ ನಿಧನಂ ತದಾ।
ಆಲಸ್ಯಕರಣಾತ್ ಪಶ್ಯ ಮಹದ್ ದೋಷಮುಪಾಗತಮ್ ॥16॥
ಹೀಗೆ ದುರ್ಬುದ್ಧಿಯುಳ್ಳ ಒಂಟೆಯು ಆಗ ನಿಧನವನ್ನು ಹೊಂದಿತು. ಕತ್ತನ್ನು ಚಾಚುವುದರಲ್ಲಿ ಮತ್ತು ಹಿಂದೆ ತೆಗೆದುಕೊಳ್ಳುವುದರಲ್ಲಿ ಆಲಸ್ಯವನ್ನು ಮಾಡಿದ ಒಂಟೆಗೆ ಎಂತಹ ದೋಷವುಂಟಾಯಿತೆಂಬುದನ್ನು ನೋಡು.
ತ್ವಮಪ್ಯೇತಂ ವಿಧಿಂ ತ್ಯಕ್ತ್ವಾ ಯೋಗೇನ ನಿಯತೇಂದ್ರಿಯಃ।
ವರ್ತಸ್ವ ಬುದ್ಧಿಮೂಲಂ ಹಿ ವಿಜಯಂ ಮನುರಬ್ರವೀತ್ ॥17॥
ನೀನೂ ಸಹ ಒಂಟೆಯ ಈ ನೀತಿಯನ್ನು ತ್ಯಜಿಸಿ, ಯೋಗಾರೂಢನಾಗಿ, ಇಂದ್ರಿಯಜಯವನ್ನು ಹೊಂದಿ ಇರುವವನಾಗು. ವಿಜಯಕ್ಕೆ ಬುದ್ಧಿಯೇ ಮೂಲ- ವೆಂದು ಮನುವು ಹೇಳಿದ್ದಾನೆ.
ಬುದ್ಧಿಶ್ರೇಷ್ಠಾನಿ ಕರ್ಮಾಣಿ ಬಾಹುಮಧ್ಯಾನಿ ಭಾರತ।
ತಾನಿ ಜಂಘಾಜಘನ್ಯಾನಿ ಭಾರಪ್ರತ್ಯವರಾಣಿ ಚ ॥18॥
ಎಲೈ ಭಾರತನೇ! ಬುದ್ಧಿಯ ಬಲದಿಂದ ಮಾಡುವ ಕರ್ಮಗಳು ಶ್ರೇಷ್ಠವಾದವು. ಬಾಹುಬಲದಿಂದ ಮಾಡುವ ಕರ್ಮಗಳು ಮಧ್ಯಮವಾದವುಗಳು. ಜಘಾಬಲದಿಂದ ಮಾಡುವ ಸೇವಾವೃತ್ತಿರೂಪವಾದ ಕರ್ಮಗಳು ನೀಚವಾದವುಗಳು. ಭಾರವನ್ನು ಹೊರುವಂತಹ ಕರ್ಮಗಳು ಅತಿನೀಚವಾದವುಗಳು (ಲಕ್ಷ್ಯಾಲಂಕಾರ).
ರಾಜ್ಯಂ ತಿಷ್ಠತಿ ದಕ್ಷಸ್ಯ ಸಂಗೃಹೀತೇಂದ್ರಿಯಸ್ಯ ಚ।
ಗುಪ್ತಮಂತ್ರಶ್ರುತವತಃ ಸುಸಹಾಯಸ್ಯ ಚಾನಘ ॥19॥
ಎಲೈ ಅನಘನೇ! ದಕ್ಷನೂ ಇಂದ್ರಿಯಜಯವುಳ್ಳವನೂ ಮಂತ್ರರಕ್ಷಣೆಯನ್ನು ಮಾಡಿಕೊಳ್ಳುವವನೂ ವಿದ್ಯಾವಂತನೂ ಒಳ್ಳೆಯ ಸಹಾಯವುಳ್ಳವನೂ ಆದ ರಾಜನಲ್ಲಿ ರಾಜ್ಯವು ನಿಲ್ಲುತ್ತದೆ.
ಪರೀಕ್ಷ್ಯಕಾರಿಣೋಽರ್ಥಾಶ್ಚ ತಿಷ್ಠಂತೀಹ ಯುಧಿಷ್ಠಿರ।
ಸಹಾಯಯುಕ್ತೇನ ಮಹೀ ಕೃತ್ಸ್ನಾ ಶಕ್ಯಾ ಪ್ರಶಾಸಿತುಮ್ ॥20॥
ಎಲೈ ಯುಧಿಷ್ಠಿರನೇ! ಪರೀಕ್ಷಿಸಿ ಕಾರ್ಯವನ್ನು ಮಾಡುವವನಿಗೆ ಇಲ್ಲಿ ಅರ್ಥ- ಸಿದ್ಧಿಯಾಗುತ್ತದೆ. ಸಹಾಯಯುಕ್ತನಾದ ರಾಜನು ಸಮಗ್ರವಾದ ಭೂಮಿಯನ್ನು ಆಳಲು ಸಮರ್ಥನಾಗುತ್ತಾನೆ.
ಇದಂ ಹಿ ಸದ್ಭಿಃ ಕಥಿತಂ ವಿಧಿಜ್ಞೈಃ ಪುರಾ ಮಹೇಂದ್ರಪ್ರತಿಮಪ್ರಭಾವ।
ಮಯಾಪಿ ಚೋಕ್ತಂ ತವ ಶಾಸ್ತ್ರದೃಷ್ಟ್ಯಾ ತ್ವಮತ್ರ ಯುಕ್ತಃ ಪ್ರಚರಸ್ವ ರಾಜನ್ ॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ರಾಜಧರ್ಮೇ ಚತುರ್ದಶಾಧಿಕಶತತಮೋಽಧ್ಯಾಯಃ ॥114॥
ಎಲೈ ಮಹೇಂದ್ರನಿಗೆ ಸದೃಶವಾದ ಸಾಮರ್ಥ್ಯವುಳ್ಳವನೇ! ಈ ವಿಷಯವನ್ನು ಹಿಂದೆ ರಾಜನೀತಿಯನ್ನು ತಿಳಿದ ಸಜ್ಜನರು ಹೇಳಿದ್ದಾರೆ. ಶಾಸ್ತ್ರದೃಷ್ಟಿಯಿಂದ ನಾನು ನಿನಗೆ ಹೇಳಿದ್ದೇನೆ. ಎಲೈ ರಾಜನೇ! ಇದರಲ್ಲಿ ಯುಕ್ತವಾದುದನ್ನು ಮಾಡುವವ- ನಾಗು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 114ನೆಯ ಅಧ್ಯಾಯವು ಮುಗಿಯಿತು
0
115. ನೂರಹದಿನೈದನೆಯ ಅಧ್ಯಾಯ
ಗಂಗಾಸಾಗರಸಂವಾದಾನುವಾದದಿಂದ ಬಲಿಷ್ಠನಾದ ಶತ್ರುವಿನ ವಿಷಯದಲ್ಲಿ ನಡೆದುಕೊಳ್ಳಬೇಕಾದ ರೀತಿಯ ಕಥನ
ಯುಧಿಷ್ಠಿರಃ
ರಾಜಾ ರಾಜ್ಯಮನುಪ್ರಾಪ್ಯ ದುರ್ಬಲೋ ಭರತರ್ಷಭ |
ಅಮಿತ್ರಸ್ಯಾತಿವೃದ್ಧಸ್ಯ ಕಥಂ ತಿಷ್ಠೇದಸಾಧನಃ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ! ದುರ್ಬಲನಾದ ರಾಜನು ರಾಜ್ಯವನ್ನು ಪಡೆದು ಅತಿಬಲಿಷ್ಠನಾದ ಶತ್ರುವಿನ ಮುಂದೆ ಸಾಧನರಹಿತನಾಗಿ ಹೇಗೆ ನಿಲ್ಲುತ್ತಾನೆ? (ನಡೆದುಕೊಳ್ಳುತ್ತಾನೆ?)
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸರಿತಾಂ ಚೈವ ಸಂವಾದಂ ಸಾಗರಸ್ಯ ಚ ಭಾರತ ॥2॥
ಭೀಷ್ಮರು ಎಲೈ ಭಾರತನೇ! ಈ ವಿಷಯದಲ್ಲೂ ಸಹ ಸಾಗರಕ್ಕೂ ಮತ್ತು ನದಿಗಳಿಗೂ ನಡೆದ ಸಂವಾದರೂಪವಾದ ಈ ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ.
ಸುರಾರಿನಿಲಯಃ ಶಶ್ವತ್ ಸಾಗರಃ ಸರಿತಾಂಪತಿಃ |
ಪಪ್ರಚ್ಛ ಸರಿತಃ ಸರ್ವಾಃ ಸಂಶಯಂ ಜಾತಮಾತ್ಮನಃ ॥3॥
ಯಾವಾಗಲೂ ನಾರಾಯಣನಿಗೆ ಆಶ್ರಯನೂ ಸರಿತ್ಪತಿಯೂ ಆದ ಸಾಗರನು ತನಗೆ ಉಂಟಾದ ಸಂಶಯವನ್ನು ಎಲ್ಲಾ ನದಿಗಳ ಮುಂದೆ ಕೇಳಿದನು.
ಸಮೂಲಶಾಖಾನ್ ಪಶ್ಯಾಮಿ ನಿಹತಾನ್ ಕ್ಷಾಥಿನೋ ದ್ರುಮಾನ್ |
ಯುಷ್ಮಾಭಿರಿಹ ಪೂರ್ಣಾಭಿರನ್ಯಾಂಸ್ತತ್ರ ನ ವೇತಸಮ್ ॥4॥
ಪೂರ್ಣರಾದ ನೀವು ಮೂಲ ಮತ್ತು ಶಾಖೆಗಳಿಂದ ಸಹಿತವಾದ ಕ್ಷೀರವನ್ನು ಸ್ರವಿಸುವ ವೃಕ್ಷಗಳನ್ನೂ ಬೇರೆ ವೃಕ್ಷಗಳನ್ನೂ ಸೆಳೆದುಕೊಂಡು ಹೋಗುತ್ತೀರಿ. ಆದರೆ ಬೆತ್ತದ ಪೊದೆಯನ್ನು ಸೆಳೆದುಕೊಂಡು ಹೋಗುವುದಿಲ್ಲ.
ಅಕಾಯಶ್ಚಾಲ್ಪಸಾರಶ್ಚ ವೇತಸಃ ಕೂಲಜಶ್ಚ ವಃ |
ಅವಜ್ಞಾಯ ನಶಕ್ಯೋ ವಾ ಕಿಂಚಿದ್ ವಾ ತೇನ ವಃ ಕೃತಮ್ ॥5॥
ಬೆತ್ತವು ಅಲ್ಪಶರೀರವನ್ನು ಮತ್ತು ಅಲ್ಪಬಲವನ್ನೂ ಹೊಂದಿ, ನಿಮ್ಮ ತೀರ- ದಲ್ಲಿಯೇ ಇದೆ. ನಿಮ್ಮನ್ನು ತಿರಸ್ಕರಿಸಿ ಅದು ನಿಲ್ಲಲು ಸಾಧ್ಯವಿಲ್ಲ. ಅಥವಾ ಅದು ನಿಮಗೆ ಏನಾದರೂ ಉಪಕಾರವನ್ನು ಮಾಡಿದೆಯೇ?
ತದಹಂ ಶ್ರೋತುಮಿಚ್ಛಾಮಿ ಸರ್ವಾಸಾಮೇವ ವೋ ಮತಮ್ |
ಯಥಾ ಕೂಲಾನಿ ಚೇಮಾನಿ ಭಿತ್ತ್ವಾ ನಾನೀಯತೇ ವಶಮ್ ॥6॥
ಹೇಗೆ ತೀರಗಳನ್ನು ಭೇದಿಸಿ ಬೆತ್ತವನ್ನು ವಶಪಡಿಸಿಕೊಳ್ಳುವುದಿಲ್ಲ ಎಂಬ ವಿಷಯದಲ್ಲಿ ನಿಮ್ಮೆಲ್ಲರ ಅಭಿಪ್ರಾಯವನ್ನು ಕೇಳಲು ಬಯಸುತ್ತೇನೆ. (ಎಂದು ಹೇಳಿದನು).
ತತಃ ಪ್ರಾಹ ನದೀ ಗಂಗಾ ವಾಕ್ಯಮುತ್ತರಮರ್ಥವತ್ |
ಹೇತುಮದ್ ಗ್ರಾಹಕಂ ಚೈವ ಸಾಗರಂ ಸರಿತಾಂಪತಿಮ್ ॥7॥
ಆಗ ಗಂಗಾನದಿಯು ಸರಿತ್ಪತಿಯಾದ ಸಾಗರನನ್ನು ಕುರಿತು ಅರ್ಥಪೂರ್ಣ- ವಾದ ಯುಕ್ತಿಯುಕ್ತವಾದ ಕೇಳುವವರಲ್ಲಿ ಗುಣಗಳನ್ನು ಉಂಟುಮಾಡುವ ಉತ್ತರವನ್ನು ಹೇಳಿದಳು.
ತಿಷ್ಠಂತ್ಯೇತೇ ಯಥಾಸ್ಥಾನಂ ನಗಾ ಹ್ಯೇಕನಿಕೇತನಾಃ |
ತತಸ್ತ್ಯಜಂತಿ ತತ್ ಸ್ಥಾನಂ ಪ್ರಾತಿಲೋಮ್ಯಾದಚೇತಸಃ ॥8॥
ವೇತಸೋ ವೇಗಮಾಯಾಂತಂ ದೃಷ್ಟ್ವಾ ನಮತಿ ನೇತರಃ |
ಸ ಚ ವೇಗೇಽಭ್ಯತಿಕ್ರಾಂತೇ ಸ್ಥಾನಮಾಸಾದ್ಯ ತಿಷ್ಠತಿ ॥9॥
ನಮ್ಮ ತೀರದಲ್ಲಿರುವ ಈ ದೊಡ್ಡ ವೃಕ್ಷಗಳು ಒಂದೇ ಸ್ಥಾನದಲ್ಲಿ ನಿಲ್ಲುತ್ತವೆ. ಆದ್ದರಿಂದ ಬುದ್ಧಿಯಿಲ್ಲದ ಅವು ಆ ಸ್ಥಾನವನ್ನು ತ್ಯಜಿಸುತ್ತವೆ. ಬೆತ್ತವಾದರೋ ಇದಕ್ಕೆ ವಿರುದ್ಧವಾಗಿ ನದಿಯ ವೇಗವು ಬರುವುದನ್ನು ಗಮನಿಸಿ ಬಾಗುತ್ತದೆ. ಉಳಿದ ವೃಕ್ಷಗಳು ಬಾಗುವುದಿಲ್ಲ. ವೇಗವು ಹೊರಟು ಹೋದ ಮೇಲೆ ಬೆತ್ತವು ತನ್ನ ಮೊದಲಸ್ಥಾನದಲ್ಲಿಯೇ ನಿಲ್ಲುತ್ತದೆ.
ಕಾಲಜ್ಞಃ ಸಮಯಜ್ಞಶ್ಚ ಸದಾ ವಶ್ಯಶ್ಚ ಯೋ ದ್ರುಮಃ |
ಅನುಲೋಮಸ್ತಥಾಸ್ತಬ್ಧಸ್ತೇನ ನಾತ್ಯೇತಿ ವೇತಸಃ ॥10॥
ಬಾಗುವ ಕಾಲವನ್ನು ಪುನಃ ಏಳುವ ಕಾಲವನ್ನು ತಿಳಿದು ಸದಾ ಪ್ರವಾಹಕ್ಕೆ ವಶವಾದ ಬೆತ್ತವು ಅಹಂಕಾರವಿಲ್ಲದೇ ಪ್ರವಾಹಕ್ಕೆ ಅನುಕೂಲವಾಗಿರುತ್ತದೆ. ಆದ್ದರಿಂದ ಅದು ವಿನಾಶವನ್ನು ಹೊಂದುವುದಿಲ್ಲ.
ಮಾರುತೋದಕವೇಗೇನ ಯೇ ನಮಂತ್ಯುನ್ನಮಂತಿ ಚ |
ಔಷಧ್ಯಃ ಪಾದಪಾ ಗುಲ್ಮಾ ನ ತೇ ಯಾಂತಿ ಪರಾಭವಮ್ ॥11॥

ಗಾಳಿ ಮತ್ತು ಉದಕಗಳ ವೇಗಗಳಿಗೆ ಸಿಲುಕಿ ಯಾವ ಓಷಧಿಗಳು ವೃಕ್ಷಗಳು ಪೊದೆಗಳು ಬಗ್ಗಿ ಅನಂತರ ಏಳುತ್ತವೆಯೋ ಅವು ಪರಾಭವವನ್ನು ಹೊಂದು- ವುದಿಲ್ಲ.
ಯೋ ಹಿ ಶತ್ರೋರ್ವಿವೃದ್ಧಸ್ಯ ಪ್ರಭೋರ್ವಧವಿನಾಶನೇ |
ಪೂರ್ವಂ ನ ಸಹತೇ ವೇಗಂ ಕ್ಷಿಪ್ರಮೇವ ಸ ನಶ್ಯತಿ ॥12॥
ಯಾವನು ಅಭಿವೃದ್ಧನಾದ ಪ್ರಭುವಾದ ಶತ್ರುವು ಉಂಟು ಮಾಡಿದ ವಧೆ ಮತ್ತು ವಿನಾಶಗಳ ವೇಗವನ್ನು ಮೊದಲು ಸಹಿಸುವುದಿಲ್ಲವೋ ಅವನು ಶೀಘ್ರವಾಗಿ ನಾಶವನ್ನು ಹೊಂದುತ್ತಾನೆ.
ಸಾರಾಸಾರಂ ಬಲಂ ವೀರ್ಯಮಾತ್ಮನೋ ದ್ವಿಷತಶ್ಚ ಯಃ |
ಜಾನನ್ ವಿಚರತಿ ಪ್ರಾಜ್ಞೋ ನ ಸ ಯಾತಿ ಪರಾಭವಮ್ ॥13॥
ತನ್ನ ಮತ್ತು ಶತ್ರುಗಳ ಬಲಾಬಲಗಳನ್ನು ಸಾರಾಸಾರವನ್ನು ತಿಳಿದು ವರ್ತಿಸುವ ಪ್ರಾಜ್ಞನಾದವನು ಪರಾಭವವನ್ನು ಹೊಂದುವುದಿಲ್ಲ.
ಏವಮೇವ ಯದಾ ವಿದ್ವಾನ್ ಮನ್ಯೇತಾತಿಬಲಂ ರಿಪುಮ್ |
ಸಂಶ್ರಯೇದ್ ವೈತಸೀಂ ವೃತ್ತಿಮೇವಂ ಪ್ರಜ್ಞಾನಲಕ್ಷಣಮ್ ॥14॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚದಶಾಧಿಕಶತತಮೋಽಧ್ಯಾಯಃ ॥115॥
ಇದೇ ರೀತಿಯಲ್ಲಿ ವಿವೇಕಿಯಾದವನು ಶತ್ರುವು ತನಗಿಂತ ಬಹಳಬಲಿಷ್ಠ- ನಾಗಿದ್ದಾನೆಂದು ತಿಳಿದಾಗ ಬೆತ್ತದ ನಡತೆಯನ್ನು ಆಶ್ರಯಿಸಬೇಕು. ಇದು ವಿವೇಕದ ಲಕ್ಷಣ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 115ನೆಯ ಅಧ್ಯಾಯವು ಮುಗಿಯಿತು
0

116. ನೂರಹದಿನಾರನೆಯ ಅಧ್ಯಾಯ
ಸಭೆಯಲ್ಲಿ ದುಷ್ಟಪುರುಷರು ನಿಂದಿಸಿದರೆ ಸಹನೆಯ ಕಥನ
ಯುಧಿಷ್ಠಿರಃ
ವಿದ್ವಾನ್ ಮೂಢಪ್ರಗಲ್ಭೇನ ಮೃದುಸ್ತೀಕ್ಷ್ಣೇನ ಭಾರತ |
ಆಕ್ರುಶ್ಯಮಾನಃ ಸದಸಿ ಕಥಂ ಕುರ್ಯಾದರಿಂದಮ ॥1॥
ಯುಧಿಷ್ಠಿರ ಎಲೈ ಭಾರತನೇ! ಅರಿಂದಮನೇ! ಮೃದುವೂ ವಿದ್ವಾಂಸನೂ ಆದ ಮನುಷ್ಯನು ಸಭೆಯಲ್ಲಿ ಮೂಢನೂ ವಾಚಾಲನೂ ಮತ್ತು ಉಗ್ರನೂ ಆದ ದುಷ್ಟನಿಂದ ನಿಂದಿಸಲ್ಪಡುವಾಗ ಏನು ಮಾಡಬೇಕು?
ಭೀಷ್ಮಃ
ಶ್ರೂಯತಾಂ ಪೃಥಿವೀಪಾಲ ಯಥೈಷೋಽರ್ಥೋಽನುಗೀಯತೇ |
ಸದಾ ಸುಚೇತಾಃ ಸಹತೇ ನರಸ್ಯೇಹಾಲ್ಪಚೇತಸಃ ॥2॥
ಎಲೈ ಪೃಥಿವೀಪಾಲನೇ! ಒಳ್ಳೆಯ ಮನಸ್ಸುಳ್ಳವನು ಅಲ್ಪಬುದ್ಧಿಯ ನರನು ಅವನನ್ನು ನಿಂದಿಸುವಾಗ ಸಹನೆ ಮಾಡಬೇಕೆಂಬ (ಈ) ವಿಷಯವು ಹೇಗೆ ಹೇಳಲ್ಪಡುತ್ತದೆ ಎಂಬುದನ್ನು ಕೇಳು.
ಅರುಷ್ಯನ್ ಕ್ರುಶ್ಯಮಾನಸ್ಯ ಸುಕೃತಂ ನಾಮ ವಿಂದತಿ |
ದುಷ್ಕೃತಂ ಚಾತ್ಮನೋಽಮರ್ಷೀ ರುಷ್ಯತ್ಯೇವಾಪಮಾರ್ಷ್ಟಿ ವೈ ॥3॥
ದುಷ್ಟನು ನಿಂದಿಸುತ್ತಿದ್ದರೆ ಕೋಪಗೊಳ್ಳದ ಸತ್ಪುರುಷನು ಪುಣ್ಯವನ್ನು ಹೊಂದುತ್ತಾನೆ. ಮತ್ತು ತನ್ನ ಸಹನೆಯ ಗುಣದಿಂದ ತನ್ನ ಪಾಪವನ್ನೆಲ್ಲ ನಿಂದಿಸು- ವವನಿಗೆ ಕೊಟ್ಟು ತೊಳೆದು ಬಿಡುತ್ತಾನೆ.
ಟಿಟ್ಟಿಭಂ ತಮುಪೇಕ್ಷೇತ ವಾಶಮಾನಮಿವಾತುರಮ್ |
ಲೋಕವಿದ್ವೇಷಮಾಪನ್ನೋ ನಿಷ್ಫಲಂ ಪ್ರತಿಪದ್ಯತೇ ॥4॥
ಕಿರುಚುವ ಹಕ್ಕಿಯಂತೆ, ನರಳುವ ರೋಗಿಯಂತೆ ಇರುವ ಅವನನ್ನು ಉಪೇಕ್ಷಿಸಬೇಕು. ಅವನು ಲೋಕವಿದ್ವೇಷಕ್ಕೆ ಪಾತ್ರನಾಗುತ್ತಾನೆ. ಅವನ ನಿಂದೆಯ ಮಾತುಗಳಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲ.
ಇತಿ ಸಂಶ್ಲಾಘತೇ ನಿತ್ಯಂ ತೇನ ಪಾಪೇನ ಕರ್ಮಣಾ |
ಇದಮುಕ್ತೋ ಮಯಾ ಕಶ್ಚಿತ್ ಸಮ್ಮತೋ ಜನಸಂಸದಿ |
ಸ ತತ್ರ ವ್ರೀಡಿತಃ ಶುಷ್ಕೋ ಮೃತಕಲ್ಪೋಽವತಿಷ್ಠತಿ ॥5॥
ದುಷ್ಟನಾದವನು ``ನಾನು ದೊಡ್ಡ ಸಭೆಯಲ್ಲಿ ಪ್ರಾಜ್ಞಸಮ್ಮತನಾದ ಒಬ್ಬನನ್ನು ಈ ರೀತಿಯಲ್ಲಿ ನಿಂದಿಸಿದೆ. ಅವನು ನಾಚಿಕೆಯಿಂದ ಮುಖವನ್ನು ಒಣಗಿಸಿಕೊಂಡು ಸತ್ತವನಂತೆ ಸುಮ್ಮನಿದ್ದನು'' ಎಂದು ತನ್ನ ಪಾಪಕರ್ಮವನ್ನು ತಾನೇ ಹೊಗಳಿ- ಕೊಳ್ಳುತ್ತಾನೆ.
ಶ್ಲಾಘನ್ನಶ್ಲಾಘನೀಯೇನ ಕರ್ಮಣಾ ನಿರಪತ್ರಪಃ |
ಉಪೇಕ್ಷಿತವ್ಯೋ ದಾಂತೇನ ತಾದೃಶಃ ಪುರುಷಾಧಮಃ ॥6॥
ಶ್ಲಾಘನೀಯವಲ್ಲದ ಕರ್ಮದಿಂದ ತನ್ನನ್ನು ಹೊಗಳಿಕೊಳ್ಳುವ ನಾಚಿಕೆಗೆಟ್ಟ ಅಂತಹ ಪುರುಷಾಧಮನನ್ನು ದಾಂತನಾದವನು ಉಪೇಕ್ಷೆ ಮಾಡಬೇಕು.
ಯದ್ಯದ್ ಬ್ರೂಯಾದಲ್ಪಮತಿಸ್ತತ್ ತದಸ್ಯ ಸಹೇತ್ ಸದಾ |
ಪ್ರಾಕೃತೋ ಹಿ ಪ್ರಶಂಸನ್ ವಾ ನಿಂದನ್ ವಾ ಕಿಂ ಕರಿಷ್ಯತಿ |

ವನೇ ಕಾಕ ಇವಾಬುದ್ಧಿರ್ವಾಶಮಾನೋ ನಿರರ್ಥಕಮ್ ॥7॥
ಅಲ್ಪಮತಿಯು ಏನೇನನ್ನು ಹೇಳುತ್ತಾನೋ ಅದೆಲ್ಲವನ್ನೂ ಸದಾ ಸಹಿಸಬೇಕು. ಅಂತಹ ಬುದ್ಧಿಶೂನ್ಯನು ಪ್ರಶಂಸೆಯನ್ನು ಅಥವಾ ನಿಂದೆಯನ್ನು ಮಾಡಿ ಏನು ಮಾಡುವನು? ಕಾಡಿನಲ್ಲಿರುವ ಕಾಗೆಯಂತೆ ವ್ಯರ್ಥವಾಗಿ ಕಿರುಚುತ್ತಾ ಇರುತ್ತಾನೆ.
ಯದಿ ವಾಗ್ಭಿಃ ಪ್ರಯೋಗಃ ಸ್ಯಾತ್ ಪ್ರಯೋಗೇ ಪಾಪಕರ್ಮಣಃ |
ವಾಗೇವಾರ್ಥೋ ಭವೇತ್ ತಸ್ಯ ನ ಹ್ಯೇವಾರ್ಥೋ ಜಿಘಾಂಸತಃ ॥8॥
ಪಾಪಕರ್ಮವುಳ್ಳವನ ಜೊತೆಯಲ್ಲಿ ಸಮಾಗಮವಾದಾಗ ಅವನು ತನ್ನ ವಚನಗಳಿಂದ ನಿಂದಿಸಲು ಪ್ರಾರಂಭಿಸಿದರೆ ಅವನು ಮಾತನಾಡುವುದೇ ಅವನಿಗೆ ಪ್ರಯೋಜನ. ಸಜ್ಜನನನ್ನು ಹಿಂಸಿಸಲು ಬಯಸುವ ಅವನಿಗೆ ಬೇರೆ ಯಾವ ಪ್ರಯೋಜನವೂ ಇಲ್ಲ.
ನಿಷೇಕಂ ವಿಪರೀತಂ ಸ ವ್ಯಾಚಷ್ಟೇ ವೃತ್ತಚೇಷ್ಟಯಾ |
ಮಯೂರ ಇವ ಕೋಪೇನ ನೃತ್ತಂ ಸಂದರ್ಶಯನ್ನಿವ ॥9॥
ದುರ್ಜನನು ತನ್ನಲ್ಲಿ ಒಳ್ಳೆಯ ನಡತೆ ಇದೆಯೆಂದು ತೋರಿಸಿಕೊಳ್ಳುತ್ತಾ, ಸಜ್ಜನನು ಆಡಿದ ಅಮೃತದಂತಹ ಪ್ರಿಯವಾದ ಮಾತುಗಳನ್ನು ವಿಪರೀತವಾಗಿ ವ್ಯಾಖ್ಯಾನ ಮಾಡುತ್ತಾನೆ. ಕೋಪದಿಂದ ವಿಪರೀತವಾಗಿ ವ್ಯಾಖ್ಯಾನಮಾಡುತ್ತಾನೆ.
ಕೋಪೇನ ಎಂಬ ಪದಕ್ಕೆ ಕೌಪೀನವೆಂಬ ಪಾಠಾಂತರವಿದೆ. ನೃತ್ಯವನ್ನು ಮಾಡುವ ನವಿಲು ತಾನು ಚೆನ್ನಾಗಿದ್ದೇನೆ ಎಂದು ಭಾವಿಸಿದರೂ ತೋರಿಸಬಾರದ ತನ್ನ ಅಂಗವನ್ನು ಹೇಗೆ ತೋರಿಸುತ್ತದೆಯೋ ಅದರಂತೆ ದುರ್ಜನನು ತಾನು ಒಳ್ಳೆಯ ಕಾರ್ಯವನ್ನು ಮಾಡುತ್ತಿದ್ದೇನೆಂದು ತೋರಿಸಿಕೊಂಡರೂ ಅವನ ದುರ್ಗುಣಗಳು ಎಲ್ಲರಿಗೂ ತಿಳಿಯುತ್ತವೆ.
ಯಸ್ಯಾವಾಚ್ಯಂ ನ ಲೋಕೇಽಸ್ತಿ ನಾಕಾರ್ಯಂ ವಾಪಿ ಕಿಂಚನ |
ವಾಚಂ ತೇನ ನ ಸಂದಧ್ಯಾಚ್ಛುಚಿಃ ಸಂಕ್ಲಿಷ್ಟಕರ್ಮಣಾ ॥10॥
ಯಾವನಿಗೆ ಲೋಕದಲ್ಲಿ ಮಾತನಾಡಬಾರದ ಒಂದು ಶಬ್ದವೂಇಲ್ಲವೋ, ಮಾಡಲಾರದ ಒಂದು ಕಾರ್ಯವೂ ಇಲ್ಲವೋ ಅಂತಹ ದುಷ್ಟಕರ್ಮವನ್ನು ಮಾಡುವವನ ಜೊತೆಯಲ್ಲಿ ಶುಚಿಯಾದವನು ಮಾತನಾಡಬಾರದು.
ಪ್ರತ್ಯಕ್ಷಂ ಗುಣವಾದೀ ಯಃ ಪರೋಕ್ಷಂ ತು ವಿನಿಂದಕಃ |
ಸ ಮಾನವಃ ಶ್ವವಲ್ಲೋಕೇ ನಷ್ಟಲೋಕಪರಾಯಣಃ ॥11॥
ಯಾವ ಮನುಷ್ಯನು ಎದುರಿಗೆ ಗುಣಗಳನ್ನು ಹೇಳಿ ಹೊಗಳಿ ಹಿಂದೆ ನಿಂದಿಸು- ತ್ತಾನೆಯೋ ಅವನು ನಾಯಿಯಂತೆ ಲೋಕವನ್ನೂ ಆಶ್ರಯವನ್ನೂ ಕಳೆದುಕೊಂಡ- ವನು.
ತಾದೃಗ್ ಜನಶತಸ್ಯಾಪಿ ಯದ್ ದದಾತಿ ಜುಹೋತಿ ಚ |
ಪರೋಕ್ಷೇಣಾಪವಾದೇನ ತನ್ನಾಶಯತಿ ಸ ಕ್ಷಣಾತ್ ॥12॥
ಅಂತಹ ದುಷ್ಟನು ನೂರು ಜನರಿಗೆ ದಾನವನ್ನು ಮಾಡಿ ಹೋಮವನ್ನು ಮಾಡಿದರೂ ಅವನು ಪರೋಕ್ಷವಾಗಿ ಮಾಡಿದ ಅಪವಾದಗಳಿಂದ ಅದೆಲ್ಲವನ್ನೂ ಒಂದೇ ಕ್ಷಣದಲ್ಲಿ ನಾಶಪಡಿಸುತ್ತಾನೆ.
ತಸ್ಮಾತ್ ಪ್ರಾಜ್ಞೋ ನರಃ ಸದ್ಯಸ್ತಾದೃಶಂ ಪಾಪಚೇತಸಮ್ |
ವರ್ಜಯೇತ್ ಸಾಧುಭಿರ್ವರ್ಜ್ಯಂ ಸಾರಮೇಯಾಮಿಷಂ ಯಥಾ ॥13॥
ಆದ್ದರಿಂದ ಪ್ರಾಜ್ಞನಾದವನು ಸಜ್ಜನರಿಂದ ವರ್ಜಿಸಬೇಕಾದ ಅಂತಹ ಪಾಪ- ಮನಸ್ಸುಳ್ಳವನನ್ನು ನಾಯಿಯ ಮಾಂಸದಂತೆ ವರ್ಜಿಸಬೇಕು.
ಪರಿವಾದಂ ಬ್ರುವಾಣೋ ಹಿ ದುರಾತ್ಮಾ ವೈ ಮಹಾತ್ಮನೇ |
ಪ್ರಕಾಶಯತಿ ದೋಷಾನ್ ಸ್ವಾನ್ ಸರ್ಪಃ ಫಣಮಿವೋಚ್ಛ್ರಿತಮ್॥14॥
ಮಹಾತ್ಮನ ಕುರಿತು ನಿಂದೆಯ ಮಾತುಗಳನ್ನಾಡುವ ದುರಾತ್ಮನು ಸರ್ಪವು ತನ್ನ ಹೆಡೆಯನ್ನು ಬಿಚ್ಚಿ ತೋರಿಸಿದಂತೆ ತನ್ನ ದೋಷಗಳನ್ನೇ ತೋರಿಸಿಕೊಳ್ಳುತ್ತಾನೆ.
ತಂ ಸ್ವಕರ್ಮಾಣಿ ಕುರ್ವಾಣಂ ಪ್ರತಿಕರ್ತುಂ ಯ ಇಚ್ಛತಿ |
ಭಸ್ಮಕೂಟ ಇವಾಬುದ್ಧಿಃ ಖರೋ ರಜಸಿ ಮಜ್ಜತಿ ॥15॥
ತನ್ನ ಕರ್ಮದಲ್ಲಿ ನಿರತನಾದ ಸಜ್ಜನನಿಗೆ ಅಪಕಾರವನ್ನು ಮಾಡಲು ಯಾವನು ಇಚ್ಛಿಸುತ್ತಾನೆಯೋ ಅಂತಹ ದುರ್ಬುದ್ಧಿಯುಳ್ಳ ಮನುಷ್ಯನು ಬೂದಿಯ ರಾಶಿಯಲ್ಲಿ ಹೊರಳುವ ಕತ್ತೆಯಂತೆ ಇರುತ್ತಾನೆ.
ಮನುಷ್ಯಶಾಲಾವೃಕಮಪ್ರಶಾಂತಂ
ಜನಾಪವಾದೇ ಸತತಂ ನಿವಿಷ್ಟಮ್ |
ಮಾತಂಗಮುನ್ಮತ್ತಮಿವೋನ್ನದಂತಂ
ತ್ಯಜೇತ ತಂ ಶ್ವಾನಮಿವಾತಿರೌದ್ರಮ್ ॥16॥
ಶಾಂತವಾದ ಮನಸ್ಸನ್ನು ಹೊಂದದಿರುವ ಸತತವಾಗಿ ಜನಗಳನ್ನು ನಿಂದಿಸು- ವುದರಲ್ಲಿ ನಿರತನಾದ ಮದಿಸಿದ ಆನೆಯಂತೆ ಗರ್ಜಿಸುವಅಂತಹ ಮನುಷ್ಯ ತೋಳನನ್ನು ಭಯಂಕರವಾದ ನಾಯಿಯನ್ನು ತ್ಯಜಿಸುವಂತೆ ತ್ಯಜಿಸಬೇಕು.
ಅಧೀರಜುಷ್ಟೇ ಪಥಿ ವರ್ತಮಾನಂ
ದಮಾದಪೇತಂ ವಿನಯಾಚ್ಚ ಪಾಪಮ್ |
ಅರಿವ್ರತಂ ನಿತ್ಯಮಭೂತಿಕಾಮಂ
ಧಿಗಸ್ತು ತಂ ಪಾಪಮತಿಂ ಮನುಷ್ಯಮ್ ॥17॥
ಅಸಜ್ಜನರ ಮಾರ್ಗದಲ್ಲಿರುವ, ದಮ ಮತ್ತು ವಿನಯಗಳಿಂದ ರಹಿತನಾದ, ಶತ್ರುವ್ರತವನ್ನು ಧರಿಸಿದ, ನಿತ್ಯವೂ ಇನ್ನೊಬ್ಬನಿಗೆ ಅಶುಭವನ್ನು ಕೋರುವ, ಪಾಪಮತಿಯುಳ್ಳ ಅಂತಹ ಮನುಷ್ಯನಿಗೆ ಧಿಕ್ಕಾರವಿರಲಿ.

ಪ್ರತ್ಯುಚ್ಯಮಾನಸ್ತು ಹಿ ಭೂಯ ಏಭಿ-
ರ್ನಿಶಾಮ್ಯ ಮಾ ಭೂಸ್ತ್ವಮಥಾರ್ತರೂಪಃ |
ಉಚ್ಚಸ್ಯ ನೀಚೇನ ಹಿ ಸಂಪ್ರಯೋಗಂ
ವಿಗರ್ಹಯಂತಿ ಸ್ಥಿರಬುದ್ಧಯೋ ಯೇ ||18||
ಅಂತಹ ದುರ್ಜನರಿಂದ ನಿಂದಿಸಲ್ಪಡುವವನನ್ನು ನೋಡಿ, ಸ್ಥಿತಬುದ್ಧಿಯುಳ್ಳ ಸಜ್ಜನರು ನಿಂದಿಸಲ್ಪಡುವ ಪುರುಷನನ್ನು ಕುರಿತು ಅವನ ಮಾತುಗಳನ್ನು ಕೇಳಿ ನೀನು ಆರ್ತನಾಗಬೇಡ. ಶ್ರೇಷ್ಠನಾದವನು ನೀಚಪುರುಷನ ಸಹವಾಸವನ್ನು ಹೊಂದು- ವುದನ್ನು ದೊಡ್ಡವರು ನಿಂದಿಸುತ್ತಾರೆ.
ಕ್ರುದ್ಧೋ ದಶೇದ್ ವಾಪಿ ಚ ತಾಡಯೇದ್ ವಾ
ಸ ಪಾಂಸುಭಿರ್ವಾಪಕಿರೇತ್ ತುಷೈರ್ವಾ |
ವಿವೃತ್ಯ ದಂತಾಂಶ್ಚ ವಿಭೀಷಯೇದ್ ವಾ
ಸಿದ್ಧಂ ಹಿ ಮೂರ್ಖೇ ಕುಪಿತೇ ನೃಶಂಸೇ ||19||
ಕೋಪಗೊಂಡ ದುರ್ಜನನು ಕಚ್ಚಬಹುದು. ಅಥವಾ ಹೊಡೆಯಬಹುದು. ಅಥವಾ ಒಂದು ಹಿಡಿ ಮಣ್ಣನ್ನಾಗಲೀ ಹೊಟ್ಟನ್ನಾಗಲೀ ತೆಗೆದುಕೊಂಡು ಎರಚ- ಬಹುದು. ಅಥವಾ ಹಲ್ಲುಗಳನ್ನು ತೋರಿಸಿ ಹೆದರಿಸಬಹುದು. ಕೋಪಗೊಂಡ- ವನೂ ಕ್ರೂರಿಯೂ ಆದ ಮೂರ್ಖನಲ್ಲಿ ಇವೆಲ್ಲ ನಡತೆಯು ಸಿದ್ಧವಾದವುಗಳು.
ವಿಗರ್ಹಣಾಂ ಪರಮದುರಾತ್ಮನಾ ಕೃತಾಂ
ಸಹೇತ ಯಃ ಸಂಸದಿ ದುರ್ಜನಾನ್ನರಃ |
ಪಠೇದಿದಂ ಚಾಪಿ ನಿದರ್ಶನಂ ಸದಾ
ನ ವಾಙ್ಮಯಂ ಸ ಲಭತೇ ಕಿಂಚಿದಪ್ರಿಯಮ್ ||20||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷೋಡಶಾಧಿಕಶತತಮೋಽಧ್ಯಾಯಃ ||116||
ಪರಮದುಷ್ಟಾತ್ಮನು ಸಭೆಯಲ್ಲಿ ಮಾಡಿದ ನಿಂದೆಯ ಮಾತುಗಳನ್ನು ಯಾವನು ಸಹಿಸುತ್ತಾನೆಯೋ ನಾನು ಹೇಳಿದ ಈ ದೃಷ್ಟಾಂತಗಳನ್ನು ಯಾವನು ಪಠಿಸುತ್ತಾನೋ ಅವನು ಮಾತುಗಳಿಂದ ಯಾವ ಅಪ್ರಿಯವನ್ನೂ ಹೊಂದುವುದಿಲ್ಲ.
0
117. ನೂರಹದಿನೇಳನೆಯ ಅಧ್ಯಾಯ
ರಾಜರಿಗೆ ಸಹಾಯಸಂಪಾದನೆಯ ಅವಶ್ಯಕತೆ
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸಂಶಯೋ ಮೇ ಮಹಾನಯಮ್ |
ಸ ಚ್ಛೇತ್ತವ್ಯಸ್ತ್ವಯಾ ರಾಜನ್ ಭವಾನ್ ಕುಲಕರೋ ಹಿ ನಃ ||1||
ಎಲೈ ಮಹಾಪ್ರಾಜ್ಞನೇ ಪಿತಾಮಹನೇ! ನನಗೆ ಒಂದು ದೊಡ್ಡ ಸಂಶಯವಿದೆ. ನೀನು ಅದನ್ನು ಪರಿಹರಿಸಬೇಕು. ನೀನೇ ನಮ್ಮ ವಂಶಕರನಷ್ಟೇ!.
ಪುರುಷಾಣಾಮಯಂ ತಾತ ದುರ್ವೃತ್ತಾನಾಂ ದುರಾತ್ಮನಾಮ್ |
ಕಥಿತೋ ವಾಕ್ಯಸಂಚಾರಸ್ತತೋ ವಿಜ್ಞಾಪಯಾಮಿ ತೇ ||2||
ಎಲೈ ಪ್ರೀತಿಪಾತ್ರನೇ! ದುರ್ನಡತೆಯುಳ್ಳ ಪುರುಷರು ಹೇಗೆ ಮಾತನಾಡು- ತ್ತಾರೆಂದು ನನಗೆ ಹೇಳಿದೆ. ಅದರಿಂದ ಈ ಪ್ರಶ್ನೆಯನ್ನು ಮಾಡುತ್ತಿದ್ದೇನೆ.
ಯದ್ ಹಿತಂ ರಾಜ್ಯತಂತ್ರಸ್ಯ ಕುಲಸ್ಯ ಚ ಸುಖೋದಯಮ್ |
ಆಯತ್ಯಾಂ ಚ ತದಾತ್ವೇ ಚ ಕ್ಷೇಮವೃದ್ಧಿಕರಂ ಚ ಯತ್ ||3||
ಪುತ್ರಪೌತ್ರಾಭಿರಾಮಂ ಚ ರಾಷ್ಟ್ರವೃದ್ಧಿಕರಂ ಚ ಯತ್ |
ಅನ್ನಪಾನೇ ಶರೀರೇ ಚ ಹಿತಂ ಯತ್ ತದ್ ಬ್ರವೀಹಿ ಮೇ ||4||
ರಾಜ್ಯತಂತ್ರಕ್ಕೆ ಯಾವುದು ಹಿತವೋ, ಕುಲಕ್ಕೆ ಯಾವುದು ಸುಖವನ್ನು ಉಂಟು ಮಾಡುತ್ತದೆಯೋ, ತತ್ಕಾಲದಲ್ಲಿ ಮತ್ತು ಭವಿಷ್ಯತ್ಕಾಲದಲ್ಲಿ ಯಾವುದು ಕ್ಷೇಮವನ್ನು ಹಾಗೂ ವೃದ್ಧಿಯನ್ನು ಉಂಟು ಮಾಡುತ್ತದೆಯೋ, ಪುತ್ರಪೌತ್ರರಿಗೆ ಸುಖಕರವಾ- ಗಿದೆಯೋ, ರಾಷ್ಟ್ರಕ್ಕೆ ವೃದ್ಧಿಯನ್ನು ಉಂಟು ಮಡುತ್ತದೆಯೋ, ಅನ್ನಪಾನಗಳ ವಿಷಯದಲ್ಲಿ ಹಾಗೂ ಶರೀರದ ವಿಷಯದಲ್ಲಿ ಹಿತವಾಗಿರುತ್ತದೆಯೋ ಅಂತಹ ವಿಷಯವನ್ನು ನನಗೆ ಹೇಳು.
ಅಭಿಷಿಕ್ತೋ ಹಿ ಯೋ ರಾಜಾ ರಾಜ್ಯಸ್ಥೋ ಮಿತ್ರಸಂವೃತಃ |
ಅಸುಹೃತ್ಸಮುಪೇತೋ ವಾ ಸ ಕಥಂ ರಂಜಯೇತ್ ಪ್ರಜಾಃ ||5||
ರಾಜನು ಪಟ್ಟಾಭಿಷಿಕ್ತನಾಗಿ ಮಿತ್ರರ ಜೊತೆಯಲ್ಲಿ ರಾಜ್ಯದಲ್ಲಿ ನೆಲೆಸಿದವನಾಗಿ ಅಥವಾ ಅಸುಹೃಜ್ಜನರಿಂದ ಕೂಡಿದವನಾಗಿ ಹೇಗೆ ಪ್ರಜೆಗಳನ್ನು ರಂಜಿಸಬೇಕು?
ಯೋ ಹ್ಯಸತ್ಪ್ರಗ್ರಹರತಿಃ ಸ್ನೇಹರಾಗಬಲಾತ್ಕೃತಃ |
ಇಂದ್ರಿಯಾಣಾಮನೀಶತ್ವಾದಸಜ್ಜನಬುಭೂಷಕಃ ||6||
ತಸ್ಯ ಭೃತ್ಯಾ ವಿಗುಣತಾಂ ಯಾಂತಿ ಸರ್ವೇ ಕುಲೋದ್ಗತಾಃ |
ನ ಚ ಭೃತ್ಯಫಲೈರರ್ಥೈಃ ಸ ರಾಜಾ ಸಂಪ್ರಯುಜ್ಯತೇ ||7||

ಯಾವನು ಸ್ನೇಹರಾಗಗಳಿಗೆ ವಶನಾಗಿ ಸುಹೃಜ್ಜನರಲ್ಲದವರನ್ನು ಸ್ವೀಕರಿಸುವು- ದರಲ್ಲಿಯೇ ನಿರತನೋ, ಇಂದ್ರಿಯಗಳ ಮೇಲೆ ನಿಯಂತ್ರಣವಿಲ್ಲದಿರುವುದರಿಂದ ಅಸಜ್ಜನರಿಗೆ ಹಿತವನ್ನು ಮಾಡುತ್ತಾನೆಯೋ ಅಂತಹವನ ಭೃತ್ಯರು ಒಳ್ಳೆಯ ಕುಲ- ದಿಂದ ಬಂದಿದ್ದರೂ ಎಲ್ಲರೂ ಗುಣಹೀನರಾಗುತ್ತಾರೆ. ಅಂತಹ ರಾಜನು ಭೃತ್ಯರಿಂದ ಯಾವ ಪ್ರಯೋಜನವನ್ನೂ ಪಡೆಯುವುದಿಲ್ಲ.
ಏತಾನ್ ಮೇ ಸಂಶಯಸ್ಥಸ್ಯ ರಾಜಧರ್ಮಾನ್ ಸುದುರ್ಲಭಾನ್ |
ಬೃಹಸ್ಪತಿಸಮೋ ಬುದ್ಧ್ಯಾ ಭವಾನ್ ಶಂಸಿತುಮರ್ಹತಿ ||8||
ಸುದುರ್ಲಭವಾದ ರಾಜಧರ್ಮಗಳ ವಿಷಯದಲ್ಲಿ ನನಗೆ ಇರುವ ಈ ಸಂಶಯವನ್ನು ಬೃಹಸ್ಪತಿಸಮನಾದ ನೀನು ನಿನ್ನ ಬುದ್ಧಿಯಿಂದ ಪರಿಹರಿಸಬೇಕು.
ಶಂಸಿತಾ ಪುರುಷವ್ಯಾಘ್ರ ತ್ವಂ ನಃ ಕುಲಹಿತೇ ರತಃ |
ಕ್ಷತ್ತಾ ಚೈವ ಪಟುಪ್ರಜ್ಞೋ ಯೋ ನಃ ಶಂಸತಿ ಸರ್ವದಾ ||9||
ಎಲೈ ಪುರುಷವ್ಯಾಘ್ರನೇ! ನಮ್ಮ ಕುಲಹಿತದಲ್ಲಿ ನಿರತನಾದ ನೀನು ನಮಗೆ ಇಂತಹ ಉಪದೇಶವನ್ನು ಮಾಡುವವನು. ಮತ್ತು ಪಟುವಾದ ಜ್ಞಾನವನ್ನು ಹೊಂದಿದ ವಿದುರನೂ ಸಹ ಯಾವಾಗಲೂ ಉಪದೇಶಿಸುತ್ತಾನೆ.
ತ್ವತ್ತಃ ಕುಲಹಿತಂ ವಾಕ್ಯಂ ಶ್ರುತ್ವಾ ರಾಜ್ಯಹಿತೋದಯಮ್ |
ಅಮೃತಸ್ಯಾವ್ಯಯಸ್ಯೇವ ತೃಪ್ತಃ ಸ್ವಪ್ಸ್ಯಾಮ್ಯಹಂ ಸುಖಮ್ ||10||
ನಿನ್ನಿಂದ ಕುಲಕ್ಕೆ ಹಿತವೂ ಮತ್ತು ರಾಜ್ಯಕ್ಕೆ ಹಿತವನ್ನು ಉಂಟುಮಾಡುವುದೂ ಆದ ಮಾತುಗಳನ್ನು ಕೇಳಿ ಅಮೃತವನ್ನು ಪಾನ ಮಾಡಿದವನಂತೆ ತೃಪ್ತನಾಗಿ ನಾನು ನಿದ್ರಿಸುವೆನು.
ಕೀದೃಶಾಃ ಸನ್ನಿಕರ್ಷಸ್ಥಾ ಭೃತ್ಯಾಃ ಸ್ಯುರ್ವಾ ಗುಣಾನ್ವಿತಾಃ |
ಕೀದೃಶೈಃ ಕಿಂಕುಲೀನೈರ್ವಾ ಸಹ ಯಾತ್ರಾ ವಿಧೀಯತೇ ||11||
ರಾಜನ ಸಮೀಪದಲ್ಲಿರುವ ಭೃತ್ಯರು ಎಂತಹವರು ಮತ್ತು ಎಂತಹ ಗುಣದಿಂದ ಕೂಡಿದವರಾಗಿರಬೇಕು? ರಾಜನ ಜೊತೆಯಲ್ಲಿ ಸಂಚರಿಸುವವರು ಎಂತಹವರು ಮತ್ತು ಎಂತಹ ಕುಲೀನರಾಗಿರಬೇಕು?
ನ ಹ್ಯೇಕೋ ಭೃತ್ಯರಹಿತೋ ರಾಜಾ ಭವತಿ ರಕ್ಷಿತಾ |
ರಾಜ್ಯಂ ಚೇದಂ ಜನಃ ಸರ್ವಸ್ತತ್ಕುಲೀನೋಽಭಿಶಾಸತಿ ||12||
ಭೃತ್ಯರಿಲ್ಲದೇ ರಾಜನೊಬ್ಬನೇ ಈ ರಾಜ್ಯವನ್ನೂ ಸರ್ವಜನರನ್ನೂ ಕುಲೀನ- ನಾದ ರಾಜನು ರಕ್ಷಿಸಲು ಸಾಧ್ಯವಿಲ್ಲ.
ನ ಚ ಪ್ರಶಾಸ್ತುಂ ರಾಜ್ಯಂ ಹಿ ಶಕ್ಯಮೇಕೇನ ಭಾರತ |
ಅಸಹಾಯವತಾ ತಾತ ನೈವಾರ್ಥಾಃ ಕೇಚಿದಪ್ಯುತ |
ಲಬ್ಧುಂ ಲಬ್ಧ್ವಾ ಚಾಪಿ ಸದಾ ರಕ್ಷಿತುಂ ಭರತರ್ಷಭ ||13||
ಎಲೈ ಭಾರತನೇ! ಸಹಾಯವಿಲ್ಲದೇ ಒಬ್ಬನೇ ರಾಜ್ಯವನ್ನು ಆಳಲು ಸಾಧ್ಯವಿಲ್ಲ. ಮತ್ತು ಸಹಾಯವಿಲ್ಲದೇ ಯಾವುದನ್ನಾದರೂ ಸಂಪಾದಿಸಲು ಅಥವಾ ಸಂಪಾ- ದಿಸಿದುದನ್ನು ಸದಾ ರಕ್ಷಿಸಲೂ ಸಾಧ್ಯವಿಲ್ಲ.
ಭೀಷ್ಮಃ
ಯಸ್ಯ ಭೃತ್ಯಜನಃ ಸರ್ವೋ ಜ್ಞಾನವಿಜ್ಞಾನಕೋವಿದಃ |
ಹಿತೈಷೀ ಕುಲಜಃ ಸ್ನಿಗ್ಧಃ ಸ ರಾಜ್ಯಫಲಮಶ್ನುತೇ ||14||
ಭೀಷ್ಮರು ಯಾವನ ಭೃತ್ಯಜನರೆಲ್ಲರೂ ಜ್ಞಾನವಿಜ್ಞಾನ ಕೋವಿದರಾಗಿ- ರುತ್ತಾರೆಯೋ ಸತ್ಕುಲದಿಂದ ಬಂದು ರಾಜನ ಹಿತೈಷಿಗಳಾಗಿ ರಾಜನಲ್ಲಿ ಸ್ನೇಹವುಳ್ಳ- ವರಾಗಿರುತ್ತಾರೆಯೋ, ಅಂತಹ ರಾಜನು ರಾಜ್ಯಫಲವನ್ನು ಹೊಂದುವನು.
ಮಂತ್ರಿಣೋ ಯಸ್ಯ ಕುಲಜಾ ಅಸಂಹಾರ್ಯಾ ಸಹೋಷಿತಾಃ |
ನೃಪತೇರ್ಮತಿದಾಃ ಸಂತಿ ಸಂಬಂಧಜ್ಞಾನಕೋವಿದಾಃ ||15||
ಅನಾಗತವಿಧಾತಾರಃ ಕಾಲಜ್ಞಾನವಿಶಾರದಾಃ |
ಅತಿಕ್ರಾಂತಮಶೋಚಂತಃ ಸ ರಾಜ್ಯಫಲಮಶ್ನುತೇ ||16||
ಯಾವನ ಮಂತ್ರಿಗಳು ಒಳ್ಳೆಯ ಕುಲದಲ್ಲಿ ಬಂದವರಾಗಿ, ಇನ್ನೊಬ್ಬರಿಂದ ಭೇದಿಸಲು ಸಾಧ್ಯವಿಲ್ಲದವರಾಗಿ, ರಾಜನ ಜೊತೆಯಲ್ಲಿ ವಾಸಿಸಿ, ರಾಜನಿಗೆ ಒಳ್ಳೆಯ ಉಪದೇಶವನ್ನು ನೀಡಿ, ಯಾರ ಜೊತೆಯಲ್ಲಿ ಸಂಬಂಧವನ್ನು ಮಾಡಬೇಕು ಯಾರ ಜೊತೆಯಲ್ಲಿ ಸಂಬಂಧವನ್ನು ಮಾಡಬಾರದು ಎಂದು ಚೆನ್ನಾಗಿ ತಿಳಿದವರಾಗಿ, ಕಾಲಜ್ಞಾನದಲ್ಲಿ ವಿಶಾರದರಾಗಿ, ಕಳೆದುಹೋದುದನ್ನು ಕುರಿತು ಶೋಕಪಡದೇ ಮುಂದೆ ಆಗಬೇಕಾದುದನ್ನು ಸಾಧಿಸುತ್ತಾರೆಯೋ ಅಂತಹ ರಾಜನು ರಾಜ್ಯಫಲವನ್ನು ಹೊಂದುತ್ತಾನೆ.
ಸಮದುಃಖಸುಖಾ ಯಸ್ಯ ಸಹಾಯಾಃ ಸತ್ಯಕಾರಿಣಃ |
ಅರ್ಥಚಿಂತಾಪರಾ ಯಸ್ಯ ಸ ರಾಜ್ಯಫಲಮಶ್ನುತೇ ||17||
ಯಾವ ರಾಜನ ಭೃತ್ಯರು ಹಿತವಾದ ಕಾರ್ಯಗಳನ್ನೇ ಮಾಡುತ್ತಾ ರಾಜನ ಸುಖದುಃಖಗಳಲ್ಲಿ ಸಮಭಾಗಿಗಳಾಗಿ ರಾಜನ ಸಮೃದ್ಧಿಯನ್ನು ಚಿಂತಿಸುವರೋ ಅಂತಹ ರಾಜನು ರಾಜ್ಯಫಲವನ್ನು ಹೊಂದುವನು.
ಯಸ್ಯ ನಾರ್ತೋ ಜನಪದಃ ಸನ್ನಿಕರ್ಷಗತಃ ಸದಾ |
ಅಕ್ಷುದ್ರಃ ಸತ್ಪಥಾಲಂಬೀ ಸ ರಾಜ್ಯಫಲಭಾಗ್ ಭವೇತ್ ||18||
ಯಾವ ರಾಜನಿಗೆ ಸಮೀಪದಲ್ಲಿರುವ ಪ್ರಜೆಗಳು ಆರ್ತರಾಗಿರುವುದಿಲ್ಲವೋ, ಕ್ಷುದ್ರರಾಗಿರುವುದಿಲ್ಲವೋ, ಸನ್ಮಾರ್ಗದಲ್ಲಿ ನಡೆಯುವರೋ ಅಂತಹ ರಾಜನು ರಾಜ್ಯಫಲವನ್ನು ಹೊಂದುವನು.
ಕೋಶಾಕ್ಷಪಟಲಂ ಯಸ್ಯ ಕೋಶವೃದ್ಧಿಕರೈರ್ಜನೈಃ |
ಆಪ್ತೈಸ್ತುಷ್ಟೈಶ್ಚ ಸತತಂ ಧಾರ್ಯತೇ ಸ ನೃಪೋತ್ತಮಃ ||19||

ಯಾವ ರಾಜನ ಕೋಶವು (ಬೊಕ್ಕಸವು) ಕೋಶವನ್ನು ಅಭಿವೃದ್ಧಿಗೊಳಿಸು- ವುದರಲ್ಲಿ ನಿರತರಾದ ತೃಪ್ತರಾದ ಆಪ್ತರಾದ ಜನರಿಂದ ನೋಡಲ್ಪಡುತ್ತದೆಯೋ ಅಂತಹವನು ಶ್ರೇಷ್ಠರಾಜನಾಗುತ್ತಾನೆ.
ಕೋಷ್ಠಾಗಾರಮಸಂಹಾರ್ಯೈರಾಪ್ತೈಃ ಸಂಚಯತತ್ಪರೈಃ |
ಪಾತ್ರಭೂತೈರಲುಬ್ಧೈಶ್ಚ ಪಾಲ್ಯಮಾನಂ ಗುಣೀ ಭವೇತ್ ॥20॥
ಯಾವ ರಾಜನ ಉಗ್ರಾಣಗಳು ಇನ್ನೊಬ್ಬರಿಂದ ರಾಜನಿಂದ ಬೇರ್ಪಡಿಸಲಾಗದ ಆಪ್ತರಾದ ಉಗ್ರಾಣವನ್ನು ಅಭಿವೃದ್ಧಿಪಡಿಸುವುದರಲ್ಲಿ ನಿರತರಾದ ಸತ್ಪಾತ್ರರಾದ ಲೋಭಿಗಳಲ್ಲದ ಸೇವಕರಿಂದ ರಕ್ಷಿಸಲ್ಪಡುತ್ತದೆಯೋ ಆ ರಾಜನು ಗುಣವಂತನಾಗುತ್ತಾನೆ.
ವ್ಯವಹಾರಶ್ಚ ನಗರೇ ಯಸ್ಯ ಕರ್ಮಫಲೋದಯಃ |
ದೃಶ್ಯತೇ ಶಂಖಲಿಖಿತಃ ಸ ಧರ್ಮಫಲಭಾಗ್ ಭವೇತ್ ॥21॥
ಯಾವನ ರಾಜ್ಯದಲ್ಲಿ ಕ್ರಯವಿಕ್ರಯಾದಿ ವ್ಯವಹಾರಗಳು ಯೋಗ್ಯವಾದ ಫಲವನ್ನು ಕೊಡುತ್ತವೆಯೋ, ಶಂಖಲಿಖಿತರಿಗೆ ಅನುಗುಣವಾದ ವ್ಯವಹಾರವು ಕಂಡು ಬರುತ್ತದೆಯೋ ಅಂತಹ ರಾಜನು ಧರ್ಮಫಲವನ್ನು ಪಡೆಯುತ್ತಾನೆ.
ಸಂಗೃಹೀತಮನುಷ್ಯಶ್ಚ ಯೋ ರಾಜಾ ರಾಜಧರ್ಮವಿತ್ |
ಷಡ್ವರ್ಗಂ ಪ್ರತಿಗೃಹ್ಣನ್ ಸ ಧರ್ಮಾತ್ ಫಲಮುಪಾಶ್ನುತೇ ॥22॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತದಶಾಧಿಕಶತತಮೋಽಧ್ಯಾಯಃ ॥117॥
ಒಳ್ಳೆಯ ಸೇವಕರನ್ನು ಸಂಗ್ರಹಿಸಿ ರಾಜಧರ್ಮವನ್ನು ತಿಳಿದ ಯಾವ ರಾಜನು ಷಡ್ವರ್ಗವನ್ನು ಅನುಷ್ಠಾನ ಮಾಡುತ್ತಾನೆಯೋ ಅವನು ಧರ್ಮದ ಫಲವನ್ನು ಹೊಂದುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 117ನೆಯ ಅಧ್ಯಾಯ ಮುಗಿಯಿತು
0
118. ನೂರಹದಿನೆಂಟನೆಯ ಅಧ್ಯಾಯ
ಮುನಿಯಿಂದ ನಾಯಿಯ ರೂಪಾಂತರಕರಣ ಮತ್ತು ಪುನಃ ಶ್ವಾನಕರಣ
ಯುಧಿಷ್ಠಿರಃ
ನ ಸಂತಿ ಕುಲಜಾ ಯತ್ರ ಸಹಾಯಾಃ ಪಾರ್ಥಿವಸ್ಯ ತು |
ಅಕುಲೀನಾಶ್ಚ ಕರ್ತವ್ಯಾ ನ ವಾ ಭಾರತಸತ್ತಮ ॥1॥
ಯುಧಿಷ್ಠಿರ ಎಲೈ ಭರತಸತ್ತಮನೇ! ರಾಜನಿಗೆ ಕುಲಜರಾದವರು ಸಹಾಯಕರಿಲ್ಲದಿದ್ದರೆ ಅಕುಲೀನರನ್ನು ಸಹಾಯಕರಾಗಿ ತೆಗೆದುಕೊಳ್ಳಬಹುದೇ ಬೇಡವೇ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಿದರ್ಶನಕರಂ ಲೋಕೇ ಸಜ್ಜನಾಚರಿತಂ ಸದಾ ॥2॥
ಭೀಷ್ಮರು ಈ ವಿಷಯದಲ್ಲಿಯೂ ಸಜ್ಜನನಾದ ಮುನಿಯು ಆಚರಿಸಿದ ದೃಷ್ಟಾಂತರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಅಸ್ಯೈವಾರ್ಥಸ್ಯ ಸದೃಶಂ ಯಚ್ಛ್ರುತಂ ಮೇ ತಪೋವನೇ |
ಜಾಮದಗ್ನ್ಯಸ್ಯ ರಾಮಸ್ಯ ಯದುಕ್ತಮೃಷಿಸತ್ತಮೈಃ ॥3॥
ನೀನು ಕೇಳಿದ ಪ್ರಶ್ನೆಗೆ ಸದೃಶವಾದ ಒಂದು ವಿಷಯವನ್ನು ನಾನು ತಪೋವನ- ದಲ್ಲಿ ಜಮದಗ್ನಿಪುತ್ರರಾದ ಪರಶುರಾಮರ ಆಶ್ರಮದಲ್ಲಿ ಋಷಿಶ್ರೇಷ್ಠರಿಂದ ಹೇಳಿದ ಒಂದು ಕಥೆಯನ್ನು ಕೇಳಿದ್ದೇನೆ.
ವನೇ ಮಹತಿ ಕಸ್ಮಿಂಶ್ಚಿದಮನುಷ್ಯನಿಷೇವಿತೇ |
ಋಷಿರ್ಮೂಲಫಲಾಹಾರೋ ನಿಯತೋ ನಿಯತೇಂದ್ರಿಯಃ ॥4॥
ದೀಕ್ಷಾದಮಪರಃ ಶಾಂತಃ ಸ್ವಾಧ್ಯಾಯಪರಮಃ ಶುಚಿಃ |
ಉಪವಾಸವಿಶುದ್ಧಾತ್ಮಾ ಸತತಂ ಸತ್ಪಥೇ ಸ್ಥಿತಃ ॥5॥
ನಿರ್ಜನವಾದ ಒಂದು ದೊಡ್ಡ ವನದಲ್ಲಿ ಮೂಲಫಲಾಹಾರನೂ, ನಿಯಮ- ಬದ್ಧನೂ, ಜಿತೇಂದ್ರಿಯನೂ, ದೀಕ್ಷಾಪರನೂ, ಶಾಂತನೂ, ಸ್ವಾಧ್ಯಾಯನಿರತನೂ, ಶುಚಿಯೂ, ಉಪವಾಸದಿಂದ ವಿಶುದ್ಧವಾದ ಶರೀರವುಳ್ಳವನೂ ಯಾವಾಗಲೂ ಸನ್ಮಾರ್ಗದಲ್ಲಿ ಇರುವವನೂ ಆದ ಒಬ್ಬ ಋಷಿಯು ಇದ್ದನು.
ತಸ್ಯ ಸಂದೃಶ್ಯ ಸದ್ಭಾವಮುಪವಿಷ್ಟಸ್ಯ ಧೀಮತಃ |
ಸರ್ವಸತತ್ತ್ವಾಃ ಸಮೀಪಸ್ಥಾ ಭವಂತಿ ವನಚಾರಿಣಃ ॥6॥
ಮೇಧಾವಿಯಾದ ಅವನ ಒಳ್ಳೆಯತನವನ್ನು ನೋಡಿ ವನಚಾರಿಗಳಾದ ಎಲ್ಲ ಪ್ರಾಣಿಗಳೂ ಅವನ ಸಮೀಪದಲ್ಲಿರುತ್ತಿದ್ದವು.
ಸಿಂಹವ್ಯಾಘ್ರಾಃ ಸಶರಭಾ ಮತ್ತಾಶ್ಚೈವ ಮಹಾಗಜಾಃ |
ದ್ವೀಪಿನಃ ಖಡ್ಗಭಲ್ಲೂಕಾ ಯೇ ಚಾನ್ಯೇ ಭೀಮದರ್ಶನಾಃ ॥7॥
ಸಿಂಹವ್ಯಾಘ್ರಗಳು, ಶರಭಗಳು, ಮದ್ದಾನೆಗಳು, ಚಿರತೆಗಳು, ಖಡ್ಗಮೃಗಗಳು, ಕರಡಿಗಳು ಇನ್ನೂ ಅನೇಕ ಭಯಂಕರಪ್ರಾಣಿಗಳೂ ಬರುತ್ತಿದ್ದವು.
ತೇ ಸುಖಪ್ರಶ್ನದಾಃ ಸರ್ವೇ ಭವಂತಿ ಕ್ಷತಜಾಶನಾಃ |
ತಸ್ಯರ್ಷೇಃ ಶಿಷ್ಯವಚ್ಚೈವ ನ್ಯಗ್ಭೂತಾಃ ಪ್ರಿಯಕಾರಿಣಃ ॥8॥

ಮಾಂಸಾಹಾರಿಗಳಾದ ಆ ಪ್ರಾಣಿಗಳೆಲ್ಲವೂ ಮುನಿಯ ಸಮೀಪಕ್ಕೆ ಬಂದು ಕುಶಲಪ್ರಶ್ನೆಯನ್ನು ಮಾಡಿ ಅವನಿಗೆ ಪ್ರಿಯವನ್ನು ಮಾಡಿ ಆ ಋಷಿಯ ಶಿಷ್ಯರಂತೆ ವಿನಯದಿಂದ ಬಾಗಿರುತ್ತಿದ್ದವು.
ದತ್ವಾ ಚ ತೇ ಸುಖಪ್ರಶ್ನಂ ಸರ್ವೇ ಯಾಂತಿ ಯಥಾಗತಮ್ |
ಗ್ರಾಮ್ಯಸ್ತ್ವೇಕಃ ಪಶುಸ್ತತ್ರ ನಾಜಹಾತ್ ಸ ಮಹಾಮುನಿಮ್ ॥9॥
ಅವೆಲ್ಲವೂ ಕುಶಲಪ್ರಶ್ನೆಯನ್ನು ಮಾಡಿ ಬಂದ ದಾರಿಯಲ್ಲಿಯೇ ಹಿಂದಿರು- ಗುತ್ತಿದ್ದವು. ಆದರೆ ಒಂದು ನಾಯಿಯು ಮಾತ್ರ ಆ ಮಹಾಮುನಿಯನ್ನು ಬಿಡು- ತ್ತಿರಲಿಲ್ಲ.
ಭಕ್ತೋಽನುರಕ್ತಃ ಸತತಮುಪವಾಸಕೃಶೋಽಬಲಃ |
ಫಲಮೂಲೋತ್ಕರಾಹಾರಃ ಶಾಂತಃ ಶಿಷ್ಟಾಕೃತಿರ್ಯಥಾ ॥10॥
ಆ ನಾಯಿಯು ಆ ಋಷಿಯಲ್ಲಿ ಭಕ್ತಿಯನ್ನು ಹೊಂದಿ, ಅನುರಾಗವನ್ನು ಹೊಂದಿ, ಸತತೋಪವಾಸದಿಂದ ಕೃಶವಾಗಿ, ದುರ್ಬಲವಾಗಿ, ಫಲಮೂಲಗಳನ್ನು ಮತ್ತು ಎಸೆದ ಆಹಾರವನ್ನು ಸ್ವೀಕರಿಸುತ್ತಾ, ಶಾಂತವಾಗಿ, ಶಿಷ್ಟರಂತೆ ಇರುತ್ತಿದ್ದಿತು.
ತಸ್ಯರ್ಷೇರುಪವಿಷ್ಟಸ್ಯ ಪಾದಮೂಲೇ ಮಹಾಮುನೇಃ |
ಮನುಷ್ಯವದ್ ಗತೋ ಭಾವಃ ಸ್ನೇಹಬದ್ಧೋಽಭವದ್ ಭೃಶಮ್ ॥11॥
ಆ ಮಹಾಮುನಿಯಾದ ಋಷಿಯು ಕುಳಿತುಕೊಂಡಾಗ ಅವನ ಪಾದಮೂಲ- ದಲ್ಲಿ ಮನುಷ್ಯರಂತೆ ಸ್ನೇಹಭಾವದಿಂದ ಕುಳಿತಿರುತ್ತಿದ್ದಿತು.
ತತೋಽಭ್ಯಯಾನ್ಮಹಾವೀರ್ಯೋ ದ್ವೀಪೀ ಕ್ಷತಜಭೋಜನಃ |
ಶ್ವಾರ್ಥಮತ್ಯಂತಸಂದುಷ್ಟಃ ಕ್ರೂರಃ ಕಾಲ ಇವಾಂತಕಃ ॥12॥
ಅನಂತರ ಒಮ್ಮೆ ಅಲ್ಲಿ ರಕ್ತಾಹಾರಸೇವಿಯಾದ, ಮಹಾಪರಾಕ್ರಮಿಯಾದ ಒಂದು ಚಿರತೆಯು ಬಂದಿತು. ಕ್ರೂರಿಯೂ, ಯಮನಂತೆ ಇರುವುದೂ, ದುಷ್ಟವೂ ಆದ ಆ ಚಿರತೆಯು ನಾಯಿಯನ್ನು ಹಿಡಿಯುವ ಸಲುವಾಗಿ ಬಂದಿತು.
ಲೇಲಿಹ್ಯಮಾನಸ್ತೃಷಿತಃ ಪುಚ್ಛಾಸ್ಫೋಟನತತ್ಪರಃ |
ವ್ಯಾದಿತಾಸ್ಯಃ ಕ್ಷುಧಾಭಗ್ನಃ ಪ್ರಾರ್ಥಯಾನಸ್ತದಾಮಿಷಮ್ ॥13॥
ಬಾಯಾರಿಕೆಯಿಂದ ತನ್ನ ಕಟಬಾಯಿಗಳನ್ನು ಸವರಿಕೊಂಡು, ಬಾಲವನ್ನು ಬಡಿಯುತ್ತಾ, ಮುಖವನ್ನು ತೆರೆದು, ಹಸಿವೆಯಿಂದ ಬಳಲಿ, ನಾಯಿಯ ಮಾಂಸ- ವನ್ನು ಆಶಿಸುತ್ತಾ ಸಮೀಪಕ್ಕೆ ಬಂದಿತು.
ತಂ ದೃಷ್ಟ್ವಾ ಕ್ರೂರಮಾಯಾಂತಂ ಜೀವಿತಾರ್ಥೀ ನರಾಧಿಪ |
ಪ್ರೋವಾಚ ಶ್ವಾ ಮುನಿಂ ತತ್ರ ಯತ್ ತಚ್ಛೃಣು ಮಹಾಮತೇ ॥14॥
ಎಲೈ ನರಾಧಿಪನೇ! ಕ್ರೂರ ಮೃಗವು ತನ್ನ ಬಳಿ ಬರುತ್ತಿರುವುದನ್ನು ನೋಡಿ, ಜೀವಿತಾರ್ಥಿಯಾದ ಆ ನಾಯಿಯು ಆ ಋಷಿಯನ್ನು ಕುರಿತು ಏನು ಹೇಳಿತೆಂಬು- ದನ್ನು ಎಲೈ ಮಹಾಮತಿಯೇ! ನನ್ನಿಂದ ಕೇಳು.
ಶ್ವಾಶತ್ರುರ್ಭಗವನ್ನತ್ರ ದ್ವೀಪೀ ಮಾಂ ಹಂತುಮಿಚ್ಛತಿ |
ತ್ವತ್ಪ್ರಸಾದಾದ್ ಭಯಂ ನ ಸ್ಯಾತ್ ತಸ್ಮಾನ್ಮಮ ಮಹಾಮುನೇ ॥15॥
ಎಲೈ ಪೂಜ್ಯನೇ! ನಾಯಿಗಳಿಗೆ ಶತ್ರುವಾದ ಈ ಚಿರತೆಯು ನನ್ನನ್ನು ಕೊಲ್ಲಲು ಬಯಸುತ್ತಿದೆ. ಎಲೈ ಮಹಾಮುನಿಯೇ! ನಿನ್ನ ಅನುಗ್ರಹದಿಂದ ನನಗೆ ಆ ಚಿರತೆ- ಯಿಂದ ಭಯವುಂಟಾಗುವುದು ಬೇಡ.
ಮುನಿಃ
ನ ಭಯಂ ದ್ವೀಪಿನಃ ಕಾರ್ಯಂ ಮೃತ್ಯುತಸ್ತೇ ಕಥಂಚನ |
ಏಷ ಶ್ವರೂಪರಹಿತೋ ದ್ವೀಪೀ ಭವಸಿ ಪುತ್ರಕ ॥16॥
ಮುನಿ ಚಿರತೆಯಿಂದ ಮರಣವುಂಟಾಗುವುದೆಂಬ ಭಯವು ನಿನಗೆ ಬೇಡ. ಎಲೈ ಪುತ್ರನೇ! ನೀನು ನಾಯಿಯ ರೂಪವನ್ನು ತ್ಯಜಿಸಿ, ಚಿರತೆಯ ರೂಪವನ್ನು ಹೊಂದಿದವನಾಗುವಿ.
ಭೀಷ್ಮಃ
ತತಃ ಶ್ವಾ ದ್ವೀಪಿತಾಂ ನೀತೋ ಜಾಂಬೂನದನಿಭಾಕೃತಿಃ |
ಚಿತ್ರಾಂಗೋ ವಿಸ್ಫುರದ್‌ದಂಷ್ಟ್ರೋ (ಹೃಷ್ಟೋ) ವನೇ ವಸತಿ ನಿರ್ಭಯಃ 17
ಭೀಷ್ಮರು ಆಗ ಆ ನಾಯಿಯು ಚಿನ್ನದ ಬಣ್ಣದ ಒಂದು ಚಿರತೆಯಾಗಿ ಮಾಡಲ್ಪಟ್ಟಿತು. ಅದು ಚಿತ್ರಿತವಾದ ಅಂಗಗಳಿಂದ ಶೋಭಿಸುತ್ತಾ ಆ ಕಾಡಿನಲ್ಲಿ ನಿರ್ಭಯವಾಗಿ ಸಂತೋಷದಿಂದ ವಾಸ ಮಾಡಿತು.
ತಂ ದೃಷ್ಟ್ವಾ ಸ ಪುನರ್ದ್ವೀಪೀ ಆತ್ಮನಃ ಸುಭೃಶಂ ಶುಭಮ್ |
ಅವಿರುದ್ಧಸ್ತತಸ್ತಸ್ಯ ಕ್ಷಣೇನ ಸಮಪದ್ಯತ ॥18॥
ತನ್ನ ಕಡೆಗೆ ಬರುತ್ತಿದ್ದ ಚಿರತೆಯು ತನಗೆ ಸದೃಶವಾದ ಇನ್ನೊಂದು ಒಳ್ಳೆಯ ಚಿರತೆಯನ್ನು ನೋಡಿ ಒಂದು ಕ್ಷಣದಲ್ಲಿಯೇ ಅದರ ವಿರೋಧವನ್ನು ತ್ಯಜಿಸಿತು.
ತತೋಽಭ್ಯಯಾನ್ಮಹಾರೌದ್ರೋ ವ್ಯಾದಿತಾಸ್ಯಃ ಕ್ಷುಧಾನ್ವಿತಃ |
ದ್ವೀಪಿನಂ ಲೇಲಿಹದ್‌ವಕ್ತ್ರೋ ವ್ಯಾಘ್ರೋ ರುಧಿರಲಾಲಸಃ ॥19॥
ಅನಂತರ ಅಲ್ಲಿಗೆ ಮಹಾಭಯಂಕರವೂ, ಹಸಿವೆಯಿಂದ ಕೂಡಿದುದೂ, ರಕ್ತಪ್ರಿಯವೂ ಆದ ಒಂದು ಮಹಾವ್ಯಾಘ್ರವು ಬಾಯನ್ನು ತೆರೆದು ಕಟಬಾಯಿಗಳನ್ನು ಸವರುತ್ತಾ ಅಲ್ಲಿಗೆ ಬಂದಿತು.
ವ್ಯಾಘ್ರಂ ದೃಷ್ಟ್ವಾ ಕ್ಷುಧಾಭಗ್ನಂ ದಂಷ್ಟ್ರಿಣಂ ವನಗೋಚರಮ್ |
ದ್ವೀಪೀ ಜೀವಿತರಕ್ಷಾರ್ಥಮೃಷಿಂ ಶರಣಮೇಯಿವಾನ್ ॥20॥

ಹಸಿವಿನಿಂದ ಬಳಲಿದ ವನಸಂಚಾರಿಯಾದ, ಪ್ರಶಸ್ತವಾದ ಕೋರೆದಾಡೆಗಳನ್ನು ಹೊಂದಿದ ಆ ವ್ಯಾಘ್ರವನ್ನು ನೋಡಿ ಚಿರತೆಯು ತನ್ನ ಜೀವನವನ್ನು (ಅಥವಾ ಪ್ರಾಣಗಳನ್ನು) ರಕ್ಷಿಸಿಕೊಳ್ಳಲು ಋಷಿಯನ್ನು ಶರಣು ಹೊಂದಿತು.
ತತಃ ಸಂವಾಸಜಂ ಸ್ನೇಹಮೃಷಿಣಾ ಕುರ್ವತಾ ಸದಾ |
ಸ ದ್ವೀಪೀ ವ್ಯಾಘ್ರತಾಂ ನೀತೋ ರಿಪುಭಿರ್ಬಲವತ್ತರಃ |
ತತೋ ದೃಷ್ಟ್ವಾ ಸ ಶಾರ್ದೂಲೋ ನಾಭ್ಯಹಂಸ್ತಂ ವಿಶಾಂಪತೇ ॥21॥
ಆಗ ಸಹವಾಸಪ್ರಯುಕ್ತವಾಗಿ ಸ್ನೇಹವನ್ನು ಮಾಡುವ ಋಷಿಯು ಆ ಚಿರತೆ- ಯನ್ನು ಅದರ ಶತ್ರುಗಳಾದ ವ್ಯಾಘ್ರಗಳಿಗಿಂತ ಬಲಿಷ್ಠವಾದ ಇನ್ನೊಂದು ವ್ಯಾಘ್ರ- ವನ್ನಾಗಿ ಮಾಡಿದನು. ಎಲೈ ರಾಜನೇ! ಮೊದಲು ಬರುತ್ತಿದ್ದ ವ್ಯಾಘ್ರವು ಆ ವ್ಯಾಘ್ರ- ವನ್ನು ನೋಡಿ ಅದನ್ನು ಕೊಲ್ಲಲಿಲ್ಲ.
ಸ ತು ಶ್ವಾ ವ್ಯಾಘ್ರತಾಂ ಪ್ರಾಪ್ಯ ಬಲವಾನ್ ಪಿಶಿತಾಶನಃ |
ನ ಮೂಲಫಲಭೋಗೇಷು ಸ್ಪೃಹಾಮಪ್ಯಕರೋತ್ ತದಾ ॥22॥
ಆ ನಾಯಿಯಾದರೋ ವ್ಯಾಘ್ರವಾಗಿ ಪರಿವರ್ತನೆ ಹೊಂದಿ ಬಲಿಷ್ಠವಾಗಿ ಮಾಂಸಾಹಾರಿಯಾಗಿ ಫಲಮೂಲಗಳಲ್ಲಿ ಅಪೇಕ್ಷೆಯನ್ನು ತೊರೆಯಿತು.
ಯಥಾ ಮೃಗಪತಿರ್ನಿತ್ಯಂ ಪ್ರಕಾಂಕ್ಷತಿ ವನೌಕಸಃ |
ತಥೈವ ಸ ಮಹಾರಾಜ ವ್ಯಾಘ್ರಃ ಸಮಭವತ್ ತದಾ ॥23॥
ಮೃಗರಾಜನು ನಿತ್ಯವೂ ವನಚಾರಿ ಪ್ರಾಣಿಗಳನ್ನು ಬಯಸುವಂತೆ ಎಲೈ ಮಹಾರಾಜನೇ! ಆ ವ್ಯಾಘ್ರವು ಅದೇ ರೀತಿಯಲ್ಲಿ ಆಯಿತು.
ವ್ಯಾಘ್ರಸ್ತೂಟಜಮೂಲಸ್ಥಸ್ತೃಪ್ತಃ ಸುಪ್ತೋ ಹತೈರ್ಮೃಗೈಃ |
ನಾಗಶ್ಚಾಗಾತ್ ತಮುದ್ದೇಶಂ ಮತ್ತೋ ಮೇಘ ಇವೋತ್ಥಿತಃ ॥24॥
ಆ ವ್ಯಾಘ್ರವಾದರೋ ಮೃಗಗಳನ್ನು ಕೊಂದು, ಅವುಗಳ ಮಾಂಸದಿಂದ ತೃಪ್ತವಾಗಿ ಪರ್ಣಶಾಲೆಯ ಬಳಿಯಲ್ಲಿ ಮಲಗಿದ್ದಿತು. ಆಗ ಒಂದು ಮದ್ದಾನೆಯು ದೊಡ್ಡ ಮೋಡದಂತೆ ಆ ಪ್ರದೇಶಕ್ಕೆ ಬಂದಿತು.
ಪ್ರಭಿನ್ನಕರಟಃ ಪ್ರಾಂಶುಃ ಪದ್ಮೀ ವಿತತಮಸ್ತಕಃ |
ಸುವಿಷಾಣೋ ಮಹಾಕಾಯೋ ಮೇಘಗಂಭೀರನಿಸ್ವನಃ ॥25॥
ಅದು ಎತ್ತರವಾಗಿದ್ದು ವಿಸ್ತಾರವಾದ ಶಿರಸ್ಸನ್ನು ಹೊಂದಿದ್ದು, ಒಳ್ಳೆಯ ದಂತಗಳನ್ನು, ದೊಡ್ಡ ಶರೀರವನ್ನು, ಮೇಘಗಂಭೀರವಾದ ನಾದವನ್ನೂ ಹೊಂದಿ, ಗಂಡಸ್ಥಳದಿಂದ ಮದವನ್ನು ಸುರಿಸುತ್ತಿದ್ದಿತು.
ತಂ ದೃಷ್ಟ್ವಾ ಕುಂಜರಂ ಮತ್ತಮಾಯಾಂತಂ ಮದಗರ್ವಿತಮ್ |
ವ್ಯಾಘ್ರೋ ಹಸ್ತಿಭಯಾತ್ ತ್ರಸ್ತಸ್ತಮೃಷಿಂ ಶರಣಂ ಯಯೌ ॥26॥
ಮದಭರಿತವಾದ ಮದ್ದಾನೆಯು ತನ್ನೆಡೆಗೆ ಬರುತ್ತಿರುವುದನ್ನು ನೋಡಿ ವ್ಯಾಘ್ರವು ಅದರ ಭಯದಿಂದ ಋಷಿಗೆ ಶರಣುಹೊಂದಿತು.
ತತೋಽನಯತ್ ಕುಂಜರತಾಂ ತಂ ವ್ಯಾಘ್ರಮೃಷಿಸತ್ತಮಃ |
ಮಹಾಮೇಘೋಪಮಂ ದೃಷ್ಟ್ವಾ ತಂ ಸ ಭೀತೋಽಭವದ್ ಗಜಃ ॥27॥
ಆ ಋಷಿಶ್ರೇಷ್ಠನು ಆಗ ಅದನ್ನು ಒಂದು ಗಜವನ್ನಾಗಿ ಮಾಡಿದನು. ದೊಡ್ಡ ಮೇಘದಂತಿರುವ ಈ ಗಜವನ್ನು ನೋಡಿ ಮೊದಲು ಬಂದ ಗಜವು ಭಯದಿಂದ ಹೊರಟು ಹೋಯಿತು.
ತತಃ ಕಮಲಷಂಡಾನಿ ಶಲ್ಯಕೀಗಹನಾನಿ ಚ |
ವ್ಯಚರತ್ ಸ ಮುದಾ ಯುಕ್ತಃ ಪದ್ಮರೇಣುವಿಭೂಷಿತಃ ॥28॥
ಅನಂತರ ಆ ಆನೆಯು ಕಮಲನಾಳಗಳನ್ನು ಶಲ್ಯಕೀಪಕ್ಷಿಗಳು ಗೂಡುಕಟ್ಟುವ ಜೊಂಡುಗಳನ್ನು ಸಂತೋಷದಿಂದ ತಿನ್ನುತ್ತಾ ಪದ್ಮರೇಣುಗಳಿಂದ ಭೂಷಿತವಾಗಿ ತಿರುಗಾಡಿತು.
ಕದಾಚಿದ್ ರಮಮಾಣಸ್ಯ ಹಸ್ತಿನಃ ಸುಸುಖಂ ತದಾ |
ಋಷೇಸ್ತಸ್ಯೋಟಜಸ್ಥಸ್ಯ ಕಾಲೋಽಗಚ್ಛನ್ನಿಶಾನಿಶಮ್ ॥29॥
ಹೀಗೆ ಋಷಿಗಳ ಪರ್ಣಶಾಲೆಯ ಸಮೀಪದಲ್ಲಿ ಸುಖವಾಗಿ ಕಾಲವನ್ನು ಕಳೆಯುತ್ತಿದ್ದ ಆ ಗಜಕ್ಕೆ ಎಷ್ಟೋ ರಾತ್ರಿಗಳು ಕಳೆದವು.
ಅಥಾಜಗಾಮ ತಂ ದೇಶಂ ಕೇಸರೀ ಕೇಸರಾರುಣಃ |
ಗಿರಿಕಂದರಜೋ ಭೀಮಃ ಸಿಂಹೋ ನಾಗಕುಲಾಂತಕಃ ॥30॥
ಅನಂತರ ಒಮ್ಮೆ ಗಜಕುಲವೈರಿಯಾದ ಅರುಣಬಣ್ಣದ ಕೇಸರಗಳನ್ನು ಹೊಂದಿದ ಗಿರಿಗುಹೆಯಲ್ಲಿ ವಾಸಿಸುವ ಒಂದು ಭಯಂಕರವಾದ ಸಿಂಹವು ಅಲ್ಲಿಗೆ ಬಂದಿತು.
ತಂ ದೃಷ್ಟ್ವಾ ಸಿಂಹಮಾಯಾಂತಂ ನಾಗಃ ಸಿಂಹಭಯಾಕುಲಃ |
ಋಷಿಂ ಶರಣಮಾಪೇದೇ ವೇಪಮಾನೋ ಭಯಾತುರಃ ॥31॥
ಬರುತ್ತಿದ್ದ ಸಿಂಹವನ್ನು ನೋಡಿದ ಆನೆಯು ಸಿಂಹದ ಭಯದಿಂದ ವ್ಯಾಕುಲ- ವಾಗಿ ನಡುಗುತ್ತಾ ಭಯಾತುರವಾಗಿ ಋಷಿಗೆ ಶರಣಾಗತವಾಯಿತು.
ತತಃ ಸ ಸಿಂಹತಾಂ ನೀತೋ ನಾಗೇಂದ್ರೋ ಮುನಿನಾ ತದಾ |
ವನ್ಯಂ ನಾಗಣಯತ್ ಸಿಂಹಂ ತುಲ್ಯಜಾತಿಸಮನ್ವಯಾತ್ ॥32॥
ಆಗ ಆ ಋಷಿಯು ಆ ನಾಗವನ್ನು ಸಿಂಹವನ್ನಾಗಿ ಮಾಡಿದನು. ಆ ಸಿಂಹವು ತನ್ನದೇ ಜಾತಿಯ ವನಸಿಂಹಗಳನ್ನು ಪರಿಗಣಿಸಲೇ ಇಲ್ಲ.
ದೃಷ್ಟ್ವಾ ಚ ಸೋಽನಶತ್ ಸಿಂಹೋ ವನ್ಯೋ ಭೀಸನ್ನವಾಗ್ಬಲಃ |
ಸ ಚಾಶ್ರಮೇಽವಸತ್ ಸಿಂಹಸ್ತಸ್ಮಿನ್ನೇವ ವನೇ ಸುಖೀ ॥33॥

ಈ ಹೊಸಸಿಂಹವನ್ನು ನೋಡಿದ ಇನ್ನೊಂದು ವನಸಿಂಹವು ಭಯದಿಂದ ವಾಗ್ಬಲವು ಉಡುಗಿಹೋಗಿ ನಾಶವನ್ನು ಹೊಂದಿತು. ಈ ಸಿಂಹವಾದರೋ ಅದೇ ಆಶ್ರಮದಲ್ಲಿ ಸುಖವಾಗಿ ವಾಸಮಾಡಿತು.
ನ ತ್ವನ್ಯೇ ಕ್ಷುದ್ರಪಶವಸ್ತಪೋವನನಿವಾಸಿನಃ |
ವ್ಯದೃಶ್ಯಂತ ಭಯತ್ರಸ್ತಾ ಜೀವಿತಾಕಾಂಕ್ಷಿಣಃ ಸದಾ ||34||
(ತಪೋ)ವನದಲ್ಲಿ ವಾಸಿಸುವ ಕ್ಷುದ್ರಪಶುಗಳು ತಮ್ಮ ಜೀವಿತವನ್ನು ಬಯಸಿ ಭಯದಿಂದ ಕೂಡಿದವುಗಳಾಗಿ ಅಲ್ಲಿ ಕಂಡುಬರಲೇ ಇಲ್ಲ.
ಕದಾಚಿದ್ ಕಾಲಯೋಗೇನ ಸರ್ವಪ್ರಾಣಿವಿಹಿಂಸಕಃ |
ಬಲವಾನ್ ಕ್ಷತಜಾಹಾರೋ ನಾನಾಸತ್ತ್ವಭಯಂಕರಃ ||35||
ಅಷ್ಟಪಾದೋಽರ್ಧನಯನಃ ಶರಭೋ ವನಗೋಚರಃ |
ತಂ ಸಿಂಹಂ ಹಂತುಮಾಗಚ್ಛನ್ ಮುನೇಸ್ತಸ್ಯ ನಿವೇಶನಮ್ ||36||
ಅನಂತರ ಕಾಲಕ್ರಮದಲ್ಲಿ ಒಮ್ಮೆ ಸರ್ವಪ್ರಾಣಿಗಳನ್ನೂ ಕೊಲ್ಲುವ ಬಲಿಷ್ಠವಾದ ರಕ್ತಾಹಾರಿಯಾದ ಎಲ್ಲ ಪ್ರಾಣಿಗಳಿಗೂ ಭಯವನ್ನುಂಟು ಮಾಡುವ ಎಂಟು ಪಾದ- ಗಳನ್ನೂ ಮತ್ತು ನಾಲ್ಕು ಕಣ್ಣುಗಳನ್ನೂ ಹೊಂದಿದ ವನವಾಸಿಯಾದ ಒಂದು ಶರಭವು ಆ ಸಿಂಹವನ್ನು ಕೊಲ್ಲಲು ಆ ಮುನಿಯ ಆಶ್ರಮದ ಬಳಿಗೆ ಬಂದಿತು.
ತಂ ಮುನಿಃ ಶರಭಂ ಚಕ್ರೇ ಬಲೋತ್ಕಟಮರಿಂದಮ |
ತತಃ ಸ ಶರಭೋ ವನ್ಯೋ ಮುನೇಃ ಶರಭಮಗ್ರತಃ |
ದೃಷ್ಟ್ವಾ ಬಲಿನಮತ್ಯುಗ್ರಂ ದ್ರುತಂ ಸಂಪ್ರಾದ್ರವದ್ ಭಯಾತ್ ||37||
ಎಲೈ ಅರಿಂದಮನೇ! ಮುನಿಯು ಆಗ ಆ ಸಿಂಹವನ್ನು ಬಲೋತ್ಕಟವಾದ ಶರಭವನ್ನಾಗಿ ಮಾಡಿದನು. ಆಗ ಮೊದಲು ಬಂದ ಕಾಡಿನ ಶರಭವು ತನ್ನ ಮುಂಭಾಗದಲ್ಲಿ ತನಗಿಂತ ಬಲಿಷ್ಠವೂ ಉಗ್ರವೂ ಆದ ಆ ಋಷಿಯ ಶರಭವನ್ನು ನೋಡಿ ಭಯದಿಂದ ಬೇಗ ಓಡಿಹೋಯಿತು.
ಸ ಏವಂ ಶರಭಸ್ಥಾನೇ ನ್ಯಸ್ತೋ ವೈ ಮುನಿನಾ ತದಾ |
ಮುನೇಃ ಪಾರ್ಶ್ವಗತೋ ನಿತ್ಯಂ ಶಾರಭ್ಯಂ ಸುಖಮಾಪ್ತವಾನ್ ||38||
ಹೀಗೆ ಶರಭರೂಪವನ್ನು ಹೊಂದಿದ ಆ ಗಜವು ಮುನಿಯ ಪಾರ್ಶ್ವದಲ್ಲಿ ವಾಸಿಸಿ ನಿತ್ಯವೂ ಶರಭಕ್ಕೆ ಯೋಗ್ಯವಾದ ಸುಖವನ್ನು ಹೊಂದಿತು.
ತತಃ ಶರಭಸಂತ್ರಸ್ತಾಃ ಸರ್ವೇ ಮೃಗಗಣಾ ವನಾತ್ |
ದಿಶಃ ಸಂಪ್ರಾದ್ರುವನ್ ರಾಜನ್ ಭಯಾಜ್ಜೀವಿತಕಾಂಕ್ಷಿಣಃ ||39||
ಆಗ ಎಲೈ ರಾಜನೇ! ಶರಭವನ್ನು ನೋಡಿ ಹೆದರಿದ ಆ ಕಾಡಿನ ಮೃಗ- ಸಮೂಹಗಳೆಲ್ಲವೂ ತಮ್ಮ ಜೀವಿತವನ್ನು ಉಳಿಸಿಕೊಳ್ಳಲು ಅಲ್ಲಿಂದ ದಿಕ್ಕು ದೆಸೆಯಿಲ್ಲದೇ ಓಡಿಹೋದವು.
ಶರಭೋಽಪ್ಯತಿಸಂದುಷ್ಟೋ ನಿತ್ಯಂ ಪ್ರಾಣಿವಧೇ ರತಃ |
ಫಲಮೂಲಾಶನಂ ಶಾಂತಂ ನೈಚ್ಛತ್ ಸ ಪಿಶಿತಾಶನಃ ||40||
ಈ ಶರಭವಾದರೂ ಅತ್ಯಂತ ದುಷ್ಟವಾಗಿ ಮಾಂಸಾಹಾರಿಯಾಗಿ ನಿತ್ಯವೂ ಪ್ರಾಣಿವಧೆಯಲ್ಲಿಯೇ ರತವಾಗಿ ಶಾಂತವಾದ ಫಲಮೂಲಗಳ ಭೋಜನವನ್ನು ಬಯಸಲಿಲ್ಲ.
ತತೋ ರುಧಿರತರ್ಷೇಣ ಬಲಿನಾ ಶರಭೋಽನ್ವಿತಃ |
ಇಯೇಷ ತಂ ಮುನಿಂ ಹಂತುಮಕೃತಜ್ಞಃ ಶ್ವಯೋನಿಜಃ ||41||
ಅನಂತರ ನಾಯಿಯೋನಿಯಿಂದ ಹುಟ್ಟಿಬಂದ ಕೃತಘ್ನತೆಯುಳ್ಳ ಆ ಶರಭವು ಬಲವಾದ ರಕ್ತಪಿಪಾಸೆಯಿಂದ ಕೂಡಿ ಆ ಮುನಿಯನ್ನೇ ಕೊಲ್ಲಲು ಬಯಸಿತು.
ಚಿಂತಯಾಮಾಸ ಚ ತದಾ ಶರಭಃ ಶ್ವಾನಪೂರ್ವಕಃ |
ಅಸ್ಯ ಪ್ರಭಾವಾತ್ ಸಂಪ್ರಾಪ್ತೋ ವಾಙ್ಮಾತ್ರೇಣ ತು ಕೇವಲಮ್ ||42||
ಶರಭತ್ವಂ ಸುದುಷ್ಪ್ರಾಪಂ ಸರ್ವಭೂತಭಯಂಕರಮ್ |
ಮೊದಲು ನಾಯಿಯಾಗಿದ್ದ ಆ ಶರಭವು ಹೀಗೆ ಚಿಂತಿಸಿತು. ಕೇವಲ ಅವನ ಮಾತಿನಿಂದ ಮತ್ತು ಅವನ ಪ್ರಭಾವದಿಂದ ನಾನು ಸರ್ವಭೂತಭಯಂಕರವಾದ ಪಡೆಯಲು ಕಷ್ಟಸಾಧ್ಯವಾದ ಶರಭಶರೀರವನ್ನು ಪಡೆದಿದ್ದೇನೆ.
ಅನ್ಯೇಽಪ್ಯತ್ರ ಭಯತ್ರಸ್ತಾ ಮೃಗಾಃ ಪಕ್ಷಿಗಣಾಸ್ತಥಾ ||43||
ತೇಷಾಮಪಿ ಕದಾಚಿಚ್ಚ ಶರಭತ್ವಂ ಪ್ರಯಚ್ಛತಿ |
ಸರ್ವಸತೊತ್ತ್ವೇತ್ತಮೇ ಲೋಕೇ ಬಲಂ ಯತ್ರ ಪ್ರತಿಷ್ಠಿತಮ್ ||44||
ಈ ವನದಲ್ಲಿ ಭಯಗೊಂಡ ಇನ್ನೂ ಅನೇಕ ಮೃಗಗಳೂ ಪಕ್ಷಿಸಮೂಹಗಳೂ ಇವೆ. ಈ ಮುನಿಯು ಸರ್ವಪ್ರಾಣಿಗಳಿಂದ ಕೂಡಿದ ಈ ಲೋಕದಲ್ಲಿ ಎಲ್ಲಿ ಮಹಾಬಲವಿದೆಯೋ ಅಂತಹ ಶರಭತ್ವವನ್ನು ಅವುಗಳಿಗೂ ಕೊಡಬಹುದು.
ಪಕ್ಷಿಣಾಮಪ್ಯಯಂ ದದ್ಯಾತ್ ಕದಾಚಿದ್ ಗಾರುಡಂ ಬಲಮ್ |
ಯಾವದನ್ಯತ್ರ ಸಂಪ್ರೀತಃ ಕಾರುಣ್ಯಂ ಚ ಸಮಾಶ್ರಿತಃ ||45||
ಸ ದದಾತಿ ಬಲಂ ತುಷ್ಟಂ ಸತ್ತ್ವಸ್ಯಾನ್ಯಸ್ಯ ಕಸ್ಯಚಿತ್ |
ತಾವದೇನಮಹಂ ವಿಪ್ರಂ ವಧಿಷ್ಯಾಮಿ ಚ ಶೀಘ್ರತಃ |
ಸ್ಥಾತುಂ ಮಯಾ ಶಕ್ಯಮಿಹ ಮುನಿಘಾತಾನ್ನ ಸಂಶಯಃ ||46||

ಪಕ್ಷಿಗಳಿಗೂ ಇವನು ಗರುಡನಷ್ಟು ಬಲವನ್ನು ಕೊಡಬಹುದು. ಇವನು ಪ್ರೀತಿಯಿಂದ ಮತ್ತುಕರುಣೆಯಿಂದ ಉಳಿದ ಪ್ರಾಣಿಗಳಿಗೆ ಅಂತಹ ಬಲವನ್ನು ಕೊಡುವುದಕ್ಕಿಂತ ಮೊದಲೇ ನಾನುಶೀಘ್ರವಾಗಿ ಈ ಮುನಿಯನ್ನು ಕೊಂದು- ಬಿಡುವೆನು. ಮುನಿಯನ್ನು ಕೊಂದರೂ ನಾನು ಈ ವನದಲ್ಲಿ ವಾಸಿಸ ಬಹುದು ಎಂಬುದರಲ್ಲಿ ಸಂಶಯವಿಲ್ಲ. (ಎಂದು ಚಿಂತಿಸಿತು)
ತತಸ್ತೇನ ತಪಃಶಕ್ತ್ಯಾ ವಿದಿತೋ ಜ್ಞಾನಚಕ್ಷುಷಾ |
ವಿಜ್ಞಾಯ ಚ ಮಹಾಪ್ರಾಜ್ಞೋ ಮುನಿಃ ಶ್ವಾನಂ ತಮುಕ್ತವಾನ್ ॥47॥
ಆಗ ಮುನಿಯು ತನ್ನ ಜ್ಞಾನಚಕ್ಷುಸ್ಸಿನಿಂದ ಮತ್ತು ತಪಃಶಕ್ತಿಯಿಂದ ಆ ಶರಭದ ಚಿಂತನೆಯ ವಿಷಯವನ್ನು ತಿಳಿದನು. ಅದನ್ನು ತಿಳಿದ ಮಹಾಪ್ರಾಜ್ಞನಾದ ಆ ಮುನಿಯು ಆ ಶ್ವಾನವನ್ನು ಕುರಿತು ಹೇಳಿದನು.
ಮುನಿಃ
ಅಹಮಗ್ನಿಪ್ರಭೋ ನಾಮ ಮುನಿರ್ಭೃಗುಕುಲಾನ್ವಯಃ |
ಮನಸಾ ನಿರ್ದಹೇ ಸರ್ವಂ ಜಗತ್ ಸಂಧಾರಯಾಮಿ ಚ ॥48॥
ನಾನು ಭೃಗುಕುಲದಲ್ಲಿ ಜನಿಸಿದ ಅಗ್ನಿಪ್ರಭ ಎಂಬ ಮುನಿ. ನಾನು ನನ್ನ ಮನಸ್ಸಿನಿಂದಲೇ ಎಲ್ಲ ಜಗತ್ತನ್ನೂ ಸುಡುತ್ತೇನೆ ಅಥವಾ ಉಳಿಸುತ್ತೇನೆ.
ಮಮ ವಶ್ಯಂ ಜಗತ್ ಸರ್ವಂ ದೇವಾನ್ ವರ್ಜ್ಯಂ ಚರಾಚರಮ್ |
ಸಂತಿ ದೇವಾಶ್ಚ ಮೇ ಭೀತಾಃ ಸ್ವಧರ್ಮಂ ನ ತ್ಯಜಂತಿ ಯೇ |
ಸ್ವಧರ್ಮಾಚ್ಚಾಲಿತಾನ್ ಸರ್ವಾನ್ ವಾಙ್ಮಾತ್ರೇಣೈವ ನಿರ್ದಹೇ ॥49॥
ದೇವತೆಗಳನ್ನು ಬಿಟ್ಟು ಉಳಿದ ಚರಾಚರವಾದ ಜಗತ್ತೆಲ್ಲವೂ ನನ್ನ ಅಧೀನ- ವಾದುದು. ತಮ್ಮ ಧರ್ಮವನ್ನು ಆಚರಿಸುವ ದೇವತೆಗಳೂ ನನಗೆ ಹೆದರುತ್ತಾರೆ. ತಮ್ಮ ಧರ್ಮವನ್ನು ತ್ಯಜಿಸಿದ ಎಲ್ಲರನ್ನೂ ನಾನು ಕೇವಲ ಮಾತಿನಿಂದಲೇ ಸುಟ್ಟು- ಬಿಡುತ್ತೇನೆ.
ಕಿಮಂಗ ತ್ವಂ ಮಯಾಽನೇನ ಶರಭತ್ವಮನಾಮಯಮ್ |
ಕ್ರೂರಃ ಸ ಸರ್ವಭೂತೇಷು ಹೀನಶ್ಚಾಶುಚಿರೇವ ಚ ॥50॥
ಎಲೈ ಪ್ರೀತಿಪಾತ್ರನೇ! ಹೀನನೂ, ಅಶುಚಿಯೂ ಆದ ನೀನು ಈ ನನ್ನಿಂದ ಸರ್ವಭೂತಗಳಲ್ಲಿ ಕ್ರೂರವಾದ ಶರಭಶರೀರವನ್ನು ಹೊಂದಿದೆ.
ಶ್ವಾ ತ್ವಂ ದ್ವೀಪಿತ್ವಮಾಪನ್ನೋ ದ್ವೀಪೀ ವ್ಯಾಘ್ರತ್ವಮಾಗತಃ |
ವ್ಯಾಘ್ರೋ ನಾಗೋ ಮದಪಟುರ್ನಾಗಃ ಸಿಂಹತ್ವಮಾಪ್ತವಾನ್ ॥51॥
ನಾಯಿಯಾಗಿದ್ದ ನೀನು ಚಿರತೆಯಾದೆ; ಚಿರತೆಯಾಗಿದ್ದ ನೀನು ವ್ಯಾಘ್ರನಾದೆ; ವ್ಯಾಘ್ರವಾಗಿದ್ದವನು ಮದಗಜವಾದೆ; ಮದಗಜವಾಗಿದ್ದವನು ಸಿಂಹತ್ವವನ್ನು ಹೊಂದಿದೆ.
ಸಿಂಹೋಽತಿಬಲಸಂಯುಕ್ತೋ ಭೂಯಃ ಶರಭತಾಂ ಗತಃ |
ಮಯಾ ಸ್ನೇಹಪರೀತೇನ ನ ವಿಮೃಷ್ಟಃ ಕುಲಾನ್ವಯಃ ॥52॥
ಸಿಂಹವು ಅತಿಬಲದಿಂದ ಕೂಡಿದ ಶರಭನಾದೆ. ಸ್ನೇಹದಿಂದ ಕೂಡಿದ ನಾನು ನಿನಗೆ ಇದೆಲ್ಲವನ್ನೂ ಮಾಡಿದೆ. ಆದರೆ ನಿನ್ನ ಮೊದಲಿನ ಕುಲದ ಬುದ್ಧಿಯನ್ನು ನಾನು ಚಿಂತಿಸಲಿಲ್ಲ.
ಯಸ್ಮಾದೇವಮಪಾಪಂ ಮಾಂ ಪಾಪ ಹಿಂಸಿತುಮಿಚ್ಛತಿ |
ತಸ್ಮಾತ್ ಸ್ವಯೋನಿಮಾಪನ್ನಃ ಶ್ವೈವ ತ್ವಂ ಹಿ ಭವಿಷ್ಯತಿ ॥53॥
ನಿರಪರಾಧಿಯಾದ ನನಗೆ ಎಲೈ ಪಾಪಿಯೇ! ಹಿಂಸೆ ಮಾಡಲು ನೀನು ಬಯಸುವುದರಿಂದ ನೀನು ನಿನ್ನ ಮೊದಲಿನ ಯೋನಿಗೇ ಹೋಗಿ ನಾಯಿಯೇ ಆಗುವಿ.
ತತೋ ಮುನಿಜನದ್ವೇಷಾದ್ ದುಷ್ಟಾತ್ಮಾ ಶ್ವಾಕೃತೋಽಬುಧಃ |
ಋಷಿಣಾ ಶರಭಃ ಶಪ್ತಃ ಸ್ವಂ ರೂಪಂ ಪುನರಾಪ್ತವಾನ್ ॥54॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಾದಶಾಧಿಕಶತತಮೋಽಧ್ಯಾಯಃ ॥118॥
ಅನಂತರ ಮುನಿಯನ್ನು ದ್ವೇಷಮಾಡಿದ ಕಾರಣದಿಂದ ಅವಿವೇಕಿಯೂ ದುಷ್ಟವೂ ಆದ ಆ ಶರಭವು ನಾಯಿಯಾಯಿತು. ಋಷಿಯ ಶಾಪಕ್ಕೆ ಒಳಗಾದ ಶರಭವು ತನ್ನ ಮೊದಲಿನ ರೂಪವನ್ನು ಹೊಂದಿತು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 118ನೆಯ ಅಧ್ಯಾಯವು ಮುಗಿಯಿತು
0
119. ನೂರಹತ್ತೊಂಬತ್ತನೆಯ ಅಧ್ಯಾಯ
ಸಚಿವ, ರಾಜ ಮತ್ತು ಯೋಧರ ಲಕ್ಷಣಕಥನ
ಭೀಷ್ಮಃ
ಸ ಶ್ವಾ ಪ್ರಕೃತಿಮಾಪನ್ನಃ ಪರಂ ದೈನ್ಯಮುಪಾಗಮತ್ |
ಋಷಿಣಾ ಹುಂಕೃತಃ ಪಾಪಸ್ತಪೋವನಬಹಿಷ್ಕೃತಃ ॥1॥
ಭೀಷ್ಮರು ಆ ನಾಯಿಯು ತನ್ನ ಮೊದಲ ಸ್ವಭಾವವನ್ನು ಹೊಂದಿ ಬಹಳ ದೈನ್ಯವನ್ನು ಹೊಂದಿತು. ಋಷಿಯಿಂದ ಹುಂಕರಿಸಲ್ಪಟ್ಟ ಆ ಪಾಪಿಯು ತಪೋವನ- ದಿಂದ ಹೊರಗೆ ಹೋಯಿತು.
ಏವಂ ರಾಜ್ಞಾ ಮತಿಮತಾ ವಿದಿತ್ವಾ ಶೀಲಶೌಚತಾಮ್ |
ಆರ್ಜವಂ ಪ್ರಕೃತಿಂ ಸತ್ತ್ವಂ ಕುಲಂ ವೃತ್ತಂ ಶ್ರುತಂ ದಮಮ್ ॥2॥

ಅನುಕ್ರೋಶಂ ಬಲಂ ವೀರ್ಯಂ ಭಾವಂ ಸಂಪ್ರಶಮಂ ಕ್ಷಮಾಮ್ |
ಭೃತ್ಯಾ ಯೇ ಯತ್ರ ಯೋಗ್ಯಾಃ ಸ್ಯುಸ್ತತ್ರ ಸ್ಥಾಪ್ಯಾಃ ಸುಶಿಕ್ಷಿತಾಃ ॥3॥
ಹೀಗೆ ಮೇಧಾವಿಯಾದ ರಾಜನು ಮನುಷ್ಯರ ಶೀಲ, ಶೌಚ, ನೇರವಾದ ನಡತೆ, ಸ್ವಭಾವ, ಧೈರ್ಯ, ಕುಲ, ವಿದ್ಯೆ, ಇಂದ್ರಿಯಜಯ, ದಯೆ, ಬಲ, ಪರಾ- ಕ್ರಮ, ಶಾಂತಿ, ಕ್ಷಮೆ,ಭಕ್ತಿ - ಇವುಗಳನ್ನು ತಿಳಿದು ಯಾವ ಸೇವಕರು ಎಲ್ಲಿ ಯೋಗ್ಯರೋ ಅಲ್ಲಿ ಅಂತಹ ಸುಶಿಕ್ಷಿತಸೇವಕರನ್ನು ನಿಯೋಜಿಸಬೇಕು.
ನಾಪರೀಕ್ಷ್ಯ ಮಹೀಪಾಲಃ ಪ್ರಕರ್ತುಂ ಭೃತ್ಯಮರ್ಹತಿ |
ಅಕುಲೀನನರಾಕೀರ್ಣೋ ನ ರಾಜಾ ಸುಖಮೇಧತೇ ॥4॥
ರಾಜನು ಪರೀಕ್ಷಿಸದೇ ಭೃತ್ಯರನ್ನು ನಿಯಮಿಸಬಾರದು. ಅಕುಲೀನರಾದ ಸೇವಕರಿಂದ ತುಂಬಿದ ರಾಜನು ಸುಖವನ್ನು ಹೊಂದುವುದಿಲ್ಲ.
ಕುಲಜಃ ಪ್ರಾಕೃತೋ ರಾಜ್ಞಾ ತತ್ಕುಲೀನತಯಾ ಸದಾ |
ನ ಪಾಪೇ ಕುರುತೇ ಬುದ್ಧಿಂ ನಿಂದ್ಯಮಾನೋಽಪ್ಯನಾಗಸಿ ॥5॥
ಸತ್ಕುಲಪ್ರಸೂತನಾದವನು ಒಳ್ಳೆಯ ಕುಲದಿಂದ ಬಂದ ಕಾರಣದಿಂದ ಅವನು ಅಪರಾಧಮಾಡದೆಯೇ ರಾಜನಿಂದ ನಿಂದಿಸಲ್ಪಟ್ಟರೂ ರಾಜನ ವಿಷಯದಲ್ಲಿ ಕೆಟ್ಟ ಬುದ್ಧಿಯನ್ನು ಹೊಂದುವುದಿಲ್ಲ. ರಾಜನು ಅಂತಹವನನ್ನು ತನ್ನ ಸಪ್ತಪ್ರಕೃತಿಗಳಲ್ಲಿ ನಿಯೋಜಿಸಬೇಕು.
ಅಕುಲೀನಸ್ತು ಪುರುಷಃ ಪ್ರಾಕೃತಃ ಸಾಧುಸಂಕ್ಷಯಾತ್ |
ದುರ್ಲಭೈಶ್ವರ್ಯತಾಂ ಪ್ರಾಪ್ತೋ ನಿಂದಿತಃ ಶತ್ರುತಾಂ ವ್ರಜೇತ್ ॥6॥
ರಾಜನು ಸಜ್ಜನರು ದೊರೆಯದ ಕಾರಣ ಅಕುಲೀನರನ್ನು ಸೇವಕರನ್ನಾಗಿ ನಿಯೋಜಿಸಿದರೆ ದುರ್ಲಭವಾದ ಐಶ್ವರ್ಯದಿಂದ ಹೊಂದಿಸಲ್ಪಟ್ಟರೂ ರಾಜನಿಂದ ನಿಂದಿತನಾದರೆ ರಾಜನ ಶತ್ರುವಾದಾನು.
ಕಾಕಃ ಶ್ವಾನೋಽಕುಲೀನಶ್ಚ ಬಿಡಾಲಃ ಸರ್ಪ ಏವ ಚ |
ಅಕುಲೀನಾ ಚ ಯಾ ನಾರೀ ತುಲ್ಯಾಸ್ತೇ ಪರಿಕೀರ್ತಿತಾಃ ॥7॥
ಕಾಗೆ, ನಾಯಿ, ಬೆಕ್ಕು, ಸರ್ಪ, ಅಕುಲೀನಳಾದ ನಾರಿ ಎಲ್ಲರೂ ಸಮಾನ- ರಾದವರು ಎಂದು ಹೇಳಲ್ಪಡುತ್ತಾರೆ.
ಲೋಕಪಾಲಾಃ ಸದೋದ್ವಿಗ್ನಾಃ ಪಶ್ಯಂತ್ಯಕುಲಜಾನ್ ಯಥಾ |
ನಾರೀಂ ವಾ ಪುರುಷಂ ವಾಽಥ ಶೀಲಂ ತತ್ರಾಪಿ ಕಾರಣಮ್ ॥8॥
ರಾಜರು ದುಷ್ಕುಲದಿಂದ ಬಂದ ಸೇವಕರನ್ನು ನೋಡಿ ಅವರು ನಾರಿಯರಾಗಿ- ರಲಿ ಅಥವಾ ಪುರುಷರಾಗಿರಲಿ ಯಾವಾಗಲೂ ಭಯಪಡುತ್ತಾರೆ. ಅದಕ್ಕೆ ಆ ಭೃತ್ಯರ ಶೀಲವೇ ಕಾರಣ.
ದುಷ್ಕುಲೀನಾ ಚ ಯಾ ಸ್ತ್ರೀ ಸ್ಯಾದ್ ದುಷ್ಕುಲೀನಶ್ಚ ಯಃ ಪುಮಾನ್ |
ಅಹಿಂಸಾಶೀಲಸಂಯೋಗಾದ್ ಧರ್ಮಶ್ಚಾಕುಲತಾಂ ವ್ರಜೇತ್ ॥9॥
ದುಷ್ಕುಲೀನರಾದ ನಾರಿಯನ್ನಾಗಲೀ ಪುರುಷರನ್ನಾಗಲೀ ನೇಮಿಸಿದರೆ ರಾಜ- ಧರ್ಮವು ಆಕುಲತೆಯನ್ನು ಹೊಂದುತ್ತದೆ.
ಧರ್ಮಂ ಪ್ರತಿ ಮಹಾರಾಜ ಶ್ಲೋಕಾನಾಹ ಬೃಹಸ್ಪತಿಃ |
ಶೃಣು ಸರ್ವಾನ್ ಮಹೀಪಾಲ ಹೃದಿ ತಾಂಶ್ಚ ಕರಿಷ್ಯಸಿ ॥10॥
ಎಲೈ ಮಹಾರಾಜನೇ! ಧರ್ಮದ ವಿಷಯದಲ್ಲಿ ಬೃಹಸ್ಪತಿಗಳು ಶ್ಲೋಕಗಳನ್ನು ಹೇಳಿದ್ದಾರೆ. ಎಲೈ ಮಹೀಪಾಲನೇ! ಅವುಗಳನ್ನು ಕೇಳಿ ಮನಸ್ಸಿನಲ್ಲಿ ಧರಿಸು.
ಅಸಿತಂ ಸಿತಕರ್ಮಾಣಂ ತಥಾ ಜಾತಂ ತಪಸ್ವಿನಮ್ |
ವೃತ್ತಸ್ಥಮಪಿ ಚಂಡಾಲಂ ತಂ ದೇವಾ ಬ್ರಾಹ್ಮಣಂ ವಿದುಃ ॥11॥
ಮನಸ್ಸಿನಲ್ಲಿ ಬಂಧನರಹಿತನೂ ಬಾಹ್ಯದಲ್ಲಿ ಸ್ರುಕ್‌ಚಂದನಧಾರಣಾದಿಸತ್ಕರ್ಮ -ವನ್ನು ಮಾಡುವವನೂ ತಪಸ್ವಿಯೂ ಆದ ಪ್ರಾಕೃತಜನದಂತಿರುವವನು ಒಳ್ಳೆಯ ನಡತೆಯನ್ನು ಹೊಂದಿರುವವನಾದರೆ ಅಂತಹ ಚಂಡಾಲನನ್ನೂ ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಯದಿ ಘಾತಯತೇ ಕಶ್ಚಿತ್ ಪಾಪಸತ್ತ್ವಂ ಪ್ರಜಾಹಿತಃ |
ಸರ್ವಸತ್ತ್ವಹಿತಾರ್ಥಾಯ ನ ತೇನಾಸೌ ವಿಹಿಂಸಕಃ ॥12॥
ಸರ್ವಪ್ರಾಣಿಗಳ ಹಿತಕ್ಕಾಗಿ ಪ್ರಜಾಹಿತದಲ್ಲಿ ರತನಾದ ಒಬ್ಬನು ಕ್ರೂರಪ್ರಾಣಿ- ಯನ್ನು ಕೊಂದರೂ ಅವನು ಅದರಿಂದ ಹಿಂಸಕನೆನಿಸಿಕೊಳ್ಳುವುದಿಲ್ಲ.
ದ್ವೀಪಿನಂ ಶರಭಂ ಸಿಂಹಂ ವ್ಯಾಘ್ರಂ ಕುಂಜರಮೇವ ಚ |
ಮಹಿಷಂ ಚ ವರಾಹಂ ಚ ಸೂಕರಂ ಶ್ವಾನಪನ್ನಗಾನ್ ॥13॥
ಗೋಬ್ರಾಹ್ಮಣಹಿತಾರ್ಥಾಯ ಬಾಲಸ್ತ್ರೀರಕ್ಷಣಾಯ ಚ |
ವೃದ್ಧಾತುರಪರಿತ್ರಾಣೇ ಯೋ ಹಿನಸ್ತಿ ಸ ಧರ್ಮವಿತ್ ॥14॥
ಗೋಬ್ರಾಹ್ಮಣರ ಹಿತಕ್ಕಾಗಿ ಬಾಲರ ಮತ್ತು ಸ್ತ್ರೀಯರ ರಕ್ಷಣೆಗಾಗಿ, ವೃದ್ಧರ ಮತ್ತು ರೋಗಿಗಳ ರಕ್ಷಣೆಗಾಗಿ ಯಾವನು ಚಿರತೆಯನ್ನಾಗಲೀ, ಶರಭವನ್ನಾಗಲೀ, ಸಿಂಹವ್ಯಾಘ್ರಗಜಗಳನ್ನಾಗಲೀ, ಮಹಿಷವರಾಹಗಳನ್ನಾಗಲೀ, ಶ್ವಾನಸರ್ಪಗಳನ್ನಾಗಲೀ ಕೊಲ್ಲುತ್ತಾನೆಯೋ ಅವನು ಧರ್ಮಗಳನ್ನು ತಿಳಿದವನು.
ಬ್ರಾಹ್ಮಣಃ ಪಾಪಕರ್ಮಾ ಚ ಮ್ಲೇಚ್ಛೋ ವಾ ಧಾರ್ಮಿಕಃ ಶುಚಿಃ |
ಶ್ರೇಯಾಂಸ್ತತ್ರ ಭವೇನ್ಮ್ಲೇಚ್ಛೋ ಬ್ರಾಹ್ಮಣಃ ಪಾಪಕೃತ್ತಮಃ ॥15॥

ಪಾಪಕರ್ಮವನ್ನು ಮಾಡುವ ಬ್ರಾಹ್ಮಣ ಮತ್ತು ಧಾರ್ಮಿಕನೂ ಶುಚಿಯೂ ಆದ ಒಬ್ಬ ಮ್ಲೇಚ್ಛ ಇವರಿಬ್ಬರಲ್ಲಿ ಮ್ಲೇಚ್ಛನು ಶ್ರೇಷ್ಠನಾದವನು; ಬ್ರಾಹ್ಮಣನು ಪಾಪಿಗಳಲ್ಲಿ ಅಗ್ರಗಣ್ಯನಾದವನು.
ದುಷ್ಕುಲೀನಃ ಕುಲೀನೋ ವಾ ಯಃ ಕಶ್ಚಿಚ್ಛೀಲವಾನ್ ನರಃ |
ಪ್ರಕೃತಿಂ ತಸ್ಯ ವಿಜ್ಞಾಯ ಸ್ಥಿರಾಂ ವಾ ಯದಿ ವಾಽಸ್ಥಿರಾಮ್ ॥16॥
ಶೀಲಂ ವಾಽನುತ್ತಮಂ ಕರ್ಮ ಕುರ್ಯಾದ್ ರಾಜ್ಞಾ ಸಮಾಹಿತಃ |
ನಿಯುಂಜೀತ ಮಹೀಪಾಲೋ ದುರ್ವೃತ್ತಂ ಪಾಪಕರ್ಮಸು ॥17॥
ದುಷ್ಕುಲೀನನಾಗಲೀ ಅಥವಾ ಕುಲೀನನಾಗಲೀ ಯಾವನು ಒಳ್ಳೆಯ ಶೀಲವನ್ನು ಹೊಂದಿರುವಂತೆ ಕಾಣುತ್ತಾನೆಯೋ ರಾಜನು ಅವನಲ್ಲಿ ಕಾಣುವ ಶೀಲವು ಸ್ವಾಭಾವಿಕವೋ ಅಸ್ವಾಭಾವಿಕವೋ ಎಂದು ತಿಳಿದು ರಾಜನು ಅವನನ್ನು ತನ್ನ ಸೇವಾಕರ್ಮದಲ್ಲಿ ತೊಡಗಿಸಿದರೆ ಅವನು ಶ್ರೇಷ್ಠವಾದ ಕರ್ಮವನ್ನು ಮಾಡುವನು. ದುರ್ನಡತೆಯುಳ್ಳವನನ್ನು ಪಾಪಕರ್ಮಗಳಲ್ಲಿ ನಿಯೋಜಿಸಬೇಕು.
ಕುಲೀನಂ ಶಿಕ್ಷಿತಂ ಪ್ರಾಜ್ಞಂ ಜ್ಞಾನವಿಜ್ಞಾನಕೋವಿದಮ್ |
ಸರ್ವಶಾಸ್ತ್ರಾರ್ಥತತ್ತ್ವಜ್ಞಂ ಸಹಿಷ್ಣುಂ ದೇಶಜಂ ತಥಾ ॥18॥
ಕೃತಜ್ಞಂ ಬಲವಂತಂ ಚ ಕ್ಷಾಂತಂ ದಾಂತಂ ಜಿತೇಂದ್ರಿಯಮ್ |
ಅಲುಬ್ಧಂ ಲಬ್ಧಸಂತುಷ್ಟಂ ಸ್ವಾಮಿಮಿತ್ರಬುಭೂಷಕಮ್ ॥19॥
ಸಚಿವಂ ದೇಶಕಾಲಜ್ಞಂ ಸರ್ವಸಂಗ್ರಹಣೇ ರತಮ್ |
ಸಂಸ್ಕೃತಂ ಯುಕ್ತವಚನಂ ಹಿತೈಷಿಣಮತಂದ್ರಿತಮ್ ॥20॥
ಯುಕ್ತಾಚಾರಂ ಸ್ವವಿಷಯೇ ಸಂಧಿವಿಗ್ರಹಕೋವಿದಮ್ |
ಶಸ್ತಂ ತ್ರಿವರ್ಗವೇತ್ತಾರಂ ಪೌರಜಾನಪದಪ್ರಿಯಮ್ ॥21॥
ಸೇನಾವ್ಯೂಹನತತ್ತ್ವಜ್ಞಂ ಬಲಹರ್ಷಣಕೋವಿದಮ್ |
ಇಂಗಿತಾಕಾರತತ್ತ್ವಜ್ಞಂ ಯಾತ್ರಾಸೇನಾವಿಶಾರದಮ್ ॥22॥
ಹಸ್ತಿಶಿಕ್ಷಾಶ್ವತತ್ತ್ವಜ್ಞಮಹಂಕಾರವಿವರ್ಜಿತಮ್ |
ಪ್ರಗಲ್ಭಂ ದಕ್ಷಿಣಂ ದಾಂತಂ ಬಲಿನಂ ಯಕ್ತಮಂತ್ರಿಣಮ್ ॥23॥
ಚೌಕ್ಷಂ ಚೌಕ್ಷಜನಾಕೀರ್ಣಂ ಸುವೇಷಂ ಸುಖದರ್ಶನಮ್ |
ನಾಯಕಂ ನೀತಿಕುಶಲಂ ಗುಣೈ ಷಡ್ಭಿಃ ಸಮನ್ವಿತಮ್ ॥24॥
ಅಸ್ತಬ್ಧಂ ಪ್ರಶ್ರಿತಂ ಶ್ಲಕ್ಷ್ಣಂ ಮೃದುವಾದಿನಮೇವ ಚ |
ಧೀರಂ ಶೂರಂ ಮಹರ್ದ್ಧಿಂ ಚ ದೇಶಕಾಲೋಪಪಾದಕಮ್ ॥25॥
ಸಚಿವಂ ಯಃ ಪ್ರಕುರುತೇ ನಚೈನಮವಮನ್ಯತೇ |
ತಸ್ಯ ವಿಸ್ತೀರ್ಯತೇ ರಾಜ್ಯಂ ಜ್ಯೋತ್ಸ್ನಾ ಗ್ರಹಪತೇರಿವ ॥26॥
ಕುಲೀನನೂ, ಶಿಕ್ಷಿತನೂ, ಪ್ರಾಜ್ಞನೂ, ಜ್ಞಾನವಿಜ್ಞಾನಕೋವಿದನೂ, ಸರ್ವಶಾಸ್ತ್ರಾರ್ಥತತ್ವವನ್ನು ತಿಳಿದವನೂ, ಸಹನಶೀಲನೂ, ತನ್ನ ದೇಶದವನೂ, ಕೃತಜ್ಞನೂ, ಬಲಿಷ್ಠನೂ, ಕ್ಷಮೆಯುಳ್ಳವನೂ, ಜಿತೇಂದ್ರಿಯನೂ, ಲೋಭ- ರಹಿತನೂ, ಲಬ್ಧವಾದುದರಲ್ಲೇ ತೃಪ್ತಿ ಪಡುವವನೂ, ಸ್ವಾಮಿಗೂ ಮತ್ತು ಮಿತ್ರರಿಗೂ ಶುಭವನ್ನುಂಟು ಮಾಡುವವನೂ, ದೇಶಕಾಲಗಳನ್ನು ತಿಳಿದವನೂ, ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವನೂ, ಸುಸಂಸ್ಕೃತನಾದವನೂ, ಯೋಗ್ಯ- ವಾದ ಮಾತನ್ನಾಡುವವನೂ, ರಾಜನ ಹಿತವನ್ನು ಬಯಸುವವನೂ, ಆಲಸ್ಯ- ರಹಿತನೂ, ಯೋಗ್ಯವಾದ ಆಚಾರವುಳ್ಳವನೂ, ಸಂಧಿವಿಗ್ರಹಾದಿಗಳನ್ನು ತಿಳಿದ- ವನೂ, ಪ್ರಶಸ್ತನಾದವನೂ, ಧರ್ಮಾರ್ಥಕಾಮಗಳನ್ನು ತಿಳಿದವನೂ, ಪೌರಜಾನ- ಪದಪ್ರಿಯನೂ, ಸೇನಾವ್ಯೂಹಗಳನ್ನು ಮಾಡುವುದನ್ನು ತಿಳಿದವನೂ, ಸೈನ್ಯವನ್ನು ಉತ್ಸಾಹಪಡಿಸುವುದನ್ನು ತಿಳಿದವನೂ, ಇಂಗಿತಜ್ಞನೂ, ಸೇನಾಯಾತ್ರೆಯಲ್ಲಿ ವಿಶಾರದನೂ, ಹಸ್ತಿಶಿಕ್ಷಾಶಾಸ್ತ್ರವನ್ನು ತಿಳಿದವನೂ, ಅಶ್ವಶಾಸ್ತ್ರವನ್ನು ತಿಳಿದವನೂ, ಅಹಂಕಾರವಿಲ್ಲದವನೂ, ವಾಗ್ಮಿಯೂ, ಸಂಕೋಚಸ್ವಭಾವದವನೂ, ಬಲಿಷ್ಠನೂ, ಒಳ್ಳೆಯ ಸಲಹೆಯನ್ನು ನೀಡುವವನೂ, ದಕ್ಷನೂ, ದಕ್ಷಜನರಿಂದ ಕೂಡಿದವನೂ, ಒಳ್ಳೆಯ ವೇಷವನ್ನು ಧರಿಸಿದವನೂ, ನೋಡಲು ಸುಂದರನಾಗಿರುವವನೂ, ನಾಯಕನೂ, ನೀತಿಕುಶಲನೂ, ರಾಜನೀತಿಯ ಆರುಗುಣಗಳನ್ನು ತಿಳಿದವನೂ, ಅನಹಂಕಾರಿಯೂ, ವಿನಯಶೀಲನೂ, ನಿಪುಣನೂ, ಮೃದುವಾಗಿ ಮಾತನಾಡು- ವವನೂ, ಧೀರನೂ, ಶೂರನೂ, ಐಶ್ವರ್ಯೋಪೇತನೂ, ದೇಶಕಾಲಗುಣಗಳನ್ನು ಪ್ರತಿಪಾದಿಸುವವನೂ ಆದ ಪುರುಷನನ್ನು ಸಚಿವನನ್ನಾಗಿ ಮಾಡಿಕೊಂಡು ಅವನಿಗೆ ಅವಮಾನವನ್ನು ಮಾಡದಿದ್ದರೆ ಆ ರಾಜನ ರಾಜ್ಯವು ಚಂದ್ರನ ಬೆಳದಿಂಗಳಿನಂತೆ ವಿಸ್ತಾರವನ್ನು ಹೊಂದುತ್ತದೆ.
ಏತೈರೇವ ಗುಣೈರ್ಯುಕ್ತೋ ರಾಜಾ ಶಾಸ್ತ್ರವಿಶಾರದಃ |
ಏಷ್ಟವ್ಯೋ ಧರ್ಮಪರಮಃ ಪ್ರಜಾಪಾಲನತತ್ಪರಃ ॥27॥
ಇವೇ ಗುಣಗಳಿಂದ ಕೂಡಿದ, ಶಾಸ್ತ್ರವಿಶಾರದನಾದ, ಧರ್ಮರತನಾದ, ಪ್ರಜಾಪಾಲನತತ್ಪರನಾದ ರಾಜನನ್ನು ಪ್ರಜೆಗಳು ಬಯಸಬೇಕು.

ಧೀರೋ ಮರ್ಷೀ ಶುಚಿಃ ಶೀಘ್ರಃ ಕಾಲೇ ಪುರುಷಕಾರವಿತ್ |
ಶುಶ್ರೂಷುಃ ಶ್ರುತವಾನ್ ಶ್ರೋತಾ ಊಹಾಪೋಹವಿಶಾರದಃ ॥28॥
ಮೇಧಾವೀ ಧಾರಣಾಯುಕ್ತೋ ಯಥಾನ್ಯಾಯೋಪಪಾದಕಃ |
ದಾಂತಃ ಸದಾ ಪ್ರಿಯಾಭಾಷೀ ಕ್ಷಮಾವಾಂಶ್ಚ ವಿಪರ್ಯಯೇ ॥29॥
ನಾತಿಚ್ಛೇತ್ತಾ ಸ್ವಯಂಕಾರೀ ಶ್ರದ್ಧಾಲುಃ ಸುಖದರ್ಶನಃ |
ಆರ್ತಹಸ್ತಪ್ರದೋ ನಿತ್ಯಮಾಪ್ತಾಮಾತ್ಯೋ ನಯೇ ರತಃ ॥30॥

ನಾಹಂವಾದೀ ನನಿರ್ದ್ವಂದ್ವೋ ನ ಯತ್ಕಿಂಚಿನಕಾರಕಃ |
ಕೃತೇ ಕರ್ಮಣ್ಯಮೋಘಾನಾಂ ಕರ್ತಾ ಭೃತ್ಯಜನಪ್ರಿಯಃ ॥31॥
ಸಂಗೃಹೀತಜನೋಽಸ್ತಬ್ಧಃ ಪ್ರಸನ್ನವದನಃ ಸದಾ |
ದಾತಾ ಭೃತ್ಯಜನಾಜೀವೀ ನಕ್ರೋಧೀ ಸುಮಹಾಮನಾಃ ॥32॥
ಯುಕ್ತದಂಡೋ ನ ನಿರ್ದಂಡೋ ಧರ್ಮಕಾರ್ಯಾನುಶಾಸನಃ |
ಚಾರನೇತ್ರಃ ಪ್ರಜಾವೇಕ್ಷೀ ಧರ್ಮಾರ್ಥಕುಶಲಃ ಸದಾ ॥33॥
ರಾಜಾ ಗುಣಶತಾಕೀರ್ಣ ಏಷ್ಟವ್ಯಸ್ತಾದೃಶೋ ಭವೇತ್ |
ಧೀರನೂ, ಸಹನೆಯುಳ್ಳವನೂ, ಶುಚಿಯೂ, ಶೀಘ್ರವಾಗಿ ಕಾರ್ಯವನ್ನು ಮಾಡುವವನೂ, ಯೋಗ್ಯವಾದ ಕಾಲದಲ್ಲಿ ಪ್ರಯತ್ನವನ್ನು ಮಾಡುವುದನ್ನು ತಿಳಿದವನೂ, ಹಿರಿಯರ ಮಾತನ್ನು ಕೇಳುವವನೂ, ವಿದ್ಯಾವಂತನೂ, ಹಿರಿಯರ ಸೇವೆಯನ್ನು ಮಾಡುವವನೂ, ಊಹಾಪೋಹಗಳಲ್ಲಿ ವಿಶಾರದನೂ, ಮೇಧಾವಿಯೂ, ಧಾರಣಾಶಕ್ತಿಯುಳ್ಳವನೂ, ನ್ಯಾಯವಾದುದನ್ನು ಮಾಡು- ವವನೂ, ಇಂದ್ರಿಯನಿಗ್ರಹವುಳ್ಳವನೂ, ಸದಾ ಪ್ರಿಯಭಾಷಿಯೂ, ವಿರೋಧವನ್ನು ಮಾಡಿದರೂ ಕ್ಷಮಿಸುವವನೂ, ಅಪರಾಧಿಗಳನ್ನು ಸಂಪೂರ್ಣವಾಗಿ ನಾಶಮಾಡು- ವವನೂ, ಸ್ವತಃ ತಾನೇ ಕಾರ್ಯವನ್ನು ಮಾಡುವವನೂ, ಶ್ರದ್ಧಾಳುವೂ, ನೋಡಲು ಸುಂದರನೂ, ಆರ್ತರಿಗೆ ಸಹಾಯಹಸ್ತವನ್ನು ನೀಡುವವನೂ, ಆಪ್ತರಾದ ಅಮಾತ್ಯರನ್ನು ಹೊಂದಿದವನೂ, ರಾಜನೀತಿಯಲ್ಲಿ ರತನಾದವನೂ, ಅಹಂಕಾರದ ಮಾತನ್ನು ಆಡದವನೂ, ಉದಾಸೀನವಾದ ಕಾರ್ಯಗಳನ್ನು ಮಾಡದವನೂ, ಒಳ್ಳೆಯ ಕಾರ್ಯವನ್ನು ಮಾಡಿದ ಸೇವಕರಿಗೆ ಹೆಚ್ಚಿನ ವೇತನವನ್ನು ಕೊಡುವವನೂ, ಭೃತ್ಯಜನರಿಗೆ ಪ್ರಿಯನಾದವನೂ, ಪ್ರಜೆಗಳನ್ನು ಸಂಗ್ರಹಿಸುವ ಸಾಮರ್ಥ್ಯವುಳ್ಳವನೂ, ದುರಹಂಕಾರವಿಲ್ಲದವನೂ, ಸದಾ ಪ್ರಸನ್ನಮುಖನಾದವನೂ, ದಾನವನ್ನು ಕೊಡು- ವವನೂ, ಭೃತ್ಯಜನರನ್ನು ಸಂತೋಷದಿಂದ ಜೀವಿಸುವಂತೆ ಮಾಡುವವನೂ, ಕ್ರೋಧರಹಿತನೂ, ಉದಾರವಾದ ಮನಸ್ಸುಳ್ಳವನೂ, ಯೋಗ್ಯವಾದ ದಂಡವನ್ನು ವಿಧಿಸುವವನೂ, ಯೋಗ್ಯದಂಡವನ್ನೇ ವಿಧಿಸುವವನೂ, ಎಲ್ಲವನ್ನೂ ಕ್ಷಮಿಸದಿ- ರುವವನೂ, ಧರ್ಮಕಾರ್ಯಗಳನ್ನು ಆದೇಶಿಸುವವನೂ, ಚಾರರೆಂಬ ಚಕ್ಷುಸ್ಸನ್ನು ಹೊಂದಿರುವವನೂ, ಪ್ರಜೆಗಳ ಹಿತವನ್ನು ನೋಡುವವನೂ, ಯಾವಾಗಲೂ ಧರ್ಮಾರ್ಥಕುಶಲನಾದವನೂ ಆಗಿ ಇಂತಹ ನೂರಾರು ಗುಣಗಳಿಂದ ಕೂಡಿದ ರಾಜನನ್ನು ಪ್ರಜೆಗಳು ಅಪೇಕ್ಷಿಸಬೇಕು.
ಯೋಧಾಶ್ಚೈವ ಮನುಷ್ಯೇಂದ್ರ ಸರ್ವೈರ್ಗುಣಗಣೈರ್ವೃತಃ ॥34॥
ಅನ್ವೇಷ್ಟವ್ಯಾಃ ಸುಪುರುಷಾಃ ಸಹಾಯಾ ರಾಜ್ಯಧಾರಣೇ |
ನ ವಿಮಾನಯಿತವ್ಯಾಸ್ತೇ ರಾಜ್ಞಾ ವೃದ್ಧಿಮಭೀಪ್ಸತಾ ॥35॥
ಎಲೈ ಮನುಷ್ಯೇಂದ್ರನೇ! ಸರ್ವಗುಣಗಳಿಂದ ಕೂಡಿದ ಒಳ್ಳೆಯ ಸ್ವಭಾವವುಳ್ಳ ಯೋಧರನ್ನು ಹುಡುಕಿ ರಾಜ್ಯವನ್ನು ರಕ್ಷಿಸುವ ವಿಷಯದಲ್ಲಿ ಅವರನ್ನು ಸಹಾಯಕರನ್ನಾಗಿ ತೆಗೆದುಕೊಳ್ಳಬೇಕು. ತನ್ನ ಅಭಿವೃದ್ಧಿಯನ್ನು ಬಯಸುವ ರಾಜನು ಯೋಧರಿಗೆ ಅವಮಾನ ಮಾಡಬಾರದು.
ಯೋಧಾಃ ಸಮರಶೌಂಡೀರಾಃ ಕೃತಜ್ಞಾಃ ಶಾಸ್ತ್ರಕೋವಿದಾಃ |
ಧರ್ಮಶಾಸ್ತ್ರಸಮಾಯುಕ್ತಾಃ ಪದಾತಿಜನಸಂವೃತಾಃ ॥36॥
ಅರ್ಥಮಾನವಿವೃದ್ಧಾಶ್ಚ ರಥಚರ್ಯಾವಿಶಾರದಾಃ |
ಇಷ್ವಸ್ತ್ರಕುಶಲಾ ಯಸ್ಯ ತಸ್ಯೇಯಂ ನೃಪತೇರ್ಮಹೀ ॥37॥
ಯಾವ ರಾಜನ ಯೋಧರು ಯುದ್ಧನಿಪುಣರೋ ಕೃತಜ್ಞರೋ, ಶಾಸ್ತ್ರಕೋವಿ- ದರೋ, ಧರ್ಮಶಾಸ್ತ್ರಸಮಾಯುಕ್ತರೋ, ಪದಾತಿಗಳಿಂದ ಕೂಡಿದವರೋ, ರಾಜನಿಂದ ಧನ ಮಾನಗಳನ್ನುಪಡೆದು ಅಭಿವೃದ್ಧಿ ಹೊಂದಿದವರೋ, ರಥವನ್ನು ನಡೆಸುವುದರಲ್ಲಿ ವಿಶಾರದರೋ, ಆಯುಧಗಳನ್ನು ಉಪಯೋಗಿಸುವುದರಲ್ಲಿ ಕುಶಲರೋ - ಈ ಭೂಮಿಯುಅಂತಹ ರಾಜನಿಗೆ ಸೇರುತ್ತದೆ.
ಜ್ಞಾತೀನಾಮನವಜ್ಞಾನಂ ಭೃತ್ಯೇಷ್ವಶಠತಾ ತಥಾ |
ನೈಪುಣಂ ಚಾರ್ಥಚರ್ಯಾಸು ಯಸ್ಯೈತೇ ತಸ್ಯ ಸಾ ಮಹೀ ॥38॥
ಯಾವ ರಾಜನು ಜ್ಞಾತಿಗಳಿಗೆ ಅವಮಾನ ಮಾಡುವುದಿಲ್ಲವೋ, ಭೃತ್ಯರಿಗೆ ದುರಹಂಕಾರವನ್ನು ತೋರಿಸುವುದಿಲ್ಲವೋ, ಅರ್ಥಕಾರ್ಯಗಳಲ್ಲಿ ನಿಪುಣನಾಗಿ- ರುತ್ತಾನೆಯೋ ಈ ಭೂಮಿಯು ಅವನಿಗೆ ಸೇರುತ್ತದೆ.
ಆಲಸ್ಯಂ ಚೈವ ನಿದ್ರಾ ಚ ವ್ಯಸನಾನ್ಯತಿಹಾಸ್ಯತಾ |
ಯಸ್ಯೈತಾನಿ ನ ವಿದ್ಯಂತೇ ತಸ್ಯೈವ ಸುಚಿರಂ ಮಹೀ ॥39॥
ಆಲಸ್ಯ, ನಿದ್ರೆ, ದುಶ್ಚಟಗಳು, ಅತಿಹಾಸ್ಯ- ಇವುಗಳು ಯಾವನಿಗೆ ಇರುವು- ದಿಲ್ಲವೋ ಅಂತಹ ರಾಜನ ಬಳಿಯಲ್ಲಿ ಭೂಮಿಯು ಬಹುಕಾಲ ಇರುತ್ತದೆ.
ನೀತಿವರ್ತ್ಮಾನುಸರಣಂ ನಿತ್ಯಮುತ್ಥಾನಮೇವ ಚ |
ರಿಪೂಣಾಮನವಜ್ಞಾನಂ ತಸ್ಯೇಯಂ ಸುಚಿರಂ ಮಹೀ ॥40॥
ನೀತಿಮಾರ್ಗದ ಅನುಸರಣೆ, ನಿತ್ಯವೂ ಉದ್ಯಮಶೀಲತೆ, ಶತ್ರುಗಳನ್ನು ಉಪೇ- ಕ್ಷಿಸದಿರುವುದು ಈ ಗುಣಗಳು ಯಾರಲ್ಲಿರುತ್ತವೆಯೋ ಅವನ ಬಳಿ ಈ ಭೂಮಿಯು ಬಹುಕಾಲ ಇರುತ್ತದೆ.
ಉತ್ಥಾನಂ ಚೈವ ದೈವಂ ಚ ತಯೋರ್ನಾನಾತ್ವಮೇವ ಚ |
ಮನುನಾ ವರ್ಣಿತಂ ಪೂರ್ವಂ ವಕ್ಷ್ಯೇ ಶೃಣು ತದೇವ ಹಿ ॥41॥
ಉದ್ಯಮಶೀಲತೆ ಮತ್ತು ದೈವ ಇವುಗಳ ಪ್ರಭೇದಗಳನ್ನು ಮನುವು ಹಿಂದೆಯೇ ವರ್ಣಿಸಿದ್ದಾನೆ. ಅದನ್ನೇ ನಾನು ಹೇಳುವೆನು ಕೇಳು.
ಉತ್ಥಾನಂ ಹಿ ನರೇಂದ್ರಾಣಾಂ ಬೃಹಸ್ಪತಿರಭಾಷತ |

ನಯಾನಯವಿಧಾನಜ್ಞಃ ಸದಾ ಭವ ಕುರೂದ್ವಹ ॥42॥
ನಯಾನಯವಿಧಾನಗಳನ್ನು ತಿಳಿದ ಬೃಹಸ್ಪತಿಗಳು ನರೇಂದ್ರರಿಗೆ ಉದ್ಯಮ- ಶೀಲತೆಯೇ ಪ್ರಧಾನವಾದುದೆಂದು ಹೇಳಿದ್ದಾರೆ. ಎಲೈ ಕುರೂದ್ವಹನೇ! ಸದಾ ಉದ್ಯಮಶೀಲನಾಗು.
ದುರ್ಹೃದಾಂ ಛಿದ್ರದರ್ಶೀ ಯಃ ಸುಹೃದಾಮುಪಕಾರವಾನ್ |
ವಿಶೇಷವಿಚ್ಚ ಭೃತ್ಯಾನಾಂ ಸ ರಾಜ್ಯಫಲಮಶ್ನುತೇ ॥43॥
ಯಾವನು ಶತ್ರುಗಳ ದೌರ್ಬಲ್ಯವನ್ನು ಕಾಣುತ್ತಾನೆಯೋ, ಸುಹೃಜ್ಜನರಿಗೆ ಉಪಕಾರವನ್ನು ಮಾಡುತ್ತಾನೆಯೋ, ಭೃತ್ಯರ ವಿಶೇಷಯೋಗ್ಯತೆಗಳನ್ನು ತಿಳಿದಿರು- ತ್ತಾನೆಯೋ ಅವನು ರಾಜ್ಯದ ಫಲವನ್ನು ಭೋಗಿಸುತ್ತಾನೆ.
ಸರ್ವಸಂಗ್ರಹಣೇ ಯುಕ್ತೋ ನೃಪೋ ಭವತಿ ಯಃ ಸದಾ |
ಉತ್ಥಾನಶೀಲೋ ಮಂತ್ರಾಢ್ಯೋ ಸ ರಾಜಾ ರಾಜಸತ್ತಮಃ ॥44॥
ಎಲ್ಲ ಪ್ರಜೆಗಳನ್ನೂ ಸಂಗ್ರಹಿಸುವುದರಲ್ಲಿ ಯಾವ ರಾಜನು ಸದಾ ನಿರತನಾಗಿ ಉದ್ಯಮಶೀಲನೂ ಮಂತ್ರಾಲೋಚನ ತತ್ಪರನೂ ಆಗಿರುತ್ತಾನೆಯೋ ಆ ರಾಜನು ರಾಜಶ್ರೇಷ್ಠನಾದವನು.
ಶಕ್ಯಾ ಚಾಶ್ವಸಹಸ್ರೇಣ ವೀರಾರೋಹೇಣ ಭಾರತ |
ಸಂಗೃಹೀತಮನುಷ್ಯೇಣ ಕೃತ್ಸ್ನಾ ಜೇತುಂ ವಸುಂಧರಾ ॥45॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ॥119॥
ಎಲೈ ಭಾರತನೇ! ವೀರರಾದ ಅಶ್ವಾರೋಹಿಗಳಿಂದ ಕೂಡಿದ ಒಂದು ಸಹಸ್ರ ಅಶ್ವಗಳಿಂದ ಚೆನ್ನಾಗಿ ಸಂಪಾದಿಸಿದ ಒಬ್ಬ ಸೇನಾನಾಯಕನ ಮೂಲಕವಾಗಿ ಈ ಭೂಮಿಯನ್ನು ಗೆಲ್ಲುವುದು ಸಾಧ್ಯವಾಗುತ್ತದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 119ನೆಯ ಅಧ್ಯಾಯವು ಮುಗಿಯಿತು
0
120. ನೂರಇಪ್ಪತ್ತನೆಯ ಅಧ್ಯಾಯ
ಭೃತ್ಯರನ್ನು ಅವರವರಿಗೆ ಯೋಗ್ಯಸ್ಥಾನದಲ್ಲಿ ನಿಯೋಜಿಸುವ ರಾಜನೀತಿ
ಭೀಷ್ಮಃ
ಏವಂ ಶುಭಾನ್ ಸಮಾನ್ ಭೃತ್ಯಾನ್ ಸ್ವಸ್ಥಾನೇ ಯೋ ನರಾಧಿಪಃ |
ನಿಯೋಜಯತಿ ಕೃತ್ಯೇಷು ಸ ರಾಜ್ಯಫಲಮಶ್ನುತೇ ॥1॥
ಭೀಷ್ಮರು ಹೀಗೆ ಯಾವ ರಾಜನು ಶುಭರೂ, ಸಮಾಧಾನವುಳ್ಳವರೂ ಆದ ಭೃತ್ಯರನ್ನು ಅವರಿಗೆ ಯೋಗ್ಯವಾದ ಕಾರ್ಯಗಳಲ್ಲಿ ನಿಯೋಜಿಸುತ್ತಾನೆಯೋ ಅವನು ರಾಜ್ಯಫಲವನ್ನು ಪಡೆಯುತ್ತಾನೆ.
ನ ಶ್ವಾ ಸ್ವಸ್ಥಾನಮುತ್ಕ್ರಮ್ಯ ಪ್ರಮಾಣಮಭಿ ಸತ್ಕೃತಃ |
ಆರೋಪ್ಯಃ ಶ್ವಾ ಸ್ವಕಾತ್ ಸ್ಥಾನಾದುತ್ಕ್ರಮ್ಯಾನ್ಯತ್ ಪ್ರಪದ್ಯತೇ ॥2॥
ನಾಯಿಯನ್ನು ಮೇಲೇರಿಸಿ ಪೂಜೆ ಮಾಡಿದರೂ ಅದು ಗ್ರಾಹ್ಯವಾಗುವುದಿಲ್ಲ. ನಾಯಿಯನ್ನು ಮೇಲೇರಿಸಿದರೆ ಅದು ತನ್ನ ಸ್ಥಾನವನ್ನುಬಿಟ್ಟು ಬೇರೆ ಕಾರ್ಯವನ್ನೇ ಮಾಡುತ್ತದೆ.
ಸ್ವಜಾತಿಗುಣಸಂಪನ್ನಾಃ ಸ್ವೇಷು ಕರ್ಮಸ್ವವಸ್ಥಿತಾಃ |
ಪ್ರಕರ್ತವ್ಯಾ ಬುಧಾ ಭೃತ್ಯಾ ನಾಸ್ಥಾನೇ ಪ್ರಕ್ರಿಯಾ ಕ್ಷಮಾ ॥3॥
ತಮ್ಮ ಜಾತಿಗುಣಗಳಿಂದ ಸಂಪನ್ನರೂ, ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾದವರೂ ಆದ ಬುಧರನ್ನು ಭೃತ್ಯರನ್ನಾಗಿ ಮಾಡಬೇಕು. ಒಂದು ಸ್ಥಾನದಲ್ಲಿ ಅದಕ್ಕೆ ಅಯೋಗ್ಯರಾದವರನ್ನು ನಿಯಮಿಸುವುದು ಸರಿಯಲ್ಲ.
ಅನುರೂಪಾಣಿ ಕರ್ಮಾಣಿ ಭೃತ್ಯೇಭ್ಯೋ ಯಃ ಪ್ರಯಚ್ಛತಿ |
ಸ ಭೃತ್ಯಗುಣಸಂಪನ್ನಂ ರಾಜಾ ಫಲಮುಪಾಶ್ನುತೇ ॥4॥
ಯಾವನು ಭೃತ್ಯರಿಗೆ ಅವರಿಗೆ ಅನುರೂಪವಾದ ಕಾರ್ಯಗಳನ್ನು ಕೊಡು- ತ್ತಾನೆಯೋ ಅಂತಹ ರಾಜನು ಭೃತ್ಯಗುಣದಿಂದ ಕೂಡಿದ ಫಲವನ್ನು ಅನುಭವಿಸು- ತ್ತಾನೆ.
ಶರಭಃ ಶರಭಸ್ಥಾನೇ ಸಿಂಹಃ ಸಿಂಹ ಇವೋರ್ಜಿತಃ |
ವ್ಯಾಘ್ರೋ ವ್ಯಾಘ್ರ ಇವ ಸ್ಥಾಪ್ಯೋ ದ್ವೀಪೀ ದ್ವೀಪೀ ಯಥಾ ತಥಾ ॥5॥
ಶರಭವನ್ನು ಶರಭಸ್ಥಾನದಲ್ಲಿಯೂ, ಬಲಿಷ್ಠವಾದ ಸಿಂಹವನ್ನು ಸಿಂಹಸ್ಥಾನ- ದಲ್ಲಿಯೂ ವ್ಯಾಘ್ರವನ್ನು ವ್ಯಾಘ್ರಸ್ಥಾನದಲ್ಲಿಯೂ ಚಿರತೆಯನ್ನು ಚಿರತೆಯ ಸ್ಥಾನ- ದಲ್ಲಿಯೂ ಹಾಗೆಯೇ ಇಡಬೇಕು.
ಕರ್ಮಸ್ವಿಹಾನುರೂಪೇಣ ನ್ಯಸ್ಯಾ ಭೃತ್ಯಾ ಯಥಾವಿಧಿ |
ಪ್ರತಿಲೋಮಂ ನ ಭೃತ್ಯಾಸ್ತೇ ಸ್ಥಾಪ್ಯಾಃ ಕರ್ಮಫಲೈಷಿಣಾ ॥6॥
ರಾಜನು ಭೃತ್ಯರನ್ನು ಅವರಿಗೆ ಅನುರೂಪವಾದ ಕರ್ಮದಲ್ಲಿಯೇ ಶಾಸ್ತ್ರಕ್ಕೆ ಅನುಸಾರಿಯಾಗಿ ಇಡಬೇಕು. ಕರ್ಮದ ಫಲವನ್ನು ಬಯಸುವ ರಾಜನು ಅದಕ್ಕೆ ವಿರುದ್ಧವಾಗಿ ಇಡಬಾರದು.
ಯಃ ಪ್ರಮಾಣಮತಿಕ್ರಮ್ಯ ಪ್ರತಿಲೋಮಂ ನರಾಧಿಪಃ |
ಭೃತ್ಯಾನ್ ಸ್ಥಾಪಯತೇಽಬುದ್ಧಿರ್ನ ಸ ರಂಜಯತೇ ಪ್ರಜಾಃ ॥7॥
ಯಾವ ರಾಜನು ಬುದ್ಧಿಹೀನನಾಗಿ ರಾಜನೀತಿಶಾಸ್ತ್ರವನ್ನು ಅತಿಕ್ರಮಿಸಿ ಭೃತ್ಯರನ್ನು ತನ್ನ ಸಮೀಪದಲ್ಲಿ ಇರಿಸಿಕೊಳ್ಳುತ್ತಾನೆಯೋ ಅವನು ಪ್ರಜೆಗಳನ್ನು ಸಂತೋಷ- ಪಡಿಸುವುದಿಲ್ಲ.

ನ ಬಾಲಿಶಾ ನ ಚ ಕ್ಷುದ್ರಾ ನ ಚಾಪ್ರತಿಮಿತೇಂದ್ರಿಯಾಃ |
ನಾಕುಲೀನಾ ನರಾಃ ಪಾರ್ಶ್ವೇ ಸ್ಥಾಪ್ಯಾ ರಾಜ್ಞಾ ಹಿತೈಷಿಣಾ ॥8॥
ತನ್ನ ಹಿತೈಷಿಯಾದ ರಾಜನು ಬಾಲಿಶರನ್ನಾಗಲೀ ಕ್ಷುದ್ರರನ್ನಾಗಲೀ, ಇಂದ್ರಿಯ- ಲೋಲುಪರನ್ನಾಗಲೀ, ಅಕುಲೀನರನ್ನಾಗಲೀ ತನ್ನ ಸಮೀಪದಲ್ಲಿಟ್ಟುಕೊಳ್ಳಬಾರದು.
ಸಾಧವಃ ಕುಶಲಾಃ ಶೂರಾ ಜ್ಞಾನವಂತೋಽನಸೂಯಕಾಃ |
ಅಕ್ಷುದ್ರಾಃ ಶುಚಯೋ ದಕ್ಷಾ ನರಾಃ ಸ್ಯುಃ ಪಾರಿಪಾರ್ಶ್ವಕಾಃ ॥9॥
ಸಾಧುಗಳೂ ಕುಶಲರೂ ಶೂರರೂ ಜ್ಞಾನವಂತರೂ ಅಸೂಯಾರಹಿತರೂ ಕ್ಷುದ್ರರಲ್ಲದವರೂ, ಶುಚಿಗಳೂ, ದಕ್ಷರೂ ಆದ ನರರು ರಾಜನ ಪಾರ್ಶ್ವವರ್ತಿ- ಗಳಾಗಿರಬೇಕು.
ನ್ಯಗ್ಭೂತಾಸ್ತತ್ಪರಾಃ ಕ್ಷಾಂತಾಶ್ಚೌಕ್ಷಾಃ ಪ್ರಕೃತಿಜಾಃ ಶುಭಾಃ |
ಸ್ವೇ ಸ್ವೇ ಸ್ಥಾನೇಽಪರಿಕ್ರುಷ್ಟಾಸ್ತೇ ಸ್ಯೂ ರಾಜ್ಞೋ ಬಹಿಶ್ಚರಾಃ ॥10॥
ರಾಜನಿಗೆ ಬಾಗಿ ನಡೆದುಕೊಂಡು ರಾಜಕಾರ್ಯತತ್ಪರರಾಗಿ,ಕ್ಷಮಾವಂತರೂ, ದಕ್ಷರೂ, ತಮ್ಮ ದೇಶದವರೂ,ಶುಭರೂ, ತಮ್ಮ ತಮ್ಮ ಸ್ಥಾನಗಳಿಂದ ಕೆಳಗೆ ಎಳೆಯಲ್ಪಡದವರೂ ಆದವರು ರಾಜನಿಗೆ ಬಾಹ್ಯಚರರಾಗುತ್ತಾರೆ. (ದೂರದಲ್ಲಿ ಕೆಲಸ ಮಾಡುವ ಸೇವಕರಾಗುತ್ತಾರೆ.)
ಸಿಂಹಸ್ಯ ಸತತಂ ಪಾರ್ಶ್ವೇ ಸಿಂಹ ಏವ ಜನೋ ಭವೇತ್ |
ಅಸಿಂಹಃ ಸಿಂಹಸಹಿತಃ ಸಿಂಹವಲ್ಲಭತೇ ಫಲಮ್ ॥11॥
ಸಿಂಹದ ಪಾರ್ಶ್ವದಲ್ಲಿ ಸತತವೂ ಸಿಂಹವೇ ಇರಬೇಕು. ಸಿಂಹವಲ್ಲದುದು ಸಿಂಹದ ಜೊತೆಯಲ್ಲಿದ್ದರೆ ಅದಕ್ಕೆ ಸಿಂಹದಂತೆ ಫಲವುಂಟಾಗುತ್ತದೆ.
ಯಸ್ತು ಸಿಂಹಃ ಶ್ವಭಿಃ ಕೀರ್ಣಃ ಸಿಂಹಕರ್ಮಫಲೇ ರತಃ |
ನ ಸ ಸಿಂಹಫಲಂ ಭೋಕ್ತುಂ ಶಕ್ತಃ ಶ್ವಭಿರುಪಾಸಿತಃ ॥12॥
ಯಾವ ಸಿಂಹವು ನಾಯಿಗಳಿಂದ ಪರಿವೃತವಾಗಿ ಸಿಂಹಕರ್ಮದ ಫಲವನ್ನು ಆಶಿಸುತ್ತದೆಯೋ ನಾಯಿಗಳಿಂದ ಸೇವಿತವಾದ ಅದು ಸಿಂಹಕರ್ಮದ ಫಲವನ್ನು ಭೋಗಿಸಲು ಸಮರ್ಥವಾಗುವುದಿಲ್ಲ.
ಏವಮೇತೈರ್ಮನುಷ್ಯೇಂದ್ರ ಶೂರೈಃ ಪ್ರಾಜ್ಞೈರ್ಬಹುಶ್ರುತೈಃ |
ಕುಲೀನೈಃ ಸಹ ಶಕ್ಯೇತ ಕೃತ್ಸ್ನಾ ಜೇತುಂ ವಸುಂಧರಾ ॥13॥
ಎಲೈ ಮನುಷ್ಯೇಂದ್ರನೇ! ಅದೇ ರೀತಿಯಲ್ಲಿ ಶೂರರೂ ಪ್ರಾಜ್ಞರೂ ವಿದ್ಯಾ- ವಂತರೂ ಕುಲೀನರೂ ಆದ ಇಂತಹ ಸೇವಕರಿಂದ ಸಮಗ್ರವಾದ ಭೂಮಿಯನ್ನು ಜಯಿಸಲು ಸಾಧ್ಯ.
ನಾವೈದ್ಯೋ ನಾನೃಜುಃ ಪಾರ್ಶ್ವೇ ನಾವಿದ್ಯೋ ನಾಮಹಾಧನಃ |
ಸಂಗ್ರಾಹ್ಯೋ ವಸುಧಾಪಾಲೈರ್ಭೃತ್ಯೋ ಭೃತ್ಯವತಾಂವರ ॥14॥
ಎಲೈ ಸೇವಕರನ್ನು ಹೊಂದಿದವರಲ್ಲಿ ಶ್ರೇಷ್ಠನಾದವನೇ! ರಾಜರು ವೇದವಿದ್ಯೆ ರಹಿತನಲ್ಲದ, ವಕ್ರನಲ್ಲದ, ಅವಿದ್ಯಾವಂತನಲ್ಲದ, ದರಿದ್ರನಲ್ಲದ ಭೃತ್ಯನನ್ನು ಸಂಗ್ರಹಿಸಬೇಕು.
ಬಾಣವದ್ ವಿಸ್ಸೃತಾ ಯಾಂತಿ ಸ್ವಾಮಿಕಾರ್ಯಪರಾ ಜನಾಃ |
ಯೇ ಭೃತ್ಯಾಃ ಪಾರ್ಥಿವಹಿತಾಸ್ತೇಷಾಂ ಸಾಂತ್ವಂ ಪ್ರಯೋಜಯೇತ್ ॥15॥
ಯಾವ ಭೃತ್ಯರು ರಾಜನ ಆದೇಶವನ್ನು ಹೊಂದಿ, ಸ್ವಾಮಿಕಾರ್ಯತತ್ಪರರಾಗಿ ಬಾಣದಂತೆ ಹೊರಡುತ್ತಾರೋ, ಅಂತಹ ರಾಜನೀತಿಯಲ್ಲಿ ಆಸಕ್ತರಾದವರಿಗೆ ಸಾಂತ್ವವಚನಗಳನ್ನು ಹೇಳಬೇಕು.
ಕೋಶಶ್ಚ ಸತತಂ ರಕ್ಷ್ಯೋ ಯತ್ನಮಾಸ್ಥಾಯ ರಾಜಭಿಃ |
ಕೋಶಮೂಲಾ ಹಿ ರಾಜಾನಃ ಕೋಶವೃದ್ಧಿಕರೋ ಭವ ॥16॥
ರಾಜನು ಪ್ರಯತ್ನಪೂರ್ವಕವಾಗಿ ತನ್ನ ಕೋಶವನ್ನು ಸತತವಾಗಿ ರಕ್ಷಿಸಿಕೊಳ್ಳ- ಬೇಕು. ರಾಜರ ಬಲವು ಕೋಶದಲ್ಲಿ ಅಡಗಿದೆ. ಆದ್ದರಿಂದ ಕೋಶವೃದ್ಧಿಯನ್ನು ಮಾಡುವವನಾಗು.
ಕೋಷ್ಠಾಗಾರಂ ಚ ತೇ ನಿತ್ಯಂ ಸ್ಫೀತಂ ಧಾನ್ಯೈಃ ಸುಸಂಚಿತಮ್ |
ಸದಾಽಸ್ತು ಸತ್ಸು ಸನ್ನ್ಯಸ್ತಂ ಧನಧಾನ್ಯಪರೋ ಭವ ॥17॥
ನಿನ್ನ ಉಗ್ರಾಣಗಳೆಲ್ಲವೂ ನಿತ್ಯವೂ ಸಂಗ್ರಹಿಸಿದ ಧಾನ್ಯಗಳಿಂದ ತುಂಬಿರಲಿ. ಸಜ್ಜನರಿಗೆ ಅದರ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ಕೊಡು. ಧನ ಧಾನ್ಯವನ್ನು ಸಂಗ್ರಹಿಸುವುದರಲ್ಲಿ ನಿರತನಾಗು.
ನಿತ್ಯಯುಕ್ತಾಶ್ಚ ತೇ ಭೃತ್ಯಾ ಭವಂತು ರಣಕೋವಿದಾಃ |
ವಾಜಿನಾಂ ಚ ಪ್ರಯೋಗೇಷು ವೈಶಾರದ್ಯಮಿಹೇಷ್ಯತೇ ॥18॥
ಭೃತ್ಯರು ನಿತ್ಯವೂ ತಮ್ಮ ಕಾರ್ಯದಲ್ಲಿ ತೊಡಗಿದವರೂ, ರಣಕೋವಿದರೂ, ಅಶ್ವವಿದ್ಯೆಗಳಲ್ಲಿ ವಿಶಾರದರೂ ಆಗಿರಬೇಕು.
ಜ್ಞಾತಿಬಂಧುಜನಾವೇಕ್ಷೀ ಮಿತ್ರಸಂಬಂಧಿಸಂವೃತಃ |
ಪೌರಕಾರ್ಯಹಿತಾನ್ವೇಷೀ ಭವ ಕೌರವನಂದನ ॥19॥
ಎಲೈ ಕೌರವನಂದನನೇ! ನೀನು ಜ್ಞಾತಿಗಳ ಮತ್ತು ಬಂಧುಗಳ ಹಿತವನ್ನು ನೋಡುತ್ತಾ ಮಿತ್ರರು ಮತ್ತು ಸಂಬಂಧಿಗಳಿಂದಲೂ ಪರಿವೃತನಾಗಿ ಯೋಚಿಸಿ ಪ್ರಜೆಗಳಿಗೆ ಹಿತವಾದ ಕಾರ್ಯವನ್ನು ಮಾಡುವವನಾಗು.
ಏಷಾ ತೇ ನೈಷ್ಠಿಕೀ ಬುದ್ಧಿಃ ಪ್ರಜ್ಞಾ ಚಾಭಿಹಿತಾ ಮಯಾ |
ಶ್ವಾ ತೇ ನಿದರ್ಶನಂ ತಾತ ಕಿಂ ಭೂಯಃ ಶ್ರೋತುಮಿಚ್ಛಸಿ ॥20॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ವಿಂಶತ್ಯಧಿಕಶತತಮೋಽಧ್ಯಾಯಃ ॥120॥
ನಾನು ನಿನಗೆ ಶಾಸ್ತ್ರನಿಷ್ಠವಾದ ಬುದ್ಧಿಯನ್ನು ಮತ್ತು ವಿವೇಕವನ್ನು ಉಪದೇಶಿಸಿ- ದ್ದೇನೆ. ಎಲೈ ಪ್ರೀತಿಪಾತ್ರನೇ! ಆ ನಾಯಿಯು ನಿನಗೆ ಒಳ್ಳೆಯ ನಿದರ್ಶನ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 120ನೆಯ ಅಧ್ಯಾಯವು ಮುಗಿಯಿತು.
0
121. ನೂರಇಪ್ಪತ್ತೊಂದನೆಯ ಅಧ್ಯಾಯ
ಪ್ರಜಾಪಾಲನಕಥನ
ಯುಧಿಷ್ಠಿರಃ
ರಾಜವೃತ್ತಾನ್ಯನೇಕಾನಿ ತ್ವಯಾ ಪ್ರೋಕ್ತಾನಿ ಭಾರತ |
ಪೂರ್ವೈಃ ಪೂರ್ವನಿಯುಕ್ತಾನಿ ರಾಜಧರ್ಮಾರ್ಥವೇದಿನಃ ॥1॥
ಯುಧಿಷ್ಠಿರ ಎಲೈ ಭಾರತನೇ! ನೀನು ರಾಜಧರ್ಮವನ್ನು ತಿಳಿದ ಪೂರ್ವ- ರಾಜರುಗಳು ಅನುಸರಿಸಿದ ಅನೇಕ ರಾಜಧರ್ಮಗಳನ್ನು ಹೇಳಿದ್ದೀಯೆ.
ತದೇವ ವಿಸ್ತರೇಣೋಕ್ತಂ ಪೂರ್ವೈರ್ದೃಷ್ಟಂ ಸತಾಂ ಮತಮ್ |
ಪ್ರಣೇಯಂ ರಾಜಧರ್ಮಾಣಾಂ ಪ್ರಬ್ರೂಹಿ ಭರತರ್ಷಭ ॥2॥
ಎಲೈ ಭರತರ್ಷಭನೇ! ಪೂರ್ವರಾಜರಿಂದ ದೃಷ್ಟವಾದ ಸಜ್ಜನರಿಂದ ಸಮ್ಮತ- ವಾದ ಇನ್ನೂ ಹೆಚ್ಚು ತಿಳಿಯಲು ಯೋಗ್ಯವಾದ ಅದೇ ರಾಜಧರ್ಮಗಳನ್ನು ವಿಸ್ತಾರ -ವಾಗಿ ಹೇಳು.
ಭೀಷ್ಮಃ
ರಕ್ಷಣಂ ಸರ್ವಭೂತಾನಾಮಿತಿ ಕ್ಷತ್ರೇ ಪರಂ ಮತಮ್ |
ತದ್ ಯಥಾ ರಕ್ಷಣಂ ಕುರ್ಯಾತ್ ತಥಾ ಶೃಣು ಮಹೀಪತೇ ॥3॥
ಭೀಷ್ಮ - ಸರ್ವಪ್ರಾಣಿಗಳ ರಕ್ಷಣೆಯು ಕ್ಷತ್ರಿಯನಿಗೆ ಶ್ರೇಷ್ಠವಾದ ಧರ್ಮವೆಂದು ಹೇಳಲ್ಪಡುತ್ತದೆ. ಎಲೈ ರಾಜನೇ! ಆ ರಕ್ಷಣೆಯನ್ನು ಹೇಗೆ ಮಾಡಬೇಕೆಂದು ಕೇಳು.
ಯಥಾ ಬರ್ಹಾಣಿ ಚಿತ್ರಾಣಿ ಬಿಭರ್ತಿ ಭುಜಗಾಶನಃ |
ತಥಾ ಬಹುವಿಧಂ ರಾಜಾ ರೂಪಂ ಕುರ್ವೀತ ಧರ್ಮವಿತ್ ॥4॥
ಹೇಗೆ ನವಿಲು ಅನೇಕ ಬಣ್ಣದ ನವಿಲುಗರಿಗಳನ್ನು ಧರಿಸಿರುತ್ತದೆಯೋ ಹಾಗೆಯೇ ಧರ್ಮಜ್ಞನಾದ ರಾಜನು ಬಹುವಿಧವಾದ ರೂಪಗಳನ್ನು ಧರಿಸಬೇಕು.
ತೈಕ್ಷ್ಣ್ಯಂ ಜಿಹ್ಮತ್ವಮಾದಾಂತ್ಯಂ ಸತ್ಯಮಾರ್ಜವಮೇವ ಚ |
ಮಧ್ಯಸ್ಥಃ ಸತ್ತ್ವಮಾತಿಷ್ಠಂಸ್ತಥಾ ವೈ ಸುಖಮೃಚ್ಛತಿ ॥5॥
ತೀಕ್ಷ್ಣತ್ವ, ಕುಟಿಲತೆ, ಉಗ್ರತ್ವ, ಸತ್ಯ, ಆರ್ಜವ, ತಟಸ್ಥತೆ, ಧೈರ್ಯ ಇವುಗಳನ್ನು ಹೊಂದುವವನು ಸುಖವನ್ನು ಪಡೆಯುತ್ತಾನೆ.
ಯಸ್ಮಿನ್ನರ್ಥೇ ಹಿತಂ ಯತ್ ಸ್ಯಾತ್ ತದ್ವರ್ಣಂ ರೂಪಮಾವಿಶೇತ್ |
ಬಹುರೂಪಸ್ಯ ರಾಜ್ಞೋ ಹಿ ಸೂಕ್ಷ್ಮೋಽಪ್ಯರ್ಥೋ ನ ಸೀದತಿ ॥6॥
ಯಾವ ಕಾರ್ಯವನ್ನು ಮಾಡುವಾಗ ಯಾವ ಬಣ್ಣದ ರೂಪವನ್ನು ಧರಿಸಬೇಕೋ ಅಂತಹ ರೂಪವನ್ನು ಧರಿಸುವ ಬಹುರೂಪವುಳ್ಳ ರಾಜನಿಗೆ ಒಂದು ಸಣ್ಣ ಅರ್ಥವೂ ನಾಶವನ್ನು ಹೊಂದುವುದಿಲ್ಲ.
ನಿತ್ಯಂ ರಕ್ಷಿತಮಂತ್ರಃ ಸ್ಯಾದ್ ಯಥಾರೂಪಂ ಶಿರಃ ಶಿಖೀ |
ಶ್ಲಕ್ಷ್ಣಾಕ್ಷರತನುಃ ಶ್ರೀಮಾನ್ ಭವೇಚ್ಛಾಸ್ತ್ರವಿಶಾರದಃ ॥7॥
ರಾಜನ ಮಂತ್ರಾಲೋಚನೆಯು ನಿತ್ಯವೂ ರಕ್ಷಿತವಾಗಿರಬೇಕು. ಕಾರ್ಯಕ್ಕೆ ಅಪೇಕ್ಷಿತವಾದ ಶಿರಸ್ಸನ್ನೂ ಶಿಖೆಗಳನ್ನೂ ಧರಿಸಿರಬೇಕು. -ಕೆಲವು ಬಾರಿ ತಲೆಯನ್ನು ಎತ್ತಿತೋರಿಸಿಕೊಳ್ಳಬೇಕು. ಕೆಲವು ಬಾರಿ ಕತ್ತನ್ನು ತಗ್ಗಿಸಿ ಮುಚ್ಚಿಕೊಳ್ಳಬೇಕು. ನಿಪುಣವಾಗಿ ಮಾತನಾಡುವ ಶರೀರವನ್ನೂ ಕಾಂತಿಯನ್ನೂ ಹೊಂದಿ ಶಾಸ್ತ್ರವಿಶಾ- ರದನಾಗಿರಬೇಕು. ಲಕ್ಷಾಲಂಕಾರ.
ಆಪದ್ದ್ವಾರೇಷು ಯತ್ತಃ ಸ್ಯಾಜ್ಜಲಪ್ರಸ್ರವಣೇಷ್ವಿವ |
ಶೈಲಂ ವರ್ಷೋದಕಾನೀವ ದ್ವಿಜಾನ್ ಸಿದ್ಧಾಂತಮಾಶ್ರಯೇತ್ ॥8॥
ಆಪತ್ತು ಉಂಟಾಗುವ ಸ್ಥಳಗಳಲ್ಲಿ ಜಲಪ್ರವಾಹಗಳಲ್ಲಿ ಇರುವಂತೆ ಪ್ರಯತ್ನ ಪೂರ್ವಕವಾಗಿ ಎಚ್ಚರಿಕೆಯಿಂದಿರಬೇಕು. ಮಳೆಯ ನೀರುಗಳು ಪರ್ವತವನ್ನು ಆಶ್ರಯಿಸಿದಂತೆ ಸಿದ್ಧರಾದ ದ್ವಿಜರನ್ನು ಆಶ್ರಯಿಸಬೇಕು.
ಅರ್ಥಕಾಮಃ ಶಿಖಾಂ ರಾಜಾ ಕುರ್ಯಾದ್ ಧರ್ಮಧ್ವಜೋಪಮಾಮ್ |
ನಿತ್ಯಮುದ್ಯತದಂಡಃ ಸ್ಯಾದಾಚರೇಚ್ಚಾಪ್ರಮಾದತಃ ॥9॥
ಅರ್ಥವನ್ನು ಸಂಪಾದಿಸಲು ಬಯಸುವವನು ಧರ್ಮಧ್ವಜದಂತಹ ಶೌರ್ಯ- ಶಿಖೆಯನ್ನು ತೋರಿಸಬೇಕು. ನಿತ್ಯವೂ ಅಪರಾಧಿಗಳಲ್ಲಿ ದಂಡಧಾರಣಶೀಲ- ನಾಗಬೇಕು. ಯಾವಾಗಲೂ ಎಚ್ಚರ ತಪ್ಪಬಾರದು.
ಲೋಕೇ ಚಾಯವ್ಯಯೌ ದೃಷ್ಟ್ವಾ ಬೃಹದ್‌ವೃಕ್ಷ ಇವ ಸ್ರವನ್ |
ಆಜ್ಞಾವಾನ್ ಸ್ಯಾತ್ ಸ್ವಯೂಥ್ಯೇಷು ಭೌಮಾನಿ ಚರಣೈಃ ಕ್ಷಿಪೇತ್ ॥10॥
ತನ್ನ ಆಯವ್ಯಯಗಳನ್ನು ನೋಡಿ ದೊಡ್ಡ ವೃಕ್ಷದಂತಿರಬೇಕು. ವಟಾದಿ ವೃಕ್ಷವು ಬಹುರಸಸಂಗ್ರಹವಾದರೆ ತಾನು ಬಹಳ ರಸವನ್ನು ಸುರಿಸುತ್ತದೆ. ಇಲ್ಲದಿದ್ದರೆ ಅಲ್ಪ ರಸವನ್ನು ಸುರಿಸುತ್ತದೆ. ಹಾಗೆಯೇ ರಾಜನು ತನ್ನ ಆಯವ್ಯಯಗಳನ್ನು ನೋಡಿಕೊಂಡು ಪ್ರಜೆಗಳಿಗೆ

ಧನವನ್ನು ಸುರಿಸುವ ವಿಷಯದಲ್ಲಿ ಆಜ್ಞೆಯನ್ನು ಮಾಡುವವನಾಗಬೇಕು. ಮಹಾವೃಕ್ಷವು ತನ್ನ ಬೇರುಗಳಿಂದ ಭೂಮಿಯನ್ನು ಆಕ್ರಮಿಸಿದಂತೆ ರಾಜನು ಭೂಮಿಯನ್ನು ಸಂಚಾರಮಾಡಿ ಕ್ರಮವಾಗಿ ಸಂಪಾದಿಸ- ಬೇಕು. (ಲಕ್ಷ್ಮಾಲಂಕಾರ)
ಜಾತಪಕ್ಷಃ ಪರಿಸ್ಪಂದೇದ್ ರಕ್ಷೇದ್ ವೈಕಲ್ಯಮಾತ್ಮನಃ ॥11॥
ಸಹಾಯವು ದೊರೆತ ಮೇಲೆ ರಾಜನು ಸಂಚರಿಸಬೇಕು. ಸಹಾಯವು ಸಿದ್ಧಿಸುವವರೆಗೆ ತನ್ನ ದೌರ್ಬಲ್ಯವನ್ನು ರಹಸ್ಯವಾಗಿ ಇಟ್ಟುಕೊಳ್ಳಬೇಕು.
ದೋಷಾನ್ ವಿವೃಣುಯಾಚ್ಛತ್ರೋಃ ಪರಪಕ್ಷಾನ್ ವಿಧೂನಯೇತ್ |
ಕಾನನೇಷ್ವಿವ ಪುಷ್ಪಾಣಿ ಬಹೂನರ್ಥಾನ್ ಸಮಾಚರೇತ್ ॥12॥
ಶತ್ರುವಿನ ದೋಷಗಳನ್ನು ಪ್ರಕಟಗೊಳಿಸಬೇಕು. ಶತ್ರುಪಕ್ಷಗಳನ್ನು ಕಂಪನ- ಗೊಳಿಸಬೇಕು. ಅರಣ್ಯಪುಷ್ಪಗಳಂತೆ ಅನೇಕ ಅರ್ಥಗಳನ್ನು ಸಾಧಿಸಲು ಸಂಚಾರವನ್ನು ಮಾಡಬೇಕು.
ಉಚ್ಛ್ರಿತಾನಾಶ್ರಯೇತ್ ಸ್ಫೀತಾನ್ ನರೇಂದ್ರಾನಚಲೋಪಮಾನ್ |
ಶ್ರಯೇಚ್ಛಾಯಾಮವಿಜ್ಞಾತಾಂ ಗುಪ್ತಂ ಶರಣಮಾಶ್ರಯೇತ್ ॥13॥
ಉನ್ನತರೂ, ಶುದ್ಧರೂ ಪರ್ವತದಂತೆ ಇರುವವರೂ ಆದ ರಾಜರನ್ನು ಆಶ್ರ- ಯಿಸಬೇಕು. ಇನ್ನೊಬ್ಬರಿಗೆ ತಿಳಿಯದಂತೆ ಛಾಯೆಯನ್ನು ಆಶ್ರಯಿಸಬೇಕು. ಎಂದರೆ ತನ್ನ ವಾಸಸ್ಥಾನವು ಗುಪ್ತವಾಗಿರಬೇಕು.
ಪ್ರಾವೃಷೀವಾಸಿತಗ್ರೀವೋ ಮಜ್ಜೇತ ನಿಶಿ ನಿರ್ಜನೇ |
ಮಾಯೂರೇಣ ಗುಣೇನೈವ ಸ್ತ್ರೀಭಿಶ್ಚಾಲಕ್ಷಿತಶ್ಚರೇತ್ |
ನ ಜಹ್ಯಾಚ್ಚ ತನುತ್ರಾಣಂ ರಕ್ಷೇದಾತ್ಮಾನಮಾತ್ಮನಾ ॥14॥
ಮಳೆಗಾಲದಲ್ಲಿ ನವಿಲಿನಂತೆ ನಿರ್ಜನವಾದ ಪ್ರದೇಶದಲ್ಲಿ ರಾತ್ರಿಯಲ್ಲಿ ಅಭ್ಯಂಗವನ್ನು ಮಾಡಬೇಕು. ನವಿಲಿನಂತೆಯೇ ಇನ್ನೊಬ್ಬರಿಗೆ ತಿಳಿಯದಂತೆ ಸ್ತ್ರೀಯರ ಜೊತೆಯಲ್ಲಿ ವಿಹರಿಸಬೇಕು. ನವಿಲು ತನ್ನ ಕವಚದಂತಿರುವ ನವಿಲುಗರಿಯನ್ನು ಎಂದೂ ಬಿಡದಂತೆ ತನ್ನನ್ನು ತಾನೇ ರಕ್ಷಿಸಿಕೊಳ್ಳಬೇಕು. (ಲಕ್ಷ್ಮಾಲಂಕಾರ)
ಚಾರಭೂಮಿಷ್ವಭಿಮತಾನ್ ಪಾಶಾಂಶ್ಚ ಪರಿವರ್ಜಯೇತ್ |
ಪ್ರಸ್ಥಾಪಯೇದ್ ವಾ ತಾಂ ಭೂಮಿಂ ಪ್ರವಿಶೇದ್ ಗಹನೇ ಪುನಃ ॥15॥
ಸಂಚಾರಮಾಡುವ ಭೂಮಿಗಳಲ್ಲಿ ಶತ್ರುಗಳು ಹಾಕಿರಬಹುದಾದ ಬಲಗಳ ರೂಪವಾದ ಪಾಶಗಳನ್ನು ಪರಿತ್ಯಜಿಸಬೇಕು. (ಶತ್ರುಗಳಿಂದ ಬಂಧನಕ್ಕೆ ಒಳಗಾ- ಗುವುದನ್ನು ತಪ್ಪಿಸಿಕೊಳ್ಳಬೇಕು). ಎಲ್ಲಿ ಅಪಾಯವಿಲ್ಲವೋ ಅಂತಹ ಭೂಮಿಯಲ್ಲಿ ಮಾತ್ರ ಸಂಚರಿಸಬೇಕು. ಅಂತಹ ಭೂಮಿಯಿಲ್ಲದಿದ್ದರೆ ಅರಣ್ಯವನ್ನು ಪ್ರವೇಶಿಸ- ಬೇಕು (ಲಕ್ಷ್ಮಾಲಂಕಾರ).
ಹನ್ಯಾತ್ ತಾನ್ ವಿಷಧರಾನ್ ಯೇ ಜಿಹ್ಮಗತಯೋಽಹಿತಾಃ |
ನಾಶಯೇದ್ ಪರಬರ್ಹಾಣಿ ಸನ್ನಿವಾಸಾನ್ ನಿವಾಸಯೇತ್ ॥16॥
ವಿಷವನ್ನು ಧರಿಸಿದ ಕುಟಿಲಗತಿಗಳಾದ ಸರ್ಪಗಳಂತಿರುವ ಶತ್ರುಗಳನ್ನು ಸಂಹರಿಸಬೇಕು. ನವಿಲುಗರಿಯ ಸ್ಥಾನದಲ್ಲಿರುವ ಅವರ ಅಂಗರಕ್ಷಕಾದಿ ಪರಿವಾರ- ವನ್ನು ನಾಶಗೊಳಿಸಬೇಕು. ತನ್ನ ಜೊತೆಯಲ್ಲಿ ಇರಲು ಯೋಗ್ಯರಾದವರನ್ನು ತನ್ನ ಜೊತೆಯಲ್ಲಿ ಇಟ್ಟುಕೊಳ್ಳಬೇಕು.
ಸದಾ ಬರ್ಹಿನಿಭಃ ಕಾಮಂ ಪ್ರಸಕ್ತಿಕೃತಮಾಚರೇತ್ |
ಸರ್ವತಶ್ಚಾದದೇತ್ ಪ್ರಜ್ಞಾಂ ಪತಂಗಾನ್ ಗಹನೇಷ್ವಿವ |
ಏವಂ ಮಯೂರವದ್ ರಾಜಾ ಸ್ವರಾಷ್ಟ್ರಂ ಪರಿಪಾಲಯೇತ್ ॥17॥
ಮಯೂರದಂತೆ ಸಮೀಪದಲ್ಲಿ ಸುಲಭವಾಗಿ ದೊರೆಯುವ ಕಾಮವನ್ನು ಮಾತ್ರ ಅನುಭವಿಸಬೇಕು. ಕಾಡಿನಲ್ಲಿ ಪತಂಗಗಳನ್ನು ಹಿಡಿದಂತೆ ಪ್ರಜ್ಞೆಯನ್ನು ಮಾತ್ರ ಎಲ್ಲ ಕಡೆಗಳಿಂದಲೂ ಸಂಪಾದಿಸಬೇಕು. ಹೀಗೆ ನವಿಲಿನಂತೆ ನಡೆದುಕೊಳ್ಳುವ ರಾಜನು ತನ್ನ ರಾಷ್ಟ್ರವನ್ನು ರಕ್ಷಿಸುವನು.
ಆತ್ಮವೃದ್ಧಿಕರೀಂ ನೀತಿಂ ವಿದಧೀತ ವಿಚಕ್ಷಣಃ |
ಆತ್ಮಸಂಯಮನಂ ಬುದ್ಧ್ಯಾ ಪರಬುದ್ಧ್ಯಾ ವಿಚಾರಣಾ |
ಬುದ್ಧ್ಯಾ ಚಾತ್ಮಗುಣಪ್ರಾಪ್ತಿರೇತಚ್ಛಾಸ್ತ್ರನಿದರ್ಶನಮ್ ॥18॥
ವಿಚಕ್ಷಣನಾದ ರಾಜನು ತನಗೆ ವೃದ್ಧಿಯುಂಟಾಗುವ ನೀತಿಯನ್ನು ಅನುಸರಿಸ- ಬೇಕು. ತನ್ನ ಬುದ್ಧಿಯಿಂದ ತನ್ನನ್ನು ನಿಯಂತ್ರಿಸಿಕೊಂಡು ಅಮಾತ್ಯಾದಿ ಪರಬುದ್ಧಿ- ಯಿಂದ ವಿಚಾರಣೆಯನ್ನು ಮಾಡಬೇಕು. ವಿಮರ್ಶೆಯಿಂದ ಆತ್ಮಗುಣ ಪ್ರಾಪ್ತಿಯಾ- ಗುತ್ತದೆ ಎಂಬುದು ಶಾಸ್ತ್ರದ ಆದೇಶವಾಗಿದೆ.
ಪರಂ ಚಾಶ್ವಾಸಯೇತ್ ಸಾಮ್ನಾ ಸ್ವಶಕ್ತಿಂ ಚೋಪಲಕ್ಷಯೇತ್ |
ಆತ್ಮನಃ ಪರಿಮರ್ಶೇನ ಬುದ್ಧಿಂ ಬುದ್ಧ್ಯಾ ವಿಚಾರಯೇತ್ |
ಸಾಂತ್ವಯೋಗಮತಿಃ ಪ್ರಾಜ್ಞಃ ಕಾರ್ಯಾಕಾರ್ಯವಿಚಾರಕಃ ॥19॥
ಒಳ್ಳೆಯ ಮಾತುಗಳಿಂದ (ಸಾಮೋಪಾಯಗಳಿಂದ) ಇನ್ನೊಬ್ಬನು ತನ್ನಲ್ಲಿ ವಿಶ್ವಾಸವಿಡುವಂತೆ ಮಾಡಬೇಕು. ತನ್ನ ಶಕ್ತಿಯನ್ನು ತಾನು ಗಮನಿಸಬೇಕು. ತನ್ನನ್ನು ತಾನು ಪರಾಮರ್ಶೆಮಾಡಿಕೊಂಡು ಪರರ ಬುದ್ಧಿಯನ್ನು ತನ್ನ ಬುದ್ಧಿಯಿಂದ ವಿಚಾರಿಸಿ ತಿಳಿದು ಪ್ರಾಜ್ಞನಾದ ರಾಜನು ಸಾಮೋಪಾಯದಲ್ಲಿ ಬುದ್ಧಿಯನ್ನಿಟ್ಟು ಯಾವುದು ಕಾರ್ಯ ಯಾವುದು ಅಕಾರ್ಯ ಎಂದು ವಿಚಾರ ಮಾಡಬೇಕು.
ನಿಗೂಢಬುದ್ಧಿರ್ಧೀರಃ ಸ್ಯಾದ್ ವಕ್ತವ್ಯೋ ವಕ್ಷ್ಯತೇ ತಥಾ |
ಸನ್ನಿಕೃಷ್ಟಾಂ ಕಥಾಂ ಪ್ರಾಜ್ಞೋ ಯದಿ ಬುದ್ಧ್ಯಾ ಬೃಹಸ್ಪತಿಃ |

ಸ್ವಭಾವಮೇಷ್ಯತೇ ತಪ್ತಂ ಕೃಷ್ಣಾಯಸಮಿವೋದಕೇ ॥20॥
ಧೀರನಾದ ರಾಜನು ತನ್ನ ಬುದ್ಧಿಯನ್ನು ಬಹಿರಂಗ ಪಡಿಸಬಾರದು. ಎಷ್ಟು ಹೇಳಬೇಕೋ ಅಷ್ಟನ್ನು ಮಾತನಾಡಬೇಕು. ಬುದ್ಧಿಯಿಂದ ಬೃಹಸ್ಪತಿಗೆ ಸಮನಾ- ಗಿದ್ದರೂ ಪ್ರಾಕೃತವಾದ ಜನರು ಮಾತನಾಡುವಂತೆ ಮಾತನಾಡಿದರೆ ಅದು ಅವನ ಸ್ವಭಾವವೆಂದೇ ತಿಳಿಯಬೇಕು. ಕಾದ ಕಬ್ಬಿಣವನ್ನು ನೀರಿನಲ್ಲಿ ಹಾಕಿದರೆ ಅದು ಮೊದಲಿನಂತೆ ಕಪ್ಪಾಗಿಯೂ ತಣ್ಣಗೂ ಆಗುವುದಷ್ಟೇ!
ಅನುಯುಂಜೀತ ಕೃತ್ಯಾನಿ ಸರ್ವಾಣ್ಯೇವ ಮಹೀಪತಿಃ |
ಆಗಮೈರುಪದಿಷ್ಟಾನಿ ಸ್ವಸ್ಯ ಚೈವ ಪರಸ್ಯ ಚ ॥21॥
ರಾಜನಾದವನು ಶಾಸ್ತ್ರೋಪದಿಷ್ಟವಾದ, ತಾನು ಮಾಡಬೇಕಾದ ಮತ್ತು ಶತ್ರು- ಗಳು ಮಾಡುವ ಎಲ್ಲ ಕಾರ್ಯಗಳನ್ನೂ ಮಂತ್ರಿಗಳ ಜೊತೆಯಲ್ಲಿ ಪ್ರಶ್ನೆ ಮಾಡಿ ವಿಚಾರ ಮಾಡಬೇಕು.
ಮೃದುಶೀಲಂ ತಥಾ ಪ್ರಾಜ್ಞಂ ಶೂರಂ ಚಾರ್ಥವಿಶಾರದಮ್ |
ಸ್ವಕರ್ಮಣಿ ನಿಯುಂಜೀತ ಯೇ ಚಾನ್ಯೇ ಚ ಬಲಾಧಿಕಾಃ ॥22॥
ಮೃದುಸ್ವಭಾವವುಳ್ಳವನೂ, ಪ್ರಾಜ್ಞನೂ, ಶೂರನೂ, ಅರ್ಥವಿಶಾರದನೂ ಆದ ಸೇವಕನನ್ನೂ ಮತ್ತು ಬಲಿಷ್ಠರಾದವರನ್ನೂ ತನ್ನ ಕರ್ಮಗಳಲ್ಲಿ ನಿಯೋಜಿಸ- ಬೇಕು.
ಅಥ ದೃಷ್ಟಾನಿ ಯುಕ್ತಾನಿ ಸ್ವಾನುರೂಪೇಷು ಕರ್ಮಸು |
ಸರ್ವಾಂಸ್ತಾನನುವರ್ತೇತ ಸ್ವರಾಂಸ್ತಂತ್ರೀರಿವಾಯತಾ ॥23॥
ಶಾಸ್ತ್ರದೃಷ್ಟವಾದ ಮತ್ತು ಯುಕ್ತಿಯುಕ್ತವಾದ ಕರ್ಮಗಳಲ್ಲಿ ತನಗೆ ಅನುರೂಪ- ರಾದ ಅಧಿಕಾರಿಗಳನ್ನು ನಿಯಮಿಸಬೇಕು. ತಂತಿಯು ಸ್ವರಗಳನ್ನು ಅನುಸರಿಸುವಂತೆ ರಾಜನು ಅವರೆಲ್ಲರನ್ನೂ ಅನುಸರಿಸಿ ನಡೆಯಬೇಕು.
ಧರ್ಮಾಣಾಮವಿರೋಧೇನ ಸರ್ವೇಷಾಂ ಪ್ರಿಯಮಾಚರೇತ್ |
ಮಮಾಯಮಿತಿ ರಾಜಾ ಯಃ ಸ ಪರ್ವತ ಇವಾಚಲಃ ॥24॥
ಧರ್ಮಕ್ಕೆ ವಿರೋಧ ಬರದಂತೆ ಎಲ್ಲರಿಗೂ ಪ್ರಿಯವನ್ನುಂಟುಮಾಡಬೇಕು. ಪ್ರಜೆಗಳನ್ನು ನನ್ನವರು ಎಂದು ತಿಳಿಯುವ ರಾಜನು ಪರ್ವತದಂತೆ ಸ್ಥಿರವಾಗಿರುತ್ತಾನೆ.
ವ್ಯವಸಾಯಂ ಸಮಾಧಾಯ ಸೂರ್ಯೋ ರಶ್ಮಿಮಿವಾಯತಾಮ್ |
ಧರ್ಮಮೇವಾಭಿರಕ್ಷೇತ ಕೃತ್ವಾ ತುಲ್ಯೇ ಪ್ರಿಯಾಪ್ರಿಯೇ ॥25॥
ಸೂರ್ಯನು ತನ್ನ ದೀರ್ಘವಾದ ರಶ್ಮಿಯಿಂದ ಪ್ರಿಯಾಪ್ರಿಯಗಳೆಲ್ಲವನ್ನೂ ಮುಟ್ಟುವಂತೆ ಪ್ರಯತ್ನವನ್ನು ಮುಂದಿಟ್ಟುಕೊಂಡು ಪ್ರಿಯಾಪ್ರಿಯಗಳನ್ನು ಸಮಾನ- ವಾಗಿ ಎಣಿಸಿ ಧರ್ಮವನ್ನೇ ರಕ್ಷಿಸಬೇಕು.
ಕುಲಪ್ರಕೃತಿದೇಶಾನಾಂ ಧರ್ಮಜ್ಞಾನ್ ಮೃದುಭಾಷಿಣಃ |
ಮಧ್ಯೇ ವಯಸಿ ನಿರ್ದೋಷಾನ್ ಹಿತೇ ಯುಕ್ತಾನ್ ಜಿತೇಂದ್ರಿಯಾನ್ ॥26
ಅಲುಬ್ಧಾನ್ ಶಿಕ್ಷಿತಾನ್ ದಾಂತಾನ್ ಧರ್ಮೇಷು ಪರಿನಿಷ್ಠಿತಾನ್ |
ಸ್ಥಾಪಯೇತ್ ಸರ್ವಕಾರ್ಯೇಷು ರಾಜಾ ಧರ್ಮಾರ್ಥರಕ್ಷಿಣಃ ॥27॥
ಕುಲಧರ್ಮಗಳನ್ನು ಸ್ವಭಾವಧರ್ಮಗಳನ್ನು ಮತ್ತುದೇಶಧರ್ಮಗಳನ್ನು ತಿಳಿದ, ಮೃದುಭಾಷಿಗಳಾದ, ಮಧ್ಯವಯಸ್ಸಿನಲ್ಲಿರುವ, ದೋಷದೂರರಾದ ಜಿತೇಂದ್ರಿ- ಯರಾದ, ರಾಜನ ಹಿತದಲ್ಲಿ ಆಸಕ್ತರಾದ, ಲೋಭಿಗಳಲ್ಲದ, ಸುಶಿಕ್ಷಿತರಾದ, ಇಂದ್ರಿಯನಿಗ್ರಹವುಳ್ಳ, ಧರ್ಮದಲ್ಲಿ ಪರಿನಿಷ್ಠಿತರಾದ, ಅಧಿಕಾರಿಗಳನ್ನು ಧರ್ಮ- ರಕ್ಷಕರನ್ನಾಗಿ ಮತ್ತುಅರ್ಥರಕ್ಷಕರನ್ನಾಗಿ ಎಲ್ಲ ಕಾರ್ಯಗಳಲ್ಲಿಯೂ ಸ್ಥಾಪಿಸಬೇಕು.
ಏತೇನೈವ ಪ್ರಕಾರೇಣ ಕೃತ್ಯಾನಾಮಾಗತಿಂ ಗತಿಮ್ |
ಯುಕ್ತಃ ಸಮನುತಿಷ್ಠೇತ ತುಷ್ಟಶ್ಚಾರೈರುಪಸ್ಕೃತಃ ॥28॥
ಇದೇ ರೀತಿಯಿಂದ ಕಾರ್ಯಗಳ ಆದ ಅಥವಾ ಹೋದ ಗತಿಯನ್ನು ಚಾರರ ಮೂಲಕವಾಗಿ ಎಲ್ಲವನ್ನೂ ತಿಳಿದು ಎಚ್ಚರಿಕೆಯಿಂದ ಕೂಡಿದವನಾಗಿ ಸಂತೋಷ- ದಿಂದ ಅನುಷ್ಠಾನ ಮಾಡಬೇಕು.
ಅಮೋಘಕ್ರೋಧಹರ್ಷಸ್ಯ ಸ್ವಯಂ ಕೃತ್ಯಾನ್ವವೇಕ್ಷಿಣಃ |
ಆತ್ಮಪ್ರತ್ಯಯಕೋಶಸ್ಯ ವಸುದೈವ ವಸುಂಧರಾ ॥29॥
ಯಾವ ರಾಜನ ಕ್ರೋಧ ಮತ್ತು ಹರ್ಷಗಳು ವ್ಯರ್ಥವಲ್ಲವೋ, ಯಾವ ರಾಜನು ಸ್ವತಃ ಎಲ್ಲ ಕಾರ್ಯಗಳ ಮೇಲ್ವಿಚಾರಣೆಯನ್ನು ಮಾಡುತ್ತಾನೆಯೋ ಮತ್ತು ತನ್ನನ್ನೇ ತಾನು ನಂಬುತ್ತಾನೆಯೋ (ಆತ್ಮವಿಶ್ವಾಸವೇ ಅವನಿಗೆ ಕೋಶವಾಗಿದೆಯೋ) ಅವನಿಗೆ ಭೂಮಿಯು ಐಶ್ವರ್ಯವನ್ನೇ ಕೊಡುತ್ತದೆ.
ವ್ಯಕ್ತಶ್ಚಾನುಗ್ರಹೋ ಯಸ್ಯ ಯಥಾರ್ಥಶ್ಚಾಪಿ ನಿಗ್ರಹಃ |
ಗುಪ್ತಾತ್ಮಾ ಗುಪ್ತರಾಷ್ಟ್ರಶ್ಚ ಸ ರಾಜಾ ರಾಜಧರ್ಮವಿತ್ ॥30॥
ಯಾವನ ಅನುಗ್ರಹವು ಪ್ರಜೆಗಳ ದೃಷ್ಟಿಗೆ ಗೋಚರವಾಗುತ್ತದೆಯೋ, ನಿಗ್ರಹವೂ ಅಪರಾಧಕ್ಕೆ ಅನುಗುಣವಾಗಿ ಪ್ರಜೆಗಳಿಗೆ ಗೋಚರವಾಗುತ್ತದೆಯೋ ಅಂತಹ ತನ್ನನ್ನು ರಕ್ಷಿಸಿಕೊಂಡು ರಾಷ್ಟ್ರವನ್ನೂ ರಕ್ಷಿಸುವ ರಾಜನು ರಾಜಧರ್ಮವನ್ನು ತಿಳಿದವನು.
ನಿತ್ಯಂ ರಾಷ್ಟ್ರಮವೇಕ್ಷೇತ ಗೋಭಿಃ ಸೂರ್ಯ ಇವೋತ್ಪತನ್ |
ಚಾರಾಂಶ್ಚಾನುಚರಾನ್ ವಿದ್ಯಾತ್ ತಥಾ ಬುದ್ಧ್ಯಾ ನ ಸಂಜ್ವರೇತ್ ॥31॥
ಉದಯಿಸುವ ಸೂರ್ಯನು ತನ್ನ ಕಿರಣಗಳಿಂದ ಎಲ್ಲವನ್ನೂ ನೋಡುವಂತೆ ನಿತ್ಯವೂ ರಾಷ್ಟ್ರವನ್ನು ನೋಡಿಕೊಳ್ಳಬೇಕು. ಚಾರರನ್ನು ಅವರ ಅನುಚರರನ್ನು ತಿಳಿದುಕೊಳ್ಳಬೇಕು. ಮನಸ್ಸಿನಲ್ಲಿ ವಿಹ್ವಲನಾಗಬಾರದು.
ಕಾಲಪ್ರಾಪ್ತಮುಪಾದದ್ಯಾನ್ನಾರ್ಥಂ ರಾಜಾ ಪ್ರಸೂಚಯೇತ್ |

ಅಹನ್ಯಹನಿ ಸಂದುಹ್ಯಾನ್ಮಹೀಂ ಗಾಮಿವ ಬುದ್ಧಿಮಾನ್ ॥32॥
ಆಯಾ ಕಾಲದಲ್ಲಿ ದೊರೆಯುವ ವಸ್ತುಗಳನ್ನು ಸಂಗ್ರಹಿಸಬೇಕು. ರಾಜನು ತಾನು ಮಾಡಲಿರುವ ಕಾರ್ಯವನ್ನು ಮೊದಲೇ ಸೂಚಿಸಬಾರದು. ವಿವೇಕಿ- ಯಾದವನು ನಿತ್ಯವೂ ಹಸುವಿನಿಂದ ಹಾಲು ಕರೆಯುವಂತೆ ರಾಜನು ಭೂಮಿ- ಯಿಂದ ಪ್ರತಿದಿನವೂ ಯೋಗ್ಯವಾದುದನ್ನು ಸಂಪಾದಿಸಬೇಕು.
ಯಥಾ ಕ್ರಮೇಣ ಪುಷ್ಪೇಭ್ಯಶ್ಚಿನೋತಿ ಮಧು ಷಟ್ಪದಃ |
ತಥಾ ದ್ರವ್ಯಮುಪಾದಾಯ ರಾಜಾ ಕುರ್ವೀತ ಸಂಚಯಮ್ ॥33॥
ದುಂಬಿಯು ಹೂಗಳಿಂದ ಕ್ರಮವಾಗಿ ಸ್ವಲ್ಪ ಸ್ವಲ್ಪ ಮಕರಂದವನ್ನು ಸಂಗ್ರಹಿ- ಸುವಂತೆ ರಾಜನು ಪ್ರಜೆಗಳಿಂದ ಸ್ವಲ್ಪಸ್ವಲ್ಪವಾಗಿ ದ್ರವ್ಯವನ್ನು ಸಂಗ್ರಹಿಸಿ ಅದನ್ನು ಬೆಳೆಸಬೇಕು.
ಯದಿ ಗುಪ್ತಾವಶಿಷ್ಟಂ ಸ್ಯಾತ್ ತದ್ವಿತಂ ಧರ್ಮಕಾಮಯೋಃ |
ಸಂಚಯಾನುವಿಸರ್ಗೀ ಸ್ಯಾದ್ ರಾಜಾ ಶಾಸ್ತ್ರವಿದಾತ್ಮವಾನ್ ॥34॥
ತಾನು ಸಂಗ್ರಹಿಸಿದ ಕೋಶವು ಧರ್ಮ ಕಾಮಗಳಿಗೆ ಉಪಯೋಗಿಸಿ ಗುಪ್ತವಾಗಿ ಇಟ್ಟುದದಕ್ಕಿಂತಲೂ ಅಧಿಕವಾದರೆ ಅದನ್ನು ಶಾಸ್ತ್ರವನ್ನು ತಿಳಿದ ಧೈರ್ಯಶಾಲಿಯಾದ ರಾಜನು ಸಂಚಯಕ್ಕನುಗುಣವಾಗಿ ಪ್ರಜೆಗಳಿಗೆ ದಾನ ಮಾಡಬೇಕು.
ನಾಲ್ಪಮರ್ಥಂ ಪರಿಭವೇನ್ನಾವಮನ್ಯೇತ ಶಾತ್ರವಾನ್ |
ಬುದ್ಧ್ಯಾಽವಬುದ್ಧ್ಯೇದಾತ್ಮಾನಂ ನ ಚಾಬುದ್ಧಿಷು ವಿಶ್ವಸೇತ್ ॥35॥
ಅಲ್ಪವಾದ ಧನವನ್ನು ತಿರಸ್ಕರಿಸಬಾರದು. ಶತ್ರುಗಳನ್ನು ಉಪೇಕ್ಷೆ ಮಾಡ- ಬಾರದು. ತನ್ನನ್ನೇ ತನ್ನ ಬುದ್ಧಿಯಿಂದ ಪರೀಕ್ಷಿಸಿಕೊಳ್ಳಬೇಕು. ಬುದ್ಧಿಹೀನರಾದವರಲ್ಲಿ ವಿಶ್ವಾಸ ಮಾಡಬಾರದು.
ಧೃತಿರ್ದಾಕ್ಷ್ಯಂ ಸಂಯಮೋ ಬುದ್ಧಿರಗ್ರ್ಯಾ
ಧೈರ್ಯಂ ಶೌರ್ಯಂ ದೇಶಕಾಲೋಽಪ್ರಮಾದಃ |
ಸ್ವಲ್ಪಸ್ಯ ವಾ ಮಹತೋ ವಾಪಿ ವೃದ್ಧೌ
ಧನಸ್ಯೈತಾನ್ಯಷ್ಟ ಸಮಿಂಧನಾನಿ ॥36॥
ಧೈರ್ಯ, ದಕ್ಷತೆ, ಸಂಯಮ, ಶ್ರೇಷ್ಠವಾದ ಬುದ್ಧಿ, ಧೈರ್ಯ, ಶೌರ್ಯ, ದೇಶಕಾಲಾನುಕೂಲತೆ, ಅಪ್ರಮಾದ ಈ ಎಂಟು ಗುಣಗಳು ಸ್ವಲ್ಪ ಧನವನ್ನು ಅಥವಾ ಮಹಾಧನವನ್ನು ವೃದ್ಧಿಮಾಡುವುದಕ್ಕೆ ಬೇಕಾದ ಶ್ರೇಷ್ಠವಾದ ಸಾಧನಗಳು.
ಅಗ್ನಿಸ್ತೋಕೋ ವರ್ಧತೇ ಹ್ಯಾಜ್ಯಸಿಕ್ತೋ
ಬೀಜಂ ಚೈಕಂ ಬಹುಸಾಹಸ್ರಮೇತಿ |
ಕ್ಷಯೋದಯೌ ವಿಪುಲೌ ಸನ್ನಿಶಾಮ್ಯ
ತಸ್ಮಾದಲ್ಪಂ ನಾವಮನ್ಯೇತ ವಿದ್ವಾನ್ ॥37॥
ಅಲ್ಪವಾದ ಅಗ್ನಿಯು ಆಜ್ಯಸಿಕ್ತವಾಗಿ ಬೆಳೆಯುತ್ತದೆ. ಭೂಮಿಯಲ್ಲಿ ನೆಟ್ಟ ಒಂದು ಬೀಜವು ಅನೇಕಸಹಸ್ರ ಬೀಜಗಳಾಗುತ್ತವೆ. ಸಣ್ಣಪದಾರ್ಥದಿಂದುಂಟಾಗುವ ಅಭಿ- ವೃದ್ಧಿ ಮತ್ತು ಅವನತಿಗಳು ವಿಪುಲವಾದವುಗಳು ಎಂದು ಚೆನ್ನಾಗಿ ತಿಳಿದು ವಿದ್ವಾಂಸ- ನಾದವನು ಅಲ್ಪವಾದುದನ್ನು ಉಪೇಕ್ಷಿಸಬಾರದು.
ಬಾಲೋಽಬಾಲಃ ಸ್ಥವಿರೋ ವಾ ರಿಪುರ್ಯಃ
ಸದಾ ಪ್ರಮತ್ತಂ ಪುರುಷಂ ನಿಹನ್ಯಾತ್ |
ಕಾಲೇನಾನ್ಯಸ್ತಸ್ಯ ಮೂಲಂ ಹರೇತ
ಕಾಲಜ್ಞಾತಾ ಪಾರ್ಥಿವಾನಾಂ ವರಿಷ್ಠಃ ॥38॥
ಪ್ರಮತ್ತನಾದ ಶತ್ರುವು ಬಾಲನಾಗಲೀ, ಯುವಕನಾಗಲೀ, ವೃದ್ಧನಾಗಲೀ ಅವನನ್ನು ಸಂಹರಿಸಬೇಕು. ಇಲ್ಲದಿದ್ದರೆ ಅವನು ಅವನಿಗೆ ಯೋಗ್ಯವಾದ ಕಾಲದಲ್ಲಿ ಈ ರಾಜನ ಮೂಲವನ್ನೇ ನಾಶ ಮಾಡಬಹುದು. ಆಯಾ ಕಾರ್ಯವನ್ನು ಮಾಡಲು ಯೋಗ್ಯವಾದ ಕಾಲವನ್ನು ತಿಳಿದ ರಾಜನು ರಾಜರಲ್ಲಿ ಶ್ರೇಷ್ಠನಾದವನಾಗುತ್ತಾನೆ.
ಹರೇತ್ ಕೀರ್ತಿಂ ಧರ್ಮಮಸ್ಯೋಪರುಂಧ್ಯಾದ್
ಅರ್ಥೇ ವಿಘ್ನಂ ವೀರ್ಯಮಸ್ಯೋಪಹನ್ಯಾತ್ |
ರಿಪುರ್ದ್ವೇಷ್ಟಾ ದುರ್ಬಲೋ ವಾ ಬಲೀ ವಾ
ತಸ್ಮಾಚ್ಛತ್ರೌ ನೈವ ಬಿಭ್ಯೇದ್ ಯತಾತ್ಮಾ ॥39॥
ಶತ್ರುವಿನ ಕೀರ್ತಿಯನ್ನು ವಿನಾಶಗೊಳಿಸಬೇಕು. ಅವನ ಧರ್ಮಕ್ಕೆ ಅಡ್ಡಿಯನ್ನು ಮಾಡಬೇಕು. ಅವನ ಅರ್ಥಕ್ಕೆ ವಿಘ್ನವನ್ನುಂಟುಮಾಡಬೇಕು. ಅವನ ಪರಾಕ್ರಮ- ವನ್ನು ನಾಶಗೊಳಿಸಬೇಕು. ದ್ವೇಷವನ್ನು ಮಾಡುವ ಶತ್ರುವು ದುರ್ಬಲನಾಗಿರಲಿ ಅಥವಾ ಪ್ರಬಲನಾಗಿರಲಿ ಪ್ರಯತ್ನಶೀಲನಾದ ರಾಜನು ಅವನಿಗೆ ಹೆದರಬಾರದು.
ಕ್ಷಯೇ ಶತ್ರೋಃ ಸಂಚಯಂ ಪಾಲನಂ ಚಾ-
ಪ್ಯುಭೌ ಬುದ್ಧ್ಯಾ ಸಹಿತೌ ಸರ್ವಕಾಮೌ |
ಅತಶ್ಚಾನ್ಯನ್ಮತಿಮಾನ್ ಸಂದಧೀತ
ತಸ್ಮಾದ್ ರಾಜಾ ಬುದ್ಧಿಮಂತಂ ಶ್ರಯೇತ ॥40॥
ಶತ್ರುವು ನಾಶವನ್ನು ಹೊಂದಿದಾಗ ಅವನ ಕೋಶದಲ್ಲಿರುವ ಧನವನ್ನು ಸಂಗ್ರಹಿಸಬೇಕು. ಮತ್ತು ರಾಜಕುಮಾರನನ್ನು ಆ ದೇಶದಲ್ಲಿಯೇ ರಕ್ಷಿಸಬೇಕು. ಇವೆರಡನ್ನೂ ಬುದ್ಧಿಯಿಂದ ವಿಚಾರಮಾಡಿದರೆ ಇವು ಸರ್ವಕಾಮಪ್ರದವಾಗುತ್ತವೆ. ಶತ್ರುಕುಮಾರನು ದುರ್ಜನನಾಗಿದ್ದರೆ ಅವನ ಬಂಧನ, ಸಜ್ಜನನಾಗಿದ್ದರೆ ಅವನ ಪಾಲನೆ ಎಂಬ ವಿವೇಕವನ್ನು ಹೊಂದಲು ಬುದ್ಧಿಯಿಂದ ವಿಮರ್ಶೆಯು

ಅವಶ್ಯಕ. ಬಂಧನ ಮತ್ತು ರಕ್ಷಣೆಗಳ ಮಧ್ಯದಲ್ಲಿ ಯಾವುದಾದರೂ ಒಂದನ್ನು ಅನುಷ್ಠಾನ ಮಾಡಬೇಕು. ಆದ್ದರಿಂದ ರಾಜನು ಬುದ್ಧಿವಂತನನ್ನು ಆಶ್ರಯಿಸಬೇಕು. (ಲಕ್ಷ್ಮಾಲಂಕಾರ)

ಬುದ್ಧಿರ್ದೀಪ್ತಾ ಬಲವಂತಂ ಹಿನಸ್ತಿ
ಬಲಂ ಬುದ್ಧ್ಯಾ ವರ್ಧತೇ ಪಾಲ್ಯಮಾನಮ್ |
ಶತ್ರುರ್ಬುದ್ಧ್ಯಾ ಸೀದತೇ ವರ್ಧಮಾನೋ
ಬುದ್ಧೇಃ ಪಶ್ಚಾತ್ ಕರ್ಮ ಯತ್ ತತ್ ಪ್ರಶಸ್ತಮ್ ॥41॥

ಕ್ರೂರವಾದ ಬುದ್ಧಿಯು ಬಲಿಷ್ಠನಾದ ತನ್ನನ್ನು ನಾಶಪಡಿಸುತ್ತದೆ. ಬುದ್ಧಿಯಿಂದ ರಕ್ಷಿಸಲ್ಪಡುವ ತನ್ನ ಸೈನ್ಯವು ಅಭಿವೃದ್ಧಿಯನ್ನು ಹೊಂದುತ್ತದೆ. ಸರಿಯಾದ ಬುದ್ಧಿಯನ್ನು ಉಪಯೋಗಿಸಿದರೆ ಏಳಿಗೆಯನ್ನು ಹೊಂದುತ್ತಿರುವ ಶತ್ರುವು ಅವನತಿಯನ್ನು ಹೊಂದುತ್ತಾನೆ. ಆದ್ದರಿಂದ ಬುದ್ಧಿಯು ಪ್ರಶಸ್ತವಾದುದು ಅನಂತರ ಅದಕ್ಕೆ ಅನು- ಗುಣವಾದ ಕರ್ಮವು ಪ್ರಶಸ್ತವಾದುದು.

ಸರ್ವಾನ್ ಕಾಮಾನ್ ಕಾಮಯಾನೋ ಹಿ ಧೀರಃ
ಸತ್ತ್ವೇನಾಲ್ಪೇನಾಪ್ನುತೇ ಹೀನದೇಹಃ |
ಯಥಾತ್ಮಾನಂ ಪ್ರಾರ್ಥಯತೇಽರ್ಥ್ಯಮಾನೈಃ
ಶ್ರೇಯಃಪಾತ್ರಂ ಪೂರಯತೇ ಹ್ಯನಲ್ಪಮ್ ॥42॥

ದೋಷರಹಿತನಾದ ಧೀರನಾದ ರಾಜನು ತನ್ನ ಎಲ್ಲ ಕಾಮಗಳನ್ನೂ ಅಲ್ಪ- ಪ್ರಯತ್ನದಿಂದಲೇ ಪಡೆಯುತ್ತಾನೆ. ಸರ್ವಸಂಪನ್ನನಾಗಿದ್ದರೂ ಪ್ರಜೆಗಳಿಂದ ಅರ್ಥ- ಮಾನಗಳಿಂದ ತಾನು ಪೂಜಿಸಲ್ಪಡಬೇಕೆಂದು ಬಯಸುವ ರಾಜನು ಅನಲ್ಪವಾದ ತನ್ನ ಶ್ರೇಯಃಪಾತ್ರೆಯನ್ನು ಪೂರಣಗೊಳಿಸುವುದಿಲ್ಲ(?). ಅಂತಹ ದುರಾಸೆಯುಳ್ಳ ರಾಜನು ಶ್ರೇಯಸ್ಸನ್ನು ಹೊಂದುವುದಿಲ್ಲ.

ತಸ್ಮಾದ್ ರಾಜಾ ಪ್ರಗೃಹೀತಃ ಪ್ರಜಾಸು
ಮೂಲಂ ಲಕ್ಷ್ಮ್ಯಾಃ ಸರ್ವತೋಽಭ್ಯಾದದೀತ |
ದೀರ್ಘಂ ಕಾಲಮಪಿ ಸಂಪೀಡ್ಯಮಾನೋ
ವಿದ್ಯುತ್ಸಂಪಾತಮಪಿ ನೋ ನಿರ್ಜಿತಃ ಸ್ಯಾತ್ ॥43॥

ಆದ್ದರಿಂದ ಪ್ರಜೆಗಳಿಂದ ಸ್ವೀಕೃತನಾದ ರಾಜನು ಸಂಪತ್ತಿಗೆ ಮೂಲವಾದ ಧನ ವನ್ನು ಪ್ರಜೆಗಳಿಂದ ಎಲ್ಲ ಕಡೆಗಳಿಂದಲೂ ಸಂಗ್ರಹಿಸಬೇಕು. ಅಂತಹ ರಾಜನು ಸಿಡಿಲುಬಡಿದಂತಹ ಅನರ್ಥಕ್ಕೆ ದೀರ್ಘಕಾಲದವರೆಗೆ ಒಳಗಾದರೂ ಪರಾಜಿತ- ನಾಗುವುದಿಲ್ಲ. (ಮಿಂಚಿನಂತಹ ಐಶ್ವರ್ಯವನ್ನು ಹೊಂದಿದರೂ ಪರಾಜಿತನಾಗು- ವುದಿಲ್ಲ - ಲಕ್ಷ್ಮಾಲಂಕಾರ)

ವಿದ್ಯಾ ತಪೋ ವಾ ವಿಪುಲಂ ಧನಂ ವಾ
ಸರ್ವಮೇತದ್ ವ್ಯವಸಾಯೇನ ಶಕ್ಯಮ್ |
ಬ್ರಹ್ಮ ಯತ್ತಂ ನಿವಸತಿ ದೇಹವತ್ಸು
ತಸ್ಮಾದ್ ವಿದ್ಯಾದ್ ವ್ಯವಸಾಯಂ ಪ್ರಭೂತಮ್ ॥44॥

ವಿದ್ಯೆಯಾಗಲೀ, ತಪಸ್ಸಾಗಲೀ, ವಿಪುಲವಾದ ಧನವಾಗಲೀ ಎಲ್ಲವೂ ಪ್ರಯತ್ನ ದಿಂದ ಲಭ್ಯವಾಗುತ್ತದೆ. ಜೀವರಲ್ಲಿ ಪ್ರಯತ್ನರೂಪನಾದ ಪರಬ್ರಹ್ಮನು ನೆಲಸಿದ್ದಾನೆ. ಆದ್ದರಿಂದ ಪ್ರಯತ್ನವು ಶ್ರೇಷ್ಠವಾದುದೆಂದು ತಿಳಿಯಬೇಕು.

ಯತ್ರಾಸತೇ ಮತಿಮಂತೋ ಮನಸ್ವಿನಃ
ಶಕ್ರೋ ವಿಷ್ಣುರ್ಯತ್ರ ಸರಸ್ವತೀ ಚ |
ವಸಂತಿ ಭೂತಾನಿ ಚ ಯತ್ರ ನಿತ್ಯಂ
ತಸ್ಮಾದ್ ವಿದ್ವಾನ್ ನಾವಮನ್ಯೇತ ದೇಹಮ್ ॥45॥

ಯಾವ ದೇಹದಲ್ಲಿ ಮೇಧಾವಿಗಳೂ, ಧೈರ್ಯಶಾಲಿಗಳೂ ಆದ ಇಂದ್ರ, ವಿಷ್ಣು, ಸರಸ್ವತಿಯರು ಮತ್ತು ಎಲ್ಲಾ ಭೂತಗಳೂ ನಿತ್ಯವೂ ನೆಲೆಸಿರುವರೋ ಆ ಕಾರಣದಿಂದ ಆ ದೇಹವನ್ನು ವಿದ್ವಾಂಸನಾದವನು ಅವಮಾನಗೊಳಿಸಬಾರದು.

ಲುಬ್ಧಂ ಹನ್ಯಾತ್ ಸಂಪ್ರದಾನೇನ ನಿತ್ಯಂ
ಲುಬ್ಧಸ್ತೃಪ್ತಿಂ ಪರವಿತ್ತಸ್ಯ ನೈತಿ |
ಸರ್ವೋ ಲುಬ್ಧಃ ಕರ್ಮಗುಣೋಪಭೋಗೇ
ಯೋಽರ್ಥೈರ್ಹೀನೋ ಧರ್ಮಕಾಮೌ ಜಹಾತಿ ॥46॥

ಲೋಭಿಯಾದವನಿಗೆ ಧನವನ್ನು ನೀಡಿಯೇ ಅವನನ್ನು ಜಯಿಸಬೇಕು. ಲೋಭಿ ಯಾದವನು ಇನ್ನೊಬ್ಬರ ವಿತ್ತವು ಎಷ್ಟು ಬಂದರೂ ತೃಪ್ತಿಯನ್ನು ಹೊಂದುವುದಿಲ್ಲ. ಎಲ್ಲರಿಗೂ ಸತ್ಕರ್ಮದಿಂದ ಉಂಟಾದ ಗುಣಗಳ ಭೋಗದಲ್ಲಿ ಆಸೆಯಿರುತ್ತದೆ. ಅರ್ಥಹೀನನಾದವನು ಧರ್ಮವನ್ನೂ, ಕಾಮವನ್ನೂ ಕಳೆದುಕೊಳ್ಳುತ್ತಾನೆ. (ಧರ್ಮಾಚರಣೆಯನ್ನೂ ಮಾಡಲಾರ, ಕಾಮಭೋಗವನ್ನೂ ಮಾಡಲಾರ).

ಧನಂ ಭೋಜ್ಯಂ ಪುತ್ರದಾರಂ ಸಮೃದ್ಧಿಂ
ಸರ್ವೋ ಲುಬ್ಧಃ ಪ್ರಾರ್ಥಯತೇ ಪರೇಷಾಮ್ |
ಲುಬ್ಧೇ ದೋಷಾಃ ಸಂಭವಂತೀಹ ಸರ್ವೇ
ತಸ್ಮಾದ್ ರಾಜಾ ನ ಪ್ರಗೃಹ್ಣೀತ ಲುಬ್ಧಾನ್ ॥47॥

ಲೋಭಿಯಾದವನು ಇನ್ನೊಬ್ಬರ ಧನ ಭೋಜ್ಯವಸ್ತುಗಳು, ಪತ್ನೀಪುತ್ರರು, ಸಮೃದ್ಧಿ ಎಲ್ಲವನ್ನೂ ಅಪೇಕ್ಷಿಸುತ್ತಾನೆ. ಅವನಲ್ಲಿ ಎಲ್ಲ ದೋಷಗಳೂ ಉಂಟಾಗುತ್ತವೆ. ಆದ್ದರಿಂದ ರಾಜನು ಲೋಭಿಗಳನ್ನು ಹತ್ತಿರ ಸೇರಿಸಬಾರದು.

ಸಂದರ್ಶನೇ ಸತ್ಪುರುಷಂ ಜಘನ್ಯಮಪಿ ಚೋದಯೇತ್ |
ಆರಂಭಾನ್ ದ್ವಿಷತಾಂ ಪ್ರಾಜ್ಞಃ ಸರ್ವಾನರ್ಥಾಂಸ್ತು ಸೂದಯೇತ್ ॥48॥

ಅಲ್ಪನಾದ ಸತ್ಪುರುಷನಿಗೂ ಸಂದರ್ಶನವನ್ನು ಕೊಡುವುದಕ್ಕಾಗಿ ಒಳಗೆ ಬಿಡುವಂತೆ ದ್ವಾರಪಾಲಕರಿಗೆ ಸೂಚನೆಯನ್ನು ನೀಡಬೇಕು. ಪ್ರಾಜ್ಞನಾದ ರಾಜನು ಶತ್ರುಗಳ ಸರ್ವೋಪಕ್ರಮಗಳನ್ನು ಮತ್ತು ಸರ್ವಾರ್ಥಗಳನ್ನು ನಾಶಗೊಳಿಸಬೇಕು. - (ಲಕ್ಷ್ಮಾಲಂಕಾರ)
ಧರ್ಮಾನ್ವಿತೇಷು ವಿಜ್ಞಾತೋ ಮಂತ್ರೀ ಗುಪ್ತಶ್ಚ ಪಾಂಡವ |
ಆಪ್ತೋ ರಾಜನ್ ಕುಲೀನಶ್ಚ ಪರ್ಯಾಪ್ತೋ ರಾಜ್ಯಸಂಗ್ರಹೇ ॥49॥
ಎಲೈ ಪಾಂಡವನೇ! ಧರ್ಮಸಂಬದ್ಧಕಾರ್ಯಗಳ ಜ್ಞಾನವುಳ್ಳ, ಸ್ವತಃ ರಕ್ಷಿತ- ನಾದ, ಆಪ್ತನೂ, ಕುಲೀನನೂ ಆದ ಮಂತ್ರಿಯು ರಾಜ್ಯವನ್ನು ಚೆನ್ನಾಗಿ ನೋಡಿ- ಕೊಳ್ಳಲು ಸಮರ್ಥನಾಗುತ್ತಾನೆ.
ವಿಧಿಪ್ರವೃತ್ತಾನ್ ನರದೇವಧರ್ಮಾನ್
ಉಕ್ತಾನ್ ಸಮಾಸೇನ ನಿಬೋಧ ಬುದ್ಧ್ಯಾ |
ಇಮಾನ್ ವಿದಧ್ಯಾದ್ ವ್ಯತಿಸೃತ್ಯ ಯೋಽಸೌ
ರಾಜಾ ಮಹೀಂ ಪಾಲಯಿತುಂ ಸ ಶಕ್ತಃ ॥50॥
ನಾನು ಸಂಕ್ಷೇಪವಾಗಿ ಹೇಳಿದ ಶಾಸ್ತ್ರಗಳಲ್ಲಿ ಪ್ರವೃತ್ತವಾದ ರಾಜಧರ್ಮಗಳನ್ನು ಬುದ್ಧಿಯಿಂದ ತಿಳಿದುಕೋ. ಯಾವ ರಾಜನು ಇವುಗಳನ್ನು ಅನುಸರಿಸಿ ಕಾರ್ಯವನ್ನು ಮಾಡುತ್ತನೆಯೋ ಅವನು ಭೂಮಿಯನ್ನು ಆಳಲು ಸಮರ್ಥನಾಗುತ್ತಾನೆ.
ಅನೀತಿಜಂ ಯದ್ಯವಿಧಾನಜಂ ಸುಖಂ
ಹಠಪ್ರಣೀತಂ ವಿವಿಧಂ ಪ್ರದೃಶ್ಯತೇ |
ನ ವಿದ್ಯತೇ ತಸ್ಯ ಗತಿರ್ಮಹೀಪತೇ-
ರ್ನ ವಿದ್ಯತೇ ರಾಷ್ಟ್ರಜಮುತ್ತಮಂ ಸುಖಮ್ ॥51॥
ಯಾವ ರಾಜನು ಅನ್ಯೆತಿಕವಾದ, ಶಾಸ್ತ್ರಸಮ್ಮತವಲ್ಲದ, ಹಠದಿಂದ ಸಂಪಾದಿಸಿದ ವಿವಿಧಸುಖಗಳಲ್ಲಿ ಪ್ರವೃತ್ತನಾಗುತ್ತಾನೆಯೋ ಅಂತಹ ರಾಜನಿಗೆ ಶ್ರೇಷ್ಠವಾದ ಬುದ್ಧಿ (ಪರಗತಿ) ಇರುವುದಿಲ್ಲ. ರಾಷ್ಟ್ರದಿಂದ ಪ್ರಜೆಗಳಿಗಾಗಲೀ ತನಗಾಗಲೀ ಉಂಟಾಗುವ ಸುಖವೂ ಇರುವುದಿಲ್ಲ.
ಧನ್ಯೈರ್ವಿಶಿಷ್ಟಾನ್ ಮತಿಶೀಲಪೂಜಿತಾನ್
ಗುಣೋಪಪನ್ನಾನ್ ಯುಧಿ ದೃಷ್ಟವಿಕ್ರಮಾನ್ |
ಗುಣೇಷು ದೃಷ್ಟಾನಚಿರಾದಿಹಾತ್ಮವಾನ್
ಸತೋಽಭಿಸಂಧಾಯ ನಿಹಂತಿ ಶಾತ್ರವಾನ್ ॥52॥
ಧನವಂತರಾದ, ಸದ್ಬುದ್ಧಿ ಮತ್ತುಶೀಲಗಳಿಂದ ಪೂಜಿತರಾದ, ಗುಣವಂತರಾದ, ಯುದ್ಧದಲ್ಲಿ ದೃಢವಿಕ್ರಮರಾದ, ಸಜ್ಜನರನ್ನು ಜೊತೆಯಲ್ಲಿರಿಸಿಕೊಂಡು ಅವರ ಜೊತೆಯಲ್ಲಿ ಚಿಂತನೆಯನ್ನು ಮಾಡಿ ಧೈರ್ಯಶಾಲಿಯಾದ ರಾಜನು ಶತ್ರುಗಳನ್ನು ಗೆಲ್ಲುತ್ತಾನೆ.
ಪಶ್ಯೇದುಪಾಯಾನ್ ವಿವಿಧೈಃ ಕ್ರಿಯಾಪಥೈ-
ರ್ನ ಚಾನುಪಾಯೇನ ಮತಿಂ ನಿವೇಶಯೇತ್ |
ಶ್ರಿಯಂ ವಿಶಿಷ್ಟಾಂ ವಿಪುಲಂ ಯಶೋ ಧನಂ
ನ ದೋಷದರ್ಶೀ ಪುರುಷಃ ಸಮಶ್ನುತೇ ॥53॥
ವಿವಿಧಕ್ರಿಯಾ ಮಾರ್ಗಗಳಿಂದ ಶತ್ರುವನ್ನು ಸೋಲಿಸುವ ಉಪಾಯಗಳನ್ನು ನೋಡಬೇಕು. ಉಪಾಯವಲ್ಲದ ರೀತಿಯಲ್ಲಿ ಯೋಚಿಸಬಾರದು. ತಪ್ಪಾಗಿ ಯೋಚಿಸುವ ಪುರುಷನು ವಿಪುಲವಾದ ಸಂಪತ್ತನ್ನಾಗಲೀ, ಕೀರ್ತಿಯನ್ನಾಗಲೀ, ಧನವನ್ನಾಗಲೀ ಗಳಿಸುವುದಿಲ್ಲ.
ಪ್ರೀತಿಪ್ರವೃತ್ತಂ ವಿನಿವರ್ತನಂ ಚ
ಸುಹೃತ್ಸು ವಿಜ್ಞಾಯ ನಿವರ್ತ್ಯ ಚೋಭಯಮ್ |
ಯದೇವ ಮಿತ್ರಂ ಗುರುಭಾರಮಾವಹೇತ್
ತದೇವ ಸುಸ್ನಿಗ್ಧಮುದಾಹರೇದ್ ಬುಧಃ ॥54॥
ಪ್ರೀತಿಯಿಂದ ರಾಜನ ಕಾರ್ಯದಲ್ಲಿ ಪ್ರವೃತ್ತಿ ಮತ್ತು ರಾಜನಿಗೆ ಒದಗ- ಬಹುದಾದ ಅಪಾಯದಿಂದ ನಿವೃತ್ತಿ ಇವೆರಡನ್ನೂ ಸುಹೃಜ್ಜನರಿಂದ ಮಾಡಿಸಿ ಅದರಲ್ಲಿ ಯಾರು ಹೆಚ್ಚಿನ ಭಾರವನ್ನು ಹೊರುತ್ತಾನೆಯೋ (ಹೆಚ್ಚಿನ ಜವಾಬ್ದಾರಿ- ಯನ್ನು ಹೊರುತ್ತಾನೆಯೋ) ಅಂತಹವನನ್ನು ಸ್ನೇಹಯುಕ್ತನಾದ ಮಿತ್ರನೆಂದು ರಾಜನು ಉದಾಹರಿಸಬೇಕು. (ಹೇಳಬೇಕು) (ಲಕ್ಷ್ಮಾಲಂಕಾರ)
ಏತಾನ್ ಮಯೋಕ್ತಾಂಸ್ತವ ರಾಜಧರ್ಮಾನ್
ನೃಣಾಂ ಚ ಗುಪ್ತೌ ಮತಿಮಾದಧತ್ಸ್ವ |
ಅವಾಪ್ಸ್ಯಸೇ ಪುಣ್ಯಫಲಂ ಸುಖೇನ
ಸರ್ವೋ ಹಿ ಲೋಕೋತ್ತಮಧರ್ಮಮೂಲಃ ॥55॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕವಿಂಶತ್ಯಧಿಕಶತತಮೋಽಧ್ಯಾಯಃ ॥121॥
ನಾನು ನಿನಗೆ ಹೇಳಿದ ಈ ರಾಜಧರ್ಮಗಳನ್ನು ತಿಳಿದು ಪ್ರಜೆಗಳನ್ನು ರಕ್ಷಿಸುವುದರಲ್ಲಿ ಬುದ್ಧಿಯನ್ನು ನಿಯೋಜಿಸು. ನೀನು ಸುಖವಾಗಿ ಪುಣ್ಯಫಲವನ್ನು ಗಳಿಸುವಿ. ಎಲ್ಲ ಲೋಕಗಳೂ ಶ್ರೇಷ್ಠವಾದ ಧರ್ಮಮೂಲಗಳಾದವುಗಳು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 120ನೇ ಅಧ್ಯಾಯವು ಮುಗಿಯಿತು.
0

122. ನೂರಇಪ್ಪತ್ತೆರಡನೆಯ ಅಧ್ಯಾಯ
ದಂಡಸ್ವರೂಪಕಥನ
ಯುಧಿಷ್ಠಿರಃ
ಅಯಂ ಪಿತಾಮಹೇನೋಕ್ತೋ ರಾಜಧರ್ಮಃ ಸನಾತನಃ |
ಈಶ್ವರಶ್ಚ ಮಹಾದಂಡೋ ದಂಡೇ ಸರ್ವಂ ಪ್ರತಿಷ್ಠಿತಮ್ ॥1॥
ಯುಧಿಷ್ಠಿರ ಈ ಸನಾತನವಾದ ರಾಜಧರ್ಮವು ಪಿತಾಮಹರಾದ ಬ್ರಹ್ಮ- ದೇವರಿಂದ ಹೇಳಲ್ಪಟ್ಟಿದೆ. ಈಶ್ವರನೇ ಮಹಾದಂಡಸ್ವರೂಪನಾದವನು. ಎಲ್ಲವೂ ದಂಡವನ್ನವಲಂಬಿಸಿದೆ.
ದೇವತಾನಾಮೃಷೀಣಾಂ ಚ ಪಿತೄಣಾಂ ಚ ಮಹಾತ್ಮನಾಮ್ |
ಯಕ್ಷರಕ್ಷಃಪಿಶಾಚಾನಾಂ ಮರ್ತ್ಯಾನಾಂ ಚ ವಿಶೇಷತಃ ॥2॥
ಸರ್ವೇಷಾಂ ಪ್ರಾಣಿನಾಂ ಲೋಕೇ ತಿರ್ಯಕ್ಷ್ವಪಿ ನಿವಾಸಿನಾಮ್ |
ಸರ್ವವ್ಯಾಪೀ ಮಹಾತೇಜಾ ದಂಡಃ ಶ್ರೇಯಾನಿತಿ ಪ್ರಭೋ ॥3॥
ಇತ್ಯೇತದುಕ್ತಂ ಭವತಾ ದಂಡೇನೈವ ಚರಾಚರಮ್ |
ದೃಶ್ಯತೇ ಲೋಕಮಾಸಕ್ತಂ ಸಸುರಾಸುರಮಾನುಷಮ್ ॥4॥
ಎಲೈ ಪ್ರಭುವೇ! ದೇವತೆಗಳು, ಋಷಿಗಳು, ಪಿತೃಗಳು, ಮಹಾತ್ಮರು, ಯಕ್ಷರಕ್ಷ- ಪಿಶಾಚಿಗಳು, ವಿಶೇಷವಾಗಿ ಮನುಷ್ಯರು, ಲೋಕದಲ್ಲಿರುವ ಎಲ್ಲಾ ಪ್ರಾಣಿಗಳು - ಇವರೆಲ್ಲರನ್ನೂ ಮಹಾತೇಜಸ್ಸುಳ್ಳ ಶ್ರೇಷ್ಠವಾದ ದಂಡವು ವ್ಯಾಪಿಸಿಕೊಂಡಿದೆ - ಎಂದು ಹೇಳಿದ್ದೀಯೆ. ಚರಾಚರವಾದ ಸುರಾಸುರಮನುಷ್ಯರಿಂದ ಸಹಿತವಾದ ಲೋಕವು ದಂಡವನ್ನು ಅವಲಂಬಿಸಿಕೊಂಡಿದೆ ಎಂದು ಹೇಳಿದ್ದೀಯೆ.
ಏತದಿಚ್ಛಾಮ್ಯಹಂ ಜ್ಞಾತುಂ ತತ್ತ್ವೇನ ಭರತರ್ಷಭ |
ಕೋ ದಂಡಃ ಕೀದೃಶೋ ದಂಡಃ ಕಿಂರೂಪಃ ಕಿಂಪರಾಯಣಃ ॥5॥
ಕಿಮಾತ್ಮಕಃ ಕಥಂಭೂತಃ ಕತಿ ಮೂರ್ತಿಃ ಕಥಂ ಪ್ರಭುಃ |
ಜಾಗರ್ತಿ ಸ ಕಥಂ ದಂಡಃ ಪ್ರಜಾಸ್ವವಹಿತಾತ್ಮಕಃ ॥6॥
ಎಲೈ ಭರತರ್ಷಭನೇ! ಇದನ್ನು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ. ದಂಡವೆಂದರೆ ಏನು? ಅದು ಎಂತಹದು, ಅದರ ರೂಪವೇನು? ಅದು ಯಾರನ್ನು ಆಶ್ರಯಿಸಿರುತ್ತದೆ? ಅದರ ಮೂಲವೇನು? ಅದಕ್ಕೆ ಎಷ್ಟು ರೂಪಗಳಿವೆ? ಅದು ಹೇಗೆ ಪ್ರಭುತ್ವವನ್ನು ಸ್ಥಾಪಿಸುತ್ತದೆ? ಪ್ರಜೆಗಳಿಗೆ ಅಹಿತರೂಪವಾಗಿರುವ ಆ ದಂಡವು ಹೇಗೆ ಜಾಗರೂಕವಾಗಿರುತ್ತದೆ?
ಕಶ್ಚ ಪೂರ್ವಾಪರಮಿದಂ ಜಾಗರ್ತಿ ಪರಿಪಾಲಯನ್ |
ಕಶ್ಚ ವಿಜ್ಞಾಯತೇ ಪೂರ್ವಂ ಕೋಽಪರೋ ದಂಡಸಂಜ್ಞಿತಃ |
ಕಿಂಸಂಸ್ಥಶ್ಚ ಭವೇದ್ ದಂಡಃ ಕಾ ಚಾಸ್ಯ ಗತಿರಿಷ್ಯತೇ ॥7॥
ದಂಡಕ್ಕಿಂತ ಮೊದಲು ಮತ್ತು ಅನಂತರ ಈ ಜಗತ್ತನ್ನು ಪರಿಪಾಲಿಸುತ್ತಾ ಎಚ್ಚರಿಕೆಯಿಂದ ಇರುವವನು ಯಾರು? ದಂಡಕ್ಕೆ ಮೊದಲು ಏನು ಹೆಸರಿದ್ದಿತು? ಅನಂತರ ಅದಕ್ಕೆ ಬರುವ ಹೆಸರೇನು? ದಂಡವು ಯಾರನ್ನು ಆಶ್ರಯಿಸಿರುತ್ತದೆ? ಅದರ ಗತಿಯೇನು?
ಭೀಷ್ಮಃ
ಶೃಣು ಕೌರವ್ಯ ಯೋ ದಂಡೋ ವ್ಯವಹಾರ್ಯೋ ಯಥಾ ಚ ಸಃ |
ಯಸ್ಮಿನ್ ಹಿ ಸರ್ವಮಾಯತ್ತಂ ಸ ದಂಡ ಇಹ ಕೇವಲಃ ॥8॥
ಭೀಷ್ಮರು ಎಲೈ ಕೌರವ್ಯನೇ! ದಂಡವೆಂದರೆ ಯಾವುದು. ಅದರ ಜೊತೆಯಲ್ಲಿ ಹೇಗೆ ವ್ಯವಹರಿಸಬೇಕೆಂಬುದನ್ನು ಕೇಳು. ಈ ಜಗತ್ತೆಲ್ಲವೂ ಯಾವುದನ್ನು ಅವ- ಲಂಬಿಸಿಕೊಂಡಿದೆಯೋ ಅದು ಶ್ರೇಷ್ಠವಾದ ದಂಡ.
ಧರ್ಮಸ್ಯಾರ್ಥೇ ಮಹೀಪಾಲ ವ್ಯವಹಾರ ಇತೀಷ್ಯತೇ |
ತಸ್ಯ ಲೋಪಃ ಕಥಂ ನ ಸ್ಯಾಲ್ಲೋಕೇಷ್ವವಹಿತಾತ್ಮನಃ |
ಇತ್ಯರ್ಥಂ ವ್ಯವಹಾರಸ್ಯ ವ್ಯವಹಾರತ್ವಮಿಷ್ಯತೇ ॥9॥
ಏಕಾಗ್ರಚಿತ್ತವುಳ್ಳ ಮನುಷ್ಯನಿಗೆ ಲೋಕದಲ್ಲಿ ಧರ್ಮಲೋಪವಾಗಬಾರದು ಎಂಬ ಉದ್ದೇಶದಿಂದ ಎಂತಹ ವಿಚಾರವು ಉಂಟಾಗುತ್ತದೆಯೋ ಅದಕ್ಕೆ ವ್ಯವಹಾರ ಎಂದು ಹೆಸರು (ಲಕ್ಷಾಲಂಕಾರ).
ಅಪಿ ಚೈತತ್ ಪುರಾ ರಾಜನ್ ಮನುನಾ ಪ್ರೋಕ್ತಮಾದಿತಃ |
ಸುಪ್ರಣೀತೇನ ದಂಡೇನ ಪ್ರಿಯಾಪ್ರಿಯಸಮಾತ್ಮನಾ |
ಪ್ರಜಾ ರಕ್ಷತಿ ಯಃ ಸಮ್ಯಗ್ ಧರ್ಮ ಏವ ಸ ಕೇವಲಃ ॥10॥
ಎಲೈ ರಾಜನೇ! ಇದನ್ನು ಮೊದಲು ಮನುಷ್ಯಲೋಕದಲ್ಲಿ ಮನುವು ಹೇಳಿದನು. ಪ್ರಿಯಾಪ್ರಿಯಗಳನ್ನು ಪಕ್ಷಪಾತವಿಲ್ಲದೆ ನೋಡಿ ಯಾರು ದಂಡವನ್ನು ಚೆನ್ನಾಗಿ ಪ್ರಯೋಗಿಸಿ ಪ್ರಜೆಗಳನ್ನು ರಕ್ಷಿಸುತ್ತಾನೆಯೋ ಅದು ಶ್ರೇಷ್ಠವಾದ ಧರ್ಮ.
ಅಥೋಕ್ತಮೇತದ್ ವಚನಂ ಪ್ರಾಗೇವ ಮನುನಾ ಪುರಾ |
ಜನ್ಮ ಚೋಕ್ತಂ ವಸಿಷ್ಠೇನ ಬ್ರಹ್ಮಣೋ ವಚನಂ ಮಹತ್ ॥11॥
ದಂಡ ಎಂಬ ವಚನವು ಹಿಂದೆ ಮನುವಿನಿಂದಲೇ ಹೇಳಲ್ಪಟ್ಟಿತು. ದಂಡದ ಜನ್ಮವು ವಸಿಷ್ಠರಿಂದ ಹೇಳಲ್ಪಟ್ಟಿತು. ಈ ವಿಷಯದಲ್ಲಿ ಬ್ರಹ್ಮದೇವರ ಶ್ರೇಷ್ಠವಾದ ವಚನವು ಇದೆ.
ಪ್ರಾಗಿದಂ ವಚನಂ ಪ್ರೋಕ್ತಮತಃ ಪ್ರಾಗ್ವಚನಂ ವಿದುಃ |
ವ್ಯವಹಾರಸ್ಯ ಚಾಖ್ಯಾನಾದ್ ವ್ಯವಹಾರ ಇಹೋಚ್ಯತೇ ॥12॥

ದಂಡವನ್ನು ಮೊದಲು ಹೇಳಿದ ಕಾರಣ ಇದಕ್ಕೆ ಪ್ರಾಗ್ವಚನವೆಂಬ ಹೆಸರು ಎಂದು ಜ್ಞಾನಿಗಳು ತಿಳಿಯುತ್ತಾರೆ. ಜಗತ್ತಿನ ವ್ಯವಹಾರವನ್ನು ಸ್ಪಷ್ಟಪಡಿಸುವುದರಿಂದ ಇದಕ್ಕೆ ವ್ಯವಹಾರ ಎಂದು ಹೆಸರು.
ದಂಡಾತ್ ತ್ರಿವರ್ಗಃ ಸತತಂ ಸುಪ್ರಣೀತಾತ್ ಪ್ರವರ್ತತೇ |
ದೈವಂ ಹಿ ಪರಮೋ ದಂಡೋ ರೂಪತೋಽಗ್ನಿರಿವೋಚ್ಛಿಖಃ ॥13॥
ನೀಲೋತ್ಪಲದಲಶ್ಯಾಮಶ್ಚತುರ್ದಂಷ್ಟ್ರಶ್ಚತುರ್ಭುಜಃ |
ಅಷ್ಟಪಾನ್ನೈಕನಯನಃ ಶಂಕುಕರ್ಣೋರ್ಧ್ವರೋಮವಾನ್ ॥14॥
ಜಟೀ ದ್ವಿಜಿಹ್ವಸ್ತಾಮ್ರಾಸ್ಯೋ ಮೃಗರಾಜತನುಚ್ಛದಃ |
ಏತದ್ ರೂಪಂ ಬಿಭರ್ತ್ಯುಗ್ರಂ ದಂಡೋ ನಿತ್ಯಂ ದುರಾವರಃ ॥15॥
ಚೆನ್ನಾಗಿ ಪ್ರಯೋಗಿಸಿದ ದಂಡದಿಂದ ಧರ್ಮಾರ್ಥಕಾಮಗಳು ಪ್ರವೃತ್ತವಾಗು- ತ್ತವೆ. ದೈವವೇ (ಈಶ್ವರನೇ) ಸರ್ವೋತ್ತಮವಾದ ದಂಡ. ಅವನ ರೂಪವು ಊರ್ಧ್ವಶಿಖೆಯನ್ನು ಹೊಂದಿದ ಅಗ್ನಿಯಂತೆ. ಅವನು ನೀಲೋತ್ಪಲದಲಶ್ಯಾಮ. ನಾಲ್ಕು ದಂಷ್ಟ್ರಗಳನ್ನೂ, ನಾಲ್ಕು ಭುಜಗಳನ್ನೂ, ಎಂಟು ಪಾದಗಳನ್ನೂ, ಅನೇಕ ನೇತ್ರಗಳನ್ನೂ, ಶಂಕುವಿನ ಆಕಾರದ ಕಿವಿಯನ್ನೂ, ಊರ್ಧ್ವರೂಪವನ್ನೂ ಹೊಂದಿ ರುವವನು, ಜಟೆಯನ್ನು ಧರಿಸಿರುವವನು, ಎರಡುನಾಲಿಗೆ ಉಳ್ಳವನು, ಕೆಂಪಾದ ಮುಖವುಳ್ಳವನು, ಸಿಂಹದ ಬಣ್ಣದ ರೋಮಗಳನ್ನು ಹೊಂದಿದವನು. ನಿವಾರಿಸಲು ಅಸಾಧ್ಯವಾದ ಉಗ್ರವಾದ ಈಶ್ವರರೂಪವಾದ ದಂಡವು ಇಂತಹ ರೂಪವನ್ನು ಧರಿಸಿರುತ್ತದೆ.
ಅಸಿರ್ಗದಾ ಧನುಃ ಶಕ್ತಿಸ್ತ್ರಿಶೂಲಂ ಮುದ್ಗರಃ ಶರಃ |
ಮುಸಲಂ ಪರಶುಶ್ಚಕ್ರಂ ಪ್ರಾಸೋ ದಂಡಷ್ಟಿರ್ತೋಮರಾಃ ॥16॥
ಸರ್ವಪ್ರಹರಣೀಯಾನಿ ಸಂತಿ ಯಾನೀಹ ಕಾನಿಚಿತ್ |
ದಂಡ ಏವ ಹಿ ಸರ್ವಾತ್ಮಾ ಲೋಕೇ ಚರತಿ ಮೂರ್ತಿಮಾನ್ ॥17॥
ಖಡ್ಗ, ಗದೆ, ಧನುಸ್ಸು, ಶಕ್ತಿ, ತ್ರಿಶೂಲ, ಒನಕೆ, ಬಾಣ, ಮುದ್ಗರ, ಕೊಡಲಿ, ಚಕ್ರ, ಈಟಿ, ದಂಡ, ಖುಷ್ಟಿ, ತೋಮರ ಮತ್ತು ಇಂತಹ ಇನ್ನೂ ಅನೇಕ ಆಯುಧಗಳು ಏನಿವೆಯೋ ಅವೆಲ್ಲಾ ದಂಡದ ಮೂರ್ತಿಗಳು. ಅಂತಹ ವಿಗ್ರಹ- ದಿಂದ ಸರ್ವವ್ಯಾಪಿಯಾದ ದಂಡವು ಲೋಕದಲ್ಲಿ ಸಂಚರಿಸುತ್ತದೆ.
ಭಿಂದಂಶ್ಛಿಂದನ್ ರುಜನ್ ಕೃಂತನ್ ದಾರಯನ್ ಪಾಟಯಂಸ್ತಥಾ |
ಘಾತಯನ್ನಭಿಧಾವಂಶ್ಚ ದಂಡ ಏವ ಚರತ್ಯುತ ॥18॥
ಹೊಡೆಯುತ್ತಾ, ಕತ್ತರಿಸುತ್ತಾ, ಹಿಂಸಿಸುತ್ತಾ, ಸೀಳುತ್ತಾ, ಪಾಲುಗಳನ್ನಾಗಿ ಮಾಡುತ್ತಾ, ಕೊಲ್ಲುತ್ತಾ ಈ ದಂಡವು ಓಡುತ್ತಾ ಸಂಚರಿಸುತ್ತದೆ.
ಅಸಿರ್ವಿಶಸನೋ ಧರ್ಮಸ್ತೀಕ್ಷ್ಣವರ್ತ್ಮಾ ದುರಾಸದಃ |
ಶ್ರೀಗರ್ಭೋ ವಿಜಯಃ ಶಾಸ್ತಾ ವ್ಯವಹಾರಃ ಪ್ರಜಾಗರಃ ॥19॥
ಶಾಸ್ತ್ರಂ ಬ್ರಾಹ್ಮಣಮಂತ್ರಶ್ಚ ಶಾಸ್ತಾ ಪ್ರಾಗ್ವಚನಂ ಗತಃ |
ಧರ್ಮಪಾಲೋಽಕ್ಷರೋ ದೇವಃ ಸತ್ಯಗೋ ನಿತ್ಯಗೋ ಗ್ರಹಃ ॥20॥
ಅಸಂಗೋ ರುದ್ರತನಯೋ ಮನುರ್ಜ್ಯೇಷ್ಠಃ ಶಿವಂಕರಃ |
ನಾಮಾನ್ಯೇತಾನಿ ದಂಡಸ್ಯ ಕೀರ್ತಿತಾನಿ ಯುಧಿಷ್ಠಿರ ॥21॥
ಅಸಿ, ವಿಶಸನ, ಧರ್ಮ, ತೀಕ್ಷ್ಣವರ್ತ್ಮಾ, ದುರಾಸದ, ಶ್ರೀಗರ್ಭ, ವಿಜಯ, ಶಾಸ್ತಾ, ವ್ಯವಹಾರ, ಪ್ರಜಾಗರ, ಶಾಸ್ತ್ರ, ಬ್ರಾಹ್ಮಣಮಂತ್ರ, ಪ್ರಾಗ್ವಚನ, ಧರ್ಮಪಾಲ, ಅಕ್ಷರ, ದೇವ, ಸತ್ಯಗ, ನಿತ್ಯಗ, ಗ್ರಹ, ಅಸಂಗ, ರುದ್ರತನಯ, ಮನುರ್ಜ್ಯೇಷ್ಠ, ಶಿವಂಕರ - ಎಲೈ ಯುಧಿಷ್ಠಿರನೇ! ಇವೆಲ್ಲಾ ದಂಡದ ನಾಮಗಳೆಂದು ಹೇಳಲ್ಪಡುತ್ತವೆ.
ದಂಡೋ ಹಿ ಭಗವಾನ್ ವಿಷ್ಣುರ್ಯಜ್ಞೋ ನಾರಾಯಣಃ ಪ್ರಭುಃ |
ಶಶ್ವದ್ರೂಪಂ ಮಹದ್ ಬಿಭ್ರನ್ ಮಹಾಪುರುಷ ಉಚ್ಯತೇ ॥22॥
ದಂಡವೆಂದರೆ ಯಜನೀಯನೂ, ಪ್ರಭುವೂ, ಭಗವಂತನೂ ಆದ ವ್ಯಾಪ್ತನಾದ ನಾರಾಯಣನೇ. ಅವನು ಯಾವಾಗಲೂ ದೊಡ್ಡ ರೂಪವನ್ನು ಧರಿಸಿ ಮಹಾಪುರುಷನೆಂದು ಕರೆಯಲ್ಪಡುತ್ತಾನೆ.
ಯಥೋಕ್ತಾ ಬ್ರಹ್ಮಕಲ್ಪೇತಿ ಲಕ್ಷ್ಮೀರ್ನೀತಿಃ ಸರಸ್ವತೀ |
ದಂಡನೀತಿರ್ಜಗದ್ಧಾತ್ರೀ ದಂಡೋ ಹಿ ವಿಷ್ಣುವಿಗ್ರಹಃ ॥23॥
ದಂಡವನ್ನು ಬ್ರಹ್ಮಕಲ್ಪ(ವೇದಕಲ್ಪನಾ), ಲಕ್ಷ್ಮೀ, ನೀತಿ, ಸರಸ್ವತೀ, ದಂಡನೀತಿ, ಜಗದ್ಧಾತ್ರಿ ಎಂದೂ ಕರೆಯುತ್ತಾರೆ. ದಂಡವು ವಿಷ್ಣುವಿಗ್ರಹರೂಪವಾದುದು.
ಅರ್ಥಾನರ್ಥೌ ಸುಖಂ ದುಃಖಂ ಧರ್ಮಾಧರ್ಮೌ ಬಲಾಬಲೇ |
ದೌರ್ಭಾಗ್ಯಂ ಭಾಗಧೇಯಂ ಚ ಪುಣ್ಯಾಪುಣ್ಯೇ ಗುಣಾಗುಣೌ ॥24॥
ಕಾಮಾಕಾಮಾವೃತುರ್ಮಾಸಃ ಶರ್ವರೀ ದಿವಸಃ ಕ್ಷಣಃ |
ಅಪ್ರಸಾದಃ ಪ್ರಸಾದಶ್ಚ ಹರ್ಷಃ ಕ್ರೋಧಃ ಶಮೋ ದಮಃ ॥25॥
ದೈವಂ ಪುರುಷಕಾರಶ್ಚ ಮೋಕ್ಷಾಮೋಕ್ಷೌ ಭಯಾಭಯೇ |
ಹಿಂಸಾಹಿಂಸೇ ತಪೋ ರಾಜ್ಞಃ ಸಂಯಮೋಽಥ ವಿಷಾವಿಷಮ್ ॥26॥
ಅಂತಶ್ಚಾದಿಶ್ಚ ಮಧ್ಯಂ ಚ ಕೃತ್ಯಾನಾಂ ಚ ಪ್ರಪಂಚನಮ್ |
ಮದಃ ಪ್ರಮಾದೋ ದರ್ಪಶ್ಚ ದಂಭೋ ಧೈರ್ಯಂ ನಯಾನಯೌ ॥27॥
ಅರ್ಥ-ಅನರ್ಥಗಳು, ಸುಖ-ದುಃಖಗಳು, ಧರ್ಮಾಧರ್ಮಗಳು, ಶರೀರ- ಬಲಾಬಲಗಳು, ದೌರ್ಭಾಗ್ಯ ಸೌಭಾಗ್ಯಗಳು, ಪುಣ್ಯಾಪಾಪಗಳು,

ಗುಣದೋಷಗಳು, ಕಾಮ-ಅಕಾಮಗಳು, ಋತುಮಾಸರಾತ್ರಿದಿವಸಕ್ಷಣಗಳು, ಪ್ರಸನ್ನತೆ ಅಪ್ರಸನ್ನತೆಗಳು, ಹರ್ಷಕ್ರೋಧಶಮದಮಗಳು, ದೈವಪುರುಷಪ್ರಯತ್ನಗಳು, ಮೋಕ್ಷಬಂಧನಗಳು, ಅಹಿಂಸೆಹಿಂಸೆಗಳು, ತಪಸ್ಸು, ರಾಜನಿಂದುಂಟಾಗುವ ಸಂಯಮ, ವಿಷ-ಅವಿಷಗಳು, ಆದಿಮಧ್ಯಾಂತಗಳು, ಕಾರ್ಯಗಳ ವಿಸ್ತಾರಗಳು, ಮದಪ್ರಮಾದದರ್ಪದಂಭ- ಧೈರ್ಯ ನೀತಿ-ಅನೀತಿಗಳು,
ಅಶಕ್ತಿಃ ಶಕ್ತಿರಿತ್ಯೇವ ಮಾನಸ್ತಂಭೌ ವ್ಯಯಾವ್ಯಯೌ |
ವಿನಯಶ್ಚ ವಿಸರ್ಗಶ್ಚ ಕಾಲಾಕಾಲೌ ಚ ಭಾರತ ॥28॥
ಅನೃತಂ ಜ್ಞಾಜ್ಞತಾ ಸತ್ಯಂ ಶ್ರದ್ಧಾಶ್ರದ್ಧೇ ತಥೈವ ಚ |
ಕ್ಲೀಬತಾ ವ್ಯವಸಾಯಶ್ಚ ಲಾಭಾಲಾಭೌ ಜಯಾಜಯೌ ॥29॥
ತೀಕ್ಷ್ಣತಾ ಮೃದುತಾ ಮೃತ್ಯುರಾಗಮಾನಾಗಮೌ ತಥಾ |
ವಿರಾದ್ಧಿಶ್ಚೈವ ರಾದ್ಧಿಶ್ಚ ಕಾರ್ಯಾಕಾರ್ಯೇ ಬಲಾಬಲೇ ॥30॥
ಅಸೂಯಾ ಚಾನಸೂಯಾ ಚ ಧರ್ಮಾಧರ್ಮೌ ತಥೈವ ಚ |
ಅಪತ್ರಪಾನಪತ್ರಪೇ ಹ್ರೀಶ್ಚ ಸಂಪದ್ ವಿಪಚ್ಚ ಹ ॥31॥
ತೇಜಃ ಕರ್ಮಣಿ ಪಾಂಡಿತ್ಯಂ ವಾಕ್‌ಶಕ್ತಿಸ್ತತ್ತ್ವಬುದ್ಧಿತಾ |
ಏವಂ ದಂಡಸ್ಯ ಕೌರವ್ಯ ಲೋಕೇಽಸ್ಮಿನ್ ಬಹುರೂಪತಾ ॥32॥
ಶಕ್ತಿ-ಅಶಕ್ತಿಗಳು, ಮಾನ-ಅಹಂಕಾರಗಳು, ವ್ಯಯ-ಆದಾಯಗಳು, ವಿನಯ- ವಿಸರ್ಗ-ಕಾಲ-ಅಕಾಲಗಳು, ಸತ್ಯಾನೃತಗಳು, ಜ್ಞಾನಾಜ್ಞಾನಗಳು, ಶ್ರದ್ಧೆ-ಅಶ್ರದ್ಧೆಗಳು, ಆಲಸ್ಯ ಮತ್ತು ಪ್ರಯತ್ನಶೀಲತೆಗಳು, ಲಾಭಾಲಾಭಗಳು, ಜಯ-ಪರಾಜಯಗಳು, ತೀಕ್ಷ್ಣತೆ ಮೃದುತ್ವಗಳು, ಮೃತ್ಯು, ಆಗಮ-ಅನಾಗಮಗಳು, ಸಮೃದ್ಧಿ ಮತ್ತು ದಾರಿದ್ರ್ಯಗಳು, ಕಾರ್ಯಾಕಾರ್ಯಗಳು, ಮನೋಬಲದೌರ್ಬಲ್ಯಗಳು, ಅಸೂಯಾ ಅನಸೂಯಗಳು, ಧರ್ಮಾಧರ್ಮಗಳು, ನಾಚಿಕೆ ಮತ್ತು ನಾಚಿಕೆಗೇಡಿತನಗಳು, ಸಂಪತ್ತು ಮತ್ತು ವಿಪತ್ತುಗಳು, ತೇಜಸ್ಸು, ಕರ್ಮದಲ್ಲಿಕುಶಲತೆ, ವಾಕ್‌ಶಕ್ತಿ, ತತ್ತ್ವಜ್ಞಾನ ಎಲೈ ಕೌರವ್ಯನೇ! ಹೀಗೆ ಈ ಲೋಕದಲ್ಲಿ ದಂಡವು ಅನೇಕರೂಪ- ಗಳನ್ನು ಧರಿಸಿದೆ.
ಇಲ್ಲಿ ಅರ್ಥಸುಖಧರ್ಮ ಮೊದಲಾದವುಗಳು ಅಹಂಕಾರಕಾರಣವಾದುದ- ರಿಂದ ದಂಡವೆನಿಸುತ್ತವೆ. ಋತುಮಾಸರಾತ್ರ್ಯಾದಿಗಳು ವಿಷಯಾಭಿಲಾಷೆಯನ್ನು ಉಂಟುಮಾಡುವುದರಿಂದ ದಂಡವೆನಿಸುತ್ತವೆ. - (ಲಕ್ಷ್ಮಾಲಂಕಾರ)
ನ ಸ್ಯಾದ್ ಯದೀಹ ದಂಡೋ ವೈ ಪ್ರಮಥೇಯುಃ ಪರಸ್ಪರಮ್ |
ಭಯಾದ್ ದಂಡಸ್ಯ ಚಾನ್ಯೋನ್ಯಂ ಘ್ನಂತಿ ನೈವ ಯುಧಿಷ್ಠಿರ ॥33॥
ಈ ಲೋಕದಲ್ಲಿ ದಂಡವಿರದಿದ್ದರೆ ಮನುಷ್ಯರು ಪರಸ್ಪರವಾಗಿ ಹಿಂಸಿಸುತ್ತಿದ್ದರು. ಎಲೈ ಯುಧಿಷ್ಠಿರನೇ! ದಂಡದ ಭಯದಿಂದಲೇ ಮನುಷ್ಯರು ಪರಸ್ಪರವಾಗಿ ಕೊಲ್ಲುವುದಿಲ್ಲ.
ದಂಡೇನ ರಕ್ಷ್ಯಮಾಣಾ ಹಿ ರಾಜನ್ನಹರಹಃ ಪ್ರಜಾಃ |
ರಾಜಾನಂ ವರ್ಧಯಂತೀಹ ತಸ್ಮಾದ್ ದಂಡಃ ಪರಾಯಣಮ್ ॥34॥
ದಂಡದಿಂದ ರಕ್ಷಿಸಲ್ಪಡುವ ಪ್ರಜೆಗಳು ಪ್ರತಿನಿತ್ಯವೂ ರಾಜನನ್ನು ಅಭಿವೃದ್ಧಿ- ಪಡಿಸುತ್ತಾರೆ. ಆದ್ದರಿಂದ ದಂಡವು ಶ್ರೇಷ್ಠವಾದ ಅವಲಂಬನ.
ವ್ಯವಸ್ಥಾಪಯತಿ ಕ್ಷಿಪ್ರಮಿಮಂ ಲೋಕಂ ನರೇಶ್ವರ |
ಸತ್ಯೇ ವ್ಯವಸ್ಥಿತೋ ಧರ್ಮೋ ಬ್ರಾಹ್ಮಣೇಷ್ವವತಿಷ್ಠತೇ ॥35॥
ಎಲೈ ನರೇಶ್ವರನೇ! ದಂಡವು ಶೀಘ್ರವಾಗಿ ಈ ಲೋಕದಲ್ಲಿ ವ್ಯವಸ್ಥೆಯನ್ನು ಉಂಟುಮಾಡುತ್ತದೆ. ಸತ್ಯದಲ್ಲಿ ನೆಲೆಗೊಂಡ ಧರ್ಮವು ಬ್ರಾಹ್ಮಣರನ್ನು ಆಶ್ರಯಿಸಿದೆ.
ಧರ್ಮಯುಕ್ತಾ ದ್ವಿಜಾಃ ಶ್ರೇಷ್ಠಾ ವೇದಯುಕ್ತಾ ಭವಂತಿ ಚ |
ಬಭೂವ ಯಜ್ಞೋ ವೇದೇಭ್ಯೋ ಯಜ್ಞಃ ಪ್ರೀಣಾತಿ ದೇವತಾಃ ॥36॥
ಧರ್ಮಯುಕ್ತರಾದ ಶ್ರೇಷ್ಠರಾದ ಬ್ರಾಹ್ಮಣರು ವೇದಾಧ್ಯಯನಸಂಪನ್ನರಾಗಿರು- ತ್ತಾರೆ. ಯಜ್ಞವು ವೇದಗಳಿಂದ ನೆರವೇರಿಸಲ್ಪಡುತ್ತದೆ. ಅದು ದೇವತೆಗಳನ್ನು ಸಂತೋಷಪಡಿಸುತ್ತದೆ.
ಪ್ರೀತಾಶ್ಚ ದೇವತಾ ನಿತ್ಯಮಿಂದ್ರೇ ಪರಿದದತ್ಯುತ |
ಅನ್ನಂ ದದಾತಿ ಶಕ್ರಶ್ಚಾಪ್ಯನುಗೃಹ್ಣನ್ನಿಮಾಃ ಪ್ರಜಾಃ ॥37॥
ಪ್ರೀತರಾದ ದೇವತೆಗಳು ಪ್ರಜೆಗಳ ಯೋಗಕ್ಷೇಮವನ್ನು ನಿತ್ಯವೂ ಇಂದ್ರನಿಗೆ ವಹಿಸುತ್ತಾರೆ. ಇಂದ್ರನು ಈ ಪ್ರಜೆಗಳಿಗೆ ಅನುಗ್ರಹವನ್ನು ಮಾಡುವವನಾಗಿ ಅನ್ನವನ್ನು ಕೊಡುತ್ತಾನೆ.
ಪ್ರಾಣಾಶ್ಚ ಸರ್ವಭೂತಾನಾಂ ನಿತ್ಯಮನ್ನೇ ಪ್ರತಿಷ್ಠಿತಾಃ |
ತಸ್ಮಾತ್ ಪ್ರಜಾಃ ಪ್ರತಿಷ್ಠಂತೇ ದಂಡೋ ಜಾಗರ್ತಿ ತಾಸು ಚ ॥38॥
ಎಲ್ಲ ಜೀವರ ಪ್ರಾಣಗಳೂ ಯಾವಾಗಲೂ ಅನ್ನದಲ್ಲಿ ಪ್ರತಿಷ್ಠಿತವಾಗಿವೆ. ಅನ್ನದ ಬಲದಿಂದ ಪ್ರಜೆಗಳು ಕಾರ್ಯಗಳನ್ನು ಮಾಡುತ್ತಾರೆ. ದಂಡವು ಆ ಪ್ರಜೆಗಳ ವಿಷಯದಲ್ಲಿ ಎಚ್ಚರಿಕೆಯಿಂದಿರುತ್ತದೆ.
ಏವಂಪ್ರಯೋಜನಶ್ಚೈವ ದಂಡಃ ಕ್ಷತ್ರಿಯತಾಂ ಗತಃ |
ರಕ್ಷನ್ ಪ್ರಜಾಃ ಪ್ರಜಾಗರ್ತಿ ನಿತ್ಯಂ ಸುವಿಹಿತೋಽಕ್ಷರಃ ॥39॥
ಇಂತಹ ಪ್ರಯೋಜನವುಳ್ಳ ದಂಡವು ಕ್ಷತ್ರಿಯರೂಪವನ್ನು ಧರಿಸಿತು. ಅದು ನಿತ್ಯವೂ ಚೆನ್ನಾಗಿ ಪ್ರಯೋಗಿಸಲ್ಪಟ್ಟು, ನಾಶವನ್ನು ಹೊಂದದೆ, ಪ್ರಜೆಗಳನ್ನು ರಕ್ಷಿಸುತ್ತಾ ಜಾಗರೂಕವಾಗಿರುತ್ತದೆ.
ಈಶ್ವರಃ ಪುರುಷಃ ಪ್ರಾಣಃ ಸತ್ತ್ವಂ ವಿತ್ತಂ ಪ್ರಜಾಪತಿಃ |

ಭೂತಾತ್ಮಾ ಜೀವ ಇತ್ಯೇವ ನಾಮಭಿಃ ಪ್ರೋಚ್ಯತೇಽಷ್ಟಭಿಃ ॥40॥
ದಂಡವು ಈಶ್ವರ, ಪುರುಷ, ಪ್ರಾಣ, ಸತ್ವ, ವಿತ್ತ, ಪ್ರಜಾಪತಿ, ಭೂತಾತ್ಮಾ ಮತ್ತು ಜೀವ ಎಂಬ ಎಂಟುನಾಮಗಳಿಂದ ಹೇಳಲ್ಪಡುತ್ತದೆ.
ಅದದದ್ ದಂಡ ಏವಾಸ್ಮೈ ಧ್ರುವಮೈಶ್ವರ್ಯಮೇವ ಚ |
ಬಲಂ ನಯಂಶ್ಚ ಸಂಯುಕ್ತೈಃ ಸದಾ ಪಂಚವಿಧಾತ್ಮಕಮ್ ॥41॥
ರಾಜನಿಗೆ ದಂಡವೇ ಶಾಶ್ವತವಾದ ಐಶ್ವರ್ಯವನ್ನು ಕೊಡುತ್ತದೆ. ಸಂಯುಕ್ತರಾ- ದವರಿಂದ ಬಲವನ್ನು ನಡೆಸುತ್ತಾ ಯಾವಾಗಲೂ ಪಂಚವಿಧವಾಗಿರುತ್ತದೆ.
ಕುಲಬಾಹುಧನಾಮಾತ್ಯಾಃ ಪ್ರಜ್ಞಾ ಚೋಕ್ತಾ ಬಲಾನಿ ಚ |
ಆಹಾರ್ಯಂ ಚಾಷ್ಟಕೈರ್ದ್ರವ್ಯೈರ್ಬಲಮನ್ಯದ್ ಯುಧಿಷ್ಠಿರ ॥42॥
ಕುಲಬಲ, ಬಾಹುಬಲ, ಧನಬಲ, ಅಮಾತ್ಯಬಲ ಮತ್ತು ಪ್ರಜ್ಞಾಬಲಗಳೆಂಬವು ಆ ಐದು ವಿಧಗಳು. ಎಲೈ ಯುಧಿಷ್ಠಿರನೇ! ಎಂಟು ದ್ರವ್ಯಗಳಿಂದ ಸಂಪಾದಿಸ- ಬೇಕಾದ ಬಲವು ಬೇರೆಯೇ ಇದೆ.
ಹಸ್ತಿನೋಽಶ್ವಾ ರಥಾಃ ಪತ್ತಿರ್ನಾವೋ ವಿಷ್ಟಿಸ್ತಥೈವ ಚ |
ದೈಶಿಕಾಶ್ಚಾರಕಾಶ್ಚೈವ ತದಷ್ಟಾಂಗಂ ಬಲಂ ಸ್ಮೃತಮ್ ॥43॥
ಗಜಗಳು, ಅಶ್ವಗಳು, ರಥಗಳು, ಪದಾತಿಗಳು, ನೌಕೆಗಳು, ಅಪರಾಧಿಗಳಾಗಿ ಬಿಟ್ಟಿ ದುಡಿಯುವವರು, ಉಪಾಧ್ಯಾಯರು ಮತ್ತು ಚಾರರು ಎಂಬ ಎಂಟು ಅವ- ಯವಗಳಿಂದ ಕೂಡಿದುದು ಇನ್ನೊಂದು (ಬಾಹ್ಯವಾದ) ಬಲ.
ಅಥವಾಂಗಸ್ಯ ಯೋಕ್ತಾ ಸ್ಯಾದ್ ಹಸ್ತಿನೋ ರಥಸಾರಥೀ |
ಅಶ್ವಾರೋಹಾಃ ಪದಾತಾಶ್ಚ ಮಂತ್ರಿಣೋ ರಸದಾಶ್ಚ ಯೇ ॥44॥
ತನ್ನ ಶರೀರದಂತಿರುವ ಸೇನೆಯನ್ನು ನಿಯಂತ್ರಿಸುವ ಸೇನಾಪತಿ, ಆರೋಹಿ- ಗಳಿಂದ ಸಹಿತವಾದ ಗಜಗಳು, ಸಾರಥಿಯಿಂದ ಸಹಿತವಾದ ರಥಗಳು, ಅಶ್ವಾ- ರೋಹಿಗಳಿಂದ ಸಹಿತವಾದ ಅಶ್ವಗಳು, ಪದಾತಿಗಳು, ಮಂತ್ರಿಗಳು ಮತ್ತು ಮನುಷ್ಯರ ಮತ್ತು ಪ್ರಾಣಿಗಳ ವೈದ್ಯರು - ಇವು ಏಳು ಸೈನ್ಯದ (ಸಪ್ತಾಂಗಗಳಿಗೆ) ಮೂಲಭೂತವಾದ ಮಧ್ಯದೇಹ(ಪ್ರಕೃತಿ)ವೆನಿಸುತ್ತದೆ ಲಕ್ಷ್ಮಾಲಂಕಾರ.
ಭಿಕ್ಷುಕಾಃ ಪ್ರಾಡ್ವಿವಾಕಾಶ್ಚ ಮೌಹೂರ್ತಾ ದೈವಚಿಂತಕಾಃ |
ಕೋಶೋ ಮಿತ್ರಾಣಿ ಧಾನ್ಯಂ ಚ ಸರ್ವೋಪಕರಣಾನಿ ಚ ॥45॥
ಬಹುವೇಷವನ್ನು ಧರಿಸುವ ಚಾರರು, ಕ್ರಯವಿಕ್ರಯಾದಿವ್ಯವಹಾರವನ್ನು ನೋಡುವ ವೈಶ್ಯಾದಿಗಳು, ಯುದ್ಧಕಾಲಕ್ಕೆ ಮುಹೂರ್ತವನ್ನು ಇಟ್ಟುಕೊಡುವವರು, ಜಾತಕಾದಿಗಳನ್ನು ಬರೆಯುವುದರಲ್ಲಿ ಕುಶಲರು, ಕೋಶ, ಮಿತ್ರರು, ಧಾನ್ಯಮತ್ತು ಎಲ್ಲಾ ಆಯುಧಾದಿ ಉಪಕರಣಗಳು (ಇವು ಎಂಟು ದ್ರವ್ಯಗಳು) ಲಕ್ಷ್ಮಾಲಂಕಾರ.
ಸಪ್ತಪ್ರಕೃತಿ ಚಾಷ್ಟಾಂಗಂ ಶರೀರಮಿಹ ಯದ್ ವಿದುಃ |
ರಾಜ್ಯಸ್ಯ ದಂಡ ಏವಾಂಗಂ ದಂಡಃ ಪ್ರಭವ ಏವ ಚ ॥46॥
ರಾಜ್ಯಕ್ಕೆ ಹಿಂದೆ ಹೇಳಿದ ಏಳು ದ್ರವ್ಯಗಳು ಮಧ್ಯದೇಹಭೂತವಾದವು ಮತ್ತು ಅನಂತರ ಹೇಳಿದ ಎಂಟು ಅಂಗಭೂತವಾದವುಗಳು. ಇವು ಸೇರಿ ರಾಜ್ಯದ ಶರೀರವಾಗುತ್ತದೆ ಎಂದು ತಿಳಿಯುತ್ತಾರೆ. ದಂಡವು ರಾಜ್ಯದ ಇನ್ನೊಂದು ಅಂಗ. ರಾಜ್ಯದ ಸಮೃದ್ಧಿಯು ದಂಡಕ್ಕೆ ಅಧೀನವಾದುದು
ಈಶ್ವರೇಣ ಪ್ರಸನ್ನೇನ ಧಾರಣೇ ಕ್ಷತ್ರಿಯಸ್ಯ ಹಿ |
ದಂಡೋ ದತ್ತಃ ಸಮಾನಾತ್ಮಾ ದಂಡೋ ಹೀದಂ ಸನಾತನಮ್ |
ರಾಜ್ಞಾಂ ಪೂಜ್ಯತಮೋ ನಾನ್ಯೋ ಯಥಾಧರ್ಮಪ್ರದರ್ಶನಃ ॥47॥
ಪ್ರಸನ್ನನಾದ ಈಶ್ವರನು ಕ್ಷತ್ರಿಯನಿಗೆ ರಾಜನಿಗೆ ಧಾರಣೆಯನ್ನು ಮಾಡುವ ಸಲುವಾಗಿ ತನಗೆ ಸದೃಶವಾದ ಸಾಮರ್ಥ್ಯವುಳ್ಳ ದಂಡವನ್ನು ನೀಡಿದನು. ಈ ದಂಡವು ಸನಾತನವಾದುದು. ರಾಜರಿಂದ ಅತ್ಯಂತಪೂಜ್ಯವಾದುದು. ದಂಡವು ಧರ್ಮವನ್ನು ಪ್ರದರ್ಶಿಸುವಂತೆ ಧರ್ಮವನ್ನು ಪ್ರದರ್ಶಿಸುವುದು ಇನ್ನೊಂದು ಇರುವುದಿಲ್ಲ.
ಬ್ರಹ್ಮಣಾ ಲೋಕರಕ್ಷಾರ್ಥಂ ಸ್ವಧರ್ಮಸ್ಥಾಪನಾಯ ಚ |
ಭರ್ತೃಪ್ರತ್ಯಯ ಉತ್ಪನ್ನೋ ವ್ಯವಹಾರಸ್ತಥಾಪರಃ |
ತಸ್ಮಾದ್ ಯಃ ಸ ಹಿತೋ ದೃಷ್ಟೋ ಭರ್ತೃಪ್ರತ್ಯಯಲಕ್ಷಣಃ ॥48॥
ಬ್ರಹ್ಮದೇವರು ಲೋಕರಕ್ಷಣೆ ಮತ್ತು ತಮ್ಮ ಧರ್ಮದ ಸ್ಥಾಪನೆಗಾಗಿ ಭರ್ತೃ- ಪ್ರತ್ಯಯ ಮತ್ತು ವ್ಯವಹಾರಗಳನ್ನು ಸೃಷ್ಟಿಸಿದರು. ಆದ್ದರಿಂದ ಭರ್ತೃಪ್ರತ್ಯಯರೂಪ- ವಾದ ದಂಡವು ಲೋಕಕ್ಕೆ ಹಿತವಾಗಿ ಕಂಡುಬಂದಿದೆ.
ವ್ಯವಹಾರಸ್ತು ವೇದಾತ್ಮಾ ವೇದಪ್ರತ್ಯಯ ಉಚ್ಯತೇ |
ಮೌಲಶ್ಚ ನರಶಾರ್ದೂಲ ಶಾಸ್ತ್ರೋಕ್ತಶ್ಚ ತಥಾಪರಃ ॥49॥
ವ್ಯವಹಾರವು ವೇದರೂಪವಾದುದು. ಅದಕ್ಕೆ ವೇದಪ್ರತ್ಯಯವೆಂದು ಹೆಸರು. ಎಲೈ ರಾಜನೇ! ಈ ವ್ಯವಹಾರವು ಮೌಲ ಮತ್ತು ಶಾಸ್ತ್ರೋಕ್ತ ಎಂದು ಎರಡು ವಿಧವಾಗಿದೆ.
ಉಕ್ತೋ ಯಶ್ಚಾಪಿ ದಂಡೋಽಸೌ ಭರ್ತೃಪ್ರತ್ಯಯಲಕ್ಷಣಃ |
ಜ್ಞೇಯೋ ನಃ ಸ ನರೇಂದ್ರಸ್ಥೋ ದಂಡಪ್ರತ್ಯಯ ಏವ ಚ ॥50॥
ನಾವು ಭರ್ತೃಪ್ರತ್ಯಯರೂಪವಾದ ದಂಡವನ್ನು ಏನು ಹೇಳಿದೆವೋ ಅದು ರಾಜನಲ್ಲಿರುವ ದಂಡಪ್ರತ್ಯಯರೂಪವಾದುದು ಎಂದು ತಿಳಿಯಬೇಕು.
ದಂಡಪ್ರತ್ಯಯದೃಷ್ಟೋಽಪಿ ವ್ಯವಹಾರಾತ್ಮಕಃ ಸ್ಮೃತಃ |
ವ್ಯವಹಾರಃ ಸ್ಮೃತೋ ಯಶ್ಚ ಸ ವೇದವಿಷಯಾತ್ಮಕಃ ॥51॥

ದಂಡವು ರಾಜನ ಮೇಲಿನ ವಿಶ್ವಾಸದಿಂದ ಪ್ರವೃತ್ತವಾದರೂ ಅದು ವ್ಯವಹಾರರೂಪವಾದುದು ಎಂದು ಹೇಳಲ್ಪಡುತ್ತದೆ. ಯಾವುದು ವ್ಯವಹಾರವೋ ಅದು ವೇದವಿಷಯವಾದುದು.
ಯಶ್ಚ ವೇದಪ್ರಸೂನಾತ್ಮಾ ಸ ಧರ್ಮೋ ಗುಣದರ್ಶಕಃ |
ಧರ್ಮಪ್ರತ್ಯಯ ಉತ್ಪನ್ನೋ ಯಥಾಧರ್ಮಃ ಕೃತಾತ್ಮಭಿಃ ॥52॥
ಯಾವುದು ವೇದವಿಷಯವಾಗಿ ವೇದದಿಂದ ತನ್ನ ಸ್ವರೂಪವನ್ನು ಪಡೆಯುತ್ತದೆಯೋ ಅದು ಧರ್ಮ. ಅದು ಗುಣಗಳನ್ನು ತೋರಿಸುವಂತಹದು. ಜ್ಞಾನಿಗಳಿಂದ ಹೀಗೆ ಧರ್ಮಕ್ಕೆ ಅನುಗುಣವಾಗಿ ಧರ್ಮಪ್ರತ್ಯಯವು ಉಂಟಾಯಿತು.
ವ್ಯವಹಾರಃ ಪ್ರಜಾಗೋಪ್ತಾ ಬ್ರಹ್ಮದಿಷ್ಟೋ ಯುಧಿಷ್ಠಿರ |
ತ್ರೀನ್ ಧಾರಯತಿ ಲೋಕಾನ್ ವೈ ಸತ್ಯಾತ್ಮಾ ಭೂತಿವರ್ಧನಃ ॥53॥
ಎಲೈ ಯುಧಿಷ್ಠಿರನೇ! ಬ್ರಹ್ಮದೇವರು ಹೇಳಿದ ವ್ಯವಹಾರವು ಪ್ರಜೆಗಳನ್ನು ರಕ್ಷಿಸುತ್ತದೆ. ಅದು ಮೂರು ಲೋಕಗಳನ್ನೂ ಧರಿಸುತ್ತದೆ. ಸತ್ಯಸ್ವರೂಪವಾದುದು ಮತ್ತು ಐಶ್ವರ್ಯಪ್ರದವಾದುದು.
ಯಶ್ಚ ದಂಡಃ ಸ ದೃಷ್ಟೋ ನೋ ವ್ಯವಹಾರಃ ಸನಾತನಃ |
ವ್ಯವಹಾರಶ್ಚ ಯೋ ದೃಷ್ಟಃ ಸ ಧರ್ಮ ಇತಿ ನಃ ಶ್ರುತಃ |
ಯಶ್ಚ ವೇದಃ ಸ ವೈ ಧರ್ಮೋ ಯಶ್ಚ ಧರ್ಮಃ ಸ ಸತ್ಪಥಃ ॥54॥
ನಾವು ಯಾವ ದಂಡವನ್ನು ನೋಡಿದೆವೋ ಅದು ಸನಾತನವಾದ ವ್ಯವಹಾರ. ಯಾವ ವ್ಯವಹಾರವನ್ನು ಉಲ್ಲೇಖಿಸಿದೆವೋ ಅದು ಧರ್ಮ ಎಂದು ನಾವು ಕೇಳಿದ್ದೇವೆ. ಯಾವುದು ವೇದೋಕ್ತವೋ ಅದೇ ಧರ್ಮ. ಯಾವುದು ಧರ್ಮವೋ ಅದು ಸನ್ಮಾರ್ಗ.
ಬ್ರಹ್ಮಾ ಪ್ರಜಾಪತಿಃ ಪೂರ್ವಂ ಬಭೂವಾಥ ಪಿತಾಮಹಃ |
ಲೋಕಾನಾಂ ಸ ಹಿ ಸರ್ವೇಷಾಂ ಸಸುರಾಸುರರಕ್ಷಸಾಮ್ |
ಸಮನುಷ್ಯೋರಗವತಾಂ ಕರ್ತಾ ಚೈವ ಸ ಭೂತಕೃತ್ ॥55॥
ಹಿಂದೆ ಪಿತಾಮಹರೂ ಪ್ರಜಾಪತಿಗಳೂ ಆದ ಬ್ರಹ್ಮದೇವರು ಇದ್ದರು. ಅವರು ಸುರಾಸುರರಾಕ್ಷಸರಿಂದ ಸಹಿತವಾದ ಮನುಷ್ಯೋರಗಗಳಿಂದ ಸಹಿತವಾದ ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಸಿದರು.
ತತೋ ನೋ ವ್ಯವಹಾರೋಽಯಂ ಭರ್ತೃಪ್ರತ್ಯಯಲಕ್ಷಣಃ |
ತಸ್ಮಾದಿದಮವೋಚಾಮ ವ್ಯವಹಾರನಿದರ್ಶನಮ್ ॥56॥
ಅವರಿಂದ ನಮಗೆ ಈ ಭರ್ತೃಪ್ರತ್ಯಯರೂಪವಾದ ವ್ಯವಹಾರವು ದೊರೆ- ಯಿತು. ಆದ್ದರಿಂದ ಈ ವ್ಯವಹಾರವಿವರಣೆಯನ್ನು ನಾನು ಹೇಳಿದೆನು.
ಮಾತಾ ಪಿತಾ ಚ ಭ್ರಾತಾ ಚ ಭಾರ್ಯಾ ಚಾಥ ಪುರೋಹಿತಃ |
ನಾದಂಡ್ಯೋ ವಿದ್ಯತೇ ರಾಜ್ಞಾಂ ಯಃ ಸ್ವಧರ್ಮೇ ನ ತಿಷ್ಠತಿ ॥57॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥122॥
ತಮ್ಮ ಧರ್ಮವನ್ನು ಮೀರುವ ತಂದೆಯಾಗಲೀ ತಾಯಿಯಾಗಲೀ ಸಹೋದರನಾಗಲೀ, ಪತ್ನಿಯಾಗಲೀ ಅಥವಾ ಪುರೋಹಿತನಾಗಲೀ ರಾಜನ ದಂಡಕ್ಕೆ ವಿಷಯರಾಗದವರು ಯಾರೂ ಇರುವುದಿಲ್ಲ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 122ನೇ ಅಧ್ಯಾಯವು ಮುಗಿಯಿತು.
0
123. ನೂರಇಪ್ಪತ್ತಮೂರನೆಯ ಅಧ್ಯಾಯ
ವಸುಹೋಮಮಾಂಧಾತೃಸಂವಾದ; ದಂಡೋತ್ಪತ್ತಿ ಮತ್ತು ಅದರ ಪ್ರಚಾರ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಂಗೇಷು ರಾಜಾ ದ್ಯುತಿಮಾನ್ ವಸುಹೋಮ ಇತಿ ಶ್ರುತಃ ॥1॥
ಭೀಷ್ಮರು ಈ ವಿಷಯದಲ್ಲಿಯೂ ಸಹ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ. ಅಂಗದೇಶದಲ್ಲಿ ಕಾಂತಿಯುಕ್ತನಾದ ವಸುಹೋಮನೆಂಬ ರಾಜನಿದ್ದನು.
ಸ ರಾಜಾ ಧರ್ಮನಿತ್ಯಃ ಸನ್ ಸಹ ಪತ್ನ್ಯಾ ಮಹಾತಪಾಃ |
ಮುಂಜಪೃಷ್ಠಂ ಜಗಾಮಾಥ ದೇವರ್ಷಿಗಣಸೇವಿತಮ್ ॥2॥
ನಿತ್ಯವೂ ಧರ್ಮಪರನೂ, ಮಹಾತಪಸ್ವಿಯೂ ಆದ ಆ ರಾಜನು ಪತ್ನಿಯ ಜೊತೆಯಲ್ಲಿ ದೇವರ್ಷಿಗಣಸೇವಿತವಾದ ಮುಂಜಪೃಷ್ಠ ಪ್ರದೇಶಕ್ಕೆ ಹೋದನು.
ತತ್ರ ಶೃಂಗೇ ಹಿಮವತೋ ಮೇರೌ ಕನಕಪರ್ವತೇ |
ಯತ್ರ ಮುಂಜವಟೇ ರಾಮೋ ಜಟಾಹರಣಮಾದಿಶತ್ ॥3॥
ಸುವರ್ಣಪರ್ವತವಾದ ಮೇರುವಿನ ಶೃಂಗದಲ್ಲಿ ಹಿಮಾಲಯದಲ್ಲಿ ಮುಂಜ- ವಟವೃಕ್ಷದ ಬಳಿಯಲ್ಲಿ ಪರಶುರಾಮರು ತಮ್ಮ ಜಟೆಯನ್ನು ಬಿಚ್ಚಲು ಆದೇಶಿಸಿದ್ದರು. (ಸುವರ್ಣಪರ್ವತವಾದ ಮೇರುವಿನಿಂದ ಒಂದು ಪರ್ವತವನ್ನು ತಂದು ಹಿಮಾ- ಲಯದಲ್ಲಿ ಇರಿಸಲಾಗಿದೆ - ಲಕ್ಷಾಲಂಕಾರ)
ತದಾಪ್ರಭೃತಿ ರಾಜೇಂದ್ರ ಋಷಿಭಿಃ ಸಂಶಿತವ್ರತೈಃ |
ಮುಂಜಪೃಷ್ಠ ಇತಿ ಪ್ರೋಕ್ತಃ ಸ ದೇಶೋ ರುದ್ರಸೇವಿತಃ ॥4॥

ಎಲೈ ರಾಜನೇ! ಆಗಿನಿಂದ ಆರಂಭಿಸಿ, ವ್ರತಧಾರಿಗಳಾದ ಋಷಿಗಳು ಆ ಪ್ರದೇಶವನ್ನು ಮುಂಜಪೃಷ್ಠ ಎಂದು ಕರೆಯುತ್ತಾರೆ. ಅಲ್ಲಿ ಯಾವಾಗಲೂ ರುದ್ರ- ದೇವರ ಸನ್ನಿಧಾನವಿದೆ.
ಸ ತತ್ರ ಬಹುಭಿರ್ಯುಕ್ತಃ ಸದಾ ಶ್ರುತಿಮಯೈರ್ಗುಣೈಃ |
ಬ್ರಾಹ್ಮಣಾನಾಮನುಮತೋ ದೇವರ್ಷಿಸದೃಶೋಽಭವತ್ ॥5॥
ಅಲ್ಲಿ ವಸುಹೋಮನು ವೇದಗಳು ಹೇಳಿದ ಅನೇಕಗುಣಗಳಿಂದ ಕೂಡಿದ- ವನಾಗಿ, ಬ್ರಾಹ್ಮಣರಿಗೆ ಸಮ್ಮತನಾಗಿ, ದೇವರ್ಷಿಸದೃಶನಾದನು.
ತಂ ಕದಾಚಿದದೀನಾತ್ಮಾ ಸಖಾ ಶಕ್ರಸ್ಯ ಮಾನಿತಃ |
ಅಭ್ಯಾಗಚ್ಛನ್ಮಹೀಪಾಲೋ ಮಾಂಧಾತಾ ಶತ್ರುಕರ್ಶನಃ ॥6॥
ಒಮ್ಮೆ ಇಂದ್ರನಿಂದ ಸನ್ಮಾನಿತನಾದ, ಶತ್ರುಕರ್ಶನನಾದ, ಇಂದ್ರನ ಸ್ನೇಹಿತನಾದ, ಅದೀನನಾದ ಮಾಂಧಾತೃರಾಜನು ಅಲ್ಲಿಗೆ ಬಂದನು.
ಸೋಽಭಿಸೃತ್ಯ ತು ಮಾಂಧಾತಾ ವಸುಹೋಮಂ ನರಾಧಿಪಮ್ |
ದೃಷ್ಟ್ವಾ ಪ್ರಕೃಷ್ಟಂ ತಪಸಾ ವಿನಯೇನಾಭ್ಯತಿಷ್ಠತ ॥7॥
ಮಾಂಧಾತೃವು ವಸುಹೋಮರಾಜನನ್ನು ಸಮೀಪಿಸಿ,ಅವನ ಶ್ರೇಷ್ಠವಾದ ತಪಸ್ಸನ್ನು ನೋಡಿ, ವಿನಯದಿಂದ ನಿಂತನು.
ವಸುಹೋಮೋಽಪಿ ರಾಜ್ಞೋ ವೈ ಗಾಮರ್ಘ್ಯಂ ಚ ನ್ಯವೇದಯತ್ |
ಸಪ್ತಾಂಗಸ್ಯ ಚ ರಾಜ್ಯಸ್ಯ ಪಪ್ರಚ್ಛ ಕುಶಲಂ ತದಾ ॥8॥
ವಸುಹೋಮನೂ ಸಹ ರಾಜನಿಗೆ ಗೋದಾನವನ್ನು ಮಾಡಿ, ಅರ್ಘ್ಯವನ್ನು ನೀಡಿದನು. ಮತ್ತು ಸಪ್ತಾಂಗಯುತವಾದ ರಾಜ್ಯದ ಕುಶಲಪ್ರಶ್ನೆಯನ್ನು ಮಾಡಿದನು.
ಸದ್ಭಿರಾಚರಿತಂ ಪೂರ್ವಂ ಯಥಾವದನುಯಾಯಿನಮ್ |
ಅಪೃಚ್ಛದ್ ವಸುಹೋಮಸ್ತಂ ರಾಜನ್ ಕಿಂ ಕರವಾಣಿ ತೇ ॥9॥
ಸಜ್ಜನರು ಆಚರಿಸಿದ ಮಾರ್ಗವನ್ನು ಯಥಾವತ್ತಾಗಿ ಅನುಸರಿಸುವ ಮಾಂಧಾತೃ -ವನ್ನು ಕುರಿತು ವಸುಹೋಮನು ರಾಜನೇ! ನಿನಗೆ ಏನು ಮಾಡಲಿ ಎಂದು ಕೇಳಿದನು.
ಸೋಽಬ್ರವೀದ್ ಪರಮಪ್ರೀತೋ ಮಾಂಧಾತಾ ರಾಜಸತ್ತಮಮ್ |
ವಸುಹೋಮಂ ಮಹಾಪ್ರಾಜ್ಞಮಾಸೀನಂ ಕುರುನಂದನ ॥10॥
ಎಲೈ ಕುರುನಂದನನೇ! ಪರಮಸಂತುಷ್ಟನಾದ ಮಾಂಧಾತೃವು ಆಸೀನನಾದ ರಾಜಶ್ರೇಷ್ಠನೂ, ಮಹಾಪ್ರಾಜ್ಞನೂ ಆದ ವಸುಹೋಮನನ್ನು ಕುರಿತು ಹೇಳಿದನು.
ಬೃಹಸ್ಪತೇರ್ಮತಂ ರಾಜನ್ನಧೀತಂ ಸಕಲಂ ತ್ವಯಾ |
ತಥೈವೌಶನಸಂ ಶಾಸ್ತ್ರಂ ವಿಜ್ಞಾತಂ ತೇ ನರಾಧಿಪ ॥11॥
ಎಲೈ ರಾಜನೇ! ನೀನು ಬೃಹಸ್ಪತಿಗಳಿಗೆ ಅಭಿಮತವಾದ ಶಾಸ್ತ್ರವನ್ನು ಪೂರ್ಣವಾಗಿ ಅಧ್ಯಯನ ಮಾಡಿದ್ದೀಯೆ. ಹಾಗೆಯೇ ಎಲೈ ನರಾಧಿಪನೇ! ಶುಕ್ರಾಚಾರ್ಯರ ಶಾಸ್ತ್ರವನ್ನೂ ತಿಳಿದಿದ್ದೀಯೆ.
ತದಹಂ ಶ್ರೋತುಮಿಚ್ಛಾಮಿ ದಂಡ ಉತ್ಪದ್ಯತೇ ಕಥಮ್ |
ಕಿಂ ವಾಪಿ ಪೂರ್ವಂ ಜಾಗರ್ತಿ ಕಿಂವಾ ಪರಮಮುಚ್ಯತೇ ॥12॥
ಅದನ್ನು ನಾನು ಕೇಳಲು ಬಯಸುತ್ತೇನೆ. ದಂಡವು ಹೇಗೆ ಉತ್ಪನ್ನವಾಗುತ್ತದೆ? ದಂಡೋತ್ಪತ್ತಿಗಿಂತಲೂ ಮೊದಲು ಯಾವುದು ಪ್ರಜೆಗಳ ರಕ್ಷಣಾಕಾರ್ಯದಲ್ಲಿ ಜಾಗರೂಕವಾಗಿದ್ದಿತು? ಅದರಲ್ಲಿ ಯಾವುದು ಶ್ರೇಷ್ಠವಾದುದು?
ಕಥಂ ಕ್ಷತ್ರಿಯಸಂಸ್ಥಶ್ಚ ದಂಡಃ ಸಂಪ್ರತ್ಯವಸ್ಥಿತಃ |
ಬ್ರೂಹಿ ಮೇ ಸುಮಹಾಪ್ರಾಜ್ಞ ದದಾಮ್ಯಾಚಾರ್ಯವೇತನಮ್ ॥13॥
ದಂಡವು ಈಗ ಹೇಗೆ ಕ್ಷತ್ರಿಯರ ಹಸ್ತಕ್ಕೆ ಬಂದಿದೆ? ಎಲೈ ಮಹಾಪ್ರಾಜ್ಞನೇ! ನನಗೆ ಇವೆಲ್ಲವನ್ನೂ ಹೇಳು. ನಾನು ಗುರುದಕ್ಷಿಣೆಯನ್ನು ಕೊಡುತ್ತೇನೆ.
ವಸುಹೋಮಃ
ಶೃಣು ರಾಜನ್ ಯಥಾ ದಂಡಃ ಸಂಭೂತೋ ಲೋಕಸಂಗ್ರಹಃ |
ಪ್ರಜಾವಿನಯರಕ್ಷಾರ್ಥಂ ಧರ್ಮಸ್ಯಾತ್ಮಾ ಸನಾತನಃ ॥14॥
ವಸುಹೋಮ ಎಲೈ ರಾಜನೇ! ಲೋಕಸಂಗ್ರಹವನ್ನು ಮಾಡುವ, ಪ್ರಜೆಗಳಲ್ಲಿ ವಿನಯವನ್ನು ರಕ್ಷಿಸುವ, ಧರ್ಮಸ್ವರೂಪವಾದ, ಸನಾತನವಾದ ದಂಡವು ಹೇಗೆ ಉತ್ಪನ್ನವಾಯಿತೆಂದು ಕೇಳು.
ಬ್ರಹ್ಮಾ ಯಿಯಕ್ಷುರ್ಭಗವಾನ್ ಸರ್ವಲೋಕಪಿತಾಮಹಃ |
ಋತ್ವಿಜಂ ನಾತ್ಮನಾ ತುಲ್ಯಂ ದದರ್ಶೇತಿ ಹಿ ನಃ ಶ್ರುತಮ್ ॥15॥
ಯಜ್ಞವನ್ನು ಮಾಡಲು ಬಯಸಿದ, ಪೂಜ್ಯರಾದ ಸರ್ವಲೋಕಪಿತಾಮಹರಾದ ಬ್ರಹ್ಮದೇವರು ತಮಗೆ ಸದೃಶನಾದ ಋತ್ವಿಜನನ್ನು ಕಾಣಲಿಲ್ಲ ಎಂದು ನಾವು ಕೇಳಿದ್ದೇವೆ.
ಸ ಗರ್ಭಂ ಶಿರಸಾ ದೇವೋ ವರ್ಷಪೂಗಾನಧಾರಯತ್ |
ಪೂರ್ಣೇ ವರ್ಷಸಹಸ್ರೇ ತು ಸ ಗರ್ಭಃ ಕ್ಷುವತೋಽಪತತ್ ॥16॥
ಅವರು ಆಗ ಎಷ್ಟೋ ವರ್ಷಗಳ ಕಾಲ ಒಂದು ಗರ್ಭವನ್ನು ಶಿರಸ್ಸಿನಲ್ಲಿ ಧಾರಣ ಮಾಡಿದರು. ಒಂದು ಸಹಸ್ರ ವರ್ಷಗಳು ಕಳೆದ ಮೇಲೆ ಅವರು ಸೀನಿದಾಗ ಆ ಗರ್ಭವು ಕೆಳಗೆ ಬಿದ್ದಿತು.

ಸ ಕ್ಷುಪೋ ನಾಮ ಸಂಭೂತಃ ಪ್ರಜಾಪತಿರರಿಂದಮ |
ಋತ್ವಿಗಾಸೀತ್ ತದಾ ರಾಜನ್ ಯಜ್ಞೇ ತಸ್ಯ ಮಹಾತ್ಮನಃ ॥17॥
ಎಲೈ ಅರಿಂದಮನೇ! ಆ ಗರ್ಭವು ಕ್ಷುಪ ಎಂಬ ಹೆಸರಿನ ಪ್ರಜಾಪತಿ- ಯಾಯಿತು. ಕ್ಷುಪನು ಮಹಾತ್ಮರಾದ ಬ್ರಹ್ಮದೇವರ ಯಜ್ಞದಲ್ಲಿ ಋತ್ವಿಜನಾದನು.
ತಸ್ಮಿನ್ ಪ್ರವೃತ್ತೇ ಸತ್ರೇ ತು ಬ್ರಹ್ಮಣಃ ಪಾರ್ಥಿವರ್ಷಭ |
ಹೃಷ್ಟರೂಪಪ್ರಚಾರತ್ವಾದ್ ದಂಡಃ ಸೋಽಂತರ್ಹಿತೋಽಭವತ್ ॥18॥
ಎಲೈ ಪಾರ್ಥಿವಶ್ರೇಷ್ಠನೇ! ಬ್ರಹ್ಮದೇವರ ಯಜ್ಞವು ನಡೆಯುತ್ತಿದ್ದಾಗ, ಬ್ರಹ್ಮದೇವರು ಸಂತೋಷಗೊಂಡು ಯಜ್ಞನಿರತನಾದುದರಿಂದ (ಪ್ರಜಾನಿಯಮನ- ಕಾರ್ಯರಹಿತರಾದುದರಿಂದ) ಆ ದಂಡವು ಅಂತರ್ಧಾನವನ್ನು ಹೊಂದಿತು.
ತಸ್ಮಿನ್ನಂತರ್ಹಿತೇ ಚಾಥ ಪ್ರಜಾನಾಂ ಸಂಕರೋಽಭವತ್ |
ನೈವ ಕಾರ್ಯಂ ನ ಚಾಕಾರ್ಯಂ ಭೋಜ್ಯಾಭೋಜ್ಯಂ ನ ವಿದ್ಯತೇ ॥19॥
ದಂಡವು ಅಂತರ್ಧಾನ ಹೊಂದುತ್ತಿರಲು ಪ್ರಜೆಗಳಲ್ಲಿ ಸಾಂಕರ್ಯವುಂಟಾ- ಯಿತು. ಕಾರ್ಯಾಕಾರ್ಯವಿಭಾಗವಾಗಲೀ ಭೋಜ್ಯಾಭೋಜ್ಯವಿಭಾಗವಾಗಲೀ ಇರಲಿಲ್ಲ.
ಪೇಯಾಪೇಯಂ ಕುತಃ ಸಿದ್ಧಿರ್ಹಿಂಸಂತಿ ಚ ಪರಸ್ಪರಮ್ |
ಗಮ್ಯಾಗಮ್ಯಂ ತದಾ ನಾಸೀತ್ ಪರಸ್ವಂ ಸ್ವಂ ಚ ವೈ ಸಮಮ್ ॥20॥
ಪೇಯಾಪೇಯವಿಭಾಗವು ಎಲ್ಲಿ ಸಿದ್ಧವಾದೀತು? ಪ್ರಜೆಗಳು ಪರಸ್ಪರವಾಗಿ ಹಿಂಸಿಸಿದರು. ಆಗ ಗಮ್ಯಾಗಮ್ಯವಿಭಾಗವಿರಲಿಲ್ಲ. ಪರಸ್ವತ್ತು ತನ್ನ ಸ್ವತ್ತಿಗೆ ಸಮನಾ- ಗಿದ್ದಿತು.
ಪರಸ್ಪರಂ ವಿಲುಂಪಂತೇ ಸಾರಮೇಯಾ ಇವಾಮಿಷಮ್ |
ಅಬಲಂ ಬಲಿನೋ ಜಘ್ನುರ್ನಿರ್ಮರ್ಯಾದಮವರ್ತತ ॥21॥
ನಾಯಿಗಳು ಮಾಂಸವನ್ನು ಲೂಟಿಮಾಡುವಂತೆ ಪರಸ್ಪರವಾಗಿ ಲೂಟಿ ಮಾಡಿ- ದರು. ಬಲಿಷ್ಠರು ದುರ್ಬಲರನ್ನು ಕೊಂದರು. ಯಾವ ಕಟ್ಟುಪಾಡೂ ಇರಲಿಲ್ಲ.
ತತಃ ಪಿತಾಮಹೋ ವಿಷ್ಣುಂ ಭಗವಂತಂ ಸನಾತನಮ್ |
ಸಂಪೂಜ್ಯ ವರದಂ ದೇವಂ ಮಹಾದೇವಮಥಾಬ್ರವೀತ್ ॥22॥
ಆಗ ಪಿತಾಮಹರಾದ ಬ್ರಹ್ಮದೇವರು ಭಗವಂತನೂ, ಸನಾತನನೂ, ವರಪ್ರದನೂ, ಮಹಾದೇವನೂ ಆದ ವಿಷ್ಣುವನ್ನು ಚೆನ್ನಾಗಿ ಪೂಜಿಸಿ ಅನಂತರ ಮಾತ -ನಾಡಿದನು.
ಸ್ವಯಂ ವಿಷ್ಣುಃ ಸದಾ ಕ್ಲೃಪ್ತೋ ಧರ್ಮಸ್ಯ ಪರಿರಕ್ಷಣೇ |
ತ್ವಂ ಹಿ ಸರ್ವವಿಧಾನಜ್ಞಃ ಸತ್ವಾನಾಂ ತ್ವಂ ಗತಿಃ ಪುರಾ ॥23॥
ವಿಷ್ಣುವಾದ ನೀನೇ ಯಾವಾಗಲೂ ಧರ್ಮದ ರಕ್ಷಣೆಯಲ್ಲಿ ಕ್ಲೃಪ್ತನಾಗಿದ್ದೀಯೆ. ನೀನು ಎಲ್ಲಾ ಪ್ರಕಾರಗಳನ್ನೂ ತಿಳಿದವನು. ಮೊದಲಿನಿಂದಲೂ ಎಲ್ಲ ಜೀವರಿಗೂ ನೀನೇ ಗತಿಯಾದವನು.
ಅತ್ರ ಸಾಧ್ವನುಕಂಪಾಂ ವೈ ಕರ್ತುಮರ್ಹಸಿ ಕೇವಲಮ್ |
ಸಂಕರೋ ನ ಭವೇದತ್ರ ಯಥಾ ವೈ ತದ್ ವಿಧೀಯತಾಮ್ ॥24॥
ಈಗ ನೀನು ಶುದ್ಧವಾದ ಅನುಕಂಪವನ್ನು ಮಾಡಬೇಕಾಗಿದೆ. ಪ್ರಜೆಗಳಲ್ಲಿ ಸಂಕರವುಂಟಾಗದಂತೆ ಮಾಡಬೇಕು. (ಎಂದು ಪ್ರಾರ್ಥಿಸಿದರು)
ತತಃ ಸ ಭಗವಾನ್ ಧ್ಯಾತ್ವಾ ಚಿರಂ ಶೂಲಜಟಾಧರಃ |
ದೇವದೇವೋ ಮಹಾದೇವಃ ಕಾರಣಂ ಜಗತಃ ಪರಮ್ ॥25॥
ಬ್ರಹ್ಮವಿಷ್ಣ್ವಿಂದ್ರಸಹಿತಃ ಸರ್ವೈಶ್ಚ ಸ ಸುರಾಸುರೈಃ |
ಲೋಕಸಂಧಾರಣಾರ್ಥಂ ಚ ಲೋಕಸಂಕರನಾಶನಮ್ |
ಆತ್ಮಾನಮಾತ್ಮನಾ ದಂಡಮಸೃಜದ್ ದೇವಸತ್ತಮಃ ॥26॥
ಅನಂತರ ಶೂಲಜಟಾಧರನಾದ, ಮಹಾದೇವನಾದ, ದೇವದೇವನಾದ, ಜಗತ್ತಿಗೆ ಮೂಲಕಾರಣನಾದ ಶಂಕರನು (ಶಂಕರನ ಅಂತರ್ಯಾಮಿಯಾದ ಹರಿಯು) ಬ್ರಹ್ಮ, ವಿಷ್ಣು (ವಿಷ್ಣುವಿನ ಇನ್ನೊಂದು ರೂಪ) ಇಂದ್ರಸಹಿತನಾಗಿ ಎಲ್ಲ ಸುರಾಸುರರಿಂದಲೂ ಸಹಿತನಾಗಿ ಲೋಕವನ್ನು ಚೆನ್ನಾಗಿ ಧರಿಸಿ ಲೋಕ- ಸಾಂಕರ್ಯವನ್ನು ನಾಶ ಮಾಡುವುದಕ್ಕಾಗಿ ದೇವಶ್ರೇಷ್ಠನಾದ ಅವನು ತನ್ನನ್ನೇ ದಂಡರೂಪವಾಗಿ ಸೃಷ್ಟಿಸಿಕೊಂಡನು.
ತಸ್ಮಾಚ್ಚ ಧರ್ಮಚರಣಾಂ ನೀತಿಂ ದೇವೀಂ ಸರಸ್ವತೀಮ್ |
ಅಸೃಜದ್ ದಂಡನೀತಿಃ ಸಾ ತ್ರಿಷು ಲೋಕೇಷು ವಿಶ್ರುತಾ ॥27॥
ಅದರಿಂದ ಸರಸ್ವತಿಯಿಂದ ಅಭಿಮನ್ಯವಾದ ಧರ್ಮಾಚರಣೆಯ ನೀತಿಯನ್ನು ಸೃಷ್ಟಿಸಿದನು. ದಂಡನೀತಿಯೆಂದು ಹೆಸರು ಪಡೆದ ಆ ನೀತಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ.
ಯಥಾಽಸೌ ನೀಯತೇ ದಂಡಃ ಸತತಂ ಪಾಪಕಾರಿಷು |
ದಂಡಸ್ಯ ನಯನಾತ್ ಸಾ ಹಿ ದಂಡನೀತಿರಿಹೋಚ್ಯತೇ ॥28॥
ಅಪರಾಧಿಗಳಲ್ಲಿ ದಂಡವನ್ನು ಉಂಟು ಮಾಡುವುದರಿಂದ ಆ ನೀತಿಗೆ ದಂಡನೀತಿಯೆಂದು ಹೆಸರು.
ಭೂಯಃ ಸ ಭಗವಾನ್ ಧ್ಯಾತ್ವಾ ಚಿರಂ ಶೂಲಧರಃ ಪ್ರಭುಃ |
ಅಸೃಜತ್ ಸರ್ವಶಾಸ್ತ್ರಾಣಿ ಮಹಾದೇವೋ ಮಹೇಶ್ವರಃ ॥29॥

ಅನಂತರ ಪೂಜ್ಯನಾದ, ಶೂಲಧರನಾದ, ಮಹಾದೇವನಾದ ಮಹೇಶ್ವರನು ಪುನಃ ಬಹಳಕಾಲ ಚಿಂತಿಸಿ ಸರ್ವಶಾಸ್ತ್ರಗಳನ್ನೂ ಸೃಷ್ಟಿಸಿದನು.
ದಂಡನೀತೇಃ ಪ್ರಯೋಗಾರ್ಥಂ ಪ್ರಮಾಣಾನಿ ಚ ಸರ್ವಶಃ |
ವಿದ್ಯಾಶ್ಚತಸ್ರಃ ಕೂಟಸ್ಥಾಸ್ತಾಸಾಂ ಭೇದವಿಕಲ್ಪನಾಃ ॥30॥
ದಂಡನೀತಿಯ ಪ್ರಯೋಗಕ್ಕಾಗಿ ಎಲ್ಲಾ ಪ್ರಮಾಣಗಳನ್ನೂ ನಾಲ್ಕು ನಿರ್ವಿ- ಕಾರವಿದ್ಯೆಗಳನ್ನೂ, ಅವುಗಳ ಪ್ರಭೇದಗಳನ್ನೂ ಸೃಷ್ಟಿಸಿದನು.
ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ |
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ ॥31॥
ಅವು ನಾಲ್ಕು ವೇದಗಳು, ಆರು ವೇದಾಂಗಗಳು,ಮೀಮಾಂಸಾ, ನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಎಂದು ಹದಿನಾಲ್ಕು ವಿದ್ಯಾಸ್ಥಾನಗಳಾಗಿವೆ.
ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತಿ ತೇ ತ್ರಯಃ |
ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ತು ॥32॥
ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಮತ್ತು ನಾಲ್ಕನೆಯ ಅರ್ಥಶಾಸ್ತ್ರವನ್ನು ಸೇರಿಸಿ ಒಟ್ಟು ಹದಿನೆಂಟು ವಿದ್ಯೆಗಳಾಗುತ್ತವೆ.
ದಶ ಚಾಷ್ಟೌ ಚ ವಿಖ್ಯಾತಾ ಏತಾ ಧರ್ಮಸ್ಯ ಸಂಹಿತಾಃ |
ಏತಾಸಾಮೇವ ವಿದ್ಯಾನಾಂ ವ್ಯಾಸಮಾಹ ಮಹೇಶ್ವರಃ ॥33॥
ಇವು ಧರ್ಮಸಂಹಿತೆಗಳೆಂದು ಪ್ರಸಿದ್ಧವಾದ ಹದಿನೆಂಟು ವಿದ್ಯೆಗಳು. ಈ ವಿದ್ಯೆಗಳ ವಿಸ್ತಾರವನ್ನೇ ಮಹೇಶ್ವರನಾದ ವಿಷ್ಣುವು ಹೇಳಿದನು. ಇಲ್ಲಿಯೇ ಮುಂದೆ ರುದ್ರನಿಗೆ ಈಶ್ವರನನ್ನು ಪ್ರಭುವನ್ನಾಗಿ ಮಾಡಿದನು ಎಂದು ಹೇಳಿರುವುದರಿಂದ ಶಿವನು ಶಿವನನ್ನು ಸೃಷ್ಟಿಮಾಡಲು ಸಾಧ್ಯವಿಲ್ಲವಾದುದರಿಂದ ಮಹೇಶ್ವರನೆಂದರೆ ಶಿವಾಂತರ್ಯಾಮಿಯಾದ ವಿಷ್ಣುವೆಂದೇ ತಿಳಿಯಬೇಕು - (ಲಕ್ಷಾಲಂಕಾರ)
ಶತಾನಿ ತ್ರೀಣಿ ಶಾಸ್ತ್ರಾಣಾಂ ಮಹಾತಂತ್ರಾಣಿ ಸಪ್ತತಿಮ್ |
ವ್ಯಾಸ ಏವ ತು ವಿದ್ಯಾನಾಂ ಮಹಾದೇವೇನ ಕೀರ್ತಿತಃ ॥34॥
ಮಹಾದೇವನಾದ ವಿಷ್ಣುವು ಮುನ್ನೂರು ಶಾಸ್ತ್ರಗಳನ್ನೂ ಎಪ್ಪತ್ತು ಮಹಾತಂತ್ರ- ಗಳನ್ನೂ ರಚಿಸಿ ವಿದ್ಯೆಗಳ ವಿಸ್ತಾರವನ್ನು ಹೇಳಿದ್ದಾನೆ.
ತಂತ್ರಂ ಪಾಶುಪತಂ ನಾಮ ಪಂಚರಾತ್ರಂ ಚ ವಿಶ್ರುತಮ್ |
ಯೋಗಶಾಸ್ತ್ರಂ ಚ ಸಾಂಖ್ಯಂ ಚ ತಂತ್ರಂ ಲೋಕಾಯತಂ ತಥಾ ॥35॥
ತಂತ್ರಂ ಬ್ರಹ್ಮತುಲಾ ನಾಮ ತರ್ಕವಿದ್ಯಾ ದಿವೌಕಸಾಮ್ |
ಸುಖದುಃಖಾರ್ತಜಿಜ್ಞಾಸಾ ಕಾರಣಂ ಚೇತಿ ವಿಶ್ರುತಮ್ ॥36॥
ಪಾಶುಪತತಂತ್ರ, ಪ್ರಖ್ಯಾತವಾದ ಪಂಚರಾತ್ರ, ಯೋಗಶಾಸ್ತ್ರ, ಸಾಂಖ್ಯಶಾಸ್ತ್ರ, ಚಾರ್ವಾಕತಂತ್ರ, ಬ್ರಹ್ಮತುಲಾತಂತ್ರ, ದೇವತೆಗಳ ತರ್ಕವಿದ್ಯಾ, ಸುಖದುಃಖಾರ್ಥ- ಜಿಜ್ಞಾಸಾ, ಪ್ರಖ್ಯಾತವಾದ ಸುಖವಿದ್ಯಾಕಾರಣ ಎಂಬ ಶಾಸ್ತ್ರಗಳನ್ನು ರಚಿಸಿದನು.
ತರ್ಕವಿದ್ಯಾಸ್ತಥಾ ಚಾಷ್ಟೌ ಸ ಚೋಕ್ತೋ ನ್ಯಾಯವಿಸ್ತರಃ |
ದಶ ಚಾಷ್ಟೌ ಚ ವಿಜ್ಞೇಯಾಃ ಪೌರಾಣಾ ಯಜ್ಞಸಂಹಿತಾಃ ॥37॥
ಎಂಟು ತರ್ಕವಿದ್ಯೆಗಳನ್ನು ರಚಿಸಿದನು. ಅದಕ್ಕೆ ನ್ಯಾಯವಿಸ್ತರವೆಂದು ಹೆಸರು. ಯಜ್ಞಕ್ಕೆ ಸಂಬಂಧಿಸಿದ ಪುರಾಣಸಂಹಿತೆಗಳು ಹದಿನೆಂಟು ಎಂದು ತಿಳಿಯಬೇಕು.
ಪುರಾಣಾಶ್ಚ ಪ್ರಣೀತಾಶ್ಚ ತಾವದೇವೇಹ ಸಂಹಿತಾಃ |
ಧರ್ಮಶಾಸ್ತ್ರಾಣಿ ತದ್ವಚ್ಚ ಏಕಾರ್ಥಾನಿ ಚ ನಾನ್ಯಥಾ ॥38॥
ಅಷ್ಟೇ ಪುರಾಣಸಂಹಿತೆಗಳನ್ನು ರಚಿಸಿದನು. ಅದರಂತೆಯೇ ಸಮಾನಾರ್ಥಕ- ವಾದ ಪರಸ್ಪರವಿರೋಧವಿಲ್ಲದ ಧರ್ಮಶಾಸ್ತ್ರಗಳನ್ನು ರಚಿಸಿದನು.
ಏಕಾರ್ಥಾನಿ ಪುರಾಣಾನಿ ವೇದಾಶ್ಚೈಕಾರ್ಥಸಂಹಿತಾಃ |
ನಾನಾರ್ಥಾನಿ ಚ ಸರ್ವಾಣಿ ತತಃ ಶಾಸ್ತ್ರಾಣಿ ಶಂಕರಃ ॥39॥
ಪ್ರೋವಾಚ ಭಗವಾನ್ ದೇವಃ ಕಾಲಜ್ಞಾನಾನಿ ಯಾನಿ ಚ |
ಚತುಃಷಷ್ಟಿಪ್ರಮಾಣಾನಿ ಆಯುರ್ವೇದಂ ಚ ಸೋತ್ತರಮ್ ॥40॥
ಪುರಾಣಗಳೆಲ್ಲವೂ ಒಂದೇ ಅರ್ಥವನ್ನು ಹೇಳುತ್ತವೆ. ವೇದಗಳಿಗೂ ಒಂದೇ ಅರ್ಥದಲ್ಲಿ ತಾತ್ಪರ್ಯವಿದೆ. ಉಳಿದ ಶಾಸ್ತ್ರಗಳು ಭಿನ್ನಭಿನ್ನಾರ್ಥಗಳನ್ನು ಹೊಂದಿವೆ. ಪೂಜ್ಯನಾದ ಶಂಕರದೇವನು ಅವುಗಳನ್ನು ಮತ್ತು ಕಾಲಜ್ಞಾನವನ್ನು, ಅರವತ್ತನಾಲ್ಕು ಪ್ರಮಾಣಗಳನ್ನು ಮತ್ತು ಶ್ರೇಷ್ಠವಾದ ಆಯುರ್ವೇದವನ್ನು ರಚಿಸಿದನು.
ಆಷ್ಟಾದಶವಿಕಲ್ಪಾಂ ತಾಂ ದಂಡನೀತಿಂ ಚ ಶಾಶ್ವತೀಮ್ |
ಗಾಂಧರ್ವಮಿತಿಹಾಸಂ ಚ ನಾನಾವಿಸ್ತರಮುಕ್ತವಾನ್ ॥41॥
ಹದಿನೆಂಟು ಪ್ರಭೇದಗಳಿಂದ ಕೂಡಿದ ಶಾಶ್ವತವಾದ ದಂಡನೀತಿಶಾಸ್ತ್ರವನ್ನು, ಗಾಂಧರ್ವಶಾಸ್ತ್ರವನ್ನು ಮತ್ತು ಇತಿಹಾಸವನ್ನು ಬಹಳವಿಸ್ತಾರವಾಗಿ ಹೇಳಿದನು.
ಇತ್ಯೇತಾಃ ಶಂಕರಪ್ರೋಕ್ತಾ ವಿದ್ಯಾಃ ಶಬ್ದಾರ್ಥಸಂಹಿತಾಃ |
ಪುನರ್ಭೇದಸಹಸ್ರಂ ತು ತಾಸಾಮೇವ ತು ವಿಸ್ತರಃ ॥42॥

ಋಷಿಭಿರ್ದೇವಗಂಧರ್ವೈಃ ಸವಿಕಲ್ಪೈಃ ಸವಿಸ್ತರಃ |
ಶಶ್ವದಭ್ಯಸ್ಯತೇ ಲೋಕೇ ವೇದ ಏವ ತು ಸರ್ವಶಃ ॥43॥
ಇವುಗಳು ಶಂಕರನಿಂದ ಹೇಳಲ್ಪಟ್ಟ ಶಬ್ದಾರ್ಥಗಳನ್ನೊಳಗೊಂಡ ವಿದ್ಯೆಗಳು. ಪುನಃ ಋಷಿಗಳು ಮತ್ತು ದೇವಗಂಧರ್ವರು ಅವುಗಳಲ್ಲಿ ಸಹಸ್ರಾರು ಪ್ರಭೇದಗಳನ್ನು ಮಾಡಿದರು. ಆ ಎಲ್ಲ ಪ್ರಭೇದಗಳು ವಿಸ್ತಾರವಾಗಿ ಲೋಕದಲ್ಲಿ ಅಧ್ಯಯನ ಮಾಡಲ್ಪಡುತ್ತವೆ. ಅವೆಲ್ಲವೂ ವೇದಗಳೇ.
ವೇದಾಶ್ಚತಸ್ರಃ ಸಂಕ್ಷಿಪ್ತಾ ವೇದವಾದಾಶ್ಚ ತೇ ಸ್ಮೃತಾಃ |
ಏತಾಸಾಂ ಪಾರಗೋ ಯಶ್ಚ ಸ ಚೋಕ್ತೋ ವೇದಪಾರಗಃ ॥44॥
ಅವು ಸಂಕ್ಷಿಪ್ತವಾದ ನಾಲ್ಕು ವೇದಗಳು. ಅವುಗಳಿಗೆ ವೇದವಾದಗಳೆಂದು ಹೆಸರು. ಇವುಗಳನ್ನೆಲ್ಲಾ ತಿಳಿದವನು ವೇದಪಾರಗನೆನಿಸುತ್ತಾನೆ.
ವೇದಾನಾಂ ಪಾರಗೋ ರುದ್ರೋ ವಿಷ್ಣುರಿಂದ್ರೋ ಬೃಹಸ್ಪತಿಃ |
ಶಕ್ರಃ ಸ್ವಾಯಂಭುವಶ್ಚೈವ ಮನುಃ ಪರಮಧರ್ಮವಿತ್ ॥45॥
ಬ್ರಹ್ಮಾ ಚ ಪರಮೋ ದೇವಃ ಸದಾ ಸರ್ವೈಃ ಸುರಾಸುರೈಃ |
ಸರ್ವಸ್ಯಾನುಗ್ರಹಾಚ್ಚೈವ ವ್ಯಾಸೋ ವೈ ವೇದಪಾರಗಃ ॥46॥
ವೇದಪಾರಂಗತರಾದವರೆಂದರೆ ರುದ್ರ, ವಿಷ್ಣು, ಇಂದ್ರ, ಬೃಹಸ್ಪತಿ, ಶಕ್ರ, ಪರಮಧರ್ಮಜ್ಞನಾದ ಸ್ವಾಯಂಭುವಮನು, ಸಕಲಸುರಾಸುರರಿಂದ ಕೂಡದ ಶ್ರೇಷ್ಠರಾದ ಬ್ರಹ್ಮದೇವರು, ಸರ್ವಾನುಗ್ರಹ ಮಾಡುವುದರಿಂದ ವೇದವ್ಯಾಸರು - ಇವರು ವೇದಪಾರಗರು.
ಭೀಷ್ಮಃ
ಅಹಂ ಶಾಂತನವೋ ಭೀಷ್ಮಃ ಪ್ರಸಾದಾನ್ಮಾಧವಸ್ಯ ಚ |
ಶಂಕರಸ್ಯ ಪ್ರಸಾದಾಚ್ಚ ಬ್ರಹ್ಮಣಶ್ಚ ಕುರೂದ್ವಹ |
ವೇದಪಾರಗ ಇತ್ಯುಕ್ತೋ ಯಾಜ್ಞವಲ್ಕ್ಯಶ್ಚ ಸರ್ವಶಃ ॥47॥
ಭೀಷ್ಮರು ಮಾಧವನ ಅನುಗ್ರಹದಿಂದ, ಶಂಕರನ ಮತ್ತು ಬ್ರಹ್ಮದೇವರ ಅನುಗ್ರಹದಿಂದ ಎಲೈ ಕುರೂದ್ವಹನೇ! ಶಂತನುವಿನ ಪುತ್ರನಾದ ಭೀಷ್ಮನಾದ ನಾನು ವೇದಪಾರಗನೆಂದು ಹೇಳಲ್ಪಡುತ್ತೇನೆ. ಯಾಜ್ಞವಲ್ಕ್ಯರೂ ವೇದಪಾರಗರೆಂದು ಹೇಳಲ್ಪಡುತ್ತಾರೆ.
ಕಲ್ಪೇ ಕಲ್ಪೇ ಮಹಾಭಾಗೈರ್ಋಷಿಭಿಸ್ತತ್ತ್ವದರ್ಶಿಭಿಃ |
ಋಷಿಪುತ್ರೈರ್ಋಷಿಗಣೈರ್ಭಿದ್ಯಂತೇ ಮಿಶ್ರಕೈರಪಿ ॥48॥
ಪ್ರತಿಯೊಂದು ಕಲ್ಪದಲ್ಲಿಯೂ ಮಹಾನುಭಾವರೂ ತತ್ವದರ್ಶಿಗಳೂ ಆದ ಋಷಿಗಳಿಂದಲೂ ಋಷಿಪುತ್ರರಿಂದಲೂ ಋಷಿಸಮೂಹಗಳಿಂದಲೂ ಈ ವೇದ- ಗಳೂ ಒಬ್ಬೊಬ್ಬರಿಂದ ಮತ್ತು ಸಮೂಹದಿಂದ ಶಾಖೆಗಳಾಗಿ ಒಡೆಯುತ್ತವೆ.
ಶಿವೇನ ಬ್ರಹ್ಮಣಾ ಚೈವ ವಿಷ್ಣುನಾ ಚ ವಿಕಲ್ಪಿತಾಃ |
ಆದಿಕಲ್ಪೇ ಪುನಶ್ಚೈವ ಭಿದ್ಯಂತೇ ಸಾಧುಭಿಃ ಪುನಃ ॥49॥
ಆದಿಕಲ್ಪದಲ್ಲಿ ಶಿವನಿಂದಲೂ, ಬ್ರಹ್ಮನಿಂದಲೂ, ವಿಷ್ಣುವಿನಿಂದಲೂ ಕವಲು- ಗಳಾಗಿ ಒಡೆದ ಈ ವೇದಗಳು ಪುನಃ ಸಜ್ಜನರಿಂದ ಕವಲುಗಳಾಗಿ ಒಡೆಯಲ್ಪಡುತ್ತವೆ.
ಇದಾನೀಮಪಿ ವಿದ್ವದ್ಭಿರ್ಭಿದ್ಯಂತೇ ಚ ವಿಕಲ್ಪಕೈಃ |
ಪೂರ್ವಜನ್ಮಾನುಸಾರೇಣ ಬಹುಧೇಯಂ ಸರಸ್ವತೀ ॥50॥
ಈಗಲೂ ಸಹ ವಿದ್ವಾಂಸರು ಅನೇಕಶಾಖೆಗಳಾಗಿ ಒಡೆಯುತ್ತಾರೆ. ಮೊದಲಿನ ತನ್ನ ಜನ್ಮಕ್ಕೆ ಅನುಸಾರವಾಗಿ ಈ ವೇದವಾಙ್ಮಯವು ಬಹುಪ್ರಕಾರವಾಗಿ ಹಬ್ಬಿದೆ.
ತತಃ ಸ ಭಗವಾನ್ ಧ್ಯಾತ್ವಾ ತದಾ ಶೂಲವರಾಯುಧಃ |
ತಸ್ಯ ತಸ್ಯ ನಿಕಾಯಸ್ಯ ಚಕಾರೈಕೈಕಮೀಶ್ವರಮ್ ॥51॥
ಅನಂತರ ಶೂಲವರಾಯುಧನಾದ ಭಗವಂತನಾದ ವಿಷ್ಣುವು ಆಯಾ ಗುಂಪು- ಗಳಿಗೆ ಒಬ್ಬೊಬ್ಬ ಅಧಿಪತಿಯನ್ನಾಗಿ ಮಾಡಿದನು. ಇಲ್ಲಿ ಶೂಲವರಾಯುಧನೆಂದರೆ ಶೂಲಕ್ಕಿಂತಲೂ ಶ್ರೇಷ್ಠವಾದ ಚಕ್ರಾಯುಧ ಎಂದರ್ಥ. ಶೂಲವರಾಯುಧನಾದವನು ಶಿವಾಂತರ್ಯಾಮಿಯಾದ ವಿಷ್ಣುವೇ ಎಂದು ತಿಳಿಯಬೇಕು ಇಲ್ಲದಿದ್ದರೆ ಇದೇ ಅಧ್ಯಾಯದಲ್ಲಿ ಉಪಕ್ರಮದಿಂದ ಇರುವ ಊತತಃ ಪಿತಾಮಹೋ ವಿಷ್ಣುಂಊ ಎಂಬ ಇದೇ ಅಧ್ಯಾಯದ 22ನೆಯ ಶ್ಲೋಕ- ದಿಂದಲೂ ಊಸ್ವಯಂ ವಿಷ್ಣುಃ ಸದಾ ಕ್ಲೃಪ್ತಃಊ ಎಂಬ 23ನೆಯ ಶ್ಲೋಕದಿಂದಲೂ ವಿರೋಧವುಂಟಾಗುತ್ತದೆ ಲಕ್ಷಾಲಂಕಾರ.
ದೇವಾನಾಮೀಶ್ವರಂ ಚಕ್ರೇ ದೇವಂ ದಶಶತೇಕ್ಷಣಮ್ |
ಯಮಂ ವೈವಸ್ವತಂ ಚಾಪಿ ಪಿತೄಣಾಮಕರೋತ್ ಪತಿಮ್ ॥52॥
ದೇವತೆಗಳಿಗೆ ಸಹಸ್ರಾಕ್ಷನಾದ ಇಂದ್ರನನ್ನು ಒಡೆಯನನ್ನಾಗಿ ಮಾಡಿದನು. ಪಿತೃಗಳಿಗೆ ಸೂರ್ಯಪುತ್ರನಾದ ಯಮನನ್ನು ಪತಿಯನ್ನಾಗಿ ಮಾಡಿನು.
ಧನಾನಾಂ ರಕ್ಷಸಾಂ ಚಾಪಿ ಕುಬೇರಮಪಿ ಚೇಶ್ವರಮ್ |
ಪರ್ವತಾನಾಂ ಪತಿಂ ಮೇರುಂ ಸರಿತಾಂ ಚ ಮಹೋದಧಿಮ್ ॥53॥
ಕೋಶಗಳಿಗೆ ಮತ್ತು ರಾಕ್ಷಸರಿಗೆ ಕುಬೇರನನ್ನೂ, ಪರ್ವತಗಳಿಗೆ ಮೇರು- ವನ್ನೂ, ಜಲಾಶಯಗಳಿಗೆ ಸಮುದ್ರವನ್ನೂ ಅಧಿಪತಿಯನ್ನಾಗಿ ಮಾಡಿದನು.
ಅಪಾಂ ರಾಜ್ಯೇ ಸುರಾಣಾಂ ಚ ವಿದಧೇ ವರುಣಂ ಪ್ರಭುಮ್ |

ಮೃತ್ಯುಂ ಪ್ರಾಣೇಶ್ವರಮಥೋ ತೇಜಸಾಂ ಚ ಹುತಾಶನಮ್ ॥54॥
ಜಲಸಾಮ್ರಾಜ್ಯದಲ್ಲಿ ಮತ್ತು ದೇವತೆಗಳಿಗೆ ವರುಣನನ್ನೂ, ಪ್ರಾಣಗಳಿಗೆ ಮೃತ್ಯುವನ್ನೂ, ತೇಜಸ್ಸುಗಳಿಗೆ ಅಗ್ನಿಯನ್ನೂ ಪ್ರಭುವನ್ನಾಗಿ ಮಾಡಿದನು.
ರುದ್ರಾಣಾಮಪಿ ಚೇಶಾನಂ ಗೋಪ್ತಾರಂ ವಿದಧೇ ಪ್ರಭುಃ |
ಮಹಾತ್ಮಾನಂ ಮಹಾದೇವಂ ವಿಶಾಲಾಕ್ಷಂ ಸನಾತನಮ್ ॥55॥
ರುದ್ರರಿಗೆ ಮಹಾತ್ಮನೂ, ವಿಶಾಲಾಕ್ಷನೂ, ಸನಾತನನೂ, ಮಹಾದೇವನೂ ಆದ ಈಶ್ವರನನ್ನು ಒಡೆಯನನ್ನಾಗಿ ಮಾಡಿದನು.
ವಸಿಷ್ಠಮೀಶಂ ವಿಪ್ರಾಣಾಂ ವಸೂನಾಂ ಜಾತವೇದಸಮ್ |
ತೇಜಸಾಂ ಭಾಸ್ಕರಂ ಚಕ್ರೇ ನಕ್ಷತ್ರಾಣಾಂ ನಿಶಾಕರಮ್ ॥56॥
ವಿಪ್ರರಿಗೆ ವಸಿಷ್ಠರನ್ನೂ, ವಸುಗಳಿಗೆ ಅಗ್ನಿಯನ್ನೂ, ತೇಜಸ್ಸುಗಳಿಗೆ ಸೂರ್ಯನನ್ನೂ, ನಕ್ಷತ್ರಗಳಿಗೆ ಚಂದ್ರನನ್ನೂ ಅಧಿಪತಿಯನ್ನಾಗಿ ಮಾಡಿದನು.
ವೀರುಧಾಮಂಶುಮಂತಂ ಚ ಭೂತಾನಾಂ ಚ ಪ್ರಭುಂ ವರಮ್ |
ಕುಮಾರಂ ದ್ವಾದಶಭುಜಂ ಸ್ಕಂದಂ ರಾಜಾನಮಾದಿಶತ್ ॥57॥
ವೃಕ್ಷಗಳಿಗೆ ಮತ್ತು ಭೂತಗಳಿಗೆ ಕಿರಣಸಹಿತನಾದ ಚಂದ್ರನನ್ನು ಅಧಿಪತಿಯನ್ನಾಗಿ ಮಾಡಿದನು. ದ್ವಾದಶಭುಜವುಳ್ಳ ಸನತ್ಕುಮಾರನಾದ ಕುಮಾರನನ್ನು ರಾಜನನ್ನಾಗಿ (ಸೇನಾಪತಿಯನ್ನಾಗಿ) ಮಾಡಿದನು.
ಕಾಲಂ ಸರ್ವೇಶಮಕರೋತ್ ಸಂಹಾರವಿನಯಾತ್ಮಕಮ್ |
ಮೃತ್ಯೋಶ್ಚತುರ್ವಿಭಾಗಸ್ಯ ದುಃಖಸ್ಯ ಚ ಸುಖಸ್ಯ ಚ ॥58॥
ಸಂಹಾರನಿಯಾಮಕವಾದ ಕಾಲವನ್ನು ಸರ್ವಪ್ರಭುವನ್ನಾಗಿ ಮಾಡಿದನು. ನಾಲ್ಕು ವಿಧವಾದ ಮೃತ್ಯುವಿಗೂ, ಸುಖದುಃಖಗಳಿಗೂ ಕಾಲವನ್ನೇ ಸರ್ವೇಶನನ್ನಾಗಿ ಮಾಡಿದನು.
ಈಶ್ವರೋ ದೇವದೇವಸ್ತು ರಾಜರಾಜೋ ಧನಾಧಿಪಃ |
ಸರ್ವೇಷಾಮೇವ ರುದ್ರಾಣಾಂ ಶೂಲಪಾಣಿರಿತಿ ಶ್ರುತಿಃ ॥59॥
ದೇವದೇವನೂ ರಾಜರಾಜನೂ ಆದ ಕುಬೇರನು ಸುಖಕ್ಕೂ ಈಶ್ವರನಾದವನು ಎಲ್ಲ ರುದ್ರರಿಗೆ ಶೂಲಪಾಣಿಯು ಒಡೆಯನಾದವನು ಎಂದು ಕೇಳಿದ್ದೇವೆ.
ತಮೇನಂ ಬ್ರಹ್ಮಣಃ ಪುತ್ರಮನುಜಾತಂ ಕ್ಷುಪಂ ದದೌ |
ಪ್ರಜಾನಾಮಧಿಪಂ ಶ್ರೇಷ್ಠಂ ಸರ್ವಧರ್ಮಭೃತಾಮಪಿ ॥60॥
ಈ ದಂಡನೀತಿಯನ್ನು ಬ್ರಹ್ಮದೇವರ ಕಿರಿಯ ಪುತ್ರನೂ ಪ್ರಜಾಪತಿಯೂ, ಧರ್ಮಿಷ್ಠನೂ ಆದ ಕ್ಷುಪನಿಗೆ ಕೊಡಬೇಕೆಂದು ಉದ್ದೇಶಿಸಿ ಶಂಕರನಿಗೆ ಕೊಟ್ಟನು. (ಲಕ್ಷ್ಯಾಲಂಕಾರ)
ಮಹಾದೇವಸ್ತತಸ್ತಸ್ಮಿನ್ ವೃತ್ತೇ ಯಜ್ಞೇ ಯಥಾವಿಧಿ |
ದಂಡಂ ಧರ್ಮಸ್ಯ ಗೋಪ್ತಾರಂ ವಿಷ್ಣವೇ ಸತ್ಕೃತಂ ದದೌ ॥61॥
ಆ ಯಜ್ಞವು ವಿಧಿವತ್ತಾಗಿ ಮುಗಿಯುತ್ತಿರಲು ಮಹಾದೇವನು ಧರ್ಮರಕ್ಷಕ- ವಾದ ಆ ದಂಡವನ್ನು ಪೂಜಿಸಿ ವಿಷ್ಣುವಿಗೆ ಕೊಟ್ಟನು.
ಈಶ್ವರಶ್ಚೇತನಃ ಕರ್ತಾ ಪುರುಷಃ ಕಾರಣಂ ಶಿವಃ |
ವಿಷ್ಣುರ್ಬ್ರಹ್ಮಾ ಶಶೀ ಸೂರ್ಯಃ ಶಕ್ರೋ ದೇವಾಶ್ಚ ಸಾನ್ವಯಾಃ ॥62॥
ಜ್ಞಾನಾತ್ಮಕಃ ಶಿವೋ ಶೇಷ ಏತೇಷಾಮಪಿ ಕಾರಣಮ್ |
ಸೃಜತೇ ಗ್ರಸತೇ ಚೈವ ತಮೋಭೂತಮಿದಂ ಯಥಾ |
ಅಪ್ರಜ್ಞಾತಂ ಜಗತ್ ಸರ್ವಂ ತದಾ ಹ್ಯೇಕೋ ಮಹೇಶ್ವರಃ ॥63॥
ಈಶ್ವರ, ಚೇತನ, ಕರ್ತೃಗಳು, ಕಾರಣ, ಶಿವ, ವಿಷ್ಣು, ಬ್ರಹ್ಮಾ, ಚಂದ್ರ, ಸೂರ್ಯ, ಇಂದ್ರ, ದೇವತೆಗಳು,ಅವರ ಸಂತತಿ, ಜ್ಞಾನಾತ್ಮಕರಾದ ಶಿವ,ಶೇಷ, ಇವರೆಲ್ಲರಿಗೂ ಕಾರಣನಾದ, ಈ ಜಗತ್ತು ಕತ್ತಲಿನಿಂದ ಗ್ರಸ್ತವಾಗಿ ಕಾಣದಿದ್ದಾಗ ಯಾವ ಒಬ್ಬನೇ ಮಹೇಶ್ವರನಾದವನು ಸೃಷ್ಟಿಮಾಡಿ ಕೊನೆಯಲ್ಲಿ ಸಂಹಾರ ಮಾಡುತ್ತಾನೆಯೋ, ಅಂತಹ ವಿಷ್ಣುವಿಗೆ ಶಂಕರನು ನೀಡಿದನು.
ವಿಷ್ಣುರಂಗಿರಸೇ ಪ್ರಾದಾದಂಗಿರಾ ಮುನಿಸತ್ತಮಃ |
ಪ್ರಾದಾದಿಂದ್ರಮರೀಚಿಭ್ಯಾಂ ಮರೀಚಿರ್ಭೃಗವೇ ದದೌ ॥64॥
ವಿಷ್ಣುವು ಅದನ್ನು ಅಂಗಿರಸರಿಗೆ ಕೊಟ್ಟನು. ಮುನಿಶ್ರೇಷ್ಠರಾದ ಅಂಗಿರಸರು ಇಂದ್ರ, ಮರೀಚಿಗಳಿಗೆ ಕೊಟ್ಟರು. ಮರೀಚಿಗಳು ಭೃಗುವಿಗೆ ಕೊಟ್ಟರು.
ಭೃಗುರ್ದದಾವೃಷಿಭ್ಯಸ್ತು ತಂ ದಂಡಂ ಧರ್ಮಸಂಹಿತಮ್ |
ಋಷಯೋ ಲೋಕಪಾಲೇಭ್ಯೋ ಲೋಕಪಾಲಾಃ ಕ್ಷುಪಾಯ ಚ ॥65॥
ಭೃಗುಗಳು ಋಷಿಗಳಿಗೆ ಧರ್ಮಸಂಹಿತಾರೂಪವಾದ ಆ ದಂಡವನ್ನು ಕೊಟ್ಟರು. ಋಷಿಗಳು ಲೋಕಪಾಲಕರಿಗೂ ಲೋಕಪಾಲರು ಕ್ಷುಪನಿಗೂ ಕೊಟ್ಟರು. (ಹೀಗೆ ಅದು ವಿಷ್ಣುವಿನಿಂದ ಕ್ಷುಪನಿಗೆ ತಲುಪಿತು)
ಕ್ಷುಪಸ್ತು ಮನವೇ ಪ್ರಾದಾದಾದಿತ್ಯತನಯಾಯ ಚ |
ಪುತ್ರೇಭ್ಯಃ ಶ್ರಾದ್ಧದೇವಸ್ತು ಸೂಕ್ಷ್ಮಧರ್ಮಾರ್ಥಕಾರಣಾತ್ |
ತಂ ದದೌ ಸೂರ್ಯಪುತ್ರಸ್ತು ಮನುರ್ವೈ ರಕ್ಷಣಾತ್ಮಕಮ್ ॥66॥
ಕ್ಷುಪನು ಸೂರ್ಯಪುತ್ರನಾದ ಶ್ರಾದ್ಧದೇವ ಮನುವಿಗೆ ಕೊಟ್ಟನು. ಶ್ರಾದ್ಧದೇವನು ಸೂಕ್ಷ್ಮವಾದ ಧರ್ಮಾರ್ಥಗಳನ್ನು ತಿಳಿಯುವ ಉದ್ದೇಶದಿಂದ ರಕ್ಷಣಾರೂಪವಾದ ಆ ಶಾಸ್ತ್ರವನ್ನು ತನ್ನ ಪುತ್ರರಿಗೆ ಕೊಟ್ಟನು.

ವಿಭಜ್ಯ ದಂಡಃ ಕರ್ತವ್ಯೋ ಧರ್ಮೇಣ ನ ಯದೃಚ್ಛಯಾ |
ದುಷ್ಟಾನಾಂ ನಿಗ್ರಹೋ ದಂಡೋ ಹಿರಣ್ಯಂ ಬಾಹ್ಯತಃ ಕ್ರಿಯಾ ॥67॥
ವಿಭಾಗ ಮಾಡಿ ಧರ್ಮದಿಂದ ದಂಡವನ್ನು ಪ್ರಯೋಗಿಸಬೇಕು. ಮನಸ್ಸಿಗೆ ಬಂದಂತೆ ಪ್ರಯೋಗಿಸಬಾರದು. ಹಿರಣ್ಯದಾನ, ವಿತ್ತದ ಆದಾನ ಇವು ಬಾಹ್ಯ- ಕ್ರಿಯೆಗಳು. ದುಷ್ಟರಿಗೆ ಬಲದಿಂದ ಅವರನ್ನು ಬಂಧಿಸಬೇಕು. (ಕಾರಾಗೃಹದಲ್ಲಿ ಇಡ- ಬೇಕು)
ವ್ಯಂಗತ್ವಂ ಚ ಶರೀರಸ್ಯ ವಧೋ ವಾ ನಾಲ್ಪಕಾರಣಾತ್ |
ಶರೀರಪೀಡಾಸ್ತಾಸ್ತಾಸ್ತು ದೇಹತ್ಯಾಗೋ ವಿವಾಸನಮ್ ॥68॥
ಅಲ್ಪಾಪರಾಧದ ಕಾರಣದಿಂದ ಅಂಗಹೀನತೆಯನ್ನಾಗಲೀ ವಧೆಯನ್ನಾಗಲೀ ಮಾಡಬಾರದು. ಆದನ್ನು ಬಿಟ್ಟು ಬೇರೆ ಬೇರೆ ಶರೀರಪೀಡೆಗಳನ್ನು ಮಾಡಬಹುದು. ಮಹಾಪರಾಧಗಳನ್ನು ಮಾಡಿದಾಗ ವಧೆಯನ್ನಾಗಲೀ, ದೇಶದಿಂದ ಗಡೀಪಾರ- ನ್ನಾಗಲೀ ಮಾಡಬಹುದು.
ಆನುಪೂರ್ವ್ಯಾ ಚ ದಂಡೋಽಸೌ ಪ್ರಜಾ ಜಾಗರ್ತಿ ಪಾಲಯನ್ |
ಇಂದ್ರೋ ಜಾಗರ್ತಿ ಭಗವಾನಿಂದ್ರಾದಗ್ನಿರ್ವಿಭಾವಸುಃ ॥69॥
ಈ ದಂಡವು ಅನುಕ್ರಮವಾಗಿ ಪ್ರಜೆಗಳನ್ನು ಪಾಲಿಸುತ್ತಾ ಎಚ್ಚರದಿಂದಿದೆ. ಪೂಜ್ಯನಾದ ಇಂದ್ರನು ಜಾಗರೂಕನಾಗಿದ್ದಾನೆ. ಇಂದ್ರನಿಂದ ಅಗ್ನಿಯು ಜಾಗರೂಕ- ನಾಗಿದ್ದಾನೆ.
ಅಗ್ನೇರ್ಜಾಗರ್ತಿ ವರುಣೋ ವರುಣಾಚ್ಚ ಪ್ರಜಾಪತಿಃ |
ಪ್ರಜಾಪತೇಸ್ತತೋ ಧರ್ಮೋ ಜಾಗರ್ತಿ ವಿನಯಾತ್ಮಕಃ ॥70॥
ಅಗ್ನಿಯಿಂದ ವರುಣನು ಜಾಗರೂಕನಾಗಿದ್ದಾನೆ. ವರುಣನಿಂದ ಪ್ರಜಾಪತಿಯು ಜಾಗರೂಕನಾಗಿದ್ದಾನೆ. ಪ್ರಜಾಪತಿಯಿಂದ ಎಲ್ಲರನ್ನೂ ದಮನಗೊಳಿಸುವ ಯಮನು ಜಾಗರೂಕನಾಗಿದ್ದಾನೆ.
ಧರ್ಮಾಚ್ಚ ಬ್ರಹ್ಮಣಃ ಪುತ್ರೋ ವ್ಯವಸಾಯಃ ಸನಾತನಃ |
ವ್ಯವಸಾಯಾತ್ ತತಸ್ತೇಜೋ ಜಾಗರ್ತಿ ಪರಿಪಾಲಯನ್ ॥71॥
ಧರ್ಮದಿಂದ ಬ್ರಹ್ಮಪುತ್ರನಾದ ಸನಾತನವಾದ ಉದ್ಯಮ(ವ್ಯವಸಾಯ)ವೂ, ವ್ಯವಸಾಯದಿಂದ ತೇಜಸ್ಸೂ ಜಗತ್ತನ್ನು ಪಾಲಿಸುತ್ತಾ ಜಾಗರೂಕವಾಗಿದೆ.
ಔಷಧ್ಯಸ್ತೇಜಸಸ್ತಸ್ಮಾದೋಷಧಿಭ್ಯಶ್ಚ ಪರ್ವತಾಃ |
ಪರ್ವತೇಭ್ಯಶ್ಚ ಜಾಗರ್ತಿ ರಸೋ ರಸಗುಣಾತ್ ತಥಾ ॥72॥
ತೇಜಸ್ಸಿನಿಂದ ಓಷಧಿಗಳೂ, ಓಷಧಿಗಳಿಂದ ಪರ್ವತಗಳೂ, ಪರ್ವತಗಳಿಂದ ರಸಗಳೂ ರಸಗುಣಗಳೂ ಜಾಗೃತವಾಗಿವೆ.
ಜಾಗರ್ತಿ ನಿರ್ಋತಿರ್ದೇವೀ ಜ್ಯೋತೀಂಷಿ ನಿವೃತೇರಪಿ |
ವೇದಾಃ ಪ್ರತಿಷ್ಠಾ ಜ್ಯೋತಿರ್ಭ್ಯಸ್ತತೋ ಹಯಶಿರಾಃ ಪ್ರಭುಃ ॥73॥
ರಸಗುಣಗಳಿಂದ ನಿರ್ಋತಿದೇವಿಯು ಜಾಗರೂಕಳಾಗಿದ್ದಾಳೆ. ನಿರ್ಋತಿಯಿಂದ ಜ್ಯೋತಿಸ್ಸುಗಳು ಜಾಗರೂಕವಾಗಿವೆ. ಜ್ಯೋತಿಸ್ಸುಗಳಿಂದ ಜಗತ್ತಿನ ಪ್ರತಿಷ್ಠೆಗೆ ಕಾರಣವಾದ ವೇದಗಳೂ ಮತ್ತು ಹಯಗ್ರೀವಪ್ರಭುವೂ ಜಾಗೃತವಾಗಿದ್ದಾರೆ.
ಬ್ರಹ್ಮಾ ಪಿತಾಮಹಸ್ತಸ್ಮಾಜ್ಜಾಗರ್ತಿ ಪ್ರಭುರವ್ಯಯಃ |
ಪಿತಾಮಹಾನ್ಮಹಾದೇವೋ ಜಾಗರ್ತಿ ಭಗವಾನ್ ಶಿವಃ ॥74॥
ಹಯಗ್ರೀವದೇವರಿಂದ ಪ್ರಭುವೂಅವ್ಯಯರೂ ಆದ ಬ್ರಹ್ಮದೇವರು ಜಾಗೃತರಾಗಿದ್ದಾರೆ. ಬ್ರಹ್ಮದೇವರಿಂದ ಮಹಾದೇವನೂ ಪೂಜ್ಯನೂ ಆದ ಶಿವನು ಜಾಗರೂಕನಾಗಿದ್ದಾನೆ.
ವಿಶ್ವೇದೇವಾಃ ಶಿವಾಚ್ಚಾಪಿ ವಿಶ್ವೇಭ್ಯಶ್ಚ ತಥರ್ಷಯಃ |
ಋಷಿಭ್ಯೋ ಭಗವಾನ್ ಸೋಮಃ ಸೋಮಾದ್ ದೇವಾಃ ಸನಾತನಾಃ ॥75
ಶಿವನಿಂದ ವಿಶ್ವೇದೇವತೆಗಳೂ, ವಿಶ್ವೇದೇವತೆಗಳಿಂದ ಋಷಿಗಳೂ, ಋಷಿ- ಗಳಿಂದ ಪೂಜ್ಯನಾದ ಚಂದ್ರನೂ, ಚಂದ್ರನಿಂದ ವೇದಪ್ರತಿಪಾದ್ಯದೇವತೆಗಳೂ ಜಾಗರೂಕರಾಗಿದ್ದಾರೆ.
ದೇವೇಭ್ಯೋ ಬ್ರಾಹ್ಮಣಾ ಲೋಕೇ ಜಾಗ್ರತೀತ್ಯುಪಧಾರಯ |
ಬ್ರಾಹ್ಮಣೇಭ್ಯಶ್ಚ ರಾಜನ್ಯಾ ಲೋಕಾನ್ ರಕ್ಷಂತಿ ಧರ್ಮತಃ |
ಸ್ಥಾವರಂ ಜಂಗಮಂ ಚೈವ ಕ್ಷತ್ರಿಯೇಭ್ಯಃ ಸನಾತನಮ್ ॥76॥
ಅಂತಹ ದೇವತೆಗಳಿಂದ ಈ ಲೋಕದಲ್ಲಿ ಬ್ರಾಹ್ಮಣರು ಜಾಗರೂಕರಾಗಿ ದ್ದಾರೆಂದು ತಿಳಿಯುವವನಾಗು. ಬ್ರಾಹ್ಮಣರಿಂದ ಕ್ಷತ್ರಿಯರು (ಆ ದಂಡವನ್ನು ಪಡೆದು) ಲೋಕಗಳನ್ನು ಧರ್ಮದಿಂದ ರಕ್ಷಿಸುತ್ತಾರೆ. ಕ್ಷತ್ರಿಯರಿಂದ ಸನಾತನವಾದ ಸ್ಥಾವರಜಂಗಮರೂಪವಾದ ಪ್ರಜೆಗಳು ಜಾಗರೂಕರಾಗಿದ್ದಾರೆ.
ಪ್ರಜಾ ಜಾಗ್ರತಿ ಲೋಕೇಽಸ್ಮಿನ್ ದಂಡೋ ಜಾಗರ್ತಿ ತಾಸು ಚ |
ಸರ್ವಸಂಕ್ಷೇಪಕೋ ದಂಡಃ ಪಿತಾಮಹಸಮಃ ಪ್ರಭುಃ ॥77॥
ಈ ಲೋಕದಲ್ಲಿ ಪ್ರಜೆಗಳು ಜಾಗರೂಕರಾಗಿದ್ದಾರೆ. ಆ ಪ್ರಜೆಗಳಲ್ಲಿ ದಂಡವು ಜಾಗರೂಕವಾಗಿದೆ. ಸರ್ವಸಂಹಾರಕವಾದ ದಂಡವು ಬ್ರಹ್ಮದೇವರಿಗೆ ಸಮವಾದ ಪ್ರಭುವಾಗಿದೆ.
ಜಾಗರ್ತಿ ಕಾಲಃ ಪೂರ್ವಂ ಚ ಮಧ್ಯೇ ಚಾಂತೇ ಚ ಭಾರತೇ |
ಈಶ್ವರಃ ಸರ್ವಲೋಕಸ್ಯ ಮಹಾದೇವಃ ಪ್ರಜಾಪತಿಃ ॥78॥
ದೇವದೇವಃ ಶಿವಃ ಶರ್ವೋ ಜಾಗರ್ತಿ ಸತತಂ ಪ್ರಭುಃ |
ಕಪರ್ದೀ ಶಂಕರೋ ರುದ್ರೋ ಭವಃ ಸ್ಥಾಣುರುಮಾಪತಿಃ ॥79॥

ಭಾರತವರ್ಷದಲ್ಲಿ ಆದಿಮಧ್ಯಾಂತಗಳಲ್ಲಿ ಕಾಲವು ಜಾಗರೂಕವಾಗಿದೆ. ದೇವದೇವನೂ, ಮಹಾದೇವನೂ, ಸರ್ವಲೋಕೇಶ್ವರನೂ, ಪ್ರಜಾಪತಿಯೂ, ಶಿವನೂ, ಶರ್ವನೂ, ಕಪರ್ದಿಯೂ, ಶಂಕರನೂ, ರುದ್ರನೂ,ಭವನೂ, ಸ್ಥಾಣುವೂ ಆದ ಉಮಾಪತಿಯು ಸತತವಾಗಿ ಜಾಗರೂಕನಾಗಿರುತ್ತಾನೆ.
ಇತ್ಯೇಷ ದಂಡೋ ವಿಖ್ಯಾತ ಆದೌ ಮಧ್ಯೇ ತಥಾವರೇ |
ಭೂಮಿಪಾಲೋ ಯಥಾನ್ಯಾಯಂ ವರ್ತೇತಾನೇನ ಧರ್ಮವಿತ್ ॥80॥
ಈ ರೀತಿಯಲ್ಲಿ ದಂಡವು ಆದಿಮಧ್ಯಾಂತಗಳಲ್ಲಿ ವಿಖ್ಯಾತವಾಗಿದೆ. ಧರ್ಮ- ಜ್ಞಾನವುಳ್ಳ ಭೂಮಿಪಾಲನು ಈ ದಂಡವನ್ನು ನ್ಯಾಯಕ್ಕೆ ಅನುಗುಣವಾಗಿ ಪ್ರಯೋ- ಗಿಸಬೇಕು.
ಭೀಷ್ಮ ಃ
ಇತೀದಂ ವಸುಹೋಮಸ್ಯ ಶೃಣುಯಾದ್ ಯೋ ಮತಂ ನರಃ |
ಶ್ರುತ್ವಾ ಚ ಸಮ್ಯಗ್ ವರ್ತೇತ ಸ ಕಾಮಾನಾಪ್ನುಯಾನ್ನೃಪಃ ॥81॥
ಭೀಷ್ಮರು - ಈ ವಸುಹೋಮನ ಅಭಿಪ್ರಾಯವನ್ನು ಯಾವ ಮನುಷ್ಯನಾಗಲೀ ರಾಜನಾಗಲೀ ಶ್ರವಣ ಮಾಡಿ ಅದರಂತೆ ನಡೆದುಕೊಳ್ಳುತ್ತಾನೆಯೋ ಅವನು ತನ್ನ ಕಾಮಗಳನ್ನು ಹೊಂದುತ್ತಾನೆ.
ಇತಿ ಮೇ ಸರ್ವಮಾಖ್ಯಾತಂ ಯೋ ದಂಡೋ ಮನುಜರ್ಷಭ |
ನಿಯಂತಾ ಸರ್ವಲೋಕಸ್ಯ ಧರ್ಮಾಕ್ರಾಂತಸ್ಯ ಭಾರತ ॥82॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ॥123॥
ಎಲೈ ಮನುಜರ್ಷಭನೇ! ಭಾರತನೇ! ಈ ರೀತಿಯಲ್ಲಿ ನಿನಗೆ ಧರ್ಮಾಕ್ರಾಂತ- ವಾದ ಸರ್ವಲೋಕವನ್ನು ನಿಯಂತ್ರಿಸುವ ದಂಡವನ್ನು ಹೇಳಿದ್ದೇನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 123ನೆಯ ಅಧ್ಯಾಯವು ಮುಗಿಯಿತು
0
124. ನೂರಇಪ್ಪತ್ತನಾಲ್ಕನೆಯ ಅಧ್ಯಾಯ
ಕಾಮಂದ ಅರಿಷ್ಟಸಂವಾದ | ಧರ್ಮತ್ಯಾಗಿಗಳಿಗೆ ಪ್ರಾಯಶ್ಚಿತ್ತಕಥನ
ಯುಧಿಷ್ಠಿರಃ
ತಾತ ಧರ್ಮಾರ್ಥಕಾಮಾನಾಂ ಶ್ರೋತುಮಿಚ್ಛಾಮಿ ನಿಶ್ಚಯಮ್ |
ಲೋಕಯಾತ್ರಾ ಹಿ ಕಾರ್ತ್ಸ್ನ್ಯೇನ ತ್ರಿಷ್ವೇತೇಷು ಪ್ರತಿಷ್ಠಿತಾ ॥1॥
ಧರ್ಮಾರ್ಥಕಾಮಾಃ ಕಿಂಮೂಲಾಸ್ತ್ರಯಾಣಾಂ ಪ್ರಭವಶ್ಚ ಕಃ |
ಅನ್ಯೋನ್ಯಂ ಚಾನುಷಜ್ಜಂತೇ ವರ್ತಂತೇ ಚ ಪೃಥಕ್ ಪೃಥಕ್ ॥2॥
ಯುಧಿಷ್ಠಿರ ಪ್ರೀತಿಪಾತ್ರನೇ! ಧರ್ಮಾರ್ಥಕಾಮಗಳ ನಿರ್ಧಾರವನ್ನು ಕೇಳಲು ಬಯಸುತ್ತೇನೆ. ಲೋಕಯಾತ್ರೆ ಎಲ್ಲವೂ ಪೂರ್ಣವಾಗಿ ಈ ಮೂರರಲ್ಲಿಯೇ ನೆಲೆಸಿದೆ. ಧರ್ಮಾರ್ಥಕಾಮಗಳಿಗೆ ಮೂಲಕಾರಣವು ಯಾವುದು? ಅವುಗಳ ಉತ್ಪತ್ತಿ ಸ್ಥಾನವು ಯಾವುದು? ಅವುಗಳು ಪರಸ್ಪರ ಸಂಬದ್ಧವಾಗಿರುತ್ತವೆ. ಭಿನ್ನ ಭಿನ್ನವಾಗಿಯೂ ಇರುತ್ತವೆ.
ಭೀಷ್ಮ ಃ
ಯದಾ ತೇ ಸ್ಯುಃ ಸುಮನಸೋ ಲೋಕಸಂಸ್ಥಾರ್ಥನಿಶ್ಚಯೇ |
ಕಾಲಪ್ರಭವಸಂಸ್ಥಾಸು ಸಜ್ಜಂತೇ ಚ ತ್ರಯಸ್ತದಾ ॥3॥
ಭೀಷ್ಮರು ಲೋಕದಲ್ಲಿ ಜನರು ಶುದ್ಧಮನಸ್ಕರಾಗಿ, ಧರ್ಮಾರ್ಥಗಳನ್ನು ಸಂಪಾದಿಸಲು ಬಯಸಿದರೆ ಆಗ ಧರ್ಮಾರ್ಥಕಾಮಗಳು ಕಾಲದಿಂದ ಉತ್ಪತ್ತಿ ಮತ್ತು ವಿನಾಶಗಳನ್ನು ಹೊಂದುವ ಪ್ರಜೆಗಳಲ್ಲಿ ನೆಲೆಗೊಳ್ಳುತ್ತವೆ.
ಧರ್ಮಮೂಲಸ್ತು ದೇಹೋಽರ್ಥಃ ಕಾಮೋಽರ್ಥಫಲಮುಚ್ಯತೇ |
ಸಂಕಲ್ಪಮೂಲಾಸ್ತೇ ಸರ್ವೇ ಸಂಕಲ್ಪೋ ವಿಷಯಾತ್ಮಕಃ ॥4॥
ದೇಹವೆಂಬ ವಸ್ತುವು ಹಿಂದೆ ಮಾಡಿದ ಧರ್ಮಮೂಲವಾದುದು. ಮುಂದೆ ಮಾಡುವ ಧರ್ಮಕ್ಕೆ ಕಾರಣವಾಗುತ್ತದೆ.
ಅರ್ಥಶಬ್ದವಾಚ್ಯವಾದ ಫಲವು ಕಾಮಕ್ಕೆ ಮೂಲವಾದುದು. ಇವೆಲ್ಲವೂ ಸಂಕಲ್ಪವನ್ನು ಮೂಲವಾಗಿ ಹೊಂದಿರುವಂತಹವು.
ಸಂಕಲ್ಪವು ವಿಷಯದಲ್ಲಿ ಹರಡಿದೆ.
ವಿಷಯಾಶ್ಚೈವ ಕಾರ್ತ್ಸ್ನ್ಯೇನ ಸರ್ವ ಆಹಾರಸಿದ್ಧಯೇ |
ಮೂಲಮೇತತ್ ತ್ರಿವರ್ಗಸ್ಯ ನಿವೃತ್ತಿರ್ಮೋಕ್ಷ ಉಚ್ಯತೇ ॥5॥
ವಿಷಯಗಳೆಲ್ಲವೂ ಪೂರ್ಣವಾಗಿ ಭೋಗಾರ್ಥವಾಗಿಯೇ ಇವೆ. ಈ ವಿಷಯ- ಭೋಗವು ತ್ರಿವರ್ಗಕ್ಕೆ ಮೂಲವಾದುದು. ಇಂತಹ ವಿಷಯಗಳ ಭೋಗನಿವೃತ್ತಿ- ಯನ್ನು ಮೋಕ್ಷವೆಂದು ಕರೆಯುತ್ತಾರೆ.
ಧರ್ಮಃ ಶರೀರಸಂಗುಪ್ತಿರ್ಧರ್ಮಾರ್ಥಂ ಚಾರ್ಥ ಇಷ್ಯತೇ |
ಕಾಮೋ ರತಿಫಲಶ್ಚಾತ್ರ ಸರ್ವ ಏತೇ ರಜಸ್ವಲಾಃ |
ಸನ್ನಿಕೃಷ್ಟಾಂಶ್ಚರೇದೇನಾನ್ ನ ಚೈನಾನ್ ಮನಸಾ ತ್ಯಜೇತ್ ॥6॥
ಶರೀರರಕ್ಷಣೆಯು ಧರ್ಮ. ಧರ್ಮಾರ್ಜನೆಯ ಸಲುವಾಗಿ ಅರ್ಥವು ಅಪೇಕ್ಷಿಸಲ್ಪಡುತ್ತದೆ. ಕಾಮವು ಸುಖರೂಪವಾದ ಫಲವನ್ನು ಹೊಂದಿರುವಂತಹದು. ಇವೆಲ್ಲವೂ ರಜೋಗುಣವಿಕಾರಗಳು. ಇವುಗಳು ಸನ್ನಿಹಿತವಾದಾಗ ಆಚರಿಸಬೇಕು. ಮನಸ್ಸಿನಿಂದ ಇವುಗಳನ್ನು ತ್ಯಜಿಸಬಾರದು.

ವಿಯುಕ್ತಸ್ತಪಸಾ ಸರ್ವಾನ್ ಧರ್ಮಾದೀನ್ ಕಾಮನೈಷ್ಠಿಕಾನ್ |
ಶ್ರೇಷ್ಠಬುದ್ಧಿಸ್ತ್ರಿವರ್ಗಸ್ಯ ಯದಯಂ ಪ್ರಾಪ್ನುಯಾತ್ ಕ್ಷಣಾತ್ ॥7॥
ಮನುಷ್ಯನು ತ್ರಿವರ್ಗದಿಂದ ಯಾವ ಫಲವನ್ನು ಪಡೆಯುತ್ತಾನೆಯೋ ಅದನ್ನು ಶ್ರೇಷ್ಠಬುದ್ಧಿಯುಳ್ಳವನು ತಪಸ್ಸಿನಿಂದ ವಿಷಯವಿರಕ್ತನಾಗಿ ಒಂದು ಕ್ಷಣದಲ್ಲಿ ಪಡೆ- ಯುತ್ತಾನೆ.
ಬುದ್ಧ್ಯಾ ಬುದ್ಧಿರಿಹಾರ್ಥೇಷು ತದಜ್ಞಾನನಿಕೃಷ್ಟಯಾ ॥8॥
ಅವಿವೇಕದಿಂದ ಸೆಳೆಯಲ್ಪಟ್ಟ ಬುದ್ಧಿಯಿಂದ ಈ ಲೋಕದಲ್ಲಿ ಅರ್ಥಗಳಲ್ಲಿ (ಭೋಗಪದಾರ್ಥಗಳಲ್ಲಿ) ಬುದ್ಧಿಯುಂಟಾಗುತ್ತದೆ.
ಅರ್ಥಾರ್ಥಮನ್ಯದ್ ಭವತಿ ವಿಪರೀತಮಥಾಪರಮ್ |
ಅನರ್ಥಾರ್ಥಮವಾಪ್ಯಾರ್ಥಮನ್ಯತ್ರಾದ್ಯೋಪಕಾರಕಮ್ ॥9॥
ಅರ್ಥಾರ್ಥವಾಗಿ ಇನ್ನೊಂದಿದೆ ಎಂದು ಕೆಲವರ ಅಭಿಪ್ರಾಯ. ಅದಕ್ಕೆ ವಿಪ- ರೀತವಾಗಿ ಅರ್ಥವು ಇನ್ನೊಂದರ ಸಲುವಾಗಿದೆ ಎಂದು ಇನ್ನೊಂದು ಅಭಿಪ್ರಾಯ. ಅನರ್ಥಪ್ರಯೋಜನವುಳ್ಳ ಅರ್ಥವನ್ನು ಸಂಪಾದಿಸಿದರೆ ಅದು ಆದ್ಯಪುರುಷಾರ್ಥ- ವಾದ ಧರ್ಮವನ್ನು ಬಿಟ್ಟು, ಅರ್ಥಕಾಮಗಳಲ್ಲಿಯೇ ಉಪಯುಕ್ತವಾಗುತ್ತದೆ.
ಅಪ(ವ)ಧ್ಯಾನಮಲೋ ಧರ್ಮೋ ಮಲೋಽರ್ಥಸ್ಯ ನಿಗೂಹನಮ್ |
ಸಂಪ್ರಮೋದಮಲಃ ಕಾಮೋ ಭೂಯಃ ಸ್ವಗುಣವರ್ಜಿತಃ ॥10॥
ಧರ್ಮದ ಮಲವು ಅನಾದರ. ಅರ್ಥದ ಮಲವು ಮುಚ್ಚಿಡುವುದು. ಕಾಮದ ಮಲವು ಅತಿಯಾದ ಪ್ರಮೋದ. ಇವೆಲ್ಲವೂ ಮನಸ್ಸಹಿತವಾದುದರಿಂದ ತಮ್ಮ ಗುಣಗಳಿಂದ ರಹಿತವಾದವುಗಳು.
ಅತ್ರಾಪ್ಯುದಹರಂತೀಮಮಿತಿಹಾಸಂ ಪುರಾತನಮ್ |
ಕಾಮಂದಸ್ಯ ಚ ಸಂವಾದಮಂಗಾರಿಷ್ಠಸ್ಯ ಚೋಭಯೋಃ ॥11॥
ಎಲೈ ಪ್ರೀತಿಪಾತ್ರನೇ! ಈ ವಿಷಯದಲ್ಲಿಯೂ ಕಾಮಂದ ಮತ್ತುಅರಿಷ್ಟ ಇವರಿಬ್ಬರ ಸಂವಾದರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಕಾಮಂದಮೃಷಿಮಾಸೀನಮಭಿವಾದ್ಯ ನರಾಧಿಪಃ |
ಅಂಗಾರಿಷ್ಠೋಽಥ ಪಪ್ರಚ್ಛ ಕೃತ್ವಾ ಸಮಯಪರ್ಯಯಮ್ ॥12॥
ರಾಜನಾದ ಅಂಗಾರಿಷ್ಠನು ಸಮಯವು ಪ್ರಶಸ್ತವಾಗಿದೆಯೆಂದು ತಿಳಿದು ಆಸೀನ -ರಾಗಿದ್ದ ಕಾಮಂದಋಷಿಗಳಿಗೆ ನಮಸ್ಕಾರವನ್ನು ಮಾಡಿ ಪ್ರಶ್ನೆಯನ್ನು ಮಾಡಿದನು.
ಯಃ ಪಾಪಂ ಕುರುತೇ ರಾಜಾ ಕಾಮಮೋಹಬಲಾತ್ಕೃತಃ |
ಪ್ರತ್ಯಾಸನ್ನಸ್ಯ ತಸ್ಯರ್ಷೇ ಕಿಂ ಸ್ಯಾತ್ ಪಾಪಪ್ರಣಾಶನಮ್ ॥13॥
ಎಲೈ ಋಷಿಯೇ! ಯಾವ ರಾಜನು ಕಾಮಮೋಹಗಳಿಗೆ ವಶನಾಗಿ ಪಾಪವನ್ನು ಮಾಡುತ್ತಾನೆಯೋ ಆ ಕ್ಷಣದಲ್ಲಿ ಮಾಡಿದ ಪಾಪಗಳಿಗೆ ಪರಿಹಾರಕವಾದುದು ಯಾವುದು?
ಅಧರ್ಮಂ ಧರ್ಮ ಇತಿ ಹ ಯೋಽಜ್ಞಾನಾದಾಚರೇದಿಹ |
ತಂ ಚಾಪಿ ಪ್ರಥಿತಂ ಲೋಕೇ ಕಥಂ ರಾಜಾ ನಿವರ್ತಯೇತ್ ॥14॥
ಸಮಾಜದಲ್ಲಿ ಪ್ರಸಿದ್ಧನಾದ ಯಾವನು ಅಜ್ಞಾನದಿಂದ ಅಧರ್ಮವನ್ನು ಧರ್ಮವೆಂದು ತಿಳಿದು ಅದನ್ನು ಆಚರಿಸುತ್ತಾನೆಯೋ ಅವನನ್ನು ನಿವರ್ತಿಸುವ ಬಗೆ ಹೇಗೆ?
ಕಾಮಂದಃ
ಯೋ ಧರ್ಮಾರ್ಥೌ ಸಮುತ್ಸೃಜ್ಯ ಕಾಮಮೇವಾನುವರ್ತತೇ |
ಸ ಧರ್ಮಾರ್ಥಪರಿತ್ಯಾಗಾತ್ ಪ್ರಜ್ಞಾನಾಶಮಿಹಾರ್ಚ್ಛತಿ ॥15॥
ಪ್ರಜ್ಞಾಪ್ರಣಾಶಕೋ ಮೋಹಸ್ತಥಾ ಧರ್ಮಾರ್ಥನಾಶಕಃ |
ತಸ್ಮಾನ್ನಾಸ್ತಿಕತಾ ಚೈವ ದುರಾಚಾರಶ್ಚ ಜಾಯತೇ ॥16॥
ಕಾಮಂದ ಯಾವನು ಧರ್ಮಾರ್ಥಗಳನ್ನು ತ್ಯಜಿಸಿ ಕಾಮವನ್ನೇ ಹಿಂಬಾಲಿ- ಸುತ್ತಾನೆಯೋ ಅವನು ಧಮಾರ್ಥಗಳನ್ನು ತ್ಯಾಗ ಮಾಡಿದ ಕಾರಣದಿಂದ ಪ್ರಜ್ಞಾನಾಶವನ್ನು ಹೊಂದುತ್ತಾನೆ. ಮೋಹವು (ಮಿಥ್ಯಾಜ್ಞಾನವು) ಪ್ರಜ್ಞಾನಾಶಕ- ವಾದುದು ಮತ್ತು ಧರ್ಮಾರ್ಥನಾಶಕವಾದುದು. ಆ ಮೋಹದಿಂದ ನಾಸ್ತಿಕತೆಯೂ ಮತ್ತು ದುರಾಚಾರವೂ ಉಂಟಾಗುತ್ತದೆ.
ದುರಾಚಾರಾನ್ ಯದಾ ರಾಜಾ ಪ್ರದುಷ್ಟಾನ್ನ ನಿಯಚ್ಛತಿ |
ತಸ್ಮಾದುದ್ವಿಜತೇ ಲೋಕಃ ಸರ್ಪಾದ್ ವೇಶ್ಮಗತಾದಿವ ॥17॥
ರಾಜನು ಯಾವಾಗ ದುರಾಚಾರಿಗಳಾದ ದುಷ್ಟರನ್ನು ನಿಯಂತ್ರಿಸುವುದಿಲ್ಲವೋ ಆಗ ಜನರು ಮನೆಯನ್ನು ಪ್ರವೇಶಿಸಿದ ಸರ್ಪದಂತೆ ಆ ರಾಜನಿಗೆ ಹೆದರುತ್ತಾರೆ.
ತಂ ಪ್ರಜಾ ನಾನುವರ್ತಂತೇ ಬ್ರಾಹ್ಮಣಾ ನ ಚ ಸಾಧವಃ |
ತತಃ ಸಂಕ್ಷಯಮಾಪ್ನೋತಿ ತಥಾಽಪಧ್ವಸ್ತ ಏವ ಚ ॥18॥
ಆ ರಾಜನನ್ನು ಪ್ರಜೆಗಳಾಗಲೀ ಬ್ರಾಹ್ಮಣರಾಗಲೀ ಸಜ್ಜನರಾಗಲೀ ಅನು- ಸರಿಸುವುದಿಲ್ಲ. ಸಜ್ಜನರಿಂದ ಹಾಗೆ ಧಿಕ್ಕೃತನಾದ ಅವನು ವಿನಾಶವನ್ನು ಹೊಂದು- ತ್ತಾನೆ.
ಅಪಧ್ವಸ್ತಸ್ತ್ವವಮತೋ ದುಃಖಂ ಜೀವತಿ ಜೀವಿತಮ್ |
ಜೀವೇಚ್ಚ ಯದಪಧ್ವಸ್ತಸ್ತಚ್ಛುದ್ಧಂ ಮರಣಂ ಭವೇತ್ ॥19॥
ಅಪಧ್ವಸ್ತ ಎಂದರೆ ಸಜ್ಜನರಿಂದ ಧಿಕ್ಕೃತನಾದವನು ಎಂದು ಅರ್ಥ. ಅಂತಹವನು ದುಃಖದಿಂದ ಜೀವಿಸುತ್ತಾನೆ. ಅಂತಹವನ

ಜೀವನವು ಶುದ್ಧಮರಣವೇ ಆದೀತು.
ಅತ್ರೈತದಾಹುರಾಚಾರ್ಯಾಃ ಪಾಪಸ್ಯ ಪರಿಬರ್ಹಣಮ್ |
ಸೇವಿತವ್ಯಾ ತ್ರಯೀ ವಿದ್ಯಾ ಸತ್ಕಾರೋ ಬ್ರಾಹ್ಮಣೇಷು ಚ ॥20॥
ಪಾಪನಾಶನವಿಷಯದಲ್ಲಿ ಆಚಾರ್ಯರು ಹೀಗೆ ಹೇಳುತ್ತಾರೆ. ಮೂರು ವೇದಗಳ ವಿದ್ಯೆಯನ್ನು ಆಶ್ರಯಿಸಬೇಕು. ಮತ್ತು ಬ್ರಾಹ್ಮಣರಿಗೆ ಸತ್ಕಾರವನ್ನು ಮಾಡಬೇಕು.
ಮಹಾಮನಾ ಭವೇದ್ ಧರ್ಮೇ ವಿವಹೇಚ್ಚ ಮಹಾಕುಲೇ |
ಬ್ರಾಹ್ಮಣಾಂಶ್ಚಾಪಿ ಸೇವೇತ ಕ್ಷಮಾಯುಕ್ತಾನ್ ಮನಸ್ವಿನಃ ॥21॥
ಧರ್ಮದಲ್ಲಿ ಮನಸ್ಸುಳ್ಳವನಾಗಿರಬೇಕು. ಮಹಾಕುಲದ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕು. ಕ್ಷಮಾಶೀಲರೂ ಜಿತಮನಸ್ಕರೂ ಆದ ಬ್ರಾಹ್ಮಣರ ಸೇವೆಯನ್ನು ಮಾಡಬೇಕು.
ಜಪೇದುದಕಶೀಲಃ ಸ್ಯಾತ್ ಸುಮುಖೋ ನಾನ್ಯದಾಸ್ಥಿತಃ |
ಧರ್ಮಾನ್ವಿತಾನ್ ಸಂಪ್ರವಿಶೇದ್ ಬಹಿಃ ಕೃತ್ವೈವ ದುಷ್ಕೃತೀನ್ ॥22॥
ಜಪವನ್ನು ಮಾಡಬೇಕು. ಸ್ನಾನಪರನಾಗಿರಬೇಕು. ಪ್ರಸನ್ನಮುಖನಾಗಿರಬೇಕು. ದುಷ್ಕಾರ್ಯಗಳನ್ನು ಮಾಡಬಾರದು. ದುಷ್ಟರನ್ನು ದೂರಮಾಡಬೇಕು ಮತ್ತು ಧಾರ್ಮಿಕರ ಸಹವಾಸದಲ್ಲಿರಬೇಕು.
ಪ್ರಸಾದಯೇನ್ಮಧುರಯಾ ವಾಚಾಪ್ಯಥ ಚ ಕರ್ಮಣಾ |
ಇತ್ಯಸ್ಮೀತಿ ವದೇನ್ನಿತ್ಯಂ ಪರೇಷಾಂ ಕೀರ್ತಯನ್ ಗುಣಾನ್ ॥23॥
ಮಧುರವಾದ ಮಾತುಗಳಿಂದ ಮತ್ತು ಕ್ರಿಯೆಯಿಂದ ದೊಡ್ಡವರನ್ನು ಪ್ರಸನ್ನ- ಗೊಳಿಸಬೇಕು. ಇನ್ನೊಬ್ಬರ ಗುಣಗಳನ್ನು ಹೊಗಳುತ್ತಾ ನಾನು ಮಾತ್ರ ಹೀಗಿದ್ದೇನೆ ಎಂದು ತನ್ನ ದೋಷಗಳನ್ನು ಹೇಳಿಕೊಳ್ಳಬೇಕು.
ಅಪಾಪೋ ಹ್ಯೇವಮಾಚಾರಃ ಕ್ಷಿಪ್ರಂ ಬಹುಮತೋ ಭವೇತ್ |
ಪಾಪಾನ್ಯಪಿ ಚ ಕೃಚ್ಛ್ರಾಣಿ ಶಮಯೇನ್ನಾತ್ರ ಸಂಶಯಃ ॥24॥
ಹೊಸದಾಗಿ ಪಾಪವನ್ನು ಮಾಡದೇ ಇಂತಹ ಆಚಾರವುಳ್ಳವನು ಶೀಘ್ರವಾಗಿ ಸಜ್ಜನರಿಗೆ ಸಮ್ಮತನಾಗುತ್ತಾನೆ. ತಾನು ಮಾಡಿದ ಪಾಪಗಳನ್ನು ತನಗೆ ಒದಗಿದ ಕಷ್ಟಗಳನ್ನು ಅವನು ನಾಶ ಮಾಡುವುದರಲ್ಲಿ ಸಂಶಯವಿಲ್ಲ.
ಗುರವೋಽಪಿ ಪರಂ ಧರ್ಮಂ ಯದ್ ಬ್ರೂಯುಸ್ತತ್ ತಥಾ ಕುರು |
ಗುರೂಣಾಂ ಹಿ ಪ್ರಸಾದಾದ್ಧಿ ಶ್ರೇಯಃ ಪರಮವಾಪ್ಸ್ಯಸಿ ॥25॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ॥124॥
ಗುರುಗಳು ಯಾವ ಶ್ರೇಷ್ಠವಾದ ಧರ್ಮವನ್ನು ಹೇಳುತ್ತಾರೆಯೋ ಅದನ್ನೂ ಸಹ ಮಾಡುವವನಾಗು. ಗುರುಗಳ ಅನುಗ್ರಹದಿಂದಲೇ ಶ್ರೇಷ್ಠವಾದ ಶ್ರೇಯಸ್ಸನ್ನು ಹೊಂದುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 124ನೆಯ ಅಧ್ಯಾಯವು ಮುಗಿಯಿತು
0
125. ನೂರಇಪ್ಪತ್ತೈದನೆಯ ಅಧ್ಯಾಯ
ಧೃತರಾಷ್ಟ್ರದುರ್ಯೋಧನಸಂವಾದ; ಶೀಲಕ್ಕೆ ಧರ್ಮಾದಿಕಾರಣತ್ವಕಥನ
ಯುಧಿಷ್ಠಿರಃ
ಇಮೇ ಜನಾ ನರಶ್ರೇಷ್ಠ ಪ್ರಶಂಸಂತಿ ಸದಾ ಭುವಿ |
ಧರ್ಮಸ್ಯ ಶೀಲಮೇವಾದೌ ತತೋ ಮೇ ಸಂಶಯೋ ಮಹಾನ್ ॥1॥
ಎಲೈ ನರಶ್ರೇಷ್ಠನೇ! ಭೂಮಿಯಲ್ಲಿ ಈ ಜನರು ಧರ್ಮಕ್ಕಿಂತಲೂ ಮೊದಲು ಶೀಲವನ್ನು ಪ್ರಶಂಸೆ ಮಾಡುತ್ತಾರೆ. ಅದರಿಂದ ನನಗೆ ದೊಡ್ಡ ಸಂಶಯವುಂಟಾಗಿದೆ.
ಯದಿ ತಚ್ಛಕ್ಯಮಸ್ಮಾಭಿರ್ಜ್ಞಾತುಂ ಧರ್ಮಭೃತಾಂವರ |
ಶ್ರೋತುಮಿಚ್ಛಾಮಿ ತತ್ ಸರ್ವಂ ಯಥೈತದುಪಲಭ್ಯತೇ ॥2॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ಅದನ್ನು ನಮಗೆ ಕೇಳಲು ಸಾಧ್ಯವಾದರೆ ಇದು ಹೇಗೆ ತಿಳಿಯಲ್ಪಡುತ್ತದೆ ಎಂದು ಇಚ್ಛಿಸುತ್ತೇನೆ.
ಕಥಂ ನು ಪ್ರಾಪ್ಯತೇ ಶೀಲಂ ಶ್ರೋತುಮಿಚ್ಛಾಮಿ ಭಾರತ |
ಕಿಂ ಲಕ್ಷಣಂ ಚ ತತ್ ಪ್ರೋಕ್ತಂ ಬ್ರೂಹಿ ಮೇ ವದತಾಂವರ ॥3॥
ಎಲೈ ಭಾರತನೇ! ಶೀಲವನ್ನು ಹೇಗೆ ಸಂಪಾದಿಸುವುದು ಎಂದು ಕೇಳಲು ಬಯಸುತ್ತೇನೆ. ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ಶೀಲದ ಲಕ್ಷಣವೇನೆಂದು ಹೇಳು.
ಭೀಷ್ಮಃ
ಪುರಾ ದುರ್ಯೋಧನೇನೇಹ ಧೃತರಾಷ್ಟ್ರಾಯ ಮಾನದ |
ಆಖ್ಯಾತಂ ತಪ್ಯಮಾನೇನ ಶ್ರಿಯಂ ದೃಷ್ಟ್ವಾ ತವಾಗತಮ್ ॥4॥
ಭೀಷ್ಮರು ಎಲೈ ಮಾನದನೇ! ಹಿಂದೆ ನಿನ್ನ ಐಶ್ವರ್ಯವನ್ನು ನೋಡಿ ಅಸೂಯೆ ಪಡುತ್ತಿದ್ದ ದುರ್ಯೋಧನನು ಧೃತರಾಷ್ಟ್ರನನ್ನು ಕುರಿತು ಹೇಳಿದನು.
ಇಂದ್ರಪ್ರಸ್ಥೇ ಮಹಾರಾಜ ತವ ಸಭ್ರಾತೃಕಸ್ಯ ಹ |
ಸಭಾಯಾಂ ಚಾವಹಸನಂ ತತ್ ಸರ್ವಂ ಶೃಣು ಭಾರತ ॥5॥

ಎಲ್ಲೈ ಭಾರತನೇ! ಮಹಾರಾಜನೇ! ಇಂದ್ರಪ್ರಸ್ಥದಲ್ಲಿ ನಿನ್ನ ತಮ್ಮಂದಿರ ಜೊತೆ- ಯಲ್ಲಿ ನೀನು ಕುಳಿತಿದ್ದಾಗ ಸಭೆಯಲ್ಲಿ ಉಂಟಾದ ಅಪಹಾಸ್ಯವನ್ನು ಹೇಳಿದನು. ಅದೆಲ್ಲವನ್ನೂ ಕೇಳು.

ಭವತಸ್ತಾಂ ಸಭಾಂ ದೃಷ್ಟ್ವಾ ಸಮೃದ್ಧಿಂ ಚಾಪ್ಯನುತ್ತಮಾಮ್ |
ದುರ್ಯೋಧನಸ್ತದಾಸೀನಃ ಸರ್ವಂ ಪಿತ್ರೇ ನ್ಯವೇದಯತ್ ॥6॥

ನಿನ್ನ ಸಭೆಯನ್ನು ಮತ್ತು ಶ್ರೇಷ್ಠವಾದ ಸಮೃದ್ಧಿಯನ್ನು ನೋಡಿ ಆಗ ದುರ್ಯೋಧನನು ಕುಳಿತುಕೊಂಡು ಎಲ್ಲವನ್ನೂ ತಂದೆಗೆ ನಿವೇದಿಸಿದನು.

ಶ್ರುತ್ವಾ ಚ ಧೃತರಾಷ್ಟ್ರೋಽಪಿ ದುರ್ಯೋಧನವಚಸ್ತದಾ |
ಅಬ್ರವೀತ್ ಕರ್ಣಸಹಿತಂ ದುರ್ಯೋಧನಮಿದಂ ವಚಃ ॥7॥

ಆಗ ಧೃತರಾಷ್ಟ್ರನಾದರೋ ದುರ್ಯೋಧನನ ಮಾತುಗಳನ್ನು ಕೇಳಿ ಕರ್ಣ- ಸಹಿತನಾದ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು.

ಕಿಮರ್ಥಂ ತಪ್ಯಸೇ ಪುತ್ರ ಶ್ರೋತುಮಿಚ್ಛಾಮಿ ತತ್ತ್ವತಃ |
ಶ್ರುತ್ವಾ ತ್ವಾಮನುನೇಷ್ಯಾಮಿ ಯದಿ ಸಮ್ಯಗ್ ಭವಿಷ್ಯಸಿ ॥8॥

ಎಲ್ಲೈ ಪುತ್ರನೇ! ಏತಕ್ಕೆ ತಾಪಪಡುತ್ತಿದ್ದೀಯೆ ಎಂದು ನಾನು ಸರಿಯಾಗಿ ಕೇಳಲು ಬಯಸುತ್ತೇನೆ. ಅದನ್ನು ಕೇಳಿ ನಿನಗೆ ಸಮಾಧಾನದ ವಚನವನ್ನು ಹೇಳುತ್ತೇನೆ. ಅದರಿಂದ ನೀನು ಸರಿಯಾಗಬಹುದು.

ಯಥಾ ತ್ವಂ ಮಹದೈಶ್ವರ್ಯಂ ಪ್ರಾಪ್ತಃ ಪರಪುರಂಜಯ |
ಕಿಂಕರಾ ಭ್ರಾತರಃ ಸರ್ವೇ ಮಿತ್ರಾಃ ಸಂಬಂಧಿನಸ್ತಥಾ ॥9॥
ಆಚ್ಛಾದಯಸಿ ಪ್ರಾವಾರಾನಶ್ನಾಸಿ ಪಿಶಿತೋದನಮ್ |
ಆಜಾನೇಯಾ ವಹಂತಿ ತ್ವಾಂ ಕಸ್ಮಾಚ್ಛೋಚಸಿ ಪುತ್ರಕ ॥10॥

ಎಲ್ಲೈ ಪರಪುರಂಜಯನೇ! ನೀನೂ ಸಹ ಮಹದೈಶ್ವರ್ಯವನ್ನು, ಕಿಂಕರರನ್ನು, ಸಹೋದರರರನ್ನು, ಮಿತ್ರಸಂಬಂಧಿಕರನ್ನೂ ಪಡೆದಿದ್ದೀಯೆ. ಒಳ್ಳೆಯ ವಸ್ತ್ರಗಳನ್ನು ಉಡುತ್ತೀಯೆ, ಮಾಂಸಭೋಜನವನ್ನು ಮಾಡುತ್ತೀಯೆ. ಜಾತಿಯ ಕುದುರೆಗಳು ನಿನ್ನನ್ನು ಎಳೆಯುತ್ತವೆ. ಎಲ್ಲೈ ಪುತ್ರನೇ! ಏಕೆ ಶೋಕಪಡುತ್ತೀಯೆ?

ದುರ್ಯೋಧನಃ
ದಶ ತಾನಿ ಸಹಸ್ರಾಣಿ ಸ್ನಾತಕಾನಾಂ ಮಹಾತ್ಮನಾಮ್ |
ಭುಂಜತೇ ರುಗ್ಮಪಾತ್ರೀಷು ಯುಧಿಷ್ಠಿರನಿವೇಶನೇ ॥11॥

ದುರ್ಯೋಧನ ಯುಧಿಷ್ಠಿರನ ಮನೆಯಲ್ಲಿ ಮಹಾತ್ಮರಾದ ಹತ್ತು ಸಹಸ್ರ- ಸ್ನಾತಕರು ಚಿನ್ನದ ಪಾತ್ರೆಗಳಲ್ಲಿ ಭೋಜನ ಮಾಡುತ್ತಾರೆ.

ದೃಷ್ಟ್ವಾ ಚ ತಾಂ ಸಭಾಂ ದಿವ್ಯಾಂ ದಿವ್ಯಪುಷ್ಪಫಲಾನ್ವಿತಾಮ್ |
ಅಶ್ವಾಂಸ್ತಿತ್ತಿರಿಕಲ್ಮಾಷಾನ್ ರತ್ನಾನಿ ವಿವಿಧಾನಿ ಚ ॥12॥
ದೃಷ್ಟ್ವಾ ತಾಂ ಪಾಂಡವೇಯಾನಾಮೃದ್ಧಿಮಿಂದ್ರೋಪಮಾಂ ಶುಭಾಮ್ |
ಅಮಿತ್ರಾಣಾಂ ಸುಮಹತೀಮನುಶೋಚಾಮಿ ಮಾನದ ॥13॥

ಎಲ್ಲೈ ಮಾನದನೇ! ದಿವ್ಯಪುಷ್ಪಫಲಯುಕ್ತವಾದ ದಿವ್ಯವಾದ ಆ ಸಭೆಯನ್ನು, ಚಕೋರಪಕ್ಷಿಯ ಬಣ್ಣದ ಮತ್ತು ಬಿಳಿ ಕಪ್ಪುಮಿಶ್ರಿತಬಣ್ಣದ ಕುದುರೆಗಳನ್ನು ವಿವಿಧ- ವಾದ ರತ್ನಗಳನ್ನು, ನನ್ನ ಶತ್ರುಗಳಾದ ಪಾಂಡುಪುತ್ರರ ಇಂದ್ರನ ಸಂಪತ್ತಿಗೆ ಸಮವಾದ ಶುಭವಾದ ಆ ಮಹಾಸಮೃದ್ಧಿಯನ್ನು ನೋಡಿ ನಾನು ಶೋಕ ಪಡುತ್ತಿ- ದ್ದೇನೆ.

ಧೃತರಾಷ್ಟ್ರಃ
ಯದೀಚ್ಛಸಿ ಶ್ರಿಯಂ ತಾತ ಯಾದೃಶೀ ತಾಂ ಯುಧಿಷ್ಠಿರೇ |
ವಿಶಿಷ್ಟಾಂ ವಾ ನರವ್ಯಾಘ್ರ ಶೀಲವಾನ್ ಭವ ಪುತ್ರಕ ॥14॥

ಧೃತರಾಷ್ಟ್ರ ಎಲ್ಲೈ ಪ್ರೀತಿಪಾತ್ರನೇ! ಪುತ್ರನೇ! ನೀನು ಯುಧಿಷ್ಠಿರನಲ್ಲಿ- ರುವಂತಹ ಸಂಪತ್ತನ್ನು ಅಥವಾ ಅದಕ್ಕಿಂತ ಶ್ರೇಷ್ಠವಾದ ಸಂಪತ್ತನ್ನು ಅಪೇಕ್ಷಿಸು- ವುದಾದರೆ ಎಲ್ಲೈ ನರವ್ಯಾಘ್ರನೇ! ಶೀಲವಂತನಾಗು.

ಶೀಲೇನ ಹಿ ತ್ರಯೋ ಲೋಕಾಃ ಶಕ್ಯಾ ಜೇತುಂ ನ ಸಂಶಯಃ |
ನ ಹಿ ಕಿಂಚಿದಸಾಧ್ಯಂ ವೈ ಲೋಕೇ ಶೀಲವತಾಂ ಭವೇತ್ ॥15॥

ಶೀಲದಿಂದ ಮೂರು ಲೋಕಗಳನ್ನು ಗೆಲ್ಲಲು ಸಾಧ್ಯ ಎಂಬುದರಲ್ಲಿ ಸಂಶಯ- ವಿಲ್ಲ. ಲೋಕದಲ್ಲಿ ಶೀಲವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

ಏಕರಾತ್ರೇಣ ಮಾಂಧಾತಾ ತ್ರ್ಯಹೇಣ ಜನಮೇಜಯಃ |
ಸಪ್ತರಾತ್ರೇಣ ನಾಭಾಗಃ ಪೃಥಿವೀಂ ಪ್ರತಿಪೇದಿವಾನ್ ॥16॥

ಮಾಂಧಾತೃವು ಒಂದೇ ರಾತ್ರಿಯಲ್ಲಿಯೂ, ಜನಮೇಜಯನು ಮೂರುದಿನ- ದಲ್ಲಿಯೂ, ನಾಭಾಗನು ಏಳು ರಾತ್ರಿಯಲ್ಲಿಯೂ ಭೂಮಿಯನ್ನು ಪಡೆದರು (ಜಯಿಸಿದರು).

ಏತೇ ಹಿ ಪಾರ್ಥಿವಾಃ ಸರ್ವೇ ಶೀಲವಂತೋ ದಮಾನ್ವಿತಾಃ |
ಅತಸ್ತೇಷಾಂ ಗುಣಕ್ರೀತಾ ವಸುಧಾ ಸ್ವಯಮಾಗಮತ್ ॥17॥

ಈ ರಾಜರೆಲ್ಲರೂ ಶೀಲವಂತರು ಮತ್ತು ಇಂದ್ರಿಯನಿಗ್ರಹವುಳ್ಳವರು. ಆದ್ದ- ರಿಂದ ಅವರ ಗುಣಗಳಿಂದ ಕ್ರೀತಳಾದ ಭೂಮಿಯು ತಾನಾಗಿಯೇ ಅವರ ಬಳಿಗೆ ಬಂದಿತು.

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |

ನಾರದೇನ ಪುರಾ ಪ್ರೋಕ್ತಂ ಶೀಲಮಾಶ್ರಿತ್ಯ ಭಾರತ ॥18॥
ಎಲೈ ಭಾರತನೇ! ಈ ಶೀಲದ ವಿಷಯದಲ್ಲಿ ನಾರದರು ಹಿಂದೆ ಹೇಳಿದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಪ್ರಹ್ಲಾದೇನ ಹೃತಂ ರಾಜ್ಯಂ ಮಹೇಂದ್ರಸ್ಯ ಮಹಾತ್ಮನಃ |
ಶೀಲಮಾಶ್ರಿತ್ಯ ದೈತ್ಯೇನ ತ್ರೈಲೋಕ್ಯಂ ಚ ವಶೀಕೃತಮ್ ॥19॥
ಮಹಾತ್ಮನಾದ ಪ್ರಹ್ಲಾದನು ಶೀಲವನ್ನು ಆಶ್ರಯಿಸಿ ಮಹೇಂದ್ರನ ರಾಜ್ಯವನ್ನು ಅಪಹರಿಸಿದನು. ಮತ್ತು ದೈತ್ಯನಾದ ಅವನು ಮೂರು ಲೋಕಗಳನ್ನೂ ವಶಪಡಿಸಿ- ಕೊಂಡನು.
ತತೋ ಬೃಹಸ್ಪತಿಂ ಶಕ್ರಃ ಪ್ರಾಂಜಲಿಃ ಸಮುಪಸ್ಥಿತಃ |
ಉವಾಚ ಚ ಮಹಾಪ್ರಾಜ್ಞಃ ಶ್ರೇಯ ಇಚ್ಛಾಮಿ ವೇದಿತುಮ್ ॥20॥
ಆಗ ಮಹಾಪ್ರಾಜ್ಞನಾದ ಇಂದ್ರನು ಬೃಹಸ್ಪತಿಗಳ ಸಮೀಪಕ್ಕೆ ಹೋಗಿ ಕೈಗಳನ್ನು ಮುಗಿದು, ನಾನು ಶ್ರೇಯಃಸಾಧನವನ್ನು ತಿಳಿಯಲು ಬಯಸುತ್ತೇನೆ ಎಂದು ಹೇಳಿದನು.
ತತೋ ಬೃಹಸ್ಪತಿಸ್ತಸ್ಮೈ ಜ್ಞಾನಂ ನೈಶ್ರೇಯಸಂ ಪರಮ್ |
ಕಥಯಾಮಾಸ ಭಗವಾನ್ ದೇವೇಂದ್ರಾಯ ಕುರೂದ್ವಹ ॥21॥
ಎಲೈ ಕುರೂದ್ವಹನೇ! ಆಗ ಪೂಜ್ಯರಾದ ಬೃಹಸ್ಪತಿಗಳು ದೇವೇಂದ್ರನಿಗೆ ಅಂತಹ ಶ್ರೇಯಃಸಾಧನವಾದ ಜ್ಞಾನವನ್ನು ಉಪದೇಶಿಸಿದರು.
ಏತಾವಚ್ಛ್ರೇಯ ಇತ್ಯೇವ ಬೃಹಸ್ಪತಿರಭಾಷತ |
ಇಂದ್ರಸ್ತು ಭೂಯಃ ಪಪ್ರಚ್ಛ ಕ್ವ ವಿಶೇಷೋ ಭವೇದಿತಿ ॥22॥
ಶ್ರೇಯಸ್ಸಾಧನವಾದುದು ಇಷ್ಟು ಎಂದು ಬೃಹಸ್ಪತಿಗಳು ಹೇಳಿದರು. ಪುನಃ ಇಂದ್ರನು ಪುನಃ ತಿಳಿಯಬೇಕಾದ ಇನ್ನೂ ಏನಾದರೂ ವಿಶೇಷವಿದೆಯೇ ಎಂದು ಬೃಹಸ್ಪತಿಗಳನ್ನು ಕುರಿತು ಕೇಳಿದನು.
ಬೃಹಸ್ಪತಿಃ
ವಿಶೇಷೋಽಸ್ತಿ ಮಹಾಂಸ್ತಾತ ಭಾರ್ಗವಸ್ಯ ಮಹಾತ್ಮನಃ |
ತತ್ರಾಗಮಯ ಭದ್ರಂ ತೇ ಭೂಯ ಏವ ಪುರಂದರ ॥23॥
ಪ್ರೀತಿಪಾತ್ರನೇ! ಮಹಾತ್ಮರಾದ ಶುಕ್ರಾಚಾರ್ಯರ ಬಳಿ ತಿಳಿಯಬೇಕಾದ ಇನ್ನೂ ವಿಶೇಷವಿದೆ. ಪುರಂದರನೇ! ನಿನಗೆ ಮಂಗಳವಾಗಲಿ. ಅಲ್ಲಿಗೆ ಹೋಗಿ ಆ ಜ್ಞಾನ- ವನ್ನು ಸಂಪಾದಿಸು.
ಧೃತರಾಷ್ಟ್ರಃ
ಆತ್ಮನಸ್ತು ತತಃ ಶ್ರೇಯೋ ಭಾರ್ಗವಾತ್ ಸುಮಹಾಯಶಾಃ |
ಜ್ಞಾನಮಾಗಮತ್ ಪ್ರೀತ್ಯಾ ಪುನಃ ಸ ಪರಮದ್ಯುತಿಃ ॥24॥
ಧೃತರಾಷ್ಟ್ರ - ಮಹಾಯಶಸ್ವಿಯೂ ಪರಮಕಾಂತಿಯುಳ್ಳವನೂ ಆದ ಇಂದ್ರನು ಪುನಃ ಶುಕ್ರಾಚಾರ್ಯರ ಬಳಿಗೆ ಹೋಗಿ ತನ್ನ ಶ್ರೇಯಃಸಾಧನವಾದ ಜ್ಞಾನವನ್ನು ಪ್ರೀತಿಯಿಂದ ಅವರಿಂದ ಸಂಪಾದಿಸಿದನು.
ತೇನಾಪಿ ಸಮನುಜ್ಞಾತೋ ಭಾರ್ಗವೇಣ ಮಹಾತ್ಮನಾ |
ಶ್ರೇಯೋಽಸ್ತೀತಿ ಪುನರ್ಭೂಯಃ ಶುಕ್ರಮಾಹ ಶತಕ್ರತುಃ ॥25॥
ಮಹಾತ್ಮರಾದ ಶುಕ್ರಾಚಾರ್ಯರು ಉಪದೇಶವನ್ನು ಮಾಡಿ, ಹೊರಡಲು ಅನುಮತಿಯನ್ನು ಕೊಟ್ಟ ಮೇಲೆ ಇಂದ್ರನು ಶುಕ್ರಾಚಾರ್ಯರನ್ನು ಕುರಿತು ಇನ್ನೂ ಏನಾದರೂ ತಿಳಿಯಬೇಕಾದ ಶ್ರೇಯಸ್ಸಾಧನವಿದೆಯೇ ಎಂದು ಕೇಳಿದನು.
ಭಾರ್ಗವಸ್ತ್ವಾಹ ಧರ್ಮಜ್ಞಃ ಪ್ರಹ್ಲಾದಸ್ಯ ಮಹಾತ್ಮನಃ |
ಜ್ಞಾನಮಸ್ತಿ ವಿಶೇಷೇಣ ತತೋ ಹೃಷ್ಟಶ್ಚ ಸೋಽಭವತ್ ॥26॥
ಧರ್ಮಜ್ಞರಾದ ಶುಕ್ರಾಚಾರ್ಯರು ಮಹಾತ್ಮನಾದ ಪ್ರಹ್ಲಾದನಲ್ಲಿ ಇನ್ನೂ ವಿಶೇಷಜ್ಞಾನವಿದೆ ಎಂದು ಹೇಳಿದರು. ಅದನ್ನು ಕೇಳಿದ ಇಂದ್ರನು ಸಂತುಷ್ಟನಾದನು.
ಸ ತತೋ ಬ್ರಾಹ್ಮಣೋ ಭೂತ್ವಾ ಪ್ರಹ್ಲಾದಂ ಪಾಕಶಾಸನಃ |
ಸೃತ್ವಾ ಪ್ರೋವಾಚ ಮೇಧಾವೀ ಶ್ರೇಯ ಇಚ್ಛಾಮಿ ವೇದಿತುಮ್ ॥27॥
ಅನಂತರ ಪಾಕಶಾಸನನಾದ ಇಂದ್ರನು ಒಬ್ಬ ಬ್ರಾಹ್ಮಣನ ವೇಷವನ್ನು ಧರಿಸಿ ಪ್ರಹ್ಲಾದನನ್ನು ಸಮೀಪಿಸಿ ಮೇಧಾವಿಯಾದ ಅವನು ಶ್ರೇಯಸ್ಸನ್ನು ತಿಳಿಯಲು ಬಯಸುತ್ತೇನೆ ಎಂದು ಹೇಳಿದನು.
ಪ್ರಹ್ಲಾದಸ್ತ್ವಬ್ರವೀದ್ ವಿಪ್ರಂ ಕ್ಷಣೋ ನಾಸ್ತಿ ದ್ವಿಜರ್ಷಭ |
ತ್ರೈಲೋಕ್ಯರಾಜ್ಯೇ ಸಕ್ತಸ್ಯ ತತೋ ನೋಪದಿಶಾಮಿ ತೇ ॥28॥
ಪ್ರಹ್ಲಾದನು ಆ ಬ್ರಾಹ್ಮಣನನ್ನು ಕುರಿತು ಎಲೈ ಬ್ರಾಹ್ಮಣಶ್ರೇಷ್ಠನೇ! ಮೂರು ಲೋಕದ ರಾಜ್ಯಭಾರದಲ್ಲಿ ಆಸಕ್ತನಾದ ನನಗೆ ಈಗ ಸಮಯವಿಲ್ಲ. ಆದ್ದರಿಂದ ನಿನಗೆ ಉಪದೇಶವನ್ನು ಮಾಡುವುದಿಲ್ಲ ಎಂದು ಹೇಳಿದನು.
ಬ್ರಾಹ್ಮಣಸ್ತ್ವಬ್ರವೀದ್ ವಾಕ್ಯಂ ಕಸ್ಮಿನ್ ಕಾಲೇ ಕ್ಷಣೋ ಭವೇತ್ |
ತತೋಪದಿಷ್ಟಮಿಚ್ಛಾಮಿ ಯದ್ಯತ್ ಕಾರ್ಯಾಂತರಂ ಭವೇತ್ ॥29॥
ಬ್ರಾಹ್ಮಣನು ಅವನನ್ನು ಕುರಿತು ನಿನಗೆ ಬೇರೆ ಕಾರ್ಯಗಳು ಮುಗಿದು ಯಾವಾಗ ಸಮಯವುಂಟಾಗುತ್ತದೋ ಆಗಲೇ ನಿನ್ನ ಉಪದೇಶವನ್ನು ಕೇಳುತ್ತೇನೆ ಎಂದು ಹೇಳಿದನು.
ತತಃ ಪ್ರೀತೋಽಭವದ್ ರಾಜಾ ಪ್ರಹ್ಲಾದೋ ಬ್ರಹ್ಮವಾದಿನೇ |
ತಥೇತ್ಯುಕ್ತ್ವಾ ಶುಭೇ ಕಾಲೇ ಜ್ಞಾನತತ್ತ್ವಂ ದದೌ ತದಾ ॥30॥
ಆಗ ರಾಜನಾದ ಪ್ರಹ್ಲಾದನು ಬ್ರಾಹ್ಮಣನಿಗೆ ಪ್ರಸನ್ನನಾದನು. ಹಾಗೆಯೇ ಆಗಲೆಂದು ಹೇಳಿ ಒಂದು ಶುಭಕಾಲದಲ್ಲಿ ಅವನಿಗೆ

ಜ್ಞಾನವನ್ನು ಉಪದೇಶ ಮಾಡಿದನು.
ಬ್ರಾಹ್ಮಣೋಽಪಿ ಯಥಾನ್ಯಾಯಂ ಗುರುವೃತ್ತಿಮನುತ್ತಮಾಮ್ |
ಚಕಾರ ಸರ್ವಭಾವೇನ ಯದ್ವತ್ ಸ ಮನಸೇಚ್ಛತಿ ॥31॥
ಬ್ರಾಹ್ಮಣನೂ ಸಹ ನ್ಯಾಯವಾದ ರೀತಿಯಲ್ಲಿ ಪ್ರಹ್ಲಾದನ ಮನಸ್ಸಿಗೆ ಇಷ್ಟವಾಗುವ ರೀತಿಯಲ್ಲಿ ಸರ್ವಪ್ರಕಾರದಿಂದ ಶ್ರೇಷ್ಠವಾದ ಗುರುಸೇವೆಯನ್ನು ಮಾಡಿದನು.
ಪೃಷ್ಟಶ್ಚ ತೇನ ಬಹುಶಃ ಪ್ರಾಪ್ತಂ ಕಥಮರಿಂದಮ |
ತ್ರೈಲೋಕ್ಯರಾಜ್ಯಂ ಧರ್ಮಜ್ಞ ಕಾರಣಂ ತದ್ ಬ್ರವೀಹಿ ಮೇ ॥32॥
ಅವನು ಅನೇಕಬಾರಿ ಪ್ರಹ್ಲಾದನನ್ನು ಕುರಿತು ಎಲ್ಲೈ ಅರಿಂದಮನೇ! ಧರ್ಮಜ್ಞನೇ! ನಿನಗೆ ತ್ರೈಲೋಕ್ಯರಾಜ್ಯವು ಹೇಗ ಲಭಿಸಿತು? ನನಗೆ ಅದರ ಕಾರಣವನ್ನು ಹೇಳು - ಎಂದು ಕೇಳಿದನು.
ಪ್ರಹ್ಲಾದಃ
ನಾಸೂಯಾಮಿ ದ್ವಿಜಶ್ರೇಷ್ಠ ರಾಜಾಸ್ಮೀತಿ ಕದಾಚನ |
ಕಾಮ್ಯಾನಿ ವದತಾಂ ತಾತ ಸಂಯಚ್ಛಾಮಿ ವಹಾಮಿ ಚ ॥33॥
ಪ್ರಹ್ಲಾದ ಎಲ್ಲೈ ದ್ವಿಜಶ್ರೇಷ್ಠನೇ! ನಾನು ರಾಜನಾಗಿದ್ದೇನೆ ಎಂದು ತಿಳಿದು ನಾನು ಯಾರನ್ನೂ ಅಸೂಯೆ ಮಾಡುವುದಿಲ್ಲ; ನನಗೆ ಇಷ್ಟವಾದ ವಿಷಯಗಳನ್ನು ಹೇಳುವವರಿಗೆ ನಾನು ಬಹಳ ದಾನವನ್ನು ಕೊಡುತ್ತೇನೆ ಮತ್ತು ಅವರ ಮಾತನ್ನು ನಡೆಸುತ್ತೇನೆ.
ತೇ ವಿಸ್ರಬ್ಧಾಃ ಪ್ರಭಾಷಂತೇ ಸಂಯಚ್ಛಂತಿ ಚ ಮಾಂ ಸದಾ |
ತೇಷು ಕಾರ್ಯಪಥೇ ಸಕ್ತಂ ಶುಶ್ರೂಷುಮನಸೂಯಕಮ್ ॥34॥
ಧರ್ಮಾತ್ಮಾನಂ ಜಿತಕ್ರೋಧಂ ಸಂಯತಂ ಸಂಯತೇಂದ್ರಿಯಮ್ |
ಸಮಾಚಿನ್ವಂತಿ ಶಾಸ್ತಾರಃ ಕ್ಷೌದ್ರಂ ಮಧ್ವಿವ ಮಕ್ಷಿಕಾಃ ॥35॥
ಅವರು ಬಹಳವಿಶ್ವಾಸದಿಂದ ಮಾತನಾಡಿ ನನ್ನನ್ನು ಯಾವಾಗಲೂ ನಿಯಂತ್ರಿ- ಸುತ್ತಾರೆ. ಅವರು ಉಪದೇಶಿಸಿದ ಕಾರ್ಯಮಾರ್ಗದಲ್ಲಿ ಆಸಕ್ತನಾದ ಶುಶ್ರೂಷಾ- ಪರನೂ, ಅಸೂಯಾರಹಿತನೂ, ಧರ್ಮಾತ್ಮನೂ, ಕ್ರೋಧವನ್ನು ಜಯಿಸಿದವನೂ, ಇಂದ್ರಿಯಸಂಯಮವನ್ನು, ಮತ್ತು ಮನಃಸಂಯಮವನ್ನು ಹೊಂದಿದವನೂ ಆದ ನನ್ನನ್ನು ರಾಜರು ಜೇನುಹುಳುಗಳು ಜೇನನ್ನು ಸಂಗ್ರಹಿಸುವಂತೆ ಸಂಗ್ರಹಿಸುತ್ತಾರೆ.
ಸೋಽಹಂ ವಾಚಾ ಪ್ರಹೃಷ್ಟಾನಾಂ ರಸಾನಾಮವಲೇಹಿತಾ |
ಸ್ವಜಾತ್ಯಾನಧಿತಿಷ್ಠಾಮಿ ನಕ್ಷತ್ರಾಣೀವ ಚಂದ್ರಮಾಃ ॥36॥
ಅಂತಹ ನಾನು ಸಂತೋಷದಿಂದುಪದೇಶಮಾಡುವವರ ವಾಗ್ರಸವನ್ನು ಸವಿದು ಚಂದ್ರನು ನಕ್ಷತ್ರಗಳ ಮೇಲೆ ಇರುವಂತೆ ನನ್ನ ಜಾತಿಯವರ ಮೇಲೆ ಇದ್ದೇನೆ. (ನನ್ನ ಜಾತಿಯವರಲ್ಲಿ ಶ್ರೇಷ್ಠನಾಗಿದ್ದೇನೆ).
ಏತತ್ ಪೃಥಿವ್ಯಾಮಮೃತಮೇತಚ್ಚಕ್ಷುರನುತ್ತಮಮ್ |
ಯದ್ ಬ್ರಾಹ್ಮಣಮುಖೇ ಕವ್ಯಮೇತಚ್ಛ್ರುತ್ವಾ ಪ್ರವರ್ತತೇ ॥37॥
ಬ್ರಾಹ್ಮಣ ಮುಖದಿಂದ ಬಂದ ಉಪದೇಶವನ್ನು ಕೇಳಿ ಪ್ರಯತ್ನಿಸುವುದು ಭೂಮಿಯಲ್ಲಿ ಅಮೃತಪ್ರಾಯವಾದುದು ಮತ್ತು ಶ್ರೇಷ್ಠವಾದ ಚಕ್ಷುಸ್ಸಿನಂತೆ ಇರು- ವಂತಹದು. (ಜ್ಞಾನಪ್ರದವಾದುದು)
ಧೃತರಾಷ್ಟ್ರಃ
ಏತಾವಚ್ಛ್ರೇಯ ಇತ್ಯಾಹ ಪ್ರಹ್ಲಾದೋ ಬ್ರಹ್ಮವಾದಿನಮ್ |
ಶುಶ್ರೂಷಿತಸ್ತೇನ ತದಾ ದೈತ್ಯೇಂದ್ರೋ ವಾಕ್ಯಮಬ್ರವೀತ್ ॥38॥
ಧೃತರಾಷ್ಟ್ರ ಆ ಬ್ರಾಹ್ಮಣನನ್ನು ಕುರಿತು ಪ್ರಹ್ಲಾದನು ಶ್ರೇಯಃಸಾಧನವೆಂದರೆ ಇಷ್ಟು ಎಂದು ಹೇಳಿದನು. ಅವನ ಸೇವೆಯನ್ನು ಸ್ವೀಕರಿಸಿ ದೈತ್ಯೇಂದ್ರನಾದ ಪ್ರಹ್ಲಾದನು ಪುನಃ ಮಾತನಾಡಿದನು.
ಯಥಾವದ್ ಗುರುವೃತ್ತ್ಯಾ ತೇ ಪ್ರೀತೋಽಸ್ಮಿ ದ್ವಿಜಸತ್ತಮ |
ವರಂ ವೃಣೀಷ್ವ ಭದ್ರಂ ತೇ ಪ್ರದಾತಾಸ್ಮಿ ನ ಸಂಶಯಃ ॥39॥
ಎಲ್ಲೈ ದ್ವಿಜಶ್ರೇಷ್ಠನೇ! ನಿನ್ನ ಶಾಸೊತ್ರೀಕ್ತರೀತಿಯಿಂದಿರುವ ಗುರುವೃತ್ತಿಯಿಂದ ಸಂತೋಷಗೊಂಡಿದ್ದೇನೆ. ನಿನಗೆ ಮಂಗಳವಾಗಲಿ. ವರವನ್ನು ಕೇಳು. ನಾನು ಅದನ್ನು ನಿಃಸಂಶಯವಾಗಿ ಕೊಡುವೆನು.
ಕೃತಮಿತ್ಯೇವ ದೈತ್ಯೇಂದ್ರಮುವಾಚ ಸ ಚ ವೈ ದ್ವಿಜಃ |
ಪ್ರಹ್ಲಾದಸ್ತ್ವಬ್ರವೀತ್ ಪ್ರೀತೋ ಗೃಹ್ಯತಾಂ ವರಮಿತ್ಯುತ ॥40॥
ಆ ಬ್ರಾಹ್ಮಣನು ದೈತ್ಯೇಂದ್ರನನ್ನು ಕುರಿತು ವರವು ಬೇಡ ಎಂದೇ ಹೇಳಿದನು. ಪ್ರಹ್ಲಾದನು ಪ್ರಸನ್ನನಾಗಿ ಪುನಃ ವರವನ್ನು ಕೇಳು ಎಂದು ಹೇಳಿದನು.
ಬ್ರಾಹ್ಮಣಃ
ಯದಿ ರಾಜನ್ ಪ್ರಸನ್ನಸ್ತ್ವಂ ಮಮ ಚೇಚ್ಛಸಿ ಚೇದ್ಧಿತಮ್ |
ಭವತಃ ಶೀಲಮಿಚ್ಛಾಮಿ ಪ್ರಾಪ್ತುಮೇಷ ವರೋ ಮಮ ॥41॥
ಎಲ್ಲೈ ರಾಜನೇ! ನೀನು ಪ್ರಸನ್ನನಾಗಿ ನನ್ನ ಹಿತವನ್ನು ಬಯಸುವುದಾದರೆ ನಿನ್ನ ಶೀಲವನ್ನು ಪಡೆಯಲು ಬಯಸುತ್ತೇನೆ. ಇದೇ ನಾನು ಕೇಳುವ ವರ.
ಧೃತರಾಷ್ಟ್ರಃ
ತತಃ ಪ್ರೀತಶ್ಚ ದೈತ್ಯೇಂದ್ರೋ ಭಯಂ ಚಾಸ್ಯಾಭವನ್ಮಹತ್ |

ವರೇ ಪ್ರದಿಷ್ಟೇ ವಿಪ್ರೇಣ ನಾಲ್ಪತೇಜಾಯಮಿತ್ಯುತ ॥42॥
ಧೃತರಾಷ್ಟ್ರ, ಆಗ ದೈತ್ಯೇಂದ್ರನು ಸಂತೋಷಗೊಂಡನು. ಆದರೆ ವರವನ್ನು ತೆಗೆದುಕೊಂಡ ಈ ಬ್ರಾಹ್ಮಣನು ಅಲ್ಪ ತೇಜಸ್ಸಿನವನಲ್ಲ ಎಂದು ಅವನು ದೊಡ್ಡ ಭಯವನ್ನು ಹೊಂದಿದನು.
ಏವಮಸ್ತ್ವಿತಿ ತಂ ಪ್ರಾಹ ಪ್ರಹ್ಲಾದೋ ವಿಸ್ಮಿತಸ್ತದಾ |
ಉಪಾಕೃತ್ಯ ತು ವಿಪ್ರಾಯ ವರಂ ದುಃಖಾನ್ವಿತೋಽಭವತ್ ॥43॥
ಪ್ರಹ್ಲಾದನು ವಿಸ್ಮಯಗೊಂಡು ಹಾಗೆಯೇ ಆಗಲಿ ಎಂದು ಹೇಳಿದನು. ಬ್ರಾಹ್ಮಣನಿಗೆ ವರವನ್ನು ನೀಡಿ ದುಃಖಾನ್ವಿತನಾದನು.
ದತ್ತೇ ವರೇ ಗತೇ ವಿಪ್ರೇ ಚಿಂತಾಽಽಸೀನ್ಮಹತೀ ತತಃ |
ಪ್ರಹ್ಲಾದಸ್ಯ ಮಹಾರಾಜ ನಿಶ್ಚಯಂ ನ ಚ ಜಗ್ಮಿವಾನ್ ॥44॥
ಎಲೈ ಮಹಾರಾಜನೇ! ಬ್ರಾಹ್ಮಣನು ವರವನ್ನು ಪಡೆದು ಹೊರಟು ಹೋದ- ಮೇಲೆ ಪ್ರಹ್ಲಾದನಿಗೆ ದೊಡ್ಡ ಚಿಂತೆಯುಂಟಾಯಿತು. ಏನೂ ನಿಶ್ಚಯ ಮಾಡ- ಲಾಗಲಿಲ್ಲ.
ತಸ್ಯ ಚಿಂತಯತಸ್ತಾತ ಛಾಯಾಭೂತಂ ಮಹಾದ್ಯುತೇ |
ತೇಜೋ ವಿಗ್ರಹವತ್ ತಾತ ಶರೀರಮಜಹಾತ್ ತದಾ ॥45॥
ಹೀಗೆ ಚಿಂತಿಸುತ್ತಿದ್ದ ಪ್ರಹ್ಲಾದನ ಶರೀರದಿಂದ ಎಲೈ ಮಹಾದ್ಯುತಿಯೇ! ಪ್ರಹ್ಲಾದನ ಶರೀರದ ಆಕಾರವನ್ನು ಧರಿಸಿದ ತೇಜೋರೂಪವಾದ ಇನ್ನೊಂದು ಶರೀರವು ಹೊರಬಂದಿತು.
ತಮಪೃಚ್ಛನ್ಮಹಾಕಾಯಂ ಪ್ರಹ್ಲಾದಃ ಕೋ ಭವಾನಿತಿ |
ಪ್ರತ್ಯಾಹ ನನು ಶೀಲೋಽಸ್ಮಿ ತ್ಯಕ್ತೋ ಗಚ್ಛಾಮ್ಯಹಂ ತ್ವಯಾ ॥46॥
ಈ ಮಹಾಶರೀರವನ್ನು ಕುರಿತು ಪ್ರಹ್ಲಾದನು ನೀನು ಯಾರು? ಎಂದು ಕೇಳಿದನು. ಆ ವ್ಯಕ್ತಿಯು ಏನಾನು ಶೀಲ. ನೀನು ತ್ಯಜಿಸಿದುದರಿಂದ ನಾನು ಹೋಗುತ್ತಿದ್ದೇನೆಏ ಎಂದು ಉತ್ತರವನ್ನು ನೀಡಿದನು.
ತಸ್ಮಿನ್ ದ್ವಿಜವರೇ ರಾಜನ್ ವತ್ಸ್ಯಾಮ್ಯಹಮನಿಂದಿತಮ್ |
ಯೋಽಸೌ ಶಿಷ್ಯತ್ವಮಾಗಮ್ಯ ತ್ವಯಿ ನಿತ್ಯಂ ಸಮಾಹಿತಃ |
ಇತ್ಯುಕತ್ವಽಂತರ್ಹಿತಂ ತದ್ ವೈ ಶಕ್ರಂ ಚಾನ್ವವಿಶತ್ ಪ್ರಭೋ ॥47॥
ಎಲೈ ರಾಜನೇ! ಯಾವ ಬ್ರಾಹ್ಮಣಶ್ರೇಷ್ಠನು ನಿನ್ನ ಶಿಷ್ಯತ್ವವನ್ನು ವಹಿಸಿ, ನಿತ್ಯವೂ ನಿನ್ನ ಸೇವೆಯನ್ನು ಮಾಡಿದನೋ ಅಂತಹ ಅನಿಂದಿತನಾದ ಬ್ರಾಹ್ಮಣನಲ್ಲಿ ನಾನು ವಾಸವನ್ನು ಮಾಡುವೆನು ಎಂದು ಹೇಳಿ ಅಂತರ್ಧಾನವನ್ನು ಹೊಂದಿ ಇಂದ್ರನನ್ನು ಪ್ರವೇಶಿಸಿತು.
ತಸ್ಮಿಂಸ್ತೇಜಸಿ ಯಾತೇ ತು ತಾದೃಗ್ರೂಪಸ್ತತೋಽಪರಃ |
ಶರೀರಾನ್ನಿಃಸೃತಸ್ತಸ್ಯ ಕೋ ಭವಾನಿತಿ ಚಾಬ್ರವೀತ್ ॥48॥
ಆ ತೇಜಸ್ಸು ಹೊರಟು ಹೋದ ಮೇಲೆ ಅದೇ ಆಕಾರದ ಇನ್ನೊಂದು ವಿಗ್ರಹವು ಪ್ರಹ್ಲಾದನ ಶರೀರದಿಂದ ಹೊರಗೆ ಬಂದಿತು. ಪ್ರಹ್ಲಾದನು ನೀನು ಯಾರು ಎಂದು ಕೇಳಿದನು.
ಧರ್ಮಂ ಪ್ರಹ್ಲಾದ ಮಾಂ ವಿದ್ಧಿ ಯತ್ರಾಸೌ ದ್ವಿಜಸತ್ತಮಃ |
ತತ್ರ ಯಾಸ್ಯಾಮಿ ದೈತ್ಯೇಂದ್ರ ಯತಃ ಶೀಲಂ ತತೋ ಹ್ಯಹಮ್ ॥49॥
ಎಲೈ ಪ್ರಹ್ಲಾದನೇ! ನನ್ನನ್ನು ಧರ್ಮವೆಂದು ತಿಳಿ. ನಾನು ಆ ದ್ವಿಜಶ್ರೇಷ್ಠನು ಎಲ್ಲಿರುವನೋ ಅಲ್ಲಿಗೆ ಹೋಗುವೆನು. ಎಲೈ ದೈತ್ಯೇಂದ್ರನೇ! ಎಲ್ಲಿ ಶೀಲವಿರುತ್ತದೆಯೋ ಅಲ್ಲಿ ನಾನಿರುತ್ತೇನೆ. (ಎಂದು ಹೇಳಿತು).
ತತೋಽಪರೋ ಮಹಾರಾಜ ಪ್ರಜ್ವಲನ್ನಿವ ತೇಜಸಾ |
ಶರೀರಾನ್ನಿಃಸೃತಸ್ತಸ್ಯ ಪ್ರಹ್ಲಾದಸ್ಯ ಮಹಾತ್ಮನಃ ॥50॥
ಎಲೈ ಮಹಾರಾಜನೇ! ಅನಂತರ ತನ್ನ ತೇಜಸ್ಸಿನಿಂದ ಜ್ವಲಿಸುತ್ತಿದ್ದ ಇನ್ನೊಂದು ವಿಗ್ರಹವು ಮಹಾತ್ಮನಾದ ಪ್ರಹ್ಲಾದನ ಶರೀರದಿಂದ ಹೊರಬಂದಿತು.
ಕೋ ಭವಾನಿತಿ ಪೃಷ್ಟಶ್ಚ ತಮಾಹ ಸ ಮಹಾದ್ಯುತಿಃ |
ಸತ್ಯಮಸ್ಮ್ಯಸುರೇಂದ್ರಾಗ್ರ್ಯ ಯಾಸ್ಯೇಽಹಂ ಧರ್ಮಮನ್ವಿಹ ॥51॥
ನೀನು ಯಾರು ಎಂದು ಕೇಳಲ್ಪಟ್ಟ ಆ ಮಹಾತೇಜಸ್ಸು ಅವನನ್ನು ಕುರಿತು ಎಲೈ ಅಸುರಶ್ರೇಷ್ಠನೇ ನಾನು ಸತ್ಯ. ನಾನು ಈ ಲೋಕದಲ್ಲಿ ಧರ್ಮವನ್ನು ಹಿಂಬಾಲಿಸಿ ಹೋಗುವೆನು (ಎಂದು ಹೇಳಿತು.)
ತಸ್ಮಿನ್ನನುಗತೇ ಧರ್ಮಂ ಪುರುಷೇ ಪುರುಷೋಽಪರಃ |
ನಿಶ್ಚಕ್ರಾಮ ತತಸ್ತಸ್ಮಾತ್ ಪೃಷ್ಟಶ್ಚಾಹ ಮಹಾತ್ಮನಾ |
ವೃತ್ತಂ ಪ್ರಹ್ಲಾದ ಮಾಂ ವಿದ್ಧಿ ಯತಃ ಸತ್ಯಂ ತತೋ ಹ್ಯಹಮ್ ॥52॥
ಆ ಧರ್ಮಪುರುಷನು ಹೋದ ಮೇಲೆ ಇನ್ನೊಬ್ಬ ಪುರುಷನು ಪ್ರಹ್ಲಾದನ ದೇಹದಿಂದ ಹೊರಗೆ ಬಂದನು. ಮಹಾತ್ಮನಾದ ಪ್ರಹ್ಲಾದನಿಂದ ನೀನು ಯಾರು ಎಂದು ಕೇಳಲ್ಪಟ್ಟು, ಎಲೈ ಪ್ರಹ್ಲಾದನೇ ನನ್ನನ್ನು ವೃತ್ತ (ಒಳ್ಳೆಯ ನಡತೆ) ಎಂದು ತಿಳಿ. ಎಲ್ಲಿ ಸತ್ಯವಿರುತ್ತದೆಯೋ ಅಲ್ಲಿ ನಾನಿರುತ್ತೇನೆ (ಎಂದು ಹೇಳಿದನು).
ತಸ್ಮಿನ್ ಗತೇ ಮಹಾಶ್ವೇತಃ ಶರೀರಾತ್ ತಸ್ಯ ನಿರ್ಯಯೌ |
ಪೃಷ್ಟಶ್ಚಾಹ ಬಲಂ ವಿದ್ಧಿ ಯತೋ ವೃತ್ತಮಹಂ ತತಃ |
ಇತ್ಯುಕತ್ವ ಚ ಯಯೌ ತತ್ರ ಯತೋ ವೃತ್ತಂ ನರಾಧಿಪ ॥53॥
ಎಲೈ ನರಾಧಿಪನೇ! ವೃತ್ತವು ಹೊರಟು ಹೋದ ಮೇಲೆ ಮಹಾಶ್ವೇತವರ್ಣದ ಇನ್ನೊಬ್ಬ ಪುರುಷನು ಬಂದನು. ಹಾಗೆಯೇ ಪ್ರಶ್ನೆ

ಮಾಡಲ್ಪಟ್ಟ ಅವನು ನನ್ನನ್ನು ಬಲವೆಂದು ತಿಳಿ. ಎಲ್ಲಿ ವೃತ್ತವಿರುತ್ತದೆಯೋ ಅಲ್ಲಿ ನಾನಿರುತ್ತೇನೆ ಎಂದು ಹೇಳಿ ವೃತ್ತವನ್ನು ಹಿಂಬಾಲಿಸಿ ಹೊರಟು ಹೋದನು.
ತತಃ ಪ್ರಭಾಮಯೀ ದೇವೀ ಶರೀರಾತ್ ತಸ್ಯ ನಿರ್ಯಯೌ |
ತಾಮಪೃಚ್ಛದ್ ಸ ದೈತ್ಯೇಂದ್ರಃ ಸಾ ಶ್ರೀರಿತ್ಯೇವಮಬ್ರವೀತ್ ॥54॥
ಅನಂತರ ತೇಜೋಮಯಿಯಾದ ಒಬ್ಬ ವನಿತೆಯು ಅವನ ಶರೀರದಿಂದ ಹೊರಬಂದಳು. ದೈತ್ಯೇಂದ್ರನು ಅವಳನ್ನು ಕುರಿತು ನೀನು ಯಾರು ಎಂದು ಕೇಳಿ- ದನು. ಅವಳು ನಾನು ಸಂಪತ್ತು ಎಂದು ಹೇಳಿದಳು.
ಉಷಿತಾಸ್ಮಿ ಸುಖಂ ವೀರ ತ್ವಯಿ ಸತ್ಯಪರಾಕ್ರಮೇ |
ತ್ವಯಾ ತ್ಯಕ್ತಾ ಗಮಿಷ್ಯಾಮಿ ಬಲಂ ಯತ್ರ ತತೋ ಹ್ಯಹಮ್ ॥55॥
ಎಲೈ ವೀರನೇ! ಸತ್ಯಪರಾಕ್ರಮನಾದ ನಿನ್ನಲ್ಲಿ ನಾನು ಸುಖವಾಗಿ ವಾಸಿಸುತ್ತಿ- ದ್ದೆನು. ನೀನು ತ್ಯಜಿಸಿದ ಕಾರಣದಿಂದ ಎಲ್ಲಿ ಬಲವಿದೆಯೋ ಅಲ್ಲಿಗೆ ನಾನು ಹೋಗುವೆನು (ಎಂದು ಹೇಳಿದಳು.).
ತತೋ ಭಯಂ ಪ್ರಾದುರಾಸೀತ್ ಪ್ರಹ್ಲಾದಸ್ಯ ಮಹಾತ್ಮನಃ |
ಅಪೃಚ್ಛತ ಚ ತಾಂ ಭೂಯಃ ಕ್ವ ಯಾಸಿ ಕಮಲಾಲಯೇ ॥56॥
ತ್ವಂ ಹಿ ಸತ್ಯವ್ರತಾ ದೇವೀ ಲೋಕಸ್ಯ ಪರಮೇಶ್ವರೀ |
ಕಶ್ಚಾಸೌ ಬ್ರಾಹ್ಮಣಶ್ರೇಷ್ಠಸ್ತತ್ತ್ವಮಿಚ್ಛಾಮಿ ವೇದಿತುಮ್ ॥57॥
ಆಗ ಮಹಾತ್ಮನಾದ ಪ್ರಹ್ಲಾದನಿಗೆ ಭಯವುಂಟಾಯಿತು. ಆ ದೇವಿಯನ್ನು ಕುರಿತು ಎಲೌ ಕಮಲಾಲಯೇ! ಎಲ್ಲಿಗೆ ಹೋಗುತ್ತೀಯೆ; ಎಲೌ ದೇವಿಯೇ! ನೀನು ಸತ್ಯವ್ರತಳಾದವಳು. ಮತ್ತು ಲೋಕಕ್ಕೆ ಪ್ರಭುವಾದವಳು. ನನ್ನ ಬಳಿ ಇದ್ದ ಆ ಬ್ರಾಹ್ಮಣಶ್ರೇಷ್ಠನು ಯಾರು ಎಂದು ಕೇಳಲು ಬಯಸುತ್ತೇನೆ ಎಂದು ಹೇಳಿದನು.
ಶ್ರೀಃ
ಸ ಶಕ್ರೋ ಬ್ರಹ್ಮಚಾರೀ ಚ ಯಸ್ತ್ವಯಾ ಚೋಪಶಿಕ್ಷಿತಃ |
ತ್ರೈಲೋಕ್ಯೇ ತು ಯದೈಶ್ವರ್ಯಂ ತತ್ ತೇನಾಪಹೃತಂ ಪ್ರಭೋ ॥58॥
ಶ್ರೀಃ ನಿನ್ನಲ್ಲಿ ವಾಸ ಮಾಡಿ ನಿನ್ನಿಂದ ವಿದ್ಯೆಯನ್ನು ಗಳಿಸಿದ ಆ ಬ್ರಹ್ಮಚಾರಿಯು ಇಂದ್ರ. ಎಲೈ ಪ್ರಭುವೇ! ನಿನ್ನಲ್ಲಿದ್ದ ಮೂರು ಲೋಕದ ಐಶ್ವರ್ಯವು ಅವನಿಂದ ಅಪಹೃತವಾಯಿತು.
ಶೀಲೇನ ಹಿ ತ್ವಯಾ ಲೋಕಾಃ ಸರ್ವೇ ಧರ್ಮಜ್ಞ ನಿರ್ಜಿತಾಃ |
ತದ್ ವಿಜ್ಞಾಯ ಮಹೇಂದ್ರೇಣ ತವ ಶೀಲಂ ಹೃತಂ ಪ್ರಭೋ ॥59॥
ಎಲೈ ಧರ್ಮಜ್ಞನೇ! ನೀನು ಶೀಲದಿಂದ ಎಲ್ಲ ಲೋಕಗಳನ್ನೂ ಜಯಿಸಿದ್ದಿ. ಎಲೈ ಪ್ರಭುವೇ! ಅದನ್ನು ತಿಳಿದ ದೇವೇಂದ್ರನು ನಿನ್ನ ಶೀಲವನ್ನು ಅಪಹರಿಸಿದನು.
ಧರ್ಮಃ ಸತ್ಯಂ ತಥಾ ವೃತ್ತಂ ಬಲಂ ಚೈವ ತಥಾ ಹ್ಯಹಮ್ |
ಶೀಲಮೂಲಾ ಮಹಾಪ್ರಾಜ್ಞ ಸದಾ ನಾಸ್ತ್ಯತ್ರ ಸಂಶಯಃ ॥60॥
ಎಲೈ ಮಹಾಪ್ರಾಜ್ಞನೇ! ಧರ್ಮ, ಸತ್ಯ, ವೃತ್ತ, ಬಲ ಹಾಗೂ ನಾನು ಎಲ್ಲರೂ ಯಾವಾಗಲೂ ಶೀಲಮೂಲರಾದವರು. ಈ ವಿಷಯದಲ್ಲಿ ಸಂಶಯವಿಲ್ಲ.
ಭೀಷ್ಮಃ
ಏವಮುಕತ್ವ ಗತಾ ತು ಶ್ರೀಸ್ತೇ ಚ ಸರ್ವೇ ಯುಧಿಷ್ಠಿರ |
ದುರ್ಯೋಧನಸ್ತು ಪಿತರಂ ಭೂಯ ಏವಾಬ್ರವೀದಿದಮ್ ॥61॥
ಶೀಲಸ್ಯ ತತ್ತ್ವಮಿಚ್ಛಾಮಿ ವೇತ್ತುಂ ಕೌರವನಂದನ |
ಪ್ರಾಪ್ಯತೇ ಚ ಯಥಾ ಶೀಲಂ ತಮುಪಾಯಂ ವದಸ್ವ ಮೇ ॥62॥
ಭೀಷ್ಮರು ಎಲೈ ಯುಧಿಷ್ಠಿರನೇ! ಹೀಗೆ ಹೇಳಿ ಲಕ್ಷ್ಮಿಯು ಮತ್ತು ಅವರೆ- ಲ್ಲರೂ ಹೊರಟುಹೋದರು. ದುರ್ಯೋಧನನು ತಂದೆಯನ್ನು ಕುರಿತು ಪುನಃ ಎಲೈ ಕೌರವನಂದನನೇ! ಶೀಲದ ತತ್ತ್ವವನ್ನು ತಿಳಿಯಲು ಬಯಸುತ್ತೇನೆ. ಶೀಲವನ್ನು ಹೇಗೆ ಸಂಪಾದಿಸುವುದು? ಆ ಉಪಾಯವನ್ನು ನನಗೆ ಹೇಳು ಎಂದು ಕೇಳಿದನು.
ಧೃತರಾಷ್ಟ್ರಃ
ಸೋಪಾಯಂ ಪೂರ್ವಮುದ್ದಿಷ್ಟಂ ಪ್ರಹ್ಲಾದೇನ ಮಹಾತ್ಮನಾ |
ಸಂಕ್ಷೇಪತಸ್ತು ಶೀಲಸ್ಯ ಶೃಣು ಪ್ರಾಪ್ತಿಂ ನರಾಧಿಪ ॥63॥
ಧೃತರಾಷ್ಟ್ರ ಮಹಾತ್ಮನಾದ ಪ್ರಹ್ಲಾದನು ಹಿಂದೆ ಹೇಳಿದ ಉಪಾಯಸಹಿತ- ವಾಗಿ ಶೀಲವನ್ನು ಸಂಪಾದಿಸುವ ರೀತಿಯನ್ನು ಸಂಕ್ಷೇಪವಾಗಿ ಕೇಳು.
ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ |
ಅನುಗ್ರಹಶ್ಚ ದಾನಂ ಚ ಶೀಲಮೇತತ್ ಪ್ರಶಸ್ಯತೇ ॥64॥
ಕರ್ಮದಿಂದಾಗಲೀ ಮನಸ್ಸಿನಿಂದಾಗಲೀ ಮಾತಿನಿಂದಾಗಲೀ ಯಾವ ಪ್ರಾಣಿಗೂ ದ್ರೋಹವನ್ನು ಮಾಡದಿರುವುದು. ಎಲ್ಲರನ್ನೂ ಅನುಗ್ರಹಿಸುವುದು ಮತ್ತು ದಾನ- ವನ್ನು ಮಾಡುವುದು ಶೀಲವೆಂದು ಪ್ರಶಂಸಿಸಲ್ಪಡುತ್ತದೆ.
ಯದನ್ಯೇಷಾಂ ಹಿತಂ ನ ಸ್ಯಾದಾತ್ಮನಃ ಕರ್ಮ ಪೌರುಷಮ್ |
ಅಪತ್ರಪೇತ ವಾ ಯೇನ ನ ತತ್ ಕುರ್ಯಾತ್ ಕಥಂಚನ ॥65॥
ತನ್ನ ಯಾವ ಪೌರುಷಕಾರ್ಯದಿಂದ ಇನ್ನೊಬ್ಬನಿಗೆ ಹಿತವಾಗುವುದಿಲ್ಲವೋ ಅಂತಹ ಕಾರ್ಯವನ್ನು ಮಾಡಲು ನಾಚಿಕೊಂಡು ಆ

ಕಾರ್ಯವನ್ನು ಸರ್ವಥಾ ಮಾಡಬಾರದು.
ತತ್ತು ಕರ್ಮ ತಥಾ ಕುರ್ಯಾದ್ ಯೇನ ಶ್ಲಾಘ್ಯೇತ ಸಂಸದಿ |
ಏತಚ್ಛೀಲಂ ಸಮಾಸೇನ ಕಥಿತಂ ಕುರುಸತ್ತಮ ॥66॥
ಎಲೈ ಕುರುಶ್ರೇಷ್ಠನೇ! ಯಾವ ಕರ್ಮವನ್ನು ಮಾಡಿದರೆ ಸಭೆಯಲ್ಲಿ ಅವನಿಗೆ ಪ್ರಶಂಸೆ ಉಂಟಾಗುತ್ತದೆಯೋ ಅಂತಹ ಕರ್ಮವನ್ನು ಮಾಡಬೇಕು. ಇದು ಸಂಕ್ಷೇಪ -ವಾಗಿ ಈ ಶೀಲವನ್ನು ನಿನಗೆ ಹೇಳಿದ್ದೇನೆ.
ಯದಪ್ಯಶೀಲಾ ನೃಪತೇ ಪ್ರಾಪ್ನುವಂತಿ ಕ್ವಚಿಚ್ಛ್ರಿಯಮ್ |
ನ ಭುಂಜತೇ ಚಿರಂ ತಾತ ಸಮೂಲಾಶ್ಚ ಪತಂತಿ ತೇ ॥67॥
ಎಲೈ ರಾಜನೇ! ಯದ್ಯಪಿ ಶೀಲವಿಲ್ಲದ ರಾಜರೂ ಸಹ ಒಮ್ಮೊಮ್ಮೆ ಸಂಪತ್ತನ್ನು ಪಡೆಯುತ್ತಾರೆ. ಆದರೆ ಎಲೈ ಪ್ರೀತಿಪಾತ್ರನೇ ಅವರು ಬಹುಕಾಲ ಅದನ್ನು ಭೋಗಿಸುವುದಿಲ್ಲ. ಮತ್ತು ಮೂಲಸಹಿತರಾಗಿ ಪತನವನ್ನು ಹೊಂದುತ್ತಾರೆ.
ಏತದ್ ವಿದಿತ್ವಾ ತತ್ತ್ವೇನ ಶೀಲವಾನ್ ಭವ ಪುತ್ರಕ |
ಯದೀಚ್ಛಸಿ ಶ್ರಿಯಂ ತಾತ ಸುವಿಶಿಷ್ಟಾಂ ಯುಧಿಷ್ಠಿರಾತ್ ॥68॥
ಎಲೈ ಪುತ್ರನೇ! ಪ್ರೀತಿಪಾತ್ರನೇ! ಯುಧಿಷ್ಠಿರನ ಬಳಿ ಇರುವುದಕ್ಕಿಂತ ದೊಡ್ಡ ಸಂಪತ್ತನ್ನು ನೀನು ಬಯಸುವುದಾದರೆ ನನ್ನ ಈ ಮಾತುಗಳನ್ನು ಚೆನ್ನಾಗಿ ತಿಳಿದು ಶೀಲವಂತನಾಗು.
ಭೀಷ್ಮಃ
ಏತತ್ ಕಥಿತವಾನ್ ಪುತ್ರೇ ಧೃತರಾಷ್ಟ್ರೋ ನರಾಧಿಪಃ |
ಏತತ್ ಕುರುಷ್ವ ಕೌಂತೇಯ ತತಃ ಪ್ರಾಪ್ಸ್ಯಸಿ ತತ್ಫಲಮ್ ॥69॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚವಿಂಶತ್ಯಧಿಕಶತತಮೋಽಧ್ಯಾಯಃ ॥125॥
ಭೀಷ್ಮರು ಧೃತರಾಷ್ಟ್ರರಾಜನು ಈ ವಿಷಯವನ್ನು ಪುತ್ರನಾದ ದುರ್ಯೋ- ಧನನಿಗೆ ಹೇಳಿದನು. ಎಲೈ ಕೌಂತೇಯನೇ! ನೀನು ಅದನ್ನು ಅನುಸರಿಸು. ಅದರಿಂದ ಆ ಫಲವನ್ನು ಹೊಂದುವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 125ನೆಯ ಅಧ್ಯಾಯವು ಮುಗಿಯಿತು.
126. ನೂರಇಪ್ಪತ್ತಾರನೆಯ ಅಧ್ಯಾಯ
ಋಷಭಸುಮಿತ್ರಸಂವಾದ; ಆಸೆಯಿಂದ ಸುಮಿತ್ರನ ಮೃಗಾನುಧಾವನ.
ಯುಧಿಷ್ಠಿರಃ
ಶೀಲಂ ಪ್ರಧಾನಂ ಪುರುಷೇ ಕಥಿತಂ ತೇ ಪಿತಾಮಹ |
ಕಥಮಾಶಾ ಸಮುತ್ಪನ್ನಾ ಯಾ ಚ ಸಾ ತದ್ ವದಸ್ವ ಮೇ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ಪುರುಷರಲ್ಲಿ ಶೀಲವು ಪ್ರಧಾನವಾದುದು ಎಂದು ನೀನು ಹೇಳಿದ್ದೀಯೆ. ಆಸೆಯು ಹೇಗೆ ಉತ್ಪನ್ನವಾಯಿತು ಮತ್ತು ನನಗೆ ಅದರ ಸ್ವರೂಪಗಳನ್ನು ಹೇಳು.
ಸಂಶಯೋ ಮೇ ಮಹಾನೇಷ ಸಮುತ್ಪನ್ನಃ ಪಿತಾಮಹ |
ಛೇತ್ತಾ ಚ ತಸ್ಯ ನಾನ್ಯೋಽಸ್ತಿ ತ್ವತ್ತಃ ಪರಪುರಂಜಯ ॥2॥
ಎಲೈ ಪಿತಾಮಹನೇ! ಈ ವಿಷಯದಲ್ಲಿ ನನಗೆ ದೊಡ್ಡ ಸಂಶಯವುಂಟಾಗಿದೆ. ಎಲೈ ಪರಪುರಂಜಯನೇ! ಆ ಸಂಶಯವನ್ನು ಪರಿಹರಿಸುವವರು ನಿನ್ನನ್ನು ಬಿಟ್ಟು ಬೇರೆ ಯಾರೂ ಇಲ್ಲ.
ಪಿತಾಮಹಾಶಾ ಮಹತೀ ಮಮಾಸೀದ್ಧಿ ಸುಯೋಧನೇ |
ಪ್ರಾಪ್ತೇ ಯುದ್ಧೇ ತು ತದ್ ಯುಕ್ತಂ ತತ್ಕರ್ತಾಽಯಮಿತಿ ಪ್ರಭೋ ॥3॥
ಎಲೈ ಪಿತಾಮಹನೇ! ಪ್ರಭುವೇ! ಯುದ್ಧವು ಪ್ರಾರಂಭವಾದಾಗ ಸುಯೋ- ಧನನು ಯುದ್ಧದಲ್ಲಿ ಯುಕ್ತವಾದುದನ್ನೇ ಮಾಡುವನು ಎಂದು ನನಗೆ ದೊಡ್ಡ ಆಸೆಯಿದ್ದಿತು.
ಸರ್ವಸ್ಯಾಶಾ ಸುಮಹತೀ ಪುರುಷಸ್ಯೋಪಜಾಯತೇ |
ತಸ್ಯಾಂ ವಿಹನ್ಯಮಾನಾಯಾಂ ದುಃಖೋ ಮೃತ್ಯುರಸಂಶಯಮ್ ॥4॥
ಎಲ್ಲ ಜೀವರಿಗೂ ಆಸೆಯು ಬಹಳ ದೊಡ್ಡದಾಗಿ ಉಂಟಾಗುತ್ತದೆ. ಆಸೆಯು ಭಗ್ನವಾದರೆ ದುಃಖವೂ ಕೆಲವೊಮ್ಮೆ ಮರಣವೂ ನಿಃಸಂಶಯವಾಗಿ ಉಂಟಾಗುತ್ತದೆ.
ಸೋಽಹಂ ಹತಾಶೋ ದುರ್ಬುದ್ಧಿಃ ಕೃತಸ್ತೇನ ದುರಾತ್ಮನಾ |
ಧಾರ್ತರಾಷ್ಟ್ರೇಣ ರಾಜೇಂದ್ರ ಪಶ್ಯ ಮಂದಾತ್ಮತಾಂ ಮಮ ॥5॥
ದುಷ್ಟನಾದ ಸುಯೋಧನನು ದುರ್ಬುದ್ಧಿಯುಳ್ಳ ನನ್ನ ಆಸೆಯ ಭಂಗವನ್ನು ಮಾಡಿದನು. ಎಲೈ ರಾಜೇಂದ್ರನೇ! ನಾನು ಎಷ್ಟು ಜ್ಞಾನಶೂನ್ಯನೆಂದು ನೋಡು.
ಆಶಾಂ ಮಹತ್ತರಾಂ ಮನ್ಯೇ ಪರ್ವತಾದಪಿ ಸದ್ರುಮಾತ್ |
ಆಕಾಶಾದಪಿ ವಾ ರಾಜನ್ನಪ್ರಮೇಯೈವ ವಾ ಪುನಃ ॥6॥
ಆಸೆಯು ವೃಕ್ಷದಿಂದ ಕೂಡಿರುವ ಪರ್ವತಗಳಿಗಿಂತಲೂ ಅಥವಾ ಆಕಾಶ- ಕ್ಕಿಂತಲೂ ಎತ್ತರವಾದುದೆಂದು ನಾನು ತಿಳಿಯುತ್ತೇನೆ. ಅಥವಾ ಅದು ನಾವು ತಿಳಿಯ -ಲಾರದಷ್ಟು ಎತ್ತರವನ್ನು ಹೊಂದಿದೆ.
ಏಷಾ ಚೈವ ಕುರುಶ್ರೇಷ್ಠ ದುರ್ವಿಚಿಂತ್ಯಾ ಸುದುರ್ಲಭಾ |
ದುರ್ಲಭತ್ವಾಚ್ಚ ಪಶ್ಯಾಮಿ ಕಿಮನ್ಯದ್ ದುರ್ಲಭಂ ತತಃ ॥7॥

ಎಲೈ ಕುರುಶ್ರೇಷ್ಠನೇ! ಆಸೆಯನ್ನು ಚಿಂತಿಸುವುದು ಕಷ್ಟಕರವಾದುದು. ಮತ್ತು ಆಸೆಯನ್ನು ಜಯಿಸುವುದು ಬಹಳ ಕಷ್ಟದ ಕಾರ್ಯ. ಆಸೆಯನ್ನು ಜಯಿಸುವುದು ಕಷ್ಟವಾದುದರಿಂದಲೇ ಅದಕ್ಕಿಂತ ಕಷ್ಟಕರವಾದ ಕಾರ್ಯವು ಯಾವುದು ಎಂದು ನಾನು ಚಿಂತಿಸುತ್ತಿದ್ದೇನೆ.
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಯುಧಿಷ್ಠಿರ ನಿಬೋಧ ತತ್ |
ಇತಿಹಾಸಂ ಸುಮಿತ್ರಸ್ಯ ನಿರ್ವೃತ್ತಮೃಷಭಸ್ಯ ಚ ॥8॥
ಭೀಷ್ಮರು ಎಲೈ ಯುಧಿಷ್ಠಿರನೇ! ನಿನಗೆ ಈ ವಿಷಯದಲ್ಲಿ ವೃಷಭ ಎಂಬ ಋಷಿಗೂ ಸುಮಿತ್ರ ಎಂಬ ರಾಜನಿಗೂ ಸಂಬಂಧಿಸಿ ನಡೆದ ಒಂದು ಇತಿಹಾಸವನ್ನು ಹೇಳುವೆನು.ಅದನ್ನು ಕೇಳು.
ಸುಮಿತ್ರೋ ನಾಮ ರಾಜರ್ಷಿರ್ಹೈಹಯೋ ಮೃಗಯಾಂ ಗತಃ |
ಸಸಾರ ಸ ಮೃಗಂ ವಿದ್ಧ್ವಾ ಬಾಣೇನ ನತಪರ್ವಣಾ ॥9॥
ಸುಮಿತ್ರನೆಂಬ ಹೈಹಯಕುಲದ ರಾಜರ್ಷಿಯು ಬೇಟೆಗೆ ಹೊರಟನು. ಅವನು ಬಾಗಿದ ತುದಿಯುಳ್ಳ ಬಾಣದಿಂದ ಒಂದು ಮೃಗವನ್ನು ಹೊಡೆದು ಅದನ್ನು ಹಿಂಬಾಲಿಸಿದನು.
ಸ ಮೃಗೋ ಬಾಣಮಾದಾಯ ಯಯಾವಮಿತವಿಕ್ರಮಃ |
ಸ ಚ ರಾಜಾ ಬಲೀ ತೂರ್ಣಂ ಸಸಾರ ಮೃಗಮಂತಿಕಾತ್ ॥10॥
ಬಹಳಪರಾಕ್ರಮಶಾಲಿಯಾಗಿದ್ದ ಆ ಮೃಗವು ಆ ಬಾಣವು ನೆಟ್ಟಂತೆಯೇ ಹೊರಟು ಹೋಯಿತು. ಬಲಿಷ್ಠನಾದ ರಾಜನೂ ಸಹ ಮೃಗಕ್ಕೆ ಬಹಳ ಸಮೀಪದಿಂದಲೇ ಅದನ್ನು ಹಿಂಬಾಲಿಸಿದನು.
ತತೋ ನಿಮ್ನಂ ಸ್ಥಲಂ ಚೈವ ಸ ಮೃಗೋಽದ್ರವದಾಶುಗಃ |
ಮುಹೂರ್ತಮೇವ ರಾಜೇಂದ್ರ ಸಮೇನ ಸ ಪಥಮಾಗಮತ್ ॥11॥
ಅನಂತರ ವೇಗವಾಗಿ ಸಾಗುವ ಆ ಮೃಗವು ಉಬ್ಬು ತಗ್ಗುಗಳನ್ನು ದಾಟುತ್ತಾ ಓಡಿಹೋಯಿತು. ಎಲೈ ರಾಜೇಂದ್ರನೇ! ಒಂದು ಮುಹೂರ್ತದ ವರೆಗೆ ಮಾತ್ರ ಅದು ಸಮತಟ್ಟಾದ ದಾರಿಯಲ್ಲಿ ನಡೆದಿತ್ತು.
ತತಃ ಸ ರಾಜಾ ತಾರುಣ್ಯಾದೌರಸೇನ ಬಲೇನ ಚ |
ಸಸಾರ ಬಾಣಾಸನಭೃತ್ ಸಖಡ್ಗೋ ಹಂಸವತ್ ತದಾ ॥12॥
ಆಗ ಆ ರಾಜನು ತನ್ನ ತಾರುಣ್ಯದಿಂದಲೂ ಬಲದಿಂದಲೂ ಕೂಡಿದವನಾಗಿ ಧನುಸ್ಸನ್ನೂ ಖಡ್ಗವನ್ನೂ ಹಿಡಿದು ಹಂಸದಂತೆ ಆ ಮೃಗವನ್ನು ಹಿಂಬಾಲಿಸಿದನು.
ತೀರ್ತ್ವಾ ನದಾನ್ ನದೀಶ್ಚೈವ ಪಲ್ವಲಾನಿ ವನಾನಿ ಚ |
ಅತಿಕ್ರಮ್ಯಾಭ್ಯತಿಕ್ರಮ್ಯ ಸಸಾರೈವ ವನೇ ಚರನ್ ॥13॥
ಆ ಮೃಗವಾದರೋ ನದಿಗಳನ್ನೂ, ನದಗಳನ್ನೂ, ಜೌಗುಪ್ರದೇಶಗಳನ್ನೂ, ಕಾಡುಗಳನ್ನೂ ದಾಟಿ ದಾಟಿ ಕಾಡಿನಲ್ಲಿ ಮುಂದೆ ಸಾಗಿತು.
ಸ ತು ಕಾಮಾನ್ಮೃಗೋ ರಾಜನ್ನಾಸಾದ್ಯಾಸಾದ್ಯ ತಂ ನೃಪಮ್ |
ಪುನರಭ್ಯೇತಿ ಜವನೋ ಜವೇನ ಮಹತಾ ತತಃ ॥14॥
ಎಲೈ ರಾಜನೇ! ಆ ಮೃಗವು ತನ್ನ ಇಚ್ಛೆಯಿಂದಲೇ ರಾಜನ ಸಮೀಪದಲ್ಲಿ ಸಿಲುಕಿ ಸಿಲುಕಿ ಪುನಃ ಬಹಳ ವೇಗದಿಂದ ಅಲ್ಲಿಂದ ಮುಂದಕ್ಕೆ ಓಡುತ್ತಿದ್ದಿತು.
ಸ ತಸ್ಯ ಬಾಣೈರ್ಬಹುಭಿಃ ಸಮಭ್ಯಸ್ತೋ ವನೇಚರಃ |
ಪ್ರಕ್ರೀಡನ್ನಿವ ರಾಜೇಂದ್ರ ಪುನರಭ್ಯೇತಿ ಚಾಂತಿಕಮ್ ॥15॥
ಆ ರಾಜನು ಆ ವನಚರಪ್ರಾಣಿಗೆ ಅನೇಕ ಬಾಣಗಳಿಂದ ಹೊಡೆದರೂ ಎಲೈ ರಾಜೇಂದ್ರನೇ! ಅದು ಆಟ ಆಡುವಂತೆ ಪುನಃ ರಾಜನಿಗೆ ಸಮೀಪದಲ್ಲಿ ಬರುತ್ತಿ- ದ್ದಿತು.
ಪುನಶ್ಚ ಜವಮಾಸ್ಥಾಯ ಜವನೋ ಮೃಗಯೂಥಪಃ |
ಅತೀತ್ಯಾತೀತ್ಯ ರಾಜೇಂದ್ರ ಪುನರಭ್ಯೇತಿ ಚಾಂತಿಕಮ್ ॥16॥
ಎಲೈ ರಾಜೇಂದ್ರನೇ! ವೇಗಶಾಲಿಯಾದ ಆ ಮೃಗರಾಜನು ಪುನಃ ವೇಗವನ್ನು ಹೊಂದಿ ದೂರ ದೂರ ಹೋಗಿ ಪುನಃ ರಾಜನ ಸಮೀಪಕ್ಕೆ ಬರುತ್ತಿದ್ದಿತು.
ತಸ್ಯ ಮರ್ಮಚ್ಛಿದಂ ಘೋರಂ ಸುಮಿತ್ರೋಽಮಿತ್ರಕರ್ಶನಃ |
ಸಮಾದಾಯ ಶರಶ್ರೇಷ್ಠಂ ಕಾರ್ಮುಕಾನ್ನಿರವಾಸೃಜತ್ ॥17॥
ಶತ್ರುಕರ್ಶನನಾದ ಸುಮಿತ್ರನು ಮರ್ಮಭೇದಿಯಾದ ಒಂದು ಶ್ರೇಷ್ಠ ಬಾಣ- ವನ್ನು ತೆಗೆದುಕೊಂಡು ಬಿಲ್ಲಿನಲ್ಲಿ ಹೂಡಿ ಪ್ರಯೋಗಿಸಿದನು.
ತತೋ ಗವ್ಯೂತಿಮಾತ್ರೇಣ ಮೃಗಯೂಥಪಯೂಥಪಃ |
ತಸ್ಯ ಬಾಣಪಥಂ ತ್ಯಕ್ತ್ವಾ ತಸ್ಥಿವಾನ್ ಪ್ರಹಸನ್ನಿವ ॥18॥
ಆಗ ಆ ಮೃಗರಾಜನು ಒಂದು ಗಾವುದ ದೂರದಲ್ಲಿ ಆ ಬಾಣದ ಮಾರ್ಗವನ್ನು ತಪ್ಪಿಸಿ ನಗುವವನಂತೆ ನಿಂತುಕೊಂಡಿತು.
ತಸ್ಮಿನ್ ನಿಪತಿತೇ ಬಾಣೇ ಭೂಮೌ ಪ್ರಜ್ವಲಿತೇ ತತಃ |
ಪ್ರವಿವೇಶ ಮಹಾರಣ್ಯಂ ಮೃಗೋ ರಾಜಾಽಪ್ಯಥಾದ್ರವತ್ ॥19॥
ಆ ಜ್ವಲಿಸುವ ಬಾಣವು ಭೂಮಿಯ ಮೇಲೆ ಬೀಳುತ್ತಿರಲು ಮೃಗವು ಮಹಾ- ರಣ್ಯವನ್ನು ಪ್ರವೇಶಿಸಿತು. ರಾಜನು ಪುನಃ ಅದರ ಹಿಂದೆ ಓಡಿದನು.

ಪ್ರವಿಶ್ಯ ತು ಮಹಾರಣ್ಯಂ ತಾಪಸಾನಾಮಥಾಶ್ರಮಮ್ |
ಆಸಸಾದ ತತೋ ರಾಜಾ ಶ್ರಾಂತಶ್ಚೋಪಾವಿಶತ್ ಪುನಃ ॥20॥
ಅರಣ್ಯವನ್ನು ಪ್ರವೇಶಿಸಿದ ರಾಜನು ಒಂದು ಋಷ್ಯಾಶ್ರಮವನ್ನು ತಲುಪಿ ದಣಿದು ಅಲ್ಲಿ ಕುಳಿತುಕೊಂಡನು.
ತಂ ಕಾರ್ಮುಕಧರಂ ದೃಷ್ಟ್ವಾ ಶ್ರಮಾರ್ತಂ ಕ್ಷುಧಿತಂ ತದಾ |
ಸಮೇತ್ಯ ಋಷಯಸ್ತಸ್ಮಿನ್ ಪೂಜಾಂ ಚಕ್ರುರ್ಯಥಾವಿಧಿ ॥21॥
ಬಿಲ್ಲನ್ನು ಧರಿಸಿ, ಹಸಿವು ಮತ್ತು ಶ್ರಮಗಳಿಂದ ಬಳಲಿದ ಅವನನ್ನು ನೋಡಿ ಅಲ್ಲಿನ ಋಷಿಗಳು ಒಟ್ಟಾಗಿ ಬಂದು ಅವನನ್ನು ವಿಧಿವತ್ತಾಗಿ ಪೂಜಿಸಿದರು.
ಋಷಯೋ ರಾಜಶಾರ್ದೂಲಮಪೃಚ್ಛನ್ ಸ್ವಂ ಪ್ರಯೋಜನಮ್ |
ಕೇನ ಭದ್ರಮುಖಾರ್ಥೇನ ಸಂಪ್ರಾಪ್ತೋಽಸಿ ತಪೋವನಮ್ ॥22॥
ಋಷಿಗಳು ಆ ರಾಜಶಾರ್ದೂಲನನ್ನು ಕುರಿತು ಎಲೈ ಭದ್ರಮುಖನೇ! ಯಾವ ಉದ್ದೇಶದಿಂದ ತಪೋವನಕ್ಕೆ ಬಂದಿದ್ದೀಯೆ ಎಂದು ಅವನ ತಪೋವನಪ್ರವೇಶದ ಉದ್ದೇಶವನ್ನು ಕೇಳಿದರು.
ಪದಾತಿರ್ಬದ್ಧನಿಸ್ತ್ರಿಂಶೋ ಧನ್ವೀ ಬಾಣೀ ನರೇಶ್ವರ |
ಏತದಿಚ್ಛಾಮ ವಿಜ್ಞಾತುಂ ಕುತಃ ಪ್ರಾಪ್ತೋಽಸಿ ಮಾನದ |
ಕಸ್ಮಿನ್ ಕುಲೇ ಹಿ ಜಾತಸ್ತ್ವಂ ಕಿನ್ನಾಮಾಸಿ ಬ್ರವೀಹಿ ನಃ ॥23॥
ಎಲೈ ಮಾನದನೇ! ಖಡ್ಗವನ್ನು ಬಿಗಿದುಕೊಂಡು, ಧನುರ್ಬಾಣಗಳನ್ನು ಧರಿಸಿ, ಪದಾತಿಯಾಗಿ ಬಂದಿದ್ದೀಯೆ. ಎಲೈ ನರೇಶ್ವರನೇ! ನೀನು ಎಲ್ಲಿಂದ ಬಂದಿರುವಿ. ಯಾವ ಕುಲದಲ್ಲಿ ಜನಿಸಿದ್ದೀಯೆ. ನಿನ್ನ ಹೆಸರೇನು ಎಂದು ತಿಳಿದುಕೊಳ್ಳಲು ಬಯಸುತ್ತೇವೆ. ಅದನ್ನು ನಮಗೆ ಹೇಳು.
ತತಃ ಸ ರಾಜಾ ಸರ್ವೇಭ್ಯೋ ದ್ವಿಜೇಭ್ಯಃ ಪುರುಷರ್ಷಭ |
ಆಚಖ್ಯೌ ತದ್ ಯಥಾನ್ಯಾಯಂ ಪರಿಚರ್ಯಾಂ ಚ ಭಾರತ ॥24॥
ಎಲೈ ಪುರುಷರ್ಷಭನೇ! ಆಗ ಆ ರಾಜನು ಎಲ್ಲ ಋಷಿಗಳಿಗೂ ವಿಧಿವತ್ತಾಗಿ ತನ್ನ ಪರಿಚರ್ಯವನ್ನು ಮತ್ತು ತಾನು ಆಶ್ರಮಕ್ಕೆ ಬಂದ ಉದ್ದೇಶವನ್ನು ಹೇಳಿದನು.
ಹೈಹಯಾನಾಂ ಕುಲೇ ಜಾತಃ ಸುಮಿತ್ರೋ ಮಿತ್ರನಂದನಃ |
ಚರಾಮಿ ಮೃಗಯೂಥಾನಿ ನಿಘ್ನನ್ ಬಾಣೈಃ ಸಹಸ್ರಶಃ |
ಬಲೇನ ಮಹತಾ ಗುಪ್ತಃ ಸಾಮಾತ್ಯಃ ಸಾವರೋಧನಃ ॥25॥
ನಾನು ಹೈಹಯಕುಲದಲ್ಲಿ ಜನಿಸಿದ ಮಿತ್ರನೆಂಬ ರಾಜನ ಮಗನಾದ ಸುಮಿತ್ರ- ನೆಂಬುವನು. ನನ್ನ ಸಹಸ್ರಾರು ಬಾಣಗಳಿಂದ ಮೃಗಸಮೂಹಗಳನ್ನು ಕೊಲ್ಲುತ್ತಾ ದೊಡ್ಡ ಸೈನ್ಯದಿಂದ ರಕ್ಷಿತನಾಗಿ ಅಮಾತ್ಯ ಮತ್ತು ಪರಿವಾರದೊಡನೆ ಸಂಚರಿಸು- ತ್ತಿದ್ದೇನೆ.
ಮೃಗಸ್ತು ವಿದ್ಧೋ ಬಾಣೇನ ಮಯಾ ಸರತಿ ಶಲ್ಯವಾನ್ |
ತಂ ದ್ರವಂತಮನು ಪ್ರಾಪ್ತೋ ವನಮೇತದ್ ಯದೃಚ್ಛಯಾ |
ಭವತ್ಸಕಾಶೇ ನಷ್ಟಶ್ರೀರ್ಹತಾಶಃ ಶ್ರಮಕರ್ಶಿತಃ ॥26॥
ಒಂದು ಮೃಗವು ನನ್ನಿಂದ ಬಾಣದಿಂದ ಹೊಡೆಯಲ್ಪಟ್ಟು ಆ ಬಾಣವು ನಾಟಿದಂತೆಯೇ ಮುಂದೆ ಹೋಗುತ್ತಿದೆ. ಓಡುವ ಅದನ್ನು ಹಿಂಬಾಲಿಸುತ್ತಾ ನನ್ನ ಆಸೆಯನ್ನೂ ಕಾಂತಿಯನ್ನೂ ಕಳೆದುಕೊಂಡು ಶ್ರಮಕರ್ಶಿತನಾಗಿ ಅಕಸ್ಮಾತ್ತಾಗಿ ಈ ಕಾಡಿನಲ್ಲಿ ನಿಮ್ಮ ಬಳಿಗೆ ಬಂದಿದ್ದೇನೆ.
ಕಿಂ ನು ದುಃಖಮತೋಽನ್ಯದ್ ವೈ ಯದಹಂ ಶ್ರಮಕರ್ಶಿತಃ |
ಭವತಾಮಾಶ್ರಮಂ ಪ್ರಾಪ್ತೋ ಹತಾಶೋ ನಷ್ಟಲಕ್ಷಣಃ ॥27॥
ನಾನು ನನ್ನ ಆಸೆಯನ್ನು ಮತ್ತು ನನ್ನ ರಾಜಚಿಹ್ನೆಗಳನ್ನು ಕಳೆದುಕೊಂಡು ಶ್ರಮದಿಂದಪೀಡಿತನಾಗಿ ನಿಮ್ಮ ಆಶ್ರಮವನ್ನು ಸೇರಿದುದಕ್ಕಿಂತ ಬೇರೆ ದುಃಖಕರ- ವಾದುದು ಯಾವದಿದೆ?
ನ ರಾಜಲಕ್ಷಣತ್ಯಾಗೋ ನ ಪುರಸ್ಯ ತಪೋಧನಾಃ |
ದುಃಖಂ ಕರೋತಿ ತತ್ ತೀವ್ರಂ ಯಥಾಶಾ ವಿಹತಾ ಮಮ ॥28॥
ಎಲೈ ತಪೋಧನರೇ! ರಾಜಚಿಹ್ನೆಯ ತ್ಯಾಗವಾಗಲೀ, ರಾಜಧಾನಿಯ ತ್ಯಾಗ- ವಾಗಲೀ, ನನಗೆ ನನ್ನ ಆಶಾಭಂಗವು ಉಂಟುಮಾಡಿದ ತೀವ್ರವಾದ ದುಃಖವನ್ನು ಉಂಟುಮಾಡುವುದಿಲ್ಲ.
ಹಿಮವಾನ್ ವಾ ಮಹಾಶೈಲಃ ಸಮುದ್ರೋ ವಾ ಮಹೋದಧಿಃ |
ಮಹತ್ತ್ವಾನ್ನಾನ್ವಪದ್ಯೇತಾಂ ರೋದಸ್ಯೋರಂತರಂ ಯಥಾ |
ಆಶಾಯಾಸ್ತಪಸಿಶ್ರೇಷ್ಠಾಸ್ತಥಾ ನಾಂತಮಹಂ ಗತಃ ॥29॥
ಹಿಮಾಲಯ ಮಹಾಪರ್ವತವಾಗಲೀ, ಮಹಾಜಲಾಶಯವಾದ ಸಮುದ್ರ- ವಾಗಲೀ, ತಮ್ಮ ಮಹತ್ವದಿಂದ ಭೂಮಿ ಅಂತರಿಕ್ಷಗಳ ಮಧ್ಯಭಾಗವನ್ನು ಹೇಗೆ ತುಂಬುವುದಿಲ್ಲವೋ, ಎಲೈ ತಪೋನಿಷ್ಠರೇ! ಹಾಗೆ ನನ್ನ ಆಸೆಯ ಅಂತವನ್ನು ನಾನು ತಲುಪಿಲ್ಲ.
ಭವತಾಂ ವಿದಿತಂ ಸರ್ವಂ ಸರ್ವಜ್ಞಾ ಹಿ ತಪೋಧನಾಃ |
ಭವಂತಃ ಸುಮಹಾಭಾಗಾಸ್ತಸ್ಮಾತ್ ಪ್ರಕ್ಷ್ಯಾಮಿ ಸಂಶಯಮ್ ॥30॥
ನೀವು ಎಲ್ಲವನ್ನೂ ತಿಳಿದಿದ್ದೀರಿ. ಏಕೆಂದರೆ ನೀವು ತಪೋಧನರಾದ ಸರ್ವಜ್ಞರು. ಮತ್ತು ಮಹಾನುಭಾವರು. ಆದ್ದರಿಂದ ನನ್ನ ಸಂಶಯವನ್ನು ಕೇಳುತ್ತಿದ್ದೇನೆ.
ಆಶಾವಾನ್ ಪುರುಷೋ ಯಃ ಸ್ಯಾದಂತರಿಕ್ಷಮಥಾಪಿ ವಾ |

ಕಿನ್ನು ಜ್ಯಾಯಸ್ತರಂ ಲೋಕೇ ಮಹತ್ತ್ವೇ ಪ್ರತಿಭಾತಿ ವಃ |
ಏತದಿಚ್ಛಾಮಿ ತತ್ತ್ವೇನ ಶ್ರೋತುಂ ಕಿಮಿಹ ದುರ್ಲಭಮ್ ||31||
ಯದಿ ಗುಹ್ಯಂ ತಪೋನಿತ್ಯಾ ಮಾಂ ಬ್ರೂತೇಹ ಮಾಚಿರಮ್ |
ನ ಹಿ ಗುಹ್ಯಮತಃ ಶ್ರೋತುಮಿಚ್ಛಾಮಿ ದ್ವಿಜಪುಂಗವಾಃ ||32||
ಪುರುಷನ ಆಸೆ ಒಂದು ಕಡೆ; ಮತ್ತು ಅಂತರಿಕ್ಷವು ಇನ್ನೊಂದು ಕಡೆ. ಇವು- ಗಳಲ್ಲಿ ಮಹತ್ವದಿಂದ ದೊಡ್ಡದು ಯಾವುದೆಂದು ನೀವು ತಿಳಿಯುತ್ತೀರಿ? ಇದನ್ನು ಸರಿಯಾಗಿ ಕೇಳಲು ನಾನು ಬಯಸುತ್ತೇನೆ. ಇಲ್ಲಿ ಬಂದಿರುವ ನನಗೆ ದುರ್ಲಭ- ವಾದುದು ಯಾವುದಿದೆ? ಎಲ್ಲೈ ತಪೋನಿತ್ಯರೇ ಅದು ರಹಸ್ಯವಲ್ಲದಿದ್ದರೆ ಅದನ್ನು ಶೀಘ್ರವಾಗಿ ನನಗೆ ಹೇಳಿ. ಎಲ್ಲೈ ದ್ವಿಜಪುಂಗವರೇ! ಗುಹ್ಯವಾಗಿದ್ದರೆ ನಾನು ಅದನ್ನು ಕೇಳಲು ಬಯಸುವುದಿಲ್ಲ.
ಭವತ್ ತಪೋವಿಘಾತೋ ವಾ ಯೇನ ಸ್ಯಾದ್ ವಿರಮೇ ತತಃ |
ಯದಿ ವಾಸ್ತಿ ಕಥಾಯೋಗೋ ಯೋಽಯಂ ಪ್ರಶ್ನೋ ಮಯೇರಿತಃ ||33||
ಅಥವಾ ನಿಮ್ಮ ತಪಸ್ಸಿಗೆ ಭಂಗವುಂಟಾಗುವುದಾದರೂ ನಾನು ನನ್ನ ಪ್ರಶ್ನೆಯಿಂದ ಹಿಂದೆ ಸರಿಯುತ್ತೇನೆ. ನಾನು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡುವ ಸಾಧ್ಯತೆ ಇದ್ದರೆ ಮಾತ್ರ ಉತ್ತರವನ್ನು ಹೇಳಿ.
ಏತತ್ ಕಾರಣಸಾಮಗ್ರ್ಯಂ ಶ್ರೋತುಮಿಚ್ಛಾಮಿ ತತ್ತ್ವತಃ |
ಭವಂತೋ ಹಿ ತಪೋ ನಿತ್ಯಾ ಬ್ರೂಯುರೇತತ್ ಸಮಾಹಿತಾಃ ||34||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ವಿಂಶತ್ಯಧಿಕಶತತಮೋಽಧ್ಯಾಯಃ ||126||
ಆಸೆಗೆ (ಮತ್ತು ಆಸೆಯ ಜಯಕ್ಕೆ) ಸಮಗ್ರವಾದ ಕಾರಣವನ್ನು ನಾನು ಕೇಳಲು ಬಯಸುತ್ತೇನೆ. ತಪೋನಿರತರಾದ ನೀವು ಸಮಾಧಾನದಿಂದ ಇದಕ್ಕೆ ಉತ್ತರವನ್ನು ಹೇಳಬಹುದು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 126ನೆಯ ಅಧ್ಯಾಯವು ಮುಗಿಯಿತು.
0
127. ನೂರಇಪ್ಪತ್ತೇಳನೆಯ ಅಧ್ಯಾಯ
ಬದರಿಕಾಶ್ರಮದಲ್ಲಿ ವೃಷಭತನು ಸಂವಾದ ವೀರದ್ಯುಮ್ನಪ್ರಶ್ನೆ
ಭೀಷ್ಮಃ
ತತಸ್ತೇಷಾಂ ಸಮಸ್ತಾನಾಮೃಷೀಣಾಮೃಷಿಸತ್ತಮಃ |
ಋಷಭೋ ನಾಮ ವಿಪ್ರರ್ಷಿಃ ಸ್ಮಯನ್ನಿವ ತತೋಽಬ್ರವೀತ್ ||1||
ಭೀಷ್ಮರು ಆಗ ಅಲ್ಲಿ ಸೇರಿದ ಋಷಿಗಳಲ್ಲಿ ಋಷಭ ಎಂಬ ವಿಪ್ರರ್ಷಿಯು ನಗುತ್ತಾ ಮಾತನಾಡಿದನು.
ಪುರಾಹಂ ರಾಜಶಾರ್ದೂಲ ತೀರ್ಥಾನ್ಯನುಚರನ್ ಪ್ರಭೋ |
ಸಮಾಸಾದಿತವಾನ್ ದಿವ್ಯಂ ನರನಾರಾಯಣಾಶ್ರಮಮ್ ||2||
ಎಲ್ಲೈ ರಾಜಶಾರ್ದೂಲನೇ! ಪ್ರಭುವೇ! ನಾನು ಹಿಂದೆ ತೀರ್ಥಯಾತ್ರೆಯನ್ನು ಮಾಡುತ್ತಾ ದಿವ್ಯವಾದ ನರನಾರಾಯಣಾಶ್ರಮಕ್ಕೆ ಬಂದೆನು.
ಯತ್ರ ಸಾ ಬದರೀ ರಮ್ಯಾ ಹ್ರದೋ ವೈಹಾಯಸಸ್ತಥಾ |
ಯತ್ರ ಚಾಶ್ವಶಿರಾ ರಾಜನ್ ವೇದಾನ್ ಪಠತಿ ಶಾಶ್ವತಾನ್ ||3||
ತಸ್ಮಿನ್ ಸರಸಿ ಕೃತ್ವಾಹಂ ವಿಧಿವತ್ ತರ್ಪಣಂ ಪುರಾ |
ಪಿತೄಣಾಂ ದೇವತಾನಾಂ ಚ ತತೋಽಽಶ್ರಮಮಿಯಾಂ ತದಾ ||4||
ಎಲ್ಲಿ ಮನೋಹರವಾದ ಬದರೀವೃಕ್ಷವಿದೆಯೋ, ಹಾಗೆಯೇ ವೈಹಾಯಸ ಕುಂಡವಿದೆಯೋ, ಎಲ್ಲಿ ಹಯಗ್ರೀವದೇವರು ಶಾಶ್ವತಗಳಾದ ವೇದಗಳನ್ನು ಪಠಿಸುತ್ತಾರೆಯೋ, ಅಲ್ಲಿಗೆ ಬಂದು ಆ ಸರೋವರದಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೆ ಮತ್ತು ದೇವತೆಗಳಿಗೆ ವಿಧಿವತ್ತಾಗಿ ತರ್ಪಣವನ್ನು ಕೊಟ್ಟು ಅನಂತರ ಈ ಆಶ್ರಮವನ್ನು ಪ್ರವೇಶಿಸಿದೆನು.
ರೇಮಾತೇ ಯತ್ರ ತೌ ನಿತ್ಯಂ ನರನಾರಾಯಣಾವೃಷೀ |
ಅದೂರಾದಾಶ್ರಮಂ ಕಶ್ಚಿದ್ ವಾಸಾರ್ಥಮಗಮಂ ತತಃ ||5||
ಎಲ್ಲಿ ನರನಾರಾಯಣಋಷಿಗಳು ನಿತ್ಯವೂ ವಾಸಮಾಡುತ್ತಾರೆಯೋ ಅಲ್ಲಿಂದ ಸ್ವಲ್ಪದೂರದಲ್ಲಿ ನನ್ನ ವಾಸಕ್ಕಾಗಿ ಒಂದು ಆಶ್ರಮಕ್ಕೆ ಹೋದೆನು.
ತತಶ್ಚೀರಾಜಿನಧರಂ ಕೃಶಮುಚ್ಚಮತೀವ ಚ |
ಅದ್ರಾಕ್ಷಮೃಷಿಮಾಯಾಂತಂ ತನುಂ ನಾಮ ತಪೋನಿಧಿಮ್ ||6||
ಅಲ್ಲಿ ಕೃಷ್ಣಾಜಿನ ಮತ್ತು ನಾರುಮಡಿಯನ್ನುಟ್ಟ ಕೃಶನಾದ ಅತ್ಯಂತ ಎತ್ತರನಾದ ತನು ಎಂಬ ಹೆಸರಿನ ತಪೋನಿಧಿಯಾದ ಋಷಿಯು ಅಲ್ಲಿಗೆ ಬರುವುದನ್ನು ನೋಡಿ- ದೆನು.
ಅನ್ಯೈರ್ನರೈರ್ಮಹಾಬಾಹೋ ವಪುಷಾಽಷ್ಟಗುಣಾನ್ವಿತಮ್ |
ಕೃಶತಾ ಚಾಪಿ ರಾಜರ್ಷೇ ನ ದೃಷ್ಟಾ ತಾದೃಶೀ ಕ್ವಚಿತ್ ||7||
ಎಲ್ಲೈ ಮಹಾಬಾಹುವೇ! ಅವನ ಎತ್ತರವು ಉಳಿದ ಮನುಷ್ಯರ ಎತ್ತರಕ್ಕಿಂತ ಎಂಟುಪಟ್ಟು ಅಧಿಕವಾಗಿದ್ದಿತು. ಎಲ್ಲೈ ರಾಜರ್ಷಿಯೇ! ಅಂತಹ ದೇಹದ ಕೃಶತೆಯನ್ನು ನಾನು ಎಂದೂ ನೋಡಿರಲಿಲ್ಲ.
ಶರೀರಮಪಿ ರಾಜೇಂದ್ರ ತನು ಕಾನಿಷ್ಠಿಕಾಸಮಮ್ |

ಗ್ರೀವಾ ಬಾಹೂ ತಥಾ ಪಾದೌ ಕೇಶಾಶ್ಚಾದ್ಭುತದರ್ಶನಾಃ ॥8॥
ಎಲೈ ರಾಜೇಂದ್ರನೇ! ಅವನ ಶರೀರವು ಒಂದು ಕಿರುಬೆರಳಿನ ಗಾತ್ರದಷ್ಟಿದ್ದಿತು. ಕತ್ತು ಬಾಹುಗಳು ಪಾದಗಳು ಕೇಶಗಳು ಎಲ್ಲವೂ ಅದಕ್ಕೆ ಅನುಗುಣವಾಗಿ ಅದ್ಭುತ- ವಾಗಿದ್ದವು.
ಶಿರಃ ಕಾಯಾನುರೂಪಂ ಚ ಕರ್ಣೌ ನೇತ್ರೇ ತಥೈವ ಚ |
ತಸ್ಯ ವಾಕ್ ಚೈವ ಚೇಷ್ಟಾ ಚ ಸಾಮಾನ್ಯೇ ರಾಜಸತ್ತಮ ॥9॥
ಅವನ ಶಿರಸ್ಸು, ಕರ್ಣಗಳು ಮತ್ತು ನೇತ್ರಗಳು ಅವನ ದೇಹಕ್ಕೆ ಅನುಗುಣ- ವಾಗಿದ್ದವು. ಎಲೈ ರಾಜಶ್ರೇಷ್ಠನೇ! ಅವನ ಮಾತು ಮತ್ತು ಚೇಷ್ಟೆಗಳು ಮಾತ್ರ ಉಳಿದ ಸಾಮಾನ್ಯಜನರಂತೆ ಇದ್ದವು.
ದೃಷ್ಟ್ವಾಽಹಂ ತಂ ಕೃಶಂ ವಿಪ್ರಂ ಭೀತಃ ಪರಮದುರ್ಮನಾಃ |
ಪಾದೌ ತಸ್ಯಾಭಿವಾದ್ಯಾಥ ಸ್ಥಿತಃ ಪ್ರಾಂಜಲಿರಗ್ರತಃ ॥10॥
ನಾನು ಆ ಬ್ರಾಹ್ಮಣನನ್ನು ನೋಡಿ, ಬಹಳ ಭಯಗೊಂಡು, ಬೇಸರವನ್ನು ಹೊಂದಿ, ಅವನಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ಎದುರಿಗೆ ನಿಂತು- ಕೊಂಡೆನು.
ನಿವೇದ್ಯ ನಾಮ ಗೋತ್ರಂ ಚ ಪಿತರಂ ಚ ನರರ್ಷಭ |
ಪ್ರದಿಷ್ಟೇ ಚಾಸನೇ ತೇನ ಶನೈರಹಮುಪಾವಿಶಮ್ ॥11॥
ಎಲೈ ನರರ್ಷಭನೇ ನನ್ನ ನಾಮಗೋತ್ರಗಳನ್ನು ತಂದೆಯ ಹೆಸರನ್ನು ಅವನಿಗೆ ನಿವೇದಿಸಿ ಅವನು ಸೂಚಿಸಿದ ಆಸನದಲ್ಲಿ ನಿಧಾನವಾಗಿ ಕುಳಿತುಕೊಂಡೆನು.
ತತಃ ಸ ಕಥಯಾಮಾಸ ಕಥಾ ಧರ್ಮಾರ್ಥಸಂಹಿತಾಃ |
ಋಷಿಮಧ್ಯೇ ಮಹಾರಾಜ ತತ್ರ ಧರ್ಮಭೃತಾಂವರಃ ॥12॥
ಎಲೈ ಮಹಾರಾಜನೇ! ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಋಷಿಗಳ ಮಧ್ಯದಲ್ಲಿ ಧರ್ಮಾರ್ಥಗಳಿಗೆ ಸಂಬಂಧಿಸಿದ ಅನೇಕ ಕಥೆಗಳನ್ನು ಹೇಳಿದನು.
ತಸ್ಮಿಂಸ್ತು ಕಥಯತ್ಯೇವ ರಾಜಾ ರಾಜೀವಲೋಚನಃ |
ಉಪಾಯಾದ್ ಜವನೈರಶ್ವೈಃ ಸಬಲಃ ಸಾವರೋಧನಃ ॥13॥
ಅವನು ಕಥೆಯನ್ನು ಹೇಳುತ್ತಿರುವಾಗಲೇ ರಾಜೀವಲೋಚನನಾದ ತನ್ನ ಸೈನ್ಯ ಮತ್ತು ಪರಿವಾರದಿಂದ ಸಹಿತನಾದ ಒಬ್ಬ ರಾಜನು ವೇಗಶಾಲಿಗಳಾದ ಅಶ್ವಗಳಿಂದ ಅಲ್ಲಿಗೆ ಬಂದನು.
ಸ್ಮರನ್ ಪುತ್ರಮರಣ್ಯೇ ವೈ ನಷ್ಟಂ ಪರಮದುರ್ಮನಾಃ |
ಭೂರಿದ್ಯುಮ್ನಪಿತಾ ಧೀಮಾನ್ ರಘುಶ್ರೇಷ್ಠೋ ಮಹಾಯಶಾಃ ॥14॥
ಮಹಾಕೀರ್ತಿವಂತನೂ, ಮೇಧಾವಿಯೂ, ರಘುವಂಶದಲ್ಲಿ ಶ್ರೇಷ್ಠನೂ, ಭೂರಿದ್ಯುಮ್ನ ಎಂಬ ರಾಜಕುಮಾರನ ತಂದೆಯೂ ಆದ ಅವನು ಕಳೆದು ಹೋದ ತನ್ನ ಪುತ್ರನನ್ನು ಅರಣ್ಯದಲ್ಲಿ ಹುಡುಕುತ್ತಾ ಪರಮದುಃಖದಿಂದ ಕೂಡಿದವನಾಗಿ ಅಲ್ಲಿಗೆ ಬಂದನು.
ಇಹ ದ್ರಕ್ಷ್ಯಾಮಿ ತಂ ಪುತ್ರಂ ದ್ರಕ್ಷ್ಯಾಮೀಹೇತಿ ಪಾರ್ಥಿವಃ |
ಏವಮಾಶಾಕೃತೋ ರಾಜಂಶ್ಚರನ್ ವನಮಿದಂ ಪುರಾ ॥15॥
ನಾನು ಇಲ್ಲಿ ನನ್ನ ಪುತ್ರನನ್ನು ನೋಡುವೆನು; ಇಲ್ಲಿ ನನ್ನ ಪುತ್ರನನ್ನು ನೋಡು- ವೆನು ಎಂದು ಆಸೆಯನ್ನು ಮಾಡುತ್ತಾ ಎಲೈ ರಾಜನೇ! ಈ ವನವನ್ನೆಲ್ಲಾ ಸಂಚರಿ- ಸುತ್ತಾ ಬಂದನು.
ದುರ್ಲಭಃ ಸ ಮಯಾ ದ್ರಷ್ಟುಂ ನೂನಂ ಪರಮಧಾರ್ಮಿಕಃ |
ಏಕಃ ಪುತ್ರೋ ಮಹಾರಣ್ಯೇ ನಷ್ಟ ಇತ್ಯಸಕೃತ್ ತದಾ ॥16॥
ಪರಮಧಾರ್ಮಿಕನಾದ ನನ್ನ ಪುತ್ರನನ್ನು ನೋಡುವುದು ದುರ್ಲಭವಾಗ- ಬಹುದು. ನನಗಿದ್ದ ಒಬ್ಬನೇ ಪುತ್ರನು ದೊಡ್ಡ ಕಾಡಿನಲ್ಲಿ ನಾಶವನ್ನು ಹೊಂದಿದ್ದಾನೆ ಎಂದು ಪುನಃ ಪುನಃ ಹೇಳುತ್ತಿದ್ದನು.
ದುರ್ಲಭಃ ಸ ಮಯಾ ದ್ರಷ್ಟುಮಾಶಾ ಚ ಮಹತೀ ಮಮ |
ತಯಾ ಪರೀತಗಾತ್ರೋಽಹಂ ಮುಮೂರ್ಷುರ್ನಾತ್ರ ಸಂಶಯಃ ॥17॥
ಅವನನ್ನು ನಾನು ಇನ್ನೊಮ್ಮೆ ನೋಡಲು ಸಾಧ್ಯವಾಗಲಾರದು. ನನ್ನ ಆಸೆ- ಯಾದರೋ ಬಹಳ ಬಲವಾಗಿದೆ. ಆ ಆಸೆಯಿಂದ ತುಂಬಿದ ಶರೀರವುಳ್ಳ ನಾನು ಇಲ್ಲಿಯೇ ಮರಣ ಹೊಂದುವುದರಲ್ಲಿ ಸಂಶಯವಿಲ್ಲ. (ಎಂದು ಹೇಳಿದನು).
ಏತಚ್ಛ್ರುತ್ವಾ ಸ ಭಗವಾಂಸ್ತನುರ್ಮುನಿವರೋತ್ತಮಃ |
ಅವಾಕ್‌ಶಿರಾ ಧ್ಯಾನಪರೋ ಮುಹೂರ್ತಮಿವ ತಸ್ಥಿವಾನ್ ॥18॥
ಇದನ್ನು ಕೇಳಿದ ಪೂಜ್ಯನಾದ ಮುನಿಶ್ರೇಷ್ಠನಾದ ತನುವು ತಲೆಯನ್ನು ತಗ್ಗಿಸಿ ಒಂದು ಮುಹೂರ್ತದ ಕಾಲ ಧ್ಯಾನಪರನಾಗಿ ಕುಳಿತನು.

ತಮನುಧ್ಯಾಂತಮಾಲಕ್ಷ್ಯ ರಾಜಾ ಪರಮದುರ್ಮನಾಃ |
ಉವಾಚ ವಾಕ್ಯಂ ದೀನಾತ್ಮಾ ಮಂದಂ ಮಂದಮಿವಾಸಕೃತ್ ॥19॥
ಧ್ಯಾನಪರನಾದ ಅವನನ್ನು ಗಮನಿಸಿ ಪರಮವ್ಯಥೆಗೊಂಡ ರಾಜನು ದೀನನಾಗಿ ಮೆಲ್ಲ ಮೆಲ್ಲನೆ ಪುನಃ ಪುನಃ ಈ ಮಾತನ್ನು ಹೇಳಿದನು.
ದುರ್ಲಭಂ ಕಿನ್ನು ವಿಪ್ರರ್ಷೇ ಆಶಾಯಾಶ್ಚೈವ ಕಿಂ ಭವೇತ್ |
ಬ್ರವೀತು ಭಗವಾನೇತದ್ ಯದಿ ಗುಹ್ಯಂ ನ ತನ್ಮಯಿ ॥20॥
ಎಲೈ ವಿಪ್ರರ್ಷಿಯೇ! ಲೋಕದಲ್ಲಿ ದುರ್ಲಭವಾದುದು ಯಾವುದು? ಆಸೆ- ಯಿಂದ ಏನಾದೀತು? ಇದು ರಹಸ್ಯವಲ್ಲದಿದ್ದರೆ

ಪೂಜ್ಯನಾದ ನೀನು ನನಗೆ ಹೇಳ- ಬೇಕು? (ಎಂದು ಹೇಳಿದನು).
ಮಹರ್ಷಿರ್ಭಗವಾಂಸ್ತೇನ ಪೂರ್ವಮಾಸೀದ್ ವಿಮಾನಿತಃ |
ಬಾಲಿಶಾಂ ಬುದ್ಧಿಮಾಸ್ಥಾಯ ಮಂದಭಾಗ್ಯತಯಾಽಽತ್ಮನಃ ॥21॥
ಪೂಜ್ಯನಾದ ಮಹರ್ಷಿಯು ಹಿಂದೆ ಅಲ್ಪಭಾಗ್ಯನಾಗಿದ್ದ ಕಾರಣ ಅವನ ಬಳಿಗೆ ಹೋಗಿ ಆ ರಾಜನ ಬಾಲಿಶಬುದ್ಧಿಯಿಂದ ಅವಮಾನಗೊಳಿಸಲ್ಪಟ್ಟಿದ್ದನು.
ಅರ್ಥಯನ್ ಕಲಶಂ ರಾಜನ್ ಕಾಂಚನಂ ವಲ್ಕಲಾನಿ ಚ |
ನಿರ್ವಿಣ್ಣಃ ಸ ತು ವಿಪ್ರರ್ಷಿರ್ನಿರಾಶಃ ಸಮಪದ್ಯತ ॥22॥
ಕಮಂಡಲು, ನಾರುಮಡಿ, ಅಲ್ಪದ್ರವ್ಯವನ್ನು ಬೇಡಲು ಹೋದ ಆ ವಿಪ್ರರ್ಷಿಯು ಅವಮಾನಿತನಾದ ಕಾರಣದಿಂದ ಬೇಸರ ಹೊಂದಿ ನಿರಾಶನಾಗಿದ್ದನು.
ಏವಮುಕತ್ವಽಭಿವಾದ್ಯಾಥ ತಮೃಷಿಂ ಲೋಕಪೂಜಿತಮ್ |
ಶ್ರಾಂತೋ ನ್ಯಷೀದದ್ ಧರ್ಮಾತ್ಮಾ ಯಥಾ ತ್ವಂ ನರಸತ್ತಮ ॥23॥
ಆ ರಾಜನು ಲೋಕಪೂಜಿತನಾದ ಋಷಿಯನ್ನು ಕುರಿತು ಹೀಗೆ ಹೇಳಿ ನೀನು ಕುಳಿತಂತೆಯೇ ಧರ್ಮಾತ್ಮನಾದ ಅವನು ದಣಿದು ಕುಳಿತನು.
ಅರ್ಘ್ಯಂ ತತಃ ಸಮಾನೀಯ ಪಾದ್ಯಂ ಚೈವ ಮಹಾನೃಷಿಃ |
ಆರಣ್ಯಕೇನ ವಿಧಿನಾ ರಾಜ್ಞೇ ಸರ್ವಂ ನ್ಯವೇದಯತ್ ॥24॥
ಆ ಮಹರ್ಷಿಯು ಅರ್ಘ್ಯಪಾದ್ಯಗಳನ್ನು ನೀಡಿ ವನವಾಸವಿಧಾನದಿಂದ ರಾಜ- ನಿಗೆ ಎಲ್ಲವನ್ನೂ ನಿವೇದಿಸಿದನು.
ತತಸ್ತೇ ಮುನಯಃ ಸರ್ವೇ ಪರಿವಾರ್ಯ ನರರ್ಷಭಮ್ |
ಉಪಾವಿಶನ್ ಪುರಸ್ಕೃತ್ಯ ಸಪ್ತರ್ಷಯ ಇವ ಧ್ರುವಮ್ ॥25॥
ಅನಂತರ ಆ ಎಲ್ಲ ಋಷಿಗಳೂ ಸಪ್ತರ್ಷಿಗಳು ಧ್ರುವನನ್ನು ಸುತ್ತುವರಿದಂತೆ ಆ ರಾಜನನ್ನು ಸುತ್ತುವರಿದು ಕುಳಿತರು.
ಅಪೃಚ್ಛಂಶ್ಚೈವ ತೇ ತತ್ರ ರಾಜಾನಮಪರಾಜಿತಮ್ |
ಪ್ರಯೋಜನಮಿದಂ ಸರ್ವಮಾಶ್ರಮಸ್ಯ ಪ್ರವೇಶನಮ್ ॥26॥
ಅವರೆಲ್ಲರೂ ಅಪರಾಜಿತನಾದ ಆ ರಾಜನನ್ನು ಕುರಿತು ಆಶ್ರಮಕ್ಕೆ ಬಂದ ಉದ್ದೇಶವೆಲ್ಲವನ್ನೂ ಕೇಳಿದರು.
ರಾಜಾ
ವೀರದ್ಯುಮ್ನ ಇತಿ ಖ್ಯಾತೋ ರಾಜಾಹಂ ದಿಕ್ಷು ವಿಶ್ರುತಃ |
ಭೂರಿದ್ಯುಮ್ನಂ ಸುತಂ ನಷ್ಟಮನ್ವೇಷ್ಟುಂ ವನಮಾಗತಃ ॥27॥
ರಾಜ ನಾನು ವೀರದ್ಯುಮ್ನನೆಂಬ ರಾಜ. ಎಲ್ಲ ದಿಕ್ಕುಗಳಲ್ಲಿಯೂ ಪ್ರಖ್ಯಾತ- ನಾಗಿದ್ದೇನೆ. ಭೂರಿದ್ಯುಮ್ನನೆಂಬ ನನ್ನ ಪುತ್ರನು ನಷ್ಟನಾಗಿದ್ದಾನೆ. ಅವನನ್ನು ಹುಡು- ಕಲು ನಾನು ಕಾಡಿಗೆ ಬಂದಿದ್ದೇನೆ.
ಏಕಪುತ್ರಃ ಸ ವಿಪ್ರಾಗ್ರ್ಯ ಬಾಲ ಏವ ಚ ಸೋಽನಘ |
ನ ದೃಶ್ಯತೇ ವನೇ ಚಾಸ್ಮಿಂಸ್ತಮನ್ವೇಷ್ಟುಂ ಚರಾಮ್ಯಹಮ್ ॥28॥
ಎಲೈ ಅನಘನೇ! ವಿಪ್ರಶ್ರೇಷ್ಠನೇ! ನನಗೆ ಅವನೊಬ್ಬನೇ ಪುತ್ರ. ಇನ್ನೂ ಬಾಲಕ. ಈ ಕಾಡಿನಲ್ಲಿ ಅವನು ಕಂಡುಬರುತ್ತಿಲ್ಲ. ಅವನನ್ನು ಹುಡುಕಲು ನಾನು ತಿರುಗು- ತ್ತಿದ್ದೇನೆ.
ಋಷಭಃ
ಏವಮುಕ್ತೇ ತು ವಚನೇ ರಾಜ್ಞಾ ಮುನಿರಧೋಮುಖಃ |
ತೂಷ್ಣೀಮೇವಾಭವತ್ ತತ್ರ ನ ಚ ಪ್ರತ್ಯುಕ್ತವಾನ್ ನೃಪಮ್ ॥29॥
ಋಷಭ ರಾಜನು ಹೀಗೆ ಮಾತನಾಡುತ್ತಿರಲು ಆ ಋಷಿಯು ತಲೆ ತಗ್ಗಿಸಿ ಕುಳಿತು ಮೌನವನ್ನು ವಹಿಸಿದನು. ರಾಜನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.
ಸ ಹಿ ತೇನ ಪುರಾ ವಿಪ್ರೋ ರಾಜ್ಞಾ ನಾತ್ಯರ್ಥಮಾನಿತಃ |
ಆಶಾಕೃತಂ ಚ ರಾಜೇಂದ್ರ ತಪೋ ದೀರ್ಘಂ ಸಮಾಸ್ಥಿತಃ ॥30॥
ಆ ಋಷಿಯಾದರೋ ಹಿಂದೆ ಅದೇ ರಾಜನಿಂದ ಬಹಳ ಸನ್ಮಾನಿತನಾಗದೇ ಎಲೈ ರಾಜೇಂದ್ರನೇ! ಆಶಾಭಂಗವನ್ನು ಹೊಂದಿ, ದೀರ್ಘವಾದ ತಪಸ್ಸನ್ನು ಆಶ್ರಯಿಸಿದ- ವನು.
ಪ್ರತಿಗ್ರಹಮಹಂ ರಾಜ್ಞಾಂ ನ ಕರಿಷ್ಯೇ ಕಥಂಚನ |
ಅನ್ಯೇಷಾಂ ಚೈವ ವರ್ಣಾನಾಮಿತಿ ಕೃತ್ವಾ ಧಿಯಂ ತದಾ ॥31॥
ನಾನು ರಾಜನಿಂದಾಗಲೀ ಅಥವಾ ಬೇರೆಯವರಿಂದಾಗಲೀ ಯಾವ ಕಾರಣ- ದಿಂದಲೂ ಯಾವ ಪ್ರತಿಗ್ರಹವನ್ನೂ ಮಾಡುವುದಿಲ್ಲ ಎಂದು ಬುದ್ಧಿಯಿಂದ ನಿಶ್ಚಯಿಸಿ ಆಗ (ತಪೋನಿಷ್ಠನಾದನು) -
ಆಶಾ ಹಿ ಪುರುಷಂ ಬಾಲಂ ಲಾಲಾಪಯತಿ ತಸ್ಥುಷೀ |
ತಾಮಹಂ ವ್ಯಪನೇಷ್ಯಾಮಿ ಇತಿ ಕೃತ್ವಾ ವ್ಯವಸ್ಥಿತಃ ॥32॥
ಆಸೆಯಾದರೋ ಬಾಲಿಶನಾದ ಪುರುಷನನ್ನು ತಾನು ಸ್ಥಿರವಾಗಿ ನಿಂತು ವಿಲಾಪಿಸುವಂತೆ ಮಾಡುತ್ತದೆ. ಅಂತಹ ಆಸೆಯನ್ನು ನಾನು ತ್ಯಜಿಸಿದ್ದೇನೆ ಎಂದು ನಿಶ್ಚಯಿಸಿ ತಪಸ್ಸಿನಲ್ಲಿ ಸ್ಥಿರವಾಗಿದ್ದನು.
ರಾಜಾ
ಆಶಾಯಾಃ ಕಿಂ ಕೃಶತ್ವಂ ಚ ಕಿಂ ಚೇಹ ಭುವಿ ದುರ್ಲಭಮ್ |

ಬ್ರವೀತು ಭಗವಾನೇತತ್ ತ್ವಂ ಹಿ ಧರ್ಮಾರ್ಥದರ್ಶಿವಾನ್ ॥33॥
ರಾಜ ಆಸೆಯನ್ನು ಕೃಶವಾಗಿ ಮಾಡುವ ಉಪಾಯವೇನು? ಈ ಭೂಮಿ- ಯಲ್ಲಿ ದುರ್ಲಭವಾದುದು ಯಾವುದು? ಪೂಜ್ಯನಾದ ನೀನು ಇದನ್ನು ನನಗೆ ಹೇಳಬೇಕು. ನೀನು ಧರ್ಮಾರ್ಥತತ್ವವನ್ನು ತಿಳಿದವನಷ್ಟೇ? - (ಲಕ್ಷಾಲಂಕಾರ)
ಋಷಭಃ
ತತಃ ಸಂಸ್ಮೃತ್ಯ ತತ್ ಸರ್ವಂ ಸ್ಮಾರಯಿಷ್ಯನ್ನಿವಾಬ್ರವೀತ್ |
ರಾಜಾನಂ ಭಗವಾನ್ವಿಪ್ರಸ್ತತಃ ಕೃಶತನುಸ್ತನುಃ ॥34॥
ಋಷಭ ಅನಂತರ ಹಿಂದಿನ ಎಲ್ಲವನ್ನೂ ಸ್ಮರಿಸಿಕೊಂಡು ರಾಜನಿಗೆ ಸ್ಮರಣೆಗೆ ತರುವವನಾಗಿ ಪೂಜ್ಯನಾದ ಕೃಶಶರೀರನಾದ ಬ್ರಾಹ್ಮಣನಾದ ತನುವು ಮಾತನಾಡಿ- ದನು.
ಕೃಶತ್ವೇನ ಸಮಂ ರಾಜನ್ನಾಶಾಯಾ ವಿದ್ಯತೇ ನ ಚ |
ತಸ್ಯ ವೈ ದುರ್ಲಭತ್ವಾತ್ ತು ಪ್ರಾರ್ಥಿತಾಃ ಪಾರ್ಥಿವಾ ಮಯಾ ॥35॥
ಎಲೈ ರಾಜನೇ! ಆಸೆಯನ್ನು ಕೃಶವನ್ನಾಗಿ ಮಾಡುವುದರಿಂದ ಉಂಟಾಗುವ ಸುಖಕ್ಕೆ ಸಮನಾದ ಸುಖವು ಇಲ್ಲ. ಆಸೆಯನ್ನು ಕೃಶವನ್ನಾಗಿ ಮಾಡುವುದು ದುರ್ಲಭವಾದುದರಿಂದ ನಾನು ಅನೇಕರಾಜರನ್ನು ಪ್ರಾರ್ಥಿಸಿದೆನು (ಲಕ್ಷಾಲಂಕಾರ).
ರಾಜಾ
ಕೃಶಾಕೃಶೇ ಮಯಾ ಬ್ರಹ್ಮನ್ ಗೃಹೀತೇ ವಚನಾತ್ ತವ |
ದುರ್ಲಭತ್ವಂ ಚ ತಸ್ಯೈವ ವೇದವಾಕ್ಯಮಿವ ದ್ವಿಜ ॥36॥
ರಾಜ ಫಲವು ದೊರಕುವುದಿಲ್ಲವೆಂದು ತಿಳಿದು ಯಾವ ಆಸೆಯು ಭಗ್ನವಾ- ಗುತ್ತದೆಯೋ ಅದು ಕೃಶವಾದ ಆಸೆ. ಫಲಪ್ರಾಪ್ತಿ ಉಂಟಾಗುವುದೆಂದು ತಿಳಿದು ಯಾವ ಆಸೆಯು ಭಗ್ನವಾಗುವುದಿಲ್ಲವೋ ಅದು ಕೃಶವಲ್ಲದ ಆಸೆ. ಎಲೈ ಬ್ರಾಹ್ಮಣನೇ! ನಿನ್ನ ಮಾತಿನಂತೆ ಕೃಶಾಕೃಶ ಆಸೆಗಳನ್ನು ತಿಳಿದೆನು. ಆಸೆಯನ್ನು ಕೃಶ ಮಾಡುವುದು ದುರ್ಲಭವೆಂದು ವೇದವಾಕ್ಯದಂತಿರುವ ನಿನ್ನ ವಾಕ್ಯದಿಂದ ತಿಳಿದೆನು.
ಸಂಶಯಸ್ತು ಮಹಾಪ್ರಾಜ್ಞ ಸಂಜಾತೋ ಹೃದಯೇ ಮಮ |
ತನ್ಮೇ ಸತ್ತಮ ತತ್ತ್ವೇನ ವಕ್ತುಮರ್ಹಸಿ ಪೃಚ್ಛತಃ ॥37॥
ಎಲೈ ಸಜ್ಜನರಲ್ಲಿ ಶ್ರೇಷ್ಠನೇ! ಮಹಾಪ್ರಾಜ್ಞನೇ! ಆದರೆ ನನ್ನ ಮನಸ್ಸಿನಲ್ಲಿ ಒಂದು ಸಂಶಯವುಂಟಾಗಿದೆ. ಅದನ್ನು ಕೇಳುವ ನೀನು ಸರಿಯಾದ ಉತ್ತರವನ್ನು ನೀಡಬೇಕು.
ತ್ವತ್ತಃ ಕೃಶತರಂ ಕಿನ್ನು ಬ್ರವೀತು ಭಗವಾನಿದಮ್ |
ಯದಿ ಗುಹ್ಯಂ ನ ತೇ ವಿಪ್ರ ಲೋಕೇऽಸ್ಮಿನ್ ಕಿಂ ನು ದುರ್ಲಭಮ್ ॥38॥
ನಿನಗಿಂತಲೂ ಕೃಶವಾದುದು ಯಾವುದೆಂದು ಬುದ್ಧಿಯಿಂದ ವಿಮರ್ಶೆ ಮಾಡಿ ಪೂಜ್ಯನಾದ ನೀನು ಹೇಳಬೇಕು. ಇದು ಗುಹ್ಯವಲ್ಲದಿದ್ದರೆ ಎಲೈ ಬ್ರಾಹ್ಮಣನೇ! ಈ ಲೋಕದಲ್ಲಿ ಯಾವುದು ದುರ್ಲಭವಾದುದೆಂದು ಹೇಳಬೇಕು.
ಕೃಶತನುಃ
ದುರ್ಲಭೋऽಪ್ಯಥ ವಾ ನಾಸ್ತಿ ಯೋऽರ್ಥೀ ಧೃತಿಮವಾಪ್ನುಯಾತ್ |
ಸುದುರ್ಲಭತರಸ್ತಾತ ಯೋऽರ್ಥಿನಂ ನಾವಮನ್ಯತೇ ॥39॥
ಕೃಶತನು ಆಸೆಯನ್ನು ಹೊಂದಿ ಅನಂತರ ಆಸೆಯನ್ನು ಬಿಟ್ಟು ಧೈರ್ಯವನ್ನು ತಂದುಕೊಳ್ಳುವವನು ದುರ್ಲಭನಾದವನು ಅಥವಾ ಇಲ್ಲವೇ ಇಲ್ಲ ಎಂದು ಹೇಳ- ಬೇಕು. ಎಲೈ ಪ್ರೀತಿಪಾತ್ರನೇ! ಆಸೆಯಿಂದ ಬೇಡುವವನನ್ನು ಅವಮಾನ ಪಡಿಸದಿ- ರುವುದು ಅದಕ್ಕಿಂತಲೂ ದುರ್ಲಭವಾದುದು.
ಸತ್ಕೃತ್ಯ ನೋಪಕುರುತೇ ಪರಂ ಶಕ್ತ್ಯಾ ಯಥಾರ್ಹತಃ |
ಸಕ್ತಾ ಯಾ ಸರ್ವಭೂತೇಷು ಸಾऽऽಶಾ ಕೃಶತರೀ ಮಯಾ ॥40॥
ನೀನು ನನ್ನನ್ನು ಸತ್ಕರಿಸಿ ನಿನ್ನ ಶಕ್ತಿಗೆ ಮತ್ತು ನನ್ನ ಅರ್ಹತೆಗೆ ಅನುಗುಣವಾಗಿ ಉಪಕಾರವನ್ನು ಮಾಡದಿದ್ದರೆ ಎಲ್ಲ ವಿಷಯಗಳಲ್ಲಿ ಹರಡಿದ ನನ್ನ ಆಸೆಯು (ಭಗ್ನವಾಗಿ) ನನಗಿಂತ ಕೃಶವಾಗುತ್ತದೆ.
ಕೃತ್ನೇಷು ಚ ಯಾ ಸಕ್ತಾ ನೃಶಂಸೇಷ್ವಲಸೇಷು ಚ |
ಅಪಕಾರಿಷು ಯಾ ಸಕ್ತಾ ಸಾऽऽಶಾ ಕೃಶತರೀ ಮಯಾ ॥41॥
ಕೃತಘ್ನರಲ್ಲಿ, ಕ್ರೂರಿಗಳಲ್ಲಿ, ಸೋಮಾರಿಗಳಲ್ಲಿ, ಅಪಕಾರಿಗಳಲ್ಲಿ ಮಾಡಿದ ಆಸೆಯು ಫಲವು ದೊರೆಯದಿರುವುದರಿಂದ ನನಗಿಂತ ಕೃಶವಾಗುತ್ತದೆ.
ಏಕಪುತ್ರಃ ಪಿತಾ ಪುತ್ರೇ ನಷ್ಟೇ ವಾ ಪ್ರೋಷಿತೇ ತಥಾ |
ಪ್ರವೃತ್ತಿಂ ಯೋ ನ ಜಾನಾತಿ ಸಾऽऽಶಾ ಕೃಶತರೀ ಮಯಾ ॥42॥
ಏಕಪುತ್ರನನ್ನು ಹೊಂದಿದ ತಂದೆಯು ಆ ಪುತ್ರನು ನಷ್ಟವಾಗಿ, ಅಥವಾ ದೇಶಾಂತರಕ್ಕೆ ಹೋಗಿ ಅವನ ವಾರ್ತೆಯು ತಿಳಿಯದಿದ್ದರೆ ಆಗ ಪುತ್ರನ ವಿಷಯ- ದಲ್ಲಿ ಅವನ ಆಸೆಯು ನನಗಿಂತಲೂ ಕೃಶವಾಗುತ್ತದೆ.
ಪ್ರಸವೇ ಚೈವ ನಾರೀಣಾಂ ವೃದ್ಧಾನಾಂ ಪುತ್ರಕಾರಿತಾ |
ತಥಾ ನರೇಂದ್ರ ಧನಿನಾಮಾಶಾ ಕೃಶತರೀ ಮಯಾ ॥43॥
ವೃದ್ಧರಾದ ನಾರಿಯರು ಮಕ್ಕಳನ್ನು ಪಡೆದರೆ ಪುತ್ರನನ್ನು ಪಡೆಯಬೇಕೆಂಬ ಆಸೆಯು, ಎಲೈ ನರೇಂದ್ರನೇ! ಧನಿಕನಿಗೆ ಇನ್ನೂ ಧನವನ್ನು ಗಳಿಸಬೇಕೆಂಬ ಆಸೆಯು ನನಗಿಂತಲೂ ಕೃಶವಾಗುತ್ತದೆ - ಲಕ್ಷಾಲಂಕಾರ.
ಪ್ರದಾನಕಾಂಕ್ಷಿಣೀನಾಂ ಚ ಕನ್ಯಾನಾಂ ವಯಸಿ ಸ್ಥಿತೇ |

ಶ್ರುತ್ವಾ ಕಥಾಸ್ತಥಾಽಯುಕ್ತಾ ಸಾಶಾ ಕೃಶತರಿ ಮಯಾ ॥44॥
ತಮ್ಮ ವಿವಾಹವನ್ನು ಬಯಸುವ ವಯಸ್ಸಿಗೆ ಬಂದ ಕನ್ಯೆಯರಿಗೆ ತಮ್ಮ ವಿವಾಹದ ವಿಷಯದಲ್ಲಿ ಮರಣ ಮೊದಲಾದ ಅಯುಕ್ತವಾದ ಮಾತುಗಳನ್ನು ಕೇಳಿದರೆ ವಿವಾಹದ ಅವರ ಆಸೆಯು ನನಗಿಂತಲೂ ಕೃಶವಾಗುತ್ತದೆ.
ಋಷಭಃ
ಏತಚ್ಛ್ರುತ್ವಾ ತತೋ ರಾಜನ್ ಸ ರಾಜಾ ಸಾವರೋಧನಃ |
ಸಂಸ್ಪೃಶ್ಯ ಪಾದೌ ಶಿರಸಾ ನಿಪಪಾತ ದ್ವಿಜರ್ಷಭೇ ॥45॥
ಋಷಭ ಎಲೈ ರಾಜನೇ ಈ ಮಾತುಗಳನ್ನು ಕೇಳಿ ರಾಜನು ತನ್ನ ಪರಿವಾರ ಸಹಿತನಾಗಿ ಆ ಋಷಿಯ ಪಾದಗಳಿಗೆ ಶಿರಸಾ ನಮಸ್ಕರಿಸಿ ದ್ವಿಜಶ್ರೇಷ್ಠನ ಪಾದಗಳಲ್ಲಿ ಬಿದ್ದನು.
ರಾಜಾ
ಪ್ರಸಾದಯೇ ತ್ವಾ ಭಗವನ್ ಪುತ್ರೇಣೇಚ್ಛಾಮಿ ಸಂಗತಿಮ್ |
ವೃಣೀಷ್ವ ಚ ವರಂ ವಿಪ್ರ ಯಮಿಚ್ಛಸಿ ಯಥಾವಿಧಿ ॥46॥
ರಾಜ ಎಲೈ ಪೂಜ್ಯನೇ! ನೀನು ಪ್ರಸನ್ನನಾಗು. ನನ್ನ ಪುತ್ರನ ಜೊತೆಯಲ್ಲಿ ಸಂಗಮವನ್ನು ಬಯಸುತ್ತೇನೆ. ಎಲೈ ವಿಪ್ರನೇ! ನೀನು ಬಯಸುವ ವರವನ್ನು ವಿಧಿಪ್ರಕಾರವಾಗಿ ಕೇಳು.
ಋಷಭಃ
ಅಬ್ರುವೀಚ್ಚ ಹಿ ತಂ ವಾಕ್ಯಂ ರಾಜಾ ರಾಜೀವಲೋಚನಃ |
ಸತ್ಯಮೇತದಸಂದೇಹಂ ತ್ವಯೋಕ್ತಂ ನಾಸ್ತ್ಯತೋ ಮೃಷಾ ॥47॥
ಋಷಭ ರಾಜೀವಲೋಚನನಾದ ರಾಜನು ಅವನನ್ನು ಕುರಿತು ನೀನು ಹೇಳಿದ ಮಾತುಗಳೆಲ್ಲವೂ ಸತ್ಯವಾದವುಗಳು. ಆಸೆಯನ್ನು ಕೃಶವನ್ನಾಗಿ ಮಾಡುವ ವಿಷಯದಲ್ಲಿ ನೀನು ಹೇಳಿದ ಯಾವ ಮಾತೂ ಸುಳ್ಳಲ್ಲ ಎಂದು ಹೇಳಿದನು.
ತತಃ ಪ್ರಹಸ್ಯ ಭಗವಾಂಸ್ತನುರ್ಧರ್ಮಭೃತಾಂ ವರಃ |
ಪುತ್ರಮಸ್ಯಾನಯತ್ ಕ್ಷಿಪ್ರಂ ತಪಸಾ ಚ ಶ್ರುತೇನ ಚ ॥48॥
ಅನಂತರ ಪೂಜ್ಯನೂ, ಧರ್ಮಿಷ್ಠರಲ್ಲಿ ಶ್ರೇಷ್ಠನೂ ಆದ ಆ ವಿಪ್ರನು ನಕ್ಕು ತನ್ನ ತಪಸ್ಸು ವಿದ್ಯೆಗಳ ಬಲದಿಂದ ಶೀಘ್ರವಾಗಿ ಅವನ ಪುತ್ರನನ್ನು ಕರೆದುಕೊಂಡು ಬಂದನು.
ತಂ ಸಮಾನಾಯ್ಯ ಪುತ್ರಂ ತು ತದೋಪಾಲಭ್ಯ ಪಾರ್ಥಿವಮ್ |
ಆತ್ಮಾನಂ ದರ್ಶಯಾಮಾಸ ಧರ್ಮಂ ಧರ್ಮಭೃತಾಂ ವರಃ ॥49॥
ಪುತ್ರನನ್ನು ಕರೆದುಕೊಂಡು ಬಂದು, ರಾಜನನ್ನು ನೋಡಿ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಧರ್ಮರೂಪನಾದ ತನ್ನನ್ನು ತೋರಿಸಿದನು.
ಸಂದರ್ಶಯಿತ್ವಾ ಚಾತ್ಮಾನಂ ದಿವ್ಯಮದ್ಭುತದರ್ಶನಮ್ |
ವಿಪಾಪ್ಮಾ ವಿಗತಕ್ರೋಧಶ್ಚಚಾರ ವನಮಂತಿಕಾತ್ ॥50॥
ತನ್ನ ದಿವ್ಯವಾದ ಮತ್ತು ಅದ್ಭುತವಾದ ದರ್ಶನವನ್ನು ನೀಡಿ ಪಾಪಗಳಿಂದಲೂ ಮತ್ತು ಕ್ರೋಧಗಳಿಂದಲೂ ರಹಿತನಾದ ಅವನು ವನದಲ್ಲಿಯೇ ಸಂಚಾರ ಮಾಡಿ- ದನು.
ಏತದ್ ದೃಷ್ಟಂ ಮಯಾ ರಾಜಂಸ್ತತಶ್ಚ ವಚನಂ ಶ್ರುತಮ್ |
ಆಶಾಮಪನಯಸ್ವಾಶು ತತಃ ಕೃಶತರೀಮಿಮಾಮ್ ॥51॥
ಎಲೈ ರಾಜನೇ! ನಾನು ಇದನ್ನು ನೋಡಿದೆನು ಮತ್ತು ಆ ಮಾತುಗಳನ್ನು ಕೇಳಿದೆನು. ಮೃಗವು ದೊರೆಯದಿರುವುದರಿಂದ ಕೃಶವನ್ನು ಮಾಡಲು ಯೋಗ್ಯವಾದ ಆ ನಿನ್ನ ಆಸೆಯನ್ನು ಶೀಘ್ರವಾಗಿ ಬಿಟ್ಟುಬಿಡು. ಲಕ್ಷ್ಮಾಲಂಕಾರ.
ಆಸೆಯನ್ನು ಬಿಡುವುದು ಕಷ್ಟಸಾಧ್ಯವಾದುದರಿಂದ ಆಶಾಖಂಡನವೇ ದುರ್ಲಭ -ವಾದುದು. ವಿವೇಕಿಗಳಾದವರು ಆಸೆಯನ್ನು ಖಂಡಿಸಬೇಕಾದ ರೀತಿಯೆಂದರೆ ಆಶಿಸುವ ವಸ್ತುವಿನ ಅಪ್ರಾಪ್ತಿಯೇ ಎಂದು ಅಧ್ಯಾಯದ ತಾತ್ಪರ್ಯವನ್ನು ತಿಳಿಯ- ಬೇಕು ಲಕ್ಷ್ಮಾಲಂಕಾರ.
ಭೀಷ್ಮಃ
ಸ ತತ್ರೋಕ್ತೋ ಮಹಾರಾಜ ಋಷಭೇಣ ಮಹಾತ್ಮನಾ |
ಸುಮಿತ್ರೋಽಪನಯತ್ ಕ್ಷಿಪ್ರಮಾಶಾಂ ಕೃಶತರೀಂ ತದಾ ॥52॥
ಭೀಷ್ಮರು ಎಲೈ ಮಹಾರಾಜನೇ! ಮಹಾತ್ಮನಾದ ಋಷಭನಿಂದ ಹೀಗೆ ಹೇಳಲ್ಪಟ್ಟ ಸುಮಿತ್ರನು ಕ್ಷಿಪ್ರವಾಗಿ ಮೃಗದ ವಿಷಯದಲ್ಲಿ ಇದ್ದ ತನ್ನ ಆಸೆಯನ್ನು ಕೃಶವನ್ನಾಗಿ ಮಾಡಿ ತೊರೆದನು.
ಏವಂ ತ್ವಮಪಿ ಕೌಂತೇಯ ಶ್ರುತ್ವಾ ವಾಣೀಮಿಮಾಂ ಮಮ |
ಸ್ಥಿರೋ ಭವ ಯಥಾ ರಾಜನ್ ಹಿಮವಾನಚಲೋತ್ತಮಃ ॥53॥
ಎಲೈ ಕೌಂತೇಯನೇ! ನೀನೂ ಸಹ ಈ ನನ್ನ ಮಾತನ್ನು ಕೇಳಿ ಆಸೆಯನ್ನು ತೊರೆದು ಹಿಮಾಲಯ ಪರ್ವತದಂತೆ ಸ್ಥಿರವಾಗಿರು.
ತ್ವಂ ಹಿ ದ್ರಷ್ಟಾ ಚ ಶ್ರೋತಾ ಚ ಕೃಚ್ಛ್ರೇಷ್ವರ್ಥಕೃತೇಷ್ವಿಹ |
ಶ್ರುತ್ವಾ ಮಮ ಮಹಾರಾಜ ನ ಸಂತಪ್ತುಮಿಹಾರ್ಹಸಿ ॥53॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥127॥
ನೀನು ಅರ್ಥದ ವಿಷಯದಲ್ಲಿ ಉಂಟಾಗುವ ಕಷ್ಟಗಳನ್ನು ನೋಡಿದ್ದೀಯೆ ಮತ್ತು ಕೇಳಿದ್ದೀಯೆ. ಎಲೈ ಮಹಾರಾಜನೇ! ನನ್ನ

ಮಾತುಗಳನ್ನು ಕೇಳಿ ಸಂತಾಪವನ್ನು ಬಿಡುವವನಾಗಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 127ನೆಯ ಅಧ್ಯಾಯವು ಮುಗಿಯಿತು
0
128. ನೂರಇಪ್ಪತ್ತೆಂಟನೆಯ ಅಧ್ಯಾಯ
ಮಾತಾಪಿತೃಸೇವೆಯಿಂದ ಅವರ ಋಣಮೋಚನ ಕಥನ
ಯುಧಿಷ್ಠಿರಃ
ನಾಮೃತಸ್ಯೇವ ಪರ್ಯಾಪ್ತಿರ್ಮಮಾಸ್ತಿ ಬ್ರುವತಿ ತ್ವಯಿ |
ತಸ್ಮಾತ್ ಕಥಯ ಭೂಯಸ್ತ್ವಂ ಧರ್ಮಮೇವ ಪಿತಾಮಹ ॥1॥
ಯುಧಿಷ್ಠಿರ ನಿನ್ನ ಮಾತುಗಳನ್ನು ಕೇಳಿ ಅಮೃತಪಾನವನ್ನು ಮಾಡಿದವನಂತೆ ನನಗೆ ತೃಪ್ತಿಯೇ ಆಗುತ್ತಿಲ್ಲ. ಆದ್ದರಿಂದ ಎಲೈ ಪಿತಾಮಹನೇ! ಪುನಃ ಧರ್ಮವನ್ನೇ ಉಪದೇಶಿಸುವವನಾಗು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೌತಮಸ್ಯ ಚ ಸಂವಾದಂ ಯಮಸ್ಯ ಚ ಮಹಾತ್ಮನಃ ॥2॥
ಈ ವಿಷಯದಲ್ಲಿಯೂ ಮಹಾತ್ಮನಾದ ಯಮನಿಗೂ ಮತ್ತು ಗೌತಮರಿಗೂ ನಡೆದ ಸಂವಾದರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಪಾರಿಯಾತ್ರಗಿರಿಂ ಪ್ರಾಪ್ಯ ಗೌತಮಸ್ಯಾಶ್ರಮೋ ಮಹಾನ್ |
ಉವಾಸ ಗೌತಮೋ ಯತ್ರ ಕಾಲಂ ತದಪಿ ಮೇ ಶೃಣು ॥3॥
ಪಾರಿಯಾತ್ರಪರ್ವತದ ಬಳಿ ಗೌತಮರ ದೊಡ್ಡ ಆಶ್ರಮವಿದೆ. ಅಲ್ಲಿ ಗೌತಮರು ಎಷ್ಟು ಕಾಲ ವಾಸಿಸಿದರು ಎಂಬುದನ್ನು ಕೇಳು.
ಷಷ್ಟಿಂ ವರ್ಷಸಹಸ್ರಾಣಿ ಸೋಽತಪ್ಯದ್ ಗೌತಮಸ್ತಪಃ |
ತಮುಗ್ರತಪಸಂ ಯುಕ್ತಂ ತಪಸಾ ಭಾವಿತಂ ಮುನಿಮ್ ॥4॥
ಉಪಯಾತೋ ನರವ್ಯಾಘ್ರ ಲೋಕಪಾಲೋ ಯಮಸ್ತದಾ |
ತಮಪಶ್ಯತ್ ಸುತಪಸಮೃಷಿಂ ವೈ ಗೌತಮಂ ಮುನಿಮ್ ॥5॥
ಅಲ್ಲಿ ಗೌತಮರು ಅರವತ್ತು ಸಹಸ್ರ ವರ್ಷಗಳ ಕಾಲ ಉಗ್ರತಪಸ್ಸನ್ನು ಆಚರಿಸಿದರು. ಎಲೈ ನರವ್ಯಾಘ್ರನೇ! ಉಗ್ರತಪಸ್ಸನ್ನು ಮಾಡಿ ತಪಸ್ಸಿನಿಂದ ಪರಿಶುದ್ಧ- ರಾದ ಆ ಮುನಿಗಳ ಬಳಿಗೆ ಲೋಕಪಾಲಕನಾದ ಯಮನು ಬಂದನು. ಯಮನು ಒಳ್ಳೆಯ ತಪಸ್ಸನ್ನು ಮಾಡಿದ ಗೌತಮ ಋಷಿಗಳನ್ನು ನೋಡಿದನು.
ಸ ತಂ ವಿದಿತ್ವಾ ಬ್ರಹ್ಮರ್ಷಿರ್ಯಮಮಾಗತಮೋಜಸಾ |
ಪ್ರಾಂಜಲಿಃ ಪ್ರಯತೋ ಭೂತ್ವಾ ಉಪಸೃಪ್ತಸ್ತಪೋಧನಃ ॥6॥
ಬ್ರಹ್ಮರ್ಷಿಗಳಾದ ತಪೋಧನರಾದ ಗೌತಮರು ತಮ್ಮ ತಪಃಶಕ್ತಿಯಿಂದ ಬಂದವನು ಯಮನೆಂದು ತಿಳಿದು ಕೈಗಳನ್ನು ಮುಗಿದು ವಿನಯದಿಂದ ಅವನನ್ನು ಸಮೀಪಿಸಿದರು.
ತಂ ಧರ್ಮರಾಜೋ ದೃಷ್ಟ್ವೈವ ನಮಸ್ಕೃತ್ಯ ನರರ್ಷಭಮ್ |
ನ್ಯಮಂತ್ರಯತ ಧರ್ಮೇಣ ಕ್ರಿಯತಾಂ ಕಿಮಿತಿ ಬ್ರುವನ್ ॥7॥
ಯಮಧರ್ಮರಾಜನು ಆ ನರಶ್ರೇಷ್ಠನನ್ನು ನೋಡಿದ ತತ್ಕ್ಷಣವೇ ನಮಸ್ಕಾರ ಮಾಡಿ ಅವರನ್ನು ಧರ್ಮಕ್ಕೆ ಅನುಸಾರವಾಗಿ ಆಮಂತ್ರಿಸಿ ನಾನು ಏನು ಉಪಕಾರ- ವನ್ನು ಮಾಡಲಿ ಎಂದು ಕೇಳಿದನು.
ಗೌತಮಃ
ಮಾತಾಪಿತೃಭ್ಯಾಮಾನೃಣ್ಯಂ ಕಿಂ ಕೃತ್ವಾ ಸಮವಾಪ್ನುಯಾತ್ |
ಕಥಂ ಚ ಲೋಕಾನಶ್ನಾತಿ ಪುರುಷೋ ದುರ್ಲಭಾನ್ ಶುಭಾನ್ ॥8॥
ಗೌತಮರು ಮನುಷ್ಯನು ಏನು ಮಾಡಿದರೆ ಮಾತಾಪಿತೃಗಳ ಋಣವನ್ನು ತೀರಿಸುತ್ತಾನೆ? ಮತ್ತು ದುರ್ಲಭವಾದ ಶುಭಲೋಕಗಳನ್ನು ಹೇಗೆ ಅನುಭವಿಸು- ತ್ತಾನೆ?
ಯಮಃ
ತಪಃಶೌಚವತಾ ನಿತ್ಯಂ ಸತ್ಯಧರ್ಮರತೇನ ಚ |
ಮಾತಾಪಿತ್ರೋರಹರಹಃ ಪೂಜನಂ ಕಾರ್ಯಮಂಜಸಾ ॥9॥
ಯಮ ನಿತ್ಯವೂ ತಪಃಶೌಚಗಳನ್ನು ಆಚರಿಸಿ, ಸತ್ಯಮತ್ತುಧರ್ಮಗಳಲ್ಲಿ ರತನಾಗಿ ಪ್ರತಿನಿತ್ಯವೂ ಚೆನ್ನಾಗಿ ತಂದೆ ತಾಯಿಗಳ ಪೂಜೆಯನ್ನು ಮಾಡಬೇಕು.
ಅಶ್ವಮೇಧೈಶ್ಚ ಯಷ್ಟವ್ಯಂ ಬಹುಭಿಃ ಸ್ವಾಪ್ತದಕ್ಷಿಣೈಃ |
ತೇನ ಲೋಕಾನುಪಾಶ್ನಾತಿ ಪುರುಷೋಽದ್ಭುತದರ್ಶನಾನ್ ॥10॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟವಿಂಶತ್ಯಧಿಕಶತತಮೋಽಧ್ಯಾಯಃ ॥128॥
ಬಹುದಕ್ಷಿಣೆಗಳಿಂದ ಕೂಡಿದ ಅನೇಕ ಅಶ್ವಮೇಧಯಾಗಗಳನ್ನು ಮಾಡಬೇಕು. ಅದರಿಂದ ಪುರುಷನು ಅದ್ಭುತವಾಗಿ ಕಾಣುವ ಶುಭಲೋಕಗಳನ್ನು ಹೊಂದುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 129ನೆಯ ಅಧ್ಯಾಯವುಮುಗಿಯಿತು.

0
129. ನೂರಇಪ್ಪತ್ತೊಂಬತ್ತನೆಯ ಅಧ್ಯಾಯ
ರಾಜನ ಕೋಶವೃದ್ಧಿರೂಪವಾದ ಆಪದ್ಧರ್ಮಕಥನ
ಯುಧಿಷ್ಠಿರಃ
ಮಿತ್ರೈಃ ಪ್ರಹೀಯಮಾಣಸ್ಯ ಬಹ್ವಮಿತ್ರಸ್ಯ ಕಾ ಗತಿಃ |
ರಾಜ್ಞಃ ಸಂಕ್ಷೀಣಕೋಶಸ್ಯ ಬಲಹೀನಸ್ಯ ಭಾರತ ॥1॥
ದುಷ್ಟಾಮಾತ್ಯಸಹಾಯಸ್ಯ ಸ್ರುತಮಂತ್ರಸ್ಯ ಸರ್ವತಃ |
ರಾಜ್ಯಾತ್ ಪ್ರಚ್ಯವಮಾನಸ್ಯ ಗತಿಮನ್ಯಾಮಪಶ್ಯತಃ ॥2॥
ಪರಚಕ್ರಾಭಿಯಾತಸ್ಯ ದುರ್ಬಲಸ್ಯ ಬಲೀಯಸಾ |
ಅಸಂವಿಹಿತರಾಷ್ಟ್ರಸ್ಯ ದೇಶಕಾಲಾವಜಾನತಃ ॥3॥
ಅಪ್ರಾಪ್ಯಂ ಚ ಭವೇತ್ ಸಾಂತ್ವಂ ಭೇದೋ ವಾಽಪ್ಯತಿಪೀಡನಾತ್ |
ಜೀವಿತಂ ಚಾರ್ಥಹೇತೋರ್ವಾ ತತ್ರ ಕಿಂ ಸುಕೃತಂ ಭವೇತ್ ॥4॥
ಯುಧಿಷ್ಠಿರ ಎಲೈ ಭಾರತನೇ! ಮಿತ್ರರನ್ನು ಕಳೆದುಕೊಂಡು ಬಹಳ ಶತ್ರುಗಳನ್ನು ಸಂಪಾದಿಸಿ ಕೋಶವನ್ನೂ ಬಲವನ್ನೂ ಕಳೆದುಕೊಂಡ ರಾಜನಿಗೆ ಯಾವ ಗತಿ? ದುಷ್ಟ ಅಮಾತ್ಯರನ್ನು ಹೊಂದಿ ತನ್ನ ಮಂತ್ರಾಲೋಚನೆಯು ಸೋರಿಹೋಗಿ ಬೇರೆ ಗತಿಯನ್ನು ಕಾಣದೇ ರಾಜ್ಯವನ್ನು ಕಳೆದುಕೊಳ್ಳಲಿರುವ, ಪ್ರಬಲನಾದ ಶತ್ರುವಿನ ಆಕ್ರಮಣಕ್ಕೆ ಒಳಗಾದ, ರಾಷ್ಟ್ರವನ್ನು ಸರಿಯಾಗಿ ರಕ್ಷಿಸದ, ದೇಶಕಾಲಗಳ ಜ್ಞಾನವಿಲ್ಲದ ದುರ್ಬಲನಾದ ರಾಜನಿಗೆ ಏನು ಗತಿ?
ಧನಸಂಗ್ರಹಕ್ಕಾಗಿ ಪ್ರಜೆಗಳನ್ನು ಅತಿಯಾಗಿ ಪೀಡಿಸುವುದರಿಂದ ಸಾಮೋಪಾಯ -ವಾಗಲೀ ಭೇದೋಪಾಯವಾಗಲೀ ಹೊಂದಲು ಯೋಗ್ಯವಾಗುವುದಿಲ್ಲ. ಆಗ ರಾಜನು ಅರ್ಥವನ್ನು (ಧನವನ್ನು) ಸಂಗ್ರಹಿಸುವುದಕ್ಕಾಗಿ ಬದುಕಬೇಕೇ? ಅಥವಾ ಏನು ಮಾಡಿದರೆ ಒಳ್ಳೆಯದಾಗುತ್ತದೆ?
ಭೀಷ್ಮಃ
ಗುಹ್ಯಂ ಮಾ ಧರ್ಮಮಪ್ರಾಕ್ಷೀರತೀವ ಭರತರ್ಷಭ |
ಅಪೃಷ್ಟೋ ನೋತ್ಸಹೇ ವಕ್ತುಂ ಧರ್ಮಮೇನಂ ಯುಧಿಷ್ಠಿರ ॥5॥
ಭೀಷ್ಮರು ಎಲೈ ಭರತರ್ಷಭನೇ! ಅತ್ಯಂತ ರಹಸ್ಯವಾದ ಧರ್ಮವನ್ನು ಪ್ರಶ್ನೆ ಮಾಡುತ್ತಿದ್ದೀಯೆ. ಎಲೈ ಯುಧಿಷ್ಠಿರನೇ! ನೀನು ಕೇಳಿರದಿದ್ದರೆ ನಾನು ಇದಕ್ಕೆ ಉತ್ತರ -ವನ್ನು ಹೇಳುತ್ತಿರಲಿಲ್ಲ.
ಧರ್ಮೋ ಹ್ಯಣೀಯಾನ್ ವಚನಾದ್ ಬುದ್ಧೇಶ್ಚ ಭರತರ್ಷಭ |
ಶ್ರುತ್ವೋಪಾಸ್ಯ ಸದಾಚಾರೈಃ ಸಾಧುರ್ಭವತಿ ಸ ಕ್ವಚಿತ್ ॥6॥
ಎಲೈ ಭರತರ್ಷಭನೇ! ಧರ್ಮವು ಮಾತಿಗಿಂತಲೂ ಮತ್ತು ಬುದ್ಧಿಗಿಂತಲೂ ಬಹಳ ಸೂಕ್ಷ್ಮವಾದುದು. ಧರ್ಮವನ್ನು ಕೇಳಿ, ಅನುಷ್ಠಾನ ಮಾಡಿ, ಸದಾಚಾರ- ಸಂಪನ್ನನಾದವನು ಸಜ್ಜನನಾಗುತ್ತಾನೆ. ಅಂತಹವರು ವಿರಳ.
ಧರ್ಮವಚನಕ್ಕಿಂತಲೂ ಧರ್ಮಬುದ್ಧಿಗಿಂತಲೂ ಧರ್ಮಾಚರಣೆಯೇ ಸೂಕ್ಷ್ಮ -ವಾದುದು (ಶ್ರೇಷ್ಠವಾದುದು). ಬಾಯಿಯಿಂದ ಧರ್ಮದ ಮಾತನಾಡಬಹುದು. ಮನಸ್ಸಿನಿಂದ ಧರ್ಮವನ್ನು ಸ್ಮರಿಸಬಹುದು ಆದರೆ ಧರ್ಮವನ್ನು ಆಚರಿಸುವುದು ಕಷ್ಟ ಎಂದು ಅಭಿಪ್ರಾಯ ಲಕ್ಷಾಲಂಕಾರ
ಕರ್ಮಣಾ ಬುದ್ಧಿಪೂರ್ವೇಣ ಭವತ್ಯಾದ್ಯೋ ನ ವಾ ಪುನಃ |
ತಾದೃಶೋಽಯಮನುಪ್ರಶ್ನಃ ಸ ವ್ಯವಸ್ಯಸ್ತ್ವಯಾ ಧಿಯಾ ॥7॥
ಆದಿಕಾಲೀನವಾದ ಧರ್ಮವು ಬುದ್ಧಿಯಿಂದ ವಿಮರ್ಶೆ ಮಾಡಲ್ಪಡುತ್ತಿದ್ದಿತು ಅಥವಾ ತ್ಯಜಿಸಲ್ಪಡುತ್ತಿದ್ದಿತು. ನೀನು ಮಾಡಿರುವ ಪ್ರಶ್ನೆ ಅಂತಹದು. ಅದು ನೀನು ಬುದ್ಧಿಯಿಂದ ವಿಮರ್ಶೆ ಮಾಡಬೇಕು.
ಉಪಾಯಂ ಧರ್ಮಬಹುಲಂ ಯಾತ್ರಾರ್ಥಂ ಶೃಣು ಭಾರತ |
ನಾಹಮೇತಾದೃಶಂ ಧರ್ಮಂ ಬುಭೂಷೇ ಧರ್ಮಕಾರಣಾತ್ |
ದುಃಖಾದಾನ ಇಹಾಢ್ಯೇಷು ಸ್ಯಾತ್ ತು ಪಶ್ಚಾತ್ ಕ್ಷಮೋ ಮತಃ ॥8॥
ಎಲೈ ಭಾರತನೇ! ರಾಜ್ಯದ ಯಾತ್ರಾರ್ಥವಾಗಿ (ರಾಜ್ಯವನ್ನು ನಡೆಸುವುದಕ್ಕಾಗಿ) ಧರ್ಮವು ಹೆಚ್ಚಾಗಿರುವ (ಸ್ವಲ್ಪ ಅಧರ್ಮವೂ ಇರುವ) ಉಪಾಯವನ್ನು ಕೇಳು. ಧರ್ಮವನ್ನು ಸಂಪಾದಿಸುವ ಸಲುವಾಗಿ ನಾನು ಇಂತಹ ಉಪಾಯವನ್ನು ಆಶ್ರಯಿಸಲಾರೆ. ರಾಜನು ಆಪತ್ಕಾಲದಲ್ಲಿ ಧನಾಢ್ಯರಿಂದ ಅವರಿಗೆ ಹಿಂಸೆಯಾದರೂ ಧನವನ್ನು ಸಂಗ್ರಹಿಸಬೇಕು.ಅನಂತರ ಒಳ್ಳೆಯ ಕಾಲ ಬಂದಾಗ ಅವರನ್ನು ಕ್ಷಮಿಸ- ಬೇಕು ಎಂಬುದು ಅಭಿಪ್ರಾಯ.
ಅನುಗಮ್ಯ ಮತೀನಾಂ ಚ ಸರ್ವಾಸಾಮೇವ ನಿಶ್ಚಯಃ |
ಯಥಾ ಯಥಾ ಹಿ ಪುರುಷೋ ನಿತ್ಯಂ ಶಾಸ್ತ್ರಮವೇಕ್ಷತೇ |
ತಥಾ ತಥಾ ವಿಜಾನಾತಿ ವಿಜ್ಞಾನಂ ಚಾಸ್ಯ ರೋಚತೇ ॥9॥
ಎಲ್ಲ ಬುದ್ಧಿಗಳನ್ನು ಒಂದುಗೂಡಿಸಿ ಒಂದು ನಿಶ್ಚಯಕ್ಕೆ ಬರಬೇಕು. ಮನುಷ್ಯನು ಸದಾ ಶಾಸ್ತ್ರವನ್ನು ನೋಡಿದಂತೆಲ್ಲಾ ಅವನಿಗೆ ವಿಜ್ಞಾನವುಂಟಾಗುತ್ತದೆ. ಆ ವಿಜ್ಞಾನ- ವಾದರೋ ಅವನಿಗೆ ರುಚಿಸುತ್ತದೆ.
ಅವಿಜ್ಞಾನಾದಯೋಗಶ್ಚ ಪುರುಷಸ್ಯೋಪಜಾಯತೇ |
ವಿಜ್ಞಾನಾದಪಿ ಯೋಗಶ್ಚ ಯೋಗೋ ಭೂತಿಕರಃ ಪುನಃ ॥10॥
ಅಂತಹ ಜ್ಞಾನವಿಲ್ಲದ ಮನುಷ್ಯರಿಗೆ ಆಪತ್ಕಾಲದಲ್ಲಿ ಪಾರಾಗುವ ಉಪಾಯವೇ ಉಂಟಾಗುವುದಿಲ್ಲ. ಆದರೆ ವಿಜ್ಞಾನದಿಂದ ಅಂತಹ

ಉಪಾಯವು ತಿಳಿಯುತ್ತದೆ. ಆ ಉಪಾಯವು ಪುನಃ ಐಶ್ವರ್ಯವನ್ನು ತಂದುಕೊಡುತ್ತದೆ.
ಅಶಂಕಮಾನೋ ವಚನಮನಸೂಯುರಿದಂ ಶೃಣು |
ರಾಜ್ಞಃ ಕೋಶಕ್ಷಯಾದೇವ ಜಾಯತೇ ಬಲಸಂಕ್ಷಯಃ ॥11॥
ನನ್ನ ಮಾತನ್ನು ಶಂಕಿಸದೇ ಅಸೂಯೆ ಪಡದೆ ಕೇಳುವವನಾಗು. ರಾಜನಿಗೆ ಕೋಶಕ್ಷಯದಿಂದಲೇ ಬಲದ ಕ್ಷಯವುಂಟಾಗುತ್ತದೆ.
ಕೋಶಂ ಸಂಜನಯೇದ್ ರಾಜಾ ನಿರ್ಜಲೇಭ್ಯೋ ಯಥಾ ಜಲಮ್ |
ಕಾಲಂ ಪ್ರಾಪ್ಯಾನುಗೃಹ್ಣೀಯಾದೇಷ ಧರ್ಮೋಽತ್ರ ಸಾಂಪ್ರತಮ್ |
ಉಪಾಯಧರ್ಮಂ ಪ್ರಾಪ್ಯೈನಂ ಪೂರ್ವೈರಾಚರಿತಂ ಜನೈಃ ॥12॥
ಎತ್ತರದ ದುರ್ಗಾದಿ ಸ್ಥಳಗಳಿಗಾಗಿ ನೀರನ್ನು ಉತ್ಪಾದಿಸಿದಂತೆ ರಾಜನು ಕೋಶ- ವನ್ನು ವೃದ್ಧಿಪಡಿಸಬೇಕು. ಯೋಗ್ಯವಾದ ಕಾಲದಲ್ಲಿ ಯಾರಿಂದ ಧನವನ್ನು ಸಂಗ್ರಹಿ- ಸಿದೆಯೋ ಅವರಿಗೆ ಅನುಗ್ರಹವನ್ನು ಮಾಡಬೇಕು. ಇದು ಇಂತಹ ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮ. ಈ ಉಪಾಯವನ್ನು ಹಿಂದಿನ ರಾಜರೂ ಆಚರಿಸಿದರು. ಅಂತಹ ಉಪಾಯವನ್ನು ಆಚರಿಸಬೇಕು.
ಅನ್ಯೋ ಧರ್ಮಃ ಸಮರ್ಥಾನಾಮಾಪತ್ಸ್ವನ್ಯಶ್ಚ ಭಾರತ ॥13॥
ಎಲ್ಲೈ ಭಾರತನೇ! ಸಾಮರ್ಥ್ಯವಿದ್ದಾಗ ಬೇರೆಯ ಧರ್ಮವನ್ನೂ ಆಪತ್ತಿನಲ್ಲಿ ಬೇರೆಯ ಧರ್ಮವನ್ನೂ ಆಚರಿಸಬೇಕಾಗುತ್ತದೆ.
ಪ್ರಾಕ್ ಕಾರ್ಯಃ ಪ್ರೋಚ್ಯತೇ ಧರ್ಮೋ ವೃತ್ತಿರ್ಧರ್ಮಾದ್ ಗರೀಯಸೀ |
ಧರ್ಮಂ ಪ್ರಾಪ್ಯ ನ್ಯಾಯವೃತ್ತಿಮಬಲೀಯಾನ್ನ ವಿಂದತಿ ॥14॥
ಧರ್ಮವನ್ನು ಮೊದಲು ಮಾಡಬೇಕೆಂದು ಹೇಳಲಾಗುತ್ತದೆ. ಆದರೆ ದೇಹ- ಧಾರಣೆಯು ಧರ್ಮಕ್ಕಿಂತಲೂ ದೊಡ್ಡದು. (ಶರೀರವೇ ಮೊದಲನೆಯ ಧರ್ಮ- ಸಾಧನವಷ್ಟೆ!) ಧರ್ಮವನ್ನು ಮಾಡಿದವನು (ಆ ಧರ್ಮವು ಸ್ವಲ್ಪ ಅಧರ್ಮದಿಂದ ಕೂಡಿದ್ದರೂ) ಬಲಿಷ್ಠನಾಗುವುದಿಲ್ಲ ಎಂಬುವುದಿಲ್ಲ. ಸ್ವರ್ಗವನ್ನು ಹೊಂದುವುದಿಲ್ಲ ಎಂಬುದಿಲ್ಲ - (ಲಕ್ಷ್ಮಾಲಂಕಾರ)
ಯಸ್ಮಾದ್ ಧನಸ್ಯೋಪಪತ್ತಿರೇಕಾಂತೇನ ನ ವಿದ್ಯತೇ |
ತಸ್ಮಾದಾಪದ್ಯಧರ್ಮೋಽಪಿ ಶ್ರೂಯತೇ ಧರ್ಮಲಕ್ಷಣಃ ॥15॥
ಧರ್ಮದಿಂದಲೇ ಧನಸಂಗ್ರಹವು ಆಗುವುದು ಎಂಬ ನಿಯಮವಿಲ್ಲದಿರುವು- ದರಿಂದ ಆಪತ್ಕಾಲದಲ್ಲಿ ಅಧರ್ಮವೂ ಕೂಡ ಧರ್ಮವೆಂದು ಹೇಳಲ್ಪಡುತ್ತದೆ.
ಅಧರ್ಮೋ ಜಾಯತೇ ತಸ್ಮಿನ್ನಿತಿ ವೈ ಕವಯೋ ವಿದುಃ |
ಅನಂತರಃ ಕ್ಷತ್ರಿಯಸ್ಯ ಇತಿ ವೈ ವಿಚಿಕಿತ್ಸಸೇ ॥16॥
ಆಪತ್ತಿಲ್ಲದ ಕಾಲದಲ್ಲಿ ಹಾಗೆ ಮಾಡಿದರೆ ಅಧರ್ಮವುಂಟಾಗುತ್ತದೆ ಎಂದು ಜ್ಞಾನಿಗಳು ಹೇಳುತ್ತಾರೆ. ಆದರೆ ಕ್ಷತ್ರಿಯನಿಗೆ ಅದು ಅಪರಿಹಾರ್ಯ ಎಂಬ ಕಾರಣದಿಂದ ವಿಚಾರಮಾಡಲ್ಪಡುತ್ತದ.
ಯಥಾಸ್ಯ ಧರ್ಮೋ ನ ಗ್ಲಾಯೇನ್ನೇಯಾಚ್ಛತ್ರುವಶಂ ಯಥಾ |
ತತ್ ಕರ್ತವ್ಯಮಿಹೇತ್ಯಾಹುರ್ನಾತ್ಮಾನಮವಸಾದಯೇತ್ ॥17॥
ತನ್ನ ಧರ್ಮವು ಲೋಪವಾಗದಂತೆ ತಾನು ಶತ್ರುವಶವಾಗದಂತೆ ರಾಜನು ತನ್ನನ್ನು ರಕ್ಷಿಸಿಕೊಳ್ಳಬೇಕು ಎಂದು ಹೇಳುತ್ತಾರೆ. ರಾಜನು ಆತ್ಮನಾಶವನ್ನು ತಂದು- ಕೊಳ್ಳಬಾರದು.
ಸರ್ವಾತ್ಮನೈವ ಧರ್ಮಸ್ಯ ನ ಪರಸ್ಯ ನ ಚಾತ್ಮನಃ |
ಸರ್ವೋಪಾಯೈರುಜ್ಜಿಹೀರ್ಷೇದಾತ್ಮಾನಮಿತಿ ನಿಶ್ಚಯಃ ॥18॥
ಸರ್ವರೀತಿಯಿಂದಲೂ ಧರ್ಮವನ್ನು ಆಚರಿಸುವುದಕ್ಕಾಗಿಯೇ ಸರ್ವೋ- ಪಾಯಗಳಿಂದಲೂ ತನ್ನನ್ನು ರಕ್ಷಿಸಿಕೊಳ್ಳಬೇಕು. ತನ್ನ ಹೊಟ್ಟೆಯನ್ನು ತುಂಬಿಕೊಳ್ಳು- ವುದಕ್ಕಾಗಲೀ ಅಥವಾ ಇನ್ನೊಬ್ಬರ ಹೊಟ್ಟೆಯನ್ನು ತುಂಬುವುದಕ್ಕಾಗಲೀ ಅಲ್ಲ ಎಂಬುದು ನಿಶ್ಚಿತವಾದುದು  ಲಕ್ಷ್ಮಾಲಂಕಾರ.
ತತ್ರ ಧರ್ಮವಿದಾಂ ತಾತ ನಿಶ್ಚಯೋ ಧರ್ಮನೈಪುಣಮ್ |
ಉದ್ಯಮೋ ನೈಪುಣಂ ಕ್ಷಾತ್ರೇ ಬಾಹುವೀರ್ಯಾದಿತಿ ಶ್ರುತಿಃ ॥19॥
ಎಲ್ಲೈ ಪ್ರೀತಿಪಾತ್ರನೇ! ಕ್ಷತ್ರಿಯಧರ್ಮದಲ್ಲಿ ನಾನು ಇದನ್ನು ಮಾಡುತ್ತೇನೆಂಬ ನಿಯಮವು ಧರ್ಮದ ಮೊದಲನೆಯ ನಿಪುಣತೆ. ಬಾಹುಪರಾಕ್ರಮದಿಂದ ಪ್ರಯತ್ನವನ್ನು ಮಾಡುವುದು ಎರಡನೆಯ ನಿಪುಣತೆ ಎಂದು ಧರ್ಮವನ್ನು ತಿಳಿದ- ವರು ಹೇಳುತ್ತಾರೆ.
ಕ್ಷತ್ರಿಯೋ ವೃತ್ತಿಸಂರೋಧೇ ಕಸ್ಮಾನ್ನಾದಾತುಮರ್ಹತಿ |
ಅನ್ಯತ್ರ ತಾಪಸಸ್ವಾಚ್ಚ ಬ್ರಾಹ್ಮಣಸ್ವಾಚ್ಚ ಭಾರತ ॥20॥
ಕ್ಷತ್ರಿಯನಿಗೆ ಅವನ ಜೀವನ ವೃತ್ತಿಯೇ ಕಷ್ಟಕ್ಕೆ ಸಿಲುಕಿದಾಗ ಎಲ್ಲೈ ಭಾರತನೇ! ಅವನು ತಪಸ್ವಿಗಳನ್ನು ಬಿಟ್ಟು, ಬ್ರಾಹ್ಮಣರನ್ನು ಬಿಟ್ಟು ಉಳಿದವರಿಂದ ಏಕೆ ಧನವನ್ನು ಸಂಗ್ರಹಿಸಬಾರದು?
ಯಥಾ ವೈ ಬ್ರಾಹ್ಮಣಃ ಸೀದನ್ನಯಾಜ್ಯಮಿತಿ ಯಾಜಯೇತ್ |
ಅಭೋಜ್ಯಾನ್ನಾನಿ ಚಾಶ್ನೀಯಾತ್ ತಥೇದಂ ನಾತ್ರ ಸಂಶಯಃ ॥21॥
ಬ್ರಾಹ್ಮಣನು ಕಷ್ಟಕ್ಕೆ ಸಿಲುಕಿದಾಗ ಅಯಾಜ್ಯರಿಗೂ ಯಾಗವನ್ನು ಮಾಡಿಸಿದಂತೆ ಅಭೋಜ್ಯಾನ್ನವನ್ನು ಭಕ್ಷಿಸುವಂತೆ ಈ ಆಪದ್ಧರ್ಮವು ಇದೆ ಎಂಬುದರಲ್ಲಿ ಸಂಶಯವಿಲ್ಲ.
ಪೀಡಿತಸ್ಯ ಕಿಮದ್ವಾರಮುತ್ಪಥೋ ನಿಧೃತಸ್ಯ ವಾ |
ಅದ್ವಾರತಃ ಪ್ರದ್ರವತಿ ಯದಾ ಭವತಿ ಪೀಡಿತಃ ॥22॥
ಪೀಡಿತನಾದವನಿಗೆ ಯಾವುದು ಸರಿಯಾದ ದ್ವಾರವಲ್ಲವೆನಿಸುತ್ತದೆ? ಬಂಧನಕ್ಕೆ ಸಿಲುಕಿ ಬಿಡಿಸಿಕೊಳ್ಳುವವನಿಗೆ ಯಾವುದು ಸರಿಯಾದ ಮಾರ್ಗವೆನಿಸುವುದಿಲ್ಲ? ಪೀಡಿತನಾದವನು ದ್ವಾರವಲ್ಲದ ಕಡೆಯಿಂದಲೇ ಓಡಿಹೋಗುತ್ತಾನೆ.

ತಸ್ಯ ಕೋಶಬಲಜ್ಯಾನ್ಯಾ ಸರ್ವಲೋಕಪರಾಭವಃ |
ಭೈಕ್ಷಚರ್ಯಾ ನ ವಿಹಿತಾ ನ ಚ ವಿಟ್-ಶೂದ್ರಜೀವಿಕಾ ॥23॥
ರಾಜನ ಕೋಶಬಲಗಳು ಕ್ಷೀಣವಾದರೆ ಸರ್ವಪ್ರಜೆಗಳು ಪರಾಭವವನ್ನು ಹೊಂದುತ್ತಾರೆ. ಭಿಕ್ಷಾವೃತ್ತಿಯಾಗಲೀ, ವೈಶ್ಯಶೂದ್ರರ ಜೀವನವಾಗಲೀ ರಾಜನಿಗೆ ವಿಹಿತವಾದುದಲ್ಲ.
ಸ್ವಧರ್ಮಾನಂತರಾ ವೃತ್ತಿರ್ಯಾ ಅನ್ಯಾಽನುಪಜೀವತಃ |
ಅರ್ಹತಃ ಪ್ರಥಮಂ ಕಲ್ಪಮನುಕಲ್ಪೇನ ಜೀವನಮ್ ॥24॥
ಸರ್ವಥಾ ಉಪಜೀವನ ರಹಿತನಾದ ಕ್ಷತ್ರಿಯನಿಗೆ ಸ್ವಧರ್ಮಾನಂತರದ ವೃತ್ತಿ ಎಂದರೆ ವೈಶ್ಯವೃತ್ತಿಯು ವಿಹಿತವಾಗುತ್ತದೆ. ಯೋಗ್ಯನಾದವನಿಗೆ (ಸಮರ್ಥನಾ- ದವನಿಗೆ) ತಮ್ಮ ತಮ್ಮ ಧರ್ಮದಲ್ಲಿನ ವೃತ್ತಿಯೇ ಶ್ರೇಷ್ಠವಾದ ಪಕ್ಷ. ಸಾಮರ್ಥ್ಯವಿಲ್ಲ -ದಿದ್ದಾಗ ಎರಡನೆಯ ಕಲ್ಪದಿಂದ ಜೀವಿಸಬಹುದು.
ಆಪದ್ಗತೇನ ಧರ್ಮಾಣಾಮನುಕಲ್ಪೇನ ಜೀವಿತುಮ್ |
ತಜ್ಜೀವನಂ ಬ್ರಾಹ್ಮಣೇಷು ದುಷ್ಟಂ ವೃತ್ತಿಪರಿಕ್ಷಯೇ ॥25॥
ಧರ್ಮಸಂಕಟಕ್ಕೆ ಸಿಲುಕಿದ ಮನುಷ್ಯನು ಪ್ರಥಮಕಲ್ಪವನ್ನು ಬಿಟ್ಟು,ಅನಂತರ ಪಕ್ಷದಿಂದ ಜೀವಿಸಲು ಸಾಧ್ಯವಾಗುತ್ತದೆ. ಜೀವನೋಪಾಯವನ್ನು ಕಳೆದುಕೊಂಡ ಬ್ರಾಹ್ಮಣರಲ್ಲಿ ಅಂತಹ ಜೀವನವು ದೃಷ್ಟವಾಗಿದೆ.
ಕ್ಷತ್ರಿಯೇ ಸಂಶಯಃ ಕಃ ಸ್ಯಾದಿತ್ಯೇತನ್ನಿಶ್ಚಿತಂ ಸದಾ |
ಆದದೀತ ವಿಶಿಷ್ಟೇಭ್ಯೋ ನಾವಸೀದೇತ್ ಕಥಂಚನ ॥26॥
ಹಾಗಾದರೆ ಕ್ಷತ್ರಿಯರ ವಿಷಯದಲ್ಲಿ ಏನು ಸಂಶಯ? ಹೀಗೆ ಯಾವಾಗಲೂ ನಿಶ್ಚಯಿಸಲ್ಪಟ್ಟಿದೆ. ಧನಾಢ್ಯರಿಂದ ಧನವನ್ನು ಸಂಗ್ರಹಿಸಬೇಕು. ರಾಜನು ಯಾವ ರೀತಿ -ಯಲ್ಲಿಯೂ ನಾಶವನ್ನು ಹೊಂದಬಾರದು.
ದಾತಾರಂ ರಕ್ಷಿತಾರಂ ಚ ಪ್ರಜಾನಾಂ ಕ್ಷತ್ರಿಯಂ ವಿದುಃ |
ತಸ್ಮಾತ್ ಸಂರಕ್ಷತಾ ಕಾರ್ಯಮಾದಾನಂ ಕ್ಷತ್ರಬಂಧುನಾ ॥27॥
ಪ್ರಜೆಗಳಿಂದ ಧನವನ್ನು ತೆಗೆದುಕೊಂಡು ಅವರನ್ನು ರಕ್ಷಿಸುವವನನ್ನು ಕ್ಷತ್ರಿಯ- ನೆಂದು ಹೇಳುತ್ತಾರೆ. ಆದ್ದರಿಂದ ರಕ್ಷಣೆಯನ್ನು ಮಾಡುವ ಕ್ಷತ್ರಿಯನು ಅವಶ್ಯವಾಗಿ ಧನವನ್ನು ಸಂಗ್ರಹಿಸಬೇಕಾಗುತ್ತದೆ.
ಅನ್ಯತ್ರ ರಾಜನ್ ಹಿಂಸಾಯಾ ವೃತ್ತಿರ್ನೇಹಾಸ್ತಿ ಕಸ್ಯಚಿತ್ |
ಅಪ್ಯರಣ್ಯಸಮುತ್ಥಸ್ಯ ಏಕಸ್ಯ ಚರತೋ ಮುನೇಃ ॥28॥
ಎಲೈ ರಾಜನೇ! ಹಿಂಸೆಯನ್ನು ಬಿಟ್ಟು ಈ ಜಗತ್ತಿನಲ್ಲಿ ಯಾವ ಪ್ರಾಣಿಯೂ ಜೀವಿಸುವುದಿಲ್ಲ. ಅರಣ್ಯವಾಸವನ್ನು ಮಾಡಿ ಒಬ್ಬನೇ ವಾಸಿಸುವ ಮುನಿಗೂ ಧಾನ್ಯಾದಿ ಹಿಂಸೆಯೂ ಮತ್ತು ಅರಣ್ಯಮೃಗಗಳ ಹಿಂಸೆಯೂ ಅನಿವಾರ್ಯ- ವಾಗುತ್ತದೆ.
ನ ಶಂಖಲಿಖಿತಾಂ ವೃತ್ತಿಂ ಶಕ್ಯಮಾಸ್ಥಾಯ ಜೀವಿತುಮ್ |
ವಿಶೇಷತಃ ಕುರುಶ್ರೇಷ್ಠ ಪ್ರಜಾಪಾಲನಮೀಪ್ಸತಾ ॥29॥
ಎಲೈ ಕುರುಶ್ರೇಷ್ಠನೇ! ಹಣೆಯಲ್ಲಿ ಬರೆದಂತಾಗುತ್ತದೆ ಎಂದು ಬದುಕಿರಲು ಸಾಧ್ಯವಿಲ್ಲ. ಅದರಲ್ಲೂ ವಿಶೇಷವಾಗಿ ಪ್ರಜಾಪಾಲನೆಯನ್ನು ಮಾಡಲು ಬಯಸು- ವವನು ಆ ರೀತಿಯಲ್ಲಿ ಬದುಕಲು ಸಾಧ್ಯವಿಲ್ಲ - ಲಕ್ಷ್ಮಾಲಂಕಾರ.
ಪರಸ್ಪರಾಭಿಸಂರಕ್ಷಾ ರಾಜ್ಞಾ ರಾಷ್ಟ್ರೇಣ ಚಾಪದಿ |
ನಿತ್ಯಮೇವೇಹ ಕರ್ತವ್ಯಾ ಏಷ ಧರ್ಮಃ ಸನಾತನಃ ॥30॥
ಆಪತ್ತು ಒದಗಿದ ಎಲ್ಲ ಸಂದರ್ಭದಲ್ಲಿಯೂ ರಾಜ ಮತ್ತು ರಾಷ್ಟ್ರ ಇವು ಪರಸ್ಪರವಾಗಿ ರಕ್ಷಿಸಬೇಕು ಎಂಬುದು ಸನಾತನವಾದ ಧರ್ಮ.
ರಾಜಾ ರಾಷ್ಟ್ರಂ ಯಥಾಪತ್ಸು ದ್ರವ್ಯೌಘೈಃ ಪರಿರಕ್ಷತಿ |
ರಾಷ್ಟ್ರೇಣ ರಾಜಾ ವ್ಯಸನೇ ಪರಿರಕ್ಷ್ಯಸ್ತಥಾ ಭವೇತ್ ॥31॥
ಆಪತ್ಕಾಲದಲ್ಲಿ ರಾಜನು ರಾಷ್ಟ್ರವನ್ನು ಧನಪ್ರವಾಹದಿಂದ ರಕ್ಷಿಸುವಂತೆ, ರಾಜನು ಆಪತ್ತಿಗೆ ಸಿಲುಕಿದಾಗ ರಾಷ್ಟ್ರವೂ ಕೂಡ ಅವನನ್ನು ಹಾಗೆಯೇ ರಕ್ಷಿಸಬೇಕು.
ಕೋಶಂ ದಂಡಂ ಬಲಂ ಮಿತ್ರಂ ಯದನ್ಯದಪಿ ಸಂಚಿತಮ್ |
ನ ಕುರ್ವೀತಾಂತರಂ ರಾಷ್ಟ್ರೇ ರಾಜಾ ಪರಿಗತೇ ಕ್ಷುಧಾ |
ಬೀಜಂ ಭಕ್ತೇನ ಸಂಪಾದ್ಯಮಿತಿ ಧರ್ಮವಿದೋ ವಿದುಃ ॥32॥
ರಾಷ್ಟ್ರವು ಹಸಿವಿನಿಂದ ಬಳಲುವಾಗ ತನ್ನ ಕೋಶ, ದಂಡ, ಬಲ, ಮಿತ್ರರು, ಸಂಚಿತವಾದ ಬೇರೆ ಯಾವುದೇ ವಸ್ತು, ಯಾವುದನ್ನೂ ಉಪಯೋಗಿಸಲು ತಡ ಮಾಡಬಾರದು. ಧರ್ಮಬೀಜವನ್ನು ಅನ್ನದಿಂದ ಸಂಪಾದಿಸಬೇಕೆಂಬುದು ಧರ್ಮ- ವನ್ನು ತಿಳಿದವರು ಹೇಳುವ ಮಾತು.
ಅತ್ರೈತಚ್ಛಂಬರಸ್ಯಾಹುರ್ಮಹಾಮಾಯಸ್ಯ ದರ್ಶನಮ್ ॥33॥
ವಿತ್ತಸ್ಯ ಜೀವಿತಂ ರಾಜ್ಞೋ ರಾಷ್ಟ್ರೇ ಯಸ್ಯಾವಸೀದತಿ |
ಅವೃತ್ತ್ಯಾಂತ್ಯಮನುಷ್ಯೋಽಪಿ ಯೋ ವೈ ವೇದ ಶಿಬೇರ್ವಚಃ ॥34॥
ರಾಷ್ಟ್ರವು ಅವನತಿಗೆ ಒಳಗಾದಾಗ ರಾಜನು ಧನವನ್ನೇ ಆಶಿಸಬೇಕು. ಅವಸಾನ- ವನ್ನು ಹೊಂದಬಾರದು. ಅನಂತರ ಪ್ರಜಾಪಾಲನವನ್ನು ಮಾಡಬೇಕು ಎಂಬುವ ವಿಷಯದಲ್ಲಿ ಮಹಾಮಾಯೆಗಳನ್ನು ಹೊಂದಿದ ಶಂಬರನ ಚರಿತ್ರೆಯು ನಿದರ್ಶನ- ವಾಗಿದೆ.
ರಾಷ್ಟ್ರವು ಆಪತ್ತಿಗೆ ಒಳಗಾದಾಗ ಸಮಾಜದ ಅಂತ್ಯಮನುಷ್ಯನೂ ಜೀವನೋ- ಪಾಯವನ್ನು ಹೊಂದದಿರುವಾಗ ಶಿಬಿಯ

ವಚನವನ್ನು ತಿಳಿದವನು ವಿತ್ತಕ್ಕಾಗಿಯೇ ಪ್ರಯತ್ನಪಡಬೇಕು. ನಾಶವನ್ನು ಹೊಂದಬಾರದು ಧನಪ್ರಾಪ್ತಿಯ ಅನಂತರ ಪ್ರಜಾ-ಪಾಲನವನ್ನು ಮಾಡಬೇಕು ಎಂಬುವ ವಿಷಯದಲ್ಲಿ ಮಹಾಮಾಯೆಗಳನ್ನು ಹೊಂದಿದ ಶಂಬರನ ಚರಿತ್ರೆಯು ನಿದರ್ಶನವಾಗಿದೆ.
ರಾಜ್ಞಃ ಕೋಶಬಲಂ ಮೂಲಂ ಕೋಶಮೂಲಂ ಪುನರ್ಬಲಮ್ |
ತನ್ಮೂಲಂ ಸರ್ವಧರ್ಮಾಣಾಂ ಧರ್ಮಮೂಲಾಃ ಪುನಃ ಪ್ರಜಾಃ ||35||
ರಾಜನಿಗೆ ಕೋಶಬಲವು ಮೂಲವಾದುದು. ಮತ್ತು ರಾಜನ ಬಲವು ಕೋಶ- ಮೂಲವಾದುದು. ರಾಜನ ಬಲವು ಎಲ್ಲ ಧರ್ಮಗಳಿಗೂ ಮೂಲವಾದುದು. ಎಲ್ಲ ಪ್ರಜೆಗಳಿಗೂ ಧರ್ಮವು ಮೂಲವಾದುದು.
ನಾನ್ಯಾನಪೀಡಯಿತ್ವೇಹ ಕೋಶಃ ಶಕ್ಯಃ ಕುತೋ ಬಲಮ್ |
ತದರ್ಥೇ ಪೀಡಯಿತ್ವಾ ಚ ದೋಷಂ ನ ಪ್ರಾಪ್ತುಮರ್ಹತಿ ||36||
ಇನ್ನೊಬ್ಬರಿಗೆ ಪೀಡೆಯನ್ನು ಮಾಡದೇ ಕೋಶವನ್ನು ಸಂಪಾದಿಸಲು ಸಾಧ್ಯವಿಲ್ಲ. ಇನ್ನು ಕೋಶಮೂಲವಾದ ಬಲವು ಎಲ್ಲಿಂದ ಬಂದೀತು? ಕೋಶಕ್ಕಾಗಿ ಪೀಡಿಸಿ- ದರೂ ಸಹ ರಾಜನು ದೋಷವನ್ನು ಹೊಂದುವುದಿಲ್ಲ.
ಅಕಾರ್ಯಮಪಿ ಕಾರ್ಯಾರ್ಥಂ ಕ್ರಿಯತೇ ಯಜ್ಞಕರ್ಮಸು |
ಏತಸ್ಮಾತ್ ಕಾರಣಾದ್ ರಾಜಾ ನ ದೋಷಂ ಪ್ರಾಪ್ತುಮರ್ಹತಿ ||37||
ಯಜ್ಞಗಳಲ್ಲಿ ಅಕಾರ್ಯವಾದ ಪ್ರಾಣಿಹಿಂಸೆಯನ್ನು ಸ್ವರ್ಗಾರ್ಥವಾಗಿ ಮಾಡು- ತ್ತಾರೆ. ಆ ಕಾರಣದಿಂದ ಒಳ್ಳೆಯ ಉದ್ದೇಶದಿಂದ ಕೆಟ್ಟ ಕಾರ್ಯವನ್ನು ಮಾಡಿದರೂ ದೋಷವಾಗುವುದಿಲ್ಲ.
ಅರ್ಥಾರ್ಥಮನ್ಯದ್ ಭವತಿ ವಿಪರೀತಮಥಾಪರಮ್ |
ಅನರ್ಥಾರ್ಥಮಥಾಪ್ಯನ್ಯತ್ ತತ್ ಸರ್ವಂ ಹ್ಯರ್ಥಕಾರಣಮ್ |
ಏವಂ ಬುದ್ಧ್ಯಾ ಸಂಪ್ರಪಶ್ಯೇನ್ಮೇಧಾವೀ ಕಾರ್ಯನಿಶ್ಚಯಮ್ ||38||
ಅರ್ಥಸಂಪಾದನೆಯ ಸಲುವಾಗಿ ಶುಭವಾದ ಉಪಾಯವು ಮತ್ತು ಅಶುಭ- ವಾದ ಉಪಾಯವು ಉಂಟಾಗುತ್ತದೆ. ಇಲ್ಲದಿದ್ದರೆ ರಾಷ್ಟ್ರಾದಿಗಳು ನಿಷ್ಪ್ರಯೋಜನ- ವಾಗುತ್ತವೆ. ಆದ್ದರಿಂದ ಸರ್ವವೂ ಅರ್ಥಕಾರಣವಾಗುತ್ತದೆ. ಮೇಧಾವಿಯಾದವನು ಹೀಗೆ ತನ್ನ ಬುದ್ಧಿಯಿಂದ ನಿಶ್ಚಯಿಸಿ ಕಾರ್ಯವನ್ನು ಮಾಡಬೇಕು - ಲಕ್ಷ್ಮಾಲಂಕಾರ.
ಯಜ್ಞಾರ್ಥಮನ್ಯದ್ ಭವತಿ ಯಜ್ಞಾದ್ಯರ್ಥಸ್ತಥಾ ಪರಃ |
ಯಜ್ಞಶ್ಚಾರ್ಥಾರ್ಥಮೇವೈತತ್ ತತ್ ಸರ್ವಂ ಯಜ್ಞಸಾಧನಮ್ ||39||
ಸಂಗ್ರಹಿಸಿದ ಧನಧಾನ್ಯಾದಿಗಳು ಯಜ್ಞದ ಸಲುವಾಗಿ ಇರುತ್ತವೆ. ಯಜ್ಞವು ಪರಲೋಕದ ಸಲುವಾಗಿ ಇದೆ. ಆದರೆ ಯಜ್ಞದಿಂದ ಪರ್ಜನ್ಯನುಉಂಟಾಗುತ್ತಾನೆ. ಪರ್ಜನ್ಯದಿಂದ ಅನ್ನವು ಉಂಟಾಗುತ್ತದೆ ಎಂಬ ವಚನದಂತೆ ಯಜ್ಞದಿಂದ ಅನ್ನವು ಉಂಟಾಗುವುದರಿಂದ ಈ ಲೋಕದಲ್ಲಿ ಯಜ್ಞವು ಅಂತತಃ ಅನ್ನದ ಸಲುವಾಗಿಯೇ ಇದೆ. ಆದ್ದರಿಂದ ಎಲ್ಲವೂ ಯಜ್ಞದ ಸಾಧನವಾಗುತ್ತದೆ. (ಅದರಂತೆ ಒಳ್ಳೆಯ ಉದ್ದೇಶದಿಂದ ಮಾಡಿದ ಶುಭಾಶುಭಉಪಾಯಗಳು ಶುಭಕ್ಕೇ ಸಾಧನೆಯಾಗು- ತ್ತವೆ.) ಲಕ್ಷ್ಮಾಲಂಕಾರ.
ಉಪಮಾಮತ್ರ ವಕ್ಷ್ಯಾಮಿ ಧರ್ಮತತ್ತ್ವಪ್ರಕಾಶಿನೀಮ್ |
ಯೂಪಂ ಛಿಂದಂತಿ ಯಜ್ಞಾರ್ಥಂ ತತ್ರ ಯೇ ಪರಿಪಂಥಿನಃ ||40||
ದ್ರುಮಾಃ ಕೇಚನ ಸಾಮಂತಾ ಧ್ರುವಂ ಛಿಂದಂತಿ ತಾನಪಿ |
ತೇ ಚಾಪಿ ನಿಪತಂತೋಽನ್ಯಾನ್ ನಿಘ್ನಂತಿ ಚ ವನಸ್ಪತೀನ್ ||41||
ಧರ್ಮತತ್ವವನ್ನು ಚೆನ್ನಾಗಿ ತಿಳಿಸುವ ಒಂದು ದೃಷ್ಟಾಂತವನ್ನು ಈ ವಿಷಯದಲ್ಲಿ ಹೇಳುವೆನು. (ಇನ್ನೊಬ್ಬರನ್ನು ಪೀಡಿಸದೇ ಕೋಶವನ್ನು ಸಂಪಾದಿಸಲು ಸಾಧ್ಯವಿಲ್ಲ ಎಂಬ ವಿಷಯದಲ್ಲಿ ಈ ದೃಷ್ಟಾಂತವನ್ನು ಹೇಳುವೆನು). ಯಜ್ಞವನ್ನು ಮಾಡುವ ಸಲುವಾಗಿ ಯೂಪವನ್ನು ಕತ್ತರಿಸುತ್ತಾರೆ. (ಒಂದು ವೃಕ್ಷವನ್ನು ಕಡಿದು ಯೂಪವನ್ನು ಮಾಡುತ್ತಾರೆ). ಯೂಪವನ್ನು ಮಾಡುವುದರ ಸಲುವಾಗಿ ಅದಕ್ಕೆ ತೊಂದರೆಯನ್ನು ಮಾಡುವ ಸುತ್ತಲೂ ಬೆಳೆದಿರುವ ಮರಗಳನ್ನು ಅವಶ್ಯವಾಗಿ ಕತ್ತರಿಸುತ್ತಾರೆ. ಆ ಮರಗಳು ಬೀಳುತ್ತಾ ಬೇರೆ ಮರಗಳನ್ನು ಉರುಳಿಸುತ್ತವೆ.
ಏವಂ ಕೋಶಸ್ಯ ಮಹತೋ ಯೇ ನರಾಃ ಪರಿಪಂಥಿನಃ |
ತಾನಹತ್ವಾ ನ ಪಶ್ಯಾಮಿ ಸಿದ್ಧಿಮತ್ರ ಪರಂತಪ ||42||
ಹೀಗೆ ಯಾವ ಮನುಷ್ಯರು ರಾಜನ ದೊಡ್ಡಕೋಶಕ್ಕೆ ವಿರೋಧಿಗಳೋ ಎಲೈ ಪರಂತಪನೇ! ಅವರನ್ನು ಕೊಲ್ಲದೇ ನಾನು ಕೋಶಸಿದ್ಧಿಯನ್ನು ಕಾಣುವುದಿಲ್ಲ.
ಧನೇನ ಜಯತೇ ಲೋಕಾವುಭೌ ಪರಮಿಮಂ ತಥಾ |
ಸತ್ಯಂ ಚ ಧರ್ಮವಚನಂ ಯಥಾ ನಾಸ್ತ್ಯಧನಸ್ತಥಾ ||43||
ಧನದಿಂದ ಈ ಲೋಕವನ್ನೂ, ಪರಲೋಕವನ್ನೂ, ಸತ್ಯವಚನವನ್ನೂ, ಧರ್ಮವಚನವನ್ನೂ ಎಲ್ಲವನ್ನೂ ಸಂಪಾದಿಸುತ್ತಾನೆ. ನಿರ್ಧನನಾದ ಮನುಷ್ಯನು ಇದ್ದರೂ ಇಲ್ಲದಂತೆಯೇ ಸರಿ.
ಸರ್ವೋಪಾಯೈರಾದದೀತ ಧನಂ ಯಜ್ಞಪ್ರಯೋಜನಮ್ |
ನ ತುಲ್ಯದೋಷಃ ಸ್ಯಾದೇವಂ ಕಾರ್ಯಾಕಾರ್ಯೇಷು ಭಾರತ ||44||
ಯಜ್ಞಕ್ಕೆ ಕಾರಣವಾದ ಧನವನ್ನು ಸರ್ವೋಪಾಯಗಳಿಂದಲೂ ಸಂಗ್ರಹಿಸ- ಬೇಕು. ಎಲೈ ಭಾರತನೇ! ಹಾಗೆ ಮಾಡಿದರೆ ಕಾರ್ಯಾಕಾರ್ಯಗಳಲ್ಲಿ ಸಮಾನ- ದೋಷವುಂಟಾಗುವುದಿಲ್ಲ. ಯೂಪದ ಸಲುವಾಗಿ ಅನೇಕ ಮರಗಳನ್ನು ಉರು- ಳಿಸುವಾಗ ಶ್ರೇಷ್ಠವಾದ ಕಾರ್ಯದ ಸಲುವಾಗಿ ಅಕಾರ್ಯವನ್ನು ಮಾಡಿದರೂ ಕೇವಲ ಅಕಾರ್ಯವನ್ನು ಮಾಡಿದ ದೋಷಕ್ಕೆ ಸಮಾನವಾದ ದೋಷವು ಉಂಟಾ- ಗುವುದಿಲ್ಲ. ಅದರಂತೆ ಧನಸಂಗ್ರಹಲ್ಲಿಯೂ ಅಕಾರ್ಯಮಿಶ್ರಿತವಾದ ಕಾರ್ಯ- ವನ್ನು ಮಾಡಿದರೆ

ದೋಷವುಂಟಾಗುವುದಿಲ್ಲ. - (ಲಕ್ಷಾಲಂಕಾರ)
ನೋಭೌ ಸಂಭವತೋ ರಾಜನ್ ಕಥಂಚಿದಪಿ ಭಾರತ |
ನ ಹ್ಯರಣ್ಯೇಷು ಪಶ್ಯಾಮಿ ಧನವೃದ್ಧಾನಹಂ ಕ್ವಚಿತ್ ॥45॥
ಎಲೈ ರಾಜನೇ! ಶುಭಕಾರ್ಯವನ್ನುಮಾಡಿದಾಗ ದೋಷ ಮತ್ತು ಗುಣ ಎರಡೂ ಉಂಟಾಗುವುದಿಲ್ಲ. ಅರಣ್ಯದಲ್ಲಿ ನಾನು ಯಾವರೀತಿಯಿಂದಲೂ ಧನ- ವೃದ್ಧಿಯನ್ನು ಕಾಣಲಾರೆ. ಸಮುದ್ರದ ನೀರಿನಲ್ಲಿ ಸ್ವಲ್ಪ ಇಂಗನ್ನು ಹಾಕಿದರೆ ಹೇಗೆ ಇಂಗಿನಪರಿಮಳವು ಬರುವುದಿಲ್ಲವೋ ಅದರಂತೆ ಬಹುತರಪುಣ್ಯಕ್ಕೆ ಅನುಕೂಲ- ವಾದ ಸ್ವಲ್ಪ ಪಾಪದಿಂದ ಬೆರೆತ ಕರ್ಮವು ಪುಣ್ಯಕರವೇ ಆಗುತ್ತದೆ. ಅದರಲ್ಲಿ ದೋಷವಿಲ್ಲ ಎಂಬುದು ಅಭಿಪ್ರಾಯ ಲಕ್ಷಾಲಂಕಾರ.
ಯದಿದಂ ದೃಶ್ಯತೇ ವಿತ್ತಂ ಪೃಥಿವ್ಯಾಮಿಹ ಕಿಂಚನ |
ಮಮೇದಂ ಸ್ಯಾನ್ಮಮೇದಂ ಸ್ಯಾದಿತ್ಯಯಂ ಕಾಂಕ್ಷತೇ ಜನಃ ॥46॥
ಈ ಭೂಮಿಯಲ್ಲಿ ಯಾವ ಅಲ್ಪವಾದ ವಿತ್ತವು ಕಂಡುಬರುತ್ತದೆಯೋ ಟಅದು ನನಗೆ ಇರಲಿ, ನನಗೆ ಇರಲಿಟ ಎಂದು ಜನರು ಬಯಸುತ್ತಾರೆ.
ನ ಚ ರಾಜ್ಯಸಮೋ ಧರ್ಮಃ ಕಶ್ಚಿದಸ್ತಿ ಪರಂತಪ |
ಧರ್ಮಃ ಸಂಶಬ್ದಿತೋ ರಾಜ್ಞಾಮಾಪದರ್ಥಮತೋಽನ್ಯಥಾ ॥47॥
ಎಲೈ ಪರಂತಪನೇ! ರಾಜ್ಯಪಾಲನೆಗೆ ಸಮನಾದ ಧರ್ಮವಿಲ್ಲ. ರಾಜರಿಗೆ ಪ್ರಜಾಪಾಲನರೂಪವಾದ ರಾಜ್ಯಧರ್ಮವು ಸಮೀಚೀನವಾದ ಧರ್ಮ ಎಂದು ಹೇಳಲ್ಪಡುತ್ತದೆ. ಆಪತ್ಕಾಲದಲ್ಲಿ ಪ್ರಜಾಪೀಡೆಯಿಂದ ಧನವನ್ನು ಸಂಗ್ರಹಿಸುವುದು ಅಧರ್ಮವಾದರೂ ಸಮೀಚೀನವಾದ ಧರ್ಮವೆಂದು ಹೇಳಲ್ಪಡುತ್ತದೆ ಲಕ್ಷಾ- ಲಂಕಾರ.
ದಾನೇನ ಕರ್ಮಣಾ ಚಾನ್ಯೇ ತಪಸಾಽನ್ಯೇ ತಪಸ್ವಿನಃ |
ಬುದ್ಧ್ಯಾ ದಾಕ್ಷ್ಯೇಣ ಚಾಪ್ಯನ್ಯೇ ಚಿನ್ವಂತಿ ಧನಸಂಚಯಾನ್ ॥48॥
ತಪಸ್ವಿಗಳಾದವರು ದಾನದಿಂದ ಕರ್ಮದಿಂದ ಇನ್ನು ಕೆಲವರು ತಪಸ್ಸಿನಿಂದ ಇನ್ನುಕೆಲವರು ಬುದ್ಧಿಯಿಂದ, ಇನ್ನು ಕೆಲವರು ದಕ್ಷತೆಯಿಂದ ಧನಸಂಗ್ರಹವನ್ನು ಮಾಡುತ್ತಾರೆ.
ಸರ್ವಂ ಧನವತಃ ಪ್ರಾಪ್ಯಂ ಸರ್ವಂ ತರತಿ ಕೋಶವಾನ್ |
ಕೋಶಾದ್ ಧರ್ಮಶ್ಚ ಕಾಮಶ್ಚ ಪರೋ ಲೋಕಸ್ತಥಾಪ್ಯಯಮ್ |
ತಂ ಚ ಧರ್ಮೇಣ ಲಿಪ್ಸೇತ ನಾಧರ್ಮೇಣ ಕದಾಚನ ॥49॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನತ್ರಿಂಶತ್ಯಧಿಕಶತತಮೋಽಧ್ಯಾಯಃ ॥129॥
॥ ಸಮಾಪ್ತಂ ರಾಜಧರ್ಮಪರ್ವ ॥
ಧನವುಳ್ಳವನು ಎಲ್ಲವನ್ನೂ ಸಂಪಾದಿಸುತ್ತಾನೆ. ಕೋಶವುಳ್ಳವನು ಎಲ್ಲ ಕಷ್ಟಗಳನ್ನೂ ದಾಟುತ್ತಾನೆ. ಕೋಶದಿಂದ ಧರ್ಮ, ಕಾಮ, ಪರಲೋಕ, ಈ ಲೋಕ ಎಲ್ಲವೂ ಸಿದ್ಧಿಸುತ್ತವೆ. ಕೋಶವನ್ನಾದರೂ ಧರ್ಮದಿಂದ ಪಡೆಯಲು ಪ್ರಯತ್ನಿಸ- ಬೇಕು. ಅಧರ್ಮದಿಂದ ಪಡೆಯಲು ಬಯಸಬಾರದು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 129ನೇ ಅಧ್ಯಾಯವು ಮುಗಿಯಿತು
ರಾಜಧರ್ಮಪರ್ವವೂ ಮುಗಿಯಿತು
0

॥ ಶ್ರೀಮಧ್ವೇಶಾರ್ಪಣಮಸ್ತು ॥
॥ ಶ್ರೀಮಧ್ವೇಶಾರ್ಪಣಮಸ್ತು ॥
॥ ಶ್ರೀಃ ॥
ಮಹಾಭಾರತ - ಶಾಂತಿಪರ್ವ
ಆಪದ್ಧರ್ಮಪರ್ವ
ಒಂದನೆಯ ಅಧ್ಯಾಯ
ಆಪತ್ಕಾಲದಲ್ಲಿ (1)ಶತ್ರುರಾಜನು ಧಾರ್ಮಿಕನಾಗಿದ್ದರೆ ಅವನ ಜೊತೆ ಸಂಧಾನವನ್ನು ಮಾಡಿಕೊಳ್ಳಬೇಕು (2) ಪೌಲ್ಯಗಳಿಗೆ ಬೆಲೆಕೊಡದವನಾಗಿದ್ದರೆ ಭೂಮಿ-ಸಂಪತ್ತುಗಳನ್ನು ತಾತ್ಕಾಲಿಕವಾಗಿ ಬಿಟ್ಟುಕೊಡಬೇಕು. ಕಾಲಾಂತರದಲ್ಲಿ ಪುನಃ ವಶಕ್ಕೆ ಪಡೆಯಬೇಕು
(3) ಹೇಗಾದರೂ ಮಾಡಿ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕು.
ಯುಧಿಷ್ಠಿರಃ
ಕ್ಷೀಣಸ್ಯ ದೀರ್ಘಸೂತ್ರಸ್ಯ ಸಾನುಕ್ರೋಶಸ್ಯ ಬಂಧುಷು |
ವಿರಕ್ತಪೌರರಾಷ್ಟ್ರಸ್ಯ ನಿರ್ದ್ರವ್ಯನಿಚಯಸ್ಯ ಚ ॥1॥
ಪರಿಶಂಕಿತಮುಖ್ಯಸ್ಯ ಸ್ರುತಮಂತ್ರಸ್ಯ ಭಾರತ |
ಅಸಂಭಾವಿತಮಿತ್ರಸ್ಯ ಭಿನ್ನಾಮಾತ್ಯಸ್ಯ ಸರ್ವಶಃ ॥2॥
ಪರಚಕ್ರಾಭಿಯಾತಸ್ಯ ದುರ್ಬಲಸ್ಯ ಬಲೀಯಸಾ |
ಆಪನ್ನಚೇತಸೋ ಬ್ರೂಹಿ ಕಿಂ ಕಾರ್ಯಮವಶಿಷ್ಯತೇ ॥3॥

ಯಾರು ಮಾನಸಿಕನಾಗಿ ಕುಸಿದಿರುವನೋ, ಆಲಸನೋ, ಬಂಧುಗಳ ನಾಶದ ಭಯದಿಂದ ಯುದ್ಧ ಮಾಡಲು ಬಯಸುವುದಿಲ್ಲವೋ, ಪ್ರಜಾನುರಾಗ ರಹಿತನೋ,ಆವಶ್ಯಕ ವಸ್ತುಗಳ ಸಂಗ್ರಹವಿಲ್ಲದವನೋ, ಯಾರ ಪ್ರಧಾನ ಅಧಿಕಾರ ವರ್ಗದವರ ನಿಷ್ಠೆಯು ಸಂಶಯಾಸ್ಪದವಾಗಿದೆಯೋ, ಗುಪ್ತಸಮಾಲೋಚನೆಗಳು ಸೋರಿ ಹೋಗಿವೆಯೋ, ಯಾರಿಗೆ ಸಂಭಾವಿತರಾದ ಮಿತ್ರರಿಲ್ಲವೋ, ಯಾರ ಮಂತ್ರಿಗಳನ್ನು ಶತ್ರುಗಳು ಭೇದಿಸಿರುವರೋ (ಯಾರ ಮಂತ್ರಿಗಳು ಶತ್ರುಗಳಿಗೆ ಅನುಕೂಲರಾಗಿರುವರೋ) ಯಾರು ಶತ್ರುಗಳ ಆಕ್ರಮಣಕ್ಕೆ ಒಳಗಾಗಿದ್ದಾನೋ, ಬಲಶಾಲಿ ಶತ್ರುಗಳಿಂದ ಆಪತ್ತಿಗೆ ಒಳಗಾಗಿರುವನೋ ಅಂತಹ ರಾಜನು ಏನು ಮಾಡಬೇಕು?
ಭೀಷ್ಮಃ
ಬಾಹ್ಯಾರ್ಥೇ ವಿಜಿಗೀಷುಃ ಸ್ಯಾದ್ ಧರ್ಮಾರ್ಥಕುಶಲಃ ಶುಚಿಃ |
ಜವೇನ ಸಂಧಿಂ ಕುರ್ವೀತ ಪೂರ್ವಂ ಪೂರ್ವಂ ವಿಮೋಕ್ಷಯನ್ ॥4॥
ಧರ್ಮದ ಅನುಷ್ಠಾನವನ್ನು ಕೌಶಲದಿಂದ (ಪ್ರಯೋಜನಕರವಾದ ವಿವೇಚನೆಯಿಂದ) ಮಾಡುವ ಶುಚಿ ವರ್ತನೆಯ ರಾಜನು, ಪರದೇಶದ ರಾಜನು ಹೊರ ಪ್ರಪಂಚಕ್ಕೆ ಸೇರಿದ ಧನ-ಕನಕ ಮೊದಲಾದವುಗಳನ್ನು ಗೆಲ್ಲುವ ಇಚ್ಛೆಯಿಂದ ಆಕ್ರಮಣವನ್ನು ಮಾಡಿದ್ದರೆ, ಅವನ ಜೊತೆ ಕೂಡಲೇ ಸಂಧಿಯನ್ನು ಮಾಡಿಕೊಳ್ಳಬೇಕು. ಅವನು ಹಿಂದೆ ಆಕ್ರಮಿಸಿಕೊಂಡ ಭೂಮಿ-ಸಂಪತ್ತುಗಳನ್ನು ಸಾಮೋಪಾಯದಿಂದ ಬಿಡಿಸಿಕೊಳ್ಳಬೇಕು.
ಅಧರ್ಮವಿಜಿಗೀಷುಶ್ಚೇದ್ ಬಲವಾನ್ ಪಾಪನಿಶ್ಚಯಃ |
ಆತ್ಮನಃ ಸನ್ನಿರೋಧೇನ ಸಂಧಿಂ ತೇನಾಭಿಯೋಜಯೇತ್ ॥5॥
ಪರರಾಜನು ಅಧರ್ಮದಿಂದ ಜಯಗಳಿಸುವ ಇಚ್ಛೆವುಳ್ಳವನೂ, ಬಲಶಾಲಿಯೂ, ಕೆಟ್ಟ ನಿಶ್ಚಯದವನೂ ಆಗಿದ್ದರೆ ಬಹಳ ಸಂಯಮದಿಂದ ಅವನ ಜೊತೆ ಸಂಧಿಯನ್ನು ಮಾಡಿಕೊಳ್ಳಬೇಕು.
ಅಥಾಸ್ಯಾರಾಜಧಾನೀಂ ಚ ತರೇದನ್ಯೇನ ವಾಪದಮ್ |
ತದ್ಭಾವಭಾವೇ ದ್ರವ್ಯಾಣಿ ಜೀವನ್ ಪುನರುಪಾರ್ಜಯೇತ್ ॥6॥
ಅಥವಾ ಈ ಶತ್ರುರಾಜನಿಗೆ ರಾಜಧಾನಿಯಲ್ಲದ ಸ್ಥಳಗಳನ್ನು ಬಿಟ್ಟು ಕೊಡಬೇಕು. ಬೇರೆ ಯಾವುದೇ ಕ್ರಮದಿಂದಲಾದರೂ ಆಪತ್ತನ್ನು ದಾಟಬೇಕು. ತಾನು ರಾಜ ಎಂಬ ಭಾವದಿಂದ ಬದುಕಿದವನು ಸಂಪತ್ತನ್ನು ಪುನಃ ಸಂಪಾದಿಸಬಹುದು.
ಯಾಸ್ತು ಕೋಶಬಲತ್ಯಾಗಾಚ್ಛಕ್ಯಾಸ್ತರಿತುಮಾಪದಃ |
ಕಸ್ತತ್ರಾಧಿಕಮಾತ್ಮಾನಂ ಸಂತ್ಯಜೇದರ್ಥಧರ್ಮವಿತ್ ॥7॥
ಕೋಶ-ಸೈನ್ಯಗಳ ಪರಿತ್ಯಾಗದಿಂದ ಯಾವ ಆಪತ್ತುಗಳನ್ನು ದಾಟಬಹುದೋ ಆ ಆಪತ್ತುಗಳನ್ನು ದಾಟಲು ಕೋಶ-ಸೈನ್ಯಗಳಿಗಿಂತ ಅಧಿಕ ಮೌಲ್ಯದ ತನ್ನ ಶರೀರವನ್ನೇ, ಅರ್ಥ-ಧರ್ಮಗಳ ಅರಿವಿರುವ, ಯಾರು ತಾನೇ ತ್ಯಜಿಸುವನು?
ಅಪರಾಧಾಜ್ಜುಗುಪ್ಸೇತ ಕಃ ಸಂಪನ್ನಧನೋ ಧನಮ್ |
ನ ತ್ವೇವಾತ್ಮಾ ಪ್ರದಾತವ್ಯಃ ಶಕ್ಯೇ ಸತಿ ಕಥಂಚನ ॥8॥
ಸಮೃದ್ಧ ಧನವಂತನಾದ ಯಾರು ತಾನೇ ಅಪರಾಧವನ್ನು= ಶರೀರತ್ಯಾಗವನ್ನು ಮಾಡಿ ಧನವನ್ನು ರಕ್ಷಿಸಲು ಬಯಸುತ್ತಾನೆ? ಹೇಗಾದರೂ ಶರೀರವನ್ನು ರಕ್ಷಿಸಿಕೊಳ್ಳಲು ಅವಕಾಶವಿರುವಾಗ ಶರೀರವನ್ನು ತ್ಯಜಿಸಲೇಬಾರದು.
ಯುಧಿಷ್ಠಿರಃ
ಆಭ್ಯಂತರೇ ಪ್ರಕುಪಿತೇ ಬಾಹ್ಯೇ ಚೋಪನಿಪೀಡಿತೇ |
ಕ್ಷೀಣೇ ಕೋಶೇ ಸ್ರುತೇ ಮಂತ್ರೇ ಕಿಂ ಕಾರ್ಯಮವಶಿಷ್ಯತೇ ॥9॥
ಯುಧಿಷ್ಠಿರ ನಮ್ಮ ಜನರೇ ವಿರೋಧಿಗಳಾದಾಗ, ದುರ್ಗ-ರಾಷ್ಟ್ರ ಮೊದಲಾದವುಗಳು ಉಪದ್ರವಗಳಿಗೆ ಒಳಗಾದಾಗ, ಬೊಕ್ಕಸವು ಕ್ಷೀಣಿಸಿರುವಾಗ, ರಾಜ ರಹಸ್ಯಗಳು ಬಹಿರಂಗವಾದಾಗ ಏನು ಮಾಡಬೇಕು?
ಭೀಷ್ಮಃ
ಕ್ಷಿಪ್ರಂ ವಾ ಸಂಧಿಕಾಮಃ ಸ್ಯಾತ್ ಕ್ಷಿಪ್ರಂ ವಾ ತೀಕ್ಷ್ಣವಿಕ್ರಮಃ |
ಯದಾಪನಯನಂ ಕ್ಷಿಪ್ರಮೇತಾವತ್ ಸಾಂಪರಾಯಿಕಮ್ ॥10॥
ಭೀಷ್ಮ ಬೇಗನೆ ಸಂಧಿಗೆ ಮನಸ್ಸು ಮಾಡಬೇಕು ಅಥವಾ ಬೇಗನೇ ತೀಕ್ಷ್ಣ ಪರಾಕ್ರಮದಿಂದ ಗೆಲ್ಲಬೇಕು. ಇದರಿಂದ ಬೇಗನೆ ಶತ್ರುವಿನ ಉಚ್ಚಾಟನವಾಗುತ್ತದೆ. ಇದಷ್ಟು ಪರಲೋಕದಲ್ಲಿ ಹಿತಕರವಾದ ಕ್ರಮಗಳು.
ಅನುರಕ್ತೇನ ಪುಷ್ಟೇನ ಹೃಷ್ಟೇನ ಜಗತೀಪತೇ |
ಅಲ್ಪೇನಾಪಿ ಹಿ ಸೈನ್ಯೇನ ಮಹೀಂ ಜಯತಿ ಪಾರ್ಥಿವಃ ॥11॥
ರಾಜನೇ! ರಾಜನ ಮೇಲೆ ಅನುರಾಗವುಳ್ಳ, ಪುಷ್ಟರಾದ, ಸಂತುಷ್ಟರಾದ ಅಲ್ಪಸಂಖ್ಯೆಯ ಸೇನಾಬಲದಿಂದಲೇ ರಾಜನು ಭೂಮಂಡಲವನ್ನು ಗೆಲ್ಲಬಲ್ಲನು.
ಹತೋ ವಾ ದಿವಮಾರೋಹೇದ್ ವಿಜಯೀ ಕ್ಷಿತಿಮಾವಸೇತ್ |
ಯುದ್ಧೇ ತು ಸಂತ್ಯಜನ್ ಪ್ರಾಣಾನ್ ಶಕ್ರಸ್ಯೈತಿ ಸಲೋಕತಾಮ್ ॥12|
ಯುದ್ಧದಲ್ಲಿ ಹತನಾದರೆ ಸ್ವರ್ಗಕ್ಕೆ ಹೋಗುತ್ತಾನೆ; ಗೆದ್ದರೆ ಭೂಮಂಡಲದ ಒಡೆಯನಾಗುತ್ತಾನೆ. ಯುದ್ಧದಲ್ಲಿ ಪ್ರಾಣವನ್ನು ಕೊಟ್ಟವನು ಇಂದ್ರನ ಲೋಕವನ್ನು ಹೊಂದುತ್ತಾನೆ.
ಸರ್ವಲೋಕಾಗಮಂ ಕೃತ್ವಾ ಮೃದುತ್ವಂ ಗಂತುಮೇವ ಚ |
ವಿಶ್ವಾಸಾದ್ ವಿನಯಂ ಕುರ್ಯಾದ್ ಸಜಲಾದ್ವಾಪ್ಯುಪಾನಹಮ್ ॥13॥
ಶತ್ರುರಾಜನನ್ನು ಮೃದುವಾಗಿಸಲು ಎಲ್ಲ ಪ್ರಾಜ್ಞರಿಗೆ ಸಮ್ಮತವಾದ ಉಪಾಯಗಳನ್ನು ಮಾಡಿ, ನಂಬಿಕೆಯನ್ನು ಹುಟ್ಟಿಸಿ ವಿನಯದಿಂದ ನಡೆದುಕೊಳ್ಳಬೇಕು. ನೀರು, ಎಣ್ಣೆ ಮೊದಲಾದವುಗಳಿಂದ ಪಾದರಕ್ಷೆಯನ್ನು ಮೃದುವಾಗಿಸುವಂತೆ.

ಅಪವಿಕ್ರಮಿಷುಃ ಕ್ಷಿಪ್ರಂ ಯಥಾಕಾಮಂ ತು ಸಾಂತ್ವಯನ್ |
ವಿಲಂಘಯಿತ್ವಾ ಮಿತ್ರೇಣ ತತಃ ಸ್ವಯಮುಪಕ್ರಮೇತ್ ॥14॥
ಪಲಾಯನ ಮಾಡಲು ಬಯಸುವವನು ತನ್ನ ಸೈನಿಕರನ್ನು ಮತ್ತು ಶತ್ರುಪಕ್ಷದ ಸೇನಾಧಿಕಾರಿಗಳನ್ನೂ ಸಾಮೋಪಾಯದಿಂದ ಪ್ರಸನ್ನಗೊಳಿಸಿ ಪಲಾಯನವನ್ನು ಮಾಡಬೇಕು. ಅನಂತರ ಎಲ್ಲ ಅನುಕೂಲಗಳನ್ನು ಮಾಡಿಕೊಂಡು ತಾನೇ ಆಕ್ರಮಿಸಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಆಪದ್ಧರ್ಮಪರ್ವದಲ್ಲಿ
ಒಂದನೆಯ ಅಧ್ಯಾಯ ಮುಗಿಯಿತು.
* * * *

ಎರಡನೆಯ ಅಧ್ಯಾಯ

ಬ್ರಾಹ್ಮಣರ=ಬ್ರಹ್ಮನಿಷ್ಠರ ಮಹತ್ವ. ರಾಜನಿಗೆ ಇರಬೇಕಾದ ಮನೋಧರ್ಮ. ಧರ್ಮದ ಅರಿವು ದುರ್ಲಭ. ಧರ್ಮಾನುಷ್ಠಾನವನ್ನು ಮಾಡುತ್ತ, ಮಾಡುತ್ತ ಧರ್ಮದ ಸ್ವರೂಪವನ್ನು ತಿಳಿಯಬೇಕು.

ಯುಧಿಷ್ಠಿರಃ
ಹೀನೇ ಪರಮಕೇ ಧರ್ಮೇ ಸರ್ವಲೋಕಾತಿಲಂಘಿನಿ |
ಸರ್ವಸ್ಮಿನ್ ದಸ್ಯುಸಾದ್ಭೂತೇ ಪೃಥಿವ್ಯಾಮುಪಜೀವನೇ ॥1॥
ಕೇನಸ್ವಿತ್ ಬ್ರಾಹ್ಮಣೋ ಜೀವೇಜ್ಜಘನ್ಯೇ ಕಾಲ ಆಗತೇ |
ಅಸಂತ್ಯಜನ್ ಪುತ್ರಪೌತ್ರಾನನುಕ್ರೋಶಾತ್ ಪಿತಾಮಹ ॥2॥
ಯುಧಿಷ್ಠಿರ ಪಿತಾಮಹನೇ! ಬ್ರಹ್ಮನಿಷ್ಠರ, ಸಜ್ಜನರ ರಕ್ಷಣೆ ರಾಜನ ಪರಮಧರ್ಮ. ಈ ಪರಮಧರ್ಮದ ಪಾಲನೆಗೆ ಭಂಗವುಂಟಾದಾಗ, ಎಲ್ಲ ಜನರೂ ನಿಯಮಗಳ ಉಲ್ಲಂಘನೆಯನ್ನು ಮಾಡುತ್ತಿರುವಾಗ, ಭೂಮಿಯಲ್ಲಿರುವ ಜೀವನೋಪಾಯಗಳೆಲ್ಲವೂ ಲೂಟಿಕೋರರ ವಶವಾದಾಗ, ಧರ್ಮ-ನೀತಿಗಳು ಕುಸಿದು ಹೋದ ಕಾಲವು ಬಂದಾಗ, ದಯಾಲುಗಳು, ಬ್ರಹ್ಮನಿಷ್ಠರು ತಮ್ಮ ಮಕ್ಕಳು, ಮೊಮ್ಮಕ್ಕಳು ಮೊದಲಾದ ಪರಿವಾರವನ್ನು ಬಿಡದೆ ಹೇಗೆ ಬದುಕಬೇಕು?

ಭೀಷ್ಮಃ
ವಿಜ್ಞಾನಬಲಮಾಸ್ಥಾಯ ಜೀವಿತವ್ಯಂ ತಥಾಗತೇ |
ಸರ್ವಂ ಸಾಧ್ವರ್ಥಮೇವೇದಮಸಾಧ್ವರ್ಥಂ ನ ಕಿಂಚನ ॥3॥
ಭೀಷ್ಮ ಅಂತಹ ಕಾಲವು ಬಂದಾಗ ವಿದ್ಯೆಯ ಬಲವನ್ನು ಅವಲಂಬಿಸಿ ಜೀವನವನ್ನು ನಿರ್ವಹಿಸಬೇಕು. ಈ ಜಗತ್ತಿನಲ್ಲಿರುವ ಎಲ್ಲವೂ ಸಜ್ಜನರಿಗಾಗಿಯೇ. ಕೆಟ್ಟವರಿಗೆ ಏನೂ ಇಲ್ಲ.
ಅಸಾಧುಭ್ಯೋ ನಿರಾದಾಯ ಸಾಧುಭ್ಯೋ ಯಃ ಪ್ರಯಚ್ಛತಿ |
ಆತ್ಮಾನಂ ಸಂಕ್ರಮಂ ಕೃತ್ವಾ ಕೃತ್ಸ್ನಧರ್ಮವಿದೇವ ಸಃ ॥4॥
ಸರ್ವವ್ಯಾಪಿಯಾದ ಪರಮಾತ್ಮನನ್ನು ಚಿಂತಿಸುತ್ತಾ, ಸರ್ವರ ಪೋಷಣೆಯು ಸರ್ವವ್ಯಾಪಿಯಾದ ಹರಿಯ ಪೂಜೆಯೆಂದು ತಿಳಿದು, ದುಷ್ಟರಿಂದ ಸಂಪತ್ತನ್ನು ವಶಪಡಿಸಿಕೊಂಡು ಸಜ್ಜನರಿಗೆ ಕೊಡಬೇಕು. ಇದೇ ಎಲ್ಲ ಧರ್ಮಗಳ ಜ್ಞಾನದ ಫಲ.
ಆರೋಪೇಣಾತ್ಮನಾ ರಾಜನ್ ರಾಜ್ಯೇ ಸ್ಥಿತಿಮಕೋಪಯನ್ |
ಅದತ್ತಮಪ್ಯಾದದೀತ ಭ್ರಾತೃವಿತ್ತಂ ಮಮೇತಿ ವಾ ॥5॥
ಸಾಧಕರು ಸರ್ವಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸುತ್ತಾರೆ. ರಾಜನು ಈ ಸಮರ್ಪಣ ಭಾವದಿಂದ, ರಾಜ್ಯದ ಸ್ಥಿತಿಯು ಹದಗೆಡದಂತೆ, ಧನಿಕರು ತಾವಾಗಿಯೇ ಕೊಡದಿದ್ದರೂ ತನ್ನ ಸೋದರರ ಹಣ ಎಂಬಂತೆ ಅವರ ಧನವನ್ನು ಪಡೆದುಕೊಳ್ಳಬೇಕು.
ವಿಜ್ಞಾನಬಲಪೂತೋ ಯೋ ವರ್ತತೇ ನಿಂದಿತೇಷ್ವಪಿ |
ವೃತ್ತವಿಜ್ಞಾನವಾನ್ ಧೀರಃ ಕಸ್ತಂ ಕಿಂ ವಕ್ತುಮರ್ಹತಿ ॥6॥
(ವಿವೇಚನೆಯನ್ನು ಪ್ರಚೋದಿಸುವ ಜ್ಞಾನವು ಬಲ. ಈ ಬಲವು ನಿರ್ಧಾರಗಳನ್ನು ಶುದ್ಧವಾಗಿಸುತ್ತದೆ. ಇಂತಹ ಜ್ಞಾನದ ಬಲದಿಂದ ನಿರ್ಧಾರಗಳನ್ನು ಮಾಡುವವನು ವಿಜ್ಞಾನಬಲಪೂತ). ವಿಜ್ಞಾನ ಬಲಪೂತನಾದ ರಾಜನು ನಿಂದಿತ (ನೀತಿ ಸಮ್ಮತವಲ್ಲದ) ಕೆಲಸಗಳನ್ನು ಮಾಡಿದರೂ, ಸದಾಚಾರಗಳ ಅರಿವು ಇರುವ ಯಾವ ವಿವೇಕಿಯು (ಧೀರಃ), ಆ ರಾಜನನ್ನು ನಿಂದಿಸಿಯಾನು?
ಯೇಷಾಂ ಬಹುಕೃತಾ ಬುದ್ಧಿರ್ನೈಷಾಮನ್ಯಾಭಿರೋಚತೇ |
ತೇಜಸಾಭಿಪ್ರವರ್ಧಂತೇ ಬಲವಂತೋ ಯುಧಿಷ್ಠಿರ ॥7॥
ಗುಣಪೂರ್ಣನಾದ (ಆದ್ದರಿಂದಲೇ `ಬಹು'ಆದ) ಹರಿಯಲ್ಲೇ (ಹರಿಯ ಆರಾಧನೆಯಲ್ಲೇ) ಯಾರಿಗೆ ಮನಸ್ಸು ಇದೆಯೋ ಅವರಿಗೆ ಗುಣ ವಿರೋಧಿಯಾದ ಕೆಲಸಗಳು ರುಚಿಸುವುದಿಲ್ಲ. ಯುಧಿಷ್ಠಿರ! ಬಲಶಾಲಿಗಳು (ಜ್ಞಾನದ ಬಲವಿರುವವರು) ಜ್ಞಾನದ ತೇಜಸ್ಸಿನಿಂದಲೇ ಬೆಳೆಯುತ್ತಾರೆ.
ಯದೇವ ಪ್ರಕೃತಂ ಶಾಸ್ತ್ರ ಅವಿಶೇಷೇಣ ವರ್ತತೇ |
ತದೇವ ಮಧ್ಯಾಃ ಸೇವಂತೇ ಮೇಧಾವೀ ಚಾಪ್ಯಥೋತ್ತರಮ್ ॥8॥
ಶಾಸ್ತ್ರದಲ್ಲಿ (ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ಮೊದಲಾದ ಶಾಸ್ತ್ರ- ವಚನಗಳಲ್ಲಿ) ಯಾವುದು ಸಾಮಾನ್ಯವಾಗಿ (ಮೇಲುನೋಟಕ್ಕೆ) ಗೋಚರಿಸುವುದೋ ಅದನ್ನೇ ಮಧ್ಯಮ ಮಟ್ಟದ ಸಾಧಕರು ಸಾಧಿಸುತ್ತಾರೆ. ಮೇಧಾವಿಗಳು (ಶಾಸ್ತ್ರ ಮಾರ್ಗದಲ್ಲಿ ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿ ಶ್ರುತಿವಚನಗಳು ಅಶಾಶ್ವತ ಫಲಗಳನ್ನು ಹೇಳುತ್ತವೆ ಎಂದು ತಿಳಿದವರು) ಅದಕ್ಕಿಂತ ಉತ್ಕೃಷ್ಟವಾದ ಮೋಕ್ಷವನ್ನು ಸಾಧಿಸಲು ಪ್ರವೃತ್ತಿಶೀಲರಾಗುತ್ತಾರೆ.

ಋತ್ವಿಕ್ಪುರೋಹಿತಾಚಾರ್ಯಾನ್ ಸತ್ಕೃತ್ಯೈರಭಿಪೂಜಿತಾನ್ |
ನ ಬ್ರಾಹ್ಮಣಾನ್ಯಾತಯೇತ ದೋಷಾನ್ ಪ್ರಾಪ್ನೋತಿ ಯಾತಯನ್ ॥9॥
ತಮ್ಮ ಸತ್ಕರ್ಮಗಳಿಂದ ಮಾನ್ಯರಾದ ಋತ್ವಿಜರು, ಪುರೋಹಿತರು, ಆಚಾರ್ಯರೂ ಆದ ಬ್ರಹ್ಮನಿಷ್ಠರಿಗೆ ತೊಂದರೆಯನ್ನುಂಟು ಮಾಡಬಾರದು. ತೊಂದರೆಯನ್ನುಂಟು ಮಾಡುವವನು ಅನಿಷ್ಟ ಪರಿಣಾಮಗಳನ್ನು ಹೊಂದುತ್ತಾನೆ.
ಏತತ್ ಪ್ರಮಾಣಂ ಲೋಕಸ್ಯ ಚಕ್ಷುರೇತತ್ ಸನಾತನಮ್ |
ತತ್ಪ್ರಮಾಣೇನಾವಗಾಹೇತ ತೇನ ತತ್ ಸಾಧ್ವಸಾಧು ವಾ ॥10॥
ಈ ಬ್ರಹ್ಮನಿಷ್ಠಕುಲವು ಜನಗಳಿಗೆ ಮಾರ್ಗದರ್ಶಕ. ಇದು ಸನಾತನ ಕಣ್ಣು. ಆದ್ದರಿಂದ ಈ ಮಾರ್ಗದರ್ಶಕರ ಸಹಾಯದಿಂದಲೇ ಸರಿ ಯಾವುದು, ತಪ್ಪು ಯಾವುದು ಎಂದು ನಿರ್ಣಯಿಸಬೇಕು.
ಬಹೂನಿ ಗ್ರಾಮವಾಸ್ತವ್ಯಾ ರೋಷಾದ್ ಬ್ರೂಯುಃ ಪರಸ್ಪರಮ್ |
ನ ತೇಷಾಂ ವಚನಾದ್ ರಾಜಾ ಸತ್ಕುರ್ಯಾದ್ ಯಾತಯೇತ ವಾ ॥
ಗ್ರಾಮ ವಾಸಿಗಳಾದ ಜನರು ಪರಸ್ಪರ ರೋಷದಿಂದ ಬಹುವಿಧವಾಗಿ ದೂರುವರು. ಅವರ ಮಾತುಗಳನ್ನು ಆಧರಿಸಿ ರಾಜನು ಯಾರನ್ನೂ ಸತ್ಕರಿಸಬಾರದು, ಯಾರನ್ನೂ ದಂಡಿಸಬಾರದು.
ನ ವಾಚ್ಯಃ ಪರಿವಾದೋ ವೈ ನ ಶ್ರೋತವ್ಯಃ ಕಥಂಚನ |
ಕರ್ಣಾವೇವ ಪಿಧಾತವ್ಯೌ ಪ್ರಸ್ಥೇಯಂ ವಾ ತತೋಽನ್ಯತಃ ॥12॥
ನಿಂದನೆಯನ್ನು ಮಾಡಬಾರದು; ನಿಂದನೆಯನ್ನು ಕೇಳಬಾರದು; ಕಿವಿಗಳನ್ನು ಮುಚ್ಚಿಕೊಳ್ಳಬೇಕು; ಅಥವಾ ಅಲ್ಲಿಂದ ಹೊರಟುಹೋಗಬೇಕು.
ನ ವೈ ಸತಾಂ ವೃತ್ತಮೇತತ್ ಕರಿಷ್ಯದ್ ಯೋಪಿ ಪೈಶುನಮ್ |
ಗುಣಾನಾಮೇವ ವಕ್ತಾರಃ ಸಂತಃ ಸತ್ಸು ಯುಧಿಷ್ಠಿರ ॥13॥
ಚಾಡಿ ಹೇಳುವುದು ಸಜ್ಜನರ ನಡವಳಿಕೆ ಅಲ್ಲ. ಯುಧಿಷ್ಠಿರ! ಸಜ್ಜನರು ಸಜ್ಜನರ ಗುಣಗಳನ್ನೇ ಹೇಳುತ್ತಾರೆ.
ಯಥಾ ಸುಮಧುರೌ ದಮ್ಯೌ ಸುಧಾಂ ವಾ ಸಾಧುವಾಹಿನೀಮ್ |
ಧುರಮುದ್ಯಮ್ಯ ವಹತಸ್ತಥಾ ವರ್ತೇತ ವೈ ನೃಪಃ ॥14॥
ಲಕ್ಷಣಸಂಪನ್ನವಾಗಿರುವ, ನಿಯಂತ್ರಣಕ್ಕೆ ಒಳಪಡುವ ಎರಡು ಎತ್ತುಗಳು ಅಮೃತದಂತಿರುವ ಹರಿಯುತ್ತಿರುವ ನೀರನ್ನು ನೋಡಿದರೂ (ಅದರ ಕಡೆಗೆ ಹೋಗುವ) ಪ್ರವೃತ್ತಿಯನ್ನು ನಿಯಂತ್ರಿಸಿಕೊಂಡು ಭಾರವನ್ನು ಹೊರತ್ತವೆಯೋ ಹಾಗೆ ರಾಜನು ನಡೆದುಕೊಳ್ಳಬೇಕು.
ಯಥಾ ಯಥಾಸ್ಯ ವಹತಃ ಸಹಾಯಾಃ ಸ್ಯುಸ್ತಥಾಪರೇ |
ಆಚಾರಮೇವ ಮನ್ಯಂತೇ ಗರೀಯೋ ಧರ್ಮಲಕ್ಷಣಮ್ ॥15॥
ರಾಜ್ಯಭಾರವನ್ನು ಹೊತ್ತ ತನಗೆ ಇತರರು ಸಹಾಯಕರಾಗುವಂತೆ ರಾಜನು ನಡೆದುಕೊಳ್ಳಬೇಕು. ಈ ನಡವಳಿಕೆಯೇ ಶ್ರೇಷ್ಠಧರ್ಮ ಎಂದು ಪ್ರಾಜ್ಞರು ಭಾವಿಸುತ್ತಾರೆ.
ಅಪರೇ ನೈವಮಿಚ್ಛಂತಿ ಯೇ ಶಂಖಲಿಖಿತಪ್ರಿಯಾಃ |
ಅರ್ಥೇ ಕ್ಷೀಣೇಽಥವಾ ಲುಬ್ಧಾಃ ತೇ ಬ್ರೂಯುರ್ವಾಕ್ಯಮೀದೃಶಮ್ ॥
ಶಂಖ ಮತ್ತು ಲಿಖಿತರನ್ನು ಮೆಚ್ಚುವವರು ಇದನ್ನು (9ನೆಯ ಮತ್ತು 15ನೆಯ ಶ್ಲೋಕಗಳಲ್ಲಿರುವ ಅಭಿಪ್ರಾಯವನ್ನು) ಒಪ್ಪುವುದಿಲ್ಲ. ಸಂಪತ್ತು ಕಡಿಮೆಯಾದಾಗ ಅಥವಾ ಲೋಭದಿಂದ ಹೀಗೆ (9ನೆಯ ಮತ್ತು 15ನೆಯ ಶ್ಲೋಕಗಳಲ್ಲಿ ಹೇಳಿದಂತೆ) ಹೇಳುತ್ತಾರೆ (ಎಂದು ಶಂಖ-ಲಿಖಿತರ ಅನುಯಾಯಿಗಳ ಅಭಿಪ್ರಾಯ).
ಆರ್ಷಮಪ್ಯತ್ರ ಪಶ್ಯಂತಿ ವಿಕರ್ಮಸ್ಥಸ್ಯ ಪಾತನಮ್ |
ನ ಚಾರ್ಷಾತ್ ಸದೃಶಂ ಕಿಂಚಿತ್ ಪ್ರಮಾಣಂ ವಿದ್ಯತೇ ಕ್ವಚಿತ್ ॥17॥
ಶಾಸ್ತ್ರವಿರುದ್ಧ ಕೆಲಸಗಳನ್ನು ಮಾಡುವವನನ್ನು ದಂಡನೆಗೆ ಒಳಪಡಿಸಬೇಕು. ಇದು ಋಷಿಗಳಿಗೆ ಸಮ್ಮತ. ಯಾವುದೇ ವಿಷಯದಲ್ಲಿ ಋಷಿಗಳು ನೋಡಿರುವ ವೇದಕ್ಕೆ ಸದೃಶವಾದ ಬೇರೆ ಯಾವ ಪ್ರಮಾಣವೂ ಇಲ್ಲ.(1)
ದೇವಾ ಅಪಿ ವಿಕರ್ಮಸ್ಥಂ ಯಾತಯಂತಿ ನರಾಧಮಮ್ |
ವ್ಯಾಜೇನ ವಿಂದನ್ವಿತ್ತಂ ಹಿ ಧರ್ಮಾತ್ತು ಪರಿಹೀಯತೇ ॥18॥
ವಿರುದ್ಧ ಕರ್ಮಗಳನ್ನು ಮಾಡಿದ ನರಾಧಮನನ್ನು ದೇವತೆಗಳು ಕೆಳಗೆ ಬೀಳಿಸುತ್ತಾರೆ. ಆಪತ್ತಿನಲ್ಲಿ ಇಲ್ಲದಿದ್ದರೂ ಆಪತ್ತಿನ ನೆಪದಿಂದ ಧನಸಂಗ್ರಹವನ್ನು ಮಾಡುವವನು ಧರ್ಮಭ್ರಷ್ಟ.
ಸರ್ವತಃ ಸತ್ಕೃತಃ ಸದ್ಭಿರ್ಭೂತಿಪ್ರಭವಕಾರಣೈಃ |
ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತಸ್ಯ ವಸ್ಯತೇ ॥19॥
ಶ್ರೇಯಸ್ಸುಗಳ ಪ್ರಾಪ್ತಿಗೆ ಕಾರಣರಾದ ಸಜ್ಜನರಿಂದ ಎಲ್ಲ ರೀತಿಗಳಿಂದಲೂ ಯಾವ ಆಚರಣೆಗಳು ಆದರಿಸಲ್ಪಟ್ಟಿವೆಯೋ, ಅಂತರಾತ್ಮಕ್ಕೆ ಒಪ್ಪಿಗೆಯಾಗಿವೆಯೋ ಆ ಆಚರಣೆಗಳು ಧರ್ಮ. ಎಲ್ಲರೂ ಆ ಧರ್ಮಕ್ಕಾಗಿ ಪ್ರವೃತ್ತಿಶೀಲರಾಗುತ್ತಾರೆ.
ಯಶ್ಚತುರ್ಗುಣಸಂಪನ್ನೋ ಧರ್ಮವೇದಸ್ಯ ಮರ್ಮವಿತ್ |
ಹರೇರಿವ ಹಿ ಧರ್ಮಸ್ಯ ಪದಂ ದುಃಖಂ ಗವೇಷಿತುಮ್ ॥20॥
ಯಾರು ಯಜನ-ಯಾಜನ-ಅಧ್ಯಯನ-ಅಧ್ಯಾಪನ - ಈ ನಾಲ್ಕು ಗುಣಗಳನ್ನು ತನ್ನಲ್ಲಿ ಸಾಧಿಸಿಕೊಂಡಿರುವನೋ ಅವನಿಗೆ ಧರ್ಮಶಾಸ್ತ್ರದ ಮರ್ಮವು ತಿಳಿದಿರುತ್ತದೆ. ಹರಿಯ ಸ್ವರೂಪವನ್ನು ತಿಳಿಯುವುದು ಬಹಳ ಕಷ್ಟ. ಅಂತೆಯೇ ಧರ್ಮದ ಸ್ವರೂಪವನ್ನು ತಿಳಿಯುವುದು ಬಹಳ ಕಷ್ಟ.(2)

ಟಿಪ್ಪಣಿ (1) 16ನೇ ಶ್ಲೋಕದ `ತೇ ಬ್ರೂಯುರ್ವಾಕ್ಯಮೀದೃಶಮ್' - ಈ ವಾಕ್ಯಕ್ಕೆ ಲಕ್ಷ್ಮಾಲಂಕಾರದಲ್ಲಿ ವ್ಯಾಖ್ಯಾನವಿದೆ. ಈ ವ್ಯಾಖ್ಯಾನಕ್ಕೆ ಹೊಂದುವ ಪೂರ್ವಶ್ಲೋಕವು ಈಗ ಸಿಗುತ್ತಿರುವ ಮಹಾಭಾರತ ಪುಸ್ತಕಗಳಲ್ಲಿ ಇಲ್ಲ. 17ನೇ ಶ್ಲೋಕದ ಲಕ್ಷ್ಮಾಲಂಕಾರ ವ್ಯಾಖ್ಯಾನವೂ ಉಪಲಬ್ಧ ಶ್ಲೋಕಗಳಿಗೆ ಹೊಂದುವುದಿಲ್ಲ.
(2) ಈ ಶ್ಲೋಕದ ಕೆಳಗೆ ಮುದ್ರಿತವಾಗಿರುವ ಲಕ್ಷ್ಮಾಲಂಕಾರ ವಾಕ್ಯದ ಅಭಿಪ್ರಾಯವು ಅಸ್ಪಷ್ಟ.
ಯಥಾ ಮೃಗಸ್ಯ ವಿದ್ಧಸ್ಯ ಮೃಗವ್ಯಾಧಃ ಪದಂ ನಯೇತ್ |
ಕಕ್ಷೇ ರುಧಿರಪಾತೇನ ತಥಾ ಧರ್ಮಪದಂ ನಯೇತ್ ॥21॥
ವ್ಯಾಧನು ತನ್ನಿಂದ ಹೊಡೆಯಲ್ಪಟ್ಟ ಮೃಗದ ದಾರಿಯನ್ನು ಕಾಡಿನಲ್ಲಿ ಬಿದ್ದಿರುವ ರಕ್ತದಿಂದ ತಿಳಿಯುತ್ತಾನೆ. ಹಾಗೆಯೇ ಧರ್ಮಾನುಷ್ಠಾನವನ್ನು ಮಾಡುತ್ತಾ ಮಾಡುತ್ತಾ ಧರ್ಮದ ಮಾರ್ಗವನ್ನು ತಿಳಿಯಬೇಕು.
ಏವಂ ಸದ್ಭಿರ್ವಿನೀತೇನ ಪಥಾ ಗಂತವ್ಯಮಚ್ಯುತ |
ರಾಜರ್ಷೀಣಾಂ ವೃತ್ತಮೇತದವಗಚ್ಛ ಯುಧಿಷ್ಠಿರ ॥22॥
ಚ್ಯುತಿರಹಿತನಾದ ಯುಧಿಷ್ಠಿರ! ಹೀಗೆ (ಈ ಅಧ್ಯಾಯದಲ್ಲಿ ವಿವರಿಸಿದಂತೆ) ಸಜ್ಜನರು ತಿಳಿಸಿದ ದಾರಿಯಲ್ಲಿ ಹೋಗಬೇಕು (ಪೂರ್ವ) ರಾಜರ್ಷಿಗಳ ಈ ನಡವಳಿಕೆಯನ್ನು ನೀನು ತಿಳಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಆಪದ್ಧರ್ಮಪರ್ವದಲ್ಲಿ
ಎರಡನೆಯ ಅಧ್ಯಾಯವು ಮುಗಿಯಿತು.
* * * *
ಮೂರನೆಯ ಅಧ್ಯಾಯ
ರಾಜನು ಕೋಶವನ್ನು ಬೆಳೆಸುವ ವಿಧಾನ. ಧನವೃದ್ಧಿಯಿಲ್ಲದ ರಾಜನು ದುರ್ಬಲ. ದಸ್ಯುಗಳ ಸಹವಾಸವನ್ನು ಮಾಡಬಾರದು. ಸಜ್ಜನದಸ್ಯುಗಳ ರೀತಿ.
ಭೀಷ್ಮಃ
ಸ್ವರಾಷ್ಟ್ರಾತ್ ಪರರಾಷ್ಟ್ರಾಚ್ಚ ಕೋಶಂ ಸಂಜನಯೇನ್ನೃಪಃ |
ಕೋಶಾದ್ಧಿ ಧರ್ಮಃ ಕೌಂತೇಯ ರಾಜ್ಯಮೂಲಂ ಪ್ರವರ್ತತೇ ॥1॥
ಭೀಷ್ಮ ರಾಜನು ತನ್ನ ರಾಷ್ಟ್ರದಿಂದ ಮತ್ತು ಪರರಾಷ್ಟ್ರಗಳಿಂದ ತನ್ನ ಬೊಕ್ಕಸವನ್ನು ಬೆಳೆಸಬೇಕು. ಕುಂತೀಸುತ!
ರಾಜ್ಯನಿಧಿಯಿಂದಲೇ ಧರ್ಮ ಮತ್ತು ರಾಜ್ಯದ ಬೇರುಗಳು ಸುಸ್ಥಿತಿಯಲ್ಲಿ ಇರುತ್ತವೆ.
ತಸ್ಮಾತ್ ಸಂಜನಯೇತ್ ಕೋಶಂ ಸಂಹೃತ್ಯ ಪರಿಪಾಲಯೇತ್ |
ಪರಿಪಾಲ್ಯಾನುಗೃಹ್ಣೀಯಾದೇಷ ಧರ್ಮಃ ಸನಾತನಃ ॥2॥
ಆದ್ದರಿಂದ ಕೋಶವನ್ನು ಬೆಳೆಸಬೇಕು. ಸಂಗ್ರಹಿಸಿದ ಧನವನ್ನು ರಕ್ಷಿಸಬೇಕು. ರಕ್ಷಿಸಿ ಅನುಕೂಲವಾಗುವಂತೆ ಉಪಯೋಗಿಸಬೇಕು. ಇದು ಸನಾತನ ಧರ್ಮ (ಪೌಲ್ಯ).
ನ ಕೋಶಃ ಶುದ್ಧಶೌಚೇನ ನ ನೃಶಂಸೇನ ಜಾಯತೇ |
ಪದಂ ಮಧ್ಯಮಮಾಸ್ಥಾಯ ಕೋಶಸಂಗ್ರಹಣಂ ಚರೇತ್ ॥3॥
ಅತಿಶುದ್ಧವಾದ ನಡವಳಿಕೆಗಳಿಂದ ಕೋಶವು ಬೆಳೆಯುವುದಿಲ್ಲ. ಕ್ರೂರ ನಡವಳಿಕೆಗಳಿಂದಲೂ ಬೆಳೆಯುವುದಿಲ್ಲ. ಮಧ್ಯಮಾರ್ಗವನ್ನು ಅವಲಂಬಿಸಿ ಕೋಶ- ಸಂಗ್ರಹವನ್ನು ಮಾಡಬೇಕು.
ಅಬಲಸ್ಯ ಕುತಃ ಕೋಶೋ ಹ್ಯಕೋಶಸ್ಯ ಕುತೋ ಬಲಮ್ |
ಅಬಲಸ್ಯ ಕುತೋ ರಾಜ್ಯಮರಾಜ್ಞಃ ಶ್ರೀಃ ಕುತೋ ಭವೇತ್ ॥4॥
ಬಲಹೀನನಿಗೆ ಕೋಶವು (ಧನವೃದ್ಧಿಯು) ಹೇಗೆ ತಾನೇ ಆದೀತು? ಕೋಶಹೀನನಿಗೆ ಬಲವು ಹೇಗೆ ತಾನೇ ಬಂದೀತು? ಬಲಹೀನನಿಗೆ ರಾಜ ಪದವಿಯು ಹೇಗೆ ಲಭಿಸೀತು? ರಾಜನಲ್ಲದವನಿಗೆ ಸಂಪತ್ತು ಹೇಗೆ ತಾನೆ ಒಲಿದೀತು?
ಉಚ್ಚೈರ್ವೃತ್ತೇಃ ಶ್ರಿಯೋ ಹಾನಿರ್ಯಥೈವ ಮರಣಂ ತಥಾ |
ತಸ್ಮಾತ್ ಕೋಶಂ ಬಲಂ ಮಿತ್ರಾಣ್ಯಥ ರಾಜಾ ವಿವರ್ಧಯೇತ್ ॥5॥
ಉನ್ನತ ಪದವಿಯಲ್ಲಿ ಇದ್ದವನಿಗೆ ಅಥವಾ ಶ್ರೀಮಂತಿಕೆಯ ಜೀವನವನ್ನು ಮಾಡಿದವನಿಗೆ ಸಂಪತ್ತಿನ ನಾಶವು ಮರಣಕ್ಕೆ ಸಮಾನ. ಆದ್ದರಿಂದ ರಾಜನು, ಬೊಕ್ಕಸವನ್ನು, ಸೇನಾಬಲವನ್ನು, ಪ್ರಜಾಬಲವನ್ನು ಮತ್ತು ಮಿತ್ರರನ್ನು ಬೆಳೆಸಬೇಕು.
ಹೀನಕೋಶಂ ಹಿ ರಾಜಾನಮವಜಾನಂತಿ ಮಾನವಾಃ |
ನ ಚಾಸ್ಯಾಲ್ಪೇನ ತುಷ್ಯಂತಿ ಕಾರ್ಯಮಭ್ಯುತ್ಸಹಂತಿ ಚ ॥6॥
ಖಾಲಿ ಬೊಕ್ಕಸದ ರಾಜನ ಬಗ್ಗೆ ಜನರು ಅನಾದರದಿಂದ ವರ್ತಿಸುತ್ತಾರೆ. ಅವನು ಕೊಡುವ ಅಲ್ಪವೇತನ- ಅನುದಾನಗಳಿಂದ ತುಷ್ಟರಾಗುವುದಿಲ್ಲ. ಅವನ ಕೆಲಸಗಳನ್ನು ಮಾಡಲು ಉತ್ಸಾಹವನ್ನು ತೋರುವುದಿಲ್ಲ.
ಶ್ರಿಯೋ ಹಿ ಕಾರಣಾದ್ ರಾಜಾ ಸತ್ಕ್ರಿಯಾಂ ಲಭತೇ ಪರಾಮ್ |
ಸಾಸ್ಯ ಗೂಹತಿ ಪಾಪಾನಿ ವಾಸೋ ಗುಹ್ಯಮಿವ ಸ್ತ್ರಿಯಾಃ ॥7॥
ರಾಜನು ವಿಪುಲ ಐಶ್ವರ್ಯವನ್ನು ಹೊಂದಿದ್ದರೆ ಮಾತ್ರ ದೊಡ್ಡ ಗೌರವ- ಆದರಗಳನ್ನು ಪಡೆಯುತ್ತಾನೆ. ಐಶ್ವರ್ಯವು ಇವನ ಪಾಪಕಾರ್ಯಗಳನ್ನು ಮುಚ್ಚುತ್ತದೆ. ವಸ್ತ್ರವು ಗುಪ್ತಾಂಗಗಳನ್ನು ಮುಚ್ಚುವಂತೆ.
ಋದ್ಧಿಮಸ್ಯಾನುವರ್ತಂತೇ ಪುರಾ ವಿಪ್ರಕೃತಾ ಜನಾಃ |

ಶಾಲಾವೃಕಾ ಇವಾಜಸ್ರಂ ಜಿಘಾಂಸೂನಿವ ವಿಂದತಿ |
ಈದೃಶಸ್ಯ ಕುತೋ ರಾಜ್ಞಃ ಸುಖಂ ಭರತಸತ್ತಮ ॥8॥
ಹಿಂದೆ (ರಾಜನಿಂದ) ಹಾನಿಗೆ ಅಥವಾ ಅಪಕಾರಕ್ಕೆ ಒಳಗಾಗಿದ್ದ ಜನರು ರಾಜನ ಸಂಪತ್ತನ್ನು ನೋಡಿ ಅವನನ್ನು ಅನುಸರಿಸುತ್ತಾರೆ. ನರಿಯು ಯಾವಾಗಲೂ ತನ್ನನ್ನು ಕೊಲ್ಲಲು ಬಯಸಿರುವ ವ್ಯಕ್ತಿಯನ್ನು (ಅವನನ್ನು ಕಪಟದಿಂದ ಕೊಲ್ಲಲು) ಆಶ್ರಯಿಸುತ್ತದೆ. ಭರತಕುಲಶ್ರೇಷ್ಠನೇ! ಇಂತಹ ರಾಜನಿಗೆ ಸುಖ ಎಲ್ಲಿಂದ?
ಉದ್ಯಚ್ಛೇದೇವ ನ ಗ್ಲಾಯೇದುದ್ಯಮೋ ಹ್ಯೇವ ಪೌರುಷಮ್ |
ಅಪ್ಯಪರ್ವಣಿ ಭಜ್ಯೇತ ನ ನಮೇತೇಹ ಕಸ್ಯಚಿತ್ ॥9॥
ವಿರೋಧಿಗಳ ಮೇಲೆ ಆಕ್ರಮಣವನ್ನೇ ಮಾಡಬೇಕು (ಕುಗ್ಗಬಾರದು). ಆಕ್ರಮಣಶೀಲತೆಯೇ ಪೌರುಷ. ಒಣಗಿದ ಕಾಷ್ಠವು ಗಿಣ್ಣು ಇಲ್ಲದ ಕಡೆಯೂ ಮುರಿದು ಹೋಗುತ್ತದೆ, ಬಗ್ಗುವುದಿಲ್ಲ. ಅಂತೆಯೇ ಯಾರಿಗೂ ಬಗ್ಗಬಾರದು.
ಅಪ್ಯರಣ್ಯಂ ಸಮಾಶ್ರಿತ್ಯ ಚರೇದ್ ಮೃಗಗಣೈಃ ಸಹ |
ನ ತ್ವೇವೋದ್ಧತಮರ್ಯಾದೈರ್ದಸ್ಯುಭಿಃ ಸಹಿತಶ್ಚರೇತ್ |
ದಸ್ಯೂನಾಂ ಸುಲಭಾ ಸೇನಾ ರೌದ್ರಕರ್ಮಸು ಭಾರತ ॥10॥
ಅರಣ್ಯಕ್ಕೆ ಹೋಗಿ ಪ್ರಾಣಿಗಳ ಜೊತೆ ಸಂಚರಿಸಬಹುದು. ನಿಯಮ-ರೀತಿ- ನೀತಿಗಳನ್ನು ಮೀರಿದ ದಸ್ಯುಗಳ (ದಸ್ಯುಗಳಂತಹ ಮಂತ್ರಿಗಳ) ಜೊತೆ ವ್ಯವಹರಿಸಬಾರದು. ದಸ್ಯುಗಳಿಗೆ (ದಸ್ಯುಗಳಂತಹ ಮಂತ್ರಿಗಳಿಗೆ) ಭಯಂಕರ ಕೆಲಸಗಳನ್ನು ಮಾಡಲು ಸೇನೆಯು ಸುಲಭವಾಗಿ ಲಭಿಸುತ್ತದೆ. ಅಥವಾ ರೌದ್ರ ಕರ್ಮಗಳನ್ನು ಮಾಡಲು ದಸ್ಯುಗಳ ಸೇನೆಯು ಸುಲಭವಾಗಿ ಸಿಗುತ್ತದೆ.
ಏಕಾಂತೇನ ಹ್ಯಮರ್ಯಾದಾತ್ ಸರ್ವೋಽಪ್ಯುದ್ವಿಜತೇ ಜನಃ |
ದಸ್ಯವೋಽಪ್ಯುಪಶಂಕಂತೇ ನಿರನುಕ್ರೋಶಕಾರಿಣಃ ॥11॥
ನಿಯಮ, ರೀತಿ-ನೀತಿಗಳನ್ನು ಸಂಪೂರ್ಣವಾಗಿ ಮೀರಿದವರನ್ನು ಕಂಡರೆ ಎಲ್ಲರೂ ಹೆದರುತ್ತಾರೆ. ನಿರ್ದಯವಾಗಿ ವರ್ತಿಸುವ ದಸ್ಯುಗಳೂ ಇವರಿಗೆ ಹೆದರುತ್ತಾರೆ.
ಸ್ಥಾಪಯೇದೇವ ಮರ್ಯಾದಾಂ ಜನಚಿತ್ತಪ್ರಸಾದಿನೀಮ್ |
ಅಲ್ಪಾಪ್ಯಥೇಹ ಮರ್ಯಾದಾ ಲೋಕೇ ಭವತಿ ಪೂಜಿತಾ ॥12॥
ಜನಗಳ ಮನಸ್ಸಿಗೆ ಪ್ರಸನ್ನತೆಯನ್ನುಂಟು ಮಾಡುವ ವ್ಯವಸ್ಥೆಯನ್ನು (ಇತಿ- ಮಿತಿಗಳನ್ನು) ಸ್ಥಾಪಿಸಲೇಬೇಕು. ಸ್ವಲ್ಪ ಕಟ್ಟುಪಾಡು ಕೂಡ ಲೋಕದಲ್ಲಿ ಮಾನ್ಯವಾಗುತ್ತದೆ.
ನಾಯಂ ಲೋಕೋಽಸ್ತಿ ನ ಪರ ಇತಿ ವ್ಯವಸಿತೋ ಜನಃ |
ನಾಲಂ ಗಂತುಂ ಚ ವಿಶ್ವಾಸಂ ನಾಸ್ತಿಕೇ ಭಯಶಂಕಿತೈಃ ॥13॥
ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ ಎಂದು ನಿಶ್ಚಯಿಸಿರುವ ಜನರೂ ಇದ್ದಾರೆ. ನಾಸ್ತಿಕ್ಯದ ವಿಷಯದಲ್ಲಿ ಭಯ ಮತ್ತು ಸಂಶಯಗಳನ್ನು ಹೊಂದಿದವರು ನಾಸ್ತಿಕಜನರ ಬಗ್ಗೆ ವಿಶ್ವಾಸವನ್ನು ತಾಳುವುದು ಯುಕ್ತವಲ್ಲ.
ಯಥಾ ಸದ್ಭಿಃ ಪರಾದಾನಮಹಿಂಸಾ ದಸ್ಯುಭಿಸ್ತಥಾ |
ಅನುರಜ್ಯಂತಿ ಭೂತಾನಿ ಸಮರ್ಯಾದೇಷು ದಸ್ಯುಷು ॥14॥
(1) ಸಜ್ಜನ ದಸ್ಯುಗಳು ಪರವಿತ್ತಾಪಹಾರವನ್ನು ಮಾಡುತ್ತಾರೆ; ಅದರಲ್ಲಿ ಹಿಂಸೆಯು ಇರುವುದಿಲ್ಲ. (2) ಸದ್ಗುಣವಂತರಾದ, ಹಿಂಸೆ ಮಾಡದ ದಸ್ಯುಗಳಿಂದ ಪರವಿತ್ತಾಪಹರಣವು ಆಗುತ್ತದೆ. ಇದು ಹೇಗೆ ಎಂದು ಹೇಳುತ್ತೇನೆ- (ಶ್ರೀವಾದಿರಾಜರು ತಮ್ಮ ಲಕ್ಷಾಲಂಕಾರ ವ್ಯಾಖ್ಯಾನದಲ್ಲಿ ಈ ಅರ್ಥವನ್ನು ಹೇಳಿದ್ದಾರೆ). ಲೋಕವ್ಯವಸ್ಥೆಯನ್ನು ಮೀರದ ದಸ್ಯುಗಳ ಮೇಲೆ ಪ್ರಜೆಗಳು ಅನುರಾಗವನ್ನು ಹೊಂದಿರುತ್ತಾರೆ.
ಅಯುದ್ಧ್ಯಮನಸಾಂ ಬಂಧೋ ದಾರಾಮರ್ಶಃ ಕೃತಘ್ನತಾ |
ಬ್ರಹ್ಮವಿತ್ತಸ್ಯ ಚಾದಾನಂ ನಿಃಶೇಷಕರಣಂ ತಥಾ ॥15॥
ಸ್ತ್ರಿಯಾಂ ಮೋಹಃ ಪಥಿ ಸ್ಥಾನಂ ದಸ್ಯುಷ್ವೇತದ್ ವಿಗರ್ಹಿತಮ್ |
ಸ ಏಷ ಏವ ಭವತಿ ದಸ್ಯುರೇತಾನಿ ವರ್ಜಯನ್ ॥16॥
ಯುದ್ಧ ಮಾಡಲಾಗದವರ ಮೇಲೆ ನಿರ್ಬಂಧ, ಪರಪತ್ನಿಯರ ಮೇಲೆ ಬಲಾತ್ಕಾರ, ಕೃತಘ್ನತೆ, ಬ್ರಾಹ್ಮಣವಿತ್ತದ ಅಪಹಾರ, ಸರ್ವಸ್ವ ಅಪಹಾರ, ಸ್ತ್ರೀ ಅಪಹಾರ, ಅವಳ ದಾರಿಗೆ ಅಡ್ಡನಿಲ್ಲುವುದು- ಇವುಗಳನ್ನು ದಸ್ಯುಗಳೇ ನಿಂದಿಸಿದ್ದಾರೆ. ಇವುಗಳನ್ನು ಮಾಡಬಾರದು ಎಂದು ಅವರೇ ನಿರ್ಧರಿಸಿದ್ದಾರೆ. ಇವುಗಳನ್ನು ಮಾಡದವನು ಸಜ್ಜನ ದಸ್ಯು.
ಅಭಿಸಂದಧತೇ ಯೇ ನ ವಿನಾಶಾಯಾಸ್ಯ ಭಾರತ |
ನಶೇಷಮೇವೋಪಲಭ್ಯ ನ ಕುರ್ವಂತೀತಿ ನಿಶ್ಚಯಃ ॥17॥
ಯಾವ ದರೋಡೆಕೋರರು ಇವನ (ದರೋಡೆಗೆ ಒಳಗಾಗುವವನ) ವಿನಾಶವನ್ನು ಬಯಸುವುದಿಲ್ಲವೋ ಅವರು ಏನೂ ಉಳಿಯದಂತೆ ಅಪಹರಿಸುವುದಿಲ್ಲ. ಇದು ನಿಶ್ಚಯ.
ತಸ್ಮಾತ್ ಸಶೇಷಂ ಕರ್ತವ್ಯಂ ಸ್ವಾಧೀನಮಪಿ ದಸ್ಯುಭಿಃ |
ನ ಬಲಸ್ಥೋಽಹಮಸ್ಮೀತಿ ನೃಶಂಸಾನಿ ಸಮಾಚರೇತ್ ॥18॥
ಆದ್ದರಿಂದ ದಸ್ಯುಗಳು ಎಲ್ಲವನ್ನೂ ಅಪಹರಿಸುವ ಅವಕಾಶವನು ಹೊಂದಿದ್ದರೂ ಸ್ವಲ್ಪ ಉಳಿಸಿಯೇ ಅಪಹರಿಸಬೇಕು. `ಬಲಶಾಲಿಯಾಗಿದ್ದೇನೆ' ಎಂಬ ಭಾವನೆಯಿಂದ ಕ್ರೂರಕರ್ಮಗಳನ್ನು ಮಾಡಬಾರದು.
ಸಶೇಷಕಾರಿಣಸ್ತಾತ ಶೇಷಂ ಪಶ್ಯಂತಿ ಸರ್ವತಃ |
ನಿಃಶೇಷಕಾರಿಣೋ ನಿತ್ಯಮಶೇಷಕರಣಾದ್ ಭಯಮ್ ॥19॥

ಸ್ವಲ್ಪ ಉಳಿಸಿ ಅಪಹಾರ ಮಾಡುವ ಚೋರನ ಸಂಪತ್ತು ಸ್ವಲ್ಪ ಉಳಿಯುತ್ತದೆ. ಇದನ್ನು ಎಲ್ಲ ಕಡೆ ಜನರು ನೋಡಿದ್ದಾರೆ. ಏನೂ ಉಳಿಸದೆ ಅಪಹಾರ ಮಾಡುವ ಚೋರನ ಸಂಪತ್ತು ನಿಶ್ಶೇಷವಾಗಿ ನಾಶವಾಗುವ ಭಯವಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂರನೆಯ ಅಧ್ಯಾಯವು ಮುಗಿಯಿತು.
ನಾಲ್ಕನೆಯ ಅಧ್ಯಾಯ
ಧರ್ಮದಿಂದ ಅರ್ಥವನ್ನು ಸಾಧಿಸಬೇಕು. ಧರ್ಮ-ಅಧರ್ಮಗಳ ಫಲಗಳು ಕಾಲಾಂತರದಲ್ಲಿ ಲಭಿಸುತ್ತವೆ. ಬಲವು ಧರ್ಮದ ತಳಪಾಯ.
ಭೀಷ್ಮಃ
ಅತ್ರ ಕಾಮಂದವಚನಂ ಕೀರ್ತಯಂತಿ ಪುರಾವಿದಃ |
ಪ್ರತ್ಯಕ್ಷಾವೇವ ಧರ್ಮಾರ್ಥೌ ಕ್ಷತ್ರಿಯಸ್ಯ ವಿಜಾನತಃ |
ತತ್ರ ನ ವ್ಯವಧಾತವ್ಯಂ ಪರೋಕ್ಷಾ ಧರ್ಮಯಾಪನಾ ॥1॥
ಪ್ರಾಚೀನ ವಿಷಯಗಳನ್ನು ತಿಳಿದವರು ಕಾಮಂದ ಋಷಿಯ ವಚನಗಳನ್ನು ಹೇಳುತ್ತಾರೆ. ಪ್ರಾಜ್ಞನಾದ ಕ್ಷತ್ರಿಯನಿಗೆ ಧರ್ಮ-ಅರ್ಥಗಳು ಸ್ಪಷ್ಟವಾಗಿಯೇ ತಿಳಿಯುತ್ತವೆ. (ಧರ್ಮ=ಸಾರ್ಥಕ ಬದುಕಿಗೆ ಅನುಕೂಲವಾಗುವ ಮತ್ತು ಸರ್ವಹಿತಕರವಾದ ಮೌಲ್ಯಗಳು. ಅರ್ಥ-ಧರ್ಮಾನುಗುಣವಾದ ಬಹುವಿಧ ಸಂಪತ್ತು). ಅವೆರಡರ ಬಗ್ಗೆ= ಧರ್ಮ-ಅರ್ಥಗಳನ್ನು ಸಾಧಿಸುವ ಕ್ರಮಗಳನ್ನು ಕೈಗೊಳ್ಳುವ ವಿಷಯದಲ್ಲಿ ವಿಳಂಬ ಮಾಡಬಾರದು. ಧರ್ಮಾಚರಣೆಯನ್ನು ಮುಂದೆ ಹಾಕುವುದರ ಪರಿಣಾಮವು ಕೂಡಲೇ ಗೋಚರವಾಗುವುದಿಲ್ಲ.
ಅಧರ್ಮೋ ಧರ್ಮ ಇತ್ಯೇತದ್ಯಥಾ ವೃಕ್ಷಫಲಂ ತಥಾ |
ಧರ್ಮಾಧರ್ಮಫಲೇ ಜಾತು ನ ದದರ್ಶೇಹ ಕಶ್ಚನ ॥2॥
ಧರ್ಮ ಮತ್ತು ಅಧರ್ಮ - ಇವೆರಡರ ಫಲವು ಮರದ ಹಣ್ಣಿನಂತೆ. ಮರವು ಬೆಳೆದ ಬಹಳ ಕಾಲಾನಂತರ ಅದರಲ್ಲಿ ಫಲವು ಹುಟ್ಟುತ್ತದೆ. ಧರ್ಮದ ಮತ್ತು ಅಧರ್ಮದ ಫಲಗಳನ್ನು ಯಾವ ಕಾಲದಲ್ಲೂ, ಯಾರೂ ನೋಡಿಲ್ಲ.
ಬುಭೂಷೇದ್ ಬಲಮೇವೇಹ ಸರ್ವಂ ಬಲವತೋ ವಶೇ |
ಶ್ರಿಯಂ ಬಲಮಮಾತ್ಯಾಂಶ್ಚ ಬಲವಾನಿಹ ವಿಂದತಿ ॥3॥
ಸುಸ್ಥಿತಿಯಲ್ಲಿ ಇರಲು ಬಯಸುವವನು ಬಲವನ್ನು (ಅರ್ಥಬಲ, ಬಾಹುಬಲ ಮತ್ತು ಪ್ರಜಾಬಲ) ಸಾಧಿಸಬೇಕು. ಎಲ್ಲವೂ ಬಲಶಾಲಿಯ ವಶವಾಗುತ್ತದೆ. ಬಲಶಾಲಿಯಾದವನು ಸಂಪತ್ತನ್ನು, ಸೈನ್ಯಬಲವನ್ನು ಮತ್ತು ಸಮರ್ಥಮಂತ್ರಿಗಳನ್ನೂ ಹೊಂದುತ್ತಾನೆ.
ಯೋ ಹ್ಯನಾಢ್ಯಃ ಸ ಪತಿತಸ್ತದುಚ್ಛಿಷ್ಟಂ ಯದಲ್ಪಕಮ್ |
ಬಹ್ವಪಥ್ಯಂ ಬಲವತಿ ನ ಕಿಂಚಿತ್ಕ್ರಿಯತೇ ಭಯಾತ್ ॥4॥
ಯಾರಿಗೆ ಸಮೃದ್ಧಿಯು ಇಲ್ಲವೋ ಅವನು ಪತಿತ (ಪತಿತನಂತೆ). ಯಾವುದು  ಅಲ್ಪವೋ ಅದು ಉಚ್ಛಿಷ್ಟ (ಉಚ್ಛಿಷ್ಟದಂತೆ). ಬಲಶಾಲಿ ವ್ಯಕ್ತಿಯಲ್ಲಿ ಬಹಳ ದೋಷಗಳಿರುತ್ತವೆ. ಆದರೆ ಭಯದಿಂದ ಯಾರೂ ಏನೂ ಮಾಡುವುದಿಲ್ಲ.
ಉಭೌ ಸತ್ಯಾಧಿಕಾರೌ ತೌ ತ್ರಾಯೇತೇ ಮಹತೋ ಭಯಾತ್ |
ಅತಿ ಧರ್ಮಾದ್ ಬಲಂ ಮನ್ಯೇ ಬಲಾದ್ಧರ್ಮಃ ಪ್ರವರ್ತತೇ ॥5॥
ಸತ್ಯದ ಶಕ್ತಿಯನ್ನು ಹೊಂದಿರುವ (ಸತ್ಯದ ತಳದಿಯ ಮೇಲೆ ನಿಂತಿರುವ) ಅವೆರಡು (ಬಲ ಮತ್ತು ಧರ್ಮಗಳು) ದೊಡ್ಡ ಭಯದಿಂದ ರಕ್ಷಿಸುತ್ತವೆ. ಧರ್ಮಕ್ಕಿಂತ ಬಲವು ದೊಡ್ಡದು. ಬಲದಿಂದ ಧರ್ಮವು ಮುನ್ನಡೆಯುತ್ತದೆ ಮತ್ತು ಪ್ರಕೃಷ್ಟವಾಗಿ ಇರುತ್ತದೆ.
ಬಲೇ ಪ್ರತಿಷ್ಠಿತೋ ಧರ್ಮೋ ಧರಣ್ಯಾಮಿವ ಜಂಗಮಃ |
ಧೂಮೋ ವಾಯೋರಿವ ವಶಂ ಬಲಂ ಧರ್ಮೋಽನುವರ್ತತೇ ॥6॥
ಧರ್ಮವು ಬಲದ ಆಸರೆಯಲ್ಲಿ ಸುಸ್ಥಿತಿಯಲ್ಲಿರುತ್ತದೆ. ಜಂಗಮವು (ಚಲನಶೀಲ ಪದಾರ್ಥವು) ಭೂಮಿಯ ಮೇಲೆ ಹೇಗೆ ಹಾಗೆ. ಹೊಗೆಯು ಗಾಳಿಗೆ ವಶವಾಗಿರುವಂತೆ ಧರ್ಮವು ಬಲದ ಅನುಯಾಯಿ.
ಅನೀಶ್ವರೋ ಬಲಂ ಧರ್ಮೋ ದ್ರುಮಂ ವಲ್ಲೀವ ಸಂಶ್ರಿತಾ |
ವಶ್ಯೋ ಬಲವತಾಂ ಧರ್ಮಃ ಸುಖಂ ಭೋಗವತಾಮಿವ |
ನಾಸ್ತ್ಯಸಾಧ್ಯಂ ಬಲವತಾಂ ಸರ್ವಂ ಬಲವತಾಂ ಶುಚಿ ॥7॥
ಸ್ವಯಂ ಅಸಮರ್ಥವಾದ ಧರ್ಮವು ಬಲವನ್ನು ಅವಲಂಬಿಸಿದೆ. ಬಳ್ಳಿಯು ಮರವನ್ನು ಆಶ್ರಯಿಸಿರುವಂತೆ ಧರ್ಮವು ಬಲಶಾಲಿಗಳಿಗೆ ವಶವಾಗಿರುತ್ತದೆ. ಸುಖವು ಭೋಗವಸ್ತುಗಳನ್ನು ಸಮೃದ್ಧವಾಗಿ ಹೊಂದಿದವರಿಗೆ ವಶವಾಗಿರುವಂತೆ. ಬಲಶಾಲಿಗಳು ಸಾಧಿಸಲಾಗದ ಯಾವ ವಿಷಯವೂ ಇಲ್ಲ. ಬಲಶಾಲಿಗಳಿಗೆ ಸೇರಿದ ಎಲ್ಲವೂ ಶುದ್ಧ.
ದುರಾಚಾರಃ ಕ್ಷೀಣಬಲಃ ಪರಿಮಾಣಂ ನಿಯಚ್ಛತಿ |
ಅಥ ತಸ್ಮಾದುದ್ವಿಜತೇ ಸರ್ವೋ ಲೋಕೋ ವೃಕಾದಿವ ॥8॥
ಕೆಟ್ಟ ನಡತೆಯ ಬಲಹೀನ ರಾಜನು ತನ್ನ ಮತ್ತು ತನ್ನ ದೇಶದ ಬೆಲೆಯನ್ನು (ಗೌರವ- ಮಹತ್ವಗಳನ್ನು) ಕಡಿಮೆ ಮಾಡುತ್ತಾನೆ. ಅಂತಹ ರಾಜನಿಂದ ಜನಗಳು ಉದ್ವೇಗಕ್ಕೆ ಒಳಗಾಗುತ್ತಾರೆ. ತೋಳದ ಉಪಸ್ಥಿತಿಯಿಂದ ಹೇಗೆ ಹಾಗೆ.
ಅಪಧ್ವಸ್ತೋ ಹ್ಯವಮತೋ ದುಃಖಂ ಜೀವತಿ ಜೀವಿತಮ್ |
ಜೀವಿತಂ ಯದವಕ್ಷಿಪ್ತಂ ಯಥೈವ ಮರಣಂ ತಥಾ ॥9॥

ಐಶ್ವರ್ಯಭ್ರಷ್ಟನಾದವನು ಮತ್ತು ಅವಗಣನೆಗೆ ಒಳಗಾದವನು ದುಃಖಮಯವಾದ ಬದುಕನ್ನು ಸಾಗಿಸುತ್ತಾನೆ. ಅವಗಣನೆಗೆ ಒಳಗಾದ ಜೀವನವು ಮರಣದಂತೆ.
ಯದೇನಮಾಹುಃ ಪಾಪೇನ ಚಾರಿತ್ರೇಣ ವಿವಕ್ಷಿತಮ್ |
ಸ ಭೃಶಂ ತಪ್ಯತೇಽನೇನ ವಾಕ್ಶಲ್ಯೇನ ಪರಿಕ್ಷತಃ ॥10॥
ಇಂತಹ ರಾಜನನ್ನು `ಕೆಟ್ಟ ನಡತೆಗಳಿಂದ ಹಾಳಾದವನು` ಎಂದು ಹೇಳುತ್ತಾರೆ. ಆಗ ಆ ರಾಜನು ಈ ಮಾತಿನ ಶಲ್ಯದಿಂದ ಘಾಸಿಗೊಂಡು ಬಹಳ ಪರಿತಪಿಸುತ್ತಾನೆ.
ಅತ್ರೈತದಾಹುರಾಚಾರ್ಯಾಃ ಪಾಪಸ್ಯ ಪರಿಮೋಕ್ಷಣೇ |
ತ್ರಯೀಂ ವಿದ್ಯಾಂ ನಿಷೇವೇತ ತಥೋಪಾಸೀತ ಸ ದ್ವಿಜಾನ್ ॥11॥
ಇಂತಹ ಸ್ಥಿತಿಯಲ್ಲಿರುವವನ ಬಗ್ಗೆ ಆಚಾರ್ಯರುಗಳು (ಶಾಸ್ತ್ರೋಕ್ತ ಪರಿಹಾರವನ್ನು ಬಲ್ಲವರು) ಹೀಗೆ ಹೇಳುತ್ತಾರೆ : ಪಾಪ ಪರಿಹಾರಕ್ಕಾಗಿ ವೇದವಿದ್ಯೆಯನ್ನು ಅವಲಂಬಿಸಬೇಕು. ಬ್ರಹ್ಮಜ್ಞಾನಿಗಳ ಸೇವೆಯನ್ನು ಮಾಡಬೇಕು.
ಪ್ರಸಾದಯೇನ್ಮಧುರಯಾ ವಾಚಾಪ್ಯಥ ಚ ಕರ್ಮಣಾ |
ಮಹಾಮನಾಶ್ಚೈವ ಭವೇದ್ ವಿವಹೇಚ್ಚ ಮಹಾಕುಲೇ ॥12॥
ಮಧುರವಾದ ಮಾತುಗಳಿಂದ ಮತ್ತು ಕೃತಿಗಳಿಂದ ಸಂತೋಷಪಡಿಸಬೇಕು. ಉದಾರ ಮನಸ್ಸಿನವನು ಆಗಬೇಕು. ಮಹಾಕುಲದಲ್ಲಿ ಜನಿಸಿದ ಕನ್ಯೆಯನ್ನು ಮದುವೆಯಾಗಬೇಕು.
ಇತ್ಯಸ್ತೀತಿ ವದೇದೇವ ಪರೇಷಾಂ ಕೀರ್ತಯನ್ ಗುಣಾನ್ |
ಜಪೇದುದಕಶೀಲಃ ಸ್ಯಾತ್ ಪೇಶಲೋ ನಾತಿಜಲ್ಪನಃ॥13॥
ಪರಲೋಕವು ಇದೆ ಎಂದೇ ಹೇಳಬೇಕು. ಪರರ ಗುಣಗಳನ್ನು ಹೇಳಬೇಕು. ಸ್ನಾನ ಮಾಡಿ ಮಂತ್ರಗಳನ್ನು ಜಪಿಸಬೇಕು. ಮೃದುವೂ, ಮಿತಭಾಷಿಯೂ ಆಗಿರಬೇಕು.
ಬ್ರಹ್ಮ ಕ್ಷತ್ರಂ ಸಂಪ್ರವಿಶೇದ್ ಬಹು ಕೃತ್ವಾ ಸುದುಷ್ಕೃತಮ್ |
ಉಚ್ಯಮಾನೋಽಪಿ ಲೋಕೇನ ಬಹು ತತ್ತದಚಿಂತಯನ್ ॥14॥
ಬಹಳ ದುಷ್ಕರ್ಮಗಳನ್ನು ಮಾಡಿದ ಕ್ಷತ್ರಿಯನು ಅದರ ಪರಿಹಾರಕ್ಕಾಗಿ ಬ್ರಹ್ಮಜ್ಞಾನಿಗಳನ್ನು ಆಶ್ರಯಿಸಬೇಕು (ಲಕ್ಷ್ಯಾಲಂಕಾರದ ಪ್ರಕಾರ ಹೀಗೆ ಅರ್ಥ). ಜನರು ಬಹಳ ನಿಂದನೆಯ ಮಾತುಗಳನ್ನು ಆಡಿದರೂ ಅವುಗಳ ಬಗ್ಗೆ ಚಿಂತಿಸಬಾರದು.
ಅಪಾಪೋ ಹ್ಯೇವಮಾಚಾರಃ ಕ್ಷಿಪ್ರಂ ಬಹುಮತೋ ಭವೇತ್ |
ಸುಖಂ ವಿತ್ತಂ ಚ ಭುಂಜೀತ ವೃತ್ತೇನೈತೇನ ಗೋಪಯನ್ |
ಲೋಕೇ ಚ ಲಭತೇ ಪೂಜಾಂ ಪರತ್ರ ಚ ಮಹತ್ಫಲಮ್ ॥15॥
ಹೀಗೆ ನಡೆದುಕೊಳ್ಳುವ ರಾಜನು ಬೇಗನೆ ಪಾಪಗಳಿಂದ ಬಿಡುಗಡೆ ಪಡೆದು ಎಲ್ಲರ ಆದರಕ್ಕೆ ಪಾತ್ರನಾಗುತ್ತಾನೆ. ಈ ನಡವಳಿಕೆಯಿಂದ ತನ್ನನ್ನು ರಕ್ಷಿಸಿಕೊಂಡು ಸುಖವನ್ನು ಅನುಭವಿಸುವನು. ವಿಪುಲ ಸಂಪತ್ತನ್ನೂ ಪಡೆಯುತ್ತಾನೆ. ಲೋಕದಲ್ಲಿ ಗೌರವಕ್ಕೆ ಪಾತ್ರನಾಗುತ್ತಾನೆ. ಪರಲೋಕದಲ್ಲೂ ಮಹಾಫಲವನ್ನು ನಡೆಯುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿಯಿತು.
* * * *
ಐದನೆಯ ಅಧ್ಯಾಯ
ಲೋಕ ಮರ್ಯಾದೆಯನ್ನು ಪಾಲಿಸುವ ದಸ್ಯುಗಳಿಗೆ
ಸದ್ಗತಿಯಾಗುತ್ತದೆ. ಕಾಪವ್ಯ ಚರಿತ್ರೆ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಥಾ ದಸ್ಯುಃ ಸಮರ್ಯಾದಃ ಪ್ರೇತ್ಯಭಾವೇ ನ ನಶ್ಯತಿ ॥1॥
ಈ ವಿಷಯದಲ್ಲಿ =ದಸ್ಯುವು ಲೋಕಮರ್ಯಾದೆಯನ್ನು ಪಾಲಿಸಿದರೆ ಅವನಿಗೆ ಮರಣಾನಂತರ ದುರ್ಗತಿಯಾಗುವುದಿಲ್ಲ ಎಂಬ ವಿಷಯದಲ್ಲಿ ಪುರಾತನ ಇತಿಹಾಸವನ್ನು ಉದಾಹರಿಸುತ್ತಾರೆ.
ಪ್ರಹರ್ತಾ ಮತಿಮಾನ್ ಶೂರಃ ಶ್ರುತವಾನನೃಶಂಸವಾನ್ |
ರಕ್ಷನ್ನಕ್ಷಯಿಣಂ ಧರ್ಮಂ ಬ್ರಹ್ಮಣ್ಯೋ ಗುರುಪೂಜಕಃ ॥2॥
ನಿಷಾದ್ಯಾಂ ಕ್ಷತ್ರಿಯಾಜ್ಜಾತಃ ಕ್ಷತ್ರಧರ್ಮಾನುಪಾಲಕಃ |
ಕಾಪವ್ಯೋ ನಾಮ ನೈಷಾದಿರ್ದಸ್ಯುತ್ವಾತ್ ಸಿದ್ಧಿಮಾಪ್ತವಾನ್ ॥3॥
ಮಹಾಕುಶಲನೂ, ವಿವೇಕಿಯೂ, ಶೂರನೂ, ಕ್ರೌರ್ಯರಹಿತನೂ, ಧರ್ಮರಕ್ಷಕನೂ, ಬ್ರಾಹ್ಮಣರಲ್ಲಿ ಗೌರವವಿದ್ದವನೂ, ಹಿರಿಯರನ್ನೂ ಆದರಿಸುವವನೂ, ಕ್ಷತ್ರಿಯನಿಂದ ನಿಷಾದ ಸ್ತ್ರೀಯಲ್ಲಿ ಹುಟ್ಟಿದವನೂ, ಕ್ಷತ್ರಿಯ ಧರ್ಮನಿಷ್ಠನೂ ಆಗಿದ್ದ ಕಾಪವ್ಯ ಎಂಬ ಬೇಡನು ದಸ್ಯು ಜೀವನದಿಂದಲೇ ಸಿದ್ಧಿಯನ್ನು ಪಡೆದನು.
ಅರಣ್ಯೇ ಸಾಯಂ ಪೂರ್ವಾಹ್ಣೇ ಮೃಗಯೂಥಪ್ರಕೋಪಿತಾ |
ವಿಧಿಜ್ಞೋ ಮೃಗಜಾತೀನಾಂ ನಿಪಾತಾನಾಂ ಚ ಕೋವಿದಃ ॥4॥
ಸರ್ವಕಾನನದೇಶಜ್ಞಃ ಪಾರಿಯಾತ್ರಚರಃ ಸದಾ |

ಧರ್ಮಜ್ಞಃ ಸರ್ವಭೂತಾನಾಮಮೋಘೇಷುರ್ದೃಢಾಯುಧಃ ॥5॥
ಅವನು ಸಾಯಂಕಾಲ- ಪ್ರಾತಃಕಾಲಗಳಲ್ಲಿ ಪ್ರಾಣಿಗಳ ಬೇಟೆಯಾಡುತ್ತಿದ್ದನು. ಪ್ರಾಣಿ ಸಮೂಹದ ರೀತಿಗಳನ್ನು ತಿಳಿದಿದ್ದನು. ಅವುಗಳ ಪತನವನ್ನು ತಿಳಿದಿದ್ದನು. ಎಲ್ಲ ಅರಣ್ಯಪ್ರದೇಶಗಳ ಪರಿಚಯವು ಅವನಿಗೆ ಇತ್ತು. ಪಾರಿಯಾತ್ರ ಎಂಬ ಪರ್ವತದಲ್ಲಿ ಸಂಚರಿಸುತ್ತಿದ್ದವನು. ಎಲ್ಲ ಪ್ರಾಣಿಗಳ ಸ್ವಭಾವಗಳನ್ನು ತಿಳಿದಿದ್ದನು. ಅವನ ಬಾಣಗಳು ಗುರಿತಪ್ಪುತ್ತಿರಲಿಲ್ಲ. ದೃಢವಾದ ಆಯುಧಗಳನ್ನು ಹೊಂದಿದ್ದನು.
ಅಪ್ಯನೇಕಶತಾಃ ಸೇನಾ ಏಕ ಏವ ಜಿಗಾಯ ಸಃ |
ಸ ವೃದ್ಧಾವಂಧಪಿತರೌ ಮಹಾರಣ್ಯೇಽಭ್ಯಪೂಜಯತ್ ॥6॥
ಮಧುಮಾಂಸೈರ್ಮೂಲಫಲೈರನ್ನೈರುಚ್ಚಾವಚೈರಪಿ |
ಸತ್ಕೃತ್ಯ ಭೋಜಯಾಮಾಸ ಸಮ್ಯಕ್ಪರಿಚಚಾರ ಚ ॥7॥
ನೂರಾರು ಸಂಖ್ಯೆಯ ಸೇನೆಯನ್ನು ಒಬ್ಬನೇ ಜಯಿಸುತ್ತಿದ್ದನು. ವೃದ್ಧರೂ, ಅಂಧರೂ ಆಗಿದ್ದ ತಾಯಿಗಳನ್ನು ಆದರದಿಂದ ಪೋಷಿಸುತ್ತಿದ್ದನು. ಮಧು, ಮಾಂಸ, ಮೂಲ, ಫಲ , ನಾನಾ ವಿಧವಾದ ಅನ್ನ-ಇವುಗಳಿಂದ ಅವರಿಗೆ ಭೋಜನ ಮಾಡಿಸುತ್ತಿದ್ದನು. ಅವರ ಸೇವೆಯನ್ನು ಚೆನ್ನಾಗಿ ಮಾಡುತ್ತಿದ್ದನು.
ಆರಣ್ಯಕಾನ್ ಪ್ರವ್ರಜಿತಾನ್ ಬ್ರಾಹ್ಮಣಾನ್ ಪರಿಪಾಲಯನ್ |
ಅಪಿ ತೇಭ್ಯೋ ಮೃಗಾನ್ ಹತ್ವಾ ನಿನಾಯ ಚ ಮಹಾವನೇ ॥8॥
ವಾನಪ್ರಸ್ಥ ಮತ್ತು ಸಂನ್ಯಾಸಿ ಬ್ರಾಹ್ಮಣರನ್ನು ರಕ್ಷಿಸುತ್ತಾ, ಅವರಿಗಾಗಿ ಮೃಗಗಳನ್ನು ಕೊಂದು ಅರ್ಪಿಸುತ್ತಿದ್ದನು.
ಯೇ ಸ್ಮ ನ ಪ್ರತಿಗೃಹ್ಣಂತಿ ದಸ್ಯುಭೋಜನಶಂಕಯಾ |
ತೇಷಾಮಾಸಾದ್ಯ ಗೇಹೇಷು ಕಾಲ್ಯ ಏವ ಸ ಗಚ್ಛತಿ ॥9॥
ದರೋಡೆಕೋರನಿಂದ ಲಭಿಸಿದ ಆಹಾರವನ್ನೂ ತಿನ್ನಬಾರದು ಎಂಬ ವ್ರತವಿದ್ದವರಿಗೆ ಫಲ-ಮೂಲ ಮೊದಲಾದವುಗಳನ್ನು ಪ್ರಾತಃಕಾಲದಲ್ಲೇ ಬೇರೆಯವರ ಮೂಲಕ ತಲುಪಿಸುತ್ತಿದ್ದನು.
ತಂ ಬಹೂನಿ ಸಹಸ್ರಾಣಿ ಗ್ರಾಮಣೀತ್ವೇನ ವವ್ರಿರೇ |
ನಿರ್ಮರ್ಯಾದಾನಿ ದಸ್ಯೂನಾಂ ನಿರನುಕ್ರೋಶಕಾರಿಣಾಮ್ ॥10॥
ಲೋಕಮರ್ಯಾದೆಯನ್ನು (ವ್ಯವಸ್ಥೆಯನ್ನು) ಮೀರಿದ, ನಿರ್ದಯವಾಗಿ ನಡೆದುಕೊಳ್ಳುತ್ತಿದ್ದ ಸಾವಿರಾರು ದಸ್ಯುಗಳು ಈ ಕಾಪವ್ಯನನ್ನು ತಮ್ಮ ಗ್ರಾಮನಾಯಕನನ್ನಾಗಿ ಆರಿಸಿದ್ದನು.
ದಸ್ಯವಃ
ಮುಹೂರ್ತದೇಶಕಾಲಜ್ಞ ಪ್ರಾಜ್ಞ ಶೀಲದೃಢಾಯುಧ |
ಗ್ರಾಮಣೀರ್ಭವ ನೋ ಮುಖ್ಯಃ ಸರ್ವೇಷಾಮೇವ ಸಮ್ಮತಃ ॥11॥
ನೀನು ಮುಹೂರ್ತ, ದೇಶ-ಕಾಲಗಳನ್ನು ತಿಳಿದಿರುವ ಪ್ರಾಜ್ಞ, ಶೂರ, ನಿಯಮಗಳನ್ನು ತಪ್ಪದೆ ಪಾಲಿಸುವವನು, ನಮ್ಮಗೆಲ್ಲರಿಗೂ ನೀನು ಸಮ್ಮತ. ನೀನು ಮುಖ್ಯಗ್ರಾಮಾಧಿಪತಿಯಾಗು.
ಯಥಾ ಯಥಾ ವಕ್ಷ್ಯಸಿ ನಃ ಕರಿಷ್ಯಾಮಸ್ತಥಾ ತಥಾ |
ಪಾಲಯಾಸ್ಮಾನ್ ಯಥಾನ್ಯಾಯಂ ಯಥಾ ಮಾತಾ ಯಥಾ ಪಿತಾ ॥
ನೀನು ಹೇಗೆ ಹೇಳುತ್ತೀಯೋ ಹಾಗೆ ನಡೆಯುತ್ತೇವೆ. ತಂದೆ-ತಾಯಿಯರು ಪಾಲಿಸುವಂತೆ ನಮ್ಮನ್ನು ನ್ಯಾಯಾನುಗುಣವಾಗಿ ಪಾಲಿಸು.
ಕಾಪವ್ಯಃ
ಮಾ ವಧೀಸ್ತ್ವಂ ಸ್ತ್ರಿಯಂ ಭೀರುಂ ಮಾ ಶಿಶುಂ ಮಾ ತಪಸ್ವಿನಮ್ |
ನಾಯುಧ್ಯಮಾನೋ ಹಂತವ್ಯೋ ನ ಚ ಗ್ರಾಹ್ಯಾ ಬಲಾತ್ ಸ್ತ್ರಿಯಃ ॥
ನೀವು ಸ್ತ್ರೀಯರನ್ನು ಕೊಲ್ಲಬಾರದು, ಹೆದರಿಕೆಯ ಸ್ವಭಾವದವರನ್ನು ಕೊಲ್ಲಬಾರದು, ಶಿಶುವನ್ನು ಕೊಲ್ಲಬಾರದು. ತಪಸ್ವಿಗಳನ್ನು ಕೊಲ್ಲಬಾರದು. ನಿಮ್ಮೊಡನೆ ಯುದ್ಧ ಮಾಡದವನನ್ನು ಕೊಲ್ಲಬಾರದು. ಸ್ತ್ರೀಯರನ್ನು ಬಲಾತ್ಕಾರವಾಗಿ ಅಪಹರಿಸಬಾರದು.
ಸರ್ವಥಾ ಸ್ತ್ರೀ ನ ಹಂತವ್ಯಾ ಸರ್ವಸತ್ತ್ವೇಷು ಯುಧ್ಯತಾ |
ನಿತ್ಯಂ ಗೋಬ್ರಾಹ್ಮಣೇ ಸ್ವಸ್ತಿ ಯೋದ್ಧವ್ಯಂ ಚ ತದರ್ಥತಃ ॥14॥
ಸಕಲ ಪ್ರಾಣಿವರ್ಗದ ಸ್ತ್ರೀಯನ್ನು ಕೊಲ್ಲಬಾರದು. ಗೋವುಗಳಿಗೆ-ಬ್ರಾಹ್ಮಣರಿಗೆ ಹಿತವಾಗುವಂತೆ ನಡೆದುಕೊಳ್ಳಬೇಕು. ಅವರ ರಕ್ಷಣೆಗಾಗಿ ಯುದ್ಧ ಮಾಡಬೇಕು.
ಸಸ್ಯಂ ಚ ನಾಪಹಂತವ್ಯಂ ಸೀರವಿಘ್ನಂ ಚ ಮಾ ಕೃಥಾಃ |
ಪೂಜ್ಯಂತೇ ಯತ್ರ ದೇವಾಶ್ಚ ಪಿತರೋತಿಥಯಸ್ತಥಾ ॥15॥
ಹೊಲಗಳಲ್ಲಿ ಬೆಳೆದಿರುವ ಪೈರನ್ನು ನಾಶಮಾಡಬಾರದು. ಕೃಷಿಗೆ ವಿಘ್ನವನ್ನು ಮಾಡಬೇಡಿ. ಎಲ್ಲಿ ದೇವತೆಗಳ, ಪಿತೃಗಳ, ಅತಿಥಿಗಳ ಪೂಜೆಯು ನಡೆಯುತ್ತಿರುತ್ತದೋ ಅಲ್ಲಿ ವಿಘ್ನಗಳನ್ನು ಮಾಡಬಾರದು.
ಸರ್ವಭೂತೇಷ್ವಪಿ ಚ ವೈ ಬ್ರಾಹ್ಮಣೋ ಮೋಕ್ಷಮರ್ಹತಿ |
ಕಾರ್ಯಾ ಚಾಪಚಿತಿಸ್ತೇಷಾಂ ಸರ್ವಸ್ವೇನಾಪಿ ಯಾ ಭವೇತ್ ॥16॥
ದಸ್ಯುಗಳು ಅಪಹರಿಸುವ ಪ್ರಾಣಿಸಮುದಾಯದಲ್ಲಿ ಬ್ರಾಹ್ಮಣನು ಬಿಡುಗಡೆಗೆ ಅರ್ಹ. ಅವರ ಸೇವೆಯನ್ನು ಮಾಡಬೇಕು. ಸರ್ವಸ್ವವನ್ನೂ ಕೊಟ್ಟು ಬ್ರಾಹ್ಮಣರನ್ನು ಸತ್ಕರಿಸಬೇಕು.
ಯಸ್ಯ ಹ್ಯೇತೇ ಸಂಪ್ರದುಷ್ಟಾ ಮಂತ್ರಯಂತಿ ಪರಾಭವಮ್ |
ನ ತಸ್ಯ ತ್ರಿಷು ಲೋಕೇಷು ತ್ರಾತಾ ಭವತಿ ಕಶ್ಚನ ॥17॥

ಬ್ರಾಹ್ಮಣರು ಯಾರ ಮೇಲೆ ಕೋಪಗೊಳ್ಳುತ್ತಾರೋ, ಯಾರಿಗೆ ಪರಾಭವವಾಗಲಿ ಎಂದು ಭಾವಿಸುತ್ತಾರೋ, ಅವರನ್ನು ಮೂರು ಲೋಕಗಳಲ್ಲಿ ಯಾರೂ ರಕ್ಷಿಸಲಾರರು.
ಯೋ ಬ್ರಾಹ್ಮಣಾನ್ ಪರಿಭವೇದ್ ವಿನಾಶಂ ವಾಪಿ ರೋಚಯೇತ್ |
ಸೂರ್ಯೋದಯ ಇವಾವಶ್ಯಂ ಧ್ರುವಂ ತಸ್ಯ ಪರಾಭವಃ ॥18॥
ಯಾರು ಬ್ರಾಹ್ಮಣನನ್ನು ಅವಮಾನಿಸುವನೋ, ಅವನ ವಿನಾಶವನ್ನು ಬಯಸುವನೋ ಅವನ ಪರಾಭವವು ಸೂರ್ಯೋದಯದಷ್ಟು ನಿಶ್ಚಯ.
ಇಹೈವ ಫಲಮಾಸೀನಃ ಪ್ರತ್ಯಾಕಾಂಕ್ಷೇತ ಶಕ್ತಿತಃ |
ಯೇ ಯೇ ನೋ ನ ಪ್ರದಾಸ್ಯಂತಿ ತಾಂಸ್ತಾನ್ ಸೇನಾಭಿಯಾಸ್ಯತಿ ॥19॥
ಇಲ್ಲೇ ಇದ್ದು ದಾರಿಹೋಕರ ಶಕ್ತಿಗನುಗುಣವಾಗಿ ಅವರಿಂದ ಪಡೆಯಬೇಕು. ಯಾರು ಕೊಡುವುದಿಲ್ಲವೋ ಅವರನ್ನು ದಸ್ಯು ಸೇನೆಯು ಆಕ್ರಮಿಸುತ್ತದೆ.
ಶಿಷ್ಟ್ಯರ್ಥಂ ವಿಹಿತೋ ದಂಡೋ ನ ವಧಾರ್ಥಂ ವಿನಿಶ್ಚಯಃ |
ಯೇ ಚ ಶಿಷ್ಟಾನ್ ಪ್ರಬಾಧಂತೇ ಧರ್ಮಸ್ತೇಷಾಂ ವಧಃ ಸ್ಮೃತಃ ॥20॥
ಅನುಶಾಸನವೇ ಶಿಕ್ಷೆಯನ್ನು ಕೊಡುವುದರ ಉದ್ದೇಶ. ವಧೆಯು ಶಿಕ್ಷೆಯ ಉದ್ದೇಶವಲ್ಲ. ಇದು ನಿಶ್ಚಯ. ಯಾರು ಸಜ್ಜನರನ್ನು ಪೀಡಿಸುತ್ತಾರೋ ಅವರ ವಧೆಯು ಧರ್ಮ.
ಯೇ ಹಿ ರಾಷ್ಟ್ರೋಪರೋಧೇನ ವೃದ್ಧಿಂ ಕುರ್ವಂತಿ ಕೇಚನ |
ತದೇವ ತೇನು ಮೀಯಂತೇ ಕುಣಪಂ ಕೃಮಯೋ ಯಥಾ ॥21॥
ಯಾರು ರಾಷ್ಟ್ರಕ್ಕೆ ತೊಂದರೆ ಮಾಡಿ ತಮ್ಮ ವೃದ್ಧಿಯನ್ನು ಮಾಡಿಕೊಳ್ಳುತ್ತಾರೋ ಅವರು ಬೇಗನೇ ನಾಶವಾಗುತ್ತಾರೆ. ಹೆಣಕ್ಕೆ ಮುತ್ತಿದ ಕ್ರಿಮಿಗಳಂತೆ.
ಯೇ ಪುನರ್ಧರ್ಮಶಾಸ್ತ್ರೇಣ ವರ್ತೇರನ್ನಿಹ ದಸ್ಯವಃ |
ಅಪ್ಯದಸ್ಯವೋ ಭೂತ್ವಾ ಕ್ಷಿಪ್ರಂ ಸಿದ್ಧಿಮವಾಪ್ನುಯುಃ ॥22॥
ಯಾವ ದಸ್ಯುಗಳು ಈ ಜೀವನದಲ್ಲಿ ಧರ್ಮದ ವಿಧಿಯಂತೆ ಇರುತ್ತಾರೋ ಅವರು ಮುಂದಿನ ಜನ್ಮದಲ್ಲಿ ಸಜ್ಜನರಾಗಿ ಬೇಗನೆ ಸಿದ್ಧಿಯನ್ನು ಹೊಂದುವರು.
ಭೀಷ್ಮಃ
ತತ್ ಸರ್ವಮುಪಚಕ್ರುಸ್ತೇ ಕಾಪವ್ಯಸ್ಯಾನುಶಾಸನಮ್ |
ವೃತ್ತಿಂ ಚ ಲೇಭಿರೇ ಸರ್ವೇ ಪಾಪೇಭ್ಯಶ್ಚಾಪ್ಯುಪಾರಮನ್ ॥23॥
ಆ ದಸ್ಯುಗಳು ಕಾಪವ್ಯನ ಅನುಶಾಸನವನ್ನು ಉತ್ತಮವಾಗಿ ಅನುಸರಿಸಿದರು. ಅವರೆಲ್ಲರೂ ಜೀವನ ಸೌಲಭ್ಯವನ್ನು ಹೊಂದಿದರು. ಪಾಪಕೃತ್ಯಗಳನ್ನೂ ನಿಲ್ಲಿಸಿದರು.
ಕಾಪವ್ಯಃ ಕರ್ಮಣಾ ತೇನ ಮಹತೀಂ ಸಿದ್ಧಿಮಾಪ್ತವಾನ್ |
ಸಾಧೂನಾಮಾಚರನ್ ಕ್ಷೇಮಂ ದಸ್ಯೂನ್ ಪಾಪಾನ್ನಿವರ್ತಯನ್ ॥24॥
ಕಾಪವ್ಯನು ತನ್ನ ಉತ್ಕೃಷ್ಟ ಕೆಲಸಗಳಿಂದ, ಸಾಧುಜನಗಳಿಗೆ ಕ್ಷೇಮವನ್ನು ಉಂಟು ಮಾಡುತ್ತಾ, ದಸ್ಯುಗಳನ್ನು ಕೆಟ್ಟ ಕೆಲಸಗಳಿಂದ ವಿಮುಖರನ್ನಾಗಿಸುತ್ತಾ ದೊಡ್ಡ ಸಿದ್ಧಿಯನ್ನು ಹೊಂದಿದನು.
ಇದಂ ಕಾಪವ್ಯಚರಿತಂ ಯೋ ನಿತ್ಯ ಅನುಕೀರ್ತಯೇತ್ |
ನಾರಣ್ಯೇಭ್ಯಃ ಸ ಭೂತೇಭ್ಯೋ ಭಯಮಾರ್ಛೇತ್ ಕದಾಚನ ॥25॥
ಭಯಂ ತಸ್ಯ ನ ಮರ್ತ್ಯೇಭ್ಯೋ ನಾಮರ್ತ್ಯೇಭ್ಯಃ ಕಥಂಚನ |
ಅಸತೋ ನಾಸತೋ ರಾಜನ್ ಸ ಹ್ಯರಣ್ಯೇಷು ಗೋಪಿತಾ ॥26॥
ಈ ಕಾಪವ್ಯಚರಿತ್ರೆಯನ್ನು ಯಾರು ಪ್ರತಿದಿನ ನಿತ್ಯ ಕರ್ಮದ ಕಾಲದಲ್ಲಿ ಹೇಳುತ್ತಾರೋ ಅವರು ವನ್ಯಜೀವಿಗಳಿಂದ ಎಂದೂ ಭಯವನ್ನು ಹೊಂದುವುದಿಲ್ಲ. ಅವನಿಗೆ ಮನುಷ್ಯರಿಂದ ಭಯವುಂಟಾಗುವುದಿಲ್ಲ. ದೈವದಿಂದಲೂ ಭಯವುಂಟಾಗುವುದಿಲ್ಲ. ಅವನು ದಸ್ಯುಗಳ ಮತ್ತು ಋಷಿಗಳ ರಕ್ಷಕನಾಗುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಐದನೆಯ ಅಧ್ಯಾಯವು ಮುಗಿಯಿತು.
* * * *
ಆರನೆಯ ಅಧ್ಯಾಯ
ರಾಜ್ಯನಿಧಿಯನ್ನು ಬೆಳೆಸಲು ಅನುಸರಿಸಬೇಕಾದ ನಿಯಮಗಳು.
ಭೀಷ್ಮಃ
ಅತ್ರ ಗಾಥಾ ಬ್ರಹ್ಮಗೀತಾಃ ಕೀರ್ತಯಂತಿ ಪುರಾವಿದಃ |
ಯೇನ ಮಾರ್ಗೇಣ ರಾಜಾನಃ ಕೋಶಂ ಸಂಜನಯಂತಿ ಚ ॥1॥
ರಾಜರು ಯಾವ ಮಾರ್ಗದಿಂದ ಬೊಕ್ಕಸವನ್ನು ಬೆಳೆಸುತ್ತಾರೋ ಆ ಬಗ್ಗೆ ಪೂರ್ವಜ್ಞಾನಿಗಳು ಬ್ರಹ್ಮನು ಹಾಡಿದ ಹಾಡುಗಳನ್ನು ಹೇಳುತ್ತಾರೆ.
ನ ಧನಂ ಯಜ್ಞಶೀಲಾನಾಂ ಹಾರ್ಯಂ ದೇವಸ್ವಮೇವ ತತ್ |

ದಸ್ಯೂನಾಂ ನಿಷ್ಕ್ರಿಯಾಣಾಂ ಚ ಕ್ಷತ್ರಿಯೋ ಹರ್ತುಮರ್ಹತಿ ॥2॥
ಯಜ್ಞವನ್ನು ನಿಷ್ಠೆಯಿಂದ ಆಚರಿಸುವವರ ಧನವನ್ನು ಅಪಹರಿಸಬಾರದು. ಆ ಧನ ದೇವಸ್ವ. ದಸ್ಯುಗಳ ಮತ್ತು ಕರ್ಮಭ್ರಷ್ಟರ ಧನವನ್ನು ಕ್ಷತ್ರಿಯನು ಅಪಹರಿಸಬೇಕು.
ಇಮಾಃ ಪ್ರಜಾಃ ಕ್ಷತ್ರಿಯಾಣಾಂ ರಕ್ಷ್ಯಾಶ್ಚಾದ್ಯಾಶ್ಚ ಭಾರತ |
ಧನಂ ಹಿ ಕ್ಷತ್ರಿಯಸ್ಯೇಹ ದ್ವಿತೀಯಸ್ಯ ನ ವಿದ್ಯತೇ ॥3॥
ಕ್ಷತ್ರಿಯರು ಪ್ರಜೆಗಳನ್ನು ರಕ್ಷಿಸಬೇಕು. ಅವರಿಂದಲೇ ತನಗೆ ಬೇಕಾದ ಧನ ಇತ್ಯಾದಿಗಳನ್ನು ಪಡೆದುಕೊಳ್ಳಬೇಕು. ಎಲ್ಲರ ಧನವೂ ಕ್ಷತ್ರಿಯನಿಗೇ ಸೇರಿದ್ದು. ಬೇರೆಯವರಿಗೆ ಹಣದ ಮೇಲೆ ಯಜಮಾನಿಕೆ ಇಲ್ಲ.
ತದಸ್ಯ ಸ್ಯಾದ್ ಬಲಾರ್ಥಂ ವಾ ಧನಂ ಯಜ್ಞಾರ್ಥಮೇವ ವಾ |
ಅಭೋಜ್ಯಾ ಹ್ಯೋಷಧೀಶ್ಛಿತ್ತ್ವಾ ಭೋಗ್ಯಾ ಏವ ಪಚಂತ್ಯುತ ॥4॥
ರಾಜನ ಧನವು ಸೈನ್ಯಕ್ಕೆ ಮತ್ತು ಯಜ್ಞಗಳಿಗೆ ವಿನಿಯೋಗವಾಗಬೇಕು. ಪೈರಿನ ತಿನ್ನಲಾಗದ ಭಾಗವನ್ನು ಕತ್ತರಿಸಿ ತಿನ್ನಲು ಯೋಗ್ಯವಾದ ಭಾಗವನ್ನು ಬೇಯಿಸುತ್ತಾರೆ.
ಯೋ ವೈ ನ ದೇವಾನ್ನ ಪಿತೄನ್ನ ಮರ್ತ್ಯಾನ್ಹವಿಷಾರ್ಚತಿ |
ಅನಂತಿಕಾಂ ತಾಂ ಧನಿತಾಮಾಹುರ್ವೇದವಿದೋ ಜನಾಃ ॥5॥
ಯಾರು ಹವಿಸ್ಸಿನಿಂದ ದೇವತೆಗಳನ್ನು ಆರಾಧಿಸುವುದಿಲ್ಲವೋ, ಪಿತೃಗಳನ್ನು ಆರಾಧಿಸುವುದಿಲ್ಲವೋ, ಮನುಷ್ಯರನ್ನು ಆರಾಧಿಸುವುದಿಲ್ಲವೋ, ಅಂತಹ ಧನವನ್ನು ಹತ್ತಿರವಿಲ್ಲದ (ಉಪಯೋಗಕ್ಕೆ ಬಾರದ) ಧನ ಎಂದು ವೇದಜ್ಞರು ಹೇಳುತ್ತಾರೆ.
ಹರೇತ್ ತದ್ದ್ರವಿಣಂ ರಾಜನ್ಧಾರ್ಮಿಕಃ ಪೃಥಿವೀಪತಿಃ |
ನ ಹಿ ನ ಪ್ರೀಣಯೇಲ್ಲೋಕಾನ್ನ ಲೋಕೋ ಗರ್ಹತೇ ನೃಪಮ್ ॥6॥
ಆ ಹಣವನ್ನು ಧಾರ್ಮಿಕನಾದ ರಾಜನು ತನ್ನ ವಶಕ್ಕೆ ತೆಗೆದುಕೊಳ್ಳಬೇಕು. ಇದರಿಂದ ಜನರಿಗೆ ಸಂತೋಷವಾಗುತ್ತದೆ. ಜನರು ರಾಜನನ್ನು ನಿಂದಿಸುವುದಿಲ್ಲ.
ಅಸಾಧುಭ್ಯೋ ನಿರಾದಾಯ ಸಾಧುಭ್ಯೋ ಯಃ ಪ್ರಯಚ್ಛತಿ |
ಆತ್ಮಾನಂ ಸಂಕ್ರಮಂ ಕೃತ್ವಾ ಮಧ್ಯೇ ಧರ್ಮವಿದೇವ ಸಃ ॥7॥
ರಾಜನು ಅಸಾಧುಜನಗಳ ಮತ್ತು ಸಾಧುಜನಗಳ ಮಧ್ಯೆ ಸೇತುವೆಯಾಗಬೇಕು. ಅಸಾಧುಜನರ ಸಂಪತ್ತನ್ನು ವಶಪಡಿಸಿಕೊಂಡು ಸಾಧುಜನರಿಗೆ ಕೊಡಬೇಕು. ಹೀಗೆ ಮಾಡುವಾಗ ತಾನು ಪರಮಾತ್ಮನ ಸೇವೆಯನ್ನೇ ಮಾಡುತ್ತಿದ್ದೇನೆ ಎಂದು ಭಾವಿಸಬೇಕು. ಹೀಗೆ ಮಾಡುವವನು ಧರ್ಮವನ್ನು ಸರಿಯಾಗಿ ತಿಳಿದಿದ್ದಾನೆ ಎಂದು ಅರ್ಥ.
ಅದ್ಭಿಸ್ತು ಜಂತವೋ ಯದ್ವತ್ ಶ್ರುತ್ವಾ ವಾಚೋ ಯಥಾ ತಥಾ |
ಅನಿಚ್ಛತಃ ಸಮ್ಭವಂತಿ ತಥಾ ಯಜ್ಞಃ ಪ್ರಜಾಯತೇ ॥8॥
ಮಳೆಗಾಲದಲ್ಲಿ ನೀರಿನಿಂದ ಜಂತುಗಳು ಹುಟ್ಟುವಂತೆ, ಮಾತಾಡಬೇಕೆಂದು ಬಯಸದೆ, ಬಾಲಕನಿಗೆ ಬೇರೆಯವರು ಆಡುತ್ತಿರುವ ಮಾತುಗಳನ್ನು ಕೇಳುತ್ತಾ ಮಾತನಾಡಲು ಬರುವಂತೆ, ಯಜ್ಞಗಳು ಅನಿರೀಕ್ಷಿತವಾಗಿ ಈಶ್ವರೇಚ್ಛೆಯಂತೆ ಸಂಭವಿಸುತ್ತವೆ.
ಯಥೈವ ದಂಶಮಶಕಂ ಯಥಾ ಕೀಟಪಿಪೀಲಿಕಮ್ |
ಸೈವ ವೃತ್ತಿರಯಜ್ಞೇಷು ತಥಾ ಧರ್ಮೋ ವಿಧೀಯತೇ ॥9॥
ಸೊಳ್ಳೆ-ನೊಣಗಳ ಬಗ್ಗೆ ಹೇಗೋ, ಕೀಟ-ಇರುವೆಗಳ ಬಗ್ಗೆ ಹೇಗೋ ಹಾಗೆ ಯಜ್ಞ ವಿರೋಧಿಗಳ ವಿಷಯದಲ್ಲಿ ನಡೆದುಕೊಳ್ಳುವುದು ಧರ್ಮ-ಸರಿಯಾದ ನಡವಳಿಕೆ ಎಂದು ಪ್ರಾಜ್ಞರ ವಿಧಿಯು ಇದೆ.
ಯಥಾ ಹ್ಯಕಸ್ಮಾದ್ಭವತಿ ಭೂಮೌ ಪಾಂಸುತೃಣೋಲಪಮ್ |
ತಥೈವೇಹ ಭವೇದ್ಧರ್ಮಃ ಸೂಕ್ಷ್ಮಃ ಸೂಕ್ಷ್ಮತರೋಽಪಿ ಚ ॥10॥
ಭೂಮಿಯಲ್ಲಿ ಧೂಳು, ಹುಲ್ಲು ಮತ್ತು ಹರಡಿಕೊಳ್ಳುವ ನಯವಾದ ಬಳ್ಳಿಗಳು ಯಾರ ಪ್ರಯತ್ನವಿಲ್ಲದೆ ಸಂಭವಿಸುತ್ತವೆ. ಹಾಗೆಯೇ ಜೀವನದಲ್ಲಿ ಧರ್ಮವು ನಮಗೆ ತಿಳಿಯದೆ ಸೂಕ್ಷ್ಮವಾಗುತ್ತದೆ. ಸೂಕ್ಷ್ಮತರವೂ (ಸೂಕ್ಷ್ಮಕ್ಕಿಂತ ಹೆಚ್ಚು ಸೂಕ್ಷ್ಮವು) ಆಗುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಆರನೆಯ ಅಧ್ಯಾಯವು ಮುಗಿಯಿತು.
* * * *
ಏಳನೆಯ ಅಧ್ಯಾಯ
ಮುಂದೆ ಬರಬಹುದಾದ ಆಪತ್ಅನ್ನು ತಡೆಯುವ ವಿಧಾನ. ಮತ್ಸ್ಯೋಪಾಖ್ಯಾನ.
ಭೀಷ್ಮಃ
ಅನಾಗತವಿಧಾತಾ ಚ ಪ್ರತ್ಯುತ್ಪನ್ನಮತಿಶ್ಚ ಯಃ |
ದ್ವಾವೇತೌ ಸುಖಮೇಧೇತೇ ದೀರ್ಘಸೂತ್ರೀ ವಿನಶ್ಯತಿ ॥1॥
ಮುಂದೆ ಆಗಬಹುದಾದ ಅಪಾಯಗಳಿಗೆ ಮೊದಲೇ ಪರಿಹಾರವನ್ನು ಕಂಡುಕೊಳ್ಳುವವನು (ಅನಾಗತವಿಧಾತಾ) ಮತ್ತು ಒದಗಿ ಬಂದ ಅಪಾಯಕ್ಕೆ ಕೂಡಲೇ ಪರಿಹಾರವನ್ನು ಕಂಡುಕೊಳ್ಳುವವನು (ಪ್ರತ್ಯುತ್ಪನ್ನಮತಿ)- ಇವರಿಬ್ಬರು ಸುಖವಾಗಿ ಅಭಿವೃದ್ಧಿಯನ್ನು ಹೊಂದುತ್ತಾರೆ. ಮಾಡಬೇಕಾದ ಕೆಲಸವನ್ನು ಮುಂದೆ ಹಾಕುವವನು= ವಿಳಂಬ ಮಾಡುವವನು (ದೀರ್ಘಸೂತ್ರೀ) ಅಪಾಯಗಳಿಗೆ ಒಳಗಾಗುತ್ತಾನೆ.
ಅತ್ರೈವ ಚೇದಮವ್ಯಗ್ರಃ ಶೃಣ್ವಾಖ್ಯಾನಮನುತ್ತಮಮ್ |

ದೀರ್ಘಸೂತ್ರಂ ಸಮಾಶ್ರಿತ್ಯ ಕಾರ್ಯಾಕಾರ್ಯವಿನಿಶ್ಚಯೇ ॥2॥
ಕರ್ತವ್ಯ-ಅಕರ್ತವ್ಯಗಳ ಬಗ್ಗೆ ವಿಳಂಬ ಪ್ರವೃತ್ತಿ ಇದ್ದವನ (ದೀರ್ಘಸೂತ್ರಿ ಆಗಿದ್ದವನ) ಕಥೆಯನ್ನು ಹೇಳುತ್ತೇನೆ. ಏಕಾಗ್ರತೆಯಿಂದ ಕೇಳು.
ನಾತಿಗಾಧೇ ಜಲಸ್ಥಾನೇ ಸುಹೃದಃ ಕುಶಲಾಸ್ತ್ರಯಃ |
ಪ್ರಭೂತಮತ್ಸ್ಯೇ ಕೌಂತೇಯ ಬಭೂವುಃ ಸಹಚಾರಿಣಃ ॥3॥
ಅತಿ ಆಳವಲ್ಲದ, ಬಹಳ ಮೀನುಗಳಿದ್ದ ಜಲಾಶಯವೊಂದರಲ್ಲಿ, ಸ್ನೇಹಿತರಾಗಿದ್ದ ಮೂರು ಕುಶಲಮೀನುಗಳು ಸಹಚಾರಿಗಳಾಗಿದ್ದವು.

ಅತ್ರೈಕಃ ಪ್ರಾಪ್ತಕಾಲಜ್ಞೋ ದೀರ್ಘದರ್ಶೀ ತಥಾಪರಃ |
ದೀರ್ಘಸೂತ್ರಶ್ಚ ತತ್ರೈಕಸ್ತ್ರಯಾಣಾಂ ಜಲಚಾರಿಣಾಮ್ ॥4॥
ಆ ಮೂರು ಜಲಚರರಲ್ಲಿ ಒಬ್ಬನು ಅಪಾಯವು ಒದಗಿ ಬಂದಾಗ ಕೂಡಲೇ ಪರಿಹಾರವನ್ನು ಕಂಡುಕೊಳ್ಳಬಲ್ಲವನು (ಪ್ರಾಪ್ತಕಾಲಜ್ಞ ಅಥವಾ ಪ್ರತ್ಯುತ್ಪನ್ನಮತಿ). ಇನ್ನೊಬ್ಬನು ಮುಂದೆ ಆಗಬಹುದಾದ ಅಪಾಯಗಳಿಗೆ ಮೊದಲೇ ಪರಿಹಾರವನ್ನು ಕಂಡುಕೊಳ್ಳುವವನು (ದೀರ್ಘದರ್ಶೀ). ಮತ್ತೊಬ್ಬನು ದೀರ್ಘಸೂತ್ರಿ.
ಕದಾಚಿತ್ತಜ್ಜಲಸ್ಥಾನಂ ಮತ್ಸ್ಯಬಂಧಾಃ ಸಮಂತತಃ |
ನಿಃಸ್ರಾವಯಾಮಾಸುರಥೋ ನಿಮ್ನೇಷು ವಿವಿಧೈರ್ಮುಖೈಃ ॥5॥
ಒಮ್ಮೆ ಮೀನು ಹಿಡಿಯುವವರು ಆ ಜಲಾಶಯದ ಎಲ್ಲ ಭಾಗಗಳಲ್ಲಿದ್ದ ಬೇರೆ ಬೇರೆ ತೂಬುಗಳಿಂದ ನೀರನ್ನು ಹೊರಗೆ ಹರಿಸಿದರು.
ಪ್ರಕ್ಷೀಯಮಾಣಂ ತಂ ಬುದ್ಧ್ವಾ ಜಲಸ್ಥಾನಂ ಭಯಾಗಮೇ |
ಅಬ್ರವೀದ್ ದೀರ್ಘದರ್ಶೀ ತು ತಾವುಭೌ ಸುಹೃದೌ ತದಾ ॥6॥
ಜಲಾಶಯದ ನೀರು ಕಡಿಮೆಯಾಗುತ್ತಿರುವುದನ್ನು ತಿಳಿದ ದೀರ್ಘದರ್ಶಿ ಮೀನು ತಮಗೆ ಭಯವು ಬಂದಾಗ ಇಬ್ಬರು ಸ್ನೇಹಿತರಿಗೆ ಹೇಳಿತು.
ಇಯಮಾಪತ್ ಸಮುತ್ಪನ್ನಾ ಸರ್ವೇಷಾಂ ಸಲಿಲೌಕಸಾಮ್ |
ಶೀಘ್ರಮನ್ಯತ್ರ ಗಚ್ಛಾಮಃ ಪಂಥಾ ಯಾವನ್ನ ದುಷ್ಯತಿ ॥7॥
ಎಲ್ಲ ಜಲನಿವಾಸಿಗಳಿಗೆ ಆಪತ್ತು ಬಂದಿದೆ. ಜಲಮಾರ್ಗವು ನಾಶವಾಗುವ ಮೊದಲೇ, ಬೇಗನೆ ಬೇರೆ ಕಡೆ ಹೊರಟು ಹೋಗೋಣ.
ಅನಾಗತಮನರ್ಥಂ ಹಿ ಸುನಯೈರ್ಯಃ ಪ್ರಬಾಧತೇ |
ನ ಸ ಸಂಶಯಮಾಪ್ನೋತಿ ರೋಚತಾಂ ವಾಂ ವ್ರಜಾಮಹೇ ॥8॥
ಮುಂದೆ ಬರುವ ಅನರ್ಥವನ್ನು ಸರಿಯಾದ ಉಪಾಯಗಳಿಂದ ಯಾರು ಪರಿಹರಿಸುವವನೋ ಅವನು ಗೊಂದಲಗಳಿಗೆ ಒಳಗಾಗುವುದಿಲ್ಲ.ಇಲ್ಲಿಂದ ಹೊರಟು ಹೋಗೋಣ. ನಿಮಗೆ ಸಮ್ಮತವೇ?
ದೀರ್ಘಸೂತ್ರಸ್ತು ಯಸ್ತತ್ರ ಸೋಽಬ್ರವೀತ್ ಸಮ್ಯಗುಚ್ಯತೇ |
ನ ತು ಕಾರ್ಯಾ ತ್ವರಾ ಯಾವದಿತಿ ಮೇ ನಿಶ್ಚಿತಾ ಮತಿಃ ॥9॥
ದೀರ್ಘಸೂತ್ರಿಯು ಹೇಳಿತು. `ನೀನು ಸರಿಯಾಗಿ ಹೇಳಿರುವಿ'. `ಆದರೆ ತುರ್ತಾಗಿ ನಿರ್ಗಮಿಸುವ ಅವಶ್ಯಕತೆ ಇಲ್ಲ'. ಇದು ನನ್ನ ದೃಢ ಅಭಿಪ್ರಾಯ ಎಂದು ಹೇಳಿತು.
ಅಥ ಸಂಪ್ರತಿಪತ್ತಿಜ್ಞಃ ಪ್ರಾಬ್ರವೀದ್ದೀರ್ಘದರ್ಶಿನಮ್ |
ಪ್ರಾಪ್ತೇ ಕಾಲೇ ನ ಮೇ ಕಿಂಚಿನ್ನ್ಯಾಯತಃ ಪರಿಹಾಸ್ಯತೇ ॥10॥
ವರ್ತಮಾನವನ್ನು ಸರಿಯಾಗಿ ನಿರ್ವಹಿಸುವ ಪ್ರತ್ಯುತ್ಪನ್ನಮತಿಯು ದೀರ್ಘದರ್ಶಿಗೆ ಹೇಳಿತು. ಕಾಲವು ಬಂದಾಗ ನ್ಯಾಯವಾದ ಯಾವುದನ್ನೂ ನಾನು ಬಿಡುವುದಿಲ್ಲ.
ಏವಮುಕ್ತೋ ನಿರಾಕ್ರಾಮದ್ ದೀರ್ಘದರ್ಶೀ ಮಹಾಮತಿಃ |
ಜಗಾಮ ಸ್ರೋತಸೈಕೇನ ಗಂಭೀರಸಲಿಲಾಶಯಮ್ ॥11॥
ಹೀಗೆ ಹೇಳಲ್ಪಟ್ಟ, ಮಹಾಮತಿಯಾದ ದೀರ್ಘದರ್ಶಿಯು ನೀರಿನ ಒಂದು ಹರಿವಿನ ಮೂಲಕ ಆಳವಾದ ಜಲಾಶಯಕ್ಕೆ ಹೋಗಿ ಸೇರಿತು.
ತತಃ ಪ್ರಸ್ರುತತೋಯಂ ತಂ ಸಮೀಕ್ಷ್ಯ ಸಲಿಲಾಶಯಮ್ |
ಬಬಂಧುರ್ವಿವಿಧೈರ್ಯೋಗೈರ್ಮತ್ಸ್ಯಾನ್ಮತ್ಸ್ಯೋಪಜೀವಿನಃ ॥12॥
ಅನಂತರ ನೀರು ಹೊರಗೆ ಹರಿದುಹೋಗಿ ಖಾಲಿಯಾದ ಜಲಾಶಯವನ್ನು ನೋಡಿ ಆ ಬೆಸ್ತರು (ಜೀವನಕ್ಕಾಗಿ ಮೀನುಗಳನ್ನು ಅವಲಂಬಿಸಿದವರು) ನಾನಾ ಸಾಧನಗಳಿಂದ ಆ ಮೀನುಗಳನ್ನು ಕಟ್ಟಿದರು.
ವಿಲೋಡ್ಯಮಾನೇ ತಸ್ಮಿಂಸ್ತು ಸ್ರುತತೋಯೇ ಜಲಾಶಯೇ |
ಅಗಚ್ಛದ್ಗ್ರಹಣಂ ತತ್ರ ದೀರ್ಘಸೂತ್ರಃ ಸಹಾಪರೈಃ ॥13॥
ಆ ಖಾಲಿ ಜಲಾಶಯವನ್ನು ಬೆಸ್ತರು ಲೂಟಿಗೈಯ್ಯುತ್ತಿದ್ದಾಗ ದೀರ್ಘಸೂತ್ರಿಯ ಬೇರೆ ಮೀನುಗಳೊಂದಿಗೆ ಬಂಧನಕ್ಕೆ ಒಳಗಾಯಿತು.
ಉದ್ಧರಣಂ ಕ್ರಿಯಮಾಣಂಚ ಮತ್ಸ್ಯಾನಾಂ ವೀಕ್ಷ್ಯ ರಶ್ಮಿಭಿಃ |
ಪ್ರವಿಶ್ಯಾಂತರಮನ್ಯೇಷಾಮಗ್ರಸತ್ ಪ್ರತಿಪತ್ತಿಮಾನ್ ॥14॥
(ಮೀನುಗಳನ್ನು) ಕಟ್ಟುವ ದಾರವನ್ನು ಮೀನುಗಳ ಮೇಲೆ ಹಾಕುತ್ತಿರುವುದನ್ನು ನೋಡಿದ ಪ್ರತ್ಯುತ್ಪನ್ನಮತಿಯು ಬೇರೆ ಮೀನುಗಳ ಮಧ್ಯೆ ಸೇರಿ ಕಟ್ಟುದಾರವನ್ನು ತನ್ನ ಬಾಯೊಳಗೆ ಸೇರಿಸಿತು.
ಗ್ರಸ್ತಮೇವ ತು ತದ್ ದಾನಮಗೃಹೀತ್ವಾ ಸುಪ್ತ ಏವ ಸಃ |

ಸರ್ವಾನೇವ ತು ತಾಂಸ್ತತ್ರ ತೇ ವಿದುರ್ಗ್ರಥಿತಾ ಇತಿ ॥15॥
ಬಾಯಲ್ಲಿ ಸೇರಿಸಿಕೊಂಡಿದ್ದ ಆ ಕಟ್ಟು ದಾರವನ್ನು ಹಾಗೆಯೇ ಇಟ್ಟುಕೊಂಡಿತ್ತು. ಬೆಸ್ತರು ತಾವು ಎಲ್ಲ ಮೀನುಗಳನ್ನು ಹಿಡಿದಿದ್ದೇವೆ ಎಂದು ತಿಳಿದರು.
ತತಃ ಪ್ರಕ್ಷಾಲ್ಯಮಾನೇಷು ಮತ್ಸ್ಯೇಷು ವಿಮಲೇ ಜಲೇ |
ತ್ಯಕ್ತ್ವಾ ರಜ್ಜುಂ ವಿಮುಕ್ತೋಽಭೂಚ್ಚೀಘ್ರಂ ಸಂಪ್ರತಿಪತ್ತಿಮಾನ್॥16॥
ಅನಂತರ ಬೆಸ್ತರು ಮೀನುಗಳನ್ನು ಶುದ್ಧ ನೀರಿನಲ್ಲಿ ತೊಳೆಯುತ್ತಿರುವಾಗ ಪ್ರತ್ಯುತ್ಪನ್ನಮತಿಯು ಕಟ್ಟುದಾರವನ್ನು ತ್ಯಜಿಸಿ ನೀರೊಳಗೆ ಸೇರಿ ಬಿಡುಗಡೆಯನ್ನು ಹೊಂದಿತು.
ದೀರ್ಘಸೂತ್ರಸ್ತು ಮಂದಾತ್ಮಾ ಹೀನಬುದ್ಧಿರಚೇತನಃ |
ಮರಣಂ ಪ್ರಾಪ್ತವಾನ್ಮೂಢೋ ಯಥೈವೋಪಹತೇಂದ್ರಿಯಃ ॥17॥
ಸೋಮಾರಿಯೂ, ಹೀನಬುದ್ಧಿಯೂ, ಜಡವೂ ಆದ ದೀರ್ಘಸೂತ್ರಿಯು, ಇಂದ್ರಿಯಶಕ್ತಿಯನ್ನು ಕಳೆದುಕೊಂಡ ಮೂಢನಂತೆ ಮರಣಹೊಂದಿದನು.
ಏವಂ ಪ್ರಾಪ್ತತಮಂ ಕಾಲಂ ಯೋ ಮೋಹಾನ್ನಾವಬುಧ್ಯತೇ |
ಸ ವಿನಶ್ಯತಿ ವೈ ಕ್ಷಿಪ್ರಂ ದೀರ್ಘಸೂತ್ರೋ ಯಥಾ ಝಷಃ ॥18॥
ಹೀಗೆ ಒದಗಿ ಬಂದ (ಆಪತ್) ಕಾಲವನ್ನು ಯಾರು ಮೋಹಪರವಶನಾಗಿ ತಿಳಿದುಕೊಳ್ಳುವುದಿಲ್ಲವೋ ಅವನು ದೀರ್ಘಸೂತ್ರಿ ಮೀನಿನಂತೆ ನಾಶವಾಗುತ್ತಾನೆ.
ಆದೌ ನ ಕುರುತೇ ಶ್ರೇಯಃ ಕುಶಲೋಽಸ್ಮೀತಿ ಯಃ ಪುಮಾನ್ |
ಸ ತು ಸಂಶಯಮಾಪ್ನೋತಿ ಯಥಾ ಸಂಪ್ರತಿಪತ್ತಿಮಾನ್ ॥19॥
ಯಾವ ಮನುಷ್ಯನು `ನನಗೆ ಎಲ್ಲ ಗೊತ್ತಿದೆ' ಎಂಬ ಭಾವದಿಂದ ಆರಂಭದಲ್ಲೇ ಒಳಿತನ್ನು ಮಾಡಿಕೊಳ್ಳುವುದಿಲ್ಲವೋ ಅವನು ಪ್ರಾಣಾಪಾಯಕ್ಕೆ ಒಳಗಾಗುತ್ತಾನೆ. ಪ್ರತ್ಯುತ್ಪನ್ನಮತಿ ಮೀನಿನಂತೆ.
ಅನಾಗತವಿಧಾನಂ ತು ಯೋ ನರಃ ಕುರುತೇ ಕ್ಷಮಮ್ |
ಶ್ರೇಯಃ ಪ್ರಾಪ್ನೋತಿ ಸೋಽತ್ಯರ್ಥಂ ದೀರ್ಘದರ್ಶೀ ಯಥಾ ಹ್ಯಸೌ ॥
ಮುಂದೆ ಸಂಭವಿಸಬಹುದಾದ ಅನರ್ಥಗಳಿಗೆ ಸರಿಯಾದ ಪರಿಹಾರವನ್ನು ಯಾರು ಮಾಡುತ್ತಾರೋ ಅವರು ಬಹಳ ಶ್ರೇಯಸ್ಅನ್ನು ಹೊಂದುತ್ತಾರೆ. ಈ ದೀರ್ಘದರ್ಶಿಯಂತೆ.
ಕಲಾಃ ಕಾಷ್ಠಾ ಮುಹೂರ್ತಾಶ್ಚ ದಿನಾ ನಾಡ್ಯಃ ಕ್ಷಣಾ ಲವಾಃ |
ಪಕ್ಷಾ ಮಾಸಾಶ್ಚ ಋತವಃ ಕಾಲಃ ಸಂವತ್ಸರಾಣಿ ಚ॥21॥
ಪೃಥಿವೀ ದೇಶ ಇತ್ಯುಕ್ತಃ ಸ ಚ ಕಾಲೋಽನುಭಿದ್ಯತೇ |
ಅಭಿಪ್ರೇತಾರ್ಥಸಿದ್ಧ್ಯರ್ಥಂ ನ್ಯಾಯತೋ ಯಚ್ಚ ತತ್ತಥಾ ॥22॥
ಕಲಾ, ಕಾಷ್ಠ, ಮುಹೂರ್ತ, ಹಗಲು, ರಾತ್ರಿ, ಕ್ಷಣ, ಲವ, ಪಕ್ಷ, ಮಾಸ, ಋತು, ಸಂವತ್ಸರ- ಇವುಗಳು ಕಾಲ. ಪೃಥಿವಿಯು ದೇಶ. ಇಷ್ಟಾರ್ಥ ಸಿದ್ಧಿಗಾಗಿ ಕಾಲದಲ್ಲಿ ಎರಡು ವಿಧವು ಗುರುತಿಸಲ್ಪಟ್ಟಿದೆ. (1) ನ್ಯಾಯಕಾಲ (2) ಅನ್ಯಾಯಕಾಲ (ಗ್ರಹ, ನಕ್ಷತ್ರ, ತಿಥಿ, ಕರಣಗಳ ಸ್ಥಿತಿಯಿಂದ ಅನುಕೂಲವಾದ ಕಾಲ ನ್ಯಾಯಕಾಲ, ಪ್ರತಿಕೂಲವಾದ ಕಾಲ ಅನ್ಯಾಯಕಾಲ).
ಏತೌ ಧರ್ಮಾರ್ಥಶಾಸ್ತ್ರೇಷು ಮೋಕ್ಷಶಾಸ್ತ್ರೇಷು ಚರ್ಷಿಭಿಃ |
ಪ್ರಧಾನಾವಿತಿ ನಿರ್ದಿಷ್ಟೌ ಕಾಮೇಶಾಭಿಮತೌ ನೃಣಾಮ್ ॥23॥
ಇವೆರಡು= ಕಾಲ ಮತ್ತು ದೇಶಗಳು- ಪ್ರಧಾನ ಎಂದು ಧರ್ಮಶಾಸ್ತ್ರಗಳಲ್ಲಿ, ಅರ್ಥಶಾಸ್ತ್ರಗಳಲ್ಲಿ, ಮೋಕ್ಷಶಾಸ್ತ್ರಗಳಲ್ಲಿ ಮತ್ತು ಕಾಮಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ. ಇದನ್ನು ಜನರೂ ಒಪ್ಪಿದ್ದಾರೆ.
ಪರೀಕ್ಷ್ಯಕಾರೀ ಯುಕ್ತಸ್ತು ಸಮ್ಯಕ್ಸಮುಪಪಾದಯೇತ್ |
ದೇಶಕಾಲಾವಭಿಪ್ರೇತೌ ತಾಭ್ಯಾಂ ಫಲಮವಾಪ್ನುಯಾತ್ ॥24॥
ಪರೀಕ್ಷಿಸಿ ಕಾರ್ಯಗಳನ್ನು ಕೈಗೊಳ್ಳುವ, ಯೋಗವಂತನು ತನಗೆ ಅನುಕೂಲವಾದ ದೇಶ-ಕಾಲಗಳನ್ನು ಚೆನ್ನಾಗಿ ಪರಿಶೀಲಿಸಿ ಉಪಪಾದಿಸಬೇಕು. ಹೀಗೆ ಆರಿಸಿದ ದೇಶ- ಕಾಲಗಳಿಂದ ಒಳ್ಳೆಯ ಫಲವನ್ನು ಪಡೆಯುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಏಳನೆಯ ಅಧ್ಯಾಯವು ಮುಗಿಯಿತು.
* * * *
ಎಂಟನೆಯ ಅಧ್ಯಾಯ
ಯುಧಿಷ್ಠಿರನ ಪ್ರಶ್ನೆಗಳು. ಭೀಷ್ಮರ ಉತ್ತರಗಳು. ತನಗೆ ಲಾಭವಾಗುವಂತೆ ಶತ್ರುಗಳ ಜೊತೆ ಸಂಧಾನವನ್ನು ಮಾಡಿಕೊಳ್ಳಬೇಕು. ಬೆಕ್ಕು-ಇಲಿಗಳ ಕಥೆ.
ಯುಧಿಷ್ಠಿರಃ
ಸರ್ವತ್ರ ಬುದ್ಧಿಃ ಕಥಿತಾ ಶ್ರೇಷ್ಠಾ ತೇ ಭರತರ್ಷಭ |
ಅನಾಗತಾ ತಥೋತ್ಪನ್ನಾ ದೀರ್ಘಸೂತ್ರಾ ವಿನಾಶಿನೀ ॥1॥
ಯುಧಿಷ್ಠಿರ ಭರತಕುಲಶ್ರೇಷ್ಠ! ಎಲ್ಲ ದೇಶ-ಕಾಲಗಳಿಗೆ ಅನ್ವಯಿಸುವ, ಶ್ರೇಷ್ಠವಾದ ಅನಾಗತ (ಅಪಾಯವು ಸಂಭವಿಸುವ ಮೊದಲೇ ಪರಿಹಾರವನ್ನು ತಂದುಕೊಳ್ಳುವ) ಬುದ್ಧಿಯು ಮತ್ತು ಪ್ರತ್ಯುತ್ಪನ್ನಮತಿಯು ನಿನ್ನಿಂದ ಹೇಳಲ್ಪಟ್ಟಿತು. ವಿನಾಶಕಾರಿಯಾದ

ದೀರ್ಘಸೂತ್ರ (ಮಾಡಬೇಕಾದ ಕೆಲಸವನ್ನು ಮುಂದೆಹಾಕುವ) ಬುದ್ಧಿಯೂ ನಿನ್ನಿಂದ ವಿವರಿಸಲ್ಪಟ್ಟಿತು.
ತದಿಚ್ಛಾಮಿ ಪರಾಂ ಬುದ್ಧಿಂ ಶ್ರೋತುಂ ಭರತಸತ್ತಮ |
ಯಥಾ ರಾಜಾ ನ ಮುಹ್ಯೇತ ಶತ್ರುಭಿಃ ಪರಿವಾರಿತಃ ||2||
ಭರತಕುಲಶ್ರೇಷ್ಠ! ಶತ್ರುಗಳು ಸುತ್ತುವರಿದಾಗ ರಾಜನು ಮೋಹಕ್ಕೆ (ಏನು ಮಾಡಬೇಕೆಂದು ತಿಳಿಯದ ಸ್ಥಿತಿಗೆ ಅಥವಾ ವಿಕಲ್ಪಸ್ಥಿತಿಗೆ) ಒಳಗಾಗದಂತಹ ಉತ್ಕೃಷ್ಟ ಬುದ್ಧಿಯನ್ನು= ವಿಚಾರವನ್ನು ನಿಮ್ಮಿಂದ ಕೇಳಲು ಬಯಸುತ್ತೇನೆ.
ಧರ್ಮಾರ್ಥಕುಶಲ ಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಪೃಚ್ಛಾಮಿ ತ್ವಾ ಕುರುಶ್ರೇಷ್ಠ ತನ್ಮೇ ವ್ಯಾಖ್ಯಾತುಮರ್ಹಸಿ ||3||
ಧರ್ಮಾರ್ಥಕುಶಲ! ಪ್ರಾಜ್ಞ! ಸರ್ವಶಾಸ್ತ್ರವಿಶಾರದ! ಕುರುಶ್ರೇಷ್ಠ! ನಿಮ್ಮನ್ನು ಪ್ರಾರ್ಥಿಸುತ್ತಿದ್ದೇನೆ. ದಯವಿಟ್ಟು ನನಗಾಗಿ ವಿವರಿಸಿರಿ.
ಶತ್ರುಭಿರ್ಬಹುಭಿರ್ಗ್ರಸ್ತೋ ಯಥಾ ವರ್ತೇತ ಪಾರ್ಥಿವಃ |
ಏತದಿಚ್ಛಾಮ್ಯಹಂ ಶ್ರೋತುಂ ಸರ್ವಮೇವ ಯಥಾವಿಧಿ ||4||
ಶತ್ರುಗಳಿಂದ ಆಕ್ರಮಿಸಲ್ಪಟ್ಟ ರಾಜನ ವರ್ತನೆಯು ಹೇಗೆ ಇರಬೇಕು? ಈ ಬಗ್ಗೆ ಎಲ್ಲವನ್ನೂ ಕಾರ್ಯಸಾಧುವಾಗುವಂತೆ ನಿಮ್ಮಿಂದ ಕೇಳಲು ಬಯಸುತ್ತೇನೆ.
ವಿಷಮಸ್ಥಂ ಹಿ ರಾಜಾನಂ ಶತ್ರವಃ ಪರಿಪಂಥಿನಃ |
ಬಹವೋಽಪ್ಯೇಕಮುದ್ಧರ್ತುಂ ಯತಂತೇ ಪೂರ್ವತಾಪಿತಾಃ ||5||
ವಿಷಮ ಪರಿಸ್ಥಿತಿಯಲ್ಲಿರುವ ಏಕಾಕಿಯಾದ ರಾಜನನ್ನು ಕೂಡ, ಅವನಿಂದ ಹಿಂದೆ ತಾಪಕ್ಕೆ ಒಳಗಾದ ಬಹಳ ಶತ್ರುಗಳು ಒಗ್ಗಟ್ಟಾಗಿ ಉಚ್ಚಾಟಿಸಲು ಪ್ರಯತ್ನಿಸುತ್ತಾರೆ.
ಸರ್ವತಃ ಪ್ರಾರ್ಥ್ಯಮಾನೇನ ದುರ್ಬಲೇನ ಮಹಾಬಲೈಃ |
ಏಕೇನೈವಾಸಹಾಯೇನ ಶಕ್ಯಂ ಸ್ಥಾತುಂ ಕಥಂ ಭವೇತ್ ||6||
ದುರ್ಬಲನೂ, ಏಕಾಕಿಯೂ, ಸಹಾಯರಹಿತನೂ ಆದವನನ್ನು ಮಹಾಬಲಶಾಲಿಗಳು ಎಲ್ಲ ರೀತಿಯಿಂದಲೂ ನುಂಗಲು ಬಯಸುತ್ತಿರುವಾಗ ಸ್ಥಿರವಾಗಿ ನಿಲ್ಲುವುದು ಹೇಗೆ?
ಕಥಂ ಮಿತ್ರಮರಿಂ ಚೈವ ವಿಂದೇತ ಭರತರ್ಷಭ |
ಚೇಷ್ಟಿತವ್ಯಂ ಕಥಂ ಚಾತ್ರ ಶತ್ರೋರ್ಮಿತ್ರಸ್ಯ ಚಾಂತರೇ ||7||
ಭರತಕುಲಶ್ರೇಷ್ಠನೇ! ಮಿತ್ರರನ್ನು ಹೇಗೆ ಸಂಪಾದಿಸಬೇಕು? ಶತ್ರುವನ್ನು ಹೇಗೆ ತನ್ನ ವಶಕ್ಕೆ ಪಡೆಯಬೇಕು. ಶತ್ರು-ಮಿತ್ರನ ಮಧ್ಯೆ ಹೇಗೆ ವ್ಯವಹರಿಸಬೇಕು?
ಅಜಾತರಕ್ಷಣೋ ರಾಜನ್ನಮಿತ್ರೇ ಮಿತ್ರತಾಂ ಗತೇ |
ಕಥಂ ನು ಪುರುಷಃ ಕುರ್ಯಾತ್ಕಿಂ ವಾ ಕೃತ್ವಾ ಸುಖೀ ಭವೇತ್ ||8||
ಮಿತ್ರನಾಗಿದ್ದವನು ಶತ್ರುವಾದಾಗ ರಕ್ಷಣೆಯ ವ್ಯವಸ್ಥೆಯಿಲ್ಲದ ಪುರುಷನು ಹೇಗೆ ನಡೆದುಕೊಳ್ಳಬೇಕು? ಏನು ಮಾಡಿದರೆ ಸುಖಿಯಾಗಬಹುದು?
ವಿಗ್ರಹಂ ಕೇನ ವಾ ಕುರ್ಯಾತ್ ಸಂಧಿಂ ವಾ ಕೇನ ಯೋಜಯೇತ್ |
ಕಥಂ ವಾ ಶತ್ರುಮಧ್ಯಸ್ಥೋ ವರ್ತೇತಾಬಲವಾನಿತಿ ||9||
ಯಾರ ಜತೆ ಕಲಹವನ್ನು ಮಾಡಬೇಕು? ಯಾರ ಜತೆ ಸಂಧಾನವನ್ನು ಮಾಡಿಕೊಳ್ಳಬೇಕು? ಬಲಹೀನನು ಶತ್ರುಗಳ ಮಧ್ಯೆ ಹೇಗೆ ವರ್ತಿಸಬೇಕು?
ಏತದ್ವೈ ಸರ್ವಕೃತ್ಯಾನಾಂ ಪರಂ ಕೃತ್ಯಂ ಪರಂತಪ |
ನೈತಸ್ಯ ಕಶ್ಚಿದ್ ವಕ್ತಾಸ್ತಿ ಶ್ರೋತಾ ಚಾಪಿ ಸುದುರ್ಲಭಃ ||10||
ಋತೇ ಶಾಂತನವಾದ್ ಭೀಷ್ಮಾತ್ ಸತ್ಯಸಂಧಾಜ್ಜಿತೇಂದ್ರಿಯಾತ್ |
ತದನ್ವಿಷ್ಯ ಮಹಾಬಾಹೋ ಸರ್ವಮೇತದ್ ವದಸ್ವ ಮೇ ||11||
ಶತ್ರುಗಳನ್ನು ಸುಡುವವನೇ! ಇದು= ನಾನು ಕೇಳಿರುವ ಪ್ರಶ್ನೆಗಳಿಗೆ ಉತ್ತರ ಕಥನವು ಬೇರೆ ಎಲ್ಲ ಕರ್ತವ್ಯಗಳಿಗಿಂತ ಶ್ರೇಷ್ಠ. ಸತ್ಯಸಂಧನೂ, ಜಿತೇಂದ್ರಿಯನೂ ಆದ ಶಂತನುಪುತ್ರ ಭೀಷ್ಮನನ್ನು ಬಿಟ್ಟು ಬೇರೆ ಯಾರೂ ಇವುಗಳ ಬಗ್ಗೆ ಸರಿಯಾಗಿ ಹೇಳುವವರು ಇಲ್ಲ. ಕೇಳಿಸಿಕೊಳ್ಳುವವರೂ ಬಹಳ ದುರ್ಲಭ. ಆದ್ದರಿಂದ ಮಹಾಬಾಹು ಭೀಷ್ಮರೇ! ದಯವಿಟ್ಟು ಈ ವಿಷಯಗಳನ್ನು ವಿಮರ್ಶಿಸಿ ನನಗೆ ಹೇಳಿ.
ಭೀಷ್ಮಃ
ತ್ವದ್ಯುಕ್ತೋಽಯಮನುಪ್ರಶ್ನೋ ಯುಧಿಷ್ಠಿರ ಗುಣೋದಯಃ |
ಶೃಣು ಮೇ ಪುತ್ರ ಕಾರ್ತ್ಸ್ನ್ಯೇನ ಗುಹ್ಯಮಾಪತ್ಸು ಭಾರತ ||12||
ಭೀಷ್ಮ ಯುಧಿಷ್ಠಿರ! ನಿನ್ನ ಅನುಪ್ರಶ್ನೆಯು= ಹಿಂದೆ ನಾನು ಹೇಳಿದ ವಿಚಾರಗಳನ್ನು ಅನುಸರಿಸಿ ಕೇಳಿರುವ ಪ್ರಶ್ನೆಯು- ಯುಕ್ತವಾಗಿದೆ. ಅಭ್ಯುದಯಕ್ಕೆ ಅನುಕೂಲವಾಗಿದೆ. ಪುತ್ರ! ಭರತಕುಲ ಸಂಜಾತ! ಆಪತ್ಕಾಲದಲ್ಲಿ ಮಾಡಬೇಕಾದ ರಹಸ್ಯಗಳನ್ನು ಹೇಳುತ್ತೇನೆ. ಸರಿಯಾಗಿ ಕೇಳು.
ಅಮಿತ್ರೋ ಮಿತ್ರತಾಂ ಯಾತಿ ಮಿತ್ರಂ ಚಾಪಿ ಪ್ರದುಷ್ಯತಿ |
ಸಾಮರ್ಥ್ಯಯೋಗಾತ್ ಕಾರ್ಯಾಣಾಂ ತದ್ಗತ್ಯಾ ಹಿ ಸದಾ ಗತಿಃ ||13||
ಒಬ್ಬನ ಸಾಮರ್ಥ್ಯಕ್ಕೆ ಅನುಗುಣವಾಗಿ ಶತ್ರುಗಳು ಮಿತ್ರರಾಗುತ್ತಾರೆ. ಮಿತ್ರರು ಶತ್ರುಗಳಾಗುತ್ತಾರೆ. ಸಾಮರ್ಥ್ಯದ ಗತಿಗೆ (ಏರಿಳಿತಕ್ಕೆ) ತಕ್ಕಂತೆ ಕಾರ್ಯಗಳ ಗತಿಯು ಇರುತ್ತದೆ.

ತಸ್ಮಾದ್ ವಿಶ್ವಸಿತವ್ಯಂ ಚ ವಿಗ್ರಹಂ ಚ ಸಮಾಚರೇತ್ |
ದೇಶಂ ಕಾಲಂ ಚ ವಿಜ್ಞಾಯ ಕಾರ್ಯಾಕಾರ್ಯವಿನಿಶ್ಚಯೇ ॥14॥
ಆದ್ದರಿಂದ ಕಾರ್ಯ-ಅಕಾರ್ಯಗಳ ನಿಶ್ಚಯವಿದ್ದಾಗ ದೇಶ-ಕಾಲಗಳನ್ನು ತಿಳಿದು ವಿಶ್ವಾಸವನ್ನು ತೋರಬೇಕು. ಕಲಹವನ್ನು ಮಾಡಬೇಕು.
ಸಂಧಾತವ್ಯಂ ಬುಧೈರ್ನಿತ್ಯಂ ವ್ಯವಸ್ಯಂ ಚ ಹಿತಾರ್ಥಿಭಿಃ |
ಅಮಿತ್ರೈರಪಿ ಸಂಧೇಯಂ ಪ್ರಾಣಾ ರಕ್ಷ್ಯಾಶ್ಚ ಭಾರತ ॥15॥
ತಿಳಿದವರ (ಲೋಕಹಿತವನ್ನು ಬಲ್ಲವರ) ಜೊತೆ, ಹಿತೈಷಿಗಳ ಜೊತೆ ತಪ್ಪದೇ ಸಂಧಾನವನ್ನು ಮಾಡಿಕೊಳ್ಳಬೇಕು. ಭರತಕುಲಸಂಜಾತ! ಶತ್ರುಗಳ ಜೊತೆಯೂ ಸಂಧಾನ ಮಾಡಿಕೊಳ್ಳಬೇಕು. ಪ್ರಾಣಗಳನ್ನು ರಕ್ಷಿಸಬೇಕು.
ಯೋ ಹ್ಯಮಿತ್ರೈರ್ನರೋ ನಿತ್ಯಂ ನ ಸಂದಧ್ಯಾದಪಂಡಿತಃ |
ನ ಸೋಽರ್ಥಮಾಪ್ನುಯಾತ್ ಕಿಂಚಿತ್ ಫಲಾನ್ಯಪಿ ಚ ಭಾರತ ॥16 |
ಯಾವ ನರನು ಶತ್ರುಗಳ ಜೊತೆ ಸಂಧಾನ ಮಾಡಿಕೊಳ್ಳುವುದಿಲ್ಲವೋ ಅವನು ದಡ್ಡ. ಭಾರತ! ಅವನು ಸಂಪತ್ತನ್ನು ಹೊಂದುವುದಿಲ್ಲ. ಬೇರೆ ಯಾವುದೇ ಫಲಗಳನ್ನು ಪಡೆಯಲಾರ.
ಯಸ್ತ್ವಮಿತ್ರೇಣ ಸಂಧತ್ತೇ ಮಿತ್ರೇಣ ಚ ವಿರುಧ್ಯತೇ |
ಅರ್ಥಯುಕ್ತಿಂ ಸಮಾಲೋಕ್ಯ ಸುಮಹದ್ ವಿಂದತೇ ಫಲಮ್ ॥17॥
ಯಾರು ತನಗೆ ಆಗುವ ಲಾಭವನ್ನು ಗಮನಿಸಿ ಶತ್ರುಗಳ ಜೊತೆ ಸಂಧಾನವನ್ನು ಮಾಡಿಕೊಳ್ಳುವನೋ, ಮಿತ್ರರನ್ನು ವಿರೋಧಿಸುವನೋ ಅವನು ಭಾರಿ ಫಲವನ್ನು ಹೊಂದುತ್ತಾನೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮಾರ್ಜಾರಸ್ಯ ಚ ಸಂವಾದಂ ನ್ಯಗ್ರೋಧೇ ಮೂಷಕಸ್ಯ ಚ ॥18॥
ಈ ವಿಷಯದಲ್ಲಿ ಪೂರ್ವಕಥೆಯೊಂದನ್ನು ಹೇಳುತ್ತಾರೆ. ಈ ಕಥೆ ಆಲದಮರದಲ್ಲಿ ಬೆಕ್ಕು- ಇಲಿಗಳ ಸಂವಾದ.
ವನೇ ಮಹತಿ ಕಸ್ಮಿಂಶ್ಚಿನ್ನ್ಯಗ್ರೋಧಃ ಸುಮಹಾನಭೂತ್ |
ಲತಾಜಾಲಪರಿಚ್ಛನ್ನೋ ನಾನಾದ್ವಿಜಗಣಾಯುತಃ ॥19॥
ಒಂದು ದೊಡ್ಡವನದಲ್ಲಿ ದೊಡ್ಡ ಆಲದ ಮರವಿತ್ತು. ನಾನಾ ಬಳ್ಳಿಗಳು ಅದಕ್ಕೆ ಹಬ್ಬಿದ್ದವು. ನಾನಾ ಹಕ್ಕಿಗಳು ಅಲ್ಲಿ ವಾಸಿಸುತ್ತಿದ್ದವು.
ಸ್ಕಂಧವಾನ್ ಮೇಘಸಂಕಾಶಃ ಶೀತಚ್ಛಾಯೋ ಮನೋರಮಃ |
ವೈತಂತ್ಯಮಭಿತೋ ಜಾತಸ್ತರುರ್ವ್ಯಾಲಮೃಗಾಕುಲಃ ॥20॥
ದೊಡ್ಡ ದೊಡ್ಡ ರೆಂಬೆಗಳನ್ನು ಹೊಂದಿದ್ದ ಆ ಮರವು ದೊಡ್ಡ ಮೋಡದಂತೆ ಇತ್ತು. ಅದರ ನೆರಳು ತಂಪಾಗಿ ಮನೋಹರವಾಗಿತ್ತು. ಸರ್ಪಗಳ, ಮೃಗಗಳ ದಟ್ಟಣೆ (ಸಾಂದ್ರತೆ) ಯನ್ನು ಹೊಂದಿದ್ದ ಆ ಮರವು ವೈತಂತ್ಯ ಎಂಬ ಸ್ಥಳದ ಸಮೀಪದಲ್ಲಿ ಬೆಳೆದಿತ್ತು.
ತಸ್ಯ ಮೂಲಂ ಸಮಾಶ್ರಿತ್ಯ ಕೃತ್ವಾ ಶತಮುಖಂ ಬಿಲಮ್ |
ವಸತಿ ಸ್ಮ ಮಹಾಪ್ರಾಜ್ಞಃ ಪಲಿತೋ ನಾಮ ಮೂಷಕಃ ॥21॥
ಮಹಾಪ್ರಾಜ್ಞನಾದ ಪಲಿತ ಎಂಬ ಇಲಿಯು ಆ ಮರದ ಬುಡದಲ್ಲಿ ನೂರು ದ್ವಾರಗಳ ಬಿಲವನ್ನು ಮಾಡಿಕೊಂಡು ವಾಸಿಸುತ್ತಿತ್ತು.
ಶಾಖಾಶ್ಚ ತಸ್ಯ ಸಂಶ್ರಿತ್ಯ ವಸತಿ ಸ್ಮ ಸುಖಂ ತದಾ |
ಲೋಮಶೋ ನಾಮ ಮಾರ್ಜಾರಃ ಪಕ್ಷಿಸತ್ತ್ವವಸಾದಕಃ ॥22॥
ಪಕ್ಷಿಗಳ ಪ್ರಾಣಹರಣವನ್ನು ಮಾಡುತ್ತಿದ್ದ ಲೋಮಶ ಎಂಬ ಬೆಕ್ಕು ಆ ಮರದ ಕೊಂಬೆಗಳನ್ನು ಆಶ್ರಯಿಸಿ ಸುಖವಾಗಿ ವಾಸಿಸುತ್ತಿತ್ತು.
ತತ್ರ ಚಾಗತ್ಯ ಚಂಡಾಲೋ ವೈತಂತ್ಯಕೃತಕೇತನಃ |
ಅಯೋಜಯತ್ತಮುನ್ಮಾಥಂ ನಿತ್ಯಮಸ್ತಂ ಗತೇ ರವೌ ॥23॥
ವೈತಂತ್ಯ ಎಂಬ ಸ್ಥಳದಲ್ಲಿ ವಸತಿಯನ್ನು ಮಾಡಿಕೊಂಡಿದ್ದ ಚಂಡಾಲನೊಬ್ಬನು ಪ್ರತಿದಿನ ಸೂರ್ಯಾಸ್ತದ ಅನಂತರ ಅಲ್ಲಿಗೆ ಬಂದು ಬಲೆಯನ್ನು ಹಾಕುತ್ತಿದ್ದನು.
ತತ್ರ ಸ್ನಾಯುಮಯಾನ್ ಪಾಶಾನ್ ಯಥಾವತ್ ಸನ್ನಿಧಾಯ ಸಃ |
ಗೃಹಂ ಗತ್ವಾ ಸುಖಂ ಶೇತೇ ಪ್ರಭಾತಾಮೇತಿ ಶರ್ವರೀಮ್ ॥24॥
(ಪ್ರಾಣಿಗಳ) ನರಗಳಿಂದ ಮಾಡಿದ್ದ ಹಗ್ಗಗಳನ್ನು ರಾತ್ರಿಯಲ್ಲಿ ಅಲ್ಲಿ ಸರಿಯಾಗಿ ಇಟ್ಟು ಮನೆಗೆ ಹೋಗಿ ಸುಖವಾಗಿ ಮಲಗುತ್ತಿದ್ದನು. ಮುಂಜಾನೆ ಅಲ್ಲಿಗೆ ಹೋಗುತ್ತಿದ್ದನು.
ತತ್ರ ಸ್ಮ ನಿತ್ಯಂ ಬಧ್ಯಂತೇ ನಕ್ತಂ ಬಹುವಿಧಾ ಮೃಗಾಃ |
ಕದಾಚಿತ್ತತ್ರ ಮಾರ್ಜಾರಸ್ತ್ವಪ್ರಮತ್ತೋಽಪ್ಯಬಧ್ಯತ ॥25॥
ಅಲ್ಲಿ ಪ್ರತಿದಿನ ರಾತ್ರಿಕಾಲದಲ್ಲಿ ಬಹುವಿಧ ಪ್ರಾಣಿಗಳು ಬಂಧನಕ್ಕೆ ಒಳಗಾಗುತ್ತಿದ್ದವು. ಅಲ್ಲಿ ಎಚ್ಚರದಿಂದ ಇರುತ್ತಿದ್ದ ಬೆಕ್ಕು ಕೂಡ ಒಮ್ಮೆ ಬಂಧನಕ್ಕೊಳಗಾಯಿತು.
ತಸ್ಮಿನ್ ಬದ್ಧೇ ಮಹಾಪ್ರಾಜ್ಞಃ ಶತ್ರೌ ನಿತ್ಯಾತತಾಯಿನಿ |
ತಂ ಕಾಲಂ ಪಲಿತೋ ಜ್ಞಾತ್ವಾ ವಿಚಚಾರ ಸುನಿರ್ಭಯಃ ॥26॥
ಶತ್ರುವೂ, ಸದಾ ಆತತಾಯಿಯೂ (ಕ್ರೂರ ವಿಧಾನಗಳಿಂದ ಹಾನಿ ಮಾಡುವವನು) ಆಗಿದ್ದ ಆ ಬೆಕ್ಕು ಬಂಧನಕ್ಕೆ ಒಳಗಾದಾಗ, ಇದನ್ನು ತಿಳಿದನು. ಮಹಾಪ್ರಾಜ್ಞನಾದ ಪಲಿತ (ಇಲಿಯು) ಏನೂ ಭಯವಿಲ್ಲದೆ ಸಂಚರಿಸಿತು.
ತೇನಾನುಚರತಾ ತಸ್ಮಿನ್ ವನೇ ವಿಶ್ವಸ್ತಚಾರಿಣಾ |
ಭಕ್ಷಂ ವಿಚರಮಾಣೇನ ನಚಿರಾದ್ದೃಷ್ಟಮಾಮಿಷಮ್ ॥27॥

ಆ ವನದಲ್ಲಿ ಭಯವಿಲ್ಲದೆ ಸಂಚರಿಸುತ್ತಿದ್ದ, ಆಹಾರವನ್ನು ಹುಡುಕುತ್ತಿದ್ದ ಆ ಇಲಿಗೆ ಮಾಂಸದ ತುಂಡು ಕಾಣಿಸಿತು.
ಸ ತಮುನ್ಮಾಥಮಾರುಹ್ಯ ತದಾಮಿಷಮಭಕ್ಷಯತ್ |
ತಸ್ಯೋಪರಿ ಸಪತ್ನಸ್ಯ ಬದ್ಧಸ್ಯ ಮನಸಾ ಹಸನ್ ॥28॥
ಇಲಿಯು ಆ ಬಲೆಯನ್ನು ಏರಿ, ಅಲ್ಲಿ ಬಂಧನದಲ್ಲಿದ್ದ ತನ್ನ ವೈರಿಯಾದ ಬೆಕ್ಕನ್ನು ಮನಸ್ಸಿನಲ್ಲಿ ಅಣಕಿಸುತ್ತಾ ಆ ಮಾಂಸವನ್ನು ತಿಂದಿತು.
ಆಮಿಷೇ ತು ಪ್ರಸಕ್ತಃ ಸ ಕದಾಚಿದವಲೋಕಯನ್ |
ಅಪಶ್ಯದಪರಂ ಘೋರಮಾತ್ಮನಃ ಶತ್ರುಮಾಗತಮ್॥29॥
ಮಾಂಸದಲ್ಲಿ ನಿರತವಾಗಿದ್ದ ಆ ಇಲ್ಲಿ ಒಂದು ಸಲ ಬೇರೆ ಕಡೆ ನೋಡಿದಾಗ ಬರುತ್ತಿರುವ ತನ್ನ ಇನ್ನೊಬ್ಬ ಘೋರಶತ್ರುವನ್ನು ನೋಡಿತು.
ಶರಪ್ರಸೂನಸಂಕಾಶಂ ಮಹೀವಿವರಶಾಯಿನಮ್ |
ನಕುಲಂ ಹರಿಕಂ ನಾಮ ಚಪಲಂ ತಾಮ್ರಲೋಚನಮ್ ॥30॥
ಆ ಶತ್ರು ಶರ ಎಂಬ ಹುಲ್ಲಿನ ಹೂವಿನಂತಿದ್ದ, ಭೂಮಿಯ ಬಿಲದಲ್ಲಿ ವಾಸ ಮಾಡುವ, ಕೆಂಪು ಕಣ್ಣಿನ, ಚಪಲ ಸ್ವಭಾವದ ಹರಿಕ ಎಂಬ ಹೆಸರಿನ ಮುಂಗಸಿ.
ತೇನ ಮೂಷಕಗಂಧೇನ ತ್ವರಮಾಣಮುಪಾಗತಮ್ |
ಭಕ್ಷಾರ್ಥಂ ಲೇಲಿಹದ್ ವಕ್ತ್ರಂ ಭೂಮಾವೂರ್ಧ್ವಮುಖಂ ಸ್ಥಿತಮ್ ॥31॥
ಇಲಿಯ ವಾಸನೆಯಿಂದ ತ್ವರೆಯಿಂದ ಬಂದು ನಿಂತಿರುವ, ತಿನ್ನುವುದಕ್ಕಾಗಿ ಬಾಯನ್ನು ಆಡಿಸುತ್ತಿರುವ, ಮುಖವನ್ನು ಮೇಲೆತ್ತಿ ನೆಲದ ಮೇಲೆ ನಿಂತಿರುವ (ಮುಂಗಸಿಯನ್ನು ಇಲಿಯು ನೋಡಿತು).
ಶಾಖಾಗತಮರಿಂ ಚಾನ್ಯಮಪಶ್ಯತ್ ಕೋಟರಾಲಯಮ್ |
ಉಲೂಕಂ ಚಂದ್ರಕಂ ನಾಮ ತೀಕ್ಷ್ಣತುಂಡಂ ಕ್ಷಪಾಚರಮ್ ॥32॥
ಆಲದ ಮರದ ಪೊಟರೆಯಲ್ಲಿ ವಾಸಿಸುವ, ಆಗ ಮರದ ಕೊಂಬೆಯ ಮೇಲೆ ಕುಳಿತಿದ್ದ, ರಾತ್ರಿ ಸಂಚಾರಿಯಾದ, ತೀಕ್ಷ್ಣಕೊಕ್ಕಿನ ಇನ್ನೊಂದು ಶತ್ರುವನ್ನು (ಇಲಿಯು) ನೋಡಿತು. ಆ ಶತ್ರು ಚಂದ್ರಕ ಎಂಬ ಹೆಸರಿನ ಗೂಬೆ.
ಗತಸ್ಯ ವಿಷಯಂ ತಸ್ಯ ನಕುಲೋಲೂಕಯೋಸ್ತದಾ |
ಅಥಾಸ್ಯಾಸೀದಿಯಂ ಚಿಂತಾ ತತ್ ಪ್ರಾಪ್ಯ ಸುಮಹದ್ಭಯಮ್ ॥33॥
ಮುಂಗಸಿ ಮತ್ತು ಗೂಬೆಗಳ ಕಣ್ಣಿಗೆ ಬಿದ್ದಿರುವ, ಭಾರಿ ಭಯಕ್ಕೊಳಗಾದ ಆ ಇಲಿಗೆ ಆಗ ಮುಂದೆ ವಿವರಿಸಲ್ಪಡುವ ಆಲೋಚನೆಯು ಉಂಟಾಯಿತು.
ಆಪದ್ಯಸ್ಯಾಂ ಸುಕಷ್ಟಾಯಾಂ ಮರಣೇ ಸಮುಪಸ್ಥಿತೇ |
ಸಮಂತಾದ್ಭಯ ಉತ್ಪನ್ನೇ ಕಥಂ ಕಾರ್ಯಂ ಹಿತೈಷಿಣಾ ॥34॥
ಬಹಳ ಕಷ್ಟದ ಈ ಆಪತ್ಸ್ಥಿತಿಯಲ್ಲಿ, ಮರಣವೇ ಎದುರಾದಾಗ, ಎಲ್ಲ ಕಡೆಯಿಂದಲು ಭಯವೇ ಹುಟ್ಟಿದಾಗ ಹಿತವನ್ನು ಬಯಸುವವನು ಏನು ಮಾಡಬೇಕು?
ಸ ತಥಾ ಸರ್ವತೋ ರುದ್ಧಃ ಸರ್ವತ್ರ ಸಮದರ್ಶನಃ |
ಅಭವದ್ ಭಯಸಂತಪ್ತಶ್ಚಕ್ರೇ ಚೇಮಾಂ ಪರಾಂ ಗತಿಮ್ ॥35॥
ಹಾಗೆ ಎಲ್ಲ ಕಡೆಯಿಂದಲೂ ನಿರೋಧಕ್ಕೆ ಒಳಗಾದ, ಎಲ್ಲ ಕಡೆಯೂ ಒಂದೇ ತರಹದ ಸ್ಥಿತಿಯನ್ನು ಕಾಣುತ್ತಿದ್ದ, ಭಯ ಸಂತಪ್ತವಾದ ಆ ಇಲಿಯು ಈ (ಮುಂದೆ ಹೇಳುವ) ಪರಮಚಿಂತನೆಯನ್ನು ಮಾಡಿತು.
ಆಪನ್ನಾಶಾಯ ಭೂಯಿಷ್ಠಂ ಶಂಕನೀಯಂ ಚ ಜೀವಿತಮ್ |
ಸಮಂತಸಂಶಯಾ ಚೇಯಮಸ್ಮಾನಾಪದುಪಸ್ಥಿತಾ ॥36॥
ಪುಷ್ಕಲಿ ಭೋಜನವು ಒದಗಿ ಬಂದಾಗ ನನಗೆ ಬದುಕೇ ಸಂಶಯಾಸ್ಪದವಾಗಿದೆ. ಎಲ್ಲ ಕಡೆಯಿಂದಲೂ ಪ್ರಾಣಸಂಶಯವನ್ನೇ ಉಂಟುಮಾಡುತ್ತಿರುವ ಈ ಆಪತ್ತು ನನಗೆ ಒದಗಿ ಬಂದಿದೆ.
ಗತಂ ಹಿ ಸಹಸಾ ಭೂಮಿಂ ನಕುಲೋ ಮಾಂ ಸಮಾಪ್ನುಯಾತ್ |
ಉಲೂಕಶ್ಚೇಹ ತಿಷ್ಠಂತಂ ಮಾರ್ಜಾರಃ ಪಾಶಸಂಕ್ಷಯಾತ್ ॥37॥
ನಾನು ಕೂಡಲೇ ಭೂಮಿಗೆ ಹೋದರೆ ಮುಂಗಸಿಯು ನನ್ನನ್ನು ಹಿಡಿಯುತ್ತದೆ. ಇಲ್ಲೇ ಇದ್ದರೆ ಗೂಬೆಯು ನನ್ನನ್ನು ಹಿಡಿಯುತ್ತದೆ. ಬಲೆಯ ಪಾಶಗಳನ್ನು ಕತ್ತರಿಸಿ ಒಳಗೆ ಹೋದರೆ ಬೆಕ್ಕು ನನ್ನನ್ನು ಹಿಡಿಯುತ್ತದೆ.
ನ ತ್ವೇವಾಸ್ಮದ್ವಿಧಃ ಪ್ರಾಜ್ಞಃ ಸಮ್ಮೋಹಂ ಗಂತುಮರ್ಹತಿ |
ಕರಿಷ್ಯೇ ಜೀವಿತೇ ಯತ್ನಂ ಯಾವದುಚ್ಛ್ವಾಸನಿಗ್ರಹಮ್ ॥38॥
ನನ್ನಂತಹ ಪ್ರಾಜ್ಞನು ಸಮ್ಮೋಹಕ್ಕೆ ಒಳಗಾಗಬಾರದು. ಉಸಿರಿನ ನಿಗ್ರಹವಾಗುವವರೆಗೂ ಬದುಕಿ ಉಳಿಯಲು ಪ್ರಯತ್ನಿಸುತ್ತೇನೆ.
ನ ಹಿ ಬುದ್ಧ್ಯಾನ್ವಿತಾಃ ಪ್ರಾಜ್ಞಾ ನೀತಿಶಾಸ್ತ್ರವಿಶಾರದಾಃ |
ಸಂಭ್ರಮಂತ್ಯಾಪದಂ ಪ್ರಾಪ್ಯ ಮಹತೋಽರ್ಥಾನವಾಪ್ಯ ಚ ॥39॥
ಬುದ್ಧಿವಂತರಾದ ಪ್ರಾಜ್ಞರು, ನೀತಿಶಾಸ್ತ್ರವಿಶಾರದರು ಆಪತ್ತಿಗೆ ಒಳಗಾದಾಗ ಮತ್ತು ಭಾರಿ ಸಂಪತ್ತನ್ನು ಹೊಂದಿದಾಗ ಗಡಿಬಿಡಿಗೆ ಒಳಗಾಗುವುದಿಲ್ಲ.
ನ ತ್ವನ್ಯಾಮಿಹ ಮಾರ್ಜಾರಾದ್ ಗತಿಂ ಪಶ್ಯಾಮಿ ಸಾಂಪ್ರತಮ್ |
ವಿಷಮಸ್ಥೋ ಹ್ಯಯಂ ಜಂತುಃ ಕೃತ್ಯಂ ಚಾಸ್ಯ ಮಹನ್ಮಯಾ ॥40॥

ಈಗ ನನಗೆ ಈ ಬೆಕ್ಕೇ ಗತಿ. ಬೇರೆ ಯಾವ ಗತಿಯೂ ಕಾಣುವುದಿಲ್ಲ. ಈ ಪ್ರಾಣಿಯೂ (ಬೆಕ್ಕು) ವಿಷಮಸ್ಥಿತಿಗೆ ಒಳಗಾಗಿದ. ನನ್ನಿಂದ ಈ ಪ್ರಾಣಿಗೆ ಬಹಳ ಪ್ರಯೋಜನವಿದೆ.
ಜೀವಿತಾರ್ಥೀ ಕೃತಸ್ತ್ವದ್ಯ ಪ್ರಾರ್ಥಿತಃ ಶತ್ರುಭಿಸ್ತ್ರಿಭಿಃ |
ತಸ್ಮಾದಿಮಮಹಂ ಶತ್ರುಂ ಮಾರ್ಜಾರಂ ಸಂಶ್ರಯಾಮಿ ವೈ ॥41॥
ಮೂರು ಶತ್ರುಗಳು ಈಗ ನನ್ನನ್ನು ಬಯಸುತ್ತಿದ್ದಾರೆ. ನಾನು ಬದುಕಲು ಬಯಸುತ್ತಿದ್ದೇನೆ. ಆದ್ದರಿಂದ ನಾನು ಈ ಶತ್ರು ಬೆಕ್ಕನ್ನೇ ಅವಲಂಬಿಸುತ್ತೇನೆ.
ಕ್ಷತ್ರವಿದ್ಯಾಂ ಸಮಾಶ್ರಿತ್ಯ ಹಿತಮಸ್ಯೋಪಧಾರಯೇ |
ಯೇನೇಮಂ ಶತ್ರುಸಂಘಾತಂ ಅರಿಪೂರ್ವೇಣ ವಂಚಯೇ ॥42॥
ಘಾಸಿಗೆ ಒಳಗಾದವರನ್ನು ರಕ್ಷಿಸುವವನು ಕ್ಷತ್ರ, ಅವನ ಕೌಶಲವು ಕ್ಷತ್ರವಿದ್ಯೆ. ಈಗ ಕ್ಷತ್ರವಿದ್ಯೆಯನ್ನು ಬಳಸಿ ಇವನಿಗೆ (ಬೆಕ್ಕಿಗೆ) ಹಿತವನ್ನು ಮಾಡುತ್ತೇನೆ. ಈ ಪ್ರಥಮ ಶತ್ರುವಿನ ಸಹಾಯದಿಂದ ಶತ್ರುಸಮೂಹವನ್ನು ವಂಚಿಸುತ್ತೇನೆ.
ಅಯಮತ್ಯಂತಶತ್ರುರ್ಮೇ ವೈಷಮ್ಯಂ ಪರಮಂ ಗತಃ |
ಮೂಢೋ ಗ್ರಾಹಯಿತುಂ ಸ್ವಾರ್ಥಂ ಸಂಗತ್ಯಾ ಯದಿ ಶಕ್ಯತೇ ॥43॥
ಈ ಬೆಕ್ಕು ನನ್ನ ಮಹಾಶತ್ರು, ಇವನು ಬಹಳ ವಿಷಮಸ್ಥಿತಿಯಲ್ಲಿ ಇದ್ದಾನೆ. ಬಹಳ ಮೂಢ. ಇವನ ಜೊತೆ ಸೇರಿ ನನ್ನ ಕೆಲಸವನ್ನು ಸಾಧಿಸಲು ಶಕ್ಯವೇ ಎಂದು ನೋಡುತ್ತೇನೆ.
ಕದಾಚಿದ್ವ್ಯಸನಂ ಪ್ರಾಪ್ಯ ಸಂಧಿಂ ಕುರ್ಯಾನ್ಮಯಾ ಸಹ |
ಬಲಿನಾ ಸನ್ನಿವಿಷ್ಟಸ್ಯ ಶತ್ರೋರಪಿ ಪರಿಗ್ರಹಃ |
ಕಾರ್ಯ ಇತ್ಯಾಹುರಾಚಾರ್ಯಾ ವಿಷಮೇ ಜೀವಿತಾರ್ಥಿನಾ ॥44॥
ಬೆಕ್ಕೂ ಕಷ್ಟಕ್ಕೆ ಒಳಗಾಗಿರುವುದರಿಂದ ನನ್ನ ಜೊತೆ ಸಂಧಿಯನ್ನು ಮಾಡಿಕೊಳ್ಳಬಹುದು. ಕಷ್ಟಕಾಲದಲ್ಲಿ ಪ್ರಾಣವನ್ನು ಉಳಿಸಿಕೊಳ್ಳಲು ಬಯಸುವವನು, ತಾನು ಬಲಶಾಲಿಯೇ ಆಗಿದ್ದರೂ, ಹತ್ತಿರ ಇರುವ ಶತ್ರುವಿನ ಜೊತೆ ಸಂಧಿಯನ್ನು ಮಾಡಿಕೊಳ್ಳಬೇಕು ಎಂದು ಬಲ್ಲವರು ಹೇಳುತ್ತಾರೆ.
ಮೂಢೋ ಹಿ ಪಂಡಿತಃ ಶತ್ರುರ್ನ ಹಿ ಮಿತ್ರಮಪಂಡಿತಃ |
ಮಮ ಹ್ಯಮಿತ್ರೇ ಮಾರ್ಜಾರೇ ಜೀವಿತಂ ಸಂಪ್ರತಿಷ್ಠಿತಮ್ ॥45॥
ಮೋಹಕ್ಕೆ ಒಳಗಾದ ಪಂಡಿತ ಶತ್ರುವು ಹೆಚ್ಚು ಅನುಕೂಲ. ಪಂಡಿತನಲ್ಲದ ಮಿತ್ರನು (ಅನುಕೂಲ) ಅಲ್ಲ. ನನ್ನ ಉಳಿವು ಶತ್ರುವಾದ ಬೆಕ್ಕನ್ನು ಅವಲಂಬಿಸಿದೆ.
ಹಂತೈನಂ ಸಂಪ್ರವಕ್ಷ್ಯಾಮಿ ಹೇತುಮಾತ್ಮಾಭಿರಕ್ಷಣೇ |
ಅಪೀದಾನೀಮಯಂ ಶತ್ರುಃ ಸಂಗತ್ಯಾ ಪಂಡಿತೋ ಭವೇತ್ ॥46॥
ಹಾ! ಆತ್ಮರಕ್ಷಣೆಗಾಗಿ ಒಂದು ಯುಕ್ತಿಯನ್ನು ಇವನಿಗೆ ಹೇಳುತ್ತೇನೆ. ಈ ಶತ್ರುವು, ಈಗ ಸಂಗತಿಯಿಂದಾಗಿ ಇಬ್ಬರ ಕಾರ್ಯಸಿದ್ದಿಯೂ ಆಗುವುದರಿಂದ, ಪಂಡಿತನಾಗ ಬಹುದು= ಅರ್ಥಮಾಡಿಕೊಳ್ಳಬಹುದು.
ತತೋಽರ್ಥಗತಿತತ್ತ್ವಜ್ಞಃ ಸಂಧಿವಿಗ್ರಹಕಾಲವಿತ್ |
ಸಾಂತ್ವಪೂರ್ವಮಿದಂ ವಾಕ್ಯಂ ಮಾರ್ಜಾರಂ ಮೂಷಕೋಽಬ್ರವೀತ್ ॥
ಅನಂತರ ಕಾರ್ಯಸಿದ್ಧಿಯ ಮರ್ಮವನ್ನು ತಿಳಿದಿದ್ದ, ಸಂಧಿಕಾಲ ಮತ್ತು ವಿಗ್ರಹಕಾಲವನ್ನು ತಿಳಿದಿದ್ದ (ಯಾವಾಗ ಸಂಧಾನವನ್ನು ಮಾಡಿಕೊಳ್ಳಬೇಕು, ಯಾವಾಗ ಕಲಹ ಮಾಡಬೇಕು ಎಂದು ತಿಳಿದಿದ್ದ) ಇಲಿಯು ಮನವೊಲಿಸುವ ರೀತಿಯಲ್ಲಿ ಬೆಕ್ಕಿಗೆ ಹೇಳಿತು.
ಸೌಹೃದೇನಾಭಿಭಾಷೇ ತ್ವಾ ಕಚ್ಚಿನ್ಮಾರ್ಜಾರ ಜೀವಸಿ |
ಜೀವಿತಂ ಹಿ ತವೇಚ್ಛಾಮಿ ಶ್ರೇಯಃ ಸಾಧಾರಣಂ ಹಿ ನೌ ॥48॥
ಬೆಕ್ಕೆ! ಸ್ನೇಹದಿಂದ ನಿನ್ನೊಡನೆ ಮಾತನಾಡುತ್ತಿದ್ದೇನೆ. ಬದುಕಿರುವಿ ತಾನೆ? ನಿನ್ನ ಪ್ರಾಣ ಉಳಿಯಬೇಕು ಎಂದು ನನ್ನ ಇಚ್ಛೆ. ಪ್ರಾಣದ ಉಳಿವು ನಮ್ಮಿಬ್ಬರಿಗೂ ಸಮಾನವಾದ ಶ್ರೇಯಸ್ಸು, ಅಲ್ಲವೇ?
ನ ತೇ ಸೌಮ್ಯ ವಿಷತ್ತವ್ಯಂ ಜೀವಿಷ್ಯಸಿ ಯಥಾ ಪುರಾ |
ಅಹಂ ತ್ವಾಮುದ್ಧರಿಷ್ಯಾಮಿ ಪ್ರಾಣಾನ್ ಜಹ್ಯಾಂ ಹಿ ತೇ ಕೃತೇ ॥49॥
ಸೌಮ್ಯ! ನೀನು ವಿಷಾದಿಸಬೇಡ, ನೀನು ಇಷ್ಟು ದಿನ ಹೇಗೋ ಹಾಗೆ ಮುಂದೆಯೂ ಜೀವಿಸುವಿ. ನಾನು ನಿನ್ನನ್ನು ಉದ್ಧರಿಸುತ್ತೇನೆ. ನಿನಗಾಗಿ ಪ್ರಾಣಗಳನ್ನೇ ತ್ಯಜಿಸುವೆನು.
ಅಸ್ತಿ ಕಶ್ಚಿದುಪಾಯೋಽತ್ರ ಪುಷ್ಕಲಃ ಪ್ರತಿಭಾತಿ ಮಾಮ್ |
ಯೇನ ಶಕ್ಯಸ್ತ್ವಯಾ ಮೋಕ್ಷಃ ಪ್ರಾಪ್ತುಂ ಶ್ರೇಯೋ ಯಥಾ ಮಯಾ ॥
ಒಂದು ಪುಷ್ಕಲ ಉಪಾಯವು ನನಗೆ ತೋರುತ್ತಿದೆ. ಆ ಉಪಾಯದಿಂದ ನೀನು (ಈ ಬಲೆಯಿಂದ) ಬಿಡುಗಡೆಯನ್ನು ಹೊಂದಬಹುದು. ನಾನೂ ಶ್ರೇಯಸ್ ಅನ್ನು ಹೊಂದಬಹುದು.
ಮಯಾ ಹ್ಯುಪಾಯೋ ದೃಷ್ಟೋಽಯಂ ವಿಚಾರ್ಯ ಮತಿಮಾತ್ಮನಃ |
ಆತ್ಮಾರ್ಥಂ ಚ ತ್ವದರ್ಥಂ ಚ ಶ್ರೇಯಃ ಸಾಧಾರಣಂ ಹಿ ನೌ ॥51॥
ನಾನು ಸರಿಯಾಗಿ ವಿಮರ್ಶಿಸಿ ಈ ಉಪಾಯವನ್ನು ಕಂಡುಕೊಂಡಿದ್ದೇನೆ. ಈ ಉಪಾಯದಿಂದ ನನಗೂ ಶ್ರೇಯಸ್ ಆಗುತ್ತದೆ. ನಿನಗೂ ಶ್ರೇಯಸ್ ಆಗುತ್ತದೆ.
ಇದಂ ಹಿ ನಕುಲೋಲೂಕಂ ಪಾಪಬುದ್ಧ್ಯಾಭಿತಃ ಸ್ಥಿತಮ್ |
ನ ಧರ್ಷಯತಿ ಮಾರ್ಜಾರ ತೇನ ಮೇ ಸ್ವಸ್ತಿ ಸಾಂಪ್ರತಮ್ ॥52॥

ಬೆಕ್ಕೆ! ದುಷ್ಟಬುದ್ಧಿಯ ಈ ಮುಂಗುಸಿ ಮತ್ತು ಗೂಬೆಗಳು ಹತ್ತಿರವೇ ಇವೆ. ಆದರೂ ಇನ್ನೂ ನನ್ನನ್ನು ಆಕ್ರಮಿಸಿಲ್ಲ. ಆದ್ದರಿಂದ ಈಗ ನಾನು ಕ್ಷೇಮದಿಂದಿದ್ದೇನೆ.
ಕೂಜಂಶ್ಚಪಲನೇತ್ರೋಽಯಂ ಕೌಶಿಕೋ ಮಾಂ ನಿರೀಕ್ಷತೇ |
ನಗಶಾಖಾಗ್ರಗಃ ಪಾಪಸ್ತಸ್ಯಾಹಂ ಭೃಶಮುದ್ವಿಜೇ ॥53॥
ಮರದ ರೆಂಬೆಯ ತುದಿಯಲ್ಲಿರುವ, ಚಂಚಲಕಣ್ಣಿನ, ಪಾಪಿ ಗೂಬೆಯು ಕೂಗುತ್ತ ನನ್ನನ್ನು ನೋಡುತ್ತಿದೆ. ಆದ್ದರಿಂದ ನಾನು ಬಹಳ ಉದ್ವಿಗ್ನನಾಗಿದ್ದೇನೆ.
ಸತಾಂ ಸಾಪ್ತಪದಂ ಸಖ್ಯಂ ಸವಾಸೋ ಮೇಽಸಿ ಪಂಡಿತಃ |
ಸಾಂವಾಸ್ಯಕಂ ಕರಿಷ್ಯಾಮಿ ನಾಸ್ತಿ ತೇ ಮೃತ್ಯುತೋ ಭಯಮ್ ॥54॥
ಸಜ್ಜನರು ಏಳು ಹೆಜ್ಜೆ ಜೊತೆಗೆ ನಡೆದರೆ ಅವರು ಮಿತ್ರರಾಗುತ್ತಾರೆ. ಪಂಡಿತನಾದ ನೀನು ನನ್ನ ಸಹವಾಸಿಯಾಗಿರುವಿ. ಸಹವಾಸಿಯ ಕರ್ತವ್ಯವನ್ನು ಮಾಡುತ್ತೇನೆ. ನಿನಗೆ ಸಾವಿನ ಭಯವಿಲ್ಲ.
ನ ಹಿ ಶಕ್ನೋಷಿ ಮಾರ್ಜಾರ ಪಾಶಂ ಛೇತ್ತುಂ ವಿನಾ ಮಯಾ |
ಅಹಂ ಛೇತ್ಸ್ಯಾಮಿ ತೇ ಪಾಶಂ ಯದಿ ಮಾಂ ತ್ವಂ ನ ಹಿಂಸಸಿ ॥55॥
ನನ್ನ ಸಹಾಯವಿಲ್ಲದೆ ನೀನು ಬಲೆಯ ಪಾಶವನ್ನು ಕತ್ತರಿಸಲಾರೆ. ನೀನು ನನ್ನನ್ನು ಹಿಂಸಿಸದಿದ್ದರೆ ನಾನು ನಿನ್ನ ಪಾಶವನ್ನು ಕತ್ತರಿಸುತ್ತೇನೆ.
ತ್ವಮಾಶ್ರಿತೋ ನಗಸ್ಯಾಗ್ರಂ ಮೂಲಂ ತ್ವಹಮುಪಾಶ್ರಿತಃ |
ಚಿರೋಷಿತಾವಿಹಾವಾಂ ವೈ ವೃಕ್ಷೇಽಸ್ಮಿನ್ ವಿದಿತಂ ಹಿ ತೇ ॥56॥
ನೀನು ಮರದ ತುದಿಯಲ್ಲಿ ವಾಸಿಸುವಿ. ನಾನು ಮರದ ಮೂಲವನ್ನು ಆಶ್ರಯಿಸಿದ್ದೇನೆ. ಇಲ್ಲಿ ನಾವು ಬಹಳ ಕಾಲದಿಂದ ವಾಸಿಸುತ್ತಿದ್ದೇವೆ. ನಿನಗೆ ತಿಳಿದೇ ಇದೆ.
ಯಸ್ಮಿನ್ನಾಶ್ವಸತೇ ಕಶ್ಚಿದ್ಯಶ್ಚ ನಾಶ್ವಸತೇ ಕ್ವಚಿತ್ |
ನ ತೌ ಧೀರಾಃ ಪ್ರಶಂಸಂತಿ ನಿತ್ಯಮುದ್ವಿಗ್ನಚೇತಸೌ ॥57॥
ಯಾರು ಒಬ್ಬನಲ್ಲಿ ನಂಬಿಕೆ ಇಡುವುದಿಲ್ಲವೋ, ಯಾರು ಒಬ್ಬನಿಗೆ ಭರವಸೆಯನ್ನು ಕೊಡುವುದಿಲ್ಲವೋ, ಆದ್ದರಿಂದ ಯಾವಾಗಲೂ ಉದ್ವಿಗ್ನ ಮನಸ್ಸಿನ ಅವರಿಬ್ಬರನ್ನು ಪ್ರಾಜ್ಞರು ಮೆಚ್ಚುವುದಿಲ್ಲ.
ತಸ್ಮಾದ್ ವಿವರ್ಧತಾಂ ಪ್ರೀತಿಃ ಸತ್ಯಾ ಸಂಗತಿರಸ್ತು ನೌ |
ಕಾಲಾತೀತಮಪಾರ್ಥಂ ಹಿ ನ ಪ್ರಶಂಸಂತಿ ಪಂಡಿತಾಃ ॥58॥
ಆದ್ದರಿಂದ ನಮ್ಮಿಬ್ಬರಲ್ಲಿ ಪ್ರೀತಿಯು ಬೆಳೆಯಲಿ. ನಮ್ಮಿಬ್ಬರ ಸಂಬಂಧವು ಸತ್ಯವಾಗಲಿ (ಪ್ರಯೋಜನಕರವಾಗಲಿ). ಕಾಲಬಾಧಿತವಾದ, ಅರ್ಥಹೀನ ವಿಚಾರಗಳನ್ನು - ನಡವಳಿಕೆಗಳನ್ನು ಪಂಡಿತರು ಮೆಚ್ಚುವುದಿಲ್ಲ.
ಅರ್ಥಯುಕ್ತಿಮಿಮಾಂ ತಾವದ್ಯಥಾಭೂತಾಂ ನಿಶಾಮಯ |
ತವ ಜೀವಿತಮಿಚ್ಛನ್ ವೈ ತ್ವಂ ಮಮೇಚ್ಛಸಿ ಜೀವಿತಮ್ ॥59॥
ನಾನು ನಿನ್ನ ಉಳಿವನ್ನು ಬಯಸುತ್ತಿದ್ದೇನೆ. ನೀನು ನನ್ನ ಉಳಿವನ್ನು ಬಯಸುವುದಾದರೆ ಸರಿಯಾಗಿರುವ ಪ್ರಯೋಜನಕಾರಿಯಾದ ಈ ಯುಕ್ತಿಯನ್ನು ನೋಡು.
ಕಶ್ಚಿತ್ ತರತಿ ಕಾಷ್ಠೇನ ಸುಗಂಭೀರಾಂ ಮಹಾನದೀಮ್ |
ಸ ತಾರಯತಿ ತತ್ ಕಾಷ್ಠಂ ಸ ಚ ಕಾಷ್ಠೇನ ತಾರ್ಯತೇ ॥60॥
ಒಬ್ಬನು ದಿಮ್ಮಿಯ ಸಹಾಯದಿಂದ ಬಹಳ ಆಳವಾದ ನದಿಯನ್ನು ದಾಟುತ್ತಾನೆ. ಅವನು ಕಾಷ್ಠವನ್ನು (ದಿಮ್ಮಿಯನ್ನು) ದಾಟಿಸುತ್ತಾನೆ. ಕಾಷ್ಠವು ಅವನನ್ನು ದಾಟಿಸುತ್ತದೆ.
ಈದೃಶೋ ನೌ ಸಮಾಯೋಗೋ ಭವಿಷ್ಯತಿ ಸುನಿಸ್ತರಃ |
ಅಹಂ ತ್ವಾಂ ತಾರಯಿಷ್ಯಾಮಿ ತ್ವಂ ಚ ಮಾಂ ತಾರಯಿಷ್ಯಸಿ ॥61॥
ಈ ವಿಧವಾದ ನಮ್ಮಿಬ್ಬರ ಸಮಾಯೋಗವು ಆಪತ್ತನ್ನು ದಾಟುವ ಒಳ್ಳೆಯ ಸಾಧನವಾಗುತ್ತದೆ. ನಾನು ನಿನ್ನನ್ನು ದಾಟಿಸುತ್ತೇನೆ. ನೀನು ನನ್ನನ್ನು ದಾಟಿಸುವಿ.
ಏವಮುಕ್ತ್ವಾ ತು ಪಲಿತಸ್ತದರ್ಥಮುಭಯೋರ್ಹಿತಮ್ |
ಹೇತುಮದ್ ಗ್ರಹಣೀಯಂ ಚ ಕಾಲಾಕಾಂಕ್ಷೀ ವ್ಯಪೈಕ್ಷತ ॥62॥
ಪಲಿತನು (ಇಲಿಯು) ಇಬ್ಬರಿಗೂ ಹಿತಕರವಾದ, ಯುಕ್ತಿಯುಕ್ತವಾದ, ಸ್ವೀಕರಿಸಲು ಯೋಗ್ಯವಾದ ವಿಚಾರವನ್ನು ಹೇಳಿ ಬೆಕ್ಕಿನ ಕಡೆ ನೋಡಿತು.
ಅಥ ಸುವ್ಯಾಹೃತಂ ತಸ್ಯ ಶ್ರುತ್ವಾ ಶತ್ರುರ್ವಿಚಕ್ಷಣಃ |
ಹೇತುಮದ್ ಗ್ರಹಣೀಯಾರ್ಥಂ ಮಾರ್ಜಾರೋ ವಾಕ್ಯಮಬ್ರವೀತ್ ॥
ಆ ಇಲಿಯ ಯುಕ್ತಿಯುಕ್ತವಾದ, ಸ್ವೀಕಾರಾರ್ಹವಾದ, ಒಳ್ಳೆಯ ಮಾತುಗಳನ್ನು ಕೇಳಿ ವಿಚಕ್ಷಣನಾದ ಶತ್ರುವಾದ ಬೆಕ್ಕು ಮಾತನಾಡಿತು.
ಬುದ್ಧಿಮಾನ್ ವಾಕ್ಯಸಂಪನ್ನಸ್ತದ್ವಾಕ್ಯಮನುವರ್ಣಯನ್ |
ತಾಮವಸ್ಥಾಮವೇಕ್ಷ್ಯಾಂತ್ಯಾಂ ಸಾಮ್ನೈವ ಪ್ರತ್ಯಪೂಜಯತ್ ॥64॥
ಬುದ್ಧಿವಂತನು, ವಾಕ್ಯ ಕುಶಲನೂ ಆದ ಬೆಕ್ಕು ತನ್ನ ಆಗಿನ ಸ್ಥಿತಿಯನ್ನು ಅರಿತು, ಆ ಇಲಿಯ ಮಾತುಗಳನ್ನು ವರ್ಣಿಸುತ್ತಾ, ಸಮಾಧಾನದಿಂದ ಆದರಿಸಿತು.
ತತಸ್ತೀಕ್ಷ್ಣಾಗ್ರದಶನೋ ವೈಡೂರ್ಯಮಣಿಲೋಚನಃ |

ಮೂಷಕಂ ಮಂದಮುದ್ವೀಕ್ಷ್ಯ ಮಾರ್ಜಾರೋ ಲೋಮಶೋಬ್ರವೀತ್ ॥
ಅನಂತರ ತೀಕ್ಷ್ಣ ತುದಿಗಳ ಹಲ್ಲಿರುವ, ವೈಡೂರ್ಯಮಣಿಯಂತೆ ಹೊಳೆಯುವ ಕಣ್ಣಿರುವ ಲೋಮಶ ಎಂಬ ಹೆಸರಿನ ಬೆಕ್ಕು ಇಲಿಯನ್ನು ಸ್ವಲ್ಪವೇ ನೋಡುತ್ತಾ ಹೇಳಿತು.
ನಂದಾಮಿ ಸೌಮ್ಯ ಭದ್ರಂ ತೇ ಯೋ ಮಾಂ ಜೀವಂತಮಿಚ್ಛಸಿ |
ಶ್ರೇಯಶ್ಚ ಯದಿ ಜಾನೀಷೇ ಕ್ರಿಯತಾಂ ಮಾ ವಿಚಾರಯ ॥66॥
ಸೌಮ್ಯ! ನಾನು ಬದುಕಿ ಉಳಿಯಬೇಕೆಂದು ಬಯಸುತ್ತಿರುವ ನಿನಗೆ ಒಳ್ಳೆಯದಾಗಲಿ. ಬಹಳ ಸಂತೋಷವಾಗುತ್ತಿದೆ. ನಿನಗೆ ತಿಳಿದಿರುವ ಶ್ರೇಯಸ್ಕರವಾದ ಕೆಲಸವನ್ನು ಮಾಡು. ಸಂದೇಹಿಸಬೇಡ.
ಅಹಂ ಹಿ ದೃಢಮಾಪನ್ನಸ್ತ್ವಮಾಪನ್ನತರೋ ಮಯಾ |
ದ್ವಯೋರಾಪನ್ನಯೋಃ ಸಂಧಿಃ ಕ್ರಿಯತಾಂ ಮಾ ವಿಚಾರಯ ॥67॥
ನಾನು ಪರಿಹರಿಸಲು ಕಷ್ಟವಾದ ಆಪತ್ತಿಗೆ ಒಳಗಾಗಿದ್ದೇನೆ. ನೀನು ಇನ್ನೂ ಹೆಚ್ಚಿನ ಆಪತ್ತಿಗೆ ಒಳಗಾಗಿರುವೆ. ಆಪತ್ತಿಗೆ ಒಳಗಾದ ಇಬ್ಬರಿಗೆ ಸಂಧಾನವಾಗಲಿ. ಸಂದೇಹಿಸಬೇಡ.
ವಿಧತ್ಸ್ವ ಪ್ರಾಪ್ತಕಾಲಂ ಯತ್ ಕಾರ್ಯಂ ಸಿಧ್ಯತು ಚಾವಯೋಃ |
ಮಯಿ ಕೃಚ್ಛ್ರಾದ್ ವಿನಿರ್ಮುಕ್ತೇ ನ ವಿನಂಕ್ಷ್ಯತಿ ತೇ ಕೃತಮ್ ॥68॥
ಈಗ ಮಾಡಬೇಕಾದದ್ದನ್ನು ಮಾಡು. ನಮ್ಮಿಬ್ಬರ ಕಾರ್ಯವೂ ಕೂಡಿಬರಲಿ. ನಾನು ಕಷ್ಟದಿಂದ ಬಿಡುಗಡೆಯಾದ ಮೇಲೆ ಕೃತಘ್ನನಾಗುವುದಿಲ್ಲ.
ನ್ಯಸ್ತಮಾನೋಽಸ್ಮಿ ಭಕ್ತೋಽಸ್ಮಿ ಶಿಷ್ಯಸ್ತ್ವದ್ಧಿತಕೃತ್ತಥಾ |
ನಿದೇಶವಶವರ್ತೀ ಚ ಭವಂತಂ ಶರಣಂ ಗತಃ ॥69॥
ನಾನು ದುರಭಿಮಾನವನ್ನು ತ್ಯಜಿಸಿದ್ದೇನೆ. ನಿನ್ನ ಭಕ್ತನೂ, ಶಿಷ್ಯನೂ ಮತ್ತು ನಿನಗೆ ಹಿತಕಾರಿಯೂ ಆಗಿದ್ದೇನೆ. ನಿನ್ನ ಆದೇಶಕ್ಕೆ ವಶವಾಗಿದ್ದೇನೆ. ನಿನಗೆ ಶರಣಾಗತನಾಗಿದ್ದೇನೆ.
ಇತ್ಯೇವಮುಕ್ತಃ ಪಲಿತೋ ಮಾರ್ಜಾರಂ ವಶಮಾಗತಮ್ |
ವಾಕ್ಯಂ ಹಿತಮುವಾಚೇದಮಭಿನೀತಾರ್ಥಮರ್ಥವತ್ ॥70॥
ಹೀಗೆ ಹೇಳಲ್ಪಟ್ಟ ಪಲಿತನು ತನಗೆ ವಶವಾದ ಬೆಕ್ಕಿಗೆ ಅರ್ಥವತ್ತಾದ ಹಿತವಾದ ಮಾತನ್ನು ಹೇಳಿತು.
ಉದಾರಂ ಯದ್ಭವಾನಾಹ ನೈತಚ್ಚಿತ್ರಂ ಭವದ್ವಿಧೇ |
ವಿದಿತೋ ಯಸ್ತು ಮಾರ್ಗೋ ಮೇ ಹಿತಾರ್ಥಂ ಶೃಣು ತಂ ಮಮ ॥
ನೀನು ಉದಾರವಾಗಿ ಮಾತನಾಡಿರುವೆ. ನಿನ್ನಂತಹವರಿಗೆ ಇದು ಆಶ್ಚರ್ಯಕರವಲ್ಲ. ನಿನ್ನ ಹಿತಕ್ಕಾಗಿ ನಾನು ಅರಿತಿರುವ ಉಪಾಯವನ್ನು ಕುರಿತು ಹೇಳುತ್ತೇನೆ, ಕೇಳು.
ಅಹಂ ಚಾನುಪ್ರವೇಕ್ಷ್ಯಾಮಿ ನಕುಲಾನ್ಮೇ ಮಹದ್ಭಯಮ್ |
ತ್ರಾಯಸ್ವ ಮಾಂ ಮಾ ವಧೀಶ್ಚ ಶಕ್ತೋಽಸ್ಮಿ ತವ ಮೋಕ್ಷಣೇ ॥72॥
ನನಗೆ ಮುಂಗಸಿಯಿಂದ ಬಹಳ ಭಯವಾಗುತ್ತಿದೆ. ನಿನ್ನನ್ನೇ ಅನುಸರಿಸಿ (ಬಲೆಯ) ಒಳಗೆ ಬರುತ್ತೇನೆ. ನನ್ನನ್ನು ರಕ್ಷಿಸು. ನನ್ನನ್ನು ಕೊಲ್ಲಬೇಡ. ನಿನ್ನನ್ನು (ಬಲೆಯಿಂದ) ಬಿಡಿಸುವ ಶಕ್ತಿಯು ನನಗೆ ಇದೆ.
ಉಲೂಕಾಚ್ಚೈವ ಮಾಂ ರಕ್ಷ ಕ್ಷುದ್ರಃ ಪ್ರಾರ್ಥಯತೇ ಹಿ ಮಾಮ್ |
ಅಹಂ ಛೇತ್ಸ್ಯಾಮಿ ತೇ ಪಾಶಾನ್ ಸಖೇ ಸತ್ಯೇನ ತೇ ಶಪೇ ॥73॥
ಗೂಬೆಯಿಂದಲೂ ನನ್ನನ್ನು ಪಾರು ಮಾಡು. ಆ ಕ್ಷುದ್ರನು ನನ್ನನ್ನು ಬಯಸುತ್ತಿದ್ದಾನೆ. ಗೆಳೆಯ! ನಾನು ನಿನ್ನಪಾಶಗಳನ್ನು ಕತ್ತರಿಸುತ್ತೇನೆ. ಸತ್ಯದ ಮೇಲೆ ಆಣೆ ಮಾಡುತ್ತೇನೆ.
ತದ್ವಚಃ ಸಂಗತಂ ಶ್ರುತ್ವಾ ಲೋಮಶೋ ಯುಕ್ತಮರ್ಥವತ್ |
ಹರ್ಷಾದುದ್ವೀಕ್ಷ್ಯ ಪಲಿತಂ ಸ್ವಾಗತೇನಾಭ್ಯಪೂಜಯತ್ ॥74॥
ಲೋಮಶನು (ಬೆಕ್ಕು) ಸಮಯೋಚಿತವಾದ, ಯುಕ್ತವಾದ, ಅರ್ಥವತ್ತಾದ ಆ ಮಾತುಗಳನ್ನು ಕೇಳಿ ಸಂತೋಷದಿಂದ ನೋಡುತ್ತಾ ಪಲಿತನನ್ನು ಸ್ವಾಗತಿಸಿ ಸತ್ಕರಿಸಿತು.
ಸ ತಂ ಸಂಪೂಜ್ಯ ಪಲಿತಂ ಮಾರ್ಜಾರಃ ಸೌಹೃದೇ ಸ್ಥಿತಃ |
ಸುವಿಚಿಂತ್ಯಾಬ್ರವೀದ್ಧೀರಃ ಪ್ರೀತಸ್ತ್ವರಿತ ಏವ ಹಿ ॥75॥
ಸುಹೃದ್‌ಭಾವದಲ್ಲಿ ಇದ್ದ ಆ ಧೀರ ಬೆಕ್ಕು ಪ್ರೀತನಾಗಿ ಆ ಪಲಿತನನ್ನು ಆದರಿಸಿ ತುರ್ತು ಮನಸ್ಥಿತಿಯಲ್ಲಿ ಬಹಳ ಆಲೋಚಿಸಿ ಹೇಳಿತು.
ಕ್ಷಿಪ್ರಮಾಗಚ್ಛ ಭದ್ರಂ ತೇ ತ್ವಂ ಮೇ ಪ್ರಾಣಸಮಃ ಸಖಾ |
ತವ ಪ್ರಾಜ್ಞ ಪ್ರಸಾದಾದ್ಧಿ ಕ್ಷಿಪ್ರಂ ಪ್ರಾಪ್ಸ್ಯಾಮಿ ಜೀವಿತಮ್ ॥76॥
ಬೇಗ ಬಾ. ನಿನಗೆ ಒಳ್ಳೆಯದಾಗಲಿ. ನೀನು ನನ್ನ ಪ್ರಾಣಸಮನಾದ ಮಿತ್ರ. ಪ್ರಾಜ್ಞ! ನಿನ್ನ ಅನುಗ್ರಹದಿಂದ ನಾನು ಬೇಗನೆ ನನ್ನ ಜೀವವನ್ನು ಪಡೆಯುತ್ತೇನೆ.
ಯದ್ಯದೇವಂಗತೇನಾದ್ಯ ವಾಕ್ಯಂ ಕರ್ತುಂ ಮಯಾ ತವ |
ತದಾಜ್ಞಾಪಯ ಕರ್ತಾಹಂ ಸಂಧಿರೇವಾಸ್ತು ನೌ ಸಖೇ ॥77॥
ಈ ಸ್ಥಿತಿಯಲ್ಲಿರುವ ನನ್ನಿಂದ ನಿನಗಾಗಿ ಏನೇನನ್ನು ಮಾಡಲು ಶಕ್ಯವೋ ಅದನ್ನು ಆಜ್ಞೆ ಮಾಡು. ನಾನು ಮಾಡುತ್ತೇನೆ. ಗೆಳೆಯ! ನಮ್ಮಿಬ್ಬರಿಗೆ ಸಂಧಾನವು ತಪ್ಪದೆ ಇರಲಿ.
ಅಸ್ಮಾತ್ ತೇ ಸಂಶಯಾನ್ಮುಕ್ತಃ ಸಮಿತ್ರಗಣಬಾಂಧವಃ |

ಸರ್ವಕಾರ್ಯಾಣಿ ಕರ್ತಾಹಂ ಪ್ರಿಯಾಣಿ ಚ ಹಿತಾನಿ ಚ ॥78॥
ಈ ಪ್ರಾಣಸಂಶಯದಿಂದ ಬಿಡುಗಡೆ ಹೊಂದಿದ ನಂತರ ನಾನು ನನ್ನ ಎಲ್ಲ ಮಿತ್ರ-ಬಂಧು ಸಹಿತನಾಗಿ ನಿನಗೆ ಪ್ರಿಯವಾದ, ಹಿತವಾದ ಎಲ್ಲ ಕಾರ್ಯಗಳನ್ನು ಮಾಡುತ್ತೇನೆ.
ಮುಕ್ತಶ್ಚ ವ್ಯಸನಾದಸ್ಮಾತ್ ಸೌಮ್ಯಾಹಮಪಿ ನಾಮ ತೇ ।
ಪ್ರೀತಿಮುತ್ಪಾದಯೇಯಂ ಚ ಪ್ರತಿಕರ್ತುಂ ಚ ಶಕ್ನುಯಾಮ್ ॥79॥
ಸೌಮ್ಯ! ಈ ವ್ಯಸನದಿಂದ ಮುಕ್ತನಾಗಿ ನಾನು ನಿನಗೆ ಸಂತೋಷವನ್ನು ಉಂಟು ಮಾಡುವೆನು. ಪ್ರತ್ಯುಪಕಾರ ಮಾಡಲು ಶಕ್ತನಾಗುವೆನು.
ಗ್ರಾಹಯಿತ್ವಾ ತು ತಂ ಸ್ವಾರ್ಥಂ ಮಾರ್ಜಾರಂ ಮೂಷಕಸ್ತದಾ ।
ಪ್ರವಿವೇಶ ಸುವಿಸ್ರಬ್ಧಃ ಸಮ್ಯಗರ್ಥಾಂಶ್ಚಚಾರ ಹ ॥80॥
ಇಲಿಯು ಬೆಕ್ಕಿಗೆ ತನ್ನ ಅಭಿಪ್ರಾಯವನ್ನು ಚೆನ್ನಾಗಿ ಅರ್ಥಮಾಡಿಸಿ ಸರಿಯಾದ ನಂಬಿಕೆಯನ್ನು ಹೊಂದಿ ಬಲೆಯನ್ನು ಪ್ರವೇಶಿಸಿತು.
ಏವಮಾಶ್ವಾಸಿತೋ ವಿದ್ವಾನ್ ಮಾರ್ಜಾರೇಣ ಸ ಮೂಷಕಃ ।
ಮಾರ್ಜಾರೋರಸಿ ವಿಸ್ರಬ್ಧಃ ಸುಷ್ವಾಪ ಪಿತೃಮಾತೃವತ್ ॥81॥
ಬೆಕ್ಕಿನಿಂದ ಹೀಗೆ ಆಶ್ವಾಸನೆಯನ್ನು ಪಡೆದ ಇಲಿಯು ವಿಶ್ವಾಸದಿಂದ ಬೆಕ್ಕಿನ ಎದೆಯಲ್ಲಿ, ತಂದೆ-ತಾಯಿಗಳ ಎದೆಯಲ್ಲಿ ಮಲಗುವಂತೆ, ಮಲಗಿತು.
ಲೀನಂ ತು ತಸ್ಯ ಗಾತ್ರೇಷು ಮಾರ್ಜಾರಸ್ಯಾಥ ಮೂಷಕಮ್ ।
ತೌ ದೃಷ್ಟ್ವಾ ನಕುಲೋಲೂಕೌ ನಿರಾಶೌ ಜಗ್ಮತುರ್ಗೃಹಾನ್ ॥82॥
ಆ ಬೆಕ್ಕಿನ ಶರೀರದಲ್ಲಿ ಅಡಗಿದ ಆ ಇಲಿಯನ್ನು ನೋಡಿ ಆ ಮುಂಗಸಿ ಮತ್ತು ಗೂಬೆಗಳು ನಿರಾಶರಾಗಿ ಮನೆಗೆ ಹೋದವು.
ಲೀನಸ್ತು ತಸ್ಯ ಗಾತ್ರೇಷು ಪಲಿತೋ ದೇಶಕಾಲವಿತ್ ।
ಚಿಚ್ಛೇದ ಪಾಶಾನ್ನೃಪತೇ ಕಾಲಾಕಾಂಕ್ಷೀ ಶನೈಃ ಶನೈಃ ॥83॥
ರಾಜನೇ! ಆ ಬೆಕ್ಕಿನ ಶರೀರದಲ್ಲಿ ಅಡಗಿದ, ದೇಶ-ಕಾಲಗಳ ಅರಿವಿರುವ ಪಲಿತವು (ಇಲಿಯು) ಕಾಲದ ನಿರೀಕ್ಷೆ ಮಾಡುತ್ತಾ ಪಾಶಗಳನ್ನು ಅತಿ ನಿಧಾನವಾಗಿ ಕತ್ತರಿಸಲು ತೊಡಗಿದನು.
ಅಥ ಬಂಧಪರಿಕ್ಲಿಷ್ಟೋ ಮಾರ್ಜಾರೋ ವೀಕ್ಷ್ಯ ಮೂಷಕಮ್ ।
ಛಿಂದಂತಂ ವೈ ತದಾ ಪಾಶಾನತ್ವರಂತಂ ತ್ವರಾನ್ವಿತಃ ॥84॥
ಬಂಧನದ ಕ್ಲೇಶಕ್ಕೆ ಒಳಗಾಗಿದ್ದ, ಪಾಶಚ್ಛೇದವು ಕೂಡಲೇ ಆಗಬೇಕೆಂದು ಬಯಸುತ್ತಿದ್ದ ಬೆಕ್ಕು ಪಾಶಗಳನ್ನು ಅತಿ ನಿಧಾನವಾಗಿ ಕತ್ತರಿಸುತ್ತಿದ್ದ ಇಲಿಯನ್ನು ನೋಡಿ,
ತಮತ್ವರಂತಂ ಪಲಿತಂ ಪಾಶಾನಾಂ ಛೇದನೇ ತದಾ ।
ಸಂಚೋದಯಿತುಮಾರೇಭೇ ಮಾರ್ಜಾರೋ ಮೂಷಕಂ ತದಾ ॥85॥
ಪಾಶಗಳ ಛೇದನವನ್ನು ತ್ವರೆಯಿಲ್ಲದೆ ಮಾಡುತ್ತಿದ್ದ ಇಲಿಯನ್ನು ಬೆಕ್ಕು ಪ್ರಚೋದಿಸಲು ಆರಂಭಿಸಿತು.
ಕಿಂ ಸೌಮ್ಯ ನಾಭಿತ್ವರಸೇ ಕಿಂ ಕೃತಾರ್ಥೋವಮನ್ಯಸೇ ।
ಛಿಂಧಿ ಪಾಶಾನಮಿತ್ರಘ್ನ ಪುರಾ ಶ್ವಪಚ ಏತಿ ಸಃ ॥86॥
ಸೌಮ್ಯ! ಏಕೆ ತ್ವರೆ ಮಾಡುತ್ತಿಲ್ಲ? ಕೃತಾರ್ಥನಾದ ನಂತರ ಏಕೆ ಅವಗಣನೆ ಮಾಡುವಿ. ಮಿತ್ರನಿಗೆ ಹಾನಿ ಮಾಡದವನೇ! ಆ ಶ್ವಪಚನು ಬರುವ ಮೊದಲು ಪಾಶಗಳನ್ನು ಕತ್ತರಿಸು.
ಇತ್ಯುಕ್ತಸ್ತ್ವರತಾ ತೇನ ಮತಿಮಾನ್ ಪಲಿತೋಽಬ್ರವೀತ್ ।
ಮಾರ್ಜಾರಮಕೃತಪ್ರಜ್ಞಂ ವಶ್ಯಮಾತ್ಮಹಿತಂ ವಚಃ ॥87॥
ಅವಸರ ಪಡಿಸುತ್ತಿದ್ದ ಆ ಬೆಕ್ಕಿನಿಂದ ಹೀಗೆ ಹೇಳಲ್ಪಟ್ಟ, ಮತಿಮಂತನಾದ ಪಲಿತನು ತನಗೆ ವಶನಾಗಿರುವ, ಸರಿಯಾದ ಶಿಕ್ಷಣವಿಲ್ಲದ ಬೆಕ್ಕಿಗೆ ತನಗೆ ಅನುಕೂಲವಾದ ಮಾತನ್ನು ಹೇಳಿದನು.
ತೂಷ್ಣೀಂ ಭವ ನ ತೇ ಸೌಮ್ಯ ತ್ವರಾ ಕಾರ್ಯಾ ನ ಸಂಭ್ರಮಃ ।
ವಯಮೇವಾತ್ರ ಕಾಲಜ್ಞಾ ನ ಕಾಲಃ ಪರಿಹಾಸ್ಯತೇ ॥88॥
ಸೌಮ್ಯ! ಸುಮ್ಮನಿರು. ಅವಸರ ಮಾಡಬೇಡ. ಗಡಿಬಿಡಿ ಮಾಡಬೇಡ. ನನಗೆ ಕಾಲದ ಅರಿವಿದೆ. ಕಾಲವನ್ನು ಮೀರುವುದಿಲ್ಲ.
ಅಕಾಲೇ ಕೃತ್ಯಮಾರಬ್ಧಂ ಕರ್ತುರ್ನಾರ್ಥಾಯ ಕಲ್ಪತೇ ।
ತದೇವ ಕಾಲ ಆರಬ್ಧಂ ಮಹತೇರ್ಥಾಯ ಕಲ್ಪತೇ ॥89॥
ಅಕಾಲದಲ್ಲಿ ಆರಂಭಿಸಲ್ಪಡುವ ಕೆಲಸವು ಫಲಪ್ರದವಾಗುವುದಿಲ್ಲ. ಸರಿಯಾದ ಕಾಲದಲ್ಲಿ ಆರಂಭಿಸಲ್ಪಡುವ ಕೆಲಸವು ಭಾರಿ ಫಲವನ್ನು ಕೊಡುತ್ತದೆ.
ಅಕಾಲೇ ಮಿತ್ರ ಮುಕ್ತೌ ಮೇ ತತ ಏವ ಭಯಂ ಭವೇತ್ ।
ತಸ್ಮಾತ್ ಕಾಲಂ ಪ್ರತೀಕ್ಷಸ್ವ ಕಿಮಿತಿ ತ್ವರಸೇ ಸಖೇ ॥90॥
ನನಗೆ ಅಕಾಲದಲ್ಲಿ ಬಿಡುಗಡೆಯಾದರೆ, ಅಕಾಲದಲ್ಲಿ ಬಿಡುಗಡೆಯಿಂದಲೇ ಹಾನಿಯಾಗುವ ಭಯವಿದೆ. ಆದ್ದರಿಂದ ಸರಿಯಾದ ಕಾಲಕ್ಕೆ ಕಾಯಬೇಕು. ಗೆಳೆಯ! ಏಕೆ ತ್ವರೆ ಮಾಡುವಿ?
ಯಾವತ್ ಪಶ್ಯಾಮಿ ಚಂಡಾಲಮಾಯಾಂತಂ ಶಸ್ತ್ರಪಾಣಿನಮ್ ।
ತತಶ್ಛೇತ್ಸ್ಯಾಮಿ ತೇ ಪಾಶಂ ಪ್ರಾಪ್ತೇ ಸಾಧಾರಣೇ ಭಯೇ ॥91॥
ಶಸ್ತ್ರಪಾಣಿಯಾಗಿ ನಮ್ಮ ಕಡೆಗೆ ಬರುತ್ತಿರುವ ಚಂಡಾಲನು ನನಗೆ ಕಾಣಿಸಿದ ಕೂಡಲೆ, ಇಬ್ಬರಿಗೂ ಸಾವಿನ ಭಯವು ಉಂಟಾದಾಗ

ನಿನ್ನ ಪಾಶಗಳನ್ನು ಕತ್ತರಿಸುತ್ತೇನೆ.
ತಸ್ಮಿನ್ ಕಾಲೇ ಪ್ರಮುಕ್ತಸ್ತ್ವಂ ತರುಮೇವಾಧಿರೋಹಸಿ |
ನ ಹಿ ತೇ ಜೀವಿತಾದನ್ಯತ್ ಕಿಂಚಿತ್ಕೃತ್ಯಂ ಭವಿಷ್ಯತಿ ॥92॥
ಆಗ ಬಿಡುಗಡೆ ಹೊಂದುವ ನೀನು ಮರವನ್ನು ಕೂಡಲೇ ಏರುವಿ. ಆಗ ನಿನಗೆ ಪ್ರಾಣ ಉಳಿಸಿಕೊಳ್ಳುವ ಕೆಲಸವನ್ನು ಬಿಟ್ಟು ಬೇರೆ ಯಾವ ಕೆಲಸವೂ ಮನಸ್ಸಿನಲ್ಲಿ ಮೂಡುವುದಿಲ್ಲ.
ತತೋ ಭವತ್ಯತಿಕ್ರಾಂತೇ ತ್ರಸ್ತೇ ಭೀತೇ ಚ ಲೋಮಶ |
ಅಹಂ ಬಿಲಂ ಪ್ರವೇಕ್ಷ್ಯಾಮಿ ಭವಾನ್ ಶಾಖಾಂ ಗಮಿಷ್ಯತಿ ॥93॥
ಏವಮುಕ್ತಸ್ತು ಮಾರ್ಜಾರೋ ಮೂಷಕೇಣಾತ್ಮನೋ ಹಿತಮ್ |
ವಚನಂ ವಾಕ್ಯತತ್ತ್ವಜ್ಞೋ ಜೀವಿತಾರ್ಥೀ ಮಹಾಮತಿಃ ॥94॥
ಲೋಮಶ! ಆ ಚಂಡಾಲನಿಂದಾಗಿ ತೀವ್ರ ಭಯಕ್ಕೆ ಒಳಗಾದ ನೀನು ಇಲ್ಲಿಂದ ಹೊರಟು ಹೋದಾಗ ನಾನು ಬಿಲವನ್ನು ಪ್ರವೇಶಿಸುತ್ತೇನೆ. ನೀನು ಮರದ ಕೊಂಬೆಯ ಮೇಲೆ ಹೋಗುವಿ. ಹೀಗೆ ಇಲಿಯು ತನಗೆ ಅನುಕೂಲವಾದ ಮಾತನ್ನು ಬೆಕ್ಕಿಗೆ ಹೇಳಿದಾಗ ಪ್ರಾಣ ಉಳಿಸಿಕೊಳ್ಳಲು ಬಯಸುತ್ತಿರುವ, ಮಾತಿನ ತತ್ವವನ್ನು ತಿಳಿದ, ಮಹಾಮತಿಯಾದ,
ಅಥಾತ್ಮಕೃತ್ಯತ್ವರಿತಃ ಸಮ್ಯಕ್ಪ್ರಶ್ರಯಮಾಚರನ್ |
ಉವಾಚ ಲೋಮಶೋ ವಾಕ್ಯಂ ಮೂಷಕಂ ಚಿರಕಾರಿಣಮ್ ॥95॥
ತನ್ನ ಕೆಲಸವು ಬೇಗ ಆಗಬೇಕೆಂದು ಬಯಸುತ್ತಿರುವ ಲೋಮಶನು ವಿನಯವನ್ನು ತೋರಿಸುತ್ತಾ, ವಿಲಂಬ ಮಾಡುತ್ತಿರುವ ಇಲಿಗೆ ಹೇಳಿತು.
ನ ಹ್ಯೇವಂ ಮಿತ್ರಕಾರ್ಯಾಣಿ ಪ್ರೀತ್ಯಾ ಕುರ್ವಂತಿ ಸಾಧವಃ |
ಯಥಾ ತ್ವಂ ಮೋಕ್ಷಿತಃ ಕೃಚ್ಛ್ರಾತ್ ತ್ವರಮಾಣೇನ ವೈ ಮಯಾ ॥96॥
ತಥೈವ ತ್ವರಮಾಣೇನ ತ್ವಯಾ ಕಾರ್ಯಂ ಹಿತಂ ಮಮ |
ಯತ್ನಂ ಕುರು ಮಹಾಪ್ರಾಜ್ಞ ಯಥಾ ಸ್ವಸ್ತ್ಯಾವಯೋರ್ಭವೇತ್ ॥97॥
ಹೀಗಲ್ಲ. ಸಜ್ಜನರು ಮಿತ್ರನಿಗೆ ಬೇಕಾದ ಕೆಲಸಗಳನ್ನು ಪ್ರೀತಿಯಿಂದ ಮಾಡುತ್ತಾರೆ. ನಾನು ನಿನ್ನನ್ನು ಶೀಘ್ರವಾಗಿ ಕಷ್ಟದಿಂದ ಪಾರು ಮಾಡಿದ್ದೇನೆ. ಅದರಂತೆ ನೀನೂ ಕೂಡ ತಡಮಾಡದೆ, ವೇಗದಿಂದ ನನಗೆ ಹಿತವನ್ನು ಮಾಡಬೇಕು. ಮಹಾಪ್ರಾಜ್ಞ! ನಮ್ಮಿಬ್ಬರಿಗೂ ಒಳ್ಳೆಯದಾಗುವಂತೆ ಕಾರ್ಯೋನ್ಮುಖನಾಗು.
ಅಥ ವಾ ಪೂರ್ವವೈರಂ ತ್ವಂ ಸ್ಮರನ್ ಕಾಲಂ ವಿಕರ್ಷಸಿ |
ಪಶ್ಯ ದುಷ್ಕೃತಕರ್ಮತ್ವಂ ವ್ಯಕ್ತಮಾಯುಃಕ್ಷಯೋ ಮಮ ॥98॥
ಅಥವಾ ನಾನು ನಿನ್ನ ಮೇಲೆ (ಇಲಿಗಳ ಮೇಲೆ) ಹಿಂದೆ ತೋರಿಸಿದ ವೈರವನ್ನು ನೆನೆಯುತ್ತಾ ಕಾಲ ಕಳೆಯುತ್ತಿರುವಿ. ನೋಡು! ನೀನು ನಿನ್ನ ಕೆಲಸವನ್ನು ಕೆಟ್ಟದಾಗಿ ಮಾಡುತ್ತಿರುವಿ. ನಿಜವಾಗಿ ನನಗೆ ಮರಣವಾಗುತ್ತದೆ.
ಯಚ್ಚ ಕಿಂಚಿನ್ಮಯಾಜ್ಞಾನಾತ್ ಪುರಸ್ತಾದ್ ವಿಪ್ರಿಯಂ ಕೃತಮ್ |
ನ ತನ್ಮನಸಿ ಕರ್ತವ್ಯಂ ಕ್ಷಾಮಯೇ ತ್ವಾಂ ಪ್ರಸೀದ ಮೇ ॥99॥
ನಾನು ಹಿಂದೆ ಅಜ್ಞಾನದಿಂದ ಮಾಡಿರುವ ಅಪ್ರಿಯ ಕೆಲಸಗಳನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡ. ನಾನು ಕ್ಷಮೆ ಬೇಡುತ್ತೇನೆ. ದಯವಿಟ್ಟು ನನ್ನ ಮೇಲೆ ಪ್ರಸನ್ನನಾಗು.
ತಮೇವಂವಾದಿನಂ ಪ್ರಾಜ್ಞಃ ಶಾಸ್ತ್ರವಿದ್ ಬುದ್ಧಿಸಮ್ಮತಃ |
ಉವಾಚೇದಂ ವಚಃ ಶ್ರೇಷ್ಠಂ ಮಾರ್ಜಾರಂ ಮೂಷಕಸ್ತದಾ ॥100॥
ಹೀಗೆ ಹೇಳಿದ ಬೆಕ್ಕಿಗೆ ಪ್ರಾಜ್ಞನೂ, ಶಾಸ್ತ್ರವನ್ನು ಅರಿತವನೂ, ನಿಶ್ಚಯ ಉಳ್ಳವನೂ ಆದ ಇಲಿಯು ಮುಂದಿನ ಮಾತುಗಳನ್ನು ಹೇಳಿತು.
ಶ್ರುತಂ ಮೇ ತವ ಮಾರ್ಜಾರ ಸ್ವಮರ್ಥಂ ಪರಿಗೃಹ್ಣತಃ |
ಮಮಾಪಿ ತ್ವಂ ವಿಜಾನೀಹಿ ಸ್ವಮರ್ಥಂ ಪರಿಗೃಹ್ಣತಃ ॥101॥
ಬೆಕ್ಕೆ! ನಿನ್ನ ಹಿತವನ್ನೇ ಪರಿಗ್ರಹಿಸಿರುವ ನಿನ್ನ ಮಾತನ್ನು ಕೇಳಿದೆ. ನನ್ನ ಹಿತವನ್ನೇ ಪರಿಗ್ರಹಿಸಿರುವ ನನ್ನ ಮಾತುಗಳನ್ನು ಅರಿ.
ಯನ್ಮಿತ್ರಂ ಭೂತವತ್ ಸಾರ್ಯಂ ಯನ್ಮಿತ್ರಂ ಭಯಸಂಹಿತಮ್ |
ಅಲಕ್ಷಿತಂ ತತಃ ಕಾರ್ಯಂ ಪಾಣಿಃ ಸರ್ಪಮುಖಾದಿವ ॥102॥
ಯಾವ ಮಿತ್ರನನ್ನು ಭೂತವನ್ನು ಅನುಸರಿಸುವಂತೆ ಅನುಸರಿಸಬೇಕೋ, (ಭಯದಿಂದಲೇ ಅನುಸರಿಸಬೇಕೋ), ಯಾವ ಮಿತ್ರನು ಭಯಗ್ರಸ್ತನೋ, ಆ ಮಿತ್ರನಿಂದ ಕಾರ್ಯವು ಆಗುವುದೋ, ಇಲ್ಲವೋ ತಿಳಿಯುವುದಿಲ್ಲ. ಹಾವಾಡಿಗನ ಕೈ ಸರ್ಪದಿಂದ ಸುರಕ್ಷಿತವಾಗುವುದೋ, ಇಲ್ಲವೋ ಎಂದು ತಿಳಿಯದಂತೆ.
ಕೃತ್ವಾ ಬಲವತಾ ಸಂಧಿಮಾತ್ಮಾನಂ ಯೋ ನ ರಕ್ಷತಿ |
ಅಪಥ್ಯಮಿವ ತದ್ಭುಕ್ತಂ ತಸ್ಯಾನರ್ಥಾಯ ಕಲ್ಪತೇ ॥103॥
ಬಲಶಾಲಿಯ ಜೊತೆ ಸಂಧಾನವನ್ನು ಮಾಡಿಕೊಂಡವನು ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಆ ಸಂಧಾನವು ಅನರ್ಥಕಾರಿಯೇ. ತಿನ್ನಲ್ಪಟ್ಟ ಅಪಥ್ಯ ಆಹಾರದಂತೆ.
ನ ಕಶ್ಚಿತ್ ಕಸ್ಯಚಿನ್ಮಿತ್ರಂ ನ ಕಶ್ಚಿತ್ ಕಸ್ಯಚಿದ್ ರಿಪುಃ |
ಅರ್ಥೈರರ್ಥಾ ನಿಬಧ್ಯಂತೇ ಗಜೈರ್ವನಗಜಾ ಇವ ॥104॥
ಯಾರೂ ಯಾರಿಗೂ ಮಿತ್ರನಲ್ಲ. ಯಾರು ಯಾರಿಗೂ ಶತ್ರುವಲ್ಲ. ಒಬ್ಬರ ಪ್ರಯೋಜನದಿಂದಲೇ ಮತ್ತೊಬ್ಬರ ಪ್ರಯೋಜನವು ಹಾನಿಗೆ

ಒಳಗಾಗುತ್ತದೆ. ಪಳಗಿದ ಆನೆಗಳಿಂದಲೇ ಕಾಡಾನೆಗಳು ಬಂಧಿಸಲ್ಪಡುತ್ತವೆ.
ನ ಹಿ ಕಶ್ಚಿತ್ಕೃತೇ ಕಾರ್ಯೇ ಕರ್ತಾರಂ ಸಮವೇಕ್ಷತೇ |
ತಸ್ಮಾತ್ ಸರ್ವಾಣಿ ಕಾರ್ಯಾಣಿ ಸಾವಶೇಷಾಣಿ ಕಾರಯೇತ್ ||105||
ತಮ್ಮ ಕೆಲಸವು ಆದನಂತರ ಕೆಲಸ ಮಾಡಿದವನನ್ನು ಯಾರೂ ನೋಡುವುದಿಲ್ಲ. ಆದ್ದರಿಂದ ಎಲ್ಲ ಕೆಲಸಗಳನ್ನು ಸಶೇಷವಾಗಿಯೇ ಮಾಡಬೇಕು.
ತಸ್ಮಿನ್ ಕಾಲೇಪಿ ಚ ಭವಾನ್ ದಿವಾಕೀರ್ತಿಭಯಾನ್ವಿತಃ |
ಮಮ ನ ಗ್ರಹಣೇ ಶಕ್ತಃ ಪಲಾಯನಪರಾಯಣಃ ||106||
ದಿವಾಕೀರ್ತಿಯ (ಬಲೆಹಾಕಿದವನ ಹೆಸರು) ಭಯಕ್ಕೊಳಗಾಗುವ ನೀನು ಆ ಸಮಯದಲ್ಲಿ (ದಿವಾಕೀರ್ತಿಯು ಬರುತ್ತಿರುವ ಸಮಯದಲ್ಲಿ) ಪಲಾಯನದಲ್ಲೇ ಮನಸ್ಸಿಟ್ಟಿರುವಿ, ನನ್ನನ್ನು ಹಿಡಿಯಲು ಶಕ್ತನಾಗುವುದಿಲ್ಲ.
ಛಿನ್ನಂ ತು ತಂತುಬಾಹುಲ್ಯಂ ತಂತುರೇಕೋಽವಶೇಷಿತಃ |
ಛೇತ್ಸ್ಯಾಮ್ಯಹಂ ತದಪ್ಯಾಶು ನಿರ್ವೃತೋ ಭವ ಲೋಮಶ ||107||
ಬಹಳ ದಾರಗಳನ್ನು ಈಗಾಗಲೇ ಕತ್ತರಿಸಿದ್ದೇನೆ. ಒಂದು ದಾರ ಉಳಿದಿದೆ. ಅದನ್ನೂ ಶೀಘ್ರವಾಗಿ ಕತ್ತರಿಸುತ್ತೇನೆ. ಲೋಮಶ! ಸಂತೋಷದಿಂದ ಇರು.
ತಯೋಃ ಸಂವದತೋರೇವಂ ತಥೈವಾಪನ್ನಯೋರ್ದ್ವಯೋಃ |
ಕ್ಷಯಂ ಜಗಾಮ ಸಾ ರಾತ್ರಿರ್ಲೋಮಶಂ ಚಾವಿಶದ್ ಭಯಮ್ ||
ಅವರಿಬ್ಬರೂ ಹೀಗೆ ಸಂವಾದವನ್ನು ಮಾಡುತ್ತಿರುವಾಗ, ಇಬ್ಬರೂ ಆಪತ್ತಿಗೆ ಒಳಗಾಗಿರುವಾಗ, ರಾತ್ರಿಯು ಕಳೆಯಿತು. ಲೋಮಶನಿಗೆ ಭಯವು ಹೆಚ್ಚಾಯಿತು.
ತತಃ ಪ್ರಭಾತಸಮಯೇ ವಿಕೃತಃ ಕೃಷ್ಣಪಿಂಗಲಃ |
ಸ್ಥೂಲಸ್ಫಿಗ್ವಿಕಚೋ ರೂಕ್ಷಃ ಶ್ವಚಕ್ರಪರಿವಾರಿತಃ ||109||
ಶಂಕುಕರ್ಣೋ ಮಹಾವಕ್ತ್ರಃ ಪಲಿತೋ ಘೋರದರ್ಶನಃ |
ಪರ್ಯಾನ್ ಸ ಹ ಚಂಡಾಲಃ ಶಸ್ತ್ರಪಾಣಿರದೃಶ್ಯತ ||110||
ಅನತರ ಬೆಳಗಾಗುವ ಸಮಯದಲ್ಲಿ ಕಪ್ಪು-ಕಂದು ಬಣ್ಣದ, ವಿಕಾರವಾಗಿದ್ದ, ದಪ್ಪ ಅಂಡಿನ, ಕೆದರಿದ ಕೂದಲಿನ, ಉಗ್ರವಾಗಿದ್ದ, ಲಾಳಗಳಂತಿದ್ದ ಕಿವಿಯ, ನೆರೆ ಕೂದಲಿನ, ಅಗಲ ಮುಖದ, ಘೋರವಾಗಿ ಕಾಣಿಸುತ್ತಿದ್ದ, ಅಡ್ಡ-ದಿಡ್ಡಿಯಾಗಿ ಬರುತ್ತಿದ್ದ ಕೈಯಲ್ಲಿ ಶಸ್ತ್ರವನ್ನು ಹಿಡಿದಿದ್ದ ಚಂಡಾಲನು ಕಾಣಿಸಿಕೊಂಡನು.
ತಂ ದೃಷ್ಟ್ವಾ ಯಮದೂತಾಭಂ ಮಾರ್ಜಾರಃ ತ್ರಸ್ತಚೇತನಃ |
ಉವಾಚ ಪಲಿತಂ ಭೀತಃ ಕಿಮಿದಾನೀಂ ಕರಿಷ್ಯಸಿ ||111||
ಯಮದೂತನಂತಿದ್ದ ಆ ಬೇಡನನ್ನು ನೋಡಿ ಹೆದರಿದ ಬೆಕ್ಕು `ಈಗ ಏನು ಮಾಡುವಿ' ಎಂದು ಪಲಿತ (ಇಲಿ)ಗೆ ಹೇಳಿತು.
ಅಥ ಚಾಪಿ ಸುಸಂತ್ರಸ್ತೌ ತಂ ದೃಷ್ಟ್ವಾ ಘೋರದರ್ಶನಮ್ |
ಕ್ಷಣೇನ ನಕುಲೋಲೂಕೌ ನೈರಾಶ್ಯಂ ಜಗ್ಮತುಸ್ತದಾ ||112||
ಘೋರವಾಗಿ ಕಾಣಿಸುತ್ತಿದ್ದ ಅವನನ್ನು ನೋಡಿ ಬಹಳ ಹೆದರಿದ ಮುಂಗಸಿ ಮತ್ತು ಗೂಬೆಗಳು ಆ ಕ್ಷಣದಲ್ಲೇ ನಿರಾಶೆಯನ್ನು ಹೊಂದಿದವು.
ಬಲಿನೌ ಮತಿಮಂತೌ ಚ ಸಂಘಾತಂ ಚಾಪ್ಯುಪಾಗತೌ |
ಅಶಕ್ತೌ ಸುನಯಾತ್ ತಸ್ಮಾತ್ ಸಂಪ್ರಧರ್ಷಯಿತುಂ ಬಲಾತ್ ||113||
ಬಲಶಾಲಿಗಳೂ, ಬುದ್ಧಿವಂತರೂ ಆಗಿದ್ದ, ಒಗ್ಗಟ್ಟನ್ನೂ ಹೊಂದಿದ್ದ ಮುಂಗಸಿ ಮತ್ತು ಗೂಬೆಗಳು ಆ ಇಲಿಯ ಸರಿಯಾದ ಉಪಾಯದಿಂದಾಗಿ (ಇಲಿ ಮತ್ತು ಬೆಕ್ಕುಗಳನ್ನು) ಬಲದಿಂದ ಆಕ್ರಮಿಸಲು ಸಮರ್ಥವಾಗಲಿಲ್ಲ.
ಕಾರ್ಯಾರ್ಥಂ ಕೃತಸಂಧೀ ತೌ ದೃಷ್ಟ್ವಾ ಮಾರ್ಜಾರಮೂಷಕೌ |
ಉಲೂಕನಕುಲೌ ತೂರ್ಣಂ ಜಗ್ಮತುಃ ಸ್ವಂ ಸ್ವಮಾಲಯಮ್ ||114||
ಕಾರ್ಯಸಾಧನೆಗಾಗಿ ಸಂಧಾನ ಮಾಡಿಕೊಂಡಿದ್ದ ಆ ಬೆಕ್ಕು-ಇಲಿಗಳನ್ನು ನೋಡಿ ಗೂಬೆ ಮತ್ತು ಮುಂಗಸಿಗಳು ಬೇಗ ತಮ್ಮ ತಮ್ಮ ವಾಸಸ್ಥಾನಕ್ಕೆ ಹೊರಟು ಹೋದವು.
ತತಶ್ಚಿಚ್ಛೇದ ತಂ ತಂತುಂ ಮಾರ್ಜಾರಸ್ಯ ಸ ಮೂಷಕಃ |
ವಿಪ್ರಮುಕ್ತೋಥ ಮಾರ್ಜಾರಸ್ತಮೇವಾಭ್ಯಪತದ್ದ್ರುಮಮ್ ||115||
ಅನಂತರ ಇಲಿಯು ಬೆಕ್ಕಿನ ಬಲೆಯ ಆ ಒಂದು ದಾರವನ್ನು ಕತ್ತರಿಸಿತು. ಬಿಡುಗಡೆ ಹೊಂದಿದ ಬೆಕ್ಕು ಆ ಮರದ ಕಡೆ ಓಡಿತು.
ಸ ಚ ತಸ್ಮಾದ್ ಭಯಾನ್ಮುಕ್ತೋ ಮುಕ್ತೋ ಘೋರೇಣ ಶತ್ರುಣಾ |
ಬಿಲಂ ವಿವೇಶ ಪಲಿತಃ ಶಾಖಾಂ ಭೇಜೇ ಚ ಲೋಮಶಃ ||116||
ಆ ಇಲಿ ಪಲಿತನೂ ಆ ಬೆಕ್ಕಿನ ಭಯದಿಂದ ಮುಕ್ತನಾಗಿ, ಆ ಘೋರ ಶತ್ರು ಮುಂಗಸಿಯಿಂದಲೂ ಮುಕ್ತನಾಗಿ ಬಿಲವನ್ನು ಹೊಕ್ಕಿತು. ಲೋಮಶನೂ (ಬೆಕ್ಕು) ಮರದ ಕೊಂಬೆಯನ್ನು ಏರಿದನು.
ಉನ್ಮಾಥಮಪ್ಯಥಾದಾಯ ಚಂಡಾಲೋ ವೀಕ್ಷ್ಯ ಸರ್ವಶಃ |
ವಿಹತಾಶಃ ಕ್ಷಣೇನಾಥ ತಸ್ಮಾದ್ದೇಶಾದಪಾಕ್ರಮತ್ |
ಜಗಾಮ ಚ ಸ್ವಭವನಂ ಚಂಡಾಲೋ ಭರತರ್ಷಭ ||117||
ಚಂಡಾಲನು ಬಲೆಯನ್ನು ಹಿಡಿದು ಎಲ್ಲ ಕಡೆ ನೋಡಿದನು. ಏನೂ ಸಿಗದೆ ನಿರಾಶನಾಗಿ ಅಲ್ಲಿಂದ ಹೊರಟುಹೋದನು.

ತತಸ್ತಸ್ಮಾದ್ ಭಯಾನ್ಮುಕ್ತೋ ದುರ್ಲಭಂ ಪ್ರಾಪ್ಯ ಜೀವಿತಮ್ |
ಬಿಲಸ್ಥಂ ಪಾದಪಾಗ್ರಸ್ಥಃ ಪಲಿತಂ ಲೋಮಶೋಽಬ್ರವೀತ್ ॥118॥
ಅನಂತರ ದುರ್ಲಭವಾದ ಪ್ರಾಣವನ್ನು ಉಳಿಸಿಕೊಂಡ, ಆ ಭಯದಿಂದ ಮುಕ್ತನಾದ, ಮರದ ತುದಿಯಲ್ಲಿ ನೆಲೆಯೂರಿದ ಲೋಮಶನು ಬಿಲದಲ್ಲಿದ್ದ ಪಲಿತನಿಗೆ ಹೇಳಿತು.
ಅಕೃತ್ವಾ ಸಂವಿದಂ ಕಾಂಚಿತ್ ಸಹಸಾಹಮುಪಪ್ಲುತಃ |
ಕೃತಜ್ಞಂ ಕೃತಕಲ್ಯಾಣಂ ಕಚ್ಚಿನ್ಮಾಂ ನಾಭಿಶಂಕಸೇ ॥119॥
ಭಯಪೀಡಿತನಾಗಿದ್ದ ನಾನು ಯಾವ ಮಾತನ್ನು ಆಡದೆ ಕೂಡಲೇ ಹಾರಿಹೋದೆನು. ನಾನು ಕೃತಜ್ಞ. ನಿನಗೆ ಒಳ್ಳೆಯದನ್ನು ಮಾಡಿದ್ದೇನೆ. ಇಂತಹ ನನ್ನ ಬಗ್ಗೆ ಸಂದೇಹವಿಲ್ಲ ತಾನೆ?
ಗತ್ವಾ ಚ ಮಮ ವಿಶ್ವಾಸಂ ದತ್ತಂತ್ವ ಚ ಮಮ ಜೀವಿತಮ್ |
ಮಿತ್ರೋಪಭೋಗಸಮಯೇ ಕಿಂ ತ್ವಂ ನೈವೋಪಸರ್ಪಸಿ ॥120॥
ನೀನು ನನ್ನ ಮೇಲೆ ವಿಶ್ವಾಸವಿಟ್ಟು ನನಗೆ ಪ್ರಾಣದಾನವನ್ನು ಮಾಡಿರುವಿ. ಮಿತ್ರ! ಈಗ ಸುಖವಾಗಿರುವ ಸಮಯದಲ್ಲಿ ಏಕೆ ನನ್ನ ಬಳಿ ಬರುವುದಿಲ್ಲ?
ಕೃತ್ವಾ ಹಿ ಪೂರ್ವಂ ಮಿತ್ರಾಣಿ ಯಃ ಪಶ್ಚಾನ್ನಾನುತಿಷ್ಠತಿ |
ನ ಸ ಮಿತ್ರಾಣಿ ಲಭತೇ ಕೃಚ್ಛ್ರಾಸ್ವಾಪತ್ಸು ದುರ್ಮತಿಃ ॥121॥
ಮೊದಲು ಮೈತ್ರಿಯನ್ನು ಮಾಡಿಕೊಂಡು ಅನಂತರ ಮಿತ್ರಧರ್ಮವನ್ನು ಅನುಸರಿಸದವನು ದುರ್ಮತಿ. ಇಂತಹವನು ಬಹಳ ಕಷ್ಟವಾದ ಆಪತ್ಕಾಲಗಳಲ್ಲಿ ಮಿತ್ರರನ್ನು ಪಡೆಯಲಾರ.
ತತ್ಕೃತೋಽಹಂ ತ್ವಯಾ ಮಿತ್ರಂ ಸಾಮರ್ಥ್ಯಾದಾತ್ಮನಃ ಸಖೇ |
ಸ ಮಾಂ ಮಿತ್ರತ್ವಮಾಪನ್ನಮುಪಭೋಕ್ತುಂ ತ್ವಮರ್ಹಸಿ ॥122॥
ಗೆಳೆಯ! ನೀನು ನಿನ್ನ ಸಾಮರ್ಥ್ಯದಿಂದ ನನ್ನನ್ನು ನಿನ್ನ ಮಿತ್ರನಾಗಿಸಿರುವಿ. ನೀನು ದಯವಿಟ್ಟು ಮಿತ್ರನಾಗಿರುವ ನನ್ನ ಜೊತೆ ಊಟಮಾಡು.
ಯಾನಿ ಮೇ ಸಂತಿ ಮಿತ್ರಾಣಿ ಯೇ ಚ ಮೇ ಸಂತಿ ಬಾಂಧವಾಃ |
ಸರ್ವೇ ತ್ವಾಂ ಪೂಜಯಿಷ್ಯಂತಿ ಶಿಷ್ಯಾ ಗುರುಮಿವ ಪ್ರಿಯಮ್ ॥123॥
ನನ್ನ ಮಿತ್ರರು, ಬಾಂಧವರು ಎಲ್ಲರೂ ನಿನ್ನನ್ನು ಪೂಜಿಸುತ್ತಾರೆ. ಶಿಷ್ಯರು ಪ್ರಿಯಗುರುವನ್ನು ಪೂಜಿಸುವಂತೆ.
ಅಹಂ ಚ ಪೂಜಯಿಷ್ಯೇ ತ್ವಾಂ ಸಮಿತ್ರಗಣಬಾಂಧವಮ್ |
ಜೀವಿತಸ್ಯ ಪ್ರದಾತಾರಂ ಕೃತಜ್ಞಃ ಕೋ ನ ಪೂಜಯೇತ್ ॥124॥
ನಾನೂ ನಿನ್ನನ್ನು, ನಿನ್ನ್ನ ಮಿತ್ರರನ್ನೂ, ಬಾಂಧವರನ್ನೂ ಸತ್ಕರಿಸುವೆ. ಕೃತಜ್ಞನಾದ ಯಾರು ತಾನೆ ಪ್ರಾಣ ಉಳಿಸಿದವರನ್ನು ಸತ್ಕರಿಸುವುದಿಲ್ಲ?
ಈಶ್ವರೋ ಮೇ ಭವಾನಸ್ತು ಶರೀರಸ್ಯ ಗೃಹಸ್ಯ ಚ |
ಅರ್ಥಾನಾಂ ಚೈವ ಸರ್ವೇಷಾಮನುಶಾಸ್ತಾ ಚ ಮೇ ಭವ ॥125॥
ನೀನು ನನ್ನ ಶರೀರ, ಮನೆ, ಸಕಲ ಸಂಪತ್ತು- ಇವೆಲ್ಲವುಗಳ ಒಡೆಯನಾಗು. ನನಗೂ ಶಾಸಕನಾಗು.
ಅಮಾತ್ಯೋ ಮೇ ಭವ ಪ್ರಾಜ್ಞ ಪಿತೇವ ಹಿ ಪ್ರಶಾಧಿ ಮಾಮ್ |
ನ ತೇಽಸ್ತಿ ಭಯಮಸ್ಮತ್ತೋ ಜೀವಿತೇನಾತ್ಮನಃ ಶಪೇ ॥126॥
ಪ್ರಾಜ್ಞ! ನೀನು ನನಗೆ ಮಂತ್ರಿಯಾಗು. ತಂದೆಯಂತೆ ನನಗೆ ಅನುಶಾಸನವನ್ನು ಮಾಡು. ನನ್ನಿಂದ ನಿನಗೆ ಭಯವಿಲ್ಲ. ನನ್ನ ಪ್ರಾಣದ ಮೇಲೆ ಆಣೆ.
ಬುದ್ಧ್ಯಾ ತ್ವಮುಶನಾಃ ಸಾಕ್ಷಾದ್ ಬಲೇ ತ್ವಧಿಕೃತಾ ವಯಮ್ |
ತ್ವನ್ಮಂತ್ರಬಲಯುಕ್ತೋ ಹಿ ವಿಂದೇತ ಜಯಮೇವ ಹ ॥127॥
ನೀನು ಬುದ್ಧಿಶಕ್ತಿಯಲ್ಲಿ ಶುಕ್ರಾಚಾರ್ಯನೇ, ನಾನು ಬಲದಿಂದ ಅಧಿಕ. ನಿನ್ನ ಆಲೋಚನೆಯ ಸಹಾಯವನ್ನು ಪಡೆದವನು ನಿಶ್ಚಯವಾಗಿ ಜಯಶಾಲಿಯಾಗುತ್ತಾನೆ.
ಏವಮುಕ್ತಃ ಪರಂ ಸಾಂತ್ವಂ ಮಾರ್ಜಾರೇಣ ಸ ಮೂಷಕಃ |
ಉವಾಚ ಪರಮಾರ್ಥಜ್ಞಃ ಶ್ಲಕ್ಷ್ಣಮಾತ್ಮಹಿತಂ ವಚಃ ॥128॥
ಹೀಗೆ ಬೆಕ್ಕು ಉತ್ತಮ ಮಟ್ಟದ ಸಾಮೋಪಾಯದ ಮಾತುಗಳನ್ನು ಹೇಳಿದ ನಂತರ ಪರಮಾರ್ಥವನ್ನು ತಿಳಿದ ಇಲಿಯು ತನಗೆ ಹಿತಕರವಾದ ಮೃದುವಾದ ಮಾತುಗಳನ್ನು ಹೇಳಿತು.
ಯದ್ಭವಾನಾಹ ತತ್ ಸರ್ವಂ ಮಯಾ ತೇ ಲೋಮಶ ಶ್ರುತಮ್ |
ಮಮಾಪಿ ತಾವದ್ ಬ್ರುವತಃ ಶೃಣು ಯತ್ ಪ್ರತಿಭಾತಿ ಮಾಮ್ ॥
ಲೋಮಶ! ನೀನು ಹೇಳಿದ ಮಾತುಗಳೆಲ್ಲವನ್ನೂ ನಾನು ಕೇಳಿದ್ದೇನೆ. ನನಗೆ ತೋರುವಂತೆ ಹೇಳುತ್ತೇನೆ. ದಯವಿಟ್ಟು ಕೇಳು.
ವೇದಿತವ್ಯಾನಿ ಮಿತ್ರಾಣಿ ಬೋದ್ಧವ್ಯಾಶ್ಚಾಪಿ ಶತ್ರವಃ |
ಏತತ್ ಸುಸೂಕ್ಷ್ಮಂ ಲೋಕೇಽಸ್ಮಿನ್ ದೃಶ್ಯತೇ ಪ್ರಾಜ್ಞಸಮ್ಮತಮ್ ॥130|
ಮಿತ್ರರು ಯಾರು, ಶತ್ರುಗಳು ಯಾರು ಎಂದು ತಿಳಿದುಕೊಳ್ಳಬೇಕು. ಈ ಲೋಕದಲ್ಲಿ ಇದು ಬಹಳ ಸೂಕ್ಷ್ಮ ವಿಷಯ. ಇದು ಪ್ರಾಜ್ಞಸಮ್ಮತ.
ಶತ್ರುರೂಪಾಶ್ಚ ಸುಹೃದೋ ಮಿತ್ರರೂಪಾಶ್ಚ ಶತ್ರವಃ |

ಸಾಂತ್ವಿತಾಸ್ತೇ ನ ಬುಧ್ಯಂತೇ ರಾಗಲೋಭವಶಂ ಗತಾಃ ॥131॥
ಒಳ್ಳೆಯ ಹೃದಯದವರು ಶತ್ರುಗಳಂತೆ ಇರುತ್ತಾರೆ. ಶತ್ರುಗಳು ಮಿತ್ರರಂತೆ ಇರುತ್ತಾರೆ. ಸಾಮೋಪಾಯದ ಮಾತುಗಳ ಪ್ರಭಾವಕ್ಕೆ ಒಳಗಾದವರು, ಆಸೆ- ಲೋಭಗಳಿಗೆ ಒಳಗಾಗಿ ಇದನ್ನು ತಿಳಿಯಲು ಅಸಮರ್ಥರಾಗುತ್ತಾರೆ.
ನಾಸ್ತಿ ಜಾತ್ಯಾ ರಿಪುರ್ನಾಮ ಮಿತ್ರಂ ನಾಮ ನ ವಿದ್ಯತೇ |
ಸಾಮರ್ಥ್ಯಯೋಗಾಜ್ಜಾಯಂತೇ ಮಿತ್ರಾಣಿ ರಿಪವಸ್ತಥಾ ॥132॥
ಹುಟ್ಟಿನಿಂದ ಯಾರೂ ಶತ್ರುವೂ ಅಲ್ಲ, ಮಿತ್ರನೂ ಅಲ್ಲ. ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಮಿತ್ರರಾಗುತ್ತಾರೆ. ಶತ್ರುಗಳಾಗುತ್ತಾರೆ.
ಯೋ ಯಸ್ಮಿನ್ ಜೀವತಿ ಸ್ವಾರ್ಥಂ ಪಶ್ಯೇತ್ ಪೀಡಾಂ ನ ಜೀವತಿ |
ಸ ತಸ್ಯ ತಾವನ್ಮಿತ್ರಂ ಸ್ಯಾದ್ ವ್ಯಾಪನ್ನಃ ಸ್ಯಾದ್ ವಿಪರ್ಯಯೇ ॥133॥
ಒಬ್ಬ ವ್ಯಕ್ತಿಯು ಬದುಕಿದ್ದರೆ ತನಗೆ ಅನುಕೂಲ ಎಂದು ಯಾರು ಕಾಣುತ್ತಾನೋ, ಬದುಕಿರದಿದ್ದರೆ ತನಗೆ ತೊಂದರೆ ಎಂದು ಕಾಣುತ್ತಾನೋ ಅವನು ಆ ವ್ಯಕ್ತಿಗೆ ಮಿತ್ರನಾಗುತ್ತಾನೆ. ಮೈತ್ರಿಯನ್ನು ಮಾಡಿಕೊಳ್ಳದಿದ್ದರೆ ವಿಪತ್ತಿಗೆ ಒಳಗಾಗುತ್ತಾನೆ.
ನಾಸ್ತಿ ಮೈತ್ರೀ ಸ್ಥಿರಾ ನಾಮ ನ ಚ ಧ್ರುವಮಸೌಹೃದಮ್ |
ಅರ್ಥಯುಕ್ತ್ಯಾ ಹಿ ಜಾಯಂತೇ ಮಿತ್ರಾಣಿ ರಿಪವಸ್ತಥಾ ॥134॥
ಸ್ಥಿರವಾದ ಮೈತ್ರಿಯೂ ಇಲ್ಲ, ಸ್ಥಿರವಾದ ಶತ್ರುತ್ವವೂ ಇಲ್ಲ. ಪ್ರಯೋಜನಕ್ಕೆ ತಕ್ಕಂತೆ ಮಿತ್ರರಾಗುತ್ತಾರೆ. ಹಾಗೆಯೇ ಶತ್ರುಗಳಾಗುತ್ತಾರೆ.
ಮಿತ್ರಂ ಚ ಶತ್ರುತಾಮೇತಿ ಕಸ್ಮಿಂಶ್ಚಿತ್ ಕಾಲಪರ್ಯಯೇ |
ಶತ್ರುಶ್ಚ ಮಿತ್ರತಾಮೇತಿ ಸ್ವಾರ್ಥೋಹಿ ಬಲವತ್ತರಃ ॥135॥
ಯಾವುದೋ ಕಾಲಗತಿಯಲ್ಲಿ ಮಿತ್ರನು ಶತ್ರುವಾಗಿ ಬಿಡುತ್ತಾನೆ. ಶತ್ರುವು ಮಿತ್ರನಾಗಿ ಬಿಡುತ್ತಾನೆ. ಸ್ವಾರ್ಥವೇ ಹೆಚ್ಚು ಬಲಶಾಲಿ.
ಯೋ ವಿಶ್ವಸಿತಿ ಮಿತ್ರೇಷು ನ ಚಾಶ್ವಸಿತಿ ಶತ್ರುಷು |
ಅರ್ಥಯುಕ್ತಿಮವಿಜ್ಞಾಯ ಚಲಿತಂ ತಸ್ಯ ಜೀವಿತಮ್ ॥136॥
ಯಾರು ಮಿತ್ರರಲ್ಲಿ ವಿಶ್ವಾಸವಿಡುವುದಿಲ್ಲವೋ, ಸ್ವಹಿತ ಸಾಧನೆಯು ಹೇಗೆ ಆಗುತ್ತದೆ ಎಂದು ವಿಮರ್ಶಿಸದೆ ಶತ್ರುಗಳಲ್ಲಿ ವಿಶ್ವಾಸವಿಡುವನೋ ಅವನ ಜೀವನವು ಅಸ್ಥಿರವಾಗುತ್ತದೆ ಅಥವಾ ನಾಶವಾಗುತ್ತದೆ.
ಅರ್ಥಯುಕ್ತಿಮವಿಜ್ಞಾಯ ಯಃ ಶುಭೇ ಕುರುತೇ ಮತಿಮ್ |
ಮಿತ್ರೇ ವಾ ಯದಿ ವಾ ಶತ್ರೌ ತಸ್ಯಾಪಿ ಚಲಿತಾ ಮತಿಃ ॥137॥
ಸ್ವಹಿತ ಸಾಧನೆಯು ಹೇಗೆ ಆಗುತ್ತದೆ ಎಂದು ತಿಳಿದುಕೊಳ್ಳದೆ, ಸ್ವಹಿತವನ್ನು ಬಯಸಿ ಮಿತ್ರನ ಅಥವಾ ಶತ್ರುವಿನ ಅಭಿಪ್ರಾಯಗಳಿಗೆ ಯಾರು ಬೆಲೆಕೊಡುವನೋ ಅವನ ಬುದ್ಧಿಯೂ ಅಸ್ಥಿರವೇ.
ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇಽಪಿ ನ ವಿಶ್ವಸೇತ್ |
ವಿಶ್ವಾಸಾದ್ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ ॥138॥
ವಿಶ್ವಾಸರಹಿತನನ್ನು ನಂಬಬಾರದು. ವಿಶ್ವಾಸವಿರುವವನನ್ನೂ ನಂಬಬಾರದು. ವಿಶ್ವಾಸವಿಟ್ಟ ಕಾರಣದಿಂದ ಉಂಟಾಗುವ ಭಯವು (ತೊಂದರೆಯು) ಬದುಕಿನ ಬೇರುಗಳನ್ನೇ ಕತ್ತರಿಸುತ್ತದೆ.
ಅರ್ಥಯುಕ್ತ್ಯಾ ಹಿ ದೃಶ್ಯಂತೇ ಪಿತಾ ಮಾತಾ ಸುತಾಸ್ತಥಾ |
ಮಾತುಲಾ ಭಾಗಿನೇಯಾಶ್ಚ ತಥಾ ಸಂಬಂಧಿಬಾಂಧವಾಃ ॥139॥
ತಂದೆ, ತಾಯಿ, ಮಕ್ಕಳು, ಸೋದರಮಾವ, ಸೋದರಿಯ ಮಕ್ಕಳು, ಸಂಬಂಧಿಗಳು, ಬಾಂಧವರು- ಇವರೆಲ್ಲರನ್ನು ಸ್ವಹಿತಕ್ಕೆ ಅನುಗುಣವಾಗಿಯೇ ಕಾಣುತ್ತೇವೆ.
ಪುತ್ರಂ ಹಿ ಮಾತಾಪಿತರೌ ತ್ಯಜತಃ ಪತಿತಂ ಪ್ರಿಯಮ್ |
ಲೋಕೋ ರಕ್ಷತಿ ಚಾತ್ಮಾನಂ ಪಶ್ಯ ಸ್ವಾರ್ಥಸ್ಯ ಸಾರತಾಮ್ ॥140॥
ತಂದೆ-ತಾಯಿಗಳು ಪತಿತನಾದ ಪ್ರಿಯಪುತ್ರನನ್ನೂ ತ್ಯಜಿಸುತ್ತಾರೆ. ಜನರು ತಮ್ಮ ರಕ್ಷಣೆಗೆ ಪ್ರಾಶಸ್ತ್ಯವನ್ನು ಕೊಡುತ್ತಾರೆ. ನೋಡು ಸ್ವಾರ್ಥದ ಶಕ್ತಿಯನ್ನು.
ತಂ ಮನ್ಯೇ ನಿಕೃತಿಪ್ರಜ್ಞಂ ಯೋ ಮೋಕ್ಷಂ ಪ್ರತ್ಯನಂತರಮ್ |
ಕೃತ್ಯಂ ಮೃಗಯಸೇ ಕರ್ತುಂ ಸುಖೋಪಾಯಮಸಂಶಯಮ್ ॥141॥
ಬಿಡುಗಡೆಯಾದ ನಂತರವೂ ನಿನ್ನ ಸುಖಕ್ಕೆ ಅನುಕೂಲವಾಗುವ (ಇಲಿಯನ್ನು ತಿನ್ನುವ) ಕೆಲಸವನ್ನು ಮಾಡಲು ಬಯಸುತ್ತಿರುವಿ. ಇಂತಹ ನಿನ್ನನ್ನು ವಂಚನೆಯಲ್ಲಿ ಮನಸ್ಸನ್ನು ಇಟ್ಟವನು ಎಂದು ತಿಳಿಯುತ್ತೇನೆ. ಈ ವಿಷಯದಲ್ಲಿ ಸಂಶಯವಿಲ್ಲ.
ಅಸ್ಮಿನ್ನಿಲಯ ಏವ ತ್ವಂ ನ್ಯಗ್ರೋಧಾದವತಾರಿತಃ |
ಪೂರ್ವಂ ನಿವಿಷ್ಟ ಉತ್ಥಾನಂ ಚಪಲತ್ವಾನ್ನ ಬುದ್ಧವಾನ್ ॥142॥
ಇದೇ ನಿಲಯದಲ್ಲಿ ಇದ್ದ ನೀನು (ಬೇಡನು ಇಟ್ಟಿದ್ದ ಮಾಂಸವನ್ನು ನೋಡಿ) ಆಲದ ಮರದಿಂದ ಇಳಿಯುವ ಪ್ರಲೋಭನೆಗೆ ಒಳಗಾಗಿ, ನಿನ್ನ ಚಪಲ ಸ್ವಭಾವದಿಂದ ಬಲೆಯಲ್ಲಿ ಸಿಕ್ಕಿದೆ. ಅನಂತರ ಹೊರಗೆ ಹೋಗುವ ರೀತಿಯನ್ನು ತಿಳಿಯಲಿಲ್ಲ.
ಆತ್ಮನಶ್ಚಪಲೇ ನಾಸ್ತಿ ಕುತೋಽನ್ಯೇಷಾಂ ಭವಿಷ್ಯತಿ |
ತಸ್ಮಾತ್ ಸರ್ವಾಣಿ ಕಾರ್ಯಾಣಿ ಚಪಲೋ ಹಂತ್ಯಸಂಶಯಮ್ ॥
ಚಪಲ ಸ್ವಭಾವದವನಿಗೆ ಸ್ವಹಿತದ ಪರಿವೆಯೇ ಇಲ್ಲ. ಬೇರೆಯವರ ಹಿತದ ಕಾಳಜಿಯು ಹೇಗೆ ತಾನೆ ಇರುತ್ತದೆ. ಆದ್ದರಿಂದ ಚಪಲಚಿತ್ತದವನು ಎಲ್ಲ ಕೆಲಸದಲ್ಲೂ ಸೋಲುತ್ತಾನೆ. ಸಂಶಯವಿಲ್ಲ.
ಬ್ರವೀಷಿ ಮಧುರಂ ಯಚ್ಚ ಪ್ರಿಯೋ ಮೇ ಹ ಭವಾನಿತಿ |
ತನ್ಮಿಥ್ಯಾ ಕಾರಣಂ ಸರ್ವಂ ವಿಸ್ತರೇಣಾಪಿ ಮೇ ಶೃಣು ॥144॥

`ನೀನು ನನಗೆ ಪ್ರಿಯ' ಎಂದು ಮಧುರವಚನವನ್ನು ಹೇಳುತ್ತಿರುವಿ. ಅದು ಸುಳ್ಳು. ಕಾರಣವನ್ನು ವಿವರವಾಗಿ ಹೇಳುತ್ತೇನೆ. ಎಲ್ಲವನ್ನೂ ಕೇಳು.
ಕಾರಣಾತ್ ಪ್ರಿಯತಾಮೇತಿ ದ್ವೇಷ್ಯೋ ಭವತಿ ಕಾರಣಾತ್ |
ಅರ್ಥಾರ್ಥೀ ಜೀವಲೋಕೋಽಯಂ ನ ಕಶ್ಚಿತ್ ಕಸ್ಯಚಿತ್ ಪ್ರಿಯಃ ॥
ಏನಾದರೊಂದು ಕಾರಣದಿಂದಲೇ ಪ್ರಿಯನಾಗುತ್ತಾನೆ. ಏನಾದರೊಂದು ಕಾರಣದಿಂದಲೇ ದ್ವೇಷಾರ್ಹನೂ ಆಗುತ್ತಾನೆ. ಈ ಜೀವಲೋಕವು ಸ್ವಪ್ರಯೋಜನವನ್ನೇ ಬಯಸುತ್ತದೆ. ಯಾರೂ ಯಾರಿಗೂ ಪ್ರಿಯನಲ್ಲ.
ಸಖ್ಯಂ ಸೋದರಯೋರ್ಭ್ರಾತ್ರೋರ್ದಂಪತ್ಯೋರ್ವಾ ಪರಸ್ಪರಮ್ |
ಕಸ್ಯಚಿನ್ನಾಭಿಜಾನಾಮಿ ಪ್ರೀತಿಂ ನಿಷ್ಕಾರಣಾಮಿಹ ॥146॥
ಒಡಹುಟ್ಟಿದ ಸೋದರರಲ್ಲಿ, ದಂಪತಿಗಳಲ್ಲಿ ಪರಸ್ಪರ ಸಖ್ಯವು ಇರುತ್ತದೆ. ಈ ಲೋಕದಲ್ಲಿ ಯಾರಿಗೂ ಯಾರಲ್ಲೂ ನಿಷ್ಕಾರಣ ಪ್ರೀತಿಯು ಇರುವುದನ್ನು ನಾನು ಗಮನಿಸಿಲ್ಲ.
ಯದ್ಯಪಿ ಭ್ರಾತರಃ ಕ್ರುದ್ಧಾ ಭಾರ್ಯಾ ವಾ ಕಾರಣಾಂತರೇ |
ಸ್ವಭಾವತಸ್ತೇ ಪ್ರೀಯಂತೇ ನೇತರಃ ಪ್ರೀಯತೇ ಜನಃ ॥147॥
ಯಾವುದೋ ಕಾರಣದಿಂದ ಕೋಪಗೊಂಡ ಸೋದರರು ಅಥವಾ ಪತ್ನೀ ಸ್ವಭಾವತಃ ಪ್ರೀತಿಯುಳ್ಳವರಾಗಿರುತ್ತಾರೆ. ಬೇರೆ ಯಾರೂ ಸ್ವಭಾವತಃ ಪ್ರೀತಿಯುಳ್ಳವರಲ್ಲ.
ಪ್ರಿಯೋ ಭವತಿ ದಾನೇನ ಪ್ರಿಯವಾದೇನ ಚಾಪರಃ |
ಮಂತ್ರಹೋಮಜಪೈರನ್ಯಃ ಕಾರ್ಯಾರ್ಥಂ ಪ್ರೀಯತೇ ಜನಃ ॥148॥
ಒಬ್ಬನು ದಾನದಿಂದ ಪ್ರಿಯನಾಗುತ್ತಾನೆ. ಮತ್ತೊಬ್ಬನು ಪ್ರಿಯ ಮಾತುಗಳಿಂದ ಪ್ರಿಯನಾಗುತ್ತಾನೆ. ಇನ್ನೊಬ್ಬನು ತನ್ನ ಕೆಲಸಕ್ಕಾಗಿ ಮಾಡಿದ ಮಂತ್ರ, ಹೋಮ, ಜಪಗಳಿಂದ ಪ್ರಿಯನಾಗುತ್ತಾನೆ.
ಉತ್ಪನ್ನಾ ಕಾರಣಾತ್ಪ್ರೀತಿರಾಸೀನ್ನೌ ಕಾರಣಾಂತರೇ |
ಪ್ರಧ್ವಸ್ತೇ ಕಾರಣಸ್ಥಾನೇ ಸಾ ಪ್ರೀತಿರ್ವಿನಿವರ್ತತೇ ॥149॥
ಯಾವುದೋ ಪ್ರಯೋಜನಕ್ಕಾಗಿ ನಮ್ಮಿಬ್ಬರಲ್ಲಿ ಪ್ರೀತಿಯು ಹುಟ್ಟಿತ್ತು. ಆ ಪ್ರಯೋಜನವು ನೆರವೇರಿದ ನಂತರ ಆ ಪ್ರೀತಿಯು ಇಲ್ಲವಾಗುತ್ತದೆ.
ಕಿಂ ನು ತತ್ ಕಾರಣಂ ಮನ್ಯೇ ಯೇನಾಹಂ ಭವತಃ ಪ್ರಿಯಃ |
ಅನ್ಯತ್ರಾಭ್ಯವಹಾರಾರ್ಥಾತ್ತತ್ರಾಪಿ ಚ ಬುಧಾ ವಯಮ್ ॥150॥
ನಾನು ನಿನಗೆ ಪ್ರಿಯನಾಗಲು, ನನ್ನನ್ನು ತಿನ್ನುವ ಉದ್ದೇಶವನ್ನು ಬಿಟ್ಟು ಬೇರೆ ಯಾವ ಕಾರಣವನ್ನು ತಿಳಿಯಲಿ? ಆ ವಿಷಯದಲ್ಲೂ ನಾನು ಬುದ್ಧಿವಂತನೇ.
ಕಾಲೋ ಹೇತುಂ ವಿಕುರುತೇ ಸ್ವಾರ್ಥಸ್ತಮನುವರ್ತತೇ |
ಸ್ವಾರ್ಥಂ ಪ್ರಾಜ್ಞೋಽಭಿಜಾನಾತಿ ಪ್ರಾಜ್ಞಂ ಲೋಕೋಽನುವರ್ತತೇ ॥
ಕಾಲವು ಕಾರಣವನ್ನು ಬದಲಾಯಿಸುತ್ತದೆ. ಸ್ವಾರ್ಥವು ಕಾರಣವನ್ನು ಅನುಸರಿಸುತ್ತದೆ (ಸ್ವಾರ್ಥಕ್ಕೆ ಅನುಗುಣವಾಗಿ ಕಾರಣವು ಏರ್ಪಡುತ್ತದೆ). (ಆಗ ಪ್ರಾಣವನ್ನು ಉಳಿಸಿಕೊಳ್ಳುವುದು ಸ್ವಾರ್ಥ. ಈಗ ಇಲಿಯ ಭಕ್ಷಣವು ಸ್ವಾರ್ಥ. ಆಗ ಸ್ವಾರ್ಥಕ್ಕಾಗಿ ಸಂಧಾನ, ತಾಳ್ಮೆ, ಈಗ ಸ್ವಾರ್ಥಕ್ಕಾಗಿ ಪ್ರೀತಿಯ ಆಹ್ವಾನ). ಪ್ರಾಜ್ಞನು ಸ್ವಾರ್ಥವನ್ನು ತಿಳಿಯುತ್ತಾನೆ. ಲೋಕವು ಪ್ರಾಜ್ಞನನ್ನು ಅನುಸರಿಸುತ್ತದೆ.
ನ ತ್ವೀದೃಶಂ ತ್ವಯಾ ವಾಚ್ಯಂ ವಿದುಷಿ ಸ್ವಾರ್ಥಪಂಡಿತೇ |
ಅಕಾಲೇಽವಿಷಮಸ್ಥಸ್ಯ ಸ್ವಾರ್ಥಹೇತುರಯಂ ತವ ॥152॥
ತಿಳಿದವನೂ, ಸ್ವಾರ್ಥಪಂಡಿತನೂ ಆದ ನನ್ನನ್ನು ಕುರಿತು ಅಕಾಲದಲ್ಲಿ (ಅವಶ್ಯಕತೆಯು ಇಲ್ಲದಿರುವಾಗ) ನೀನು ಹೀಗೆ ಹೇಳಬಾರದು. ವಿಷಮಸ್ಥಿತಿಯಲ್ಲಿ ಇಲ್ಲದ ನಿನ್ನ ಈ ವ್ಯವಹಾರವು ಸ್ವಾರ್ಥಸಾಧನೆಗಾಗಿಯೇ.
ತಸ್ಮಾನ್ನಾಹಂ ಚಲೇ ಸ್ವಾರ್ಥಾತ್ ಸುಕೃತಃ ಸಂಧಿವಿಗ್ರಹೇ |
ಅಭ್ರಾಣಾಮಿವ ರೂಪಾಣಿ ವಿಕುರ್ವಂತಿ ಕ್ಷಣೇ ಕ್ಷಣೇ ॥153॥
ಆದ್ದರಿಂದ ಸಂಧಿ ಮತ್ತು ವಿಗ್ರಹಗಳಲ್ಲಿ ಕುಶಲನಾದ ನಾನು ಸ್ವಾರ್ಥತ್ಯಾಗವನ್ನು ಮಾಡುವುದಿಲ್ಲ. ನಮ್ಮ ರೂಪಗಳು=ನಿಲುವುಗಳು ಪ್ರತಿಕ್ಷಣ ಬದಲಾವಣೆಯನ್ನು ಹೊಂದುತ್ತವೆ. ಮೋಡಗಳ ಆಕಾರಗಳಂತೆ.
ಅದ್ಯೈವ ಹಿ ರಿಪುರ್ಭೂತ್ವಾ ಪುನರದ್ಯೈವ ಸೌಹೃದಮ್ |
ಪುನಶ್ಚ ರಿಪುರದ್ಯೈವ ಯುಕ್ತೀನಾಂ ಪಶ್ಯ ಚಾಪಲಮ್ ॥154॥
ಈ ದಿನವೇ ಶತ್ರುವಾಗಿದ್ದಿ. ಈ ದಿನವೇ ಸೌಹಾರ್ದವೂ ಉಂಟಾಗಿತ್ತು. ಮತ್ತೆ ಈ ದಿನವ ಶತ್ರು. ಯುಕ್ತಿಗಳ (ಕಾರಣಗಳ) ಅಸ್ಥಿರತೆಯನ್ನು ನೋಡು.
ಆಸೀತ್ ತಾವತ್ ತು ಮೈತ್ರೀ ನೌ ಯಾವದ್ಧೇತುರಭೂತ್ ಪುರಾ |
ಸಾ ಗತಾ ಸಹ ತೇನೈವ ಕಾಲಯುಕ್ತೇನ ಹೇತುನಾ ॥155॥
ಸ್ವಲ್ಪ ಹಿಂದೆ ನಮ್ಮಿಬ್ಬರ ಮೈತ್ರಿಗೆ ಕಾರಣವಿತ್ತು. ಮೈತ್ರಿಯೂ ಇತ್ತು. ಕಾಲಕ್ಕೆ (ಕಾಲದ ಅವಶ್ಯಕತೆಗೆ) ಸೀಮಿತವಾಗಿದ್ದ ಆ ಕಾರಣವು (ಮುಂಗಸಿ ಮತ್ತು ಗೂಬೆಗಳ ನಿರ್ಗಮನದಿಂದ ಮತ್ತು ಬಲೆಯ ಛೇದದಿಂದ) ಇಲ್ಲವಾಯಿತು. ಕಾರಣದ ನಿವೃತ್ತಿಯ ಜೊತೆಗೆ ಮೈತ್ರಿಯೂ ಹೋಯಿತು.
ತ್ವಂ ಹಿ ಮೇಽತ್ಯಂತತಃ ಶತ್ರುಃ ಸಾಮರ್ಥ್ಯಾನ್ಮಿತ್ರತಾಂ ಗತಃ |
ತತ್ಕೃತ್ಯಮಭಿನಿರ್ವೃತ್ತಂ ಪ್ರಕೃತಿಃ ಶತ್ರುತಾಂ ಗತಾ ॥156॥

ನೀನು ನನ್ನ ಅತ್ಯಂತ ಶತ್ರು. (ನಿನ್ನನ್ನು ಆಪತ್ತಿನಿಂದ ಪಾರು ಮಾಡುವ) ನನ್ನ ಸಾಮರ್ಥ್ಯದಿಂದಾಗಿ ಮಿತ್ರನಾಗಿದ್ದಿ. ನಿನ್ನ ಕೆಲಸವು ಆಯಿತು. ಈಗ ನಿನ್ನ ಸ್ವಭಾವವು ಶತ್ರುತ್ವದ ಕಡೆಗೆ ಸಾಗಿದೆ.
ಸೋಽಹಮೇವಂ ಪ್ರಣೀತಾನಿ ಜ್ಞಾತ್ವಾ ಶಾಸ್ತ್ರಾಣಿ ತತ್ತ್ವತಃ |
ಪ್ರವಿಶೇಯಂ ಕಥಂ ಪಾಶಂ ತ್ವತ್ಕೃತಂ ತದ್ ವದಸ್ವ ಮೇ ॥157॥
(ಪೂರ್ವಸೂರಿಗಳಿಂದ) ರಚಿತವಾದ ಶಾಸ್ತ್ರಗಳನ್ನು ಸರಿಯಾಗಿ ತಿಳಿದಿರುವ ಈ ನಾನು ನೀನು ರಚಿಸಿರುವ ಬಲೆಗೆ ಹೇಗೆ ತಾನೆ ಪ್ರವೇಶಿಸಿಯೇನು? ನೀನೇ ಹೇಳು.
ತ್ವದ್ವೀರ್ಯೇಣ ವಿಮುಕ್ತೋಽಹಂ ಮದ್ವೀರ್ಯೇಣ ತಥಾ ಭವಾನ್ |
ಅನ್ಯೋನ್ಯಾನುಗ್ರಹೇ ವೃತ್ತೇ ನಾಸ್ತಿ ಭೂಯಃ ಸಮಾಗಮಃ ॥158॥
ನಿನ್ನ ಬಲದಿಂದ (ಅನಿವಾರ್ಯವಾದ ನಿನ್ನ ತಾಳ್ಮೆಯಿಂದ) ನಾನು ಬಿಡುಗಡೆಯನ್ನು ಹೊಂದಿದೆನು. ನನ್ನ ಬಲದಿಂದ ನೀನು ಬಿಡುಗಡೆಯನ್ನು ಹೊಂದಿದಿ. ಪರಸ್ಪರ ಉಪಕಾರವು ಆದನಂತರ ಮತ್ತೆ ಸಮಾಗಮವಿಲ್ಲ.
ತ್ವಂ ಹಿ ಸೌಮ್ಯ ಕೃತಾರ್ಥೋಽದ್ಯ ನಿರ್ವೃತ್ತಾರ್ಥಾಸ್ತಥಾ ವಯಮ್ |
ನ ತೇಽಸ್ತ್ಯನ್ಯನ್ಮಯಾ ಕೃತ್ಯಂ ಕಿಂಚಿದನ್ಯತ್ರ ಭಕ್ಷಣಾತ್ ॥159॥
ಸೌಮ್ಯ! ಈಗ ನೀನು ಕೃತಾರ್ಥ. ನಾನೂ ಕೃತಾರ್ಥ. ನನ್ನನ್ನು ತಿನ್ನುವುದನ್ನು ಬಿಟ್ಟು ಬೇರೆ ಏನೂ ನನ್ನಿಂದ ನಿನಗೆ ಆಗಬೇಕಿಲ್ಲ.
ಅಹಮನ್ನಂ ಭವಾನ್ ಭೋಕ್ತಾ ದುರ್ಬಲೋಹಂ ಭವಾನ್ ಬಲೀ |
ನಾವಯೋರ್ವಿದ್ಯತೇ ಸಂಧಿರ್ನಿಯುಕ್ತೇ ವಿಷಮೇ ಬಲೇ ॥160॥
ನಾನು ಆಹಾರ. ನೀನು ತಿನ್ನುವವನು. ನಾನು ದುರ್ಬಲ. ನೀನು ಬಲಶಾಲಿ. ವಿಷಮ ಬಲವು (ನಮ್ಮಲ್ಲಿ ವಿಧಿಯಿಂದ) ನಿಯುಕ್ತವಾಗಿರುವಾಗ ನಮ್ಮಿಬ್ಬರಲ್ಲಿ ಸಂಧಿಯು ಇಲ್ಲವೇ ಇಲ್ಲ.
ಸಮ್ಮನ್ಯೇಽಹಂ ತವ ಪ್ರಜ್ಞಾಂ ಯನ್ಮೋಕ್ಷಾತ್ ಪ್ರತ್ಯನಂತರಮ್ |
ಭಕ್ಷ್ಯಂ ಮೃಗಯಸೇ ನೂನಂ ಸುಖೋಪಾಯಮಸಂಶಯಮ್ ॥161॥
ನನಗೆ ನಿನ್ನ ಬುದ್ಧಿಯು ಗೊತ್ತು. ಬಿಡುಗಡೆಯ ನಂತರ ಸುಲಭ ಉಪಾಯದಿಂದ (ನನ್ನನ್ನು) ಆಹಾರವಾಗಿ ಪಡೆಯಲು ಹೊಂಚು ಹಾಕುತ್ತಿರುವಿ. ಸಂಶಯವೇ ಇಲ್ಲ.
ಭಕ್ಷ್ಯಾರ್ಥಮೇವ ಬದ್ಧಸ್ತ್ವಂ ಸ ಮುಕ್ತಃ ಪ್ರಸೃತಃ ಕ್ಷುಧಾ |
ಶಾಸ್ತ್ರಜ್ಞಮಭಿಸಂಧಾಯ ನೂನಂ ಭಕ್ಷಯಿತಾದ್ಯ ಮಾಮ್ |
ಶಸ್ತ್ರಜಾಂ ಮತಿಮಾಸ್ಥಾಯ ಪ್ರಾತರಾಶಮಿಹೇಚ್ಛಸಿ ॥162॥
(ಬೇಡನ) ಆಹಾರಕ್ಕಾಗಿಯೇ ನೀನು (ಬಲೆಯಲ್ಲಿ) ಬದ್ಧನಾಗಿದ್ದಿ. ಬಿಡುಗಡೆ ಹೊಂದಿದ ನಿನಗೆ ಬಹಳ ಹಸಿವು. ನಾನು ಶಾಸ್ತ್ರಜ್ಞ ಎಂದು ತಿಳಿದಿರುವಿ. (ಆದ್ದರಿಂದ ಕೃತಜ್ಞತೆ, ಸೌಹಾರ್ದ ಮೊದಲಾದ ಮಾತುಗಳಿಗೆ ನಾನು ಸ್ಪಂದಿಸುತ್ತೇನೆ ಎಂಬ) ಕುಯುಕ್ತಿಯಿಂದ ನೀನು ಇಂದು ನನ್ನನ್ನು ತಿಂದೇಬಿಡುವಿ. ಸಂಶಯವಿಲ್ಲ. (ನನ್ನ ಶಾಸ್ತ್ರಾಧ್ಯಯನದಿಂದ ಹುಟ್ಟಿದ ಚಿಂತನೆಯನ್ನು ಅವಲಂಬಿಸಿ ನನ್ನನ್ನು ನಿನ್ನ ಬೆಳಗಿನ ಆಹಾರವಾಗಿಸಲು ಬಯಸಿರುವಿ- ಲಕ್ಷ್ಮಾಲಂಕಾರ).
ಜಾನಾಮಿ ಕ್ಷುಧಿತಂ ಹಿ ತ್ವಾಮಾಹಾರಸಮಯಶ್ಚ ತೇ |
ಸ ತ್ವಂ ಮಾಮಭಿಸಂಧಾಯ ಭಕ್ಷ್ಯಂ ಮೃಗಯಸೇ ಪುನಃ ॥163॥
ನನಗೆ ಗೊತ್ತು, ನಿನಗೆ ಹಸಿವು ಆಗಿದೆ. ಈಗ ನಿನ್ನ ಆಹಾರದ ಸಮಯ. ನೀನು ಕುಯುಕ್ತಿಯನ್ನು ಹೂಡಿ ನನ್ನನ್ನು ಆಹಾರವಾಗಿಸಿಕೊಳ್ಳಲು ಬಯಸುತ್ತಿರುವಿ.
ಯಚ್ಚಾಪಿ ಪುತ್ರದಾರಂ ಸ್ವಂ ತತ್ ಸನ್ನಿಸೃಜಸೇ ಮಯಿ |
ಶುಶ್ರೂಷಾಂ ನಾಮ ಮೇ ಕರ್ತುಂ ಸಖೇ ಮಮ ನ ತತ್ಕ್ಷಮಮ್ ॥
ನಿನ್ನ ಮಕ್ಕಳನ್ನು, ಪತ್ನಿಯನ್ನು ನನ್ನ ಶುಶ್ರೂಷೆ ಮಾಡುವುದಕ್ಕೆ ನಿಯೋಜಿಸುವುದಾಗಿ ಹೇಳುತ್ತಿರುವಿ. ಗೆಳೆಯ! ನನಗೆ ಇದು ಸರ್ವಥಾ ಯುಕ್ತವಾಗಿ ಕಾಣುವುದಿಲ್ಲ.
ತ್ವಯಾ ಮಾಂ ಸಹಿತಂ ದೃಷ್ಟ್ವಾ ಪ್ರಿಯಾ ಭಾರ್ಯಾ ಸುತಾಶ್ಚ ಯೇ |
ಕಸ್ಮಾನ್ಮಾಂ ತೇ ನ ಖಾದೇಯುರ್ಹೃಷ್ಟಾಃ ಪ್ರಣಯಿನಸ್ತ್ವಯಿ ॥165॥
ನಿನ್ನ ಜೊತೆಗಿರುವ ನನ್ನನ್ನು ನೋಡಿ ನಿನ್ನ ಪ್ರೀತಿಗೆ ಪಾತ್ರರಾದ ನಿನ್ನ ಹೆಂಡತಿ, ಮಕ್ಕಳು ಸಂತೋಷದಿಂದ ನನ್ನನ್ನು ತಿನ್ನುವುದಿಲ್ಲವೇ?
ನಾಹಂ ತ್ವಯಾ ಸಮೇಷ್ಯಾಮಿ ವೃತ್ತೋ ಹೇತುಃ ಸಮಾಗಮೇ |
ಶಿವಂ ಧ್ಯಾಯಸ್ವ ಮೇಽತ್ರಸ್ಥಃ ಸುಕೃತಂ ಸ್ಮರ್ಯತೇ ಯದಿ ॥166॥
ನಾನು ನಿನ್ನ ಜೊತೆ ಸೇರುವುದಿಲ್ಲ. ನಮ್ಮ ಸಮಾಗಮಕ್ಕೆ ಕಾರಣವು ಇತ್ತು (ಈಗ ಇಲ್ಲ). ನನ್ನ ಒಳ್ಳೆಯ ಕೆಲಸವನ್ನು ನೆನೆಯುವುದೇ ಆದರೆ ನನ್ನ ಶ್ರೇಯಸ್ಸನ್ನು ಚಿಂತಿಸು.
ಶತ್ರೋರನ್ನಾದ್ಯಭೂತಃ ಸನ್ ಕ್ಲಿಷ್ಟಸ್ಯ ಕ್ಷುಧಿತಸ್ಯ ಚ |
ಭಕ್ಷ್ಯಂ ಮೃಗಯಮಾಣಸ್ಯ ಕಃ ಪ್ರಾಜ್ಞೋ ವಿಷಯಂ ವ್ರಜೇತ್ ॥167॥
ಕ್ಲೇಶಕ್ಕೆ ಒಳಗಾಗಿರುವ, ಹಸಿದಿರುವ, ಆಹಾರವನ್ನು ಹುಡುಕುತ್ತಿರುವ ಶತ್ರುವಿಗೆ ಆಹಾರವಾಗಿ ಯಾವ ಪ್ರಾಜ್ಞನು ತಾನೇ ಅವನ ಬಳಿ ಹೋದಾನು?
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ದೂರಾದಪಿ ತವೋದ್ವಿಜೇ |
ನಾಹಂ ತ್ವಯಾ ಸಮೇಷ್ಯಾಮಿ ನಿರ್ವೃತೋ ಭವ ಲೋಮಶ ॥168॥

ನಿನಗೆ ಒಳ್ಳೆಯದಾಗಲಿ ಹೋಗುತ್ತೇನೆ. ನೀನು ದೂರದಲ್ಲಿದ್ದರೂ ನನಗೆ ಉದ್ವೇಗವಾಗುತ್ತದೆ. ಲೋಮಶ! ನಾನು ನಿನ್ನ ಜೊತೆ ಸೇರುವುದಿಲ್ಲ, ಸಂತೋಷದಿಂದಿರು.
ಬಲವತ್ಸನ್ನಿಕರ್ಷೋ ಹಿ ನ ಕದಾಚಿತ್ ಪ್ರಶಸ್ಯತೇ |
ಪ್ರಶಾಂತಾದಪಿ ಮೇ ಪ್ರಾಜ್ಞ ಭೇತವ್ಯಂ ಬಲಿನಃ ಸದಾ ||169||
ಬಲಶಾಲಿಗಳ ಸಾಮೀಪ್ಯವು ಎಂದೂ ಹಿತವಲ್ಲ. ಪ್ರಾಜ್ಞ! ಪ್ರಶಾಂತರಾದ ಬಲಶಾಲಿಗಳಿಗೂ ನಾನು ಸದಾ ಹೆದರುತ್ತೇನೆ.
ಯದಿ ತ್ವರ್ಥೇನ ಮೇ ಕಾರ್ಯಂ ಬ್ರೂಹಿ ಕಿಂ ಕರವಾಣಿ ತೇ |
ಕಾಮಂ ಸರ್ವಂ ಪ್ರದಾಸ್ಯಾಮಿ ನ ತ್ವಾತ್ಮಾನಂ ಕದಾಚನ ||170||
ನನ್ನ ಸಂಪತ್ತಿನಿಂದ ನಿನಗೆ ಏನಾದರೂ ಆಗಬೇಕಿದ್ದರೆ ಹೇಳು. ಏನು ಮಾಡಬೇಕು. ಎಲ್ಲವನ್ನೂ ಉದಾರವಾಗಿ ಕೊಡುತ್ತೇನೆ. ಯಾವುದೇ ಸಮಯದಲ್ಲೂ ಆತ್ಮಾರ್ಪಣೆಯನ್ನು ಮಾಡುವುದಿಲ್ಲ.
ಆತ್ಮಾರ್ಥೇ ಸಂತತಿಸ್ತ್ಯಾಜ್ಯಾ ರಾಜ್ಯಂ ರತ್ನಂ ಧನಂ ತಥಾ |
ಅಪಿ ಸರ್ವಸ್ವಮುತ್ಸೃಜ್ಯ ರಕ್ಷೇದಾತ್ಮಾನಮಾತ್ಮನಾ ||171||
ತನ್ನ ರಕ್ಷಣೆಗಾಗಿ ಸಂತತಿಯನ್ನು ತ್ಯಜಿಸಬೇಕು. ರಾಜ್ಯವನ್ನೂ, ರತ್ನಗಳನ್ನೂ, ಧನವನ್ನೂ ತ್ಯಜಿಸಬೇಕು. ಎಲ್ಲವನ್ನೂ ಬಿಟ್ಟು ತಾನೇ ತನ್ನನ್ನು ರಕ್ಷಿಸಿಕೊಳ್ಳಬೇಕು.
ಐಶ್ವರ್ಯಧನರತ್ನಾನಾಂ ಪ್ರತ್ಯಮಿತ್ರೇಽಪಿ ತಿಷ್ಠತಾಮ್ |
ದೃಷ್ಟಾ ಹಿ ಪುನರಾವೃತ್ತಿರ್ಜೀವತಾಮಿತಿ ನಃ ಶ್ರುತಮ್ ||172||
ಬದುಕಿ ಉಳಿದರೆ ಶತ್ರುವಶವಾಗಿದ್ದ ಐಶ್ವರ್ಯ, ರತ್ನಗಳು ಪುನಃ ವಶಕ್ಕೆ ಬರುತ್ತವೆ. ಈ ಪುನರಾವೃತ್ತಿಯನ್ನು ನಾನು ನೋಡಿದ್ದೇನೆ, ಕೇಳಿದ್ದೇನೆ.
ನ ತ್ವಾತ್ಮನಃ ಸಂಪ್ರದಾನಂ ಧನರತ್ನವದಿಷ್ಯತೇ |
ಆತ್ಮಾ ತು ಸರ್ವತೋ ರಕ್ಷ್ಯೋ ದಾರೈರಪಿ ಧನೈರಪಿ ||173||
ಧನ, ರತ್ನಗಳನ್ನು ದಾನ ಮಾಡುವಂತೆ ತನ್ನನ್ನೇ ದಾನ ಮಾಡಬಾರದು. ಹೆಂಡತಿ, ಮಕ್ಕಳನ್ನೂ ಕೂಡ ತನ್ನ ರಕ್ಷಣೆಗಾಗಿ ಬಳಸಿಕೊಳ್ಳಬೇಕು.
ಆತ್ಮರಕ್ಷಿತತಂತ್ರಾಣಾಂ ಸುಪರೀಕ್ಷಿತಕಾರಿಣಾಮ್ |
ಆಪದೋ ನೋಪಪದ್ಯಂತೇ ಪುರುಷಾಣಾಂ ಸ್ವದೋಷಜಾಃ ||174||
ಆತ್ಮರಕ್ಷಣೆಯ ತಂತ್ರಗಳನ್ನು ತಿಳಿದಿರುವ, ಚೆನ್ನಾಗಿ ಪರೀಕ್ಷಿಸಿ ಕಾರ್ಯಗಳನು ಮಾಡುವ ಪುರುಷರಿಗೆ ಅವರದೇ ತಪ್ಪಿನಿಂದ ಆಪತ್ತುಗಳು ಸಂಭವಿಸುವುದಿಲ್ಲ.
ಶತ್ರೂನ್ ಸಮ್ಯಗ್ ವಿಜಾನಂತಿ ದುರ್ಬಲಾ ಯೇ ಬಲೀಯಸಃ |
ತೇಷಾಂ ನ ಚಾಲ್ಯತೇ ಬುದ್ಧಿರಾತ್ಮಾರ್ಥಂ ಕೃತನಿಶ್ಚಯಾ ||175||
ಯಾವ ದುರ್ಬಲರು ತಮಗಿಂತ ಹೆಚ್ಚು ಬಲಶಾಲಿಗಳಾದ ಶತ್ರುಗಳನ್ನು ಸರಿಯಾಗಿ ತಿಳಿದಿರುತ್ತಾರೋ, ಅಂತಹವರ ಸುಶಿಕ್ಷಿತ ನಿಶ್ಚಯವಿರುವ ಬುದ್ಧಿಯು ದಾರಿ ತಪ್ಪುವುದಿಲ್ಲ.
ಇತ್ಯಭಿವ್ಯಕ್ತಮೇವಾಸೌ ಪಲಿತೇನಾವಭರ್ತ್ಸಿತಃ |
ಮಾರ್ಜಾರೋ ವ್ರೀಡಿತೋ ಭೂತ್ವಾ ಮೂಷಕಂ ವಾಕ್ಯಮಬ್ರವೀತ್ ||
ಹೀಗೆ ಬಹಳ ಸ್ಪಷ್ಟವಾಗಿ ಪಲಿತನಿಂದ ತೆಗಳಲ್ಪಟ್ಟ ಬೆಕ್ಕು ನಾಚಿಕೆಗೊಂಡು ಇಲಿಗೆ ಹೇಳಿತು.
ಸಮ್ಮನ್ಯೇಽಹಂ ತವ ಪ್ರಜ್ಞಾಂ ಯಸ್ತ್ವಂ ಮಮ ಹಿತೇ ರತಃ |
ಉಕ್ತವಾನರ್ಥತತ್ತ್ವೇನ ಮಯಾ ಸಂಭಿನ್ನದರ್ಶನಃ ||177||
ನನ್ನ ಹಿತಚಿಂತಕನಾದ, ನನ್ನ ವಿಚಾರಗಳಿಗೆ ಹೊಂದುವ ವಿಚಾರಗಳನ್ನು ಹೊಂದಿರುವ ನೀನು ನಡವಳಿಕೆಯ ತತ್ವಗಳನ್ನು ಹೇಳಿರುವಿ. ನಿನ್ನ ಪ್ರಜ್ಞೆಗೆ ನನ್ನ ಸಹಮತಿಯಿದೆ.
ನ ತು ಮಾಮನ್ಯಥಾ ಸಾಧೋ ತ್ವಂ ವಿಜ್ಞಾತುಮಿಹಾರ್ಹಸಿ |
ಪ್ರಾಣಪ್ರದಾನಜಂ ತ್ವತ್ತೋ ಮಮ ಸೌಹೃದಮಾಗತಮ್ ||178||
ಸಾಧುವೇ! ನನ್ನನ್ನು ದಯವಿಟ್ಟು ಅನ್ಯಥಾ ಭಾವಿಸಬೇಡ. ನೀನು ಮಾಡಿದ ಪ್ರಾಣಪ್ರದಾನದಿಂದ ನನಗೆ ಈ ಸೌಹಾರ್ದವು ಹುಟ್ಟಿದೆ.
ಧರ್ಮಜ್ಞೋಽಸ್ಮಿ ಗುಣಜ್ಞೋಽಸ್ಮಿ ಕೃತಜ್ಞೋಽಸ್ಮಿ ವಿಶೇಷತಃ |
ಮಿತ್ರೇಷು ವತ್ಸಲಶ್ಚಾಸ್ಮಿ ತ್ವದ್ವಿಧೇಷು ವಿಶೇಷತಃ ||179||
ನಾನು ಧರ್ಮಜ್ಞ. ಗುಣಜ್ಞ. ವಿಶೇಷವಾಗಿ ಕೃತಜ್ಞನಾಗಿದ್ದೇನೆ. ನಿನ್ನಂತಹ ಮಿತ್ರರ ಮೇಲೆ ವಿಶೇಷ ವಾತ್ಸಲ್ಯವುಳ್ಳವನಾಗಿದ್ದೇನೆ.
ತನ್ಮಾಮೇವಂಗತೇ ಸಾಧೋ ನ ಯಾವಯಿತುಮರ್ಹಸಿ |
ತ್ವಯಾ ಹಿ ಯಾವ್ಯಮಾನೋಹಂ ಪ್ರಾಣಾನ್ ಜಹ್ಯಾಂ ಸಬಾಂಧವಃ ||
ಸಾಧುವೇ! ಹೀಗಿರುವಾಗ ದಯವಿಟ್ಟು ನನ್ನನ್ನು ನಿಂದಿಸಬೇಡ. ನಿನ್ನಿಂದ ನಿಂದೆಗೊಳಗಾದರೆ ನಾನು ನನ್ನ ಬಾಂಧವರೊಡನೆ ಪ್ರಾಣತ್ಯಾಗವನ್ನೇ ಮಾಡುವೆ.
ಧಿಕ್‌ಶಬ್ದೋ ಹಿ ಬುಧೈರ್ದೃಷ್ಟೋ ಮದ್ವಿಧೇಷು ಮನಸ್ವಿಷು |
ಮರಣಂ ಧರ್ಮತತ್ತ್ವಜ್ಞ ನ ಮಾಂ ಶಂಕಿತುಮರ್ಹಸಿ ||181||
ನನ್ನಂತಹ ಪ್ರಶಸ್ತ ಮನಸ್ವಿನವರಿಗೆ (ಬೇರೆಯವರಿಂದ ಆಗುವ) ಧಿಕ್ಕಾರವು ಮರಣವೇ. ಇದನ್ನು ಜ್ಞಾನಿಗಳು ತಿಳಿದಿದ್ದಾರೆ. ಧರ್ಮತತ್ವವನ್ನು ತಿಳಿದವನೇ! ದಯವಿಟ್ಟು ನನ್ನ ಬಗ್ಗೆ ಸಂದೇಹಪಡಬೇಡ.

ಇತಿ ಸಂಸ್ತೂಯಮಾನೋ ಹಿ ಮಾರ್ಜಾರೇಣ ಸ ಮೂಷಕಃ |
ಮನಸಾ ಭಾವಗಂಭೀರಂ ಮಾರ್ಜಾರಂ ವಾಕ್ಯಮಬ್ರವೀತ್ ॥182॥
ಬೆಕ್ಕಿನಿಂದ ಹೀಗೆ ಸ್ತುತಿಸಲ್ಪಟ್ಟ ಇಲಿಯು ಬೆಕ್ಕಿಗೆ ಗಂಭೀರಭಾವದ ಮಾತುಗಳನು ಹೇಳಿತು.
ಸಾಧುರ್ಭವಾನ್ ಶ್ರುತಾರ್ಥೋಽಸ್ಮಿ ಪ್ರೀಯೇ ಚ ನ ಚ ವಿಶ್ವಸೇ |
ಸಂಸ್ತವೈರ್ವಾ ಧನೌಘೈರ್ವಾ ನಾಹಂ ಶಕ್ಯಃ ಪುನಸ್ತ್ವಯಾ ॥183॥
ನೀನು ಸಾಧು. ನಿನ್ನ ಅಭಿಪ್ರಾಯಗಳನ್ನು ಕೇಳಿದ್ದೇನೆ. ಸಂತೋಷಿಸುತ್ತೇನೆ. ಆದರೆ ನಿನ್ನನ್ನು ನಂಬುವುದಿಲ್ಲ. ಪ್ರಶಂಸೆಗಳಿಂದ ಅಥವಾ ಧನರಾಶಿಯಿಂದ ನೀನು ನನ್ನನ್ನು ಪುನಃ ವಶಪಡಿಸಿಕೊಳ್ಳಲಾರೆ.
ನ ಹ್ಯಮಿತ್ರವಶಂ ಯಾಂತಿ ಪ್ರಾಜ್ಞಾ ನಿಷ್ಕಾರಣಂ ಸಖೇ |
ಅಸ್ಮಿನ್ನರ್ಥೇ ಸಮಾಧೇಯೇ ನಿಬೋಧೋಶನಸಾ ಕೃತೇ ॥184॥
ಗೆಳೆಯ! ಪ್ರಾಜ್ಞರು ಕಾರಣವಿಲ್ಲದೆ ಶತ್ರುಗಳಿಗೆ ವಶರಾಗುವುದಿಲ್ಲ. ಇದೇ ವಿಷಯದಲ್ಲಿ ಶುಕ್ರಾಚಾರ್ಯರಿಂದ ರಚಿತವಾದ ಎರಡು ಶ್ಲೋಕಗಳಿವೆ. ಅವುಗಳನ್ನು ತಿಳಿಯಬೇಕು (ಸರಿಯಾಗಿ ಮನಸ್ಸಿನಲ್ಲಿ ಧರಿಸಬೇಕು- ಲಕ್ಕಾಲಂಕಾರ).
ಶತ್ರುಸಾಧಾರಣೇ ಕೃತ್ಯೇ ಕೃತ್ವಾ ಸಂಧಿಂ ಬಲೀಯಸಾ |
ಸಮಾಹಿತಶ್ಚರೇದ್ ಯುಕ್ತ್ಯಾ ಕೃತಾರ್ಥಶ್ಚ ನ ವಿಶ್ವಸೇತ್ ॥185॥
ಶತ್ರು ಮತ್ತು ತಾನು- ಇಬ್ಬರಿಗೂ ಆಗಬೇಕಾದ ಕೆಲಸಕ್ಕಾಗಿ ಬಲಶಾಲಿಯಾದ ಶತ್ರುವಿನ ಜೊತೆ ಸಂಧಾನವನ್ನು ಮಾಡಿಕೊಂಡು ಉಪಾಯದಿಂದ, ಪೂರ್ಣ ಎಚ್ಚರದಿಂದ ನಡೆದುಕೊಳ್ಳಬೇಕು.ಕೆಲಸವು ಆದ ಮೇಲೆ ನಂಬಬಾರದು.
ತಸ್ಮಾತ್ ಸರ್ವಾಸ್ವವಸ್ಥಾಸು ರಕ್ಷೇಜ್ಜೀವಿತಮಾತ್ಮನಃ |
ದ್ರವ್ಯಾಣಿ ಸಂತತಿಶ್ಚೈವ ಸರ್ವಂ ಭವತಿ ಜೀವತಃ ॥186॥
ಆದ್ದರಿಂದ ಎಲ್ಲ ಅವಸ್ಥೆಗಳಲ್ಲಿ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಬೇಕು. ಬದುಕಿ ಉಳಿದವನಿಗೆ ಸಂಪತ್ತು, ಸಂತತಿ ಮೊದಲಾದ ಎಲ್ಲವೂ ಒದಗಿ ಬರುತ್ತವೆ.
ಸಂಕ್ಷೇಪೋ ನೀತಿಶಾಸ್ತ್ರಾಣಾಮವಿಶ್ವಾಸಃ ಪರೋ ಮತಃ |
ನೃಷು ತಸ್ಮಾದವಿಶ್ವಾಸಃ ಪುಷ್ಕಲಂ ಹಿತಮಾತ್ಮನಃ ॥187॥
`ಪರಮ ಅವಿಶ್ವಾಸ' - ಇದು ನೀತಿಶಾಸ್ತ್ರಗಳ ಸಾರ. ಆದ್ದರಿಂದ ಜನರ ಮೇಲೆ ಅವಿಶ್ವಾಸವು ಅತ್ಯಂತ ಹಿತಕರ.
ವಧ್ಯಂತೇ ನ ಹ್ಯವಿಶ್ವಾಸಾಃ ಶತ್ರುಭಿರ್ದುರ್ಬಲಾ ಅಪಿ |
ವಿಶ್ವಸ್ತಾಸ್ತ್ವಶು ವಧ್ಯಂತೇ ಬಲವಂತೋಽಪಿ ದುರ್ಬಲೈಃ ॥188॥
ನಂಬದ ದುರ್ಬಲರೂ ಶತ್ರುಗಳಿಂದ ಹತರಾಗುವುದಿಲ್ಲ. ನಂಬುವ ಬಲಶಾಲಿಗಳೂ ದುರ್ಬಲರಿಂದ ಹತರಾಗುತ್ತಾರೆ.
ತ್ವದ್ವಿಧೇಭ್ಯೋ ಮಯಾ ಹ್ಯಾತ್ಮಾ ರಕ್ಷ್ಯೋ ಮಾರ್ಜಾರ ಸರ್ವದಾ |
ರಕ್ಷ ತ್ವಮಪಿ ಚಾತ್ಮಾನಂ ಚಂಡಾಲಾಜ್ಜಾತಿಕಿಲ್ಬಿಷಾತ್ ॥189॥
ಬೆಕ್ಕೆ! ನಾನು ನನ್ನನ್ನು ನಿನ್ನಂತಹವರಿಂದ ಯಾವಾಗಲೂ ರಕ್ಷಿಸಿಕೊಳ್ಳಬೇಕು. ನೀನೂ ಕೂಡ ಹುಟ್ಟಿನಿಂದಲೇ ಕೆಟ್ಟವನಾದ ಚಂಡಾಲನಿಂದ ನಿನ್ನನ್ನು ರಕ್ಷಿಸಿಕೊಳ್ಳಬೇಕು.
ಸ ತಸ್ಯ ಬ್ರುವತಸ್ತ್ವೇವಂ ಸಂತ್ರಾಸಾಜ್ಜಾತಸಾಧ್ವಸಃ |
ಕಥಾಂ ಹಿತ್ವಾ ಜವೇನಾಶು ಮಾರ್ಜಾರಃ ಪ್ರಯಯೌ ತತಃ ॥190॥
ಇಲಿಯು ಹೀಗೆ ಹೇಳುತ್ತಿರುವಾಗಲೇ ಭಯಂಕರವಾದ ಚಂಡಾಲನ ಭಯಕ್ಕೊಳಗಾಗಿ ಬೆಕ್ಕು ಸಂವಾದವನ್ನು ಬಿಟ್ಟು ಅಲ್ಲಿಂದ ಹೊರಟು ಹೋಯಿತು.
ತತಃ ಶಾಸ್ತ್ರಾರ್ಥತತ್ತ್ವಜ್ಞೋ ಬುದ್ಧಿಸಾಮರ್ಥ್ಯಮಾತ್ಮನಃ |
ವಿಶ್ರಾವ್ಯ ಪಲಿತಃ ಪ್ರಾಜ್ಞೋ ಬಿಲಮನ್ಯಜ್ಜಗಾಮ ಹ ॥191॥
ತನ್ನ ಬುದ್ಧಿಸಾಮರ್ಥ್ಯವನ್ನು ಶ್ರವಣ ಮಾಡಿಸಿದ, ಶಾಸ್ತ್ರಸಾರವನ್ನು ತಿಳಿದ, ಪ್ರಾಜ್ಞನಾದ ಆ ಪಲಿತನು ಅನಂತರ ಬೇರೆ ಬಿಲಕ್ಕೆ ಹೋಯಿತು.
ಏವಂ ಪ್ರಜ್ಞಾವತಾ ಬುದ್ಧ್ಯಾ ದುರ್ಬಲೇನ ಮಹಾಬಲಾಃ |
ಏಕೇನ ಬಹವೋಽಮಿತ್ರಾಃ ಪಲಿತೇನಾಭಿಸಂಧಿತಾಃ ॥192॥
ದುರ್ಬಲನಾದ, ಆದರೆ ಪ್ರಜ್ಞಾವಂತನಾದ ಏಕಾಕಿಯಾದ ಆ ಪಲಿತನಿಂದ ಮಹಾ ಬಲಶಾಲಿಗಳಾದ ಬಹಳ ಶತ್ರುಗಳು ಹೀಗೆ ವಂಚಿಸಲ್ಪಟ್ಟರು.
ಅರಿಣಾಪಿ ಸಮರ್ಥೇನ ಸಂಧಿಂ ಕುರ್ವೀತ ಪಂಡಿತಃ |
ಮೂಷಕಶ್ಚ ಬಿಡಾಲಶ್ಚ ಮುಕ್ತಾವನ್ಯೋನ್ಯಸಂಶ್ರಯಾತ್ ॥193॥
ಪಂಡಿತನು (ವ್ಯವಹಾರ ಕುಶಲನು) ಸಮರ್ಥನಾದ ಶತ್ರುವಿನ ಜೊತೆಯೂ ಸಂಧಾನ ಮಾಡಿಕೊಳ್ಳಬೇಕು. ಇಲಿ ಮತ್ತು ಬೆಕ್ಕು ಪರಸ್ಪರ ಅವಲಂಬನೆಯಿಂದ ಬಿಡುಗಡೆಯನ್ನು ಹೊಂದಿದರು.
ಇತ್ಯೇಷ ಕ್ಷತ್ರಧರ್ಮಸ್ಯ ಮಯಾ ಮಾರ್ಗೋಽನುದರ್ಶಿತಃ |
ವಿಸ್ತರೇಣ ಮಹೀಪಾಲ ಸಂಕ್ಷೇಪೇಣ ಪುನಃ ಶೃಣು ॥194॥
ರಾಜನೇ! ನಾನು ಹೀಗೆ ವಿವರವಾಗಿ ಕ್ಷತ್ರಿಯ ಧರ್ಮದ ಮಾರ್ಗವನ್ನು ತೋರಿಸಿದ್ದೇನೆ. ಮತ್ತೆ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು.
ಅನ್ಯೋನ್ಯಂ ಕೃತವಂತೌ ತೌ ಚಕ್ರತುಃ ಪ್ರೀತಿಮುತ್ತಮಾಮ್ |
ಅನ್ಯೋನ್ಯಮಭಿಸಂಧಾತುಮಭೂಚ್ಚೈವ ತಯೋರ್ಮತಿಃ ॥195॥

ಪರಸ್ಪರ ಉಪಕಾರವನ್ನು ಮಾಡಿದ ಅವರು ಪರಸ್ಪರ ಬಹಳ ಪ್ರೀತಿಯನ್ನು ತೋರಿಸಿದರು. ಅವರಿಬ್ಬರಿಗೂ ಪರಸ್ಪರ ವಂಚಿಸುವ ಬುದ್ಧಿಯೇ ಇತ್ತು.
ತತ್ರ ಪ್ರಾಜ್ಞೋಽಭಿಸಂಧತ್ತೇ ಸಮ್ಯಗ್ಬುದ್ಧಿಬಲಾಶ್ರಯಾತ್ |
ಅಭಿಸಂಧೀಯತೇ ಪ್ರಾಜ್ಞಃ ಪ್ರಮಾದಾದಪಿ ಚಾಬುಧೈಃ ॥196॥
ಅಂತಹ ಸಂದರ್ಭಗಳಲ್ಲಿ ಪ್ರಾಜ್ಞನು ಸರಿಯಾದ ಬುದ್ಧಿ ಬಲದಿಂದ ವಂಚಿಸುತ್ತಾನೆ. ಪ್ರಾಜ್ಞನೂ ಕೂಡ ಪ್ರಮಾದದಿಂದ (ಅಜಾಗರೂಕತೆಯಿಂದ) ಅಜ್ಞಾನಿಗಳಿಂದ ವಂಚನೆಗೆ ಒಳಗಾಗುತ್ತಾನೆ.
ತಸ್ಮಾದಭೀತವದ್ಭೀತೋ ವಿಶ್ವಸ್ತವದವಿಶ್ವಸನ್ |
ನ ಹ್ಯಪ್ರಮತ್ತಶ್ಚಲತಿ ಚಲಿತೋ ವಾ ವಿನಶ್ಯತಿ ॥197॥
ಆದ್ದರಿಂದ ಹೆದರಿದವನು ಹೆದರದವನಂತೆ, ವಿಶ್ವಾಸವಿಲ್ಲದವನು ವಿಶ್ವಾಸವಿರುವವನಂತೆ ಜಾಗರೂಕನಾಗಿ ವ್ಯವಹರಿಸಬೇಕು. ಜಾಗರೂಕನು ದಾರಿತಪ್ಪುವುದಿಲ್ಲ. ಅಜಾಗರೂಕನಾಗಿ ದಾರಿತಪ್ಪಿದರೆ ನಾಶವಾಗುತ್ತಾನೆ.
ಕಾಲೇನ ರಿಪುಣಾ ಸಂಧಿಃ ಕಾಲೇ ಮಿತ್ರೇಣ ವಿಗ್ರಹಃ |
ಕಾರ್ಯ ಇತ್ಯೇವ ತತ್ತ್ವಜ್ಞಾಃ ಪ್ರಾಹುರ್ನಿತ್ಯಂ ಯುಧಿಷ್ಠಿರ ॥198॥
ಯುಧಿಷ್ಠಿರ! ಅವಶ್ಯಕತೆ ಇರುವ ಕಾಲದಲ್ಲಿ (ಕಾಲಾನುಗುಣವಾಗಿ) ಶತ್ರುವಿನ ಜೊತೆ ಸಂಧಿಯನ್ನು ಮಾಡಿಕೊಳ್ಳಬೇಕು. ಕಾಲಾನುಗುಣವಾಗಿ ಮಿತ್ರನ ಜೊತೆ ಜಗಳವನ್ನು ಮಾಡಬೇಕು. ಇದು ಬದಲಾಗದ ಸತ್ಯ. ಹೀಗೆ ತತ್ವವನ್ನು ತಿಳಿದ ಪ್ರಾಜ್ಞರು ಹೇಳುತ್ತಾರೆ.
ಏವಂ ಮತ್ವಾ ಮಹಾರಾಜ ಶಾಸ್ತ್ರಾರ್ಥಮಭಿಗಮ್ಯ ಚ |
ಅಭಿಯುಕ್ತೋಽಪ್ರಮತ್ತಶ್ಚ ಪ್ರಾಗ್ಭಯಾದ್ ಭೀತವಚ್ಚರೇತ್ ॥199॥
ಮಹಾರಾಜ! ಹೀಗೆ ತಿಳಿದು, ಶಾಸ್ತ್ರಾರ್ಥವನ್ನು ವಿಮರ್ಶಿಸಿ, ಉದ್ಯೋಗಶೀಲನಾಗಿ, ಜಾಗರೂಕನಾಗಿ ಭಯದ ಪ್ರಸಂಗವು ಹುಟ್ಟುವ ಮೊದಲೇ ಭೀತನಂತೆ ವರ್ತಿಸಬೇಕು.
ಭೀತವತ್ ಸಂವಿಧಿಃ ಕಾರ್ಯಃ ಪ್ರತಿಸಂಧಿಸ್ತಥೈವ ಚ |
ಭಯಾದುತ್ಪದ್ಯತೇ ಬುದ್ಧಿರಪ್ರಮತ್ತಾಭಿಯೋಗಜಾ ॥200॥
ಹೆದರಿದವನಂತೆ ವ್ಯವಸ್ಥೆಗಳನ್ನು (ಯೋಜನೆಗಳನ್ನು) ಮಾಡಬೇಕು. ಹಾಗೆಯೇ ಕಾರ್ಯಾಚರಣೆಯಿಂದ ವಿರಮಿಸಬೇಕು. ಭಯದಿಂದ ಜಾಗರೂಕತೆ ಇರುವ, ಉದ್ಯೋಗಶೀಲವಾದ ಬುದ್ಧಿಯು ಹುಟ್ಟುತ್ತದೆ.
ನ ಭಯಂ ಜಾಯತೇ ರಾಜನ್ ಭೀತಸ್ಯಾನಾಗತಂ ಭಯಮ್ |
ಅಭೀತಸ್ಯ ತು ವಿಸ್ರಂಭಾತ್ ಸುಮಹಜ್ಜಾಯತೇ ಭಯಮ್ ॥201॥
ರಾಜನೇ! ಹೆದರಿದವನಿಗೆ (ಆದ್ದರಿಂದಲೇ ಜಾಗರೂಕನಾಗಿರುವವನಿಗೆ) ತೊಂದರೆಯಾಗುವುದಿಲ್ಲ. ಅವನಿಗೆ ಭವಿಷ್ಯದಲ್ಲೂ ತೊಂದರೆಯಾಗುವುದಿಲ್ಲ. ಹೆದರಿಕೆ ಇಲ್ಲದವನಿಗೆ (ಅಜಾಗರೂಕನಿಗೆ) ಅಸಮಂಜಸ ಆತ್ಮವಿಶ್ವಾಸದಿಂದ ಬಹಳ ದೊಡ್ಡ ತೊಂದರೆಯೇ ಆಗುತ್ತದೆ.
ನ ಭೀರುರಿತಿ ಚಾತ್ಯಂತಂ ಮಂತ್ರೋ ದೇಯಃ ಕಥಂಚನ |
ಅವಿಜ್ಞಾನಾದ್ಧಿ ವಿಜ್ಞಾತೇ ಗಚ್ಛೇದಾಸ್ಪದದರ್ಶಿಷು ॥202॥
ಯಾರು ಪ್ರಸ್ತುತ ವಿಚಾರಗಳ ಸರಿಯಾದ ಜ್ಞಾನವಿಲ್ಲದಿದ್ದರೂ, ಅಜಾಗರೂಕನಾಗಿ ನಡೆದುಕೊಳ್ಳುವನೋ ಅವನಿಗೆ ಸಲಹೆಗಳನ್ನು ಕೊಡಬಾರದು. ಪ್ರಸ್ತುತ ವಿಚಾರಗಳ ಸರಿಯಾದ ಜ್ಞಾನವಿರುವವನು ಮಾರ್ಗದರ್ಶಕರ ಬಳಿ ತಾನೇ ಹೋಗುತ್ತಾನೆ.
ತಸ್ಮಾದಭೀತವದ್ಭೀತೋ ವಿಶ್ವಸ್ತವದವಿಶ್ವಸನ್ |
ಕಾರ್ಯಾಣಾಂ ಗುರುತಾಂ ಬುದ್ಧ್ವಾ ನಾನ್ಯತಃ ಕಿಂಚಿದಾಚರೇತ್ ॥
ಆದ್ದರಿಂದ ಕಾರ್ಯಗಳ ತೂಕವನ್ನು ಅರಿತು ಹೆದರಿದವನು ಹೆದರದವನಂತೆ, ನಂಬಿಕೆಯಿಲ್ಲದವನು ನಂಬಿಕೆ ಇರುವವನಂತೆ ವರ್ತಿಸಬೇಕು. ಇದಕ್ಕಿಂತ ಭಿನ್ನವಾಗಿ ಏನನ್ನೂ ಮಾಡಬಾರದು.
ಏವಮೇತನ್ಮಯಾ ಪ್ರೋಕ್ತಮಿತಿಹಾಸಂ ಯುಧಿಷ್ಠಿರ |
ಶ್ರುತ್ವಾ ತ್ವಂ ಸುಹೃದಾಂ ಮಧ್ಯೇ ಯಥಾವತ್ ಸಮುಪಾಚರ ॥204॥
ಯುಧಿಷ್ಠಿರ! ಹೀಗೆ ನಿನಗೆ ಇತಿಹಾಸವನ್ನು ಹೇಳಿದ್ದೇನೆ. ಕೇಳಿರುವ ನೀನು ನಿನ್ನ ಮಿತ್ರರ ಮಧ್ಯೆ ಸರಿಯಾಗಿ ವರ್ತಿಸು.
ಉಪಲಭ್ಯ ಮತಿಂ ಚಾಗ್ರ್ಯಾಮರಿಮಿತ್ರಾಂತರಂ ತಥಾ |
ಸಂಧಿವಿಗ್ರಹಕಾಲಂ ಚ ಮೋಕ್ಷೋಪಾಯಂ ತಥಾಪದಿ ॥205॥
ಸರಿಯಾದ ಮತ್ತು ಸೂಕ್ಷ್ಮವಾದ ಮತಿಯನ್ನು ಸಂಪಾದಿಸಿ ಶತ್ರು ಮತ್ತು ಮಿತ್ರರ ಅಂತರವನ್ನು ಗ್ರಹಿಸಿ, ಸಂಧಾನ ಮತ್ತು ವಿರಸಗಳ ಕಾಲವನ್ನು ಮತ್ತು ಆಪತ್ತಿನಿಂದ ಪಾರಾಗುವ ಉಪಾಯಗಳನ್ನೂ ತಿಳಿದುಕೊ.
ಶತ್ರುಸಾಧಾರಣೇ ಕೃತ್ಯೇ ಕೃತ್ವಾ ಸಂಧಿಂ ಬಲೀಯಸಾ |
ಸಮಾಗಮಂ ಚರೇದ್ ಯುಕ್ತ್ಯಾ ಕೃತಾರ್ಥೋ ನ ಚ ವಿಶ್ವಸೇತ್ ॥206॥
ತನಗೂ ಮತ್ತು ಶತ್ರುವಿಗೂ ಆಗಬೇಕಾದಾಗ ಕೆಲಸವಿದ್ದಾಗ ಬಲಶಾಲಿಯಾದ ಶತ್ರುವಿನ ಜೊತೆ ಸಂಧಾನವನ್ನು ಮಾಡಿಕೊಂಡು ಯುಕ್ತಿಯಿಂದ ಸಹಕಾರವನ್ನು ಮಾಡಬೇಕು. ಕೆಲಸವಾದನಂತರ ವಿಶ್ವಾಸವಿಡಬಾರದು.
ಅವಿರುದ್ಧಾಂ ತ್ರಿವರ್ಗೇಣ ನೀತಿಮೇತಾಂ ಯುಧಿಷ್ಠಿರ |
ಅಭ್ಯುತ್ತಿಷ್ಠ ಶ್ರುತಾದಸ್ಮಾದ್ ಭೂಯಸ್ತ್ವಂ ರಂಜಯನ್ ಪ್ರಜಾಃ ॥207॥
ಯುಧಿಷ್ಠಿರ! ತ್ರಿವರ್ಗ (ಧರ್ಮ-ಅರ್ಥ-ಕಾಮ) ವಿರುದ್ಧವಲ್ಲದ ಈ ನೀತಿಯನ್ನು ನೀನು ಆಶ್ರಯಿಸು. ನಮ್ಮಿಂದ ಕಲಿತ ಈ ನೀತಿಯಿಂದ

ಪ್ರಜಾರಂಜನೆಯನ್ನು ಮಾಡುತ್ತಾ ಅಭ್ಯುದಯವನ್ನು ಹೊಂದು.
ಬ್ರಾಹ್ಮಣೈಶ್ಚಾಪಿ ತೇ ಸಾರ್ಧಂ ಯಾತ್ರಾ ಭವತು ಪಾಂಡವ |
ಬ್ರಾಹ್ಮಣಾ ಹಿ ಪರಂ ಶ್ರೇಯೋ ದಿವಿ ಚೇಹ ಚ ಭಾರತ ॥208॥
ಪಾಂಡುಪುತ್ರ! ಬ್ರಹ್ಮಜ್ಞಾನಿಗಳೊಂದಿಗೆ ನೀನು ಸಾಗಬೇಕು. ಭಾರತ! ಬ್ರಹ್ಮಜ್ಞಾನಿಗಳು ಇಹದಲ್ಲೂ, ಪರದಲ್ಲೂ ಶ್ರೇಯಸ್ಸಿಗೆ ಕಾರಣರು.
ಏತೇ ಧರ್ಮಸ್ಯ ವೇತ್ತಾರಃ ಕೃತಜ್ಞಾಃ ಸತತಂ ಪ್ರಭೋ |
ಪೂಜಿತಾಃ ಶುಭಕರ್ಮಾಣಃ ಪೂಜಯೇತ್ ತಾನ್ ನರಾಧಿಪ ॥209॥
ಪ್ರಭು! ಇವರು ಧರ್ಮವನ್ನು ತಿಳಿದವರು. ಸದಾ ಕೃತಜ್ಞರು. ಪೂಜಿತರು. ಶುಭ ಕರ್ಮಗಳನ್ನು ಮಾಡುವವರು. ರಾಜನೇ! ಅವರನ್ನು ಗೌರವಿಸಬೇಕು.
ರಾಜ್ಯಂ ಶ್ರೇಯಃ ಪರಂ ರಾಜನ್ ಯಶಃ ಕೀರ್ತಿಂ ಚ ಲಪ್ಸ್ಯಸೇ |
ಕುಲಸ್ಯ ಸಂತತಿಂ ಚೈವ ಯಥಾನ್ಯಾಯಂ ಯಥಾಕ್ರಮಮ್ ॥210॥
ರಾಜನೇ! ನ್ಯಾಯಕ್ಕನುಗುಣವಾಗಿ, ಕ್ರಮವಾಗಿ ರಾಜ್ಯವನ್ನೂ, ಪರಮ ಶ್ರೇಯಸ್ಸನ್ನೂ, ಯಶಸ್ಸನ್ನೂ, ಕೀರ್ತಿಯನ್ನೂ ಕುಲಕ್ಕೆ ಅವಿಚ್ಛೇದವನ್ನೂ ಪಡೆಯುವಿ.
ದ್ವಯೋರಿಮಂ ಭಾರತ ಸಂಧಿವಿಗ್ರಹಂ
ಸುಭಾಷಿತಂ ಬುದ್ಧಿವಿಶೇಷಕಾರಿತಮ್ |
ತಥಾನ್ವವೇಕ್ಷ್ಯ ಕ್ಷಿತಿಪೇನ ಸರ್ವದಾ
ನಿಷೇವಿತವ್ಯಂ ನೃಪ ಶತ್ರುಮಂಡಲೇ ॥211॥
ಭರತಕುಲಸಂಜಾತ! ಬೆಕ್ಕು-ಇಲಿಗಳೆರಡರ ಈ ಸಂಧಿ-ವಿಗ್ರಹದ ಕಥೆಯು ವಿಶೇಷವಾದ ಪ್ರಜ್ಞೆಯನ್ನು ಉಂಟುಮಾಡುವ ಸುಭಾಷಿತ. ರಾಜನೇ! ಈ ಕಥೆಯ ಬೋಧನೆಗೆ (ಸಂದೇಶಕ್ಕೆ) ಅನುಗುಣವಾಗಿ ಸರಿಯಾದ ಪರಿಶೀಲನೆಯಿಂದ ರಾಜನು ತನ್ನ ಶತ್ರುಗಳೊಡನೆ ವ್ಯವಹರಿಸಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಎಂಟನೆಯ ಅಧ್ಯಾಯವು ಮುಗಿಯಿತು.
* * * * *
ಒಂಭತ್ತನೆಯ ಅಧ್ಯಾಯ
ಅವಿಶ್ವಾಸದಿಂದ ಉದ್ಭವಿಸುವ ಸಮಸ್ಯೆಗಳು. ಪೂಜನೀ-ಬ್ರಹ್ಮದತ್ತ ಸಂವಾದ. ಸ್ವಹಿತವೇ ಮುಖ್ಯ-ಒಳ್ಳೆಯ ರಾಜನ ರೀತಿ. ಕೆಟ್ಟರಾಜನ ರೀತಿ.
ಯುಧಿಷ್ಠಿರಃ
ಉಕ್ತೋ ಮಂತ್ರೋ ಮಹಾಬಾಹೋ ನ ವಿಶ್ವಾಸೋಽಸ್ತಿ ಶತ್ರುಷು |
ಕಥಂ ಹಿ ರಾಜಾ ವರ್ತೇತ ಯದಿ ಸರ್ವತ್ರ ನಾಶ್ವಸೇತ್ ॥1॥
ವಿಶ್ವಾಸಾದ್ಧಿ ಪರಂ ರಾಜ್ಞೋ ರಾಜನ್ನುತ್ಪದ್ಯತೇ ಭಯಮ್ |
ಕಥಂ ವೈ ನಾಶ್ವಸನ್ ರಾಜಾ ಶತ್ರೂನ್ ಜಯತಿ ಪಾರ್ಥಿವ ॥2॥
ಏತನ್ಮೇ ಸಂಶಯಂ ಛಿಂಧಿ ಮನೋ ಮೇ ಸಂಪ್ರಮುಹ್ಯತಿ |
ಅವಿಶ್ವಾಸಕಥಾಮೇತಾಮುಪಶ್ರುತ್ಯ ಪಿತಾಮಹ ॥3॥
ಮಹಾಬಾಹು ಭೀಷ್ಮರೇ! ಶತ್ರುಗಳಲ್ಲಿ ವಿಶ್ವಾಸವಿರುವುದಿಲ್ಲ ಎಂಬ ರಹಸ್ಯವನ್ನು ಹೇಳಿದ್ದೀರಿ. ಯಾರಲ್ಲೂ ವಿಶ್ವಾಸವಿಡದಿದ್ದರೆ ರಾಜನು ಹೇಗೆ ತನ್ನ ಕೆಲಸಗಳನ್ನು ಮಾಡಿಯಾನು?
`ರಾಜನೆ! ವಿಶ್ವಾಸವಿಡುವುದರಿಂದ ರಾಜನಿಗೆ ಆತಂಕಸ್ಥಿತಿಯೇ ಉಂಟಾಗುತ್ತದೆ' ಎಂದು ಹೇಳಿದ್ದೀರಿ. ವಿಶ್ವಾಸವಿಡದೆ ರಾಜನು ಹೇಗೆ ತಾನೆ ಶತ್ರುಗಳನ್ನು ಗೆಲ್ಲುತ್ತಾನೆ?
ಪಿತಾಮಹ! ನನ್ನ ಈ ಸಂಶಯವನ್ನು ಪರಿಹರಿಸಿ. ನೀವು ಹೇಳಿದ ಅವಿಶ್ವಾಸದ ಅವಶ್ಯಕತೆಯನ್ನು ಕೇಳಿ ನನ್ನ ಮನಸ್ಸು ಬಹಳ ಮೋಹಕ್ಕೆ ಒಳಗಾಗಿದೆ.
ಭೀಷ್ಮಃ
ಶೃಣು ಕೌಂತೇಯ ಯೋ ವೃತ್ತೋ ಬ್ರಹ್ಮದತ್ತನಿವೇಶನೇ |
ಪೂಜನ್ಯಾ ಸಹ ಸಂವಾದೋ ಬ್ರಹ್ಮದತ್ತಸ್ಯ ಪಾರ್ಥಿವ ॥4॥
ಕುಂತೀಪುತ್ರ! ಬ್ರಹ್ಮದತ್ತನ ಮನೆಯಲ್ಲಿ ನಡೆದ ಬ್ರಹ್ಮದತ್ತ ಮತ್ತು ಪೂಜನೀ ಇವರ ಸಂವಾದವನ್ನು ಹೇಳುತ್ತೇನೆ, ಕೇಳು.
ಕಾಂಪಿಲ್ಯೇ ಬ್ರಹ್ಮದತ್ತಸ್ಯ ಅಂತಃಪುರನಿವಾಸಿನೀ |
ಪೂಜನೀ ನಾಮ ಶಕುನೀ ದೀರ್ಘಕಾಲಂ ಸಹೋಷಿತಾ ॥5॥
ಕಾಂಪಿಲ್ಯ ಎಂಬ ನಗರದಲ್ಲಿ ಬ್ರಹ್ಮದತ್ತನ ಅಂತಃಪುರದಲ್ಲಿ ಪೂಜನಿ ಎಬ ಹಕ್ಕಿಯು (ಗುಬ್ಬಚ್ಚಿ) ವಾಸಿಸುತ್ತಿತ್ತು.
ರುತಜ್ಞಾ ಸರ್ವಭೂತಾನಾಂ ಯಥಾ ವೈ ಜೀವಜೀವಕಃ |
ಸರ್ವಜ್ಞಾ ಸರ್ವಧರ್ಮಜ್ಞಾ ತಿರ್ಯಗ್ಯೋನಿಗತಾಪಿ ಸಾ ॥6॥
ಈ ಹಕ್ಕಿಯು ಚಕೋರಹಕ್ಕಿಯಂತೆ ಎಲ್ಲ ಪ್ರಾಣಿಗಳ ಧ್ವನಿಗಳ ಅರ್ಥವನ್ನು ತಿಳಿದಿತ್ತು. ಸಾಮಾನ್ಯ ಪಶುಜಾತಿಯಲ್ಲಿ ಹುಟ್ಟಿದ್ದರೂ ಆ ಹಕ್ಕಿಯು ಎಲ್ಲ ವಿಷಯಗಳನ್ನೂ ತಿಳಿದಿತ್ತು. ಸರ್ವಧರ್ಮಗಳನ್ನೂ ತಿಳಿದಿತ್ತು.

ಅಭಿಪ್ರಜಾತಾ ಸಾ ತತ್ರ ಪುತ್ರಮೇಕಂ ಸುವರ್ಚಸಮ್ |
ಸಮಕಾಲಂ ಚ ರಾಜ್ಞೋಽಪಿ ದೇವ್ಯಾಃ ಪುತ್ರೋ ವ್ಯಜಾಯತ ॥7॥
ಆ ಹಕ್ಕಿಯು ರಾಜನ ಅಂತಃಪುರದಲ್ಲೇ ಬಹಳ ತೇಜಸ್ವಿಯಾದ ಹಕ್ಕಿಗೆ ಜನ್ಮ ನೀಡಿತು. ಅದೇ ಸಮಯದಲ್ಲಿ ಮಹಾರಾಣಿಗೆ ಮಗನ ಜನ್ಮವಾಯಿತು.
ಸಮುದ್ರತೀರಂ ಗತ್ವಾ ಸಾ ತ್ವಾಜಹಾರ ಫಲದ್ವಯಮ್ |
ಪುಷ್ಟ್ಯರ್ಥಂ ಚ ಸ್ವಪುತ್ರಸ್ಯ ರಾಜಪುತ್ರಸ್ಯ ಚೈವ ಹ ॥8॥
ಆ ಹಕ್ಕಿಯು ತನ್ನ ಪುತ್ರನ ಮತ್ತು ರಾಜಕುಮಾರನ ಪೋಷಣೆಗಾಗಿ ಸಮುದ್ರ ತೀರಕ್ಕೆ ಹೋಗಿ ಎರಡು ಫಲಗಳನ್ನು ತರುತ್ತಿತ್ತು.
ಫಲಮೇಕಂ ಸುತಾಯಾದಾದ್ರಾಜಪುತ್ರಾಯ ಚಾಪರಮ್ |
ಅಮೃತಾಸ್ವಾದಸದೃಶಂ ಬಲತೇಜೋವಿವರ್ಧನಮ್ ॥9॥
ಒಂದು ಫಲವನ್ನು ತನ್ನ ಮಗನಿಗೂ, ಇನ್ನೊಂದನ್ನು ರಾಜಕುಮಾರನಿಗೂ ಕೊಡುತ್ತಿತ್ತು. ಫಲವು ಅಮೃತಕ್ಕೆ ಸಮಾನ. ಬ್ರಹ್ಮತೇಜಸ್ಸಿನ ವೃದ್ಧಿಕರ.
ತತ್ರಾಗಚ್ಛತ್ ಪರಾಂ ವೃದ್ಧಿಂ ರಾಜಪುತ್ರಃ ಫಲಾಶನಾತ್ |
ಧಾತ್ರ್ಯಾ ಹಸ್ತಗತಶ್ಚಾಪಿ ತೇನಾಕ್ರೀಡತ ಪಕ್ಷಿಣಾ ॥10॥
ರಾಜಕುಮಾರನು ಫಲದ ಸೇವನೆಯಿಂದ ಬಹಳ ಒಳ್ಳೆಯ ವೃದ್ಧಿಯನ್ನು ಹೊಂದಿದನು. ದಾದಿಯ ಕೈಯಲ್ಲಿದ್ದರೂ ಆ ಹುಡುಗನು ಆ ಪಕ್ಷಿಯ ಜೊತೆ ಆಡುತ್ತಿದ್ದನು.
ಶೂನ್ಯೇ ತು ತಮುಪಾದಾಯ ಪಕ್ಷಿಣಂ ಸಮಜಾತಕಮ್ |
ಹತ್ವಾ ತತಃ ಸ ರಾಜೇಂದ್ರ ಧಾತ್ರ್ಯಾ ಹಸ್ತಮುಪಾಗಮತ್ ॥11॥
ರಾಜಕುಮಾರನು ತನ್ನ ಜೊತೆಯೇ ಹುಟ್ಟಿದ್ದ ಆ ಹಕ್ಕಿಯನ್ನು ನಿರ್ಜನ ಸ್ಥಳಕ್ಕೆ ಒಯ್ದು ಕೊಂದುಬಿಟ್ಟನು. ಅನಂತರ ದಾದಿಯ ಕೈ ಸೇರಿದನು.
ಅಥ ಸಾ ಶಕುನೀ ರಾಜನ್ನಾಗಮತ್ ಫಲಹಾರಿಕಾ |
ಅಪಶ್ಯನ್ನಿಹತಂ ಪುತ್ರಂ ತೇನ ಬಾಲೇನ ಭೂತಲೇ ॥12॥
ಬಾಷ್ಪಪೂರ್ಣಮುಖೀ ದೀನಾ ದೃಷ್ಟ್ವಾ ಸಾ ತು ಹತಂ ಸುತಮ್ |
ಪೂಜನೀ ದುಃಖಸಂತಪ್ತಾ ರುದತೀ ವಾಕ್ಯಮಬ್ರವೀತ್ ॥13॥
ರಾಜನೆ! ಆ ಹಕ್ಕಿಯು ಎಂದಿನಂತೆ ಫಲವನ್ನು ತಂದಿತು. ಆ ಹುಡುಗನಿಂದ ಹತವಾಗಿ ಬಿದ್ದಿರುವ ತನ್ನ ಮಗನನ್ನು ನೋಡಿತು. ಸತ್ತು ಬಿದ್ದಿರುವ ಮಗನನ್ನು ನೋಡಿ ದುಃಖಸಂತಪ್ತಳಾದ, ಅಶ್ರುಧಾರೆಯನ್ನು ಹರಿಸುತ್ತಿರುವ ಆ ಪೂಜನಿಯು ಅಳುತ್ತಾ ಹೇಳಿತು.
ಕ್ಷತ್ರಿಯೇ ಸಂಗತಂ ನಾಸ್ತಿ ನ ಪ್ರೀತಿರ್ನ ಚ ಸೌಹೃದಮ್ |
ಕಾರಣೇ ಸಂಭಜಂತೀಹ ಕೃತಾರ್ಥಾಃ ಸಂತ್ಯಜಂತಿ ಚ ॥14॥
ಕ್ಷತ್ರಿಯರಿಗೆ ಹೊಂದಾಣಿಕೆಯಿಲ್ಲ, ಪ್ರೀತಿ ಇಲ್ಲ, ಸೌಹಾರ್ದವಿಲ್ಲ. ತಮಗೆ ಪ್ರಯೋಜನವಾಗುವುದಿದ್ದರೆ ಸೇರುತ್ತಾರೆ, ಕೆಲಸ ಮಾಡುತ್ತಾರೆ. ತಮ್ಮ ಕೆಲಸವಾದ ಮೇಲೆ ತ್ಯಜಿಸುತ್ತಾರೆ.
ಕ್ಷತ್ರಿಯೇಷು ನ ವಿಶ್ವಾಸಃ ಕಾರ್ಯಃ ಸರ್ವೋಪಘಾತಿಷು |
ಅಪಕೃತ್ಯಾಪಿ ಸತತಂ ಸಾಂತ್ವಯಂತಿ ನಿರರ್ಥಕಮ್ ॥15॥
ಸರ್ವರಿಗೂ ಹಾನಿಮಾಡುವ ಕ್ಷತ್ರಿಯರ ಮೇಲೆ ವಿಶ್ವಾಸವಿಡಬಾರದು. ಪದೇ ಪದೇ ಅಪಕಾರ ಮಾಡುತ್ತಾರೆ. ಅರ್ಥಹೀನವಾಗಿ ಸಮಾಧಾನದ ಮಾತುಗಳನ್ನು ಹೇಳುತ್ತಾರೆ.
ಅಹಮಸ್ಯ ಕರೋಮ್ಯದ್ಯ ಸದೃಶೀಂ ವೈರಯಾತನಾಮ್ |
ಕೃತಘ್ನಸ್ಯ ನೃಶಂಸಸ್ಯ ಭೃಶಂ ವಿಶ್ವಾಸಘಾತಿನಃ ॥16॥
ನಾನು ಕೃತಘ್ನನೂ, ಕ್ರೂರನೂ, ವಿಶ್ವಾಸಘಾತಕನೂ ಆದ ಇವನಿಗೆ ಅವನ ಪಾಪಕೃತ್ಯಕ್ಕೆ ಸದೃಶವಾದ ಯಾತನೆಯನ್ನು ಉಂಟುಮಾಡುತ್ತೇನೆ.
ಸಹಸಂಜಾತವೃದ್ಧಸ್ಯ ತಥೈವ ಸಹಭೋಜಿನಃ |
ಶರಣಾಗತಸ್ಯ ಚ ವಧಸ್ತ್ರಿವಿಧಂ ಹ್ಯಸ್ಯ ಕಿಲ್ಬಿಷಮ್ ॥17॥
ಈ ರಾಜಕುಮಾರನು ಮೂರು ವಿಧ ಪಾಪಗಳನ್ನು ಮಾಡಿದ್ದಾನೆ. (1) ಜೊತೆಯಲ್ಲೇ ಹುಟ್ಟಿ ಬೆಳೆದವನ ವಧೆ. (2) ಜೊತೆಯಲ್ಲಿ ಆಹಾರವನ್ನು ಸೇವಿಸುತ್ತಿದ್ದವನ ವಧೆ. (3) ಶರಣಾಗತನ ವಧೆ.
ಇತ್ಯುಕ್ತ್ವಾ ಚರಣಾಭ್ಯಾಂ ತು ನೇತ್ರೇ ನೃಪಸುತಸ್ಯ ಸಾ |
ಭಿತ್ತ್ವಾ ಸ್ವಸ್ಥಾ ತತ ಇದಂ ಪೂಜನೀ ವಾಕ್ಯಮಬ್ರವೀತ್ ॥18॥
ಹೀಗೆ ಹೇಳಿಕೊಂಡ ಪೂಜನಿಯು ತನ್ನ ಕಾಲುಗಳಿಂದ ಆ ರಾಜಕುಮಾರನ ಕಣ್ಣುಗಳನ್ನು ಭೇದಿಸಿತು. ಅನಂತರ ಸ್ವಸ್ಥಳಾಗಿ ಹೇಳಿತು.
ಇಚ್ಛಯೇಹ ಕೃತಂ ಪಾಪಮ್ ಇಚ್ಛಯೈವೋಪಸರ್ಪತಿ |
ಕೃತಪ್ರತಿಕೃತಂ ತೇಷಾಂ ನ ನಶ್ಯತಿ ಶುಭಾಶುಭಮ್ ॥19॥
ಇಚ್ಛೆಯಿಂದ ಪಾಪ ಮಾಡಿದವರಿಗೆ ಅದರ ಫಲವು ಕೂಡಲೇ ಲಭಿಸುತ್ತದೆ. ಇತರರು ಮಾಡಿದ ಪುಣ್ಯ ಅಥವಾ ಪಾಪಕೃತ್ಯಕ್ಕೆ ಪ್ರತಿಯಾಗಿ ಮಾಡಲ್ಪಟ್ಟ ಶುಭ-ಅಶುಭಗಳು ನಾಶವಾಗುವುದಿಲ್ಲ= ಮನಸ್ಸಿನಿಂದ ಮರೆಯಾಗುವುದಿಲ್ಲ. ಉಪಕೃತರು ಅಥವಾ ಅಪಕೃತರು ಉಪಕಾರವನ್ನು ಅಥವಾ ಅಪಕಾರವನ್ನು ಮರೆಯುವುದಿಲ್ಲ.
ಪಾಪಕರ್ಮಕೃತಂ ಕಿಂಚಿನ್ನ ತಸ್ಮಿನ್ ಯದಿ ವಿದ್ಯತೇ |

ನಿಪಾತ್ಯತೇಽಸ್ಯ ಪುತ್ರೇಷು ನ ಚೇತ್ ಪೌತ್ರೇಷು ನಪ್ತೃಷು ॥20॥
ಪಾಪ ಮಾಡಿದವನಿಗೆ ಅದರ ಫಲವು ಉಂಟಾಗದಿದ್ದರೆ, ಅವನ ಮಕ್ಕಳಿಗೆ, ಮೊಮ್ಮಕ್ಕಳಿಗೆ, ಮರಿಮಕ್ಕಳಿಗೆ ಅದರ ಪರಿಣಾಮವು ಉಂಟಾಗುತ್ತದೆ.
ಬ್ರಹ್ಮದತ್ತಃ ಸುತಂ ದೃಷ್ಟ್ವಾ ಪೂಜನ್ಯಾ ಹೃತಲೋಚನಮ್ |
ಕೃತಪ್ರತಿಕೃತಂ ಮತ್ವಾ ಪೂಜನೀಮಿದಮಬ್ರವೀತ್ ॥21॥
ಬ್ರಹ್ಮದತ್ತನು ಪೂಜನಿಯಿಂದ ಕಿತ್ತಲ್ಪಟ್ಟ ಕಣ್ಣುಳ್ಳ ಮಗನನ್ನು ನೋಡಿ, ಅಪಕಾರಕ್ಕೆ ಪ್ರತೀಕಾರ ಎಂದು ಭಾವಿಸಿ ಪೂಜನಿಗೆ ಹೇಳಿದನು.
ಬ್ರಹ್ಮದತ್ತಃ
ಅಸ್ತಿ ವೈ ಕೃತಮಸ್ಮಾಭಿರಸ್ತಿ ಪ್ರತಿಕೃತಂ ತ್ವಯಾ |
ಉಭಯಂ ತತ್ ಸಮೀಭೂತಂ ವಸ ಪೂಜನಿ ಮಾ ಗಮಃ ॥22॥
ನಾವು ಅಪಕಾರ ಮಾಡಿದ್ದೆವು. ನೀನು ಪ್ರತೀಕಾರವನ್ನು ಮಾಡಿರುವೆ. ಅವೆರಡು ಸಮವಾದವು. (ಒಂದರಿಂದ ಇನ್ನೊಂದು ರದ್ದಾಯಿತು). ಪೂಜನಿ! ಇಲ್ಲೇ ವಾಸಿಸು. ಹೋಗಬೇಡ.
ಪೂಜನೀ
ಸಕೃತ್ ಕೃತಾಪರಾಧಸ್ಯ ತತ್ರೈವ ಪರಿಲಂಬತಃ |
ನ ತದ್ ಬುಧಾಃ ಪ್ರಶಂಸಂತಿ ಶ್ರೇಯಸ್ತತ್ರಾಪಸರ್ಪಣಮ್ ॥23॥
ಒಮ್ಮೆ ಅಪಕಾರಕ್ಕೆ ಒಳಗಾದವನು ಅಲ್ಲಿಗೆ ಜೋತು ಬೀಳುವುದನ್ನು ಪ್ರಾಜ್ಞರು ಮೆಚ್ಚುವುದಿಲ್ಲ. ಅಲ್ಲಿಂದ ಹೊರಟು ಹೋಗುವುದೇ ಒಳ್ಳೆಯದು.
ಸಾಂತ್ವೇ ಪ್ರಯುಕ್ತೇ ನೃಪತೇ ಕೃತವೈರೇ ನ ವಿಶ್ವಸೇತ್ |
ಕ್ಷಿಪ್ರಂ ಪ್ರಬಧ್ಯತೇ ಮೂಢೋ ನ ಹಿ ವೈರಂ ಪ್ರಶಾಮ್ಯತಿ ॥24॥
ರಾಜನೇ! ವೈರವನ್ನು ತೋರಿಸಿದವನ ಮೇಲೆ ಸಮಾಧಾನ ಪಡಿಸುವ ಮಾತುಗಳನ್ನಾಡಿದಾಗ, ಅವನನ್ನು= ಸಮಾಧಾನ ಹೇಳಿದವನನ್ನು ನಂಬಬಾರದು. ನಂಬುವವನು ಮೂಢ. ಅವನು ಪುನಃ ಬೇಗನೇ ಬಂಧನಕ್ಕೋ, ಹತ್ಯೆಗೋ ಒಳಗಾಗುತ್ತಾನೆ. ವೈರವು ಎಂದೂ ಶಮನವಾಗುವುದಿಲ್ಲ.
ಅನ್ಯೋನ್ಯಂ ಕೃತವೈರಾಣಾಂ ಪುತ್ರಪೌತ್ರಂ ನಿಗಚ್ಛತಿ |
ಪುತ್ರೇ ಪೌತ್ರೇ ವಿನಿರ್ಮಾಯ ಪರಲೋಕಂ ನಿಗಚ್ಛತಿ ॥25॥
ಪರಸ್ಪರ ವೈರವನ್ನು ಸಾಧಿಸುವವರ ಮಕ್ಕಳು- ಮೊಮ್ಮಕ್ಕಳು ನಾಶವಾಗುತ್ತಾರೆ. ಮಕ್ಕಳು, ಮೊಮ್ಮಕ್ಕಳು ನಾಶವಾದರೆ ಪರಲೋಕವು ನಾಶವಾಗುತ್ತದೆ (ಸದ್ಗತಿಯು ಆಗುವುದಿಲ್ಲ).
ಸರ್ವೇಷಾಂ ಕೃತವೈರಾಣಾಮವಿಶ್ವಾಸಃ ಸುಖಾವಹಃ |
ಏಕಾಂತತೋ ನ ವಿಶ್ವಾಸಃ ಕಾರ್ಯೋ ವಿಶ್ವಾಸಘಾತಕಃ ॥26॥
ವೈರಕ್ಕೆ ಒಳಗಾದವರು ವೈರವನ್ನು ತೋರಿಸಿದವನನ್ನು ನಂಬಬಾರದು. ಅವಿಶ್ವಾಸವೇ ಸುಖಕರ. ವಿಶ್ವಾಸಘಾತಕರ ಮೇಲೆ ಪೂರ್ಣವಿಶ್ವಾಸವನ್ನು ಇಡಲೇಬಾರದು.
ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇಽಪಿ ನ ವಿಶ್ವಸೇತ್ |
ಕಾಮಂ ವಿಶ್ವಾಸಯೇದನ್ಯಾನ್ ಪರೇಷಾಂ ತು ನ ವಿಶ್ವಸೇತ್ ॥27॥
ವಿಶ್ವಾಸವಿಲ್ಲದವನ ಮೇಲೆ ವಿಶ್ವಾಸವಿಡಬಾರದು. ವಿಶ್ವಾಸವಿರುವವನನ್ನೂ (ಪೂರ್ಣವಾಗಿ) ನಂಬಬಾರದು. ಬೇರೆಯವರು ತನ್ನನ್ನು ನಂಬುವಂತೆ ಮಾಡಬೇಕು. ತಾನು ಬೇರೆಯವರನ್ನು ನಂಬಬಾರದು.
ಮಾತಾ ಪಿತಾ ಬಾಂಧವಾನಾಂ ವರಿಷ್ಠೌ
ಭಾರ್ಯಾ ಜರಾ ಬೀಜಮಾತ್ರಂ ತು ಪುತ್ರಃ |
ಭ್ರಾತಾ ಶತ್ರುಃ ಕ್ಲಿನ್ನಪಾಣಿರ್ವಯಸ್ಯ
ಆತ್ಮಾ ಹ್ಯೇಕಃ ಸುಖದುಃಖಸ್ಯ ವೇತ್ತಾ ॥28॥
ಬಂಧುವರ್ಗದಲ್ಲಿ ತಂದೆ-ತಾಯಿಯರು ವರಿಷ್ಠರು, ಹೆಂಡತಿಯು ಶರೀರವನ್ನು ಮುಪ್ಪಾಗಿಸುವವಳು. ಮಗನು ಕೇವಲ ಸಂತತಿಯನ್ನು ಮುಂದುವರಿಸುವ ಬೀಜ. ಸೋದರನು ಶತ್ರುವೇ. ಮಿತ್ರನು ಯಾವಾಗಲೂ ಸತ್ಕಾರ ಉಪಕಾರಗಳನ್ನು ಬಯಸುವವನು.
ಸುಖ-ದುಃಖಗಳನ್ನು ಅನುಭವಿಸುವವನು ತಾನೊಬ್ಬನೇ.
ಅನ್ಯೋನ್ಯಕೃತವೈರಾಣಾಂ ನ ಸಂಧಿರುಪಪದ್ಯತೇ |
ಸ ಚ ಹೇತುರತಿಕ್ರಾಂತೋ ಯದರ್ಥಮಹಮಾವಸಮ್ ॥29॥
ಪರಸ್ಪರ ವೈರವನ್ನು ಸಾಧಿಸಿದವರ ನಡುವೆ ಸಂಧಾನವು ಸರಿಯಲ್ಲ. ನಾನು ಇಲ್ಲಿ ಯಾವ ಕಾರಣದಿಂದ ವಾಸ ಮಾಡುತ್ತಿದ್ದೆನೋ ಆ ಕಾರಣವು ಈಗ ಇಲ್ಲ.
ಪೂಜಿತಸ್ಯಾರ್ಥಮಾನಾಭ್ಯಾಂ ಜಂತೋಃ ಪೂರ್ವಾಪಕಾರಿಣಃ |
ಹೃದಯಂ ತವ ವಿಶ್ವಸ್ತಂ ಕರ್ಮ ತ್ರಾಸಯತೇ ಬಲಾತ್ ॥30॥
ಅರ್ಥ (ಹಕ್ಕಿಯು ಕೊಡುತ್ತಿದ್ದ ಹಣ್ಣು) ಮತ್ತು ಮಾನ (ಹಕ್ಕಿಯು ರಾಜನಿಗೆ ತೋರಿಸಿದ ಪ್ರೀತಿ) ಗಳಿಂದ ಆದರಿಸಲ್ಪಟ್ಟ, ಆದರೂ ಮೊದಲು ಅಪಕಾರ ಮಾಡಿದ ಪ್ರಾಣಿಯಾದ ನಿನ್ನಲ್ಲೇ ವಿಶ್ವಾಸವಿದ್ದಿತು. ಆದರೆ ನಾನು ಮಾಡಿದ ಕರ್ಮವು (ನಿನ್ನ ಪುತ್ರನ ಕಣ್ಣಿನ ನಾಶವು) ನನಗೆ ಭಯವುಂಟು ಮಾಡುತ್ತಿದೆ.

ಪೂರ್ವಂ ಸಮ್ಮಾನನಾ ಯತ್ರ ಪಶ್ಚಾಚ್ಚೈವ ವಿಮಾನನಾ |
ಜಹ್ಯಾತ್ತಂ ಸತ್ತ್ವವಾನ್ ವಾಸಂ ಸಮ್ಮಾನಿತವಿಮಾನಿತಃ ॥31॥
ಎಲ್ಲಿ ಮೊದಲು ಸತ್ಕಾರ, ಅನಂತರ ಅಪಕಾರಗಳು ಆಗುತ್ತವೋ ಆ ಸ್ಥಳವನ್ನು ಮಾನ-ಅಪಮಾನಗಳಿಗೆ ಒಳಗಾದ, ಪ್ರಶಸ್ತ ಮನಸ್ಸಿನ ವ್ಯಕ್ತಿಯು ತ್ಯಜಿಸಬೇಕು.
ಉಷಿತಾಸ್ಮಿ ತವಾಗಾರೇ ದೀರ್ಘಕಾಲಮಹಿಂಸಿತಾ |
ತದಿದಂ ವೈರಮುತ್ಪನ್ನಂ ಸುಖಮಾಸ್ಸ್ವ ವ್ರಜಾಮ್ಯಹಮ್ ॥32॥
ನಿನ್ನ ಮನೆಯಲ್ಲಿ ಏನೂ ತೊಂದರೆಯಿಲ್ಲದೆ ದೀರ್ಘಕಾಲ ವಾಸಿಸಿದ್ದೇನೆ. ಈಗ ವೈರವು ಹುಟ್ಟಿದೆ. ನಾನು ಹೋಗುತ್ತೇನೆ. ಸುಖವಾಗಿರು.
ಬ್ರಹ್ಮದತ್ತಃ
ಯತ್ಕೃತೇ ಪ್ರತಿಕುರ್ಯಾದ್ವೈ ನ ಸ ತತ್ರಾಪರಾಧ್ನುಯಾತ್ |
ಅನೃಣಸ್ತೇನ ಭವತಿ ವಸ ಪೂಜನಿ ಮಾ ಗಮಃ ॥33॥
ಅಪಕಾರಕ್ಕೆ ಪ್ರತೀಕಾರ ಮಾಡುವವನು ಅಪರಾಧಿಯಲ್ಲ. ಪ್ರತೀಕಾರದಿಂದ ಮೊದಲು ಅಪಕಾರ ಮಾಡಿದವನು ಋಣಮುಕ್ತನಾಗುತ್ತಾನೆ. ಪೂಜನಿ! ಇಲ್ಲೇ ವಾಸಿಸು. ಹೋಗಬೇಡ.
ಪೂಜನೀ
ನ ಕೃತಸ್ಯ ನ ಕರ್ತುಶ್ಚ ಸಖ್ಯಂ ಸಂಧೀಯತೇ ಪುನಃ |
ಹೃದಯಂ ತತ್ರ ಜಾನಾತಿ ಕರ್ತುಶ್ಚೈವ ಕೃತಸ್ಯ ಚ ॥34॥
ಅಪಕಾರಕ್ಕೆ ಒಳಗಾದವನ ಮತ್ತು ಅಪಕಾರ ಮಾಡಿದವನ ನಡುವೆ ಪುನಃ ಸಂಧಾನವು ಆಗುವುದಿಲ್ಲ. ಅಪಕಾರ ಮಾಡಿದವನ ಮತ್ತು ಅಪಕಾರಕ್ಕೆ ಒಳಗಾದವನ ಹೃದಯವು ಇದನ್ನು ತಿಳಿದಿದೆ.
ಬ್ರಹ್ಮದತ್ತಃ
ಕೃತಸ್ಯ ಚೈವ ಕರ್ತುಶ್ಚ ಸಖ್ಯಂ ಸಂಧೀಯತೇ ಪುನಃ |
ವೈರಸ್ಯೋಪಶಮೋ ದೃಷ್ಟಃ ಪಾಪಂ ನೋಪಾಶ್ನುತೇ ಪುನಃ ॥35॥
ಅಪಕಾರಕ್ಕೆ ಒಳಗಾದವನ ಮತ್ತು ಅಪಕಾರ ಮಾಡಿದವನ ನಡುವೆ ಪುನಃ ಸಂಧಾನವು ಆಗಬಹುದು. ವೈರದ ಉಪಶಮನವಾಗಿರುವ ನಿದರ್ಶನವಿದೆ. ಅಂತಹವನು ಪುನಃ ಪಾಪವನ್ನು ಮಾಡುವುದಿಲ್ಲ.
ಪೂಜನೀ
ನಾಸ್ತಿ ಚೈವಮತಿಕ್ರಾಂತಂ ನಾಸ್ತಿಕೋಽಸ್ಮೀತಿ ನಾಶ್ವಸೇತ್ |
ವಿಶ್ವಾಸಾದ್ ಬಧ್ಯತೇ ಬಾಲಸ್ತಸ್ಮಾಚ್ಛ್ರೇಯೋ ಹ್ಯದರ್ಶನಮ್ ॥36॥
ಹೀಗೆ ಪ್ರಿಯವಾಕ್ಯವನ್ನು ಹೇಳಿದರೂ ಅಪರಾಧದ ಪರಿಹಾರವಾಗುವುದಿಲ್ಲ. ನಾಸ್ತಿಕ=ನಿರಪರಾಧಿ ಆಗಿದ್ದೇನೆ ಎಂದು ನಾನು ನಿನ್ನನ್ನು ನಂಬಬಾರದು, ಮುಗ್ಧ ಮನಸ್ಸಿನವರು ವಿಶ್ವಾಸವಿಟ್ಟು ಬಂಧನಕ್ಕೆ ಒಳಗಾಗುತ್ತಾರೆ. ಹಾಗೆ ಆಗುವುದಕ್ಕಿಂತ ಕಾಣಿಸಿಕೊಳ್ಳದಿರುವುದೇ ಒಳ್ಳೆಯದು.
ತರಸಾ ಯೇ ನ ಶಕ್ಯಂತೇ ಶಸ್ತ್ರೈಃ ಸುನಿಶಿತೈರಪಿ |
ಸಾಮ್ನಾ ತೇ ವಿನಿಗೃಹ್ಯಂತೇ ಗಜಾ ಇವ ಕರೇಣುಭಿಃ ॥37॥
ಬಹಳ ಹರಿತ ಶಸ್ತ್ರಗಳಿಂದ ವೇಗದಿಂದ ಯಾರನ್ನು ನಿಗ್ರಹಿಸಲು ಆಗುವುದಿಲ್ಲವೋ ಅಂತಹವರನ್ನು ಸಾಮೋಪಾಯದಿಂದ ನಿಗ್ರಹಿಸುತ್ತಾರೆ. ಕಾಡಾನೆಗಳನ್ನು ಹೆಣ್ಣು ಆನೆಗಳನ್ನು ಬಳಸಿ ನಿಗ್ರಹಿಸುವಂತೆ.
ಬ್ರಹ್ಮದತ್ತಃ
ಸಂವಾಸಾಜ್ಜಾಯತೇ ಸ್ನೇಹೋ ಜೀವಿತಾಂತಕರೇಷ್ವಪಿ |
ಅನ್ಯೋನ್ಯಸ್ಯ ಚ ವಿಶ್ವಾಸಃ ಶ್ವಾನಶ್ವಪಚಯೋರಪಿ ॥38॥
ಸಹವಾಸವನ್ನು ಮಾಡುವುದರಿಂದ ಪ್ರಾಣಕಂಟಕರ ಮೇಲೂ ಸ್ನೇಹವು ಹುಟ್ಟುತ್ತದೆ. ನಾಯಿ ಮತ್ತು ಶ್ವಪಚರಿಗೆ ಇರುವ ಪರಸ್ಪರ ವಿಶ್ವಾಸವು ನಿದರ್ಶನ.
ಅನ್ಯೋನ್ಯಕೃತವೈರಾಣಾಂ ಸಂವಾಸಾನ್ಮೃದುತಾಂ ಗತಮ್ |
ನಾವತಿಷ್ಠತಿ ತದ್ವೈರಂ ಪುಷ್ಕರಸ್ಥಮಿವೋದಕಮ್ ॥39॥
ಪರಸ್ಪರ ವೈರಿಗಳಾಗಿರುವವರಲ್ಲೂ ಸಹವಾಸದಿಂದ, ವೈರವು ಮೃದುವಾಗುತ್ತದೆ. ಮೃದುವಾದ ವೈರವೂ ಕ್ರಮೇಣ ಇಲ್ಲವಾಗುತ್ತದೆ. ಪದ್ಮಪತ್ರದ ಮೇಲಿನ ನೀರಿನಂತೆ. (ಕಮಲದ ಎಲೆಯ ಮೇಲಿನ ನೀರಿನ ಹನಿ ನಿಲ್ಲುವುದಿಲ್ಲ. ಬಿದ್ದುಹೋಗುತ್ತದೆ. ಆದರೆ ಮೃದುವಾದ ವೈರವು ಅಳಿಯುವುದಿಲ್ಲ. ಮುಂದುವರಿಯುತ್ತದೆ-ಲಕ್ಷ್ಮಾಲಂಕಾರ).
ಪೂಜನೀ
ವೈರಂ ಪಂಚಸಮುತ್ಥಾನಂ ತಚ್ಚ ಬುಧ್ಯಂತಿ ಪಂಡಿತಾಃ |
ಸ್ವಕೃತಂ ವಾಸ್ತುಜಂ ವಾಗ್ಜಂ ಸ್ವ ಸಪತ್ನಾಪರಾಧಜಮ್ ॥40॥
ವೈರದ ಉತ್ಥಾನದ ಮೂಲ ಐದು. (1) ಸ್ವಭಾವ (ಉದಾ : ಹಸು-ಹುಲಿ, (2) ಮನೆ, ಮನೆಯ ಭೂಮಿ (3) ಮಾತು (ಉದಾ : ದ್ರೋಣ-ದ್ರುಪದ), (4) ವೈರಿ (5) ಅಪರಾಧ - ಇದು ಪಂಡಿತರಿಗೆ ತಿಳಿಯುತ್ತದೆ.
ತತ್ರ ದಾತಾ ನಿಹಂತವ್ಯಃ ಕ್ಷತ್ರಿಯೇಣ ವಿಶೇಷತಃ |
ಪ್ರಕಾಶಂ ವಾಪ್ರಕಾಶಂ ವಾ ಬುದ್ಧ್ವಾ ದೇಶಬಲಾದಿಕಮ್ ॥41॥
ಉಪಕಾರ ಮಾಡಿದವನ ದೇಶ-ಬಲ ಇತ್ಯಾದಿಗಳನು ತಿಳಿದು, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಉಪಕಾರ ಮಾಡಿದವನಿಗೆ

ಅಪಕಾರವನ್ನು ಮಾಡಬಹುದು.  ಕ್ಷತ್ರಿಯನಿಗೆ ಈ ಮಾತು ವಿಶೇಷವಾಗಿ ಅನ್ವಯಿಸುತ್ತದೆ. (ಶ್ಲೋಕದಲ್ಲಿ `ನ ಹಂತವ್ಯಃ' ಎಂಬ ಪಾಠವೂ ಇದೆ. ಅಪಕಾರವನ್ನು ಮಾಡಬಾರದು ಎಂದು ಅರ್ಥ).
ಕೃತಪಾಪಸ್ಯ ವಿಶ್ವಾಸಃ ಕಾರ್ಯನಿತ್ವಹ ಸುಹೃದ್ಯಪಿ |
ಛನ್ನಂ ಸಂತಿಷ್ಠತೇ ವೈರಂ ಗೂಢೋಽಗ್ನಿರಿವ ದಾರುಷು ॥42॥
ವೈರವನ್ನು ತೋರಿಸಿದವನ ಮೇಲೆ, ಅವನು ಮಿತ್ರನೇ ಆಗಿದ್ದರೂ, ವಿಶ್ವಾಸವಿಡಬಾರದು. ಕಟ್ಟಿಗೆಗಳಲ್ಲಿ ಅಗ್ನಿಯು ಗೂಢವಾಗಿರುವಂತೆ ವೈರವು (ವೈರಕಾರಿಗಳಲ್ಲಿ) ಗೂಢವಾಗಿರುತ್ತದೆ.
ನ ವಿತ್ತೇನ ನ ಪಾರುಷ್ಯೈರ್ನ ಸಾನ್ತ್ವೇನ ನ ಚ ಶ್ರುತೈಃ |
ವೈರಾಗ್ನಿಃ ಶಾಮ್ಯತೇ ರಾಜನ್ನೌರ್ವಾಗ್ನಿರಿವ ಸಾಗರೇ ॥43॥
ರಾಜನ್! ವೈರಾಗ್ನಿಯನ್ನು ಧನದಿಂದ ಶಮನಗೊಳಿಸಲಾಗುವುದಿಲ್ಲ. ಕಠಿಣ ಕ್ರಮಗಳಿಂದಲೂ ಆಗುವುದಿಲ್ಲ. ಸಾಮೋಪಾಯದಿಂದಲೂ ಆಗುವುದಿಲ್ಲ. ವಿದ್ಯೆಯಿಂದಲೂ ಆಗುವುದಿಲ್ಲ. ಸಾಗರದಲ್ಲಿರುವ ವಡವಾಗ್ನಿಯನ್ನು ಹೇಗೆ ಯಾವುದೇ ತಂತ್ರಗಳಿಂದ ಶಮನಗೊಳಿಸಲಾಗುವುದಿಲ್ಲವೋ ಹಾಗೆ.
ನ ಹಿ ವೈರಾಗ್ನಿರುದ್ಭೂತಃ ಕರ್ಮ ವಾಪ್ಯಪರಾಧಜಮ್ |
ಶಾಮ್ಯತ್ಯದಗ್ಧ್ವಾ ನೃಪತೇ ವಿನಾ ಹ್ಯೇಕತರಕ್ಷಯಾತ್ ॥44॥
ರಾಜನ್! ಹುಟ್ಟಿದ ವೈರಾಗ್ನಿಯು ಸಂಬಂಧಿಸಿದ ವ್ಯಕ್ತಿಯನ್ನು ಸುಡದೆ ಆರುವುದಿಲ್ಲ. ಅಪರಾಧದಿಂದ ಹುಟ್ಟಿದ ಕರ್ಮವು (ಪ್ರತೀಕಾರವು) ಇಬ್ಬರಲ್ಲಿ ಒಬ್ಬನ ನಾಶವಾಗದೆ ಕೊನೆಯಾಗುವುದಿಲ್ಲ.
ಸತ್ಕೃತಸ್ಯಾರ್ಥಮಾನಾಭ್ಯಾಂ ಸ್ಯಾತ್ತು ಪೂರ್ವಾಪಕಾರಿಣಃ |
ನೈವ ಶಾಂತಿರ್ನ ವಿಶ್ವಾಸಃ ಕರ್ಮ ತ್ರಾಸಯತೇ ಬಲಾತ್ ॥45॥
ಹಿಂದೆ ಅಪಕಾರ ಮಾಡಿದವನನ್ನು ಅಪಕೃತನು ಧನ-ಮಾನಗಳಿಂದ ಸತ್ಕರಿಸಿದರೂ, ಅವನ ಬಗ್ಗೆ (ಮೊದಲು ಅಪಕಾರ ಮಾಡಿದವನ ವಿಷಯದಲ್ಲಿ) ಕ್ರೋಧ-ಭಯಗಳು ಶಾಂತವಾಗುವುದಿಲ್ಲ. ವಿಶ್ವಾಸವು ಹುಟ್ಟುವುದಿಲ್ಲ. ಕರ್ಮವು (ಅಪಕಾರವು) ಬಲವಾಗಿ ಹೆದರಿಸುತ್ತದೆ.
ನೈವಾಪಕಾರೇ ಕಸ್ಮಿಂಶ್ಚಿದಹಂ ತ್ವಯಿ ತಥಾ ಭವಾನ್ |
ವಿಶ್ವಾಸಾದುಷಿತಾ ಪೂರ್ವಂ ನೇದಾನೀಂ ವಿಶ್ವಸಾಮ್ಯಹಮ್ ॥46॥
ಇಲ್ಲಿಯವರೆಗೆ ನಾನು ನಿನಗೆ ಅಥವಾ ನೀನು ನನಗೆ ಅಪಕಾರ ಮಾಡಿಯೂ ವಿಶ್ವಾಸದಿಂದ ಇಲ್ಲಿ ವಾಸ ಮಾಡಿಲ್ಲ. (ಅಪಕಾರ ಮಾಡದೆ ವಿಶ್ವಾಸದಿಂದ ಇದ್ದೇವೆ). ಈಗ ನಾನು ನಿನ್ನನ್ನು ನಂಬುವುದಿಲ್ಲ.
ಬ್ರಹ್ಮದತ್ತಃ
ಕಾಲೇನ ಕ್ರಿಯತೇ ಕಾರ್ಯಂ ತಥೈವ ವಿವಿಧಾಃ ಕ್ರಿಯಾಃ |
ಕಾಲೇನೈವ ಪ್ರವರ್ತಂತೇ ಕಃ ಕಸ್ಯೇಹಾಪರಾಧ್ಯತಿ ॥47॥
ಕಾಲವೇ ಕಾರ್ಯವನ್ನು ಮಾಡುತ್ತದೆ. ನಾನಾ ಚಟುವಟಿಕೆಗಳು ಕಾಲದ ಪ್ರಭಾವದಿಂದಲೇ ಆಗುತ್ತದೆ (ನಡೆಯುತ್ತದೆ). (ಕಾಲ=ವಿಧಿ=ಕಾಣದ ಪ್ರಾರಬ್ಧಕರ್ಮ. ಅವರವರ ಪ್ರಾರಬ್ಧ ಕರ್ಮಕ್ಕೆ ಅನುಗುಣವಾಗಿಯೇ ನಾನಾ ಕಾರ್ಯಗಳು, ಘಟನೆಗಳು ಆಗುತ್ತವೆ). (ಕಾಲದ ಪ್ರಚೋದನೆ ಇಲ್ಲದೆ) ಯಾರು ಯಾರ ಮೇಲೆ ಅಪರಾಧವನ್ನು ಮಾಡಲು ಸಾಧ್ಯ?
ತುಲ್ಯಂ ಚೋಭೇ ಪ್ರವರ್ತೇತೇ ಮರಣಂ ಜನ್ಮ ಚೈವ ಹ |
ಕಾರ್ಯತೇ ಚೈವ ಕಾಲೇನ ತನ್ನಿಮಿತ್ತಂ ಹಿ ಜೀವತಿ ॥48॥
ಹುಟ್ಟು-ಸಾವು ಸಮವಾಗಿ ಸಂಭವಿಸುತ್ತವೆ. ಕಾಲವೇ ಹುಟ್ಟು-ಸಾವುಗಳ ಪ್ರವರ್ತಕ. ಬದುಕಿಗೂ ಕಾಲವೇ ನಿಮಿತ್ತ (ಮರಣಕ್ಕೂ ಅದೇ ನಿಮಿತ್ತ).
ವಧ್ಯಂತೇ ಯುಗಪತ್ ಕೇಚಿತ್ ಏಕೈಕಂ ಚಾಪರೇ ತಥಾ |
ಕಾಲೋ ದಹತಿ ಭೂತಾನಿ ಸಂಪ್ರಾಪ್ಯಾಗ್ನಿರಿವೇಂಧನಮ್ ॥49॥
ಕೆಲವರು ಸಾಮೂಹಿಕವಾಗಿ ಸಾಯುತ್ತಾರೆ. ಕೆಲವರಿಗೆ ಬಿಡಿಬಿಡಿಯಾಗಿ ಒಬ್ಬೊಬ್ಬರಿಗೇ ಸಾವು ಬರುತ್ತದೆ. ಅಗ್ನಿಯು ತನಗೆ ಲಭಿಸಿದ ಇಂಧನವನ್ನು ದಹಿಸುವಂತೆ ಕಾಲವು ಚೇತನಗಳನ್ನೂ, ಅಚೇತನಗಳನ್ನೂ ದಹಿಸುತ್ತದೆ.
ನಾಹಂ ಪ್ರಮಾಣಂ ನೈವ ತ್ವಮನ್ಯೋನ್ಯಕರಣೇ ಶುಭೇ |
ಕಾಲೋ ನಿತ್ಯಮುಪಾಧತ್ತೇ ಸುಖಂ ದುಃಖಂ ಚ ದೇಹಿನಾಮ್ ॥50॥
ಶುಭಸ್ವರೂಪಳೇ! ಪರಸ್ಪರ ಉಪಕಾರ-ಅಪಕಾರಗಳನ್ನು ಮಾಡಲು ನಾನು ನೀನು ಇಬ್ಬರೂ ಸಮರ್ಥರಲ್ಲ. ಕಾಲವು ದೇಹಧಾರಿಗಳಿಗೆ ಯಾವಾಗಲೂ ಸುಖವನ್ನು-ದುಃಖವನ್ನು  ಉಂಟು ಮಾಡುತ್ತದೆ.
ಏವಂ ವಸೇಹ ಸಸ್ನೇಹಾ ಯಥಾಕಾಲಮಹಿಂಸಿತಾ |
ಯತ್ಕೃತಂ ತಚ್ಚ ಮೇ ಕ್ಷಾಂತಂ ತ್ವಂ ಚೈವ ಕ್ಷಮ ಪೂಜನಿ ॥51॥
ಪೂಜನಿ! ಆದ್ದರಿಂದ ಇಲ್ಲಿ ಸ್ನೇಹಪೂರ್ವಕವಾಗಿ ನಿರಂತರವಾಗಿ ವಾಸಿಸು. ನೀನು ಮಾಡಿದ್ದನ್ನು ನಾನು ಕ್ಷಮಿಸಿದ್ದೇನೆ. ನೀನು ನನ್ನನ್ನು ದಯವಿಟ್ಟು ಕ್ಷಮಿಸು.
ಪೂಜನೀ
ಯದಿ ಕಾಲಃ ಪ್ರಮಾಣಂ ತೇ ನ ವೈರಂ ಕಸ್ಯಚಿದ್ಭವೇತ್ |
ಕಸ್ಮಾತ್ತ್ವಪಚಿತಿಂ ಯಾಂತಿ ಬಾಂಧವಾ ಬಾಂಧವೇ ಹತೇ ॥52॥
ನೀನು ಹೇಳುವಂತೆ ಕಾಲವೇ ಎಲ್ಲ ಘಟನೆಗಳಿಗೂ ಕಾರಣವಾಗಿದ್ದರೆ ಬಂಧುವೊಬ್ಬನು ಹತನಾದಾಗ ಅವನ ಬಾಂಧವರೇಕೆ

ಕುಗ್ಗುತ್ತಾರೆ?
ಕಸ್ಮಾದ್ ದೇವಾಸುರಾಃ ಪೂರ್ವಮನ್ಯೋನ್ಯಮಭಿಜಘ್ನಿರೇ |
ಯದಿ ಕಾಲೇನ ನಿರ್ಯಾಣಂ ಸುಖದುಃಖೇ ಭವಾಭವೌ ॥53॥
ಮುಕ್ತಿ, ಸುಖ-ದುಃಖ, ಹುಟ್ಟು-ಸಾವು - ಇವು ಕಾಲದ ಪ್ರಭಾವದಿಂದಲೇ ಆಗುವುದಾದರೆ ಹಿಂದೆ ದೇವತೆಗಳು-ಅಸುರರು ಏಕೆ ಪರಸ್ಪರ ಬಡಿದಾಡಿದ್ದರು?
ಭಿಷಜೋ ಭೇಷಜಂ ಕರ್ತುಂ ಕಸ್ಮಾದಿಚ್ಛಂತಿ ರೋಗಿಣೇ |
ಯದಿ ಕಾಲೇನ ಪಚ್ಯಂತೇ ಭೇಷಜ್ಯೈಃ ಕಿಂ ಪ್ರಯೋಜನಮ್ ॥54॥
ಕಾಲಾನುಗುಣವಾಗಿಯೇ ರೋಗವು ವಾಸಿಯಾಗುವುದಾದರೆ ಔಷಧಿಗಳಿಂದ ಏನು ಪ್ರಯೋಜನ? ವೈದ್ಯರು ರೋಗಿಗೆ ಔಷಧವನ್ನು ನೀಡಲು ಏಕೆ ಬಯಸುತ್ತಾರೆ?
ಪ್ರಲಾಪಃ ಕ್ರಿಯತೇ ಕಸ್ಮಾತ್ ಸುಮಹಾನ್ ಶೋಕಮೂರ್ಛಿತೈಃ |
ಯದಿ ಕಾಲಃ ಪ್ರಮಾಣಂ ತೇ ಕಸ್ಮಾದ್ಧರ್ಮೋಽಸ್ತಿ ಕರ್ತೃಷು ॥55॥
ಕಾಲವೇ ಎಲ್ಲದಕ್ಕೂ ಕಾರಣವಾಗಿದ್ದರೆ ಕೋಪಕ್ಕೆ ಒಳಗಾದವರು ಏಕೆ ಭಾರಿ ಪ್ರಲಾಪವನ್ನು ಮಾಡುತ್ತಾರೆ? ಏಕೆ ಜನಗಳು ಧರ್ಮನಿಷ್ಠರಾಗಿದ್ದಾರೆ?
ತವ ಪುತ್ರೋ ಮಮಾಪತ್ಯಂ ಹತವಾನ್ ಹಿಂಸಿತೋ ಮಯಾ |
ಅನಂತರಂ ತ್ವಯಾ ಚಾಹಂ ಬಂಧನೀಯಾ ಮಹೀಪತೇ ॥56॥
ನಿನ್ನ ಮಗ ನನ್ನ ಸಂತಾನವನ್ನು ಕೊಂದನು. ಅನಂತರ ನಾನು ಅವನನ್ನು ಹಿಂಸಿಸಿದೆ. ರಾಜನೇ! ನೀನು ನನ್ನನ್ನು ಬಂಧಿಸಬೇಕು.
ಅಹಂ ಹಿ ಪುತ್ರಶೋಕೇನ ಕೃತಪಾಪಾ ತವಾತ್ಮಜೇ |
ತಥಾ ತ್ವಯಾ ಪ್ರಹರ್ತವ್ಯಂ ಮಯಿ ತತ್ತ್ವಂ ಚ ಮೇ ಶೃಣು ॥57॥
ನಾನು ಪುತ್ರಶೋಕದಿಂದ ನಿನ್ನ ಮಗನಿಗೆ ಹಾನಿ ಮಾಡಿದ್ದೇನೆ. ಆದ್ದರಿಂದ ನೀನು ನನ್ನನ್ನು ಸಂಹರಿಸಬೇಕು. ತತ್ವವನ್ನು ಹೇಳುವೆನು, ಕೇಳು.
ಭಕ್ಷಾರ್ಥಂ ಕ್ರೀಡನಾರ್ಥಂ ವಾ ನರಾ ವಾಂಛಂತಿ ಪಕ್ಷಿಣಃ |
ತೃತೀಯೋ ನಾಸ್ತಿ ಸಂಯೋಗೋ ವಧಬಂಧಾದೃತೇ ಕ್ಷಮಃ ॥58॥
ನರರು ತಿನ್ನುವುದಕ್ಕೆ ಅಥವಾ ಮೋಜಿಗೆ ಪಕ್ಷಿಗಳನ್ನು ಬಯಸುತ್ತಾರೆ. ವಧೆ ಅಥವಾ ಬಂಧನ - ಇವೆರಡನ್ನು ಬಿಟ್ಟು-ಮಾನವ ಮತ್ತು ಪಕ್ಷಿಗಳ ಸಂಬಂಧಕ್ಕೆ ಬೇರೆ ಏನೂ ಕಾರಣವಿಲ್ಲ.
ವಧಬಂಧಭಯಾದೇಕೇ ಮೋಕ್ಷತಂತ್ರಮುಪಾಗತಾಃ |
ಮರಣೋತ್ಪಾತಜಂ ದುಃಖಮಾಹುರ್ಧರ್ಮವಿದೋ ಜನಾಃ ॥59॥
ವಧೆಯ ಭಯ ಮತ್ತು ಬಂಧನದ ಭಯ- ಈ ಎರಡು ಭಯಗಳಿಂದ ಬಿಡುಗಡೆಯನ್ನು ಪಡೆಯುವ ಉಪಾಯಗಳನ್ನು ಕೆಲವರು ಅನ್ವೇಷಿಸುತ್ತಾರೆ ಮತ್ತು ಅವುಗಳನ್ನು ಬಳಸುತ್ತಾರೆ. ಧರ್ಮವನ್ನು ತಿಳಿದ ಜನರು ಮರಣ ಎಂಬ ಅನಾಹುತದಿಂದ ಉಂಟಾಗುವ ಸ್ಥಿತಿಯನ್ನು ದುಃಖ ಎಂದು ಹೇಳುತ್ತಾರೆ.
ಸರ್ವಸ್ಯ ದಯಿತಾಃ ಪ್ರಾಣಾಃ ಸರ್ವಸ್ಯ ದಯಿತಾಃ ಸುತಾಃ |
ದುಃಖಾದುದ್ವಿಜತೇ ಸರ್ವಃ ಸರ್ವಸ್ಯ ಸುಖಮೀಪ್ಸಿತಮ್ ॥60॥
ಎಲ್ಲರಿಗೂ ಪ್ರಾಣವು ಪ್ರಿಯ. ಎಲ್ಲರಿಗೂ ಮಕ್ಕಳು ಪ್ರಿಯರು. ಎಲ್ಲರೂ ದುಃಖದಿಂದ ಅಥವಾ ದುಃಖಕರವಾದ ಸಂದರ್ಭವು ಎದುರಾದಾಗ ಉದ್ವೇಗಕ್ಕೆ ಒಳಗಾಗುತ್ತಾರೆ. ಎಲ್ಲರಿಗೂ ಸುಖವು ಇಷ್ಟ.
ದುಃಖಂ ಜರಾ ಬ್ರಹ್ಮದತ್ತ ದುಃಖಮರ್ಥವಿಪರ್ಯಯಃ |
ದುಃಖಂ ಚಾನಿಷ್ಟಸಂವಾಸೋ ದುಃಖಮಿಷ್ಟವಿಯೋಗಜಮ್ ॥61॥
ಬ್ರಹ್ಮದತ್ತ! ಮುಪ್ಪು ದುಃಖ. ಹಣವಿಲ್ಲದ ಸ್ಥಿತಿ ದುಃಖ. ಇಷ್ಟವಾಗದವರ ಅಥವಾ ಅನಿಷ್ಟಕರರಾದವರ ಸಹವಾಸವು ದುಃಖ. ಪ್ರಿಯ ವ್ಯಕ್ತಿಗಳ ಮತ್ತು ವಸ್ತುಗಳ ವಿಯೋಗವು ದುಃಖ.
ವೈರಬಂಧಕೃತಂ ದುಃಖಂ ಹಿಂಸಾಜಂ ಸ್ತ್ರೀಕೃತಂ ತಥಾ |
ದುಃಖಂ ಸುಖೇನ ಸತತಂ ಜನಾನ್ ವಿಪರಿವರ್ತತೇ ॥62॥
ನಿರಂತರ ವೈರದಿಂದ ಮತ್ತು ಗಾಢ ವೈರದಿಂದ ಉಂಟಾಗುವ ದುಃಖ, ಹಿಂಸೆಯಿಂದ ಉಂಟಾಗುವ ದುಃಖ, ಸ್ತ್ರೀಗೆ ಪುರುಷನಿಂದ ಮತ್ತು ಪುರುಷನಿಗೆ ಸ್ತ್ರೀಯಿಂದ ಆಗುವ ದುಃಖ-ಇವೆಲ್ಲವೂ ಸುಖೇನ-ಸುಖಕಾಗಿ ಮಾಡುವ ಪ್ರವೃತ್ತಿಯಿಂದ ಉಂಟಾಗುವ ದುಃಖ. ಈ ದುಃಖವು ಜನರನ್ನು ನಿರಂತರವಾಗಿ ಸುತ್ತುವರಿದಿದೆ.
ನ ದುಃಖಂ ಪರದುಃಖೇ ವೈ ಕೇಚಿದಾಹುರಬುದ್ಧಯಃ |
ಯೋ ದುಃಖಂ ನಾಭಿಜಾನಾತಿ ಸ ಜಲ್ಪತಿ ಮಹಾಜನೇ ॥63॥
ಕೆಲವರು ಬುದ್ಧಿಹೀನರು ಪರರಿಗೆ ಆದ ದುಃಖವು ತಮಗೆ ದುಃಖವುಂಟು ಮಾಡುವುದಿಲ್ಲ ಎಂದು ಹೇಳುತ್ತಾರೆ. ದುಃಖದ ಅನುಭವವಿಲ್ಲದವನು ಮಾತ್ರ ಜನಗಳೆದುರು ನಾಚಿಕೆಯಿಲ್ಲದ ಹೀಗೆ ಹರಟುತ್ತಾನೆ.
ಯಸ್ತು ಶೋಚತಿ ದುಃಖಾರ್ತಃ ಸ ಕಥಂ ವಕ್ತುಮುತ್ಸಹೇತ್ |
ರಸಜ್ಞಃ ಸರ್ವದುಃಖಸ್ಯ ಯಥಾತ್ಮನಿ ತಥಾ ಪರೇ ॥64॥
ಯಾರು ದುಃಖದಿಂದ ಆರ್ತನಾಗಿ ಶೋಕಪಟ್ಟಿದ್ದಾನೋ, `ತನ್ನ ದುಃಖದಂತೆಯೇ ಪರರ ದುಃಖ' ಎಂದು ದುಃಖದ ಸ್ವರೂಪವನ್ನು ತಿಳಿದಿದ್ದಾನೋ ಅವನು ಹೇಗೆ ತಾನೆ ಹೀಗೆ ಹೇಳುವ ಉತ್ಸಾಹವನ್ನು ಹೊಂದಿಯಾನು?

ಯತ್ಕೃತಂ ತೇ ಮಯಾ ರಾಜಂಸ್ತ್ವಯಾ ಚ ಮಮ ಯತ್ಕೃತಮ್ |
ನ ತದ್ವರ್ಷಶತೈಃ ಶಕ್ಯಂ ವ್ಯಪೋಹಿತುಮರಿಂದಮ ॥65॥
ರಾಜನೇ! ನಾನು ನಿನಗೆ ಏನು ಮಾಡಿದೆನೋ, ನೀನು ನನಗೆ ಏನು ಮಾಡಿದೆಯೋ ಅದನ್ನು, ಶತ್ರುದಮನಕಾರಿಯೇ!' ನೂರಾರು ವರ್ಷಗಳಾದರೂ ಅಳಿಸಲು ಆಗುವುದಿಲ್ಲ.
ಆವಯೋಃ ಕೃತಮನ್ಯೋನ್ಯಂ ತತ್ರ ಸಂಧಿರ್ನ ವಿದ್ಯತೇ |
ಸ್ಮೃತ್ವಾ ಸ್ಮೃತ್ವಾ ಹಿ ತೇ ಪುತ್ರಂ ನವಂ ವೈರಂ ಭವಿಷ್ಯತಿ ॥66॥
ನಾವಿಬ್ಬರೂ ಪರಸ್ಪರ ಅಪಕಾರವನ್ನು ಮಾಡಿದ್ದೇವೆ. ಆದ್ದರಿಂದ ನಮ್ಮಿಬ್ಬರ ಮನಸ್ಸು ಇನ್ನು ಎಂದೂ ಕೂಡುವುದಿಲ್ಲ. ನಿನ್ನ ಮಗನನ್ನು ಚಿಂತಿಸಿ, ಚಿಂತಿಸಿ ವೈರವು ಹೊಸದಾಗಿ ಹುಟ್ಟುತ್ತಿರುತ್ತದೆ.
ವೈರಮಂತಿಕಮಾಸಜ್ಯ ಯಃ ಪ್ರೀತಿಂ ಕರ್ತುಮಿಚ್ಛತಿ |
ಮೃನ್ಮಯಸ್ಯೇವ ಭಗ್ನಸ್ಯ ತಸ್ಯ ಸಂಧಿರ್ನ ವಿದ್ಯತೇ ॥67॥
ಯಾರು ಹತ್ತಿರದಲ್ಲಿ (ಹೃದಯದಲ್ಲಿ) ವೈರವನ್ನು ಅಂಟಿಸಿಕೊಂಡು ಪ್ರೀತಿಯನ್ನು ಮಾಡಲು ಬಯಸುವನೋ ಅವನಲ್ಲಿ ಪ್ರೀತಿಯು ಕೂಡುವುದಿಲ್ಲ. ಒಡೆದು ಹೋದ ಮಣ್ಣಿನ ಪಾತ್ರೆಯಂತೆ.
ನಿಶ್ಚಿತಶ್ಚಾರ್ಥಶಾಸ್ತ್ರಜ್ಞೈರವಿಶ್ವಾಸಃ ಸುಖೋದಯಃ |
ಉಶನಾಶ್ಚಾಥ ಗಾಥೇ ದ್ವೇ ಪ್ರಹ್ಲಾದಾಯಾಬ್ರವೀತ್ ಪುರಾ ॥68॥
ಅವಿಶ್ವಾಸವು ಸುಲಭವಾಗಿ= ಸಾಮಾನ್ಯ ಕಾರಣಗಳಿಂದ ಹುಟ್ಟುತ್ತದೆ ಎಂದು ಅರ್ಥಶಾಸ್ತ್ರವನ್ನು (ಲೋಕದ ಬದುಕಿನ ರೀತಿಗಳನ್ನು ತಿಳಿಸುವ ಶಾಸ್ತ್ರ) ಬಲ್ಲವರು ನಿಶ್ಚಯಿಸಿದ್ದಾರೆ. ಈ ವಿಷಯದಲ್ಲಿ ಶುಕ್ರಾಚಾರ್ಯರು ಪ್ರಹ್ಲಾದನಿಗೆ ಹೇಳಿದ ಎರಡು ಶ್ಲೋಕಗಳು ಹೀಗಿವೆ.
ಭಿನ್ನಕ್ರಮಾ ನ ಸಜ್ಜಂತೇ ಶಸ್ತ್ರೈಃ ಸುನಿಶಿತೈರಪಿ |
ಸಾಮ್ನಾ ತೇಽಪಿ ನಿಗೃಹ್ಯಂತೇ ಗಜಾ ಇವ ಕರೇಣುಭಿಃ ॥69॥
ಶಿಸ್ತು-ಸುವ್ಯವಸ್ಥೆಗಳಿಗಾಗಿ ಇರುವ ನಿಯಮಗಳನ್ನು ಮುರಿದವರು ಬಹಳ ಹರಿತವಾದ ಶಸ್ತ್ರಗಳಿಂದ (= ತೀವ್ರ ದಂಡನೆಗಳಿಂದಲೂ) ಶಿಸ್ತಿಗೆ ಬದ್ಧರಾಗುವುದಿಲ್ಲ. ಇಂತಹವರನ್ನೂ ಸಾಮೋಪಾಯದಿಂದ ಪಳಗಿಸಬಹುದು. ಅಪಾಯಕಾರಿ ಆನೆಗಳನ್ನು ಹೆಣ್ಣಾನೆಗಳಿಂದ ಪಳಗಿಸುವಂತೆ.
ಯೇ ವೈರಿಣಃ ಶ್ರದ್ದಧತೇ ಸತ್ಯೇ ಸತ್ಯೇತರೇಽಪಿ ವಾ |
ತೇ ಶ್ರದ್ದಧಾನಾ ವಧ್ಯಂತೇ ಮಧು ಶುಷ್ಕತೃಣೈರ್ಯಥಾ ॥70॥
ಯಾರು ವೈರಿಯ ಸತ್ಯವಾದ ಮಾತಿನಲ್ಲಿ ಅಥವಾ ಸತ್ಯವಲ್ಲದ ಮಾತಿನಲ್ಲಿ ನಂಬಿಕೆಯನ್ನು ಇಡುತ್ತಾರೋ ಅವರು ವಧಿಸಲ್ಪಡುತ್ತಾರೆ/ ಬಂಧಿಸಲ್ಪಡುತ್ತಾರೆ. `ಮುಂದೆ ಮಧು ಇದೆ' ಎಂಬ ವಂಚಕನ ಮಾತನ್ನು ನಂಬಿದವನು ಹುಲ್ಲಿನಿಂದ ಮರೆಯಾಗಿಸಲ್ಪಟ್ಟ ಬಾವಿಯಲ್ಲಿ ಬೀಳುವಂತೆ.
ನ ಹಿ ವೈರಾಣಿ ಶಾಮ್ಯಂತಿ ಕುಲೇಷ್ವಾ ದಶಮಾದ್ಯುಗಾತ್ |
ಆಖ್ಯಾತಾರಶ್ಚ ವಿದ್ಯಂತೇ ಕುಲೇ ಚೇದ್ವಿದ್ಯತೇ ಪುಮಾನ್ ॥71॥
ಕುಲಗಳಲ್ಲಿ ಹುಟ್ಟಿದ ವೈರವು ಹತ್ತೂ ತಲೆಮಾರಿನವರೆಗೂ ಶಮನವಾಗುವುದಿಲ್ಲ. ಕುಲದಲ್ಲಿ ಪುರುಷನಿದ್ದರೆ ಅವನಿಗೆ ಆಗಿ ಹೋದ ಘಟನೆಯನ್ನು ಹೇಳುವವರು ಇರುತ್ತಾರೆ.
ಉಪಗುಹ್ಯ ಹಿ ವೈರಾಣಿ ಸಾಂತ್ವಯಂತಿ ನರಾಧಿಪಾಃ |
ಅಥೈನಂ ಪ್ರತಿಪಿಂಷಂತಿ ಪೂರ್ಣಂ ಘಟಮಿವಾಶ್ಮನಿ ॥72॥
ರಾಜರುಗಳು ವೈರವನ್ನು ಅಡಗಿಸಿಕೊಂಡು ಓಲೈಸುತ್ತಾರೆ. ಅನಂತರ ತುಂಬಿದ ಮಡಕೆಯನ್ನು ನೆಲಕ್ಕ ಅಪ್ಪಳಿಸುವಂತೆ ಪುಡಿಗಟ್ಟುತ್ತಾರೆ.
ಸದಾ ನ ವಿಶ್ವಸೇದ್ ರಾಜನ್ ಪಾಪಂ ಕೃತ್ವೇಹ ಕಸ್ಯಚಿತ್ |
ಅಪಕೃತ್ಯ ಪರೇಷಾಂ ಹಿ ವಿಶ್ವಾಸಾದ್ದುಃಖಮಶ್ನುತೇ ॥73॥
ರಾಜನೇ! ಪಾಪಕೃತ್ಯವನ್ನು ಮಾಡಿದ ಮೇಲೆ (ಅನಂತರ) ಪಾಪಕೃತ್ಯಕ್ಕೆ ಗುರಿಯಾದವನ ಮೇಲೆ ವಿಶ್ವಾಸವಿಡಬಾರದು. ಪರರಿಗೆ ಅಪಕಾರ ಮಾಡಿ, ಅವರ ಮೇಲೆ ನಂಬಿಕೆ ಇಟ್ಟರೆ, ಆ ನಂಬಿಕೆಯ ಕಾರಣದಿಂದಲೇ ದುಃಖವನ್ನು ಅನುಭವಿಸಬೇಕಾಗುತ್ತದೆ.
ಬ್ರಹ್ಮದತ್ತಃ
ನಾವಿಶ್ವಾಸಾಚ್ಚಿನ್ವತೇಽರ್ಥಾನ್ನೇಹಂತೇ ಚಾಪಿ ಕಿಂಚನ |
ಪ್ರಯಾತ್ವೇಕತರಂ ಮಿತ್ರೇ ಕೃತಕೃತ್ಯಾ ಭವತ್ವಿಹ ॥74॥
ಅವಿಶ್ವಾಸದಿಂದ ಏನನ್ನೂ ಗಳಿಸಲಾಗುವುದಿಲ್ಲ. ಏನನ್ನೂ ಮಾಡಲಾಗುವುದಿಲ್ಲ. ಮಿತ್ರನಾದ ನನ್ನಲ್ಲೇ ಇದ್ದು ಎರಡರಲ್ಲಿ ಒಂದನ್ನು (ಧನವನ್ನು ಅಥವಾ ಕ್ರಿಯಾಶೀಲತೆಯನ್ನು) ನೀನು ಹೊಂದು. ಹೀಗೆ ನನ್ನ ಮನೆಯಲ್ಲೇ ಇದ್ದು ಕೃತಕೃತ್ಯಳಾಗು.
ಪೂಜನೀ
ಯಸ್ಯೈವ ವ್ರಣಿನೌ ಪಾದೌ ಪದ್ಭ್ಯಾಂ ಚ ಪರಿಸರ್ಪತಿ |
ಕ್ಷಣ್ಯೇತೇ ತಸ್ಯ ತೌ ಪಾದೌ ಸುಗುಪ್ತಮಭಿಧಾವತಃ ॥75॥
ಯಾರ ಪಾದಗಳಿಗೆ ಗಾಯಗಳಾಗಿವೆಯೋ, ಆದರೂ ನಡೆದೇ ಚಲಿಸುತ್ತಾನೋ, ಅವನ ಪಾದಗಳು, ಅವನು ಬಹಳ ಎಚ್ಚರಿಕೆಯಿಂದ ನಡೆದರೂ, ಹಾನಿಗೆ ಒಳಗಾಗುತ್ತವೆ.
ನೇತ್ರಾಭ್ಯಾಂ ಸರುಜಾಭ್ಯಾಂ ಯಃ ಪ್ರತಿವಾತಮುದೀಕ್ಷತೇ |
ತಸ್ಯ ವಾಯುರುಜಾತ್ಯರ್ಥಂ ನೇತ್ರಯೋರ್ಭವತಿ ಧ್ರುವಮ್ ॥76॥

ರೋಗಕ್ಕೆ ಒಳಗಾದ ಕಣ್ಣುಗಳನ್ನು ಯಾರು ಎದುರುಗಾಳಿಗೆ ತೆರೆಯುತ್ತಾನೋ ಅವನ ಕಣ್ಣುಗಳಲ್ಲಿ ರೋಗವು ನಿಶ್ಚಯವಾಗಿ ಹೆಚ್ಚಾಗುತ್ತದೆ.
ದುಷ್ಟಂ ಪಂಥಾನಮಾಶ್ರಿತ್ಯ ಯೋ ಮೋಹಾದಭಿಪದ್ಯತೇ |
ಆತ್ಮನೋ ಬಲಮಜ್ಞಾತ್ವಾ ತದಂತಂ ತಸ್ಯ ಜೀವಿತಮ್ ॥77॥
ಯಾರು ತನ್ನ ಸಾಮರ್ಥ್ಯವನ್ನು ಅರಿಯದೆ ಮೋಹದಿಂದ ತಪ್ಪುದಾರಿಯನ್ನು ಹಿಡಿದು ಸಾಗುತ್ತಾನೋ ಅವನ ಜೀವಿತವು ಅಲ್ಲಿಗೆ ಮುಗಿಯುತ್ತದೆ.
ಯಸ್ತು ವರ್ಷಮವಿಜ್ಞಾಯ ಕ್ಷೇತ್ರಂ ಕೃಷತಿ ಮಾನವಃ |
ಹೀನಃ ಪುರುಷಕಾರೇಣ ಸಸ್ಯಂ ನೈವಾಪ್ನುತೇ ಪುನಃ ॥78॥
ಯಾವ ಹೀನ=ವಿವೇಚನೆಯಿಲ್ಲದ ಮನುಷ್ಯನು ಮಳೆಯ ಅನುಕೂಲವನ್ನು ತಿಳಿದುಕೊಳ್ಳದೆ ಭೂಮಿಯನ್ನು ಉಳುತ್ತಾನೋ ಅವನು ಪುರುಷ ಪ್ರಯತ್ನದ ಬಲದಿಂದ ಸಸ್ಯವನ್ನು ಪಡೆಯುವುದಿಲ್ಲ. (ಅವನ ಪರಿಶ್ರಮವು ವ್ಯರ್ಥ).
ಯಶ್ಚ ತಿಕ್ತಂ ಕಷಾಯಂ ವಾಪ್ಯಾಸ್ವಾದವಿಧುರಂ ಹಿತಮ್ |
ಆಹಾರಂ ಕುರುತೇ ನಿತ್ಯಂ ಸೋಽಮೃತತ್ವಾಯ ಕಲ್ಪತೇ ॥79॥
ಯಾರು ಕಹಿಕಷಾಯವನ್ನು ಸೇವಿಸುತ್ತಾನೋ, ಆಸ್ವಾದವಿಲ್ಲದ, ಆದರೆ ಹಿತವಾದ ಆಹಾರವನ್ನು ನಿತ್ಯವೂ ಸೇವಿಸುತ್ತಾನೋ ಅವನು ಬಾಧೆಗಳಿಲ್ಲದೆ ಆರೋಗ್ಯದಿಂದ ಇರುತ್ತಾನೆ.
ಪಥ್ಯಂ ಮುಕತ್ತ್ವ ನರೋ ಲೋಭಾದ್ ಯೋಽನ್ಯದಶ್ನಾತಿ ಭೋಜನಮ್|
ಪರಿಣಾಮಮವಿಜ್ಞಾಯ ತದಂತಂ ತಸ್ಯ ಜೀವಿತಮ್ ॥80॥
ಯಾವ ನರನು ಪಥ್ಯ ಆಹಾರವನ್ನು ಬಿಟ್ಟು, ಲೋಭದಿಂದ, ಪರಿಣಾಮವನ್ನು ಲೆಕ್ಕಿಸದೆ, ಆಪಥ್ಯ ಆಹಾರವನ್ನು ತಿನ್ನುತ್ತಾನೋ ಅವನ ಬದುಕು ಅಲ್ಲಿಗೆ ಮುಗಿಯುತ್ತದೆ.
ದೈವಂ ಪುರುಷಕಾರಶ್ಚ ಸ್ಥಿತಾವನ್ಯೋನ್ಯಸಂಶ್ರಯಾತ್ |
ಉದಾತ್ತಾ ವೈ ಕರ್ಮ ತತ್ರ ದೈವಂ ಕಿಂ ವಾ ಉಪಾಸತೇ ॥81॥
ಯಾರಲ್ಲಿ ದೈವ ಮತ್ತು ಪುರುಷಪ್ರಯತ್ನಗಳು ಸಮನ್ವಯದಿಂದ ಇರುತ್ತವೋ ಅಂತಹ ವ್ಯಕ್ತಿಯಿಂದ ಉದಾತ್ತಕಾರ್ಯಗಳು ಆಗುತ್ತವೆ (ಅಸಮರ್ಥರು ಕೇವಲ ದೈವವನ್ನು ಅವಲಂಬಿಸುತ್ತಾರೆ). ಪುರುಷ ಪ್ರಯತ್ನವಿಲ್ಲದೆ ಕೇವಲ ದೈವದಿಂದ ಏನನ್ನು ಸಾಧಿಸುತ್ತಾರೆ?
ಕರ್ಮ ಚಾತ್ಮಹಿತಂ ಕಾರ್ಯಂ ತೀಕ್ಷ್ಣಂ ವಾ ಯದಿ ವಾ ಮೃದು |
ಗ್ರಸ್ಯತೇಽಕರ್ಮಶೀಲಸ್ತು ಸದಾನರ್ಥೈರಕಿಂಚನಃ ॥82॥
ತೀಕ್ಷ್ಣವೋ, ಮೃದುವೋ, ತನಗೆ ಹಿತವಾದ ಕರ್ಮವನ್ನೇ ಮಾಡಬೇಕು. ಕ್ರಿಯಾಶೀಲನಲ್ಲದ ದರಿದ್ರನನ್ನು ಅನರ್ಥಗಳು ನುಂಗುತ್ತವೆ.
ತಸ್ಮಾತ್ ಸಂಶಯಿತೇಽಪ್ಯರ್ಥೇ ಕಾರ್ಯ ಏವ ಪರಾಕ್ರಮಃ |
ಸರ್ವಸ್ವಮಪಿ ಸಂತ್ಯಜ್ಯ ಕಾರ್ಯಮಾತ್ಮಹಿತಂ ನರೈಃ ॥83॥
ಆದ್ದರಿಂದ ಪ್ರಯೋಜನವು ಲಭಿಸುವ ಸಂಶಯವಿದ್ದರೂ ಪರಾಕ್ರಮವನ್ನೇ ಆಚರಿಸಬೇಕು. ನರರು ಎಲ್ಲವನ್ನೂ ತ್ಯಜಿಸಿ ಆತ್ಮಹಿತವನ್ನೇ ಸಾಧಿಸಬೇಕು.
ವಿದ್ಯಾ ಶೌರ್ಯಂ ಚ ದಾಕ್ಷ್ಯಂ ಚ ಬಲಂ ಧೈರ್ಯಂ ಚ ಪಂಚಮಮ್|
ಮಿತ್ರಾಣಿ ಸಹಜಾನ್ಯಾಹುರ್ವರ್ತಯಂತೀಹ ಯೈರ್ಬುಧಾಃ ॥84॥
ವಿದ್ಯೆ, ಶೌರ್ಯ, ಸಾಮರ್ಥ್ಯ, ಬಲ ಮತ್ತು ಐದನೆಯ ಧೈರ್ಯ- ಇವು ಸಹಜ ಮಿತ್ರರು ಎಂದು ಪ್ರಾಜ್ಞರು ಹೇಳುತ್ತಾರೆ. ವಿವೇಕಿಗಳು ಇವುಗಳನ್ನು ಅವಲಂಬಿಸಿ ನಡೆಯುತ್ತಾರೆ.
ನಿವೇಶನಂ ಚ ಕುಪ್ಯಂ ಚ ಕ್ಷೇತ್ರಂ ಭಾರ್ಯಾ ಸುಹೃಜ್ಜನಃ |
ಏತಾನ್ಯುಪಚಿತಾನ್ಯಾಹುಃ ಸರ್ವತ್ರ ಲಭತೇ ಪುಮಾನ್ ॥85॥
ನಿವೇಶನ (ಗೃಹ ನಿರ್ಮಾಣಭೂಮಿ), ಕುಪ್ಯ (ಗೋವುಗಳು, ಧಾನ್ಯ ಮೊದಲಾದವುಗಳು) ಕೃಷಿಭೂಮಿ, ಹೆಂಡತಿ, ಮಿತ್ರರು- ಇವು ಸಂಗ್ರಹಗಳು. ಇವುಗಳನ್ನು ಎಲ್ಲ ಕಡೆಯೂ ಪಡೆಯಬಹುದು.
ಸರ್ವತ್ರ ರಮತೇ ಪ್ರಾಜ್ಞಃ ಸರ್ವತ್ರ ಚ ವಿರೋಚತೇ |
ನ ವಿಭೀಷಯತೇ ಕಂಚಿದ್ ಭೀಷಿತೋ ನ ಬಿಭೇತಿ ಚ ॥86॥
ಪ್ರಾಜ್ಞನು ಎಲ್ಲ ಸಂನಿವೇಶಗಳನ್ನು ಆಸ್ವಾದಿಸುತ್ತಾನೆ. ಎಲ್ಲ ಸಂನಿವೇಶಗಳಲ್ಲೂ ಬೆಳಗುತ್ತಾನೆ. ಯಾರನ್ನೂ ಹೆದರಿಸುವುದಿಲ್ಲ. ಬೇರೆಯವರು ತನ್ನನ್ನು ಹೆದರಿಸಿದರೆ ಹೆದರುವುದಿಲ್ಲ.
ನಿತ್ಯಂ ಬುದ್ಧಿಮತೋ ಹ್ಯರ್ಥಃ ಸ್ವಲ್ಪಕೋಽಪಿ ವಿವರ್ಧತೇ |
ದಾಕ್ಷ್ಯೇ ಣಯೇಣ ಕುರುತೇ ಕರ್ಮ ಸಂಯಮಾತ್ ಪ್ರತಿತಿಷ್ಠತಿ ॥87॥
ಬುದ್ಧಿವಂತನ ಸ್ವಲ್ಪವೇ ಹಣವೂ ನಿರಂತರವಾಗಿ ಬೆಳೆಯುತ್ತದೆ. ಬುದ್ಧಿವಂತನು ಸಾಮರ್ಥ್ಯದಿಂದ ಕೆಲಸ ಮಾಡುತ್ತಾನೆ. ಸಂಯಮದಿಂದ ಸ್ಥಿರವಾಗಿ ನಿಲ್ಲುತ್ತಾನೆ.
ಗೃಹಸ್ನೇಹಾವಬದ್ಧಾನಾಂ ನರಾಣಾಮಲ್ಪಮೇಧಸಾಮ್ |
ಕುಸ್ತ್ರೀ ಖಾದತಿ ಮಾಂಸಾನಿ ಮಾಘಮಾ ಸೇಗವಾಮಿವ ॥88॥
ಹೆಂಡತಿಯ ಆಕರ್ಷಣೆಗೆ ಒಳಗಾದ ಮಂದಮತಿಗಳ ಮಾಂಸವನ್ನೇ ಕೆಟ್ಟ ಮಹಿಳೆಯು ತಿಂದುಬಿಡುತ್ತಾಳೆ. ಚೇಳಿನ ಮರಿಗಳು ತಾಯಿ ಚೇಳನ್ನು ನಾಶಮಾಡುವಂತೆ.
ಗೃಹಂ ಕ್ಷೇತ್ರಾಣಿ ಮಿತ್ರಾಣಿ ಸ್ವದೇಶ ಇತಿ ಚಾಪರೇ |

ಇತ್ಯೇವಮವಸೀದಂತಿ ನರಾ ಬುದ್ಧಿವಿಪರ್ಯಯೇ ॥89॥
ನರರು ತಮ್ಮ ಬುದ್ಧಿಯು ವಿರುದ್ಧವಾಗಿ ಅಥವಾ ವಿನಾಶಕಾರಿಯಾಗಿ ಕೆಲಸ ಮಾಡಿದಾಗ ಮನೆ, ಹೊಲ, ಮಿತ್ರರು ಎಂದು, ಮತ್ತೆ ಕೆಲವರು ಸ್ವದೇಶ ಎಂದು ವಿನಾಶಕ್ಕೊಳಗಾಗುತ್ತಾರೆ.
ಉತ್ಪತೇತ್ ಸರುಜಾದ್ ದೇಶಾದ್ ವ್ಯಾಧಿದುರ್ಭಿಕ್ಷಪೀಡಿತಾತ್ |
ಅನ್ಯತ್ರ ವಸ್ತುಂ ಗಚ್ಛೇದ್ವಾ ವಸೇದ್ವಾ ನಿತ್ಯಮಾನಿತಃ ॥90॥
ವ್ಯಾಧಿ, ದುರ್ಭಿಕ್ಷಗಳಿಂದ ಪೀಡಿತವಾದ ದೇಶವನ್ನು ಬಿಟ್ಟು ಹೋಗಬೇಕು. ಬೇರೆ ಕಡೆ ವಾಸಿಸಲು ಹೋಗಬೇಕು. ಅಥವಾ ನಿರಂತರವಾಗಿ ಗೌರವಾರ್ಹನಾಗಿಯೇ ಇರಬೇಕು.
ತಸ್ಮಾದನ್ಯತ್ರ ಯಾಸ್ಯಾಮಿ ವಸ್ತುಂ ನಾಹಮಿಹೋತ್ಸಹೇ |
ಕೃತಮೇತದನಾಹಾರ್ಯಂ ತವ ಪುತ್ರೇಣ ಪಾರ್ಥಿವ ॥91॥
ರಾಜನೇ! ಆದ್ದರಿಂದ ಬೇರೆ ಕಡೆ ಹೋಗುತ್ತೇನೆ. ಇಲ್ಲಿ ವಾಸಿಸಲು ಉತ್ಸಾಹವಿಲ್ಲ. ನಿನ್ನ ಮಗನು ಪರಿಹಾರವಿಲ್ಲದ ಕೆಲಸವನ್ನು ಮಾಡಿದ್ದಾನೆ.
ಕುಭಾರ್ಯಾಂ ಚ ಕುಪುತ್ರಂ ಚ ಕುರಾಜಾನಂ ಕುಸೌಹೃದಮ್ |
ಕುಸಂಬಂಧಂ ಕುದೇಶಂ ಚ ದೂರತಃ ಪರಿವರ್ಜಯೇತ್ ॥92॥
ಕೆಟ್ಟ ಹೆಂಡತಿಯನ್ನು, ಕೆಟ್ಟ ಮಗನನ್ನು, ಕೆಟ್ಟ ರಾಜನನ್ನು, ಕೆಟ್ಟ ಸ್ನೇಹಿತನನ್ನು, ಕೆಟ್ಟ ಸಂಬಂಧವನ್ನು, ಕೆಟ್ಟ ದೇಶವನ್ನು ದೂರದಿಂದಲೇ ಪರಿತ್ಯಜಿಸಬೇಕು.
ಕುಮಿತ್ರೇ ನಾಸ್ತಿ ವಿಶ್ವಾಸಃ ಕುಭಾರ್ಯಾಯಾಂ ಕುತೋ ರತಿಃ |
ಕುರಾಜ್ಯೇ ನಿರ್ವೃತಿರ್ನಾಸ್ತಿ ಕುದೇಶೇ ನ ಪ್ರಜೀವ್ಯತೇ ॥93॥
ಕೆಟ್ಟ ಮಿತ್ರನಲ್ಲಿ ವಿಶ್ವಾಸವಿರುವುದಿಲ್ಲ. ಕೆಟ್ಟ ಹೆಂಡತಿಯಲ್ಲಿ ರತಿ ಎಲ್ಲಿಂದ? ಕೆಟ್ಟ ಆಡಳಿತ ವ್ಯವಸ್ಥೆಯಲ್ಲಿ ಸಂತೋಷವಿರುವುದಿಲ್ಲ. ಕೆಟ್ಟ ಸ್ಥಳದಲ್ಲಿ ಜೀವನೋಪಾಯವು ಸಿಗುವುದಿಲ್ಲ.
ಕುಮಿತ್ರೇ ಸಂಗತಂ ನಾಸ್ತಿ ನಿತ್ಯಮಸ್ಥಿರಸೌಹೃದೇ |
ಅವಮಾನಃ ಕುಸಂಬಂಧೇ ಭವತ್ಯರ್ಥವಿಪರ್ಯಯೇ ॥94॥
ಯಾವಾಗಲೂ ಚಂಚಲ ಸೌಹಾರ್ದವನ್ನೇ ತೋರಿಸುವ ಕೆಟ್ಟ ಮಿತ್ರನ ಜೊತೆ ಹೊಂದಾಣಿಕೆಯಾಗುವುದಿಲ್ಲ. ಧನಹೀನ ಸ್ಥಿತಿಯು ಒದಗಿದಾಗ ಕೆಟ್ಟ ಬಂಧುಗಳ ನಡುವೆ ಅವಮಾನವಾಗುತ್ತದೆ.
ಸಾ ಭಾರ್ಯಾ ಯಾ ಪ್ರಿಯಂ ಬ್ರೂತೇ ಸ ಪುತ್ರೋ ಯತ್ರ ನಿರ್ವೃತಿಃ |
ತನ್ಮಿತ್ರಂ ಯತ್ರ ವಿಶ್ವಾಸಃ ಸ ದೇಶೋ ಯತ್ರ ಜೀವ್ಯತೇ ॥95॥
ಪ್ರಿಯವಚನಗಳನ್ನು ಹೇಳುವವಳು ಹೆಂಡತಿ. ಸಂತೋಷವುಂಟು ಮಾಡುವವನು ಪುತ್ರ. ಯಾರಲ್ಲಿ ವಿಶ್ವಾಸವಿರುವುದೋ ಅವನು ಮಿತ್ರ. ಎಲ್ಲಿ ಬದುಕಬಹುದೋ ಅದು ದೇಶ.
ಯತ್ರ ನಾಸ್ತಿ ಬಲಾತ್ಕಾರಃ ಸ ರಾಜಾ ತೀವ್ರಶಾಸನಃ |
ಯತ್ರೈವ ಹ್ಯಭಿಸಂಬಂಧೋ ದರಿದ್ರಂ ಯೋ ಬುಭೂಷತಿ ॥96॥
ಯಾವ ರಾಜನ ಆಳ್ವಿಕೆಯಲ್ಲಿ ಪ್ರಜೆಗಳ ಮೇಲೆ ಬಲಾತ್ಕಾರವಿಲ್ಲವೋ ಆ ರಾಜನು ಸರಿಯಾಗಿ ಆಳುವ ರಾಜ. ಯಾವ ರಾಜನಿಗೂ-ಪ್ರಜೆಗಳಿಗೂ ಸಾಮರಸ್ಯದ ಸಂಬಂಧವಿದೆಯೋ ಅವನು ಸರಿಯಾದ ರಾಜ. ಯಾವ ರಾಜನು ಬಡವನೂ ಹಿತವಾಗಿ ಬದುಕಬೇಕೆಂದು ಬಯಸುವನೋ ಅವನು ಸರಿಯಾದ ರಾಜ.
ಭಾರ್ಯಾ ದೇಶೋಽಥ ಮಿತ್ರಾಣಿ ಪುತ್ರಸಂಬಂಧಿಬಾಂಧವಾಃ |
ಏತತ್ ಸರ್ವಂ ಗುಣವತಿ ಧರ್ಮನೇತ್ರೇ ಮಹೀಪತೌ ॥97॥
ರಾಜನು ಗುಣಸಂಪನ್ನನೂ ಧರ್ಮದೃಷ್ಟಿಯವನೂ ಆಗಿದ್ದರೆ ಹೆಂಡತಿ, ದೇಶ, ಮಿತ್ರರು, ಪುತ್ರರು, ಸಂಬಂಧಿಗಳು ಹಿತಕರರಾಗಿರುತ್ತಾರೆ.

ಅಧರ್ಮಜ್ಞಸ್ಯ ವಿಲಯಂ ಪ್ರಜಾ ಗಚ್ಛಂತ್ಯನಿಗ್ರಹಾತ್ |
ರಾಜಾ ಮೂಲಂ ತ್ರಿವರ್ಗಸ್ಯ ಅಪ್ರಮತ್ತೋಽನುಪಾಲಯನ್ ॥98॥
ಧರ್ಮದ ಪರಿಜ್ಞಾನವಿಲ್ಲದ ರಾಜನ ಪ್ರಜೆಗಳು, ಅಧರ್ಮದ ನಿಗ್ರಹವಾಗುವುದಿಲ್ಲವಾದ್ದರಿಂದ, ನಾಶವಾಗುತ್ತಾರೆ. ಸದಾ ಎಚ್ಚರದಿಂದ ಇರುತ್ತಾ ಅನುಶಾಸನವನ್ನು ಮಾಡುವ ರಾಜ ತ್ರಿವರ್ಗದ=ಧರ್ಮ-ಅರ್ಥ-ಕಾಮಗಳ ಮೂಲ.
ಬಲಿಷಡ್ಭಾಗಮುದ್ಧೃತ್ಯ ಬಲಿಂ ತಮುಪಯೋಜಯೇತ್ |
ನ ರಕ್ಷತಿ ಪ್ರಜಾಃ ಸಮ್ಯಗ್ಯಃ ಸ ಪಾರ್ಥಿವತಸ್ಕರಃ ॥99॥
(1) ಪ್ರಜೆಗಳ ಆದಾಯದ ಆರನೇ ಒಂದು ಭಾಗವನ್ನು ತೆರಿಗೆಯಾಗಿ ಪಡೆದು ಆ ತೆರಿಗೆಯನ್ನು ಪ್ರಜಾಹಿತಕ್ಕಾಗಿ ಬಳಸಬೇಕು. (2) ಪ್ರಜೆಗಳು ಕೊಡುವ ತೆರಿಗೆಯ ಆರನೆಯ ಒಂದು ಭಾಗವನ್ನು ರಾಜನು ತನಗಾಗಿ ಉಪಯೋಗಿಸಿಕೊಳ್ಳಬಹುದು. ಯಾರು ಪ್ರಜೆಗಳನ್ನು ಸರಿಯಾಗಿ ರಕ್ಷಿಸುವುದಿಲ್ಲವೋ ಅವನು ಕಳ್ಳರಾಜ.
ದತ್ತ್ವಾಭಯಂ ಯಃ ಸ್ವಯಮೇವ ರಾಜಾ ನ ತತ್ ಪ್ರಮಾಣಂ ಕುರುತೇ ಯಥಾವತ್ |
ಸ ಸರ್ವಲೋಕಾದುಪಲಭ್ಯ ಪಾಪಮಧರ್ಮಬುದ್ಧಿರ್ನಿರಯಂ ಪ್ರಯಾತಿ ॥
ಯಾವ ರಾಜನು ಪ್ರಜೆಗಳಿಗೆ ಅಭಯವನ್ನು ಕೊಟ್ಟು, ಆ ವಚನವನ್ನು ಸರಿಯಾಗಿ ಪಾಲಿಸುವುದಿಲ್ಲವೋ ಆ ಅಧರ್ಮಬುದ್ಧಿಯ ರಾಜನು ಎಲ್ಲ ಜನರ ಪಾಪಕ್ಕೆ ಹೊಣೆಯಾಗುತ್ತಾನೆ. ಅವುಗಳ ಫಲವನ್ನು ಅನುಭವಿಸುವುದಕ್ಕಾಗಿ ನರಕಕ್ಕೆ ಹೋಗುತ್ತಾನೆ.
ದತ್ತ್ವಾಭಯಂ ಯಃ ಸ್ಮ ರಾಜಾ ಪ್ರಮಾಣಂ ಕುರುತೇ ಸದಾ |

ಸ ಸರ್ವಸುಖಕೃಜ್ಜ್ಞೇಯಃ ಪ್ರಜಾ ಧರ್ಮೇಣ ಪಾಲಯನ್ ॥101॥
ಯಾವ ರಾಜನು ಅಭಯವನ್ನು ಕೊಟ್ಟು, ಅದರಂತೆ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಾನೋ ಅವನು ಎಲ್ಲ ಸುಖಗಳಿಗೆ ಪಾತ್ರ.
ಪಿತಾ ಮಾತಾ ಗುರುರ್ಗೋಪ್ತಾ ವಹ್ನಿರ್ವೈಶ್ರವಣೋ ಯಮಃ |
ಸಪ್ತ ರಾಜ್ಞೋ ಗುಣಾನೇತಾನ್ ಮನುರಾಹ ಪ್ರಜಾಪತಿಃ ॥102॥
ತಂದೆ, ತಾಯಿ, ಗುರು, ಅಗ್ನಿ, ಕುಬೇರ, ಯಮ - ಈ ಏಳು ಚೇತನಗಳ ಗುಣಗಳು ರಾಜನಿಗೆ ಇರಬೇಕು ಎಂದು ಸ್ವಾಯಂಭುವ ಮನುವು ಹೇಳಿದ್ದಾನೆ.
ಪಿತಾ ಹಿ ರಾಜಾ ರಾಷ್ಟ್ರಸ್ಯ ಪ್ರಜಾನಾಂ ಯೋಽನುಕಂಪಕಃ |
ತಸ್ಮಿನ್ ಮಿಥ್ಯಾಪ್ರಣೀತೇ ಹಿ ತಿರ್ಯಗ್ಗಚ್ಛತಿ ಮಾನವಃ ॥103॥
ರಾಜನು ರಾಷ್ಟ್ರದ ತಂದೆ. ಅವನು ಪ್ರಜೆಗಳ ಮೇಲೆ ಅನುಕಂಪವನ್ನು ಹೊಂದಿರಬೇಕು. ಅವನು (ರಾಜನು) ಅಸತ್ಯಮಾರ್ಗದಲ್ಲಿ ನಡೆದರೆ ಅಥವಾ (ಮಂತ್ರಿಗಳಿಂದ ಅಧಿಕಾರಿಗಳಿಂದ) ನಡೆಸಲ್ಪಟ್ಟರೆ ಪ್ರಜೆಗಳು ಅಡ್ಡದಾರಿಯಲ್ಲಿ ಹೋಗುತ್ತಾರೆ.
ಸಂಭಾವಯತಿ ಮಾತೇವ ದೀನಮಭ್ಯವಪದ್ಯತೇ |
ದಹತ್ಯಗ್ನಿರಿವಾನಿಷ್ಟಾನ್ ಯಮಯನ್ ಭವತೇ ಯಮಃ ॥104॥
ತಾಯಿಯಂತೆ ಉಪಚರಿಸಬೇಕು. ದೀನರನ್ನು ರಕ್ಷಿಸಬೇಕು. ಅಗ್ನಿಯಂತೆ ಅನಿಷ್ಟಗಳನ್ನು ಸುಡಬೇಕು. ನಿಯಂತ್ರಿಸುವ ಅವನು ಯಮ.
ಇಷ್ಟೇಷು ವಿಸೃಜತ್ಯರ್ಥಾನ್ ಕುಬೇರ ಇವ ಕಾಮದಃ |
ಗುರುರ್ಧರ್ಮೋಪದೇಶೇನ ಗೋಪ್ತಾ ಚ ಪರಿಪಾಲನಾತ್ ॥105॥
ಬಯಸಿದ್ದನ್ನು ಕೊಡುವ ಕುಬೇರನಂತೆ ರಾಜನು ಇಷ್ಟಜನರಿಗೆ ನಾನಾ ಸಂಪತ್ತನ್ನು ಕೊಡಬೇಕು. ಧರ್ಮವನ್ನು ಉಪದೇಶಿಸಿ ಗುರು ಆಗಬೇಕು. ಪರಿಪಾಲನೆ ಮಾಡಿ ಗೋಪ್ತಾ=ರಕ್ಷಕ ಆಗಬೇಕು.
ಯಸ್ತು ರಂಜಯತೇ ರಾಜಾ ಪೌರಜಾನಪದಾನ್ ಗುಣೈಃ |
ನ ತಸ್ಯ ಭ್ರಶ್ಯತೇ ರಾಜ್ಯಂ ಗುಣಧರ್ಮಾನುಪಾಲನಾತ್ ॥106॥
ಯಾವ ರಾಜನು ತನ್ನ ಗುಣಗಳಿಂದ ಪೌರರನ್ನೂ, ಜಾನಪದರನ್ನೂ ರಂಜಿಸುವನೋ ಅವನ ರಾಜ್ಯವು, ಗುಣ-ಧರ್ಮಗಳ ರಕ್ಷಣೆಯಿಂದಾಗಿ ಭ್ರಷ್ಟವಾಗುವುದಿಲ್ಲ. ಅವನೂ ರಾಜಪದವೀ ಭ್ರಷ್ಟನಾಗುವುದಿಲ್ಲ.
ಸ್ವಯಂ ಸಮುಪಜಾನನ್ಹಿ ಪೌರಜಾನಪದಕ್ರಿಯಾಃ |
ಸ ಸುಖಂ ಮೋದತೇ ಭೂಪ ಇಹ ಲೋಕೇ ಪರತ್ರ ಚ ॥107॥
ರಾಜನೇ! ಪುರವಾಸಿಗಳಿಗೆ, ಜನಪದ ವಾಸಿಗಳಿಗೆ ಆಗಬೇಕಾದ ಕೆಲಸಗಳನ್ನು ತಾನಾಗಿಯೇ ತಿಳಿದುಕೊಳ್ಳುವ ರಾಜನು ಈ ಲೋಕದಲ್ಲಿ, ಮತ್ತು ಪರಲೋಕದಲ್ಲಿ ಹರ್ಷದಿಂದ ಇರುತ್ತಾನೆ.
ನಿತ್ಯೋದ್ವಿಗ್ನಾಃ ಪ್ರಜಾ ಯಸ್ಯ ಕರಭಾರಪ್ರಪೀಡಿತಾಃ |
ಅನರ್ಥೈರ್ವಿಪ್ರಲುಪ್ಯಂತೇ ಸ ಗಚ್ಛತಿ ಪರಾಭವಮ್ ॥108॥
ಯಾವ ರಾಜನ ಪ್ರಜೆಗಳು ಯಾವಾಗಲೂ ಆತಂಕಕ್ಕೆ ಒಳಗಾಗಿರುತ್ತಾರೋ, ತೆರಿಗೆಯ ಭಾರದಿಂದ ನರಳುತ್ತಾರೋ, ಅನರ್ಥಗಳಿಗೆ ಸಿಕ್ಕಿ ನಷ್ಟರಾಗುತ್ತಾರೋ, ಆ ರಾಜನು ಪರಾಭವವನ್ನು ಹೊಂದುತ್ತಾನೆ.
ಪ್ರಜಾ ಯಸ್ಯ ವಿವರ್ಧಂತೇ ಸರಸೀವ ಮಹೋತ್ಪಲಮ್ |
ಸ ಸರ್ವಯಜ್ಞಫಲಭಾಗ್ ರಾಜಾ ಲೋಕೇ ಮಹೀಯತೇ ॥109॥
ಯಾರ ಪ್ರಜೆಗಳು, ಸರೋವರದಲ್ಲಿ ಕಮಲವು ಅರಳುವಂತೆ, ವೃದ್ಧಿಯನ್ನು ಹೊಂದುತ್ತಾರೋ, ಆ ರಾಜನು ಸಕಲ ಯಜ್ಞಗಳ ಫಲವನ್ನು ಹೊಂದುತ್ತಾನೆ. ಲೋಕದಲ್ಲಿ ಗೌರವಿಸಲ್ಪಡುತ್ತಾನೆ.
ಬಲಿನಾ ವಿಗ್ರಹೋ ರಾಜನ್ನ ಕಥಂಚಿತ್ ಪ್ರಶಸ್ಯತೇ |
ಬಲಿನಾ ವಿಗೃಹೀತಸ್ಯ ಕುತೋ ರಾಜ್ಯಂ ಕುತಃ ಸುಖಮ್ ॥110॥
ರಾಜನೇ! ಬಲಶಾಲಿಗಳ ಜೊತೆ ಕಲಹವು ಸರ್ವಥಾ ಒಳ್ಳೆಯದಲ್ಲ. ಇದನ್ನು ಪ್ರಾಜ್ಞರು ಒಪ್ಪುವುದಿಲ್ಲ. ಬಲಶಾಲಿಯ ಜೊತೆ ವಿರೋಧವನ್ನು ಕಟ್ಟಿಕೊಂಡವನಿಗೆ ರಾಜ್ಯವೂ ಇಲ್ಲ, ಸುಖವೂ ಇಲ್ಲ.
ಭೀಷ್ಮಃ
ಸೈವಮುಕ್ತ್ವಾ ಶಕುನಿಕಾ ಬ್ರಹ್ಮದತ್ತಂ ನರಾಧಿಪಮ್ |
ರಾಜಾನಂ ಸಮನುಜ್ಞಾಪ್ಯ ಜಗಾಮಾಥೇಪ್ಸಿತಾಂ ದಿಶಮ್ ॥111॥
ಆ ಹೆಣ್ಣು ಹಕ್ಕಿಯು ರಾಜಾ ಬ್ರಹ್ಮದತ್ತನಿಗೆ ಹೀಗೆ ಹೇಳಿ, ಅವನ ಅನುಮತಿಯನ್ನು ಕೇಳಿ ತನಗೆ ಇಷ್ಟವಾದ ದಿಕ್ಕಿಗೆ ಹೊರಟು ಹೋಯಿತು.
ಏತತ್ತೇ ಬ್ರಹ್ಮದತ್ತಸ್ಯ ಪೂಜನ್ಯಾ ಸಹ ಭಾಷಿತಮ್ |
ಮಯೋಕ್ತಂ ಭರತಶ್ರೇಷ್ಠ ಕಿಮನ್ಯಚ್ಛ್ರೋತುಮಿಚ್ಛಸಿ ॥112॥
ಭರತಶ್ರೇಷ್ಠ! ನಿನಗೆ ಈ ಬ್ರಹ್ಮದತ್ತ-ಪೂಜನಿಯರ ಸಂಭಾಷಣೆಯನ್ನು ಹೇಳಿದ್ದೇನೆ. ಇನ್ನೇನನ್ನು ಕೇಳಲು ಬಯಸುವಿ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿಯಿತು.
* * * *
ಹತ್ತನೆಯ ಅಧ್ಯಾಯ

ಆಪತ್ಕಾಲದಲ್ಲಿ ರಾಜನು ನಿರ್ದಯನಾಗಿ ವರ್ತಿಸಬೇಕು. ಇದನ್ನು ಸಮರ್ಥಿಸುವ-ವಿವರಿಸುವ ಶತ್ರುಂತಪ-ಭರದ್ವಾಜ ಸಂವಾದ. ಈ ನೀತಿಯಲ್ಲಿರುವ ದೋಷ ಕಥನ. ಅನಿವಾರ್ಯವಾದಾಗ ಇದನ್ನು ಪ್ರಯೋಗಿಸಬೇಕು.
ಯುಧಿಷ್ಠಿರಃ
ಯುಗಕ್ಷಯಾತ್ ಪರಿಕ್ಷೀಣೇ ಧರ್ಮೇ ಲೋಕೇ ಚ ಭಾರತ |
ದಸ್ಯುಭಿಃ ಪೀಡ್ಯಮಾನೇ ಚ ಕಥಂ ಸ್ಥೇಯಂ ಪಿತಾಮಹ ॥1॥
ಭರತಕುಲಸಂಜಾತ! ಪಿತಾಮಹ! ಯುಗಕ್ಕೆ ಅನುಗುಣವಾದ ಅವನತಿಯಿಂದ ಧರ್ಮವು= ಜೀವನ ಮೌಲ್ಯವು ನಶಿಸಿದಾಗ, ಜನಗಳು ದಸ್ಯುಗಳಿಂದ (ಕೊಳ್ಳೆ ಹೊಡೆಯುವವರಿಂದ) ಪೀಡಿಸಲ್ಪಡುತ್ತಿರುವಾಗ ಹೇಗೆ ನಡೆದುಕೊಳ್ಳಬೇಕು?
ಭೀಷ್ಮಃ
ಹಂತ ತೇ ಕಥಯಿಷ್ಯಾಮಿ ನೀತಿಮಾಪತ್ಸು ಭಾರತ |
ಉತ್ಸೃಜ್ಯಾಪಿ ಘೃಣಾಂ ಕಾಲೇ ಯಥಾ ವರ್ತೇತ ಭೂಮಿಪಃ ॥2॥
ಭರತಕುಲಸಂಜಾತ! ಸಂತೋಷ. ಆಪತ್ಕಾಲದಲ್ಲಿ ಅನುಸರಿಸಬೇಕಾದ ನೀತಿಯನ್ನು ನಿನಗೆ ಹೇಳುತ್ತೇನೆ. ಅಂತಹ ಕಾಲದಲ್ಲಿ ರಾಜನು ದಯೆಯನ್ನು ಪರಿತ್ಯಜಿಸಿ ಹೇಗೆ ಇರಬೇಕೆಂದು ಈ ನೀತಿಯಿಂದ ತಿಳಿಯುತ್ತದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಭರದ್ವಾಜಸ್ಯ ಸಂವಾದಂ ರಾಜ್ಞಃ ಶತ್ರುಂತಪಸ್ಯ ಚ ॥3॥
ಈ ವಿಷಯದಲ್ಲಿ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ. ಈ ಇತಿಹಾಸವು ರಾಜಾ ಶತ್ರುಂತಪ ಮತ್ತು ಭರದ್ವಾಜನ ಸಂವಾದ.
ರಾಜಾ ಶತ್ರುಂತಪೋ ನಾಮ ಸೌವೀರಾಣಾಂ ಮಹಾರಥಃ |
ಕಲಿಂಗಮುಪಸಂಗಮ್ಯ ಪಪ್ರಚ್ಛಾರ್ಥವಿನಿಶ್ಚಯಮ್ ॥4॥
ಶತ್ರುಂತಪನು ಸೌವೀರದೇಶದ ರಾಜ. ಮಹಾರಥ. ಅವನು ಕಲಿಂಗ ದೇಶದಲ್ಲಿದ್ದ ಭರದ್ವಾಜನ ಬಳಿ ಹೋಗಿ, ನಾನಾ ಸೂಕ್ಷ್ಮ ವಿಷಯಗಳ ಬಗ್ಗೆ ಸ್ಪಷ್ಟ ಜ್ಞಾನವಿದ್ದ ಅವನನ್ನು ಕೇಳಿದನು.
ಅಲಬ್ಧಸ್ಯ ಕಥಂ ಲಿಪ್ಸಾ ಲಬ್ಧಂ ಕೇನ ವಿವರ್ಧತೇ |
ವರ್ಧಿತಂ ಪಾಲಯೇತ್ಕೇನ ಪಾಲಿತಂ ಪ್ರಣಯೇತ್ ಕಥಮ್ ॥5॥
ಇಲ್ಲದ ವಸ್ತುವನ್ನು ಪಡೆಯುವುದು ಹೇಗೆ? ಪಡೆದದ್ದನ್ನು ಹೆಚ್ಚಿಸುವ ಉಪಾಯವು ಯಾವುದು? ವೃದ್ಧಿಯಾದದ್ದನ್ನು ರಕ್ಷಿಸುವ ಉಪಾಯವು ಯಾವುದು? ರಕ್ಷಿತ ವಸ್ತುವನ್ನು ಹೇಗೆ ಬಳಸಬೇಕು?
ತಸ್ಮೈ ವಿನಿಶ್ಚಯಾರ್ಥಂ ಸ ಪರಿಪೃಷ್ಟಾರ್ಥನಿಶ್ಚಯಃ |
ಉವಾಚ ಬ್ರಾಹ್ಮಣೋ ವಾಕ್ಯಮಿದಂ ಹೇತುಮದುತ್ತರಮ್ ॥6॥
ರಾಜನು ಕೇಳಿದ ವಿಷಯಗಳ ಬಗ್ಗೆ ಸ್ಪಷ್ಟ ಜ್ಞಾನವಿದ್ದ ಬ್ರಾಹ್ಮಣ ಭರದ್ವಾಜನು ಅವನಿಗೆ ಯುಕ್ತಿಯುಕ್ತವಾದ ಉತ್ತರವನ್ನು ಹೇಳಿದನು.
ನಿತ್ಯಮುದ್ಯತದಂಡಃ ಸ್ಯಾನ್ನಿತ್ಯಂ ವಿವೃತಪೌರುಷಃ |
ಅಚ್ಛಿದ್ರಶ್ಛಿದ್ರದರ್ಶೀ ಚ ಪರೇಷಾಂ ವಿವರಾನುಗಃ ॥7॥
ಯಾವಾಗಲೂ ದಂಡವನ್ನು ಎತ್ತಿಯೇ ಇರಬೇಕು. ಪ್ರಹಾರಕ್ಕೆ ಸಿದ್ಧನಾಗಿರಬೇಕು. ಪೌರುಷದ ಅಭಿವ್ಯಕ್ತಿಯನ್ನು ಮಾಡುತ್ತಲೇ ಇರಬೇಕು. ತನ್ನಲ್ಲಿ ನ್ಯೂನತೆಗಳಿರಬಾರದು. ಎದುರಾಳಿಯ ನ್ಯೂನತೆಯನ್ನು ತಿಳಿಯುತ್ತಲೇ ಇರಬೆಕು. ಆ ನ್ಯೂನತೆಯನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳಬೇಕು.
ನಿತ್ಯಮುದ್ಯತದಂಡಸ್ಯ ಭೃಶಮುದ್ವಿಜತೇ ಜನಃ |
ತಸ್ಮಾತ್ ಸರ್ವಾಣಿ ಭೂತಾನಿ ದಂಡೇನೈವ ಪ್ರರೋಧಯೇತ್ ॥8॥
ಯಾವಾಗಲೂ ಪ್ರಹಾರ ಮಾಡುವ ಮನಃಸ್ಥಿತಿಯಲ್ಲೇ ಇರುವ ರಾಜನ ಬಗ್ಗೆ ಜನರು ಹೆದರುತ್ತಾರೆ. ಆದ್ದರಿಂದ ಎಲ್ಲ ಪ್ರಾಣಿಗಳನ್ನೂ ದಂಡದಿಂದಲೇ ನಿರೋಧಿಸಬೇಕು.
ಏವಮೇವ ಪ್ರಶಂಸಂತಿ ಪಂಡಿತಾಸ್ತತ್ತ್ವದರ್ಶಿನಃ |
ತಸ್ಮಾಚ್ಚತುಷ್ಟಯೇ ತಸ್ಮಿನ್ ಪ್ರಧಾನೋ ದಂಡ ಉಚ್ಯತೇ ॥9॥
ತತ್ವದರ್ಶಿಗಳಾದ ಪಂಡಿತರು ಹೀಗೆಯೇ ಹೇಳುತ್ತಾರೆ. ಆದ್ದರಿಂದ ಸಾಮ-ದಾನ- ಭೇದ-ದಂಡಗಳಲ್ಲಿ ದಂಡವೇ ಪ್ರಧಾನ.
ಛಿನ್ನಮೂಲೇ ಹ್ಯಧಿಷ್ಠಾನೇ ಸರ್ವೇ ತಜ್ಜೀವಿನೋ ಹತಾಃ |
ಕಥಂ ಹಿ ಶಾಖಾಸ್ತಿಷ್ಠೇಯುಶ್ಛಿನ್ನಮೂಲೇ ವನಸ್ಪತೌ ॥10॥
ಆಧಾರವಾಗಿರುವ ಮೂಲವೇ ಕತ್ತರಿಸಿ ಹೋದಾಗ ಅದನ್ನು ಅವಲಂಬಿಸಿ ಬದುಕುವ ಎಲ್ಲರೂ ಹತರಾಗುತ್ತಾರೆ. ಮರದ ಬೇರು ಕತ್ತರಿಸಿ ಹೋದಾಗ ಕೊಂಬೆಗಳು ಹೇಗೆ ತಾನೆ ಇದ್ದಾವು?
ಮೂಲಮೇವಾದಿತಶ್ಛಿಂದ್ಯಾತ್ ಪರಪಕ್ಷಸ್ಯ ಪಂಡಿತಃ |
ತತಃ ಸಹಾಯಾನ್ ಪಕ್ಷಂ ಚ ಸರ್ವಮೇವಾನುಸಾರಯೇತ್ ॥11॥
ಪ್ರಾಜ್ಞನಾದವನು ಶತ್ರುಪಕ್ಷದ ಬೇರನ್ನೇ ಮೊದಲು ಕತ್ತರಿಸಬೇಕು. ಅನಂತರ ಸಹಾಯಕರ ಮೇಲೆ ಮತ್ತು ಆ ಇಡೀ ಪಕ್ಷದ ಮೇಲೆ ಆಕ್ರಮಣ ಮಾಡಿಸಬೇಕು.
ಸುಮಂತ್ರಿತಂ ಸುವಿಕ್ರಾಂತಂ ಸುಯುದ್ಧಂ ಸುಪಲಾಯಿತಮ್ |
ಆಪದಾಂ ಪದಕಾಲೇಷು ಕುರ್ವೀತ ನ ವಿಚಾರಯೇತ್ ॥12॥
ಆಪತ್ತುಗಳು ಹೆಜ್ಜೆಯಿಟ್ಟಾಗ ಸರಿಯಾಗಿ ಸಮಾಲೋಚನೆಯನ್ನು ಮಾಡಬೇಕು. ಪರಾಕ್ರಮಿಸಬೇಕು. ಸರಿಯಾಗಿ ಯುದ್ಧವನ್ನು

ಮಾಡಬೇಕು. ಚತುರತೆಯಿಂದ ಪಲಾಯನವನ್ನೂ ಮಾಡಬೇಕು. ಎಲ್ಲವನ್ನೂ ಶೀಘ್ರವಾಗಿ ಮಾಡಬೇಕು. ಸಂಶಯಕ್ಕೆ ಒಳಗಾಗಬಾರದು.
ವಾಙ್ಮಾತ್ರೇಣ ವಿನೀತಃ ಸ್ಯಾದ್ಧೃದಯೇನ ಯಥಾ ಕ್ಷುರಃ |
ಶ್ಲಕ್ಷ್ಣಪೂರ್ವಾಭಿಭಾಷೀ ಚ ಕಾಮಕ್ರೋಧೌ ವಿವರ್ಜಯೇತ್ ||13||
ಮಾತಿನಲ್ಲಿ ಮಾತ್ರ ವಿನೀತನಾಗಿರಬೇಕು. ಹೃದಯವು ಕತ್ತಿಯಂತೆ ಹರಿತವಾಗಿರಬೇಕು. ಮಂದಹಾಸ ಪೂರ್ವಕವಾಗಿ, ಮಧುರವಾಗಿ ಮಾತನಾಡಬೇಕು. ಕಾಮ-ಕ್ರೋಧಗಳನ್ನು ಬಿಡಬೇಕು..
ಸಪತ್ನಸಹಿತೇ ಕಾರ್ಯೇ ಕೃತ್ವಾ ಸಂಧಿಂ ನ ವಿಶ್ವಸೇತ್ |
ಅಪಕ್ರಾಮೇತ್ತತಃ ಕ್ಷಿಪ್ರಂ ಕೃತಕಾರ್ಯೋ ವಿಚಕ್ಷಣಃ ||14||
ಶತ್ರುವಿನ ಜೊತೆಗೇ ಮಾಡಬೇಕಾದ ಕೆಲಸವಿದ್ದರೆ ಸಂಧಿಯನ್ನು ಮಾಡಿಕೊಳ್ಳಬೇಕು. ಆದರೆ ವಿಶ್ವಾಸವಿಡಬಾರದು. ಕೆಲಸವು ಆದ ಕೂಡಲೇ ಸರಿಯಾದ ವಿಮರ್ಶೆಯಿಂದ ಕೂಡಲೇ ಅವನಿಂದ ದೂರಹೋಗಬೇಕು.
ಶತ್ರುಮಿತ್ರೇ ಚ ಪೂರ್ವೇಣ ಸಾಂತ್ವೇನೈವಾಭಿಸಾಂತ್ವಯೇತ್ |
ನಿತ್ಯಶಶ್ಚೋದ್ವಿಜೇತ್ತಸ್ಮಾತ್ ಸರ್ಪಾದ್ವೇಶ್ಮಗತಾದಿವ ||15||
ಶತ್ರುವಾಗಿರುವ ಮಿತ್ರನನ್ನು (ಮಿತ್ರರೂಪದಿಂದ ಇರುವ ಶತ್ರುವನ್ನು) ಮೊದಲನೆಯ ಸಾಮೋಪಾಯದಿಂದ ಶಾಂತನನ್ನಾಗಿಸಬೇಕು. ಅವನಿಂದ ತನಗೆ ತೊಂದರೆಯನ್ನು ನಿರೀಕ್ಷಿಸುತ್ತಲೇ ಇರಬೇಕು. ಮನೆಯಲ್ಲಿರುವ ಸರ್ಪದಿಂದ ನಿರಂತರ ಆತಂಕಕ್ಕೆ ಒಳಗಾಗುವಂತೆ.
ಯಸ್ಯ ಬುದ್ಧಿಃ ಪರಿಭವೇತ್ ತಮತೀತೇನ ಸಾಂತ್ವಯೇತ್ |
ಅನಾಗತೇನ ದುಷ್ಪ್ರಜ್ಞಂ ಪ್ರತ್ಯುತ್ಪನ್ನೇನ ಪಂಡಿತಮ್ ||16||
ಯಾರ ಬುದ್ಧಿಯು ಸೋಲುವುದೋ ಅವನಿಗೆ ಹಿಂದೆ ನಡೆದುಹೋದ ಘಟನೆಗಳನ್ನು (ಶ್ರೀರಾಮಚಂದ್ರ, ನಳ ಮೊದಲಾದವರ) ಹೇಳಿ ಸಮಾಧಾನ ಪಡಿಸಬೇಕು. ದುರಾಲೋಚನೆಯ ವ್ಯಕ್ತಿಯನ್ನು ಮುಂದಾಗುವ ಅನರ್ಥವನ್ನು ಹೇಳಿ ಎಚ್ಚರಿಸಬೇಕು. ಪಂಡಿತನನ್ನು ತತ್ಕಾಲದಲ್ಲಿ ಒದಗುವ ಸಾಧನಗಳಿಂದ (ಧನ, ಭೋಜನಾದಿಗಳಿಂದ) ಸಮಾಧಾನ ಪಡಿಸಬೇಕು.
ಅಂಜಲಿಂ ಶಪಥಂ ಸಾಂತ್ವಂ ಪ್ರಣಮ್ಯ ಶಿರಸಾ ವದೇತ್ |
ಅಶ್ರುಪ್ರಪಾತನಂ ಚೈವ ಕರ್ತವ್ಯಂ ಭೂತಿಮಿಚ್ಛತಾ ||17||
ಶ್ರೇಯಸ್ಸು-ಸಮೃದ್ಧಿಗಳನ್ನು ಬಯಸುವವನು ಅವಶ್ಯಕತೆಗೆ ಅನುಗುಣವಾಗಿ ಶತ್ರುವಿಗೆ ಕೈಮುಗಿಯಬೇಕು, ಶಪಥ ಮಾಡಬೇಕು. ಸಮಾಧಾನದಿಂದ ವರ್ತಿಸಬೇಕು, ತಲೆಬಾಗಿಸಿ ನಮಸ್ಕರಿಸಿ ಮಾತನಾಡಬೇಕು, ಕಣ್ಣೀರನ್ನು ಹರಿಸಬೇಕು.
ವಹೇದಮಿತ್ರಂ ಸ್ಕಂಧೇನ ಯಾವದರ್ಥಸ್ಯ ಬಂಧನಮ್ |
ಅಥೈನಮಾಗತೇ ಕಾಲೇ ಭಿಂದ್ಯಾದ್ಘಟಮಿವಾಶ್ಮನಿ ||18||
ಪ್ರಯೋಜನವಾಗುವ ಸಂಬಂಧವು ಇರುವವರೆಗೆ (ಕಾಲವು ತನಗೆ ಅನುಕೂಲವಾಗಿ ತಿರುಗುವವರೆಗೆ) ಶತ್ರುವನ್ನು ಹೆಗಲ ಮೇಲೆ ಹೊರಬೇಕು. ಕಾಲವು ಬಂದಾಗ ಮಡಕೆಯನ್ನು ಕಲ್ಲಿನ ಮೇಲೆ ಚಚ್ಚುವಂತೆ ಚಚ್ಚಿಬಿಡಬೇಕು.
ಮುಹೂರ್ತಮಪಿ ರಾಜೇಂದ್ರ ತಿನ್ದುಕಾಲಾತವಜ್ಜ್ವಲೇತ್ |
ಮಾನುಷಾಗ್ನಿರಿವಾನರ್ಚಿರ್ಧೂಮಾಯೇತ ನರಶ್ಚಿರಮ್ ||19||
ರಾಜೇಂದ್ರ! ನರನು ಸ್ವಲ್ಪವೇ ಕಾಲ ತುಂಬೆ ಗಿಡದ ಕೊಳ್ಳಿಯಂತೆ ಉರಿಯಬೇಕು. ಮನುಷ್ಯರಿಂದ ಹೊತ್ತಿಸಲ್ಪಟ್ಟ ಜ್ವಾಲೆಯಿಲ್ಲದ ಅಗ್ನಿಯಂತೆ ಬಹಳಕಾಲ ಹೊಗೆ ಮಾಡಬೇಕು.
ನಾನಾರ್ಥಿಕೋಽರ್ಥಸಂಬಂಧಂ ಕೃತಘ್ನೇ ನ ಸಮಾಚರೇತ್ |
ಕಾರ್ಯಾರ್ಥೀ ಶಕ್ಯತೇ ಯೋಕ್ತುಂ ಕೃತಕಾರ್ಯೋಽಭಿಮನ್ಯತಿ |
ತಸ್ಮಾತ್ ಸರ್ವಾಣಿ ಕಾರ್ಯಾಣಿ ಸಾವಶೇಷಾಣಿ ಕಾರಯೇತ್ ||20||
ನಾನಾ ಪ್ರಯೋಜನಗಳನ್ನು ಸಾಧಿಸುವ ಗುರಿ ಇರುವವನು ಕೃತಘ್ನನ ಜೊತೆ ಅರ್ಥ ಸಂಬಂಧವನ್ನು= ಗುರಿಸಾಧನೆಗಾಗಿ ಸಂಬಂಧವನ್ನು ಮಾಡಿಕೊಳ್ಳಬಾರದು. ತನ್ನ ಕೆಲಸವನ್ನು ಮಾಡಿಸಿಕೊಳ್ಳಲು ಬಯಸುವವನಿಗೆ (ಕೆಲಸವನ್ನು ಮಾಡಿಕೊಡುವವನು) ಕೆಲಸಗಳನ್ನು ವಹಿಸಬಹುದು. ತನ್ನ ಕೆಲಸವು ಪೂರ್ಣವಾಗಿ ಆದನಂತರ (ಕೆಲಸ ಮಾಡಿಸಿಕೊಂಡವನು) ಅವಜ್ಞೆಯಿಂದ ವರ್ತಿಸುತ್ತಾನೆ. ಆದ್ದರಿಂದ ಎಲ್ಲ ಕಾರ್ಯಗಳನ್ನು ಅಪೂರ್ಣವಾಗಿಯೇ ಮಾಡಿಕೊಡಬೇಕು.
ಕೋಕಿಲಸ್ಯ ವರಾಹಸ್ಯ ಮೇರೋಃ ಶೂನ್ಯಸ್ಯ ವೇಶ್ಮನಃ |
ವ್ಯಾಲಸ್ಯ ಭಕ್ತಚಿತ್ರಸ್ಯ ಯಚ್ಛ್ರೇಯಸ್ತತ್ ಸಮಾಚರೇತ್ ||21||
ಕೋಗಿಲೆಯ, ಹಂದಿಯ, ಟಗರುಗಳ, ಖಾಲಿಮನೆಯ, ಸರ್ಪದ, ಭಿತ್ತಿಚಿತ್ರದ - ಒಳ್ಳೆಯ ಗುಣಗಳನ್ನು ಅನುಸರಿಸಬೇಕು. (ಪಾಠಾಂತರ : ಕೋಗಿಲೆಯ, ಹಂದಿಯ, ಮೇರುಪರ್ವತದ ಖಾಲಿ ಮನೆಯ, ಸರ್ಪದ, ಪ್ರೀತಿ ತೋರುವ ಮಿತ್ರನ- ಒಳ್ಳೆಯ ಅಂಶಗಳನ್ನು ರೂಢಿಸಿಕೊಳ್ಳಬೇಕು).
(1) ಕೋಗಿಲೆಯು ತನ್ನ ಮರಿಗಳನ್ನು ತಾನು ಪೋಷಿಸುವುದಿಲ್ಲ. ಬೇರೆ ಹಕ್ಕಿಗಳ ಗೂಡಿನಲ್ಲಿ ಇಟ್ಟು ಅವುಗಳಿಂದ ಪೋಷಣೆ ಮಾಡಿಸುತ್ತದೆ. ಇದು ಬೇರೆಯವರಿಂದ ತನ ಕಾರ್ಯವನ್ನು ಸಾಧಿಸುವುದಕ್ಕೆ ನಿದರ್ಶನ.
(2) ಹಂದಿಯಲ್ಲಿ ಭೂಮಿಯಲ್ಲಿ ಆಳದಲ್ಲಿರುವ ಗೆಡ್ಡೆ-ಗೆಣಸುಗಳನು ಕಿತ್ತು ತಿನ್ನುವ ಸ್ವಭಾವವಿದೆ.
(3) ಟಗರುಗಳು ತಮ್ಮ ಶತ್ರುವಿನ ತಲೆಯನ್ನೇ ಚಚ್ಚುತ್ತವೆ. ಮೇರುಪರ್ವತದಲ್ಲಿ ಔನ್ನತ್ಯ, ಅಚಲತ್ವ, ಅನುಲ್ಲಂಘನೀಯತ್ವ ಮೊದಲಾದ ಗುಣಗಳಿವೆ.
(4) ಖಾಲಿ ಮನೆ= ಧರ್ಮಶಾಲಾ. ಸರ್ವರೂ ಅದರ ಉಪಯೋಗವನ್ನು ಪಡೆಯಬಹುದು. ಅಂತೆಯೇ ರಾಜನು ಸರ್ವೋಪಕಾರಿಯಾಗಿರಬೇಕು.

(5) ಸರ್ಪವು ತಾನು ನಿರ್ಮಿಸದ ಹುತ್ತದಲ್ಲಿ ಪ್ರವೇಶಿಸಿ ವಾಸಿಸುತ್ತದೆ.
(6) ಭಿತ್ತಿಚಿತ್ರವು ಕಣ್ಣಿಗೆ ಪ್ರಿಯ. ಭಕ್ತನ ಚಿತ್ತದಲ್ಲಿ ಪ್ರೀತಿಯು ತುಂಬಿರುತ್ತದೆ.
ಉತ್ಥಾಯೋತ್ಥಾಯ ಗಚ್ಛೇಚ್ಚ ನಿತ್ಯಯುಕ್ತೋ ರಿಪೋರ್ಗೃಹಾನ್ |
ಕುಶಲಂ ಚಾಪಿ ಪೃಚ್ಛೇತ ಯದ್ಯಪ್ಯಕುಶಲಂ ಭವೇತ್ ॥22॥
ಸದಾ ಉಪಾಯವಂತನಾಗಿದ್ದು ಬಹಳ ಎಚ್ಚರದಿಂದ ಶತ್ರುವಿನ ಮನೆಗೆ ಹೋಗಬೇಕು. ಕೆಡುಕಾಗಲಿ ಎಂಬ ಭಾವವಿದ್ದರೂ ಕುಶಲವನ್ನೇ ವಿಚಾರಿಸಬೇಕು.
ನಾಲಸಾಃ ಪ್ರಾಪ್ನುವಂತ್ಯರ್ಥಾನ್ನ ಕ್ಲೀಬಾ ನ ಚ ಮಾನಿನಃ |
ನ ಚ ಲೋಕರವಾದ್ಭೀತಾ ನ ಚ ಶಶ್ವತ್ ಪ್ರತೀಕ್ಷಿಣಃ ॥23॥
ಸೋಮಾರಿಗಳು, ಹೇಡಿಗಳು, ದುರಭಿಮಾನಿಗಳು, ಜನರ ಮಾತಿಗೆ ಹೆದರುವವರು, ಒಳ್ಳೆಯ ಕಾಲದ ನಿರೀಕ್ಷೆಯಲ್ಲಿ ಕಾಲ ಕಳೆಯುವವರು ಸಂಪತ್ತನ್ನು ಗಳಿಸಲಾರರು.
ನಾಸ್ಯ ಛಿದ್ರಂ ಪರೋ ವಿದ್ಯಾದ್ ವಿದ್ಯಾಚ್ಛಿದ್ರಂ ಪರಸ್ಯ ತು |
ಗೂಹೇತ್ ಕೂರ್ಮ ಇವಾಂಗಾನಿ ರಕ್ಷೇದ್ ವಿವರಮಾತ್ಮನಃ ॥24॥
ತನ್ನ ಕೊರತೆಗಳನ್ನು ಶತ್ರುಗಳು ಅರಿಯಬಾರದು. ತಾನು ಶತ್ರುವಿನ ಕೊರತೆಗಳನ್ನು ತಿಳಿಯಬೇಕು. ಆಮೆಯು ತನ್ನ ಅಂಗಗಳನ್ನು ಅಡಗಿಸಿಕೊಳ್ಳುವಂತೆ ತನ್ನ ನ್ಯೂನತೆಗಳನ್ನು ಇತರರು ತಿಳಿಯದಂತೆ ಅಡಗಿಸಿಕೊಳ್ಳಬೇಕು.
ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ |
ವೃಕವಚ್ಚಾವಲುಮ್ಪೇತ ಶಶವಚ್ಚ ವಿನಿಷ್ಪತೇತ್ ॥25॥
ಅರ್ಥಗಳ= ಸಾಧಿಸಬೇಕಾದ ಕಾರ್ಯಗಳ ಬಗ್ಗೆ ಬಕದಂತೆ ಚಿಂತಿಸಬೇಕು. (ಬಕದ ಏಕಾಗ್ರತೆಯು ಸುಪ್ರಸಿದ್ಧ). ಸಿಂಹದಂತೆ ಪರಾಕ್ರಮಿಸಬೇಕು. ತೋಳದಂತೆ ಲೂಟಿ ಮಾಡಬೇಕು. ಮೊಲದಂತೆ ಜಿಗಿಯಬೇಕು.
ಪಾನಮಕ್ಷಾಸ್ತಥಾ ನಾರ್ಯೋ ಮೃಗಯಾ ಗೀತವಾದಿತಮ್ |
ಏತಾನಿ ಯುಕ್ತ್ಯಾ ಸೇವೇತ ಪ್ರಸಂಗೋ ಹ್ಯತ್ರ ದೋಷವಾನ್ ॥26॥
ಸುರಾಪಾನ, ದ್ಯೂತ, ಸ್ತ್ರೀಯರು, ಬೇಟೆ, ಗಾಯನ, ವಾದ್ಯ - ಇವುಗಳನ್ನು ಕೌಶಲದಿಂದ ಮತ್ತು ಎಚ್ಚರದಿಂದ ಸೇವಿಸಬೇಕು. ಅತ್ಯಾಸಕ್ತಿಯು ಹಾನಿಕರ.
ಕುರ್ಯಾತ್ ತೃಣಮಯಂ ಚಾಪಂ ಶಯೀತ ಮೃಗಶಾಯಿಕಾಮ್ |
ಅಂಧಃ ಸ್ಯಾದಂಧವೇಲಾಯಾಂ ಬಾಧಿರ್ಯಮಪಿ ಸಂಶ್ರಯೇತ್ ॥27॥
ಬಿಲ್ಲನ್ನು ತೃಣಮಯವಾಗಿ ಮಾಡಬೇಕು (ಹುಲ್ಲಿನ ಕಂತೆಯಂತೆ ಕಾಣಿಸುವಂತೆ ಮಾಡಬೇಕು). ಜಿಂಕೆಯು ಮಲಗುವಂತೆ ಮಲಗಬೇಕು. (ಯಾವಾಗಲೂ ಎಚ್ಚರದಿಂದ ಇರಬೇಕು) ಅಂಧನಂತೆ ಇರಬೇಕಾದ ಅವಶ್ಯಕತೆ ಇದ್ದಾಗ ಅಂಧನಾಗಿರಬೇಕು. ಕಿವುಡನಂತೆ ಇರಬೇಕಾದ ಅವಶ್ಯಕತೆ ಇದ್ದಾಗ ಕಿವುಡಾಗಿರಬೇಕು.
ದೇಶಂ ಕಾಲಂ ಸಮಾಸಾದ್ಯ ವಿಕ್ರಮೇತ ವಿಚಕ್ಷಣಃ |
ದೇಶಕಾಲಾಭ್ಯತೀತೋ ಹಿ ವಿಕ್ರಮೋ ನಿಷ್ಫಲೋ ಭವೇತ್ ॥28॥
ವಿವೇಚನಶೀಲನು ತನಗೆ ಅನುಕೂಲವಾದ ದೇಶ-ಕಾಲಗಳನ್ನು ಒದಗಿಸಿಕೊಂಡು ಅಥವಾ ಅವುಗಳು ಒದಗಿ ಬಂದಾಗ ಪರಾಕ್ರಮಿಸಬೇಕು. ದೇಶ-ಕಾಲಗಳನ್ನು ಮೀರಿದ ಪರಾಕ್ರಮವು ಫಲಪ್ರದವಲ್ಲ.
ಕಾಲಾಕಾಲೌ ಸಂಪ್ರಧಾರ್ಯ ಬಲಾಬಲಮಥಾತ್ಮನಃ |
ಪರಸ್ಪರಬಲಂ ಜ್ಞಾತ್ವಾ ತಥಾತ್ಮಾನಂ ವಿನಿಯೋಜಯೇತ್ ॥29॥
ಕಾಲ-ಅಕಾಲಗಳನ್ನು, ತನ್ನ ಬಲ-ದೌರ್ಬಲ್ಯಗಳನು, ಪರಸ್ಪರರ ಬಲವನ್ನೂ ಅರಿತು ಅದಕ್ಕೆ ತಕ್ಕಂತೆ ಕಾರ್ಯದಲ್ಲಿ ತೊಡಗಬೇಕು.
ದಂಡೇನೋಪನತಂ ಶತ್ರುಂ ಯೋ ರಾಜಾ ನ ನಿಯಚ್ಛತಿ |
ಸ ಮೃತ್ಯುಮುಪಗೂಹ್ಯಾಸ್ತೇ ಗರ್ಭಮಶ್ವತರೀ ಯಥಾ ॥30॥
ಸೋತು ಶರಣಾಗತನಾದ ಶತ್ರುವನ್ನು ಯಾರು ದಂಡಪ್ರಯೋಗದಿಂದ ನಿಯಂತ್ರಿಸುವುದಿಲ್ಲವೋ, ಅವನು ಮೃತ್ಯುವನ್ನು ತಬ್ಬಿಕೊಂಡೇ ಇರುತ್ತಾನೆ. ಹೆಸರಗತ್ತೆಯು ಗರ್ಭ ಧರಿಸಿ ಇರುವಂತೆ. (ಗರ್ಭ ಧರಿಸಿದ ಹೆಸರಗತ್ತೆ ಪ್ರಸವಿಸಿ ಸಾಯುತ್ತದೆ ಎಂದು ಹೇಳುತ್ತಾರೆ).
ಸುಪುಷ್ಪಿತಃ ಸ್ಯಾದಫಲಃ ಫಲವಾನ್ ಸ್ಯಾದ್ದುರಾರುಹಃ |
ಆಮಃ ಸ್ಯಾತ್ ಪಕ್ವಸಂಕಾಶೋ ನ ಚ ಶೀರ್ಯೇತ ಕಸ್ಯಚಿತ್ ॥31॥
ಬಹಳ ಹೂ ಬಿಟ್ಟಿರುವ, ಆದರೆ ಫಲಬಿಡದ ಮರ, ಫಲವಿರುವ ಆದರೆ ಏರಲಾಗದ ಮರ, ಕಾಯಿಗಳಾಗಿರಬೇಕು, ಹಣ್ಣುಗಳಂತೆ ಕಾಣಬೇಕು- ಅಂತಹ ಮರ ರಾಜನು ಈ ಮರಗಳಂತೆ ಇರಬೇಕು (ಬೇರೆ ಬೇರೆ ಜನಗಳಿಗೆ ಬೇರೆ ಬೇರೆ ರೀತಿಯಲ್ಲಿ ರಾಜನು ಇರಬೇಕು). ಯಾರಿಂದಲೂ ಹಾನಿಗೆ ಒಳಗಾಗಬಾರದು.
ಆಶಾಂ ಕಾಲವತೀಂ ಕುರ್ಯಾತ್ತಾಂ ಚ ವಿಘ್ನೇನ ಯೋಜಯೇತ್ |
ವಿಘ್ನಂ ನಿಮಿತ್ತತೋ ಬ್ರೂಯಾನ್ನಿಮಿತ್ತಂ ಚಾಪಿ ಹೇತುತಃ ॥32॥
ಪ್ರಜೆಗಳ ಆಸೆಯು ಸರಿಯಾದ ಕಾಲದಲ್ಲಿ ಈಡೇರುತ್ತದೆ ಎಂದು ಹೇಳಬೇಕು. ವಿಳಂಬವಾದಾಗ ವಿಳಂಬಕ್ಕೆ ವಿಘ್ನಗಳು ಕಾರಣ ಎಂದು ಹೇಳಬೇಕು. ವಿಘ್ನಕ್ಕೆ ನಿಮಿತ್ತಗಳನ್ನು ಹೇಳಬೇಕು. ನಿಮಿತ್ತಗಳನ್ನು ಯುಕ್ತಿಯಿಂದ ವಿವರಿಸಬೇಕು.
ಭೀತವತ್ ಸಂವಿಧಾತವ್ಯಂ ಯಾವದ್ಭಯಮನಾಗತಮ್ |
ಆಗತಂ ತು ಭಯಂ ದೃಷ್ಟ್ವಾ ಪ್ರಹರ್ತವ್ಯಮಭೀತವತ್ ॥33॥

ಭಯವು ಬರುವುದಕ್ಕೆ ಮೊದಲು ಅದರ ನಿರೀಕ್ಷೆಯಿದ್ದರೆ ಹೆದರಿದವನಂತೆ ನಡೆದುಕೊಳ್ಳಬೇಕು. (ಭಯದ ನಿರೀಕ್ಷೆ ಇದ್ದವರು ಅದು ಬರದಂತೆ ಪ್ರಯತ್ನಿಸಬೇಕು). ಭಯವು ಬಂದಾಗ ನಿರ್ಭಯವಾಗಿ ಪ್ರಹಾರ ಮಾಡಬೇಕು.
ನ ಸಂಶಯಮಪಾರುಹ್ಯ ನರೋ ಭದ್ರಾಣಿ ಪಶ್ಯತಿ |
ಸಂಶಯಂ ಪುನರಾರುಹ್ಯ ಯದಿ ಜೀವತಿ ಪಶ್ಯತಿ ॥34॥
ಸಂಶಯಕ್ಕೊಳಗಾಗದ ನರನು ಉನ್ನತಿಯನ್ನು ಕಾಣುವುದಿಲ್ಲ. ಸಂಶಯಗ್ರಸ್ತನಾಗಿದ್ದರೂ ಪ್ರಯತ್ನಿಸುತ್ತಾ ಬದುಕಿದವನು ಉನ್ನತಿಯನ್ನು ಕಾಣುತ್ತಾನೆ. ಇಷ್ಟವಾದ ಉನ್ನತ ಸ್ಥಿತಿಗೆ ಏರುವ ಅಪೇಕ್ಷೆ ಇದ್ದವನು ಅದಕ್ಕಾಗಿ ಮಹಾಪ್ರಯತ್ನವನ್ನು ಮಾಡಬೇಕು. ಹೀಗೆ ಮಾಡಬೇಕಾದಾಗ ಆ ಉನ್ನತಸ್ಥಿತಿಯ ಬಗ್ಗೆ, ಅದನ್ನು ಸಾಧಿಸುವ ಮಾರ್ಗದ ಬಗ್ಗೆ, ತನ್ನ ಸಾಮರ್ಥ್ಯದ ಬಗ್ಗೆ ನಾನಾ ಸಂಶಯಗಳು ಉದ್ಭವಿಸುತ್ತವೆ. ಇವುಗಳನ್ನು ಎದುರಿಸಿ ಮುಂದೆ ಸಾಗಬೇಕು. ಹೀಗೆ ಸಂಶಯದ ಸ್ಥಿತಿಯಲ್ಲೇ ಪ್ರಯತ್ನಿಸುತ್ತಾ, ಅನ್ವೇಷಿಸುತ್ತಾ ಬದುಕಿದರೆ ಕೊನೆಯಲ್ಲಿ ಉನ್ನತ ಸ್ಥಿತಿಯನ್ನು ತಲುಪುತ್ತಾನೆ.
ಅನಾಗತಂ ವಿಜಾನೀಯಾದ್ಯಚ್ಛೇದ್ಭಯಮುಪಸ್ಥಿತಮ್ |
ಪುನರ್ಬುದ್ಧಿಕ್ಷಯಾತ್ ಕಿಂಚಿದಭಿವೃತ್ತಂ ನಿಶಾಮಯೇತ್ ॥35॥
ಮುಂದೆ ಬರಬಹುದಾದ ಭಯವನ್ನು ಮೊದಲೇ ಅರಿಯಬೇಕು. ಬಂದ ಭಯವನ್ನು ಪರಿಹರಿಸಬೇಕು. ಮತ್ತೆ ಪ್ರಮಾದದಿಂದ ಭಯವು ಬರಬಹುದೆಂದು ಕಂಡು ಎಚ್ಚರದಿಂದ ಇರಬೇಕು.
ಪ್ರತ್ಯುಪಸ್ಥಿತಕಾಲಸ್ಯ ಸುಖಸ್ಯ ಪರಿವರ್ಜನಮ್ |
ಅನಾಗತಸುಖಾಶಾ ಚ ನೈಷ ಬುದ್ಧಿಮತಾಂ ನಯಃ ॥36॥
ವರ್ತಮಾನದಲ್ಲಿ ಒದಗಿರುವ ಸುಖದ ತ್ಯಾಗ, ಮುಂದೆ ಸುಖವು ಬರುವ ಆಸೆ- ಇದು ಬುದ್ಧಿವಂತರ ನೀತಿಯಲ್ಲ.
ಯೋಽರಿಣಾ ಸಹ ಸಂಧಾಯ ಸುಖಂ ಸ್ವಪಿತಿ ವಿಶ್ವಸನ್ |
ಸ ವೃಕ್ಷಾಗ್ರೇ ಪ್ರಸುಪ್ತೋ ವಾ ಪತಿತಃ ಪ್ರತಿಬುಧ್ಯತೇ ॥37॥
ಯಾರು ಶತ್ರುವಿನ ಜೊತೆ ಸಂಧಾನ ಮಾಡಿಕೊಂಡು, ನಂಬಿಕೆ ಇಟ್ಟು ಸುಖವಾಗಿ ನಿದ್ರಿಸುತ್ತಾನೋ ಅವನು ಮರದ ತುದಿಯಲ್ಲಿ ನಿದ್ರಿಸಿದವನಿಗೆ ಸಮಾನ. ಅವನಿಗೆ ಬಿದ್ದನಂತರವೇ ಎಚ್ಚರವಾಗುತ್ತದೆ. ಇವನು ಶತ್ರುವಿನ ಬಲೆಗೆ ಬಿದ್ದೇ ಬೀಳುತ್ತಾನೆ.
ಕರ್ಮಣಾ ಯೇನ ತೇನೇಹ ಮೃದುನಾ ದಾರುಣೇನ ವಾ |
ಉದ್ಧರೇದ್ ದೀನಮಾತ್ಮಾನಂ ಸಮರ್ಥೋ ಧರ್ಮಮಾಚರೇತ್ ॥38॥
ದೀನ ಸ್ಥಿತಿಗೆ ಹೋದವನು ಮೃದು ಕೆಲಸಗಳಿಂದಲೋ ಅಥವಾ ದಾರುಣ ಕೆಲಸಗಳಿಂದಲೋ ತನ್ನನ್ನು ಮೇಲೆತ್ತಿಕೊಳ್ಳಬೇಕು. ಸಮರ್ಥನಾಗಿ ಧರ್ಮವನ್ನು ಆಚರಿಸಬೇಕು.
ಯೇ ಸಪತ್ನಾಃ ಸಪತ್ನಾನಾಂ ಸರ್ವಾಂಸ್ತಾನಪವತ್ಸಯೇತ್ |
ಆತ್ಮನಶ್ಚಾಪಿ ಬೋದ್ಧವ್ಯಾಶ್ಚಾರಾಃ ಪ್ರಣಿಹಿತಾಃ ಪರೈಃ ॥39॥
ಯಾರು ಶತ್ರುಗಳ ಶತ್ರುಗಳೋ ಅವರೆಲ್ಲರನ್ನು ಓಲೈಸಬೇಕು. ಶತ್ರುಗಳು ತನ್ನ ಬಗ್ಗೆ ತಿಳಿಯಲು ಕಳುಹಿಸಿರುವ ಗೂಢಚಾರರನ್ನು ಪತ್ತೆ ಮಾಡಬೇಕು.
ಚಾರಃ ಸುವಿಹಿತಃ ಕಾರ್ಯ ಆತ್ಮನೋಽಥ ಪರಸ್ಯ ಚ |
ಪಾಷಂಡಾಂಸ್ತಾಪಸಾದೀಂಶ್ಚ ಪರರಾಷ್ಟ್ರಂ ಪ್ರವೇಶಯೇತ್ ॥40॥
ತನ್ನ ರಾಜ್ಯದಲ್ಲೂ, ಪರರ ರಾಜ್ಯದಲ್ಲೂ ಗೂಢಚಾರರನ್ನು ಸರಿಯಾಗಿ ತೊಡಗಿಸಬೇಕು. ಪಾಷಂಡ-ತಾಪಸ ಮೊದಲಾದವರನ್ನು ಪರರಾಷ್ಟ್ರಕ್ಕೆ ಗೂಢಚಾರರನ್ನಾಗಿ ಕಳುಹಿಸಬೇಕು.
ಉದ್ಯಾನೇಷು ವಿಹಾರೇಷು ಪ್ರಪಾಸ್ವಾವಸಥೇಷು ಚ |
ಪಾನಾಗಾರೇಷು ವೇಶೇಷು ತೀರ್ಥೇಷು ಚ ಸಭಾಸು ಚ ॥41॥
ಉದ್ಯಾನಗಳಲ್ಲಿ, ವಿಹಾರಸ್ಥಳಗಳಲ್ಲಿ, ಅರವಟ್ಟಿಗೆಗಳಲ್ಲಿ, ಧರ್ಮಶಾಲೆಗಳಲ್ಲಿ, ಸುರಾಪಾನಗೃಹಗಳಲ್ಲಿ, ವೇಶ್ಯಾಗೃಹಗಳಲ್ಲಿ, ತೀರ್ಥ ಸ್ಥಳಗಳಲ್ಲಿ, ಸಭೆಗಳಲ್ಲಿ
ಧರ್ಮಾಭಿಚಾರಿಣಃ ಪಾಪಾಶ್ಚಾರಾ ಲೋಕಸ್ಯ ಕಂಟಕಾಃ |
ಸಮಾಗಚ್ಛಂತಿ ತಾನ್ ಬುದ್ಧ್ವಾ ನಿಯಚ್ಛೇಚ್ಛಮಯೇದಪಿ ॥42॥
ಲೋಕಕಂಟಕರಾದ, ಪಾಪಿಗಳಾದ ಚಾರರು ಧರ್ಮಾಚರಣನಿಷ್ಠರಂತೆ ಬರುತ್ತಾರೆ. ಅವರನು ಪತ್ತೆ ಮಾಡಿ ನಿಯಂತ್ರಿಸಬೇಕು. ಅಡಗಿಸಬೇಕು.
ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾಪಿ ವಿಶ್ವಸೇತ್ |
ವಿಶ್ವಸ್ತಂ ಭಯಮನ್ವೇತಿ ನಾಪರೀಕ್ಷ್ಯ ಚ ವಿಶ್ವಸೇತ್ ॥43॥
ವಿಶ್ವಾಸವಿಲ್ಲದವನ ಮೇಲೆ ವಿಶ್ವಾಸವಿಡಬಾರದು. ವಿಶ್ವಾಸವಿರುವವನ ಮೇಲೂ ವಿಶ್ವಾಸವಿಡಬಾರದು. ನಂಬಿದವನಿಗೆ ಭಯವು ಹಿಂದೆಯೇ ಬರುತ್ತದೆ. ಪರೀಕ್ಷಿಸದೆ ಯಾರನ್ನೂ ನಂಬಬಾರದು.
ವಿಶ್ವಾಸಯಿತ್ವಾ ತು ಪರಂ ತತ್ತ್ವಭೂತೇನ ಹೇತುನಾ |
ಅಥಾಸ್ಯ ಪ್ರಹರೇತ್ ಕಾಲೇ ಕಿಂಚಿದ್ ವಿಚಲಿತೇ ಪದೇ ॥44॥
ಸರಿಯಾಗಿರುವ ಕಾರಣಗಳನ್ನು ತೋರಿಸಿಯೇ ಶತ್ರುವು ತನ್ನನ್ನು ನಂಬುವಂತೆ ಮಾಡಬೇಕು. ಶತ್ರುವಿನ ಹೆಜ್ಜೆಯು ಸ್ವಲ್ಪ ವಿಚಲಿತವಾದಾಗ (ಶತ್ರುವು ನಂಬಿ ಅಸ್ಥಿರನಾದಾಗ) ಅವನ ಮೇಲೆ ಪ್ರಹಾರ ಮಾಡಬೇಕು.
ಅಶಂಕ್ಯಮಪಿ ಶಂಕೇತ ನಿತ್ಯಂ ಶಂಕೇತ ಶಂಕಿತಾತ್ |
ಭಯಂ ಹಿ ಶಂಕಿತಾಜ್ಜಾತಂ ಸಮೂಲಮಪಿ ಕೃಂತತಿ ॥45॥

ಸಂದೇಹಕ್ಕೆ ಅನರ್ಹನ ಮೇಲೂ ಸಂದೇಹವಿರಬೇಕು. ಸಂದೇಹಕ್ಕೆ ಅರ್ಹನಾದವನ ಮೇಲೆ ಯಾವಾಗಲೂ ಸಂಶಯವಿರಬೇಕು. ಸಂದೇಹಾಸ್ಪದ ವ್ಯಕ್ತಿಯಿಂದ ಉಂಟಾದ ಭಯವು ಸರಿಯಾದ ಬೇರುಗಳು (ಆಧಾರಗಳು) ಇದ್ದವನನ್ನೂ ಕತ್ತರಿಸುತ್ತದೆ.
ಅವಧಾನೇನ ಮೌನೇನ ಕಾಷಾಯೇಣ ಜಟಾಜಿನೈಃ |
ವಿಶ್ವಾಸಯಿತ್ವಾ ದ್ವೇಷ್ಟಾರಮವಲುಂಪೇದ್ಯಥಾ ವೃಕಃ ॥46॥
ಶತ್ರುವನ್ನು ಏಕಾಗ್ರತೆಯಿಂದ (ಧ್ಯಾನದಿಂದ, ಅವಧಾನ ಕಲೆಯಿಂದ), ಮೌನದಿಂದ, ಕಾವಿ ವಸ್ತ್ರಧಾರಣೆಯಿಂದ, ಜಟೆ ಮತ್ತು ಕೃಷ್ಣಾಜಿನಗಳಿಂದ ನಂಬಿಸಿ ತೋಳದಂತೆ ಮೇಲೆ ಬಿದ್ದು ನಾಶಮಾಡಬೇಕು.
ಪುತ್ರೋ ವಾ ಯದಿ ವಾ ಭ್ರಾತಾ ಪಿತಾ ವಾ ಯದಿ ವಾ ಸುಹೃತ್ |
ಅರ್ಥಸ್ಯ ವಿಘ್ನಂ ಕುರ್ವಾಣಾ ಹಂತವ್ಯಾ ಭೂತಿವರ್ಧನಾಃ ॥47॥
ಸಂಪತ್ತನು ಹೆಚ್ಚಿಸುವ ಉದ್ದೇಶವಿರುವವರು, ಸಂಪತ್ತಿನ ವೃದ್ಧಿಗೆ ವಿಘ್ನ ಮಾಡುವವರನ್ನು- ಅವರು ಮಗನಾಗಿರಲಿ, ಸೋದರನಾಗಿರಲಿ, ತಂದೆಯಾಗಿರಲಿ ಅಥವಾ ಸ್ನೇಹಿತನಾಗಿರಲಿ- ಕೊಂದು ಬಿಡಬೇಕು.
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ |
ಉತ್ಪಥಂ ಪ್ರತಿಪನ್ನಸ್ಯ ದಂಡೋ ಭವತಿ ಶಾಸನಮ್ ॥48॥
ಗರ್ವವನ್ನು ಬೆಳೆಸಿಕೊಂಡಿರುವ, ಕಾರ್ಯ-ಅಕಾರ್ಯಗಳನ್ನು ತಿಳಿಯದ, ದಾರಿಬಿಟ್ಟು ಹೋಗಿರುವ ಹಿರಿಯರೂ ದಂಡನೆಗೆ ಅರ್ಹರೇ.

ಪ್ರತ್ಯುತ್ಥಾನಾಭಿವಾದಾಭ್ಯಾಂ ಸಂಪ್ರದಾನೇನ ಕಸ್ಯಚಿತ್ |
ಪ್ರಪೂಜಯನ್ನಿಘಾತೀ ಸ್ಯಾತ್ ತೀಕ್ಷ್ಣತುಂಡ ಇವ ದ್ವಿಜಃ ॥49॥
ಶತ್ರುವು ಬಂದಾಗ ಎದ್ದುನಿಂತು, ಅಭಿವಾದನವನ್ನು ಮಾಡಿ ಕಾಣಿಕೆಗಳನ್ನು ಕೊಟ್ಟು ಪೂಜಿಸಿ ಸಂಹರಿಸಬೇಕು. ತೀಕ್ಷ್ಣಕೊಕ್ಕಿನ ಹಕ್ಕಿಯು ಮಾಡುವಂತೆ.
ನಾಚ್ಛಿತ್ತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮ ದಾರುಣಮ್ |
ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಪರಮಾಂ ಶ್ರಿಯಮ್ ॥50॥
ಶತ್ರುವಿನ ಮರ್ಮಗಳನ್ನು ಕತ್ತರಿಸದೆ, ದಾರುಣ ಕರ್ಮಗಳನ್ನು ಮಾಡದೆ, ಮೀನುಗಳನ್ನು ಕೊಲ್ಲುವವನಂತೆ ಕೊಲ್ಲದೆ ದೊಡ್ಡ ಸಂಪತ್ತನ್ನು ಹೊಂದುವುದಿಲ್ಲ.
ನಾಸ್ತಿ ಜಾತ್ಯಾ ರಿಪುರ್ನಾಮ ಮಿತ್ರಂ ನಾಮ ನ ವಿದ್ಯತೇ |
ಸಾಮರ್ಥ್ಯಯೋಗಾಜ್ಜಾಯಂತೇ ಮಿತ್ರಾಣಿ ರಿಪವಸ್ತಥಾ ॥51॥
ಹುಟ್ಟಿನಿಂದಲೇ ಯಾರೂ ಶತ್ರುವಲ್ಲ. ಅಂತಹ ಮಿತ್ರನೂ ಇಲ್ಲ. ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿ ಮಿತ್ರರು ಆಗುತ್ತಾರೆ. ಶತ್ರುಗಳೂ ಆಗುತ್ತಾರೆ.
ಅಮಿತ್ರಂ ನೈವ ಮುಂಚೇತ ಬ್ರುವಂತಂ ಕರುಣಾನ್ಯಪಿ |
ದುಃಖಂ ತತ್ರ ನ ಕುರ್ವೀತ ಹನ್ಯಾತ್ ಪೂರ್ವಾಪಕಾರಿಣಮ್ ॥52॥
ಶತ್ರುವು ಕರುಣಾಜನಕವಾದ ಮಾತುಗಳನ್ನು ಹೇಳುತ್ತಿದ್ದರೂ ಅವನನ್ನು ಬಿಡಬಾರದು. ಅವನ ಬಗ್ಗೆ ದುಃಖಿಸಬಾರದು. ಹಿಂದೆ ಅಪಕಾರ ಮಾಡಿದವನನ್ನು ಕೊಂದುಬಿಡಬೇಕು.
ಸಂಗ್ರಹಾನುಗ್ರಹೇ ಯತ್ನಃ ಸದಾ ಕಾರ್ಯೋಽನಸೂಯತಾ |
ನಿಗ್ರಹಶ್ಚಾಪಿ ಯತ್ನೇನ ಕರ್ತವ್ಯೋ ಭೂತಿಮಿಚ್ಛತಾ ॥53॥
ಉನ್ನತಿಯನ್ನು ಬಯಸುವವನು ಪ್ರಜೆಗಳು ತನ್ನನ್ನು ಗ್ರಹಿಸುವುದಕ್ಕಾಗಿ ಅವರಿಗೆ ನಾನಾ ಅನುಕೂಲಗಳನ್ನು ಅಸೂಯೆಯಿಲ್ಲದೆ ಮಾಡುತ್ತಲೇ ಇರಬೇಕು. ನಿಗ್ರಹಕ್ಕೆ ಅರ್ಹರಾದವರನ್ನು ಪ್ರಯತ್ನ ಪೂರ್ವಕವಾಗಿ ನಿಗ್ರಹಿಸಬೇಕು.
ಪ್ರಹರಿಷ್ಯನ್ ಪ್ರಿಯಂ ಬ್ರೂಯಾತ್ ಪ್ರಹೃತ್ಯಾಪಿ ಪ್ರಿಯೋತ್ತರಮ್ |
ಅಪಿ ಚಾಸ್ಯ ಶಿರಶ್ಛಿತ್ತ್ವಾ ರುದ್ಯಾಚ್ಛೋಚೇದಥಾಪಿ ವಾ ॥54॥
ಪ್ರಹಾರವನ್ನು ಮಾಡುವಾಗಲೂ ಪ್ರಿಯವಚನಗಳನ್ನು ಹೇಳಬೇಕು. ಪ್ರಹಾರ ಮಾಡಿದ ಮೇಲೂ ಪ್ರಿಯವಾದ ಮಾತುಗಳನ್ನು ಆಡಬೇಕು. ಅವನ ಶಿರಶ್ಛೇದನ ಮಾಡಿದ ಮೇಲೂ ಅವನಿಗಾಗಿ ಅಳಬೇಕು, ಶೋಕಿಸಬೇಕು.
ನಿಮಂತ್ರಯೇತ ಸಾನ್ತ್ವೇನ ಸಮ್ಮಾನೇನ ತಿತಿಕ್ಷಯಾ |
ಆಶಾಕಾರಣಮಿತ್ಯೇತತ್ ಕರ್ತವ್ಯಂ ಭೂತಿಮಿಚ್ಛತಾ ॥55॥
ಸಮೃದ್ಧಿಯನ್ನು ಬಯಸುವವನು ಓಲೈಸುವ ಮಾತುಗಳಿಂದ, ಸಮ್ಮಾನದಿಂದ, ತಾಳ್ಮೆಯಿಂದ ಜನರನ್ನು ತನ್ನ ಕಡೆ ಒಲಿಸಿಕೊಳ್ಳಬೇಕು. ಇದಕ್ಕೆ ಆಶಾಕಾರಣ (ಲೋಕಾರಾಧನ) ಎಂದು ಹೆಸರು. ಇದನ್ನು ಮಾಡಲೇಬೇಕು.
ನ ಶುಷ್ಕವೈರಂ ಕುರ್ವೀತ ನ ಬಾಹುಭ್ಯಾಂ ನದೀಂ ತರೇತ್ |
ಅಪಾರ್ಥಕಮನಾಯುಷ್ಯಂ ಗೋವಿಷಾಣಸ್ಯ ಭಕ್ಷಣಮ್ |
ದಂತಾಶ್ಚ ಪರಿಘೃಷ್ಯಂತೇ ರಸಶ್ಚಾಪಿ ನ ಲಭ್ಯತೇ ॥56॥
ಒಣವೈರವನ್ನು ಮಾಡಬಾರದು. ಬಾಹುಗಳಿಂದ ನದಿಯನ್ನು ದಾಟಬಾರದು. ಹಸುವಿನ ಕೊಂಬನ್ನು ತಿನ್ನುವುದರಿಂದ ಏನೂ ಪ್ರಯೋಜನವಿಲ್ಲ. ಆಯುಷ್ಯ ಹಾಳಾಗುತ್ತದೆ, ಹಲ್ಲುಗಳಿಗೆ ಘರ್ಷಣೆಯಾಗುತ್ತದೆ. ರಸವು ಸಿಗುವುದಿಲ್ಲ.
ತ್ರಿವರ್ಗೇ ತ್ರಿವಿಧಾ ಪೀಡಾ ಅನುಬಂಧಸ್ತಥೈವ ಚ |
ಅನುಬಂಧಂ ತಥಾ ಜ್ಞಾತ್ವಾ ಪೀಡಾಂ ಹಿ ಪರಿವರ್ಜಯೇತ್ ॥57॥
ತ್ರಿವರ್ಗದಲ್ಲಿ=ಧರ್ಮ-ಅರ್ಥ-ಕಾಮ ಈ ಮೂರರ ವಿಷಯದಲ್ಲಿ ಮೂರು ಪೀಡೆಗಳು. ಮೂರು ಅನುಬಂಧಗಳು. (1) ಸಂಪಾದಿಸದೆ

ಇರುವುದು (2) ಸಂಪಾದಿಸಿದ ಸಂಪತ್ತಿನ ರಕ್ಷಣೆ ಮಾಡದಿರುವುದು (3) ರಕ್ಷಣೆ ಮಾಡಿದ್ದರೂ ಕೊನೆಗೆ ನಾಶ- ಇವು ಪೀಡೆಗಳು (ಮೂರ್ಖತನ, ಲೋಭ, ದೌರ್ಬಲ್ಯಗಳು ಎಂದೂ ಹೇಳುತ್ತಾರೆ). (1) ಸಂಪಾದನೆ, (2) ರಕ್ಷಣೆ (3) ಮರಣಪರ್ಯಂತ ಪರಿಪಾಲನೆ- ಇವು ಅನುಬಂಧ (ಚಿತ್ತಶುದ್ಧಿ, ಯಜ್ಞಾದಿ ಕರ್ಮಗಳು, ಉಪಭೋಗ ಎಂದೂ ಹೇಳುತ್ತಾರೆ). ಅನುಬಂಧಗಳು ಶುಭ. ಪೀಡೆಗಳನ್ನು ಪರಿತ್ಯಜಿಸಬೇಕು.

ಋಣಶೇಷೋಗ್ನಿಶೇಷಶ್ಚ ಶತ್ರುಶೇಷಸ್ತಥೈವ ಚ |
ಪುನಃ ಪುನರ್ವಿವರ್ಧೇತ ಸ್ವಲ್ಪೋಽಪಿ ಹ್ಯನಿವಾರಿತಃ ॥58॥

ಋಣಶೇಷ, ಅಗ್ನಿಶೇಷ ಮತ್ತು ಶತ್ರುಶೇಷ- ಇವುಗಳನ್ನು ಸ್ವಲ್ಪವೂ ಉಳಿಸಬಾರದು. ಸ್ವಲ್ಪವೇ ಉಳಿದರೂ ಅವು ಮತ್ತೆ ಬೆಳೆಯುತ್ತವೆ.

ವರ್ಧಮಾನಮೃಣಂ ತಿಷ್ಠತ್ ಪರಿಭೂತಾಶ್ಚ ಶತ್ರವಃ |
ಆವಹಂತ್ಯನಯಂ ತೀವ್ರಂ ವ್ಯಾಧಯಶ್ಚಾಪ್ಯುಪೇಕ್ಷಿತಾಃ ॥59॥

ಉಳಿದ ಋಣವು, ಸೋಲಿಸಲ್ಪಟ್ಟ ಶತ್ರುಗಳೂ, ಉಪೇಕ್ಷಿಸಲ್ಪಟ್ಟ (ಪರಿಹಾರ ಕ್ರಮವನ್ನು ಕೈಗೊಳ್ಳದೆ ಬಿಟ್ಟ) ವ್ಯಾಧಿಗಳೂ ಬೆಳೆದು ತೀವ್ರ ಹಾನಿಯನ್ನುಂಟು ಮಾಡುತ್ತವೆ.

ನಾಸಮ್ಯಕ್ಕೃತಕಾರೀ ಸ್ಯಾದಪ್ರಮತ್ತಃ ಸದಾ ಭವೇತ್ |
ಕಂಟಕೋಽಪಿ ಹಿ ದುಶ್ಛಿನ್ನೋ ವಿಕಾರಂ ಕುರುತೇ ಚಿರಮ್ ॥60॥

ಶತ್ರುವಿನಾಶವನ್ನು ಸರಿಯಾಗಿ ಮಾಡಬೇಕು. ಕೆಟ್ಟ ರೀತಿಯಲ್ಲಿ ಮಾಡಬಾರದು. ಯಾವಾಗಲೂ ಜಾಗರೂಕನಾಗಿರಬೇಕು. ಕೆಟ್ಟದಾಗಿ ಕತ್ತರಿಸಲ್ಪಟ್ಟ ಕಂಟಕವು ದೀರ್ಘಕಾಲ ತೊಂದರೆಯುಂಟು ಮಾಡುತ್ತದೆ (ಮುಳ್ಳನ್ನು ಬೇರುಸಹಿತ ಕಿತ್ತದಿದ್ದರೆ ಉಳಿದ ಮುಳ್ಳು ದೀರ್ಘಕಾಲ ತೊಂದರೆ ಕೊಡುತ್ತದೆ).

ವಧೇನ ಚ ಮನುಷ್ಯಾಣಾಂ ಮಾರ್ಗಾಣಾಂ ದೂಷಣೇನ ಚ |
ಆಕರಾಣಾಂ ವಿನಾಶೈಶ್ಚ ಪರರಾಷ್ಟ್ರಂ ವಿನಾಶಯೇತ್ ॥61॥

ಪರರಾಷ್ಟ್ರವನ್ನು, ಆ ರಾಷ್ಟ್ರದ ಪ್ರಜೆಗಳನ್ನು (ಕಾರ್ಯನಿರತರನ್ನು) ಕೊಂದು ಮಾರ್ಗಗಳನ್ನು ಹಾಳು ಮಾಡಿ, ಸರಬರಾಜುಗಳ ಮೂಲವನ್ನು ನಾಶಮಾಡಿ ನಾಶ ಮಾಡಬೇಕು.

ಗೃಧ್ರದೃಷ್ಟಿರ್ಬಕಾಲೀನಃ ಸಚೇಷ್ಟಃ ಸಿಂಹವಿಕ್ರಮಃ |
ಅನುದ್ವಿಗ್ನಃ ಕಾಕಶಂಕೀ ಭುಜಂಗಚರಿತಂ ಚರೇತ್ ॥62॥

ಹದ್ದಿನ ದೃಷ್ಟಿವುಳ್ಳವನಾಗಿ (ದೂರದರ್ಶಿಯಾಗಿ), ಬಕಪಕ್ಷಿಯಂತೆ ನಿಶ್ಚಲನಾಗಿದ್ದು (ಏಕಾಗ್ರತೆ ಮತ್ತು ಶತ್ರುವಿಗೆ ಗೊತ್ತಾಗದಂತೆ ಕಾರ್ಯಾಚರಣೆ), ಕಾರ್ಯಾಚರಣೆ ಮಾಡುವಾಗ ಸಿಂಹದಂತೆ ವಿಕ್ರಮವನ್ನು ತೋರಿ (ಶ್ವಚೇಷ್ಟಃ=ನಾಯಿಯಂತೆ ಜಾಗರೂಕನಾಗಿ), ಉದ್ವೇಗರಹಿತನಾಗಿ, ಕಾಗೆಯಂತೆ ಶತ್ರುವಿನ ಇಂಗಿತವನ್ನು ತಿಳಿದು, ಸರ್ಪದಂತೆ ವರ್ತಿಸಬೇಕು (ಇದ್ದಕ್ಕಿದ್ದಂತೆ ಪೂರ್ವಸೂಚನೆಯಿಲ್ಲದೆ ಶತ್ರುವಿನ ಕೋಟೆ ಮೊದಲಾದವುಗಳಲ್ಲಿ ಪ್ರವೇಶಿಸಬೇಕು).

ಶ್ರೇಣಿಮುಖ್ಯೋಪಜಾಪೇಷು ವಲ್ಲಭಾನುನಯೇಷು ಚ |
ಅಮಾತ್ಯಾನ್ ಪರಿರಕ್ಷೇತ ಭೇದಸಂಘಾತಯೋರಪಿ ॥63॥

ದಳಗಳ ನಾಯಕರಲ್ಲಿ ಒಡಕು ಉಂಟಾದಾಗ, ಮಿತ್ರರನ್ನು ಒಲೈಸುವಾಗ, ಒಡಕು- ಸಂಘರ್ಷಗಳು ಉಂಟಾಗುವ ಸಂದರ್ಭಗಳಲ್ಲಿ ಅಮಾತ್ಯರನ್ನು (ಅವರು ರಾಜ ವಿರೋಧಿಗಳಾಗದಂತೆ) ಕಾಯಬೇಕು.

ಮೃದುರಿತ್ಯವಮನ್ಯಂತೇ ತೀಕ್ಷ್ಣ ಇತ್ಯುದ್ವಿಜಂತಿ ಚ |
ತೀಕ್ಷ್ಣಕಾಲೇ ಚ ತೀಕ್ಷ್ಣಃ ಸ್ಯಾನ್ಮೃದುಕಾಲೇ ಮೃದುರ್ಭವೇತ್ ॥64॥

ರಾಜನು ಮೃದುವಾಗಿದ್ದರೆ, ಆ ಕಾರಣದಿಂದಲೇ ಅವಹೇಳನ ಮಾಡುತ್ತಾರೆ. ತೀಕ್ಷ್ಣನಾಗಿದ್ದರೆ ಅದೇ ಕಾರಣದಿಂದಲೇ ಉದ್ವೇಗಕ್ಕೆ ಒಳಗಾಗುತ್ತಾರೆ. ಆದ್ದರಿಂದ ರಾಜನು ತೀಕ್ಷ್ಣನಾಗಿರಬೇಕಾದ ಕಾಲದಲ್ಲಿ ತೀಕ್ಷ್ಣನಾಗಿರಬೇಕು. ಮೃದುವಾಗಿರಬೇಕಾದ ಕಾಲದಲ್ಲಿ ಮೃದುವಾಗಿರಬೇಕು.

ಮೃದುನಾ ಸುಮೃದುಂ ಹಂತಿ ಮೃದುನಾ ಹಂತಿ ದಾರುಣಮ್ |
ನಾಸಾಧ್ಯಂ ಮೃದುನಾ ಕಿಂಚಿತ್ತಸ್ಮಾತ್ತೀಕ್ಷ್ಣತರಂ ಮೃದು ॥65॥

ಮೃದು ವಿಧಾನಗಳಿಂದಲೇ ಮೃದು ಶತ್ರುವನ್ನು ಕೊಲ್ಲುತ್ತಾರೆ. ಮೃದು ವಿಧಾನಗಳಿಂದ ದಾರುಣ ಶತ್ರುವನ್ನೂ ಕೊಲ್ಲುತ್ತಾರೆ. ಮೃದುವಿಧಾನದಿಂದ ಸಾಧಿಸಲು ಆಗದ ಕೆಲಸ ಯಾವುದೂ ಇಲ್ಲ. ಆದ್ದರಿಂದ ಮೃದು ವಿಧಾನಗಳು ಅತಿತೀಕ್ಷ್ಣ. ಲಕ್ಷಾಲಂಕಾರ ಮೃದುವಾದ ಹುಳಿರಸದಿಂದ ಮೃದುವಾದ ಹಾಲನ್ನು ಕೊಲ್ಲುತ್ತಾರೆ. ಖಡ್ಗದ ಅಲಗಿನ ಮೇಲಿನ ನೀರಿನಿಂದ ದಾರುಣವಾದ ಆನೆಯ ತಲೆಯನ್ನು ನಾಶ ಮಾಡುತ್ತಾರೆ. ಸೋಲಿಸಲಾಗದ ಶತ್ರುವನ್ನು ಮೃದು ವಚನಗಳಿಂದ ಸೋಲಿಸುತ್ತಾರೆ.

ಕಾಲೇ ಮೃದುರ್ಯೋ ಭವತಿ ಕಾಲೇ ಭವತಿ ದಾರುಣಃ |
ಸ ಸಾಧಯತಿ ಕೃತ್ಯಾನಿ ಶತ್ರೂಂಶ್ಚೈವಾಧಿತಿಷ್ಠತಿ ॥66॥

ಯಾರು ಸಮಯಕ್ಕೆ ತಕ್ಕಂತೆ ಮೃದುವಾಗುತ್ತಾನೋ, ದಾರುಣನಾಗುತ್ತಾನೋ ಅವನು ತನ್ನ ಕಾರ್ಯಗಳನು ಸಾಧಿಸುತ್ತಾನೆ. ಶತ್ರುಗಳ ಮೇಲೇರಿ ನಿಲ್ಲುತ್ತಾನೆ.

ಪಂಡಿತೇನ ವಿರುದ್ಧಃ ಸನ್ ದೂರೇಽಸ್ಮೀತಿ ನ ವಿಶ್ವಸೇತ್ |
ದೀರ್ಘೌ ಬುದ್ಧಿಮತೋ ಬಾಹೂ ಯಾಭ್ಯಾಂ ಹಿಂಸತಿ ಹಿಂಸಿತಃ ॥67॥

ಜಾಣನೊಂದಿಗೆ ವಿರೋಧವನ್ನು ಮಾಡಿಕೊಂಡು, `ಅವನಿಂದ ದೂರವಿದ್ದೇನೆ, ಏನೂ ಅಪಾಯವಿಲ್ಲ' ಎಂಬ ನಂಬಿಕೆಯಿಂದ ಇರಬಾರದು. ಜಾಣನ ಬಾಹುಗಳು ಬಹಳ ಉದ್ದ. ಹಿಂಸೆಗೆ ಗುರಿಯಾದ ಜಾಣನು ತನ್ನ ಬುದ್ಧಿ ಬಾಹುಗಳಿಂದ ಸೇಡು ತೀರಿಸಿಕೊಳ್ಳುತ್ತಾನೆ (ಉಪಾಯ ಮತ್ತು ಪ್ರಯತ್ನಗಳು ಜಾಣನ ಎರಡು ಬಾಹುಗಳು).

ನ ತತ್ತರೇದ್ಯಸ್ಯ ನ ಪಾರಮುತ್ತರೇ-
ನ್ನ ತದ್ಧರೇದ್ಯತ್ ಪುನರಾಹರೇತ್ ಪರಃ |
ನ ತತ್ಖನೇದ್ಯಸ್ಯ ನ ಮೂಲಮುತ್ಖನೇ-
ನ್ನ ತಂ ಹನ್ಯಾದ್ಯಸ್ಯ ಶಿರೋ ನ ಪಾತಯೇತ್ ||68||

ಯಾವ ನದಿಯ ದಡಕ್ಕೆ ಸೇರಲಾಗುವುದಿಲ್ಲವೋ ಆ ನದಿಯನ್ನು ದಾಟಬಾರದು. ಶತ್ರುವು ಪುನಃ ವಶಪಡಿಸಿಕೊಳ್ಳಬಹುದಾದ ಸಂಪತ್ತನ್ನು ಶತ್ರುವಿನಿಂದ ಅಪಹರಿಸಬಾರದು. ಯಾವ ಮರದ ಬೇರನ್ನು ಮೇಲೆ ಎತ್ತಲು ಸಾಧ್ಯವಿಲ್ಲವೋ ಆ ಮರದ ಬುಡವನ್ನು ಅಗೆಯಬಾರದು. ಯಾರ ತಲೆಯನ್ನು ಕೆಳಗೆ ಉರುಳಿಸಲು ಅಸಾಧ್ಯವೋ ಅಂತಹವನ ಮೇಲೆ ಪ್ರಹಾರ ಮಾಡಬಾರದು.

ಇತೀದಮುಕ್ತಂ ವೃಜಿನಾಭಿಸಂಹಿತಂ
ನ ಚೈತದೇವಂ ಪುರುಷಃ ಸಮಾಚರೇತ್ |
ಪರಪ್ರಯುಕ್ತಂ ತು ಕಥಂ ನಿಶಾಮಯೇ-
ದತೋ ಮಯೋಕ್ತಂ ಭವತೋ ಹಿತಾರ್ಥಿನಾ ||69||

ಇಲ್ಲಿಯವರೆಗೂ ಹೇಳಿದ ನೀತಿಯಲ್ಲಿ ಪಾಪವು ತುಂಬಿದೆ. ಯಾವುದೇ ಪುರುಷನು ಹೀಗೆ ಮಾಡಬಾರದು. ಆದರೆ ಶತ್ರುವು ಈ ನೀತಿಯನ್ನು ಪ್ರಯೋಗಿಸಿದರೆ ಹೇಗೆ ನೋಡಬೇಕು? ಆದ್ದರಿಂದ ನಿನ್ನ ಹಿತಕ್ಕಾಗಿ ಈ ನೀತಿಯನ್ನು ನಿನಗೆ ಹೇಳಿದ್ದೇನೆ.

ಯಥಾವದುಕ್ತಂ ವಚನಂ ಹಿತಂ ತದಾ
ನಿಶಮ್ಯ ವಿಪ್ರೇಣ ಸುವೀರರಾಷ್ಟ್ರಿಯಃ |
ತಥಾಕರೋದ್ ವಾಕ್ಯಮದೀನಚೇತನಃ
ಶ್ರಿಯಂ ಚ ದೀಪ್ತಾಂ ಬುಭುಜೇ ಸಬಾಂಧವಃ ||70||

ಸೌವೀರ ರಾಷ್ಟ್ರದ ರಾಜನು (ಭರದ್ವಾಜ ಎಂಬ) ಬ್ರಾಹ್ಮಣನಿಂದ ಹೇಳಲ್ಪಟ್ಟ ಹಿತವಚನವನ್ನು ಕೇಳಿ, ಸೋಲದ, ಕುಸಿಯದ ಮನಸ್ಸಿನ ಆ ರಾಜನು ಹಾಗೆಯೇ ಮಾಡಿದನು. ತನ್ನ ಬಾಂಧವರೊಂದಿಗೆ ಉಜ್ವಲವಾದ ಸಂಪತ್ತನ್ನು ಅನುಭವಿಸಿದನು.

|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ದಶಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹತ್ತನೆಯ ಅಧ್ಯಾಯವು ಮುಗಿಯಿತು.

* * * *

## ಹನ್ನೊಂದನೆಯ ಅಧ್ಯಾಯ

ಮೌಲ್ಯಗಳು ನಶಿಸಿದಾಗ, ವ್ಯವಸ್ಥೆಗಳು ಕುಸಿದಾಗ, ಬದುಕು ದುರ್ಭರವಾದಾಗ ಇತಿಹಾಸ ಮತ್ತು ಧರ್ಮಸೂಕ್ಷ್ಮಗಳನ್ನು ತಿಳಿದು ಜೀವಿಸಬೇಕು. ವಿಶ್ವಾಮಿತ್ರ-ಶ್ವಪಚ ಸಂವಾದ.

ಯುಧಿಷ್ಠಿರಃ
ಹೀನೇ ಪರಮಕೇ ಧರ್ಮೇ ಸರ್ವಲೋಕಾತಿಲಂಘಿನಿ |
ಅಧರ್ಮೇ ಧರ್ಮತಾಂ ನೀತೇ ಧರ್ಮೇ ಚಾಧರ್ಮತಾಂ ಗತೇ ||1||

ಪ್ರಭುವೇ! ಪರಮಧರ್ಮವು (ಉನ್ನತ ಮೌಲ್ಯಗಳು) ನಶಿಸಿದಾಗ, ಎಲ್ಲ ಜನರೂ ಉಲ್ಲಂಘನೆಯನ್ನು ಮಾಡುತ್ತಿರುವಾಗ, ಅಧರ್ಮವು ಧರ್ಮ ಎಂದೂ, ಧರ್ಮವು ಅಧರ್ಮ ಎಂದೂ ಪರಿಗಣನೆಯನ್ನು (ಮಾನ್ಯತೆಯನ್ನು) ಪಡೆದಾಗ

ಮರ್ಯಾದಾಸು ಪ್ರಭಿನ್ನಾಸು ಕ್ಷುಭಿತೇ ಧರ್ಮನಿಶ್ಚಯೇ |
ರಾಜಭಿಃ ಪೀಡಿತೇ ಲೋಕೇ ಚೋರೈರ್ವಾಪಿ ವಿಶಾಂ ಪತೇ ||2||

ಮರ್ಯಾದೆಗಳು (ನಡವಳಿಕೆಗಳ ಇತಿಮಿತಿಗಳು) ಭಗ್ನವಾದಾಗ, ಧರ್ಮನಿರ್ಣಯವು ಕ್ಷೋಭೆಗೆ ಒಳಗಾದಾಗ, ಜನರು ರಾಜರುಗಳಿಂದ, ಕಳ್ಳರಿಂದ ಪೀಡಿತರಾದಾಗ,

ಸರ್ವಾಶ್ರಮೇಷು ಮೂಢೇಷು ಕರ್ಮಸೂಪಹತೇಷು ಚ |
ಕಾಮಾನ್ಮೋಹಾಚ್ಚ ಲೋಭಾಚ್ಚ ಭಯಂ ಪಶ್ಯತ್ಸು ಭಾರತ ||3||

ಭರತಕುಲಸಂಜಾತ! ಕಾಮ-ಮೋಹ-ಲೋಭಗಳಿಂದ ಎಲ್ಲ ಆಶ್ರಮಗಳೂ (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಗಳು) ಮೂಢಸ್ಥಿತಿಯನ್ನು ತಲುಪಿದಾಗ, ಎಲ್ಲ ಆಚರಣೆಗಳು-ಕರ್ತವ್ಯಗಳು ಭಂಗಕ್ಕೆ ಒಳಗಾದಾಗ, ಎಲ್ಲ ಕಡೆಯೂ ಭಯದ ಪರಿಸ್ಥಿತಿಯನ್ನೇ ಕಾಣುವಾಗ,

ಅವಿಶ್ವಸ್ತೇಷು ಸರ್ವೇಷು ನಿತ್ಯಭೀತೇಷು ಪಾರ್ಥಿವ |
ನಿಕೃತ್ಯಾ ಹನ್ಯಮಾನೇಷು ವಂಚಯತ್ಸು ಪರಸ್ಪರಮ್ ||4||

ರಾಜನೇ! ಎಲ್ಲರೂ ವಿಶ್ವಾಸಹೀನರಾದಾಗ, ನಿರಂತರವಾಗಿ ಹೆದರಿದಾಗ, ವಂಚನೆಯಿಂದ ಪೀಡಿತರಾಗುತ್ತಿರುವಾಗ, ಪರಸ್ಪರ ವಂಚಿಸುತ್ತಿರುವಾಗ,

ಸಂಪ್ರದೀಪ್ತೇಷು ದೇಶೇಷು ಬ್ರಾಹ್ಮಣ್ಯೇ ಚಾಭಿಪೀಡಿತೇ |
ಅವರ್ಷತಿ ಚ ಪರ್ಜನ್ಯೇ ಮಿಥೋ ಭೇದೇ ಸಮುತ್ಥಿತೇ ||5||

ನಾನಾ ಪ್ರದೇಶಗಳು ಅಗ್ನಿಯಿಂದ ಉರಿದು ಹೋಗುತ್ತಿರುವಾಗ, ಬ್ರಹ್ಮಾನ್ವೇಷಣೆಯನ್ನು ಮಾಡುವ ಮನೋಧರ್ಮವು ಉಪದ್ರವಕ್ಕೆ ಒಳಗಾದಾಗ, ಮೋಡಗಳು ಮಳೆ ಸುರಿಸದಿರುವಾಗ, ಪರಸ್ಪರ ಒಡಕು ಹುಟ್ಟಿದಾಗ,

ಸರ್ವಸ್ಮಿನ್ ದಸ್ಯುಸಾದ್ಭೂತೇ ಪೃಥಿವ್ಯಾಮುಪಜೀವನೇ |
ಕೇನ ಸ್ವಿದ್ಬ್ರಾಹ್ಮಣೋ ಜೀವೇಜ್ಜಘನ್ಯೇ ಕಾಲ ಆಗತೇ ||6||

ಲೋಕದ ಜೀವನೋಪಾಯಗಳೆಲ್ಲವೂ ಲೂಟಿಕೋರರ ವಶವಾಗಿರುವಾಗ, ಅವನತಿಯ ಕಾಲವು ಬಂದಾಗ ಬ್ರಹ್ಮನಿಷ್ಠ ಜನರು ಹೇಗೆ ಜೀವಿಸಬೇಕು?
ಅತಿತ್ಯಕ್ಷುಃ ಪುತ್ರಪೌತ್ರಾನನುಕ್ರೋಶಾನ್ನರಾಧಿಪ |
ಕಥಮಾಪತ್ಸು ವರ್ತೇತ ತನ್ಮೇ ಬ್ರೂಹಿ ಪಿತಾಮಹ ॥7॥
ಪಿತಾಮಹನೇ! ದಯಾಲುವಾಗಿದ್ದು, ಮಕ್ಕಳನ್ನು, ಮೊಮ್ಮಕ್ಕಳನ್ನು ಕೈಬಿಡಲಾಗದವನು ಆಪತ್ಕಾಲದಲ್ಲಿ ಹೇಗೆ ಜೀವಿಸಬೇಕು? ದಯವಿಟ್ಟು ತಿಳಿಸು.
ಕಥಂ ಚ ರಾಜಾ ವರ್ತೇತ ಲೋಕೇ ಕಲುಷತಾಂ ಗತೇ |
ಕಥಮರ್ಥಾಚ್ಚ ಧರ್ಮಾಚ್ಚ ನ ಹೀಯೇತ ಪರಂತಪ ॥8॥
ಪರಂತಪನೇ! ಇಡೀ ಲೋಕವು ನೀತಿ-ಪೌಲ್ಯಗಳನ್ನು ತ್ಯಜಿಸಿ ಮಲಿನವಾದಾಗ ರಾಜನು ಹೇಗೆ ವರ್ತಿಸಬೇಕು? ಅರ್ಥ (ಸಂಪತ್ತು) ಹೀನನಾಗದೆ, ಧರ್ಮಭ್ರಷ್ಟನಾಗದೆ ಇರುವ ದಾರಿ ಯಾವುದು?
ಭೀಷ್ಮಃ
ರಾಜಮೂಲಾ ಮಹಾರಾಜ ಯೋಗಕ್ಷೇಮಸುವೃಷ್ಟಯಃ |
ಪ್ರಜಾಸು ವ್ಯಾಧಯಶ್ಚೈವ ಮರಣಂ ಚ ಭಯಾನಿ ಚ ॥9॥
ಮಹಾರಾಜ! ರಾಜನು ಯೋಗ-ಕ್ಷೇಮ-ಸುವೃಷ್ಟಿ (ಒಳ್ಳೆಯ ಮಳೆ)ಗಳ ಮೂಲಕಾರಣ. ಪ್ರಜೆಗಳಲ್ಲಿ ವ್ಯಾಧಿಗಳು, ಮರಣ, ಭಯ ಇವುಗಳಿಗೂ ರಾಜನೇ ಮೂಲಕಾರಣ.
ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚ ಭರತರ್ಷಭ |
ರಾಜಮೂಲಾನಿ ಸರ್ವಾಣಿ ಮಮ ನಾಸ್ತ್ಯತ್ರ ಸಂಶಯಃ ॥10॥
ಭರತಕುಲಶ್ರೇಷ್ಠ! ಕೃತ, ತ್ರೇತಾ, ದ್ವಾಪರ, ಕಲಿ- ಇವೆಲ್ಲವುಗಳಿಗೂ ರಾಜನೇ ಮೂಲಕಾರಣ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ತಸ್ಮಿಂಸ್ತ್ವಭ್ಯಾಗತೇ ಕಾಲೇ ಪ್ರಜಾನಾಂ ದೋಷಕಾರಕೇ |
ವಿಜ್ಞಾನಬಲಮಾಸ್ಥಾಯ ಜೀವಿತವ್ಯಂ ತದಾ ಭವೇತ್ ॥11॥
ಪ್ರಜೆಗಳಿಗೆ ತೊಂದರೆ ಮಾಡುವ ಆ ಕಾಲವು (ಕಲಿಕಾಲವು) ಬಂದಾಗ ವಿಜ್ಞಾನ ಬಲವನ್ನು (ಇತಿಹಾಸ-ಧರ್ಮಸೂಕ್ಷ್ಮಗಳ ಜ್ಞಾನದ ಬಲವನ್ನು) ಅವಲಂಬಿಸಿ ಜೀವಿಸಬೇಕು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವಿಶ್ವಾಮಿತ್ರಸ್ಯ ಸಂವಾದಂ ಚಂಡಾಲಸ್ಯ ಚ ಪಕ್ಕಣೇ ॥12॥
ಈ ವಿಷಯದಲ್ಲಿ ಬೇಡನ ಮನೆಯೊಂದರಲ್ಲಿ ನಡೆದ ಪುರಾತನವಾದ ವಿಶ್ವಾಮಿತ್ರ- ಬೇಡರ ಸಂವಾದವನ್ನು ಹೇಳುತ್ತಾರೆ.
ತ್ರೇತಾದ್ವಾಪರಯೋಃ ಸಂಧೌ ಪುರಾ ದೈವವಿಧಿಕ್ರಮಾತ್ |
ಅನಾವೃಷ್ಟಿರಭೂದ್ ಘೋರಾ ರಾಜನ್ ದ್ವಾದಶವಾರ್ಷಿಕೀ ॥13॥
ರಾಜನ್! ಹಿಂದೆ ತ್ರೇತಾ-ದ್ವಾಪರಗಳ ಸಂಧಿಕಾಲದಲ್ಲಿ ದೈವಕೃತ ಶಾಸನದಂತೆ ಹನ್ನೆರಡು ವರ್ಷ ಘೋರ ಅನಾವೃಷ್ಟಿಯು ಸಂಭವಿಸಿತು.
ಪ್ರಜಾನಾಮಭಿವೃದ್ಧಾನಾಂ ಯುಗಾಂತೇ ಪರ್ಯುಪಸ್ಥಿತೇ |
ತ್ರೇತಾನಿರ್ಮೋಕ್ಷಸಮಯೇ ದ್ವಾಪರಪ್ರತಿಪಾದನೇ ॥14॥
ನ ವವರ್ಷ ಸಹಸ್ರಾಕ್ಷಃ ಪ್ರತಿಲೋಮೋಽಭವದ್ ಗುರುಃ |
ಜಗಾಮ ದಕ್ಷಿಣಂ ಮಾರ್ಗಂ ಸೋಮೋ ವ್ಯಾವೃತ್ತಲಕ್ಷಣಃ ॥15॥
ತ್ರೇತಾಯುಗವು ಮುಗಿಯುವ, ದ್ವಾಪರ ಯುಗವು ಪ್ರಾರಂಭವಾಗುವ, ಪ್ರಜೆಗಳ ಸಮೃದ್ಧಿ ಯುಗದ ಅಂತ್ಯವು ಸಮೀಪಿಸಿದಾಗ ಇಂದ್ರನು ಮಳೆ ಸುರಿಸಲಿಲ್ಲ. ಗುರುವು ವಕ್ರಗತಿಯಲ್ಲಿದ್ದನು. ಚಂದ್ರನು ಹಿನ್ನಡೆಯ ಲಕ್ಷಣವನ್ನು ಪಡೆದು ದಕ್ಷಿಣ ದಿಕ್ಕಿಗೆ ಚಲಿಸಿದನು.
ನಾವಶ್ಯಾಯೋಽಪಿ ರಾತ್ರ್ಯಂತೇ ಕುತ ಏವಾಭ್ರರಾಜಯಃ |
ನದ್ಯಃ ಸಂಕ್ಷಿಪ್ತತೋಯೌಘಾಃ ಕ್ವಚಿದಂತರ್ಗತಾಭವನ್ ॥16॥
ರಾತ್ರಿಯ ಕೊನೆಯಲ್ಲಿ ಇಬ್ಬನಿಯೂ ಇರಲಿಲ್ಲ. ಮೋಡದ ಸಾಲುಗಳಿಂದ ಎಲ್ಲಿಂದ? ನದಿಗಳಲ್ಲಿ ನೀರಿನ ರಾಶಿಯು ಕಡಿಮೆಯಾಗಿ, ಅವು ಎಲ್ಲಿಯೋ ಅಡಗಿ ಹೋದವು.
ಸರಾಂಸಿ ಸರಿತಶ್ಚೈವ ಕೂಪಾಃ ಪ್ರಸ್ರವಣಾನಿ ಚ |
ಹತತ್ವಿಟ್ಕಾನ್ಯಲಕ್ಷ್ಯಂತ ವಿಸರ್ಗಾದ್ ಪೂರ್ವಕಾರಿತಾತ್ ॥17॥
ಹಿಂದೆ ಆಗಿದ್ದ ಸೃಷ್ಟಿಗೆ ವಿರುದ್ಧವಾದ ಸೃಷ್ಟಿಯಿಂದ ಸರೋವರಗಳು, ನದಿಗಳು, ಭಾವಿಗಳು, ಚಿಲುಮೆಗಳು ಕಾಂತಿಹೀನವಾಗಿದ್ದವು.
ಉಪಶುಷ್ಕಜಲಸ್ಥಾಯಾ ವಿನಿವೃತ್ತಸಭಾಪ್ರಪಾ |
ನಿವೃತ್ತಯಜ್ಞಸ್ವಾಧ್ಯಾಯಾ ನಿರ್ವಷಟ್ಕಾರಮಂಗಲಾ ॥18॥
ಉತ್ಸನ್ನಕೃಷಿಗೋರಕ್ಷ್ಯಾ ನಿವೃತ್ತವಿಪಣಾಪಣಾ |
ನಿವೃತ್ತಪೂಗಸಮಯಾ ಸಂಪ್ರನಷ್ಟಮಹೋತ್ಸವಾ ॥19॥
ಜಲಸ್ಥಾನಗಳು ಒಣಗಿದ್ದವು. ಸಭೆ, ಅರವಟ್ಟಿಗೆಗಳು ನಿಂತುಹೋಗಿದ್ದವು. ಯಜ್ಞ ಮತ್ತು ವೇದಾಧ್ಯಯನಗಳೂ, ವಷಟ್ಕಾರದ ಮಂಗಳ ಸಂದರ್ಭಗಳೂ ನಿಂತು ಹೋಗಿದ್ದವು. ಕೃಷಿ-ಗೋರಕ್ಷಣೆಗಳು ನಾಶವಾಗಿದ್ದವು. ಕ್ರಯ-ವಿಕ್ರಯಗಳು ನಿಂತು ಹೋಗಿದ್ದವು. ಸಾಮಗ್ರಿಗಳ ಸಂಗ್ರಹವೂ ನಿಂತುಹೋಗಿತ್ತು. ಮಹೋತ್ಸವಗಳು ನಡೆಯುತ್ತಿರಲಿಲ್ಲ.
ಅಸ್ಥಿಕಂಕಾಲಸಂಕೀರ್ಣಾ ಹಾಹಾಭೂತಜನಾಕುಲಾ |

ಶೂನ್ಯಭೂಯಿಷ್ಠನಗರಾ ದಗ್ಧಗ್ರಾಮನಿವೇಶನಾ ॥20॥
ಪೃಥ್ವಿಯಲ್ಲಿ ಎಲ್ಲ ಕಡೆ ಅಸ್ಥಿಗಳು (ಕೈ-ಕಾಲು ಮೊದಲಾದವುಗಳ ಎಲುಬುಗಳು), ಕಂಕಾಲಗಳು (ಶರೀರದ ಬೇರೆ ಭಾಗಗಳ ಎಲುಬುಗಳು) ಚದುರಿದ್ದವು. ಜನರು ಹಾಹಾಕಾರಕ್ಕೆ ಒಳಗಾಗಿದ್ದರು. ನಗರಗಳು ಖಾಲಿ ಖಾಲಿಯಾಗಿದ್ದವು. ಗ್ರಾಮಗಳೂ, ಮನೆಗಳೂ ಸುಟ್ಟು ಹೋಗಿದ್ದವು.
ಕ್ವಚಿಚ್ಚೋರೈಃ ಕ್ವಚಿಚ್ಛಸ್ತ್ರೈಃ ಕ್ವಚಿದ್ರಾಜಭಿರಾತುರೈಃ ।
ಪರಸ್ಪರಭಯಾಚ್ಚೈವ ಶೂನ್ಯಭೂಯಿಷ್ಠನಿರ್ಜನಾ ॥21॥
ಕೆಲವು ಕಡೆ ಕಳ್ಳರಿಂದ, ಕೆಲವು ಕಡೆ ಶಸ್ತ್ರಧಾರಿಗಳಿಂದ, ಕೆಲವು ಕಡೆ ರಾಜರುಗಳಿಂದ, ಕೆಲವು ಕಡೆ ಕ್ಲೇಶಕ್ಕೆ ಒಳಗಾದವರಿಂದ ಉಪದ್ರವಕ್ಕೆ ಒಳಗಾದ ಭೂಮಿಯು ಜನರಹಿತವಾಗಿ ಖಾಲಿಖಾಲಿಯಾಗಿತ್ತು.
ಗತದೈವತಸಂಕಲ್ಪಾ ವೃದ್ಧಬಾಲವಿನಾಕೃತಾ ।
ಗೋಜಾವಿಮಹಿಷೈರ್ಹೀನಾ ಪರಸ್ಪರಹರಾಹರಾ ॥22॥
ದೇವಮಂದಿರಗಳು ನಾಶವಾಗಿದ್ದವು. ವೃದ್ಧರೂ, ಬಾಲರೂ ಇರಲಿಲ್ಲ. ಗೋವುಗಳು, ಕುರಿಗಳೂ, ಮೇಕೆಗಳೂ, ಎಮ್ಮೆಗಳೂ ಇರಲಿಲ್ಲ. ಇದ್ದ ಜನಗಳು, ಪ್ರಾಣಿಗಳು ಪರಸ್ಪರ ಕಚ್ಚಾಡುತ್ತಿದ್ದರು.
ಹತವಿಪ್ರಾ ಹತಾರಕ್ಷಾ ಪ್ರನಷ್ಟೌಷಧಿಸಂಚಯಾ ।
ಶ್ಯಾವಭೂತನರಪ್ರಾಯಾ ಬಭೂವ ವಸುಧಾ ತದಾ ॥23॥
ಆಗ ಭೂಮಿಯಲ್ಲಿ ವಿಪ್ರರು ನಾಶವಾಗಿದ್ದರು. ರಕ್ಷಕರು ಇರಲಿಲ್ಲ. ಆಹಾರ ಧಾನ್ಯಗಳ, ಹಣ್ಣು-ಹಂಪಲುಗಳ ರಾಶಿ ಕಾಣದಂತಾಗಿತ್ತು. ಜನರೆಲ್ಲ ತಪಿಸಿ, ತಪಿಸಿ ಕಪ್ಪಾಗಿದ್ದರು. ಶವದಂತಾಗಿದ್ದರು.
ತಸ್ಮಿನ್ ಪ್ರತಿಭಯೇ ಕಾಲೇ ಕ್ಷೀಣೇ ಧರ್ಮೇ ಯುಧಿಷ್ಠಿರ ।
ಬಭ್ರಮುಃ ಕ್ಷುಧಿತಾ ಮರ್ತ್ಯಾಃ ಖಾದಂತಃ ಸ್ಮ ಪರಸ್ಪರಮ್ ॥24॥
ಯುಧಿಷ್ಠಿರ! ಆ ಭಯಂಕರ ಕಾಲದಲ್ಲಿ ಧರ್ಮವು ಕ್ಷೀಣಿಸಿದ್ದಾಗ ಹಸಿವೆಯಿಂದ ಆರ್ತರಾದ ಮನುಷ್ಯರು ಒಬ್ಬರನ್ನೊಬ್ಬರು ತಿನ್ನುತ್ತಾ ಅಲೆಯುತ್ತಿದ್ದರು.
ಋಷಯೋ ನಿಯಮಾಂಸ್ತ್ಯಕ್ತ್ವಾ ಪರಿತ್ಯಕ್ತಾಗ್ನಿದೈವತಾಃ ।
ಆಶ್ರಮಾನ್ ಸಂಪರಿತ್ಯಜ್ಯ ಪರ್ಯಧಾವನ್ನಿತಸ್ತತಃ ॥25॥
ಋಷಿಗಳು ನಿಯಮಗಳನ್ನು ಪರಿತ್ಯಜಿಸಿ, ಅಗ್ನಿಯಲ್ಲಿ ದೇವತಾರಾಧನೆಯನ್ನು, ಬೇರೆ ವಿಹಿತ ದೇವತಾರಾಧನೆಯನ್ನೂ ಪರಿತ್ಯಜಿಸಿ, ಆಶ್ರಮಗಳನ್ನೂ ಪರಿತ್ಯಜಿಸಿ ಎಲ್ಲೆಲ್ಲೋ ಅಲೆದರು.
ವಿಶ್ವಾಮಿತ್ರೋಽಥ ಭಗವಾನ್ಮಹರ್ಷಿರನಿಕೇತನಃ ।
ಕ್ಷುಧಾ ಪರಿಗತೋ ಧೀಮಾನ್ ಸಮಂತಾತ್ ಪರ್ಯಧಾವತ ॥26॥
ಇದೇ ಸಮಯದಲ್ಲಿದ್ದ ಸ್ಥಿರ ವಸತಿರಹಿತರಾಗಿದ್ದ, ಧೀಮಂತರಾಗಿದ್ದ, ಭಗವಾನ್ ವಿಶ್ವಾಮಿತ್ರ ಮಹರ್ಷಿಗಳು ಹಸಿವೆಯಿಂದ ಪೀಡಿತರಾಗಿ ಎಲ್ಲೆಲ್ಲೋ ಅಲೆದಾಡಿದರು.
ಸ ಕದಾಚಿತ್ ಪರಿಪತನ್ ಶ್ವಪಚಾನಾಂ ನಿವೇಶನಮ್ ।
ಹಿಂಸ್ರಾಣಾಂ ಪ್ರಾಣಿಹಂತೄಣಾಮಾಸಸಾದ ವನೇ ಕ್ವಚಿತ್ ॥27॥
ಹೀಗೆ ಅಲೆಯುತ್ತಿದ್ದ ಅವರು ಒಮ್ಮೆ ಒಂದು ವನಪ್ರದೇಶದಲ್ಲಿ ಹಿಂಸೆಯನ್ನು ಸಹಜವಾಗಿ ಮಾಡುವ, ಪ್ರಾಣಿವಧೆಯನ್ನು ಮಾಡುವ ಶ್ವಪಚರ ನಿವೇಶನಕ್ಕೆ ಹೋದರು.
ವಿಭಿನ್ನಕಲಶಾಕೀರ್ಣಂ ಶ್ವಚರ್ಮಾಚ್ಛಾದನಾಯುತಮ್ ।
ವರಾಹಖರಭಗ್ನಾಸ್ಥಿಕಪಾಲಘಟಸಂಕುಲಮ್ ॥28॥
ಮೃತಚೇಲಪರಿಸ್ತೀರ್ಣಂ ನಿರ್ಮಲಂ ಕೃತ್ತಿಭೂಷಿತಮ್ ।
ಸರ್ಪನಿರ್ಮೋಕಮಾಲಾಭಿಃ ಕೃತಚಿಹ್ನಕುಟೀಮಠಮ್ ॥29॥
ಉಲೂಕಪಕ್ಷಧ್ವಜಿಭಿರ್ದೇವತಾಯತನೈರ್ವೃತಮ್ ।
ಲೋಹಘಂಟಾಪರಿಷ್ಕಾರಂ ಶ್ವಯೂಥಪರಿವಾರಿತಮ್ ॥30॥
ಆ ನಿವೇಶನದಲ್ಲಿ ಒಡೆದ ಮಡಕೆಗಳ ಚೂರುಗಳು ಹರಡಿದ್ದವು. ನಾಯಿಗಳ ಚರ್ಮಗಳನ್ನು ಪರದೆಯಾಗಿ ಹಾಕಿದ್ದರು. ಹಂದಿ, ಕತ್ತೆಗಳ ಮುರಿದ ಮೂಳೆಗಳು, ತಲೆ ಬುರುಡೆಗಳು, ಮಡಕೆಗಳು ತುಂಬಿದ್ದವು. ಹೆಣದ ಮೇಲಿನ ಬಟ್ಟೆಗಳನ್ನು ಹಾಕಿದ್ದರು. ಆ ನಿವೇಶನವು ಬಹಳ ಮಲಿನವಾಗಿತ್ತು. ಆನೆಯ ಚರ್ಮಗಳಿಂದ ಅಲಂಕೃತವಾಗಿತ್ತು. ಹಾವಿನ ಪೊರೆಗಳ ಮಾಲೆಗಳಿಂದ ಕುಟೀರವನ್ನು ಅಲಂಕರಿಸಿದ್ದರು. ಅಲ್ಲಿಯ ದೇವಮಂದಿರಗಳಲ್ಲಿ ಗೂಬೆಗಳ ರೆಕ್ಕೆಗಳನ್ನು ಧ್ವಜವಾಗಿ ಅಲಂಕರಿಸಿದ್ದರು. ಲೋಹದ ಘಂಟೆಗಳಿದ್ದವು. ನಾಯಿಗಳ ಗುಂಪು ಆ ಜನರ ಪರಿವಾರವಾಗಿತ್ತು.
ತತ್ ಪ್ರವಿಶ್ಯ ಕ್ಷುಧಾವಿಷ್ಟೋ ಗಾಧೇಃ ಪುತ್ರೋ ಮಹಾನೃಷಿಃ ।
ಆಹಾರಾನ್ವೇಷಣೇ ಯುಕ್ತಃ ಪರಂ ಯತ್ನಂ ಸಮಾಸ್ಥಿತಃ ॥31॥
ಹಸಿವೆಯ ಆವೇಶಕ್ಕೊಳಗಾಗಿದ್ದ, ಗಾಧಿಪುತ್ರನಾದ ಆ ಮಹರ್ಷಿಯು ಆ ನಿವೇಶನವನ್ನು ಪ್ರವೇಶಿಸಿ ಆಹಾರಾನ್ವೇಷಣೆಗೆ ಭಾರೀ ಪ್ರಯತ್ನವನ್ನೇ ಮಾಡಿದನು.
ನ ಚ ಕ್ವಚಿದವಿಂದತ್ಸ ಭಿಕ್ಷಮಾಣೋಽಪಿ ಕೌಶಿಕಃ ।
ಮಾಂಸಮನ್ನಂ ಮೂಲಫಲಮನ್ಯದ್ ವಾ ತತ್ರ ಕಿಂಚನ ॥32॥
ಕೌಶಿಕನಿಗೆ (ವಿಶ್ವಾಮಿತ್ರನಿಗೆ) ಬೇಡಿದರೂ ಮಾಂಸ, ಅನ್ನ, ಮೂಲ, ಫಲ ಅಥವಾ ಏನಾದರೂ ಆಹಾರ ಸಿಗಲಿಲ್ಲ.

ಅಹೋ ಕೃಚ್ಛ್ರಂ ಮಯಾ ಪ್ರಾಪ್ತಮಿತಿ ನಿಶ್ಚಿತ್ಯ ಕೌಶಿಕಃ |
ಪಪಾತ ಭೂಮೌ ದೌರ್ಬಲ್ಯಾತ್ತಸ್ಮಿಂಶ್ಚಂಡಾಲಪಕ್ಕಣೇ ॥33॥
ಅಯ್ಯೋ! ಎಂತಹ ಕಷ್ಟಕ್ಕೆ ಸಿಕ್ಕಿದ್ದೇನೆ ಎಂದುಕೊಳ್ಳುತ್ತಾ ಆ ಮುನಿಯು ಅಶಕ್ತಿಯಿಂದ ಆ ಚಂಡಾಲನ ನಿವೇಶನದಲ್ಲಿ ಕುಸಿದುಬಿದ್ದನು.
ಚಿಂತಯಾಮಾಸ ಸ ಮುನಿಃ ಕಿಂ ನು ಮೇ ಸುಕೃತಂ ಭವೇತ್ |
ಕಥಂ ವೃಥಾ ನ ಮೃತ್ಯುಃ ಸ್ಯಾದಿತಿ ಪಾರ್ಥಿವಸತ್ತಮ ॥34॥
ರಾಜಶ್ರೇಷ್ಠ! ಆ ಮುನಿಯು ನಾನೀಗ ಮಾಡಬಹುದಾದ ಸರಿಯಾದ ಕೆಲಸ ಯಾವುದು? ವ್ಯರ್ಥವಾಗಿ ಮೃತ್ಯುವು ಸಂಭವಿಸದಿರಲು ನಾನು ಈಗ ಏನು ಮಾಡಬೇಕು? ಎಂದು ಚಿಂತಿಸಿದನು.
ಸ ದದರ್ಶ ಶ್ವಮಾಂಸಸ್ಯ ಕುತಂತ್ರಿಕತತಿಂ ಮುನಿಃ |
ಚಂಡಾಲಸ್ಯ ಗೃಹೇ ರಾಜನ್ ಸದ್ಯಃ ಶಸ್ತ್ರಹತಸ್ಯ ಚ ॥35॥
ರಾಜನೆ! ಆ ಮುನಿಯು ಚಂಡಾಲನ ಮನೆಯಲ್ಲಿ ಆಗ ತಾನೇ ಶಸ್ತ್ರಹತವಾದ ನಾಯಿಮಾಂಸವನ್ನು ನೇತುಹಾಕಿದ್ದ ತಂತಿಯ ಬಲೆಯನ್ನು ನೋಡಿದನು.
ಸ ಚಿಂತಯಾಮಾಸ ತದಾ ಸ್ತೇಯಂ ಕಾರ್ಯಮಿತೋ ಮಯಾ |
ನ ಹೀದಾನೀಮುಪಾಯೋಽನ್ಯೋ ವಿದ್ಯತೇ ಪ್ರಾಣಧಾರಣೇ ॥36॥
ಅವನು ಆಲೋಚಿಸಿದನು `ನಾನು ಇಲ್ಲಿ ಕಳ್ಳತನವನ್ನು ಮಾಡಬೇಕು. ಪ್ರಾಣ ಉಳಿಸಿಕೊಳ್ಳಲು ಬೇರೆ ಉಪಾಯವಿಲ್ಲ'.
ಆಪತ್ಸು ವಿಹಿತಂ ಸ್ತೇಯಂ ವಿಶಿಷ್ಟಸ್ಯ ನಿಹೀನತಃ |
ಪರಸ್ಪರಂ ಭವೇತ್ ಪೂರ್ವಮಾಸ್ತೇಯಮಿತಿ ನಿಶ್ಚಯಃ ॥37॥
ಆಪತ್ಕಾಲದಲ್ಲಿ ತನಗಿಂತ ವಿಶಿಷ್ಟರ, ತನಗೆ ಸಮಾನರ ಅಥವಾ ತನಗಿಂತ ಹೀನರ ವಸ್ತುಗಳ ಅಪಹಾರವನ್ನು ಪ್ರಾಜ್ಞರು ಅಂಗೀಕರಿಸಿದ್ದಾರೆ. ಮುಂದಿನವರ, ಮುಂದಿನವರ (ಹೀನರ ಅಥವಾ ಸಮಾನರ) ವಸ್ತುಗಳನ್ನು ಅಪಹರಿಸುವ ಅವಕಾಶವಿದ್ದಾಗ ಮೊದಲಿನವರ (ಸಮಾನರ ಅಥವಾ ವಿಶಿಷ್ಟರ) ವಸ್ತುಗಳನು ಅಪಹರಿಸಬಾರದು ಎಂದು ಪ್ರಾಜ್ಞರ ನಿರ್ಣಯ.
ಹೀನಾದಾದೇಯಮಾದೌ ಸ್ಯಾತ್ ಸಮಾನಾತ್ತದನಂತರಮ್ |
ಅಸಂಭವಾದಾದದೀತ ವಿಶಿಷ್ಟಾದಪಿ ಧಾರ್ಮಿಕಾತ್ ॥38॥
ಹೀನನಾದವನ ವಸ್ತುವಿನ ಅಪಹಾರ ಮೊದಲ ಆಯ್ಕೆ. ಅದಕ್ಕೆ ಅವಕಾಶವಿಲ್ಲದಿದ್ದಾಗ ಸಮಾನನ ವಸ್ತುವಿನ ಅಪಹಾರವನ್ನು ಮಾಡಬೇಕು. ಅದಕ್ಕೂ ಅವಕಾಶವಿಲ್ಲದಿದ್ದಾಗ ಧಾರ್ಮಿಕನಾದ ವಿಶಿಷ್ಟನ ವಸ್ತುವನ್ನು ಅಪಹರಿಸಬೇಕು.
ಸೋಽಹಮಂತೇತ್ಯವಸ್ಥಾಯಾಂ ಹರಮಾಣಃ ಪರಿಗ್ರಹಾತ್ |
ನ ಸ್ತೇಯದೋಷಂ ಪಶ್ಯಾಮಿ ಹರಿಷ್ಯಾಮ್ಯೇತದಾಮಿಷಮ್ ॥39॥
ಪ್ರಾಣಗಳು ಹೋಗುವ ಸ್ಥಿತಿಯಲ್ಲಿರುವ ನಾನು ಈ ಮಾಂಸವನ್ನು ಅಪಹರಿಸುತ್ತೇನೆ. ಅಪಹರಿಸುವ ನಾನು ಕಳ್ಳತನದ ದೋಷಕ್ಕೆ ಒಳಗಾಗುವುದಿಲ್ಲ.
ಏತಾಂ ಬುದ್ಧಿಂ ಸಮಾಸ್ಥಾಯ ವಿಶ್ವಾಮಿತ್ರೋ ಮಹಾಮುನಿಃ |
ತಸ್ಮಿನ್ ದೇಶೇ ಪ್ರಸುಷ್ವಾಪ ಪತಿತೋ ಯತ್ರ ಭಾರತ ॥40॥
ಭಾರತನೇ! ಹೀಗೆ ನಿಶ್ಚಯಿಸಿ ಮಹಾಮುನಿ ವಿಶ್ವಾಮಿತ್ರನು ಶ್ವಪಚನು ಮಲಗಿದ ಜಾಗದಲ್ಲೇ ಮಲಗಿದನು.
ಸ ವಿಗಾಢಾಂ ನಿಶಾಂ ದೃಷ್ಟ್ವಾ ಸುಪ್ತೇ ಚಂಡಾಲಪಕ್ಕಣೇ |
ಶನೈರುತ್ಥಾಯ ಭಗವಾನ್ ಪ್ರವಿವೇಶ ಕುಟೀಮಥಮ್ ॥41॥
ರಾತ್ರಿಯು ಗಾಢವಾಗಿರುವುದನ್ನು ಕಂಡು, ಚಂಡಾಲರೆಲ್ಲರೂ ನಿದ್ರಿಸಿದ್ದಾಗ ಮೆಲ್ಲನೆ ಎದ್ದು ಚಂಡಾಲನ ಗುಡಿಸಲನ್ನು ಪ್ರವೇಶಿಸಿದನು.
ಸ ಸುಪ್ತ ಏವ ಚಂಡಾಲಃ ಶ್ಲೇಷ್ಮಾಪಿಹಿತಲೋಚನಃ |
ಪರಿಭಿನ್ನಸ್ವರೋ ರೂಕ್ಷ ಉವಾಚಾಪ್ರಿಯದರ್ಶನಃ ॥42॥
ಕಫದಿಂದಾಗಿ ಸ್ವಲ್ಪವೇ ಕಣ್ಣು ಮುಚ್ಚಿದ್ದ, ಗೊಗ್ಗರು ಧ್ವನಿಯ ಕಠೋರ ಸ್ವಭಾವದ, ಕುರೂಪಿಯಾದ ಚಂಡಾಲನು ಮಲಗಿಕೊಂಡೇ ಹೇಳಿದನು.
ಕಃ ಕುತಂತೀಂ ಘಟ್ಟಯತಿ ಸುಪ್ತೇ ಚಂಡಾಲಪಕ್ಕಣೇ |
ಜಾಗರ್ಮಿ ನಾವಸುಪ್ತೋಽಸ್ಮಿ ಹತೋಽಸೀತಿ ಚ ದಾರುಣಃ ॥43॥
ಚಂಡಾಲರು ನಿದ್ರಿಸಿರುವಾಗ, ತಂತಿಯಲ್ಲಿ ನೇತುಹಾಕಿರುವ ಮಾಂಸವನ್ನು ಅಪಹಾರ ಮಾಡುತ್ತಿರುವವನು ಯಾರು? ಎಚ್ಚರವಾಗಿದ್ದೇನೆ. ನಿದ್ರಿಸಿಲ್ಲ. ಈಗ ನೀನು ಸತ್ತೇ ಹೋಗುವಿ.
ವಿಶ್ವಾಮಿತ್ರೋಽಹಮಿತ್ಯೇವ ಸಹಸಾ ತಮುವಾಚ ಸಃ |
ಸಹಸಾಭ್ಯಾಗತಭಯಃ ಸೋದ್ವೇಗಸ್ತೇನ ಕರ್ಮಣಾ ॥44॥
ಆ ಕದಿಯುವ ಕೆಲಸದಿಂದಾಗಿ ಉದ್ವೇಗದಲ್ಲಿದ್ದ, ಹೆದರಿದ ವಿಶ್ವಾಮಿತ್ರನು `ನಾನು ವಿಶ್ವಾಮಿತ್ರ' ಎಂದು ಹೇಳಿದನು.
ಚಂಡಾಲಸ್ತದ್ವಚಃ ಶ್ರುತ್ವಾ ಮಹರ್ಷೇರ್ಭಾವಿತಾತ್ಮನಃ |
ಶಯನಾದುಪಸಂಭ್ರಾಂತ ಇಯೇಷ ಪತಿತುಂ ತತಃ ॥45॥
ಚಂಡಾಲನು ಶುದ್ಧಾಂತಃಕರಣದ ಮಹರ್ಷಿಯ ಮಾತನ್ನು ಕೇಳಿ ಗಡಿಬಿಡಿಯಿಂದ ಹಾಸಿಗೆಯಿಂದ ಎದ್ದು ಋಷಿಯ ಪಾದಗಳಿಗೆ ಎರಗಲು ಬಯಸಿದನು.

ಸ ವಿಸೃಜ್ಯಾಶ್ರು ನೇತ್ರಾಭ್ಯಾಂ ಬಹುಮಾನಾತ್ಕೃತಾಂಜಲಿಃ |
ಉವಾಚ ಕೌಶಿಕಂ ರಾತ್ರೌ ಬ್ರಹ್ಮನಿನ್ ಕಿಂ ತೇ ಚಿಕೀರ್ಷಿತಮ್ ॥46॥
ಚಂಡಾಲನು ಕಣ್ಣುಗಳಿಂದ ನೀರು ಹರಿಸುತ್ತಾ, ಗೌರವದಿಂದ ಕೈಮುಗಿದು ಕೌಶಿಕನಿಗೆ ಹೇಳಿದನು. `ಬ್ರಹ್ಮಜ್ಞಾನಿಗಳೇ, ನಿಮಗಾಗಿ ನಾನು ಏನು ಮಾಡಲಿ?' (ಅಥವಾ ನೀವು ಏನು ಮಾಡಲು ಬಯಸಿರುವಿರಿ?)
ವಿಶ್ವಾಮಿತ್ರಸ್ತು ಮಾತಂಗಮುವಾಚ ಪರಿಸಾಂತ್ವಯನ್ |
ಕ್ಷುಧಿತೋಽಹಂ ಗತಪ್ರಾಣೋ ಹರಿಷ್ಯಾಮಿ ಶ್ವಜಾಘನೀಮ್ ॥47॥
ವಿಶ್ವಾಮಿತ್ರನು ಚಂಡಾಲನನ್ನು ಒಲೈಸುತ್ತಾ ಹೇಳಿದನು. `ನನಗೆ ಹಸಿವು, ಪ್ರಾಣ ಹೋಗುತ್ತಿದೆ. ನಾಯಿಯ ಸೊಂಟದ ಮಾಂಸವನ್ನು ತೆಗೆದುಕೊಳ್ಳುತ್ತೇನೆ'.
ಅವಸೀದಂತಿ ಮೇ ಪ್ರಾಣಾಃ ಸ್ಮೃತಿರ್ಮೇ ನಶ್ಯತಿ ಕ್ಷುಧಾ |
ಸ್ವಧರ್ಮಂ ಬುಧ್ಯಮಾನೋಽಪಿ ಹರಿಷ್ಯಾಮಿ ಶ್ವಜಾಘನೀಮ್ ॥48॥
ಹಸಿವೆಯಿಂದ ನನ್ನ ಪ್ರಾಣಗಳು ಕುಸಿಯುತ್ತಿವೆ. ಎಚ್ಚರ ಹೋಗುತ್ತಿದೆ. ಸ್ವಧರ್ಮದ ಜ್ಞಾನವಿದ್ದರೂ ನಾಯಿ ಮಾಂಸವನ್ನು ತೆಗೆದುಕೊಳ್ಳುತ್ತೇನೆ.
ಅಟನ್ ಭೈಕ್ಷಂ ನ ವಿನ್ದಾಮಿ ಯದಾ ಯುಷ್ಮಾಕಮಾಲಯೇ |
ತದಾ ಬುದ್ಧಿಃ ಕೃತಾ ಪಾಪೇ ಹರಿಷ್ಯಾಮಿ ಶ್ವಜಾಘನೀಮ್ ॥49॥
ಆಹಾರಕ್ಕಾಗಿ ಅಲೆಯುತ್ತಾ, ಎಲ್ಲೂ ಭಿಕ್ಷೆಯು ಸಿಗದೆ, ನಿಮ್ಮ ವಸತಿಯವರೆಗೆ ಬಂದಿದ್ದೇನೆ. ಈಗ ಪಾಪಬುದ್ಧಿಯು ಹುಟ್ಟಿದೆ. ನಾಯಿ ಮಾಂಸವನ್ನು ತೆಗೆದುಕೊಳ್ಳುತ್ತೇನೆ.
ತೃಷಿತಃ ಕಲುಷಂ ಪಾತಾ ನಾಸ್ತಿ ಹ್ರೀರಶನಾರ್ಥಿನಃ |
ಕ್ಷುದ್ಧರ್ಮಂ ದೂಷಯತ್ಯತ್ರ ಹರಿಷ್ಯಾಮಿ ಶ್ವಜಾಘನೀಮ್ ॥50॥
ಬಾಯಾರಿದವನು ಮಲಿನ ನೀರನ್ನು ಕುಡಿಯುತ್ತಾನೆ. ಹಸಿದವನಿಗೆ ನಾಚಿಕೆ ಇಲ್ಲ. ಹಸಿವು ಧರ್ಮವನ್ನು ಕೆಡಿಸುತ್ತದೆ. ನಾಯಿಮಾಂಸವನ್ನು ತೆಗೆದುಕೊಳ್ಳುತ್ತೇನೆ.
ಅಗ್ನಿರ್ಮುಖಂ ಪುರೋಧಾಶ್ಚ ದೇವಾನಾಂ ಶುಚಿಪಾದ್ ವಿಭುಃ |
ಯಥಾ ಸ ಸರ್ವಭುಗ್ಬ್ರಹ್ಮಾ ತಥಾ ಮಾಂ ವಿದ್ಧಿ ಧರ್ಮತಃ ॥51॥
ಅಗ್ನಿಯು ದೇವತೆಗಳ ಬಾಯಿ, ಪುರೋಹಿತ. ಶುಚಿಯನ್ನೇ ಬಯಸುತ್ತಾನೆ. ಆ ದೇವತೆ (ಅಗ್ನಿ) ಕೆಲವು ಸಂದರ್ಭದಲ್ಲಿ ಎಲ್ಲವನ್ನೂ ತಿನ್ನುತ್ತಾನೆ. ನೀನು ನನ್ನನ್ನು ಅಗ್ನಿಯಂತೆ ಎಂದು ತಿಳಿ. ನಾನು ಬ್ರಹ್ಮನಿಷ್ಠನೇ ಆಗಿದ್ದರೂ ಈಗ ಎಲ್ಲವನ್ನೂ ತಿನ್ನುತ್ತೇನೆ. ನನ್ನನ್ನು ಧರ್ಮನಿಷ್ಠ ಬ್ರಾಹ್ಮಣ ಎಂದು ತಿಳಿ.
ತಮುವಾಚ ಸ ಚಂಡಾಲೋ ಮಹರ್ಷೇ ಶೃಣು ಮೇ ವಚಃ |
ಶ್ರುತ್ವಾ ತಥಾ ಸಮಾತಿಷ್ಠ ಯಥಾ ಧರ್ಮಾನ್ನ ಹೀಯಸೇ ॥52॥
ಚಂಡಾಲನು ಮಹರ್ಷಿಗೆ ಹೇಳಿದನು. ಮಹರ್ಷಿಯೇ! ನನ್ನ ಮಾತನ್ನು ಕೇಳಿರಿ. ಕೇಳಿದ ನಂತರ ಧರ್ಮಹೀನನಾಗದಂತೆ ಆಚರಿಸಿರಿ.
ಮೃಗಾಣಾಮಧಮಂ ಶ್ವಾನಂ ಪ್ರವದಂತಿ ಮನೀಷಿಣಃ |
ತಸ್ಯಾಪ್ಯಧಮ ಉದ್ದೇಶಃ ಶರೀರಸ್ಯ ತು ಜಾಘನೀ ॥53॥
ಪ್ರಾಣಿಗಳಲ್ಲಿ ನಾಯಿ ಅಧಮ ಎಂದು ಪ್ರಾಜ್ಞರು ಹೇಳುತ್ತಾರೆ. ಅದರ ಶರೀರದ ಜಘನದ ಮಾಂಸವು ಮತ್ತೂ ಅಧಮ ಎಂದು ಪ್ರಾಜ್ಞರು ಹೇಳುತ್ತಾರೆ.
ನೇದಂ ಸಮ್ಯಗ್ವ್ಯವಸಿತಂ ಮಹರ್ಷೇ ಕರ್ಮ ವೈಕೃತಮ್ |
ಚಂಡಾಲಸ್ವಸ್ಯ ಹರಣಮಭಕ್ಷ್ಯಸ್ಯ ವಿಶೇಷತಃ ॥54॥
ಮಹರ್ಷಿಗಳೇ! ಚಂಡಾಲನ ವಸ್ತುವಿನ ಅಪಹಾರ ಅಥವಾ ಸ್ವೀಕಾರ, ಅದರಲ್ಲೂ ತಿನ್ನಬಾರದ ವಸ್ತುವಿನ ಸ್ವೀಕಾರ - ಇದು ಸರಿಯಾದ ಕೆಲಸವಲ್ಲ. ಇದು ವಿಕೃತ ನಡವಳಿಕೆ.
ಸಾಧ್ವನ್ಯಮನುಪಶ್ಯ ತ್ವಮುಪಾಯಂ ಪ್ರಾಣಧಾರಣೇ |
ನ ಮಾಂಸಲೋಭಾತ್ ತಪಸೋ ನಾಶಸ್ತೇ ಸ್ಯಾನ್ಮಹಾಮುನೇ ॥55॥
ಮಹಾಮುನಿಯೇ! ಪ್ರಾಣಧಾರಣೆಗಾಗಿ ನೀವು ಬೇರೆ ಉಪಾಯವನ್ನು ಸರಿಯಾಗಿ ಹುಡುಕಿಕೊಳ್ಳಿ. ಮಾಂಸದ ಮೇಲೆ ಆಸೆಯಿಂದ ನಿಮ್ಮ ತಪಸ್ಸು ನಾಶವಾಗಬಾರದು.
ಜಾನತೋಽವಿಹಿತೋ ಮಾರ್ಗೋ ನ ಕಾರ್ಯೋ ಧರ್ಮಸಂಕರಃ |
ಮಾ ಸ್ಮ ಧರ್ಮಂ ಪರಿತ್ಯಾಕ್ಷೀಸ್ತ್ವಂ ಹಿ ಧರ್ಮವಿದುತ್ತಮಃ ॥56॥
ಜ್ಞಾನಿಗಳಿಗೆ ಈ ಮಾರ್ಗವು ನಿಷಿದ್ಧ. ಧರ್ಮಸಾಂಕರ್ಯವನ್ನು ಮಾಡಬಾರದು. ಧರ್ಮವನ್ನು ತಿಳಿದವರಲ್ಲಿ ಉತ್ತಮನಾಗಿರುವ ನೀವು ಧರ್ಮವನ್ನು ಬಿಡಬೇಡಿ.
ವಿಶ್ವಾಮಿತ್ರಸ್ತತೋ ರಾಜನ್ನಿತ್ಯುಕ್ತೋ ಭರತರ್ಷಭ |
ಕ್ಷುಧಾರ್ತಃ ಪ್ರತ್ಯುವಾಚೇದಂ ಪುನರೇವ ಮಹಾಮುನಿಃ ॥57॥
ಭರತಕುಲಶ್ರೇಷ್ಠ! ಹೀಗೆ ಹೇಳಲ್ಪಟ್ಟ, ಹಸಿವೆಯ ಪೀಡೆಗೆ ಒಳಗಾಗಿದ್ದ ಮಹಾಮುನಿ ವಿಶ್ವಾಮಿತ್ರನು ಪುನಃ ಈ ಮಾತನ್ನು ಹೇಳಿದನು.
ನಿರಾಹಾರಸ್ಯ ಸುಮಹಾನ್ಮಮ ಕಾಲೋಽಭಿಧಾವತಃ |
ನ ವಿದ್ಯತೇಽಭ್ಯುಪಾಯಶ್ಚ ಕಶ್ಚಿನ್ಮೇ ಪ್ರಾಣಧಾರಣೇ ॥58॥
ಆಹಾರವಿಲ್ಲದೆ ಅಲೆಯುತ್ತಾ ಬಹಳ ಕಾಲ ಕಳೆದಿದೆ. ಪ್ರಾಣಧಾರಣೆಗೆ ನನ್ನಲ್ಲಿ ಇನ್ನು ಯಾವ ಉಪಾಯವೂ ಇಲ್ಲ.

ಯೇನ ತೇನ ವಿಶೇಷೇಣ ಕರ್ಮಣಾ ಯೇನ ಕೇನಚಿತ್ |
ಅಭ್ಯುಜ್ಜೀವೇತ್ ಸೀದಮಾನಃ ಸಮರ್ಥೋ ಧರ್ಮಮಾಚರೇತ್ ॥59॥
ಹಸಿವೆಯಿಂದ ಕುಸಿಯುತ್ತಿರುವವನು ಯಾವುದಾದರೂ ಕ್ರಮದಿಂದ ಪ್ರಾಣವನ್ನು ಉಳಿಸಿಕೊಳ್ಳಬೇಕು. ಶಕ್ತನಾದ ಮೇಲೆ ಧರ್ಮವನ್ನು ಆಚರಿಸಬೇಕು.
ಐಂದ್ರೋ ಧರ್ಮಃ ಕ್ಷತ್ರಿಯಾಣಾಂ ಬ್ರಾಹ್ಮಣಾನಾಮಥಾಗ್ನಿಕಃ |
ಬ್ರಹ್ಮವಹ್ನಿರ್ಮಮ ಬಲಂ ಭೋಕ್ಷ್ಯಾಮಿ ಶಮಯನ್ ಕ್ಷುಧಮ್ ॥60॥
ಐಂದ್ರವು=ಪ್ರಜಾರಕ್ಷಣೆಯು ಕ್ಷತ್ರಿಯರ ಧರ್ಮ. ಆಗ್ನಿಕವು= ಪವಿತ್ರವಾದ ವಸ್ತುಗಳ ಮತ್ತು ಎಲ್ಲ ವಸ್ತುಗಳ ಭಕ್ಷಣವು ಬ್ರಾಹ್ಮಣರಿಗೆ ಧರ್ಮ. ನನಗೆ ವೇದವು ಅಗ್ನಿ. ಅದೇ ನನ್ನ ಬಲ. ಈಗ ಹಸಿವೆಯ ಸಮಯ. ಅದರ ಶಮನಕ್ಕಾಗಿ ತಿನ್ನುತ್ತೇನೆ.
ಯಥಾ ಯಥಾ ವೈ ಜೀವೇದ್ಧಿ ತತ್ ಕರ್ತವ್ಯಮಪೀಡಯಾ |
ಜೀವಿತಂ ಮರಣಾಚ್ಛ್ರೇಯೋ ಜೀವನ್ ಧರ್ಮಮವಾಪ್ನುಯಾತ್ ॥61॥
ಯಾವ ಯಾವ ಉಪಾಯದಿಂದ (ವಿಧಾನದಿಂದ) ಬದುಕಬಹುದೋ ಅದನ್ನು ಅಹಿಂಸೆಯಿಂದ ಮಾಡಬೇಕು. ಮರಣಕ್ಕಿಂತ ಬದುಕು ಒಳ್ಳೆಯದು. ಬದುಕಿದವನು ಧರ್ಮವನ್ನು ಸಾಧಿಸಬಹುದು.
ಸೋಽಹಂ ಜೀವಿತಮಾಕಾಂಕ್ಷನ್ನಭಕ್ಷಸ್ಯಾಪಿ ಭಕ್ಷಣಮ್ |
ವ್ಯವಸ್ಯೇ ಬುದ್ಧಿಪೂರ್ವಂ ವೈ ತದ್ಭವಾನನುಮನ್ಯತಾಮ್ ॥62॥
ಬದುಕನ್ನು ಬಯಸುತ್ತಿರುವ ಈ ನಾನು ತಿನ್ನಬಾರದ (ನಾಯಿಮಾಂಸದ) ಭಕ್ಷಣವನ್ನು ಮಾಡುತ್ತೇನೆ. ನೀನು ಒಪ್ಪಿಗೆ ಕೊಡು.
ಜೀವನ್ ಧರ್ಮಂ ಚರಿಷ್ಯಾಮಿ ಪ್ರಣೋತ್ಸ್ಯಾಮ್ಯಶುಭಾನಿ ಚ |
ತಪೋಭಿರ್ವಿದ್ಯಯಾ ಚೈವ ಜ್ಯೋತೀಂಷೀವ ಮಹತ್ತಮಃ ॥63॥
ಬದುಕಿ ಧರ್ಮವನ್ನು ಆಚರಿಸುತ್ತೇನೆ. ತಪಸ್ಸುಗಳಿಂದ ಮತ್ತು ವಿದ್ಯೆಯಿಂದ ಪಾಪಗಳನ್ನು ಪರಿಹರಿಸಿಕೊಳ್ಳುತ್ತೇನೆ. ಬೆಳಕುಗಳು ಗಾಢ ಕತ್ತಲನ್ನು ಪರಿಹರಿಸುವಂತೆ.
ಶ್ವಪಚಃ
ನೈತತ್ಖಾದನ್ ಪ್ರಾಪ್ಸ್ಯಸೇ ಪ್ರಾಣಮದ್ಯ
ನಾಯುರ್ದೀರ್ಘಂ ನಾಮೃತಸ್ಯೇವ ತೃಪ್ತಿಮ್ |
ಭಿಕ್ಷಾಮನ್ಯಾಂ ಭಿಕ್ಷ ಮಾ ತೇ ಮನೋಽಸ್ತು
ಶ್ವಭಕ್ಷಣೇ ಶ್ವಾ ಹ್ಯಭಕ್ಷ್ಯೋ ದ್ವಿಜಾನಾಮ್ ॥64॥
ಈಗ ಇದನ್ನು ತಿಂದು ನೀನು ಪ್ರಾಣವನ್ನು ಉಳಿಸಿಕೊಳ್ಳುವುದಿಲ್ಲ. ದೀರ್ಘ ಆಯುಷ್ಯವನ್ನೂ ಪಡೆಯುವುದಿಲ್ಲ. ನೀರಿನಿಂದ ಅಥವಾ ಅಮೃತದಿಂದ ಸಿಗುವ ತೃಪ್ತಿಯೂ ಲಭಿಸುವುದಿಲ್ಲ. ಬೇರೆ ಭಿಕ್ಷೆಯನ್ನು ಬೇಡು. ನಾಯಿಮಾಂಸದ ಭಕ್ಷಣಕ್ಕೆ ಮನಸ್ಸು ಮಾಡಬೇಡ. ವಿಪ್ರರು ನಾಯಿಯನ್ನು ತಿನ್ನಬಾರದು.
ವಿಶ್ವಾಮಿತ್ರಃ
ನ ದುರ್ಭಿಕ್ಷೇ ಸುಲಭಂ ಮಾಂಸಮದ್ಯಂ
ಶ್ವಪಾಕ ನಾನ್ನಂ ನ ಚ ಮೇಽಸ್ತಿ ವಿತ್ತಮ್ |
ಕ್ಷುಧಾರ್ತಶ್ಚಾಹಮಗತಿರ್ನಿರಾಶಃ
ಶ್ವಮಾಂಸೇ ಚಾಸ್ಮಿನ್ ಷಡ್ರಸಾನ್ ಸಾಧು ಮನ್ಯೇ ॥65॥
ಶ್ವಪಚ! ಈ ದುರ್ಭಿಕ್ಷೆಯ ಸಮಯದಲ್ಲಿ ತಿನ್ನಲು ಯೋಗ್ಯವಾದ ಮಾಂಸವು ಸುಲಭವಾಗಿ ಸಿಗುವುದಿಲ್ಲ. ಅನ್ನವೂ ಸಿಗುವುದಿಲ್ಲ. ನನ್ನಲ್ಲಿ ಹಣವಿಲ್ಲ. ಹಸಿವೆಯಿಂದ ಕಂಗಾಲಾಗಿರುವ ನಾನು ಎಲ್ಲೂ ಹೋಗಲಾರೆ. ಯಾವ ಭರವಸೆಯೂ ಇಲ್ಲ. ಈ ನಾಯಿಯ ಮಾಂಸದಲ್ಲಿ ಆರುರಸಗಳ ಸವಿಯನ್ನು ಭಾವಿಸುತ್ತಿದ್ದೇನೆ.
ಶ್ವಪಚಃ
ಪಂಚ ಪಂಚನಖಾ ಭಕ್ಷ್ಯಾ ಬ್ರಹ್ಮಕ್ಷತ್ರಸ್ಯ ವೈ ದ್ವಿಜ |
ಯದಿ ಶಾಸ್ತ್ರಂ ಪ್ರಮಾಣಂ ತೇ ಮಾಭಕ್ಷ್ಯೇ ಮಯೇ ಮಾನಸಂ ಕೃಥಾಃ ॥66॥
ಬ್ರಾಹ್ಮಣ! ಬ್ರಾಹ್ಮಣರು ಮತ್ತು ಕ್ಷತ್ರಿಯರು ಐದು ಉಗುರುಗಳಿರುವ ಐದು ಪ್ರಾಣಿಗಳನ್ನು ತಿನ್ನಬಹುದು. ನೀನು ಶಾಸ್ತ್ರವನ್ನು ಪ್ರಮಾಣವೆಂದು ತಿಳಿಯುವುದಾದರೆ ತಿನ್ನಬಾರದ್ದನ್ನು ತಿನ್ನಲು ಮನಸ್ಸು ಮಾಡಬೇಡ.
ವಿಶ್ವಾಮಿತ್ರಃ
ಅಗಸ್ತ್ಯೇನಾಸುರೋ ಜಗ್ಧೋ ವಾತಾಪಿಃ ಕ್ಷುಧಿತೇನ ವೈ |
ಅಹಮಾಪದ್ಗತಃ ಕ್ಷುಬ್ಧೋ ಭಕ್ಷಯಿಷ್ಯೇ ಶ್ವಜಾಘನೀಮ್ ॥67॥
ಹಸಿದಿದ್ದ ಅಗಸ್ತ್ಯರು ಅಸುರ ವಾತಾಪಿಯನ್ನು ತಿಂದರು. ನಾನು ಈಗ ಆಪತ್ತಿಗೆ ಒಳಗಾಗಿದ್ದೇನೆ. ಕ್ಷೋಭೆಗೆ ಒಳಗಾಗಿದ್ದೇನೆ. ನಾಯಿಯ ಜಘನ ಮಾಂಸವನ್ನು ತಿನ್ನುತ್ತೇನೆ.
ಶ್ವಪಚಃ
ಭಿಕ್ಷಾಮನ್ಯಾಮಾಹರೇತಿ ನ ಚೈತತ್ ಕರ್ತುಮರ್ಹಸಿ |
ನ ನೂನಂ ಕಾರ್ಯಮೇತದ್ವೈ ಹರ ಕಾಮಂ ಶ್ವಜಾಘನೀಮ್ ॥68॥
ಬೇರೆ ಭಿಕ್ಷೆಯನ್ನೇ ತೆಗೆದುಕೋ ಎಂದು ಹೇಳಿದ ಮೇಲೂ ಈ ಕೆಲಸವನ್ನು ದಯವಿಟ್ಟು ಮಾಡಬೇಡ. ಈ ಕೆಲಸವನ್ನು ಸರ್ವಥಾ ಮಾಡಬಾರದು. ನಾಯಿಯ ಜಘನ ಮಾಂಸವನ್ನು ದಯವಿಟ್ಟು ತೆಗೆದುಕೊಳ್ಳಬೇಡ.

ವಿಶ್ವಾಮಿತ್ರಃ
ಶಿಷ್ಟಾ ವೈ ಕಾರಣಂ ಧರ್ಮೇ ತದ್ವೃತ್ತಮನುವರ್ತಯೇ|
ಪರಾಂ ಮೇಧ್ಯಾಶನಾದೇತಾಂ ಭಕ್ಷ್ಯಾಂ ಮನ್ಯೇ ಶ್ವಜಾಘನೀಮ್ ||69||
ಧರ್ಮಾಚರಣೆಯ ವಿಷಯದಲ್ಲಿ ಶಿಷ್ಟರೇ ಪ್ರಮಾಣ. ಅವರ ವರ್ತನೆಯನ್ನು ಅನುಸರಿಸುತ್ತೇನೆ. ಈ ನಾಯಿಯ ಜಘನಮಾಂಸವನ್ನು ಯಾಗದ ಹವಿಸ್ಸಿಗಿಂತ ಹೆಚ್ಚು ಶ್ರೇಷ್ಠ ಭಕ್ಷ್ಯವೆಂದು ತಿಳಿಯುತ್ತೇನೆ.
ಶ್ವಪಚಃ
ಅಸತಾ ಯತ್ ಸಮಾಚೀರ್ಣಂ ನ ಸ ಧರ್ಮಃ ಸನಾತನಃ|
ನಾವೃತ್ತಮನುಕಾರ್ಯಂ ವೈ ಮಾ ಛಲೇನಾನೃತಂ ಕೃಥಾಃ ||70||
ಅಸತ್ಪುರುಷರು ಯಾವುದನ್ನು ಆಚರಿಸುತ್ತಾರೋ ಅದು ಸನಾತನ ಧರ್ಮವಲ್ಲ. ವಿರುದ್ಧ ವರ್ತನೆಗಳು ಅನುಕರಣೆಗೆ ಯೋಗ್ಯವಲ್ಲ. ಹಾರಿಕೆಯ ಮಾತುಗಳಿಂದ ಅಥವಾ ವಚನಗಳಿಗೆ ಮತ್ತು ಆಚರಣೆಗಳಿಗೆ ಅಸಮ್ಮತ ಅರ್ಥಗಳನ್ನು ಹೇಳುವುದರಿಂದ ತಪ್ಪು ಮಾಡಬೇಡ.
ವಿಶ್ವಾಮಿತ್ರಃ
ನ ಪಾತಕಂ ನ ಚಾವೃತ್ತಂ ಮೃಷಾ ತತ್ ಕರ್ತುಮರ್ಹಸಿ |
ಸಮೌ ಚ ಶ್ವಮೃಗೌ ಮನ್ಯೇ ತಸ್ಮಾದ್ಭಕ್ಷ್ಯಾ ಶ್ವಜಾಘನೀ ||71||
ಇದು ಪಾತಕವಲ್ಲ. ಹಿಂದೆ ನಡೆಯದ ಘಟನೆಯೂ ಅಲ್ಲ. ಆದ್ದರಿಂದ ನನ್ನ ಪ್ರವೃತ್ತಿಯನ್ನು ವಿಫಲಗೊಳಿಸಬೇಡ. ನಾಯಿ ಮತ್ತು ಜಿಂಕೆಗಳು ಸಮ ಎಂದು ಭಾವಿಸುತ್ತೇನೆ. ಆದ್ದರಿಂದ ನಾಯಿಯ ಜಾಘನಿಯು ತಿನ್ನಲು ಯೋಗ್ಯ.
ಶ್ವಪಚಃ
ಯದ್ ಬ್ರಾಹ್ಮಣಾರ್ಥೇ ಕೃತಮರ್ಥಿತೇನ
ತೇನರ್ಷಿಣಾ ತದಭಕ್ಷ್ಯಂ ನ ಕಸ್ಮಾತ್|
ಸ ವೈ ಧರ್ಮೋ ಯತ್ರ ನ ಪಾಪಮಸ್ತಿ
ಸರ್ವೈರುಪಾಯೈರ್ಹಿ ಸ ರಕ್ಷಿತವ್ಯಃ ||72||
ಬ್ರಾಹ್ಮಣನು ನನ್ನನ್ನು ಬೇಡಿದಾಗ ನಾನು ಆ ಬ್ರಾಹ್ಮಣನಿಗೆ ಏನನ್ನು ನಿಷೇಧಿಸಿದೆನೋ ಆ ವಸ್ತು ಆ ಋಷಿಗೆ ಯಾವ ಕಾರಣದಿಂದಲೂ ಅಭಕ್ಷ್ಯವಲ್ಲ. ಅದು ಭಕ್ಷ್ಯವೇ. ಪಾಪರಹಿತವಾದ ಆಚರಣೆಗಳು ಧರ್ಮವೇ. ಎಲ್ಲ ವಿಧಾನಗಳಿಂದಲೂ ಆ ಬ್ರಾಹ್ಮಣನು ರಕ್ಷಣಾರ್ಹ.
ವಿಶ್ವಾಮಿತ್ರಃ
ಮಿತ್ರಂ ಚ ಮೇ ಬ್ರಾಹ್ಮಣಶ್ಚಾಯಮಾತ್ಮಾ
ಪ್ರಿಯಶ್ಚ ಮೇ ಪೂಜ್ಯತಮಶ್ಚ ಲೋಕೇ|
ತಂ ಭರ್ತುಕಾಮೋಹಮಿಮಾಂ ಹರಿಷ್ಯೇ
ನೃಶಂಸಾನಾಮೀದೃಶಾನಾಂ ನ ಬಿಭ್ಯೇ ||73||
ಈ ಬ್ರಾಹ್ಮಣದೇಹವು ನನ್ನ ಮಿತ್ರ. ನನಗೆ ಪ್ರಿಯವೂ ಹೌದು. ಈ ದೇಹವು ಲೋಕದಲ್ಲಿ ಬಹಳ ಪೂಜ್ಯ. ಈ ದೇಹವನ್ನು ಉಳಿಸುವುದಕ್ಕಾಗಿ ನಾನು ಈ ಜಾಘನಿಯನ್ನು ಅಪಹರಿಸುವೆ. (ನನ್ನನ್ನು ನಿಷೇಧಿಸುವವರು ಕ್ರೂರರು). ಇಂತಹ ಕ್ರೂರರಿಗೆ ನಾನು ಹೆದರುವುದಿಲ್ಲ.
ಶ್ವಪಚಃ
ಕಾಮಂ ನರಾ ಜೀವಿತಂ ಸಂತ್ಯಜಂತಿ
ನ ಚಾಭಕ್ಷ್ಯೈಃ ಪ್ರತಿಕುರ್ವಂತಿ ತತ್ರ|
ಸರ್ವಾನ್ ಕಾಮಾನ್ ಪ್ರಾಪ್ನುವಂತೀಹ ವಿದ್ವನ್
ಪ್ರಿಯಸ್ವ ಕಾಮಂ ಸಹಿತಃ ಕ್ಷುಧಾ ವೈ ||74||
ಮನುಷ್ಯರು ಹಸಿವೆಯಿಂದ ಪೀಡಿತರಾಗಿ ಜೀವವನ್ನೇ ತ್ಯಜಿಸುತ್ತಾರೆ. ಅಭಕ್ಷ್ಯಗಳನ್ನು ತಿಂದು ಪರಿಹಾರ ಮಾಡಿಕೊಳ್ಳುವುದಿಲ್ಲ. ಪ್ರಾಜ್ಞನೇ! ಪ್ರಾಣಗಳ ತ್ಯಾಗದಿಂದಲೇ ಎಲ್ಲ ಅಭಿಲಾಷೆಗಳನ್ನು ಪೂರೈಸಿಕೊಳ್ಳುತ್ತಾರೆ. ಹಸಿವೆಯಲ್ಲೇ ಇದ್ದು ನಿನ್ನ ಅಭಿಲಾಷೆಗಳನ್ನು ಪೂರ್ಣಮಾಡಿಕೊ.
ವಿಶ್ವಾಮಿತ್ರಃ
ಸ್ಥಾನೇ ಭವೇತ್ ಸಂಶಯಃ ಪ್ರೇತ್ಯಭಾವೇ
ನಿಃಸಂಶಯಂ ಕರ್ಮಣೋ ವೈ ವಿನಾಶಃ|
ಅಹಂ ಪುನರ್ವರ್ತ ಇತ್ಯಾಶಯಾತ್ಮಾ
ಶುಷ್ಕಂ ರಕ್ಷ್ಯಂ ಭಕ್ಷಯಿಷ್ಯಾಮ್ಯಭಕ್ಷ್ಯಮ್ ||75||
ಈಗ ಮರಣವಾದರೆ ಅನಂತರ ಸಿಗುವ ಸ್ಥಾನದ ಬಗ್ಗೆ ಸಂಶಯವುಂಟಾಗುತ್ತದೆ. ಈಗ ಮರಣವಾದರೆ ಪುಣ್ಯಕರ್ಮಗಳನ್ನು ಮಾಡುವ ಅವಕಾಶವು ತಪ್ಪಿ ಹೋಗುತ್ತದೆ. ನಾನು ಇನ್ನು ಇರಬೇಕು, ಸತ್ಕರ್ಮಗಳನ್ನು ಆಚರಿಸಬೇಕು ಎಂದು ಆಶೆವುಳ್ಳವನು. ಆದ್ದರಿಂದ ಸತ್ಕರ್ಮಾಚರಣೆಗೆ ಮೂಲವಾದ ಈ ದೇಹವನ್ನು ರಕ್ಷಿಸುವುದಕ್ಕಾಗಿ ತಿನ್ನಬಾರದ್ದನ್ನು ತಿನ್ನುತ್ತೇನೆ.
ಬುದ್ಧ್ಯಾತ್ಮಕೇ ವ್ಯಕ್ತಮಸ್ತೀತಿ ಸೃಷ್ಟೋ
ಮೋಕ್ಷಾತ್ಮಕೇ ತ್ವಂ ಯಥಾ ಶಿಷ್ಟಚಕ್ಷುಃ|
ಯದ್ಯಪ್ಯೇತತ್ ಸಂಶಯಾಚ್ಚ ತ್ರಪಾಮಿ

ನಾಹಂ ಭವಿಷ್ಯಾಮಿ ಯಥಾ ನ ಮಾಯಾ ॥76॥

ಈ ದೇಹವು ಮೋಕ್ಷಸಾಧನ ಎಂದು ನಿನಗೆ ಶಿಷ್ಟ ದೃಷ್ಟಿಯಿದೆ. ಅದಕ್ಕೆ ಅನುಗುಣವಾಗಿ ಮೋಕ್ಷ ಸಾಧನವಾದ ಜ್ಞಾನವನ್ನು ಸಾಧಿಸುವುದಕ್ಕಾಗಿ ನಾನು ಹೀಗೆ ಋಷಿಯಾಗಿ ಸೃಷ್ಟಿಸಲ್ಪಟ್ಟಿದ್ದೇನೆ. ಇದು ಸ್ಪಷ್ಟ. ನೀನು ಏನು ಹೇಳಿರುವೆಯೋ (ಬ್ರಾಹ್ಮಣನೇ, ನಾಯಿಮಾಂಸವನ್ನು ತಿನ್ನಬಾರದು ಎಂದು) ಅದು ಸತ್ಯ. ಆದರೆ ದೇಹವಿಲ್ಲದಿದ್ದರೆ ಅಜ್ಞಾನರಹಿತನಾಗಲಾರೆ ಎಂಬ ಸಂಶಯದಿಂದ ನಾನು ದೇಹವನ್ನು ತ್ಯಜಿಸಲು ಹಿಂಜರಿಯುತ್ತಿದ್ದೇನೆ.

ಶ್ವಪಚಃ

ಗೋಪನೀಯಮಿದಂ ದುಃಖಮಿತಿ ಮೇ ನಿಶ್ಚಿತಾ ಮತಿಃ |
ದುಷ್ಕೃತಂ ಬ್ರಾಹ್ಮಣಂ ಸಂತಂ ಯಸತ್ತ್ವಮಹಮುಪಾಲಭೇ ॥77॥

ದುಃಖಕರವಾದ ಈ ದುಷ್ಕೃತ್ಯವು ನಿನ್ನಿಂದ ಆಗಬಾರದು ಎಂದು ನನ್ನ ದೃಢಮತಿ. ಆದ್ದರಿಂದ ನಾನು ಬ್ರಾಹ್ಮಣನಾಗಿರುವ ನಿನ್ನನ್ನು ಹೀಗೆ ನಿಂದಿಸುತ್ತಿದ್ದೇನೆ, ತಡೆಯುತ್ತಿದ್ದೇನೆ, ನಿನಗೆ ಬೋಧಿಸುತ್ತಿದ್ದೇನೆ.

ವಿಶ್ವಾಮಿತ್ರಃ

ಪಿಬಂತ್ಯೇವೋದಕಂ ಗಾವೋ ಮಂಡೂಕೇಷು ರುವತ್ಸ್ವಪಿ |
ನ ತೇಽಧಿಕಾರೋ ಧರ್ಮೇಽಸ್ತಿ ಮಾ ಭೂರಾತ್ಮಪ್ರಶಂಸಕಃ ॥78॥

ಕಪ್ಪೆಗಳು ವಟಗುಟ್ಟುತ್ತಿದ್ದರೂ ಗೋವುಗಳು ಜಲಾಶಯದ ನೀರನ್ನು ಕುಡಿಯುತ್ತವೆ. ನಿನಗೆ ಧರ್ಮಬೋಧನೆಯ ಅಧಿಕಾರವಿಲ್ಲ. ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬೇಡ.

ಶ್ವಪಚಃ

ಸುಹೃದ್ಭೂತ್ವಾನುಶಾಸ್ಮಿ ತ್ವಾ ಕೃಪಾ ಹಿ ತ್ವಯಿ ಮೇ ದ್ವಿಜ |
ತದೇವಂ ಶ್ರೇಯ ಆಧತ್ಸ್ವ ಮಾ ಲೋಭಾಚ್ಛ್ವಾನಮಾದಿಥಾಃ ॥79॥

ಹೇ ಬ್ರಾಹ್ಮಣ! ನನಗೆ ನಿನ್ನ ಮೇಲೆ ಕೃಪೆ. ಹಿತಚಿಂತಕನಾಗಿ ನಿನಗೆ ಅನುಶಾಸನವನ್ನು ತಿಳಿಸುತ್ತಿದ್ದೇನೆ. ಆದ್ದರಿಂದ ಅನುಶಾಸನಕ್ಕೆ ಅನುಗುಣವಾಗಿ ಶ್ರೇಯಸ್ಕರವಾದದ್ದನ್ನು ಮಾಡು. ಲೋಭದಿಂದ ನಾಯಿಯನ್ನು ತಿನ್ನಬೇಡ.

ವಿಶ್ವಾಮಿತ್ರಃ

ಸುಹೃನ್ಮೇ ತ್ವಂ ಸುಖೇಪ್ಸುಶ್ಚೇದಾಪದೋ ಮಾಂ ಸಮುದ್ಧರ |
ಜಾನೇಽಹಂ ಧರ್ಮತೋಽತ್ಮಾನಮುತ್ಸೃಜೇಮಾಂ ಶ್ವಜಾಘನೀಮ್ ॥

ನೀನು ನನ್ನ ಹಿತಚಿಂತಕ. ನನ್ನ ಸುಖವನ್ನು ಬಯಸುವುದಾದರೆ ಈ ಆಪತ್ತಿನಿಂದ ನನ್ನನ್ನು ಮೇಲೆತ್ತು. ನೀನು ಧರ್ಮಾತ್ಮ ಎಂದು ತಿಳಿದಿದ್ದೇನೆ. ಈ ನಾಯಿ ಜಾಘನಿಯನ್ನು ನನಗೆ ಕೊಡು.

ಶ್ವಪಚಃ

ನೈವೋತ್ಸಹೇ ಭವತೇ ದಾತುಮೇತಾಂ
ನೋಪೇಕ್ಷಿತುಂ ಹ್ರಿಯಮಾಣಂ ಸ್ವಮನ್ನಮ್ |
ಉಭೌ ಸ್ಯಾವಃ ಸ್ವಮಲೇನಾವಲಿಪ್ತೌ
ದಾತಾಹಂ ಚ ತ್ವಂ ಚ ವಿಪ್ರ ಪ್ರತೀಚ್ಛನ್ ॥81॥

ವಿಪ್ರನೇ! ಇದನ್ನು ನಿನಗೆ ಕೊಡಲು ನನಗೆ ಇಚ್ಛೆಯಿಲ್ಲ. ನನ್ನ ಆಹಾರವನ್ನು ನೀನು ಅಪಹರಿಸಿದರೆ ಸುಮ್ಮನೆ ಇರಲೂ ಇಚ್ಛೆಯಿಲ್ಲ. ಈ ಘಟನೆಯಿಂದ ಕೊಡುವ ನಾನು, ಪ್ರತಿಗ್ರಹ ಮಾಡುವ ನೀನು - ಇಬ್ಬರೂ ಪಾಪಭಾಗಿಗಳಾಗುತ್ತೇವೆ.

ವಿಶ್ವಾಮಿತ್ರಃ

ಅದ್ಯಾಹಮೇತದ್ ವೃಜಿನಂ ಕರ್ಮ ಕೃತ್ವಾ
ಜೀವಂಶ್ಚರಿಷ್ಯಾಮಿ ಮಹಾಪವಿತ್ರಮ್ |
ಪ್ರಪೂತಾತ್ಮಾ ಧರ್ಮಮೇವಾಭಿಪತ್ಸ್ಯೇ
ಯದೇತಯೋರ್ಗುರು ತದ್ವೈ ಬ್ರವೀಹಿ ॥82॥

ಈ ದಿನ ನಾನು ಈ ಪಾಪಕರ್ಮವನ್ನು ಮಾಡಿ, ಬದುಕಿ ಮಹಾಪವಿತ್ರವಾದ ಆಚರಣೆಗಳನ್ನು ಮಾಡುತ್ತೇನೆ. ಈ ಆಚರಣೆಗಳಿಂದ ಬಹಳ ಪವಿತ್ರನಾಗಿ ಧರ್ಮಾಚರಣೆಯ ಫಲವನ್ನೇ ಪಡೆಯುತ್ತೇನೆ. (1) ಪ್ರಾಣರಕ್ಷಣೆಯನ್ನು ಮಾಡಿಕೊಂಡು ಧರ್ಮಸಾಧನೆ, (2) ಆಹಾರವಿಲ್ಲದೆ ಪ್ರಾಣತ್ಯಾಗ - ಇವೆರಡರಲ್ಲಿ ಯಾವುದು ಹೆಚ್ಚು ಒಳ್ಳೆಯದು? ನೀನೇ ಹೇಳು.

ಶ್ವಪಚಃ

ಆತ್ಮೈವ ಸಾಕ್ಷೀ ಕಿಲ ಲೋಕಕೃತ್ಯೇ
ತ್ವಮೇವ ಜಾನಾಸಿ ಯದತ್ರ ದುಷ್ಟಮ್ |
ಯೋ ಹ್ಯಾದ್ರಿಯೇದ್ ಭಕ್ಷ್ಯಮಿತಿ ಶ್ವಮಾಂಸಂ
ಮನ್ಯೇ ನ ತಸ್ಯಾಸ್ತಿ ವಿವರ್ಜನೀಯಮ್ ॥83॥

ಜನಗಳಿಗೆ ತಾವು ಏನು ಮಾಡಬೇಕು ಅಥವಾ ಮಾಡಬಾರದು ಎಂಬ ವಿಷಯದಲ್ಲಿ ಅವರವರ ಅಂತಃಕರಣವೇ ಪ್ರಮಾಣ. ಇವೆರಡರಲ್ಲಿ ಯಾವುದು ದೋಷಯುಕ್ತ ಎಂದು ನೀನೇ ತಿಳಿದಿರುವಿ. ಯಾರು ನಾಯಿ ಮಾಂಸವನ್ನು ತಿನ್ನಲು ಅರ್ಹ ಎಂದು ಆದರಿಸುವನೋ ಅವನಿಗೆ ಯಾವ ಪದಾರ್ಥವೂ ತ್ಯಾಜ್ಯವಲ್ಲ ಎಂದು ನನ್ನ ಅಭಿಪ್ರಾಯ.

ವಿಶ್ವಾಮಿತ್ರಃ

ಉಪಾಧಾನ್ಯೈಃ ಸಾಧತೇ ನಾಪಿ ದೋಷಃ

ಕಾರ್ಯೇ ಸಿದ್ಧೇ ಮಿತ್ರ ನಾತ್ರಾಪವಾದಃ |
ಅಸ್ಮಿನ್ನಹಿಂಸಾ ನಾನೃತೇ ವಾಕ್ಯಲೇಶೋ
ಭಕ್ಷ್ಯಕ್ರಿಯಾ ತತ್ರ ನ ತದ್ ಗರೀಯಃ ॥84॥
ನಿಮಿತ್ತಗಳಿಂದ (ಪ್ರಾಣ ಉಳಿಸಿಕೊಳ್ಳುವುದು ಮೊದಲಾದ ಅನಿವಾರ್ಯ ಕಾರಣಗಳಿಂದ) ನಿಷಿದ್ಧ ಕೆಲಸಗಳನ್ನು ಮಾಡುವವನಿಗೆ ಅದರಿಂದ ದೋಷವಿಲ್ಲ. ಮಿತ್ರ! ಆಗಲೇಬೇಕಾದ ಕೆಲಸವು ಆದನಂತರ ನಿಷಿದ್ಧ ಕೆಲಸವನ್ನು ಮುಂದುವರಿಸಬಾರದು. (ಹಾಗೆ ಮಾಡಲು ಏನೂ ವಿನಾಯಿತಿ ಇಲ್ಲ). ಹಾಗೆ ಅವಶ್ಯಕತೆ ಇಲ್ಲದಿರುವಾಗಲೂ ನಿಷಿದ್ಧ ಕೆಲಸಗಳನ್ನು ಮಾಡುವವನಲ್ಲಿ ಅಹಿಂಸಾ, ಸತ್ಯ ಮೊದಲಾದ ಧರ್ಮಗಳು ಇರುವುದಿಲ್ಲ. ಇರುತ್ತವೆ ಎಂದು ತಿಳಿಸುವ ಒಂದೇ ಒಂದು ಶಾಸ್ತ್ರ ವಚನವೂ ಇಲ್ಲ. ಅದರಲ್ಲೂ ತಿನ್ನಬಾರದ ಪದಾರ್ಥದ ಭಕ್ಷಣವು ಸರ್ವಥಾ ಸರಿಯಲ್ಲ.
ಶ್ವಪಚಃ
ಯದ್ಯೇಷ ಹೇತುಸ್ತವ ತತ್ಸ್ವಾದನೇ ಸ್ಯಾತ್
ನ ತೇ ವೇದಃ ಕಾರಣಂ ನಾಪಿ ಧರ್ಮಃ |
ತಸ್ಮಾದ್ ಭಕ್ಷ್ಯೇಽಯೇ ಭಕ್ಷಣೇ ವಾ ದ್ವಿಜೇಂದ್ರ
ದೋಷಂ ನ ಪಶ್ಯಾಮಿ ಯದರ್ಥಮಾಹ ॥85॥
ನೀನು ನಾಯಿಮಾಂಸವನ್ನು ತಿನ್ನುವುದಕ್ಕೆ ಇದು ಪ್ರಾಣರಕ್ಷಣೆಯು ಕಾರಣವಾಗಿದ್ದರೆ (ಈ ವಿಷಯದಲ್ಲಿ) ವೇದವು ನಿನಗೆ (ಅಡ್ಡಿಯಾಗುವ) ಕಾರಣವಲ್ಲ. ಧರ್ಮವೂ (ಅಡ್ಡಿಯಾಗುವ ಕಾರಣ) ಅಲ್ಲ. ದ್ವಿಜಶ್ರೇಷ್ಠ! ಆದ್ದರಿಂದ ತಿಂದರೆ ಅಥವಾ ತಿನ್ನದಿದ್ದರೆ ನಾನು ದೋಷವನ್ನು ಕಾಣುವುದಿಲ್ಲ. ಆದ್ದರಿಂದಲೇ ನೀನೇ ಇದನ್ನು= ನಾಯಿಮಾಂಸ ಭಕ್ಷಣವನ್ನು ಪುರುಷಾರ್ಥ ಎಂದು ಹೇಳುತ್ತಿರುವಿ.
ವಿಶ್ವಾಮಿತ್ರಃ
ನ ಪಾತಕಂ ಭಕ್ಷಣಮಸ್ಯ ದೃಷ್ಟಂ
ಸುರಾಂ ಪೀತ್ವಾ ಪತತೀತಿ ಶಬ್ದಃ |
ಅನ್ಯೋನ್ಯಕಾರ್ಯಾಣಿ ಯಥಾ ತಥೈವ
ನ ಲೇಪಮಾತ್ರೇಣ ಕೃತಂ ಹಿನಸ್ತಿ ॥86॥
(ಆಪತ್ಕಾಲದಲ್ಲಿ) ನಾಯಿ ಮಾಂಸದ ಭಕ್ಷಣವು ಪಾತಕ ಎಂದು ಪ್ರಮಾಣಗಳಲ್ಲಿ ಕಂಡಿಲ್ಲ. `ಸುರಾಂ ಪೀತ್ವಾ ಪತಿತ' (ಸುರಾಪಾನ ಮಾಡಿದವನು ಪತಿತನಾಗುತ್ತಾನೆ) ಎಂಬ ಪ್ರಮಾಣ ವಚನವು ಇದೆ. ಅನ್ಯೋನ್ಯ ಕಾರ್ಯಗಳು (ಮೈಥುನ) ಹೇಗೆ ಪಾಪಲೇಪವನ್ನು ಉಂಟುಮಾಡಿದರೂ ಮಾಡಿದ ಪುಣ್ಯವನ್ನು ನಾಶ ಮಾಡುವುದಿಲ್ಲವೋ ಹಾಗೆ ಆಪತ್ಕಾಲದಲ್ಲಿ ನಾಯಿ ಮಾಂಸ ಭಕ್ಷಣವು ಸ್ವಲ್ಪ ಪಾಪಲೇಪವನ್ನು ಉಂಟುಮಾಡಿದರೂ ಬ್ರಾಹ್ಮಣ್ಯಹಾನಿಯನ್ನು, ಪುಣ್ಯಹಾನಿಯನ್ನೂ ಉಂಟು ಮಾಡುವುದಿಲ್ಲ.
ಶ್ವಪಚಃ
ಅಸ್ಥಾನತೋ ಹೀನತಃ ಕುತ್ಸಿತಾದ್ವಾ
ತಂ ವಿದ್ವಾಂಸಂ ಬಾಧತೇ ಸಾಧುವೃತ್ತಮ್ |
ಸ್ಥಾನಂ ಪುನರ್ಯೋ ಲಭತೇತಿಭಂಗಾತ್
ತೇನಾಪಿ ದಂಡಃ ಪ್ರಹಿತಃ ಸ ಏವ ॥87॥
ಅಶುದ್ಧ ಸ್ಥಳಗಳಿಂದ, ಹೀನಕರ್ಮಗಳಿಂದ ಅಥವಾ ಹೀನ ಮನುಷ್ಯನಿಂದ ಅವಶ್ಯಕತೆಗಳನ್ನು ಪೂರೈಸಿಕೊಂಡರೆ, ಅದು ಸದಾಚಾರನಿಷ್ಠನಾದ ಪಂಡಿತನನ್ನು ಬಾಧಿಸುತ್ತದೆ. ಯಾರು ನಾಯಿಮಾಂಸವನ್ನೇ ಆಗ್ರಹದಿಂದ ಪಡೆಯುತ್ತಾರೋ ಅವನಿಗೆ ಶಿಕ್ಷೆ ಆಗುತ್ತದೆ. ಅದನ್ನು ಅವನು ಸಹಿಸಲೇಬೇಕು.
ಭೀಷ್ಮಃ
ಏವಮುಕತ್ವ ನಿವವೃತೇ ಮಾತಂಗಃ ಕೌಶಿಕಂ ತದಾ |
ವಿಶ್ವಾಮಿತ್ರೋ ಜಹಾರೈವ ಕೃತಬುದ್ಧಿಃ ಶ್ವಜಾಘನೀಮ್ ॥88॥
ಮಾತಂಗನು ಕೌಶಿಕನಿಗೆ ಹೀಗೆ ಹೇಳಿ ನಿವೃತ್ತನಾದನು (ಮತ್ತೇನೂ ಮಾತನಾಡಲಿಲ್ಲ). ನಾಯಿ ಮಾಂಸವನ್ನು ತಿನ್ನಲು ನಿಶ್ಚಯ ಮಾಡಿದ್ದ (ಶುದ್ಧಬುದ್ಧಿಯ) ವಿಶ್ವಾಮಿತ್ರನು ಶ್ವಜಾಘನಿಯನ್ನು ತೆಗೆದುಕೊಂಡೇ ಬಿಟ್ಟನು.
ತತೋ ಜಗ್ರಾಹ ಪಂಚಾಂಗೀಂ ಜೀವಿತಾರ್ಥೀ ಮಹಾಮುನಿಃ |
ಸದಾರಸ್ತಾಮುಪಾಕೃತ್ಯ ವನೇ ಯಾತೋ ಮಹಾಮುನಿಃ ॥89॥
ಅನಂತರ ಪತ್ನೀ ಸಹಿತನಾಗಿ ಪ್ರಾಣವುಳಿಸಿಕೊಳ್ಳಲು ಕಾತರನಾಗಿದ್ದ ಆ ಮಹಾಮುನಿಯು ಐದು ಅಂಗಗಳ ಸಮಾವೇಶವಿದ್ದ ಆ ಮಾಂಸವನ್ನು ತೆಗೆದುಕೊಂಡು ವನಕ್ಕೆ ಹೋದನು.
ಏತಸ್ಮಿನ್ನೇವ ಕಾಲೇ ತು ಪ್ರವವರ್ಷಾಥ ವಾಸವಃ |
ಸಂಜೀವಯನ್ ಪ್ರಜಾಃ ಸರ್ವಾ ಜನಯಾಮಾಸ ಚೌಷಧೀಃ ॥90॥
ಇದೇ ಸಮಯದಲ್ಲಿ ದೇವೇಂದ್ರನು ಧಾರಾಕಾರ ಮಳೆಯನ್ನು ಸುರಿಸಿದನು. ಎಲ್ಲ ಜೀವಗಳಿಗೂ ಸಂಜೀವನವನ್ನುಂಟು ಮಾಡಿದನು. ಸಸ್ಯಗಳನ್ನು ಹುಟ್ಟಿಸಿದನು.
ವಿಶ್ವಾಮಿತ್ರೋಽಪಿ ಭಗವಾಂಸ್ತಪಸಾ ದಗ್ಧಕಿಲ್ಬಿಷಃ |
ಕಾಲೇನ ಮಹತಾ ಸಿದ್ಧಿಮವಾಪ ಪರಮಾದ್ಭುತಾಮ್ ॥91॥
ಭಗವಾನ್ ವಿಶ್ವಾಮಿತ್ರನೂ ತಪಸ್ಸಿನಿಂದ ಎಲ್ಲ ದೋಷಗಳನ್ನು ದಹಿಸಿದನು. ಅನಂತರ ದೀರ್ಘಕಾಲ ತಪಸ್ಸನ್ನಾಚರಿಸಿ ಪರಮಾದ್ಭುತ

ಸಿದ್ಧಿಯನ್ನು ಪಡೆದನು.
ಏವಂ ವಿದ್ವಾನದೀನಾತ್ಮಾ ವ್ಯಸನಸ್ಥೋ ಜಿಜೀವಿಷುಃ |
ಸರ್ವೋಪಾಯೈರುಪಾಯಜ್ಞೋ ದೀನಮಾತ್ಮಾನಮುದ್ಧರೇತ್ ॥92॥
ಹೀಗೆ ವ್ಯಸನದಲ್ಲಿ ಸಿಕ್ಕಿಕೊಂಡ, ಬದುಕ ಬಯಸುವ ಪ್ರಾಜ್ಞನು ದೀನ ಮನಸ್ಸಿನವನಾಗದೆ, ಎಲ್ಲ ಉಪಾಯಗಳಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು.
ಏತಾಂ ಬುದ್ಧಿಂ ಸಮಾಸ್ಥಾಯ ಜೀವಿತವ್ಯಂ ಸದಾ ಭವೇತ್ |
ಜೀವನ್ ಪುಣ್ಯಮವಾಪ್ನೋತಿ ನರೋ ಭದ್ರಾಣಿ ಪಶ್ಯತಿ ॥93॥
ಯಾವಾಗಲೂ ಈ ಬುದ್ಧಿಯನ್ನೇ ಅವಲಂಬಿಸಿ ಬದುಕಬೇಕು. ಬದುಕುವ ಮನುಷ್ಯನು ಪುಣ್ಯವನ್ನು ಹೊಂದುತ್ತಾನೆ. ಒಳ್ಳೆಯ ಸ್ಥಿತಿಯನ್ನು ಕಾಣುತ್ತಾನೆ.
ತಸ್ಮಾತ್ ಕೌಂತೇಯ ವಿದುಷಾ ಧರ್ಮಾಧರ್ಮವಿನಿಶ್ಚಯೇ |
ಬುದ್ಧಿಮಾಸ್ಥಾಯ ಲೋಕೇಽಸ್ಮಿನ್ವರ್ತಿತವ್ಯಂ ಯತಾತ್ಮನಾ ॥94॥
ಕೌಂತೇಯ! ಆದ್ದರಿಂದ ಧರ್ಮ-ಅಧರ್ಮಗಳನ್ನು ನಿಶ್ಚಯಿಸಬೇಕಾದಾಗ ಪ್ರಾಜ್ಞನಾದವನು ಮನಸ್ಸನ್ನು ನಿಯಂತ್ರಣದಲ್ಲಿಟ್ಟುಕೊಂಡು, ಸರಿಯಾದ ನಿರ್ಣಯಗಳನ್ನು ಮಾಡಿ ಈ ಲೋಕದಲ್ಲಿ ವರ್ತಿಸಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿಯಿತು.
* * * *
ಹನ್ನೆರಡನೆಯ ಅಧ್ಯಾಯ
ಕೇವಲ ಪುಸ್ತಕಗಳ ಅಧ್ಯಯನದಿಂದ ಧರ್ಮದ ಅರಿವು ಆಗುವುದಿಲ್ಲ. ಈ ಅಧ್ಯಯನದ ಜೊತೆ ಉತ್ತಮ ವಿವೇಚನೆಯೂ ಬೇಕು. ರಾಜನು ಅವಶ್ಯಕತೆಗೆ ಅನುಗುಣವಾಗಿ ಉಗ್ರನೂ, ಮೃದುವೂ ಆಗಿರಬೇಕು. ಸತ್ಕುಲಜನ್ಮ ಮತ್ತು ಶ್ರೇಷ್ಠ ಸಾಧನೆಗಳು- ಇವೆರಡೂ ಇರುವವರು ಮಂತ್ರಿಗಳಾಗಲು ಅರ್ಹರು.
ಯುಧಿಷ್ಠಿರಃ
ಯದಿದಂ ಘೋರಮುದ್ದಿಷ್ಟಮಶ್ರದ್ಧೇಯಮಿವಾನೃತಮ್ |
ಅಸ್ತಿ ಸ್ವಿದಸ್ಯ ಮರ್ಯಾದಾ ಯಾಮಹಂ ಪರಿವರ್ಜಯೇ ॥1॥
ನಿಮ್ಮಿಂದ ಘೋರಕರ್ಮವು (ಬ್ರಾಹ್ಮಣನು ನಾಯಿಮಾಂಸವನ್ನು ತಿನ್ನುವುದು) ಹೇಳಲ್ಪಟ್ಟಿದೆ. ಈ ಸಲಹೆಯು ಸ್ವೀಕಾರಾರ್ಹವಲ್ಲ, ಸುಳ್ಳಿನಂತೆ. ಈ ನಿಷಿದ್ಧಕರ್ಮಕ್ಕೆ ಮಿತಿ ಅಥವಾ ಲಕ್ಷ್ಮಣರೇಖೆಯು ಇದೆಯೇ? ಇದ್ದರೆ ನಾನು ಅದನ್ನು ಪರಿತ್ಯಜಿಸುತ್ತೇನೆ= ನಿಷಿದ್ಧ ಕರ್ಮವನ್ನು ಆದಷ್ಟು ಕಡಿಮೆ ಮಾಡುತ್ತೇನೆ; ಎಷ್ಟು ಮಾಡಲು ಅವಕಾಶವಿದೆಯೋ ಅಷ್ಟು ಮಾಡುವುದಿಲ್ಲ.
ಸಮ್ಮುಹ್ಯಾಮಿ ವಿಷೀದಾಮಿ ಧರ್ಮೋ ಮೇ ಶಿಥಿಲೀಕೃತಃ |
ಉದ್ಯಮಂ ನಾಧಿಗಚ್ಛಾಮಿ ಕುತಶ್ಚಿತ್ ಪರಿಚಿಂತಯನ್ ॥2॥
ನಾನು ಮೋಹಕ್ಕೊಳಗಾಗಿದ್ದೇನೆ. ವಿಷಾದಕ್ಕೊಳಗಾಗಿದ್ದೇನೆ. ನನ್ನ ಧರ್ಮವು ಶಿಥಿಲವಾಗಿಸಲ್ಪಟ್ಟಿದೆ. ಎಷ್ಟೇ ಆಲೋಚಿಸಿದರೂ ನಾನು ಈ ಆಪದ್ಧರ್ಮದ ಆಚರಣೆಯಲ್ಲಿ ಪ್ರವೃತ್ತಿ ಮಾಡಲಾರೆ.
ಭೀಷ್ಮಃ
ನೈತದ್ ಬುದ್ಧ್ವಾಗಮಾದೇವ ತವ ಧರ್ಮಾನುಶಾಸನಮ್ |
ಪ್ರಜ್ಞಾಸಮಭಿಹಾರೋಽಯಂ ಕವಿಭಿಃ ಸಂಭೃತಂ ಮಧು ॥3॥
ಇದು ಶಾಸ್ತ್ರಗ್ರಂಥಗಳಿಂದ ತಿಳಿದು ನಿನಗೆ ಮಾಡಿದ ಧರ್ಮಾನುಶಾಸನ ಅಲ್ಲ. ಇದು ವಿವೇಕದ ಸರಿಯಾದ ಬಳಕೆ. ಚಿಂತನಶೀಲರು ಸಂಗ್ರಹಿಸಿದ ಮಕರಂದ. (ಇದು =ನಿನ್ನ ಅಭಿಪ್ರಾಯವು- ಸರಿಯಲ್ಲ. ನಿನಗೆ ಮಾಡಿದ ಧರ್ಮಾನುಶಾಸನವು ಆಗಮಗಳಿಂದ ತಿಳಿಯಲ್ಪಡುವ ವಿಷಯಗಳು. ಅಷ್ಟೆ ಅಲ್ಲ. ಇದು ವಿವೇಕದ ಸರಿಯಾದ ಬಳಕೆ. ಚಿಂತನಶೀಲರು ಸಂಗ್ರಹಿಸಿದ ಮಕರಂದ).
ಬಾಹ್ಯಾಃ ಪ್ರತಿವಿಧಾತವ್ಯಾಃ ಪ್ರಜಾ ರಾಜ್ಞಾ ತತಸ್ತತಃ |
ಬಹುಶಾಖೇನ ಧರ್ಮೇಣ ಯಾತ್ರೈಷಾ ಸಂಪ್ರವರ್ತತೇ ॥4॥
ಸಾಧಾರಣ ಬುದ್ಧಿಯ ಜನರಿಗೆ ಬೇರೆ ಬೇರೆ ನಿದರ್ಶನಗಳಿಂದ (ಕೋಗಿಲೆ- ವರಾಹ-ತೋಳ-ಸಿಂಹ ಮೊದಲಾದ ಪ್ರಾಣಿಗಳು ಆಪತ್ತನ್ನು ನಿಭಾಯಿಸುವ ನಿದರ್ಶನಗಳಿಂದ) ಶಿಕ್ಷಣವನ್ನು ಕೊಡಬೇಕು. ಬಹುವಿಧ ಧರ್ಮಗಳಿಂದ (ವ್ಯವಸ್ಥೆಗಳಿಂದ) ಈ ಲೋಕಜೀವನವು ನಡೆಯುತ್ತದೆ. (ಬಹುವಿಧ ಧರ್ಮ- ಚಿಕ್ಕವರಿಗೆ ಒಂದು ವ್ಯವಸ್ಥೆ, ತರುಣರಿಗೆ ಇನ್ನೊಂದು ವ್ಯವಸ್ಥೆ. ವೃದ್ಧರಿಗೆ ಮತ್ತೊಂದು ವ್ಯವಸ್ಥೆ. ತಿಳಿದವರಿಗೆ ಒಂದು ವ್ಯವಸ್ಥೆ. ತಿಳಿಯದವರಿಗೆ ಇನ್ನೊಂದು ವ್ಯವಸ್ಥೆ).
ಬುದ್ಧಿಸಂಜನನಂ ರಾಜ್ಞಾಂ ಧರ್ಮಮಾಚರತಾಂ ಸದಾ |
ಜಯೋ ಭವತಿ ಕೌರವ್ಯ ತದಾ ತದ್ವಿದ್ಧಿ ಮೇ ವಚಃ ॥5॥
ಸದಾ ಧರ್ಮನಿಷ್ಠರಾದ ರಾಜರಿಗೆ (ಸಮಯಕ್ಕೆ ಅನುಕೂಲವಾದ) ಬುದ್ಧಿಯು ಹುಟ್ಟುತ್ತದೆ. ಆಗ ಜಯವೂ ಆಗುತ್ತದೆ. ಕುರುಕುಲ ಸಂಜಾತ! ಆದ್ದರಿಂದ ನನ್ನ ಮಾತನ್ನು ಸರಿಯಾಗಿ ತಿಳಿ.
ಬುದ್ಧಿಶ್ರೇಷ್ಠಾ ಹಿ ರಾಜಾನೋ ಜಯಂತಿ ವಿಜಯೈಷಿಣಃ |
ಧರ್ಮಃ ಪ್ರತಿವಿಧಾತವ್ಯೋ ಬುದ್ಧ್ಯಾ ರಾಜ್ಞಾ ತತಸ್ತತಃ ॥6॥
ವಿಜಯಾಕಾಂಕ್ಷಿಗಳಾದ ರಾಜರು ಬುದ್ಧಿಯಿಂದ (ಅನುಕೂಲಕರ ಸ್ಫೂರ್ತಿಯಿಂದ) ಶ್ರೇಷ್ಠರಾಗಿದ್ದರೆ ಜಯಿಸುತ್ತಾರೆ. ರಾಜರು ಬೇರೆ

ಬೇರೆ ಮೂಲಗಳಿಂದ (ನಿದರ್ಶನಗಳಿಂದ) ವಿಮರ್ಶ ಪ್ರಜ್ಞೆಯಿಂದ ಧರ್ಮವನ್ನು ವಿಮರ್ಶಿಸಬೇಕು.
ನೈಕಶಾಖೇನ ಧರ್ಮೇಣ ರಾಜ್ಞಾಂ ಧರ್ಮೋ ವಿಧೀಯತೇ |
ದುರ್ಬಲಸ್ಯ ಕುತಃ ಪ್ರಜ್ಞಾ ಪುರಸ್ತಾದನುದಾಹೃತಾ ॥7॥
ನಾನಾ ಪ್ರಕಾರದ ಧರ್ಮಗಳ ನಿದರ್ಶನದಿಂದ ರಾಜರಿಗೆ ಧರ್ಮವನ್ನು ಬೋಧಿಸಲಾಗುತ್ತದೆ. ಅಧ್ಯಯನ ಕಾಲದಲ್ಲಿ ಪ್ರೌಢಸ್ಥಿತಿಗೆ ಏರದ ಪ್ರಜ್ಞೆಯು, ಆದ್ದರಿಂದಲೇ ಜ್ಞಾನ ದುರ್ಬಲನಾದ ರಾಜನಿಗೆ, ಅನಂತರ ಹೇಗೆ ತಾನೆ ಕೂಡಿ ಬರುತ್ತದೆ.
ಅದ್ವೈಧಜ್ಞಃ ಪ್ರತಿದ್ವೈಧೇ ಸಂಶಯಂ ಪ್ರಾಪ್ತುಮರ್ಹತಿ |
ಬುದ್ಧಿದ್ವೈಧಂ ವೇದಿತವ್ಯಂ ಪುರಸ್ತಾದೇವ ಭಾರತ ॥8॥
ಪ್ರತಿಯೊಂದು ಧರ್ಮಕ್ಕೂ ಎರಡು ಅಥವಾ ಹೆಚ್ಚು ಪ್ರಕಾರಗಳು ಇರುತ್ತವೆ. (ಅಹಿಂಸೆಯು ಸಾಮಾನ್ಯವಾಗಿ ಧರ್ಮ. ರಾಷ್ಟ್ರಕ್ಕೆ, ಜನಗಳಿಗೆ ಹಾನಿ ಮಾಡುವವರ ವಿಷಯದಲ್ಲಿ ಅಧರ್ಮ). ರಾಜನು ಇದನ್ನು ತಿಳಿದಿರಬೇಕು. ತಿಳಿಯದ ರಾಜನು ತನ್ನ ವಿರುದ್ಧ ಪ್ರಯೋಗಿಸುವ ದ್ವಿಮುಖ ಅಥವಾ ಬಹುಮುಖ ಧರ್ಮದ ಬಗ್ಗೆ ಸಂಶಯಕ್ಕೆ ಒಳಗಾಗುತ್ತಾನೆ. ಭರತಕುಲಸಂಜಾತ!
ಧರ್ಮದ್ವೈವಿಧ್ಯವನ್ನು ಮತ್ತು ಬುದ್ಧಿ ದ್ವೈವಿಧ್ಯವನ್ನು ಮೊದಲೇ ತಿಳಿದಿರಬೇಕು.
ಪಾರ್ಶ್ವತಃಕರಣಂ ಪ್ರಜ್ಞಾ ವಿಷೂಚೀ ತ್ವಾಪಗಾ ಇವ |
ಜನಸ್ತೂಚ್ಚಾರಿತಂ ಧರ್ಮಂ ವಿಜಾನಾತ್ಯನ್ಯಥಾನ್ಯಥಾ ॥9॥
ಯಾವ ಕಡೆ, ಹೇಗೆ ಹರಿಯುತ್ತದೆ ಎಂಬ ಸೂಚನೆಯನ್ನು ಕೊಡದ ನದಿಯಂತೆ ಪರರಿಗೆ ತಿಳಿಯದಂತೆ ಮರೆಯಲ್ಲಿ ಕೆಲಸ ಮಾಡುವುದು ಪ್ರಜ್ಞೆ. ಜನರು ಪ್ರಕಟವಾಗಿ ಘೋಷಿಸಿದ ಕಾರ್ಯಗಳನ್ನು ತಪ್ಪುತಪ್ಪಾಗಿ ತಿಳಿಯುತ್ತಾರೆ.
ಸಮ್ಯಗ್ ವಿಜ್ಞಾನಿನಃ ಕೇಚಿನ್ಮಿಥ್ಯಾವಿಜ್ಞಾನಿನೋಽಪರೇ |
ತದ್ವೈ ಯಥಾತಥಂ ಬುದ್ಧ್ವಾ ಜ್ಞಾನಮಾದದತೇ ಸತಾಮ್ ॥10॥
ಕೆಲವರು ಸರಿಯಾಗಿ ತಿಳಿದಿರುತ್ತಾರೆ. ಕೆಲವರು ತಪ್ಪಾಗಿ ತಿಳಿದಿರುತ್ತಾರೆ. ವಿವೇಕಿಗಳು ಅಂತಹವರನ್ನು ಸರಿಯಾಗಿ ತಿಳಿದು, ಸಜ್ಜನರಿಂದ= ಪ್ರಾಜ್ಞ ಸಜ್ಜನರಿಂದ ಜ್ಞಾನವನ್ನು ಪಡೆಯುತ್ತಾರೆ.
ಪರಿಮುಷ್ಣಂತಿ ಶಾಸ್ತ್ರಾಣಿ ಧರ್ಮಸ್ಯ ಪರಿಪಂಥಿನಃ |
ವೈಷಮ್ಯಮಪಿ ವಿದ್ಯಾನಾಂ ನೈರರ್ಥ್ಯಾತ್ ಖ್ಯಾಪಯಂತಿ ತೇ ॥11॥
ಧರ್ಮದ ವಿರೋಧಿಗಳು ಶಾಸ್ತ್ರಗಳನ್ನು ಕದಿಯುತ್ತಾರೆ. ಅಂದರೆ, ಶಾಸ್ತ್ರಗಳು ಅರ್ಥಹೀನವೆಂದು ಪ್ರತಿಪಾದಿಸಿ, ಅವುಗಳ ವಿಷಮತೆಯನ್ನು= ಅಸಾಮಂಜಸ್ಯವನ್ನು ಪ್ರತಿಪಾದಿಸುತ್ತಾರೆ.
ಆಜಿಜೀವಿಷವೋ ವಿದ್ಯಾಂ ಯಶಸ್ಕಾಮಾಃ ಸಮಂತತಃ |
ತೇ ಸರ್ವೇ ನರಪಾಪಿಷ್ಠಾ ಧರ್ಮಸ್ಯ ಪರಿಪಂಥಿನಃ ॥12॥
ವಿದ್ಯೆಯನ್ನು ಜೀವನೋಪಾಯವನ್ನಾಗಿಸಿಕೊಳ್ಳುವವರು, ವಿದ್ಯೆಯಿಂದ ಕೀರ್ತಿಯನ್ನು ಬಯಸುವವರು ಪಾಪಿಷ್ಠರು, ಧರ್ಮದ ವಿರೋಧಿಗಳು.
ಅಪಕ್ವಮತಯೋ ಮನ್ದಾ ನ ಜಾನಂತಿ ಯಥಾತಥಮ್ |
ಸದಾ ಹ್ಯಶಾಸ್ತ್ರಕುಶಲಾಃ ಸರ್ವತ್ರಾಪರಿನಿಷ್ಠಿತಾಃ ॥13॥
ಪಕ್ವಮತಿಯಿಲ್ಲದ ಮಂದರು ಎಂದೂ ಶಾಸ್ತ್ರದಲ್ಲಿ ಕುಶಲರಾಗುವುದಿಲ್ಲ. ಇವರಿಗೆ ಯಾವುದೇ ವಿಷಯದಲ್ಲಿ ತಲಸ್ಪರ್ಶಿಜ್ಞಾನವಿರುವುದಿಲ್ಲ. ಇಂತಹವರು ವಸ್ತುಸ್ಥಿತಿಯನ್ನು ತಿಳಿಯುವುದೇ ಇಲ್ಲ.
ಪರಿಮುಷ್ಣಂತಿ ಶಾಸ್ತ್ರಾಣಿ ಶಾಸ್ತ್ರದೋಷಾನುದರ್ಶಿನಃ |
ವಿಜ್ಞಾನಮಥ ವಿದ್ಯಾನಾಂ ನ ಸಮ್ಯಗಿತಿ ವರ್ತತೇ ॥14॥
ಶಾಸ್ತ್ರಗಳಲ್ಲಿ ದೋಷಗಳನ್ನೇ ಕಾಣುವವರು ಅವುಗಳನ್ನು ಕದಿಯುತ್ತಾರೆ. ಅಂದರೆ, ಅವುಗಳಿಗೆ ಅಪಾರ್ಥವನ್ನು ಹೇಳುತ್ತಾರೆ. ಶಾಸ್ತ್ರಗಳ ವಿಪರೀತ ಜ್ಞಾನವು ಶ್ರೇಯಸ್ಕರವಲ್ಲ. ಇದು ಸಿದ್ಧವಾದ ವಿಷಯ.
ನಿಂದಯಾ ಪರವಿದ್ಯಾನಾಂ ಸ್ವಾಂ ವಿದ್ಯಾಂ ಖ್ಯಾಪಯಂತಿ ಯೇ |
ವಾಗಾಸ್ತಿಕ್ಯಾನುನೀತಾಶ್ಚ ದುಗ್ಧವಿದ್ಯಾಫಲಾ ಇವ |
ತಾನ್ ವಿದ್ಯಾವಣಿಜೋ ವಿದ್ಧಿ ರಾಕ್ಷಸಾನಿವ ಭಾರತ ॥15॥
ಯಾರು ವಿದ್ಯೆಯ ಫಲವನ್ನು ಪಡೆದವರಂತೆ ಬೇರೆಯವರ ವಿದ್ಯೆಯನ್ನು ನಿಂದಿಸುತ್ತಾ ತಮ್ಮ ವಿದ್ಯೆಯ ಪ್ರಶಂಸೆಯನ್ನು ಮಾಡುತ್ತಾರೋ, ಸ್ವರ್ಗವೇ ಮಹಾಫಲ ಎನ್ನುವ ಆಸ್ತಿಕ್ಯದ ಮಾತುಗಳಿಂದ ಯಾರು ಪ್ರಭಾವಿತರಾಗುತ್ತಾರೋ, ಅವರನ್ನು, ಹೇ ಭರತಕುಲಸಂಜಾತ! ವಿದ್ಯೆಯನ್ನು ಮಾರುವ ವರ್ತಕರೆಂದು ತಿಳಿ. ರಾಕ್ಷಸ ಸದೃಶ ಎಂದು ತಿಳಿ.
ವ್ಯಾಜೇನ ಕೃತ್ಸ್ನೋ ವಿಹಿತೋ ಧರ್ಮಸ್ತೇ ಪರಿಹಾಸ್ಯತೇ |
ನ ಧರ್ಮವಚನಂ ವಾಚಾ ಕಿಂತು ಬುದ್ಧ್ಯೇತಿ ನಃ ಶ್ರುತಮ್ ॥16॥
ಇತಿ ಬಾರ್ಹಸ್ಪತಂ ಜ್ಞಾನಂ ಪ್ರೋವಾಚ ಮಘವಾ ಸ್ವಯಮ್ |
ನ ತ್ವೇವ ವಚನಂ ಕಿಂಚಿದನಿಮಿತ್ತಾದಿಹೋಚ್ಯತೇ ॥17॥
ಯಾವುದೋ ನೆಪದಿಂದ ಧರ್ಮವನ್ನು ಆಚರಿಸಿದರೆ ಆ ಧರ್ಮವು ಯಾವುದೋ ನೆಪದಿಂದ ದೂರವಾಗುತ್ತದೆ. ಧರ್ಮದ ಪ್ರತಿಪಾದನೆಯ ಮತ್ತು ಆಚರಣೆಯ ಗುರಿ ಕೇವಲ ಸ್ವರ್ಗಪ್ರಾಪ್ತಿ ಅಲ್ಲ. ತತ್ವಜ್ಞಾನದ ಪ್ರಾಪ್ತಿಯು ಇವುಗಳ ಗುರಿ ಎಂದೂ ನಾವು ಕೇಳಿದ್ದೇವೆ. ಇದು ಬೃಹಸ್ಪತಿಯ ಮತ. ಇಂದ್ರನೇ ಇದನ್ನು ಪ್ರಚುರಪಡಿಸಿದನು. ಈ ಶಾಸ್ತ್ರದಲ್ಲಿ ಅಸಮರ್ಥನೀಯವಾದ ಯಾವ ವಚನವೂ ಇಲ್ಲ. (ಈ ಭಾವವು ಶ್ರೀವಾದಿರಾಜರ ಲಕ್ಷಾಲಂಕಾರದಲ್ಲಿ ಹೇಳಲ್ಪಟ್ಟಿದೆ).
ಸ್ವವಿನೀತೇನ ಶಾಸ್ತ್ರೇಣ ವ್ಯವಸ್ಯಂತಿ ಯಥಾ ಪರಃ |

ಲೋಕಯಾತ್ರಾಮಿಹೈಕೇ ತು ಧರ್ಮಮಾಹುರ್ಮನೀಷಿಣಃ ॥18॥
ಕೆಲವರು (ಗುರುಗಳಿಂದ ಶಿಕ್ಷಣ ಪಡೆಯದೆ) ತಾವೇ ಅಭ್ಯಾಸ ಮಾಡಿದ ಶಾಸ್ತ್ರಕ್ಕೆ ಅನುಗುಣವಾಗಿ ನಡೆದುಕೊಳ್ಳುತ್ತಾರೆ. ಇವರು ಪಾಮರಸದೃಶ. ಕೆಲವು ಪ್ರಾಜ್ಞರು ವರ್ತಮಾನ ಜೀವನ ನಿರ್ವಹಣೆಗೆ ಅನುಕೂಲವಾದ ವ್ಯವಸ್ಥೆಯೇ ಧರ್ಮ ಎಂದು ಹೇಳುತ್ತಾರೆ.
ಸಮುದ್ದಿಷ್ಟಂ ಸತಾಂ ಧರ್ಮಂ ಸ್ವಯಂ ಮುಚ್ಯೇದಪಂಡಿತಃ |
ಅಮರ್ಷಾಚ್ಛಾಸ್ತ್ರಸಮ್ಮೋಹಾದನಿಮಿತ್ತಾದಿಹೋಚ್ಯತೇ ॥19॥
ಸಜ್ಜನರು ಆಚರಿಸಿದ ಮತ್ತು ಸಜ್ಜನರಿಗೆ ಹಿತವಾಗುವಂತೆ ಸರಿಯಾಗಿ ಹೇಳಲ್ಪಟ್ಟ ಧರ್ಮವನ್ನು ಯಾರು ಕೋಪದಿಂದ, ಶಾಸ್ತ್ರಗಳ ಬಗ್ಗೆ ತಪ್ಪು ಕಲ್ಪನೆಯಿಂದ ಅಥವಾ ಏನೂ ಕಾರಣವಿಲ್ಲದೆ ತ್ಯಜಿಸುತ್ತಾನೋ ಅವನು ಅಪಂಡಿತ ಎಂದು ಅಭಿಪ್ರಾಯ.
ಶಾಸ್ತ್ರಂ ಪ್ರಜ್ಞಾಸ್ಯ ವದತಃ ಸಮೂಹೇ ಯತ್ಪ್ರದರ್ಶನಮ್ |
ಆಜಗಾಮ ತಯೋರ್ಬುದ್ಧ್ಯಾ ವಚನೇನ ಪ್ರಶಸ್ಯತೇ ॥20॥
ಧರ್ಮದ ಬಗ್ಗೆ ಇರುವ ವಿವಿಧ ಅಭಿಪ್ರಾಯಗಳ ಮಧ್ಯೆ ಯಾವ ಶಾಸ್ತ್ರದಿಂದ ಉತ್ಕೃಷ್ಟವಾದ ಧರ್ಮದ ಅರಿವು ಬರುವುದೋ ಆ ಶಾಸ್ತ್ರವು ಪ್ರಜ್ಞೆಯ ಮೂಲ ಮತ್ತು ಆ ಶಾಸ್ತ್ರಕ್ಕೆ ಪ್ರಜ್ಞೆಯು ಮೂಲ. ಶಾಸ್ತ್ರ ಮತ್ತು ವಿವೇಚನೆ ಇವೆರಡರ ಸಮನ್ವಯದಿಂದ ಮಾಡಲ್ಪಡುವ ಕರ್ಮವು ಸರಿಯಾದ ಫಲವನ್ನು ಕೊಡುತ್ತದೆ.
ಅಜ್ಞಾನಾಜ್ಞಾನಹೇತುತ್ವಾದ್ ವಚನಂ ಸಾಧು ಮನ್ಯತೇ |
ಅನುಪಾಗತಮೇವೇದಂ ಶಾಸ್ತ್ರಮೇವಮಪಾರ್ಥಕಮ್ ॥21॥
ಶಾಸ್ತ್ರವು ಅಜ್ಞಾನದಿಂದ ಜ್ಞಾನದ ಕಡೆ ಸಾಗಲು ಕಾರಣವಾದ್ದರಿಂದ ಅದನ್ನು ಸರಿಯಾದ ಜ್ಞಾನಸಾಧನ ಎಂದು ತಿಳಿಯುತ್ತಾರೆ. ಶಾಸ್ತ್ರವು ಯುಕ್ತಿಗೆ ಅನುಗುಣವಾಗಿಲ್ಲ ಎಂದೂ ಕೆಲವರು ತಿಳಿಯುತ್ತಾರೆ. ಶಾಸ್ತ್ರಗಳಲ್ಲಿ ವಸ್ತುಸ್ಥಿತಿಗೆ ವಿರುದ್ಧವಾದ ಅಭಿಪ್ರಾಯಗಳಿಲ್ಲ.
ದೈತೇಯಾನುಶನಾಃ ಪ್ರಾಹ ಸಂಶಯಚ್ಛೇದನೇ ಪುರಾ |
ಜ್ಞಾನಮವ್ಯಪದೇಶ್ಯಂ ಹಿ ಯಥಾ ನಾಸ್ತಿ ತಥೈವ ತತ್ ॥22॥
(ತರ್ಕ ಮತ್ತು ಶಾಸ್ತ್ರಗಳಲ್ಲಿ ಪರಸ್ಪರ ವಿರೋಧವನ್ನು ಕಾಣದೆ. ಅವೆರಡನ್ನು ಸಮನ್ವಯಗೊಳಿಸಿ ವಸ್ತುಸ್ಥಿತಿಯನ್ನು ತಿಳಿಯಬೇಕು). ಹೀಗೆ ಶುಕ್ರಾಚಾರ್ಯರು ಹಿಂದೆ ದಿತಿಯ ಮಕ್ಕಳಿಗೆ ಸಂಶಯವನ್ನು ಪರಿಹರಿಸುವ ಕ್ರಮವನ್ನು ತಿಳಿಸುವಾಗ ಹೇಳಿದರು. ಗುರಿಯನ್ನು ಮುಟ್ಟಲು ಸಾಧನವಾಗದ ಜ್ಞಾನವು ಇದ್ದರೂ ಇಲ್ಲದಂತೆಯೇ.
ತೇನ ಸಂಛಿನ್ನಮೂಲೇನ ಕಸ್ತೋಷಯಿತುಮಿಚ್ಛತಿ |
ಪುನರ್ವ್ಯವಸಿತುಂ ಯೋ ವಾ ನೇದಂ ವಾಕ್ಯಮುಪಾಶ್ರಯೇತ್ ॥23॥
(ಮೇಲೆ ಹೇಳಿದ ಶುಕ್ರಾಚಾರ್ಯರ ಉಪದೇಶವು ಮೂಲ) ಮೂಲದ= ಗುರೂಪದೇಶದ ಹಿನ್ನೆಲೆಯಿಲ್ಲದ ಜ್ಞಾನದಿಂದ ಯಾರು ತಾನೆ (ಅವಶ್ಯಕತೆ ಇರುವವರಿಗೆ) ಅನುಕೂಲವಾಗುವಂತೆ ಬೋಧಿಸಿ ಸಂತೋಷಪಡಿಸಲು ಬಯಸಬಹುದು? ಮತ್ತು ಯಾರು ತಾನೆ ಸರಿಯಾದ ನಿಶ್ಚಯಕ್ಕಾಗಿ ಗುರೂಪದೇಶವನ್ನು ಆಶ್ರಯಿಸದೆ ಇದ್ದಾನು? (ಗುರೂಪದೇಶದಿಂದ ಗಳಿಸದ ಜ್ಞಾನದಲ್ಲಿ ಕೊರತೆ ಇರುತ್ತದೆ. ಅಸಮರ್ಪಕ ಜ್ಞಾನದಿಂದ ಯಾರಿಗೂ ಯಾವ ಅನುಕೂಲವನ್ನು ಮಾಡಲಾಗುವುದಿಲ್ಲ. ಸರಿಯಾದ ನಿಶ್ಚಯಕ್ಕಾಗಿ ಗುರೂಪದೇಶವನ್ನೇ ಅವಲಂಬಿಸಬೇಕು).
ಉಗ್ರಾಯೈವ ಹಿ ಸೃಷ್ಟೋಽಸಿ ತದೇವ ತ್ವಮಪೀಕ್ಷಸೇ |
ಅಂಗೇಮಾಮನ್ವವೇಕ್ಷಸ್ವ ರಾಜನೀತಿಂ ಬುಭೂಷಿತುಮ್ |
ಯಯಾ ಪ್ರಮುಚ್ಯತೇ ತ್ವನ್ಯೋ ಯದರ್ಥಂ ಚ ಪ್ರಮೋದತೇ ॥24॥
ಪ್ರಿಯ ಯುಧಿಷ್ಠಿರ! ಉಗ್ರಕರ್ಮವನ್ನು (ಯುದ್ಧವನ್ನು) ಮಾಡುವುದಕ್ಕಾಗಿಯೇ ನೀನು ಹುಟ್ಟಿರುವಿ. ನಿನಗೂ ಅದು ತಿಳಿದಿದೆ. ನೀನು ಸುಸ್ಥಿತಿಯಲ್ಲಿ ಇರುವುದಕ್ಕಾಗಿ ಈ ರಾಜನೀತಿಯನ್ನೇ ಅನುಸರಿಸು. ಈ ರಾಜನೀತಿಯಿಂದಾಗಿ ಯಾರಿಗೋ ಕೆಲವರಿಗೆ ಬಿಡುಗಡೆಯಾಗುತ್ತದೆ. ಮತ್ತೆ ಯಾರಿಗೋ ಸಂತೋಷವಾಗುತ್ತದೆ.
ಅಜೋಽಶ್ವಃ ಕ್ಷತ್ರಮಿತ್ಯೇತತ್ ಸದೃಶಂ ಬ್ರಹ್ಮಣಾ ಕೃತಮ್ |
ತಸ್ಮಾನ್ನ ತೈಕ್ಷ್ಣ್ಯಾದ್ ಭೂತಾನಾಂ ಯಾತ್ರಾ ಕಾಚಿತ್ ಪ್ರಸಿಧ್ಯತಿ ॥25॥
ಬ್ರಹ್ಮದೇವನು ಆಡು, ಕುದುರೆ, ಕ್ಷತ್ರಿಯ- ಈ ಮೂವರನ್ನು ಸದೃಶವಾಗಿ ಸೃಷ್ಟಿಸಿದ್ದಾನೆ (ಈ ಮೂವರಲ್ಲಿ ಸಾದೃಶ್ಯವಿದೆ). (ಆಡನ್ನು ಯಜ್ಞದಲ್ಲಿ ಬಲಿಕೊಟ್ಟರೆ ಈ ಬಲಿಯಿಂದ ಆ ಆತ್ಮಕ್ಕೆ ಹಿತವಾಗುತ್ತದೆ. ಹೀಗೆಯೇ ಕುದುರೆಗಳು ಮತ್ತು ಕ್ಷತ್ರಿಯರು ಯುದ್ಧದಲ್ಲಿ ಭಾಗವಹಿಸಬೇಕು. ಇದರಿಂದ ಇಬ್ಬರಿಗೂ ಹಿತವಾಗುತ್ತದೆ). ಆದ್ದರಿಂದ ಕ್ಷತ್ರಿಯನ ತೀಕ್ಷ್ಣತೆಯಿಂದಲೇ ಲೋಕಜೀವನವು ನಡೆಯುತ್ತದೆ. ಕ್ಷತ್ರಿಯನು ತೀಕ್ಷ್ಣತೆಯನ್ನು ಬಿಟ್ಟರೆ ಲೋಕಜೀವನವು ನಡೆಯುವುದಿಲ್ಲ.
ಯಸ್ತ್ವವಧ್ಯವಧೇ ದೋಷಃ ಸ ವಧ್ಯಸ್ಯಾವಧೇ ಸ್ಮೃತಃ |
ಏಷೈವ ಖಲು ಮರ್ಯಾದಾ ಯಾಮಯಂ ಪರಿವರ್ಜಯೇತ್ ॥26॥
ಕೊಲ್ಲಬಾರದವರನ್ನು ಕೊಂದರೆ ಯಾವ ದೋಷವೋ ಆ ದೋಷವು ಕೊಲ್ಲಬೇಕಾದವರನ್ನು ಕೊಲ್ಲದಿದ್ದರೂ ಆಗುತ್ತದೆ. ಇದೇ ಧರ್ಮದ ಮರ್ಯಾದೆ=ಗಡಿ. ಪಾಮರರು ಈ ಮರ್ಯಾದೆಯನ್ನು ಉಲ್ಲಂಘಿಸುತ್ತಾರೆ.
ತಸ್ಮಾತ್ ತೀಕ್ಷ್ಣಃ ಪ್ರಜಾ ರಾಜಾ ಸ್ವಧರ್ಮೇ ಸ್ಥಾಪಯೇದುತ |
ಅನ್ಯೋನ್ಯಂ ಭಕ್ಷಯಂತೋ ಹಿ ಪ್ರಚರೇಯುರ್ವೃಕಾ ಇವ ॥27॥
ಯಸ್ಯ ದಸ್ಯುಗಣಾ ರಾಷ್ಟ್ರೇ ಧ್ವಾಂಕ್ಷಾ ಮತ್ಸ್ಯಾನ್ ಜಲಾದಿವ |
ವಿಹರಂತಿ ಪರಸ್ವಾನಿ ಸ ವೈ ಕ್ಷತ್ರಿಯಪಾಂಸನಃ ॥28॥
ಆದ್ದರಿಂದ ರಾಜನು ತೀಕ್ಷ್ಣಶಾಸನದಿಂದಲೇ ಪ್ರಜೆಗಳನ್ನು ನ್ಯಾಯಮಾರ್ಗದಲ್ಲಿ ಸ್ಥಾಪಿಸಬೇಕು. ಯಾರ ರಾಷ್ಟ್ರದಲ್ಲಿ ಲೂಟಿಕೋರರು ತೋಳಗಳಂತೆ ಜನಗಳನ್ನು ತಿನ್ನುತ್ತಾ, ಹಿಂಸಿಸುತ್ತಾ, ಕಾಗೆಗಳು ನೀರಿನಲ್ಲಿರುವ ಮೀನುಗಳನ್ನು ಅಪಹರಿಸುವಂತೆ ಪರರ ಸ್ವತ್ತನ್ನು

ಅಪಹರಿಸುತ್ತಾರೋ ಆ ರಾಜನು ಕ್ಷತ್ರಿಯ ಕುಲಕ್ಕೆ ಕಳಂಕ.
ಕುಲೀನಾನ್ ಸಚಿವಾನ್ಕೃತ್ವಾ ವೇದವಿದ್ಯಾಸಮನ್ವಿತಾನ್ |
ಪ್ರಶಾಧಿ ಪೃಥಿವೀಂ ರಾಜನ್ ಪ್ರಜಾ ಧರ್ಮೇಣ ಪಾಲಯನ್ ॥29॥
ರಾಜನೇ! ಸತ್ಕುಲಪ್ರಸೂತರೂ, ವೇದವಿದ್ಯಾಸಂಪನ್ನರೂ ಆದವರನ್ನು ಸಚಿವರನ್ನಾಗಿ ಮಾಡಿಕೊಂಡು, ಧರ್ಮದಿಂದ ಪ್ರಜೆಗಳನ್ನು ರಕ್ಷಿಸುತ್ತಾ ಭೂಮಿಯನ್ನು ಆಳು.
ವಿಹೀನಜನ್ಮಕರ್ಮಾಣಂ ಯಃ ಪ್ರಗೃಹ್ಣಾತಿ ಭೂಮಿಪಃ |
ಉಭಯಸ್ಯಾವಿಶೇಷಜ್ಞಸ್ತದ್ವೈ ಕ್ಷತ್ರಂ ನಪುಂಸಕಮ್ ॥30॥
ಸತ್ಕುಲದಲ್ಲಿ ಜನ್ಮ ಮತ್ತು ಶ್ರೇಷ್ಠ ಸಾಧನೆಗಳಿಲ್ಲದವರನ್ನು ಮಂತ್ರಿಗಳನ್ನಾಗಿ ಯಾರು ಸ್ವೀಕರಿಸುವನೋ ಅವನು ಅಂತಹ ಜನ್ಮ ಮತ್ತು ಸಾಧನೆಗಳು ಮತ್ತು ಈ ಜನ್ಮ-ಪರಜನ್ಮಗಳ ಮಹತ್ವವನ್ನು ಅರಿಯದವನು. ಅಂತಹ ಕ್ಷತ್ರಿಯ ಅಪ್ರಯೋಜಕ.
ನೈವೋಗ್ರಂ ನೈವ ಚಾನುಗ್ರಂ ಧರ್ಮೇಣೇಹ ಪ್ರಶಸ್ಯತೇ |
ಉಭಯಂ ನ ವ್ಯತಿಕ್ರಾಮೇದುಗ್ರೋ ಭೂತ್ವಾ ಮೃದುರ್ಭವ ॥31॥
ಧರ್ಮವು ಉಗ್ರಶಾಸನವನ್ನು ಒಪ್ಪುವುದಿಲ್ಲ. ಮೃದುಶಾಸನವನ್ನೂ ಒಪ್ಪುವುದಿಲ್ಲ. ಎರಡು ವಿಧಶಾಸನವನ್ನೂ ಮೀರಬಾರದು. ಉಗ್ರನೂ ಆಗು, ಮೃದುವೂ ಆಗು.
ಕಷ್ಟಃ ಕ್ಷತ್ರಿಯಧರ್ಮೋಯಂ ಸೌಹೃದಂ ತ್ವಯಿ ಯತ್ ಸ್ಥಿತಮ್ |
ಉಗ್ರೇ ಕರ್ಮಣಿ ಸೃಷ್ಟೋಽಸಿ ತಸ್ಮಾದ್ ರಾಜ್ಯಂ ಪ್ರಶಾಧಿ ವೈ ॥32॥
ನಿನ್ನಲ್ಲಿ ಮೃದು ಮನಸ್ಸು ಇರುವುದರಿಂದ ನಿನಗೆ ಈ ಕ್ಷತ್ರಿಯ ಧರ್ಮವು ಕಷ್ಟ. ನೀನು ಕಠೋರ ಕರ್ಮಗಳನ್ನು ಮಾಡುವುದಕ್ಕಾಗಿ ಹುಟ್ಟಿರುವಿ. ಆದ್ದರಿಂದ ನೀನು (ಉಗ್ರ ಮತ್ತು ಮೃದು ಸ್ವಭಾವಗಳ ಸಮನ್ವಯದಿಂದ) ರಾಜ್ಯವನ್ನು ಆಳು.
ಅಶಿಷ್ಟನಿಗ್ರಹೋ ನಿತ್ಯಂ ಶಿಷ್ಟಸ್ಯ ಪರಿಪಾಲನಮ್ |
ಇತಿ ಶುಕ್ರೋಽಬ್ರವೀದ್ ಧೀಮಾನಾಪತ್ಸು ಭರತರ್ಷಭ ॥33॥
ಭರತಕುಲಶ್ರೇಷ್ಠ! ಆಪತ್ಕಾಲದಲ್ಲಿ ಅಶಿಷ್ಟರ ನಿಗ್ರಹವನ್ನು ಶಿಷ್ಟರ ಪರಿಪಾಲನವನ್ನು ರಾಜನು ಮಾಡಬೇಕು ಎಂದು ಜ್ಞಾನಿಯಾದ ಶುಕ್ರಾಚಾರ್ಯರು ಹೇಳಿದ್ದಾರೆ.
ಯುಧಿಷ್ಠಿರಃ
ಅಸ್ತಿ ಸ್ವಿದ್ದಸ್ಯುಮರ್ಯಾದಾ ಯಾಮನ್ಯೋ ನಾತಿಲಂಘಯೇತ್ |
ಪೃಚ್ಛಾಮಿ ತ್ವಾಂ ಸತಾಂ ಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ॥34॥
ಯಾರೂ ಉಲ್ಲಂಘಿಸಬಾರದ ಎಲ್ಲೆಗಳು ಇವೆಯೇ? ಪಿತಾಮಹ! ಸಜ್ಜನಶ್ರೇಷ್ಠ! ದಯವಿಟ್ಟು ನನಗೆ ತಿಳಿಸಿರಿ.
ಭೀಷ್ಮಃ
ಬ್ರಾಹ್ಮಣಾನೇವ ಸೇವೇತ ವಿದ್ಯಾವೃದ್ಧಾಂಸ್ತಪಸ್ವಿನಃ |
ಶ್ರುತಚಾರಿತ್ರವೃತ್ತಾಢ್ಯಾನ್ ಪವಿತ್ರಂ ಹ್ಯೇತದುತ್ತಮಮ್ ॥35॥
ವಿದ್ಯಾವೃದ್ಧರಾದ, ತಪಸ್ವಿಗಳಾದ, ವೇದವಿದ್ಯಾ ಮತ್ತು ಸಚ್ಚಾರಿತ್ರ್ಯ ಸಂಪನ್ನರಾದ ಬ್ರಾಹ್ಮಣರ ಸೇವೆಯನ್ನು ಮಾಡಲೇಬೇಕು. ಇದು ಉತ್ತಮವೂ, ಪವಿತ್ರವೂ ಆದ ಕಾರ್ಯ.
ಯಾ ದೇವತಾಸು ವೃತ್ತಿಸ್ತೇ ಸಾಸ್ತು ವಿಪ್ರೇಷು ಸರ್ವದಾ |
ಕ್ರುದ್ಧೈರ್ಹಿ ವಿಪ್ರೈಃ ಕರ್ಮಾಣಿ ಕೃತಾನಿ ಬಹುಧಾ ನೃಪ ॥36॥
ರಾಜನೇ! ನೀನು ದೇವತೆಗಳ ಬಗ್ಗೆ ಹೇಗೆ ವರ್ತಿಸುವೆಯೋ ಹಾಗೆಯೇ ಯಾವಾಗಲೂ ಬ್ರಾಹ್ಮಣರಲ್ಲೂ ನಡೆದುಕೊಳ್ಳಬೇಕು. ಕ್ರುದ್ಧರಾದ ವಿಪ್ರರು ವಿಚಿತ್ರ ಕಾರ್ಯಗಳನ್ನು ಮಾಡಿರುವ ನಿದರ್ಶನಗಳಿವೆ.
ತೇಷಾಂ ಪ್ರೀತ್ಯಾ ಯಶೋ ಮುಖ್ಯಮಪ್ರೀತ್ಯಾ ತು ವಿಪರ್ಯಯಃ |
ಪ್ರೀತ್ಯಾ ಹ್ಯಮೃತವದ್ ವಿಪ್ರಾಃ ಕ್ರುದ್ಧಾಶ್ಚೈವ ಯಥಾ ವಿಷಮ್ ॥37॥
ಬ್ರಾಹ್ಮಣರ ಪ್ರೀತಿಯಿಂದ ದೊಡ್ಡ ಕೀರ್ತಿಯು ಲಭಿಸುತ್ತದೆ. ಅವರ ಅಪ್ರೀತಿಯಿಂದ ದೊಡ್ಡ ಅಪಕೀರ್ತಿಯು ಬರುತ್ತದೆ. ಪ್ರೀತರಾದ ಬ್ರಾಹ್ಮಣರು ಅಮೃತದಂತೆ. ಕ್ರುದ್ಧ ಬ್ರಾಹ್ಮಣರು ವಿಷದಂತೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿಯಿತು.
* * * *
ಹದಿಮೂರನೆಯ ಅಧ್ಯಾಯ
ಶರಣಾಗತರ ರಕ್ಷಣೆಯನ್ನು ಮಾಡಿದವರಿಗೆ ಲಭಿಸುವ ಫಲದ ಬಗ್ಗೆ
ಯುಧಿಷ್ಠಿರನ ಪ್ರಶ್ನೆ. ಕಾಡಿನಲ್ಲಿ ಮಳೆಯ ಹೊಡೆತಕ್ಕೆ ನಲುಗಿದ ಬೇಟೆಗಾರ.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಶರಣಂ ಪಾಲಯಾನಸ್ಯ ಯೋ ಧರ್ಮಸ್ತಂ ವದಸ್ವ ಮೇ ॥1॥
ಪಿತಾಮಹ! ಮಹಾಪ್ರಾಜ್ಞ! ಸರ್ವಶಾಸ್ತ್ರವಿಶಾರದ! ಶರಣಾಗತರನ್ನು ರಕ್ಷಿಸುವವರಿಗೆ ಯಾವ ಧರ್ಮದ ಫಲದ ಸಿದ್ಧಿಯಾಗುವುದೋ ಅದನ್ನು ತಿಳಿಸಿರಿ. (ಶರಣಾಗತರ ರಕ್ಷಣೆ ಧರ್ಮ. ಈ ಧರ್ಮವನ್ನು ಆಚರಿಸುವವರಿಗೆ ಏನು ಫಲವು ಲಭಿಸುತ್ತದೆ?)

ಭೀಷ್ಮಃ
ಮಹಾನ್ ಧರ್ಮೋ ಮಹಾರಾಜ ಶರಣಾಗತಪಾಲನೇ |
ಅರ್ಹಃ ಪ್ರಷ್ಟುಂ ಭವಾಂಶ್ಚೈವ ಪ್ರಶ್ನಂ ಭರತಸತ್ತಮ ||2||
ಮಹಾರಾಜ! ಶರಣಾಗತರ ರಕ್ಷಣೆ ಮಾಡಿದವರಿಗೆ ಮಹಾಫಲವು ಲಭಿಸುತ್ತದೆ. ಭರತಕುಲಶ್ರೇಷ್ಠ! ನೀನು ಇದರ ಬಗ್ಗೆ ಪ್ರಶ್ನಿಸುವ ಅರ್ಹತೆಯನ್ನು ಹೊಂದಿರುವೆ.
ನೃಗಪ್ರಭೃತಯೋ ರಾಜನ್ ರಾಜಾನಃ ಶರಣಾಗತಾನ್ |
ಪರಿಪಾಲ್ಯ ಮಹಾರಾಜ ಸಂಸಿದ್ಧಿಂ ಪರಮಾಂ ಗತಾಃ ||3||
ರಾಜನ್! ನೃಗ ಮೊದಲಾದ ರಾಜರು ಶರಣಾಗತರನ್ನು ರಕ್ಷಿಸಿ ಮಹಾಸಿದ್ಧಿಯನ್ನು ಹೊಂದಿದರು.
ಶ್ರೂಯತೇ ಹಿ ಕಪೋತೇನ ಶತ್ರುಃ ಶರಣಮಾಗತಃ |
ಪೂಜಿತಶ್ಚ ಯಥಾನ್ಯಾಯಂ ಸ್ವೈಶ್ಚ ಮಾಂಸೈರ್ನಿಮಂತ್ರಿತಃ ||4||
ಕಪೋತ ಹಕ್ಕಿಯು ಶರಣಾಗತನಾದ ಶತ್ರುವನ್ನು ಸತ್ಕರಿಸಿ ತನ್ನ ಮಾಂಸವನ್ನೇ ಅವನಿಗೆ ಅರ್ಪಿಸಿದ ಘಟನೆಯು ಪ್ರಸಿದ್ಧ.
ಯುಧಿಷ್ಠಿರಃ
ಕಥಂ ಕಪೋತೇನ ಪುರಾ ಶತ್ರುಃ ಶರಣಮಾಗತಃ |
ಸ್ವಮಾಂಸೈರ್ಭೋಜಿತಃ ಕಾಂ ಚ ಗತಿಂ ಲೇಭೇ ಸ ಭಾರತ ||5||
ಭರತಕುಲಸಂಜಾತ! ಶರಣಾಗತ ಶತ್ರುವಿಗೆ ಕಪೋತವು ಅವನ ಆಹಾರಕ್ಕಾಗಿ ತನ್ನ ಮಾಂಸವನ್ನೇ ಹೇಗೆ ಅರ್ಪಿಸಿತು? ಅದರಿಂದ ಕಪೋತವು ಯಾವ ಗತಿಯನ್ನು ಪಡೆಯಿತು?
ಭೀಷ್ಮಃ
ಶೃಣು ರಾಜನ್ ಕಥಾಂ ದಿವ್ಯಾಂ ಸರ್ವಪಾಪಪ್ರಣಾಶಿನೀಮ್ |
ನೃಪತೇರ್ಮುಚುಕುಂದಸ್ಯ ಕಥಿತಾಂ ಭಾರ್ಗವೇಣ ಹ ||6||
ರಾಜನ್! ಪರಶುರಾಮರು ಮುಚುಕುಂದ ಮಹಾರಾಜನಿಗೆ ಹೇಳಿದ ಕಥೆ ಇದು. ದಿವ್ಯ ಕಥೆ. ಸರ್ವಪಾಪವನ್ನೂ ಪರಿಹರಿಸುವ ಕಥೆ, ಕೇಳು.
ಇಮಮರ್ಥಂ ಪುರಾ ಪಾರ್ಥ ಮುಚುಕುಂದೋ ನರಾಧಿಪಃ |
ಭಾರ್ಗವಂ ಪರಿಪಪ್ರಚ್ಛ ಪ್ರಣತೋ ಭರತರ್ಷಭ ||7||
ಭರತಕುಲಶ್ರೇಷ್ಠ! ಕುಂತೀಸುತ! ಹಿಂದೆ ಮುಚುಕುಂದ ಮಹಾರಾಜನು ಈ ವಿಷಯವನ್ನು ಕುರಿತು ಪರಶುರಾಮರನ್ನು ಕೇಳಿದನು.
ತಸ್ಮೈ ಶುಶ್ರೂಷಮಾಣಾಯ ಭಾರ್ಗವೋಽಕಥಯತ್ ಕಥಾಮ್ |
ಇಯಂ ಯಥಾ ಕಪೋತೇನ ಸಿದ್ಧಿಃ ಪ್ರಾಪ್ತಾ ನರಾಧಿಪ ||8||
ಕೇಳ ಬಯಸಿದ ಆ ರಾಜನಿಗೆ ಪರಶುರಾಮರು ಕಪೋತವು ಸಿದ್ಧಿಯನ್ನು ಪಡೆದ ಈ ಕಥೆಯನ್ನು ಹೇಳಿದರು.
ಧರ್ಮನಿಶ್ಚಯಸಂಯುಕ್ತಾಂ ಕಾಮಾರ್ಥಸಹಿತಾಂ ಕಥಾಮ್ |
ಶೃಣುಷ್ವಾವಹಿತೋ ರಾಜನ್ ಗದತೋ ಮೇ ಮಹಾಭುಜ ||9||
ರಾಜನ್! ಪರಾಕ್ರಮಿಯೇ! ಧರ್ಮ-ಅರ್ಥ-ಕಾಮಗಳ ಬಗ್ಗೆ ಬೋಧನೆಯನ್ನು ಒಳಗೊಂಡ ಈ ಕಥೆಯನ್ನು ಕೇಳು.
ಕಶ್ಚಿತ್ ಕ್ಷುದ್ರಸಮಾಚಾರಃ ಪೃಥಿವ್ಯಾಂ ಕಾಲಸಮ್ಮತಃ |
ಚಚಾರ ಪೃಥಿವೀಂ ಪಾಪೋ ಘೋರಃ ಶಕುನಿಲುಬ್ಧಕಃ ||10||
ಕಾಕೋಲ ಇವ ಕೃಷ್ಣಾಂಗೋ ರೂಕ್ಷಃ ಪಾಪಸಮಾಹಿತಃ |
ಯವಮಧ್ಯಃ ಕೃಶಗ್ರೀವೋ ಹ್ರಸ್ವಪಾದೋ ಮಹಾಹನುಃ ||11||
ಒಬ್ಬ ಹಕ್ಕಿಗಳ ಬೇಟೆಗಾರ. ಕ್ಷುದ್ರ ನಡವಳಿಕೆಯವನು. ಯಮ ಸದೃಶ, ಪಾಪಿ, ಘೋರ. ಕಾಗೆಯಷ್ಟು ಕಪ್ಪು. ನಿಷ್ಠುರ. ಕೆಟ್ಟ ಕೆಲಸವನ್ನು ಮಾಡಲೇಬೇಕೆಂಬ ದೃಢ ನಿರ್ಧಾರದವನು. ತೆಳು ನಡು, ತೆಳು ಕುತ್ತಿಗೆ, ಸಣ್ಣ ಕಾಲು, ದೊಡ್ಡ ಗದ್ದ.
ನೈವ ತಸ್ಯ ಸುಹೃತ್ ಕಶ್ಚಿನ್ನ ಸಂಬಂಧೀ ನ ಬಾಂಧವಃ |
ಸ ಹಿ ತೈಃ ಸಂಪರಿತ್ಯಕ್ತಸ್ತೇನ ಘೋರೇಣ ಕರ್ಮಣಾ ||12||
ಅವನಿಗೆ ಒಬ್ಬನು ಸ್ನೇಹಿತನೂ ಇಲ್ಲ. ಸಂಬಂಧಿ ಇಲ್ಲ. ಬಂಧು ಇಲ್ಲ. ಅವನ ಘೋರ ಕರ್ಮಗಳಿಂದಾಗಿ ಅವರೆಲ್ಲರೂ ಅವನನ್ನು ಪರಿತ್ಯಜಿಸಿದ್ದರು.
ಸ ವೈ ಕ್ಷಾರಕಮಾದಾಯ ದ್ವಿಜಾನ್ ಹತ್ವಾ ವನೇ ಸದಾ |
ಚಕಾರ ವಿಕ್ರಯಂ ತೇಷಾಂ ಪತಂಗಾನಾಂ ನರಾಧಿಪ ||13||
ರಾಜನ್! ಅವನು ಕಾಡಿನಲ್ಲಿ ಬಲೆ ಹಾಕಿ ಹಕ್ಕಿಗಳನ್ನು ಹಿಡಿದು, ಕೊಂದು ಅವುಗಳ ಮಾರಾಟವನ್ನು ಮಾಡುತ್ತಿದ್ದನು.
ಏವಂ ತು ವರ್ತಮಾನಸ್ಯ ತಸ್ಯ ವೃತ್ತಿಂ ದುರಾತ್ಮನಃ |
ಅಗಮತ್ ಸುಮಹಾನ್ಕಾಲೋ ನ ಚಾಧರ್ಮಮಬುಧ್ಯತ ||14||
ಹೀಗೆ ವೃತ್ತಿಯನ್ನು ನಡೆಸುತ್ತಾ ಆದುರಾತ್ಮನ ದೀರ್ಘಕಾಲವು ಕಳೆದುಹೋಯಿತು. ಅವನಿಗೆ ತಾನು ಮಾಡುತ್ತಿರುವುದು ಅಧರ್ಮ ಎಂದು ತಿಳಿಯಲೇ ಇಲ್ಲ.
ತಸ್ಯ ಭಾರ್ಯಾಸಹಾಯಸ್ಯ ರಮಮಾಣಸ್ಯ ಶಾಶ್ವತಮ್ |
ದೈವಯೋಗವಿಮೂಢಸ್ಯ ನಾನ್ಯಾ ವೃತ್ತಿರರೋಚತ ||15||
ಪತ್ನೀ ಸಹಿತನಾಗಿ ಈ ವೃತ್ತಿಯಲ್ಲೇ ದೀರ್ಘಕಾಲ ಸುಖವನ್ನು ಅನುಭವಿಸುತ್ತಿದ್ದ, ದೈವಯೋಗದಿಂದ ಮೂಢನೇ ಆಗಿದ್ದ ಅವನಿಗೆ

ಬೇರೆ ಯಾವ ವೃತ್ತಿಯೂ ಇಷ್ಟವಾಗಲಿಲ್ಲ.
ತತಃ ಕದಾಚಿತ್ತಸ್ಯಾಥ ವನಸ್ಥಸ್ಯ ಸಮುದ್ಗತಃ |
ಪಾತಯನ್ನಿವ ವೃಕ್ಷಾಂಸ್ತಾನ್ ಸುಮಹಾನ್ ವಾತಸಂಭ್ರಮಃ ॥16॥
ಮೇಘಸಂಕುಲಮಾಕಾಶಂ ವಿದ್ಯುನ್ಮಂಡಲಮಂಡಿತಮ್ |
ಸಂಛನ್ನಂ ಸುಮುಹೂರ್ತೇನ ನೌಸಾರ್ಥೇನೇವ ಸಾಗರಃ ॥17॥
ಒಮ್ಮೆ ಅವನು ಕಾಡಿನಲ್ಲಿದ್ದಾಗ ಅಲ್ಲಿನ ಮರಗಳನ್ನು ಬೀಳಿಸುವಂತಿದ್ದ, ಭಾರಿ ಬಿರುಗಾಳಿಯು ಎದ್ದಿತು. ಸ್ವಲ್ಪವೇ ಹೊತ್ತಿನಲ್ಲಿ ಆಕಾಶವು ಮೋಡಗಳಿಂದ ಮುಚ್ಚಿಹೋಯಿತು. ಮಿಂಚುಗಳು ಆಕಾಶವನ್ನು ಅಲಂಕರಿಸಿದ್ದವು. ಹಡಗುಗಳ ಸಮೂಹದಿಂದ ಆವೃತವಾದ ಸಾಗರದಂತಿತ್ತು ಆಕಾಶ.
ವಾರಿಧಾರಾಸಮೂಹೈಶ್ಚ ಸಂಪ್ರಹೃಷ್ಟಃ ಶತಕ್ರತುಃ |
ಕ್ಷಣೇನ ಪೂರಯಾಮಾಸ ಸಲಿಲೇನ ವಸುಂಧರಾಮ್ ॥18॥
ಬಹಳ ಸಂತೋಷದಲ್ಲಿದ್ದ ಇಂದ್ರನು ಕ್ಷಣ ಮಾತ್ರದಲ್ಲಿ ನೀರಿನ ಧಾರೆಗಳಿಂದ ಭೂಮಿಯನ್ನು ತುಂಬಿಸಿದನು.
ತತೋ ಧಾರಾಕುಲೇ ಲೋಕೇ ಸಂಭ್ರಮನ್ನಷ್ಟಚೇತನಃ |
ಶೀತಾರ್ತಸ್ತದ್ವನಂ ಸರ್ವಮಾಕುಲೇನಾಂತರಾತ್ಮನಾ ॥19॥
ನೈವ ನಿಮ್ನಂ ಸ್ಥಲಂ ವಾಪಿ ಸೋಽವಿಂದತ ವಿಹಂಗಹಾ |
ಪೂರಿತೋ ಹಿ ಜಲೌಘೇನ ಮಾರ್ಗಸ್ತಸ್ಯ ವನಸ್ಯ ವೈ ॥20॥
ಆ ಪ್ರದೇಶವೆಲ್ಲವು ಮಳೆಯ ಧಾರೆಗಳಿಂದ ಅಸ್ತವ್ಯಸ್ತವಾದಾಗ ಚಳಿಯ ಬಾಧೆಗೆ ಒಳಗಾಗಿ, ವ್ಯಾಕುಲ ಮನಸ್ಸಿನಿಂದ, ಏನು ತೋಚದೆ ಆ ವನದಲ್ಲಿ ಅಲೆಯುತ್ತಿರುವ ಆ ಪಕ್ಷಿ ಹಂತಕನು ಆ ಇಡೀ ವನದಲ್ಲಿ ತಗ್ಗು, ದಿಣ್ಣೆ, ಸಮತಟ್ಟು ಸ್ಥಳಗಳನ್ನೇ ತಿಳಿಯದಾದನು. ಆ ವನದ ಎಲ್ಲ ಮಾರ್ಗಗಳೂ ಜಲರಾಶಿಯಿಂದ ತುಂಬಿಹೋಗಿತ್ತು.
ಪಕ್ಷಿಣೋ ವಾತವೇಗೇನ ಹತಾ ಲೀನಾಸ್ತದಾಭವನ್ |
ಮೃಗಾಃ ಸಿಂಹಾ ವರಾಹಾಶ್ಚ ಸ್ಥಲಾನ್ಯಾಶ್ರಿತ್ಯ ತಸ್ಥಿರೇ ॥21॥
ಆಗ ಹಕ್ಕಿಗಳು ಗಾಳಿಯ ವೇಗದ ಹೊಡೆತಕ್ಕೆ ಸಿಕ್ಕಿ ಅಲ್ಲಲ್ಲಿ ಅಡಗಿಕೊಂಡವು. ಜಿಂಕೆಗಳು, ಸಿಂಹಗಳು, ಹಂದಿಗಳು ಗಟ್ಟಿ ನೆಲವನ್ನು ಆಶ್ರಯಿಸಿ ನಿಂತವು.
ಮಹತಾ ವಾತವರ್ಷೇಣ ತ್ರಾಸಿತಾಸ್ತೇ ವನೌಕಸಃ |
ಭಯಾರ್ತಾಶ್ಚ ಕ್ಷುಧಾರ್ತಾಶ್ಚ ಬಭ್ರಮುಃ ಸಹಿತಾ ವನೇ ॥22॥
ಭಾರಿ ಗಾಳಿ- ಮಳೆಯಿಂದ ಪೀಡಿತರಾದ ಆ ವನವಾಸಿ ಪ್ರಾಣಿಗಳು ಭಯ- ಹಸಿವೆಗಳಿಂದ ಆರ್ತರಾಗಿ ಜೊತೆಯಲ್ಲೇ ಅಲೆದಾಡಿದವು.
ಸ ತು ಶೀತಹತೈರ್ಗಾತ್ರೈರ್ಜಗಾಮೈವ ನ ತಸ್ಥಿವಾನ್ |
ಸೋಽಪಶ್ಯದ್ವನಷಣ್ಡೇಷು ಮೇಘನೀಲಂ ವನಸ್ಪತಿಮ್ ॥23॥
ಆ ಬೇಡನು ಶೀತಪೀಡಿತನಾಗಿ ಎಲ್ಲೂ ನಿಲ್ಲಲಾಗದೆ ಎಲ್ಲೆಲ್ಲೋ ಹೋದನು. ದಟ್ಟ ವನದಲ್ಲಿ ಮೋಡದಂತೆ ಕಪ್ಪಾದ ಮರವೊಂದನ್ನು ನೋಡಿದನು.
ತಾರಾಢ್ಯಂ ಕುಮುದಾಕಾರಮಾಕಾಶಂ ನಿರ್ಮಲಂ ಚ ಹ |
ಮೇಘೈರ್ಮುಕ್ತಂ ನಭೋ ದೃಷ್ಟ್ವಾ ಲುಬ್ಧಕಃ ಶೀತವಿಹ್ವಲಃ ॥24॥
ದಿಶೋಽವಲೋಕಯಾಮಾಸ ವೇಲಾಂ ಚೈವ ದುರಾತ್ಮವಾನ್ |
ದೂರೇ ಗ್ರಾಮನಿವೇಶಶ್ಚ ತಸ್ಮಾದ್ದೇಶಾದಿತಿ ಪ್ರಭೋ |
ಕೃತಬುದ್ಧಿರ್ವನೇ ತಸ್ಮಿನ್ ವಸ್ತುಂ ತಾಂ ರಜನೀಂ ತದಾ ॥25॥
ನಕ್ಷತ್ರಗಳಿಂದ ತುಂಬಿದ, ನೈದಿಲೆಗಳಿಂದ ಶೋಭಿಸುವ ಸರೋವರದಂತಿರುವ ನಿರ್ಮಲ ಆಕಾಶವು ಕಾಣಿಸಿತು. ಶೀತ ಪೀಡಿತನಾದ ಬೇಡನು ಮೋಡಗಳಿಲ್ಲದ ಆಕಾಶವನ್ನು ನೋಡಿ ಸುತ್ತಲೂ ನೋಡಿದನು. ಸಮಯವನ್ನು ತಿಳಿದನು. ಆ ದುರಾತ್ಮನು ಊರು ಆ ಪ್ರದೇಶದಿಂದ ದೂರವಿದೆ ಎಂದು ತಿಳಿದು, ಆ ರಾತ್ರಿ ಆ ವನದಲ್ಲೇ ವಾಸ ಮಾಡಲು ನಿಶ್ಚಯಿಸಿದನು.
ಸೋಽಂಜಲಿಂ ಪ್ರಯತಃ ಕೃತ್ವಾ ವಾಕ್ಯಮಾಹ ವನಸ್ಪತಿಮ್ |
ಶರಣಂ ಯಾಮಿ ಯಾನ್ಯಸ್ಮಿನ್ ದೈವತಾನೀಹ ಭಾರತ ॥26॥
ಭರತಕುಲಜಾತ! ಅವನು ಕೈಮುಗಿದು, ವಿನೀತನಾಗಿ ಮರಕ್ಕೆ ಹೇಳಿದನು. `ಈ ಮರದಲ್ಲಿರುವ ದೇವತಾ ಸಮುದಾಯಕ್ಕೆ ರಕ್ಷಿಸಿರಿ ಎಂದು ಬೇಡುವೆನು'.
ಸ ಶಿಲಾಯಾಂ ಶಿರಃ ಕೃತ್ವಾ ಪರ್ಣಾನ್ಯಾಸ್ತೀರ್ಯ ಭೂತಲೇ |
ದುಃಖೇನ ಮಹತಾವಿಷ್ಟಸ್ತತಃ ಸುಷ್ವಾಪ ಪಕ್ಷಿಹಾ ॥27॥
ಬಹಳ ದುಃಖಕ್ಕೆ ಒಳಗಾದ ಆ ಪಕ್ಷಿಹಂತಕನು ನೆಲದ ಮೇಲೆ ಎಲೆಗಳನ್ನು ಹಾಸಿ, ಕಲ್ಲಿನ ಮೇಲೆ ತಲೆ ಇಟ್ಟು ಮಲಗಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿಯಿತು.
* * * *

ಹದಿನಾಲ್ಕನೆಯ ಅಧ್ಯಾಯ

ಕಪೋತ-ಕಪೋತೀ ದಂಪತಿಗಳು. ಕಪೋತಿಗೆ ಬೇಡನ ಬಲೆಯಲ್ಲಿ ಬಂಧನ. ಅದನ್ನು ನೋಡಿದ ಕಪೋತಕ್ಕೆ `ಶರಣಾಗತ ರಕ್ಷಣೆಯು ಧರ್ಮ.
ಇದನ್ನು ನಿಷ್ಠೆಯಿಂದ ಪಾಲಿಸು' ಎಂದು ಕಪೋತಿಯ ಸಲಹೆ.
ಕಪೋತನಿಂದ ಬೇಡನಿಗೆ ಉಪಚಾರ-ಆತ್ಮಾರ್ಪಣೆ.
ಭೀಷ್ಮಃ
ಅಥ ವೃಕ್ಷಸ್ಯ ಶಾಖಾಯಾಂ ವಿಹಂಗಃ ಸಸುಹೃಜ್ಜನಃ |
ದೀರ್ಘಕಾಲೋಷಿತೋ ರಾಜಂಸ್ತತ್ರ ಚಿತ್ರತನೂರುಹಃ ॥1॥
ರಾಜನೇ! ಆ ಮರದ ಕೊಂಬೆಯಲ್ಲಿ ವಿಚಿತ್ರ ರೆಕ್ಕೆಗಳಿದ್ದ ಹಕ್ಕಿಯೊಂದು ತನ್ನ ಮಿತ್ರರೊಂದಿಗೆ ದೀರ್ಘಕಾಲದಿಂದ ವಾಸ ಮಾಡುತ್ತಿತ್ತು.
ತಸ್ಯ ಕಾಲಂ ಗತಾ ಭಾರ್ಯಾ ಚರಿತುಂ ನಾಭ್ಯವರ್ತತ |
ಪ್ರಾಪ್ತಾಂ ಚ ರಜನೀಂ ದೃಷ್ಟ್ವಾ ಸ ಪಕ್ಷೀ ಪರ್ಯತಪ್ಯತ ॥2॥
ಅದರ ಪತ್ನಿ ಹಕ್ಕಿಯು ತಿರುಗಾಡಲು ಹೋಗಿ ಬಹಳ ಸಮಯವಾದರೂ ಹಿಂತಿರುಗಲಿಲ್ಲ. ರಾತ್ರಿಯಾದರೂ ಬರದಿದ್ದಾಗ ಪಕ್ಷಿಗೆ ಚಿಂತೆಯಾಯಿತು.
ವಾತವರ್ಷಂ ಮಹಚ್ಚಾಸೀನ್ನ ಚಾಗಚ್ಛತಿ ಮೇ ಪ್ರಿಯಾ |
ಕಿಂ ನು ತತ್ ಕಾರಣಂ ಯೇನ ಸಾದ್ಯಾಪಿ ನ ನಿವರ್ತತೇ ॥3॥
ಭಾರಿ ಗಾಳಿ-ಮಳೆ ಇತ್ತು. ನನ್ನ ಪ್ರಿಯೆ ಇನ್ನೂ ಬಂದಿಲ್ಲ. ಬರದಿರಲು ಏನು ಕಾರಣವಿರಬಹುದು?
ಅಪಿ ಸ್ವಸ್ತಿ ಭವೇತ್ ತಸ್ಯಾಃ ಪ್ರಿಯಾಯಾ ಮಮ ಕಾನನೇ |
ತಯಾ ವಿರಹಿತಂ ಹೀದಂ ಶೂನ್ಯಮದ್ಯ ಗೃಹಂ ಮಮ ॥4॥
ನನ್ನ ಪ್ರಿಯೆಯು ಕಾಡಿನಲ್ಲಿ ಕ್ಷೇಮವಾಗಿರಬಹುದೆ? ಅವಳಿಲ್ಲದ ಈ ನನ್ನ ಮನೆ ಶೂನ್ಯ.
ಯದಿ ಸಾ ರಕ್ತನೇತ್ರಾಂತಾ ಚಿತ್ರಾಂಗೀ ಮಧುರಸ್ವರಾ |
ಅದ್ಯ ನಾಭ್ಯೇತಿ ಮೇ ಕಾಂತಾ ನ ಕಾರ್ಯಂ ಜೀವಿತೇನ ಮೇ ॥5॥
ಕೆಂಪು ಕುಡಿಗಣ್ಣಿನ, ಮಧುರ ಸ್ವರದ, ಸುಂದರಾಂಗಿಯಾದ ಆ ನನ್ನ ಕಾಂತೆಯು ಈಗ ಬರದಿದ್ದರೆ ನಾನು ಬದುಕಿ ಮಾಡಬೇಕಾದುದು ಏನೂ ಇಲ್ಲ.
ಪತಿಧರ್ಮರತಾ ಸಾಧ್ವೀ ಪ್ರಾಣೇಭ್ಯೋಽಪಿ ಗರೀಯಸೀ |
ಸಾ ಹಿ ಶ್ರಾಂತಂ ಕ್ಷುಧಾರ್ತಂ ಚ ಜಾನೀತೇ ಮಾಂ ತಪಸ್ವಿನೀ ॥6॥
ಪತಿವ್ರತೆಯಾದ, ನನಗೆ ನನ್ನ ಪ್ರಾಣಗಳಿಗಿಂತ ಹೆಚ್ಚು ಪ್ರಿಯಳಾದ, ಸಾಧ್ವಿಯಾದ ಆ ತಪಸ್ವಿನಿಯು ನಾನು ಬಳಲಿದ್ದೇನೆ, ಬಹಳ ಹಸಿದಿದ್ದೇನೆ ಎಂದು ತಿಳಿದಿದ್ದಾಳೆ.
ಅನುರಕ್ತಾ ಹಿತಾ ಚೈವ ಸ್ನಿಗ್ಧಾ ಚೈವ ಪತಿವ್ರತಾ |
ಯಸ್ಯ ವೈ ತಾದೃಶೀ ಭಾರ್ಯಾ ಧನ್ಯಃ ಸ ಮನುಜೋ ಭುವಿ ॥7॥
ಯಾರ ಪತ್ನಿಯು ತನ್ನಲ್ಲಿ ಅನುರಕ್ತಳೂ, ಹಿತಕರಳೂ, ಸ್ನೇಹಶೀಲಳೂ ಆಗಿರುತ್ತಾಳೋ ಆ ಪುರುಷನು ಧನ್ಯ.
ಭಾರ್ಯಾ ಹಿ ಪರಮೋ ನಾಥಃ ಪುರುಷಸ್ಯೇಹ ಪಠ್ಯತೇ |
ಅಸಹಾಯಸ್ಯ ಲೋಕೇಽಸ್ಮಿಲ್ಲೋಕಯಾತ್ರಾಸಹಾಯಿನೀ ॥8॥
ಈ ಜೀವನದಲ್ಲಿ ಪುರುಷನಿಗೆ ಪತ್ನಿಯು ಶ್ರೇಷ್ಠನಾಥ ಎಂದು ಅಲ್ಲಲ್ಲಿ ಓದುತ್ತೇವೆ. ಈ ಲೋಕದಲ್ಲಿ ಬೇರೆ ಯಾರೂ ಸಹಾಯಕರಿಲ್ಲದ ಅವನಿಗೆ ಪತ್ನಿಯು ಜೀವನ ಯಾತ್ರೆಯಲ್ಲಿ ಜೊತೆಗಾರ್ತಿ.
ತಥಾ ರೋಗಾಭಿಭೂತಸ್ಯ ನಿತ್ಯಂ ಕೃಚ್ಛ್ರಗತಸ್ಯ ಚ |
ನಾಸ್ತಿ ಭಾರ್ಯಾಸಮಂ ಕಿಂಚಿನ್ನರಸ್ಯಾರ್ತಸ್ಯ ಭೇಷಜಮ್ ॥9॥
ರೋಗಪೀಡಿತನಾದ, ಕಷ್ಟಕ್ಕೊಳಗಾದ, ಆರ್ತ ನರನಿಗೆ ಪತ್ನಿಗೆ ಸಮವಾದ ಔಷಧವು ಯಾವುದೂ ಇಲ್ಲ.
ನಾಸ್ತಿ ಭಾರ್ಯಾಸಮೋ ಬಂಧುರ್ನಾಸ್ತಿ ಭಾರ್ಯಾಸಮಾ ಗತಿಃ |
ನಾಸ್ತಿ ಭಾರ್ಯಾಸಮೋ ಲೋಕೇ ಸಹಾಯೋ ಧರ್ಮಸಾಧನಃ ॥10॥
ಲೋಕದಲ್ಲಿ ಪತ್ನೀ ಸಮನಾದ ಬಂಧುವಿಲ್ಲ. ಪತ್ನಿ ಸಮವಾದ ದಾರಿಯಿಲ್ಲ. ಪತ್ನೀ ಸಮಳಾದ ಧರ್ಮಸಾಧನವು ಇಲ್ಲವೇ ಇಲ್ಲ.
ಏವಂ ವಿಲಪತಸ್ತಸ್ಯ ದ್ವಿಜಸ್ಯಾರ್ತಸ್ಯ ತತ್ರ ವೈ |
ಗೃಹೀತಾ ಶಕುನಘ್ನೇನ ಭಾರ್ಯಾ ಶುಶ್ರಾವ ಭಾರತೀಮ್ ॥11॥
ಹೀಗೆ ವಿಲಪಿಸುತ್ತಿರುವ, ದುಃಖಿಯಾದ ಆ ಹಕ್ಕಿಯ ಮಾತು ಹಕ್ಕಿ ಹಂತಕನಿಂದ ಹಿಡಿಯಲ್ಪಟ್ಟಿದ್ದ ಪತ್ನಿ ಹಕ್ಕಿಗೆ ಕೇಳಿಸಿತು.
ನ ಸಾ ಸ್ತ್ರೀತ್ಯಭಿಭಾಷಾ ಸ್ಯಾದ್ಯಸ್ಯಾ ಭರ್ತಾ ನ ತುಷ್ಯತಿ |
ಅಗ್ನಿಸಾಕ್ಷಿಕಮಪ್ಯೇತದ್ಭರ್ತಾ ಹಿ ಶರಣಂ ಸ್ತ್ರಿಯಃ ॥12॥
ಯಾವ ಮಹಿಳೆಯ ಬಗ್ಗೆ ಪತಿಯು ಸಂತುಷ್ಟನಲ್ಲವೋ ಅವಳು `ಸ್ತ್ರೀ' ಎಂಬ ಹೆಸರಿಗೆ ಅರ್ಹಳಲ್ಲ. ಸ್ತ್ರೀಗೆ ಪತಿಯು ರಕ್ಷಕ. ಇದು ಅಗ್ನಿ ಸಮ್ಮುಖದಲ್ಲಿ ಸಿದ್ಧವಾದ ವಿಷಯ.
ಇತಿ ಸಂಚಿಂತ್ಯ ದುಃಖಾರ್ತಾ ಭರ್ತಾರಂ ದುಃಖಿತಂ ತದಾ |
ಕಪೋತೀ ಲುಬ್ಧಕೇನಾಥ ಯತ್ತಾ ವಚನಮಬ್ರವೀತ್ ॥13॥
ಬೇಡನ ಬಂಧನಕ್ಕೆ ಒಳಗಾದ ದುಃಖಾರ್ತಳಾದ ಕಪೋತಿಯು ಹೀಗೆ ಆಲೋಚಿಸಿ ದುಃಖಿತ ಪತಿಗೆ ಹೇಳಿದಳು.
ಹಂತ ವಕ್ಷ್ಯಾಮಿ ತೇ ಶ್ರೇಯಃ ಶ್ರುತ್ವಾ ಚ ಕುರು ತತ್ತಥಾ |

ಶರಣಾಗತಸಂತ್ರಾತಾ ಭವ ಕಾಂತ ವಿಶೇಷತಃ ॥14॥
ಕಾಂತ! ಶ್ರೇಯಸ್ಕರವಾದ ಕೆಲಸವೊಂದನ್ನು ನಿನಗೆ ಹೇಳುತ್ತೇನೆ. ಕೇಳಿ ಹಾಗೆ ಮಾಡು. ಶರಣಾಗತರನ್ನು ವಿಶೇಷ ಶ್ರದ್ಧೆಯಿಂದ ರಕ್ಷಿಸು.
ಏಷ ಶಾಕುನಿಕಃ ಶೇತೇ ತವ ವಾಸಂ ಸಮಾಶ್ರಿತಃ |
ಶೀತಾರ್ತಶ್ಚ ಕ್ಷುಧಾರ್ತಶ್ಚ ಪೂಜಾಮಸ್ಮೈ ಪ್ರಯೋಜಯ ॥15॥
ಈ ಹಕ್ಕಿಯ ಬೇಟೆಗಾರನು ನಿನ್ನ ವಸತಿಯನ್ನು ಆಶ್ರಯಿಸಿ ಮಲಗಿದ್ದಾನೆ. ಛಳಿಯ ಬಾಧೆಗೆ ಒಳಗಾಗಿದ್ದಾನೆ. ಬಹಳ ಹಸಿಸಿದ್ದಾನೆ. ಅವನನ್ನು ಆದರಿಸು.
ಯೋ ಹಿ ಕಶ್ಚಿದ್ ದ್ವಿಜಂ ಹನ್ಯಾದ್ ಗಾಂ ವಾ ಲೋಕಸ್ಯ ಮಾತರಮ್ |
ಶರಣಾಗತಂ ಚ ಯೋ ಹನ್ಯಾತ್ ತುಲ್ಯಂ ತೇಷಾಂ ಚ ಪಾತಕಮ್ ॥
ಬ್ರಾಹ್ಮಣ ಹತ್ಯೆ, ಲೋಕಮಾತೆಯಾದ ಗೋವಿನ ಹತ್ಯೆ, ಶರಣಾಗತನ ಹತ್ಯೆ- ಇವು ಸಮಾನ ಪಾತಕಗಳು.
ಯಾಸ್ಮಾಕಂ ವಿಹಿತಾ ವೃತ್ತಿಃ ಕಾಪೋತೀ ಜಾತಿಧರ್ಮತಃ |
ಸಾ ಚರ್ಯಾತ್ಮವತಾ ನಿತ್ಯಂ ತ್ವದ್ವಿಧೇನಾಭಿವರ್ತಿತುಮ್ ॥17॥
ನಮ್ಮ ಜನ್ಮ-ಧರ್ಮಕ್ಕನುಗುಣವಾಗಿ ನಮಗೆ ಕಪೋತವೃತ್ತಿಯು ವಿಹಿತ. ಪ್ರಶಸ್ತ ಮನಸ್ಸಿನ ನಿನ್ನಂತಹವನು ಆ ಆಚರಣೆಯನ್ನು ಪಾಲಿಸಬೇಕು.
ಯಸ್ತು ಧರ್ಮಂ ಯಥಾಶಕ್ತಿ ಗೃಹಸ್ಥೋ ಹ್ಯನುವರ್ತತೇ |
ಸ ಪ್ರೇತ್ಯ ಲಭತೇ ಲೋಕಾನಕ್ಷಯಾನಿತಿ ಶುಶ್ರುಮ ॥18॥
ಯಾವ ಗೃಹಸ್ಥಾಶ್ರಮಿಯು ತನ್ನ ಧರ್ಮವನ್ನು ಯಥಾಶಕ್ತಿ ಅನುಸರಿಸುವನೋ ಅವನು ಮರಣಾನಂತರ ಅಕ್ಷಯಲೋಕವನ್ನು= ಮುಕ್ತಿಯನ್ನು ಹೊಂದುತ್ತಾನೆ ಎಂದು ಕೇಳಿದ್ದೇವೆ.
ಸ ತ್ವಂ ಸಂತಾನವಾನದ್ಯ ಪುತ್ರವಾನಪಿ ಚ ದ್ವಿಜ |
ತತ್ಸ್ವದೇಹೇ ದಯಾಂ ತ್ಯಕ್ತ್ವಾ ಧರ್ಮಾರ್ಥೌ ಪರಿಗೃಹ್ಯ ವೈ |
ಪೂಜಾಮಸ್ಮೈ ಪ್ರಯುಂಕ್ಷ್ವ ತ್ವಂ ಪ್ರೀಯೇತಾಸ್ಯ ಮನೋ ಯಥಾ ॥19॥
ನಿನ್ನ ಸಂತತಿಯನ್ನು ಮುಂದುವರಿಸುವ ಪುತ್ರರು ನಿನಗೆ ಇದ್ದಾರೆ. ಆದ್ದರಿಂದ ನಿನ್ನ ದೇಹದ ಮೇಲೆ ಅಭಿಮಾನವನ್ನು ಬಿಟ್ಟು ಧರ್ಮ-ಅರ್ಥಗಳನ್ನು ಪರಿಗ್ರಹಿಸಿ, ಈ ಬೇಡನ ಮನಸ್ಸಿಗೆ ಪ್ರೀತಿಯಾಗುವಂತೆ ಇವನನ್ನು ಸತ್ಕರಿಸು.
ಇತಿ ಸಾ ಶಕುನೀ ವಾಕ್ಯಂ ಕ್ಷಾರಕಸ್ಥಾ ತಪಸ್ವಿನೀ |
ಅತಿದುಃಖಾನ್ವಿತಾ ಪ್ರೋಚ್ಯ ಭರ್ತಾರಂ ಸಮುದೈಕ್ಷತ ॥20॥
ಬಲೆಯಲ್ಲಿದ್ದ ಆ ತಪಸ್ವಿನೀ ಹಕ್ಕಿಯು ಹೀಗೆ ಹೇಳಿ ಅತಿ ದುಃಖದಿಂದ ಪತಿಯನ್ನು ನೋಡಿತು.
ಸ ಪತ್ನ್ಯಾ ವಚನಂ ಶ್ರುತ್ವಾ ಧರ್ಮಯುಕ್ತಿಸಮನ್ವಿತಮ್ |
ಹರ್ಷೇಣ ಮಹತಾ ಯುಕ್ತೋ ಬಾಷ್ಪವ್ಯಾಕುಲಲೋಚನಃ ॥21॥
ಆ ಗಂಡು ಹಕ್ಕಿಗೆ ಪತ್ನಿಯ ಧರ್ಮಸಾಧಕವಾದ ಮಾತನ್ನು ಕೇಳಿ ಬಹಳ ಸಂತೋಷವಾಯಿತು. ಕಣ್ಣೀರು ತುಂಬಿ ಕಣ್ಣು ಮಬ್ಬಾಯಿತು.
ತಂ ವೈ ಶಾಕುನಿಕಂ ದೃಷ್ಟ್ವಾ ವಿಧಿದೃಷ್ಟೇನ ಕರ್ಮಣಾ |
ಪೂಜಯಾಮಾಸ ಯತ್ನೇನ ಸ ಪಕ್ಷೀ ಪಕ್ಷಿಜೀವಿನಮ್ ॥22॥
ಹಕ್ಕಿಯು ಹಕ್ಕಿಗಳನ್ನು ಕೊಂದು ಜೀವಿಸುವ ಆ ಬೇಡನನ್ನು ನೋಡಿ ವಿಧಿಗೆ ಅನುಗುಣವಾಗಿ ಪ್ರಯತ್ನ ಪಟ್ಟು ಅವನನ್ನು ಸತ್ಕರಿಸಿತು.
ಉವಾಚ ಚ ಸ್ವಾಗತಂ ತೇ ಬ್ರೂಹಿ ಕಿಂ ಕರವಾಣ್ಯಹಮ್ |
ಸಂತಾಪಶ್ಚ ನ ಕರ್ತವ್ಯಃ ಸ್ವಗೃಹೇ ವರ್ತತೇ ಭವಾನ್ ॥23॥
ಹೇಳಿತು. ನಿನಗೆ ಸ್ವಾಗತ. ನಿನಗಾಗಿ ಏನು ಮಾಡಲಿ? ದಯವಿಟ್ಟು ಹೇಳು. ಸಂತಾಪ ಪಡಬೇಡ. ಇದು ನಿನ್ನ ಮನೆಯೆ.
ತದ್ ಬ್ರವೀತು ಭವಾನ್ಕ್ಷಿಪ್ರಂ ಕಿಂ ಕರೋಮಿ ಕಿಮಿಚ್ಛಸಿ |
ಪ್ರಣಯೇನ ಬ್ರವೀಮಿ ತ್ವಾಂ ತ್ವಂ ಹಿ ನಃ ಶರಣಾಗತಃ ॥24॥
ಆದ್ದರಿಂದ ದಯವಿಟ್ಟು ಬೇಗ ಹೇಳು. ನಿನ್ನ ಇಚ್ಛೆ ಏನು? ನಾನು ಏನು ಮಾಡಬೇಕು? ಪ್ರೀತಿಯಿಂದ ಹೇಳುತ್ತಿದ್ದೇನೆ. ನೀನು ನಮ್ಮನ್ನು ಆಶ್ರಯಿಸಿ ಬಂದಿರುವಿ.
ಶರಣಾಗತಸ್ಯ ಕರ್ತವ್ಯಮಾತಿಥ್ಯಮಿಹ ಯತ್ನತಃ |
ಪಂಚಯಜ್ಞಪ್ರವೃತ್ತೇನ ಗೃಹಸ್ಥೇನ ವಿಶೇಷತಃ ॥25॥
ಶರಣಾಗತರ ಆತಿಥ್ಯವನ್ನು ಶ್ರದ್ಧೆಯಿಂದ ಮಾಡಬೇಕು. ಪಂಚಯಜ್ಞ (ದೇವ- ಋಷಿ-ಪಿತೃ-ಮನುಷ್ಯ-ಪಶುಗಳ ಆರಾಧನೆ) ದಲ್ಲಿ ಪ್ರವೃತ್ತನಾದ ಗೃಹಸ್ಥಾಶ್ರಮಿಯು ವಿಶೇಷವಾಗಿ ಅತಿಥಿ ಸತ್ಕಾರವನ್ನು ಮಾಡಬೇಕು.
ಪಂಚಯಜ್ಞಾಂಸ್ತು ಯೋ ಮೋಹಾನ್ನ ಕರೋತಿ ಗೃಹಾಶ್ರಮೀ |
ತಸ್ಯ ನಾಯಂ ನ ಚ ಪರೋ ಲೋಕೋ ಭವತಿ ಧರ್ಮತಃ ॥26॥
ಯಾವ ಗೃಹಸ್ಥಾಶ್ರಮಿಯು ಮೋಹದಿಂದ ಪಂಚಯಜ್ಞಗಳನ್ನು ಧರ್ಮ- ಶ್ರದ್ಧೆಯಿಂದ ಮಾಡುವುದಿಲ್ಲವೋ ಅವನಿಗೆ ಈ ಲೋಕವೂ ಇಲ್ಲ. ಪರಲೋಕವೂ ಇಲ್ಲ.
ತದ್ ಬ್ರೂಹಿ ತ್ವಂ ಸುವಿಸ್ರಬ್ಧೋ ಯತ್ತ್ವಂ ವಾಚಾ ವದಿಷ್ಯಸಿ |
ತತ್ ಕರಿಷ್ಯಾಮ್ಯಹಂ ಸರ್ವಂ ಮಾ ತ್ವಂ ಶೋಕೇ ಮನಃ ಕೃಥಾಃ ॥27॥
ಆದ್ದರಿಂದ ಏನೂ ಸಂಕೋಚವಿಲ್ಲದೆ ಹೇಳು. ನೀನು ಹೇಳುವ ಎಲ್ಲವನ್ನೂ ಮಾಡುತ್ತೇನೆ. ಶೋಕಿಸಬೇಡ.

ತಸ್ಯ ತದ್ವಚನಂ ಶ್ರುತ್ವಾ ಶಕುನೇರ್ಲುಬ್ಧಕೋಽಬ್ರವೀತ್ |
ಬಾಧತೇ ಖಲು ಮಾ ಶೀತಂ ಹಿಮತ್ರಾಣಂ ವಿಧೀಯತಾಮ್ ॥28॥
ಆ ಹಕ್ಕಿಯ ಮಾತನ್ನು ಕೇಳಿದ ಬೇಡನು ಹೇಳಿದನು. ಛಳಿಯು ಬಹಳ ಬಾಧಿಸುತ್ತಿದೆ. ಏನಾದರೂ ಪರಿಹಾರವನ್ನು ಏರ್ಪಡಿಸು.
ಏವಮುಕ್ತಸ್ತತಃ ಪಕ್ಷೀ ಪರ್ಣಾನ್ಯಾಸ್ತೀರ್ಯ ಭೂತಲೇ |
ಯಥಾಶುಷ್ಕಾಣಿ ಯತ್ನೇನ ಜ್ವಲನಾರ್ಥಂ ದ್ರುತಂ ಯಯೌ ॥29॥
ಹೀಗೆ ಹೇಳಲ್ಪಟ್ಟ ಹಕ್ಕಿಯು ಚೆನ್ನಾಗಿ ಒಣಗಿದ ಎಲೆಗಳನ್ನು ನೆಲದ ಮೇಲೆ ಹಾಸಿ ಬೆಂಕಿಯನ್ನು ತರಲು ವೇಗದಿಂದ ಹೋಯಿತು.
ಸ ಗತ್ವಾಂಗಾರಕರ್ಮಾಂತಂ ಗೃಹೀತ್ವಾಗ್ನಿಮಥಾಗಮತ್ |
ತತಃ ಶುಷ್ಕೇಷು ಪರ್ಣೇಷು ಪಾವಕಂ ಸೋಽಭ್ಯದೀದಿಪತ್ ॥30॥
ಕಮ್ಮಾರನ ಕಾರ್ಯಾಗಾರಕ್ಕೆ ಹೋಗಿ ಅಗ್ನಿಯನ್ನು ಹಿಡಿದುಕೊಂಡು ಬಂದಿತು. ಒಣಗಿದ ಎಲೆಗಳ ಮೇಲೆ ಅಗ್ನಿಯನ್ನು ಹಾಕಿ ಉದ್ದೀಪಿಸಿತು.
ಸುಸಂದೀಪ್ತಂ ಮಹತ್ಕೃತ್ವಾ ತಮಾಹ ಶರಣಾಗತಮ್ |
ಪ್ರತಾಪಯ ಸುವಿಸ್ರಬ್ಧಂ ಸ್ವಗಾತ್ರಾಣ್ಯಕುತೋಭಯಃ ॥31॥
ಅಗ್ನಿಯ ಜ್ವಾಲೆಗಳು ಏಳುವಂತೆ ಮಾಡಿ ಆ ಶರಣಾಗತನಿಗೆ ಹೇಳಿತು. ಏನೂ ಸಂಕೋಚವಿಲ್ಲದ ಶರೀರವನ್ನು ಕಾಯಿಸಿಕೋ. ನಿನಗೆ ಇಲ್ಲಿ ಯಾವ ಭಯವೂ ಇಲ್ಲ.
ಸ ತಥೋಕ್ತಸ್ತಥೇತ್ಯುಕ್ತ್ವಾ ಲುಬ್ಧೋ ಗಾತ್ರಾಣ್ಯತಾಪಯತ್ |
ಅಗ್ನಿಪ್ರತ್ಯಾಗತಪ್ರಾಣಸ್ತತಃ ಪ್ರಾಹ ವಿಹಂಗಮಮ್ ॥32॥
ಹೀಗೆ ಹೇಳಲ್ಪಟ್ಟ ಬೇಡನು ಶರೀರವನ್ನು ಕಾಯಿಸಿಕೊಂಡನು. ಶಾಖದಿಂದಾಗಿ ಪ್ರಾಣಶಕ್ತಿಗಳ ಉಜ್ಜೀವನವನ್ನು ಪಡೆದ ಅವನು ಹಕ್ಕಿಗೆ ಹೇಳಿದನು.
ದತ್ತಮಾಹಾರಮಿಚ್ಛಾಮಿ ತ್ವಯಾ ಕ್ಷುದ್ ಬಾಧತೇ ಹಿ ಮಾಮ್ |
ತದ್ವಚಃ ಸ ಪ್ರತಿಶ್ರುತ್ಯ ವಾಕ್ಯಮಾಹ ವಿಹಂಗಮಃ ॥33॥
ನನಗೆ ಬಹಳ ಹಸಿವು. ಏನಾದರೂ ಆಹಾರವನ್ನು ಕೊಡು. ಆ ಮಾತನ್ನು ಕೇಳಿದ ಹಕ್ಕಿಯು ಪ್ರತ್ಯುತ್ತರವನ್ನು ಹೇಳಿತು.
ನ ಮೇಽಸ್ತಿ ವಿಭವೋ ಯೇನ ನಾಶಯಾಮಿ ತವ ಕ್ಷುಧಾಮ್ |
ಉತ್ಪನ್ನೇನ ಹಿ ಜೀವಾಮೋ ವಯಂ ನಿತ್ಯಂ ವನೌಕಸಃ ॥34॥
ನಿನ್ನ ಹಸಿವೆಯನ್ನು ಪರಿಹರಿಸುವ ಅನುಕೂಲ ನನಗೆ ಇಲ್ಲ. `ವನವಾಸಿಗಳಾದ ನಾವು ಆಯಾಯ ದಿನ ಸಿಗುವ ಆಹಾರದಿಂದ ಜೀವಿಸುತ್ತೇವೆ'.
ಸಂಚಯೋ ನಾಸ್ತಿ ಚಾಸ್ಮಾಕಂ ಮುನೀನಾಮಿವ ಕಾನನೇ |
ಇತ್ಯುಕ್ತ್ವಾ ಸ ತದಾ ತತ್ರ ವಿವರ್ಣವದನೋಽಭವತ್ ॥35॥
ಕಾಡಿನಲ್ಲಿರುವ ಮುನಿಗಳ ಬಳಿ ಸಂಚಯವೂ ಇರುವುದಿಲ್ಲ. ಅಂತೆಯೇ ನಮ್ಮಲ್ಲಿ ಯಾವ ಸಂಚಯವೂ ಇಲ್ಲ. ಹೀಗೆ ಹೇಳುತ್ತಾ ಹಕ್ಕಿಯು ಮುಖ ಕಳೆಗುಂದಿತು.
ಕಥಂ ನು ಖಲು ಕರ್ತವ್ಯಮಿತಿ ಚಿಂತಾಪರಃ ಸದಾ |
ಬಭೂವ ಭರತಶ್ರೇಷ್ಠ ಗರ್ಹಯನ್ವೃತ್ತಿಮಾತ್ಮನಃ ॥36॥
ಭರತಶ್ರೇಷ್ಠ! ತನ್ನ ವೃತ್ತಿ (ಸ್ಥಿತಿ)ಯನ್ನೇ ಬೈದುಕೊಳ್ಳುತ್ತಾ ಏನು ಮಾಡಬೇಕೆಂದು ಚಿಂತಾಕ್ರಾಂತನಾದನು.
ಮುಹೂರ್ತಾಲ್ಲಬ್ಧಸಂಜ್ಞಸ್ತು ಸ ಪಕ್ಷೀ ಪಕ್ಷಿಘಾತಕಮ್ |
ಉವಾಚ ತರ್ಪಯಿಷ್ಯೇ ತ್ವಾಂ ಮುಹೂರ್ತಂ ಪ್ರತಿಪಾಲಯ ॥37॥
ಸ್ವಲ್ಪ ಹೊತ್ತಿಗೆ ಅವನಿಗೆ ಒಂದು ಉಪಾಯವು ಹೊಳೆಯಿತು. ಪಕ್ಷಿಯು ಪಕ್ಷಿಘಾತಕನಿಗೆ ಹೇಳಿತು. `ನಿನಗೆ ತೃಪ್ತಿಯಾಗುವಂತೆ ಮಾಡುತ್ತೇನೆ. ಸ್ವಲ್ಪ ತಾಳು'.
ಇತ್ಯುಕ್ತ್ವಾ ಶುಷ್ಕಪರ್ಣೈಃ ಸ ಸಂಪ್ರಜ್ವಾಲ್ಯ ಹುತಾಶನಮ್ |
ಹರ್ಷೇಣ ಮಹತಾ ಯುಕ್ತಃ ಕಪೋತಃ ಪುನರಬ್ರವೀತ್ ॥38॥
ಹೀಗೆ ಹೇಳಿ, ಒಣಗಿದ ಎಲೆಗಳಿಂದ ಅಗ್ನಿಯನ್ನು ಪ್ರಜ್ವಲಿಸಿ ಬಹಳ ಸಂತೋಷದಿಂದ ಕಪೋತವು ಹೇಳಿತು.
ದೇವಾನಾಂ ಚ ಮುನೀನಾಂ ಚ ಪಿತೃಣಾಂ ಚ ಮಹಾತ್ಮನಾಮ್ |
ಶ್ರುತಪೂರ್ವೋ ಮಯಾ ಧರ್ಮೋ ಮಹಾನತಿಥಿಪೂಜನೇ ॥39॥
ಅತಿಥಿ ಸತ್ಕಾರವು ಮಹಾಧರ್ಮ ಎಂದು ಮಹಾತ್ಮರಾದ ದೇವತೆಗಳ, ಮುನಿಗಳ, ಪಿತೃಗಳ ಮಾತನ್ನು ಕೇಳಿದ್ದೇನೆ. ಅವರು ಈ ಮಹಾಧರ್ಮವನ್ನು ಆಚರಿಸಿದರೆಂದೂ ಕೇಳಿದ್ದೇನೆ.
ಕುರುಷ್ವಾನುಗ್ರಹಂ ಮೇಽದ್ಯ ಸತ್ಯಮೇತದ್ ಬ್ರವೀಮಿ ತೇ |
ನಿಶ್ಚಿತಾ ಖಲು ಮೇ ಬುದ್ಧಿರತಿಥಿಪ್ರತಿಪೂಜನೇ ॥40॥
ಇಂದು ನೀನು ನನ್ನನ್ನು ಅನುಗ್ರಹಿಸು. ನಿನಗೆ ಸತ್ಯವನ್ನೇ ಹೇಳುತ್ತಿದ್ದೇನೆ. ಅತಿಥಿ ಸತ್ಕಾರವನ್ನು ಮಾಡಲೇಬೇಕೆಂದು ನನಗೆ ದೃಢವಾದ ಬುದ್ಧಿಯು ಹುಟ್ಟಿದೆ.
ತತಃ ಸತ್ಯಪ್ರತಿಜ್ಞೋ ವೈ ಸ ಪಕ್ಷೀ ಪ್ರಹಸನ್ನಿವ |
ತಮಗ್ನಿಂ ತ್ರಿಃ ಪರಿಕ್ರಮ್ಯ ಪ್ರವಿವೇಶ ಮಹೀಪತೇ ॥41॥
ರಾಜನೆ! ಅನಂತರ ಸತ್ಯಪ್ರತಿಜ್ಞನಾದ ಆ ಹಕ್ಕಿಯು ಮಂದಸ್ಮಿತನಾಗಿ ಆ ಅಗ್ನಿಗೆ ಮೂರು ಬಾರಿ ಪ್ರದಕ್ಷಿಣೆಯನ್ನು ಮಾಡಿ ಅದರಲ್ಲಿ

ಪ್ರವೇಶಿಸಿತು.
ಅಗ್ನಿಮಧ್ಯಂ ಪ್ರವಿಷ್ಟಂ ತಂ ಲುಬ್ಧೋ ದೃಷ್ಟ್ವಾಥ ಪಕ್ಷಿಣಮ್ |
ಚಿಂತಯಾಮಾಸ ಮನಸಾ ಕಿಮಿದಂ ನು ಕೃತಂ ಮಯಾ ॥42॥
ಬೇಡನು ಅಗ್ನಿಮಧ್ಯೆ ಪ್ರವೇಶಿಸಿದ ಆ ಹಕ್ಕಿಯನ್ನು ನೋಡಿ `ಇದೇನು ಮಾಡಿದೆ' ಎಂದು ಚಿಂತಿಸಿತು.
ಅಹೋ ಮಮ ನೃಶಂಸಸ್ಯ ಗರ್ಹಿತಸ್ಯ ಸ್ವಕರ್ಮಣಾ |
ಅಧರ್ಮಃ ಸುಮಹಾನ್ ಘೋರೋ ಭವಿಷ್ಯತಿ ನ ಸಂಶಯಃ ॥43॥
ಏವಂ ಬಹುವಿಧಂ ಭೂರಿ ವಿಲಲಾಪ ಸ ಲುಬ್ಧಕಃ |
ಗರ್ಹಯನ್ ಸ್ವಾನಿ ಕರ್ಮಾಣಿ ದ್ವಿಜಂ ದೃಷ್ಟ್ವಾ ತಥಾಗತಮ್ ॥44॥
ಅಯ್ಯೋ! ನನ್ನ ಕೆಟ್ಟ ಕಾರ್ಯಗಳಿಂದ ಪಾಪಿಯಾದ ನನಗೆ ಘೋರ ಪಾಪವು ಉಂಟಾಗುತ್ತದೆ. ಅಗ್ನಿಯಲ್ಲಿ ಬಿದ್ದಿರುವ ಹಕ್ಕಿಯನ್ನು ನೋಡಿ, ತನ್ನ ಕೆಲಸವನ್ನು ಬೈದುಕೊಳ್ಳುತ್ತಾ ಆ ಬೇಡನು ಹೀಗೆ ಬಹುವಿಧವಾಗಿ ವಿಲಾಪ ಮಾಡಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು.
* * * *
ಹದಿನೈದನೆಯ ಅಧ್ಯಾಯ
ಕಪೋತದ ಆತ್ಮಾರ್ಪಣೆಯನ್ನು ನೋಡಿ ಬೇಟೆಗಾರನ ಮನಃಪರಿವರ್ತನೆ. ಧರ್ಮಸಾಧನೆಗೆ ಪ್ರವೃತ್ತಿ.
ಭೀಷ್ಮಃ
ತತಸ್ತಂ ಲುಬ್ಧಕಃ ಪಶ್ಯನ್ ಕೃಪಯಾಭಿಪರಿಪ್ಲುತಃ |
ಕಪೋತಮಗ್ನೌ ಪತಿತಂ ವಾಕ್ಯಂ ಪುನರುವಾಚ ಹ ॥1॥
ಅನಂತರ ಬೇಡನು ಅಗ್ನಿಯಲ್ಲಿ ಬಿದ್ದಿರುವ ಆ ಕಪೋತವನ್ನು ನೋಡಿ ಕೃಪೆ ತುಂಬಿ ಹೀಗೆ ಹೇಳಿದನು.
ಕಿಮೀದೃಶಂ ನೃಶಂಸೇನ ಮಯಾ ಕೃತಮಬುದ್ಧಿನಾ |
ಭವಿಷ್ಯತಿ ಹಿ ಮೇ ನಿತ್ಯಂ ಪಾತಕಂ ಹೃದಿ ಜೀವತಃ ॥2॥
ಬುದ್ಧಿಯಿಲ್ಲದ, ಕ್ರೂರಿಯಾದ ನಾನು ಇದೆಂತಹ ಕೆಲಸ ಮಾಡಿದೆ? ನಾನು ಬದುಕಿ ಉಳಿದರೆ ಮನಸ್ಸಿನಲ್ಲಿ ನಿತ್ಯವೂ ಪಾಪಪ್ರಜ್ಞೆಯು ಕಾಡುತ್ತದೆ.
ಸ ವಿನಿಂದನ್ನಥಾತ್ಮಾನಂ ಪುನಃ ಪುನರುವಾಚ ಹ |
ಧಿಙ್ ಮಾಮಸ್ತು ಸುದುರ್ಬುದ್ಧಿಂ ಸದಾ ನಿಕೃತಿನಿಶ್ಚಯಮ್ |
ಶುಭಂ ಕರ್ಮ ಪರಿತ್ಯಜ್ಯ ಯೋಽಹಂ ಶಕುನಿಲುಬ್ಧಕಃ ॥3॥
ಅವನು ತನ್ನನ್ನು ಮತ್ತೆ ಮತ್ತೆ ಬೈದುಕೊಳ್ಳುತ್ತಾ ಹೇಳಿದನು. `ಬಹಳ ಕೆಟ್ಟ ಬುದ್ಧಿಯ, ವಂಚನೆಯನ್ನು ಮಾಡಲು ಅಚಲಬುದ್ಧಿವುಳ್ಳ ನನಗೆ ಧಿಕ್ಕಾರ'. ಶುಭಕರ್ಮಗಳನ್ನು ಮಾಡದ, ಹಕ್ಕಿಗಳ ಬೇಟೆ ಮಾಡುವ ನನಗೆ ಧಿಕ್ಕಾರ.
ನೃಶಂಸಸ್ಯ ಮಹಾನ್ಯಾಯಪ್ರತ್ಯಾದೇಶೋ ನ ಸಂಶಯಃ |
ದತ್ತಃ ಸ್ವಮಾಂಸಂ ದಹತಾ ಕಪೋತೇನ ಮಹಾತ್ಮನಾ ॥4॥
ಕ್ರೂರಿಯಾದ ನಾನು ಆಹಾರವನ್ನು ಕೇಳಿ ಮಹಾ ಅನ್ಯಾಯವನ್ನು ಮಾಡಿದ್ದೇನೆ. ಸಂಶಯವಿಲ್ಲ. ಈ ಮಹಾತ್ಮ ಕಪೋತನು ತನ್ನನ್ನು ಸುಟ್ಟುಕೊಂಡು ತನ್ನ ಮಾಂಸವನ್ನು ದಾನ ಮಾಡಿದ.
ಸೋಽಹಂ ತ್ಯಕ್ಷ್ಯೇ ಿಯೇ ಪ್ರಿಯಾನ್ ಪ್ರಾಣಾನ್ ಪುತ್ರದಾರಂ ವಿಸೃಜ್ಯ ಚ |
ಉಪದಿಷ್ಟೋ ಹಿ ಮೇ ಧರ್ಮಃ ಕಪೋತೇನಾತಿಧರ್ಮಿಣಾ ॥5॥
ಈ ನಾನು ಪುತ್ರರನ್ನೂ, ಪತ್ನಿಯನ್ನೂ ಪರಿತ್ಯಜಿಸಿ ಪ್ರಾಣತ್ಯಾಗವನ್ನು ಮಾಡುತ್ತೇನೆ. ಅತ್ಯಂತ ಧರ್ಮನಿಷ್ಠನಾದ ಈ ಕಪೋತವು ನನಗೆ ಧರ್ಮವನ್ನು ಉಪದೇಶಿಸಿದೆ.
ಅದ್ಯಪ್ರಭೃತಿ ದೇಹಂ ಸ್ವಂ ಸರ್ವಭೋಗೈರ್ವಿವರ್ಜಿತಮ್ |
ಯಥಾ ಸ್ವಲ್ಪಂ ಜಲಂ ಗ್ರೀಷ್ಮೇ ಶೋಷಯಿಷ್ಯಾಮ್ಯಹಂ ತಥಾ ॥6॥
ಇಂದಿನಿಂದ ನಾನು ಎಲ್ಲ ಭೋಗಗಳನ್ನು ಪರಿತ್ಯಜಿಸಿ ನನ್ನ ದೇಹವನ್ನು ಒಣಗಿಸುತ್ತೇನೆ. ಗ್ರೀಷ್ಮಕಾಲದಲ್ಲಿ ಸ್ವಲ್ಪ ಜಲವು ಸಸ್ಯಗಳನ್ನು ಒಣಗಿಸುವಂತೆ.
ಕ್ಷುತ್ಪಿಪಾಸಾತಪಸಹಃ ಕೃಶೋ ಧಮನಿಸಂತತಃ |
ಉಪವಾಸೈರ್ಬಹುವಿಧೈಶ್ಚರಿಷ್ಯೇ ಪಾರಲೌಕಿಕಮ್ ॥7॥
ಹಸಿವೆ, ಬಾಯಾರಿಕೆ, ಬಿಸಿಲು- ಇವುಗಳನ್ನು ಸಹಿಸಿ, ಕೃಶನಾಗಿ, ನರ ನಾಡಿಗಳು ಕಾಣುವಂತಾಗಿ ಬಹುವಿಧ ಉಪವಾಸಗಳಿಂದ ಪರಲೋಕದಲ್ಲಿ ಸುಖಪ್ರಾಪ್ತಿ ಆಗುವಂತಹ ಆಚರಣೆಗಳನ್ನು ಮಾಡುತ್ತೇನೆ.
ಅಹೋ ದೇಹಪ್ರದಾನೇನ ದರ್ಶಿತಾತಿಥಿಪೂಜನಾ |
ತಸ್ಮಾದ್ಧರ್ಮಂ ಚರಿಷ್ಯಾಮಿ ಧರ್ಮೋ ಹಿ ಪರಮಾ ಗತಿಃ |
ದೃಷ್ಟೋ ಹಿ ಧರ್ಮೋ ಧರ್ಮಿಷ್ಠೈರ್ಯಾದೃಶೋ ವಿಹಗೋತ್ತಮೇ ॥8॥
ಅಹೋ! ಈ ಹಕ್ಕಿಯು ದೇಹವನ್ನೇ ದಾನ ಮಾಡಿ ಅತಿಥಿ ಪೂಜೆಯನ್ನು ಅರ್ಥ ಮಾಡಿಸಿದೆ. ಆದ್ದರಿಂದ ನಾನು ಧರ್ಮವನ್ನು ಆಚರಿಸುತ್ತೇನೆ. ಧರ್ಮವೇ ಪರಮಗತಿ. ಧರ್ಮಿಷ್ಠರು ಆಚರಿಸುವ ಧರ್ಮವನ್ನು ಈ ಶ್ರೇಷ್ಠ ಹಕ್ಕಿಯಲ್ಲಿ ನಾನು ನೋಡಿದೆನು.

ಏವಮುಕತತ್ವ ವಿನಿಶ್ಚಿತ್ಯ ರೌದ್ರಕರ್ಮಾ ಸ ಲುಬ್ಧಕಃ |
ಮಹಾಪ್ರಸ್ಥಾನಮಾಶ್ರಿತ್ಯ ಪ್ರಯಯೌ ಸಂಶಿತವ್ರತಃ ॥9॥
ನಿಷ್ಠುರಕೆಲಸಗಳನ್ನು ಮಾಡುತ್ತಿದ್ದ ಆ ಬೇಡನು ಹೀಗೆ ನಿಶ್ಚಯಿಸಿ ಕಠೋರ ವ್ರತಗಳನ್ನು ಮಾಡುತ್ತಾ ಮಹಾಪ್ರಸ್ಥಾನದ ದಾರಿಯನ್ನು ಹಿಡಿದನು.
ತತೋ ಯಷ್ಟಿ ಶಲಾಕಾಶ್ಚ ಕ್ಷಾರಕಂ ಪಂಜರಂ ತಥಾ |
ತಾಂ ಚ ಬದ್ಧ್ವಾಂ ಕಪೋತೀಂ ಸ ಸಂಪ್ರಮುಚ್ಯೋತ್ಸಸರ್ಜ ಹ ॥10॥
ಅನಂತರ ದೊಣ್ಣೆಯನ್ನೂ, ಸಲಾಕೆಗಳನು, ಬಲೆಯನ್ನು, ಪಂಜರವನ್ನು ಎಸೆದು, ತಾನು ಹಿಡಿದಿದ್ದ ಕಪೋತಗಳನ್ನು ಬಿಡುಗಡೆ ಮಾಡಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹದಿನೈದನೆಯ ಅಧ್ಯಾಯವು ಮುಗಿಯಿತು.
* * * *
ಹದಿನಾರನೆಯ ಅಧ್ಯಾಯ
ಪತಿಯನ್ನು ಕಳೆದುಕೊಂಡ ಕಪೋತಿಯ ಶೋಕ. ಅಗ್ನಿಪ್ರವೇಶ. ಕಪೋತ-ಕಪೋತಿಗಳ ಸ್ವರ್ಗಾರೋಹಣ.
ಭೀಷ್ಮಃ
ತತೋ ಗತೇ ಶಾಕುನಿಕೇ ಕಪೋತೀ ಪ್ರಾಹ ದುಃಖಿತಾ |
ಸಂಸ್ಮೃತ್ಯ ಭರ್ತಾರಮಥೋ ರುದತೀ ಶೋಕಮೂರ್ಛಿತಾ ॥1॥
ಹಕ್ಕಿಯ ಬೇಟೆಗಾರನು ಹೊರಟು ಹೋದನಂತರ ಹೆಣ್ಣು ಕಪೋತವು ಬಹಳ ದುಃಖಕ್ಕೆ ಒಳಗಾಯಿತು. ಪತಿಯನ್ನು ನೆನೆದು ಅಳುತ್ತಾ ತೀವ್ರ ಶೋಕದ ಸ್ಥಿತಿಯಲ್ಲಿ ಹೇಳಿತು.
ನಾಹಂ ತೇ ವಿಪ್ರಿಯಂ ಕಾಂತ ಕದಾಚಿದಪಿ ಸಂಸ್ಮರೇ |
ಸರ್ವಾ ವೈ ವಿಧವಾ ನಾರೀ ಬಹುಪುತ್ರಾಪಿ ಖೇಚರ |
ಶೋಚ್ಯಾ ಭವತಿ ಬಂಧೂನಾಂ ಪತಿಹೀನಾ ಮನಸ್ವಿನೀ ॥2॥
ಕಾಂತ! ನಾನು ನಿನಗೆ ಎಂದೂ ಏನೂ ಅಪ್ರಿಯವನ್ನು ಮಾಡಿಲ್ಲ. ಹಕ್ಕಿಯೇ! ಎಲ್ಲ ನಾರಿಯರೂ- ಬಹಳ ಪುತ್ರರಿದ್ದರೂ, ಒಳ್ಳೆಯ ಮನಸ್ಸಿನವರಾಗಿದ್ದರೂ - ವಿಧವೆಯಾದರೆ ಬಂಧುಗಳ ಮಧ್ಯೆ ಶೋಚನೀಯರಾಗುತ್ತಾರೆ.
ಲಾಲಿತಾಹಂ ತ್ವಯಾ ನಿತ್ಯಂ ಬಹುಮಾನಾಚ್ಚ ಸಾಂತ್ವಿತಾ |
ವಚನೈರ್ಮಧುರೈಃ ಸ್ನಿಗ್ಧೈರಸಕೃತ್ ಸುಮನೋಹರೈಃ ॥3॥
ನೀನು ನನಗೆ ಯಾವಾಗಲೂ ಹಿತವನ್ನೇ ಮಾಡಿರುವಿ. ಮಧುರವಾದ ಸ್ನೇಹಪೂರ್ಣವಾದ ಮಾತುಗಳಿಂದ ಬಹಳ ಆದರದಿಂದ ಪ್ರೀತಿ ತೋರಿರುವಿ.
ಕಂದರೇಷು ಚ ಶೈಲಾನಾಂ ನದೀನಾಂ ನಿರ್ಝರೇಷು ಚ |
ದ್ರುಮಾಗ್ರೇಷು ಚ ರಮ್ಯೇಷು ರಮಿತಾಹಂ ತ್ವಯಾ ಪ್ರಿಯ ॥4॥
ಪ್ರಿಯ! ಬೆಟ್ಟಗಳ ಗುಹೆಗಳಲ್ಲಿ, ನದಿಗಳ ಝರಿಗಳಲ್ಲಿ ರಮಣೀಯವಾದ ಮರದ ತುದಿಗಳಲ್ಲಿ ನೀನು ನನಗೆ ವಿಹಾರದ ಸಂತೋಷವನ್ನು ಉಂಟುಮಾಡಿರುವಿ.
ಆಕಾಶಗಮನೇ ಚೈವ ಸುಖಿತಾಹಂ ತ್ವಯಾ ಸುಖಮ್ |
ವಿಹೃತಾಸ್ಮಿ ತ್ವಯಾ ಕಾಂತ ತನ್ಮೇ ನಾದ್ಯಾಸ್ತಿ ಕಿಂಚನ ॥5॥
ಆಕಾಶದಲ್ಲಿ ನಿನ್ನ ಜೊತೆ ಹಾರುವ ಸುಖವನ್ನು ಅನುಭವಿಸಿದ್ದೇನೆ. ನಿನ್ನ ಜೊತೆ ವಿಹರಿಸಿದ್ದೇನೆ. ಕಾಂತ! ಇನ್ನು ಮುಂದೆ ನನಗೆ ಅದು ಯಾವುದೂ ಇಲ್ಲ.
ಮಿತಂ ದದಾತಿ ಹಿ ಪಿತಾ ಮಿತಂ ಮಾತಾ ಮಿತಂ ಸುತಃ |
ಅಮಿತಸ್ಯ ತು ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥6॥
ತಂದೆಯು ಸ್ವಲ್ಪವೇ ಕೊಡುತ್ತಾನೆ. ತಾಯಿಯೂ ಸ್ವಲ್ಪವೇ ಕೊಡುತ್ತಾಳೆ. ಮಗನೂ ಸ್ವಲ್ಪವೇ ಕೊಡುತ್ತಾನೆ. ಪತಿಯು ಅಳತೆಗೆ ಸಿಗದಷ್ಟು ಕೊಡುತ್ತಾನೆ. ಆ ಪತಿಯನ್ನು ಯಾವ ಸ್ತ್ರೀ ತಾನೆ ಪೂಜಿಸದೆ ಇದ್ದಾಳು?
ನಾಸ್ತಿ ಭರ್ತೃಸಮೋ ನಾಥೋ ನ ಚ ಭರ್ತೃಸಮಂ ಸುಖಮ್ |
ವಿಸೃಜ್ಯ ಧನಸರ್ವಸ್ವಂ ಭರ್ತಾ ವೈ ಶರಣಂ ಸ್ತ್ರಿಯಾಃ ॥7॥
ಪತಿಗೆ ಸಮನಾದ ರಕ್ಷಕನಿಲ್ಲ. ಪತಿಗೆ ಸಮವಾದ ಸುಖವಿಲ್ಲ. ಎಲ್ಲ ಸಂಪತ್ತಿಗಿಂತಲೂ ಹೆಚ್ಚಾಗಿ ಸ್ತ್ರೀಗೆ ಪತಿಯೇ ರಕ್ಷಕ.
ನ ಕಾರ್ಯಮಿಹ ಮೇ ನಾಥ ಜೀವಿತೇನ ತ್ವಯಾ ವಿನಾ |
ಪತಿಹೀನಾಪಿ ಕಾ ನಾರೀ ಸತೀ ಜೀವಿತುಮುತ್ಸಹೇತ್ ॥8॥
ನಾಥ! ನೀನಿಲ್ಲದೆ ನಾನು ಬದುಕಿ ಏನು ಮಾಡಬೇಕು? ಯಾವ ಸತೀ ಸ್ತ್ರೀ ತಾನೆ ಪತಿಯಿಲ್ಲದೆ ಜೀವಿಸಲು ಬಯಸುವಳು?
ಏವಂ ವಿಲಪ್ಯ ಬಹುಧಾ ಕರುಣಂ ಸಾ ಸುದುಃಖಿತಾ |
ಪತಿವ್ರತಾ ಸಂಪ್ರದೀಪ್ತಂ ಪ್ರವಿವೇಶ ಹುತಾಶನಮ್ ॥9॥
ಬಹಳ ದುಃಖಿತಳಾದ ಆ ಪತಿವ್ರತೆಯು ಶೋಕದಿಂದ ಹೀಗೆ ಬಹುವಿಧವಾಗಿ ವಿಲಪಿಸಿ ಜ್ವಲಿಸುತ್ತಿದ್ದ ಅಗ್ನಿಯನ್ನು ಪ್ರವೇಶಿಸಿದಳು.
ತತಶ್ಚಿತ್ರಾಂಬರಧರಂ ಭರ್ತಾರಂ ಸಾನ್ವಪಶ್ಯತ |

ವಿಮಾನಸ್ಥಂ ಸುಕೃತಿಭಿಃ ಪೂಜ್ಯಮಾನಂ ಮಹಾತ್ಮಭಿಃ ॥10॥
ಅನಂತರ ಆ ಹಕ್ಕಿಯು ಆ ಚಿತೆಯ ಸ್ಥಳದಿಂದ ಸುಂದರ ವಸ್ತ್ರಗಳನ್ನು ಧರಿಸಿದ, ಸುಕೃತಿಗಳಾದ ಮಹಾತ್ಮರಿಂದ ಪೂಜಿಸಲ್ಪಡುತ್ತಿರುವ ವಿಮಾನದಲ್ಲಿರುವ ಪತಿಯನ್ನು ನೋಡಿತು.
ಚಿತ್ರಮಾಲ್ಯಾಂಬರಧರಂ ಸರ್ವಾಭರಣಭೂಷಿತಮ್ |
ವಿಮಾನಶತಕೋಟೀಭಿರಾವೃತಂ ಪುಣ್ಯಕೀರ್ತಿಭಿಃ ॥11॥
ಆ ಪತಿಯು ಸುಂದರಮಾಲೆಗಳನ್ನು, ವಸ್ತ್ರಗಳನ್ನು ಧರಿಸಿದ್ದನು. ಎಲ್ಲ ಆಭರಣಗಳಿಂದ ಅಲಂಕೃತನಾಗಿದ್ದನು. ಪುಣ್ಯಪುರುಷರು ಇದ್ದ ನಾನಾ ವಿಮಾನಗಳು ಅವನಿದ್ದ ವಿಮಾನದ ಸುತ್ತಲೂ ಇದ್ದವು.
ತತಃ ಸ್ವರ್ಗಗತಃ ಪಕ್ಷೀ ಭಾರ್ಯಯಾ ಸಹ ಸಂಗತಃ |
ಕರ್ಮಣಾ ಪೂಜಿತಸ್ತೇನ ರೇಮೇ ತತ್ರ ಸ ಭಾರ್ಯಯಾ ॥12॥
ಅನಂತರ ಆ ಪಕ್ಷಿಯು ಸ್ವರ್ಗವನ್ನು ತಲುಪಿತು. ಅಲ್ಲಿ ಅವನಿಗೆ ಪತ್ನಿಯ ಜೊತೆ ಸಮಾಗಮವಾಯಿತು. ಅವನು ಮಾಡಿದ ಸತ್ಕರ್ಮಕ್ಕಾಗಿ (ವ್ಯಾಧನ ಆಹಾರಕ್ಕಾಗಿ ದೇಹಾರ್ಪಣೆ) ಎಲ್ಲರೂ ಅವನನ್ನು ಸತ್ಕರಿಸಿದರು. ಅಲ್ಲಿ ಅವನು ತನ್ನ ಪತ್ನಿಯ ಜೊತೆ ಸುಖವಾಗಿದ್ದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹದಿನಾರನೆಯ ಅಧ್ಯಾಯವು ಮುಗಿಯಿತು.
* * * *
## ಹದಿನೇಳನೆಯ ಅಧ್ಯಾಯ
ವ್ಯಾಧನಿಗೆ ವಿಮಾನದಲ್ಲಿದ್ದ ಕಪೋತ-ಕಪೋತಿಯರ ದರ್ಶನ. ಸದ್ಗತಿಗಾಗಿ ವ್ಯಾಧನ ಮಹಾಪ್ರಸ್ಥಾನ. ದಾವಾಗ್ನಿಯಲ್ಲಿ ಶರೀರತ್ಯಾಗ. ಸ್ವರ್ಗಗಮನ.
ಭೀಷ್ಮಃ
ವಿಮಾನಸ್ಥೌ ತು ತೌ ರಾಜನ್ ಲುಬ್ಧಕೋ ವೈ ದದರ್ಶ ಹ |
ದೃಷ್ಟ್ವಾ ತೌ ದಂಪತೀ ದುಃಖಾದಚಿಂತಯತ ಸದ್ಗತಿಮ್ ॥1॥
ರಾಜನೇ! ಬೇಡನು ವಿಮಾನದಲ್ಲಿದ್ದ ಆ ದಂಪತಿಗಳನ್ನು ನೋಡಿದನು. ಅವರಿಬ್ಬರನ್ನು ನೋಡಿ ದುಃಖದಿಂದ ತನಗೆ ಸದ್ಗತಿಯಾಗುವುದರ ಬಗ್ಗೆ ಚಿಂತಿಸಿದನು.
ಕೀದೃಶೇನೇಹ ತಪಸಾ ಗಚ್ಛೇಯಂ ಪರಮಾಂ ಗತಿಮ್ |
ಇತಿ ಬುದ್ಧ್ಯಾ ವಿನಿಶ್ಚಿತ್ಯ ಗಮನಾಯೋಪಚಕ್ರಮೇ ॥2॥
ಯಾವ ರೀತಿಯ ತಪಸ್ಸಿನಿಂದ ಸದ್ಗತಿಯನ್ನು ಹೊಂದಿಯೇನು? ಎಂದು ಚಿಂತಿಸಿದನು. ಕೊನೆಗೆ ಒಂದು ನಿಶ್ಚಯವು ಅವನಿಗೆ ಉಂಟಾಯಿತು.
ಮಹಾಪ್ರಸ್ಥಾನಮಾಶ್ರಿತ್ಯ ಲುಬ್ಧಕಃ ಪಕ್ಷಿಜೀವನಃ |
ನಿಶ್ಚೇಷ್ಟೋ ಮಾರುತಾಹಾರೋ ನಿರ್ಮಮಃ ಸ್ವರ್ಗಕಾಂಕ್ಷಯಾ ॥3॥
ಪಕ್ಷಿಗಳನ್ನು ಅವಲಂಬಿಸಿ ಜೀವಿಸುವ ಆ ಬೇಡನು ಸ್ವರ್ಗಕ್ಕೆ ಹೋಗುವ ಆಸೆಯಿಂದ ಎಲ್ಲ ಬಾಹ್ಯ ಚಟುವಟಿಕೆಗಳನ್ನು ನಿಲ್ಲಿಸಿ, ಗಾಳಿಯನ್ನು ಮಾತ್ರ ಸೇವಿಸುತ್ತ, ಮಮಕಾರವಿಲ್ಲದೆ ಮಹಾಪ್ರಸ್ಥಾನವನ್ನು ಬಯಸಿ ಹೊರಟನು.
ತತೋಽಪಶ್ಯತ್ ಸುವಿಸ್ತೀರ್ಣಂ ಹೃದ್ಯಂ ಪದ್ಮವಿಭೂಷಿತಮ್ |
ನಾನಾದ್ವಿಜಗಣಾಕೀರ್ಣಂ ಸರಃ ಶೀತಜಲಂ ಶುಭಮ್ |
ಪಿಪಾಸಾರ್ತೋಽಪಿ ತದ್ದೃಷ್ಟ್ವಾ ತೃಪ್ತಃ ಸ್ಯಾನ್ನಾತ್ರ ಸಂಶಯಃ ॥4॥
ಹೋಗುತ್ತಾ ಬಹಳ ವಿಶಾಲವಾದ, ರಮಣೀಯವಾದ, ಕಮಲಗಳಿಂದ ಅಲಂಕೃತವಾದ, ನಾನಾ ಹಕ್ಕಿಗಳಿಂದ ತುಂಬಿದ, ತಂಪು ನೀರಿನ ಶುಭ ಸರೋವರವನ್ನು ನೋಡಿದನು. ಬಹಳ ಬಾಯಾರಿದ್ದರೂ ಸರೋವರವನ್ನು ನೋಡಿಯೇ ತೃಪ್ತನಾದನು. ನೀರು ಕುಡಿಯಲಿಲ್ಲ. ಈ ವಿಷಯದಲ್ಲಿ ಸಂದೇಹಬೇಡ. ನೀರು ಕುಡಿಯಲಿಲ್ಲ.
ಉಪವಾಸಕೃಶೋಽತ್ಯರ್ಥಂ ಸ ತು ಪಾರ್ಥಿವ ಲುಬ್ಧಕಃ |
ಉಪಸರ್ಪತ ಸಂಹೃಷ್ಟಃ (ಉಪಸೃತ್ಯ ತು ತದ್ದೃಷ್ಟಃ) ಶ್ವಾಪದಾಧ್ಯುಷಿತಂ ವನಮ್ ॥5॥
ರಾಜನೇ! ಉಪವಾಸದಿಂದ ಕೃಶನಾಗಿದ್ದ ಆ ಬೇಡನು ಸಂತೋಷದಿಂದಲೇ ಹಿಂಸ್ರ ಪ್ರಾಣಿಗಳಿದ್ದ ವನವನ್ನು ಸಮೀಪಿಸಿದನು.
ಮಹಾಂತಂ ನಿಶ್ಚಯಂ ಕೃತ್ವಾ ಲುಬ್ಧಕಃ ಪ್ರವಿವೇಶ ಹ |
ಪ್ರವಿಶನ್ನೇವ ಚ ವನಂ ನಿಗೃಹೀತಃ ಸ ಕಂಟಕೈಃ ॥6॥
ಬೇಡನು ಮಹಾನಿಶ್ಚಯವನ್ನು ಮಾಡಿ ಆ ವನವನ್ನು ಪ್ರವೇಶಿಸಿದನು. ವನವನ್ನು ಪ್ರವೇಶಿಸುತ್ತಲೇ ಮುಳ್ಳುಗಳಲ್ಲಿ ಅವನು ಸಿಕ್ಕಿಕೊಂಡನು.
ಸ ಕಂಟಕವಿಭುಗ್ನಾಂಗೋ ಲೋಹಿತಾರ್ದ್ರೀಕೃತಚ್ಛವಿಃ |
ಬಭ್ರಾಮ ತಸ್ಮಿನ್ ವಿಜನೇ ನಾನಾಮೃಗಸಮಾಕುಲೇ ॥7॥
ಮುಳ್ಳುಗಳಿಂದ ಅವನ ಶರೀರದಲ್ಲಿ ನಾನಾ ಛಿದ್ರಗಳು ಉಂಟಾದವು. ರಕ್ತ ಹರಿದು ದೇಹವಿಡಿ ತೊಯ್ದುಹೋಯಿತು. ನಾನಾ ಪ್ರಾಣಿಗಳಿಂದ ತುಂಬಿದ, ಜನರಿಲ್ಲದ ಆ ವನದಲ್ಲಿ ಅಲೆದನು.
ತತೋ ದ್ರುಮಾಣಾಂ ಮಹತಾಂ ಪವನೇನ ವನೇ ತದಾ |

ಉದತಿಷ್ಠತ ಸಂಘರ್ಷಾತ್ ಸುಮಹಾನ್ ಹವ್ಯವಾಹನಃ ॥8॥
ಅನಂತರ ವನದಲ್ಲಿ ಗಾಳಿಯಿಂದ ಮರಗಳಿಗೆ ಸಂಘರ್ಷವಾಗಿ ಭಾರಿ ಬೆಂಕಿಯು ಉದ್ಭವಿಸಿತು.
ತದ್ವನಂ ವೃಕ್ಷಸಂಕೀರ್ಣಂ ಲತಾವಿಟಪಸಂಕುಲಮ್ |
ದದಾಹ ಪಾವಕಃ ಕ್ರುದ್ಧೋ ಯುಗಾಂತಾಗ್ನಿಸಮಪ್ರಭಃ ॥9॥
ಪ್ರಲಯಾಗ್ನಿಯಂತಿದ್ದ ಆ ಕಾಡ್ಗಿಚ್ಚು ವೃಕ್ಷಗಳಿಂದ ತುಂಬಿದ್ದ, ಬಳ್ಳಿಗಳ ರಾಶಿಯಿದ್ದ ಆ ವನವನ್ನು ಸುಟ್ಟುಹಾಕಿತು.
ಸಜ್ವಾಲೈಃ ಪವನೋದ್ಧೂತೈರ್ವಿಸ್ಫುಲಿಂಗೈಃ ಸಮನ್ವಿತಃ |
ದದಾಹ ತದ್ವನಂ ಘೋರಂ ಮೃಗಪಕ್ಷಿಸಮಾಕುಲಮ್ ॥10॥
ಜ್ವಾಲೆಯಿಂದ ಕೂಡಿದ, ಗಾಳಿಯಿಂದ ಎದ್ದ ಕಿಡಿಗಳಿಂದ ಕೂಡಿದ ಅಗ್ನಿಯು ಪ್ರಾಣಿ- ಪಕ್ಷಿಗಳಿಂದ ತುಂಬಿದ ಆ ಘೋರ ವನವನ್ನು ಸುಟ್ಟುಹಾಕಿತು.
ತತಃ ಸ ದೇಹಮೋಕ್ಷಾರ್ಥಂ ಸಂಪ್ರಹೃಷ್ಟೇನ ಚೇತಸಾ |
ಅಭ್ಯಧಾವತ ಸಂವೃದ್ಧಂ ಪಾವಕಂ ಲುಬ್ಧಕಸ್ತದಾ ॥11॥
ಆಗ ಆ ಬೇಡನು ದೇಹವನ್ನು ತ್ಯಜಿಸುವುದಕ್ಕಾಗಿ ಸಂತುಷ್ಟ ಮನಸ್ಸಿನಿಂದ ಆ ಮಹಾಗ್ನಿಯ ಕಡೆಗೆ ಧಾವಿಸಿದನು.
ತತಸ್ತೇನಾಗ್ನಿನಾ ದಗ್ಧೋ ಲುಬ್ಧಕೋ ನಷ್ಟಕಿಲ್ಬಿಷಃ |
ಜಗಾಮ ಪರಮಾಂ ಸಿದ್ಧಿಂ ತದಾ ಭರತಸತ್ತಮ ॥12॥
ಭರತಸತ್ತಮ! ಆ ಅಗ್ನಿಯಿಂದ ಬೇಡನು ಸುಟ್ಟುಹೋದನು. ಅವನ ಪಾಪಗಳೂ ಸುಟ್ಟುಹೋದವು. ಪರಮಸಿದ್ಧಿಯನ್ನು ಹೊಂದಿದನು.
ತತಃ ಸ್ವರ್ಗಸ್ಥಮಾತ್ಮಾನಂ ಸೋಽಪಶ್ಯದ್ ವಿಗತಜ್ವರಃ |
ಯಕ್ಷಗಂಧರ್ವಸಿದ್ಧಾನಾಂ ಮಧ್ಯೇ ಭ್ರಾಜಂತಮಿಂದ್ರವತ್ ॥13॥
ಅನಂತರ ಅವನು ಎಲ್ಲ ತಾಪಗಳಿಂದ ದೂರವಾಗಿ ಸ್ವರ್ಗದಲ್ಲಿ ಯಕ್ಷ-ಗಂಧರ್ವ- ಸಿದ್ಧರ ನಡುವೆ ಇಂದ್ರನಂತೆ ಶೋಭಿಸುತ್ತಿರುವ ತನ್ನನ್ನು ಕಂಡುಕೊಂಡನು.
ಏವಂ ಖಲು ಕಪೋತಶ್ಚ ಕಪೋತೀ ಚ ಪತಿವ್ರತಾ |
ಲುಬ್ಧಕೇನ ಸಹ ಸ್ವರ್ಗಂ ಗತಾಃ ಪುಣ್ಯೇನ ಕರ್ಮಣಾ ॥14॥
ಹೀಗೆ ಕಪೋತ, ಪತಿವ್ರತೆಯಾದ ಕಪೋತಿ ಮತ್ತು ಬೇಡನು ಪುಣ್ಯಕರ್ಮಗಳಿಂದ ಸ್ವರ್ಗಕ್ಕೆ ಹೋದರು.
ಯಾಪಿ ಚೈವಂವಿಧಾ ನಾರೀ ಭರ್ತಾರಮನುವರ್ತತೇ |
ವಿರಾಜತೇ ಹಿ ಸಾ ಕ್ಷಿಪ್ರಂ ಕಪೋತೀವ ದಿವಿ ಸ್ಥಿತಾ ॥15॥
ಈ ವಿಧದ ಯಾವ ನಾರಿಯು ಪತಿಯನ್ನು ಅನುಸರಿಸುವಳೋ ಅವಳು ಶೀಘ್ರವಾಗಿ ಸ್ವರ್ಗವನ್ನು ತಲುಪಿ ಕಪೋತಿಯಂತೆ ವಿರಾಜಿಸುತ್ತಾಳೆ.
ಏವಮೇತತ್ ಪುರಾ ವೃತ್ತಂ ಲುಬ್ಧಕಸ್ಯ ಮಹಾತ್ಮನಃ |
ಕಪೋತಸ್ಯ ಚ ಧರ್ಮಿಷ್ಠಾ ಗತಿಃ ಪುಣ್ಯೇನ ಕರ್ಮಣಾ ॥16॥
ಇದು ಹಿಂದೆ ನಡೆದ ಬೇಡನ ಮತ್ತು ಮಹಾತ್ಮನಾದ ಕಪೋತದ ಪುಣ್ಯಕರ್ಮಗಳಿಂದ ಸಂಭವಿಸಿದ ಧರ್ಮಿಷ್ಠಗತಿ.
ಯಶ್ಚೇದಂ ಶೃಣುಯಾನ್ನಿತ್ಯಂ ಯಶ್ಚೇದಂ ಪರಿಕೀರ್ತಯೇತ್ |
ನಾಶುಭಂ ವಿದ್ಯತೇ ತಸ್ಯ ಮನಸಾಪಿ ಪ್ರಮಾದ್ಯತಃ ॥17॥
ಯಾರು ಇದನ್ನು ನಿತ್ಯವೂ ಕೇಳುವರೋ, ಹೇಳುವರೋ ಅವರು ಮಾನಸಿಕವಾಗಿ ಪ್ರಮಾದಗಳನ್ನು ಮಾಡಿದರೂ ಅವರಿಗೆ ಏನೂ ಅಶುಭವಾಗುವುದಿಲ್ಲ.
ಯುಧಿಷ್ಠಿರ ಮಹಾನೇಷ ಧರ್ಮೋ ಧರ್ಮಭೃತಾಂ ವರ |
ಗೋಘ್ನೇಷ್ವಪಿ ಭವೇದಸ್ಮಿನ್ನಿಷ್ಕೃತಿಃ ಪಾಪಕರ್ಮಣಃ |
ನಿಷ್ಕೃತಿರ್ನ ಭವೇತ್ತಸ್ಮಿನ್ ಯೋ ಹನ್ಯಾಚ್ಛರಣಾಗತಮ್ ॥18॥
ಯುಧಿಷ್ಠಿರ! ಧರ್ಮನಿಷ್ಠರಲ್ಲಿ ಶ್ರೇಷ್ಠ! ಈ ಲೋಕದಲ್ಲಿ ಗೋಹತ್ಯೆ ಮಾಡಿದವರಿಗೂ ಪಾಪಗಳಿಂದ ಬಿಡುಗಡೆಯಾಗುತ್ತದೆ. ಶರಣಾಗತರನ್ನು ಕೊಂದವರಿಗೆ ಯಾವ ಪರಿಹಾರವೂ ಇಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿಯಿತು.
* * * *
ಹದಿನೆಂಟನೆಯ ಅಧ್ಯಾಯ
ಜನಮೇಜಯನಿಗೆ ಆಕಸ್ಮಿಕವಾಗಿ ಸಂಭವಿಸಿದ ಬ್ರಹ್ಮಹತ್ಯಾ ಪಾಪ. ಪ್ರಾಯಶ್ಚಿತ್ತಕ್ಕಾಗಿ ಪ್ರಯತ್ನ. ಶೌನಕರ ಗದರಿಕೆ.
ಯುಧಿಷ್ಠಿರಃ
ಅಬುದ್ಧಿಪೂರ್ವಂ ಯಃ ಪಾಪಂ ಕುರ್ಯಾದ್ ಭರತಸತ್ತಮ |
ಮುಚ್ಯತೇ ಸ ಕಥಂ ತಸ್ಮಾದೇನಸಸ್ತದ್ವದಸ್ವ ಮೇ ॥1॥
ಭರತಸತ್ತಮ! ಯಾರು ತಿಳಿಯದೆ (ಪಾಪವನ್ನು ಮಾಡುತ್ತಿದ್ದೇನೆಂದು ತಿಳಿಯದೆ) ಪಾಪವನ್ನು ಮಾಡುತ್ತಾನೋ ಅವನಿಗೆ ಆ ಪಾಪದಿಂದ ಬಿಡುಗಡೆ ಹೇಗೆ? ದಯವಿಟ್ಟು ಹೇಳು.

ಭೀಷ್ಮಃ
ಅತ್ರ ತೇ ವರ್ಣಯಿಷ್ಯೇऽಹಮಿತಿಹಾಸಂ ಪುರಾತನಮ್ |
ದಂಡೇನ ಶೌನಕೋ ವಿಪ್ರೋ ಯದಾಹ ಜನಮೇಜಯಮ್ ॥2॥
ಶೌನಕ ಎಂಬ ವಿಪ್ರನು ಇಂತಹ ಪರಿಹಾರಕ್ಕೆ ಅನುಭವಿಸಬೇಕಾದ ಶಿಕ್ಷೆಯನ್ನು ಜನಮೇಜಯನಿಗೆ ಹೇಳಿದ್ದನು. ಈ ಪುರಾತನ ಇತಿಹಾಸವನ್ನು ನಿನಗೆ ಹೇಳುವೆನು.
ಆಸೀದ್ ರಾಜಾ ಮಹಾವೀರ್ಯಃ ಪರಿಕ್ಷಿಜ್ಜನಮೇಜಯಃ |
ಅಬುದ್ಧಿಪೂರ್ವಂ ಬ್ರಹ್ಮಹತ್ಯಾ ತಮಾಗಚ್ಛನ್ಮಹೀಪತಿಮ್ ॥3॥
ಜನಮೇಜಯ ಎಂಬ ಮಹಾಬಲಶಾಲಿಯಾದ ರಾಜನಿದ್ದನು. ಅವನು ಒಳ್ಳೆಯ ವಿಮರ್ಶಕ. ಅವನಿಗೆ ಬುದ್ಧಿಪೂರ್ವಕವಲ್ಲದ ಬ್ರಹ್ಮಹತ್ಯಾದೋಷವು ಬಂದಿತು. (ಈ ಜನಮೇಜಯ ಕುರುಕುಲದ ಪರೀಕ್ಷಿತನ ಮಗನಲ್ಲ).
ತಂ ಬ್ರಾಹ್ಮಣಾಃ ಸರ್ವ ಏವ ತತ್ಯಜುಃ ಸಪುರೋಹಿತಾಃ |
ಜಗಾಮ ಸ ವನಂ ರಾಜಾ ದಹ್ಯಮಾನೋ ದಿವಾನಿಶಮ್ ॥4॥
ಅವನನ್ನು ಎಲ್ಲ ಬ್ರಾಹ್ಮಣರು ಮತ್ತು ಪುರೋಹಿತರು ತ್ಯಾಗ ಮಾಡಿದರು. ಹಗಲು- ರಾತ್ರಿ ಪರಿತಪಿಸುತ್ತಿದ್ದ ಆ ರಾಜನು ಕಾಡಿಗೆ ಹೋದನು.
ಸ ಪ್ರಜಾಭಿಃ ಪರಿತ್ಯಕ್ತಶ್ಚಕಾರ ಕುಶಲಂ ಮಹತ್ |
ಅತಿವೇಲಂ ತಪಸ್ತೇಪೇ ದಹ್ಯಮಾನಃ ಸ ಮನ್ಯುನಾ ॥5॥
ಪ್ರಜೆಗಳಿಂದ ಪರಿತ್ಯಕ್ತನಾದ ಅವನು ಕಾಡಿನಲ್ಲಿ ನಾನಾ ಪುಣ್ಯಕೆಲಸಗಳನ್ನು ಮಾಡಿದನು. ದುಃಖದಿಂದ ಬೇಯುತ್ತಾ ತೀವ್ರ ತಪಸ್ಸನ್ನು ಮಾಡಿದನು.
ಬ್ರಹ್ಮಹತ್ಯಾಪನೋದಾರ್ಥಮಪೃಚ್ಛದ್ ಬ್ರಾಹ್ಮಣಾನ್ ಬಹೂನ್ |
ಪರ್ಯಟನ್ ಪೃಥಿವೀಂ ಕೃತ್ಸ್ನಾಂ ದೇಶೇ ದೇಶೇ ನರಾಧಿಪಃ ॥6॥
ಇಡೀ ಭೂಮಂಡಲವನ್ನು ಸಂಚರಿಸುತ್ತಾ ಬೇರೆ ಬೇರೆ ಪ್ರದೇಶಗಳಲ್ಲಿ ಬಹು ಬ್ರಾಹ್ಮಣರನ್ನು ಬ್ರಹ್ಮಹತ್ಯಾ ದೋಷದ ಪರಿಹಾರವು ಹೇಗೆ ಎಂದು ವಿಚಾರಿಸಿದನು.
ತತ್ರೇತಿಹಾಸಂ ವಕ್ಷ್ಯಾಮಿ ಧರ್ಮಸ್ಯಾಸ್ಯೋಪಬೃಂಹಣಮ್ |
ದಹ್ಯಮಾನಃ ಪಾಪಕೃತ್ಯಾ ಜಗಾಮ ಜನಮೇಜಯಃ ॥7॥
ವರಿಷ್ಯಮಾಣ ಇನ್ದ್ರೋತಂ ಶೌನಕಂ ಸಂಶಿತವ್ರತಮ್ |
ಸಮಾಸಾದ್ಯೋಪಜಗ್ರಾಹ ಪಾದಯೋಃ ಪರಿಪೀಡಯನ್ ॥8॥
ಈ ಧರ್ಮವನ್ನು= ಬ್ರಹ್ಮಹತ್ಯಾ ದೋಷವನ್ನು ಪರಿಹರಿಸುವ ಆಚರಣೆಯನ್ನು ವಿವರವಾಗಿ ತಿಳಿಸುವ ಇತಿಹಾಸವನ್ನು ನಿನಗೆ ಹೇಳುತ್ತೇನೆ. ತನ್ನ ಪಾಪಕೃತ್ಯದಿಂದ ದಹಿಸುತ್ತಿದ್ದ ಜನಮೇಜಯನು ಸಂಚರಿಸುತ್ತಾ ಶೌನಕವಂಶದ, ಕಠಿಣವ್ರತನಿಷ್ಠನಾದ ಇಂದ್ರೋತನ ಬಳಿ ಹೋದನು. ಹತ್ತಿರ ಹೋಗಿ ಅವನ ಪಾದಗಳನ್ನು ಗಟ್ಟಿಯಾಗಿ ಹಿಡಿದನು.
ತತೋ ಭೀತೋ ಮಹಾಪ್ರಾಜ್ಞೋ ಜಗರ್ಹೇ ಸುಭೃಶಂ ತದಾ |
ಕರ್ತಾ ಪಾಪಸ್ಯ ಮಹತೋ ಭ್ರೂಣಹಾ ಕಿಮಿಹಾಗತಃ ॥9॥
ಆಗ ಅವನನ್ನು ನೋಡಿ ಹೆದರಿದ ಆ ಮಹಾಪ್ರಾಜ್ಞನು ತೀವ್ರವಾಗಿ ನಿಂದಿಸಿದನು. `ಭ್ರೂಣಹತ್ಯೆ ಮಾಡಿರುವ, ಮಹಾಪಾಪವನ್ನು ಮಾಡಿರುವ ನೀನು ಇಲ್ಲಿಗೆ ಏಕೆ ಬಂದೆ?'
ಕಿಂ ತವಾಸ್ಮಾಸು ಕರ್ತವ್ಯಂ ಮಾ ಮಾ ಸ್ಪ್ರಾಕ್ಷೀಃ ಕಥಂಚನ |
ಗಚ್ಛ ಗಚ್ಛ ನ ತೇ ಸ್ಥಾನಂ ಪ್ರೀಣಾತ್ಯಸ್ಮಾನಿಹ ಧ್ರುವಮ್ ॥10॥
`ನನ್ನಲ್ಲಿ ನಿನಗೇನು ಕೆಲಸ? ಸರ್ವಥಾ ಮುಟ್ಟಬೇಡ; ಹೊರಟುಹೋಗು. ನೀನಿಲ್ಲಿರುವುದು ನನಗೆ ಸರ್ವಥಾ ಇಷ್ಟವಿಲ್ಲ'.
ರುಧಿರಸ್ಯೇವ ತೇ ಗಂಧಃ ಶವಸ್ಯೇವ ಚ ದರ್ಶನಮ್ |
ಅಶಿವಃ ಶಿವಸಂಕಾಶೋ ಮೃತೋ ಜೀವನ್ನಿವಾಟಸಿ ॥11॥
`ನಿನ್ನ ವಾಸನೆ ರಕ್ತದ ವಾಸನೆಯಂತಿದೆ. ನಿನ್ನ ದರ್ಶನ ಶವದ ದರ್ಶನದಂತೆ. (ನೀನು ಶವದಂತೆ ಕಾಣುವಿ). ಮಂಗಳಾತ್ಮರಂತಿರುವ ನೀನು ಅಮಂಗಳ. ಜೀವಚ್ಛವದಂತೆ ಅಲೆಯುತ್ತಿರುವಿ.
ಅಂತರ್ಮೃತ್ಯುರಶುದ್ಧಾತ್ಮಾ ಪಾಪಮೇವಾನುಚಿಂತಯನ್ |
ಪ್ರಬುಧ್ಯಸೇ ಪ್ರಸ್ವಪಿಷಿ ವರ್ತಸೇ ಚರಸೇ ಸುಖೀ ॥12॥
`ನೀನು ಒಳಗೆ ಸತ್ತುಹೋಗಿರುವಿ. ಅಶುದ್ಧಾತ್ಮ. ಪಾಪಕೆಲಸವನ್ನೇ ಚಿಂತಿಸುತ್ತಾ ಏಳುವಿ, ಮಲಗುವಿ, ಇರುವಿ, ಸುಖವಾಗಿ ಓಡಾಡುವಿ'.
ಮೋಘಂ ತೇ ಜೀವಿತಂ ರಾಜನ್ ಪರಿಕ್ಲಿಷ್ಟಂ ಚ ಜೀವಸಿ |
ಪಾಪಾಯೈವ ಚ ಸೃಷ್ಟೋऽಸಿ ಕರ್ಮಣೇ ಹ ಯವೀಯಸೇ ॥13॥
ರಾಜನೆ! ನಿನ್ನ ಜೀವನ ವ್ಯರ್ಥ. ಕ್ಲೇಶಪಡುತ್ತಾ ಜೀವಿಸುತ್ತಿರುವಿ. ಪಾಪ ಸಂಪಾದನೆಗಾಗಿಯೇ ನಿನ್ನ ಜನ್ಮವಾಗಿದೆ. ಹೀನಕರ್ಮಗಳನ್ನು ಮಾಡುವುದಕ್ಕಾಗಿಯೇ ನಿನ್ನ ಜನ್ಮವಾಗಿದೆ.
ಬಹು ಕಲ್ಯಾಣಮಿಚ್ಛಂತ ಈಹಂತೇ ಪಿತರಃ ಸುತಾನ್ |
ತಪಸಾ ದೇವತೇಜ್ಯಾಭಿರ್ವಂದನೇನ ತಿತಿಕ್ಷಯಾ |14॥
ಬಹು ಶುಭೋದಯವನ್ನು ಬಯಸುವ ದಂಪತಿಗಳು ತಪಸ್ಸು, ದೇವತಾರಾಧನೆ, ನಮಸ್ಕಾರ, ದ್ವಂದ್ವ ಸಹನೆ-ಇವುಗಳಿಂದ ಮಕ್ಕಳನ್ನು ಪಡೆಯಲು ಪ್ರಯತ್ನಿಸುತ್ತಾರೆ.

ಪಿತೃವಂಶಮಿಮಂ ಪಶ್ಯ ತ್ವತ್ಕೃತೇ ನರಕಂ ಗತಮ್ |
ನಿರರ್ಥಾಃ ಸರ್ವ ಏವೈಷಾಮಾಶಾಬಂಧಾಸ್ತ್ವದಾಶ್ರಯಾಃ ॥15॥
ನಿನ್ನಿಂದಾಗಿ ನರಕಕ್ಕೆ ಹೋಗಿರುವ ಈ ಪಿತೃಕುಲವನ್ನು ನೋಡು. ನಿನ್ನಿಂದ ಈಡೇರುವುದೆಂದು ಅವರು ನಂಬಿದ್ದ ಅವರ ಎಲ್ಲ ಆಸೆಗಳೂ ವ್ಯರ್ಥವಾಗಿವೆ.
ಯಾನ್ ಪೂಜಯಂತೋ ವಿಂದಂತಿ ಸ್ವರ್ಗಮಾಯುರ್ಯಶಃ ಸುಖಮ್ |
ತೇಷು ತೇ ಸತತಂ ದ್ವೇಷೋ ಬ್ರಾಹ್ಮಣೇಷು ನಿರರ್ಥಕಃ ॥16॥
ಯಾರನ್ನು ಪೂಜಿಸಿ ಸ್ವರ್ಗ, ಆಯುಷ್ಯ, ಕೀರ್ತಿ, ಸುಖ- ಇವುಗಳನ್ನು ಪಡೆಯುವರೋ ಆ ಬ್ರಾಹ್ಮಣರ ಮೇಲೆ ನಿನಗೆ ಯಾವಾಗಲೂ ನಿರರ್ಥಕ ದ್ವೇಷ.
ಇಮಂ ಲೋಕಂ ವಿಮುಚ್ಯ ತ್ವಮವಾಙ್ಮೂರ್ಧಾ ಪತಿಷ್ಯಸಿ |
ಅಶಾಶ್ವತೀಃ ಶಾಶ್ವತೀಶ್ಚ ಸಮಾಃ ಪಾಪೇನ ಕರ್ಮಣಾ ॥17॥
ನೀನು ಈ ದೇಹವನ್ನು ತ್ಯಜಿಸಿದ ನಂತರ, ನಿನ್ನ ಪಾಪಕರ್ಮದ ಫಲವಾಗಿ ಒಂದೊಂದು ಪಾಪಕರ್ಮದ ಅಶಾಶ್ವತ ಫಲಗಳನ್ನು= ಮಿತಫಲಗಳನ್ನು ಅನುಭವಿಸುತ್ತಾ ಶಾಶ್ವತವಾಗಿ ನರಕದಲ್ಲಿ ತಲೆಕೆಳಗಾಗಿ ಬಿದ್ದಿರುವಿ.
ಅದ್ಯಮಾನೋ ಜಂತುಗೃಧ್ರೈಃ ಶಿತಿಕಂಠೈರಯೋಮುಖೈಃ |
ತತೋಽಪಿ ಪುನರಾವೃತ್ತಃ ಪಾಪಯೋನಿಂ ಗಮಿಷ್ಯಸಿ ॥18॥
ಕಬ್ಬಿಣದ ಕೊಕ್ಕುಗಳಿರುವ ನವಿಲುಗಳಿಂದ, ಹದ್ದುಗಳಿಂದ, ಇನ್ನೂ ಬೇರೆ ಬೇರೆ ಪ್ರಾಣಿಗಳಿಂದ ತಿನ್ನಲ್ಪಡುತ್ತಾ ನರಕದಲ್ಲಿ ಬಿದ್ದಿರುವಿ. ಅಲ್ಲಿಂದ ಹಿಂತಿರುಗಿ ಹೀನಜನ್ಮವನ್ನು ಹೊಂದುವಿ.
ಯದಿದಂ ಮನ್ಯಸೇ ರಾಜನ್ನಾಯಮಸ್ತಿ ಪರಃ ಕುತಃ |
ಪ್ರತಿಸ್ಮಾರಯಿತಾರಸ್ತತ್ತ್ವಂ ಯಮದೂತಾ ಯಮಕ್ಷಯೇ ॥19॥
ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ (ಈ ಲೋಕದಲ್ಲಿ ಪಾಪದ ಫಲ ಅನುಭವಕ್ಕೆ ಬರುವುದಿಲ್ಲ, ಪರಲೋಕವು ಇಲ್ಲವೇ ಇಲ್ಲ) ಎಂದು ನೀನು ಭಾವಿಸಿರುವಿ. ಯಮಸದನದಲ್ಲಿ ಯಮದೂತರು ನಿನ್ನ ವಿಚಾರಗಳನ್ನು ನಿನಗೆ ನೆನಪಿಸುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿಯಿತು.
* * * *
ಹತ್ತೊಂಬತ್ತನೆಯ ಅಧ್ಯಾಯ
ಜನಮೇಜಯನಿಂದ ಶೌನಕರ ತೆಗಳಿಕೆಯ ಅಂಗೀಕಾರ. ದಯೆ ತೋರಲು ಪ್ರಾರ್ಥನೆ. ಬ್ರಹ್ಮನಿಷ್ಠರಿಗೆ ದ್ರೋಹ ಮಾಡದಿರಲು ಉಪದೇಶ. ಉಪದೇಶದ ಅಂಗೀಕಾರ.
ಭೀಷ್ಮಃ
ಏವಮುಕ್ತಃ ಪ್ರತ್ಯುವಾಚ ತಂ ಮುನಿಂ ಜನಮೇಜಯಃ |
ಗರ್ಹ್ಯಂ ಭವಾನ್ ಗರ್ಹಯತಿ ನಿಂದ್ಯಂ ನಿಂದತಿ ಮಾ ಭವಾನ್ ॥1॥
ಹೀಗೆ ಹೇಳಲ್ಪಟ್ಟ ಜನಮೇಜಯನು ಆ ಮುನಿಗೆ ಉತ್ತರ ಹೇಳಿದನು. ಮುನಿಯೇ! ನಿಂದಾರ್ಹನಾದ ನನ್ನನ್ನು ನೀನು ನಿಂದಿಸುತ್ತಿರುವಿ. ತೆಗೆಳಿಕೆಗೆ ಅರ್ಹನಾದ ನನ್ನನ್ನು ತೆಗಳುತ್ತಿರುವಿ.
ಧಿಕ್ಕಾರ್ಯಂ ಮಾ ಧಿಕ್ಕುರುತೇ ತಸ್ಮಾತ್ತ್ವಾಹಂ ಪ್ರಸಾದಯೇ |
ಸರ್ವಂ ಹೀದಂ ಸ್ವಕೃತಂ ಮೇ ಜ್ವಲಾಮ್ಯಗ್ನಾವಿವಾಹಿತಃ ॥2॥
ಧಿಕ್ಕಾರಕ್ಕೆ ಯೋಗ್ಯನಾದ ನನ್ನನ್ನು ಧಿಕ್ಕರಿಸುತ್ತಿರುವಿ. ನಾನು ನಿನ್ನ ಅನುಗ್ರಹವನ್ನು ಬೇಡುತ್ತೇನೆ. ಪ್ರಸನ್ನನಾಗಬೇಕೆಂದು ಬೇಡುತ್ತೇನೆ. ಇದೆಲ್ಲವೂ ನಾನು ಮಾಡಿದ ಅಪರಾಧವೇ. ನಾನು ಬೆಂಕಿಯಲ್ಲಿ ಹಾಕಲ್ಪಟ್ಟವನಂತೆ ದಹಿಸುತ್ತಿದ್ದೇನೆ.
ಸ್ವಕರ್ಮಾಣ್ಯಭಿಸಂಧಾಯ ನಾಭಿನಂದತಿ ಮೇ ಮನಃ |
ಪ್ರಾಪ್ತಂ ನೂನಂ ಮಯಾ ಘೋರಂ ಭಯಂ ವೈವಸ್ವತಾದಪಿ ॥3॥
ನನ್ನ ಕೃತ್ಯಗಳನ್ನು ನೆನೆದಾಗ ನನ್ನ ಮನಸ್ಸಿಗೆ ದುಃಖವಾಗುತ್ತದೆ. ಯಮನಿಂದ ನನಗೆ ಘೋರ ಶಿಕ್ಷೆ ಕಾದಿದೆ. ಇದು ನಿಶ್ಚಯ.
ತತ್ತು ಶಲ್ಯಮನಿರ್ಹೃತ್ಯ ಕಥಂ ಶಕ್ಷ್ಯಾಮಿ ಜೀವಿತುಮ್ |
ಸರ್ವಮನ್ಯೂನ್ ವಿನೀಯ ತ್ವಮಭಿ ಮಾ ವದ ಶೌನಕ ॥4॥
ಮನಸ್ಸಿಗೆ ಚುಚ್ಚಿರುವ ಆ ಪಾಪಕೃತ್ಯದ ಶಲ್ಯವನ್ನು (ಮುಳ್ಳನ್ನು) ತೆಗೆಯದೆ ನಾನು ಹೇಗೆ ತಾನೆ ಬದುಕಲಿ? ಶೌನಕರೇ! ಎಲ್ಲ ಕೋಪವನ್ನು ದೂರ ಇಟ್ಟು ನನಗೆ ನನ್ನ ಉದ್ಧಾರದ ದಾರಿಯನ್ನು ದಯವಿಟ್ಟು ಉಪದೇಶಿಸಿರಿ.
ಮಹಾನಾಸಂ ಬ್ರಾಹ್ಮಣಾನಾಂ ಭವಿಷ್ಯಾಮ್ಯರ್ಥವಾನ್ ಪುನಃ |
ಅಸ್ತು ಶೇಷಂ ಕುಲಸ್ಯಾಸ್ಯ ಮಾ ಪರಾಭೂದಿದಂ ಕುಲಮ್ ॥5॥
ನಾನು ಬ್ರಾಹ್ಮಣರ ದೊಡ್ಡ ಭಕ್ತನಾಗಿದ್ದೆ. ಮತ್ತೆ ಅವರಿಗೆ ಉಪಯೋಗಿಯಾದವನು ಆಗಬೇಕು. ಈ ಕುಲವು ಉಳಿಯಬೇಕು. ಈ ಕುಲವು ನಾಶವಾಗಬಾರದು.
ನ ಹಿ ನೋ ಬ್ರಹ್ಮಶಪ್ತಾನಾಂ ಶೇಷೋ ಭವಿತುಮರ್ಹತಿ |
ಶ್ರುತೀರಲಭಮಾನಾನಾಂ ಸಂವಿದಂ ವೇದ ನಿಶ್ಚಯಾತ್ ॥6॥
ಬ್ರಾಹ್ಮಣಶಾಪಕ್ಕೆ ಒಳಗಾದ ನಾವು ಉಳಿಯುವುದೇ ಇಲ್ಲ. ಯಾರ ಮಾತನ್ನು ಯಾರು ಕೇಳುವುದಿಲ್ಲವೋ ಅಂತಹವರ ಸ್ಥಿತಿಯನ್ನು

(ದುಃಸ್ಥಿತಿಯನ್ನು) ನೀವು ನಿಶ್ಚಯವಾಗಿ ತಿಳಿದಿರುವಿರಿ.
ನಿರ್ವಿದ್ಯಮಾನಃ ಸುಭೃಶಂ ಭೂಯೋ ವಕ್ಷ್ಯಾಮಿ ಸಾಂಪ್ರತಮ್ |
ಭೂಯಶ್ಚೈವಾಭಿನಂಕ್ಷ್ಯಂತಿ ನಿರ್ಧರ್ಮಾ ನಿರ್ಜಪಾ ಇವ ॥7॥
ಬಹಳ ಬೇಸರಗೊಂಡಿರುವ ನಾನು ಮತ್ತೆ ಮತೆ ಹೇಳುತ್ತೇನೆ. ಬ್ರಾಹ್ಮಣಶಾಪಕ್ಕೆ ಒಳಗಾದವರು ನಾಶವಾಗುತ್ತಾರೆ. ಧರ್ಮಾಚರಣೆಯಿಲ್ಲದವರಂತೆ. ಜಪವಿಲ್ಲದವರಂತೆ.
ಅರ್ವಾಕ್ಚ ಪ್ರತಿತಿಷ್ಠಂತಿ ಪುಲಿಂದಶಬರಾ ಇವ |
ನ ಹ್ಯಯಜ್ಞಾ ಅಮುಂ ಲೋಕಂ ಪ್ರಾಪ್ನುವಂತಿ ಕಥಂಚನ ॥8॥
ಪುಲಿಂದರಂತೆ, ಶಬರರಂತೆ ಕೆಳಸ್ಥಿತಿಯಲ್ಲೇ ನಿಲ್ಲುತ್ತಾರೆ. ಯಜ್ಞಗಳನ್ನು ಮಾಡದವರು ಮೇಲಿನ ಲೋಕಗಳಿಗೆ ಸರ್ವಥಾ ಹೋಗುವುದಿಲ್ಲ.
ಅವಿಜ್ಞಾಯೈವ ಮೇ ಪ್ರಜ್ಞಾಂ ಬಾಲಸ್ಯೇವ ಸುಪಂಡಿತಃ |
ಬ್ರಹ್ಮನ್ ಪಿತೇವ ಪುತ್ರೇಭ್ಯಃ ಪ್ರತಿ ಮಾಂ ವಾಂಛ ಶೌನಕ ॥9॥
ಬ್ರಾಹ್ಮಣೋತ್ತಮರೇ! ನೀವು ಒಳ್ಳೆಯ ಪಂಡಿತರು. ನನ್ನ ಬಾಲಿಶ ಪ್ರಜ್ಞೆಯನ್ನು ಗಮನಕ್ಕೆ ತೆಗೆದುಕೊಳ್ಳದೆ, ತಂದೆಯು ಮಗನ ಮೇಲೆ ಪ್ರೀತಿಯನ್ನು ತೋರುವಂತೆ ನನ್ನ ಮೇಲೆ ದಯೆ ತೋರಿ.
ಶೌನಕಃ
ಕಿಮಾಶ್ಚರ್ಯಂ ಯತಃ ಪ್ರಾಜ್ಞೋ ಬಹು ಕುರ್ಯಾದ್ಧಿ ಸಾಂಪ್ರತಮ್ |
ಇತಿ ವೈ ಪಂಡಿತೋ ಭೂತ್ವಾ ಭೂತಾನಾಂ ನೋಪತಪ್ಯತಿ ॥10॥
ಪ್ರಾಜ್ಞನು ಸರಿಯಾದ ಕೆಲಸಗಳನ್ನೇ ಹೆಚ್ಚಾಗಿ ಮಾಡುತ್ತಾನೆ. ಇದರಲ್ಲಿ ಆಶ್ಚರ್ಯವೇನು? ಆದ್ದರಿಂದ ಪಂಡಿತನಾದವನು ಪಾಮರರ ಬಗ್ಗೆ ತಪಿಸುವುದಿಲ್ಲ, ಕೋಪಿಸಿಕೊಳ್ಳುವುದಿಲ್ಲ.
ಪ್ರಜ್ಞಾಪ್ರಾಸಾದಮಾರುಹ್ಯ ಅಶೋಚ್ಯಃ ಶೋಚತೇ ಜನಾನ್ |
ಜಗತೀಸ್ಥಾನಿವಾದ್ರಿಸ್ಥಃ ಪ್ರಜ್ಞಯಾ ಪ್ರತಿಪಶ್ಯತಿ ॥11॥
ಪ್ರಜ್ಞಾ ಎಂಬ ಪ್ರಾಸಾದವನ್ನು= ಬಹುಮಹಡಿ ಕಟ್ಟಡವನ್ನು ಏರಿದವನು ಶೋಚನೀಯನಾಗದಂತಹ ಸುಸ್ಥಿತಿಯಲ್ಲಿರುತ್ತಾನೆ. ಅವನಿಗೆ ಪಾಮರರ ಮೇಲೆ ಅನುಕಂಪ. ಬೆಟ್ಟದ ಮೇಲಿರುವವನು ನೆಲದ ಮೇಲೆ ಇರುವವರನ್ನು ನೋಡುವಂತೆ ಪ್ರಾಜ್ಞನು ತನ್ನ ಪ್ರಜ್ಞಾಬಲದಿಂದ ಪಾಮರರನ್ನು ನೋಡುತ್ತಾನೆ.
ನ ಚೋಪಲಭತೇ ತತ್ರ ನ ಚ ಕಾರ್ಯಾಣಿ ಪಶ್ಯತಿ |
ನಿರ್ವಿಣ್ಣಾತ್ಮಾ ಪರೋಕ್ಷೋ ವಾ ಧಿಕ್ಕೃತಃ ಸರ್ವಸಾಧುಷು ॥12॥
ಕುಸಿದ ಮನಸ್ಸಿನವನಿಗೆ, ಸಾಧುಜನರ ದೃಷ್ಟಿಗೆ ಬೀಳದವನಿಗೆ. ಅವರ ಧಿಕ್ಕಾರಕ್ಕೆ ಒಳಗಾದವನಿಗೆ ಏನೂ ತಿಳಿಯುವುದಿಲ್ಲ. ಏನು ಮಾಡಲೂ ತೋಚುವುದಿಲ್ಲ.
ವಿದಿತ್ವೋಭಯತೋ ವೀರ್ಯಂ ಮಾಹಾತ್ಮ್ಯಂ ವೇದ ಆಗಮೇ |
ಕುರುಷ್ವೇಹ ಮಹಾಶಾಂತಿಂ ಬ್ರಹ್ಮಾ ಶರಣಮಸ್ತು ತೇ ॥13॥
ವೇದ ಮತ್ತು ಪೌರುಷೇಯ ಆಗಮ - ಇವೆರಡರಲ್ಲಿರುವ ಸತ್ವ ಮತ್ತು ಮಹಿಮೆಯನ್ನು ತಿಳಿದು ನಿನ್ನ ಪಾಪಕ್ಕೆ ಮಹಾಶಾಂತಿಯನ್ನು ಮಾಡು. ಬ್ರಾಹ್ಮಣರು ನಿನ್ನನ್ನು ರಕ್ಷಿಸಲಿ.
ತದ್ವೈ ಪಾರತ್ರಿಕಂ ಚಾರು ಬ್ರಾಹ್ಮಣಾನಾಮಕುಪ್ಯತಾಮ್ |
ಅಥ ಚೇತ್ತಪ್ಯಸೇ ಪಾಪೈರ್ಧರ್ಮಂ ಚೇದನುಪಶ್ಯಸಿ ॥14॥
ಪ್ರಸನ್ನ ಮನಸ್ಸಿನವರಾದ ಬ್ರಾಹ್ಮಣರ ರಕ್ಷಣೆಯು ಪರಲೋಕ ಪ್ರಾಪ್ತಿಗೆ ಸಾಧನ. ಮಾಡಿದ ಪಾಪದ ಬಗ್ಗೆ ಪಶ್ಚಾತ್ತಾಪವಿದ್ದರೆ, ಧರ್ಮವನ್ನು ಸರಿಯಾಗಿ ತಿಳಿದರೆ - ಇವೆರಡರಿಂದ ಪರಲೋಕದಲ್ಲಿ ಸದ್ಗತಿಯಾಗುತ್ತದೆ.
ಜನಮೇಜಯಃ
ಅನುತಪ್ಯೇ ಚ ಪಾಪೇನ ನ ಚಾಧರ್ಮಂ ಚರಾಮ್ಯಹಮ್ |
ಬುಭೂಷುಂ ಭಜಮಾನಂ ಚ ಪ್ರತಿವಾಂಛಾಮಿ ಶೌನಕ ॥15॥
ಶೌನಕರೇ! ನನ್ನ ಪಾಪಕೃತ್ಯದ ಬಗ್ಗೆ ನನಗೆ ಪಶ್ಚಾತ್ತಾಪವಿದೆ. ನಾನು ಅಧರ್ಮವನ್ನು ಮಾಡುವುದಿಲ್ಲ. ನಾನು ನನಗೆ ಶ್ರೇಯಸ್ಸನ್ನು ಬಯಸುತ್ತಿರುವೆ. ನಿಮ್ಮನ್ನು ಆಶ್ರಯಿಸಿದ್ದೇನೆ. ನಿಮ್ಮ ಪ್ರಸಾದವನ್ನು ಬಯಸಿದ್ದೇನೆ.
ಶೌನಕಃ
ಛಿತ್ತ್ವಾ ಸ್ತಂಭಂ ಚ ಮಾನಂ ಚ ಪ್ರೀತಿಮಿಚ್ಛಾಮಿ ತೇ ನೃಪ |
ಸರ್ವಭೂತಹಿತೇ ತಿಷ್ಠ ಧರ್ಮಂ ಚೈವ ಪ್ರತಿಸ್ಮರ ॥16॥
ರಾಜನೇ! ನಿನ್ನ ದರ್ಪ-ದುರಭಿಮಾನಗಳನ್ನು ಕತ್ತರಿಸಿ ನಿನಗೆ ಪ್ರೀತಿಯನ್ನು ತೋರುತ್ತೇನೆ. ಸರ್ವಭೂತಗಳಿಗೂ ಹಿತವಾಗುವಂತೆ ನಡೆದುಕೊ. ಧರ್ಮವನ್ನೇ ಚಿಂತಿಸು.
ನ ಭಯಾನ್ನ ಚ ಕಾರ್ಪಣ್ಯಾನ್ನ ಲೋಭಾತ್ತ್ವಾಮುಪಾಹ್ವಯೇ |
ತಾಂ ಮೇ ದೇವಾ ಗಿರಂ ಸತ್ಯಾಂ ಶೃಣ್ವಂತು ಬ್ರಾಹ್ಮಣೈಃ ಸಹ ॥17॥
ನಾನು ನಿನ್ನನ್ನು ನನ್ನ ಬಳಿಗೆ ಭಯದಿಂದ ಆಹ್ವಾನಿಸುವುದಿಲ್ಲ. ಕಾರ್ಪಣ್ಯದಿಂದಲೂ ಅಲ್ಲ. ಲೋಭದಿಂದಲೂ ಅಲ್ಲ. ನನ್ನ ಸತ್ಯವಾದ ಮಾತನ್ನು ದೇವತೆಗಳು ಮತ್ತು ಬ್ರಾಹ್ಮಣರು ದಯವಿಟ್ಟು ಕೇಳಲಿ.
ಸೋಽಹಂ ನ ಕೇನಚಿಚ್ಚಾರ್ಥೀ ತ್ವಾಂ ಚ ಧರ್ಮಮುಪಾಹ್ವಯೇ |

ಕ್ರೋಶತಾಂ ಸರ್ವಭೂತಾನಾಮಹೋ ಧಿಗಿತಿ ಕುರ್ವತಾಮ್ ॥18॥
ನನಗೆ ನಿನ್ನಿಂದ ಏನನ್ನಾದರೂ ಪಡೆಯುವ ಅಪೇಕ್ಷೆ ಇಲ್ಲ. ಎಲ್ಲರೂ ನಿನ್ನ ವಿರುದ್ಧ ಕೂಗುತ್ತಿರುವಾಗ, ಧಿಕ್ಕಾರವನ್ನು ಮಾಡುತ್ತಿರುವಾಗ ಧರ್ಮಾಪೇಕ್ಷಿಯಾದ ನಿನ್ನನ್ನು ನಾನು ಹತ್ತಿರ ಕರೆಯುತ್ತಿದ್ದೇನೆ.
ವಕ್ಷ್ಯಂತಿ ಮಾಮಧರ್ಮಜ್ಞಾ ವಕ್ಷ್ಯಂತ್ಯಸುಹೃದೋ ಜನಾಃ।
(ವಕ್ಷ್ಯಂತಿ ಮಾಮಧರ್ಮಜ್ಞಂ ತ್ಯಕ್ಷಂತಿ ಸುಹೃದೋ ಜನಾಃ।)
ವಾಚಸ್ತಾಃ ಸುಹೃದಃ ಶ್ರುತ್ವಾ ಸಂಜ್ವರಿಷ್ಯಂತಿ ಮೇ ಭೃಶಮ್ ॥19॥
ಧರ್ಮವನ್ನು ತಿಳಿಯದವರು ನನ್ನನ್ನು ನಿಂದಿಸುತ್ತಾರೆ. ಒಳ್ಳೆಯ ಹೃದಯವಿಲ್ಲದ ಜನರು ನನ್ನನ್ನು ನಿಂದಿಸುತ್ತಾರೆ. (ನನ್ನ ಬಗ್ಗೆ ಸೌಹಾರ್ದವಿರುವ ಜನರು ನನ್ನನ್ನು ಧರ್ಮದ ಜ್ಞಾನವಿಲ್ಲದವನು ಎಂದು ಹೇಳುತ್ತಾರೆ. ನನ್ನನ್ನು ತ್ಯಜಿಸುತ್ತಾರೆ). ಕೆಲವು ಮಿತ್ರರು ನನ್ನ ಬಗ್ಗೆ ಆ ಮಾತುಗಳನ್ನು ಕೇಳಿ ಬಹಳ ಪರಿತಪಿಸುತ್ತಾರೆ.
ಕೇಚಿದೇವ ಮಹಾಪ್ರಾಜ್ಞಾಃ ಪರಿಜ್ಞಾಸ್ಯಂತಿ ಕಾರ್ಯತಾಮ್।
ಜಾನೀಹಿ ಮೇ ಕೃತಂ ತಾತ ಬ್ರಾಹ್ಮಣಾನ್ ಪ್ರತಿ ಭಾರತ ॥20॥
ಕೆಲವೇ ಮಹಾಪ್ರಾಜ್ಞರು ನನ್ನ ಕೆಲಸವನ್ನು ಸರಿಯಾದ ಕೆಲಸ (ಅರ್ಹಕೆಲಸ) ಎಂದು ತಿಳಿಯುತ್ತಾರೆ. ಭರತಕುಲಸಂಜಾತ! ಪ್ರಿಯ! ನನ್ನ ಈ ಕೆಲಸ ಬ್ರಾಹ್ಮಣರಿಗಾಗಿಯೇ ಎಂದು ತಿಳಿದುಕೊ.
ಯಥಾ ತೇ ಮತ್ಕೃತೇ ಕ್ಷೇಮಂ ಲಭೇರಂಸ್ತತ್ತಥಾ ಕುರು।
ಪ್ರತಿಜಾನೀಹಿ ಚಾದ್ರೋಹಂ ಬ್ರಾಹ್ಮಣಾನಾಂ ನರಾಧಿಪ ॥21॥
ಆ ಬ್ರಾಹ್ಮಣರು ನನ್ನ ಈ ಕೆಲಸದಿಂದಾಗಿ ಕ್ಷೇಮವನ್ನು ಹೊಂದುವಂತೆ ನೀನು ಮಾಡು. ರಾಜನೆ! ಬ್ರಾಹ್ಮಣರಿಗೆ ದ್ರೋಹ ಮಾಡುವುದಿಲ್ಲ ಎಂದು ಪ್ರತಿಜ್ಞೆ ಮಾಡು.
ಜನಮೇಜಯಃ
ನೈವ ವಾಚಾ ನ ಮನಸಾ ನ ಪುನರ್ಜಾತು ಕರ್ಮಣಾ।
ದ್ರೋಗ್ಧಾಸ್ಮಿ ಬ್ರಾಹ್ಮಣಾನ್ ವಿಪ್ರ ಚರಣಾವೇವ ತೇ ಸ್ಪೃಶೇ ॥22॥
ವಿಪ್ರರೆ! ಎಂದೂ ನಾನು ಬ್ರಾಹ್ಮಣರಿಗೆ ಮಾತಿನಿಂದ ದ್ರೋಹ ಮಾಡುವುದಿಲ್ಲ. ಮನಸ್ಸಿನಿಂದ ದ್ರೋಹ ಮಾಡುವುದಿಲ್ಲ. ಕೃತಿಯಿಂದ ದ್ರೋಹ ಮಾಡುವುದಿಲ್ಲ. ನಿಮ್ಮ ಪಾದಗಳನ್ನು ಮುಟ್ಟಿ ಪ್ರತಿಜ್ಞೆ ಮಾಡುವೆನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.
* * * *
ಇಪ್ಪತ್ತನೆಯ ಅಧ್ಯಾಯ
ಬ್ರಹ್ಮಹತ್ಯಾ ಪಾಪದಿಂದ ಬಿಡುಗಡೆಯ ದಾರಿಯ ಉಪದೇಶ.
ಶೌನಕಃ
ತಸ್ಮಾತ್ ತೇಽಹಂ ಪ್ರವಕ್ಷ್ಯಾಮಿ ಧರ್ಮಮಾವೃತ್ತಚೇತಸೇ।
ಶ್ರೀಮಾನ್ ಮಹಾಬಲಸ್ತುಷ್ಟೋ ಯಸ್ತ್ವಂ ಧರ್ಮಮವೇಕ್ಷಸೇ ॥1॥
ಆದ್ದರಿಂದ ಬ್ರಾಹ್ಮಣರ ಬಗ್ಗೆ ನಿನಗೆ ಇರುವ ಗೌರವ ಭಾವನೆಯ ಕಾರಣದಿಂದ ಒಳ್ಳೆಯ ನಡವಳಿಕೆಯ ಮನಸ್ಸಿರುವ ನಿನಗೆ ಧರ್ಮವನ್ನು ಉಪದೇಶಿಸುತ್ತೇನೆ. ಸತ್ವಸಂಪನ್ನನೂ, ಮಹಾಬಲಶಾಲಿಯೂ, ಸಂತುಷ್ಟನೂ ಆಗಿರುವ ನಿನಗೆ ಧರ್ಮದ ಕಡೆ ದೃಷ್ಟಿಯಿದೆ.
ಪುರಸ್ತಾದ್ದಾರುಣೋ ಭೂತ್ವಾ ಸುಚಿತ್ರತರಮೇವ ತತ್।
ಅನುಗೃಹ್ಣಂತಿ ಭೂತಾನಿ ಸ್ವೇನ ವೃತ್ತೇನ ಪಾರ್ಥಿವ ॥2॥
ಕೃತ್ಸ್ನೇ ನೂನಂ ಸದಸತೀ ಇತಿ ಲೋಕೋ ವ್ಯವಸ್ಯತಿ।
ಯತ್ರ ತ್ವಂ ತಾದೃಶೋ ಭೂತ್ವಾ ಧರ್ಮಮದ್ಯಾನುಪಶ್ಯಸಿ ॥3॥
ರಾಜನೆ! ಮೊದಲು ದಾರುಣ ನಡತೆಯಿಂದ ಇದ್ದವನಿಗೆ, ಅನಂತರ ಅವನಲ್ಲಿ ಉಂಟಾಗಿರುವ ಒಳ್ಳೆಯ ನಡತೆಯನ್ನು ಪರಿಗಣಿಸಿ ಭೂತಾಭಿಮಾನಿ ದೇವತೆಗಳು ಅನುಗ್ರಹಿಸಿರುತ್ತಾರೆ. ಇದು ಬಹಳ ಅದ್ಭುತ ವಿಷಯ. ಇದನ್ನು ನೋಡಿ ಲೋಕವು ಎಲ್ಲವೂ/ ಎಲ್ಲರೂ ಒಳ್ಳೆಯದು/ ಒಳ್ಳೆಯವರು ಆಗಿರುತ್ತವೆ/ ಆಗಿರುತ್ತಾರೆ. ಕೆಟ್ಟದ್ದೂ/ ಕೆಟ್ಟವರೂ ಆಗಿರುತ್ತವೆ/ ಆಗಿರುತ್ತಾರೆ ಎಂದು ನಿರ್ಣಯಿಸುತ್ತಾರೆ. ಅವರ ನಿರ್ಣಯಕ್ಕೆ ನೀನೇ ನಿದರ್ಶನ. ನೀನು ಮೊದಲು ಹಾಗೆ ಇದ್ದು (ಅತಿ ಕೆಟ್ಟವನಾಗಿದ್ದು) ಈಗ ಧರ್ಮವನ್ನು ಅನುಕೂಲ-ಅನುಗ್ರಹಕಾರಕ ಎಂದು ನೋಡುತ್ತಿರುವಿ.
ಹಿತ್ವಾ ಸುರುಚಿರಂ ಭಕ್ಷ್ಯಂ ಭೋಗಾಂಶ್ಚ ತಪ ಆಸ್ಥಿತಃ।
ಇತ್ಯೇತದಪಿ ಭೂತಾನಾಮದ್ಭುತಂ ಜನಮೇಜಯ ॥4॥
ಜನಮೇಜಯ! ಬಹಳ ಆಸ್ವಾದಕರವಾದ ಭಕ್ಷ್ಯಗಳನ್ನೂ-ಭೋಗಗಳನ್ನು ಬಿಟ್ಟು ತಪಸ್ಸನು ಕೈಗೊಂಡಿರುವಿ. ಇದು ಎಲ್ಲ ಚೇತನಗಳಿಗೂ-ಭೂತಾಭಿಮಾನಿಗಳಿಗೂ ಅದ್ಭುತ ಎನಿಸುತ್ತವೆ.
ಯೋ ದುರ್ಬಲೋ ಭವೇದ್ದಾತಾ ಕೃಪಣೋ ವಾ ತಪೋಧನಃ।
ಅನಾಶ್ಚರ್ಯಂ ತದಿತ್ಯಾಹುರ್ನಾತಿದೂರೇ ಹಿ ವರ್ತತೇ ॥5॥
ದುರ್ಬಲನು ದಾನಶೀಲನಾಗಬಹುದು. ಕೃಪಣನು ತಪೋಧನ ಆಗಬಹುದು! ಅದು ಆಶ್ಚರ್ಯವಲ್ಲ ಎಂದು ಹೇಳುತ್ತಾರೆ. ಈ ಹೇಳಿಕೆಗೆ

ನಿದರ್ಶನವಾಗಿ ನೀನು ಹತ್ತಿರದಲ್ಲೇ ಇರುವಿ.
ತಪ ಏವ ಹಿ ಕಾರ್ಪಣ್ಯಂ ಸಮರ್ಥಮಸಮೀಹಿತುಮ್ |
ತಸ್ಮಾತ್ ಸಮೀಕ್ಷಯ್ಯೈವ ಸ್ಯಾದ್ ಭವೇತ್ ತಸ್ಮಿಂಸ್ತತೋ ಗುಣಃ ॥6॥
ಕಾರ್ಪಣ್ಯವನ್ನು ಮಾಡದಿರಲು ತಪಸ್ಸೇ ಸಮರ್ಥ ದಾರಿ. ಆದ್ದರಿಂದ ಸರಿಯಾದ ಸಮೀಕ್ಷೆಯ ಇರಬೇಕು. ಸಮೀಕ್ಷೆಯಿಂದ ತಪಸ್ಸಿನಲ್ಲಿ ಉತ್ಕರ್ಷವು ಉಂಟಾಗುತ್ತದೆ.
ಯಜ್ಞೋ ದಾನಂ ದಯಾ ವೇದಾಃ ಸತ್ಯಂ ಚ ಪೃಥಿವೀಪತೇ |
ಪಂಚೈತಾನಿ ಪವಿತ್ರಾಣಿ ಷಷ್ಠಂ ಸುಚರಿತಂ ತಪಃ ॥7॥
ಭೂಪತಿ! ಯಜ್ಞ-ದಾನ-ದಯ-ವೇದ-ಸತ್ಯ- ಈ ಐದು ಪವಿತ್ರ. ಸರಿಯಾಗಿ ಆಚರಿಸಲ್ಪಡುವ ತಪಸ್ ಆರನೆಯದು.
ತದೇವ ರಾಜ್ಞಾಂ ಪರಮಂ ಪವಿತ್ರಂ ಜನಮೇಜಯ |
ತೇನ ಸಮ್ಯಗ್ಗೃಹೀತೇನ ಶ್ರೇಯಾಂಸಂ ಧರ್ಮಮಾಪ್ಸ್ಯಸಿ ॥8॥
ಜನಮೇಜಯ! ರಾಜರಿಗೆ ಅದೇ=ತಪಸ್ಸೇ ಪರಮಪವಿತ್ರ. ಸರಿಯಾಗಿ ಆಚರಿಸಲ್ಪಟ್ಟ ತಪಸ್ಸಿನಿಂದ ಶ್ರೇಷ್ಠ ಧರ್ಮವನ್ನು (ಧರ್ಮಫಲವನ್ನು) ಹೊಂದುವಿ.
ಪುಣ್ಯದೇಶಾಭಿಗಮನಂ ಪವಿತ್ರಂ ಪರಮಂ ಸ್ಮೃತಮ್ |
ಅಪಿ ಹ್ಯುದಾಹರಂತೀಮಾ ಗಾಥಾ ಗೀತಾ ಯಯಾತಿನಾ ॥9॥
ಪುಣ್ಯಸ್ಥಳಗಳಿಗೆ ಯಾತ್ರೆಯು ಪರಮಪವಿತ್ರ ಎಂದು ಪೂರ್ವಸೂರಿಗಳ ಚಿಂತನೆಯಿದೆ. ಯಯಾತಿಯು ಹಾಡಿದ ಈ ಗಾಥೆಗಳನ್ನು ಉದಾಹರಿಸುತ್ತಾರೆ.
ಯೋ ಮರ್ತ್ಯಃ ಪ್ರತಿಪದ್ಯೇತ ಆಯುರ್ಜೀವೇತ ವಾ ಪುನಃ |
ಯಜ್ಞಮೇಕಾಂತತಃ ಕೃತ್ವಾ ತತ್ ಸನ್ನ್ಯಸ್ಯ ಪುನಶ್ಚರೇತ್ ॥10॥
ಯಾವ ಮನುಷ್ಯನು ಆಯುಷ್ಯವನ್ನು ಹೊಂದುತ್ತಾನೋ, ಜೀವಿಸುತ್ತಾನೋ ಅವನು ಚೆನ್ನಾಗಿ ಯಜ್ಞವನ್ನು ಮಾಡಬೇಕು. ಅದನ್ನು ಹರಿಚರಣಗಳಿಗೆ ಅರ್ಪಿಸಿ ತೀರ್ಥಯಾತ್ರೆಯನ್ನು ಮಾಡಬೇಕು.
ಪುಣ್ಯಮಾಹುಃ ಕುರುಕ್ಷೇತ್ರಂ ಸರಸ್ವತ್ಯಾಂ ಪೃಥೂದಕಮ್ |
ಯತ್ರಾವಗಾಹ್ಯ ಪೀತ್ವಾ ವಾ ನೈನಂ ಶ್ವೋ ಮರಣಂ ತಪೇತ್ ॥11॥
ಕುರುಕ್ಷೇತ್ರವನ್ನು ಪುಣ್ಯಕರ ಎಂದು ಹೇಳುತ್ತಾರೆ. ಸರಸ್ವತೀ ನದಿಯ ಬೇರೆ ಬೇರೆ ತೀರ್ಥಗಳನ್ನು ಪುಣ್ಯಕರ ಎಂದು ಹೇಳುತ್ತಾರೆ. ಈ ತೀರ್ಥಗಳಲ್ಲಿ ಅವಗಾಹನ ಮಾಡಿದವರಿಗೆ, ಈ ತೀರ್ಥವನು ಪಾನ ಮಾಡಿದವನಿಗೆ ನಾಳೆಯೇ ಸಂಭವಿಸುವ ಮರಣವೂ ಕೂಡ ತಾಪವುಂಟು ಮಾಡುವುದಿಲ್ಲ (ಇಲ್ಲಿ ಅವಗಾಹನ-ಪಾನಗಳಿಂದ ಎಲ್ಲ ಪಾಪಗಳ ಪರಿಹಾರವಾಗಿರುತ್ತದೆ).
ಮಹಾಸರಃ ಪುಷ್ಕರಾಣಿ ಪ್ರಭಾಸೋತ್ತರಮಾನಸೇ |
ಕಾಲೋದಂ ತ್ವೇವ ಗಂತಾಸಿ ಲಬ್ಧಾಯುರ್ಜೀವಿತೇ ಪುನಃ ॥12॥
ಮಹಾಸರೋವರ, ಪುಷ್ಕರಗಳು, ಪ್ರಭಾಸ, ಉತ್ತರಮಾನಸ, ಕಾಲೋದ - ಇವುಗಳಿಗೆ ಹೋಗು. ಮತ್ತಷ್ಟು ಆಯುಷ್ಯವು ನಿನಗೆ ಲಬ್ಧವಾಗುತ್ತದೆ.
ಸರಸ್ವತೀದೃಷದ್ವತ್ಯೌ ಸೇವಮಾನೋಽನುಸಂಚರೇಃ |
ಸ್ವಾಧ್ಯಾಯಶೀಲಃ ಸ್ಥಾನೇಷು ಸರ್ವೇಷು ಸಮುಪಸ್ಪೃಶೇಃ ॥13॥
ಸರಸ್ವತಿ-ದೃಷದ್ವತಿಗಳ ಸೇವೆಯನ್ನು ಮಾಡಿ ಸಂಚಾರವನ್ನು ಮುಂದುವರಿಸು. ಎಲ್ಲ ಸ್ಥಾನಗಳಲ್ಲಿ ವೇದಾಧ್ಯಯನಶೀಲನಾಗಿ ಸ್ನಾನ ಮಾಡು.
ತ್ಯಾಗಧರ್ಮಂ ಪವಿತ್ರಾಣಾಂ ಸಂನ್ಯಾಸಂ ಪರಮಬ್ರುವೀತ್ |
ಅತ್ರಾಪ್ಯುದಾಹರಂತೀಮಾ ಗಾಥಾಃ ಸತ್ಯವತಾ ಕೃತಾಃ ॥14॥
ಪವಿತ್ರಕಾರ್ಯಗಳಲ್ಲಿ ಸರ್ವಸಂಗಪರಿತ್ಯಾಗವಿರುವ ಸಂನ್ಯಾಸವನ್ನು ಶ್ರೇಷ್ಠ ಎಂದು ಹೇಳುತ್ತಾರೆ. ಈ ವಿಷಯದಲ್ಲಿ ಸತ್ಯವಾನ್ ಹೇಳಿದ ಗಾಥೆಗಳನ್ನು ಉದಾಹರಿಸುತ್ತಾರೆ.
ಯಥಾ ಕುಮಾರಃ ಸದ್ಯೋ ವೈ ನೈವ ಪುಣ್ಯೋ ನ ಪಾಪಕೃತ್ |
ನ ಹ್ಯಸ್ತಿ ಸರ್ವಭೂತೇಷು ದುಃಖಮಸ್ಮಿನ್ ಕುತಃ ಸುಖಮ್ ॥15॥
ಕುಮಾರ ವಯಸ್ಸಿನವನು ಆಗ ಪುಣ್ಯವನ್ನು ಮಾಡುವುದಿಲ್ಲ, ಪಾಪವನ್ನೂ ಮಾಡುವುದಿಲ್ಲ. ಎಲ್ಲರೂ ಹಾಗೆ ಇರಬೇಕು. ಎಲ್ಲ ಪ್ರಾಣಿಗಳಲ್ಲಿ ದುಃಖವಿಲ್ಲದಿದ್ದರೆ ಸುಖವು ಹೇಗೆ ತಾನೇ ಇದ್ದೀತು?
ಏವಂ ಪ್ರಕೃತಿಭೂತಾನಾಂ ಸರ್ವಸಂಸರ್ಗಯಾಯಿನಾಮ್ |
ತ್ಯಜತಾಂ ಜೀವಿತಂ ಪ್ರಾಯೋ ವಿವೃತೇ ಪುಣ್ಯಪಾತಕೇ ॥16॥
ಎಲ್ಲರಿಗೂ ದುಃಖವುಂಟು ಮಾಡುವ, ಆದ್ದರಿಂದಲೇ, ಸರ್ವಯೋನಿಗಳಲ್ಲಿ ಹುಟ್ಟುವ ಮತ್ತು ಸಾಯುವ ಜೀವಗಳ ಪುಣ್ಯ ಮತ್ತು ಪಾಪಗಳು ಅವುಗಳ ಹುಟ್ಟು- ಸಾವುಗಳಿಂದ ವಿವರಿಸಲ್ಪಡುತ್ತವೆ.
ಯತ್ತ್ವೇವ ರಾಜನ್ ಸ್ಥಾಯಿಷ್ಠಂ ಕಾರ್ಯಾಣಾಂ ತದ್ವದಾಮಿ ತೇ |
ಬಲೇನ ಸಂವಿಭಾಗೈಶ್ಚ ಜಯ ಸ್ವರ್ಗಂ ಪುನೀಷ್ವ ಚ ॥17॥
ರಾಜನೆ! ಕಾರ್ಯಗಳಲ್ಲಿ ಯಾವುದು ಗಟ್ಟಿಯಾಗಿ ನಿಲ್ಲುವುದೋ ಅದನ್ನು ಹೇಳುತ್ತೇನೆ. ನೀನು ಬಲದಿಂದ (ಧರ್ಮನಿಷ್ಠೆಯಿಂದ) ಮತ್ತು ದಾನಗಳಿಂದ ಸ್ವರ್ಗವನ್ನು ಜಯಿಸು. ಪವಿತ್ರನಾಗು.
ಯಸ್ಯೈವಂ ಬಲಮೋಜಶ್ಚ ಸ ಧರ್ಮಸ್ಯ ಪ್ರಭುರ್ನರಃ |

ಬ್ರಾಹ್ಮಣಾನಾಂ ಸುಖಾರ್ಥಂ ತ್ವಂ ಪರ್ಯೇಹಿ ಪೃಥಿವೀಮಿಮಾಮ್ ||
ಯಾರಿಗೆ ಬಲ ಮತ್ತು ಇಂದ್ರಿಯಪಾಟವಗಳು ಇರುತ್ತವೋ ಆ ಮನುಷ್ಯನು ಧರ್ಮನಿಷ್ಠನಾಗಲು ಸಮರ್ಥ. ಬ್ರಾಹ್ಮಣರ ಸುಖಕ್ಕಾಗಿ ನೀನು ಈ ಭೂಮಿಯನ್ನು ರಕ್ಷಿಸು.
ಯಥೈವೈನಾನ್ ಪುರಾಕ್ಷೈಪ್ಸೀಸ್ತಥೈವೈನಾನ್ ಪ್ರಸಾದಯ |
ಅಪಿ ಧಿಕ್ಕ್ರಿಯಮಾಣೋಽಪಿ ತ್ಯಜ್ಯಮಾನೋಽಪ್ಯನೇಕಧಾ ||19||
ಹಿಂದೆ ಇವರನ್ನು ಹೇಗೆ ದೂರ ಮಾಡಿದೆಯೋ ಹಾಗೆಯೇ ಈಗ ಇವರನ್ನು ಸಂತೋಷಗೊಳಿಸು. ಅವರು ನಿನ್ನನ್ನು ಅನೇಕ ರೀತಿಯಲ್ಲಿ ಧಿಕ್ಕರಿಸಿದರೂ, ತ್ಯಜಿಸಿದರೂ ಅವರನ್ನು ಸಂತೋಷಗೊಳಿಸು.
ಆತ್ಮನೋ ದರ್ಶನಂ ವಿದ್ವನ್ನಾಹರ್ತಾಸ್ಮೀತಿ ಮಾ ಕ್ರುಧಃ |
ಘಟಮಾನಃ ಸ್ವಕಾರ್ಯೇಷು ಕುರು ನೈಃಶ್ರೇಯಸಂ ಪರಮ್ ||20||
ಜ್ಞಾನಿಯೇ! ಶತ್ರುಗಳನ್ನು ನಿಗ್ರಹ ಮಾಡುತ್ತೇನೆ ಎಂಬ ಸಿದ್ಧಾಂತವು ನಿನಗಿರಲಿ. ಕೋಪಿಸಬೇಡ. ನಿನ್ನ ಕರ್ತವ್ಯಗಳಲ್ಲಿ ತೊಡಗಿ ಮುಕ್ತಿಯನ್ನು ಪರಮಗುರಿಯಾಗಿಸಿಕೊ.
ಹಿಮಾಗ್ನಿಗೋಪಸದೃಶೋ ರಾಜಾ ಭವತಿ ಕಶ್ಚನ |
ಲಾಂಗಲಾಶನಿಕಲ್ಪೋ ವಾ ಭವತ್ಯನ್ಯಃ ಪರಂತಪ ||21||
ಪರಂತಪ! ಒಬ್ಬ ರಾಜನು ಹಿಮದಂತೆ (ಶಾಂತನು) ಅಗ್ನಿಯಂತೆ (ಕ್ರೂರನು) ಗೋಪಾಲಕನಂತೆ (ಸರ್ವೋಪಕಾರಿಯೂ) ಇರುತ್ತಾನೆ. ಮತ್ತೊಬ್ಬ ರಾಜನು ನೇಗಿಲಿನಂತೆ (ಶತ್ರುಗಳನ್ನು ಎಳೆಯುವವನು), ಸಿಡಿಲಿನಂತೆ (ಅನಿರೀಕ್ಷಿತವಾಗಿ ಶತ್ರುಗಳ ಮೇಲೆ ಬೀಳುವವನು) ಆಗಿರುತ್ತಾನೆ.
ನ ವಿಶೇಷೇಣ ಗಂತವ್ಯಮಚಿಕಿತ್ಸ್ಯೇನ ವಾ ಪುನಃ |
ನ ಜಾತು ನಾಹಮಸ್ಮೀತಿ ಪ್ರಸಕ್ತವ್ಯಮಸಾಧುಷು ||22||
ಶಕ್ತಿಯನ್ನು ಮೀರಿ ಕಾರ್ಯಸಾಧನೆಗೆ ಹೋಗಬಾರದು. ವಿಮರ್ಶೆ ಮಾಡದೆಯೂ ಹೋಗಬಾರದು. ಆತ್ಮನಾಶವಾಗುವಂತೆ ಕೆಟ್ಟವರ ಸಂಗವನ್ನು ಮಾಡಬಾರದು.
ವಿಕರ್ಮಣಾ ತಪ್ಯಮಾನಃ ಪಾದಾತ್ ಪಾಪಸ್ಯ ಮುಚ್ಯತೇ |
ನೈತತ್ ಕಾರ್ಯಂ ಪುನರಿತಿ ದ್ವಿತೀಯಾತ್ ಪರಿಮುಚ್ಯತೇ |
ಚರಿಷ್ಯೇ ಧರ್ಮಮೇವೇತಿ ತೃತೀಯಾತ್ ಪರಿಮುಚ್ಯತೇ ||23||
ವಿರುದ್ಧ ಕರ್ಮ (ಪಾಪಕರ್ಮ)ಗಳನ್ನು ಮಾಡಿದ್ದಕ್ಕಾಗಿ ಪಶ್ಚಾತ್ತಾಪವಾದರೆ ಪಾಪದ ಕಾಲುಭಾಗದಿಂದ ಬಿಡುಗಡೆಯಾಗುತ್ತದೆ. ಇನ್ನೊಮ್ಮೆ ಇಂತಹ ಪಾಪವನ್ನು ಮಾಡುವುದಿಲ್ಲ ಎಂದು ನಿಶ್ಚಯಿಸಿದರೆ ಪಾಪದ ಎರಡನೆಯ ಪಾದದಿಂದ ಬಿಡುಗಡೆ ಆಗುತ್ತದೆ. ಇನ್ನು ಮುಂದೆ ಧರ್ಮವನ್ನೇ ಆಚರಿಸುತ್ತೇನೆ ಎಂದು ನಿಶ್ಚಯಿಸಿದವನಿಗೆ ಪಾಪದ ಮೂರನೆಯ ಪಾದದಿಂದ ಬಿಡುಗಡೆಯಾಗುತ್ತದೆ.
ಕಲ್ಯಾಣಮನುಮಂತವ್ಯಂ ಪುರುಷೇಣ ಬುಭೂಷತಾ |
ಯೇ ಸುಗಂಧೀನಿ ಸೇವಂತೇ ತಥಾಗಂಧಾ ಭವಂತಿ ತೇ |
ಯೇ ದುರ್ಗಂಧೀನಿ ಸೇವಂತೇ ತಥಾಗಂಧಾ ಭವಂತಿ ತೇ ||24||
ಸುಸ್ಥಿತಿಯಲ್ಲಿ ಇರಲು ಬಯಸುವ ಪುರುಷನು ಶುಭಕಾರ್ಯಗಳನ್ನು ಅನುಮೋದಿಸಬೇಕು. ಯಾರು ಸುಗಂಧದ್ರವ್ಯಗಳನ್ನು ಉಪಯೋಗಿಸುತ್ತಾನೋ ಅವರು ಸುಗಂಧವುಳ್ಳವರಾಗುತ್ತಾರೆ. ಯಾರು ದುರ್ಗಂಧ ಪದಾರ್ಥಗಳನು ಬಳಸುತ್ತಾರೋ ಅವರು ದುರ್ಗಂಧವುಳ್ಳವರಾಗುತ್ತಾರೆ.
ತಪಶ್ಚರ್ಯಾಪರಃ ಸದ್ಯಃ ಪಾಪಾದ್ಧಿ ಪರಿಮುಚ್ಯತೇ |
ಸಂವತ್ಸರಮುಪಾಸ್ಯಾಗ್ನಿಮಭಿಶಸ್ತಃ ಪ್ರಮುಚ್ಯತೇ |
ತ್ರೀಣಿ ವರ್ಷಾಣ್ಯುಪಾಸ್ಯಾಗ್ನಿಂ ಭ್ರೂಣಹಾ ವಿಪ್ರಮುಚ್ಯತೇ ||25||
ತಪಶ್ಚರ್ಯೆಯಲ್ಲಿ ನಿರತನಾದವನು ಬೇಗನೆ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಶಾಪಕ್ಕೊಳಗಾದವನು ಅಥವಾ ಪಾಪಿಯು ಒಂದು ವರ್ಷ ಅಗ್ನಿಯನ್ನು ಉಪಾಸನೆ ಮಾಡಿ ಅವುಗಳಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಭ್ರೂಣಹತ್ಯೆ ಮಾಡಿದವನು ಮೂರು ವರ್ಷ ಅಗ್ನಿಯ ಉಪಾಸನೆಯನ್ನು ಮಾಡಿ ಆ ಪಾಪದಿಂದ ಬಿಡುಗಡೆಯನ್ನು ಪಡೆಯುತ್ತಾನೆ.
ಯಾವತಃ ಪ್ರಾಣಿನೋ ಹನ್ಯಾತ್ ತಜ್ಜಾತೀಯಾನ್ಸ್ವಭಾವತಃ |
ಪ್ರಣೀಯಮಾನಾನುನ್ಮುಚ್ಯ ಪ್ರಾಣಹಾ ವಿಪ್ರಮುಚ್ಯತೇ ||26||
ಎಷ್ಟು ಪ್ರಾಣಿಗಳ ಹತ್ಯೆಯನ್ನು ಮಾಡಿರುತ್ತಾನೋ, ಆಯಾಯಾ ಜಾತಿಯ ಅಷ್ಟೇ ಪ್ರಾಣಿಗಳನ್ನು ಸಾಯುವ ಸ್ಥಿತಿಯಿಂದ ಬಿಡುಗಡೆ ಮಾಡಿದರೆ ಆ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಅಪಿ ವಾಪ್ಸು ನಿಮಜ್ಜೇತ ತ್ರಿರ್ಜಪನ್ನಘಮರ್ಷಣಮ್ |
ಯಥಾಶ್ವಮೇಧಾವಭೃಥಸ್ತಥಾ ತನ್ಮನುರಬ್ರವೀತ್ ||27||
ಮತ್ತು ಅಘಮರ್ಷಣಸೂಕ್ತವನ್ನು ಮೂರು ಬಾರಿ ಜಪಿಸುತ್ತಾ ನೀರಿನಲ್ಲಿ ಅವಗಾಹನ ಮಾಡುವವನು ಅಶ್ವಮೇಧದ ಅವಭೃಥವನ್ನು ಮಾಡಿದವನಿಗೆ ಸಮಾನ. ಹೀಗೆ ಮನು ಹೇಳಿದನು.
ಕ್ಷಿಪ್ರಂ ಪ್ರಣುದತೇ ಪಾಪಂ ಸತ್ಕಾರಂ ಲಭತೇ ತಥಾ |
ಅಪಿ ಚೈನಂ ಪ್ರಸೀದಂತಿ ಭೂತಾನಿ ಜಡಮೂಕವತ್ ||28||
ಈ ಅಘಮರ್ಷಣಸ್ನಾನವು ಶೀಘ್ರವಾಗಿ ಪಾಪಗಳನ್ನು ದೂರ ಮಾಡುತ್ತದೆ. ಈ ವ್ಯಕ್ತಿಯು ಸತ್ಕಾರಗಳನ್ನು ಪಡೆಯುತ್ತಾನೆ. ಜಡನಂತಿದ್ದ, ಮೂಕನಂತಿದ್ದ ಇವನ ಮೇಲೆ ಎಲ್ಲ ಭೂತಾಭಿಮಾನಿಗಳು ಪ್ರಸನ್ನರಾಗುತ್ತಾರೆ.

ಬೃಹಸ್ಪತಿಂ ದೇವಗುರುಂ ಸುರಾಸುರಾಃ
ಸಮೇತ್ಯ ಸರ್ವೇ ನೃಪತೇಽನ್ವಯುಂಜನ್ |
ಧರ್ಮೇ ಫಲಂ ವೇತ್ಥ ಕೃತೇ ಮಹರ್ಷೇ
ತಥೇತರಸ್ಮಿನ್ನರಕೇ ಪಾಪಲೋಕೇ ॥29॥
ರಾಜನೆ! ದೇವತೆಗಳು ಮತ್ತು ಅಸುರರು ದೇವಗುರು ಬೃಹಸ್ಪತ್ಯಾಚಾರ್ಯರ ಬಳಿ ಹೋಗಿ ಕೇಳಿದರು. ಮಹರ್ಷಿಗಳೇ! ಧರ್ಮಾಚರಣೆಯ ಫಲವನ್ನು ನೀವು ತಿಳಿದಿದ್ದೀರಿ. ಅಧರ್ಮದ ಫಲವನ್ನು ನರಕದಲ್ಲಿ ಅನುಭವಿಸುತ್ತಾರೆಂದು ತಿಳಿದಿರುವಿರಿ.
ಉಭೇ ತು ಯಸ್ಯ ಸುಕೃತೇ ಭವೇತಾಂ
ಕಿಂ ಸ್ವಿತ್ತಯೋಸ್ತತ್ರ ಜಯೋತ್ತರಂ ಸ್ಯಾತ್ |
ಆಚಕ್ಷ್ವ ನಃ ಕರ್ಮಫಲಂ ಮಹರ್ಷೇ
ಕಥಂ ಪಾಪಂ ನುದತೇ ಪುಣ್ಯಶೀಲಃ ॥30॥
ಯಾರು ಧರ್ಮ-ಅಧರ್ಮ ಇವೆರಡನ್ನೂ ಬಹಳ ಮಾಡಿರುತ್ತಾನೋ ಅವನಿಗೆ ಅವೆರಡರ ಫಲವೂ ಆಗುತ್ತದೆಯೇ? ಮಹರ್ಷಿಗಳೇ ನಮಗೆ ಕರ್ಮದ ಫಲವನ್ನು ಹೇಳಿರಿ. ಪುಣ್ಯಶೀಲನಾದವನ ಪಾಪವು ಹೇಗೆ ಪರಿಹಾರವಾಗುತ್ತದೆ?
ಬೃಹಸ್ಪತಿಃ
ಕೃತ್ವಾ ಪಾಪಂ ಪೂರ್ವಮಬುದ್ಧಿಪೂರ್ವಂ
ಪುಣ್ಯಾನಿ ಯಃ ಕುರುತೇ ಬುದ್ಧಿಪೂರ್ವಮ್ |
ಸ ತತ್ ಪಾಪಂ ನುದತೇ ಪುಣ್ಯಶೀಲೋ
ವಾಸೋ ಯಥಾ ಮಲಿನಂ ಕ್ಷಾರಯುಕ್ತ್ಯಾ ॥31॥
ತಿಳಿಯದೆ ಮೊದಲು ಪಾಪವನ್ನು ಮಾಡಿದವನು ಅನಂತರ ಪ್ರಜ್ಞಾ ಪೂರ್ವಕವಾಗಿ ಪುಣ್ಯಕರ್ಮಗಳನ್ನು ಮಾಡಿದರೆ, ಆ ಪುಣ್ಯಶೀಲನ ಪೂರ್ವಪಾಪಗಳು ದೂರವಾಗುತ್ತವೆ. ಕ್ಷಾರಸಂಯೋಜನೆಯಿಂದ ಬಟ್ಟೆಯ ಕೊಳೆಯು ದೂರವಾಗುವಂತೆ.
ಪಾಪಂ ಕೃತ್ವಾ ಹಿ ಮನ್ಯೇತ ನಾಹಮಸ್ಮೀತಿ ಪೂರುಷಃ |
ಚಿಕೀರ್ಷೇದೇವ ಕಲ್ಯಾಣಂ ಶ್ರದ್ದಧಾನೋನಸೂಯಕಃ ॥32॥
ಪಾಪಗಳನು ಮಾಡಿದ ಪುರುಷನು `ನಾನು ಹಾಳಾಗಿ ಹೋದೆನು` ಎಂದು ಭಾವಿಸಬೇಕು. ಅಂದರೆ, ಪಶ್ಚಾತ್ತಾಪ ಪಡಬೇಕು. ಶ್ರದ್ಧಾವಂತನಾಗಿ, ಪರರ ಗುಣಗಳಲ್ಲಿ ದೋಷವನ್ನು ತೋರಿಸದೆ ಸತ್ಕರ್ಮಗಳನ್ನು ಮಾಡಬೇಕು.
ಛಿದ್ರಾಣಿ ವಸನಸ್ಯೇವ ಸಾಧುನಾ ಸಂವೃಣೋತಿ ಸಃ |
ಯಃ ಪಾಪಂ ಪುರುಷಃ ಕೃತ್ವಾ ಕಲ್ಯಾಣಮಭಿಪದ್ಯತೇ ॥33॥
ಪಾಪಗಳನ್ನು ಮಾಡಿದ ಯಾವ ಪುರುಷನು ಸತ್ಕರ್ಮಗಳಿಂದ, ಕುಶಲ ದರ್ಜಿಯು ಬಟ್ಟೆಯ ಛಿದ್ರಗಳನ್ನು ಮುಚ್ಚುವಂತೆ, ಪಾಪಗಳನ್ನು ಮುಚ್ಚುವನೋ ಅವನು ಶ್ರೇಯಸ್ಸನ್ನು ಹೊಂದುತ್ತಾನೆ.
ಯಥಾದಿತ್ಯಃ ಪುನರುದ್ಯಂಸ್ತಮಃ ಸರ್ವಂ ವ್ಯಪೋಹತಿ |
ಕಲ್ಯಾಣಮಾಚರನ್ನೇವಂ ಸರ್ವಂ ಪಾಪಂ ವ್ಯಪೋಹತಿ ॥34॥
ಉದಯಿಸುವ ಸೂರ್ಯನು ಕತ್ತಲನ್ನು ಸಂಪೂರ್ಣವಾಗಿ ನಾಶಮಾಡುವಂತೆ ಸತ್ಕರ್ಮಗಳನ್ನು ಮಾಡುವವನು ಪಾಪಗಳನ್ನು ನಾಶ ಮಾಡುತ್ತಾನೆ.
ಭೀಷ್ಮಃ
ಏವಮುಕತ್ವ ಸ ರಾಜಾನಮಿಂದ್ರೋತೋ ಜನಮೇಜಯಮ್ |
ಯಾಜಯಾಮಾಸ ವಿಧಿವದ್ವಾಜಿಮೇಧೇನ ಶೌನಕಃ ॥35॥
ಆ ಶೌನಕವಂಶದ ಇಂದ್ರೋತನು ರಾಜ ಜನಮೇಜಯನಿಗೆ ಹೀಗೆ ಹೇಳಿ, ಅವನಿಂದ ವಿಧಿಗೆ ಅನುಗುಣವಾಗಿ ಅಶ್ವಮೇಧವನ್ನು ಮಾಡಿಸಿದನು.
ತತಃ ಸ ರಾಜಾ ವ್ಯಪನೀತಕಲ್ಮಷಃ
ಶ್ರಿಯಾ ಯುತಃ ಪ್ರಜ್ವಲಿತಾಗ್ನಿರೂಪಯಾ |
ವಿವೇಶ ರಾಜ್ಯಂ ಸ್ವಮಮಿತ್ರಕರ್ಶನೋ
ದಿವಂ ಯಥಾ ಪೂರ್ಣವಪುರ್ನಿಶಾಕರಃ ॥36॥
ಅನಂತರ ಎಲ್ಲ ಪಾಪಗಳೂ ಅವನಿಂದ ದೂರವಾಗಿ ರಾಜನು ಶುದ್ಧನಾದನು. ಪ್ರಜ್ವಲಿಸುತ್ತಿರುವ ಅಗ್ನಿಯಂತಹ ಕಾಂತಿಯು ಅವನಿಗೆ ಬಂದಿತು. ಈ ಹೊಸ ಸ್ಥಿತಿಯಲ್ಲಿ ಶತ್ರುಸಂಹಾರಿಯಾದ ರಾಜನು ತನ್ನ ರಾಜ್ಯಕ್ಕೆ ಪ್ರವೇಶಿಸಿದನು. ಪೂರ್ಣಚಂದ್ರನು ಆಕಾಶವನ್ನು ಪ್ರವೇಶಿಸುವಂತೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿಯಿತು.
* * * *
ಇಪ್ಪತ್ತೊಂದನೆಯ ಅಧ್ಯಾಯ
ಬಾಲಕನ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿದ್ದ
ಬಂಧುಜನಗಳಿಗೆ ಹದ್ದು-ನರಿಗಳ ವಿರುದ್ಧ ಮಾತುಗಳು ಕೊನೆಗೆ

ರುದ್ರದೇವರ ಆಗಮನ. ಬಾಲಕನ ಪುನರುಜ್ಜೀವನ.
ಯುಧಿಷ್ಠಿರಃ
ಕಚ್ಚಿತ್ ಪಿತಾಮಹೇನಾಸೀಚ್ಛ್ರುತಂ ವಾ ದೃಷ್ಟಮೇವ ಚ |
ಕಚ್ಚಿನ್ಮರ್ತ್ಯೋ ಮೃತೋ ರಾಜನ್ ಪುನರುಜ್ಜೀವಿತೋಭವತ್ ||1||
ಪಿತಾಮಹರಾದ ನೀವು ಮೃತ ಮನುಷ್ಯನು ಪುನಃ ಬದುಕಿದ ಘಟನೆಯನ್ನು ನೀವು ಕೇಳಿದ್ದೀರಾ? ಅಥವಾ ನೋಡಿದ್ದೀರಾ? ರಾಜನೇ! ಸತ್ತವನು ಮತ್ತೆ ಬದುಕಿಸಲ್ಪಟ್ಟನು ಎಂಬ ಸುದ್ದಿಯನ್ನು ನಂಬಲೇ?
ಭೀಷ್ಮಃ
ಶೃಣು ಪಾರ್ಥ ಯಥಾವೃತ್ತಮಿತಿಹಾಸಂ ಪುರಾತನಮ್ |
ಗೃಧ್ರಜಂಬುಕಸಂವಾದಂ ಯೋ ವೃತ್ತೋ ವೈದಿಶೇ ಪುರಾ ||2||
ಕುಂತೀಸುತ! ವೈದಿಶ ಎಂಬ ದೇಶದಲ್ಲಿ ಹಿಂದೆ ನಡೆದ ಹದ್ದು- ನರಿಗಳ ಸಂವಾದವನ್ನು ಹೇಳುತ್ತೇನೆ, ಕೇಳು.
ಕಸ್ಯಚಿದ್ ಬ್ರಾಹ್ಮಣಸ್ಯಾಸೀದ್ ದುಃಖಲಬ್ಧಃ ಸುತೋ ಮೃತಃ |
ಬಾಲ ಏವ ವಿಶಾಲಾಕ್ಷೋ ಬಾಲಗ್ರಹನಿಪೀಡಿತಃ ||3||
ಒಬ್ಬ ಬ್ರಾಹ್ಮಣ. ನಾನಾ ವ್ರತ-ನಿಯಮಗಳನ್ನು ಆಚರಿಸಿ ಒಬ್ಬ ಪುತ್ರನನ್ನು ಪಡೆದಿದ್ದನು. ಬಾಲಗ್ರಹಪೀಡಿತನಾದ ಅವನು ಬಾಲಕನಾಗಿರುವಾಗಲೇ ಸತ್ತು ಹೋದನು.
ದುಃಖಿತಾಃ ಕೇಚಿದಾದಾಯ ಬಾಲಮಪ್ರಾಪ್ತಯೌವನಮ್ |
ಕುಲಸರ್ವಸ್ವಭೂತಂ ವೈ ರುದಂತಃ ಶೋಕವಿಹ್ವಲಾಃ ||4||
ಆ ಬಾಲಕನ ಬಂಧುಗಳಲ್ಲಿ ಕೆಲವರು ತಾರುಣ್ಯವನ್ನೂ ಹೊಂದದ, ಕುಲಕ್ಕೆ ಸರ್ವಸ್ವನಾಗಿದ್ದ ಆ ಬಾಲಕನನ್ನು ಎತ್ತಿಕೊಂಡು, ಶೋಕಾಕುಲರಾಗಿ, ದುಃಖಿತರಾಗಿ ಅತ್ತರು.
ಬಾಲಂ ಮೃತಂ ಗೃಹೀತ್ವಾಥ ಶ್ಮಶಾನಾಭಿಮುಖಾಃ ಸ್ಥಿತಾಃ |
ಅಂಕೇನಾಂಕಂ ಚ ಸಂಕ್ರಮ್ಯ ರುರುದುರ್ಭೂತಲೇ ತದಾ ||5||
ಮೃತನನ್ನು ಎತ್ತಿಕೊಂಡು ಸ್ಮಶಾನದ ಕಡೆಗೆ ಹೋದರು. ಆಗ ನೆಲದ ಮೇಲೆ (ಕುಳಿತು) ತೊಡೆಯಿಂದ ತೊಡೆಗೆ ವರ್ಗಾಯಿಸಿ ಅತ್ತರು.
ಶೋಚಂತಸ್ತಸ್ಯ ಪೂರ್ವೋಕ್ತಾನ್ ಭಾಷಿತಾಂಶ್ಚಾಸಕೃತ್ ಪುನಃ |
ತಂ ಬಾಲಂ ಭೂತಲೇ ಕ್ಷಿಪ್ಯ ಪ್ರತಿಗಂತುಂ ನ ಶಕ್ನುಯುಃ ||6||
ಆ ಬಾಲಕನ ಬಾಲನುಡಿಗಳನ್ನು ಮತ್ತೆ ಮತ್ತೆ ನೆನೆಸಿಕೊಂಡು ಅತ್ತರು. ಶವವನ್ನು ಭೂಮಿಯಲ್ಲಿ ಹಾಕಿ ಹಿಂದಿರುಗಲು ಮನಸ್ಸೇ ಬರಲಿಲ್ಲ.
ತೇಷಾಂ ರುದಿತಶಬ್ದೇನ ಗೃಧ್ರೋಽಭ್ಯೇತ್ಯ ವಚೋಽಬ್ರವೀತ್ |
ಏಕಾತ್ಮಕಮಿದಂ ಲೋಕೇ ತ್ಯಕತ್ವ ಗಚ್ಛತ ಮಾಚಿರಮ್ ||7||
ಅವರು ಅಳುವಿನ ಧ್ವನಿಯನ್ನು ಕೇಳಿ ಒಂದು ಹದ್ದು ಅಲ್ಲಿಗೆ ಬಂದು ಹೇಳಿತು. ಜನನ-ಮರಣಗಳು ಎಲ್ಲರಿಗೂ ಅನ್ವಯಿಸುವ ನಿಯಮ. ಯಾರಿಗೂ ವಿನಾಯಿತಿ ಇಲ್ಲ. ಆದ್ದರಿಂದ ತಡ ಮಾಡದೆ ಈ ಮೃತದೇಹವನ್ನು ಬಿಟ್ಟು ಹೊರಟು ಹೋಗಿ.
ಇಹ ಪುಂಸಾಂ ಸಹಸ್ರಾಣಿ ಸ್ತ್ರೀಸಹಸ್ರಾಣಿ ಚೈವ ಹಿ |
ಸಮಾನೀತಾನಿ ಕಾಲೇನ ಕಿಂ ತೇ ವೈ ಜಾತ್ವಬಾಂಧವಾಃ ||8||
ಕಾಲಗತಿಯಲ್ಲಿ ಇಲ್ಲಿಗೆ ಸಾವಿರಾರು ಪುರುಷರನ್ನು ತಂದಿದ್ದಾರೆ. ಸ್ತ್ರೀಯರನ್ನು ತಂದಿದ್ದಾರೆ. ಅವರೆಲ್ಲ ಬಂಧುಗಳಲ್ಲವೇ?
ಸಂಪಶ್ಯತ ಜಗತ್ ಸರ್ವಂ ಸುಖದುಃಖೈರಧಿಷ್ಠಿತಮ್ |
ಸಂಯೋಗೋ ವಿಪ್ರಯೋಗಶ್ಚ ಪರ್ಯಾಯೇಣೋಪಲಭ್ಯತೇ ||9||
ನೋಡಿ. ಇಡೀ ಜಗತ್ತಿನಲ್ಲಿ ಸುಖ-ದುಃಖಗಳು ಇದ್ದೇ ಇವೆ. ಸಂಯೋಗ- ವಿಯೋಗಗಳು ಪರ್ಯಾಯದಿಂದ (ಒಂದಾದ ಮೇಲೆ ಒಂದು) ಒದಗಿ ಬರುತ್ತವೆ.
ಗೃಹೀತ್ವಾ ಯೇಽನುಗೃಹ್ಣಂತಿ ಅನುಯಾಂತಿ ಚ ಯೇ ಗುಣಾತ್ |
ತೇಪ್ಯಾಯುಷಃ ಪ್ರಮಾಣೇನ ತೇನ ಗಚ್ಛಂತಿ ಜಂತವಃ ||10||
ಯಾರು ಈ ಮೃತಬಾಲಕನನ್ನು ಹಿಡಿದುಕೊಂಡು ಕೃಪೆ ತೋರುತ್ತಾರೋ, ಯಾರು ಸ್ನೇಹದಿಂದಾಗಿ ಸ್ಮಶಾನದವರೆಗೆ ಹಿಂಬಾಲಿಸುತ್ತಾರೋ ಆ ಜನರೂ ತಮ್ಮ ಆಯುಷ್ಯದ ಅಳತೆಗೆ ಅನುಗುಣವಾಗಿ ಅದೇ ಮಾರ್ಗದಲ್ಲಿ ಹೋಗುತ್ತಾರೆ.
ಅಲಂ ಸ್ಥಿತ್ವಾ ಶ್ಮಶಾನೇಽಸ್ಮಿನ್ ಗೃಧ್ರಗೋಮಾಯುಸಂಕುಲೇ |
ಕೃಕಾಲಬಹುಲೇ ಘೋರೇ ಸರ್ವಪ್ರಾಣಿಭಯಂಕರೇ ||11||
ಹದ್ದು, ನರಿ, ಕೋಳಿಗಳಿಂದ ತುಂಬಿರುವ, ಎಲ್ಲ ಪ್ರಾಣಿಗಳಿಗೂ ಭಯ ಹುಟ್ಟಿಸುವ, ಘೋರವಾದ ಈ ಸ್ಮಶಾನದಲ್ಲಿ ಇದ್ದದ್ದು ಸಾಕು.
ನ ಪುನರ್ಜೀವಿತಃ ಕಶ್ಚಿತ್ ಕಾಲಧರ್ಮಮುಪಾಗತಃ |
ಪ್ರಿಯೋ ವಾ ಯದಿ ವಾ ದ್ವೇಷ್ಯಃ ಪ್ರಾಣಿನಾಂ ಗತಿರೀದೃಶೀ ||12||
ಸತ್ತವರು ಪ್ರಿಯರಾಗಲಿ, ಅಪ್ರಿಯರಾಗಲಿ, ಯಾರೂ ಪುನಃ ಬದುಕಿಲ್ಲ. ಪ್ರಾಣಧಾರಿಗಳ ಗತಿಯೇ ಹೀಗೆ.
ಸರ್ವೇಣ ಖಲು ಮರ್ತವ್ಯಂ ಮರ್ತ್ಯಲೋಕೇ ಪ್ರಸೂಯತಾ |
ಕೃತಾಂತವಿಹಿತೇ ಮಾರ್ಗೇ ಕೋ ಮೃತಂ ಜೀವಯಿಷ್ಯತಿ ||13||
ಇದು ಸಾಯುವವರ ಲೋಕ. ಹುಟ್ಟಿದವರೆಲ್ಲ ಸಾಯಲೇಬೇಕು. ಯಮನು ಏರ್ಪಡಿಸಿದ ದಾರಿಯಲ್ಲಿ ಯಾರು ಸತ್ತವನನ್ನು ಬದುಕಿಸಬಲ್ಲರು?

ದಿಶಾಂತೋಪರತೇ ಕಾಲೇ ಚಾಸ್ತಂ ಗಚ್ಛತಿ ಭಾಸ್ಕರೇ |
ಗಮ್ಯತಾಂ ಸ್ವಮಧಿಷ್ಠಾನಂ ಸುತಸ್ನೇಹಂ ವಿಸೃಜ್ಯ ವೈ ||14||
ಸೂರ್ಯನು ಅಸ್ತಂಗತನಾಗುತ್ತಿರುವಾಗ, ಎಲ್ಲ ದಿಕ್ಕುಗಳಲ್ಲಿ ಎಲ್ಲ ಚಟುವಟಿಕೆಗಳೂ ನಿಲ್ಲುವ ಕಾಲ. ಈ ಕಾಲದಲ್ಲಿ ನೀವೂ ಪುತ್ರಸ್ನೇಹವನ್ನು ಬಿಟ್ಟು ನಿಮ್ಮ ಮನೆಗಳಿಗೆ ಹೋಗಿ.
ತತೋ ಗೃಧ್ರವಚಃ ಶ್ರುತ್ವಾ ವಿಕ್ರೋಶಂತಸ್ತದಾ ನೃಪ |
ಬಾಂಧವಾಸ್ತೇಭ್ಯಗಚ್ಛಂತ ಪುತ್ರಮುತ್ಸೃಜ್ಯ ಭೂತಲೇ ||15||
ವಿನಿಶ್ಚಿತ್ಯಾಥ ಚ ತತಃ ಸಂತ್ಯಜಂತಃ ಸ್ವಮಾತ್ಮಜಮ್ |
ನಿರಾಶಾ ಜೀವಿತೇ ತಸ್ಯ ಮಾರ್ಗಮಾರುಹ್ಯ ಧಿಷ್ಠಿತಾಃ ||16||
ರಾಜನ್! ಆ ಹದ್ದಿನ ಮಾತನ್ನು ಕೇಳಿ ಆ ಬಂಧುಗಳೆಲ್ಲರೂ ಅಳುತ್ತಾ ಮಗನನ್ನು ನೆಲದಲ್ಲಿ ಬಿಟ್ಟು ಹೊರಟರು. ತಮ್ಮ ಮಗು ಪುನಃ ಬದುಕುವ ಆಶೆಯನ್ನು ಬಿಟ್ಟು, ಅವನನ್ನು ಬಿಟ್ಟು ಮನೆಯ ದಾರಿಯನ್ನು ಹಿಡಿದರು.
ಧ್ವಾಂಕ್ಷರೂಕ್ಷೇ ವಿವರ್ಣಸ್ತು ಬಿಲಾನ್ನಿಃಸೃತ್ಯ ಜಂಬುಕಃ |
ಗಚ್ಛಮಾನಾನ್ ಸ್ಮ ತಾನಾಹ ನಿರ್ಘೃಣಾಃ ಖಲು ಮಾನವಾಃ ||17||
ಕಾಗೆಯ ಶಬ್ದದಿಂದ ಭಯಂಕರವಾದ ಆ ಕಾಡಿನಲ್ಲಿ ಇದ್ದ, ವಿವಿಧವರ್ಣದ ನರಿಯೊಂದು ತನ್ನ ಗುಹೆಯಿಂದ ಹೊರಗೆ ಬಂದು ಹೋಗುತ್ತಿದ್ದ ಅವರಿಗೆ ಹೇಳಿತು. `ಮಾನವರು ದಯಾಹೀನರು` ಎಂದು.
ಆದಿತ್ಯೋಽಯಂ ಸ್ಥಿತೋ ಮೂಢಾಃ ಸ್ನೇಹಂ ಕುರುತ ಮಾ ಭಯಮ್ |
ಬಹುರೂಪೋ ಮುಹೂರ್ತಶ್ಚ ಜೀವೇತಾಪಿ ಕದಾಚನ ||18||
ಮೂಢರೆ! ಸೂರ್ಯ ಇನ್ನೂ ಇದ್ದಾನೆ. ಸ್ನೇಹವನ್ನು ತೋರಿಸಿ. ಹೆದರಬೇಡಿ. ಮುಹೂರ್ತಗಳು ಬಹುವಿಧ. ನಿಮ್ಮ ಮಗ ಬದುಕಬಹುದು.
ಯೂಯಂ ಭೂಮೌ ವಿನಿಕ್ಷಿಪ್ಯ ಪುತ್ರಸ್ನೇಹವಿನಾಕೃತಾಃ |
ಶ್ಮಶಾನೇ ಪುತ್ರಮುತ್ಸೃಜ್ಯ ಕಸ್ಮಾದ್ಗಚ್ಛಥ ನಿರ್ಘೃಣಾಃ ||19||
ನೀವು ಪುತ್ರಸ್ನೇಹರಹಿತರಾಗಿ, ದಯಾರಹಿತರಾಗಿ ಮಗನನ್ನು ಸ್ಮಶಾನದಲ್ಲಿ ನೆಲದ ಮೇಲೆ ಎಸೆದು ಏಕೆ ಹೋಗುತ್ತೀರಿ?
ನ ವೋಽಸ್ತ್ಯಸ್ಮಿನ್ ಸುತೇ ಸ್ನೇಹೋ ಬಾಲೇ ಮಧುರಭಾಷಿಣಿ |
ಯಸ್ಯ ರಾವಿತಮಾತ್ರೇಣ ಪ್ರಸಾದಮುಪಗಚ್ಛಥ ||20||
ನೀವು ಯಾರ ಧ್ವನಿ ಮಾತ್ರದಿಂದಲೇ ಪ್ರಸನ್ನರಾಗುತ್ತೀರೋ ಅಂತಹ ಮಧುರ ಭಾಷಿಯಾದ ನಿಮ್ಮ ಬಾಲಕನ ಮೇಲೆ ನಿಮಗೆ ಸ್ನೇಹವಿಲ್ಲವೇ?
ನ ಪಶ್ಯಥ ಸುತಸ್ನೇಹೋ ಯಾದೃಶಃ ಪಶುಪಕ್ಷಿಣಾಮ್ |
ನ ಯೇಷಾಂ ಧಾರಯಿತ್ವಾ ತಾನ್ ಕಶ್ಚಿದಸ್ತಿ ಫಲಾಗಮಃ ||21||
ಚತುಷ್ಪಾತ್ ಪಕ್ಷಿಕೀಟಾನಾಂ ಪ್ರಾಣಿನಾಂ ಸ್ನೇಹಸಂಗಿನಾಮ್ |
ಪರಲೋಕಗತಿಸ್ಥಾನಾಂ ಮುನಿಯಜ್ಞಕ್ರಿಯಾ ಇವ ||22||
ತೇಷಾಂ ಪುತ್ರಾಭಿರಾಮಾಣಾಮಿಹ ಲೋಕೇ ಪರತ್ರ ಚ |
ನ ಗುಣೋ ದೃಶ್ಯತೇ ಕಶ್ಚಿತ್ ಪ್ರಜಾಃ ಸಂಧಾರಯಂತಿ ಚ ||23||
ಪಶು-ಪಕ್ಷಿಗಳಿಗೆ ಯಾವ ವಿಧವಾದ ಸುತಸ್ನೇಹವಿದೆ! ನಿಮಗೆ ಕಾಣುವುದಿಲ್ಲವೆ? ಪರಲೋಕದಲ್ಲಿ ಸದ್ಗತಿಯನ್ನು ಪಡೆಯುವುದರಲ್ಲಿ ನಿರತರಾದ ಮುನಿಗಳಿಗೆ ಅವರ ಯಜ್ಞಕ್ರಿಯೆಗಳಿಂದ ಫಲವಿರುವಂತೆ, ಕೇವಲ ಸ್ನೇಹದಿಂದ ಗಾಢಸಂಗವನ್ನು ಹೊಂದುವ ನಾಲ್ಕು ಕಾಲಿನ ಪ್ರಾಣಿಗಳಿಗೆ, ಪಕ್ಷಿ, ಕೀಟಗಳಿಗೆ, ತಮ್ಮ ಸಂತಾನವನ್ನು ಪೋಷಿಸುವುದರಿಂದ ಯಾವ ಫಲವೂ ಬರುವುದಿಲ್ಲ. ಮಕ್ಕಳ ಮೇಲೆ ಪ್ರೀತಿ ಹೊಂದಿರುವ ಆ ಪ್ರಾಣಿಗಳಿಗೆ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಯಾವ ಅನುಕೂಲವೂ-ಲಾಭವೂ ಇಲ್ಲ. ಆದರೂ ಅವುಗಳು ತಮ್ಮ ಮಕ್ಕಳನ್ನು ಪೋಷಿಸುತ್ತವೆ.
ಅಪಶ್ಯತಾಂ ಪ್ರಿಯಾನ್ ಪುತ್ರಾನ್ನೈಷಾಂ ಶೋಕೋಽನುತಿಷ್ಠತಿ |
ನ ಚ ಪುಷ್ಣಂತಿ ಸಂವೃದ್ಧಾಸ್ತೇ ಮಾತಾಪಿತರೌ ಕ್ವಚಿತ್ ||24||
(ತಾವು ಬೆಳೆಸಿದ) ಪ್ರಿಯ ಪುತ್ರರು (ದೊಡ್ಡವರಾದ ಮೇಲೆ ಎಲ್ಲಿಯೋ ಹೋಗಿ ಬಿಡುತ್ತವೆ. ಆದ್ದರಿಂದ) ತಮಗೆ ಕಾಣದೆ ಇದ್ದಾಗ ಹಕ್ಕಿಗಳಿಗೆ ಶೋಕವಾಗುವುದಿಲ್ಲ. ಆ ಬೆಳೆದ ಹಕ್ಕಿಗಳು ತಮ್ಮ ತಂದೆ-ತಾಯಿಗಳನ್ನು ಪೋಷಿಸುವುದಿಲ್ಲ. (ಆದರೂ ತಂದೆ-ತಾಯಿ ಹಕ್ಕಿಗಳಿಗೆ ತಮ್ಮ ಮರಿಗಳ ಮೇಲೆ ಸ್ನೇಹವಿದೆ).
ಮಾನುಷಾಣಾಂ ಕುತಃ ಸ್ನೇಹೋ ಯೇಷಾಂ ಶೋಕೋ ಭವಿಷ್ಯತಿ |
ಇಮಂ ಕುಲಕರಂ ಪುತ್ರಂ ಕಥಂ ತ್ಯಕ್ತ್ವಾ ಗಮಿಷ್ಯಥ ||25||
ಮನುಷ್ಯರಿಗೆ ತಾವು ಬೆಳಸಿದ ಮಕ್ಕಳು ದೂರವಾದಾಗ ಶೋಕವಾಗುತ್ತದೆ. ಯಾರಿಗೆ ಭವಿಷ್ಯತ್‌ಕಾಲದಲ್ಲಿ ಮಕ್ಕಳು ಕಾಣದಿದ್ದಾಗ ಶೋಕವಾಗುತ್ತದೋ, ಅಂತಹ ಮನುಷ್ಯ ವರ್ಗಕ್ಕೆ ಸೇರಿದ ನಿಮಗೆ ಏಕೆ ಸ್ನೇಹವಿಲ್ಲ? ಕುಲೋದ್ಧಾರವನ್ನು ಮಾಡುವ ಈ ಮಗನನ್ನು ಹೇಗೆ ಬಿಟ್ಟುಹೋಗುತ್ತೀರಿ?
ಚಿರಭೂತಂ ಚ ಬಾಲಂ ಚ ಚಿರಂ ಸ್ನೇಹೇನ ಪಶ್ಯತ |
ಏವಂವಿಧಾನಿ ಹೀಷ್ಟಾನಿ ದುಸ್ತ್ಯಜಾನಿ ವಿಶೇಷತಃ ||26||
ಬಹಳ ಕಾಲಾನಂತರ ಹುಟ್ಟಿದ ಈ ಬಾಲಕನನ್ನು ಬಹಳ ಕಾಲ ಸ್ನೇಹದಿಂದ ಕಾಣಿರಿ. ವಿಶೇಷವಾಗಿ ಇಷ್ಟವಾದ ಇಂತಹ ಮಕ್ಕಳನ್ನು ತ್ಯಜಿಸುವುದು ಬಹಳ ದುಃಖಕರ.

ಕ್ಷೀಣಸ್ಯಾಥಾಭಿಯುಕ್ತಸ್ಯ ಸ್ಮಶಾನಾಭಿಮುಖಸ್ಯ ಚ |
ಬಾಂಧವಾ ಯತ್ರ ತಿಷ್ಠಂತಿ ತತ್ರಾನ್ಯೋ ನಾವತಿಷ್ಠತೇ ॥27॥
ದುರ್ಬಲನಿಗೆ, ಘಾಸಿಗೊಳಗಾದವನಿಗೆ, ಸಾಯುವ ಸ್ಥಿತಿಯಲ್ಲಿರುವವನಿಗೆ ಆಸರೆಯಾಗಿ ಬಂಧುಗಳು ನಿಲ್ಲುತ್ತಾರೆ. ಎಲ್ಲಿ ಬಂಧುಗಳು ನಿಲ್ಲಬೇಕೋ ಅಲ್ಲಿ ಬೇರೆ ಯಾರೂ ನಿಲ್ಲುವುದಿಲ್ಲ.
ಸರ್ವಸ್ಯ ದಯಿತಾಃ ಪ್ರಾಣಾಃ ಸರ್ವಃ ಸ್ನೇಹಂ ಚ ವಿಂದತಿ |
ತಿರ್ಯಗ್ಯೋನಿಷ್ವಪಿ ಸತಾಂ ಸ್ನೇಹಂ ಪಶ್ಯತ ಯಾದೃಶಮ್ ॥28॥
ಎಲ್ಲರಿಗೂ ಪ್ರಾಣಿಗಳು ಬಹಳ ಇಷ್ಟ. ಎಲ್ಲರೂ ಸ್ನೇಹವನ್ನು ಬಯಸುತ್ತಾರೆ. ಪಶು- ಪಕ್ಷಿ ಮೊದಲಾದ ಕೆಳಮಟ್ಟದ ಜನ್ಮವನ್ನು ತಾಳಿದ ಪ್ರಾಣಿಗಳಲ್ಲಿ ಕೂಡ ಎಂತಹ ಸ್ನೇಹವಿದೆ ನೀವೇ ನೋಡಿ.
ತ್ಯಕ್ಷತ್ವ ಕಥಂ ಗಚ್ಛಥೇಮಂ ಪದ್ಮಲೋಲಾಯತಾಕ್ಷಕಮ್ |
ಯಥಾ ನವೋದ್ವಾಹಕೃತಂ ಸ್ನಾನಮಾಲ್ಯವಿಭೂಷಿತಮ್ ॥29॥
ಮದುಮಗನಂತೆ ಸ್ನಾನ ಮಾಡಿ ಮಾಲೆ ಮೊದಲಾದವುಗಳಿಂದ ಅಲಂಕೃತನಾಗಿರುವ, ಕಮಲದ ಎಸಳಿನಂತಹ ಸುಂದರ ಕಣ್ಣಿರುವ ಇವನನ್ನು ಹೇಗೆ ಬಿಟ್ಟು ಹೋಗುತ್ತೀರಿ?
ಭೀಷ್ಮಃ
ಜಂಬುಕಸ್ಯ ವಚಃ ಶ್ರುತ್ವಾ ಕೃಪಣಂ ಪರಿದೇವತಃ |
ನ್ಯವರ್ತಂತ ತದಾ ಸರ್ವೇ ಶವಾರ್ಥಂ ತೇ ಸ್ಮ ಮಾನುಷಾಃ ॥30॥
ಕರುಣಾಜನಕವಾಗಿ ವಿಲಪಿಸಿದ ನರಿಯ ಮಾತನ್ನು ಕೇಳಿ ಆ ಮನುಷ್ಯರೆಲ್ಲರೂ ಆ ಶವದ ಕಡೆಗೆ ಹಿಂತಿರುಗಿದರು.
ಗೃಧ್ರಃ
ಅಹೋ ಧಿಕ್ ಸುನೃಶಂಸೇನ ಜಂಬುಕೇನಾಲ್ಪಮೇಧಸಾ |
ಕ್ಷುದ್ರೇಣೋಕ್ತಾ ಹೀನಸತ್ತ್ವ ಮಾನುಷಾಃ ಕಿಂ ನಿವರ್ತಥ ॥31॥
ಅಯ್ಯೋ! ಅನ್ಯಾಯ! ಕ್ರೂರಿ, ಮಂದಮತಿ, ಕ್ಷುದ್ರ ನರಿಯ ಮಾತನ್ನು ಕೇಳಿ ನೀವು ಸತ್ವಹೀನ (ಸತ್ವ= ಪ್ರೌಢಮನೋಬಲ. ಇದಿದ್ದವರು ಲೋಕೋತ್ತರ ಸಾಧನೆಗಳನ್ನು ಮಾಡುತ್ತಾರೆ) ಮನುಷ್ಯರು ಏಕೆ ಹಿಂತಿರುಗುತ್ತೀರಿ?
ಪಂಚಭೂತಪರಿತ್ಯಕ್ತಂ ಶೂನ್ಯಂ ಕಾಷ್ಠತ್ವಮಾಗತಮ್ |
ಕಸ್ಮಾಚ್ಛೋಚಥ ನಿಶ್ಚೇಷ್ಟಮಾತ್ಮಾನಂ ಕಿಂ ನ ಶೋಚಥ ॥32॥
ಪಂಚಭೂತಗಳಿಂದ= ಪಂಚಭೂತಾಭಿಮಾನಿ ದೇವತೆಗಳಿಂದ ಪರಿತ್ಯಜಿಸಲ್ಪಟ್ಟ, ಶೂನ್ಯ= ಸೊನ್ನೆಯಾಗಿರುವ, ಮರಗಟ್ಟಿರುವ, ನಿಶ್ಚೇಷ್ಟನಾದ ಈ ಬಾಲಕನ ಬಗ್ಗೆ ಏಕೆ ಶೋಕಪಡುತ್ತೀರಿ? ನಿಮ್ಮ ಬಗ್ಗೆಯೇ ಏಕೆ ಶೋಕಪಡುವುದಿಲ್ಲ?
ತಪಃ ಕುರುತ ವೈ ತೀವ್ರಂ ಮುಚ್ಯಧ್ವಂ ಯೇನ ಕಿಲ್ಬಿಷಾತ್ |
ತಪಸಾ ಲಭ್ಯತೇ ಸರ್ವಂ ವಿಲಾಪಃ ಕಿಂ ಕರಿಷ್ಯತಿ ॥33॥
ತೀವ್ರವಾದ ತಪಸ್ಸನ್ನು ಮಾಡಿರಿ. ಅದರಿಂದ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆಯಿರಿ. ತಪಸ್ಸಿನಿಂದ ಎಲ್ಲವೂ ಲಭಿಸುತ್ತದೆ. ಏಕೆ ವಿಲಪಿಸುತ್ತೀರಿ?
ಸ್ವನಿಷ್ಟಾನಿ ಚ ಭೋಜ್ಯಾನಿ ಜಾನೀತ ಸ್ವಂ ಸ್ವಮಾತ್ಮನಾ |
ಯೇನ ಗಚ್ಛತಿ ಲೋಕೋಽಯಂ ದತ್ತತ್ವ ಶೋಕಮನಂತಕಮ್ ॥34॥
ಉಣ್ಣಲೇಬೇಕಾದ (ಅನುಭವಿಸಲೇಬೇಕಾದ) ಅತಿ ಅನಿಷ್ಟಗಳು, ನಮ್ಮದೆ ಆಗುವ ಸಂಪತ್ತುಗಳು ನಮ್ಮಿಂದಲೇ (ನಮ್ಮ ಪೂರ್ವಕರ್ಮಗಳಿಂದಲೇ) ನಮಗೆ ಬಂದಿರುತ್ತವೆ. ತಿಳಿಯಿರಿ. ಆದ್ದರಿಂದ ಈ ಜನರು ಕೊನೆಯಿಲ್ಲದ ಶೋಕವನ್ನು ಕೊಟ್ಟು ಹೋಗುತ್ತಾರೆ.
ಧೇನುರ್ಗೌಶ್ಚ ಸುವರ್ಣಂ ಚ ಮಣಿರತ್ನಮಥಾಪಿ ಚ |
ಅಪತ್ಯಂ ಚ ತಯೋರ್ಮೂಲಂ ತಪೋಯೋಗಾಚ್ಚ ಲಭ್ಯತೇ ॥35॥
ಹಸುಗಳು, ವಿದ್ಯೆ, ಬಂಗಾರ, ಮಣಿಗಳು ಮತ್ತು ರತ್ನಗಳು, ಸಂತತಿ ಮತ್ತು ಸುಖ-ದುಃಖ ಕಾರಣವಾದ ಶರೀರ-ಇವುಗಳು ತಪಸ್ ಮತ್ತು ಪಾಪಗಳಿಂದ ಉಂಟಾಗುತ್ತವೆ.
ಯಥಾಕೃತ್ವಾ ಚ ಭೂತೇಷು ಪ್ರಾಪ್ಯತೇ ಸುಖದುಃಖತಾ |
ಗೃಹೀತ್ವಾ ಜಾಯತೇ ಜಂತುರ್ದುಃಖಾನಿ ಚ ಸುಖಾನಿ ಚ ॥36॥
ಜೀವಗಳಿಗೆ ಅವರವರು ಮಾಡಿದ ಸುಖಕರವಾದ ಅಥವಾ ದುಃಖಕರವಾದ ಕರ್ಮಗಳಿಗೆ ಅನುಗುಣವಾಗಿ ಸುಖ-ದುಃಖಗಳು ಲಭಿಸುತ್ತವೆ. ಜೀವಾತ್ಮನು ಸುಖಗಳನ್ನು-ದುಃಖಗಳನ್ನು ಜೊತೆಗಿಟ್ಟುಕೊಂಡೇ ಹುಟ್ಟುತ್ತಾನೆ.
ನ ಕರ್ಮಣಾ ಪಿತುಃ ಪುತ್ರಃ ಪಿತಾ ವಾ ಪುತ್ರಕರ್ಮಣಾ |
ಮಾರ್ಗೇಣಾನ್ಯೇನ ಗಚ್ಛಂತಿ ವಿದ್ಧಾಃ ಸುಕೃತದುಷ್ಕೃತೈಃ ॥37॥
ತಂದೆಯ ಕರ್ಮದಿಂದ ಮಗನಿಗೆ ಸುಖ-ದುಃಖಗಳು ಉಂಟಾಗುವುದಿಲ್ಲ. ಮಗನ ಕರ್ಮದಿಂದ ತಂದೆಗೆ ಸುಖ-ದುಃಖಗಳು ಉಂಟಾಗುವುದಿಲ್ಲ. ತಮ್ಮ ತಮ್ಮ ಪುಣ್ಯ- ಪಾಪಗಳ ಹೊಡೆತಕ್ಕೆ ಸಿಕ್ಕಿ ಬೇರೆ ಬೇರೆ ದಾರಿಯಲ್ಲಿ ಹೋಗುತ್ತಾರೆ.
ಧರ್ಮಂ ಚರತ ಯತ್ನೇನ ತಥಾಧರ್ಮಾನ್ನಿವರ್ತತ |
ವರ್ತಧ್ವಂ ಚ ಯಥಾಕಾಲಂ ದೈವತೇಷು ದ್ವಿಜೇಷು ಚ ॥38॥
ಪ್ರಯತ್ನ ಪಟ್ಟು ಧರ್ಮವನ್ನು ಆಚರಿಸಿರಿ. ಅಧರ್ಮದಿಂದ ದೂರ ಇರಿ. ಕಾಲಾನುಗುಣವಾಗಿ (ಯಾವ ಕಾಲದಲ್ಲಿ ಯಾವ ಅನುಷ್ಠಾನಗಳನ್ನು ಶಾಸ್ತ್ರಗಳು ತಿಳಿಸಿವೆಯೋ ಅದರಂತೆ) ದೇವತಾರಾಧನೆಯನ್ನೂ, ಬ್ರಾಹ್ಮಣಾರಾಧನೆಯನ್ನು ಮಾಡಿರಿ.

ಶೋಕಂ ತ್ಯಜತ ದೈನ್ಯಂ ಚ ಸುತಸ್ನೇಹಾನ್ನಿವರ್ತತ |
ತ್ಯಜ್ಯತಾಮಯಮಾಕಾಶೇ ತತಃ ಶೀಘ್ರಂ ನಿವರ್ತತ ॥39॥
ಶೋಕವನ್ನೂ, ದೈನ್ಯವನ್ನೂ ಬಿಡಿ. ಸುತಸ್ನೇಹವನ್ನೂ ಬಿಡಿ. ಈ ಬಾಲಕನನ್ನು ಬಯಲಿನಲ್ಲಿ ಬಿಟ್ಟು ಬಿಡಿ. ಬೇಗ ಇಲ್ಲಿಂದ ಹಿಂತಿರುಗಿರಿ.
ಯತ್ ಕರೋತಿ ಶುಭಂ ಕರ್ಮ ತಥಾಧರ್ಮಂ ಸುದಾರುಣಮ್ |
ತತ್ ಕರ್ತೈವ ಸಮಶ್ನಾತಿ ಬಾಂಧವಾನಾಂ ಕಿಮತ್ರ ಹಿ ॥40॥
ಯಾರು ಯಾವ ಶುಭಕರ್ಮವನ್ನು ಮಾಡುತ್ತಾರೋ, ಹಾಗೆಯೇ ಯಾವ ದಾರುಣ ಅಧರ್ಮವನ್ನು ಮಾಡುತ್ತಾರೋ ಅವರೇ ಅದನ್ನು ಅನುಭವಿಸುತ್ತಾರೆ. ಈ ವಿಷಯದಲ್ಲಿ ಬಾಂಧವರಿಗೆ ಏನು ಪಾತ್ರವಿದೆ? ಏನೂ ಇಲ್ಲ.
ಇಹ ತ್ಯಕ್ತ್ವಾ ನ ತಿಷ್ಠಂತಿ ಬಾಂಧವಾ ಬಾಂಧವಂ ಪ್ರಿಯಮ್ |
ಸ್ನೇಹಮುತ್ಸೃಜ್ಯ ಗಚ್ಛಂತಿ ಬಾಷ್ಪಪೂರ್ಣಾವಿಲೇಕ್ಷಣಾಃ ॥41॥
ಈ ಸ್ಮಶಾನದಲ್ಲಿ ಬಂಧುಗಳು ತಮ್ಮ ಪ್ರಿಯಬಂಧುವನ್ನು ತ್ಯಜಿಸುತ್ತಾರೆ. ತ್ಯಜಿಸಿ ಇಲ್ಲೇ ನಿಲ್ಲುವುದಿಲ್ಲ. ಸ್ನೇಹವನ್ನು ಬಿಟ್ಟು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಹೊರಟು ಹೋಗುತ್ತಾರೆ.
ಪ್ರಾಜ್ಞೋ ವಾ ಯದಿ ವಾ ಮೂರ್ಖಃ ಸಧನೋ ನಿರ್ಧನೋಽಪಿ ವಾ |
ಸರ್ವಃ ಕಾಲವಶಂ ಯಾತಿ ಶುಭಾಶುಭಸಮನ್ವಿತಃ ॥42॥
ಪ್ರಾಜ್ಞನಾಗಲಿ, ಮೂರ್ಖನಾಗಲಿ, ಧನವಂತನಾಗಲಿ, ಬಡವನಾಗಲಿ ಎಲ್ಲರೂ ತಮ್ಮ ತಮ್ಮ ಪುಣ್ಯ-ಪಾಪಗಳ ಜೊತೆಗೆ ಯಮನಿಗೆ ವಶವಾಗುತ್ತಾರೆ.
ಕಿಂ ಕರಿಷ್ಯಥ ಶೋಚಿತ್ವಾ ಮೃತಂ ಕಿಮನುಶೋಚಥ |
ಸರ್ವಸ್ಯ ಹಿ ಪ್ರಭುಃ ಕಾಲೋ ಧರ್ಮತಃ ಸಮದರ್ಶನಃ ॥43॥
ಶೋಕಪಟ್ಟು ಏನು ಮಾಡುತ್ತೀರಿ. ಸತ್ತು ಹೋದವನ ಬಗ್ಗೆ ಯಾಕೆ ಶೋಕಪಡುತ್ತೀರಿ? ಯಮನು ಎಲ್ಲರ ಪ್ರಭು. ಅವನು ಧರ್ಮದ ವಿಷಯದಲ್ಲಿ ಸಮದೃಷ್ಟಿವುಳ್ಳವನು.
ಯೌವನಸ್ಥಾಂಶ್ಚ ಬಾಲಾಂಶ್ಚ ವೃದ್ಧಾನ್ ಗರ್ಭಗತಾನಪಿ |
ಸರ್ವಾನಾವಿಶತೇ ಮೃತ್ಯುರೇವಂಭೂತಮಿದಂ ಜಗತ್ ॥44॥
ಮೃತ್ಯುವು ತರುಣರನ್ನೂ, ಬಾಲಕರನ್ನೂ, ವೃದ್ಧರನ್ನೂ, ಗರ್ಭದಲ್ಲಿದ್ದವರನ್ನೂ - ಎಲ್ಲರನ್ನೂ ಪ್ರವೇಶಿಸುತ್ತದೆ. ಈ ಜಗತ್ತು ಹೀಗೆಯೇ.

ಜಂಬುಕಃ
ಅಹೋ ಮಂದೀಕೃತಃ ಸ್ನೇಹೋ ಗೃಧ್ರೇಣೇಹಾಲ್ಪಮೇಧಸಾ |
ಪುತ್ರಸ್ನೇಹಾಭಿಭೂತಾನಾಂ ಯುಷ್ಮಾಕಂ ಶೋಚತಾಂ ಭೃಶಮ್ ॥45॥
ಪುತ್ರಸ್ನೇಹದ ಆವೇಶದಲ್ಲಿರುವ, ಬಹಳ ಶೋಕಿಸುತ್ತಿರುವ ನಿಮ್ಮ ಸ್ನೇಹವನ್ನು ಈ ಮಂದಮತಿ ಹದ್ದು ಮಂದವಾಗಿಸಿಬಿಟ್ಟಿತು. ಅಯ್ಯೋ, ಅನ್ಯಾಯ!
ಸಮ್ಯೈಃ ಸಮ್ಯಕ್ಪ್ರಯುಕ್ತೈಶ್ಚ ವಚನೈಃ ಪ್ರಶ್ರಯೋತ್ತರೈಃ |
ಯದ್ಗಚ್ಛಥ ಜಲಸ್ಥಾಯಂ ಸ್ನೇಹಮುತ್ಸೃಜ್ಯ ದುಸ್ತ್ಯಜಮ್ ॥46॥
ಚೆನ್ನಾಗಿರುವಂತೆ ಕಾಣುವ, ಪರಿಣಾಮಕಾರಿಯಾಗಿ ಹೇಳಲ್ಪಟ್ಟ, ವಿನಯಸಂಪನ್ನವಾದ ಮಾತುಗಳ ಪ್ರಭಾವಕ್ಕೆ ಒಳಗಾಗಿ ಬಿಡಲು ಅಸಾಧ್ಯವಾದ ಸ್ನೇಹವನ್ನು ಬಿಟ್ಟು ನೀರಿನ ಕಡೆಗೆ ಹೋಗುತ್ತಿದ್ದೀರಿ!
ಅಹೋ ಪುತ್ರವಿಯೋಗೇನ ಮೃತಶೂನ್ಯೋಪಸೇವನಾತ್ |
ಕ್ರೋಶತಾಂ ವೈ ಭೃಶಂ ದುಃಖಂ ವಿವತ್ಸಾನಾಂ ಗವಾಮಿವ ॥47॥
ಅಬ್ಬಾ! ಪುತ್ರ ವಿಯೋಗದಿಂದ ಸ್ಮಶಾನಕ್ಕೆ ಬಂದು ಅಳುತ್ತಿರುವವರಿಗೆ ಎಂತಹ ತೀವ್ರ ದುಃಖ! ಕರುಗಳನ್ನು ಕಳೆದುಕೊಂಡ ಹಸುಗಳ ದುಃಖದಂತೆ.
ಅದ್ಯ ಶೋಕಂ ವಿಜಾನಾಮಿ ಮಾನುಷಾಣಾಂ ಮಹೀತಲೇ |
ಸ್ನೇಹಂ ಹಿ ಕರುಣಂ ದೃಷ್ಟ್ವಾ ಮಮಾಪ್ಯಶ್ರೂಣ್ಯಥಾಗಮನ್ ॥48॥
ಈ ಭೂಮಿಯಲ್ಲಿ ಮನುಷ್ಯರ ದುಃಖ ಈಗ ಅರ್ಥವಾಗುತ್ತಿದೆ. ನಿಮ್ಮ ಕರುಣಾಜನಕವಾದ ಸ್ನೇಹವನ್ನು ನೋಡಿ ನನಗೂ ಕಣ್ಣೀರು ಬಂದಿತು.
ಯತ್ನೋ ಹಿ ಸತತಂ ಕಾರ್ಯಃ ಕೃತೋ ದೈವೇನ ಸಿಧ್ಯತಿ |
ದೈವಂ ಪುರುಷಕಾರಶ್ಚ ಕೃತಾಂತೇನೋಪಪದ್ಯತೇ ॥49॥
ಸತತ ಪ್ರಯತ್ನವನ್ನು ಮಾಡಬೇಕು. ಪ್ರಯತ್ನವು ದೈವಾನುಗ್ರಹದಿಂದ ಫಲಿಸುತ್ತದೆ. ದೈವ ಮತ್ತು ಪುರುಷ ಪ್ರಯತ್ನಗಳು ಉಪಪನ್ನವಾಗಿ ಫಲಿಸುತ್ತವೆ ಎಂದು ಪ್ರಾಜ್ಞರ ಸಿದ್ಧಾಂತ.
ಅನಿರ್ವೇದಃ ಸದಾ ಕಾರ್ಯೋ ನಿರ್ವೇದಾದ್ಧಿ ಕುತಃ ಸುಖಮ್ |
ಪ್ರಯತ್ನಾತ್ ಪ್ರಾಪ್ಯತೇ ಹ್ಯರ್ಥಃ ಕಸ್ಮಾದ್ ಗಚ್ಛಥ ನಿರ್ದಯಾಃ ॥50॥
ಎಂದೂ ಬೇಸರಿಸಬಾರದು, ಯಾವಾಗಲೂ ಹುರುಪಿನಿಂದ ಕ್ರಿಯಾಶೀಲರಾಗಿರಬೇಕು. ಬೇಸರದಿಂದ ಸುಖವಿಲ್ಲ. ಪ್ರಯತ್ನದಿಂದ ಫಲವಿದೆ. ಏಕೆ ನಿರ್ದಯರಾಗಿ ಹೋಗುತ್ತೀರಿ?
ಆತ್ಮಮಾಂಸೋಪವೃತ್ತಂ ಚ ಶರೀರಾರ್ಧಮಯೀಂ ತನುಮ್ |

ಪಿತೃಣಾಂ ವಂಶಕರ್ತಾರಂ ವನೇ ತ್ಯಕತ್ವ ಕ್ವ ಯಾಸ್ಯಥ ॥51॥
ನಿಮ್ಮದೇ ರಕ್ತ-ಮಾಂಸಗಳೊಂದಿಗೆ ಬಂದಿರುವ, ನಿಮ್ಮ ಅರ್ಧಶರೀರವೇ ಆಗಿರುವ, ಪಿತೃಗಳ ವಂಶವನ್ನು ಮುಂದುವರಿಸುವ ಇವನನ್ನು ವನದಲ್ಲಿ ಬಿಟ್ಟು ಎಲ್ಲಿಗೆ ಹೋಗುವಿರಿ?
ಅಥವಾಸ್ತಂ ಗತೇ ಸೂರ್ಯೇ ಸಂಧ್ಯಾಕಾಲ ಉಪಸ್ಥಿತೇ |
ತತೋ ನೇಷ್ಯಥ ವಾ ಪುತ್ರಮಿಹಸ್ಥಾ ವಾ ಭವಿಷ್ಯಥ॥52॥
ಅಥವಾ ಸೂರ್ಯಾಸ್ತವಾದ ಮೇಲೆ, ಸಂಧ್ಯಾಕಾಲವು ಸನ್ನಿಹಿತವಾದಾಗ ನಿಮ್ಮ ಮಗನನ್ನು ನಿಮ್ಮ ಜೊತೆಗೆ ಒಯ್ಯಿರಿ ಅಥವಾ ನೀವು ಇಲ್ಲೇ ಇರಿ.
ಗೃಧ್ರಃ
ಅದ್ಯ ವರ್ಷಸಹಸ್ರಂ ಮೇ ಸಾಗ್ರಂ ಜಾತಸ್ಯ ಮಾನುಷಾಃ |
ನ ಚ ಪಶ್ಯಾಮಿ ಜೀವಂತಂ ಮೃತಂ ಸ್ತ್ರೀಪುಂನಪುಂಸಕಮ್ ॥53॥
ಮನುಷ್ಯರೇ! ನಾನು ಹುಟ್ಟಿ ಬಂದು ಸಾವಿರ ವರ್ಷಕ್ಕಿಂತ ಹೆಚ್ಚಾಯಿತು. ಸತ್ತು ಬದುಕಿದ ಪುರುಷನನ್ನೋ, ಸ್ತ್ರೀಯನ್ನೋ, ನಪುಂಸಕನನ್ನೋ ನಾನು ನೋಡಿಲ್ಲ.
ಮೃತಾ ಗರ್ಭೇಷು ಜಾಯಂತೇ ಮ್ರಿಯಂತೇ ಜಾತಮಾತ್ರಕಾಃ |
ವಿಕ್ರಮಂತೋ ಮ್ರಿಯಂತೇ ಚ ಯೌವನಸ್ಥಾಸ್ತಥಾಪರೇ ॥54॥
ಗರ್ಭದಲ್ಲೇ ಸತ್ತು ಹುಟ್ಟುತ್ತಾರೆ. ಹುಟ್ಟಿದ ಕೂಡಲೇ ಸಾಯುತ್ತಾರೆ. ಪರಾಕ್ರಮವನ್ನು ಮೆರೆಯುತ್ತಾ ಸಾಯುತ್ತಾರೆ. ಮತ್ತೆ ಕೆಲವರು ತರುಣರಾಗಿದ್ದಾಗ ಸಾಯುತ್ತಾರೆ.
ಅನಿತ್ಯಾನೀಹ ಭಾಗ್ಯಾನಿ ಚತುಷ್ಪಾತ್ಪಕ್ಷಿಣಾಮಪಿ |
ಜಂಗಮಾಜಂಗಮಾನಾಂ ಚಾಪ್ಯಾಯುರಗ್ರೇಽವತಿಷ್ಠತೇ ॥55॥
ನಾಲ್ಕು ಕಾಲಿನ ಪ್ರಾಣಿಗಳ ಮತ್ತು ಪಕ್ಷಿಗಳ ಭಾಗ್ಯವೂ ಅನಿತ್ಯವೇ. ಎಲ್ಲ ಜಂಗಮ- ಸ್ಥಾವರಗಳಿಗೆ ಆಯುಷ್ಯವೇ ಮುಖ್ಯ.
ಇಷ್ಟದಾರವಿಯುಕ್ತಾಶ್ಚ ಪುತ್ರಶೋಕಾನ್ವಿತಾಸ್ತಥಾ |
ದಹ್ಯಮಾನಾಃ ಸ್ಮ ಶೋಕೇನ ಗೃಹಂ ಗಚ್ಛಂತಿ ನಿತ್ಯದಾ ॥56॥
ಪ್ರಿಯಜನರ ವಿಯೋಗಕ್ಕೊಳಗಾದವರು, ಪತ್ನೀವಿಯೋಗಕ್ಕೆ ಒಳಗಾದವರು, ಪುತ್ರಶೋಕಕ್ಕೆ ಒಳಗಾದವರು ಶೋಕದಿಂದ ತಪಿಸುತ್ತಾ ಮನೆಗೆ ಹೋಗುತ್ತಾರೆ. ಪ್ರತಿದಿನ ಹೀಗೆಯೇ ನಡೆಯುತ್ತಾರೆ.
ಅನಿಷ್ಟಾನಾಂ ಸಹಸ್ರಾಣಿ ತಥೇಷ್ಟಾನಾಂ ಶತಾನಿ ಚ |
ಉತ್ಸೃಜ್ಯೇಹ ಪ್ರಯಾತಾ ವೈ ಬಾಂಧವಾ ಭೃಶದುಃಖಿತಾಃ ॥57॥
ಅತ್ಯಂತ ದುಃಖಮಗ್ನರಾದ ಬಂಧುಗಳು ಸಾವಿರಾರು ಇಷ್ಟರಲ್ಲದವರನ್ನು, ನೂರಾರು ಪ್ರಿಯಜನರನ್ನು ಇಲ್ಲಿ ಬಿಟ್ಟುಹೋಗಿದ್ದಾರೆ.
ತ್ಯಜ್ಯತಾಮೇಷ ನಿಸ್ತೇಜಾಃ ಶೂನ್ಯಃ ಕಾಷ್ಠತ್ವಮಾಗತಃ |
ಅನ್ಯದೇಹವಿಷಕ್ತೋ ಹಿ ಶಾವಂ ಕಾಷ್ಠಮುಪಾಸತೇ ॥58॥
ತೇಜೋಹೀನನಾದ, ಸೊನ್ನೆಯಾಗಿರುವ, ಕಟ್ಟಿಗೆಯಂತಿರುವ ಇವನನ್ನು ಇಲ್ಲಿ ಬಿಟ್ಟುಬಿಡಿ. ಇವನು ಈಗಾಗಲೇ ಬೇರೆ ದೇಹಕ್ಕೆ ಅಂಟಿಕೊಂಡಿದ್ದಾನೆ. ನೀವು ಕಟ್ಟಿಗೆಯಂತಿರುವ ಶವದ ಹತ್ತಿರ ಇದ್ದೀರಿ.
ಭ್ರಾಂತಜೀವಸ್ಯ ವೈ ಬಾಷ್ಪಂ ಕಸ್ಮಾದ್ಧಿತ್ವಾ ನ ಗಚ್ಛಥ |
ನಿರರ್ಥಕೋ ಹ್ಯಯಂ ಸ್ನೇಹೋ ನಿರರ್ಥಶ್ಚ ಪರಿಶ್ರಮಃ ॥59॥
ಹೊರಟು ಹೋಗಿರುವ ಈ ಜೀವಕ್ಕಾಗಿ ಕಂಬನಿ ಮಿಡಿದು ನೀವೇಕೆ ಇವನನ್ನು ಬಿಟ್ಟು ಹೋಗುತ್ತಿಲ್ಲ. ನಿಮ್ಮ ಈ ಸ್ನೇಹ ನಿರರ್ಥಕ. ನಿಮ್ಮ ಪರಿಶ್ರಮ ವ್ಯರ್ಥ.
ನ ಚಕ್ಷುರ್ಭ್ಯಾಂ ನ ಕರ್ಣಾಭ್ಯಾಂ ಸಂಶೃಣೋತಿ ಸಮೀಕ್ಷತೇ |
ತಸ್ಮಾದೇನಂ ಸಮುತ್ಸೃಜ್ಯ ಸ್ವಗೃಹಾನ್ ಗಚ್ಛತಾಶು ವೈ ॥60॥
ಕಣ್ಣುಗಳಿಂದ ನೋಡುವುದಿಲ್ಲ. ಕಿವಿಗಳಿಂದ ಕೇಳುವುದಿಲ್ಲ. ಆದ್ದರಿಂದ ಇವನನು ಇಲ್ಲಿ ಬಿಟ್ಟು ಬೇಗ ಮನೆಗೆ ಹೋಗಿರಿ.
ಮೋಕ್ಷಧರ್ಮಾಶ್ರಿತೈರ್ವಾಕ್ಯೈರ್ಹೇತುಮದ್ಭಿರನಿಷ್ಠುರೈಃ |
ಮಯೋಕ್ತಾ ಗಚ್ಛತ ಕ್ಷಿಪ್ರಂ ಸ್ವಂ ಸ್ವಮೇವ ನಿವೇಶನಮ್ ॥61॥
ಮೋಕ್ಷ ಮತ್ತು ಧರ್ಮಗಳ ಸಾಧನೆಗೆ ಅನುಕೂಲವಾದ, ಯುಕ್ತಿಯುಕ್ತವಾದ, ಸೌಮ್ಯವಾದ ಮಾತುಗಳನ್ನು ಹೇಳಿದ್ದೇನೆ. ಬೇಗನೆ ನಿಮ್ಮ ನಿಮ್ಮ ಮನೆಗೆ ತೆರಳಿರಿ.
ಪ್ರಜ್ಞಾವಿಜ್ಞಾನಯುಕ್ತೇನ ಬುದ್ಧಿಸಂಜ್ಞಾಪ್ರದಾಯಿನಾ |
ವಚನಂ ಶ್ರಾವಿತಾ ನೂನಂ ಮಾನುಷಾಃ ಸನ್ನಿವರ್ತತ ॥62॥
ಪ್ರಜ್ಞಾ-ವಿಜ್ಞಾನ ಸಂಪನ್ನನಾದ, ಬುದ್ಧಿ-ವಿವೇಕಗಳನ್ನು ಕೊಡುವ ನಾನು ನಿಮಗೆ ಒಳ್ಳೆಯ ಮಾತುಗಳನ್ನು ಕೇಳಿಸಿದ್ದೇನೆ. ಮನುಷ್ಯರೇ! ಸಂದೇಹಬೇಡ, ಹಿಂತಿರುಗಿರಿ.
ಜಂಬುಕಃ
ಇಮಂ ಕನಕವರ್ಣಾಭಂ ಭೂಷಣೈಃ ಸಮಲಂಕೃತಮ್ |
ಗೃಧ್ರವಾಕ್ಯಾತ್ ಕಥಂ ಪುತ್ರಂ ತ್ಯಜಧ್ವಂ ಪಿತೃಪಿಂಡದಮ್ ॥63॥
ಬಂಗಾರದ ಬಣ್ಣ ಮತ್ತು ಕಾಂತಿಗಳನ್ನು ಹೊಂದಿರುವ, ಆಭರಣಗಳಿಂದ ಅಲಂಕೃತನಾದ, ಮುಂದೆ ಪಿತೃಗಳಿಗೆ ಪಿಂಡ ಪ್ರದಾನ ಮಾಡುವ ಮಗನನ್ನು ಹದ್ದಿನ ಮಾತನ್ನು ಕೇಳಿ ಹೇಗೆ ತ್ಯಜಿಸುವಿರಿ?

ನ ಸ್ನೇಹಸ್ಯ ವಿರೋಧೋಸ್ತಿ ವಿಲಾಪರುದಿತಸ್ಯ ವೈ |
ಮೃತಸ್ಯಾಸ್ಯ ಪರಿತ್ಯಾಗಾತ್ ತಪೋ ವೈ ಭವಿತಾ ಧ್ರುವಮ್ ॥64॥
ಸ್ನೇಹಕ್ಕೆ ತಡೆಯಿಲ್ಲ. ವಿಲಾಪ ಮತ್ತು ಅಳುವಿಗೂ ತಡೆಯಿಲ್ಲ. ಮೃತನಾದ ಇವನನ್ನು ತ್ಯಜಿಸಿದರೆ ನಿಮಗೆ ಮುಂದೆ ದುಃಖವೇ ಆಗುತ್ತದೆ. ಇದು ನಿಶ್ಚಯ.
ಶ್ರೂಯತೇ ಶಂಬುಕೇ ಶೂದ್ರೇ ಹತೇ ಬ್ರಾಹ್ಮಣದಾರಕಃ |
ಜೀವಿತೋ ಧರ್ಮಮಾಸಾದ್ಯ ರಾಮಾತ್ ಸತ್ಯಪರಾಕ್ರಮಾತ್ ॥65॥
ಸತ್ಯಪರಾಕ್ರಮನಾದ ರಾಮನಿಂದ ಧರ್ಮವನ್ನು ಅವಲಂಬಿಸಿ ಶೂದ್ರ ಶಂಬುಕನು ಕೊಲ್ಲಲ್ಪಟ್ಟ ನಂತರ, ಬ್ರಾಹ್ಮಣಕುಮಾರನು ಬದುಕಿದನು ಎಂದು ಕೇಳಿದ್ದೇವೆ.
ತಥಾ ಶ್ವೇತಸ್ಯ ರಾಜರ್ಷೇರ್ಬಾಲೋ ದಿಷ್ಟಾಂತಮಾಗತಃ |
ಶ್ವೋಽಭೂತೇ ಧರ್ಮನಿತ್ಯೇನ ಮೃತಃ ಸಂಜೀವಿತಃ ಪುನಃ ॥66॥
ಹಾಗೆಯೇ, ಶ್ವೇತ ಎಂಬ ರಾಜರ್ಷಿಯ ಬಾಲಕನು ಮೃತನಾಗಿದ್ದನು. ಧರ್ಮನಿಷ್ಠನಾದ ಒಬ್ಬ ಸಿದ್ಧಪುರುಷನು ಮರುದಿನಕ್ಕಿಂತ ಮೊದಲೇ= ಆ ದಿನವೇ (ಮರುದಿನವೇ) ಮೃತಪುತ್ರನನ್ನು ಬದುಕಿಸಿದನು.
ತಥಾ ಕಶ್ಚಿದ್ ಭವೇತ್ ಸಿದ್ಧೋ ಮುನಿರ್ವಾ ದೇವತಾಪಿ ವಾ |
ಕೃಪಣಾನಾಮನುಕ್ರೋಶಂ ಕುರ್ಯಾದ್ವೋ ರುದತಾಮಿಹ ॥67॥
ಹಾಗೆಯೇ ಯಾರಾದರೊಬ್ಬ ಸಿದ್ಧಪುರುಷನೋ, ಮುನಿಯೋ, ದೇವತೆಯೋ ಬರಬಹುದು. ಅವನು ಅಳುತ್ತಿರುವ, ಕೃಪಣರಾದ ನಿಮ್ಮ ಮೇಲೆ ದಯೆ ತೋರಬಹುದು.
ಭೀಷ್ಮಃ
ಇತ್ಯುಕ್ತಾಃ ಸನ್ನ್ಯವರ್ತಂತ ಶೋಕಾರ್ತಾಃ ಪುತ್ರವತ್ಸಲಾಃ |
ಅಂಕೇ ಶಿರಃ ಸಮಾಧಾಯ ರುರುದುರ್ಬಹುವಿಸ್ತರಮ್ ॥68॥
ಹೀಗೆ ಹೇಳಲ್ಪಟ್ಟ ಶೋಕಾರ್ತರಾದ, ಪುತ್ರವತ್ಸಲರಾದ ಆ ಜನರು ಶವದ ಬಳಿ ಹಿಂತಿರುಗಿದರು. ತೊಡೆಯ ಮೇಲೆ ಮೃತನ ತಲೆಯಿಟ್ಟುಕೊಂಡು ಬಹಳ ಅತ್ತರು.
ಗೃಧ್ರಃ
ಅಶ್ರುಪಾತಪರಿಕ್ಲಿನ್ನಃ ಪಾಣಿಸ್ಪರ್ಶನಪೀಡಿತಃ |
ಧರ್ಮರಾಜಪ್ರಯೋಗಾಚ್ಚ ದೀರ್ಘಾಂ ನಿದ್ರಾಂ ಪ್ರವೇಶಿತಃ ॥69॥
ನಿಮ್ಮ ಕಣ್ಣೀರುಗಳಿಂದ ತೊಯ್ದಿರುವ, ನಿಮ್ಮ ಪ್ರಾಣಿಸ್ಪರ್ಶದ ಹಿತಾನುಭವವನ್ನು ಹೊಂದಿರುವ ಈ ಬಾಲಕನು ಯಮಧರ್ಮರಾಜನ ಶಾಸನದಂತೆ ಚಿರನಿದ್ರೆಗೆ ಹೋಗಿದ್ದಾನೆ.
ತಪಸಾಪಿ ಹಿ ಸಂಯುಕ್ತೋ ನಕಾಲೇ ನೋಪಹನ್ಯತೇ |
ಸರ್ವಸ್ನೇಹಾವಸಾನಂ ತದಿದಂ ತತ್ ಪ್ರೇತಪತ್ತನಮ್ ॥70॥
ತಪಸ್ವಿಗಳೂ ಕೂಡ ಆಯುಷ್ಯ ಮುಗಿದಾಗ ಮರಣಕ್ಕೆ ಒಳಗಾಗುತ್ತಾರೆ. ಈ ಪ್ರೇತ ಪಟ್ಟಣವು (ಸ್ಮಶಾನವು) ಎಲ್ಲ ಸ್ನೇಹಗಳೂ ಕೊನೆಯಾಗುವ ತಾಣ.
ಬಾಲವೃದ್ಧಸಹಸ್ರಾಣಿ ಸದಾ ಸಂತ್ಯಜ್ಯ ಬಾಂಧವಾಃ |
ದಿನಾನಿ ಚೈವ ರಾತ್ರೀಶ್ಚ ದುಃಖಂ ತಿಷ್ಠಂತಿ ಭೂತಲೇ ॥71॥
ಸಾವಿರಾರು ಬಾಲಕರನ್ನು- ವೃದ್ಧರನ್ನು ಬಂಧುಗಳು ಹಗಲು- ರಾತ್ರಿಗಳಲ್ಲಿ ಇಲ್ಲಿ ಬಿಟ್ಟು ದುಃಖಿಸುತ್ತಾರೆ. ಇದು ಭೂಲೋಕದ ಸ್ಥಿತಿ.
ಅಲಂ ನಿರ್ಬಂಧಮಾಗಮ್ಯ ಶೋಕಸ್ಯ ಪರಿವಾರಣಮ್ |
ಸಂಪ್ರತ್ಯಯಕೃತೋಽಪ್ಯಸ್ಯ ಪುನರದ್ಯೇಹ ಜೀವಿತಮ್ ॥72॥
ಈ ನಿರ್ಬಂಧ ಸಾಕು. ಶೋಕದ ಪರಿಹಾರವನ್ನು ಮಾಡಿಕೊಳ್ಳಿ. ಈ ನರಿ ಎಷ್ಟೇ ನಂಬಿಕೆಯನ್ನು ಹುಟ್ಟಿಸಿದರೂ ಈ ದಿನ ಇವನ ಪುನರುಜ್ಜೀವನವು ಆಗುವುದಿಲ್ಲ.
ನೈಷ ಜಂಬುಕವಾಕ್ಯೇನ ಪುನಃ ಪ್ರಾಪ್ಸ್ಯತಿ ಜೀವಿತಮ್ |
ಭೂತಸ್ಯೋತ್ಸೃಷ್ಟದೇಹಸ್ಯ ಪುನರ್ದೇಹೋ ನ ವಿದ್ಯತೇ ॥73॥
ನರಿಯ ಮಾತಿನಿಂದ ಈ ಬಾಲಕ ಮತ್ತೆ ಬದುಕುವುದಿಲ್ಲ. ದೇಹವನ್ನು ಬಿಟ್ಟ ಚೇತನಕ್ಕೆ ಪುನಃ ಅದೇ ದೇಹದಲ್ಲಿ ಪ್ರವೇಶವಿಲ್ಲ.
ನ ವೈ ಮೂರ್ತಿಪ್ರದಾನೇನ ನ ಜಂಬುಕಶತೈರಪಿ |
ಶಕ್ಯೋ ಜೀವಯಿತುಂ ಹ್ಯೇಷ ಬಾಲೋ ವರ್ಷಶತೈರಪಿ ॥74॥
ನೂರಾರು ನರಿಗಳು ಒಟ್ಟಾಗಿ ನೂರಾರು ವರ್ಷ ಪ್ರಯತ್ನಿಸಿದರೂ ಇವನಿಗೆ ದೇಹವನ್ನು ಕೊಟ್ಟು ಬದುಕಿಸಲು ಆಗುವುದಿಲ್ಲ.
ಅಪಿ ರುದ್ರಃ ಕುಮಾರೋ ವಾ ಬ್ರಹ್ಮಾ ವಾ ವಿಷ್ಣುರೇವ ವಾ |
ವರಮಸ್ಮೈ ಪ್ರಯಚ್ಛೇಯುಸ್ತತೋ ಜೀವೇದಯಂ ಶಿಶುಃ ॥75॥
ರುದ್ರದೇವರು, ಷಣ್ಮುಖ, ಚತುರ್ಮುಖ ಬ್ರಹ್ಮ, ವಿಷ್ಣು- ಇವರಲ್ಲಿ ಯಾರಾದರೂ ವರವನ್ನು ಕೊಟ್ಟರೆ, ಆ ವರಬಲದಿಂದ ಈ ಶಿಶುವು ಬದುಕಬಹುದು.
ನ ಚ ಬಾಷ್ಪವಿಮೋಕ್ಷೇಣ ನ ಚಾಶ್ವಾಸಕೃತೇನ ವೈ |
ನ ದೀರ್ಘರುದಿತೇನೇಹ ಪುನರ್ಜೀವೋ ಭವಿಷ್ಯತಿ ॥76॥
ಕಣ್ಣೀರು ಹಾಕುವುದರಿಂದ ಈ ಶಿಶುವಿಗೆ ಪುನಃ ಜೀವ ಬರುವುದಿಲ್ಲ. ಆಶ್ವಾಸನೆಯಿಂದ ಬರುವುದಿಲ್ಲ. ದೀರ್ಘರೋದನದಿಂದಲೂ

ಬರುವುದಿಲ್ಲ.
ಅಹಂ ಚ ಕ್ರೋಷ್ಟುಕಶ್ಚೈವ ಯೂಯಂ ಚೈವಾಸ್ಯ ಬಾಂಧವಾಃ |
ಧರ್ಮಾಧರ್ಮೌ ಗೃಹೀತ್ವೇಹ ಸರ್ವೇ ವರ್ತಾಮಹೇಧ್ವನಿ ॥77॥
ನಾನು, ಈ ನರಿ, ಈ ಶಿಶುವಿನ ಬಂಧುಗಳಾದ ನೀವು - ಎಲ್ಲರೂ ಅವರವರ ಧರ್ಮ-ಅಧರ್ಮಗಳನ್ನು (ಪುಣ್ಯ-ಪಾಪಗಳನ್ನು) ಹಿಡಿದುಕೊಂಡೇ (ಅವುಗಳ ಫಲವನ್ನು ಅನುಭವಿಸುತ್ತಲೇ) ಜೀವನ ಮಾರ್ಗದಲ್ಲಿ ಇದ್ದೇವೆ.
ಅಪ್ರಿಯಂ ಪರುಷಂ ಚಾಪಿ ಪರದ್ರೋಹಂ ಪರಸ್ತ್ರಿಯಮ್ |
ಅಧರ್ಮಮನೃತಂ ಚೈವ ದೂರಾತ್ ಪ್ರಾಜ್ಞೋ ನಿವರ್ತಯೇತ್ ॥78॥
ಅಪ್ರಿಯ ನಡವಳಿಕೆ, ನಿಷ್ಠುರ ಮಾತು, ಪರದ್ರೋಹ, ಪರಸ್ತ್ರೀ, ಅಧರ್ಮ, ಸುಳ್ಳು- ಇವುಗಳನ್ನು ಪ್ರಾಜ್ಞನು ಸರ್ವಥಾ ದೂರವಿರಿಸಬೇಕು.
ಸತ್ಯಂ ಧರ್ಮಂ ಶುಭಂ ನ್ಯಾಯ್ಯಂ ಪ್ರಾಣಿನಾಂ ಮಹತೀಂ ದಯಾಮ್|
ಅಜಿಹ್ಮತ್ವಮಶಾಠ್ಯಂ ಚ ಯತ್ನತಃ ಪರಿಮಾರ್ಗತ ॥79॥
ಸತ್ಯ, ಧರ್ಮ, ಶುಭ, ನ್ಯಾಯ, ಪ್ರಾಣಿಗಳ ಮೇಲೆ ದೊಡ್ಡ ಪ್ರಮಾಣದ ದಯೆ, ಅಕುಟಿಲತೆ, ಶಾಠ್ಯಹೀನತೆ - ಇವುಗಳನ್ನು ಪ್ರಯತ್ನ ಪೂರ್ವಕವಾಗಿ ಅನುಸರಿಸಿರಿ.
ಮಾತರಂ ಪಿತರಂ ಚೈವ ಬಾಂಧವಾನ್ ಸುಹೃದಸ್ತಥಾ |
ಜೀವತೋ ಯೇ ನ ಪಶ್ಯಂತಿ ತೇಷಾಂ ಧರ್ಮವಿಪರ್ಯಯಃ ॥80॥
ತಾಯಿ, ತಂದೆ, ಬಂಧುಗಳು, ಸ್ನೇಹಿತರು- ಇವರನ್ನು, ಇವರು ಬದುಕಿದ್ದಾಗ, ಯಾರು ಆದರಿಸುವುದಿಲ್ಲವೋ ಅವರಿಗೆ ಪಾಪವೇ ಅಂಟಿಕೊಳ್ಳುತ್ತದೆ.
ಯೋ ನ ಪಶ್ಯತಿ ಚಕ್ಷುರ್ಭ್ಯಾಂ ನೇಂಗತೇ ಚ ಕಥಂಚನ |
ತಸ್ಯ ನಿಷ್ಠಾವಸಾನಾಂತೇ ರುದಂತಃ ಕಿಂ ಕರಿಷ್ಯಥ ॥81॥
ಯಾರು ಕಣ್ಣುಗಳಿಂದ ನೋಡುವುದಿಲ್ಲವೋ ಯಾರಲ್ಲಿ ಯಾವ ಚಲನೆಯೂ ಇಲ್ಲವೋ, ಅವನ ಮರಣವಾಗಿರುವುದು ನಿಶ್ಚಯ. ಅವಸಾನವೂ ನಿಶ್ಚಯವಾಗಿರುವಾಗ ಅಳುತ್ತಾ ಏನು ಮಾಡುತ್ತೀರಿ.
ಭೀಷ್ಮಃ
ಇತ್ಯುಕ್ತಾಸ್ತಂ ಸುತಂ ತ್ಯಕ್ತ್ವಾ ಭೂಮೌ ಶೋಕಪರಿಪ್ಲುತಾಃ |
ದಹ್ಯಮಾನಾಃ ಸುತಸ್ನೇಹಾತ್ ಪ್ರಯಯುರ್ಬಾಂಧವಾ ಗೃಹಾನ್ ॥82॥
ಹೀಗೆ ಹೇಳಲ್ಪಟ್ಟ, ಶೋಕದಲ್ಲಿ ಮುಳುಗಿದ್ದ ಆ ಬಾಂಧವರು ಆ ಮಗನನ್ನು ಅಲ್ಲೇ ಭೂಮಿಯಲ್ಲಿ ಬಿಟ್ಟು, ಸುತಸ್ನೇಹದಿಂದ ಬೇಯುತ್ತಾ ಮನೆಯ ಕಡೆಗೆ ಹೊರಟರು.
ಜಂಬುಕಃ
ದಾರುಣೋ ಮರ್ತ್ಯಲೋಕೋಽಯಂ ಸರ್ವಪ್ರಾಣಿವಿನಾಶನಃ |
ಇಷ್ಟಬಂಧುವಿಯೋಗಶ್ಚ ತಥೈವಾಲ್ಪಂ ಚ ಜೀವಿತಮ್ ॥83॥
ಬಹ್ವಲೀಕಮಸತ್ಯಂ ಚ ಪ್ರತಿವಾದಾಪ್ರಿಯಂವದಮ್ |
ಇಮಂ ಪ್ರೇಕ್ಷ್ಯ ಪುನರ್ಭಾವಂ ದುಃಖಶೋಕಾಭಿವರ್ಧನಮ್ ॥84॥
ನ ಮೇ ಮಾನುಷಲೋಕೋಽಯಂ ಮುಹೂರ್ತಮಪಿ ರೋಚತೇ |
ಅಹೋ ಧಿಗ್ಗೃಧ್ರವಾಕ್ಯೇನ ಸನ್ನಿವರ್ತಥ ಮಾನುಷಾಃ ॥85॥
ಈ ಮನುಷ್ಯ ಸಮುದಾಯ ದಾರುಣ. ಇಲ್ಲಿ ಎಲ್ಲ ಪ್ರಾಣಧಾರಿಗಳೂ ನಾಶವಾಗುತ್ತಾರೆ. ಇಷ್ಟ ಬಂಧುಗಳ ವಿಯೋಗವಾಗುತ್ತದೆ. ಇಲ್ಲಿ ಆಯುಷ್ಯವೂ ಕಡಿಮೆ. ಇಲ್ಲಿ ಬಹಳ ಸುಳ್ಳು. ಬಹಳ ಅಸತ್ಯ. ಎದುರುತ್ತರ ಅಪ್ರಿಯವಚನಗಳು. ದುಃಖ- ಶೋಕಗಳನ್ನು ಹೆಚ್ಚಿಸುವ ಈ ಸ್ಥಿತಿಯನ್ನು ನೋಡಿ ನನಗೆ ಈ ಮನುಷ್ಯಲೋಕವು ಸ್ವಲ್ಪವೂ ಇಷ್ಟವಾಗುತ್ತಿಲ್ಲ. ಸ್ವಲ್ಪ ಹೊತ್ತು ಕೂಡ ಇಷ್ಟವಾಗುತ್ತಿಲ್ಲ. ಅಯ್ಯೋ! ಅನ್ಯಾಯ! ಮನುಷ್ಯರೇ! ಹದ್ದಿನ ಮಾತು ಕೇಳಿ ಹಿಂತಿರುಗುತ್ತಿದ್ದೀರಿ!
ಪ್ರದೀಪ್ತಾಃ ಪುತ್ರಶೋಕೇನ ಯಥೈವಾಬುದ್ಧಯಸ್ತಥಾ |
ಕಥಂ ಗಚ್ಛಥ ಸಸ್ನೇಹಾಃ ಸುತಸ್ನೇಹಂ ವಿಸೃಜ್ಯ ಚ |
ಶ್ರುತ್ವಾ ಗೃಧ್ರಸ್ಯ ವಚನಂ ಪಾಪಸ್ಯೇಹಾಕೃತಾತ್ಮನಃ ॥86॥
ಪುತ್ರಶೋಕದ ಜ್ವಾಲೆಯಲ್ಲಿ ಸುಟ್ಟು ಹೋಗಿರುವ, ಸ್ನೇಹಮಯರಾದ ನೀವು, ಪಾಪಿಯಾದ, ಅಶುದ್ಧ ಬುದ್ಧಿಯ ಹದ್ದಿನ ಮಾತನ್ನು ಕೇಳಿ ಸುತಸ್ನೇಹವನ್ನು ಬಿಟ್ಟು ಹೇಗೆ ಹೊರಟು ಹೋಗುತ್ತೀರಿ?
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ |
ಸುಖದುಃಖಾನ್ವಿತೇ ಲೋಕೇ ನೇಹಾಸ್ತ್ಯೇಕಮನಂತಕಮ್ ॥87॥
ಸುಖದ ಅನಂತರ ದುಃಖ. ದುಃಖದ ಅನಂತರ ಸುಖ. ಸುಖ-ದುಃಖಗಳೆರಡೂ ಇರುವ ಈ ಲೋಕದಲ್ಲಿ ಯಾವುದೇ ಒಂದು ಶಾಶ್ವತವಲ್ಲ.
ಇಮಂ ಕ್ಷಿತಿತಲೇ ನ್ಯಸ್ಯ ಬಾಲಂ ರೂಪಸಮನ್ವಿತಮ್ |
ಕುಲಶೋಭಾಕರಂ ಮೂಢಾಃ ಪುತ್ರಂ ತ್ಯಕ್ತ್ವಾ ಕ್ವ ಯಾಸ್ಯಥ ॥88॥
ಮೂಢರೇ! ರೂಪಸಂಪನ್ನನಾದ, ಕುಲಕ್ಕೆ ಶೋಭಾಕರನಾದ ಈ ಬಾಲಕ ಪುತ್ರನನ್ನು ಭೂಮಿಯಲ್ಲಿ ಬಿಟ್ಟು ಎಲ್ಲಿಗೆ ಹೋಗುತ್ತೀರಿ?
ರೂಪಯೌವನಸಂಪನ್ನಂ ದ್ಯೋತಮಾನಮಿವ ಶ್ರಿಯಾ |

ಜೀವಂತಮೇನಂ ಪಶ್ಯಾಮಿ ಮನಸಾ ನಾತ್ರ ಸಂಶಯಃ ॥89॥
ಇವನು ಬದುಕಿ, ರೂಪ-ಯೌವನ ಸಂಪನ್ನನಾಗಿ, ಕಾಂತಿಯಿಂದ ಬೆಳಗುವವನಂತೆ ನನ್ನ ಮನಸ್ಸಿಗೆ ಕಾಣುತ್ತಿದೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.
ವಿನಾಶಶ್ಚಾಪ್ಯನರ್ಹೋಽಸ್ಯ ಸುಖಂ ಪ್ರಾಪ್ಸ್ಯಥ ಮಾನುಷಾಃ |
ಪುತ್ರಶೋಕಾಗ್ನಿದಗ್ಧಾನಾಂ ಮೃತಮಪ್ಯದ್ಯ ನ ಕ್ಷಮಮ್ ॥90॥
ಇವನ ವಿನಾಶ ನ್ಯಾಯವಾದುದಲ್ಲ. ಮನುಷ್ಯರೇ ನಿಮಗೆ ಸುಖವು ಲಭಿಸುತ್ತದೆ. ನೀವು ಪುತ್ರಶೋಕಾಗ್ನಿಯಿಂದ ಸುಟ್ಟುಹೋಗಿದ್ದೀರಿ. ಈ ಮರಣ ಸರಿಯಲ್ಲ.
ದುಃಖಸಂಭಾವನಾಂ ಕೃತ್ವಾ ಧಾರಯಿತ್ವಾ ಸ್ವಯಂ ಸುಖಮ್ |
ತ್ಯಕ್ತ್ವಾ ಗಮಿಷ್ಯಥ ಕ್ವಾದ್ಯ ಸಮುತ್ಸೃಜ್ಯಾಲ್ಪಬುದ್ಧಿವತ್ ॥91॥
ದುಃಖದ ತೀವ್ರ ಭಾವನೆಯನ್ನು ಮಾಡಿಕೊಂಡು, ಆದರೆ ಸುಖವೇ ಆಗಲಿ (ಬಾಲಕನು ಬದುಕಲಿ) ಎಂಬ ಭಾವನೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಅಲ್ಪ ಮತಿಯ ಜನರಂತೆ, ಇವನನ್ನು ಬಿಟ್ಟು ಎಲ್ಲಿಗೆ ಹೋಗುತ್ತೀರಿ?
ಭೀಷ್ಮಃ
ತಥಾ ಧರ್ಮವಿರೋಧೇನ ಪ್ರಿಯಮಿಥ್ಯಾಭಿಧಾಯಿನಾ |
ಸ್ಮಶಾನವಾಸಿನಾ ನಿತ್ಯಂ ರತಿಂ ಮೃಗಯತಾ ತದಾ ॥92॥
ತತೋ ಮಧ್ಯಸ್ಥತಾಂ ನೀತಾ ವಚನೈರಮೃತೋಪಮೈಃ |
ಜಂಬುಕೇನ ಸ್ವಕಾರ್ಯಾರ್ಥಂ ಬಾಂಧವಾಸ್ತಸ್ಯ ಧಿಷ್ಠಿತಾಃ ॥93॥
ಹಾಗೆ (ಹಿಂದಿನ ಶ್ಲೋಕಗಳಲ್ಲಿ ಹೇಳಿರುವಂತೆ) ಧರ್ಮ ವಿರೋಧಿಯಾದ, ಪ್ರಿಯವಾದ ಸುಳ್ಳನ್ನು ಚಿಂತಿಸುವ, ನಿತ್ಯವೂ ಸ್ಮಶಾನವಾಸಿಯಾದ, ಅಲ್ಲೇ ಸುಖವನ್ನು ಹುಡುಕಿಕೊಳ್ಳುವ ನರಿಯ ಅಮೃತದಂತಹ ಮಾತುಗಳಿಂದ ಮಧ್ಯಸ್ಥ ಸ್ಥಿತಿಗೆ ಹೋದ ಆ ಬಾಂಧವರು ತಮ್ಮ ಕೆಲಸವು ಆಗುವುದೇನೋ ಎಂಬ ನಿರೀಕ್ಷೆಯಿಂದ ಅಲ್ಲೇ ನಿಂತರು.
ಗೃಧ್ರಃ
ಅಯಂ ಪ್ರೇತಸಮಾಕೀರ್ಣೋ ಯಕ್ಷರಾಕ್ಷಸಸೇವಿತಃ |
ದಾರುಣಃ ಕಾನನೋದ್ದೇಶಃ ಕೌಶಿಕೈರಭಿನಾದಿತಃ ॥94॥
ಭೀಮಃ ಸುಘೋರಶ್ಚ ತಥಾ ನೀಲಮೇಘಸಮಪ್ರಭಃ |
ಅಸ್ಮಿನ್ಶವಂ ಪರಿತ್ಯಜ್ಯ ಪ್ರೇತಕಾರ್ಯಾಣ್ಯುಪಾಸತ ॥95॥
ಈ ಸ್ಥಳ ಪ್ರೇತಗಳಿಂದ ತುಂಬಿದೆ. ಯಕ್ಷರೂ, ರಾಕ್ಷಸರೂ ಇಲ್ಲಿದ್ದಾರೆ. ಇದು ದಾರುಣ ಕಾಡು ಪ್ರದೇಶ. ಇಲ್ಲಿ ಎಲ್ಲೆಲ್ಲೂ ಭಯಂಕರವಾದ ಘೋರವಾದ ಗೂಬೆಗಳ ಧ್ವನಿ. ಇಲ್ಲಿ ಕಪ್ಪು ಮೋಡದ ಪ್ರಭೆ (ಬರೀ ಕತ್ತಲು). ಇಲ್ಲಿ ಶವವನ್ನು ಬಿಟ್ಟು ಸತ್ತವರಿಗೆ ಮಾಡಬೇಕಾದ ಕ್ರಿಯೆಗಳಲ್ಲಿ ತೊಡಗಿರಿ.
ಭಾನುರ್ಯಾವನ್ನ ಯಾತ್ಯಸ್ತಂ ಯಾವಚ್ಚ ವಿಮಲಾ ದಿಶಃ |
ತಾವದೇನಂ ಪರಿತ್ಯಜ್ಯ ಪ್ರೇತಕಾರ್ಯಾಣ್ಯುಪಾಸತ ॥96॥
ಸೂರ್ಯಾಸ್ತವಾಗುವುದಕ್ಕೆ ಮೊದಲೇ, ದಿಕ್ಕುಗಳು ವಿಮಲವಾಗಿರುವಾಗಲೇ ಇವನನ್ನು ಬಿಟ್ಟು ಸತ್ತವರಿಗೆ ಮಾಡಬೇಕಾದ ಕ್ರಿಯೆಗಳಲ್ಲಿ ತೊಡಗಿರಿ.
ನದಂತಿ ಪರುಷಂ ಶ್ಯೇನಾಃ ಶಿವಾಃ ಕ್ರೋಶಂತಿ ದಾರುಣಾಃ |
ಮೃಗೇಂದ್ರಾಃ ಪ್ರತಿನಂದಂತಿ ರವಿರಸ್ತಂ ಚ ಗಚ್ಛತಿ ॥97॥
ಇಲ್ಲಿ ಗಿಡುಗಗಳು ಕಠೋರವಾಗಿ ಕೂಗುತ್ತವೆ. ನರಿಗಳು ದಾರುಣವಾಗಿ ಕೂಗುತ್ತವೆ. ಸಿಂಹಗಳು ಪ್ರತಿಯಾಗಿ ಕೂಗುತ್ತವೆ. ಸೂರ್ಯನು ಅಸ್ತನಾಗುತ್ತಿದ್ದಾನೆ.
ಚಿತಾಧೂಮೇನ ನೀಲೇನ ಸಂರಜ್ಯಂತೇ ಚ ಪಾದಪಾಃ |
ಶ್ಮಶಾನೇ ಚ ನಿರಾಹಾರಾಃ ಪ್ರತಿನಂದಂತಿ ದೇಹಿನಃ ॥98॥
ಮರಗಳಿಗೆ ಕಪ್ಪು ಚಿತಾಧೂಮವು ಬಳಿದುಕೊಂಡಿದೆ. ಸ್ಮಶಾನದಲ್ಲಿ ಆಹಾರವಿಲ್ಲದ ಪ್ರಾಣಿಗಳು (ಪರಸ್ಪರ) ಎದುರು ಕೂಗುತ್ತವೆ.
ಸರ್ವೇ ವಿಕ್ರಾಂತವೀರ್ಯಾಶ್ಚ ಅಸ್ಮಿನ್ ದೇಶೇ ಸುದಾರುಣಾಃ |
ಯುಷ್ಮಾನ್ ಪ್ರಧರ್ಷಯಿಷ್ಯಂತಿ ವಿಕೃತಾ ಮಾಂಸಭೋಜನಾಃ ॥99॥
ಈ ಸ್ಥಳದಲ್ಲಿರುವ ಎಲ್ಲ ಪ್ರಾಣಿಗಳೂ ಪರಾಕ್ರಮಿಗಳು, ಮಾಂಸಾಹಾರಿಗಳು. ನಾನಾ ವಿಕಾರಗಳು ಅವುಗಳಿಗೆ ಇವೆ. ಅವು ನಿಮ್ಮನ್ನು ಆಕ್ರಮಿಸಿ ಘಾಸಿಗೊಳಿಸುತ್ತವೆ.
ದೂರಾಚ್ಚಾಯಂ ವನೋದ್ದೇಶೋ ಭಯಮತ್ರ ಭವಿಷ್ಯತಿ |
ತ್ಯಜ್ಯತಾಂ ಕಾಷ್ಠಭೂತೋಽಯಂ ಮೃಷ್ಯತಾಂ ಜಾಂಬುಕಂ ವಚಃ ॥100॥
ಇಲ್ಲಿ ಭಯವಾಗುತ್ತದೆ. ಬೇಗ ಈ ವನಪ್ರದೇಶದಿಂದ ದೂರ ಹೋಗಿ. ಕಟ್ಟಿಗೆಯಾಗಿರುವ ಇವನನ್ನು ಬಿಟ್ಟುಬಿಡಿ. ನರಿಯ ಮಾತನ್ನು ಕೇಳಬೇಡಿ.
ಯದಿ ಜಂಬುಕವಾಕ್ಯಾನಿ ನಿಷ್ಫಲಾನ್ಯನೃತಾನಿ ಚ |
ಶ್ರೋಷ್ಯಥ ಭ್ರಷ್ಟವಿಜ್ಞಾನಾಸ್ತತಃ ಸರ್ವೇ ವಿನಂಕ್ಷ್ಯಥ ॥101॥
ನೀವು ಜ್ಞಾನರಹಿತರಾಗಿ, ನಿಷ್ಫಲವೂ, ಸುಳ್ಳೂ ಆದ ನರಿಯ ಮಾತುಗಳನ್ನೇ ಕೇಳಿದರೆ ಎಲ್ಲರೂ ನಾಶವಾಗುತ್ತೀರಿ.
ಜಂಬುಕಃ

ಸ್ಥೀಯತಾಂ ನೇಹ ಭೇತವ್ಯಂ ಯಾವತ್ತಪತಿ ಭಾಸ್ಕರಃ |
ತಾವದಸ್ಮಿನ್ ಸುತಸ್ನೇಹಾದನಿರ್ವೇದೇನ ವರ್ತತ ||102||
ನಿಲ್ಲಿ, ಹೆದರಬೇಡಿ. ಸೂರ್ಯನ ಬೆಳಕು ಇರುವವರೆಗೆ ಇಲ್ಲೇ, ಮಗನ ಮೇಲಿನ ಸ್ನೇಹದಿಂದ, ಬೇಸರವಿಲ್ಲದೆ ಇರಿ.
ಸ್ವೈರಂ ರುದತ ವಿಸ್ರಬ್ಧಾಃ ಸ್ವೈರಂ ಸ್ನೇಹೇನ ಪಶ್ಯತ |
ಸ್ಥೀಯತಾಂ ಯಾವದಾದಿತ್ಯಃ ಕಿಂ ವಃ ಕ್ರವ್ಯಾದಭಾಷಿತೈಃ ||103||
ಬದುಕುತ್ತಾನೆ ಎಂಬ ನಂಬಿಕೆವುಳ್ಳವರಾಗಿ. ಸಂಕೋಚವಿಲ್ಲದೆ ರೋದಿಸಿರಿ. ಸ್ನೇಹದಿಂದ ಕಾಣಿರಿ. ಸೂರ್ಯನಿರುವವರೆಗೆ ಇರಿ. ಆ ಮಾಂಸಭಕ್ಷಕನ ಮಾತಿನಿಂದ ನಿಮಗೆ ಏನೂ ಪ್ರಯೋಜನವಿಲ್ಲ.
ಯದಿ ಗೃಧ್ರಸ್ಯ ವಾಕ್ಯಾನಿ ತೀವ್ರಾಣಿ ರಭಸಾನಿ ಚ |
ಗೃಹ್ಣೀತ ಮೋಹಿತಾತ್ಮಾನಃ ಸುತೋ ವೋ ನ ಭವಿಷ್ಯತಿ ||104||
ಮೋಹಕ್ಕೊಳಗಾಗಿ, ಹದ್ದಿನ ತೀವ್ರವೂ, ರಭಸವೂ ಆದ ಮಾತುಗಳನ್ನು ಸ್ವೀಕರಿಸಿದರೆ ನಿಮ್ಮ ಮಗ ಇಲ್ಲವಾಗುತ್ತಾನೆ.
ಭೀಷ್ಮಃ
ಗೃಧ್ರೋಽನಸ್ತಮಿತೇ ತ್ವಾಹ ಗತೇಽಸ್ತಮಿತಿ ಜಂಬುಕಃ |
ಮೃತಂ ಸುತಂ ಪ್ರತಿ ಜನಾನೂಚತುಸ್ತೌ ಕ್ಷುಧಾನ್ವಿತೌ ||105||
ಸೂರ್ಯಾಸ್ತಕ್ಕಿಂತ ಮೊದಲೇ ಈ ಬಾಲಶವದ ಬಂಧುಗಳು ಹೊರಟು ಹೋಗಲಿ ಎಂದು ಹದ್ದು ಮಾತನಾಡುತ್ತದೆ. ಅಸ್ತವಾದ ಮೇಲೆ ಹೋಗಲಿ ಎಂದು ನರಿಯು ಮಾತನಾಡುತ್ತದೆ. ಹಸಿದಿದ್ದ ಆ ಗೃಧ್ರ-ಜಂಬುಕಗಳು ಮೃತ ಸುತನ ಬಗ್ಗೆ ಅವನ ಬಂಧು-ಜನಗಳಿಗೆ ತಮ್ಮ ಅನುಕೂಲಕ್ಕೆ ತಕ್ಕಂತೆ ಮಾತನಾಡಿದವು.
ಸ್ವಕಾರ್ಯದಕ್ಷೌ ರಾಜನ್ ಗೃಧ್ರೋ ಜಂಬುಕ ಏವ ಚ |
ಕ್ಷುತ್ಪಿಪಾಸಾಪರಿಶ್ರಾನ್ತೌ ಶಾಸ್ತ್ರಮಾಲಂಬ್ಯ ಜಲ್ಪತಃ ||106||
ರಾಜನೆ! ಗೃಧ್ರ ಮತ್ತು ಜಂಬುಕ- ಎರಡೂ ತಮ್ಮ ಕಾರ್ಯಸಾಧನೆಯಲ್ಲಿ ದಕ್ಷರು. ಹಸಿವೆ-ಬಾಯಾರಿಕೆಗಳಿಂದ ಬಳಲಿದ್ದಾರೆ. ಶಾಸ್ತ್ರವನ್ನೇ ಆಧರಿಸಿ ಮಾತನಾಡುತ್ತವೆ.
ತಯೋರ್ವಿಜ್ಞಾನವಿದುಷೋರ್ದ್ವಯೋರ್ಜಂಬುಕಪತ್ರಿಣೋಃ |
ವಾಕ್ಯೈರಮೃತಕಲ್ಪೈರ್ಹಿ ಪ್ರಾತಿಷ್ಠಂತ (ಪ್ರತಿಷ್ಠತ) ವ್ರಜಂತಿ ಚ ||107||
ಜ್ಞಾನಿಗಳಾದ ಆ ನರಿ-ಹದ್ದುಗಳ ಅಮೃತದಂತಹ ಮಾತುಗಳಿಂದ ಪ್ರಭಾವಿತರಾಗಿ ಹೊರಡುತ್ತಾರೆ. ಮತ್ತೆ ಬರುತ್ತಾರೆ.
ಶೋಕದೈನ್ಯಸಮಾವಿಷ್ಟಾ ರುದಂತಸ್ತಸ್ಥಿರೇ ತದಾ |
ಸ್ವಕಾರ್ಯಕುಶಲಾಭ್ಯಾಂ ತೇ ಸಂಭ್ರಾಮ್ಯಂತೇ ಹ ನೈಪುಣಾತ್ ||108||
ಶೋಕ ಮತ್ತು ದೈನ್ಯಗಳಲ್ಲಿ ಮುಳುಗಿರುವ ಅವರು ಅಳುತ್ತಾ ಅಲ್ಲೇ ನಿಂತರು. ತಮ್ಮ ಕಾರ್ಯಸಾಧನೆಯಲ್ಲಿ ಕುಶಲರಾದ ಅವೆರಡು ಪ್ರಾಣಿಗಳು ತಮ್ಮ ನೈಪುಣ್ಯದಿಂದ ಆ ಜನರಿಗೆ ಭ್ರಾಂತಿಯನ್ನುಂಟು ಮಾಡಿದವು.
ತಥಾ ತಯೋರ್ವಿವದತೋರ್ವಿಜ್ಞಾನವಿದುಷೋರ್ದ್ವಯೋಃ |
ಬಾಂಧವಾನಾಂ ಸ್ಥಿತಾನಾಂ ಚ ಉಪಾತಿಷ್ಠತ ಶಂಕರಃ ||109||
ಜ್ಞಾನಿಗಳಾದ ಅವೆರಡು ಪ್ರಾಣಿಗಳು ಹಾಗೆ ವಿರುದ್ಧವಾಗಿ ಮಾತನಾಡುತ್ತಿದ್ದಾಗ, ಸ್ಮಶಾನದಲ್ಲೇ ಇದ್ದ ಆ ಬಾಂಧವರ ಸಮೀಪಕ್ಕೆ ರುದ್ರದೇವರು ಬಂದರು.
ತತಸ್ತಾನಾಹ ಮನುಜಾನ್ವರದೋಽಸ್ಮೀತಿ ಶೂಲಭೃತ್ |
ತೇ ಪ್ರತ್ಯೂಚುರಿದಂ ವಾಕ್ಯಂ ದುಃಖಿತಾಃ ಪ್ರಣತಾಃ ಸ್ಥಿತಾಃ ||110||
ಶೂಲಧಾರಿಯಾದ ಶಂಕರನು ಆ ಮನುಜರಿಗೆ ಹೇಳಿದನು : `ನಿಮಗೆ ವರ ಕೊಡುವೆ'. ದುಃಖಿತರಾಗಿದ್ದ ಅವರು ನಮಸ್ಕರಿಸಿ ಈ ಮಾತುಗಳನ್ನು ಹೇಳಿದರು.
ಏಕಪುತ್ರವಿಹೀನಾನಾಂ ಸರ್ವೇಷಾಂ ಜೀವಿತಾರ್ಥಿನಾಮ್ |
ಪುತ್ರಸ್ಯ ನೋ ಜೀವದಾನಾಜ್ಜೀವಿತಂ ದಾತುಮರ್ಹಸಿ ||111||
ನಮಗೆ ಒಬ್ಬನೇ ಮಗ. ಅವನೂ ಈಗ ಇಲ್ಲ. ಅವನು ಬದುಕಬೇಕು ಎಂದು ನಮ್ಮೆಲ್ಲರ ಅಪೇಕ್ಷೆ. ದಯವಿಟ್ಟು ನಮ್ಮ ಮಗನಿಗೆ ಜೀವದಾನ ಮಾಡಿ ನಮಗೆ ಬದುಕನ್ನು ಕೊಡಬೇಕು ಎಂದು ನಮ್ಮ ಪ್ರಾರ್ಥನೆ.
ಏವಮುಕ್ತಃ ಸ ಭಗವಾನ್ ವಾರಿಪೂರ್ಣೇನ ಪಾಣಿನಾ |
ಜೀವಂ ತಸ್ಮೈ ಕುಮಾರಾಯ ಪ್ರಾದಾದ್ವರ್ಷಶತಾಯ ವೈ ||112||
ಹೀಗೆ ಹೇಳಲ್ಪಟ್ಟ ಭಗವಾನ್ ಶಂಕರನು ನೀರು ತುಂಬಿದ ಕೈಯಿಂದ (ಪ್ರೋಕ್ಷಿಸಿ) ಆ ಕುಮಾರನಿಗೆ ನೂರು ವರ್ಷ ಬದುಕಲು ಜೀವವನ್ನು ಕೊಟ್ಟನು.
ತಥಾ ಗೋಮಾಯುಗೃಧ್ರಾಭ್ಯಾಮದದತ್ಕ್ಷುದ್ವಿನಾಶನಮ್ |
ವರಂ ಪಿನಾಕೀ ಭಗವಾನ್ ಸರ್ವಭೂತಹಿತೇ ರತಃ ||113||
ಸರ್ವಭೂತಹಿತದಲ್ಲಿ ನಿರತನಾದ ಭಗವಾನ್ ಪಿನಾಕಿಯು ನರಿ-ಹದ್ದುಗಳಿಗೂ ಹಸಿವೆ ಪರಿಹಾರವಾಗಲಿ ಎಂದು ವರವನ್ನು ಕೊಟ್ಟನು.

ತತಃ ಪ್ರಣಮ್ಯ ತಂ ದೇವಂ ಶ್ರೇಯೋಹರ್ಷಸಮನ್ವಿತಾಃ |
ಕೃತಕೃತ್ಯಾಃ ಸುಖಂ ಹೃಷ್ಟಾಃ ಪ್ರಾತಿಷ್ಠಂತ ತದಾ ವಿಭೋ ||114||
ಸಮರ್ಥರಾಜನೆ! ಅನಂತರ ಶ್ರೇಯಸ್ಸು (ಮೃತನಿಗೆ ಜೀವಪ್ರಾಪ್ತಿ) ಮತ್ತು ಸಂತೋಷಗಳಿಂದ ಕೂಡಿದ ಅವರು ಕೃತಕೃತ್ಯರಾಗಿ,

ಹೃಷ್ಟರಾಗಿ ಅಲ್ಲಿಂದ ಹೊರಟರು.
ಅನಿರ್ವೇದೇನ ದೀರ್ಘೇಣ ನಿಶ್ಚಯೇನ ಧ್ರುವೇಣ ಚ |
ದೇವದೇವಪ್ರಸಾದಾಚ್ಚ ಕ್ಷಿಪ್ರಂ ಫಲಮವಾಪ್ಯತೇ ॥115॥
ದೀರ್ಘಕಾಲ ಶ್ರದ್ಧಾಪೂರ್ವಕ ಕ್ರಿಯಾಶೀಲತೆಯಿಂದ, ದೃಢನಿಶ್ಚಯದಿಂದ, ಮತ್ತು ದೇವೋತ್ತಮನ ಅನುಗ್ರಹದಿಂದ ಬೇಗ ಫಲವು ಲಭಿಸುತ್ತದೆ.
ಪಶ್ಯ ದೇವಸ್ಯ ಸಂಯೋಗಂ ಬಾಂಧವಾನಾಂ ಚ ನಿಶ್ಚಯಮ್ |
ಕೃಪಣಾನಾಂ ಹಿ ರುದತಾಂ ಕೃತಮಶ್ರುಪ್ರಮಾರ್ಜನಮ್ ॥116॥
ನೋಡು. ದೇವನ ಸಂಯೋಗ. ಬಾಂಧವರ ನಿಶ್ಚಯ. ಇವುಗಳಿಂದ ಕೃಪಣರಾಗಿ ಅಳುತ್ತಿದ್ದವರ ಕಣ್ಣೀರು ಅಳಿಸಲ್ಪಟ್ಟಿತು.
ಪಶ್ಯ ಚಾಲ್ಪೇನ ಕಾಲೇನ ನಿಶ್ಚಯಾನ್ವೇಷಣೇನ ಚ |
ಪ್ರಸಾದಂ ಶಂಕರಾತ್ ಪ್ರಾಪ್ಯ ದುಃಖಿತಾಃ ಸುಖಮಾಪ್ನುವನ್ ॥117॥
ನೋಡು. ನಿಶ್ಚಯದಿಂದ ಅನ್ವೇಷಣೆ ಮಾಡಿ, ಅಲ್ಪಕಾಲದಲ್ಲೇ ಶಂಕರನಿಂದ ಅನುಗ್ರಹವನ್ನು ಪಡೆದು ದುಃಖಿತರು ಸುಖವನ್ನು ಹೊಂದಿದರು.
ತೇ ವಿಸ್ಮಿತಾಃ ಪ್ರಹೃಷ್ಟಾಶ್ಚ ಪುತ್ರಸಂಜೀವನಾತ್ ಪುನಃ |
ಬಭೂವುರ್ಭರತಶ್ರೇಷ್ಠ ಪ್ರಸಾದಾಚ್ಛಂಕರಸ್ಯ ವೈ ॥118॥
ಭರತಶ್ರೇಷ್ಠನೇ! ಶಂಕರನ ಅನುಗ್ರಹದಿಂದ ಪುತ್ರನ ಸಂಜೀವನವು ಆಗಿದ್ದರಿಂದ ಅವರೆಲ್ಲರೂ ಪ್ರಹೃಷ್ಟರಾದರು. ವಿಸ್ಮಿತರಾದರು.
ತತಸ್ತೇ ತ್ವರಿತಾ ರಾಜಂಶ್ರುತ್ವಾ ಶೋಕಮಘೋದ್ಭವಮ್ |
ವಿವಿಶುಃ ಪುತ್ರಮಾದಾಯ ನಗರಂ ಹೃಷ್ಟಮಾನಸಾಃ |
ಏಷಾ ಬುದ್ಧಿಃ ಸಮಸ್ತಾನಾಂ ಚಾತುರ್ವರ್ಣ್ಯೇ ನಿದರ್ಶಿತಾ ॥119॥
ರಾಜನೇ! ಅನಂತರ ಅವರು ತಮ್ಮ ಶೋಕವು ತಮ್ಮ ಪಾಪಕರ್ಮದ ಫಲ ಎಂದು ಶಂಕರನಿಂದ ಕೇಳಿ ತಿಳಿದರು. ಸಂತುಷ್ಟ-ಮನಸ್ಸಿನಿಂದ ಮಗನನ್ನು ಕರೆದುಕೊಂಡು ತ್ವರೆಯಿಂದ ನಗರವನ್ನು ಪ್ರವೇಶಿಸಿದರು. ಈ ವಿವೇಚನೆಯು ಚತುರ್ವರ್ಣ ಸಮುದಾಯದ ಎಲ್ಲರಿಗೂ ನಿದರ್ಶನ.
ಧರ್ಮಾರ್ಥಮೋಕ್ಷಸಂಯುಕ್ತಮಿತಿಹಾಸಮಿಮಂ ಶುಭಮ್ |
ಶ್ರುತ್ವಾ ಮನುಷ್ಯಃ ಸತತಮಿಹ ಪ್ರೇತ್ಯ ಚ ಮೋದತೇ ॥120॥
ಧರ್ಮ-ಅರ್ಥ-ಮೋಕ್ಷ- ಈ ಪುರುಷಾರ್ಥಗಳ ಬಗ್ಗೆ ಬೋಧನೆಯನ್ನು ಒಳಗೊಂಡಿರುವ ಈ ಶುಭ ಇತಿಹಾಸವನ್ನು ಪದೇ ಪದೇ ಕೇಳುವ ಮನುಷ್ಯನು ಇಲ್ಲಿಯೂ ಸಂತೋಷದಿಂದ ಇರುತ್ತಾನೆ. ಮರಣಾನಂತರವೂ ಸಂತೋಷದಿಂದ ಇರುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು.
* * * *
ಇಪ್ಪತ್ತೆರಡನೆಯ ಅಧ್ಯಾಯ
ಹಿಮಾಲಯದಲ್ಲಿ ಅತಿ ದೊಡ್ಡ ಬೂರುಗದ ಮರ. ನಾರದರಿಂದ ಅದರ ವರ್ಣನೆ. ಮರದ ಮೇಲೆ ವಾಯುದೇವನ ಪ್ರೀತಿಯ ವರ್ಣನೆ. ಮರದಿಂದ ನಿರಾಕರಣೆ. ವಾಯುವಿಗಿಂತ ತಾನೇ ಹೆಚ್ಚು ಬಲಶಾಲಿ ಎಂದು ಆತ್ಮಶ್ಲಾಘನೆ. ನಾರದರಿಂದ ಮರದ ಧೋರಣೆ ಸರಿಯಲ್ಲ ಎಂದು ಕಥನ.
ಯುಧಿಷ್ಠಿರಃ
ಬಲಿನಃ ಪ್ರತ್ಯಮಿತ್ರಸ್ಯ ನಿತ್ಯಮಾಸನ್ನವರ್ತಿನಃ |
ಉಪಕಾರಾಪಕಾರಾಭ್ಯಾಂ ಸಮರ್ಥಸ್ಯೋದ್ಯತಸ್ಯ ಚ ॥1॥
ಪಿತಾಮಹ! ಬಲಶಾಲಿಯಾದ ಶತ್ರು, ಹತ್ತಿರವೇ ಇರುತ್ತಾನೆ. ಉಪಕಾರ ಮಾಡಲೂ ಸಮರ್ಥ, ಅಪಕಾರ ಮಾಡಲೂ ಸಮರ್ಥ, ಆಕ್ರಮಣಕ್ಕೆ ಸಿದ್ಧನಾಗಿರುತ್ತಾನೆ.
ಮೋಹಾದ್ ವಿಕತ್ಥನಾಮಾತ್ರೈರಸಾರೋಽಲ್ಪಬಲೋ ಲಘುಃ |
ವಾಗ್ಭಿರಪ್ರತಿರೂಪಾಭಿರಭಿದ್ರುಹ್ಯ ಪಿತಾಮಹ ॥2॥
ದುರ್ಬಲ, ಹಗುರ (ಗೌರವ ಪಡೆಯಲು- ಭಯಜನಕನಾಗಲು ಬೇಕಾದ ವ್ಯಕ್ತಿತ್ವವಿಲ್ಲದವನು). ಮೋಹದಿಂದ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವವನು. ಅನುಚಿತ ಮಾತುಗಳಿಂದ ಬಲಶಾಲಿಯನ್ನು ಕೆಣಕುತ್ತಾನೆ.
ಆತ್ಮನೋ ಬಲಮಾಸ್ಥಾಯ ಕಥಂ ವರ್ತೇತ ಮಾನವಃ |
ಆಗಚ್ಛತೋಽತಿಕ್ರುದ್ಧಸ್ಯ ತಸ್ಯೋದ್ಧರಣಕಾಮ್ಯಯಾ ॥3॥
ಬಲಶಾಲಿ ಶತ್ರುವು ಅತಿಕ್ರುದ್ಧನಾಗಿ, ದುರ್ಬಲನನ್ನು ಎತ್ತಿಹಾಕುವ ಸಂಕಲ್ಪದಿಂದ ಬರುತ್ತಾನೆ. ಇಂತಹ ಸನ್ನಿವೇಶದಲ್ಲಿ ದುರ್ಬಲ ಮನುಷ್ಯನು ತನ್ನ ಬಲವನ್ನೇ ಅವಲಂಬಿಸಿ ಹೇಗೆ ವ್ಯವಹರಿಸಬೇಕು?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಂವಾದಂ ಭರತಶ್ರೇಷ್ಠ ಶಲ್ಮಲೇಃ ಪವನಸ್ಯ ಚ ॥4॥
ಭರತಶ್ರೇಷ್ಠ! ಈ ವಿಷಯದಲ್ಲಿ ಬಹಳ ಹಿಂದೆ ನಡೆದ ಶಾಲ್ಮಲಿ ವೃಕ್ಷ (ಬೂರುಗದ ಮರ) ಮತ್ತು ವಾಯುವಿನ ಸಂವಾದವನ್ನು

ಉದಾಹರಿಸುತ್ತಾರೆ.
ಹಿಮವಂತಂ ಸಮಾಸಾದ್ಯ ಮಹಾನಾಸೀದ್ ವನಸ್ಪತಿಃ |
ವರ್ಷಪೂಗಾಭಿಸಂವೃದ್ಧಃ ಶಾಖಾಸ್ಕಂಧಪಲಾಶವಾನ್ ॥5॥
ಹಿಮಾಲಯದಲ್ಲಿ (ಹಿಮಾಲಯವನ್ನು ಆಶ್ರಯಿಸಿ) ದೊಡ್ಡ ಮರ ಇತ್ತು. ಬಹು ವರ್ಷಗಳ ಅವಧಿಯಲ್ಲಿ ಬೆಳೆದಿದ್ದ ಆ ಮರದಲ್ಲಿ ಕೊಂಬೆಗಳು, ಕಾಂಡಗಳು, ಎಲೆಗಳೂ ಸಮೃದ್ಧವಾಗಿದ್ದವು.
ತತ್ರ ಸ್ಮ ಮತ್ತಾ ಮಾತಂಗಾ ಘರ್ಮಾರ್ತಾಃ ಶ್ರಮಕರ್ಶಿತಾಃ |
ವಿಶ್ರಮಂತಿ ಮಹಾಬಾಹೋ ತಥಾನ್ಯಾ ಮೃಗಜಾತಯಃ ॥6॥
ಮಹಾಬಾಹುವೇ! ಆ ಮರದ ನೆರಳಿನಲ್ಲಿ ಬಿಸಿಲಿನ ತಾಪದಿಂದ ಬೆಂದ, ಶ್ರಮದಿಂದ ಆಯಾಸಗೊಂಡ ಮದಿಸಿದ ಆನೆಗಳು ವಿಶ್ರಮಿಸುತ್ತಿದ್ದವು. ಬೇರೆ ಪ್ರಾಣಿಗಳೂ ವಿಶ್ರಮಿಸುತ್ತಿದ್ದವು.
ನಲ್ವಮಾತ್ರಪರೀಣಾಹೋ ಘನಚ್ಛಾಯೋ ವನಸ್ಪತಿಃ |
ಶುಕಶಾರಿಕಸಂಘುಷ್ಟಃ ಫಲವಾನ್ ಪುಷ್ಪವಾನಪಿ ॥7॥
ಆ ಮರ ನಾಲ್ಕುನೂರು ಮೊಳ ವಿಸ್ತಾರವಾಗಿತ್ತು. ದಟ್ಟವಾದ ನೆರಳಿತ್ತು. ಶುಕ- ಶಾರಿಕಾ ಪಕ್ಷಿಗಳ ಕಲರವ ಮೊಳಗುತ್ತಿತ್ತು. ಫಲ ಮತ್ತು ಪುಷ್ಪಗಳು ಸಮೃದ್ಧವಾಗಿದ್ದವು.
ಸಾರ್ಥಿಕಾ ವಣಿಜಶ್ಚಾಪಿ ತಾಪಸಾಶ್ಚ ವನೌಕಸಃ |
ವಸಂತಿ ವಾಸಾನ್ ಮಾರ್ಗಸ್ಥಾಃ ಸುರಮ್ಯೇ ತರುಸತ್ತಮೇ ॥8॥
ಗುಂಪಿನಲ್ಲಿ ಪ್ರಯಾಣಿಸುವ ವರ್ತಕರು, ವನವಾಸಿಗಳಾದ ತಪಸ್ವಿಗಳು, ದಾರಿಹೋಕರು ಬಹಳ ರಮಣೀಯವಾದ, ಆ ಶ್ರೇಷ್ಠ ಮರದ ಕೆಳಗೆ ವಾಸಿಸುತ್ತಿದ್ದರು.
ತಸ್ಯ ತಾ ವಿಪುಲಾಃ ಶಾಖಾ ದೃಷ್ಟ್ವಾ ಸ್ಕಂಧಾಂಶ್ಚ ಸರ್ವತಃ |
ಅಭಿಗಮ್ಯಾಬ್ರವೀದೇನಂ ನಾರದೋ ಭರತರ್ಷಭ ॥9॥
ಭರತರ್ಷಭ! ಒಮ್ಮೆ ನಾರದರು ಅಲ್ಲಿಗೆ ಬಂದರು. ಆ ಮರದ ಎಲ್ಲ ಕಡೆ ವ್ಯಾಪಿಸಿರುವ ಶಾಖೆಗಳನ್ನೂ, ಕಾಂಡಗಳನ್ನೂ ನೋಡಿ ಆ ಮರಕ್ಕೆ ಹೇಳಿದರು.
ಅಹೋ ನು ರಮಣೀಯಸ್ತ್ವಮಹೋ ಚಾಸಿ ಮನೋರಮಃ |
ಪ್ರೀಯಾಮಹೇ ತ್ವಯಾ ನಿತ್ಯಂ ತರುಪ್ರವರ ಶಲ್ಮಲೇ ॥10॥
ತರುಶ್ರೇಷ್ಠ! ಬೂರುಗ! ನೀನು ಎಷ್ಟು ರಮಣೀಯ! ಆಹ! ಎಷ್ಟು ಮನೋಹರವಾಗಿರುವಿ! ನಿನ್ನಿಂದ ನಮಗೆ ಯಾವಾಗಲೂ ಪ್ರೀತಿಯಾಗುತ್ತದೆ.
ಸದೈವ ಶಕುನಾಸ್ತಾತ ಮೃಗಾಶ್ಚಾಧಸ್ತಥಾ ಗಜಾಃ |
ವಸಂತಿ ತವ ಸಂಹೃಷ್ಟಾ ಮನೋಹರತರಾಸ್ತಥಾ ॥11॥
ತವ ಶಾಖಾ ಮಹಾಶಾಖ ಸ್ಕಂಧಂ ಚ ವಿಪುಲಂ ತಥಾ |
ನ ವೈ ಪ್ರಭಗ್ನಾನ್ ಪಶ್ಯಾಮಿ ಮಾರುತೇನ ಕಥಂಚನ ॥12॥
ಪ್ರಿಯ ಶಾಲ್ಮಲಿ! ಹಕ್ಕಿಗಳು ಯಾವಾಗಲೂ ನಿನ್ನ ಆಶ್ರಯದಲ್ಲಿ ವಾಸಿಸುತ್ತವೆ. ನಿನ್ನ ಕೆಳಭಾಗದಲ್ಲಿ ಆನೆಗಳೂ, ಬೇರೆ ಪ್ರಾಣಿಗಳು ಸಂತೋಷದಿಂದ ವಾಸಿಸುತ್ತವೆ. ವಿಪುಲ ಶಾಖೆಗಳಿರುವ ಮರವೇ! ನಿನ್ನ ಶಾಖೆಗಳು ಬಹಳ ಮನೋಹರವಾಗಿವೆ. ಕಾಂಡಗಳೂ ವಿಪುಲವಾಗಿವೆ. ಗಾಳಿಯಿಂದ ಯಾವುದೇ ಕಾಂಡ-ಕೊಂಬೆಗಳು ಮುರಿದದ್ದು ನನಗೆ ಕಾಣಿಸಿಲ್ಲ.
ಕಿಂ ನು ತೇ ಮಾರುತಸ್ತಾತ ಪ್ರೀತಿಮಾನಥ ವಾ ಸುಹೃತ್ |
ತ್ವಾಂ ರಕ್ಷತಿ ಸದಾ ಯೇನ ವನೇಽಸ್ಮಿನ್ ಪವನೋ ಧ್ರುವಮ್ ॥13॥
ಪ್ರಿಯ ವೃಕ್ಷ! ಗಾಳಿಗೆ ನಿನ್ನ ಮೇಲೆ ಅಷ್ಟು ಪ್ರೀತಿಯೆ? ಅಷ್ಟು ಸ್ನೇಹವೆ? ಪ್ರೀತಿ- ಸ್ನೇಹಗಳಿಂದಾಗಿ ಗಾಳಿಯು ನಿನ್ನನ್ನು ಸದಾ ರಕ್ಷಿಸುತ್ತಿದ್ದಾನೆ. ಇದು ನಿಶ್ಚಯ.
ವಿವಾನ್ ಹಿ ಪವನಃ ಸ್ಥಾನಾದ್ ವೃಕ್ಷಾನುಚ್ಚಾವಚಾನಪಿ |
ಪರ್ವತಾನಾಂ ಚ ಶಿಖರಾಣ್ಯಾಚಾಲಯತಿ ವೇಗವಾನ್ ॥14॥
ಮಹಾವೇಗಿಯಾದ ವಾಯುವು ದೊಡ್ಡ-ಸಣ್ಣ ಮರಗಳನ್ನೂ, ಪರ್ವತಗಳ ಶಿಖರಗಳನ್ನೂ ಅವುಗಳ ಸ್ಥಾನದಿಂದ ಚಲಿಸುವಂತೆ ಮಾಡುತ್ತಾನೆ.
ಶೋಷಯತ್ಯೇವ ಪಾತಾಲಂ ವಿವಾನ್ ಗಂಧವಹಃ ಶುಚಿಃ |
ಹ್ರದಾಂಶ್ಚ ಸರಿತಶ್ಚೈವ ಸಾಗರಾಂಶ್ಚ ತಥೈವ ಹ ॥15॥
ಗಂಧವನ್ನು ಹೊತ್ತು ಒಯ್ಯುವ, ಶುಚಿಯಾದ ವಾಯುವು ಪಾತಾಲವನ್ನೇ ಒಣಗಿಸುತ್ತಾನೆ. ಕೆರೆಗಳನ್ನೂ, ನದಿಗಳನ್ನೂ, ಸಾಗರಗಳನ್ನೂ ಒಣಗಿಸುತ್ತಾನೆ.
ತ್ವಾಂ ಸಂರಕ್ಷ್ಯೇತ ಪವನಃ ಸಖಿತ್ವೇನ ನ ಸಂಶಯಃ |
ತಸ್ಮಾದ್ ಬಹಲಶಾಖೋಽಸಿ ಪರ್ಣವಾನ್ ಪುಷ್ಪವಾನಪಿ ॥16॥
ಪವನನು ಸ್ನೇಹದಿಂದ ನಿನ್ನನ್ನು ರಕ್ಷಿಸುತ್ತಾನೆ. ಸಂಶಯವಿಲ್ಲ. ಆದ್ದರಿಂದ ನಿನ್ನಲ್ಲಿ ಬಹಳ ಶಾಖೆಗಳೂ, ಎಲೆಗಳೂ, ಪುಷ್ಪಗಳೂ ಇವೆ.
ಇದಂ ಚ ರಮಣೀಯಂ ತೇ ಪ್ರತಿಭಾತಿ ವನಸ್ಪತೇ |
ಯದಿಮೇ ವಿಹಗಾಸ್ತಾತ ರಮಂತೇ ಮುದಿತಾಸ್ತ್ವಯಿ ॥17॥
ಪ್ರಿಯ ಮರವೇ! ಈ ಹಕ್ಕಿಗಳು ನಿನ್ನ ಆಶ್ರಯದಲ್ಲಿ ಸಂತೋಷದಿಂದ ವಿಹರಿಸುತ್ತಿವೆ. ಈ ಸನ್ನಿವೇಶವು ಬಹಳ ರಮಣೀಯವಾಗಿ

ಕಾಣುತ್ತಿದೆ.
ಏಷಾಂ ಪೃಥಕ್ಸಮಸ್ತಾನಾಂ ಶ್ರೂಯತೇ ಮಧುರಃ ಸ್ವರಃ |
ಪುಷ್ಪಸಮ್ಮೋದನೇ ಕಾಲೇ ವಾಶತಾಂ ಸುಮನೋಹರಮ್ ॥18॥
ಪುಷ್ಪಗಳು ಅರಳುವ ಕಾಲದಲ್ಲಿ (ವಸಂತ ಋತುವಿನಲ್ಲಿ) ಬಹಳ ಮನೋಹರವಾಗಿ ಕೂಗುವ ಈ ಎಲ್ಲಾ ಹಕ್ಕಿಗಳ ಮಧುರಸ್ವರವು ಬೇರೆ ಬೇರೆಯಾಗಿ ಕೇಳಿಸುತ್ತದೆ.
ತಥೇಮೇ ಮುದಿತಾ ನಾಗಾಃ ಸ್ವಯೂಥಕುಲಶೋಭಿನಃ |
ಘರ್ಮಾರ್ತಾಸ್ತ್ವಂ ಸಮಾಸಾದ್ಯ ಸುಖಂ ವಿಂದಂತಿ ಶಲ್ಮಲೇ ॥19॥
ಹಾಗೆಯೇ ತಮ್ಮ ಹಿಂಡಿನಲ್ಲಿ ಶೋಭಿಸುವ ಆನೆಗಳೂ ಸಂತುಷ್ಟವಾಗಿವೆ. ಶಾಲ್ಮಲಿ! ಬಿಸಿಲಿನಿಂದ ಬೆಂದ ಇವುಗಳು ನಿನ್ನಲ್ಲಿಗೆ ಬಂದು ಸುಖವನ್ನು ಹೊಂದುತ್ತವೆ.
ತಥೈವ ಮೃಗಜಾತೀಭಿರನ್ಯಾಭಿರುಪಶೋಭಸೇ |
ತಥಾ ಸಾರ್ಥಾಧಿವಾಸೈಶ್ಚ ಶೋಭಸೇ ಮೇರುವದ್ದ್ರುಮ ॥20॥
ಹಾಗೆಯೇ ಬೇರೆ ವಿವಿಧ ಪ್ರಾಣಿಗಳು ನಿನ್ನನ್ನು ಆಶ್ರಯಿಸಿವೆ. ಅವುಗಳಿಗೆ ಆಶ್ರಯನಾದ ನೀನು ಶೋಭಿಸುತ್ತಿರುವೆ. ಮರವೆ! ಗುಂಪಿನಲ್ಲಿ ಸಂಚರಿಸುವ ವರ್ತಕರೂ ನಿನ್ನ ಆಶ್ರಯದಲ್ಲಿ ವಾಸಿಸುತ್ತಾರೆ. ಆದ್ದರಿಂದಲೂ ನೀನು ಮೇರು ಪರ್ವತದಂತೆ ಶೋಭಿಸುತ್ತಿರುವೆ.
ಬ್ರಾಹ್ಮಣೈಶ್ಚ ತಪಃಸಿದ್ಧೈಸ್ತಾಪಸೈಃ ಶ್ರಮಣೈರಪಿ |
ತ್ರಿವಿಷ್ಟಪಸಮಂ ಮನ್ಯೇ ತವಾಯತನಮೇವ ಹ ॥21॥
ಬ್ರಾಹ್ಮಣರು, ತಪಸಿದ್ಧಿಯನ್ನು ಪಡೆದ ತಾಪಸರು, ಯತಿಗಳೂ ನಿನ್ನ ಆಶ್ರಯದಲ್ಲಿದ್ದಾರೆ. ಇವರೆಲ್ಲರಿಂದ ನಿನ್ನ ಸ್ಥಾನವು ಸ್ವರ್ಗಸಮ ಎಂದು ಭಾವಿಸುತ್ತೇನೆ.
ಬಂಧುತ್ವಾದಥ ವಾ ಸಖ್ಯಾಚ್ಛಲ್ಮಲೇ ನಾತ್ರ ಸಂಶಯಃ |
ಪಾಲಯತ್ಯೇವ ಸತತಂ ಭೀಮಃ ಸರ್ವತ್ರಗೋಽನಿಲಃ ॥22॥
ಶಾಲ್ಮಲಿ! ಸರ್ವತ್ರ ಸಂಚರಿಸುವ ಭಯಂಕರನಾದ ಗಾಳಿಯು ನಿನ್ನ ಬಂಧುವಾದ್ದರಿಂದ ಅಥವಾ ಸಖ್ಯದಿಂದ ನಿನ್ನನ್ನು ಸದಾ ರಕ್ಷಿಸುತ್ತಿದ್ದಾನೆ.
ನ್ಯಗ್ಭಾವಂ ಪರಮಂ ವಾಯೋಃ ಶಲ್ಮಲೇ ತ್ವಮುಪಾಗತಃ |
ತವಾಹಮಸ್ಮೀತಿ ಸದಾ ಯೇನ ರಕ್ಷತಿ ಮಾರುತಃ ॥23॥
ಶಾಲ್ಮಲಿ! ನೀನು `ನಾನು ನಿನ್ನವನು, ನಿನಗೆ ದಾಸ' ಎಂದು ಸದಾ ವಾಯುವಿಗೆ ಮಹಾವಿನಯವನ್ನು ತೋರಿರುವಿ. ಆದ್ದರಿಂದ ಆ ಮಾರುತನು ನಿನ್ನನ್ನು ರಕ್ಷಿಸುತ್ತಿದ್ದಾನೆ.
ನ ತಂ ಪಶ್ಯಾಮ್ಯಹಂ ವೃಕ್ಷಂ ಪರ್ವತಂ ವಾಪಿ ತಂ ದೃಢಮ್ |
ಯೋ ನ ವಾಯುಬಲಾದ್ಭಗ್ನಃ ಪೃಥಿವ್ಯಾಮಿತಿ ಮೇ ಮತಿಃ ॥24॥
ನಾನು ಭೂಮಂಡಲದಲ್ಲಿ ವಾಯುಬಲದಿಂದ ಭಗ್ನವಾಗದ ದೃಢವಾದ ಮರವನ್ನು ಅಥವಾ ಪರ್ವತವನ್ನು ನೋಡಿಲ್ಲ.
ತ್ವಂ ಪುನಃ ಕಾರಣೈರ್ನೂನಂ ಶಲ್ಮಲೇ ರಕ್ಷ್ಯಸೇ ಸದಾ |
ವಾಯುನಾ ಸಪರೀವಾರಸ್ತೇನ ತಿಷ್ಠಸ್ಯಸಂಶಯಮ್ ॥25॥
ಶಲ್ಮಲಿ! ಪ್ರಬಲವಾದ ಕಾರಣಗಳಿಂದ ನೀನು ಪರಿವಾರ ಸಹಿತನಾಗಿ ಗಾಳಿಯಿಂದ ರಕ್ಷಿಸಲ್ಪಡುತ್ತಿರುವಿ, ಸಂಶಯವಿಲ್ಲ. ಆದ್ದರಿಂದ ಹೀಗೆ ಆತಂಕವಿಲ್ಲದೆ ನಿಂತಿರುವಿ.
ಶಲ್ಮಲಿಃ
ನ ಮೇ ವಾಯುಃ ಸಖಾ ಬ್ರಹ್ಮನ್ನ ಬಂಧುರ್ನ ಚ ಮೇ ಸುಹೃತ್ |
ಪರಮೇಷ್ಠೀ ತಥಾ ನೈವ ಯೇನ ರಕ್ಷತಿ ಮಾನಿಲಃ ॥26॥
ಬ್ರಹ್ಮಜ್ಞಾನಿಯೇ! ವಾಯುವು ನನ್ನ ಗೆಳೆಯನಲ್ಲ. ನನ್ನ ಬಂಧುವಲ್ಲ. ನನ್ನ ಸುಹೃತ್ ಅಲ್ಲ. ಅನಿಲನೂ ಅಲ್ಲ, ಬ್ರಹ್ಮನೂ ಅಲ್ಲ. ಆಗಿದ್ದಿದ್ದರೆ ನನ್ನನ್ನು ರಕ್ಷಿಸುತ್ತಿದ್ದನೇನೊ.
ಮಮ ತೇಜೋಬಲಂ ವಾಯೋರ್ಭೀಮಮಪಿ ಹಿ ನಾರದ |
ಕಲಾಮಷ್ಟಾದಶೀಂ ಪ್ರಾಣೈರ್ನ ಮೇ ಪ್ರಾಪ್ನೋತಿ ಮಾರುತಃ ॥27॥
ನಾರದರೇ! ನನ್ನ ತೇಜೋಬಲವು ವಾಯುವನ್ನು ಬೆದರಿಸುತ್ತದೆ. ಮಾರುತನು ನನ್ನ ಪ್ರಾಣಶಕ್ತಿಯ ಹದಿನೆಂಟನೆ ಒಂದು ಅಂಶವನ್ನೂ ಹೊಂದಿಲ್ಲ.
ಆಗಚ್ಛನ್ ಪರಮೋ ವಾಯುರ್ಮಯಾ ವಿಷ್ಟಂಭಿತೋ ಬಲಾತ್ |
ರುಜನ್ ದ್ರುಮಾನ್ ಪರ್ವತಾಂಶ್ಚ ಯಚ್ಚಾನ್ಯದಪಿ ಕಿಂಚನ ॥28॥
ಮರಗಳನ್ನು, ಪರ್ವತಗಳನ್ನು, ಬೇರೆ ಯಾವುದೇ ಪದಾರ್ಥಗಳನ್ನೂ ನಾಶ ಮಾಡುತ್ತಾ ಬರುತ್ತಿದ್ದ ಮಹಾವಾಯುವು ನನ್ನಿಂದ, ನನ್ನ ಬಲದಿಂದ, ಸ್ತಂಭಿಸಲ್ಪಟ್ಟಿದ್ದಾನೆ.
ಸ ಮಯಾ ಬಹುಶೋ ಭಗ್ನಃ ಪ್ರಭಂಜನ್ ವೈ ಪ್ರಭಂಜನಃ |
ತಸ್ಮಾನ್ನ ಬಿಭ್ಯೇ ದೇವರ್ಷೇ ಕ್ರುದ್ಧಾದಪಿ ಸಮೀರಣಾತ್ ॥29॥
ಬೇರೆ ಎಲ್ಲವನ್ನು ಭಂಗ ಮಾಡುವ ಪ್ರಭಂಜನನು ನನ್ನಿಂದ ಬಹಳ ಸಲ ಭಗ್ನನಾಗಿದ್ದಾನೆ. ಆದ್ದರಿಂದ, ದೇವರ್ಷಿಯೇ! ಕ್ರುದ್ಧ ಸಮೀರಣನಿಂದಲೂ ನನಗೆ ಭಯವಿಲ್ಲ.
ನಾರದಃ

ಶಲ್ಮಲೇ ವಿಪರೀತಂ ತೇ ದರ್ಶನಂ ನಾತ್ರ ಸಂಶಯಃ |
ನ ಹಿ ವಾಯೋರ್ಬಲೇನಾಸ್ತಿ ಭೂತಂ ತುಲ್ಯಬಲಂ ಕ್ವಚಿತ್ ॥30॥
ಶಾಲ್ಮಲಿ! ನಿನ್ನ ದೃಷ್ಟಿ ವಸ್ತುಸ್ಥಿತಿಗೆ ವಿರುದ್ಧವಾದ ದೃಷ್ಟಿ. ಇದರಲ್ಲಿ ಸಂಶಯವಿಲ್ಲ. ವಾಯುಬಲಕ್ಕೆ ಸರಿಗಟ್ಟುವ ಬಲವುಳ್ಳ ಯಾವ ವಸ್ತುವೂ ಎಲ್ಲಿಯೂ ಇಲ್ಲ.
ಇಂದ್ರೋ ಯಮೋ ವೈಶ್ರವಣೋ ವರುಣಶ್ಚ ಜಲೇಶ್ವರಃ |
ನ ತೇಽಪಿ ತುಲ್ಯಾ ಮರುತಃ ಕಿಂ ಪುನಸ್ತ್ವಂ ವನಸ್ಪತೇ ॥31॥
ಇಂದ್ರ, ಯಮ, ಕುಬೇರ, ಜಲಾಧಿಪತಿ ವರುಣ- ಇವರೂ ವಾಯುವಿಗೆ ಸಮರಲ್ಲ. ಮರವೆ! ನೀನು ಅಲ್ಲ ಎಂದು ಹೇಳಬೇಕೆ?
ಯದ್ಧಿ ಕಿಂಚಿದಿಹ ಪ್ರಾಣಿ ಶಲ್ಮಲೇ ಚೇಷ್ಟತೇ ಭುವಿ |
ಸರ್ವತ್ರ ಭಗವಾನ್ ವಾಯುಶ್ಚೇಷ್ಟಾಪ್ರಾಣಕರಃ ಪ್ರಭುಃ ॥32॥
ಶಾಲ್ಮಲಿ! ಈ ಭೂಮಿಯಲ್ಲಿ ಯಾವ ಯಾವ ವಸ್ತುವಿಗೆ ಪ್ರಾಣವಿದೆಯೋ, ಯಾವ ಯಾವ ವಸ್ತು ಚಲಿಸುತ್ತದೋ ಆ ಎಲ್ಲ ವಸ್ತುಗಳಲ್ಲಿ ಪ್ರಭು, ಭಗವಾನ್ ವಾಯುವೇ ಚಲನೆ ಮತ್ತು ಪ್ರಾಣಗಳನ್ನು ಉಂಟು ಮಾಡುತ್ತಾನೆ.
ಏಷ ಚೇಷ್ಟಯತೇ ಸಮ್ಯಕ್ಪ್ರಾಣಿನಃ ಸಮ್ಯಗಾಯತಃ |
ಅಸಮ್ಯಗಾಯತೋ ಭೂಯಶ್ಚೇಷ್ಟತೇ ವಿಕೃತೋ ನೃಷು ॥33॥
ಈ ವಾಯುವು ಪ್ರಾಣಿಗಳಲ್ಲಿ ಸುಸ್ಥಿತಿಯಲ್ಲಿದ್ದರೆ ಅವುಗಳಿಗೆ ಸರಿಯಾದ ಚಲನೆಯನ್ನು ಉಂಟು ಮಾಡುತ್ತಾನೆ. ನರರಲ್ಲಿ ದುಸ್ಥಿತಿಯಲ್ಲಿ ವ್ಯಾಪಿಸಿದ್ದರೆ ಅವರಲ್ಲಿ ವಿಕೃತ ಚಲನೆಯನ್ನು ಉಂಟುಮಾಡುತ್ತಾನೆ.
ಸ ತ್ವಮೇವಂವಿಧಂ ವಾಯುಂ ಸರ್ವಸತ್ತ್ವಭೃತಾಂ ವರಮ್ |
ನ ಪೂಜಯಸಿ ಪೂಜ್ಯಂ ತಂ ಕಿಮನ್ಯದ್ ಬುದ್ಧಿಲಾಘವಾತ್ ॥34॥
ಈ ನೀನು ಪ್ರಾಣಧಾರಿಗಳೆಲ್ಲರಿಗಿಂತ ಶ್ರೇಷ್ಠನಾದ, ಪೂಜ್ಯನಾದ ವಾಯುವನ್ನು ಪೂಜಿಸುವುದಿಲ್ಲ. ಇದಕ್ಕೆ ನಿನ್ನ ಹೀನಬುದ್ಧಿಯೇ ಕಾರಣ. ಬೇರೆ ಏನು ಕಾರಣವಿದೆ?
ಅಸಾರಶ್ಚಾಸಿ ದುರ್ಬುದ್ಧೇ ಕೇವಲಂ ಬಹು ಭಾಷಸೇ |
ಕ್ರೋಧಾದಿಭಿರವಚ್ಛನ್ನೋ ಮಿಥ್ಯಾ ವದಸಿ ಶಲ್ಮಲೇ ॥35॥
ದುರ್ಬುದ್ಧಿಯ ಶಾಲ್ಮಲಿ! ನಿನ್ನಲ್ಲಿ ಏನೂ ಸಾರವಿಲ್ಲ. ಬಹಳ ಮಾತನಾಡುವಿ ಅಷ್ಟೆ! ಕ್ರೋಧ ಮೊದಲಾದ ದೋಷಗಳು ನಿನ್ನನ್ನು ಆವರಿಸಿವೆ. ಸುಳ್ಳು ಹೇಳುವಿ.
ಮಮ ರೋಷಃ ಸಮುತ್ಪನ್ನಸ್ತ್ವಯ್ಯೇವಂ ಸಂಪ್ರಭಾಷತಿ |
ಬ್ರವೀಮ್ಯೇಷ ಸ್ವಯಂ ವಾಯೋಸ್ತವ ದುರ್ಭಾಷಿತಂ ಬಹು ॥36॥
ಹೀಗೆ ಮಾತನಾಡುವ ನಿನ್ನ ಮೇಲೆ ನನಗೆ ರೋಷವು ಹುಟ್ಟಿದೆ. ನಿನ್ನ ಈ ಅತಿ ಕೆಟ್ಟ ಮಾತುಗಳನ್ನು ನಾನೇ ಸ್ವಯಂ ವಾಯುವಿಗೆ ಹೇಳುವೆ.
ಚಂದನೈಃ ಸ್ಪಂದನೈಃ ಶಾಲೈಃ ಸರಲೈರ್ದೇವದಾರುಭಿಃ |
ವೇತಸೈರ್ಬಂಧನೈಶ್ಚಾಪಿ ಯೇ ಚಾನ್ಯೇ ಬಲವತ್ತರಾಃ ॥37॥
ತೈಶ್ಚಾಪಿ ನೈವಂ ದುರ್ಬುದ್ಧೇ ಕ್ಷಿಪ್ತೋ ವಾಯುರ್ದುರಾತ್ಮಭಿಃ |
ತೇ ಹಿ ಜಾನಂತಿ ವಾಯೋಶ್ಚ ಬಲಮಾತ್ಮನ ಏವ ಚ ॥38॥
ಚಂದನ, ಸ್ಪಂದನ (ನೆಮ್ಮಿ), ಶಾಲ, ಸಕಲ, ದೇವದಾರು, ವೇತಸ (ಬೆತ್ತ) ಬಂಧನ- ಈ ಮರಗಳಿಂದ, ಇವುಗಳಿಗಿಂತಲೂ ಹೆಚ್ಚು ಬಲಶಾಲಿಯಾದ ಮರಗಳಿಂದಲೂ ವಾಯುವು ನಿಂದಿಸಲ್ಪಟ್ಟಿಲ್ಲ. ದುರ್ಬುದ್ಧಿಯವನೆ! ದುರಾತ್ಮರಿಂದ ಮಾತ್ರ ವಾಯುವು ನಿಂದಿಸಲ್ಪಡುತ್ತಾನೆ. ಆ ಚಂದನ ಮೊದಲಾದ ಮರಗಳು ವಾಯುವಿನ ಬಲವನ್ನೂ, ತಮ್ಮ ಬಲವನ್ನೂ ತಿಳಿದಿವೆ.
ತಸ್ಮಾತ್ ತೇ ವೈ ನಮಸ್ಯಂತಿ ಶ್ವಸನಂ ದ್ರುಮಸತ್ತಮಾಃ |
ತ್ವಂ ತು ಮೋಹಾನ್ನ ಜಾನೀಷೇ ವಾಯೋರ್ಬಲಮನಂತಕಮ್ ॥39॥
ಆದ್ದರಿಂದ ಆ ಶ್ರೇಷ್ಠ ಮರಗಳು ವಾಯುದೇವನನ್ನು ನಮಸ್ಕರಿಸುತ್ತವೆ. ನೀನು ಮೋಹದಿಂದ ವಾಯುವಿನ ಅನಂತಬಲವನ್ನು ತಿಳಿದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು.
* * * *
ಇಪ್ಪತ್ತೂರನೆಯ ಅಧ್ಯಾಯ
ನಾರದರಿಂದ ವಾಯುದೇವನಿಗೆ ಶಾಲ್ಮಲಿಯ ಗರ್ವದ ಬಗ್ಗೆ ವರದಿ. ವಾಯುದೇವ-ಶಾಲ್ಮಲಿಯ ವಾಗ್ವಾದ. ಶಾಲ್ಮಲಿಯ ಜಂಭದ ಮಾತುಗಳು. ವಿವೇಕವಿಲ್ಲದ ವರ್ತನೆ ಸರಿಯಲ್ಲ ಎಂದು ಭೀಷ್ಮರ ಉಪದೇಶ.
ಭೀಷ್ಮ
ಏವಮುಕತ್ವ ತು ರಾಜೇಂದ್ರ ಶಲ್ಮಲಿಂ ಬ್ರಹ್ಮವಿತ್ತಮಃ |
ನಾರದಃ ಪವನೇ ಸರ್ವಂ ಶಲ್ಮಲೇರ್ವಾಕ್ಯಮಬ್ರವೀತ್ ॥1॥
ರಾಜೇಂದ್ರ! ಶ್ರೇಷ್ಠಬ್ರಹ್ಮಜ್ಞಾನಿಗಳಾದ ನಾರದರು ಶಾಲ್ಮಲಿ ಮರಕ್ಕೆ ಹೀಗೆ ಹೇಳಿ ವಾಯುವಿನ ಬಳಿ ಹೋಗಿ ಶಾಲ್ಮಲಿಯ ಮಾತೆಲ್ಲವನ್ನೂ ಹೇಳಿದರು.

ಹಿಮವತ್ಪೃಷ್ಠಜಃ ಕಶ್ಚಿಚ್ಛಲ್ಮಲಿಃ ಪರಿವಾರವಾನ್ |
ಬೃಹನ್ಮೂಲೋ ಬೃಹಚ್ಛಾಖಃ ಸ ತ್ವಾಂ ವಾಯೋಽವಮನ್ಯತೇ ॥2॥
ವಾಯುದೇವ! ಹಿಮಾಲಯದ ಬೆನ್ನಿನಲ್ಲಿ ಒಂದು ಶಾಲ್ಮಲಿ ಮರವಿದೆ. ಅದಕ್ಕೆ ಭಾರಿ ದೊಡ್ಡ ಬೇರು. ಬಡ್ಡೆ ಇದೆ. ಬಹಳ ದೊಡ್ಡ ಕೊಂಬೆಗಳಿವೆ. ಅದಕ್ಕೆ ಬಹಳ ಪರಿವಾರವಿದೆ. ಅವನು ನಿನ್ನನ್ನು ಕೀಳಾಗಿ ತಿಳಿದಿದ್ದಾನೆ.
ಬಹೂನ್ಯಾಕ್ಷೇಪಯುಕ್ತಾನಿ ತ್ವಾಮಾಹ ವಚನಾನಿ ಸಃ |
ನ ಯುಕ್ತಾನಿ ಮಯಾ ವಾಯೋ ತಾನಿ ವಕ್ತುಂ ತ್ವಯಿ ಪ್ರಭೋ ॥3॥
ಪ್ರಭು! ಅವನು ನಿನ್ನ ಬಗ್ಗೆ ಬಹಳ ತೆಗಳಿಕೆಯ ಮಾತುಗಳನ್ನು ಹೇಳಿದನು. ನಿನ್ನ ಬಳಿ ಆ ಮಾತುಗಳನ್ನು ಹೇಳಬಾರದು.
ಜಾನಾಮಿ ತ್ವಾಮಹಂ ವಾಯೋ ಸರ್ವಪ್ರಾಣಭೃತಾಂ ವರಮ್ |
ವರಿಷ್ಠಂ ಚ ಗರಿಷ್ಠಂ ಚ ಕ್ರೋಧೇ ವೈವಸ್ವತಂ ಯಥಾ ॥4॥
ವಾಯುದೇವ! ಪ್ರಾಣಧಾರಿಗಳೆಲ್ಲರಲ್ಲಿ ನೀನು ಶ್ರೇಷ್ಠ ಎಂದು ತಿಳಿದಿದ್ದೇನೆ. ನೀನು ವರಿಷ್ಠ, ಗರಿಷ್ಠ ಎಂದು ತಿಳಿದಿದ್ದೇನೆ. ಕ್ರೋಧದಲ್ಲಿ ನೀನು ಯಮನಿಗೆ ಸಮ ಎಂದು ತಿಳಿದಿದ್ದೇನೆ.
ಏವಂ ತು ವಚನಂ ಶ್ರುತ್ವಾ ನಾರದಸ್ಯ ಸಮೀರಣಃ |
ಶಲ್ಮಲಿಂ ತಮುಪಾಗಮ್ಯ ಕ್ರುದ್ಧೋ ವಚನಮಬ್ರವೀತ್ ॥5॥
ನಾರದರ ಈ ಮಾತನ್ನು ಕೇಳಿ ವಾಯುದೇವನು ಕ್ರುದ್ಧನಾಗಿ ಶಾಲ್ಮಲಿ ಮರದ ಬಳಿ ಹೋಗಿ ಹೇಳಿದನು.
ಶಲ್ಮಲೇ ನಾರದೇ ಯತ್ತತ್ತ್ವಯೋಕ್ತಂ ಮದ್ವಿಗರ್ಹಣಮ್ |
ಅಹಂ ವಾಯುಃ ಪ್ರಭಾವಂ ತೇ ದರ್ಶಯಾಮ್ಯಾತ್ಮನೋ ಬಲಮ್ ॥6॥
ಶಾಲ್ಮಲಿ! ನೀನು ನಾರದರ ಬಳಿ ನನ್ನ ನಿಂದನೆಯನ್ನು ಮಾಡಿರುವಿ. ಆದ್ದರಿಂದ ನಾನು ನನ್ನ ಪ್ರಭಾವವನ್ನು, ಬಲವನ್ನೂ ನಿನಗೆ ತೋರಿಸುತ್ತೇನೆ.
ನಾಹಂ ತ್ವಾ ನಾಭಿಜಾನಾಮಿ ವಿದಿತಶ್ಚಾಸಿ ಮೇ ದ್ರುಮ |
ಪಿತಾಮಹಃ ಪ್ರಜಾಸರ್ಗೇ ತ್ವಯಿ ವಿಶ್ರಾಂತವಾನ್ ಪ್ರಭುಃ ॥7॥
ಮರವೇ! ನಿನ್ನ ಬಗ್ಗೆ ನನಗೆ ಗೊತ್ತಿಲ್ಲ ಎಂದಿಲ್ಲ. ನಿನ್ನ ಪರಿಚಯ ನನಗಿದೆ. ಪ್ರಭು ಪಿತಾಮಹನು (ಚತುರ್ಮುಖ ಬ್ರಹ್ಮನು) ಪ್ರಜಾಸೃಷ್ಟಿಯನ್ನು ಮಾಡುತ್ತಿರುವಾಗ ನಿನ್ನಲ್ಲಿ ವಿಶ್ರಾಂತಿಯನ್ನು ಪಡೆದಿದ್ದನು.
ತಸ್ಯ ವಿಶ್ರಮಣಾದೇಷ ಪ್ರಸಾದೋ ಗಚ್ಛತಸ್ತವ |
ರಕ್ಷ್ಯಸೇ ತೇನ ದುರ್ಬುದ್ಧೇ ನಾತ್ಮವೀರ್ಯಾದ್ ದ್ರುಮಾಧಮ ॥8॥
ನಿನ್ನಲ್ಲಿ ವಿಶ್ರಾಂತಿ ಪಡೆದು ಹೊರಟ ಅವನ ಅನುಗ್ರಹವು ನಿನ್ನ ಮೇಲಿದೆ. ನೀಚ ಮರವೇ! ಆ ಅನುಗ್ರಹದಿಂದಾಗಿ ನಾನು ನಿನ್ನನ್ನು ರಕ್ಷಿಸುತ್ತಿದ್ದೇನೆ. ನಿನ್ನ ಸ್ವಂತಬಲದಿಂದ ನಿನ್ನ ರಕ್ಷಣೆಯಾಗಿಲ್ಲ.
ಯನ್ಮಾಂ ತ್ವಮವಜಾನೀಷೇ ಯಥಾನ್ಯಂ ಪ್ರಾಕೃತಂ ತಥಾ |
ದರ್ಶಯಾಮ್ಯೇಷ ಆತ್ಮಾನಂ ಯಥಾ ಮಾಮವಭೋತ್ಸ್ಯಸೇ ॥9॥
ನೀನು ನನ್ನನ್ನು, ಬೇರೆ ಪ್ರಾಕೃತ (ಅತಿ ಕೆಳಮಟ್ಟದ ವ್ಯಕ್ತಿ) ನನ್ನು ಅವಹೇಳನ ಮಾಡುವಂತೆ ಅವಹೇಳನ ಮಾಡುತ್ತಿರುವಿ. ಆದ್ದರಿಂದ ನಾನು ನನ್ನನ್ನು (ನನ್ನ ಬಲವನ್ನು) ತೋರಿಸುವೆ. ಆಗ ನೀನು ನನ್ನನ್ನು ಸರಿಯಾಗಿ ತಿಳಿಯುವಿ.
ಏವಮುಕ್ತಸ್ತತಃ ಪ್ರಾಹ ಶಲ್ಮಲಿಃ ಪ್ರಹಸನ್ನಿವ |
ಪವನ ತ್ವಂ ವನೇ ಕ್ರುದ್ಧೋ ದರ್ಶಯಾತ್ಮಾನಮಾತ್ಮನಾ ॥10॥
ಹೀಗೆ ಹೇಳಲ್ಪಟ್ಟ ಶಾಲ್ಮಲಿಯು ಅಣಕಿಸುವವನಂತೆ ಹೇಳಿತು. ಪವನ! ಕ್ರುದ್ಧನಾದ ನೀನು ಈ ವನದಲ್ಲಿ ನಿನ್ನ ಸ್ವರೂಪವನ್ನು ತೋರಿಸು.
ಮಯಿ ವೈ ತ್ಯಜ್ಯತಾಂ ಕ್ರೋಧಃ ಕಿಂ ಮೇ ಕ್ರುದ್ಧಃ ಕರಿಷ್ಯಸಿ |
ನ ತೇ ಬಿಭೇಮಿ ಪವನ ಯದ್ಯಪಿ ತ್ವಂ ಸ್ವಯಂಪ್ರಭುಃ ॥11॥
ನನ್ನ ಮೇಲೆ ನಿನ್ನ ಕ್ರೋಧವನ್ನು ಪ್ರಯೋಗಿಸು. ಕ್ರುದ್ಧನಾಗಿ ನನಗೇನು ಮಾಡುವಿ? ಪವನ! ವಸ್ತುತಃ ನೀನು ಸ್ವಯಂ ಪ್ರಭು. ಆದರೂ ನಾನು ನಿನಗೆ ಹೆದರುವುದಿಲ್ಲ.
ಯೇ ತು ಬುದ್ಧ್ಯಾ ಹಿ ಬಲಿನಸ್ತೇ ಭವಂತಿ ಬಲೀಯಸಃ |
ಪ್ರಾಣಮಾತ್ರಬಲಾ ಯೇ ವೈ ನೈವ ತೇ ಬಲಿನೋ ಮತಾಃ ॥12॥
ಯಾರು ಬುದ್ಧಿಯಿಂದ ಬಲಶಾಲಿಗಳೋ ಅವರೇ ನಿಜವಾಗಿ ಬಲಶಾಲಿಗಳು. ಕೇವಲ ಶರೀರಬಲವಿರುವವರು ಬಲಶಾಲಿಗಳೆಂದು ಪ್ರಾಜ್ಞರು ಒಪ್ಪುವುದಿಲ್ಲ.
ಇತ್ಯೇವಮುಕ್ತಃ ಪವನಃ ಶ್ವ ಇತ್ಯೇವಾಬ್ರವೀದ್ ವಚಃ |
ದರ್ಶಯಿಷ್ಯಾಮಿ ತೇ ತೇಜಸ್ತತೋ ರಾತ್ರಿರುಪಾಗಮತ್ ॥13॥
ಹೀಗೆ ಹೇಳಲ್ಪಟ್ಟ ಪವನನು ನಾಳೆಯೇ ನಿನಗೆ ನನ್ನ ತೇಜಸ್ಸನ್ನು ತೋರಿಸುತ್ತೇನೆ ಎಂದು ಹೇಳಿದನು. ಅನಂತರ ರಾತ್ರಿಯಾಯಿತು.
ಅಥ ನಿಶ್ಚಿತ್ಯ ಮನಸಾ ಶಲ್ಮಲಿರ್ವಾತಕಾರಿತಮ್ |
ಪಶ್ಯಮಾನಸ್ತದಾತ್ಮಾನಮಸಮಂ ಮಾತರಿಶ್ವನಃ ॥14॥
ಅನಂತರ ಶಾಲ್ಮಲಿಯು ವಾಯುದೇವನ ನಾನಾ ಕಾರ್ಯಗಳನ್ನು ಚಿಂತಿಸಿ ತಾನು ವಾಯುದೇವನಿಗೆ ಸಮ ಅಲ್ಲ ಎಂದು ತಿಳಿಯಿತು.
ನಾರದೇ ಯನ್ಮಯಾ ಪ್ರೋಕ್ತಂ ಪವನಂ ಪ್ರತಿ ತನ್ಮೃಷಾ |
ಅಸಮರ್ಥೋ ಹ್ಯಹಂ ವಾಯೋರ್ಬಲೇನ ಬಲವಾನ್ಹಿ ಸಃ ॥15॥

ನಾನು ನಾರದರ ಬಳಿ ವಾಯುದೇವನ ಬಗ್ಗೆ ಹೇಳಿದ್ದು ಸುಳ್ಳು. ನಾನು ವಾಯುದೇವನ ಬಲದ ಮುಂದೆ ಸಮರ್ಥನಲ್ಲ. ಅವನೇ ಬಲಶಾಲಿ.
ಮಾರುತೋ ಬಲವಾನ್ನಿತ್ಯಂ ತ್ವಯೇದಂ ನಾರದೋಽಬ್ರವೀತ್ |
ಅಹಂ ಹಿ ದುರ್ಬಲೋಽನ್ಯೇಭ್ಯೋ ವೃಕ್ಷೇಭ್ಯೋ ನಾತ್ರ ಸಂಶಯಃ ॥16॥
ಮಾರುತನು ಯಾವಾಗಲೂ ನಿನಗಿಂತ ಹೆಚ್ಚು ಬಲಶಾಲಿ ಎಂದು ನಾರದರು ಹೇಳಿದರು. ನಾನು ಬೇರೆ ವೃಕ್ಷಗಳಿಗಿಂತ ದುರ್ಬಲ. ಸಂಶಯವೇ ಇಲ್ಲ.
ಕಿಂ ತು ಬುದ್ಧ್ಯಾ ಸಮೋ ನಾಸ್ತಿ ಮಮ ಕಶ್ಚಿದ್ವನಸ್ಪತಿಃ |
ತದಹಂ ಬುದ್ಧಿಮಾಸ್ಥಾಯ ಭಯಂ ಮೋಕ್ಷ್ಯೇ ಕಯೇ ಸಮೀರಣಾತ್ ॥17॥
ಆದರೆ ಯಾವ ಮರವೂ ಬುದ್ಧಿಯಿಂದ ನನಗೆ ಸಮವಲ್ಲ. ಆದ್ದರಿಂದ ನಾನು ಬುದ್ಧಿಯನ್ನು ಅವಲಂಬಿಸಿ ವಾಯುದೇವನ ಆಕ್ರಮಣವನ್ನು ಬಿಡಿಸಿಕೊಳ್ಳುತ್ತೇನೆ.
ಯದಿ ತಾಂ ಬುದ್ಧಿಮಾಸ್ಥಾಯ ಚರೇಯುಃ ಪರ್ಣಿನೋ ವನೇ |
ಅರಿಷ್ಟಾಃ ಸ್ಯುಃ ಸದಾ ಕ್ರುದ್ಧಾತ್ ಪವನಾನ್ನಾತ್ರ ಸಂಶಯಃ ॥18॥
ವನದಲ್ಲಿ ಮರಗಳು ಬುದ್ಧಿಯನ್ನು ಉಪಯೋಗಿಸಿಕೊಂಡು ಇದ್ದರೆ ಕ್ರುದ್ಧ ವಾಯುವಿನಿಂದ ಹಾನಿಗೊಳಗಾಗದೆ ಕ್ಷೇಮದಿಂದ ಇದ್ದಾರು. ಇದರಲ್ಲಿ ಸಂಶಯವಿಲ್ಲ.
ತೇಽತ್ರ ಬಾಲಾ ನ ಜಾನಂತಿ ಯಥಾ ನೈನಾನ್ ಸಮೀರಣಃ |
ಸಮೀರಯೇತ ಸಂಕ್ರುದ್ಧೋ ಯಥಾ ಜಾನಾಮ್ಯಹಂ ತಥಾ ॥19॥
ಆ ಎಳಸು (ಬುದ್ಧಿಹೀನ) ಮರಗಳು ಕ್ರುದ್ಧ ವಾಯುವು ತಮ್ಮನ್ನು ಪುಡಿಗಟ್ಟದಂತೆ ಮಾಡುವ ಉಪಾಯವನ್ನು ತಿಳಿದಿಲ್ಲ. ನಾನು ತಿಳಿದಿರುವಂತೆ.
ತತೋ ನಿಶ್ಚಿತ್ಯ ಮನಸಾ ಶಲ್ಮಲಿಃ ಕ್ಷುಭಿತಸ್ತದಾ |
ಶಾಖಾಃ ಸ್ಕಂಧಾನ್ ಪ್ರಶಾಖಾಶ್ಚ ಸ್ವಯಮೇವ ವ್ಯಶಾತಯತ್ ॥20॥
ಕ್ಷೋಭೆಗೊಂಡಿದ್ದ ಶಾಲ್ಮಲಿಯು ಹೀಗೆ ನಿಶ್ಚಯಿಸಿ, ಕೊಂಬೆಗಳನ್ನೂ, ಕಾಂಡಗಳನೂ, ಉಪಶಾಖೆಗಳನ್ನೂ ತಾನೇ ನಾಶಮಾಡಿತು.
ಸ ಪರಿತ್ಯಜ್ಯ ಶಾಖಾಶ್ಚ ಪತ್ರಾಣಿ ಕುಸುಮಾನಿ ಚ |
ಪ್ರಭಾತೇ ವಾಯುಮಾಯಾಂತಂ ಪ್ರತ್ಯೈಕ್ಷತ ವನಸ್ಪತಿಃ ॥21॥
ಆ ಮರವು ಹೀಗೆ ಕೊಂಬೆಗಳನ್ನೂ, ಎಲೆಗಳನ್ನೂ, ಹೂಗಳನ್ನೂ ಪರಿತ್ಯಜಿಸಿ, ಬೆಳಗಾದನಂತರ ವಾಯುವಿನ ಆಗಮನವನ್ನು ನಿರೀಕ್ಷಿಸಿದನು.
ತತಃ ಕ್ರುದ್ಧಃ ಶ್ವಸನ್ವಾಯುಃ ಪಾತಯನ್ವೈ ಮಹಾದ್ರುಮಾನ್ |
ಆಜಗಾಮಾಥ ತಂ ದೇಶಂ ಸ್ಥಿತೋ ಯತ್ರ ಸ ಶಲ್ಮಲಿಃ ॥22॥
ಅನಂತರ ಕ್ರುದ್ಧವಾಯುವು ಬೀಸುತ್ತಾ, ದೊಡ್ಡ ಮರಗಳನ್ನು ಬೀಳಿಸುತ್ತಾ ಶಾಲ್ಮಲಿ ಮರವು ಇದ್ದ ಸ್ಥಳಕ್ಕೆ ಬಂದನು.
ತಂ ಹೀನಪರ್ಣಂ ಪತಿತಾಗ್ರಶಾಖಂ
ವಿಶೀರ್ಣಪುಷ್ಪಂ ಪ್ರಸಮೀಕ್ಷ್ಯ ವಾಯುಃ |
ಉವಾಚ ವಾಕ್ಯಂ ಸ್ಮಯಮಾನ ಏನಂ
ಮುದಾ ಯುತಂ ಶಲ್ಮಲಿಂ ರುಗ್ಣಶಾಖಮ್ ॥23॥
ವಾಯುವು ಎಲೆಗಳಿಲ್ಲದ, ಬಿದ್ದುಹೋದ ಕೊಂಬೆಗಳುಳ್ಳ, ಪುಷ್ಪಗಳೆಲ್ಲವನ್ನು ಕಳೆದುಕೊಂಡಿರುವ, ಆದರೂ ಸಂತೋಷದಿಂದಿದ್ದ ಆ ಬೂರುಗದ ಮರವನ್ನು ನೋಡಿ ಮುಗುಳ್ನಗುತ್ತಾ ಹೇಳಿದನು.
ಅಹಮಪ್ಯೇವಮೇವ ತ್ವಾಂ ಕುರ್ವಾಣಃ ಶಲ್ಮಲೇ ರುಷಾ |
ಆತ್ಮನಾ ಯತ್ಕೃತಂ ಕೃತ್ಸ್ನಂ ಶಾಖಾನಾಮಪಕರ್ಷಣಮ್ ॥24॥
ಶಾಲ್ಮಲಿ! ನೀನೆ ನಿನ್ನ ಎಲ್ಲ ಶಾಖೆಗಳನ್ನು ಧ್ವಂಸಮಾಡಿರುವಿ. ನಾನೂ ಕೋಪದಿಂದ ಇದನ್ನು ಮಾಡಬೇಕೆಂದಿದ್ದೆ.
ಹೀನಪುಷ್ಪಾಗ್ರಶಾಖಸ್ತ್ವಂ ಶೀರ್ಣಾಂಕುರಪಲಾಶವಾನ್ |
ಆತ್ಮದುರ್ಮಂತ್ರಿತೇನೇಹ ಮದ್ವೀರ್ಯವಶಗೋಽಭವಃ ॥25॥
ನಿನ್ನ ದುರಾಲೋಚನೆಯಿಂದ ಪುಷ್ಪಹೀನನಾಗಿ, ಶಾಖಾಹೀನನಾಗಿ, ಚಿಗುರುಗಳಿಲ್ಲದವನಾಗಿ, ಎಲೆಗಳಿಲ್ಲದವನಾಗಿ ನನ್ನ ಬಲಕ್ಕೆ ವಶನಾಗಿರುವಿ.
ಏತಚ್ಛ್ರುತ್ವಾ ವಚೋ ವಾಯೋಃ ಶಲ್ಮಲಿರ್ವ್ರೀಡಿತಸ್ತದಾ |
ಅತಪ್ಯತ ವಚಃ ಸ್ಮೃತ್ವಾ ನಾರದೋ ಯತ್ತದಾಬ್ರವೀತ್ ॥26॥
ಆಗ ವಾಯುವಿನ ಈ ಮಾತನ್ನು ಕೇಳಿ ಶಾಲ್ಮಲಿಗೆ ನಾಚಿಕೆಯಾಯಿತು. ನಾರದರು ಹಿಂದೆ ಹೇಳಿದ ಮಾತನ್ನು ನೆನೆದು ಪರಿತಪಿಸಿದನು.
ಏವಂ ಯೋ ರಾಜಶಾರ್ದೂಲ ದುರ್ಬಲಃ ಸನ್ ಬಲೀಯಸಾ |
ವೈರಮಾಸಜ್ಜತೇ ಬಾಲಸ್ತಪ್ಯತೇ ಶಲ್ಮಲಿರ್ಯಥಾ ॥27॥
ರಾಜಶ್ರೇಷ್ಠ! ಯಾರು ದುರ್ಬಲನಾಗಿದ್ದರೂ ಹೀಗೆ ಎಳಸಾಗಿ ಬಲಶಾಲಿಗಳ ಜೊತೆ ವೈರವನ್ನು ಸಾಧಿಸುತ್ತಾನೋ ಅವನು, ಶಾಲ್ಮಲಿಯಂತೆ ತಾಪಕ್ಕೆ ಒಳಗಾಗುತ್ತಾನೆ.
ತಸ್ಮಾದ್ವೈರಂ ನ ಕುರ್ವೀತ ದುರ್ಬಲೋ ಬಲವತ್ತರೈಃ |
ಶೋಚೇದ್ಧಿ ವೈರಂ ಕುರ್ವಾಣೋ ಯಥಾ ವೈ ಶಲ್ಮಲಿಸ್ತಥಾ ॥28॥

ಆದ್ದರಿಂದ ದುರ್ಬಲನು ತನಗಿಂತ ಹೆಚ್ಚು ಬಲಶಾಲಿಗಳ ಜೊತೆ ವೈರವನ್ನು ಮಾಡಬಾರದು. ವೈರವನ್ನು ಮಾಡುವವನು ಶಾಲ್ಮಲಿಯಂತೆ ಶೋಕಕ್ಕೆ ಒಳಗಾಗುತ್ತಾನೆ.
ನ ಹಿ ವೈರಂ ಮಹಾತ್ಮಾನೋ ವಿವೃಣ್ವಂತ್ಯಪಕಾರಿಷು |
ಶನೈಃ ಶನೈರ್ಮಹಾರಾಜ ದರ್ಶಯಂತಿ ಸ್ಮ ತೇ ಬಲಮ್ ॥29॥
ಮಹಾತ್ಮರು ಅಪಕಾರಿಗಳಿಗೆ ವೈರದ ವಿವರಣೆಯನ್ನು ಕೊಡುವುದಿಲ್ಲ. ಮಹಾರಾಜ! ಅವರು ನಿಧಾನವಾಗಿ ತಮ್ಮ ಬಲವನ್ನು ತೋರಿಸುತ್ತಾರೆ.
ವೈರಂ ನ ಕುರ್ವೀತ ನರೋ ದುರ್ಬುದ್ಧಿರ್ಬುದ್ಧಿಜೀವಿನಾ |
ಬುದ್ಧಿರ್ಬುದ್ಧಿಮತೋ ಯಾತಿ ತೂಲೇಷ್ವಿವ ಹುತಾಶನಃ ॥30॥
ದುರ್ಬುದ್ಧಿಯವನು ಸುಬುದ್ಧಿಗಳ ಜೊತೆ ವೈರವನ್ನು ಸಾಧಿಸಬಾರದು. ಸುಬುದ್ಧಿಯ ಬುದ್ಧಿಯು ಎಲ್ಲ ಕಡೆ ವ್ಯಾಪಿಸಿರುತ್ತದೆ. ಹತ್ತಿಯ ರಾಶಿಯಲ್ಲಿ ಬೆಂಕಿಯಂತೆ.
ನ ಹಿ ಬುದ್ಧ್ಯಾ ಸಮಂ ಕಿಂಚಿದ್ ವಿದ್ಯತೇ ಪುರುಷೇ ನೃಪ |
ತಥಾ ಬಲೇನ ರಾಜೇಂದ್ರ ನ ಸಮೋಽಸ್ತೀತಿ ಚಿಂತಯೇತ್ ॥31॥
ರಾಜನೇ! ಜನರಲ್ಲಿ ಬುದ್ಧಿಗೆ ಸಮಾನವಾದುದು ಯಾವುದೂ ಇಲ್ಲ. ಬುದ್ಧಿಗೆ ಬಲವು ಸಮಾನ ಎಂದು ಚಿಂತಿಸಬಾರದು.
ತಸ್ಮಾತ್ ಕ್ಷಮೇತ ಬಾಲಾಯ ಜಡಾಯ ಬಧಿರಾಯ ಚ |
ಬಲಾಧಿಕಾಯ ರಾಜೇಂದ್ರ ತದ್ ದೃಷ್ಟಂ ತ್ವಯಿ ಶತ್ರುಹನ್ ॥32॥
ರಾಜೇಂದ್ರ! ಆದ್ದರಿಂದ ಬಾಲನನ್ನೂ, ಜಡನನ್ನೂ, ಕಿವುಡನನ್ನೂ, ಹೆಚ್ಚು ಬಲಶಾಲಿಯನ್ನು ಸಹಿಸಬೇಕು. ಈ ಸಹನೆ ನಿನ್ನಲ್ಲಿ ಕಾಣುತ್ತಿದೆ.
ಅಕ್ಷೌಹಿಣ್ಯೋ ದಶೈಕಾ ಚ ಸಮಮೇವ ಮಹಾದ್ಯುತೇ |
ಬಲೇನ ನ ಸಮಾ ರಾಜನ್ನರ್ಜುನಸ್ಯ ಮಹಾತ್ಮನಃ ॥33॥
ಮಹಾಕಾಂತಿಶಾಲಿಯೇ! ರಾಜನೇ! ಹನ್ನೊಂದು ಅಕ್ಷೋಹಿಣಿ ಸೈನ್ಯವು ಒಟ್ಟಾಗಿಯೂ ಮಹಾತ್ಮನಾದ ಅರ್ಜುನನ ಬಲಕ್ಕೆ ಸಮವಲ್ಲ.
ಹತಾಸ್ತಾಶ್ಚೈವ ಭಗ್ನಾಶ್ಚ ಪಾಂಡವೇನ ಯಶಸ್ವಿನಾ |
ಚರತಾ ಬಲಮಾಸ್ಥಾಯ ಪಾಕಶಾಸನಿನಾ ಮೃಧೇ ॥34॥
ಯಶಸ್ವೀ ಆದ, ಪಾಂಡುಪುತ್ರನಾದ ಇಂದ್ರಸುತನಿಂದ, ರಣರಂಗದಲ್ಲಿ ಬಲವನ್ನು ಅವಲಂಬಿಸಿ ಮುನ್ನುಗ್ಗುತ್ತಾ, ಆ ಹನ್ನೊಂದು ಅಕ್ಷೋಹಿಣಿಯು ಭಂಗ ಮಾಡಲ್ಪಟ್ಟಿತು, ನಾಶಮಾಡಲ್ಪಟ್ಟಿತು.
ಉಕ್ತಾಸ್ತೇ ರಾಜಧರ್ಮಾಶ್ಚ ಆಪದ್ಧರ್ಮಾಶ್ಚ ಭಾರತ |
ವಿಸ್ತರೇಣ ಮಹಾರಾಜ ಕಿಂ ಭೂಯಃ ಪ್ರಬ್ರವೀಮಿ ತೇ ॥35॥
ಭರತಕುಲಸಂಜಾತ! ಮಹಾರಾಜ! ನಿನಗೆ ರಾಜಧರ್ಮಗಳನ್ನೂ, ಆಪದ್ಧರ್ಮಗಳನ್ನೂ ವಿಸ್ತರವಾಗಿ ಹೇಳಿದ್ದೇನೆ. ನಿನಗೆ ಇನ್ನೇನನ್ನು ಹೇಳಲಿ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯವು ಮುಗಿಯಿತು.
* * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಲೋಭವು ಪಾಪದ ಮೂಲ. ಲೋಭಿಗಳಲ್ಲಿರುವ ದುರ್ಗುಣಗಳು.
ಶಿಷ್ಟರು ಮತ್ತು ಅವರಲ್ಲಿರುವ ಸದ್ಗುಣಗಳು. ಶಿಷ್ಟರನ್ನು ಅನುಸರಿಸಬೇಕು.
ಯುಧಿಷ್ಠಿರಃ
ಪಾಪಸ್ಯ ಯದಧಿಷ್ಠಾನಂ ಯತಃ ಪಾಪಂ ಪ್ರವರ್ತತೇ |
ಏತದಿಚ್ಛಾಮ್ಯಹಂ ಜ್ಞಾತುಂ ತತ್ತ್ವೇನ ಭರತರ್ಷಭ ॥1॥
ಭರತರ್ಷಭ! ಪಾಪದ ಮೂಲ ಯಾವುದು? ಅಂದರೆ, ಯಾವ ದೋಷದಿಂದಾಗಿ ಪಾಪಕಾರ್ಯವು ನಡೆಯುತ್ತದೆ? ಇದನ್ನು ಸರಿಯಾಗಿ ತಿಳಿಯಲು ಇಚ್ಛಿಸುತ್ತಿದ್ದೇನೆ.
ಭೀಷ್ಮಃ
ಪಾಪಸ್ಯ ಯದಧಿಷ್ಠಾನಂ ತಚ್ಛೃಣುಷ್ವ ನರಾಧಿಪ |
ಏಕೋ ಲೋಭೋ ಮಹಾಗ್ರಾಹೋ ಲೋಭಾತ್ ಪಾಪಂ ಪ್ರವರ್ತತೇ ॥
ನರಾಧಿಪ! ಪಾಪದ ಮೂಲವನ್ನು ಹೇಳುವೆ. ಕೇಳು. ಲೋಭವೇ ಪಾಪದ ಮೂಲ. ಅದು ದೊಡ್ಡ ಮೊಸಳೆ (ಎಲ್ಲ ಸದ್ಗುಣಗಳನ್ನು ನುಂಗಿಬಿಡುತ್ತದೆ). ಲೋಭದಿಂದ ಪಾಪಕಾರ್ಯವು ನಡೆಯುತ್ತದೆ.
ತತಃ ಪಾಪಾದಧರ್ಮಶ್ಚ ತಥಾ ದುಃಖಮನುತ್ತಮಮ್ |
ನಿಕೃಂತ್ಯಾನ್ಮೂಲಮೇತದ್ಧಿ ಯೇನ ಪಾಪಕೃತೋ ಜನಾಃ ॥3॥
ಪಾಪದಿಂದ ಧರ್ಮವಿರುದ್ಧವಾದ ಕಾರ್ಯಗಳು ಸಂಭವಿಸುತ್ತವೆ ಮತ್ತು ಸಾಟಿಯಿಲ್ಲದ ದುಃಖವೂ ಸಂಭವಿಸುತ್ತದೆ. ಈ ಮೂಲವನ್ನು ಕತ್ತರಿಸಬೇಕು. ಇದರಿಂದಾಗಿಯೆ ಜನರು ಪಾಪಗಳನ್ನು ಮಾಡುತ್ತಾರೆ.
ಲೋಭಾತ್ ಕ್ರೋಧಃ ಪ್ರಭವತಿ ಲೋಭಾತ್ ಕಾಮಃ ಪ್ರವರ್ತತೇ |

ಲೋಭಾನ್ಮೋಹಶ್ಚ ಮಾಯಾ ಚ ಮಾನಸ್ತಂಭಃ ಪರಾಸುತಾ ॥4॥
ಲೋಭದಿಂದ ಕ್ರೋಧವು ಹುಟ್ಟುತ್ತದೆ. ಲೋಭದಿಂದ ಕಾಮವು ಹುಟ್ಟುತ್ತದೆ. ಲೋಭದಿಂದ ಮೋಹವೂ, ಕಪಟವೂ, ಸ್ವಾಭಿಮಾನಹೀನತೆಯೂ, ಪರಾಸುತ್ವವೂ (ಬೇರೆಯವರ ಖರ್ಚಿನಲ್ಲಿ ಜೀವನದ ಅವಶ್ಯಕತೆಗಳನ್ನು ಪೂರೈಸುವ ಮನೋಧರ್ಮ) ಹುಟ್ಟುತ್ತವೆ.
ಅಕ್ಷಮಾ ಹ್ರೀಪರಿತ್ಯಾಗಃ ಶ್ರೀನಾಶೋ ಧರ್ಮಸಂಕ್ಷಯಃ |
ಅಭಿಧ್ಯಾಪ್ರಜ್ಞತಾ ಚೈವ ಸರ್ವಂ ಲೋಭಾತ್ ಪ್ರವರ್ತತೇ ॥5॥
ಅಸಹನೆ, ಲಜ್ಜಾಹೀನತೆ, ಸಂಪತ್ತಿನ / ತೇಜಸ್ಸಿನ ನಾಶ, ಧರ್ಮನಾಶ, ಚಿಂತೆ, ಪ್ರಜ್ಞೆಯ ಕೊರತೆ - ಇವೆಲ್ಲವೂ ಲೋಭದಿಂದ ಉಂಟಾಗುತ್ತವೆ.
ಅನ್ಯಾಯಶ್ಚಾವಿತರ್ಕಶ್ಚ ವಿಕರ್ಮಸು ಚ ಯಾಃ ಕ್ರಿಯಾಃ |
ಕೂಟವಿದ್ಯಾದಯಶ್ಚೈವ ರೂಪೈಶ್ವರ್ಯಮದಸ್ತಥಾ ॥6॥
ಅನ್ಯಾಯ, ವಿರುದ್ಧಯುಕ್ತಿ, ವಿರುದ್ಧಕರ್ಮಗಳು, ವಂಚಿಸುವ ನೈಪುಣ್ಯ, ರೂಪಮದ, ಐಶ್ವರ್ಯಮದ,
ಸರ್ವಭೂತೇಷ್ವವಿಶ್ವಾಸಃ ಸರ್ವಭೂತೇಷ್ವನಾರ್ಜವಮ್ |
ಸರ್ವಭೂತೇಷ್ವಭಿದ್ರೋಹಃ ಸರ್ವಭೂತೇಷ್ವಯುಕ್ತತಾ |
ಹರಣಂ ಪರವಿತ್ತಾನಾಂ ಪರದಾರಾಭಿಮರ್ಶನಮ್ ॥7॥
ಎಲ್ಲರ ಮೇಲೂ ಅವಿಶ್ವಾಸ, ಎಲ್ಲರ ಬಗ್ಗೆ ವಕ್ರ ನಡವಳಿಕೆ, ಎಲ್ಲರಿಗೂ ದ್ರೋಹ, ಎಲ್ಲರ ಬಗ್ಗೆಯೂ ಅನುಚಿತ ವರ್ತನೆ, ಪರವಿತ್ತಾಪಹಾರ, ಪರಪತ್ನಿಯರ ಮೇಲೆ ಗಮನ,
ವಾಗ್ವೇಗೋ ಮಾನಸೋ ವೇಗೋ ನಿಂದಾವೇಗಸ್ತಥೈವ ಚ |
ಉಪಸ್ಥೋದರಯೋರ್ವೇಗೋ ಮೃತ್ಯುವೇಗಶ್ಚ ದಾರುಣಃ ॥8॥
ವೇಗದ ಮಾತುಗಳು, ವೇಗದ ಆಲೋಚನೆಗಳು, ವೇಗದ ನಿಂದೆಗಳು, ಅತಿಹಸಿವು, ಅತಿಯಾದ ಲೈಂಗಿಕ ಕಾಮನೆಗಳು, ದಾರುಣವಾದ ಮೃತ್ಯುವೇಗ (ವೇಗದಿಂದ ಆತ್ಮಹತ್ಯೆ ಇತ್ಯಾದಿಗಳ ಕಡೆ ಪ್ರವೃತ್ತಿ),
ಈರ್ಷ್ಯಾವೇಗಶ್ಚ ಬಲವಾನ್ಮಿಥ್ಯಾವೇಗಶ್ಚ ದುಸ್ತ್ಯಜಃ |
ರಸವೇಗಶ್ಚ ದುರ್ವಾರಃ ಶ್ರೋತ್ರವೇಗಶ್ಚ ದುಃಸಹಃ ॥9॥
ಉತ್ಕಟ ಅಸೂಯೆ, ತಡೆಯಲಾಗದ ಸುಳ್ಳಿನ ವೇಗ, ತಡೆಯಲಾಗದ ಜಿಹ್ವಾಚಾಪಲ್ಯ, ತಡೆಯಲಾಗದ ಕಿವಿಯ ವೇಗ (ಸುದ್ದಿಗಳನ್ನು ಕೇಳುವ ಆತುರ),
ಕುತ್ಸಾ ವಿಕತ್ಥಾ ಮಾತ್ಸರ್ಯಂ ಪಾಪಂ ದುಷ್ಕರಕಾರಿತಾ |
ಸಾಹಸಾನಾಂ ಚ ಸರ್ವೇಷಾಮಕಾರ್ಯಾಣಾಂ ಕ್ರಿಯಾಸ್ತಥಾ ॥10॥
ಪರನಿಂದೆ, ಆತ್ಮಪ್ರಶಂಸೆ, ಮಾತ್ಸರ್ಯ, ಮಾಡಬಾರದ ಕೆಲಸಗಳಲ್ಲಿ ಪ್ರವೃತ್ತಿ, ಮಾಡಬಾರದ ಸಾಹಸಗಳನ್ನು ಮಾಡುವುದು - ಇವೆಲ್ಲವೂ ಲೋಭದ ಪರಿಣಾಮಗಳು.
ಜಾತೌ ಬಾಲ್ಯೇಥ ಕೌಮಾರೇ ಯೌವನೇ ಚಾಪಿ ಮಾನವಃ |
ನ ಸಂತ್ಯಜತ್ಯಾತ್ಮಕರ್ಮ ಯನ್ನ ಜೀರ್ಯತಿ ಜೀರ್ಯತಃ ॥11॥
ಮಾನವನು ಹುಟ್ಟು, ಬಾಲ್ಯ, ಕುಮಾರಸ್ಥಿತಿ, ಯೌವನಗಳಲ್ಲಿ ತನ್ನ ಸ್ವಭಾವವನ್ನು= ಲೋಭವನ್ನು ಬಿಡುವುದಿಲ್ಲ. ದೇಹವೇ ಜೀರ್ಣವಾದರೂ (ಮರಣಾವಸ್ಥೆಯಲ್ಲೂ) ಲೋಭವು ಜೀರ್ಣವಾಗುವುದಿಲ್ಲ (ಇಲ್ಲವಾಗುವುದಿಲ್ಲ).
ಯೋ ನ ಪೂರಯಿತುಂ ಶಕ್ಯೋ ಲೋಭಃ ಪ್ರಾಪ್ತ್ಯಾ ಕುರೂದ್ವಹ |
ನಿತ್ಯಂ ಗಂಭೀರತೋಯಾಭಿರಾಪಗಾಭಿರಿವೋದಧಿಃ |
ನ ಪ್ರಹೃಷ್ಯತಿ ಲಾಭೈರ್ಯೋ ಯಶ್ಚ ಕಾಮೈರ್ನ ತೃಪ್ಯತಿ ॥12॥
ಕುರುಕುಲಸಂಜಾತ! ಪದಾರ್ಥಗಳ ಪ್ರಾಪ್ತಿಯಿಂದ, ಅಪೇಕ್ಷೆಗಳ ಪೂರೈಕೆಯಿಂದ ಲೋಭವನ್ನು ತಣಿಸಲು ಸಾಧ್ಯವಿಲ್ಲ. ಆಳವಾದ ನೀರಿರುವ ನದಿಗಳಿಂದ ಸಮುದ್ರವನ್ನು ತುಂಬಿಸಲು ಆಗುವುದಿಲ್ಲ. ಅಂತೆಯೇ ಲೋಭವು ಲಾಭದಿಂದ ತಣಿಯುವುದಿಲ್ಲ. ಭೋಗವಸ್ತುಗಳಿಂದ ತೃಪ್ತವಾಗುವುದಿಲ್ಲ.
ಯೋ ನ ದೇವೈರ್ನ ಗಂಧರ್ವೈರ್ನಾಸುರೈರ್ನ ಮಹೋರಗೈಃ |
ಜ್ಞಾಯತೇ ನೃಪ ತತ್ತ್ವೇನ ಸರ್ವೈರ್ಭೂತಗಣೈಸ್ತಥಾ |
ಸ ಲೋಭಃ ಸಹ ಮೋಹೇನ ವಿಜೇತವ್ಯೋ ಜಿತಾತ್ಮನಾ ॥13॥
ಲೋಭದ ಸ್ವರೂಪವನ್ನು (ಅದರ ಆಳ-ಅಗಲಗಳನ್ನು) ಯಥಾರ್ಥವಾಗಿ ದೇವತೆಗಳು ತಿಳಿಯಲಾರರು. ಗಂಧರ್ವರು ತಿಳಿಯಲಾರರು. ಅಸುರರು ತಿಳಿಯಲಾರರು. ಮಹಾನಾಗಗಳು ತಿಳಿಯಲಾರರು. ಯಾವ ಚೇತನವೂ ತಿಳಿಯದು. ಈ ಲೋಭವನ್ನು ಮತ್ತು ಮೋಹವನ್ನು ಮನಸ್ಸಿನ ನಿಗ್ರಹದಿಂದಲೇ ಜಯಿಸಬೇಕು.
ದಂಭೋ ದ್ರೋಹಶ್ಚ ನಿಂದಾ ಚ ಪೈಶುನ್ಯಂ ಮತ್ಸರಸ್ತಥಾ |
ಭವಂತ್ಯೇತಾನಿ ಕೌರವ್ಯ ಲುಬ್ಧಾನಾಮಕೃತಾತ್ಮನಾಮ್ ॥14॥
ಕುರುಕುಲಸಂಜಾತ! ಅಶುದ್ಧ ಮನಸ್ಸಿನ ಲೋಭಿಗಳಲ್ಲಿ, ಡಂಭ (ಇಲ್ಲದ ಉತ್ಕರ್ಷಗಳ ಪ್ರದರ್ಶನ) ದ್ರೋಹ, ಪರನಿಂದೆ, ಚಾಡಿಕೋರತನ, ಮಾತ್ಸರ್ಯ- ಇವುಗಳು ಇರುತ್ತವೆ.
ಸುಮಹಾಂತ್ಯಪಿ ಶಾಸ್ತ್ರಾಣಿ ಧಾರಯಂತಿ ಬಹುಶ್ರುತಾಃ |
ಛೇತ್ತಾರಃ ಸಂಶಯಾನಾಂ ಚ ಕ್ಲಿಶ್ಯಂತೀಹಾಲ್ಪಬುದ್ಧಯಃ ॥15॥

ಮಹಾ ಮಹಾಶಾಸ್ತ್ರಗಳನ್ನು ಧರಿಸಿರುತ್ತಾರೆ. ಬಹುಶ್ರುತರಾಗಿರುತ್ತಾರೆ. ನಾನಾ ಸಂಶಯಗಳನ್ನು ಪರಿಹರಿಸುತ್ತಾರೆ. ಆದರೂ ಸಣ್ಣಬುದ್ಧಿಯವರಾಗಿರುತ್ತಾರೆ. ಲೋಭದಿಂದ ಕ್ಲೇಶಪಡುತ್ತಾರೆ.
ದ್ವೇಷಕ್ರೋಧಪ್ರಸಕ್ತಾಶ್ಚ ಶಿಷ್ಟಾಚಾರಬಹಿಷ್ಕೃತಾಃ |
ಅಂತಃಕ್ಷುರಾ ವಾಙ್ಮಧುರಾಃ ಕೂಪಾಶ್ಛನ್ನಾಸ್ತೃಣೈರಿವ |
ಧರ್ಮವೈತಂಸಿಕಾಃ ಕ್ಷುದ್ರಾ ಮುಷ್ಣಂತಿ ಧ್ವಜಿನೋ ಜಗತ್ ॥16॥
ಲೋಭಿಗಳಲ್ಲಿ ದ್ವೇಷ-ಕ್ರೋಧಗಳು ಗಾಢವಾಗಿ ಅಂಟಿರುತ್ತವೆ. ಶಿಷ್ಟಾಚಾರವು ಅವರಿಂದ ಹೊರಗೇ ಇರುತ್ತದೆ. ಅವರ ಅಂತಃಕರಣವು ಕತ್ತಿಯ ಅಲಗು. ಮಾತು ಮಧುರ. ಹುಲ್ಲಿನ ಹೊದಿಕೆಯನ್ನು ಹೊದ್ದ ಭಾವಿಯಂತೆ. ಇವರು ಧರ್ಮದ ವರ್ತಕರು. ಕ್ಷುದ್ರರು. ಧರ್ಮದ ಧ್ವಜವನ್ನು ಹಿಡಿದವರು (ಧರ್ಮನಿಷ್ಠರಾಗದೆ ಧರ್ಮನಿಷ್ಠರೆಂದು ಜನರು ನಂಬುವಂತೆ ಲಾಂಛನಗಳನ್ನು ಧರಿಸಿದವರು). ಇವರು ಜಗತ್ತನ್ನೇ ಕದಿಯುತ್ತಾರೆ.
ಕುರ್ವತೇ ಚ ಬಹೂನ್ ಮಾರ್ಗಾಂಸ್ತಾಂಸ್ತಾನ್ ಹೇತುಬಲಾಶ್ರಿತಾಃ |
ಸರ್ವಂ ಮಾರ್ಗಂ ವಿಲುಂಪಂತಿ ಲೋಭಾಜ್ಞಾನೇಷು ನಿಷ್ಠಿತಾಃ ॥17॥
ಯುಕ್ತಿ ಬಲದಿಂದ ನಾನಾ ಮಾರ್ಗಗಳನ್ನು ಸೃಷ್ಟಿಸುತ್ತಾರೆ. ಲೋಭ-ಅಜ್ಞಾನಗಳಲ್ಲಿ ದೃಢನಿಷ್ಠೆವುಳ್ಳವರಾಗಿ ಸಜ್ಜನರ ಮಾರ್ಗಗಳನ್ನು ನಾಶಮಾಡುತ್ತಾರೆ.
ಧರ್ಮಸ್ಯಾಹ್ರಿಯಮಾಣಸ್ಯ ಲೋಭಗ್ರಸ್ತೈರ್ದುರಾತ್ಮಭಿಃ |
ಯಾ ಯಾ ವಿಕ್ರಿಯತೇ ಸಂಸ್ಥಾ ತಥಾ ಸಾಪಿ ಪ್ರಪದ್ಯತೇ ॥18॥
ಲೋಭಗ್ರಸ್ತರಾದ ದುರಾತ್ಮರು ಧರ್ಮವನ್ನು ಅಪಹರಿಸುತ್ತಾರೆ. ಈ ಅಪಹಾರದಿಂದ ನಾನಾ ವ್ಯವಸ್ಥೆಗಳು ವಿಕೃತವಾಗುತ್ತವೆ. ಅನಂತರ ಆ ವ್ಯವಸ್ಥೆಯೂ ವಿಕಾರಕ್ಕೆ ಒಳಗಾಗುತ್ತದೆ. (ಅನಂತರ ಪರಲೋಕಯಾತನೆಯು ಪ್ರಾಪ್ತವಾಗುತ್ತದೆ- ಲಕ್ಷಾಲಂಕಾರ).
ದರ್ಪಃ ಕ್ರೋಧೋ ಮದಃ ಸ್ವಪ್ನೋ ಹರ್ಷಃ ಶೋಕೋಽತಿಮಾನಿತಾ |
ತತ ಏವ ಹಿ ಕೌರವ್ಯ ದೃಶ್ಯಂತೇ ಲುಬ್ಧಬುದ್ಧಿಷು |
ಏತಾನಶಿಷ್ಟಾನ್ ಬುಧ್ಯಸ್ವ ನಿತ್ಯಂ ಲೋಭಸಮನ್ವಿತಾನ್ ॥19॥
ಕುರುಕುಲಸಂಜಾತ! ಲೋಭಿಗಳಲ್ಲಿ ಲೋಭದಿಂದಾಗಿಯೇ ದರ್ಪ, ಕ್ರೋಧ, ಮದ, ನಿದ್ರೆ, ಹರ್ಷ, ಶೋಕ, ದುರಹಂಕಾರ- ಇವುಗಳು ಕಾಣಿಸಿಕೊಳ್ಳುತ್ತವೆ. ಸದಾ ಲೋಭಿಗಳಾದ ಇವರನ್ನು ಅಶಿಷ್ಟರು ಎಂದು ತಿಳಿ.
ಶಿಷ್ಟಾಂಸ್ತು ಪರಿಪೃಚ್ಛೇಥಾ ಯಾನ್ ವಕ್ಷ್ಯಾಮಿ ಶುಚಿವ್ರತಾನ್ |
ಯೇಷ್ವಾವೃತ್ತಿಭಯಂ ನಾಸ್ತಿ ಪರಲೋಕಭಯಂ ನ ಚ ॥20॥
ಶಿಷ್ಟರು ಯಾರು ಎಂದು ನೀನು ಕೇಳಿರುವೆ. ಅವರನ್ನು ಕುರಿತು ಹೇಳುತ್ತೇನೆ. ಕೇಳು. ಅವರು ದೇಹ-ಇಂದ್ರಿಯ-ಮನಸ್ಸುಗಳು ಶುಚಿಯಾಗಿರಲು ಅನುಕೂಲವಾದ ಕೆಲಸಗಳಲ್ಲಿ ದೀಕ್ಷೆವುಳ್ಳವರಾಗಿರುತ್ತಾರೆ. ಅವರಲ್ಲಿ ಹೊಟ್ಟೆಗಾಗಿ ಅಲೆದಾಟವಿಲ್ಲ. ಅಲೆದಾಟದಿಂದ ಹುಟ್ಟುವ ಭಯವಿಲ್ಲ. (ಪುಣ್ಯಶೀಲರಾದ್ದರಿಂದ-ಲಕ್ಷಾಲಂಕಾರ). ಪರಲೋಕದ ಭಯವಿಲ್ಲ. ಅಂದರೆ ಯಮದೂತರ ಭಯವಿಲ್ಲ.
ನಾಮಿಷೇಷು ಪ್ರಸಂಗೋಽಸ್ತಿ ನ ಪ್ರಿಯೇಷ್ವಪ್ರಿಯೇಷು ಚ |
ಶಿಷ್ಟಾಚಾರಃ ಪ್ರಿಯೋ ಯೇಷು ಶ್ರುತಂ ಯೇಷಾಂ ಪರಾಯಣಮ್ ॥
ಅವರು ಆಮಿಷಗಳಿಗೆ ಅಂಟಿಕೊಳ್ಳುವುದಿಲ್ಲ. ಪ್ರಿಯ-ಅಪ್ರಿಯಗಳ ದ್ವಂದ್ವಕ್ಕೆ ಅಂಟಿಕೊಳ್ಳುವುದಿಲ್ಲ. ಅವರಿಗೆ ಶಿಷ್ಟಾಚಾರವು ಪ್ರಿಯ. ಶಾಸ್ತ್ರಾಧ್ಯಯನವು ಅವರ ಶ್ರೇಷ್ಠ ಆಸಕ್ತಿ.
ಸುಖಂ ದುಃಖಂ ಸಮಂ ಯೇಷಾಂ ಸತ್ಯಂ ಯೇಷಾಂ ಪರಾಯಣಮ್|
ದಾತಾರೋ ನ ಗೃಹೀತಾರೋ ದಯಾವಂತಸ್ತಥೈವ ಚ ॥22॥
ಅವರು ಸುಖ-ದುಃಖಗಳನ್ನು ಸಮವಾಗಿ ಕಾಣುತ್ತಾರೆ. ಅವರಿಗೆ ಸತ್ಯದಲ್ಲಿ ಪರಮನಿಷ್ಠೆ. ದಾನ ಮಾಡುತ್ತಾರೆ. ಪರಿಗ್ರಹವನ್ನು ಮಾಡುವುದಿಲ್ಲ. ದಯಾವಂತರು.
ಪಿತೃದೇವಾತಿಥೇಯಾಶ್ಚ ನಿತ್ಯೋದ್ಯುಕ್ತಾಸ್ತಥೈವ ಚ |
ಸರ್ವೋಪಕಾರಿಣೋ ಧೀರಾಃ ಸರ್ವದೇಯಾಶ್ಚ ಭಾರತ ॥23॥
ಭರತಕುಲಸಂಜಾತ! ಪಿತೃಗಳನ್ನು, ದೇವತೆಗಳನ್ನು, ಅತಿಥಿಗಳನ್ನು ಸತ್ಕರಿಸುತ್ತಾರೆ. ನಿತ್ಯವೂ ಉತ್ಕೃಷ್ಟ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಎಲ್ಲರಿಗೂ ಉಪಕಾರ ಮಾಡುತ್ತಾರೆ. ಜ್ಞಾನಾಸಕ್ತರೂ-ವಿಕಾರರಹಿತರೂ ಆಗಿರುತ್ತಾರೆ. ಎಲ್ಲವನ್ನು ದಾನ ಮಾಡುತ್ತಾರೆ.
ಸರ್ವಭೂತಹಿತಾಶ್ಚೈವ ಸರ್ವದೇಯಾಶ್ಚ ಭಾರತ |
ನ ತೇ ಚಾಲಯಿತುಂ ಶಕ್ಯಾ ಧರ್ಮವ್ಯಾಪಾರಪಾರಗಾಃ ॥24॥
ಎಲ್ಲ ಪ್ರಾಣಿಗಳಿಗೂ ಹಿತವನ್ನು ಮಾಡುತ್ತಾರೆ. ಎಲ್ಲವನ್ನೂ ದಾನ ಮಾಡುತ್ತಾರೆ. ಅವರನ್ನು ಅಲುಗಾಡಿಸಲು ಆಗುವುದಿಲ್ಲ. ಧರ್ಮಕಾರ್ಯಗಳಲ್ಲಿ ಪಾರಂಗತರಾಗಿರುತ್ತಾರೆ.
ನ ತೇಷಾಂ ಭಿದ್ಯತೇ ವೃತ್ತಂ ಯತ್ ಪುರಾ ಸಾಧುಭಿಃ ಕೃತಮ್ |
ನ ತ್ರಾಸಿನೋ ನ ಚಪಲಾ ನ ರೌದ್ರಾಃ ಸತ್ಪಥೇ ಸ್ಥಿತಾಃ ॥25॥
ಪೂರ್ವಕಾಲದ ಸಜ್ಜನರು ಆಚರಿಸಿದ ಕರ್ಮಗಳನ್ನೇ ಅವರು ಆಚರಿಸುತ್ತಾರೆ. ಅವರ ನಡವಳಿಕೆಯಲ್ಲಿ ಒಡಕು ಉಂಟಾಗುವುದಿಲ್ಲ. ಅವರಿಗೆ ಆತಂಕವಿಲ್ಲ. ಚಪಲವಿಲ್ಲ. ಉಗ್ರರಲ್ಲ. ಸನ್ಮಾರ್ಗದಲ್ಲೇ ಇರುತ್ತಾರೆ.
ತೇ ಸೇವ್ಯಾಃ ಸಾಧುಭಿರ್ನಿತ್ಯಂ ಯೇಷ್ವಹಿಂಸಾ ಪ್ರತಿಷ್ಠಿತಾ |

ಕಾಮಕ್ರೋಧವ್ಯಪೇತಾ ಯೇ ನಿರ್ಮಮಾ ನಿರಹಂಕೃತಾಃ |
ಸುವ್ರತಾಃ ಸ್ಥಿರಮರ್ಯಾದಾಸ್ತಾನುಪಾಸ್ಸ್ವ ಚ ಪೃಚ್ಛ ಚ ||26||
ಅವರಲ್ಲಿ ಅಹಿಂಸಾಚರಣೆಯು ಅಚಲವಾಗಿದೆ. ಅವರಲ್ಲಿ ಕಾಮ-ಕ್ರೋಧಗಳಿಲ್ಲ. ನಾನು- ನನ್ನದು ಎನ್ನುವ ಹಾನಿಕರ ಭಾವಗಳಿಲ್ಲ. ಒಳ್ಳೆಯ ಆಚರಣೆಗಳಲ್ಲಿ ನಿಷ್ಠೆವುಳ್ಳವರು. ಔಚಿತ್ಯದ ಎಲ್ಲೆಯನ್ನು ಮೀರದವರು. ಸಾಧುಜನಗಳು ಅವರನ್ನು ಅನುಸರಿಸಬೇಕು. ಅವರ ಸಾಮೀಪ್ಯದಲ್ಲಿರಬೇಕು. ಅವರನ್ನು ಕೇಳಿ ತಿಳಿದುಕೊಳ್ಳಬೇಕು.
ನ ವಾಗರ್ಥಂ ಯಶೋರ್ಥಂ ವಾ ಧರ್ಮಸ್ತೇಷಾಂ ಯುಧಿಷ್ಠಿರ |
ನ ರಕ್ಷ್ಯಂ ಕಾಯಮಿತ್ಯೇವ ಶರೀರಸ್ಯ ಕ್ರಿಯಾ ಯಥಾ ||27||
ಯುಧಿಷ್ಠಿರ! ಅವರ ಧರ್ಮಾಚರಣೆಯು ಹೇಳಿಕೊಳ್ಳುವುದಕ್ಕಾಗಿ ಅಲ್ಲ. ಕೀರ್ತಿಗಾಗಿಯೂ ಅಲ್ಲ. ಶರೀರದ ರಕ್ಷಣೆಗಾಗಿ ಅವರು ಆಹಾರವನ್ನು ತೆಗೆದುಕೊಳ್ಳುವುದಿಲ್ಲ. ಶರೀರವು ಕ್ರಿಯಾಶೀಲವಾಗಿರುವುದಕ್ಕಾಗಿ ತೆಗೆದುಕೊಳ್ಳುತ್ತಾರೆ.
ನ ಭಯಂ ಕ್ರೋಧಚಾಪಲ್ಯಂ ನ ಶೋಕಸ್ತೇಷು ವಿದ್ಯತೇ |
ನ ಧರ್ಮಧ್ವಜಿನಶ್ಚೈವ ನ ಗುಹ್ಯಂ ಕಿಂಚಿದಾಸ್ಥಿತಾಃ ||28||
ಅವರಲ್ಲಿ ಭಯವಿಲ್ಲ. ಕ್ರೋಧ-ಚಾಪಲ್ಯಗಳಿಲ್ಲ. ಶೋಕವಿಲ್ಲ. ಧರ್ಮಾಚರಣೆ ಇಲ್ಲದೆ ಧರ್ಮನಿಷ್ಠರೆಂದು ತೋರಿಸಿಕೊಳ್ಳುವುದಕ್ಕಾಗಿ ಲಾಂಛನಧಾರಿಗಳಲ್ಲ. ಅವರಲ್ಲಿ ಮುಚ್ಚಿಡಬೇಕಾದ ಯಾವ ಸಂಗತಿಯೂ ಇಲ್ಲ.
ಯೇಷ್ವಲೋಭಸ್ತಥಾಮೋಹೋ ಯೇ ಚ ಸತ್ಯಾರ್ಜವೇ ರತಾಃ |
ತೇಷು ಕೌಂತೇಯ ರಜ್ಯೇಥಾ ಯೇಷ್ವತಂದ್ರೀಕೃತಂ ಮನಃ ||29||
ಕುಂತೀಸುತ! ಅವರಲ್ಲಿ ಲೋಭವಿಲ್ಲ. ಮೋಹವಿಲ್ಲ. ಸತ್ಯ ಮತ್ತು ಆರ್ಜವದಲ್ಲಿ ರತರು. ಅವರ ಮನಸ್ಸಿನಲ್ಲಿ ಬಳಲಿಕೆ ಇಲ್ಲ, ಆಲಸ್ಯವಿಲ್ಲ. ಈ ಜನಗಳಲ್ಲಿ ಅನುರಕ್ತನಾಗು.
ಯೇ ನ ಹೃಷ್ಯಂತಿ ಲಾಭೇಷು ನಾಲಾಭೇಷು ವ್ಯಥಂತಿ ಚ |
ನಿರ್ಮಮಾ ನಿರಹಂಕಾರಾಃ ಸತ್ತ್ವಸ್ಥಾಃ ಸಮದರ್ಶಿನಃ ||30||
ಅವರು ಲಾಭವಾದಾಗ ಹರ್ಷಿಸುವುದಿಲ್ಲ. ಲಾಭವಾಗದಿದ್ದಾಗ ವ್ಯಥಿಸುವುದಿಲ್ಲ. ಅವರಿಗೆ ಮಮಕಾರವಿಲ್ಲ, ಅಹಂಕಾರವಿಲ್ಲ. ಸತ್ವಗುಣನಿಷ್ಠರು, ಸಮದರ್ಶಿಗಳು.
ಲಾಭಾಲಾಭೌ ಸುಖದುಃಖೇ ಚ ತಾತ
ಪ್ರಿಯಾಪ್ರಿಯೇ ಮರಣಂ ಜೀವಿತಂ ಚ |
ಸಮಾನಿ ಯೇಷಾಂ ಸ್ಥಿರವಿಕ್ರಮಾಣಾಂ
ಬುದ್ಧಾತ್ಮನಾಂ ಸತ್ತ್ವಮವಸ್ಥಿತಾನಾಮ್ ||31||
ಸ್ಥಿರವಾದ ವಿಶಿಷ್ಟ ಹೆಜ್ಜೆಗಳನ್ನು ಇಟ್ಟಿರುವ, ಪ್ರಬುದ್ಧ ಮನಸ್ಸಿನವರಾದ, ಸತ್ವಗುಣವನ್ನು ವಿಪುಲವಾಗಿ ಹೊಂದಿರುವ ಈ ಸಾಧಕರಿಗೆ ಲಾಭ-ಅಲಾಭ, ಸುಖ-ದುಃಖ, ಪ್ರಿಯ-ಅಪ್ರಿಯ, ಹುಟ್ಟು-ಸಾವು - ಇವುಗಳು ಸಮ. ಒಂದು ಹೆಚ್ಚಲ್ಲ. ಒಂದು ಕಡಿಮೆ ಅಲ್ಲ.
ಧರ್ಮಪ್ರಿಯಾಂಸ್ತಾನ್ ಸುಮಹಾನುಭಾವಾನ್
ದಾಂತೋಽಪ್ರಮತ್ತಶ್ಚ ಸಮರ್ಚಯೇಥಾಃ |
ದೈವಾತ್ ಸರ್ವೇ ಗುಣವಂತೋ ಭವಂತಿ
ಶುಭಾಶುಭಾ ವಾಕ್ಪ್ರಲಾಪಾ ಯಥೈವ ||32||
ಧರ್ಮಪ್ರಿಯರಾದ, ಶ್ರೇಷ್ಠ ಮಹಾನುಭಾವರಾದ ಅವರನ್ನು ಸಂಯಮ ಮತ್ತು ಜಾಗರೂಕತೆಗಳಿಂದ ಪೂಜಿಸು. ಗುಣಸಂಪನ್ನರೆಲ್ಲರೂ ದೈವಬಲದಿಂದ ಗುಣಸಂಪನ್ನರಾಗಿರುತ್ತಾರೆ. ದೈವಬಲವಿಲ್ಲದವರು ಶುಭ-ಅಶುಭ ಫಲಗಳ ಬಗ್ಗೆ ಆಡುವ ಮಾತುಗಳು ಅಸಂಬದ್ಧ ಪ್ರಲಾಪ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಚತುರ್ವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ನಾಲ್ಕನೆಯ
ಅಧ್ಯಾಯವು ಮುಗಿಯಿತು.
* * * *

ಇಪ್ಪತ್ತೈದನೆಯ ಅಧ್ಯಾಯ
ಲೋಭದಿಂದ ಅಜ್ಞಾನವು ಮತ್ತು ಅಜ್ಞಾನದಿಂದ ಲೋಭವು ಹೆಚ್ಚುತ್ತದೆ. ಇವೆರಡರಿಂದ ರಾಗ, ದ್ವೇಷ, ಕ್ರೋಧ ಮೊದಲಾದ ಹಾನಿಕರ ಸ್ಥಿತಿಗಳು ಏರ್ಪಡುತ್ತವೆ. ಲೋಭವನ್ನು ತ್ಯಜಿಸಿದವರಿಗೆ ಸದ್ಗತಿಯಾಗುತ್ತದೆ.
ಯುಧಿಷ್ಠಿರಃ
ಅಮನ್ವತಾಮಧಿಷ್ಠಾನಮುಕ್ತೋ ಲೋಭಃ ಪಿತಾಮಹ |
ಅಜ್ಞಾನಮಪಿ ವೈ ತಾತ ಶ್ರೋತುಮಿಚ್ಛಾಮಿ ತತ್ತ್ವತಃ ||1||
ಪಿತಾಮಹ! ಪಾಪದ ಮೂಲವನ್ನು ತಿಳಿಯದವರಿಗೆ ಲೋಭವು ಪಾಪದ ಮೂಲ ಎಂದು ಹೇಳಿದಿರಿ. ಪ್ರಿಯ ಪಿತಾಮಹ! ಅಜ್ಞಾನವನ್ನು ಕುರಿತು ಯಥಾರ್ಥ ವಿಷಯಗಳನ್ನು ಕೇಳಲು ಬಯಸುತ್ತಿದ್ದೇನೆ.
ಭೀಷ್ಮಃ
ಕರೋತಿ ಪಾಪಂ ಯೋಽಜ್ಞಾನಾನ್ನಾತ್ಮನೋ ವೇತ್ತಿ ಚ ಕ್ಷಯಮ್ |

ಪ್ರದ್ವೇಷ್ಟಿ ಸಾಧುವೃತ್ತಾಂಶ್ಚ ಸ ಲೋಕಸ್ಯೈತಿ ವಾಚ್ಯತಾಮ್ ॥2॥
ಯಾರು ಅಜ್ಞಾನದಿಂದ ಪಾಪವನ್ನು ಮಾಡುತ್ತಾನೋ, ಅದರಿಂದ ತನಗೆ ಆಗುವ ಹಾನಿಯನ್ನು ತಿಳಿಯುವುದಿಲ್ಲವೋ, ಸದ್ವರ್ತನೆಗಳನ್ನು ದ್ವೇಷಿಸುತ್ತಾನೋ ಅವನು ಲೋಕದ ನಿಂದೆಗೆ ಗುರಿಯಾಗುತ್ತಾನೆ.
ಅಜ್ಞಾನಾನ್ನಿರಯಂ ಯಾತಿ ತಥಾಜ್ಞಾನೇನ ದುರ್ಗತಿಮ್ |
ಅಜ್ಞಾನಾತ್ ಕ್ಲೇಶಮಾಪ್ನೋತಿ ತಥಾಪತ್ಸು ನಿಮಜ್ಜತಿ ॥3॥
ಅಜ್ಞಾನದಿಂದ ನರಕಕ್ಕೆ ಹೋಗುತ್ತಾನೆ. ಅಜ್ಞಾನದಿಂದ ದುರ್ಗತಿಯನ್ನು ಹೊಂದುತ್ತಾನೆ. ಅಜ್ಞಾನದಿಂದ ಕ್ಲೇಶವನ್ನು ಹೊಂದುತ್ತಾನೆ. ಮತ್ತು ಆಪತ್ತಿನಲ್ಲಿ ಮುಳುಗುತ್ತಾನೆ.
ಯುಧಿಷ್ಠಿರಃ
ಅಜ್ಞಾನಸ್ಯ ಪ್ರವೃತ್ತಿಂ ಚ ಸ್ಥಾನಂ ವೃದ್ಧಿಂ ಕ್ಷಯೋದಯೌ |
ಮೂಲಂ ಯೋಗಂ ಗತಿಂ ಕಾಲಂ ಕಾರಣಂ ಹೇತುಮೇವ ಚ ॥4॥
ಶ್ರೋತುಮಿಚ್ಛಾಮಿ ತತ್ತ್ವೇನ ಯಥಾವದಿಹ ಪಾರ್ಥಿವ |
ಅಜ್ಞಾನಪ್ರಭವಂ ಹೀದಂ ಯದ್ ದುಃಖಮುಪಲಭ್ಯತೇ ॥5॥
ಪಿತಾಮಹ! ಅಜ್ಞಾನದ (ಅಜ್ಞಾನದಿಂದ ಉಂಟಾಗುವ) ಪ್ರವೃತ್ತಿ, ಸ್ಥಿತಿ, ವೃದ್ಧಿ, ಕ್ಷಯ, ಉದಯ, ಮೂಲ, ಯೋಗ, ಕಾಲ, ಕಾರಣ, ಯುಕ್ತಿ - ಇವುಗಳನ್ನು ಯಥಾರ್ಥವಾಗಿ ತಿಳಿಯಲು ಬಯಸುತ್ತೇನೆ. ಲೋಕದಲ್ಲಿ ಗಮನಕ್ಕೆ ಬರುತ್ತಿರುವ ಎಲ್ಲ ದುಃಖಗಳಿಗೂ ಅಜ್ಞಾನವೇ ಮೂಲಕಾರಣ.
ಭೀಷ್ಮಃ
ರಾಗೋ ದ್ವೇಷಸ್ತಥಾ ಮೋಹೋ ಹರ್ಷಃ ಶೋಕೋಽಭಿಮಾನಿತಾ |
ಕಾಮಃ ಕ್ರೋಧಶ್ಚ ದರ್ಪಶ್ಚ ತಂದ್ರೀರಾಲಸ್ಯಮೇವ ಚ ॥6॥
ಇಚ್ಛಾ ದ್ವೇಷಸ್ತಥಾ ತಾಪಃ ಪರವೃದ್ಧ್ಯುಪತಾಪಿತಾ |
ಅಜ್ಞಾನಮೇತನ್ನಿರ್ದಿಷ್ಟಂ ಪಾಪಾನಾಂ ಚೈವ ಯಾಃ ಕ್ರಿಯಾಃ ॥7॥
ರಾಜನ್! ರಾಗ, ದ್ವೇಷ, ಮೋಹ, ಹರ್ಷ, ಶೋಕ, ಅಭಿಮಾನ, ಕಾಮ, ಕ್ರೋಧ, ದರ್ಪ, ಶ್ರಮ, ಆಲಸ್ಯ, ಇಚ್ಛೆ, ವೈರ, ತಾಪ, ಪರರ ಉನ್ನತಿಯನ್ನು ನೋಡಿ ಪರಿತಾಪ, ಪಾಪಜನಕವಾದ ಎಲ್ಲ ಕ್ರಿಯೆಗಳು - ಇವುಗಳು ಅಜ್ಞಾನದ ಪರಿಣಾಮ ಎಂದು ಹೇಳಲ್ಪಟ್ಟಿದೆ.
ಏತಸ್ಯ ಯಾ ಪ್ರವೃತ್ತಿಶ್ಚ ವೃದ್ಧ್ಯಾದೀನ್ ಯಾಂಶ್ಚ ಪೃಚ್ಛಸಿ |
ವಿಸ್ತರೇಣ ಮಹಾಬಾಹೋ ಶೃಣು ತಚ್ಚ ವಿಶಾಂ ಪತೇ ॥8॥
ಈ ಅಜ್ಞಾನದ ಪ್ರವೃತ್ತಿ, ಅದರ ವೃದ್ಧಿ ಮೊದಲಾದವುಗಳನು ತಿಳಿಸಲು ಕೇಳಿರುವಿ. ಮಹಾಬಾಹುವೇ! ಇವುಗಳ ಬಗ್ಗೆ ವಿಸ್ತಾರವಾಗಿ ಹೇಳುವೆ. ಕೇಳು.
ಉಭಾವೇತೌ ಸಮಫಲೌ ಸಮದೋಷೌ ಚ ಭಾರತ |
ಅಜ್ಞಾನಂ ಚಾತಿಲೋಭಶ್ಚಾಪ್ಯೇಕಂ ಜಾನೀಹಿ ಪಾರ್ಥಿವ ॥9॥
ಭರತಕುಲಸಂಜಾತ! ರಾಜನ್! ಅಜ್ಞಾನ ಮತ್ತು ಅತಿಲೋಭ ಇವೆರಡರಿಂದ ಆಗುವ ಫಲ ಒಂದೇ ವಿಧವಾದುದು. ಅವುಗಳ ದೋಷವೂ ಸಮಾನವೇ. ಅಜ್ಞಾನ ಮತ್ತು ಅತಿಲೋಭ - ಇವೆರಡನ್ನು ಒಂದೇ ಎಂದು ತಿಳಿ.
ಲೋಭಪ್ರಭವಮಜ್ಞಾನಂ ವೃದ್ಧಂ ಭೂಯಃ ಪ್ರವರ್ಧತೇ |
ಸ್ಥಾನೇ ಸ್ಥಾನಂ ಕ್ಷಯೇ ಕ್ಷೈಣ್ಯಮುಪೈತಿ ವಿವಿಧಾಂ ಗತಿಮ್ ॥10॥
ಅಜ್ಞಾನವು ಲೋಭದಿಂದ ಹುಟ್ಟುತ್ತದೆ. ಲೋಭದಿಂದ ಅಜ್ಞಾನವು ಹುಟ್ಟುತ್ತದೆ. ಬೆಳೆಯುತ್ತದೆ. ಮತ್ತೆ ಬೆಳೆಯುತ್ತದೆ. ಲೋಭವಿರುವವರೆಗೂ ಅಜ್ಞಾನವಿರುತ್ತದೆ. ಅದು ಕ್ಷೀಣಿಸಿದರೆ ಅಜ್ಞಾನವು ಕ್ಷಯಿಸುತ್ತದೆ. ಇವೆರಡು ಜೀವಾತ್ಮನ ನಾನಾ ಗತಿಗಳಿಗೆ ಕಾರಣ.
ಮೂಲಂ ಲೋಭಸ್ಯ ಮಹತಃ ಕಾಲಾತ್ಮಗತಿರೇವ ಚ |
ಛಿನ್ನೇಽಚ್ಛಿನ್ನೇ ತಥಾ ಲೋಭೇ ಕಾರಣಂ ಕಾಲ ಏವ ಹಿ ॥11॥
ಕಾಲ ಪುರುಷನ ಗತಿಯೇ ಮಹಾಲೋಭದ ಮೂಲಕಾರಣ. ಲೊಭವು ಛಿನ್ನವಾದರೆ ಇದಕ್ಕೆ ಕಾಲವೇ ಕಾರಣ. ಛಿನ್ನವಾಗದಿದ್ದರೆ, ಇದಕ್ಕೂ ಕಾಲವೇ ಕಾರಣ.
ತಸ್ಯಾಜ್ಞಾನಾತ್ತು ಲೋಭೋ ಹಿ ಲೋಭಾದಜ್ಞಾನಮೇವ ಚ |
ಸರ್ವೇ ದೋಷಾಸ್ತಥಾ ಲೋಭಾತ್ತಸ್ಮಾಲ್ಲೋಭಂ ವಿವರ್ಜಯೇತ್ ॥12॥
ಅಜ್ಞಾನದಿಂದ ಲೋಭ ಮತ್ತು ಲೋಭದಿಂದ ಅಜ್ಞಾನವು ಉಂಟಾಗುತ್ತದೆ. ಎಲ್ಲ ದೋಷಗಳಿಗೂ ಲೋಭವೇ ಕಾರಣ. ಆದ್ದರಿಂದ ಲೋಭವನ್ನು ತ್ಯಜಿಸಬೇಕು.
ಜನಕೋ ಯುವನಾಶ್ವಶ್ಚ ವೃಷಾದರ್ಭಿಃ ಪ್ರಸೇನಜಿತ್ |
ಲೋಭಕ್ಷಯಾದ್ ದಿವಂ ಪ್ರಾಪ್ತಾಸ್ತಥೈವಾನ್ಯೇ ಜನಾಧಿಪಾಃ ॥13॥
ಜನಕ, ಯುವನಾಶ್ವ, ವೃಷಾದರ್ಭಿ, ಪ್ರಸೇನಜಿತ್ ಮತ್ತು ಇತರ ರಾಜರುಗಳು ಲೋಭವನ್ನು ನಾಶಮಾಡಿ (ಬಿಟ್ಟು) ಸ್ವರ್ಗವನ್ನು ಹೊಂದಿದರು.
ಪ್ರತ್ಯಕ್ಷಂ ತು ಕುರುಶ್ರೇಷ್ಠ ತ್ಯಜ ಲೋಭಮಿಹಾತ್ಮನಾ |
ತ್ಯಕ್ತ್ವಾ ಲೋಭಂ ಸುಖಂ ಲೋಕೇ ಪ್ರೇತ್ಯ ಚಾನುಚರಿಷ್ಯಸಿ ॥14॥
ಕುರುಶ್ರೇಷ್ಠ! ಎಲ್ಲ ಕಡೆ ಕಾಣುತ್ತಿರುವ ಈ ಲೋಭವನ್ನು ಮನೋಬಲದಿಂದ ಬಿಡು. ಲೋಭವನ್ನು ತ್ಯಜಿಸಿ ಈ ಲೋಕದಲ್ಲಿ ಮತ್ತು

ಪರಲೋಕದಲ್ಲಿ ಸುಖವಾಗಿರುವಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.
ಇಪ್ಪತ್ತಾರನೆಯ ಅಧ್ಯಾಯ
ದಮದ ಮಹತ್ವ.
ಯುಧಿಷ್ಠಿರಃ
ಸ್ವಾಧ್ಯಾಯಕೃತಯತ್ನಸ್ಯ ಬ್ರಾಹ್ಮಣಸ್ಯ ಪಿತಾಮಹ |
ಧರ್ಮಕಾಮಸ್ಯ ಧರ್ಮಾತ್ಮನ್ ಕಿಂ ನು ಶ್ರೇಯ ಇಹೋಚ್ಯತೇ ॥1॥
ಧರ್ಮಾತ್ಮ! ಪಿತಾಮಹ! ವೇದಾಧ್ಯಯನದಲ್ಲೇ ನಿರತನಾದ, ಬ್ರಹ್ಮಾನ್ವೇಷಣೆಯಲ್ಲಿ ಆಸಕ್ತನಾದ, ಧರ್ಮದಲ್ಲಿ ಅಭಿರುಚಿಯುಳ್ಳ ಸಾಧಕನಿಗೆ ಈ ಜಗತ್ತಿನಲ್ಲಿ ಏನು ಶ್ರೇಯಸ್ಸನ್ನು ಪ್ರಾಜ್ಞರು ಹೇಳುತ್ತಾರೆ? ಶಾಸ್ತ್ರಗಳು ಹೇಳುತ್ತವೆ?
ಬಹುಧಾದರ್ಶನೇ ಲೋಕೇ ಶ್ರೇಯೋ ಯದಿಹ ಮನ್ಯಸೇ |
ಅಸ್ಮಿನ್‌ಲೋಕೇ ಪರೇ ಚೈವ ತನ್ಮೇ ಬ್ರೂಹಿ ಪಿತಾಮಹ ॥2॥
ಜಗತ್ತಿನ ಬಗ್ಗೆ ಬಹುವಿಧ ದೃಷ್ಟಿಗಳುಳ್ಳ ಈ ಲೋಕದಲ್ಲಿ, ಯಾವ ದೃಷ್ಟಿಯು ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಶ್ರೇಯಸ್ಕರ? ಪಿತಾಮಹ! ಅದನ್ನು ದಯವಿಟ್ಟು ನನಗೆ ಹೇಳಿ.
ಮಹಾನಯಂ ಧರ್ಮಪಥೋ ಬಹುಶಾಖಶ್ಚ ಭಾರತ |
ಕಿಂ ಸ್ವಿದೇವೇಹ ಧರ್ಮಾಣಾಮನುಷ್ಠೇಯತಮಂ ಮತಮ್ ॥3॥
ಭರತಕುಲಸಂಜಾತ! ಈ ಧರ್ಮಮಾರ್ಗ ಬಹಳ ದೊಡ್ಡದು. ಇದಕ್ಕೆ ನಾನಾ ಕವಲುಗಳಿವೆ. ಈ ಧರ್ಮಗಳ ಮಧ್ಯೆ ಯಾವುದನ್ನು ತಪ್ಪದೆ ಅನುಷ್ಠಾನ ಮಾಡಬೇಕು? ಅನುಷ್ಠಾನಕ್ಕೆ ಅರ್ಹತಮ ಯಾವುದು? ನಿಮ್ಮ ಅಭಿಪ್ರಾಯವೇನು?
ಧರ್ಮಸ್ಯ ಮಹತೋ ರಾಜನ್ ಬಹುಶಾಖಸ್ಯ ತತ್ತ್ವತಃ |
ಯನ್ಮೂಲಂ ಪರಮಂ ತಾತ ತತ್ ಸರ್ವಂ ಬ್ರೂಹ್ಯತಂದ್ರಿತಃ ॥4॥
ಪ್ರಿಯ ಮಹಾರಾಜ! ಬಹು ಕವಲುಗಳಿರುವ ವಿಶಾಲವಾದ ಧರ್ಮದ ಪರಮ ಮೂಲ ಯಾವುದು? ಅದೆಲ್ಲವನ್ನೂ, ಆಯಾಸ ಮಾಡಿಕೊಳ್ಳದೆ ಹೇಳಿ.
ಭೀಷ್ಮಃ
ಹಂತ ತೇ ಕಥಯಿಷ್ಯಾಮಿ ಯೇನ ಶ್ರೇಯಃ ಪ್ರಪತ್ಸ್ಯಸೇ |
ಪೀತ್ವಾಮೃತಮಿವ ಪ್ರಾಜ್ಞೋ ಜ್ಞಾನತೃಪ್ತೋ ಭವಿಷ್ಯಸಿ ॥5॥
ಸಂತೋಷ! ನಿನಗೆ ಹೇಳುತ್ತೇನೆ. ಆ ಧರ್ಮದಿಂದ ನೀನು ಶ್ರೇಯಸ್ಸನ್ನು ಹೊಂದುವಿ. ಪ್ರಾಜ್ಞನೂ, ಜ್ಞಾನತೃಪ್ತನೂ ಆಗುವಿ. ಅಮೃತವನ್ನು ಕುಡಿದವನಂತೆ.
ಧರ್ಮಸ್ಯ ವಿಧಯೋ ನೈಕೇ ತೇ ತೇ ಪ್ರೋಕ್ತಾ ಮಹರ್ಷಿಭಿಃ |
ಸ್ವಂ ಸ್ವಂ ವಿಜ್ಞಾನಮಾಶ್ರಿತ್ಯ ದಮಸ್ತೇಷಾಂ ಪರಾಯಣಮ್ ॥6॥
ಧರ್ಮದ ವಿಧಿಗಳು ಬಹಳ ಇವೆ. ಅವೆಲ್ಲವೂ ಮಹರ್ಷಿಗಳಿಂದ ತಮ್ಮ ತಮ್ಮ ವಿಜ್ಞಾನಕ್ಕೆ ಅನುಗುಣವಾಗಿ ಹೇಳಲ್ಪಟ್ಟಿವೆ. ಅವುಗಳಲ್ಲಿ ದಮವು ಬಹಳ ಶ್ರೇಷ್ಠ.
ದಮಂ ನಿಃಶ್ರೇಯಸಂ ಪ್ರಾಹುರ್ವೃದ್ಧಾ ನಿಶ್ಚಯದರ್ಶಿನಃ |
ಬ್ರಾಹ್ಮಣಸ್ಯ ವಿಶೇಷೇಣ ದಮೋ ಧರ್ಮಃ ಸನಾತನಃ ॥7॥
ತತ್ವನಿಶ್ಚಯವನ್ನು ಕಂಡುಕೊಂಡಿರುವ ಜ್ಞಾನವೃದ್ಧರು ದಮವನ್ನು ಮುಕ್ತಿಸಾಧನ ಎಂದು ಹೇಳುತ್ತಾರೆ. ವಿಶೇಷವಾಗಿ ಬ್ರಾಹ್ಮಣನಿಗೆ. ದಮವು ಸನಾತನ (ವೇದದಲ್ಲಿ ಹೇಳಲ್ಪಟ್ಟ) ಧರ್ಮ.
ನಾದಾಂತಸ್ಯ ಕ್ರಿಯಾಸಿದ್ಧಿರ್ಯಥಾವದುಪಲಭ್ಯತೇ |
ದಮೋ ದಾನಂ ತಥಾ ಯಜ್ಞಾನಧೀತಂ ಚಾತಿವರ್ತತೇ ॥8॥
ದಮವಿಲ್ಲದವನಿಗೆ ಅನುಷ್ಠಾನಗಳ ಸಿದ್ಧಿಯು ಚೆನ್ನಾಗಿ ಆಗುವುದಿಲ್ಲ. ದಮವು ದಾನವನ್ನು, ಯಜ್ಞಗಳನ್ನು ಮತ್ತು ಅಧ್ಯಯನವನ್ನು ಮೀರಿಸುತ್ತದೆ.
ದಮಸ್ತೇಜೋ ವರ್ಧಯತಿ ಪವಿತ್ರಂ ಚ ದಮಃ ಪರಮ್ |
ವಿಪಾಪ್ಮಾ ತೇಜಸಾ ಯುಕ್ತಃ ಪುರುಷೋ ವಿಂದತೇ ಮಹತ್ ॥9॥
ದಮವು ತೇಜಸ್ಸನ್ನು ಹೆಚ್ಚಿಸುತ್ತದೆ. ದಮವು ಪರಮ ಪಾವಿತ್ರ್ಯವನ್ನು ಉಂಟು ಮಾಡುತ್ತದೆ. ಪುರುಷನು ದಮದಿಂದ ಪಾಪರಹಿತನಾಗುತ್ತಾನೆ. ತೇಜಃಸಂಪನ್ನನಾಗುತ್ತಾನೆ. ಇದರಿಂದ ಮಹಾಫಲವನ್ನು ಹೊಂದುತ್ತಾನೆ.
ದಮೇನ ಸದೃಶಂ ಧರ್ಮಂ ನಾನ್ಯಂ ಲೋಕೇಷು ಶುಶ್ರುಮ |
ದಮೋ ಹಿ ಪರಮೋ ಲೋಕೇ ಪ್ರಶಸ್ತಃ ಸರ್ವಧರ್ಮಿಣಾಮ್ ॥10॥
ದಮಸದೃಶವಾದ ಬೇರೆ ಧರ್ಮದ ಬಗ್ಗೆ ನಾವು ಎಲ್ಲಿಯೂ ಕೇಳಿಲ್ಲ. ಲೋಕದಲ್ಲಿ ಸಕಲ ಧರ್ಮನಿಷ್ಠರಿಗೂ ದಮವು ಬಹಳ ಪ್ರಶಸ್ತ.
ಪ್ರೇತ್ಯ ಚಾಪಿ ಮನುಷ್ಯೇಂದ್ರ ಪರಮಂ ವಿಂದತೇ ಸುಖಮ್ |
ದಮೇನ ಹಿ ಸಮಾಯುಕ್ತೋ ಮಹಾಂತಂ ಧರ್ಮಮಶ್ನುತೇ ॥11॥
ಮನುಷ್ಯೇಂದ್ರ! (ರಾಜನೆ!) ದಮವನ್ನು ಸಾಧಿಸಿದವನು ದೊಡ್ಡ ಪ್ರಮಾಣದಲ್ಲಿ ಧರ್ಮಫಲವನ್ನು ಪಡೆಯುತ್ತಾನೆ.

ಮರಣಾನಂತರವೂ ಪರಮ ಸುಖವನ್ನು ಹೊಂದುತ್ತಾನೆ.
ಸುಖಂ ದಾಂತಃ ಪ್ರಸ್ವಪಿತಿ ಸುಖಂ ಚ ಪ್ರತಿಬುಧ್ಯತೇ |
ಸುಖಂ ಪರ್ಯೇತಿ ಲೋಕಾಂಶ್ಚ ಮನಶ್ಚಾಸ್ಯ ಪ್ರಸೀದತಿ ॥12॥
ದಮವುಳ್ಳವನು ಸುಖವಾಗಿ ನಿದ್ರಿಸುತ್ತಾನೆ. ಸುಖವಾಗಿ ಏಳುತ್ತಾನೆ. ಸುಖವಾಗಿ ಲೋಕಪರ್ಯಟನವನ್ನು ಮಾಡುತ್ತಾನೆ. ಇವನ ಮನಸ್ಸು ಪ್ರಸನ್ನವಾಗಿರುತ್ತದೆ.
ಅದಾಂತಃ ಪುರುಷಃ ಕ್ಲೇಶಮಭೀಕ್ಷ್ಣಂ ಪ್ರತಿಪದ್ಯತೇ |
ಅನರ್ಥಾಂಶ್ಚ ಬಹೂನನ್ಯಾನ್ ಪ್ರಸೃಜತ್ಯಾತ್ಮದೋಷಜಾನ್ ॥13॥
ದಮವಿಲ್ಲದ ಪುರುಷನು ಪದೇ ಪದೇ ಕ್ಲೇಶವನ್ನು ಹೊಂದುತ್ತಾನೆ. ದಮವಿಲ್ಲದವನ ಮನೋದೋಷದಿಂದ ಬೇರೆ ನಾನಾ ಅನರ್ಥಗಳು ಹುಟ್ಟುತ್ತವೆ.
ಆಶ್ರಮೇಷು ಚತುರ್ಷ್ವಾಹುರ್ದಮಮೇವೋತ್ತಮಂ ವ್ರತಮ್ |
ತಸ್ಯ ಲಿಂಗಾನಿ ವಕ್ಷ್ಯಾಮಿ ಯೇಷಾಂ ಸಮುದಯೋ ದಮಃ ॥14॥
ನಾಲ್ಕು ಆಶ್ರಮಗಳಲ್ಲೂ ದಮವೇ ಉತ್ತಮ ವ್ರತ ಎಂದು ಹೇಳುತ್ತಾರೆ. ಅವುಗಳ ಗುರುತುಗಳನ್ನು ಹೇಳುತ್ತೇನೆ. ಆ ಗುರುತುಗಳ ಮೊತ್ತವೇ ದಮ.
ಕ್ಷಮಾ ಧೃತಿರಹಿಂಸಾ ಚ ಸಮತಾ ಸತ್ಯಮಾರ್ಜವಮ್ |
ಇಂದ್ರಿಯಾವಜಯೋ ದಾಕ್ಷ್ಯಂ ಮಾರ್ದವಂ ಹ್ರೀರಚಾಪಲಮ್ ॥15॥
ಕ್ಷಮೆ, ಧೃತಿ (ಸ್ಥಿರವಾಗಿ ಇರುವ ಗುಣ), ಅಹಿಂಸಾ, ಸಮತಾ, ಸತ್ಯ, ಆರ್ಜವ, ಇಂದ್ರಿಯನಿಗ್ರಹ, ದಕ್ಷತೆ, ಮೃದುನಡವಳಿಕೆ, ನಾಚಿಕೆ, ಚಾಪಲದ ಅಭಾವ,
ಅಕಾರ್ಪಣ್ಯಮಸಂರಂಭಃ ಸಂತೋಷಃ ಪ್ರಿಯವಾದಿತಾ |
ಅವಿವಿತ್ಸಾನಸೂಯಾ ಚಾಪ್ಯೇಷಾಂ ಸಮುದಯೋ ದಮಃ ॥16॥
ಅದೀನತೆ, ಕೋಪದ ಅಭಾವ, ಸಂತೋಷ, ಪ್ರಿಯವಚನ, ದುರಾಸೆಯ ಅಭಾವ, ಅಸೂಯೆಯ ಅಭಾವ - ಇವುಗಳ ಮೊತ್ತ ದಮ.
ಗುರುಪೂಜಾ ಚ ಕೌರವ್ಯ ದಯಾ ಭೂತೇಷ್ವಪೈಶುನಮ್ |
ಜನವಾದಮೃಷಾವಾದಸ್ತುತಿನಿಂದಾವಿವರ್ಜನಮ್ ॥17॥
ಕುರುಕುಲಸಂಜಾತ! ಹಿರಿಯರ ಮೇಲೆ ಗೌರವ, ಭೂತದಯೆ, ಚಾಡಿ ಹೇಳದಿರುವಿಕೆ, ಜನನಿಂದೆ, ಸುಳ್ಳು ಮಾತು, ಸ್ತುತಿ, ನಿಂದೆ - ಇವುಗಳ ತ್ಯಾಗ - ಇವು ದಮದಲ್ಲಿ ಸೇರಿರುವ ಗುಣಗಳು.
ಕಾಮಃ ಕ್ರೋಧಶ್ಚ ಲೋಭಶ್ಚ ದರ್ಪಃ ಸ್ತಂಭೋ ವಿಕತ್ಥನಮ್ |
ಮೋಹ ಈರ್ಷ್ಯಾವಮಾನಶ್ಚೇತ್ಯೇತದ್ದಾಂತೋ ನ ಸೇವತೇ ॥18॥
ಕಾಮ, ಕ್ರೋಧ, ಲೋಭ, ದರ್ಪ, ಬಿಗುಮಾನ, ಆತ್ಮಪ್ರಶಂಸೆ, ಮೋಹ, ಈರ್ಷ್ಯೆ (ಪರರ ಗುಣವನ್ನು ದೋಷ ಎಂದು ಪರಿಗಣನೆ), ಅವಮಾನ - ಇವುಗಳು ತನ್ನಲ್ಲಿ ಇರುವುದಕ್ಕೆ ದಮ ಇರುವ ಪುರುಷನು ಅವಕಾಶ ಕೊಡುವುದಿಲ್ಲ.
ಅನಿಂದಿತೇ ಹ್ಯಕಾಮಾತ್ಮಾಽಥಾಲ್ಪೇಚ್ಛೋಽಥಾನಸೂಯಕಃ |
ಸಮುದ್ರಕಲ್ಪಃ ಪುರುಷೋ ನ ಕದಾಚಿನ್ನ ಪೂರ್ಯತೇ ॥19॥
ದಮ ಇರುವ ಪುರುಷನಿಗೆ ನಿಷಿದ್ಧವಲ್ಲದ ವಸ್ತುಗಳ ಬಗ್ಗೆಯೂ, ಅವುಗಳ ಪ್ರಾಪ್ತಿಯಾದರೂ, ಆಸೆ ಇರುವುದಿಲ್ಲ. ಅವುಗಳ ಪ್ರಾಪ್ತಿಯಾಗದಿದ್ದಾಗಲೂ ಅವುಗಳ ಪ್ರಾಪ್ತಿಯಾಗಲಿ ಎಂದು ಆಸೆಯು ಇರುವುದಿಲ್ಲ. ಅವನು ಅಲ್ಪತೃಪ್ತ. ಅಸೂಯಾ ರಹಿತ. ಆ ಪುರುಷ ಸಮುದ್ರದಂತೆ. ಅವನು ಎಂದೂ ಅತೃಪ್ತನಲ್ಲ.
ಅಹಂ ತ್ವಯಿ ಮಮ ತ್ವಂ ಚ ಮಯಿ ತೇ ತೇಷು ಚಾಪ್ಯಹಮ್ |
ಪೂರ್ವಸಂಬಂಧಿಸಂಯೋಗಾನ್ನೈತದ್ ದಾಂತೋ ನಿಷೇವತೇ ॥20॥
ನಾನು ನಿನ್ನವನು. ನೀನು ನನ್ನವನು. ಅವರಿಗೆ ನನ್ನಲ್ಲಿ ಅನುರಾಗ. ನನಗೆ ಅವರಲ್ಲಿ ಅನುರಾಗ. ಪೂರ್ವಸಂಬಂಧಿಗಳ ಸಮಾಗಮವಾದಾಗ ಈ ಭಾವಗಳು ಜನರಲ್ಲಿ ಉಂಟಾಗುತ್ತವೆ. ದಮ ಇರುವ ಪುರುಷನು ಈ ಭಾವಗಳಿಗೆ ಅವಕಾಶವನ್ನು ಕೊಡುವುದಿಲ್ಲ.
ಸರ್ವಾ ಗ್ರಾಮ್ಯಾಸ್ತಥಾರಣ್ಯಾ ಯಾಶ್ಚ ಲೋಕೇ ಪ್ರವೃತ್ತಯಃ |
ನಿಂದಾಂ ಚೈವ ಪ್ರಶಂಸಾಂ ಚ ಯೋ ನಾಶ್ರಯತಿ ಮುಚ್ಯತೇ ॥21॥
ಲೋಕದಲ್ಲಿ ಯಾವ ಯಾವ ಗ್ರಾಮ್ಯ ಪ್ರವೃತ್ತಿಗಳೋ, ಯಾವ ಯಾವ ಕಾಡು ಪ್ರವೃತ್ತಿಗಳೋ, ಅವುಗಳಿಗೆ ದಮ ಇರುವ ಪುರುಷನು ಅವಕಾಶ ಕೊಡುವುದಿಲ್ಲ. ಯಾರು (ಸ್ವಾರ್ಥ ಸಾಧನೆಗಾಗಿ) ಪರನಿಂದೆಯನ್ನು, ಪ್ರಶಂಸೆಯನ್ನು ಅವಲಂಬಿಸುವುದಿಲ್ಲವೋ ಅವನು ಪಾಪಗಳಿಂದ ಮುಕ್ತನಾಗುತ್ತಾನೆ.
ಮೈತ್ರೋಽಥ ಶೀಲಸಂಪನ್ನಃ ಸುಸಹಾಯಪರಶ್ಚ ಯಃ |
ಮುಕ್ತಶ್ಚ ವಿವಿಧೈಃ ಸಂಗೈಸ್ತಸ್ಯ ಪ್ರೇತ್ಯ ಮಹತ್ಫಲಮ್ ॥22॥
ಮಿತ್ರಭಾವವಿರುವ, ಶೀಲಸಂಪನ್ನನಾದ, ಒಳ್ಳೆಯವರ ಸಹವಾಸದಲ್ಲಿ ಆಸಕ್ತನಾದ, ವಿವಿಧ ಪ್ರಾಪಂಚಿಕ ಸಂಗಗಳಿಂದ ದೂರವಿರುವ ದಮಶಾಲಿ ಪುರುಷನಿಗೆ ಮರಣಾನಂತರ ಮಹಾಫಲವು ಲಭಿಸುತ್ತದೆ.
ಸುವೃತ್ತಃ ಶೀಲಸಂಪನ್ನಃ ಪ್ರಸನ್ನಾತ್ಮಾತ್ಮವಿದ್ ಬುಧಃ |
ಪ್ರಾಪ್ಯೇಹ ಲೋಕೇ ಸತ್ಕಾರಂ ಸುಗತಿಂ ಪ್ರತಿಪದ್ಯತೇ ॥23॥
ಒಳ್ಳೆಯ ನಡತೆಗಳುಳ್ಳ, ಶೀಲಸಂಪನ್ನನಾದ, ಪ್ರಸನ್ನಮನಸ್ಕನಾದ ಆತ್ಮಜ್ಞಾನಿಯಾದ (ಪರಮಾತ್ಮನನ್ನು ಮತ್ತು ಜೀವಾತ್ಮನನ್ನು

ಸರಿಯಾಗಿ ತಿಳಿದುಕೊಂಡಿರುವ) ಬುಧನು ಈ ಲೋಕದಲ್ಲಿ ಸತ್ಕಾರವನ್ನು ಪಡೆಯುತ್ತಾ, ಸದ್ಗತಿಯನ್ನೂ ಪಡೆಯುತ್ತಾನೆ.
ಕರ್ಮ ಯಚ್ಛುಭಮೇವೇಹ ಸದ್ಭಿರಾಚರಿತಂ ಚ ಯತ್ |
ತದೇವ ಜ್ಞಾನಯುಕ್ತಸ್ಯ ಮುನೇರ್ಧರ್ಮೋ ನ ಹೀಯತೇ ||24||
ಈ ಲೋಕದಲ್ಲಿ ಯಾವ ಕರ್ಮವು ಶುಭಪ್ರದವೇ ಆಗಿರುವುದೋ, ಯಾವ ಕರ್ಮಗಳನ್ನು ಸಜ್ಜನರು ಆಚರಿಸಿದ್ದಾರೋ, ಆ ಕರ್ಮಗಳೇ ಜ್ಞಾನಸಂಪನ್ನನಾದ ಮುನಿಯ ಧರ್ಮ. ದಮವಿರುವ ಸಾಧಕನು ಅದನ್ನು ಬಿಡುವುದಿಲ್ಲ.
ನಿಷ್ಕ್ರಮ್ಯ ವನಮಾಸ್ಥಾಯ ಜ್ಞಾನಯುಕ್ತೋ ಜಿತೇಂದ್ರಿಯಃ |
ಕಾಲಾಕಾಂಕ್ಷೀ ಚರನ್ನೇವಂ ಬ್ರಹ್ಮಭೂಯಾಯ ಕಲ್ಪತೇ ||25||
(ಜನಸಮೂಹದಿಂದ) ನಿರ್ಗಮಿಸಿ, ಕಾಡಿಗೆ ಹೋಗಿ ಜ್ಞಾನಯುಕ್ತನಾಗಿ, ಜಿತೇಂದ್ರಿಯನಾಗಿ, ದೇಹಾವಸಾನ ಕಾಲವನ್ನು ನಿರೀಕ್ಷಿಸುತ್ತಾ, ಮೇಲೆ ಹೇಳಿದ ಗುಣಸಹಿತನಾಗಿ ಅನುಷ್ಠಾನ ಮಾಡುತ್ತಾ ಇರುವ ಸಾಧಕನು ನಿರಂತರ ಬ್ರಹ್ಮನಿಷ್ಠನಾಗಿರಲು (ಬ್ರಹ್ಮನಲ್ಲೇ ಇರುವ ಎತ್ತರಕ್ಕೆ ಏರಲು) ಸಮರ್ಥನಾಗುತ್ತಾನೆ.
ಅಭಯಂ ಯಸ್ಯ ಭೂತೇಭ್ಯೋ ಭೂತಾನಾಮಭಯಂ ಯತಃ |
ತಸ್ಯ ದೇಹಾದ್ ವಿಮುಕ್ತಸ್ಯ ಭಯಂ ನಾಸ್ತಿ ಕುತಶ್ಚನ ||26||
ಯಾರಿಗೆ ಪಂಚಭೂತಗಳಿಂದ- ಪಾಂಚಭೌತಿಕಗಳಿಂದ ಭಯವಿಲ್ಲವೋ, ಯಾರಿಂದ ಯಾವ ಪ್ರಾಣಿಗೂ ಭಯವಿಲ್ಲವೋ, ದೇಹಾಭಿಮಾನವಿಲ್ಲದ ಅಂತಹ ಸಾಧಕನಿಗೆ ಯಾವ ಕಡೆಯಿಂದಲೂ ಭಯವಾಗುವುದಿಲ್ಲ.
ಅವಾಚಿನೋತಿ ಕರ್ಮಾಣಿ ನ ಚ ಸಂಪ್ರಚಿನೋತಿ ಹ |
ಸಮಃ ಸರ್ವೇಷು ಭೂತೇಷು ಮೈತ್ರಾಯಣಗತಿಶ್ಚರೇತ್ ||27||
ಇಂತಹ ಸಾಧಕನು ತನ್ನ ಸಾಧನೆಗಳಿಂದ ಕರ್ಮಗಳನ್ನು ದೂರ ಮಾಡುತ್ತಾನೆ. ತನಗೆ ಹಾನಿಯಾಗುವಂತೆ ಅವುಗಳನ್ನು ಸಂಗ್ರಹಿಸುವುದಿಲ್ಲ. ಎಲ್ಲ ಪ್ರಾಣಿಗಳ ಬಗ್ಗೆ ಅವನಿಗೆ ಸಮದೃಷ್ಟಿಯು ಇರುತ್ತದೆ. ಸರ್ವರಿಗೂ ಅಭಯದಾನ ಮಾಡುತ್ತಾ ಸಂಚರಿಸುತ್ತಾನೆ.
ಶಕುನೀನಾಮಿವಾಕಾಶೇ ಜಲೇ ವಾರಿಚರಸ್ಯ ವಾ |
ಯಥಾ ಗತಿರ್ನ ದೃಶ್ಯೇತ ತಥಾ ತಸ್ಯ ನ ಸಂಶಯಃ ||28||
ಹಕ್ಕಿಗಳು ಆಕಾಶಸಂಚಾರಿಗಳು, ಅವುಗಳ ಸಂಚಾರದ ಗುರುತು ಆಕಾಶದಲ್ಲಿ ಕಾಣುವುದಿಲ್ಲ. ಚಲಚರ ಪ್ರಾಣಿಗಳ ಸಂಚಾರದ ಗುರುತು ಜಲದಲ್ಲಿ ಕಾಣುವುದಿಲ್ಲ. ಅಂತೆಯೇ ದಮಶೀಲನಾದ, ಮೇಲೆ ಹೇಳಿದಂತೆ ಸಾಧಕನಾದ ಪುರುಷನ ಗುರುತುಗಳು ಕಾಣುವುದಿಲ್ಲ.
ಗೃಹಾನುತ್ಸೃಜ್ಯ ಯೋ ರಾಜನ್ ಮೋಕ್ಷಮೇವಾಭಿಪದ್ಯತೇ |
ಲೋಕಾಸ್ತೇಜೋಮಯಾಸ್ತಸ್ಯ ಕಲ್ಪಂತೇ ಶಾಶ್ವತೀಃ ಸಮಾಃ ||29||
ರಾಜನೆ! ಯಾರು ಭೋಗಗಳನ್ನು ತ್ಯಜಿಸಿ ಮುಕ್ತಿಯ ಕಡೆ ನಡೆಯುತ್ತಾನೋ ಅವನಿಗೆ ಬಹುದೀರ್ಘಕಾಲ ತೇಜೋಮಯವಾದ ಲೋಕಗಳಲ್ಲಿ ಸಾಧನೆಗೈಯ್ಯುವ ಅವಕಾಶವು ಲಭಿಸುತ್ತದೆ.
ಸನ್ನ್ಯಸ್ಯ ಸರ್ವಕರ್ಮಾಣಿ ಸನ್ನ್ಯಸ್ಯ ವಿಧಿವತ್ತಪಃ |
ಸಂನ್ಯಸ್ಯ ವಿವಿಧಾ ವಿದ್ಯಾಃ ಸರ್ವಂ ಸಂನ್ಯಸ್ಯ ಚೈವ ಹ ||30||
ಫಲಕಾಮನೆಯನ್ನು ತ್ಯಜಿಸಿ ವಿಹಿತವಾದ ಸಕಲ ಕರ್ಮಗಳನ್ನು ಮಾಡುವ, ಫಲಕಾಮನೆಗಳನ್ನು ತ್ಯಜಿಸಿ ವಿಧಿಗೆ ಅನುಗುಣವಾಗಿ ತಪಸ್ಸನ್ನು ಮಾಡುವ ಫಲಕಾಮನೆಗಳನ್ನು ತ್ಯಜಿಸಿ ವಿವಿಧ ವಿದ್ಯೆಗಳನ್ನು ಸಾಧಿಸುವ, ಫಲಕಾಮನೆಗಳನ್ನು ತ್ಯಜಿಸಿಯೇ ಎಲ್ಲವನ್ನು ಮಾಡುವ ಸಾಧಕನು,
ಕಾಮೇ ಶುಚಿರನಾವೃತ್ತಃ ಪ್ರಸನ್ನಾತ್ಮಾತ್ಮವಿಚ್ಛುಚಿಃ |
ಪ್ರಾಪ್ಯೇಹ ಲೋಕೇ ಸತ್ಕಾರಂ ಸ್ವರ್ಗಂ ಸಮಭಿಪದ್ಯತೇ ||31||
ಯಾರ ಅಪೇಕ್ಷೆಗಳು ಶುಚಿಯಾಗಿರುತ್ತವೋ, ಯಾರು ತನ್ನ ವರ್ತನೆಗಳನ್ನು ರಹಸ್ಯವಾಗಿಡಬೇಕಿಲ್ಲವೋ, ಪ್ರಸನ್ನ ಮನಸ್ಸನ್ನು ಹೊಂದಿರುವನೋ, ಆತ್ಮಜ್ಞಾನಿಯೂ, ಶುಚಿಯೂ ಆಗಿರುವನೋ, ಆ ಸಾಧಕನು ಈ ಲೋಕದಲ್ಲಿ ಸತ್ಕಾರವನ್ನು ಪಡೆಯುತ್ತಾನೆ ಸ್ವರ್ಗಕ್ಕೆ ಹೋಗುತ್ತಾನೆ.
ಯಚ್ಚ ಪೈತಾಮಹಂ ಸ್ಥಾನಂ ಬ್ರಹ್ಮರಾಶಿಸಮುದ್ಭವಮ್ |
ಗುಹಾಯಾಂ ಪಿಹಿತಂ ನಿತ್ಯಂ ತದ್ದಮೇನಾಭಿಪದ್ಯತೇ ||32||
ದಮದಿಂದ ಚತುರ್ಮುಖ ಬ್ರಹ್ಮದೇವನ ಸ್ಥಾನವನ್ನು ಹೊಂದುತ್ತಾನೆ. ವೇದ ರಾಶಿಗಳ ಅಧ್ಯಯನದಿಂದ ಅಭಿವ್ಯಕ್ತನಾಗುವ ಹೃದಯಗುಹೆಯಲ್ಲಿರುವ ಪರಬ್ರಹ್ಮನ ಪ್ರಾಪ್ತಿಯೂ ದಮದಿಂದ ಆಗುತ್ತದೆ.
ಜ್ಞಾನಾರಾಮಸ್ಯ ಬುದ್ಧಸ್ಯ ಸರ್ವಭೂತಾವಿರೋಧಿನಃ |
ನಾವೃತ್ತಿಭಯಮಸ್ತೀಹ ಪರಲೋಕೇ ಭಯಂ ಕುತಃ ||33||
ತತ್ವಜ್ಞಾನದಲ್ಲಿ ವಿಹರಿಸುವ, ಪ್ರಬುದ್ಧನಾದ, ಸರ್ವಭೂತಗಳ ಮೇಲೆ ದಯೆ ಇರುವ ಚೇತನಕ್ಕೆ ಪುನರ್ಜನ್ಮದ ಭಯವಿಲ್ಲ. ಪರಲೋಕದಲ್ಲಿ ಯಾವ ಭಯಕ್ಕೂ ಯಾವ ಆಸ್ಪದವೂ ಇಲ್ಲ.
ಏಕ ಏವ ದಮೇ ದೋಷೋ ದ್ವಿತೀಯೋ ನೋಪಪದ್ಯತೇ |
ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ||34||
`ದಮ' ದಲ್ಲಿ ಒಂದೇ ದೋಷ. ಎರಡನೆಯ ದೋಷಕ್ಕೆ ಅವಕಾಶವಿಲ್ಲ. ಆ ದೋಷ: ಕ್ಷಮಾಗುಣಸಂಪನ್ನನಾದ ಇವನನ್ನು ಜನರು ಅಶಕ್ತ ಎಂದು ತಿಳಿಯುತ್ತಾರೆ.
ಏತಸ್ಯ ತು ಮಹಾಪ್ರಾಜ್ಞ ದೋಷಸ್ಯ ಸುಮಹಾನ್ ಗುಣಃ |

ಕ್ಷಮಾಯಾಂ ವಿಪುಲಾ ಲೋಕಾಃ ಸುಲಭಾ ಹಿ ಸಹಿಷ್ಣುನಾ ॥35॥
ಮಹಾಪ್ರಾಜ್ಞ! ಈ ದೋಷಕ್ಕೆ ಒಂದು ಬಹಳ ದೊಡ್ಡ ಗುಣವಿದೆ. ಕ್ಷಮಾಗುಣವಿದ್ದರೆ ಬಹುಲೋಕಗಳು ಸುಲಭವಾಗಿ ಲಭಿಸುತ್ತವೆ.
ದಾಂತಸ್ಯ ಕಿಮರಣ್ಯೇನ ತಥಾದಾಂತಸ್ಯ ಭಾರತ |
ಯತ್ರೈವ ಹಿ ವಸೇದ್ ದಾಂತಸ್ತದರಣ್ಯಂ ಸ ಆಶ್ರಮಃ ॥36॥
ಭರತಕುಲಸಂಜಾತ! ದಮ ಇರುವವನು ಊರಿನಲ್ಲೇ ಇದ್ದರೂ ಉತ್ಕೃಷ್ಟ ಗುರಿಗಳನ್ನು ಮುಟ್ಟಬಹುದು. ಅವನಿಗೆ ಅರಣ್ಯಕ್ಕೆ ಹೋಗುವ ಅವಶ್ಯಕತೆ ಇಲ್ಲ. ದಮ ಇಲ್ಲದವನು ಅರಣ್ಯಕ್ಕೆ ಹೋದರೂ ಗುರಿಯನ್ನು ಮುಟ್ಟಲಾರ. ಆದ್ದರಿಂದ ದಮ ಇಲ್ಲದವನಿಗೆ ಅರಣ್ಯಗಮನದಿಂದ ಏನೂ ಪ್ರಯೋಜನವಿಲ್ಲ. ದಮ ಇರುವವನು ಎಲ್ಲಿ ವಾಸಿಸುವನೋ ಅದೇ ಅರಣ್ಯ. ಅದೇ ಆಶ್ರಮ.
ವೈಶಂಪಾಯನಃ
ಏತದ್ಭೀಷ್ಮಸ್ಯ ವಚನಂ ಶ್ರುತ್ವಾ ರಾಜಾ ಯುಧಿಷ್ಠಿರಃ |
ಅಮೃತೇನೇವ ಸಂತೃಪ್ತಃ ಪ್ರಹೃಷ್ಟಃ ಸಮಪದ್ಯತ ॥37॥
ಭೀಷ್ಮರ ಈ ಮಾತುಗಳನ್ನು ಕೇಳಿ ರಾಜಾ ಯುಧಿಷ್ಠಿರನು ಅಮೃತಪಾನದಿಂದ ಸಂತೃಪ್ತನಾದವನಂತೆ ಉತ್ಕೃಷ್ಟ ಹರ್ಷವನ್ನು ಹೊಂದಿದನು.
ಪುನಶ್ಚ ಪರಿಪಪ್ರಚ್ಛ ಭೀಷ್ಮಂ ಧರ್ಮಭೃತಾಂ ವರಮ್ |
ತಪಃ ಪ್ರತಿ ಸ ಚೋವಾಚ ತಸ್ಮೈ ಸರ್ವಂ ಕುರೂದ್ವಹ ॥38॥
ಕುರುಕುಲಶ್ರೇಷ್ಠ! ಧರ್ಮನಿಷ್ಠರಲ್ಲಿ ಶ್ರೇಷ್ಠರಾದ ಭೀಷ್ಮಾಚಾರ್ಯರನ್ನು `ತಪಸ್' ನ ಬಗ್ಗೆ ತಿಳಿಸಬೇಕೆಂದು ಪುನಃ ಯುಧಿಷ್ಠಿರನು ಕೇಳಿದನು. ಅವರು ಅವನಿಗೆ ಎಲ್ಲವನ್ನೂ ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತಾರನೆಯ
ಅಧ್ಯಾಯವು ಮುಗಿಯಿತು.
* * * *
ಇಪ್ಪತ್ತೇಳನೆಯ ಅಧ್ಯಾಯ
ದೊಡ್ಡ ಗುರಿಯನ್ನು ತಲುಪಲು ಮಹಾಪ್ರಯತ್ನವನ್ನು ಮಾಡಬೇಕು. ತಪಸ್ಸಿನಿಂದ ಮಹಾಪಾಪಗಳನ್ನು ಪರಿಹರಿಸಿಕೊಳ್ಳಬಹುದು. ಉಪವಾಸವು ಶ್ರೇಷ್ಠ ತಪಸ್ಸು.
ಭೀಷ್ಮಃ
ಸರ್ವಮೇತತ್ ತಪೋಮೂಲಂ ಕವಯಃ ಪರಿಚಕ್ಷತೇ |
ನ ಹ್ಯತಪ್ತತಪಾ ಮೂಢಃ ಕ್ರಿಯಾಫಲಮವಾಪ್ನುತೇ ॥1॥
ಇವೆಲ್ಲವುಗಳಿಗೆ (ಮುಂದಿನ ಶ್ಲೋಕಗಳಲ್ಲಿ ಹೇಳಲ್ಪಡುವ ನಾನಾ ಮಹತ್ಕಾರ್ಯಗಳಿಗೆ) ತಪಸ್ಸು ಮೂಲ ಎಂದು ತಿಳಿದವರು ಹೇಳುತ್ತಾರೆ. ತಪಸ್ಸನ್ನು (ದೊಡ್ಡ ಗುರಿಯನ್ನು ತಲುಪಲು ಸರಿಯಾದ ದಿಕ್ಕಿನಲ್ಲಿ ಮಹಾಪ್ರಯತ್ನವನ್ನು) ಮಾಡದ ಮೂಢನು ಕ್ರಿಯೆಯ ಫಲವನ್ನು ಹೊಂದುವುದಿಲ್ಲ.
ಪ್ರಜಾಪತಿರಿದಂ ಸರ್ವಂ ತಪಸೈವಾಸೃಜತ್ ಪ್ರಭುಃ |
ತಥೈವ ವೇದಾನೃಷಯಸ್ತಪಸಾ ಪ್ರತಿಪೇದಿರೇ ॥2॥
ಸಮರ್ಥನಾದ ಪ್ರಜಾಪತಿಯು (ಚತುರ್ಮುಖ ಬ್ರಹ್ಮನು) ತಪಸ್ಸಿನಿಂದಲೇ ಈ ಸಮಗ್ರ ಜಗತ್ತನ್ನು ಸೃಷ್ಟಿಸಿದನು. ಹಾಗೆಯೇ ಋಷಿಗಳು ತಪಸ್ಸಿನಿಂದಲೇ ವೇದಗಳನ್ನು ಪಡೆದರು.
ತಪಸೋ ಹ್ಯಾನುಪೂರ್ವ್ಯೇಣ ಫಲಮೂಲಾನಿಲಾಶನಾಃ |
ತ್ರೀನ್ ಲೋಕಾಂಸ್ತಪಸಾ ಸಿದ್ಧಾಃ ಪಶ್ಯಂತಿ ಸುಸಮಾಹಿತಾಃ ॥3॥
ಋಷಿಗಳು ತಪಸ್ಸಿನಿಂದಲೇ ಕ್ರಮವಾಗಿ ಫಲಾಶನರೂ, ಮೂಲಾಶನರೂ ಮತ್ತು ಅನಿಲಾಶನರೂ ಆದರು (ಕೇವಲ ಫಲಗಳನ್ನು ತಿನ್ನುವವರು ಫಲಾಶನರು. ಕೇವಲ ಮೂಲಗಳನ್ನು ತಿನ್ನುವವರು ಮೂಲಾಶನರು. ಕೇವಲ ವಾಯುಸೇವನೆಯಿಂದ ಬದುಕುವವರು ಅನಿಲಾಶನರು) ತಪಸ್ಸಿನ ಬಲದಿಂದ ಉತ್ಕೃಷ್ಟ ಏಕಾಗ್ರತೆಯನ್ನು ಸಾಧಿಸಿದ ಸಿದ್ಧರು ಮೂರು ಲೋಕಗಳನ್ನು ನೋಡುತ್ತಾರೆ.
ಔಷಧಾನ್ಯಗದಾದೀನಿ ತಿಸ್ರೋ ವಿದ್ಯಾಶ್ಚ ಸಂಸ್ಕೃತಾಃ |
ತಪಸೈವ ಹಿ ಸಿಧ್ಯಂತಿ ತಪೋಮೂಲಂ ಹಿ ಸಾಧನಮ್ ॥4॥
ಆರೋಗ್ಯಕ್ಕೆ ಕಾರಣವಾಗುವ ಔಷಧಗಳು, ಸಂಸ್ಕಾರ ಸಂಪನ್ನವಾದ ವೇದವಿದ್ಯೆಗಳು ತಪಸ್ಸಿನಿಂದಲೇ ಸಿದ್ಧವಾಗುತ್ತವೆ. ತಪಸ್ಸು ಸಾಧನೆಗಳ ಮೂಲ.
ಯದ್ದುರಾಪಂ ದುರಾಮ್ನಾಯಂ ದುರಾಧರ್ಷಂ ದುರುತ್ಸಹಮ್ |
ಸರ್ವಂ ತತ್ತಪಸಾ ಶಕ್ಯಂ ತಪೋ ಹಿ ದುರತಿಕ್ರಮಮ್ ॥5॥
ಯಾವುದನ್ನು ಪಡೆಯಲು ಸಾಧ್ಯವಿಲ್ಲವೋ, ಯಾವ ವಿದ್ಯೆಯನ್ನು ಸಾಧಿಸುವುದು ಕಷ್ಟವೋ. ಯಾವುದರ ಅತಿಕ್ರಮಣವು ಕಷ್ಟವೋ, ಯಾವುದರ ಬಗ್ಗೆ ಉತ್ಸಾಹವನ್ನು ಹೊಂದುವುದು ಕಷ್ಟವೋ - ಇವೆಲ್ಲವನ್ನೂ ತಪಸ್ಸಿನಿಂದ ಸಾಧಿಸಬಹುದು. ತಪಸ್ಸು ಅಜೇಯ (ತಪಸ್ಸು ಎಂದೂ ವಿಫಲವಾಗುವುದಿಲ್ಲ).
ಸುರಾಪೋಽಸಮ್ಮತಾದಾಯೀ ಭ್ರೂಣಹಾ ಗುರುತಲ್ಪಗಃ |
ತಪಸೈವ ಸುತಪ್ತೇನ ನರಃ ಪಾಪಾದ್ ವಿಮುಚ್ಯತೇ ॥6॥

ಸುರಾಪಾನ ಮಾಡಿದವನು, ಸಮ್ಮತಿಯಿಲ್ಲದೆ ವಸ್ತುಗಳನ್ನು ತೆಗೆದುಕೊಂಡವನು (ಕಳ್ಳ), ಭ್ರೂಣಹತ್ಯೆಯನ್ನು ಮಾಡಿದವನು ಗುರುಗಳ ಹಾಸಿಗೆಯ ಮೇಲೆ ಕುಳಿತವನು, ಮಲಗಿದವನು- ತೀವ್ರ ತಪಸ್ಸನ್ನು ಆಚರಿಸಿದರೆ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ತಪಸೋ ಬಹುರೂಪಸ್ಯ ತೈಸ್ತೈರ್ದ್ವಾರೈಃ ಪ್ರವರ್ತತಃ |
ನಿವೃತ್ತಾ್ಯ ವರ್ತಮಾನಸ್ಯ ತಪೋ ನಾನಶನಾತ್ ಪರಮ್ ॥7॥
ತಪಸ್ಸುಗಳು ನಾನಾ ವಿಧ. ಅವುಗಳಲ್ಲಿ ತೊಡಗುವುದಕ್ಕೆ ನಾನಾ ಬಾಗಿಲುಗಳು. ನಿವೃತ್ತಿ ಮಾರ್ಗದಲ್ಲಿ ಸಾಗಲು ಬಯಸುವವನಿಗೆ ಉಪವಾಸಕ್ಕಿಂತ ಹೆಚ್ಚು ಉತ್ಕೃಷ್ಟವಾದ ಬೇರೆ ತಪಸ್ಸು ಇಲ್ಲ. (ನಿವೃತ್ತಿ ಮಾರ್ಗ : ಹುಟ್ಟು-ಸಾವುಗಳಿಂದ ಶಾಶ್ವತ ಬಿಡುಗಡೆಯನ್ನು ಸಾಧಿಸುವ ಮಾರ್ಗ. ಭಗವದ್ಗೀತೆಯು ಹೇಳುವ ನಿಷ್ಕಾಮ ಕರ್ಮಯೋಗ).
ಅಹಿಂಸಾ ಸತ್ಯವಚನಂ ದಾನಮಿಂದ್ರಿಯನಿಗ್ರಹಃ |
ಏತೇಭ್ಯೋ ಹಿ ಮಹಾರಾಜ ತಪೋ ನಾನಶನಾತ್ ಪರಮ್ ॥8॥
ಮಹಾರಾಜ! ಅಹಿಂಸೆ, ಸತ್ಯವಚನ, ದಾನ, ಇಂದ್ರಿಯನಿಗ್ರಹ ಇವುಗಳಿಗಾಗಿ (ಇವುಗಳನ್ನು ಸಾಧಿಸಲು) ಉಪವಾಸಕ್ಕಿಂತ ಹೆಚ್ಚು ಉತ್ಕೃಷ್ಟವಾದ ಬೇರೆ ತಪಸ್ಸು ಇಲ್ಲ.
ನ ದುಷ್ಕರತರಂ ದಾನಾನ್ನಾತಿಮಾತರಮಾಶ್ರಮಃ |
ತ್ರೈವಿದ್ಯೇಭ್ಯಃ ಪರಂ ನಾಸ್ತಿ ಸಂನ್ಯಾಸಃ ಪರಮಂ ತಪಃ ॥9॥
ದಾನದ ಆಚರಣೆ ಬಹಳ ಕಷ್ಟ. ಬೇರೆ ಯಾವ ಆಚರಣೆಯೂ ಇದಕ್ಕಿಂತ ಹೆಚ್ಚು ಕಷ್ಟವಲ್ಲ. ತಾಯಿಯನ್ನು ಮೀರುವ ಯಾವ ಆಶ್ರಮವೂ ಇಲ್ಲ. ಮೂರು ವೇದಗಳ ಅಧ್ಯಯನವನ್ನು ಮಾಡಿದವರಿಗಿಂತ ಹೆಚ್ಚು ಉತ್ಕೃಷ್ಟನಾದ ಪಂಡಿತನಿಲ್ಲ. ಸಂನ್ಯಾಸವೇ= ಫಲಕಾಮನಾ ತ್ಯಾಗವೇ ಶ್ರೇಷ್ಠ ತಪಸ್ಸು.
ಇಂದ್ರಿಯಾಣೀಹ ರಕ್ಷಂತಿ ವಿಪ್ರರ್ಷಿಪಿತೃದೇವತಾಃ |
ತಸ್ಮಾದರ್ಥೇ ಚ ಧರ್ಮೇ ಚ ತಪೋ ನಾನಶನಾತ್ ಪರಮ್ ॥10॥
(ಉಪವಾಸದಿಂದ ಇಂದ್ರಿಯಗಳು ದುರ್ಬಲವಾಗುತ್ತವೆ? ಈ ಪ್ರಶ್ನೆಗೆ ಉತ್ತರ) ಉಪವಾಸ ಕಾಲದಲ್ಲಿ, ಈ ವ್ರತವನ್ನು ಆಚರಿಸುವವರಲ್ಲಿ ವಿಪ್ರರು, ಋಷಿಗಳು, ಪಿತೃಗಳು, ದೇವತೆಗಳು (ಅನುಗ್ರಹ ಮಾಡಿ) ಇಂದ್ರಿಯಗಳನ್ನು ರಕ್ಷಿಸುತ್ತಾರೆ. ಆದ್ದರಿಂದ ಅರ್ಥ ಮತ್ತು ಧರ್ಮಗಳ ಸಾಧನೆಗಾಗಿ ಉಪವಾಸಕ್ಕಿಂತ ಹೆಚ್ಚು ಉತ್ಕೃಷ್ಟವಾದ ಬೇರೆ ತಪಸ್ಸು ಇಲ್ಲ.
ಋಷಯಃ ಪಿತರೋ ದೇವಾ ಮನುಷ್ಯಾ ಮೃಗಸತ್ತಮಾಃ |
ಯಾನಿ ಚಾನ್ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥11॥
ತಪಃಪರಾಯಣಾಃ ಸರ್ವೇ ಸಿಧ್ಯಂತಿ ತಪಸಾ ಚ ತೇ |
ಇತ್ಯೇವಂ ತಪಸಾ ದೇವಾ ಮಹತ್ತ್ವಂ ಚಾಪ್ಯವಾಪ್ನುವನ್ ॥12॥
ತಪಸ್ಸನ್ನು ಗಾಢವಾಗಿ ಅವಲಂಬಿಸಿದ ಎಲ್ಲರೂ - ಋಷಿಗಳು, ಪಿತೃಗಳು, ದೇವತೆಗಳು, ಮನುಷ್ಯರು, ಉತ್ತಮ ಮೃಗಗಳು, ಬೇರೆ ಸ್ಥಾವರ-ಜಂಗಮ ಚೇತನಗಳು - ತಪಸ್ಸಿನಿಂದ ಸಿದ್ಧಿಯನ್ನು ಪಡೆಯುತ್ತಾರೆ. ದೇವತೆಗಳು ತಪಸ್ಸಿನಿಂದ ಮಹತ್ವವನ್ನು ಪಡೆದುಕೊಂಡರು.
ಇಮಾನೀಷ್ಟವಿಭಾಗಾನಿ ಫಲಾನಿ ತಪಸಃ ಸದಾ |
ತಪಸಾ ಶಕ್ಯತೇ ಪ್ರಾಪ್ತುಂ ದೇವತ್ವಮಪಿ ನಿಶ್ಚಯಾತ್ ॥13॥
ಇವುಗಳು (ಮೇಲಿನ ಶ್ಲೋಕಗಳಲ್ಲಿ ಹೇಳಲ್ಪಟ್ಟ ಫಲಗಳು) ತಪಸ್ಸಿನ ಫಲವಾಗಿ ಲಭಿಸುವ ನಾನಾ ಅಭೀಷ್ಟಗಳು. ತಪಸ್ಸಿನಿಂದ ದೇವ ಪದವಿಯನ್ನೂ ಪಡೆಯಬಹುದು. ಇದು ನಿಶ್ಚಯ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತೇಳನೆಯ
ಅಧ್ಯಾಯವು ಮುಗಿಯಿತು.
* * * *

ಇಪ್ಪತ್ತೆಂಟನೆಯ ಅಧ್ಯಾಯ
ಸತ್ಯದ ಲಕ್ಷಣ. ಸತ್ಯದ ನಾನಾ ಪ್ರಕಾರಗಳು.
ಯುಧಿಷ್ಠಿರಃ
ಸತ್ಯಂ ಧರ್ಮೇ ಪ್ರಶಂಸಂತಿ ವಿಪ್ರರ್ಷಿಪಿತೃದೇವತಾಃ |
ಸತ್ಯಮಿಚ್ಛಾಮ್ಯಹಂ ಶ್ರೋತುಂ ತನ್ಮೇ ಬ್ರೂಹಿ ಪಿತಾಮಹ ॥1॥
ಪಿತಾಮಹ! ವಿಪ್ರರು, ಋಷಿಗಳು, ಪಿತೃಗಳು, ದೇವತೆಗಳು ನಾನಾ ಧರ್ಮಗಳ ನಡುವೆ ಸತ್ಯವನ್ನು ಪ್ರಶಂಸಿಸುತ್ತಾರೆ. ಸತ್ಯದ ಬಗ್ಗೆ ಕೇಳಲು ಬಯಸುತ್ತಿದ್ದೇನೆ. ದಯವಿಟ್ಟು ಹೇಳಿರಿ.
ಸತ್ಯಂ ಕಿಂಲಕ್ಷಣಂ ರಾಜನ್ ಕಥಂ ವಾ ತದವಾಪ್ಯತೇ |
ಸತ್ಯಂ ಪ್ರಾಪ್ಯ ಭವೇತ್ ಕಿಂ ಚ ಕಥಂ ಚೈವ ತದುಚ್ಯತಾಮ್ ॥2॥
ರಾಜನೆ! ಸತ್ಯದ ಲಕ್ಷಣ ಏನು? ಅದನ್ನು ಸಾಧಿಸುವುದು ಹೇಗೆ? ಸತ್ಯನಿಷ್ಠನಿಗೆ ಏನು ಸಿದ್ಧಿಸುತ್ತದೆ? ಆ ಸಿದ್ಧಿಯು ಹೇಗೆ ಆಗುತ್ತದೆ? ದಯವಿಟ್ಟು ಹೇಳಿರಿ.

ಭೀಷ್ಮ ಉವಾಚ
ಚಾತುರ್ವರ್ಣ್ಯಸ್ಯ ಧರ್ಮಾಣಾಂ ಸಂಕರೋ ನ ಪ್ರಶಸ್ಯತೇ |
ಅವಿಕಾರಿತಮಂ ಸತ್ಯಂ ಸರ್ವವರ್ಣೇಷು ಭಾರತ ॥3॥
ಭರತಕುಲಸಂಜಾತ! ನಾಲ್ಕು ವರ್ಣಗಳ (ಶಾಸ್ತ್ರೋಕ್ತ) ಧರ್ಮಗಳ ಕಲಬೆರಕೆಯನ್ನು ಪ್ರಾಜ್ಞರು ಒಪ್ಪುವುದಿಲ್ಲ. ಆದರೆ ನಾಲ್ಕು ವರ್ಣಗಳಲ್ಲೂ ಸತ್ಯವು ಒಂದೇ. ಅದರಲ್ಲಿ ಯಾವ ಬದಲಾವಣೆಯೂ ಇಲ್ಲ.
ಸತ್ಯಂ ಸತ್ಸು ಸದಾ ಧರ್ಮಃ ಸತ್ಯಂ ಧರ್ಮಃ ಸನಾತನಃ |
ಸತ್ಯಮೇವ ನಮಸ್ಯೇತ ಸತ್ಯಂ ಹಿ ಪರಮಾ ಗತಿಃ ॥4॥
ಸಜ್ಜನ ಸಮುದಾಯದಲ್ಲಿ ಯಾವಾಗಲೂ ಸತ್ಯವೇ ಧರ್ಮ. ಸತ್ಯವು ಸನಾತನ ಧರ್ಮ. ಸತ್ಯಕ್ಕೆ ತಲೆಬಾಗಲೇಬೇಕು. ಸತ್ಯವು ಅತ್ಯಂತಶ್ರೇಷ್ಠ ನೆಲೆ.
ಸತ್ಯಂ ಧರ್ಮಸ್ತಪೋ ಯೋಗಃ ಸತ್ಯಂ ಬ್ರಹ್ಮ ಸನಾತನಮ್ |
ಸತ್ಯಂ ಯಜ್ಞಃ ಪರಃ ಪ್ರೋಕ್ತಃ ಸತ್ಯೇ ಸರ್ವಂ ಪ್ರತಿಷ್ಠಿತಮ್ ॥5॥
ಸತ್ಯವು ಧರ್ಮ. ಅದೇ ತಪಸ್ಸು. ಅದೇ ಯೋಗ. ಅದೇ ಸನಾತನ ಬ್ರಹ್ಮ. ಅದೇ ಶ್ರೇಷ್ಠಯಜ್ಞ. ಹೀಗೆ ಶಾಸ್ತ್ರಗಳು ಹೇಳುತ್ತವೆ. ಸತ್ಯದಲ್ಲಿ ಎಲ್ಲ ಶ್ರೇಯಸ್ಸುಗಳೂ ಅಡಗಿವೆ.
ಆಚಾರಾನಿಹ ಸತ್ಯಸ್ಯ ಯಥಾವದನುಪೂರ್ವಶಃ |
ಲಕ್ಷಣಂ ಚ ಪ್ರವಕ್ಷ್ಯಾಮಿ ಸತ್ಯಸ್ಯೇಹ ಯಥಾಕ್ರಮಮ್ ॥6॥
ಪ್ರಾಪ್ಯತೇ ಹಿ ಯಥಾ ಸತ್ಯಂ ತಚ್ಚ ಶ್ರೋತುಂ ತ್ವಮರ್ಹಸಿ |
ಸತ್ಯಂ ತ್ರಯೋದಶವಿಧಂ ಸರ್ವಲೋಕೇಷು ಭಾರತ ॥7॥
ಭರತಕುಲಸಂಜಾತ! ಸತ್ಯದ ಆಚರಣೆಗಳನ್ನು ಮತ್ತು ಸತ್ಯದ ಲಕ್ಷಣವನ್ನು ಕ್ರಮವಾಗಿ ಹೇಳುತ್ತೇನೆ. ಸತ್ಯನಿಷ್ಠೆ ಹೇಗೆ ಸಿದ್ಧಿಸುತ್ತದೆ ಎಂದೂ ಹೇಳುತ್ತೇನೆ. ನೀನು ಇವೆಲ್ಲವನ್ನೂ ಕೇಳಬೇಕು. ಸತ್ಯವು ಹದಿಮೂರು ವಿಧ.
ಸತ್ಯಂ ಚ ಸಮತಾ ಚೈವ ದಮಶ್ಚೈವ ನ ಸಂಶಯಃ |
ಅಮಾತ್ಸರ್ಯಂ ಕ್ಷಮಾ ಚೈವ ಹ್ರೀಸ್ತಿತಿಕ್ಷಾನಸೂಯತಾ ॥8॥
ತ್ಯಾಗೋ ಧ್ಯಾನಮಥಾರ್ಯತ್ವಂ ಧೃತಿಶ್ಚ ಸತತಂ ಸ್ಥಿರಾ |
ಅಹಿಂಸಾ ಚೈವ ಸತ್ಯಂ ಚ ಸಸತ್ಕಾರಾಸ್ತ್ರಯೋದಶ ॥9॥
ಸಮತ್ವವು ಸತ್ಯ. ದಮವು ಸತ್ಯ. ಸಂಶಯವಿಲ್ಲ. ಅಮಾತ್ಸರ್ಯವು ಸತ್ಯ. ಕ್ಷಮಾ ಸತ್ಯ. ನಾಚಿಕೆಯು ಸತ್ಯ. ತಿತಿಕ್ಷಾ ಸತ್ಯ. ಅನಸೂಯತಾ ಸತ್ಯ. ತ್ಯಾಗವೂ ಸತ್ಯ. ಧ್ಯಾನವು ಸತ್ಯ. ಆರ್ಯತ್ವವು ಸತ್ಯ. ನಿರಂತರ ಸ್ಥಿರವಾಗಿರುವ ಧೃತಿ (ಧಾರಣ ಸಾಮರ್ಥ್ಯ, ಉತ್ಸಾಹ) ಯು ಸತ್ಯ. ಅಹಿಂಸೆಯು ಸತ್ಯ. ಕೆಲಸಗಳನ್ನು ಸಮರ್ಪಕವಾಗಿ ಮಾಡುವುದು ಅಥವಾ ಎಲ್ಲರನ್ನೂ ಸತ್ಕರಿಸುವುದು ಸತ್ಯ.
ಸತ್ಯಂ ನಾಮಾವ್ಯಯಂ ನಿತ್ಯಮವಿಕಾರಿ ತಥೈವ ಚ |
ಸರ್ವಧರ್ಮಾವಿರುದ್ಧಂ ಚ ಯೋಗೇನೈತದವಾಪ್ಯತೇ ॥10॥
ಯಾವುದು ಯಾವಾಗಲೂ ಒಂದೇ ರೂಪದಲ್ಲಿರುತ್ತದೋ, ಎಂದೂ ವಿಕಾರಕ್ಕೆ ಒಳಗಾಗುವುದಿಲ್ಲವೋ ಅದು ಸತ್ಯ. ಸರ್ವಧರ್ಮಗಳಿಗೆ ಅವಿರುದ್ಧವಾದುದು ಸತ್ಯ. (ಇಲ್ಲಿ ಧರ್ಮ ಎಂದರೆ ನಿಷ್ಕಾಮಕರ್ಮ- ತತ್ವಜ್ಞಾನ-ಭಗವದ್ಭಕ್ತಿ-ಧ್ಯಾನ ಇತ್ಯಾದಿ) ಯೋಗದಿಂದ ಸತ್ಯನಿಷ್ಠೆಯು ಸಿದ್ಧಿಸುತ್ತದೆ.
ಆತ್ಮನೀಷ್ಟೇ ತಥಾನಿಷ್ಟೇ ರಿಪೌ ಚ ಸಮತಾ ತಥಾ |
ಇಚ್ಛಾದ್ವೇಷಕ್ಷಯಂ ಪ್ರಾಪ್ಯ ಕಾಮಕ್ರೋಧಕ್ಷಯಂ ತಥಾ ॥11॥
ತನ್ನ ಬಗ್ಗೆ, ತನಗೆ ಇಷ್ಟವಾದವರ ಬಗ್ಗೆ ಇಚ್ಛೆ-ಪ್ರೀತಿ, ತನಗೆ ಇಷ್ಟವಾಗದವರ ಬಗ್ಗೆ ಮತ್ತು ಶತ್ರುವಿನ ಬಗ್ಗೆ ದ್ವೇಷ - ಇವುಗಳ ನಿಗ್ರಹವನ್ನು ಸಾಧಿಸಿದಾಗ ಮತ್ತು ಕಾಮ-ಕ್ರೋಧಗಳ ನಿಗ್ರಹವನ್ನು ಸಾಧಿಸಿದಾಗ ಸಿದ್ಧಿಸುವ ಮನೋಭಾವವೇ ಸಮತಾ.
ದಮೋ ನಾನ್ಯಸ್ಪೃಹಾ ನಿತ್ಯಂ ಧೈರ್ಯಂ ಗಾಂಭೀರ್ಯಮೇವ ಚ |
ಅಭಯಂ ಕ್ರೋಧಶಮನಂ ಜ್ಞಾನೇನೈತದವಾಪ್ಯತೇ ॥12॥
ಅನ್ಯರ ವಸ್ತುಗಳ ಮೇಲೆ ಆಸೆಯಿಲ್ಲದಿರುವಿಕೆ, ಆತಂಕಕ್ಕೆ ಒಳಗಾಗದಿರುವಿಕೆ, ಗಾಂಭೀರ್ಯ, ಅಭಯ, ಕ್ರೋಧಶಮನ- ಇವುಗಳು ದಮ. ಲೋಕಪ್ರಜ್ಞೆ-ಸ್ವಯಂ ಪ್ರಜ್ಞೆಗಳಿಂದ ಇದರ ಸಿದ್ಧಿಯಾಗುತ್ತದೆ.
ಅಮಾತ್ಸರ್ಯಂ ಬುಧಾಃ ಪ್ರಾಹುರ್ದಾನೇ ಧರ್ಮೇ ಚ ಸಂಯಮಮ್|
ಅವಸ್ಥಿತೇನ ನಿತ್ಯಂ ಚ ಸತ್ಯೇನಾಮತ್ಸರೀ ಭವೇತ್ ॥13॥
ದಾನದ ಬಗ್ಗೆ ಮತ್ತು ಧರ್ಮಾನುಷ್ಠಾನದ ಬಗ್ಗೆ ಸಂಯಮ= ಸ್ಪರ್ಧೆಯ ಅಭಾವ-ವನ್ನು ಅಮಾತ್ಸರ್ಯ ಎಂದು ಪ್ರಾಜ್ಞರು ಹೇಳುತ್ತಾರೆ. ನಿರಂತರ ಸತ್ಯನಿಷ್ಠೆಯಿಂದ ಅಮಾತ್ಸರ್ಯದ ಸಿದ್ಧಿಯಾಗುತ್ತದೆ.
ಅಕ್ಷಮಾಯಾಃ ಕ್ಷಮಾಯಾಶ್ಚ ಪ್ರಿಯಾಣೀಹಾಪ್ರಿಯಾಣಿ ಚ |
ಕ್ಷಮತೇ ಸರ್ವತಃ ಸಾಧುಃ ಸಾಧ್ವಾಪ್ನೋತಿ ಚ ಸತ್ಯವಾನ್ ॥14॥
ಕ್ಷಮಾ ಗುಣದಿಂದಾಗಿ (ಈ ಗುಣವಿದ್ದವನಿಗೆ) ಪ್ರಿಯಗಳು ಸಂಭವಿಸುತ್ತವೆ, ಅಪ್ರಿಯಗಳೂ ಸಂಭವಿಸುತ್ತವೆ. ಅಕ್ಷಮಾ-ಈ ದೋಷದಿಂದಾಗಿ (ಈ ದೋಷವಿದ್ದವನಿಗೆ) ಪ್ರಿಯಗಳು ಸಂಭವಿಸುತ್ತವೆ, ಅಪ್ರಿಯಗಳೂ ಸಂಭವಿಸುತ್ತವೆ. ಸಾಧುಪುರುಷನು ಎಲ್ಲವನ್ನೂ ಸಹಿಸುತ್ತಾನೆ. ಸತ್ಯನಿಷ್ಠನು ಕ್ಷಮಾಗುಣವನ್ನು, ಅದರ ಫಲವನ್ನು ಚೆನ್ನಾಗಿ ಪಡೆಯುತ್ತಾನೆ.
ಕಲ್ಯಾಣಂ ಕುರುತೇ ಗಾಢಂ ಹ್ರೀಮಾನ್ನ ಗ್ಲಾಯತೇ ಕ್ವಚಿತ್ |
ಪ್ರಶಾಂತವಾಙ್ಮನಾ ನಿತ್ಯಂ ಹ್ರೀಸ್ತು ಧರ್ಮಾದವಾಪ್ಯತೇ ॥15॥

ಹ್ರೀ= ನಾಚಿಕೆ ಇರುವವನು ಒಳ್ಳೆಯ ಕೆಲಸಗಳನ್ನೇ ಮಾಡುತ್ತಾನೆ. ಯಾವುದೇ ವಿಷಯದಲ್ಲಿ/ ಕಾಲದಲ್ಲಿ ಗ್ಲಾನಿಯನ್ನು ಹೊಂದುವುದಿಲ್ಲ. ಹ್ರೀ ಇರುವವನ ಮನಸ್ಸು ಮತ್ತು ಮಾತುಗಳು ಯಾವಾಗಲೂ ಶಾಂತವಾಗಿರುತ್ತವೆ. ಧರ್ಮನಿಷ್ಠ ಇರುವವನಿಗೆ `ಹ್ರೀ' ಯು ಸಿದ್ಧಿಸುತ್ತದೆ.
ಧರ್ಮಾರ್ಥಹೇತೋಃ ಕ್ಷಮತೇ ತಿತಿಕ್ಷಾ ಕ್ಷಾಂತಿರುಚ್ಯತೇ |
ಲೋಕಸಂಗ್ರಹಣಾರ್ಥಾ ತು ಸಾ ತು ಧೈರ್ಯೇಣ ಲಭ್ಯತೇ |
ಅನಸೂಯಾ ತು ಗಾಂಭೀರ್ಯಂ ದಾನೇನೈತದವಾಪ್ಯತೇ ॥16॥
ಧರ್ಮ ಮತ್ತು ಅರ್ಥಗಳ ಸಾಧನೆಗಾಗಿ ಸಾಧಕನು ಕ್ಲೇಶಗಳನ್ನು ಸಹಿಸುತ್ತಾನೆ. ಈ ಕ್ಲೇಶ ಸಹನೆಯೇ ತಿತಿಕ್ಷಾ. ಇದನ್ನು ಕ್ಷಾಂತಿ ಎಂದೂ ಹೇಳುತ್ತಾರೆ. ಧರ್ಮ ಮತ್ತು ಅರ್ಥಗಳ ಸಾಧನೆಯಲ್ಲಿ ಲೋಕಕ್ಕೆ ಮಾರ್ಗದರ್ಶನ ಮಾಡಲು ಇದು ಉಪಯುಕ್ತ. ಧೀರಭಾವದಿಂದ ತಿತಿಕ್ಷಾವನ್ನು ಸಾಧಿಸಬೇಕು. ಅನಸೂಯಾ ಎಂದರೆ ಗಾಂಭೀರ್ಯ. (ಒಳ್ಳೆಯ ಚಿಂತನೆಗಳಿಗೆ ಆಳವಿದ್ದರೆ, ಅವುಗಳನ್ನು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸುವ ಸಾಮರ್ಥ್ಯದಲ್ಲಿ ಆಳವಿದ್ದರೆ ಈ ಆಳವು ಗಾಂಭೀರ್ಯ. ಇದಿಲ್ಲದಿದ್ದವರು ಪರರ ಗುಣಗಳಲ್ಲಿ ದೋಷವನ್ನು ತೋರಿಸುತ್ತಾರೆ. ಈ ದೋಷಪ್ರದರ್ಶನವು ಅಸೂಯಾ. ಗಾಂಭೀರ್ಯವಿದ್ದವರು ಪರರ ಗುಣಗಳಲ್ಲಿ ದೋಷವನ್ನು ತೋರಿಸುವುದಿಲ್ಲ. ಆದ್ದರಿಂದ ಅನಸೂಯಾ ಎಂದರೆ ಗಾಂಭೀರ್ಯ). ದಾನದಿಂದ ಇದನ್ನು (ಗಾಂಭೀರ್ಯವನ್ನು) ಸಾಧಿಸಬೇಕು.
ತ್ಯಾಗಃ ಸ್ನೇಹಸ್ಯ ಯಸ್ತ್ಯಾಗೋ ವಿಷಯಾಣಾಂ ತಥೈವ ಚ |
ರಾಗದ್ವೇಷಪ್ರಹೀಣಸ್ಯ ತ್ಯಾಗೋ ಭವತಿ ನಾನ್ಯಥಾ |
ಧ್ಯಾನಂ ಚಾಶಾರ್ಯಮಿತ್ಯುಕ್ತಂ ಮೌನೇನೈತದವಾಪ್ಯತೇ ॥17॥
ವಿಷಯಗಳ (ಭೋಗ ವಸ್ತುಗಳ) ಪ್ರೀತಿಯ ತ್ಯಾಗವೇ ತ್ಯಾಗ. ರಾಗ- ದ್ವೇಷಗಳಿಲ್ಲದವನಿಗೆ ತ್ಯಾಗವು ಸಿದ್ಧಿಸುತ್ತದೆ. ಧ್ಯಾನವು ಮೌನದಿಂದ ಸಿದ್ಧಿಸುತ್ತದೆ. ಆಶಾರ್ಯವೇ= ಪ್ರಾಮಾಣಿಕತೆಯೇ ಧ್ಯಾನ. ಮೌನದಿಂದ ಇದು ಸಿದ್ಧಿಸುತ್ತದೆ.
ಆರ್ಯತಾ ನಾಮ ಭೂತಾನಾಂ ಯಃ ಕರೋತಿ ಪ್ರಯತ್ನತಃ |
ಶುಭಕರ್ಮಾನಿರಾಕಾರೋ ವೀತರಾಗತ್ವಮೇವ ಚ ॥18॥
`ಆರ್ಯತಾ' ಎಂದರೆ ಪ್ರಯತ್ನಪೂರ್ವಕವಾಗಿ ಸಕಲ ಪ್ರಾಣಿಗಳಿಗೆ ಒಳ್ಳೆಯದನ್ನು ಮಾಡುವುದು ಮತ್ತು ಹಾನಿಕರವಾದ ರಾಗಗಳಿಲ್ಲದಿರುವುದು.
ಧೃತಿರ್ನಾಮ ಸುಖೇ ದುಃಖೇ ಯಥಾ ನಾಪ್ನೋತಿ ವಿಕ್ರಿಯಾಮ್ |
ತಾಂ ಭಜೇತ ಸದಾ ಪ್ರಾಜ್ಞೋ ಯ ಇಚ್ಛೇದ್ಭೂತಿಮಾತ್ಮನಃ ॥19॥
ಧೃತಿ ಎಂದರೆ ಸುಖ-ದುಃಖಗಳು ಉಂಟಾದಾಗ ವಿಕಾರವನ್ನು ಹೊಂದದ ಮನಃಸ್ಥಿತಿ. ಶ್ರೇಯಸ್ಸನ್ನು ಬಯಸುವ ಪ್ರಾಜ್ಞನು ಅದನ್ನು ಹೊಂದಿರಬೇಕು.
ಸರ್ವಥಾ ಕ್ಷಮಿಣಾ ಭಾವ್ಯಂ ತಥಾ ಸತ್ಯಪರೇಣ ಚ |
ವೀತಹರ್ಷಭಯಕ್ರೋಧೋ ಧೃತಿಮಾಪ್ನೋತಿ ಪಂಡಿತಃ ॥20॥
ಎಲ್ಲ ರೀತಿಯಿಂದ ತಾಳ್ಮೆವುಳ್ಳವನಾಗಿರಬೇಕು. ಎಲ್ಲ ರೀತಿಯಿಂದ ಸತ್ಯನಿಷ್ಠನಾಗಿರಬೇಕು. ಹರ್ಷ-ಭಯ-ಕ್ರೋಧಗಳಿಲ್ಲದ ಪಂಡಿತನು ಧೃತಿಯನ್ನು ಹೊಂದುತ್ತಾನೆ.
ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ |
ಅನುಗ್ರಹಶ್ಚ ದಾನಂ ಚ ಸತಾಂ ಧರ್ಮಃ ಸನಾತನಃ॥21॥
ಕೃತಿ-ಆಲೋಚನೆ-ಮಾತುಗಳಿಂದ ಯಾವ ಪ್ರಾಣಿಗಳಿಗೂ ದ್ರೋಹ ಮಾಡಬಾರದು. ಉಪಕಾರ ಮಾಡಬೇಕು. ದಾನ ಮಾಡಬೇಕು. ಇದು ಸಜ್ಜನರು ಪಾಲಿಸುವ ಸನಾತನ ಧರ್ಮ.
ಏತೇ ತ್ರಯೋದಶಾಕಾರಾಃ ಪೃಥಕ್ಸತ್ಯೈಕಲಕ್ಷಣಾಃ |
ಭಜಂತೇ ಸತ್ಯಮೇವೇಹ ಬೃಂಹಯಂತಿ ಚ ಭಾರತ ॥22॥
ಈ ಹದಿಮೂರರಲ್ಲಿ ಪ್ರತಿಯೊಂದರಲ್ಲೂ ಸತ್ಯವೇ ಸಾರ. ಈ ಮೌಲ್ಯಗಳಿಗೆ ನಿಷ್ಠರಾದವರು ಸತ್ಯವನ್ನೇ ಆರಾಧಿಸುತ್ತಾರೆ. ಅದನ್ನೇ ಹೆಚ್ಚಿಸುತ್ತಾರೆ.
ನಾಂತಃ ಶಕ್ಯೋ ಗುಣಾನಾಂ ಹಿ ವಕ್ತುಂ ಸತ್ಯಸ್ಯ ಭಾರತ |
ಅತಃ ಸತ್ಯಂ ಪ್ರಶಂಸಂತಿ ವಿಪ್ರಾಃ ಸಪಿತೃದೇವತಾಃ ॥23॥
ಭರತಕುಲಸಂಜಾತ! ಸತ್ಯದ ಗುಣಗಳನ್ನು ಹೇಳಿ ಮುಗಿಸಲು ಸಾಧ್ಯವಿಲ್ಲ. ಆದ್ದರಿಂದ ವಿಪ್ರರು, ಪಿತೃಗಳು, ದೇವತೆಗಳು ಸತ್ಯವನ್ನು ಪ್ರಶಂಸಿಸುತ್ತಾರೆ.
ನಾಸ್ತಿ ಸತ್ಯಾತ್ ಪರೋ ಧರ್ಮೋ ನಾನೃತಾತ್ ಪಾತಕಂ ಪರಮ್ |
ಸ್ಥಿತಿರ್ಹಿ ಸತ್ಯಂ ಧರ್ಮಸ್ಯ ತಸ್ಮಾತ್ ಸತ್ಯಂ ನ ಲೋಪಯೇತ್ ॥24॥
ಸತ್ಯಕ್ಕಿಂತ ದೊಡ್ಡ ಧರ್ಮವಿಲ್ಲ. ಸುಳ್ಳಿಗಿಂತ ದೊಡ್ಡ ಪಾಪವಿಲ್ಲ. ಸತ್ಯವು ಧರ್ಮಕ್ಕೆ ಆಧಾರ. ಆದ್ದರಿಂದ ಸತ್ಯದ ಲೋಪವನ್ನು ಮಾಡಬಾರದು.
ಉಪೈತಿ ಸತ್ಯಾದ್ ದಾನಂ ಹಿ ತಥಾ ಯಜ್ಞಾಃ ಸದಕ್ಷಿಣಾಃ |
ವ್ರತಾಗ್ನಿಹೋತ್ರಂ ವೇದಾಶ್ಚ ಯೇ ಚಾನ್ಯೇ ಧರ್ಮನಿಶ್ಚಯಾಃ ॥25॥
ಸತ್ಯದಿಂದ ದಾನದ ಫಲವನ್ನು ಹೊಂದುತ್ತಾನೆ. ಯಜ್ಞ ಮತ್ತು ದಕ್ಷಿಣೆಗಳ ಫಲವನ್ನು ಹೊಂದುತ್ತಾನೆ.
ವ್ರತ-ಅಗ್ನಿಹೋತ್ರ-ವೇದಾಧ್ಯಯನ-ಅಧ್ಯಾಪನ ಇವುಗಳ ಫಲವನ್ನು ಹೊಂದುತ್ತಾನೆ. ಧರ್ಮ ಎಂದು ನಿಶ್ಚಯಿಸಲ್ಪಡುವ ಎಲ್ಲ ಆಚರಣೆಗಳ ಫಲವನ್ನು ಹೊಂದುತ್ತಾನೆ.

ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ |
ಅಶ್ವಮೇಧಸಹಸ್ರಾದ್ಧಿ ಸತ್ಯಮೇವಾತಿರಿಚ್ಯತೇ ॥26॥
ಸಾವಿರ ಅಶ್ವಮೇಧ ಮತ್ತು ಸತ್ಯ. ಇವುಗಳನ್ನು ತೂಗಿದರೆ ಸಾವಿರ ಅಶ್ವಮೇಧಕ್ಕಿಂತ ಸತ್ಯವೇ ಹೆಚ್ಚಾಗುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು.
* * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ಕ್ರೋಧ ಮೊದಲಾದ ದೋಷಗಳು
ಯುಧಿಷ್ಠಿರಃ
ಯತಃ ಪ್ರಭವತಿ ಕ್ರೋಧಃ ಕಾಮಶ್ಚ ಭರತರ್ಷಭ |
ಶೋಕಮೋಹೌ ವಿವಿತ್ಸಾ ಚ ಪರಾಭೂತಿಸ್ತಥಾ ಮದಃ ॥1॥
ಲೋಭೋ ಮಾತ್ಸರ್ಯಮೀರ್ಷ್ಯಾ ಚ ಕುತ್ಸಾಸೂಯಾ ಕೃಪಾ ತಥಾ |
ಏತತ್ಸರ್ವಂ ಮಹಾಪ್ರಾಜ್ಞ ಯಾಥಾತಥ್ಯೇನ ಮೇ ವದ ॥2॥
ಭರತಕುಲಶ್ರೇಷ್ಠ! ಕ್ರೋಧ, ಕಾಮ, ಶೋಕ, ಮೋಹ, ವಿಮರ್ಶೆ, ಪರಾಭವ, ಮದ, ಲೋಭ, ಮಾತ್ಸರ್ಯ, ಈರ್ಷ್ಯೆ, ನಿಂದೆ, ಅಸೂಯಾ, ಅನುಚಿತ ಕೃಪಾ- ಇವುಗಳು ಏಕೆ ಹುಟ್ಟುತ್ತವೆ. ಮಹಾಪ್ರಾಜ್ಞ! ಇದೆಲ್ಲವನ್ನೂ ಯಥಾರ್ಥವಾಗಿ ಹೇಳಿ.
ಭೀಷ್ಮಃ
ತ್ರಯೋದಶೈತೇಽತಿಬಲಾಃ ಶತ್ರವಃ ಪ್ರಾಣಿನಾಂ ಸ್ಮೃತಾಃ |
ಉಪಾಸತೇ ಮಹಾರಾಜ ಸಮಸ್ತಾಃ ಪುರುಷಾನಿಹ ॥3॥
ಮಹಾರಾಜ! ಈ ಹದಿಮೂರು ಪ್ರಾಣಧಾರಿಗಳ-ಮಾನವರ= ಅತಿಬಲಶಾಲಿ ಶತ್ರುಗಳು. ಹೀಗೆ ಜ್ಞಾನಿಗಳ ಚಿಂತನೆಯಿದೆ. ಇವು ಎಲ್ಲ ಪುರುಷರಲ್ಲೂ ಇರುತ್ತವೆ.
ಏತೇ ಪ್ರಮತ್ತಂ ಪುರುಷಮಪ್ರಮತ್ತಾಸ್ತುದಂತಿ ಹಿ |
ವೃಕಾ ಇವ ವಿಲುಂಪಂತಿ ದೃಷ್ಟ್ವೈವ ಪುರುಷೇತರಾನ್ ॥4॥
ಇವುಗಳು ಅಜಾಗರೂಕನನ್ನು ಜಾಗರೂಕರಾಗಿ ಹಿಂಸಿಸುತ್ತವೆ. ತೋಳಗಳು ಅಥವಾ ದರೋಡೆಗಾರರು ಅಜಾಗರೂಕರನ್ನು ಅಥವಾ ದುರ್ಬಲರನ್ನು ನೋಡಿದ ಕೂಡಲೇ ಆಕ್ರಮಿಸುತ್ತವೆ/ತ್ತಾರೆ. ಕ್ರೋಧಾದಿಗಳು ಹಾಗೆಯೇ ಆಕ್ರಮಿಸುತ್ತವೆ.
ಏಭ್ಯಃ ಪ್ರವರ್ತತೇ ದುಃಖಮೇಭ್ಯಃ ಪಾಪಂ ಪ್ರವರ್ತತೇ |
ಇತಿ ಮರ್ತ್ಯೋ ವಿಜಾನೀಯಾತ್ ಸತತಂ ಭರತರ್ಷಭ ॥5॥
ಭರತಕುಲಶ್ರೇಷ್ಠ! ಇವುಗಳಿಂದ ದುಃಖವುಂಟಾಗುತ್ತದೆ. ಇವುಗಳಿಂದ ಪಾಪಗಳು ಸಂಭವಿಸುತ್ತವೆ. ಮಾನವನು ಇದನ್ನು ಯಾವಾಗಲೂ ತಿಳಿದಿರಬೇಕು.
ಏತೇಷಾಮುದಯಂ ಸ್ಥಾನಂ ಕ್ಷಯಂ ಚ ಪುರುಷೋತ್ತಮ |
ಹಂತ ತೇ ವರ್ಣಯಿಷ್ಯಾಮಿ ತನ್ಮೇ ನಿಗದತಃ ಶೃಣು ॥6॥
ಪುರುಷಶ್ರೇಷ್ಠ! ಇವುಗಳ ಉತ್ಪತ್ತಿ, ಸ್ಥಿತಿ ಮತ್ತು ನಾಶಗಳನ್ನು ಕುರಿತು ನಿನಗೆ ವಿವರಿಸುವೆ. ಕೇಳು.
ಲೋಭಾತ್ ಕ್ರೋಧಃ ಪ್ರಭವತಿ ಪರದೋಷೈರುದೀರ್ಯತೇ |
ಕ್ಷಮಯಾ ತಿಷ್ಠತೇ ರಾಜನ್ ಕ್ಷಮಯಾ ವಿನಿವರ್ತತೇ ॥7॥
ಲೋಭದಿಂದ (ಅದು ಭಗ್ನವಾದಾಗ) ಕ್ರೋಧವು ಹುಟ್ಟುತ್ತದೆ. ಅದು ಪರರ ದೋಷದಿಂದ (ತನ್ನ ಲೋಭಕ್ಕೆ ಅಡ್ಡಿ ಮಾಡುವ ಪ್ರವೃತ್ತಿಗಳಿಂದ - ಲೋಭಿಯು ಈ ಪ್ರವೃತ್ತಿಗಳನ್ನು ನೋಡಿದಾಗ) ಉದ್ದೀಪನಗೊಳ್ಳುತ್ತದೆ. ತಾಳ್ಮೆಯಿಂದ ಉದ್ದೀಪನವು ನಿಲ್ಲುತ್ತದೆ. ತಾಳ್ಮೆಯಿಂದ ಅದರ (ಕ್ರೋಧದ) ನಿವೃತ್ತಿಯಾಗುತ್ತದೆ.
ಸಂಕಲ್ಪಾಜ್ಜಾಯತೇ ಕಾಮಃ ಸೇವ್ಯಮಾನೋ ವಿವರ್ಧತೇ |
ಅವದ್ಯದರ್ಶನಾದ್ವೇತಿ ತತ್ತ್ವಜ್ಞಾನಾಚ್ಚ ಧೀಮತಾಮ್ ॥8॥
`ಸಂಕಲ್ಪ' ಒಂದು ಮನೋವೃತ್ತಿ. ಕಾಮದ ಪೂರ್ವಸ್ಥಿತಿ. ಸಂಕಲ್ಪದಿಂದ ಕಾಮವು ಹುಟ್ಟುತ್ತದೆ. ಕಾಮನೆಗಳನ್ನು ಪೂರೈಸಿದರೆ ಅದು ಹೆಚ್ಚುತ್ತದೆ. ಧೀಮಂತರಿಗೆ ತತ್ವಜ್ಞಾನದ ಬಲದಿಂದ ಕಾಮವು ಹಾನಿಕರ ಎಂದು ತಿಳಿದರೆ ಅದು ನಾಶವಾಗುತ್ತದೆ.
ವಿರುದ್ಧಾನಿ ಹಿ ಶಾಸ್ತ್ರಾಣಿ ಪಶ್ಯಂತೀಹಾಲ್ಪಬುದ್ಧಯಃ |
ವಿವಿತ್ಸಾ ಜಾಯತೇ ಯಸ್ಯ ತಸ್ಯೈವ ವಿನಿವರ್ತತೇ ॥9॥
ಅಲ್ಪಬುದ್ಧಿಯ ಜನಗಳು ಶಾಸ್ತ್ರಗಳನ್ನು ವಿರುದ್ಧವಾಗಿ= ಅವುಗಳ ಕರ್ತೃಗಳ ಅಭಿಪ್ರಾಯಕ್ಕೆ ವಿರುದ್ಧವಾಗಿ ಕಾಣುತ್ತಾರೆ. ಯಾರಿಗೆ ವಿಮರ್ಶೆಯು ಹುಟ್ಟುತ್ತದೋ ಅವರಿಗೆ ತತ್ವಜ್ಞಾನವು ಉದಯಿಸಿ ವಿರುದ್ಧ ಅಭಿಪ್ರಾಯದ ಪರಿಹಾರವಾಗುತ್ತದೆ.
ಪ್ರೀತೇಃ ಶೋಕಃ ಪ್ರಭವತಿ ವಿಯೋಗಾತ್ತಸ್ಯ ದೇಹಿನಃ |
ಯದಾ ನಿರರ್ಥಕಂ ವೇತ್ತಿ ತದಾ ಸದ್ಯಃ ಪ್ರಣಶ್ಯತಿ ॥10॥
ತನಗೆ ಯಾರ ಮೇಲೆ ಪ್ರೀತಿಯು ಇದೆಯೋ ಅವರಿಗೆ ತೊಂದರೆಯಾದಾಗ ಶೋಕವು ಉಂಟಾಗುತ್ತದೆ. ಈ ಶೋಕ ನಿರರ್ಥಕ ಎಂದು ಮನವರಿಕೆಯಾದಾಗ ಶೋಕದ ಪರಿಹಾರವಾಗುತ್ತದೆ.
ಪರಾಭೂತೇಃ ಕ್ರೋಧಲೋಭ ಅಭ್ಯಾಸಾಚ್ಚ ಪ್ರವರ್ಧತೇ |

ದಯಯಾ ಸರ್ವಭೂತಾನಾಂ ನಿರ್ವೇದಾತ್ ಸ ನಿವರ್ತತೇ ॥11॥
ಪರಾಭವ ಹೊಂದಿದ ವ್ಯಕ್ತಿಯಲ್ಲಿ ಕ್ರೋಧ ಮತ್ತು ಲೋಭಗಳು ಮತ್ತೆ ಮತ್ತೆ ಹೆಚ್ಚುತ್ತವೆ. ಸರ್ವಭೂತದಯೆಯಿಂದ ಮತ್ತು ಈ ಗುಣದಿಂದ ಹುಟ್ಟುವ ನಿರ್ವೇದ (ಅಧಿಕಾರ-ಆಡಂಬರಗಳಲ್ಲಿ ಮಾಲಿನ್ಯದರ್ಶನ) ದಿಂದ ಪರಾಭವವು (ಪರಾಭವ ಪ್ರಜ್ಞೆಯ ದುಷ್ಪರಿಣಾಮಗಳು) ದೂರವಾಗುತ್ತವೆ.
ಸತ್ತ್ವತ್ಯಾಗಾತ್ ತು ಮಾತ್ಸರ್ಯಮಹಿತಾನಾಂ ಚ ಸೇವಯಾ |
ಏತತ್ ತು ಕ್ಷೀಯತೇ ತಾತ ಸಾಧೂನಾಮುಪಸೇವನಾತ್ ॥12॥
ಸತ್ವ (ಶುದ್ಧ, ದೃಢ ಮನೋಬಲ ಮತ್ತು ಯುಕ್ತಾಯುಕ್ತ ವಿವೇಕ) ದ ತ್ಯಾಗದಿಂದ ಮತ್ತು ಅಹಿತಕರ ವಿಚಾರಗಳಲ್ಲಿ ಆಸಕ್ತಿಯಿಂದ ಮಾತ್ಸರ್ಯವು ಉಂಟಾಗುತ್ತದೆ. ಸಾಧುಜನಗಳ ಸಂಗದಿಂದ ಇದರ ಪರಿಹಾರವಾಗುತ್ತದೆ.
ಕುಲಾಜ್ಜ್ಞಾನಾತ್ ತಥೈಶ್ವರ್ಯಾನ್ಮದೋ ಭವತಿ ದೇಹಿನಾಮ್ |
ಏಭಿರೇವ ಯಥಾ ಜ್ಞಾತೈರ್ಮದಃ ಸದ್ಯಃ ಪ್ರಣಶ್ಯತಿ ॥13॥
ಪ್ರತಿಷ್ಠಿತ ಕುಲ, ಉನ್ನತ ಜ್ಞಾನ, ಐಶ್ವರ್ಯ- ಇವುಗಳು ಮದಕ್ಕೆ ಕಾರಣ. ಈ ಮೂರು ತನಗೆ ಒದಗಿ ಬಂದಿರುವುದಕ್ಕೆ ಸರಿಯಾದ ಕಾರಣ- ಭಗವತ್ಕೃಪೆ ಎಂಬ ಜ್ಞಾನದಿಂದ ಮದವು ನಾಶವಾಗುತ್ತದೆ.
ಈರ್ಷ್ಯಾ ಕಾಮಾತ್ ಪ್ರಭವತಿ ಸಂಘರ್ಷಾಚ್ಚೈವ ಭಾರತ |
ಇತರೇಷಾಂ ತು ಮರ್ತ್ಯಾನಾಂ ಪ್ರಜ್ಞಯಾ ಸಾ ಪ್ರಣಶ್ಯತಿ ॥14॥
ಭರತಕುಲಸಂಜಾತ! ಈರ್ಷ್ಯೆಯು ಕಾಮದಿಂದ ಹುಟ್ಟುತ್ತದೆ. ಸಂಘರ್ಷದಿಂದಲೂ ಹುಟ್ಟುತ್ತದೆ. ಬೇರೆ ಜನಗಳ ಅಂದರೆ ಈರ್ಷ್ಯಾರಹಿತ ಜನಗಳ ಬಗ್ಗೆ ತಿಳಿದುಕೊಳ್ಳುವುದರಿಂದ ಈರ್ಷ್ಯೆಯ ಪರಿಹಾರವಾಗುತ್ತದೆ.
ವಿಭ್ರಮಾಲ್ಲೋಕಬಾಹ್ಯಾನಾಂ ದ್ವೇಷ್ಯೈರ್ವಾಕ್ಯೈರಸಂಗತೈಃ |
ಕುತ್ಸಾ ಸಂಜಯತೇ ರಾಜನ್ ನಿಷೇವಾಭಿಃ ಪ್ರಶಾಮ್ಯತಿ ॥15॥
ಲೋಕಜೀವನದ ಮೌಲ್ಯಗಳನ್ನು ಮೀರಿ ನಡೆಯುವವರು ಲೋಕಬಾಹ್ಯರು. ಅವರ ಅಸಂಗತ ಮಾತುಗಳಿಂದ ಉಂಟಾಗುವ ವಿಭ್ರಮೆಯಿಂದ ಕುತ್ಸಾ= ಪರನಿಂದಾ ಪ್ರವೃತ್ತಿಯು ಉಂಟಾಗುತ್ತದೆ. ವಿಪುಲ ಸಜ್ಜನರ ಸೇವೆಯಿಂದ ಇದರ ಪರಿಹಾರವಾಗುತ್ತದೆ.
ಪ್ರತಿಕರ್ತುಮಶಕ್ಯಾಯ ಬಲಸ್ಥಾಯಾಪಕಾರಿಣೇ |
ಅಸೂಯಾ ಜಾಯತೇ ತೀವ್ರಾ ಕಾರುಣ್ಯಾದ್ ವಿನಿವರ್ತತೇ ॥16॥
ತನಗೆ ಅಪಕಾರ ಮಾಡಿದ, ಪ್ರತಿಕಾರ ಮಾಡಲಾಗದಷ್ಟು ಬಲಶಾಲಿಯಾದ ಶತ್ರುವಿನ ಬಗ್ಗೆ ತೀವ್ರ ಅಸೂಯೆಯು ಹುಟ್ಟುತ್ತದೆ. ಆ ಬಲಶಾಲಿ ಶತ್ರುವು ಕಾರುಣ್ಯವನ್ನು ತೋರಿದರೆ ಅಸೂಯೆಯ ಪರಿಹಾರವಾಗುತ್ತದೆ.
ಕೃಪಣಾನ್ ಸತತಂ ದೃಷ್ಟ್ವಾ ತತಃ ಸಂಜಯತೇ ಕೃಪಾ |
ಧರ್ಮನಿಷ್ಠಾಂ ಯದಾ ವೇತ್ತಿ ತದಾ ಶಾಮ್ಯತಿ ಸಾ ಕೃಪಾ ॥17॥
ಸತತವಾಗಿ ಕೃಪಣರಾಗಿರುವವನನ್ನು (ಕೃಪಣ= ಸಣ್ಣ ಮನಸ್ಸಿನವನು, ಏಳ್ಗೆ ಇಲ್ಲದವನು) ನೋಡಿದರೆ ಮರುಕ ಹುಟ್ಟುತ್ತದೆ. ಅಂತಹ ವ್ಯಕ್ತಿಯಲ್ಲಿ ಧರ್ಮದ ಅವನತಿ (ನಿಷ್ಠಾ= ಅವನತಿ, ನಾಶ) ಯನ್ನು ಗಮನಿಸಿದಾಗ ಮರುಕವು ನಿವೃತ್ತವಾಗುತ್ತದೆ.
ಏತಾನ್ಯೇವ ಜಿತಾನ್ಯಾಹುಃ ಪ್ರಶಮೇಚ್ಚ ತ್ರಯೋದಶ |
ಏತೇ ಹಿ ಧಾರ್ತರಾಷ್ಟ್ರಾಣಾಂ ಸರ್ವೇ ದೋಷಾಸ್ತ್ರಯೋದಶ |
ತ್ವಯಾ ಸತ್ಯಾರ್ಥಿನಾ ನಿತ್ಯಂ ವಿಜಿತಾ ಜೇಷ್ಯಸೇ ಚ ತಾನ್ ॥18॥
ಈ ಹದಿಮೂರನ್ನು ಪೂರ್ಣವಾಗಿ ಶಮನಗೊಳಿಸಬೇಕು. ಶಮನವೇ ಜಯ ಎಂದು ಪ್ರಾಜ್ಞರು ಹೇಳುತ್ತಾರೆ. ಈ ಹದಿಮೂರು ದೋಷಗಳೂ ಧೃತರಾಷ್ಟ್ರನ ಮಕ್ಕಳಿಗೆ ಇವೆ. ನೀನು ಸತ್ಯನಿಷ್ಠ. ಆದ್ದರಿಂದ ಇವುಗಳನ್ನು ನಿರಂತರ ಜಯಿಸಿರುವಿ. ಇನ್ನು ಮುಂದೆಯೂ ಜಯಿಸುವಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಏಕೋನತ್ರಿಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.
* * * *
ಮೂವತ್ತನೆಯ ಅಧ್ಯಾಯ
ವಕ್ರ-ಕಠೋರ ಸ್ವಭಾವದ ಜನರು
ಯುಧಿಷ್ಠಿರಃ
ಆನೃಶಂಸ್ಯಂ ವಿಜಾನಾಮಿ ದರ್ಶನೇನ ಸತಾಂ ಸದಾ |
ನೃಶಂಸಾನ್ನ ವಿಜಾನಾಮಿ ತೇಷಾಂ ಕರ್ಮ ಚ ಭಾರತ ॥1॥
ಭರತಕುಲಸಂಜಾತ! ಸದಾ ಸಜ್ಜನರ ದರ್ಶನದಿಂದ ನನಗೆ ಸರಳ-ಮೃದು ಸ್ವಭಾವದ ಪರಿಚಯವಿದೆ. ವಕ್ರ-ಕಠೋರ ಸ್ವಭಾವದವರ (ನೃಶಂಸರ) ಮತ್ತು ಅವರ ಕಾರ್ಯಗಳ ಪರಿಚಯವಿಲ್ಲ.
ಕಂಟಕಾನ್ ಕೂಪಮಗ್ನಿಂ ಚ ವರ್ಜಯಂತಿ ಯಥಾ ನರಾಃ |
ತಥಾ ನೃಶಂಸಕರ್ಮಾಣಂ ವರ್ಜಯಂತಿ ನರಾ ನರಮ್ ॥2॥
ಮುಳ್ಳುಗಳಿಂದ, ಭಾವಿಯಿಂದ ಮತ್ತು ಅಗ್ನಿಯಿಂದ ಜನರು ದೂರವಿರುತ್ತಾರೆ. ಅಂದರೆ ಅವುಗಳಿಂದ ಅಪಾಯವಾಗದಂತೆ ಎಚ್ಚರವಹಿಸುತ್ತಾರೆ. ಹೀಗೆಯೇ ಜನರು ವಕ್ರ-ಕಠೋರ ಕೃತ್ಯಗಳನ್ನೆಸಗುವ ಜನರಿಂದ ದೂರವಿರುತ್ತಾರೆ.
ನೃಶಂಸೋ ಹ್ಯಧಮೋ ನಿತ್ಯಂ ಪ್ರೇತ್ಯ ಚೇಹ ಚ ಭಾರತ |

ತಸ್ಮಾದ್ಬ್ರವೀಹಿ ಕೌರವ್ಯ ತಸ್ಯ ಧರ್ಮವಿನಿಶ್ಚಯಮ್ ॥3॥
ಭಾರತ! ನೃಶಂಸನು ಈ ಜೀವನದಲ್ಲಿ ಅಧಮ. ಮರಣಾನಂತರದಲ್ಲಿ ಅಧಮ. ಯಾವಾಗಲೂ ಅಧಮ. ಆದ್ದರಿಂದ, ಕುರುಕುಲಸಂಜಾತ! ಅವನ ಧರ್ಮ=ವರ್ತನೆ, ಪ್ರವೃತ್ತಿ, ಸ್ವಭಾವ-ವನ್ನು ಕುರಿತು ಹೇಳಿರಿ.
ಭೀಷ್ಮಃ
ಸ್ಪೃಹಾಸ್ಯಾಂತರ್ಹಿತಾ ಚೈವ ವಿದಿತಾರ್ಥಾ ಚ ಕರ್ಮಣಾ |
ಆಕ್ರೋಷ್ಟಾ ಕ್ರುಶ್ಯತೇ ಚೈವ ಬಂಧಿತಾ ಬಧ್ಯತೇ ಚ ಯಃ ॥4॥
ಇವರ ಆಸೆಗಳು ಒಳಗೇ ಅಡಗಿರುತ್ತವೆ. ಬೇರೆಯವರಿಗೆ ತಿಳಿಯುವುದಿಲ್ಲ. ಅವನ ಕೃತ್ಯಗಳಿಂದ ಕ್ರಮೇಣ ತಿಳಿಯುತ್ತದೆ. ಇವನು ಸುಮ್ಮನೆ ಆಕ್ರೋಶ ಮಾಡುತ್ತಾನೆ. ಬೇರೆಯವರಿಂದ ಆಕ್ರೋಶಕ್ಕೆ ಒಳಗಾಗುತ್ತಾನೆ. ಬೇರೆಯವರನ್ನು ಇಕ್ಕಟ್ಟಿಗೆ ಗುರಿಯಾಗಿಸುತ್ತಾನೆ. ತಾನೂ ಇಕ್ಕಟ್ಟಿಗೆ ಗುರಿಯಾಗುತ್ತಾನೆ.
ದತ್ತಾನುಕೀರ್ತಿರ್ವಿಷಮಃ ಕ್ಷುದ್ರೋ ನೈಕೃತಿಕಃ ಶಠಃ |
ಅಸಂಭೋಗೀ ಚ ಮಾನೀ ಚ ತಥಾ ಸಂಗೀ ವಿಕತ್ಥನಃ ॥5॥
ದಾನ ಮಾಡಿದರೆ ಅದನ್ನು ಹೇಳಿಕೊಳ್ಳುತ್ತಾನೆ. ಸಮಬುದ್ಧಿಯವನಲ್ಲ. ಕ್ಷುದ್ರ, ವಂಚಕ, ಶಠ. ಭೋಗ್ಯವಸ್ತುಗಳನ್ನು ಅರ್ಹರಿಗೆ ಕೊಡದೆ ತಾನೊಬ್ಬನೇ ಅನುಭವಿಸುತ್ತಾನೆ. ದುರಭಿಮಾನಿ, ಅನುಚಿತ ಆಸಕ್ತಿವುಳ್ಳವನು. ಆತ್ಮಶ್ಲಾಘನೆ ಮಾಡಿಕೊಳ್ಳುವವನು.
ಸರ್ವಾತಿಶಂಕೀ ಪರುಷೋ ಬಾಲಿಶಃ ಕೃಪಣಸ್ತಥಾ |
ವರ್ಗಪ್ರಶಂಸೀ ಸತತಮಾಶ್ರಮದ್ವೇಷಸಂಕರೀ ॥6॥
ಎಲ್ಲರ ಬಗ್ಗೆಯೂ ಅತಿ ಸಂಶಯವುಳ್ಳವನು. ಕಠೋರ, ಎಳಸು, ಜಿಪುಣ, ಗುಂಪುಗಾರಿಕೆ ಯವನು. ವರ್ಣಾಶ್ರಮಗಳ ವ್ಯವಸ್ಥೆಯನ್ನು ದ್ವೇಷಿಸುತ್ತಾನೆ. ಅವುಗಳಲ್ಲಿ ಸಾಂಕರ್ಯವನ್ನುಂಟು ಮಾಡುತ್ತಾನೆ.
ಹಿಂಸಾವಿಹಾರೀ ಸತತಮವಿಶೇಷಗುಣಾಗುಣಃ |
ಬಹ್ವಲೀಕೋ ಮನಸ್ವೀ ಚ ಲುಬ್ಧೋಽತ್ಯರ್ಥಂ ನೃಶಂಸಕೃತ್ ॥7॥
ಪರರನ್ನು ಹಿಂಸಿಸಿ ಸಂತೋಷಪಡುತ್ತಾನೆ. ಗುಣ-ದೋಷಗಳನ್ನು ಸಮವಾಗಿ ಕಾಣುತ್ತಾನೆ. ಬಹಳ ಸುಳ್ಳು ಹೇಳುತ್ತಾನೆ. ಸ್ವಚ್ಛಂದ ಪ್ರವೃತ್ತಿಯವನು. ಲೋಭಿ, ಬಹಳ ಕ್ರೂರ ಕೆಲಸಗಳನ್ನು ಮಾಡುತ್ತಾನೆ.
ಧರ್ಮಶೀಲಂ ಗುಣೋಪೇತಂ ಪಾಪ ಇತ್ಯವಗಚ್ಛತಿ |
ಆತ್ಮಶೀಲಾನುಮಾನೇನ ನ ವಿಶ್ವಸಿತಿ ಕಸ್ಯಚಿತ್ ॥8॥
ಧರ್ಮನಿಷ್ಠನನ್ನು, ಗುಣಸಂಪನ್ನನನ್ನು ಪಾಪಿ ಎಂದು ತಿಳಿಯುತ್ತಾನೆ. ತನ್ನ ಸ್ವಭಾವಕ್ಕೆ ಅನುಗುಣವಾಗಿ ಬೇರೆಯವರ ವ್ಯಕ್ತಿತ್ವವನ್ನು ಕಲ್ಪಿಸುತ್ತಾನೆ. ಯಾರ ಮೇಲೂ ವಿಶ್ವಾಸವಿಲ್ಲದವನು.
ಪರೇಷಾಂ ಯತ್ರ ದೋಷಃ ಸ್ಯಾತ್ತದ್ ಗುಹ್ಯಂ ಸಂಪ್ರಕಾಶಯೇತ್ |
ಸಮಾನೇಷ್ವೇವ ದೋಷೇಷು ವೃತ್ತ್ಯರ್ಥಮುಪಘಾತಯೇತ್ ॥9॥
ಯಾವ ರಹಸ್ಯಗಳನ್ನು ಬಹಿರಂಗ ಮಾಡಿದರೆ ಪರರಿಗೆ ತೊಂದರೆಯಾಗುವುದೋ ಆ ರಹಸ್ಯಗಳನ್ನು ಬಹಿರಂಗಗೊಳಿಸುತ್ತಾನೆ. ಇತರರಲ್ಲಿ ಇರುವ ದೋಷಗಳು ತನ್ನಲ್ಲಿ ಇದ್ದರೂ ತನ್ನ ವೃತ್ತಿಯ ರಕ್ಷಣೆಗಾಗಿ, ವೃದ್ಧಿಗಾಗಿ ಪರರಿಗೆ ಹಾನಿ ಮಾಡುತ್ತಾನೆ.
ತಥೋಪಕಾರಿಣಂ ಚೈವ ಮನ್ಯತೇ ವಂಚಿತಂ ಪರಮ್ |
ದತ್ತತ್ವಪಿ ಚ ನಯಂ ಕಾಲೇ ಸಂತರತ್ಯುಪಕಾರಿಣೇ ॥10॥
ತನಗೆ ಉಪಕಾರ ಮಾಡಿದವನ ಬಗ್ಗೆ, ``ಉಪಕಾರ ಮಾಡುವಂತೆ ನಾನು ಅವನನ್ನು ವಂಚಿಸಿದ್ದೇನೆ'' ಎಂದು ಭಾವಿಸುತ್ತಾನೆ. ಉಪಕಾರ ಮಾಡಿದವನಿಗೆ ತಾನು ಪ್ರತ್ಯುಪಕಾರ ಮಾಡುವ ಕಾಲ ಬಂದಾಗ ಬರಿ ನಯವಾದ ಮಾತುಗಳನ್ನಾಡಿ ಕಾಲಕಳೆಯುತ್ತಾನೆ.
ಭಕ್ಷ್ಯಂ ಭೋಜ್ಯಮಥೋ ಲೇಹ್ಯಂ ಯಚ್ಚಾನ್ಯತ್ ಸಾಧು ಭೋಜನಮ್|
ಪ್ರೇಕ್ಷಮಾಣೇಷು ಯೋಽಶ್ನೀಯಾನ್ನೃಶಂಸ ಇತಿ ತಂ ವಿದುಃ ॥11॥
ಭಕ್ಷ್ಯ, ಬೋಜ್ಯ, ಲೇಹ್ಯ ಮೊದಲಾದ ಒಳ್ಳೆಯ ಭೋಜ್ಯ ಪದಾರ್ಥಗಳನ್ನು ಬೇರೆಯವರು ನೋಡುತ್ತಿರುವಾಗ ತಾನೊಬ್ಬನೇ ತಿನ್ನುತ್ತಾನೆ. ಇವನು ಅತಿನೃಶಂಸ ಎಂದು ಜನರು ತಿಳಿಯುತ್ತಾರೆ.
ಬ್ರಾಹ್ಮಣೇಭ್ಯಃ ಪ್ರದಾಯಾಗ್ರಂ ಯಃ ಸುಹೃದ್ಭಿಃ ಸಹಾಶ್ನುತೇ |
ಸ ಪ್ರೇತ್ಯ ಲಭತೇ ಸ್ವರ್ಗಮಿಹ ಚಾನಂತ್ಯಮಶ್ನುತೇ ॥12॥
ಬ್ರಹ್ಮನಿಷ್ಠರಿಗೆ ಅಗ್ರಭೋಜನವನ್ನು ಕೊಟ್ಟು ಅನಂತರ ತನ್ನ ಸುಹೃದ್‌ಗಳ ಜೊತೆ ಯಾರು ಭೋಜನವನ್ನು ಮಾಡುತ್ತಾನೋ ಅವನು ಮರಣಾನಂತರ ಸ್ವರ್ಗವನ್ನು ಹೊಂದುತ್ತಾನೆ. ಈ ಜೀವನದಲ್ಲೂ ಅಕ್ಷಯ ಸಂಪತ್ತನ್ನು ಹೊಂದುತ್ತಾನೆ.
ಏಷ ತೇ ಭರತಶ್ರೇಷ್ಠ ನೃಶಂಸಃ ಪರಿಕೀರ್ತಿತಃ |
ಸದಾ ವಿವರ್ಜನೀಯೋ ವೈ ಪುರುಷೇಣ ಬುಭೂಷತಾ ॥13॥
ಭರತಶ್ರೇಷ್ಠ! ನೃಶಂಸನ ಬಗ್ಗೆ ನಿನಗೆ ವಿವರಿಸಿದ್ದೇನೆ. ಸುಸ್ಥಿತಿಯಲ್ಲಿ ಇರಲು ಬಯಸುವವನು ನೃಶಂಸನನ್ನು ಸದಾ ದೂರವಿರಿಸಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ತ್ರಿಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿಯಿತು.
* * * *
ಮೂವತ್ತೊಂದನೆಯ ಅಧ್ಯಾಯ
ಯಜ್ಞವಿಧಿ. ಯಜ್ಞ ಮಾಡುವವರಿಗಾಗಿ ರಾಜನ ಕರ್ತವ್ಯ. ದಕ್ಷಿಣೆ-ದಾನ. ಪಾಪಗಳಿಂದ ಉಂಟಾಗುವ ದುಸ್ಥಿತಿಗಳು. ನಾನಾ

ಪ್ರಾಯಶ್ಚಿತ್ತಗಳು.
ಭೀಷ್ಮ:
ಏತೇ ವೈ ಸಾಧವೋ ದೃಷ್ಟ್ವಾ ಬ್ರಾಹ್ಮಣಾ ಧರ್ಮಭಿಕ್ಷವಃ |
ಅಸ್ವೇಭ್ಯೋ ದೇಯಮೇತೇಭ್ಯೋ ದಾನಂ ವಿದ್ಯಾವಿಶೇಷತಃ ॥1॥
ಸಾಧು ಬ್ರಾಹ್ಮಣರು ಧರ್ಮಭಿಕ್ಷುಗಳಾಗಿ (ಧರ್ಮಾಚರಣೆಗಾಗಿ ಧನ ಮೊದಲಾದವುಗಳನ್ನು ಬೇಡುವವರಾಗಿ) ಕಂಡು ಬಂದಿದ್ದಾರೆ. ಧನರಹಿತರಾದ ಇವರಿಗೆ ಇವರ ವಿದ್ಯೆಯ ಉತ್ಕರ್ಷಕ್ಕೆ ಅನುಗುಣವಾಗಿ ಧನ ಮೊದಲಾದವುಗಳನ್ನು ಕೊಡಬೇಕು.
ಕೃತಾರ್ಥೋ ಯಕ್ಷ್ಯಮಾಣಶ್ಚ ಸರ್ವವೇದಾಂತಗಶ್ಚ ಯಃ |
ಆಚಾರ್ಯಪಿತೃಭಾರ್ಯಾರ್ಥಂ ಸ್ವಾಧ್ಯಾಯಾರ್ಥಮಥಾಪಿ ವಾ ॥2॥
ಯಾರು ಸರ್ವವೇದಾಂತ ಪಾರಂಗತನೋ, ಯಜ್ಞಗಳನ್ನು ಮಾಡುತ್ತಾನೋ, ಆದರೆ ಅವನ ಧನ ಮೊದಲಾದವುಗಳು ಮುಗಿದು ಹೋಗಿವೆಯೋ, ಅವನಿಗೆ ಗುರು- ಸತ್ಕಾರ-ಮಾತಾಪಿತೃ ಪರಿಪಾಲನೆ- ಭಾರ್ಯಾ ಪೋಷಣೆಗಳಿಗಾಗಿ ಮತ್ತು ವೇದ ಶಾಸ್ತ್ರಗಳ ಅಧ್ಯಯನ-ಅಧ್ಯಾಪನಕ್ಕಾಗಿ ಧನ ಮೊದಲಾದವುಗಳನ್ನು ಕೊಡಬೇಕು.
ಅನ್ಯತ್ರ ದಕ್ಷಿಣಾದಾನಂ ದೇಯಂ ಭರತಸತ್ತಮ |
ಅನ್ಯೇಭ್ಯೋಽಪಿ ಬಹಿರ್ವೇದಿ ಪ್ರಾಕೃತಾಂತಂ ವಿಧೀಯತೇ ॥3॥
ಭರತಕುಲಶ್ರೇಷ್ಠ! ಯಜ್ಞವೇದಿಕೆಯ ಹೊರಗೆ ಸಾಮಾನ್ಯರವರೆಗೆ (ವೇದಾಂತ ಪಾರಂಗತರಲ್ಲದವರು ಸಾಮಾನ್ಯರು) ಎಲ್ಲರಿಗೆ ದಾನ ಮಾಡಬೇಕೆಂದು ವಿಧಿ ಇದೆ. ಇವರಿಗೆ ದಕ್ಷಿಣೆಯನ್ನು ಕೊಡಬಾರದು.
ಸರ್ವರತ್ನಾನಿ ರಾಜಾ ಚ ಯಥಾರ್ಹಂ ಪ್ರತಿಪಾದಯೇತ್ |
ಬ್ರಾಹ್ಮಣಾಯೈವ ಯಜ್ಞಾಶ್ಚ ಸಹಾನ್ನಾಃ ಸಹದಕ್ಷಿಣಾಃ ॥4॥
ರಾಜನು ಬ್ರಾಹ್ಮಣರಿಗೆ ಸಕಲ ಅಮೂಲ್ಯ ಪದಾರ್ಥಗಳನ್ನು ಅವರ ಅರ್ಹತೆಗೆ ಅನುಗುಣವಾಗಿ ಕೊಡಬೇಕು. ಅನ್ನದಾನ ಮತ್ತು ದಕ್ಷಿಣೆಗಳು ಯಜ್ಞಗಳ ಅಂಗ. ಇವೆರಡು ಇಲ್ಲದೆ ಯಜ್ಞಗಳು ಅಪೂರ್ಣ.
ಯಸ್ಯ ತ್ರೈವಾರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ |
ಅಧಿಕಂ ವಾಪಿ ವಿದ್ಯೇತ ಸ ಸೋಮಂ ಪಾತುಮರ್ಹತಿ ॥5॥
ಯಾವ ಬ್ರಾಹ್ಮಣರ ಬಳಿ ತನ್ನ ಕುಟುಂಬವರ್ಗದವರ ಪಾಲನೆಗೆ ಮೂರು ವರ್ಷಗಳಿಗೆ ಸಾಕಾಗುವಷ್ಟು ಅಥವಾ ಇನ್ನೂ ಹೆಚ್ಚು ಆಹಾರ ಪದಾರ್ಥಗಳು ಇವೆಯೋ ಆ ಬ್ರಾಹ್ಮಣನು ಸೋಮಯಾಗವನ್ನು ಮಾಡಲು ಅರ್ಹ.
ಯಜ್ಞಶ್ಚೇತ್ ಪ್ರತಿವಿದ್ಧಃ ಸ್ಯಾದಂಗೇನೈಕೇನ ಯಜ್ವನಃ |
ಬ್ರಾಹ್ಮಣಸ್ಯ ವಿಶೇಷೇಣ ಧಾರ್ಮಿಕೇ ಸತಿ ರಾಜನಿ ॥6॥
ಯೋ ವೈಶ್ಯಃ ಸ್ಯಾದ್ ಬಹುಪಶುರ್ಹೀನಕ್ರತುರಸೋಮಪಃ |
ಕುಟುಂಬಾತ್ತಸ್ಯ ತದ್ ದ್ರವ್ಯಂ ಯಜ್ಞಾರ್ಥಂ ಪಾರ್ಥಿವೋ ಹರೇತ್ ॥7॥
ರಾಜನು ಧಾರ್ಮಿಕನಾಗಿರುವಾಗ ಯಾಗನಿರತನ, ವಿಶೇಷವಾಗಿ ಬ್ರಾಹ್ಮಣನ (ಧನದಿಂದ ನಿರ್ವಾಹವಾಗುವ) ಯಜ್ಞವು ಯಾವುದಾದರೂ ಒಂದು ಅಂಗದಿಂದ ತಡೆಗೆ ಒಳಗಾದರೆ, ಆಗ ವಿಪುಲ ಪಶುಸಂಪತ್ತನ್ನು ಹೊಂದಿರುವ, ಕ್ರತುಗಳನ್ನು ಮಾಡದ, ಸೋಮಯಾಗವನ್ನು ಆಚರಿಸದ ವೈಶ್ಯನ ಕುಟುಂಬದಿಂದ ಆ ಬ್ರಾಹ್ಮಣನ ಯಜ್ಞವು ಪೂರ್ಣವಾಗಲು ಬೇಕಾದ ಧನವನ್ನು ರಾಜನು ತೆಗೆದುಕೊಳ್ಳಬೇಕು.
ಆಹರೇದ್ ವೇಶ್ಮತಃ ಕಿಂಚಿತ್ ಕಾಮಂ ಶೂದ್ರಸ್ಯ ದ್ರವ್ಯತಃ |
ನ ಹಿ ವೇಶ್ಮನಿ ಶೂದ್ರಸ್ಯ ಕಶ್ಚಿದಸ್ತಿ ಪರಿಗ್ರಹಃ ॥8॥
ಶೂದ್ರನ ಮನೆಯ ದ್ರವ್ಯದಿಂದ ಸ್ವಲ್ಪ ದ್ರವ್ಯವನ್ನು ಸಂಕೋಚವಿಲ್ಲದೆ ತೆಗೆದುಕೊಳ್ಳಬೇಕು. ಶೂದ್ರನ ಮನೆಯಲ್ಲಿ ಯಾವುದೇ ವ್ರತ, ಅನುಷ್ಠಾನಗಳು ಇಲ್ಲ. (ಆದ್ದರಿಂದ ಅವನ ದ್ರವ್ಯವನ್ನು ರಾಜನು ತೆಗೆದುಕೊಳ್ಳಬಹುದು).
ಯೋಽನಾಹಿತಾಗ್ನಿಃ ಶತಗುರಯಜ್ವಾ ಚ ಸಹಸ್ರಗುಃ |
ತಯೋರಪಿ ಕುಟುಂಬಾಭ್ಯಾಮಾಹರೇದವಿಚಾರಯನ್ ॥9॥
ಯಾವ ವೈಶ್ಯನು ನೂರು ಹಸುಗಳ ಒಡೆಯನೋ, ಅಗ್ನಿಹೋತ್ರವನ್ನು ಆಚರಿಸುವುದಿಲ್ಲವೋ ಮತ್ತು ಯಾವ ವೈಶ್ಯನು ಸಾವಿರ ಹಸುಗಳ ಒಡೆಯನೋ, ಯಜ್ಞಗಳನ್ನು ಮಾಡುವುದಿಲ್ಲವೋ, ಅವರಿಬ್ಬರ ಕುಟುಂಬಗಳಿಂದ ಸಂಶಯವಿಲ್ಲದೆ ಯಜ್ಞಕ್ಕಾಗಿ ಧನವನ್ನು ತೆಗೆದುಕೊಳ್ಳಬೇಕು.
ಅದಾತೃಭ್ಯೋ ಹರೇನ್ನಿತ್ಯಂ ವ್ಯಾಖ್ಯಾಪ್ಯ ನೃಪತಿಃ ಪ್ರಭೋ |
ತಥಾ ಹ್ಯಾಚರತೋ ಧರ್ಮೋ ನೃಪತೇಃ ಸ್ಯಾದಥಾಖಿಲಃ ॥10॥
ದಾನಶೀಲರಲ್ಲದವರಿಂದ ರಾಜನು ಅವರ ಆ ದೋಷವನ್ನು ಜನರಿಗೆ ತಿಳಿಸಿ ಧನವನ್ನು ತೆಗೆದುಕೊಳ್ಳಬೇಕು. ಹಾಗೆ ಮಾಡುವ ರಾಜನಿಗೆ ಸಕಲ ಧರ್ಮಾಚರಣೆಗಳ ಫಲವು ಲಭಿಸುತ್ತದೆ.
ಯಥೈವ ಸಪ್ತಮೇ ಭಕ್ತೇ ಭಕ್ತಾನಿ ಷಡನಿಃಸ್ವತಾ |
ಅಶ್ವಸ್ತನವಿಧಾನೇನ ಹರ್ತವ್ಯಂ ಹೀನಕರ್ಮಣಃ ॥11॥
ಅಲ್ಪ ಹೀನ ಕರ್ಮವನ್ನು ಮಾಡಿದ ಮನುಷ್ಯನಿಂದ ಏಳು ದಿವಸಗಳ ಆಹಾರಕ್ಕೆ ಸಾಕಾಗುವಷ್ಟು ಪದಾರ್ಥಗಳನ್ನು ಉಳಿಸಿ ಎಲ್ಲವನ್ನೂ ತೆಗೆದುಕೊಳ್ಳಬೇಕು. ಮಧ್ಯಮ ಹೀನ ಕರ್ಮವನ್ನು ಮಾಡಿದ ಪುರುಷನಿಂದ ಆರು ದಿವಸಗಳ ಆಹಾರಕ್ಕೆ ಸಾಕಾಗುವಷ್ಟು ಪದಾರ್ಥಗಳನ್ನು ಉಳಿಸಿ ಎಲ್ಲವನ್ನೂ ತೆಗೆದುಕೊಳ್ಳಬೇಕು. ಅತಿಹೀನ ಕರ್ಮವನ್ನು ಮಾಡಿದವನಿಂದ ಮರುದಿವಸದ ಆಹಾರಕ್ಕೆ ಉಳಿಯದಂತೆ ಎಲ್ಲವನ್ನೂ ತೆಗೆದುಕೊಳ್ಳಬೇಕು. (ಈ ಅಭಿಪ್ರಾಯವು ಶ್ರೀವಾದಿರಾಜರ ಲಕ್ಷಾಲಂಕಾರ- ವ್ಯಾಖ್ಯಾನದಲ್ಲಿದೆ).

ಸ್ಥಲಾತ್ ಕ್ಷೇತ್ರಾತ್ ತಥಾಗಾರಾದ್ ಯೋ ಹೃತೋ ವ್ಯೋಪಪದ್ಯತೇ |
ಆಖ್ಯಾ ನಾಸ್ಯ ಚ ತತ್ರೈತತ್ ಪೃಚ್ಛತೋಽಪೃಚ್ಛತೋಽಪಿ ವಾ |
ನ ತಸ್ಮೈ ಧಾರಯೇದ್ ದಂಡಂ ರಾಜಾ ಧರ್ಮೇಣ ಧರ್ಮವಿತ್ ॥
ಗ್ರಾಮದಿಂದ, ಹೊಲದಿಂದ, ಮನೆಗಳಿಂದ ಆಹಾರ ಪದಾರ್ಥಗಳನ್ನು ತೆಗೆದುಕೊಂಡರೂ ತಪ್ಪಿಲ್ಲ. ಈ ಬಗ್ಗೆ ರಾಜನಿಗೆ, ಅವನು ಪ್ರಶ್ನಿಸಲಿ, ಪ್ರಶ್ನಿಸದಿರಲಿ, ತಿಳಿಸಬೇಕು. ಹೀಗೆ ಮಾಡುವ ಪುರುಷನಿಗೆ ಧರ್ಮಜ್ಞನಾದ ರಾಜನು ಶಿಕ್ಷೆಯನ್ನು ಕೊಡಬಾರದು. ಶಿಕ್ಷೆಯನ್ನು ಕೊಡದಿರುವುದು ಧರ್ಮ.
ಕ್ಷತ್ರಿಯಸ್ಯ ಹಿ ಬಾಲಿಶ್ಯಾದ್ಬ್ರಾಹ್ಮಣಃ ಕ್ಲಿಶ್ಯತೇ ಕ್ಷುಧಾ |
ಶ್ರುತಶೀಲೇ ಸಮಾಜ್ಞಾಯ ವೃತ್ತಿಮಸ್ಯ ಪ್ರಕಲ್ಪಯೇತ್ ॥
ಅಥೈನಂ ಪರಿರಕ್ಷೇತ ಪಿತಾ ಪುತ್ರಮಿವೌರಸಮ್ ॥13॥
ಬ್ರಾಹ್ಮಣನು ಹಸಿವೆಯ ಕ್ಲೇಶಕ್ಕೆ ಒಳಗಾದರೆ, ಇದಕ್ಕೆ ಕ್ಷತ್ರಿಯನ, ಅಂದರೆ, ರಾಜನ ಬಾಲಿಶತನವೇ ಕಾರಣ. ಬ್ರಾಹ್ಮಣನ ವಿದ್ಯೆ-ಶೀಲಗಳನ್ನು ತಿಳಿದು ರಾಜನು ಬ್ರಾಹ್ಮಣನಿಗೆ ಜೀವನೋಪಾಯವನ್ನು ಕಲ್ಪಿಸಬೇಕು. ತಂದೆಯು ತನ್ನ ಔರಸಪುತ್ರನನ್ನು (ತನ್ನಿಂದಲೇ ಜನಿಸಿದ ಪುತ್ರನನ್ನು) ರಕ್ಷಿಸುವಂತೆ ರಾಜನು ಅರ್ಹಬ್ರಾಹ್ಮಣನನ್ನು ರಕ್ಷಿಸಬೇಕು.
ಇಷ್ಟಂ ವೈಶ್ವಾನರೇ ನಿತ್ಯಂ ದತ್ತಂ ವೇದ ನ ವಿಪರ್ಯಯೇ |
ಅವಿಕಲ್ಪಃ ಪುರಾ ಧರ್ಮೋ ಧರ್ಮವಾದೈಸ್ತು ಕೇವಲಮ್ ॥14॥
ಬ್ರಾಹ್ಮಣರಿಗೆ ದಾನ ಮಾಡಿದರೆ, ಅದು ಅಗ್ನಿಯಲ್ಲಿ ಅರ್ಪಿಸಿದ ಆಹುತಿ ಎಂದು ತಿಳಿ. ಬ್ರಾಹ್ಮಣನಿಗೆ ದಾನ ಮಾಡದಿದ್ದರೆ ಯಾಗವನ್ನು ಮಾಡಿದರೂ ಮಾಡದಂತೆ ಎಂದು ತಿಳಿ. ಪೂರ್ವಕಾಲದಲ್ಲಿ ಧರ್ಮಾಚರಣೆಯಲ್ಲಿ ವಿಕಲ್ಪವಿರಲಿಲ್ಲ. ಅಂದರೆ, ಇದನ್ನು ಮಾಡಬೇಕು, ಇದನ್ನು ಮಾಡದಿರಬಹುದು ಎಂಬ ವಿಚಾರಗಳಿರಲಿಲ್ಲ.
ವಿಶ್ವೈಸ್ತು ದೇವೈಃ ಸಾಧ್ಯೈಶ್ಚ ಬ್ರಾಹ್ಮಣೈಶ್ಚ ಮಹರ್ಷಿಭಿಃ |
ಆಪತ್ಸು ಮರಣಾದ್ ಭೀತೈರ್ಲಿಂಗಪ್ರತಿನಿಧಿಃ ಕೃತಃ ॥15॥
ವಿಶ್ವೇದೇವತೆಗಳು, ಸಾಧ್ಯರು, ಬ್ರಾಹ್ಮಣರು, ಮಹರ್ಷಿಗಳು ಮರ್ತ್ಯರಿಗಾಗಿ, ಅವರ ಆಪತ್ಕಾಲದಲ್ಲಿ, ಲಿಂಗವನ್ನು= ಸಾಂಕೇತಿಕ ಕರ್ಮಗಳನ್ನು ಪ್ರಧಾನ ಕರ್ಮಗಳಿಗೆ ಪ್ರತಿನಿಧಿಯಾಗಿ ಕಲ್ಪಿಸಿದ್ದಾರೆ.
ಪ್ರಭುಃ ಪ್ರಥಮಕಲ್ಪೇ ಚ ಯೋಽನುಕಲ್ಪೇನ ವರ್ತತೇ |
ನ ಸಾಂಪರಾಯಿಕಂ ತಸ್ಯ ದುರ್ಮತೇರ್ವಿದ್ಯತೇ ಫಲಮ್ ॥16॥
(ಶಾಸ್ತ್ರಗಳು ಹೇಳಿರುವ ಸರ್ವಾಂಗಸಂಪನ್ನವಾದ ಆಚರಣೆಗಳು ಪ್ರಥಮಕಲ್ಪ. ಸಂಕ್ಷಿಪ್ತ ಆಚರಣೆಗಳು ಅನುಕಲ್ಪ).
ಪ್ರಥಮಕಲ್ಪವನ್ನು ಅನುಸರಿಸಲು ಸಮರ್ಥನಾಗಿದ್ದರೂ ಅನುಕಲ್ಪವನ್ನು ಆಶ್ರಯಿಸಿರುವವನು ದುರ್ಮತಿ. ಇವನಿಗೆ ಮರಣಾನಂತರ ಸದ್ಗತಿಯಾಗುವುದಿಲ್ಲ.
ನ ಬ್ರಾಹ್ಮಣಾನ್ ವೇದಯೀತ ಕಶ್ಚಿದ್ ರಾಜಾ ನ ಧರ್ಮವಿತ್ |
ಅವಿದ್ಯಾವೇದನಾದ್ ವಿದ್ಯಾತ್ ಸ್ವವೀರ್ಯಂ ವೀರ್ಯವತ್ತರಮ್ |
ತಸ್ಮಾದ್ ರಾಜ್ಞಃ ಸದಾ ತೇಜೋ ದುಃಸಹಂ ಬ್ರಹ್ಮವಾದಿನಾಮ್ ॥17॥
ಯಾವ ರಾಜನು ತನ್ನ ರಾಜ್ಯದ ಬ್ರಾಹ್ಮಣರ ಬಗ್ಗೆ ತಿಳಿದಿರುವುದಿಲ್ಲವೋ ಅವನು ಧರ್ಮವನ್ನು ಬಲ್ಲವನಲ್ಲ. ತನ್ನ (ಬ್ರಾಹ್ಮಣನ) ತೇಜಸ್ಸು ರಾಜನ ತೇಜಸ್ಸಿಗಿಂತ ಹೆಚ್ಚು ಬಲಶಾಲಿ ಎಂದು ತಿಳಿದಿರಬೇಕು. ಬ್ರಹ್ಮವಾದಿಗಳು ತೇಜಸ್ಸನ್ನು ರಾಜರು ಎಂದೂ ಸಹಿಸಲಾರರು.
ಗಂತಾ ಶಾಸ್ತಾ ವಿಧಾತಾ ಚ ಬ್ರಾಹ್ಮಣೋ ದೇವ ಉಚ್ಯತೇ |
ತಸ್ಮಿನ್ನಾಕುಶಲಂ ಬ್ರೂಯಾನ್ನ ಶುಷ್ಕಾಮೀರಯೇದ್ ಗಿರಮ್ ॥18॥
ಬ್ರಾಹ್ಮಣನು ಜ್ಞಾನಿ. (ಕಾರ್ಯ-ಅಕಾರ್ಯಗಳ ಬಗ್ಗೆ) ಅನುಶಾಸನ ಮಾಡಬಲ್ಲವನು. (ತನ್ನ ತೇಜಸ್ಸಿನಿಂದ) ಧಾರಣ-ಪೋಷಣಗಳನ್ನು ಮಾಡಬಲ್ಲವನು. ಆದ್ದರಿಂದ ಇವನನ್ನು ದೇವ ಎನ್ನುತ್ತಾರೆ. ಅವನ ಬಗ್ಗೆ ಕೆಟ್ಟ ಮಾತುಗಳನ್ನು ಆಡಬಾರದು. ಅರ್ಥಹೀನ ಮಾತುಗಳನ್ನು ಆಡಬಾರದು.
ಕ್ಷತ್ರಿಯೋ ಬಾಹುವೀರ್ಯೇಣ ತರತ್ಯಾಪದಮಾತ್ಮನಃ |
ಧನೇನಾವೈಶ್ಯಶೂದ್ರೇಣ ಮಂತ್ರೈರ್ಹೋಮೈಶ್ಚ ವೈ ದ್ವಿಜಃ ॥19॥
ಕ್ಷತ್ರಿಯನು ಬಾಹುಬಲದಿಂದ ತನ್ನ ಆಪತ್ತನ್ನು ದಾಟುತ್ತಾನೆ. ಬ್ರಾಹ್ಮಣನು- ವೈಶ್ಯರದಲ್ಲದ, ಶೂದ್ರರದಲ್ಲದ ಧನದಿಂದ, ಮಂತ್ರಗಳಿಂದ ಮತ್ತು ಹೋಮಗಳಿಂದ ಆಪತ್ತನ್ನು ದಾಟುತ್ತಾನೆ.
ನ ವೈ ಕನ್ಯಾ ನ ಯುವತಿರ್ನಾಮಂತ್ರಜ್ಞೋ ನ ಬಾಲಿಶಃ |
ಪರಿವೇಷ್ಟಾಗ್ನಿಹೋತ್ರಸ್ಯ ತತ್ಪೇನಾಸಂಸ್ಕೃತಸ್ತಥಾ |
ನರಕೇ ನಿಪತನ್ತ್ಯೇತೇ ಜುಹ್ವಾನಾಃ ಸ ಚ ಯಸ್ಯ ತತ್ ॥20॥
ಮದುವೆಯಾಗದ ಹುಡುಗಿ ಅಗ್ನಿಯಲ್ಲಿ ಆಹುತಿಯನ್ನು ಹಾಕಬಾರದು. ತರುಣಿಯು ಹಾಕಬಾರದು. ಮಂತ್ರವನ್ನು ತಿಳಿಯದವನು ಹಾಕಬಾರದು. ಬಾಲಕನು ಹಾಕಬಾರದು. ಆಹುತಿ ಹಾಕಲು ಅರ್ಹತೆ ಪಡೆಯಲು ಬೇಕಾದ ಸಂಸ್ಕಾರವಿಲ್ಲದವನು ಹಾಕಬಾರದು. ಆಹುತಿ ಹಾಕುವ ಇವರು ನರಕದಲ್ಲಿ ಬೀಳುತ್ತಾರೆ. ಯಜ್ಞದ ಯಜಮಾನನೂ ಬೀಳುತ್ತಾನೆ.
ಪ್ರಾಜಾಪತ್ಯಮದತ್ತಶ್ವಮಗ್ನ್ಯಾಧೇಯಸ್ಯ ದಕ್ಷಿಣಾಮ್ |
ಅನಾಹಿತಾಗ್ನಿರಿತಿ ಸ ಪ್ರೋಚ್ಯತೇ ಧರ್ಮದರ್ಶಿಭಿಃ ॥21॥
ಅಗ್ನಿಯ ಆಧಾನಕ್ಕಾಗಿ ಆಚರಿಸುವ ಕರ್ಮ ಅಗ್ನ್ಯಾಧೇಯ. ಈ ಕರ್ಮವನ್ನು ಮಾಡುವವರು ಪ್ರಾಜಾಪತ್ಯ ಅಶ್ವವನ್ನು ದಕ್ಷಿಣೆಯಾಗಿ

ಕೊಡಬೇಕು (ಪ್ರಜಾಪತಿಯ ಪ್ರೀತಿಗಾಗಿ ಅಶ್ವವನ್ನು ದಕ್ಷಿಣೆಯಾಗಿ ಕೊಡಬೇಕು. ಹೀಗೆ ಕೊಡಲ್ಪಡುವ ಅಶ್ವವು `ಪ್ರಾಜಾಪತ್ಯ ಅಶ್ವ'). ಈ ದಕ್ಷಿಣೆಯನ್ನು ಕೊಡದಿದ್ದರೆ ಅಗ್ನ್ಯಾಧಾನ ಕರ್ಮವು ದೇವತೆಗಳಿಂದ ಮಾನ್ಯತೆಯನ್ನು ಪಡೆಯುವುದಿಲ್ಲ. ಆದ್ದರಿಂದ ಈ ಕರ್ಮವನ್ನು ಮಾಡಿದವನು. `ಆಹಿತಾಗ್ನಿ' ಅಲ್ಲ ಎಂದು ಧರ್ಮದರ್ಶಿಗಳು ಹೇಳುತ್ತಾರೆ.
ಪುಣ್ಯಾನ್ಯನ್ಯಾನಿ ಕುರ್ವೀತ ಶ್ರದ್ದಧಾನೋ ಜಿತೇಂದ್ರಿಯಃ|
ಅನಾಪ್ತದಕ್ಷಿಣೈರ್ಯಜ್ಞೈರ್ನ ಯಜೇತ ಕಥಂಚನ ॥22॥
ಬೇರೆ ಪುಣ್ಯಕರ್ಮಗಳನ್ನು ಶ್ರದ್ಧಾವಂತನಾಗಿ, ಜಿತೇಂದ್ರಿಯನಾಗಿ ಮಾಡಬೇಕು. ದಕ್ಷಿಣೆಯನ್ನು ಕೊಡದೆ ಯಜ್ಞಗಳನ್ನು ಮಾಡಲೇಬಾರದು.
ಪ್ರಜಾಃ ಪಶೂಂಶ್ಚ ಸ್ವರ್ಗಂ ಚ ಹಂತಿ ಯಜ್ಞೋ ಹ್ಯದಕ್ಷಿಣಃ|
ಇಂದ್ರಿಯಾಣಿ ಯಶಃ ಕೀರ್ತಿಮಾಯುಶ್ಚಾಸ್ಯೋಪಕೃಂತತಿ ॥23॥
ದಕ್ಷಿಣೆಯಿಲ್ಲದ (ದಕ್ಷಿಣೆಯನ್ನು ಕೊಡದೆ ಮಾಡಲ್ಪಟ್ಟ) ಯಜ್ಞವು ಮಕ್ಕಳಿಗೆ ಹಾನಿಯನ್ನು ಮಾಡುತ್ತದೆ. ಪಶುಗಳಿಗೂ ಹಾನಿಯನ್ನು ಮಾಡುತ್ತದೆ. ಇಂತಹ ಯಜ್ಞದಿಂದ ಸ್ವರ್ಗದ ಪ್ರಾಪ್ತಿಯಾಗುವುದಿಲ್ಲ. ಹೀಗೆ ಯಜ್ಞವನ್ನು ಮಾಡಿದವನ ಇಂದ್ರಿಯಗಳು ಕುಂಠಿತವಾಗುತ್ತವೆ. ಕೀರ್ತಿಯ ನಾಶವಾಗುತ್ತದೆ. ಆಯುಷ್ಯದ ಛೇದವಾಗುತ್ತದೆ.
ಉದಕ್ಯಾ ಹ್ಯಾಸತೇ ಯೇ ಚ ಯೇ ಚ ಕೇಚಿದನಗ್ನಯಃ|
ಕುಲಂ ಚಾಶ್ರೋತ್ರಿಯಂ ಯೇಷಾಂ ಸರ್ವೇ ತೇ ಶೂದ್ರಧರ್ಮಿಣಃ॥
ಯಾವ ಪುರುಷರು ರಜಸ್ವಲೆಯ ಸಮಾಗಮವನ್ನು ಮಾಡುವರೋ, ಯಾರು ಅಗ್ನಿಯಲ್ಲಿ ಉಪಾಸನೆಯನ್ನು ಮಾಡುವುದಿಲ್ಲವೋ, ಯಾವ ಕುಲದಲ್ಲಿ ವೇದಾಧ್ಯಯನ ಮಾಡಿದವರು ಇಲ್ಲವೋ ಅವರೆಲ್ಲರೂ ಶೂದ್ರಸಮಾನರು.
ಉದಪಾನೋದಕೇ ಗ್ರಾಮೇ ಬ್ರಾಹ್ಮಣೋ ವೃಷಲೀಪತಿಃ|
ಉಷಿತ್ವಾ ದ್ವಾದಶ ಸಮಾಃ ಶೂದ್ರಕರ್ಮೇಹ ಗಚ್ಛತಿ ॥25॥
ನೀರಿಗಾಗಿ ಒಂದೇ ಭಾವಿಯನ್ನು ಅವಲಂಬಿಸಿರುವ ಗ್ರಾಮದಲ್ಲಿ ಶೂದ್ರಸ್ತ್ರೀ ಪತಿಯಾಗಿ ಹನ್ನೆರಡು ವರ್ಷ ವಾಸ ಮಾಡುವವನು ಶೂದ್ರನೇ ಆಗುತ್ತಾನೆ.
ಅನಾರ್ಯಾಂ ಶಯನೇ ಬಿಭ್ರದುಜ್ಝನ್ ಬಿಭ್ರುಚ್ಚ ಯೋ ದ್ವಿಜಾಮ್|
ಅಬ್ರಾಹ್ಮಣೋ ಮನ್ಯಮಾನಸ್ತೃಣೇಷ್ವಾಸೀತ ಪೃಷ್ಠತಃ|
ತಥಾ ಸ ಶುಧ್ಯತೇ ರಾಜನ್ ಶೃಣು ಚಾತ್ರ ವಚೋ ಮಮ ॥26॥
ಬ್ರಾಹ್ಮಣ ಕನ್ಯೆಯನ್ನು ಮದುವೆಯಾಗಿ, ಅವಳನ್ನು ತ್ಯಜಿಸಿ, ಅಬ್ರಾಹ್ಮಣ ಸ್ತ್ರೀ ಸಮಾಗಮವನ್ನು ಮಾಡಿದವನು ಬ್ರಾಹ್ಮಣತ್ವವನ್ನು ಕಳೆದುಕೊಳ್ಳುತ್ತಾನೆ. ತಾನು ಬ್ರಾಹ್ಮಣತ್ವವನ್ನು ಕಳೆದುಕೊಂಡಿದ್ದೇನೆ ಎಂದು ತಿಳಿದವನು ಹುಲ್ಲಿನ ಮೇಲೆ (ಸೂರ್ಯನ ಕಡೆ) ಬೆನ್ನು ಮಾಡಿ ಕುಳಿತುಕೊಳ್ಳಬೇಕು. ಹೀಗೆ ಮಾಡುವುದರಿಂದ ಶುದ್ಧನಾಗುತ್ತಾನೆ. ಈ ವಿಷಯದಲ್ಲಿ ನನ್ನ ಮುಂದಿನ ಮಾತುಗಳನ್ನು ಕೇಳು.
ಯದೇಕರಾತ್ರೇಣ ಕರೋತಿ ಪಾಪಂ
ಕಷ್ಟಂ ವರ್ಣಂ ಬ್ರಾಹ್ಮಣಃ ಸೇವಮಾನಃ|
ಸ್ಥಾನಾಸನಾಭ್ಯಾಂ ವಿಚರನ್ ವ್ರತೀ ಸನ್
ತ್ರಿಭಿರ್ವರ್ಷೈಃ ಶಮಯೇದಾತ್ಮಪಾಪಮ್ ॥27॥
ಬ್ರಾಹ್ಮಣನು ಒಂದು ರಾತ್ರಿ ಕೆಳಗಿನ ವರ್ಣದವರ ಸೇವೆಯನ್ನು ಮಾಡಿದರೆ, ಅವರ ಜೊತೆ ಇದ್ದರೆ, ಕುಳಿತರೆ ಅವನು ಮೂರು ವರ್ಷಗಳು ನಾನಾ ವ್ರತಗಳನ್ನು ಮಾಡಿದರೆ ಪಾಪದ ಪರಿಹಾರವಾಗುತ್ತದೆ.
ನ ನರ್ಮಯುಕ್ತಂ ವಚನಂ ಹಿನಸ್ತಿ ನ ಸ್ತ್ರೀಷು ರಾಜನ್ನ ವಿವಾಹಕಾಲೇ|
ನ ಗುರ್ವರ್ಥೇ ನಾತ್ಮನೋ ಜೀವಿತಾರ್ಥೇ ಪಂಚಾನೃತಾನ್ಯಾಹುರಪಾತಕಾನಿ ॥
ವಿನೋದಕ್ಕಾಗಿ ಹೇಳುವ ಸುಳ್ಳು, ಸ್ತ್ರೀಯರ ಜೊತೆ ವ್ಯವಹರಿಸುವಾಗ ಹೇಳುವ ಸುಳ್ಳು, ವಿವಾಹ ಕಾಲದಲ್ಲಿ ಹೇಳುವ ಸುಳ್ಳು, ಗುರುಗಳಿಗೋಸ್ಕರ ಹೇಳುವ ಸುಳ್ಳು, ತನ್ನ ಬದುಕಿಗಾಗಿ ಹೇಳುವ ಸುಳ್ಳು- ಈ ಐದು ಸುಳ್ಳುಗಳು ಪಾಪವಲ್ಲ ಎಂದು ಹೇಳುತ್ತಾರೆ.
ಶ್ರದ್ದಧಾನಃ ಶುಭಾಂ ವಿದ್ಯಾಂ ಹೀನಾದಪಿ ಸಮಾಚರೇತ್|
ಸುವರ್ಣಮಪಿ ಚಾಮೇಧ್ಯಾದಾದದೀತೇತಿ ಧಾರಣಾ ॥29॥
ಶ್ರದ್ಧೆ ಇದ್ದವನು ಹೀನರಿಂದಲೂ ಒಳ್ಳೆಯ ವಿದ್ಯೆಯನ್ನು ಪಡೆಯಬೇಕು. ಬಂಗಾರವನ್ನು ಅದು ಅಮೇಧ್ಯದಲ್ಲಿದ್ದರೂ ಅಲ್ಲಿಂದ ಪಡೆಯಬೇಕು. ಇದು ದೃಢ ಅಭಿಪ್ರಾಯ.
ಸ್ತ್ರೀರತ್ನಂ ದುಷ್ಕುಲಾಚ್ಚಾಪಿ ವಿಷಾದಪ್ಯಮೃತಂ ಪಿಬೇತ್|
ಅದುಷ್ಟಾ ಹಿ ಸ್ತ್ರಿಯೋ ರತ್ನಮಾಪ ಇತ್ಯೇವ ಧರ್ಮತಃ ॥30॥
ದುಷ್ಕುಲದಲ್ಲಿ ಹುಟ್ಟಿದ ಶ್ರೇಷ್ಠ ಸ್ತ್ರೀಯನ್ನು ಪರಿಗ್ರಹಿಸಬೇಕು. ಕಹಿ ಔಷಧದಿಂದ ಅದರಲ್ಲಿರುವ ಅಮೃತವನ್ನು=ರೋಗವನ್ನು ಪರಿಹರಿಸುವ ರಸವನ್ನು ಸ್ವೀಕರಿಸಬೇಕು. ಶ್ರೇಷ್ಠ ಸ್ತ್ರೀ (ಲಕ್ಷಣ ಸಂಪನ್ನಳಾದ ಸ್ತ್ರೀ) ರತ್ನ ಮತ್ತು ನೀರು- ಈ ಮೂರು ಅವುಗಳಲ್ಲಿರುವ ಧರ್ಮದ (ಸ್ವಾಭಾವಿಕ ಲಕ್ಷಣ ಸಂಪನ್ನತೆ ಮತ್ತು ಪಾವಿತ್ರ್ಯ) ಕಾರಣದಿಂದ ದೋಷರಹಿತಗಳು.
ಗೋಬ್ರಾಹ್ಮಣಹಿತಾರ್ಥಂ ಚ ವರ್ಣಾನಾಂ ಸಂಕರೇಷು ಚ|
ಗೃಹ್ಣೀಯಾತ್ ತು ಧನುರ್ವೈಶ್ಯಃ ಪರಿತ್ರಾಣಾಯ ಚಾತ್ಮನಃ ॥31॥
ಗೋವುಗಳ ಮತ್ತು ಬ್ರಾಹ್ಮಣರ ಹಿತಕ್ಕಾಗಿ, ವರ್ಣಗಳ ಸಾಂಕರ್ಯವನ್ನು ತಡೆಯುವುದಕ್ಕಾಗಿ, ಆತ್ಮರಕ್ಷಣೆಗಾಗಿ ವೈಶ್ಯನು ಬಿಲ್ಲನ್ನು ಕೈಗೆ ತೆಗೆದುಕೊಳ್ಳಬೇಕು.
ಸುವರ್ಣಹರಣಂ ಸ್ತೈನ್ಯಂ ವಿಪ್ರಾಸಂಗಾಚ್ಚ ಪಾತಕಮ್|

ವಿಹಾರೋ ಮದ್ಯಪಾನಂ ಚಾಪ್ಯಗಮ್ಯಾಗಮನಂ ತಥಾ ॥32॥
ಬಂಗಾರದ ಅಪಹಾರ, ಇತರ ಅಮೂಲ್ಯ ವಸ್ತುಗಳ ಕಳ್ಳತನ, ಬ್ರಾಹ್ಮಣ ಸ್ತ್ರೀ ಸಮಾಗಮ, ಮದ್ಯಪಾನ, ಸಮಾಗಮಕ್ಕೆ ಅನರ್ಹಳಾದ ಸ್ತ್ರೀಯೊಡನೆ ಸಮಾಗಮ,
ಸುರಾಪಾನಂ ಬ್ರಹ್ಮಹತ್ಯಾ ಗುರುತಲ್ಪಮಥಾಪಿ ವಾ |
ಆಚಾರೇಣ ಮಹಾರಾಜ ಪತಿತೋ ವೈ ಭವತ್ಯುತ |
ಅನಿರ್ದೇಶ್ಯಾನಿ ಮನ್ಯಂತೇ ಪ್ರಾಣಾಂತಾನೀತಿ ಧಾರಣಾ ॥33॥
ಸುರಾಪಾನ, ಬ್ರಹ್ಮಹತ್ಯೆ, ಗುರುಪತ್ನೀ ಸಮಾಗಮ- ಇವು ಮಹಾಪಾತಕಗಳು. ಇವುಗಳನ್ನು ಮಾಡುವವರು ಪತಿತರಾಗುತ್ತಾರೆ. ಈ ಪಾತಕಗಳಿಗೆ ಪ್ರಾಯಶ್ಚಿತ್ತವನ್ನು ನಿರ್ದೇಶಿಸಲಾಗುವುದಿಲ್ಲ ಎಂದು ಹೇಳುತ್ತಾರೆ. ಪ್ರಾಣತ್ಯಾಗವೇ ಪ್ರಾಯಶ್ಚಿತ್ತ ಎಂದೂ ಹೇಳುತ್ತಾರೆ.
ಪತಿತೈಃ ಸಂಪ್ರಯೋಗಾಚ್ಚ ಬ್ರಾಹ್ಮಣ್ಯೈರ್ಯೋನಿತಸ್ತಥಾ |
ಅನಿರ್ದೇಶ್ಯಾನಿ ಮನ್ಯಂತೇ ಪ್ರಾಣಾಂತಾನೀತಿಧಾರಣಾ ॥ 34॥
(ಸ್ವನಿರ್ದೇಶ್ಯಾನಿ ಮನ್ಯಂತೇ ಪ್ರಾಣಾ ಇತಿ ಹಿ ಧಾರಣಾ)
ಇದು ಶ್ರೀವಾದಿರಾಜರಿಗೆ ಸಮ್ಮತವಾದ ಪಾಠ. ಅಭಿಪ್ರಾಯವು ಅಸ್ಪಷ್ಟ.
ಪತಿತರ ಸಂಗ, ಬ್ರಾಹ್ಮಣ ಸ್ತ್ರೀ ಸಮಾಗಮ- ಇವುಗಳು ಮಹಾಪಾತಕಗಳು. ಇವುಗಳಿಗೆ ಪ್ರಾಯಶ್ಚಿತ್ತವನ್ನು ಹೇಳಲಾಗುವುದಿಲ್ಲ ಎಂದು ಪ್ರಾಜ್ಞರ ಅಭಿಪ್ರಾಯ. ಮರಣದಲ್ಲಿ ಪರ್ಯವಸಾನವಾಗುವ ವ್ರತಗಳ ಅನುಷ್ಠಾನವೇ ಈ ಪಾತಕಗಳಿಗೆ ಪ್ರಾಯಶ್ಚಿತ್ತ.
ಸಂವತ್ಸರೇಣ ಪತತಿ ಪತಿತೇನ ಸಹಾಚರನ್ |
ಯಾಜನಾಧ್ಯಾಪನಾನಾಂ ಚ ಚತುರ್ಥಾನಾಂ ಸಮೀಹನಾತ್ ॥35॥
ಏತಾನಿ ದದತೋನ್ಯಾನಿ ನಿರ್ದೇಶ್ಯಾನೀತಿ ಧಾರಣಾ |
ನಿರ್ದೇಶ್ಯಾನೀತಿ ನಿಧನಕಾಲೇ ಚ ವ್ಯಸನೀ ಭವೇತ್ ॥36॥
ಪತಿತನ ಜೊತೆ ಆಚರಣೆಗಳನ್ನು ಮಾಡುವವನು ಒಂದು ವರ್ಷದಲ್ಲಿ ಪತಿತನಾಗುತ್ತಾನೆ. ಯಾಜನ, ಅಧ್ಯಾಪನ- ಪರಿಗ್ರಹ ಇವುಗಳನ್ನು ಶೂದ್ರನಿಗೋಸ್ಕರ ಮಾಡುವುದರಿಂದ ಮಾಡುವವನು ಪತಿತನಾಗುತ್ತಾನೆ. ಈ ಮೂರು ಮತ್ತು ಬೇರೆ ಮೂರು- ಯಜನ-ಅಧ್ಯಯನ-ದಾನಗಳನ್ನು ಶೂದ್ರನಿಗೋಸ್ಕರ ಮಾಡಿ ಪತಿತನಾದವನಿಗೆ ಪಾಪಪರಿಹಾರಕ್ಕೆ ಪ್ರಾಯಶ್ಚಿತ್ತವಿದೆ. ಪಶ್ಚಾತ್ತಾಪವು ದೊಡ್ಡ ಪ್ರಾಯಶ್ಚಿತ್ತ. ಬೇರೆ ಪ್ರಾಯಶ್ಚಿತ್ತ ವಿಧಿಗಳೂ ಇವೆ. ಪ್ರಾಯಶ್ಚಿತ್ತದಿಂದ ಪರಿಹಾರವಾಗುವ ಪಾಪಗಳನ್ನು ಮಾಡಿದವನು ಮರಣಪರ್ಯಂತ ಪಶ್ಚಾತ್ತಾಪ ಮೊದಲಾದ ಪ್ರಾಯಶ್ಚಿತ್ತಗಳಿಗೆ ತೀವ್ರವಾಗಿ ಅಂಟಿಕೊಂಡಿರಬೇಕು.
ಅನುತ್ತೀರ್ಯ ನ ಹೋತವ್ಯಂ ಪ್ರೇತಕರ್ಮಣ್ಯಪಾತಿತೇ (ಣ್ಯುಪಶ್ರಿತೇ) |
ತ್ರಿಷು ತ್ವೇತೇಷು ಪೂರ್ವೇಷು ನ ಕುರ್ವೀತ ವಿಚಾರಣಾಮ್ ॥37॥
ಬಂಧುಗಳ ಮರಣದಿಂದ ಅಶೌಚವು ಉಂಟಾದಾಗ, ಅಶೌಚದ ಅವಧಿ ಮುಗಿಯುವವರೆಗೆ ಹೋಮಗಳನ್ನು ಮಾಡಬಾರದು. ಅಧ್ಯಯನ, ಯಜನ, ದಾನಗಳನ್ನು ಮಾಡಲೇಬಾರದು. ಈ ಬಗ್ಗೆ ಏನೂ ವಿಮರ್ಶೆಯನ್ನು ಮಾಡಬಾರದು.
ಅಮಾತ್ಯಾನ್ ವಾ ಗುರೂನ್ ವಾಪಿ ಜಹ್ಯಾದ್ಧರ್ಮೇಣ ಧಾರ್ಮಿಕಃ |
ಪ್ರಾಯಶ್ಚಿತ್ತಮಕುರ್ವಾಣೈರ್ನೈತೈರರ್ಹತಿ ಸಂವಿದಮ್ ॥38॥
ಧರ್ಮನಿಷ್ಠನು ಪಾತಕಗಳನ್ನು ಮಾಡಿದ ಮಂತ್ರಿಗಳನ್ನು ಅಥವಾ ಗುರುಗಳನ್ನು ಧರ್ಮದ ವಿಧಿಗೆ ಅನುಗುಣವಾಗಿ ಪರಿತ್ಯಾಗ ಮಾಡಬೇಕು. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಇವರ ಜೊತೆ ಯಾವುದೇ ವ್ಯವಹಾರವನ್ನು ಮಾಡಬಾರದು.
ವ್ರತಸ್ಥವ್ರತವಿಘ್ನೇ ಚ ತಾವತ್ ಪ್ರಾಪ್ನೋತಿ ಕಿಲ್ಬಿಷಮ್ |
ಅಧರ್ಮಕಾರೀ ಧರ್ಮೇಣ ತಪಸಾ ಹಂತಿ ಕಿಲ್ಬಿಷಮ್ ॥39॥
ವ್ರತವನ್ನು ಮಾಡುತ್ತಿರುವವನ ವ್ರತಕ್ಕೆ ವಿಘ್ನವುಂಟು ಮಾಡಿದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅಲ್ಲಿಯವರಿಗೆ ಪಾಪವು ಅಂಟಿಕೊಳ್ಳುತ್ತದೆ. ಅಧರ್ಮವನ್ನು ಮಾಡಿದವನು ಧರ್ಮರೂಪದ ತಪಸ್ಸನ್ನು ಆಚರಿಸುವುದರಿಂದ ಪಾಪವನ್ನು ಪರಿಹರಿಸಿಕೊಳ್ಳಬಹುದು.
ಅಸ್ತೇನಂ ಸ್ತೇನ ಇತ್ಯುಕ್ತ್ವಾ ದ್ವಿಗುಣಂ ಪಾಪಮಾಪ್ನುಯಾತ್ |
ಸ್ತೇನಮಸ್ತೇನ ಇತ್ಯುಕ್ತ್ವಾ ತಾವದಾಪ್ನೋತಿ ಕಿಲ್ಬಿಷಮ್ ॥40॥
ಕಳ್ಳನಲ್ಲದವನನ್ನು ಕಳ್ಳ ಎಂದರೆ ಕಳ್ಳತನಕ್ಕೆ ಎಷ್ಟು ಪಾಪವೋ ಅದರ ಎರಡರಷ್ಟು ಪಾಪವು ಉಂಟಾಗುತ್ತದೆ. ಕಳ್ಳನನ್ನು ಕಳ್ಳ ಅಲ್ಲ ಎಂದರೆ ಕಳ್ಳತನಕ್ಕೆ ಎಷ್ಟು ಪಾಪವೋ ಅಷ್ಟು ಪಾಪವು ಉಂಟಾಗುತ್ತದೆ.
ತ್ರಿಭಾಗಂ ಬ್ರಹ್ಮಹತ್ಯಾಯಾಃ ಕನ್ಯಾಪ್ರಾಪ್ತೌ ಚ ಕಿಲ್ಬಿಷಮ್ |
ಯಸ್ತು ದೂಷಯಿತಾ ತಸ್ಯಾಃ ಶೇಷಂ ಪ್ರಾಪ್ನೋತಿ ಕಿಲ್ಬಿಷಮ್ ॥41॥
ಪುರುಷನು ಕನ್ಯಾ (ರಜೋದರ್ಶನವಾಗದ ಹುಡುಗಿ) ಸಮಾಗಮವನ್ನು ಮಾಡಿದರೆ ಬ್ರಹ್ಮಹತ್ಯಾಪಾಪದ ಮುಕ್ಕಾಲುಭಾಗ (3/4) ಪಾಪಕ್ಕೆ ಇಬ್ಬರೂ ಗುರಿಯಾಗುತ್ತಾರೆ. ಕನ್ಯೆಯನ್ನು ಕೆಡಿಸಿದ ಪುರುಷನು ಇಷ್ಟು ಪಾಪವನ್ನು ಹೆಚ್ಚು ತೀವ್ರವಾಗಿ ಹೊಂದುತ್ತಾನೆ.
ಬ್ರಾಹ್ಮಣಾಯಾವಗುರ್ಯೈವ ಸ್ಪೃಷ್ಟ್ವಾ ಗುರುತರಂ ಭವೇತ್ |
ವರ್ಷಾಣಾಂ ಹಿ ಶತಂ ಪಾಪಃ ಪ್ರತಿಷ್ಠಾಂ ನಾಧಿಗಚ್ಛತಿ ॥42॥
ಯಾರು ಬ್ರಾಹ್ಮಣನ ನಿಂದನೆಯನ್ನು ಮಾಡುವರೋ ಅವರು ಪಾಪಕ್ಕೆ ಭಾಗಿಗಳಾಗುತ್ತಾರೆ. ಮುಟ್ಟಿದರೆ, ಹೊಡೆದರೆ ಇನ್ನೂ ಹೆಚ್ಚು ಪಾಪವು ಸಂಭವಿಸುತ್ತದೆ. ಈ ಪಾಪವನ್ನು ಮಾಡಿದವನು ಒಂದು ನೂರು ವರ್ಷ ಸುಸ್ಥಿತಿಯನ್ನು ಹೊಂದುವುದಿಲ್ಲ.
ಸಹಸ್ರಂ ತ್ವೇವ ವರ್ಷಾಣಾಂ ನಿಪಾತ್ಯ ನರಕೇ ವಸೇತ್ |
ತಸ್ಮಾನ್ನೈವಾವಗೂರ್ಯಾದ್ಧಿ ನೈವ ಜಾತು ನಿಪಾತಯೇತ್ ॥43॥

ಬ್ರಾಹ್ಮಣನನ್ನು ಬೀಳಿಸಿದವನು ಒಂದು ಸಾವಿರ ವರ್ಷ ನರಕದಲ್ಲಿ ವಾಸಿಸುತ್ತಾನೆ. ಆದ್ದರಿಂದ ಬ್ರಾಹ್ಮಣನನ್ನು ನಿಂದಿಸಬಾರದು, ಬೀಳಿಸಬಾರದು.
ಶೋಣಿತಂ ಯಾವತಃ ಪಾಂಸೂನ್ ಸಂಗೃಹ್ಣೀಯಾದ್ ದ್ವಿಜಕ್ಷತಾತ್ |
ತಾವತೀಃ ಸ ಸಮಾ ರಾಜನ್ನರಕೇ ಪರಿವರ್ತತೇ ||44||
(ಬ್ರಾಹ್ಮಣನಿಗೆ ಗಾಯ ಮಾಡಿದರೆ) ಬ್ರಾಹ್ಮಣನ ಗಾಯದಿಂದ ಹರಿಯುವ ರಕ್ತವು ಎಷ್ಟು ಮಣ್ಣಿನ ಕಣಗಳನ್ನು ವ್ಯಾಪಿಸುವುದೋ ಅಷ್ಟು ವರ್ಷ ನರಕದಲ್ಲಿ ಅಲೆಯುತ್ತಾನೆ.
ಭ್ರೂಣಹಾಹವಮಧ್ಯೇ ತು ಶುಧ್ಯತೇ ಶಸ್ತ್ರಪಾತಿತಃ |
ಆತ್ಮಾನಂ ಜುಹುಯಾದ್ ವಹ್ನೌ ಸಮಿದ್ಧೇ ತೇನ ಶುಧ್ಯತಿ ||45||
ಭ್ರೂಣಹತ್ಯೆಯನ್ನು ಮಾಡಿದವನು ಯುದ್ಧದಲ್ಲಿ ಶಸ್ತ್ರ ಪ್ರಹಾರದಿಂದ ಬೀಳಿಸಲ್ಪಟ್ಟರೆ ಶುದ್ಧನಾಗುತ್ತಾನೆ. ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ತನ್ನನ್ನು ಹೋಮಿಸಿಕೊಳ್ಳಬೇಕು. ಈ ಆಹುತಿಪ್ರದಾನದಿಂದ ಶುದ್ಧಿಯಾಗುತ್ತಾನೆ.
ಸುರಾಪೋ ವಾರುಣೀಮುಷ್ಣಾಂ ಪೀತ್ವಾ ಪಾಪಾದ್ ವಿಮುಚ್ಯತೇ |
ತಯಾ ಸ ಕಾಯೇ ನಿರ್ದಗ್ಧೇ ಮೃತ್ಯುನಾ ಪ್ರೇತ್ಯ ಶುಧ್ಯತಿ |
ಲೋಕಾಂಶ್ಚ ಲಭತೇ ವಿಪ್ರೋ ನಾನ್ಯಥಾ ಲಭತೇ ಹಿ ಸಃ ||46||
ಸುರಾಪಾನ ಮಾಡಿದ ಬ್ರಾಹ್ಮಣನು ಕುದಿಯುತ್ತಿರುವ ಸುರೆಯನ್ನು ಪಾನ ಮಾಡಿದರೆ ಪಾಪದಿಂದ ಬಿಡುಗಡೆಯಾಗುತ್ತದೆ. ಆ ಕುದಿಯುವ ಸುರೆಯಿಂದ ದೇಹವು ಬೆಂದು ಮರಣ ಉಂಟಾದರೆ ಮರಣದಿಂದ ಶುದ್ಧನಾಗುತ್ತಾನೆ. ಉತ್ತಮ ಲೋಕಗಳನ್ನು ಪಡೆಯುತ್ತಾನೆ. ಹೀಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಉತ್ತಮ ಲೋಕಗಳನ್ನು ಪಡೆಯುವುದಿಲ್ಲ.
ಗುರುತಲ್ಪಮಧಿಷ್ಠಾಯ ದುರಾತ್ಮಾ ಪಾಪಚೇತನಃ |
ಸೂರ್ಮೀಂ ಜ್ವಲಂತೀಮಾಶ್ಲಿಷ್ಯ ಮೃತ್ಯುನಾ ಸ ವಿಶುಧ್ಯತಿ ||47||
ಗುರುಪತ್ನಿ ಸಮಾಗಮವನ್ನು ಮಾಡಿದ ದುಷ್ಟಮನಸ್ಸಿನ ಪಾಪಿಯು ಜ್ವಲಿಸುತ್ತಿರುವ ಲೋಹಪ್ರತಿಮೆಯನ್ನು ತಬ್ಬಿಕೊಂಡು ಮೃತ್ಯುವಶನಾಗಬೇಕು. ಇದರಿಂದ ಶುದ್ಧನಾಗುತ್ತಾನೆ.
ಅಥ ವಾ ಶಿಶ್ನವೃಷಣಾವಾದಾಯಾಂಜಲಿನಾ ಸ್ವಯಮ್ |
ನೈರ್ಋತೀಂ ದಿಶಮಾಸ್ಥಾಯ ನಿಪತೇತ್ಸ ತ್ವಜಿಹ್ಮಗಃ |
ಬ್ರಾಹ್ಮಣಾರ್ಥೇಽಪಿ ವಾ ಪ್ರಾಣಾನ್ ಸಂತ್ಯಜೇತ್ ತೇನ ಶುಧ್ಯತಿ ||48||
ಅಥವಾ ಋಜು ಮನಸ್ಸಿನಿಂದ ತನ್ನ ಶಿಶ್ನ ಮತ್ತು ವೃಷಣಗಳನ್ನು (ಕತ್ತರಿಸಿ) ತನ್ನ ಬೊಗಸೆಯಲ್ಲಿ ಹಿಡಿದುಕೊಂಡು ನೈಋತ್ಯ ದಿಕ್ಕಿನಲ್ಲಿ ಹೋಗುತ್ತಾ ಹೋಗುತ್ತಾ ಬಿದ್ದು ಸಾಯಬೇಕು. ಹೀಗೆ ಮಾಡಿದರೆ ಶುದ್ಧನಾಗುತ್ತಾನೆ. ಅಥವಾ ಬ್ರಾಹ್ಮಣನ ರಕ್ಷಣೆಗಾಗಿ ಪ್ರಾಣತ್ಯಾಗ ಮಾಡಬೇಕು. ಈ ತ್ಯಾಗದಿಂದ ಶುದ್ಧನಾಗುತ್ತಾನೆ.
ಅಶ್ವಮೇಧೇನ ವಾಪೀಷ್ಟ್ವಾ ಗೋಮೇಧೇನಾಪಿ ವಾ ಪುನಃ |
ಅಗ್ನಿಷ್ಟೋಮೇನ ವಾ ಸಮ್ಯಗಿಹ ಪ್ರೇತ್ಯ ಚ ಪೂಜ್ಯತೇ ||49||
ಅಥವಾ ಅಶ್ವಮೇಧವನ್ನು ಅಥವಾ ಗೋಮೇಧವನ್ನು ಅಥವಾ ಅಗ್ನಿಷ್ಟೋಮವನ್ನು ವಿಧಿಪ್ರಕಾರವಾಗಿ ಮಾಡಿದರೆ ಶುದ್ಧನಾಗುತ್ತಾನೆ. ಈ ಜನ್ಮ ಮತ್ತು ಮುಂದಿನ ಜನ್ಮಗಳಲ್ಲಿ ಪೂಜಾರ್ಹನಾಗುತ್ತಾನೆ.
ತಥೈವ ದ್ವಾದಶ ಸಮಾಃ ಕಪಾಲೀ ಬ್ರಹ್ಮಹಾ ಭವೇತ್ |
ಬ್ರಹ್ಮಚಾರೀ ಚರೇದ್ಭೈಕ್ಷಂ ಸ್ವಕರ್ಮೋದಾಹರನ್ ಮುನಿಃ |
ಏವಂ ವಾ ತಪಸಾ ಯುಕ್ತೋ ಬ್ರಹ್ಮಹಾ ಸವನೀ ಭವೇತ್ ||50||
ಬ್ರಹ್ಮಹತ್ಯೆಯನ್ನು ಮಾಡಿದವನು ಕಪಾಲವನ್ನು ಹಿಡಿದುಕೊಂಡು, ತನ್ನ ಕೃತ್ಯವನ್ನು ಎಲ್ಲ ಕಡೆ ಹೇಳುತ್ತಾ, ಬ್ರಹ್ಮಚರ್ಯ ವ್ರತದಿಂದ, ಮನನಶೀಲನಾಗಿ ಹನ್ನೆರಡು ವರ್ಷ ಕಳೆಯಬೇಕು. ನಿತ್ಯ ಮೂರು ಕಾಲಗಳಲ್ಲಿ ಸ್ನಾನ ಮಾಡಬೇಕು. ಹೀಗೆ ತಪಸ್ಸನ್ನು ಮಾಡುವುದರಿಂದ ಬ್ರಹ್ಮಹತ್ಯೆಯ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ. ತ್ರಿಕಾಲಗಳಲ್ಲಿ ಮಾಡಬೇಕಾದ ಅನುಷ್ಠಾನಕ್ಕೆ ಅರ್ಹನಾಗುತ್ತಾನೆ.
ಏವಂ ಗರ್ಭಸಮವಿಜ್ಞಾತಮಾತ್ರೇಯೀಂ ವಾ ವಿಘಾತಯೇತ್ |
ದ್ವಿಗುಣಾ ಬ್ರಹ್ಮಹತ್ಯಾ ವೈ ಆತ್ರೇಯೀವ್ಯಸನೇ ಭವೇತ್ ||51||
ಹೀಗೆಯೇ ಗರ್ಭಿಣೀ ಸೋದರಿಯನ್ನು ಕೊಂದವನು ಬ್ರಹ್ಮಹತ್ಯಾ ಪಾಪದ ಎರಡರಷ್ಟು ಪಾಪವನ್ನು ಹೊಂದುವನು. ಯಾವುದೇ ಗರ್ಭಿಣಿಯನ್ನು ಕೊಂದವನು ಇಷ್ಟು ಪಾಪವನ್ನು ಹೊಂದುವನು.
ಸುರಾಪೋ ನಿಯತಾಹಾರೋ ಬ್ರಹ್ಮಚಾರೀ ಕ್ಷಪಾಚರಃ |
ಊರ್ಧ್ವಂ ತ್ರಿಭ್ಯೋಽಥ ವರ್ಷೇಭ್ಯೋ ಯಜೇತಾಗ್ನಿಷ್ಟುತಾ ಪರಮ್ |
ಋಷಭೈಕಸಹಸ್ರಂ ಗಾ ದತ್ತ್ವಾ ಶುಭಮವಾಪ್ನುಯಾತ್ ||52||
ಸುರಾಪಾನವನ್ನು ಮಾಡಿದವನು ಮೂರು ವರ್ಷ ಮಿತಾಹಾರ-ಬ್ರಹ್ಮಚರ್ಯ ಮತ್ತು ರಾತ್ರಿಸಂಚಾರ ವ್ರತವನ್ನು ಮಾಡಬೇಕು. ಅನಂತರ ಅಗ್ನಿಷ್ಟುತ್ ಯಾಗವನ್ನು ಮಾಡಬೇಕು. ಒಂದು ಸಾವಿರ ಎತ್ತುಗಳನ್ನು ಅಥವಾ ಒಂದು ಸಾವಿರ ಗೋವುಗಳನ್ನು ದಾನ ಮಾಡಬೇಕು. ಇದರಿಂದ ಶುದ್ಧನಾಗುತ್ತಾನೆ.
ವೈಶ್ಯಂ ಹತ್ವಾ ತು ವರ್ಷೇ ದ್ವೇ ಋಷಭೈಕಶತಂ ಚ ಗಾಃ |
ಶೂದ್ರಂ ಹತ್ವಾಬ್ದಮೇವೈಕಮೃಷಭಂ ಚ ಶತಂ ಚ ಗಾಃ ||53||
ವೈಶ್ಯಹತ್ಯೆಯನ್ನು ಮಾಡಿದವನು ಎರಡು ವರ್ಷ ಈ ವ್ರತವನ್ನು ಮಾಡಬೇಕು. ಒಂದು ನೂರು ಎತ್ತುಗಳನ್ನು ಅಥವಾ ಗೋವುಗಳನ್ನು

ದಾನ ಮಾಡಬೇಕು. ಶೂದ್ರಹತ್ಯೆಯನ್ನು ಮಾಡಿದವನು ಒಂದು ವರ್ಷ ಈ ವ್ರತವನ್ನು ಮಾಡಿ ಒಂದು ಎತ್ತು ಮತ್ತು ನೂರು ಗೋವುಗಳನ್ನು ದಾನ ಮಾಡಬೇಕು.
ಶ್ವವರಾಹಖರಾನ್ ಹತ್ವಾ ಶೌದ್ರಮೇವ ವ್ರತಂ ಚರೇತ್ |
ಮಾರ್ಜಾರಚಾಷಮಂಡೂಕಾನ್ ಕಾಕಂ ಭಾಸಂ ಚ ಮೂಷಕಮ್ ||
ನಾಯಿ, ಹಂದಿ, ಕತ್ತೆಗಳನ್ನು ಕೊಂದವನು ಶೂದ್ರಹತ್ಯೆಗೆ ಮಾಡಿಕೊಳ್ಳಬೇಕಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಬೆಕ್ಕು, ನವಿಲು, ಕಪ್ಪೆ, ಕಾಗೆ, ಗಿಡುಗ, ಹುಂಜ, ಇಲಿ- ಇವುಗಳನ್ನು ಕೊಂದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ಉಕ್ತಃ ಪಶುಸಮೋ ಧರ್ಮೋ ರಾಜನ್ ಪ್ರಾಣಿನಿಪಾತನಾತ್ |
ಪ್ರಾಯಶ್ಚಿತ್ತಾನ್ಯಥಾನ್ಯಾನಿ ಪ್ರವಕ್ಷ್ಯಾಮ್ಯನುಪೂರ್ವಶಃ ||55||
ರಾಜನೇ! ಯಾವುದೇ ಪ್ರಾಣಿಯನ್ನು ಹತ್ಯೆ ಮಾಡಿದರೂ ಹೀಗೆಯೇ ಪ್ರಾಯಶ್ಚಿತ್ತ ಎಂದು ಪ್ರಾಜ್ಞರು ಹೇಳಿದ್ದಾರೆ. ಬೇರೆ ಪ್ರಾಯಶ್ಚಿತ್ತಗಳನ್ನು ಕ್ರಮವಾಗಿ ಹೇಳುವೆ.
ಕಲ್ಪೇ ಚಾನ್ನಸ್ಯ ಚೌರ್ಯೇ ಚ ಪೃಥಕ್ಸಂವತ್ಸರಂ ಚರೇತ್ |
ತ್ರೀಣಿ ಶ್ರೋತ್ರಿಯಭಾರ್ಯಾಯಾಂ ಪರದಾರೇ ತು ದ್ವೇ ಸ್ಮೃತೇ ||56||
ಇಲ್ಲದ ದೋಷವನ್ನು ಕಲ್ಪಿಸಿದರೆ, ಆಹಾರವನ್ನು ಅಪಹರಿಸಿದರೆ ಒಂದು ವರ್ಷ (ಮುಂದೆ ಹೇಳುವ) ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಶ್ರೋತ್ರಿಯನ ಪತ್ನಿಯ ಸಮಾಗಮವನ್ನು ಮಾಡಿದರೆ ಮೂರು ವರ್ಷ, ಪರಪತ್ನಿಯರ ಸಮಾಗಮವನ್ನು ಮಾಡಿದರೆ ಎರಡು ವರ್ಷ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.
ಕಾಲೇ ಚತುರ್ಥೇ ಭುಂಜಾನೋ ಬ್ರಹ್ಮಚಾರೀ ವ್ರತೀ ಭವೇತ್ |
ಸ್ಥಾನಾಸನಾಭ್ಯಾಂ ವಿಹರೇತ್ ತ್ರಿರಹ್ನೋಽಭ್ಯುದಿತಾದಪಃ |
ಏವಮೇವ ನಿರಾಚಾಂತೋ ಯಶ್ಚಾಗ್ನೀನಪವಿಧ್ಯತಿ ||57||
ಒಂದು ಹೊತ್ತು ಭೋಜನ, ಅನಂತರ ಮೂರು ಹೊತ್ತು ಉಪವಾಸ, ಅನಂತರ ಭೋಜನ, ಬ್ರಹ್ಮಚರ್ಯ ವ್ರತ, ತನಗೇ ಪ್ರತ್ಯೇಕವಾದ ಜಾಗ, ಆಸನಗಳನ್ನು ಏರ್ಪಡಿಸಿಕೊಳ್ಳಬೇಕು. ಪ್ರತಿದಿನ ಮೂರು ಬಾರಿ ಸ್ನಾನ ಮಾಡಬೇಕು. ಆಚಮನವನ್ನು ಮಾಡದೆ ಅಗ್ನಿಯನ್ನು ಅಪವಿತ್ರಗೊಳಿಸುವವನು (ಅಗ್ನಿಯನ್ನು ಅನುಷ್ಠಾನ ಮಾಡುವವನು) ಹೀಗೆಯೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ತ್ಯಜತ್ಯಕಾರಣೇ ಯಶ್ಚ ಪಿತರಂ ಮಾತರಂ ತಥಾ |
ಪತಿತಃ ಸ್ಯಾತ್ಸ ಕೌರವ್ಯ ತಥಾ ಧರ್ಮೇಷು ನಿಶ್ಚಯಃ |
ಗ್ರಾಸಾಚ್ಛಾದನಮತ್ಯರ್ಥಂ ದದ್ಯಾದಿತಿ ನಿದರ್ಶನಮ್ ||58||
ಯಾರು ಕಾರಣವಿಲ್ಲದೆ ತಂದೆಯನ್ನು, ತಾಯಿಯನ್ನು (ಗುರುಗಳನ್ನು) ತ್ಯಾಗ ಮಾಡುವನೋ ಅವನು ಪತಿತನಾಗುತ್ತಾನೆ. ಇದು ಧರ್ಮಶಾಸ್ತ್ರಗಳ ನಿರ್ಣಯ. ಇವನು ಬ್ರಹ್ಮಚರ್ಯ ವ್ರತವನ್ನು ಮಾಡುತ್ತಾ, ಬ್ರಾಹ್ಮಣನಿಗೆ ಆಹಾರ, ವಸ್ತ್ರ, ಯಾನ, ಹಾಸಿಗೆಯನ್ನು ದಾನ ಮಾಡಿ ಶುದ್ಧನಾಗುತ್ತಾನೆ.
ಭಾರ್ಯಾಯಾಂ ವ್ಯಭಿಚಾರಿಣ್ಯಾಂ ನಿರುದ್ಧಾಯಾಂ ವಿಶೇಷತಃ |
ಯತ್ ಪುಂಸಾಂ ಪರದಾರೇಷು ತಚ್ಚೈನಾಂ ಚಾರಯೇದ್ ವ್ರತಮ್ ||
ಪತ್ನಿಯು ವ್ಯಭಿಚಾರಿಣಿಯಾದರೆ, ಅವಳನ್ನು ಆ ಕೃತ್ಯವನ್ನು ಮಾಡದಂತೆ ತಡೆದರೆ, ಪರಸ್ತ್ರೀ ಸಂಗವನ್ನು ಮಾಡಿದ ಪುರುಷನಿಗೆ ಯಾವ ಪ್ರಾಯಶ್ಚಿತ್ತವೋ ಅದನ್ನು ಅವಳಿಂದ ಮಾಡಿಸಬೇಕು.
ಶ್ರೇಯಾಂಸಂ ಶಯನೇ ಹಿತ್ವಾ ಯಾ ಪಾಪೀಯಾಂಸಮೃಚ್ಛತಿ |
ಶ್ವಭಿಸ್ತಾಂ ಖಾದಯೇದ್ರಾಜಾ ಸಂಸ್ಥಾನೇ ಬಹುಸಂವೃತೇ ||60||
ಪತಿಯನ್ನು ಬಿಟ್ಟು ಪರಪುರುಷನ ಸಂಗ ಮಾಡುವವಳನ್ನು ರಾಜನು ರಹಸ್ಯ ಸ್ಥಳದಲ್ಲಿ ನಾಯಿಗಳು ತಿನ್ನುವಂತೆ ಮಾಡಬೇಕು.
ಪುಮಾಂಸಂ ಬಂಧಯೇತ್ ಪ್ರಾಜ್ಞಃ ಶಯನೇ ತಪ್ತ ಆಯಸೇ |
ಅಪ್ಯಾದಧೀತ ದಾರೂಣಿ ತತ್ರ ದಹ್ಯೇತ ಪಾಪಕೃತ್ ||61||
ಹೀಗೆಯೇ ಪರಸ್ತ್ರೀ ಸಂಗವನ್ನು ಮಾಡುವ ಪುರುಷನನ್ನು ಪ್ರಾಜ್ಞ ರಾಜನು ಕಾಯಿಸಿದ ಕಬ್ಬಿಣದ ಮಂಚಕ್ಕೆ ಕಟ್ಟಿ ಕಟ್ಟಿಗೆಗಳನ್ನು ಒಟ್ಟಬೇಕು. ಅದರಿಂದ ಅವನು ಸುಟ್ಟು ಹೋಗಬೇಕು.
ಏಷ ದಂಡೋ ಮಹಾರಾಜ ಸ್ತ್ರೀಣಾಂ ಭರ್ತೃವ್ಯತಿಕ್ರಮೇ |
ಸಂವತ್ಸರಾಭಿಶಸ್ತಸ್ಯ ದುಷ್ಟಸ್ಯ ದ್ವಿಗುಣೋ ಭವೇತ್ ||62||
ಮಹಾರಾಜ! ಸ್ತ್ರೀಯರು ಪತಿಯನ್ನು ಮೀರಿದರೆ, ಅವರಿಗೂ ಇದೇ ಪ್ರಾಯಶ್ಚಿತ್ತ. ಅಪರಾಧ ಮಾಡಿದವರು ಒಂದು ವರ್ಷ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ಅನಂತರ ಎರಡರಷ್ಟು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ದ್ವೇ ತಸ್ಯ ತ್ರೀಣಿ ವರ್ಷಾಣಿ ಚತ್ವಾರಿ ಸಹ ಸೇವನಾತ್ |
ಕೌಮಾರಂ ಪಂಚ ವರ್ಷಾಣಿ ಚರೇದ್ ಭೈಕ್ಷಂ ಮುನಿವ್ರತಃ ||63||
ಪರಸ್ತ್ರೀ ಸಂಗವನ್ನು ಮಾಡಿದ ಕಾರಣದಿಂದ ಪುರುಷನು ಅಲ್ಪಕಾಲ ಈ ಅಪರಾಧವನ್ನು ಮಾಡಿದ್ದರೆ ಎರಡು ವರ್ಷ, ಅದಕ್ಕಿಂತ ಹೆಚ್ಚು ಕಾಲ ಮಾಡಿದ್ದರೆ ಮೂರು ವರ್ಷ, ಬಹುಕಾಲ ಮಾಡಿದ್ದರೆ ನಾಲ್ಕು ವರ್ಷ ಅಥವಾ ಐದು ವರ್ಷ ಬ್ರಹ್ಮಚಾರಿಯು ಆಚರಿಸಬೇಕಾದ ಭಿಕ್ಷಾವ್ರತವನ್ನು, ಮೌನವ್ರತವನ್ನು ಆಚರಿಸಬೇಕು.
(`ಕುಚರ' ಈ ಪಾಠವನ್ನು ಆದರಿಸಿ ಸ್ವಲ್ಪ ಭಿನ್ನ ಅಭಿಪ್ರಾಯಗಳೂ ಪೂರ್ವ ಅನುವಾದಗಳಲ್ಲಿ ಇವೆ. ಎರಡು, ಮೂರು, ನಾಲ್ಕು, ಐದು ವರ್ಷಗಳ ಕಾಲ ಪತಿತನ ಸಹವಾಸದಲ್ಲಿದ್ದವನು ಅಷ್ಟೇ ವರ್ಷಗಳ ಕಾಲ ಮೌನದಿಂದ, ಭೂಪರ್ಯಟನೆ ಮಾಡುತ್ತಾ ಭಿಕ್ಷಾವೃತ್ತಿಯನ್ನು ಮಾಡಬೇಕು).

ಪರಿವಿತ್ತಿಃ ಪರಿವೇತ್ತಾ ಯಥಾ ಚ ಪರಿವಿದ್ಯತೇ |
ಪಾಣಿಗ್ರಹಮಧರ್ಮೇಣ ಸರ್ವೇ ತೇ ಪತಿತಾಃ ಸ್ಮೃತಾಃ ॥64॥
ಅಣ್ಣನ ಮದುವೆಗಿಂತ ಮೊದಲು ತಮ್ಮನು ಮದುವೆಯಾದರೆ, ತಮ್ಮನು ಪರಿವೇತ್ತಾ. ಅವನ ಪತ್ನಿಯು ಪರಿವಿತ್ತಿ. ಯಾರ ಸಹಾಯದಿಂದ, ಪ್ರೇರಣೆಯಿಂದ ಈ ಮದುವೆ ಆಗುವುದೋ ಅವರೆಲ್ಲರೂ ಮತ್ತು ಈ ದಂಪತಿಗಳು ಪತಿತರು ಎಂದು ಪ್ರಾಜ್ಞರ ಅಭಿಪ್ರಾಯ.
ಚರೇಯುಃ ಸರ್ವ ಏವೈತೇ ವೀರಹಾ ಯದ್ವ್ರತಂ ಚರೇತ್ |
ಚಾಂದ್ರಾಯಣಂ ಚರೇನ್ಮಾಸಂ ಕೃಚ್ಛ್ರಂ ವಾ ಪಾಪಶುದ್ಧಯೇ ॥65॥
ತನ್ನ ಅಗ್ನಿಯನ್ನು ತ್ಯಾಗ ಮಾಡಿದ ಗೃಹಸ್ಥಾಶ್ರಮಿಯು ವೀರಹಾ. ಈ ಅಪರಾಧಿಯು ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು ಎಂದು ಶಾಸ್ತ್ರವಿಧಿಯು ಇದೆಯೋ ಅದೇ ಪ್ರಾಯಶ್ಚಿತ್ತವನ್ನು ಇವರೆಲ್ಲರೂ (ಪರಿವೇತ್ತಾ, ಪರಿವಿತ್ತಿ ಮತ್ತು ಸಹಾಯಕರು) ಮಾಡಿಕೊಳ್ಳಬೇಕು ಅಥವಾ ಒಂದು ತಿಂಗಳು ಚಾಂದ್ರಾಯಣ ವ್ರತವನ್ನು ಅಥವಾ ಕೃಚ್ಛ್ರ ವ್ರತವನ್ನು ಆಚರಿಸಬೇಕು.
ಪರಿವೇತ್ತಾ ಪ್ರಯಚ್ಛೇತ ಪರಿವಿತ್ತಾಯ ತಾಂ ಸ್ನುಷಾಮ್ |
ಜ್ಯೇಷ್ಠೇನ ತ್ವಭ್ಯನುಜ್ಞಾತೋ ಯವೀಯಾನ್ ಪ್ರತ್ಯನಂತರಮ್ |
ಏನಸೋ ಮೋಕ್ಷಮಾಪ್ನೋತಿ ತೌ ಚ ವಾಚ್ಯೌ ಚ ಧರ್ಮತಃ ॥66॥
ಪರಿವೇತ್ತಾ ಪುರುಷನು ಪರಿವಿತ್ತನಿಗೆ (ತನಗಿಂತ ಮೊದಲು ಮದುವೆಯಾಗದ ಅಣ್ಣನಿಗೆ) ತನ್ನ ಪತ್ನಿಯನ್ನು ಸೊಸೆ ಎಂದು ಪರಿಗಣಿಸಿ, ಹಾಗೆ ವ್ಯವಹರಿಸಬೇಕೆಂದು ವಿನಂತಿಸಿ ಒಪ್ಪಿಸಬೇಕು. ಅನಂತರ ತಮ್ಮನು ಅಣ್ಣನ ಅನುಮತಿಯಿಂದ ತನ್ನ ಪತ್ನಿಯ ಜೊತೆ ದಾಂಪತ್ಯವನ್ನು ನಡೆಸಬೇಕು. ಈ ಆಚರಣೆಯು ಧರ್ಮ. ಈ ಧರ್ಮದಿಂದ ಆ ಮಹಿಳೆ ಮತ್ತು ಸೋದರರು ಅಪರಾಧದ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾರೆ.
ಸ ಮಾನುಷೇಷು ಗೋವರ್ಜಂ ದೋಷೇಣ ನ ಚ ದೂಷ್ಯತೇ |
ಅಧಿಷ್ಠಾತಾರಮತ್ತಾರಂ ಪಶೂನಾಂ ಪುರುಷಂ ವಿದುಃ ॥67॥
ಪಾಪ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವವನು ಗೋದಾನವನ್ನು ಮಾಡಲೇಬೇಕು. ಬೇರೆ ದಾನಗಳನ್ನು ಮಾಡಿದ್ದರೂ ಅವನಿಗೆ ದೋಷಲೇಪವಿಲ್ಲ. ಪಶುಗಳ ಮೇಲೆ ಏರಿ ಕುಳಿತ ಪುರುಷನನ್ನು ಪಶುಭಕ್ಷಕ ಎಂದು ಪ್ರಾಜ್ಞರು ತಿಳಿದಿದ್ದಾರೆ.
ಪರಿದಾಯೋರ್ಧ್ವಬಹುಲಂ ಪಾತ್ರಮಾದಾಯ ಮೃನ್ಮಯಮ್ |
ಚರೇತ್ ಸಪ್ತ ಗೃಹಾನ್ ಭೈಕ್ಷಂ ಸ್ವಕರ್ಮ ಪರಿಕೀರ್ತಯನ್ ॥68॥
ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವವನು ಶ್ರೇಷ್ಠವಾದ ಬಹು ದ್ರವ್ಯಗಳನ್ನು ದಾನ ಮಾಡಿ, ಮಣ್ಣಿನ ಪಾತ್ರೆಯನ್ನು ಹಿಡಿದುಕೊಂಡು ತನ್ನ ಅಪರಾಧಗಳನ್ನು ಹೇಳುತ್ತಾ ಏಳು ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡಬೇಕು.
ತಥೈವ ಮಲಭೋಜೀ ಸ್ಯಾದ್ ದ್ವಾದಶಾಹಾತ್ ಸ ಶುದ್ಧ್ಯತಿ |
ಚರೇತ್ ಸಂವತ್ಸರಂ ಚಾಪಿ ತದ್ ವ್ರತಂ ಯನ್ನಿಕೃಂತತಿ ॥69॥
ಮತ್ತು ಗೋಮಯವನ್ನು ತಿನ್ನಬೇಕು. ಹನ್ನೆರಡು ದಿವಸ ಹೀಗೆ ಮಾಡುವುದರಿಂದ ಶುದ್ಧನಾಗುತ್ತಾನೆ. ಒಂದು ವರ್ಷ ಈ ವ್ರತವನ್ನು ಮಾಡಬೇಕು. ಇದು ಪಾಪಗಳನ್ನು ಕತ್ತರಿಸುತ್ತದೆ.
ಮಾನುಷೇಷು ಚ ಭವೇತ್ ಪ್ರಾಯಶ್ಚಿತ್ತಮನುತ್ತಮಮ್ |
ಧನಂ ವಾ ದಾನಶಕ್ತೇಷು ಏತತ್ಸರ್ವಂ ಪ್ರಕಲ್ಪಯೇತ್ |
ಅನಾಸ್ತಿಕೇಷು ಗೋಮಾತ್ರಂ ಪ್ರಾಣಮೇಕಂ ಪ್ರಚಕ್ಷತೇ ॥70॥
ಮೇಲೆ ಹೇಳಿದ ಅತ್ಯುತ್ತಮ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡವನು ಮತ್ತೆ ಮನುಷ್ಯರ ಮಧ್ಯೆ ಮನ್ನಣೆಯನ್ನು ಪಡೆಯುತ್ತಾನೆ. ದಾನ ಮಾಡುವ ಶಕ್ತಿ ಇದ್ದವರಿಗೆ, ಅವರು ಮಾಡುವ ದಾನವು ಎಲ್ಲ ಪ್ರಾಯಶ್ಚಿತ್ತಗಳನ್ನು ಕಲ್ಪಿಸುತ್ತದೆ. ಆಸ್ತಿಕರು ಕೇವಲ ಗೋದಾನವನ್ನು ಮಾಡಿದರೂ, ಅದು ಅವರಿಗೆ ಪ್ರಾಣ (ಧಾರಕ ಶಕ್ತಿ) ಎಂದು ಹೇಳುತ್ತಾರೆ.
ಶ್ವವರಾಹಮೃಗಾಣಾಂ ಚ ಕುಕ್ಕುಟಸ್ಯ ಖರಸ್ಯ ಚ |
ಮಾಂಸಂ ಮೂತ್ರಪುರೀಷಂ ಚ ಪ್ರಾಶ್ಯ ಸಂಸ್ಕಾರಮರ್ಹತಿ ॥71॥
ನಾಯಿ, ಹಂದಿ, ಮೃಗಗಳು, ಕೋಳಿ, ಕತ್ತೆ - ಇವುಗಳ ಮಾಂಸ, ಮಲಗಳನ್ನು ತಿಂದ, ಮೂತ್ರವನ್ನು ಕುಡಿದ ಬ್ರಾಹ್ಮಣನು ಪುನಃ ಉಪನಯನ ಸಂಸ್ಕಾರವನ್ನು ಮಾಡಿಕೊಳ್ಳಬೇಕು.
ಬ್ರಾಹ್ಮಣಸ್ತು ಸುರಾಪಸ್ಯ ಗಂಧಮಾಘ್ರಾಯ ಸೋಮಪಃ |
ಅಪಸ್ತ್ರ್ಯಹಂ ಪಿಬೇದುಷ್ಣಾಸ್ತ್ರ್ಯಹಮುಷ್ಣಂ ಪಯಃ ಪಿಬೇತ್ |
ತ್ರ್ಯಹಮುಷ್ಣಂ ಘೃತಂ ಪೀತ್ವಾ ವಾಯುಭಕ್ಷೋ ಭವೇತ್ ತ್ರ್ಯಹಮ್ ॥
ಸೋಮರಸ ಪಾನಾರ್ಹನಾದ ಬ್ರಾಹ್ಮಣನು ಸುರಾಪಾನ ಮಾಡಿದವನ ದುರ್ಗಂಧವನ್ನು ಆಘ್ರಾಣಿಸಿದರೆ ಮೂರು ದಿನ ಬಿಸಿ ನೀರನ್ನು ಕುಡಿಯಬೇಕು. ಮೂರು ದಿನ ಬಿಸಿ ಹಾಲನ್ನು ಕುಡಿಯಬೇಕು. ಮೂರು ದಿನ ಬಿಸಿ ತುಪ್ಪವನ್ನು ಕುಡಿಯಬೇಕು. ಮೂರು ದಿನ ಕೇವಲ ವಾಯುಸೇವನೆಯನ್ನು ಮಾಡಬೇಕು.
ಏವಮೇತತ್ ಸಮುದ್ದಿಷ್ಟಂ ಪ್ರಾಯಶ್ಚಿತ್ತಂ ಸನಾತನಮ್ |
ಬ್ರಾಹ್ಮಣಸ್ಯ ವಿಶೇಷೇಣ ತತ್ತ್ವಜ್ಞಾನೇನ ಜಾಯತೇ ॥73॥
ಮೇಲೆ ಹೇಳಲ್ಪಟ್ಟ ಪ್ರಾಯಶ್ಚಿತ್ತಗಳು ಸನಾತನ (ವೇದೋಕ್ತ ಮತ್ತು ಪರಂಪರಾಪ್ರಾಪ್ತ) ಪ್ರಾಯಶ್ಚಿತ್ತಗಳು. ವಿಶೇಷವಾಗಿ ಬ್ರಾಹ್ಮಣನಿಗೆ ಅನ್ವಯಿಸುತ್ತವೆ. ಪ್ರಾಯಶ್ಚಿತ್ತದ ತತ್ವವನ್ನು ತಿಳಿದುಕೊಂಡರೆ ಪ್ರಾಯಶ್ಚಿತ್ತವು ಸಫಲವಾಗುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ಆಪದ್ಧರ್ಮೇ ಏಕತ್ರಿಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.
ಮೂವತ್ತೆರಡನೆಯ ಅಧ್ಯಾಯ
ಖಡ್ಗದ ಉತ್ಪತ್ತಿ, ಅದರ ಉಪಯೋಗ ಮೊದಲಾದ ವಿಷಯಗಳನ್ನು ತಿಳಿಸಬೇಕೆಂದು ನಕುಲನ ಪ್ರಾರ್ಥನೆ. ಭೀಷ್ಮರಿಂದ ಪ್ರಾಸ್ತಾವಿಕವಾಗಿ ಪ್ರಪಂಚ ಸೃಷ್ಟಿಯ ಕಥನ. ಹಿಮಾಲಯದ ಒಂದು ರಮಣೀಯ ಸ್ಥಳದಲ್ಲಿ ಬ್ರಹ್ಮದೇವರು ನಡೆಸಿದ ಯಜ್ಞ. ಆ ಸಂದರ್ಭದಲ್ಲಿ ಉದ್ಭವಿಸಿದ ಮಹಾಭೂತ. ಖಡ್ಗವಾಗಿ ಅದರ ಪರಿವರ್ತನೆ. ಬ್ರಹ್ಮದೇವರಿಂದ ರುದ್ರದೇವರಿಗೆ ಆ ಖಡ್ಗದ ಪ್ರದಾನ. ಅವರಿಂದ ಅದರಿಂದ ಅಧರ್ಮನಿಗ್ರಹ. ಖಡ್ಗದ ಪರಂಪರೆ.
ವೈಶಂಪಾಯನಃ
ಕಥಾಂತರಮಥಾಸಾದ್ಯ ಖಡ್ಗಯುದ್ಧವಿಶಾರದಃ |
ನಕುಲಃ ಶರತಲ್ಪಸ್ಥಮಿದಮಾಹ ಪಿತಾಮಹಮ್ ||1||
ಕಥಾ ಸಮಾಪ್ತಿಯನ್ನು ತಲುಪಿ (ಆಪದ್ಧರ್ಮಗಳ ವಿವರಣೆಯು ಮುಗಿಯುವವರೆಗೆ ಅದನ್ನು ಕೇಳುತ್ತಿದ್ದ ನಕುಲನು, ಆ ವಿವರಣೆಯು ಮುಗಿದನಂತರ, ಬೇರೆ ವಿಷಯವನ್ನು ಕುರಿತು ಪ್ರಶ್ನಿಸಲು ಅವಕಾಶವನ್ನು ಪಡೆದು) ಖಡ್ಗಯುದ್ಧ ವಿಶಾರದನಾದ ನಕುಲನು ಶರತಲ್ಪದಲ್ಲಿದ್ದ ಪಿತಾಮಹರನ್ನು ಕುರಿತು ಇದನ್ನು (ಮುಂದೆ ಹೇಳುವುದನ್ನು) ಹೇಳಿದನು.
ನಕುಲಃ
ಧನುಃ ಪ್ರಹರಣಂ ಶ್ರೇಷ್ಠಮಿತಿ ವಾದಃ ಪಿತಾಮಹ |
ಮತಸ್ತು ಮಮ ಧರ್ಮಜ್ಞ ಖಡ್ಗ ಏವ ಸುಸಂಶಿತಃ ||2||
ಧರ್ಮಜ್ಞ! ಪಿತಾಮಹ! ಬಿಲ್ಲು ಶ್ರೇಷ್ಠ ಪ್ರಹರಣ (ಹೊಡೆಯುವ ಸಾಧನ) ಎಂಬ ವಾದವಿದೆ. ಬಹಳ ಹರಿತವಾದ ಖಡ್ಗವೇ ಶ್ರೇಷ್ಠ ಪ್ರಹರಣ ಎಂದು ನನ್ನ ಅಭಿಪ್ರಾಯ.
ವಿಶೀರ್ಣೇ ಕಾರ್ಮುಕೇ ರಾಜನ್ ಪ್ರಕ್ಷೀಣೇಷು ಚ ವಾಜಿಷು |
ಖಡ್ಗೇನ ಶಕ್ಯತೇ ಯುದ್ಧೇ ಸಾಧ್ವಾತ್ಮಾ ಪರಿರಕ್ಷಿತುಮ್ ||3||
ಯುದ್ಧದಲ್ಲಿ ಬಿಲ್ಲು ನಾಶವಾದರೂ, ಕುದುರೆಗಳು ದುರ್ಬಲವಾದರೂ ಖಡ್ಗದಿಂದ ತನ್ನ ಪಕ್ಷವನ್ನು ಚೆನ್ನಾಗಿ ರಕ್ಷಿಸಬಹುದು.
ಶರಾಸನಧರಾಂಶ್ಚೈವ ಗದಾಶಕ್ತಿಧರಾಂಸ್ತಥಾ |
ಏಕಃ ಖಡ್ಗಧರೋ ವೀರಃ ಸಮರ್ಥಃ ಪ್ರತಿಬಾಧಿತುಮ್ ||4||
ಧನುರ್ಧಾರಿಗಳನ್ನು, ಗದಾಧಾರಿಗಳನ್ನು, ಶಕ್ತ್ಯಾಯುಧಧಾರಿಗಳನ್ನು ಖಡ್ಗಧರನಾದ ವೀರನೊಬ್ಬನೇ ಎದುರಿಸಲು, ಬಾಧಿಸಲು ಸಮರ್ಥ.
ಅತ್ರ ಮೇ ಸಂಶಯಶ್ಚೈವ ಕೌತೂಹಲಮತೀವ ಚ |
ಕಿಂಸ್ವಿತ್ ಪ್ರಹರಣಂ ಶ್ರೇಷ್ಠಂ ಸರ್ವಯುದ್ಧೇಷು ಪಾರ್ಥಿವ ||5||
ಪೃಥಿವೀಪತಿಯೇ! ಈ ವಿಷಯದಲ್ಲಿ ನನಗೆ ಬಹಳ ಸಂಶಯ ಮತ್ತು ಬಹಳ ಕುತೂಹಲವಿದೆ. ಎಲ್ಲ ಯುದ್ಧಗಳಲ್ಲಿ ಯಾವ ಆಯುಧವು ಶ್ರೇಷ್ಠ?
ಕಥಂ ಚೋತ್ಪಾದಿತಃ ಖಡ್ಗಃ ಕಸ್ಯಾರ್ಥಾಯ ಚ ಕೇನ ವಾ |
ಪೂರ್ವಾಚಾರ್ಯಂ ಚ ಖಡ್ಗಸ್ಯ ಪ್ರಬ್ರೂಹಿ ಪ್ರಪಿತಾಮಹ ||6||
ಪ್ರಪಿತಾಮಹ! ಖಡ್ಗವು ಹೇಗೆ ತಯಾರಿಸಲ್ಪಟ್ಟಿತು? ಯಾರಿಗಾಗಿ? ಯಾರಿಂದ? ಖಡ್ಗದ ಮೊದಲನೆಯ ಆಚಾರ್ಯ ಯಾರು? ದಯವಿಟ್ಟು ಹೇಳಿ.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಮಾದ್ರೀಪುತ್ರಸ್ಯ ಧೀಮತಃ |
ಸರ್ವಕೌಶಲಸಂಯುಕ್ತಂ ಸೂಕ್ಷ್ಮಚಿತ್ರಾರ್ಥವಚ್ಛುಭಮ್ ||7||
ತತಸ್ತಸ್ಯೋತ್ತರಂ ವಾಕ್ಯಂ ಸ್ವರವರ್ಣೋಪಪಾದಿತಮ್ |
ಶಿಕ್ಷಾನ್ಯಾಯೋಪಸಂಪನ್ನಂ ದ್ರೋಣಶಿಷ್ಯಾಯ ಪೃಚ್ಛತೇ ||8||
ಉವಾಚ ಸರ್ವಧರ್ಮಜ್ಞೋ ಧನುರ್ವೇದಸ್ಯ ಪಾರಗಃ |
ಶರತಲ್ಪಗತೋ ಭೀಷ್ಮೋ ನಕುಲಾಯ ಮಹಾತ್ಮನೇ ||9||
ಧೀಮಂತನಾದ ಆ ಮಾದ್ರೀಪುತ್ರನ ಆ ಮಾತುಗಳನ್ನು ಕೇಳಿ ಸರ್ವಧರ್ಮಗಳನ್ನೂ ತಿಳಿದ, ಧನುರ್ವಿದ್ಯಾಪಾರಂಗತರಾದ, ಶರಶಯ್ಯೆಯಲ್ಲಿದ್ದ ಭೀಷ್ಮರು ದ್ರೋಣಶಿಷ್ಯನಾದ, ತಿಳಿಸಲು ಪ್ರಾರ್ಥಿಸಿರುವ, ಮಹಾತ್ಮ ನಕುಲನಿಗೆ ಸಕಲ ಕೌಶಲ ಸಂಪನ್ನವಾದ, ಸೂಕ್ಷ್ಮ ಮತ್ತು ವಿಚಿತ್ರ ಅರ್ಥಸಂಪನ್ನವಾದ, ಶುಭವಾದ, ರೋಚಕಸ್ವರ-ವರ್ಣ ಸಂಪನ್ನವಾದ, ಬೋಧಕ ಯುಕ್ತಿಗಳಿಂದ ತುಂಬಿದ ಉತ್ತರವನ್ನು ಹೇಳಿದರು.
ಭೀಷ್ಮಃ
ತತ್ತ್ವಂ ಶೃಣುಷ್ವ ಮಾದ್ರೇಯ ಯದೇತತ್ ಪರಿಪೃಚ್ಛಸಿ |
ಪ್ರಬೋಧಿತೋಽಸ್ಮಿ ಭವತಾ ಧಾತುಮಾನಿವ ಪರ್ವತಃ ||10||
ಮಾದ್ರೀಸುತ! ನೀನು ಯಾವ ವಿಷಯವನ್ನು ಕೇಳಿರುವಿಯೋ ಅದನ್ನು ಕುರಿತು ಕೇಳು. ಕೆಂಪು ಧಾತುಮಯವಾದ ಪರ್ವತದಂತೆ ಇರುವ (ಶರೀರವೆಲ್ಲ ರಕ್ತಮಯವಾಗಿರುವ ಎಂದು ಹೇಳಲು ಈ ಉಪಮಾ) ನಾನು ನಿನ್ನಿಂದ ಉತ್ತಮ ವಿಷಯದ ಕಡೆ ಎಚ್ಚರಿಸಲ್ಪಟ್ಟಿದ್ದೇನೆ.

ಸಲಿಲೈಕಾರ್ಣವಂ ತಾತ ಪುರಾ ಸರ್ವಮಭೂದಿದಮ್ ।
ನಿಷ್ಪ್ರಕಂಪಮನಾಕಾಶಮನಿರ್ದೇಶ್ಯಮಹೀತಲಮ್ ॥11॥
ಪ್ರಿಯ ನಕುಲ! ಹಿಂದೆ ಇದೆಲ್ಲವೂ (ಸಕಲ ಭೂಭಾಗವೂ) ಕೇವಲ ಜಲ ಸಾಗರವಾಗಿತ್ತು. ಯಾವ ಕಂಪನವೂ ಇರಲಿಲ್ಲ. ಜಾಗವಿರಲಿಲ್ಲ. ತೋರಿಸಬಹುದಾದ, ಗುರುತಿಸಬಹುದಾದ ಭೂಮಿಯು ಇರಲಿಲ್ಲ.
ತಮಃಸಂವೃತಮಸ್ಪರ್ಶಮತಿಗಂಭೀರದರ್ಶನಮ್ ।
ನಿಃಶಬ್ದಂ ಚಾಪ್ರಮೇಯಂ ಚ ತತ್ರ ಜಜ್ಞೇ ಪಿತಾಮಹಃ ॥12॥
ಎಲ್ಲ ಕಡೆ ಕತ್ತಲು ಆವರಿಸಿತ್ತು. ಸ್ಪರ್ಶವಿಲ್ಲ. ಶಬ್ದವಿಲ್ಲ. ಅತಿಗಂಭೀರವಾಗಿ ಕಾಣುತ್ತಿತ್ತು. ತಿಳಿವಿಗೆ ನಿಲುಕದ ಸನ್ನಿವೇಶ. ಆಗ ಪಿತಾಮಹನು (ಚತುರ್ಮುಖ ಬ್ರಹ್ಮನು ಹುಟ್ಟಿದನು).
ಸೋಽಸೃಜದ್ ವಾಯುಮಗ್ನಿಂ ಚ ಭಾಸ್ಕರಂ ಚಾಪಿ ವೀರ್ಯವಾನ್ ।
ಆಕಾಶಮಸೃಜಚ್ಚೋರ್ಧ್ವಮಧೋ ಭೂಮಿಂ ಚ ನೈರ್ಋತಿಮ್ ॥13॥
ವೀರ್ಯಶಾಲಿಯಾದ ಅವನು ವಾಯು, ಅಗ್ನಿ, ಸೂರ್ಯರನ್ನು ಸೃಷ್ಟಿಸಿದನು. ಮೇಲೆ ಆಕಾಶವನ್ನು, ಕೆಳಗೆ ಭೂಮಿಯನ್ನು ಮತ್ತು ನೈರ್ಋತಿಯನ್ನು (ರಾಕ್ಷಸ ಸಮೂಹವನ್ನು) ಸೃಷ್ಟಿಸಿದನು.
ನಭಃ ಸಚಂದ್ರತಾರಂ ಚ ನಕ್ಷತ್ರಾಣಿ ಗ್ರಹಾಂಸ್ತಥಾ ।
ಸಂವತ್ಸರಾನಹೋರಾತ್ರಾನೃತೂನಥ ಲವಾನ್ ಕ್ಷಣಾನ್ ॥14॥
ಆಕಾಶದಲ್ಲಿ ಚಂದ್ರರನ್ನು, ತಾರೆಗಳನ್ನು, ನಕ್ಷತ್ರಗಳನ್ನು, ಗ್ರಹಗಳನ್ನು ಸೃಷ್ಟಿಸಿದನು. ಸಂವತ್ಸರ, ಹಗಲು, ರಾತ್ರಿ, ಋತು, ಲವ, ಕ್ಷಣ- ಈ ಕಾಲ ಘಟಕಗಳನ್ನು ಸೃಷ್ಟಿಸಿದನು.
ತತಃ ಶರೀರಂ ಲೋಕಸ್ಥಂ ಸ್ಥಾಪಯಿತ್ವಾ ಪಿತಾಮಹಃ ।
ಜನಯಾಮಾಸ ಭಗವಾನ್ ಪುತ್ರಾನುತ್ತಮತೇಜಸಃ ॥15॥
ಅನಂತರ ಭಗವಾನ್ ಪಿತಾಮಹನು ಲೌಕಿಕ ಶರೀರವನ್ನು= ಲೋಕದಲ್ಲಿ ಮಾನವ ಮತ್ತು ಮಾನವೇತರ ದೇಹಗಳು ಹೇಗೆ ಇವೆಯೋ ಅವುಗಳ ಮಾದರಿಯನ್ನು, ಸೃಷ್ಟಿಸಿ ಅಂತಹ ದೇಹಗಳನ್ನು ಹೊಂದಿರುವ ಉತ್ತಮ ತೇಜಸ್ಸಿನ ಪುತ್ರರನ್ನು ಸೃಷ್ಟಿಸಿದನು.
ಮರೀಚಿಮೃಷಿಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಮ್ ।
ವಸಿಷ್ಠಾಂಗಿರಸೌ ಚೋಭೌ ರುದ್ರಂ ಚ ಪ್ರಭುಮೀಶ್ವರಮ್ ॥16॥
ಆ ಪುತ್ರರು- ಋಷಿಗಳಾದ ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಮತ್ತು ಅಂಗಿರಸರು. ಇವರಲ್ಲದೆ ಆಳುವ ಸಾಮರ್ಥ್ಯವಿರುವ ಇಂದ್ರಾದಿಗಳಿಗಿಂತ ಮೇಲ್ಮಟ್ಟದ ಪ್ರಭು ರುದ್ರದೇವರನ್ನು ಸೃಷ್ಟಿಸಿದರು.
ಪ್ರಾಚೇತಸಸ್ತಥಾ ದಕ್ಷಃ ಕನ್ಯಾಃ ಷಷ್ಟಿಮಜೀಜನತ್ ।
ತಾ ವೈ ಬ್ರಹ್ಮರ್ಷಯಃ ಸರ್ವಾಃ ಪ್ರಜಾರ್ಥಂ ಪ್ರತಿಪೇದಿರೇ ॥17॥
ಪ್ರಚೇತಸ್ ಮಹರ್ಷಿಯ ಮಗ ದಕ್ಷ ಪ್ರಜಾಪತಿ. ಇವನು ಅರವತ್ತು ಹೆಣ್ಣು ಮಕ್ಕಳನ್ನು ಪಡೆದನು. ಈ ಕನ್ಯೆಯರನ್ನು ಅತ್ರಿ ಮೊದಲಾದ ಬ್ರಹ್ಮರ್ಷಿಗಳು ಪ್ರಜಾ ವೃದ್ಧಿಗಾಗಿ ಮದುವೆಯಾದರು.
ತಾಭ್ಯೋ ವಿಶ್ವಾನಿ ಭೂತಾನಿ ದೇವಾಃ ಪಿತೃಗಣಾಸ್ತಥಾ ।
ಗಂಧರ್ವಾಪ್ಸರಸಶ್ಚೈವ ರಕ್ಷಾಂಸಿ ವಿವಿಧಾನಿ ಚ ॥18॥
ಪತತ್ರಿಮೃಗಮೀನಾಶ್ಚ ಪ್ಲವಂಗಾಶ್ಚ ಮಹೋರಗಾಃ ।
ನಾನಾಕೃತಿಬಲಾಶ್ಚಾನ್ಯೇ ಜಲಕ್ಷಿತಿವಿಚಾರಿಣಃ ॥19॥
ಔದ್ಭಿದಾಃ ಸ್ವೇದಜಾಶ್ಚೈವ ಅಂಡಜಾಶ್ಚ ಜರಾಯುಜಾಃ ।
ಜಜ್ಞೇ ತಾತ ತಥಾ ಸರ್ವಂ ಜಗತ್ ಸ್ಥಾವರಜಂಗಮಮ್ ॥20॥
ಈ ದಕ್ಷಪುತ್ರಿಯರಿಂದ ಸಕಲ ಪ್ರಾಣಿಗಳು, ದೇವತೆಗಳು, ಪಿತೃಗಣಗಳು, ಗಂಧರ್ವರು, ಅಪ್ಸರೆಯರು, ವಿವಿಧ ರಾಕ್ಷಸರು, ಹಕ್ಕಿಗಳು, ಪಶುಗಳು, ಮೀನುಗಳು, ಕಪಿಗಳು, ಮಹಾಸರ್ಪಗಳು ಹುಟ್ಟಿದವು. ಇವೆಲ್ಲವೂ ವಿವಿಧ ಆಕೃತಿ ಮತ್ತು ಬಲವುಳ್ಳವುಗಳು. ನೀರಿನಲ್ಲಿ, ನೆಲದಲ್ಲಿ ಸಂಚರಿಸುವವುಗಳು. ಈ ವಿಧವಾದ ಬೇರೆ ಬೇರೆ ಪ್ರಾಣಿಗಳು ಹುಟ್ಟಿದವು. ಭೂಮಿಯನ್ನು ಭೇದಿಸಿ ಹುಟ್ಟುವ, ಬೆವರಿನಿಂದ ಹುಟ್ಟುವ, ಮೊಟ್ಟೆಗಳಿಂದ ಹುಟ್ಟುವ, ಗರ್ಭದಿಂದ ಹುಟ್ಟುವ ಜೀವ ಸಂಕುಲವು ಹುಟ್ಟಿತು. ಇದೀ ಸ್ಥಾವರ-ಜಂಗಮ ಪ್ರಪಂಚವು ಹುಟ್ಟಿತು.
ಭೂತಸರ್ಗಮಿಮಂ ಕೃತ್ವಾ ಸರ್ವಲೋಕಪಿತಾಮಹಃ ।
ಶಾಶ್ವತಂ ವೇದಪಠಿತಂ ಧರ್ಮಂ ಚ ಯುಯುಜೇ ಪುನಃ ॥21॥
ಸರ್ವಲೋಕ ಪಿತಾಮಹನಾದ ಬ್ರಹ್ಮದೇವನು ಈ ಜೀವಸಂಕುಲವನ್ನು ಸೃಷ್ಟಿಸಿ ವೇದೋಕ್ತವಾದ ಸನಾತನ ಧರ್ಮವನ್ನು ಎಲ್ಲರೂ ಅನುಸರಿಸುವ ವ್ಯವಸ್ಥೆಯನ್ನು ಮಾಡಿದನು.
ತಸ್ಮಿನ್ ಧರ್ಮೇ ಸ್ಥಿತಾ ದೇವಾಃ ಸಹಾಚಾರ್ಯಪುರೋಹಿತಾಃ ।
ಆದಿತ್ಯಾ ವಸವೋ ರುದ್ರಾಃ ಸಸಾಧ್ಯಾ ಮರುದಶ್ವಿನಃ ॥22॥
ದೇವತೆಗಳು, ಆಚಾರ್ಯರು, ಪುರೋಹಿತರು, ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ಮರುತ್‌ಗಳು, ಅಶ್ವಿನೀದೇವತೆಗಳು ಈ ಸನಾತನ ಧರ್ಮದ ಅನುಷ್ಠಾನ ನಿರತರಾಗಿ ಅದರ ಪಾಲಕರಾದರು.
ಭೃಗ್ವತ್ರ್ಯಂಗಿರಸಃ ಸಿದ್ಧಾಃ ಕಾಶ್ಯಪಶ್ಚ ತಪೋಧನಃ ।
ವಸಿಷ್ಠಗೌತಮಾಗಸ್ತ್ಯಾಸ್ತಥಾ ನಾರದಪರ್ವತೌ ॥23॥
ಋಷಯೋ ವಾಲಖಿಲ್ಯಾಶ್ಚ ಪ್ರಭಾಸಾಃ ಸಿಕತಾಸ್ತಥಾ ।

ಘೃತಾಶ್ಚ ಸೌಮ್ಯಾ ವಾಯವ್ಯಾ ವೈಖಾನಸಮರೀಚಿಪಾಃ ॥24॥
ಅಕೃಷ್ಟಾಶ್ಚೈವ ಹಂಸಾಶ್ಚ ಋಷಯೋಽಥಾಗ್ನಿಯೋನಿಜಾಃ |
ವಾನಪ್ರಸ್ಥಾಃ ಪೃಶ್ನಯಶ್ಚ ಸ್ಥಿತಾ ಬ್ರಹ್ಮಾನುಶಾಸನೇ ॥25॥
ಭೃಗು-ಅತ್ರಿ-ಅಂಗಿರಸರು, ಸಿದ್ಧರು, ತಪೋಧನರಾದ ಕಾಶ್ಯಪ, ವಸಿಷ್ಠ, ಗೌತಮ, ಅಗಸ್ತ್ಯರು, ನಾರದರು, ಪರ್ವತ, ವಾಲಖಿಲ್ಯರು, ಪ್ರಭಾಸನಾಮಕ ಋಷಿಗಳು, ಸಿಕತನಾಮಕ ಋಷಿಗಳು, ಘೃತನಾಮಕ ಋಷಿಗಳು, ಸೋಮರಸಪಾನವನ್ನು ಮಾಡುವ ವಾಯವ್ಯರು, ವೈಖಾನಸರು, ಮರಿಚಿಪರು, ಅಕೃಷ್ಟಪಚ್ಯರು, ಹಂಸರು, ಅಗ್ನಿಜನ್ಯರಾದ ಋಷಿಗಳು, ವಾನಪ್ರಸ್ಥರು, ಪೃಶ್ನಿಗಳು- ಬ್ರಹ್ಮದೇವರ ಧರ್ಮಾನುಶಾಸನಕ್ಕೆ ನಿಷ್ಠರಾಗಿದ್ದರು.
ದಾನವೇಂದ್ರಾಸ್ತ್ವತಿಕ್ರಮ್ಯ ತತ್ ಪಿತಾಮಹಶಾಸನಮ್ |
ಧರ್ಮಸ್ಯಾಪಚಯಂ ಚಕ್ರುಃ ಕ್ರೋಧಲೋಭಸಮನ್ವಿತಾಃ ॥26॥
ಕ್ರೋಧ-ಲೋಭಗಳಿಗೆ ವಶರಾದ ದಾನವ ನಾಯಕರು ಆ ಪಿತಾಮಹ ಶಾಸನವನ್ನು ಉಲ್ಲಂಘಿಸಿ ಧರ್ಮವ್ಯವಸ್ಥೆಗೆ ಅಪಚಯವನ್ನು (ಕ್ಷೀಣದೆಶೆಯನ್ನು) ಉಂಟು ಮಾಡಿದರು.
ಹಿರಣ್ಯಕಶಿಪುಶ್ಚೈವ ಹಿರಣ್ಯಾಕ್ಷೋ ವಿರೋಚನಃ |
ಶಂಬರೋ ವಿಪ್ರಚಿತ್ತಿಶ್ಚ ಪ್ರಹ್ಲಾದೋ ನಮುಚಿರ್ಬಲಿಃ ॥27॥
ಏತೇ ಚಾನ್ಯೇ ಚ ಬಹವಃ ಸಗಣಾ ದೈತ್ಯದಾನವಾಃ |
ಧರ್ಮಸೇತುಮತಿಕ್ರಮ್ಯ ರೇಮಿರೇಽಧರ್ಮನಿಶ್ಚಯಾಃ ॥28॥
ಅಧರ್ಮದಲ್ಲೇ ದೃಢ ಮನಸ್ಸು ಇದ್ದ ಹಿರಣ್ಯಕಶಿಪು, ಹಿರಣ್ಯಾಕ್ಷ, ವಿರೋಚನ, ಶಂಬರ, ವಿಪ್ರಚಿತ್ತಿ, ಪ್ರಹ್ಲಾದ, ನಮುಚಿ, ಬಲಿ- ಇವರು ಮತ್ತು ಇನ್ನೂ ಬಹಳ ದೈತ್ಯ-ದಾನವ ಗಣಗಳು ಧರ್ಮ ಸೇತುವೆಯನ್ನು ಅತಿಕ್ರಮಿಸಿ ವಿಹರಿಸಿದರು.
ಸರ್ವೇ ಸ್ಮ ತುಲ್ಯಜಾತೀಯಾ ಯಥಾ ದೇವಾಸ್ತಥಾ ವಯಮ್ |
ಇತ್ಯೇವಂ ಹೇತುಮಾಸ್ಥಾಯ ಸ್ಪರ್ಧಮಾನಾಃ ಸುರರ್ಷಿಭಿಃ ॥29॥
`ಎಲ್ಲರೂ ಒಂದೇ ಮೂಲದಿಂದ ಹುಟ್ಟಿದವರು. ಇಂದ್ರಾದಿ ದೇವವರ್ಗದವರು ಹೇಗೋ ನಾವೂ ಹಾಗೆಯೇ`. ಈ ತರ್ಕವನ್ನು ಅವಲಂಬಿಸಿ ದೇವತೆಗಳೊಂದಿಗೆ, ಋಷಿಗಳೊಂದಿಗೆ ಸ್ಪರ್ಧಿಸಿದರು.
ನ ಪ್ರಿಯಂ ನಾಪ್ಯನುಕ್ರೋಶಂ ಚಕ್ರುರ್ಭೂತೇಷು ಭಾರತ |
ತ್ರೀನುಪಾಯಾನತಿಕ್ರಮ್ಯ ದಣ್ಡೇನ ರುರುಧುಃ ಪ್ರಜಾಃ |
ನ ಜಗ್ಮುಃ ಸಂವಿದಂ ತೈಶ್ಚ ದರ್ಪಾದಸುರಸತ್ತಮಾಃ ॥30॥
ಭಾರತ! ಇವರು ಭೂತ (ದೇಹಧಾರಿ ಚೇತನಗಳು) ಗಳಿಗೆ ಪ್ರಿಯವನ್ನು ಮಾಡಲಿಲ್ಲ. ಅವುಗಳ ಮೇಲೆ ದಯೆ ತೋರಲಿಲ್ಲ. ಮೂರು ಉಪಾಯಗಳನ್ನು (ಸಾಮ, ದಾನ, ಭೇದ) ಮೀರಿ ದಂಡೋಪಾಯದಿಂದಲೇ ಜನಗಳ ಮೇಲೆ ಮುತ್ತಿಗೆ ಹಾಕಿದರು. ಈ ಮಹಾ ಅಸುರರು ದರ್ಪದಿಂದ ಜನಗಳ ಜೊತೆ ವಿಶ್ವಾಸದ ವ್ಯವಹಾರವನ್ನೇ ಮಾಡಲಿಲ್ಲ.
ಖಡ್ಗದ ಉತ್ಪತ್ತಿ
ಅಥ ವೈ ಭಗವಾನ್ ಬ್ರಹ್ಮಾ ಬ್ರಹ್ಮರ್ಷಿಭಿರುಪಸ್ಥಿತಃ |
ತದಾ ಹಿಮವತಃ ಪೃಷ್ಠೇ ಸುರಮ್ಯೇ ಪದ್ಮತಾರಕೇ ॥31॥
ಶತಯೋಜನವಿಸ್ತಾರೇ ಮಣಿಮುಕ್ತಾಚಯಾಚಿತೇ |
ತಸ್ಮಿನ್ ಗಿರಿವರೇ ಪುತ್ರ ಪುಷ್ಪಿತದ್ರುಮಕಾನನೇ |
ತಸ್ಥೌ ಸ ವಿಬುಧಶ್ರೇಷ್ಠೋ ಬ್ರಹ್ಮಾ ಲೋಕಾರ್ಥಸಿದ್ಧಯೇ ॥32॥
ಈ ಸ್ಥಿತಿಯು ಇದ್ದಾಗ ಒಮ್ಮೆ ಭಗವಾನ್ ಬ್ರಹ್ಮದೇವರು ಬ್ರಹ್ಮರ್ಷಿಗಳೊಂದಿಗೆ ಹಿಮಾಲಯದ ಒಂದು ಎತ್ತರ ಸ್ಥಳಕ್ಕೆ ಬಂದರು. ಆ ಸ್ಥಳ ಅತ್ಯಂತ ರಮಣೀಯವಾಗಿತ್ತು. ಅಲ್ಲಿ ನಕ್ಷತ್ರದಂತೆ ಹೊಳೆಯುತ್ತಿದ್ದ ಪದ್ಮಗಳು ವಿಪುಲವಾಗಿದ್ದವು. ಆ ಸ್ಥಳದ ವಿಸ್ತಾರ ನೂರು ಯೋಜನ. ಮಣಿಗಳ, ಮುತ್ತುಗಳ ರಾಶಿಗಳು ಅಲ್ಲಿ ವ್ಯಾಪಿಸಿದ್ದವು. ಪ್ರಿಯ ನಕುಲ! ಹೂ ಅರಳಿದ ಮರಗಳ ಕಾಡುಗಳಿದ್ದ ಆ ಶ್ರೇಷ್ಠ ಪರ್ವತದಲ್ಲಿ ದೇವಶ್ರೇಷ್ಠನಾದ ಬ್ರಹ್ಮನು ಲೋಕದ ಪ್ರಯೋಜನಕ್ಕಾಗಿ ನೆಲೆನಿಂತನು.
ತತೋ ವರ್ಷಸಹಸ್ರಾಂತೇ ವಿತಾನಮಕರೋತ್ ಕ್ರತುಮ್ |
ವಿಧಿನಾ ಕಲ್ಪದೃಷ್ಟೇನ ಯಥೋಕ್ತೇನೋಪಪಾದಿತಮ್ ॥33॥
ಒಂದು ಸಾವಿರ ವರ್ಷಗಳನಂತರ ಕಲ್ಪ (ಒಂದು ವೇದಾಂಗ) ದಲ್ಲಿ ಹೇಳಿದ ಕ್ರಮದಿಂದ ಬಹಳ ವಿಸ್ತಾರವಾದ ಯಾಗವನ್ನು ಮಾಡಿದನು.
ಋಷಿಭಿರ್ಯಜ್ಞಪಟುಭಿರ್ಯಥಾವತ್ ಕರ್ಮಕರ್ತೃಭಿಃ |
ಮರುದ್ಭಿಃ ಪರಿಸಂಸ್ತೀರ್ಣಂ ದೀಪ್ಯಮಾನೈಶ್ಚ ಪಾವಕೈಃ ॥34॥
ಕಾಂಚನೈರ್ಯಜ್ಞಭಾಂಡೈಶ್ಚ ಭ್ರಾಜಿಷ್ಣುಭಿರಲಂಕೃತಮ್ |
ವೃತಂ ದೇವಗಣೈಶ್ಚೈವ ಪ್ರಬಭೌ ಯಜ್ಞಮಂಡಲಮ್ ॥35॥
ಆ ಯಜ್ಞ ಪ್ರದೇಶದಲ್ಲಿ ಯಜ್ಞಕುಶಲರಾದ ಋಷಿಗಳು, ಅವರ ಮಾರ್ಗದರ್ಶನದಲ್ಲಿ ಯಜ್ಞದ ಕೆಲಸಗಳನ್ನು ಸರಿಯಾಗಿ ಮಾಡುವವರು ನೆರೆದಿದ್ದರು. ಅಗ್ನಿಗಳು ಪ್ರಜ್ವಲಿಸುತ್ತಿದ್ದವು. ಹೊಳೆಯುತ್ತಿದ್ದ ಬಂಗಾರದ ಯಜ್ಞ ಪಾತ್ರೆಗಳು ಆ ಸ್ಥಳವನ್ನು ಅಲಂಕರಿಸಿದ್ದವು. ದೇವಸಮೂಹವು ಅಲ್ಲಿ ಉಪಸ್ಥಿತವಾಗಿತ್ತು. ಇವೆಲ್ಲವುಗಳ ಸಮಾವೇಶದಿಂದ ಆ ಯಜ್ಞ ಸ್ಥಳವು ಪ್ರಕೃಷ್ಟ ಶೋಭೆಯನ್ನು ಹೊಂದಿತ್ತು.
ತಥಾ ಬ್ರಹ್ಮರ್ಷಿಭಿಶ್ಚೈವ ಸದಸ್ಯೈರುಪಶೋಭಿತಮ್ |

ತತ್ರ ಘೋರತಮಂ ವೃತ್ತಮೃಷೀಣಾಂ ಮೇ ಪರಿಶ್ರುತಮ್ ॥36॥
ಹಾಗೆಯೇ ಬ್ರಹ್ಮರ್ಷಿಗಳ, ಸಭಾಜನರ ಉಪಸ್ಥಿತಿಯಿಂದ ಆ ಸ್ಥಳವು ಕಂಗೊಳಿಸುತ್ತಿತ್ತು. ಆಗ ಅಲ್ಲಿ ಮಹಾಘೋರವಾದ ಘಟನೆಯೊಂದು ನಡೆಯಿತು ಎಂದು ಋಷಿಗಳಿಂದ ಕೇಳಿದ್ದೇನೆ.

ಚಂದ್ರಮಾ ವಿಮಲಂ ವ್ಯೋಮ ಯಥಾಭ್ಯುದಿತತಾರಕಮ್ |
ವಿದಾರ್ಯಾಗ್ನಿಂ ತಥಾ ಭೂತಮುತ್ಥಿತಂ ಶ್ರೂಯತೇ ತತಃ ॥37॥
ನಕ್ಷತ್ರಗಳ ಉದಯವಾಗಿರುವ ನಿರ್ಮಲ ಆಕಾಶದಲ್ಲಿ ಚಂದ್ರನು ಉದಯಿಸುವಂತೆ ಹೋಮಾಗ್ನಿಯನ್ನು ಭೇದಿಸಿ ಒಂದು ಪ್ರಾಣಿಯು ಉದಯಿಸಿತು.

ನೀಲೋತ್ಪಲಸವರ್ಣಾಭಂ ತೀಕ್ಷ್ಣದಂಷ್ಟ್ರಂ ಕೃಶೋದರಮ್ |
ಪ್ರಾಂಶು ದುರ್ದರ್ಶನಂ ಚೈವಾಪ್ಯತಿತೇಜಸ್ತಥೈವ ಚ ॥38॥
ನೀಲನೈದಿಲೆಯ ಬಣ್ಣ, ತೀಕ್ಷ್ಣ ಕೋರೆಹಲ್ಲುಗಳು, ತೆಳು ಉದರ, ಎತ್ತರ, ಕಣ್ಣು ಕೋರೈಸುವ ತೇಜಸ್ಸು- ಇವು ಆ ಪ್ರಾಣಿಯಲ್ಲಿದ್ದ ಲಕ್ಷಣಗಳು.

ತಸ್ಮಿನ್ನುತ್ಪತಮಾನೇ ಚ ಪ್ರಚಚಾಲ ವಸುಂಧರಾ |
ತತ್ರೋರ್ಮಿಕಲಿಲಾವರ್ತಶ್ಚುಕ್ಷುಭೇ ಚ ಮಹಾರ್ಣವಃ ॥39॥
ಆ ಪ್ರಾಣಿಯು ಮೇಲೆ ಬಂದಾಗ ಭೂಮಿಯು ನಡುಗಿತು. ಮಹಾಸಮುದ್ರವು, ಅಲ್ಲಿ ದೊಡ್ಡ ದೊಡ್ಡ ಅಲೆಗಳು ಮತ್ತು ಸುಳಿಗಳು ಹುಟ್ಟಿ, ಅಲ್ಲೋಲಕಲ್ಲೋಲವಾಯಿತು.

ಪೇತುರುಲ್ಕಾ ಮಹೋತ್ಪಾತಾಃ ಶಾಖಾಶ್ಚ ಮುಮುಚುರ್ದ್ರುಮಾಃ |
ಅಪ್ರಸನ್ನಾ ದಿಶಃ ಸರ್ವಾಃ ಪವನಶ್ಚಾಶಿವೋ ವವೌ |
ಮುಹುರ್ಮುಹುಶ್ಚ ಭೂತಾನಿ ಪ್ರಾವ್ಯಥಂತ ಭಯಾತ್ ತಥಾ ॥40॥
ಉಲ್ಕೆಗಳು ಬಿದ್ದು ಮಹಾ ಉತ್ಪಾತಗಳ ಸೂಚನೆಯಾಯಿತು. ಮರಗಳಿಂದ ಕೊಂಬೆಗಳು ಮುರಿದುಬಿದ್ದವು. ಎಲ್ಲ ದಿಕ್ಕುಗಳಲ್ಲೂ ಅಶಾಂತ ಸ್ಥಿತಿಯು ಉಂಟಾಗಿತ್ತು. ಗಾಳಿಯು ಹಾನಿಕರವಾಗಿ ಬೀಸಿತು. ಪ್ರಾಣಿಗಳು ಭಯದಿಂದ ಮತ್ತೆ ಮತ್ತೆ ಸಂಕಟಕ್ಕೆ ಒಳಗಾದವು.

ತತಃ ಸುತುಮುಲಂ ದೃಷ್ಟ್ವಾ ತದದ್ಭುತಮುಪಸ್ಥಿತಮ್ |
ಮಹರ್ಷಿಸುರಗಂಧರ್ವಾನುವಾಚೇದಂ ಪಿತಾಮಹಃ ॥41॥
ಅಲ್ಲಿ ಪ್ರಾದುರ್ಭವಿಸಿದ್ದ, ಭಾರಿ ತುಮುಲವನ್ನು ಹುಟ್ಟಿಸಿದ್ದ ಆ ಅದ್ಭುತ ಭೂತವನ್ನು ನೋಡಿ ಬ್ರಹ್ಮದೇವರು ಮಹರ್ಷಿಗಳಿಗೆ ಸುರರಿಗೆ ಮತ್ತು ಗಂಧರ್ವರಿಗೆ ಹೇಳಿದರು.

ಮಯ್ಯೈತಚ್ಚಿಂತಿತಂ ಭೂತಮಸಿರ್ನಾಮ್ನೈಷ ವೀರ್ಯವಾನ್ |
ರಕ್ಷಣಾರ್ಥಾಯ ಲೋಕಸ್ಯ ವಧಾಯ ಚ ಸುರದ್ವಿಷಾಮ್ ॥42॥
ಈ ಭೂತವು ಆವಿರ್ಭವಿಸಬೇಕೆಂದು ನನ್ನ ಚಿಂತನೆಯಿತ್ತು. ವೀರ್ಯಶಾಲಿಯಾದ ಇದಕ್ಕೆ ಅಸಿ ಎಂದು ಹೆಸರು. ಲೋಕದ ರಕ್ಷಣೆಗಾಗಿ, ಸಜ್ಜನರ ದ್ವೇಷಿಗಳ ವಧೆಗಾಗಿ ಇದರ ಅವಿರ್ಭಾವ.

ತತಸ್ತದ್ರೂಪಮುತ್ಸೃಜ್ಯ ಬಭೌ ನಿಸ್ತ್ರಿಂಶ ಏವ ಸಃ |
ವಿಮಲಸ್ತೀಕ್ಷ್ಣಧಾರಶ್ಚ ಕಾಲಾಂತಕ ಇವೋದ್ಯತಃ ॥43॥
ಅನಂತರ ಆ ಭೂತವು ಆ ರೂಪವನ್ನು ವಿಸರ್ಜಿಸಿ ಖಡ್ಗವೇ ಆಗಿ ಶೋಭಿಸಿತು. ತೀಕ್ಷ್ಣವಾದ ಅಲಗನ್ನು ಹೊಂದಿದ್ದ ಅದು ವಿಶುದ್ಧವಾಗಿತ್ತು. ನಾಶಕಾರ್ಯಕ್ಕೆ ಉದ್ಯುಕ್ತನಾದ ಯಮನಂತಿತ್ತು.

ತತಸ್ತಂ ಶಿತಿಕಂಠಾಯ ರುದ್ರಾಯರ್ಷಭಕೇತವೇ |
ಬ್ರಹ್ಮಾ ದದಾವಸಿಂ ದೀಪ್ತಮಧರ್ಮಪ್ರತಿವಾರಣಮ್ ॥44॥
ಅನಂತರ ಬ್ರಹ್ಮದೇವರು ಅಧರ್ಮ ನಾಶಕರವಾದ, ಉಜ್ವಲವಾದ ಆ ಖಡ್ಗವನ್ನು ಋಷಭವಾಹನನಾದ, ನೀಲಕಂಠನಾದ ರುದ್ರದೇವರಿಗೆ ಕೊಟ್ಟರು.

ತತಃ ಸ ಭಗವಾನ್ ರುದ್ರೋ ಬ್ರಹ್ಮರ್ಷಿಗಣಸಂಸ್ತುತಃ |
ಪ್ರಗೃಹ್ಯಾಸಿಮಮೇಯಾತ್ಮಾ ರೂಪಮನ್ಯಚ್ಚಕಾರ ಹ ॥45॥
ಅನಂತರ ಬ್ರಹ್ಮರ್ಸಿಗಳು ರುದ್ರದೇವರನ್ನು ಸ್ತುತಿಸಿದರು. ಯಾರಿಗೂ ಪೂರ್ಣವಾಗಿ ತಿಳಿಯದ ಮಹಿಮೆಯುಳ್ಳ ಭಗವಾನ್ ರುದ್ರದೇವರು ಖಡ್ಗವನ್ನು ಹಿಡಿದುಕೊಂಡು ಬೇರೆ ಆಕೃತಿಯನ್ನು ಪಡೆದರು.

ಚತುರ್ಬಾಹುಃ ಸ್ಪೃಶನ್ ಮೂರ್ಧ್ನಾ ಭೂಸ್ಥಿತೋಽಪಿ ನಭಸ್ತಲಮ್ |
ಊರ್ಧ್ವದೃಷ್ಟಿರ್ಮಹಾಲಿಂಗೋ ಮುಖಾಜ್ಜ್ವಾಲಾಃ ಸಮುತ್ಸಜನ್ |
ವಿಕುರ್ವನ್ ಬಹುಧಾ ವರ್ಣಾನ್ನೀಲಪಾಂಡುರಲೋಹಿತಾನ್ ॥46॥
ಬಿಭ್ರತ್ಕೃಷ್ಣಾಜಿನಂ ವಾಸೋ ಹೇಮಪ್ರವರತಾರಕಮ್ |
ನೇತ್ರಂ ಚೈಕಂ ಲಲಾಟೇನ ಭಾಸ್ಕರಪ್ರತಿಮಂ ಮಹತ್ |
ಶುಶುಭಾತೇ ಚ ವಿಮಲೇ ದ್ವೇ ನೇತ್ರೇ ಕೃಷ್ಣಪಿಂಗಲೇ ॥47॥
ನೆಲದ ಮೇಲೆ ನಿಂತಿರುವ ಆ ಆಕೃತಿಯ ತಲೆಯು ಆಕಾಶವನ್ನು ಮುಟ್ಟಿದೆ. ಊರ್ಧ್ವಮುಖವಾದ ಕಣ್ಣುಗಳು, ದೊಡ್ಡ ಲಿಂಗದ ಆಕೃತಿ. ಅದು ಬಾಯಿಂದ ಜ್ವಾಲೆಗಳನ್ನು ಸೃಷ್ಟಿಸುತ್ತಿದೆ. ನೀಲಿ, ಬಿಳಿ, ಕೆಂಪು ಮೊದಲಾದ ನಾನಾ ವರ್ಣಗಳನ್ನು ಸೃಷ್ಟಿಸುತ್ತಿದೆ. ಕೃಷ್ಣಾಜಿನವು ವಸ್ತ್ರ, ಅದರಲ್ಲಿ ಸುವರ್ಣಮಯ ನಕ್ಷತ್ರಾಕಾರಗಳು, ಹಣೆಯಲ್ಲಿ ಸೂರ್ಯನಷ್ಟು ತೇಜೋಮಯವಾದ ಒಂದು ಕಣ್ಣು. ಕಪ್ಪು-ಪಿಂಗಲ (ಕಂದು) ವರ್ಣಗಳ ಶುಭ್ರವಾದ ಎರಡು ಕಣ್ಣುಗಳು.

ತತೋ ದೇವೋ ಮಹಾದೇವಃ ಶೂಲಪಾಣಿರ್ಭಗಾಕ್ಷಿಹಾ |
ಸಂಪ್ರಗೃಹ್ಯ ತು ನಿಸ್ತ್ರಿಂಶಂ ಕಾಲಾರ್ಕಾನಲಸನ್ನಿಭಮ್ ॥48॥
ತ್ರಿಕೂಟಂ ಚರ್ಮ ಚೋದ್ಯಮ್ಯ ಸವಿದ್ಯುತಮಿವಾಂಬುದಮ್ |
ಚಚಾರ ವಿವಿಧಾನ್ ಮಾರ್ಗಾನ್ ಮಹಾಬಲಪರಾಕ್ರಮಃ |
ವಿಧುನ್ವನ್ನಸಿಮಾಕಾಶೇ ದಾನವಾಂತಚಿಕೀರ್ಷಯಾ ॥49॥
ಅನಂತರ ಭಗಾಕ್ಷನನ್ನು (ದೇವೇಂದ್ರನನ್ನು?) ನಿಗ್ರಹಿಸಿದ ಶೂಲಪಾಣಿಯಾದ ಮಹಾಬಲ ಮತ್ತು ಮಹಾಪರಾಕ್ರಮಶಾಲಿಯಾದ ರುದ್ರದೇವನು ಪ್ರಲಯ ಕಾಲದ ಸೂರ್ಯ ಮತ್ತು ಅಗ್ನಿಯಂತಿದ್ದ ಖಡ್ಗವನ್ನು ಹಿಡಿದು, ಮೂರು ಕೂಟ (ಮುಂದಕ್ಕೆ ಚಾಚಿರುವ ಭಾಗ)ಗಳನ್ನು ಹೊಂದಿರುವ, ಮಿಂಚಿನಿಂದ ಕೂಡಿರುವ ಮೋಡದಂತಿರುವ ಗುರಾಣಿಯನ್ನು ಎತ್ತಿಹಿಡಿದು, ದಾನವರ ಸಂಹಾರವನ್ನು ಮಾಡುವ ಇಚ್ಛೆಯಿಂದ ಆಕಾಶದಲ್ಲಿ ಖಡ್ಗವನ್ನು ಝುಳಪಿಸುತ್ತಾ ವಿವಿಧ ವರಸಗಳಲ್ಲಿ ಮತ್ತು ಭಂಗಿಗಳಲ್ಲಿ ಸುತ್ತು ಹಾಕಿದನು.
ತಸ್ಯ ಹಾಸಾದ್ ವಿನಾದ್ಯೋಭೌ ಪ್ರಚಚಾರ ಚಮೂಂ ಚ ಹಾ |
ಬಭೌ ಪ್ರತಿಭಯಂ ರೂಪಂ ತದಾ ರುದ್ರಸ್ಯ ಭಾರತ ॥50॥
ಅಟ್ಟಹಾಸದಿಂದ ಅಂತರಿಕ್ಷ-ಭೂಮಿಗಳಲ್ಲಿ ಪ್ರತಿನಾದವನ್ನೆಬ್ಬಿಸಿ, ಮಹಾಹಾಸವನ್ನು ಮಾಡುತ್ತಿದ್ದ ಆ ರುದ್ರದೇವರ ರೂಪವು ಬಹಳ ಭಯಂಕರವಾಗಿ ಕಾಣಿಸಿತು.
ತದ್ರೂಪಧಾರಿಣಂ ರುದ್ರಂ ರೌದ್ರಕರ್ಮ ಚಿಕೀರ್ಷವಃ |
ನಿಶಮ್ಯ ದಾನವಾಃ ಸರ್ವೇ ಹೃಷ್ಟಾಃ ಸಮಭಿದುದ್ರುವುಃ ॥51॥
ಎಲ್ಲ ದಾನವರೂ ಆ ಭಯಂಕರ ರೂಪದ ರುದ್ರದೇವರನ್ನು ನೋಡಿ ತಾವೂ ಉಗ್ರ ಕರ್ಮವನ್ನೇ ಮಾಡಲು ಬಯಸಿ ಹರ್ಷ-ಉತ್ಸಾಹಭರಿತರಾಗಿ ರುದ್ರದೇವರ ಮೇಲೆ ಎರಗಿದರು.
ಅಶ್ಮಭಿಶ್ಚಾಪ್ಯವರ್ಷಂತ ಪ್ರದೀಪ್ತೈಶ್ಚ ತಥೋಲ್ಮುಕೈಃ |
ಘೋರೈಃ ಪ್ರಹರಣೈಶ್ಚಾನ್ಯೈಃ ಶಿತಧಾರೈರಯೋಮುಖೈಃ ॥52॥
ಕಲ್ಲುಗಳ ಮಳೆಯನ್ನು ಸುರಿಸಿದರು. ಉಜ್ವಲ ಕೊಳ್ಳಿಗಳ ಮಳೆಯನ್ನು ಸುರಿಸಿದರು. ಹರಿತ ಅಲಗುಗಳಿರುವ ಕಬ್ಬಿಣದ ತುದಿಗಳಿರುವ ಅನೇಕ ಘೋರ ಆಯುಧಗಳಿಂದ ಆಕ್ರಮಿಸಿದರು.
ತತಸ್ತದ್ದಾನವಾನೀಕಂ ಸಂಪ್ರಣೇತಾರಮಚ್ಯುತಮ್ |
ರುದ್ರಖಡ್ಗಬಲೋದ್ಧೂತಂ ಪ್ರಚಚಾಲ ಮುಮೋಹ ಚ ॥53॥
ದೇವತೆಗಳ ನಾಯಕರಾದ, ಯಾವುದೇ ಚ್ಯುತಿಗೆ ಒಳಗಾಗದ ರುದ್ರದೇವರನ್ನು (ನೋಡಿ), ಅವರ ಖಡ್ಗದ ಬಲದಿಂದ ಪುಡಿಯಾದ ಆ ದಾನವ ಸೈನ್ಯವು ಕಂಪಿಸಿತು. ಮೋಹಕ್ಕೆ ಒಳಗಾಯಿತು.
ಚಿತ್ರಂ ಶೀಘ್ರತರತ್ವಾಚ್ಚ ಚರಂತಮಸಿಧಾರಿಣಮ್ |
ತಮೇಕಮಸುರಾಃ ಸರ್ವೇ ಸಹಸ್ರಮಿತಿ ಮೇನಿರೇ ॥54॥
ಖಡ್ಗಧಾರಿಯಾದ, ವಿಚಿತ್ರವಾಗಿ ಚಲಿಸುತ್ತಿರುವ ಒಬ್ಬರೇ ರುದ್ರದೇವರನ್ನು ಅವರ ಅತಿವೇಗದಿಂದಾಗಿ ಅಸುರರೆಲ್ಲರೂ ಸಾವಿರ ರುದ್ರರು ಎಂದು ತಿಳಿದರು.
ಛಿಂದನ್ ಭಿಂದನ್ ರುಜನ್ ಕೃಂತನ್ ದಾರಯನ್ ಪ್ರಮಥನ್ನಪಿ |
ಅಚರದ್ ದೈತ್ಯಸೇಂಘು ರುದ್ರೋಽಗ್ನಿರಿವ ಕಕ್ಷಗಃ ॥55॥
ರುದ್ರದೇವರು ಕಾಡ್ಗಿಚ್ಚಿನಂತೆ ಛೇದಿಸುತ್ತಾ, ಒಡೆಯುತ್ತಾ, ಗಾಯಗೊಳಿಸುತ್ತಾ, ಕತ್ತರಿಸುತ್ತಾ, ಸೀಳುತ್ತಾ, ಮಥಿಸುತ್ತಾ ದೈತ್ಯ ಸಮೂಹದಲ್ಲಿ ಸಂಚರಿಸಿದರು.
ಅಸಿವೇಗಪ್ರರುಗ್ಣಾಸ್ತೇ ಛಿನ್ನಬಾಹೂರುವಕ್ಷಸಃ |
ಸಂಪ್ರಕೃತ್ತೋತ್ತಮಾಂಗಾಶ್ಚ ಪೇತುರುರ್ವ್ಯಾಂ ಮಹಾಸುರಾಃ ॥56॥
ಖಡ್ಗದ ವೇಗದಿಂದ ಘಾಸಿಗೊಳಗಾದ ಆ ಮಹಾಸುರರ ಬಾಹು, ತೊಡೆ, ಎದೆಗಳು ಕತ್ತರಿಸಲ್ಪಟ್ಟವು. ತಲೆಗಳೂ ಕತ್ತರಿಸಲ್ಪಟ್ಟವು. ಈ ಸ್ಥಿತಿಯಲ್ಲಿ ಎಲ್ಲರೂ ನೆಲಕ್ಕೆ ಉರುಳಿದರು.
ಅಪರೇ ದಾನವಾ ಭಗ್ನಾ ರುದ್ರಘಾತಾವಪೀಡಿತಾಃ |
ಅನ್ಯೋನ್ಯಮಭಿನರ್ದಂತೋ ದಿಶಃ ಸಂಪ್ರತಿಪೇದಿರೇ ॥57॥
ಇನ್ನಷ್ಟು ದಾನವರು ರುದ್ರದೇವರ ಹೊಡೆತದಿಂದ ಪೀಡಿತರಾಗಿ ಒಬ್ಬರ ಕಡೆಗೆ ಇನ್ನೊಬ್ಬರು ಗರ್ಜಿಸುತ್ತಾ ದಿಕ್ಕು ದಿಕ್ಕುಗಳಿಗೆ ಪಲಾಯನಗೈದರು.
ಭೂಮಿಂ ಕೇಚಿತ್ ಪ್ರವಿವಿಶುಃ ಪರ್ವತಾನಪರೇ ತಥಾ |
ಅಪರೇ ಜಗ್ಮುರಾಕಾಶಮಪರೇಽಂಭಃ ಸಮಾವಿಶನ್ ॥58॥
ಕೆಲವರು ಭೂಮಿಯ ಒಳಗೆ ಪ್ರವೇಶಿಸಿದರು. ಕೆಲವರು ಪರ್ವತಗಳಿಗೆ ಏರಿ ಹೋದರು. ಮತ್ತೆ ಕೆಲವರು ಆಕಾಶಕ್ಕೆ ಹಾರಿ ಹೋದರು. ಕೆಲವರು ಜಲಪ್ರವೇಶ ಮಾಡಿದರು.
ತಸ್ಮಿನ್ ಮಹತಿ ಸಂವೃತ್ತೇ ಸಮರೇ ಭೃಶದಾರುಣೇ |
ಬಭೌ ಭೂಮಿಃ ಪ್ರತಿಭಯಾ ತದಾ ರುಧಿರಕರ್ದಮಾ ॥59॥
ಅತ್ಯಂತ ದಾರುಣವಾದ ಆ ದೊಡ್ಡ ಯುದ್ಧವು ನಡೆದಾಗ ಭೂಮಿಯು ರಕ್ತದ ಕೆಸರು ಆಗಿ ಭಯಂಕರವಾಗಿ ಕಾಣಿಸಿತು.
ದಾನವಾನಾಂ ಶರೀರೈಶ್ಚ ಮಹದ್ಭಿಃ ಶೋಣಿತೋಕ್ಷಿತೈಃ |
ಸಮಾಕೀರ್ಣಾ ಮಹಾಬಾಹೋ ಶೈಲೈರಿವ ಸಕಿಂಶುಕೈಃ ॥60॥

ಮಹಾಬಾಹುವೇ! ರಕ್ತವನ್ನು ಎರಚಿಕೊಂಡಿದ್ದ ದೊಡ್ಡ ದೊಡ್ಡ ಶರೀರಗಳಿಂದ ಭೂಮಿಯು ತುಂಬಿಹೋಗಿತ್ತು. ಭೂಮಿಯು ಕಿಂಶುಕಪುಷ್ಪಗಳಿರುವ ಬೆಟ್ಟಗಳಿಂದ ತುಂಬಿದಂತೆ ಇತ್ತು.
ರುಧಿರೇಣ ಪರಿಕ್ಲಿನ್ನಾ ಪ್ರಬಭೌ ವಸುಧಾ ತದಾ |
ರಕ್ತಾರ್ದ್ರವಸನಾ ಶ್ಯಾಮಾ ನಾರೀವ ಮದವಿಹ್ವಲಾ ||61||
ಆಗ ರಕ್ತದಿಂದ ತೊಯ್ದ ಭೂಮಿಯು ಕೆಂಪು ಒದ್ದೆ ಸೀರೆಯನ್ನುಟ್ಟ, ಮದವೇರಿದ, ಆತಂಕಗೊಂಡ ಕಪ್ಪು ಮಹಿಳೆಯಂತೆ ಕಾಣಿಸಿತು.
ಸ ರುದ್ರೋ ದಾನವಾನ್ ಹತ್ವಾ ಕೃತ್ವಾ ಧರ್ಮೋತ್ತರಂ ಜಗತ್ |
ರೌದ್ರಂ ರೂಪಂ ವಿಹಾಯಾಶು ಚಕ್ರೇ ರೂಪಂ ಶಿವಂ ಶಿವಃ ||62||
ಆ ಮಂಗಳಕರ ರುದ್ರದೇವರು ದಾನವರನ್ನು ಕೊಂದು, ಜಗತ್ತನ್ನು ಧರ್ಮಮಯವನ್ನಾಗಿ (ಧರ್ಮನಿಷ್ಠೆಯಿಂದ ಉತ್ಕೃಷ್ಟವಾಗಿರುವಂತೆ) ಮಾಡಿ, ಉಗ್ರರೂಪವನ್ನು ಬಿಟ್ಟು ಸೌಮ್ಯರೂಪವನ್ನು ಪಡೆದರು.
ತತೋ ಮಹರ್ಷಯಃ ಸರ್ವೇ ಸರ್ವೇ ದೇವಗಣಾಸ್ತಥಾ |
ಜಯೇನಾದ್ಭುತಕಲ್ಪೇನ ದೇವದೇವಮಥಾರ್ಚಯನ್ ||63||
ಅನಂತರ ಎಲ್ಲ ಮಹರ್ಷಿಗಳು ಮತ್ತು ಸಕಲ ದೇವವೃಂದವು ದೇವದೇವನಾದ ಶಿವನನ್ನು ಅದ್ಭುತ ದರ್ಜೆಯ ವಿಜಯವನ್ನು ಸಾಧಿಸಿದ ಕಾರಣದಿಂದ ಸತ್ಕರಿಸಿದರು.
ತತಃ ಸ ಭಗವಾನ್ ರುದ್ರೋ ದಾನವಕ್ಷತಜೋಕ್ಷಿತಮ್ |
ಅಸಿಂ ಧರ್ಮಸ್ಯ ಗೋಪ್ತಾರಂ ದದೌ ಸತ್ಕೃತ್ಯ ವಿಷ್ಣವೇ ||64||
ಅನಂತರ ಭಗವಾನ್ ರುದ್ರದೇವರು ದಾನವರ ರಕ್ತದಿಂದ ತೊಯ್ದಿದ್ದ, ಧರ್ಮ ರಕ್ಷಣೆಯ ಸಾಧನವಾದ ಆ ಖಡ್ಗವನ್ನು ಶುದ್ಧಿ ಮಾಡಿ, ಸತ್ಕಾರ ಪೂರ್ವಕವಾಗಿ ವಿಷ್ಣುವಿಗೆ ಸಮರ್ಪಿಸಿದರು.
ವಿಷ್ಣುರ್ಮರೀಚಯೇ ಪ್ರಾದಾನ್ಮರೀಚಿರ್ಭಗವಾಂಶ್ಚ ತಮ್ |
ಮಹರ್ಷಿಭ್ಯೋ ದದೌ ಖಡ್ಗಮೃಷಯೋ ವಾಸವಾಯ ತು ||65||
ವಿಷ್ಣುವು ಮರೀಚಿ ಮಹರ್ಷಿಗೆ ಕೊಟ್ಟನು. ಭಗವಾನ್ ಮರೀಚಿಗಳು ಖಡ್ಗವನ್ನು ಮಹರ್ಷಿಗಳಿಗೆ ಕೊಟ್ಟರು. ಅವರು ದೇವೇಂದ್ರನಿಗೆ ಕೊಟ್ಟನು.
ಮಹೇಂದ್ರೋ ಲೋಕಪಾಲೇಭ್ಯೋ ಲೋಕಪಾಲಾಸ್ತು ಪುತ್ರಕ |
ಮನವೇ ಸೂರ್ಯಪುತ್ರಾಯ ದದುಃ ಖಡ್ಗಂ ಸುವಿಸ್ತರಮ್ ||66||
ಮಹೇಂದ್ರನು ಲೋಕಪಾಲಕರಿಗೆ ಕೊಟ್ಟನು. ಲೋಕಪಾಲಕರು ಸೂರ್ಯಪುತ್ರ ಮನುವಿಗೆ ಕೊಟ್ಟರು.
ಊಚುಶ್ಚೈನಂ ತಥೈವಾದ್ಯಂ ಮಾನುಷಾಣಾಂ ತ್ವಮೀಶ್ವರಃ |
ಅಸಿನಾ ಧರ್ಮಗರ್ಭೇಣ ಪಾಲಯಸ್ವ ಪ್ರಜಾ ಇತಿ ||67||
ಅವರು ಮನುವಿಗೆ ಹೇಳಿದರು. `ನೀನು ಸಕಲ ಮಾನವರ ಈಶ್ವರ. ತನ್ನೊಳಗೆ ಧರ್ಮವನ್ನು ಅಡಗಿಸಿಕೊಂಡಿರುವ ಈ ಖಡ್ಗದಿಂದ ಪ್ರಜೆಗಳನ್ನು ಪಾಲಿಸು.
ಧರ್ಮಸೇತುಮತಿಕ್ರಾಂತಾಃ ಸೂಕ್ಷ್ಮಸ್ಥೂಲಾರ್ಥಕಾರಣಾತ್ |
ವಿಭಜ್ಯ ದಂಡಂ ರಕ್ಷ್ಯಾಃ ಸ್ಯುರ್ಧರ್ಮತೋ ನ ಯದೃಚ್ಛಯಾ ||68||
ಯಾವ ಪ್ರಜೆಗಳು ಸೂಕ್ಷ್ಮ ಮನಸ್ಸಿನ, ಸ್ಥೂಲ ಶರೀರದ ಸುಖಕ್ಕಾಗಿ ಧರ್ಮ ವ್ಯವಸ್ಥೆಯನ್ನು ಮೀರುವರೋ ಅವರನ್ನು ಅಪರಾಧಕ್ಕೆ ತಕ್ಕ ಪ್ರಮಾಣದ ಶಿಕ್ಷೆಯನ್ನು ವಿಧಿಸಿ ರಕ್ಷಿಸಬೇಕು. ಧರ್ಮದ ಮಾನದಂಡದಿಂದಲೇ ಎಲ್ಲರನ್ನೂ ಪಾಲಿಸಬೇಕು. ಸ್ವಚ್ಛಂದವಾಗಿ ಅಲ್ಲ.

ದುರ್ವಾಚಾ ನಿಗ್ರಹೋ ದಂಡೋ ಹಿರಣ್ಯಬಹುಲಸ್ತಥಾ |
ವ್ಯಂಗನಂ ಚ ಶರೀರಸ್ಯ ವಧೋ ವಾನಲ್ಪಕಾರಣಾತ್ ||69||
ಕಠೋರ ಮಾತುಗಳಿಂದ ನಿಗ್ರಹ ಒಂದು ವಿಧವಾದ ದಂಡ. ಅಪರಾಧಿಯಿಂದ ಬಂಗಾರವನ್ನು ಪಡೆಯುವುದು ಇನ್ನೊಂದು ವಿಧವಾದ ದಂಡ. ಅಂಗವೈಕಲ್ಯವನ್ನು ಉಂಟು ಮಾಡುವುದು ಮತ್ತೊಂದು ವಿಧ. ಉಗ್ರ ಅಪರಾಧವನ್ನು ಮಾಡಿದ್ದರೆ ಮರಣದಂಡನೆ.
ಅಸೇರೇತಾನಿ ರೂಪಾಣಿ ದುರ್ವಾಚಾದೀನಿ ನಿರ್ದಿಶೇತ್ |
ಅಸೇರೇವ ಪ್ರಮಾಣಾನಿ ಪರಿಮಾಣವ್ಯತಿಕ್ರಮಾತ್ ||70||
ಕಠೋರ ಮಾತು ಮೊದಲಾದವುಗಳು ಧರ್ಮಖಡ್ಗದ ಬೇರೆ ಬೇರೆ ರೂಪಗಳೆಂದು ಪ್ರಜೆಗಳಿಗೆ ತಿಳಿಸಬೇಕು.
ಅಧಿಸೃಜ್ಯಾಥ ಪುತ್ರಂ ಸ್ವಂ ಪ್ರಜಾನಾಮಧಿಪಂ ತತಃ |
ಮನುಃ ಪ್ರಜಾನಾಂ ರಕ್ಷಾರ್ಥಂ ಕ್ಷುಪಾಯ ಪ್ರದದಾವಸಿಮ್ ||71||
ಅನಂತರ ಮನುವು ತನ್ನ ಪುತ್ರ ಕ್ಷುಪನನ್ನು ಪ್ರಜಾಧಿಪ ಪದವಿಯಲ್ಲಿ ಅಭಿಷೇಕ ಮಾಡಿ ಪ್ರಜಾಪಾಲನೆಗಾಗಿ ಅವನಿಗೆ ಈ ಖಡ್ಗವನ್ನು ಕೊಟ್ಟನು.
ಕ್ಷುಪಾಜ್ಜಗ್ರಾಹ ಚೇಕ್ಷ್ವಾಕುರಿಕ್ಷ್ವಾಕೋಶ್ಚ ಪುರೂರವಾಃ |
ಆಯುಶ್ಚ ತಸ್ಮಾಲ್ಲೇಭೇ ತಂ ನಹುಷಶ್ಚ ತತೋ ಭುವಿ ||72||
ಅನಂತರ ಕ್ಷುಪನಿಂದ ಇಕ್ಷ್ವಾಕುವು ಈ ಖಡ್ಗವನ್ನು ಪಡೆದನು. ಇಕ್ಷ್ವಾಕುವಿನಿಂದ ಪುರೂರವಸ್, ಅವನಿಂದ ಆಯು, ಅವನಿಂದ ನಹುಷ ಈ ಖಡ್ಗವನ್ನು ಪಡೆದರು.
ಯಯಾತಿರ್ನಹುಷಾಚ್ಚಾಪಿ ಪೂರುಸ್ತಸ್ಮಾಚ್ಚ ಲಬ್ಧವಾನ್ |

ಆಮೂರ್ತರಯಸಸ್ತಸ್ಮಾತ್ತತೋ ಭೂಮಿಶಯೋ ನೃಪಃ ||73||
ನಹುಷನಿಂದ ಯಯಾತಿ, ಅವನಿಂದ ಪೂರು- ಈ ಖಡ್ಗವನ್ನು ಪಡೆದರು. ಅವನಿಂದ ರಾಜ ಅಮೂರ್ತರಸ ಮತ್ತು ಅವನಿಂದ ರಾಜ ಭೂಮಿಶಯನು ಪಡೆದರು.
ಭರತಶ್ಚಾಪಿ ದೌಃಷಂತಿರ್ಲೇಭೇ ಭೂಮಿಶಯಾದಸಿಮ್ |
ತಸ್ಮಾಚ್ಚ ಲೇಭೇ ಧರ್ಮಜ್ಞೋ ರಾಜನ್ನೈಡಬಿಡಸ್ತಥಾ ||74||
ಭೂಮಿಶಯನಿಂದ ದುಷ್ಯಂತನ ಮಗನಾದ ಭರತನು ಈ ಖಡ್ಗವನ್ನು ಪಡೆದನು. ಭರತನಿಂದ ಧರ್ಮಜ್ಞನಾದ ಐಡಬಿಡನು ಇದನ್ನು ಪಡೆದನು.
ತತಶ್ಚೈಡಬಿಡಾಲ್ಲೇಭೇ ಧುಂಧುಮಾರೋ ಜನೇಶ್ವರಃ |
ಧುಂಧುಮಾರಾಚ್ಚ ಕಾಂಬೋಜೋ ಮುಚುಕುಂದಸ್ತತೋಲಭತ್ ||75||
ಆ ಐಡಬಿಡನಿಂದ ಜನಾಧಿಪತಿ ಧುಂಧುಮಾರನು ಪಡೆದನು. ಧುಂಧುಮಾರನಿಂದ ಕಾಂಬೋಜನು ಪಡೆದನು. ಕಾಂಬೋಜನಿಂದ ಮುಚುಕುಂದನು ಪಡೆದನು.
ಮುಚುಕುಂದಾನ್ಮರುತ್ತಶ್ಚ ಮರುತ್ತಾದಪಿ ರೈವತಃ |
ರೈವತಾದ್ ಯುವನಾಶ್ವಶ್ಚ ಯುವನಾಶ್ವಾತ್ ತತೋ ರಘುಃ ||76||
ಮುಚುಕುಂದನಿಂದ ಮರುತ್ತ, ಮರುತ್ತನಿಂದ ರೈವತ, ರೈವತನಿಂದ ಯುವನಾಶ್ವ, ಯುವನಾಶ್ವನಿಂದ ರಘು ಖಡ್ಗವನ್ನು ಪಡೆದರು.
ಇಕ್ಷ್ವಾಕುವಂಶಜಸ್ತಸ್ಮಾದ್ಧರಿಣಾಶ್ವಃ ಪ್ರತಾಪವಾನ್ |
ಹರಿಣಾಶ್ವಾದಸಿಂ ಲೇಭೇ ಶುನಕಃ ಶುನಕಾದಪಿ ||77||
ಅವನಿಂದ ಇಕ್ಷ್ವಾಕುವಂಶಜನಾದ ಪ್ರತಾಪಶಾಲಿ ಹರಿಣಾಶ್ವನು ಖಡ್ಗವನ್ನು ಪಡೆದನು. ಹರಿಣಾಶ್ವನಿಂದ ಶುನಕನು ಪಡೆದನು.
ಉಶೀನರೋ ವೈ ಧರ್ಮಾತ್ಮಾ ತಸ್ಮಾದ್ ಭೋಜಾಃ ಸಯಾದವಾಃ |
ಯದುಭ್ಯಶ್ಚ ಶಿಬಿರ್ಲೇಭೇ ಶಿಬೇಶ್ಚಾಪಿ ಪ್ರತರ್ದನಃ ||78||
ಶುನಕನಿಂದ ಧರ್ಮಾತ್ಮಾ ಉಶೀನರನು, ಅವನಿಂದ ಭೋಜ ಮತ್ತು ಯಾದವರು, ಯದುವಿನಿಂದ ಶಿಬಿ ಮತ್ತು ಶಿಬಿಯಿಂದ ಪ್ರತರ್ದನನು ಖಡ್ಗವನ್ನು ಪಡೆದರು.
ಪ್ರತರ್ದನಾದಷ್ಟಕಶ್ಚ ರುಶದಶ್ವೋಷ್ಟಕಾದಪಿ |
ರುಶದಶ್ವಾದ್ ಭರದ್ವಾಜೋ ದ್ರೋಣಸ್ತಸ್ಮಾತ್ ಕೃಪಸ್ತತಃ |
ತತಸ್ತ್ವಂ ಭ್ರಾತೃಭಿಃ ಸಾರ್ಧಂ ಪರಮಾಸಿಮವಾಪ್ತವಾನ್ ||79||
ಪ್ರತರ್ದನನಿಂದ ಅಷ್ಟಕ, ಅಷ್ಟಕನಿಂದ ರುಶದಶ್ವ, ರುಶದಶ್ವನಿಂದ ಭರದ್ವಾಜ ಗೋತ್ರದ ದ್ರೋಣರು, ಅವರಿಂದ ಕೃಪಾಚಾರ್ಯರು ಪಡೆದರು. ಅವರಿಂದ ನೀನು ಮತ್ತು ನಿನ್ನ ಸೋದರರು ಈ ಶ್ರೇಷ್ಠ ಖಡ್ಗವನ್ನು ಪಡೆದಿರುವಿರಿ.
ಕೃತ್ತಿಕಾಶ್ಚಾಸ್ಯ ನಕ್ಷತ್ರಮಸೇರಗ್ನಿಶ್ಚ ದೈವತಮ್ |
ರೌಹಿಣ್ಯಾಮುದ್ಭ್ರಮೋಽಸ್ಯಾಥ ರುದ್ರಶ್ಚ ಗುರುರುತ್ತಮಃ ||80||
ಈ ಖಡ್ಗದ ಜನ್ಮನಕ್ಷತ್ರ ಕೃತ್ತಿಕಾ. ಅಗ್ನಿಯು ದೇವತೆ. ಈ ಖಡ್ಗದ ಉದ್‌ಭ್ರಮಣವು ರೋಹಿಣೀ ನಕ್ಷತ್ರದಲ್ಲಿ ಹುಟ್ಟಿತು. ಶ್ರೇಷ್ಠರಾದ ರುದ್ರದೇವರು ಇದರ ಗುರು.
ಅಸೇರಷ್ಟೌ ಚ ನಾಮಾನಿ ರಹಸ್ಯಾನಿ ನಿಬೋಧ ಮೇ |
ಪಾಂಡವೇಯ ಸದಾ ಯಾನಿ ಕೀರ್ತಯನ್ ಲಭತೇ ಜಯಮ್ ||81||
ಪಾಂಡುಪುತ್ರ! ಈ ಖಡ್ಗಕ್ಕೆ ಎಂಟು ರಹಸ್ಯನಾಮಗಳಿವೆ. ನಾನು ನಿನಗೆ ಇವುಗಳನ್ನು ತಿಳಿಸುತ್ತೇನೆ. ಈ ನಾಮಗಳನ್ನು ಸದಾ ಪಠಿಸುವವನು ಜಯಶಾಲಿಯಾಗುತ್ತಾನೆ.
ಅಸಿರ್ವಿಶಸನಃ ಖಡ್ಗಸ್ತೀಕ್ಷ್ಣವರ್ತ್ಮಾ ದುರಾಸದಃ |
ಶ್ರೀಗರ್ಭೋ ವಿಜಯಶ್ಚೈವ ಧರ್ಮಪಾಲಸ್ತಥೈವ ಚ ||82||
ಅಸಿ, ವಿಶಸನ, ಖಡ್ಗ, ತೀಕ್ಷ್ಣವರ್ತ್ಮಾ, ದುರಾಸದ, ಶ್ರೀಗರ್ಭ, ವಿಜಯ, ಧರ್ಮಪಾಲ- ಇವು ಎಂಟು ನಾಮಗಳು.
ಅಗ್ರ್ಯಃ ಪ್ರಹರಣಾನಾಂ ಚ ಖಡ್ಗೋ ಮಾದ್ರವತೀಸುತ |
ಮಹೇಶ್ವರಪ್ರಣೀತಶ್ಚ ಪುರಾಣೇ ನಿಶ್ಚಯಂ ಗತಃ ||83||
ಮಾದ್ರೀಸುತ! ಈ ಖಡ್ಗವು ಆಯುಧಗಳಲ್ಲಿ ಶ್ರೇಷ್ಠ ಆಯುಧ. ರುದ್ರದೇವರು ಇದನ್ನು ಬಳಕೆಗೆ ತಂದವರು. ಪುರಾಣಗಳಲ್ಲಿ ಇದರ ಶ್ರೇಷ್ಠತೆಯು ನಿಶ್ಚಯವಾಗುವಂತಹ ವಿವರಣೆಗಳಿವೆ.
ಪೃಥುಸ್ತೂತ್ಪಾದಯಾಮಾಸ ಧನುರಾದ್ಯಮರಿಂದಮ |
ತೇನೇಯಂ ಪೃಥಿವೀ ಪೂರ್ವಂ ವೈನ್ಯೇನ ಪರಿರಕ್ಷಿತಾ ||84||
ಅರಿಂದಮನಾದ ಪೃಥುಚಕ್ರವರ್ತಿಯು ಮೊದಲನೆಯ ಧನುಸ್ ಅನ್ನು ಉತ್ಪಾದಿಸಿದನು. ಆ ಧನುಸ್ಸಿನಿಂದ ಪೃಥುಚಕ್ರವರ್ತಿಯು ಈ ಭೂಮಿಯನ್ನು ರಕ್ಷಿಸಿದನು (ಸುವ್ಯವಸ್ಥಿತಗೊಳಿಸಿದನು).
ತದೇತದಾರ್ಷಂ ಮಾದ್ರೇಯ ಪ್ರಮಾಣಂ ಕರ್ತುಮರ್ಹಸಿ |
ಅಸೇಶ್ಚ ಪೂಜಾ ಕರ್ತವ್ಯಾ ಸದಾ ಯುದ್ಧವಿಶಾರದೈಃ ||85||
ಮಾದ್ರೀಸುತ! ಖಡ್ಗದ ಬಗ್ಗೆ ಈ ವಿವರಣೆಯು ಋಷಿ ಪರಂಪರೆಯಿಂದ ಬಂದಿದೆ. ಆದ್ದರಿಂದ ಇದನ್ನು ನೀನು ಪ್ರಮಾಣವೆಂದು ಸ್ವೀಕರಿಸು. ಯುದ್ಧವಿಶಾರದರು ಯಾವಾಗಲೂ ಖಡ್ಗದ ಪೂಜೆಯನ್ನು ಮಾಡಬೇಕು.
ಇತ್ಯೇಷ ಪ್ರಥಮಃ ಕಲ್ಪೋ ವ್ಯಾಖ್ಯಾತಸ್ತೇ ಸುವಿಸ್ತರಃ |

ಅಸೇರುತ್ಪತ್ತಿಸಂಸರ್ಗೋ ಯಥಾವದ್ ಭರತರ್ಷಭ ॥86॥
ಭರತಕುಲಶ್ರೇಷ್ಠ! ಖಡ್ಗದ ಉತ್ಪತ್ತಿ ಮತ್ತು ಅದರ ಪ್ರಾಪ್ತಿ ಪ್ರಕಾರವನ್ನು ನಾನು ನಿನಗೆ ಯಥಾರ್ಥವಾಗಿ ಹೇಳಿದ್ದೇನೆ. ಇದೇ ಸರಿಯಾದ ವಿವರಣೆ. ಮೊದಲನೆಯ ವಿವರಣೆ.
ಸರ್ವೋದಂತಮಿಹ ಶ್ರುತ್ವಾ ಖಡ್ಗಸಾಧನಮುತ್ತಮಮ್ |
ಲಭತೇ ಪುರುಷಃ ಕೀರ್ತಿಂ ಪ್ರೇತ್ಯ ಚಾನಂತ್ಯಮಶ್ನುತೇ ॥87॥
ಖಡ್ಗದ ಬಗ್ಗೆ ಉತ್ತಮವಾದ ಸರ್ವವೃತ್ತಾಂತವನ್ನು ಕೇಳಿದ ಪುರುಷನು ಕೀರ್ತಿಯನ್ನು ಹೊಂದುತ್ತಾನೆ. ಮರಣಾನಂತರ ಅಕ್ಷಯ ಫಲಗಳನ್ನು ಪಡೆಯುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ದ್ವಾತ್ರಿಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿಯಿತು.
* * * *
ಮೂವತ್ಮೂರನೆಯ ಅಧ್ಯಾಯ
ಧರ್ಮ-ಅರ್ಥ-ಕಾಮ-ಮೋಕ್ಷಗಳ ಬಗ್ಗೆ ಅಭಿಪ್ರಾಯ ಕಥನ.
ವೈಶಂಪಾಯನಃ
ಇತ್ಯುಕ್ತವತಿ ಭೀಷ್ಮೇ ತು ತೂಷ್ಣೀಂಭೂತೇ ಯುಧಿಷ್ಠಿರಃ |
ಪಪ್ರಚ್ಛಾವಸಥಂ ಗತ್ವಾ ಭ್ರಾತೄನ್ ವಿದುರಪಂಚಮಾನ್ ॥1॥
ಇಷ್ಟು ಹೇಳಿದ ಭೀಷ್ಮರು ಮೌನವಹಿಸಿದರು. ಆಗ ಯುಧಿಷ್ಠಿರನು ಮನೆಗೆ ಹೋಗಿ ತನ್ನ ಸೋದರರನ್ನು ಮತ್ತು ವಿದುರನನ್ನು ಕೇಳಿದರು.
ಧರ್ಮೇ ಚಾರ್ಥೇ ಚ ಕಾಮೇ ಚ ಲೋಕವೃತ್ತಿಃ ಸಮಾಹಿತಾ |
ತೇಷಾಂ ಗರೀಯಾನ್ ಕತಮೋ ಮಧ್ಯಮಃ ಕೋ ಲಘುಶ್ಚ ಕಃ ॥2॥
ಧರ್ಮ, ಅರ್ಥ, ಕಾಮಗಳಲ್ಲಿ ಜನರ ಪ್ರವೃತ್ತಿಯು ಇದೆ. ಈ ಮೂರರಲ್ಲಿ ಶ್ರೇಷ್ಠ ಯಾವುದು? ಮಧ್ಯಮ ಯಾವುದು? ಕನಿಷ್ಠ ಯಾವುದು?
ಕಸ್ಮಿಂಶ್ಚಾತ್ಮಾ ನಿಯಂತವ್ಯಸ್ತ್ರಿವರ್ಗವಿಜಯಾಯ ವೈ |
ಸಂತುಷ್ಟಾ ನೈಷ್ಠಿಕಂ ವಾಕ್ಯಂ ಯಥಾವದ್ ವಕ್ತುಮರ್ಹಥ ॥3॥
ತ್ರಿವರ್ಗ= ಕಾಮ-ಕ್ರೋಧ-ಲೋಭವನ್ನು ಜಯಿಸಲು ಯಾವ ವಿಷಯದಲ್ಲಿ ಮನಸ್ಸನ್ನು ದೃಢವಾಗಿ ನಿಲ್ಲಿಸಬೇಕು? ಸಂತುಷ್ಟರಾದ ನೀವು ನಿರ್ಣಾಯಕ ವಾಕ್ಯವನ್ನು ದಯವಿಟ್ಟು ಹೇಳಿ.
ತತೋಽರ್ಥಗತಿತತ್ತ್ವಜ್ಞಃ ಪ್ರಥಮಂ ಪ್ರತಿಭಾನವಾನ್ |
ಜಗಾದ ವಿದುರೋ ವಾಕ್ಯಂ ಧರ್ಮಶಾಸ್ತ್ರಮನುಸ್ಮರನ್ ॥4॥
ಅನಂತರ ಮೊದಲು ಅರ್ಥಪ್ರಾಪ್ತಿಯ ತತ್ತ್ವವನ್ನು ತಿಳಿದಿದ್ದ, ಸ್ಫೂರ್ತಿಶಾಲಿಯಾದ ವಿದುರನು ಧರ್ಮಶಾಸ್ತ್ರಗಳನ್ನು ಸ್ಮರಿಸುತ್ತಾ ಹೇಳಿದನು.
ವಿದುರ
ಬಾಹುಶ್ರುತ್ಯಂ ತಪಸ್ತ್ಯಾಗಃ ಶ್ರದ್ಧಾ ಯಜ್ಞಕ್ರಿಯಾ ಕ್ಷಮಾ |
ಭಾವಶುದ್ಧಿರ್ದಯಾ ಸತ್ಯಂ ಸಂಯಮಶ್ಚಾತ್ಮಸಂಪದಃ ॥5॥
ಬಹುಶಾಸ್ತ್ರಗಳ ಅಧ್ಯಯನ, ತಪಸ್, ತ್ಯಾಗ, ಶ್ರದ್ಧೆ, ಯಜ್ಞಾನುಷ್ಠಾನ, ತಾಳ್ಮೆ, ಭಾವಶುದ್ಧಿ, ದಮಾ, ಸತ್ಯ, ಸಂಯಮ- ಇವು ಆತ್ಮಸಂಪತ್ತುಗಳು.
ಏತದೇವಾಭಿಪದ್ಯಸ್ವ ಮಾ ತೇ ಭೂಚ್ಚಲಿತಂ ಮನಃ |
ಏತನ್ಮೂಲೌ ಹಿ ಧರ್ಮಾರ್ಥಾವೇತದೇಕಪದಂ ಹಿತಮ್ ॥6॥
ಈ ಸಂಪತ್ತನ್ನೇ ಸಾಧಿಸು. ನಿನ್ನ ಮನಸ್ಸು ವಿಚಲಿತವಾಗಬಾರದು. ಈ ಸಂಪತ್ತೇ ಧರ್ಮ-ಅರ್ಥಗಳ ಮೂಲ. ಇದೊಂದೇ ಹಿತಕರ ಮಾರ್ಗ.
ಧರ್ಮೇಣೈವರ್ಷಯಸ್ತೀರ್ಣಾ ಧರ್ಮೇ ಲೋಕಾಃ ಪ್ರತಿಷ್ಠಿತಾಃ |
ಧರ್ಮೇಣ ದೇವಾ ದಿವಿಗಾ ಧರ್ಮೇ ಚಾರ್ಥಃ ಸಮಾಹಿತಃ ॥7॥
ಧರ್ಮದಿಂದಲೇ ಋಷಿಗಳು ಉನ್ನತಿಯನ್ನು ಸಾಧಿಸಿದ್ದಾರೆ. ನಾನಾ ಲೋಕಗಳು ಧರ್ಮನಿಷ್ಠೆಯಿಂದಲೇ ಸುವ್ಯವಸ್ಥಿತವಾಗಿವೆ. ದೇವತೆಗಳು ಧರ್ಮನಿಷ್ಠೆಯಿಂದಲೇ ಸ್ವರ್ಗವನ್ನು ಪಡೆದಿದ್ದಾರೆ. ಅರ್ಥವೂ ಧರ್ಮದಲ್ಲೇ ಸ್ಥಿರವಾಗಿದೆ.
ಧರ್ಮೋ ರಾಜನ್ ಗುಣಶ್ರೇಷ್ಠೋ ಮಧ್ಯಮೋ ಹ್ಯರ್ಥ ಉಚ್ಯತೇ |
ಕಾಮೋ ಯವೀಯಾನಿತಿ ಚ ಪ್ರವದಂತಿ ಮನೀಷಿಣಃ |
ತಸ್ಮಾದ್ಧರ್ಮಪ್ರಧಾನೇನ ಭವಿತವ್ಯಂ ಯತಾತ್ಮನಾ ॥8॥
ರಾಜನೇ! ಧರ್ಮವು ಶ್ರೇಷ್ಠ ಗುಣ, ಅರ್ಥವು ಮಧ್ಯಮ, ಕಾಮವು ಹೀನ ಎಂದು ಪ್ರಾಜ್ಞರು ಹೇಳುತ್ತಾರೆ. ಆದ್ದರಿಂದ ಮನೋನಿಯಂತ್ರಣವುಳ್ಳವನೂ, ಧರ್ಮಕ್ಕೆ ಪ್ರಥಮ ನಿಷ್ಠೆವುಳ್ಳವನೂ ಆಗಿರಬೇಕು.
ಸಮಾಪ್ತವಚನೇ ತಸ್ಮಿನ್ನರ್ಥಶಾಸ್ತ್ರವಿಶಾರದಃ |
ಪಾರ್ಥೋ ವಾಕ್ಯಾರ್ಥತತ್ತ್ವಜ್ಞೋ ಜಗೌ ವಾಕ್ಯಮತಂದ್ರಿತಃ ॥9॥

ವಿದುರನು ಮಾತನ್ನು ಮುಗಿಸಿದ ಮೇಲೆ, ಅರ್ಥಶಾಸ್ತ್ರವಿಶಾರದನಾದ, ಆಡುವ ಮಾತಿನ ಅರ್ಥ ಮತ್ತು ತತ್ವವನ್ನು ತಿಳಿದ, ಉತ್ಸುಕನಾದ ಅರ್ಜುನನು ಮಾತನಾಡಿದನು.
ಕರ್ಮಭೂಮಿರಿಯಂ ರಾಜನ್ನಿಹ ವಾರ್ತಾ ಪ್ರಶಸ್ಯತೇ |
ಕೃಷಿವಾಣಿಜ್ಯಗೋರಕ್ಷ್ಯಂ ಶಿಲ್ಪಾನಿ ವಿವಿಧಾನಿ ಚ ॥10॥
ಅರ್ಥ ಇತ್ಯೇವ ಸರ್ವೇಷಾಂ ಕರ್ಮಣಾಮವ್ಯತಿಕ್ರಮಃ |
ನ ಋತೇರ್ಥೇನ ವರ್ತೇತೇ ಧರ್ಮಕಾಮಾವಿತಿ ಶ್ರುತಿಃ ॥11॥
ರಾಜನೆ! ಇದು ಕರ್ಮಭೂಮಿ, ಇಲ್ಲಿ ಅರ್ಥಕ್ಕೇ ಮನ್ನಣೆ. ಕೃಷಿ, ಗೋರಕ್ಷಣೆ, ವ್ಯಾಪಾರ, ನಾನಾ ಕಲೆಗಳು- ಇವೆಲ್ಲವೂ ಅರ್ಥ. ಆದ್ದರಿಂದಲೇ ಎಲ್ಲರ ಕೆಲಸಗಳೂ ಹೆಚ್ಚು ಅತಿಕ್ರಮಣವಿಲ್ಲದೆ ನಡೆಯುತ್ತಿವೆ. ಅರ್ಥವಿಲ್ಲದೆ ಧರ್ಮಸಾಧನೆಯಾಗುವುದಿಲ್ಲ. ಕಾಮಗಳು ಪೂರೈಸುವುದಿಲ್ಲ (ಬಯಕೆಗಳು ಈಡೇರುವುದಿಲ್ಲ) ಎಂದು ಶ್ರುತಿಯು ಹೇಳುತ್ತದೆ.
ವಿಜಯೀ ಹ್ಯರ್ಥವಾನ್ ಧರ್ಮಮಾರಾಧಯಿತುಮುತ್ತಮಮ್ |
ಕಾಮಂ ಚ ಚರಿತುಂ ಶಕ್ತೋ ದುಷ್ಪ್ರಾಪಮಕೃತಾತ್ಮಭಿಃ ॥12॥
ಅರ್ಥವುಳ್ಳವನೇ ವಿಜಯಶಾಲಿ. ಚೆನ್ನಾಗಿ ಧರ್ಮವನ್ನು ಆಚರಿಸಲು ಮತ್ತು ಕಾಮಗಳನ್ನು ಅನುಭವಿಸಲು ಸಮರ್ಥ. ಅರ್ಥಕ್ಕಾಗಿ ಪ್ರಯತ್ನಶೀಲರಲ್ಲದವರಿಂದ ಇವುಗಳನ್ನು ಪಡೆಯಲು ಆಗದು.
ಅರ್ಥಸ್ಯಾವಯವಾವೇತೌ ಧರ್ಮಕಾಮಾವಿತಿ ಶ್ರುತಿಃ |
ಅರ್ಥಸಿದ್ಧ್ಯಾ ಹಿ ನಿರ್ವೃತ್ತಾವುಭಾವೇತೌ ಭವಿಷ್ಯತಃ ॥13॥
ಧರ್ಮ-ಕಾಮಗಳು ಅರ್ಥದ ಅವಯವ ಎಂದು ಶ್ರುತಿಯು ಹೇಳುತ್ತದೆ. ಅರ್ಥವು ಸಿದ್ಧವಾದರೆ ಇವೆರಡರ ಸಿದ್ಧಿಯು ಆಗುತ್ತದೆ.
ಉದ್ಭೂತಾರ್ಥಂ ಹಿ ಪುರುಷಂ ವಿಶಿಷ್ಟತರಯೋನಯಃ |
ಬ್ರಹ್ಮಾಣಮಿವ ಭೂತಾನಿ ಸತತಂ ಪರ್ಯುಪಾಸತೇ ॥14॥
ಧನವಂತನನ್ನು ಸತ್ಕುಲಪ್ರಸೂತರು ಆರಾಧಿಸುತ್ತಾರೆ. ಸೇವಕರು ದಣಿಯನ್ನು ಆರಾಧಿಸುವಂತೆ.
ಜಟಾಜಿನಧರಾ ದಾಂತಾಃ ಪಂಕದಿಗ್ಧಾ ಜಿತೇಂದ್ರಿಯಾಃ |
ಮುಂಡಾ ವಿತಂತವಶ್ಚಾಪಿ ವಸಂತ್ಯರ್ಥಾರ್ಥಿನಃ ಪೃಥಕ್ ॥15॥
ಜಟಾ-ಅಜಿನಗಳನ್ನು ಧರಿಸಿದ, ಸಂಯಮಶಾಲಿಗಳಾದ, ಮಲಧಾರಣೆಯನ್ನು ಮಾಡಿರುವ, ಜಿತೇಂದ್ರಿಯರಾದ ಮುಂಡರೂ (ಸನ್ಯಾಸಿಗಳೂ), ವಿಶೇಷವಾಗಿ ಯಜ್ಞಗಳನ್ನು ಮಾಡಿದವರೂ ಧನಕಾಂಕ್ಷಿಗಳಾಗಿ ಧನವಂತರ ಬಳಿ ವಾಸಿಸುತ್ತಾರೆ.
ಕಾಷಾಯವಸನಾಶ್ಚಾನ್ಯೇ ಶ್ಮಶ್ರುಲಾ ಹ್ರೀಸುಸಂವೃತಾಃ |
ವಿದ್ವಾಂಸಶ್ಚೈವ ಶಾಂತಾಶ್ಚ ಮುಕ್ತಾಃ ಸರ್ವಪರಿಗ್ರಹೈಃ ॥16॥
ಅರ್ಥಾರ್ಥಿನಃ ಸಂತಿ ಕೇಚಿದಪರೇ ಸ್ವರ್ಗಕಾಂಕ್ಷಿಣಃ |
ಕುಲಪ್ರತ್ಯಾಗಮಾಶ್ಚೈಕೇ ಸ್ವಂ ಸ್ವಂ ಮಾರ್ಗಮನುಷ್ಠಿತಾಃ ॥17॥
ಕಾಷಾಯವಸ್ತ್ರವನ್ನು ಧರಿಸಿದವರು, ಗಡ್ಡಮೀಸೆಗಳನ್ನು ಬೆಳೆಸಿದವರು, ಸಂಕೋಚ ಸ್ವಭಾವದವರು, ವಿದ್ವಾಂಸರು, ಭಗವದ್ಭಕ್ತರು, ಎಲ್ಲ ಪರಿಗ್ರಹಗಳನ್ನು ತ್ಯಾಗ ಮಾಡಿದವರು ಕೆಲವರು ಧನಾಕಾಂಕ್ಷಿಗಳಾಗಿದ್ದಾರೆ. ಸ್ವರ್ಗಕ್ಕೆ ಹೋಗುವ ಅಪೇಕ್ಷೆಯಿಂದ ಸಾಧನೆಯಲ್ಲಿ ನಿರತರೂ ಧನಾಕಾಂಕ್ಷಿಗಳಾಗಿದ್ದಾರೆ. ಕುಲಕ್ರಮಾಗತವಾದ ನಿಯಮಗಳನ್ನು ಪಾಲಿಸುತ್ತಿರುವವರು ಕೆಲವರು, ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಪಾಲಿಸುತ್ತಿರುವವರು ಕೆಲವರು ಕೂಡ ಧನಾಕಾಂಕ್ಷಿಗಳಾಗಿದ್ದಾರೆ.
ಆಸ್ತಿಕಾ ನಾಸ್ತಿಕಾಶ್ಚೈವ ನಿಯತಾಃ ಸಂಯಮೇ ಪರೇ |
ಅಪ್ರಜ್ಞಾನಂ ತಮೋಭೂತಂ ಪ್ರಜ್ಞಾನಂ ತು ಪ್ರಕಾಶತಾ ॥18॥
ಆಸ್ತಿಕರು, ನಾಸ್ತಿಕರು, ಸಂಯಮಶೀಲರು ಆದ ಕೆಲವರು ಧನಾಕಾಂಕ್ಷಿಗಳಾಗಿದ್ದಾರೆ. ಅರ್ಥದ ಬಗ್ಗೆ ಸರಿಯಾದ ಜ್ಞಾನದ ಕೊರತೆಯು ತಮೋಗುಣದ ಪರಿಣಾಮ. ಅರ್ಥದ ಬಗ್ಗೆ ಸರಿಯಾದ ಜ್ಞಾನವು ಸತ್ವಗುಣದ ಪರಿಣಾಮ-ಪ್ರಕಾಶ.
ಭೃತ್ಯಾನ್ ಭೋಗೈರ್ದ್ವಿಷೋ ದಂಡೈರ್ಯೋ ಯೋಜಯತಿ ಸೋಽರ್ಥವಾನ್|
ಏತನ್ಮತಿಮತಾಂ ಶ್ರೇಷ್ಠ ಮತಂ ಮಮ ಯಥಾತಥಮ್ ॥19॥
ಭೃತ್ಯರಿಗೆ ಭೋಗಗಳನ್ನು ಕಲ್ಪಿಸುವವನು, ಶತ್ರುಗಳನ್ನು ದಂಡಪ್ರಯೋಗದಿಂದ ನಿಗ್ರಹಿಸುವವನು ನಿಜವಾದ ಧನವಂತ. ಪ್ರಾಜ್ಞಶ್ರೇಷ್ಠ! ಇದು ಯಥಾರ್ಥವಾದ ಅಭಿಪ್ರಾಯ.
ಅಶ್ರಾಂತವಚನೇ ತಸ್ಮಿನ್ ಭೀಮಕರ್ಮಾ ಧನಂಜಯಃ |
ಅನಯೋಽಸ್ತು ನಿಬೋಧ ತ್ವಂ ವಚನಂ ವಾಕ್ಯಕಂಠಯೋಃ ॥20॥
ಮತ್ತಷ್ಟು ವಿವರಿಸು ಎಂದು ಯುಧಿಷ್ಠಿರನು ಶ್ರಮವಿಲ್ಲದೆ ಕೇಳಿದಾಗ ಧನಂಜಯನು ಹೇಳಿದನು. ನಕುಲ-ಸಹದೇವರು ತಮ್ಮ ಅಭಿಪ್ರಾಯವನ್ನು ಹೇಳಲು ಬಹಳ ಉತ್ಸುಕರಾಗಿದ್ದಾರೆ. ಅವರ ವಾಕ್ಯಗಳು ಅವರ ಕಂಠದಲ್ಲಿ ನಿಂತಿವೆ. ಅವರ ಅಭಿಪ್ರಾಯವನ್ನು ದಯವಿಟ್ಟು ತಿಳಿ.
ತತೋ ಧರ್ಮಾರ್ಥಕುಶಲೌ ಮಾದ್ರೀಪುತ್ರಾವನಂತರಮ್ |
ನಕುಲಃ ಸಹದೇವಶ್ಚ ವಾಕ್ಯಂ ಜಗದತುಃ ಪರಮ್ ॥21॥
ಧರ್ಮ-ಅರ್ಥಗಳ ವಿಷಯದಲ್ಲಿ ಕುಶಲರಾದ ಮಾದ್ರೀಪುತ್ರರಾದ ನಕುಲ- ಸಹದೇವರು ಹೇಳಿದರು.
ಆಸೀನಶ್ಚ ಶಯಾನಶ್ಚ ವಿಚರನ್ನಪಿ ಚ ಸ್ಥಿತಃ |
ಅರ್ಥಯೋಗಂ ದೃಢಂ ಕುರ್ಯಾದ್ಯೋಗೈರುಚ್ಚಾವಚೈರಪಿ ॥22॥
ಕುಳಿತಿರುವಾಗ, ಮಲಗಿರುವಾಗ, ಸಂಚರಿಸುತ್ತಿರುವಾಗ ದೊಡ್ಡ-ಸಣ್ಣ ಮಾರ್ಗಗಳಿಂದ ಅರ್ಥಪ್ರಾಪ್ತಿಯನ್ನು ದೃಢವಾಗಿಸಬೇಕು.

ಅಸ್ಮಿಂಸ್ತು ವೈ ಸುಸಂವೃತ್ತೇ ದುರ್ಲಭೇ ಪರಮಪ್ರಿಯೇ |
ಇಹ ಕಾಮಾನವಾಪ್ನೋತಿ ಪ್ರತ್ಯಕ್ಷಂ ನಾತ್ರ ಸಂಶಯಃ ||23||
ಪರಮಪ್ರಿಯವಾದ, ಆದರೆ ದುರ್ಬಲವಾದ ಈ ಅರ್ಥವು ಚೆನ್ನಾಗಿ ಒದಗಿದಾಗ ಎಲ್ಲ ಅಪೇಕ್ಷೆಗಳು ಈಡೇರುತ್ತವೆ. ಇದು ಪ್ರತ್ಯಕ್ಷಸಿದ್ಧ. ಆದ್ದರಿಂದ ಈ ಬಗ್ಗೆ ಏನೂ ಸಂಶಯವಿಲ್ಲ.
ಯೋಽರ್ಥೋ ಧರ್ಮೇಣ ಸಂಯುಕ್ತೋ ಧರ್ಮೋ ಯಶ್ಚಾರ್ಥಸಂಯುತಃ|
ಮಧ್ಯಮೇವಾಮೃತಂ ಸೃಷ್ಟಂ ತಸ್ಮಾದೇತೌ ಗತಾವಿಹ ||24||
ಯಾವ ಅರ್ಥವು ಧರ್ಮಸಹಿತವಾಗಿದೆಯೋ (ಧರ್ಮದಿಂದ ಸಂಪಾದಿಸಲ್ಪಟ್ಟಿದೆಯೋ) ಯಾವ ಧರ್ಮಾನುಷ್ಠಾನವು ಅರ್ಥಸಹಿತವಾಗಿದೆಯೋ (ಧರ್ಮಾನುಷ್ಠಾನಕ್ಕಾಗಿ ಅರ್ಥದ ಬಳಕೆಯಾಗುವುದೋ) ಈ ಅರ್ಥವು ಧರ್ಮ- ಕಾಮಗಳ ಮಧ್ಯೆ ಇದೆ. ಆದ್ದರಿಂದ ಇದು ಅಮೃತ. ಆದ್ದರಿಂದ ಧರ್ಮ-ಕಾಮಗಳು ಅರ್ಥಾವಲಂಬಿಯಾಗಿವೆ.
ಅನರ್ಥಸ್ಯ ನ ಕಾಮೋಽಸ್ತಿ ತಥಾರ್ಥೋ ಧರ್ಮಿಣಃ ಕೃತಃ |
ತಸ್ಮಾದುದ್ವಿಜತೇ ಲೋಕೋಽರ್ಥಾದ್ ಧರ್ಮಬಹಿಷ್ಕೃತಾತ್ ||25||
ಅರ್ಥರಹಿತನ ಆಸೆಗಳು ಈಡೇರುವುದಿಲ್ಲ. ಅಂತೆಯೇ ಧರ್ಮನಿಷ್ಠನಿಗೆ ಅರ್ಥದ ಅಪೇಕ್ಷೆಯು ಜೋಡಿಸಲ್ಪಟ್ಟಿದೆ. ಲೋಕವು ಧರ್ಮಬಾಹಿರವಾದ ಸಂಪತ್ತಿನಿಂದ ಉದ್ವೇಗಕ್ಕೆ ಒಳಗಾಗುತ್ತದೆ.
ತಸ್ಮಾದ್ ಧರ್ಮಪ್ರಧಾನೇನ ಸಾಧ್ಯೋಽರ್ಥಃ ಸಂಯತಾತ್ಮನಾ |
ವಿಶ್ವಸ್ತೇಷು ಚ ಭೂತೇಷು ಕಲ್ಪ್ಯತೇ ಸರ್ವ ಏವ ಸಃ ||26||
ಆದ್ದರಿಂದ ಧರ್ಮಕ್ಕೆ ಆದ್ಯತೆಯನ್ನು ಕೊಟ್ಟು, ಸಂಯಮಶೀಲವಾದ ಮನಸ್ಸಿನಿಂದ ಅರ್ಥವನ್ನು ಸಂಪಾದಿಸಬೇಕು. ಎಲ್ಲ ಜನರೂ ವಿಶ್ವಾಸಿಗಳಾಗಿದ್ದಾಗ ಅರ್ಥವು ಪೂರ್ಣವಾಗಿ ಸಿದ್ಧಿಸುತ್ತದೆ.
ಸರ್ವಂ ಸಮಾಚರೇತ್ ಪೂರ್ವಂ ತಥೋರ್ಧ್ವಂ ಧರ್ಮಸಂಯುತಮ್ |
ತತಃ ಕಾಮಂ ಚರೇತ್ ಪಶ್ಚಾತ್ ಸಿದ್ಧಾರ್ಥಸ್ಯ ಹಿ ತತ್ಫಲಮ್ ||27||
ಮೊದಲು (ಯಜ್ಞ-ದಾನ ಮೊದಲಾದ ಧರ್ಮಾನುಷ್ಠಾನಕ್ಕಿಂತ ಮೊದಲು) ಅರ್ಥ ಸಂಪಾದನೆಯ ದಾರಿಯನ್ನು ಅನುಸರಿಸಬೇಕು. ಅನಂತರವೂ ಧರ್ಮದಿಂದಲೇ ಅರ್ಥವನ್ನು ಸಂಪಾದಿಸಬೇಕು. ಅನಂತರ ಅಭೀಷ್ಟಗಳನ್ನು ಪೂರೈಸಬೇಕು. ಧರ್ಮ ಮತ್ತು ಕಾಮಗಳು ಅರ್ಥಸಿದ್ಧಿಯ ಫಲ.
ವಿರೇಮತುಸ್ತು ತದ್ವಾಕ್ಯಮುಕ್ತ್ವಾ ತಾವಶ್ವಿನೋಃ ಸುತೌ |
ಭೀಮಸೇನಸ್ತದಾ ವಾಕ್ಯಮಿದಂ ವಕ್ತುಂ ಪ್ರಚಕ್ರಮೇ ||28||
ಆ ಅಶ್ವಿನಿಸುತರು ಅಷ್ಟು ಮಾತನ್ನು ಹೇಳಿ ವಿರಮಿಸಿದರು. ಅನಂತರ ಭೀಮಸೇನನು ಮಾತನಾಡಿದನು.
ನಾಕಾಮಃ ಕಾಮಯತ್ಯರ್ಥಂ ನಾಕಾಮೋ ಧರ್ಮಮಿಚ್ಛತಿ |
ನಾಕಾಮಃ ಕಾಮಯಾನೋಽಸ್ತಿ ತಸ್ಮಾತ್ ಕಾಮೋ ವಿಶಿಷ್ಯತೇ ||29||
ಕಾಮರಹಿತನಿಗೆ ಅರ್ಥಕಾಮನೆಯೂ ಇರುವುದಿಲ್ಲ. ಧರ್ಮಾನುಷ್ಠಾನ ಇಚ್ಛೆಯೂ ಇರುವುದಿಲ್ಲ. ಮೋಕ್ಷಕಾಮನೆಯೂ ಇರುವುದಿಲ್ಲ. ಭೋಗಕಾಮನೆಯೂ ಇರುವುದಿಲ್ಲ.
ಕಾಮೇನ ಯುಕ್ತಾ ಋಷಯಸ್ತಪಸ್ಯೇವ ಸಮಾಹಿತಾಃ |
ಪಲಾಶಫಲಮೂಲಾಶಾ ವಾಯುಭಕ್ಷಾಃ ಸುಸಂಯತಾಃ ||30||
ತಪಸ್ಸಿನ ಫಲವನ್ನು ಪಡೆಯುವ ಕಾಮನೆಯಿದ್ದ ಋಷಿಗಳೇ ತಪಸ್ಸಿನಲ್ಲಿ ತೊಡಗಿದರು. ಎಲೆಗಳನ್ನೇ ತಿನ್ನುವವರು ಮತ್ತು ಫಲ-ಮೂಲಗಳನ್ನೇ ತಿನ್ನುವವರು ಫಲದ ಆಸೆಯಿದ್ದವರೇ, ಕೇವಲ ವಾಯುಸೇವನೆಯನ್ನು ಮಾಡುವವರು ಅಂತಹ ಆಹಾರನಿಯಮವನ್ನು ಆಚರಿಸುವ ಕಾಮನೆ ಇದ್ದವರೇ.
ವೇದೋಪವೇದೇಷ್ವಪರೇ ಯುಕ್ತಾಃ ಸ್ವಾಧ್ಯಾಯಪಾರಗಾಃ |
ಶ್ರಾದ್ಧಯಜ್ಞಕ್ರಿಯಾಯಾಂ ಚ ತಥಾ ದಾನಪ್ರತಿಗ್ರಹೇ ||31||
ವೇದ-ಉಪವೇದಗಳಲ್ಲಿ ತೊಡಗಿದವರು, ಸ್ವಾಧ್ಯಾಯ ಪಾರಂಗತರು, ಶ್ರಾದ್ಧದಲ್ಲಿ ಮತ್ತು ಯಜ್ಞಪ್ರಕ್ರಿಯೆಗಳಲ್ಲಿ, ದಾನ-ಪ್ರತಿಗ್ರಹಗಳಲ್ಲಿ ಆಸಕ್ತರು ಆಯಾಯಾ ಕಾಮನೆಗಳಿದ್ದವರೇ.
ವಣಿಜಃ ಕರ್ಷಕಾ ಗೋಪಾಃ ಕಾರವಃ ಶಿಲ್ಪಿನಸ್ತಥಾ |
ದೈವಕರ್ಮಕೃತಶ್ಚೈವ ಯುಕ್ತಾಃ ಕಾಮೇನ ಕರ್ಮಸು ||32||
ವರ್ತಕರು, ಕೃಷಿಕರು, ಗೋಪಾಲಕರು, ಬಡಗಿಗಳು, ಶಿಲ್ಪಿಗಳು, ಜ್ಯೋತಿಷಿಗಳು ಆಯಾಯಾ ಕೆಲಸಗಳಲ್ಲಿ ಕಾಮನೆ ಇದ್ದವರೇ.
ಸಮುದ್ರಂ ಚಾವಿಶಂತ್ಯನ್ಯೇ ನರಾಃ ಕಾಮೇನ ಸಂಯುತಾಃ |
ಕಾಮೋ ಹಿ ವಿವಿಧಾಕಾರಃ ಸರ್ವಂ ಕಾಮೇನ ಸಂತತಮ್ ||33||
(ಮುತ್ತು-ರತ್ನಗಳ) ಕಾಮನೆಯಿದ್ದ ನರರೇ ಸಮುದ್ರವನ್ನು ಪ್ರವೇಶಿಸುತ್ತಾರೆ. ಕಾಮಕ್ಕೆ ವಿವಿಧ ರೂಪಗಳು. ಎಲ್ಲ ಪ್ರವೃತ್ತಿಗಳಲ್ಲೂ ಕಾಮವು ವ್ಯಾಪಿಸಿದೆ.
ನಾಸ್ತಿ ನಾಸೀನ್ನಾಭವಿಷ್ಯದ್ಭೂತಂ ಕಾಮಾತ್ಮಕಾತ್ ಪರಮ್ |
ಏತತ್ ಸಾರಂ ಮಹಾರಾಜ ಧರ್ಮಾರ್ಥಾವತ್ರ ಸಂಶ್ರಿತೌ ||34||
ಕಾಮನೆಯಿಲ್ಲದ ಯಾವ ಪ್ರಾಣಿಯೂ ಇಲ್ಲ. ಹಿಂದೆ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಧರ್ಮ-ಅರ್ಥಗಳು ಕಾಮವನ್ನು ಅವಲಂಬಿಸಿವೆ. ಮಹಾರಾಜ ಇದು ಸಾರ.
ನವನೀತಂ ಯಥಾ ದಧ್ನಸ್ತಥಾ ಕಾಮೋಽರ್ಥಧರ್ಮತಃ |

ಶ್ರೇಯಸ್ತೈಲಂ ಚ ಪಿಣ್ಯಾಕಾದ್ಘೃತಂ ಶ್ರೇಯ ಉದಶ್ವಿತಃ ॥35॥
ಮೊಸರಿಗಿಂತ ಬೆಣ್ಣೆ ಶ್ರೇಷ್ಠ. ಹಿಂಡಿಗಿಂತ ತೈಲವು ಶ್ರೇಷ್ಠ. ಮಜ್ಜಿಗೆಗಿಂತ ತುಪ್ಪ ಶ್ರೇಷ್ಠ. ಹಾಗೆಯೇ ಕಾಮವು ಅರ್ಥ ಮತ್ತು ಧರ್ಮಗಳಿಗಿಂತ ಶ್ರೇಷ್ಠ.
ಶ್ರೇಯಃ ಪುಷ್ಪಫಲಂ ಕಾಷ್ಠಾತ್ ಕಾಮೋ ಧರ್ಮಾರ್ಥಯೋರ್ವರಃ ।
ಪುಷ್ಪತೋ ಮಧ್ವಿವ ರಸಃ ಕಾಮಾತ್ ಸಂಜಯತೇ ಸುಖಮ್ ॥36॥
ಕಟ್ಟಿಗೆಗಿಂತ ಪುಷ್ಪ ಮತ್ತು ಫಲಗಳು ಶ್ರೇಷ್ಠ. ಕಾಮವು ಧರ್ಮ- ಅರ್ಥಗಳಿಗಿಂತ ಶ್ರೇಷ್ಠ. ಪುಷ್ಪಕ್ಕಿಂತ ಮಧು ಶ್ರೇಷ್ಠ. ಕಾಮದಿಂದ ಸುಖವು ಹುಟ್ಟುತ್ತದೆ.
ಸುಚಾರುವೇಷಾಭಿರಲಂಕೃತಾಭಿ-
 ರ್ಮದೋತ್ಕಟಾಭಿಃ ಪ್ರಿಯವಾದಿನೀಭಿಃ ।
ರಮಸ್ವ ಯೋಷಾಭಿರುಪೇತ್ಯ ಕಾಮಂ
 ಕಾಮೋ ಹಿ ರಾಜಂಸ್ತರಸಾಭಿಪಾತೀ ॥37॥
ಬಹಳ ರಮಣೀಯ ವಸ್ತ್ರಗಳನ್ನು ಧರಿಸಿರುವ, ಅಲಂಕರಿಸಿಕೊಂಡಿರುವ, ಉತ್ಕಟ ಮದವನ್ನು ಹೊಂದಿರುವ, ಪ್ರಿಯವಾಗಿ ಮಾತನಾಡುವ ಸ್ತ್ರೀಯರೊಂದಿಗೆ ಯಥೇಷ್ಟವಾಗಿ ವಿಹರಿಸು. ಕಾಮವು ವೇಗದಿಂದ ಆಕ್ರಮಿಸುತ್ತದೆ.
ಬುದ್ಧಿರ್ಮಮೈಷಾ ಪರಿಷತ್ ಸ್ಥಿತಸ್ಯ
 ಮಾ ಭೂದ್ ವಿಚಾರಸ್ತವ ಧರ್ಮಪುತ್ರ ।
ಶಾಂತಂ ಹಿ ತತ್ ಸದ್ಭಿರಫಲ್ಗುಸಾರಮ್
 ಅಸಸ್ತವಾಕ್ಯಂ ಪರಮಾನೃಶಂಸ್ಯಮ್ ॥38॥
ಧರ್ಮಪುತ್ರ ಇದು ಸಭಾಸದನಾದ (ತಿಳಿದವರ ಮಧ್ಯೆ ಇರುವ) ನನ್ನ ನಿರ್ಣಯ. ನೀನು ಏನೂ ಸಂದೇಹಪಡಬೇಡ. ಕೆಟ್ಟ ಮತ್ತು ಹಾನಿಕರ ವಸ್ತುಗಳಿಂದ ದೂರವಿರುವ ಕಾಮವು ಉತ್ತಮೋತ್ತಮ ಕಾಮ ಎಂದು ಸಜ್ಜನರ ಅಭಿಪ್ರಾಯ. ನನ್ನ ಮಾತು ವಿಮರ್ಶಪೂರ್ವಕ ಮತ್ತು ಪ್ರಜ್ಞಾಪೂರ್ವಕ (ಅಜ್ಞಾನದ ಸ್ಥಿತಿಯಲ್ಲಿ ನಾನು ಇದನ್ನು ಹೇಳಿಲ್ಲ). ಇದು ನಿಷ್ಠುರತೆಯಿಲ್ಲದ ಉತ್ತಮವಾದ ಮಾತು.
ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾ
 ಯೋ ಹ್ಯೇಕಭಕ್ತಃ ಸ ನರೋ ಜಘನ್ಯಃ ।
ದ್ವಯೋಸ್ತು ಸಾಹ್ಯಂ ಪ್ರವದಂತಿ ಮಧ್ಯಂ
 ಸ ಉತ್ತಮೋ ಯೋ ನಿರತಸ್ತ್ರಿವರ್ಗೇ ॥39॥
ಧರ್ಮ-ಅರ್ಥ-ಕಾಮಗಳನ್ನು ಸಮವಾಗಿ ಸೇವಿಸಬೇಕು. ಯಾರು ಒಂದನ್ನೇ ಸೇವಿಸುತ್ತಾನೋ ಅವನು ಬಹಳ ಕೆಳಮಟ್ಟದ ನರ. ಎರಡನ್ನು ಸೇವಿಸುವ ನರನನ್ನು ಮಧ್ಯ ಎಂದು ಹೇಳುತ್ತಾರೆ. ಮೂರನ್ನೂ ಸಮವಾಗಿ ಸೇವಿಸುವವನು ಉತ್ತಮ.
ಪ್ರಾಜ್ಞಃ ಸುಹೃಚ್ಚಂದನಸಾರಲಿಪ್ತೋ
 ವಿಚಿತ್ರಮಾಲ್ಯಾಭರಣೈರುಪೇತಃ ।
ತತೋ ವಚಃ ಸಂಗ್ರಹವಿಗ್ರಹೇಣ
 ಪ್ರೋಕತ್ವ ಯವೀಯಾನ್ ವಿರರಾಮ ಭೀಮಃ ॥40॥
ಯುಧಿಷ್ಠಿರನಿಗಿಂತ ಕಿರಿಯನಾದ ಭೀಮ ಪ್ರಾಜ್ಞ. ಒಳ್ಳೆಯ ಹೃದಯದವನು, ಶ್ರೇಷ್ಠಚಂದನವನ್ನು ಲೇಪಿಸಿಕೊಳ್ಳುವವನು. ಸುಂದರವಾದ ಮಾಲೆ ಮತ್ತು ಆಭರಣಗಳನ್ನು ಧರಿಸುವವನು. ಈ ಭೀಮನು ಸಂಕ್ಷೇಪವಾಗಿ ಮತ್ತು ವಿಸ್ತರವಾಗಿ ಪ್ರತಿಪಾದಿಸಿ ವಿರಮಿಸಿದನು.
ತತೋ ಮುಹೂರ್ತಾದಥ ಧರ್ಮರಾಜೋ
 ವಾಕ್ಯಾನಿ ತೇಷಾಮನುಚಿಂತ್ಯ ಸಮ್ಯಕ್ ।
ಉವಾಚ ರಾಜಾವಿತಥಂ ಸ್ಮಯನ್ ವೈ
 ಬಹುಶ್ರುತಾಂ ಧರ್ಮಭೃತಾಂ ವರಿಷ್ಠಃ ॥41॥
ಅನಂತರ ಧರ್ಮರಾಜನು ಸ್ವಲ್ಪಹೊತ್ತು ಅವರೆಲ್ಲರ ಮಾತುಗಳನ್ನು ಚೆನ್ನಾಗಿ ತನ್ನೊಳಗೇ ವಿಮರ್ಶಿಸಿದನು. ಅನಂತರ ಬಹುಶಾಸ್ತ್ರಗಳ ಅಧ್ಯಯನ ಮಾಡಿರುವ, ಧರ್ಮಪಾಲಕರಲ್ಲಿ ಶ್ರೇಷ್ಠನಾದ ರಾಜನು ಪ್ರಸನ್ನಮುಖಭಾವದಿಂದ ಯಥಾರ್ಥವಾಗಿ ಹೇಳಿದನು.
ನಿಃಸಂಶಯಂ ನಿಶ್ಚಿತಧರ್ಮಶಾಸ್ತ್ರಾಃ
 ಸರ್ವೇ ಭವಂತೋ ವಿದಿತಪ್ರಮಾಣಾಃ ।
ವಿಜ್ಞಾತುಕಾಮಸ್ಯ ಮಮೇಹ ವಾಕ್ಯ-
 ಮುಕ್ತಂ ಯದ್ವೈ ನೈಷ್ಠಿಕಂ ತಚ್ಛ್ರುತಂ ಮೇ ।
ಇಹಾನುವಂಶಂ ಗದತೋ ಮಮಾಪಿ
 ವಾಕ್ಯಂ ನಿಬೋಧಧ್ವಮನನ್ಯಭಾವಾಃ ॥42॥
ನೀವೆಲ್ಲರೂ ಧರ್ಮಶಾಸ್ತ್ರವನ್ನು ಚೆನ್ನಾಗಿ ತಿಳಿದಿರುವಿರಿ. ಪ್ರಮಾಣಗಳನ್ನು ತಿಳಿದಿರುವಿರಿ. ಸಂಶಯವಿಲ್ಲ. ನಿಮ್ಮ ಅಭಿಪ್ರಾಯವನ್ನು ತಿಳಿಯಬಯಸಿದ ನನಗೆ ನೀವೆಲ್ಲರೂ ಗೊಂದವಿಲ್ಲದಂತೆ ಸುಸ್ಪಷ್ಟ ವಚನಗಳನ್ನು ಹೇಳಿದ್ದೀರಿ. ಅದೆಲ್ಲವನ್ನು ಕೇಳಿದ್ದೇನೆ. ಈಗ ನಾನು ಕುಲಕ್ರಮಾಗತ ಚಿಂತನೆಗೆ ಅನುಗುಣವಾಗಿ ಹೇಳುವೆ. ನೀವು ಏಕಾಗ್ರತೆಯಿಂದ ಕೇಳಿರಿ.

ಯೋ ವೈ ನ ಪಾಪೇ ನಿರತೋ ನ ಪುಣ್ಯೇ
ನಾರ್ಥೇ ನ ಧರ್ಮೇ ಮನುಜೋ ನ ಕಾಮೇ |
ವಿಮುಕ್ತದೋಷಃ ಸಮಫಲ್ಗುಸಾರಃ
ವಿಮುಚ್ಯತೇ ಸುಖದುಃಖಾತ್ ಸ ಸಿದ್ಧಃ ||43||

ಯಾವ ಮನುಜನು ಪಾಪಕಾರ್ಯದಲ್ಲಿ ನಿರತನಾಗುವುದಿಲ್ಲವೋ, ಪುಣ್ಯ ಕಾರ್ಯದಲ್ಲಿ ನಿರತನಾಗುವುದಿಲ್ಲವೋ, ಅರ್ಥದಲ್ಲಿ ನಿರತನಾಗುವುದಿಲ್ಲವೋ, ಧರ್ಮದಲ್ಲಿ ನಿರತನಾಗುವುದಿಲ್ಲವೋ, ಕಾಮದಲ್ಲಿ ನಿರತನಾಗುವುದಿಲ್ಲವೋ, ತುಚ್ಛವಾದ ಮಣ್ಣು ಇತ್ಯಾದಿಗಳನ್ನು, ಶ್ರೇಷ್ಠವಾದ ಬಂಗಾರ ಇತ್ಯಾದಿಗಳನ್ನು ಸಮವಾಗಿ ಕಾಣುತ್ತಾನೋ ಅವನಿಗೆ ಯಾವ ದೋಷಗಳ ಲೇಪವಾಗುವುದಿಲ್ಲ. ಆ ಸಿದ್ಧನು ಸುಖ- ದುಃಖಮಯವಾದ ಹುಟ್ಟು-ಸಾವುಗಳಿಂದ ಬಿಡುಗಡೆಯನ್ನು ಪಡೆಯುತ್ತಾನೆ. (ಆದ್ದರಿಂದ ಮೋಕ್ಷವೇ ಶ್ರೇಷ್ಠ). (ಪುಣ್ಯ, ಅರ್ಥ, ಧರ್ಮ, ಕಾಮಗಳಲ್ಲಿ ನಿರತನಾಗದವನು ಎಂದರೆ ಫಲಾಪೇಕ್ಷೆಯಿಂದ ಇವುಗಳಲ್ಲಿ ನಿರತನಾಗದವನು ಎಂದು ಅಭಿಪ್ರಾಯ. ಫಲಾಪೇಕ್ಷೆಯಿಂದ ಇವುಗಳನ್ನು ಮಾಡಿದರೆ ಪ್ರಾಪ್ತವಾಗುವ ಫಲಗಳು ಸಂಸಾರ ಬಂಧನಕ್ಕೆ ಕಾರಣವಾಗುತ್ತವೆ. ಫಲಾಪೇಕ್ಷೆಯಿಲ್ಲದೆ, ಶ್ರೀಹರಿ ಪ್ರೀತಿಯಾಗಲಿ ಎಂಬ ಭಾವದಿಂದ ಮಾಡಿದರೆ ಸಂಸಾರಬಂಧನದಿಂದ ಬಿಡುಗಡೆಯಾಗುತ್ತದೆ).

ಭೂತಾನಿ ಜಾತೀಮರಣಾನ್ವಿತಾನಿ
ಜರಾವಿಕಾರೈಶ್ಚ ಸಮನ್ವಿತಾನಿ |
ಭೂಯಶ್ಚ ತೈಸ್ತೈಃ ಪ್ರತಿಬೋಧಿತಾನಿ
ಮೋಕ್ಷಂ ಪ್ರಶಂಸಂತಿ ನ ತಂ ಚ ವಿದ್ಮಃ ||44||

ಜೀವ ಸಂಕುಲವು ಪುನಃ ಪುನಃ ಹುಟ್ಟು-ಸಾವುಗಳಿಗೆ ಒಳಗಾಗುತ್ತದೆ. ಮುಪ್ಪು ಮತ್ತು ಇತರ ವಿಕಾರಗಳಿಗೆ ಒಳಗಾಗುತ್ತದೆ. ಆ ಹುಟ್ಟು-ಸಾವು ಮತ್ತು ವಿಕಾರಗಳ ಅನುಭವದಿಂದ ಜೀವಸಂಕುಲಕ್ಕೆ ಇವುಗಳಿಂದ ಬಿಡುಗಡೆಯನ್ನು ಪಡೆಯಬೇಕು ಎಂದು ಜ್ಞಾನವು ಹುಟ್ಟುತ್ತದೆ. ಹುಟ್ಟು-ಸಾವು-ವಿಕಾರಗಳಿಂದ ಪಾಠ ಕಲಿತವರು ಮೋಕ್ಷವನ್ನು ಪ್ರಶಂಸಿಸುತ್ತಾರೆ. ನಮಗೆ ಆ ಮೋಕ್ಷದ ಬಗ್ಗೆ ತಿಳಿದಿಲ್ಲ.

ಸ್ನೇಹೇನ ಬದ್ಧಸ್ಯ ಹಿ ಸಂತಿ ತಾನೀ-
ತ್ಯೇವಂ ಸ್ವಯಂಭೂರ್ಭಗವಾನುವಾಚ |
ಬುಧಾಶ್ಚ ನಿರ್ವಾಣಪರಾ ವದಂತಿ
ತಸ್ಮಾನ್ನ ಕುರ್ಯಾತ್ ಪ್ರಿಯಮಪ್ರಿಯಂ ಚ ||45||

`ಪ್ರಕೃತಿಯಿಂದ ಅಭಿವ್ಯಕ್ತವಾಗಿರುವ ರೂಪ-ರಸ-ಗಂಧ-ಸ್ಪರ್ಶ-ಶಬ್ದ ಇವುಗಳ ಬಗ್ಗೆ ಗಾಢ ಒಲವು ಇದ್ದವನಿಗೆ ಹುಟ್ಟು-ಸಾವು-ಮುಪ್ಪು ಮೊದಲಾದವುಗಳು ಇವೆ' ಎಂದು ಚತುರ್ಮುಖ ಬ್ರಹ್ಮದೇವರು ಹೇಳಿದ್ದಾರೆ. ಪ್ರಕೃತಿಯಿಂದ ಬಿಡುಗಡೆಯನ್ನು ಪಡೆಯುವ ಅಭಿರುಚಿ ಇರುವ ಪ್ರಾಜ್ಞರೂ ಹೇಳುತ್ತಾರೆ. ಆದ್ದರಿಂದ ಪ್ರಿಯವನ್ನು ಮತ್ತು ಅಪ್ರಿಯವನ್ನು ಮಾಡಬಾರದು.

ಏತತ್ ಪ್ರಧಾನಂ ನ ತು ಕಾಮಕಾರೋ
ಯಥಾ ನಿಯುಕ್ತೋಽಸ್ಮಿ ತಥಾ ಚರಾಮಿ |
ಭೂತಾನಿ ಸರ್ವಾಣಿ ವಿಧಿರ್ನಿಯುಂಕ್ತೇ
ವಿಧಿರ್ಬಲೀಯಾನಿತಿ ವಿತ್ತ ಸರ್ವೇ ||46||

ಮೋಕ್ಷಕ್ಕಾಗಿ ಪ್ರಯತ್ನವೇ ಮುಖ್ಯ. ಸ್ವಚ್ಛಂದ ವರ್ತನೆಯು ಅಲ್ಲ. ವಿಧಿಯಿಂದ ಹೇಗೆ ನಿಯೋಜಿಸಲ್ಪಟ್ಟಿರುವೆನೋ ಹಾಗೆ ಮಾಡುತ್ತೇನೆ. ಸಕಲ ಜೀವಸಂಕುಲವನ್ನು ವಿಧಿಯು ನಿಯೋಜಿಸುತ್ತದೆ. ವಿಧಿಯು ನಮ್ಮ ಇಚ್ಛೆ-ಪ್ರಯತ್ನಗಳಿಗಿಂತ ಹೆಚ್ಚು ಬಲಶಾಲಿ ಎಂದು ಎಲ್ಲರೂ ತಿಳಿಯಿರಿ.

ಯತ್ ಕರ್ಮಣಾಪ್ನೋತಿ ನ ಚಾಪ್ಯನರ್ಥಂ
ಯದ್ಭಾವಿ ಸರ್ವಂ ಭವತೀತಿ ವಿತ್ತ |
ತ್ರಿವರ್ಗಹೀನೋಽಪಿ ಹಿ ವಿಂದತೇಽರ್ಥಂ
ತಸ್ಮಾದಿದಂ ಲೋಕಹಿತಾಯ ಗುಹ್ಯಮ್ ||47||

ಕರ್ಮದಿಂದ= ಪ್ರಯತ್ನದಿಂದ ಅರ್ಥವನ್ನು ಪಡೆಯುತ್ತಾನೆ, ಅನರ್ಥವನ್ನು ಹೊಂದುವುದಿಲ್ಲ. ನಿಜ. ಆದರೆ ಇದೂ ಕೂಡ ವಿಧಿಯ ಇಚ್ಛೆಯಂತೆ ಎಂದು ತಿಳಿಯಿರಿ. ತ್ರಿವರ್ಗಹೀನನೂ ಕೂಡ ಮೋಕ್ಷಪ್ರಾಪ್ತಿಗೆ ಅನುಕೂಲವಾದ ರಹಸ್ಯ ಜ್ಞಾನವನ್ನು ವಿಧಿಯ ವ್ಯವಸ್ಥೆಯಂತೆ ಪಡೆಯುತ್ತಾನೆ.

ವೈಶಂಪಾಯನಃ

ತತಸ್ತದಗ್ರ್ಯಂ ವಚನಂ ಮನೋನುಗಂ
ಸಮಸ್ತಮಾಜ್ಞಾಯ ತತೋಽತಿಹೇತುಮತ್ |
ತದಾ ಪ್ರಣೇದುಶ್ಚ ಜಹರ್ಷಿರೇ ಚ ತೇ
ಕುರುಪ್ರವೀರಾಯ ಚ ಚಕ್ರುರಂಜಲೀನ್ ||48||

ಅನಂತರ ಬಹಳ ಯುಕ್ತಿಯುಕ್ತವಾದ, ತಮ್ಮ ಮನಸ್ಸಿಗೆ ಒಪ್ಪಿಗೆಯಾದ ಆ ಎಲ್ಲ ಉತ್ತಮ ವಚನಗಳನ್ನು ತಿಳಿದು ಅವರೆಲ್ಲರೂ ಹರ್ಷೋದ್ಗಾರಗಳನ್ನು ಮಾಡಿದರು. ಕುರುಪ್ರವೀರ ಯುಧಿಷ್ಠಿರನಿಗೆ ನಮಸ್ಕರಿಸಿದರು.

ಸುಚಾರುವರ್ಣಾಕ್ಷರಶಬ್ದಭೂಷಿತಾಂ
ಮನೋನುಗಾಂ ನಿರ್ಧುತವಾಕ್ಯಕಂಟಕಾಮ್ |
ನಿಶಮ್ಯ ತಾಂ ಪಾರ್ಥಿವ ಪಾರ್ಥಭಾಷಿತಾಂ

ಗಿರಂ ನರೇಂದ್ರಾಃ ಪ್ರಶಶಂಸುರೇವ ತೇ |
ಪುನಶ್ಚ ಪಪ್ರಚ್ಛ ಸರಿದ್ವರಾಸುತಂ
ತತಃ ಪರಂ ಧರ್ಮಮಹೀನಸತ್ತ್ವಃ ||49||
ಬಹಳ ರಮಣೀಯವಾದ ವರ್ಣ ಮತ್ತು ಶಬ್ಧಗಳಿಂದ ಭೂಷಿತವಾದ ಮನಸ್ಸಿಗೆ ಒಪ್ಪಿಗೆಯಾಗುವ, ವಾಕ್ಯದೋಷಗಳಿಲ್ಲದ ಯುಧಿಷ್ಠಿರ ವಚನಗಳನ್ನು ಕೇಳಿ ಭೀಮಸೇನ ಮೊದಲಾದ ನರೋತ್ತಮರು ಆ ಮಾತುಗಳನ್ನು ಪ್ರಶಂಸಿಸಿದರು. ಪ್ರಗಲ್ಭ ಅಂತಃಸತ್ವವಿರುವ ಯುಧಿಷ್ಠಿರನು ಗಂಗಾಸುತನನ್ನು ಧರ್ಮದ ಬಗ್ಗೆ ಮತ್ತಷ್ಟು ವಿವರಿಸಬೇಕೆಂದು ಕೇಳಿದರು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ತ್ರಯಸ್ತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತಮೂರನೆಯ
ಅಧ್ಯಾಯವು ಮುಗಿಯಿತು.
* * * *

ಮೂವತ್ನಾಲ್ಕನೆಯ ಅಧ್ಯಾಯ

ಸಂಧಾನಕ್ಕೆ ಅರ್ಹರ ಮತ್ತು ಅನರ್ಹರ ವಿವರಣೆ. ಧನದ ಆಸೆಯಿಂದ ಬಂಧನವನ್ನು ವಿವರಿಸುವ ಬ್ರಾಹ್ಮಣನ ಕಥೆ.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಕುರೂಣಾಂ ಕೀರ್ತಿವರ್ಧನ |
ಪ್ರಶ್ನಂ ಕಂಚಿತ್ ಪ್ರವಕ್ಷ್ಯಾಮಿ ತನ್ಮೇ ವ್ಯಾಖ್ಯಾತುಮರ್ಹಸಿ ||1||
ಕುರುಗಳ ಕೀರ್ತಿಯನ್ನು ಹೆಚ್ಚಿಸಿದ ಮಹಾಪ್ರಾಜ್ಞ! ಪಿತಾಮಹ! ಪ್ರಶ್ನೆಯೊಂದನ್ನು ಕೇಳುತ್ತೇನೆ. ದಯವಿಟ್ಟು ಉತ್ತರವನ್ನು ವಿವರವಾಗಿ ಹೇಳಿ.
ಕೀದೃಶಾ ಮಾನವಾಃ ಸೌಮ್ಯಾಃ ಕೈಃ ಪ್ರೀತಿಃ ಪರಮಾ ಭವೇತ್ |
ಆಯತ್ಯಾಂ ಚ ತದಾತ್ವೇ ಚ ಕೇ ಕ್ಷಮಾಸ್ತಾನ್ ವದಸ್ವ ಮೇ ||2||
ಸೌಮ್ಯ ಸ್ವಭಾವದ ಮಾನವರು ಹೇಗಿರುತ್ತಾರೆ? ಯಾರೊಡನೆ ಪ್ರೀತಿಯು ಶ್ರೇಷ್ಠ? ಭವಿಷ್ಯತ್‌ಕಾಲದಲ್ಲೂ ಮತ್ತು ವರ್ತಮಾನ ಕಾಲದಲ್ಲೂ ಹಿತವಾಗುವಂತೆ ನಡೆದುಕೊಳ್ಳಲು ಯಾರು ಸಮರ್ಥರು? ಅವರನ್ನು ಕುರಿತು ದಯವಿಟ್ಟು ತಿಳಿಸಿರಿ.
ನ ಹಿ ತತ್ರ ಧನಂ ಸ್ಫೀತಂ ನ ಚ ಸಂಬಂಧಿಬಾಂಧವಾಃ |
ತಿಷ್ಠಂತಿ ಯತ್ರ ಸುಹೃದಸ್ತಿಷ್ಠಂತೀತಿ ಮತಿರ್ಮಮ ||3||
ಸಮೃದ್ಧ ಧನದಿಂದ ಯಾವ ಕೆಲಸವು ಆಗುವುದಿಲ್ಲವೋ, ಸಂಬಂಧಿಗಳು, ಬಾಂಧವರು ಯಾವ ಸಂದರ್ಭದಲ್ಲಿ ಉಪಯೋಗಕ್ಕೆ ಬರುವುದಿಲ್ಲವೋ ಅಂತಹ ಕೆಲಸವನ್ನು ಸೌಹಾರ್ದವಿರುವವರು ಮಾಡುತ್ತಾರೆ. ಅಂತಹ ಸಂದರ್ಭದಲ್ಲಿ ಅವರು ಉಪಯೋಗಕ್ಕೆ ಬರುತ್ತಾರೆ. ಇದು ನನ್ನ ಅಭಿಪ್ರಾಯ.
ದುರ್ಲಭೋ ಹಿ ಸುಹೃಚ್ಛ್ರೋತಾ ದುರ್ಲಭಶ್ಚ ಹಿತಃ ಸುಹೃತ್ |
ಏತದ್ ಧರ್ಮಭೃತಾಂ ಶ್ರೇಷ್ಠ ಸರ್ವಂ ವ್ಯಾಖ್ಯಾತುಮರ್ಹಸಿ ||4||
ನಮ್ಮ ಮಾತುಗಳನ್ನು ಸಮಾಧಾನದಿಂದ ಕೇಳುವ ಸುಹೃದ್ ದುರ್ಲಭ. ಹಿತಕರನಾದ ಸುಹೃತ್ ದುರ್ಲಭ. ಧರ್ಮನಿಷ್ಠರಲ್ಲಿ ಶ್ರೇಷ್ಠನೇ! ದಯವಿಟ್ಟು ಇವೆಲ್ಲವನ್ನು ವಿವರಿಸಿರಿ.
ಭೀಷ್ಮಃ
ಸಂದೇಹಾಃ ಪುರುಷಾ ರಾಜನ್ನಸನ್ದೇಹಾಶ್ಚ ತತ್ತ್ವತಃ |
(ಸಂಧೇಯಾನ್ ಪುರುಷಾನ್ ರಾಜನ್ನಸಂಧೇಯಾಂಶ್ಚ ತತ್ವತಃ)
ವದತೋ ಮೇ ನಿಬೋಧ ತ್ವಂ ನಿಖಿಲೇನ ಯುಧಿಷ್ಠಿರ ||5||
ರಾಜನೆ! ಧರ್ಮಸಮ್ಮತವಲ್ಲದ ಕೆಲಸವನ್ನು ಮಾಡಲು ಅಳಕುವವರು, ಅಳಕು ಇಲ್ಲದವರು- ಇವರ ಬಗ್ಗೆ ಹೇಳುವೆನು, ತಿಳಿದುಕೊ. (ಸಂಧಿಗೆ ಅರ್ಹರನ್ನು ಮತ್ತು ಅನರ್ಹರನ್ನು ಕುರಿತು ಹೇಳುವೆ).
ಲುಬ್ಧಃ ಕ್ರೂರಸ್ತ್ಯಕ್ತಧರ್ಮಾ ನಿಕೃತಃ ಶಠ ಏವ ಚ |
ಕ್ಷುದ್ರಃ ಪಾಪಸಮಾಚಾರಃ ಸರ್ವಶಂಕೀ ತಥಾಲಸಃ ||6||
ದೀರ್ಘಸೂತ್ರೋಽನೃಜುಃ ಕಷ್ಟೋ ಗುರುದಾರಪ್ರಧರ್ಷಕಃ |
ವ್ಯಸನೇ ಯಃ ಪರಿತ್ಯಾಗೀ ದುರಾತ್ಮಾ ನಿರಪತ್ರಪಃ ||7||
ಲೋಭಿ, ಕ್ರೂರಿ, ಧರ್ಮವನ್ನು ತ್ಯಜಿಸಿದವನು, ವಂಚಕ, ಕಪಟಿ, ಕ್ಷುದ್ರ, ಪಾಪಕೃತ್ಯಗಳನ್ನು ಮಾಡುವವನು, ಎಲ್ಲರ ಬಗ್ಗೆ ಸಂದೇಹಿಸುವವನು, ಅಲಸ, ವಿಳಂಬದಿಂದ ಕೆಲಸ ಮಾಡುವವನು, ಕೆಟ್ಟವನು, ಗುರುಪತ್ನಿಯನ್ನು ಬಲಾತ್ಕರಿಸಿದವನು, ಕಷ್ಟಕಾಲದಲ್ಲಿ ಬಿಟ್ಟುಹೋಗುವವನು, ನಾಚಿಕೆ ಇಲ್ಲದವನು,
ಸರ್ವತಃ ಪಾಪದರ್ಶೀ ಚ ನಾಸ್ತಿಕೋ ವೇದನಿಂದಕಃ |
ಸಂಪ್ರಕೀರ್ಣೇಂದ್ರಿಯೋ ಲೋಕೇ ಯಃ ಕಾಮನಿರತಶ್ಚರೇತ್ ||8||
ಅಸತ್ಯೋ ಲೋಕವಿದ್ವಿಷ್ಟಃ ಸಮಯೇ ಚಾನವಸ್ಥಿತಃ |
ಪಿಶುನೋಽಥಾಕೃತಪ್ರಜ್ಞೋ ಮತ್ಸರೀ ಪಾಪನಿಶ್ಚಯಃ ||9||
ಎಲ್ಲ ಕಡೆಯೂ ಕೆಡುಕನ್ನೇ ಕಾಣುವವನು, ನಾಸ್ತಿಕ, ವೇದನಿಂದಕ, ಇಂದ್ರಿಯಗಳನ್ನು ಬಹಿರ್ಮುಖವಾಗಿ ಹರಿಯಬಿಟ್ಟವನು, ಭೋಗನಿರತ, ಸತ್ಯವಂತನಲ್ಲದವನು, ಜನರ ದ್ವೇಷಕ್ಕೆ ಗುರಿಯಾದವನು, ಮಾತಿಗೆ ತಕ್ಕಂತೆ ನಡೆದುಕೊಳ್ಳದವನು, ಚಾಡಿಕೋರ,

ಸಂಸ್ಕಾರ ಸಂಪನ್ನವಾದ ಪ್ರಜ್ಞೆಯಿಲ್ಲದವನು, ಮತ್ಸರವುಳ್ಳವನು, ಕೆಟ್ಟ ನಿಶ್ಚಯವುಳ್ಳವನು,
ದುಃಶೀಲೋಽಥಾಕೃತಾತ್ಮಾ ಚ ನೃಶಂಸಃ ಕಿತವಸ್ತಥಾ |
ಮಿತ್ರೈರರ್ಥಕೃತೀ ನಿತ್ಯಮಿಚ್ಛತ್ಯರ್ಥಪರಶ್ಚ ಯಃ ॥10॥
ದುಷ್ಟಚಾರಿತ್ರ್ಯದವನು, ಮನಸ್ಸಿನ ಮೇಲೆ ಹತೋಟಿ ಇಲ್ಲದವನು, ಕ್ರೂರಿ, ವಂಚಕ, ಮಿತ್ರರಿಂದ ಸಂಪತ್ತನ್ನು ಮಾಡಿಕೊಳ್ಳುವವನು, ಯಾವಾಗಲೂ ಹಣದಲ್ಲಿಯೇ ಆಸಕ್ತನು,
ದದತಶ್ಚ ಯಥಾಶಕ್ತಿ ಯೋ ನ ತುಷ್ಯತಿ ಮಂದಧೀಃ |
ಅಮಿತ್ರಮಿವ ಯೋ ಭುಂಕ್ತೇ ಸದಾ ಮಿತ್ರಂ ನರರ್ಷಭ ॥11॥
ಯಥಾಶಕ್ತಿ ದಾನ ಮಾಡುವವನ ಬಗ್ಗೆ ಸಂತುಷ್ಟನಾಗದವನು, ಸದಾ ಮಿತ್ರರನ್ನು ಶತ್ರುವನ್ನು ಹಿಂಸಿಸುವಂತೆ ಹಿಂಸಿಸುವವನು,
ಅಸ್ಥಾನಕ್ರೋಧನೋ ಯಶ್ಚ ಅಕಸ್ಮಾಚ್ಚ ವಿರಜ್ಯತೇ |
ಸುಹೃದಶ್ಚೈವ ಕಲ್ಯಾಣಾನನು ತ್ಯಜತಿ ಕಿಲ್ಬಿಷೀ ॥12॥
ಅನುಚಿತವಾಗಿ ಕೋಪ ಮಾಡಿಕೊಳ್ಳುವವನು, ಕಾರಣವಿಲ್ಲದೆ ದೂರವಾಗುವವನು, ತನ್ನ ಕೆಲಸವಾದ ನಂತರ ಸುಹೃಜ್ಜನರನ್ನು ತ್ಯಜಿಸುವವನು,
ಅಲ್ಪೇಽಪ್ಯಪಕೃತೇ ಮೂಢಸ್ತಥಾಜ್ಞಾನಾತ್ಕೃತೇಪಿ ಚ |
ಕಾರ್ಯೋಪಸೇವೀ ಮಿತ್ರೇಷು ಮಿತ್ರದ್ವೇಷೀ ನರಾಧಿಪ ॥13॥
ಸಣ್ಣ ಅಪಕಾರವನ್ನು ಮಾಡಿದ, ಅಜ್ಞಾನದಿಂದ ಅಪಕಾರ ಮಾಡಿದ ಮಿತ್ರರನ್ನು ದ್ವೇಷಿಸುವವನು, ತನಗೆ ಅನುಕೂಲವಾಗುವಂತೆ ಮಿತ್ರರನ್ನು ಉಪಯೋಗಿಸಿಕೊಳ್ಳುವವನು,
ಶತ್ರುರ್ಮಿತ್ರಮುಖೋ ಯಶ್ಚ ಜಿಹ್ಮಪ್ರೇಕ್ಷೀ ವಿಲೋಭನಃ |
ನ ರಜ್ಯತಿ ಚ ಕಲ್ಯಾಣೇ ಯಸ್ತ್ಯಜೇತ್ತಾದೃಶಂ ನರಮ್ ॥14॥
ಮಿತ್ರನ ಮುಖವಾಡವನ್ನು ಧರಿಸಿದ ಶತ್ರು, ಕುಟಿಲ ದೃಷ್ಟಿಯವನು, ಒಳ್ಳೆಯ ಕೆಲಸಗಳಲ್ಲಿ, ವಿಚಾರಗಳಲ್ಲಿ ಪ್ರೀತಿಯಿಲ್ಲದವನು - ಇಂತಹ ಜನರನ್ನು ತ್ಯಜಿಸಬೇಕು.
ಪಾನಪೋ ದ್ವೇಷಣಃ ಕ್ರೂರೋ ನಿರ್ಘೃಣಃ ಪರುಷಸ್ತಥಾ |
ಪರೋಪತಾಪೀ ಮಿತ್ರಧ್ರುಕ್ ತಥಾ ಪ್ರಾಣಿವಧೇ ರತಃ ॥15॥
ಮದ್ಯಪಾನ ಮಾಡುವವನು, ದ್ವೇಷದ ಸ್ವಭಾವದವನು, ದಯಾರಹಿತ, ಕ್ರೂರ, ಪರರಿಗೆ ತಾಪವುಂಟು ಮಾಡುವವನು, ಮಿತ್ರದ್ರೋಹಿ ಪ್ರಾಣಿಹಿಂಸೆಯನ್ನು ಮಾಡುವವನು,
ಕೃತಘ್ನಶ್ಚಾಧಮೋ ಲೋಕೇ ನ ಸಂಧೇಯಃ ಕಥಂಚನ |
ಛಿದ್ರಾನ್ವೇಷೀ ನ ಸಂಧೇಯಃ ಸಂಧೇಯಾನಪಿ ಮೇ ಶೃಣು ॥16॥
ಕೃತಘ್ನ, ಅಧಮ, ದೋಷಗಳನ್ನೇ ಹುಡುಕುವವನು- ಇವರ ಜೊತೆ ಸ್ನೇಹವನ್ನು ಮಾಡಬಾರದು. ಸಂಧೇಯರ (ಸ್ನೇಹಕ್ಕೆ ಅರ್ಹರ) ಬಗ್ಗೆ ಹೇಳುವೆನು, ಕೇಳು.
ಕುಲೀನಾ ವಾಕ್ಯಸಂಪನ್ನಾ ಜ್ಞಾನವಿಜ್ಞಾನಕೋವಿದಾಃ |
ಮಿತ್ರಜ್ಞಾಶ್ಚ ಕೃತಜ್ಞಾಶ್ಚ ಸರ್ವಜ್ಞಾಃ ಶೋಕವರ್ಜಿತಾಃ ॥17॥
ಸತ್ಕುಲಪ್ರಸೂತರು, ವಾಕ್‌ಪಟುಗಳು, ಸಾಮಾನ್ಯವಾಗಿ ತಿಳಿಯಬೇಕಾದ ವಿಷಯಗಳಲ್ಲಿ ಮತ್ತು ವಿಶೇಷವಾಗಿ ತಿಳಿಯಬೇಕಾದ ವಿಷಯಗಳಲ್ಲಿ ಕೋವಿದರು, ಮಿತ್ರ ಲಕ್ಷಣವನ್ನು ತಿಳಿದವರು, ಕೃತಜ್ಞರು, ಸರ್ವಜ್ಞರು, ಶೋಕರಹಿತರು,
ಮಾಧುರ್ಯಗುಣಸಂಪನ್ನಾಃ ಸತ್ಯಸಂಧಾ ಜಿತೇಂದ್ರಿಯಾಃ |
ವ್ಯಾಯಾಮಶೀಲಾಃ ಸತತಂ ಭೃತ್ಯಪುತ್ರಾಃ ಕುಲೋದ್ಭವಾಃ ॥18॥
ಮಧುರಸ್ವಭಾವದವರು, ಸತ್ಯಸಂಧರು, ಜಿತೇಂದ್ರಿಯರು, ಪ್ರಯತ್ನಶೀಲರು, ಭೃತ್ಯರನ್ನು ಪುತ್ರರಂತೆ ಕಾಣುವವರು, ಕುಲಕ್ಕೆ ಉತ್ಕರ್ಷವನ್ನು ಉಂಟು ಮಾಡುವವರು,
ರೂಪವಂತೋ ಗುಣೋಪೇತಾಸ್ತಥಾಲುಬ್ಧಾ ಜಿತಶ್ರಮಾಃ |
ದೋಷೈರ್ವಿಯುಕ್ತಾಃ ಪ್ರಥಿತಾಸ್ತೇ ಗ್ರಾಹ್ಯಾಃ ಪಾರ್ಥಿವೇನ ಹ ॥19॥
ರೂಪವಂತರು, ಗುಣಸಂಪನ್ನರು, ಲೋಭರಹಿತರು, ಆಯಾಸವಾಗದವರು, ದೋಷರಹಿತರು, ಸುಪ್ರಸಿದ್ಧರು- ಇವರನ್ನು ರಾಜನು ತನ್ನ ವಲಯದಲ್ಲಿ ಇಟ್ಟುಕೊಳ್ಳಬೇಕು.
ಯಥಾಶಕ್ತಿಸಮಾಚಾರಾಃ ಸಂತಸ್ತುಷ್ಯಂತಿ ಹಿ ಪ್ರಭೋ |
ನಾಸ್ಥಾನೇ ಕ್ರೋಧವಂತಶ್ಚ ನ ಚಾಕಸ್ಮಾದ್ ವಿರಾಗಿಣಃ ॥20॥
ಶಕ್ತಿ ಇದ್ದಷ್ಟು ಒಳ್ಳೆಯ ನಡವಳಿಕೆಯನ್ನು ಹೊಂದಿದ ಸಜ್ಜನರು, ಸಂತೋಷವುಳ್ಳವರು, ಅನುಚಿತವಾಗಿ ಕೋಪಮಾಡಿಕೊಳ್ಳದವರು, ಅಸಮಂಜಸ ಕಾರಣಗಳಿಂದ ವಿರಕ್ತರಾಗದವರು,
ವಿರಕ್ತಾಶ್ಚ ನ ರುಷ್ಯಂತಿ ಮನಸಾಪ್ಯರ್ಥಕೋವಿದಾಃ |
ಆತ್ಮಾನಂ ಪೀಡಯಿತ್ವಾಪಿ ಸುಹೃತ್ಕಾರ್ಯಪರಾಯಣಾಃ |
ನ ವಿರಜ್ಯಂತಿ ಮಿತ್ರೇಭ್ಯೋ ವಾಸೋ ರಕ್ತಮಿವಾವಿಕಮ್ ॥21॥
ಗಾಢವಾದ ಆಸೆಯಿಲ್ಲದವರು, ಮನಸ್ಸಿನಲ್ಲೂ ರೋಷರಹಿತರು, ಆಗಬೇಕಾದ ಕೆಲಸಗಳ ಬಗ್ಗೆ ಸರಿಯಾದ ಜ್ಞಾನವಿರುವವರು, ತನಗೆ ತೊಂದರೆ ಮಾಡಿಕೊಂಡು ಮಿತ್ರರ ಕೆಲಸವನ್ನು ಮಾಡುವವರು, ಕೆಂಪು ಉಣ್ಣೆಬಟ್ಟೆಯಂತೆ (ಇದು ತನ್ನ ರಾಗವನ್ನು = ಕೆಂಪು ಬಣ್ಣವನ್ನು ಬಿಡುವುದಿಲ್ಲ) ಸ್ನೇಹಿತರ ಮೇಲಿನ ಪ್ರೀತಿಯನ್ನು ಬಿಡದವರು, (ಅಥವಾ ಉಣ್ಣೆ ಬಟ್ಟೆಯ ಕೆಂಪು ಗಾಢವಲ್ಲ, ಅಂತೆಯೇ

ಮಿತ್ರರ ಬಗ್ಗೆ ಗಾಢವಾದ ಅಂಟನ್ನು ಹೊಂದದವರು),
ದೋಷಾಂಶ್ಚ ಲೋಭಮೋಹಾದೀನರ್ಥೇಷು ಯುವತಿಷ್ವಥ |
ನ ದರ್ಶಯಂತಿ ಸುಹೃದಾಂ ವಿಶ್ವಸ್ತಾ ಬಂಧುವತ್ಸಲಾಃ ॥22॥
ಧನದ ಮೇಲೆ, ತರುಣಿಯರ ಮೇಲೆ ಲೋಭ-ಮೋಹ ಮೊದಲಾದ ದೋಷಗಳನ್ನು ಹೊಂದಿಲ್ಲದವರು, ಮಿತ್ರರ ವಿಶ್ವಾಸಕ್ಕೆ ಪಾತ್ರರು, ಬಂಧುಗಳ ಮೇಲೆ ಪ್ರೀತಿಯುಳ್ಳವರು,
ಲೋಷ್ಟಕಾಂಚನತುಲ್ಯಾರ್ಥಾಃ ಸುಹೃತ್ಸ್ವಶಠಬುದ್ಧಯಃ |
ಯೇ ಚರಂತ್ಯನಭೀಮಾನಾ ನಿಸೃಷ್ಟಾರ್ಥವಿಭೂಷಣಾಃ |
ಸಂಗಹ್ಣಂತಃ ಪರಿಜನಂ ಸ್ವಾಮ್ಯರ್ಥಪರಮಾಃ ಸದಾ ॥23॥
ಮಣ್ಣು ಮತ್ತು ಬಂಗಾರವನ್ನು ಸಮವಾಗಿ ಕಾಣುವವರು, ಮಿತ್ರರ ಬಗ್ಗೆ ವಂಚನೆಯ ಬುದ್ಧಿ ಇಲ್ಲದವರು, ಅಭಿಮಾನರಹಿತರಾಗಿ ಆಚರಣೆಗಳನ್ನು ಮಾಡುವವರು, ದಾನದಿಂದ ಶೋಭೆಯನ್ನು ಗಳಿಸಿದವರು, ಪರಿಜನರನ್ನು ಸಲಹುವವರು, ಸದಾ ತಮ್ಮ ಪ್ರಭುವಿನ ಕೆಲಸವನ್ನು ಸಾಧಿಸುವ ನಿಷ್ಠೆವುಳ್ಳವರು,
ಈದೃಶೈಃ ಪುರುಷಶ್ರೇಷ್ಠೈಃ ಸಂಧಿಂ ಯಃ ಕುರುತೇ ನೃಪಃ |
ತಸ್ಯ ವಿಸ್ತೀರ್ಯತೇ ರಾಷ್ಟ್ರಂ ಜ್ಯೋತ್ಸ್ನಾ ಗ್ರಹಪತೇರಿವ ॥24॥
ಇಂತಹ ಶ್ರೇಷ್ಠ ಪುರುಷರೊಂದಿಗೆ ಸಂಧಿಯನ್ನು ಮಾಡಿಕೊಳ್ಳುವ ರಾಜನ ರಾಷ್ಟ್ರಕ್ಕೆ ವೃದ್ಧಿಯಾಗುತ್ತದೆ. ಚಂದ್ರನ ಪ್ರಭೆಯು ವೃದ್ಧಿಯಾಗುವಂತೆ.
ಶಾಸ್ತ್ರನಿತ್ಯಾ ಜಿತಕ್ರೋಧಾ ಬಲವಂತೋ ರಣಪ್ರಿಯಾಃ |
ಕ್ಷಾಂತಾಃ ಶೀಲಗುಣೋಪೇತಾಃ ಸಂಧೇಯಾಃ ಪುರುಷೋತ್ತಮಾಃ ॥25॥
ಸರಿಯಾದ ಅನುಶಾಸನವನ್ನು ಮಾಡುವ ಶಾಸ್ತ್ರಗಳಲ್ಲಿ ನಿರಂತರ ಆಸಕ್ತರಾದವರು, ಕ್ರೋಧವನ್ನು ಗೆದ್ದವರು, ಬಲಶಾಲಿಗಳು, ಯುದ್ಧವನ್ನು ಎದುರಿಸುವ ಪ್ರೀತಿ ಇರುವವರು, ಕ್ಷಮಾವಂತರು, ಶೀಲವಂತರು- ಇವರು ಸಂಧೇಯರು (ಸಂಧಿಗೆ ಅರ್ಹರು).
ಯೇ ಚ ದೋಷಸಮಾಯುಕ್ತಾ ನರಾಃ ಪ್ರೋಕ್ತಾ ಮಯಾನಘ |
ತೇಷಾಮಪ್ಯಧಮೋ ರಾಜನ್ ಕೃತಘ್ನೋ ಮಿತ್ರಘಾತಕಃ |
ತ್ಯಕ್ತವ್ಯಃ ಸ ದುರಾಚಾರಃ ಸರ್ವೇಷಾಮಿತಿ ನಿಶ್ಚಯಃ॥26॥
ಪಾಪರಹಿತ! ನಾನು ದುಷ್ಟ ಮನುಷ್ಯರ ದೋಷಗಳ ಪಟ್ಟಿಯನ್ನೇ ಕೊಟ್ಟಿದ್ದೇನೆ. ಆ ದೋಷಗಳಲ್ಲಿ ಕೃತಘ್ನತೆ ಮತ್ತು ಮಿತ್ರದ್ರೋಹ ಬಹಳ ಹೀನ ದೋಷಗಳು. ಕೃತಘ್ನ ಮತ್ತು ಮಿತ್ರಘಾತಕನು ಅಧಮ. ಈ ಅಧಮನನ್ನು ಎಲ್ಲರೂ ತ್ಯಜಿಸಲೇಬೇಕು. ಸಂದೇಹವೇ ಇಲ್ಲ.
ಯುಧಿಷ್ಠಿರಃ
ವಿಸ್ತರೇಣಾರ್ಥಸಂಬಂಧಂ ಶ್ರೋತುಮಿಚ್ಛಾಮಿ ಪಾರ್ಥಿವ |
ಮಿತ್ರದ್ರೋಹೀ ಕೃತಘ್ನಶ್ಚ ಯಃ ಪ್ರೋಕ್ತಸ್ತಂ ಚ ಮೇ ವದ ॥27॥
ರಾಜನೆ! ಧನದಿಂದ ಆಗುವ ಬಂಧನವನ್ನು ವಿಸ್ತಾರವಾಗಿ ತಿಳಿಸಿರಿ. ಮಿತ್ರದ್ರೋಹಿ ಮತ್ತು ಕೃತಘ್ನರ ಬಗ್ಗೆಯೂ ತಿಳಿಸಿರಿ.
ಭೀಷ್ಮಃ
ಹಂತ ತೇ ವರ್ತಯಿಷ್ಯೇಽಹಮಿತಿಹಾಸಂ ಪುರಾತನಮ್ |
ಉದೀಚ್ಯಾಂ ದಿಶಿ ಯದ್ ವೃತ್ತಂ ಮ್ಲೇಚ್ಛೇಷು ಮನುಜಾಧಿಪ ॥28॥
ಸಂತೋಷ! ರಾಜನೆ! ಉತ್ತರದಿಕ್ಕಿನಲ್ಲಿ ಮ್ಲೇಚ್ಛರ ಪ್ರದೇಶದಲ್ಲಿ ಹಿಂದೆ ನಡೆದ ಘಟನೆಯೊಂದನ್ನು ಹೇಳುವೆ.
ಬ್ರಾಹ್ಮಣೋ ಮಧ್ಯದೇಶೀಯಃ ಕೃಷ್ಣಾಂಗೋ ವಿತ್ತವರ್ಜಿತಃ |
ಗ್ರಾಮಂ ಪ್ರೇಕ್ಷ್ಯ ಜನಾಕೀರ್ಣಂ ಪ್ರಾವಿಶದ್ ಭೈಕ್ಷಕಾಂಕ್ಷಯಾ ॥29॥
ಮಧ್ಯಪ್ರದೇಶದ ಕೃಷ್ಣಾಂಗ ಎಂಬ ಬ್ರಾಹ್ಮಣ. ಬಡವ. ಬಹಳ ಜನಗಳಿರುವ ಗ್ರಾಮವೊಂದನ್ನು ನೋಡಿ ಅಲ್ಲಿ ಭಿಕ್ಷೆಯನ್ನು ಪಡೆಯುವ ಆಸೆಯಿಂದ ಅಲ್ಲಿಗೆ ಹೋದನು.
ತತ್ರ ದಸ್ಯುರ್ಧನಯುತಃ ಸರ್ವವರ್ಣವಿಶೇಷವಿತ್ |
ಬ್ರಹ್ಮಣ್ಯಃ ಸತ್ಯಸಂಧಶ್ಚ ದಾನೇ ಚ ನಿರತೋಭವತ್ ॥30॥
ಆ ಗ್ರಾಮದಲ್ಲಿ ಒಬ್ಬ ದಸ್ಯು (ದರೋಡೆಕೋರ) ಇದ್ದನು. ಅವನು ಧನವಂತ. ಎಲ್ಲ ವರ್ಣಗಳ ವ್ಯವಸ್ಥೆಯನ್ನು ಸರಿಯಾಗಿ ತಿಳಿದವನು. ಬ್ರಹ್ಮನಿಷ್ಠರಲ್ಲಿ= ವೇದನಿಷ್ಠರಲ್ಲಿ ಆದರವುಳ್ಳವನು. ಸತ್ಯಸಂಧ. ದಾನಶೀಲ.
ತಸ್ಯ ಕ್ಷಯಮುಪಾಗಮ್ಯ ತತೋ ಭಿಕ್ಷಾಮಯಾಚತ |
ಪ್ರತಿಶ್ರಯಂ ಚ ವಾಸಾರ್ಥಂ ಭಿಕ್ಷಾ ಚೈವಾಥ ವಾರ್ಷಿಕೀ ॥31॥
ಕೃಷ್ಣಾಂಗನು ಅವನ ಮನೆಗೆ ಹೋಗಿ ಭಿಕ್ಷೆಯನ್ನು ಬೇಡಿದನು. ವಾಸಕ್ಕೆ ಮನೆಯನ್ನು ಬೇಡಿದನು. ವಾರ್ಷಿಕ ಭಿಕ್ಷೆಯನ್ನು (ಒಂದು ವರ್ಷಕ್ಕೆ ಆಗುವಷ್ಟು ಆಹಾರ ಪದಾರ್ಥಗಳ ಭಿಕ್ಷೆಯನ್ನು) ಬೇಡಿದನು.
ಪ್ರಾದಾತ್ ತಸ್ಮೈ ಸ ವಿಪ್ರಾಯ ವಸ್ತ್ರಂ ಚ ಸದೃಶಂ ನವಮ್ |
ನಾರ್ಯಶ್ಚಾಪಿ ಯಥೋಪೇತಾ ಭರ್ತ್ರಾ ವಿರಹಿತಾಸ್ತದಾ ॥32॥
ಅವನು (ದಸ್ಯುವು) ಅವನಿಗೆ ಎಲ್ಲವನ್ನೂ ಕೊಟ್ಟನು. ಅವನು ಧರಿಸಲು ಯೋಗ್ಯವಾದ ಹೊಸ ವಸ್ತ್ರಗಳನ್ನೂ ಕೊಟ್ಟನು. ಪತಿರಹಿತರಾದ ಶಬರಸ್ತ್ರೀಯರು ಅವನ ಸೇವೆಗಾಗಿ ಸರಿಯಾದ ರೀತಿಯಲ್ಲಿ ಬಂದರು.
(ಪಾಠಾಂತರ : `ನಾರೀಂ ಚಾಪಿ ವಯೋಪೇತಾಂ ಭರ್ತ್ರಾ ವಿರಹಿತಾಂ ತಥಾ' ಪತಿ ಇಲ್ಲದ ತಾರುಣ್ಯದ ಸ್ತ್ರೀಯನ್ನೂ ಕೊಟ್ಟನು).
ಏತತ್ ಸಂಪ್ರಾಪ್ಯ ಹೃಷ್ಟಾತ್ಮಾ ದಸ್ಯೋಃ ಸರ್ವಂ ದ್ವಿಜಸ್ತದಾ |

ತಸ್ಮಿನ್ ಗೃಹವರೇ ರಾಜಂಸ್ತಯಾ ರೇಮೇ ಸ ಗೌತಮಃ ॥33॥
ಆ ಗೌತಮ ಗೋತ್ರದ ಬ್ರಾಹ್ಮಣನು ದಸ್ಯುವಿನಿಂದ ಇದೆಲ್ಲವನ್ನೂ ಪಡೆದು ಸಂತುಷ್ಟನಾಗಿ ಆ ಮನೆಯಲ್ಲಿ ಅವಳೊಡನೆ ವಿಹರಿಸಿದನು.
ಕುಟುಂಬಾರ್ಥೇಷು ದಸ್ಯೋಃ ಸ ಸಾಹಾಯ್ಯಂ ಚಾಪ್ಯಥಾಕರೋತ್ |
ತತ್ರಾವಸತ್ ಸೋಽಥ ವರ್ಷಾಃ ಸಮೃದ್ಧೇ ಶಬರಾಲಯೇ |
ಬಾಣವೇಧ್ಯೇ ಪರಂ ಯತ್ನಮಕರೋಚ್ಚೈವ ಗೌತಮಃ ॥34॥
ಆ ಬ್ರಾಹ್ಮಣನು ದಸ್ಯುವಿಗೆ ಕುಟುಂಬದ ಕೆಲಸಗಳಲ್ಲಿ ಸಹಾಯವನ್ನು ಮಾಡಿದನು. ಸಮೃದ್ಧವಾದ ಆ ಶಬರವಸತಿಯಲ್ಲಿ ಬಹುವರ್ಷ ವಾಸ ಮಾಡಿದನು. ಬಾಣವನ್ನು ಗುರಿಗೆ ಸರಿಯಾಗಿ ಹೊಡೆಯಲು ಬಹಳ ಅಭ್ಯಾಸ ಮಾಡಿದನು.
ಚಕ್ರಾಂಗಾಂಸ್ತು ಸ ನಿತ್ಯಂ ವೈ ಸರ್ವತೋ ಬಾಣಗೋಚರಾನ್ |
ಜಘಾನ ಗೌತಮೋ ರಾಜನ್ಯಥಾ ದಸ್ಯುಗಣಸ್ತಥಾ ॥35॥
ರಾಜನ್! ಆ ಗೌತಮನು ಪ್ರತಿದಿನ ಬಾಣಕ್ಕೆ ನಿಲುಕುತ್ತಿದ್ದ ಚಕ್ರವಾಕಗಳನ್ನು, ದಸ್ಯುಗಳು ಕೊಲ್ಲುವಂತೆ, ಕೊಲ್ಲುತ್ತಿದ್ದನು.
ಹಿಂಸಾಪರೋ ಘೃಣಾಹೀನಃ ಸದಾ ಪ್ರಾಣಿವಧೇ ರತಃ |
ಗೌತಮಃ ಸನ್ನಿಕರ್ಷೇಣ ದಸ್ಯುಭಿಃ ಸಮತಾಮಿಯಾತ್ ॥36॥
ಗೌತಮನು ದಸ್ಯುಗಳ ಸಾಮೀಪ್ಯದಿಂದ ಹಿಂಸಾಸಕ್ತನೂ, ದಯಾರಹಿತನೂ ಸದಾ ಪ್ರಾಣಿವಧೆಯಲ್ಲಿ ನಿರತನೂ ಆಗಿ ದಸ್ಯುಗಳಂತೆಯೇ ಆದನು.
ತಥಾ ತು ವಸತಸ್ತಸ್ಯ ದಸ್ಯುಗ್ರಾಮೇ ಸುಖಂ ತದಾ |
ಅಗಚ್ಛನ್ ಬಹವೋ ಮಾಸಾ ನಿಘ್ನತಃ ಪಕ್ಷಿಣೋ ಬಹೂನ್ ॥37॥
ದಸ್ಯುವಿನ ಗ್ರಾಮದಲ್ಲಿ ಹೀಗೆ ಸುಖವಾಗಿ ಮಾಡುತ್ತಾ, ಬಹಳ ಪಕ್ಷಿಗಳನ್ನು ಕೊಲ್ಲುತ್ತಾ ಅವನ ಬಹುಮಾಸಗಳು ಕಳೆದವು.
ತತಃ ಕದಾಚಿದಪರೋ ದ್ವಿಜಸ್ತಂ ದೇಶಮಾಗಮತ್ |
ಜಟೀ ಚೀರಾಜಿನಧರಃ ಸ್ವಾಧ್ಯಾಯಪರಮಃ ಶುಚಿಃ ॥38॥
ಒಮ್ಮೆ ಜಟಾಧಾರಿಯಾದ, ನಾರುವಸ್ತ್ರ ಮತ್ತು ಅಜಿನಗಳನ್ನು ಧರಿಸಿದ್ದ ವೇದಾದ್ಯಯನ ನಿಷ್ಠನಾದ, ಶುಚಿಯಾದ ಮತ್ತೊಬ್ಬ ಬ್ರಾಹ್ಮಣನು ಆ ಊರಿಗೆ ಬಂದನು.
ವಿನೀತೋ ನಿಯತಾಹಾರೋ ಬ್ರಹ್ಮಣ್ಯೋ ವೇದಪಾರಗಃ |
ಸಬ್ರಹ್ಮಚಾರೀ ತದ್ದೇಶ್ಯಃ ಸಖಾ ತಸ್ಯೈವ ಸುಪ್ರಿಯಮ್ (ಸುಪ್ರಿಯಃ) ॥
ಆ ಬ್ರಾಹ್ಮಣನು ವಿನೀತ. ಆಹಾರನಿಯಮವುಳ್ಳವನು, ಬ್ರಹ್ಮನಿಷ್ಠ. ವೇದಪಾರಂಗತ. ಕೃಷ್ಣಾಂಗನ ಸಹಪಾಠಿ. ಅವನ ಊರಿನವನು. ಅವನ ಪ್ರಿಯಮಿತ್ರ.
ತಂ ದಸ್ಯವೋಽವಸನ್ ಗ್ರಾಮಂ ಪುಮಾಂಸೋ ಗೌತಮೋಽಭವತ್ |
ಸ ತು ವಿಪ್ರಗೃಹಾನ್ವೇಷೀ ಶೂದ್ರಾನ್ನಪರಿವರ್ಜಕಃ |
ಗ್ರಾಮೇ ದಸ್ಯುಜನಾಕೀರ್ಣೇ ವ್ಯಚರತ್ ಸರ್ವತೋದಿಶಮ್ ॥40॥
ಆ ಗ್ರಾಮದಲ್ಲಿ ದಸ್ಯುಗಳದ್ದೇ ವಾಸ. ಗೌತಮ ಮಾತ್ರ ಬ್ರಾಹ್ಮಣ. ಹೊಸದಾಗಿ ಬಂದ ಬ್ರಾಹ್ಮಣನು ಬ್ರಾಹ್ಮಣನ ಮನೆಯನ್ನು ಹುಡುಕುತ್ತಿದ್ದನು. ಶೂದ್ರಾನ್ನವನ್ನು ಸ್ವೀಕರಿಸದವನು, ಬರೀ ದಸ್ಯುಗಳಿಂದ ತುಂಬಿದ್ದ ಆ ಊರಿನಲ್ಲಿ ಈ ಬ್ರಾಹ್ಮಣನು ಎಲ್ಲ ಕಡೆ ಓಡಾಡಿದನು.
ತತಃ ಸ ಗೌತಮಗೃಹಂ ಪ್ರವಿವೇಶ ದ್ವಿಜೋತ್ತಮಃ |
ಗೌತಮಶ್ಚಾಪಿ ಸಂಪ್ರಾಪ್ತಸ್ತಾವನ್ಯೋನ್ಯೇನ ಸಂಗತೌ ॥41॥
ಆ ಬ್ರಾಹ್ಮಣೋತ್ತಮನು ಗೌತಮನ ಮನೆಯನ್ನು ಪ್ರವೇಶಿಸಿದನು. ಆ ಹೊತ್ತಿಗೇ ಗೌತಮನೂ ಬಂದನು. ಅವರಿಬ್ಬರ ಪರಸ್ಪರ ಸಮಾಗಮವಾಯಿತು.
ಚಕ್ರಾಂಗಭಾರಸ್ಕಂಧಂ ತಂ ಧನುಷ್ಪಾಣಿಂ ಕೃತಾಗಸಮ್ |
ರುಧಿರೇಣಾವಸಿಕ್ತಾಂಗಂ ಗೃಹದ್ವಾರಮುಪಾಗತಮ್ ॥42॥
ಹೆಗಲಿನ ಮೇಲೆ ಚಕ್ರವಾಕಗಳ ಭಾರ, ಕೈಯಲ್ಲಿ ಬಿಲ್ಲು, ರಕ್ತದಿಂದ ತೊಯ್ದ ಶರೀರ. ನಾನಾ ಪಾಪಕಾರ್ಯಗಳನ್ನು ಮಾಡಿದವನು.
ತಂ ದೃಷ್ಟ್ವಾ ಪುರುಷಾದಾಭಮಪಧ್ವಸ್ತಂ ಕ್ಷಯಾಗತಮ್ |
ಅಭಿಜ್ಞಾಯ ದ್ವಿಜೋ ವ್ರೀಡಾಮಗಮದ್ವಾಕ್ಯಮಾಹ ಚ ॥43॥
ಮನೆಯ ಬಾಗಿಲಿಗೆ ಬಂದ ಅವನನ್ನು ನೋಡಿ, ನರಭಕ್ಷಕನಂತೆ ಇದ್ದ ಸಂಪೂರ್ಣ ಭ್ರಷ್ಟನಾಗಿದ್ದ ಅವನನ್ನು ಗುರುತಿಸಿದ ಬ್ರಾಹ್ಮಣನು ಅವನೊಡನೆ ಮಾತನಾಡಲು ಹಿಂಜರಿದನು. ಅನಂತರ ಹೇಳಿದನು.
ಕಿಮಿದಂ ಕುರುಷೇ ಮೌಢ್ಯಾದ್ ವಿಪ್ರ ಸದ್ಭಿಃ ಕುಲೋದ್ಗತಃ |
ಮಧ್ಯದೇಶಪರಿಜ್ಞಾತೋ ದಸ್ಯುಭಾವಂ ಗತಃ ಕಥಮ್ ॥44॥
ಬ್ರಾಹ್ಮಣ! ಮೌಢ್ಯಕ್ಕೆ ವಶನಾಗಿ ಇದೇನು ಮಾಡುತ್ತಿರುವೆ! ನೀನು ಸತ್ಕುಲಪ್ರಸೂತ. ಮಧ್ಯ ಪ್ರದೇಶದಲ್ಲಿ ನೀನು ಪ್ರಸಿದ್ಧ ಬ್ರಾಹ್ಮಣ. ಈ ದಸ್ಯು ಸ್ಥಿತಿ ಹೇಗೆ ಉಂಟಾಯಿತು?
ಪೂರ್ವಾನ್ ಸ್ಮರ ದ್ವಿಜಾಗ್ರ್ಯಾಂಸ್ತಾನ್ ಪ್ರಖ್ಯಾತಾನ್ ವೇದಪಾರಗಾನ್ |
ಯೇಷಾಂ ವಂಶೇಽಭಿಜಾತಸ್ತ್ವಮೀದೃಶಃ ಕುಲಪಾಂಸನಃ ॥45॥
ಯಾರ ವಂಶದಲ್ಲಿ ನೀನು ಹುಟ್ಟಿದೆಯೋ ಆ ನಿನ್ನ ಪೂರ್ವಜರು ಶ್ರೇಷ್ಠ ಬ್ರಾಹ್ಮಣರು. ವೇದಪಾರಂಗತರು. ಪ್ರಖ್ಯಾತರು. ಅವರನ್ನು

ಸ್ಮರಿಸು. ಈ ಹಿನ್ನೆಲೆಯ ನೀನು ಹೇಗೆ ಕುಲಕ್ಕೆ ಕಳಂಕ ಹಚ್ಚಿರುವಿ?
ಅವಬುಧ್ಯಾತ್ಮನಾತ್ಮಾನಂ ಸತ್ಯಂ ಶೀಲಂ ಶ್ರುತಂ ದಮಮ್ |
ಅನುಕ್ರೋಶಂ ಚ ಸಂಸ್ಮೃತ್ಯ ತ್ಯಜ ವಾಸಮಿಮಂ ದ್ವಿಜ ॥46॥
ನೀನು ಆತ್ಮ ಪರೀಕ್ಷಣದಿಂದ ನಿನ್ನನ್ನು ತಿಳಿದುಕೋ. ಸತ್ಯ, ಶೀಲ, ವಿದ್ಯೆ, ದಮ, ದಯೆ- ಈ ಗುಣಗಳನ್ನು ಅನುಸಂಧಾನ ಮಾಡು. ಈ ವಸತಿಯನ್ನು ಬಿಡು.
ಏವಮುಕ್ತಃ ಸ ಸುಹೃದಾ ತದಾ ತೇನ ಹಿತೈಷಿಣಾ |
ಪ್ರತ್ಯುವಾಚ ತತೋ ರಾಜನ್ ವಿನಿಶ್ಚಿತ್ಯ ತದಾರ್ತವತ್ ॥47॥
ಹಿತೈಷಿಯಾದ ಮಿತ್ರನಿಂದ ಹೀಗೆ ಹೇಳಲ್ಪಟ್ಟ ಆ ಕೃಷ್ಣಾಂಗನು ಬಹಳ ಆರ್ತನಾಗಿ, ಮುಂದೆ ಮಾಡಬೇಕಾದದ್ದನ್ನು ಸರಿಯಾಗಿ ನಿರ್ಧರಿಸಿ ಉತ್ತರವನ್ನು ಹೇಳಿದನು.
ಅಧನೋಽಸ್ಮಿ ದ್ವಿಜಶ್ರೇಷ್ಠ ನ ಚ ವೇದವಿದಪ್ಯಹಮ್ |
ವೃತ್ತ್ಯರ್ಥಮಿಹ ಸಂಪ್ರಾಪ್ತಂ ವಿದ್ಧಿ ಮಾಂ ದ್ವಿಜಸತ್ತಮ ॥48॥
ದ್ವಿಜಶ್ರೇಷ್ಠ! ನನ್ನಲ್ಲಿ ಏನೂ ಹಣವಿಲ್ಲ. ನಾನು ವೇದಾಧ್ಯಯನವನ್ನೂ ಮಾಡಿಲ್ಲ. ದ್ವಿಜಶ್ರೇಷ್ಠ! ನಾನು ಜೀವನೋಪಾಯವನ್ನು ಹುಡುಕುತ್ತಾ ಇಲ್ಲಿಗೆ ಬಂದಿದ್ದೇನೆ.
ಸ ದದರ್ಶ ಹಿ ವಿಪ್ರರ್ಷೇ ಕೃತಾರ್ಥಂ ವೇದ್ಮ್ಯಹಂ ದ್ವಿಜ |
ಆತ್ಮಾನಂ ಸಹ ಯಾಸ್ಯಾವಃ ಶ್ವೋ ವಸಾದ್ಯೇಹ ಶರ್ವರೀಮ್ ॥49॥
ವಿಪ್ರಋಷಿಯೇ! ಬ್ರಾಹ್ಮಣ! ನೀನು ಏನನ್ನು ಇಲ್ಲಿ ಗಮನಿಸಿರಿವಿಯೋ, ಅದೆಲ್ಲವೂ ನನಗೆ ಗೊತ್ತಿದೆ. ಈ ರಾತ್ರಿ ಇಲ್ಲೇ ಇರು. ನಾಳೆ ನಾವಿಬ್ಬರೂ ಇಲ್ಲಿಂದ ಹೋಗೋಣ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಚತುಸ್ತ್ರಿಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.
ಮೂವತ್ತೈದನೆಯ ಅಧ್ಯಾಯ
ಗ್ರಾಮದಿಂದ ಗೌತಮನ ನಿರ್ಗಮನ. ವರ್ತಕರ ಗುಂಪಿನೊಂದಿಗೆ ಗಮನ. ಅಪಘಾತ. ಏಕಾಕಿಯಾಗಿ ಅಲೆದಾಟ. ಯಾವುದೋ ರಮಣೀಯ ಕಾಡಿಗೆ ಪ್ರವೇಶ. ಅಲ್ಲಿ ನಡೆದ ಅದ್ಭುತ.
ಭೀಷ್ಮಃ
ತಸ್ಯಾಂ ನಿಶಾಯಾಂ ವ್ಯುಷ್ಟಾಯಾಂ ಗತೇ ತಸ್ಮಿನ್ ದ್ವಿಜೋತ್ತಮೇ |
ನಿಷ್ಕ್ರಮ್ಯ ಗೌತಮೋಽಗಚ್ಛತ್ ಸಮುದ್ರಂ ಪ್ರತಿ ಭಾರತ ॥1॥
ಭರತಕುಲಸಂಜಾತ! ಆ ರಾತ್ರಿಯು ಕಳೆಯಿತು. ಆ ಬ್ರಾಹ್ಮಣಶ್ರೇಷ್ಠನು ಹೊರಟುಹೋದನು. ಗೌತಮನು ಅಲ್ಲಿಂದ ನಿರ್ಗಮಿಸಿ ಸಮುದ್ರದ ಕಡೆ ಹೋದನು.
ಸಾಮುದ್ರಕಾನ್ ಸ ವಣಿಜಸ್ತತೋಽಪಶ್ಯತ್ ಸ್ಥಿತಾನ್ ಪಥಿ |
ಸ ತೇನ ಸಾರ್ಥೇನ ಸಹ ಪ್ರಯಯೌ ಸಾಗರಂ ಪ್ರತಿ ॥2॥
ದಾರಿಯಲ್ಲಿ ಸಮುದ್ರತೀರದಲ್ಲಿ ವ್ಯಾಪಾರ ಮಾಡುವ ವರ್ತಕರನ್ನು ನೋಡಿದನು. ಆ ಗುಂಪಿನೊಂದಿಗೆ ಸಮುದ್ರದ ಕಡೆ ಹೋದನು.
ಸ ತು ಸಾರ್ಥೋ ಮಹಾರಾಜ ಕಸ್ಮಿಂಶ್ಚಿದ್ ಗಿರಿಗಹ್ವರೇ |
ಮತ್ತೇನ ದ್ವಿರದೇನಾಥ ನಿಹತಃ ಪ್ರಾಯಶೋಭವತ್ ॥3॥
ಮಹಾರಾಜ! ಆ ಗುಂಪು ಬೆಟ್ಟದ ಗುಹೆಯೊಂದರಲ್ಲಿ ತಂಗಿದ್ದಾಗ ಮದಿಸಿದ ಆನೆಯೊಂದು ಆ ಗುಂಪಿನಲ್ಲಿದ್ದ ಬಹಳ ಜನರನ್ನು ಕೊಂದುಹಾಕಿತು.
ಸ ಕಥಂಚಿದ್ ಭಯಾತ್ ತಸ್ಮಾದ್ ವಿಮುಕ್ತೋ ಬ್ರಾಹ್ಮಣಸ್ತದಾ |
ಕಾದಿಗ್ಭ್ರಾಂತೋ ಜೀವಿತಾರ್ಥೀ ಪ್ರದುದ್ರಾವೋತ್ತರಾಂ ದಿಶಮ್ ॥4॥
ಆಗ ಆ ಬ್ರಾಹ್ಮಣನು, ಹೇಗೋ ಆ ಭಯದಿಂದ ಬಿಡುಗಡೆಯನ್ನು ಹೊಂದಿ, ದಿಗ್ಭ್ರಾಂತನಾಗಿ, ಪ್ರಾಣ ಉಳಿದರೆ ಸಾಕು ಎಂಬ ಸ್ಥಿತಿಯಲ್ಲಿ ಉತ್ತರ ದಿಕ್ಕಿನ ಕಡೆಗೆ ಓಡಿದನು.
ಸ ಸರ್ವತಃ ಪರಿಭ್ರಷ್ಟಃ ಸಾರ್ಥಾದ್ದೇಶಾತ್ತಥಾರ್ಥತಃ |
ಏಕಾಕೀ ವ್ಯದ್ರವತ್ ತತ್ರ ವನೇ ಕಿಂಪುರುಷೋ ಯಥಾ ॥5॥
ಅವನು ಆ ಗುಂಪಿನಿಂದ ಮತ್ತು ಆ ಸ್ಥಳದಿಂದ ತಪ್ಪಿಸಿಕೊಂಡು, ಹಣವೂ ಇಲ್ಲದೆ. ಏಕಾಕಿಯಾಗಿ ಆ ವನದಲ್ಲಿ, ಕಿಂಪುರುಷನು ಅಲೆಯುವಂತೆ ಅಲೆದನು.
ಸ ಪಂಥಾನಮಥಾಸಾದ್ಯ ಸಮುದ್ರಾಭಿಸರಂ ತದಾ |
ಆಸಸಾದ ವನಂ ರಮ್ಯಂ ಮಹತ್ ಪುಷ್ಪಿತಪಾದಪಮ್ ॥6॥
ಅಲೆಯುತ್ತಾ ಸಮುದ್ರದ ಕಡೆಗೆ ಹೋಗುವ ದಾರಿಯನ್ನು ತಲುಪಿದನು. ಆ ದಾರಿಯಲ್ಲಿ ಹೋಗುತ್ತಾ ಹೂಬಿಟ್ಟ ಮರಗಳಿರುವ, ರಮಣೀಯವಾದ ದೊಡ್ಡ ಕಾಡನ್ನು ತಲುಪಿದನು.
ಸರ್ವರ್ತುಕೈರಾಮ್ರವನೈಃ ಪುಷ್ಪಿತೈರುಪಶೋಭಿತಮ್ |
ನಂದನೋದ್ದೇಶಸದೃಶಂ ಯಕ್ಷಕಿನ್ನರಸೇವಿತಮ್ ॥7॥
ಎಲ್ಲ ಋತುಗಳಲ್ಲು ಫಲಕೊಡುವ, ಹೂಬಿಟ್ಟ ಮಾವಿನ ಅರಣ್ಯದಿಂದ ಆ ವನವು ಶೋಭಿಸುತ್ತಿತ್ತು. ಅಲ್ಲಿ ಯಕ್ಷರೂ, ಕಿನ್ನರರೂ

ಇದ್ದರು. ಆ ವನವು ನಂದನವನದಂತೆ ಇತ್ತು.
ಶಾಲತಾಲಧವಾಶ್ವತ್ಥಚಿಂಚಾಗರುವನೈಸ್ತಥಾ |
ಚಂದನಸ್ಯ ಚ ಮುಖ್ಯಸ್ಯ ಪಾದಪೈರುಪಶೋಭಿತಮ್ ॥8॥
ಶಾಲ-ತಾಲ-ಧವ-ಅಶ್ವತ್ಥ-ಹುಣಸೆ, ಅಗರುಗಳ ವನಗಳು ಆ ವನದಲ್ಲಿದ್ದವು. ಬಹಳ ಚಂದನ ವೃಕ್ಷಗಳಿಂದ ಅರಣ್ಯವು ಶೋಭಿಸುತ್ತಿತ್ತು.

ಗಿರಿಪ್ರಸ್ಥೇಷು ರಮ್ಯೇಷು ಶುಭೇಷು ಸುಸುಗಂಧಿಷು |
ಸಮಂತತೋ ದ್ವಿಜಶ್ರೇಷ್ಠಾ ವಲ್ಗು ಕೂಜಂತಿ ತತ್ರ ವೈ ॥9॥
ಬಹಳ ಸುಗಂಧ ಮಯವಾದ, ಶುಭವಾದ, ರಮ್ಯವಾದ ಗಿರಿಪ್ರಸ್ಥಗಳಲ್ಲಿ ಸುತ್ತಲೂ ಶ್ರೇಷ್ಠ ಹಕ್ಕಿಗಳು ರಮಣೀಯವಾಗಿ ಕೂಗುತ್ತಿದ್ದವು.
ಮನುಷ್ಯವದನಾಸ್ತ್ವನ್ಯೇ ಭಾರುಂಡಾ ಇತಿ ವಿಶ್ರುತಾಃ |
ಭೂಲಿಂಗಶಕುನಾಶ್ಚಾನ್ಯೇ ಸಾಮುದ್ರಾಃ ಸರ್ವತೋಭವನ್ ॥10॥
ಮನುಷ್ಯ ಮುಖವಿದ್ದ `ಭಾರುಂಡ' ಎಂದು ಪ್ರಸಿದ್ಧವಾಗ ಹಕ್ಕಿಗಳು, `ಭೂಲಿಂಗ' ಎಂಬ ಹಕ್ಕಿಗಳೂ, `ಸಾಮುದ್ರ' ಎಂಬ ಹಕ್ಕಿಗಳು ಎಲ್ಲ ಕಡೆ ಇದ್ದವು.
ಸ ತಾನ್ಯತಿಮನೋಜ್ಞಾನಿ ವಿಹಂಗಾಭಿರುತಾನಿ ವೈ |
ಶೃಣ್ವನ್ ಸುರಮಣೀಯಾನಿ ವಿಪ್ರೋಽಗಚ್ಛತ ಗೌತಮಃ ॥11॥
ವಿಪ್ರ ಗೌತಮನು ಬಹಳ ಮನೋಜ್ಞವಾದ, ಬಹಳ ರಮಣೀಯವಾದ ಆ ಹಕ್ಕಿಗಳ ಧ್ವನಿಯನ್ನು ಕೇಳುತ್ತಾ ಸಾಗಿದನು.
ತತೋಽಪಶ್ಯತ್ ಸುರಮ್ಯೇ ಸ ಸುವರ್ಣಸಿಕತಾಚಿತೇ |
ದೇಶಭಾಗೇ ಸಮೇ ಚಿತ್ರೇ ಸ್ವರ್ಗೋದ್ದೇಶಸಮಪ್ರಭೇ ॥12॥
ಶ್ರಿಯಾ ಜುಷ್ಟಂ ಮಹಾವೃಕ್ಷಂ ನ್ಯಗ್ರೋಧಂ ಪರಿಮಂಡಲಮ್ |
ಶಾಖಾಭಿರನುರೂಪಾಭಿರ್ಭೂಷಿತಂ ಛತ್ರಸನ್ನಿಭಮ್ ॥13॥
ಆಗ ಬಹಳ ರಮಣೀಯವಾದ, ಬಂಗಾರದ ಕಣಗಳು ಹರಡಿರುವ ಸಮತಟ್ಟಾದ, ಸುಂದರವಾದ ಸ್ವರ್ಗದ ಪ್ರದೇಶದ ಕಾಂತಿಯಂತಹ ಕಾಂತಿಯನ್ನು ಹೊಂದಿದ್ದ ಒಂದು ಸ್ಥಳದಲ್ಲಿ ಬಹಳ ರಮಣೀಯವಾಗಿದ್ದ, ದೊಡ್ಡ ಸುತ್ತಳತೆಯಿದ್ದ ನ್ಯಗ್ರೋಧ (ಆಲದ) ಮರವನ್ನು ನೋಡಿದನು.
ತಸ್ಯ ಮೂಲಂ ಸುಸಂಸಿಕ್ತಂ ವರಚಂದನವಾರಿಣಾ |
ದಿವ್ಯಪುಷ್ಪಾನ್ವಿತಂ ಶ್ರೀಮತ್ಪಿತಾಮಹಸದೋಪಮಮ್ ॥14॥
ಆ ಮರದ ಮೂಲವು ಒಳ್ಳೆಯ ಗಂಧದ ನೀರಿನಿಂದ ಎರೆಯಲ್ಪಟ್ಟಿತ್ತು. ದಿವ್ಯ ಪುಷ್ಪಗಳು ಆ ಮರದಲ್ಲಿದ್ದವು. ಆ ಪ್ರದೇಶವು ಚತುರ್ಮುಖ ಬ್ರಹ್ಮದೇವರ ಸದನದಂತಿತ್ತು.
ತಂ ದೃಷ್ಟ್ವಾ ಗೌತಮಃ ಪ್ರೀತೋ ಮುನಿಕಾಂತಮನುತ್ತಮಮ್ |
ಮಧ್ಯೇಪುರಗೃಹಪ್ರಖ್ಯಂ ಪುಷ್ಪಿತೈಃ ಪಾದಪೈರ್ವೃತಮ್ |
ತಮಾಗಮ್ಯ ಮುದಾ ಯುಕ್ತಸ್ತಸ್ಯಾಧಸ್ತಾದುಪಾವಿಶತ್ ॥15॥
ಗೌತಮನು ಮುನಿಗಳಿಗೆ ಪ್ರಿಯವಾದ, ಉತ್ತಮವಾದ, ಊರಿನ ಮಧ್ಯ ಇರುವ ಮನೆಯಂತಿದ್ದ, ಸುತ್ತಲೂ ಹೂಬಿಟ್ಟ ಮರಗಳಿದ್ದ ಆ ಮರವನ್ನು ನೋಡಿ ಪ್ರೀತನಾದನು. ಆ ಮರದ ಬಳಿ ಬಂದು ಸಂತೋಷದಿಂದ ಅದರ ಕೆಳಗೆ ಕುಳಿತನು.
ತತ್ರಾಸೀನಸ್ಯ ಕೌರವ್ಯ ಗೌತಮಸ್ಯ ಸುಖಃ ಶಿವಃ |
ಪುಷ್ಪಾಣಿ ಸಮುಪಸ್ಪೃಶ್ಯ ಪ್ರವವಾವನಿಲಃ ಶುಚಿಃ |
ಹ್ಲಾದಯನ್ ಸರ್ವಗಾತ್ರಾಣಿ ಗೌತಮಸ್ಯ ತದಾ ನೃಪ ॥16॥
ಕೌರವ್ಯ! ಅಲ್ಲಿ ಪುಷ್ಪಗಳನ್ನು ಮುಟ್ಟಿ ಬೀಸುತ್ತಿದ್ದ ಗಾಳಿಯು ಶುಚಿಯೂ, ಸುಖಕರವೂ, ಮಂಗಳಕರವೂ ಆಗಿತ್ತು. ಈ ಗಾಳಿಯು ಆಗ ಅಲ್ಲಿ ಕುಳಿತಿದ್ದ ಗೌತಮನ ಇಡೀ ದೇಹಕ್ಕೆ ಆಹ್ಲಾದವನ್ನುಂಟು ಮಾಡಿತು.
ಸ ತು ವಿಪ್ರಃ ಪರಿಶ್ರಾಂತಃ ಸ್ಪೃಷ್ಟಃ ಪುಣ್ಯೇನ ವಾಯುನಾ |
ಸುಖಮಾಸಾದ್ಯ ಸುಷ್ವಾಪ ಭಾಸ್ಕರಶ್ಚಾಸ್ತಮಭ್ಯಗಾತ್ ॥17॥
ಬಳಲಿದ್ದ ಆ ವಿಪ್ರನು ಪವಿತ್ರವಾದ ಗಾಳಿಯ ಸ್ಪರ್ಶದಿಂದ ಸುಖವನ್ನು ಹೊಂದಿ ನಿದ್ರಿಸಿದನು. ಸೂರ್ಯನು ಅಸ್ತನಾದನು.
ತತೋಽಸ್ತಂ ಭಾಸ್ಕರೇ ಯಾತೇ ಸಂಧ್ಯಾಕಾಲ ಉಪಸ್ಥಿತೇ |
ಆಜಗಾಮ ಸ್ವಭವನಂ ಬ್ರಹ್ಮಲೋಕಾತ್ ಖಗೋತ್ತಮಃ ॥18॥
ನಾಡೀಜಂಘ ಇತಿ ಖ್ಯಾತೋ ದಯಿತೋ ಬ್ರಹ್ಮಣಃ ಸಖಾ |
ಬಕರಾಜೋ ಮಹಾಪ್ರಾಜ್ಞಃ ಕಶ್ಯಪಸ್ಯಾತ್ಮಸಂಭವಃ ॥19॥
ಸೂರ್ಯನು ಅಸ್ತನಾಗಿ ಸಂಧ್ಯಾಕಾಲವು ಉಪಸ್ಥಿತವಾದಾಗ ಬ್ರಹ್ಮಲೋಕದಿಂದ `ನಾಡೀಜಂಘ' ಎಂದು ಪ್ರಸಿದ್ಧವಾದ ಶ್ರೇಷ್ಠಹಕ್ಕಿಯು ತನ್ನ ಮನೆಗೆ ಬಂದಿತು. ಈ ಹಕ್ಕಿಯು ಬ್ರಹ್ಮದೇವನ ಪ್ರಿಯಮಿತ್ರ. ಶ್ರೇಷ್ಠ ಬಕಪಕ್ಷಿ. ಬಕಗಳ ರಾಜ. ಮಹಾಪ್ರಾಜ್ಞ. ಕಶ್ಯಪರ ಮಗ.
ರಾಜಧರ್ಮೇತಿ ವಿಖ್ಯಾತೋ ಬಭೂವಾಪ್ರತಿಮೋ ಭುವಿ |
ದೇವಕನ್ಯಾಸುತಃ ಶ್ರೀಮಾನ್ ವಿದ್ವಾನ್ ದೇವಪತಿಪ್ರಭಃ ॥20॥
ಈ ಹಕ್ಕಿ `ರಾಜಧರ್ಮ' ಎಂದು ಪ್ರಖ್ಯಾತವಾಗಿತ್ತು. ಭೂಮಿಯಲ್ಲಿ ಇದಕ್ಕೆ ಸದೃಶವಾದ ಯಾವ ಚೇತನವೂ ಇರಲಿಲ್ಲ. ದೇವಕನ್ಯೆಯ ಮಗ. ಕಾಂತಿಸಂಪನ್ನ. ಪಂಡಿತ. ಇಂದ್ರನ ತೇಜಸ್ಸಿನಂತಹ ತೇಜಸ್ಸನ್ನು ಹೊಂದಿದವನು.
ಮೃಷ್ಟಹಾಟಕಸಂಛನ್ನೋ ಭೂಷಣೈರರ್ಕಸನ್ನಿಭೈಃ |

ಭೂಷಿತಃ ಸರ್ವಗಾತ್ರೇಷು ದೇವಗರ್ಭಃ ಶ್ರಿಯಾ ಜ್ವಲನ್ ||21||
ಪರಿಶುದ್ಧ ಬಂಗಾರವು ಅವನ ದೇಹವನ್ನು ಮುಚ್ಚಿತ್ತು. ಸೂರ್ಯನಂತೆ ಉಜ್ವಲವಾದ ಆಭರಣಗಳಿಂದ ಅದರ ದೇಹವು ಅಲಂಕೃತವಾಗಿತ್ತು. ದೇವಸಂತತಿಯಾದ ಆ ಹಕ್ಕಿಯು ಕಾಂತಿಯಿಂದ ಬೆಳಗುತ್ತಿತ್ತು.
ತಮಾಗತಂ ದ್ವಿಜಂ ದೃಷ್ಟ್ವಾ ವಿಸ್ಮಿತೋ ಗೌತಮೋಽಭವತ್ |
ಕ್ಷುತ್ಪಿಪಾಸಾಪರೀತಾತ್ಮಾ ಹಿಂಸಾರ್ಥೀ ಚಾಪ್ಯವೈಕ್ಷತ ||22||
ಗೌತಮನು ಬಂದ ಆ ಹಕ್ಕಿಯನ್ನು ನೋಡಿ ವಿಸ್ಮಿತನಾದನು. ಹಸಿವು- ಬಾಯಾರಿಕೆಗಳಿಂದ ಪೀಡಿತನಾಗಿದ್ದ ಅವನು ಅದನ್ನು ಕೊಲ್ಲುವ ಇಚ್ಛೆಯಿಂದ ನೋಡಿದನು.
ರಾಜಧರ್ಮಾ
ಸ್ವಾಗತಂ ಭವತೇ ವಿಪ್ರ ದಿಷ್ಟ್ಯಾ ಪ್ರಾಪ್ತೋಽಸಿ ಮೇ ಗೃಹಮ್ |
ಅಸ್ತಂ ಚ ಸವಿತಾ ಯಾತಃ ಸಂಧ್ಯೇಯಂ ಸಮುಪಸ್ಥಿತಾ ||23||
ಮಮ ತ್ವಂ ನಿಲಯಂ ಪ್ರಾಪ್ತಃ ಪ್ರಿಯಾತಿಥಿರನಿಂದಿತಃ |
ಪೂಜಿತೋ ಯಾಸ್ಯಸಿ ಪ್ರಾತರ್ವಿಧಿದೃಷ್ಟೇನ ಕರ್ಮಣಾ ||24||
ವಿಪ್ರ! ನಿನಗೆ ಸ್ವಾಗತ. ನನ್ನ ಭಾಗ್ಯದಿಂದ ನನ್ನ ಮನೆಗೆ ಬಂದಿರುವಿ. ಸೂರ್ಯನು ಅಸ್ತನಾಗಿದ್ದಾನೆ. ಈಗ ಸಂಧ್ಯಾಕಾಲ, ನೀನು ನನ್ನ ಮನೆಗೆ ಬಂದಿರುವ ಪ್ರಿಯ, ಶುದ್ಧ ಅತಿಥಿ. ವಿಧಿಗೆ ಅನುಗುಣವಾದ ಆಚರಣೆಗಳಿಂದ ನಾನು ನಿನ್ನನ್ನು ಸತ್ಕರಿಸುವೆ. ಬೆಳಗಾದ ನಂತರ ನೀವು ಹೋಗಬೇಕು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಪಂಚತ್ರಿಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯವು ಮುಗಿಯಿತು.
ಮೂವತ್ತಾರನೆಯ ಅಧ್ಯಾಯ
`ರಾಜಧರ್ಮ'ನಿಂದ ಗೌತಮನಿಗೆ ಸತ್ಕಾರ. `ವಿರೂಪಾಕ್ಷ' ಎಂಬ
ರಾಜನ ಬಳಿ ಹೋಗಲು ಸಲಹೆ. ಗೌತಮನ ಗಮನ.
ಭೀಷ್ಮಃ
ಗಿರಂ ತಾಂ ಮಧುರಾಂ ಶ್ರುತ್ವಾ ಗೌತಮೋ ವಿಸ್ಮಿತಸ್ತದಾ |
ಕೌತೂಹಲಾನ್ವಿತೋ ರಾಜನ್ ರಾಜಧರ್ಮಾಣಮೈಕ್ಷತ ||1||
ರಾಜನೆ! ಆ ಮಧುರವಾದ ಮಾತನ್ನು ಕೇಳಿ ಗೌತಮನು ವಿಸ್ಮಿತನಾದನು. ಕುತೂಹಲದಿಂದ ರಾಜಧರ್ಮನನ್ನು ನೋಡಿದನು.
ರಾಜಧರ್ಮಾ
ಭೋಃ ಕಶ್ಯಪಸ್ಯ ಪುತ್ರೋಽಹಂ ಮಾತಾ ದಾಕ್ಷಾಯಣೀ ಚ ಮೇ |
ಅತಿಥಿಸ್ತ್ವಂ ಗುಣೋಪೇತಃ ಸ್ವಾಗತಂ ತೇ ದ್ವಿಜರ್ಷಭ ||2||
ದ್ವಿಜಶ್ರೇಷ್ಠ! ನಾನು ಕಶ್ಯಪರ ಮಗ. ನನ್ನ ತಾಯಿ ದಾಕ್ಷಾಯಿಣಿ. ಗುಣಸಂಪನ್ನನಾದ ನೀನು ನನ್ನ ಅತಿಥಿ. ನಿನಗೆ ಸ್ವಾಗತ.
ಭೀಷ್ಮಃ
ತಸ್ಮೈ ದತ್ತ್ವಾ ಸ ಸತ್ಕಾರಂ ವಿಧಿದೃಷ್ಟೇನ ಕರ್ಮಣಾ |
ಶಾಲಪುಷ್ಪಮಯೀಂ ದಿವ್ಯಾಂ ಬೃಸೀಂ ಸಮುಪಕಲ್ಪಯತ್ ||3||
ಆ ಹಕ್ಕಿಯು ಶಾಸ್ತ್ರೋಕ್ತ ವಿಧಿಯಿಂದ ಆ ಬ್ರಾಹ್ಮಣನಿಗೆ ಸತ್ಕಾರವನ್ನು ಮಾಡಿ ಶಾಲಪುಷ್ಪಗಳ ಆಸನವನ್ನು ಕಲ್ಪಿಸಿತು.
ಭಗೀರಥರಥಾಕ್ರಾಂತಾನ್ ದೇಶಾನ್ ಗಂಗಾನಿಷೇವಿತಾನ್ |
ಯೇ ಚರಂತಿ ಮಹಾಮೀನಾಸ್ತಾಂಶ್ಚ ತಸ್ಯಾನ್ವಕಲ್ಪಯತ್ ||4||
ಭಗೀರಥನ ರಥವು ಚಲಿಸಿದ ಮತ್ತು ಗಂಗೆಯು ಹರಿಯುವ ಪ್ರದೇಶಗಳಲ್ಲಿ ಸಂಚರಿಸುವ ಶ್ರೇಷ್ಠ ಮೀನುಗಳನ್ನು ಅವನ ಆಹಾರಕ್ಕಾಗಿ ಏರ್ಪಡಿಸಿತು.
ವಹ್ನಿಂ ಚಾಪಿ ಸುಸಂದೀಪ್ತಂ ಮೀನಾಂಶ್ಚೈವ ಸುಪೀವರಾನ್ |
ಸ ಗೌತಮಾಯಾತಿಥಯೇ ನ್ಯವೇದಯತ ಕಾಶ್ಯಪಃ ||5||
ಕಶ್ಯಪ ಸುತನು ಅತಿಥಿ ಗೌತಮನಿಗಾಗಿ ಪ್ರಜ್ವಲಿಸುವ ಅಗ್ನಿಯನ್ನು ಏರ್ಪಡಿಸಿತು. ಪುಷ್ಟವಾದ ಮೀನುಗಳನ್ನು ಅರ್ಪಿಸಿತು.
ಭುಕ್ತವಂತಂ ಚ ತಂ ವಿಪ್ರಂ ಪ್ರೀತಾತ್ಮಾನಂ ಮಹಾಮನಾಃ |
ಕ್ಲಮಾಪನಯನಾರ್ಥಂ ಸ ಪಕ್ಷಾಭ್ಯಾಮಭ್ಯವೀಜಯತ್ ||6||
ಊಟಮಾಡಿ, ಪ್ರಸನ್ನನಾದ ಆ ಬ್ರಾಹ್ಮಣನ ಶ್ರಮ ಪರಿಹಾರಕ್ಕಾಗಿ ಉದಾರ ಮನಸ್ಸಿನ `ರಾಜಧರ್ಮ'ನು ರೆಕ್ಕೆಗಳಿಂದ ಬೀಸಿದನು.
ತತೋ ವಿಶ್ರಾಂತಮಾಸೀನಂ ಗೋತ್ರಪ್ರಶ್ನಮಪೃಚ್ಛತ |
ಸೋಽಬ್ರವೀದ್ ಗೌತಮೋಽಸ್ಮೀತಿ ಬ್ರಾಹ್ಮ ನಾನ್ಯದುದಾಹರತ್ ||7||
ಅನಂತರ ಆಯಾಸವನ್ನು ಪರಿಹರಿಸಿಕೊಂಡು ಕುಳಿತಿದ್ದ ಬ್ರಾಹ್ಮಣನನ್ನು `ನಿಮ್ಮ ಗೋತ್ರ ಯಾವುದು?' ಎಂದು ಕೇಳಿದನು. `ನಾನು ಗೌತಮ' ಎಂದು ಹೇಳಿದನು. ತನ್ನ ಬ್ರಾಹ್ಮಣ ಕರ್ಮ ಮತ್ತು ವೇದಾಧ್ಯಯನಗಳ ಬಗ್ಗೆ ಬೇರೆ ಏನನ್ನೂ ಹೇಳಲಿಲ್ಲ.
ತಸ್ಮೈ ಪರ್ಣಮಯಂ ದಿವ್ಯಂ ದಿವ್ಯಪುಷ್ಪಾಧಿವಾಸಿತಮ್ |
ಗಂಧಾಢ್ಯಂ ಶಯನಂ ಪ್ರಾದಾತ್ ಸ ಶಿಶ್ಯೇ ತತ್ರ ವೈ ಸುಖಮ್ ||8||
ಹಕ್ಕಿಯು ಅವನಿಗೆ ಎಲೆಗಳಿಂದ ರಚಿಸಲ್ಪಟ್ಟ, ದಿವ್ಯ ಪುಷ್ಪಗಳಿಂದ ರಮಣೀಯವಾಗಿಸಲ್ಪಟ್ಟ, ಸುಗಂಧಯುಕ್ತವಾದ ದಿವ್ಯವಾದ

ಹಾಸಿಗೆಯನ್ನು ಕಲ್ಪಿಸಿದನು. ಗೌತಮನು ಅಲ್ಲಿ ಸುಖವಾಗಿ ಮಲಗಿದನು.
ಅಥೋಪವಿಷ್ಟಂ ಶಯನೇ ಗೌತಮಂ ಬಕರಾಟ್ ತದಾ |
ಪಪ್ರಚ್ಛ ಕಾಶ್ಯಪೋ ವಾಗ್ಮೀ ಕಿಮಾಗಮನಕಾರಣಮ್ ||9||
ಅನಂತರ ಹಾಸಿಗೆಯ ಮೇಲೆ ಕುಳಿತಿದ್ದ ಗೌತಮನನ್ನು ಕಶ್ಯಪಸುತನಾದ ವಾಗ್ಮಿ ಬಕರಾಜನು `ಇಲ್ಲಿಗೆ ಬರಲು ಏನು ಕಾರಣ?' ಎಂದು ಕೇಳಿದನು.
ತತೋಽಬ್ರವೀದ್ಗೌತಮಸ್ತಂ ದರಿದ್ರೋಽಹಂ ಮಹಾಮತೇ |
ಸಮುದ್ರಗಮನಾಕಾಂಕ್ಷೀ ದ್ರವ್ಯಾರ್ಥಮಿತಿ ಭಾರತ ||10||
ಭಾರತ! ಗೌತಮನು `ಮಹಾಮತಿಯೇ! ನಾನು ಬಡವ. ಧನಕ್ಕಾಗಿ ಸಮುದ್ರಕ್ಕೆ ಹೋಗಲು ಬಯಸಿದ್ದೇನೆ' ಎಂದು ಹೇಳಿದನು.
ತಂ ಕಾಶ್ಯಪೋಽಬ್ರವೀತ್ ಪ್ರೀತೋ ನೋತ್ಕಂಠಾಂ ಕರ್ತುಮರ್ಹಸಿ |
ಕೃತಕಾರ್ಯೋ ದ್ವಿಜಶ್ರೇಷ್ಠ ಸದ್ರಶೋ ಯಾಸ್ಯಸೇ ಗೃಹಾನ್ (ಸುಖಾನ್) ||
ಕಶ್ಯಪ ಸುತನಾದ ಆ ಹಕ್ಕಿಯು ಪ್ರೀತನಾಗಿ ಹೇಳಿದನು. ಕಳವಳ ಪಡಬೇಡ. ದ್ವಿಜಶ್ರೇಷ್ಠ! ನಿನ್ನ ಕೆಲಸವು ಆಗುತ್ತದೆ. ಧನವಂತರಿಗೆ ಸದ್ರುಶನಾಗಿ ನೀನು ಮನೆಗೆ ಹೋಗುವಿ (ಆದರ-ಸಮ್ಮಾನಗಳಿರುವ ಮನೆಗೆ ಹೋಗುವಿ).
ಚತುರ್ವಿಧಾ ಹ್ಯರ್ಥಗತಿರ್ಬೃಹಸ್ಪತಿಮತಂ ಯಥಾ |
ಪಾರಂಪರ್ಯಂ ತಥಾ ದೈವಂ ಕರ್ಮ ಮಿತ್ರಮಿತಿ ಪ್ರಭೋ ||12||
ಪ್ರಭುವೇ! ಅರ್ಥಪ್ರಾಪ್ತಿಯು ನಾಲ್ಕು ರೀತಿ ಎಂದು ಬ್ರುಹಸ್ಪತ್ಯಾಚಾರ್ಯರ ಅಭಿಪ್ರಾಯ. (1) ಪರಂಪರೆಯಿಂದ ಬಂದ ಧನಸಂಪತ್ತು, (2) ದೈವ ಬಲದಿಂದ ಬಂದ ಸಂಪತ್ತು, (3) ಶ್ರಮಪೂರ್ವಕವಾದ ಕ್ರಿಯಾಶೀಲತೆಯಿಂದ ಬಂದ ಸಂಪತ್ತು, (4) ಮಿತ್ರನಿಂದ ಬಂದ ಸಂಪತ್ತು.
ಪ್ರಾದುರ್ಭೂತೋಽಸ್ಮಿ ತೇ ಮಿತ್ರಂ ಸುಹೃತ್ತ್ವಂ ಚ ಮಮ ತ್ವಯಿ |
ಸೋಽಹಂ ತಥಾ ಯತಿಷ್ಯಾಮಿ ಭವಿಷ್ಯಸಿ ಯಥಾರ್ಥವಾನ್ ||13||
ನಾನು ನಿನ್ನ ಮಿತ್ರನಾಗಿ ನಿನ್ನ ಎದುರು ಕಾಣಿಸಿಕೊಂದಿದ್ದೇನೆ. ನನಗೆ ನಿನ್ನ ಮೇಲೆ ಸೌಹಾರ್ದವಿದೆ. ನೀನು ಧನವಂತನಾಗುವಂತೆ ನಾನು ಪ್ರಯತ್ನಿಸುತ್ತೇನೆ.
ತತಃ ಪ್ರಭಾತಸಮಯೇ ಸುಖಂ ಪೃಷ್ಟ್ವಾಬ್ರವೀದಿದಮ್ |
ಗಚ್ಛ ಸೌಮ್ಯ ಪಥಾನೇನ ಕೃತಕೃತ್ಯೋ ಭವಿಷ್ಯಸಿ ||14||
ಅನಂತರ ಪ್ರಾತಃಕಾಲದಲ್ಲಿ ಸುಖನಿದ್ರೆಯನ್ನು ವಿಚಾರಿಸಿ ಹೀಗೆ ಹೇಳಿದನು. ಸೌಮ್ಯ! ಈ ಮಾರ್ಗದಿಂದ ಹೋಗು. ನಿನ್ನ ಕೆಲಸವಾಗುತ್ತದೆ.
ಇತಸ್ತ್ರಿಯೋಜನಂ ಗತ್ವಾ ರಾಕ್ಷಸಾಧಿಪತಿರ್ಮಹಾನ್ |
ವಿರೂಪಾಕ್ಷ ಇತಿ ಖ್ಯಾತಃ ಸಖಾ ಮಮ ಮಹಾಬಲಃ ||15||
ಇಲ್ಲಿಂದ ಮೂರು ಯೋಜನ ದೂರದಲ್ಲಿ ವಿರೂಪಾಕ್ಷ ಎಂದು ಪ್ರಸಿದ್ಧನಾದ ರಾಕ್ಷಸಾಧಿಪತಿಯು ಇದ್ದಾನೆ. ಅವನು ನನ್ನ ಗೆಳೆಯ. ಮಹಾಬಲಶಾಲಿ.
ತಂ ಗಚ್ಛ ದ್ವಿಜಮುಖ್ಯ ತ್ವಂ ಮಮ ವಾಕ್ಯಪ್ರಚೋದಿತಃ |
ಕಾಮಾನಭೀಪ್ಸಿತಾಂಸ್ತುಭ್ಯಂ ದಾತಾ ನಾಸ್ತ್ಯತ್ರ ಸಂಶಯಃ ||16||
ದ್ವಿಜಶ್ರೇಷ್ಠ! ನೀನು ಅವನ ಬಳಿ ಹೋಗು. ನಾನು ಕಳಿಸಿದೆ ಎಂದು ಹೇಳು, ನನ್ನ ಮಾತಿನಿಂದ ಪ್ರಚೋದನೆಯನ್ನು ಪಡೆದು ಅವನು ನಿನಗೆ ಇಷ್ಟವಾದ ಎಲ್ಲವನ್ನೂ ಕೊಡುತ್ತಾನೆ. ಸಂಶಯವೇ ಇಲ್ಲ.
ಇತ್ಯುಕ್ತಃ ಪ್ರಯಯೌ ರಾಜನ್ ಗೌತಮೋ ವಿಗತಕ್ಲಮಃ |
ಫಲಾನ್ಯಮೃತಕಲ್ಪಾನಿ ಭಕ್ಷಯನ್ ಸ್ಮ ಯಥೇಷ್ಟತಃ ||17||
ರಾಜನೇ! ಹೀಗೆ ಹೇಳಲ್ಪಟ್ಟ, ಆಯಾಸ ಪರಿಹಾರವಾಗಿರುವ ಗೌತಮನು ಅಲ್ಲಿಂದ ಹೊರಟನು. ದಾರಿಯಲ್ಲಿ ವನಪ್ರದೇಶದಲ್ಲಿ ಅಮೃತಸದ್ರುಶವಾದ ಫಲಗಳನ್ನು ಯಥೇಷ್ಟವಾಗಿ ತಿನ್ನುತ್ತಾ ಸಾಗಿದನು.
ಚಂದನಾಗುರುಮುಖ್ಯಾನಿ ತ್ವಕ್ಪತ್ರಾಣಾಂ ವನಾನಿ ಚ |
ತಸ್ಮಿನ್ ಪಥಿ ಮಹಾರಾಜ ಸೇವಮಾನೋ ದ್ರುತಂ ಯಯೌ ||18||
ಮಹಾರಾಜ! ದಾರಿಯಲ್ಲಿ ಚಂದನ-ಅಗರುಗಳು ದಟ್ಟವಾಗಿರುವ ವನವನ್ನು ಮತ್ತು ಲವಂಗದ ವನವನ್ನು ಆಸ್ವಾದಿಸುತ್ತಾ ವೇಗದಿಂದ ಸಾಗಿದನು.
ತತೋ ಮೇರುವ್ರಜಂ ನಾಮ ನಗರಂ ಶೈಲತೋರಣಮ್ |
ಶೈಲಪ್ರಾಕಾರವಪ್ರಂ ಚ ಶೈಲಯಂತ್ರಾರ್ಗಲಂ ತಥಾ ||19||
ಮೇರು ವ್ರಜ ಎಂಬ ನಗರವನ್ನು ತಲುಪಿದನು. ಬೆಟ್ಟಗಳು ಆ ನಗರದ ತೋರಣವಾಗಿದ್ದವು. ಬೆಟ್ಟಗಳು ಸುತ್ತು ಗೋಡೆ (ಬೇಲಿ)ಗಳಾಗಿದ್ದವು. ಕಲ್ಲಿನ ಯಂತ್ರಗಳು, ಅಗಳಿಗಳು ಆ ನಗರದಲ್ಲಿದ್ದವು.
ವಿದಿತಶ್ಚಾಭವತ್ತಸ್ಯ ರಾಕ್ಷಸೇಂದ್ರಸ್ಯ ಧೀಮತಃ |
ಪ್ರಹಿತಃ ಸುಹೃದಾ ರಾಜನ್ ಪ್ರೀಯತಾ ವೈ ಪ್ರಿಯಾತಿಥಿಃ ||20||
ರಾಜನೆ! ಧೀಮಂತನಾದ ರಾಕ್ಷಸೇಂದ್ರನಿಗೆ `ಈ ಬ್ರಾಹ್ಮಣನು ಪ್ರಿಯಮಿತ್ರನಿಂದ ಕಳಿಸಲ್ಪಟ್ಟ ಪ್ರಿಯ ಅತಿಥಿ' ಎಂದು ತಿಳಿಯಿತು.
ತತಃ ಸ ರಾಕ್ಷಸೇಂದ್ರಃ ಸ್ವಾನ್ ಪ್ರೇಷ್ಯಾನಾಹ ಯುಧಿಷ್ಠಿರ |
ಗೌತಮೋ ನಗರದ್ವಾರಾಚ್ಛೀಘ್ರಮಾನೀಯತಾಮಿತಿ ||21||

ಯುಧಿಷ್ಠಿರ! ಅನಂತರ ಆ ರಾಕ್ಷಸೇಂದ್ರನು ತನ್ನ ಸೇವಕರಿಗೆ `ನಗರದ್ವಾರದಿಂದ ಗೌತಮನನ್ನು ಶೀಘ್ರ ಕರೆತನ್ನಿರಿ' ಎಂದು ಹೇಳಿದನು.
ತತಃ ಪುರವರಾತ್ತಸ್ಮಾತ್ ಪುರುಷಾಃ ಶ್ವೇತವೇಷ್ಟನಾಃ |
ಗೌತಮೇತ್ಯಭಿಭಾಷಂತಃ ಪುರದ್ವಾರಮುಪಾಗಮನ್ ||22||
ಅನಂತರ ಬಿಳಿ ಪೇಟಗಳನ್ನು ಧರಿಸಿದ್ದ ರಾಜಸೇವಕರು `ಗೌತಮ' ಎಂದು ಹೇಳುತ್ತಾ ನಗರದ್ವಾರಕ್ಕೆ ಬಂದರು.
ತೇ ತಮೂಚುರ್ಮಹಾರಾಜ ಪ್ರೇಷ್ಯಾ ರಕ್ಷಃಪತೇರ್ದ್ವಿಜಮ್ |
ತ್ವರಸ್ವ ತೂರ್ಣಮಾಗಚ್ಛ ರಾಜಾ ತ್ವಾಂ ದ್ರಷ್ಟುಮಿಚ್ಛತಿ ||23||
ಮಹಾರಾಜ! ರಾಕ್ಷಸರಾಜನ ಆ ಸೇವಕರು ಆ ಬ್ರಾಹ್ಮಣನಿಗೆ ಹೇಳಿದರು. `ತ್ವರೆ ಮಾಡು, ಬೇಗ ಬಾ, ರಾಜನು ನಿನ್ನನ್ನು ನೋಡಲು ಬಯಸಿದ್ದಾನೆ'.
ರಾಕ್ಷಸಾಧಿಪತಿರ್ವೀರೋ ವಿರೂಪಾಕ್ಷ ಇತಿ ಶ್ರುತಃ |
ಸ ತ್ವಾಂ ತ್ವರತಿ ವೈ ದ್ರಷ್ಟುಂ ತತ್ ಕ್ಷಿಪ್ರಂ ಸಂವಿಧೀಯತಾಮ್ ||24||
ರಾಕ್ಷಸಾಧಿಪತಿಯು ವೀರ. ವಿರೂಪಾಕ್ಷ ಎಂದು ಪ್ರಸಿದ್ಧ. ಅವನು ನಿಮ್ಮನ್ನು ನೋಡಲು ಕಾತರಿಸುತ್ತಿದ್ದಾನೆ. ಆದ್ದರಿಂದ ಬೇಗನೆ ಬನ್ನಿ.
ತತಃ ಸ ಪ್ರಾದ್ರವದ್ ವಿಪ್ರೋ ವಿಸ್ಮಯಾದ್ ವಿಗತಕ್ಲಮಃ |
ಗೌತಮೋ ನಗರರ್ದ್ಧಿಂ ತಾಂ ಪಶ್ಯನ್ ಪರಮವಿಸ್ಮಿತಃ ||25||
ಅನಂತರ ಆ ವಿಪ್ರನಿಗೆ ವಿಸ್ಮಯದಿಂದ ಶ್ರಮವೆಲ್ಲವೂ ಪರಿಹಾರವಾಯಿತು. ಅವನು ವೇಗದಿಂದ ಸಾಗಿದನು. ನಗರದ ಸಮೃದ್ಧಿಯನ್ನು ನೋಡುತ್ತಾ ಗೌತಮನು ಪರಮಾಶ್ಚರ್ಯಕ್ಕೆ ಒಳಗಾದನು.
ತೈರೇವ ಸಹಿತೋ ರಾಜ್ಞೋ ವೇಶ್ಮ ತೂರ್ಣಮುಪಾದ್ರವತ್ |
ದರ್ಶನಂ ರಾಕ್ಷಸೇಂದ್ರಸ್ಯ ಕಾಂಕ್ಷಮಾಣೋ ದ್ವಿಜಸ್ತದಾ ||26||
ವಿಪ್ರನು ರಾಕ್ಷಸೇಂದ್ರನ ದರ್ಶನವನ್ನು ಬಯಸಿ ಆ ಸೇವಕರೊಡನೆ ಬೇಗನೆ ರಾಜನ ಮನೆಗೆ ಧಾವಿಸಿದನು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಷಟ್‌ತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿಯಿತು.
* * * *
ಮೂವತ್ತೇಳನೆಯ ಅಧ್ಯಾಯ
ವಿರೂಪಾಕ್ಷನು ಮಾಡಿದ ಬ್ರಾಹ್ಮಣ ಸತ್ಕಾರ. ಗೌತಮನಿಗೆ ವಿಪುಲ
ಧನಕನಕಗಳ ದಾನ, ಅವುಗಳ ಜೊತೆ ಹೊರಟ ಗೌತಮನಿಂದ ಅದೇ
ಮರದ ಬಳಿ ಆಗಮನ. ಬಕ ಪಕ್ಷಿಯಿಂದ ಉಪಚಾರ.
ಗೌತಮನಿಗೆ ಆ ಹಕ್ಕಿಯನ್ನು ಕೊಲ್ಲುವ ಆಲೋಚನೆ.
ಭೀಷ್ಮಃ
ತತಃ ಸ ವಿದಿತೋ ರಾಜ್ಞಃ ಪ್ರವಿಶ್ಯ ಗೃಹಮುತ್ತಮಮ್ |
ಪೂಜಿತೋ ರಾಕ್ಷಸೇಂದ್ರೇಣ ನಿಷಸಾದಾಸನೋತ್ತಮೇ ||1||
ಆ ವಿಪ್ರನು ಬಂದಿದ್ದಾನೆ ಎಂದು ರಾಜನಿಗೆ ತಿಳಿಯಿತು. ರಾಜನ ಭವ್ಯವಾದ ಮನೆಗೆ ಪ್ರವೇಶಿಸಿದ ಅವನು ರಾಕ್ಷಸೇಂದ್ರನಿಂದ ಸತ್ಕೃತನಾಗಿ ಉತ್ತಮವಾದ ಆಸನದಲ್ಲಿ ಕುಳಿತನು.
ಪೃಷ್ಟಶ್ಚ ಗೋತ್ರಚರಣಂ ಸ್ವಾಧ್ಯಾಯಂ ಬ್ರಹ್ಮಚಾರಿಕಮ್ |
ನ ತತ್ರ ವ್ಯಾಜಹಾರಾನ್ಯದ್ಗೋತ್ರಮಾತ್ರಾದೃತೇ ದ್ವಿಜಃ ||2||
ರಾಜನು ಅವನ ಗೋತ್ರ, ಶಾಖೆ, ವೇದಾಧ್ಯಯನ, ಅನುಷ್ಠಾನಗಳ ಬಗ್ಗೆ ಕೇಳಿದನು. ವಿಪ್ರನು ಗೋತ್ರವನ್ನು ಮಾತ್ರ ಹೇಳಿದನು. ಬೇರೆ ಏನನ್ನೂ ಹೇಳಲಿಲ್ಲ.
ಬ್ರಹ್ಮವರ್ಚಸಹೀನಸ್ಯ ಸ್ವಾಧ್ಯಾಯವಿರತಸ್ಯ ಚ |
ಗೋತ್ರಮಾತ್ರವಿದೋ ರಾಜಾ ನಿವಾಸಂ ಸಮಪೃಚ್ಛತ ||3||
ರಾಜನು ಬ್ರಹ್ಮವರ್ಚಸ್ಸಿಲ್ಲದ, ವೇದಾಧ್ಯಯನವನ್ನು ತ್ಯಜಿಸಿರುವ, ಕೇವಲ ಗೋತ್ರವನ್ನು ತಿಳಿದ ಅವನ ವಾಸ ಎಲ್ಲಿ ಎಂದು ಕೇಳಿದನು.

ಕ್ವ ತೇ ನಿವಾಸಃ ಕಲ್ಯಾಣ ಕಿಂಗೋತ್ರಾ ಬ್ರಾಹ್ಮಣೀ ಚ ತೇ |
ತತ್ತ್ವಂ ಬ್ರೂಹಿ ನ ಭೀಃ ಕಾರ್ಯಾ ವಿಶ್ರಮಸ್ವ ಯಥಾಸುಖಮ್ ||4||
`ಕಲ್ಯಾಣ! ನಿನ್ನ ಮನೆ ಎಲ್ಲಿದೆ? ನಿನ್ನ ಬ್ರಾಹ್ಮಣಿಯ (ಪತ್ನಿಯ) ಗೋತ್ರ ಯಾವುದು? ಸತ್ಯ ಹೇಳು. ಹೆದರಬೇಡ. ಸುಖವಾಗಿ ವಿಶ್ರಮಿಸು'.
ಗೌತಮಃ
ಮಧ್ಯದೇಶಪ್ರಸೂತೋಽಹಂ ವಾಸೋ ಮೇ ಶಬರಾಲಯೇ |
ಶೂದ್ರೀ ಪುನರ್ಭೂರ್ಭಾರ್ಯಾ ಮೇ ಸತ್ಯಮೇತದ್ ಬ್ರವೀಮಿ ತೇ ||5||
ನಾನು ಮಧ್ಯಪ್ರದೇಶದಲ್ಲಿ ಹುಟ್ಟಿದವನು. ಬೇಡರ ಗ್ರಾಮದಲ್ಲಿ ಬೇಡರ ಮನೆಯಲ್ಲಿ ವಾಸ. ಎರಡು ಸಲ ಮದುವೆಯಾದ ಶೂದ್ರಸ್ತ್ರೀ ನನ್ನ ಪತ್ನಿ. ನಾನು ಸತ್ಯವನ್ನು ಹೇಳುತ್ತಿದ್ದೇನೆ.
ಭೀಷ್ಮಃ
ತತೋ ರಾಜಾ ವಿಮಮೃಶೇ ಕಥಂ ಕಾರ್ಯಮಿದಂ ಭವೇತ್ |

ಕಥಂ ವಾ ಸುಕೃತಂ ಮೇ ಸ್ಯಾದಿತಿ ಬುದ್ಧ್ಯಾನ್ವಚಿಂತಯತ್ ॥6॥
ಅನಂತರ ರಾಜನು ವಿಮರ್ಶಿಸಿದನು. ಈಗ ಈ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು? ಹೇಗೆ ಮಾಡಿದರೆ ಸರಿ? ಎಂದು ತನ್ನ ಬುದ್ಧಿಬಲದಿಂದ ಆಲೋಚಿಸಿದನು.
ಅಯಂ ವೈ ಜನನಾದ್ ವಿಪ್ರಃ ಸುಹೃತ್ತಸ್ಯ ಮಹಾತ್ಮನಃ |
ಸಂಪ್ರೇಷಿತಶ್ಚ ತೇನಾಯಂ ಕಾಶ್ಯಪೇನ ಮಮಾಂತಿಕಮ್ ॥7॥
ಇವನು ಹುಟ್ಟಿನಿಂದ ಬ್ರಾಹ್ಮಣ. ಆ ಮಹಾತ್ಮನ ಮಿತ್ರ. ಆ ಕಶ್ಯಪಸುತನಿಂದ (ರಾಜಧರ್ಮನಿಂದ) ನನ್ನ ಬಳಿ ಕಳುಹಿಸಲ್ಪಟ್ಟಿದ್ದಾನೆ.
ತಸ್ಯ ಪ್ರಿಯಂ ಕರಿಷ್ಯಾಮಿ ಸ ಹಿ ಮಾಮಾಶ್ರಿತಃ ಸದಾ |
ಭ್ರಾತಾ ಮೇ ಬಾಂಧವಶ್ಚಾಸೌ ಸಖಾ ಚ ಹೃದಯಂಗಮಃ ॥8॥
ಅವನಿಗೆ ಏನು ಪ್ರಿಯವೋ ಅದನ್ನು ಮಾಡುತ್ತೇನೆ. ಅವನು ಯಾವಾಗಲೂ ನನ್ನನ್ನು ಆಶ್ರಯಿಸಿದ್ದಾನೆ. ಅವನು ನನ್ನ ಸೋದರ. ಬಾಂಧವ. ಅವನು ನನ್ನ ಹೃದಯಂಗಮ ಗೆಳೆಯ.
ಕಾರ್ತ್ತಿಕ್ಯಾಮದ್ಯ ಭೋಕ್ತಾರಃ ಸಹಸ್ರಂ ಮೇ ದ್ವಿಜೋತ್ತಮಾಃ |
ತತ್ರಾಯಮಪಿ ಭೋಕ್ತಾ ವೈ ದೇಯಮಸ್ಮೈ ಚ ಮೇ ಧನಮ್ ॥9॥
ಈ ದಿನ ಕಾರ್ತ್ತಿಕಮಾಸದ ಹುಣ್ಣಿಮೆ. ನನ್ನ ಮನೆಯಲ್ಲಿ ಒಂದು ಸಾವಿರ ಬ್ರಾಹ್ಮಣೋತ್ತಮರು ಊಟ ಮಾಡುತ್ತಾರೆ. ಅವರ ಮಧ್ಯೆ ಇವನೂ ಊಟ ಮಾಡಲಿ. ನಾನು ಇವನಿಗೂ ಧನವನ್ನು ಕೊಡುತ್ತೇನೆ.
ತತಃ ಸಹಸ್ರಂ ವಿಪ್ರಾಣಾಂ ವಿದುಷಾಂ ಸಮಲಂಕೃತಮ್ |
ಸ್ನಾತಾನಾಮನುಸಂಪ್ರಾಪ್ತಮಹತಕ್ಷೌಮವಾಸಸಾಮ್ ॥10॥
ಅನಂತರ ವಿದ್ವಾಂಸರಾದ, ಸ್ನಾನ-ಅನುಷ್ಠಾನಗಳನ್ನು ಮುಗಿಸಿರುವ, ಚೆನ್ನಾಗಿ ಅಲಂಕೃತರಾದ, ಹೊಸ ರೇಷ್ಮೆ ವಸ್ತ್ರಗಳನ್ನು ಧರಿಸಿದ ಒಂದು ಸಾವಿರ ಬ್ರಾಹ್ಮಣರು ಆಗಮಿಸಿದರು.
ತಾನಾಗತಾನ್ ದ್ವಿಜಶ್ರೇಷ್ಠಾನ್ ವಿರೂಪಾಕ್ಷೋ ವಿಶಾಂಪತೇ |
ಯಥಾರ್ಹಂ ಪ್ರತಿಜಗ್ರಾಹ ವಿಧಿದೃಷ್ಟೇನ ಕರ್ಮಣಾ ॥11॥
ರಾಜನೇ! ವಿರೂಪಾಕ್ಷನು ಬಂದ ಆ ದ್ವಿಜಶ್ರೇಷ್ಠರನ್ನು ಶಾಸೊತ್ರೀಕ್ತ ಆಚರಣೆಗಳಿಂದ ಅವರವರ ಅರ್ಹತೆಗೆ ಅನುಗುಣವಾಗಿ ಸ್ವಾಗತಿಸಿದನು.
ನೀವ್ಯಸ್ತೇಷಾಂ ತು ಸನ್ನ್ಯಸ್ತಾ ರಾಕ್ಷಸೇಂದ್ರಸ್ಯ ಶಾಸನಾತ್ |
ಭೂಮೌ ವರಕುಶಾಸ್ತೀರ್ಣಾಃ ಪ್ರೇಷ್ಯೈರ್ಭರತಸತ್ತಮ ॥12॥
ಭರತಸತ್ತಮ! ರಾಕ್ಷಸೇಂದ್ರನ ಶಾಸನದಂತೆ ಸೇವಕರು ಆ ಬ್ರಾಹ್ಮಣರಿಗೆ ನೀವಿಗಳನ್ನು (ರಾಜವಧುಗಳು ಧರಿಸುವ ಸೂಕ್ಷ್ಮ ವಸ್ತ್ರಗಳನ್ನು) ಕೊಟ್ಟರು. ನೆಲದ ಮೇಲೆ ದರ್ಭಾಸನಗಳನ್ನು ಹಾಸಿದರು.
ತಾಸು ತೇ ಪೂಜಿತಾ ರಾಜ್ಞಾ ನಿಷಣ್ಣಾ ದ್ವಿಜಸತ್ತಮಾಃ |
ವ್ಯರಾಜಂತ ಮಹಾರಾಜ ನಕ್ಷತ್ರಪತಯೋ ಯಥಾ ॥13॥
ಮಹಾರಾಜ! ರಾಜನಿಂದ ಪೂಜಿಸಲ್ಪಟ್ಟ ಆ ಬ್ರಾಹ್ಮಣಶ್ರೇಷ್ಠರು ಆ ಆಸನಗಳ ಮೇಲೆ ಕುಳಿತು ಚಂದ್ರರಂತೆ ಶೋಭಿಸಿದರು.
ತತೋ ಜಾಂಬೂನದಾಃ ಪಾತ್ರೀರ್ವಜ್ರಾಂಕಾ ವಿಮಲಾಃ ಶುಭಾಃ |
ವರಾನ್ನಪೂರ್ಣಾ ವಿಪ್ರೇಭ್ಯಃ ಪ್ರಾದಾನ್ಮಧುಘೃತಾಪ್ಲುತಾಃ ॥14॥
ಅನಂತರ ರಾಕ್ಷಸೇಂದ್ರನು ವಿಪ್ರರಿಗೆ ಮಧು-ತುಪ್ಪಗಳಿಂದ ನೆನೆಸಲ್ಪಟ್ಟ ಶ್ರೇಷ್ಠ ಅನ್ನದಿಂದ ಮತ್ತು ಸೂಪದಿಂದ ಪೂರ್ಣವಾಗಿದ್ದ, ವಜ್ರಖಚಿತವಾದ, ವಿಮಲವೂ ಶುಭಕರವೂ ಆದ ಬಂಗಾರದ ಪಾತ್ರೆಗಳನ್ನು ಕೊಟ್ಟನು.
ತಸ್ಯ ನಿತ್ಯಂ ತಥಾಷಾಢ್ಯಾಂ ಮಾಘ್ಯಾಂ ಚ ಬಹವೋ ದ್ವಿಜಾಃ |
ಈಪ್ಸಿತಂ ಭೋಜನವರಂ ಲಭಂತೇ ಸತ್ಕೃತಂ ಸದಾ ॥15॥
ಆ ರಾಜನಿಂದ ಪ್ರತಿದಿನ ಮತ್ತು ಆಷಾಢ-ಮಾಘಮಾಸಗಳ ಹುಣ್ಣಿಮೆಗಳಲ್ಲಿ ಬಹಳ ಬ್ರಾಹ್ಮಣರು ತಮಗೆ ಇಷ್ಟವಾದ ಭೋಜನವನ್ನು ಮತ್ತು ಸತ್ಕಾರವನ್ನು ಪಡೆಯುತ್ತಿದ್ದರು. ಹೀಗೆ ನಿರಂತರವಾಗಿ ನಡೆಯುತ್ತಿತ್ತು.
ವಿಶೇಷತಸ್ತು ಕಾರ್ತಿಕ್ಯಾಂ ದ್ವಿಜೇಭ್ಯಃ ಸಂಪ್ರಯಚ್ಛತಿ |
ಶರದ್ವ್ಯಪಾಯೇ ರತ್ನಾನಿ ಪೌರ್ಣಮಾಸ್ಯಾಮಿತಿ ಶ್ರುತಿಃ ॥16॥
ವಿಶೇಷವಾಗಿ ಶರದೃತುವಿನ ಕೊನೆಯಲ್ಲಿ ಕಾರ್ತಿಕಮಾಸದ ಹುಣ್ಣಿಮೆಯ ದಿನ ಬ್ರಾಹ್ಮಣರಿಗೆ ರತ್ನಗಳನ್ನು ಕೊಡುತ್ತಿದ್ದನು ಎಂದು ನಾವು ಕೇಳಿದ್ದೇವೆ.
ಸುವರ್ಣಂ ರಜತಂ ಚೈವ ಮಣೀನಥ ಚ ಮೌಕ್ತಿಕಮ್ |
ವಜ್ರಾನ್ ಮಹಾಧನಾಂಶ್ಚೈವ ವೈಡೂರ್ಯಾಜಿನರಾಂಕವಾನ್ ॥17॥
ರತ್ನರಾಶೀನ್ ವಿನಿಕ್ಷಿಪ್ಯ ದಕ್ಷಿಣಾರ್ಥೇ ಸ ಭಾರತ |
ತತಃ ಪ್ರಾಹ ದ್ವಿಜಶ್ರೇಷ್ಠಾನ್ ವಿರೂಪಾಕ್ಷೋ ಮಹಾಯಶಾಃ ॥18॥
ಭರತಕುಲಸಂಜಾತ! ದಕ್ಷಿಣೆಗಾಗಿ ಬಂಗಾರ-ಬೆಳ್ಳಿ-ಮಣಿಗಳು-ಮುತ್ತುಗಳು, ವಜ್ರಗಳು-ವೈಡೂರ್ಯ, ಅಜಿನ-ರಂಕುಮೃಗದ ಚರ್ಮ, ಭಾರಿ ಹಣದ ರಾಶಿ-ರತ್ನ ರಾಶಿ- ಇವುಗಳನ್ನು ಇಟ್ಟು ಮಹಾಕೀರ್ತಿವಂತನಾದ ವಿರೂಪಾಕ್ಷನು ದ್ವಿಜಶ್ರೇಷ್ಠರಿಗೆ ಹೇಳಿದನು.
ಗೃಹ್ಣೀತ ರತ್ನಾನ್ಯೇತಾನಿ ಯಥೋತ್ಸಾಹಂ ಯಥೇಷ್ಟತಃ |
ಯೇಷು ಯೇಷು ಚ ಭಾಂಡೇಷು ಭುಕ್ತಂ ವೋ ದ್ವಿಜಸತ್ತಮಾಃ |
ತಾನ್ಯೇವಾದಾಯ ಗಚ್ಛಧ್ವಂ ಸ್ವವೇಶ್ಮಾನೀತಿ ಭಾರತ ॥19॥

ಭರತಕುಲಸಂಜಾತ! `ಈ ಎಲ್ಲ ಅಮೂಲ್ಯ ವಸ್ತುಗಳನ್ನು ಉತ್ಸಾಹದಿಂದ ಯಥೇಷ್ಟವಾಗಿ ತೆಗೆದುಕೊಳ್ಳಿರಿ. ಯಾವ ಯಾವ ಪಾತ್ರೆಗಳಲ್ಲಿ ಊಟ ಮಾಡಿದಿರೋ ಆ ಪಾತ್ರೆಗಳನ್ನು ತೆಗೆದುಕೊಂಡು ನಿಮ್ಮ ಮನೆಗಳಿಗೆ ಹೋಗಿರಿ'.
ಇತ್ಯುಕ್ತವಚನೇ ತಸ್ಮಿನ್ರಾಕ್ಷಸೇಂದ್ರೇ ಮಹಾತ್ಮನಿ |
ಯಥೇಷ್ಟಂ ತಾನಿ ರತ್ನಾನಿ ಜಗೃಹುರ್ಬ್ರಾಹ್ಮಣರ್ಷಭಾಃ ॥20॥
ಮಹಾತ್ಮನಾದ ಆ ರಾಕ್ಷಸೇಂದ್ರನು ಹೀಗೆ ಹೇಳಿದಾಗ ಆ ಬ್ರಾಹ್ಮಣಶ್ರೇಷ್ಠರು ಆ ಅಮೂಲ್ಯ ವಸ್ತುಗಳನ್ನು ಯಥೇಷ್ಟವಾಗಿ ತೆಗೆದುಕೊಂಡರು.
ತತೋ ಮಹಾರ್ಹೈಸ್ತೇ ಸರ್ವೇ ರತ್ನೈರಭ್ಯರ್ಚಿತಾಃ ಶುಭೈಃ |
ಬ್ರಾಹ್ಮಣಾ ಮೃಷ್ಟವಸನಾಃ ಸುಪ್ರೀತಾಃ ಸ್ಮ ತದಾಭವನ್ ॥21॥
ಬಾರಿ ಬೆಲೆಬಾಳುವ ಶುಭಕರವಾದ ರತ್ನಗಳಿಂದ ಅರ್ಚಿತರಾದ, ಶುಭ್ರ ವಸ್ತ್ರಗಳನ್ನು ಧರಿಸಿದ ವಿಪ್ರರು ಬಹಳ ಪ್ರೀತರಾದರು.
ತತಸ್ತಾನ್ ರಾಕ್ಷಸೇಂದ್ರಶ್ಚ ದ್ವಿಜಾನಾಹ ಪುನರ್ವಚಃ |
ನಾನಾದಿಗಾಗತಾನ್ ರಾಜನ್ ರಾಕ್ಷಸಾನ್ ಪ್ರತಿಷಿಧ್ಯ ವೈ ॥22॥
ಅದ್ಯೈಕದಿವಸಂ ವಿಪ್ರಾ ನ ವೋಽಸ್ತೀಹ ಭಯಂ ಕ್ವಚಿತ್ |
ರಾಕ್ಷಸೇಭ್ಯಃ ಪ್ರಮೋದಧ್ವಮಿಷ್ಟತೋ ಯಾತ ಮಾಚಿರಮ್ ॥23॥
ಅನಂತರ ರಾಕ್ಷಸೇಂದ್ರನು ನಾನಾ ದಿಕ್ಕುಗಳಿಂದ ಬಂದಿದ್ದ ಆ ಬ್ರಾಹ್ಮಣರಿಗೆ ಹೇಳಿದನು. `ಇದೊಂದು ದಿನ ನಿಮಗೆ ಇಲ್ಲಿ ರಾಕ್ಷಸರಿಂದ ಯಾವ ಭಯವೂ ಇಲ್ಲ. ನಿಮ್ಮ ಇಚ್ಛೆಯಂತೆ ಇಲ್ಲಿ ಸಂತೋಷಿಸಿರಿ. ಬೇಗ ಹೊರಡಿ'. ಹೀಗೆ ಹೇಳಿ ಕರ್ತವ್ಯ ಭಾರವಿರುವ ರಾಕ್ಷಸರಿಗೆ `ವಿಪ್ರರಿಗೆ ಅಡ್ಡಿ ಮಾಡಬೇಡಿ' ಎಂದು ಆದೇಶಿಸಿದನು.
ತತಃ ಪ್ರದುದ್ರುವುಃ ಸರ್ವೇ ವಿಪ್ರಸಂಘಾಃ ಸಮಂತತಃ |
ಗೌತಮೋಽಪಿ ಸುವರ್ಣಸ್ಯ ಭಾರಮಾದಾಯ ಸತ್ವರಃ ॥24॥
ಅನಂತರ ಎಲ್ಲ ವಿಪ್ರರೂ ಎಲ್ಲ ಕಡೆ ಧಾವಿಸಿದರು. ಗೌತಮನೂ ಬಂಗಾರದ ಭಾರವನ್ನು ತೆಗೆದುಕೊಂಡು ತ್ವರೆಯಿಂದ ಹೊರಟನು.
ಕೃಚ್ಛ್ರಾತ್ ಸಮುದ್ವಹನ್ ವೀರ ನ್ಯಗ್ರೋಧಂ ಸಮುಪಾಗಮತ್ |
ನ್ಯಷೀದಚ್ಚ ಪರಿಶ್ರಾಂತಃ ಕ್ಲಾಂತಶ್ಚ ಕ್ಷುಧಿತಶ್ಚ ಹ ॥25॥
ಬಹಳ ಕಷ್ಟದಿಂದ ಹೊತ್ತುಕೊಂಡು ಆಲದ ಮರದ ಬಳಿ ಬಂದನು. ಆಯಾಸಗೊಂಡಿದ್ದ, ಬಾಡಿದ್ದ, ಹಸಿದಿದ್ದ ಅವನು ಮರದ ಕೆಳಗೆ ಕುಳಿತನು.
ತತಸ್ತಮಭ್ಯಗಾದ್ರಾಜನ್ರಾಜಧರ್ಮಾ ಖಗೋತ್ತಮಃ |
ಸ್ವಾಗತೇನಾಭ್ಯನಂದಚ್ಚ ಗೌತಮಂ ಮಿತ್ರವತ್ಸಲಃ ॥26॥
ಆಗ ಪಕ್ಷಿಶ್ರೇಷ್ಠನಾದ ರಾಜಧರ್ಮನು ಅಲ್ಲಿಗೆ ಬಂದನು. ಮಿತ್ರವತ್ಸಲನಾದ ಅವನು ಗೌತಮನನ್ನು ಸ್ವಾಗತಿಸಿ ಅಭಿನಂದಿಸಿದನು.
ತಸ್ಯ ಪಕ್ಷಾಗ್ರವಿಕ್ಷೇಪೈಃ ಕ್ಲಮಂ ವ್ಯಪನಯತ್ ಖಗಃ |
ಪೂಜಾಂ ಚಾಪ್ಯಕರೋದ್ಧೀಮಾನ್ ಭೋಜನಂ ಚಾಪ್ಯಕಲ್ಪಯತ್ ॥27॥
ಹಕ್ಕಿಯು ರೆಕ್ಕೆಯ ತುದಿಗಳನ್ನು ಬೀಸಿ ಅವನ ಶ್ರಮವನ್ನು ಪರಿಹರಿಸಿತು. ಧೀಮಂತನಾದ ಹಕ್ಕಿಯು ಅವನನ್ನು ಪೂಜಿಸಿ ಭೋಜನವನ್ನೂ ಕಲ್ಪಿಸಿತು.
ತತಸ್ತೌ ಸಂವಿದಂ ಕೃತ್ವಾ ಖಗೇಂದ್ರದ್ವಿಜಸತ್ತಮೌ |
ನ್ಯಷೀದತಾಂ ಮಹಾರಾಜ ನ್ಯಗ್ರೋಧೇ ವಿಪುಲೇ ತಥಾ |
ಗೌತಮಶ್ಚಿಂತಯಾಮಾಸ ರಾತ್ರೌ ತಸ್ಯ ಸಮೀಪತಃ ॥28॥
ಅನಂತರ ಆ ಹಕ್ಕಿ ಮತ್ತು ಬ್ರಾಹ್ಮಣನು ಮಾತುಗಳನ್ನು ಆಡುತ್ತಾ ಆ ವಿಪುಲ ಆಲದ ಮರದಲ್ಲಿ ಆಶ್ರಯವನ್ನು ಪಡೆದರು. ಆ ರಾತ್ರಿ ಗೌತಮನು ಆಲೋಚಿಸಿದನು.
ಹಾಟಕಸ್ಯ ಸುವರ್ಣಸ್ಯ ಭಾರೋಽಯಂ ಸುಮಹಾನ್ ಮಯಾ |
ಗೃಹೀತೋ ಲೋಭಮೋಹಾದ್ವೈ ದೂರಂ ಚ ಗಮನಂ ಮಮ ॥29॥
`ನಾನು ಲೋಭ ಮತ್ತು ಮೋಹಗಳಿಂದ ಒಳ್ಳೆಯ ಬಣ್ಣದ ಬಂಗಾರವನ್ನು ತೆಗೆದುಕೊಂಡಿದ್ದೇನೆ. ದೂರ ಹೋಗಬೇಕಾಗಿದೆ.
ನ ಚಾಸ್ತಿ ಪಥಿ ಭೋಕ್ತವ್ಯಂ ಪ್ರಾಣಸಂಧಾರಣಂ ಮಮ |
ಕಿಂ ಕೃತ್ವಾ ಧಾರಯೇಯಂ ವೈ ಪ್ರಾಣಾನಿತ್ಯಭ್ಯಚಿಂತಯತ್ ॥30॥
`ದಾರಿಯಲ್ಲಿ ಪ್ರಾಣಧಾರಣೆಗೆ ಬೇಕಾದ ಆಹಾರವೇನೂ ಇಲ್ಲ. ಏನು ಮಾಡಿ ಪ್ರಾಣಧಾರಣೆಯನ್ನು ಮಾಡಿಕೊಳ್ಳಲಿ' ಎಂದು ಚಿಂತಿಸಿದನು.
ತತಃ ಸ ಪಥಿ ಭೋಕ್ತವ್ಯಂ ಪ್ರೇಕ್ಷಮಾಣೋ ನ ಕಿಂಚನ |
ಕೃತಘ್ನಃ ಪುರುಷವ್ಯಾಘ್ರ ಮನಸೇದಮಚಿಂತಯತ್ ॥31॥
ತನ್ನ ಪ್ರಯಾಣದ ದಾರಿಯಲ್ಲಿ ತಿನ್ನಲು ಬೇಕಾದ ಯಾವ ಆಹಾರವೂ ಅವನಿಗೆ ಹೊಳೆಯಲಿಲ್ಲ. ಕೃತಘ್ನನಾದ ಆ ಪುರುಷಮುಖದ ವ್ಯಾಘ್ರನು ಆಲೋಚಿಸಿದನು.
ಅಯಂ ಬಕಪತಿಃ ಪಾರ್ಶ್ವೇ ಮಾಂಸರಾಶಿಃ ಸ್ಥಿತೋ ಮಮ |
ಇಮಂ ಹತ್ವಾ ಗೃಹೀತ್ವಾ ಚ ಯಾಸ್ಯೇಽಹಂ ಸಮಭಿದ್ರುತಮ್ ॥32॥
ಮಾಂಸರಾಶಿಯಾದ ಈ ಬಕಪಕ್ಷಿಯು ನನ್ನ ಪಕ್ಕದಲ್ಲಿದೆ. ಈ ಹಕ್ಕಿಯನ್ನು ಕೊಂದು ತೆಗೆದುಕೊಂಡು ಶೀಘ್ರವಾಗಿ ಇಲ್ಲಿಂದ ಹೊರಟುಹೋಗುತ್ತೇನೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಸಪ್ತತ್ರಿಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿಯಿತು.
* * * *

ಮೂವತ್ತೆಂಟನೆಯ ಅಧ್ಯಾಯ
ಗೌತಮನಿಂದ `ರಾಜಧರ್ಮ' (ಬಕಪಕ್ಷಿ)ನ ಹತ್ಯೆ. ವಿರೂಪಾಕ್ಷನ ಮಗ ಮತ್ತು ಸೇವಕರಿಂದ ಗೌತಮನ ಬಂಧನ, ಹತ್ಯೆ.
ಭೀಷ್ಮಃ
ಅಥ ತತ್ರ ಮಹಾರ್ಚಿಷ್ಮಾನನಲೋ ವಾತಸಾರಥಿಃ ।
ತಸ್ಯಾವಿದೂರೇ ರಕ್ಷಾರ್ಥಂ ಖಗೇಂದ್ರೇಣ ಕೃತೋಽಭವತ್ ॥1॥
ಅನಂತರ ಪಕ್ಷಿಶ್ರೇಷ್ಠನಾದ ರಾಜಧರ್ಮನು ಅವನ (ಗೌತಮನ) ರಕ್ಷಣೆಗಾಗಿ ಹತ್ತಿರದಲ್ಲೇ ಗಾಳಿಯ ಸಹಾಯದಿಂದ ಜ್ವಾಲೆಗಳಿರುವ ಅಗ್ನಿಯನ್ನು ಏರ್ಪಡಿಸಿದನು.
ಸ ಚಾಪಿ ಪಾರ್ಶ್ವೇ ಸುಷ್ವಾಪ ವಿಶ್ವಸ್ತೋ ಬಕರಾಟ್ ತದಾ ।
ಕೃತಘ್ನಸ್ತು ಸ ದುಷ್ಟಾತ್ಮಾ ತಂ ಜಿಘಾಂಸುರಜಾಗರತ್ ॥2॥
ಆ ಶ್ರೇಷ್ಠ ಬಕಪಕ್ಷಿಯೂ ನಂಬಿಕೆಯಿಂದ ಅವನ ಪಕ್ಕದಲ್ಲೇ ನಿದ್ರಿಸಿದನು. ಕೃತಘ್ನನಾದ ಆ ದುಷ್ಟ ಗೌತಮನು ಹಕ್ಕಿಯನ್ನು ಕೊಲ್ಲುವ ಇಚ್ಛೆಯಿಂದ ಎಚ್ಚರದಿಂದ ಇದ್ದನು.
ತತೋಽಲಾತೇನ ದೀಪ್ತೇನ ವಿಶ್ವಸ್ತಂ ನಿಜಘಾನ ತಮ್ ।
ನಿಹತ್ಯ ಚ ಮುದಾ ಯುಕ್ತಃ ಸೋಽನುಬಂಧಂ ನ ದೃಷ್ಟವಾನ್ ॥3॥
ಅನಂತರ ಉರಿಯುತ್ತಿರುವ ಕೊಳ್ಳಿಯಿಂದ ನಂಬಿಕೆಯಿಟ್ಟಿದ್ದ ಆ ಹಕ್ಕಿಯನ್ನು ಕೊಂದನು. ಕೊಂದು ಸಂತೋಷಿಸಿದ ಗೌತಮನು ಈ ಕೃತ್ಯದ ಪರಿಣಾಮವನ್ನು (ಘೋರ ಪಾಪದ ಪ್ರಾಪ್ತಿಯನ್ನು ಮನಗಾಣಲೇ ಇಲ್ಲ).
ಸ ತಂ ವಿಪಕ್ಷರೋಮಾಣಂ ಕೃತ್ವಾ ಜೀವಪರಸ್ತದಾ ।
ತಂ ಗೃಹೀತ್ವಾ ಸುವರ್ಣಂ ಚ ಯಯೌ ದ್ರುತತರಂ ದ್ವಿಜಃ ॥4॥
ಕೇವಲ ತನ್ನ ಪ್ರಾಣರಕ್ಷಣೆಯಲ್ಲಿ ಆಸಕ್ತನಾಗಿದ್ದ ಆ ಬ್ರಾಹ್ಮಣನು ಆ ಸತ್ತ ಹಕ್ಕಿಯ ರೆಕ್ಕೆಗಳನ್ನು ಮತ್ತು ರೋಮಗಳನ್ನು ಕಿತ್ತುಹಾಕಿ ದೇಹವನ್ನು ಮತ್ತು ಬಂಗಾರವನ್ನು ತೆಗೆದುಕೊಂಡು ವೇಗದಿಂದ ಹೊರಟುಹೋದನು.
ತತೋಽನ್ಯಸ್ಮಿನ್ ಗತೇ ಚಾಹ್ನಿ ವಿರೂಪಾಕ್ಷೋಽಬ್ರವೀತ್ ಸುತಮ್ ।
ನ ಪ್ರೇಕ್ಷೇ ರಾಜಧರ್ಮಾಣಮದ್ಯ ಪುತ್ರ ಖಗೋತ್ತಮಮ್ ॥5॥
ಇನ್ನೊಂದು ದಿವಸ ಕಳೆದ ನಂತರ ವಿರೂಪಾಕ್ಷನು ಮಗನಿಗೆ ಹೇಳಿದನು. `ಪುತ್ರ! ಪಕ್ಷಿಶ್ರೇಷ್ಠ ರಾಜಧರ್ಮನನ್ನು ಇಂದು ನೋಡಲೇ ಇಲ್ಲ'.
ಸ ಪೂರ್ವಸಂಧ್ಯಾಂ ಬ್ರಹ್ಮಾಣಂ ವಂದಿತುಂ ಯಾತಿ ಸರ್ವದಾ ।
ಮಾಂ ಚಾದೃಷ್ಟ್ವಾ ಕದಾಚಿತ್ಸ ನ ಗಚ್ಛತಿ ಗೃಹಾನ್ ಖಗಃ ॥6॥
`ಆ ಹಕ್ಕಿಯು ಪ್ರತಿದಿನ ಪ್ರಾತಃಸಂಧ್ಯಾಕಾಲದಲ್ಲಿ ಬ್ರಹ್ಮದೇವನಿಗೆ ವಂದಿಸಲು ಹೋಗುತ್ತದೆ. ಹಿಂದಿರುಗುವಾಗ ಎಂದೂ ನನ್ನನ್ನು ಕಾಣದೆ ಮನೆಗೆ ಹೋಗುವುದಿಲ್ಲ'.
ಉಭೇ ದ್ವಿರಾತ್ರಂ ಸಂಧ್ಯೇ ವೈ ನಾಭ್ಯಗಾತ್ ಸ ಮಮಾಲಯಮ್ ।
ತಸ್ಮಾನ್ನ ಶುದ್ಧ್ಯತೇ ಭಾವೋ ಮಮ ಸ ಜ್ಞಾಯತಾಂ ಸುಹೃತ್ ॥7॥
`ಎರಡು ರಾತ್ರಿ, ಎರಡು ಸಂಧ್ಯಾಕಾಲಗಳು ಕಳೆಯಿತು. ಆ ಹಕ್ಕಿಯು ನಮ್ಮ ಮನೆಗೆ ಬಂದಿಲ್ಲ. ಆದ್ದರಿಂದ ನನ್ನ ಮನಸ್ಸಿಗೆ ಆತಂಕವಾಗಿದೆ. ಅವನ ಬಗ್ಗೆ ವಿಚಾರಿಸು'.
ಸ್ವಾಧ್ಯಾಯೇನ ವಿಯುಕ್ತೋ ಹಿ ಬ್ರಹ್ಮವರ್ಚಸವರ್ಜಿತಃ ।
ತಂ ಗತಸ್ತತ್ರ ಮೇ ಶಂಕಾ ಹನ್ಯಾತ್ತಂ ಸ ದ್ವಿಜಾಧಮಃ ॥8॥
`ವೇದಾಧ್ಯಯನ ರಹಿತನಾದ, ಬ್ರಹ್ಮವರ್ಚಸ್ ಇಲ್ಲದ ಆ ಬ್ರಾಹ್ಮಣಾಧಮನು ಆ ಹಕ್ಕಿಯು ವಸತಿಗೆ ಹೋಗಿದ್ದಾನೆ. ಅವನು ಹಕ್ಕಿಯನ್ನು ಕೊಂದಿರಬಹುದು ಎಂದು ನನಗೆ ಸಂಶಯ'.
ದುರಾಚಾರಸ್ತು ದುರ್ಬುದ್ಧಿರಿಂಗಿತೈರ್ಲಕ್ಷಿತೋ ಮಯಾ ।
ನಿಷ್ಕ್ರಿಯೋ ದಾರುಣಾಕಾರಃ ಕೃಷ್ಣೋ ದಸ್ಯುರಿವಾಧಮಃ ॥9॥
`ಅವನು ದುರಾಚಾರ, ದುರ್ಬುದ್ಧಿ, ಸೋಮಾರಿ, ಕ್ರೂರ ಆಕೃತಿಯವನು, ಕಪ್ಪು, ದಸ್ಯುವಿನಂತೆ ಅಧಮ'.
ಗೌತಮಃ ಸ ಗತಸ್ತತ್ರ ತೇನೋದ್ವಿಗ್ನಂ ಮನೋ ಮಮ ।
ಪುತ್ರ ಶೀಘ್ರಮಿತೋ ಗತ್ವಾ ರಾಜಧರ್ಮನಿವೇಶನಮ್ ।
ಜ್ಞಾಯತಾಂ ಸ ವಿಶುದ್ಧಾತ್ಮಾ ಯದಿ ಜೀವತಿ ಮಾಚಿರಮ್ ॥10॥
`ಆ ಗೌತಮನು ಅಲ್ಲಿಗೆ (ಹಕ್ಕಿಯ ವಸತಿಗೆ) ಹೋಗಿದ್ದಾನೆ. ಆದ್ದರಿಂದ ನನ್ನ ಮನಸ್ಸು ಉದ್ವಿಗ್ನವಾಗಿದೆ. ಪುತ್ರ! ಕೂಡಲೇ ಇಲ್ಲಿಂದ `ರಾಜಧರ್ಮ'ದ ವಸತಿಗೆ ಹೋಗಿ ಆ ವಿಶುದ್ಧಾತ್ಮನು ಬದುಕಿದ್ದಾನೋ, ಇಲ್ಲವೋ ಎಂದು ತಿಳಿದು ಬಾ. ಬೇಗ ಹೋಗು'.
ಸ ಏವಮುಕ್ತಸ್ತ್ವರಿತೋ ರಕ್ಷೋಭಿಃ ಸಹಿತೋ ಯಯೌ ।
ನ್ಯಗ್ರೋಧಂ ತತ್ರ ಚಾಪಶ್ಯತ್ ಕಂಕಾಲಂ ರಾಜಧರ್ಮಣಃ ॥11॥

ಹಿಂದೆ ಹೇಳಲ್ಪಟ್ಟ ಪುತ್ರನು ರಾಕ್ಷಸರೊಡನೆ ಕೂಡಲೇ ಆ ವಟವೃಕ್ಷವಿದ್ದಲ್ಲಿಗೆ ಹೋದನು. ಅಲ್ಲಿ `ರಾಜಧರ್ಮ'ನ ರೆಕ್ಕೆ, ಮೂಳೆಗಳನ್ನು ನೋಡಿದನು.
ನ್ಯಗ್ರೋಧೇ ರಾಜಧರ್ಮಾಣಮಪಶ್ಯನ್ನಿಹತಂ ತತಃ |
ರುದಿತ್ವಾ ಬಹು ತತ್ತದ್ವೈ ವಿಲಪ್ಯ ಚ ಸ ರಾಕ್ಷಸಃ ||12||
ವಟವೃಕ್ಷದ ಕೆಳಗೆ `ರಾಜಧರ್ಮ'ನು ಹತನಾಗಿರುವುದನ್ನು ಕಂಡು ಆ ರಾಕ್ಷಸ ಪುತ್ರನು ಬಹಳ ಅತ್ತನು. ಬಹುವಿಧವಾಗಿ ವಿಲಾಪ ಮಾಡಿದನು.
ಗತೋ ರೋಷಸಮಾವಿಷ್ಟೋ ಗೌತಮಗ್ರಹಣಾಯ ವೈ |
ಗೃಹೀತೋ ಗೌತಮಃ ಪಾಪೋ ರಕ್ಷೋಭಿಃ ಕ್ರೋಧಮೂರ್ಚ್ಛಿತೈಃ ||13||
ರೋಷದ ಆವೇಶಕ್ಕೊಳಗಾಗಿ ಆ ಗೌತಮನನ್ನು ಹಿಡಿಯಲು ಹೊರಟನು. ಕ್ರೋಧಾವಿಷ್ಟರಾದ ರಾಕ್ಷಸರು ಗೌತಮನನ್ನು ಹಿಡಿದರು.
ರಾಜಧರ್ಮಶರೀರಸ್ಯ ಕಂಕಾಲಂ ಚಾಪ್ಯಥೋ ಧೃತಮ್ |
ಮೇರುಪೃಷ್ಠೇ ಚ ನಗರಂ ಯಾತುಧಾನಾಸ್ತತೋ ಗತಾಃ ||14||
`ರಾಜಧರ್ಮ'ನ ಶರೀರದ ಅಸ್ಥಿಗಳನ್ನು ವಶಕ್ಕೆ ತೆಗೆದುಕೊಂಡರು. ಅಲ್ಲಿಂದ ರಾಕ್ಷಸರು ಮೇರುಪರ್ವತದಲ್ಲಿದ್ದ ವಿರೂಪಾಕ್ಷನ ನಗರಕ್ಕೆ ಹೋದರು.
ಕ್ರೋಧರಕ್ತೇಕ್ಷಣಾ ಘೋರಾ ಗೌತಮಸ್ಯ ವಧೇ ಧೃತಾಃ |
ಪಾರ್ಥಿವಸ್ಯಾಗ್ರತೋಧ್ರುಸ್ತೇ ಕಂಕಾಲಂ ರಾಜಧರ್ಮಣಃ ||15||
ಕ್ರೋಧದಿಂದ ಕೆಂಪಾದ ಕಣ್ಣುಗಳಿದ್ದ, ಗೌತಮನನ್ನು ಕೊಲ್ಲಲು ನಿರ್ಧರಿಸಿದ್ದ ಆ ಘೋರ ಅಸುರರು ರಾಜನ ಮುಂದೆ `ರಾಜಧರ್ಮ'ನ ಶರೀರದ ಅವಶೇಷಗಳನ್ನು ಇಟ್ಟರು.
ತಂ ದೃಷ್ಟ್ವಾ ವಿಮನಾ ರಾಜಾ ಸಾಮಾತ್ಯಃ ಸಗಣೋಭವತ್ |
ಆರ್ತನಾದೋ ಮಹಾನಾಸೀದ್ ಗೃಹೇ ತಸ್ಯ ಮಹಾತ್ಮನಃ ||16||
ಸ್ತ್ರೀಸಂಘಸ್ಯ ತದಾ ರಾಜನ್ ನಿಹತೇ ಕಾಶ್ಯಪಾತ್ಮಜೇ |
ರಾಜಾ ಚೈವಾಬ್ರವೀತ್ಪುತ್ರಂ ಪಾಪೋಽಯಂ ವಧ್ಯತಾಮಿತಿ ||17||
ಆ ಅವಶೇಷಗಳನ್ನು ನೋಡಿ ರಾಜನ ಮತ್ತು ಮಂತ್ರಿಗಳ ಮತ್ತು ಇತರ ಪರಿವಾರದ ಜನರ ಮನಸ್ಸು ದುಃಖದಿಂದ ಕುಸಿಯಿತು. ರಾಜನೇ! ಕಶ್ಯಪರ ಸಂತತಿಯವನಾದ ಆ `ರಾಜಧರ್ಮ'ನು ಹೀಗೆ ಹತನಾದಾಗ, ಆ ಮಹಾತ್ಮನ= ವಿರೂಪಾಕ್ಷನ ಮನೆಯಲ್ಲಿದ್ದ ಮಹಿಳೆಯರು ಬಹಳ ಆರ್ತನಾದವನ್ನು ಮಾಡಿದರು. `ಈ ಪಾಪಿಯನ್ನು ಕೊಂದು ಬಿಡಿ' ಎಂದು ರಾಜನು ಹೇಳಿದನು.
ರಾಕ್ಷಸಾಃ
ಅಸ್ಯ ಮಾಂಸಂ ವಯಂ ಸರ್ವೇ ಖಾದಿಷ್ಯಾಮಃ ಸಮಾಗತಾಃ |
ಪಾಪಕೃತ್ ಪಾಪಕರ್ಮಾ ಚ ಪಾಪಾತ್ಮಾ ಪಾಪಮಾಸ್ಥಿತಃ |
ಹಂತವ್ಯ ಏವ ಪಾಪಾತ್ಮಾ ಕೃತಘ್ನೋ ನಾತ್ರ ಸಂಶಯಃ ||18||
ಇಲ್ಲಿ ಸೇರಿರುವ ನಾವೆಲ್ಲರೂ ಇವನ ಮಾಂಸವನ್ನು ತಿನ್ನೋಣ. ಪಾಪಕರ್ಮಗಳನ್ನು ಹೊತ್ತಿರುವ ಈ ಪಾಪಕಾರಿಯು ಪಾಪವನ್ನೇ ಆಶ್ರಯಿಸಿದ್ದಾನೆ. ಇವನು ಪಾಪಾತ್ಮಾ. ಇವನು ಕೃತಘ್ನ. ಇವನು ವಧೆಗೇ ಅರ್ಹ. ಈ ವಿಷಯದಲ್ಲಿ ಏನೂ ಸಂಶಯವಿಲ್ಲ.
ವಿರೂಪಾಕ್ಷಃ
ಕೃತಘ್ನಂ ಪಾಪಕರ್ಮಾಣಂ ನ ಭಕ್ಷಯಿತುಮುತ್ಸಹೇ |
ದಾಸೇಭ್ಯೋ ದೀಯತಾಮೇಷ ಮಿತ್ರಧ್ರುಕ್ ಪುರುಷಾಧಮಃ ||19||
ಕೃತಘ್ನನಾದ, ಪಾಪಕರ್ಮವನ್ನು ಮಾಡಿದ ಇವನನ್ನು ನಾನು ತಿನ್ನಲು ಬಯಸುವುದಿಲ್ಲ. ಮಿತ್ರದ್ರೋಹಿಯಾದ, ಪುರುಷಾಧಮನಾದ ಇವನನ್ನು ಆಳುಗಳಿಗೆ ಕೊಟ್ಟು ಬಿಡಿ.
ಭೀಷ್ಮಃ
ದಾಸಾಃ ಸರ್ವೇ ಸಮಾಹೂತಾ ಯಾತುಧಾನಾಸ್ತಥಾ ಪರೇ |
ನೇಚ್ಛಂತಿ ಸ್ಮ ಕೃತಘ್ನಂ ತಂ ಖಾದಿತುಂ ಪುರುಷೋತ್ತಮ ||20||
ಪುರುಷಶ್ರೇಷ್ಠ! ಎಲ್ಲ ಆಳುಗಳನ್ನು, ರಾಕ್ಷಸರನ್ನು ಕರೆದರು. ಆ ಕೃತಘ್ನನನ್ನು ತಿನ್ನಲು ಅವರು ಇಚ್ಛಿಸಲಿಲ್ಲ.
ಶಿರೋಭಿಶ್ಚ ಗತಾ ಭೂಮಿಂ ಮಹಾರಾಜ ತತೋ ಬಲಾತ್ |
ಮಾ ನಾರ್ಥಂ ಜಾತನಿರ್ಬಂಧಂ ಕಿಲ್ಬಿಷಂ ದಾತುಮರ್ಹಸಿ ||21||
ಅವರೆಲ್ಲರೂ ಶಿರಸಾ ನಮಸ್ಕರಿಸಿ `ಮಹಾರಾಜರೇ! ದಯವಿಟ್ಟು ಈ ಪಾಪಿಯನ್ನು, ಅನಾರ್ಯನನ್ನು ನಮಗೆ ಕೊಡಬೇಡಿ' ಎಂದು ಹೇಳಿದರು.
ಯಾತುಧಾನಾ ನೃಪೇಣೋಕ್ತಾಃ ಪಾಪಕರ್ಮಾ ವಿಶಸ್ಯತಾಮ್ |
ಭಕ್ಷ್ಯತಾಂ ತ್ಯಜ್ಯತಾಂ ವಾಯಂ ದರ್ಶನಾನ್ಽಪನೀಯತಾಮ್ ||22||
ರಾಕ್ಷಸರಿಂದ ಹೀಗೆ ಹೇಳಲ್ಪಟ್ಟ ರಾಜನು `ಈ ಪಾಪಕಾರ್ಯವೆಸಗಿದವನನ್ನು ಕೊಂದು ಬಿಡಿ. ಅನಂತರ ತಿನ್ನಿ ಅಥವಾ ಬಿಡಿ. ಇವನನ್ನು ನನಗೆ ಕಾಣದಂತೆ ದೂರ ಒಯ್ಯಿರಿ' ಎಂದು ಹೇಳಿದನು.
ತತಸ್ತೇ ರುಷಿತಾ ದಾಸಾಃ ಶೂಲಪಟ್ಟಿಸಪಾಣಯಃ |
ಖಂಡಶೋ ವಿಕೃತಂ ಹತ್ವಾ ಕ್ರವ್ಯಾದ್ಭ್ಯೋ ಹ್ಯದದುಸ್ತದಾ ||23||
ಅನಂತರ ರೋಷಾವಿಷ್ಟರಾದ, ಶೂಲ-ಪಟ್ಟಿಸಗಳನ್ನು ಕೈಯಲ್ಲಿ ಹಿಡಿದಿದ್ದ ಸೇವಕರು ಗೌತಮನನ್ನು ಚೂರು ಚೂರು ಆಗುವಂತೆ

ಹೊಡೆದು ಮಾಂಸಭಕ್ಷಕರಿಗೆ ಕೊಟ್ಟರು.
ಕ್ರವ್ಯಾದಾಸ್ತ್ವಪಿ ರಾಜೇಂದ್ರ ನೇಚ್ಛಂತಿ ಪಿಶಿತಾಶನಾಃ |
ಮೃತಾನಪಿ ಹಿ ಕ್ರವ್ಯಾದಾಃ ಕೃತಘ್ನಾನ್ನೋಪಭುಂಜತೇ ॥24॥
ರಾಜೇಂದ್ರ! ಮಾಂಸಭಕ್ಷಕರೂ ಕೂಡ ಕೃತಘ್ನರನ್ನು, ಅವರು ಸತ್ತು ಹೋಗಿದ್ದರೂ ತಿನ್ನುವುದಿಲ್ಲ.
ಬ್ರಹ್ಮಸ್ವಹರಣೇ ಚೋರೇ ಬ್ರಹ್ಮಘ್ನೇ ಗುರುತಲ್ಪಗೇ |
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥25॥
ಬ್ರಹ್ಮಸ್ವವನ್ನು ಅಪಹಾರ ಮಾಡಿದವರಿಗೆ, ಕಳ್ಳನಿಗೆ, ಬ್ರಾಹ್ಮಣಹತ್ಯೆಯನ್ನು ಮಾಡಿದವರಿಗೆ, ಗುರುಪತ್ನಿಯ ಭೋಗವನ್ನು ಮಾಡಿದವರಿಗೆ ಪ್ರಾಜ್ಞರು ಪ್ರಾಯಶ್ಚಿತ್ತವನ್ನು ವಿಧಿಸಿದ್ದಾರೆ. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ.
ಮಿತ್ರದ್ರುಹಂ ಕೃತಘ್ನಂ ಚ ನೃಶಂಸಂ ಚ ನರಾಧಮಮ್ |
ಕ್ರವ್ಯಾದಾಃ ಕೃಮಯಶ್ಚೈವ ನೋಪಭುಂಜಂತಿ ವೈ ಸದಾ ॥26॥
ಮಿತ್ರದ್ರೋಹಿಯನ್ನು, ಕೃತಘ್ನನನ್ನು, ಕ್ರೂರಿಯನ್ನು, ನರಾಧಮನನ್ನು, ಮಾಂಸಭಕ್ಷಕ ಪ್ರಾಣಿಗಳು, ಕ್ರಿಮಿಗಳು ಕೂಡ ಎಂದೂ ತಿನ್ನುವುದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಅಷ್ಟತ್ರಿಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತೆಂಟನೆಯ
ಅಧ್ಯಾಯವು ಮುಗಿಯಿತು.
* * * *
ಮೂವತ್ತೊಂಬತ್ತನೆಯ ಅಧ್ಯಾಯ
`ರಾಜಧರ್ಮ'ನ ದೇಹಕ್ಕೆ ಸಂಸ್ಕಾರ. ದೇಹದ ಮೇಲೆ ಸುರಭಿಯ ಬಾಯಿಯ ನೊರೆಯ ಪತನ. ದೇವೇಂದ್ರನ ಆಗಮನ. ರಾಜಧರ್ಮನ ಪುನರುಜ್ಜೀವನ. ಅವನ ಶಾಪ ವೃತ್ತಾಂತ. ಗೌತಮನ ಪುನರುಜ್ಜೀವನ. ಅವನ ನರಕಗಮನ. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ.
ಭೀಷ್ಮಃ
ವಿದ್ವಾನ್ ಸಂಸ್ಕಾರಯಾಮಾಸ ಪಾರ್ಥಿವೋ ರಾಜಧರ್ಮಣಃ |
ಗಂಧೈರ್ಬಹುಭಿರವ್ಯಗ್ರೋ ದಾಹಯಾಮಾಸ ತಂ ದ್ವಿಜಮ್ ॥1॥
ತಸ್ಯ ದೇವಸ್ಯ ವಚನಾದಿಂದ್ರಸ್ಯ ಬಕರಾಡಿಹ |
ತೇನೈವಾಮೃತಸಿಕ್ತಶ್ಚ ಪುನಃ ಸಂಜೀವಿತೋ ಬಕಃ ॥2॥
ಇಂದ್ರದೇವನ ಮಾತಿನಂತೆ ಪ್ರಾಜ್ಞನಾದ ರಾಜ ವಿರೂಪಾಕ್ಷನು `ರಾಜಧರ್ಮ'ನ ಸಂಸ್ಕಾರವನ್ನು ಮಾಡಿಸಿದನು. ಏಕಾಗ್ರಚಿತ್ತನಾಗಿ ಬಹಳ ಸುಗಂಧ ದ್ರವ್ಯಗಳಿಂದ ಆ ಹಕ್ಕಿಯ ದಹನವನ್ನು ಮಾಡಿಸಿದನು. ಆ ಇಂದ್ರದೇವನ ಆದೇಶಕ್ಕನುಗುಣವಾಗಿ ಆ ಬಕರಾಜ ರಾಜಧರ್ಮನ ಶರೀರದ ಮೇಲೆ ಅಮೃತವೃಷ್ಟಿಯಾಯಿತು. ಬಕನು ಪುನಃ ಬದುಕಿದನು.
ದಗ್ಧೋ ರಾಕ್ಷಸರಾಜೇನ ಖಗರಾಜಃ ಪ್ರತಾಪವಾನ್ |
ಚಿತಾಯಾಃ ಪಾರ್ಶ್ವತೋ ದೋಗ್ಧ್ರೀ ಸುರಭಿಃ ಪ್ರೀಣಯಚ್ಚ ತಾನ್ ॥3॥
ರಾಕ್ಷಸರಾಜ (ವಿರೂಪಾಕ್ಷ)ನಿಂದ ಪಕ್ಷಿಶ್ರೇಷ್ಠನು ಸಂಸ್ಕಾರಕ್ಕೆ ಒಳಗಾಗುತ್ತಿದ್ದಾಗ, ಚಿತೆಯ ಸಮೀಪದಲ್ಲಿ ಸುರಭಿದೇವಿಯು ಹೆರಡಿದ ಸೌರಭವು ಅಲ್ಲಿದ್ದವರಿಗೆ ಹಿತ ಉಂಟುಮಾಡಿತು.
ತಸ್ಯಾ ವಕತತ್ರಚ್ಯುತಃ ಫೇನೋ ದುಗ್ಧಮಾತ್ರಸ್ತದಾನಘ |
ಸಮೀರಣಾಹೃತೋ ಯಾತಃ ಕೃತಾಂತೇ ರಾಜಧರ್ಮಣಿ |
ದೇವರಾಜಸ್ತತಃ ಪ್ರಾಪ್ತೋ ವಿರೂಪಾಕ್ಷಪುರಂ ತದಾ ॥4॥
ಆ ಸುರಭಿದೇವಿಯ ಬಾಯಿಂದ ಹೊರಗೆ ಬಿದ್ದ ನೊರೆಯು ಗಾಳಿಯ ವೇಗದಿಂದ ಮೃತ `ರಾಜಧರ್ಮ'ನ ಮೇಲೆ ಬಿತ್ತು. ಅನಂತರ ದೇವೇಂದ್ರನು ವಿರೂಪಾಕ್ಷನ ಪುರಕ್ಕೆ ಬಂದನು.
ವಿರೂಪಾಕ್ಷೋಽಪಿ ತಂ ಪ್ರಾಪ್ತಂ ದೇವರಾಜಂ ಸಮಾಗಮತ್ |
ಕಾಶ್ಯಪಸ್ಯ ಸುತೋ ದೇವ ಭ್ರಾತಾ ಮೇ ಜೀವತಾಮಿತಿ ॥5॥
ವಿರೂಪಾಕ್ಷನು ಆ ದೇವರಾಜನನ್ನು ಸಮೀಪಿಸಿ ಪ್ರಾರ್ಥಿಸಿದನು. `ದೇವ! ಕಾಶ್ಯಪ ಸುತನಾದ, ಈ ನನ್ನ ಸೋದರನನ್ನು ಬದುಕಿಸಿ' (ದೇವೇಂದ್ರನ ಆದೇಶದಂತೆ ಸುರಭಿಯ ನೊರೆಯ ಸ್ಪರ್ಶವನ್ನು ಪಡೆದಿದ್ದ ಬಕರಾಜನು ದೇವೇಂದ್ರನ ಅನುಗ್ರಹದಿಂದ ಬದುಕಿದನು).
ಕೌಶಿಕಸ್ತ್ವಬ್ರವೀತ್ ಸರ್ವಂ ಪ್ರೀಯಮಾಣಂ ಪುನಃ ಪುನಃ |
ಬ್ರಹ್ಮಣಾ ವ್ಯಾಹೃತೋ ರೋಷಾದ್ ರಾಜಧರ್ಮಾ ಕದಾಚನ ॥6॥
ದೇವೇಂದ್ರನು ಬಹಳ ಪ್ರೀತನಾದ ವಿರೂಪಾಕ್ಷನಿಗೆ `ರಾಜಧರ್ಮ'ನ ಪೂರ್ವವೃತ್ತಾಂತವನ್ನು ಹೇಳಿದನು.
ಯಸ್ಮಾತ್ ತ್ವಂ ನಾಗತೋ ದ್ರಷ್ಟುಂ ಮಮ ನಿತ್ಯಮಿಮಾಂ ಸಭಾಮ್ |
ತಸ್ಮಾದ್ ಬಕೋ ಭವಾನ್ ಭಾವೀ ಧರ್ಮಶೀಲಃ ಪುರಾಣವಿತ್ ॥7॥
ಒಮ್ಮೆ ಬ್ರಹ್ಮದೇವನು ಕೋಪದಿಂದ `ರಾಜಧರ್ಮ'ನಿಗೆ ಹೇಳಿದನು. ``ನೀನು ನನ್ನ ದರ್ಶನಕ್ಕಾಗಿ ಪ್ರತಿದಿನವೂ ಈ ಮಂದಿರಕ್ಕೆ ಬರುತ್ತಿಲ್ಲ. ಆದ್ದರಿಂದ ನೀನು ಬಕಪಕ್ಷಿ ಆಗುವಿ. ಆ ಸ್ಥಿತಿಯಲ್ಲೂ ನೀನು ಧರ್ಮನಿಷ್ಠನಾಗಿರುವಿ ಪ್ರಾಚೀನ ವೃತ್ತಾಂತಗಳನ್ನು ತಿಳಿದಿರುವಿ''.
ಆಗಮಿಷ್ಯತಿ ತೇ ವಾಸಂ ಕದಾಚಿತ್ ಪಾಪಕರ್ಮಕೃತ್ |

ಶಬರಾವಾಸಗೋ ವಿಪ್ರಃ ಕೃತಘ್ನೋ ವೃಷಲೀಪತಿಃ ॥8॥
ಯದಾ ನಿಹಂತಾ ಮೋಕ್ಷಸ್ತೇ ತದಾ ಭಾವೀತ್ಯುವಾಚ ತಮ್ ।
ತಸ್ಮಾದೇವ ಗತೋ ಲೋಕಂ ಬ್ರಹ್ಮಣಃ ಪರಮೇಷ್ಠಿನಃ ॥9॥
``ಒಮ್ಮೆ ನಿನ್ನ ವಸತಿಗೆ ಬೇಡರ ಮಧ್ಯೆ ವಾಸ ಮಾಡುವ, ಪಾಪಕೃತ್ಯಗಳನ್ನು ಮಾಡುವ, ಶೂದ್ರಸ್ತ್ರೀಗೆ ಪತಿಯಾದ, ಕೃತಘ್ನ ವಿಪ್ರನು ಬರುತ್ತಾನೆ. ಅವನು ನಿನ್ನನ್ನು ಕೊಲ್ಲುತ್ತಾನೆ. ಆಗ ನಿನಗೆ ಶಾಪದಿಂದ ಬಿಡುಗಡೆಯಾಗುತ್ತದೆ''.
ಭೀಷ್ಮಃ
ರಾಜಧರ್ಮಾಪಿ ತಂ ಪ್ರಾಹ ಸಹಸ್ರಾಕ್ಷಮರಿಂದಮಮ್ ।
ಗೌತಮೋ ಬ್ರಾಹ್ಮಣಃ ಕ್ವಾಸೌ ಮುಚ್ಯತಾಂ ಮತ್ಪ್ರಿಯಃ ಸಖಾ ॥10॥
ರಾಜಧರ್ಮನು ಶತ್ರು ದಮನಕಾರಿಯಾದ ದೇವೇಂದ್ರನಿಗೆ ಹೇಳಿದನು. `ನನ್ನ ಪ್ರಿಯಮಿತ್ರ ಗೌತಮ ಎಲ್ಲಿ? ಅವನನ್ನು ಬಿಡುಗಡೆ ಮಾಡಿ'.
ತಸ್ಯ ವಾಕ್ಯಂ ಸಮಾಜ್ಞಾಯ ಕೌಶಿಕಃ ಸುರಸತ್ತಮಃ ।
ಸಂಜೀವಯಿತ್ವಾ ಸಖ್ಯೇ ವೈ ಪ್ರಾದಾತ್ ತಂ ಗೌತಮಂ ತದಾ ।
ಪ್ರತೀತಃ ಸ ಗತಃ ಸೌಮ್ಯೇ ರಾಜಧರ್ಮ ಸ್ವಯಾಲಯಮ್ ॥11॥
``ಅವನ ಮಾತನ್ನು ಕೇಳಿ ದೇವಶ್ರೇಷ್ಠನಾದ ಇಂದ್ರನು ಗೌತಮನನ್ನು ಬದುಕಿಸಿ, `ರಾಜಧರ್ಮ'ನಿಗೆ ಒಪ್ಪಿಸಿದನು''. ಸಂತುಷ್ಟನಾದ `ರಾಜಧರ್ಮ'ನು ತನ್ನ ವಸತಿಗೆ ಹೊರಟು ಹೋದನು.
``ಸಂತುಷ್ಟನಾದ `ರಾಜಧರ್ಮ'ನು ಗೌತಮನಿಗೆ ಅವನ ವಸ್ತುಗಳೆಲ್ಲವನ್ನು ಒಪ್ಪಿಸಿ ತೃಪ್ತನಾದನು. ಅನಂತರ ತನ್ನ ವಸತಿಗೆ ಹೊರಟುಹೋದನು. (ಗೌತಮನು ಬೇಡರ ವಸತಿಗೆ ಹೋಗಿ ಅಲ್ಲಿ ತನ್ನ ಶೂದ್ರಪತ್ನಿಯ ಜೊತೆ ಜೀವನ ಮಾಡಿದನು)'.
ನೃಶಂಸೋ ಗೌತಮೋ ಮುಗಕ್ನೋ ಮಿತ್ರಧ್ರುಕ್ ಪುರುಷಾಧಮಃ ।
ಸ ಚಾಪಿ ನಿರಯಂ ಪ್ರಾಪ್ತೋ ದುಷ್ಕೃತಿಃ ಕುಲಪಾಂಸನಃ ।
ಏತಚ್ಛ್ರುತ್ವಾ ಮಹದ್ವಾಕ್ಯಂ ಸನ್ಮಧ್ಯೇ ನಾರದೇರಿತಮ್ ॥12॥
ಮಯಾಪಿ ತವ ರಾಜೇಂದ್ರ ಯಥಾವದನುವರ್ಣಿತಮ್ ।
ಬ್ರಹ್ಮಘ್ನೇ ಚ ಸುರಾಪೇ ಚ ಚೋರೇ ಭ್ರಷ್ಟವ್ರತೇ ತಥಾ ॥13॥
ನಿಷ್ಕೃತಿರ್ವಿಹಿತಾ ರಾಜನ್ ಕೃತಘ್ನೇ ನಾಸ್ತಿ ನಿಷ್ಕೃತಿಃ ।
ಕುತಃ ಕೃತಘ್ನಸ್ಯ ಯಶಃ ಕುತಃ ಸ್ಥಾನಂ ಕುತಃ ಸುಖಮ್ ॥14॥
`ವಿರೂಪಾಕ್ಷನಿಂದ ಬಿಡುಗಡೆಯನ್ನು ಪಡೆದ ಮಿತ್ರದ್ರೋಹಿ, ಪುರುಷಾಧಮ, ಕ್ರೂರಿ, ಕುಲಕಳಂಕ ಗೌತಮನು ಅನಂತರ ನರಕಕ್ಕೆ ಹೋದನು''. ನಾರದರು ಸಜ್ಜನರ ಸಭೆಯಲ್ಲಿ ಹೇಳಿದ ಈ ಘಟನೆಯನ್ನು ನಾನು ಕೇಳಿದ್ದೆ. ಅದನ್ನು ನಿನಗೆ ಹೇಳಿದ್ದೇನೆ. ಬ್ರಾಹ್ಮಣಹತ್ಯೆಯನ್ನು ಮಾಡಿದವನಿಗೆ, ಸುರಾಪಾನವನ್ನು ಮಾಡಿದವನಿಗೆ, ಕಳ್ಳನಿಗೆ, ವ್ರತಭ್ರಷ್ಟನಿಗೆ ಪ್ರಾಯಶ್ಚಿತ್ತದ ವಿಧಿಯು ಇದೆ. ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ''. ಕೃತಘ್ನನಿಗೆ ಸುಖ, ಸ್ಥಾನ, ಮಾನಗಳು ಇಲ್ಲವೇ ಇಲ್ಲ.
ಅಶ್ರದ್ಧೇಯಃ ಕೃತಘ್ನೋ ಹಿ ಕೃತಘ್ನೇ ನಾಸ್ತಿ ನಿಷ್ಕೃತಿಃ ।
ಮಿತ್ರದ್ರೋಹೋ ನ ಕರ್ತವ್ಯಃ ಪುರುಷೇಣ ವಿಶೇಷತಃ ॥16॥
ಕೃತಘ್ನನು ನಂಬಿಕೆಗೆ ಅರ್ಹನಲ್ಲ. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ. ಮಿತ್ರದ್ರೋಹವನ್ನು ಸರ್ವಥಾ ಮಾಡಬಾರದು.
ಮಿತ್ರಧ್ರುಙ್ ನಿರಯಂ ಘೋರಂ ನರಕಂ ಪ್ರತಿಪದ್ಯತೇ ।
ಕೃತಜ್ಞೇನ ಸದಾ ಭಾವ್ಯಂ ಮಿತ್ರಭಾವೇನ ಚಾನಘ ॥17॥
ಮಿತ್ರದ್ರೋಹಿಯು ಘೋರನರಕವನ್ನು ಹೊಂದುತ್ತಾನೆ. ಯಾವಾಗಲೂ ಕೃತಜ್ಞನಾಗಿರಬೇಕು. ಸ್ನೇಹದಿಂದ ಇರಬೇಕು.
ಮಿತ್ರಾತ್ ಪ್ರಭವತೇ ಸರ್ವಂ ಮಿತ್ರಂ ಧನ್ಯಮಿತಿ ಸ್ಮೃತಮ್ ।
ಅರ್ಥಾದ್ವಾ ಮಿತ್ರಲಾಭಾದ್ವಾ ಮಿತ್ರಲಾಭೋ ವಿಶಿಷ್ಯತೇ ॥18॥
ಮಿತ್ರನಿಂದ ಎಲ್ಲವೂ ಸಂಭವಿಸುತ್ತದೆ. ಮಿತ್ರನು ಸಂಪತ್ಕರ ಎಂದು ಪ್ರಾಜ್ಞರ ಅಭಿಪ್ರಾಯ. ಧನಲಾಭಕ್ಕಿಂತ ಮಿತ್ರಲಾಭಕ್ಕೆ ಹೆಚ್ಚು ಮಹತ್ವವಿದೆ.
ಸುಲಭಾ ಮಿತ್ರತೋಽರ್ಥಾಸ್ತು ಮಿತ್ರೇಣ ಯತಿತುಂ ಕ್ಷಮಮ್ ।
ಮಿತ್ರಂ ಚಾಭಿಮತಂ ಸ್ನಿಗ್ಧಂ ಫಲಂ ಚಾಪಿ ಸತಾಂ ಫಲಮ್ ।
ಸತ್ಕಾರೈಃ ಸ್ವಜನೋಪೇತೈಃ ಪೂಜಯೇತ ವಿಚಕ್ಷಣಃ ॥19॥
ಮಿತ್ರನಿಂದ ಅರ್ಥಪ್ರಾಪ್ತಿಯು ಸುಲಭವಾಗಿ ಆಗುತ್ತದೆ. ಮಿತ್ರನ ಜೊತೆ ಪ್ರಯತ್ನಿಸಬೇಕು. ಮಿತ್ರನಿಂದ ಅಭಿಮತ ಫಲಗಳು ಉಂಟಾಗುತ್ತವೆ. ಸಜ್ಜನರಿಗೆ ಮಿತ್ರನೇ ಫಲ.
ಪರಿತ್ಯಾಜ್ಯೋ ಬುಧೈಃ ಪಾಪಃ ಕೃತಘ್ನೋ ನಿರಪತ್ರಪಃ ।
ಮಿತ್ರದ್ರೋಹೀ ಕುಲಾಂಗಾರಃ ಪಾಪಕರ್ಮಾ ನರಾಧಮಃ ॥20॥
ತಿಳಿದವರು ಪಾಪಿಗಳನ್ನು, ಕೃತಘ್ನರನ್ನು, ನಾಚಿಕೆಯಿಲ್ಲದವರನ್ನು, ಮಿತ್ರದ್ರೋಹಿಗಳನ್ನು, ಕುಲಕಳಂಕರನ್ನು, ಪಾಪಕೃತ್ಯಗಳನ್ನು ಎಸಗುವವರನ್ನು ಪರಿತ್ಯಜಿಸಬೇಕು. ಇವರೆಲ್ಲರೂ ನರಾಧಮರು.
ಏಷ ಧರ್ಮಭೃತಾಂ ಶ್ರೇಷ್ಠ ಪ್ರೋಕ್ತಃ ಪಾಪೋ ಮಯಾ ತವ ।
ಮಿತ್ರದ್ರೋಹೀ ಕೃತಘ್ನೋ ವೈ ಕಿಂ ಭೂಯಃ ಶ್ರೋತುಮಿಚ್ಛಸಿ ॥21॥
ಧರ್ಮನಿಷ್ಠರಲ್ಲಿ ಶ್ರೇಷ್ಠನೇ! ಪಾಪಿಯೂ, ಮಿತ್ರದ್ರೋಹಿಯೂ ಆದ ಕೃತಘ್ನನ ಬಗ್ಗೆ ಇಷ್ಟು ಹೇಳಿದ್ದೇನೆ. ಇನ್ನೇನನ್ನು ಕೇಳಲು

ಬಯಸುವಿ?
ವೈಶಂಪಾಯನಃ
ಏತಚ್ಛ್ರುತ್ವಾ ತದಾ ವಾಕ್ಯಂ ಭೀಷ್ಮೇಣೋಕ್ತಂ ಮಹಾತ್ಮನಾ |
ಯುಧಿಷ್ಠಿರಃ ಪ್ರೀತಮನಾ ಬಭೂವ ಜನಮೇಜಯ ॥22॥
ಜನಮೇಜಯ! ಮಹಾತ್ಮರಾದ ಭೀಷ್ಮರಿಂದ ಹೇಳಲ್ಪಟ್ಟ ಈ ವಿಚಾರವನ್ನು ಕೇಳಿ ಯುಧಿಷ್ಠಿರನು ಪ್ರಸನ್ನಚಿತ್ತನಾದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಆಪದ್ಧರ್ಮೇ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಪದ್ಧರ್ಮಪರ್ವದಲ್ಲಿ ಮೂವತ್ತೊಂಬತ್ತನೆಯ
ಅಧ್ಯಾಯವು ಮುಗಿಯಿತು.

॥ ಸಮಾಪ್ತಮ್ ಆಪದ್ಧರ್ಮಪರ್ವ ॥

॥ ಶ್ರೀಮಧ್ವೇಶಾರ್ಪಣಮಸ್ತು ॥
* * * * *
ಮಹಾಭಾರತ
ಮೋಕ್ಷಧರ್ಮಪರ್ವ
ಒಂದನೆಯ ಅಧ್ಯಾಯ
ಧರ್ಮರಾಜನ ಮನಸ್ಸಿಗೆ ಶಾಂತಿಯನ್ನು ನೀಡಲು ಭೀಷ್ಮರು ಸೇನಜಿತ
ಮತ್ತು ಬ್ರಾಹ್ಮಣನ ಸಂವಾದವನ್ನು ಹೇಳಿದುದು.
ಯುಧಿಷ್ಠಿರಃ
ಧರ್ಮಾಃ ಪಿತಾಮಹೇನೋಕ್ತಾ ರಾಜಧರ್ಮಾಶ್ರಿತಾಃ ಶುಭಾಃ |
ಧರ್ಮಮಾಶ್ರಮಿಣಾಂ ಶ್ರೇಷ್ಠಂ ವಕ್ತುಮರ್ಹಸಿ ಪಾರ್ಥಿವ ॥ 1 ॥
ಯುಧಿಷ್ಠಿರ ಪಿತಾಮಹನೇ, ಇಲ್ಲಿಯ ತನಕ ರಾಜಧರ್ಮಕ್ಕೆ ಸಂಬಂಧಿಸಿದ, ರಾಜರಿಗೆ ಶುಭಕರವಾದ ಅನೇಕ ಧರ್ಮಗಳನ್ನು ನೀನು ವಿವರಿಸಿರುವಿ. ಈಗ ಚತುರಾಶ್ರಮಿಗಳಿಗೆ ಶ್ರೇಷ್ಠವಾದ ಧರ್ಮವು ಯಾವುದೆಂಬುದನ್ನು ತಿಳಿಸು.
ಭೀಷ್ಮಃ
ಸರ್ವತ್ರ ವಿಹಿತೋ ಧರ್ಮಃ ಸ್ವರ್ಗ್ಯಃ ಸತ್ಯಫಲಂ ತಪಃ |
ಬಹುದ್ವಾರಸ್ಯ ಧರ್ಮಸ್ಯ ನೇಹಾಸ್ತಿ ವಿಫಲಾ ಕ್ರಿಯಾ ॥ 2 ॥
ಭೀಷ್ಮ ಯುಧಿಷ್ಠಿರನೇ, ವೇದಗಳಲ್ಲಿ ಎಲ್ಲೆಡೆಯೂ ಸ್ವರ್ಗಫಲ ಸಾಧನವಾದ ಧರ್ಮವು ಹೇಳಲ್ಪಟ್ಟಿದೆ. ವೇದದಲ್ಲಿ ಸತ್ಯಫಲವು, ತಪಸ್ಸು ಹೇಳಲ್ಪಟ್ಟಿದೆ. ಧರ್ಮಕ್ಕೆ ಅನೇಕ ದ್ವಾರಗಳಿವೆ. ಧರ್ಮದ ಕಾರ್ಯವು ಎಂದಿಗೂ ವಿಫಲವಾಗುವುಗಳಲ್ಲ.
ಯಸ್ಮಿನ್ ಯಸ್ಮಿಂಸ್ತು ವಿಷಯೇ ಯೋ ಯೋ ಯಾತಿ ವಿನಿಶ್ಚಯಮ್ |
ಸ ತಮೇವಾಭಿಜಾನಾತಿ ನಾನ್ಯಂ ಭರತಸತ್ತಮ ॥ 3 ॥
ಯಾವ ವ್ಯಕ್ತಿಯು ಯಾವ ಯಾವ ವಿಷಯದಲ್ಲಿ ಅರ್ಥಾತ್ ಸ್ವರ್ಗಾದಿ ಫಲಗಳಲ್ಲಿ ತನ್ನ ಉದ್ದೇಶವನ್ನಿಡುತ್ತಾನೋ ಆ ಉದ್ದೇಶಕ್ಕೆ ಅನುಗುಣವಾದ ಮಾರ್ಗವನ್ನೇ ಹುಡುಕಿ ಆ ದಾರಿಯಲ್ಲಿ ಸಾಗುತ್ತಾನೆ. ಅವನಿಗೆ ಬೇರೆ ಮಾರ್ಗವು ದೃಷ್ಟಿಗೆ ಬೀಳದು.
ಯಥಾ ಯಥಾ ಚ ಪರ್ಯೇತಿ ಲೋಕತಂತ್ರಮಸಾರವತ್ |
ತಥಾ ತಥಾ ವಿರಾಗೋಽತ್ರ ಜಾಯತೇ ನಾತ್ರ ಸಂಶಯಃ ॥ 4 ॥
ಲೋಕದಲ್ಲಿ ಸುಖಸಾಧನಗಳಾದ ವಸ್ತುಗಳು ಯಾವ ವಿಧವಾಗಿ ನಮಗೆ ಅಸಾರವಾಗಿ ಮನಸ್ಸಿಗೆ ತೋರುತ್ತವೋ ಅದೇ ರೀತಿಯಲ್ಲಿ ಅವುಗಳಲ್ಲಿ ವೈರಾಗ್ಯ ಹುಟ್ಟುತ್ತಾ ಬರುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಏವಂ ವ್ಯವಸಿತೇ ಲೋಕೇ ಬಹುದೋಷೇ ಯುಧಿಷ್ಠಿರ |
ಆತ್ಮಮೋಕ್ಷನಿಮಿತ್ತಂ ವೈ ಯತೇತ ಮತಿಮಾನ್ ನರಃ ॥ 5 ॥
ಧರ್ಮರಾಜನೇ, ನಮ್ಮ ಪುರುಷಾರ್ಥವೆನಿಸಿದ ಮೋಕ್ಷದ ವಿಷಯದಲ್ಲಿ ನಿನಗೆ ದುಃಖವಲ್ಲ. ಮೋಕ್ಷದ ವಿಷಯದಲ್ಲಿರುವ ಅಜ್ಞಾನವೇ ನಿನ್ನನ್ನು ದುಃಖಕ್ಕೆ ಈಡು ಮಾಡಿದೆ. ಧರ್ಮರಾಜನೇ, ಅನೇಕ ದೋಷಗಳಿಂದ ತುಂಬಿರುವ ಈ ಪ್ರಪಂಚದ ಸ್ಥಿತಿಯು ಹೀಗಿರುವುದರಿಂದ ಧೀಮಂತನಾದ ವ್ಯಕ್ತಿಯು ಎಲ್ಲ ಸುಖ ಸಾಧನಗಳಿಗಿಂತಲೂ ಉತ್ತಮ ಸುಖವಾದ ಮೋಕ್ಷಕ್ಕಾಗಿಯೇ ಪ್ರಯತ್ನವನ್ನು ಮಾಡಬೇಕು. ಅಶಾಶ್ವತವಾದ ಫಲಗಳನ್ನು ಉದ್ದೇಶಿಸಿಕೊಂಡು ಕಾರ್ಯದಲ್ಲಿ ಪ್ರವೃತ್ತನಾಗಬಾರದು.
ಯುಧಿಷ್ಠಿರಃ
ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ |
ಯಯಾ ಬುದ್ಧ್ಯಾ ನುದೇಚ್ಛೋಕಂ ತನ್ಮೇ ಬ್ರೂಹಿ ಪಿತಾಮಹ ॥ 6 ॥
ಯುಧಿಷ್ಠಿರ ಎಲೈ ಪಿತಾಮಹನೇ, ತನ್ನಲ್ಲಿರುವ ಧನವನ್ನು ಮನುಷ್ಯನು ಕಳೆದುಕೊಂಡರೆ ಅಥವಾ ಹೆಂಡತಿಯನ್ನು, ಮಗನನ್ನು ಕಳೆದುಕೊಂಡರೆ, ತಂದೆಯು ಮೃತನಾದರೆ ಅವನು ತನಗೆ ಉಂಟಾಗಿರುವ ಆ ವಿಯೋಗದ ದುಃಖವನ್ನು ಹೇಗೆ ಪರಿಹರಿಸಿಕೊಳ್ಳಬೇಕು? ಎಂತಹ ಬುದ್ಧಿಯನ್ನು ಅವಲಂಬಿಸಿ ಆ ದುಃಖವನ್ನು ಶಾಂತಗೊಳಿಸಬಹುದು? ಅದನ್ನು ನನಗೆ ತಿಳಿಸಿ.
ಭೀಷ್ಮಃ

ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ |
ಅಹೋ ದುಃಖಮಿತಿ ಧ್ಯಾಯನ್ ಶೋಕಸ್ಯಾಪಚಿತಿಂ ಚರೇತ್ ॥ 7 ॥
ಭೀಷ್ಮ ಧರ್ಮರಾಜನೇ, ಒಬ್ಬ ಮನುಷ್ಯನಿಗೆ ಧನವು ನಷ್ಟವಾದರೂ ಹೆಂಡತಿ, ಮಕ್ಕಳು ಮೊದಲಾದ ಬಂಧುಗಳು, ತಂದೆಯು ಮೃತನಾದರೂ ಅದನ್ನು ಹೆಚ್ಚು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಇದೊಂದು ದುಃಖ ಸನ್ನಿವೇಶ ಒದಗಿತೆಂದು ತಿಳಿದು ಅದರ ಪರಿಹಾರಕ್ಕೆ ಬೇಕಾದ ಆಲೋಚನೆಯನ್ನು ಆಚರಿಸಬೇಕು. ಹೀಗೆ ಬೌದ್ಧಿಕವಾಗಿಯೇ ಈ ದುಃಖವನ್ನು ಪರಿಹರಿಸಿಕೊಳ್ಳಬೇಕು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಥಾ ಸೇನಜಿತಂ ವಿಪ್ರಃ ಕಶ್ಚಿದಿತ್ಯಬ್ರವೀದ್ ವಚಃ ॥ 8 ॥
ಇದೇ ವಿಷಯದಲ್ಲಿ ಒಬ್ಬ ಬ್ರಾಹ್ಮಣನಿಗೂ ಸೇನಜಿತ್ ಎಂಬ ರಾಜನಿಗೂ ನಡೆದ ಪುರಾತನವಾದ ಇತಿಹಾಸವನ್ನು ನಿನಗೆ ಹೇಳುತ್ತೇನೆ, ಕೇಳು.
ಪುತ್ರಶೋಕಾಭಿಸಂತಪ್ತಂ ರಾಜಾನಂ ಶೋಕವಿಹ್ವಲಮ್ |
ವಿಷಣ್ಣವದನಂ ದೃಷ್ಟ್ವಾ ವಿಪ್ರೋ ವಚನಮಬ್ರವೀತ್ ॥ 9 ॥
ಒಮ್ಮೆ ಬ್ರಾಹ್ಮಣನೊಬ್ಬನು ತನ್ನ ಸ್ನೇಹಿತನಾಗಿರುವ ಸೇನಜಿತ್ ಎಂಬುವನ ಬಳಿಗೆ ಆಗಮಿಸಿದನು. ಆ ಸಮಯದಲ್ಲಿ ಸೇನಜಿತ್ ತನ್ನ ಮಗನ ಮರಣದಿಂದ ದುಃಖ ಪಡುತ್ತಾ ಏನೂ ತೋರದೆ ವಿಷಣ್ಣವದನನಾಗಿ ಕುಳಿತುಕೊಂಡಿರುವುದನ್ನು ನೋಡಿದ ಬ್ರಾಹ್ಮಣನು ಇಂತು ಅವನನ್ನುದ್ದೇಶಿಸಿ ಹೇಳಿದನು.
ಕಿಂ ನು ಖಲ್ವಸಿ ಮೂಢಸ್ತ್ವಂ ಶೋಚ್ಯಃ ಕಿಮನುಶೋಚಸಿ |
ಯದಾ ತ್ವಾಮಪಿ ಶೋಚಂತಃ ಶೋಚ್ಯಾ ಯಾಸ್ಯಂತಿ ತಾಂ ಗತಿಮ್ ॥
ಅಯ್ಯಾ! ಜಡನಂತೆ ನೀನು ಬುದ್ಧಿಶೂನ್ಯನಾಗಿ ಏಕೆ ಕುಳಿತಿರುವೆ? ಮೂಢನಾಗಿ ಯಾರಿಗಾಗಿ ದುಃಖಪಡುತ್ತಿರುವೆ? ನಿನ್ನನ್ನು ಕುರಿತು ಮತ್ತೊಬ್ಬರು ಶೋಕಿಸಬೇಕಾದ ಸ್ಥಿತಿಯಲ್ಲಿರುವಾಗ ನೀನು ಇನ್ನೊಬ್ಬರಿಗೋಸ್ಕರ ದುಃಖವನ್ನು ಏಕೆ ಪಡುತ್ತಿರುವೆ? ಇನ್ನು ಕೆಲವು ದಿನಗಳು ಉರುಳಿ ಹೋದರೆ ನಿನಗಾಗಿ ಬೇರೆಯವರು ದುಃಖಿಸಬೇಕಾಗುತ್ತದೆ. ಬಳಿಕ ಅವರು ನಿನ್ನ ಸ್ಥಿತಿಯನ್ನು ತಲುಪಿದಾಗ ಮತ್ತೊಬ್ಬರು ಅವರಿಗಾಗಿ ಶೋಕಿಸುತ್ತಾರೆ. ಎಲ್ಲರ ಸ್ಥಿತಿಯೂ ಹೀಗೆಯೇ ಇರುತ್ತದೆ.
ತ್ವಂ ಚೈವಾಹಂ ಚ ಯೇ ಚಾನ್ಯೇ ತ್ವಾಂ ರಾಜನ್ ಪರ್ಯುಪಾಸತೇ |
ಸರ್ವೇ ತತ್ರ ಗಮಿಷ್ಯಾಮೋ ಯತ ಏವಾಗತಾ ವಯಮ್ ॥ 11 ॥
ನೀನಾಗಲೀ, ನಾನಾಗಲೀ, ನಿನ್ನನ್ನು ಆಶ್ರಯಿಸಿರುವ ಇತರ ಜನರಾಗಲೀ ನಾವೆಲ್ಲರೂ ಎಲ್ಲಿಂದ ಆಗಮಿಸಿದ್ದೆವೋ ಅಲ್ಲಿಗೇ ನಿಶ್ಚಿತವಾಗಿಯೂ ತೆರಳುತ್ತೇವೆ ಎಂದು ಹೇಳಿದನು.
ಸೇನಜಿತ್
ಕಾ ಬುದ್ಧಿಃ ಕಿಂ ತಪೋ ವಿಪ್ರ ಕಃ ಸಮಾಧಿಸ್ತಪೋಧನ |
ಕಿಂ ಜ್ಞಾನಂ ಕಿಂ ಶ್ರುತಂ ವಾ ತೇ ಯತ್ ಪ್ರಾಪ್ಯ ನ ವಿಷೀದಸಿ ॥ 12 ॥
ಸೇನಜಿತ್ ಎಲೈ ಬ್ರಾಹ್ಮಣಶ್ರೇಷ್ಠನೇ, ತಪೋಧನನೇ, ಯಾವ ಮಾರ್ಗವನ್ನು ಅನುಸರಿಸಿದ್ದಲ್ಲಿ ನನ್ನ ಈ ಮನಸ್ಸಿನ ದುಃಖವು ಬಿಟ್ಟುಹೋಗುತ್ತದೋ ಅಂತಹ ಬುದ್ಧಿಯಾಗಲೀ, ತಪಸ್ಸಾಗಲೀ, ಸಮಾಧಿಯಾಗಲೀ, ಜ್ಞಾನವಾಗಲೀ, ವಿದ್ಯೆಯಾಗಲೀ ಇದ್ದರೆ ಅದನ್ನು ನನಗೆ ತಿಳಿಸಬೇಕು.
ಹೃಷ್ಯಂತಮವಸೀದಂತಂ ಸುಖದುಃಖವಿಪರ್ಯಯೇ |
ಆತ್ಮಾನಮನುಶೋಚಾಮಿ ಯೋ ಮಮೈಷ ಹೃದಿ ಸ್ಥಿತಃ ॥ 13 ॥
ಆಗಮಿಸಿದ ಸುಖವು ಕೈತಪ್ಪಿದಾಗ ಆತ್ಮನು ದುಃಖಕ್ಕೀಡಾಗುತ್ತಾನೆ. ಒದಗಿ ಬಂದ ದುಃಖವು ಪರಿಹಾರವಾಗಿ ಸುಖವು ಬಂದಾಗ ಸಂಭ್ರಮಿಸುತ್ತಾನೆ. ಈ ರೀತಿಯಾದ ಸುಖ-ದುಃಖಗಳನ್ನು ಹೊಂದುವ ಮನಸ್ಸನ್ನು ಪಡೆದುಕೊಂಡು ದುಃಖಕ್ಕೆ ಈಡಾಗಿರುತ್ತೇನೆ. ಇದಕ್ಕೆ ಪರಿಹಾರವನ್ನು ತಿಳಿಸು.
ಬ್ರಾಹ್ಮಣಃ
ಪಶ್ಯ ಭೂತಾನಿ ದುಃಖೇನ ವ್ಯತಿಷಕ್ತಾನಿ ಸರ್ವಶಃ |
ಆತ್ಮಾಪಿ ಚಾಯಂ ನ ಮಮ ಸರ್ವಾ ವಾ ಪೃಥಿವೀ ಮಮ ॥ 14 ॥
ಬ್ರಾಹ್ಮಣ ಎಲೈ ಮಿತ್ರನೇ, ಸಮಸ್ತ ಪ್ರಾಣಿಗಳು ಭಿನ್ನ ಭಿನ್ನ ಅವಸ್ಥೆಗಳನ್ನು ಪಡೆದು ತಮ್ಮ-ತಮ್ಮ ಕರ್ಮಗಳಿಗೆ ಅನುಗುಣವಾಗಿ ದುಃಖದಲ್ಲೇ ಸಿಲುಕಿ ಸಂಕಟ ಪಡುತ್ತಿರುವುದನ್ನು ನೀನು ನೋಡುತ್ತಿರುವೆ. ಈ ದುಃಖವೆಂಬುದೆಲ್ಲಾ ನಾನು, ನನ್ನದು ಎಂಬ ಮೋಹದಿಂದ ಉಂಟಾಗುತ್ತದೆ. ಆದರೆ ನಾನು ಅಸ್ವತಂತ್ರನೆಂದು ತಿಳಿದಿರುತ್ತೇನೆ. ಅಸ್ವತಂತ್ರನಾದ ನಾನು ನನ್ನ ಅಧೀನವಲ್ಲವೆಂದ ಬಳಿಕ ಈ ಸಮಗ್ರ ಪೃಥಿವಿಯೂ ನನ್ನದಾಗಿರುವುದಿಲ್ಲ. ನನ್ನದು ಎಂಬ ಮೋಹವೇ ದುಃಖಕ್ಕೆ ಕಾರಣವಾಗಿದೆ.
ಯಥಾ ಮಮ ತಥಾನ್ಯೇಷಾಮಿತಿ ಬುದ್ಧ್ಯಾ ನ ಮೇ ವ್ಯಥಾ |
ಏತಾಂ ಬುದ್ಧಿಮಹಂ ಪ್ರಾಪ್ಯ ನ ಪ್ರಹೃಷ್ಯೇ ನ ಚ ವ್ಯಥೇ ॥ 15 ॥
ನನಗೆ ಹೇಗೆ ಅಸ್ವಾತಂತ್ರ್ಯವಿದೆಯೋ ಅದೇ ರೀತಿಯಾಗಿ ಮತ್ತೊಬ್ಬರೂ ಅಸ್ವತಂತ್ರರು ಎಂದು ತಿಳಿದಿರುವುದರಿಂದ ನಾನು ದುಃಖಕ್ಕೆ ತುತ್ತಾಗುವುದಿಲ್ಲ. ಈ ರೀತಿಯಾದ ಸಮಚಿತ್ತವನ್ನು ಹೊಂದಿರುವುದರಿಂದ ಜಗತ್ತಿನ ಸುಖ-ದುಃಖದ ವಿಷಯದಲ್ಲಿ ಸಂತೋಷವನ್ನಾಗಲೀ, ದುಃಖವನ್ನಾಗಲೀ ನಾನು ಹೊಂದುವುದಿಲ್ಲ.
ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ |
ಸಮೇತ್ಯ ಚ ವ್ಯಪೇಯಾತಾಂ ತದ್ವದ್ಭೂತಸಮಾಗಮಃ ॥ 16 ॥
ಸಮುದ್ರಲ್ಲಿ ನೀರಿನ ಹೊಡೆತಗಳಿಂದ ತೇಲಿಬರುವ ಎರಡು ಕಟ್ಟಿಗೆಗಳು ಒಂದೊಂದು ಬಾರಿ ಒಟ್ಟಾಗಿ ಬಂದು ಸೇರುತ್ತವೆ. ಇನ್ನೊಂದು

ಅಲೆ ಬಡಿದಾಗ ಅದರಂತೆ ದೂರಕ್ಕೆ ಸರಿಯುತ್ತದೆ. ಅದೇ ರೀತಿಯಾಗಿ ಈ ಜಗತ್ತಿನಲ್ಲಿ ಪ್ರಾಣಿಗಳು ಒಮ್ಮೊಮ್ಮೆ ಅನ್ಯೋನ್ಯ ಸಂಬಂಧದಿಂದ ಇರುತ್ತವೆ. ಕಾಲಕ್ರಮದಿಂದ ಅಗಲಿ ಹೋಗುತ್ತವೆ.

ಏವಂ ಪುತ್ರಾಶ್ಚ ಪೌತ್ರಾಶ್ಚ ಜ್ಞಾತಯೋ ಬಾಂಧವಾಸ್ತಥಾ |
ತೇಷು ಸ್ನೇಹೋ ನ ಕರ್ತವ್ಯೋ ವಿಪ್ರಯೋಗೋ ಹಿ ತೈರ್ಧ್ರುವಮ್ ||

ಇದೇ ರೀತಿಯಾಗಿ ಮಕ್ಕಳು, ಮೊಮ್ಮಕ್ಕಳು, ಜ್ಞಾತಿಗಳು, ಬಂಧುಗಳು ಎಂಬ ಈ ಸಂಗಗಳೆಲ್ಲವೂ ಸಮುದ್ರದ ಕಟ್ಟಿಗೆಯಂತೆಯೇ ಅಸ್ಥಿರ ಸಂಬಂಧವನ್ನು ಹೊಂದಿರುತ್ತವೆ. ಇವರ ಸಂಗ, ಇವರ ವಿಯೋಗ ಕಾಲಪ್ರವಾಹದಿಂದ ನಡೆದುಕೊಂಡು ಹೋಗುತ್ತಿರುತ್ತದೆ. ಆದ್ದರಿಂದ ಯಾರಲ್ಲಿಯೂ ತಮ್ಮವರೆಂಬ ಮೋಹವನ್ನು ಇಡಬಾರದು. ಅವರಿಗೂ ನಮಗೂ ಅಗಲಿಕೆ ಎಂಬುದು ನಿಶ್ಚಿತವಾದುದು.

ಅದರ್ಶನಾದಾಪತಿತಃ ಪುನಶ್ಚಾದರ್ಶನಂ ಗತಃ |
ನ ತ್ವಾಸೌ ವೇದ ನ ತ್ವಂ ತಂ ಕಃ ಸನ್ ಕಮನುಶೋಚಸಿ || 18 ||

ನಮಗೆ ಹಿಂದೆಂದೂ ತಿಳಿಯದ ಸ್ಥಳದಿಂದ ಅವರು ನಮ್ಮೊಡನೆ ಬಂದು ಸೇರಿರುವರು. ತಿರುಗಿ ನಮಗೆ ತಿಳಿಯದಂತೆ ಎಲ್ಲಿಯೋ ಸಾಗುತ್ತಾರೆ. ಅವರಿಗೆ ನೀನು ಕಾಣಿಸಲಾರೆ. ನಿನಗೆ ಅವರು ಕಾಣಿಸಲಾರರು. ಹೀಗಿರುವಾಗ ನೀನು ಯಾರು? ಯಾರಿಗೋಸ್ಕರ ದುಃಖಿಸುತ್ತೀಯೆ?

ತೃಷ್ಣಾರ್ತಿಪ್ರಭವಂ ದುಃಖಂ ದುಃಖಾರ್ತಿಪ್ರಭವಂ ಸುಖಮ್ |
ಸುಖಾತ್ ಸಂಜಾಯತೇ ದುಃಖಮೇವಮೇತತ್ ಪುನಃ ಪುನಃ |
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ || 19 ||

ಮತ್ತೊಂದು ರಹಸ್ಯವನ್ನು ತಿಳಿದುಕೋ. ಯಾವಾಗಲೂ ಸುಖದಿಂದಾಚೆಗೆ ದುಃಖವು ತೋರುತ್ತದೆ. ದುಃಖದಿಂದಾಚೆಗೆ ಸುಖವು ತೋರುತ್ತದೆ. ಇದರಿಂದ ಸುಖದಿಂದ ದುಃಖವು, ದುಃಖದಿಂದ ಸುಖವು ತೋರುವುದೆಂದೇ ತಿಳಿದುಕೊ. ಸುಖವನ್ನು ಹಿಂಬಾಲಿಸಿಕೊಂಡು ದುಃಖವು, ದುಃಖವನ್ನು ಹಿಂಬಾಲಿಸಿಕೊಂಡು ಸುಖವು ಬರುತ್ತದೆ. ಪುನಃ ಪುನಃ ಆಗಮಿಸುವ ಈ ಸುಖ-ದುಃಖಗಳು ಚಕ್ರದಂತೆ ತಿರುಗಿ ತಿರುಗಿ ಬರುತ್ತಿರುತ್ತವೆ.

ಸುಖಾತ್ ತ್ವಂ ದುಃಖಮಾಪನ್ನಃ ಪುನರಾಪತ್ಸ್ಯಸೇ ಸುಖಮ್ |
ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ || 20 ||

ರಾಜನೇ, ಸುಖದ ಬೆನ್ನನ್ನು ಅಂಟಿಕೊಂಡಿರುವ ದುಃಖವನ್ನು ಹೊಂದುವ ನೀನು ವಿಷಣ್ಣನಾಗಿರುವಿ. ಈ ದುಃಖದ ಬೆನ್ನಿನಲ್ಲೇ ಸುಖವು ಇರುವುದರಿಂದ ಪುನಃ ಸುಖವನ್ನು ಹೊಂದುತ್ತಿ. ನೀನು ಹೊಂದುವ ದುಃಖವೂ ನಿತ್ಯವಾದುದಲ್ಲ, ಸುಖವೂ ನಿತ್ಯವಾದುದಲ್ಲ. ಇವುಗಳನ್ನು ನಿತ್ಯವಾಗಿ ಹೊಂದಲು ಸಾಧ್ಯವಿಲ್ಲ.

ಶರೀರಮೇವಾಯತನಂ ಸುಖಸ್ಯ
ದುಃಖಸ್ಯ ಚಾಪ್ಯಾಯತನಂ ಶರೀರಮ್ |
ಯದ್ಯಚ್ಛರೀರೇಣ ಕರೋತಿ ಕರ್ಮ
ತೇನೈವ ದೇಹೀ ಸಮುಪಾಶ್ನುತೇ ತತ್ || 21 ||

ಅಲ್ಲದೇ ಸುಖ-ದುಃಖವೆರಡಕ್ಕೂ ಆದೇಯವಾದುದು ದೇಹವೇ ಹೊರತು ಆತ್ಮವಲ್ಲ. ಯಾವ ವ್ಯಕ್ತಿಯು ಯಾವ ರೀತಿಯಾದ ಶರೀರವನ್ನು ಹೊಂದಿದಾಗ ಯಾವ ಯಾವ ಕರ್ಮಗಳನ್ನು ಆಚರಿಸುತ್ತಾನೋ ಆಯಾ ಕರ್ಮಗಳನ್ನು ಶರೀರದಿಂದಲೇ ಅನುಭವಿಸುತ್ತಾನೆ.

ಜೀವಿತಂ ಚ ಶರೀರಂ ಚ ಜಾತ್ಯೈವ ಸಹ ಜಾಯತೇ |
ಉಭೇ ಸಹ ವಿವರ್ಧೇತೇ ಉಭೇ ಸಹ ವಿನಶ್ಯತಃ || 22 ||

ಲೋಕದಲ್ಲಿ ಬದುಕೆಂಬುದು ಶರೀರದ ಜೊತೆಗೆ ಆಗಮಿಸುತ್ತದೆ. ಅವೆರಡು ಒಟ್ಟಿಗೆ ಚಲಿಸುತ್ತಿರುತ್ತವೆ, ಒಟ್ಟಿಗೆ ನಾಶವಾಗುತ್ತವೆ.

ಸ್ನೇಹಪಾಶೈರ್ಬಹುವಿಧೈರಾವಿಷ್ಟವಿಷಯಾ ಜನಾಃ |
ಅಕೃತಾರ್ಥಾವಸೀದಂತೇ ಜಲೈಃ ಸೈಕತಸೇತವಃ || 23 ||

ಪಕ್ವಬುದ್ಧಿಯಿಲ್ಲದ ಜನರು ಬಗೆಬಗೆಯ ಸ್ನೇಹಪಾಶಗಳಿಂದ ವಿಷಯ ಸುಖಗಳಿಗೆ ಸೆಳೆಯಲ್ಪಟ್ಟು ನೀರಲ್ಲಿ ಕಟ್ಟಿದ ಮರಳಿನ ಸೇತುವೆಗಳಂತೆ ಆ ಜಲಪ್ರವಾಹದಿಂದಲೇ ನಾಶವನ್ನು ಹೊಂದುತ್ತಾರೆ.

ಸ್ನೇಹೇನ ತೈಲವತ್ ಸರ್ವಂ ಸರ್ಗಚಕ್ರೇ ನಿಪೀಡ್ಯತೇ |
ತಿಲಪೀಡೈರಿವಾಕ್ರಮ್ಯ ಕ್ಲೇಶೈರಜ್ಞಾನಸಂಭವೈಃ || 24 ||

ಎಣ್ಣೆಗಾಗಿ ಗಾಣಿಗರು ಎಳ್ಳನ್ನು ಹಿಂಡುತ್ತಾರೆ. ಈ ಸ್ನೇಹವೆಂಬುದೇ ಎಣ್ಣೆಯಂತಿದೆ. ಈ ಸ್ನೇಹವೇ ಜನರನ್ನು ಕಷ್ಟಕ್ಕೆ ಗುರಿಮಾಡಿ ಅಜ್ಞಾನದಿಂದ ಉಂಟಾದ ಅನೇಕ ಕ್ಲೇಶಗಳನ್ನು ಹೆಚ್ಚಿಸುತ್ತದೆ. ಗಾಣದಲ್ಲಿ ಎಣ್ಣೆಯನ್ನು ಉಂಟುಮಾಡುವ ಚಕ್ರವು ಎಳ್ಳುಗಳನ್ನು ತಿಕ್ಕಿ-ತೀಡುವಂತೆ ಸ್ನೇಹವೆಂಬ ಭಾವನೆಯಿಂದ ಸಂಸಾರಚಕ್ರವು ಮನುಷ್ಯನನ್ನು ತಿಕ್ಕಿ- ತೀಡುತ್ತದೆ.

ಸಂಚಿನೋತ್ಯಶುಭಂ ಕರ್ಮ ಕಲತ್ರಾಪೇಕ್ಷಯಾ ನರಃ |
ಏಕಃ ಕ್ಲೇಶಾನವಾಪ್ನೋತಿ ಪರತ್ರೇಹ ಚ ಮಾನವಃ || 25 ||

ಮನುಷ್ಯನು ತನ್ನ ಹೆಂಡತಿ-ಮಕ್ಕಳಿಗಾಗಿಯೇ ಅಶುಭಕರ್ಮವನ್ನು ಮಾಡುತ್ತಾನೆ. ಇದರಿಂದ ಇಹದಲ್ಲಿಯೂ ಪರದಲ್ಲಿಯೂ ವಿಹ್ವಲಗಳನ್ನೇ ಅನುಭವಿಸುತ್ತಾನೆ.

ಪುತ್ರದಾರಕುಟುಂಬೇಷು ಪ್ರಸಕ್ತಾಃ ಸರ್ವಮಾನವಾಃ |
ಶೋಕಪಂಕಾರ್ಣವೇ ಮಗ್ನಾ ಜೀರ್ಣಾ ವನಗಜಾ ಇವ || 26 ||

ಸಾಮಾನ್ಯವಾಗಿ ಸಮಸ್ತರೂ ಹೆಂಡತಿ-ಮಕ್ಕಳಿಂದ ಕೂಡಿದ ಕುಟುಂಬಗಳಲ್ಲಿ ಅಧಿಕ ಆಸಕ್ತಿಯನ್ನಿಟ್ಟು, ದುಃಖವೆಂಬ ಸಮುದ್ರದಲ್ಲಿ

ಬಿದ್ದು, ಶಕ್ತಿ ಇಲ್ಲದ ಮುದಿತನವನ್ನು ಹೊಂದಿದ ಕಾಡಾನೆಗಳು ಕೆಸರಿನಲ್ಲಿ ಸಿಲುಕಿ ಕಷ್ಟವನ್ನು ಹೊಂದುವಂತೆ ಕಷ್ಟಕ್ಕೆ ಈಡಾಗುತ್ತಾರೆ.
ಪುತ್ರನಾಶೇ ವಿತ್ತನಾಶೇ ಜ್ಞಾತಿಸಂಬಂಧಿನಾಮಪಿ |
ಪ್ರಾಪ್ಯತೇ ಸುಮಹದ್ ದುಃಖಂ ದಾವಾಗ್ನಿಪ್ರತಿಮಂ ವಿಭೋ ॥ 27 ॥
ಒಬ್ಬ ಮನುಷ್ಯನಿಗೆ ಪುತ್ರನು ನಾಶವನ್ನು ಹೊಂದಿದರೂ, ಧನವು ನಾಶವನ್ನು ಹೊಂದಿದರೂ, ಸಂಬಂಧಿಗಳು, ಜ್ಞಾತಿಗಳು ಮೃತರಾದರೂ, ಕಾಡ್ಗಿಚ್ಚಿನಲ್ಲಿ ಬೇಯುವ ವ್ಯಕ್ತಿಗಳಿಗೆ ಉಂಟಾಗುವ ದುಃಖಕ್ಕೆ ಸಮವಾದ ತೀವ್ರದುಃಖವನ್ನು ಬಹಳವಾಗಿ ಹೊಂದುತ್ತಾರೆ.
ದೈವಾಯತ್ತಮಿದಂ ಸರ್ವಂ ಸುಖದುಃಖೇ ಭವಾಭವೌ |
ಅಸುಹೃತ್ ಸಸುಹೃಚ್ಚಾಪಿ ಸಶತ್ರುರ್ಮಿತ್ರವಾನಪಿ |
ಸಪ್ರಜ್ಞಃ ಪ್ರಜ್ಞಯಾ ಹೀನೋ ದೈವೇನ ಲಭತೇ ಸುಖಮ್ ॥ 28 ॥
ರಾಜನೇ, ಸುಖ-ದುಃಖಗಳು, ಜನನ-ಮರಣಗಳು ಇವುಗಳೆಲ್ಲವೂ ದೈವಾಧೀನವಾಗಿವೆ. ಒಬ್ಬನು ಅನೇಕ ಸ್ನೇಹಿತರೊಡನೆ ಕೂಡಿದ್ದರೂ ಸ್ನೇಹಿತನೊಂದಿಗೆ ಕೂಡದಿದ್ದರೂ, ಶತ್ರುವಿನಿಂದ ಕೂಡಿದ್ದರೂ, ಮಿತ್ರನಿಂದ ಕೂಡಿದ್ದರೂ, ಪ್ರಜ್ಞಾವಂತನಾಗಿದ್ದರೂ, ಬುದ್ಧಿಗೆಟ್ಟವನಾಗಿದ್ದರೂ, ದೈವಾಧೀನವಾಗಿಯೇ ಸುಖವನ್ನು ಹೊಂದಬೇಕೇ ವಿನಾ ಮಿತ್ರತ್ವಾದಿಗಳು ಸುಖ-ದುಃಖಗಳನ್ನು ತಂದೊಡ್ಡಲಾರವು.
ನಾಲಂ ಸುಖಾಯ ಸುಹೃದೋ ನಾಲಂ ದುಃಖಾಯ ಶತ್ರವಃ |
ನ ಚ ಪ್ರಜ್ಞಾಲಮರ್ಥಾನಾಂ ನ ಸುಖಾನಾಮಲಂ ಧನಮ್ ॥ 29 ॥
ಸ್ನೇಹಿತರಿಗೆ ಸುಖವನ್ನು ತಂದೊಡ್ಡಲು ಸಾಮರ್ಥ್ಯವಿರುವುದಿಲ್ಲ. ಶತ್ರುಗಳಿಗೆ ದುಃಖವನ್ನು ತಂದೊಡ್ಡಲು ಸಾಮರ್ಥ್ಯವಿರುವುದಿಲ್ಲ. ಸುಖ-ದುಃಖಗಳಿಗೆ ನೇತಾರನು ಆ ಭಗವಂತನೇ ಆಗಿರುತ್ತಾನೆ. ಪ್ರಜ್ಞೆಯಿಂದ ಧನವು ಒದಗಿಬರುವುದಿಲ್ಲ. ಧನವಿದ್ದ ಮಾತ್ರಕ್ಕೆ ಸುಖವೂ ದೊರೆಯಬೇಕೆಂಬ ನಿಯಮವಿಲ್ಲ. ಇವೆಲ್ಲವೂ ಭಗವಂತನ ಅಧೀನವಾಗಿಯೇ ಒದಗಿಬರುತ್ತವೆ.
ನ ಬುದ್ಧಿರ್ಧನಲಾಭಾಯ ನ ಜಾಡ್ಯಮಸಮೃದ್ಧಯೇ |
ಲೋಕಪರ್ಯಾಯವೃತ್ತಾಂತಂ ಪ್ರಾಜ್ಞೋ ಜಾನಾತಿ ನೇತರಃ ॥ 30 ॥
ಧನಲಾಭಕ್ಕೆ ಮನುಷ್ಯನ ಬುದ್ಧಿಯು ಕಾರಣವಲ್ಲ. ಬಡತನಕ್ಕೆ ಅವನ ಮೂರ್ಖತನವೂ ಕಾರಣವಲ್ಲ. ಲೋಕದ ಇಂತಹ ವಿಚಿತ್ರಗತಿಯನ್ನು ಜ್ಞಾನಿಯಾದವನು ತಿಳಿಯಬಲ್ಲನೇ ಹೊರತು ಸಾಮಾನ್ಯ ಮನುಷ್ಯನು ತಿಳಿಯಲಾರನು.
ಬುದ್ಧಿಮಂತಂ ಚ ಮೂಢಂ ಚ ಶೂರಂ ಭೀರುಂ ಜಡಂ ಕವಿಮ್ |
ದುರ್ಬಲಂ ಬಲವಂತಂ ಚ ಭಾಗಿನಂ ಭಜತೇ ಸುಖಮ್ ॥ 31 ॥
ಮನುಷ್ಯನು ಬುದ್ಧಿವಂತನೇ ಆಗಿರಲಿ, ಮೂರ್ಖನೇ ಆಗಿರಲಿ, ಶೂರನಾಗಿರಲಿ, ಹೇಡಿಯಾಗಿರಲಿ, ಜಡನಾಗಿರಲಿ, ಕವಿಯಾಗಿರಲಿ, ದುರ್ಬಲನಾಗಿರಲಿ, ಬಲಾಢ್ಯನಾಗಿರಲಿ ಬರಬೇಕಾದ ಸುಖವು ದೈವವಿದ್ದರೆ ಬಂದೇ ಬರುತ್ತದೆ.
ಧೇನುರ್ವತ್ಸಸ್ಯ ಗೋಪಸ್ಯ ಸ್ವಾಮಿನಸ್ತಸ್ಕರಸ್ಯ ಚ |
ಪಯಃ ಪಿಬತಿ ಯಸ್ತಸ್ಯಾ ಧೇನುಸ್ತಸ್ಯೇತಿ ನಿಶ್ಚಯಃ ॥ 32 ॥
ಹಸುವನ್ನು ಕರೆಯುವ ಗೊಲ್ಲನು ಆ ಹಸುವನ್ನು ತನ್ನದ್ದೆಂದು ಭಾವಿಸುತ್ತಾನೆ. ಅದನ್ನು ಕದಿಯುವ ಕಳ್ಳನು ತನ್ನದ್ದೆಂದು ಭಾವಿಸುತ್ತಾನೆ. ಇವರು ಆ ಹಸುವನ್ನು ತನ್ನದ್ದೆಂದು ಭಾವಿಸಿದರೂ ಹಸುವಿನ ಹಾಲನ್ನು ಯಾವನು ಕುಡಿಯುತ್ತಾನೋ ಆ ಹಸುವು ಅವನಿಗೇ ಸಂಬಂಧಿಸಿದ್ದು ಎಂಬುದು ನಿಶ್ಚಯವು. ಇದೇ ರೀತಿಯಾಗಿ ಮಕ್ಕಳು, ಮನೆ ಮೊದಲಾದ ಸಂಪತ್ತುಗಳನ್ನು ಯಾರು ಅನುಭವಿಸುತ್ತಾರೋ ಅವುಗಳು ಅವರ ಅಧೀನವಾಗಿವೆ ಎಂದು ಭಾವ.
ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇಃ ಪರಂ ಗತಾಃ |
ತೇ ನರಾಃ ಸುಖಮೇಧಂತೇ ಕ್ಲಿಶ್ಯತ್ಯಂತರಿತೋ ಜನಃ ॥ 33 ॥
ಲೋಕದಲ್ಲಿ ಯಾರು ಅತ್ಯಂತ ಮೂಢರಾಗಿರುವರೋ ಅವರು ಸುಖವನ್ನು ಹೊಂದುತ್ತಾರೆ. ತುಂಬಾ ಬುದ್ಧಿವಂತನೂ ಸುಖದಿಂದ ಅಭಿವೃದ್ಧಿಯನ್ನು ಹೊಂದುತ್ತಾನೆ. ಆದರೆ ಮೂರ್ಖನೂ ಅಲ್ಲದ, ಬುದ್ಧಿವಂತನೂ ಅಲ್ಲದ ಎಡಬಿಡಂಗಿಯು ದುಃಖಕ್ಕೆ ಈಡಾಗುತ್ತಾನೆ.
ಅಂತೇಷು ರೇಮಿರೇ ಧೀರಾ ನ ತೇ ಮಧ್ಯೇಷು ರೇಮಿರೇ |
ಅಂತಪ್ರಾಪ್ತಿಂ ಸುಖಂ ಪ್ರಾಹುರ್ದುಃಖಮಂತರಮಂತಯೋಃ ॥ 34 ॥
ಬುದ್ಧಿವಂತನಾದವನು ಧರ್ಮ-ಅರ್ಥ-ಕಾಮ-ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಲ್ಲಿ ಮೊದಲನೆಯದ್ದು ಮತ್ತು ಕಡೆಯದ್ದು ಅರ್ಥಾತ್ ಧರ್ಮ- ಮೋಕ್ಷಗಳಲ್ಲಿಯೇ ಸಂತೋಷ ಹೊಂದುತ್ತಾನೆ ವಿನಾ ಅವೆರಡರಲ್ಲಿರುವ ಅರ್ಥ- ಕಾಮಗಳಿಗೆ ಮನಸ್ಸನ್ನಿಡುವುದಿಲ್ಲ. ಮೊದಲು ಹೇಳಿದ ಧರ್ಮ-ಮೋಕ್ಷವು ಸುಖವೆಂದು ನಡುವೆ ಹೇಳಿರುವ ಅರ್ಥ-ಕಾಮಗಳು ದುಃಖವೆಂದು ಪ್ರಾಜ್ಞರು ಹೇಳುತ್ತಾರೆ.
ವ್ಯಾಖ್ಯಾನ ವಿಶೇಷ ಶ್ಲೋಕದಲ್ಲಿ `ಅಂತೇಷು ರೇಮಿರೇ' ಎಂಬುದಾಗಿ ಬಹುವಚನ ಪ್ರಯೋಗವಿದೆ. ಮೋಕ್ಷವು ಒಂದೇ ಇರುವುದರಿಂದ, ಧರ್ಮವೂ ಒಂದೇ ಇರುವುದರಿಂದ ಕೊನೆಯವುಗಳಲ್ಲಿ ಸಂತೋಷವನ್ನು ಹೊಂದುತ್ತಾರೆ ಎಂದು ಬಹುವಚನ ಪ್ರಯೋಗವನ್ನು ವ್ಯಾಸರು ಏಕೆ ಮಾಡಿದ್ದಾರೆ ಎಂಬುದಕ್ಕೆ ಗುರುರಾಜರು ಹೀಗೆ ಉತ್ತರಿಸಿದ್ದಾರೆ: ಮೋಕ್ಷದಲ್ಲಿಯೂ ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ ಮುಂತಾಗಿ ಅನೇಕ ಭೇದವು ಇರುವುದರಿಂದ ಬಹುವಚನ ಪ್ರಯೋಗವನ್ನು ಮಾಡಿದ್ದಾರೆ. ಪುರುಷಾರ್ಥಗಳಲ್ಲಿ ಹಿಂದಿನಿಂದ ಗಣನೆ ಮಾಡಿದಾಗ ಧರ್ಮವು ಕೊನೆಯದ್ದಾಗುತ್ತದೆ. ಆ ಧರ್ಮವು ಅನೇಕ ವಿಧವಾಗಿರುವುದರಿಂದ ಬಹುವಚನ ಪ್ರಯೋಗವು ಕೂಡುತ್ತದೆ.
ಯೇ ತು ಬುದ್ಧಿಸುಖಂ ಪ್ರಾಪ್ತಾ ದ್ವಂದ್ವಾತೀತಾ ವಿಮತ್ಸರಾಃ |

ತಾನ್ನೈವಾರ್ಥಾ ನ ಚಾನರ್ಥಾ ವ್ಯಥಯಂತಿ ಕದಾಚನ ॥ 35 ॥
ಯಾರು ಧರ್ಮಕ್ಕಾಗಿ ದ್ವಂದ್ವದಿಂದ ಅತೀತರಾಗಿ, ಮಾತ್ಸರ್ಯರಹಿತರಾಗಿ ಬುದ್ದಿಸುಖವನ್ನು ಹೊಂದಿರುತ್ತಾರೋ ಅವರು ಅನರ್ಥಕಾರಿಯಾದ ಅರ್ಥಗಳ ಪ್ರಾಪ್ತಿಯಿಂದ ದುಃಖವನ್ನು ಹೊಂದುವುದಿಲ್ಲ. ಅವರನ್ನು ಅರ್ಥ-ಕಾಮಗಳು ಪೀಡಿಸಲು ಶಕ್ತವಾಗುವುದಿಲ್ಲ.
ಸುಖಂ ಸ್ವಪಿತಿ ದುರ್ಮೇಧಾಃ ಸ್ವಾನಿ ಕರ್ಮಾಣ್ಯಚಿಂತಯನ್ |
ಅವಿಜ್ಞಾನೇನ ಮಹತಾ ಕಂಬಲೇನೇವ ಸಂವೃತಃ ॥ 36 ॥
ಕೇವಲ ಮೂಢನಾದವನು ತಾನು ಮಾಡುವ ಕರ್ಮವು ಎಷ್ಟು ನಿಕೃಷ್ಟವಾಗಿದೆ ಎಂದು ತಿಳಿಯದೇ ಕರಿಯ ಕಂಬಳಿಯಲ್ಲಿ ಮುಚ್ಚಲ್ಪಟ್ಟವನಂತೆ ಅಜ್ಞಾನದಿಂದ ಆವೃತನಾಗಿ ನಿಶ್ಚಿಂತೆಯಿಂದ ನಿದ್ರಿಸುತ್ತಾನೆ.
ಅಥ ಯೇ ಬುದ್ಧಿಮಪ್ರಾಪ್ತಾ ವ್ಯತಿಕ್ರಾಂತಾಶ್ಚ ಮೂಢತಾಮ್ |
ತೇಽತಿವೇಲಂ ಪ್ರಹೃಷ್ಯಂತಿ ಸಂತಾಪಮುಪಯಾಂತಿ ಚ ॥ 37 ॥
ಯಾವ ಬುದ್ಧಿಪರಿಪಾಕವಿಲ್ಲದವರೊ, ಅತ್ಯಂತ ಮೌಢ್ಯ ಹೊಂದಿದವರೊ ಅವರನ್ನು ಸುಖ-ದುಃಖಗಳು ಚೆನ್ನಾಗಿ ಪೀಡಿಸುತ್ತವೆ. ಇಂತಹ ಮೂರ್ಖರು ಸುಖ ಬಂದಾಗ ಸಂತೋಷವನ್ನು ಹೊಂದುತ್ತಾರೆ. ದುಃಖ ಬಂದಾಗ ಸಂತಾಪಕ್ಕೀಡಾಗುತ್ತಾರೆ. ಈ ಸುಖ-ದುಃಖ ಪ್ರಭಾವಕ್ಕೆ ಈಡಾಗಿ ಸಂಕಟಪಡುತ್ತಾರೆ.
ನಿತ್ಯಪ್ರಮುದಿತಾ ಮೂಢಾ ದಿವಿ ದೇವಗಣಾ ಇವ |
ಅವಲೇಪೇನ ಮಹತಾ ಪರಿತೃಪ್ತಾ ವಿಚೇತಸಃ ॥ 38 ॥
ಮೂರ್ಖರಾದ ಜನರು ಬಲಿಷ್ಠವಾದ ಅಹಂಕಾರದಿಂದ ಬೇರೆ ಏನನ್ನೂ ತಿಳಿಯಲಾರದೆ ತಮ್ಮ ಸ್ಥಿತಿಗೆ ತಾವು ತೃಪ್ತರಾಗಿ ದೇವಲೋಕದಲ್ಲಿ ಇರುವ ವ್ಯಕ್ತಿಗಳು ಸಂತೋಷದಿಂದ ಉನ್ಮತ್ತರಾಗಿರುವಂತೆ ಭೂಮಿಯಲ್ಲಿಯೂ ಸಂತೋಷದಲ್ಲಿ ಮುಳುಗಿರುತ್ತಾರೆ. ಅವರಿಗೆ ಆಗುವ ಹಾನಿಗಳನ್ನು ತಿಳಿಯುವುದಿಲ್ಲ.
ಸುಖಂ ದುಃಖಾಂತಮಾಲಸ್ಯಂ ದುಃಖಂ ದಾಕ್ಷ್ಯಂ ಸುಖೋದಯಮ್ |
ಭೂತಿಶ್ಚೈವ ಶ್ರಿಯಾ ಸಾರ್ಧಂ ದಕ್ಷೇ ವಸತಿ ನಾಲಸೇ ॥ 39 ॥
ಸುಖ ಎನ್ನುವುದು ಯಾವತ್ತಿಗೂ ದುಃಖದಲ್ಲಿಯೇ ಪರ್ಯವಸಾನವಾಗುತ್ತದೆ. ಉತ್ಸಾಹರಹಿತನಾದ ವ್ಯಕ್ತಿಯು ಕೊನೆಗೆ ದುಃಖಕ್ಕೆ ಈಡಾಗುತ್ತಾನೆ. ತಿಳಿವಳಿಕೆಯಿಂದ, ಧೈರ್ಯದಿಂದ ಮುಂದೆ ಸಾಗುವ ವ್ಯಕ್ತಿಯು ಸುಖವನ್ನು ಹೊಂದುತ್ತಾನೆ. ಅಂತಹ ದ್ವಿಜನಲ್ಲಿಯೇ ಐಶ್ವರ್ಯ, ವಿದ್ಯೆ ಎಲ್ಲವೂ ನೆಲೆಸಿಕೊಂಡಿರುತ್ತವೆ. ಸೋಮಾರಿಗಳಲ್ಲಿ ಇವು ನೆಲೆಸವು.
ವ್ಯಾಖ್ಯಾನ ವಿಶೇಷ ಆಲಸ್ಯದಿಂದ ಆರಂಭದಲ್ಲಿ ಸುಖವಾದರೂ ಕೊನೆಗೆ ದುಃಖವಾಗುತ್ತದೆ. ಉತ್ಸಾಹಿಗೆ ಆರಂಭದಲ್ಲಿ ದುಃಖವಾದರೂ ಕೊನೆಗೆ ಸುಖವೇ ಆಗುತ್ತದೆ. ಕಾಷ್ಠಭಾರವನ್ನು ಹೊತ್ತು ನಡೆಯುವ ವ್ಯಕ್ತಿಗೆ ಯಾವ ದುಃಖವುಂಟಾಗುತ್ತದೋ ಆ ದುಃಖವು ಆಲಸಿಗೆ ಉಂಟಾಗುವುದಿಲ್ಲ. ಕರ್ತವ್ಯಗಳನ್ನು ಮಾಡದೆ ಆರಂಭದಲ್ಲಿ ಸುಖವನ್ನು ಅನುಭವಿಸುತ್ತಾನೆ. ಕೊನೆಯಲ್ಲಿ ತುತ್ತು ಹುಟ್ಟದೇ ಇದ್ದಾಗ ಪುತ್ರ-ಮಿತ್ರ- ಕಲತ್ರಾದಿಗಳಿಂದ ಮಹಾದುಃಖವನ್ನೇ ಅನುಭವಿಸುತ್ತಾನೆ. ಉತ್ಸಾಹಿಯಾದ ದಕ್ಷನು ಆರಂಭದಲ್ಲಿ ಕಾಷ್ಠಭಾರವನ್ನು ಹೊರುವ ದುಃಖವನ್ನು ಸ್ವಲ್ಪ ಮಟ್ಟಿಗೆ ಅನುಭವಿಸಿದರೂ ಕೊನೆಗೆ ಪುತ್ರ-ಮಿತ್ರ-ಕಲತ್ರಾದಿಗಳಿಂದ ಕೂಡಿಕೊಂಡು ಸಂತೃಪ್ತಿಯಿಂದ ಭೋಜನವನ್ನು ಮಾಡಿ ಮಹಾಸುಖವನ್ನೇ ಹೇಗೆ ಹೊಂದುತ್ತಾನೋ ಇದರಂತೆ ಜ್ಞಾನಸಾಧನಗಳಲ್ಲಿ ಪ್ರವೃತ್ತಿಯನ್ನು ಹೊಂದದೆ, ಜೀವರ ಕರ್ತವ್ಯಗಳನ್ನು ಅರಿಯದೆ, ಆಲಸಿಯಾಗಿ ಮೈಮರೆತ ವ್ಯಕ್ತಿಯು ತಾತ್ಕಾಲಿಕ ಸುಖವನ್ನು ಹೊಂದಿದರೂ ಮೃತ್ಯುವಿನ ಬಳಿಕ ದುಃಖಕ್ಕೆ ತುತ್ತಾಗುತ್ತಾನೆ. ಜ್ಞಾನಸಾಗರದಲ್ಲಿ ಪ್ರವೃತ್ತಿಯನ್ನು ಹೊಂದಿದ ವ್ಯಕ್ತಿಯು ಸ್ವಲ್ಪ ಬಾಹ್ಯ ಸುಖಗಳಿಂದ ವಂಚಿತನಾದರೂ ಕಾಲಕ್ರಮದಲ್ಲಿ ಮಹತ್ತರ ಸುಖವನ್ನೇ ಹೊಂದುತ್ತಾನೆ ಎಂದು ಅಭಿಪ್ರಾಯ.
ಸುಖಂ ವಾ ಯದಿ ವಾ ದುಃಖಂ ದ್ವೇಷ್ಯಂ ವಾ ಯದಿ ವಾ ಪ್ರಿಯಮ್|
ಪ್ರಾಪ್ತಂ ಪ್ರಾಪ್ತಮುಪಾಸೀತ ಹೃದಯೇನಾಪರಾಜಿತಃ ॥ 40 ॥
ಸುಖವಾಗಲಿ-ದುಃಖವಾಗಲೀ, ಪ್ರಿಯವಾಗಲಿ-ಅಪ್ರಿಯವಾಗಲೀ, ತನ್ನ ಬದುಕಿನಲ್ಲಿ ಒದಗಿಬಂದಾಗ ಮನುಷ್ಯನು ಮನೋದಾರ್ಢ್ಯದಿಂದ ಎದುರಿಸಬೇಕು. ಎಂದಿಗೂ ಇವುಗಳಿಂದ ಧೃತಿಗೆಡದೆ ಏನೇನು ಸಂಕಷ್ಟಗಳು, ದುಃಖಗಳು ಒದಗಿ ಬರುತ್ತವೋ ಅವುಗಳನ್ನು ಬುದ್ಧಿಪೂರ್ವಕವಾಗಿ ಎದುರಿಸಬೇಕು.
ಶೋಕಸ್ಥಾನಸಹಸ್ರಾಣಿ ಹರ್ಷಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥ 41 ॥
ಪ್ರತಿದಿನವೂ ಮನಸ್ಸಿಗೆ ಸಾವಿರಾರು ದುಃಖಕಾರಣಗಳು, ನೂರಾರು ಭಯ ಕಾರಣಗಳು ಬಂದೇ ಬರುತ್ತವೆ. ಆದರೆ ಅವುಗಳು ಮೂರ್ಖರನ್ನು ಹಿಡಿದು ಹಿಂಸಿಸುತ್ತವೆಯೇ ಹೊರತು ಪಂಡಿತನನ್ನು ಕುಗ್ಗಿಸಲಾರವು.
ಬುದ್ಧಿಮಂತಂ ಕೃತಪ್ರಜ್ಞಂ ಶುಶ್ರೂಷುಮನಸೂಯಕಮ್ |
ದಾಂತಂ ಜಿತೇಂದ್ರಿಯಂ ಚಾಪಿ ಶೋಕೋ ನ ಸ್ಪೃಶತೇ ನರಮ್ ॥42॥
ಧೀಮಂತನನ್ನು, ವಿವೇಕಿಯನ್ನು, ಗುರುಸೇವಾ ನಿರತನಾದವನನ್ನು, ಅಸೂಯಾ ರಹಿತನನ್ನು, ಜಿತೇಂದ್ರಿಯನನ್ನು, ಭಗವನ್ನಿಷ್ಠನನ್ನು ಎಂದಿಗೂ ಶೋಕವು ಮುಟ್ಟುವುದಿಲ್ಲ.
ಏತಾಂ ಬುದ್ಧಿಂ ಸಮಾಸ್ಥಾಯ ಗುಪ್ತಚಿತ್ತಶ್ಚರೇದ್ ಬುಧಃ |
ಶುಕ್ಲಕೃಷ್ಣಗತಿಜ್ಞಂ ತಂ ದೇವಾಸುರವಿನಿರ್ಗಮಮ್ |
ಉದಯಾಸ್ತಮಯಜ್ಞಂ ಹಿ ನ ಶೋಕಃ ಸ್ಪ್ರಷ್ಟುಮರ್ಹತಿ ॥ 43 ॥
ಈ ರೀತಿಯಾದ ಸ್ಥಿರಬುದ್ಧಿಯನ್ನು ಹೊಂದಿ ಅಂತರ್ಮುಖಿಯಾಗಿ ಜ್ಞಾನಿಯಾದ ಸಾಧಕನು ಸಂಚರಿಸಬೇಕು. ಶುಕ್ಲ-ಕೃಷ್ಣ ಗತಿಗಳನ್ನು ಅರ್ಥಾತ್ ಅರ್ಚಿರಾದಿ, ಧೂಮಾದಿ ಮಾರ್ಗಗಳನ್ನು ಚೆನ್ನಾಗಿ ಅರಿತು ದೇವತೆಗಳಿಗೆ, ಅಸುರರಿಗೆ ಒದಗುವ ಮಾರ್ಗಗಳನ್ನೂ

ಅರಿತಿರುವ, ದುಃಖವು ಯಾವುದರಿಂದ ಉಂಟಾಗುತ್ತದೆ, ದುಃಖವು ಯಾವುದರಿಂದ ಪರಿಹಾರವಾಗುತ್ತದೆ ಎಂದು ಅರಿತಿರುವ ವ್ಯಕ್ತಿಯನ್ನು ಶೋಕವು ಎಂದೂ ಮುಟ್ಟಲಾಗುವುದಿಲ್ಲ.
ಯನ್ನಿಮಿತ್ತೋ ಭವೇಚ್ಛೋಕಸ್ತಾಪೋ ವಾ ದುಃಖಮೇವ ವಾ |
ಆಯಾಸೋ ವಾ ಯತೋ ಮೂಲಸ್ತದೇಕಾಂಗಮಪಿ ತ್ಯಜೇತ್ ॥ 44 ॥
ಯಾವುದರ ನಿಮಿತ್ತದಿಂದ ಶೋಕ-ತಾಪ-ದುಃಖಗಳು ಉಂಟಾಗುತ್ತವೋ, ಯಾವುದರ ಕಾರಣದಿಂದ ಅಧಿಕವಾದ ಆಯಾಸವುಂಟಾಗುತ್ತದೋ ಅದು ಶರೀರದ ಒಂದು ಅಂಗವೇ ಆಗಿದ್ದರೂ ಬೆರಳಿಗೆ ಹಾವು ಕಚ್ಚಿದಾಗ ದೇಹದ ರಕ್ಷಣೆಯ ದೃಷ್ಟಿಯಿಂದ ಬೆರಳನ್ನೇ ತುಂಡುಮಾಡುವಂತೆ ಅದನ್ನು ತುಂಡರಿಸಬೇಕು (ತ್ಯಜಿಸಬೇಕು).
ಯದ್ ಯತ್ ತ್ಯಜತಿ ಕಾಮಾನಾಂ ತತ್ ಸುಖಸ್ಯಾಭಿಪೂರ್ಯತೇ |
ಕಾಮಾನುಸಾರೀ ಪುರುಷಃ ಕಾಮಾನನು ವಿನಶ್ಯತಿ ॥ 45 ॥
ಕಾಮಗಳಲ್ಲಿ ಯಾವ ಯಾವುದನ್ನು ಬಿಡುತ್ತಾ ಬರುತ್ತಾನೋ ಅದೆಲ್ಲ ಸುಖವನ್ನು ಹೆಚ್ಚಿಸಲು ಕಾರಣವಾಗುತ್ತದೆ. ಕಾಮಕ್ಕೆ ದಾರಿ ಮಾಡಿಕೊಟ್ಟಲ್ಲಿ ಅವುಗಳನ್ನು ಅನುಭವಿಸುತ್ತಾ ಆ ಕಾಮದಿಂದಲೇ ನಾಶವನ್ನು ಹೊಂದುತ್ತಾನೆ.
ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ ಸುಖಮ್ |
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥ 46 ॥
ಲೋಕದಲ್ಲಿ ಕಾಮದಿಂದ ಉತ್ಪನ್ನವಾಗುವ ಸುಖ, ದೇವಲೋಕದ ಉತ್ತಮ ಸುಖಗಳು ಇವೆಲ್ಲವೂ ತೃಷ್ಣೆಯನ್ನು ಜಯಿಸುವುದರಿಂದ ಉಂಟಾಗುವ ಸುಖದ ಹದಿನಾರನೆಯ ಒಂದು ಕಲಾಮಾತ್ರಕ್ಕೂ ಸರಿ ಎನಿಸಲಾರವು.
ಪೂರ್ವದೇಹಕೃತಂ ಕರ್ಮ ಶುಭಂ ವಾ ಯದಿ ವಾಶುಭಮ್ |
ಪ್ರಾಜ್ಞಂ ಮೂಢಂ ತಥಾ ಶೂರಂ ಭಜತೇ ಯಾದೃಶಂ ಕೃತಮ್ ॥ 47 ॥
ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು ಒಳ್ಳೆಯದಾಗಿರಲಿ, ಕೆಟ್ಟದ್ದಾಗಿರಲಿ ಯಾರನ್ನೂ ಬಿಟ್ಟುಹೋಗುವುದಿಲ್ಲ. ಅವನು ಪ್ರಾಜ್ಞನಾಗಿರಲಿ, ಮೂಢನಾಗಿರಲಿ, ಶೂರನಾಗಿರಲಿ, ಭೀರು(ಹೇಡಿ)ವಾಗಿರಲಿ ಎಲ್ಲರನ್ನೂ ಪೂರ್ವದೇಹಕೃತಕರ್ಮವು ಹಿಂಬಾಲಿಸುತ್ತದೆ.
ಏವಮೇವ ಕಿಲೈತಾನಿ ಪ್ರಿಯಾಣ್ಯೇವಾಪ್ರಿಯಾಣಿ ಚ |
ಜೀವೇಷು ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ॥ 48 ॥
ಈ ಕರ್ಮನಿಮಿತ್ತವಾಗಿಯೇ ಪ್ರಾಣಿಗಳಿಗೆ ಸುಖ-ದುಃಖಗಳು, ಇಷ್ಟಾನಿಷ್ಟಗಳು ಪುನಃ ಪುನಃ ಬರುತ್ತಲೇ ಇರುತ್ತವೆ.
ತದೇವಂ ಬುದ್ಧಿಮಾಸ್ಥಾಯ ಸುಖಂ ಜೀವೇದ್ಗುಣಾನ್ವಿತಃ |
ಸರ್ವಾನ್ ಕಾಮಾನ್ ಜುಗುಪ್ಸೇತ ಸಂಗಾನ್ ಕುರ್ವೀತ ಪೃಷ್ಠತಃ ॥49॥
ವೃತ್ತ ಏಷ ಹೃದಿ ಪ್ರೌಢೋ ಮೃತ್ಯುರೇಷ ಮನೋಭಯಃ |
ಕ್ರೋಧೋ ನಾಮ ಶರೀರಸ್ಥೋ ದೇಹಿನಾಂ ಪ್ರೋಚ್ಯತೇ ಬುಧೈಃ ॥50॥
ವಿವೇಕಿಯಾದವನು ಈ ಅಂಶವನ್ನು ತಿಳಿದುಕೊಂಡು ಕಷ್ಟಬಂದಾಗ ಕುಗ್ಗಬಾರದು. ಸಮಸ್ತ ಕಾಮಗಳನ್ನು ದಾಟಬೇಕು. ಕೋಪವನ್ನು ನಿಗ್ರಹಿಸಿಕೊಳ್ಳಬೇಕು. ಸಮಸ್ತ ವಿಷಯ ಸುಖಗಳಿಗೆ ಬೆನ್ನು ಹಾಕಿ ನಡೆಯಬೇಕು. ಕೋಪವೆಂಬುದು ಮನಸ್ಸಿನಲ್ಲಿ ಮೆಲ್ಲನೆ ಅಂಕುರಿಸುತ್ತಾ ವೃದ್ಧಿಯನ್ನು ಹೊಂದಿ ನಮಗೆ ಕಂಟಕವಾಗುತ್ತದೆ. ಆದ್ದರಿಂದ ಮನಸ್ಸಿನಲ್ಲಿ ಹುಟ್ಟುವ ಕಾಮ-ಕ್ರೋಧಗಳೇ ಜೀವರಿಗೆ ಮೃತ್ಯು ಎನಿಸಿವೆ. ಇವುಗಳನ್ನು ಶರೀರದಿಂದ ಹೊರಹಾಕಿದಲ್ಲಿ ಆ ವ್ಯಕ್ತಿಯು ಮೃತ್ಯುವನ್ನು ಗೆಲ್ಲಲು ಸಮರ್ಥನಾಗುತ್ತಾನೆ.
ಯದಾ ಸಂಹರತೇ ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ |
ತದಾತ್ಮಜ್ಯೋತಿರಾತ್ಮಾ ಚ ಆತ್ಮನ್ಯೇವ ಪ್ರಸೀದತಿ ॥ 51 ॥
ಆಮೆಯು ತನ್ನ ಅವಯವಗಳನ್ನು ಬೇಕಾದಾಗ ಹೊರಗೆ ಚೆಲ್ಲುತ್ತದೆ. ಬೇಕಾದ ಒಳಗೆ ಸೆಳೆದುಕೊಳ್ಳುತ್ತದೆ. ಇದರಂತೆ ಮನುಷ್ಯನು ಕಾಮನೆಗಳಲ್ಲಿ ತನ್ನ ಹತೋಟಿಯನ್ನು ಸಾಧಿಸಿಕೊಂಡರೆ ಆಗ ಪರಮಾತ್ಮನ ವಿಷಯಕವಾದ ಜ್ಞಾನಪ್ರಕಾಶವನ್ನು ಹೊಂದುತ್ತಾನೆ. ಜ್ಯೋತಿಸ್ಥಾನೀಯನಾದ ಪರಮಾತ್ಮನನ್ನು ಹೃದಯದಲ್ಲಿ ಕಾಣಲು ಸಮರ್ಥನಾಗುತ್ತಾನೆ. ಅವನಿಂದ ತಾನು ಸುಖವನ್ನು ಹೊಂದುತ್ತಾನೆ.
ಕಿಂಚಿದೇವ ಮಮತ್ವೇನ ಯದಾ ಭವತಿ ಕಲ್ಪಿತಮ್ |
ತದೇವ ಪರಿತಾಪಾರ್ಥಂ ಸರ್ವಂ ಸಂಪದ್ಯತೇ ತದಾ ॥ 52 ॥
ಮನುಷ್ಯನು ಯಾವುದರಲ್ಲಿಯೇ ಆಗಲಿ ತನ್ನದು ಎಂಬ ಮಮತೆಯನ್ನು ಹುಟ್ಟಿಸಿಕೊಂಡರೆ ಆ ಮಮತೆಯೇ ಕೊನೆಯಲ್ಲಿ ಪರಿತಾಪವನ್ನೂ, ಕಾಲಕ್ರಮದಲ್ಲಿ ನಾಶವನ್ನೂ ಉಂಟುಮಾಡಲು ಕಾರಣವಾಗುತ್ತದೆ.
ನ ಬಿಭೇತಿ ಯದಾ ಚಾಯಂ ಯದಾ ಚಾಸ್ಮಾನ್ನ ಬಿಭ್ಯತಿ |
ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥ 53 ॥
ಮನುಷ್ಯನು ಯಾವಾಗ ಬೇರೆಯವರಿಗೆ ಭಯವನ್ನು ಹುಟ್ಟಿಸದೆ, ಇತರರಿಂದ ತಾನೂ ಭಯಪಡದೆ ಇರುತ್ತಾನೋ, ಯಾವುದೇ ಪದಾರ್ಥಗಳಲ್ಲಿ ಇಚ್ಛಾ-ದ್ವೇಷಗಳಿಗೆ ತುತ್ತಾಗದೆ ಸ್ಥಿತಪ್ರಜ್ಞನಾಗಿರುತ್ತಾನೋ ಆಗಲೇ ಗುಣಪರಿಪೂರ್ಣನಾದ ಪರಬ್ರಹ್ಮನನ್ನು ಹೊಂದುತ್ತಾನೆ.
ಉಭೇ ಸತ್ಯಾನೃತೇ ತ್ಯಕ್ತ್ವಾ ಶೋಕಾನಂದೌ ಭಯಾಭಯೇ |
ಪ್ರಿಯಾಪ್ರಿಯೇ ಪರಿತ್ಯಜ್ಯ ಪ್ರಶಾಂತಾತ್ಮಾ ಭವಿಷ್ಯಸಿ ॥ 54 ॥
ಕಳ್ಳರಿಗೆ ಸತ್ಯವಚನಗಳನ್ನು ಹೇಳಬಾರದು. ಸಜ್ಜನರ ಮುಂದೆ ಸುಳ್ಳಾದ ಮಾತುಗಳನ್ನಾಡಬಾರದು. ಈ ಕ್ರಮದಲ್ಲಿ ಸತ್ಯ-ಅನೃತಗಳನ್ನು ತ್ಯಜಿಸಿ, ಶೋಕ- ಆನಂದಗಳನ್ನು, ಭಯಾಭಯಗಳನ್ನು, ಪ್ರಿಯಾಪ್ರಿಯಗಳನ್ನು ಸಮವಾಗಿ ಪರಿತ್ಯಜಿಸಿದ

ವ್ಯಕ್ತಿಯು ಪ್ರಶಾಂತಾತ್ಮನೆನಿಸುತ್ತಾನೆ.
ಯದಾ ನ ಕುರುತೇ ಧೀರಃ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥ 55 ॥
ಯಾವಾಗ ಜ್ಞಾನಿಯಾದ ವ್ಯಕ್ತಿಯು ಯಾವ ಭೂತಗಳಲ್ಲಿಯೂ ಅನ್ಯಾಯವನ್ನು ಎಸಗುವುದಿಲ್ಲವೋ, ಮಾನಸಿಕವಾಗಿ, ದೈಹಿಕವಾಗಿ, ವಾಚನಿಕವಾಗಿ ಹಿಂಸೆಯನ್ನು ಪಡಿಸುವುದಿಲ್ಲವೋ ಅವನು ಪರಬ್ರಹ್ಮನನ್ನು ಹೊಂದುತ್ತಾನೆ.
ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ |
ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥
ತೃಷ್ಣೆ ಎಂಬುದು ಅಧೀರರಾದ ಬುದ್ಧಿಯುಳ್ಳ ವ್ಯಕ್ತಿಗಳಿಗೆ ಬಿಡಲಾಗದು. ಮನುಷ್ಯನು ಎಷ್ಟೇ ವೃದ್ಧಾಪ್ಯವನ್ನು ಹೊಂದಿದರೂ ಅವನ ಹೃದಯದಲ್ಲಿರುವ ಆಸೆಗೆ ಮುಪ್ಪಿರುವುದಿಲ್ಲ. ಈ ಆಸೆಯು ಪ್ರಾಣಾಂತಿಕ ರೋಗ ಎನಿಸಿದೆ. ಮಹಾಕಠಿಣ ವ್ಯಾಧಿ ಎನಿಸಿದೆ. ಈ ತೃಷ್ಣೆಯನ್ನು ಬಿಟ್ಟವನಿಗೆ ನಿಜವಾದ ಸುಖವು ಉಂಟಾಗುತ್ತದೆ.
ಅತ್ರ ಪಿಂಗಲಯಾ ಗೀತಾ ಗಾಥಾಃ ಶ್ರೂಯಂತಿ ಪಾರ್ಥಿವ |
ಯಥಾ ಸಾ ಕೃಚ್ಛ್ರಕಾಲೇಽಪಿ ಲೇಭೇ ಧರ್ಮಂ ಸನಾತನಮ್ ॥ 57 ॥
ಇದೇ ವಿಷಯದಲ್ಲಿ ಪಿಂಗಲಾ ಎಂಬ ವೇಶ್ಯೆಯು ತನಗೆ ಬಹಳ ಸಂಕಟ ಬಂದ ಕಾಲದಲ್ಲಿಯೂ ಹೃದಯದಲ್ಲಿರುವ ಭಗವಂತನ ಅನುಗ್ರಹದಿಂದ ಶಾಶ್ವತ ಸುಖವನ್ನು ಸ್ಥಿರವಾದ ಬುದ್ಧಿಯ ಮೂಲಕ ಹೊಂದಿದ್ದಾಳೆ ಎಂಬುದನ್ನು ತಿಳಿಸುವ ಗಾಥೆಯನ್ನು ತಿಳಿಸುತ್ತೇನೆ, ಕೇಳು.
ಸಂಕೇತೇ ಪಿಂಗಲಾ ವೇಶ್ಯಾ ಕಾಂತೇನಾಸೀದ್ವಿನಾಕೃತಾ |
ಅಥ ಕೃಚ್ಛ್ರಗತಾ ಶಾಂತಾಂ ಬುದ್ಧಿಮಾಸ್ಥಾಪಯತ್ತದಾ ॥ 58 ॥
ಪಿಂಗಲಾ ಎಂಬ ವೇಶ್ಯೆಯು ಪ್ರಿಯಕರನಿಂದ ರಹಿತಳಾಗಿ ಬಹಳ ದಿನ ವಾಸಿಸಿದಳು. ಆಮೇಲೆ ಕಷ್ಟದಲ್ಲಿರುವ ಅವಳು ತನ್ನ ಬುದ್ಧಿಯನ್ನು ಸ್ಥಿರವಾಗಿ ಇಟ್ಟುಕೊಂಡಳು.
ಪಿಂಗಲಾ
ಉನ್ಮತ್ತಾಹಮನುನ್ಮತ್ತಂ ಕಾಂತಮನ್ವವಸಂ ಚಿರಮ್ |
ಅಂತಿಕೇ ರಮಣಂ ಸಂತಂ ನೈನಮಧ್ಯಗಮಂ ಪುರಾ ॥ 59 ॥
ಪಿಂಗಲಾ ನನ್ನ ಹೃದಯದಲ್ಲೇ ಇರುವ, ಮನೋಹರನಾದ ಪರಮಾತ್ಮನಾದ ಕಾಂತನನ್ನು ಉನ್ಮತ್ತಳಾದ ನಾನು ಹಿಂದೆ ತಿಳಿಯಲಿಲ್ಲ. ಇನ್ನು ಮುಂದೆ ಬಹಳ ಕಾಲ ಅವನನ್ನೇ ಹೃದಯದಲ್ಲಿ ಧ್ಯಾನಿಸುತ್ತೇನೆ. ಅಜ್ಞಾನನಿದ್ರೆಯಿಂದ ನಾನು ಎಚ್ಚರಗೊಂಡಿದ್ದೇನೆ.
ಏಕಸ್ಥೂಣಂ ನವದ್ವಾರಮಪಿಧಾಸ್ಯಾಮ್ಯಗಾರಕಮ್ |
ಕಾ ಹಿ ಕಾಂತಮಿಹಾಯಾಂತಮಯಂ ಕಾಂತೇತಿ ಮಂಸ್ಯತೇ ॥ 60 ॥
ಈ ದೇಹವು ಬೆನ್ನಿನ ಪ್ರಧಾನವಾದ ಅಸ್ಥಿ ಎಂಬ ಸ್ತಂಭವನ್ನು ಆಶ್ರಯಿಸಿಕೊಂಡು ಇದೆ. ಒಂಬತ್ತು ದ್ವಾರಗಳಿಂದ ಕೂಡಿದೆ. ಇಂತಹ ಶರೀರದ ಬಾಗಿಲನ್ನು ಬಾಹ್ಯ ಕಾಮನೆಗಳಿಗೆ ತೆರೆಯದೆ ನನ್ನ ಹೃದಯದಲ್ಲಿರುವ ಭಗವಂತನಿಗೆ ಈ ದೇಹವನ್ನು ಸಮರ್ಪಿಸುತ್ತೇನೆ. ಮೂಢಳಾದ ನಾನು ಕಾಮಿಸಬಾರದು, ವ್ಯಕ್ತಿಗಳನ್ನು ಕಾಂತರೆಂದು ತಪ್ಪಾಗಿ ತಿಳಿದು ಮೂರ್ಖಳಾದೆ. ಈಗ ಅಜ್ಞಾನವೆಂಬ ನಿದ್ರೆಯಿಂದ ಎಚ್ಚರಗೊಂಡಿರುತ್ತೇನೆ.
ಅಕಾಮಾಃ ಕಾಮರೂಪೇಣ ಧೂರ್ತಾ ನರಕರೂಪಿಣಃ |
ಪುನರ್ನ ಯಭಯಿಷ್ಯಂತಿ ಪ್ರತಿಬುದ್ಧಾಸ್ಮಿ ಜಾಗೃಮಿ ॥ 61 ॥
ಈಗ ಸ್ಥಿತಪ್ರಜ್ಞಳಾಗಿ ಜಾಗೃತಳಾಗಿರುವ ನನ್ನ ಈ ಶರೀರವನ್ನು ಧೂರ್ತರಾದ ನರಕರೂಪಿಗಳಾದ, ಕಾಮರೂಪಿಗಳಾದ ವ್ಯಕ್ತಿಗಳು ಮೈಥುನಗಳಿಂದ ವ್ಯಥೆಪಡಿಸಲು ಸಾಧ್ಯವಿಲ್ಲ.
ಅನರ್ಥೋಽಪಿ ಭವತ್ಯರ್ಥೋ ದೈವಾತ್ ಪೂರ್ವಕೃತೇನ ವಾ |
ಸಂಬುದ್ಧಾಹಂ ನಿರಾಕಾರಾ ನಾಹಮದ್ಯಾಜಿತೇಂದ್ರಿಯಾ ॥ 62 ॥
ದೈವಕೃಪೆಯಿಂದಲೋ, ಪೂರ್ವಕರ್ಮಪಾಪದಿಂದಲೋ ಮನುಷ್ಯನಿಗೆ ಉಂಟಾಗತಕ್ಕ ಅನರ್ಥವೇ ಇಂದು ಒಳ್ಳೆಯದಾಗಿ ಪರಿಣಮಿಸುತ್ತಿದೆ. ಈಗ ನಾನು ಎಚ್ಚರಗೊಂಡಿದ್ದೇನೆ. ವೇಶ್ಯಾಭಾವವನ್ನು ತೊರೆದಿದ್ದೇನೆ. ಇಂದು ನಾನು ಜಿತೇಂದ್ರಿಯಳು. ನನ್ನ ಮನಸ್ಸನ್ನು ಚಂಚಲಗೊಳಿಸಿಕೊಳ್ಳಲಾರೆ.
ಸುಖಂ ನಿರಾಶಃ ಸ್ವಪಿತಿ ನೈರಾಶ್ಯಂ ಪರಮಂ ಸುಖಮ್ |
ಆಶಾಮನಾಶಾಂ ಕೃತ್ವಾ ಹಿ ಸುಖಂ ಸ್ವಪಿತಿ ಪಿಂಗಲಾ ॥ 63 ॥
ಇನ್ನು ಮೇಲೆ ನಾನು ಇಂದ್ರಿಯಗಳಿಗೆ ದಾಸಿಯಾಗುವುದಿಲ್ಲ. ಆಸೆಯನ್ನು ತೊರೆದು ಸುಖವಾಗಿ ನಿದ್ರಿಸುತ್ತೇನೆ. ಆಸೆ ಇಲ್ಲದಿರುವುದೇ ಪರಮಸುಖವು. ಇನ್ನು ಮೇಲೆ ಲೌಕಿಕವಾದ ಆಸೆಯನ್ನು ತ್ಯಾಗ ಮಾಡಿ, ಭಗವಂತನ ಆಕಾಂಕ್ಷೆಯಿಂದಲೇ ಸುಖ ಪಡುವ ನಾನು ನಿರಂತರ ಸುಖವಾಗಿ ನಿದ್ರಿಸುತ್ತೇನೆ.
ಭೀಷ್ಮಃ
ಏತೈಶ್ಚಾನ್ಯೈಶ್ಚ ವಿಪ್ರಸ್ಯ ಹೇತುಮದ್ಭಿಃ ಪ್ರಭಾಷಿತೈಃ |
ಪರ್ಯವಸ್ಥಾಪಿತೋ ರಾಜಾ ಸೇನಜಿನ್ಮುಮುದೇ ಸುಖಮ್ ॥ 64 ॥
ಭೀಷ್ಮ ಧರ್ಮರಾಜನೇ, ಬ್ರಾಹ್ಮಣನು ಹೀಗೆ ಅನೇಕ ಕಾರಣಗಳಿಂದ ಕೂಡಿದ ಮಾತುಗಳಿಂದ ರಾಜನನ್ನು ಸಮಾಧಾನಪಡಿಸಿದನು. ರಾಜನಾದರೂ ಪರಮಾತ್ಮನಲ್ಲಿ ನೆಲೆಗೊಂಡ ಮನಸ್ಸುಳ್ಳವನಾಗಿ, ಸಮಾಧಾನವನ್ನು ಪಡೆದು ನಿಶ್ಚಿಂತೆಯಿಂದ ಸುಖವನ್ನು ಹೊಂದಿದನು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಯುಧಿಷ್ಠಿರನನ್ನು ಕುರಿತು ಭೀಷ್ಮರು ಕಾಲದ ವೇಗದಲ್ಲಿ ಚಲಿಸುವ ವ್ಯಕ್ತಿಗಳು ಶ್ರೇಯೋಮಾರ್ಗವನ್ನು ಹೇಗೆ ಅನುಸರಿಸಿ ನಡೆಯಬೇಕೆಂಬುದನ್ನು ನಿರೂಪಿಸಿದುದು. ಇದಕ್ಕೆ ಪೂರಕವಾಗಿ ತಂದೆ-ಮಕ್ಕಳ ಸಂವಾದವನ್ನು ತಿಳಿಸಿದುದು.
ಯುಧಿಷ್ಠಿರಃ
ಅತಿಕ್ರಾಮತಿ ಕಾಲೇಽಸ್ಮಿನ್ ಸರ್ವಭೂತಕ್ಷಯಾವಹೇ |
ಕಿಂ ಶ್ರೇಯಃ ಪ್ರತಿಪದ್ಯೇತ ತನ್ಮೇ ಬ್ರೂಹಿ ಪಿತಾಮಹ ॥ 1 ॥
ಯುಧಿಷ್ಠಿರ ಪಿತಾಮಹನೇ, ಸಮಸ್ತ ಪ್ರಾಣಿಗಳಿಗೂ ನಾಶಕರವಾದ ಕಾಲವೆಂಬುದು ಕ್ಷಣ-ಕ್ಷಣವೂ ಕಳೆದುಹೋಗುತ್ತಲೇ ಇದೆ. ಈ ಕ್ಷಣಿಕವಾದ ಕಾಲದಲ್ಲಿ ಶ್ರೇಯಸ್ಸನ್ನು ಪಡೆಯುವ ಮಾರ್ಗವು ಯಾವುದೆಂಬುದನ್ನು ತಿಳಿಸಿರಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪಿತುಃ ಪುತ್ರೇಣ ಸಂವಾದಂ ತನ್ನಿಬೋಧ ಯುಧಿಷ್ಠಿರ ॥ 2 ॥
ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಹಿಂದೆ ಒಬ್ಬ ತಂದೆಗೂ, ಮಗನಿಗೂ ನಡೆದ ಸಂವಾದರೂಪವಾದ ಇತಿಹಾಸ ಒಂದನ್ನು ಹೇಳುತ್ತಾರೆ. ಅದನ್ನು ಹೇಳುತ್ತೇನೆ, ಕೇಳು.
ದ್ವಿಜಾತೇಃ ಕಸ್ಯಚಿತ್ ಪಾರ್ಥ ಸ್ವಾಧ್ಯಾಯನಿರತಸ್ಯ ವೈ |
ಬಭೂವ ಪುತ್ರೋ ಮೇಧಾವೀ ಮೇಧಾವೀ ನಾಮ ನಾಮತಃ ॥ 3 ॥
ಒಬ್ಬ ವೇದಾಧ್ಯಯನ ನಿರತನಾದ ಬ್ರಾಹ್ಮಣನಿದ್ದನು. ಅವನಿಗೆ ಮೇಧಾವಿ ಎಂಬ ಒಬ್ಬ ಮಗನು, ಹೆಸರಿಗೆ ತಕ್ಕಂತೆ ಮೇಧಾವಿಯಾಗಿದ್ದನು.
ಸೋಽಬ್ರವೀತ್ ಪಿತರಂ ಪುತ್ರಃ ಸ್ವಾಧ್ಯಾಯಕರಣೇ ರತಮ್ |
ಮೋಕ್ಷಧರ್ಮಾರ್ಥಕುಶಲೋ ಲೋಕತತ್ತ್ವವಿಚಕ್ಷಣಃ ॥ 4 ॥
ಆ ಮೇಧಾವಿಯು ಮೋಕ್ಷಧರ್ಮ ವಿಚಾರದಲ್ಲಿ ಬಹಳ ವಿದ್ವಾಂಸನಾಗಿದ್ದನು. ಲೋಕತತ್ತ್ವಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು. ಅವನು ಒಮ್ಮೆ ತಂದೆಯನ್ನು ಕುರಿತು ಹೀಗೆ ಹೇಳಿದನು.
ಧೀರಃ ಕಿಂ ಸ್ವಿತ್ತಾತ ಕುರ್ಯಾತ್ ಪ್ರಜಾನನ್
ಕ್ಷಿಪ್ರಂ ಹ್ಯಾಯುರ್ಭ್ರಶ್ಯತೇ ಮಾನವಾನಾಮ್ |
ಪಿತಸ್ತದಾಚಕ್ಷ್ವ ಯಥಾರ್ಥಯೋಗಂ
ಮಮಾನುಪೂರ್ವ್ಯಾ ಯೇನ ಧರ್ಮಂ ಚರೇಯಮ್ ॥ 5 ॥
ಜನಕನೇ, ಮನುಷ್ಯರ ಆಯುಸ್ಸು ಬಹಳ ವೇಗದಿಂದ ಕಳೆದುಹೋಗುತ್ತಿದೆ. ಅದನ್ನು ತಿಳಿದ ಮನುಷ್ಯನು ತನ್ನ ಶ್ರೇಯಸ್ಸಿಗಾಗಿ ಏನು ಮಾಡಬೇಕು? ಯಾವ ರೀತಿಯಲ್ಲಿ ಧರ್ಮವನ್ನು ನಡೆಸಬೇಕು? ಆ ಧರ್ಮಮಾರ್ಗವನ್ನು, ಅದರಿಂದ ದೊರಕುವ ಫಲವನ್ನು ನನಗೆ ತಿಳಿಸು ಎಂದು ಹೇಳಿದನು.
ಪಿತಾ
ವೇದಾನಧೀತ್ಯ ಬ್ರಹ್ಮಚರ್ಯೇಣ ಪುತ್ರ
ಪುತ್ರಾನಿಚ್ಛೇತ್ ಪಾವನಾರ್ಥಂ ಪಿತೃಣಾಮ್ |
ಅಗ್ನೀನಾಧಾಯ ವಿಧಿವಚ್ಚೇಷ್ಟ್ವಯಜ್ಞೋ
ವನಂ ಪ್ರವಿಶ್ಯಾಥ ಮುನಿರ್ಬುಭೂಷೇತ್ ॥ 6 ॥
ಪಿತಾ ಮಗನೇ, ಮನುಷ್ಯನು ಮೊದಲು ಬ್ರಹ್ಮಚರ್ಯವನ್ನು ನಡೆಸಬೇಕು. ಅನಂತರ ತನ್ನ ಪಿತೃಗಳ ಉದ್ಧಾರಕ್ಕಾಗಿ ಗಾರ್ಹಸ್ಥ್ಯ ಧರ್ಮವನ್ನು ಆಶ್ರಯಿಸಿ ಸಂತತಿಯನ್ನು ಪಡೆಯಬೇಕು. ಅಗ್ನ್ಯಾಧಾನವನ್ನು ಮಾಡಿ ಯಜ್ಞಗಳನ್ನು ವಿಧಿಬದ್ಧವಾಗಿ ನಡೆಸಬೇಕು. ಬಳಿಕ ಮುನಿಯಾಗಿ ವನವನ್ನು ಪ್ರವೇಶಿಸಿ ಶ್ರೇಯಸ್ಸನ್ನು ಸಾಧಿಸಬೇಕು.
ಪುತ್ರಃ
ಏವಮಭ್ಯಾಹತೇ ಲೋಕೇ ಸಮಂತಾತ್ ಪರಿವಾರಿತೇ |
ಅಮೋಘಾಸು ಪತಂತೀಷು ಕಿಂ ಧೀರ ಇವ ಭಾಷಸೇ ॥ 7 ॥
ಪುತ್ರ ಜನಕನೇ, ಹೀಗೇಕೆ ಹೇಳುತ್ತಿರುವೆ? ಲೋಕವೆಲ್ಲಾ ಅನೇಕ ರೀತಿಯಲ್ಲಿ ನಾಶವನ್ನು ಹೊಂದುತ್ತಿದೆ. ಅನರ್ಥದಿಂದ ಆವರಿಸಲ್ಪಟ್ಟಿದೆ. ಅನಾಹುತಗಳಿಂದ ಸೆಳೆಯಲ್ಪಡುತ್ತಿದೆ. ಹೀಗಿರುವಾಗ ಮಹಾಧೀರನಂತೆ ಸುಖವಾಗಿ ಏನೇನೋ ಕಾರ್ಯಗಳನ್ನು ಬೋಧಿಸುತ್ತಿರುವೆಯಲ್ಲ ಎಂದನು.
ಪಿತಾ
ಕಥಮಭ್ಯಾಹತೋ ಲೋಕಃ ಕೇನ ವಾ ಪರಿವಾರಿತಃ |
ಅಮೋಘಾಃ ಕಾಃ ಪತಂತೀಹ ಕಿಂ ನು ಭೀಷಯಸೀವ ಮಾಮ್ ॥ 8 ॥
ಪಿತಾ ಮಗನೇ, ಲೋಕವನ್ನು ಕೊಲ್ಲುತ್ತಿರುವುದು ಯಾವುದು? ಈ ಲೋಕವನ್ನು ಯಾವುದು ಆವರಿಸಿದೆ? ಯಾವುದರಿಂದ ಎಲ್ಲರೂ

ಸೆಳೆತಕ್ಕೆ ತುತ್ತಾಗಿ ಅನಾಹುತಗಳಿಗೆ ತುತ್ತಾಗುತ್ತಿದ್ದಾರೆ? ಇದ್ಯಾವುದೂ ನನಗೆ ತೋರುತ್ತಿಲ್ಲ. ಸುಮ್ಮನೆ ನನ್ನನ್ನು ನೀನು ಏಕೆ ಹೆದರಿಸುತ್ತಿರುವಿ?
ಪುತ್ರಃ
ಮೃತ್ಯುನಾಭ್ಯಾಹತೋ ಲೋಕೋ ಜರಯಾ ಪರಿವಾರಿತಃ |
ಅಹೋರಾತ್ರಾಃ ಪತಂತ್ಯೇತೇ ನನು ಕಸ್ಮಾನ್ನ ಬುದ್ಧ್ಯಸೇ ॥ 9 ॥
ಪುತ್ರ ಜಗತ್ತೆಲ್ಲವೂ ಪ್ರತಿದಿವಸವೂ ಮೃತ್ಯುವಿನಿಂದ ಕೊಲ್ಲಲ್ಪಡುತ್ತಿದೆ. ವೃದ್ಧಾಪ್ಯದಿಂದ ಗ್ರಸ್ತವಾಗಿದೆ. ಹಗಲು-ರಾತ್ರಿಗಳಲ್ಲಿ ಮೂರುವಿಧರಾದ ಜೀವರು ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಪುಣ್ಯ-ಪಾಪಕರ್ಮಗಳನ್ನು ಆಚರಿಸುತ್ತಾ ಕಾಲ ನಿಯಮಕ್ಕೆ ಒಳಪಡುತ್ತಿದ್ದಾರೆ. ಹೀಗಿದ್ದರೂ ಇದು ನಿನಗೆ ತಿಳಿಯದೇ ಹೋಯಿತೆ?
ಯದಾಹಮೇತಜ್ಜಾನಾಮಿ ನ ಮೃತ್ಯುಸ್ತಿಷ್ಠತೀತಿ ಹ |
ಸೋಽಹಂ ಕಥಂ ಪ್ರತೀಕ್ಷಿಷ್ಯೇ ಜಾಲೇನಾಪಿ ಹಿತಶ್ಚರನ್ ॥ 10 ॥
ರಾತ್ರ್ಯಾಂ ರಾತ್ರ್ಯಾಂ ವ್ಯತೀತಾಯಾಮಾಯುರಲ್ಪತರಂ ಯದಾ |
ಗಾಧೋದಕೇ ಮತ್ಸ್ಯ ಇವ ಸುಖಂ ವಿಂದೇತ ಕಸ್ತದಾ |
ತದೈವ ವಂಧ್ಯಂ ದಿವಸಮಿತಿ ವಿದ್ಯಾದ್ ವಿಚಕ್ಷಣಃ ॥ 11 ॥
ಬಲೆಯಲ್ಲಿ ಸಿಕ್ಕಿಬಿದ್ದಂತಿರುವ ನಾನು ಇದಕ್ಕೆಲ್ಲಾ ಹೇಗೆ ಭಯಪಡದಂತೆ ಇರಲಿ. ಒಂದೊಂದು ರಾತ್ರಿಯು ಕಳೆದಂತೆ ಆಯುಸ್ಸು ಸ್ವಲ್ಪಸ್ವಲ್ಪವಾಗಿ ತಗ್ಗಿಸುತ್ತಾ ಬರುತ್ತದೆ.  ಕಳೆದುಹೋಗುವ ಹಗಲು ಹಾಗೆಯೇ ವ್ಯರ್ಥವಾಗಿ ಇರುತ್ತಿರಲು ವಿವೇಕವುಳ್ಳವನು ಯಾವನು ತಾನೇ ಇದನ್ನು ತಿಳಿಯದೇ ಇರುತ್ತಾನೆ? ಮೃತ್ಯುವು ನಿರಂತರ ಮೇಲೆ ಬಿದ್ದು ಬರುತ್ತಿರುವಾಗ ಯಾವ ಮನುಷ್ಯನು ತಾನೇ ತತ್ಕಾಲದ ಸುಖವನ್ನು ನಿರೀಕ್ಷಿಸಬಲ್ಲನು? ಆಳವಿಲ್ಲದ ನೀರಿನಲ್ಲಿ ಜೀವಿಸುವ ಮತ್ಸ್ಯಗಳ ಬದುಕು ಎಷ್ಟು ಅಸ್ಥಿರವೋ, ಮೃತ್ಯುವಿಗೆ ತುತ್ತಾಗುತ್ತಿರುವ ಜೀವರ ಬದುಕೂ ಇಷ್ಟೇ ಅಸ್ಥಿರ. ಜ್ಞಾನಿಯಾದವನು ಬಂಜೆಯಂತಿರುವ ಮೃತ್ಯುಸಂಬಂಧಿ ದಿವಸಗಳನ್ನು ಅರ್ಥಮಾಡಿಕೊಂಡಿರುತ್ತಾನೆ. ಎಲ್ಲ ಜೀವರಿಗೂ ನೂರು ವರ್ಷದ ಆಯುಷ್ಯ ಎಂಬ ನಿಯಮವು ಇಲ್ಲದಿರುವುದರಿಂದ ಪ್ರತಿದಿನವೂ ಮೃತ್ಯುವಿನ ಆಶಂಕೆಯನ್ನು ಮಾಡಲೇಬೇಕಾಗುತ್ತದೆ.
ಯಾಮೇವ ರಾತ್ರಿಂ ಪ್ರಥಮಾಂ ಗರ್ಭೋ ಭಜತಿ ಮಾತರಮ್ |
ತಾಮೇವ ರಾತ್ರಿಂ ಪ್ರಸ್ಥಾತಿ ಮರಣಾಯ ನಿವರ್ತತೇ |
ಯಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ನ ಕಿಂಚಿಚ್ಛುಭಮಾಚರೇತ್ ॥
ಯಾವ ಮೊದಲನೆಯ ರಾತ್ರಿಯಲ್ಲಿ ತಾಯಿಯ ಉದರವನ್ನು ಗರ್ಭವು ಪ್ರವೇಶಿಸುತ್ತದೋ ಅದೇ ರಾತ್ರಿಯೇ ಗರ್ಭಸ್ರಾವಕ್ಕೆ ಕಾರಣೀಭೂತವಾದ ಕರ್ಮವು ಆ ಜೀವನಿಗೆ ಉಂಟಾಗುತ್ತದೆ. ಉತ್ಪತ್ತಿಯನ್ನು ಹೊಂದಿದ ರಾತ್ರಿಯಲ್ಲಿಯೇ ಮರಣಕ್ಕೆ ಬೇಕಾದ ಕರ್ಮವು ಉತ್ಪನ್ನವಾಗುತ್ತದೆ. ಒಂದು ರಾತ್ರಿ ಕಳೆದಾಗ ಆ ದಿನಕ್ಕೆ ಸಂಬಂಧಿಸಿದ ಸತ್ಕರ್ಮದಿಂದಲೂ ವಂಚಿತನಾದಂತೆಯೇ.
ಅನವಾಪ್ತೇಷು ಕಾಮೇಷು ಮೃತ್ಯುರಭ್ಯೇತಿ ಮಾನವಮ್ |
ಪುಷ್ಪಾಣೀವ ವಿಚಿನ್ವಂತಮನ್ಯತ್ರಗತಮಾನಸಮ್ |
ವೃಕೀವೋರಣಮಾಸಾದ್ಯ ಮೃತ್ಯುರಾದಾಯ ಗಚ್ಛತಿ ॥ 13 ॥
ಮನಸ್ಸಿನಲ್ಲಿ ಉತ್ಪನ್ನವಾಗುವ ಅನೇಕ ಕಾಮನೆಗಳನ್ನು ಹೊಂದುವ ಮೊದಲೇ ಮೃತ್ಯುವು ಮಾನವನನ್ನು ಸಮೀಪಿಸಿರುತ್ತದೆ. ಪುಷ್ಪಗಳನ್ನು ಹುಡುಕುತ್ತಿರುವ ವ್ಯಕ್ತಿಯ ಮನಸ್ಸು ಬೇರೆ ಕಡೆ ಲಗ್ನವಾದಾಗ ಅವನಿಗೆ ಒದಗುವ ಆಪತ್ತುಗಳು ತಿಳಿಯದಿರುವಂತೆ ಕಾಮನೆಗಳಲ್ಲಿ ಆಸಕ್ತನಾಗಿರುವ ವ್ಯಕ್ತಿಗೆ ಮೃತ್ಯುವಿನ ಅತಿಕ್ರಮಣವು ಗೊತ್ತಾಗುವುದಿಲ್ಲ. ಋತುಕಾಲದ ಹೆಣ್ಣುಮೇಕೆಯನ್ನು ಹುಡುಕುತ್ತಾ ಹೋಗುವ ಗಂಡುಮೇಕೆಯನ್ನು ಹಿಂದಿನಿಂದ ಬಂದ ತೋಳಗಳು ಥಟ್ಟನೆ ಕಚ್ಚಿಕೊಂಡು ಹೋಗುವಂತೆ, ತನ್ನ ಕರ್ಮಫಲಗಳನ್ನು ಹುಡುಕುತ್ತಾ ಮನಸ್ಸಿನಲ್ಲಿ ಏನನ್ನೋ ಎಣಿಸುತ್ತಿರುವ ಪುರುಷನನ್ನು ಅವನಿಗೆ ತಿಳಿಯದಂತೆ ಮೃತ್ಯುವು ಬಂದು ಎತ್ತಿಕೊಂಡು ಹೋಗುತ್ತದೆ.
ಅದ್ಯೈವ ಕುರು ಯಚ್ಛ್ರೇಯೋ ಮಾ ತ್ವಾ ಕಾಲೋಽತ್ಯಗಾದಯಮ್ |
ಅಕೃತೇಷ್ವೇವ ಕಾರ್ಯೇಷು ಮೃತ್ಯುರ್ವೈ ಸಂಪ್ರಕರ್ಷತಿ ॥ 14 ॥
ಆದ್ದರಿಂದ ಯಾವುದು ಶ್ರೇಯಸ್ಸು ಎಂಬುದಿದೆಯೋ ಅದನ್ನು ಕೂಡಲೇ ಆಚರಿಸಬೇಕು. ಜನಕನೇ, ಕಾಲವು ಈಗಲೇ ನಿನ್ನ ಮೇಲೆ ಬಿದ್ದು ನಿನ್ನನ್ನು ಅತಿಕ್ರಮಿಸುವುದಕ್ಕೆ ತವಕಿಸುತ್ತಿರುವಾಗ ಅದಕ್ಕೆ ಅವಕಾಶವನ್ನು ಕೊಡದೇ ಮೊದಲೇ ಸತ್ಕಾರ್ಯವನ್ನು ನಡೆಸು. ಶ್ರೇಯಃಕಾರ್ಯವನ್ನು ನಡೆಸುವುದಕ್ಕಿಂತ ಮೊದಲೇ ನಿನ್ನನ್ನು ಮೃತ್ಯುವು ಹಿಡಿದುಕೊಂಡು ಹೋಗಬಹುದು.
ಶ್ವಃಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಮ್ |
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ವಾಸ್ಯ ನ ವಾ ಕೃತಮ್ |
ಕೋ ಹಿ ಜಾನಾತಿ ಕಸ್ಯಾದ್ಯ ಮೃತ್ಯುಸೇನಾ ನಿವೇಕ್ಷ್ಯತೇ ॥ 15 ॥
ಆದ್ದರಿಂದ ಮೃತ್ಯುವಿಗೆ ಅವಕಾಶ ನೀಡದಂತೆ ನಾಳೆಯ ಕಾರ್ಯವನ್ನು ಈಗಲೇ ಮುಗಿಸಬೇಕು. ಮಧ್ಯಾಹ್ನದ ಕಾರ್ಯಗಳನ್ನು ಪೂರ್ವಾಹ್ಣದಲ್ಲೇ ಮುಗಿಸಿಬಿಡಬೇಕು. ನೀನು ಕಾರ್ಯಗಳನ್ನು ಮುಗಿಸಿದೆಯೋ ಇಲ್ಲವೋ ಎಂಬುದನ್ನು ಮೃತ್ಯುವು ನಿರೀಕ್ಷಿಸದು. ಯಾವನಿಗೆ ಯಾವಾಗ ಮೃತ್ಯುಕಾಲವು ಎಂಬುದನ್ನು ತಿಳಿಯಬಲ್ಲವರು ಯಾರಿದ್ದಾರೆ?
ಯುವೈವ ಧರ್ಮಶೀಲಃ ಸ್ಯಾದನಿಮಿತ್ತಂ ಹಿ ಜೀವಿತಮ್ |
ಕೃತೇ ಧರ್ಮೇ ಭವೇತ್ ಕೀರ್ತಿರಿಹ ಪ್ರೇತ್ಯ ಚ ವೈ ಸುಖಮ್ ॥ 16 ॥
ಯೌವನದಶೆಯಲ್ಲಿಯೇ ಧರ್ಮಶೀಲನಾಗಬೇಕು. ಜೀವಿತವು ಸ್ಥಿರವಾಗಿರುವುದಿಲ್ಲ. ಧರ್ಮವನ್ನು ಆಚರಿಸಿದರೆ ಇಹಲೋಕದಲ್ಲಿ ಕೀರ್ತಿಯೂ ಪರಲೋಕದಲ್ಲಿ ಸುಖವೂ ಉಂಟಾಗುತ್ತದೆ.

ಮೋಹೇನ ಹಿ ಸಮಾವಿಷ್ಟಃ ಪುತ್ರದಾರಾರ್ಥಮುದ್ಯತಃ |
ಕೃತ್ವಾ ಕಾರ್ಯಮಕಾರ್ಯಂ ವಾ ಪುಷ್ಟಿಮೇಷಾಂ ಪ್ರಯಚ್ಛತಿ ॥ 17 ॥
ಮೋಹವು ಹೆಚ್ಚಿದಷ್ಟು ಮನುಷ್ಯನು ಹೆಂಡತಿ-ಮಕ್ಕಳಿಗಾಗಿ ಕಷ್ಟಪಡುತ್ತಾನೆ. ಮಾಡಬಹುದಾದ, ಮಾಡಬಾರದಾದ ಕಾರ್ಯಗಳನ್ನೆಲ್ಲಾ ಮಾಡಿ ಅವರನ್ನು ಪೋಷಿಸುತ್ತಾನೆ.
ತಂ ಪುತ್ರಪಶುಸಮ್ಮತ್ತಂ ವ್ಯಾಸಕ್ತಮನಸಂ ನರಮ್ |
ಸುಪ್ತಂ ವ್ಯಾಘ್ರಂ ಮಹೌಘೋ ವಾ ಮೃತ್ಯುರಾದಾಯ ಗಚ್ಛತಿ ॥ 18 ॥
ಹೆಂಡತಿ-ಮಕ್ಕಳು-ಸಂಪತ್ತು ಇವುಗಳಲ್ಲೇ ಮೈಮರೆತ ಮನುಷ್ಯನನ್ನು ನಿದ್ದೆ ಮಾಡುವ ಮೃಗವನ್ನು ಹುಲಿಯು ಎತ್ತಿಕೊಂಡು ಹೋಗುವಂತೆ ಮೃತ್ಯುವು ಅಪಹರಿಸಿಕೊಂಡು ಹೋಗುತ್ತದೆ.
ಸಂಚಿನ್ವಾನಕಮೇವೈಕಂ ಕಾಮಾನಾಮವಿತೃಪ್ತಕಮ್ |
ವ್ಯಾಘ್ರಃ ಪಶುಮಿವಾದಾಯ ಮೃತ್ಯುರಾದಾಯ ಗಚ್ಛತಿ ॥ 19 ॥
ಅನೇಕ ಬಯಕೆಗಳನ್ನು ಹೊಂದಬೇಕೆಂದು ಅವಿತೃಪ್ತನಾಗಿ ಕಾಮನೆಗಳ ಬೆನ್ನನ್ನು ಹಿಡಿದಿರುವಾಗಲೇ ಹುಲಿಯು ಪಶುವನ್ನು ಹಿಡಿಯುವಂತೆ ಮೃತ್ಯುವು ಮನುಷ್ಯನನ್ನು ಎತ್ತಿಕೊಂಡು ಹೋಗುತ್ತದೆ.
ಇದಂ ಕೃತಮಿದಂ ಕಾರ್ಯಮಿದಮನ್ಯತ್ಕೃತಾಕೃತಮ್ |
ಏವಮೀಹಾಸುಖಾಸಕ್ತಂ ಕೃತಾಂತಃ ಕುರುತೇ ವಶೇ ॥ 20 ॥
ಈ ಕರ್ಮವನ್ನು ನಾನು ಮುಗಿಸಿದೆನು, ಇನ್ನು ಮುಂದೆ ಇದನ್ನು ಮಾಡಬೇಕು, ಈ ಕಾರ್ಯವು ಅರ್ಧದಲ್ಲಿ ನಿಂತಿದೆ ಎಂಬುದಾಗಿ ವಿಧವಿಧವಾಗಿ ಯೋಚಿಸುತ್ತಾ ಸುಖಗಳನ್ನು ಮನಸ್ಸಿನಲ್ಲಿ ಗುಣಿಸುತ್ತಿರುವಾಗಲೇ ಯಮನು ಬಂದು ಆ ಮನುಷ್ಯನನ್ನು ತನ್ನ ವಶವಾಗಿಸಿಕೊಳ್ಳುತ್ತಾನೆ.
ಕೃತಾನಾಂ ಫಲಮಪ್ರಾಪ್ತಂ ಕರ್ಮಣಾಂ ಫಲಸಂಗಿನಮ್ |
ಕ್ಷೇತ್ರಾಪಣಗೃಹಾಸಕ್ತಂ ಮೃತ್ಯುರಾದಾಯ ಗಚ್ಛತಿ ॥ 21 ॥
ಮನುಷ್ಯನು ತನ್ನ ವೃತ್ತಿಯನ್ನು ಆಶ್ರಯಿಸಿ ಫಲವನ್ನುಣ್ಣುತ್ತಲೋ, ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಲೋ, ಮನೆಯಲ್ಲಿ ಸುಖವಾಗಿ ಕಾಲಕಳೆಯುತ್ತಲೋ ಇರುವಾಗ ಅವನ ಕಾರ್ಯಕ್ಕೆ ಫಲವುಂಟಾಗುವುದಕ್ಕಿಂತ ಮೊದಲೇ ಕರ್ಮದ ಫಲಗಳಲ್ಲಿ ಆಸಕ್ತನಾದ ಅವನನ್ನು ಮೃತ್ಯುವು ಸ್ವೀಕರಿಸಿ ಹೊರಟು ಹೋಗುತ್ತದೆ.
ದುರ್ಬಲಂ ಬಲವಂತಂ ಚ ಶೂರಂ ಭೀರುಂ ಜಡಂ ಕವಿಮ್ |
ಅಪ್ರಾಪ್ತಸರ್ವಕಾಮಾರ್ಥಂ ಮೃತ್ಯುರಾದಾಯ ಗಚ್ಛತಿ ॥ 22 ॥
ವ್ಯಕ್ತಿಯು ದುರ್ಬಲನಾಗಿರಲಿ, ಬಲಾಢ್ಯನಾಗಿರಲಿ, ಶೂರನಾಗಿರಲಿ, ಭಯಶೀಲನಾಗಿರಲಿ, ಜಡನಾಗಿರಲಿ, ದೂರದೃಷ್ಟಿಯುಳ್ಳವನಾಗಿರಲಿ ಎಂತಹವನನ್ನೂ ಮೃತ್ಯುವು ಬಿಡುವುದಿಲ್ಲ. ಅವನ ಕೋರಿಕೆಗಳು, ಕಾರ್ಯಗಳು ಮುಗಿಯುವ ಮೊದಲೇ ಮೃತ್ಯುವು ಎಳೆದುಕೊಂಡು ಹೋಗುತ್ತದೆ.
ಮೃತ್ಯುರ್ಜರಾ ಚ ವ್ಯಾಧಿಶ್ಚ ದುಃಖಂ ಚಾನೇಕಕಾರಣಮ್ |
ಅನುಷಕ್ತಂ ಯದಾ ದೇಹೇ ಕಿಂ ಸ್ವಸ್ಥ ಇವ ತಿಷ್ಠಸಿ ॥ 23 ॥
ಜರಾ (ಮುಪ್ಪು), ಮೃತ್ಯು, ವ್ಯಾಧಿ, ಅನೇಕ ಕಾರಣಗಳಿಂದ ಉಂಟಾಗುವ ದುಃಖಗಳು ಇವೆಲ್ಲವೂ ನಿನ್ನ ದೇಹದಲ್ಲಿಯೇ ನೆಲೆಸಿರುವಾಗ ಹೇಗೆ ತಾನೆ ಸ್ವಸ್ಥಾತ್ಮನಂತೆ ನೀನು ಇರುತ್ತಿರುವಿ?
ಇದಂ ಮೇ ಸ್ಯಾದಿದಂ ಮೇ ಸ್ಯಾದಿತ್ಯೇವಂಮನಸೋ ನರಾನ್ |
ಅನವಾಪ್ತೇಷು ಕಾಮೇಷು ಕೃತಾಂತಃ ಕುರುತೇ ವಶೇ ॥ 24 ॥
ಈ ವಸ್ತುವು ನನಗೆ ಲಭಿಸಲಿ, ಇದು ನನ್ನ ವಶವಾಗಲಿ ಎಂದು ಮನುಷ್ಯನು ಮನಸ್ಸಿನಲ್ಲಿ ಸಂಕಲ್ಪಿಸುತ್ತಿರುವಾಗಲೇ ಆ ಕಾಮನೆಗಳು ಪೂರ್ಣವಾಗುವ ಮುನ್ನವೇ ಮನುಷ್ಯನು ಯಮನ ವಶನಾಗುತ್ತಾನೆ.
ಜಾತಮೇವಾಂತಕೋಽಂತಾಯ ಜರಾ ಚಾನ್ವೇತಿ ದೇಹಿನಮ್ |
ಅನುಷಕ್ತಾ ದ್ವಯೇನೈತೇ ಭಾವಾಃ ಸ್ಥಾವರಜಂಗಮಾಃ ॥ 25 ॥
ಪ್ರಾಣಿಯು ಹುಟ್ಟುವಾಗಲೇ ಆ ಜೀವವನ್ನು ಕೊನೆಗಾಣಿಸುವುದಕ್ಕಾಗಿ ಜರಾ-ಮರಣಗಳೆರಡು ಕಣ್ಬಿಟ್ಟು ಕಾದಿರುತ್ತವೆ. ಸ್ಥಾವರ-ಜಂಗಮವಿರುವ ಎಲ್ಲಾ ವಸ್ತುಗಳೂ ಜರಾ-ಮರಣಗಳಿಗೆ ಗುರಿಯಾಗಿಯೇ ಇರುತ್ತವೆ.
ಮೃತ್ಯೋರ್ವಾ ಗೃಹಮೇವೈತದ್ಯಾ ಗ್ರಾಮೇ ವಸತೋ ರತಿಃ |
ದೇವಾನಾಮೇಷ ವೈ ಗೋಷ್ಠೋ ಯದರಣ್ಯಮಿತಿ ಶ್ರುತಿಃ ॥ 26 ॥
ಗ್ರಾಮಗಳಲ್ಲಿ, ಪಟ್ಟಣಗಳಲ್ಲಿ ವಾಸಮಾಡಿರಬೇಕು. ಬಂಧು-ಬಾಂಧವರನ್ನೇ ಕೂಡಿಕೊಂಡಿರಬೇಕು ಎಂಬ ಆಸಕ್ತಿಯು ಮೃತ್ಯುವಿಗೆ ಮುಖ ಎನಿಸಿದೆ. ಇಂದ್ರಿಯಗಳೆಂಬ ಹಸುಗಳನ್ನು ಕಟ್ಟಿಡುವ ದನದ ಕೊಟ್ಟಿಗೆಯಂತಿರುವ ಈ ದೇಹವು ದೇವತೆಗಳ ಅರಣ್ಯವೆಂಬುದಾಗಿ ಶ್ರುತಿಯು ಹೇಳುತ್ತಿದೆ.
ನಿಬಂಧನೀ ರಜ್ಜುರೇಷಾ ಯಾ ಗ್ರಾಮೇ ವಸತೋ ರತಿಃ |
ಉತ್ತ್ವೈನಾಂ ಸುಕೃತೋ ಯಾಂತಿ ನೈನಾಂ ಉಂದಂತಿ ದುಷ್ಕೃತಃ ॥ 27 ॥
ಗ್ರಾಮ-ನಗರಗಳಲ್ಲಿ ಗುಂಪುಗುಂಪಾಗಿ ವಾಸಮಾಡಬೇಕೆಂಬ ಆಸೆಯೇ ಮನುಷ್ಯನಿಗೆ ಹಸುವಿನಂತೆ ಕಟ್ಟುವ ಹಗ್ಗವೆನಿಸಿದೆ. ಪುಣ್ಯಾತ್ಮರು ಇಂತಹ ಬಲವಾದ ಕಟ್ಟುಗಳನ್ನು ಕಿತ್ತುಕೊಂಡು ಸಾಗುತ್ತಾರೆ. ಪಾಪಿಗಳು ಈ ಬಂಧನದಲ್ಲಿಯೇ ಸಿಕ್ಕಿ ಬೀಳುತ್ತಾರೆ.
ನ ಹಿಂಸಯತಿ ಯಃ ಪ್ರಾಣಾನ್ಮನೋವಾಕ್ಕಾಯಹೇತುಭಿಃ |
ಜೀವಿತಾರ್ಥಾಪನಯನೈಃ ಕರ್ಮಭಿರ್ನ ಸ ಬಧ್ಯತೇ ॥ 28 ॥

ಮಾತು-ಮನಸ್ಸು-ಕೃತಿಗಳಿಂದ ಪ್ರಾಣಿಹಿಂಸೆಯನ್ನು ಮಾಡದಿರುವ ವ್ಯಕ್ತಿಯು ಪ್ರಾಣನಾಶಕಗಳಾದ ಯಾವುದೇ ವಸ್ತುಗಳಿಂದಲೂ, ವ್ಯಕ್ತಿಗಳಿಂದಲೂ ಹಿಂಸೆಯನ್ನು ಅನುಭವಿಸುವುದಿಲ್ಲ.

ನ ಮೃತ್ಯುಸೇನಾಮಾಯಾಂತೀಂ ಜಾತು ಕಶ್ಚಿತ್ ಪ್ರಬಾಧತೇ |
ಋತೇ ಸತ್ಯಮಸಂತ್ಯಾಜ್ಯಂ ಸತ್ಯೇ ಹ್ಯಮೃತಮಾಶ್ರಿತಮ್ ॥ 29 ॥

ಮೃತ್ಯುವಿನ ಸೈನ್ಯಗಳೆನಿಸಿಕೊಂಡ ಜರಾ-ವ್ಯಾಧಿ ಎಂಬವು ಪುರುಷರ ಮೇಲೆ ಎರಗುತ್ತಿರುವಾಗ ತತ್ತ್ವಜ್ಞಾನವೆಂಬ ಸತ್ಯವೊಂದನ್ನು ಬಿಟ್ಟು ಬೇರೆ ಯಾವುದೂ ಅವುಗಳ ವಿರುದ್ಧ ಎದುರಿಸಿ ನಿಲ್ಲಲಾರದು. ಸತ್ಯದಲ್ಲಿಯೇ ಅಮೃತವು ನೆಲೆಸಿರುವುದು.

ತಸ್ಮಾತ್ ಸತ್ಯವ್ರತಾಚಾರಃ ಸತ್ಯಯೋಗಪರಾಯಣಃ |
ಸತ್ಯಾರಾಮಃ ಸಮೋ ದಾಂತಃ ಸತ್ಯೇನೈವಾಂತಕಂ ಜಯೇತ್ ॥ 30 ॥|

ಆದ್ದರಿಂದ ಸತ್ಯವೆಂಬ ವ್ರತವನ್ನೇ ಆಶ್ರಯಿಸಬೇಕು. ಸತ್ಯವನ್ನು ಎಂದಿಗೂ ಮೀರಿ ವರ್ತಿಸಬಾರದು. ಸತ್ಯವನ್ನೇ ವೇದವೆಂದು ಆಧರಿಸಬೇಕು. ಹೀಗೆ ಸತ್ಯವನ್ನೇ ಆಧರಿಸುತ್ತಾ ದಮ ಎಂಬ ಇಂದ್ರಿಯನಿಗ್ರಹವನ್ನು ಸಾಧಿಸಿದವನು ಈ ಸತ್ಯದ ಬಲದಿಂದಲೇ ಅಂತಕ (ಯಮ)ನನ್ನು ಜಯಿಸುತ್ತಾನೆ.

ಅಮೃತಂ ಚೈವ ಮೃತ್ಯುಶ್ಚ ದ್ವಯಂ ದೇಹೇ ಪ್ರತಿಷ್ಠಿತಮ್ |
ಮೃತ್ಯುಮಾಪದ್ಯತೇ ಮೋಹಾತ್ ಸತ್ಯೇನಾಪದ್ಯತೇಽಮೃತಮ್ ॥ 31 ॥

ಮೃತ್ಯು-ಅಮೃತ ಎಂಬ ಎರಡು ಈ ದೇಹದಲ್ಲಿ ನೆಲೆಗೊಂಡಿವೆ. ಮೋಹದಿಂದ ಮೃತ್ಯುವು ತಲೆದೋರುತ್ತದೆ. ಸತ್ಯದಿಂದ ಅಮೃತವು ಗೋಚರಿಸುತ್ತದೆ.

ಸೋಽಹಂ ಹ್ಯಹಿಂಸ್ರಃ ಸತ್ಯಾರ್ಥೀ ಕಾಮಕ್ರೋಧಬಹಿಷ್ಕೃತಃ |
ಸಮದುಃಖಸುಖಃ ಕ್ಷೇಮೀ ಮೃತ್ಯುಂ ಹಾಸ್ಯಾಮ್ಯಮರ್ಷವತ್ ॥ 32 ॥

ಜನಕನೇ, ನಾನು ಎಲ್ಲರಂತೆ ಮೃತ್ಯುವಿಗೆ ಗುರಿ ಎನಿಸಿದ್ದರೂ ಕಾಮ-ಕ್ರೋಧಗಳನ್ನು ಜಯಿಸಿ, ಹಿಂಸೆಯನ್ನು ತೊರೆದು, ಸತ್ಯವನ್ನೇ ಹಿಡಿದು, ಸುಖ-ದುಃಖಗಳೆರಡನ್ನೂ ಸಮವಾಗಿ ನೋಡುತ್ತಾ ಮರಣವಿಲ್ಲದ ದೇವನಂತೆ ನಿರ್ಭಯವಾಗಿ ಸಂಚರಿಸುತ್ತಿದ್ದೇನೆ.

ಶಾಂತಿಯಜ್ಞರತೋ ದಾಂತೋ ಬ್ರಹ್ಮಯಜ್ಞೇ ಸ್ಥಿತೋ ಮುನಿಃ |
ವಾಙ್ಮನಃಕರ್ಮಯಜ್ಞಶ್ಚ ಭವಿಷ್ಯಾಮ್ಯುದಗಾಯನೇ ॥ 33 ॥

ಉತ್ತರಾಯಣ ಎಂಬ ಮುಕ್ತಿಮಾರ್ಗಕ್ಕಾಗಿ ನಾನು ದಮವನ್ನು ಸ್ವೀಕರಿಸಿ, ಶಾಂತಿಯಜ್ಞ ಎಂಬ ನಿವೃತ್ತಿಮಾರ್ಗವನ್ನು ಅನುಸರಿಸಿ, ಬ್ರಹ್ಮಯಜ್ಞ ಎಂಬ ವೇದಾಂತ ತತ್ತ್ವವನ್ನು ಅವಲಂಬಿಸಿದ್ದೇನೆ. ಮಾತು, ಮನಸ್ಸು, ಕೃತಿಗಳಿಂದ ಆಚರಿಸುತ್ತಾ ಉತ್ತರಾಯಣವನ್ನು ನಿರೀಕ್ಷಿಸುತ್ತಿದ್ದೇನೆ.

ಪಶುಯಜ್ಞೈಃ ಕಥಂ ಹಿಂಸ್ರೈರ್ಮಾದೃಶೋ ಯಷ್ಟುಮರ್ಹತಿ |
ಅಂತವದ್ಭಿರುತ ಪ್ರಾಜ್ಞಃ ಕ್ಷತ್ರಯಜ್ಞೈಃ ಪಿಶಾಚವತ್ ॥ 34 ॥

ಹಿಂಸಾಸ್ವಭಾವವುಳ್ಳ ಪಶುಯಜ್ಞದಿಂದಾಗಲೀ, ಅಶಾಶ್ವತಗಳಾದ, ಪಿಶಾಚಿಗಳಿಗೆ ಯೋಗ್ಯವಾದ ಕ್ಷತ್ರಯಜ್ಞದಿಂದಾಗಲೀ ನನ್ನಂತಹ ವ್ಯಕ್ತಿಯು ಕಾರ್ಯಗಳನ್ನು ಮಾಡಲು ಮನಸ್ಸು ಮಾಡನು.

ಯಸ್ಯ ವಾಙ್ಮನಸೀ ಸ್ಯಾತಾಂ ಸಮ್ಯಕ್ ಪ್ರಣಿಹಿತೇ ಸದಾ |
ತಪಸ್ತ್ಯಾಗಶ್ಚ ಯೋಗಶ್ಚ ಸ ವೈ ಸರ್ವಮವಾಪ್ನುಯಾತ್ ॥ 35 ॥

ಯಾರ ಮಾತು, ಮನಸ್ಸುಗಳು ದೃಢವಾಗಿ ಭಗವಂತನಲ್ಲಿ ಏಕಾಗ್ರಗೊಂಡಿರುತ್ತವೆಯೋ ಅಂತಹ ತಪಸ್ಸು, ತ್ಯಾಗ, ಯೋಗಗಳಿಂದ ಕೂಡಿದ ವ್ಯಕ್ತಿಯು ಎಲ್ಲ ವಿಧವಾದ ಫಲಗಳನ್ನು ಹೊಂದಲು ಅರ್ಹನಾಗುತ್ತಾನೆ.

ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ವಿದ್ಯಾಸಮಂ ಬಲಮ್ |
ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್ ॥ 36 ॥

ವಿದ್ಯೆಗೆ ಸಮಾನವಾದ ಕಣ್ಣಿರುವುದಿಲ್ಲ. ವಿದ್ಯೆಗೆ ಸಮಾನವಾದ ಬಲವಿಲ್ಲ. ಆಸೆಗೆ ಸಮಾನವಾದ ದುಃಖವಿಲ್ಲ. ತ್ಯಾಗಕ್ಕೆ ಸಮಾನವಾದ ಸುಖವಿರುವುದಿಲ್ಲ.

ಆತ್ಮನ್ಯೇವಾತ್ಮನಾ ಜಾತ ಆತ್ಮನಿಷ್ಠೋಽಪ್ರಜೋಽಪಿ ವಾ |
ಆತ್ಮನ್ಯೇವ ಭವಿಷ್ಯಾಮಿ ನ ಮಾಂ ತಾರಯತಿ ಪ್ರಜಾ ॥ 37 ॥

ಜೀವಾತ್ಮನು ಪರಮಾತ್ಮನ ದೆಸೆಯಿಂದಲೇ ಜನ್ಮವನ್ನು ತಾಳಿರುತ್ತಾನೆ. ಸಂತಾನಹೀನನಾಗಿದ್ದರೂ ಪರಮಾತ್ಮನ ಅನುಗ್ರಹಕ್ಕೆ ಭಾಗಿಯಾಗುತ್ತಾನೆ. ಪ್ರಳಯ ಕಾಲದಲ್ಲಿಯೂ ಪರಮಾತ್ಮನನ್ನೇ ಹೊಂದುತ್ತಾನೆ. ಬಾಹ್ಯವಾದ ಪ್ರಜೆಗಳು ಪರಮಾತ್ಮನಲ್ಲಿ ಆಸಕ್ತನಾದ ವ್ಯಕ್ತಿಯನ್ನು ಉದ್ಧರಿಸಲಾರರು.

ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ
ಯಥೈಕತಾ ಸಮತಾ ಸತ್ಯತಾ ಚ |
ಶೀಲೇ ಸ್ಥಿತಿರ್ದಂಡನಿಧಾನಮಾರ್ಜವಂ
ತತಸ್ತತಶ್ಚೋಪರಮಃ ಕ್ರಿಯಾಭ್ಯಃ ॥ 38 ॥

ಬ್ರಾಹ್ಮಣನಿಗೆ ಏಕಾಂತವಾಸ, ಎಲ್ಲದರಲ್ಲಿಯೂ ಸಮದೃಷ್ಟಿ, ಸತ್ಯ, ಶೀಲ, ಮರ್ಯಾದೆ, ಅಹಿಂಸೆ, ಋಜುತ್ವ, ಕರ್ಮದಲ್ಲಿ ಉಪರಮ (ಅಸಕ್ತಿ), ಇವುಗಳೇ ಮುಖ್ಯವಾದ ಧನ ಎನಿಸಿವೆ. ಇದಕ್ಕೆ ಸಮಾನವಾದ ಧನವು ಇನ್ನೊಂದು ಇರುವುದಿಲ್ಲ.

ಕಿಂ ತೇ ಧನೈರ್ಬಾಂಧವೈರ್ವಾಪಿ ಕಿಂ ತೇ
ಕಿಂ ತೇ ದಾರೈರ್ಬ್ರಾಹ್ಮಣ ಯೋ ಮರಿಷ್ಯಸಿ |
ಆತ್ಮಾನಮನ್ವಿಚ್ಛ ಗುಹಾಂ ಪ್ರವಿಷ್ಟಂ

ಪಿತಾಮಹಸ್ತೇ ಕ್ವ ಗತಃ ಪಿತಾ ಚ ॥ 39 ॥
ಎಂದಿಗಾದರೂ ಒಮ್ಮೆ ಸಾಯುವ ನಿನಗೆ ಧನದಿಂದಾಗಲೀ, ಬಂಧುಗಳಿಂದಾಗಲೀ, ಭಾರ್ಯೆಯರಿಂದಾಗಲೀ ಏನು ಪ್ರಯೋಜನ? ಹೃದಯಗುಹೆಯಲ್ಲಿರುವ ಪರಮಾತ್ಮನನ್ನು ಧ್ಯಾನಿಸು. ನಿನ್ನ ತಂದೆಯಾಗಲೀ, ತಾತನಾಗಲೀ, ಮುತ್ತಾತನಾಗಲೀ ಈಗ ಎಲ್ಲಿದ್ದಾರೆಂದು ತಿಳಿದಿರುವೆಯಾ? ಎಂದನು.
ಭೀಷ್ಮಃ
ಪುತ್ರಸ್ಯೈತದ್ವಚಃ ಶ್ರುತ್ವಾ ತಥಾಕಾರ್ಷೀತ್ ಪಿತಾ ನೃಪ |
ತಥಾ ತ್ವಮಪಿ ವರ್ತಸ್ವ ಸತ್ಯಧರ್ಮಪರಾಯಣಃ ॥ 40 ॥
ಭೀಷ್ಮ ಧರ್ಮರಾಜನೇ, ಮಗನು ಹೇಳಿದ ಈ ಮಾತನ್ನು ಕೇಳಿ ತಂದೆಯೂ ಅವನ ದಾರಿಯನ್ನು ಹಿಡಿದು ನೆಮ್ಮದಿಯಿಂದ ಇದ್ದನು. ನೀನು ಅವನಂತೆ ಸತ್ಯ-ಧರ್ಮಗಳಲ್ಲಿ ಆಸಕ್ತನಾಗಿ ಸತ್ಯ-ಧರ್ಮಗಳ ಮಾರ್ಗವನ್ನೇ ಅನುಸರಿಸು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ದಾರಿದ್ರ್ಯವು ಶ್ರೇಯಸ್ಸಿಗೆ,
ಐಶ್ವರ್ಯವು ಅನರ್ಥಕ್ಕೆ ಕಾರಣವೆಂಬುದನ್ನು ನಿರೂಪಿಸಲು
ಶಮ್ಯಾಕಗೀತೆಯನ್ನು ನಿರೂಪಿಸಿದುದು.
ಯುಧಿಷ್ಠಿರಃ
ಧನಿನೋ ವಾಧನಾ ಯೇ ಚ ವರ್ತಯಂತಿ ಸ್ವತಂತ್ರಿಣಃ |
ಸುಖದುಃಖಾಗಮಸ್ತೇಷಾಂ ಕಃ ಕಥಂ ವಾ ಪಿತಾಮಹ ॥ 1 ॥
ಯುಧಿಷ್ಠಿರ ಪಿತಾಮಹರೇ, ಧನರಹಿತರೂ ಧನಾಢ್ಯರೂ ತಮಗೆ ಸಿಕ್ಕ ಸ್ಥಿತಿಯಲ್ಲಿ ಬದುಕನ್ನು ನಡೆಸುತ್ತಿದ್ದಾರೆ. ಅವರಿಗೆ ಸುಖ-ದುಃಖಗಳು ಬರುವ ಕಾರಣವೇನು? ಆ ಸುಖ-ದುಃಖಗಳು ಎಂತಹವುಗಳು ಎಂಬುದನ್ನು ತಿಳಿಸಿರಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶಮ್ಯಾಕೇನ ವಿಮುಕ್ತೇನ ಗೀತಂ ಶಾಂತಿಗತೇನ ಹ ॥ 2 ॥
ಭೀಷ್ಮ ಯುಧಿಷ್ಠಿರನೇ, ಇದೇ ವಿಷಯದಲ್ಲಿ ಶಮ್ಯಾಕನೆಂಬುವನು ಶಾಂತಿ- ಮಾರ್ಗದಿಂದ ಮೋಕ್ಷವನ್ನು ಪಡೆದ ಇತಿಹಾಸವನ್ನು ಹಿಂದಿನವರು ಉದಾಹರಿಸುತ್ತಾರೆ.
ಅಬ್ರವೀನ್ಮಾಂ ಪುರಾ ಕಶ್ಚಿದ್ ಬ್ರಾಹ್ಮಣಸ್ತ್ಯಾಗಮಾಸ್ಥಿತಃ |
ಕ್ಲಿಶ್ಯಮಾನಃ ಕುದಾರೇಣ ಕುಚೈಲೇನ ಬುಭುಕ್ಷಯಾ ॥ 3 ॥
ನನಗೆ ಅವರು ಹೇಳಿದಂತೆ ನಿನಗೆ ತಿಳಿಸುತ್ತೇನೆ. ಹಿಂದೆ ಶಮ್ಯಾಕನೆಂಬ ಬ್ರಾಹ್ಮಣನೊಬ್ಬನಿದ್ದನು. ಬಡತನದಿಂದ ಅವನು ಯಾವ ವಿಧವಾದ ಸುಖವನ್ನೂ ಹೊಂದಿರಲಿಲ್ಲ. ಕೈಹಿಡಿದ ಹೆಂಡತಿಯೂ ಕೆಟ್ಟವಳಾಗಿದ್ದಳು. ಉಡಲು ವಸ್ತ್ರವಿಲ್ಲ, ತಿನ್ನಲು ಅನ್ನವಿಲ್ಲ. ಇದರಿಂದ ಬಹುದುಃಖಿತನಾಗಿದ್ದನು.
ಉತ್ಪನ್ನಮಿಹ ಲೋಕೇ ವೈ ಜನ್ಮಪ್ರಭೃತಿ ಮಾನವಮ್ |
ವಿವಿಧಾನ್ಯುಪವರ್ತಂತೇ ದುಃಖಾನಿ ಚ ಸುಖಾನಿ ಚ ॥ 4 ॥
ಇದರಿಂದ ಅವನು ಹೀಗೆ ಚಿಂತಿಸಿದನು- ಭೂಮಿಯಲ್ಲಿ ಹುಟ್ಟಿದ ಮಾನವನಿಗೆ ಹಲವು ಬಗೆಯ ಸುಖ-ದುಃಖಗಳು ಹುಟ್ಟಿನಿಂದಲೇ ಬರುತ್ತಿರುತ್ತವೆ. ಇದಕ್ಕೆ ದೈವವು ಕಾರಣ.
ತಯೋರೇಕತರೇ ಮಾರ್ಗೇ ಯದ್ಯೇನಮಭಿಸಂನಯೇತ್ |
ನ ಸುಖಂ ಪ್ರಾಪ್ಯ ಸಂಹೃಷ್ಯೇನ್ನ ದುಃಖಂ ಪ್ರಾಪ್ಯ ಸಂಜ್ವರೇತ್ ॥ 5 ॥
ಈ ಸುಖ-ದುಃಖಗಳ ಮಾರ್ಗಗಳನ್ನು ಅಭ್ಯಸಿಕೊಂಡಾಗ ಸುಖದಿಂದ ಸಂತೋಷವು, ದುಃಖದಿಂದ ವ್ಯಸನವು ಉಂಟಾಗುವುದಿಲ್ಲ.
ನ ವೈ ಚರಸಿ ಯಚ್ಛ್ರೇಯ ಆತ್ಮನೋ ವಾ ಯದೀಹಸೇ |
ಅಕಾಮಾತ್ಮಾಪಿ ಹಿ ಸದಾ ಧುರಮುದ್ಯಮ್ಯ ಚೈವ ಹಿ ॥ 6 ॥
ಮನುಷ್ಯನು ಒಂದು ದೊಡ್ಡ ಮೋಹದ ಭಾರವನ್ನು ಹೊತ್ತುಕೊಂಡು ಯಾವಾಗಲೂ ಸಂಚರಿಸುತ್ತಾನೆ. ಮನಸ್ಸಿನಲ್ಲಿ ಕಾಮವಿಲ್ಲದಿದ್ದರೂ ಈ ಮೋಹದ ಬಾಧೆಯು ಬಾಧಿಸುತ್ತದೆ. ಶ್ರೇಯಸ್ಸಿನ ದಾರಿಯನ್ನು ಹುಡುಕುವುದಿದ್ದಲ್ಲಿ ನಿನ್ನ ಮನಸ್ಸನ್ನು ನಿಯಮಿಸಬಾರದೇಕೆ?
ಅಕಿಂಚನಃ ಪರಿಪತನ್ ಸುಖಮಾಸ್ವಾದಯಿಷ್ಯಸಿ |
ಅಕಿಂಚನಃ ಸುಖಂ ಶೇತೇ ಸಮುತ್ತಿಷ್ಠತಿ ಚೈವ ಹಿ ॥ 7 ॥
ದರಿದ್ರನು ಯಾವುದೇ ಚಿಂತೆಗಳಿಲ್ಲದೆ ಸುಖವಾಗಿ ನಿದ್ರಿಸುತ್ತಾನೆ. ಸಿಕ್ಕಿದ್ದನ್ನು ಸುಖದಿಂದ ಆಸ್ವಾದಿಸುತ್ತಾನೆ. ಸುಖವಾಗಿಯೇ ಎಚ್ಚರಗೊಳ್ಳುತ್ತಾನೆ.
ಆಕಿಂಚನ್ಯಂ ಸುಖಂ ಲೋಕೇ ಪಥ್ಯಂ ಶಿವಮನಾಮಯಮ್ |
ಅನಮಿತ್ರಮಥೋ ಹ್ಯೇತದ್ದುರ್ಲಭಂ ಸುಲಭಂ ಸತಾಮ್ ॥ 8 ॥

ಅಕಿಂಚನತ್ವವು ಲೋಕದಲ್ಲಿ ಉತ್ತಮ ಸುಖವೆನಿಸಿದೆ. ಅದೇ ಹಿತಕರವು, ಅದೇ ಮಂಗಳಕರವೂ, ಅದರಲ್ಲಿ ಯಾವ ಆಧಿ-ವ್ಯಾಧಿಗಳಿಗೆ ಅವಕಾಶವಿರುವುದಿಲ್ಲ. ಶತ್ರುರಹಿತವಾದ ಈ ಸುಲಭಮಾರ್ಗವು ಸುದುರ್ಲಭವು. ನಿಷ್ಕಾಮಿಗಳಿಗೆ ಮಾತ್ರ ಇದು ಸುಲಭವು.
ಅಕಿಂಚನಸ್ಯ ಶುದ್ಧಸ್ಯ ಉಪಪನ್ನಸ್ಯ ಸರ್ವಶಃ |
ಅವೇಕ್ಷಮಾಣಸ್ತ್ರೀಂಲ್ಲೋಕಾನ್ನ ತುಲ್ಯಮುಪಲಕ್ಷಯೇ ॥ 9 ॥
ನಾನು ಅಂತಹ ಅಕಿಂಚನನೂ, ಶುದ್ಧನೂ, ವಿಷಯಸುಖಗಳನ್ನು ಪರಿತ್ಯಾಗ ಮಾಡಿದವನು ಆದ ಮನುಷ್ಯನಿಗೆ ಸಮಾನವಾದ ಸುಖಿಗಳನ್ನು ಇಲ್ಲಿಯವರೆಗೆ ಮೂರು ಲೋಕದಲ್ಲೂ ನೋಡಲಿಲ್ಲ.
ಆಕಿಂಚನ್ಯಂ ಚ ರಾಜ್ಯಂ ಚ ತುಲಯಾ ಸಮತೋಲಯಮ್ |
ಅತ್ಯರಿಚ್ಯತ ದಾರಿದ್ರ್ಯಂ ರಾಜ್ಯಾದಪಿ ಗುಣಾಧಿಕಮ್ ॥ 10 ॥
ನಾನು ತಕ್ಕಡಿಯಲ್ಲಿ ಒಂದುಕಡೆ ಅಕಿಂಚನತ್ವವನ್ನು ಮತ್ತೊಂದು ಕಡೆ ರಾಜ್ಯವನ್ನು ತೂಗಿ ನೋಡಿದೆನು. ರಾಜ್ಯಕ್ಕಿಂತಲೂ ಅಕಿಂಚನತ್ವದ ಭಾಗವೇ ಅನೇಕ ವಿಧದಲ್ಲಿ ಉನ್ನತವಾಗಿ ವಿಶೇಷ ಗುಣಯುಕ್ತವಾಗಿದೆ ಎಂದು ಬೌದ್ಧಿಕವಾಗಿ ತೂಗಿ ನೋಡಿದಾಗ ನನಗೆ ತಿಳಿಯಿತು.
ಆಕಿಂಚನ್ಯೇ ಚ ರಾಜ್ಯೇ ಚ ವಿಶೇಷಃ ಸುಮಹಾನಯಮ್ |
ನಿತ್ಯೋದ್ವಿಗ್ನೋ ಹಿ ಧನವಾನ್ ಮೃತ್ಯೋರಾಸ್ಯಗತೋ ಯಥಾ ॥ 11 ॥
ಅಕಿಂಚನತ್ವಕ್ಕೂ ರಾಜ್ಯದ ವೈಭವಕ್ಕೂ ನಡುವೆ ದೊಡ್ಡ ಅಂತರವಿದೆ. ಮಹತ್ತ್ವಾದ ತಾರತಮ್ಯವಿದೆ. ಧನವಂತನಾದ ರಾಜನು ಮೃತ್ಯುವಿನ ಹಲ್ಲುಗಳ ನಡುವೆ ಸಿಕ್ಕಿದಂತೆ ಯಾವಾಗಲೂ ಭಯದಿಂದ ದುಃಖದಿಂದ ಉದ್ವಿಗ್ನನಾಗಿರುತ್ತಾನೆ.
ನೈವಾಸ್ಯಾಗ್ನಿರ್ನ ಚಾದಿತ್ಯೋ ನ ಮೃತ್ಯುರ್ನ ಚ ದಸ್ಯವಃ |
ಪ್ರಭವಂತಿ ಧನಜ್ಯಾನಿನಿರ್ಮುಕ್ತಸ್ಯ ನಿರಾಶಿಷಃ ॥ 12 ॥
ಅಕಿಂಚನನಿಗೆ ಯಾವ ಭಯವೂ ಇರುವುದಿಲ್ಲ. ಅಗ್ನಿಭಯ, ಶತ್ರುಭಯ, ಚೋರಭಯ, ಮರಣಭಯ ಎಲ್ಲವನ್ನೂ ಮೀರಿ ನಿಲ್ಲುತ್ತಾನೆ. ಅವನನ್ನು ಯಾರೂ ಏನೂ ಮಾಡಲಾರರು.
ತಂ ವೈ ಸದಾ ಕಾಮಚರಮನುಪಸ್ತೀರ್ಣಶಾಯಿನಮ್ |
ಬಾಹೂಪಧಾನಂ ಶಾಮ್ಯಂತಂ ಪ್ರಶಂಸಂತಿ ದಿವೌಕಸಃ ॥ 13 ॥
ಅವನು ಇಷ್ಟಬಂದಂತೆ ಸಂಚರಿಸಬಲ್ಲನು. ನೆಲದ ಮೇಲೆ ಮಲಗುವನು. ಅವನಿಗೆ ನೆಲವೇ ಹಾಸಿಗೆ, ತೋಳೇ ತಲೆದಿಂಬು, ನೆಮ್ಮದಿಯ ನಿದ್ರೆ. ಅಂತಹ ಪುರುಷನನ್ನು ದೇವತೆಗಳು ಕೊಂಡಾಡುತ್ತಾರೆ.
ಧನವಾನ್ ಕ್ರೋಧಲೋಭಾಭ್ಯಾಮಾವಿಷ್ಟೋ ನಷ್ಟಚೇತನಃ |
ತಿರ್ಯಗೀಕ್ಷಃ ಶುಷ್ಕಮುಖಃ ಪಾಪಕೋ ಭ್ರುಕುಟೀಮುಖಃ ॥ 14 ॥
ಧನವಂತನಿಗಾದರೂ ಕ್ರೋಧ-ಲೋಭಗಳು ಅವನ ಮನಸ್ಸನ್ನು ಯಾವಾಗಲೂ ಚಂಚಲದಲ್ಲಿಟ್ಟಿರುತ್ತವೆ. ಬುದ್ಧಿಯು ಸ್ಥಿಮಿತವಾಗಿರುವುದಿಲ್ಲ, ವಕ್ರದೃಷ್ಟಿ ಉಳ್ಳವನಾಗಿರುತ್ತಾನೆ, ಮುಖವು ಕುಂದಿರುತ್ತದೆ, ಪಾಪಬುದ್ಧಿಯುಳ್ಳವನಾಗಿರುತ್ತಾನೆ, ಕೋಪದಿಂದ ಹುಬ್ಬು ಗಂಟಿಕ್ಕಿರುತ್ತಾನೆ.
ನಿರ್ದಶಂಶ್ಚಾಧರೋಷ್ಠಂ ಚ ಕ್ರುದ್ಧೋ ದಾರುಣಭಾಷಿತಾ |
ಕಸ್ತಮಿಚ್ಛೇತ್ ಪರಿದ್ರಷ್ಟುಂ ದಾತುಮಿಚ್ಛತಿ ಚೇನ್ಮಹೀಮ್ ॥ 15 ॥
ತುಟಿಗಳನ್ನು ಕಚ್ಚುತ್ತಿರುತ್ತಾನೆ, ಕಟುವಾಗಿ ಮಾತನಾಡುತ್ತಾನೆ, ಭೂಮಂಡಲವನ್ನೇ ಅವನು ಕೊಡಲು ಸಿದ್ಧನಾಗಿದ್ದರೂ ಅವನನ್ನು ನೋಡಲು ಜನರಿಗೆ ಮನಸ್ಸು ಬರುವುದಿಲ್ಲ.
ಶ್ರಿಯಾ ಹ್ಯಭೀಕ್ಷ್ಣಂ ಸಂವಾಸೋ ಮೋಹಯತ್ಯವಿಚಕ್ಷಣಮ್ |
ಸಾ ತಸ್ಯ ಚಿತ್ತಂ ಹರತಿ ಶಾರದಾಭ್ರಮಿವಾನಿಲಃ ॥ 16 ॥
ಐಶ್ವರ್ಯವೆಂಬುದು ಮತಿಭ್ರಷ್ಟರನ್ನು ಬಲವಾಗಿ ಮೋಹದಲ್ಲಿ ಸಿಲುಕಿಸುತ್ತದೆ. ಶರತ್ಕಾಲದ ಮೇಘವನ್ನು ಬಿರುಗಾಳಿಯು ಹೇಗೆ ಚದುರಿಸುತ್ತದೋ ಅದರಂತೆ ಐಶ್ವರ್ಯದ ಬುದ್ಧಿಯು ಅವನ ಮನಸ್ಸನ್ನು ಸುಲಭವಾಗಿ ತೂರುತ್ತದೆ.
ಅಥೈನಂ ರೂಪಮಾನಶ್ಚ ಧನಮಾನಶ್ಚ ವಿಂದತಿ |
ಅಭಿಜಾತೋಽಸ್ಮಿ ಸಿದ್ಧೋಽಸ್ಮಿ ನಾಸ್ಮಿ ಕೇವಲಮಾನುಷಃ |
ಇತ್ಯೇಭಿಃ ಕಾರಣೈಸ್ತಸ್ಯ ತ್ರಿಭಿಶ್ಚಿತ್ತಂ ಪ್ರಸಿಚ್ಯತೇ ॥ 17 ॥
ಧನಿಕನು ಹೆಮ್ಮೆಯಿಂದ ಹೀಗೆ ಬೀಗುತ್ತಾನೆ- ನನ್ನಂತಹ ರೂಪವಂತನಿಲ್ಲ. ನನ್ನಂತಹ ಶ್ರೀಮಂತನಿಲ್ಲ. ಕುಲದಲ್ಲಿ ನನಗಿಂತ ಮಿಗಿಲಾದವನಿಲ್ಲ. ನನ್ನ ಮನಸ್ಸಿನಲ್ಲಿ ಇಚ್ಛಿಸುವುದೆಲ್ಲ ಕೈಗೂಡುವುದು. ನಾನು ಕೇವಲ ಮನುಷ್ಯನಾಗಿಲ್ಲ, ಸಿದ್ಧ ಪುರುಷನಾಗಿದ್ದೇನೆ. ಈ ರೀತಿಯಾದ ಅನೇಕ ಮತಿವಿಭ್ರಮದಿಂದ ರೂಪಮದ, ಧನಮದ, ಕುಲಮದಗಳೆಂಬ ಮೂರು ದೋಷಗಳಿಂದ ಅವನ ಮನಸ್ಸು ವ್ಯಗ್ರವಾಗಿರುತ್ತದೆ.
ಸ ಪ್ರಸಿಕ್ತಮನಾ ಭೋಗಾನ್ ವಿಸೃಜ್ಯ ಪಿತೃಸಂಚಿತಾನ್ |
ಪರಿಕ್ಷೀಣಃ ಪರಸ್ವಾನಾಮಾದಾನಂ ಸಾಧು ಮನ್ಯತೇ ॥ 18 ॥
ಅವನಿಗೆ ವಿಷಯಸುಖದಲ್ಲಿ ಪುನಃ ಪುನಃ ಬುದ್ಧಿಯು ಪ್ರವೃತ್ತಿಯನ್ನು ಹೊಂದಿರುತ್ತದೆ. ತನ್ನ ಹಿರಿಯರು ಸಂಪಾದಿಸಿಟ್ಟ ಹಣವೆಲ್ಲಾ ಅಕಾರ್ಯಕ್ಕೆ ವಿನಿಯೋಗವಾಗುತ್ತದೆ. ಇದ್ದ ಹಣವನ್ನು ಕಳೆದುಕೊಂಡ ಆತನು ಮತ್ತೊಬ್ಬರ ಸಂಪತ್ತನ್ನು ಅಪಹರಿಸುವುದರಲ್ಲಿ ಆಲೋಚನೆ ಮಾಡುತ್ತಾನೆ. ಅಂತಹ ಅಕಾರ್ಯದಲ್ಲಿಯೂ ಅವನಿಗೆ ದೋಷಬುದ್ಧಿಯು ತೋರುವುದಿಲ್ಲ.
ತಮತಿಕ್ರಾಂತಮರ್ಯಾದಮಾದದಾನಂ ತತಸ್ತತಃ |
ಪ್ರತಿಷೇಧಂತಿ ರಾಜಾನೋ ಲುಬ್ಧಾ ಮೃಗಮಿವೇಷುಭಿಃ ॥ 19 ॥

ಹೀಗೆ ಅತಿಕ್ರಮಿಸಿ ಮತ್ತೊಬ್ಬರ ಸ್ವತ್ತಿಗೆ ಕೈ ಇಕ್ಕುವುದರಿಂದ ರಾಜದಂಡನೆಗೆ ತುತ್ತಾಗುತ್ತಾನೆ. ಬೇಟೆಗಾರನು ಜಿಂಕೆಯನ್ನು ಹೇಗೋ ಹಾಗೆ ಅವನನ್ನು ನಿರ್ಭಯವಾಗಿ ಶಿಕ್ಷಿಸುತ್ತಾನೆ.
ಏವಮೇತಾನಿ ದುಃಖಾನಿ ತಾನಿ ತಾನೀಹ ಮಾನವಮ್ |
ವಿವಿಧಾನ್ಯುಪವರ್ತಂತೇ ಗಾತ್ರಸಂಸ್ಪರ್ಶಜಾನಿ ಚ ॥ 20 ॥
ಅಂತಹ ವ್ಯಕ್ತಿಯು ತಾನು ಮಾಡಿದ ಮಹಾಪರಾಧಗಳಿಂದ ರಾಜರಿಂದ ಅಗ್ನಿದಾಹ, ಶಿರಶ್ಛೇದ ಮೊದಲಾದ ಕಠಿಣ ದಂಡನೆಗಳಿಗೆ ಗುರಿಯಾಗುತ್ತಾನೆ.
ತೇಷಾಂ ಪರಮದುಃಖಾನಾಂ ಬುದ್ಧ್ಯಾ ಭೈಷಜ್ಯಮಾಚರೇತ್ |
ಲೋಕಧರ್ಮಂ ಸಮಾಜ್ಞಾಯ ಧ್ರುವಾಣಾಮಧ್ರುವೈಃ ಸಹ ॥ 21 ॥
ಆದ್ದರಿಂದ ಮನುಷ್ಯನು ಲೌಕಿಕಗಳಾದ ಹೆಂಡತಿ-ಮಕ್ಕಳು ಮುಂತಾದವುಗಳಲ್ಲಿ ಅತಿಯಾದ ಅಭಿಮಾನವನ್ನು ತೊರೆದು ಶರೀರವು ಅಶಾಶ್ವತವೆಂದರಿತು ಪರಮ ದುಃಖಕ್ಕೆ ಕಾರಣವಾಗುವ ಮೋಹದ ವಿಷಯಗಳಲ್ಲಿ ಚಿಕಿತ್ಸೆಯನ್ನು ನೀಡಬೇಕು. ಸ್ಥಿರವಾದ ಜೀವನು ಅಸ್ಥಿರವಾದ ಧನಕ್ಕೆ ತುತ್ತಾಗಬಾರದೆಂಬುದನ್ನು ಸರಿಯಾಗಿ ಆಲೋಚಿಸಿ ವಿರಕ್ತನಾಗಬೇಕು.
ನಾತ್ಯಕ್ತ್ವಾ ಸುಖಮಾಪ್ನೋತಿ ನಾತ್ಯಕ್ತ್ವಾ ವಿಂದತೇ ಪರಮ್ |
ನಾತ್ಯಕ್ತ್ವಾ ಚಾಭಯಃ ಶೇತೇ ತ್ಯಕ್ತ್ವಾ ಸರ್ವಂ ಸುಖೀ ಭವ ॥ 22 ॥
ತ್ಯಾಗವಿಲ್ಲದೆ ಸುಖವನ್ನು ಹೊಂದನು. ತ್ಯಾಗದಿಂದಲ್ಲದೆ ಪರಗತಿಯನ್ನು ಹೊಂದಲು ಸಾಧ್ಯವಿಲ್ಲ. ತ್ಯಾಗವಿಲ್ಲದೆ ಸುಖನಿದ್ರೆಯೂ ಇರುವುದಿಲ್ಲ. ಸರ್ವಸಂಗ ತ್ಯಾಗವೇ ನಿಜವಾದ ಸುಖವು - ಹೀಗೆ ಹೇಳಿದನು.
ಇತ್ಯೇತದ್ಧಾಸ್ತಿನಪುರೇ ಬ್ರಾಹ್ಮಣೇನೋಪವರ್ಣಿತಮ್ |
ಶಮ್ಯಾಕೇನ ಪುರಾ ಮಹ್ಯಂ ತಸ್ಮಾತ್ತ್ಯಾಗಃ ಪರೋ ಮತಃ ॥ 23 ॥
ಯುಧಿಷ್ಠಿರನೇ, ಹಿಂದೆ ಶಮ್ಯಾಕನೆಂಬ ಬ್ರಾಹ್ಮಣನು ಹಾಡಿದ ಇದೇ ಲೋಕ ಸಿದ್ಧವಾದ ಅರ್ಥಗಳನ್ನು ಹಸ್ತಿನಾವತಿಯಲ್ಲಿ ಬ್ರಾಹ್ಮಣನೊಬ್ಬನು ನನಗೆ ತಿಳಿಸಿದನು. ಇದರಿಂದ ತ್ಯಾಗವೇ ಎಲ್ಲಕ್ಕಿಂತಲೂ ಮೇಲಾದುದು ಎಂದು ನಾನು ನಿಶ್ಚಯಿಸಿ-ಕೊಂಡಿರುತ್ತೇನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ವೈರಾಗ್ಯವೇ ಸುಖಸಾಧನ ಎನ್ನುವುದನ್ನು ನಿರೂಪಿಸುವುದಕ್ಕಾಗಿ ಮಂಕಿಗೀತೆಯನ್ನು, ಭೋಗ್ಯಗೀತೆಯನ್ನು ತಿಳಿಸಿದುದು.
ಯುಧಿಷ್ಠಿರಃ
ಈಹಮಾನಃ ಸಮಾರಂಭಾನ್ ಯದಿ ನಾಸಾದಯೇದ್ಧನಮ್ |
ಧನತೃಷ್ಣಾಭಿಭೂತಶ್ಚ ಕಿಂ ಕುರ್ವನ್ ಸುಖಮಾಪ್ನುಯಾತ್ ॥ 1 ॥
ಯುಧಿಷ್ಠಿರ ಪಿತಾಮಹನೇ, ಒಬ್ಬ ವ್ಯಕ್ತಿಯು ಅನೇಕ ಕಾರ್ಯಗಳನ್ನು ಹಣದ ಆಸೆಯಿಂದ ಮಾಡಿದವನಾದರೂ ತಾನು ಬಯಸಿದ ಹಣವನ್ನು ಪಡೆಯದೆ ಹೋದಾಗ, ಹಣದ ಆಸೆಯು ತೀರದಿದ್ದಾಗ ಯಾವ ಕರ್ಮವನ್ನು ಮಾಡಿ ಸುಖವನ್ನು ಹೊಂದಿಯಾನು?
ಭೀಷ್ಮಃ
ಸರ್ವಸಾಮ್ಯಮನಾಯಾಸಃ ಸತ್ಯವಾಕ್ಯಂ ಚ ಭಾರತ |
ನಿರ್ವೇದಶ್ಚಾವಿವಿತ್ಸಾ ಚ ಯಸ್ಯ ಸ್ಯಾತ್ಸ ಸುಖೀ ನರಃ ॥ 2 ॥
ಭೀಷ್ಮ ಧರ್ಮರಾಜನೇ, ಮಾನ-ಅವಮಾನಗಳು, ಕಷ್ಟ-ಸುಖಗಳು ಇವುಗಳಲ್ಲಿ ಸಮಾನವಾಗಿರುವುದು, ವಿಷಯಸುಖಕ್ಕಾಗಿ ಆಯಾಸ ಪಡದಿರುವುದು, ಸತ್ಯವಾದ ಮಾತುಗಳನ್ನಾಡುವುದು, ವೈರಾಗ್ಯವನ್ನು ಹೊಂದಿರುವುದು, ಕಾರ್ಯಗಳಲ್ಲಿ ಅತ್ಯಂತ ಆಸಕ್ತಿಯನ್ನಿಡದಿರುವುದು ಈ ರೀತಿಯಾದ ಗುಣಗಳನ್ನು ಯಾವಾತನು ಹೊಂದಿರುತ್ತಾನೋ ಅವನು ಸುಖವನ್ನು ಹೊಂದುತ್ತಾನೆ.
ಏತಾನ್ಯೇವ ಪದಾನ್ಯಾಹುಃ ಪಂಚ ವೃದ್ಧಾಃ ಪ್ರಶಾಂತಯೇ |
ಏಷ ಸ್ವರ್ಗಶ್ಚ ಧರ್ಮಶ್ಚ ಸುಖಂ ಚಾನುತ್ತಮಂ ಸತಾಮ್ ॥ 3 ॥
ಸರ್ವಸಾಮ್ಯ, ಅನಾಯಾಸ, ಸತ್ಯವಾಕ್ಯ, ನಿರ್ವೇದ, ಅವಿವಿತ್ಸ ಎಂಬ ಈ ಐದು ಪದಗಳನ್ನೇ ಮನಸ್ಸಿನ ಶಾಂತಿಗಾಗಿ ವೃದ್ಧರು ಹಿಂದೆ ಬೋಧಿಸಿರುತ್ತಾರೆ. ಈ ಐದು ಗುಣಗಳನ್ನು ಹೊಂದುವುದೇ ಸ್ವರ್ಗವನ್ನು ಹೊಂದಿದಂತೆ. ಸಾಟಿಯಿಲ್ಲದ ಸುಖ ಧರ್ಮಗಳಿಗೆ ಈ ಗುಣಗಳೇ ಸಜ್ಜನರಿಗೆ ಆಶ್ರಯವಾಗಿವೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಿರ್ವೇದಾನ್ಮಂಕಿನಾ ಗೀತಂ ತನ್ನಿಬೋಧ ಯುಧಿಷ್ಠಿರ ॥ 4 ॥
ಇದೇ ವಿಷಯದಲ್ಲಿ ಮಂಕಿ ಎಂಬ ಬ್ರಾಹ್ಮಣನು ಒಂದು ಬಾರಿ ಆಶಾಭಂಗವನ್ನು ಹೊಂದಿ ನಿರ್ವೇದದಿಂದ ಹಾಡಿದ ಕೆಲವು ಗೀತೆಗಳಿವೆ. ಆ ಇತಿಹಾಸವನ್ನು ನಮ್ಮ ಹಿರಿಯರು ಏನು ತಿಳಿಸಿದ್ದಾರೋ ಅದನ್ನೇ ನಿನಗೆ ತಿಳಿಸುತ್ತೇನೆ.
ಈಹಮಾನೋ ಧನಂ ಮಂಕಿರ್ಭಗ್ನೇಹಶ್ಚ ಪುನಃ ಪುನಃ |
ಕೇನಚಿದ್ಧನಶೇಷೇಣ ಕ್ರೀತವಾನ್ ದಮ್ಯಗೋಯುಗಮ್ ॥ 5 ॥
ಹಿಂದೆ ಮಂಕಿ ಎಂಬ ಬ್ರಾಹ್ಮಣನು ಧನಸಂಪಾದನೆಗಾಗಿ ಪುನಃ ಪುನಃ ಅನೇಕ ವಿಧವಾದ ಪ್ರಯತ್ನಗಳನ್ನು ಮಾಡಿದನು. ಆದರೆ ಅವನ

ಉದ್ದೇಶವು ಫಲಿಸುತ್ತಿರಲಿಲ್ಲ. ಆಶಾಭಂಗವನ್ನು ಹೊಂದುತ್ತಿದ್ದನು. ಒಮ್ಮೆ ಅವನು ತನ್ನಲ್ಲಿದ್ದ ಸ್ವಲ್ಪ ಹಣವನ್ನು ವಿನಿಯೋಗಿಸಿ ಆ ಹಣದಿಂದ ಎರಡು ತನ್ನ ನಿಯಂತ್ರಣಕ್ಕೆ ಒಳಪಡುವ ಹೋರಿಗಳನ್ನು ಕೊಂಡುಕೊಂಡನು.
ಸುಸಂಬದ್ಧೌ ತು ತೌ ದಮ್ಯೌ ದಮನಾಯಾಭಿನಿಃಸೃತೌ |
ಆಸೀನಮುಷ್ಟ್ರಂ ಮಧ್ಯೇನ ಸಹಸೈವಾಭ್ಯಧಾವತಾಮ್ ॥ 6 ॥
ಆ ಹೊಸ ಹೋರಿಗಳಿಗೆ ಅಭ್ಯಾಸ ಮಾಡಿಸುವುದಕ್ಕಾಗಿ ಅವುಗಳಿಗೆ ನೊಗವನ್ನು ಹೇರಿ ತೆಕ್ಕೆಹಾಕಿ ಕಂಠದೇಶವನ್ನು ಹಗ್ಗದಿಂದ ಕಟ್ಟಿ ಅಟ್ಟಿಸಿಕೊಂಡು ಹೋಗುತ್ತಿದ್ದನು. ಇವೆರಡು ಹೋಗುತ್ತಿರುವಾಗ ನಡುದಾರಿಯಲ್ಲಿ ಒಂದು ಒಂಟೆಯು ಮಲಗಿತ್ತು. ಆ ಮಲಗಿದ ಒಂಟೆಯ ನಡುವೆಯೇ ಎರಡು ಹೋರಿಗಳು ಹೆದರಿ ಕೂಡಲೇ ಒಂಟೆಯ ಆಚೆ-ಈಚೆ ಓಡಿದವು.
ತಯೋಃ ಸಂಪ್ರಾಪ್ತಯೋರುಷ್ಟ್ರಃ ಸ್ಕಂಧದೇಶಮಮರ್ಷಣಃ |
ಉತ್ಥಾಯೋತ್ಕ್ಷಿಪ್ಯ ತೌ ದಮ್ಯೌ ಪ್ರಸಸಾರ ಮಹಾಜವಃ ॥ 7 ॥
ಹೀಗೆ ಹೋರಿಗಳು ಭಯದಿಂದ ಓಡಿ ಬರುವಾಗ ಅವುಗಳ ಮೇಲೆ ಏರಿಸಿದ್ದ ನೊಗವು ಒಂಟೆಯ ಕತ್ತಿಗೆ ತಾಗಿತು. ಮಲಗಿದ್ದ ಒಂಟೆಯು ಬೆದರಿ ಮೇಲಕ್ಕೆ ಎದ್ದು ಓಡಲಾರಂಭಿಸಿತು. ಆ ಹೋರಿಗಳೆರಡು ತನ್ನ ಬೆನ್ನ ಮೇಲೆ ನೇತಾಡುತ್ತಿರುವ ಹಾಗೆಯೇ ಆ ದೊಡ್ಡ ಒಂಟೆಯು ಭಯದಿಂದ ರೋಷದಿಂದ ಅತೀ ವೇಗದಿಂದ ಓಡಲಾರಂಭಿಸಿತು.
ಹ್ರಿಯಮಾಣೌ ತು ತೌ ದಮ್ಯೌ ತೇನೋಷ್ಟ್ರೇಣ ಪ್ರಮಾಥಿನಾ |
ಮ್ರಿಯಮಾಣೌ ಚ ಸಂಪ್ರೇಕ್ಷ್ಯ ಮಂಕಿಸ್ತತ್ರಾಬ್ರವೀದಿದಮ್ ॥ 8 ॥
ಮಂಕಿಯು ತನ್ನ ಎರಡು ಹೋರಿಗಳು ಒಂಟೆಯ ಕುತ್ತಿಗೆಗೆ ನೇತುಬಿದ್ದು ಧಾವಿಸುತ್ತಿರುವಾಗ ಅವುಗಳನ್ನು ನಿಯಂತ್ರಿಸಲು ಸಾಧ್ಯವಾಗದೆ ಆ ಎರಡು ಹೋರಿಗಳನ್ನು ಕಳೆದುಕೊಂಡನು. ತನ್ನ ವೈರಾಗ್ಯಕ್ಕೆ ಈ ಪ್ರಸಂಗವೇ ಕಾರಣವಾಯಿತು. ಆ ಪ್ರಸಂಗದಲ್ಲಿ ಮಂಕಿಯು ಹೀಗೆ ನುಡಿದನು.
ನ ಚೈವಾವಿಹಿತಂ ಶಕ್ಯಂ ದಕ್ಷೇಣಾಪೀಹಿತುಂ ಧನಮ್ |
ಯುಕ್ತೇನ ಶ್ರದ್ಧಯಾ ಸಮ್ಯಗೀಹಾಂ ಸಮನುತಿಷ್ಠತಾ ॥ 9 ॥
ದೈವವು ವಿಧಿಸದೇ ಇರುವ ಧನವನ್ನು ಪಡೆಯಲು ಯಾರಿಂದಲೂ ಎಂದಿಗೂ ಸಾಧ್ಯವಿಲ್ಲ. ಎಷ್ಟೇ ಶ್ರಮಪಟ್ಟರೂ, ಎಷ್ಟೇ ಆಸೆಪಟ್ಟರೂ ಅದು ದಕ್ಕುವುದಿಲ್ಲ. ಶ್ರದ್ಧೆಯಿಂದ, ಎಷ್ಟೇ ಉಪಾಯದಿಂದ ಕೆಲಸ ಮಾಡಿದರೂ ನಮಗೆ ಲಭ್ಯವಲ್ಲದ್ದನ್ನು ಪಡೆಯಲು ಸಮರ್ಥರಿಂದಲೂ ಸಾಧ್ಯವಾಗದು.
ಕೃತಸ್ಯ ಪೂರ್ವಂ ಚಾನರ್ಥೈರ್ಯುಕ್ತಸ್ಯಾಪ್ಯನುತಿಷ್ಠತಃ |
ಇಮಂ ಪಶ್ಯತ ಸಂಗತ್ಯಾ ಮಮ ದೈವಮುಪಪ್ಲವಮ್ ॥ 10 ॥
ಹಿಂದೆ ನಾನು ಅನೇಕ ಉಪಾಯಗಳನ್ನು ಮಾಡಿರುತ್ತೇನೆ. ಅನೇಕ ರೀತಿಯಲ್ಲಿ ಶ್ರಮವನ್ನು ಪಟ್ಟಿರುತ್ತೇನೆ. ಯಾವುದನ್ನೂ ನನ್ನಿಂದ ಪಡೆಯಲಾಗಲಿಲ್ಲ. ಕೊನೆಯದ್ದಾದ ಈ ಪ್ರಯತ್ನವು ದೈವದಿಂದ ಹತವಾಯಿತು. ಒಂಟೆಯ ಪಲಾಯನದಿಂದ ಹೋರಿಗಳನ್ನು ಕಳೆದುಕೊಂಡಿರುವ ನನ್ನ ದುರವಸ್ಥೆಯನ್ನು ನೀವೇ ನೋಡಿರಿ.
ಉದ್ಯಮ್ಯೋದ್ಯಮ್ಯ ಮೇ ದಮ್ಯೌ ವಿಷಮೇಣೇವ ಗಚ್ಛತಿ |
ಅತಿಷ್ಠತ್ ಕಾಕತಾಲೀಯಮುನ್ಮಾಥೇನೇವ ಜಂಬುಕಮ್ ॥ 11 ॥
ನನ್ನ ಹೋರಿಗಳೆರಡು ಹಾರುತ್ತಾ, ಬೀಳುತ್ತಾ ಒಂಟೆಯಿಂದ ಸೆಳೆಯಲ್ಪಡುತ್ತಿರುವುವಲ್ಲ. ಅಯ್ಯೋ! ನನ್ನ ಎರಡು ಹೋರಿಗಳು ವಿಷಮ ಮಾರ್ಗದಲ್ಲಿಯೇ ನನ್ನ ನಿಯಂತ್ರಣವನ್ನು ತಪ್ಪಿಸಿಕೊಂಡು ಹೋಗುತ್ತಿವೆ. ಕಾಡಿನಲ್ಲಿ ಯಂತ್ರದ ಬಲೆಯನ್ನು ಕಟ್ಟಿದಾಗ ಆಹಾರಕ್ಕೋಸ್ಕರ ಸಂಚರಿಸುತ್ತಿರುವ ಜಾಣಪ್ರಾಣಿ ಎನಿಸಿದ ಗುಳ್ಳೆನರಿಯು ಅಕಸ್ಮಾತ್ತಾಗಿ ಆ ಜಾಲದಲ್ಲಿ ಸಿಲುಕಿ ದುಃಖಪಡುವಂತೆ ಈ ಎರಡು ನನ್ನ ಹೋರಿಗಳನ್ನು ಪಳಗಿಸುವ ಪ್ರಸಂಗದಲ್ಲಿಯೇ ದಾರಿನಡುವೆ ಮಲಗಿದ ಒಂಟೆಗೆ ಸಿಲುಕಿ ಅಕಸ್ಮಾತ್ತಾಗಿ ಈ ದುಃಖವನ್ನು ಅನುಭವಿಸುತ್ತಿದ್ದೇನೆ.
ಮಣೀವೋಷ್ಟ್ರಸ್ಯ ಲಂಬೇತೇ ಪ್ರಿಯೌ ವತ್ಸತರೌ ಮಮ |
ಶುದ್ಧಂ ಹಿ ದೈವಮೇವೇದಮತೋ ನೈವಾಸ್ತಿ ಪೌರುಷಮ್ ॥ 12 ॥
ಆ ನನ್ನ ಮುದ್ದು ಹೋರಿಗಳೆರಡು ಒಂಟೆಯ ಕತ್ತಿಗೆ ಕಟ್ಟಿದ ಎರಡು ಮಣಿಗಳಂತೆ ಜೋಲಾಡುತ್ತಿವೆ. ಮುಖ್ಯವಾಗಿ ದೈವವೇ ಪ್ರಬಲವೆನಿಸಿದೆ. ಎಷ್ಟೇ ಹಠದಿಂದಲಾದರೂ ಪುರುಷಪ್ರಯತ್ನವು ಫಲಿಸದು.
ಯದಿ ವಾಪ್ಯುಪಪದ್ಯೇತ ಪೌರುಷಂ ನಾಮ ಕರ್ಹಿಚಿತ್ |
ಅನ್ವಿಷ್ಯಮಾಣಂ ತದಪಿ ದೈವಮೇವಾವತಿಷ್ಠತೇ ॥ 13 ॥
ಕೆಲವೊಮ್ಮೆ ಪೌರುಷವು ಫಲಸಾಧನವೆಂದು ಕಂಡುಬಂದರೂ ಅದು ದೈವದ ಅಧೀನವಾಗಿಯೇ ಇರುತ್ತದೆ.
ತಸ್ಮಾನ್ನಿರ್ವೇದ ಏವೇಹ ಗಂತವ್ಯಃ ಸುಖಮೀಪ್ಸತಾ |
ಸುಖಂ ಸ್ವಪಿತಿ ನಿರ್ವಿಣ್ಣೋ ನಿರಾಶಶ್ಚಾರ್ಥಸಾಧನೇ ॥ 14 ॥
ಆದ್ದರಿಂದ ಸುಖವನ್ನು ಪಡೆಯಬೇಕೆಂಬ ಮನುಷ್ಯನು ಲೋಕದಲ್ಲಿ ವೈರಾಗ್ಯ ಮಾರ್ಗವನ್ನೇ ಆಶ್ರಯಿಸಬೇಕು. ಧನಸಂಗ್ರಹದ ಆಸೆಯನ್ನು ತೊರೆದು ವಿರಕ್ತನಾಗಿರುವ ವ್ಯಕ್ತಿಯು ಯಾವುದೇ ಚಿಂತೆ ಇಲ್ಲದೆ ಸುಖವಾಗಿ ನಿದ್ರಿಸುತ್ತಾನೆ.
ಅಹೋ ಸಮ್ಯಕ್ ಶುಕೇನೋಕ್ತಂ ಸರ್ವತಃ ಪರಿಮುಚ್ಯತಾ |
ಪ್ರತಿಷ್ಠತಾ ಮಹಾರಣ್ಯಂ ಜನಕಸ್ಯ ನಿವೇಶನಾತ್ ॥ 15 ॥
ಅಹೋ! ಶುಕಮುನಿಯು ತಾನು ತಂದೆಯ ಮನೆಯನ್ನು ತೊರೆದು ಸರ್ವಸಂಗವನ್ನು ತ್ಯಾಗಮಾಡಿ ಮಹಾರಣ್ಯಕ್ಕೆ ಹೋಗುವುದೇ ಶ್ರೇಯಸ್ಸಾಧನವೆಂದು ತೋರಿಸಿಕೊಟ್ಟಿದ್ದಾನೆ.
ಯಃ ಕಾಮಾನ್ ಪ್ರಾಪ್ನುಯಾತ್ ಸರ್ವಾನ್ ಯಶ್ಚೈನಾನ್ ಕೇವಲಾಂಸ್ತ್ಯಜೇತ್|

ಪ್ರಾಪಣಾತ್ ಸರ್ವಕಾಮಾನಾಂ ಪರಿತ್ಯಾಗೋ ವಿಶಿಷ್ಯತೇ ॥ 16 ॥
ಅರಣ್ಯಕ್ಕೆ ಸಾಗುವ ಶುಕಮುನಿಯ ಅಭಿಪ್ರಾಯ ಇಂತಿದೆ: ಯಾವ ವ್ಯಕ್ತಿಯು ಸಮಸ್ತ ಕಾಮನೆಗಳನ್ನು ಅನುಭವಿಸಬೇಕು ಎಂದುಕೊಳ್ಳುತ್ತಾನೋ, ಯಾವ ವ್ಯಕ್ತಿಯು ಸಮಸ್ತ ಕಾಮನೆಗಳನ್ನು ತೊರೆಯಬೇಕು ಎಂದುಕೊಳ್ಳುತ್ತಾನೋ ಇವರಿಬ್ಬರಲ್ಲಿ ಸಮಸ್ತ ಕಾಮನೆಗಳನ್ನು ಪಡೆದವನಿಗಿಂತಲೂ ಸಮಸ್ತ ಕಾಮನೆಗಳನ್ನು ತೊರೆದವನೇ ಶ್ರೇಷ್ಠನೆನಿಸುತ್ತಾನೆ.
ನಾಂತಂ ಸರ್ವವಿವಿತ್ಸಾನಾಂ ಗತಪೂರ್ವೋಽಸ್ತಿ ಕಶ್ಚನ |
ಶರೀರೇ ಜೀವಿತೇ ಚೈವ ತೃಷ್ಣಾ ಮಂದಸ್ಯ ವರ್ಧತೇ ॥ 17 ॥
ಅವನ ಮಾತು ಬಹಳ ಸಮಂಜಸವು. ಲೋಕದಲ್ಲಿ ಯಾವ ಮನುಷ್ಯನೂ ತನ್ನ ಕಾಮನೆಗಳ ಕೊನೆಯನ್ನು ಇಲ್ಲಿಯತನಕ ಮುಟ್ಟಿರುವುದಿಲ್ಲ. ಮನುಷ್ಯನಿಗೆ ದೇಹದಲ್ಲಿ, ಬದುಕಿನಲ್ಲಿ ಆಸೆಯು ಪುನಃ ಪುನಃ ಹೆಚ್ಚುತ್ತಲೇ ಹೋಗುತ್ತದೆ.
ನಿವರ್ತಸ್ವ ವಿವಿತ್ಸಾಭ್ಯಃ ಸಮ್ಯಗ್ ನಿರ್ವಿದ್ಯ ಮಾಮಕಃ |
ಅಸಕೃಚ್ಚಾಸಿ ನಿಕೃತೋ ನ ಚ ನಿರ್ವಿದ್ಯಸೇ ತನೋ ॥ 18 ॥
ಎಲೈ ಕಾಮನೆಗಳ ಹಿಂದೆ ಸಾಗುವ ಮನವೇ, ಇನ್ನು ಮೇಲೆ ನಿನ್ನ ಆಸೆಯನ್ನು ಸಾಕುಮಾಡು. ವಿರಕ್ತಿಯನ್ನು ಆಶ್ರಯಿಸು. ಶಾಂತಿಯಿಂದ ಇರು. ನೀನು ಅನೇಕ ಬಾರಿ ತೃಷ್ಣೆಯಿಂದ ಮೋಸಹೋಗಿ ಆಶಾಭಂಗಕ್ಕೆ ತುತ್ತಾಗಿದ್ದರೂ ಇನ್ನೂ ವಿರಕ್ತನಾಗಲಿಲ್ಲವೇಕೆ? ಎಂದು ಶುಕಮುನಿಯು ತನ್ನನ್ನೇ ಸಂಬೋಧಿಸಿಕೊಂಡು ಮನಸ್ಸಿಗೆ ಬೋಧಿಸಿದನು.
ಯದಿ ನಾಹಂ ವಿನಾಶ್ಯಸ್ತೇ ಯದ್ಯೇವಂ ರಮಸೇ ಮಯಾ |
ಮಾ ಮಾಂ ಯೋಜಯ ಲೋಭೇನ ವೃಥಾ ತ್ವಂ ವಿತ್ತಕಾಮುಕ ॥ 19 ॥
ಎಲೈ ಮನಸ್ಸೇ, ನೀನು ನನ್ನನ್ನು ಹಾಳುಗೆಡಹಬಾರದು ಎಂದು ಆಲೋಚಿಸಿದ್ದರೆ ನನ್ನೊಡನೆ ನೀನೂ ಸುಖವನ್ನು ಬಯಸುತ್ತಿಯಾದರೆ ವಿತ್ತಕಾಮುಕವಾದ ಎಲೈ ಮನಸ್ಸೇ, ಇಂತಹ ವ್ಯರ್ಥವಾದ ಲೋಭಕ್ಕೆ ನನ್ನನ್ನು ಸೆಳೆಯಬೇಡ.
ಸಂಚಿತಂ ಸಂಚಿತಂ ದ್ರವ್ಯಂ ನಷ್ಟಂ ತವ ಪುನಃ ಪುನಃ |
ಕದಾ ವಿಮೋಕ್ಷ್ಯಸೇ ಮೂಢ ಧನೇಹಾಂ ಧನಕಾಮುಕ ॥ 20 ॥
ನೀನು ಪುನಃ ಪುನಃ ಸೇರಿಸಿಟ್ಟ ಹಣವನ್ನು ಇಲ್ಲಿಯತನಕ ಎಷ್ಟೋ ಬಾರಿ ಕಳೆದುಕೊಂಡಿರುವೆ. ಆದರೂ ನಿನಗೆ ಧನದ ಆಸೆಯು ಬಿಡುತ್ತಿಲ್ಲ. ಈ ಆಸೆಯು ಯಾವಾಗ ಬಿಟ್ಟುಹೋಗುತ್ತದೋ! ಧನ ಕಾಮುಕತೆ ಬುದ್ಧಿಹೀನತೆಯ ಮೂಢತನದಲ್ಲಿ ಬಿದ್ದಿರುವ ನೀನು ಎಂದು ಇದರಿಂದ ಹೊರಬರುತ್ತಿ?
ಅಹೋ ನು ಮಮ ಬಾಲಿಶ್ಯಂ ಯೋಽಹಂ ಕ್ರೀಡನಕಸ್ತವ |
ಕಿಂ ನೈವ ಜಾತು ಪುರುಷಃ ಪರೇಷಾಂ ಪ್ರೇಷ್ಯತಾಮಿಯಾತ್ ॥ 21 ॥
ಎಲೈ ಮನಸ್ಸೇ, ನಾನು ನಿನ್ನ ಮಕ್ಕಳಾಟದ ಕೈಗೊಂಬೆಯಾಗಿರುವೆನಲ್ಲ. ನೀನು ನನ್ನನ್ನು ಪ್ರತಿನಿತ್ಯವೂ ದಯೆಯಿಲ್ಲದೆ ಅನೇಕ ಕಷ್ಟಗಳಿಗೆ ಗುರಿ ಮಾಡುತ್ತಿರುವಿ. ಪರಾಧೀನನಾಗಿ ಸೇವೆ ಮಾಡುವ ಪುರುಷನು ಎಂದೂ ಸುಖವನ್ನು ಹೊಂದಲಾರನು. ಕಾಮನೆಯನ್ನು ತ್ಯಾಗ ಮಾಡಿದವನು ಯಾರಿಗೂ ದಾಸನಾಗಿರಬೇಕಾಗಿಲ್ಲ.
ನ ಪೂರ್ವೇ ನಾಪರೇ ಜಾತು ಕಾಮಾನಾಮಂತಮಾಪ್ನುವನ್ |
ತ್ಯಕ್ತ್ವಾ ಸರ್ವಸಮಾರಂಭಾನ್ ಪ್ರತಿಬುದ್ಧೋಽಸ್ಮಿ ಜಾಗೃಮಿ ॥ 22 ॥
ಇದಕ್ಕಿಂತ ಹಿಂದಿನ ಯಾವ ವ್ಯಕ್ತಿಗಳು ತಮ್ಮ ಬಯಕೆಗಳು ಕೊನೆಯನ್ನು ಪೂರ್ಣವಾಗಿ ಹೊಂದಿದವರಿಲ್ಲ. ಮುಂದೆ ಬರುವ ಯಾವ ವ್ಯಕ್ತಿಗಳೂ ಆ ಬಯಕೆಗಳ ಕೊನೆಯನ್ನು ಕಾಣಲಾರರು. ಈ ತತ್ತ್ವಚಿಂತನೆಯಿಂದ ನಾನು ಇಂದು ಚೆನ್ನಾಗಿ ಎಚ್ಚರ ಹೊಂದಿರುವೆನು. ನನ್ನ ಮನೋರಥಗಳನ್ನೆಲ್ಲ ಕೈಬಿಟ್ಟೆನು. ನನಗೆ ಈಗ ವಿವೇಕವು ಹುಟ್ಟಿತು.
ನೂನಂ ತೇ ಹೃದಯಂ ಕಾಮ ವಜ್ರಸಾರಮಯಂ ದೃಢಮ್ |
ಯದನರ್ಥಶತಾವಿಷ್ಟಂ ಶತಧಾ ನ ವಿದೀರ್ಯತೇ ॥ 23 ॥
ನಿಜವಾಗಿಯೂ ನನ್ನ ಹೃದಯವು ವಜ್ರಸಾರಮಯವಾಗಿ ಅತಿಕಠಿಣವಾದುದು. ನೂರಾರು ವಿಧವಾದ ಅನರ್ಥಗಳನ್ನು ಅನುಭವಿಸಿಯೂ ಇನ್ನೂ ನನ್ನ ಹೃದಯವು ಭೇದಿಸುತ್ತಿಲ್ಲವೆಂಬುದೇ ಆಶ್ಚರ್ಯ.
ತ್ಯಜಾಮಿ ಕಾಮ ತ್ವಾಂ ಚೈವ ಯಚ್ಚ ಕಿಂಚಿತ್ ಪ್ರಿಯಂ ತವ |
ತವಾಹಂ ಸುಖಮನ್ವಿಚ್ಛನ್ನಾತ್ಮನ್ಯುಪಲಭೇ ಸುಖಮ್ ॥ 24 ॥
ಎಲೈ ಕಾಮವೇ, ಇನ್ನು ಮೇಲೆ ನಿನ್ನನ್ನು ನಾನು ತಡೆದುಬಿಡುತ್ತೇನೆ. ನಿನಗೆ ಪ್ರಿಯವಾದುದೆಲ್ಲವನ್ನೂ ಈಗಾಗಲೇ ನೀಡಿರುತ್ತೇನೆ. ನಿನ್ನನ್ನು ನಾನು ಎಷ್ಟೆಷ್ಟು ತೃಪ್ತಿಗೊಳಿಸುತ್ತಿದ್ದರೂ ನನ್ನ ಆತ್ಮಕ್ಕೆ ನೀನು ಯಾವ ಸುಖವನ್ನೂ ಕಾಣಿಸಲಿಲ್ಲ.
ಕಾಮ ಜಾನಾಮಿ ತೇ ಮೂಲಂ ಸಂಕಲ್ಪಾತ್ ಕಿಲ ಜಾಯಸೇ |
ನ ತ್ವಾಂ ಸಂಕಲ್ಪಯಿಷ್ಯಾಮಿ ಸಮೂಲೋ ನ ಭವಿಷ್ಯಸಿ ॥ 25 ॥
ಎಲೈ ಕಾಮವೇ, ನಿನ್ನ ಮೂಲವೇನೆಂಬುದನ್ನು ನಾನು ಅರಿತಿರುವೆನು. ನಿನ್ನ ಸಂಕಲ್ಪದಿಂದಲೇ ನೀನು ಹುಟ್ಟುವವನು. ಆ ಸಂಕಲ್ಪವನ್ನು ಹುಟ್ಟಿಸುವವನು ನಾನೇ. ಇನ್ನು ಮೇಲೆ ನಿನಗೆ ಕಾರಣವಾದ ಆ ಸಂಕಲ್ಪವನ್ನೇ ನಾನು ಬಿಟ್ಟುಬಿಡುತ್ತೇನೆ. ಆಗ ಸಮೂಲವಾಗಿ ನಾಶಹೊಂದುತ್ತಿ.
ಈಹಾ ಧನಸ್ಯ ನ ಸುಖಾ ಲಬ್ಧ್ವಾ ಚಿಂತಾ ಚ ಭೂಯಸೀ |
ಲಬ್ಧನಾಶೋ ಯಥಾ ಮೃತ್ಯುರ್ಲಬ್ಧಂ ಭವತಿ ವಾ ನ ವಾ ॥ 26 ॥
ಧನದ ಆಸೆಯಲ್ಲಿ ಕಿಂಚಿತ್ತಾದರೂ ಸುಖವಿರುವುದಿಲ್ಲ. ಧನವು ದೊರೆತಷ್ಟು ಅದರಿಂದ ಚಿಂತೆಯು ಮೇಲಿಂದ ಮೇಲೆ ಅಧಿಕವಾಗುತ್ತಾ ಹೋಗುತ್ತದೆ. ಧನವು ಲಭಿಸಿದ ಮೇಲೆ ಎಂದಾದರೂ ಅದು ಕೈಬಿಟ್ಟು ಹೋದರೆ ಮರಣಸಮಾನವಾದ ದುಃಖವನ್ನು ತಂದೊಡ್ಡುತ್ತದೆ. ಆ ಸಂಪಾದಿಸಿದ ಹಣವು ಸ್ಥಿರವಾಗಿ ನಿಲ್ಲುವುದರಲ್ಲಿ ಸಂಶಯವೇ ಇದೆ.

ಪರೇತ್ಯ ಯೋ ನ ಲಭತೇ ತತೋ ದುಃಖತರಂ ನು ಕಿಮ್ |
ನ ಚ ತುಷ್ಯತಿ ಲಬ್ಧೇನ ಭೂಯ ಏವ ಚ ಮಾರ್ಗತಿ ॥ 27 ॥
ತನ್ನ ದೇಹವನ್ನೇ ಒಪ್ಪಿಸಿದ್ದರೂ ಆ ಧನವು ದೊರೆಯಲಾರದು. ಇದಕ್ಕಿಂತಲೂ ದುಃಖದ ಸಂಗತಿ ಏನು? ಬಯಸಿದ ಹಣವು ದೊರೆತರೂ ಮನುಷ್ಯನಿಗೆ ಅಷ್ಟರಲ್ಲಿ ತೃಪ್ತಿಯನ್ನುಂಟು ಮಾಡುವುದಿಲ್ಲ. ಇನ್ನೂ ಹೆಚ್ಚಾಗಿ ಪಡೆಯಬೇಕೆಂಬ ಆಸೆಯು ಅಭಿವೃದ್ಧವಾಗುತ್ತಲೇ ಇರುತ್ತದೆ.
ಅನುತರ್ಷುಲ ಏವಾರ್ಥಃ ಸ್ವಾದು ಗಾಂಗಮಿವೋದಕಮ್ |
ಮದ್ವಿಲಾಪನಮೇತತ್ತು ಪ್ರತಿಬುದ್ಧೋಽಸ್ಮಿ ಸಂತ್ಯಜ ॥ 28 ॥
ನೀರನ್ನು ಕುಡಿದಷ್ಟು ದಾಹವು ಹೆಚ್ಚುವಂತೆ ಧನವನ್ನು ಗಳಿಸಿದಷ್ಟು ಪುನಃ ಪುನಃ ತೃಷ್ಣೆಯು ಹೆಚ್ಚುತ್ತಲೇ ಇರುತ್ತದೆ. ಈ ಧನಾಸೆಯು ನಿರಂತರ ಪೀಡಿಸುತ್ತಾ ಹಾಳು- ಗೆಡಹುವುದಕ್ಕಾಗಿಯೇ ಬಂದಂತಿದೆ. ಆದರೆ ದೈವದಿಂದ ಇದರ ಬಗ್ಗೆ ತಿಳಿವಳಿಕೆ ಹುಟ್ಟಿದೆ. ನಾನು ಈಗ ಎಚ್ಚರಗೊಂಡಿರುವೆನು. ಮಾತಿನಿಂದ ಮಾತ್ರವಲ್ಲದೆ ಬುದ್ಧಿಯಿಂದಲೂ ಈ ಧನವನ್ನು ನಿರಾಕರಿಸುತ್ತಿದ್ದೇನೆ.
ಯ ಇಮಂ ಮಾಮಕಂ ದೇಹಂ ಭೂತಗ್ರಾಮಃ ಸಮಾಶ್ರಿತಃ |
ಮಯಾರ್ಥಿತೋ ಯಥಾ ಕಾಮ ವಸತಾಂ ವಾ ಯಥಾಸುಖಮ್ ॥
ಎಲೈ ಕಾಮವೇ, ನೀನು ನನ್ನನ್ನು ಬಿಟ್ಟು ಇನ್ನು ತೆರಳಬಹುದು. ಯಾವ ಈ ನನ್ನ ದೇಹವನ್ನು ಕಾರ್ಯ ಪದಾರ್ಥ ಪ್ರಪಂಚವು ಆಶ್ರಯಿಸಿದೆಯೋ ನನ್ನ ಪ್ರಾರ್ಥನೆಯಿಂದ ನೀವು ಮೊದಲಿದ್ದ ಕಡೆಗೆ ಸೇರಿರಿ. ಇಲ್ಲವೇ ಇದ್ದಲ್ಲಿ ಸುಖವಾಗಿರಿ.
ನ ಯುಷ್ಮಾಸ್ವಿಹ ಮೇ ಪ್ರೀತಿಃ ಕಾಮಲೋಭಾನುಸಾರಿಷು |
ತಸ್ಮಾದುತ್ಸೃಜ್ಯ ಸರ್ವಾನ್ ವಃ ಸತ್ಯಮೇವಾಶ್ರಯಾಮ್ಯಹಮ್ ॥ 30 ॥
ಕಾಮ-ಲೋಭಗಳನ್ನೇ ಅನುಸರಿಸುವ ರಜಸ್-ತಮೋಗುಣಗಳಿಂದ ತುಂಬಿದ ನಿಮ್ಮಲ್ಲಿ ನನಗೆ ಪ್ರೀತಿ ಇರುವುದಿಲ್ಲ. ನಿಮ್ಮೆಲ್ಲರನ್ನೂ ಬಿಟ್ಟ ಬಳಿಕ ನಾನು ಸತ್ವಗುಣವನ್ನೇ ಆಶ್ರಯಿಸುತ್ತೇನೆ.
ಸರ್ವಭೂತಾನ್ಯಹಂ ದೇಹೇ ಪಶ್ಯನ್ಮನಸಿ ಚಾತ್ಮನಃ |
ಯೋಗೇ ಬುದ್ಧಿಂ ಶ್ರುತೇ ಸತ್ತ್ವಂ ಮನೋ ಬ್ರಹ್ಮಣಿ ಧಾರಯನ್ ॥31॥
ಸಮಸ್ತ ಭೂತಗಳನ್ನು ನನ್ನ ದೇಹದಲ್ಲಿಯೂ, ಮನಸ್ಸಿನಲ್ಲಿಯೂ ಇರುವಂತೆಯೇ ಭಾವಿಸಿ ನನ್ನನ್ನು ಒಳಗಿಂದ ಪ್ರೀತಿಸುತ್ತಾ ಯೋಗದಲ್ಲಿ ಬುದ್ಧಿಯನ್ನು, ಶ್ರವಣಾದಿಗಳಲ್ಲಿ ನನ್ನ ಚಿತ್ತವನ್ನು, ಗುಣಪರಿಪೂರ್ಣನಾದ ಪರಬ್ರಹ್ಮನಲ್ಲಿ ನನ್ನ ಮನಸ್ಸನ್ನು ನೆಲೆಗೊಳಿಸುತ್ತೇನೆ.
ವಿಹರಿಷ್ಯಾಮ್ಯನಾಸಕ್ತಃ ಸುಖೀ ಲೋಕಾನ್ನಿರಾಮಯಃ |
ಯಥಾ ಮಾ ತ್ವಂ ಪುನರ್ನೈವಂ ದುಃಖೇಷು ಪ್ರಣಿಧಾಸ್ಯಸಿ ॥ 32 ॥
ಸಮಸ್ತ ಕಾಮನೆಗಳಿಂದಲೂ ದೂರನಾಗಿ, ಪರಬ್ರಹ್ಮನ ಚಿಂತನೆಯಲ್ಲಿಯೇ ವಿಹರಿಸುತ್ತಾ ಯಾವುದೇ ಲೋಕದ ಉಪದ್ರವವಿಲ್ಲದೆ ಸುಖದಿಂದ ವರ್ತಿಸುತ್ತೇನೆ. ಇನ್ನು ಮುಂದೆ ಎಂದಿಗೂ ಇಂತಹ ದುಃಖದ ಕ್ರಿಯೆಗಳಲ್ಲಿ ನನ್ನ ಮನಸ್ಸನ್ನು ತೊಡಗಿಸಿಕೊಳ್ಳೆನು.
ತ್ವಯಾ ಹಿ ಮೇ ಪ್ರಣುನ್ನಸ್ಯ ಗತಿರನ್ಯಾ ನ ವಿದ್ಯತೇ |
ತೃಷ್ಣಾಶೋಕಶ್ರಮಾಣಾಂ ಹಿ ತ್ವಂ ಕಾಮ ಪ್ರಭವಃ ಸದಾ ॥ 33 ॥
ನಿನ್ನಿಂದ ನಾನು ಹೀಗೆ ಪೀಡಿಸಲ್ಪಡುತ್ತಿದ್ದರೆ ನನ್ನ ಬಿಡುಗಡೆಗೆ ದಾರಿಯೇ ಇಲ್ಲದಂತಾಗುತ್ತದೆ. ಎಲೈ ಕಾಮವೇ, ನೀನೇ ನನ್ನ ತೃಷ್ಣೆಗೂ, ಶೋಕಕ್ಕೂ, ಶ್ರಮಕ್ಕೂ ಉತ್ಪತ್ತಿ ಸ್ಥಾನವು.
ಧನನಾಶೋಽಧಿಕಂ ದುಃಖಂ ಮನ್ಯೇ ಸರ್ವಮಹತ್ತರಮ್ |
ಜ್ಞಾತಯೋ ಹ್ಯವಮನ್ಯಂತೇ ಮಿತ್ರಾಣಿ ಚ ಧನಚ್ಯುತಮ್ ॥ 34 ॥
ಧನನಾಶದಿಂದ ಹುಟ್ಟುವ ದುಃಖವು ಎಷ್ಟು ಪ್ರಬಲವೆಂಬುದನ್ನು ನಾನು ಈಗಾಗಲೇ ತಿಳಿದಿದ್ದೇನೆ. ಧನವನ್ನು ಕಳೆದುಕೊಂಡವನನ್ನು ಜ್ಞಾತಿಗಳು ಅವಮಾನಿಸುತ್ತಾರೆ. ಮಿತ್ರರು ಹೀಗಳೆಯುತ್ತಾರೆ.
ಅವಜ್ಞಾನಸಹಸ್ರೈಸ್ತು ದೋಷಾಃ ಕಷ್ಟತರಾಧನೇ |
ಧನೇ ಸುಖಕಲಾ ಯಾ ಚ ಸಾಪಿ ದುಃಖೈರ್ವಿಧೀಯತೇ ॥ 35 ॥
ಧನಹೀನನಾದವನು ಎಲ್ಲಿಗೆ ಹೋದರೂ ಸಾವಿರಾರು ಅವಮಾನಗಳನ್ನು ಎದುರಿಸಬೇಕಾಗುತ್ತದೆ. ಅತ್ಯಂತ ಕಷ್ಟತರವಾದ ಕಠಿಣ ದೋಷಗಳು ತಲೆದೋರುತ್ತವೆ. ಧನದಿಂದ ಉತ್ಪನ್ನವಾಗುವ ಅಲ್ಪಸುಖವಾದರೂ ದುಃಖದಿಂದ ಸಹಿತವಾಗಿಯೇ ಇರುತ್ತದೆ.
ಧನಮಸ್ಯೇತಿ ಪುರುಷಂ ಪುರಾ ನಿಘ್ನಂತಿ ದಸ್ಯವಃ |
ಕ್ಲಿಶ್ಯಂತಿ ವಿವಿಧೈರ್ದಂಡೈರ್ನಿತ್ಯಮುದ್ವೇಜಯಂತಿ ಚ ॥ 36 ॥
ಈ ವ್ಯಕ್ತಿಯಲ್ಲಿ ಧನವಿದೆ ಎಂದು ತಿಳಿದಾಗ ಆ ವ್ಯಕ್ತಿಯನ್ನು ಕಳ್ಳರು ಬಂದು ಪೀಡಿಸುತ್ತಾರೆ, ಹೊಡೆಯುತ್ತಾರೆ. ನಾನಾ ಬಗೆಯಿಂದ ಹಿಂಸಿಸುತ್ತಾರೆ, ಹೆದರಿಸುತ್ತಾರೆ. ನಿತ್ಯವೂ ಉದ್ವೇಗಕ್ಕೆ ಕಾರಣವಾಗುವಂತೆ ಮಾಡುವುದು ಈ ಧನವು.
ಮಂದಲೋಲುಪತಾ ದುಃಖಮಿತಿ ಬುದ್ಧಂ ಚಿರಾನ್ಮಯಾ |
ಯದ್ಯದಾಲಂಬಸೇ ಕಾಮ ತತ್ತದೇವಾನುರುದ್ಧ್ಯಸೇ ॥ 37 ॥
ಈ ಧನವು ಬದುಕಿನಲ್ಲಿ ಅಧಿಕವಾದ ದುಃಖವನ್ನೇ ಕೊಡುತ್ತದೆ ಎಂಬುದು ನನಗೆ ಚೆನ್ನಾಗಿ ತಿಳಿಯಿತು. ಎಲೈ ಕಾಮವೇ, ನಿನಗೆ ಸ್ವಲ್ಪ ಅವಕಾಶವನ್ನು ಕೊಟ್ಟರೂ ಅದರ ಹಿಂದೆ ನನ್ನನ್ನೂ ಸೆಳೆದುಕೊಂಡು ಹೋಗುತ್ತಿ.
ಅತತ್ತ್ವಜ್ಞೋಽಸಿ ಬಾಲಶ್ಚ ದುಸ್ತೋಷೋಽಪೂರಣೋಽನಲಃ |
ನೈವ ತ್ವಂ ವೇತ್ಥ ಸುಲಭಂ ನೈವ ತ್ವಂ ವೇತ್ಥ ದುರ್ಲಭಮ್ ॥ 38 ॥
ನೀನು ಯಥಾರ್ಥಜ್ಞಾನವುಳ್ಳವನಲ್ಲ. ಬಾಲಕನಂತೆ ವರ್ತಿಸುತ್ತಿ. ನಿನ್ನನ್ನು ತೃಪ್ತಿಗೊಳಿಸುವುದು ಅತ್ಯಂತ ಕಷ್ಟವು. ಅಗ್ನಿಯನ್ನು

ತೃಪ್ತಿಗೊಳಿಸಲು ಹೋಗುವ ಮನುಷ್ಯನು ಉರಿಯುವ ಬೆಂಕಿಗೆ ತುಪ್ಪ ಸುರಿದಂತೆ ನಿನ್ನನ್ನು ತೃಪ್ತಿಗೊಳಿಸಲು ಹೊರಟವನು ಮೂರ್ಖನಾಗುತ್ತಾನೆ. ನೀನು ಶಾಂತನಾಗುವುದಿಲ್ಲ. ನೀನು ಯಾವುದಾದರೂ ಒಂದನ್ನು ಬಯಸಿದರೆ ಅದನ್ನು ಸುಲಭ ಎಂದು ತಿಳಿಯುವುದಿಲ್ಲ. ದುರ್ಲಭ ಎಂಬುದನ್ನೂ ತಿಳಿಯುವುದಿಲ್ಲ.

ಪಾತಾಲಮಿವ ದುಷ್ಪೂರೋ ಮಾಂ ದುಃಖೈರ್ಯೋಕ್ತುಮಿಚ್ಛಸಿ |
ನಾಹಮದ್ಯ ಸಮಾವೇಷ್ಟುಂ ಶಕ್ಯಃ ಕಾಮ ಪುನಸ್ತ್ವಯಾ ॥ 39 ॥

ನೀನು ಪಾತಾಳದಂತೆ ಮಹಾ ಹೊಟ್ಟೆಬಾಕ. ಎಷ್ಟು ತುಂಬಿದರೂ ತೃಪ್ತಿ ಇರುವುದಿಲ್ಲ. ನನ್ನನ್ನು ನೀನು ದುಃಖದಲ್ಲಿ ಮುಳುಗಿಸುವುದಕ್ಕಾಗಿಯೇ ನಿರೀಕ್ಷಿಸುತ್ತಿರುವಿ. ಇಂತಹ ನಿನ್ನನ್ನು ನಾನು ಇನ್ನೆಂದಿಗೂ ಆಶ್ರಯಿಸಲಾರೆ.

ನಿರ್ವೇದಮಹಮಾಸಾದ್ಯ ದ್ರವ್ಯನಾಶಾದ್ಯದೃಚ್ಛಯಾ |
ನಿರ್ವೃತಿಂ ಪರಮಾಂ ಪ್ರಾಪ್ಯ ನಾದ್ಯ ಕಾಮಾನ್ ವಿಚಿಂತಯೇ ॥ 40 ॥

ಈ ದಿನ ನನ್ನ ದ್ರವ್ಯವು ಸಂಪೂರ್ಣವಾಗಿ ನಾಶವಾಗಿ ನನ್ನ ವೈರಾಗ್ಯಕ್ಕೆ ಕಾರಣವಾಯಿತು. ಇನ್ನೆಂದಿಗೂ ನಾನು ಕಾಮನೆಗಳನ್ನು ಮನಸ್ಸಿನಲ್ಲಿಯೂ ಚಿಂತಿಸುವುದಿಲ್ಲ.

ಅತಿಕ್ಲೇಶಾನ್ ಸಹಾಮೀಹ ನಾಹಂ ಬುಧ್ಯಾಮ್ಯಬುದ್ಧಿಮಾನ್ |
ನಿಕೃತೋ ಧನನಾಶೇನ ಶಯೇ ಸರ್ವಾಂಗವಿಜ್ವರಃ ॥ 41 ॥

ಇದುವರೆಗೂ ನಿನ್ನಿಂದ ಅನೇಕ ಕಷ್ಟಗಳನ್ನು ಹೊಂದಿರುತ್ತೇನೆ. ಇಷ್ಟು ಕಷ್ಟಗಳನ್ನು ಅನುಭವಿಸಿದ ಬಳಿಕ ತಿಳಿವಳಿಕೆಯನ್ನು ಹೊಂದಿರುತ್ತೇನೆ ಮತ್ತೂ ನಿನ್ನನ್ನು ಅನುಸರಿಸಲು ನಾನು ಬುದ್ಧಿಹೀನನಲ್ಲ. ನಾನು ಗಳಿಸಿದ ಧನವೆಲ್ಲಾ ಈಗ ನಷ್ಟವಾಗಿದೆ. ಇನ್ನು ವೈರಾಗ್ಯವನ್ನೇ ಅವಲಂಬಿಸಿ ಸುಖವಾಗಿ ನಿದ್ರಿಸುತ್ತೇನೆ.

ಪರಿತ್ಯಜಾಮಿ ಕಾಮ ತ್ವಾಂ ಹಿತ್ವಾ ಸರ್ವಮನೋಗತೀಃ |
ನ ತ್ವಂ ಮಯಾ ಪುನಃ ಕಾಮ ನಸ್ಯೋತೇನೇವ ರಂಸ್ಯಸೇ ॥ 42 ॥

ನನ್ನ ಮನಸ್ಸಿನ ಸಕಲವಿಧ ಆಸೆಗಳನ್ನೂ ಬಿಟ್ಟಿರುತ್ತೇನೆ. ಮೂಗುದಾರವನ್ನು ಬಿಗಿದ ಎತ್ತಿನಂತೆ ನೀನು ನನ್ನನ್ನು ಇನ್ನು ಮುಂದೆ ಭಾವಿಸಬೇಡ. ನಿನ್ನ ಅತಿಕ್ರಮಣಕ್ಕೆ ನಾನು ತುತ್ತಾಗಲಾರೆ.

ಕ್ಷಮಿಷ್ಯೇಽಕ್ಷಮಮಾಣಾನಾಂ ನ ಹಿಂಸಿಷ್ಯೇ ಚ ಹಿಂಸಿತಃ |
ದ್ವೇಷ್ಯಮುಕ್ತಃ ಪ್ರಿಯಂ ವಕ್ಷ್ಯಾಮ್ಯನಾದೃತ್ಯ ತದಪ್ರಿಯಮ್ ॥ 43 ॥

ಇನ್ನು ಮುಂದೆ ನಾನು ನನ್ನನ್ನು ಹಿಂಸಿಸಿದವರನ್ನು ಪ್ರತಿಯಾಗಿ ಹಿಂಸಿಸೆನು. ನನ್ನನ್ನು ಕ್ಷಮಿಸದಿದ್ದರೂ ಅವರ ವಿಷಯದಲ್ಲಿ ನಾನು ಕ್ಷಮಿಸುತ್ತೇನೆ. ನನ್ನನ್ನು ನಿಂದಿಸಿದವರನ್ನು ನಿಂದಿಸದೆ ಪ್ರಿಯವಾದ ಮಾತುಗಳನ್ನೇ ಆಡುತ್ತೇನೆ. ಬೇರೆಯವರ ಅಪ್ರಿಯವಾಕ್ಯಗಳನ್ನು ಮನಸ್ಸಿಗೆ ತಂದುಕೊಳ್ಳುವುದಿಲ್ಲ.

ತೃಪ್ತಃ ಸ್ವಸ್ಥೇಂದ್ರಿಯೋ ನಿತ್ಯಂ ಯಥಾಲಬ್ಧೇನ ವರ್ತಯನ್ |
ನ ಸಕಾಮಂ ಕರಿಷ್ಯಾಮಿ ತ್ವಾಮಹಂ ಶತ್ರುಮಾತ್ಮನಃ ॥ 44 ॥

ನಿತ್ಯವೂ ತೃಪ್ತನಾಗಿ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಸಿಕ್ಕಿದ್ದರಲ್ಲಿ ಜೀವನ ಕಳೆಯುತ್ತಾ ವರ್ತಿಸುತ್ತೇನೆ. ಎಲೈ ಕಾಮವೇ, ನನಗೆ ಶತ್ರುವಾದ ನಿನ್ನ ಕೋರಿಕೆಯನ್ನು ಇನ್ನು ಮೇಲೆ ನಾನು ಈಡೇರಿಸುತ್ತೇನೆಂದು ತಿಳಿಯಬೇಡ.

ನಿರ್ವೇದಂ ನಿರ್ವೃತಿಂ ತೃಪ್ತಿಂ ಶಾಂತಿಂ ಸತ್ಯಂ ದಮಂ ಕ್ಷಮಾಮ್ |
ಸರ್ವಭೂತದಯಾಂ ಚೈವ ವಿದ್ಧಿ ಮಾಂ ಶರಣಾಗತಮ್ ॥ 45 ॥

ಎಲೈ ಕಾಮವೇ, ಇನ್ನು ನಾನು ವಿರಕ್ತಿ, ಶಾಂತಿ, ತೃಪ್ತಿ, ಸತ್ಯ, ದಮ, ಕ್ಷಮೆ, ಸರ್ವಭೂತದಯೆ - ಈ ಗುಣಗಳನ್ನೇ ಆಶ್ರಯಿಸಿರುವವನಾಗಿ ತಿಳಿ.

ತಸ್ಮಾತ್ ಕಾಮಶ್ಚ ಲೋಭಶ್ಚ ತೃಷ್ಣಾ ಕಾರ್ಪಣ್ಯಮೇವ ಚ |
ತ್ಯಜಂತು ಮಾಂ ಪ್ರತಿಷ್ಠಂತಂ ಸತ್ತ್ವಸ್ಥೋ ಹ್ಯಸ್ಮಿ ಸಾಂಪ್ರತಮ್ ॥ 46

ಬಿಡುಗಡೆಯ ಮಾರ್ಗದಲ್ಲಿ ಸಾಗುತ್ತಿರುವ ನನ್ನನ್ನು ಕಾಮವಾಗಲೀ, ಲೋಭವಾಗಲೀ, ಆಸೆಯಾಗಲೀ, ಕಾರ್ಪಣ್ಯವಾಗಲೀ ಮುಟ್ಟಲಾರವು. ನಾನು ಕಾಮ- ಕ್ರೋಧಾದಿಗಳನ್ನು ಮೀರಿ ಸತ್ವಗುಣವನ್ನು ಆಶ್ರಯಿಸಿಕೊಂಡು ಈಗ ಇರುತ್ತೇನೆ.

ಪ್ರಹಾಯ ಕಾಮಂ ಲೋಭಂ ಚ ಕ್ರೋಧಂ ಪಾರುಷ್ಯಮೇವ ಚ |
ನಾದ್ಯ ಲೋಭವಶಂ ಪ್ರಾಪ್ತೋ ದುಃಖಂ ಪ್ರಾಪ್ಸ್ಯಾಮ್ಯನಾತ್ಮವಾನ್ ॥

ಇನ್ನು ಮುಂದೆ ಕಾಮ, ಲೋಭ, ಕ್ರೋಧ, ಕಾಠಿಣ್ಯಗಳಿಗೆ ನಾನು ತುತ್ತಾಗುವುದಿಲ್ಲ. ಲೋಭಕ್ಕೆ ವಶನಾಗಿ ಎಂದಿಗೂ ಆತ್ಮಗ್ಲಾನಿಯನ್ನು ಉಂಟುಮಾಡಿಕೊಳ್ಳುವುದಿಲ್ಲ. ದುಃಖಕ್ಕೆ ತುತ್ತಾಗುವುದಿಲ್ಲ.

ಯದ್ಯತ್ ತ್ಯಜತಿ ಕಾಮಾನಾಂ ತತ್ ಸುಖಸ್ಯಾಭಿಪೂರ್ಯತೇ |
ಕಾಮಸ್ಯ ವಶಗೋ ನಿತ್ಯಂ ದುಃಖಮೇವ ಪ್ರಪದ್ಯತೇ ॥ 48 ॥

ಮನುಷ್ಯನು ಕಾಮವನ್ನು ಬಿಡುತ್ತಾ ಬಂದಂತೆ ಸುಖವನ್ನು ಹೆಚ್ಚಿಸಿಕೊಳ್ಳುತ್ತಾನೆ. ಕಾಮವಶನಾದವನು ಯಾವಾಗಲೂ ದುಃಖವನ್ನೇ ಹೆಚ್ಚಿಸಿಕೊಳ್ಳುತ್ತಾನೆ.

ಕಾಮಾನ್ ವ್ಯುದಸ್ಯ ಧುನುತೇ ಯತ್ಕಿಂಚಿತ್ ಪುರುಷೋ ರಜಃ |
ಕಾಮಕ್ರೋಧೋದ್ಭವಂ ದುಃಖಮಹ್ರೀರರತಿರೇವ ಚ ॥ 49 ॥

ಕಾಮಕ್ಕೆ ಸಂಬಂಧಪಟ್ಟದ್ದೆಲ್ಲವೂ ರಜೋಗುಣನಿಮಿತ್ತವಾಗಿದೆ. ಅದೆಲ್ಲವೂ ತ್ಯಾಜ್ಯವು. ದುಃಖ, ಲಜ್ಜೆ ಇಲ್ಲದಿರುವುದು, ಅತೃಪ್ತಿ ಇವೆಲ್ಲವೂ ಕಾಮ- ಕ್ರೋಧಗಳಿಂದಲೇ ಉತ್ಪತ್ತಿಯನ್ನು ಹೊಂದುತ್ತವೆ.

ಏಷ ಬ್ರಹ್ಮಪ್ರವಿಷ್ಟೋಽಹಂ ಗ್ರೀಷ್ಮೇ ಶೀತಮಿವ ಹ್ರದಮ್ |

ಶಾಮ್ಯಾಮಿ ಪರಿನಿರ್ವಾಮಿ ಸುಖಮಾಸೇ ಚ ಕೇವಲಮ್ ॥ 50 ॥
ಆಹಾ! ನಾನು ಧನ್ಯನು. ಈಗ ನಾನು ಕಾಮವನ್ನು ಬಿಟ್ಟಿದ್ದೇನೆ. ತೀವ್ರವಾದ ಕಡು ಬಿಸಿಲಿನಲ್ಲಿ ಬಳಲಿದವನು ತಂಪಾದ ನೀರಿನ ಮಡುವನ್ನು ಆಶ್ರಯಿಸಿದಂತೆ ನನ್ನನ್ನು ಘಾಸಿಗೊಳಿಸುವ ಕಾಮವನ್ನು ತ್ಯಾಗ ಮಾಡಿ ಪರಬ್ರಹ್ಮನೆಂಬ ತಂಪಾದ ಹ್ರದವನ್ನು (ಕೊಳ)ಆಶ್ರಯಸಿದ್ದೇನೆ. ಕರ್ಮಗಳನ್ನು ದಾಟಿದ್ದೇನೆ, ದುಃಖಗಳನ್ನು ನೀಗಿದ್ದೇನೆ. ಕೇವಲ ಸುಖದಲ್ಲಿ ಇದ್ದೇನೆ.
ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ ಸುಖಮ್ |
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥ 51 ॥
ಲೋಕದಲ್ಲಿ ಕಾಮದಿಂದ ಸಿಗುವ ಸುಖವಾಗಲೀ, ದೇವಲೋಕದ ಮಹಾಸುಖವಾಗಲೀ, ತೃಷ್ಣೆಯನ್ನು ತ್ಯಾಗ ಮಾಡುವುದರಿಂದ ಉಂಟಾಗುವ ಸುಖದ ಹದಿನಾರನೆಯ ಒಂದು ಕಲೆಗೂ (ಅಂಶಕ್ಕೂ) ಸಾಟಿಯಾಗದು.
ಆತ್ಮನಾ ಸಪ್ತಮಂ ಕಾಮಂ ಹತ್ವಾ ಶತ್ರುಮಿವೋತ್ತಮಮ್ |
ಪ್ರಾಪ್ಯಾವಧ್ಯಂ ಬ್ರಹ್ಮಪುರಂ ರಾಜೇವ ಸ್ಯಾಮಹಂ ಸುಖೀ ॥ 52 ॥
ಹಸಿವು, ನೀರಡಿಕೆ, ಜರಾ, ಮರಣ, ವ್ಯಾಧಿ, ಉತ್ಪತ್ತಿ ಮೊದಲಾದ ಷಡೂರ್ಮಿಗಳೊಡನೆ ಏಳನೆಯದ್ದಾದ ಕಾಮನೆಯ ಮನಸ್ಸನ್ನು ಶತ್ರುವೆಂದು ಕೊಂದು ಈಗ ನಾನು ಅವಧ್ಯವಾದ ಬ್ರಹ್ಮಪುರವನ್ನು ಸೇರಿ ಅಲ್ಲಿ ರಾಜನಂತೆ ಸುಖದಿಂದ ವಾಸಿಸುತ್ತಿದ್ದೇನೆ.
ಏತಾಂ ಬುದ್ಧಿಂ ಸಮಾಸ್ಥಾಯ ಮಂಕಿನಿರ್ವೇದಮಾಗತಃ |
ಸರ್ವಾನ್ ಕಾಮಾನ್ ಪರಿತ್ಯಜ್ಯ ಪ್ರಾಪ್ಯ ಬ್ರಹ್ಮ ಮಹತ್ ಸುಖಮ್ ॥
ಎಲೈ ಧರ್ಮರಾಜನೇ, ಮಂಕಿ ಎಂಬ ಬ್ರಾಹ್ಮಣನು ಶುಕಮುನಿಯಿಂದ ಬೋಧಿತವಾದ ಈ ವೈರಾಗ್ಯಬುದ್ಧಿಯನ್ನು ಆಶ್ರಯಿಸಿ ಎಲ್ಲದರಲ್ಲಿಯೂ ವಿರಕ್ತನಾಗಿ, ಸಮಸ್ತ ಕಾಮನೆಗಳನ್ನು ತೊರೆದು ಪರಮ ಸುಖವೆನಿಸಿದ ಪರಬ್ರಹ್ಮನನ್ನೇ ಪಡೆದನು.
ದಮ್ಯನಾಶಕೃತೇ ಮಂಕಿರಮರತ್ವಂ ಕಿಲಾಗಮತ್ |
ಅಚ್ಛಿನತ್ ಕಾಮಮೂಲಂ ಸ ತೇನ ಪ್ರಾಪ ಮಹತ್ ಸುಖಮ್ ॥54॥
ತನ್ನ ಎರಡು ಹೋರಿಗಳನ್ನು ಕಳೆದುಕೊಂಡದ್ದೇ ಮೂಲವಾಗಿ ವೈರಾಗ್ಯವನ್ನು ಪಡೆದುಕೊಂಡು ಅದರಿಂದ ಮಂಕಿಯು ಅಮೃತತ್ವವನ್ನು ಪಡೆದನು. ಕಾಮವನ್ನು ಬೇರು ಸಹಿತ ಕಿತ್ತುಹಾಕಿದುದರಿಂದ ಉತ್ತಮಗತಿಯನ್ನು ಹೊಂದುವಂತಾಯಿತು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ವಿದೇಹರಾಜೇನ ಜನಕೇನ ಪ್ರಶಾಮ್ಯತಾ ॥ 55 ॥
ಇದೇ ವಿಷಯದಲ್ಲಿ ವಿದೇಹರಾಜನಾದ ಜನಕನು ಶಾಂತಿಯನ್ನಾಶ್ರಯಿಸಿ ಮೋಕ್ಷದ ದೃಷ್ಟಿಯಿಂದ ಹಾಡಿದ ಗೀತೆಯನ್ನು ಉದಾಹರಿಸುತ್ತಾರೆ.
ಅನಂತಂ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ |
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ ॥ 56 ॥
ಈ ಗೀತಾರ್ಥವಾದರೂ- `ನನ್ನ ಧನವಾದರೂ ಅಪಾರವಾದುದು. ಆದರೆ ಧನದ ಒಂದು ಕಣವೂ ನನ್ನದ್ದಲ್ಲ. ಈ ಮಿಥಿಲಾಪಟ್ಟಣವೇ ಪೂರ್ಣವಾಗಿ ಸುಟ್ಟುಹೋದರೂ ನನಗೆ ಸಂಬಂಧಿಸಿದ ಯಾವ ಒಂದು ಪದಾರ್ಥವೂ ಸುಟ್ಟುಹೋಗುವುದಿಲ್ಲ'.
ಅತ್ರೈವೋದಾಹರಂತೀಮಂ ಬೋಧ್ಯಸ್ಯ ಪದಸಂಚಯಮ್ |
ನಿರ್ವೇದಂ ಪ್ರತಿ ವಿನ್ಯಸ್ತಂ ಪ್ರತಿಬೋಧ ಯುಧಿಷ್ಠಿರ ॥ 57 ॥
ಇದೇ ವೈರಾಗ್ಯದ ವಿಷಯದಲ್ಲಿ ಬೋಧ್ಯನೆಂಬುವನು ಹೇಳಿದ ರಮಣೀಯ ಪದಪುಂಜಗಳನ್ನು ಹೀಗೆ ಉದಾಹರಿಸುತ್ತಾರೆ. ಯುಧಿಷ್ಠಿರನೇ ಅದನ್ನು ತಿಳಿಸುತ್ತೇನೆ, ಕೇಳು.
ಬೋಧ್ಯಂ ದಾಂತಮೃಷಿಂ ರಾಜಾ ನಹುಷಃ ಪರ್ಯಪೃಚ್ಛತ |
ನಿರ್ವೇದಾಚ್ಛಾಂತಿಮಾಪನ್ನಂ ಶಾಂತಂ ಪ್ರಜ್ಞಾನತರ್ಪಿತಮ್ ॥ 58 ॥
ಉಪದೇಶಂ ಮಹಾಪ್ರಾಜ್ಞ ಶಮಸ್ಯೋಪದಿಶಸ್ವ ಮೇ |
ಕಾಂ ಬುದ್ಧಿಂ ಸಮನುಧ್ಯಾಯ ಶಾಂತಶ್ಚರಸಿ ನಿರ್ವೃತಃ ॥ 59 ॥
ಒಮ್ಮೆ ಯಯಾತಿರಾಜನು ಶಾಂತನೂ, ಶಾಸ್ತ್ರವಿದನೂ ಆದ ಬೋಧ್ಯನೆಂಬ ಋಷಿಯನ್ನು ನೋಡಿ ಹೀಗೆ ಪ್ರಶ್ನಿಸಿದನು. ಎಲೈ ಮಹಾಪ್ರಾಜ್ಞನೇ, ಅತ್ಯಂತ ಶಾಂತಿಯನ್ನು ಹೊಂದಿರುವ ನೀನು ನನಗೂ ಶಾಂತಿಯನ್ನು ಉಪದೇಶಿಸು. ಯಾವ ಬುದ್ಧಿಯಿಂದ ಶಾಂತಿಯನ್ನು ಹಿಡಿದು ಸುಖವನ್ನು ಹೊಂದಿರುವೆಯೋ ಅದನ್ನೂ ನನಗೆ ತಿಳಿಸು.
ಬೋಧ್ಯಃ
ಉಪದೇಶೇನ ವರ್ತಾಮಿ ನಾನುಶಾಸ್ಮೀಹ ಕಂಚನ |
ಲಕ್ಷಣಂ ತಸ್ಯ ವಕ್ಷ್ಯೇಽಹಂ ತತ್ ಸ್ವಯಂ ಪ್ರವಿಮೃಶ್ಯತಾಮ್ ॥ 60 ॥
ಬೋಧ್ಯ ಮಹಾರಾಜನೇ, ನಾನು ಇನ್ನೊಬ್ಬರ ಉಪದೇಶದಂತೆ ನಡೆದುಕೊಳ್ಳುತ್ತಿದ್ದೇನೆ ಹೊರತು ಬೇರೆ ಯಾರಿಗೂ ಯಾವಾಗಲೂ ಬಹಳವಾದ ಉಪದೇಶಗಳನ್ನು ಮಾಡಿದವನಲ್ಲ. ನೀನು ಉಪದೇಶಿಸುವ ವಸ್ತುಗಳನ್ನು ತಿಳಿಸುತ್ತೇನೆ. ಉಪದೇಶಿಸುವ ಗುರುಗಳು ಯಾರು ಎಂದು ತಿಳಿಸುತ್ತೇನೆ. ಅಂತಹ ವ್ಯಕ್ತಿಗಳನ್ನು ನಿನ್ನ ಬುದ್ಧಿಯಿಂದಲೇ ವಿಮರ್ಶಿಸಿ ಅಲ್ಲಿಂದ ತಿಳಿಯಬೇಕಾದ ತತ್ವವೇನೆಂಬುದನ್ನು ನೀನೇ ತಿಳಿದುಕೊ.
ಪಿಂಗಲಾ ಕುರರಃ ಸರ್ಪಃ ಸಾರಂಗಾನ್ವೇಷಣಂ ವನೇ |
ಇಷುಕಾರಃ ಕುಮಾರೀ ಚ ಷಡೇತೇ ಗುರವೋ ಮಮ ॥ 61 ॥
ಪಿಂಗಲಾ ಎಂಬ ವೇಶ್ಯೆ, ಕುರರ ಪಕ್ಷಿ, ಸರ್ಪ, ಕಾಡು ದುಂಬಿ, ಬಾಣಗಾರ, ಕುಮಾರಿ ಎಂಬ ಆರು ಮಂದಿ ನನಗೆ ಗುರುಗಳಾಗಿದ್ದಾರೆ. ವ್ಯಾಖ್ಯಾನ ವಿಶೇಷ ಪಿಂಗಲೆಯು ಗ್ರಾಮ್ಯಭೋಗಗಳ ಆಸೆಯನ್ನು ಬಿಡಬೇಕು ಎನ್ನುವ ವಿಷಯದಲ್ಲಿ ಗುರುವಾಗಿದ್ದಾಳೆ. ಕುರರ

ಪಕ್ಷಿಯು ತನಗೆ ಆಯಾಸವನ್ನುಂಟು ಮಾಡುವ ಕರ್ಮಗಳನ್ನು ಮಾಡಬಾರದು ಎನ್ನುವ ವಿಷಯದಲ್ಲಿ ಗುರುವಾಗಿದೆ. ಹೀಗೆ ಬೇರೆ ವ್ಯಕ್ತಿಗಳ ಗುರುತ್ವವನ್ನು ಅರ್ಥಮಾಡಿಕೊಳ್ಳಬೇಕು. ಈ ರೀತಿಯಾಗಿ ಬೋಧ್ಯರು ಗುರುಗಳ ಆದೇಶವಿಲ್ಲದೆ ಇದ್ದುದರಿಂದ ಯಯಾತಿಗೆ ತಾನು ಉಪದೇಶಿಸದೆ ತನಗೆ ಸಂಬಂಧಪಟ್ಟ ಗುರುಗಳನ್ನು ಮಾತ್ರ ತಿಳಿಸುತ್ತಾನೆ ಹೊರತು ಅವರಿಂದ ಏನನ್ನು ಕಲಿತೆ ಎಂಬುದನ್ನು ಯಯಾತಿಗೆ ಹೇಳುವುದಿಲ್ಲ.

ಇಷ್ಟು ಅಭಿಪ್ರಾಯವು ಲಕ್ಷಾಲಂಕಾರದಲ್ಲಿ ಹೇಳಲ್ಪಟ್ಟಿದೆ. ಈ ಅಧ್ಯಾಯದಲ್ಲಿ ಮತ್ತೂ ಹತ್ತು ಶ್ಲೋಕಗಳನ್ನು ಅಧಿಕವಾಗಿ ಕೆಲವರು ಸೇರಿಸಿದ್ದಾರೆ. ಆದರೆ ಅರವತ್ತನೆಯ ಶ್ಲೋಕದಲ್ಲಿ `ತತ್ ಸ್ವಯಂ ಪ್ರವಿಮೃಶ್ಯತಾಮ್' ಈ ವ್ಯಕ್ತಿಗಳಿಂದ ಲಭಿಸುವ ಉಪದೇಶವೇನೆಂಬುದನ್ನು ನೀನೇ ವಿಮರ್ಶಿಸಿಕೊ ಬೋಧ್ಯರು ಹೇಳಿದ ಬಳಿಕ ಈ ಗುರುಗಳಿಂದ ಬರುವ ಈ ಉಪದೇಶವನ್ನು ವಿವರಿಸುವ ಶ್ಲೋಕಗಳು ಇಲ್ಲಿ ಅಪ್ರಸ್ತುತವೆನಿಸುತ್ತವೆ, ಅಧಿಕವೆನಿಸುತ್ತವೆ. ಈ ವಿಷಯದ ಬಗ್ಗೆ ಹೆಚ್ಚಿನ ಅಭಿಪ್ರಾಯವನ್ನು ಭಾಗವತದ ಏಕಾದಶಸ್ಕಂಧದಲ್ಲಿ ನೋಡಬಹುದು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

ಐದನೆಯ ಅಧ್ಯಾಯ

ಭೀಷ್ಮರು ಧರ್ಮರಾಜನಿಗೆ ಪ್ರಪಂಚವು ಅನಿತ್ಯವೆಂಬ ವಿಚಾರವನ್ನು,
ಪರಮಾತ್ಮನ ಜ್ಞಾನವನ್ನು ಸಂಪಾದಿಸುತ್ತಾ ಅದಕ್ಕೆ ಪೂರಕವಾಗಿ ವೈರಾಗ್ಯವನ್ನು ಹೊಂದಬೇಕೆಂಬುದನ್ನು ತಿಳಿಸುತ್ತಾ,
ಪ್ರಹ್ಲಾದ-ಅಜಗರಮುನಿಗೆ ನಡೆದ ಸಂವಾದವನ್ನು ತಿಳಿಸಿದುದು.

ಯುಧಿಷ್ಠಿರಃ
ಕೇನ ವೃತ್ತೇನ ವೃತ್ತಜ್ಞ ವೀತಶೋಕಶ್ಚರೇನ್ಮಹೀಮ್ ।
ಕಿಂ ಚ ಕುರ್ವನ್ನರೋ ಲೋಕೇ ಪ್ರಾಪ್ನೋತಿ ಪರಮಾಂ ಗತಿಮ್ ॥ 1 ॥
ಯುಧಿಷ್ಠಿರ ಪಿತಾಮಹನೇ, ಮನುಷ್ಯನು ಯಾವ ನಡತೆಯನ್ನು ಅವಲಂಬಿಸಿದರೆ ದುಃಖವನ್ನು ಪರಿಹರಿಸಿಕೊಂಡು ಭೂಮಿಯಲ್ಲಿ ಶಾಂತಿಯಿಂದ ಜೀವನ ನಡೆಸುತ್ತಾನೋ ಮತ್ತು ಯಾವ ಕಾರ್ಯದಿಂದ ಉತ್ತಮ ಗತಿಯನ್ನು ಹೊಂದುತ್ತಾನೋ ಅದನ್ನು ತಿಳಿಸಿರಿ.

ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಪ್ರಹ್ಲಾದಸ್ಯ ಚ ಸಂವಾದಂ ಮುನೇರಾಜಗರಸ್ಯ ಚ ॥ 2 ॥
ಭೀಷ್ಮ ಎಲೈ ಮಹಾರಾಜನೇ, ಇದೇ ವಿಷಯದಲ್ಲಿ ಪ್ರಹ್ಲಾದರಾಜನಿಗೂ ಮತ್ತು ಅಜಗರಮುನಿಗೂ ನಡೆದ ಸಂವಾದವಿದೆ.
ಪುರಾತನವಾದ ಇತಿಹಾಸವನ್ನು ಈ ನಿನ್ನ ಪ್ರಶ್ನೆಗೆ ನಿದರ್ಶನವಾಗಿ ಹೇಳುತ್ತೇನೆ.
ಚರಂತಂ ಬ್ರಾಹ್ಮಣಂ ಕಂಚಿತ್ ಕಲ್ಯಚಿತ್ತಮನಾಮಯಮ್ ।
ಪಪ್ರಚ್ಛ ರಾಜನ್ ಪ್ರಹ್ಲಾದೋ ಬುದ್ಧಿಮಾನ್ ಪ್ರಾಜ್ಞಸಮ್ಮತಃ ॥ 3 ॥
ಒಂದು ಬಾರಿ ಧೀಮಂತನಾದ ಪ್ರಹ್ಲಾದರಾಜನು ರಾಗ-ದ್ವೇಷಗಳಿಗೆ ತುತ್ತಾಗದ, ಸಮಗ್ರವಾದ ಮನಸ್ಸನ್ನು ಹೊಂದಿರುವ,
ಲೋಕಸಂಚಾರ ಮಾಡುತ್ತಿರುವ ಒಬ್ಬ ಬ್ರಾಹ್ಮಣನನ್ನು ಕಂಡು ಹೀಗೆ ಪ್ರಶ್ನೆ ಮಾಡುತ್ತಾನೆ.
ಸ್ವಸ್ಥಃ ಶಕ್ತೋ ಮೃದುರ್ದಾಂತೋ ನಿರ್ವಿವಿತ್ಸೋಽನಸೂಯಕಃ ।
ಸುವಾಗ್ ಬಹುಮತೋ ಲೋಕೇ ಪ್ರಾಜ್ಞಶ್ಚರಸಿ ಬಾಲವತ್ ॥ 4 ॥
ಎಲೈ ವಿಪ್ರೋತ್ತಮನೇ, ನೀನು ಯಾವುದೇ ಉದ್ವಿಗ್ನವಿಲ್ಲದ ಮನಸ್ಸುಳ್ಳವನಾಗಿರುವಿ, ಶಕ್ತನಾಗಿರುವಿ. ಮೃದುಸ್ವಭಾವದವನು, ಇಂದ್ರಿಯನಿಗ್ರಹವುಳ್ಳವನು ಆಗಿರುವಿ. ಯಾವ ಕಾರ್ಯಗಳಲ್ಲಿಯೂ ಅತಿಯಾದ ಆಸೆಗಳಿಲ್ಲ. ಇತರರಲ್ಲಿ ಹೊಟ್ಟೆಕಿಚ್ಚಿರುವುದಿಲ್ಲ. ಪ್ರಿಯವಾಕ್ಯವನ್ನೇ ಹೇಳುತ್ತಿರುವಿ. ಎಲ್ಲರಿಗೂ ಘನ್ಯನಾಗಿರುವಿ. ಇಂತಹ ಪ್ರಾಜ್ಞನಾದ ನೀನು ಮಕ್ಕಳಂತೆ ಸಂಚರಿಸುತ್ತಿರುವಿ.
ನೈವ ಪ್ರಾರ್ಥಯಸೇ ಲಾಭಂ ನಾಲಾಭೇಷ್ವನುಶೋಚಸಿ ।
ನಿತ್ಯತೃಪ್ತ ಇವ ಬ್ರಹ್ಮನ್ನ ಕಿಂಚಿದವಮನ್ಯಸೇ ॥ 5 ॥
ನೀನು ಲಾಭವನ್ನು ಬಯಸುತ್ತಿಲ್ಲ, ನಷ್ಟಕ್ಕಾಗಿ ದುಃಖಿಸುತ್ತಿಲ್ಲ. ಲೋಕದಲ್ಲಿ ಏನನ್ನೂ ಬಯಸದೆ ನಿತ್ಯತೃಪ್ತನಾಗಿ ಬಾಳುತ್ತಿರುವೆ. ಯಾರನ್ನೂ ಕೀಳಾಗಿ ಕಾಣುತ್ತಿಲ್ಲ.
ಸ್ರೋತಸಾ ಹ್ರಿಯಮಾಣಾಸು ಪ್ರಜಾಸ್ವವಿಮನಾ ಇವ ।
ಧರ್ಮಕಾಮಾರ್ಥಕಾರ್ಯೇಷು ಕೂಟಸ್ಥ ಇವ ಲಕ್ಷ್ಯಸೇ ॥ 6 ॥
ಲೋಕವೆಲ್ಲವೂ ಕಾಮಪ್ರವಾಹದಲ್ಲಿ ತಡೆಯಿಲ್ಲದಂತೆ ಹೊಡೆದುಕೊಂಡು ಹೋಗುತ್ತಿರುವಾಗ ನೀನು ಮಾತ್ರ ಧರ್ಮ-ಕಾಮಾರ್ಥಕಾರ್ಯಗಳಲ್ಲಿ ಆಕಾಶದಂತೆ ಅಸಂಗನಾಗಿ ಕಾಣಿಸುತ್ತಿರುವಿ.
ನಾನುತಿಷ್ಠಸಿ ಧರ್ಮಾರ್ಥೌ ನ ಕಾಮೇ ಚಾಪಿ ವರ್ತಸೇ ।
ಇಂದ್ರಿಯಾರ್ಥಾನನಾದೃತ್ಯ ಮುಕ್ತಶ್ಚರಸಿ ಸಾಕ್ಷಿವತ್ ॥ 7 ॥
ಧರ್ಮವನ್ನಾಗಲೀ, ಅರ್ಥವನ್ನಾಗಲೀ, ಕಾಮವನ್ನಾಗಲೀ ನೀನು ಬಯಸುವಂತೆ ಕಾಣುತ್ತಿಲ್ಲ. ಇಂದ್ರಿಯಗಳಿಗೆ ಬೇಕಾದ ಪದಾರ್ಥಗಳನ್ನು ಧಿಕ್ಕರಿಸಿ ಮುಕ್ತನಂತೆ ಸಂಚರಿಸುತ್ತಿರುವಿ. ಸ್ವರೂಪ ಪ್ರಜ್ಞೆಯಿಂದಲೇ ಸಂಚರಿಸುತ್ತಿರುವಿ.
ಕಾ ನು ಪ್ರಾಜ್ಞಾ ಶ್ರುತಂ ವಾ ಕಿಂ ವೃತ್ತಿರ್ವಾ ಕಾ ನು ತೇ ಮುನೇ ।
ಕ್ಷಿಪ್ರಮಾಚಕ್ಷ್ವ ಮೇ ಬ್ರಹ್ಮನ್ ಶ್ರೇಯೋ ಯದಿಹ ಮನ್ಯಸೇ ॥ 8 ॥

ಈ ಗುಣಗಳೆಲ್ಲಾ ನಿನಗೆ ಹೇಗೆ ಬಂದವು? ನಿನ್ನ ಪ್ರಜ್ಞೆ ಎಂತಹದ್ದು? ನಿನ್ನ ವಿದ್ಯೆ ಏನು? ನಿನ್ನ ವೃತ್ತಿ ಏನು? ಬ್ರಾಹ್ಮಣನೇ, ತಡಮಾಡದೆ ನನಗೂ ಈ ರಹಸ್ಯವನ್ನು ತಿಳಿಸು. ನನಗೇನಾದರೂ ಇದರಿಂದ ಶ್ರೇಯಸ್ಸುಂಟಾಗುವುದಾದರೆ ಉಪದೇಶಿಸು.

ಅನುಯುಕ್ತಃ ಸ ಮೇಧಾವೀ ಲೋಕಧರ್ಮವಿಧಾನವಿತ್ ।
ಉವಾಚ ಶ್ಲಕ್ಷ್ಣಯಾ ವಾಚಾ ಪ್ರಹ್ಲಾದಮನಪಾರ್ಥಯಾ ॥ 9 ॥

ಲೋಕಧರ್ಮವನ್ನು ಚೆನ್ನಾಗಿ ಅರಿತಿರುವ ಮೇಧಾವಿಯೂ ಆದ ಅಜಗರ ಬ್ರಾಹ್ಮಣನು ಪ್ರಹ್ಲಾದನನ್ನು ಕುರಿತು ಮಧುರವಾದ ಮಾತುಗಳಿಂದ ಹೀಗೆ ಹೇಳಿದನು.

ಪಶ್ಯನ್ ಪ್ರಹ್ಲಾದ ಭೂತಾನಾಮುತ್ಪತ್ತಿಮನಿಮಿತ್ತತಃ ।
ಹ್ರಾಸಂ ವೃದ್ಧಿಂ ವಿನಾಶಂ ಚ ನ ಪ್ರಹೃಷ್ಯೇ ನ ಚ ವ್ಯಥೇ ॥ 10 ॥
ಸ್ವಭಾವಾದೇವ ಸಂದೃಶ್ಯ ವರ್ತಮಾನಾಃ ಪ್ರವೃತ್ತಯಃ ।
ಸ್ವಭಾವನಿರತಾಃ ಸರ್ವಾಃ ಪರಿತಪ್ಯೇ ನ ಕೇನಚಿತ್ ॥ 11 ॥

ಪ್ರಹ್ಲಾದನೇ, ನೋಡು. ಭೂತಗಳ ಜನ್ಮ-ವೃದ್ಧಿ-ಕ್ಷಯಗಳು, ಅವುಗಳ ನಾಶವು ನಾವ್ಯಾರೂ ಕಾರಣವಾಗದಿದ್ದರೂ ನಡೆಯುತ್ತಲೇ ಇವೆ. ಇದನ್ನು ತಿಳಿದ ನಾನು ದುಃಖಿಸುವುದೂ ಇಲ್ಲ, ಸಂತೋಷಿಸುವುದೂ ಇಲ್ಲ. ಸಮಸ್ತ ಪ್ರಾಣಿಗಳ ಪ್ರವೃತ್ತಿಗಳೆಲ್ಲವೂ ಅವುಗಳ ಸ್ವಭಾವಕ್ಕೆ ತಕ್ಕಂತೆ ಉಂಟಾಗುತ್ತವೆ. ಲೋಕದಲ್ಲಿ ಎಲ್ಲ ವಸ್ತುಗಳು ತಮ್ಮ ತಮ್ಮ ಸ್ವಭಾವವನ್ನು ಆಶ್ರಯಿಸಿಕೊಂಡು ಇವೆಯೇ ಹೊರತು ಯಾರೂ ಈ ಸ್ವಭಾವವಾದವುಗಳಿಗೆ ಕಾರಣಕರ್ತರಾಗಿರುವುದಿಲ್ಲ.

ಪಶ್ಯನ್ ಪ್ರಹ್ಲಾದ ಸಂಯೋಗಾನ್ ವಿಪ್ರಯೋಗಪರಾಯಣಾನ್ ।
ಸಂಚಯಾಂಶ್ಚ ವಿನಾಶಾಂತಾನ್ನ ಕ್ವಚಿದ್ ವಿದಧೇ ಮನಃ ॥ 12 ॥

ಪ್ರಹ್ಲಾದನೇ, ಕೆಲವೊಂದು ವಸ್ತುಗಳು ಕೂಡುವಿಕೆಗೆ ಸಿದ್ಧವಾಗಿವೆ. ಕೆಲವೊಂದು ವಸ್ತುಗಳು ಅಗಲುವಿಕೆಗೆ ಸಿದ್ಧವಾಗಿವೆ. ನಶ್ವರವಾದ ಈ ಜಗತ್ತಿನಲ್ಲಿ ನಾವು ಕೂಡಿಟ್ಟ ಭೌತಿಕ ಪದಾರ್ಥಗಳೆಲ್ಲವೂ ಇಂದಲ್ಲ ನಾಳೆ ನಾಶವನ್ನು ಹೊಂದುತ್ತವೆ. ಆದ್ದರಿಂದ ಯಾವುದರಲ್ಲಿಯೂ ನನ್ನ ಮನಸ್ಸನ್ನು ಸಂಯೋಜಿಸಿಕೊಂಡಿಲ್ಲ.

ಅಂತವಂತಿ ಚ ಭೂತಾನಿ ಗುಣಯುಕ್ತಾನಿ ಪಶ್ಯತಃ ।
ಉತ್ಪತ್ತಿನಿಧನಜ್ಞಸ್ಯ ಕಿಂ ಕಾರ್ಯಮವಶಿಷ್ಯತೇ ॥ 13 ॥

ಗುಣಬದ್ಧವಾದ ಪ್ರತಿಯೊಂದು ಜಂತುವಿಗೂ ನಾಶವು ಸಿದ್ಧವಾಗಿದೆ. ಈ ಪ್ರಾಣಿಗಳ ಉತ್ಪತ್ತಿ-ವಿನಾಶಗಳನ್ನು ಚೆನ್ನಾಗಿ ಅರ್ಥೈಸಿಕೊಂಡ ನನಗೆ ಲೋಕದಲ್ಲಿ ನಡೆಸಬೇಕಾದ ಕಾರ್ಯ ಯಾವುದೂ ಉಳಿದಿರುವುದಿಲ್ಲ.

ಜಲಜಾನಾಮಪಿ ಹ್ಯಂತಂ ಪರ್ಯಾಯೇಣೋಪಲಕ್ಷಯೇ ।
ಮಹತಾಮಪಿ ಕಾಯಾನಾಂ ಸೂಕ್ಷ್ಮಾಣಾಂ ಚ ಮಹೋದಧೌ ॥ 14 ॥

ಮಹೋದಧಿಯಲ್ಲಿ ಸಂಚರಿಸುವ ಮಹಾಪ್ರಾಣಿಗಳು, ಅತ್ಯಂತ ಸೂಕ್ಷ್ಮ ಪ್ರಾಣಿಗಳು ಅವುಗಳ ಆಯುಷ್ಯಕ್ಕೆ ತಕ್ಕಂತೆ ಸಾಯುವುದನ್ನು ನಾನು ಕಾಣುತ್ತಿದ್ದೇನೆ.

ಜಂಗಮಸ್ಥಾವರಾಣಾಂ ಚ ಭೂತಾನಾಮಸುರಾಧಿಪ ।
ಪಾರ್ಥಿವಾನಾಮಪಿ ವ್ಯಕ್ತಂ ಮೃತ್ಯುಂ ಪಶ್ಯಾಮಿ ಸರ್ವಶಃ ॥ 15 ॥

ಈ ಪೃಥ್ವಿಯಲ್ಲಿ ಇರುವ ಜಂಗಮಗಳಾಗಲೀ, ಸ್ಥಾವರಗಳಾಗಲೀ, ಸಮಸ್ತ ಭೂತಗಳಿಗಾಗಲೀ ಮೃತ್ಯುವು ನಿಶ್ಚಯ ಎಂಬುದನ್ನು ನಿತ್ಯವೂ ನಾವು ನೋಡುತ್ತಿದ್ದೇವೆ.

ಅಂತರಿಕ್ಷಚರಾಣಾಂ ಚ ದಾನವೋತ್ತಮ ಪಕ್ಷಿಣಾಮ್ ।
ಉತ್ತಿಷ್ಠತಿ ಯಥಾಕಾಲಂ ಮೃತ್ಯುರ್ಬಲವತಾಮಪಿ ॥ 16 ॥

ಅಂತರಿಕ್ಷದಲ್ಲಿ ಸಂಚರಿಸುವ ಪಕ್ಷಿಗಳಿಗೂ, ದೇವ-ದಾನವರಿಗೂ ಆಯಾ ಕಾಲವನ್ನು ಅನುಸರಿಸಿ ಮೃತ್ಯುವು ಆಕ್ರಮಿಸುತ್ತದೆ. ಎಂತಹ ಬಲಾಢ್ಯರನ್ನೂ ಈ ಮೃತ್ಯುವು ಬಿಡುವುದಿಲ್ಲ.

ದಿವಿ ಸಂಚರಮಾಣಾನಿ ಹ್ರಸ್ವಾನಿ ಚ ಮಹಾಂತಿ ಚ ।
ಜ್ಯೋತೀಂಷಿ ಚ ಯಥಾಕಾಲಂ ಪತಮಾನಾನಿ ಲಕ್ಷಯೇ ॥ 17 ॥

ಆಕಾಶದಲ್ಲಿ ಸಂಚರಿಸುವ ಸಣ್ಣ ಗಾತ್ರದ, ದೊಡ್ಡ ಗಾತ್ರದ ನಕ್ಷತ್ರಗಳು ಕಾಲವು ಪ್ರಾಪ್ತವಾದೊಡನೆ ಬಿದ್ದುಹೋಗುವುದನ್ನು ನಾವು ನೋಡುತ್ತಿರುವೆವು.

ಇತಿ ಭೂತಾನಿ ಸಂಪಶ್ಯನ್ನನುಷಕ್ತಾನಿ ಮೃತ್ಯುನಾ ।
ಸರ್ವಸಾಮಾನ್ಯತೋ ವಿದ್ವಾನ್ ಕೃತಕೃತ್ಯಃ ಸುಖಂ ಸ್ವಪೇ ॥ 18 ॥

ಹೀಗೆ ಸಮಸ್ತ ಭೂತಗಳು ಸಮಾನವಾಗಿ ಮೃತ್ಯುವಿಗೆ ತುತ್ತಾಗುತ್ತಿರುವುದನ್ನು ತಿಳಿದ ನಾನು ಸಮಗ್ರ ಪ್ರಪಂಚವು ಒಂದೇ ವಿಧವಾದ ಜನನ-ಮರಣ ಸ್ವಭಾವವುಳ್ಳದ್ದನ್ನಾಗಿ ಅರ್ಥೈಸಿಕೊಂಡಿದ್ದೇನೆ. ಆದ್ದರಿಂದ ನನ್ನ ಕಾರ್ಯದಲ್ಲಿ ಕೃತಕೃತ್ಯನಾಗಿ ಪ್ರತಿದಿನವೂ ಸುಖವಾಗಿಯೇ ನಿದ್ರಿಸುತ್ತೇನೆ.

ಸುಮಹಾಂತಮಪಿ ಗ್ರಾಸಂ ಗ್ರಸೇ ಲಬ್ಧಂ ಯದೃಚ್ಛಯಾ ।
ಶಯೇ ಪುನರಭುಂಜಾನೋ ದಿವಸಾನಿ ಬಹೂನ್ಯಪಿ ॥ 19 ॥

ಭಗವತ್ಸಂಕಲ್ಪದಂತೆ ಆಹಾರವು ದೊರಕಿದಾಗ ಅಂತಹ ಶ್ರೇಷ್ಠವಾದ ಆಹಾರವನ್ನು ಸ್ವೀಕರಿಸುತ್ತೇನೆ. ಆಹಾರವಿಲ್ಲದೆಯೇ ಹಲವು ದಿನಗಳಾದರೂ ಸುಮ್ಮನೆ ಇರುತ್ತೇನೆ. ಒಟ್ಟಿನಲ್ಲಿ ಸುಖವಾಗಿ ನಿದ್ರಿಸುತ್ತೇನೆ.

ಆಸ್ರವತ್ಯಪಿ ಮಾಮನ್ನಂ ಪುನರ್ಬಹುಗುಣಂ ಬಹು ।
ಪುನರಲ್ಪಗುಣಂ ಸ್ತೋಕಂ ಪುನರ್ನೈವೋಪಪದ್ಯತೇ ॥ 20 ॥

ಕೆಲವರು ತಾವಾಗಿಯೇ ನನಗೆ ಮೃಷ್ಟಾನ್ನಗಳನ್ನು ತಂದು ನೀಡುತ್ತಾರೆ. ಕೆಲವೊಮ್ಮೆ ಸ್ವಲ್ಪ ತರುತ್ತಾರೆ. ಕೆಲವೊಮ್ಮೆ ಅನ್ನವೇ ದೊರಕುವುದಿಲ್ಲ.
ಕಣಾನ್ ಕದಾಚಿತ್ ಖಾದಾಮಿ ಪಿಣ್ಯಾಕಮಪಿ ಚ ಗ್ರಸೇ |
ಭಕ್ಷಯೇ ಶಾಲಿಮಾಂಸಾನಿ ಭಕ್ಷ್ಯಾಂಶ್ಚೋಚ್ಚಾವಚಾನ್ ಪುನಃ ॥ 21 ॥
ಕೆಲವೊಮ್ಮೆ ಪುಡಿನುಚ್ಚುಗಳನ್ನೇ ತಿನ್ನುತ್ತೇನೆ. ಕೆಲವೊಮ್ಮೆ ಹಿಂಡಿಯನ್ನಾದರೂ ತಿನ್ನುತ್ತೇನೆ. ಕೆಲವೊಮ್ಮೆ ಶಾಲ್ಯನ್ನವನ್ನು ಉಣ್ಣುತ್ತೇನೆ. ಕೆಲವೊಮ್ಮೆ ಮಾಂಸವೂ ದೊರಕುವುದಿದೆ. ಒಮ್ಮೊಮ್ಮೆ ಹಲವು ಬಗೆಯ ಭಕ್ಷ್ಯಗಳು ಲಭಿಸುತ್ತವೆ. ಹೀಗೆ ದೈವಿಕವಾಗಿ ಸಿಗುವ ಶ್ರೇಷ್ಠ-ಕನಿಷ್ಠ ಆಹಾರಗಳನ್ನು ಸ್ವೀಕರಿಸಿ ತೃಪ್ತನಾಗಿದ್ದೇನೆ.
ಶಯೇ ಕದಾಚಿತ್ ಪರ್ಯಂಕೇ ಭೂಮಾವಪಿ ಪುನಃ ಶಯೇ |
ಪ್ರಾಸಾದೇಽಪಿ ಚ ಮೇ ಶಯ್ಯಾ ಕದಾಚಿದುಪಪದ್ಯತೇ ॥ 22 ॥
ಕೆಲವೊಮ್ಮೆ ಮಂಚದಲ್ಲಿ ಮಲಗುತ್ತೇನೆ, ಕೆಲವೊಮ್ಮೆ ಭೂಮಿಯಲ್ಲಿ ಮಲಗುತ್ತೇನೆ. ಕೆಲವು ವೇಳೆ ಉಪ್ಪರಿಗೆ ಮನೆಗಳಲ್ಲಿ ಮಲಗುತ್ತೇನೆ.
ಧಾರಯಾಮಿ ಚ ಚೀರಾಣಿ ಶಾಣಕ್ಷೌಮಾಜಿನಾನಿ ಚ |
ಮಹಾರ್ಹಾಣಿ ಚ ವಾಸಾಂಸಿ ಧಾರಯಾಮ್ಯಹಮೇಕದಾ ॥ 23 ॥
ನ ಸನ್ನಿಪತಿತಂ ಧರ್ಮ್ಯಮುಪಭೋಗಂ ಯದೃಚ್ಛಯಾ |
ಪ್ರತ್ಯಾಚಕ್ಷೇ ನ ಚಾಪ್ಯೇನಮನುರುದ್ಧ್ಯೇ ಸುದುರ್ಲಭಮ್ ॥ 24 ॥
ಕೆಲವೊಮ್ಮೆ ನಾರುಮಡಿಯನ್ನು ಉಟ್ಟುಕೊಳ್ಳುತ್ತೇನೆ. ಕೆಲವೊಮ್ಮೆ ಗೋಣಿಯ ವಸ್ತ್ರವನ್ನು ಧರಿಸುತ್ತೇನೆ. ಕೆಲವೊಮ್ಮೆ ರೇಷ್ಮೆ ವಸ್ತ್ರವನ್ನೂ, ಕೆಲವೊಮ್ಮೆ ಕೃಷ್ಣಾಜಿನವನ್ನೂ, ಕೆಲವೊಮ್ಮೆ ಅತ್ಯಂತ ಬೆಲೆಬಾಳುವ ವಸ್ತ್ರಗಳನ್ನೂ ಧರಿಸುತ್ತೇನೆ. ದೈವಿಕವಾಗಿ ಲಭಿಸಿದ ಯಾವ ವಸ್ತ್ರಗಳನ್ನೂ ನಾನು ನಿರಾಕರಿಸುವುದಿಲ್ಲ. ದುರ್ಲಭವಾದ ವಸ್ತುವಿಗೆ ಆಸೆಯನ್ನೂ ಪಡುವುದಿಲ್ಲ.
ಅಚಲಮನಿಧನಂ ಶಿವಂ ವಿಶೋಕಂ
ಶುಚಿಮತುಲಂ ವಿದುಷಾಂ ಮತೇ ನಿವಿಷ್ಟಮ್ |
ಅನಭಿಮತಮಸೇವಿತಂ ಚ ಮೂಢೈ-
ರ್ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 25 ॥
ಈ ನನ್ನ ವ್ರತಕ್ಕೆ ಅಜಗರವ್ರತವೆಂದು ಹೆಸರು. ಇದಕ್ಕೆ ಎಂದೂ ನಾಶವಿಲ್ಲ. ಇದು ಸ್ಥಿರವಾಗಿರುವ, ಮಂಗಳಕರವಾದ, ಶೋಕರಹಿತವಾದ, ಶುದ್ಧವಾದ, ಅಸಮಾನವಾದ, ವಿದ್ವಾಂಸರಿಂದ ಅಭಿನಂದನೀಯವಾದ ವ್ರತವಾಗಿದೆ. ಮೂಢನಿಗೆ ಇದು ಅಸಮ್ಮತವಾಗಿ, ಅಸಾಧ್ಯವಾಗಿ ತೋರಬಹುದು. ನಾನು ಶುದ್ಧಮನಸ್ಸಿನಿಂದ ಈ ಅಜಗರ ವ್ರತವನ್ನು ಧರಿಸುತ್ತಿದ್ದೇನೆ.
ಅಚಲಿತಮತಿರಚ್ಯುತಃ ಸ್ವಧರ್ಮಾತ್
ಪರಿಮಿತಸಂಸರಣಃ ಪರಾವರಜ್ಞಃ |
ವಿಗತಭಯಕಷಾಯಲೋಭಮೋಹೋ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 26 ॥
ನಾನು ಸ್ಥಿರಚಿತ್ತನಾಗಿ, ಸ್ವಧರ್ಮಕ್ಕೆ ಚ್ಯುತಿಬಾರದಂತೆ, ಶೋಕ, ಮೋಹ, ಭಯ, ಕ್ರೋಧಗಳನ್ನೆಲ್ಲಾ ದಾಟಿ ಪರಿಮಿತವಾದ ವಸ್ತುಗಳಿಂದಲೇ ಜೀವನವನ್ನು ಸಾಗಿಸುತ್ತಾ ಸರ್ವೋತ್ತಮನಾದ ಭಗವಂತನನ್ನು, ಅಮರರಾದ ಜೀವರನ್ನು ಅರ್ಥೈಸಿಕೊಂಡು ಈ ಅಜಗರವ್ರತವನ್ನು ಶುದ್ಧನಾಗಿ ಆಚರಿಸುತ್ತಿದ್ದೇನೆ.
ಅನಿಯತಫಲಭಕ್ಷ್ಯಭೋಜ್ಯಪೇಯಂ
ವಿಧಿಪರಿಣಾಮವಿಭಕ್ತದೇಶಕಾಲಮ್ |
ಹೃದಯಸುಖಮಸೇವಿತಂ ಕದರ್ಯೈ-
ರ್ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 27 ॥
ನನಗೆ ಹಣ್ಣು, ಭಕ್ಷ್ಯ, ಭೋಜ್ಯ, ಪಾನೀಯಗಳಲ್ಲಿ ಹೀಗೆ ಇರಬೇಕೆಂಬ ನಿಯಮವಿಲ್ಲ. ಎಲ್ಲವನ್ನೂ ವಿಧಿಪರಿಣಾಮವೆಂದೇ ತಿಳಿದು ಸ್ವೀಕರಿಸುತ್ತೇನೆ. ದೇಶ- ಕಾಲ ವಿಭೇದಗಳನ್ನು ಹಚ್ಚಿಕೊಳ್ಳುವುದಿಲ್ಲ. ಹೃದಯಕ್ಕೆ ಸುಖಕರವಾದ ಅಲ್ಪ ಮನಸ್ಸಿನ ಮನುಷ್ಯರಿಗೆ ಸೇವಿಸಲು ಅಸಾಧ್ಯವಾದ ಶುದ್ಧವಾದ ಈ ವ್ರತವನ್ನು ಶುಚಿಯಾಗಿ ಆಚರಿಸಿಕೊಂಡು ಬರುತ್ತಿದ್ದೇನೆ.
ಇದಮಿದಮಿತಿ ತೃಷ್ಣಯಾಭಿಭೂತಂ
ಜನಮನವಾಪ್ತಧನಂ ವಿಷೀದಮಾನಮ್ |
ನಿಪುಣಮನುನಿಶಾಮ್ಯ ತತ್ತ್ವಬುದ್ಧ್ಯಾ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 28 ॥
ಅತಿಯಾದ ಆಸೆಗೆ ತುತ್ತಾದ ಜನರು ನಮಗೆ ಇದು ಬೇಕು, ಅದು ಬೇಕು ಎಂದು ನಾನಾ ವಸ್ತುಗಳಿಗಾಗಿ ಆಸೆಯಿಂದ ದುಡಿಮೆಯನ್ನು ಮಾಡುತ್ತಾರೆ. ಇಷ್ಟ ವಸ್ತುವು ದೊರೆಯದಿದ್ದಾಗ ದುಃಖಿತರಾಗುತ್ತಾರೆ. ನಾನು ತೀಕ್ಷ್ಣವಾದ ಜ್ಞಾನದಿಂದ ಇವೆಲ್ಲವನ್ನೂ ಪರಿಶೀಲಿಸಿ ಅಜಗರವ್ರತವನ್ನು ಶುದ್ಧವಾಗಿ ಆಚರಿಸುತ್ತಿದ್ದೇನೆ.
ಬಹುವಿಧಮನುದೃಶ್ಯ ಚಾರ್ಥಹೇತೋಃ
ಕೃಪಣಮಿಹಾರ್ಯಮನಾರ್ಯಮಾಶ್ರಯಂತಮ್ |
ಉಪಶಮರುಚಿರಾತ್ಮವಾನ್ ಪ್ರಶಾಂತೋ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 29 ॥

ಧನದ ಮೋಹಕ್ಕೆ ತುತ್ತಾದ ಅಧಮಜನರು ಧನದ ಆಸೆಗಾಗಿ ಒಳ್ಳೆಯವರು ಕೆಟ್ಟವರು ಎಂಬ ಭೇದವನ್ನೇ ತಿಳಿಯದೆ ಅವರನ್ನು ಆಶ್ರಯಿಸುತ್ತಿರುವುದನ್ನು ನೋಡಿದ ನನಗೆ ಅಂತಹ ಕ್ರಿಯೆಗಳಿಂದ ಜಿಗುಪ್ಸೆ ಉಂಟಾಗಿ ಕೇವಲ ಶಾಂತಿಯಲ್ಲಿಯೇ ಆಸಕ್ತಿ ಹುಟ್ಟಿರುವುದು. ಆದ್ದರಿಂದ ಪರಮಾತ್ಮನ ಪ್ರಜ್ಞೆಯಿಂದಲೇ ಈ ಅಜಗರ ವ್ರತವನ್ನು ಆಚರಿಸುತ್ತಿದ್ದೇನೆ.

ಸುಖಮಸುಖಮನರ್ಥಮರ್ಥಲಾಭಂ
ರತಿಮರತಿಂ ಮರಣಂ ಚ ಜೀವಿತಂ ಚ |
ವಿಧಿನಿಯತಮವೇಕ್ಷ್ಯ ತತ್ತ್ವತೋಽಹಂ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 30 ॥

ಸುಖ-ದುಃಖಗಳು, ಪದಾರ್ಥಗಳ ಲಾಭ-ನಷ್ಟಗಳು, ಪ್ರಿಯ-ಅಪ್ರಿಯಗಳು, ಜೀವಿತ-ಮರಣಗಳು ಇವೆಲ್ಲವೂ ವಿಧಿನಿಯಮ ಎಂಬುದನ್ನು ತತ್ವದೃಷ್ಟಿಯಿಂದ ತಿಳಿದಿರುವ ನಾನು ಈ ಅಜಗರವ್ರತವನ್ನು ಶುಚಿಯಾಗಿ ಆಚರಿಸುತ್ತಿದ್ದೇನೆ.

ಉಪಗತಭಯರಾಗಮೋಹದರ್ಪೋ
ಧೃತಿಮತಿಬುದ್ಧಿಸಮನ್ವಿತಃ ಪ್ರಶಾಂತಃ |
ಉಪಗತಫಲಭೋಗಿನೋ ನಿಶಾಮ್ಯ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 31 ॥

ರಾಗ-ಮೋಹ-ಭಯ-ದರ್ಪಾದಿಗಳನ್ನು ಬಿಟ್ಟು ಧೈರ್ಯವನ್ನು, ದೃಢ ಬುದ್ಧಿಯನ್ನು, ಸದ್ವಿವೇಚನೆಯನ್ನು ಹೊಂದಿದ ನಾನು ಶಾಂತನಾಗಿದ್ದೇನೆ. ಹೆಬ್ಬಾವುಗಳು ತಮ್ಮ ಬಳಿ ಬಂದ ಪ್ರಾಣಿಗಳನ್ನು ಮಾತ್ರ ಭೋಗಿಸುತ್ತವೆ. ತಾವಾಗಿಯೇ ಆಹಾರಕ್ಕಾಗಿ ಸಂಚರಿಸುವುದಿಲ್ಲ ಎಂಬ ವಿಚಾರವನ್ನು ತಿಳಿದು ಅವುಗಳಂತೆ ಬದುಕಬೇಕೆಂದು ಈ ಅಜಗರವ್ರತವನ್ನು ಆಶ್ರಯಿಸಿ ಈ ವ್ರತದಲ್ಲಿ ಸಂಚರಿಸುತ್ತಿದ್ದೇನೆ.

ಅನಿಯತಶಯನಾಸನಃ ಪ್ರಕೃತ್ಯಾ
ದಮನಿಯಮವ್ರತಸತ್ಯಶೌಚಯುಕ್ತಃ |
ಅಪಗತಫಲಸಂಚಯಃ ಪ್ರಹೃಷ್ಟೋ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 32 ॥

ನನಗೆ ಹಾಸಿಗೆ, ಆಸನ ಈ ರೀತಿಯಾಗಿ ಇರಬೇಕೆಂಬ ನಿಯಮವಿಲ್ಲ. ಸಹಜವಾಗಿಯೇ ದಮ, ನಿಯಮ, ಸತ್ಯ, ಶೌಚ ಮುಂತಾದ ವ್ರತಗಳನ್ನು ಆಶ್ರಯಿಸಿ ಕರ್ಮಫಲಗಳನ್ನು ಗಳಿಸಬೇಕೆಂಬ ಆಸೆಯೂ ಇಲ್ಲದೆ ಸಂತುಷ್ಟಚಿತ್ತನಾಗಿ ಈ ವ್ರತವನ್ನು ಆಚರಿಸುತ್ತಿರುವೆನು.

ಅಭಿಗತಮಸುಖಾರ್ಥಮೀಹನಾರ್ಥೈ-
ರುಪಗತಬುದ್ಧಿರವೇಕ್ಷ್ಯ ಚಾತ್ಮಸಂಸ್ಥಃ |
ತೃಷಿತಮನಿಯತಂ ಮನೋ ನಿಯಂತುಂ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 33 ॥

ಮನಸ್ಸು ಬಾಹ್ಯವಾದ ಕಾಮನೆಗಳಿಗೆ ಆಸಕ್ತಿಯನ್ನು ತೋರುತ್ತದೆ. ಆತ್ಮತತ್ವವನ್ನು ಅರಿಯದೆ ಪುತ್ರ-ಮಿತ್ರ-ಕಳತ್ರಾದಿಗಳಲ್ಲಿ ಆಸಕ್ತವಾಗಿ ದುಃಖಕ್ಕೆ ತುತ್ತಾಗುತ್ತದೆ. ಬಯಕೆಗಳ ಅಧೀನವಾಗಿ ಸಾಗುವ ಚಂಚಲವಾದ ಮನಸ್ಸು ಅಸ್ಥಿರವೆನಿಸಿದೆ. ಅಂತಹ ಮನಸ್ಸಿನ ಸ್ಥಿತಿಯನ್ನು ನೋಡಿ ವಿವೇಕದಿಂದ ಆ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಲು ಈ ಅಜಗರವ್ರತವನ್ನು ಆಚರಿಸುತ್ತಿದ್ದೇನೆ.

ನ ಹೃದಯಮನುರುದ್ಧ್ಯತೇ ಮನೋ ವಾ
ಪ್ರಿಯಸುಖದುರ್ಲಭತಾಮನಿತ್ಯತಾಂ ಚ |
ತದುಭಯಮುಪಲಕ್ಷಯನ್ನಿವಾಹಂ
ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 34 ॥

ನನ್ನ ಮನಸ್ಸು ಹೃದಯದಲ್ಲಿರುವ ಪರಮಾತ್ಮನನ್ನು ಧ್ಯಾನಿಸುತ್ತಿರುವುದರಿಂದ ವಿಷಯ ಭೋಗಾದಿಗಳಿಂದ ತಡೆಯನ್ನು ಹೊಂದುತ್ತಿಲ್ಲ. ನಾವು ಬಯಸುವ ಸುಖಗಳು ಅನೇಕ ಬಾರಿ ದುರ್ಲಭವೂ ಅನಿತ್ಯವೂ ಆಗಿರುತ್ತವೆ ಎಂಬುದನ್ನು ತಿಳಿದೇ ನಾನು ಈ ಅಜಗರವ್ರತವನ್ನು ಆಚರಿಸುತ್ತಿರುವೆನು.

ಅಸುಲಭಮುಪಗಮ್ಯ ಚಾರ್ಥಲಾಭಂ
ಧೃತಿಮತಿಬುದ್ಧಿಪರಾಕ್ರಮೈರುಪೇತಮ್
ಬುಧಮನುಜನಿಷೇವಿತಂ ಸಮರ್ಥೈ-
ರ್ವ್ರತಮಿದಮಾಜಗರಂ ಶುಚಿಶ್ಚರಾಮಿ ॥ 35 ॥

ಅರ್ಥಪ್ರಾಪ್ತಿಯು ತುಂಬಾ ದುಃಖದಿಂದ ಕೂಡಿದೆ ಎಂಬುದನ್ನು ಅರ್ಥ ಮಾಡಿಕೊಂಡಿರುವ ನಾನು ಧೈರ್ಯದ ಬುದ್ಧಿಯಿಂದ ಅವಲಂಬಿತವಾದ ಪರಾಕ್ರಮದಿಂದ ಕೂಡಿರುವ ಜ್ಞಾನಿಗಳು ಸೇವಿಸುವ ಈ ಅಜಗರವ್ರತವನ್ನು ಸಮರ್ಥವಾಗಿ ಆಚರಿಸುತ್ತಿದ್ದೇನೆ.

ಬಹು ಕಥಿತಮಿದಂ ಹಿ ಬುದ್ಧಿಮದ್ಭಿಃ
ಕವಿಭಿರಭಿಪ್ರಥಯದ್ಭಿರಾತ್ಮಕೀರ್ತಿಮ್ |
ಇದಮಿದಮಿತಿ ತತ್ರ ತತ್ರ ತತ್ತತ್
ಸ್ವಪರಮತೈರ್ಗಹನಂ ಪ್ರತರ್ಕಯದ್ಭಿಃ ॥ 36 ॥

ಪ್ರಹ್ಲಾದನೇ, ಲೋಕದಲ್ಲಿ ಮಹಾಧೀಮಂತರಾದ ದೂರದೃಷ್ಟಿಯುಳ್ಳ ವಿದ್ವಾಂಸರು ಕೀರ್ತಿಯ ಉದ್ದೇಶದಿಂದ ತಮ್ಮ ಮತಗಳನ್ನು ಸ್ಥಾಪಿಸಲು, ಪರಮತಗಳನ್ನು ನಿಂದಿಸಲು ಅನೇಕ ತರ್ಕಗಳನ್ನು ಮಾಡುತ್ತಾರೆ. ಅರ್ಥವಾಗದೆ ಇರುವ ವಿಷಯಗಳಲ್ಲಿ ತರ್ಕಿಸುತ್ತಾ

ಕಲಹದಿಂದ ಕೂಡಿರುವ ಕ್ಲೇಶದಾಯಕವಾದ ಕರ್ಮವನ್ನೂ ಮಾಡುತ್ತಿರುತ್ತಾರೆ. ನಾನಾದರೂ ಸಮಸ್ತ ದೋಷನಿವಾರಕವಾದ ಇಂತಹ ವ್ರತವನ್ನು ಆಶ್ರಯಿಸಿ ಸುಖವಾಗಿದ್ದೇನೆ.

ತದಹಮನುನಿಶಾಮ್ಯ ವಿಪ್ರಯಾತಃ
ಪೃಥಗಭಿಪನ್ನಮಿಹಾಬುಧೈರ್ಮನುಷ್ಯೈಃ |
ಅನವಸಿತಮನಂತದೋಷಪಾರಂ
ನೃಷು ವಿಹರಾಮಿ ವಿನೀತರೋಷತೃಷ್ಣಃ ॥ 37 ॥

ನಾನಾದರೂ ಈ ವ್ರತವು ಅಜ್ಞಾನನಿವಾರಕವಾದುದೆಂದು ತಿಳಿದು, ಅಜ್ಞಾನಿ ಜನರಿಗೆ ಈ ವಿಚಾರಗಳು ಬೇರೆ ವಿಧವಾಗಿ ತಿಳಿಯುತ್ತವೆಂದು ನಿಶ್ಚಯಿಸಿಕೊಂಡು ಸಮಸ್ತ ದೋಷಗಳನ್ನು ನಿವಾರಿಸುವ ಈ ಅಜಗರವ್ರತವನ್ನು ಶಾಶ್ವತವೆಂದು ತಿಳಿದು ರೋಷ-ತೃಷ್ಣಾದಿ ದೋಷಗಳಿಗೆ ತುತ್ತಾಗದೆ ಇದನ್ನು ಆಶ್ರಯಿಸಿ ಮನುಷ್ಯರ ಮಧ್ಯದಲ್ಲಿಯೇ ಸುಖವಾಗಿ ವಿಹರಿಸುತ್ತೇನೆ.

ಭೀಷ್ಮಃ
ಅಜಗರಚರಿತಂ ವ್ರತಂ ಮಹಾತ್ಮಾ
ಯ ಇಹ ನರೋಽನುಚರೇದ್ ವಿನೀತರಾಗಃ |
ಅಪಗತಭಯಮನ್ಯುಲೋಭಮೋಹಃ
ಸ ಖಲು ಸುಖೀ ವಿಹರೇದಿಮಂ ವಿಹಾರಮ್ ॥ 38 ॥

ಭೀಷ್ಮ ಧರ್ಮರಾಜನೇ, ಈ ಅಜಗರ ಚರಿತ್ರೆಯನ್ನು ಭೂಮಿಯಲ್ಲಿ ಯಾರು ರಾಗ-ದ್ವೇಷಗಳಿಲ್ಲದೆ ಅನುಸರಿಸುತ್ತಾರೋ ಅವರು ಅಜಗರಮುನಿಯಂತೆ ಭಯ- ಲೋಭಾದಿಗಳಿಗೆ ತುತ್ತಾಗದೆ ಸುಖವಾಗಿ ವಿಹರಿಸುತ್ತಾರೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.

* * * * *

ಆರನೆಯ ಅಧ್ಯಾಯ

ಭೀಷ್ಮರು ಯುಧಿಷ್ಠಿರನನ್ನು ಕುರಿತು ಪ್ರಜ್ಞೆಯೇ ಸುಖಸಾಧನಕ್ಕೆ ಕಾರಣವೆಂದು ತಿಳಿಸಲು ಶೃಗಾಲ-ಕಾಶ್ಯಪರ ಸಂವಾದವನ್ನು ಉದಾಹರಿಸಿದುದು.

ಯುಧಿಷ್ಠಿರಃ
ಬಾಂಧವಾಃ ಕರ್ಮ ವಿತ್ತಂ ವಾ ಪ್ರಜ್ಞಾ ವೇಹ ಪಿತಾಮಹ |
ನರಸ್ಯ ಕಾ ಪ್ರತಿಷ್ಠಾ ಸ್ಯಾದೇತತ್ ಪೃಷ್ಟೋ ವದಸ್ವ ಮೇ ॥ 1 ॥

ಯುಧಿಷ್ಠಿರ ಪಿತಾಮಹನೇ, ಮನುಷ್ಯನಿಗೆ ಮುಖ್ಯವಾದ ಆಶ್ರಯವು ಯಾವುದು? ಬಂದುಗಳೇ, ಧರ್ಮವೇ, ಧನವೇ ಅಥವಾ ಅವನ ಪ್ರಜ್ಞೆಯೇ? ಇದರ ಬಗ್ಗೆ ನನಗೆ ತಿಳಿಸು.

ಭೀಷ್ಮಃ
ಪ್ರಜ್ಞಾ ಪ್ರತಿಷ್ಠಾ ಭೂತಾನಾಂ ಪ್ರಜ್ಞಾ ಲಾಭಃ ಪರೋ ಮತಃ |
ಪ್ರಜ್ಞಾ ನೈಃಶ್ರೇಯಸೀ ಲೋಕೇ ಪ್ರಜ್ಞಾ ಸ್ವರ್ಗೋ ಮತಃ ಸತಾಮ್ ॥2॥

ಭೀಷ್ಮ ಕುಮಾರನೇ, ಪ್ರಜ್ಞೆಯೇ ಪ್ರಾಣಿಗಳಿಗೆ ಮುಖ್ಯವಾದ ಆಶ್ರಯವು. ಪ್ರಜ್ಞೆಯೇ ಪರಮಲಾಭವು. ಪ್ರಜ್ಞೆಯೇ ಪರಮಶ್ರೇಯಸ್ಸು. ಪ್ರಜ್ಞೆಯೇ ಸಜ್ಜನರಿಗೆ ಸಮ್ಮತವಾದ ಸ್ವರ್ಗವು.

ಪ್ರಜ್ಞಯಾ ಪ್ರಾಪಿತಾರ್ಥೋ ಹಿ ಬಲಿರೈಶ್ವರ್ಯಸಂಕ್ಷಯೇ |
ಪ್ರಹ್ಲಾದೋ ನಮುಚಿರ್ಮಂಕಿಸ್ತಸ್ಯಾಃ ಕಿಂ ವಿದ್ಯತೇ ಪರಮ್ ॥ 3 ॥

ಹಿಂದೆ ಬಲಿಚಕ್ರವರ್ತಿ, ಪ್ರಹ್ಲಾದ, ನಮುಚಿ, ಮಂಕಿ ಮುಂತಾದ ಮಹಾತ್ಮರೆಲ್ಲರೂ ತಮ್ಮ ಐಶ್ವರ್ಯವೆಲ್ಲವೂ ನಾಶಹೊಂದಿದಾಗ ಪ್ರಜ್ಞೆಯಿಂದಲೇ ತಮ್ಮ ಇಷ್ಟಾರ್ಥವನ್ನು ಪಡೆದಿದ್ದಾರೆ. ಪ್ರಜ್ಞೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ.

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಇಂದ್ರಕಾಶ್ಯಪಸಂವಾದಂ ತನ್ನಿಬೋಧ ಯುಧಿಷ್ಠಿರ ॥ 4 ॥

ಯುಧಿಷ್ಠಿರನೇ, ಇದೇ ವಿಷಯದಲ್ಲಿ ಹಿಂದೆ ಕಶ್ಯಪನಿಗೂ, ಇಂದ್ರನಿಗೂ ನಡೆದ ಸಂವಾದ ರೂಪವಾದ ಇತಿಹಾಸವನ್ನು ಉದಾಹರಿಸುತ್ತಾರೆ. ಅದನ್ನು ಹೇಳುತ್ತೇನೆ, ಕೇಳು.

ವೈಶ್ಯಃ ಕಶ್ಚಿದೃಷಿಂ ತಾತ ಕಾಶ್ಯಪಂ ಸಂಶಿತವ್ರತಮ್ |
ರಥೇನ ಪಾತಯಾಮಾಸ ಶ್ರೀಮಾನ್ ದೃಪ್ತಸ್ತಪಸ್ವಿನಮ್ ॥ 5 ॥

ಒಬ್ಬ ಮಹಾಧನಿಕನಾದ ವೈಶ್ಯನಿದ್ದನು. ಅವನು ತನ್ನ ಐಶ್ವರ್ಯಮದದಿಂದ ಕೊಬ್ಬಿ ತನ್ನ ರಥವನ್ನು ಓಡಿಸುತ್ತಿರುವಾಗ ಅಜಾಗ್ರತೆಯಿಂದ ಮಹಾತಪಸ್ವಿಯಾದ ಕಾಶ್ಯಪನೆಂಬ ಋಷಿಕುಮಾರನ ಮೇಲೆ ರಥವನ್ನು ಚಲಾಯಿಸಿದನು.

ಆರ್ತಃ ಸ ಪತಿತಃ ಕ್ರುದ್ಧಸ್ತ್ಯಕ್ತ್ವಾತ್ಮಾನಮಥಾಬ್ರವೀತ್ |
ಮರಿಷ್ಯಾಮ್ಯಧನಸ್ಯೇಹ ಜೀವಿತಾರ್ಥೋ ನ ವಿದ್ಯತೇ ॥ 6 ॥

ಇದರಿಂದ ದುಃಖಿತನಾಗಿ ಆ ಬಡಬ್ರಾಹ್ಮಣನು ಕೆಳಗೆ ಬಿದ್ದನು. ತನ್ನ ಸ್ಥಿತಿಗಾಗಿ ದುಃಖ-ಕೋಪಗಳಿಂದ ಕುದಿಯುತ್ತಾ ಮುಂದೆ ತನ್ನ ಬದುಕಿನಲ್ಲಿ ಆಸೆಯನ್ನು ಬಿಟ್ಟು ಅಳಲಾರಂಭಿಸಿದನು. ಲೋಕದಲ್ಲಿ ನನ್ನಂತೆ ದರಿದ್ರನಿಗೆ ಬದುಕಿನಿಂದ ಏನೂ ಪ್ರಯೋಜನವಿಲ್ಲ. ನಾನು ಬದುಕಿ ಏನಾಗಬೇಕು? ನಾನು ಪ್ರಾಣತ್ಯಾಗ ಮಾಡುತ್ತೇನೆ.

ತಥಾ ಮುಮೂರ್ಷುಮಾಸೀನಮಕೂಜಂತಮಚೇತಸಮ್ |
ಇಂದ್ರಃ ಸೃಗಾಲರೂಪೇಣ ಬಭಾಷೇ ಕ್ರುದ್ಧಮಾನಸಮ್ ॥ 7 ॥
ಪ್ರಜ್ಞೆ ತಪ್ಪಿ ನೆಲದಲ್ಲಿ ಬಿದ್ದು ಮಾತನಾಡಲಾಗದೆ ಸಾಯುವ ಸ್ಥಿತಿಯಲ್ಲಿದ್ದ ಬ್ರಾಹ್ಮಣನ ದುರವಸ್ಥೆಯನ್ನು ಕಂಡು ಇಂದ್ರನು ಒಂದು ನರಿ ರೂಪದಿಂದ ಬಂದು ಕ್ರುದ್ಧ ಮನಸ್ಸಿನಿಂದ ಕೂಡಿರುವ ಬ್ರಾಹ್ಮಣನನ್ನು ಕುರಿತು ಹೀಗೆ ಹೇಳಿದನು.
ಮನುಷ್ಯಯೋನಿಮಿಚ್ಛಂತಿ ಸರ್ವಭೂತಾನಿ ಸರ್ವಶಃ |
ಮನುಷ್ಯತ್ವೇ ಚ ವಿಪ್ರತ್ವಂ ಸರ್ವ ಏವಾಭಿನಂದತಿ ॥ 8 ॥
ಬ್ರಾಹ್ಮಣನೇ, ಎಲ್ಲಾ ಪ್ರಾಣಿಗಳು ಲೋಕದಲ್ಲಿ ಹೇಗಾದರೂ ತಮಗೆ ಮನುಷ್ಯ ಜನ್ಮವು ಬಂದರೆ ಸಾಕೆಂದು ಬಯಸುತ್ತವೆ.
ಅದರಲ್ಲಿಯೂ ನಿನ್ನಂತೆ ಬ್ರಾಹ್ಮಣಜನ್ಮಕ್ಕೆ ಎಲ್ಲರೂ ಆಸೆಪಡುತ್ತಾರೆ.
ಮನುಷ್ಯೋ ಬ್ರಾಹ್ಮಣಶ್ಚಾಸಿ ಶ್ರೋತ್ರಿಯಶ್ಚಾಸಿ ಕಾಶ್ಯಪ |
ಸುದುರ್ಲಭಮವಾಪ್ಯೈತದದೋಷಾನ್ ಮರ್ತುಮಿಚ್ಛಸಿ ॥ 9 ॥
ಎಲೈ ಕಾಶ್ಯಪನೇ, ನೀನು ಬ್ರಾಹ್ಮಣನಾಗಿ ಹುಟ್ಟಿರುವಿ. ಬ್ರಾಹ್ಮಣರಲ್ಲಿಯೂ ಶ್ರೋತ್ರಿಯನೆನಿಸಿರುವೆ. ಇಂತಹ ದುರ್ಲಭವಾದ ಜನ್ಮವನ್ನು ಪಡೆದಿರುವ ನೀನು ಬುದ್ಧಿಗೆಟ್ಟು, ಬಡತನದ ಜೀವನವೇ ಬೇಡವೆಂದು ಹೇಳಿ ಸಾಯುವುದಕ್ಕೆ ಆಸೆಪಡುತ್ತಿರುವಿಯಲ್ಲ!
ಸರ್ವೇ ಲಾಭಾಃ ಸಾಭಿಮಾನಾ ಇತಿ ಸತ್ಯಾ ಬತ ಶ್ರುತಿಃ |
ಸಂತೋಷಣೀಯರೂಪೋಽಸಿ ಲೋಭಾದ್ ಯದಭಿಮನ್ಯಸೇ ॥ 10 ॥
ಲೋಕದಲ್ಲಿ ಎಲ್ಲ ರೀತಿಯ ಲಾಭಗಳು ಅಭಿಮಾನದ ದೋಷಕ್ಕೆ ತುತ್ತಾಗುತ್ತದೆ ಎಂಬ ಶ್ರುತಿವಾಕ್ಯವು ಸತ್ಯವಾದುದು. ನಿನಗಾದರೂ ಅಭಿಮಾನವೇ ಇಲ್ಲದಂತಿದೆ. ನೀನು ಅಭಿಮಾನವನ್ನು ಹೊಂದಿದವನಾಗಿದ್ದಲ್ಲಿ ಅತ್ಯಂತ ಸಂತೋಷವನ್ನು ಪಡೆಯುವ ಸ್ಥಿತಿಯನ್ನು ಹೊಂದುತ್ತಿ.
ಅಹೋ ಸಿದ್ಧಾರ್ಥತಾ ತೇಷಾಂ ಯೇಷಾಂ ಸಂತೀಹ ಪಾಣಯಃ |
ಪಾಣಿಮದ್ಭ್ಯಃ ಸ್ಪೃಹಾಸ್ಮಾಕಂ ಯಥಾ ತವ ಧನಸ್ಯ ವೈ ॥ 11 ॥
ಓ ಬ್ರಾಹ್ಮಣ! ನನ್ನ ಸ್ಥಿತಿಯನ್ನು ನೋಡು. ನನಗೆ ಕೈಗಳಿಲ್ಲ. ಲೋಕದಲ್ಲಿ ಕೈಯುಳ್ಳವರ ಭಾಗ್ಯವು ನನಗೆ ಬರಬಾರದೆ ಎಂದು ಎಷ್ಟೋ ಬಾರಿ ಆಸೆಪಟ್ಟಿದ್ದೇನೆ. ನಾಲ್ಕು ಕಾಲುಳ್ಳ ಪ್ರಾಣಿಗಳಿಗೆ ಪುರುಷರಂತೆ ಕೈಗಳು ಬೇಕು ಎಂಬ ಅಪೇಕ್ಷೆಯು ಯಾವಾಗಲೂ ಇರುತ್ತದೆ. ನೀನು ಹಣಕ್ಕಾಗಿ ಎಷ್ಟು ಆಸೆಪಡುತ್ತೀಯೋ ಅದಕ್ಕಿಂತಲೂ ಅಧಿಕವಾದ ಆಸೆಯು ನನಗೆ ಕೈಗಳು ಸಿಗಬೇಕೆಂದು ಇದೆ.
ನ ಪಾಣಿಲಾಭಾದಧಿಕೋ ಲಾಭಃ ಕಶ್ಚನ ವಿದ್ಯತೇ |
ಅಪಾಣಿತ್ವಾದ್ವಯಂ ಬ್ರಹ್ಮನ್ ಕಂಟಕಾನ್ನೋದ್ಧರಾಮಹೇ ॥ 12 ॥
ಲೋಕದಲ್ಲಿ ಕೈಗಳನ್ನು ಪಡೆಯುವುದಕ್ಕಿಂತ ಅಧಿಕವಾದ ಲಾಭವು ಬೇರೆ ಇರುವುದಿಲ್ಲ. ನಮಗೆ ಕೈಗಳು ಇಲ್ಲದಿದುದರಿಂದ ಕಾಲಿನಲ್ಲಿ ಸಿಕ್ಕಿದ ಮುಳ್ಳುಗಳನ್ನು ಕಿತ್ತಿಕೊಳ್ಳಲಾರೆವು.
ಅಥ ಯೇಷಾಂ ಪುನಃ ಪಾಣೀ ದೇವದತ್ತೌ ದಶಾಂಗುಲೀ |
ಉದ್ಧರಂತಿ ಕೃಮೀನಂಗಾದ್ದಶಮಾನಾನ್ ಕಷಂತಿ ಚ ॥ 13 ॥
ಯಾರಿಗೆ ಕೈಗಳಿವೆಯೋ ಅವರು ತಮ್ಮ ಕೈಗಳಿಂದ ದೇವದತ್ತವಾದ ಹತ್ತು ಬೆರಳುಗಳಿಂದ ದೇಹಕ್ಕೆ ಅಂಟಿದ ಕ್ರಿಮಿಗಳನ್ನು, ಕಚ್ಚುವ ಕೀಟಗಳನ್ನು ಕಿತ್ತಿ ತೆಗೆಯಬಹುದು. ನಮಗೆ ಕೈಗಳಿಲ್ಲದೆ ಇರುವುದರಿಂದ ಆ ಅದೃಷ್ಟವು ಇರುವುದಿಲ್ಲ.
ಹಿಮವರ್ಷಾತಪಾನಾಂ ಚ ಪರಿತ್ರಾಣಾನಿ ಕುರ್ವತೇ |
ಚೇಲಮನ್ನಂ ಸುಖಂ ಶಯ್ಯಾಂ ನಿವಾತಂ ಚೋಪಭುಂಜತೇ ॥ 14 ॥
ಚಳಿ, ಮಳೆ, ಬಿಸಿಲು ಇವುಗಳ ಬಾಧೆ ಇಲ್ಲದಂತೆ ಆಚ್ಛಾದನೆಗಳನ್ನು ಕೈಗಳಿಂದ ನಿರ್ಮಿಸಿಕೊಳ್ಳಬಹುದು. ಒಳ್ಳೆಯ ಬಟ್ಟೆಗಳನ್ನುಡಬಹುದು. ಮೃಷ್ಟಾನ್ನವನ್ನು ತಯಾರಿಸಿ ಉಣ್ಣಬಹುದು. ಒಳ್ಳೆಯ ಹಾಸಿಗೆಯನ್ನು, ಉತ್ತಮ ನಿವಾಸಗಳನ್ನು ಮಾಡಿಕೊಂಡು ಸುಖವನ್ನು ಅನುಭವಿಸಬಹುದು.
ಅಧಿಷ್ಠಾಯ ಚ ಗಾಂ ಲೋಕೇ ಭುಂಜತೇ ವಾಹಯಂತಿ ಚ |
ಉಪಾಯೈರ್ಬಹುಭಿಶ್ಚೈವ ವಶ್ಯಾನಾತ್ಮನಿ ಕುರ್ವತೇ ॥ 15 ॥
ಹಸುಗಳ ಹಾಲನ್ನು ಕರೆದುಕೊಂಡು ಕುಡಿಯಬಹುದು. ಇತರ ಮೃಗಗಳಿಂದ ಅನುಭವಿಸಬಹುದಾದ ಸುಖಗಳನ್ನೂ ಅನುಭವಿಸಬಹುದು. ಅವುಗಳ ಮೇಲೆ ಏರಿ ನಡೆಯಬಹುದು. ಭಾರವನ್ನು ಹೊರಿಸಬಹುದು. ಬಂಡಿಗಳನ್ನು ಎಳೆಸಬಹುದು.
ಯೇ ಖಲ್ವಜಿಹ್ವಾಃ ಕೃಪಣಾ ಅಲ್ಪಪ್ರಾಣಾ ಅಪಾಣಯಃ |
ಸಹಂತೇ ತಾನಿ ದುಃಖಾನಿ ದಿಷ್ಟ್ಯಾ ತ್ವಂ ನ ತಥಾ ಮುನೇ ॥ 16 ॥
ಇಂತಹ ಸೌಕರ್ಯಗಳಿಲ್ಲದ ನನ್ನಂತಹವರಿಗೆ ಯಾವ ಸುಖವಿದೆ? ಮಾತನಾಡಲು ನಾಲಿಗೆಯಿಲ್ಲ, ಕೆಲಸ ಮಾಡಲು ಕೈಗಳಿಲ್ಲ, ನನ್ನಂತಹ ಬಡಜಂತುಗಳು ಇಂತಹ ದುಃಖಗಳನ್ನು ಸಹಿಸಿಕೊಂಡಿರಬೇಕಲ್ಲವೆ! ಭಾಗ್ಯವಶದಿಂದ ನಿನಗೆ ಆ ಸ್ಥಿತಿಯಿಲ್ಲ. ಅದೃಷ್ಟದಿಂದ ಮನುಷ್ಯನಾಗಿ ಹುಟ್ಟಿರುವಿ.
ದಿಷ್ಟ್ಯಾ ತ್ವಂ ನ ಸೃಗಾಲೋ ವೈ ನ ಕೃಮಿರ್ನ ಚ ಮೂಷಕಃ |
ನ ಸರ್ಪೋ ನ ಚ ಮಂಡೂಕೋ ನ ಚಾನ್ಯಃ ಪಾಪಯೋನಿಜಃ ॥ 17 ॥
ದುರದೃಷ್ಟದಿಂದ ನೀನು ನರಿಯಾಗಿ ಹುಟ್ಟಲಿಲ್ಲ. ಕ್ರಿಮಿಯಾಗಿ ಹುಟ್ಟಲಿಲ್ಲ. ಹಾವು, ಕಪ್ಪೆ ಮುಂತಾಗಿ ಪಾಪಯೋನಿಗಳಲ್ಲಿ ಹುಟ್ಟುವ ಜಂತುವಾಗಿಯೂ ಹುಟ್ಟಲಿಲ್ಲ.
ಏತಾವತಾಪಿ ಲಾಭೇನ ತೋಷ್ಟುಮರ್ಹಸಿ ಕಾಶ್ಯಪ |
ಕಿಂ ಪುನರ್ಯೋಽಸಿ ಸತ್ತ್ವಾನಾಂ ಸರ್ವೇಷಾಂ ಬ್ರಾಹ್ಮಣೋತ್ತಮಃ ॥18॥

ಎಲೈ ಕಾಶ್ಯಪನೇ, ನಿನಗೆ ಲಭಿಸಿರುವ ಭಾಗ್ಯಕ್ಕೆ ನೀನು ಎಷ್ಟು ಸಂತೋಷಪಡಬೇಕಿದೆ! ಅದರಲ್ಲಿಯೂ ನೀನು ಬ್ರಾಹ್ಮಣನಾಗಿ ಜನ್ಮವನ್ನು ತಾಳಿರುವಿ. ಇದಕ್ಕೆ ಎಷ್ಟು ಸಂತೋಷ ಹೊಂದಿದರೂ ಸಾಲದು.
ಇಮೇ ಮಾಂ ಕೃಮಯೋಽದಂತಿ ತೇಷಾಮುದ್ಧರಣಾಯ ಮೇ |
ನಾಸ್ತಿ ಶಕ್ತಿರಪಾಣಿತ್ವಾತ್ ಪಶ್ಯಾವಸ್ಥಾಮಿಮಾಂ ಮಮ ॥ 19 ॥
ನನ್ನನ್ನು ನೋಡು. ಮೈಮೇಲೆ ಬಿದ್ದು ಕಚ್ಚುತ್ತಿರುವ ಹುಳಗಳು ಎಷ್ಟಿವೆ ಎಂದು ವೀಕ್ಷಿಸು. ಕೈಗಳಿಲ್ಲದ ನನಗೆ ಅವುಗಳನ್ನು ಓಡಿಸಲು ಸಾಧ್ಯವಿಲ್ಲ. ನನ್ನ ಈ ದುರವಸ್ಥೆಯನ್ನು ನೀನೇ ನೋಡು.
ಅಕಾರ್ಯಮಿತಿ ಚೈವೇಮಂ ನಾತ್ಮಾನಂ ಸಂತ್ಯಜಾಮ್ಯಹಮ್ |
ನೇತಃ ಪಾಪೀಯಸೀಂ ಯೋನಿಂ ಪತೇಯಮಪರಾಮಿತಿ ॥ 20 ॥
ಇಂತಹ ಸ್ಥಿತಿಯಲ್ಲಿಯೂ ಸಾಯುವುದಕ್ಕೆ ಆಸೆಪಡುವುದು ಉಚಿತವಲ್ಲ ಎಂದು, ಒಂದು ವೇಳೆ ಸತ್ತರೂ ಇದಕ್ಕಿಂತ ಹೀನವಾದ ಶರೀರವು ಒದಗಿಬರುತ್ತದೋ ಎಂಬ ಭಯದಿಂದ ಈ ಶರೀರವನ್ನು ಬಿಡಲು ಇಷ್ಟಪಡುತ್ತಿಲ್ಲ.
ಮಧ್ಯೇ ವೈ ಪಾಪಯೋನೀನಾಂ ಸಾರ್ಗಾಲೀಯಾಮಹಂ ಗತಃ |
ಪಾಪೀಯಸ್ಯೋ ಬಹುತರಾ ಇತೋಽನ್ಯಾಃ ಪಾಪಯೋನಯಃ ॥ 21 ॥
ಪಾಪಕರ್ಮದಿಂದಾಗಿ ನಾನು ಸೃಗಾಲಸಂಬಂಧಿಯಾದ ನರಿಯಾಗಿ ಹುಟ್ಟನ್ನು ಪಡೆದಿದ್ದೇನೆ. ಇದಕ್ಕಿಂತಲೂ ಅತ್ಯಂತ ಪಾಪಿಷ್ಠವಾದ ಕೆಟ್ಟ ಜನ್ಮಗಳು ಎಷ್ಟೋ ಇವೆ.
ಜಾತ್ಯೈವೈಕೇ ಸುಖತರಾಃ ಸಂತ್ಯನ್ಯೇ ಭೃಶದುಃಖಿತಾಃ |
ನೈಕಾಂತಸುಖಮೇವೇಹ ಕ್ವಚಿತ್ ಪಶ್ಯಾಮಿ ಕಸ್ಯಚಿತ್ ॥ 22 ॥
ಲೋಕದಲ್ಲಿ ಕೆಲವರು ಹುಟ್ಟಿನಿಂದಲೇ ಸುಖಭಾಗಿಗಳಾಗಿ ಹುಟ್ಟುತ್ತಾರೆ. ಕೆಲವರು ಹುಟ್ಟಿನಿಂದಲೇ ಪರಮದುಃಖಿತರಾಗಿ ಇರುತ್ತಾರೆ. ಒಟ್ಟಿನಲ್ಲಿ ಯಾರಿಗೂ ಅವಿಚ್ಛಿನ್ನವಾದ ಸುಖವು ದೊರೆಯುವುದಿಲ್ಲ. ಅಂತಹವರನ್ನು ಯಾರನ್ನೂ ಕಾಣಲು ಸಾಧ್ಯವಿಲ್ಲ.
ಮನುಷ್ಯಾ ಹ್ಯಾಢ್ಯತಾಂ ಪ್ರಾಪ್ಯ ರಾಜ್ಯಮಿಚ್ಛಂತ್ಯನಂತರಮ್ |
ರಾಜ್ಯಾದ್ದೇವತ್ವಮಿಚ್ಛಂತಿ ದೇವತ್ವಾದಿಂದ್ರತಾಮಪಿ ॥ 23 ॥
ಮನುಷ್ಯನಿಗೆ ಅಲ್ಪಸ್ವಲ್ಪ ಧನವಿದ್ದಾಗ ಅವನು ರಾಜ್ಯವನ್ನು ಬಯಸುತ್ತಾನೆ. ರಾಜನಾದವನು ದೇವತ್ವವನ್ನು ಬಯಸುತ್ತಾನೆ. ದೇವತ್ವವನ್ನು ಪಡೆದವನು ಇಂದ್ರ ಪದವಿಯೇ ಬೇಕೆನ್ನುತ್ತಾನೆ.
ಭವೇಸ್ತ್ವಂ ಯದ್ಯಪಿ ತ್ವಾಢ್ಯೋ ನ ರಾಜ್ಯಂ ನ ಚ ದೈವತಮ್ |
ದೇವತ್ವಂ ಪ್ರಾಪ್ಯ ಚೇಂದ್ರತ್ವಂ ನೈವ ತುಷ್ಯೇಸ್ತಥಾ ಸತಿ ॥ 24 ॥
ಎಲೈ ಕಾಶ್ಯಪನೇ, ಯದ್ಯಪಿ ನೀನು ಧನಿಕನಾದರೂ ಅದರಿಂದ ನೀನು ತೃಪ್ತಿಯನ್ನು ಹೊಂದಲಾರೆ. ಜನ್ಮತಃ ಬ್ರಾಹ್ಮಣನಾಗಿರುವ ನೀನು ರಾಜ್ಯ ದೇವತಾ ಸಂಬಂಧಿಲೋಕ ಹೊಂದಿದರೂ ಇಂದ್ರತ್ವವನ್ನು ಹೊಂದಿದರೂ ತೃಪ್ತಿಯುಂಟಾಗದು.
ನ ತೃಪ್ತಿಃ ಪ್ರಿಯಲಾಭೇಽಸ್ತಿ ತೃಷ್ಣಾ ನಾದ್ಭಿಃ ಪ್ರಶಾಮ್ಯತಿ |
ಸಂಪ್ರಜ್ವಲತಿ ಸಾ ಭೂಯಃ ಸಮಿದ್ಭಿರಿವ ಪಾವಕಃ ॥ 25 ॥
ಎಷ್ಟೇ ಉನ್ನತಿ ಪದವಿ ಬಂದರೂ ಆಸೆಯು ತೀರದು. ಪ್ರಿಯವಸ್ತುವನ್ನು ಪಡೆದ ಮಾತ್ರಕ್ಕೆ ಯಾರೂ ತೃಪ್ತಿಯನ್ನು ಹೊಂದರು. ದಾಹವೆಂಬುದು ನೀರನ್ನು ಕುಡಿದಷ್ಟು ಹೆಚ್ಚುವಂತೆ, ಸೌದೆಯು ಉರಿದಷ್ಟು ಬೆಂಕಿಯು ಜ್ವಲಿಸುವಂತೆ ತೃಷ್ಣೆಯು ಇಷ್ಟವಸ್ತುವನ್ನು ತಂದಂತೆಲ್ಲಾ ಉದ್ದೀಪಿಸುತ್ತಲೇ ಹೋಗುತ್ತದೆ.
ಅಸ್ತ್ಯೇವ ತ್ವಯಿ ಶೋಕೋ ವೈ ಹರ್ಷಶ್ಚಾಸ್ತಿ ತಥಾ ತ್ವಯಿ |
ಸುಖದುಃಖೇ ತಥಾ ಚೋಭೇ ತತ್ರ ಕಾ ಪರಿದೇವನಾ ॥ 26 ॥
ಎಲೈ ಕಶ್ಯಪನೇ, ದುಃಖವೆಂಬುದನ್ನು ಈಗ ನಿನ್ನಲ್ಲಿ ನೋಡುತ್ತಿದ್ದೇನೆ. ಸಂತೋಷವೂ ನಿನ್ನಲ್ಲೇ ಇದೆ. ಸುಖ-ದುಃಖಗಳೆರಡೂ ನಿನ್ನಲ್ಲಿರುವಾಗ ಏಕೆ ವ್ಯಸನ ಪಡುತ್ತಿ?
ಪರಿಚ್ಛಿದ್ಯೈವ ಕಾಮಾನಾಂ ಸರ್ವೇಷಾಂ ಚೈವ ಕರ್ಮಣಾಮ್ |
ಮೂಲಂ ರುಂಧೀಂದ್ರಿಯಗ್ರಾಮಂ ಶಕುಂತಾನಿವ ಪಂಜರೇ ॥ 27 ॥
ಪಕ್ಷಿಗಳು ಗೂಡಿನಲ್ಲಿ ತಮ್ಮ ಮರಿಗಳನ್ನು ಅಡಗಿಸಿರುವಂತೆ ಎಲ್ಲ ಕಾಮಗಳಿಗೂ, ಕರ್ಮಗಳಿಗೂ ಮೂಲವಾದ ಬುದ್ಧಿಯನ್ನು, ಇಂದ್ರಿಯಗಳನ್ನು ತನ್ನ ಶರೀರದಲ್ಲಿಯೇ ಅಡಗಿಸಿಟ್ಟವನಿಗೆ ಯಾವ ಭಯವೂ ಇರುವುದಿಲ್ಲ.
ನ ಖಲ್ವಪ್ಯರಸಜ್ಞಸ್ಯ ಕಾಮಃ ಕ್ವಚನ ಜಾಯತೇ |
ಸಂಸ್ಪರ್ಶಾದ್ದರ್ಶನಾದ್ವಾಪಿ ಶ್ರವಣಾದ್ವಾಪಿ ಜಾಯತೇ ॥ 28 ॥
ರಸವನ್ನು ತಿಳಿಯದವನಿಗೆ ರಸದಲ್ಲಿ ಆಸೆ ಹುಟ್ಟದು. ದರ್ಶನ, ಸ್ಪರ್ಶನ, ಶ್ರವಣಾದಿಗಳಿಂದ ಆಯಾ ಇಂದ್ರಿಯಗಳಿಂದ ಕಾಮವು ಅಭಿವೃದ್ಧಿಯನ್ನು ಹೊಂದುತ್ತದೆ.
ನ ತ್ವಂ ಸ್ಮರಸಿ ವಾರುಣ್ಯಾಃ ಲ(ಖ)ಟ್ವಾಂಗಾನಾಂ ಚ ಪಕ್ಷಿಣಾಮ್ |
ತಾಭ್ಯಾಂ ಚಾಭ್ಯಧಿಕೋ ಭಕ್ಷ್ಯೋ ನ ಕಶ್ಚಿದ್ ವಿದ್ಯತೇ ಕ್ವಚಿತ್ ॥ 29 ॥
ನೀನು ವಾರುಣಿ ಎಂಬ ಮದ್ಯದ ರುಚಿಯನ್ನು ತಿಳಿದವನಲ್ಲ. ಲಟ್ವಾಂಗ (ಹೋರಸಿನ ಹಕ್ಕಿ) ಎಂಬ ಪಕ್ಷಿಯ ಮಾಂಸದ ಸವಿಯನ್ನು ಉಂಡವನಲ್ಲ. ಅವುಗಳ ರುಚಿಯೆಷ್ಟೆಂಬುದನ್ನು ಊಹಿಸಲು ನಿನಗೆ ಸಾಧ್ಯವಿಲ್ಲ. ಅವೆರಡಕ್ಕಿಂತಲೂ ಉತ್ತಮವಾದ ಪಾನೀಯವಾಗಲೀ, ಭಕ್ಷ್ಯವಾಗಲೀ ಬೇರೆಲ್ಲೂ ಸಿಕ್ಕಲಾರದು. ಆದರೆ ಅಂತಹದರ ಆಸೆ ನಿನಗಿರುವುದಿಲ್ಲ.
ಯಾನಿ ಚಾನ್ಯಾನಿ ದೂರೇಷು ಭಕ್ಷ ್ಯಭೋಜ್ಯಾನಿ ಕಾಶ್ಯಪ |
ಯೇಷಾಮಭುಕ್ತಪೂರ್ವಂ ತೇ ತೇಷಾಮಸ್ಮೃತಿರೇವ ಚ ॥ 30 ॥

ಅದರಂತೆ ಇತರ ಮನುಷ್ಯರು ತಿಳಿದಿರುವ ಭಕ್ಷ್ಯ-ಭೋಜ್ಯಗಳ ಚಿಂತೆಯೇ ನಿನಗಿರುವುದಿಲ್ಲ. ಏಕೆಂದರೆ ಯಾವಾಗಲೂ ನೀನು ಅವುಗಳ ರುಚಿಯನ್ನು ನೋಡಿ ತಿಳಿದವನಲ್ಲ. ಆದ್ದರಿಂದ ಅವುಗಳ ಸ್ಥಿತಿಯೇ ನಿನ್ನಲ್ಲಿರುವುದಿಲ್ಲ.

ಅಪ್ರಾಶನಮಸಂಸ್ಪರ್ಶಮಸಂದರ್ಶನಮೇವ ಚ |
ಪುರುಷಸ್ಯೈಷ ನಿಯಮೋ ಮನ್ಯೇ ಶ್ರೇಯೋ ನ ಸಂಶಯಃ ॥ 31 ॥

ತಿನ್ನದಿರುವುದು, ನೋಡದಿರುವುದು, ಮುಟ್ಟದಿರುವುದು ಇವುಗಳೇ ಮನುಷ್ಯನಿಗೆ ದೊಡ್ಡ ವ್ರತವಾಗಿರಬೇಕು. ಇದೇ ಶ್ರೇಯಸ್ಕರವೆಂದು ನಾನು ತಿಳಿಯುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

ಪಾಣಿಮಂತೋ ಧನೈರ್ಯುಕ್ತಾ ಬಲವಂತೋ ನ ಸಂಶಯಃ |
ಮನುಷ್ಯಾ ಮಾನುಷೈರೇವ ದಾಸತ್ವಮುಪಪಾದಿತಾಃ ॥ 32 ॥

ಕೈಗಳುಳ್ಳ ಪ್ರಾಣಿಗಳು ಬಲಾಢ್ಯರು, ಧನವಂತರೂ ಆಗಿರುತ್ತಾರೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಮನುಷ್ಯರು ಮನುಷ್ಯರಿಂದಲೇ ದಾಸ್ಯದಲ್ಲಿ ಇಡಲ್ಪಟ್ಟಿದ್ದಾರೆ.

ವಧಬಂಧಪರಿಕ್ಲೇಶೈಃ ಕ್ಲಿಶ್ಯಂತೇ ಚ ಪುನಃ ಪುನಃ |
ತೇ ಖಲ್ವಪಿ ರಮಂತೇ ಚ ಮೋದಂತೇ ಚ ಹಸಂತಿ ಚ ॥ 33 ॥

ಆಗಾಗ ಕೊಲೆ, ಬಂಧನ ಮುಂತಾದ ಬಾಧೆಗಳಿಗೂ ಪುನಃ ಪುನಃ ತುತ್ತಾಗುತ್ತಾರೆ. ಹೀಗೆ ಮತ್ತೊಬ್ಬರನ್ನು ಪೀಡಿಸಿ ಕೆಲವರು ವಿನೋದದಿಂದ ಆಟವಾಡುತ್ತಾ ಸಂತೋಷ ಪಡುತ್ತಾರೆ, ನಗುತ್ತಾರೆ.

ಅಪರೇ ಬಾಹುಬಲಿನಃ ಕೃತವಿದ್ಯಾ ಮನಸ್ವಿನಃ |
ಜುಗುಪ್ಸಿತಾಂ ಸುಕೃಪಣಾಂ ಪಾಪಾಂ ವೃತ್ತಿಮುಪಾಸತೇ ॥ 34 ॥

ಇನ್ನು ಕೆಲವರು ಒಳ್ಳೆಯ ಬಾಹುಬಲವುಳ್ಳವರಾಗಿ, ವಿದ್ಯಾನಿಪುಣರಾಗಿ, ಮನಶ್ಶಕ್ತಿ ಉಳ್ಳವರಾಗಿ ಅಸಹ್ಯಕರವಾದ, ಹೀನವಾದ ಪಾಪಕರ್ಮದಲ್ಲೇ ನಿರತರಾಗಿರುತ್ತಾರೆ.

ಉತ್ಸಹಂತೇ ಚ ತೇ ವೃತ್ತಿಮನ್ಯಾಮಪ್ಯುಪಸೇವಿತುಮ್ |
ಸ್ವಕರ್ಮಣಾ ತು ನಿಯತಂ ಭವಿತವ್ಯಂ ತು ತತ್ತಥಾ ॥ 35 ॥

ಕೆಲವರು ಇದಕ್ಕಿಂತಲೂ ಅಧಿಕವಾದ ಕೆಟ್ಟಕರ್ಮಗಳನ್ನು ಮಾಡಲು ಉತ್ಸಾಹ ಉಳ್ಳವರಾಗಿರುತ್ತಾರೆ. ಇವರೆಲ್ಲರೂ ತಮ್ಮ ಪೂರ್ವಕರ್ಮಕ್ಕೆ ಕಟ್ಟುಬಿದ್ದು ದೈವವಿಧಿಯು ನಡೆಸಿದಂತೆ ನಡೆಯುತ್ತಾರೆ.

ನ ಪುಲ್ಕಸೋ ನ ಚಂಡಾಲ ಆತ್ಮಾನಂ ತ್ಯಕ್ತುಮಿಚ್ಛತಿ |
ಅಸಂತುಷ್ಟಃ ಸ್ವಯಾ ಯೋನ್ಯಾ ಮಾಯಾಂ ಪಶ್ಯಸ್ವ ಯಾದೃಶೀಮ್ ॥

ಕ್ಷತ್ರಿಯಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದ ಪುಲ್ಕಸನಾಗಲೀ, ಚಂಡಾಲನಾಗಲೀ ತನ್ನ ಶರೀರವನ್ನು ಬಿಡಲು ಇಷ್ಟಪಡುವುದಿಲ್ಲ. ಅವರವರ ಯೋನಿಗಳಲ್ಲಿ ಅಸಂತೋಷವಿದ್ದರೂ ಬದುಕಲು ಬಯಸುತ್ತಾರೆ. ಇದು ಭಗವಂತನ ಮಾಯೆ. ಇದನ್ನು ನೀನೇ ಅರ್ಥೈಸಿಕೊ.

ದೃಷ್ಟ್ವಾ ಕುಣಾನ್ ಪಕ್ಷಹತಾನ್ ಮನುಷ್ಯಾನಾಮಯಾವಿನಃ |
ಸುಸಂಪೂರ್ಣಃ ಸ್ವಯಾ ಯೋನ್ಯಾ ಲಬ್ಧಲಾಭೋಽಸಿ ಕಾಶ್ಯಪ ॥ 37 ॥

ಕಾಶ್ಯಪನೇ, ಕೈಯಿಲ್ಲದೆ ಎಷ್ಟೋ ಮಂದಿ ವ್ರಣದಿಂದ ಉತ್ಪನ್ನವಾದ ಕ್ರಿಮಿಗಳನ್ನು ತೆಗೆಯಲಾರರು. ರೋಗಗ್ರಸ್ತರಾದ ಮನುಷ್ಯರಲ್ಲಿಯೇ ಎಷ್ಟೋ ಜನರಿಗೆ ಈ ಸ್ಥಿತಿ ಇದೆ. ಆದರೆ ಎರಡು ಕೈಗಳನ್ನು ಚೆನ್ನಾಗಿ ಹೊಂದಿರುವ, ಯಾವ ರೋಗಗಳಿಂದಲೂ ಬಾಧ್ಯನಾಗದಿರುವ, ಉತ್ತಮ ಬ್ರಾಹ್ಮಣನಾಗಿರುವ ನೀನು ಶ್ರೇಷ್ಠವಾದ ಅದೃಷ್ಟವನ್ನೇ ಹೊಂದಿರುವಿ ಎಂದು ಭಾವಿಸುತ್ತೇನೆ.

ಯದಿ ಬ್ರಾಹ್ಮಣ ದೇಹಸ್ತೇ ನಿರಾತಂಕೋ ನಿರಾಮಯಃ |
ಅಂಗಾನಿ ಚ ಸಮಗ್ರಾಣಿ ನ ಚ ಲೋಕೇಷು ಧಿಕ್ಕೃತಃ ॥ 38 ॥

ಕಾಶ್ಯಪನೇ, ನಿನ್ನ ದೇಹವು ಯಾವುದೇ ಕುಂದುಗಳಿಲ್ಲದೆ ಪೂರ್ಣವಾಗಿದೆ. ಸಮಗ್ರವಾಗಿ ಪಡೆಯಬೇಕಾದ ಅಂಗಗಳನ್ನೆಲ್ಲ ಚೆನ್ನಾಗಿ ಪಡೆದಿರುತ್ತಿ. ಯಾವ ಲೋಕದ ಜನರೂ ನಿನ್ನನ್ನು ಧಿಕ್ಕರಿಸಿಲ್ಲ.

ನ ಕೇನಚಿತ್ ಪ್ರವಾದೇನ ಸತ್ಯೇನೈವಾಪಹಾರಿಣಾ |
ಧರ್ಮಾಯೋತ್ತಿಷ್ಠ ವಿಪ್ರರ್ಷೇ ನಾತ್ಮಾನಂ ತ್ಯಕ್ತುಮರ್ಹಸಿ ॥ 39 ॥

ಜಾತಿಯಿಂದ ನಿಂದಿಸುವಂತಹ ಯಾವ ಅಪವಾದಗಳೂ ಲೋಕದಲ್ಲಿ ನಿನಗಿರುವುದಿಲ್ಲ. ಆದ್ದರಿಂದ ನಿನ್ನ ಶರೀರದಿಂದ ಜುಗುಪ್ಸೆಯನ್ನು ಪಡೆಯುವುದು ಯೋಗ್ಯವಲ್ಲ. ಬ್ರಹ್ಮರ್ಷಿಯೇ ಎದ್ದೇಳು, ನಿನ್ನ ಧರ್ಮವನ್ನು ಆಚರಿಸು. ದೇಹತ್ಯಾಗದ ಮನಸ್ಸನ್ನು ಎಂದಿಗೂ ಮಾಡಬೇಡ.

ಯದಿ ಬ್ರಹ್ಮನ್ ಶೃಣೋಷ್ಯೇತಚ್ಛ್ರದ್ದಧಾಸಿ ಚ ಮೇ ವಚಃ |
ವೇದೋಕ್ತಸ್ಯ ಚ ಧರ್ಮಸ್ಯ ಫಲಂ ಮುಖ್ಯಮವಾಪ್ಸ್ಯಸಿ ॥ 40 ॥

ಬ್ರಹ್ಮರ್ಷಿಯೇ, ನನ್ನ ಮಾತಿನಲ್ಲಿ ವಿಶ್ವಾಸವನ್ನಿಡುವುದಾಗಿದ್ದಲ್ಲಿ ನೀನು ವೇದೋಕ್ತವಾದ ಧರ್ಮಗಳ ಮುಖ್ಯಫಲವನ್ನು ಖಂಡಿತವಾಗಿಯೂ ಪಡೆಯುತ್ತಿ.

ಸ್ವಾಧ್ಯಾಯಮಗ್ನಿಸಂಸ್ಕಾರಮಪ್ರಮತ್ತೋಽನುಪಾಲಯ |
ಸತ್ಯಂ ದಮಂ ಚ ದಾನಂ ಚ ಸ್ಪರ್ಧಿಷ್ಠಾ ಮಾ ಚ ಕೇನಚಿತ್ ॥ 41 ॥

ನೀನು ಎಂದಿಗೂ ತಪ್ಪದೆ ಅಧ್ಯಯನ, ಅಗ್ನಿಹೋತ್ರ, ಸತ್ಯ, ದಾನ, ದಮಾದಿಗಳನ್ನು ಅನುಷ್ಠಾನ ಮಾಡು. ಯಾರಲ್ಲಿಯೂ ಮತ್ಸರಿಸಬೇಡ. ಯಾರ ಜೊತೆಗೂ ಸ್ಪರ್ಧೆಗೆ ಇಳಿಯಬೇಡ.

ಯೇ ಕೇಚನ ಸ್ವಧ್ಯಯನಾಃ ಪ್ರಾಪ್ತಾ ಯಜನಯಾಜನಮ್ |

ಕಥಂ ತೇ ಜಾತು ಶೋಚೇಯುರ್ಧ್ಯಾಯೇಯುರ್ವಾಪ್ಯಶೋಭನಮ್ ॥
ಯಾರು ನಿನ್ನಂತೆ ವೇದಾಧ್ಯಯನ ಪರಾಯಣರಾಗಿ, ಯಜನ-ಯಾಜನ ಕಾರ್ಯಗಳಿಗೆ ಅರ್ಹರೆನಿಸುತ್ತಾರೋ ಅಂತಹ ಬ್ರಾಹ್ಮಣರು ಯಾವುದಕ್ಕೂ ಶೋಕಿಸಬೇಕಾದುದಿಲ್ಲ. ಅವರು ತಮಗೆ ತಾವು ಕೇಡನ್ನೂ ಬಯಸಬೇಕಾದುದಿಲ್ಲ.
ಇಚ್ಛಂತಸ್ತೇ ವಿಹಾರಾಯ ಸುಖಂ ಮಹದವಾಪ್ನುಯುಃ |
ಉತ ಜಾತಾಃ ಸುನಕ್ಷತ್ರೇ ಸುತೀರ್ಥಾಃ ಸುಮುಹೂರ್ತಜಾಃ ॥ 43 ॥
ಒಳ್ಳೆಯ ತಿಥಿಯಲ್ಲಿ, ಉತ್ತಮ ನಕ್ಷತ್ರದಲ್ಲಿ, ಸುಮುಹೂರ್ತದಲ್ಲಿ ಜನ್ಮವನ್ನು ತಳೆದ ನಿನ್ನಂತಹವರು ತಮ್ಮ ಶಕ್ತಿಗೆ ಅನುಗುಣವಾಗಿ ಯಜ್ಞ-ದಾನಾದಿ ಸತ್ಕರ್ಮಗಳನ್ನು ಮಾಡಿ ಸತ್ಸಂತಾನದಲ್ಲಿಯೂ ಆಸೆಯುಳ್ಳವರಾಗಿ ಪ್ರಯತ್ನಿಸಿದಾಗ ಉತ್ತಮವಾದ ಸುಖವನ್ನೇ ಹೊಂದುತ್ತಾರೆ.
ನಕ್ಷತ್ರೇಷ್ವಾಸುರೇಷ್ವನ್ಯೇ ದುಸ್ತೀರ್ಥಾ ದುರ್ಮುಹೂರ್ತಜಾಃ |
ಸಂಪತಂತ್ಯಾಸುರೀಂ ಯೋನಿಂ ಯಜ್ಞಪ್ರಸವವರ್ಜಿತಾಮ್ ॥ 44 ॥
ಇದಕ್ಕೆ ವಿರುದ್ಧವಾಗಿ ಕೆಟ್ಟನಕ್ಷತ್ರದಲ್ಲಿ, ಕೆಟ್ಟ ತಿಥಿಯಲ್ಲಿ, ಅಸನ್ಮುಹೂರ್ತದಲ್ಲಿ ಹುಟ್ಟಿದವರು ಹಿಂದೆ ತಿಳಿಸಿದಂತೆ ಸತ್ಕರ್ಮಗಳಲ್ಲಿ ಆಸಕ್ತಿ ಇಲ್ಲದಿದ್ದಲ್ಲಿ ಆಸುರಿ ಜನ್ಮವನ್ನೇ ಹೊಂದುತ್ತಾರೆ.
ಅಹಮಾಸಂ ಪಂಡಿತಕೋ ಹೈತುಕೋ ವೇದನಿಂದಕಃ |
ಆನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥಿಕಾಮ್ ॥ 45 ॥
ನಾನು ಹಿಂದಿನ ಜನ್ಮದಲ್ಲಿ ಕೇವಲ ಕುತ್ಸಿತವಾದ ಪಾಂಡಿತ್ಯವುಳ್ಳವನಾಗಿದ್ದೆ. ತರ್ಕ ಬದ್ಧವಾಗಿ ವೇದಗಳ ವಿಷಯದಲ್ಲಿ ವಿಚಾರ ಮಾಡುತ್ತಿದ್ದೆ. ತರ್ಕದಿಂದ ವೇದಗಳು ದೂಷಿತವಾಗಿವೆ ಎಂದು ವೇದಪ್ರಾಮಾಣ್ಯವನ್ನು ನಂಬದೆ ನಿಂದಿಸುತ್ತಿದ್ದೆ. ನಿರರ್ತಕವಾದ ಆನ್ವೀಕ್ಷಕಿ ಎಂಬ ತರ್ಕವಿದ್ಯೆಯಲ್ಲಿ ಆದರವುಳ್ಳವನಾಗಿದ್ದೆ.
ಹೇತುವಾದಾನ್ ಪ್ರವದಿತಾ ವಕ್ತಾ ಸಂಸತ್ಸು ಹೇತುಮತ್ |
ಆಕ್ರೋಷ್ಟಾ ಚಾಭಿವಕ್ತಾ ಚ ಬ್ರಹ್ಮಯಜ್ಞೇಷು ವೈ ದ್ವಿಜಾನ್ ॥ 46 ॥
ದೊಡ್ಡ ವಿದ್ವತ್ಸಭೆಗಳಲ್ಲಿ ಯಾವಾಗಲೂ ಶಾಸ್ತ್ರಪ್ರಮಾಣವನ್ನು ನಿರಾಕರಿಸಿ ಹೇತು ವಾದಗಳನ್ನೇ ಆರಂಭಿಸುತ್ತಿದ್ದೆ. ಅಂತಹ ವಾದವಿಧಿಗಳಲ್ಲಿ ವೇದನಿಧಿಗಳನ್ನು ಧಿಕ್ಕರಿಸುತ್ತಾ ಅದೇ ವಿಚಾರದಲ್ಲಿ ಬ್ರಾಹ್ಮಣರೊಡನೆ ಬಹಳವಾಗಿ ವಾದಿಸುತ್ತಿದ್ದೆ.
ನಾಸ್ತಿಕಃ ಸರ್ವಶಂಕೀ ಚ ಮೂರ್ಖಃ ಪಂಡಿತಮಾನಿಕಃ |
ಯಸ್ಯೇಯಂ ಫಲನಿರ್ವೃತ್ತಿಃ ಸೃಗಾಲತ್ವಂ ಮಮ ದ್ವಿಜ ॥ 47 ॥
ನಾಸ್ತಿಕನೂ, ಮೂರ್ಖನೂ, ಎಲ್ಲ ವಿಷಯಗಳಲ್ಲಿಯೂ ಶಂಕೆಯುಳ್ಳವನೂ, ಪಂಡಿತ ಎಂಬ ದುರಭಿಮಾನವುಳ್ಳವನೂ ಆದ ನಾನು ಇದಕ್ಕೆಲ್ಲ ಫಲವಾಗಿ ನರಿಯ ಜನ್ಮವನ್ನು ಹೊಂದಿದ್ದೇನೆ.
ವ್ಯಾಖ್ಯಾನ ವಿಶೇಷ ಈ ಪ್ರಕರಣದಲ್ಲಿ ಇಂದ್ರದೇವರು, ನಾವು ಹಿಂದಿನ ಜನ್ಮದಲ್ಲಿ ಕುತರ್ಕಗಳನ್ನು ಮಾಡಿದ ಪರಿಣಾಮದಿಂದ ತಮೋರೂಪವಾದ ಈ ಯೋನಿಯನ್ನು ಹೊಂದಿದ್ದೇನೆ ಎಂದು ಹೇಳಿಕೊಂಡಿದ್ದಾರೆ. ಆದರೆ ಅನೇಕ ಯಥಾರ್ಥವಚನಗಳನ್ನೂ ಇಲ್ಲಿ ಆಡಿದ್ದಾರೆ. ಒಂದು ವೇಳೆ ಕುತರ್ಕಗಳ ಪರಿಣಾಮವಾದ ಅಜ್ಞಾನವೇ ಇಂದ್ರದೇವರಲ್ಲಿ ಇದ್ದ ಪಕ್ಷದಲ್ಲಿ ಈ ಯಥಾರ್ಥ ಜ್ಞಾನದ ಉಪದೇಶವು ಹೇಗೆ ಹೊರಹೊಮ್ಮಿತು ಎಂಬ ಪ್ರಶ್ನೆಯು ಉತ್ಪನ್ನವಾಗುತ್ತದೆ. ಇದಕ್ಕೆ ವಾದಿರಾಜರು ಭಾಗವತದ ಆಧಾರದಲ್ಲಿ ಉತ್ತರಿಸಿದ್ದಾರೆ.
ಈ ರೀತಿಯಾಗಿ ಭಾಗವತದಲ್ಲಿ ಪೃಥು ಚಕ್ರವರ್ತಿಯ ಯಜ್ಞ ಪ್ರಕರಣದಲ್ಲಿ ಇಂದ್ರದೇವರು ಪಾಖಂಡ ವೇಷವನ್ನು ಧರಿಸಿ ಕುದುರೆಯನ್ನು ಅಪಹರಿಸುತ್ತಿರಲು ಬಹುವಿಧವಾದ ಪಾಖಂಡ ರೂಪಗಳನ್ನು ನಿರ್ದುಷ್ಟವಾದ ಖುತ್ತುಗಳನ್ನು ಸ್ವಯಂ ಇಂದ್ರದೇವರೇ ಆಚರಿಸಿದರೂ ಅದಕ್ಕೆ ಫಲವಾಗಿ ಈ ರೀತಿಯಾದ ನರಿ ಜನ್ಮವು ಬಂದಿದೆ. ಅದರ ಪಶ್ಚಾತ್ತಾಪದಿಂದಲೇ ಇಂದ್ರದೇವರು ಇಲ್ಲಿ ಹೀಗೆ ಹೇಳಿದ್ದಾರೆ ಎಂದು ಭಾವಿಸಬೇಕು. ಇಂದ್ರದೇವರು ಎಲ್ಲಿಯೂ ದುರ್ವಾದಗಳನ್ನು ಮಂಡಿಸುವಂತಹ ವೇದವಿರುದ್ಧವಾಗಿ ನಡೆದುಕೊಳ್ಳುವಂತಹ ಚರ್ಯೆಯುಳ್ಳವರಾಗಿರಲಿಲ್ಲ. ದುರ್ವಾದವನ್ನು ಮಂಡಿಸುವಂತಹ ವೇಷವನ್ನು ನೆಪಮಾತ್ರದಿಂದ ಧರಿಸಿದ ಕಾರಣದಿಂದ ಇಂತಹ ನರಿಜನ್ಮವನ್ನು ಹೊಂದಿದ್ದೇನೆ ಎಂಬುದು ಪ್ರಕೃತ ಅರ್ಥ. ಆದ್ದರಿಂದ ಯಾರು ವೇದಗಳನ್ನು ಸರ್ವಾತ್ಮನಾ ನಾಸ್ತಿಕಬುದ್ಧಿಯಿಂದ, ಕುತರ್ಕಗಳಿಂದ ನಿಂದಿಸುತ್ತಾರೋ ಅವರಿಗೆ ತಮಸ್ಸೇ ಫಲವಾಗುತ್ತದೆ ಎಂದು ಹೇಳಬೇಕು. ಇಂದ್ರದೇವರಿಗೆ ಈ ರೀತಿ ವಾದಗಳನ್ನು ಮಂಡಿಸಿದಾಗ ಇಂತಹ ದುಷ್ಫಲವು ಏಕಾಗಲಿಲ್ಲ ಎಂಬ ಪ್ರಶ್ನೆಗೆ ಉತ್ತರವಾಗಿ ಭಾಗವತವನ್ನು ಸಂವಾದವಾಗಿ ರಾಜರು ಉಲ್ಲೇಖಿಸಿದ್ದಾರೆ. ಇಂದ್ರದೇವರು ದೇವಕಾರ್ಯನಿಮಿತ್ತ ಪೃಥುಚಕ್ರವರ್ತಿಯ ಯಜ್ಞಾಶ್ವವನ್ನು ಅಪಹರಿಸಲು ಪಾಖಂಡವೇಷವನ್ನು ಮಾತ್ರ ಧರಿಸಿದ್ದಾರೆ. ಅಸುರಜನರ ಮೋಹಕ್ಕೋಸ್ಕರ ಲೀಲೆಯಿಂದ ಒಂದು ಬಾರಿ ಈ ಪಾಖಂಡ ವೇಷವನ್ನು ಬಾಹ್ಯವಾಗಿ ಧರಿಸಿದಾಗಲೂ ಇಂತಹ ವೇಷಧಾರಣೆಗೆ ನರಿಜನ್ಮವು ಪ್ರಾಪ್ತವಾದ ಬಳಿಕ ಮನಃಪೂರ್ವಕವಾಗಿ ಯಾವಾಗಲೂ ವೇದನಿಂದನೆ ಮಾಡುವ ಕೆಟ್ಟ ಅಧರ್ಮದ ಆಚರಣೆಗಳನ್ನು ಅಳವಡಿಸಿಕೊಂಡಲ್ಲಿ ಅಂತಹ ವ್ಯಕ್ತಿಗಳಿಗೆ ಅಂಧಂತಮಸ್ಸಿನಲ್ಲಿಯೇ ಪತನವಾಗುತ್ತದೆ ಎಂದು ಹೇಳಬೇಕೇನು? ಎಂಬ ಕೈಮುತ್ಯನ್ಯಾಯವನ್ನು ತಿಳಿಸುವ ದೃಷ್ಟಿಯ ತಾತ್ಪರ್ಯಗಳು ಈ ಪ್ರಕರಣದಲ್ಲಿವೆ ಎಂದು ಅರ್ಥೈಸಿಕೊಳ್ಳಬೇಕು.
ಅಪಿ ಜಾತು ತಥಾ ತತ್ ಸ್ಯಾದಹೋರಾತ್ರಶತೈರಪಿ |
ಯದಹಂ ಮಾನುಷೀಂ ಯೋನಿಂ ಸೃಗಾಲಃ ಪ್ರಾಪ್ನುಯಾಂ ಪುನಃ ॥48॥
ಈ ನರಿಜನ್ಮವನ್ನು ಹೊಂದಿದ ನಾನು ಹೀಗೆಯೇ ನೂರಾರು ಜನ್ಮಗಳನ್ನು ಕಳೆದ ಮೇಲೆಯಾದರೂ ಎಂದಿಗಾದರೂ ಒಮ್ಮೆ ಪುನಃ ನಿನ್ನಂತೆ ಮನುಷ್ಯಜನ್ಮವು ಬರುತ್ತದೇನೋ ಎಂದು ಕಾದು ಕುಳಿತಿದ್ದೇನೆ.
ಸಂತುಷ್ಟಶ್ಚಾಪ್ರಮತ್ತಶ್ಚ ಯಜ್ಞದಾನತಪೋರತಿಃ |
ಜ್ಞೇಯಜ್ಞಾತಾ ಭವೇಯಂ ವೈ ವರ್ಜ್ಯವರ್ಜಯಿತಾ ತಥಾ ॥ 49 ॥

ಹಾಗೆನಾದರೂ ದೊರಕಿದ ಪಕ್ಷದಲ್ಲಿ ನಾನು ಎಷ್ಟೋ ತೃಪ್ತಿಯನ್ನು ಹೊಂದುತ್ತೇನೆ. ಹಿಂದಿನಂತೆ ಅಸತ್ಕರ್ಮಗಳಲ್ಲಿ ಪ್ರವೃತ್ತಿಯನ್ನು ಮಾಡದೆ ಯಜ್ಞ-ದಾನಾದಿ ಸತ್ಕರ್ಮಗಳಲ್ಲಿ ಆಸಕ್ತನಾಗುತ್ತೇನೆ. ತಿಳಿಯಬೇಕಾದ್ದನ್ನು ತಿಳಿದುಕೊಂಡು ಬಿಡಬೇಕಾದ್ದನ್ನು ಬಿಟ್ಟು ಬಿಡುತ್ತೇನೆ ಎಂದು ನುಡಿಯಿತು.

ತತಃ ಸ ಮುನಿರುತ್ಥಾಯ ಕಾಶ್ಯಪಸ್ತಮುವಾಚ ಹ |
ಅಹೋ ಬತಾಸಿ ಕುಶಲೋ ಬುದ್ಧಿಮಾನಿತಿ ವಿಸ್ಮಿತಃ ॥ 50 ॥
ಸಮವೈಕ್ಷತ ತಂ ವಿಪ್ರೋ ಜ್ಞಾನದೀರ್ಘೇಣ ಚಕ್ಷುಷಾ |
ದದರ್ಶ ಚೈನಂ ದೇವಾನಾಮಿಂದ್ರಂ ದೇವಂ ಶಚೀಪತಿಮ್ ॥ 51 ॥

ಈ ಮಾತನ್ನು ಕೇಳಿದ ಮೇಲೆ ಕಾಶ್ಯಪನೆಂಬ ಬ್ರಾಹ್ಮಣನು ನೆಲದಿಂದ ಮೇಲೆದ್ದು ನರಿಯನ್ನು ಕುರಿತು ಹೇಳುತ್ತಾನೆ: ಅಹೋ! ಏನಾಶ್ಚರ್ಯವು. ಎಲೈ ನರಿಯೇ, ನೀನು ಮಹಾನಿಪುಣನೂ, ಬುದ್ಧಿವಂತನೂ ಆಗಿರುವಿ ಎಂದು, ಆಶ್ಚರ್ಯದಿಂದ ಬಹಳ ಕಾಲ ನೋಡುತ್ತಿರುವಾಗ ಜ್ಞಾನದೃಷ್ಟಿಯಿಂದ ನೋಡುತ್ತಿರುವ ಆತನಿಗೆ ಆ ನರಿಯು ಶಚೀಪತಿಯಾದ ದೇವೇಂದ್ರನೆಂಬುದು ಅರಿವಿಗೆ ಬಂದಿತು.

ತತಃ ಸಂಪೂಜಯಾಮಾಸ ಕಾಶ್ಯಪೋ ಹರಿವಾಹನಮ್ |
ಅನುಜ್ಞಾತಶ್ಚ ತೇನಾಥ ಪ್ರವಿವೇಶ ಸ್ವಮಾಶ್ರಮಮ್ ॥ 52 ॥

ಬಳಿಕ ಕಾಶ್ಯಪನು ಕುದುರೆಯೇ ವಾಹನವಾಗಿಯುಳ್ಳ ಇಂದ್ರನನ್ನು ಬಹಳವಾಗಿ ಪೂಜಿಸಿ ಅವನ ಅನುಮತಿಯನ್ನು ಪಡೆದು ಅಲ್ಲಿಂದ ತಿರುಗಿ ತನ್ನ ಆಶ್ರಮಕ್ಕೆ ಹೊರಟನು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಷಷ್ಠೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.

ಏಳನೆಯ ಅಧ್ಯಾಯ

ಭೀಷ್ಮರು ಯಜ್ಞ-ದಾನ-ತಪಸ್ಸು ಮೊದಲಾದ ಸತ್ಕರ್ಮಗಳು ಪರಂಪರೆಯಿಂದ ಮೋಕ್ಷಸಾಧನವಾಗಿವೆ ಎಂಬುದನ್ನು ಯುಧಿಷ್ಠಿರನಿಗೆ ನಿರೂಪಿಸಿದುದು.

ಯುಧಿಷ್ಠಿರಃ
ಯದ್ಯಸ್ತಿ ದತ್ತಮಿಷ್ಟಂ ವಾ ತಪಸ್ತಪ್ತಂ ತಥೈವ ಚ |
ಗುರೂಣಾಂ ಚಾಪಿ ಶುಶ್ರೂಷಾ ತನ್ಮೇ ಬ್ರೂಹಿ ಪಿತಾಮಹ ॥ 1 ॥

ಯುಧಿಷ್ಠಿರ ಪಿತಾಮಹನೇ, ಯಜ್ಞ, ದಾನ, ತಪಸ್ಸು, ಗುರುಶುಶ್ರೂಷೆ ಮೊದಲಾದವುಗಳಿಗೆ ಉತ್ತಮವಾದ ಫಲವೇನೆಂಬುದನ್ನು ನನಗೆ ತಿಳಿಸಿ.

ಭೀಷ್ಮಃ
ಆತ್ಮನಾನರ್ಥಯುಕ್ತೇನ ಪಾಪೇ ನಿವಿಶತೇ ಮನಃ |
ಸ ಕರ್ಮ ಕಲುಷಂ ಕೃತ್ವಾ ಕ್ಲೇಶೇ ಮಹತಿ ಧೀಯತೇ ॥ 2 ॥

ಭೀಷ್ಮ ನಾನು ಈ ಲೋಕಗತಿಯನ್ನು ಹೇಗೆ ಅರಿತಿದ್ದೇನೋ ಹಾಗೆ ಪರಲೋಕ ವಿಚಾರವನ್ನೂ ತಿಳಿದಿದ್ದೇನೆ. ಈ ಲೋಕದಲ್ಲಿ ದುಷ್ಕರ್ಮಗಳನ್ನು ಮಾಡುವ ಪುರುಷರು ಯಾವ ರೀತಿಯಾದ ದುಃಖವನ್ನು ಅನುಭವಿಸುತ್ತಾರೆ ಎಂಬುದನ್ನು ತಿಳಿಸುತ್ತೇನೆ.

ದುರ್ಭಿಕ್ಷಾದೇವ ದುರ್ಭಿಕ್ಷಂ ಕ್ಲೇಶಾತ್ ಕ್ಲೇಶಂ ಭಯಾದ್ ಭಯಮ್ |
ಮೃತೇಭ್ಯಃ ಪ್ರಮೃತಂ ಯಾಂತಿ ದರಿದ್ರಾಃ ಪಾಪಕಾರಿಣಃ ॥ 3 ॥

ಪಾಪ ಮಾಡಿದವರು ದರಿದ್ರರಾಗಿ ಹುಟ್ಟುತ್ತಾರೆ. ಅವರಿಗೆ ದುರ್ಭಿಕ್ಷದ ಮೇಲೆ ದುರ್ಭಿಕ್ಷವು ಹುಟ್ಟುತ್ತದೆ. ಕಷ್ಟದ ಹಿಂದೆ ಕಷ್ಟವು, ಭಯದ ಮೇಲೆ ಭಯವು, ಪುನಃ ಪುನಃ ಜನನ-ಮರಣಗಳು ಉಂಟಾಗುತ್ತಿರುತ್ತವೆ.

ಉತ್ಸವಾದುತ್ಸವಂ ಯಾಂತಿ ಸ್ವರ್ಗಾತ್ ಸ್ವರ್ಗಂ ಸುಖಾತ್ ಸುಖಮ್ |
ಶ್ರದ್ದಧಾನಾಶ್ಚ ದಾಂತಾಶ್ಚ ಧನಾಢ್ಯಾಃ ಶುಭಕಾರಿಣಃ ॥ 4 ॥

ಸತ್ಕರ್ಮದಲ್ಲಿ ನಿರತರಾದವರು ಆಸ್ತಿಕರಾಗಿ ಸತ್ವಗುಣದಲ್ಲೇ ಪ್ರವರ್ತಿಸುತ್ತಾ ಶ್ರೀಮಂತರಾಗಿ ಹುಟ್ಟಿ ಮೇಲಿಂದ ಮೇಲೆ ಸುಖಗಳನ್ನೂ, ಸಂತೋಷಗಳನ್ನೂ, ಸದ್ಗತಿಗಳನ್ನು ಪಡೆಯುತ್ತಾರೆ. ಶ್ರದ್ಧೆಯುಳ್ಳವರಾಗಿ, ಇಂದ್ರಿಯನಿಗ್ರಹವುಳ್ಳವರಾಗಿ, ಶ್ರೀಮಂತರಾಗಿ ಶುಭಕರ್ಮಿಗಳಾಗಿ ಉತ್ಪನ್ನರಾಗುತ್ತಾರೆ.

ವ್ಯಾಲಕುಂಜರದುರ್ಗೇಷು ಸರ್ಪಚೋರಭಯೇಷು ಚ |
ಹಸ್ತವಾಮೇನ ಗಚ್ಛಂತಿ ನಾಸ್ತಿಕಾಃ ಕಿಮತಃ ಪರಮ್ ॥ 5 ॥

ನಾಸ್ತಿಕರಾದವರು ಮಾಡಬಾರದ ಕಾರ್ಯಗಳಿಗೆ ಕೈಹಾಕಿ ಸರ್ಪ, ಚೋರರ ಬಾಧೆಗಳಿಂದ ಭಯಂಕರವಾದ ಪ್ರದೇಶಗಳಿಗೆ ಅಟ್ಟಲ್ಪಡುತ್ತಾರೆ. ಕ್ರೂರ ಮೃಗಗಳಿಂದಲೂ, ದುಷ್ಟಗಜಗಳಿಂದಲೂ ದುರ್ಗಮಗಳಾಗಿರುವ ಪ್ರದೇಶಗಳಿಗೆ ಅಟ್ಟಲ್ಪಡುತ್ತಾರೆ. ಅಪರಾಧಕ್ಕೆ ಅನುಗುಣವಾಗಿ ಯಮಭಟರಿಂದ ಎಡಗೈಯಿಂದ ಪೆಟ್ಟುಗಳನ್ನು ತಿನ್ನುತ್ತಾ ಅನರ್ಥದ ದಾರಿಯಲ್ಲಿ ಸಾಗುತ್ತಾರೆ. ಇದಕ್ಕಿಂತ ಹೆಚ್ಚೇನು ಹೇಳೋಣ?

ಪ್ರಿಯದೇವಾತಿಥೇಯಾಶ್ಚ ವದಾನ್ಯಾಃ ಪ್ರಿಯಸಾಧವಃ |
ಕ್ಷೇಮ್ಯಮಾತ್ಮವತಾಂ ಮಾರ್ಗಮಾಸ್ಥಿತಾ ಹಸ್ತದಕ್ಷಿಣಮ್ ॥ 6 ॥

ಯಾರು ದೈವಭೀತರಾಗಿ, ಅತಿಥಿಗಳಲ್ಲಿ ಆದರವುಳ್ಳವರಾಗಿ, ದಾನಶೀಲರಾಗಿ, ಸಾಧುಗಳಲ್ಲಿ ಪ್ರೀತಿಯುಳ್ಳವರಾಗಿ ಇರುತ್ತಾರೋ ಇಂತಹ ಸಜ್ಜನರು ದೇವತೆಗಳಿಂದ ಬಲಗೈಯಿಂದ ಸ್ವಾಗತಕ್ಕೆ ಅರ್ಹತೆಯನ್ನು ಉಳ್ಳವರಾಗಿ ಉತ್ತಮ ಸ್ಥಿತಿಗಳನ್ನು ಹೊಂದುತ್ತಾರೆ.

ಪುಲಾಕಾ ಇವ ಧಾನ್ಯೇಷು ಪುತ್ತಿಕಾ ಇವ ಪಕ್ಷಿಷು |
ತದ್ವಿಧಾಸ್ತೇ ಮನುಷ್ಯೇಷು ಯೇಷಾಂ ಧರ್ಮೋ ನ ಕಾರಣಮ್ ॥ 7 ॥
ಧರ್ಮವನ್ನು ಕ್ಷೇಮಕಾರಣ ಎಂದು ಯಾರು ತಿಳಿಯುವುದಿಲ್ಲವೋ ಅಂತಹ ಮನುಷ್ಯರು ಧಾನ್ಯಗಳ ನಡುವೆ ಇರುವ ಶುದ್ಧಧಾನ್ಯಗಳಲ್ಲಿ, ಜೊಳ್ಳುಗಳಂತೆ, ಪಕ್ಷಿಗಳ ಮಧ್ಯದಲ್ಲಿ ಸೊಳ್ಳೆಗಳಂತೆ, ದುರ್ಗಂಧಭರಿತವಾದ ಪಕ್ಷಿಜಾತಿಗಳಂತೆ ಪರಿಗಣಿಸಲ್ಪಡುತ್ತಾರೆ.
ಸುಶೀಘ್ರಮಪಿ ಧಾವಂತಂ ವಿಧಾನಮನುಧಾವತಿ |
ಶೇತೇ ಸಹ ಶಯಾನೇನ ಯೇನ ಯೇನ ಯಥಾ ಕೃತಮ್ ॥ 8 ॥
ಉಪತಿಷ್ಠತಿ ತಿಷ್ಠಂತಂ ಗಚ್ಛಂತಮನುಗಚ್ಛತಿ |
ಕರೋತಿ ಕುರ್ವತಃ ಕರ್ಮ ಛಾಯೇವಾನುವಿಧೀಯತೇ ॥ 9 ॥
ಯಾವ ಮನುಷ್ಯನು ಯಾವ ಯಾವ ಕರ್ಮವನ್ನು ಯಾವ ರೀತಿಯಾಗಿ ಆಚರಿಸುತ್ತಾನೋ ಆಯಾ ಕರ್ಮಗಳು ಮನುಷ್ಯನನ್ನು ಬಿಡದೆ ಬೆನ್ನಟ್ಟಿ ಬರುತ್ತವೆ. ಈ ಕರ್ಮಗಳು ಅವನು ಕುಳಿತಲ್ಲಿ, ನಿಂತಲ್ಲಿ ಹಿಂಬಾಲಿಸುತ್ತವೆ. ಓಡಿದಷ್ಟೂ ಓಡಿ ಬರುತ್ತವೆ. ಮಲಗಿದಾಗ ಮಲಗುತ್ತವೆ. ಪ್ರಾರಬ್ಧವೆಂಬುದು ಆಯಾ ಮನುಷ್ಯನ ನೆರಳಿನಂತೆ ಹಿಂಬಾಲಿಸುತ್ತದೆ.
ಯೇನ ಯೇನ ಯಥಾ ಯದ್ಯತ್ ಪುರಾ ಕರ್ಮ ಸಮಾಚಿತಮ್ |
ತತ್ತದೇವ ನರೋ ಭುಂಕ್ತೇ ನಿತ್ಯಂ ವಿಹಿತಮಾತ್ಮನಾ ॥ 10 ॥
ಯಾವ ಯಾವ ಮನುಷ್ಯನು ಯಾವ ಯಾವ ವಿಧವಾದ ಕರ್ಮಗಳನ್ನು ಹಿಂದಿನ ಜನ್ಮದಲ್ಲಿ ಹೇಗೆ ಆಚರಿಸಿರುತ್ತಾನೋ ಅದೇ ರೀತಿಯಾದ ಕರ್ಮಫಲಗಳನ್ನು, ಜನ್ಮಾಂತರದಲ್ಲಿ ತಾನು ಮಾಡಿದಂತೆ ನಿತ್ಯವೂ ಅನುಭವಿಸುತ್ತಾನೆ.
ಸ್ವಕರ್ಮಫಲವಿಕ್ಷಿಪ್ತಂ ವಿಧಾನಪರಿರಕ್ಷಿತಮ್ |
ಭೂತಗ್ರಾಮಮಿಮಂ ಕಾಲಃ ಸಮಂತಾತ್ ಪರಿಕರ್ಷತಿ ॥ 11 ॥
ಪ್ರಾಣಿಗಳು ಮಾಡಿದ ಕರ್ಮಗಳಿಗೆ ತಕ್ಕ ಸ್ವರ್ಗಾದಿ ಫಲಗಳನ್ನು ದೈವವು ಭದ್ರವಾಗಿ ಕಾಪಾಡಿಕೊಂಡಿರುತ್ತದೆ. ಕಾಲವೆಂಬುದು ಆಯಾ ಸಮಯಕ್ಕೆ ಸರಿಯಾಗಿ ಪ್ರಾಣಿ ವರ್ಗವನ್ನು ಸೆಳೆದುಕೊಂಡು ಹೋಗಿ ಆಯಾ ಫಲಗಳನ್ನು ಉಣಿಸುತ್ತದೆ.
ಅಚೋದ್ಯಮಾನಾನಿ ಯಥಾ ಪುಷ್ಪಾಣಿ ಚ ಫಲಾನಿ ಚ |
ಸ್ವಕಾಲಂ ನಾತಿವರ್ತಂತೇ ತಥಾ ಕರ್ಮ ಪುರಾಕೃತಮ್ ॥ 12 ॥
ಯಾರ ಪ್ರೇರಣೆಯೂ ಇಲ್ಲದೆ ವೃಕ್ಷಗಳು ತಮ್ಮ ಋತುಕಾಲಗಳಲ್ಲಿ ಪುಷ್ಪ-ಫಲಗಳನ್ನು ಹೊಂದುವಂತೆ ಕರ್ಮಗಳು ಆಯಾ ಕಾಲಕ್ಕೆ ಫಲವನ್ನು ತೋರಿಸುತ್ತವೆ.
ಸಮ್ಮಾನಶ್ಚಾವಮಾನಶ್ಚ ಲಾಭಾಲಾಭೌ ಕ್ಷಯೋದಯೌ |
ಪ್ರವೃತ್ತಾ ವಿನಿವರ್ತಂತೇ ವಿಧಾನಾಂತೇ ಪುನಃ ಪುನಃ ॥ 13 ॥
ಹಿಂದೆ ಮಾಡಿದ ಕರ್ಮಫಲಗಳನ್ನು ಅನುಭವಿಸಿದ ಮೇಲೆ ಯಾರಿಗೂ ಮಾನಾವಮಾನಗಳಾಗಲಿ, ಲಾಭ-ನಷ್ಟಗಳಾಗಲಿ, ವೃದ್ಧಿ-ಕ್ಷಯವಾಗಲಿ ತೋರಲು ಅವಕಾಶವಿರುವುದಿಲ್ಲ. ಕರ್ಮಫಲದ ಜೊತೆಗೆ ಅವೂ ತೀರಿಹೋಗುತ್ತವೆ.
ಆತ್ಮನಾ ವಿಹಿತಂ ದುಃಖಮಾತ್ಮನಾ ವಿಹಿತಂ ಸುಖಮ್ |
ಗರ್ಭಶಯ್ಯಾಮುಪಾದಾಯ ಭುಜ್ಯತೇ ಪೌರ್ವದೇಹಿಕಮ್ ॥ 14 ॥
ಪ್ರತಿಯೊಬ್ಬ ಪ್ರಾಣಿಯೂ ತಾನು ತಾಯಿಗರ್ಭದಲ್ಲಿ ಇರುವಾಗಲಿನಿಂದಲೇ ಪೂರ್ವದಲ್ಲಿ ಮಾಡಿದ ಕರ್ಮಗಳಿಗೆ ತಕ್ಕ ಸುಖ-ದುಃಖಗಳನ್ನು ಅನುಭವಿಸುತ್ತಿರುತ್ತಾನೆ.
ಬಾಲೋ ಯುವಾ ಚ ವೃದ್ಧಶ್ಚ ಯತ್ ಕರೋತಿ ಶುಭಾಶುಭಮ್ |
ತಸ್ಯಾಂ ತಸ್ಯಾಮವಸ್ಥಾಯಾಂ ಭುಂಕ್ತೇ ಜನ್ಮನಿ ಜನ್ಮನಿ ॥ 15 ॥
ಒಬ್ಬನು ಬಾಲ್ಯದಲ್ಲಿಯಾಗಲೀ, ಯೌವನದಲ್ಲಿಯಾಗಲೀ, ವೃದ್ಧಾಪ್ಯದಲ್ಲೇ ಆಗಲಿ ಶುಭಾಶುಭಕರ್ಮಗಳನ್ನು ಹೇಗೆ ನಡೆಸುತ್ತಾನೋ ಅದರಂತೆ ಅವನ ಮುಂದಿನ ಜನ್ಮದಲ್ಲಿ ಆಯಾ ಅವಸ್ಥೆಯಲ್ಲಿಯೇ ಅವುಗಳು ಅನುಭವಕ್ಕೆ ಬರುತ್ತವೆ.
ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಮ್ |
ತಥಾ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ ॥ 16 ॥
ಸಾವಿರಾರು ಹಸುಗಳಿರುವ ಮಂದೆಯಲ್ಲಿ ಕರುವು ತನ್ನ ತಾಯಿಯನ್ನು ಗುರುತು ಹಿಡಿದು ಓಡುವಂತೆ ಪೂರ್ವಕರ್ಮವು ಮುಂದಿನ ಜನ್ಮದಲ್ಲಿ ಹುಟ್ಟಿದ ಕರ್ತೃವನ್ನು ಕಂಡುಹಿಡಿದು ಹಿಂಬಾಲಿಸುತ್ತದೆ.
ಸಂಸ್ವಿನ್ನಮಗ್ರತೋ ವಸ್ತ್ರಂ ಪಶ್ಚಾಚ್ಛುದ್ಧ್ಯತಿ ಕರ್ಮಣಾ |
ಉಪವಾಸೈಃ ಪ್ರತಪ್ತಾನಾಂ ದೀರ್ಘಂ ಸುಖಮನಂತಕಮ್ ॥ 17 ॥
ಬಹಳ ಮುದುರಿ ಕೊಳೆಯಾದ ವಸ್ತುವು, ಬೆವರಿನಿಂದ ಮಲಿನವಾದ ವಸ್ತ್ರವು ನೀರಿನಿಂದ ಶುದ್ಧವಾಗುವಂತೆ ಹಿಂದೆ ಮಾಡಿದ ದುಷ್ಕರ್ಮವು ಮುಂದಿನ ಪುಣ್ಯ ಕರ್ಮಗಳಿಂದ ಪರಿಹಾರವಾಗಿ ಮನುಷ್ಯನು ಶುದ್ಧಿಯನ್ನು ಹೊಂದುತ್ತಾನೆ.
ದುಷ್ಕರ್ಮಾಪಿ ತಥಾ ಪಶ್ಚಾತ್ ಪೂಯತೇ ಪುಣ್ಯಕರ್ಮಣಾ |
ತಪಸಾ ತಪ್ಯತೇ ದೇಹಸ್ತಪಸಾ ವಿಂದತೇ ಮಹತ್ |
ದೀರ್ಘಕಾಲೇನ ತಪಸಾ ಸೇವಿತೇನ ತಪೋವನೇ |
ಧರ್ಮನಿರ್ಧೂತಪಾಪಾನಾಂ ಸಂಸಿದ್ಧ್ಯಂತೇ ಮನೋರಥಾಃ ॥ 18 ॥
ದುಷ್ಕರ್ಮಿಯಾಗಿದ್ದರೂ ಆಮೇಲೆ ಮಾಡಿದ ಪುಣ್ಯಕರ್ಮಗಳಿಂದ ಪವಿತ್ರನಾಗುತ್ತಾನೆ. ತಪಸ್ಸಿನಿಂದ ದೇಹವು ಶುದ್ಧವಾಗುತ್ತದೆ. ತಪಸ್ಸಿನಿಂದಲೇ ಮಹತ್ತಾದ್ದನ್ನು ಹೊಂದುತ್ತಾನೆ. ದೀರ್ಘಕಾಲವಾದ ತಪಸ್ಸುಗಳನ್ನು ತಪೋವನಗಳಲ್ಲಿ ಅನುಷ್ಠಾನ ಮಾಡಿದ ಬಳಿಕ

ಧರ್ಮಾಚರಣೆಯಿಂದ ಪಾಪಗಳು ಪರಿಹಾರವಾಗಿ ಮನೋರಥಗಳು ಸಿದ್ಧಿಸುತ್ತವೆ.
ಶಕುನೀನಾಮಿವಾಕಾಶೇ ಮತ್ಸ್ಯಾನಾಮಿವ ಚೋದಕೇ |
ಪದಂ ಯಥಾ ನ ದೃಶ್ಯೇತ ತಥಾ ಜ್ಞಾನವಿದಾಂ ಗತಿಃ ॥ 19 ॥
ಆಕಾಶದಲ್ಲಿ ಪಕ್ಷಿಗಳು ಸಂಚರಿಸುವಾಗ ಅವುಗಳು ಹೋಗುವ ದಾರಿಯನ್ನು ಹೇಗೆ ಕಂಡುಕೊಳ್ಳಲು ಸಾಧ್ಯವಿಲ್ಲವೋ, ನೀರಿನಲ್ಲಿ ಸಂಚರಿಸುವ ಮತ್ಸ್ಯಗಳು ಹೋಗುವ ದಾರಿಯು ಹೇಗೆ ಅರಿಯದೋ ಹಾಗೆ ಧರ್ಮಜ್ಞರ ಗತಿಯನ್ನು ಕಂಡುಕೊಳ್ಳುವುದು ಬಹಳ ಕಷ್ಟ.
ಅಲಮನ್ಯೈರುಪಾಲಂಭೈಃ ಕೀರ್ತಿತೈಶ್ಚ ವ್ಯತಿಕ್ರಮೈಃ |
ಪೇಶಲಂ ಚಾನುರೂಪಂ ಚ ಕರ್ತವ್ಯಂ ಹಿತಮಾತ್ಮನಃ ॥ 20 ॥
ಈ ವಿಷಯದಲ್ಲಿ ಇನ್ನೂ ಹೆಚ್ಚು ಆಕ್ಷೇಪವಿಷಯಗಳು ಸಾಕು. ತಪ್ಪುಗಳನ್ನು ತಿಳಿಸುವುದೂ ಸಾಕು. ಮನುಷ್ಯನು ತನ್ನ ಯೋಗ್ಯವಾದ ದಾರಿಯನ್ನು ತಿಳಿದು ಆತ್ಮಕ್ಕೆ ಯಾವುದು ಹಿತವೋ ಅದನ್ನು ನಡೆಸಬೇಕು ಎಂದು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ಭರದ್ವಾಜರಿಗೆ ಭೃಗುವು ಹೇಳಿದ ಜಗತ್ಸೃಷ್ಟ್ಯಾದಿ ಕರ್ತೃತ್ವವನ್ನು
ಭೀಷ್ಮರು ಧರ್ಮರಾಜನಿಗೆ ತಿಳಿಸಿದುದು.
ಯುಧಿಷ್ಠಿರಃ
ಕುತಃ ಸೃಷ್ಟಮಿದಂ ವಿಶ್ವಂ ಜಗತ್ ಸ್ಥಾವರಜಂಗಮಮ್ |
ಪ್ರಲಯೇ ಚ ಕಮಭ್ಯೇತಿ ತನ್ಮೇ ಬ್ರೂಹಿ ಪಿತಾಮಹ ॥ 1 ॥
ಯುಧಿಷ್ಠಿರ ಪಿತಾಮಹನೇ, ಚರಾಚರಾತ್ಮಕವಾದ ಈ ಪ್ರಪಂಚವು ಯಾರಿಂದ, ಎಲ್ಲಿಂದ ಸೃಷ್ಟಿಸಲ್ಪಟ್ಟಿತು? ಪ್ರಳಯಕಾಲದಲ್ಲಿ ಇದು ಎಲ್ಲಿಗೆ ಸೇರುತ್ತದೆ? ಈ ವಿಷಯವನ್ನು ತಿಳಿಸಿರಿ.
ಸಸಾಗರಃ ಸಗಗನಃ ಸಶೈಲಃ ಸಬಲಾಹಕಃ |
ಸಭೂಮಿಃ ಸಾಗ್ನಿಪವನೋ ಲೋಕೋಽಯಂ ಕೇನ ನಿರ್ಮಿತಃ ॥ 2 ॥
ಸಮುದ್ರಗಳು, ಪರ್ವತಗಳು, ಮೇಘಗಳು, ಮೋಡಗಳು, ಭೂಮಿ, ಅಗ್ನಿ, ಗಾಳಿ ಇವುಗಳಿಂದ ಕೂಡಿದ ಈ ಲೋಕವನ್ನು ಯಾರು ಸೃಷ್ಟಿಸಿದ್ದಾರೆ?
ಕಥಂ ಸೃಷ್ಟಾನಿ ಭೂತಾನಿ ಕಥಂ ವರ್ಣವಿಭಕ್ತಯಃ |
ಶೌಚಾಶೌಚಂ ಕಥಂ ತೇಷಾಂ ಧರ್ಮಾಧರ್ಮಾವಥೋ ಕಥಮ್ ॥ 3 ॥
ಭೂತಗಳ ಸೃಷ್ಟಿಯ ಪ್ರಕಾರವೇನು? ಬ್ರಾಹ್ಮಣಾದಿ ವರ್ಣವಿಭಾಗಗಳು ಹೇಗೆ ಉಂಟಾದವು? ಆ ವರ್ಣಗಳಿಗೆ ಶುಚಿತ್ವವು, ಅಶುಚಿತ್ವವು ಹೇಗೆ ಉಂಟಾಯಿತು? ಧರ್ಮಾಧರ್ಮಗಳ ವಿಧಿಗಳೇನು?
ಕೀದೃಶೋ ಜೀವತಾಂ ಜೀವಃ ಕ್ವ ವಾ ಗಚ್ಛಂತಿ ಯೇ ಮೃತಾಃ |
ಅಸ್ಮಾಲ್ಲೋಕಾದಮುಂ ಲೋಕಂ ಸರ್ವಂ ಶಂಸತು ನೋ ಭವಾನ್ ॥4॥
ಬದುಕಿರುವ ಪ್ರಾಣಿಗಳ ಜೀವಸ್ವರೂಪವು ಯಾವ ರೀತಿಯದ್ದು? ಸತ್ತವರು ಎಲ್ಲಿಗೆ ಹೋಗುತ್ತಾರೆ? ಈ ಲೋಕದಿಂದ ಅವರು ಪರಲೋಕಕ್ಕೆ ಹೇಗೆ ಹೋಗುತ್ತಾರೆ? ಇವೆಲ್ಲವನ್ನೂ ನನಗೆ ತಿಳಿಸಿರಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಭೃಗುಣಾಭಿಹಿತಂ ಶ್ರೇಷ್ಠಂ ಭರದ್ವಾಜಾಯ ಪೃಚ್ಛತೇ ॥ 5 ॥
ಭೀಷ್ಮ ಕುಮಾರನೇ, ಹಿಂದೆ ಭೃಗುಮುನಿಯು ಭರದ್ವಾಜರಿಗೆ ಹೇಳಿದ ಕಥಾ ರೂಪವಾದ ಇತಿಹಾಸವೊಂದನ್ನು ಉದಾಹರಿಸುತ್ತಾರೆ.
ಕೈಲಾಸಶಿಖರೇ ದೃಷ್ಟ್ವಾ ದೀಪ್ಯಮಾನಮಿವೌಜಸಾ |
ಭೃಗುಂ ಮಹರ್ಷಿಮಾಸೀನಂ ಭರದ್ವಾಜೋಽನ್ವಪೃಚ್ಛತ ॥ 6 ॥
ಹಿಂದೆ ಭೃಗುಮಹರ್ಷಿಯು ಕೈಲಾಸಶಿಖರದಲ್ಲಿ ಮಹಾತೇಜಸ್ವಿಯಾಗಿ ಕುಳಿತಿರುವಾಗ ಭರದ್ವಾಜರು ನಿನ್ನಂತೆ ಇದೇ ವಿಷಯವಾಗಿ ಅವರ ಬಳಿ ಪ್ರಶ್ನಿಸಿದರು.
ಸಸಾಗರಃ ಸಗಗನಃ ಸಶೈಲಃ ಸಬಲಾಹಕಃ |
ಸಭೂಮಿಃ ಸಾಗ್ನಿಪವನೋ ಲೋಕೋಽಯಂ ಕೇನ ನಿರ್ಮಿತಃ ॥ 7 ॥
ಭೃಗುಋಷಿಯೇ, ಸಮುದ್ರ, ಆಕಾಶ, ಅಗ್ನಿ, ಪರ್ವತ, ವಾಯು, ಭೂಮಿ ಇವುಗಳಿಂದ ಕೂಡಿದ ಲೋಕವು ಯಾರಿಂದ ನಿರ್ಮಿತವಾಗಿದೆ?
ಕಥಂ ಸೃಷ್ಟಾನಿ ಭೂತಾನಿ ಕಥಂ ವರ್ಣವಿಭಕ್ತಯಃ |
ಶೌಚಾಶೌಚಂ ಕಥಂ ತೇಷಾಂ ಧರ್ಮಾಧರ್ಮಾವಥೋ ಕಥಮ್ ॥ 8 ॥
ಭೂತಸೃಷ್ಟಿಯ ಕ್ರಮ, ವರ್ಣವಿಭಾಗ, ಶೌಚಾಶೌಚ, ಧರ್ಮಾಧರ್ಮ ಇವುಗಳೆಲ್ಲವೂ ಯಾರಿಂದ ನಿರ್ಮಿತವಾದವು?
ಕೀದೃಶೋ ಜೀವತಾಂ ಜೀವಃ ಕ್ವ ವಾ ಗಚ್ಛಂತಿ ಯೇ ಮೃತಾಃ |
ಪರಲೋಕಮಿಮಂ ಚಾಪಿ ಸರ್ವಂ ಶಂಸತು ನೋ ಭವಾನ್ ॥ 9 ॥

ಜೀವರ ಸ್ವರೂಪ, ಮೃತರಾದವರು ಹೋಗುವ ಸ್ಥಳ, ಇಹಲೋಕದ ಪರಲೋಕದ ಸ್ವರೂಪ ಇವೆಲ್ಲವನ್ನೂ ನನಗೆ ತಿಳಿಸು.
ಏವಂ ಸ ಭಗವಾನ್ ಪೃಷ್ಟೋ ಭರದ್ವಾಜೇನ ಸಂಶಯಮ್ |
ಮಹರ್ಷಿರ್ಬ್ರಹ್ಮಸಂಕಾಶಃ ಸರ್ವಂ ತಸ್ಮೈ ತತೋಽಬ್ರವೀತ್ ॥ 10 ॥
ಈ ರೀತಿಯಾಗಿ ಬ್ರಹ್ಮಸಮಾನನಾದ ಭೃಗುವು ಭರದ್ವಾಜರಿಂದ ಈ ಪ್ರಶ್ನೆಗಳನ್ನು ಕೇಳಿಸಿಕೊಂಡು ಉತ್ತರಿಸಲು ತೊಡಗಿದನು.
ಮಾನಸೋ ನಾಮ ವಿಖ್ಯಾತಃ ಶ್ರುತಪೂರ್ವೋ ಮಹರ್ಷಿಭಿಃ |
ಅನಾದಿನಿಧನೋ ದೇವಸ್ತಥಾಭೇದ್ಯೋಽಜರಾಮರಃ ॥ 11 ॥
ಆದಿಪುರುಷನಾದ ನಾರಾಯಣನನ್ನು ಋಷಿಗಳು ಮಾನಸ ಪುರುಷನೆಂದು ಕರೆಯುತ್ತಾರೆ. ಮಾನಸ ಪುರುಷ ಎಂದೇ ಅವನಿಗೆ ಪ್ರಸಿದ್ಧಿಯು. ಅವನಿಗೆ ಆದ್ಯಂತಗಳಿಲ್ಲ. ಅವನು ಶಸ್ತ್ರಗಳಿಂದ ತುಂಡಾಗುವವನಲ್ಲ. ಜರಾ-ಮರಣಗಳು ಉಳ್ಳವನಲ್ಲ.
ಅವ್ಯಕ್ತ ಇತಿ ವಿಖ್ಯಾತಃ ಶಾಶ್ವತೋಽಥಾಕ್ಷರೋಽವ್ಯಯಃ |
ಯತಃ ಸೃಷ್ಟಾನಿ ಭೂತಾನಿ ಜಾಯಂತೇ ಚ ಮ್ರಿಯಂತಿ ಚ ॥ 12 ॥
ಅವನು ಅವ್ಯಕ್ತನೆಂದೂ, ಅಕ್ಷಯ, ಅವ್ಯಯ, ಶಾಶ್ವತನೆಂದೂ ಪ್ರಸಿದ್ಧಿ ಹೊಂದಿದ್ದಾನೆ. ಭೂತಗಳೆಲ್ಲವೂ ಅವನಿಂದಲೇ ಹುಟ್ಟಿ, ಅವನಲ್ಲೇ ಲಯ ಹೊಂದುತ್ತವೆ.
ಸೋಽಸೃಜತ್ ಪ್ರಥಮಂ ದೇವೋ ಮಹಾಂತಂ ನಾಮ ನಾಮತಃ |
ಆಕಾಶಮಿತಿ ವಿಖ್ಯಾತಂ ಸರ್ವಭೂತಧರಃ ಪ್ರಭುಃ ॥ 13 ॥
ಅವನು ಮೊದಲು ಮಹತ್ತೆಂಬ ತತ್ತ್ವವನ್ನು ಸೃಷ್ಟಿಸಿದನು. ಮಹತ್ತು ಅಹಂಕಾರ ತತ್ತ್ವವನ್ನು ಸೃಷ್ಟಿಸಿತು. ಅದರ ಮೂಲಕ ಆಕಾಶವು ಸೃಷ್ಟವಾಯಿತು. ಇದೇ ಸರ್ವಭೂತಗಳಿಗೆ ಧಾರಕವಾಗಿದೆ.
ಆಕಾಶಾದಭವದ್ ವಾರಿ ಸಲಿಲಾದಗ್ನಿಮಾರುತೌ |
ಅಗ್ನಿಮಾರುತಸಂಯೋಗಾತ್ತತಃ ಸಮಭವನ್ಮಹೀ ॥ 14 ॥
ಆಕಾಶದಿಂದ ಜಲ, ಜಲದಿಂದ ಅಗ್ನಿ-ವಾಯುಗಳು, ಅವೆರಡರ ಸಂಪರ್ಕದಿಂದ ಭೂಮಿಯು ಹುಟ್ಟಿತು.
ತತಸ್ತೇಜೋಮಯಂ ದಿವ್ಯಂ ಪದ್ಮಂ ಸೃಷ್ಟಂ ಸ್ವಯಂಭುವಾ |
ತಸ್ಮಾತ್ ಪದ್ಮಾತ್ ಸಮಭವದ್ ಬ್ರಹ್ಮಾ ವೇದಮಯೋ ನಿಧಿಃ ॥ 15 ॥
ಬಳಿಕ ಮಾನಸ ಪುರುಷನು ತೇಜೋಮಯವಾದ ದಿವ್ಯ ಕಮಲ ಒಂದನ್ನು ಸೃಷ್ಟಿಸಿದನು. ಆ ಕಮಲದಿಂದ ವೇದನಿಧಿಯಾದ ಸ್ವಯಂಭು ಎನಿಸಿದ ಚತುರ್ಮುಖ ಬ್ರಹ್ಮನು ಹುಟ್ಟಿದನು.
ಅಹಂಕಾರ ಇತಿ ಖ್ಯಾತಃ ಸರ್ವಭೂತಾತ್ಮಭೂತಕೃತ್ |
ಬ್ರಹ್ಮಾ ವೈ ಸುಮಹಾತೇಜಾ ಯ ಏತೇ ಪಂಚ ಧಾತವಃ ॥ 16 ॥
ಅವನು ಹುಟ್ಟಿದ ಕೂಡಲೇ ಸಮಸ್ತ ಪ್ರಾಣಿಗಳಿಗೂ ಪ್ರೇರಕವಾದ ಅಹಂಕಾರ ಎಂಬ ಶಬ್ದದಿಂದ ಅಹಂಕಾರತತ್ತ್ವಪ್ರೇರಕನಾಗಿ ಖ್ಯಾತನಾದನು. ಸಮಸ್ತ ಜೀವರಾಶಿಗಳಿಗೂ ಪಾಂಚಭೌತಿಕ ದೇಹವನ್ನು ನಿರ್ಮಿಸುವವನು ಇವನೇ. ಮಹಾತೇಜಸ್ವಿಯಾದ ಈ ಚತುರ್ಮುಖ ಬ್ರಹ್ಮನೇ ಈ ಪಂಚಭೂತಗಳಿಗೆ ನಿಯಾಮಕನಾಗಿದ್ದಾನೆ.
ಶೈಲಾಸ್ತಸ್ಯಾಸ್ಥಿಸಂಜ್ಞಾಸ್ತು ಮೇದೋ ಮಾಂಸಂ ಚ ಮೇದಿನೀ |
ಸಮುದ್ರಾಸ್ತಸ್ಯ ರುಧಿರಮಾಕಾಶಮುದರಂ ತಥಾ ॥ 17 ॥
ನಮ್ಮ ಕಣ್ಣಿಗೆ ಕಾಣುವ ಪರ್ವತಗಳೇ ವಿಶ್ವರೂಪ ಎನಿಸಿದ ಪದ್ಮನಾಭನ ಅಸ್ಥಿಗಳು. ಭೂಮಿಯೇ ಅವನ ಮೇದಸ್ಸು, ಮಾಂಸಗಳು. ಸಮುದ್ರವೇ ಅವನ ರಕ್ತವು. ಆಕಾಶವೇ ಅವನ ಜಠರವು.
ಪವನಶ್ಚೈವ ನಿಃಶ್ವಾಸಸ್ತೇಜೋಽಗ್ನಿರ್ನಿಮ್ನಗಾಃ ಸಿರಾಃ |
ಅಗ್ನೀಷೋಮೌ ತು ಚಂದ್ರಾರ್ಕೌ ನಯನೇ ತಸ್ಯ ವಿಶ್ರುತೇ ॥ 18 ॥
ವಾಯುವು ಅವನ ಉಸಿರು. ಅಗ್ನಿಯು ಅವನ ತೇಜಸ್ಸು. ನದಿಗಳು ಅವನ ನಾಡಿಗಳು. ಸೂರ್ಯಚಂದ್ರರು ಅವನ ಕಣ್ಣುಗಳು.
ನಭಶ್ಚೋರ್ಧ್ವಂ ಶಿರಸ್ತಸ್ಯ ಕ್ಷಿತಿಃ ಪಾದೌ ದಿಶೋ ಭುಜೌ |
ದುರ್ವಿಜ್ಞೇಯೋ ಹ್ಯನಂತತ್ವಾತ್ ಸಿದ್ಧೈರಪಿ ನ ಸಂಶಯಃ ॥ 19 ॥
ಆಕಾಶವು ಅವನ ಶಿರಸ್ಸು. ಭೂಮಿಯು ಅವನ ಪಾದಗಳು. ದಿಕ್ಕುಗಳು ಅವನ ಭುಜಗಳು. ಅವನು ಅನಂತನಾದುದರಿಂದ ಆ ಅನಂತತತ್ವನಾದ ಅವನನ್ನು ತಿಳಿಯಲು ಸಿದ್ಧರಿಗೂ ಸಾಧ್ಯವಿಲ್ಲ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಸ ಏವ ಭಗವಾನ್ ವಿಷ್ಣುರನಂತ ಇತಿ ವಿಶ್ರುತಃ |
ಸರ್ವಭೂತಾತ್ಮಭೂತಸ್ಥೋ ದುರ್ವಿಜ್ಞೇಯೋಽಕೃತಾತ್ಮಭಿಃ ॥ 20 ॥
ಅಂತಹ ಭಗವಂತನೇ ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವೇ ಅನಂತ ಎಂದು ಖ್ಯಾತನಾಗಿದ್ದಾನೆ. ಸಮಸ್ತ ಜೀವರ ಅಂತರ್ಯಾಮಿಯಾಗಿರುವ ಈ ವಿಷ್ಣುವು ಸತ್ಕರ್ಮಗಳನ್ನು ಆಚರಿಸದವರಿಗೆ ತಿಳಿಯದವನಾಗಿದ್ದಾನೆ.
ಅಹಂಕಾರಸ್ಯ ಯಃ ಸ್ರಷ್ಟಾ ಸರ್ವಭೂತಭವಾಯ ವೈ |
ಯತಃ ಸಮಭವದ್ ವಿಶ್ವಂ ಪೃಷ್ಟೋಽಹಂ ಯದಿಹ ತ್ವಯಾ ॥ 21 ॥
ಸಮಸ್ತ ಭೂತಗಳ ಉತ್ಪತ್ತಿಗಳಿಗೆ ಬೇಕಾದ ಅಹಂಕಾರತತ್ತ್ವವು ಅವನಿಂದ ಸೃಷ್ಟವಾಯಿತು. ಜಗತ್ತೆಲ್ಲವೂ ಅವನಿಂದಲೇ ಉತ್ಪನ್ನವಾಯಿತು.
ಭರದ್ವಾಜಃ
ಗಗನಸ್ಯ ದಿಶಾಂ ಚೈವ ಭೂತಲಸ್ಯಾನಿಲಸ್ಯ ಚ |
ಕಾನ್ಯತ್ರ ಪರಿಮಾಣಾನಿ ಸಂಶಯಂ ಛಿಂಧಿ ಮೇಽರ್ಥತಃ ॥ 22 ॥

ಭರದ್ವಾಜ ಭೃಗುಶ್ರೇಷ್ಠನೇ, ಆಕಾಶ, ದಿಕ್ಕು, ಭೂಮಿ, ವಾಯು ಇವುಗಳ ಅಳತೆ ಏನೆಂಬುದನ್ನು ನನಗೆ ತಿಳಿಸು. ನನ್ನ ಸಂಶಯವನ್ನು ಪರಿಹರಿಸು.
ಭೃಗುಃ
ಅನಂತಮೇತದಾಕಾಶಂ ಸಿದ್ಧಚಾರಣಸೇವಿತಮ್ |
ರಮ್ಯಂ ನಾನಾಶ್ರಯಾಕೀರ್ಣಂ ಯಸ್ಯಾಂತೋ ನಾಧಿಗಮ್ಯತೇ ॥ 23 ॥
ಭೃಗು ನೀನು ನೋಡುತ್ತಿರುವ ಈ ಆಕಾಶಕ್ಕೆ ಅನಂತ ಎಂದು ಹೆಸರು. ಇದಕ್ಕೆ ಕೊನೆಯೇ ಇಲ್ಲ, ಮೊದಲೂ ಇಲ್ಲ. ಸಿದ್ಧ-ಚಾರಣರಿಗೆ ನಿವಾಸವಾಗಿ ರಮ್ಯವಾಗಿ ಎಲ್ಲ ಕಡೆಯೂ ವ್ಯಾಪ್ತವಾಗಿರುವ ಇದರ ಕೊನೆಯನ್ನು ಯಾರಿಂದಲೂ ನೋಡಲಾಗದು.
ಊರ್ಧ್ವಂ ಗತೇರಧಸ್ತಾತ್ತು ಚಂದ್ರಾದಿತ್ಯೌ ನ ದೃಶ್ಯತಃ |
ತತ್ರ ದೇವಾಃ ಸ್ವಯಂ ದೀಪ್ತಾ ಭಾಸ್ವರಾಶ್ಚಾಗ್ನಿವರ್ಚಸಃ ॥ 24 ॥
ಚಂದ್ರ-ಸೂರ್ಯರು ಈ ಆಕಾಶದ ಕೆಳಭಾಗವನ್ನಾಗಲೀ, ಮೇಲ್ಭಾಗವನ್ನಾಗಲೀ ತಮ್ಮ ಕಿರಣಗಳನ್ನು ಚೆಲ್ಲುವಷ್ಟು ದೂರದವರೆಗೆ ನೋಡುವವರೇ ಹೊರತು ಅದರಿಂದಾಚೆಗೆ ಅವರಿಂದಲೂ ನೋಡಲಾಗದು. ಸೂರ್ಯ-ಚಂದ್ರರ ಕಿರಣಗಳೂ ಮುಟ್ಟಲಾಗದ ಆಕಾಶದ ಭಾಗಗಳಲ್ಲಿ ಸೂರ್ಯಾಗ್ನಿಗಳಂತೆ ಸ್ವಪ್ರಕಾಶದಿಂದ ಬೆಳಗುತ್ತಿರುವ ದೇವತೆಗಳಿದ್ದಾರೆ.
ತೇ ಚಾಪ್ಯಂತಂ ನ ಪಶ್ಯಂತಿ ನಭಸಃ ಪ್ರಥಿತೌಜಸಃ |
ದುರ್ಗಮತ್ವಾದನಂತತ್ವಾದಿತಿ ಮೇ ವಿದ್ಧಿ ಮಾನದ ॥ 25 ॥
ಅವರು ಈ ಆಕಾಶದ ಕೊನೆಯನ್ನು ಕಂಡವರಲ್ಲ. ಅದು ಅನಂತವಾಗಿ ಎಂತಹ ವ್ಯಕ್ತಿಗಳಿಗೂ ದುರ್ಗಮವಾಗಿರುವುದರಿಂದ ಯಾರೂ ಅದರ ಕೊನೆಯನ್ನು ಕಂಡವರಿಲ್ಲವೆಂದು ಶ್ರುತಿಗಳು ಹೇಳುತ್ತಿವೆ.
ಉಪರಿಷ್ಟೋಪರಿಷ್ಟಾತ್ತು ಪ್ರಜ್ವಲದ್ಭಿಃ ಸ್ವಯಂಪ್ರಭೈಃ |
ನಿರುದ್ಧಮೇತದಾಕಾಶಮಪ್ರಮೇಯಂ ಸುರೈರಪಿ ॥ 26 ॥
ಭೂಮಿಯ ಮೇಲೆ ಮೇಲ್ಭಾಗದಲ್ಲಿ ಪ್ರಜ್ವಲಿತವಾದ ಸ್ವಯಂ ಪ್ರಭೆಗಳಿಂದ ಆಕಾಶವು ಆವೃತವಾಗಿದೆ. ಈ ಅಗಣಿತ ಆಕಾಶವನ್ನು ದೇವತೆಗಳಿಂದಲೂ ತಿಳಿಯಲಾಗಿಲ್ಲ.
ಪೃಥಿವ್ಯಂತೇ ಸಮುದ್ರಾಸ್ತು ಸಮುದ್ರಾಂತೇ ತಮಃ ಸ್ಮೃತಮ್ |
ತಮಸೋऽಂತೇ ಜಲಂ ಪ್ರಾಹುರ್ಜಲಸ್ಯಾಂತೇऽಗ್ನಿರೇವ ಚ ॥ 27 ॥
ಈ ಭೂಮಿಯಿಂದಾಚೆಗೆ ಸಮುದ್ರಗಳಿವೆ. ಸಮುದ್ರದ ಕೊನೆಗೆ ದೊಡ್ಡ ತಮಸ್ಸಿದೆ. ತಮಸ್ಸಿನಿಂದಾಚೆ ತಿರುಗಿ ಜಲವಿದೆ. ಜಲದಿಂದಾಚೆಗೆ ಅಗ್ನಿಯು ಇದೆ.
ರಸಾತಲಾಂತೇ ಸಲಿಲಂ ಜಲಾಂತೇ ಪನ್ನಗಾಧಿಪಃ |
ತದಂತೇ ಪುನರಾಕಾಶಮಾಕಾಶಾಂತೇ ಪುನರ್ಜಲಮ್ ॥ 28 ॥
ಭೂಮಿಯ ಕೆಳಗೆ ರಸಾತಲದ ಕೊನೆಯಲ್ಲಿ ಜಲವೂ, ಆ ಜಲದಿಂದಾಚೆಗೆ ಮಹಾಸರ್ಪಗಳು, ಅದರಿಂದಾಚೆ ಆಕಾಶವು, ಆಮೇಲೆ ಪುನಃ ಜಲವು ಹೀಗೆ ನೀರು ಆಕಾಶ ಒಂದರ ಮೇಲೊಂದು ಎಡೆಬಿಡದೆ ವ್ಯಾಪಕವಾಗಿವೆ.
ಏವಮಂತಂ ಭಗವತಃ ಪ್ರಮಾಣಂ ಸಲಿಲಸ್ಯ ಚ |
ಅಗ್ನಿಮಾರುತತೋಯೇಭ್ಯೋ ದುರ್ಜ್ಞೇಯಂ ದೈವತೈರಪಿ ॥ 29 ॥
ಈ ರೀತಿಯಾಗಿ ಆಕಾಶ ಮತ್ತು ಜಲದ ಅಳತೆಯನ್ನು ಇಷ್ಟು ಮಾತ್ರ ತಿಳಿಯಬಹುದಾಗಿದೆ. ಅಗ್ನಿ-ವಾಯು-ಜಲ ಇವುಗಳ ಕೊನೆಯನ್ನು ದೇವತೆಗಳಿಂದಲೂ ತಿಳಿಯಲು ಸಾಧ್ಯವಿಲ್ಲ.
ಅಗ್ನಿಮಾರುತತೋಯಾನಾಂ ವರ್ಣಾಃ ಕ್ಷಿತಿತಲಸ್ಯ ಚ |
ಆಕಾಶಸದೃಶಾ ಹ್ಯೇತೇ ಭಿದ್ಯಂತೇ ತತ್ತ್ವದರ್ಶನಾತ್ ॥ 30 ॥
ಅಗ್ನಿ, ವಾಯು, ಭೂಮಿ, ನೀರು ಇವುಗಳ ಸ್ವರೂಪಗಳೆಲ್ಲವೂ ಒಂದೇ ವಿಧವಾಗಿದೆ. ಆಕಾಶದಂತೆ ವ್ಯಾಪಕವಾಗಿಯೇ ಇದೆ. ತತ್ತ್ವದರ್ಶನವುಳ್ಳವರಿಗೆ ಭಿನ್ನವಾಗಿ ತೋರುತ್ತದೆ.
ಪಠಂತಿ ಚೈವ ಮುನಯಃ ಶಾಸ್ತ್ರೇಷು ವಿವಿಧೇಷು ಚ |
ತ್ರೈಲೋಕ್ಯೇ ಸಾಗರೇ ಚೈವ ಪ್ರಮಾಣಂ ವಿಹಿತಂ ಯಥಾ |
ಅದೃಶ್ಯಾಯ ತ್ವಗಮ್ಯಾಯ ಕಃ ಪ್ರಮಾಣಮುದಾಹರೇತ್ ॥ 31 ॥
ನಾನಾ ಶಾಸ್ತ್ರಗಳಲ್ಲಿ ಮಹರ್ಷಿಗಳು ಮೂರುಲೋಕದ ಮತ್ತು ಸಮುದ್ರದ ಅಳತೆಯನ್ನು ವಿಮರ್ಶಿಸಿದ್ದಾರೆ. ಆದರೆ ಅವುಗಳು ಅದೃಶ್ಯವೂ, ಅಗಮ್ಯವೂ ಆದ ವಸ್ತುಗಳಾಗಿರುವುದರಿಂದ ಅವುಗಳ ಅಳತೆಯನ್ನು ಯಾರಿಂದಲೂ ತಿಳಿದು ಹೇಳುವುದು ಸಾಧ್ಯವಿರುವುದಿಲ್ಲ.
ವ್ಯಾಖ್ಯಾನ ವಿಶೇಷ ಇಂತಹ ಭೂತಗಳನ್ನು ನಿರ್ಮಿಸಿದ ಭಗವಂತನ ಇತಿ-ಮಿತಿಯನ್ನು ಯಾರಿಂದಲೂ ತಿಳಿಸಲು ಸಾಧ್ಯವಿಲ್ಲ ಎನ್ನಬೇಕೇ ವಿನಾ ಪಂಚಭೂತಗಳಿಗೆ ಅಭಿಮಾನಿದೇವತೆಗಳಿರುವುದರಿಂದ ಪಂಚಭೂತಗಳ ಇತಿ-ಮಿತಿಯನ್ನು ತಿಳಿಸಲು ಯಾರಿಂದಲೂ ಸಾಧ್ಯವಿಲ್ಲ ಎನ್ನಬಾರದು. ಪರಮಾತ್ಮನು ಅದೃಶ್ಯನೂ, ಅಪ್ರಮೇಯನೂ, ಅಗಮ್ಯನೂ ಆಗಿದ್ದಾನೆ ಹೊರತು ಆಕಾಶವಲ್ಲ. ಒಂದು ವೇಳೆ ಪಂಚಭೂತಗಳಿಗೇ ಈ ವ್ಯಾಪ್ತಿಯನ್ನು ಹೇಳಿದರೆ ಮುಂದಿನ ವಾಕ್ಯವೃಂದಗಳ ವಿರೋಧವು ಉಂಟಾಗುತ್ತದೆ.
ಸಿದ್ಧಾನಾಂ ದೇವತಾನಾಂ ಚ ಯದಾ ಪರಿಮಿತಾ ಗತಿಃ |
ತದಾ ಗೌಣಮನಂತಸ್ಯ ನಾಮಾನಂತೇತಿ ವಿಶ್ರುತಮ್ |
ನಾಮಧೇಯಾನುರೂಪಸ್ಯ ಮಾನಸಸ್ಯ ಮಹಾತ್ಮನಃ ॥ 32 ॥

ಸಿದ್ದರೂ, ದೇವತೆಗಳೂ ಹೋಗುವ ದಾರಿಯಾದ ಆಕಾಶದ ಭಾಗದ ಅಳತೆಯನ್ನು ತಿಳಿಯುವುದು ಒಂದು ವೇಳೆ ಸಾಧ್ಯವಾಗಬಹುದು. ಆದರೆ ಮಾನಸಪುರುಷನಾದ ಭಗವಂತನ ಇತಿ-ಮಿತಿಯನ್ನು ಹೇಳುವುದು ಯಾರಿಂದಲೂ ಸಾಧ್ಯವಾಗುವುದಿಲ್ಲ. ಅನಂತ ಎಂಬ ಹೆಸರಿಗೆ ತಕ್ಕಂತೆ ಅನಂತತ್ವವನ್ನೇ ಹೊಂದಿರುವವನು ವಿಷ್ಣುವು.
ಯದಾ ತು ದಿವ್ಯಂ ತದ್ರೂಪಂ ಹ್ರಸತೇ ವರ್ಧತೇ ಪುನಃ |
ಕೋಽನ್ಯಸ್ತದ್ವೇದಿತುಂ ಶಕ್ತೋ ಯೋಽಪಿ ಸ್ಯಾತ್ತದ್ವಿಧೋಽಪರಃ ॥ 33 ॥
ಇಷ್ಟಬಂದಂತೆ ಸಂಕೋಚ-ವೃದ್ಧಿಗಳನ್ನು ಹೊಂದುವಂತಹ ಅವನ ದಿವ್ಯರೂಪವನ್ನು ಅವನೇ ಬಲ್ಲನೇ ಹೊರತು ಬೇರೆ ಯಾರಿಂದಲೂ ತಿಳಿಯಲಾಗದು.
ತತಃ ಪುಷ್ಕರತಃ ಸೃಷ್ಟಃ ಸರ್ವಜ್ಞೋ ಮೂರ್ತಿಮಾನ್ ಪ್ರಭುಃ |
ಬ್ರಹ್ಮಾ ಧರ್ಮಮಯಃ ಪೂರ್ವಃ ಪ್ರಜಾಪತಿರನುತ್ತಮಃ ॥ 34 ॥
ಹಿಂದೆ ಹೇಳಿದ ನಾಭಿಕಮಲದಿಂದ ಸರ್ವಜ್ಞನೂ, ಧರ್ಮಮೂರ್ತಿಯೂ ಆದ ಬ್ರಹ್ಮನೆಂಬ ಪ್ರಜಾಪತಿಯು ಹುಟ್ಟಿದನು.
ಭರದ್ವಾಜಃ
ಪುಷ್ಕರಾದ್ ಯದಿ ಸಂಭೂತೋ ಜ್ಯೇಷ್ಠಂ ಭವತಿ ಪುಷ್ಕರಮ್ |
ಬ್ರಹ್ಮಾಣಂ ಪೂರ್ವಜಂ ಚಾಹ ಭವಾನ್ ಸಂದೇಹ ಏವ ಮೇ ॥ 35 ॥
ಭರದ್ವಾಜ ಮಹರ್ಷಿಯೇ, ಬ್ರಹ್ಮನು ಕಮಲದಿಂದ ಹುಟ್ಟಿದನು ಎಂದ ಬಳಿಕ ಕಮಲವೇ ಮೊದಲು ಹುಟ್ಟಿದಂತಾಯಿತಲ್ಲವೇ? ಬ್ರಹ್ಮನನ್ನು ಮೊದಲು ಹುಟ್ಟಿದವನೆಂದು ಹೇಳುವುದೇಕೆ? ಈ ಸಂದೇಹವನ್ನು ಪರಿಹರಿಸಬೇಕು.
ಭೃಗುಃ
ಮಾನಸಸ್ಯೇಹ ಯಾ ಮೂರ್ತಿರ್ಬ್ರಹ್ಮತ್ವಂ ಸಮುಪಾಗತಾ |
ತಸ್ಯಾಸನವಿಧಾನಾರ್ಥಂ ಪೃಥಿವೀ ಪದ್ಮಮುಚ್ಯತೇ ॥ 36 ॥
ಭೃಗು ಭರದ್ವಾಜನೇ ಕೇಳು. ಈ ಭೂಮಿಯನ್ನೇ ಆದಿಪುರುಷನಾದ ಚತುರ್ಮುಖ ಬ್ರಹ್ಮನಿಗೆ ಆಸನವನ್ನಾಗಿಸಲು ಭೂಮಿಯನ್ನು ಪದ್ಮ ಎನ್ನುತ್ತಾರೆ. ಮಾನಸಪುರುಷನಾದ ಭಗವಂತನು ಚತುರ್ಮುಖ ಬ್ರಹ್ಮನ ಅಂತರ್ಯಾಮಿಯಾಗಿ ಇರುವುದರಿಂದ ಅವನ ಅಪೇಕ್ಷೆಯಿಂದ ಬ್ರಹ್ಮತ್ವವನ್ನು ಹೇಳುತ್ತಾರೆ.
ಕರ್ಣಿಕಾ ತಸ್ಯ ಪದ್ಮಸ್ಯ ಮೇರುರ್ಗಗನಮುಚ್ಛ್ರಿತಃ |
ತಸ್ಯ ಮಧ್ಯೇ ಸ್ಥಿತೋ ಲೋಕಾನ್ ಸೃಜತೇ ಜಗತಃ ಪ್ರಭುಃ ॥ 37 ॥
ಮೇರುವು ಆಕಾಶದವರೆಗೆ ಉನ್ನತವಾಗಿ ಆ ಕಮಲಕ್ಕೆ ಕರ್ಣಿಕೆಯಾಯಿತು. ಆ ಕರ್ಣಿಕೆಯ ನಡುವೆ ಉತ್ಪನ್ನನಾದ ಪ್ರಭುವಾದ ಬ್ರಹ್ಮನು ಅನೇಕ ಲೋಕಗಳನ್ನು, ಮನಸ್ಸಂಕಲ್ಪದಿಂದ ದೇವತೆಗಳನ್ನು, ವಿವಿಧ ಭೂತಗಳನ್ನು ಸೃಷ್ಟಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಬ್ರಹ್ಮನು ಮೇರುವಿನಲ್ಲಿ ಇದ್ದು ಜಲದಿಂದ ಆರಂಭಿಸಿ ಭೂಮಿಯ
ತನಕ ಪಂಚಭೂತಗಳನ್ನು ಸೃಷ್ಟಿಸಿದ ಕ್ರಮ.
ಭರದ್ವಾಜಃ
ಪ್ರಜಾವಿಸರ್ಗಂ ವಿವಿಧಂ ಕಥಂ ಸ ಸೃಜತೇ ಪ್ರಭುಃ |
ಮೇರುಮಧ್ಯೇ ಸ್ಥಿತೋ ಬ್ರಹ್ಮಾ ತದ್ ಬ್ರೂಹಿ ದ್ವಿಜಸತ್ತಮ ॥ 1 ॥
ಭರದ್ವಾಜ ಓ ಮಹರ್ಷಿಯೇ, ಮೇರುಪರ್ವತದ ಮಧ್ಯದಲ್ಲಿರುವಂತಹ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದ ರೀತಿ ಏನು ಎಂಬುದನ್ನು, ಅದರ ಅನೇಕ ಪ್ರಕಾರಗಳನ್ನು ನನಗೆ ತಿಳಿಸಬೇಕು.
ಭೃಗುಃ
ಪ್ರಜಾವಿಸರ್ಗಂ ವಿವಿಧಂ ಮಾನಸೋ ಮನಸಾಸೃಜತ್ |
ಸಂಧುಕ್ಷಣಾರ್ಥಂ ಭೂತಾನಾಂ ಸೃಷ್ಟಂ ಪ್ರಥಮತೋ ಜಲಮ್ ॥ 2 ॥
ಭೃಗು ಭರದ್ವಾಜನೇ ಕೇಳು. ಭಗವಂತನ ಅರ್ಥಾತ್ ನಾರಾಯಣನ ಸಂಕಲ್ಪದಿಂದ ಅವತೀರ್ಣನಾದ, ಬ್ರಹ್ಮಾಂಡದ ಹೊರವಲಯದಲ್ಲಿರುವ ನೀರಿನಲ್ಲಿ ಮಲಗಿರುವ ಎರಡನೆಯ ಪುರುಷನಾಮಕನಾದ ವಿಷ್ಣುವು ಮಾನಸಪುರುಷ ಎನಿಸಿದ್ದಾನೆ. ಅಂತಹ ಮಾನಸಪುರುಷನಾಮಕನಾದ ಭಗವಂತನು ಪ್ರಾಣಿಗಳ ಸೃಷ್ಟಿಗಾಗಿ ಸಂಕಲ್ಪಿಸಿ ಅವುಗಳ ರಕ್ಷಣೆಗೆ ಕಾರಣವಾದ ನೀರನ್ನು ಮೊದಲು ಸೃಷ್ಟಿಸಿದನು.
ಯತ್ಪ್ರಾಣಾಃ ಸರ್ವಭೂತಾನಾಂ ವರ್ಧಂತೇ ಯೇನ ಚ ಪ್ರಜಾಃ |
ಪರಿತ್ಯಕ್ತಾಶ್ಚ ನಶ್ಯಂತಿ ತೇನೇದಂ ಸರ್ವಮಾವೃತಮ್ ॥ 3 ॥
ಯಾವ ಜಲವು ಸಕಲ ಭೂತಗಳಿಗೂ ಜೀವನವೆನಿಸಿದೆಯೋ, ಯಾವ ಜಲದಿಂದ ಸಮಸ್ತ ಪ್ರಜೆಗಳು ವೃದ್ಧಿಯನ್ನು ಹೊಂದುತ್ತಾರೋ, ಯಾವ ಜಲವಿಲ್ಲದಿದ್ದಲ್ಲಿ ಪ್ರಾಣಿಗಳು ಮರಣವನ್ನಪ್ಪುತ್ತಾರೋ ಅಂತಹ ಜಲದಿಂದಲೇ ಪ್ರಪಂಚವು ವ್ಯಾಪ್ತವಾಯಿತು.
ಪೃಥಿವೀ ಪರ್ವತಾ ಮೇಘಾ ಮೂರ್ತಿಮಂತಶ್ಚ ಯೇ ಪರೇ |
ಸರ್ವಂ ತದ್ವಾರುಣಂ ಜ್ಞೇಯಮಾಪಸ್ತಸ್ತಂಭಿರೇ ಪುನಃ ॥ 4 ॥

ಪೃಥಿವಿ, ಪರ್ವತಗಳು, ಮೇಘಗಳು, ಮೂರ್ತಿಮತ್ತಾದ ಇತರ ವಸ್ತುಗಳು ಎಲ್ಲವೂ ಜಲದಿಂದಲೇ ಉತ್ಪನ್ನವಾದವುಗಳೆಂದು ತಿಳಿ. ಈ ಎಲ್ಲ ಪದಾರ್ಥಗಳು ನೀರಿನ ಘನೀಭಾವದಿಂದಲೇ ಉಂಟಾಗಿವೆ.
ಭರದ್ವಾಜಃ
ಕಥಂ ಸಲಿಲಮುತ್ಪನ್ನಂ ಕಥಂ ಚೈವಾಗ್ನಿಮಾರುತೌ |
ಕಥಂ ಚ ಮೇದಿನೀ ಸೃಷ್ಟೇತ್ಯತ್ರ ಮೇ ಸಂಶಯೋ ಮಹಾನ್ ॥ 5 ॥
ಭರದ್ವಾಜ ಭೃಗುಗಳೇ, ಹಾಗಿದ್ದಲ್ಲಿ ನೀರು ಹೇಗೆ ಹುಟ್ಟಿತು? ಅಗ್ನಿ-ವಾಯುಗಳ ಉತ್ಪತ್ತಿ ಹೇಗಾಯಿತು? ಭೂಮಿಯು ಹೇಗೆ ಸೃಷ್ಟಿಸಲ್ಪಟ್ಟಿತು? ಈ ವಿಷಯದಲ್ಲಿರುವ ನನ್ನ ಸಂಶಯವನ್ನು ಪರಿಹರಿಸಿ.
ಭೃಗುಃ
ಬ್ರಹ್ಮಕಲ್ಪೇ ಪುರಾ ಬ್ರಹ್ಮನ್ ಬ್ರಹ್ಮರ್ಷೀಣಾಂ ಸಮಾಗಮೇ |
ಲೋಕಸಂಭವಸಂದೇಹಃ ಸಮುತ್ಪನ್ನೋ ಮಹಾತ್ಮನಾಮ್ ॥ 6 ॥
ಭೃಗು ಬ್ರಾಹ್ಮಣಶ್ರೇಷ್ಠನೇ, ಹಿಂದೆ ಒಂದು ಕಾಲದಲ್ಲಿ ಬ್ರಹ್ಮಕಲ್ಪದಲ್ಲಿ ಬ್ರಹ್ಮರ್ಷಿಗಳು ಸಭೆ ಸೇರಿದಾಗ ಅವರಿಗೂ ಈ ಲೋಕಸೃಷ್ಟಿಯ ಬಗ್ಗೆ ಇಂತಹುದೇ ಸಂಶಯವುಂಟಾಯಿತು.
ತೇಽತಿಷ್ಠನ್ ಧ್ಯಾನಮಾಲಂಬ್ಯ ಮೌನಮಾಸ್ಥಾಯ ನಿಶ್ಚಲಾಃ |
ತ್ಯಕ್ತಾಹಾರಾಃ ಪವನಪಾ ದಿವ್ಯಂ ವರ್ಷಶತಂ ದ್ವಿಜಾಃ ॥ 7 ॥
ಈ ಜ್ಞಾನದ ಪ್ರಾಪ್ತಿಗಾಗಿ ಅವರು ಲೋಕದ ಆಹಾರಗಳನ್ನು ಬಿಟ್ಟು, ಮೌನ ವ್ರತಧಾರಿಗಳಾಗಿ, ವಾಯುಭಕ್ಷಕರಾಗಿ ದೇವಲೋಕದ ನೂರು ಸಂವತ್ಸರಗಳವರೆಗೆ ನಿಶ್ಚಲಧ್ಯಾನದಲ್ಲಿ ಆಸಕ್ತರಾದರು.
ತೇಷಾಂ ಧರ್ಮಮಯೀ ವಾಣೀ ಸರ್ವೇಷಾಂ ಶ್ರೋತ್ರಮಾಗಮತ್ |
ದಿವ್ಯಾ ಸರಸ್ವತೀ ತತ್ರ ಸಂಬಭೂವ ನಭಸ್ತಲಾತ್ ॥ 8 ॥
ಕೊನೆಗೆ ವೇದವಚನಗಳಂತೆ ಆಕಾಶದಿಂದ ಒಂದು ಅಶರೀರವಾಣಿಯು ಕಿವಿಗೆ ಕೇಳಿಸಿತು.
ಪುರಾ ಸ್ತಿಮಿತನಿಃಶಬ್ದಮಾಕಾಶಮಚಲೋಪಮಮ್ |
ನಷ್ಟಚಂದ್ರಾರ್ಕಪವನಂ ಪ್ರಸುಪ್ತಮಿವ ಸಂಬಭೌ ॥ 9 ॥
ಮೊದಲು ಅನಂತವಾದ ಆಕಾಶವು ನಿಶ್ಚಲವಾಗಿ ಶಬ್ದರಹಿತವಾಗಿದ್ದಿತು. ಸೂರ್ಯ-ಚಂದ್ರ-ನಕ್ಷತ್ರ ಯಾವವೂ ಇಲ್ಲದೆ ಅದು ನಿದ್ರಿಸುವಂತೆ ಕಾಣಿಸುತ್ತಿತ್ತು.
ತತಃ ಸಲಿಲಮುತ್ಪನ್ನಂ ತಮಸೀವಾಪರಂ ತಮಃ |
ತಸ್ಮಾಚ್ಚ ಸಲಿಲೋತ್ಪೀಡಾದುದತಿಷ್ಠತ ಮಾರುತಃ ॥ 10 ॥
ಇಷ್ಟರಲ್ಲಿ ಅಂಧಕಾರದ ಮಧ್ಯದಲ್ಲಿ ಮತ್ತೊಂದು ತಮಸ್ಸು ಕಾಣಿಸುವಂತೆ ಕಪ್ಪಾದ ಆಕಾಶದಲ್ಲಿ ಜಲವು ಉತ್ಪನ್ನವಾಯಿತು. ಆ ನೀರಿನ ಅಲೆಗಳ ತಿಕ್ಕಾಟದಿಂದ ವಾಯುವು ಉತ್ಪನ್ನವಾಯಿತು.
ಯಥಾ ಭಾಜನಮಚ್ಛಿದ್ರಂ ನಿಃಶಬ್ದಮಿವ ಲಕ್ಷ್ಯತೇ |
ತಚ್ಚಾಂಭಸಾ ಪೂರ್ಯಮಾಣಂ ಸಶಬ್ದಂ ಕುರುತೇಽನಿಲಃ ॥ 11 ॥
ತೂತಿಲ್ಲದ ಗಡಿಗೆಯು ಮೊದಲು ನಿಶ್ಶಬ್ದವಾಗಿದ್ದು ಅದರಲ್ಲಿ ನೀರನ್ನು ಹಾಕಿದಾಗ ಗಾಳಿಯು ಉತ್ಪನ್ನವಾಗಿ ದೊಡ್ಡ ಶಬ್ದವು ಉಂಟಾಗುವಂತೆ ಆಕಾಶದಲ್ಲಿ ನೀರು ತುಂಬಿದಾಗ ಗಾಳಿಯು ಪ್ರಬಲವಾದ ಶಬ್ದದ ಜೊತೆಗೆ ಆ ಜಲವನ್ನು ಭೇದಿಸಿಕೊಂಡು ಮೇಲೆದ್ದಿತು.
ತಥಾ ಸಲಿಲಸಂರುದ್ಧೇ ನಭಸೋಽಂತೇ ನಿರಂತರೇ |
ಭಿತ್ತ್ವಾರ್ಣವತಲಂ ವಾಯುಃ ಸಮುತ್ಪತತಿ ಘೋಷವಾನ್ ॥ 12 ॥
ಆ ರೀತಿಯಾಗಿ ಘೋಷದಿಂದ ಸಹಿತವಾದ ಗಾಳಿಯು ಉತ್ಪನ್ನವಾಗಿ ಆಕಾಶವನ್ನೆಲ್ಲಾ ಆವರಿಸಿ ನಿರಂತರವೂ ಬೀಸಲಾರಂಭಿಸಿತು.
ಸ ಏಷ ಚರತೇ ವಾಯುರರ್ಣವೋತ್ಪೀಡಸಂಭವಃ |
ಆಕಾಶಸ್ಥಾನಮಾಸಾದ್ಯ ಪ್ರಶಾಂತಿಂ ನಾಧಿಗಚ್ಛತಿ ॥ 13 ॥
ಸಮುದ್ರದ ಜಲಘರ್ಷಣದಿಂದ ಉಂಟಾದ ಗಾಳಿಯ ಶಬ್ದದಂತೆ ಮೊದಲು ಉತ್ಪನ್ನವಾದ ವಾಯುವು ಮಹಾಘೋಷದಿಂದಲೇ ಮೇಲೆ ಎದ್ದಿತು. ಆ ಗಾಳಿಯು ಆಕಾಶವನ್ನು ಆಶ್ರಯಿಸಿಕೊಂಡು ನಿರಂತರವೂ ಬೀಸುತ್ತಿದೆ.
ತಸ್ಮಿನ್ ವಾಯ್ವಂಬುಸಂಘರ್ಷೇ ದೀಪ್ತತೇಜಾ ಮಹಾಬಲಃ |
ಪ್ರಾದುರ್ಭವತ್ಯೂರ್ಧ್ವಶಿಖಃ ಕೃತ್ವಾ ವಿತಿಮಿರಂ ನಭಃ ॥ 14 ॥
ನೀರು ಮತ್ತು ಗಾಳಿ ಇವುಗಳ ಸಂಘರ್ಷದಿಂದ ಪ್ರಬಲವಾದ ತೇಜಸ್ಸುಳ್ಳ ಅಗ್ನಿಯು ಉತ್ಪನ್ನವಾಯಿತು. ಕತ್ತಲೆಯಿಂದ ಕೂಡಿದ ಆಕಾಶಕ್ಕೆ ಬೆಳಕನ್ನುಂಟು ಮಾಡಿತು.
ಅಗ್ನಿಃ ಪವನಸಂಯುಕ್ತಃ ಖಾತ್ ಸಮುತ್ಪತತೇ ಜಲಮ್ |
ಅಗ್ನಿರ್ಮಾರುತಸಂಯೋಗಾದ್ ಘನತ್ವಮುಪಪದ್ಯತೇ ॥ 15 ॥
ಗಾಳಿಯಿಂದ ಪ್ರೇರಿತವಾದ ಬೆಂಕಿಯು ಆಕಾಶದಲ್ಲಿ ಉತ್ಪನ್ನವಾದ ನೀರನ್ನು ಗಟ್ಟಿಯಾಗಿ ಮಾಡುತ್ತಾ ಬಂದಿತು. ಅಗ್ನಿ-ವಾಯುಗಳ ಸಂಬಂಧದಿಂದ ಪೃಥಿವಿ, ಉಪಾದಾನ, ರಸರೇಣುಗಳ ಜೊತೆಗೆ ಸೇರಿದ ಜಲವು ಘನವಾಗುತ್ತಾ, ನಿಬಿಡ (ದಟ್ಟ) ವಾಗುತ್ತಾ ಕ್ರಮವಾಗಿ ಭೂಮಿಯ ಸ್ವರೂಪವನ್ನು ಹೊಂದಿತು.
ತಸ್ಯಾಕಾಶೇ ನಿಪತಿತಃ ಸ್ನೇಹಸ್ತಿಷ್ಠತಿ ಯೋಽಪರಃ |
ಸ ಸಂಘಾತತ್ವಮಾಪನ್ನೋ ಭೂಮಿತ್ವಮುಪಗಚ್ಛತಿ ॥ 16 ॥

ಅಗ್ನಿ-ವಾಯುಗಳ ಸಂಯೋಗದಿಂದ ಘನೀಭೂತವಾದ ಆಕಾಶದ ನಡುವೆ ವ್ಯಾಪಿಸಿದ ಜಲದಲ್ಲಿ ಸ್ನೇಹಗುಣವು ಉಂಟಾಯಿತು. ಅದೇ ನಿಬಿಡ (ದಟ್ಟ)ವಾಗುತ್ತಾ ಭೂಮಿಯ ಸ್ವರೂಪವನ್ನು ಹೊಂದಿತು.
ರಸಾನಾಂ ಸರ್ವಗಂಧಾನಾಂ ಸ್ನೇಹಾನಾಂ ಪ್ರಾಣಿನಾಂ ತಥಾ |
ಭೂಮಿರ್ಯೋನಿರಿಹ ಜ್ಞೇಯಾ ಯಸ್ಯಾಂ ಸರ್ವಂ ಪ್ರಸೂಯತೇ ॥17॥
ಭೂಮಿ ಎಂಬುದು ಎಲ್ಲ ರಸಗಳಿಗೂ, ಸಮಸ್ತ ಗಂಧಗಳಿಗೂ, ಸ್ನೇಹಕ್ಕೂ, ಎಲ್ಲ ಪ್ರಾಣಿಗಳಿಗೂ ಕಾರಣಭೂತವಾಗಿ ಎಲ್ಲ ಭೂತಗಳ ಉತ್ಪತ್ತಿ ಸ್ಥಾನವಾಗಿ ಇದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ಪಂಚಭೂತಗಳಿಂದ ನಿರ್ಮಿಸಲ್ಪಟ್ಟ ಸಸ್ಯವರ್ಗಗಳು ಚೇತನಗಳಾದವು ಎಂಬುದನ್ನು ಭರದ್ವಾಜರಿಗೆ ಭೃಗುಗಳು ತಿಳಿಸಿದುದು.
ಭರದ್ವಾಜಃ
ಏತೇ ತೇ ಧಾತವಃ ಪಂಚ ಬ್ರಹ್ಮಾ ಯಾನಸೃಜತ್ ಪುರಾ |
ಆವೃತಾ ಯೈರಿಮೇ ಲೋಕಾ ಮಹಾಭೂತಾಭಿಸಂಜ್ಞಿತೈಃ ॥ 1 ॥
ಯದಾಸೃಜತ್ ಸಹಸ್ರಾಣಿ ಭೂತಾನಾಂ ಸ ಮಹಾಮತಿಃ |
ಪಂಚಾನಾಮೇವ ಭೂತತ್ವಂ ಕಥಂ ಸಮುಪಪದ್ಯತೇ ॥ 2 ॥
ಭರದ್ವಾಜ ಮಹಾನುಭಾವರೇ, ಬ್ರಹ್ಮನು ಅನೇಕ ಪ್ರಾಣಿಗಳನ್ನು ಸೃಷ್ಟಿ ಮಾಡಿದಾಗ ಅವನಿಂದ ಮೊದಲು ಸೃಷ್ಟಿಗೊಂಡ ಲೋಕಗಳನ್ನೆಲ್ಲ ವ್ಯಾಪಿಸಿರುವ ಭೂಮಿ ಮೊದಲಾದ ಐದು ಧಾತುಗಳಿಗೆ ಮಾತ್ರ ಮಹಾಭೂತಗಳೆಂದು ಹೇಳುತ್ತಾರೆ. ಇವುಗಳಿಗೆ ಹೀಗೆ ಹೆಸರು ಏಕೆ ಬಂತೆಂದು ನನಗೆ ತಿಳಿಸಿ. ಸಾವಿರಾರು ಭೂತಗಳನ್ನು ಸೃಷ್ಟಿಸಿದರೂ ಐದು ಭೂತಗಳಿಗೇ ಮಹತ್ವ ಬಂದದ್ದು ಯಾವ ಕಾರಣದಿಂದ?
ಭೃಗುಃ
ಅಮಿತಾನಾಂ ಮಹಾಶಬ್ದೋ ಯಾಂತಿ ಭೂತಾನಿ ಸಂಭವೇ |
ತತಸ್ತೇಷಾಂ ಮಹಾಭೂತಶಬ್ದೋಽಯಮುಪಪದ್ಯತೇ ॥ 3 ॥
ಭೃಗು ಬ್ರಹ್ಮನು ಸಾವಿರಾರು ಪ್ರಾಣಿಗಳನ್ನು ಪಂಚಭೂತಗಳ ಆಧಾರದಲ್ಲಿಯೇ ಸೃಷ್ಟಿಸುತ್ತಾನೆ. ಆದ್ದರಿಂದ ಮಹತ್ ಶಬ್ದವು ಈ ಪಂಚಭೂತಗಳಿಗೇ ಯೋಗ್ಯವಾಗಿದೆ. ಅನಂತಾನಂತ ಪ್ರಾಣಿಗಳ ದೇಹಗಳಿಗೆ ಪಂಚಭೂತಗಳೇ ಉಪಾದಾನ ಕಾರಣಗಳಾಗಿರುವುದರಿಂದ ಇವುಗಳನ್ನು ಮಹಾಭೂತ ಎನ್ನುವ ಶಬ್ದದಿಂದ ಕರೆಯುವುದು ಯೋಗ್ಯವಾಗಿದೆ.
ಚೇಷ್ಟಾ ವಾಯುಃ ಖಮಾಕಾಶಮೂಷ್ಮಾಗ್ನಿಃ ಸಲಿಲಂ ದ್ರವಃ |
ಪೃಥಿವೀ ಚಾತ್ರ ಸಂಘಾತಃ ಶರೀರಂ ಪಾಂಚಭೌತಿಕಮ್ ॥ 4 ॥
ಈ ಪಂಚಮಹಾಭೂತಗಳಲ್ಲಿ ಪ್ರಾಣಿಗಳ ಶರೀರದಲ್ಲಿ ಐದು ವಿಧ ಶ್ವಾಸರೂಪದಿಂದ ಚೇಷ್ಟೆಯನ್ನು ಮಾಡುವ ವಾಯುವು ದೇಹದ ಒಳಗಡೆ ಖಾಲಿ ಭಾಗದಲ್ಲಿರುವ ಆಕಾಶವು, ದೇಹದಲ್ಲಿರುವ ಉಷ್ಣವೇ ಅಗ್ನಿಯೂ, ಅದರಲ್ಲಿರುವ ದ್ರವಾಂಶವೇ ನೀರು, ದೇಹದಲ್ಲಿರುವ ಅಸ್ಥಿ-ಮಾಂಸಗಳೇ ಭೂಮಿಯು, ಕೈ-ಕಾಲು- ತಲೆ ಮೊದಲಾದ ಅಂಗಗಳಿಂದ ಕೂಡಿದ ಈ ಶರೀರವು ಪಾಂಚಭೌತಿಕವೆನಿಸಿದೆ.
ಇತ್ಯೇತೈಃ ಪಂಚಭಿರ್ಭೂತೈರ್ಯುಕ್ತಂ ಸ್ಥಾವರಜಂಗಮಮ್ |
ಶ್ರೋತ್ರಂ ಘ್ರಾಣಂ ರಸಃ ಸ್ಪರ್ಶೋ ದೃಷ್ಟಿಶ್ಚೇಂದ್ರಿಯಸಂಜ್ಞಿತಾಃ ॥ 5 ॥
ಈ ರೀತಿಯಾಗಿ ಸ್ಥಾವರ-ಜಂಗಮಗಳೆಲ್ಲವೂ ಪಂಚಭೂತಗಳಿಂದಲೇ ನಿರ್ಮಿತವಾಗಿವೆ. ಇಂದ್ರಿಯ ಎಂಬ ಹೆಸರಿನಿಂದ ಕರೆಯುವ ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ ಎಂಬವು ಕ್ರಮವಾಗಿ ಪಂಚಭೂತಗಳಿಗೆ ಸಂಬಂಧಿಸಿವೆ.
ಭರದ್ವಾಜಃ
ಪಂಚಭಿರ್ಯದಿ ಭೂತೈಸ್ತು ಯುಕ್ತಾಃ ಸ್ಥಾವರಜಂಗಮಾಃ |
ಸ್ಥಾವರಾಣಾಂ ನ ದೃಶ್ಯಂತೇ ಶರೀರೇ ಪಂಚ ಧಾತವಃ ॥ 6 ॥
ಭರದ್ವಾಜ ಭೃಗುಗಳೇ, ಸ್ಥಾವರ-ಜಂಗಮಗಳೆಲ್ಲವೂ ಪಂಚಭೂತಗಳಿಂದಲೇ ಸೃಷ್ಟಿಯಾಗಿದ್ದಲ್ಲಿ ಸ್ಥಾವರಶರೀರದಲ್ಲಿ ಪ್ರಾಣಿಶರೀರದಂತೆ ಆ ಪಂಚಭೂತಗಳು ಸ್ಪಷ್ಟವಾಗಿ ಏಕೆ ಕಾಣಿಸುವುದಿಲ್ಲ?
ಅನೂಷ್ಮಣಾಮಚೇಷ್ಟಾನಾಂ ಘನಾನಾಂ ಚೈವ ತತ್ತ್ವತಃ |
ವೃಕ್ಷಾಣಾಂ ನೋಪಲಭ್ಯಂತೇ ಶರೀರೇ ಪಂಚ ಧಾತವಃ ॥ 7 ॥
ಒಂದು ವೃಕ್ಷವನ್ನು ಪರೀಕ್ಷಿಸಿ ನೋಡಿದಾಗ ಅದರಲ್ಲಿ ನಮ್ಮ ದೇಹದಲ್ಲಿ ಕಾಣುವ ಬಿಸಿಯು ಕಾಣಿಸುವುದಿಲ್ಲ. ನಮ್ಮ ದೇಹದಂತೆ ಚೇಷ್ಟೆಯೂ ಕಾಣಿಸುವುದಿಲ್ಲ. ಕೇವಲ ಘನಪದಾರ್ಥವಾಗಿ ಕಾಣಿಸುತ್ತದೆ. ಪಂಚಭೂತಗಳ ಸಂಬಂಧವು ಕಾಣಿಸದಿರಲು ವಾಯು ಮೊದಲಾದ ಸಂಚಾರವೂ ಕಾಣಿಸದಿರಲು ಕಾರಣವೇನು?
ನ ಶೃಣ್ವಂತಿ ನ ಪಶ್ಯಂತಿ ನ ಗಂಧರಸವೇದಿನಃ |
ನ ಚ ಸ್ಪರ್ಶಂ ವಿಜಾನಂತಿ ತೇ ಕಥಂ ಪಾಂಚಭೌತಿಕಾಃ ॥ 8 ॥
ಆ ವೃಕ್ಷಗಳು ಕೇಳಲಾರವು, ನೋಡಲಾರವು, ಮೂಸಲಾರವು, ರಸವನ್ನು ಸವಿಯಲಾರವು, ಸ್ಪರ್ಶಜ್ಞಾನವನ್ನು ಹೊಂದಿರುವುದಿಲ್ಲ. ಇವುಗಳನ್ನು ಪಂಚ- ಭೂತಗಳೆಂದು ಹೇಗೆ ಕರೆಯುವುದು?

ಅದ್ರುವತ್ವಾದನಗ್ನಿತ್ವಾದಭೌಮತ್ವಾದವಾಯುತಃ |
ಆಕಾಶಸ್ಯಾಪ್ರಮೇಯತ್ವಾದ್ ವೃಕ್ಷಾಣಾಂ ನಾಸ್ತಿ ಭೌತಿಕಮ್ ॥ 9 ॥
ದ್ರುವತ್ವ, ಉಷ್ಣತ್ವ ಮುಂತಾದ ಯಾವ ಗುಣಗಳೂ ಕಾಣದಿರುವುದರಿಂದ ಅವುಗಳನ್ನು ಪಂಚಭೂತ ಮನೆಗಳೆಂದು ಹೇಳಲಾಗದು. ದೇಹದಲ್ಲಿ ವಾಯುವಿನ ಸಂಚಾರವಿರುವಂತೆ ಇವುಗಳಲ್ಲಿ ವಾಯುಸಂಚಾರ ಕಾಣಿಸುವುದಿಲ್ಲ. ನಮ್ಮ ದೇಹದ ಮಧ್ಯಭಾಗದ ಛಿದ್ರದಲ್ಲಿ ಆಕಾಶದ ಚಿಂತನೆ ನಡೆಸುವಂತೆ ವೃಕ್ಷಾದಿಗಳ ಮಧ್ಯಭಾಗದಲ್ಲಿ ಛಿದ್ರವೂ ಕಾಣಿಸುವುದಿಲ್ಲ.
ಭೃಗುಃ
ಘನಾನಾಮಪಿ ವೃಕ್ಷಾಣಾಮಾಕಾಶೋಽಸ್ತಿ ನ ಸಂಶಯಃ |
ತೇಷಾಂ ಪುಷ್ಪಫಲೇ ವ್ಯಕ್ತಿರ್ನಿತ್ಯಂ ಸಮುಪಲಭ್ಯತೇ ॥ 10 ॥
ಭೃಗು ಭರದ್ವಾಜನೇ, ವೃಕ್ಷಗಳು ಕಠಿಣವಾಗಿ ಕಾಣಿಸುತ್ತಿವೆ. ಅವುಗಳನ್ನು ತುಂಡರಿಸಿದಾಗ ದೇಹದಿಂದ ನೀರು ಸುರಿಯುತ್ತದೆ. ಮರದ ದಿಮ್ಮಿಗಳನ್ನು ಮಥಿಸಿದಾಗ ಅಗ್ನಿಯು ಉತ್ಪನ್ನವಾಗುತ್ತದೆ. ಅವುಗಳಲ್ಲಿ ಆಕಾಶದ ರಂಧ್ರಗಳು ಇಲ್ಲವೆಂದು ತಿಳಿಯಬಾರದು. ಅಲ್ಲಲ್ಲಿ ಆಕಾಶದ ರಂಧ್ರಗಳು ಮರಗಳಲ್ಲೂ ಇವೆ. ಆ ರಂಧ್ರಗಳಿಂದಲೇ ಪುಷ್ಪ-ಫಲಗಳು ಉತ್ಪನ್ನವಾಗುತ್ತವೆ. ಪುಷ್ಪ-ಫಲಗಳ ಅಭಿವ್ಯಕ್ತಿಯಿಂದಲೇ ಮರಗಳಲ್ಲಿ ಆಕಾಶವೂ ಇದೆ, ಗಾಳಿಯ ಸಂಚಾರವೂ ಇದೆ ಎಂದು ತಿಳಿಯಬೇಕು.
ಊಷ್ಮತೋ ಗ್ಲಾನಪರ್ಣಾನಾಂ ತ್ವಕ್ಫಲಂ ಪುಷ್ಪಮೇವ ಚ |
ಮ್ಲಾಯತೇ ಚೈವ ಶೀತೇ ನ ಸ್ಪರ್ಶಸ್ತೇನಾತ್ರ ವಿದ್ಯತೇ ॥ 11 ॥
ವೃಕ್ಷಗಳಲ್ಲಿ ಉಷ್ಣದ ಆಧಿಕ್ಯದ ಸಂಬಂಧವಿರುವುದರಿಂದ ಬಿಸಿಲಿನ ಬೇಗೆಯಿಂದ ಬಣ್ಣ ಕೆಟ್ಟು ಮರಗಳು ಬಾಡಿಹೋಗುತ್ತವೆ. ಅದರ ಎಲೆ, ಹೂ, ಹಣ್ಣು, ತೊಗಟೆ ಮುಂತಾದವುಗಳೆಲ್ಲ ಒಣಗಿ ಬೀಳುವುದು ಔಷ್ಣ್ಯದಿಂದಲೇ. ಹೀಗೆ ಒಣಗುವುದರಿಂದ ಸ್ಪರ್ಶಜ್ಞಾನವೂ ಅವುಗಳಿಗಿದೆ ಎಂದು ಸ್ಪಷ್ಟವಾಗುತ್ತದೆ.
ವಾಯ್ವಗ್ನ್ಯಶನಿನಿಷ್ಪೇಷೈಃ ಫಲಪುಷ್ಪಂ ವಿಶೀರ್ಯತೇ |
ಶ್ರೋತ್ರೇಣ ಗೃಹ್ಯತೇ ಶಬ್ದಸ್ತಸ್ಮಾಚ್ಛೃಣ್ವಂತಿ ಪಾದಪಾಃ ॥ 12 ॥
ಇಷ್ಟೇ ಅಲ್ಲದೆ ಬೆಂಕಿ, ಗಾಳಿ, ಸಿಡಿಲು ಮುಂತಾದವುಗಳ ಶಬ್ದದಿಂದ ಕೆಲವೊಮ್ಮೆ ಅವುಗಳಲ್ಲಿ ತುಂಬಿದ ಹೂವು, ಹಣ್ಣುಗಳು ಉದುರಿಬೀಳುತ್ತವೆ. ಇದರಿಂದ ವೃಕ್ಷಗಳಿಗೆ ಶಬ್ದಗ್ರಹಣ ಶಕ್ತಿ ಇದೆ, ಇಂದ್ರಿಯಗಳು ಇವೆ ಎಂಬುದು ಸ್ಪಷ್ಟವಾಗುತ್ತದೆ.
ವಲ್ಲೀ ವೇಷ್ಟಯತೇ ವೃಕ್ಷಂ ಸರ್ವತಶ್ಚೈವ ಗಚ್ಛತಿ |
ನ ಹ್ಯದೃಷ್ಟೇಶ್ಚ ಮಾರ್ಗೋಽಸ್ತಿ ತಸ್ಮಾತ್ ಪಶ್ಯಂತಿ ಪಾದಪಾಃ ॥ 13 ॥
ಬಳ್ಳಿಗಳು ಹತ್ತಿರದಲ್ಲಿರುವ ಮರವನ್ನು ಕಂಡುಕೊಂಡು, ಅದರ ಆಶ್ರಯವನ್ನು ಹಿಡಿದು ಹಬ್ಬುತ್ತವೆ. ಇದರಿಂದ ಅವುಗಳಿಗೆ ಕಣ್ಣುಗಳು ಇವೆ ಎಂದು ತಿಳಿಯುತ್ತದೆ. ಕಣ್ಣಿಲ್ಲದವರಿಗೆ ದಾರಿ ತಿಳಿಯಲಾರದಷ್ಟೆ! ಆದ್ದರಿಂದ ಮರ-ಗಿಡಗಳು ನೋಡುತ್ತವೆ.
ಪುಣ್ಯಾಪುಣ್ಯೈಸ್ತಥಾ ಗಂಧೈರ್ಧೂಪೈಶ್ಚ ವಿವಿಧೈರಪಿ |
ಅರೋಗಾಃ ಪುಷ್ಪಿತಾಃ ಸಂತಿ ತಸ್ಮಾಜ್ಜಿಘ್ರಂತಿ ಪಾದಪಾಃ ॥ 14 ॥
ನಾನಾ ವಿಧವಾದ ಧೂಪಗಳ, ಸುಗಂಧ-ದುರ್ಗಂಧಗಳಿಂದ, ಕಸ್ತೂರ್ಯಾದಿ ಪರಿಮಳಗಳಿಂದ, ಮದಿರಾದಿ ದುರ್ಗಂಧಗಳಿಂದ ವೃಕ್ಷಗಳಿಗೆ ಅಂಟಿದ ರೋಗಗಳು ಪರಿಹಾರವಾಗಿ ಅವುಗಳು ಪುಷ್ಪ-ಫಲಗಳನ್ನು ಬಿಡುವುದೂ ಇದೆ. ಆದ್ದರಿಂದ ಗಿಡಗಳಿಗೆ ಘ್ರಾಣೇಂದ್ರಿಯ ಶಕ್ತಿ ಇದೆ ಎಂದು ತಿಳಿಯಬಹುದು.
ಪಾದೈಃ ಸಲಿಲಪಾನಂ ಚ ವ್ಯಾಧೀನಾಂ ಚಾಪಿ ದರ್ಶನಾತ್ |
ವ್ಯಾಧಿಪ್ರತಿಕ್ರಿಯತ್ವಾಚ್ಚ ವಿದ್ಯತೇ ರಸನಂ ದ್ರುಮೇ ॥ 15 ॥
ಗಿಡಗಳು ಬೇರುಗಳಿಂದ ನೀರನ್ನು ಕುಡಿಯುತ್ತವೆ. ತುಂಬಾ ನೀರನ್ನು ಪಾನ ಮಾಡಿದ ಅವುಗಳಿಗೆ ಜಲೀಯರೋಗಪೀಡೆಯೂ ಉಂಟಾಗುತ್ತದೆ. ಆ ರೋಗಗಳಿಗೆ ಚಿಕಿತ್ಸೆಯೂ ಮಾಡಲ್ಪಡುತ್ತದೆ. ಇದರಿಂದ ಲವಣ ರಸಗಳನ್ನು ಬೇರಿಗೆ ಹಾಕುವುದರಿಂದ ರೋಗಗಳು ಪರಿಹಾರವಾಗುವ ಪ್ರಕ್ರಿಯೆಯೂ ಕಂಡುಬಂದಿರುವುದರಿಂದ ಸಸ್ಯ ವರ್ಗಗಳಿಗೂ ರುಚಿಯನ್ನು ನೋಡುವ ರಸನೇಂದ್ರಿಯಗಳು ಇವೆ ಎಂದು ತಿಳಿಯಬಹುದು.
ವಕ್ತ್ರೇಣೋತ್ಪಲನಾಲೇನ ಯಥೋರ್ಧ್ವಂ ಜಲಮಾದದೇತ್ |
ತಥಾ ಪವನಸಂಯುಕ್ತಃ ಪಾದೈಃ ಪಿಬತಿ ಪಾದಪಃ ॥ 16 ॥
ತಾವರೆಯ ದಂಟಿನ ನಾಳದ ಕೊನೆಯನ್ನು ನೀರಿನಲ್ಲಿಟ್ಟು ಬಾಯಿಂದ ಗಾಳಿಯನ್ನು ಸೆಳೆದುಕೊಂಡಾಗ ಆ ನಾಳದ ಮೂಲಕವಾಗಿ ನೀರನ್ನು ನಾವು ಬಾಯಿಂದ ಹೀರುವಂತೆ ಗಿಡಗಳೂ ಕೂಡ ಗಾಳಿಯ ಸಹಾಯದಿಂದ ಬೇರಿನ ಮೂಲಕವಾಗಿ ನೀರನ್ನು ಹೀರುತ್ತವೆ. ಇದರಿಂದ ಒಳಗಡೆಯೂ ಖಾಲಿ ಭಾಗಗಳಿವೆ, ಆಕಾಶ ಭಾಗಗಳಿವೆ. ವಾಯು- ಆಕಾಶಗಳ ಸಂಚಾರವು ವೃಕ್ಷಗಳ ಒಳಗೆ ಇವೆ ಎಂಬುದು ಅರ್ಥವಾಗುತ್ತದೆ. ಪಾದಗಳಿಂದ ನೀರನ್ನು ಪಾನ ಮಾಡುವುದರಿಂದಲೇ ಪಾದಪ ಎನಿಸಿವೆಯಷ್ಟೆ?
ಗ್ರಹಣಾತ್ ಸುಖದುಃಖಸ್ಯ ಉನ್ನಸ್ಯ ಚ ವಿರೋಹಣಾತ್ |
ಜೀವಂ ಪಶ್ಯಾಮಿ ವೃಕ್ಷಾಣಾಮಚೈತನ್ಯಂ ನ ವಿದ್ಯತೇ ॥ 17 ॥
ಸಸ್ಯವರ್ಗಗಳಿಗೂ ಕಷ್ಟ-ಸುಖಗಳ ಅನುಭವವಿದೆ. ಅವುಗಳನ್ನು ಕಡಿದ ಬಳಿಕ ಪುನಃ ಚಿಗುರಿ ಬೆಳೆಯುತ್ತವೆ. ಇವುಗಳಿಂದ ಅವುಗಳಿಗೆ ಜೀವವಿದೆ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಅವು ಅಚೇತನಗಳಲ್ಲ.
ತೇನ ತಜ್ಜಲಮಾದತ್ತಂ ಜರಯತ್ಯಗ್ನಿಮಾರುತೌ |
ಆಹಾರಪರಿಣಾಮಾಚ್ಚ ಸ್ನೇಹೋ ವೃದ್ಧಿಶ್ಚ ಜಾಯತೇ ॥ 18 ॥
ಬೇರಿನ ಮೂಲಕವಾಗಿ ನೀರನ್ನು ಸೆಳೆದುಕೊಂಡಷ್ಟು ಅಗ್ನಿ-ವಾಯುಗಳ ಸಂಬಂಧದಿಂದ ಆ ನೀರನ್ನು ಜೀರ್ಣಮಾಡಿಕೊಳ್ಳುತ್ತವೆ. ಅದರಿಂದಾಗಿ ಹುಲುಸಾಗಿ, ಸಮೃದ್ಧವಾಗಿ ವೃಕ್ಷಗಳು ಬೆಳೆಯುತ್ತವೆ. ಆಹಾರದ ಸ್ವೀಕಾರದಿಂದ ಅವುಗಳ ಬಣ್ಣ, ಅವುಗಳ

ತೊಗಟೆಯಲ್ಲಿ ನುಣುಪು, ಬೆಳವಣಿಗೆ ಇವುಗಳೆಲ್ಲವೂ ಕಾಣುತ್ತವೆ.
ಜಂಗಮಾನಾಂ ಚ ಸರ್ವೇಷಾಂ ಶರೀರೇ ಪಂಚ ಧಾತವಃ |
ಪ್ರತ್ಯೇಕಶಃ ಪ್ರಭಿದ್ಯಂತೇ ಯೈಃ ಶರೀರಂ ವಿಚೇಷ್ಟತೇ ॥ 19 ॥
ಸಮಸ್ತ ಜಂಗಮ ಶರೀರಗಳಲ್ಲಿ ಪಂಚಧಾತುಗಳಿವೆ. ಆದರೆ ಒಂದೊಂದರಲ್ಲಿಯೂ ಆ ಪಂಚಭೂತಗಳ ಪ್ರಮಾಣವು ಭಿನ್ನ ಭಿನ್ನವಾಗಿ ಮೇಲನವನ್ನು ಹೊಂದಿದೆ. ಈ ಧಾತುಗಳಿಂದಲೇ ಜಂಗಮಗಳಿಗೆ ಚೇಷ್ಟಾಶಕ್ತಿಯು ಉಂಟಾಗುತ್ತದೆ.
ತ್ವಕ್ಚ ಮಾಂಸಂ ತಥಾಸ್ಥೀನಿ ಮಜ್ಜಾ ಸ್ನಾಯು ಚ ಪಂಚಮಮ್ |
ಇತ್ಯೇತದಿಹ ಸಂಖ್ಯಾತಂ ಶರೀರೇ ಪೃಥಿವೀಮಯಮ್ ॥ 20 ॥
ದೇಹದಲ್ಲಿರುವ ಚರ್ಮ, ಮಾಂಸ, ಎಲುಬು, ಮಜ್ಜಾ, ಸ್ನಾಯು ಎಂಬ ಐದು ಪೃಥಿವೀಮಯವಾದ ಧಾತುಗಳು.
ತೇಜೋಽಗ್ನಿತಸ್ತಥಾ ಕ್ರೋಧಶ್ಚಕ್ಷುರೂಷ್ಮಾ ತಥೈವ ಚ |
ಅಗ್ನಿರ್ಜರಯತೇ ಚಾಪಿ ಪಂಚಾಗ್ನೇಯಾಃ ಶರೀರಿಣಃ ॥ 21 ॥
ತೇಜಸ್ಸು, ಕೋಪ, ಕಣ್ಣು, ದೇಹದೊಳಗೆ ಉಷ್ಣತೆ, ಆಹಾರವನ್ನು ಜೀರ್ಣಿಸುವ ಜಾಠರಾಗ್ನಿ ಇವು ಐದು ಪ್ರಾಣಿಯ ದೇಹದಲ್ಲಿರುವ ಐದು ಅಗ್ನಿಯ ಅಂಶಗಳು.
ಶ್ರೋತ್ರಂ ಘ್ರಾಣಮಥಾಸ್ಯಂ ಚ ಹೃದಯಂ ಕೋಷ್ಠಮೇವ ಚ |
ಆಕಾಶಾತ್ ಪ್ರಾಣಿನಾಮೇತೇ ಶರೀರೇ ಪಂಚ ಧಾತವಃ ॥ 22 ॥
ಕಿವಿ, ಮೂಗು, ಬಾಯಿ, ಹೃದಯ, ಜಠರ ಎಂಬ ಐದು ಪ್ರಾಣಿಗಳಲ್ಲಿರುವ ಆಕಾಶದ ಅಂಶಗಳು.
ಶ್ಲೇಷ್ಮಾ ಪಿತ್ತಮಥ ಸ್ವೇದೋ ವಸಾ ಶೋಣಿತಮೇವ ಚ |
ಇತ್ಯಾಪಃ ಪಂಚಧಾ ದೇಹೇ ಭವಂತಿ ಪ್ರಾಣಿನಾಂ ಸದಾ ॥ 23 ॥
ಶ್ಲೇಷ್ಮಾ, ಪಿತ್ತ, ಬೆವರು, ವಸ= ಕೆನ್ನೀರು, ರಕ್ತ - ಈ ಐದು ದೇಹದಲ್ಲಿರುವ ಜಲಾಂಶಗಳು.
ಪ್ರಾಣಾತ್ ಪ್ರಾಣಯತೇ ಪ್ರಾಣೀ ವ್ಯಾನಾದ್ವ್ಯಾಯಚ್ಛತೇ ತಥಾ |
ಗಚ್ಛತ್ಯಪಾನೋಽವಾಕ್ಚೈವ ಸಮಾನೋ ಹೃದ್ಯವಸ್ಥಿತಃ ॥ 24 ॥
ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ದೇಹದಲ್ಲಿರುವ ವಾಯುವಿನ ಅಂಶಗಳು. ಇವುಗಳಲ್ಲಿ ಇಂದ್ರಿಯಗಣಗಳನ್ನು ಜೀವಂತಗೊಳಿಸುವ ವಾಯುವು ಪ್ರಾಣವಾಯು. ಶರೀರದ ಎಪ್ಪತ್ತೆರಡು ಸಾವಿರ ನಾಡಿಗಳನ್ನು ವಿಕಸನಗೊಳಿಸುವುದು ವ್ಯಾನವಾಯು. ಗುದಸ್ಥಾನದಲ್ಲಿ ಅಧೋಮುಖವಾಗಿ ಬರುವುದು ಅಪಾನ ವಾಯುವು. ಹೃದಯದಲ್ಲಿರುವುದು ಸಮಾನವಾಯುವು.
ಉದಾನಾದುಚ್ಛ್ವಸಿತಿ ಚ ಪ್ರತಿಭೇದಾಚ್ಚ ಭಾಷತೇ |
ಇತ್ಯೇತೇ ವಾಯವಃ ಪಂಚ ಚೇಷ್ಟಯಂತೀಹ ದೇಹಿನಮ್ ॥ 25 ॥
ಶ್ವಾಸಕೋಶದಿಂದ ಆರಂಭಿಸಿ ನೆತ್ತಿಯ ತನಕ ಸಂಚರಿಸುವ ಗಾಳಿಯು ಉದಾನ ವಾಯುವು. ಇವೆಲ್ಲವನ್ನೂ ಸೇರಿಸಿಕೊಂಡು ವಾಯುವನ್ನು ಶ್ರುತಿಯು ಕೊಂಡಾಡುತ್ತದೆ. ಹೀಗೇ ಪಂಚವಾಯುಗಳು ಜೀವವನು ಚೇಷ್ಟೆಗೊಳಿಸುತ್ತವೆ.
ಭೂಮೇರ್ಗಂಧಗುಣಾನ್ ವೇತ್ತಿ ರಸಂ ಚಾದ್ಭ್ಯಃ ಶರೀರವಾನ್ |
ಜ್ಯೋತಿಃ ಪಶ್ಯತಿ ಚಕ್ಷುರ್ಭ್ಯಾಂ ಸ್ಪರ್ಶಂ ವೇತ್ತಿ ಚ ವಾಯುನಾ ॥ 26 ॥
ಇಂದ್ರಿಯರೂಪದಿಂದಿರುವ ಭೂತತತ್ತ್ವದಿಂದ ಗಂಧಗುಣವನ್ನೂ, ಜಲತತ್ತ್ವದಿಂದ ರಸವನ್ನೂ, ಅಗ್ನಿ ತತ್ತ್ವದಿಂದ ರೂಪವನ್ನೂ, ವಾಯು ತತ್ತ್ವದಿಂದ ಸ್ಪರ್ಶವನ್ನೂ, ಆಕಾಶದಿಂದ ಶಬ್ದವನ್ನೂ ಗ್ರಹಿಸುತ್ತಾರೆ.
ತಸ್ಯ ಗಂಧಸ್ಯ ವಕ್ಷ್ಯಾಮಿ ವಿಸ್ತರಾಭಿಹಿತಾನ್ ಗುಣಾನ್ |
ಇಷ್ಟಶ್ಚಾನಿಷ್ಟಗಂಧಶ್ಚ ಮಧುರಃ ಕಟುರೇವ ಚ ॥ 27 ॥
ಗಂಧವೆಂಬ ಭೂತತತ್ತ್ವದ ಮುಖ್ಯಗುಣದಲ್ಲಿರುವ ಪ್ರಭೇದಗಳನ್ನು ತಿಳಿಸುತ್ತೇನೆ. ಒಳ್ಳೆಯ ಅನ್ನದ ಪರಿಮಳವು ಇಷ್ಟವಾದ ಗಂಧ ಎನಿಸಿದೆ. ಅಮೇಧ್ಯ ಗಂಧವು ಅನಿಷ್ಟ ಗಂಧ ಎನಿಸಿದೆ. ಬೆಲ್ಲ ಮೊದಲಾದವುಗಳಲ್ಲಿರುವ ಪರಿಮಳವು ಮಧುರ ಗಂಧ ಎನಿಸಿದೆ. ಮೆಣಸಿನಕಾಯಿ ಮೊದಲಾದ ಗಂಧವು ಕಟುವೆನಿಸಿದೆ.
ನಿರ್ಹಾರೀ ಸಂಹತಃ ಸ್ನಿಗ್ಧೋ ರೂಕ್ಷೋ ವಿಶದ ಏವ ಚ |
ಏವಂ ನವವಿಧೋ ಜ್ಞೇಯಃ ಪಾರ್ಥಿವೋ ಗಂಧವಿಸ್ತರಃ ॥ 28 ॥
ಲವಣಾದಿ ಗಂಧವು ನಿರ್ಹಾರಿ ಎನಿಸಿದೆ. ಸಕ್ಕರೆ ಮೊದಲಾದವುಗಳಿಂದ ಮಿಶ್ರಿತವಾದ ಗಂಧವು ಸಂಹತ ಎನಿಸಿದೆ. ತುಪ್ಪ, ಚಂದನಾದಿಗಳ ಗಂಧವು ಸ್ನಿಗ್ಧ ಎನಿಸಿದೆ. ಸಾಸಿವೆ ಮೊದಲಾದವುಗಳ ಗಂಧವು ರೂಕ್ಷ ಎನಿಸಿದೆ. ಕುಸುಮದ ಗಂಧವು ವಿಶದ ಎನಿಸಿದೆ. ಈ ರೀತಿಯಾಗಿ ಒಂಬತ್ತು ಗಂಧದ ಗುಣಗಳು ಪೃಥಿವಿಯ ವಿಸ್ತಾರವೆಂದು ತಿಳಿಯಬೇಕು.
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸಶ್ಚಾಪಾಂ ಗುಣಾಃ ಸ್ಮೃತಾಃ |
ರಸಜ್ಞಾನಂ ತು ವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ 29 ॥
ತ್ವಗಿಂದ್ರಿಯದಿಂದ ಸ್ಪರ್ಶವನ್ನು ತಿಳಿಯುತ್ತಾರೆ. ಇದರಿಂದ ಶಬ್ದ, ಸ್ಪರ್ಶ, ರೂಪ, ರಸ ಎಲ್ಲವೂ ಭೂಮಿಯಲ್ಲಿರುವ ಗುಣಗಳು ಎಂದು ಹೇಳುತ್ತಾರೆ. ಜಲತತ್ತ್ವದ ಮುಖ್ಯವಾದ ರಸವೆಂಬ ಗುಣದ ಬಗ್ಗೆ ವಿದ್ವಾಂಸರು ಹೇಳುವುದನ್ನು ವಿವರಿಸುತ್ತೇನೆ, ಕೇಳು.
ರಸೋ ಬಹುವಿಧಃ ಪ್ರೋಕ್ತಃ ಸೂರಿಭಿಃ ಪ್ರಥಿತಾತ್ಮಭಿಃ |
ಮಧುರೋ ಲವಣಸ್ತಿಕ್ತಃ ಕಷಾಯೋಽಮ್ಲಃ ಕಟುಸ್ತಥಾ |
ಏಷ ಷಡ್ವಿಧವಿಸ್ತಾರೋ ರಸೋ ವಾರಿಮಯಃ ಸ್ಮೃತಃ ॥ 30 ॥
ರಸವು ಹಲವು ಬಗೆಯಾಗಿದೆ ಎಂದು ಜ್ಞಾನಿಗಳು ತಿಳಿಸುತ್ತಾರೆ. ಮಧುರ, ಲವಣ, ತಿಕ್ತ (ಒಗರು), ಕಷಾಯ (ಕಹಿ), ಆಮ್ಲ (ಹುಳಿ), ಕಟು ಎಂದು ಆರುವಿಧವಾಗಿ ನೀರಿನ ಉತ್ಪನ್ನವಾದ ರಸವನ್ನು ವಿವರಿಸುತ್ತಾರೆ.

ಶಬ್ದಃ ಸ್ಪರ್ಶಶ್ಚ ರೂಪಂ ಚ ತ್ರಿಗುಣಂ ಜ್ಯೋತಿರುಚ್ಯತೇ |
ಜ್ಯೋತಿಃ ಪಶ್ಯತಿ ರೂಪಾಣಿ ರೂಪಂ ಚ ಬಹುಧಾ ಸ್ಮೃತಮ್ ॥ 31 ॥
ತೇಜಸ್ಸೆಂಬ ತತ್ತ್ವವು ಶಬ್ದ-ಸ್ಪರ್ಶ-ರೂಪವೆಂಬ ಮೂರುಗುಣವುಳ್ಳದ್ದು. ತೇಜಸ್ಸಿನ ಶಕ್ತಿಯಿಂದಲೇ ರೂಪವನ್ನು ನೋಡಲು ಸಮರ್ಥನಾಗುತ್ತಾನೆ. ಆ ರೂಪವು ಅನೇಕ ವಿಧವಾಗಿದೆ.
ಹ್ರಸ್ವೋ ದೀರ್ಘಸ್ತಥಾ ಸ್ಥೂಲಶ್ಚತುರಸ್ರೋಽಣು ವೃತ್ತವಾನ್ |
ಶುಕ್ಲಃ ಕೃಷ್ಣಸ್ತಥಾ ರಕ್ತೋ ನೀಲಃ ಪೀತೋಽರುಣಸ್ತಥಾ |
ಏವಂ ದ್ವಾದಶವಿಸ್ತಾರೋ ಜ್ಯೋತೀರೂಪಗುಣಃ ಸ್ಮೃತಃ ॥ 32 ॥
ಹ್ರಸ್ವವಸ್ತುವಿನಲ್ಲಿರುವ ರೂಪವು ಹ್ರಸ್ವ ಎನಿಸಿದೆ. ದೀರ್ಘವಸ್ತುವಿನಲ್ಲಿರುವ ರೂಪವು ದೀರ್ಘವೆನಿಸಿದೆ. ಸ್ಥೂಲ, ಚತುರಸ್ರ, ಅಣು, ವರ್ತುಲ ಎಂಬ ಆರು ಆಕಾರಗಳು. ಬಿಳಿ, ಕಪ್ಪು, ಕೆಂಪು, ನೀಲಿ, ಹಳದಿ, ಅರುಣ ಎಂಬ ಆರು ಬಗೆಯ ಬಣ್ಣಗಳು. ಈ ರೀತಿಯಾಗಿ ಜ್ಯೋತಿರೂಪಗುಣವು ಹನ್ನೆರಡು ಬಗೆಯಾಗಿ ವಿಸ್ತಾರ ಹೊಂದಿದೆ.
ಶಬ್ದಸ್ಪರ್ಶೌ ತು ವಿಜ್ಞೇಯೌ ದ್ವಿಗುಣೋ ವಾಯುರುಚ್ಯತೇ |
ವಾಯವ್ಯಸ್ತು ಗುಣಃ ಸ್ಪರ್ಶಃ ಸ್ಪರ್ಶಶ್ಚ ಬಹುಧಾ ಸ್ಮೃತಃ ॥ 33 ॥
ವಾಯುವಿನಲ್ಲಿ ಶಬ್ದ-ಸ್ಪರ್ಶ ಎಂಬ ಎರಡೇ ಗುಣಗಳು. ವಾಯುವಿನ ಸ್ಪರ್ಶ ಗುಣದಲ್ಲಿ ಅನೇಕ ವಿಧಗಳಿವೆ ಎಂದು ಹೇಳುತ್ತಾರೆ.
ಕಠಿನಶ್ಚಿಕ್ಕಣಃ ಶ್ಲಕ್ಷ್ಣಃ ಪಿಚ್ಛಲೋ ಮೃದುದಾರುಣಃ |
ಉಷ್ಣಃ ಶೀತಃ ಸುಖೋ ದುಃಖಃ ಸ್ನಿಗ್ಧೋ ವಿಶದ ಏವ ಚ |
ಏವಂ ದ್ವಾದಶವಿಸ್ತಾರೋ ವಾಯವ್ಯೋ ಗುಣ ಉಚ್ಯತೇ ॥ 34 ॥
ಒರಟು, ಮೃದು, ನಯ, ಘನ, ಜಿಡ್ಡು, ಕಠಿಣ, ಉಷ್ಣ, ಶೀತ, ಸುಖ, ದುಃಖ, ಸ್ನಿಗ್ಧ, ವಿಶದ ಎಂದು ಹನ್ನೆರಡು ಗುಣಗಳ ವಿಸ್ತಾರವನ್ನು ವಾಯುವಿನ ಗುಣ ಎಂದು ಹೇಳುತ್ತಾರೆ.
ತತ್ರೈಕಗುಣಮಾಕಾಶಂ ಶಬ್ದ ಇತ್ಯೇವ ತತ್ ಸ್ಮೃತಮ್ |
ತಸ್ಯ ಶಬ್ದಸ್ಯ ವಕ್ಷ್ಯಾಮಿ ವಿಸ್ತರಂ ವಿವಿಧಾತ್ಮಕಮ್ ॥ 35 ॥
ಆಕಾಶವೆಂಬುದು ಶಬ್ದವೆಂಬ ಒಂದೇ ಗುಣವುಳ್ಳದ್ದು. ಆಕಾಶಜನ್ಯವಾದ ಶಬ್ದದಲ್ಲಿ ಅನೇಕ ವಿಧವಿದೆ. ಅದನ್ನು ಹೇಳುತ್ತೇನೆ.
ಷಡ್ಜಂ ಋಷಭಗಾಂಧಾರೌ ಮಧ್ಯಮಃ ಪಂಚಮಸ್ತಥಾ |
ಧೈವತಶ್ಚಾಪಿ ವಿಜ್ಞೇಯಸ್ತಥಾ ಚಾಪಿ ನಿಷಾದಕಃ ॥ 36 ॥
ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ ಎಂಬುದಾಗಿ ಏಳು ಭೇದಗಳಿವೆ.
ಏಷ ಸಪ್ತವಿಧಃ ಪ್ರೋಕ್ತೋ ಗುಣ ಆಕಾಶಲಕ್ಷಣಃ |
ತ್ರೈಸ್ವರ್ಯೇಣ ತು ಸರ್ವತ್ರ ಸ್ಥಿತೋಽಪಿ ಪಟಹಾದಿಷು ॥ 37 ॥
ಈ ಏಳು ವಿಧ ಗುಣಗಳು ಆಕಾಶದ ಲಕ್ಷಣವು. ಶಬ್ದವೆಂಬುದು ಭೇರಿ ಮೊದಲಾದ ವಾದ್ಯಗಳಲ್ಲಿ ಸ್ಪಷ್ಟವಾಗಿ ಕೇಳಿಬಂದರೂ ಅದು ಸರ್ವವ್ಯಾಪಿಯು.
ಮೃದಂಗಭೇರೀಶಂಖಾನಾಂ ಸ್ತನಯಿತ್ನೋ ರಥಸ್ಯ ಚ |
ಯಃ ಕಶ್ಚಿಚ್ಛ್ರೂಯತೇ ಶಬ್ದಃ ಪ್ರಾಣಿನೋಽಪ್ರಾಣಿನೋಽಪಿ ವಾ ॥ 38 ॥
ಮೃದಂಗ, ಭೇರೀ, ಶಂಖ, ಮೇಘ, ರಥ ಮೊದಲಾದ ಸಜೀವ, ನಿರ್ಜೀವಗಳಿಂದ ಕೇಳಿ ಬರುವ ಎಲ್ಲಾ ಶಬ್ದಗಳು
ಏತೇಷಾಮೇವ ಸರ್ವೇಷಾಂ ವಿಷಯೇ ಸಂಪ್ರಕೀರ್ತಿತಃ |
ಏವಂ ಬಹುವಿಧಾಕಾರಃ ಶಬ್ದ ಆಕಾಶಸಂಭವಃ ॥ 39 ॥
ಈ ಎಲ್ಲಾ ಶಬ್ದಗಳು ಷಡ್ಜಾದಿ ಸ್ವರಗಳಲ್ಲಿಯೇ ಸೇರಿದವುಗಳೆಂದು ತಿಳಿ. ಆಕಾಶದಿಂದ ಹುಟ್ಟುವ ಶಬ್ದವು ಹೀಗೆ ಅನೇಕ ಆಕಾರದಿಂದ ಕೂಡಿದೆ.
ಆಕಾಶಜಂ ಶಬ್ದಮಾಹುರೇಭಿರ್ವಾಯುಗುಣೈಃ ಸಹ |
ಅವ್ಯಾಹತೈಶ್ಚೇತಯತೇ ನ ವೇತ್ತಿ ವಿಷಮಾಗತೈಃ ॥ 40 ॥
ಆಕಾಶದಿಂದ ಉತ್ಪನ್ನವಾಗುವ ಶಬ್ದವು ವಾಯುವಿನ ಗುಣಗಳಾದ ಹಲವು ಬಗೆಯ ಸ್ಪರ್ಶಗಳಲ್ಲಿ ತಡೆಯಲ್ಪಡದೆ ಹೊರಬಿದ್ದರೆ ಅದು ಕಿವಿಗೆ ವಿಧವಿಧವಾಗಿ ಕೇಳಿಸುತ್ತದೆ. ಅದೇ ಸ್ಪರ್ಶವು ಅಡ್ಡಬಂದಾಗ ಶಬ್ದವು ಕೇಳಿಸದು.
ಆಪ್ಯಾಯಂತೇ ಚ ತೇ ನಿತ್ಯಂ ಧಾತವಸ್ತೈಸ್ತು ಧಾತುಭಿಃ |
ಆಪೋಽಗ್ನಿರ್ಮಾರುತಶ್ಚೈವ ನಿತ್ಯಂ ಜಾಗ್ರತಿ ದೇಹಿಷು ॥ 41 ॥
ಸಮಸ್ತ ಪ್ರಾಣಿಗಳು ಶರೀರದೊಳಗಿನ ಪಂಚಭೂತಗಳಿಂದ ಮೇಲಿಂದ ಮೇಲೆ ವೃದ್ಧಿ ಹೊಂದುತ್ತವೆ. ಪ್ರಾಣಿಗಳ ದೇಹದಲ್ಲಿ ಅಗ್ನಿ-ಜಲ-ವಾಯುಗಳೆಂಬ ಭೂತಗಳು ಯಾವಾಗಲೂ ಜಾಗೃತವಾಗಿಯೇ ಇರುತ್ತವೆ. ಇವುಗಳೇ ದೇಹಕ್ಕೆ ಆಧಾರವಾಗಿ ಪಂಚಪ್ರಾಣಗಳಲ್ಲಿಯೂ ವ್ಯಾಪಿಸಿ ದೇಹಗಳಲ್ಲಿ ನೆಲೆಗೊಂಡಿವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಭೃಗುಋಷಿಗಳು ಭರದ್ವಾಜರನ್ನು ಕುರಿತು ಶರೀರದಲ್ಲಿ ಪ್ರಾಣಾಪಾನಾದಿಗಳ ಕಾರ್ಯಗಳ ಕುರಿತು ನಿರೂಪಿಸಿದುದು.

ಭರದ್ವಾಜಃ
ಪಾರ್ಥಿವಂ ಧಾತುಮಾಶ್ರಿತ್ಯ ಶಾರೀರೋಽಗ್ನಿಃ ಕಥಂ ಭವೇತ್ |
ಅವಕಾಶವಿಶೇಷೇಣ ಕಥಂ ವರ್ತಯತೇಽನಿಲಃ ॥ 1 ॥
ಭರದ್ವಾಜ ಮಹಾತ್ಮನೇ, ದೇಹದ ಪಾರ್ಥಿವ ಭಾಗದಲ್ಲಿ ಅಗ್ನಿ ಇರುತ್ತದೆಂದು ಹಿಂದೆ ಹೇಳಿರುವಿ. ಆ ಅಗ್ನಿಯು ಹೇಗೆ ದೇಹದಲ್ಲಿ ಸೇರಿದೆ? ವಾಯುವೆಂಬ ಭೂತವು ಶರೀರದ ಅವಕಾಶದಲ್ಲಿ ಅರ್ಥಾತ್ ಆಕಾಶದಲ್ಲಿ ಹೇಗೆ ಸೇರಿಕೊಂಡು ಶರೀರವನ್ನು ಪ್ರವೃತ್ತಿ ಹೊಂದುವಂತೆ ಮಾಡುತ್ತದೆ? ಇದನ್ನು ತಿಳಿಸಿರಿ.
ಭೃಗುಃ
ವಾಯೋರ್ಗತಿಮಹಂ ಬ್ರಹ್ಮನ್ ಕೀರ್ತಯಿಷ್ಯಾಮಿ ತೇಽನಘ |
ಪ್ರಾಣಿನಾಮನಿಲೋ ದೇಹಾನ್ ಯಥಾ ಚೇಷ್ಟಯತೇ ಬಲೀ ॥ 2 ॥
ಭೃಗು ಭರದ್ವಾಜರೇ, ವಾಯುಗತಿಯನ್ನು, ಅದು ದೇಹವನ್ನು ಚೇಷ್ಟಿಸುವ ಕ್ರಮವನ್ನು ತಿಳಿಸುತ್ತೇನೆ, ಕೇಳಿರಿ.
ಶ್ರಿತೋ ಮೂರ್ಧಾನಮಗ್ನಿಸ್ತು ಶರೀರಂ ಪರಿಪಾಲಯನ್ |
ಪ್ರಾಣೋ ಮೂರ್ಧನಿ ಚಾಗ್ನೌ ಚ ವರ್ತಮಾನೋ ವಿಚೇಷ್ಟತೇ ॥ 3 ॥
ಸಮಸ್ತ ಜೀವರ ತಲೆಯಲ್ಲಿ ಅಗ್ನಿ ಎಂಬ ಜೀವಾತ್ಮನು ಸೇರಿಕೊಂಡು ಶರೀರವನ್ನು ರಕ್ಷಿಸುತ್ತಿರುವುದು. ಪ್ರಾಣವಾಯುವೆಂಬುದು ತಲೆಯನ್ನಾಶ್ರಯಿಸಿರುವ ಆ ಅಗ್ನಿಗಳಲ್ಲಿದ್ದುಕೊಂಡು ಅನೇಕ ವಿಧವಾದ ಚೇಷ್ಟೆಗಳನ್ನು ಮಾಡಿಸುತ್ತದೆ.
ಸ ಜಂತುಃ ಸರ್ವಭೂತಾತ್ಮಾ ಪುರುಷಃ ಸ ಸನಾತನಃ |
ಮನೋ ಬುದ್ಧಿರಹಂಕಾರೋ ಭೂತಾನಿ ವಿಷಯಾಶ್ಚ ಸಃ ॥ 4 ॥
ಆ ಪ್ರಾಣವಾಯುವು ಸಮಸ್ತ ಜಂತುಗಳನ್ನು ನಿಯಮನ ಮಾಡುವುದರಿಂದ ಜಂತು ಎನಿಸಿಕೊಂಡಿದೆ. ಸಮಸ್ತ ಭೂತಗಳಿಗೂ ಆತ್ಮನೆನಿಸಿದ ಸನಾತನ ಪುರುಷನು ಆಗಿದೆ. ಆ ಪ್ರಾಣವೇ ಸಮಸ್ತ ಭೂತಗಳು, ಮನಸ್ಸು, ಬುದ್ಧಿ, ಅಹಂಕಾರ, ಇಂದ್ರಿಯ ಗೋಚರವಾದ ವಿಷಯಗಳೂ ಆಗಿದೆ.
ಏವಂ ತ್ವಿಹ ಸ ಸರ್ವತ್ರ ಪ್ರಾಣೇನ ಪರಿಪಾಲ್ಯತೇ |
ಪೃಷ್ಠತಶ್ಚ ಸಮಾನೇನ ಸ್ವಾಂ ಸ್ವಾಂ ಗತಿಮುಪಾಶ್ರಿತಃ ॥ 5 ॥
ಸಮಸ್ತ ಪ್ರಾಣಿಯು ಪ್ರಾಣವಾಯುವಿಂದ ರಕ್ಷಿತವಾಗಿ ಅದರ ಅನುಗ್ರಹದಿಂದಲೇ ವ್ಯಾಪಾರ ಮಾಡುತ್ತವೆ. ಸಮಾನವಾಯುವು ಶರೀರದ ನಡುವೆ ಸೇರಿಕೊಂಡಿದೆ. ಇದರ ಬಲದಿಂದಲೇ ಇಂದ್ರಿಯಗಳು ತಮ್ಮ ತಮ್ಮ ಕ್ರಿಯೆಗಳನ್ನು ನಡೆಸುತ್ತವೆ.
ಬಸ್ತಿಮೂಲಂ ಗುದಂ ಚೈವ ಪಾವಕಂ ಚ ಸಮಾಶ್ರಿತಃ |
ವಹನ್ಮೂತ್ರಂ ಪುರೀಷಂ ಚಾಪ್ಯಪಾನಃ ಪರಿವರ್ತತೇ ॥ 6 ॥
ಅಪಾನವೆಂಬ ವಾಯುವು ನಾಭಿಯ ಕೆಳಭಾಗದಲ್ಲಿ ಗುದಪ್ರದೇಶವನ್ನು ಆಶ್ರಯಿಸಿಕೊಂಡು ಅಲ್ಲಿರುವ ಅಗ್ನಿಯನ್ನಾಶ್ರಯಿಸಿ ದೇಹದ ಕಶ್ಮಲ, ಜಲ, ಮಲಗಳನ್ನು ಹೊರಗೆ ಬೀಳುವಂತೆ ಪ್ರೇರಿಸುತ್ತದೆ.
ಪ್ರಯತ್ನೇ ಕರ್ಮಣಿ ಬಲೇ ಯ ಏಕಸ್ತ್ರಿಷು ವರ್ತತೇ |
ಉದಾನ ಇತಿ ತಂ ಪ್ರಾಹುರಧ್ಯಾತ್ಮವಿದುಷೋ ಜನಾಃ ॥ 7 ॥
ಉದಾನವೆಂಬ ವಾಯುವು ಶರೀರದಲ್ಲಿ ಪ್ರಯತ್ನ, ಕರ್ಮ, ಬಲ ಎಂಬ ಮೂರು ಕಾರ್ಯಗಳಲ್ಲಿ ಒಂದೊಂದಕ್ಕೂ ಪ್ರೇರಕವೆಂದು ಶರೀರ ಶಾಸ್ತ್ರಜ್ಞರು ಹೇಳುತ್ತಾರೆ.
ಸಂಧಿಷ್ವಪಿ ಚ ಸರ್ವೇಷು ಸನ್ನಿವಿಷ್ಟಸ್ತಥಾನಿಲಃ |
ಶರೀರೇಷು ಮನುಷ್ಯಾಣಾಂ ವ್ಯಾನ ಇತ್ಯುಪದಿಶ್ಯತೇ ॥ 8 ॥
ವ್ಯಾನವೆಂಬ ವಾಯುವು ಪ್ರಾಣಿಶರೀರಗಳ ಒಂದೊಂದು ಕೀಲುಗಳಲ್ಲಿಯೂ ಪ್ರವೇಶಿಸಿ ವರ್ತಿಸತಕ್ಕದ್ದು.
ವ್ಯಾಖ್ಯಾನ ವಿಶೇಷ 1. ಚರ್ಮ, ರಕ್ತ, ಮಾಂಸ, ಮೇಧಸ್ಸು, ಮಜ್ಜೆ, ಅಸ್ಥಿ, ಶುಕ್ಲ ಎಂಬ ಸಪ್ತಧಾತುಗಳು ವಾತ, ಪಿತ್ತ, ಕಫ ಎಂಬ ಮೂರು ದೋಷಗಳು.
2. ವಾತ, ಪಿತ್ತ, ಕಫ ಎಂಬ ಮೂರು ದೋಷಗಳಲ್ಲಿ ರಕ್ತದ ಮಲವು ಕಫ ಎಂದು ಕರೆಸಿಕೊಳ್ಳುತ್ತದೆ. ಪಿತ್ತವು ಮಾಂಸದ ಮಲ. ಮೇಧಸ್ಸಿನ ಮಲ ಬೆವರು. ಎಲುಬಿನ ಮಲ ಕೂದಲು, ಉಗುರು ಮುಂತಾದವು ಎಂದು ಚರಕ ಸಂಹಿತೆಯಲ್ಲಿದೆ.
ಧಾತುಷ್ವಗ್ನಿಸ್ತು ವಿತತಃ ಸಮಾನೇನ ಸಮೀರಿತಃ |
ರಸಾನ್ ಧಾತೂಂಶ್ಚ ದೋಷಾಂಶ್ಚ ವರ್ತಯನ್ನವತಿಷ್ಠತಿ ॥ 9 ॥
ಅಗ್ನಿಯು ಸಮಾನವೆಂಬ ವಾಯುವಿನಿಂದ ಪ್ರೇರಿತವಾಗಿ ಅವುಗಳಲ್ಲಿ ವ್ಯಾಪಿಸಿ ಅನ್ನರಸಗಳನ್ನು ಪಾಕ ಮಾಡುವುದು. ಅವುಗಳಲ್ಲಿರುವ ಸಾರಾಸಾರಗಳನ್ನು ಬೇರ್ಪಡಿಸಿ ಸಪ್ತಧಾತುಗಳಿಗೆ ಬೇಕಾದ ಸಾರವನ್ನು ಒದಗಿಸಿ ಬೇಡವಾದ ಅಸಾರ ಭಾಗಗಳನ್ನು ಪ್ರತ್ಯೇಕಿಸುವುದು ಅದರ ವ್ಯಾಪಾರವಾಗಿದೆ.
ಅಪಾನಪ್ರಾಣಯೋರ್ಮಧ್ಯೇ ಪ್ರಾಣಾಪಾನಸಮಾಹಿತಃ |
ಸಮನ್ವಿತಃ ಸ್ವಧಿಷ್ಠಾನಃ ಸಮ್ಯಕ್ಪಚತಿ ಪಾವಕಃ ॥ 10 ॥
ಪ್ರಾಣಾಪಾನಗಳ ನಡುವೆ ಎಂದರೆ ನಾಭಿಪ್ರದೇಶದಲ್ಲಿರುವ ಅಗ್ನಿಯು ಆ ಎರಡು ವಾಯುಗಳ ಸಹಾಯದಿಂದ ಆಹಾರವನ್ನು ಪಚನವಾಗುವಂತೆ ಮಾಡುತ್ತದೆ.
ಆಸ್ಯಂ ಹಿ ಪಾಯುಸಂಯುಕ್ತಮಂತೇ ಸ್ಯಾದ್ಗುದಸಂಜ್ಞಿತಮ್ |
ಸ್ರೋತಸೋಽಸ್ಮಾತ್ ಪ್ರಜಾಯಂತೇ ಸರ್ವಸ್ರೋತಾಂಸಿ ದೇಹಿನಾಮ್ ॥
ಬಾಯಿಂದ ಗುದದ್ವಾರದವರೆಗೆ ಒಂದು ನಾಳವಿದೆ. ಆ ನಾಳವೇ ಪ್ರಾಣವಾಯುವು ಸಂಚರಿಸುವ ಮಾರ್ಗವು. ಇದರ ತಳಭಾಗವೇ

ಗುದವೆಂದು ಕರೆಸಿಕೊಳ್ಳುತ್ತದೆ. ಬಾಯಲ್ಲಿ ಉತ್ಪನ್ನವಾಗುವ ಜೊಲ್ಲುರಸದ ಜಲಪ್ರವಾಹವು ದೇಹದಲ್ಲಿರುವ ನಾಡಿಗಳ ಪ್ರತಿಸಂಧಿಗಳಲ್ಲಿಯೂ ಹರಿಯುತ್ತದೆ. ಕ್ಷಣಕ್ಷಣಗಳಲ್ಲಿಯೂ ಉತ್ಪನ್ನವಾಗುವ ಈ ರಸದಿಂದಲೇ ಸಮಸ್ತ ನಾಡಿಗಳು ಚೈತನ್ಯವನ್ನು ಹೊಂದಿರುತ್ತವೆ.

ಪ್ರಾಣಾನಾಂ ಸನ್ನಿಪಾತಾಚ್ಚ ಸನ್ನಿಪಾತಃ ಪ್ರಜಾಯತೇ |
ಊಷ್ಮಾ ಚಾಗ್ನಿರಿತಿ ಜ್ಞೇಯೋ ಯೋಽನ್ನಂ ಪಚತಿ ದೇಹಿನಾಮ್ ॥12॥

ಪ್ರಾಣವಾಯುವು ಸಮಸ್ತ ನಾಡಿಗಳಲ್ಲಿಯೂ ಪ್ರವೇಶಿಸಿ ಎಲ್ಲವನ್ನೂ ಏಕೀಕರಿಸುತ್ತದೆ. ಪ್ರಾಣವಾಯುವಿನಲ್ಲಿಯೇ ಸನ್ನಿಹಿತವಾಗಿರುವ ಅಗ್ನಿಯು ಉಷ್ಣವೆಂದು ಕರೆಯಲ್ಪಟ್ಟು ಅದೇ ಅನ್ನವನ್ನು ಪಕ್ವವಾಗುವಂತೆ ಮಾಡುತ್ತದೆ.

ಅಗ್ನಿವೇಗವಹಃ ಪ್ರಾಣೋ ಗುದಾಂತೇ ಪ್ರತಿಹನ್ಯತೇ |
ಸ ಊರ್ಧ್ವಮಾಗಮ್ಯ ಪುನಃ ಸಮುತ್ಕ್ಷಿಪತಿ ಪಾವಕಮ್ ॥ 13 ॥

ಈ ಅಗ್ನಿವೇಗದ ಬಲದಿಂದ ಪ್ರಾಣವಾಯುವು ತಲೆಯಿಂದ ಗುದದ್ವಾರದವರೆಗೆ ಸಂಚರಿಸಿ ಪುನಃ ಮೇಲ್ಭಾಗದಲ್ಲಿ ತಿರುಗಿ ಬರುತ್ತದೆ.

ಪಕ್ವಾಶಯಸ್ತ್ವಧೋ ನಾಭೇರೂರ್ಧ್ವಮಾಮಾಶಯಃ ಸ್ಥಿತಃ |
ನಾಭಿಮಧ್ಯೇ ಶರೀರಸ್ಯ ಸರ್ವೇ ಪ್ರಾಣಾಃ ಸಮಾಹಿತಾಃ ॥ 14 ॥

ಬಳಿಕ ತನ್ನಲ್ಲಿರುವ ಆ ಅಗ್ನಿಯನ್ನು ಕೆಳಕ್ಕೆ ದೂಡುವುದು, ನಾಭಿಯ ಕೆಳಗೆ ಆಹಾರವನ್ನು ಪಕ್ವಮಾಡುವ ಪಕ್ವಾಶಯ ಇದೆ. ಜಠರಾಗ್ನಿಯಿಂದ ಹಿಟ್ಟಿನಂತೆ ಮಾಡಲ್ಪಟ್ಟ ಕಶ್ಮಲರೂಪವಾದ ಮಲವನ್ನು ಗುದಪ್ರದೇಶಕ್ಕೆ ಕೊಂಡೊಯ್ಯುತ್ತದೆ. ಅದರ ಮೇಲೆ ಆಮಾಶಯವೆಂದು ಕರೆಯಲ್ಪಡುವ ಆಹಾರವನ್ನು ಗ್ರಹಿಸತಕ್ಕ ಸ್ಥಾನವಿದೆ. ನಾಭಿಯ ನಡುಭಾಗದಲ್ಲಿ ಶರೀರಕ್ಕೆ ಬೇಕಾದ ಎಲ್ಲಾ ಪ್ರಾಣಗಳೂ ನೆಲೆಸಿವೆ.

ಪ್ರಸೃತಾ ಹೃದಯಾತ್ ಸರ್ವೇ ತಿರ್ಯಗೂರ್ಧ್ವಮಧಸ್ತಥಾ |
ವಹಂತ್ಯನ್ನರಸಾನ್ನಾಡ್ಯೋ ದಶ ಪ್ರಾಣ್ಯೈಃ ಪ್ರಚೋದಿತಾಃ ॥ 15 ॥

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ ಎಂಬ ಹತ್ತು ಪ್ರಾಣವಾಯುಗಳಿಂದ ಪ್ರೇರಿತಗಳಾಗಿ ದೇಹದೊಳಗಿನ ನಾಡಿಗಳು ಹೃದಯದಿಂದ ನಾನಾ ಭಾಗದಲ್ಲಿ ಹೊರಟು ಎಲ್ಲ ರಸಗಳನ್ನು ಮೇಲಕ್ಕೆ, ಕೆಳಕ್ಕೆ, ಪಾರ್ಶ್ವಗಳಿಗೂ ಸಾಗಿಸುತ್ತವೆ.

ಏಷ ಮಾರ್ಗೋಽಥ ಯೋಗಾನಾಂ ಯೇನ ಗಚ್ಛಂತಿ ತತ್ ಪದಮ್ |
ಜಿತಕ್ಲಮಾಸನಾ ಧೀರಾ ಮೂರ್ಧನ್ಯಾತ್ಮಾನಮಾದಧುಃ ॥ 16 ॥

ಮುಖ್ಯಪ್ರಾಣನು ಯೋಗದ ಮಾರ್ಗಗಳ ಗುರಿಯಾಗಿದ್ದಾನೆ. ಇವನನ್ನು ಆಶ್ರಯಿಸಿಕೊಂಡೇ ಬ್ರಹ್ಮಪದವನ್ನು ಹೊಂದುತ್ತಾರೆ. ಯೋಗಿಗಳು ಎಲ್ಲಾ ಶ್ರಮಗಳನ್ನು ಜಯಿಸಿ ಸುಖ-ದುಃಖಗಳನ್ನು ಸಮವಾಗಿ ಕಾಣುತ್ತಾ ತಮ್ಮ ತಲೆಯಲ್ಲಿ ಭಗವಂತನನ್ನೇ ಚಿಂತಿಸುತ್ತಾ ಇವನ ಅನುಗ್ರಹದಿಂದ ಉತ್ತಮ ಬ್ರಹ್ಮಪದವನ್ನು ಹೊಂದುತ್ತಾರೆ.

ಏವಂ ಸರ್ವೇಷು ವಿಹಿತಃ ಪ್ರಾಣಾಪಾನೇಷು ದೇಹಿನಾಮ್ |
ತಸ್ಮಿನ್ ಸ್ಥಿತೋ ನಿತ್ಯಮಗ್ನಿಃ ಸ್ಥಾಲ್ಯಾಮಿವ ಸಮಾಹಿತಃ ॥ 17 ॥

ಹೀಗೆ ಪ್ರಾಣಿ ಶರೀರದಲ್ಲಿರುವ ಪ್ರಾಣಾಪಾನಾದಿ ವಾಯುಗಳೆಲ್ಲರೂ ಅಗ್ನಿಯಿಂದ ನೆಲೆಗೊಂಡು ಸ್ಥಾಲಿಯಲ್ಲಿ ಕಾಪಾಡಿಕೊಂಡು ಇಟ್ಟಿರುವ ಅಗ್ನಿಯಂತೆ ಯಾವಾಗಲೂ ಪ್ರಕಾಶಿಸುತ್ತಿರುತ್ತಾರೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕಾದಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.

* * * * *

## ಹನ್ನೆರಡನೆಯ ಅಧ್ಯಾಯ

ಭರದ್ವಾಜರು ದೇಹಾತಿರಿಕ್ತ ಆತ್ಮನಿಲ್ಲ ಎಂಬ ಪಕ್ಷವನ್ನು ಆಶ್ರಯಿಸಿ
ಭೃಗುಋಷಿಗಳನ್ನು ಕುರಿತು ಪ್ರಶ್ನಿಸಿದುದು.

ಭರದ್ವಾಜಃ

ಯದಿ ಪ್ರಾಣಾಯತೇ ವಾಯುರ್ವಾಯುರೇವ ವಿಚೇಷ್ಟತೇ |
ಶ್ವಸಿತ್ಯಾಭಾಷತೇ ಚೈವ ತಸ್ಮಾಜ್ಜೀವೋ ನಿರರ್ಥಕಃ ॥ 1 ॥

ಭರದ್ವಾಜ ಭೃಗುಋಷಿಗಳೇ, ಸಮಸ್ತ ಜೀವರನ್ನು ಜೀವಿಸುವಂತೆ ಮಾಡುವವನು ಪ್ರಾಣವಾಯುವು. ಪ್ರಾಣವುಳ್ಳ ಚೇತನರನ್ನು ಚೇಷ್ಟೆ ಹೊಂದುವಂತೆ ಮಾಡುವುದು, ಉಸಿರಾಡುವುದು, ಮಾತನಾಡುವುದು ಈ ಎಲ್ಲ ಕಾರ್ಯಗಳೆಲ್ಲವೂ ಪ್ರಾಣನಿಂದಲೇ ನಡೆಯುವುದಾದರೆ ಜೀವ ಎಂಬ ಈ ದೇಹದಲ್ಲಿರುವ ವಸ್ತುವು ವ್ಯರ್ಥವಲ್ಲವೆ?

ಯದ್ಯೂಷ್ಮಭಾವ ಆಗ್ನೇಯೋ ವಹ್ನಿನಾ ಪಚ್ಯತೇ ಯದಿ |
ಅಗ್ನಿರ್ಜರಯತೇ ಚೈವ ತಸ್ಮಾಜ್ಜೀವೋ ನಿರರ್ಥಕಃ ॥ 2 ॥

ದೇಹದ ಉಷ್ಣವೇ ಅಗ್ನಿರೂಪವಾಗಿದ್ದು ಅದು ಆಹಾರವನ್ನು ಪಚನ ಮಾಡಿ ಜೀರ್ಣ ಮಾಡುತ್ತದೆ. ಅಗ್ನಿಯೇ ಜೀರ್ಣ ಮಾಡುವುದಾದರೆ ಆ ಕಾರಣದಿಂದಲೇ ಜೀವ ಎಂಬುದು ನಿರರ್ಥಕ ಎನಿಸುವುದಿಲ್ಲವೇ?

ಜಂತೋಃ ಪ್ರೀಣಯಮಾಣಸ್ಯ ಜೀವೋ ನೈವೋಪಲಭ್ಯತೇ |
ವಾಯುರೇವ ಜಹಾತ್ಯೇನಮೂಷ್ಮಭಾವಶ್ಚ ನಶ್ಯತಿ ॥ 3 ॥

ಜೀವ ಸಾಯುವಾಗ ಅದರ ದೇಹದಿಂದ ಜೀವನು ಬಿಟ್ಟುಹೋಗುವುದನ್ನು ನಾವು ನೋಡೆವು. ಉಸಿರಾಟ ನಿಂತ ಕ್ರಮವನ್ನು ತಿಳಿದು ಈ

ದೇಹವನ್ನು ಪ್ರಾಣವಾಯುವು ಬಿಟ್ಟು ಹೋಯಿತು ಎಂದು ತಿಳಿಯಬಹುದು. ಆದ್ದರಿಂದ ಪ್ರಾಣ ಹೋಯಿತು ಎಂದೇ ಹೇಳುವ ವಾಡಿಕೆಯಿದೆ. ಕೂಡಲೇ ದೇಹದಲ್ಲಿರುವ ಬಿಸಿ ಅಂಶವು ಶಾಂತವಾಗುವುದನ್ನು ತಿಳಿಯುತ್ತೇವೆ. ದೇಹವು ತಣ್ಣಗಾಗುವುದು ಅನುಭವಕ್ಕೆ ಬರುತ್ತದೆ.

ಯದಿ ವಾತೋಪಮೋ ಜೀವಃ ಸಂಶ್ಲೇಷೋ ಯದಿ ವಾಯುನಾ |
ವಾಯುಮಂಡಲವದ್ದೃಶ್ಯೋ ಗಚ್ಛೇತ್ ಸಹ ಮರುದ್ಗಣೈಃ ॥ 4 ॥

ಈ ಜೀವವೆಂಬುದು ಪ್ರಾಣನಿಗಿಂತ ಬೇರೆಯಾಗಿದೆಯಾ? ಅಥವಾ ಪ್ರಾಣದ ಸಂಬಂಧವನ್ನು ಹೊಂದಿಕೊಂಡು ಇರುವುದೋ? ಅದು ಪ್ರತ್ಯೇಕವಾಗಿದ್ದರೆ ಹೊರಗೆ ಹೋಗುವಾಗ ವಾಯುಮಂಡಲದಲ್ಲಿ ಸುಳಿ-ಗಾಳಿಯಂತೆ ಪ್ರತ್ಯೇಕವಾಗಿ ಕಾಣಿಸಬೇಕಲ್ಲವೇ?

ಶ್ಲೇಷೋ ಯದಿ ಚ ವಾತೇನ ಯದಿ ತಸ್ಮಾತ್ ಪ್ರಣಶ್ಯತಿ |
ಮಹಾರ್ಣವವಿಮುಕ್ತತ್ವಾದನ್ಯತ್ ಸಲಿಲಭಾಜನಮ್ ॥ 5 ॥
ಕೂಪೇ ವಾ ಸಲಿಲಂ ದದ್ಯಾತ್ ಪ್ರದೀಪಂ ವಾ ಹುತಾಶನೇ |
ತನ್ನಶ್ಯತ್ಯುಭಯಂ ತದ್ವಜ್ಜೀವೋ ವಾತಾನಲಾತ್ಮಕಃ |
ಪ್ರಕ್ಷಿಪ್ತಂ ನಶ್ಯತಿ ಕ್ಷಿಪ್ರಂ ಯಥಾ ನಶ್ಯತ್ಯಸೌ ತಥಾ ॥ 6 ॥

ಒಂದು ವೇಳೆ ಪ್ರಾಣವಾಯುವಿನ ಜೊತೆಗೇ ಜೀವನೂ ಸೇರಿಕೊಂಡಿದ್ದಾನೆ ಎಂದಾದಲ್ಲಿ ಪ್ರಾಣವಾಯುವು ನಶಿಸಿದೊಡನೆ ಜೀವವು ನಾಶಹೊಂದಿರಬೇಕಲ್ಲವೆ? ಬಾವಿಯ ನೀರಿನಲ್ಲಿ ಬೆರೆತ ಇದರ ಜಲವೂ, ಅಗ್ನಿಯಲ್ಲಿ ಸೇರಿದ ದೀಪಜ್ವಾಲೆಯು ಅವುಗಳ ಜೊತೆಯಲ್ಲಿ ಬೆರೆತು ಅವುಗಳ ಜೊತೆಯಲ್ಲೇ ನಾಶ ಹೊಂದುವಂತೆ ಜೀವನು ಪ್ರಾಣವಾಯುವಿನ ಜೊತೆ ಬೆರೆತು ಅವು ನಾಶವಾದಾಗ ಜೀವನು ನಾಶವಾಗಬೇಕಾಗುತ್ತದೆ. ಸಮುದ್ರದಿಂದ ಹೊರಬಂದ ನೀರು ನದಿ, ತಟಾಕ ಮೊದಲಾದವುಗಳನ್ನು ತುಂಬುತ್ತದೆ. ಅದರಂತೆ ಮಹಾವಾಯುವಿನ ಒಂದೊಂದು ಅಂಶಗಳು ನಾನಾದೇಹವನ್ನು ಪ್ರವೇಶಿಸಿ ಜೀವಭಾವವನ್ನು ಹೊಂದುತ್ತವೆ ಎಂದು ಹೇಳಬಾರದೇಕೆ? ಸಮುದ್ರದಲ್ಲಿ ಮುಳುಗಿಸಿದ ನೀರಿನ ಪಾತ್ರೆಯು ಅದರೊಳಗೆ ನೀರನ್ನು ಮುಳುಗಿಸಿದಾಗ ಮಾತ್ರ ನೀರಿನಲ್ಲಿದ್ದು ಮೇಲೆ ತೆಗೆದಾಗ ಬೇರೆಯಾಗಿ ಕಾಣುವಂತೆ ಜೀವನು ಪ್ರಾಣಾಗ್ನಿಗಿಂತ ಬೇರೆಯಾಗಿ ಕಾಣಿಸಬೇಕಲ್ಲವೇ?

ಪಂಚಸಾಧಾರಣೇ ಹ್ಯಸ್ಮಿನ್ ಶರೀರೇ ಜೀವಿತಂ ಕುತಃ |
ಯೇಷಾಮನ್ಯತರತ್ಯಾಗಾಚ್ಚತುರ್ಣಾಂ ನಾಸ್ತಿ ಸಂಗ್ರಹಃ ॥ 7 ॥

ಪಂಚಭೂತಗಳಿಂದ ನಿರ್ಮಿತವಾಗಿರುವ ಈ ಶರೀರದಲ್ಲಿ ಜೀವಾತ್ಮ ಎಂದರೆ ಯಾವುದು? ದೇಹದೊಳಗಿನ ಪಂಚಭೂತಗಳಲ್ಲಿ ಒಂದು ಅಗಲಿ ಹೋದರೂ ಉಳಿದ ನಾಲ್ಕಕ್ಕೂ ಅಲ್ಲಿ ಅಸ್ತಿತ್ವವು ಇರುವುದಿಲ್ಲ. ಶರೀರರೂಪದ ಸಂಗ್ರಹವು, ಸಮುದಾಯವು ನಾಶ ಹೊಂದುತ್ತದೆ.

ನಶ್ಯಂತ್ಯಾಪೋ ಹ್ಯನಾಹಾರಾದ್ ವಾಯುರುಚ್ಛ್ವಾಸನಿಗ್ರಹಾತ್ |
ನಶ್ಯತೇ ಕೋಷ್ಠಭೇದಾತ್ ಖಮಗ್ನಿರ್ನಶ್ಯತ್ಯಭೋಜನಾತ್ ॥ 8 ॥

ಆಹಾರವಿಲ್ಲದೆ ದೇಹದಲ್ಲಿರುವ ನೀರು ಒಣಗಿ ಹೋಗುತ್ತದೆ. ಉಸಿರಿಗೆ ಅಡ್ಡಿಮಾಡಿದಾಗ ದೇಹದಲ್ಲಿರುವ ಶ್ವಾಸವಾಯುವು ನಿಂತುಹೋಗುತ್ತದೆ. ಉದರವನ್ನು ಸೀಳುವುದರಿಂದ ಆಕಾಶತತ್ತ್ವವು ನಾಶವಾಗುತ್ತದೆ. ಆಹಾರವಿಲ್ಲದಿದ್ದಾಗ ಅಗ್ನಿಗೆ ಆಶ್ರಯವಿಲ್ಲದೆ ಅಗ್ನಿತತ್ತ್ವವು ನಾಶವಾಗುತ್ತದೆ.

ವ್ಯಾಧಿವ್ರಣಪರಿಕ್ಲೇಶೈರ್ಮೇದಿನೀ ಚೈವ ಶೀರ್ಯತೇ |
ಪೀಡಿತೇಽನ್ಯತರೇ ಹ್ಯೇಷಾಂ ಸಂಘಾತೋ ಯಾತಿ ಪಂಚಧಾ ॥ 9 ॥

ರೋಗ-ವ್ರಣಾದಿಗಳಿಂದ ಪೃಥಿವಿ ಎಂಬ ತತ್ತ್ವವು ದೇಹದಲ್ಲಿ ನಾಶವನ್ನು ಹೊಂದುತ್ತದೆ. ಪಂಚಭೂತಗಳಲ್ಲಿ ಒಂದಕ್ಕೆ ಅಪಾಯ ಒದಗಿದರೂ ಪಂಚಭೂತಗಳ ಕಟ್ಟು ನಾಶವಾಗಿ ದೇಹವು ಮೃತಿಯನ್ನು ಹೊಂದುತ್ತದೆ.

ತಸ್ಮಿನ್ ಪಂಚತ್ವಮಾಪನ್ನೇ ಜೀವಃ ಕಿಮನುಧಾವತಿ |
ಕಿಂ ವೇದಯತಿ ವಾ ಜೀವಃ ಕಿಂ ಶೃಣೋತಿ ಬ್ರವೀತಿ ವಾ ॥ 10 ॥

ಹೀಗೆ ಪಂಚಭೂತಗಳು ಪ್ರತ್ಯೇಕಿಸಿದಾಗ ಜೀವನು ಮೃತಿಯನ್ನು ಹೊಂದಿದಾಗ ಜೀವನು ಯಾವುದನ್ನು ಅನುಸರಿಸಿಕೊಂಡು ಹೋಗುತ್ತಾನೆ? ಏನನ್ನು ತಿಳಿಯುತ್ತಾನೆ? ಕೇಳುವುದಾದರೂ ಯಾವುದು? ಏನು ನುಡಿಯುತ್ತಾನೆ?

ಏಷಾ ಗೌಃ ಪರಲೋಕಸ್ಥಂ ತಾರಯಿಷ್ಯತಿ ಮಾಮಿತಿ |
ಯೋ ದತ್ವಾ ಮ್ರಿಯತೇ ಜಂತುಃ ಸಾ ಗೌಃ ಕಂ ತಾರಯಿಷ್ಯತಿ ॥ 11॥

ಬ್ರಾಹ್ಮಣನೊಬ್ಬನಿಗೆ ಒಂದು ಗೋವನ್ನು ದಾನ ಮಾಡುವಾಗ ಆ ಗೋವು ಪರಲೋಕದಲ್ಲಿ ತನ್ನನ್ನು ಉದ್ಧರಿಸಲಿ ಎಂದು ಹೇಳುತ್ತಾರೆ. ಹಾಗೆ ದಾನ ಮಾಡಲ್ಪಟ್ಟ ಹಸುವು ತಾನೇ ಮೃತ್ಯುವನ್ನು ಹೊಂದುವಾಗ ಬೇರೆಯವರನ್ನು ಉದ್ಧರಿಸುವುದು ಹೇಗೆ?

ಗೌಶ್ಚ ಪ್ರತಿಗ್ರಹೀತಾ ಚ ದಾತಾ ಚೈವ ಸಮಂ ಯದಾ |
ಇಹೈವ ವಿಲಯಂ ಯಾಂತಿ ಕುತಸ್ತೇಷಾಂ ಸಮಾಗಮಃ ॥ 12 ॥

ಗೋವನ್ನು ಕೊಟ್ಟವನು, ತೆಗೆದುಕೊಂಡವನು, ಗೋವು ಈ ಮೂವರು ಮೃತ ಹೊಂದುವುದರಲ್ಲಿ ಸಮಾನರೇ ಆಗಿರುವಾಗ ಅವರಿಗೆ ಪರಸ್ಪರ ಸಂಬಂಧ ಎಲ್ಲಿರುತ್ತದೆ?

ವಿಹಗೈರುಪಯುಕ್ತಸ್ಯ ಶೈಲಾಗ್ರಾತ್ ಪತಿತಸ್ಯ ವಾ |
ಅಗ್ನಿನಾ ಚೋಪಯುಕ್ತಸ್ಯ ಕುತಃ ಸಂಜೀವನಂ ಪುನಃ ॥ 13 ॥
ಛಿನ್ನಸ್ಯ ಯದಿ ವೃಕ್ಷಸ್ಯ ನ ಮೂಲಂ ಪ್ರತಿರೋಹತಿ |
ಬೀಜಾನ್ಯಸ್ಯ ಪ್ರವರ್ತಂತೇ ಮೃತಃ ಕ್ವ ಪುನರೇಷ್ಯತಿ ॥ 14 ॥

ಮೃಗ-ಪಕ್ಷಿಗಳಿಂದ ತಿನ್ನಲ್ಪಟ್ಟ ದೇಹವುಳ್ಳ ವ್ಯಕ್ತಿಯು, ಬೆಟ್ಟದಿಂದ ಕೆಳಗೆ ಬಿದ್ದು ತಲೆ ಒಡೆದುಕೊಂಡು ಸತ್ತವನು, ಬೆಂಕಿಯಲ್ಲಿ

ಬಿದ್ದವನು ಇವರೆಲ್ಲರಿಗೂ ದೇಹವು ಹೋದ ಮೇಲೆ ಪುನಃ ಎಲ್ಲಿಂದ ದೇಹವು ಬರುತ್ತದೆ? ಒಂದು ಗಿಡದ ಬೇರನ್ನೇ ಸುಟ್ಟುಹಾಕಿದರೂ ಆ ಗಿಡವು ಮತ್ತೆ ಹುಟ್ಟದಿದ್ದರೂ ಆ ಗಿಡದ ಶೇಷವಾದ ಬೀಜದಿಂದ ಇನ್ನೊಂದು ಗಿಡವು ಹುಟ್ಟಬಹುದು. ಆದರೆ ಮೃತದೇಹವು ನಿಶ್ಶೇಷವಾಗಿ ದಗ್ಧವಾದ ಮೇಲೆ ತಿರುಗಿ ಹುಟ್ಟುವುದು ಎಂದರೆ ಏನು?

ಬೀಜಮಾತ್ರಂ ಪುರಾ ಸೃಷ್ಟಂ ಯದೇತತ್ ಪರಿವರ್ತತೇ |
ಮೃತಾ ಮೃತಾಃ ಪ್ರಣಶ್ಯಂತಿ ಬೀಜಾದ್ ಬೀಜಂ ಪ್ರವರ್ತತೇ ॥ 15 ॥

ಮೊದಲು ಬೀಜವು ಸೃಷ್ಟಿಸಲ್ಪಟ್ಟು ಆ ಬೀಜಗಳೇ ತಿರುಗಿ ತಿರುಗಿ ಮೊರೆತು ಪ್ರಪಂಚವಾಗಿ ಕಾಣಿಸುತ್ತಿದೆ. ಆದರೆ ಮೃತನಾದವನು ತಿರುಗಿ ಬರುವುದೆಂದರೆ ಹೇಗೆ ಎನ್ನುವುದು ಅರ್ಥವಾಗುತ್ತಿಲ್ಲ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ದ್ವಾದಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.

* * * * *

ಹದಿಮೂರನೆಯ ಅಧ್ಯಾಯ

ಭೃಗುವು ಶರೀರಕ್ಕಿಂತಲೂ ಬೇರೆಯಾದ ಜೀವನಿದ್ದಾನೆಂಬುದನ್ನು
ಯುಕ್ತಿಬದ್ಧವಾಗಿ ಪ್ರತಿಪಾದಿಸಿದುದು.

ಭೃಗುಃ

ನ ಪ್ರಣಾಶೋಽಸ್ತಿ ಜೀವಾನಾಂ ದತ್ತಸ್ಯ ಚ ಕೃತಸ್ಯ ಚ |
ಯಾತಿ ದೇಹಾಂತರಂ ಪ್ರಾಣೀ ಶರೀರಂ ತು ವಿಶೀರ್ಯತೇ ॥ 1 ॥

ಭೃಗು ಭರದ್ವಾಜರೇ, ಜೀವಾತ್ಮನಿಗೆ ನಾಶವಿಲ್ಲ. ಕೊಟ್ಟ ದಾನಕ್ಕೂ ನಾಶವಿಲ್ಲ. ನಡೆಸಿದ ಕರ್ಮಗಳಿಗೂ ಕೊನೆಯಿಲ್ಲ. ಸಾಯುವಾಗ ಆಯಾ ಶರೀರವು ಮಾತ್ರ ನಾಶ ಹೊಂದುತ್ತದೆ. ಜೀವನು ಬೇರೆ ಶರೀರವನ್ನು ಪ್ರವೇಶಿಸುತ್ತಾನೆ.

ನ ಶರೀರಾಶ್ರಿತೋ ಜೀವಸ್ತಸ್ಮಿನ್ನಷ್ಟೇ ಪ್ರಣಶ್ಯತಿ |
ಯಥಾ ಸಮಿತ್ಸು ದಗ್ಧಾಸು ನ ಪ್ರಣಶ್ಯತಿ ಪಾವಕಃ ॥ 2 ॥

ಸೌದೆಯು ಉರಿದುಹೋದರೂ ಆ ಕಟ್ಟಿಗೆಯಲ್ಲಿರುವ ಅಗ್ನಿಯು ನಾಶ ಹೊಂದುವುದಿಲ್ಲ. ಅದರಂತೆ ಶರೀರವು ನಾಶ ಹೊಂದಿದರೂ ಆ ಶರೀರವನ್ನು ಆಶ್ರಯಿಸಿದ ಜೀವನು ನಾಶಹೊಂದುವುದಿಲ್ಲ. ಸಮಿತ್ತುಗಳು ಸುಟ್ಟಾಗ ಸಮಿತ್ತಿನಲ್ಲಿರುವ ವಾಯುವಿನಿಂದ ಕೊಂಡೊಯ್ಯಲ್ಪಟ್ಟ ಅಗ್ನಿಯು ಸೂಕ್ಷ್ಮರೂಪದಿಂದ ಆಕಾಶವನ್ನು ಕುರಿತು ಹೋಗುವಂತೆ ಈ ದೇಹವನ್ನು ತೊರೆದ ಜೀವನು ಮತ್ತೊಂದು ಶರೀರವನ್ನು ಹೊಂದುತ್ತಾನೆ ಎಂದು ಅಭಿಪ್ರಾಯ.

ಭರದ್ವಾಜಃ

ಅಗ್ನೇರ್ಯಥಾ ತಥಾ ತಸ್ಯ ಯದಿ ನಾಶೋ ನ ವಿದ್ಯತೇ |
ಇಂಧನಸ್ಯೋಪಯೋಗಾಂತೇ ಸ ಚಾಗ್ನಿರ್ನೋಪಲಭ್ಯತೇ ॥ 3 ॥

ಭರದ್ವಾಜ ಕಟ್ಟಿಗೆಯು ಉರಿದು ಹೋದಮೇಲೆ ಅದರಲ್ಲಿದ್ದ ಅಗ್ನಿಯು ಕಾಣಿಸುವುದಿಲ್ಲ. ಆದ್ದರಿಂದ ಅಗ್ನಿಯೂ ಕಟ್ಟಿಗೆಯಿಂದ ನಾಶವಾಗಿದೆ ಎಂದು ಏಕೆ ಹೇಳಬಾರದು?

ನಶ್ಯತೀತ್ಯೇವ ಜಾನಾಮಿ ಶಾಂತಮಗ್ನಿಮನಿಂಧನಮ್ |
ಗತಿರ್ಯಸ್ಯ ಪ್ರಮಾಣಂ ವಾ ಸಂಸ್ಥಾನಂ ವಾ ನ ದೃಶ್ಯತೇ ॥ 4 ॥

ಅಗ್ನಿಯು ಕಟ್ಟಿಗೆಯಿಂದ ಆಕಾಶಕ್ಕೆ ಹೋಗುವುದು ನಮಗೆ ತಿಳಿಯುವುದಿಲ್ಲ. ಅದು ಕಟ್ಟಿಗೆಯಲ್ಲಿಯೇ ಇದೆ ಎಂಬುದಕ್ಕೆ ಪ್ರಮಾಣವಿಲ್ಲ. ಆ ಅಗ್ನಿಯಿದ್ದ ಸ್ಥಳವು ನಮಗೆ ತಿಳಿಯುವುದಿಲ್ಲ. ಹೀಗಿದ್ದಮೇಲೆ ನಷ್ಟವಾಗಿದೆ ಎಂದೇ ತಿಳಿಯಬೇಕಲ್ಲವೇ?

ಭೃಗುಃ

ಸಮಿಧಾಮುಪಯೋಗಾಂತೇ ಸ್ವಲಿಂಗೈರುಪಲಭ್ಯತೇ |
ಆಕಾಶಾನುಗತತ್ವಾದ್ಧಿ ದುರ್ಗ್ರಹಃ ಸ ನಿರಾಶ್ರಯಃ ॥ 5 ॥

ಭೃಗು ಭರದ್ವಾಜರೇ, ನೀರು ತಿಳಿದಂತಲ್ಲ. ಜೀವನಿಗೆ ನಾಶವಿರುವುದಿಲ್ಲ. ಕಟ್ಟಿಗೆಯೊಳಗಿನ ಅಗ್ನಿಗೂ ನಾಶವಿಲ್ಲ. ಕಟ್ಟಿಗೆಯ ಮಥನದಿಂದ ಕಟ್ಟಿಗೆಯಲ್ಲಿ ಲೀನವಾದ ಅಗ್ನಿಯು ಅಭಿವ್ಯಕ್ತಿಯನ್ನು ಹೊಂದುತ್ತದೆ. ಆ ಅಗ್ನಿಗೆ ಬೇರೆ ಆಶ್ರಯಸ್ಥಾನವಿಲ್ಲದ್ದರಿಂದ ಅದು ವಾಯುವಿನ ಜೊತೆಗೆ ಆಕಾಶದಲ್ಲಿ ಸೇರಿ ಅದೃಶ್ಯವಾಗಿರುತ್ತದೆ. ಅದನ್ನು ಕಂಡುಕೊಳ್ಳಲು ನಮ್ಮಿಂದ ಸಾಧ್ಯವಿಲ್ಲ.

ತಥಾ ಶರೀರಸಂತ್ಯಾಗೇ ಜೀವೋ ಹ್ಯಾಕಾಶವತ್ ಸ್ಥಿತಃ |
ನ ಗೃಹ್ಯತೇ ಸುಸೂಕ್ಷ್ಮತ್ವಾದ್ಯಥಾ ಜ್ಯೋತಿರ್ನ ಸಂಶಯಃ ॥ 6 ॥

ಇದರಂತೆ ಜೀವಾತ್ಮನು ಶರೀರವನ್ನು ತೊರೆದಮೇಲೆ ಆಕಾಶವನ್ನು ಸೇರುತ್ತಾನೆ. ಆ ಜೀವನು ಸೂಕ್ಷ್ಮನಾದುದರಿಂದ ಅಗ್ನಿಯಂತೆ ಕಣ್ಣಿಗೆ ಕಾಣಿಸಲಾರನು.

ಪ್ರಾಣಾನ್ ಧಾರಯತೇ ಹ್ಯಗ್ನಿಃ ಸ ಜೀವ ಉಪಧೀಯತೇ |
ವಾಯುಸಂಧಾರಣೋ ಹ್ಯಗ್ನಿರ್ನಶ್ಯತ್ಯುಚ್ಛ್ವಾಸನಿಗ್ರಹಾತ್ ॥ 7 ॥

ಇಂದ್ರಿಯಗಳನ್ನು ಧರಿಸುವ ಶಕ್ತಿ ಅಗ್ನಿಯಲ್ಲಿದೆ. ಆ ಅಗ್ನಿಯೇ ಜೀವ ಎಂದು ತಿಳಿದುಕೊ. ಜೀವ ಇದ್ದಾಗಲೇ ಅಗ್ನಿಯು ನಿಶ್ಚಯವಾಗುತ್ತದೆ. ಶರೀರದೊಳಗಿನ ಅಗ್ನಿಯು ಪ್ರಾಣವಾಯುವಿನಿಂದ ಧರಿಸಲ್ಪಟ್ಟಿದೆ. ಆ ವಾಯುವು ನಾಶವಾದೊಡನೆ ಅಗ್ನಿಯೂ ನಾಶವಾಗುತ್ತದೆ.

ತಸ್ಮಿನ್ನಷ್ಟೇ ಶರೀರಾಗ್ನೌ ಶರೀರಂ ತದಚೇತನಮ್ |

ಪತಿತಂ ಯಾತಿ ಭೂಮಿತ್ವಮಯನಂ ತಸ್ಯ ಹಿ ಕ್ಷಿತಿಃ ॥ 8 ॥
ಶರೀರದೊಳಗಿನ ಅಗ್ನಿಯು ನಾಶವಾದ ಕೂಡಲೇ ಶರೀರವು ಅಚೇತನವಾಗಿ ಕೆಳಗೆ ಬಿದ್ದು ಮಣ್ಣಾಗುತ್ತದೆ. ಅಂದರೆ ಪೃಥಿವಿಯಲ್ಲಿ ಸೇರಿಹೋಗುತ್ತದೆ. ಪಾರ್ಥಿವ ಶರೀರಕ್ಕೆ ಪೃಥಿವಿಯೇ ಆಶ್ರಯವು.
ಜಂಗಮಾನಾಂ ಹಿ ಸರ್ವೇಷಾಂ ಸ್ಥಾವರಾಣಾಂ ತಥೈವ ಚ |
ಆಕಾಶಂ ಪವನೋಽಭ್ಯೇತಿ ಜ್ಯೋತಿಸ್ತಮನುಗಚ್ಛತಿ |
ತತ್ರ ತ್ರಯಾಣಾಮೇಕತ್ವಂ ದ್ವಯಂ ಭೂಮೌ ಪ್ರತಿಷ್ಠಿತಮ್ ॥ 9 ॥
ಸ್ಥಾವರ-ಜಂಗಮ ಪ್ರಾಣಿಗಳಲ್ಲಿರುವ ವಾಯುವು ಆಕಾಶದಲ್ಲಿ ಸೇರಿ ಹೋಗುತ್ತದೆ. ಆ ಶರೀರದಲ್ಲಿರುವ ಅಗ್ನಿಯು ವಾಯುವನ್ನೇ ಹಿಂಬಾಲಿಸುತ್ತದೆ. ಆಕಾಶ, ಅಗ್ನಿ, ವಾಯು, ಮೂರು ಒಟ್ಟಾಗಿ ಸೇರಿಕೊಳ್ಳುವ ಸ್ವಭಾವವುಳ್ಳವುಗಳು. ಉಳಿದ ಭೂತಗಳೆರಡು ನೀರು, ಭೂಮಿಗಳು ಭೂಮಿಯ ರೂಪಕ್ಕೆ ದೇಹದಲ್ಲಿರುವ ಪೃಥ್ವಿಭಾಗವು, ಜಲಭಾಗವು ಸೇರಿಹೋಗುತ್ತವೆ.
ಯತ್ರ ಖಂ ತತ್ರ ಪವನಸ್ತತ್ರಾಗ್ನಿರ್ಯತ್ರ ಮಾರುತಃ |
ಅಮೂರ್ತಯಸ್ತೇ ವಿಜ್ಞೇಯಾ ಆಪೋ ಮೂರ್ತಾಸ್ತಥಾ ಕ್ಷಿತಿಃ ॥ 10 ॥
ಎಲ್ಲಿ ಆಕಾಶವಿದೆಯೋ ಅಲ್ಲಿ ವಾಯುವಿದೆ. ವಾಯುವಿರುವ ಸ್ಥಳದಲ್ಲಿ ಅಗ್ನಿ ಇದೆ. ಇವೆರಡು ಅಮೂರ್ತವಾದುದರಿಂದ ಕಣ್ಣಿಗೆ ಕಾಣಿಸವು. ಜಲಭೂತವಸ್ತುಗಳು ಮೂರ್ತವಾದುದರಿಂದ ಕಣ್ಣಿಗೆ ಕಾಣಿಸುತ್ತವೆ.
ಭರದ್ವಾಜಃ
ಯದ್ಯಗ್ನಿಮಾರುತೌ ಭೂಮಿಃ ಖಮಾಪಶ್ಚ ಶರೀರಿಷು |
ಜೀವಃ ಕಿಂಲಕ್ಷಣಸ್ತತ್ರೇತ್ಯೇತದಾಚಕ್ಷ್ವ ಮೇಽನಘ ॥ 11 ॥
ಭರದ್ವಾಜ ಮಹರ್ಷಿಗಳೇ, ಪ್ರಾಣಿಗಳ ಶರೀರದಲ್ಲಿ ಅಗ್ನಿ, ವಾಯು, ಭೂಮಿ, ಆಕಾಶ, ಜಲ ಎಂಬ ಪಂಚಭೂತಗಳೂ ಸೇರಿಕೊಂಡಿರುತ್ತವೆ. ಜೀವನೂ ಆ ಶರೀರದಲ್ಲಿ ಸೇರಿರುವುದಾದರೆ ಆ ಜೀವನ ಲಕ್ಷಣಗಳೇನು ಎಂದು ತಿಳಿಸಿರಿ.
ಪಂಚಾತ್ಮಕೇ ಪಂಚರತೌ ಪಂಚವಿಜ್ಞಾನಸಂಯುತೇ |
ಶರೀರೇ ಪ್ರಾಣಿನಾಂ ಜೀವಂ ಜ್ಞಾತುಮಿಚ್ಛಾಮಿ ಯಾದೃಶಮ್ ॥ 12 ॥
ಪಂಚೇಂದ್ರಿಯಗಳಿಂದ ಕೂಡಿದ, ಪಂಚಭೂತಾತ್ಮಕನಾದ, ಪಂಚೇಂದ್ರಿಯ ವಿಷಯಗಳಿಗಾಗಿ ಆಶಿಸುವ ಶರೀರದಲ್ಲಿ ಜೀವನು ಹೇಗೆ ನೆಲೆಸಿದ್ದಾನೆ ಎಂಬುದನ್ನು ನನಗೆ ತಿಳಿಸಿರಿ.
ಮಾಂಸಶೋಣಿತಸಂಘಾತೇ ಮೇದಃಸ್ನಾಯ್ವಸ್ಥಿಸಂಚಯೇ |
ಭಿದ್ಯಮಾನೇ ಶರೀರೇ ತು ಜೀವೋ ನೈವೋಪಲಭ್ಯತೇ ॥ 13 ॥
ಮಾಂಸ, ರಕ್ತ, ಮೇದಸ್ಸು, ಅಸ್ಥಿ, ಸ್ನಾಯು ಎಂಬ ಅನೇಕ ಧಾತುಗಳಿಂದ ನಿರ್ಮಿತವಾದ ಶರೀರವೇ ಭಿನ್ನವಾದ ಬಳಿಕ ನಾಶವಾಗುವ ಈ ಶರೀರದಲ್ಲಿ ಜೀವನು ನಿಶ್ಚಿತವಾಗಿಯೂ ಕಾಣಿಸುವುದಿಲ್ಲ.
ಯದ್ಯಜೀವಂ ಶರೀರಂ ತು ಪಂಚಭೂತಸಮನ್ವಿತಮ್ |
ಶಾರೀರೇ ಮಾನಸೇ ದುಃಖೇ ಕಸ್ತಾಂ ವೇದಯತೇ ರುಜಮ್ ॥ 14 ॥
ಶರೀರಸಂಬಂಧವಿಲ್ಲದಿದ್ದಾಗ ಶಾರೀರಿಕ, ಮಾನಸಿಕ ದುಃಖಗಳು ಜೀವನ ಅನುಭವಕ್ಕೆ ಬರುವುದಿಲ್ಲ. ಜೀವನಿಲ್ಲದ ಆ ದುಃಖವನ್ನು ಅನುಭವಿಸಿ ತಿಳಿಯುವವರು ಯಾರು?
ಶೃಣೋತಿ ಕಥಿತಂ ಜೀವಃ ಕರ್ಣಾಭ್ಯಾಂ ನ ಶೃಣೋತಿ ತತ್ |
ಮಹರ್ಷೇ ಮನಸಿ ವ್ಯಗ್ರೇ ತಸ್ಮಾಜ್ಜೀವೋ ನಿರರ್ಥಕಃ ॥ 15 ॥
ಜೀವನು ಈ ಶರೀರದಲ್ಲಿ ನಿಯತಸ್ಥಿತಿಯಲ್ಲಿದ್ದಾಗ ಬೇರೆಯವರು ಹೇಳಿದ್ದನ್ನು ಕಿವಿಗಳಿಂದ ಕೇಳಿಸಿಕೊಳ್ಳುತ್ತಾನೆ. ಅದೇ ಜೀವನ ಮನಸ್ಸು ಇತರ ವಿಷಯದಲ್ಲಿ ಆಸಕ್ತವಾದಾಗ ಬೇರೆಯವರು ಹೇಳಿದ್ದನ್ನು ಕೇಳಿಸಿಕೊಳ್ಳದು. ಆದ್ದರಿಂದ ಎಲ್ಲದಕ್ಕೂ ಮನಸ್ಸು ಪ್ರಧಾನವೇ ಹೊರತು ಜೀವನು ನಿರರ್ಥಕನೇ ಆಗುತ್ತಾನಲ್ಲವೆ?
ಸರ್ವಂ ಪಶ್ಯತಿ ಯದ್ದೃಶ್ಯಂ ಮನೋಯುಕ್ತೇನ ಚಕ್ಷುಷಾ |
ಮನಸಿ ವ್ಯಾಕುಲೇ ತದ್ಧಿ ಪಶ್ಯನ್ನಪಿ ನ ಪಶ್ಯತಿ ॥ 16 ॥
ಮನಸ್ಸಿರುವಾಗಲೇ ಕಣ್ಣಿಗೆ ಬಿದ್ದದ್ದನ್ನೆಲ್ಲಾ ನೋಡಿ ತಿಳಿಯುತ್ತಾನೆ. ಮನಸ್ಸು ಬೇರೆ ಕಡೆ ಮಗ್ನವಾದಾಗ ಕಣ್ಣಿನಿಂದ ನೋಡಿದರೂ ಅದನ್ನು ತಿಳಿಯುವುದಿಲ್ಲ.
ವ್ಯಾಖ್ಯಾನ ವಿಶೇಷ `ಮನಸಿ ವ್ಯಾಕುಲೇ' ಎಂಬಲ್ಲಿ ಜೀವನು ನಿದ್ರಾವಶನಾಗಿ ಸ್ವರೂಪಭೂತವಾದ ಆನಂದಾನುಭವಕ್ಕೆ ವಶನಾದವನಾಗಿ ಸ್ವರೂಪಭೂತವಾದ ಮನಸ್ಸಿನಲ್ಲಿ ಸ್ವರೂಪ ಸುಖವನ್ನೇ ಅನುಭವಿಸುತ್ತಿರುವಾಗ ಒಳಗೆ ಅನುಭವಿಸುತ್ತಿರುವ ಜೀವನು ಹೊರಗೆ ಇರುವ ಪದಾರ್ಥಗಳನ್ನು ನೋಡುವುದಿಲ್ಲ. ಪುನಃ ಎಚ್ಚರಗೊಂಡ ಬಳಿಕ ಚಿದ್ರೂಪಿಯಾದ ಜೀವನು ಸಾಮಾನ್ಯ ವಿಶೇಷ ಜ್ಞಾನಗಳನ್ನು ಬಾಹ್ಯವಾಗಿ ಹೊಂದುತ್ತಾನೆ. ಈ ಕರ್ಮವನ್ನು ನಾನು ಮಾಡಿದೆ ಎಂದು ಮತ್ತೊಬ್ಬರಿಗೆ ಹೇಳುತ್ತಾನೆ. ಅಜ್ಞಾನಿಯಾದ ವ್ಯಕ್ತಿಗೆ ತಾನು ತಿಳಿದ ಅರ್ಥವನ್ನು ವಿವರಿಸುತ್ತಾನೆ. ಇದರಿಂದ ಜೀವನಿದ್ದಾನೋ ಇಲ್ಲವೋ ಎಂಬುದನ್ನು ನೀನೇ ಹೇಳು.
ನ ಪಶ್ಯತಿ ನ ಚ ಬ್ರೂತೇ ನ ಶೃಣೋತಿ ನ ಜಿಘ್ರತಿ |
ನ ಚ ಸ್ಪರ್ಶರಸೌ ವೇತ್ತಿ ನಿದ್ರಾವಶಗತಃ ಪುನಃ ॥ 17 ॥
ಜೀವನು ನಿದ್ರಾವಶನಾದಾಗ, ಮನಸ್ಸು ಆತ್ಮನಲ್ಲಿ ಉಪರತವಾದಾಗ ಬಾಹ್ಯ ಪದಾರ್ಥಗಳನ್ನು ನೋಡುವುದಿಲ್ಲ. ಬಾಹ್ಯವಿಷಯಗಳ ಬಗ್ಗೆ ಕೇಳಿಸಿಕೊಳ್ಳುವುದಿಲ್ಲ, ಮೂಗಿನಿಂದ ಆಘ್ರಾಣಿಸುವುದಿಲ್ಲ, ಸ್ಪರ್ಶರಸಗಳನ್ನೂ ತಿಳಿಯುವುದಿಲ್ಲ. ಪುನಃ ಜಾತವಶವನ್ನು ಹೊಂದಿದ ಬಳಿಕ ನೋಡುತ್ತಾನೆ, ಕೇಳಿಸಿಕೊಳ್ಳುತ್ತಾನೆ, ಆಘ್ರಾಣಿಸುತ್ತಾನೆ, ಮುಟ್ಟುತ್ತಾನೆ ಮತ್ತು ರಸವನ್ನು ಸ್ವೀಕರಿಸುತ್ತಾನೆ. ಮನಸ್ಸು

ಇವುಗಳಲ್ಲಿ ರತವಾದಾಗ ಸಂತೋಷದ ವಿಷಯಗಳ ವ್ಯಾಪಾರಗಳನ್ನು ಮಾಡುತ್ತಾನೆ. ಇದರಿಂದ ಮನಸ್ಸು ಉಪರತವಾದಾಗ ಬಾಹ್ಯಪ್ರಜ್ಞೆಯಿರುವುದಿಲ್ಲ. ಮನಸ್ಸು ಜಾಗೃತವಾದಾಗ ಬಾಹ್ಯ ಪ್ರಜ್ಞೆಯನ್ನು ಹೊಂದುತ್ತಾನೆ. ಈ ಅನ್ಯವ್ಯತಿರೇಕ ವ್ಯಾಪ್ತಿಯಿಂದ ಬಾಹ್ಯಪ್ರಜ್ಞೆಗೆ ಮನಸ್ಸೇ ಕಾರಣ ಎಂದು ಸ್ಪಷ್ಟವಾಗುತ್ತಿದೆ.

ಹೃಷ್ಯತಿ ಕ್ರುಧ್ಯತಿ ಚ ಕಃ ಶೋಚತ್ಯುದ್ವಿಜತೇ ಚ ಕಃ |
ಇಚ್ಛತಿ ಧ್ಯಾಯತಿ ದ್ವೇಷ್ಟಿ ವಾಚಮೀರಯತೇ ಚ ಕಃ ॥ 18 ॥

ಶರೀರದಲ್ಲಿ ಶೋಕ, ಕ್ರೋಧ, ಸಂತೋಷಗಳನ್ನು ಅನುಭವಿಸುವುದು ಯಾವುದು? ಅಪೇಕ್ಷೆಗಳು, ಇಚ್ಛಾ-ದ್ವೇಷಗಳು, ಮಾತನಾಡುವ ಶಕ್ತಿ ಯಾವುದರ ಧರ್ಮವಾಗಿದೆ ಎಂದು ಪ್ರಶ್ನಿಸಿದರು.

ಭೃಗುಃ

ನ ಪಂಚಸಾಧಾರಣಮತ್ರ ಕಿಂಚಿ-
ಚ್ಛರೀರಮೇಕೋ ವಹತೇಽಂತರಾತ್ಮಾ |
ಸ ವೇತ್ತಿ ಗಂಧಾಂಶ್ಚ ರಸಾನ್ ಶ್ರುತಿಂ ಚ
ಸ್ಪರ್ಶಂ ಚ ರೂಪಂ ಚ ಗುಣಾಶ್ಚ ಯೇಽನ್ಯೇ ॥ 19 ॥

ಭೃಗು ಭರದ್ವಾಜರೇ, ಪಂಚೇಂದ್ರಿಯಗಳಿಗೆ ಮನಸ್ಸು ಆಧಾರವಾಗಿದ್ದರೂ ಹರ್ಷ -ಶೋಕಾದಿಗಳಿಗೆ ಅದು ಕರ್ತೃವಲ್ಲ. ಪಂಚಭೂತಗಳಿಗೆ ಶರೀರವು ಸಾಧಾರಣವಾಗಿದ್ದರೂ ಶರೀರವು ಕರ್ತೃವಲ್ಲ. ಶರೀರದಲ್ಲಿರುವ ಜೀವನೇ ಮನಸ್ಸಿನ ಮೂಲಕವಾಗಿ ರೂಪ, ರಸ, ಗಂಧಗಳನ್ನು ತಿಳಿಯಬಲ್ಲನು. ಗಂಧ-ರಸಗಳನ್ನು ತಿಳಿಯುವವನು ಜೀವನೇ ಆಗಿದ್ದಾನೆ ಎಂದು ತಿಳಿಯುವ ವಿಷಯದಲ್ಲಿ ಶ್ರುತಿಯು ಮೂಲವಾಗಿದೆ.

ಪಂಚಾತ್ಮಕೇ ಪಂಚಗುಣಪ್ರದರ್ಶೀ
ಸ ಸರ್ವಗಾತ್ರಾನುಗತೋಽಂತರಾತ್ಮಾ |
ಸ ವೇತ್ತಿ ದುಃಖಾನಿ ಸುಖಾನಿ ಚಾತ್ರ
ತದ್ವಿಪ್ರಯೋಗಾತ್ತು ನ ವೇತ್ತಿ ದೇಹಃ ॥ 20 ॥

ಆತ್ಮವು ಪಂಚಭೂತಾತ್ಮಕವಾದ ಶರೀರದ ಎಲ್ಲ ಅವಯವಗಳಲ್ಲಿಯೂ ವ್ಯಾಪಿಸಿದೆ. ಪಂಚಗುಣಗಳಿಂದ ಕೂಡಿದ ಆ ಮನಸ್ಸಿನ ಕಾರಣಗಳಿಗೆಲ್ಲಾ ತಾನು ಸಾಕ್ಷಿಯಾಗಿ ನೋಡುತ್ತಿದೆ. ಶರೀರಕ್ಕೆ ಸಂಬಂಧಿಸಿದ ಸುಖ-ದುಃಖಗಳನ್ನು ತಿಳಿಯುತ್ತದೆ. ಆತ್ಮವು ಮನಸ್ಸಿನ ಸಂಬಂಧವನ್ನು ತಪ್ಪಿಸಿಕೊಂಡಾಗ ಯಾವುದನ್ನೂ ತಿಳಿಯಲಾರದು.

ಯದಾ ನ ರೂಪಂ ನ ಸ್ಪರ್ಶೋ ನೋಷ್ಮಭಾವಶ್ಚ ಪಾವಕೇ |
ತದಾ ಶಾಂತೇ ಶರೀರಾಗ್ನೌ ದೇಹಂ ತ್ಯಕ್ತ್ವಾ ಸ ನಶ್ಯತಿ ॥ 21 ॥

ಆತ್ಮವು ಶರೀರವನ್ನು ಬಿಟ್ಟು ಹೋದಾಗ ದೇಹದಲ್ಲಿ ರೂಪ-ಸ್ಪರ್ಶ ಜ್ಞಾನ ಇರುವುದಿಲ್ಲ. ಉಷ್ಣವಾಗಲಿ ಇರುವುದಿಲ್ಲ. ಶರೀರಾಗ್ನಿಯು ಶಾಂತವಾದ ಬಳಿಕ ಆತ್ಮವು ಬಿಟ್ಟುಹೋಗಿರುವುದರಿಂದ ದೇಹವು ನಾಶವನ್ನು ಹೊಂದುತ್ತದೆ.

ಅಮ್ಮಯಂ ಸರ್ವಮೇವೇದಮಾಪೋ ಮೂರ್ತಿಃ ಶರೀರಿಣಾಮ್ |
ತತ್ರಾತ್ಮಾ ಮಾನಸೋ ಬ್ರಹ್ಮಾ ಸರ್ವಭೂತೇಷು ಲೋಕಕೃತ್ ॥ 22 ॥

ಜಗತ್ತೆಲ್ಲವೂ ಜಲಮಯವಾಗಿದೆ. ಶರೀರವನ್ನು ಧರಿಸಿರುವ ಶರೀರಧಾರಿಗಳ ರೂಪವು ಜಲಪ್ರಧಾನವಾಗಿಯೇ ಇದೆ. ಲೋಕವನ್ನು ನಿರ್ಮಾಣ ಮಾಡುವ ಪರಬ್ರಹ್ಮನು ಸಮಸ್ತ ಜೀವರ ಸೂಕ್ಷ್ಮಶರೀರದಲ್ಲಿ ಸನ್ನಿಹಿತನಾಗಿರುತ್ತಾನೆ. (ಮನಸ್ಸಿನ ಸಂಕಲ್ಪಗಳು ಸನ್ನಿಹಿತನಾದ ಭಗವಂತನಿಂದಲೇ ಆಯಾ ಕಾಲಕ್ಕೆ ಉತ್ಪನ್ನವಾಗುತ್ತವೆ).

ಆತ್ಮಾನಂ ತಂ ವಿಜಾನೀಹಿ ತಂ ವೈ ತಸ್ಯ ವಿಧಾಯಕಮ್ |
ತಸ್ಮಿನ್ ಯಃ ಸಂಶ್ರಿತೋ ದೇಹೇ ಹ್ಯಬ್ಬಿಂದುರಿವ ಪುಷ್ಕರೇ ॥ 23 ॥

ಜೀವಾತ್ಮನನ್ನು ನಿಯಮನ ಮಾಡುವ ಪರಮಾತ್ಮನು ಈ ಶರೀರದಲ್ಲಿದ್ದಾನೆಂದು ತಿಳಿದುಕೊ. ಆ ಪರಮಾತ್ಮನನ್ನು ಆಶ್ರಯಿಸಿಕೊಂಡು ಜೀವಾತ್ಮನು ಇದ್ದಾನೆ. ಪರಮಾತ್ಮನಾದರೂ ತಾವರೆ ಎಲೆಯ ಮೇಲಿನ ನೀರಿನ ಬಿಂದುವಿನಂತೆ ಅಸಂಗನಾಗಿ ಇದ್ದಾನೆ.

ಕ್ಷೇತ್ರಜ್ಞಂ ತಂ ವಿಜಾನೀಹಿ ನಿತ್ಯಂ ಲೋಕಹಿತಾತ್ಮಕಮ್ |
ತಮೋ ರಜಶ್ಚ ಸತ್ತ್ವಂ ಚ ವಿದ್ಧಿ ಜೀವಗುಣಾನಿಮಾನ್ ॥ 24 ॥

ಆ ಪರಮಾತ್ಮನು ಕ್ಷೇತ್ರಜ್ಞನಾಗಿದ್ದಾನೆ ಎಂದು ತಿಳಿದುಕೊ. ನಿತ್ಯವೂ ಸಮಸ್ತ ಲೋಕಗಳಿಗೆ ಹಿತವನ್ನು ಬಯಸುವವನಾಗಿದ್ದಾನೆ. ಸತ್ವ-ರಜಸ್-ತಮೋಗುಣಗಳು ಜೀವನಿಗೆ ಸಂಬಂಧಿಸಿದುದಾಗಿ ತಿಳಿದುಕೊ.

ಸಚೇತನಂ ಜೀವಗುಣಂ ವದಂತಿ
ಸ ಚೇಷ್ಟತೇ ಚೇಷ್ಟಯತೇ ಚ ಸರ್ವಮ್ |
ತತಃ ಪರಂ ಕ್ಷೇತ್ರವಿದಂ ವದಂತಿ
ಪ್ರಾವರ್ತಯದ್ಯೋ ಭುವನಾನಿ ಸಪ್ತ ॥ 25 ॥

ಸಚೇತನವಾದ ಶರೀರವು ಆ ಜೀವನಿಗೆ ಅಧೀನವಾಗಿದೆ. ಜೀವನು ತಾನು ಚೇಷ್ಟೆ ಮಾಡುತ್ತಾ ಇತರೆ ವಸ್ತುಗಳನ್ನು ಚೇಷ್ಟಿಸುವಂತೆ ಮಾಡುತ್ತಾನೆ. ದೇಹತತ್ತ್ವವನ್ನು ತಿಳಿದವರು ಏಳು ಲೋಕಗಳನ್ನು ಪ್ರವರ್ತಿಸುವ ವಿಲಕ್ಷಣನಾದ ಪರಮಾತ್ಮನನ್ನು ಜೀವಾತ್ಮನಿಗಿಂತ ಬೇರೆಯಾಗಿಯೇ ತಿಳಿದಿರುತ್ತಾರೆ.

ನ ಜೀವನಾಶೋಽಸ್ತಿ ಹಿ ದೇಹಭೇದೇ
ಮಿಥ್ಯೈತದಾಹುರ್ಮೃತ ಇತ್ಯಬುದ್ಧಾಃ |
ಜೀವಸ್ತು ದೇಹಾಂತರಿತಃ ಪ್ರಯಾತಿ

ದಶಾರ್ಧತ್ವೈವಾಸ್ಯ ಶರೀರಭೇದಃ ॥ 26 ॥
ಶರೀರವು ನಾಶವಾದರೂ ಜೀವನಿಗೆ ನಾಶವಿರುವುದಿಲ್ಲ. ತಿಳಿಯದಿರುವ ಮೂರ್ಖರು ಜೀವನೇ ಮೃತನಾದನೆಂದು ತಿಳಿಯುತ್ತಾರೆ. ಇದು ಅವರ ಭ್ರಮೆ. ಜೀವನು ಒಂದು ದೇಹವನ್ನು ಬಿಟ್ಟರೂ ಮತ್ತೊಂದು ದೇಹವನ್ನು ಸೇರುತ್ತಾನೆ. ಮೊದಲಿನ ಶರೀರವನ್ನು ಬಿಡುವುದಕ್ಕೇ ಮರಣ ಎಂದು ಹೇಳುತ್ತಾರೆ.
ಏವಂ ಸರ್ವೇಷು ಭೂತೇಷು ಗೂಢಶ್ಚರತಿ ಸಂವೃತಃ |
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ತತ್ತ್ವದರ್ಶಿಭಿಃ ॥ 27 ॥
ಈ ರೀತಿಯಾಗಿ ಸಮಸ್ತ ಭೂತಗಳಲ್ಲಿಯೂ ಪರಮಾತ್ಮನು ಅಂತರ್ಯಾಮಿಯಾಗಿ ಸಂಚರಿಸುತ್ತಾನೆ. ತತ್ತ್ವದರ್ಶಿಗಳ, ಸೂಕ್ಷ್ಮವಾದ, ಶ್ರೇಷ್ಠವಾದ ಬುದ್ಧಿಯಿಂದ ಮಾತ್ರ ತಿಳಿಯಲ್ಪಡುತ್ತಾನೆ.
ತಂ ಪೂರ್ವಾಪರರಾತ್ರೇಷು ಯುಂಜಾನಃ ಸತತಂ ಬುಧಃ |
ಲಘ್ವಾಹಾರೋ ವಿಶುದ್ಧಾತ್ಮಾ ಪಶ್ಯತ್ಯಾತ್ಮಾನಮಾತ್ಮನಿ ॥ 28 ॥
ಅಂತಹ ಪರಮಾತ್ಮನನ್ನು ಸ್ವಲ್ಪವೇ ಆಹಾರವನ್ನು ಸ್ವೀಕರಿಸುತ್ತಾ ಶುದ್ಧ ಮನಸ್ಸಿನಿಂದ ನೋಡುತ್ತಾರೆ. ಯೋಗಿಗಳು ಮಲಗುವ ಮುನ್ನ ನಿದ್ರೆಯ ನಂತರ ಈ ಅವಸ್ಥೆಗಳಿಗೆ ನಿಯಾಮಕನನ್ನಾಗಿ ಭಗವಂತನನ್ನು ಸ್ಮರಿಸುತ್ತಾರೆ.
ಚಿತ್ತಸ್ಯ ಹಿ ಪ್ರಸಾದೇನ ಹಿತ್ವಾ ಕರ್ಮ ಶುಭಾಶುಭಮ್ |
ಪ್ರಸನ್ನಾತ್ಮಾತ್ಮನಿ ಸ್ಥಿತ್ವಾ ಸುಖಮಕ್ಷಯಮಶ್ನುತೇ ॥ 29 ॥
ಆ ಪರಮಾತ್ಮನ ಪೂರ್ಣಾನುಗ್ರಹದಿಂದ ಅಪರೋಕ್ಷ ಜ್ಞಾನವನ್ನು ಸಂಪಾದಿಸಿಕೊಂಡು ಶುಭಾಶುಭಕರ್ಮಗಳನ್ನು ನೀಗಿ ಶುದ್ಧ ಮನಸ್ಸಿನಿಂದ, ಪರಮಾತ್ಮನ ಅನುಗ್ರಹದಿಂದ ಅಕ್ಷಯವಾದ ಸುಖವನ್ನು ಹೊಂದುತ್ತಾರೆ.
ಮಾನಸೋಽಗ್ನಿಃ ಶರೀರೇಷು ಜೀವ ಇತ್ಯಭಿಧೀಯತೇ |
ಸೃಷ್ಟಿಃ ಪ್ರಜಾಪತೇರೇಷಾ ಭೂತಾಧ್ಯಾತ್ಮವಿನಿಶ್ಚಯೇ ॥ 30 ॥
ನಿಮ್ಮಿಂದ ಹೇಳಲ್ಪಟ್ಟ ಮನಸ್ಸು ಎಂದರೆ ಜೀವನಲ್ಲ. ಮನಸ್ಸಿಗೆ ಸಂಬಂಧಿಸಿದ ಅದು ಅಗ್ನಿ. ಕರ-ಚರಣಾದಿ ವ್ಯಾಪಾರಗಳನ್ನು ಮಾಡುವುದರಿಂದ ಅಗ್ನಿಶಬ್ದ ವಾಚ್ಯನಾದವನು ಜೀವನಾಗಿದ್ದಾನೆ. ಈ ಪ್ರಪಂಚದ ಸೃಷ್ಟಿಯ ವಿಷಯದಲ್ಲಿ ತತ್ತ್ವಜ್ಞಾನಿಗಳು ಚತುರ್ಮುಖ ಬ್ರಹ್ಮನ ಸೃಷ್ಟಿಯ ಕ್ರಮ ಇದೆಂದು ನಿರ್ಣಯಿಸಿದ್ದಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ಸೃಷ್ಟಿಯ ಆರಂಭದಲ್ಲಿ ಎಲ್ಲರೂ ಬ್ರಾಹ್ಮಣರಾಗಿಯೇ ಇದ್ದು ತಮ್ಮ
ಇಷ್ಟಬಂದ ಆಚಾರದಲ್ಲಿ ರತರಾಗಿರುವುದರಿಂದ ವರ್ಣಭೇದಗಳನ್ನು ಹೊಂದಿದ್ದಾರೆಂದು ಭೃಗುವು ಭರದ್ವಾಜರಿಗೆ ಹೇಳಿದುದು.
ಭೃಗುಃ
ಅಸೃಜದ್ ಬ್ರಾಹ್ಮಣಾನೇವ ಪೂರ್ವಂ ಬ್ರಹ್ಮಾ ಪ್ರಜಾಪತಿಃ |
ಆತ್ಮತೇಜೋಭಿನಿರ್ವೃತ್ತಾನ್ ಭಾಸ್ಕರಾಗ್ನಿಸಮಪ್ರಭಾನ್ ॥ 1 ॥
ಭೃಗು ಭರದ್ವಾಜರೇ, ಚತುರ್ಮುಖ ಬ್ರಹ್ಮನು ಸೃಷ್ಟಿಯ ಆರಂಭದಲ್ಲಿ ಬ್ರಹ್ಮನಿಷ್ಠರಾದ ಬ್ರಾಹ್ಮಣರನ್ನು ಸೃಷ್ಟಿಸಿದನು.
ಬ್ರಹ್ಮತೇಜಸ್ಸಿನಿಂದ ಹುಟ್ಟಿದ ಅವರು ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸನ್ನು ಹೊಂದಿದರು.
ತತಃ ಸತ್ಯಂ ಚ ಧರ್ಮಂ ಚ ತಪೋ ಬ್ರಹ್ಮ ಚ ಶಾಶ್ವತಮ್ |
ಆಚಾರಂ ಚೈವ ಶೌಚಂ ಚ ಸ್ವರ್ಗಾಯ ವಿದಧೇ ಪ್ರಭುಃ ॥ 2 ॥
ಬಳಿಕ ಚತುರ್ಮುಖ ಬ್ರಹ್ಮನು ಸತ್ಯ, ಧರ್ಮ, ತಪಸ್ಸು, ವೇದಗಳು, ಆ ವೇದಗಳ ಮೂಲಕ ಶೌಚಾಚಾರಗಳನ್ನು ನಿತ್ಯಸುಖದ ಪ್ರಾಪ್ತಿಗಾಗಿ ಸೃಷ್ಟಿ ಮಾಡಿದನು.
ದೇವದಾನವಗಂಧರ್ವದೈತ್ಯಾಸುರಮಹೋರಗಾಃ |
ಯಕ್ಷರಾಕ್ಷಸನಾಗಾಶ್ಚ ಪಿಶಾಚಾ ಮನುಜಾಸ್ತಥಾ ॥ 3 ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ದ್ವಿಜಸತ್ತಮ |
ಯೇ ಚಾನ್ಯೇ ಭೂತಸಂಘಾನಾಂ ಸಂಘಾಸ್ತಾಂಶ್ಚಾಪಿ ನಿರ್ಮಮೇ ॥ 4 ॥
ದೇವ, ದಾನವ, ಗಂಧರ್ವ, ದೈತ್ಯ, ರಾಕ್ಷಸ, ಮಹೋರಗ, ಯಕ್ಷ, ರಾಕ್ಷಸ, ನಾಗ, ಪಿಶಾಚ, ಮನುಷ್ಯರೆಂಬ ವರ್ಗಗಳನ್ನೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಪ್ರಭೇದಗಳನ್ನೂ, ಇತರ ಹಲವು ಪ್ರಾಣಿ ಸಮೂಹಗಳನ್ನೂ ನಿರ್ಮಿಸಿದನು.
ಬ್ರಾಹ್ಮಣಾನಾಂ ಸಿತೋ ವರ್ಣಃ ಕ್ಷತ್ರಿಯಾಣಾಂ ತು ಲೋಹಿತಃ |
ವೈಶ್ಯಾನಾಂ ಪೀತಕೋ ವರ್ಣಃ ಶೂದ್ರಾಣಾಮಸಿತಸ್ತಥಾ ॥ 5 ॥
ಬ್ರಾಹ್ಮಣರಿಗೆ ಬಿಳಿ ವರ್ಣವೂ, ಕ್ಷತ್ರಿಯರಿಗೆ ಕೆಂಪು ವರ್ಣವೂ, ವೈಶ್ಯರಿಗೆ ಹಳದಿ, ಶೂದ್ರರಿಗೆ ಕಪ್ಪು ವರ್ಣವೆಂದು ವಿಧಿಸಿದನು.
ಭರದ್ವಾಜಃ
ಚಾತುರ್ವರ್ಣ್ಯಸ್ಯ ವರ್ಣೇನ ಯದಿ ವರ್ಣೋ ವಿಭಜ್ಯತೇ |
ಸರ್ವೇಷಾಂ ಖಲು ವರ್ಣಾನಾಂ ದೃಶ್ಯತೇ ವರ್ಣಸಂಕರಃ ॥ 6 ॥
ಭರದ್ವಾಜ ಮಹರ್ಷಿಯೇ, ನಾಲ್ಕು ವರ್ಣದವರ ಜಾತಿಯು ಬಣ್ಣದಿಂದಲೇ ವಿಭಾಗಿಸಲ್ಪಡುತ್ತದೆ ಎನ್ನುವುದಾದರೆ ಎಲ್ಲ ವರ್ಣಗಳೂ

ಅಲ್ಲಲ್ಲಿ ಮಿಶ್ರಣವಾದಂತೆ ವರ್ಣಸಂಕರವು ಕಾಣುತ್ತದಲ್ಲವೇ?
ಕಾಮಃ ಕ್ರೋಧೋ ಭಯಂ ಲೋಭಃ ಶೋಕಶ್ಚಿಂತಾ ಕ್ಷುಧಾ ಶ್ರಮಃ |
ಸರ್ವೇಷಾಂ ನಃ ಪ್ರಭವತಿ ಕಸ್ಮಾದ್ವರ್ಣೋ ವಿಭಜ್ಯತೇ ॥ 7 ॥
ಲೋಕದಲ್ಲಿ ಕಾಮ, ಕ್ರೋಧ, ಭಯ, ಲೋಭ, ಶೋಕ, ಚಿಂತೆ, ಹಸಿವು, ಬಾಯಾರಿಕೆ, ಶ್ರಮ ಈ ಎಲ್ಲ ಧರ್ಮಗಳು ಇತರ ವರ್ಣಗಳಂತೆ ಬ್ರಾಹ್ಮಣರಿಗೂ ಸರ್ವಸಾಮಾನ್ಯವಾಗಿವೆ. ಹೀಗಿರುವಾಗ ವರ್ಣಭೇದವನ್ನು ತಿಳಿಯುವ ಬಗೆ ಹೇಗೆ?
ಸ್ವೇದಮೂತ್ರಪುರೀಷಾಣಿ ಶ್ಲೇಷ್ಮಾ ಪಿತ್ತಂ ಸಶೋಣಿತಮ್ |
ತನುಃ ಕ್ಷರತಿ ಸರ್ವೇಷಾಂ ಕಸ್ಮಾದ್ವರ್ಣೋ ವಿಭಜ್ಯತೇ ॥ 8 ॥
ದೇಹದಲ್ಲಿ ಮಲ-ಮೂತ್ರಗಳು, ಬೆವರು, ಶ್ಲೇಷ್ಮಾ, ಪಿತ್ತ, ರಕ್ತ ಮೊದಲಾದವುಗಳು ಎಲ್ಲಾ ಪ್ರಾಣಿಗಳಲ್ಲಿಯೂ ಸಮಾನವಾಗಿವೆ. ಎಲ್ಲರ ಶರೀರವೂ ಅನೇಕ ಕಶ್ಮಲಗಳನ್ನು ಸುರಿಸುತ್ತದೆ. ಹೀಗಿರಲು ವರ್ಣವನ್ನು ಯಾವ ಧರ್ಮದ ಆಧಾರದಿಂದ ವಿಭಾಗಿಸಬಹುದು?
ಜಂಗಮಾನಾಮಸಂಖ್ಯೇಯಾಃ ಸ್ಥಾವರಾಣಾಂ ಚ ಜಾತಯಃ |
ತೇಷಾಂ ವಿವಿಧವರ್ಣಾನಾಂ ಕುತೋ ವರ್ಣವಿನಿಶ್ಚಯಃ ॥ 9 ॥
ಸ್ಥಾವರ-ಜಂಗಮಗಳಲ್ಲಿ ಅಸಂಖ್ಯಾತವಾದ ಎಷ್ಟೋ ಜಾತಿಗಳಿವೆ. ಅವುಗಳಲ್ಲಿ ವರ್ಣಗಳನ್ನು ನಿಶ್ಚಯ ಮಾಡುವ ಬಗೆ ಹೇಗೆ?
ಭೃಗುಃ
ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್ |
ಬ್ರಹ್ಮಣಾ ಪೂರ್ವಸೃಷ್ಟಂ ಹಿ ಕರ್ಮಭಿರ್ವರ್ಣತಾಂ ಗತಮ್ ॥ 10 ॥
ಭೃಗು ಭರದ್ವಾಜರೇ, ಆರಂಭದಲ್ಲಿ ವರ್ಣಗಳಲ್ಲಿ ಹೆಚ್ಚು ಕಡಿಮೆ ಇಲ್ಲದಂತೆ ಬ್ರಹ್ಮನಿಂದ ಎಲ್ಲರೂ ಸಮಾನವಾಗಿಯೇ ಸೃಷ್ಟಿಸಲ್ಪಟ್ಟರು. ಆದರೆ ತಮ್ಮ ತಮ್ಮ ಕರ್ಮ ಪ್ರಭೇದಗಳಿಂದ ಬೇರೆ ಬೇರೆ ವರ್ಣಪ್ರಭೇದಗಳನ್ನು ಪಡೆದರು.
ಕಾಮಭೋಗಪ್ರಿಯಾಸ್ತೀಕ್ಷ್ಣಾಃ ಕ್ರೋಧನಾಃ ಪ್ರಿಯಸಾಹಸಾಃ |
ತ್ಯಕ್ತಸ್ವಧರ್ಮಾ ರಕ್ತಾಂಗಾಸ್ತೇ ದ್ವಿಜಾಃ ಕ್ಷತ್ರತಾಂ ಗತಾಃ ॥ 11 ॥
ವಿಷಯಭೋಗಗಳ ಆಸೆಯಿಂದ ಕ್ರೌರ್ಯದಿಂದ, ಕೋಪಸ್ವಭಾವದಿಂದ, ಸಾಹಸದಲ್ಲಿರುವ ಪ್ರೀತಿಯಿಂದ ಬ್ರಾಹ್ಮಣಸ್ವಭಾವವನ್ನು ಬಿಟ್ಟು ರಜೋಗುಣವನ್ನು ಹೊಂದಿದ ಕೆಲವರು ಕೆಂಪು ಬಣ್ಣವುಳ್ಳ ಕ್ಷತ್ರಿಯರೆನಿಸಿಕೊಂಡರು.
ಗೋಷು ವೃತ್ತಿಂ ಸಮಾಧಾಯ ಪೀತಾಃ ಕೃಷ್ಯುಪಜೀವಿನಃ |
ಸ್ವಧರ್ಮಂ ನಾನುತಿಷ್ಠಂತಿ ತೇ ದ್ವಿಜಾ ವೈಶ್ಯತಾಂ ಗತಾಃ ॥ 12 ॥
ಬ್ರಾಹ್ಮಣರಲ್ಲಿಯೇ ಕೆಲವರು ಪಶುಪಾಲನೆ, ಕೃಷಿ, ವಾಣಿಜ್ಯಗಳಿಂದ ಬದುಕುವವರಾಗಿ ಸ್ವಧರ್ಮವನ್ನು ನಡೆಸದೆ ವೈಶ್ಯರಾಗಿ ಪರಿವರ್ತಿತರಾದರು. ಇವರೆಲ್ಲರೂ ಪೀತವರ್ಣದವರೆಂದು ಕರೆಸಿಕೊಳ್ಳುತ್ತಾರೆ.
ಹಿಂಸಾನೃತಪ್ರಿಯಾ ಲುಬ್ಧಾಃ ಸರ್ವಕರ್ಮೋಪಜೀವಿನಃ |
ಕೃಷ್ಣಾಃ ಶೌಚಪರಿಭ್ರಷ್ಟಾಸ್ತೇ ದ್ವಿಜಾಃ ಶೂದ್ರತಾಂ ಗತಾಃ ॥ 13 ॥
ಬ್ರಾಹ್ಮಣರಲ್ಲಿ ಶೌಚಾಚಾರಗಳನ್ನು ಬಿಟ್ಟ ವ್ಯಕ್ತಿಗಳು ಹಣದ ಆಸೆಯಿಂದ ಇಷ್ಟಬಂದ ಜೀವನದ ಉದ್ಯೋಗವನ್ನು ಹಿಡಿದು ಹಿಂಸೆ, ಅಸತ್ಯ ಮುಂತಾದವುಗಳಲ್ಲಿ ನಡೆದುಕೊಳ್ಳುತ್ತಾ ಬಣ್ಣದಿಂದ ಕಪ್ಪಾಗಿ ಶೂದ್ರರೆನಿಸಿಕೊಂಡರು.
ಇತ್ಯೇತೈಃ ಕರ್ಮಭಿರ್ವ್ಯಸ್ತಾ ದ್ವಿಜಾ ವರ್ಣಾಂತರಂ ಗತಾಃ |
ಧರ್ಮೋ ಯಜ್ಞಕ್ರಿಯಾ ಚೈಷಾಂ ನಿತ್ಯಂ ನ ಪ್ರತಿಷಿಧ್ಯತೇ ॥ 14 ॥
ಹೀಗೆ ತಮ್ಮ ಕಾರ್ಯಪ್ರವೃತ್ತಿಗಳಿಂದ ಬೇರೆ ಬೇರೆಯಾಗಿ ಚದುರಿ ಬೇರೆ ಬೇರೆ ವರ್ಣದವರಾಗಿದ್ದಾರೆ. ಧರ್ಮವು, ಯಾಗಕಾರ್ಯವು ಎಂದಿಗೂ ಇವರಿಗೆ ನಿಷಿದ್ಧವೆನಿಸಿರಲಿಲ್ಲ.
ವರ್ಣಾಶ್ಚತ್ವಾರ ಏತೇ ಹಿ ಯೇಷಾಂ ಬ್ರಾಹ್ಮೀ ಸರಸ್ವತೀ |
ವಿಹಿತಾ ಬ್ರಹ್ಮಣಾ ಪೂರ್ವಂ ಲೋಭಾತ್ತ್ವಜ್ಞಾನತಾಂ ಗತಾಃ ॥ 15 ॥
ಮೊದಲು ಬ್ರಹ್ಮದೇವರಿಂದ ಇವರೆಲ್ಲರಿಗೂ ಸಮಾನವಾಗಿ ವೇದವೆಂಬ ಉಪದೇಶವಾಕ್ಯಗಳು ಅನುಗ್ರಹಿಸಲ್ಪಟ್ಟಿದ್ದರೂ ಪರಬ್ರಹ್ಮನಿಗೆ ಸಂಬಂಧಿಸಿದ ವೇದ- ಪುರಾಣಾದಿ ವಿದ್ಯೆಗಳನ್ನು ಬಿಟ್ಟು ಲೋಭವಶದಿಂದ ವೇದಾರ್ಥಗಳನ್ನು ತಿಳಿಯದ ಸ್ಥಿತಿಗೆ ಬಂದರು.
ಬ್ರಾಹ್ಮಣಾ ಧರ್ಮತಂತ್ರಸ್ಥಾಸ್ತಪಸ್ತೇಷಾಂ ನ ನಶ್ಯತಿ |
ಬ್ರಹ್ಮ ಧಾರಯತಾಂ ನಿತ್ಯಂ ವ್ರಾತಾನಿ ನಿಯಮಾಂಸ್ತಥಾ ॥ 16 ॥
ಬ್ರಾಹ್ಮಣರು ಯಾವಾಗಲೂ ಧರ್ಮಶಾಸ್ತ್ರದಲ್ಲಿ ವೇದಪ್ರತಿಪಾದಕವಾದ ಶಾಸ್ತ್ರಗಳಲ್ಲಿ ಸ್ಥಿರವಾಗಿ ನಿಂತರು. ವ್ರತ-ನಿಯಮಗಳನ್ನು ಬಿಡದಿದ್ದರಿಂದ ಬ್ರಹ್ಮಜ್ಞಾನಕ್ಕೆ ಅರ್ಹರಾದರು. ವ್ರತ-ನಿಯಮಗಳನ್ನು, ವೇದಗಳನ್ನು ನಿತ್ಯವೂ ಧರಿಸಿದರು.
ಬ್ರಹ್ಮ ಚೈತತ್ ಪುರಾ ಸೃಷ್ಟಂ ಯೇ ನ ಜಾನಂತ್ಯತದ್ವಿದಃ |
ತೇಷಾಂ ಬಹುವಿಧಾಸ್ತ್ವನ್ಯಾಸ್ತತ್ರ ತತ್ರ ಹಿ ಜಾತಯಃ ॥ 17 ॥
ಪ್ರಪಂಚದ ಸೃಷ್ಟಿಯಲ್ಲಿ ಏನೆಲ್ಲ ಕಾಣುತ್ತದೋ ಅದೆಲ್ಲವೂ ಭಗವಂತನಿಂದಲೇ ಸೃಷ್ಟವಾಗಿದೆ. ಅಜ್ಞಾನಿಗಳಿಗೆ ಇದು ತಿಳಿಯುವುದಿಲ್ಲ. ಈ ಜ್ಞಾನವನ್ನು ಹೊಂದದೆ ಇರುವ ಅನೇಕರು ಬೇರೆ ಬೇರೆ ಜಾತಿಯವರು ಹೀನಜಾತಿಯವರು ಎನಿಸಿಕೊಂಡರು.
ಪಿಶಾಚಾ ರಾಕ್ಷಸಾಃ ಪ್ರೇತಾ ಬಹುಧಾ ಮ್ಲೇಚ್ಛಜಾತಯಃ |
ಪ್ರನಷ್ಟಜ್ಞಾನವಿಜ್ಞಾನಾಃ ಸ್ವಚ್ಛಂದಾಚಾರಚೇಷ್ಟಿತಾಃ ॥ 18 ॥
ಜ್ಞಾನವನ್ನು ಕಳೆದುಕೊಂಡು ಸ್ವಚ್ಛಂದವಾಗಿ ವರ್ತಿಸಿದ ವ್ಯಕ್ತಿಗಳು ರಾಕ್ಷಸ, ಪ್ರೇತ, ಪಿಶಾಚಿಗಳ ಜನ್ಮದಲ್ಲಿಯೂ ಮ್ಲೇಚ್ಛಜಾತಿಯಲ್ಲಿಯೂ ಹುಟ್ಟನ್ನು ಪಡೆದರು.
ಪ್ರಜಾ ಬ್ರಾಹ್ಮಣಸಂಸ್ಕಾರಾಃ ಸ್ವಧರ್ಮಕೃತನಿಶ್ಚಯಾಃ |

ಋಷಿಭಿಃ ಸ್ವೇನ ತಪಸಾ ಸೃಜ್ಯಂತೇ ಚಾಪರೇ ಪರೈಃ ॥ 19 ॥
ಮೊದಲಿಗೆ ಬ್ರಹ್ಮನ ಸಂಕಲ್ಪದಿಂದ ಹುಟ್ಟಿದ ಮಹರ್ಷಿಗಳು ತಮ್ಮ ತಪಸ್ಸಿನಿಂದ ಸ್ವಕರ್ಮಗಳಲ್ಲಿ, ತಪಸ್ಸಿನಲ್ಲಿಯೂ, ವೇದೋಕ್ತ ಸಂಸ್ಕಾರಗಳಲ್ಲಿಯೂ ಶ್ರದ್ಧೆಯಿಂದ ನಿರತರಾಗಿ ಮುಂದಿನ ಋಷಿಗಳನ್ನು ಸೃಷ್ಟಿಸುತ್ತಾರೆ.
ಆದಿದೇವಸಮುದ್ಭೂತಾ ಬ್ರಹ್ಮಮೂಲಾಕ್ಷಯಾವ್ಯಯಾ |
ಸಾ ಸೃಷ್ಟಿರ್ಮಾನಸೀ ನಾಮ ಧರ್ಮತಂತ್ರಪರಾಯಣಾ ॥ 20 ॥
ಧರ್ಮಾನುಷ್ಠಾನವೇ ವೇದವೇ ಆಧಾರವಾಗಿ ಉಳ್ಳ ಆದಿಸೃಷ್ಟಿಯು ಬ್ರಹ್ಮನ ಮಾನಸ ಸೃಷ್ಟಿ ಎನಿಸಿದೆ. ಆ ಸೃಷ್ಟಿಯು ಬ್ರಹ್ಮನಿಂದ ಆರಂಭಿಸಿ ಬ್ರಹ್ಮನಲ್ಲೇ ಕೊನೆಗೊಳ್ಳುತ್ತದೆ. ಯೋಗಾನುಷ್ಠಾನವೇ ಆಶ್ರಯವಾಗಿ ಉಳ್ಳದ್ದು ಆದಿಸೃಷ್ಟಿಯು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ಭೃಗುಗಳು ಭರದ್ವಾಜರಿಗೆ ಬ್ರಾಹ್ಮಣಾದಿ ವರ್ಣಗಳ ಲಕ್ಷಣಗಳನ್ನು ನಿರೂಪಿಸುತ್ತಾ, ವೈರಾಗ್ಯವೇ ಮೋಕ್ಷಕ್ಕೆ ಕಾರಣ ಎಂದು ನಿರೂಪಿಸಿದುದು.
ಭರದ್ವಾಜಃ
ಬ್ರಾಹ್ಮಣಃ ಕೇನ ಭವತಿ ಕ್ಷತ್ರಿಯೋ ವಾ ದ್ವಿಜೋತ್ತಮ |
ವೈಶ್ಯಃ ಶೂದ್ರಶ್ಚ ವಿಪ್ರರ್ಷೇ ತದ್ ಬ್ರೂಹಿ ವದತಾಂ ವರ ॥ 1 ॥
ಭರದ್ವಾಜ ಮಹಾತ್ಮರಾದ ಭೃಗುಗಳೇ, ಯಾವ ಕರ್ಮದಿಂದ ಬ್ರಾಹ್ಮಣ ಎನಿಸುತ್ತಾನೆ? ಇದರಂತೆ ಕ್ಷತ್ರಿಯ, ವೈಶ್ಯ, ಶೂದ್ರರು ಆಯಾ ವರ್ಣದವರೆನಿಸುತ್ತಾರೆ ಎಂದು ನನಗೆ ತಿಳಿಸಿ.
ಭೃಗುಃ
ಜಾತಕರ್ಮಾದಿಭಿರ್ಯಸ್ತು ಸಂಸ್ಕಾರೈಃ ಸಂಸ್ಕೃತಃ ಶುಚಿಃ |
ವೇದಾಧ್ಯಯನಸಂಪನ್ನಃ ಷಟ್ಸು ಕರ್ಮಸ್ವವಸ್ಥಿತಃ ॥ 2 ॥
ಭೃಗು ಯಾವ ವ್ಯಕ್ತಿಯು ಜಾತಕರ್ಮಾದಿ ಹದಿನಾರು ಸಂಸ್ಕಾರಗಳನ್ನು ಪಡೆದು ಸಂಸ್ಕೃತನಾಗುತ್ತಾನೋ, ಶುಚಿಯಾಗಿ ಇದ್ದು ವೇದಾಧ್ಯಯನ ಸಂಪನ್ನನಾಗುತ್ತಾನೋ, ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ ಎಂಬ ಕರ್ಮಗಳಲ್ಲಿ ನಿರತನಾಗಿರುತ್ತಾನೋ;
ಶೌಚಾಚಾರಸ್ಥಿತಃ ಸಮ್ಯಗ್ ವಿಘಸಾಶೀ ಗುರುಪ್ರಿಯಃ |
ನಿತ್ಯವ್ರತೀ ಸತ್ಯಪರಃ ಸ ವೈ ಬ್ರಾಹ್ಮಣ ಉಚ್ಯತೇ ॥ 3 ॥
ಶೌಚಾಚಾರಗಳಲ್ಲಿ ನಿರತನಾಗಿರುವ, ಅತಿಥಿ ಉಂಡ ಬಳಿಕ ಊಟವನ್ನು ಮಾಡುವ, ಗುರುಗಳಿಗೆ ಪ್ರೀತಿಪಾತ್ರನಾದ, ನಿತ್ಯವ್ರತ, ಸತ್ಯಸಂಧ ಇವುಗಳನ್ನು ಹೊಂದಿರುವ ವ್ಯಕ್ತಿಯು ಬ್ರಾಹ್ಮಣನೆನಿಸುತ್ತಾನೆ.
ಸತ್ಯಂ ದಾನಂ ದಮೋಽದ್ರೋಹ ಆನೃಶಂಸ್ಯಂ ಕ್ಷಮಾ ಘೃಣಾ |
ತಪಶ್ಚ ದೃಶ್ಯತೇ ಯತ್ರ ಸ ಬ್ರಾಹ್ಮಣ ಇತಿ ಸ್ಮೃತಃ ॥ 4 ॥
ಸತ್ಯ, ದಾನ, ದಯೆ, ದಮ, ಅದ್ರೋಹ, ಆನೃಶಂಸ್ಯ, ಕ್ಷಮಾ, ಕರುಣೆ, ತಪಸ್ಸು ಎಲ್ಲಿ ಕಾಣುತ್ತವೋ ಅವನನ್ನು ಬ್ರಾಹ್ಮಣ ಎನ್ನಬಹುದು.

ಕ್ಷತ್ರಜಂ ಸೇವತೇ ಕರ್ಮ ವೇದಾಧ್ಯಯನಸಮ್ಮತಃ |
ದಾನಾದಾನರತಿರ್ಯಶ್ಚ ಸ ವೈ ಕ್ಷತ್ರಿಯ ಉಚ್ಯತೇ ॥ 5 ॥
ಕ್ಷತ್ರಿಯಜಾತಿಗೆ ವಿಹಿತವಾದ ಯುದ್ಧರೂಪವಾದ ಕರ್ಮವನ್ನು ಯಾವನು ಮಾಡುತ್ತಾನೋ, ವೇದಾಧ್ಯಯನ ಪರನಾಗಿದ್ದಾನೋ, ಬ್ರಾಹ್ಮಣರಿಗೆ ದಾನ ಮಾಡುತ್ತಾನೋ ಪ್ರಜೆಗಳಿಗೆ ಪ್ರಿಯನೆನಿಸುತ್ತಾನೋ ಅವನು ಕ್ಷತ್ರಿಯನೆಂದು ಕರೆಸಿಕೊಳ್ಳುತ್ತಾನೆ.
ಕೃಷಿಗೋರಕ್ಷ್ಯವಾಣಿಜ್ಯಂ ಯೋ ವಿಶತ್ಯನಿಶಂ ಶುಚಿಃ |
ವೇದಾಧ್ಯಯನಸಂಪನ್ನಃ ಸ ವೈಶ್ಯ ಇತಿ ಸಂಜ್ಞಿತಃ ॥ 6 ॥
ಕೃಷಿ, ವಾಣಿಜ್ಯ, ಗೋರಕ್ಷಣೆ ಈ ಕಾರ್ಯಗಳಲ್ಲಿ ಶುದ್ಧವಾಗಿ ನಡೆಯುತ್ತಾ ವೇದಾಧ್ಯಯನ ಸಂಪನ್ನನಾದ ವ್ಯಕ್ತಿಯು ವೈಶ್ಯ ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತಾನೆ.
ಸರ್ವಭಕ್ಷರತಿರ್ನಿತ್ಯಂ ಸರ್ವಕರ್ಮಕರೋಽಶುಚಿಃ |
ತ್ಯಕ್ತವೇದಸ್ತ್ವನಾಚಾರಃ ಸ ವೈ ಶೂದ್ರ ಇತಿ ಸ್ಮೃತಃ ॥ 7 ॥
ಸಿಕ್ಕಿದ್ದನ್ನು ಭುಂಜಿಸುತ್ತಾ, ಇಚ್ಛೆಬಂದಂತೆ ಕಾರ್ಯಗಳನ್ನು ನಗುತ್ತಾ, ವೇದಾಧ್ಯಯನ, ಶೌಚಾಚಾರವಿಲ್ಲದೆ ಬದುಕುವ ವ್ಯಕ್ತಿಯು ಶೂದ್ರ ಎನಿಸಿಕೊಳ್ಳುತ್ತಾನೆ.
ಶೂದ್ರೇ ಚೈತದ್ಭವೇಲ್ಲಕ್ಷ್ಯಂ ದ್ವಿಜೇ ಚೈತನ್ನ ವಿದ್ಯತೇ |
ನ ವೈ ಶೂದ್ರೋ ಭವೇಚ್ಛೂದ್ರೋ ಬ್ರಾಹ್ಮಣೋ ನ ಚ ಬ್ರಾಹ್ಮಣಃ ॥ 8 ॥
ಮೇಲೆ ಬ್ರಾಹ್ಮಣನಿಗೆ ಹೇಳಿದ ಸತ್ಯ, ದಯೆ ಮೊದಲಾದ ಗುಣಗಳು ಶೂದ್ರನಲ್ಲಿಯೂ ಇರುವುದುಂಟು, ಬ್ರಾಹ್ಮಣನಲ್ಲಿ ಇಲ್ಲದಿರುವುದುಂಟು. ಆ ಗುಣಗಳಿದ್ದ ಶೂದ್ರನು ಶೂದ್ರನೆನಿಸುವುದಿಲ್ಲ, ಗುಣಗಳಿಲ್ಲದ ಬ್ರಾಹ್ಮಣನು ಬ್ರಾಹ್ಮಣನೂ ಆಗುವುದಿಲ್ಲ.
ಸರ್ವೋಪಾಯೈಸ್ತು ಲೋಭಸ್ಯ ಕ್ರೋಧಸ್ಯ ಚ ವಿನಿಗ್ರಹಃ |

ಏತತ್ ಪವಿತ್ರಂ ಜ್ಞಾತವ್ಯಂ ತಥಾ ಚೈವಾತ್ಮಸಂಯಮಃ ॥ 9 ॥
ಯಾವ ವರ್ಣದವರೇ ಆಗಲಿ, ಲೋಭ-ಮೋಹಗಳನ್ನು ಸಮಸ್ತ ಉಪಾಯಗಳಿಂದ ನಿಗ್ರಹಿಸಬೇಕು. ಇವುಗಳ ನಿಗ್ರಹವೇ ಆತ್ಮಸಂಯಮಕ್ಕೂ, ಜ್ಞಾನಕ್ಕೂ ದೊರೆತ ಫಲವೆಂದು ಭಾವಿಸಬೇಕು.
ನಿತ್ಯಂ ಕ್ರೋಧಾತ್ತಪೋ ರಕ್ಷೇಚ್ಛ್ರಿಯಂ ರಕ್ಷೇತ ಮತ್ಸರಾತ್ |
ವಿದ್ಯಾಂ ಮಾನಾವಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥ 10 ॥
ಕ್ರೋಧದಿಂದ ಮನುಷ್ಯನು ತನ್ನ ಸಂಪತ್ತನ್ನು, ಮತ್ಸರದಿಂದ ತಪಸ್ಸನ್ನೂ, ಮಾನಾವಮಾನಗಳಿಂದ ವಿದ್ಯೆಯನ್ನೂ ಪ್ರಮಾದದಿಂದ ತನ್ನನ್ನು ಹಾಳು ಮಾಡಿಕೊಳ್ಳದಂತೆ, ಎಚ್ಚರದಿಂದ ಇವುಗಳಿಂದ ರಕ್ಷಿಸಬೇಕು.
ಯಸ್ಯ ಸರ್ವೇ ಸಮಾರಂಭಾ ನಿರಾಶೀರ್ಬಂಧನಾಸ್ತ್ವಿಹ |
ತ್ಯಾಗೇ ಯಸ್ಯ ಹುತಂ ಸರ್ವಂ ಸ ತ್ಯಾಗೀ ಸ ಚ ಬುದ್ಧಿಮಾನ್ ॥11॥
ಯಾವ ಮನುಷ್ಯನ ಸಮಸ್ತ ಪ್ರಯತ್ನಗಳು ಆಸೆಗೆ ತುತ್ತಾಗಿ ಇರುವುದಿಲ್ಲವೋ, ಯಾವನು ಮಾಡುವ ಯಜ್ಞ-ದಾನಾದಿಗಳು ಫಲಾಭಿಲಾಷೆಯಿಂದ ಕೂಡಿರುವುದಿಲ್ಲವೋ ಅವನೇ ತ್ಯಾಗಿಯೂ, ಅವನೇ ಬುದ್ಧಿವಂತನು.
ಅಹಿಂಸ್ರಃ ಸರ್ವಭೂತಾನಾಂ ಮೈತ್ರಾಯಣಗತಶ್ಚರೇತ್ |
ಅವಿಸ್ರಂಭೇ ನ ಗಂತವ್ಯಂ ವಿಸ್ರಂಭೇ ಧಾರಯೇನ್ಮನಃ ॥ 12 ॥
ಯಾವ ಪ್ರಾಣಿಗಳಿಗೂ ಹಿಂಸಿಸದ, ಎಲ್ಲಾ ಪ್ರಾಣಿಗಳಲ್ಲಿಯೂ ಮೈತ್ರೀಭಾವವನ್ನು ಹೊಂದುವ, ಪರಿಗ್ರಹವನ್ನೆಲ್ಲಾ ನೀಗಿರುವ, ಬುದ್ಧಿಯಿಂದ ಇಂದ್ರಿಯಗಳನ್ನು ಜಯಿಸಿರುವ ವ್ಯಕ್ತಿಯು ಸಾಧಕನಾಗುತ್ತಾನೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಮನಸ್ಸಿನಿಂದ ಇಂದ್ರಿಯನಿಗ್ರಹವನ್ನು ಸಾಧಿಸಿಕೊಳ್ಳಬೇಕು.
ಪರಿಗ್ರಹಾನ್ ಪರಿತ್ಯಜ್ಯ ಭವೇದ್ ಬುದ್ಧ್ಯಾ ಜಿತೇಂದ್ರಿಯಃ |
ಅಶೋಕಂ ಸ್ಥಾನಮಾತಿಷ್ಠೇದಿಹ ಚಾಮುತ್ರ ಚಾಭಯಮ್ ॥ 13 ॥
ಪರಿಗ್ರಹವನ್ನು ತ್ಯಜಿಸಿ, ಜಿತೇಂದ್ರಿಯವಾದ ಬುದ್ಧಿಯಿಂದ ಎಂದೂ ಮನಸ್ಸಿನಲ್ಲಿ ಸುಖ-ದುಃಖಗಳಿಗೆ ಅವಕಾಶ ನೀಡದ ವ್ಯಕ್ತಿಯು ಇಹ-ಪರಗಳಲ್ಲಿ ಸುಖವನ್ನು ಹೊಂದುತ್ತಾನೆ.
ತಪೋನಿತ್ಯೇನ ದಾಂತೇನ ಮುನಿನಾ ಸಂಯತಾತ್ಮನಾ |
ಅಜಿತಂ ಜೇತುಕಾಮೇನ ಭಾವ್ಯಂ ಸಂಗೇಷ್ವಸಂಗಿನಾ ॥ 14 ॥
ನಿತ್ಯವೂ ತಪೋನಿರತನಾಗಿ, ಭಗವನ್ನಿಷ್ಠವಾದ ಬುದ್ಧಿಯಿಂದ ಮೌನಿಯಾಗಿ, ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಸಂಗಗಳಲ್ಲಿ ಸಂಬಂಧವಿಲ್ಲದಂತೆ ನಿತ್ಯವೂ ಜಯಶೀಲನಾಗಿ ಇರಲು ಬಯಸಬೇಕು.
ಇಂದ್ರಿಯೈರ್ಗೃಹ್ಯತೇ ಯದ್ಯತ್ತತ್ತದ್ವ್ಯಕ್ತಮಿತಿ ಸ್ಥಿತಿಃ |
ಅವ್ಯಕ್ತಮಿತಿ ವಿಜ್ಞೇಯಂ ಲಿಂಗಗ್ರಾಹ್ಯಮತೀಂದ್ರಿಯಮ್ ॥ 15 ॥
ಇಂದ್ರಿಯಗಳಿಗೆ ಗೋಚರವಾಗುವ ಪದಾರ್ಥಗಳು ವ್ಯಕ್ತವೆನಿಸುತ್ತವೆ. ಇಂದ್ರಿಯಗಳನ್ನು ಮೀರಿ ಇರುವ ಅತೀಂದ್ರಿಯವಾದವುಗಳು ಯುಕ್ತಿಗಳಲ್ಲಿ ತಿಳಿಯಲು ಅರ್ಹವಾದವುಗಳು ಅತೀಂದ್ರಿಯವೆನಿಸುತ್ತವೆ. ಇಂತಹ ಅವ್ಯಕ್ತನೆನಿಸಿದ ಡಂಭನನ್ನು ತಿಳಿಯಲು ಯತ್ನಿಸಬೇಕು.
ಮನಃ ಪ್ರಾಣೇ ನಿಗೃಹ್ಣೀಯಾತ್ ಪ್ರಾಣಂ ಬ್ರಹ್ಮಣಿ ಧಾರಯೇತ್ |
ನಿರ್ವೇದಾದೇವ ನಿರ್ವಾಯಾತ್ ನ ಚ ಕಿಂಚಿದ್ ವಿಚಿಂತಯೇತ್ |
ಸುಖಂ ವೈ ಬ್ರಾಹ್ಮಣೋ ಬ್ರಹ್ಮ ಸ ವೈ ತೇನಾಧಿಗಚ್ಛತಿ ॥ 16 ॥
ಮನಸ್ಸನ್ನು ಪ್ರಾಣದಲ್ಲಿಯೂ, ಪ್ರಾಣವನ್ನು ಬ್ರಹ್ಮನಲ್ಲಿಯೂ ನೆಲೆಗೊಳಿಸಬೇಕು. ಬೇರೆ ಏನನ್ನೂ ಚಿಂತಿಸಬಾರದು. ವಿರಕ್ತನಾಗಿ ತೀರ್ಥಕ್ಷೇತ್ರ ಯಾತ್ರೆಗಳನ್ನು ಆಚರಿಸಬೇಕು. ಮನಸ್ಸಿನಲ್ಲಿ ಯಾವ ಸಂಗವನ್ನು ಇಟ್ಟುಕೊಳ್ಳದೆ ಪರಬ್ರಹ್ಮನನ್ನೇ ಚಿಂತಿಸಬೇಕು. ಸುಖಸ್ವರೂಪನಾದವನು ಪರಬ್ರಹ್ಮನೇ ಆಗಿದ್ದಾನೆ. ಯಾರು ಅವನನ್ನು ಚಿಂತಿಸುತ್ತಾರೋ ಅಂತಹ ಪರಬ್ರಹ್ಮನನ್ನೇ ಅವನು ಹೊಂದುತ್ತಾನೆ.
ಶೌಚೇನ ಸತತಂ ಯುಕ್ತಸ್ತಥಾಚಾರಸಮನ್ವಿತಃ |
ಸಾನುಕ್ರೋಶಶ್ಚ ಭೂತೇಷು ತದ್ವಜಾದಿಷು ಲಕ್ಷಣಮ್ ॥ 17 ॥
ಶೌಚ, ಸದಾಚಾರ, ಭೂತದಯೆ ಇವುಗಳು ಬ್ರಾಹ್ಮಣನ ಮುಖ್ಯಲಕ್ಷಣಗಳಾಗಿವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾರನೆಯ ಅಧ್ಯಾಯ
ಭೃಗುವು ಭರದ್ವಾಜರಿಗೆ ಸತ್ಯಾಸತ್ಯಗಳು ಸ್ವರ್ಗ-ನರಕಗಳಿಗೆ ಕಾರಣವೆಂದು, ಅಸತ್ಯದಿಂದುಂಟಾಗುವ ಅನರ್ಥವೇನೆಂಬುದನ್ನು, ಇಹ-ಪರಗಳಿಗಿರುವ ಭೇದವನ್ನು ನಿರೂಪಿಸಿದುದು.
ಭೃಗುಃ
ಸತ್ಯಂ ಬ್ರಹ್ಮ ತಪಃ ಸತ್ಯಂ ಸತ್ಯಂ ಸೃಜತಿ ಚ ಪ್ರಜಾಃ |
ಸತ್ಯೇನ ಧಾರ್ಯತೇ ಲೋಕಃ ಸ್ವರ್ಗಂ ಸತ್ಯೇನ ಗಚ್ಛತಿ ॥ 1 ॥
ಭೃಗು ಭರದ್ವಾಜರೇ, ಸತ್ಯವೇ ಬ್ರಹ್ಮ ಎನಿಸಿದೆ. ಸತ್ಯವೇ ತಪಸ್ಸು. ಪ್ರಜೆಗಳನ್ನು ಸೃಷ್ಟಿಸಿ ಲೋಕವನ್ನು ಧರಿಸುವುದು ಸತ್ಯವೇ ಆಗಿದೆ.

ಸತ್ಯದಿಂದಲೇ ಸ್ವರ್ಗವು ಮನುಷ್ಯನಿಗೆ ಲಭಿಸುತ್ತದೆ.
ಅನೃತಂ ತಮಸೋ ರೂಪಂ ತಮಸಾ ನೀಯತೇ ಹ್ಯಧಃ |
ತಮೋಗ್ರಸ್ತಾ ನ ಪಶ್ಯಂತಿ ಪ್ರಕಾಶಂ ತಮಸಾವೃತಮ್ ॥ 2 ॥
ಅಸತ್ಯವೆಂಬುದು ತಮೋರೂಪವಾದುದು. ಈ ಅಸತ್ಯವು ಮನುಷ್ಯರನ್ನು ಅಧೋಗತಿಗೆ ಕೊಂಡೊಯ್ಯುತ್ತದೆ. ಆ ಅಂಧಂತಮಸ್ಸಿನಲ್ಲಿ ಸಿಕ್ಕಿಬಿದ್ದವರು ಪುಣ್ಯ ಲೋಕಗಳನ್ನು, ಉತ್ತಮ ಜ್ಞಾನಗಳನ್ನು ಅಜ್ಞಾನಾವೃತರಾಗಿ ಕಾಣಲಾರರು.
ಸ್ವರ್ಗಃ ಪ್ರಕಾಶ ಇತ್ಯಾಹುರ್ನರಕಂ ತಮ ಏವ ಚ |
ಸತ್ಯಾನೃತಾತ್ತದುಭಯಂ ಪ್ರಾಪ್ಯತೇ ಜಗತೀಚರೈಃ ॥ 3 ॥
ಇದರಿಂದ ಪ್ರಕಾಶವನ್ನೇ ಸ್ವರ್ಗವೆಂದೂ, ಕತ್ತಲನ್ನೇ ನರಕವೆಂದು ತತ್ತ್ವಜ್ಞರು ಹೇಳುತ್ತಾರೆ. ಪ್ರಾಣಿಗಳಿಗೆ ಸತ್ಯಾಸತ್ಯಗಳೇ ಸ್ವರ್ಗ-ನರಕಗಳಿಗೆ ಮಾರ್ಗಗಳಾಗಿವೆ.
ತತ್ರ ತ್ವೇವಂವಿಧಾ ವೃತ್ತಿರ್ಲೋಕೇ ಸತ್ಯಾನೃತಾ ಭವೇತ್ |
ಧರ್ಮಾಧರ್ಮೌ ಪ್ರಕಾಶಶ್ಚ ತಮೋ ದುಃಖಂ ಸುಖಂ ತಥಾ ॥ 4 ॥
ಲೋಕದಲ್ಲಿ ಸತ್ಯಾಸತ್ಯಗಳೇ ಕ್ರಮವಾಗಿ ಅನ್ಯೋನ್ಯ ವಿರುದ್ಧಗಳಾದ ಧರ್ಮಾಧರ್ಮಗಳಿಗೂ, ಸುಖ-ದುಃಖಗಳಿಗೂ, ತೇಜಸ್ಸು-ತಮಸ್ಸುಗಳಿಗೂ ಕಾರಣವಾಗಿವೆ.
ತತ್ರ ಯತ್ ಸತ್ಯಂ ಸ ಧರ್ಮೋ ಯೋ ಧರ್ಮಃ ಸ
ಪ್ರಕಾಶೋ ಯಃ ಪ್ರಕಾಶಸ್ತತ್ ಸುಖಮಿತಿ |
ತತ್ರ ಯದನೃತಂ ಸೋಽಧರ್ಮೋ ಯೋಽಧರ್ಮ-
ಸ್ತತ್ತಮೋ ಯತ್ತಮಸ್ತದ್ದುಃಖಮಿತಿ ॥ 5 ॥
ಯಾವುದು ಸತ್ಯವೋ ಅದು ಧರ್ಮವೆನಿಸಿದೆ. ಯಾವುದು ಧರ್ಮವೋ ಅದೇ ಪ್ರಕಾಶವೆನಿಸಿದೆ. ಯಾವುದು ಪ್ರಕಾಶರೂಪವಾದ ತತ್ತ್ವಜ್ಞಾನವೋ ಅದೇ ಸುಖವೆನಿಸಿದೆ. ಅದರಂತೆ ಯಾವುದು ಅನೃತವೋ ಅದು ಅಧರ್ಮವೆನಿಸಿದೆ. ಯಾವುದು ಅಧರ್ಮವೋ ಅದೇ ತಮಸ್ಸೆನಿಸಿದೆ. ಆ ತಮೋರೂಪವಾದ ಅಜ್ಞಾನವೇ ದುಃಖವೆನಿಸಿದೆ.
ಶಾರೀರೈರ್ಮಾನಸೈರ್ದುಃಖೈಃ ಸುಖೈಶ್ಚಾಪ್ಯಸುಖೋದಯೈಃ |
ಲೋಕಸೃಷ್ಟಿಂ ಪ್ರಪಶ್ಯಂತೋ ನ ಮುಹ್ಯಂತಿ ವಿಚಕ್ಷಣಾಃ ॥ 6 ॥
ವಿದ್ವಾಂಸರು ಲೋಕದ ದೃಷ್ಟಿಯೆಲ್ಲವೂ ಶಾರೀರಿಕ, ಮಾನಸಿಕವಾದ ದುಃಖ ಪ್ರಚುರಕವಾದುದೆಂದೂ, ಸುಖವು ದುಃಖದಲ್ಲೇ ಪರ್ಯವಸಾನವಾಗುತ್ತದೆಂದೂ ಚೆನ್ನಾಗಿ ತಿಳಿದುಕೊಂಡು ಯಾವುದರಲ್ಲಿಯೂ ಮೋಹವನ್ನು ಹೊಂದುವುದಿಲ್ಲ.
ತತ್ರ ದುಃಖವಿಮೋಕ್ಷಾರ್ಥಂ ಪ್ರಯತೇತ ವಿಚಕ್ಷಣಃ |
ಸುಖಂ ಹ್ಯನಿತ್ಯಂ ಭೂತಾನಾಮಿಹ ಲೋಕೇ ಪರತ್ರ ಚ ॥ 7 ॥
ವಿವೇಕಿಯಾದವನು ಈ ಮಾನವ ಜನ್ಮದಲ್ಲಿ ಒದಗಿಬರುವ ದುಃಖದಿಂದ ತನ್ನನ್ನು ಪೂರ್ಣವಾಗಿ ಬಿಡಿಸಿಕೊಳ್ಳಲು ಪ್ರಯತ್ನಿಸಬೇಕು. ಇಹಲೋಕದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ಪ್ರಾಣಿಗಳಿಗೆ ಲಭಿಸುವ ಸುಖವು ಯಾವಾಗಲೂ ಅಶಾಶ್ವತವಾಗಿದೆ.
ರಾಹುಗ್ರಸ್ತಸ್ಯ ಸೋಮಸ್ಯ ಯಥಾ ಜ್ಯೋತ್ಸ್ನಾ ನ ಭಾಸತೇ |
ತಥಾ ತಮೋಭಿಭೂತಾನಾಂ ಭೂತಾನಾಂ ಭ್ರಶ್ಯತೇ ಸುಖಮ್ ॥ 8 ॥
ರಾಹುವಿನಿಂದ ನುಂಗಲ್ಪಟ್ಟ ಚಂದ್ರನ ಕಾಂತಿಯು ಹೇಗೆ ಪ್ರಕಾಶಕ್ಕೆ ಬರುವುದಿಲ್ಲವೋ, ಇದರಂತೆ ಅಜ್ಞಾನವು ಆವರಿಸಿದ ಮನುಷ್ಯನ ಸುಖವು ನಶಿಸಿ ಹೋಗುತ್ತದೆ.
ತತ್ಖಲು ದ್ವಿವಿಧಂ ಸುಖಮುಚ್ಯತೇ ಶಾರೀರಂ ಮಾನಸಂ ಚ
ಇಹ ಖಲ್ವಮುಷ್ಮಿಂಶ್ಚ ಲೋಕೇ ಸರ್ವಾರಂಭಪ್ರವೃತ್ತಯಃ ಸುಖಾರ್ಥಾ ಅಭಿಧೀಯಂತೇ |
ನ ಹ್ಯತಸ್ತ್ರಿವರ್ಗಫಲಂ ವಿಶಿಷ್ಟತರಮಸ್ತಿ ಸ ಏಷ ಕಾಮ್ಯೋ ಗುಣವಿಶೇಷೋ ಧರ್ಮಾರ್ಥಯೋರಾರಂಭಃ ತದ್ಧೇತುರಸ್ಯೋತ್ಪತ್ತಿಃ ಸುಖಪ್ರಯೋಜನಾ ॥
ವಿಷಯ ಸುಖಗಳಲ್ಲಿ ಶಾರೀರಿಕವೆಂದು, ಮಾನಸಿಕವೆಂದು ಎರಡು ವಿಧವಿದೆ. ಇಹದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ನಡೆಸುವ ಎಲ್ಲಾ ಪ್ರಯತ್ನಗಳು ಸುಖಕ್ಕೋಸ್ಕರವಾಗಿಯೇ ಎಂದು ವೇದಗಳು ಹೇಳುತ್ತವೆ. ಧರ್ಮಾರ್ಥ ಕಾಮಗಳೆಂಬ ತ್ರಿವರ್ಗಗಳ ಫಲದಲ್ಲಿ ಈ ಸುಖಕ್ಕಿಂತ ಬೇರೆಯಾದ ವಿಶೇಷ ಇರುವುದಿಲ್ಲ. ಸುಖವೇ ಯಾವಾಗಲೂ ಎಲ್ಲರಿಗೂ ಆದರಣೀಯವಾಗಿದೆ. ಆತ್ಮನಲ್ಲಿರುವ ಕಾಮ್ಯಗುಣವೂ ಈ ಸುಖವೇ ಆಗಿದೆ. ಇದಕ್ಕಾಗಿಯೇ ಜನರು ಧರ್ಮಾರ್ಥಗಳನ್ನು ಬಯಸುತ್ತಾರೆ. ಕಾರಣ ಈ ಧರ್ಮಾರ್ಥಗಳಿಂದಲೇ ಸುಖದ ಉತ್ಪತ್ತಿಯಾಗುತ್ತದೆ. ಆದ್ದರಿಂದ ಎಲ್ಲರ ಪ್ರಯತ್ನಗಳು ಸುಖವನ್ನುದ್ದೇಶಿಸಿಯೇ ನಡೆಯುತ್ತವೆ.
ಭರದ್ವಾಜಃ
ಯದೇತದ್ ಭವತಾಭಿಹಿತಂ ಸುಖಾನಾಂ ಪರಮಾಃ ಸ್ತ್ರಿಯ ಇತಿ
ತನ್ನ ಗೃಹ್ಣೀಮಃ | ನ ಹ್ಯೇಷಾಮೃಷೀಣಾಂ ಮಹತಿ ಸ್ಥಿತಾನಾಮಪ್ರಾಪ್ಯ ಏಷ ಗುಣವಿಶೇಷೋ | ನ ಚೈನಮಭಿಲಷಂತಿ ಶ್ರೂಯತೇ ಚ ಭಗವಾಂಸ್ತ್ರಿಲೋಕಕೃದ್ ಬ್ರಹ್ಮಾ | ಪ್ರಭುರೇಕಾಕೀ ತಿಷ್ಠತಿ ಬ್ರಹ್ಮಚಾರೀ ನ ಕಾಮಸುಖೇಷ್ವಾತ್ಮಾನಮವದಧಾತಿ | ಅಪಿ ಚ ಭಗವಾನ್ ವಿಶ್ವೇಶ್ವರ ಉಮಾಪತಿಃ ಕಾಮಮಭಿವರ್ತಮಾನಮನಂಗತ್ವೇನ ಶಮಮನಯತ್ | ತಸ್ಮಾದ್ ಬ್ರೂಮೋ ನ ಮಹಾತ್ಮಭಿರಯಂ ಪ್ರತಿಗೃಹೀತೋ ನ ತ್ವೇಷ ತಾವದ್ ವಿಶಿಷ್ಟೋ ಗುಣ ಇತಿ ನೈತದ್ಭಗವತಃ ಪ್ರೇಷ್ಯಾಮಿ | ಭಗವತಾ ತೂಕ್ತಂ ಸುಖಾನಾಂ ಪರಮಾಃ ಸ್ತ್ರಿಯ ಇತಿ ಲೋಕಪ್ರಾವೃದೋಽಪಿ ಚ ಭವತಿ ದ್ವಿವಿಧಃ ಫಲೋದಯಃ ಸುಕೃತಾತ್ ಸುಖಮವಾಪ್ಯತೇ ದುಷ್ಕೃತಾದ್ ದುಃಖಮಿತಿ ಅತ್ರೋಚ್ಯತಾಮ್ ॥10॥
ಭರದ್ವಾಜ ಭೃಗುಮಹರ್ಷಿಯೇ, ನೀವು ಸ್ತ್ರೀ ಸುಖವನ್ನೇ ಪರಮಾರ್ಥವೆಂದು ಹೇಳಿದ್ದೀರಿ. ಆದರೆ ನಾನು ಇದನ್ನು ಒಪ್ಪುವುದಿಲ್ಲ.

ಯಾವ ಸುಖವನ್ನು ಕಾಮಿಸಲು ಯೋಗ್ಯವೆಂದು ಹೇಳಿದೆಯೋ ಅದನ್ನು ಋಷಿಗಳು ಅನಾದರಿಸುತ್ತಾರೆ. ಅವರು ಅದಕ್ಕಾಗಿ ಪ್ರಯತ್ನಿಸುವುದೂ ಇಲ್ಲ. ಇಷ್ಟೇ ಅಲ್ಲದೆ ಸೃಷ್ಟಿಕರ್ತನಾದ, ಪ್ರಭುವಾದ ಬ್ರಹ್ಮನು ಇದ್ಯಾವುದನ್ನೂ ಬಯಸದೆ ಏಕಾಕಿಯಾಗಿ ತಪೋನಿರತನಾಗಿದ್ದನೆಂದು ಕೇಳುತ್ತೇವೆ. ಅವನು ಯಾವ ಸುಖದಲ್ಲಿಯೂ ಮನಸ್ಸನ್ನಿಡದೆ ಬ್ರಹ್ಮಚಾರಿಯಾಗಿದ್ದನು ಎಂದು ಹೇಳುತ್ತಾರೆ. ಉಮಾಪತಿಯಾದ ವಿಶ್ವೇಶ್ವರನು ತನ್ನನ್ನು ಎದುರಿಸಲು ಆಗಮಿಸಿದ ಮನ್ಮಥನನ್ನು ಭಸ್ಮ ಮಾಡಿ ಅನಂಗನಾಗಿ ಮಾಡಿದನು. ಆದ್ದರಿಂದ ನೀವು ಹೇಳಿದ ಸುಖವೆಂಬುದು ಮಹಾತ್ಮರಾದವರಿಗೆ ಆದರಣೀಯವಾದುದಾಗಿ ತೋರುವುದಿಲ್ಲ. ಆತ್ಮನಿಗೆ ಇದು ವಿಶೇಷ ಗುಣವೂ ಅಲ್ಲ. ನೀವು ತಿಳಿಸಿದ ಸ್ತ್ರೀ ಸುಖವೇ ಪರಮಾರ್ಥವೆಂಬ ಮಾತಿನಲ್ಲಿ ನನಗೆ ವಿಶ್ವಾಸವಿಲ್ಲ.
ಸುಕೃತ-ದುಷ್ಕೃತಗಳೆರಡು ಸುಖ- ದುಃಖಗಳಿಗೆ ಕಾರಣವೆಂದು ಫಲಗಳನ್ನು ಎರಡು ವಿಧವಾಗಿ ಹೇಳಿದ್ದು ಲೋಕದ ರೂಢಿಯನ್ನು ಅನುಸರಿಸಿ ಎಂದು ನಾನು ಅರಿತಿದ್ದೇನೆ. ಇದರಲ್ಲಿ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ.
ಭೃಗು
ಅನೃತಾತ್ ಖಲು ತಮಃ ಪ್ರಾದುರ್ಭೂತಂ ತಮೋಗ್ರಸ್ತಾ ಅಧರ್ಮ- ಮೇವಾನುವರ್ತಂತೇ ನ ಧರ್ಮಮ್ | ಕ್ರೋಧಲೋಭಮೋಹ ಮಾನಾನೃತಾದಿಭಿರವಚ್ಛನ್ನಾ ನ ಖಲ್ವಸ್ಮಿಂಲ್ಲೋಕೇ ನ ಚಾಮುತ್ರ ಸುಖಮಾಪ್ನುವಂತಿ |
ವಿವಿಧವ್ಯಾಧಿಗಣೋಪತಾಪೈರವಕೀರ್ಯಂತೇ ವಧಬಂಧರೋಗಪರಿಕ್ಲೇಶಾದಿಭಿಶ್ಚ ಕ್ಷುತ್ಪಿಪಾಸಾಶ್ರಮಕೃತೈರುಪತಾಪೈ- ರುಪತಪ್ಯಂತೇ | ಚಂಡವಾತಾತ್ಯುಷ್ಣಾತಿಶೀತಕೃತೈಶ್ಚ ಪ್ರತಿಭಯೈಃ ಶಾರೀರೈ- ರ್ದುಃಖೈರುಪತಪ್ಯಂತೇ ಬಂಧುಧನವಿನಾಶ ವಿಪ್ರಯೋಗಕೃತೈಶ್ಚ ॥ 11 ॥
ಮಾನಸೈಃ ಶೋಕೈರಭಿಭೂಯಂತೇ ಜರಾಮೃತ್ಯುಕೃತೈಶ್ಚಾನ್ಯೈರಿತಿ ॥12॥
ಭೃಗು ಭರದ್ವಾಜರೇ, ಈ ವಿಷಯದ ನಿರ್ಣಯತತ್ತ್ವವನ್ನು ತಿಳಿಸುತ್ತೇನೆ: ಅನೃತವೆಂಬುದು ತಮಸ್ಸಿಗೆ ಕಾರಣ. ತಮಸ್ಸಿನಿಂದ ಗೃಹಸ್ಥರಾದವರು ಅಧರ್ಮಕ್ಕೆ ಹೋಗುತ್ತಾರೆಯೇ ಹೊರತು ಅವರಿಗೆ ಧರ್ಮದಲ್ಲಿ ಪ್ರವೃತ್ತಿಯು ಹುಟ್ಟುವುದಿಲ್ಲ. ಅಜ್ಞಾನವಶರಾದ ಅವರು ಕ್ರೋಧ-ಲೋಭ-ಮೋಹ-ಮದ ಮುಂತಾದ ದೋಷಗಳಿಂದ ಆಸ್ಪಂದಿತರಾಗಿ ಇಹ-ಪರ ಸುಖಗಳೆರಡನ್ನೂ ಕೆಡಿಸಿಕೊಳ್ಳುತ್ತಾರೆ. ವ್ಯಾಧಿಗಳಿಗೆ ತುತ್ತಾಗುತ್ತಾರೆ. ರೋಗ-ವ್ರಣಾದಿ ಬಾಧೆಗಳಿಗೆ ಗುರಿಯಾಗುತ್ತಾರೆ. ಕೊಲೆ ಮಾಡುವುದು, ಬಂಧನಕ್ಕೆ ತುತ್ತಾಗುವುದು, ಹಸಿವು-ಬಾಯಾರಿಕೆಗಳಿಂದ ಬಳಲುವುದು, ಚಳಿ-ಗಾಳಿ-ಮಳೆ ಮುಂತಾದವುಗಳ ಭಯಕ್ಕೆ, ಬಾಧೆಗೆ ಈಡಾಗುವುದು. ಬಂಧು ವಿಯೋಗ, ಧನ ನಾಶ ಮೊದಲಾದ ಮಾನಸಿಕ ದುಃಖಗಳಿಗೂ, ಜರಾ-ಮರಣಾದಿ ದುಃಖಗಳಿಗೂ ತುತ್ತಾಗುತ್ತಾರೆ.
ಯಸ್ತ್ವೇತೈಃ ಶಾರೀರೈರ್ಮಾನಸೈರ್ದುಃಖೈರ್ನ ಸ್ಪೃಶ್ಯತೇ ಸ ಸುಖಂ ವೇದ|
ನ ಚೈತೇ ದೋಷಾಃ ಸ್ವರ್ಗೇ ಪ್ರಾದುರ್ಭವಂತಿ ತತ್ರ ಭವತಿ ಖಲು ॥
ಇಂತಹ ಶಾರೀರಿಕ, ಮಾನಸಿಕ ಸಂಬಂಧವನ್ನು ಹೊಂದದವರೇ ಸುಖಿಗಳು. ಅವರು ಸುಖವೆಂದರೆ ಏನೆಂಬುದನ್ನು ನಿಜವಾಗಿ ತಿಳಿಯುತ್ತಾರೆ. ಸ್ವರ್ಗದಲ್ಲಿ ಮೇಲೆ ಹೇಳಿದ ಆಧಿ (ಮಾನಸಿಕ ರೋಗಾದಿ)-ವ್ಯಾಧಿ (ದೈಹಿಕ ರೋಗಾದಿ) ಮೊದಲಾದ ದೋಷಗಳು ಉಂಟಾಗುವುದಿಲ್ಲ. ಅಲ್ಲಿ ಒಳ್ಳೆಯ ಸುಖವೇ ಉಂಟಾಗುತ್ತದೆ.
ಸುಸುಖಃ ಪವನಃ ಸ್ವರ್ಗೇ ಗಂಧಶ್ಚ ಸುರಭಿಸ್ತಥಾ |
ಕ್ಷುತ್ಪಿಪಾಸಾ ಶ್ರಮೋ ನಾಸ್ತಿ ನ ಜರಾ ನ ಚ ಪಾಪಕಮ್ ॥ 14 ॥
ಸ್ವರ್ಗದಲ್ಲಿ ಸುಖಕರವಾದ ಸುಗಂಧವಾಯುವು ಯಾವಾಗಲೂ ಬೀಸುತ್ತಿರುತ್ತದೆ. ಅಲ್ಲಿದ್ದವರಿಗೆ ಹಸಿವು-ನೀರಡಿಕೆಗಳ ಶ್ರಮವು ಇರುವುದಿಲ್ಲ. ಜರಾ-ಮರಣಗಳು ಇರುವುದಿಲ್ಲ. ಪಾಪದ ಸಂಬಂಧವೂ ಇರುವುದಿಲ್ಲ.
ನಿತ್ಯಮೇವ ಸುಖಂ ಸ್ವರ್ಗೇ ಸುಖಂ ದುಃಖಮಿಹೋಭಯಮ್ |
ನರಕೇ ದುಃಖಮೇವಾಹುಃ ಸಮಂ ತು ಪರಮಂ ಪದಮ್ ॥ 15 ॥
ಸ್ವರ್ಗದಲ್ಲಿ ನಿತ್ಯವೂ ಸುಖವೇ ಉಂಟಾಗುತ್ತದೆ. ಇಹಲೋಕದಲ್ಲಿ ಸುಖ- ದುಃಖಗಳೆರಡೂ ಮಿಶ್ರವಾಗಿವೆ. ನರಕದಲ್ಲಿ ಯಾವಾಗಲೂ ದುಃಖವೇ ತುಂಬಿರುವುದು. ಆದ್ದರಿಂದ ಸುಖವೆಂಬುದೇ ಉತ್ತಮಸ್ಥಾನವು. ಈ ಸುಖ- ದುಃಖಗಳಿಂದ ರಹಿತವಾದ ವಿಷ್ಣುವಿನ ಪದವೇ ಉತ್ತಮಸ್ಥಾನವು.
ಪೃಥಿವೀ ಸರ್ವಭೂತಾನಾಂ ಜನಿತ್ರೀ ತದ್ವಿಧಾಃ ಸ್ತ್ರಿಯಃ |
ಪುಮಾನ್ ಪ್ರಜಾಪತಿಸ್ತತ್ರ ಶುಕ್ರಂ ತೇಜೋಮಯಂ ವಿದುಃ ॥ 16 ॥
ಈ ಭೂಮಿಯು ಸಮಸ್ತ ಭೂತಗಳಿಗೆ ಉತ್ಪತ್ತಿಸ್ಥಾನವೆನಿಸಿದೆ. ಈ ಭೂಮಿಯಲ್ಲಿ ಸೃಷ್ಟಿಗಾಗಿಯೇ ಸ್ತ್ರೀಯರು ಇದ್ದಾರೆ. ಆ ಪರಲೋಕದಲ್ಲಿ ಪುರುಷನು ಪ್ರಜಾಪತಿಯಾದ ಬ್ರಹ್ಮನೆನಿಸಿದ್ದಾನೆ. ತೇಜೋಮಯವಾದ ಶುಕ್ಲ ಉಳ್ಳವನು.
ಇತ್ಯೇತಲ್ಲೋಕನಿರ್ಮಾಣಂ ಬ್ರಹ್ಮಣಾ ವಿಹಿತಂ ಪುರಾ |
ಪ್ರಜಾ ವಿಪರಿವರ್ತಂತೇ ಸ್ವೈಃ ಸ್ವೈಃ ಕರ್ಮಭಿರಾವೃತಾಃ ॥ 17 ॥
ಬ್ರಹ್ಮನು ಇದೇ ವಿಧದಿಂದ ಲೋಕನಿರ್ಮಾಣವನ್ನು ಹಿಂದೆ ಮಾಡಿದ್ದಾನೆ. ಪ್ರಜೆಗಳು ತಮ್ಮ ತಮ್ಮ ಕರ್ಮಕ್ಕೆ ಅನುಗುಣವಾಗಿ ಸುಖ-ದುಃಖಗಳಲ್ಲಿ ತೊಳಲುತ್ತಿದ್ದಾರೆ.
ವ್ಯಾಖ್ಯಾನ ವಿಶೇಷ ಈ ಪ್ರಕರಣದಲ್ಲಿ ನಿತ್ಯಸುಖ ಸ್ವರ್ಗದಲ್ಲಿದೆ, ನಿತ್ಯ ದುಃಖ ನರಕದಲ್ಲಿದೆ ಎಂದು ಹೇಳಿದ್ದಾರೆ. ಇಲ್ಲಿ ಸ್ವರ್ಗ-ನರಕಗಳೆಂದರೆ ಮೋಕ್ಷ-ಅಂಧಂತಮಸ್ಸುಗಳೆಂದು ಅರ್ಥ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ

ಭೃಗುಋಷಿಗಳು ಭರದ್ವಾಜರಿಗೆ ವರ್ಣಾಶ್ರಮಧರ್ಮಗಳನ್ನು ನಿರೂಪಿಸಿದುದು.
ಭರದ್ವಾಜಃ
ದಾನಸ್ಯ ಕಿಂ ಫಲಂ ಪ್ರಾಹುರ್ಧರ್ಮಸ್ಯ ಚರಿತಸ್ಯ ಚ |
ತಪಸಶ್ಚ ಸುತಪ್ತಸ್ಯ ಸ್ವಾಧ್ಯಾಯಸ್ಯ ಹುತಸ್ಯ ಚ ॥ 1 ॥
ಭರದ್ವಾಜ ಮಹಾತ್ಮರಾದ ಭೃಗುಗಳೇ, ದಾನದ ಫಲವೇನು? ಧರ್ಮದ ಫಲವೇನು? ಇದರಂತೆ ಶೀಲ, ತಪಸ್ಸು, ಅಧ್ಯಯನ, ಹೋಮ ಮೊದಲಾದವುಗಳಿಗೆ ಯಾವ ಯಾವ ಫಲಗಳು ದೊರೆಯುತ್ತವೆ?
ಭೃಗುಃ
ಹುತೇನ ಶಾಮ್ಯತೇ ಪಾಪಂ ಸ್ವಾಧ್ಯಾಯೇ ಶಾಂತಿರುತ್ತಮಾ |
ದಾನೇನ ಭೋಗ ಇತ್ಯಾಹುಸ್ತಪಸಾ ಸರ್ವಮಾಪ್ನುಯಾತ್ ॥ 2 ॥
ಭೃಗು ಭರದ್ವಾಜರೇ, ಹೋಮದಿಂದ ಪಾಪವು ಪರಿಹಾರವಾಗುತ್ತದೆ. ವೇದಾಧ್ಯಯನದಿಂದ ಶಾಂತಿಯು, ದಾನದಿಂದ ಭೋಗಗಳು, ತಪಸ್ಸಿನಿಂದ ಎಲ್ಲವೂ ಲಭಿಸುತ್ತವೆ.
ದಾನಂ ತು ದ್ವಿವಿಧಂ ಪ್ರಾಹುಃ ಪರತ್ರಾರ್ಥಮಿಹೈವ ಚ |
ಸದ್ಭ್ಯೋ ಯದ್ದೀಯತೇ ಕಿಂಚಿತ್ತತ್ ಪರತ್ರೋಪತಿಷ್ಠತಿ ॥ 3 ॥
ದಾನದಲ್ಲಿ ಎರಡು ಬಗೆ ಇದೆ. ಪರಲೋಕಕ್ಕಾಗಿ ಮಾಡುವ ದಾನ. ಇಹಲೋಕದ ಸುಖಕ್ಕಾಗಿ ಮಾಡುವ ದಾನ. ಸತ್ಪಾತ್ರರಲ್ಲಿ ಮಾಡಿದ ದಾನವು ಎಷ್ಟೇ ಅಲ್ಪವಾಗಿದ್ದರೂ ಪರಲೋಕ ಸುಖಕ್ಕೆ ಸಾಧನವಾಗುತ್ತದೆ.
ಅಸತ್ಸು ದೀಯತೇ ಯತ್ತು ತದ್ದಾನಮಿಹ ಭುಜ್ಯತೇ |
ಯಾದೃಶಂ ದೀಯತೇ ದಾನಂ ತಾದೃಶಂ ಫಲಮಾಪ್ಯತೇ ॥ 4 ॥
ಅಸಜ್ಜನರಿಗೆ ಮಾಡಿದ ದಾನವು ಇಹಲೋಕದ ಫಲದಲ್ಲಿಯೇ ಮುಗಿಯುತ್ತದೆ. ಆಯಾ ದಾನಕ್ಕೆ ತಕ್ಕಂತೆ ಫಲಗಳು ಲಭಿಸುತ್ತವೆ.
ಭರದ್ವಾಜಃ
ಕಿಂ ಕಸ್ಯ ಧರ್ಮಚರಣಂ ಕಿಂ ವಾ ಧರ್ಮಸ್ಯ ಲಕ್ಷಣಮ್ |
ಧರ್ಮಃ ಕತಿವಿಧೋ ವಾಪಿ ತದ್ಭವಾನ್ವಕ್ತುಮರ್ಹತಿ ॥ 5 ॥
ಭರದ್ವಾಜ ಮಹರ್ಷಿಗಳೇ, ಧರ್ಮವು ಎಷ್ಟು ವಿಧ? ಯಾವ ಯಾವ ವರ್ಣಾಶ್ರಮಗಳಲ್ಲಿ ಎಂತಹ ಧರ್ಮಗಳನ್ನು ಆಚರಿಸಬೇಕು? ಅದನ್ನು ತಿಳಿಸಿರಿ.
ಭೃಗುಃ
ಸ್ವಧರ್ಮಚರಣೇ ಯುಕ್ತಾ ಯೇ ಭವಂತಿ ಮನೀಷಿಣಃ |
ತೇಷಾಂ ಧರ್ಮಫಲಾವಾಪ್ತಿರ್ಯೋಽನ್ಯಥಾ ಸ ವಿಮುಹ್ಯತಿ ॥ 6 ॥
ಭೃಗು ಯಾವ ಬುದ್ಧಿವಂತರು ತಮ್ಮ ಧರ್ಮಾಚರಣೆಗಳನ್ನು ಶ್ರದ್ಧೆಯಿಂದ ಆಚರಿಸುತ್ತಾರೋ ಅವರಿಗೆ ಆಯಾ ಧರ್ಮಗಳ ಫಲವು ಲಭಿಸುತ್ತದೆ. ಇಲ್ಲದಿದ್ದಲ್ಲಿ ಅವರು ತಾವೇ ಭ್ರಾಂತರಾಗಿ ಅನರ್ಥಕ್ಕೆ ತುತ್ತಾಗುತ್ತಾರೆ.
ಭರದ್ವಾಜಃ
ಯದೇತಚ್ಚಾತುರಾಶ್ರಮ್ಯಂ ಬ್ರಹ್ಮರ್ಷಿವಿಹಿತಂ ಪುರಾ |
ತೇಷಾಂ ಸ್ವೇ ಸ್ವೇ ಯ ಆಚಾರಾಸ್ತಾನ್ಮೇ ವಕ್ತುಮಿಹಾರ್ಹಸಿ ॥ 7 ॥
ಭರದ್ವಾಜ ಪೂರ್ವಕಾಲದ ಬ್ರಹ್ಮರ್ಷಿಗಳು ಬೇರೆ ಬೇರೆ ಆಶ್ರಮಕ್ಕೆ ತಕ್ಕಂತೆ ವಿಧಿಸಿರುವ ಆಚಾರ-ವಿಚಾರಗಳನ್ನು ನನಗೆ ತಿಳಿಸಲು ಯೋಗ್ಯರಾಗಿದ್ದೀರಿ.
ಭೃಗುಃ
ಪೂರ್ವಮೇವ ಭಗವತಾ ಲೋಕಹಿತಮನುತಿಷ್ಠತಾ ಧರ್ಮಸಂರಕ್ಷಣಾರ್ಥಮಾಶ್ರಮಾಶ್ಚತ್ವಾರೋಽಭಿನಿರ್ದಿಷ್ಟಾಃ, ತತ್ರ ಗುರುಕುಲವಾಸಮೇವ ತಾವತ್ ಪ್ರಥಮಮಾಶ್ರಮಮುದಾಹರಂತಿ, ಸಮ್ಯಗತ್ರ ಶೌಚಸಂಸ್ಕಾರವಿನಯನಿಯಮಪ್ರಣೀತೋ, ವಿನೀತಾತ್ಮಾ ಉಭೇ ಸಂಧ್ಯೇ ಭಾಸ್ಕರಾಗ್ನಿದೈವತಾನ್ಯುಪಸ್ಥಾಯ, ವಿಹಾಯ ತಂದ್ರಾಲಸ್ಯೇ ಗುರೋರಭಿವಾದನವೇದಾಭ್ಯಾಸಶ್ರವಣಪವಿತ್ರೀಕೃತಾಂತರಾತ್ಮಾ ತ್ರಿಷವಣಮುಪಸ್ಪೃಶ್ಯ ಬ್ರಹ್ಮಚರ್ಯಾಗ್ನಿಪರಿಚರಣಗುರುಶುಶ್ರೂಷಾನಿತ್ಯೋ ಭೈಕ್ಷ್ಯಾದಿಸರ್ವನಿವೇದಿತಾಂತರಾತ್ಮಾ ಗುರುವಚನನಿರ್ದೇಶಾನುಷ್ಠಾನಾ-ಪ್ರತಿಕೂಲೋ ಗುರುಪ್ರಸಾದಲಬ್ಧಸ್ವಾಧ್ಯಾಯತತ್ಪರಃ ಸ್ಯಾತ್ ॥ 8 ॥
ಭೃಗು ಭರದ್ವಾಜರೇ, ಬ್ರಹ್ಮನು ಧರ್ಮರಕ್ಷಣೆಯನ್ನು ಲೋಕಕ್ಕೆ ಹಿತವನ್ನು ಮಾಡುವ ದೃಷ್ಟಿಯಿಂದ ಮಾಡಿರುತ್ತಾನೆ. ಬೇರೆ ಬೇರೆ ನಾಲ್ಕು ಆಶ್ರಮಧರ್ಮಗಳನ್ನು ಮೊದಲೇ ಉಪದೇಶಿಸಿದ್ದಾನೆ. ಅವುಗಳಲ್ಲಿ ಗುರುಕುಲವಾಸವೆಂಬ ಬ್ರಹ್ಮಚರ್ಯೆಯು ಮೊದಲನೆಯ ಆಶ್ರಮದ ಧರ್ಮವು. ಈ ಆಶ್ರಮದಲ್ಲಿರುವ ವ್ಯಕ್ತಿಯು ಶೌಚ, ಸಂಸ್ಕಾರ, ವ್ರತ, ವಿನಯ, ನಿಯಮ, ಇವುಗಳಿಂದ ವಿನೀತಾತ್ಮನಾಗಿ ಶುದ್ಧಿಯನ್ನು ಉಂಟುಮಾಡಿಕೊಳ್ಳಬೇಕು. ಎರಡು ಸಂಧಿಗಳಲ್ಲಿ ಸೂರ್ಯಾಗ್ನಿಗಳನ್ನು, ಇತರ ದೇವತೆಗಳನ್ನು ಉಪಾಸನೆ ಮಾಡಬೇಕು. ನಿದ್ರೆ, ಆಲಸ್ಯಗಳನ್ನು ತೊರೆದಿರಬೇಕು. ಗುರುವಿಗೆ ನಮಸ್ಕಾರ ಮಾಡುವುದರಲ್ಲಿ ಆಸಕ್ತನಾಗಿರಬೇಕು. ವೇದಗಳನ್ನು ಅಭ್ಯಾಸ ಮಾಡುವುದು, ವೇದಗಳ ವಿಚಾರ ಮಾಡುವುದು ಇವುಗಳಿಂದ ಅಂತರಾತ್ಮವನ್ನು ಶುದ್ಧಿಗೊಳಿಸಬೇಕು. ತ್ರಿಕಾಲ ಸ್ನಾನ, ಬ್ರಹ್ಮಚರ್ಯ, ಅಗ್ನಿಹೋತ್ರ, ಗುರುಶುಶ್ರೂಷೆ, ಪ್ರತಿದಿನವೂ ಭಿಕ್ಷೆಯನ್ನು ಎತ್ತುವುದು, ಭಿಕ್ಷೆಯಿಂದ ತಂದ ಪದಾರ್ಥಗಳನ್ನು ಗುರುವಿನ ಮುಂದೆ ಸಮರ್ಪಿಸುವುದು- ಇವೆಲ್ಲ ಮೊದಲನೆಯ ಆಶ್ರಮದ ಧರ್ಮಗಳು. ಇದರಂತೆ ಗುರುಕುಲವಾಸ ಮಾಡುತ್ತಾ, ಗುರುಗಳು ಹೇಳಿದ್ದನ್ನು ತಿರುಗಿ ಮಾತನಾಡದೆ ಮನಃಪೂರ್ವಕವಾಗಿ ನಡೆಸುವುದು, ಸ್ವಾಧ್ಯಾಯ ತತ್ಪರನಾಗಿರುವುದು ಬ್ರಹ್ಮಚರ್ಯದ ಧರ್ಮವೆನಿಸಿದೆ.
ಭವತಿ ಚಾತ್ರ ಶ್ಲೋಕಃ

ಗುರುಂ ಯಸ್ತು ಸಮಾರಾಧ್ಯ ದ್ವಿಜೋ ವೇದಮವಾಪ್ನುಯಾತ್ |
ತಸ್ಯ ಸ್ವರ್ಗಫಲಾವಾಪ್ತಿಃ ಸಿದ್ಧ್ಯತೇ ಚಾಸ್ಯ ಮಾನಸಮ್ ॥ 9 ॥
ಇದಕ್ಕೆ ಸಂಬಂಧಿಸಿದ ಪ್ರಮಾಣದ ಮಾತು ಇಂತಿದೆ- `ಗುರುವನ್ನು ಆರಾಧಿಸಿ ಅವನಿಂದ ವೇದವನ್ನು ಪಡೆಯತಕ್ಕ ಬ್ರಾಹ್ಮಣನಿಗೆ ಮನಃಶುದ್ಧಿ ಉಂಟಾಗುತ್ತದೆ ಮಾತ್ರವಲ್ಲದೆ ಅವನಿಗೆ ಸ್ವರ್ಗವು ಲಭಿಸುತ್ತದೆ' ಎಂಬುದು ಈ ಶ್ಲೋಕಾರ್ಥವು.
ಗಾರ್ಹಸ್ಥ್ಯಂ ಖಲು ದ್ವಿತೀಯಮಾಶ್ರಮಂ ವದಂತಿ | ತಸ್ಯ ಸಮುದಾಚಾರಲಕ್ಷಣಂ ಸರ್ವಮನುವ್ಯಾಖ್ಯಾಸ್ಯಾಮಃ | ಸಮಾವೃತ್ತಾನಾಂ ಸದಾರಾಣಾಂ ಸಹಧರ್ಮಚರ್ಯಾಫಲಾರ್ಥಿನಾಂ ಗೃಹಾಶ್ರಮೋ
ವಿಧೀಯತೇ | ಧರ್ಮಾರ್ಥಕಾಮಾವಾಪ್ತಿರ್ಹ್ಯತ್ರ ತ್ರಿವರ್ಗಸಾಧನಮವೇಕ್ಷ್ಯ ಗರ್ಹಿತೇನ ಕರ್ಮಣಾ ಧನಾನ್ಯಾದಾಯ ಸ್ವಾಧ್ಯಾಯಪ್ರಕರ್ಷೋಪಲಬ್ಧೇನ ಬ್ರಹ್ಮರ್ಷಿನಿರ್ಮಿತೇನ ವಾ ಅದ್ರಿಸಾರಗತೇನ ವಾ
ಹವ್ಯನಿಯಮಾಭ್ಯಾಸದೈವತಪ್ರಸಾದೋಪಲಬ್ಧೇನ ವಾ ಧನೇನ ಗೃಹಸ್ಥೋ ಗಾರ್ಹಸ್ಥ್ಯಂ ಪ್ರವರ್ತಯೇತ್ | ತದ್ಧಿ ಸರ್ವಾಶ್ರಮಾಣಾಂ ಮೂಲಮುದಾಹರಂತಿ | ಗುರುಕುಲವಾಸಿನಃ ಪರಿವ್ರಾಜಕಾ ಯೇ ಚಾನ್ಯೇ ಸಂಕಲ್ಪಿತವ್ರತನಿಯಮಧರ್ಮಾನುಷ್ಠಾಯಿನ-ಸ್ತೇಷಾಮಪ್ಯತ ಏವ | ಭಿಕ್ಷಾಬಲಿಸಂವಿಭಾಗಾಃ ಪ್ರವರ್ತಂತೇ ॥ 10 ॥
ಗಾರ್ಹಸ್ಥ್ಯವನ್ನು ಎರಡನೆಯ ಆಶ್ರಮವೆಂದು ಹೇಳುತ್ತಾರೆ. ಅದರ ಲಕ್ಷಣಗಳನ್ನು, ಆಚಾರಗಳನ್ನು ವಿವರಿಸುತ್ತೇನೆ: ಬ್ರಹ್ಮಚರ್ಯದಲ್ಲಿ ಗುರುಕುಲವಾಸವನ್ನು ಮುಗಿಸಿ ಬಳಿಕ ಸಮಾವರ್ತನವೆಂಬ ಸಂಸ್ಕಾರವನ್ನು ಮಾಡಿಕೊಳ್ಳಬೇಕು. ನಂತರ ವಿವಾಹಿತನಾಗಿ ಸದಾಚಾರಸಂಪನ್ನನಾಗಿ ಭಾರ್ಯೆಯಿಂದ ಕೂಡಿಕೊಂಡು ಜೀವನ ನಡೆಸುವ ವ್ಯಕ್ತಿಯು ಧರ್ಮಗಳ ಫಲವನ್ನು ಹೊಂದುತ್ತಾನೆ. ಈ ರೀತಿಯಾದ ಕರ್ತವ್ಯಗಳಿಗಾಗಿ ಗೃಹಸ್ಥಾಶ್ರಮವು ವಿಧಿಸಲ್ಪಟ್ಟಿದೆ. ಗೃಹಸ್ಥಧರ್ಮದಲ್ಲಿ ಧರ್ಮ-ಅರ್ಥ-ಕಾಮವೆಂಬ ತ್ರಿವರ್ಗಗಳನ್ನು ದಾಟಿಸುವ ಸೌಲಭ್ಯವಿದೆ. ನಿಂದನೆಗೆ ಯೋಗ್ಯವಲ್ಲದ ಕಾರ್ಯಗಳಿಂದ ವೇದಾಧ್ಯಯನದಲ್ಲಿ ತನಗೆ ಉಂಟಾದ ಮಹತ್ತರ ಬಲದಿಂದ, ಬ್ರಹ್ಮರ್ಷಿಗಳಿಂದ ಆಚರಿಸಲ್ಪಟ್ಟ ಜೀವನಮಾರ್ಗದಿಂದ, ಹವ್ಯ-ಕವ್ಯನಿಯಮಗಳಿಂದಲೂ, ದೇವಪೂಜೆಯಿಂದ ಪ್ರಾಪ್ತವಾದ ಅಥವಾ ಯೋಗ್ಯವಾಗಿ ಲಬ್ಧವಾದ ಧನದಿಂದ ಗೃಹಸ್ಥನು ಗಾರ್ಹಸ್ಥ್ಯಧರ್ಮವನ್ನು ನಡೆಸಬೇಕು. ಈ ಗೃಹಸ್ಥಾಶ್ರಮವನ್ನು ಎಲ್ಲಾ ಆಶ್ರಮಗಳಿಗೂ ಆಧಾರವೆಂದು ಹೇಳುತ್ತಾರೆ. ಗುರುಕುಲವಾಸ ಮಾಡುವ ಬ್ರಹ್ಮಚಾರಿಗಳಿಗೂ ಪರಿವ್ರಾಜಕರೆನಿಸಿದ ಸಂನ್ಯಾಸಿಗಳಿಗೂ ತಮ್ಮ ತಮ್ಮ ಸಂಕಲ್ಪದಂತೆ ವ್ರತಗಳನ್ನು, ನಿಯಮಗಳನ್ನು, ಧರ್ಮಗಳನ್ನು ಅನುಷ್ಠಾನ ಮಾಡುವವರಿಗೆ ಗೃಹಸ್ಥಾಶ್ರಮದಲ್ಲಿರುವ ವ್ಯಕ್ತಿಗಳಿಂದಲೇ ಭಿಕ್ಷೆ, ಬಲಿ, ದಾನಾದಿಗಳು ಎಲ್ಲವೂ ಲಭಿಸುವುದರಿಂದ ಎಲ್ಲ ಆಶ್ರಮಿಗಳಿಗೂ ಗೃಹಸ್ಥನು ಅಶ್ರಯನೆನಿಸಿದ್ದಾನೆ.
ವಾನಪ್ರಸ್ಥಾನಾಂ ದ್ರವ್ಯೋಪಸ್ಕಾರ ಇತಿ ಪ್ರಾಯಶಃ ಖಲ್ವೇತೇ ಸಾಧವಃ ಸಾಧುಪಥ್ಯದರ್ಶನಾಃ
ವಾಧ್ಯಾಯಪ್ರಸಂಗಿನಸ್ತೀರ್ಥಾಭಿಗಮನದೇಶ- ದರ್ಶನಾರ್ಥಂ ಪೃಥಿವೀಂ ಪರ್ಯಟಂತಿ ತೇಷಾಂ ವಾಕ್ಪ್ರದಾನ-ಸೌಮುಖ್ಯಶಕ್ತ್ಯಾಸನಶಯನಾಭ್ಯವಹಾರಸತ್ಕ್ರಿಯಾಶ್ಚೇತಿ ॥ 11 ॥
ವಾನಪ್ರಸ್ಥವೆಂಬ ಮೂರನೆಯ ಆಶ್ರಮದಲ್ಲಿರುವ ವ್ಯಕ್ತಿಗಳಿಗೆ ಧನವಾಗಲೀ, ಇತರ ವಸ್ತುಗಳಾಗಲೀ ಅಪೇಕ್ಷಿಸಲು ಯೋಗ್ಯವಾದುವಲ್ಲ. ಇವರು ಸಾಧುಗಳಾಗಿ ಸಾತ್ವಿಕ ಆಹಾರವನ್ನು ಸ್ವೀಕರಿಸುತ್ತಾ ವೇದಾಧ್ಯಯನ, ತೀರ್ಥಯಾತ್ರೆ, ಪುಣ್ಯಕ್ಷೇತ್ರ ದರ್ಶನ ಎಂಬ ಈ ಕ್ರಿಯೆಗಳಲ್ಲಿಯೇ ನಿತ್ಯವೂ ನಿರತರಾಗಿ ಸಂಚರಿಸಬೇಕು. ಇಂತಹವರನ್ನು ಕಂಡ ಗೃಹಸ್ಥನು ಅವರೆದುರು ಹೋಗಿ ಅವರನ್ನು ಆದರದಿಂದ ನಮಸ್ಕರಿಸಿ ಅಸೂಯೆ ಇಲ್ಲದೆ ಒಳ್ಳೆಯ ಮಾತುಗಳಿಂದ ಆದರಿಸಬೇಕು. ಅವರಿಗೆ ಸಾಧ್ಯವಾದುದನ್ನು ದಾನ ಮಾಡಬೇಕು. ಉತ್ತಮವಾದ ಹಾಸಿಗೆ, ಆಸನಗಳನ್ನು, ಒಳ್ಳೆಯ ಆಹಾರಗಳನ್ನು ಒಪ್ಪಿಸಬೇಕು. ಇದು ಗೃಹಸ್ಥನ ಕರ್ತವ್ಯವಾಗಿದೆ. ಇದೇ ವಿಷಯದಲ್ಲಿ ಒಂದು ಶ್ಲೋಕವಿದೆ.
ಭವತಿ ಚಾತ್ರ ಶ್ಲೋಕಃ
ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ |
ಸ ದತ್ತತ್ವ ದುಷ್ಕೃತಂ ತಸ್ಮೈ ಪುಣ್ಯಮಾದಾಯ ಗಚ್ಛತಿ ॥ 12 ॥
ಯಾವ ಗೃಹಸ್ಥನ ಮನೆಗೆ ಬಂದ ಅತಿಥಿಯು ತನ್ನ ಇಷ್ಟಾರ್ಥವನ್ನು ಪಡೆಯದೆ ಹಿಂದಿರುಗುತ್ತಾನೋ ಅವನು ತನ್ನ ಪಾಪಗಳನ್ನೆಲ್ಲಾ ಗೃಹಸ್ಥನಿಗೆ ಕೊಟ್ಟು ಗೃಹಸ್ಥನ ಪುಣ್ಯವನ್ನು ತೆಗೆದುಕೊಂಡು ಹೋಗುತ್ತಾನೆ ಎಂಬುದು ಶ್ಲೋಕದ ಅಭಿಪ್ರಾಯ.
ಅಪಿ ಚಾತ್ರ ಯಜ್ಞಕ್ರಿಯಾಭಿರ್ದೇವತಾಃ ಪ್ರೀಯಂತೇ |
ನಿವಾಪೇನ ಪಿತರೋ ವೇದಾಭ್ಯಾಸಶ್ರವಣಧಾರಣೇನ ಋಷಯಃ | ಅಪತ್ಯೋತ್ಪಾದನೇನ ಪ್ರಜಾಪತಿರಿತಿ ॥ 13 ॥
ಇದಲ್ಲದೆ ಗೃಹಸ್ಥಾಶ್ರಮದಲ್ಲಿರುವ ವ್ಯಕ್ತಿಗಳು ಯಾಗಗಳಿಂದ ದೇವತೆಗಳನ್ನೂ, ತರ್ಪಣಾದಿಗಳಿಂದ ಪಿತೃಗಳನ್ನೂ, ವೇದದ ಅಧ್ಯಯನದಿಂದ ಶ್ರವಣಧಾರಣದಿಂದ ಋಷಿಗಳನ್ನೂ, ಸಂತಾನಪ್ರಾಪ್ತಿಯಿಂದ ಪ್ರಜಾಪತಿಗಳನ್ನು ತೃಪ್ತಿಪಡಿಸಬೇಕು. ಈ ವಿಷಯದಲ್ಲಿಯೂ ಎರಡು ಶ್ಲೋಕಗಳಿವೆ.
ಶ್ಲೋಕೌ ಚಾತ್ರ ಭವತಃ
ವತ್ಸಲಾಃ ಸರ್ವಭೂತಾನಾಂ ವಾಚ್ಯಾಃ ಶ್ರೋತ್ರಸುಖಾ ಗಿರಃ | ಪರಿವಾದೋಪಘಾತೌ ಚ ಪಾರುಷ್ಯಂ ಚಾತ್ರ ಗರ್ಹಿತಮ್ ॥ 14 ॥
ಎಲ್ಲಾ ಪ್ರಾಣಿಗಳಿಗೂ ಹಿತವಾದ ಕಿವಿಗಿಂಪಾದ ಮಾತುಗಳನ್ನೇ ಗೃಹಸ್ಥನಾದವನು ನುಡಿಯಬೇಕು. ಇತರರನ್ನು ನಿಂದಿಸುವುದು, ಅವರಲ್ಲಿ ತಪ್ಪುಗಳನ್ನು ಹೇಳುವುದು, ಕಠಿಣವಾಗಿ ಮಾತನಾಡುವುದು ಎಂದಿಗೂ ಕೂಡದು.
ಅವಜ್ಞಾನಮಹಂಕಾರೋ ದಂಭಶ್ಚೈವ ವಿಗರ್ಹಿತಃ |
ಅಹಿಂಸಾ ಸತ್ಯಮಕ್ರೋಧಃ ಸರ್ವಾಶ್ರಮಗತಂ ತಪಃ ॥ 15 ॥
ಇತರರಲ್ಲಿ ಅವಮರ್ಯಾದೆ, ಅಹಂಕಾರ, ಡಂಭ ಇವೆಲ್ಲ ನಿಂದ್ಯವಾದವುಗಳು. ಅಹಿಂಸೆ, ಅಕ್ರೋಧ, ಸತ್ಯಸಂಧತೆ ಇವು ಎಲ್ಲಾ ಆಶ್ರಮದವರಿಗೂ ಸಾಮಾನ್ಯವಾದ ತಪೋರೂಪವಾದ ಧರ್ಮವೆನಿಸಿವೆ.
ಅಪಿ ಚಾತ್ರ

ಮಾಲ್ಯಾಭರಣವಸಾತ್ರಭ್ಯಂಗಗಂಧೋಪಭೋಗನೃತ್ತಗೀತವಾದಿತ್ರಶ್ರುತಿಸುಖ-
ನಯನಾಭಿರಾಮಸಂದರ್ಶನಾನಾಂ ಪ್ರಾಪ್ತಿರ್ಭಕ್ಷ್ಯಭೋಜ್ಯಪೇಯಲೇಹ್ಯ- ಚೋಷ್ಯಾಣಾಮಭ್ಯವಹಾರ್ಯಾಣಾಂ
ವಿವಿಧಾನಾಮುಪಭೋಗಃ ಸ್ವದಾರವಿಹಾರಸಂತೋಷಃ ಕಾಮಸುಖಾವಾಪ್ತಿರಿತಿ ॥ 16 ॥
ಗೃಹಸ್ಥಾಶ್ರಮದಲ್ಲಿರುವ ವ್ಯಕ್ತಿಗಳಿಗೆ ಸುಗಂಧ, ಮಾಲ್ಯ, ವಸ್ತ್ರ, ಅಭ್ಯಂಗ ಮೊದಲಾದವುಗಳು ನಿಷಿದ್ಧವೆನಿಸುವುದಿಲ್ಲ. ಆಟ-ಪಾಠಗಳು, ಇಂಪಾದ ವಾದ್ಯಗಳು, ಅಂದವಾದ ನೋಟಗಳು, ಭಕ್ಷ್ಯ-ಭೋಜ್ಯ-ಪೇಯ-ಚೋಷ್ಯ-ಲೇಹ್ಯ ಮೊದಲಾದ ಆಹಾರಗಳು, ಮನಬಂದಂತೆ ಯೋಗ್ಯಪ್ರದೇಶಗಳಲ್ಲಿ ಸಂಚರಿಸುವುದು, ಈ ಎಲ್ಲ ತರಹದ ಸಂತೋಷಗಳನ್ನು ಅನುಭವಿಸಬಹುದು. ಗೃಹಸ್ಥನಿಗೆ ಕಾಮ ಸುಖಗಳ ಲಾಭವೂ ಇದೆ. ಇದೇ ವಿಷಯದಲ್ಲಿ ಶ್ಲೋಕಗಳಿವೆ.
ಶ್ಲೋಕೌ ಚಾತ್ರ ಭವತಃ
ತ್ರಿವರ್ಗಗುಣನಿರ್ವೃತ್ತಿರ್ಯಸ್ಯ ನಿತ್ಯಂ ಗೃಹಾಶ್ರಮೇ |
ಸ ಸುಖಾನ್ಯನುಭೂಯೇಹ ಶಿಷ್ಟಾನಾಂ ಗತಿಮಾಪ್ನುಯಾತ್ ॥ 17 ॥
ಯಾವ ವ್ಯಕ್ತಿಯು ಗೃಹಸ್ಥಾಶ್ರಮದಲ್ಲಿರುವಾಗ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳ ಜೊತೆಗೆ ಮೂರು ಗುಣಗಳಿಂದ ಅತೀತವಾದ ಮೋಕ್ಷವನ್ನು ಸಾಧಿಸಲು ಪ್ರಯತ್ನಿಸುತ್ತಾನೋ ಅವನು ಈ ಸಮಸ್ತ ಸುಖಗಳನ್ನು ಅನುಭವಿಸಿ ಬಳಿಕ ಶಿಷ್ಟರಿಗೆ ದೊರಕುವ ಉತ್ತಮವಾದ ಗತಿಯನ್ನು ಹೊಂದಬಲ್ಲನು.
ಉಂಛವೃತ್ತಿರ್ಗೃಹಸ್ಥೋ ಯಃ ಸ್ವಧರ್ಮಚರಣೇ ರತಃ |
ತ್ಯಕ್ತಕಾಮಸುಖಾರಂಭಸ್ತಸ್ಯ ಸ್ವರ್ಗೋ ನ ದುರ್ಲಭಃ ॥ 18 ॥
ಯಾವ ಗೃಹಸ್ಥನು ಉಂಛವೃತ್ತಿಯಿಂದಾದರೂ ಜೀವಿಸುತ್ತಾ ಸ್ವಧರ್ಮವನ್ನು ಮೀರಿ ನಡೆಯದೆ ಕಾಮಸುಖವನ್ನು ಬಿಟ್ಟಿದ್ದಾನೋ ಅವನಿಗೆ ಸ್ವರ್ಗವು ದುರ್ಲಭವಾದುದಲ್ಲ ಎಂಬುದು ಈ ಶ್ಲೋಕಾಭಿಪ್ರಾಯ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ವಾನಪ್ರಸ್ಥ-ಸಂನ್ಯಾಸಿಗಳ ಲಕ್ಷಣಗಳು. ಹಿಮವತ್ಪರ್ವತದ
ಉತ್ತರದಲ್ಲಿರುವ ಪುಣ್ಯಾತ್ಮರಿಗೆ ದೊರೆಯುವ ಸ್ವರ್ಗಸಮಾನವಾದ
ಲೋಕಗಳ ಬಗ್ಗೆ ಭೃಗುಋಷಿಗಳು ನಿರೂಪಿಸಿದುದು.
ಭೃಗುಃ
ವಾನಪ್ರಸ್ಥಾಃ ಖಲು ಋಷಿಧರ್ಮಮನುಸರಂತಃ ಪುಣ್ಯಾನಿ ತೀರ್ಥಾನಿ ನದೀಪ್ರಸ್ರವಣಾನಿ ಸುವಿವಿಕ್ತೇಷ್ವರಣ್ಯೇಷು ಮೃಗಮಹಿಷವರಾಹಸೃಮರ- ಗಜಾಕೀರ್ಣೇಷು ತಪಸ್ಯಂತೋಽನುಸಂಚರಂತಿ | ತ್ಯಕ್ತಗ್ರಾಮ್ಯ- ವಸಾತ್ರಹಾರೋಪಭೋಗಾ ವನ್ಯೌಷಧಿಮೂಲಫಲಪರ್ಣಪರಿಮಿತವಿಚಿತ್ರ- ನಿಯತಾಹಾರಾಃ ಸ್ಥಾನಾಸನಿನೋ ಭೂಮಿಪಾಷಾಣಸಿಕತಾಶರ್ಕರಾವಾಲುಕಾ- ಭಸ್ಮಶಾಯಿನಃ ಕಾಶಕುಶಚರ್ಮವಲ್ಕಲಸಂವೃತಾಂಗಾಃ ಕೇಶಶ್ಮಶ್ರುನಖ- ರೋಮಧಾರಿಣೋ ನಿಯತಕಾಲೋಪಸ್ಪರ್ಶನಾ ಅಸ್ಕನ್ನಹೋಮಬಲಿ- ಕಾಲಾನುಷ್ಠಾಯಿನಃ ಸಮಿತ್ಕುಶಕುಸುಮೋಪಹಾರ ಹೋಮಾರ್ಜನ- ಲಬ್ಧವಿಶ್ರಾಮಾಃ ಶೀತೋಷ್ಣಪವನನಿಷ್ಪಪ್ತವಿಭಿನ್ನಸರ್ವತ್ವಚೋ ಮಯೋಗಚರ್ಯಾವಿಹಿತಧರ್ಮಾನುಷ್ಠಾನಹೃತಮಾಂಸಶೋಣಿತಾ- ಸ್ತ್ವಗಸ್ಥಿಭೂತಾ ಧೃತಿಪರಾಃ ಸತ್ತ್ವಯೋಗಾಚ್ಛರೀರಾಣ್ಯುದ್ವಹಂತಿ ॥ 1 ॥
ಭೃಗು ಎಲೈ ಭರದ್ವಾಜರೇ ಕೇಳಿ. ವಾನಪ್ರಸ್ಥರು ಋಷಿಧರ್ಮವನ್ನು ಅನುಸರಿಸುತ್ತಾ ಪುಣ್ಯತೀರ್ಥಗಳನ್ನೂ, ಪುಣ್ಯನದಿಗಳನ್ನೂ ಸೇವಿಸುತ್ತಿರುತ್ತಾರೆ. ಏಕಾಂತವಾದ ಅರಣ್ಯಗಳಲ್ಲಿ ಸಂಚರಿಸುತ್ತಾ ಜಿಂಕೆ, ಎಮ್ಮೆ, ಹಂದಿ, ಹುಲಿ, ಕಡವೆ, ಆನೆ ಮೊದಲಾದ ವನಮೃಗಗಳಿಂದ ತುಂಬಿರುವ ಜನರಹಿತವಾದ ಅರಣ್ಯಗಳಲ್ಲಿ ತಪಸ್ಸನ್ನು ಮಾಡುತ್ತಿರುವರು. ಅವರು ಗ್ರಾಮ್ಯಜನರು ಬಯಸುವ ವಸ್ತ್ರ, ಆಹಾರ, ಭೋಗವಸ್ತುಗಳನ್ನು ಎಂದೂ ಬಯಸುವುದಿಲ್ಲ. ಕಾಡಿನಲ್ಲಿ ಸಿಕ್ಕುವ ಹಸಿರು ಎಲೆ, ಗೆಡ್ಡೆ-ಗೆಣಸು ಮೊದಲಾದವುಗಳನ್ನು ಮಿತವಾಗಿ ನಿಯಮದಿಂದ ಸೇವಿಸುತ್ತಾರೆ. ಅವರಿಗೆ ನೆಲವೇ ಶಯನ, ಆಸನಗಳು. ನೆಲದ ಮೇಲೋ, ಬಂಡೆಗಳ ಮೇಲೋ, ಮರಳಿನ ಮೇಲೋ, ನೊರಜು ಕಲ್ಲುಗಳ ಮೇಲೆಯೋ, ಭೂಮಿಯ ಮೇಲೆಯೋ ಮಲಗುತ್ತಾರೆ. ದರ್ಭೆಗಳನ್ನು, ಜಿಂಕೆಯ ಚರ್ಮಗಳನ್ನು, ಮರದ ತೊಗಟೆಯನ್ನು, ನಾರುಗಳನ್ನು ಮೈಗೆ ಮರೆಮಾಡಿಕೊಳ್ಳುತ್ತಾರೆ. ತಲೆಕೂದಲು, ಗಡ್ಡ-ಮೀಸೆ, ಮೈಮೇಲಿನ ಕೂದಲುಗಳನ್ನು ತೆಗೆಸದೆ ಹಾಗೆ ಜೀವಿಸಿರುತ್ತಾರೆ. ಕಾಲಕಾಲಕ್ಕೆ ಸ್ನಾನಗಳನ್ನು, ಬಲಿ-ಹೋಮಗಳನ್ನು ನಡೆಸುತ್ತಾರೆ. ಪ್ರತಿದಿನವೂ ಸಮಿತ್ತು, ದರ್ಭೆ, ಹೂವು, ಇವುಗಳನ್ನು ಸಂಗ್ರಹಿಸಿಕೊಂಡು ಯಜ್ಞವೇದಿಕೆಯನ್ನು ಶುದ್ಧೀಕರಿಸಿ ಹೋಮ ಕಾರ್ಯಗಳನ್ನು ನಡೆಸಿ ಬಳಿಕ ವಿಶ್ರಾಂತಿಯನ್ನು ಹೊಂದುತ್ತಾರೆ. ಅವರು ಚಳಿ, ಮಳೆ, ಗಾಳಿ, ಬಿಸಿಲು ಇವುಗಳನ್ನು ಲಕ್ಷಿಸದೆ ಅವುಗಳನ್ನು ಸಹಿಸಿಕೊಂಡು ಜೀವನ ನಡೆಸುವುದರಿಂದ ಅವರ ದೇಹದ ಚರ್ಮವೆಲ್ಲವೂ ಒಣಗಿ ಜೀರ್ಣವಾಗಿ ಉದುರುತ್ತಿರುತ್ತದೆ. ಹೀಗಿದ್ದರೂ ವ್ರತೋಪವಾಸ-ನಿಯಮಗಳಲ್ಲಿ ಯೋಗಾಭ್ಯಾಸಗಳಲ್ಲಿ, ಅನುಷ್ಠಾನಗಳಲ್ಲಿ ನಿರತರಾಗಿರುತ್ತಾರೆ. ಅವರ ದೇಹದ ರಕ್ತ, ಮಾಂಸ, ಅಸ್ಥಿ, ಚರ್ಮ ಎಲ್ಲವೂ ಒಣಗಿ ಸುಕ್ಕಿಹೋಗಿರುತ್ತವೆ. ಅವರು ದೇಹಸುಖವನ್ನು ಲಕ್ಷ್ಯ ಮಾಡದೆ ದೃಢಮನಸ್ಸಿನಿಂದ ಸತ್ವಗುಣದಿಂದ ದೇಹಯಾತ್ರೆಯನ್ನು ನಡೆಸುತ್ತಾರೆ. ಇವರ ವಿಷಯವಾಗಿ ಒಂದು ಶ್ಲೋಕವಿದೆ.
ಯಸ್ತ್ವೇತಾಂ ನಿಯತಶ್ಚರ್ಯಾಂ ಬ್ರಹ್ಮರ್ಷಿವಿಹಿತಾಂ ಚರೇತ್ |
ಸ ದಹೇದಗ್ನಿವದ್ದೋಷಾಂಜಯೇಲ್ಲೋಕಾಂಶ್ಚ ದುರ್ಜಯಾನ್ ॥ 2 ॥
ಯಾರು ವಾನಪ್ರಸ್ಥನಿಯಮವನ್ನು ಧರಿಸಿ ಬ್ರಹ್ಮರ್ಷಿಗಳ ವಿಧಿಯಂತೆ ಜೀವನವನ್ನು ನಡೆಸುತ್ತಾರೋ ಅವರು ಅಗ್ನಿಯಂತೆ ಸಮಸ್ತ

ದೋಷಗಳನ್ನೂ ಸುಟ್ಟು ಯಾರಿಂದಲೂ ಜಯಿಸಲು ಸಾಧ್ಯವಿಲ್ಲದ ಉತ್ತಮಲೋಕಗಳನ್ನು ಹೊಂದುತ್ತಾರೆ ಎಂಬುದು ಶ್ಲೋಕಾರ್ಥವು.
ಪರಿವ್ರಾಜಕಾನಾಂ ಪುನರಾಚಾರಸ್ತದ್ಯಥಾ | ವಿಮುಚ್ಯಾಗ್ನಿಧನಕಲತ್ರ- ಪರಿಬರ್ಹಸಂಗಾನಾತ್ಮನಃ ಸ್ನೇಹಪಾಶಾನವಧೂಯ ಪರಿವ್ರಜಂತಿ ಸಮಕಾಂಚನಾಸ್ತ್ರಿವರ್ಗಪ್ರವೃತ್ತೇಷ್ವಾರಂಭೇಷ್ವಸಕ್ತಬುದ್ಧಯೋಽರಿಮಿತ್ರೋ- ದಾಸೀನೇಷು ತುಲ್ಯವೃತ್ತಯಃ ಸ್ಥಾವರಜರಾಯುಜಾಂಡಜ ಸ್ವೇದಜೋ ದ್ಭಿಜಾನಾಂ ಭೂತಾನಾಂ ವಾಙ್ಮನಃಕರ್ಮಭಿರನಭಿದ್ರೋಹಿಣೋಽನಿಕೇತಾಃ ಪರ್ವತಪುಲಿನವೃಕ್ಷಮೂಲದೇವತಾಯತನಾನ್ಯನುಚರಂತೋ ವಾಸಾರ್ಥಮುಪೇಯುರ್ನಗರಂ ಗ್ರಾಮಂ ವಾ ನಗರೇ ಪಂಚರಾತ್ರಿಕಾ ಗ್ರಾಮೈಕರಾತ್ರಿಕಾಃ | ಪ್ರವಿಶ್ಯ ಚ ಪ್ರಾಣಧಾರಣಮಾತ್ರಾರ್ಥಂ ದ್ವಿಜಾತೀನಾಂ ಭವನಾನ್ಯಸಂಕೀಣಕರ್ಮಣಾಮುಪತಿಷ್ಠೇಯುಃ ಪಾತ್ರಪತಿತಾಯಾಚಿತಭೈಕ್ಷಾಃ ಕಾಮಕ್ರೋಧದರ್ಪಮೋಹಲೋಭಕಾರ್ಪಣ್ಯದಂಭ ಪರಿವಾದಾಭಿಮಾನಹಿಂಸಾನಿವೃತ್ತಾ ಇತಿ ॥
ಸಂನ್ಯಾಸಿಗಳ ಆಚಾರವನ್ನು ಹೇಳುತ್ತೇನೆ, ಕೇಳು. ಸಂನ್ಯಾಸಿಗಳಿಗೆ ಅಗ್ನಿಹೋತ್ರ ವಿಧಿಯು ಇರುವುದಿಲ್ಲ. ಅವರು ಧನ-ಸಂಪಾದಿಸಬಾರದು. ಹೆಂಡತಿ-ಮಕ್ಕಳನ್ನು ಹೊಂದಿರಬಾರದು. ಉಡುಗೆ, ತೊಡುಗೆ, ಹಾಸಿಗೆ, ಹೊದ್ದಿಕೆ ಇದ್ಯಾವುದನ್ನೂ ಹೊಂದಿರಬಾರದು. ಆಸನವನ್ನು ಹೊಂದಿರಬಾರದು. ಸಮಸ್ತ ಭೋಗಗಳನ್ನು ಮೀರಿ, ಸ್ನೇಹಪಾಶವನ್ನು ಕಡಿದು, ಕಲ್ಲು-ಮಣ್ಣು-ಹೆಂಟೆ-ಬಂಗಾರವೆಂಬ ಭೇದವನ್ನು ತಿಳಿಯದೆ ಸಮವಾಗಿ ಎಲ್ಲವನ್ನೂ ಕಾಣುತ್ತಾ ಸಂಚರಿಸುತ್ತಿರುವರು. ಧರ್ಮ-ಅರ್ಥ-ಕಾಮ ಎಂಬ ತ್ರಿವರ್ಗಗಳಿಗೆ ಸಂಬಂಧಿಸಿದ ಕಾರ್ಯಗಳಿಗೆ ಮನಸ್ಸನ್ನು ಮಾಡದೆ, ಶತ್ರು-ಮಿತ್ರ- ಉದಾಸೀನ ಎಂಬ ಭೇದಬುದ್ಧಿಯನ್ನು ಮಾಡದೆ, ಎಲ್ಲರನ್ನೂ ಸಮದೃಷ್ಟಿಯಿಂದ ನೋಡುತ್ತಾರೆ. ಅವರು ಮಾತು-ಮನಸ್ಸು-ಕೃತಿಗಳಿಂದ ಜರಾಯುಜ-ಸ್ವೇದಜ- ಅಂಡಜ-ಉದ್ಭಿಜಗಳೆಂಬ ಭೂತಗಳಿಗೆ ಎಂದೂ ದ್ವೇಷ ಎಣಿಸಲಾರರು. ಇವರಿಗೆ ಮನೆ ಎಂಬುದಿರುವುದಿಲ್ಲ. ಬೆಟ್ಟಗಳಲ್ಲಿಯೂ, ಸಮುದ್ರ-ನದಿ ತೀರಗಳಲ್ಲಿಯೂ, ಮರದ ಪೊಟರೆಗಳಲ್ಲಿಯೂ, ದೇವಾಲಯಗಳಲ್ಲಿಯೂ ಕಾಲವನ್ನು ಕಳೆಯುತ್ತಾರೆ. ತಮ್ಮ ದೇಹಯಾತ್ರೆಗಾಗಿ ಆಗಾಗ ನಗರಗಳಿಗೆ, ಪಟ್ಟಣಗಳಿಗೆ, ಗ್ರಾಮಗಳಿಗೆ ಹೋಗುತ್ತಾರೆ. ಆದರೆ ಒಂದು ಗ್ರಾಮದಲ್ಲಿ ಒಂದು ರಾತ್ರಿ ಮಾತ್ರ ತಂಗುತ್ತಾರೆ. ನಗರಗಳಲ್ಲಿ ಐದು ರಾತ್ರಿಗಳ ಬಳಿಕ ನಿಲ್ಲಲಾರರು. ಅಂತಹ ಗ್ರಾಮ, ನಗರಗಳಿಗೆ ಹೋದಾಗಲೂ ಪ್ರಾಣಧಾರಣೆಗೆ ಮಾತ್ರ ಸ್ವಕರ್ಮಗಳಲ್ಲಿ ನಿರತರಾದ ಶುದ್ಧರಾದ ಬ್ರಾಹ್ಮಣರ ಮನೆಗೆ ಭಿಕ್ಷೆಗಾಗಿ ಹೋಗಬೇಕು. ಭಿಕ್ಷೆಗೆ ಹೋದಾಗಲೂ ತಾವಾಗಿಯೇ ಬಾಯ್ಬಿಟ್ಟು ಯಾವುದನ್ನೂ ಕೇಳದೆ ಅವರವರು ಇಷ್ಟಪಟ್ಟು ತಮ್ಮ ಪಾತ್ರೆಗೆ ತಂದು ಹಾಕಿದ ಭಿಕ್ಷೆಯನ್ನು ಸ್ವೀಕರಿಸಬೇಕು. ಕಾಮ-ಕ್ರೋಧ-ಲೋಭ-ಮೋಹ-ಕಾರ್ಪಣ್ಯ- ಡಂಭ- ನಿಂದೆ-ಅಭಿಮಾನ-ಹಿಂಸೆ ಎಂಬ ಈ ದುರ್ಗುಣಗಳನ್ನೆಲ್ಲಾ ಬಿಟ್ಟಿರಬೇಕು. ಈ ವಿಷಯದಲ್ಲಿ  ಶ್ಲೋಕಗಳಿವೆ.
ಭವತಿ ಚಾತ್ರ ಶ್ಲೋಕಃ
ಅಭಯಂ ಸರ್ವಭೂತೇಭ್ಯೋ ದತ್ತ್ವಾ ಚರತಿ ಯೋ ಮುನಿಃ |
ನ ತಸ್ಯ ಸರ್ವಭೂತೇಭ್ಯೋ ಭಯಮುತ್ಪದ್ಯತೇ ಕ್ವಚಿತ್ ॥ 4 ॥
ಯಾವ ಮುನಿಯು ಎಲ್ಲಾ ಪ್ರಾಣಿಗಳಿಗೂ ಭಯವಿಲ್ಲದಂತೆ ನಡೆಯುತ್ತಿರುವನೋ ಅವನಿಗೆ ಯಾವ ಪ್ರಾಣಿಯಿಂದಲೂ, ಎಲ್ಲಿಯೂ, ಯಾವ ಭಯವೂ ಇರುವುದಿಲ್ಲ.
ಕೃತ್ವಾಗ್ನಿಹೋತ್ರಂ ಸ್ವಶರೀರಸಂಸ್ಥಂ
ಶಾರೀರಮಗ್ನಿಂ ಸ್ವಮುಖೇ ಜುಹೋತಿ |
ಯೋ ಭೈಕ್ಷಚರ್ಯೋಪಗತೈರ್ಹವಿರ್ಭಿ-
ಶ್ಚಿತಾಗ್ನಿನಾಂ ಸ ವ್ಯತಿಯಾತಿ ಲೋಕಾನ್ ॥ 5 ॥
ಯಾವ ವಿದ್ವಾಂಸನು ತನ್ನ ದೇಹದಲ್ಲಿರುವ ಅಗ್ನಿಯಲ್ಲಿ ಅಗ್ನಿಹೋತ್ರ ವಿಧಿಯನ್ನು ಆಚರಿಸುತ್ತಾನೋ ಎಂದರೆ ಅಗ್ನಿಯಲ್ಲಿ ಬೇಡಿತಂದ ಭೈಕ್ಷ್ಯವೆಂಬ ಹವಿಸ್ಸನ್ನು ತನ್ನ ಬಾಯಿಯ ಮೂಲಕ ಹೋಮ ಮಾಡುತ್ತಾನೋ ಅದರ ಫಲದಿಂದ ಪುಣ್ಯ ಲೋಕಗಳನ್ನು ಹೊಂದುತ್ತಾನೆ.
ಮೋಕ್ಷಾಶ್ರಮಂ ಯಃ ಕುರುತೇ ಯಥೋಕ್ತಂ
ಶುಚಿಃ ಸುಸಂಕಲ್ಪಿತಬುದ್ಧಿಯುಕ್ತಃ |
ಅನಿಂಧನಂ ಜ್ಯೋತಿರಿವ ಪ್ರಶಾಂತಂ
ಸ ಬ್ರಹ್ಮಲೋಕಂ ಶ್ರಯತೇ ದ್ವಿಜಾತಿಃ ॥ 6 ॥
ಯಾವ ದ್ವಿಜನು ಶುಚಿಯಾಗಿ ಮನಸ್ಸಿನಲ್ಲಿ ಯಾವ ಆಸೆಗಳನ್ನು ಇಟ್ಟುಕೊಳ್ಳದೆ ಬುದ್ಧಿಯಿಂದ ಇಂಧನವಿಲ್ಲದ ಬೆಂಕಿಯಂತೆ ಶಾಂತನಾಗಿ ಮೋಕ್ಷಸಾಧನವನ್ನು ಅನುಷ್ಠಾನ ಮಾಡುತ್ತಾನೋ ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ.
ಭರದ್ವಾಜಃ
ಅಸ್ಮಾಲ್ಲೋಕಾತ್ ಪರೋ ಲೋಕಃ ಶ್ರೂಯತೇ ನೋಪಲಭ್ಯತೇ |
ತಮಹಂ ಜ್ಞಾತುಮಿಚ್ಛಾಮಿ ತದ್ಭವಾನ್ವಕ್ತುಮರ್ಹತಿ ॥ 7 ॥
ಭರದ್ವಾಜ ಮಹರ್ಷಿಗಳೇ, ಈ ಲೋಕದಿಂದ ಆಚೆಗೆ ಬೇರೊಂದು ಪುಣ್ಯಲೋಕ ಇರುವುದಾಗಿ ಕೇಳಿದ್ದೇನೆ. ಆದರೆ ಅದನ್ನು ನೋಡಲಾರೆವು. ಅದರ ವಿಚಾರವೇನೆಂದು ನೀವು ನನಗೆ ತಿಳಿಸಬೇಕು.
ಭೃಗುಃ
ಉತ್ತರೇ ಹಿಮವತ್ಪಾರ್ಶ್ವೇ ಪುಣ್ಯೇ ಸರ್ವಗುಣಾನ್ವಿತೇ |
ಪುಣ್ಯಃ ಕ್ಷೇಮ್ಯಶ್ಚ ಕಾಮ್ಯಶ್ಚ ಸ ವರೋ ಲೋಕ ಉಚ್ಯತೇ ॥ 8 ॥
ಭೃಗು ಭರದ್ವಾಜರೇ, ಈ ನಿನ್ನ ಅಭಿಪ್ರಾಯವು ವಸ್ತುಸ್ಥಿತಿಯಾಗಿದೆ. ಇಲ್ಲಿಗೆ ಉತ್ತರದಲ್ಲಿರುವ ಹಿಮವಂತ ಪರ್ವತದಿಂದ ಆಚೆಗೆ ಪುಣ್ಯಕರವೂ, ಸಮಸ್ತ ಗುಣಗಳಿಂದ ಕೂಡಿದುದೂ ಆದ ಪ್ರದೇಶವಿದೆ. ಅದು ಪವಿತ್ರವೂ, ಕ್ಷೇಮಕರವೂ, ಎಲ್ಲ ಸಾಧಕರಿಂದಲೂ

ಅಪೇಕ್ಷಿಸುವ ಪ್ರದೇಶವಾಗಿದೆ. ಅದನ್ನೇ ಉತ್ತಮವಾದ ಲೋಕ ಎನ್ನುತ್ತಾರೆ.
ತತ್ರ ಹ್ಯಪಾಪಕರ್ಮಾಣಃ ಶುಚಯೋಽತ್ಯಂತನಿರ್ಮಲಾಃ |
ಲೋಭಮೋಹಪರಿತ್ಯಕ್ತಾ ಮಾನವಾ ನಿರುಪದ್ರವಾಃ ॥ 9 ॥
ಅಲ್ಲಿ ಮನುಷ್ಯರು ಪಾಪಕರ್ಮಗಳ ಸಂಬಂಧವಿಲ್ಲದೆ ಶುದ್ಧರಾಗಿ ನಿರ್ಮಲ- ಚಿತ್ತರಾಗಿ ಇರುತ್ತಾರೆ. ಲೋಭ-ಮೋಹಗಳಿಂದ ಮುಕ್ತರಾಗಿ, ಯಾವ ಭೂತಗಳಿಗೂ ಉಪದ್ರವಕಾರಿಗಳಾಗದೆ ಇರುತ್ತಾರೆ.
ಸ ಸ್ವರ್ಗಸದೃಶೋ ದೇಶಸ್ತತ್ರ ಹ್ಯುಕ್ತಾಃ ಶುಭಾ ಗುಣಾಃ |
ಕಾಲೇ ಮೃತ್ಯುಃ ಪ್ರಭವತಿ ಸ್ಪೃಶಂತಿ ವ್ಯಾಧಯೋ ನ ಚ ॥ 10 ॥
ಆ ಲೋಕವು ಸ್ವರ್ಗಸದೃಶವಾದ ಶುಭಗುಣಗಳಿಂದ ಕೂಡಿದ ದೇಶವಾಗಿದೆ. ಮೃತ್ಯುವೆಂಬುದು ಅಕಾಲದಲ್ಲಿ ಬರುವುದಿಲ್ಲ. ವ್ಯಾಧಿಗಳು ಅಲ್ಲಿರುವ ವ್ಯಕ್ತಿಗಳನ್ನು ಮುಟ್ಟುವುದಿಲ್ಲ.
ನ ಲೋಭಃ ಪರದಾರೇಷು ಸ್ವದಾರನಿರತೋ ಜನಃ |
ನ ಚಾನ್ಯೋನ್ಯವಧಸ್ತತ್ರ ದ್ರವ್ಯೇಷು ನ ಚ ವಿಸ್ಮಯಃ |
ಪರೋಕ್ಷಧರ್ಮೋ ನೈವಾಸ್ತಿ ಸಂದೇಹೋ ನಾಪಿ ಜಾಯತೇ ॥ 11 ॥
ಅಲ್ಲಿನ ಜನರು ತಮ್ಮ ತಮ್ಮ ಪತ್ನಿಯರಲ್ಲಿ ದೃಢವಾದ ಪ್ರೇಮವುಳ್ಳವರು. ಇತರ ಸ್ತ್ರೀಯರನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಅಲ್ಲಿ ಒಬ್ಬರು ಇನ್ನೊಬ್ಬರನ್ನು ಘಾಸಿಸುವುದು, ಒಬ್ಬರ ಸ್ವತ್ತಿಗೆ ಇನ್ನೊಬ್ಬರು ಅಪೇಕ್ಷೆ ಪಡುವುದು ಮುಂತಾದ ದೋಷಗಳನ್ನು ಹೊಂದಿರುವುದಿಲ್ಲ. ಅಲ್ಲಿ ಅಧರ್ಮದ ಪ್ರಸಕ್ತಿಯೇ ಇಲ್ಲ. ಯಾವ ಸಂಶಯಗಳಿಗೂ ಅವಕಾಶವಿಲ್ಲ.
ಕೃತಸ್ಯ ತು ಫಲಂ ತತ್ರ ಪ್ರತ್ಯಕ್ಷಮುಪಲಭ್ಯತೇ |
ಶಯ್ಯಾಯಾನಾಸನೋಪೇತಾಃ ಪ್ರಾಸಾದಭವನಾಶ್ರಯಾಃ ॥
ಸರ್ವಕಾಮೈರ್ವೃತಾಃ ಕೇಚಿದ್ಧೇಮಾಭರಣಭೂಷಿತಾಃ ॥ 12 ॥
ಅಲ್ಲಿ ನಡೆಸುವ ಕರ್ಮಗಳಿಗೆ ಫಲವು ಪ್ರತ್ಯಕ್ಷವಾಗಿಯೇ ಲಭಿಸುತ್ತದೆ. ಕೆಲವರು ಉತ್ತಮವಾಹನಗಳಿಂದಲೂ, ಆಸನಗಳಿಂದಲೂ, ದಿವ್ಯ ಆಹಾರಗಳಿಂದಲೂ ಭೋಗವನ್ನು ಹೊಂದುತ್ತಾ ಉಪ್ಪರಿಗೆಯ ಭವನಗಳಲ್ಲಿ ಸರ್ವಕಾಮಗಳಿಂದ ಸಮೃದ್ಧಿಯನ್ನು ಪಡೆದು ಹೇಮಾಭರಣಭೂಷಿತರಾಗಿ ಶೋಭಿಸುತ್ತಾರೆ.
ಪ್ರಾಣಧಾರಣಮಾತ್ರಂ ತು ಕೇಷಾಂಚಿದುಪಪದ್ಯತೇ |
ಶ್ರಮೇಣ ಮಹತಾ ಕೇಚಿತ್ಕುರ್ವಂತಿ ಪ್ರಾಣಧಾರಣಮ್ ॥ 13 ॥
ಇನ್ನು ಕೆಲವರು ಪ್ರಾಣಧಾರಣೆಗೆ ಸಾಕಾಗುವಷ್ಟು ಆಹಾರವನ್ನು ಮಾತ್ರ ಸ್ವೀಕರಿಸುವುದೂ ಇದೆ. ಕೆಲವರು ಬಹಳ ಶ್ರಮಪಟ್ಟು ಪ್ರಾಣಧಾರಣೆ ಎಂಬ ಯೋಗವನ್ನು ಆಚರಿಸುತ್ತಿರುತ್ತಾರೆ.
ಇಹ ಧರ್ಮಪರಾಃ ಕೇಚಿತ್ಕೇಚಿನ್ನೈಕೃತಿಕಾ ನರಾಃ |
ಸುಖಿತಾ ದುಃಖಿತಾಃ ಕೇಚಿನ್ನಿರ್ಧನಾ ಧನಿನೋಽಪರೇ ॥ 14 ॥
ಈ ಲೋಕದಲ್ಲಿಯೂ ಕೆಲವರು ಧರ್ಮಪರಾಯಣರು ಇದ್ದಾರೆ, ಕೆಲವರು ವಂಚಕರೂ ಇದ್ದಾರೆ. ಸುಖಿಗಳೂ ಇದ್ದಾರೆ, ದುಃಖಿಗಳೂ ಇದ್ದಾರೆ. ಧನಿಗಳಿದ್ದಾರೆ, ದರಿದ್ರರೂ ಇದ್ದಾರೆ.
ಇಹ ಶ್ರಮೋ ಭಯಂ ಮೋಹಃ ಕ್ಷುಧಾ ತೀವ್ರಾ ಚ ಜಾಯತೇ |
ಲೋಭಶ್ಚಾರ್ಥಕೃತೋ ನೃಣಾಂ ಯೇನ ಮುಹ್ಯಂತಿ ಪಂಡಿತಾಃ ॥ 15 ॥
ಇಲ್ಲಿ ಶ್ರಮ, ಭಯ, ಮೋಹ, ಬಳಲುವಿಕೆ, ಹಸಿವು, ನಿದ್ರೆ ಇವೆಲ್ಲ ಮನುಷ್ಯರನ್ನು ಪೀಡಿಸುತ್ತವೆ. ಇಲ್ಲಿನ ಮನುಷ್ಯರಿಗೆ ಹಣದ ಆಸೆಯು ಪ್ರಬಲವಾಗಿರುತ್ತದೆ. ಈ ಹಣದ ಆಸೆಯು ಪಂಡಿತರ ಬುದ್ಧಿಯನ್ನು ಕೆಡಿಸುತ್ತದೆ.
ಇಹ ಚಿಂತಾ ಬಹುವಿಧಾ ಧರ್ಮಾಧರ್ಮಸ್ಯ ಕರ್ಮಣಃ |
ಯಸ್ತದ್ವೇದೋಭಯಂ ಪ್ರಾಜ್ಞಃ ಪಾಪ್ಮನಾ ನ ಸ ಲಿಪ್ಯತೇ ॥ 16 ॥
ಇಲ್ಲಿ ಧರ್ಮಪರರೂ, ಅಧರ್ಮರತರೂ ಇಬ್ಬರೂ ಸೇರಿರುತ್ತಾರೆ. ಅವರ ಪ್ರವೃತ್ತಿಗಳು ವಿಧವಿಧವಾಗಿರುತ್ತವೆ. ಈ ಎರಡು ಬಗೆಯ ಅಭಿಪ್ರಾಯಗಳನ್ನು ವಿಮರ್ಶಿಸಿ ಪ್ರಾಜ್ಞರು ಪಾಪಕ್ಕೆ ತುತ್ತಾಗುವಂತಹ ಪ್ರಸಂಗವು ಬರುವುದಿಲ್ಲ.
ಸೋಪಧಂ ನಿಕೃತಿಃ ಸ್ತೇಯಂ ಪರಿವಾದೋಽಭ್ಯಸೂಯತಾ |
ಪರೋಪಘಾತೋ ಹಿಂಸಾ ಚ ಪೈಶುನ್ಯಮನೃತಂ ತಥಾ ॥ 17 ॥
ಏತಾನಾಸೇವತೇ ಯಸ್ತು ತಪಸ್ತಸ್ಯ ಪ್ರಹೀಯತೇ |
ಯಸ್ತ್ವೇತಾನ್ನಾಚರೇದ್ ವಿದ್ವಾಂಸ್ತಪಸ್ತಸ್ಯಾಭಿವರ್ಧತೇ ॥ 18 ॥
ಮೋಸ, ಕಳ್ಳತನ, ನಿಂದೆ, ಅಸೂಯೆ, ಪರಪೀಡೆ, ಹಿಂಸೆ, ಚಾಡಿಕೋರತನ, ಅಸತ್ಯಈ ದುರ್ಗುಣಗಳನ್ನು ಯಾರು ಸೇವಿಸುತ್ತಾರೋ ಅವರು ಮಾಡಿದ ತಪಸ್ಸು ನಿರರ್ಥಕವಾಗುತ್ತದೆ. ಇವೆಲ್ಲವನ್ನೂ ಬಿಟ್ಟು ಧೀಮಂತನಾದವನ ತಪಸ್ಸು ಮೇಲೆ ಮೇಲೆ ಅಭಿವೃದ್ಧಿಯನ್ನು ಹೊಂದುತ್ತದೆ.
ಕರ್ಮಭೂಮಿರಿಯಂ ಲೋಕ ಇಹ ಕೃತ್ವಾ ಶುಭಾಶುಭಮ್ |
ಶುಭೈಃ ಶುಭಮವಾಪ್ನೋತಿ ಕೃತ್ವಾಶುಭಮತೋಽನ್ಯಥಾ ॥ 19 ॥
ನಾವು ವಾಸ ಮಾಡುವ ಈ ಲೋಕವು ಕರ್ಮಭೂಮಿ ಎನಿಸುತ್ತದೆ. ಈ ಲೋಕದಲ್ಲಿ ಧರ್ಮಕಾರ್ಯಗಳನ್ನು, ಅಧರ್ಮಕಾರ್ಯಗಳನ್ನು ಆಚರಿಸುವಾಗ ಬಹುವಿಧವಾದ ಪುಣ್ಯ-ಪಾಪಗಳ ಸಂಬಂಧವಿದೆ. ಶುಭಕರ್ಮಗಳಿಂದ ಮಂಗಳವನ್ನು, ಅಶುಭಕರ್ಮಗಳಿಂದ ಅಮಂಗಳವನ್ನು ಹೊಂದುತ್ತಾನೆ.
ಇಹ ಪ್ರಜಾಪತಿಃ ಪೂರ್ವಂ ದೇವಾಃ ಸರ್ಷಿಗಣಾಸ್ತಥಾ |

ಇಷ್ಟ್ವೇಷ್ಟತಪಸಃ ಪೂತಾ ಬ್ರಹ್ಮಲೋಕಮುಪಾಶ್ರಿತಾಃ ॥ 20 ॥
ಪ್ರಜಾಪತಿ ಎನಿಸಿದ ಬ್ರಹ್ಮನು, ದೇವತೆಗಳು, ಮಹರ್ಷಿಗಳು ಇಲ್ಲಿಯೇ ಹಿಂದೆ ಯಜ್ಞಗಳನ್ನು, ತಪಸ್ಸುಗಳನ್ನು ನಡೆಸಿ ಬ್ರಹ್ಮಲೋಕವನ್ನು ಹೊಂದಿರುತ್ತಾರೆ.
ಉತ್ತರಃ ಪೃಥಿವೀಭಾಗಃ ಸರ್ವಪುಣ್ಯತಮಃ ಶುಭಃ |
ಇಹತ್ಯಾಸ್ತತ್ರ ಜಾಯಂತೇ ಯೇ ವೈ ಪುಣ್ಯಕೃತೋ ಜನಾಃ ॥ 21 ॥
ಈ ಭೂಮಿಯ ಉತ್ತರಭಾಗವು ಅತ್ಯಂತ ಶುಭಕರವಾಗಿ ಎಲ್ಲ ರೀತಿಯಲ್ಲೂ ಪುಣ್ಯತಮ ಎನಿಸಿದೆ. ಎಲ್ಲಕ್ಕಿಂತಲೂ ಪುಣ್ಯಮಾಡಿದವರು ಅದರ ಫಲದಿಂದ ಆ ಪ್ರದೇಶದಲ್ಲಿ ಹುಟ್ಟುತ್ತಾರೆ. ಈ ಪುಣ್ಯಕರ್ಮದಿಂದ ಪುಣ್ಯಭೂಮಿಯಲ್ಲಿ ಉತ್ಪತ್ತಿಯನ್ನು ಹೊಂದುತ್ತಾರೆ.
ಅಸತ್ಕರ್ಮಾಣಿ ಕುರ್ವಂತಸ್ತಿರ್ಯಗ್ಯೋನಿಷು ಚಾಪರೇ |
ಕ್ಷೀಣಾಯುಷಸ್ತಥೈವಾನ್ಯೇ ನಶ್ಯಂತಿ ಪೃಥಿವೀತಲೇ ॥ 22 ॥
ಇಲ್ಲಿ ಅಸತ್ಕರ್ಮಗಳನ್ನು ನಡೆಸಿದವರು ತಿರ್ಯಗ್ಯೋನಿಗಳಲ್ಲಿ (ನೀಚಜೀವಿ) ಹುಟ್ಟುತ್ತಾರೆ. ಕೆಲವರು ಅಲ್ಪಾಯುಷಿಗಳಾಗಿ ನಾಶ ಹೊಂದುತ್ತಾರೆ.
ಅನ್ಯೋನ್ಯಭಕ್ಷಣೇ ಸಕ್ತಾ ಲೋಭಮೋಹಸಮನ್ವಿತಾಃ |
ಇಹೈವ ಪರಿವರ್ತಂತೇ ನ ತೇ ಯಾಂತ್ಯುತ್ತರಾಂ ದಿಶಮ್ ॥ 23 ॥
ಇಂತಹ ಪಾಪಜನ್ಮವುಳ್ಳವರು ಒಬ್ಬರನ್ನೊಬ್ಬರು ಲೋಭ-ಮೋಹಗಳಿಂದ ಕೂಡಿದವರಾಗಿ ಹೊಡೆದು ತಿನ್ನುವುದರಲ್ಲಿಯೇ ಆಸಕ್ತರಾಗಿರುತ್ತಾರೆ. ಇಲ್ಲಿಯೇ ಪುನಃ ಪುನಃ ಜನನ-ಮರಣಗಳೆಂಬ ಅಲೆಯಲ್ಲಿ ತೇಲುತ್ತಿರುತ್ತಾರೆ. ಇವರೆಂದಿಗೂ ಉತ್ತರ ದಿಕ್ಕಿಗೆ ಹೋಗಲು ಸಾಧ್ಯವಿಲ್ಲ.
ಯೇ ಗುರೂನುಪಸೇವಂತೇ ನಿಯತಾ ಬ್ರಹ್ಮಚಾರಿಣಃ |
ಪಂಥಾನಂ ಸರ್ವಲೋಕಾನಾಂ ತೇ ಜಾನಂತಿ ಮನೀಷಿಣಃ ॥ 24 ॥
ಯಾರು ನಿಯತಬ್ರಹ್ಮಚಾರಿಗಳಾಗಿ ಗುರುಗಳನ್ನು ಸೇವಿಸುತ್ತಾರೋ ಅಂತಹ ಜ್ಞಾನಿಗಳು ಸಮಸ್ತ ಲೋಕದ ಜ್ಞಾನಿಗಳನ್ನು ಬಲ್ಲವರಾಗಿರುತ್ತಾರೆ.
ಇತ್ಯುಕ್ತೋಽಯಂ ಮಯಾ ಧರ್ಮಃ ಸಂಕ್ಷೇಪಾದ್ ಬ್ರಹ್ಮನಿರ್ಮಿತಃ |
ಧರ್ಮಾಧರ್ಮೌ ಹಿ ಲೋಕಸ್ಯ ಯೋ ವೈ ವೇತ್ತಿ ಸ ಬುದ್ಧಿಮಾನ್ ॥
ಬ್ರಹ್ಮನಿಂದ ವಿಧಿಸಲ್ಪಟ್ಟ ಧರ್ಮಗಳನ್ನು ನಿಮಗೆ ಸಂಕ್ಷಿಪ್ತವಾಗಿ ವಿವರಿಸಿದ್ದೇನೆ. ಧರ್ಮಾಧರ್ಮಗಳನ್ನು ಈ ಲೋಕದಲ್ಲಿ ತಿಳಿದವನೇ ವಿದ್ವಾಂಸನೆನಿಸುತ್ತಾನೆ.
ಭೀಷ್ಮಃ
ಇತ್ಯುಕ್ತೋ ಭೃಗುಣಾ ರಾಜನ್ ಭರದ್ವಾಜಃ ಪ್ರತಾಪವಾನ್ |
ಭೃಗುಂ ಪರಮಧರ್ಮಾತ್ಮಾ ವಿಸ್ಮಿತಃ ಪ್ರತ್ಯಪೂಜಯತ್ ॥ 26 ॥
ಭೀಷ್ಮ ಭೃಗುವಿನ ಮಾತನ್ನು ಕೇಳಿ ಮಹಾತಪಸ್ವಿಯಾದ ಭರದ್ವಾಜನು ವಿಸ್ಮಿತನಾದನು. ಧರ್ಮರಾಜನೇ, ಭರದ್ವಾಜರು ಭೃಗು ಋಷಿಗಳನ್ನು ಬಹಳವಾಗಿ ಪೂಜಿಸಿದರು.
ಏಷ ತೇ ಪ್ರಭವೋ ರಾಜನ್ ಜಗತಃ ಸಂಪ್ರಕೀರ್ತಿತಃ |
ನಿಖಿಲೇನ ಮಹಾಪ್ರಾಜ್ಞ ಕಿಂ ಭೂಯಃ ಶ್ರೋತುಮಿಚ್ಛಸಿ ॥ 27 ॥
ಭೃಗುಋಷಿಗಳು ಹೇಳಿದ ಈ ಪ್ರಪಂಚದ ಉತ್ಪತ್ತಿಪ್ರಕಾರವನ್ನು ನಾನು ವಿವರಿಸಿದ್ದೇನೆ. ಇನ್ನೂ ಕೇಳಬೇಕಾದ ಅಂಶಗಳೇನಾದರೂ ಇದ್ದಲ್ಲಿ ಕೇಳಬಹುದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *

ಹತ್ತೊಂಬತ್ತನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಸದಾಚಾರವನ್ನು ನಿರೂಪಿಸಿದುದು
ಯುಧಿಷ್ಠಿರಃ
ಆಚಾರಸ್ಯ ವಿಧಿಂ ತಾತ ಪ್ರೋಚ್ಯಮಾನಂ ತ್ವಯಾನಘ |
ಶ್ರೋತುಮಿಚ್ಛಾಮಿ ಧರ್ಮಜ್ಞ ಸರ್ವಜ್ಞೋ ಹ್ಯಸಿ ಮೇ ಮತಃ ॥ 1 ॥
ಯುಧಿಷ್ಠಿರ ಆಗ ಧರ್ಮರಾಜನು ಭೀಷ್ಮನನ್ನು ಕುರಿತು `ತಾತಾ! ನೀನು ಸರ್ವಜ್ಞನು. ಸಕಲಧರ್ಮಸೂತ್ರಗಳನ್ನೂ ತಿಳಿದವನು. ಆದುದರಿಂದ ಮನುಷ್ಯನ ಸದಾಚಾರಗಳನ್ನು ಕುರಿತು ನನಗೆ ವಿವರಿಸಬೇಕು'.
ಭೀಷ್ಮಃ
ದುರಾಚಾರಾ ದುರ್ವಿಚೇಷ್ಟಾ ದುಷ್ಪ್ರಜ್ಞಾಃ ಪ್ರಿಯಸಾಹಸಾಃ |
ಅಸಂತೋ ಹ್ಯಭಿವಿಖ್ಯಾತಾಃ ಸಂತಶ್ಚಾಚಾರಲಕ್ಷಣಾಃ ॥ 2 ॥
ಭೀಷ್ಮ ಯುಧಿಷ್ಠಿರಾ! ಕೇಳು. ಲೋಕದಲ್ಲಿ ಕೆಟ್ಟನಡತೆ, ಕೆಟ್ಟಕಾರ್ಯಗಳು, ಕೆಟ್ಟಬುದ್ಧಿ, ಸಾಸಹಕೃತ್ಯಗಳಲ್ಲಿಯೇ ಪ್ರೀತಿ, ಇವು ಯಾರಲ್ಲಿ ಕಾಣುವುವೋ ಅವರು ಅಸತ್ತುಗಳು. ಸತ್ಪುರುಷರಿಗಾದರೋ ಸದಾಚಾರಗಳೇ ಲಕ್ಷಣಗಳು. ಆ ಸದಾಚಾರಗಳು ಎಂತಹುದೆಂಬುದನ್ನು ತಿಳಿಸುವೆನು, ಕೇಳು.

ಪುರೀಷಂ ಯದಿ ವಾ ಮೂತ್ರಂ ಯೇ ನ ಕುರ್ವಂತಿ ಮಾನವಾಃ |
ರಾಜಮಾರ್ಗೇ ಗವಾಂ ಮಧ್ಯೇ ಧಾನ್ಯಮಧ್ಯೇ ಚ ತೇ ಶುಭಾಃ ॥ 3 ॥
ರಾಜಮಾರ್ಗಗಳಲ್ಲಿ, ದನದ ಕೊಟ್ಟಿಗೆಗಳಲ್ಲಿ, ಧಾನ್ಯಗಳು ಪಕ್ವವಾಗಿರುವ ಹೊಲ ಗದ್ದೆಗಳಲ್ಲಿ, ದೇವಾಲಯಗಳಲ್ಲಿ, ಅಗ್ನಿಹೋತ್ರಶಾಲೆಗಳಲ್ಲಿ, ಜಲಾಶಯದ ತೀರ ಪ್ರದೇಶಗಳಲ್ಲಿ ಮೂತ್ರ, ಮಲ, ವಿಸರ್ಜನೆಗಳನ್ನು ಮಾಡದವರು ಸತ್ಪುರುಷರು.
ಶೌಚಮಾವಶ್ಯಕಂ ಕೃತ್ವಾ ದೇವತಾನಾಂ ಚ ತರ್ಪಣಮ್ |
ಧರ್ಮಮಾಹುರ್ಮನುಷ್ಯಾಣಾಮುಪಸ್ಪೃಶ್ಯ ನದೀಂ ತರೇತ್ ॥ 4 ॥
ಪ್ರತಿದಿನವೂ ಅವಶ್ಯಕವಾದ ಶುದ್ಧಿಕಾರ್ಯವನ್ನು ಮಾಡಿಕೊಂಡು ಎಂದರೆ, ಸ್ನಾನಾಚಮನಗಳನ್ನು ಮಾಡಿ ದೇವತೆಗಳನ್ನರ್ಚಿಸಬೇಕು. ಪುಣ್ಯನದಿಯಲ್ಲಿಳಿದು ಸ್ನಾನ ಮಾಡುವುದಕ್ಕೆ ಮೊದಲು ಶುದ್ಧಾಚಮನವನ್ನು ಮಾಡಬೇಕು. ಇವು ಮನುಷ್ಯನಿಗೆ ಸದ್ಧರ್ಮವು.
ಸೂರ್ಯಂ ಸದೋಪತಿಷ್ಠೇತ ನ ಸ್ವಪ್ಯಾದ್ ಭಾಸ್ಕರೋದಯೇ |
ಸಾಯಂ ಪ್ರಾತರ್ಜಪನ್ ಸಂಧ್ಯಾಂ ತಿಷ್ಠೇತ್ ಪೂರ್ವಾಂ ತಥಾಪರಾಮ್ ॥
ಯಾವಾಗಲೂ ತಪ್ಪದೆ ಸೂರ್ಯೋಪಾಸನೆ ಮಾಡಬೇಕು. ಸೂರ್ಯೋದಯ ಕಾಲದಲ್ಲಿ ನಿದ್ರಿಸುತ್ತಿರಬಾರದು. ಬೆಳಗಿನ ಹೊತ್ತು ಪೂರ್ವಾಭಿಮುಖವಾಗಿಯೂ, ಸಂಜೆಯಲ್ಲಿ ಪಶ್ಚಿಮಾಭಿಮುಖವಾಗಿಯೂ ಕುಳಿತು ಗಾಯತ್ರಿಯನ್ನು ಜಪಿಸಬೇಕು.
ಪಂಚಾರ್ದ್ರೋ ಭೋಜನಂ ಕುರ್ಯಾತ್ ಪ್ರಾಙ್ಮುಖೋ ಮೌನಮಾಸ್ಥಿತಃ |
ನ ನಿಂದೇದನ್ನಭಕ್ಷ್ಯಾಂಶ್ಚ ಸ್ವಾದ್ವಸ್ವಾದು ಚ ಭಕ್ಷಯೇತ್ ॥ 6 ॥
ಕೈಗಳು, ಕಾಲುಗಳು, ಮುಖವೆಂಬ ಐದು ಅವಯವಗಳನು ಶುದ್ಧವಾಗಿ ತೊಳೆದುಕೊಂಡು, ಪೂರ್ವಾಭಿಮುಖವಾಗಿ ಕುಳಿತು ಮೌನದಿಂದ ಭೋಜನ ಮಾಡಬೇಕು. ತಾನು ಭುಂಜಿಸತಕ್ಕ ಅನ್ನವನ್ನೂ, ಭಕ್ಷ್ಯವನ್ನೂ, ನಿಂದಿಸದೆ, ಅವೇ ತನಗೆ ಅತ್ಯಂತ ರುಚಿಕರಗಳೆಂದು ಭಾವಿಸಿ ಭುಂಜಿಸಬೇಕು.
ನಾರ್ದ್ರಪಾದಃ ಸಮುತ್ತಿಷ್ಠೇನ್ನಾರ್ದ್ರಪಾಣಿಃ ಸ್ವಪೇನ್ನಿಶಿ |
ದೇವರ್ಷಿನಾರದಪ್ರೋಕ್ತಮೇತದಾಚಾರಲಕ್ಷಣಮ್ ॥ 7 ॥
ಮಲಗಿದ್ದಾಗ ಯಾರಾದರೂ ಕಾಲುಗಳಿಗೆ ನೀರು ಹಾಕಿದಲ್ಲಿ ಒದ್ದೆ ಕಾಲಿನಿಂದ ಏಳಬಾರದು. ನೆನೆದ ಕೈಗಳಿಂದ ರಾತ್ರಿಯಲ್ಲಿ ನಿದ್ರಿಸಬಾರದು. ದೇವರ್ಷಿಯಾದ ನಾರದನು, ಆಚಾರಲಕ್ಷಣಗಳನ್ನು, ಹೀಗೆಂದು ಹೇಳಿರುವನು.
ಶುಚಿಕಾಮಮನಾಹಂ ಚ ದೇವಗೋಷ್ಠಂ ಚತುಷ್ಪಥಮ್ |
ಬ್ರಾಹ್ಮಣಂ ಧಾರ್ಮಿಕಂ ಚೈವ ನಿತ್ಯಂ ಕುರ್ಯಾತ್ ಪ್ರದಕ್ಷಿಣಮ್ ॥ 8 ॥
ಪ್ರತಿನಿತ್ಯವೂ ಹೋಮಾಗ್ನಿಯನ್ನೂ, ಎತ್ತನ್ನೂ, ದೇವಾಲಯಗಳನ್ನೂ, ದನಗಳ ಮುಂದೆಯನ್ನೂ, ಚತುಷ್ಪಥವನ್ನೂ, ಧಾರ್ಮಿಕನಾದ ಬ್ರಾಹ್ಮಣನನ್ನೂ ಪ್ರದಕ್ಷಿಣ ಮಾಡಬೇಕು.
ಅತಿಥೀನಾಂ ಚ ಸರ್ವೇಷಾಂ ಪ್ರೇಷ್ಯಾಣಾಂ ಸ್ವಜನಸ್ಯ ಚ |
ಸಾಮಾನ್ಯಂ ಭೋಜನಂ ಭೃತ್ಯೈಃ ಪುರುಷಸ್ಯ ಪ್ರಶಸ್ಯತೇ ॥ 9 ॥
ಅತಿಥಿಗಳು, ಕೆಲಸಗಾರರು, ಬಂಧುಗಳು ಇವರಿಗೆಲ್ಲ ತನಗೆ ಸಮಾನವಾಗಿಯೇ ಭೋಜನವನ್ನಿಕ್ಕಬೇಕೇ ಹೊರತು ಭೇದವನ್ನು ತೋರಿಸಬಾರದು. ಭೋಜನ ವಿಷಯದಲ್ಲಿ ತಾನು ತನ್ನ ಭೃತ್ಯರಿಗೆ ಸಮಾನವಾಗಿಯೇ ಇರಬೇಕಾದುದು ಮನುಷ್ಯನಿಗೆ ಉತ್ತಮಗುಣವೆಂದು ಗ್ರಹಿಸಲ್ಪಡುವುದು.
ಸಾಯಂ ಪ್ರಾತರ್ಮನುಷ್ಯಾಣಾಮಶನಂ ದೇವನಿರ್ಮಿತಮ್ |
ನಾಂತರಾ ಭೋಜನಂ ದೃಷ್ಟಮುಪವಾಸೀ ತಥಾ ಭವೇತ್ ॥ 10 ॥
ಮನುಷ್ಯನಿಗೆ ದಿನಕ್ಕೆ ಎರಡುಸಾರಿ ಎಂದರೆ, ಹಗಲು ಮತ್ತು ರಾತ್ರಿ ಈ ಎರಡು ಹೊತ್ತುಗಳಲ್ಲಿ ಮಾತ್ರವೇ ಭೋಜನವು ಯುಕ್ತವೆಂದು ವೇದವಿಧಿಯುಂಟು. ಇದು ಹೊರತು ನಡುವೆ ಭೋಜನವು ವಿಧಿಸಲ್ಪಡಲಿಲ್ಲ. ಈ ಎರಡನೇ ಭೋಜನಗಳಲ್ಲಿರತಕ್ಕ ಉಪವಾಸದ ಫಲವನ್ನು ಹೊಂದುವರು.
ಹೋಮಕಾಲೇ ತಥಾ ಜುಹ್ವನೃತುಕಾಲೇ ತಥಾ ವ್ರಜನ್ |
ಅನನ್ಯಸ್ತ್ರೀಜನಃ ಪ್ರಾಜ್ಞೋ ಬ್ರಹ್ಮಚಾರೀ ತಥಾ ಭವೇತ್ ॥ 11 ॥
ಹೋಮಕಾಲದಲ್ಲಿ ಹೋಮ ಮಾಡುವುದು. ಋತುಕಾಲಗಳಲ್ಲಿ ಮಾತ್ರ ಸ್ವಪತ್ನಿಯಲ್ಲಿ ಸೇರುವುದು, ಪರಸ್ತ್ರೀಯರ ಸಂಬಂಧವಿಲ್ಲದಿರುವುದು, ಈ ನಿಯಮ ಉಳ್ಳವರು ಬ್ರಹ್ಮಚರ್ಯೆಯ ಫಲವನ್ನು ಹೊಂದುವರು.
ಅಮೃತಂ ಬ್ರಾಹ್ಮಣೋಚ್ಛಿಷ್ಟಂ ಜನನ್ಯಾ ಹೃದಯಂ ಕೃತಮ್ |
ಉಪಾಸೀತ ಜನಃ ಸತ್ಯಂ ಸತ್ಯಂ ಸಂತ ಉಪಾಸತೇ ॥ 12 ॥
ಬ್ರಾಹ್ಮಣರು ತಿಂದು ಮಿಕ್ಕ ಅನ್ನವು ಅಮೃತಸಮಾನವು. ಅದು ತಾಯಿಯ ಹೃದಯದಂತೆ ಹಿತಕರವಾದುದು. ಅದು ಜನರಿಗೆ ಅತ್ಯಂತ ಗೌರವಾರ್ಹವಾದುದು. ಅಂತಹ ಶೇಷಾನ್ನವನ್ನು ಭುಂಜಿಸುವುದರಿಂದ ಬ್ರಹ್ಮಪ್ರಾಪ್ತಿಯುಂಟು.
ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ತು ಯೋ ನರಃ |
ನಿತ್ಯೋಚ್ಛಿಷ್ಟಃ ಶಂಕುಶುಕೋ ನೇಹಾಯುರ್ವಿಂದತೇ ಮಹತ್ ॥ 13 ॥
ಕೈಯಿಂದ ನೆಲದ ಮಣ್ಣನ್ನು ಕೆರೆಯುವುದು, ಹುಲ್ಲನ್ನು ಕೈಯಿಂದ ಕೀಳುವುದು, ಉಗುರನ್ನು ಕಚ್ಚುತ್ತಿರುವುದು, ಯಾವಾಗಲೂ ಎಂಜಲು ಮಾಡುವುದು, ಕಾಮ ಲೋಭಗಳಿಗೆ ವಶನಾಗಿರುವುದು, ಇಂತಹವರು ದೀರ್ಘಾಯುಷ್ಮಂತರಾಗಿರಲಾರರು.
ಯಜುಷಾ ಸಂಸ್ಕೃತಂ ಮಾಂಸಂ ನಿವೃತ್ತೋ ಮಾಂಸಭಕ್ಷಣಾತ್ |
ನ ಭಕ್ಷಯೇದ್ ವೃಥಾ ಮಾಂಸಂ ಪೃಷ್ಠಮಾಂಸಂ ಚ ವರ್ಜಯೇತ್ ॥

ಮಾಂಸಭಕ್ಷಣವನ್ನು ಬಿಟ್ಟವನು ಯಜುರ್ಮಂತ್ರಗಳಿಂದ ಸಂಸ್ಕರಿಸಲ್ಪಟ್ಟ ಮಾಂಸವನ್ನಾದರೂ ಎಂದೂ ತಿನ್ನಬಹುದು. ಯಾರೂ ಯಜ್ಞಸಂಸ್ಕೃತವಲ್ಲದ ಮಾಂಸವನ್ನು ಸುಮ್ಮನೆ ಭುಜಿಸಲೇಬಾರದು.
ಸ್ವದೇಶೇ ಪರದೇಶೇ ವಾ ಅತಿಥಿಂ ನೋಪವಾಸಯೇತ್ |
ಕಾಮ್ಯಂ ಕರ್ಮಫಲಂ ಲಬ್ಧ್ವಾ ಗುರೂಣಾಮುಪಪಾದಯೇತ್ ॥ 15 ॥
ತಾನು ತನ್ನ ಮನೆಯಲ್ಲಿಯಾಗಲಿ, ತಾನು ಹೋದ ಬೇರೆ ಕಡೆಗಳಲ್ಲಿಯಾಗಲಿ, ಅತಿಥಿಗಳನ್ನು ಉಪವಾಸವಿರಿಸಬಾರದು. ಭಿಕ್ಷೆ ಮೊದಲಾದ ಕಾಮ್ಯಕರ್ಮಗಳ ಫಲಗಳಲ್ಲಿ ತಾನು ಪಡೆದುದನ್ನು ಮೊದಲು ತನ್ನ ಗುರುವಿಗೆ ಅರ್ಪಿಸಬೇಕು.
ಗುರುಭ್ಯ ಆಸನಂ ದೇಯಂ ಕರ್ತವ್ಯಂ ಚಾಭಿವಾದನಮ್ |
ಗುರೂನಭ್ಯರ್ಚ್ಯ ಯುಜ್ಯಂತೇ ಆಯುಷಾ ಯಶಸಾ ಶ್ರಿಯಾ ॥ 16 ॥
ಗುರುವನ್ನು ಕಂಡೊಡನೆ ಆಸನವನ್ನು ಕೊಟ್ಟು ಅಭಿವಾದನ ಮಾಡಬೇಕು. ಗುರುಪೂಜೆಯು ಆಯುಸ್ಸನ್ನೂ, ಯಶಸ್ಸನ್ನೂ, ಸಂಪತ್ತನ್ನೂ ಹೆಚ್ಚಿಸುವುದು.
ನೇಕ್ಷೇತಾದಿತ್ಯಮುದ್ಯಂತಂ ನ ಚ ನಗ್ನಾಂ ಪರಸ್ತ್ರಿಯಮ್ |
ಮೈಥುನಂ ಸಮಯೇ ಧರ್ಮ್ಯಂ ಗುಹ್ಯಂ ಚೈವ ಸಮಾಚರೇತ್ ॥17॥
ಉದಿಸುವ ಸೂರ್ಯನನ್ನೂ, ಬೆತ್ತಲೆಯಾಗಿರುವ ಸ್ತ್ರೀಯನ್ನೂ, ಕಣ್ಣೆತ್ತಿ ನೋಡಬಾರದು. ಋತುಕಾಲದಲ್ಲಿ ಮಾತ್ರವೇ ಪತ್ನೀ ಸಮಾಗಮವು ಧರ್ಮಯುಕ್ತವು. ಅದನ್ನು ಯಾವಾಗಲೂ ಅತಿರಹಸ್ಯವಾಗಿಯೇ ನಡೆಸಬೇಕು.
ತೀರ್ಥಾನಾಂ ಹೃದಯಂ ತೀರ್ಥಂ ಶುಚೀನಾಂ ಹೃದಯಂ ಶುಚಿಃ |
ಸರ್ವಮಾರ್ಯಕೃತಂ ಶೌಚಂ ವಾಲಸಂಸ್ಪರ್ಶನಾನಿ ಚ ॥ 18 ॥
ತೀರ್ಥಗಳ ರಹಸ್ಯವೆಲ್ಲ ಧರ್ಮದ ಮನದಲ್ಲಡಗಿರುವುದು. ಶುಚಿತ್ವದ ರಹಸ್ಯವು ಅಗ್ನಿಯಲ್ಲಿರುವುದು. ಶಿಷ್ಟರ ಕಾರ್ಯವು ಎಂತಹುದಾಗಿದ್ದರೂ, ಶುಚಿ. ಗೋಪುಚ್ಛ ಸ್ಪರ್ಶನಾದಿಗಳೂ ಕೂಡ ಧರ್ಮಯುಕ್ತವಾದ ಸದಾಚಾರಗಳೇ.
ದರ್ಶನೇ ದರ್ಶನೇ ನಿತ್ಯಂ ಸುಖಪ್ರಶ್ನಮುದಾಹರೇತ್ |
ಸಾಯಂ ಪ್ರಾತಶ್ಚ ವಿಪ್ರಾಣಾಂ ಪ್ರದಿಷ್ಟಮಭಿವಾದನಮ್ ॥ 19 ॥
ಇತರರನ್ನು ನೋಡಿದಾಗಲೆಲ್ಲ ಸುಖಪ್ರಶ್ನೆಯನ್ನು ಮಾಡುವುದೂ, ಬೆಳಗ್ಗೆ, ಸಂಧ್ಯಾಕಾಲಗಳಲ್ಲಿ ಬ್ರಾಹ್ಮಣರಿಗೆ ಅಭಿವಾದನ ಮಾಡುವುದೂ ಸದಾಚಾರಗಳೆಂದು ವಿಧಿಸಲ್ಪಟ್ಟಿದೆ.
ದೇವಗೋಷ್ಠೇ ಗವಾಂ ಮಧ್ಯೇ ಬ್ರಾಹ್ಮಣಾನಾಂ ಕ್ರಿಯಾಪಥೇ |
ಸ್ವಾಧ್ಯಾಯೇ ಭೋಜನೇ ಚೈವ ದಕ್ಷಿಣಂ ಪಾಣಿಮುದ್ಧರೇತ್ ॥ 20 ॥
ದೇವಾಲಯಗಳಲ್ಲಿ, ದನದ ಕೊಟ್ಟಿಗೆಗಳಲ್ಲಿ, ಬ್ರಾಹ್ಮಣರಿಗೆ ವಿಧಿಸಲ್ಪಟ್ಟ ಕ್ರಿಯೆಗಳನ್ನು ನಡೆಸುವ ಸಮಯಗಳಲ್ಲಿ, ವೇದಾಧ್ಯಯನ ಕಾಲಗಳಲ್ಲಿ, ಭೋಜನ ಕಾಲದಲ್ಲಿ ಈ ಸಮಯಗಳೊಳಗೆಲ್ಲ ಬ್ರಾಹ್ಮಣನು ಬಲಗೈಯಿಂದ ಭೂಮಿಯನ್ನು ಮುಟ್ಟಿ ಅಲ್ಲಿರುವ ಪುಣ್ಯಧೂಳನ್ನು ಎತ್ತಿ ತಲೆಯಲ್ಲಿಟ್ಟುಕೊಳ್ಳಬೇಕು.
ಪಣ್ಯಾನಾಂ ಶೋಭನಂ ಪಣ್ಯಂ ಕೃಷೀಣಾಂ ಋಧ್ಯತಾಂ ಕೃಷಿಃ |
ಬಹುಕಾರಂ ಚ ಸಸ್ಯಾನಾಂ ವಾಹ್ಯೇ ವಾಹ್ಯಂ ತಥಾ ಗವಾಮ್ ॥ 21 ॥
ಉತ್ತಮ ಬ್ರಾಹ್ಮಣರನ್ನು ಹಗಲು ಮತ್ತು ಸಂಜೆಯ ಹೊತ್ತಿನಲ್ಲಿ ನಮಸ್ಕರಿಸಿ ಪೂಜಿಸುವುದರಿಂದ, ವೈಶ್ಯರಿಗೆ ವ್ಯಾಪಾರ ಪದಾರ್ಥಗಳೂ, ಕೃಷಿಮಾಡತಕ್ಕದವರಿಗೆ ಒಳ್ಳೇ ಬೆಳೆಯೂ ವೃದ್ಧಿ ಹೊಂದುವುವು. ಅಲ್ಲದೆ ಅಂತಹವರಿಗೆ ಧಾನ್ಯ ಸಮೃದ್ಧಿಯೂ ಹೆಚ್ಚುವುದು. ವ್ಯಾಖ್ಯಾನ ವಿಶೇಷ ಮಾರಾಟದ ವಸ್ತುಗಳನ್ನು ಕಂಡು `ಶೋಭನಂ ಪಣ್ಯಮಸ್ತು' ಎಂದು; ಕೃಷಿಯನ್ನು ಕಂಡು `ಋಧ್ಯತಾಂ ಕೃಷಿಃ' ಎಂದು; ಸಸ್ಯಗಳನ್ನು ಕಂಡು `ಬಹ್ವಸು' ಎಂದು; ಗಾಡಿಹೊತ್ತ ಎತ್ತುಗಳನ್ನು ಕಂಡು `ಸುವಾಹ್ಯಮಸ್ತು' ಎಂದು; ಭೋಜನದಲ್ಲಿ `ಸಂಪನ್ನಂ' ಎಂದು; ಜಲಪಾನದಲ್ಲಿ `ತೃಪ್ತಿರಭೂತ್' ಎಂದು; ಪಾಯಸ ಹುಗ್ಗಿ ತಿನ್ನುವಾಗ `ಕ್ಷೀರಘೃತಾದಿನಾ ಸುಶೃತಮಭೂತ್' ಎಂದು; ಮಂಡನದಲ್ಲಿ `ಆಯುಷ್ಯಮಸ್ತು' ಎಂದೂ ಹೇಳಬೇಕು.
ಸಂಪನ್ನಂ ಭೋಜನೇ ನಿತ್ಯಂ ಪಾನೀಯೇ ತರ್ಪಣಂ ತಥಾ |
ಸುಶೃತಂ ಪಾಯಸೇ ಬ್ರೂಯಾದ್ಯವಾಗ್ವಾಂ ಕೃಸರೇ ತಥಾ ॥ 22 ॥
ಅತಿಥಿಗಳಿಗೆ ಭೋಜನವನ್ನಿಡುವಾಗ ಭೋಜನ ಮಾಡಿಸುವವನು ಸಂಪನ್ನವೇ (ಸಾಕಾಯಿತೇ) ಎಂದು ಕೇಳಬೇಕು. ಭುಜಿಸುವವನು ಅದಕ್ಕೆ ಪ್ರತ್ಯುತ್ತರವಾಗಿ `ಸುಸಂಪನ್ನಂ' ಎಂದು ಹೇಳಬೇಕು. ಹಾಗೆಯೇ ಪಾನೀಯವನ್ನು ಕೊಡುವಾಗ ಕೊಡುವವನು `ತೃಪ್ತಿಯೇ' ಎಂದು ಕೇಳಬೇಕು. ಪಾಯಸ, ಗಂಜಿ, ಚಿತ್ರಾನ್ನ ಎಂಬೀ ಪದಾರ್ಥಗಳನ್ನು ಅತಿಥಿಗೆ ಇಕ್ಕಿದಾಗ, `ಶೃತವೇ' (ಚೆನ್ನಾಗಿ ಬಡಿಸಲ್ಪಟ್ಟಿತೇ) ಎಂದು ಕೇಳಬೇಕು.
ಶ್ಮಶ್ರುಕರ್ಮಣಿ ಸಂಪ್ರಾಪ್ತೇ ಕ್ಷುತೇ ಸ್ನಾನೇಽಥ ಭೋಜನೇ |
ವ್ಯಾಧಿತಾನಾಂ ಚ ಸರ್ವೇಷಾಮಾಯುಷ್ಯಮಭಿನಂದನಮ್ ॥ 23 ॥
ಕ್ಷೌರ ಮಾಡಿಸಿಕೊಳ್ಳುವವನು, ಸೀನುವವನು, ಸ್ನಾನ ಮಾಡುವವನು, ಭೋಜನ ಮಾಡುವವನು, ರೋಗಿಗಳು ಇವರನ್ನು ಕಂಡಾಗ `ಆಯುಷ್ಯಂ' ಎಂದು ಹೇಳುವುದು ಕ್ಷೇಮಕರವು.
ಪ್ರತ್ಯಾದಿತ್ಯಂ ನ ಮೇಹೇತ ನ ಪಶ್ಯೇದಾತ್ಮನಃ ಶಕೃತ್ |
ಸುತಸ್ತ್ರಿಯಾ ಚ ಶಯನಂ ಸಹಭೋಜ್ಯಂ ಚ ವರ್ಜಯೇತ್ ॥ 24 ॥
ಸೂರ್ಯನಿಗಿದಿರಾಗಿ ಮೂತ್ರ ವಿಸರ್ಜನೆ ಮಾಡಬಾರದು. ತನ್ನ ಮಲವನ್ನು ತಾನು ನೋಡಬಾರದು. ಮಕ್ಕಳೊಡನೆಯೂ, ಸ್ತ್ರೀಯರೊಡನೆಯೂ ಸಹಪಂಕ್ತಿಯಲ್ಲಿ ಭೋಜನಕ್ಕೆ ಕುಳ್ಳಿರಬಾರದು.
ತ್ವಂಕಾರಂ ನಾಮಧೇಯಂ ಚ ಜ್ಯೇಷ್ಠಾನಾಂ ಪರಿವರ್ಜಯೇತ್ |

ಅವರಾಣಾಂ ಸಮಾನಾನಾಮುಭಯೇಷಾಂ ನ ದುಷ್ಯತಿ ॥ 25 ॥
ತನಗಿಂತಲೂ ದೊಡ್ಡವರನ್ನು `ನೀನು' ಎಂದಾಗಲಿ, ಹೆಸರನ್ನು ಹಿಡಿದಾಗಲಿ ಮಾತಾಡಿಸಬಾರದು. ತನಗಿಂತಲೂ ಚಿಕ್ಕವರಲ್ಲಿ ಮತ್ತು ಸಮಾನ ವಯಸ್ಕರಲ್ಲಿ ಹಾಗೆ ಹೇಳುವುದರಿಂದ ದೋಷವಿಲ್ಲ.
ಹೃದಯಂ ಪಾಪವೃತ್ತಾನಾಂ ಪಾಪಮಾಖ್ಯಾತಿ ವೈ ಕೃತಮ್ |
ಜ್ಞಾನಪೂರ್ವಂ ವಿನಶ್ಯಂತಿ ಗೂಹಮಾನಾ ಮಹಾಜನೇ ॥ 26 ॥
ಜ್ಞಾನಪೂರ್ವಂ ಕೃತಂ ಪಾಪಂ ಛಾದಯಂತ್ಯಬಹುಶ್ರುತಾಃ |
ನೈನಂ ಮನುಷ್ಯಾಃ ಪಶ್ಯಂತಿ ಪಶ್ಯಂತಿ ತ್ರಿದಿವೌಕಸಃ ॥ 27 ॥
ಪಾಪಿಷ್ಟರ ಹೃದಯವನ್ನು ಅವರ ಮುಖಲಕ್ಷಣವೇ ಹೊರಪಡಿಸುವುದು. ಅಂತಹ ಪಾಪಿಗಳು ತಮ್ಮ ಅಕೃತ್ಯವನ್ನು ಜನಗಳಿಗೆ ತಿಳಿಯದಂತೆ ಮರೆಸಿಟ್ಟು, ಅದರಿಂದ ಕೆಟ್ಟು ಹೋಗುವರು. ಮನುಷ್ಯರು ಅದನ್ನು ಕಂಡುಕೊಳ್ಳಲಾರದಿದ್ದರೂ, ದೇವತೆಗಳು ಅದನ್ನು ತಪ್ಪದೆ ಕಂಡುಕೊಳ್ಳುವರು.
ಪಾಪೇನ ಹಿ ಕೃತಂ ಪಾಪಂ ಪಾಪಮೇವಾನುವರ್ತತೇ |
ಧಾರ್ಮಿಕೇಣ ಕೃತೋ ಧರ್ಮಃ ಕರ್ತಾರಮನುವರ್ತತೇ ॥ 28 ॥
ಪಾಪಬುದ್ಧಿಯಿಂದ ಮುಚ್ಚಿಟ್ಟ ಧರ್ಮವು ಹೊಸಧರ್ಮವನ್ನು ದಾರಿಕೊಡುವುದು. ಧರ್ಮಬುದ್ಧಿಯಿಂದ ಮುಚ್ಚಿಟ್ಟ ಧರ್ಮವು ಹೊಸ ಧರ್ಮವನ್ನು ಹೆಚ್ಚಿಸುವುದು.
ಪಾಪಂ ಕೃತಂ ನ ಸ್ಮರತೀಹ ಮೂಢೋ
ವಿವರ್ತಮಾನಸ್ಯ ತದೇತಿ ಕರ್ತುಃ |
ರಾಹುರ್ಯಥಾ ಚಂದ್ರಮುಪೈತಿ ಚಾಪಿ
ತಥಾಽಬುಧಂ ಪಾಪಮುಪೈತಿ ಕರ್ಮ ॥ 29 ॥
ಲೋಕದಲ್ಲಿ ಮೂಢನಾದವನು ತಾನು ಮಾಡಿದ ಪಾಪವನ್ನು ನೆನೆಸದೆಯೇ ಇದ್ದರೂ, ಆ ಪಾಪವು ಶಾಸ್ತ್ರವಿರುದ್ಧವಾಗಿ ನಡೆದ ಆ ಪಾಪಿಯನ್ನು ಬೆನ್ನಟ್ಟದೆಬಿಡದು. ರಾಹುವು ಚಂದ್ರನನ್ನು ಹಿಡಿಯುವಂತೆ ಪಾಪವು ಅಜ್ಞರಾದ ಮೂಢರನ್ನು ಹಿಡಿದು ನುಂಗುವುದು.
ಆಶಯಾ ಸಂಚಿತಂ ದ್ರವ್ಯಂ ಯತ್ಕಾಲೇ ನೇಹ ಭುಜ್ಯತೇ |
ತದ್ ಬುಧಾ ನ ಪ್ರಶಂಸಂತಿ ಮರಣಂ ನ ಪ್ರತೀಕ್ಷತೇ ॥ 30 ॥
ಲೋಭದಿಂದ ಕೂಡಿಟ್ಟ ಹಣವು ದುಃಖಮಯವಾಗಿಯೇ ಅನುಭವಿಸಲ್ಪಡುವುದು. ಪ್ರಾಜ್ಞರು ಅಂತಹ ಧನವನ್ನು ಆದರಿಸಲಾರರು. ಮರಣವೆಂಬುದೂ ಆ ಧನವನ್ನು ಇದಿರು ನೋಡುತ್ತಾ ನಿಂತಿರುವುದಲ್ಲ.
ಮಾನಸಂ ಸರ್ವಭೂತಾನಾಂ ಧರ್ಮಮಾಹುರ್ಮನೀಷಿಣಃ |
ತಸ್ಮಾತ್ ಸರ್ವೇಷು ಭೂತೇಷು ಮನಸಾ ಶಿವಮಾಚರೇತ್ ॥ 31 ॥
ಪ್ರಾಜ್ಞರು ಧರ್ಮವನ್ನು ಮಾನಸವೆಂದು ಹೇಳಿದರು. ಆದುದರಿಂದ ಎಲ್ಲಾ ಪ್ರಾಣಿಗಳ ವಿಷಯದಲ್ಲಿ ಮನಸ್ಸಿನಿಂದಲೇ ಕ್ಷೇಮವನ್ನು ಕೋರಬಹುದು. ಧರ್ಮವನ್ನು ಮಾಡುವುದಕ್ಕೆ ಬೇರೊಬ್ಬರ ಸಹಾಯವೂ ಬೇಕಾದುದಿಲ್ಲ.
ಏಕ ಏವ ಚರೇದ್ಧರ್ಮಂ ನಾಸ್ತಿ ಧರ್ಮೇ ಸಹಾಯತಾ |
ಕೇವಲಂ ವಿಧಿಮಾಸಾದ್ಯ ಸಹಾಯಃ ಕಿಂ ಕರಿಷ್ಯತಿ ॥ 32 ॥
ತಾನು ಏಕಾಕಿಯಾಗಿಯೇ ನಡೆಸಬಹುದು. ಮನಸ್ಸಿನಲ್ಲಿ ಧರ್ಮಬುದ್ಧಿ ಇಲ್ಲದೆ, ಬರೀ ವಿಧಿಯನ್ನು ಮಾತ್ರ ಹಿಡಿದು ನಡೆಸಿದ ಧರ್ಮವಿಷಯದಲ್ಲಿ ಸಹಾಯವು ತಾನೇ ಏನನ್ನು ಮಾಡಬಲ್ಲದು.
ದೇವಾ ಯೋನಿರ್ಮನುಷ್ಯಾಣಾಂ ದೇವಾನಾಮಮೃತಂ ದಿವಿ |
ಪ್ರೇತ್ಯಭಾವೇ ಸುಖಂ ಧರ್ಮಾಚ್ಛಶ್ವತ್ತೈರುಪಭುಜ್ಯತೇ ॥ 33 ॥
ಧರ್ಮವೇ ಮನುಷ್ಯನಿಗೆ ಉತ್ಪತ್ತಿಕಾರಣವು. ಧರ್ಮವೇ ದೇವತೆಗಳಿಗೆ ಸ್ವರ್ಗದಲ್ಲಿ ಅಮೃತವೆನಿಸುವುದು. ಮೃತಿಹೊಂದಿದಮೇಲೆಯೂ ಮನುಷ್ಯನು ಧರ್ಮದಿಂದಲೇ ಶಾಶ್ವತಸುಖವನ್ನು ಅನುಭವಿಸುವನು' ಎಂದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಅಧ್ಯಾತ್ಮವಿಚಾರವನ್ನು ನಿರೂಪಿಸಿದುದು.
ಯುಧಿಷ್ಠಿರಃ
ಅಧ್ಯಾತ್ಮಂ ನಾಮ ಯದಿದಂ ಪುರುಷಸ್ಯೇಹ ಚಿಂತ್ಯತೇ |
ಯದಧ್ಯಾತ್ಮಂ ಯತಶ್ಚೈತತ್ತನ್ಮೇ ಬ್ರೂಹಿ ಪಿತಾಮಹ ॥ 1 ॥
ಯುಧಿಷ್ಠಿರ ಪಿತಾಮಹನೇ, ಲೋಕದಲ್ಲಿ ಪುರುಷರು ಅಧ್ಯಾತ್ಮ ಎಂಬುದಾಗಿ ಏನನ್ನು ಚಿಂತಿಸುತ್ತಾರೋ ಈ ಅಧ್ಯಾತ್ಮವು ಯಾರಿಂದ ನಿರೂಪಿಸಲ್ಪಟ್ಟಿದೆ? ಅಧ್ಯಾತ್ಮವೆಂದರೆ ಏನು? ಇದರ ಸ್ವರೂಪವನ್ನು ನನಗೆ ತಿಳಿಸಿರಿ.
ಕುತಃ ಸೃಷ್ಟಮಿದಂ ಸರ್ವಂ ಬ್ರಹ್ಮನ್ ಸ್ಥಾವರಜಂಗಮಮ್ |
ಪ್ರಲಯೇ ಚ ಕಮಭ್ಯೇತಿ ತನ್ಮೇ ವಕ್ತುಮಿಹಾರ್ಹಸಿ ॥ 2 ॥
ಈ ಅಧ್ಯಾತ್ಮವು ಯಾರಿಂದ ಸೃಷ್ಟವಾಯಿತು? ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚವು ಹೇಗೆ ಸೃಷ್ಟಿಸಲ್ಪಟ್ಟಿತು? ಪ್ರಳಯದಲ್ಲಿ

ಎಲ್ಲಿಗೆ ಹೋಗಿ ಸೇರುತ್ತದೆ? ಇದನ್ನು ನನಗೆ ಹೇಳಲು ಅರ್ಹರಾಗಿದ್ದೀರಿ.
ಭೀಷ್ಮಃ
ಅಧ್ಯಾತ್ಮಮಿತಿ ಮಾಂ ಪಾರ್ಥ ಯದೇತದನುಪೃಚ್ಛಸಿ |
ತದ್ ವ್ಯಾಖ್ಯಾಸ್ಯಾಮಿ ತೇ ತಾತ ಶ್ರೇಯಸ್ಕರತಮಂ ಶುಭಮ್ ॥ 3 ॥
ಭೀಷ್ಮ ಧರ್ಮರಾಜನೇ, ಅಧ್ಯಾತ್ಮ ವಿಚಾರದ ಬಗ್ಗೆ ಏನು ಪ್ರಶ್ನಿಸುತ್ತಿರುವೆಯೋ ಅತ್ಯಂತ ಶ್ರೇಯಸ್ಸನ್ನುಂಟು ಮಾಡುವ ಮಂಗಳಕರವಾದ ಈ ವಿಚಾರವನ್ನು ಕುರಿತು ವಿವರಿಸುತ್ತೇನೆ.
ಸೃಷ್ಟಿಪ್ರಳಯಸಂಯುಕ್ತಮಾಚಾರ್ಯೈಃ ಪರಿದರ್ಶಿತಮ್ |
ಯಜ್ಜ್ಞಾತ್ವಾ ಪುರುಷೋ ಲೋಕೇ ಪ್ರೀತಿಂ ಸೌಖ್ಯಂ ಚ ವಿಂದತಿ |
ಫಲಲಾಭಶ್ಚ ತಸ್ಯ ಸ್ಯಾತ್ ಸರ್ವಭೂತಹಿತಂ ಚ ತತ್ ॥ 4 ॥
ಪ್ರಪಂಚದ ಸೃಷ್ಟಿ-ಪ್ರಳಯಗಳನ್ನು ಕುರಿತು ಆರಂಭದಲ್ಲಿಯೇ ಪೂರ್ವಾಚಾರ್ಯರು ಸಾಕಷ್ಟು ವಿಚಾರಗಳನ್ನು ತಿಳಿಸಿರುತ್ತಾರೆ. ಅದನ್ನು ತಿಳಿದ ಮನುಷ್ಯನು ಲೋಕದಲ್ಲಿ ಭಗವಂತನ ಪ್ರೀತಿಗೆ ಪಾತ್ರನಾಗಿ ಸುಖವನ್ನು ಹೊಂದುತ್ತಾನೆ. ಈ ಜ್ಞಾನದಿಂದ ಉತ್ತಮ ಫಲವಿದೆ. ಸಮಸ್ತ ಭೂತಗಳಿಗೆ ಹಿತಕರವಾಗಿರುವ ಚಿಂತನೆಯಿದು.
ಆತ್ಮಾನಮಮಲಂ ರಾಜನ್ನಾವೃತ್ಯೈವಂ ವ್ಯವಸ್ಥಿತಮ್ |
ತಸ್ಮಿನ್ ಪ್ರಕಾಶತೇ ನಿತ್ಯಂ ತಮಃ ಸೋಮೋ ಯಥೈವ ತತ್ ॥ 5 ॥
ತದ್ ವಿದ್ವನ್ನಷ್ಟಪಾಪ್ಮೈಷ ಬ್ರಹ್ಮಭೂಯಾಯ ಕಲ್ಪತೇ |
ಅಂಡಾವರಣಭೂತಾನಾಂ ಪರ್ಯಂತಂ ಹಿ ಯಥಾ ತಮಃ ॥ 6 ॥
ಪ್ರಳಯಕಾಲದಲ್ಲಿ ಪರಮಾತ್ಮನನ್ನು ವ್ಯಾಪಿಸಿಕೊಂಡು ದುರ್ಗಾದೇವಿಯು ಇರುತ್ತಾಳೆ. ಇವಳ ರೂಪ ನೀಲವಾಗಿದೆ. ಪ್ರಳಯ ಸಮುದ್ರ ಜಲರೂಪದಲ್ಲಿ ಸರ್ವತ್ರ ಭಗವಂತನನ್ನು ವ್ಯಾಪಿಸಿ ದುರ್ಗೆಯು ಇರುತ್ತಾಳೆ. ಈ ಪ್ರಳಯ ಕಾಲದಲ್ಲಿ ಭಗವಂತನ ಸ್ವರೂಪವು ಆಕಾಶದಲ್ಲಿ ಚಂದ್ರನ ಸ್ವರೂಪವು ಹೇಗೆ ಬೆಳಗುತ್ತದೋ ಹಾಗೆ ಬೆಳಗುತ್ತದೆ, `ಆದಿತ್ಯವರ್ಣಂ ತಮಸಸ್ತು ಪಾರೇ' ಎಂದು ಶ್ರುತಿ ತಿಳಿಸಿದಂತೆ. ಯಾವನು ಈ ಭಗವಂತನ ಸ್ವರೂಪವನ್ನು ಚೆನ್ನಾಗಿ ತಿಳಿಯಬಲ್ಲನೋ ಅವನು ಸಮಸ್ತ ಪಾಪಗಳಿಂದ ಮುಕ್ತನಾಗಿ ಪರಮಾತ್ಮನನ್ನು ಹೊಂದುತ್ತಾನೆ. ಈ ಭಗವಂತನನ್ನು ಆವರಿಸಿದ ದುರ್ಗೆಯು ಇಪ್ಪತ್ನಾಲ್ಕು ತತ್ವಗಳ ಅವಸ್ಥಾನವು ಎಲ್ಲಿದೆಯೋ ಅಲ್ಲಿಯತನಕವೂ ಅರ್ಥಾತ್ ಬ್ರಹ್ಮಾಂಡಾವರಣಗಳಿಗಿಂತಲೂ ಹೊರಗಡೆಯೂ ವ್ಯಾಪಿಸಿ ಇದೆ. ಅಂತಹ ಪ್ರಳಯ ಸಮುದ್ರದ ಜಲದಲ್ಲಿ ಭಗವಂತನು ವಟಪತ್ರಶಾಯಿಯಾಗಿ ಇರುತ್ತಾನೆ.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಮಹಾಭೂತಾನಿ ಭೂತಾನಾಂ ಸರ್ವೇಷಾಂ ಪ್ರಭವಾಪ್ಯಯೌ ॥ 7 ॥
ಪೃಥಿವೀ ಮೊದಲಾದ ಪಂಚಮಹಾಭೂತಗಳೇ ಎಲ್ಲಾ ಪ್ರಾಣಿಗಳಿಗೂ ಉತ್ಪತ್ತಿ, ಲಯಗಳಿಗೆ ಕಾರಣವೆನಿಸಿವೆ.
ಯತಃ ಸೃಷ್ಟಾನಿ ತತ್ರೈವ ತಾನಿ ಯಾಂತಿ ಪುನಃ ಪುನಃ |
ಮಹಾಭೂತಾನಿ ಭೂತೇಭ್ಯಃ ಸಾಗರಸ್ಯೋರ್ಮಯೋ ಯಥಾ ॥ 8 ॥
ಸಮುದ್ರಗಳಲ್ಲಿ ಅಲೆಗಳು ಮೇಲೆದ್ದು ಪುನಃ ಆ ಅಲೆಗಳು ಸಮುದ್ರ ಜಲದಲ್ಲಿಯೇ ಅಡಗಿಹೋಗುವಂತೆ ಪಂಚಮಹಾಭೂತಗಳು ತಮ್ಮ ಉತ್ಪತ್ತಿ ಸ್ಥಾನವೆನಿಸಿದ ಪ್ರಕೃತ್ಯಾತ್ಮಕ ತತ್ತ್ವಸೂಕ್ಷ್ಮ ರೂಪಗಳಾದ ಪಂಚಭೂತಗಳಲ್ಲಿಯೇ ಲಯ ಹೊಂದುತ್ತವೆ.
ಪ್ರಸಾರ್ಯ ಚ ಯಥಾಂಗಾನಿ ಕೂರ್ಮಃ ಸಂಹರತೇ ಪುನಃ |
ತದ್ವದ್ಭೂತಾನಿ ಭೂತಾತ್ಮಾ ಸೃಷ್ಟ್ವಾ ಸಂಹರತೇ ಪುನಃ ॥ 9 ॥
ಆಮೆಯು ತನ್ನ ಅವಯವಗಳನ್ನು ಬೇಕಾದಾಗ ಹೊರಗೆ ತಂದು ಪುನಃ ತನ್ನೊಳಗೆ ಸೇರಿಸಿಕೊಳ್ಳುವಂತೆ ಸಮಸ್ತ ಭೂತಗಳಿಗೂ ಅಂತರ್ಯಾಮಿಯಾದ ಪರಮಾತ್ಮನು ಈ ಪಂಚಭೂತಗಳನ್ನು ಸೃಷ್ಟಿಸಿ ಕೊನೆಯಲ್ಲಿ ಇವುಗಳನ್ನು ತನ್ನಲ್ಲಿಯೇ ಅಡಗಿಸಿ-ಕೊಳ್ಳುತ್ತಾನೆ.
ಸ ತೇಷಾಂ ಗುಣಸಂಘಾತಃ ಶರೀರೇ ಭರತರ್ಷಭ |
ಸತತಂ ಪ್ರವಿಲೀಯಂತೇ ಗುಣಾಸ್ತೇ ಪ್ರಭವಂತಿ ಚ ॥ 10 ॥
ಶರೀರದಲ್ಲಿ ಪಂಚಮಹಾಭೂತಗಳ ಗುಣಗಳು ಒಟ್ಟಾಗಿ ಸೇರಿಕೊಂಡಿವೆ. ಅವು ಯಾವಾಗಲೂ ಉತ್ಪತ್ತಿಯನ್ನೂ, ಲಯವನ್ನೂ ಹೊಂದುತ್ತಿರುತ್ತವೆ.
ಯದ್ವಿನಾ ನೈವ ಶೃಣುತೇ ನ ಪಶ್ಯತಿ ನ ದೀಪ್ಯತೇ |
ಯದಧೀನಂ ಯತಸ್ತಸ್ಮಾದಧ್ಯಾತ್ಮಮಿತಿ ಕಥ್ಯತೇ ॥ 11 ॥
ಈ ಶರೀರದಲ್ಲಿ ಯಾವುದಿಲ್ಲದಿದ್ದರೆ ಕೇಳಲಾಗುವುದಿಲ್ಲವೋ, ಯಾವುದಿಲ್ಲದಿದ್ದರೆ ನೋಡಲಾಗುವುದಿಲ್ಲವೋ, ಮತ್ತೊಂದನ್ನು ಬೆಳಗಲಾಗುವುದಿಲ್ಲವೋ ಇವುಗಳೆಲ್ಲವೂ ಯಾರನ್ನು ಆಶ್ರಯಿಸಿಕೊಂಡಿವೆಯೋ ಅದನ್ನೇ ಅಧ್ಯಾತ್ಮ ಎಂದು ಕರೆಯುತ್ತಾರೆ.
ಜ್ಞಾನಂ ತದೇಕರೂಪಾಖ್ಯಂ ನಾನಾಪ್ರಜ್ಞಾನ್ವಿತಂ ತದಾ |
ನ ತೇ ವಾಚಾಽನುರೂಪಂ ಸ್ಯಾದ್ ಯಯಾ ರಾಸವಿವರ್ಜಿತಮ್ ॥
ಈ ಅಧ್ಯಾತ್ಮವೆನಿಸಿದ ಭಗವತ್ಸ್ವರೂಪವು ಏಕವೆನಿಸಿದೆ. ಅನೇಕ ಬಗೆಯ ಪ್ರಜ್ಞೆಗಳಿಂದ ವ್ಯಾಪ್ತವಾಗಿದೆ. ಇದರ ಸ್ವರೂಪವನ್ನು ಹೀಗೇ ಎಂದು ನಿರೂಪಿಸಲು ಯಾರಿಂದಲೂ ಸಾಧ್ಯವಿಲ್ಲ. ನನ್ನ ನಿನ್ನ ಮಾತುಗಳು ಆ ಸ್ವರೂಪವನ್ನು ನಿರ್ಣಯಿಸುವುದರಲ್ಲಿ ಅಶಕ್ತಗಳಾಗಿವೆ.
ಆಕಾಶಾತ್ ಖಲು ಯಾಜ್ಯೇಷು ಭವಂತಿ ಸುಮಹಾಗುಣಾಃ |
ಇತಿ ತನ್ಮಯಮೇವೈತತ್ ಸರ್ವಂ ಸ್ಥಾವರಜಂಗಮಮ್ ॥ 13 ॥

ಸೃಷ್ಟಿಯನ್ನು ಪಡೆದ ಪದಾರ್ಥಗಳಲ್ಲಿ ಶಬ್ದವೇ ಮೊದಲಾದ ಗುಣಗಳು ಆಕಾಶದಿಂದ ಉತ್ಪತ್ತಿಯನ್ನು ಹೊಂದುತ್ತವೆ. ಇದೇ ರೀತಿ ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತೆಲ್ಲವೂ ಅದರಲ್ಲಿಯೇ ಲಯವನ್ನು ಹೊಂದುತ್ತವೆ.

ಪ್ರಳಯೇ ಚ ತಮಭ್ಯೇತಿ ತಸ್ಮಾದುತ್ಸೃಜತೇ ಪುನಃ |
ಮಹಾಭೂತೇಷು ಭೂತಾತ್ಮಾ ಸೃಷ್ಟ್ವಾ ಸಂಹರತೇ ಪುನಃ ॥ 14 ॥

ಪ್ರಳಯ ಕಾಲದಲ್ಲಿ ಆ ಭಗವಂತನಲ್ಲಿ ಲಯ ಹೊಂದಿದ ಪದಾರ್ಥಗಳು ಸೃಷ್ಟಿ ಕಾಲದಲ್ಲಿ ಅವನಿಂದಲೇ ಉತ್ಪತ್ತಿಯನ್ನು ಹೊಂದುತ್ತವೆ. ಸಮಸ್ತ ಭೂತಗಳ ಅಂತರ್ಯಾಮಿ ಎನಿಸಿದ ಪರಮಾತ್ಮನು ಪಂಚಮಹಾಭೂತಗಳನ್ನು ಹಿಂದಿನಂತೆ ಸೃಷ್ಟಿಸಿ ಪುನಃ ಅವುಗಳನ್ನು ಉಪಸಂಹರಿಸುತ್ತಾನೆ.

ಮಹಾಭೂತಾನಿ ಪಂಚೈವ ಸರ್ವಭೂತೇಷು ಭೂತಕೃತ್ |
ಅಕರೋತ್ತೇಷು ವೈಷಮ್ಯಂ ತತ್ತು ಜೀವೋಽನು ಪಶ್ಯತಿ ॥ 15 ॥

ಪಂಚಭೂತಗಳನ್ನು ಸೃಷ್ಟಿಸುವ ಪರಮಾತ್ಮನು ಆ ಪಂಚಭೂತಗಳಲ್ಲಿಯೂ ವಿಷಮತೆಯನ್ನು ಉಂಟುಮಾಡಿ ಸಮಸ್ತ ಪ್ರಾಣಿಗಳ ಶರೀರವನ್ನು ಆವಿಷ್ಕರಿಸುತ್ತಾನೆ. ಎಂದರೆ ಪಾರ್ಥಿವ ಶರೀರದಲ್ಲಿ ಪೃಥಿವಿಯ ಅಂಶವನ್ನು ಹೆಚ್ಚಾಗಿ ಸೇರಿಸುತ್ತಾನೆ. ತೈಜಸ ಶರೀರದಲ್ಲಿ ತೇಜಸ್ಸನ್ನು ಹೆಚ್ಚಾಗಿ ಸೇರಿಸುತ್ತಾನೆ. ಜಲೀಯ ಶರೀರದಲ್ಲಿ ನೀರಿನ ಅಂಶವನ್ನು ಹೆಚ್ಚಾಗಿ ಸೇರಿಸುತ್ತಾನೆ. ಉಳಿದವರ ಶರೀರದಲ್ಲಿ ಸ್ವಲ್ಪ, ಸ್ವಲ್ಪ ಪ್ರಮಾಣದಲ್ಲಿ ಸೇರಿಸುತ್ತಾನೆ. ಇದನ್ನೇ ವೈಷಮ್ಯ ಎಂದಿದ್ದಾರೆ. ಈ ರೀತಿಯಾಗಿ ಸೃಷ್ಟಿಸಿದ ಶರೀರದಿಂದ ಜೀವನು ತನ್ನ ವ್ಯಾಪಾರಗಳನ್ನು ಮಾಡುತ್ತಾನೆ.

ಶಬ್ದಃ ಶ್ರೋತ್ರಂ ತಥಾ ಖಾನಿ ತ್ರಯಮಾಕಾಶಯೋನಿಜಮ್ |
ವಾಯೋಸ್ತ್ವಕ್‌ಸ್ಪರ್ಶಚೇಷ್ಟಾಶ್ಚ ವಾಗಿತ್ಯೇತಚ್ಚತುಷ್ಟಯಮ್ ॥ 16 ॥

ಶಬ್ದ ಕಿವಿಯ ಒಳಗಡೆ ಇರುವ ತಮಟೆಯಲ್ಲಿ ಅಂತರ್ಗತವಾದ ಸೂಕ್ಷ್ಮವಾದ ಆಕಾಶ, ಶ್ರೋತ್ರೇಂದ್ರಿಯ ಇವುಗಳು ಆಕಾಶದಿಂದ ಹುಟ್ಟುತ್ತವೆ. ಸ್ಪರ್ಶ, ಚೇಷ್ಟೆ, ತ್ವಕ್ಕು, ವಾಕ್ಕು ಈ ನಾಲ್ಕು ವಾಯುವಿನಿಂದ ಸೃಷ್ಟಿಯನ್ನು ಹೊಂದುತ್ತವೆ.

ರೂಪಂ ಚಕ್ಷುಸ್ತಥಾ ಪಾಕಸ್ತ್ರಿವಿಧಂ ತೇಜ ಉಚ್ಯತೇ |
ರಸಃ ಕ್ಲೇದಶ್ಚ ಜಿಹ್ವಾ ಚ ತ್ರಯೋ ಜಲಗುಣಾಃ ಸ್ಮೃತಾಃ ॥ 17 ॥

ರೂಪ, ನೇತ್ರ, ಉದರದಲ್ಲಿ ಆಗುವ ಜೀರ್ಣತೆ - ಈ ಮೂರು ತೇಜಸ್ಸಿನಿಂದ ಉಂಟಾಗುತ್ತವೆ. ರಸ, ಒದ್ದೆ, ನಾಲಿಗೆ - ಈ ಮೂರು ಜಲೀಯಗುಣಗಳು ಎನಿಸಿವೆ.

ೆರೇಯಂ ಘ್ರಾಣಂ ಶರೀರಂ ಚ ತೇ ತು ಭೂಮಿಗುಣಾಸ್ತ್ರಯಃ |
ಮಹಾಭೂತಾನಿ ಪಂಚೈವ ಷಷ್ಠಂ ತು ಮನ ಉಚ್ಯತೇ ॥ 18 ॥
ಇಂದ್ರಿಯಾಣಿ ಮನಶ್ಚೈವ ವಿಜ್ಞಾನಾನ್ಯಸ್ಯ ಭಾರತ |
ಸಪ್ತಮೀ ಬುದ್ಧಿರಿತ್ಯಾಹುಃ ಕ್ಷೇತ್ರಜ್ಞಃ ಪುನರಷ್ಟಮಃ ॥ 19 ॥

ವಾಸನೆ, ಮೂಗು, ಶರೀರ ಎಂಬ ಮೂರು ಭೂಮಿಯ ಗುಣಗಳೆನಿಸಿವೆ. ಐದು ಪಂಚಮಹಾಭೂತಗಳು. ಆರನೆಯದ್ದೆನಿಸಿದ ಮನಸ್ಸು, ಇಂದ್ರಿಯಗಳು, ಜೀವನ ಜ್ಞಾನ ಸಾಧನಗಳು. ಏಳನೆಯದ್ದೆನಿಸಿದ ಬುದ್ಧಿ. ಎಂಟನೆಯದ್ದು ಕ್ಷೇತ್ರಜ್ಞನೆನಿಸಿದೆ.

ಚಕ್ಷುರಾಲೋಚನಾಯೈವ ಸಂಶಯಂ ಕುರುತೇ ಮನಃ |
ಬುದ್ಧಿರಧ್ಯವಸಾನಾಯ ಕ್ಷೇತ್ರಜ್ಞಃ ಸಾಕ್ಷಿವತ್ ಸ್ಥಿತಃ ॥ 20 ॥

ಕಣ್ಣು ಮೊದಲಾದ ಇಂದ್ರಿಯಗಳೆಲ್ಲ ಪದಾರ್ಥವನ್ನು ನೋಡುವ ವ್ಯಾಪಾರವನ್ನು ಮಾಡುತ್ತವೆ. ಮನಸ್ಸು ಆ ವಸ್ತುಗಳ ವಿಷಯದಲ್ಲಿ ಸಂಶಯವನ್ನು ಹುಟ್ಟಿಸುತ್ತದೆ. ಬುದ್ಧಿಯು ಮನಸ್ಸಿನಲ್ಲಿ ಬಂದ ವಿಚಾರವನ್ನು ನಿರ್ಣಯ ಮಾಡಿ ತಿಳಿಸುತ್ತದೆ. ಕ್ಷೇತ್ರಜ್ಞನು ಇದಕ್ಕೆಲ್ಲ ಸಾಕ್ಷಿಯಾಗಿ ನೋಡುತ್ತಿರುತ್ತಾನೆ.

ಚಿಚ್ಛಕ್ತ್ಯಧಿಷ್ಠಿತಾ ಬುದ್ಧಿಶ್ಚೇತನೇತ್ಯಭಿವಿಶ್ರುತಾ |
ಚೇತನಾನಂತರೋ ಜೀವಸ್ತದಾ ವೇತ್ತಿ ಚ ಲಕ್ಷ್ಯತೇ ॥ 21 ॥

ಜ್ಞಾನವೆಂಬ ಶಕ್ತಿಯಿಂದ ಕೂಡಿಕೊಂಡಿರುವ ಬುದ್ಧಿಯು ಚೇತನ ಎಂದು ಕರೆಯಲ್ಪಡುತ್ತದೆ. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ ಎಂದು ಐದು ವಿಧವುಳ್ಳ ಮನಸ್ಸನ್ನು ಜೀವನು ತನ್ನ ಸಮೀಪದಲ್ಲೇ ಇರುವುದರಿಂದ ತನ್ನ ಸಾಕ್ಷಿಯಿಂದ ಚೆನ್ನಾಗಿ ಅವುಗಳನ್ನು ನೋಡುತ್ತಾನೆ. ಆದರೆ ಅವುಗಳಿಂದ ಜೀವನು ನೋಡಲ್ಪಡುವವನಲ್ಲ.

ನೋತ್ಸೃಜನ್ ವಿಸೃಜಂಶ್ಚೈವ ಶರೀರಂ ದೃಶ್ಯತೇ ತಮಃ |
ತಸ್ಮಿಂಶ್ಚೇತೋಪಲಭ್ಯಃ ಸ್ಯಾತ್ ತಮೋ ವಾಚ್ಛಾದಯಂತ್ಯುತ ॥ 22 ॥

ಜೀವನು ಇಂತಹ ಪಂಚಭೂತಾತ್ಮಕವಾದ ಶರೀರವನ್ನು ಹೊಂದುತ್ತಿರುತ್ತಾನೆ, ಬಿಡುತ್ತಿರುತ್ತಾನೆ. ಹೀಗಿದ್ದರೂ ಈ ದೇಹದಲ್ಲಿರುವ ಶರೀರವನ್ನು ನೋಡುತ್ತಿರುತ್ತಾನೆ, ಪರಮಾತ್ಮನನ್ನು ಜೀವನು ಅಜ್ಞಾನಾವೃತನಾಗಿ ನೋಡುವುದಿಲ್ಲ. ಆದರೆ ಪರಮಾತ್ಮನು ಈ ಜೀವಾತ್ಮನನ್ನು ನೋಡುತ್ತಿರುತ್ತಾನೆ. ಯಾವಾಗ ಈ ಜೀವನಿಗೆ ಪರಮಾತ್ಮನ ದರ್ಶನಕ್ಕೆ ಪ್ರತಿಬಂಧಕವಾದ ಅಜ್ಞಾನವು ಅಪಸರಣವನ್ನು ಹೊಂದುತ್ತದೋ ಆಗ ಆ ಪರಮಾತ್ಮನನ್ನು ಜೀವನು ನೋಡಬಹುದು. ಈ ಪಂಚಭೂತ ಶರೀರದಲ್ಲಿ ಎಲ್ಲವನ್ನೂ ನೋಡುತ್ತಾನೆ. ಪರಮಾತ್ಮನ ದರ್ಶನವೇ ದುರ್ಲಭವಾದುದು ಎಂದು ಭಾವ.

ಚಕ್ಷುರಾಲೋಕನಾಯೈವ ಸಂಶಯಂ ಕುರುತೇ ಮನಃ |
ಬುದ್ಧಿರಧ್ಯವಸಾಯಾಯ ಕ್ಷೇತ್ರಜ್ಞಃ ಸಾಕ್ಷಿವತ್ ಸ್ಥಿತಃ ॥ 23 ॥

`ಪಾತಾಳ ಮೇತಸ್ಯ ಹಿ ಪಾದಮೂಲಂ' ಎಂದು ಭಾಗವತದಲ್ಲಿ ನಿರೂಪಿಸಿದಂತೆ ಪರಮಾತ್ಮನು ತನ್ನ ಪಾದತಳಕ್ಕಿಂತ ಮೇಲ್ಭಾಗದಲ್ಲಿರುವ ಚತುರ್ದಶ ಲೋಕಾತ್ಮಕವಾದ ಜಗತ್ತನ್ನು ತ್ರಿವಿಕ್ರಮ ಅವತಾರದಲ್ಲಿ ತನ್ನ ಪಾದದಿಂದ ಕೆಳಗೆ ಇದೆ ಎಂಬುದಾಗಿ ನೋಡುತ್ತಾನೆ. ಬೇರೆ ಸಮಯದಲ್ಲಿ ಮೇಲ್ಭಾಗದಲ್ಲಿದೆ ಎಂದು ನೋಡುತ್ತಾನೆ. ಅಥವಾ ತನ್ನ ಶರೀರದಲ್ಲಿ ಈ ಜಗತ್ತನ್ನು ಮೇಲೆ ಕೆಳಗೆ

ವ್ಯಾಪಿಸಿರುವಂತೆ ನೋಡುತ್ತಾನೆ. ಹೀಗೆ ನೋಡುವ ಪರಮಾತ್ಮನಿಂದಲೇ ಈ ಜಗತ್ತು, ಈ ಶರೀರವು ವ್ಯಾಪ್ತವಾಗಿದೆ ಎಂಬುದನ್ನು ತಿಳಿದುಕೊ.
ಊರ್ಧ್ವಂ ಪಾದತಳಾಭ್ಯಾಂ ಯದರ್ವಾಗೂರ್ಧ್ವಂ ಚ ಪಶ್ಯತಿ |
ಏತೇನ ಸರ್ವಮೇವೇದಂ ವಿದ್ಧ್ಯಭಿವ್ಯಾಪ್ತಮಂತರಮ್ ॥ 24 ॥
ಈ ಲೋಕದಲ್ಲಿರುವ ಪುರುಷನು ಸಮಸ್ತ ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಗ್ರಹಿಸಿಕೊಳ್ಳಬೇಕು. ಸತ್ವ, ರಜಸ್, ತಮೋಗುಣಗಳನ್ನು ಜಯಿಸಬೇಕು. ಈ ಮೂರು ಗುಣಗಳು ಆ ಪರಮಾತ್ಮನನ್ನೇ ಆಶ್ರಯಿಸಿಕೊಂಡಿವೆ.
ಪುರುಷೇ ಚೇಂದ್ರಿಯಾಣೀಹ ವೇದಿತವ್ಯಾನಿ ಕೃತ್ಸ್ನಶಃ |
ತಮೋ ರಜಶ್ಚ ಸತ್ತ್ವಂ ಚ ವಿದ್ಧಿ ಭಾವಾಂಸ್ತದಾಶ್ರಯಾನ್ ॥ 25 ॥
ಮನುಷ್ಯನು ಸಮಸ್ತ ಜಗತ್ತಿನಲ್ಲಿ ವಾಸ ಮಾಡುವ ಪ್ರಾಣಿಗಳ ಹುಟ್ಟು-ಸಾವುಗಳನ್ನು ತನ್ನ ಬುದ್ಧಿಯಿಂದ ವಿಮರ್ಶಿಸಿ ತಿಳಿದುಕೊಂಡಾಗ ಅವನಿಗೆ ಕಾಲಕ್ರಮದಿಂದ ಉತ್ತಮ ರೀತಿಯಾದ ಶಾಂತಿಯ ಲಾಭವು ಆಗುತ್ತದೆ.
ಏತಾಂ ಬುದ್ಧ್ವಾ ನರೋ ಬುದ್ಧ್ಯಾ ಭೂತಾನಾಮಾಗತಿಂ ಗತಿಮ್ |
ಸಮವೇಕ್ಷ್ಯ ಶನೈಶ್ಚೈವ ಲಭತೇ ಶಮಮುತ್ತಮಮ್ ॥ 26 ॥
ಬುದ್ಧಿಯು ರೂಪ-ರಸ ಮೊದಲಾದ ಗುಣಗಳ ಸಮೀಪಕ್ಕೆ ಜೀವಾತ್ಮನನ್ನು ರಾಗದಿಂದ ಜೀವನನ್ನು ಸೆಳೆಯಲ್ಪಟ್ಟು ಸಾಗುತ್ತದೆ. ಮನಸ್ಸೇ ಮೊದಲಾದ ಆರು ಇಂದ್ರಿಯಗಳು ಬುದ್ಧಿಯ ಅಧೀನಗಳಾಗಿಯೇ ವ್ಯಾಪಾರವನ್ನು ಮಾಡುತ್ತವೆ. ಈ ಪದಾರ್ಥವು ನನಗೆ ದೊರಕೀತು ಎಂದು ಬುದ್ಧಿಯು ಹುಟ್ಟಿದಾಗ ಕಣ್ಣೇ ಮೊದಲಾದ ಇಂದ್ರಿಯಗಳು ಆ ವಸ್ತುವಿನ ಬಳಿ ಸಾಗುತ್ತವೆ. ಈ ರೀತಿಯಾದ ಅಪೇಕ್ಷೆಗಳು ಬುದ್ಧಿಯಲ್ಲಿ ಹುಟ್ಟದಿದ್ದಲ್ಲಿ ಬುದ್ಧಿಯನ್ನೇ ನಿಗ್ರಹಿಸಿಕೊಂಡಲ್ಲಿ ಇಂದ್ರಿಯಗಳ ಬಾಹ್ಯ ಚಲನೆಯು ಉಂಟಾಗುವುದಿಲ್ಲ. ಸಮಸ್ತ ಇಂದ್ರಿಯಗಳ ವ್ಯಾಪಾರವೂ ಬುದ್ಧಿಯ ಅಧೀನವಾಗಿಯೇ ನಡೆಯುತ್ತದೆ.
ಗುಣಾಂತೇ ನೀಯತೇ ಬುದ್ಧಿರ್ಬುದ್ಧಿರೇವೇಂದ್ರಿಯಾಣ್ಯಪಿ |
ಮನಃಷಷ್ಠಾನಿ ಸರ್ವಾಣಿ ಬುದ್ಧ್ಯಭಾವೇ ಕುತೋ ಗುಣಾಃ ॥ 27 ॥
ಇತಿ ತನ್ಮಯಮೇವೈತತ್ ಸರ್ವಂ ಸ್ಥಾವರಜಂಗಮಮ್ |
ಪ್ರಲೀಯತೇ ಚೋದ್ಭವತಿ ತಸ್ಮಾನ್ನಿರ್ದಿಶ್ಯತೇ ತಥಾ ॥ 28 ॥
ಸ್ಥಾವರ-ಜಂಗಮಾತ್ಮಕವಾದ ಜಗತ್ತೆಲ್ಲವೂ ಈ ಬುದ್ಧಿಯ ಅಧೀನವಾಗಿಯೇ ಸಾಗುತ್ತದೆ. ಜಗತ್ತಿನ ಉತ್ಪತ್ತಿ-ಲಯಗಳಿಗೂ ಬುದ್ಧಿಯೇ ಮೂಲವು.
ಯೇನ ಪಶ್ಯತಿ ತಚ್ಚಕ್ಷುಃ ಶೃಣೋತಿ ಶ್ರೋತ್ರಮುಚ್ಯತೇ |
ಜಿಘ್ರತಿ ಘ್ರಾಣಮಿತ್ಯಾಹೂ ರಸಂ ಜಾನಾತಿ ಜಿಹ್ವಯಾ ॥ 29 ॥
ಮನುಷ್ಯನು ಯಾವ ಬುದ್ಧಿಯಿಂದ ನೋಡುತ್ತಾನೋ ಅದೇ ಚಕ್ಷುಸ್ಸು. ಯಾವ ಬುದ್ಧಿಯಿಂದ ಕೇಳುತ್ತಾನೋ ಅದೇ ಶ್ರೋತ್ರೇಂದ್ರಿಯ. ಯಾವ ಬುದ್ಧಿಯಿಂದ ಆಘ್ರಾಣಿಸುತ್ತಾನೋ ಅದೇ ಘ್ರಾಣೇಂದ್ರಿಯ. ಯಾವ ಬುದ್ಧಿಯಿಂದ ರಸವನ್ನು ಆಸ್ವಾದಿಸುತ್ತಾನೋ ಅದೇ ಜಿಹ್ವೆ ಎನಿಸಿದೆ.
ತ್ವಚಾ ಸ್ಪೃಶತಿ ಚ ಸ್ಪರ್ಶಾನ್ ಬುದ್ಧಿರ್ವಿಕ್ರಿಯತೇಽಸಕೃತ್ |
ಯೇನ ಸಂಕಲ್ಪಯತ್ಯರ್ಥಂ ಕಿಂಚಿದ್ಭವತಿ ತನ್ಮನಃ ॥ 30 ॥
ಯಾವ ಬುದ್ಧಿಯಿಂದ ಸ್ಪರ್ಶಜ್ಞಾನವನ್ನು ಹೊಂದುತ್ತಾನೋ ಅದೇ ಸ್ಪರ್ಶ ಎನಿಸಿದೆ. ಹೀಗೆ ಹಲವು ಇಂದ್ರಿಯಗಳ ರೂಪವಾಗಿ ವಿಕಾರವಾಗಿ ಬುದ್ಧಿಯೇ ಕೆಲಸ ಮಾಡುತ್ತದೆ. ಬುದ್ಧಿಯು ಯಾವುದಾದರೂ ಒಂದು ವಿಷಯವನ್ನು ಉದ್ದೇಶಿಸಿ ಸಂಕಲ್ಪಿಸಿಕೊಂಡಾಗ ಅದು ಮನಸ್ಸು ಎನಿಸುತ್ತದೆ.
ಅಧಿಷ್ಠಾನಾನಿ ಬುದ್ಧೇರ್ಹಿ ಪೃಥಗರ್ಥಾನಿ ಪಂಚಧಾ |
ಪಂಚೇಂದ್ರಿಯಾಣಿ ಯಾನ್ಯಾಹುಸ್ತಾನ್ಯದೃಶ್ಯೋಽಧಿತಿಷ್ಠತಿ ॥ 31 ॥
ಹೀಗೆ ಬುದ್ಧಿಗೆ ಐದು ಆಧಾರಗಳಿವೆ. ಅವುಗಳ ಪ್ರಯೋಜನಗಳು ರೂಪ, ರಸ ಮೊದಲಾಗಿ ಬೇರೆ ಬೇರೆಯಾಗಿವೆ. ಅವುಗಳನ್ನೇ ಪಂಚೇಂದ್ರಿಯಗಳು ಎನ್ನುತ್ತಾರೆ. ಬುದ್ಧಿತತ್ತ್ವವು ಅವುಗಳನ್ನು ಕಣ್ಣಿಗೆ ಕಾಣಿಸದಂತೆ ನಿಯಮಿಸುತ್ತಿದೆ.
ಪುರುಷಾಧಿಷ್ಠಿತಾ ಬುದ್ಧಿಸ್ತ್ರಿಷು ಭಾವೇಷು ವರ್ತತೇ |
ಕದಾಚಿಲ್ಲಭತೇ ಪ್ರೀತಿಂ ಕದಾಚಿದನುಶೋಚತಿ ॥ 32 ॥
ಆ ಬುದ್ಧಿಯು ಪುರುಷರನ್ನು ಸತ್ವ, ರಜ, ತಮ ಎಂಬ ಜೀವರಲ್ಲಿ ಪ್ರವರ್ತಿಸುತ್ತದೆ. ಉತ್ತಮ ಜೀವರಲ್ಲಿ ಸಾತ್ವಿಕ ಸ್ವಭಾವದಿಂದ, ಮಧ್ಯಮ ಜೀವರಲ್ಲಿ ರಾಜಸ ಸ್ವಭಾವದಿಂದ, ಅಧಮ ಜೀವರಲ್ಲಿ ತಾಮಸ ಸ್ವಭಾವದಿಂದ ಪ್ರವೃತ್ತಿಯನ್ನು ಹೊಂದುತ್ತದೆ. ಧರ್ಮವನ್ನು ಆಚರಿಸುವ ಈ ಬುದ್ಧಿಯು ತಾಮಸ ವ್ಯಾಪಾರವನ್ನು ಮಾಡುವುದಿಲ್ಲ. ಈ ಬುದ್ಧಿಯನ್ನಾಶ್ರಯಿಸಿಯೇ ಒಮ್ಮೆ ಉತ್ತಮ ಜೀವನು ಮುಕ್ತಿಯನ್ನು ಹೊಂದುತ್ತಾನೆ. ಅಧಮ ಜೀವನು ಅಂಧಂತಮಸ್ಸನ್ನು ಹೊಂದುತ್ತಾನೆ.
ನ ಸುಖೇನ ನ ದುಃಖೇನ ಕದಾಚಿದಪಿ ವರ್ತತೇ |
ಏವಂ ನರಾಣಾಂ ಮನಸಿ ತ್ರಿಷು ಭಾವೇಷ್ವವಸ್ಥಿತಾ ॥ 33 ॥
ಮಧ್ಯಮ ಜೀವನು ಕೇವಲ ಸುಖದಿಂದಾಗಲೀ, ಕೇವಲ ದುಃಖದಿಂದಾಗಲೀ ಇರುವುದಿಲ್ಲ. ಮಧ್ಯಮ ಜೀವನಲ್ಲಿ ಬುದ್ಧಿಯು ಸುಖ-ದುಃಖಗಳ ಮೂಲಕ ನಿಯಮನ ಮಾಡುತ್ತದೆ. ಈ ರೀತಿಯಾಗಿ ಮನುಷ್ಯನಲ್ಲಿಯೇ ಮೂರು ವಿಧವಾದ ಅರ್ಹತೆಗಳಿರುತ್ತವೆ.
ಸೇಯಂ ಭಾವಾತ್ಮಿಕಾ ಭಾವಾಂಸ್ತ್ರೀನೇತಾನ್ನಾತಿವರ್ತತೇ |
ಸರಿತಾಂ ಸಾಗರೋ ಭರ್ತಾ ಮಹಾವೇಲಾಮಿವೋರ್ಮಿಮಾನ್ ॥34॥
ಅವಿಭಾಗಗತಾ ಬುದ್ಧಿರ್ಭಾವೇ ಮನಸಿ ವರ್ತತೇ |

ಪ್ರವರ್ತಮಾನಂ ಹಿ ರಜಸ್ತದ್ಭಾವಮನುವರ್ತತೇ ॥ 35 ॥
ಎಲ್ಲಾ ವಸ್ತುವಿನ ಸ್ವರೂಪದಲ್ಲಿರುವ ಬುದ್ಧಿಯು ಆಗಾಗ ಸಮುದ್ರವು ಉಕ್ಕಿ ಅಲೆಗಳ ಸಮುದಾಯದಿಂದ ತನ್ನ ಮೇರೆಯನ್ನು ಮೆಟ್ಟಿ ಮೇಲೆ ಮೇಲೆ ಬರುವಂತೆ ಕೆಲವೊಮ್ಮೆ ಮೂರು ಸ್ವಭಾವಗಳನ್ನು ಅತಿಕ್ರಮಿಸಿ ಈ ಬುದ್ಧಿಯು ವ್ಯಾಪಾರ ಮಾಡುತ್ತದೆ. ಪಂಚೇಂದ್ರಿಯಗಳ ಮೂಲಕ ಐದು ರೀತಿಯಲ್ಲಿ ಹೊರಗೆ ಕಾಣದೇ ಇರುವ ಬುದ್ಧಿಯು ಮನಸ್ಸಿನಲ್ಲಿ ಅಡಗಿ ಇರುತ್ತದೆ. ಕಾರ್ಯಪ್ರವರ್ತಕವಾದ ರಜೋಗುಣವು ಬುದ್ಧಿಯನ್ನು ಆವರಿಸಿದಾಗ ಇಂದ್ರಿಯಗಳ ದ್ವಾರಾ ಬುದ್ಧಿಯು ವ್ಯಾಪಾರವನ್ನು ಮಾಡುತ್ತದೆ.
ಇಂದ್ರಿಯಾಣಿ ಹಿ ಸರ್ವಾಣಿ ಪ್ರದರ್ಶಯತಿ ಸಾ ಸದಾ |
ಪ್ರೀತಿಃ ಸತ್ತ್ವಂ ರಜಃ ಶೋಕಸ್ತಮೋ ಮೋಹಶ್ಚ ತೇ ತ್ರಯಃ ॥ 36 ॥
ಇಂದ್ರಿಯಗಳು ವಿಷಯದ ಕಡೆ ಧಾವಿಸಿದಾಗ ಅದರಿಂದ ಪ್ರೀತಿರೂಪವಾದ ಸತ್ವವೂ, ಅಜ್ಞಾನ ರೂಪವಾದ ತಮಸ್ಸೂ, ಶೋಕರೂಪವಾದ ರಜಸ್ಸು ಎಂಬ ಮೂರು ಗುಣಗಳು ಪ್ರವೃತ್ತಿಯನ್ನು ಹೊಂದುತ್ತವೆ. ಹೀಗೆ ಪ್ರೀತಿ, ಶೋಕ, ಮೋಹ ಎಂಬುವು ಅದರ ಫಲವೆನಿಸಿವೆ.
ಯೇ ಯೇ ಚ ಭಾವಾ ಲೋಕೇಽಸ್ಮಿನ್ ಸರ್ವೇಷ್ವೇತೇಷು ತೇ ತ್ರಿಷು |
ಇತಿ ಬುದ್ಧಿಗತಿಃ ಸರ್ವಾ ವ್ಯಾಖ್ಯಾತಾ ತವ ಭಾರತ ॥ 37 ॥
ಇಂದ್ರಿಯಾಣಿ ಚ ಸರ್ವಾಣಿ ವಿಜೇತವ್ಯಾನಿ ಧೀಮತಾ |
ಸತ್ತ್ವಂ ರಜಸ್ತಮಶ್ಚೈವ ಪ್ರಾಣಿನಾಂ ಸಂಶ್ರಿತಾಃ ಸದಾ ॥ 38 ॥
ಧರ್ಮರಾಜನೇ, ಲೋಕದಲ್ಲಿ ಇರುವ ಪದಾರ್ಥಗಳೆಲ್ಲ ಈ ಮೂರು ಗುಣಗಳಲ್ಲಿಯೇ ಅಡಕವಾಗಿವೆ. ಇದಕ್ಕೆ ಮೂಲವಾದದ್ದು ಬುದ್ಧಿಯು. ಈ ರೀತಿಯಾಗಿ ಬುದ್ಧಿಯ ಗತಿಗಳನ್ನು ನಾನು ನಿನಗೆ ವಿವರಿಸಿದ್ದೇನೆ. ಧರ್ಮರಾಜನೇ, ಧೀಮಂತನಾದವನು ಈ ಇಂದ್ರಿಯಗಳನ್ನು ನಿಗ್ರಹಿಸಿಕೊಳ್ಳಬೇಕು.
ತ್ರಿವಿಧಾ ವೇದನಾ ಚೈವ ಸರ್ವಸತ್ತ್ವೇಷು ದೃಶ್ಯತೇ |
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ಭಾರತ ॥ 39 ॥
ಸತ್ತ್ವ, ರಜಸ್ಸು, ತಮಸ್ಸು ಇವುಗಳು ಯಾವಾಗಲೂ ಪ್ರಾಣಿಗಳನ್ನು ಆಶ್ರಯಿಸಿಕೊಂಡಿವೆ. ಪ್ರತಿ ಪ್ರಾಣಿಗಳಲ್ಲಿಯೂ ಕೂಡ ಸಾತ್ವಿಕ, ರಾಜಸ, ತಾಮಸ ಎಂಬ ಭಾವಗಳು, ಸಂವೇದನೆಗಳು ಕಾಣಿಸುತ್ತವೆ.
ಸುಖಸ್ಪರ್ಶಃ ಸತ್ತ್ವಗುಣೋ ದುಃಖಸ್ಪರ್ಶೋ ರಜೋಗುಣಃ |
ತಮೋಗುಣೇನ ಸಂಯುಕ್ತೌ ಭವತೋಽವ್ಯಾವಹಾರಿಕೌ ॥ 40 ॥
ಸತ್ವಗುಣದಲ್ಲಿ ಸುಖದ ಸ್ಪರ್ಶವಿದೆ. ರಜೋಗುಣದಲ್ಲಿ ದುಃಖದ ಸಂಬಂಧವಿದೆ. ಈ ಎರಡು ತಮೋಗುಣದ ಜೊತೆಗೆ ಸೇರಿದಾಗ ಕೇವಲ ಯಥಾರ್ಥವಾದ ಸುಖ, ದುಃಖಗಳನ್ನು ಪಡೆಯದೆ ಇವುಗಳ ಭ್ರಮೆಯನ್ನು ಹೊಂದುತ್ತಾನೆ. ತಮೋಗುಣದ ಆಧಿಕ್ಯದಿಂದ ಸತ್ತ್ವ, ರಜೋಗುಣಗಳ ಸ್ಥಿತಿಯನ್ನು ಪಡೆಯದ ಜೀವನು ನಿದ್ರೆಯಿಂದ ಸ್ತಂಭೀಭೂತನಾಗಿ ಯಾವುದನ್ನೂ ನೋಡಲು ಸಮರ್ಥನಾಗಿರುವುದಿಲ್ಲ.
ತತ್ರ ಯತ್ ಪ್ರೀತಿಸಂಯುಕ್ತಂ ಕಾಯೇ ಮನಸಿ ವಾ ಭವೇತ್ |
ವರ್ತತೇ ಸಾತ್ತ್ವಿಕೋ ಭಾವ ಇತ್ಯವೇಕ್ಷೇತ ತತ್ತದಾ ॥ 41 ॥
ಜೀವರಲ್ಲಿ ದೇಹದಲ್ಲಿಯಾಗಲೀ, ಮನಸ್ಸಿನಲ್ಲಿಯಾಗಲೀ ಪ್ರೀತಿಯಿಂದ ಕೂಡಿದ ಸಂತೋಷವು ಉಂಟಾದಾಗ ಅದನ್ನು ಆ ಸಮಯದಲ್ಲಿ ಸಾತ್ವಿಕಭಾವ ಎಂದು ತಿಳಿಯಬೇಕು.
ಅಥ ಯದ್ದುಃಖಸಂಯುಕ್ತಮತುಷ್ಟಿಕರಮಾತ್ಮನಃ |
ಪ್ರವೃತ್ತಂ ರಜ ಇತ್ಯೇವ ತನ್ನಸಂರಭ್ಯ ಚಿಂತಯೇತ್ ॥ 42 ॥
ಮನುಷ್ಯನಿಗೆ ಅಸಂತೋಷವುಂಟಾಗುವ ಪ್ರಸಂಗಗಳು ಒದಗಿದಾಗ, ಮನಸ್ಸು ದುಃಖದಿಂದ ಕೂಡಿದಾಗ ಇದು ರಜೋಗುಣದ ಕಾರ್ಯವೆಂದು ಅರಿತು ಇಂತಹದ್ದನ್ನು ಪಡೆದಾಗ ಚಿಂತೆಗೀಡಾಗಬಾರದು.
ಅಥ ಯನ್ಮೋಹಸಂಯುಕ್ತಮವ್ಯಕ್ತಮಿವ ಯದ್ಭವೇತ್ |
ಅಪ್ರತರ್ಕ್ಯಮವಿಜ್ಞೇಯಂ ತಮಸ್ತದುಪಧಾರಯೇತ್ ॥ 43 ॥
ಯಾವಾಗ ಏನೂ ತಿಳಿಯದೆ ಇರುವ ಜೀವನು ಮೋಹಕ್ಕೆ ತುತ್ತಾಗುತ್ತಾನೋ ಎಲ್ಲ ವಿಚಾರಗಳು ಅಸ್ಪಷ್ಟವಾಗುತ್ತವೋ, ಊಹೆ ಮಾಡಲಾಗದ, ತಿಳಿಯದೇ ಇರುವ ಆ ಅವಸ್ಥೆಯನ್ನು ತಮಸ್ಸಿನ ವ್ಯಾಪಾರವೆಂದು ತಿಳಿದು ಚಿಂತೆಯಿಂದ ಮುಕ್ತನಾಗಬಹುದು.
ಪ್ರಹರ್ಷಃ ಪ್ರೀತಿರಾನಂದಃ ಸುಖಂ ಸಂಶಾಂತಚಿತ್ತತಾ |
ಕಥಂಚಿದಭಿವರ್ತಂತ ಇತ್ಯೇತೇ ಸಾತ್ತ್ವಿಕಾ ಗುಣಾಃ ॥ 44 ॥
ಸಂತೋಷ, ಪ್ರೀತಿ, ಆನಂದ, ಸುಖ, ಶಾಂತಿ ಎಂಬವುಗಳು ಎಲ್ಲಿಯಾದರೂ ಅಭಿವೃದ್ಧಿಯನ್ನು ಹೊಂದಿದಾಗ ಅವುಗಳನ್ನು ಸಾತ್ವಿಕ ಗುಣ ಎಂದು ಚಿಂತಿಸಬೇಕು.
ಅತುಷ್ಟಿಃ ಪರಿತಾಪಶ್ಚ ಶೋಕೋ ಲೋಭಸ್ತಥಾಕ್ಷಮಾ |
ಲಿಂಗಾನಿ ರಜಸಸ್ತಾನಿ ದೃಶ್ಯಂತೇ ಹೇತ್ವಹೇತುಭಿಃ ॥ 45 ॥
ಅಸಂತುಷ್ಟಿ, ಪರಿತಾಪ, ಶೋಕ, ಅತಿಯಾದ ಆಸೆ, ಅಸಹನೆ ಇವುಗಳು ಉತ್ಪನ್ನವಾದಾಗ ಇವುಗಳು ಪರಲೋಕದ ಪುಣ್ಯಕ್ಕೆ ಪ್ರತಿಬಂಧಕಗಳಾದ ರಾಜಸ ಗುಣಗಳು ಎಂದು ಚಿಂತಿಸಬೇಕು.
ಅಭಿಮಾನಸ್ತಥಾ ಮೋಹಃ ಪ್ರಮಾದಃ ಸ್ವಪ್ನತಂದ್ರಿತಾ |
ಕಥಂಚಿದಭಿವರ್ತಂತೇ ವಿವಿಧಾಸ್ತಾಮಸಾ ಗುಣಾಃ ॥ 46 ॥

ಅಭಿಮಾನ, ಅವಿವೇಕ, ಅಜಾಗರೂಕತೆ, ನಿದ್ರೆ, ಸೋಮಾರಿತನ ಇವೆಲ್ಲವೂ ತಾಮಸಗುಣಗಳೆಂದು ಚಿಂತಿಸಬೇಕು.
ದೂರಗಂ ಬಹುಧಾಗಾಮಿ ಪ್ರಾರ್ಥನಾಸಂಶಯಾತ್ಮಕಮ್ |
ಮನಃ ಸುನಿಯತಂ ಯಸ್ಯ ಸ ಸುಖೀ ಪ್ರೇತ್ಯ ಚೇಹ ಚ ॥ 47 ॥
ಬಹುದೂರಕ್ಕೆ ಸಾಗುವ ಬಹುವಿಧವಾಗಿ ಸುತ್ತುವ ಸ್ವಭಾವವುಳ್ಳ ಆಸೆ ಮತ್ತು ಸಂಶಯದಿಂದ ತುಂಬಿದ ಮನಸ್ಸನ್ನು ಯಾವನು ಸ್ಥಿರವಾಗಿ ನಿಲ್ಲಿಸುತ್ತಾನೋ ಅವನು ಇಹ-ಪರಗಳಲ್ಲಿ ಸುಖಿಯಾಗಿರುತ್ತಾನೆ.
ಸತ್ತ್ವಕ್ಷೇತ್ರಜ್ಞಯೋರೇತದಂತರಂ ಪಶ್ಯ ಸೂಕ್ಷ್ಮಯೋಃ |
ಸೃಜತೇ ತು ಗುಣಾನೇಕ ಏಕೋ ನ ಸೃಜತೇ ಗುಣಾನ್ ॥ 48 ॥
ಈ ಗುಣಗಳ ಸಂಬಂಧವಿಲ್ಲದೆ ಜೀವರನ್ನು ನಿಯಮಿಸುವ ಅಂತರ್ಯಾಮಿಯಾದ ಪರಮಾತ್ಮನಿಗೂ, ಸತ್ವ ಶಬ್ದದಿಂದ ಕರೆಯಲ್ಪಟ್ಟ ಪ್ರಾಣಿಸಮೂಹಕ್ಕೂ ಇರುವ ಸೂಕ್ಷ್ಮವಾದ ಅಂತರವನ್ನು ನೀನೇ ನೋಡು. ಕ್ಷೇತ್ರಜ್ಞನೆನಿಸಿದ ಪರಮಾತ್ಮನು ಒಬ್ಬನೇ ಸ್ವತಂತ್ರನಾಗಿ ನಿಂತು ಈ ಗುಣಗಳನ್ನು ಸೃಷ್ಟಿಸುತ್ತಾನೆ. ಅವನ ಅಧೀನನಾಗಿರುವ ಜೀವನು ಅಸ್ವತಂತ್ರನಾಗಿ ಏನನ್ನೂ ಸೃಷ್ಟಿಸಲಾರನು.
ವ್ಯಾಖ್ಯಾನ ವಿಶೇಷ ಕೆಲವರು `ಸತ್ವಕ್ಷೇತ್ರಜ್ಞಯೋರೇತತ್' ಎನ್ನುವುದಕ್ಕೆ ಸತ್ವಗುಣಕ್ಕೂ, ಕ್ಷೇತ್ರಜ್ಞನಿಗೂ ಇರುವ ಅಂತರವನ್ನು ಸೂಕ್ಷ್ಮವಾಗಿ ನೋಡು ಎಂದು ವ್ಯಾಖ್ಯಾನಿಸುತ್ತಾ ಬುದ್ಧಿಯೂ, ಕ್ಷೇತ್ರಜ್ಞನು ಒಂದೇ ಆಗಿದೆ ಎಂದು ವಿವರಿಸಿದ್ದಾರೆ. ಸತ್ತ್ವಗುಣಕ್ಕೂ, ಕ್ಷೇತ್ರಜ್ಞನಿಗೂ ಅಂತರವನ್ನಾಗಲೀ, ಅರ್ಥಾತ್ ಭೇದವನ್ನಾಗಲೀ ಐಕ್ಯವನ್ನಾಗಲೀ ಇಲ್ಲಿ ಹೇಳುವುದು ಅಪ್ರಸ್ತುತವಾಗುತ್ತದೆ. ಹಿಂದೆ ಮೂರುಗುಣಗಳನ್ನು ಪ್ರಸ್ತಾಪಿಸಿ ಒಂದೇ ಗುಣವನ್ನು ಸ್ವೀಕರಿಸಿ ಅಂತರವನ್ನು ಹೇಳುವುದು ಯುಕ್ತಿಬದ್ಧವಾಗಿರುವುದಿಲ್ಲ. 50ನೇ ಶ್ಲೋಕದಲ್ಲಿ `ಸಂಪ್ರಯುಕ್ತೌ ತಥೈವ ತೌ' ಎಂದು ಇರುವುದರಿಂದ ಜೀವ-ಪರಮಾತ್ಮರಿಗೆ ಭೇದವನ್ನೇ ಹೇಳಿದ್ದಾರೆ. ಸತ್ತ್ವಗುಣವೆಂದು ಸ್ವೀಕರಿಸಿದರೆ ಮುಂದೆ ಹೇಳಿದ ವಾಕ್ಯದ ವಿರೋಧವು ಉಂಟಾಗುತ್ತದೆ. ಸಂಪ್ರಯುಕ್ತೌ ಎಂದರೆ ನಿತ್ಯವೂ ಸಂಬಂಧವನ್ನು ಹೊಂದಿರುವ ಜೀವ-ಪರಮಾತ್ಮರು ಎಂದು ಅರ್ಥವು. ಜೀವನಿಗೆ ಸತ್ತ್ವಗುಣದ ಸಂಬಂಧವು ನಿತ್ಯವೂ ಇರುವುದಿಲ್ಲ. ಆದ್ದರಿಂದ ಪ್ರಕರಣ ವಿರೋಧ ಬರುವುದರಿಂದ ಸತ್ತ್ವ ಶಬ್ದಕ್ಕೆ ಪ್ರಾಣಿಸಮೂಹ ಎಂದೇ ಅರ್ಥ ಮಾಡಬೇಕೇ ಹೊರತು ಸತ್ತ್ವಗುಣವೆಂದು ಅರ್ಥ ಮಾಡಬಾರದು. ಕ್ಷೇತ್ರಜ್ಞ ಶಬ್ದಕ್ಕೆ ಜೀವನೆಂದು ಅರ್ಥಮಾಡಬಾರದು. `ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎಂದು ಗೀತೆಯಲ್ಲಿ ಕೃಷ್ಣನು ಹೇಳಿದಂತೆ ಕ್ಷೇತ್ರಜ್ಞನು ಪರಮಾತ್ಮನೇ ಆಗಿದ್ದಾನೆ.
ಮಶಕೋದುಂಬರೌ ಚಾಪಿ ಸಂಪ್ರಯುಕ್ತೌ ಯಥಾ ಸದಾ |
ಅನ್ಯೋನ್ಯಮನ್ಯೌ ಚ ಯಥಾ ಸಂಪ್ರಯೋಗಸ್ತಥಾ ತಯೋಃ ॥ 49 ॥
ಅತ್ತಿಹಣ್ಣು, ಅತ್ತಿಹಣ್ಣಿನಲ್ಲಿರುವ ನುಸಿ ಇವೆರಡು ಒಂದಾಗಿ ಸೇರಿದಂತೆ ಕಂಡು ಬಂದರೂ ಅವುಗಳು ಹೇಗೆ ಬೇರೆ ಬೇರೆಯಾಗಿವೆಯೋ ಅದರಂತೆ ಸ್ವಭಾವದಿಂದಲೇ ಬೇರ್ಪಟ್ಟಿರುವ ಜೀವ-ಪರಮಾತ್ಮರು ಒಂದೇ ಶರೀರದಲ್ಲಿ ನೆಲೆಸಿದ್ದರೂ ಪರಸ್ಪರ ಭಿನ್ನರಾಗಿಯೇ ಇದ್ದಾರೆ.
ಪೃಥಗ್ಭೂತೌ ಪ್ರಕೃತ್ಯಾ ತೌ ಸಂಪ್ರಯುಕ್ತೌ ಚ ಸರ್ವದಾ |
ಯಥಾ ಮತ್ಸ್ಯೋ ಜಲಂ ಚೈವ ಸಂಪ್ರಯುಕ್ತೌ ತಥೈವ ತೌ ॥ 50 ॥
ನೀರು ಮತ್ತು ಮೀನು ಯಾವಾಗಲೂ ನಿತ್ಯಸಂಬಂಧವನ್ನು ಹೊಂದಿದ್ದರೂ ಅವುಗಳಲ್ಲಿ ಒಂದಕ್ಕೊಂದು ಭಿನ್ನತೆಯೇ ಹೇಗೆ ಇದೆಯೋ ಅದರಂತೆ ಜೀವರಿಗೂ ಪರಮಾತ್ಮನಿಗೂ ನಿತ್ಯ ಸಂಬಂಧವಿದ್ದರೂ ಭಿನ್ನತೆಯನ್ನು ತಿಳಿಯಬೇಕು.
ನ ಗುಣಾ ವಿದುರಾತ್ಮಾನಂ ಸ ಗುಣಾನ್ ವೇತ್ತಿ ಸರ್ವಶಃ |
ಪರಿದ್ರಷ್ಟಾ ಗುಣಾನಾಂ ಚ ಸಂಸ್ರಷ್ಟಾ ಮನ್ಯತೇ ಸದಾ ॥ 51 ॥
ಪರಮಾತ್ಮನಲ್ಲಿರುವ ಗುಣಗಳನ್ನು ಜೀವಾತ್ಮನು ತಿಳಿಯಲಾರನು. ಆದರೆ ಜೀವಾತ್ಮನಲ್ಲಿರುವ ಗುಣಗಳನ್ನು ಪರಮಾತ್ಮನು ತಿಳಿದಿರುತ್ತಾನೆ. ಅಸ್ವತಂತ್ರರಾದ ಜೀವರು ಯಾವತ್ತೂ ಪರಮಾತ್ಮನನ್ನು ತಿಳಿಯಲಾರರು. ಹೀಗಿದ್ದರೂ ಜೀವನು ನಾನು ಎಲ್ಲಾ ಗುಣಗಳನ್ನು ನೋಡುತ್ತೇನೆ, ಸೃಷ್ಟಿಸುತ್ತೇನೆ ಎಂದು ತಪ್ಪಾಗಿ ತಿಳಿಯುತ್ತಾನೆ. ಪರಮಾತ್ಮನು ಎಲ್ಲಾ ಗುಣಗಳನ್ನು ನಾನೇ ಸೃಷ್ಟಿಸುತ್ತೇನೆ, ನೋಡುತ್ತೇನೆ ಎಂದು ಯಥಾರ್ಥವಾಗಿ ತಿಳಿಯುತ್ತಾನೆ.
ಇಂದ್ರಿಯೈಸ್ತು ಪ್ರದೀಪಾರ್ಥಂ ಕುರುತೇ ಬುದ್ಧಿಸಪ್ತಮೈಃ |
ನಿರ್ವಿಚೇಷ್ಟೈರಜಾನದ್ಭಿಃ ಪರಮಾತ್ಮಾ ಪ್ರದೀಪವತ್ ॥ 52 ॥
ಯಾವಾಗ ಸಾಧಕನು ಪಂಚಜ್ಞಾನೇಂದ್ರಿಯಗಳು, ಮನಸ್ಸು ಇವುಗಳ ಸಹಕಾರದಿಂದ ಕೂಡಿದ ಬಲಿಷ್ಠವಾದ ಬುದ್ಧಿಯಿಂದ ಬಾಹ್ಯವಾದ ವಿಷಯ ಸುಖಗಳನ್ನು ಚಿಂತಿಸದೆ, ಅಂತರಂಗದಲ್ಲಿ ಭಗವಂತನ ಪ್ರಸಾದಸಿದ್ಧಿಗೋಸ್ಕರ ಇಂದ್ರಿಯಗಳನ್ನು ನಿಯಮಿಸಿಕೊಂಡು ಪರಮಾತ್ಮನನ್ನೇ ಎಲ್ಲಾ ಇಂದ್ರಿಯಗಳಿಂದ ನೋಡಲು ಪ್ರಯತ್ನಿಸುತ್ತಾನೋ ಅಂತಹ ಸಾತ್ವಿಕನಿಗೆ ಪರಮಾತ್ಮನು ಅಂತರಂಗದಲ್ಲಿ ಬೆಳಕಿನಂತೆ ಗೋಚರಿಸುತ್ತಾನೆ.
ಸೃಜತೇ ಹಿ ಗುಣಾನ್ ಸತ್ತ್ವಂ ಕ್ಷೇತ್ರಜ್ಞಃ ಪರಿಪಶ್ಯತಿ |
ಸಂಪ್ರಯೋಗಸ್ತಯೋರೇಷ ಸತ್ತ್ವಕ್ಷೇತ್ರಜ್ಞಯೋರ್ಧ್ರುವಃ ॥ 53 ॥
ಭಗವಂತನು ಪ್ರಾಣಿ ಸಮುದಾಯವನ್ನು, ಆಯಾ ಪ್ರಾಣಿಗಳಿಗೆ ಯೋಗ್ಯವಾದ ಸತ್ತ್ವಾದಿ ಗುಣಗಳನ್ನು ಸೃಷ್ಟಿ ಮಾಡುತ್ತಾನೆ. ಅವರನ್ನು ಚೆನ್ನಾಗಿ ಪರಿಪಾಲಿಸಲು ಗಮನ ಹರಿಸುತ್ತಾನೆ. ಈ ಪ್ರಾಣಿಸಮೂಹಕ್ಕೂ ಪರಮಾತ್ಮನಿಗೂ ಸಂಬಂಧವು ನಿತ್ಯವಾದುದು.
ವ್ಯಾಖ್ಯಾನ ವಿಶೇಷ ಇಲ್ಲಿ ಸತ್ತ್ವ ಮತ್ತು ಕ್ಷೇತ್ರಜ್ಞ ಎಂಬ ಶಬ್ದಗಳಿಂದ ಪ್ರಾಣಿಸಮುದಾಯ ಮತ್ತು ಪರಮಾತ್ಮನನ್ನು ಗ್ರಹಿಸಬೇಕು. ಸತ್ತ್ವಗುಣದ ಸಂಬಂಧವು ಮೋಕ್ಷದ ಅವಸ್ಥೆಯಲ್ಲಿ ಇಲ್ಲದಿರುವುದರಿಂದ ನಿತ್ಯಸಂಬಂಧವು ಪ್ರಾಣಿಸಮೂಹದ ಜೊತೆಗೆ ಹೊಂದಿಕೆಯಾಗುತ್ತದೆ. `ಸತ್ತ್ವಕ್ಷೇತ್ರಯೋರ್ಧ್ರುವಃ' ಎಂಬ ಮಾತಿನಿಂದ ಕ್ಷೇತ್ರಜ್ಞ-ಸತ್ತ್ವಗಳ ಸಂಬಂಧವು ಶಾಶ್ವತ ಎಂದು ಹೇಳಿದ್ದರಿಂದ ಜೀವ-ಪರಮಾತ್ಮರ ಸಂಬಂಧವು ನಿತ್ಯ ಎಂಬ ಅರ್ಥವು ಸ್ಫುಟವಾಗಿ ಗೋಚರವಾಗುತ್ತದೆ.
ಆಶ್ರಯೋ ನಾಸ್ತಿ ಸತ್ತ್ವಸ್ಯ ಕ್ಷೇತ್ರಜ್ಞಸ್ಯ ಚ ಕಶ್ಚನ |

ಸತ್ತ್ವಂ ಮನಸ್ತು ಸೃಜತಿ ನ ಗುಣಾನ್ ವೈ ಕದಾಚನ ॥ 54 ॥
ಪ್ರಾಣಿಸಮುದಾಯವು ಮಶಕಗಳು ಔದುಂಬರ ಫಲವನ್ನೂ, ಮತ್ಸ್ಯಗಳು ನೀರನ್ನು ಆಶ್ರಯಿಸಿದಂತೆ ಪರಮಾತ್ಮನನ್ನು ಆಶ್ರಯಿಸಿದೆ ಎಂದು ಹೇಳಿದ್ದರಿಂದ ಪ್ರಾಣಿ ಸಮೂಹಕ್ಕೆ ಆಶ್ರಯವು ಇಲ್ಲ ಎಂದರೆ ಪರಮಾತ್ಮನನ್ನು ಬಿಟ್ಟು ಬೇರೆ ಆಶ್ರಯವೂ ಇಲ್ಲ ಎಂದು ಅರ್ಥ. ಕ್ಷೇತ್ರಜ್ಞನಾದ ಪರಮಾತ್ಮನು ಯಾವ ಆಶ್ರಯವನ್ನೂ ಹೊಂದಿರುವುದಿಲ್ಲ. ಸ್ವಯಂ ತಾನಾಗಲೀ, ಬೇರೆಯವರಾಗಲಿ ಅವನಿಗೆ ಅಶ್ರಯನೆನಿಸುವುದಿಲ್ಲ. `ಕಿಂ ಸ್ವಿದಾಸಿ ವಧಿಷ್ಠಾನಂ' ಎಂದು ಪರಮಾತ್ಮನಿಗೆ ಯಾವುದೇ ರೀತಿಯಾದ ಆಶ್ರಯದ ಅಗತ್ಯವಿಲ್ಲ ಎಂದು ಶ್ರುತಿ ಹೇಳಿದೆ. ಜೀವಸಮೂಹವು ರೂಪಾದಿ ಗುಣಗಳನ್ನು ಸೃಷ್ಟಿಸಲು ಸಮರ್ಥವಲ್ಲ. ಮನಸ್ಸು ಎಂದಿಗೂ ರೂಪಾದಿ ಗುಣಗಳನ್ನು ಸೃಷ್ಟಿಸುವುದಿಲ್ಲ. ಆದ್ದರಿಂದ ಯಾವಾಗ ಜೀವನು ಪರಮಾತ್ಮನನ್ನು ಆಶ್ರಯಿಸಿ ತಾನು ಸೃಷ್ಟಿಸದ, ತನ್ನ ಮನಸ್ಸೇ ಮೊದಲಾದ ಇಂದ್ರಿಯಾದಿ ಮೊದಲಾದ ರೂಪಾದಿ ಗುಣಗಳ ವ್ಯಾಪಾರವನ್ನು ಅರ್ಥಾತ್ ಸ್ನೇಹಪಾಶಗಳನ್ನು ನಿಯಂತ್ರಿಸಿ- ಕೊಳ್ಳುತ್ತಾನೋ ಆಗ ಜೀವರಿಗೆ, ಸತ್ತ್ವನಾಮಕ ಜೀವಸಮೂಹಕ್ಕೆ ಪರಮಾತ್ಮನು ಹೃದಯದಲ್ಲಿ ಪ್ರಕಟನಾಗುತ್ತಾನೆ.
ರಶ್ಮೀಂಸ್ತೇಷಾಂ ಸ ಮನಸಾ ಯದಾ ಸಮ್ಯಙ್ನಿಯಿಚ್ಛತಿ |
ತದಾ ಪ್ರಕಾಶತೇಽಸ್ಯಾತ್ಮಾ ಘಟೇ ದೀಪೋ ಜ್ವಲನ್ನಿವ ॥ 55 ॥
ಯಾವಾಗ ಪ್ರಾಣಿಸಮುದಾಯವು ಇಂದ್ರಿಯದ್ವಾರದಿಂದ ಹೊರಡುವ ಗುಣಗಳೆಂಬ ಕಿರಣಗಳನ್ನು ಮನಸ್ಸಿನಲ್ಲಿಯೇ ನಿಗ್ರಹಿಸಿಕೊಳ್ಳುತ್ತದೋ ಆಗ ಘಟದೀಪದಂತೆ ಪರಮಾತ್ಮನು ಜೀವರ ಹೃದಯದಲ್ಲಿಯೇ ಬೆಳಗುತ್ತಾನೆ.
ತ್ಯಕ್ತ್ವಾ ಯಃ ಪ್ರಕೃತಂ ಕರ್ಮ ನಿತ್ಯಮಾತ್ಮರತಿರ್ಮುನಿಃ |
ಸರ್ವಭೂತಾತ್ಮಭೂತಃ ಸ್ಯಾತ್ಸ ಗಚ್ಛೇತ್ ಪರಮಾಂ ಗತಿಮ್ ॥ 56 ॥
ಯಾವನು ಕರ್ಮಗಳನ್ನೆಲ್ಲ ನೀಗಿ ಪರಮಾತ್ಮನಲ್ಲಿಯೇ ಪ್ರೇಮವುಳ್ಳವನಾಗಿ ಮನನಶೀಲನಾಗಿರುತ್ತಾನೋ ಅವನು ಕರ್ಮತ್ಯಾಗದಿಂದ ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ತಿಳಿದು ಉತ್ತಮ ಗತಿಯನ್ನು ಹೊಂದುತ್ತಾನೆ.
ಯಥಾ ವಾರಿಚರಃ ಪಕ್ಷೀ ಲಿಪ್ಯಮಾನೋ ನ ಲಿಪ್ಯತೇ |
ಏವಮೇವ ಕೃತಪ್ರಜ್ಞೋ ಭೂತೇಷು ಪರಿವರ್ತತೇ ॥ 57 ॥
ಯಾವ ರೀತಿಯಾಗಿ ನೀರಿನಲ್ಲಿದ್ದರೂ ಹಂಸಪಕ್ಷಿಯು ನೀರಿನಲ್ಲಿ ನೆನೆಯುವುದಿಲ್ಲವೋ ಹಾಗೆಯೇ ಜೀವರ ಜೊತೆಗೇ ಸಂಚರಿಸುತ್ತಿರುವ ಸಾಧಕನು ಪರಮಾತ್ಮನ ತತ್ತ್ವಜ್ಞಾನವನ್ನು ಪಡೆದ ಫಲದಿಂದಾಗಿ ಪ್ರಾಣಿಗಳ ಸಮುದಾಯದಲ್ಲಿದ್ದರೂ ಸಂಗರಹಿತನಾಗಿರುತ್ತಾನೆ.
ಏವಂಸ್ವಭಾವಮೇವೈತತ್ ಸ್ವಬುದ್ಧ್ಯಾ ವಿಹರೇನ್ನರಃ |
ಅಶೋಚನ್ನಪ್ರಹೃಷ್ಯಂಶ್ಚ ಚರೇದ್ ವಿಗತಮತ್ಸರಃ ॥ 58 ॥
ಹೀಗೆ ಸಂಗರಹಿತವಾದ ಸ್ವಭಾವವುಳ್ಳ ಜೀವಾತ್ಮನು ಪರಮಾತ್ಮನ ಸ್ವರೂಪವನ್ನು ತನ್ನ ಬುದ್ಧಿಯಿಂದ ತಿಳಿದು ಆನಂದವನ್ನು ಹೊಂದಬೇಕು. ಅವನಿಗೆ ದುಃಖ, ಸಂತೋಷ, ಮತ್ಸರಗಳು ಎಂದಿಗೂ ಹುಟ್ಟಲಾರವು.
ಸ್ವಭಾವಸಿದ್ಧ್ಯಾ ಸಂಸಿದ್ಧಾನ್ ಸ ನಿತ್ಯಂ ಸೃಜತೇ ಗುಣಾನ್ |
ಊರ್ಣನಾಭಿರ್ಯಥಾ ಸೃಷ್ಟಾ ವಿಜ್ಞೇಯಾಸ್ತಂತುವದ್ ಗುಣಾಃ ॥ 59 ॥
ಹೀಗೆ ಪರಮಾತ್ಮತತ್ತ್ವವನ್ನು ತಿಳಿದ ಜ್ಞಾನಿಯು ಜೇಡರ ಹುಳವು ತನ್ನಲ್ಲಿಯೇ ತನಗೆ ಬೇಕಾದ ನೂಲಿನ ಎಳೆಗಳನ್ನು ಉಂಟುಮಾಡುವಂತೆ ತನಗೆ ಬೇಕಾದ ಅಪೇಕ್ಷೆಗಳನ್ನು ತನ್ನಲ್ಲಿಯೇ ಪಡೆಯಬಲ್ಲನು. ಗುಣಗಳನ್ನು ಊರ್ಣನಾಭಿಯ ತಂತುಗಳಂತೆ ಚಿಂತಿಸಬೇಕು. ಊರ್ಣನಾಭಿಯುವೂ (ಜೇಡವು) ತನ್ನ ನೂಲಿನಿಂದ ಹೇಗೆ ಬಂಧನಕ್ಕೆ ತುತ್ತಾಗುವುದಿಲ್ಲ ಹಾಗೆ ವಿಷಯಗಳಿಂದ ಜ್ಞಾನಿಯು ಬದ್ಧನಾಗುವುದಿಲ್ಲ.
ಪ್ರಧ್ವಸ್ತಾ ನ ನಿವರ್ತಂತೇ ನಿವೃತ್ತಿರ್ನೋಪಲಭ್ಯತೇ |
ಪ್ರತ್ಯಕ್ಷೇಣ ಪರೋಕ್ಷಂ ತದನುಮಾನೇನ ಸಿಧ್ಯತಿ ॥ 60 ॥
ಲಿಂಗದೇಹದಿಂದ ಬಿಡುಗಡೆಯನ್ನು ಹೊಂದಿರುವ ಉತ್ತಮ, ಅಧಮ ಜೀವರು ಪುನಃ ಪ್ರವೃತ್ತಿಯನ್ನು ಹೊಂದುವುದಿಲ್ಲ. `ನ ಚ ಪುನರಾವರ್ತತೇ ನ ಚ ಪುನರಾವರ್ತತೇ' ಎಂದು ಶ್ರುತಿಯು ಹೇಳುತ್ತಿದೆ. `ಅಂಧೇತಮಸಿಮಗ್ನಾನಾಂ ನ ತೇಷಾಂ ಪುನರುತ್ಥಿತಿಃ' ಎಂದು ಸ್ಮೃತಿಯೂ ಇದೆ. ಮೋಕ್ಷಕ್ಕೆ ಹೋದವರು ಮರಳಿ ಸಂಸಾರಕ್ಕೆ ಬರುವುದಿಲ್ಲ. ಅಂಧಂತಮಸ್ಸಿಗೆ ಹೋದವರು ಸಂಸಾರಕ್ಕೆ ಬರುವುದಿಲ್ಲ. ಕೆಲವು ಪಂಡಿತರು ಲಿಂಗದೇಹದಿಂದ ಬಿಡುಗಡೆ ಹೊಂದಿರುವ ಮಧ್ಯಮ ಜೀವರು ಪುನಃ ಸುಖ-ದುಃಖಾತ್ಮಕವಾದ ಸಂಸಾರಕ್ಕೆ ಆಗಮಿಸುತ್ತಾರೆ ಎಂದು ತಿಳಿದಿದ್ದಾರೆ. ಈ ವಿಚಾರಗಳನ್ನು ಪ್ರತ್ಯಕ್ಷ ಸಹಕೃತವಾದ ಅನುಮಾನಗಳಿಂದ, ಶ್ರುತಿವಚನದಿಂದ ನಿರ್ಣಯಿಸಿಕೊಳ್ಳಬೇಕು.
ಏವಮೇಕೇ ವ್ಯವಸ್ಯಂತಿ ನಿವೃತ್ತಿರಿತಿ ಚಾಪರೇ |
ಉಭಯಂ ಸಂಪ್ರಧಾರ್ಯೈತದಧ್ಯವಸ್ಯೇದ್ ಯಥಾಮತಿ ॥ 61 ॥'
ಕೆಲವು ಯೋಗಜ್ಞರು ಮಧ್ಯಮ ಜೀವರ ಲಿಂಗದೇಹವು ನಾಶವಾಗುತ್ತದೆ ಎಂದು ಹೇಳುತ್ತಾರೆ, ಕೆಲವರು ನಾಶವಾಗುವುದಿಲ್ಲ ಎಂದು ಹೇಳುತ್ತಾರೆ. ಈ ಎರಡು ವಿಚಾರಗಳನ್ನು ಕೇಳಿಸಿಕೊಂಡು ವಿಮರ್ಶಿಸಿ ಅವೆರಡರಲ್ಲಿ ಸರಿಯಾದುದು ಯಾವುದೆಂದು ಸುಬುದ್ಧಿಯಿಂದ ನಿಶ್ಚಯಿಸಿಕೊಳ್ಳಬೇಕು.
ಇತೀಮಂ ಹೃದಯಗ್ರಂಥಿಂ ಬುದ್ಧಿಭೇದಮಯಂ ದೃಢಮ್ |
ವಿಮುಚ್ಯ ಸುಖಮಾಸೀತ ನ ಶೋಚೇಚ್ಛಿನ್ನಸಂಶಯಃ ॥ 62 ॥
ಹೀಗೆ ಬಿಡಿಸಲಾಗದೇ ಇರುವ ಗಂಟಿನಂತಿರುವ ಸಂಶಯವನ್ನು ಮನಸ್ಸಿಗೆ ಹುಟ್ಟಿಸಿ ಬುದ್ಧಿಗೆ ಕದಡಿಸುವ ವಿಷಯವನ್ನು ನಿರ್ಧರಿಸಿಕೊಂಡವರೆ ಸುಖದಿಂದ ಇರುತ್ತಾರೆ. ಸಂಶಯದಿಂದ ನಿವೃತ್ತರಾದವರು ಎಂದಿಗೂ ದುಃಖಿಸುವುದಿಲ್ಲ.
ಮಲಿನಾಃ ಪ್ರಾಪ್ನುಯುಃ ಶುದ್ಧಿಂ ಯಥಾ ಪೂರ್ಣಾಂ ನದೀಂ ನರಾಃ |
ಅವಗಾಹ್ಯ ಸುವಿದ್ವಾಂಸೋ ವಿದ್ಧಿ ಜ್ಞಾನಮಿದಂ ತಥಾ ॥ 63 ॥

ಮಲಿನನಾದ ವ್ಯಕ್ತಿಯು ತುಂಬಿ ಹರಿಯುವ ನದಿಯಲ್ಲಿ ಸ್ನಾನ ಮಾಡಿ ಶುದ್ಧನಾಗುವಂತೆ ಅಜ್ಞಾನದಿಂದ ಮಲಿನನಾದ ವ್ಯಕ್ತಿಯು ಪರಮಾತ್ಮನೆಂಬ ಜ್ಞಾನದ ನದಿಯಲ್ಲಿ ಮುಳುಗಿ ಶುದ್ಧನಾಗಬಹುದು.
ಮಹಾನದೀಂ ಹಿ ಪಾರಜ್ಞಸ್ತಪ್ಯತೇ ನ ತರನ್ಯಥಾ |
ಏವಂ ಯೇ ವಿದುರಧ್ಯಾತ್ಮಂ ಕೈವಲ್ಯಂ ಜ್ಞಾನಮುತ್ತಮಮ್ ॥ 64 ॥
ಮಹಾನದಿಯಲ್ಲಿ ಈಜಲು ತಿಳಿದು ಬಿದ್ದವನು ದಡವನ್ನು ಮುಟ್ಟಲು ಪ್ರಯಾಸವನ್ನು ಪಡದೆ ಸುಖವಾಗಿಯೇ ಹೇಗೆ ದಡವನ್ನು ಮುಟ್ಟುತ್ತಾನೋ ಇದೇ ರೀತಿಯಾಗಿ ಅಧ್ಯಾತ್ಮ ಎನಿಸಿದ, ಕೈವಲ್ಯ ಎನಿಸಿದ ಪರಮಾತ್ಮನ ಉತ್ತಮವಾದ ಜ್ಞಾನವನ್ನು ಯಾರು ಹೊಂದಿದ್ದಾರೋ ಅವರು ಸಂಸಾರ ಎಂಬ ದಡವನ್ನು ಮುಟ್ಟಲು ಪ್ರಯಾಸ ಹೊಂದುವುದಿಲ್ಲ.
ನತು ತಪ್ಯತಿ ತತ್ತ್ವಜ್ಞಃ ಫಲೇ ಜ್ಞಾತೇ ತರತ್ಯುತ |
ಏತಾಂ ಬುದ್ಧ್ವಾ ನರಃ ಸರ್ವಾಂ ಭೂತಾನಾಮಾಗತಿಂ ಗತಿಮ್ |
ಅವೇಕ್ಷ್ಯ ಚ ಶನೈರ್ಬುದ್ಧ್ಯಾ ಲಭತೇ ಶಂ ಪರಂ ತತಃ ॥ 65 ॥
ಪರಮಾತ್ಮತತ್ತ್ವವನ್ನು ಚೆನ್ನಾಗಿ ಅರಿತವನು ಈ ಸಾಂಸಾರಿಕ ತಾಪಗಳಿಗೆ ತುತ್ತಾಗುವುದಿಲ್ಲ. ಜೀವನದ ಫಲ ಯಾವುದು ಎಂದು ಅರ್ಥ ಮಾಡಿಕೊಂಡ ಬಳಿಕ ಸಂಸಾರದ ಬಂಧನವನ್ನು ದಾಟುತ್ತಾನೆ. ಈ ರೀತಿಯಾಗಿ ಮಾನವನು, ಬುದ್ಧಿಯಿಂದ ಸಮಸ್ತ ಜೀವರ ಆಗತಿ, ಗತಿಗಳನ್ನು ಪರಮಾತ್ಮನ ದೆಸೆಯಿಂದ ಎಂದು ಚೆನ್ನಾಗಿ ಶ್ರುತಿ- ಸ್ಮೃತಿಗಳಿಂದ ನಿರ್ಣಯಿಸಿಕೊಂಡಲ್ಲಿ ಕ್ರಮವಾಗಿ ನಿರ್ಣೀತವಾದ ಆ ಬುದ್ಧಿಯ ಸಹಕಾರದಿಂದ ಉತ್ತಮವಾದ ಸುಖವನ್ನು ಹೊಂದುತ್ತಾನೆ.
ತ್ರಿವರ್ಗೋ ಯಸ್ಯ ವಿದಿತಃ ಪ್ರಾಗ್ಜ್ಯೋತಿಃ ಸ ವಿಮುಚ್ಯತೇ |
ಅನ್ವಿಷ್ಯ ಮನಸಾ ಯುಕ್ತಸ್ತತ್ತ್ವದರ್ಶೀ ನಿರುತ್ಸುಕಃ ॥ 66 ॥
ಯಾರಿಗೆ ಧರ್ಮಾರ್ಥಕಾಮಗಳೆಂಬುವು ಅನಿತ್ಯವಾದವುಗಳೆಂದು ತಿಳಿದಿದೆಯೋ, ಪರಮಾತ್ಮನ ಸ್ವರೂಪವು ಅರ್ಥವಾಗಿದೆಯೋ ಅಂತಹ ವ್ಯಕ್ತಿಯು ಮುಕ್ತನಾಗುತ್ತಾನೆ. ತನ್ನ ಮನಸ್ಸಿನಿಂದ ಬಾಹ್ಯಸುಖಗಳನ್ನು ನಿಗ್ರಹಿಸಿಕೊಂಡ, ತತ್ತ್ವದರ್ಶಿಯಾದ ಆ ವ್ಯಕ್ತಿಯು ಪರಮಾತ್ಮನನ್ನು ಹುಡುಕಿ ಮುಕ್ತನಾಗುತ್ತಾನೆ.
ನ ಚಾತ್ಮಾ ಶಕ್ಯತೇ ದ್ರಷ್ಟುಮಿಂದ್ರಿಯೇಷು ವಿಭಾಗಶಃ |
ತತ್ರ ತತ್ರ ವಿಸೃಷ್ಟೇಷು ದುರ್ಜಯೇಷ್ವಕೃತಾತ್ಮಭಿಃ ॥ 67 ॥
ಯಾವನು ದುರ್ನಿವಾರಗಳಾದ ಇಂದ್ರಿಯಗಳನ್ನು ನಿಗ್ರಹಿಸಿಕೊಂಡಿಲ್ಲವೋ ಅವನಿಗೆ ಅಂತಹ ನಿಗ್ರಹವಿಲ್ಲದ ಇಂದ್ರಿಯಗಳಿಂದ ಪರಮಾತ್ಮನನ್ನು ನೋಡಲಾಗುವುದಿಲ್ಲ. ಆಯಾ ವಿಷಯಪದಾರ್ಥಗಳಲ್ಲಿ ಇಂದ್ರಿಯಗಳ ರತಿಯು ಹುಟ್ಟುವುದರಿಂದ ಇಂದ್ರಿಯಗಳ ಜಯವನ್ನು ಸಂಪಾದಿಸದೆ ಕರ್ತವ್ಯವನ್ನು ಮಾಡಲಾಗದ ವ್ಯಕ್ತಿಗೆ ಪರಮಾತ್ಮನು ಗೋಚರಿಸುವುದಿಲ್ಲ.
ಏತದ್ ಬುದ್ಧ್ವಾ ಭವೇದ್ ಬುದ್ಧಃ ಕಿಮನ್ಯದ್ ಬುದ್ಧಲಕ್ಷಣಮ್ |
ಪ್ರತಿಗೃಹ್ಯ ಚ ನಿಹ್ನೋತಿ ಹ್ಯನ್ಯಥಾ ಚ ಪ್ರದೃಶ್ಯತೇ ॥ 68 ॥
ಯಾವನು ಪರಮಾತ್ಮನ ಜ್ಞಾನವನ್ನು ಬುದ್ಧಿಯಿಂದ ಹೊಂದಿರುತ್ತಾನೋ ಅವನೇ ಜ್ಞಾನಿ ಎನಿಸುತ್ತಾನೆ. ಇದಕ್ಕಿಂತ ಹೊರತು ಜ್ಞಾನಕ್ಕೆ ಬೇರೆ ಲಕ್ಷಣವಿರುವುದಿಲ್ಲ. ಸಂಸಾರದೆಸೆಯಲ್ಲಿ ಜ್ಞಾನಿಯಾದ ವ್ಯಕ್ತಿಯು ಪ್ರಪಂಚದ ಪ್ರತಿಯೊಂದು ಪದಾರ್ಥವನ್ನು ನಿಸ್ಸಾರವೆಂದು ಅರಿತು ನಿರಾಕರಿಸುತ್ತಾನೆ. ಎಲ್ಲಿ ದುಃಖವಿಲ್ಲವೋ ಅಂತಹ ಜಾಗಕ್ಕೆ ಹೋಗಬೇಕೆಂದು ಬಯಸುತ್ತಾನೆ. ಸಂಸಾರದಲ್ಲಿ ನಿರಂತರವೂ ಪ್ರತಿ ಸ್ಥಳದಲ್ಲಿಯೂ ದುಃಖಕ್ಕೆ ಭಾಗಿಯಾಗುವುದರಿಂದ ಭಾಗವನ್ನು ಹೊಂದಲು ಜ್ಞಾನಿಯಾದವನು ಬಯಸುವುದಿಲ್ಲ.
ನ ಸರ್ಪೇತಿ ಚ ಯಂ ಪ್ರಾಹುಃ ಸರ್ವತ್ರ ಪ್ರತಿಹನ್ಯತೇ |
ಧೂಮೇನ ಚಾಪ್ರಸನ್ನೋಽಗ್ನಿರ್ಯಥಾಽರ್ಕಂ ನ ಪ್ರವರ್ತಯೇತ್ ॥
ಇಲ್ಲಿಗೆ ಆಗಮಿಸಬೇಡ ಎಂದು ಹೇಳುವಂತೆ ಜ್ಞಾನಿಯಾದ ವ್ಯಕ್ತಿಯು ಈ ಸಂಸಾರದ ಯಾವ ಜಾಗಕ್ಕೂ ಆಗಮಿಸುವುದು ಬೇಡ ಎಂದೇ ಭಾವಿಸುತ್ತಾನೆ. ಸಂಸಾರದ ಪ್ರತೀ ಸ್ಥಳದಲ್ಲಿಯೂ ದುಃಖವನ್ನೇ ನೋಡಿ ಇಲ್ಲಿಗೆ ಬರಬಾರದು ಎಂದು ಭಾವಿಸುತ್ತಾನೆ. ಹೊಗೆಯಿಂದ ಆವೃತವಾದ ಬೆಂಕಿಯಲ್ಲಿ ಅಗ್ನಿಯ ಕಾಂತಿಯು ಹೇಗೆ ಕಾಣಿಸುವುದಿಲ್ಲವೋ ಅದರಂತೆ ಮೋಡ ಕವಿದಾಗ ಸೂರ್ಯಪ್ರಕಾಶವು ಹೇಗೆ ಕಾಣಿಸುವುದಿಲ್ಲವೋ ಅದರಂತೆ ಅಜ್ಞಾನವಿದ್ದಾಗ ಜೀವನಿಗೆ ಬುದ್ಧಿಯು ಪ್ರಕಾಶಿಸಲಾರದು. ಪರಮಾತ್ಮನನ್ನು ತಿಳಿಸಲಾರದು. ವ್ಯಾಖ್ಯಾನ ವಿಶೇಷ ಭಗವಂತನ ಅನುಗ್ರಹದಿಂದ ಅಜ್ಞಾನವು ಏಕೆ ಪರಿಹಾರವಾಗದು? ಎಂದರೆ ಹೇಳುತ್ತಾರೆ- ಧೂಮದಿಂದ ಆಚ್ಛಾದಿತವಾದ ಅಗ್ನಿಯು ಪ್ರಕಾಶಿತವಾದ ಅಗ್ನಿಯಂತೆ ಹೇಗೆ ತೋರುವುದಿಲ್ಲವೋ ಅದರಂತೆ ಅಜ್ಞಾನಾವೃತನಾದ ಜೀವನು ಪರಮಾತ್ಮನನ್ನು ತಿಳಿಯುವುದಿಲ್ಲ ಎಂದು ಭಾವ.
ಧಿಷ್ಣ್ಯಾಧಿಪೇ ಪ್ರಸನ್ನೇ ತು ಸ್ಥಿತಿಮೇತಾಂ ನಿರೀಕ್ಷತೇ |
ಅತಿಕ್ರೂರಾಚ್ಚ ಸೂಕ್ಷ್ಮತ್ವಾತ್ ಪ್ರಧಾನಂ ನ ಪ್ರಕಾಶತೇ ॥ 70 ॥
ವೈಕುಂಠಲೋಕಕ್ಕೆ ಅಧಿಪತಿಯಾದ ಪರಮಾತ್ಮನು ಪ್ರಸನ್ನನಾಗಲು ಮುಕ್ತಿಯನ್ನು ಹೊಂದುವ ಸ್ಥಿತಿಯನ್ನು ಜೀವನು ನಿರೀಕ್ಷಿಸುತ್ತಾನೆ. ಮುಕ್ತಿಮಾರ್ಗವು ಅತ್ಯಂತ ಸೂಕ್ಷ್ಮವಾದುದರಿಂದ ಇಂದ್ರಿಯಗಳಿಗೆ ಅಗೋಚರವಾದುದರಿಂದ ಪರಮಾತ್ಮನ ಅನುಗ್ರಹವಿಲ್ಲದೆ ಗೋಚರಿಸದು.
ಪ್ರಪದ್ಯ ತಚ್ಚ್ಯುತಾಹ್ನಾನಿ ಚಿನ್ಮಯಂ ಸ್ವೀಕೃತಂ ವಿನಾ |
ವಿಜ್ಞಾಯ ತದ್ಧಿ ಮನ್ಯಂತೇ ಕೃತಕೃತ್ಯಾ ಮನೀಷಿಣಃ ॥ 71 ॥
ಆದ್ದರಿಂದ ಜ್ಞಾನಿಗಳು ಧ್ಯಾನಿಸಲು ಯೋಗ್ಯನಾದ ಪರಮಾತ್ಮನನ್ನು ಸಾಧಕನಾದ ನಾನು ಧ್ಯಾನಿಸದೆ, ಅನೇಕ ದಿನಗಳನ್ನು ಆಯುಷ್ಯ ಜಲವನ್ನು ಭಿನ್ನಘಟದಲ್ಲಿ ತುಂಬಿದ ನೀರಿನಂತೆ ವ್ಯರ್ಥಮಾಡಿಕೊಂಡೆ ಎಂದು ವೈರಾಗ್ಯವನ್ನು ಹೊಂದಿದ ಸಾಧಕನು ಪರಲೋಕಗಮನವನ್ನು ಗುರುಮುಖದಿಂದ ತಿಳಿದು ಕೃತಕೃತ್ಯನಾಗಿ ಪರಮಾತ್ಮನ ಸ್ವರೂಪವನ್ನು ತಿಳಿದುಕೊಳ್ಳುತ್ತಾನೆ.
ನ ಭವತಿ ವಿದುಷಾಂ ತತೋ ಭಯಂ

यदविदुषां सुमहद्भयं भवेत्।
न हि गतिरधिकास्ति कस्यचित्
सति हि गुणे प्रवदन्त्यतुल्यताम् ॥ 72 ॥

ಯದವಿದುಷಾಂ ಸುಮಹದ್ಭಯಂ ಭವೇತ್ |
ನ ಹಿ ಗತಿರಧಿಕಾಸ್ತಿ ಕಸ್ಯಚಿತ್
ಸತಿ ಹಿ ಗುಣೇ ಪ್ರವದಂತ್ಯತುಲ್ಯತಾಮ್ ॥ 72 ॥

ಅಜ್ಞಾನಿಗಳಿಗೆ ಯಾವುದು ಭಯವನ್ನುಂಟು ಮಾಡುತ್ತದೋ ಅದು ಜ್ಞಾನಿಗಳಿಗೆ ಭಯವನ್ನು ಹುಟ್ಟಿಸದು. ಯಾರಿಗೆ ಜ್ಞಾನಾದಿ ಗುಣಗಳಿಲ್ಲವೋ ಅವರಿಗೆ ಉತ್ತಮವಾದ ಪರಲೋಕದ ಗತಿಯು ದೊರೆಯುವುದಿಲ್ಲ. ಜ್ಞಾನಾದಿ ಗುಣಗಳು ಇದ್ದವರಿಗೆ ಕೊನೆಯೇ ಇಲ್ಲದ ಪರಮಪದಗತಿಯು ಇದೆ ಎಂದು ಜ್ಞಾನಿಗಳು ಹೇಳುತ್ತಾರೆ.

ಯಃ ಕರೋತ್ಯನಭಿಸಂಧಿಪೂರ್ವಕಂ
ತಚ್ಚ ನಿರ್ಣುದತಿ ಯತ್ ಪುರಾ ಕೃತಮ್ |
ನಾಪ್ರಿಯಂ ತದುಭಯಂ ಕುತಃ ಪ್ರಿಯಂ
ತಸ್ಯ ತಜ್ಜನಯತೀಹ ಕುರ್ವತಃ ॥ 73 ॥

ಯಾರು ಭಗವಂತನಲ್ಲಿ ಭಕ್ತಿಯಿಲ್ಲದೆ ಕರ್ಮಗಳನ್ನು ಆಚರಿಸುತ್ತಾರೋ ಆ ಕರ್ಮಗಳು ಪುಣ್ಯವನ್ನು ನಾಶಮಾಡುತ್ತವೆ. ಆಮುಷ್ಮಿಕ ಫಲವನ್ನು ನಾಶಮಾಡುತ್ತವೆ. ಐಹಿಕ, ಆಮುಷ್ಮಿಕ ಫಲಗಳನ್ನು ನೀಡಲು ಅಭಕ್ತಿಪೂರ್ವಕವಾದ ಫಲಗಳು ಸಮರ್ಥವಾಗುವುದಿಲ್ಲ. ಭಕ್ತಿಯಿಲ್ಲದೆ ಕರ್ಮವನ್ನು ಮಾಡುವ ವ್ಯಕ್ತಿಗಳ ವಿಷಯದಲ್ಲಿ ಪರಮಾತ್ಮನು ಪ್ರಿಯ ಎನಿಸಿದ ಮುಕ್ತಿ ಪದವಿಯನ್ನು ಹೇಗೆ ತಾನೆ ನೀಡಿಯಾನು?

ಲೋಕ ಆತುರಜನಾನ್ ವಿರಾವಿಣ-
ಸ್ತತ್ತದೇವ ಬಹು ಪಶ್ಯ ಶೋಚತಃ |
ತತ್ರ ಪಶ್ಯ ಕುಶಲಾನಶೋಚತೋ
ಯೇ ವಿದುಸ್ತದುಭಯಂ ಪದಂ ಸದಾ ॥ 74 ॥

ಲೋಕದಲ್ಲಿ ಎಷ್ಟೋ ಸಂಸಾರಿಗಳು ಹೆಂಡತಿ, ಮಕ್ಕಳು, ಧನ ಮೊದಲಾದವುಗಳನ್ನು ಕಳೆದುಕೊಂಡಾಗ ಬಹಳವಾಗಿ ದುಃಖಿಸುತ್ತಾರೆ. ಜ್ಞಾನಿಗಳಾದವರು ದುಃಖಿಸದೆ ಇರುತ್ತಾರೆ. ಅಸಾರವೆಂದು ತಿಳಿದವರಿಗೆ ದುಃಖವಿಲ್ಲ, ಸಾರವೆಂದು ತಿಳಿದವರಿಗೆ ದುಃಖವಿದೆ. ಆದ್ದರಿಂದ ತಾವು ಪಡೆಯಬೇಕಾದ ಸುಖವನ್ನು ಪಡೆಯಲಿಲ್ಲವೆಂದು ಉಚ್ಚಕಂಠದಿಂದ ರೋದನ ಮಾಡುತ್ತಿರುವ ಮನುಷ್ಯರನ್ನು ತಿಳಿದು, ಜ್ಞಾನಿಗಳನ್ನು ವಿಮರ್ಶಿಸಿ ನೋಡಿ ನಿನ್ನ ಬದುಕಿಗೆ ಕ್ಷೇಮವಾದ ಮಾರ್ಗ ಯಾವುದು ಎಂಬುದನ್ನು ನಿರ್ಣಯಿಸಿಕೊ. ಯಾರು ಮುಕ್ತಿದಾತೃವಾದ ಪರಮಾತ್ಮನ ಪಾದವನ್ನು ವಿಮರ್ಶಿಸಿ ನೋಡಿದ್ದಾರೋ ಅವರಿಗೆ ಎಂದೂ ದುಃಖವುಂಟಾಗದು. ಯಾರು ಸಾರಾಸಾರಗಳನ್ನು ತಿಳಿದಿದ್ದಾರೋ ಅವರಿಗೆ ದುಃಖವಿಲ್ಲ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.

* * * * *

ಇಪ್ಪತ್ತೊಂದನೆಯ ಅಧ್ಯಾಯ

ಭೀಷ್ಮರು ಯುಧಿಷ್ಠಿರನನ್ನು ಕುರಿತು ಧ್ಯಾನಯೋಗವನ್ನು ಉಪದೇಶಿಸಿದುದು.

ಭೀಷ್ಮಃ

ಹಂತ ವಕ್ಷ್ಯಾಮಿ ತೇ ಪಾರ್ಥ ಧ್ಯಾನಯೋಗಂ ಚತುರ್ವಿಧಮ್ |
ಯಂ ಜ್ಞಾತ್ವಾ ಶಾಶ್ವತೀಂ ಸಿದ್ಧಿಂ ಗಚ್ಛಂತಿ ಪರಮರ್ಷಯಃ ॥ 1 ॥

ಭೀಷ್ಮ ಧರ್ಮರಾಜನೇ, ಪುರಾತನ ಋಷಿಗಳು ಯಾವುದರಿಂದ ಶಾಶ್ವತವಾದ ಸಿದ್ಧಿಯನ್ನು ಪಡೆದಿರುವರೋ ಅಂತಹ ನಾಲ್ಕು ವಿಧವಾದ ಧ್ಯಾನಯೋಗವನ್ನು ನಿನಗೆ ತಿಳಿಸುತ್ತೇನೆ.

ಯಥಾ ಸ್ವನುಷ್ಠಿತಂ ಧ್ಯಾನಂ ತಥಾ ಕುರ್ವಂತಿ ಯೋಗಿನಃ |
ಮಹರ್ಷಯೋ ಜ್ಞಾನತೃಪ್ತಾ ನಿರ್ವಾಣಗತಮಾನಸಾಃ ॥ 2 ॥

ಯೋಗಿಗಳು ಭಗವಂತನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಧ್ಯಾನವು ಹೇಗೆ ಅನುಷ್ಠಾನ ಮಾಡಿದರೆ ಪೂರ್ಣವಾಗುತ್ತದೋ ಆ ಬಗೆಯಲ್ಲಿ ಧ್ಯಾನವನ್ನು ಮಾಡುತ್ತಾರೆ. ಶ್ವಾಸಾಭಿಮಾನಿಯಾದ ಮುಖ್ಯಪ್ರಾಣನಲ್ಲಿ ಏಕಾಗ್ರತೆಯಿಂದ ಮನಸ್ಸನ್ನಿಟ್ಟು ಪ್ರಾಣಾಯಾಮವನ್ನು ಮಾಡಿ ಧ್ಯಾನಯೋಗದಿಂದ ಮನಃಪರಿಪಾಕವನ್ನು ಹೊಂದುತ್ತಾರೆ.

ನಾವರ್ತಂತೇ ಪುನಃ ಪಾರ್ಥ ಮುಕ್ತಾಃ ಸಂಸಾರದೋಷತಃ |
ಜನ್ಮದೋಷಪರಿಕ್ಷೀಣಾಃ ಸ್ವಭಾವೇ ಪರ್ಯವಸ್ಥಿತಾಃ ॥ 3 ॥

ಈ ರೀತಿಯಾಗಿ ಮನಃಪರಿಪಾಕವನ್ನು ಹೊಂದಿದ ಸಾಧಕರು ಸಂಸಾರವೆಂಬ ದುಃಖದಿಂದ ಮುಕ್ತರಾಗಿ ಪುನರ್ಜನ್ಮವೆಂಬ ದೋಷವನ್ನು ಪರಿಹರಿಸಿಕೊಂಡು ಪರಮಾತ್ಮನಲ್ಲಿಯೇ ತೃಪ್ತಿಯನ್ನು ಹೊಂದಿರುತ್ತಾರೆ.

ನಿರ್ದ್ವಂದ್ವಾ ನಿತ್ಯಸತ್ತ್ವಸ್ಥಾ ವಿಮುಕ್ತಾ ನಿತ್ಯಮಾಶ್ರಿತಾಃ |
ಅಸಂಗೀನ್ಯವಿಭಾಗೀನಿ ಮನಃಶಾಂತಿಕರಾಣಿ ಚ ॥ 4 ॥

ಅಂತಹ ಸಾಧಕರು ಸುಖ-ದುಃಖಗಳನ್ನು ಜಯಿಸಿ ನಿತ್ಯವೂ ಸತ್ವ ಎನಿಸಿದ ಭಗವಂತನಲ್ಲಿಯೇ ಮನಸ್ಸುಳ್ಳವರಾಗಿ ವಿಮುಕ್ತರಾಗಿ ಭಗವಂತನನ್ನೇ ಆಶ್ರಯಿಸಿ ಇರುತ್ತಾರೆ.

ತತ್ರ ಸ್ವಾಧ್ಯಾಯಸಂಶ್ಲಿಷ್ಟಮೇಕಾಗ್ರಂ ಧಾರಯೇನ್ಮನಃ |
ಪಿಂಡೀಕೃತ್ಯೇಂದ್ರಿಯಗ್ರಾಮಮಾಸೀನಃ ಕಾಷ್ಠವನ್ಮುನಿಃ ॥ 5 ॥

ಮನಸ್ಸಿಗೆ ಯಾವುದೇ ಸಂಗವಿಲ್ಲದಂತೆ ಅರ್ಥಾತ್ ದುಃಖವಿಲ್ಲದಂತೆ ಅನುಭವಿಸುವ ನಾಲ್ಕು ವಿಧವಾದ ಸಾಧಕರ ಮುಕ್ತಿಲಕ್ಷಣವನ್ನು ನಿನಗೆ ಹೇಳುತ್ತೇನೆ. ತೈಲಧಾರೆಯಲ್ಲಿ ವಿಚ್ಛೇದವು ಹೇಗೆ ಇರುವುದಿಲ್ಲವೋ ಆ ರೀತಿಯಾಗಿ ನಿರಂತರವೂ ಚ್ಯುತಿ ಇಲ್ಲದ ಮನಶ್ಶಾಂತಿಕಾರಕಗಳಾದ ನಾಲ್ಕು ವಿಧವಾದ ಮುಕ್ತಿ ಲಕ್ಷಣವನ್ನು ಮುಂದೆ ಹೇಳುತ್ತೇನೆ.

ಶಬ್ದಂ ನ ವಿಂದೇಚ್ಛ್ರೋತ್ರೇಣ ಸ್ಪರ್ಶಂ ತ್ವಚಾ ನ ವೇದಯೇತ್ |
ರೂಪಂ ನ ಚಕ್ಷುಷಾ ವಿದ್ಯಾಜ್ಜಿಹ್ವಯಾ ನ ರಸಾಂಸ್ತಥಾ ॥ 6 ॥

ಸಾಧಕನು ಮನಸ್ಸನ್ನು ಸ್ವಾಧ್ಯಾಯ, ಅಧ್ಯಯನದಲ್ಲಿ ನೆಲೆಗೊಳಿಸಿ ಇಂದ್ರಿಯಗಳನ್ನು ಒಂದೇ ಕಡೆ ಧ್ಯಾನದಲ್ಲಿ ನಿಗ್ರಹಿಸಿಕೊಂಡು ಜಿತಾಸನನಾಗಿ ಕುಳಿತು ಕಟ್ಟಿಗೆಯಂತೆ ಯಾವ ವಿಷಯಸಂಬಂಧವೂ ಇಲ್ಲದೆ ಮನಸ್ಸನ್ನು ಏಕಾಗ್ರಗೊಳಿಸಿಕೊಳ್ಳಬೇಕು. ಶ್ರೋತ್ರೇಂದ್ರಿಯದಿಂದ ಲೋಕವಿಷಯಕವಾದ ಶಬ್ದಗಳನ್ನು ಕೇಳಿಸಿಕೊಳ್ಳಬಾರದು. ತ್ವಗಿಂದ್ರಿಯದಿಂದ ಬಾಹ್ಯಸ್ಪರ್ಶಗಳಿಗೆ ತುತ್ತಾಗಬಾರದು. ಕಣ್ಣಿನಿಂದ ಬಾಹ್ಯ ರೂಪವನ್ನಾಗಲಿ, ಜಿಹ್ವೆಯಿಂದ ಬಾಹ್ಯ ರಸಗಳ ಆಸಕ್ತಿಯನ್ನಾಗಲಿ ತಾಳಬಾರದು.

ೀರೇಯಾಣ್ಯಪಿ ಚ ಸರ್ವಾಣಿ ಜಹ್ಯಾದ್ ಧ್ಯಾನೇನ ಯೋಗವಿತ್ |
ಪಂಚವರ್ಗಪ್ರಮಾಥೀನಿ ನೇಚ್ಛೇಚ್ಚೈತಾನಿ ವೀರ್ಯವಾನ್ ॥ 7 ॥

ಯೋಗಜ್ಞಾನಿಯಾದ ವ್ಯಕ್ತಿಯು ಪರಿಪಕ್ವದ ಧ್ಯಾನಾವಸ್ಥೆಯನ್ನು ಹೊಂದುತ್ತಾ ಆಘ್ರಾಣಿಸಲು ಯೋಗ್ಯವಾದ ಬಾಹ್ಯ ವಿಷಯಗಳನ್ನು ತ್ಯಾಗ ಮಾಡಬೇಕು. ಹೀಗೆ ಶಬ್ದ-ಸ್ಪರ್ಶಾದಿ ಮನಸ್ಸನ್ನು ಶಿಥಿಲಗೊಳಿಸುವ ಪಂಚವರ್ಗವೆನಿಸಿದ ವಿಷಯಗಳಲ್ಲಿ ಧ್ಯಾನದ ಬಲದಿಂದ ಮನಸ್ಸನ್ನು ನಿಗ್ರಹಿಸಿಕೊಳ್ಳಬೇಕು.

ತತೋ ಮನಸಿ ಸಂಸಜ್ಯ ಪಂಚವರ್ಗಂ ವಿಚಕ್ಷಣಃ |
ಸಮಾದಧ್ಯಾನ್ಮನೋ ಭ್ರಾಂತಮಿಂದ್ರಿಯೈಃ ಸಹ ಪಂಚಭಿಃ ॥ 8 ॥

ಧ್ಯಾನಿಯಾದ ವ್ಯಕ್ತಿಯು ಶಬ್ದಸ್ಪರ್ಶಾದಿ ವಿಷಯದಲ್ಲಿ ಮನಸ್ಸನ್ನು ನಿಗ್ರಹಿಸಿಕೊಂಡು ಪಂಚೇಂದ್ರಿಯಗಳಿಂದ ಕೂಡಿಕೊಂಡು ಭ್ರಾಂತವಾಗುವ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿಕೊಳ್ಳಬೇಕು.

ವಿಸಂಚಾರಿ ನಿರಾಲಂಬಂ ಪಂಚದ್ವಾರಂ ಚ ಲೋಚನಮ್ |
ಪೂರ್ವೇ ಧ್ಯಾನಪಥೇ ಧೀರಃ ಸಮಾದಧ್ಯಾನ್ಮನೋಽಂತರಮ್ ॥ 9 ॥

ವಿಷಯಗಳ ಕಡೆ ಓಡುವ ಸ್ವಭಾವವುಳ್ಳ ವಶವಲ್ಲದ, ಅಸ್ಥಿರ ವಸ್ತುಗಳಲ್ಲಿ ಸ್ಥಿರವಾಗಿ ಉಳ್ಳ, ಇಂದ್ರಿಯಗಳ ಬೆನ್ನನ್ನೇ ಹಿಂಬಾಲಿಸುವ ಮನಸ್ಸನ್ನು ಮೊಟ್ಟ ಮೊದಲು ಧ್ಯಾನ ಮಾರ್ಗಕ್ಕೆ ತಿರುಗಿಸಿ ಧ್ಯಾನಮಾರ್ಗದಲ್ಲಿ ನೆಲೆಗೊಳಿಸಿಕೊಳ್ಳಬೇಕು.

ಇಂದ್ರಿಯಾಣಿ ಮನಶ್ಚೈವ ಯದಾ ಪಿಂಡೀಕರೋತ್ಯಯಮ್ |
ಏಷ ಧ್ಯಾನಪಥಃ ಪೂರ್ವೋ ಮಯಾ ಸಮನುವರ್ಣಿತಃ ॥ 10 ॥

ಇಂದ್ರಿಯಗಳನ್ನು, ಮನಸ್ಸನ್ನು ಹಿಂತಿರುಗಿಸಿ ಮನಸ್ಸು, ಇಂದ್ರಿಯಗಳಿಂದ ಏಕಾಗ್ರತೆಯಿಂದ ನಡೆಸುವ ಧ್ಯಾನವೇ ಮೊದಲನೆಯ ಗತಿ. ಈ ಧ್ಯಾನಪಥದ ಬಗ್ಗೆ ಹಿಂದೆ ನಾನು ವರ್ಣಿಸಿರುತ್ತೇನೆ.

ತಸ್ಯ ತತ್ ಪೂರ್ವಸಂರುದ್ಧಮ್ ಆತ್ಮಷಷ್ಠಂ ಮನೋಽಂತರಾ |
ಸ್ಫುರಿಷ್ಯತಿ ಸಮುದ್ಭ್ರಾಂತಂ ವಿದ್ಯುದಂಬುಧರೇ ಯಥಾ ॥ 11 ॥

ಪಂಚೇಂದ್ರಿಯಗಳು ಮತ್ತು ಆರನೆಯದೆನಿಸಿದ ಮನಸ್ಸು ಇವುಗಳ ಒಡಗೂಡಿದ ಮನುಷ್ಯನ ಮನಸ್ಸು ಮೊದಲನೆಯ ಧ್ಯಾನಮಾರ್ಗವನ್ನು ಅವಲಂಬಿಸಿದ ಮೇಲೂ ಮೇಘದಿಂದ ಮಿಂಚು ಹೇಗೆ ಚಲಿಸುತ್ತದೋ ಹಾಗೆ ಮಧ್ಯ-ಮಧ್ಯದಲ್ಲಿ ಧ್ಯಾನ ಮಾರ್ಗದಿಂದ ವಿಚಲಿತವಾಗುತ್ತದೆ.

ಜಲಬಿಂದುರ್ಯಥಾ ಲೋಲಃ ಪರ್ಣಸ್ಥಃ ಸರ್ವತಶ್ಚಲಃ |
ಏವಮೇವಾಸ್ಯ ತಚ್ಚಿತ್ತಂ ಭವತಿ ಧ್ಯಾನವರ್ತ್ಮನಿ ॥ 12 ॥

ತಾವರೆ ಎಲೆಯ ಮೇಲಿನ ನೀರಿನ ಬಿಂದುವಿನಂತೆ ಧ್ಯಾನಾಸಕ್ತವಾದ ಮನುಷ್ಯನ ಮನಸ್ಸು ಒಂದೇ ಕಡೆ ಸ್ಥಿರವಾಗಿ ನಿಲ್ಲದೆ ಅತ್ತಿತ್ತ ಚಲಿಸುತ್ತಿರುತ್ತದೆ.

ಸಮಾಹಿತಂ ಕ್ಷಣಂ ಕಿಂಚಿದ್ಧ್ಯಾನವರ್ತ್ಮನಿ ತಿಷ್ಠತಿ |
ಪುನರ್ವಾಯುಪಥಂ ಭ್ರಾಂತಂ ಮನೋ ಭವತಿ ವಾಯುವತ್ ॥ 13 ॥

ಆಗಾಗ ಕ್ಷಣಕಾಲದವರೆಗೆ ಮನಸ್ಸು ಧ್ಯಾನಮಗ್ನವಾಗಿರುತ್ತದೆ. ಅದು ಪ್ರಾಣವಾಯುವು ಹೇಗೋ ಪುನಃ ವಾಯುವಿನಂತೆ ಅಸ್ಥಿರವಾಗುತ್ತದೆ. ಮನಸ್ಸು ವಿಚಲಿತವಾಗುತ್ತದೆ.

ಅನಿರ್ವೇದೋ ಗತಕ್ಲೇಶೋ ಗತತಂದ್ರೀರಮತ್ಸರಃ |
ಸಮಾದಧ್ಯಾತ್ ಪುನಶ್ಚೇತೋ ಧ್ಯಾನೇನ ಧ್ಯಾನಯೋಗವಿತ್ ॥ 14 ॥

ಅಂತಹ ಸಮಯದಲ್ಲಿ ಧ್ಯಾನಯೋಗವನ್ನು ಬಲ್ಲವನು ದುಃಖ-ಸ್ನೇಹ-ಮಾತ್ಸರ್ಯ ಮುಂತಾದ ಯಾವ ದೋಷಗಳು ಇಲ್ಲದವನಾಗಿ ಮನಸ್ಸನ್ನು ಪುನಃ ಪುನಃ ಧ್ಯಾನದಲ್ಲಿ ತಿರುಗಿಸಿ ನೆಲೆಗೊಳಿಸಿಡಬೇಕು.

ವಿಚಾರಶ್ಚ ವಿತರ್ಕಶ್ಚ ವಿವೇಕಶ್ಚೋಪಜಾಯತೇ |
ಮುನೇಃ ಸಮಾದಧಾನಸ್ಯ ಪ್ರಥಮಂ ಧ್ಯಾನಮಾದಿತಃ ॥ 15 ॥

ಧ್ಯಾನಮಾರ್ಗವನ್ನು ಅನುಸರಿಸುವ ಯೋಗಿಗೆ ಕ್ರಮವಾಗಿ ವಿಚಾರ, ವಿತರ್ಕ, ವಿವೇಕ ಮುಂತಾದವುಗಳು ಹುಟ್ಟುತ್ತವೆ. ಅವು ಮನಸ್ಸಿಗೆ ತೋರುವಾಗಲೆಲ್ಲ ಅದರಿಂದ ಧೃತಿಗೆಡದೆ ದೃಢವಾದ ಧ್ಯಾನವನ್ನು ಅವಲಂಬಿಸಬೇಕು.

ಮನಸಾ ಕ್ಲಿಶ್ಯಮಾನಸ್ತು ಸಮಾಧಾನಂ ಚ ಕಾರಯೇತ್ |
ನ ನಿರ್ವೇದಂ ಮುನಿರ್ಗಚ್ಛೇತ್ಕುರ್ಯಾದೇವಾತ್ಮನೋ ಹಿತಮ್ ॥ 16 ॥

ಮಾನಸಿಕವಾಗಿ ದುಃಖವಾಗುತ್ತಿದ್ದರೂ ಆ ದುಃಖವನ್ನು ಸ್ಥಿತಪ್ರಜ್ಞನಾಗಿ ದಾಟಿ ಅದರಿಂದ ಕಳವಳಗೊಳ್ಳದೆ ತನ್ನ ಹಿತವನ್ನು ಬಯಸಿ

ಧ್ಯಾನದ ಏಕಾಗ್ರತೆಯನ್ನೇ ಹೊಂದಬೇಕು.
ಪಾಂಸುಭಸ್ಮಕರೀಷಾಣಾಂ ಯಥಾ ವೈ ರಾಶಯಶ್ಚಿತಾಃ |
ಸಹಸಾ ವಾರಿಣಾ ಸಿಕ್ತಾ ನ ಯಾಂತಿ ಪರಿಭಾವನಾಮ್ ॥ 17 ॥
ಕಿಂಚಿತ್ ಸ್ನಿಗ್ಧಂ ಯಥಾ ಚ ಸ್ಯಾಚ್ಛುಷ್ಕಚೂರ್ಣಮಭಾವಿತಮ್ |
ಕ್ರಮಶಸ್ತು ಶನೈರ್ಗಚ್ಛೇತ್ ಸರ್ವಂ ತತ್ ಪರಿಭಾವನಮ್ ॥ 18 ॥
ಏವಮೇವೇಂದ್ರಿಯಗ್ರಾಮಂ ಶನೈಃ ಸಂಪರಿಭಾವಯೇತ್ |
ಸಂಹರೇತ್ಕ್ರಮಶಶ್ಚೈವ ಸ ಸಮ್ಯಕ್ ಪ್ರಶಮಿಷ್ಯತಿ ॥ 19 ॥
ಧೂಳು, ಬೂದಿ, ಒಣಗಿದ ಗೋಮಯಚೂರ್ಣ ಇವುಗಳನ್ನು ರಾಶಿ ಹಾಕಿ ನೆನೆಸಿಟ್ಟರೂ ಅದು ಕೂಡಲೇ ಪಿಷ್ಟಭಾವವನ್ನು ಹೊಂದಲಾರದು. ನೆನೆಸಿಹಾಕಿ ಬಹಳ ಕಾಲವಾದ ಬಳಿಕ ಕ್ರಮವಾಗಿ ಅದರಲ್ಲಿ ಸ್ನೇಹಭಾವವು ಉಂಟಾಗುತ್ತಾ ಉಂಡೆ ಮಾಡಲು ಸಾಧ್ಯವಾಗುತ್ತದೆ. ಇದರಂತೆ ಬೇರೆ ಬೇರೆಯಾಗಿರುವ ಇಂದ್ರಿಯಗಳನ್ನು ಮೆಲ್ಲನೆ ಒಂದಾಗಿ ಮನಸ್ಸಿನಲ್ಲಿ ನಿಯಂತ್ರಿಸಿಕೊಳ್ಳಬೇಕು. ಕಾಲಕ್ರಮದಿಂದ ಆ ಎಲ್ಲಾ ಇಂದ್ರಿಯಗಳನ್ನು ಒಂದೇ ವಿಷಯದಲ್ಲಿ ನೆಲೆಗೊಳಿಸಿಕೊಳ್ಳಬೇಕು. ಇಂತಹ ವ್ಯಕ್ತಿಯೇ ಮನಶ್ಶಾಂತಿಯನ್ನು ಪಡೆಯಲು ಸಾಧ್ಯವಾಗುತ್ತದೆ.
ಸ್ವಯಮೇವ ಮನಶ್ಚೈವ ಪಂಚವರ್ಗಶ್ಚ ಭಾರತ |
ಪೂರ್ವಂ ಧ್ಯಾನಪಥಂ ಪ್ರಾಪ್ಯ ನಿತ್ಯಯೋಗೇನ ಶಾಮ್ಯತಿ ॥ 20 ॥
ಮನಸ್ಸನ್ನು, ಪಂಚೇಂದ್ರಿಯಗಳನ್ನು ಹೀಗೆ ಮೊದಲನೆಯ ಧ್ಯಾನಮಾರ್ಗದಲ್ಲಿ ಇರಿಸಿ ನಿತ್ಯಯೋಗದಿಂದ ಶಾಂತಿಯನ್ನು ಸಾಧಿಸಬೇಕು.
ನ ತತ್ ಪುರುಷಕಾರೇಣ ನ ಚ ದೈವೇನ ಕೇನಚಿತ್ |
ಸುಖಮೇಷ್ಯತಿ ತತ್ತಸ್ಯ ಯದೇವಂ ಸಂಯತಾತ್ಮನಃ ॥ 21 ॥
ಈ ಧ್ಯಾನಯೋಗವನ್ನು ಕೇವಲ ಅದೃಷ್ಟದಿಂದಲಾಗಲೀ, ಪುರುಷಪ್ರಯತ್ನದಿಂದ ಆಗಲಿ ಸಾಧಿಸಲು ಸಾಧ್ಯವಿಲ್ಲ. ಇದನ್ನು ಚೆನ್ನಾಗಿ ಸಾಧಿಸಿದವನೇ ಧ್ಯಾನಯೋಗದ ಸುಖವನ್ನು ಹೊಂದುತ್ತಾನೆ.
ವ್ಯಾಖ್ಯಾನ ವಿಶೇಷ ಕೇವಲ ದೈವದಿಂದಾಗಲಿ, ಕೇವಲ ಪುರುಷನ ಪ್ರಯತ್ನದಿಂದಾಗಲೀ ಧ್ಯಾನಸುಖವನ್ನು ಹೊಂದಲಾರನು. ಆದ್ದರಿಂದ ಧ್ಯಾನದ ಮೊದಲನೆಯ ಮೆಟ್ಟಿಲು ವಿಷಯಪದಾರ್ಥಗಳಲ್ಲಿ ಅನಾಸಕ್ತಿ. ಎರಡನೆಯ ಮೆಟ್ಟಿಲು ಸಮಸ್ತ ಇಂದ್ರಿಯಗಳನ್ನು ಮನಸ್ಸಿನಲ್ಲಿಯೇ ಏಕಾಗ್ರಗೊಳಿಸಿಕೊಳ್ಳುವುದು. ಮೂರನೆಯ ಮೆಟ್ಟಿಲು ಪ್ರಾಣಾಯಾಮದಿಂದ ಪಾಪಪುರುಷನನ್ನು ಉಚ್ಚಾಟನೆ ಮಾಡುವುದು. ನಾಲ್ಕನೆಯ ಮೆಟ್ಟಿಲು ನಿಶ್ಚಲವಾದ, ನಿರ್ಮಲವಾದ ಮನಸ್ಸಿನಿಂದ ನಾನಾ ವೇದಶಾಖೆಗಳಲ್ಲಿ ಹೇಳಿದ ಭಗವಂತನ ಗುಣಗಳನ್ನು ಅನುಸಂಧಾನ ಮಾಡುವುದು ಎಂದು ಮೋಕ್ಷದ ನಾಲ್ಕು ಗತಿಗಳ ಬಗ್ಗೆ ವಿವರಿಸಿದಂತಾಯಿತು.
ಸುಖೇನ ತೇನ ಸಂಯುಕ್ತೋ ರಂಸ್ಯತೇ ಧ್ಯಾನಕರ್ಮಣಿ |
ಗಚ್ಛಂತಿ ಯೋಗಿನೋ ಹ್ಯೇವಂ ನಿರ್ವಾಣಂ ತನ್ನಿರಾಮಯಮ್ ॥22॥
ಧ್ಯಾನಯೋಗದ ಸುಖದಲ್ಲಿರುವವನು ಆ ಧ್ಯಾನದಲ್ಲಿಯೇ ಸಂತೋಷವನ್ನು ಹೊಂದುತ್ತಾನೆ. ಯೋಗಿಗಳು ಇದೇ ಮಾರ್ಗದಿಂದ ದುಃಖರಹಿತವಾದ, ನಿತ್ಯಸುಖ ಸಂಪನ್ನವಾದ ಮೋಕ್ಷವನ್ನು ಹೊಂದಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಜಪಫಲವನ್ನು,
ಜಪಕ್ರಮವನ್ನು ನಿರೂಪಿಸಿದುದು.
ಯುಧಿಷ್ಠಿರಃ
ಚಾತುರಾಶ್ರಮ್ಯಮುಕ್ತಂ ತೇ ರಾಜಧರ್ಮಾಸ್ತಥೈವ ಚ |
ನಾನಾಶ್ರಯಾಶ್ಚ ಬಹವ ಇತಿಹಾಸಾಃ ಪೃಥಗ್ವಿಧಾಃ ॥ 1 ॥
ಯುಧಿಷ್ಠಿರ ನೀನು ನಾಲ್ಕು ಆಶ್ರಮಧರ್ಮಗಳನ್ನು, ರಾಜಧರ್ಮಗಳನ್ನು, ವಿವಿಧ ವಿಷಯಗಳನ್ನು ಕುರಿತು ಹಲವು ಇತಿಹಾಸಗಳನ್ನು ನನಗೆ ತಿಳಿಸಿರುತ್ತಿ.
ಶ್ರುತಾಸ್ತ್ವತ್ತಃ ಕಥಾಶ್ಚೈವ ಧರ್ಮಯುಕ್ತಾ ಮಹಾಮತೇ |
ಸಂದೇಹೋಽಸ್ತಿ ತು ಕಶ್ಚಿನ್ಮೇ ತದ್ಭವಾನ್ವಕ್ತುಮರ್ಹತಿ ॥ 2 ॥
ನಿನ್ನಿಂದ ಧರ್ಮಯುಕ್ತವಾದ ಅನೇಕ ಕಥೆಗಳನ್ನು ಕೇಳಿರುತ್ತೇನೆ. ಆದರೆ ನನಗೆ ಇನ್ನೂ ಕೆಲವು ಸಂಶಯವಿವೆ. ಅವುಗಳನ್ನು ಪರಿಹರಿಸಲು ನೀನು ಉತ್ತರಿಸಬೇಕು.
ಜಾಪಕಾನಾಂ ಫಲಾವಾಪ್ತಿಂ ಶ್ರೋತುಮಿಚ್ಛಾಮಿ ಭಾರತ |
ಕಿಂ ಫಲಂ ಜಪತಾಮುಕ್ತಂ ಕ್ವ ವಾ ತಿಷ್ಠಂತಿ ಜಾಪಕಾಃ ॥ 3 ॥
ಜಪಿಸುವಂತಹ ಮಂತ್ರಗಳ ಬಗ್ಗೆ, ಜಪದ ಫಲಗಳ ಬಗ್ಗೆ ನನಗೆ ತಿಳಿಸಬೇಕು. ಮಂತ್ರಜಪಗಳಿಗೆ ಲಭಿಸುವ ಫಲಗಳೇನು? ಮಂತ್ರಜಪಿಸುವ ವ್ಯಕ್ತಿಗಳು ಯಾವ ಗತಿಯನ್ನು ಹೊಂದುತ್ತಾರೆ?
ಜಪಸ್ಯ ಚ ವಿಧಿಂ ಕೃತ್ಸ್ನಂ ವಕ್ತುಮರ್ಹಸಿ ಮೇಽನಘ |

ಜಾಪಕಾ ಇತಿ ಕಿಂ ಚೈತತ್ ಸಾಂಖ್ಯಯೋಗಕ್ರಿಯಾವಿಧಿಃ ॥ 4 ॥
ಜಪದ ವಿಧಿಗಳನ್ನು ಸಮಗ್ರವಾಗಿ ನಿರ್ದುಷ್ಟನಾದ ನೀನು ನನ್ನನ್ನು ಕುರಿತು ಹೇಳುವವನಾಗಿರುತ್ತಿ. ಜಾಪಕನು ಸಾಂಖ್ಯಯೋಗಗಳನ್ನು, ಕರ್ಮಯೋಗಗಳನ್ನು ಅನುಷ್ಠಾನ ಮಾಡಿದಂತಾಗುತ್ತಾನೆಯೇ? ಮಾನಸಿಕ ಯಜ್ಞಗಳನ್ನು ನಡೆಸಿದಂತಾಗುತ್ತಾನೆಯೇ?
ಕಿಂ ಯಜ್ಞವಿಧಿರೇವೈಷ ಕಿಮೇತಜ್ಜಪ್ಯಮುಚ್ಯತೇ |
ಏತನ್ಮೇ ಸರ್ವಮಾಚಕ್ಷ್ವ ಸರ್ವಜ್ಞೋ ಹ್ಯಸಿ ಮೇ ಮತಃ ॥ 5 ॥
ನನ್ನ ಪಾಲಿನ ಸರ್ವಜ್ಞನೇ, ಜಪವಿಷಯದ ಅರ್ಥವೇನು? ಜಪವಿಷಯವಾದ ಅಂಶಗಳನ್ನೆಲ್ಲ ನನಗೆ ಹೇಳಿ ನನ್ನ ಸಂಶಯವನ್ನು ಪರಿಹರಿಸು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಮಸ್ಯ ಯತ್ ಪುರಾ ವೃತ್ತಂ ಕಾಲಸ್ಯ ಬ್ರಾಹ್ಮಣಸ್ಯ ಚ ॥ 6 ॥
ಭೀಷ್ಮ ಧರ್ಮಪುತ್ರನೇ, ಈ ವಿಷಯದಲ್ಲಿ ಹಿಂದೆ ಯಮನಿಗೂ, ಕಾಲಕ್ಕೂ, ಮೃತ್ಯುವಿಗೂ, ಕುರುರಾಜನಿಗೂ ಬ್ರಾಹ್ಮಣನೊಡನೆ ನಡೆದ ಧರ್ಮನಿಮಿತ್ತವಾದ ಸಂವಾದವನ್ನು ಹೇಳುತ್ತಾರೆ.
ಸನ್ನ್ಯಾಸ ಏವ ವೇದಾಂತೇ ವರ್ತತೇ ಜಪನಂ ಪ್ರತಿ |
ವೇದವಾದಾಭಿನಿರ್ವೃತ್ತಾ ಶಾಂತಿರ್ಬ್ರಹ್ಮಣ್ಯವಸ್ಥಿತಾ |
ಮಾರ್ಗೌ ತಾವಪ್ಯುಭಾವೇತೌ ಸಂಶ್ರಿತೌ ನ ಚ ಸಂಶ್ರಿತೌ ॥ 7 ॥
ವೇದಾಂತದಲ್ಲಿ ಜಪಕ್ಕೆ ಸಂನ್ಯಾಸವನ್ನೇ ಹೇಳಿದ್ದಾರೆ. ಕರ್ಮನಿವೃತ್ತಿಯನ್ನು ಹೇಳುವ ವೇದವಾದಗಳೆಲ್ಲ ಕೇವಲ ಬ್ರಹ್ಮ ಎಂಬ ವಸ್ತುವನ್ನೇ ವಿಷಯೀಕರಿಸುತ್ತಿವೆ. ಪರಿಪಕ್ವ ಬುದ್ಧಿಯುಳ್ಳ ಸಂನ್ಯಾಸಿಗಳು ವೈದಿಕಸಾಂಖ್ಯಯೋಗಗಳನ್ನು ಆಶ್ರಯಿಸಿರುತ್ತಾರೆ. ಅವೈದಿಕವಾದ ಸಾಂಖ್ಯಯೋಗಮಾರ್ಗವನ್ನು ಎಂದಿಗೂ ಆಶ್ರಯಿಸುವುದಿಲ್ಲ.
ಯಥಾ ಸಂಶ್ರೂಯತೇ ರಾಜನ್ ಕಾರಣಂ ಚಾತ್ರ ವಕ್ಷ್ಯತೇ |
ಮನಃಸಮಾಧಿರತ್ರಾಪಿ ತಥೇಂದ್ರಿಯಜಯಃ ಸ್ಮೃತಃ ॥ 8 ॥
ಜಪದ ಬಗ್ಗೆ ನೀನು ಏನು ಪ್ರಶ್ನೆಗಳನ್ನು ಕೇಳಿರುವೆಯೋ, ಈ ಯೋಗಮಾರ್ಗಗಳ ಬಗ್ಗೆ ಏನು ಕೇಳಿಸಿಕೊಂಡಿರುವೆಯೋ ಇದಕ್ಕೆ ಕಾರಣವನ್ನು ನಾನು ಹೇಳುತ್ತೇನೆ. ಈ ಜಪಯೋಗದಲ್ಲಿಯೂ ಮನಸ್ಸಮಾಧಿ ಎಂದರೆ ಇಂದ್ರಿಯಜಯವು ಮುಖ್ಯವಾಗಿಯೇ ಹೇಳಲ್ಪಟ್ಟಿದೆ.
ಸತ್ಯಮಗ್ನಿಪರೀಚಾರೋ ವಿವಿಕ್ತಾನಾಂ ಚ ಸೇವನಮ್ |
ಧ್ಯಾನಂ ತಪೋ ದಮಃ ಕ್ಷಾಂತಿರನಸೂಯಾ ಮಿತಾಶನಮ್ ॥ 9 ॥
ವಿಷಯಪ್ರತಿಸಂಹಾರೋ ಮಿತಜಲ್ಪಸ್ತಥಾ ಶಮಃ |
ಏಷ ಪ್ರವರ್ತಕೋ ಧರ್ಮೋ ನಿವೃತ್ತಕಮಥೋ ಶೃಣು ॥ 10 ॥
ಸತ್ಯ, ಅಗ್ನ್ಯುಪಾಸನೆ, ಏಕಾಂತವಾಸ, ಧ್ಯಾನ, ತಪಸ್ಸು, ಇಂದ್ರಿಯನಿಗ್ರಹ, ಕ್ಷಮೆ, ಅಸೂಯೆ ಇಲ್ಲದಿರುವಿಕೆ, ಅಲ್ಪಾಹಾರ ಸೇವನೆ, ವಿಷಯವಿರಕ್ತಿ, ಮಿತಭಾಷಣ, ಕ್ಷಮಾ ಈ ಎಲ್ಲಾ ಗುಣಗಳು ಜಪಯಜ್ಞಕ್ಕೆ ಯೋಗ್ಯವಾದ ಫಲವನ್ನುಂಟು ಮಾಡಲು ಕಾರಣವಾಗಿವೆ. ಜಪಯಜ್ಞಕ್ಕೆ ಕಾರಣಭೂತವಾದ ಆಚಾರಗಳನ್ನು ತಿಳಿಸುತ್ತೇನೆ, ತಿಳಿದುಕೊ.
ಯಥಾ ನಿವರ್ತತೇ ಕರ್ಮ ಜಪತೋ ಬ್ರಹ್ಮಚಾರಿಣಃ |
ಏತತ್ ಸರ್ವಮಶೇಷೇಣ ಯಥೋಕ್ತಂ ಪರಿವರ್ಜಯೇತ್ |
ತ್ರಿವಿಧಂ ಮಾರ್ಗಮಾಸಾದ್ಯ ವ್ಯಕ್ತಾವ್ಯಕ್ತಮನಾಶ್ರಯಮ್ ॥ 11 ॥
ಜಪಯಜ್ಞ ಮಾಡುವ ಬ್ರಹ್ಮಚಾರಿಗೆ ಕರ್ಮತ್ಯಾಗ ಪೂರ್ವಕವಾಗಿ ನಿವೃತ್ತಿ ಮಾರ್ಗಕ್ಕೆ ಸಾಧನವಾದ ಧರ್ಮವೇನೆಂಬುದನ್ನು ತಿಳಿಸುತ್ತೇನೆ. ಜಪ-ಯಜ್ಞನಿರತನಾದ ಬ್ರಹ್ಮಚಾರಿಯು ನಿವರ್ತಕವಾದ ಕರ್ಮಗಳನ್ನು ಸೇವಿಸಬಾರದು. ಅರ್ಥಾತ್ ದುರ್ಜನರ ಸಂಗವನ್ನು ಮಾಡಿದಲ್ಲಿ ಜಪಿಸಲು ಸಾಧ್ಯವಾಗುವುದಿಲ್ಲ. ಪುತ್ರ-ಮಿತ್ರ- ಕಳತ್ರಾದಿಗಳ ಅತ್ಯಂತ ಸ್ನೇಹವು ಧ್ಯಾನಕ್ಕೆ ಪೂರಕವಾಗಿರುವುದಿಲ್ಲ. ಧನಾದಿಗಳ ಆಸೆಯು ಜಪದಲ್ಲಿ ಆಸಕ್ತಿಯನ್ನು ಹುಟ್ಟಿಸುವುದಿಲ್ಲ. ಸತ್ಪದಾರ್ಥಗಳಲ್ಲಿ ದ್ವೇಷ, ದುರ್ವಿಷಯಗಳಲ್ಲಿ ಸಂತೋಷವೂ ಧ್ಯಾನಕ್ಕೆ ಪ್ರತಿಬಂಧಕವಾಗುತ್ತದೆ. ಈ ಪ್ರವರ್ತಕ- ನಿವರ್ತಕಗಳನ್ನು ಅರಿತು ಹಿತವಾದುದನ್ನೇ ಸ್ವೀಕರಿಸಬೇಕು. ಸ್ಥೂಲ-ಸೂಕ್ಷ್ಮ ಎಂಬ ಎರಡು ಯೋಗಮಾರ್ಗಗಳ ಜೊತೆ ಯಾವುದನ್ನೂ ಆಶ್ರಯಿಸದಿರುವಿಕೆ ಎಂಬ ಅನಾಶ್ರಯ ಯೋಗಮಾರ್ಗವು ಇದೆ. ಈ ಯೋಗ ಮಾರ್ಗಗಳ ಸಹಾಯದಿಂದ ಅಹಿತವಾದುದನ್ನು ತ್ಯಾಗ ಮಾಡಬೇಕು.
ನ ಜಪೋ ನ ಚ ವೈ ಧ್ಯಾನಂ ನೇಚ್ಛಾ ನ ದ್ವೇಷಹರ್ಷಣೌ |
ಯುಜ್ಯತೇ ನೃಪಶಾರ್ದೂಲ ಸುಸಂವೇದ್ಯಂ ಹಿ ತತ್ ಕಿಲ ॥ 12 ॥
ಮೋಕ್ಷಗತಿಗೆ ಜಪವೇ ಅಥವಾ ಧ್ಯಾನವೇ, ಮನಸ್ಸಿನ ಸಂಕಲ್ಪಗಳೇ ನೇರವಾಗಿ ಕಾರಣವಾಗುವವುಗಳಲ್ಲ. ದ್ವೇಷ-ಹರ್ಷಗಳು ಕಾರಣವಲ್ಲ. ಮೋಕ್ಷಗತಿಯ ವಿವರವು ಅತ್ಯಂತ ಸೂಕ್ಷ್ಮವಾದದ್ದು.
ಜಪಮಾವರ್ತಯೇನ್ನಿತ್ಯಂ ಜಪನ್ ವೈ ಬ್ರಹ್ಮಚಾರಿಕಮ್ |
ತದರ್ಥಬುದ್ಧ್ಯಾ ಸಂಯಾತಿ ಮನಸಾ ಜಾಪಕಃ ಪರಮ್ ॥ 13 ॥
ಯಾವಾಗಲೂ ಜಪವನ್ನು ಆವೃತ್ತಿ ಮಾಡುತ್ತಿರಬೇಕು. ಬ್ರಹ್ಮಚರ್ಯೆಗೆ ಯೋಗ್ಯವಾದ ಮಂತ್ರವನ್ನು ಪುರಶ್ಚರಣ ಮಾಡುವ ವ್ಯಕ್ತಿಯು ಪರಮಾತ್ಮನಲ್ಲಿಯೇ ಬುದ್ಧಿಯನ್ನಿಟ್ಟು ಆ ಜಪವನ್ನು ಅನುಷ್ಠಾನ ಮಾಡಿದರೆ ಪರಮಾತ್ಮನನ್ನು ಹೊಂದುತ್ತಾನೆ.
ಯಥಾ ಸಂಶ್ರೂಯತೇ ಜಾಪೋ ಯೇನ ವೈ ಜಾಪಕೋ ಭವೇತ್ |

ಸಂಹಿತಾ ಪ್ರಣವೇನೈವ ಸಾವಿತ್ರೀ ಚ ಪರಾ ಮತಾ |
ಯದನ್ಯದುಚಿತಂ ಶುದ್ಧಂ ವೇದಸ್ಮೃತ್ಯುಪಪಾದಿತಮ್ ॥ 14 ॥
ಜಪ ಮಾಡುವವನು ಜಪದ ನಿಯಮ, ವಿಧಿಗಳನ್ನು ಅನುಸರಿಸಿದರೆ ಇಂದ್ರಿಯ ಜಯಾದಿ ಸಾಧನೆಗಳಿಂದ ಮನಃಶುದ್ಧಿಯನ್ನು ತಂದುಕೊಂಡು ಪ್ರಣವ ಸಹಿತವಾದ ಗಾಯತ್ರಿಯನ್ನು ಜಪಿಸುವುದೇ ಶ್ರೇಷ್ಠವಾದ ಕರ್ಮವೆನಿಸಿದೆ. ಶ್ರುತಿಗಳಲ್ಲಿ, ಸಂಹಿತೆಗಳಲ್ಲಿ, ಸ್ಮೃತಿಗಳಲ್ಲಿಯೂ ಶುದ್ಧವಾದ ಬೇರೆ ಯಾವ ಉತ್ತಮ ಮಂತ್ರಗಳನ್ನು ಹೇಳಿದ್ದಾರೋ ಅವುಗಳನ್ನು ಸಾಧನಗಳನ್ನಾಗಿ ಗಳಿಸಿಕೊಳ್ಳಬೇಕು.
ಕುಶೋಚ್ಛಯನಿಷಣ್ಣಃ ಸನ್ ಕುಶಹಸ್ತಃ ಕುಶೈಃ ಶಿಖೀ |
ಚೀರೈಃ ಪರಿವೃತಸ್ತಸ್ಮಿನ್ ಮಧ್ಯೇ ಛನ್ನಃ ಕುಶೈಸ್ತಥಾ ॥ 15 ॥
ಜಪ ಮಾಡುವವನು ದರ್ಭೆಯ ಆಸನದಲ್ಲಿ ಕುಳಿತು ಕೈಯಲ್ಲಿ ದರ್ಭೆಗಳನ್ನು ಹಿಡಿದು, ಕುಶಗಳನ್ನು ತಲೆಗೆ ಸುತ್ತಿಕೊಂಡು, ಸುತ್ತಲೂ ದರ್ಭೆಗಳನ್ನು ಹರಡಿ, ಕುಶವಸ್ತ್ರವನ್ನೇ ಧರಿಸಿರಬೇಕು.
ವಿಷಯೇಭ್ಯೋ ನಮಸ್ಕುರ್ಯಾದ್ ವಿಷಯಾನ್ನ ಚ ಭಾವಯೇತ್ |
ಸಾಮ್ಯಮುತ್ಪಾದ್ಯ ಮನಸೋ ಮನಸ್ಯೇವ ಮನೋ ದಧತ್ ॥ 16 ॥
ಬಾಹ್ಯವಿಷಯಗಳ ಸಂಬಂಧವನ್ನು ಮನಸ್ಸಿಗೆ ತಂದುಕೊಳ್ಳಬಾರದು. ವಿಷಯಗಳಿಂದ ವಿಮುಖನಾಗಿ ಅವುಗಳನ್ನು ದೂರೀಕರಿಸಿಕೊಂಡು ತನ್ನ ಮನಸ್ಸನ್ನು ಮನಸ್ಸಿನಲ್ಲಿಯೇ ದೃಢಗೊಳಿಸಿಕೊಂಡಿರಬೇಕು.
ತದ್ಧಿಯಾ ಧ್ಯಾಯತಿ ಬ್ರಹ್ಮ ಜಪನ್ ವೈ ಸಂಹಿತಾಂ ಹಿತಾಮ್ |
ಸನ್ನ್ಯಸ್ಯತ್ಯಥ ವಾ ತಾಂ ವೈ ಸಮಾಧೌ ಪರ್ಯವಸ್ಥಿತಃ ॥ 17 ॥
ಈ ವಿಧವಾಗಿ ನಡೆಯತಕ್ಕ ಜಾಪಕನು ಗಾಯತ್ರೀಮಂತ್ರವನ್ನು ಜಪಿಸುತ್ತಾ ತನ್ನ ಬುದ್ಧಿಯು ಪರಮಾತ್ಮನೊಬ್ಬನನ್ನೇ ವಿಷಯೀಕರಿಸುವಂತೆ ಮಾಡುತ್ತಾನೆ. ಬಳಿಕ ಆ ಸಾಧಕನು ಸ್ಥಿರವಾದ ಸಮಾಧಿಯೋಗದಲ್ಲಿ ಮಗ್ನನಾಗಿರುತ್ತಾನೆ.
ಧ್ಯಾನಮುತ್ಪಾದಯತ್ಯತ್ರ ಸಂಹಿತಾಬಲಸಂಶ್ರಯಾತ್ |
ಶುದ್ಧಾತ್ಮಾ ತಪಸಾ ದಾಂತೋ ನಿವೃತ್ತದ್ವೇಷಕಾಮವಾನ್ ॥ 18 ॥
ಗಾಯತ್ರಿಮಂತ್ರಬಲವನ್ನು ಆಶ್ರಯಿಸುವುದರಿಂದ ಜಾಪಕನಿಗೆ ಧ್ಯಾನಯೋಗವು ತಾನಾಗಿಯೇ ಸಿದ್ಧಿಸುವುದು. ಧೀರನಾದ ಅವನು ಶುದ್ಧಾತ್ಮನಾಗಿ ತಪಸ್ಸಿನಿಂದ ಇಂದ್ರಿಯ ಜಯವನ್ನು ಸಂಪಾದಿಸಿಕೊಂಡು ದ್ವೇಷ, ಕಾಮಗಳಿಂದ ನಿವೃತ್ತಿಯನ್ನು ಹೊಂದುತ್ತಾನೆ.
ಅರಾಗಮೋಹೋ ನಿರ್ದ್ವಂದ್ವೋ ನ ಶೋಚತಿ ನ ಸಜ್ಜತೇ |
ನ ಕರ್ತಾಕರಣೀಯಾನಾಂ ನ ಕಾರ್ಯಾಣಾಮಿತಿ ಸ್ಥಿತಿಃ ॥ 19 ॥
ರಾಗ-ಮೋಹಗಳಿಗೆ ತುತ್ತಾಗದ, ಸುಖ-ದುಃಖಗಳಿಗೆ ಬಲಿಯಾಗದ ಆ ಸಾಧಕನು ಬಾಹ್ಯವಾದ ಸುಖ-ದುಃಖಗಳಲ್ಲಿ ಎಂದೂ ಯುಕ್ತನಾಗುವುದಿಲ್ಲ. ಅಂತಹವನು ಮಾಡಿದ ಕಾರ್ಯಗಳಿಗೆ ತಾನು ಕರ್ತನೆಂದಾಗಲೀ, ಅದರ ಫಲವನ್ನು ತಾನು ಅನುಭವಿಸುವುದೆಂದಾಗಲೀ ತಿಳಿಯದಿರುವ ಸ್ಥಿತಿಯನ್ನು ಹೊಂದುತ್ತಾನೆ.
ನ ಚಾಹಂಕಾರಯೋಗೇನ ಮನಃ ಪ್ರಸ್ಥಾಪಯೇತ್ ಕ್ವಚಿತ್ |
ನ ಚಾತ್ಮಗ್ರಹಣೇ ಯುಕ್ತೋ ನಾವಮಾನೀ ನ ಚಾಕ್ರಿಯಃ ॥ 20 ॥
ಅಹಂಕಾರದಿಂದ ಮನಸ್ಸನ್ನು ಯಾವುದರಲ್ಲಿಯೂ ಸಂಯೋಜಿಸಿಕೊಳ್ಳಬಾರದು. ಸಾಧಕನಾದ ಇವನಿಗೆ ಧನಾರ್ಜನೆಯಲ್ಲಿ ಪ್ರವೃತ್ತಿಯುಂಟಾಗದು. ಮತ್ತೊಬ್ಬರನ್ನು ಅಪಮಾನಿಸುವ ಸ್ವಭಾವವನ್ನು ಹೊಂದುವುದಿಲ್ಲ. ಸತ್ಕರ್ಮಗಳಿಲ್ಲದೆ ವರ್ತಿಸುವುದಿಲ್ಲ. ಅಭಿಮಾನಕ್ಕೆ ತುತ್ತಾಗುವುದಿಲ್ಲ.
ಧ್ಯಾನಕ್ರಿಯಾಪರೋ ಯುಕ್ತೋ ಧ್ಯಾನವಾನ್ ಧ್ಯಾನನಿಶ್ಚಯಃ |
ಧ್ಯಾನೇ ಸಮಾಧಿಮುತ್ಪಾದ್ಯ ತದಪಿ ತ್ಯಜತಿ ಕ್ರಮಾತ್ ॥ 21 ॥
ಧ್ಯಾನದಲ್ಲಿಯೇ ಸದಾ ಆಸಕ್ತನಾಗಿರುತ್ತಾನೆ. ಧ್ಯಾನವುಳ್ಳವನಾಗಿ, ಧ್ಯಾನದಲ್ಲೇ ಅಚಲವಾದ ನಿಶ್ಚಯವುಳ್ಳವನಾಗಿ, ಧ್ಯಾನಸಮಾಧಿಯನ್ನು ಹೊಂದಿ ಕ್ರಮವಾಗಿ ಬ್ರಹ್ಮನನ್ನು ಧ್ಯಾನಿಸುತ್ತಾ ಎಲ್ಲವನ್ನೂ ಮರೆಯುತ್ತಾನೆ.
ಸ ವೈ ತಸ್ಯಾಮವಸ್ಥಾಯಾಂ ಸರ್ವತ್ಯಾಗಕೃತಃ ಸುಖೀ |
ನಿರೀಹಸ್ತ್ಯಜತಿ ಪ್ರಾಣಾನ್ ಬ್ರಾಹ್ಮೀಂ ಸಂಶ್ರಯತೇ ತನುಮ್ ॥ 22 ॥
ಆ ಸ್ಥಿತಿಯಲ್ಲಿ ಅವನು ಸರ್ವತ್ಯಾಗದಿಂದ ಲಭಿಸಬಹುದಾದ ಉತ್ತಮ ಸುಖವನ್ನು ಅನುಭವಿಸುತ್ತಾನೆ. ಅವನು ಬಾಹ್ಯ ಇಚ್ಛಾರಹಿತನಾಗಿ ಪ್ರಾಣಗಳನ್ನು ಮೀರಿ ಕಾಲಾಂತರದಲ್ಲಿ ಸಾಧಕವಾದ ಬ್ರಾಹ್ಮಣಸಂಬಂಧಿಯಾದ ಶರೀರವನ್ನು ಹೊಂದುತ್ತಾನೆ.
ಅಥ ವಾ ನೇಚ್ಛತೇ ತತ್ರ ಬ್ರಹ್ಮಕಾಯನಿಷೇವಣಮ್ |
ಉತ್ಕ್ರಾಮತಿ ಚ ಮಾರ್ಗಸ್ಥೋ ನೈವ ಕ್ವಚನ ಜಾಯತೇ ॥ 23 ॥
ಅಂತಹ ಬ್ರಾಹ್ಮಣ ಶರೀರವನ್ನು ಹೊಂದಿದರೂ ಆ ಶಾರೀರಿಕ ಮೋಹವುಳ್ಳವನಾಗಿ ಜನ್ಮಾಂತರ ಸಂಸ್ಕಾರದಿಂದ ದೇವಯಾನ ಎಂಬ ಬ್ರಹ್ಮಮಾರ್ಗವನ್ನು ಅನುಸರಿಸಿ ಜ್ಞಾನಮುಖದ ಧ್ಯಾನದಿಂದ ಊರ್ಧ್ವಗಮನವನ್ನು ಹೊಂದುತ್ತಾನೆ. ಇನ್ನೆಂದಿಗೂ ಈ ಸಂಸಾರದಲ್ಲಿ ಅವನು ಹುಟ್ಟುವುದಿಲ್ಲ.
ಆತ್ಮಬುದ್ಧಿಂ ಸಮಾಸ್ಥಾಯ ಶಾಂತೀಭೂತೋ ನಿರಾಮಯಃ |
ಅಮೃತಂ ವಿರಜಃಶುದ್ಧಮಾತ್ಮಾನಂ ಪ್ರಪದ್ಯತೇ ॥ 24 ॥
ಅವನು ಪರಮಾತ್ಮನ ವಿಷಯಕವಾದ ಜ್ಞಾನವನ್ನು ಹೊಂದಿದವನಾಗಿ ಶೋಕ- ಮೋಹಾದಿಗಳನ್ನು ತೊರೆದವನಾಗಿ, ಶಾಂತಾತ್ಮನಾಗಿ ಅಮೃತವೂ, ವಿರಜವೂ, ಶುದ್ಧವೂ ಆದ ಪರಮಾತ್ಮನನ್ನೇ ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ಮೂರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ಜಪಫಲಾದಿಗಳನ್ನು ತಿಳಿಸಿದುದು.
ಯುಧಿಷ್ಠಿರಃ
ಗತೀನಾಮುತ್ತಮಾ ಪ್ರಾಪ್ತಿಃ ಕಥಿತಾ ಜಾಪಕೇಷ್ವಿಹ |
ಏಕೈವೈಷಾ ಗತಿಸ್ತೇಷಾಮುತ ಯಾಂತ್ಯಪರಾಮಪಿ ॥ 1 ॥
ಯುಧಿಷ್ಠಿರ ಪಿತಾಮಹನೇ, ಜಾಪಕರಿಗೆ ಗತಿಗಳಲ್ಲೇ ಉತ್ತಮವಾದ ಗತಿಯು ಲಭಿಸುತ್ತದೆ ಎಂದು ಹೇಳಿದೆಯಷ್ಟೆ! ಅವರು ಆ ಜಪಫಲಗಳಿಂದ ಒಂದೇ ಗತಿಯನ್ನು ಹೊಂದುತ್ತಾರೋ ಅಥವಾ ಅವರಿಗೆ ಬೇರೆ ಗತಿಗಳು ಇವೆಯೋ?
ಭೀಷ್ಮಃ
ಶೃಣುಷ್ವಾವಹಿತೋ ರಾಜಂಜಾಪಕಾನಾಂ ಗತಿಂ ವಿಭೋ |
ಯಥಾ ಗಚ್ಛಂತಿ ನಿರಯಮನೇಕಂ ಪುರುಷರ್ಷಭ ॥ 2 ॥
ಭೀಷ್ಮ ರಾಜನೇ, ಸಮಾಧಾನಚಿತ್ತದಿಂದ ಕೇಳು. ಜಪಮಾಡುವವರಿಗೆ ಲಭಿಸಬಹುದಾದ ಎಲ್ಲ ಗತಿಗಳನ್ನು, ಜಪದ ನ್ಯೂನತೆಯಿಂದ ಅವರು ಹೊಂದಬಹುದಾದ ಅನೇಕ ನರಕಗಳನ್ನು ನಿನಗೆ ತಿಳಿಸುತ್ತೇನೆ.
ಯಥೋಕ್ತಮೇತತ್ ಪೂರ್ವಂ ಯೋ ನಾನುತಿಷ್ಠತಿ ಜಾಪಕಃ |
ಏಕದೇಶಕ್ರಿಯಶ್ಚಾತ್ರ ನಿರಯಂ ಸ ನಿಗಚ್ಛತಿ ॥ 3 ॥
ಜಪಕ್ಕಾಗಿ ಸಂಕಲ್ಪಿಸಿದವನು ಹಿಂದೆ ಹೇಳಿದ ನಿಯಮಗಳನ್ನು ಅನುಷ್ಠಾನ ಮಾಡದೆ ಅದರ ಸ್ವಲ್ಪಭಾಗವನ್ನು ಮಾತ್ರ ಕ್ರಮವಾಗಿ ನಡೆಸಿದರೂ ಉಳಿದದ್ದನ್ನು ಪೂರ್ಣವಾಗಿ ಮಾಡದ ಕಾರಣ ನರಕಕ್ಕೆ ಹೋಗುತ್ತಾನೆ.
ಅವಮಾನೇನ ಕುರುತೇ ನ ತುಷ್ಯತಿ ನ ಶೋಚತಿ |
ಈದೃಶೋ ಜಾಪಕೋ ಯಾತಿ ನಿರಯಂ ನಾತ್ರ ಸಂಶಯಃ ॥ 4 ॥
ಮತ್ತು ಜಪದ ವಿಧಿಯಲ್ಲಿ ಪೂರ್ಣವಾದ ನಂಬಿಕೆಯಿಲ್ಲದೆ, ಜಪದಿಂದ ಸಂತೋಷವನ್ನು ಹೊಂದುವುದಿಲ್ಲ, ದುಃಖವನ್ನೂ ಹೊಂದುವುದಿಲ್ಲ. ಜಪತ್ಯಾಗದಿಂದ ದುಃಖಿತನಾಗುವುದಿಲ್ಲ. ಇಂತಹ ಜಾಪಕನು ಅನಾದರ ಮಾಡಿದ ಕಾರಣದಿಂದ ನರಕಭಾಗಿಯಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಅಹಂಕಾರಕೃತಶ್ಚೈವ ಸರ್ವೇ ನಿರಯಗಾಮಿನಃ |
ಪರಾವಮಾನೀ ಪುರುಷೋ ಭವಿತಾ ನಿರಯೋಪಗಃ ॥ 5 ॥
ಅಹಂಕಾರದಿಂದ ಜಪಮಾಡುವ ವ್ಯಕ್ತಿಯು ನಿರಯಗಾಮಿಯಾಗುತ್ತಾನೆ. ಅಹಂಕಾರದಿಂದ ಮತ್ತೊಬ್ಬರನ್ನು ಅಪಮಾನಿಸುವ ವ್ಯಕ್ತಿಯು ನರಕಕ್ಕೆ ಹೋಗುತ್ತಾನೆ.
ಅಭಿಧ್ಯಾಪೂರ್ವಕಂ ಜಪ್ಯಂ ಕುರುತೇ ಯಶ್ಚ ಮೋಹಿತಃ |
ಯತ್ರಾಭಿಧ್ಯಾಂ ಸ ಕುರುತೇ ತಂ ವೈ ನಿರಯಮೃಚ್ಛತಿ ॥ 6 ॥
ಯಾವನು ವಿಷಯಗಳನ್ನೇ ಚಿಂತಿಸುತ್ತಾ ವಿಷಯಗಳಲ್ಲಿ ಮೋಹಿತನಾಗಿ ಜಪವನ್ನು ಅನುಷ್ಠಾನ ಮಾಡುತ್ತಾನೋ, ಯಾವುದೋ ಫಲಾಪೇಕ್ಷೆಯಿಂದ ಜಪದ ಉದ್ದೇಶವನ್ನು ಅರಿಯದೆ ಜಪವನ್ನು ಮಾಡುತ್ತಾನೋ ಆ ಮಾಡಿದ ಅನುಷ್ಠಾನವು ಅವನನ್ನು ನರಕಕ್ಕೆ ತಳ್ಳುತ್ತದೆ.
ಅಥೈಶ್ವರ್ಯಪ್ರವೃತ್ತಃ ಸಂಜಾಪಕಸ್ತತ್ರ ರಜ್ಯತೇ |
ಸ ಏವ ನಿರಯಸ್ತಸ್ಯ ನಾಸೌ ತಸ್ಮಾತ್ ಪ್ರಮುಚ್ಯತೇ ॥ 7 ॥
ಯಾವನು ಐಶ್ವರ್ಯಗಳಲ್ಲಿ (ಅಣಿಮಾದಿ ಐಶ್ವರ್ಯಗಳಲ್ಲಿ) ಆಸೆಯಿಟ್ಟುಕೊಂಡು ಜಪವನ್ನು ಮಾಡುತ್ತಾನೋ, ಆ ಐಶ್ವರ್ಯದಲ್ಲೇ ಏಕಾಗ್ರತೆಯನ್ನು ಹೊಂದಿದ ಕಾರಣದಿಂದಾಗಿ ಉದ್ದಿಷ್ಟವಾದ ಫಲವನ್ನು ಪಡೆಯದೆ ಕೊನೆಗೆ ನರಕಕ್ಕೆ ಹೋಗುತ್ತಾನೆ.
ರಾಗೇಣ ಜಾಪಕೋ ಜಪ್ಯಂ ಕುರುತೇ ತತ್ರ ಮೋಹಿತಃ |
ಯತ್ರಾಸ್ಯ ರಾಗಃ ಪತತಿ ತತ್ರ ತತೋಪಜಾಯತೇ ॥ 8 ॥
ಮೋಹದಿಂದ ಜಪವನ್ನು ಮಾಡುವ ವ್ಯಕ್ತಿಯು ಆ ಫಲದಲ್ಲಿಯೇ ಮೋಹಿತನಾಗಿರುತ್ತಾನಾದ್ದರಿಂದ ಎಲ್ಲಿ ಅವನಿಗೆ ರಾಗವು ಉತ್ಪತ್ತಿಯಾಗುತ್ತದೋ ಅಂತಹ ರಾಗ-ಮೋಹಗಳನ್ನು ಜಪಿಸಿದ ಫಲವಾಗಿ ಅಂತಹ ಪುತ್ರ-ಕಳತ್ರ-ಧನ- ಧಾನ್ಯಾದಿಗಳ ಮಧ್ಯದಲ್ಲಿಯೇ ಜನ್ಮವನ್ನು ಹೊಂದುತ್ತಾನೆ. ಕಳತ್ರ-ಧನ-ಧಾನ್ಯಾದಿಗಳು ಅವನಿಗೆ ಲಭಿಸುತ್ತವೆ. ಉದ್ದಿಷ್ಟವಾದ ಫಲವು ಸಿಗುವುದಿಲ್ಲ.
ದುರ್ಬುದ್ಧಿರಕೃತಪ್ರಜ್ಞಶ್ಚಲೇ ಮನಸಿ ತಿಷ್ಠತಿ |
ಚಲಾಮೇವ ಗತಿಂ ಯಾತಿ ನಿರಯಂ ವಾಧಿಗಚ್ಛತಿ ॥ 9 ॥
ಉದ್ದಿಷ್ಟಫಲಕ್ಕಾಗಿ ಜಪ ಮಾಡುವವನು ದುರ್ಬುದ್ಧಿಯುಳ್ಳವನಾಗಿ, ಚಪಲ ಮನಸ್ಕನಾಗಿ, ಅವನು ಉದ್ದೇಶಿಸಿದ ಫಲದಲ್ಲಿಯೂ ಕೊರತೆಯುಂಟಾಗಿ ಅವನಿಗೆ ನರಕವುಂಟಾಗುತ್ತದೆ.
ಅಕೃತಪ್ರಜ್ಞಕೋ ಬಾಲೋ ಮೋಹಂ ಗಚ್ಛತಿ ಜಾಪಕಃ |
ಸ ಮೋಹಾನ್ನಿರಯಂ ಯಾತಿ ತತ್ರ ಗತ್ವಾನುಶೋಚತಿ ॥ 10 ॥
ಪ್ರಜ್ಞಾಹೀನನೂ, ಬಾಲಿಶನೂ ಆದ ಜಾಪಕನು ನಡುವೆ ಮೋಹಕ್ಕೆ ತುತ್ತಾಗಿ ಅದರಿಂದ ನರಕಕ್ಕೆ ಹೋಗಿ ಅನುತಾಪವನ್ನು ಪಡುವಂತಾಗುತ್ತದೆ.

ದೃಢಗ್ರಾಹೀ ಕರೋಮೀತಿ ಜಪ್ಯಂ ಜಪತಿ ಜಾಪಕಃ |
ನ ಸಂಪೂರ್ಣೋ ನ ವಾ ಯುಕ್ತೋ ನಿರಯಂ ಸೋಽಧಿಗಚ್ಛತಿ ॥11॥
ಯಾರಿಗೆ ಮನಸ್ಸಿನಲ್ಲಿ ವೈರಾಗ್ಯವು ಪೂರ್ಣವಾಗಿಲ್ಲವೋ, ಬಲಾತ್ಕಾರದಿಂದ ಭೋಗಗಳನ್ನು ನೀಗುವ ಸಂಕಲ್ಪವನ್ನು ಮಾತ್ರ ದೃಢವಾಗಿ ಮಾಡಿ ಜಪ ಮಾಡಿದರೂ ಅವನು ನರಕಕ್ಕೇ ಭಾಗಿಯಾಗುತ್ತಾನೆ.
ಯುಧಿಷ್ಠಿರಃ
ಅನಿಮಿತ್ತಂ ಪರಂ ಯತ್ತದವ್ಯಕ್ತಂ ಬ್ರಹ್ಮಣಿ ಸ್ಥಿತಮ್ |
ತದ್ಭೂತೋ ಜಾಪಕಃ ಕಸ್ಮಾತ್ಸ ಶರೀರಮಥಾವಿಶೇತ್ ॥ 12 ॥
ಯುಧಿಷ್ಠಿರ ವೇದಗಳಲ್ಲಿ ಅವ್ಯಕ್ತನಾದ ಪರಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಅಂತಹ ಪರಬ್ರಹ್ಮನಲ್ಲಿಯೇ ನೆಲೆಗೊಂಡಿರುವ ಅವನ ಸ್ವರೂಪವನ್ನೇ ಜಪಿಸುವ ಜಾಪಕನು ಪುನಃ ತಿರುಗಿ ಲೋಕದಲ್ಲಿ ಈ ಶರೀರವನ್ನು ಹೊಂದುತ್ತಾನೆ ಎಂದರೆ ಹೇಗೆ? ಜಾಪಕನು ಪರಬ್ರಹ್ಮನ ಸದನವನ್ನು ಹೊಂದುತ್ತಾನೋ ಅಥವಾ ಮಹದ್ಭಯವಾದ ನರಕವನ್ನೇ ಹೊಂದುತ್ತಾನೋ? ಏನು ನಿಮ್ಮ ಅಭಿಪ್ರಾಯ?
ಭೀಷ್ಮಃ
ದುಷ್ಪ್ರಜ್ಞಾನೇನ ನಿರಯಾ ಬಹವಃ ಸಮುದಾಹೃತಾಃ |
ಪ್ರಶಸ್ತಂ ಜಾಪಕತ್ವಂ ಚ ದೋಷಾಶ್ಚೈತೇ ತದಾತ್ಮಕಾಃ ॥ 13 ॥
ಭೀಷ್ಮ ಧರ್ಮರಾಜನೇ, ದುಷ್ಟಪ್ರಜ್ಞೆಯೇ ಜಾಪಕರನ್ನು ಅನೇಕ ನರಕಗಳಿಗೆ ತಳ್ಳುತ್ತದೆ. ಜಾಪಕತ್ವವು ಪ್ರಶಸ್ತವಾಗಿದೆ. ಆದರೆ ಮೇಲೆ ಹೇಳಿದ ದೋಷಗಳೆಲ್ಲಾ ಆ ಜಪದ ಜೊತೆಗೆ ಸೇರಿದಾಗ ನರಕಕ್ಕೆ ಕಾರಣವಾಗುತ್ತವೆ. ಆದ್ದರಿಂದ ಜಾಗರೂಕನಾಗಿ ಜಪಿಸಬೇಕು ಎಂದು ನನ್ನ ಅಭಿಪ್ರಾಯ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಜಾಪದಿಂದ ಉಂಟಾದ ನರಕಗಳು.
ಯುಧಿಷ್ಠಿರಃ
ಕೀದೃಶಂ ನಿರಯಂ ಯಾತಿ ಜಾಪಕೋ ವರ್ಣಯಸ್ವ ಮೇ |
ಕೌತೂಹಲಂ ಹಿ ಮೇ ಜಾತಂ ತದ್ಭವಾನ್ವಕ್ತುಮರ್ಹತಿ ॥ 1 ॥
ಯುಧಿಷ್ಠಿರ ಪಿತಾಮಹನೇ, ಜಾಪಕನು ಯಾವ ರೀತಿಯಾದ ನರಕವನ್ನು ಹೊಂದುತ್ತಾನೆ ಎಂಬುದನ್ನು ನನಗೆ ವರ್ಣಿಸು. ಜಾಪಕನೂ ನರಕವನ್ನು ಹೊಂದುತ್ತಾನೆ ಎಂಬ ವಿಷಯವು ನನ್ನ ಮನಸ್ಸಿನಲ್ಲಿ ಕುತೂಹಲ ಹುಟ್ಟಿಸಿದೆ. ಇದರ ಬಗ್ಗೆ ಹೇಳಲು ನೀನು ಅರ್ಹನಾಗಿರುತ್ತಿ.
ವ್ಯಾಖ್ಯಾನ ವಿಶೇಷ ಸ್ವಲ್ಪ ಅಂಗವೈಕಲ್ಯದಿಂದ ಕೂಡಿದ ದಿವ್ಯಮಂತ್ರ ಜಾಪಕನು ಯಾವ ಮಂತ್ರವನ್ನು ಹೊಂದುತ್ತಾನೆ? ಕುಂಭೀಪಾಕ ಮೊದಲಾದ ನರಕಗಳನ್ನು ನಿಶ್ಚಿತವಾಗಿ ಹೊಂದುವುದಿಲ್ಲ. ಕಾರಣ, ಪಾಪಿಗಳಿಗೇ ಲಭಿಸುವಂತಹ ನರಕವು ಇದಾಗಿದೆ. ಆದ್ದರಿಂದ ನೀನು ಹೇಳಿದ ನರಕ ಯಾವುದು ಎಂಬುದು ಧರ್ಮರಾಜನ ಪ್ರಶ್ನೆಯ ಅಂತರಂಗ. ಸಿದ್ಧಾಂತವಾದರೂ ಋಷಿ, ಛಂದಸ್ಸು, ದೇವತೆ, ನ್ಯಾಸ, ಧ್ಯಾನ ಇವುಗಳಿಂದ ಸಹಿತವಾಗಿ ಏಕಾಗ್ರದಿಂದ ಮಾಡುವ ದಿವ್ಯಮಂತ್ರ ಜಪವು ವಿಷ್ಣುಲೋಕಕ್ಕೆ ಕಾರಣವಾಗುತ್ತದೆ. ಮನೋದೋಷದಿಂದ, ಸ್ವಲ್ಪ ಅಂಗ ವೈಕಲ್ಯದಿಂದ ಕೂಡಿಕೊಂಡು ಮಹಾಮಂತ್ರವನ್ನು ಜಪಿಸುವವರಿಗೆ ಬ್ರಹ್ಮಲೋಕವೇ ಮೊದಲಾದ ಅಸ್ಥಿರ ಲೋಕಗಳು ಲಭಿಸುತ್ತದೆ. ಆದ್ದರಿಂದ ಅದೇ ಪುಣ್ಯಲೋಕವನ್ನು ನಿರಯಾ ಎಂದು ವೈರಾಗ್ಯ ಹುಟ್ಟಿಸಲು ಮಹಾಭಾರತದಲ್ಲಿ ವ್ಯಾಸರು ತಿಳಿಸುತ್ತಾರೆ. `ಅಯನಂ ನಿರ್ಗತಂ ಏಷು ತೇ ನಿರಯಾಃ' ಎಂಬ ವ್ಯುತ್ಪತ್ತಿಯಿಂದ ನಿತ್ಯಸ್ಥಿತಿಯನ್ನು ಪಡೆಯದಿರುವ ಲೋಕಗಳು ಎಂದಷ್ಟೇ ನಿರಯ ಶಬ್ದಕ್ಕೆ ಅರ್ಥವಾಗುತ್ತದೆ.
ಭೀಷ್ಮಃ
ಧರ್ಮಸ್ಯಾಂಶಃ ಪ್ರಸೂತೋಽಸಿ ಧರ್ಮಿಷ್ಠೋಽಸಿ ಸ್ವಭಾವತಃ |
ಧರ್ಮಮೂಲಾಶ್ರಯಂ ವಾಕ್ಯಂ ಶೃಣುಷ್ವಾವಹಿತೋಽನಘ ॥ 2 ॥
ಭೀಷ್ಮ ಧರ್ಮರಾಜನೇ, ನೀನು ಧರ್ಮಪುರುಷನ ಅಂಶದಿಂದ ಹುಟ್ಟಿದವನು. ಇಷ್ಟೇ ಅಲ್ಲದೆ ಸಹಜವಾಗಿ ಎಲ್ಲ ಧರ್ಮಗಳನ್ನೂ ಬಲ್ಲವನು. ಆದರೂ ಧರ್ಮ ಸಂಬಂಧವಾದ ನಾನು ಹೇಳುವ ವಿಷಯಗಳನ್ನು ಸಾವಧಾನವಾಗಿ ಕೇಳು.
ಅಮೂನಿ ಯಾನಿ ಸ್ಥಾನಾನಿ ದೇವಾನಾಂ ಪರಮಾತ್ಮನಾಮ್ |
ನಾನಾಸಂಸ್ಥಾನವರ್ಣಾನಿ ನಾನಾರೂಪಫಲಾನಿ ಚ ॥ 3 ॥
ಪರಲೋಕವೆನಿಸುವ ದೇವತಾಸ್ಥಾನಗಳು ಅನೇಕ ಇವೆ. ಮಹಾತ್ಮರಾದ ದೇವತೆಗಳ ಸನ್ನಿವೇಶಗಳು, ವರ್ಣಗಳು, ರೂಪಗಳು, ಅವುಗಳೊಳಗಿನ ಫಲಗಳು ಅನೇಕ ವಿಧವಾಗಿರುತ್ತವೆ.
ದಿವ್ಯಾನಿ ಕಾಮಚಾರೀಣಿ ವಿಮಾನಾನಿ ಸಭಾಸ್ತಥಾ |
ಆಕ್ರೀಡಾ ವಿವಿಧಾ ರಾಜನ್ ಪದ್ಮಿನ್ಯಶ್ಚಾಮಲೋದಕಾಃ ॥ 4 ॥
ಅಲ್ಲಲ್ಲಿ ದಿವ್ಯಸ್ಥಾನಗಳಿವೆ. ಕಾಮಚಾರಿಗಳಾದ ದಿವ್ಯವಿಮಾನಗಳಿದ್ದಾವೆ. ದಿವ್ಯ ಸಭೆಗಳೂ ಇವೆ. ವಿಹಾರ ಸ್ಥಾನಗಳಿವೆ. ಸ್ವಚ್ಛಜಲಗಳುಳ್ಳ ಕಮಲಗಳಿಂದ ತುಂಬಿದ ದಿವ್ಯಸರೋವರಗಳಿವೆ.
ಚತುರ್ಣಾಂ ಲೋಕಪಾಲಾನಾಂ ಶುಕ್ರಸ್ಯಾಥ ಬೃಹಸ್ಪತೇಃ |

ಮರುತಾಂ ವಿಶ್ವದೇವಾನಾಂ ಸಾಧ್ಯಾನಾಮಶ್ವಿನೋರಪಿ ॥ 5 ॥
ರುದ್ರಾದಿತ್ಯವಸೂನಾಂ ಚ ತಥಾನ್ಯೇಷಾಂ ದಿವೌಕಸಾಮ್ ।
ಏತೇ ವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ ॥ 6 ॥
ಅಲ್ಲಿ ನಾಲ್ಕು ದಿಕ್ಪಾಲಕರಿಗೆ ಸೇರಿದ ಬೇರೆ ಬೇರೆ ಲೋಕಗಳೂ ಇವೆ. ಹಾಗೆಯೇ ಶುಕ್ರ, ಬೃಹಸ್ಪತಿ, ಮರುತ್ತುಗಳು, ವಿಶ್ವೇದೇವತೆಗಳು, ಸಾಧ್ಯರು, ಅಶ್ವಿನೀದೇವತೆಗಳು, ರುದ್ರರು, ಆದಿತ್ಯರು, ವಸುಗಳು, ಇನ್ನೂ ಬೇರೆ ದೇವತೆಗಳ ಸ್ಥಾನಗಳೂ ಇವೆ. ಆದರೆ ಅಲ್ಲಿನ ಸುಖಭಾಗಿಗಳನ್ನು, ಸನ್ನಿವೇಶಗಳನ್ನು ಪರಮಾತ್ಮನ ಸ್ಥಾನದ ಜೊತೆಗೆ ಹೋಲಿಸಿದಾಗ ಇವುಗಳು ನರಕವೆಂದೇ ಕರೆಸಿಕೊಳ್ಳುತ್ತವೆ. ಈ ಅಭಿಪ್ರಾಯದಲ್ಲಿ ನರಕಭಾಗಿಗಳಾಗುತ್ತಾರೆ ಎಂದು ಹೇಳಿದ್ದೇನೆ.
ಅಭಯಂ ಚಾನಿಮಿತ್ತಂ ಚ ನ ಚ ಕ್ಲೇಶಭಯಾವೃತಮ್ ।
ದ್ವಾಭ್ಯಾಂ ಯುಕ್ತಂ ತ್ರಿಭಿರ್ಮುಕ್ತಮಷ್ಟಾಭಿಸ್ತ್ರಿಭಿರೇವ ಚ ॥ 7 ॥
ಪರಮಾತ್ಮನ ಸ್ಥಾನವಾದರೂ ಭಯರಹಿತವಾದುದು. ಆ ಸ್ಥಾನಕ್ಕೆ ಎಂದೂ ಉತ್ಪತ್ತಿ ಎಂಬುದಿರುವುದಿಲ್ಲ, ನಿತ್ಯವಾದುದು. ಅಜ್ಞಾನಾದಿ ಕ್ಲೇಶಗಳ ಭಯವು ಇರುವುದಿಲ್ಲ. ಜನನ-ಮರಣಗಳಾಗಲಿ ಇರುವುದಿಲ್ಲ. ಸತ್ವ-ರಜಸ್-ತಮೋಗುಣಗಳಿಂದ ಮುಕ್ತವಾದುದು. ಅಷ್ಟಮದಗಳಿಂದ, ಸೃಷ್ಟಿ-ಸ್ಥಿತಿ-ಸಂಹಾರಗಳಿಂದ, ತೇಜಸ್ಸು-ನೀರು- ಅನ್ನ ಎಂಬ ಉಪಾದಾನ ಕಾರಣಗಳಿಂದ ರಹಿತವಾದುದು.
ಚತುರ್ಲಕ್ಷಣವರ್ಜಂ ತು ಚತುಷ್ಕಾರಣವರ್ಜಿತಮ್ ।
ಅಪ್ರಹರ್ಷಮನಾನಂದಮಶೋಕಂ ವಿಗತಕ್ಲಮಮ್ ॥ 8 ॥
ಕಾಲಂ ಸಂವಹತೇ ತತ್ರ ನ ಕಾಲಸ್ತತ್ರ ವೈ ಪ್ರಭುಃ ।
ಸ ಕಾಲಸ್ಯ ಪ್ರಭೂ ರಾಜನ್ ಸ್ವರ್ಗಸ್ಯಾಪಿ ತಥೇಶ್ವರಃ ॥ 9 ॥
ಬ್ರಹ್ಮನ ಸ್ಥಾನವಾದರೂ ಸಾರೂಪ್ಯಾದಿ ಚತುರ್ವಿಧ ಮುಕ್ತಲಕ್ಷಣ ವರ್ಜಿತವಾದುದು. ಚತುರ್ವಿಧ ಜ್ಞಾನಗಳೆಂಬ ಕಾರಣದಿಂದ ವರ್ಜಿತವಾದುದು. ಮೋಕ್ಷದಂತೆ ಪ್ರಕೃಷ್ಟ ಚಿತ್ತೋಲಾಸರಹಿತವಾದುದು. ಸ್ವರೂಪದಿಂದ ಅನುಭವ ರಹಿತವಾದುದು. ಯಾವುದೇ ಆಯಾಸವಿಲ್ಲದುದು. ಇಂತಹ ಬ್ರಹ್ಮನ ಸ್ಥಾನವನ್ನು ಯಮನು ನಿಯಮಿಸುವುದಿಲ್ಲ. ಅವನು ಅಲ್ಲಿ ಪ್ರಭುವಾಗಲಾರ. ಕಾಲಕ್ಕೆಲ್ಲ ಪ್ರಭುವಾದ ನಾರಾಯಣನ ಸ್ಥಾನಕ್ಕೆ ಯಾರೂ ನಿಯಾಮಕರು ಇರುವುದಿಲ್ಲ. ಮಹಾತ್ಮರಾದ ಜಾಪಕರು ಹೊಂದುವಂತಹ ಪರಬ್ರಹ್ಮನ ಸ್ಥಾನವು ಈ ರೀತಿಯಾದುದು.
ಆತ್ಮಕೇವಲತಾಂ ಪ್ರಾಪ್ತಸ್ತತ್ರ ಗತ್ವಾ ನ ಶೋಚತಿ ।
ಈದೃಶಂ ಪರಮಂ ಸ್ಥಾನಂ ನಿರಯಾಸ್ತೇ ಚ ತಾದೃಶಾಃ ॥ 10 ॥
ಪರಮಾತ್ಮನ ಇಂತಹ ಸ್ಥಾನವನ್ನು ಹಿರಣ್ಯಗರ್ಭನು ಧ್ಯಾನಬಲದಿಂದಲೇ ಹೊಂದಿರುತ್ತಾನೆ. ಮನಸ್ಸಿನಲ್ಲಿ ಪರಮಾತ್ಮನನ್ನೇ ಧ್ಯಾನಿಸುವ ವ್ಯಕ್ತಿಗಳಿಗೆ ಈ ಭಗವಂತನ ಸ್ಥಾನವು ಲಭಿಸುತ್ತವೆ. ಪರಬ್ರಹ್ಮನ ಸ್ಥಾನವು ಈ ರೀತಿಯಾಗಿದ್ದರೆ ಉಳಿದ ಎಲ್ಲಾ ಲೋಕಗಳು ಈ ರೀತಿಯಾದ ವ್ಯವಸ್ಥೆ ಇಲ್ಲದಿರುವುದರಿಂದ ನಿರಯಗಳೆಂದೇ ಕರೆಯಲ್ಪಡುತ್ತದೆ. ಹಿರಣ್ಯಗರ್ಭನಿಗೂ ಸಾಯುಜ್ಯಪ್ರಾಪ್ತಿಗೆ ಕಾರಣವಾದ ಸ್ಥಾನವನ್ನು ದಿವ್ಯಮಂತ್ರಗಳ ಧ್ಯಾನದಿಂದ ಹೊಂದಬೇಕು.
ಏತೇ ತೇ ನಿರಯಾಃ ಪ್ರೋಕ್ತಾಃ ಸರ್ವ ಏವ ಯಥಾತಥಮ್ ।
ತಸ್ಯ ಸ್ಥಾನವರಸ್ಯೇಹ ಸರ್ವೇ ನಿರಯಸಂಜ್ಞಿತಾಃ ॥ 11 ॥
ಭಗವಂತನ ಸ್ಥಾನಕ್ಕಿಂತ ಬೇರೆಯಾದ ಉಳಿದ ಸ್ಥಾನಗಳು ಹಿಂದೆ ತಿಳಿಸಿದಂತೆ ನಿರಯ ಎಂದೇ ಕರೆಸಿಕೊಳ್ಳುತ್ತವೆ. ಭಗವಂತನ ಸ್ಥಾನಕ್ಕಿಂತ ಅವರ (ಕಡಿಮೆ)ಗಳಾದ ಉಳಿದ ಸ್ವರ್ಗಾದಿ ಲೋಕಗಳೆಲ್ಲವೂ ನರಕಸಮಾನಗಳಾದುದರಿಂದ ನಿರಯ ಎಂಬ ಶಬ್ದದಿಂದಲೇ ಕರೆಸಿಕೊಳ್ಳುತ್ತವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

ಇಪ್ಪತ್ತೈದನೆಯ ಅಧ್ಯಾಯ
ಜಾಪಕೋಪಾಖ್ಯಾನ
ಯುಧಿಷ್ಠಿರಃ
ಕಾಲಮೃತ್ಯುಯಮಾನಾಂ ಚ ಬ್ರಾಹ್ಮಣಸ್ಯ ಚ ಸತ್ತಮ ।
ವಿವಾದೋ ವ್ಯಾಹೃತಃ ಪೂರ್ವಂ ತದ್ಭವಾನ್ ವಕ್ತುಮರ್ಹತಿ ॥ 1 ॥
ಯುಧಿಷ್ಠಿರ ಪಿತಾಮಹನೇ, ಇದಕ್ಕೆ ಮೊದಲು ನೀನು ಕಾಲ, ಯಮ, ಮೃತ್ಯುಗಳಿಗೂ, ಇಕ್ಷ್ವಾಕುವಿಗೂ, ಬ್ರಾಹ್ಮಣನಿಗೂ ಇದೇ ವಿಚಾರವಾಗಿ ವಿವಾದಗಳು ನಡೆದಿವೆ ಎಂದು ಹೇಳಿದೆಯಲ್ಲವೇ? ಆ ವಿವಾದಗಳನ್ನು ನನಗೆ ಪೂರ್ಣವಾಗಿ ವಿವರಿಸು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಇಕ್ಷ್ವಾಕೋಃ ಸೂರ್ಯಪುತ್ರಸ್ಯ ಯದ್ವೃತ್ತಂ ಬ್ರಾಹ್ಮಣಸ್ಯ ಚ ॥ 2 ॥
ಕಾಲಸ್ಯ ಮೃತ್ಯೋಶ್ಚ ತಥಾ ಯದ್ವೃತ್ತಂ ತನ್ನಿಬೋಧ ಮೇ ।
ಯಥಾ ಸ ತೇಷಾಂ ಸಂವಾದೋ ಯಸ್ಮಿನ್ ಸ್ಥಾನೇಽಪಿ ಚಾಭವತ್ ॥
ಭೀಷ್ಮ ರಾಜನೇ, ಆ ಐದುಜನರ ವಿವಾದರೂಪವಾದ ಇತಿಹಾಸವೊಂದನ್ನು ಹಿರಿಯರು ಉದಾಹರಿಸಿದ್ದಾರೆ. ಸೂರ್ಯಪುತ್ರನಾದ

ಇಕ್ಷ್ವಾಕುರಾಜನಿಗೂ ಬ್ರಾಹ್ಮಣನಿಗೂ ನಡೆದ, ಆ ಸಂವಾದವನ್ನು ಕಾಲಕ್ಕೂ, ಮೃತ್ಯುವಿಗೂ ನಡೆದ ವಿವಾದವನ್ನು ತಿಳಿಸುತ್ತೇನೆ. ಯಾವಾಗ, ಯಾವ ಕಾರಣಕ್ಕಾಗಿ, ಯಾವ ಧರ್ಮಸೂಕ್ಷ್ಮವನ್ನುದ್ದೇಶಿಸಿ ನಡೆದಿದೆಯೋ ಅದೆಲ್ಲವನ್ನೂ ನಿನಗೆ ಹೇಳುತ್ತೇನೆ.

ಬ್ರಾಹ್ಮಣೋ ಜಾಪಕಃ ಕಶ್ಚಿದ್ಧರ್ಮವೃತ್ತೋ ಮಹಾಯಶಾಃ |
ಷಡಂಗವಿನ್ಮಹಾಪ್ರಾಜ್ಞಃ ಪೈಪ್ಪಲಾದಿಃ ಸ ಕೌಶಿಕಃ ॥ 4 ॥

ಹಿಂದೆ ಯಶಸ್ವಿಯೂ, ಧಾರ್ಮಿಕನೂ ಆದ ಒಬ್ಬ ಬ್ರಾಹ್ಮಣನಿದ್ದನು. ಅವನು ಸದಾ ಜಪಶೀಲನೂ, ಪ್ರಾಜ್ಞನೂ, ಷಡಂಗಗಳನ್ನು ಅರಿತವನೂ ಆಗಿದ್ದನು. ಅವನು ಕುಶಿಕವಂಶದ ಪಿಪ್ಪಲಾದ ಎಂಬ ಜ್ಞಾನಿಯ ಮಗನಾಗಿದ್ದನು.

ತಸ್ಯಾಪರೋಕ್ಷಂ ವಿಜ್ಞಾನಂ ಷಡಂಗೇಷು ತಥೈವ ಚ |
ವೇದೇಷು ಚೈವ ನಿಷ್ಣಾತೋ ಹಿಮವತ್ಪಾದಸಂಶ್ರಯಃ ॥ 5 ॥

ಅವನಿಗೆ ವೇದಗಳಲ್ಲಿಯೂ, ವೇದಗಳಿಗೆ ಸಂಬಂಧಿಸಿದ ಷಡಂಗಗಳಲ್ಲಿಯೂ ಅಪರೋಕ್ಷಜ್ಞಾನವಿದ್ದಿತು. ಅವನು ಹಿಮವತ್‌ಗಿರಿಯ ತಪ್ಪಲಿನಲ್ಲಿ ವಾಸಿಸುತ್ತಿದ್ದನು.

ಸೋಽಂತ್ಯಂ ಬ್ರಾಹ್ಮಂ ತಪಸ್ತೇಪೇ ಸಂಹಿತಾಂ ಸಂಯತೋ ಜಪನ್ |
ತಸ್ಯ ವರ್ಷಸಹಸ್ರಂ ತು ನಿಯಮೇನ ತಥಾ ಗತಮ್ ॥ 6 ॥

ಅವನು ಬಹಳ ನಿಯಮದಿಂದ ಗಾಯತ್ರಿಮಂತ್ರವನ್ನು ಜಪಿಸುತ್ತಾ ಬ್ರಹ್ಮಪ್ರಾಪ್ತಿಗಾಗಿ ತಪಸ್ಸನ್ನು ಮಾಡುತ್ತಿದ್ದನು. ಹೀಗೆ ತಪಸ್ಸನ್ನು ಮಾಡುತ್ತಾ ಸಾವಿರ ವರ್ಷಗಳು ನಿಯಮ ಬದ್ಧವಾಗಿಯೇ ಕಳೆದುಹೋದವು.

ಸ ದೇವ್ಯಾ ದರ್ಶಿತಃ ಸಾಕ್ಷಾತ್ ಪ್ರೀತಾಸ್ಮೀತಿ ತದಾ ಕಿಲ |
ಜಪ್ಯಮಾವರ್ತಯಂಸ್ತೂಷ್ಣೀಂ ನ ಚ ತಾಂ ಕಿಂಚಿದಬ್ರುವೀತ್ ॥ 7 ॥

ಸಾವಿರವರ್ಷಗಳ ಬಳಿಕ ಆ ಛಂದೋಭಿಮಾನಿ ಗಾಯತ್ರಿದೇವಿಯು ಅವನಿಗೆ ಪ್ರತ್ಯಕ್ಷಳಾಗಿ ವಿಪ್ರೋತ್ತಮನೇ, ನಾನು ನಿನಗೆ ಪ್ರಸನ್ನಳಾಗಿರುತ್ತೇನೆ ಎಂದು ಹೇಳಿದಳು. ಹೀಗೆ ಹೇಳಿದಾಗಲೂ ಬ್ರಾಹ್ಮಣನು ಜಪದಲ್ಲಿಯೇ ಆಸಕ್ತನಾಗಿದ್ದನು. ಆ ಗಾಯತ್ರೀ ದೇವಿಯೊಡನೆ ಮಾತನ್ನೇ ಆಡದೆ ಸುಮ್ಮನಿದ್ದನು.

ತಸ್ಯಾನುಕಂಪಯಾ ದೇವೀ ಪ್ರೀತಾ ಸಮಭವತ್ತದಾ |
ವೇದಮಾತಾ ತತಸ್ತಸ್ಯ ತಜ್ಜಪ್ಯಂ ಸಮಪೂಜಯತ್ ॥ 8 ॥

ಅವನ ಸ್ಥಿರವಾದ ಬುದ್ಧಿಯನ್ನು ನೋಡಿದ ಗಾಯತ್ರೀದೇವಿಯು ಅವನಲ್ಲಿ ಅನುಕಂಪವನ್ನು ತಾಳಿದವಳಾಗಿ ಸಂತುಷ್ಟಳಾಗಿ ಅವನ ಜಪವನ್ನು ಮನಸ್ಸಿನಲ್ಲಿಯೇ ಕೊಂಡಾಡುತ್ತಾ ಅಲ್ಲಿಯೇ ನಿರೀಕ್ಷಿಸುತ್ತಾ ನಿಂತಳು.

ಚತುರ್ಭಿರಕ್ಷರೈರ್ಯುಕ್ತಾ ಸೋಮಪಾನೇಽಕ್ಷರಾಷ್ಟಕಾ |
ಜಗದ್ಬೀಜಸಮಾಯುಕ್ತಾ ಚತುರ್ವಿಂಶಾಕ್ಷರಾತ್ಮಿಕಾ ॥ 9 ॥

ತತ್ಸವಿತುಃ ಎಂಬ ನಾಲ್ಕು ಅಕ್ಷರಗಳಿಂದ ಕೂಡಿದ, ಸೋಮಪಾನಕ್ಕೆ ಸಂಬಂಧಿಸಿದ ಅಷ್ಟಾಕ್ಷರಗಳಿಂದ ಕೂಡಿದ ಭೂರ್ಭುವಸ್ವಃ ಎಂಬ ಮೂರು ಲೋಕಗಳನ್ನು ಹೇಳುವ ಜಗದ್ಬೀಜವಾಚಕ ಎಂಬ ಚತುರ್ವಿಂಶತಿ ಅಕ್ಷರಗಳಿಂದ ಕೂಡಿದ ಗಾಯತ್ರಿಯನ್ನು ಆ ಬ್ರಾಹ್ಮಣನು ಜಪಿಸುತ್ತಿದ್ದನು.

ವ್ಯಾಖ್ಯಾನ ವಿಶೇಷ ಗಾಯತ್ರಿಗೆ ಸಂಬಂಧಿಸಿದಂತೆ ನಾಲ್ಕು ಅಕ್ಷರಗಳು ಸೋಮಪಾನ ಮಂತ್ರಕ್ಕೆ ಸಂಬಂಧಿಸಿದ ಅಷ್ಟಾಕ್ಷರಗಳು ಎಂದರೆ ಏನು ಎಂಬುದನ್ನು ಗುರುರಾಜರು ಇಲ್ಲಿ ಚಿಂತಿಸಿದ್ದಾರೆ. ಜಗದ್ಬೀಜಸಮಾಯುಕ್ತಾ ಎಂದರೆ ಭೂಃ ಭುವಃ ಸ್ವಃ ಎಂಬ ಮೂರುಲೋಕಗಳನ್ನು ವ್ಯಾಹೃತಿಯು ಹೇಳುವುದರಿಂದ ವ್ಯಾಹೃತಿ ಎಂಬ ಬೀಜದಿಂದ ಗಾಯತ್ರಿಯು ಕೂಡಿದೆ ಎಂದು ಅರ್ಥ. ಗಾಯತ್ರಿಯನ್ನು ಜಪಿಸುವ ಆರಂಭದಲ್ಲಿ ಭೂಃ ಭುವಃ ಸ್ವಃ ವ್ಯಾಹೃತಿ ಎಂಬ ಮೂರು ಪದಗಳಿಂದಲೇ ಭೂಮಿಯೇ ಮೊದಲಾದ ಸಪ್ತಲೋಕದ ತನಕ ಇರುವ ಲೋಕಗಳು ಹೇಳಲ್ಪಡುತ್ತವೆ. ಹೀಗೆ ಸಪ್ತವ್ಯಾಹೃತಿ ಪಾದಗಳಿಂದ ಕೂಡಿದ ಚತುರ್ವಿಂಶಾಕ್ಷರಾತ್ಮಕವಾದುದು ಗಾಯತ್ರಿಯು. `ಚತುರ್ಭಿರಕ್ಷರೈಃ ಸೋಮಪಾನೇ ಅಷ್ಟರಾಷ್ಟಕಾ ಜಗದ್ಬೀಜಸಮಾಯುಕ್ತಾ' ಎಂಬ ಮೂರು ವಿಷಯಗಳು ಗಾಯತ್ರಿಗೆ ಸಂಬಂಧಿಸಿದವುಗಳು. `ಸೋಮಪಾನೇ ಅಷ್ಟರಾಕ್ಷಃ' ಎಂದರೆ `ತತ್ಸವಿತು ರ್ವೃಣೀಮಹೇ ವಯಂ ದೇವಸ್ಯ ಭೋಜನಂ ಶ್ರೇಷ್ಠಂ ಸರ್ವಧಾತಮಂ ತುರಂ ಭಗಸ್ಯ ಧೀಮಹಿ' ಎಂಬ ಸೋಮಪಾನಕ್ಕೆ ಸಂಬಂಧಿಸಿದ ಶ್ರುತಿವಾಕ್ಯವನ್ನು ಗಾಯತ್ರಿಗೆ ಸಂಬಂಧಿಸಿದಂತೆ ಚಿಂತಿಸಬೇಕು. ಕ್ರೀಡಾದಿ ಗುಣವಿಶಿಷ್ಟನಾದ ಭಗವಂತನಿಗೆ ಭೋಜನಯೋಗ್ಯವಾದ ಸೋಮರಸವನ್ನು ನಾವು ಪ್ರಾರ್ಥಿಸುತ್ತೇವೆ. ಯಾವ ಸೋಮರಸವನ್ನು ಪ್ರಾರ್ಥಿಸುವುದರಿಂದ ಪವಿತ್ರವಾದ ಅಂತಃಕರಣವುಳ್ಳ ನಾವು ಸಕಲ ಜಗತ್‌ಶ್ರೇಷ್ಠನೆನಿಸಿದ, ಅತಿಶಯವಾಗಿ ಎಲ್ಲವನ್ನೂ ಧರಿಸಿದ ತುರಂ= ಒಂದೇ ಹಗಲು ರಾತ್ರಿಗಳಲ್ಲಿ ಮೇರುವಿಗೆ ಪ್ರದಕ್ಷಿಣೆ ಮಾಡಿದ ಮೇರುವಿನಿಂದ ಕೂಡಿದ, ಭಗಸ್ಯ= ಭಾಗ್ಯಾಧಿಕನಾಗಿರುವುದರಿಂದ ಭಗನಾಮಕನಾದ ಸೂರ್ಯಾಂತರ್ಗತ ನಾರಾಯಣರೂಪವನ್ನು ಧ್ಯಾನ ಮಾಡುತ್ತೇವೆ. ಯಜ್ಞಾದಿ ಕರ್ಮಗಳು ಭಗವದ್ಧ್ಯಾನಕ್ಕೆ ಅಂಗವೇ ಆಗಿವೆ ಎಂಬುದು ಶ್ರುತಿಯ ತಾತ್ಪರ್ಯವಾಗಿದೆ. ಈ ರೀತಿಯಾಗಿ ಸೋಮಪಾನದ ಶ್ರುತಿಯ ಅರ್ಥವನ್ನು ಆಲೋಚಿಸಿದಾಗ ಈ ಶ್ರುತಿಯು ಸೋಮಪಾನ ಮಂತ್ರ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಸೋಮಪಾನ ಮಾಡುವ ಮಂತ್ರವು ಇದು. ಈ ಮಂತ್ರದಲ್ಲಿ ತತ್ಸವಿತುಃ ಎಂಬುದಾಗಿ ನಾಲ್ಕು ಅಕ್ಷರಗಳು ಆರಂಭದಲ್ಲಿ ಪ್ರವಿಷ್ಟವಾಗಿವೆ. ಗಾಯತ್ರೀಮಂತ್ರದ ಅಕ್ಷರವು ಈ ಸೋಮಪಾನ ಮಾಡುವ ಮಂತ್ರದಲ್ಲಿ ಪ್ರವೇಶ ಮಾಡಿರುವುದರಿಂದಲೇ ಆ ಸೋಮಪಾನ ಮಂತ್ರವು ಗಾಯತ್ರೀಮಂತ್ರಾರ್ಥ ಸಮಾನವಾಯಿತು. ವಯಂ ಎಂದು ಈ ಮಂತ್ರದಲ್ಲಿರುವ ಪದವು ಗಾಯತ್ರೀ ಮಂತ್ರದಲ್ಲಿರುವ ವರೇಣ್ಯಂ ಎಂಬ ಪದದಲ್ಲಿರುವ ಆದ್ಯಂತ ಅಕ್ಷರಗಳನ್ನು ಸೇರಿಸಿಕೊಂಡು ಹೇಳಿದ ಪದವಾಗಿದೆ. ವರೇಣ್ಯ ಎಂಬುದರ ಆದ್ಯಕ್ಷರವು ವಕಾರವಾಗಿದೆ. ಕೊನೆಯ ಅಕ್ಷರವು ಯಕಾರವಾಗಿದೆ. ಆ ವರೇಣ್ಯಂ ಎಂಬ ಶಬ್ದವೇ ಇಲ್ಲಿ ವಯಂ ಎಂದು ಹೇಳಲ್ಪಟ್ಟಿದೆ. ದೇವಸ್ಯ ಎಂಬ ಗಾಯತ್ರಿಯ ಶಬ್ದವನ್ನೇ ಇಲ್ಲಿಯೂ ಹೇಳಲಾಗಿದೆ. ಧೀಮಹಿ ಎಂಬ ಗಾಯತ್ರೀ ಮಂತ್ರದ ಅಕ್ಷರತ್ರಯಗಳಿಂದ ಕೂಡಿದ ಶಬ್ದವನ್ನೇ ಇಲ್ಲಿ ಹೇಳಲಾಗಿದೆ. ಹೀಗೆ ಇದೇ ಮಂತ್ರದಲ್ಲಿ ದೇವಸ್ಯ, ಧೀಮಹಿ, ವಯಂ ಎಂಬುದಾಗಿ ಗಾಯತ್ರಿಯ ಅಷ್ಟಾಕ್ಷರಗಳು ಸೇರಿಕೊಂಡಿವೆ ಎಂದೂ ಅರ್ಥ. ಹೀಗೆ ಗಾಯತ್ರಿಮಂತ್ರದಲ್ಲಿರುವ ಇಪ್ಪತ್ನಾಲ್ಕು ಅಕ್ಷರಗಳಲ್ಲಿ ಹನ್ನೆರಡು

ಅಕ್ಷರಗಳು ಯಾವುದೇ ವಿಕಾರವಿಲ್ಲದೆ ಈ ಸೋಮಪಾನದಲ್ಲಿ ಸೇರಿಕೊಂಡಿವೆ. ತತ್ಸವಿತುಃ ಎಂದು ನಾಲ್ಕು ಅಕ್ಷರಗಳು, ವಯಂ ಎಂದು ಎರಡು ಅಕ್ಷರ, ದೇವಸ್ಯ ಎಂದು ಮೂರು ಅಕ್ಷರ, ಧೀಮಹಿ ಎಂದು ಮೂರು ಅಕ್ಷರಗಳು. ಒಟ್ಟು ಹನ್ನೆರಡು ಅಕ್ಷರಗಳಿಂದ ಕೂಡಿದ ಗಾಯತ್ರೀತುಲ್ಯವಾದ ಮಂತ್ರವೆನಿಸಿದೆ. ಹೀಗೆ ಸೋಮಪಾನದ ಸಮಯದಲ್ಲಿಯೂ ಗಾಯತ್ರಿಯಿಂದ ಅಭಿಮಂತ್ರಿತವಾದ ಸೋಮರಸವನ್ನೇ ಜ್ಞಾನಿಗಳು ಪಾನ ಮಾಡುತ್ತಾರೆ. ಇಂತಹ ಗಾಯತ್ರಿಯನ್ನು ಆ ಬ್ರಾಹ್ಮಣನು ಜಪಿಸುತ್ತಿದ್ದನು.
ಸಮಾಪ್ತಜಪ್ಯಸ್ತೂತ್ಥಾಯ ಶಿರಸಾ ಪಾದಯೋಸ್ತಥಾ |
ಪಪಾತ ದೇವ್ಯಾ ಧರ್ಮಾತ್ಮಾ ವಚನಂ ಚೇದಮಬ್ರವೀತ್ ॥ 10 ॥
ಸ್ವಲ್ಪ ಹೊತ್ತಿಗೆ ತನ್ನ ಜಪವು ಪೂರ್ಣವಾಗಲು ಬ್ರಾಹ್ಮಣನು ಮೇಲೆ ಎದ್ದುನಿಂತು ಗಾಯತ್ರಿಯನ್ನು ನೋಡಿ ಅವಳ ಪಾದಗಳಿಗೆ ತಲೆಬಾಗಿ ನಮಸ್ಕರಿಸುತ್ತಾ ಈ ರೀತಿಯಾಗಿ ಹೇಳಿದನು.
ದಿಷ್ಟ್ಯಾ ದೇವಿ ಪ್ರಸನ್ನಾ ತ್ವಂ ದರ್ಶನಂ ಚಾಗತಾ ಮಮ |
ಯದಿ ವಾಪಿ ಪ್ರಸನ್ನಾಸಿ ಜಪ್ಯೇ ಮೇ ರಮತಾಂ ಮನಃ ॥ 11 ॥
ತಾಯಿ, ನನ್ನ ಅದೃಷ್ಟದಿಂದ ನೀನು ಪ್ರಸನ್ನಳಾಗಿ ದರ್ಶನವನ್ನು ಕೊಟ್ಟಿರುವಿ. ನೀನು ಅನುಗ್ರಹಿಸುವುದಾದರೆ ನನ್ನ ಮನಸ್ಸನ್ನು ಯಾವಾಗಲೂ ಜಪದಲ್ಲಿಯೇ ರಮಿಸುವಂತೆ ಮಾಡು ಎಂದು ಪ್ರಾರ್ಥಿಸಿದನು.
ಸಾವಿತ್ರೀ
ಕಿಂ ಪ್ರಾರ್ಥಯಸಿ ವಿಪ್ರರ್ಷೇ ಕಿಂ ಚೇಷ್ಟಂ ಕರವಾಣಿ ತೇ |
ಪ್ರಬ್ರೂಹಿ ಜಪತಾಂ ಶ್ರೇಷ್ಠ ಸರ್ವಂ ತತ್ತೇ ಭವಿಷ್ಯತಿ ॥ 12 ॥
ಸಾವಿತ್ರೀ ಬ್ರಹ್ಮರ್ಷಿಯೇ, ನಿನ್ನ ಇಷ್ಟಾರ್ಥಗಳು ಏನೆಂದು ಹೇಳು. ನಿನ್ನ ಜಪದ ಉದ್ದಿಷ್ಟವು ಯಾವುದಿದ್ದರೂ ಅವೆಲ್ಲವೂ ಕೈಗೂಡುತ್ತವೆ. ಅದೆಲ್ಲವನ್ನು ನೆರವೇರಿಸುತ್ತೇನೆ.
ಭೀಷ್ಮಃ
ಇತ್ಯುಕ್ತಃ ಸ ತದಾ ದೇವ್ಯಾ ವಿಪ್ರಃ ಪ್ರೋವಾಚ ಧರ್ಮವಿತ್ |
ಜಪ್ಯಂ ಪ್ರತಿ ಮಮೇಚ್ಛೇಯಂ ವರ್ಧತ್ವಿತಿ ಪುನಃ ಪುನಃ ॥ 13 ॥
ಮನಸಶ್ಚ ಸಮಾಧಿರ್ಮೇ ವರ್ಧೇತಾಹರಹಃ ಶುಭೇ |
ತತ್ತಥೇತಿ ತತೋ ದೇವೀ ಮಧುರಂ ಪ್ರತ್ಯಭಾಷತ ॥ 14 ॥
ಇದಂ ಚೈವಾಪರಂ ಪ್ರಾಹ ದೇವೀ ತತ್ ಪ್ರಿಯಕಾಮ್ಯಯಾ |
ನಿರಯಂ ನೈವ ಯಾತಾಸಿ ಯತ್ರ ಯಾತಾ ದ್ವಿಜರ್ಷಭಾಃ ॥ 15 ॥
ಭೀಷ್ಮ ಈ ರೀತಿಯಾಗಿ ಗಾಯತ್ರೀದೇವಿಯೇ ಹೇಳಿದರೂ ಧರ್ಮಜ್ಞನಾದ ಬ್ರಾಹ್ಮಣನು, ಜಪದಲ್ಲಿಯೇ ನನಗಿರುವ ಆಸೆಯು ಮತ್ತೂ ಮತ್ತೂ ವೃದ್ಧಿಯನ್ನು ಹೊಂದುತ್ತಿರಲಿ. ಮನಸ್ಸಿನ ಸಮಾಧಿ ದೆಸೆಯು ದಿನದಿನಕ್ಕೆ ವರ್ಧಿಸುತ್ತಿರಲಿ ಎಂದು ಪ್ರಾರ್ಥಿಸಿದನು. ಅದಕ್ಕೆ ಉತ್ತರವಾಗಿ ಸಾವಿತ್ರಿಯು ನಿನ್ನ ಉದ್ದೇಶದಂತೆಯೇ ಆಗಲಿ ಎಂದು ಹೇಳಿ, ಪುನಃ ಮಧುರವಾದ ಮಾತನ್ನು ಬ್ರಾಹ್ಮಣನಿಗೆ ಸಂತೋಷವಾಗಲೆಂದು ಹೇಳಿದಳು. ಮಹರ್ಷಿಯೇ, ನೀನು ಇನ್ನು ಮೇಲೆ ನಿನ್ನಂತಹ ಬ್ರಾಹ್ಮಣನು ಹೋಗುವ ನರಕಕ್ಕೆ ಹೋಗಲಾರೆ.
ಯಾಸ್ಯಸಿ ಬ್ರಹ್ಮಣಃ ಸ್ಥಾನಮನಿಮಿತ್ತಮನಿಂದಿತಮ್ |
ಸಾಧಯೇ ಭವಿತಾ ಚೈತದ್ ಯತ್ತ್ವಯಾಹಮಿಹಾರ್ಥಿತಾ ॥ 16 ॥
ನೀನು ಸ್ವತಃಸಿದ್ಧವೂ, ದೋಷರಹಿತವೂ ಆಗಿರುವ ಅನಿಂದಿತವಾದ ಬ್ರಹ್ಮಸ್ಥಾನವನ್ನೇ ಹೊಂದುತ್ತಿ. ನೀನು ಜಪದ ಅಭಿವೃದ್ಧಿಯನ್ನೇ ಕೇಳಿರುವುದರಿಂದ ಸಂತುಷ್ಟಳಾದ ನಾನು ನಿನಗೆ ವೈಕುಂಠ ಪದವಿಯನ್ನೇ ಸೇರುವಂತೆ ಅನುಗ್ರಹಿಸಿರುತ್ತೇನೆ. ನನ್ನನ್ನು ಕುರಿತು ನೀನು ಏನು ಪ್ರಾರ್ಥಿಸಿದೆಯೋ ಅದು ನಿನಗೆ ಸಿದ್ಧಿಸಲಿ.
ನಿಯತೋ ಜಪ ಚೈಕಾಗ್ರೋ ಧರ್ಮಸಾತ್ವಂ ಸಮುಪೈಷ್ಯತಿ |
ಕಾಲೋ ಮೃತ್ಯುರ್ಯಮಶ್ಚೈವ ಸಮಾಯಾಸ್ಯಂತಿ ತೇಽಂತಿಕಮ್ |
ಭವಿತಾ ಚ ವಿವಾದೋಽತ್ರ ತವ ತೇಷಾಂ ಚ ಧರ್ಮತಃ ॥ 17 ॥
ನೀನು ಏಕಾಗ್ರಚಿತ್ತದಿಂದ ಜಪವನ್ನಾಚರಿಸುತ್ತಿರು. ಧರ್ಮವು ತಾನಾಗಿ ಬಂದು ನಿನ್ನನ್ನು ಸೇರುತ್ತದೆ. ಕಾಲನೂ, ಮೃತ್ಯುವೂ, ಯಮನೂ ನಿನ್ನ ಬಳಿ ಬರುತ್ತಾರೆ. ನಿನಗೂ ಅವರಿಗೂ ಧರ್ಮವಿಷಯದಲ್ಲಿ ವಿವಾದವು ನಡೆಯುತ್ತದೆ.
ಏವಮುಕತ್ವ ಭಗವತೀ ಜಗಾಮ ಭವನಂ ಸ್ವಕಮ್ |
ಬ್ರಾಹ್ಮಣೋಽಪಿ ಜಪನ್ನಾಸ್ತೇ ದಿವ್ಯಂ ವರ್ಷಶತಂ ತದಾ ॥ 18 ॥
ಧರ್ಮರಾಜನೇ, ಭಗವತಿಯಾದ ಗಾಯತ್ರೀದೇವಿಯು ಈ ರೀತಿಯಾಗಿ ಬ್ರಾಹ್ಮಣನನ್ನು ಕುರಿತು ಹೇಳಿ ತನ್ನ ಸ್ಥಾನಕ್ಕೆ ಹೊರಟುಹೋದಳು. ಈಚೆ ಬ್ರಾಹ್ಮಣನು ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ನೂರು ದಿವ್ಯವರ್ಷಗಳವರೆಗೆ ಜಪದಲ್ಲಿಯೇ ಆಸಕ್ತನಾಗಿದ್ದನು.
ಸಮಾಪ್ತೇ ನಿಯಮೇ ತಸ್ಮಿನ್ನಥ ವಿಪ್ರಸ್ಯ ಧೀಮತಃ |
ಸಾಕ್ಷಾತ್ ಪ್ರೀತಸ್ತದಾ ಧರ್ಮೋ ದರ್ಶಯಾಮಾಸ ತಂ ದ್ವಿಜಮ್ ॥ 19
ಅವನ ಜಪನಿಯಮವು ಮುಗಿಯುವ ಕಾಲಕ್ಕೆ ಸರಿಯಾಗಿ ಧರ್ಮದೇವನು ಅವನ ಮುಂದೆ ಪ್ರತ್ಯಕ್ಷನಾದನು.
ಧರ್ಮಃ
ದ್ವಿಜಾತೇ ಪಶ್ಯ ಮಾಂ ಧರ್ಮಮಹಂ ತ್ವಾಂ ದ್ರಷ್ಟುಮಾಗತಃ |
ಜಪ್ಯಸ್ಯ ಚ ಫಲಂ ಯತ್ತೇ ಸಂಪ್ರಾಪ್ತಂ ತಚ್ಚ ಮೇ ಶೃಣು ॥ 20 ॥
ಧರ್ಮ ಎಲೈ ಬ್ರಾಹ್ಮಣನೇ, ನಾನು ಧರ್ಮದೇವತೆಯು. ನಿನ್ನನ್ನು ನೋಡುವುದಕ್ಕಾಗಿ ಬಂದಿದ್ದೇನೆ. ನೀನು ಮಾಡಿದ ಜಪಕ್ಕೆ ಫಲವು

ಸಿದ್ಧಿಸಿದೆ. ಸಿದ್ಧಿಸಿದ ಆ ಜಪದ ಫಲವೇನೆಂಬುದನ್ನು ಕೇಳಿಸಿಕೊ.
ಜಿತಾ ಲೋಕಾಸ್ತ್ವಯಾ ಸರ್ವೇ ಯೇ ದಿವ್ಯಾ ಯೇ ಚ ಮಾನುಷಾಃ |
ದೇವಾನಾಂ ನಿರಯಾನ್ ಸಾಧೋ ಸರ್ವಾನುತ್ಕ್ರಮ್ಯ ಯಾಸ್ಯಸಿ ॥ 21 ॥
ನಿನ್ನ ಜಪದ ಫಲದಿಂದ ದಿವ್ಯ ಮಾನುಷಲೋಕಗಳನ್ನೆಲ್ಲಾ ಜಯಿಸಿರುವೆ. ದೇವತೆಗಳ ನಿರಯ ಎನಿಸಿದ ಸ್ಥಾನಗಳನ್ನೆಲ್ಲಾ ಮೀರಿ ಉತ್ತಮವಾದ ಮೇಲಿನ ಸ್ಥಾನಕ್ಕೆ ನೀನು ಹೋಗುತ್ತಿ.
ಪ್ರಾಣತ್ಯಾಗಂ ಕುರು ಮುನೇ ಗಚ್ಛ ಲೋಕಾನ್ ಯಥೇಪ್ಸಿತಾನ್ |
ತ್ಯಕ್ತ್ವಾತ್ಮನಃ ಶರೀರಂ ಚ ತತೋ ಲೋಕಾನವಾಪ್ಸ್ಯಸಿ ॥ 22 ॥
ಇನ್ನು ನೀನು ಪ್ರಾಣವನ್ನು ಬಿಟ್ಟು ಹೊರಡು. ನೀನು ಇಷ್ಟಪಟ್ಟ ಲೋಕಗಳಿಗೆಲ್ಲ ಹೋಗಬಹುದು. ನೀನು ನಿನ್ನ ಶರೀರವನ್ನು ತ್ಯಜಿಸಿದ ಕೂಡಲೇ ಪುಣ್ಯಲೋಕವನ್ನು ಹೊಂದುತ್ತಿ ಎಂದನು.
ಬ್ರಾಹ್ಮಣಃ
ಕೃತಂ ಲೋಕೈರ್ಹಿ ಮೇ ಧರ್ಮ ಗಚ್ಛ ಚ ತ್ವಂ ಯಥಾಸುಖಮ್ |
ಬಹುದುಃಖಸುಖಂ ದೇಹಂ ನೋತ್ಸೃಜೇಯಮಹಂ ವಿಭೋ ॥ 23 ॥
ಬ್ರಾಹ್ಮಣ ಧರ್ಮನೇ, ನೀನು ಹೇಳಿದ ಲೋಕಗಳೇನೂ ನನಗೆ ಬೇಕಾಗಿರುವುದಿಲ್ಲ. ನೀನು ಬಂದ ದಾರಿಯನ್ನು ಹಿಡಿದು ಹೊರಡು. ಅನೇಕ ಸುಖ-ದುಃಖಗಳನ್ನು ಸೈರಿಸಿದ ಈ ದೇಹವನ್ನು ನಾನು ಬಿಡಲಾರೆನು ಎಂದನು.
ಧರ್ಮಃ
ಅವಶ್ಯಂ ಭೋಃ ಶರೀರಂ ತೇ ತ್ಯಕ್ತವ್ಯಂ ಮುನಿಪುಂಗವ |
ಸ್ವರ್ಗ ಆರೋಹ್ಯತಾಂ ವಿಪ್ರ ಕಿಂ ವಾ ತೇ ರೋಚತೇಽನಘ ॥ 24 ॥
ಧರ್ಮ ಓ ಬ್ರಾಹ್ಮಣನೇ, ನೀನು ಮನಸ್ಸನ್ನು ದೃಢಮಾಡಿಕೊಂಡು ಅವಶ್ಯವಾಗಿ ಈ ಶರೀರವನ್ನು ಬಿಟ್ಟುಬಿಡು. ಇದರ ಬಂಧವು ನಿನಗೇಕೆ? ಹಠ ಹಿಡಿಯಬೇಡ, ಸ್ವರ್ಗವನ್ನು ಸೇರುವವನಾಗು. ಇಲ್ಲದಿದ್ದಲ್ಲಿ ನಿನ್ನ ಇಷ್ಟವೇನೆಂಬುದನ್ನಾದರೂ ನನಗೆ ತಿಳಿಸು ಎಂದನು.
ಬ್ರಾಹ್ಮಣಃ
ನ ರೋಚಯೇ ಸ್ವರ್ಗವಾಸಂ ವಿನಾ ದೇಹಾದಹಂ ವಿಭೋ |
ಗಚ್ಛ ಧರ್ಮ ನ ಮೇ ಶ್ರದ್ಧಾ ಸ್ವರ್ಗಂ ಗಂತುಂ ವಿನಾತ್ಮನಾ ॥ 25 ॥
ಬ್ರಾಹ್ಮಣ ಧರ್ಮನೇ, ನೀನು ಈ ಶರೀರವನ್ನು ಬಿಡಬೇಕೆಂದು ಏಕೆ ನಿರ್ಬಂಧಿಸುವೆ? ನನಗೆ ಸ್ವರ್ಗವೂ ಇಷ್ಟವಾಗುವುದಿಲ್ಲ. ಧರ್ಮಸಾಧನವಾದ ಈ ಶರೀರವೇ ಇಷ್ಟವಾಗಿದೆ. ಧರ್ಮನೇ, ನೀನು ಹೊರಡು. ಈ ಶರೀರವನ್ನು ತ್ಯಜಿಸಿ ಸ್ವರ್ಗಕ್ಕೆ ಹೋಗುವ ಶ್ರದ್ಧೆಯು ನನಗಿರುವುದಿಲ್ಲ.
ಧರ್ಮಃ
ಅಲಂ ದೇಹೇ ಮನಃ ಕೃತ್ವಾ ತ್ಯಕ್ತತ್ವ ದೇಹಂ ಸುಖೀ ಭವ |
ಗಚ್ಛ ಲೋಕಾನರಜಸೋ ಯತ್ರ ಗತ್ವಾ ನ ಶೋಚಸಿ ॥ 26 ॥
ಧರ್ಮ ಬ್ರಾಹ್ಮಣನೇ, ಈ ಶರೀರಕ್ಕೆ ಆಸೆಪಡುವುದರಿಂದ ಏನೂ ಪ್ರಯೋಜನವಿಲ್ಲ. ಈ ಶರೀರವನ್ನು ಬಿಟ್ಟರೆ ನಿನಗೆ ಸುಖವಿದೆ. ರಜೋಗುಣ ರಹಿತವಾದ ಲೋಕಗಳಿಗೆ ಹೋಗಿ ನೀನು ಅಲ್ಲಿ ದುಃಖಸಂಬಂಧವೇ ಇಲ್ಲದೆ ಇರಬಹುದು.
ಬ್ರಾಹ್ಮಣಃ
ರಮೇ ಜಪನ್ಮಹಾಭಾಗ ಕೃತಂ ಲೋಕೈಃ ಸನಾತನೈಃ |
ಸಶರೀರೇಣ ಗಂತವ್ಯೋ ಮಯಾ ಸ್ವರ್ಗೋ ನ ವಾ ವಿಭೋ ॥ 27 ॥
ಬ್ರಾಹ್ಮಣ ಮಹಾಭಾಗನೇ, ನನಗೆ ಈ ಜಪದಲ್ಲಿಯೇ ಎಲ್ಲಕ್ಕಿಂತಲೂ ಅಧಿಕವಾದ ಸಂತೋಷವಿರುತ್ತದೆ. ನನಗೆ ಬ್ರಾಹ್ಮಣ ಶರೀರವನ್ನು ಬಿಟ್ಟು ಯಾವ ಲೋಕಗಳೂ ಬೇಕಾಗುವುದಿಲ್ಲ. ಈ ಶರೀರದೊಡನೆಯೇ ಸ್ವರ್ಗಕ್ಕೆ ಹೋಗ- ಬಹುದಾಗಿದ್ದರೆ ಹೇಳು. ಬೇರೆ ವಿಧವನ್ನು ನಾನು ಒಪ್ಪುವುದಿಲ್ಲ.
ಧರ್ಮಃ
ಯದಿ ತ್ವಂ ನೇಚ್ಛಸಿ ತ್ಯಕ್ತುಂ ಶರೀರಂ ಪಶ್ಯ ವೈ ದ್ವಿಜ |
ಏಷ ಕಾಲಸ್ತಥಾ ಮೃತ್ಯುರ್ಯಮಶ್ಚ ತ್ವಾಮುಪಾಗತಾಃ ॥ 28 ॥
ಧರ್ಮ ಬ್ರಾಹ್ಮಣನೇ, ನಿನಗೇನೋ ಈ ಶರೀರದಲ್ಲಿ ಅಪಾರಸ್ನೇಹವಿರುವುದು. ಅದನ್ನು ನೀನು ಬಿಡದೆ ಹೋದರೆ ಈಗಲೇ ಕಾಲವೂ, ಮೃತ್ಯುವೂ, ಯಮನೂ ನಿನ್ನ ಬಳಿಗೆ ಬರುತ್ತಾರೆ ಎಂದು ಹೇಳಿದನು.
ಭೀಷ್ಮಃ
ಅಥ ವೈವಸ್ವತಃ ಕಾಲೋ ಮೃತ್ಯುಶ್ಚ ತ್ರಿತಯಂ ವಿಭೋ |
ಬ್ರಾಹ್ಮಣಂ ತಂ ಮಹಾಭಾಗಮುಪಾಗಮ್ಯೇದಮಬ್ರುವನ್ ॥ 29 ॥
ಭೀಷ್ಮ ಧರ್ಮನು ಹೇಳಿದಂತೆ ವಿವಸ್ವಾನ್ ಎನಿಸಿದ ಕಾಲನು, ಮೃತ್ಯುವು, ಯಮನು ಎಂಬ ಮೂವರು ಆ ಬ್ರಾಹ್ಮಣನಿಗೆ ಕಾಣಿಸಿಕೊಂಡರು. ಅವರು ಮಹಾಭಾಗನಾದ ಬ್ರಾಹ್ಮಣನ ಸಮೀಪಕ್ಕೆ ಆಗಮಿಸಿ ಅವನನ್ನು ಕುರಿತು ಹೀಗೆ ಹೇಳಿದರು.
ತಪಸೋಽಸ್ಯ ಸುತಪ್ತಸ್ಯ ತಥಾ ಸುಚರಿತಸ್ಯ ಚ |
ಫಲಪ್ರಾಪ್ತಿಸ್ತವ ಶ್ರೇಷ್ಠಾ ಯಮೋಽಹಂ ತ್ವಾಮುಪಬ್ರುವೇ ॥ 30 ॥
ವಿಪ್ರೋತ್ತಮನೇ, ನೀನು ತಪಸ್ಸನ್ನು ಬಹಳ ಸಂತೋಷದಿಂದ ನಡೆಸಿ ಚೆನ್ನಾಗಿ ದೇಹವನ್ನು ದಂಡಿಸಿ ಉತ್ತಮ ಚರಿತನಾಗಿರುವಿ.

ಇಂತಹ ತಪಸ್ಸಿಗೆ ಉತ್ತಮವಾದ ಫಲವು ನಿನಗೆ ಲಭಿಸಿದೆ. ನಾನು ಯಮನು. ನಿನ್ನ ಅರ್ಹತೆಯನ್ನು ತಿಳಿದು ಹೇಳುತ್ತಿದ್ದೇನೆ ಎಂದನು.
ಯಥಾವದಸ್ಯ ಜಪ್ಯಸ್ಯ ಫಲಂ ಪ್ರಾಪ್ತಸ್ತ್ವಮುತ್ತಮಮ್ |
ಕಾಲಸ್ತೇ ಸ್ವರ್ಗಮಾರೋಢುಂ ಕಾಲೋಽಹಂ ತ್ವಾಮುಪಾಗತಃ ॥ 31 ॥
ಬಳಿಕ ಕಾಲನು ಆ ಬ್ರಾಹ್ಮಣನನ್ನು ಕುರಿತು, ಬ್ರಾಹ್ಮಣನೇ ನಿನ್ನ ಜಪಕ್ಕೆ ಉತ್ತಮವಾದ ಫಲವು ಲಭಿಸಿದೆ. ಸ್ವರ್ಗವನ್ನು ಹೊಂದಲು ಇದು ಯೋಗ್ಯಕಾಲವು. ಕಾಲನಾದ ನಾನೇ ಬಂದು ನಿನ್ನನ್ನು ಕುರಿತು ಈ ವಿಷಯವನ್ನು ತಿಳಿಸುತ್ತಿದ್ದೇನೆ ಎಂದನು.
ಮೃತ್ಯುಂ ಮಾ ವಿದ್ಧಿ ಧರ್ಮಜ್ಞ ರೂಪಿಣಂ ಸ್ವಯಮಾಗತಮ್ |
ಕಾಲೇನ ಚೋದಿತಂ ವಿಪ್ರ ತ್ವಾಮಿತೋ ನೇತುಮದ್ಯ ವೈ ॥ 32 ॥
ಬಳಿಕ ಧರ್ಮಜ್ಞನೇ, ನಾನು ಮೃತ್ಯುವೆಂದು ತಿಳಿ. ನಿನ್ನನ್ನು ಇಲ್ಲಿಂದ ಕರೆದುಕೊಂಡು ಈಗಲೇ ಹೊರಡಲು ಕಾಲನು ನನ್ನನ್ನು ನಿಯಮಿಸಿ ಕಳುಹಿಸಿದ್ದಾನೆ ಎಂದು ಹೇಳಿದನು.
ಬ್ರಾಹ್ಮಣಃ
ಸ್ವಾಗತಂ ಸೂರ್ಯಪುತ್ರಾಯ ಕಾಲಾಯ ಚ ಮಹಾತ್ಮನೇ |
ಮೃತ್ಯವೇ ಚಾಥ ಧರ್ಮಾಯ ಕಿಂ ಕಾರ್ಯಂ ಕರವಾಣಿ ವಃ ॥ 33 ॥
ಬ್ರಾಹ್ಮಣ ಸೂರ್ಯಪುತ್ರನಾದ ಯಮನೇ, ಮಹಾತ್ಮನಾದ ಕಾಲಪುರುಷನೇ, ಮೃತ್ಯುದೇವತೆಯೇ, ನಿಮಗೆ ಸ್ವಾಗತವು. ನಿಮಗೆ ಆಗಬೇಕಾದ ಕಾರ್ಯವೇನಿದ್ದರೂ ನಾನು ಸಿದ್ಧನಿದ್ದೇನೆ. ಏನು ಮಾಡಲಿ ಎಂದು ತಿಳಿಸಿರಿ.
ಭೀಷ್ಮಃ
ಅರ್ಘ್ಯಂ ಪಾದ್ಯಂ ಚ ದತ್ತ್ವಾ ಸ ತೇಭ್ಯಸ್ತತ್ರ ಸಮಾಗಮೇ |
ಅಬ್ರುವೀತ್ ಪರಮಪ್ರೀತಃ ಸ್ವಶಕ್ತ್ಯಾ ಕಿಂ ಕರೋಮಿ ವಃ ॥ 34 ॥
ಭೀಷ್ಮ ಈ ರೀತಿಯಾಗಿ ಹೇಳಿ ಬ್ರಾಹ್ಮಣನು ಆ ಮೂವರಿಗೆ ಅರ್ಘ್ಯ-ಪಾದ್ಯಗಳನ್ನು ಕೊಟ್ಟನು. ಅವರನ್ನು ಕಂಡು ಸಂತುಷ್ಟನಾಗಿ ಬ್ರಾಹ್ಮಣನು, ನನ್ನ ಶಕ್ತಿಗನುಗುಣವಾಗಿ ನಿಮ್ಮ ಇಷ್ಟವನ್ನು ನೆರವೇರಿಸಲು ಸಿದ್ಧನಾಗಿದ್ದೇನೆ. ನನ್ನಿಂದೇನಾಗಬೇಕು? ಎಂದು ಕೇಳಿದನು.

ತಸ್ಮಿನ್ನೇವಾಥ ಕಾಲೇ ತು ತೀರ್ಥಯಾತ್ರಾಮುಪಾಗತಃ |
ಇಕ್ಷ್ವಾಕುರಗಮತ್ತತ್ರ ಸಮೇತಾ ಯತ್ರ ತೇ ವಿಭೋ ॥ 35 ॥
ಈ ರೀತಿಯಾಗಿ ಹೇಳುತ್ತಿರುವಾಗಲೇ ತೀರ್ಥಯಾತ್ರೆಗಾಗಿ ಸಂಚರಿಸುತ್ತಿದ್ದ ಇಕ್ಷ್ವಾಕು ಮಹಾರಾಜನು ಆ ನಾಲ್ವರೂ ಸೇರಿದ್ದ ಸ್ಥಳಕ್ಕೆ ಆಗಮಿಸಿದನು.
ಸರ್ವಾನೇವ ತು ರಾಜರ್ಷಿಃ ಸಂಪೂಜ್ಯಾಭಿಪ್ರಣಮ್ಯ ಚ |
ಕುಶಲಪ್ರಶ್ನಮಕರೋತ್ ಸರ್ವೇಷಾಂ ರಾಜಸತ್ತಮಃ ॥ 36 ॥
ಆ ರಾಜನು ಅವರೆಲ್ಲರಿಗೂ ನಮಸ್ಕರಿಸಿ ಅವರನ್ನು ಪೂಜಿಸಿ ಅವರ ಬಳಿ ಕುಶಲ ಪ್ರಶ್ನೆಯನ್ನು ಕೇಳಿದನು.
ತಸ್ಮೈ ಸೋಽಥಾಸನಂ ದತ್ತ್ವಾ ಪಾದ್ಯಮರ್ಘ್ಯಂ ತಥೈವ ಚ |
ಅಬ್ರುವೀದ್ ಬ್ರಾಹ್ಮಣೋ ವಾಕ್ಯಂ ಕೃತ್ವಾ ಕುಶಲಸಂವಿದಮ್ ॥ 37 ॥
ಬಳಿಕ ಆ ಬ್ರಾಹ್ಮಣನು ಇಕ್ಷ್ವಾಕು ಮಹಾರಾಜನಿಗೆ ಅರ್ಘ್ಯ-ಪಾದ್ಯಾದಿಗಳನ್ನು ನೀಡಿ ಸತ್ಕರಿಸಿ, ಕುಶಲಪ್ರಶ್ನೆಯನ್ನು ಮಾಡಿದನು.
ಸ್ವಾಗತಂ ತೇ ಮಹಾರಾಜ ಬ್ರೂಹಿ ಯದ್ ಯದಿಹೇಚ್ಛಸಿ |
ಸ್ವಶಕ್ತ್ಯಾ ಕಿಂ ಕರೋಮೀಹ ತದ್ಭವಾನ್ ಪ್ರಬ್ರವೀತು ಮೇ ॥ 38 ॥
ಮಹಾರಾಜನೇ, ನಿನಗೆ ಸ್ವಾಗತವು. ನೀನು ಬಂದ ಉದ್ದೇಶವೇನು? ನನ್ನ ಶಕ್ತಿಗನುಗುಣವಾಗಿ ನಿನಗೆ ಮಾಡಬೇಕಾದ ಕಾರ್ಯವೇನು ಎಂದು ತಿಳಿಸು ಎಂದು ರಾಜನಿಗೆ ಹೇಳಿದನು.
ರಾಜಾ
ರಾಜಾಹಂ ಬ್ರಾಹ್ಮಣಶ್ಚ ತ್ವಂ ಯದಿ ಷಟ್ಕರ್ಮಸಂಸ್ಥಿತಃ |
ದದಾಮಿ ವಸು ಕಿಂಚಿತ್ತೇ ಪ್ರಾರ್ಥಿತಂ ತದ್ ವದಸ್ವ ಮೇ ॥ 39 ॥
ರಾಜಾ ವಿಪ್ರೋತ್ತಮನೇ, ನೀನು ದಾನ, ಪ್ರತಿಗ್ರಹ ಮೊದಲಾದ ಆರು ಕರ್ಮಗಳಿಗೆ ಅಧಿಕಾರವುಳ್ಳ ಬ್ರಾಹ್ಮಣನಾಗಿರುವಿ. ನಾನು ಕ್ಷತ್ರಿಯನಾದ ರಾಜ. ಆದ್ದರಿಂದ ನಿನ್ನಲ್ಲಿ ನಾನು ಪಡೆಯಬೇಕಾದುದೇನೂ ಇರುವುದಿಲ್ಲ. ನಿನಗೆ ಬೇಕಾದರೆ ಧನವನ್ನು ಕೊಡುತ್ತೇನೆ, ಕೇಳು ಅಥವಾ ನಿನಗೆ ಇಷ್ಟವಾದುದನ್ನು ಕೇಳು ಎಂದು ಹೇಳಿದನು.
ಬ್ರಾಹ್ಮಣಃ
ದ್ವಿವಿಧಾ ಬ್ರಾಹ್ಮಣಾ ರಾಜನ್ ಧರ್ಮಶ್ಚ ದ್ವಿವಿಧಃ ಸ್ಮೃತಃ |
ಪ್ರವೃತ್ತಶ್ಚ ನಿವೃತ್ತಶ್ಚ ನಿವೃತ್ತೋಽಸ್ಮಿ ಪ್ರತಿಗ್ರಹಾತ್ ॥ 40 ॥
ಬ್ರಾಹ್ಮಣ ರಾಜೇಂದ್ರನೇ, ನೀನು ಹೇಳುವುದು ಸರಿಯೇ. ಆದರೆ ಬ್ರಾಹ್ಮಣರಲ್ಲಿ ಎರಡು ವಿಧವಿದೆ. ಅವರ ಧರ್ಮದಲ್ಲಿ ಪ್ರವೃತ್ತಿ, ನಿವೃತ್ತಿಗಳೆಂಬ ಭೇದವಿದೆ. ನಾನಾದರೂ ಪ್ರತಿಗ್ರಹಾದಿಗಳನ್ನೆಲ್ಲಾ ಬಿಟ್ಟಿರುವ ನಿವೃತ್ತಿಧರ್ಮದಲ್ಲಿರುವ ಬ್ರಾಹ್ಮಣನಾಗಿದ್ದೇನೆ.
ತೇಭ್ಯಃ ಪ್ರಯಚ್ಛ ದಾನಾನಿ ಯೇ ಪ್ರವೃತ್ತಾ ನರಾಧಿಪ |
ಅಹಂ ನ ಪ್ರತಿಗೃಹ್ಣಾಮಿ ಕಿಮಿಷ್ಟಂ ಕಿಂ ದದಾನಿ ತೇ |
ಬ್ರೂಹಿ ತ್ವಂ ನೃಪತಿಶ್ರೇಷ್ಠ ತಪಸಾ ಸಾಧಯಾಮಿ ಕಿಮ್ ॥ 41 ॥
ರಾಜನೇ, ನೀನು ಕೊಡಲು ಬಯಸಿದರೆ ಪ್ರವೃತ್ತಿಧರ್ಮದಲ್ಲಿ ರತರಾದವರಿಗೆ ನೀಡಬಹುದು. ಅಂತಹವರು ನಿನ್ನಿಂದ ಪ್ರತಿಗ್ರಹವನ್ನು ಹೊಂದಿಯಾರು! ನಾನು ನಿನ್ನಿಂದ ಏನನ್ನೂ ಸ್ವೀಕರಿಸುವುದಿಲ್ಲ. ನನ್ನ ತಪೋಬಲದಿಂದ ನಿನಗೇ ಬೇಕಾದ್ದನ್ನು

ಸಾಧಿಸಿಕೊಡಬಲ್ಲೆ. ರಾಜನೇ ನಿನಗಿಷ್ಟವಾದುದು ಏನೆಂದು ಹೇಳು, ನೀಡುತ್ತೇನೆ ಎಂದು ಹೇಳಿದನು.
ರಾಜಾ
ಕ್ಷತ್ರಿಯೋಽಹಂ ನ ಜಾನಾಮಿ ದೇಹೀತಿ ವಚನಂ ಕ್ವಚಿತ್ |
ಪ್ರಯಚ್ಛ ಯುದ್ಧಮಿತ್ಯೇವಂ ವಾದಿನಃ ಸ್ಮೋ ದ್ವಿಜೋತ್ತಮ ॥ 42 ॥
ರಾಜಾ ಬ್ರಾಹ್ಮಣನೇ, ನಾನು ಕ್ಷತ್ರಿಯನಾಗಿದ್ದೇನೆ. ಕ್ಷತ್ರಿಯನಾದ ನನ್ನ ಬಾಯಿಂದ ದೇಹಿ ಎಂಬ ಶಬ್ದದ ಉಚ್ಚಾರಣೆಯು ಇಲ್ಲಿಯ ತನಕ ಬಂದಿರುವುದಿಲ್ಲ. ನನಗೆ ಏನಾದರೂ ಕೊಡುವವರು ಇದ್ದರೆ ಅವರ ಬಳಿ ಯುದ್ಧವನ್ನೇ ಕೊಡು ಎಂದು ಹೇಳುವುದೊಂದನ್ನೇ ನಾನು ಬಲ್ಲವನಾಗಿದ್ದೇನೆ.
ಬ್ರಾಹ್ಮಣಃ
ತುಷ್ಯಸಿ ತ್ವಂ ಸ್ವಧರ್ಮೇಣ ತಥಾ ತುಷ್ಟಾ ವಯಂ ನೃಪ |
ಅನ್ಯೋನ್ಯಸ್ಯೋತ್ತರಂ ನಾಸ್ತಿ ಯದಿಷ್ಟಂ ತತ್ ಸಮಾಚರ ॥ 43 ॥
ಬ್ರಾಹ್ಮಣ ರಾಜೇಂದ್ರನೇ, ಅದು ಸರಿಯೇ. ನೀನು ಸ್ವಧರ್ಮದಲ್ಲಿ ಸಂತುಷ್ಟನಾಗಿರುವಂತೆ ನಾನೂ ನನ್ನ ಧರ್ಮದಲ್ಲಿ ತೃಪ್ತನಾಗಿದ್ದೇನೆ. ಆದ್ದರಿಂದ ನಮ್ಮಲ್ಲಿ ಉತ್ತರ-ಪ್ರತ್ಯುತ್ತರಗಳಿಗೆ ಅವಕಾಶವೇ ಇರುವುದಿಲ್ಲ. ನಿನಗೆ ಇಷ್ಟಬಂದಂತೆ ನಡೆದುಕೊ ಎಂದನು.
ರಾಜಾ
ಸ್ವಶಕ್ತ್ಯಾಹಂ ದದಾನೀತಿ ತ್ವಯಾ ಪೂರ್ವಂ ಪ್ರಭಾಷಿತಮ್ |
ಯಾಚೇ ತ್ವಾಂ ದೀಯತಾಂ ಮಹ್ಯಂ ಜಪ್ಯಸ್ಯಾಸ್ಯ ಫಲಂ ದ್ವಿಜ ॥ 44 ॥
ರಾಜ ವಿಪ್ರೋತ್ತಮನೇ, ಮೊದಲು ನೀನು ನನಗೆ ನಿನ್ನ ಶಕ್ತ್ಯನುಗುಣವಾಗಿ ನೀಡುತ್ತೇನೆ ಎಂದೆಯಲ್ಲವೆ? ನಿನ್ನ ಬಳಿ ನಾನು ಒಂದನ್ನು ಕೇಳುತ್ತೇನೆ. ನೀನು ಇಲ್ಲಿಯ ತನಕ ಜಪಿಸಿದ ಆ ಜಪದ ಫಲವನ್ನು ನನಗೆ ಕೊಟ್ಟುಬಿಡು ಎಂದನು.
ಬ್ರಾಹ್ಮಣಃ
ಯುದ್ಧಂ ಮಮ ಸದಾ ವಾಣೀ ಯಾಚತೀತಿ ವಿಕತ್ಥಸೇ |
ನ ಚ ಯುದ್ಧಂ ಮಯಾ ಸಾರ್ಧಂ ಕಿಮರ್ಥಂ ಯಾಚಸೇ ಪುನಃ ॥
ಬ್ರಾಹ್ಮಣ ರಾಜನೇ, ನೀನು ಇಷ್ಟರತನಕ ನನ್ನ ಬಾಯಿಂದ ಯುದ್ಧ ಯಾಚನೆ ಹೊರತಾಗಿ ಬೇರೆ ವಿಧವಾದ ದೇಹಿ ಎಂಬ ಯಾಚನೆಯ ಶಬ್ದಗಳು ಹೊರಟಿಲ್ಲ ಎಂದು ಜಂಭದಿಂದ ಹೇಳಿಕೊಂಡಿರುವೆ. ನನ್ನ ಬಳಿ ಯುದ್ಧಕ್ಕೆ ಪ್ರಸಕ್ತಿಯಿಲ್ಲ. ಅದಿಲ್ಲದ ಬಳಿಕ ಪುನಃ ನೀನು ಯಾಕೆ ಯಾಚಿಸುತ್ತಿರುವೆ ಎಂದು ಕೇಳಿದನು.
ರಾಜಾ
ವಾಗ್ವಜ್ರಾ ಬ್ರಾಹ್ಮಣಾಃ ಪ್ರೋಕ್ತಾಃ ಕ್ಷತ್ರಿಯಾ ಬಾಹುಜೀವಿನಃ |
ವಾಗ್ಯುದ್ಧಂ ತದಿದಂ ತೀವ್ರಂ ಮಮ ವಿಪ್ರ ತ್ವಯಾ ಸಹ ॥ 46 ॥
ರಾಜ ಬ್ರಾಹ್ಮಣೋತ್ತಮನೇ, ಬ್ರಾಹ್ಮಣರು ಮಾತಿನಲ್ಲಿ ವಜ್ರಾಯುಧದ ಬಲ ಉಳ್ಳವರು. ಕ್ಷತ್ರಿಯರು ಬಾಹುಬಲದಿಂದ ಜೀವಿಸುವವರು. ಈಗ ನಿನ್ನೊಡನೆ ನನಗೆ ತೀವ್ರವಾದ ವಾಗ್ಯುದ್ಧವೇ ನಡೆದಂತಾಯಿತಲ್ಲವೇ ಎಂದನು.
ಬ್ರಾಹ್ಮಣಃ
ಸೈವಾದ್ಯಾಪಿ ಪ್ರತಿಜ್ಞಾ ಮೇ ಸ್ವಶಕ್ತ್ಯಾ ಕಿಂ ಪ್ರದೀಯತಾಮ್ |
ಬ್ರೂಹಿ ದಾಸ್ಯಾಮಿ ರಾಜೇಂದ್ರ ವಿಭವೇ ಸತಿ ಮಾಚಿರಮ್ ॥ 47 ॥
ಬ್ರಾಹ್ಮಣ ರಾಜನೇ, ಹಾಗೆ ಭಾವಿಸಬೇಡ. ಇದು ನಿಜವಾಗಿ ನನ್ನ ಪ್ರತಿಜ್ಞೆ. ನನ್ನ ಶಕ್ತಿಗೆ ಅನುಸಾರವಾಗಿ ಏನು ಕೊಡಬೇಕೆಂಬುದನ್ನು ಬೇಗನೆ ಹೇಳು. ಕೊಡಲು ಸಾಮರ್ಥ್ಯವಿದ್ದಾಗ ತಡಮಾಡದೆ ಕೊಡಬೇಕೆಂದು ಧರ್ಮವಿದೆ ಎಂದು ಹೇಳಿದನು.
ರಾಜಾ
ಯತ್ತದ್ವರ್ಷಶತಂ ಪೂರ್ಣಂ ಜಪ್ಯಂ ವೈ ಜಪತಾ ತ್ವಯಾ |
ಫಲಂ ಪ್ರಾಪ್ತಂ ತತ್ ಪ್ರಯಚ್ಛ ಮಮ ದಿತ್ಸುರ್ಭವಾನ್ ಯದಿ ॥ 48 ॥
ರಾಜ ಬ್ರಾಹ್ಮಣನೇ, ಹಾಗಿದ್ದಲ್ಲಿ ನೀನು ಸಹಸ್ರ ಸಂವತ್ಸರಗಳಿಂದ ನಡೆಸಿದ ತೀವ್ರವಾದ ಜಪದ ಫಲಗಳನ್ನೇ ನನಗೆ ಕೊಟ್ಟುಬಿಡು. ಕೊಡುವ ಇಚ್ಛೆ ಇದ್ದರೆ ಇದನ್ನು ನಾನು ಬಯಸುತ್ತೇನೆ ಎಂದನು.
ಬ್ರಾಹ್ಮಣಃ
ಪರಮಂ ಗೃಹ್ಯತಾಂ ತಸ್ಯ ಫಲಂ ಯಜ್ಜಪಿತಂ ಮಯಾ |
ಅರ್ಧಂ ತ್ವಮವಿಚಾರೇಣ ಫಲಂ ತಸ್ಯ ಸಮಾಪ್ನುಹಿ ॥ 49 ॥
ಬ್ರಾಹ್ಮಣ ರಾಜನೇ, ಹಾಗಿದ್ದರೆ ನಾನು ಮಾಡಿದ ಜಪದ ಉತ್ತಮ ಫಲ ಯಾವುದೋ ಅದನ್ನು ನೀನು ಸ್ವೀಕರಿಸು. ನನ್ನ ಜಪದ ಫಲದಲ್ಲಿ ಅರ್ಧಭಾಗವನ್ನಾದರೂ ಸ್ವೀಕರಿಸು.
ಅಥವಾ ಸರ್ವಮೇವೇಹ ಜಪ್ಯಕಂ ಮಾಮಕಂ ಫಲಮ್ |
ರಾಜನ್ ಪ್ರಾಪ್ನುಹಿ ಕಾಮಂ ತ್ವಂ ಯದಿ ಸರ್ವಮಿಹೇಚ್ಛಸಿ ॥ 50 ॥
ಅಥವಾ ನನ್ನ ಜಪದ ಫಲನ್ನೆಲ್ಲಾ ಸಂಪೂರ್ಣವಾಗಿ ಬೇಕಾದರೂ ನೀನು ನಿನ್ನ ಇಚ್ಛೆಯಂತೆ ಸ್ವೀಕರಿಸಬಹುದು.
ರಾಜಾ
ಕೃತಂ ಸರ್ವೇಣ ಭದ್ರಂ ತೇ ಜಪ್ಯಂ ಯದ್ಯಾಚಿತಂ ಮಯಾ |
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಕಿಂ ಚ ತಸ್ಯ ಫಲಂ ವದ ॥ 51 ॥
ರಾಜ ಬ್ರಾಹ್ಮಣೋತ್ತಮನೇ, ನಿನಗೆ ಮಂಗಳವಾಗಲಿ. ನಿನ್ನ ಜಪಫಲವೇನೂ ನನಗೆ ಬೇಕಾದುದಿಲ್ಲ. ನಾನು ಹೋಗಿಬರುತ್ತೇನೆ. ಆದರೆ

ನಿನ್ನ ಜಪದ ಫಲವೇನೆಂದು ಮಾತ್ರ ನನಗೆ ತಿಳಿಸಿದರೆ ಸಾಕು.
ಬ್ರಾಹ್ಮಣಃ
ಫಲಪ್ರಾಪ್ತಿಂ ನ ಜಾನಾಮಿ ದತ್ತಂ ಯಜ್ಜಪಿತಂ ಮಯಾ |
ಅಯಂ ಧರ್ಮಶ್ಚ ಕಾಲಶ್ಚ ಯಮೋ ಮೃತ್ಯುಶ್ಚ ಸಾಕ್ಷಿಣಃ ॥ 52 ॥
ಬ್ರಾಹ್ಮಣ ನನಗೆ ಲಭಿಸಿದ ಜಪದ ಫಲವೇನೆಂಬುದನ್ನು ನಾನು ಕಾಣೆನು. ನಾನು ಪಡೆದದ್ದನ್ನು ನಿನಗೆ ಕೊಟ್ಟುಬಿಡುತ್ತೇನೆ. ಇದಕ್ಕೆ ನನ್ನ ಬಳಿ ಇರುವ ಈ ಧರ್ಮ, ಕಾಲ, ಯಮರು, ಮೃತ್ಯುವು ಸಾಕ್ಷಿಯಾಗಿರಲಿ.
ರಾಜಾ
ಅಜ್ಞಾತಮಸ್ಯ ಧರ್ಮಸ್ಯ ಫಲಂ ಮೇ ಕಿಂ ಕರಿಷ್ಯತಿ |
ಪ್ರಾಪ್ನೋತು ತತ್ಫಲಂ ವಿಪ್ರೋ ನಾಹಮಿಚ್ಛೇ ಸಸಂಶಯಮ್ ॥ 53 ॥
ರಾಜ ಬ್ರಾಹ್ಮಣನೇ, ನೀನು ಇಲ್ಲಿಯತನಕ ಅನುಷ್ಠಾನ ಮಾಡಿದ ಧರ್ಮಕ್ಕೆ ಫಲವೇನೆಂಬುದನ್ನೇ ತಿಳಿಯದಿದ್ದ ಬಳಿಕ ಅದನ್ನು ಪಡೆದು ನನಗೇನು ಪ್ರಯೋಜನ? ಅದರ ಫಲವನ್ನು ತಿಳಿಸದಿದ್ದ ಬಳಿಕ ಅದನ್ನು ನೀನೇ ಅನುಭವಿಸು. ಸಂಶಯಾಸ್ಪದವಾದ ಫಲವನ್ನು ನಾನು ಬಯಸುವುದಿಲ್ಲ.
ಬ್ರಾಹ್ಮಣಃ
ನಾದದೇ ಪರದತ್ತಂ ವೈ ದತ್ತಂ ವಾ ಚಾಫಲಂ ಮಯಾ |
ವಾಕ್ಯಂ ಪ್ರಮಾಣಂ ರಾಜರ್ಷೇ ಮಮಾಪಿ ತವ ಚೈವ ಹಿ ॥ 54 ॥
ಬ್ರಾಹ್ಮಣ ರಾಜನೇ, ನೀನು ಆಡಿದ ಮಾತಿಗೆ ತಪ್ಪುತ್ತಿರುವಿ. ಮತ್ತೊಬ್ಬರಿಗೆ ಕೊಟ್ಟದ್ದನ್ನು ನಾನು ಹಿಂದಿರುಗಿ ಸ್ವೀಕರಿಸಲಾರೆನು. ನಮ್ಮಿಬ್ಬರ ಮಾತುಗಳೇ ಇಲ್ಲಿ ಪ್ರಮಾಣವಾಗಿವೆ.
ಸಕೃದಂಶೋ ನಿಪತತಿ ಸಕೃತ್ ಕನ್ಯಾ ಪ್ರದೀಯತೇ |
ಸಕೃದೇವ ದದಾನೀತಿ ತ್ರೀಣ್ಯೇತಾನಿ ಸಕೃತ್ ಸಕೃತ್ |
ನಾಭಿಸಂಧಿರ್ಮಯಾ ಜಾಪ್ಯೇ ಕೃತಪೂರ್ವಃ ಕಥಂಚನ |
ಜಪ್ಯಸ್ಯ ರಾಜಶಾರ್ದೂಲ ಕಥಂ ಜ್ಞಾಸ್ಯಾಮ್ಯಹಂ ಫಲಮ್ ॥ 55 ॥
ರಾಜನೆ, ಭಾಗವನ್ನು ಪಡೆಯುವುದು ಒಂದೇ ಬಾರಿ, ಕನ್ಯೆಯನ್ನು ನೀಡುವುದು ಒಂದೇ ಬಾರಿ, ಕೊಡುವುದೆಂದು ಬಾಯಿಂದ ಆಡುವುದು ಒಂದೇ ಬಾರಿ, ಇವು ಮೂರು ಒಂದೊಂದು ಸಾರಿ ಹೇಳಿದ ಮೇಲೆ ಅದು ನಡೆಯಿತೆಂದೇ ಅರ್ಥ. ನಾನು ಜಪವನ್ನು ಮಾಡುವುದಕ್ಕಿಂತ ಮೊದಲು ಅದರ ಫಲವೇನೆಂದು ಯಾವತ್ತೂ ಚಿಂತಿಸಲಿಲ್ಲ. ಆದ್ದರಿಂದ ನನಗಾದರೂ ಅದು ತಿಳಿಯುವುದು ಹೇಗೆ?
ದದಸ್ವೇತಿ ತ್ವಯಾ ಚೋಕ್ತಂ ದದಾಮೀತಿ ತಥಾ ಮಯಾ |
ನ ವಾಚಂ ದೂಷಯಿಷ್ಯಾಮಿ ಸತ್ಯಂ ರಕ್ಷ ಸ್ಥಿರೋ ಭವ ॥ 56 ॥
ನೀನು ನನಗೆ ಕೊಡು ಎಂದು ಹೇಳಿದಾಗ ನಾನು ಕೊಡುತ್ತೇನೆ ಎಂದು ಹೇಳಿದೆನು. ಆ ಮಾತನ್ನು ನಾನು ಸುಳ್ಳು ಮಾಡಲಾರೆ. ನೀನು ಸತ್ಯವನ್ನು ರಕ್ಷಿಸು. ಸ್ಥಿರವಾಗಿ ನಿಂತು ನನ್ನ ಜಪದ ಫಲವನ್ನು ಸ್ವೀಕರಿಸು.
ಅಥೈವಂ ವದತೋ ಮೇಽದ್ಯ ವಚನಂ ನ ಕರಿಷ್ಯಸಿ |
ಮಹಾನಧರ್ಮೋ ಭವಿತಾ ತವ ರಾಜನ್ ಮೃಷಾಕೃತಃ ॥ 57 ॥
ಒಂದು ವೇಳೆ ನೀನು ಮಾತಿಗೆ ತಪ್ಪಿದರೆ ಅಸತ್ಯದೋಷಕ್ಕೆ ಭಾಗಿಯಾಗುತ್ತಿ. ನಿನಗಾಗಲೀ, ನನಗಾಗಲೀ ಈಗ ಆಡಿದ ಮಾತಿಗೆ ತಪ್ಪುವುದು ಸಮಂಜಸವಲ್ಲ.
ನ ಯುಕ್ತಂ ತು ಮೃಷಾ ವಾಣೀ ತ್ವಯಾ ವಕ್ತುಮರಿಂದಮ |
ತಥಾ ಮಯಾಪ್ಯಭ್ಯಧಿಕಂ ಮೃಷಾ ವಕ್ತುಂ ನ ಶಕ್ಯತೇ ॥ 58 ॥
ಶತ್ರುಸಂಹಾರಕನೇ, ಸುಳ್ಳು ಮಾತನ್ನಾಡುವುದು ನಿನಗೆ ಯೋಗ್ಯವಾದುದಲ್ಲ. ಅದರಂತೆ ನನ್ನಿಂದಲೂ ಧರ್ಮವನ್ನು ಮೀರಿ ಸುಳ್ಳನ್ನು ಹೇಳುವುದು ಶಕ್ಯವಾಗುವುದಿಲ್ಲ.
ಸಂಶ್ರುತಂ ಚ ಮಯಾ ಪೂರ್ವಂ ದದಾನೀತ್ಯವಿಚಾರಿತಮ್ |
ತದ್ ಗೃಹ್ಣೀಷ್ವಾವಿಚಾರೇಣ ಯದಿ ಸತ್ಯೇ ಸ್ಥಿತೋ ಭವಾನ್ ॥ 59 ॥
ನಾನು ಏನೂ ವಿಚಾರ ಮಾಡದೆ ನೀನು ಕೇಳಿದ ಕೂಡಲೇ ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿದೆನು. ನೀನು ಸತ್ಯದಲ್ಲಿ ಸ್ಥಿರವಾಗಿ ನಿಲ್ಲುವವನಾಗಿದ್ದರೆ ವಿಚಾರ ಮಾಡದೆ ಅದನ್ನು ಸ್ವೀಕರಿಸಲೇಬೇಕು.
ಇಹಾಗಮ್ಯ ಹಿ ಮಾಂ ರಾಜಂಜಾಪ್ಯಂ ಫಲಮಯಾಚಥಾಃ |
ತನ್ಮನ್ನಿಸೃಷ್ಟಂ ಗೃಹ್ಣೀಷ್ವ ಭವ ಸತ್ಯೇ ಸ್ಥಿರೋಽಪಿ ಚ ॥ 60 ॥
ಇಲ್ಲಿಗೆ ನನ್ನ ಬಳಿ ಆಗಮಿಸಿ ನೀನು ನನ್ನ ಜಪದ ಫಲವನ್ನು ಬೇಡಿಕೊಂಡಿರುತ್ತಿ. ಅದರಂತೆ ಆ ಜಪದ ಫಲವನ್ನು ಸ್ವೀಕರಿಸು, ನಾನು ಕೊಡುತ್ತೇನೆ ಎಂದು ಹೇಳಿರುತ್ತೇನೆ. ನಾವಿಬ್ಬರೂ ನುಡಿದಂತೆ ನಡೆದುಕೊಳ್ಳಬೇಕು. ಸತ್ಯದಲ್ಲಿ ಸ್ಥಿರವಾಗಿ ನಿಲ್ಲಬೇಕು.
ನಾಯಂ ಲೋಕೋಽಸ್ತಿ ನ ಪರೋ ನ ಚ ಪೂರ್ವಾನ್ ಸ ತಾರಯೇತ್ |
ಕುತ ಏವಾವರಾನ್ ರಾಜನ್ ಮೃಷಾವಾದಪರಾಯಣಃ ॥ 61 ॥
ಸುಳ್ಳನ್ನಾಡುವವರಿಗೆ ಇಹಲೋಕವೂ ಇಲ್ಲ, ಪರಲೋಕವೂ ಇರುವುದಿಲ್ಲ. ಸುಳ್ಳನ್ನಾಡುವ ವ್ಯಕ್ತಿಗಳು ತಮ್ಮ ಪೂರ್ವಜರನ್ನು ಉದ್ಧರಿಸಲಾರರು. ಇನ್ನು ಅವರ ಮುಂದಿನ ಸಂತತಿಗೆ ಸದ್ಗತಿ ಸಿಗುವುದು ಸಾಧ್ಯವೇ ಇರುವುದಿಲ್ಲ.
ನ ಯಜ್ಞಾಧ್ಯಯನೇ ದಾನಂ ನಿಯಮಾಸ್ತಾರಯಂತಿ ಹಿ |

ತಥಾ ಸತ್ಯಂ ಪರೇ ಲೋಕೇ ಯಥಾ ವೈ ಪುರುಷರ್ಷಭ ॥ 62 ॥
ಯಜ್ಞ, ದಾನ, ಅಧ್ಯಯನ, ಶೀಲ ಮೊದಲಾದವು ಯಾವುವೂ ಸದ್ಗತಿಗೆ ಹೇಗೆ ಸಾಧ್ಯವಾಗುತ್ತವೋ ಅದರಂತೆ ಸಾಧನವಾಗಲಾರವು.
ತಪಾಂಸಿ ಯಾನಿ ಚೀರ್ಣಾನಿ ಚರಿಷ್ಯಸಿ ಚ ಯತ್ತಪಃ |
ಸಮಾಃ ಶತೈಃ ಸಹಸ್ರೈಶ್ಚ ತತ್ ಸತ್ಯಾನ್ನ ವಿಶಿಷ್ಯತೇ ॥ 63 ॥
ನೀನು ಇಲ್ಲಿಯತನಕ ನಡೆಸಿದ ತಪಸ್ಸಾಗಲೀ, ಇನ್ನು ಮುಂದೆ ಸಾವಿರಾರು ವರ್ಷಗಳ ಕಾಲ ನಡೆಸುವ ತಪಸ್ಸಾಗಲೀ ಸತ್ಯಕ್ಕಿಂತ ಅತಿಶಯವಾಗಲಾರವು.
ಸತ್ಯಮೇಕಾಕ್ಷರಂ ಬ್ರಹ್ಮ ಸತ್ಯಮೇಕಾಕ್ಷರಂ ತಪಃ |
ಸತ್ಯಮೇಕಾಕ್ಷರೋ ಯಜ್ಞಃ ಸತ್ಯಮೇಕಾಕ್ಷರಂ ಶ್ರುತಮ್ ॥ 64 ॥
ಸತ್ಯವೇ ಪರಬ್ರಹ್ಮ ಎನಿಸಿದೆ. ಸತ್ಯವೇ ಪರಮ ತಪಸ್ಸು ಎನಿಸಿದೆ. ಸತ್ಯವೇ ಪರಮ ಯಜ್ಞ ಎನಿಸಿದೆ. ಸತ್ಯವೇ ಪರಮ ಶ್ರುತವು.
ಸತ್ಯಂ ವೇದೇಷು ಜಾಗರ್ತಿ ಫಲಂ ಸತ್ಯೇ ಪರಂ ಸ್ಮೃತಮ್ |
ಸತ್ಯಾದ್ಧರ್ಮೋ ದಮಶ್ಚೈವ ಸರ್ವಂ ಸತ್ಯೇ ಪ್ರತಿಷ್ಠಿತಮ್ ॥ 65 ॥
ವೇದಗಳಲ್ಲಿ ಸತ್ಯವೇ ಬೆಳಗುತ್ತಿದೆ. ಉತ್ತಮಫಲಗಳು ಸತ್ಯದಲ್ಲಿಯೇ ನೆಲೆಗೊಂಡಿವೆ. ತಪಸ್ಸು, ದಮ, ಧರ್ಮ ಎಲ್ಲವೂ ಸತ್ಯದಲ್ಲಿಯೇ ನೆಲೆಗೊಂಡಿವೆ.
ಸತ್ಯಂ ವೇದಾಸ್ತಥಾಂಗಾನಿ ಸತ್ಯಂ ಯಜ್ಞಸ್ತಥಾ ವಿಧಿಃ |
ವ್ರತಚರ್ಯಾಸ್ತಥಾ ಸತ್ಯಮೋಂಕಾರಃ ಸತ್ಯಮೇವ ಚ ॥ 66 ॥
ವೇದ-ವೇದಾಂಗಗಳು, ಯಜ್ಞಗಳು, ಯಜ್ಞವಿಧಿಗಳು, ವ್ರತಚರ್ಯಗಳು ಎಲ್ಲವೂ ಸತ್ಯದಲ್ಲಿಯೇ ಅಡಕವಾಗಿವೆ. ಸತ್ಯವೇ ಓಂಕಾರವು.
ಪ್ರಾಣಿನಾಂ ಜನನಂ ಸತ್ಯಂ ಸತ್ಯಂ ಸಂತತಿರೇವ ಚ |
ಸತ್ಯೇನ ವಾಯುರಭ್ಯೇತಿ ಸತ್ಯೇನ ತಪತೇ ರವಿಃ ॥ 67 ॥
ಸತ್ಯೇನ ಚಾಗ್ನಿರ್ದಹತಿ ಸ್ವರ್ಗಃ ಸತ್ಯೇ ಪ್ರತಿಷ್ಠಿತಃ |
ಸತ್ಯಂ ಯಜ್ಞಸ್ತಪೋ ವೇದಾಃ ಸ್ತೋಭಾ ಮಂತ್ರಾಃ ಸರಸ್ವತೀ ॥ 68 ॥
ಪ್ರಾಣಿಗಳ ಜನ್ಮಭೂಮಿ ಸತ್ಯವೇ ಆಗಿದೆ. ಪ್ರಾಣಿಗಳ ಸಂತತಿಯು ಸತ್ಯವೇ. ಸತ್ಯದಿಂದಲೇ ಗಾಳಿ ಬೀಸುತ್ತಿದೆ, ಸೂರ್ಯತಪಿಸುತ್ತಿದ್ದಾನೆ, ಅಗ್ನಿಯು ಉರಿಯುತ್ತಿದೆ. ಸತ್ಯದಲ್ಲಿಯೇ ಸ್ವರ್ಗವು ನಿಂತಿದೆ. ಸಾಮಗಾನದಲ್ಲಿ ಹೇಳಲ್ಪಡುವ ಹುಂ, ಹಾ, ವಾ ಇತ್ಯಾದಿ ಸ್ತೋಭ ಎನಿಸಿದ ಪದವಿಶೇಷಗಳು, ಮಂತ್ರಗಳು, ಸರಸ್ವತಿ ಎಲ್ಲರೂ ಸತ್ಯದಲ್ಲಿಯೇ ಸನ್ನಿಹಿತರಾಗಿದ್ದಾರೆ.
ತುಲಾಮಾರೋಪಿತೋ ಧರ್ಮಃ ಸತ್ಯಂ ಚೈವೇತಿ ನಃ ಶ್ರುತಮ್ |
ಸಮಾಂ ಕಕ್ಷಾಂ ಧಾರಯತೋ ಯತಃ ಸತ್ಯಂ ತತೋಽಧಿಕಮ್ ॥ 69 ॥
ಸತ್ಯ, ಧರ್ಮ ಎರಡನ್ನು ತಕ್ಕಡಿಯಲ್ಲಿಟ್ಟು ತೂಗಿದಾಗ ಸತ್ಯವೇ ಭಾರದಿಂದ ಕುಗ್ಗಿತೆಂದು ನಾನು ತಿಳಿದಿದ್ದೇನೆ.
ಯತೋ ಧರ್ಮಸ್ತತಃ ಸತ್ಯಂ ಸರ್ವಂ ಸತ್ಯೇನ ವರ್ಧತೇ |
ಕಿಮರ್ಥಮನೃತಂ ಕರ್ಮ ಕರ್ತುಂ ರಾಜಂಸ್ತ್ವಮಿಚ್ಛಸಿ ॥ 70 ॥
ಧರ್ಮವಿದ್ದಲ್ಲಿ ಸತ್ಯವು. ಸತ್ಯದಿಂದಲೇ ಎಲ್ಲವೂ ವೃದ್ಧಿ ಹೊಂದುತ್ತದೆ. ಹೀಗಿರುವಾಗ ಸತ್ಯವನ್ನೇಕೆ ಬಿಟ್ಟು ನೀನು ಹೋಗುತ್ತಿರುವಿ? ಸತ್ಯವನ್ನು ಬಿಟ್ಟು ಸುಳ್ಳಿನ ಮಾರ್ಗದ ಕರ್ಮವನ್ನು ಯಾಕೆ ಆಚರಿಸಲು ಇಚ್ಛಿಸುತ್ತಿರುವಿ?
ಸತ್ಯೇ ಕುರು ಸ್ಥಿರಂ ಭಾವಂ ಮಾ ರಾಜನ್ನನೃತಂ ಕೃಥಾಃ |
ಕಸ್ಮಾತ್ತ್ವಮನೃತಂ ವಾಕ್ಯಂ ದೇಹೀತಿ ಕುರುಷೇಽಶುಭಮ್ ॥ 71 ॥
ಸತ್ಯದಲ್ಲಿ ಸ್ಥಿರಭಾವವನ್ನು ಹೊಂದು. ರಾಜನೇ, ಅನೃತಕ್ಕೆ ಸ್ಥಾನವನ್ನು ನೀಡಬೇಡ. ದೇಹಿ ಎಂದು ಕೇಳಿದ ಬಳಿಕ ಯಾವ ಕಾರಣದಿಂದ ನೀನು ಅನೃತವಾಕ್ಯವನ್ನು ಉಚ್ಚರಿಸಿ ಆ ಶಬ್ದವನ್ನು ಅಮಂಗಳ ಮಾಡುತ್ತಿರುವಿ?
ಯದಿ ಜಪ್ಯಫಲಂ ದತ್ತಂ ಮಯಾ ನೇಷಿಷ್ಯಸೇ ನೃಪ |
ಸ್ವಧರ್ಮೇಭ್ಯಃ ಪರಿಭ್ರಷ್ಟೋ ಲೋಕಾನನುಚರಿಷ್ಯಸಿ ॥ 72 ॥
ನಾನು ಕೊಟ್ಟದ್ದನ್ನು ನೀನು ಬೇಡವೆಂದು ಹೇಳಿದರೆ ಧರ್ಮಭ್ರಷ್ಟನಾಗುತ್ತಿ. ಉತ್ತಮ ಲೋಕಗಳನ್ನು ಹೊಂದಲು ನೀನು ಅನರ್ಹನಾಗುತ್ತಿ.
ಸಂಶ್ರುತ್ಯ ಯೋ ನ ದಿತ್ಸೇತ ಯಾಚಿತ್ವಾ ಯಶ್ಚ ನೇಚ್ಛತಿ |
ಉಭಾವಾನೃತಿಕಾವೇತೌ ನ ಮೃಷಾ ಕರ್ತುಮರ್ಹಸಿ ॥ 73 ॥
ಕೊಡುತ್ತೇನೆಂದು ಹೇಳಿ ಕೊಡದಿದ್ದವನು, ಕೊಡು ಎಂದು ಕೇಳಿ ಸ್ವೀಕರಿಸದಿದ್ದವನು ಇಬ್ಬರೂ ಅನೃತವಾದಿಗಳೇ ಆಗುತ್ತಾರೆ. ಅಂತಹ ಅನೃತಕ್ಕೆ ನೀನು ಪಾತ್ರನಾಗಬೇಡ.
ರಾಜಾ
ಯೋದ್ಧವ್ಯಂ ರಕ್ಷಿತವ್ಯಂ ಚ ಕ್ಷತ್ರಧರ್ಮಃ ಕಿಲ ದ್ವಿಜ |
ದಾತಾರಃ ಕ್ಷತ್ರಿಯಾಃ ಪ್ರೋಕ್ತಾ ಗೃಹ್ಣೀಯಾಂ ಭವತಃ ಕಥಮ್ ॥ 74 ॥
ರಾಜ ವಿಪ್ರೋತ್ತಮನೇ, ಯುದ್ಧ ಮಾಡುವುದು, ದೇಶ ರಕ್ಷಿಸುವುದು ಕ್ಷತ್ರ ಧರ್ಮ ಎನಿಸಿದೆಯಷ್ಟೆ! ದಾನ ಮಾಡಲು ಅರ್ಹರಾದ ಕ್ಷತ್ರಿಯರು ನಿನ್ನಿಂದ ಸ್ವೀಕರಿಸಲು ಹೇಗೆ ಅರ್ಹರಾಗುತ್ತಾರೆ? ನೀನೇ ಹೇಳು.
ಬ್ರಾಹ್ಮಣಃ
ನ ಛಂದಯಾಮಿ ತೇ ರಾಜನ್ನಪಿ ತೇ ಗೃಹಮಾವ್ರಜಮ್ |
ಇಹಾಗಮ್ಯ ತು ಯಾಚಿತ್ವಾ ನ ಗೃಹ್ಣೀಷೇ ಪುನಃ ಕಥಮ್ ॥ 75 ॥

ಬ್ರಾಹ್ಮಣ ರಾಜನೇ, ನಿನ್ನ ಧರ್ಮಕ್ಕನುಗುಣವಾಗಿ ನಾನು ವರ್ತಿಸಿದೆ. ನಿನ್ನನ್ನು ತೆಗೆದುಕೊಳ್ಳಬೇಕೆಂದು ನಾನೇನು ನಿರ್ಬಂಧಿಸಲಿಲ್ಲ. ನಿನ್ನ ಬಳಿ ಬಂದು ನಾನೇನು ಕೊಡಲು ಬಯಸಲಿಲ್ಲ. ನೀನೇ ಇಲ್ಲಿಗೆ ಆಗಮಿಸಿ ನಿರ್ಬಂಧ ಪೂರ್ವಕವಾಗಿ ಯಾಚಿಸಿ ಈಗ ಬೇಡವೆಂದು ಹೇಳುವುದು ಧರ್ಮವಾಗುತ್ತದೆಯೇ?

ಧರ್ಮಃ

ಅವಿವಾದೋಽಸ್ತು ಯುವಯೋರ್ವಿತ್ತಂ ಮಾಂ ಧರ್ಮಮಾಗತಮ್ |
ದ್ವಿಜೋ ದಾನಫಲೈರ್ಯುಕ್ತೋ ರಾಜಾ ಸತ್ಯಫಲೇನ ಚ ॥ 76 ॥

ಧರ್ಮ ನಿಮ್ಮಿಬ್ಬರಿಗೆ ವೃಥಾ ವಿವಾದವೇಕೆ? ನಾನೇ ಸಾಕ್ಷಾತ್ ಧರ್ಮವೆಂದು ತಿಳಿಯಿರಿ. ಬ್ರಾಹ್ಮಣನಾದ ನಿನಗೆ ದಾನ ಮಾಡಿದ ಫಲವು ಬರುತ್ತದೆ. ರಾಜನಾದ ನಿನಗೆ ಸತ್ಯದಲ್ಲಿ ನೆಲೆಗೊಂಡ ಫಲವು ಉಂಟಾಗಲಿ.

ಸ್ವರ್ಗಃ

ಸ್ವರ್ಗಂ ಮಾಂ ವಿದ್ಧಿ ರಾಜೇಂದ್ರ ರೂಪಿಣಂ ಸ್ವಯಮಾಗತಮ್ |
ಅವಿವಾದೋಽಸ್ತು ಯುವಯೋರುಭೌ ತುಲ್ಯಫಲೌ ಯುವಾಮ್ ॥

ಸ್ವರ್ಗ ರಾಜೇಂದ್ರನೇ, ಪ್ರತ್ಯಕ್ಷವಾಗಿ ಆಗಮಿಸಿದ ನನ್ನನ್ನು ಸ್ವರ್ಗ ಎಂದು ತಿಳಿ. ನಿಮ್ಮಿಬ್ಬರಿಗೆ ವಿವಾದವು ಉಂಟಾಗದಿರಲಿ. ನೀವಿಬ್ಬರೂ ಫಲದಲ್ಲಿ ಸಾಮ್ಯವನ್ನು ಹೊಂದಿರಿ.

ರಾಜಾ

ಕೃತಂ ಸ್ವರ್ಗೇಣ ಮೇ ಕಾರ್ಯಂ ಗಚ್ಛ ಸ್ವರ್ಗ ಯಥಾಸುಖಮ್ |
ವಿಪ್ರೋ ಯದೀಚ್ಛತೇ ದಾತುಂ ಪ್ರಯಚ್ಛತು ಚ ಮೇ ಧನಮ್ ॥ 78 ॥

ರಾಜ ನನಗೆ ಸ್ವರ್ಗದಿಂದ ಆಗಬೇಕಾದುದ್ದೇನೂ ಇಲ್ಲ. ನೀನು ನಿನ್ನ ದಾರಿಯನ್ನು ಹಿಡಿದು ಹೊರಡು. ಈ ಬ್ರಾಹ್ಮಣನು ನನಗೆ ದಾನವನ್ನು ಮಾಡಿ ಅದರಿಂದ ಸ್ವರ್ಗ ಫಲವನ್ನು ಪಡೆಯಬೇಕೆಂದಿದ್ದರೆ ನಾನು ನಡೆಸಿದ ಕರ್ಮಫಲವನ್ನೆಲ್ಲಾ ಅವನಿಗೆ ನೀಡುತ್ತೇನೆ. ಅದರಿಂದ ಅವನು ಸ್ವರ್ಗಕ್ಕೆ ಹೋಗಲಿ.

ಬ್ರಾಹ್ಮಣಃ

ಬಾಲ್ಯೇ ಯದಿ ಸ್ಯಾದಜ್ಞಾನಾನ್ಮಯಾ ಹಸ್ತಃ ಪ್ರಸಾರಿತಃ |
ನಿವೃತ್ತಿಲಕ್ಷಣಂ ಧರ್ಮಮುಪಾಸೇ ಸಂಹಿತಾಂ ಜಪನ್ ॥ 79 ॥

ಬ್ರಾಹ್ಮಣ ಎಲೈ ರಾಜನೇ, ಒಂದು ವೇಳೆ ನಾನು ಬಾಲ್ಯದಲ್ಲಿ ತಿಳಿಯದೆ ಪ್ರತಿಗ್ರಹಕ್ಕಾಗಿ ಕೈ ನೀಡಿದ್ದರೂ ಇರಬಹುದು. ಈಗ ಗಾಯತ್ರೀ ಜಪವನ್ನು ಹಿಡಿದು ನಿವೃತ್ತಿ ಧರ್ಮದಲ್ಲಿ ನಿರತನಾಗಿದ್ದೇನೆ. ನನಗೆ ಯಾವ ಬಯಕೆಗಳೂ ಇರುವುದಿಲ್ಲ.

ನಿವೃತ್ತಂ ಮಾಂ ಚಿರಂ ರಾಜನ್ ವಿಪ್ರಂ ಲೋಭಯಸೇ ಕಥಮ್ |
ಸ್ವೇನ ಕಾರ್ಯಂ ಕರಿಷ್ಯಾಮಿ ತ್ವತ್ತೋ ನೇಚ್ಛೇ ಫಲಂ ನೃಪ |
ತಪಃಸ್ವಾಧ್ಯಾಯಶೀಲೋಽಹಂ ನಿವೃತ್ತಶ್ಚ ಪ್ರತಿಗ್ರಹಾತ್ ॥ 80 ॥

ನಿವೃತ್ತಿ ಧರ್ಮದಲ್ಲಿ ನಿರತನಾಗಿರುವ ನನಗೆ ಪ್ರಲೋಭನೆಗಳನ್ನೇಕೆ ಒಡ್ಡುತ್ತಿರುವಿ? ನನ್ನ ಕಾರ್ಯ ಯಾವುದೋ ಅದನ್ನೇ ನಾನು ನಡೆಸಿದ್ದೇನೆ. ನೀನು ಸಂಪಾದಿಸಿಟ್ಟ ಫಲವನ್ನು ನಾನು ಬಯಸುವುದಿಲ್ಲ. ತಪಸ್ಸು, ಸ್ವಾಧ್ಯಾಯ ಇವುಗಳಲ್ಲೇ ಆಸಕ್ತನಾದ ನಾನು ಪ್ರತಿಗ್ರಹವನ್ನು ಯಾವಾಗಲೋ ಬಿಟ್ಟಿರುತ್ತೇನೆ.

ರಾಜಾ

ಯದಿ ವಿಪ್ರ ನಿಸೃಷ್ಟಂ ತೇ ಜಪ್ಯಸ್ಯ ಫಲಮುತ್ತಮಮ್ |
ಆವಯೋರ್ಯತ್ಫಲಂ ಕಿಂಚಿತ್ ಸಹಿತಂ ನೌ ತದಸ್ತ್ವಿಹ ॥ 81 ॥

ರಾಜ ಎಲೈ ಬ್ರಾಹ್ಮಣನೇ, ನೀನು ನಿನ್ನ ಅನುತ್ತಮವಾದ ಜಪದ ಫಲವನ್ನು ಕೊಡುವುದಾದರೆ ನಾವಿಬ್ಬರು ಸಂಪಾದಿಸಿದ ಫಲಗಳನ್ನು ಒಟ್ಟು ಮಾಡಿ ಹಂಚಿಕೊಳ್ಳುತ್ತೇವೆ. ನಿನ್ನ ಜಪಫಲದಲ್ಲಿ ಅರ್ಧ ನನಗೆ. ನನ್ನ ಕರ್ಮಫಲದಲ್ಲಿ ಅರ್ಧ ನಿನಗೆ ಸೇರುವಂತಾಗಲಿ.

ದ್ವಿಜಾಃ ಪ್ರತಿಗ್ರಹೇ ಯುಕ್ತಾ ದಾತಾರೋ ರಾಜವಂಶಜಾಃ |
ಯದಿ ಧರ್ಮಃ ಶ್ರುತೋ ವಿಪ್ರ ಸಹೈವ ಫಲಮಸ್ತು ನೌ ॥ 82 ॥

ನಿಮ್ಮಂತಹ ಬ್ರಾಹ್ಮಣರಿಗೆ ಪ್ರತಿಗ್ರಹದಲ್ಲಿ ಅಧಿಕಾರವಿದೆ. ರಾಜರಿಗೆ ಯಾವಾಗಲೂ ದಾನವನ್ನು ಮಾಡುವ ಅಧಿಕಾರವಿರುತ್ತದೆ. ಆದ್ದರಿಂದ ನಮ್ಮ ಉಭಯ ಕುಲಕ್ಕೂ ವಿಹಿತವಾದ ಧರ್ಮದ ಫಲಗಳನ್ನು ಸೇರಿಸಿ ಇಬ್ಬರೂ ಸಮಾನ ಫಲ ಹೊಂದಿದವರಾಗಿ ವರ್ತಿಸೋಣ.

ಮಾ ವಾ ಭೂತ್ ಸಹಭೋಜ್ಯಂ ನೌ ಮದೀಯಂ ಫಲಮಾಪ್ನುಹಿ |
ಪ್ರತೀಚ್ಛ ಮತ್ಕೃತಂ ಧರ್ಮಂ ಯದಿ ತೇ ಮಯ್ಯನುಗ್ರಹಃ ॥ 83 ॥

ಒಂದು ವೇಳೆ ಫಲದಲ್ಲಿ ಸಮಾನವಾಗಿರಲು ನಿನಗೆ ಇಷ್ಟವಿಲ್ಲದ ಪಕ್ಷದಲ್ಲಿ ನಾನು ಸಂಪಾದಿಸಿದ ಕರ್ಮಫಲಗಳನ್ನು ನೀನೇ ಸ್ವೀಕರಿಸು. ಹೀಗೆ ಮಾಡಿದಲ್ಲಿ ನಿನ್ನ ಅನುಗ್ರಹ ಎಂದು ಭಾವಿಸುತ್ತೇನೆ. ನನ್ನ ಧರ್ಮವನ್ನೇ ನೀನು ಸ್ವೀಕರಿಸಬಹುದು.

ಭೀಷ್ಮಃ

ತತೋ ವಿಕೃತಚೇಷ್ಟೌ ದ್ವೌ ಪುರುಷೌ ಸಮುಪಸ್ಥಿತೌ |
ಗೃಹೀತ್ವಾನ್ಯೋನ್ಯಮಾವೇಷ್ಟ್ಯ ಕುಚೇಲಾವೂಚತುರ್ವಚಃ ॥ 84 ॥

ಭೀಷ್ಮ ಧರ್ಮರಾಜನೇ, ಇದೇ ಸಮಯದಲ್ಲಿ ವಿಕೃತವೇಷವುಳ್ಳ ಇಬ್ಬರು ಪುರುಷರು ಆ ಸ್ಥಳಕ್ಕೆ ಆಗಮಿಸಿದರು. ಅವರಿಬ್ಬರು ಹರಿದು ಹೋದ ಬಟ್ಟೆಗಳನ್ನು ಧರಿಸಿದ್ದರು. ಇಬ್ಬರೂ ಪರಸ್ಪರ ಒಬ್ಬರನ್ನೊಬ್ಬರು ಎಳೆದಾಡುತ್ತಾ ಜಗಳವಾಡುತ್ತಾ ಬಂದರು.

ನ ಮೇ ಧಾರಯಸೀತ್ಯೇಕೋ ಧಾರಯಾಮೀತಿ ಚಾಪರಃ |

ಇಹಾಸ್ತಿ ನೌ ವಿವಾದೋಽಯಮಯಂ ರಾಜಾನುಶಾಸಕಃ ॥ 85 ॥
ಅವರಲ್ಲಿ ಒಬ್ಬನು ನಾನು ನೀಡಿದ್ದನ್ನು ಏಕೆ ಧರಿಸಲಿಲ್ಲ ಎಂದು ಪ್ರಶ್ನಿಸುತ್ತಿದ್ದನು. ಮತ್ತೊಬ್ಬನು ನಾನೇಕೆ ಧರಿಸಲಿ? ಧರಿಸುವುದಿಲ್ಲ ಎನ್ನುತ್ತಿದ್ದನು. ಹೀಗೆ ಒಬ್ಬರಿಗೊಬ್ಬರು ವಿವಾದವನ್ನೆಬ್ಬಿಸಿಕೊಂಡು ರಾಜನ ಮುಂದೆ ಬಂದು, ನಮ್ಮನ್ನೆಲ್ಲ ನಿಯಮಿಸುವ ರಾಜನು ಇಲ್ಲೇ ಇದ್ದಾನೆ. ಅವನ ಮುಂದೆ ಹೇಳುತ್ತೇವೆ ಎಂದರು.
ಸತ್ಯಂ ಬ್ರವೀಮ್ಯಹಮಿದಂ ನ ಮೇ ಧಾರಯತೇ ಭವಾನ್ |
ಅನೃತಂ ವದಸೀಹ ತ್ವಮೃಣಂ ತೇ ಧಾರಯಾಮ್ಯಹಮ್ ॥ 86 ॥
ಅದರಲ್ಲಿ ಮೊದಲನೆಯವನು ನನ್ನ ಮಾತು ಸತ್ಯವು. ನೀನು ಕೊಟ್ಟ ವಸ್ತುವು ನನ್ನಲ್ಲಿ ಇದ್ದಲ್ಲಿ ನಿನ್ನ ಋಣವನ್ನು ನಾನು ಧರಿಸಿದಂತಾಗುತ್ತದೆ. ಆದರೆ ನಾನು ನಿನ್ನಿಂದ ಯಾವುದನ್ನೂ ಸ್ವೀಕರಿಸಿಲ್ಲ. ನೀನು ಸುಳ್ಳನ್ನು ಹೇಳುತ್ತಿರುವೆ. ನಿನಗೆ ನಾನು ಋಣಿಯಾಗಿರುವುದಿಲ್ಲ ಎಂದು ಹೇಳಿದನು.
ತಾವುಭೌ ಭೃಶಸಂತಪ್ತೌ ರಾಜಾನಮಿದಮೂಚತುಃ |
ಪರೀಕ್ಷ್ಯತಾಂ ಯಥಾ ಸ್ಯಾವ ನಾವಾಮಿಹ ವಿಗರ್ಹಿತೌ ॥ 87 ॥
ಕೊನೆಗೆ ಅವರಿಬ್ಬರೂ ರಾಜನ ಬಳಿ ಆಗಮಿಸಿ ರಾಜನೇ, ನಮ್ಮಿಬ್ಬರ ನ್ಯಾಯವನ್ನು ವಿಚಾರಿಸಿ ನಮ್ಮನ್ನು ನಿರ್ದೋಷಿಗಳನ್ನಾಗಿ ನೀನು ಮಾಡಬೇಕು. ನಾವು ಹೇಗೆ ನಿರ್ದೋಷಿಗಳಾಗುತ್ತೇವೆ ಎಂಬುದನ್ನು ನೀನೇ ಪರೀಕ್ಷಿಸಿ ನಿರ್ಧರಿಸು.
ವಿರೂಪಃ
ವಿಕೃತಸ್ಯ ನರವ್ಯಾಘ್ರ ಧಾರಯಾಮೀಹ ಗೋಫಲಮ್ |
ದದತಶ್ಚ ನ ಗೃಹ್ಣಾಮಿ ವಿಕೃತೋ ಮೇ ಮಹೀಪತೇ ॥ 88 ॥
ವಿರೂಪ ಮಹಾರಾಜನೇ ಕೇಳು. ಇವನು ನನ್ನ ಮಿತ್ರನಾದ ವಿಕೃತನು. ನಾನು ಇವನಿಗೆ ಒಂದು ಗೋದಾನದ ಫಲವನ್ನು ಸಾಲ ತೀರಿಸಬೇಕಾಗಿದೆ. ಆದರೆ ಆ ವಿಕೃತನು ಗೋದಾನದ ಋಣರೂಪದಲ್ಲಿರುವ ಫಲವನ್ನು ತೆಗೆದುಕೊಳ್ಳದೆ ನಿರಾಕರಿಸುತ್ತಿದ್ದಾನೆ.
ವಿಕೃತಃ
ನ ಮೇ ಧಾರಯತೇ ಕಿಂಚಿದ್ ವಿರೂಪೋಽಯಂ ನರಾಧಿಪ |
ಮಿಥ್ಯಾ ಬ್ರವೀತ್ಯಯಂ ಹಿ ತ್ವಾ ಮಿಥ್ಯಾಭಾಸಂ ನರಾಧಿಪ ॥ 89 ॥
ವಿಕೃತ ರಾಜೇಂದ್ರನೇ, ಈ ವಿರೂಪನು ನನಗೇನೂ ಸಾಲ ಕೊಡಬೇಕಾಗಿರುವುದಿಲ್ಲ. ಇವನು ಸತ್ಯವಚನದಂತೆ ಸುಳ್ಳನ್ನೇ ಹೇಳುತ್ತಿದ್ದಾನೆ ಎಂದು ಹೇಳಿದನು.
ರಾಜಾ
ವಿರೂಪ ಕಿಂ ಧಾರಯತೇ ಭವಾನಸ್ಯ ವದಸ್ವ ಮೇ |
ಶ್ರುತ್ವಾ ತಥಾ ಕರಿಷ್ಯಾಮೀತ್ಯೇವಂ ಮೇ ಧೀಯತೇ ಮತಿಃ ॥ 90 ॥
ರಾಜ ಹೇ ವಿರೂಪನೇ, ಇವನಿಗೆ ಯಾವ ಭಾಗದಲ್ಲಿ ಋಣಿಯಾಗಿರುವೆ ವಿವರವಾಗಿ ತಿಳಿಸಿದರೆ ಯೋಗ್ಯವಾದ ತೀರ್ಮಾನವನ್ನು ನೀಡುತ್ತೇನೆ ಎಂದನು.
ವಿರೂಪಃ
ಶೃಣುಷ್ವಾವಹಿತೋ ರಾಜನ್ ಯಥೈತದ್ಧಾರಯಾಮ್ಯಹಮ್ |
ವಿಕೃತಸ್ಯಾಸ್ಯ ರಾಜರ್ಷೇ ನಿಖಿಲೇನ ನರರ್ಷಭ ॥ 91 ॥
ಅನೇನ ಧರ್ಮಪ್ರಾಪ್ತ್ಯರ್ಥಂ ಶುಭಾ ದತ್ತಾ ಪುರಾನಘ |
ಧೇನುರ್ವಿಪ್ರಾಯ ರಾಜರ್ಷೇ ತಪಃಸ್ವಾಧ್ಯಾಯಶೀಲಿನೇ ॥ 92 ॥
ತಸ್ಯಾಶ್ಚಾಯಂ ಮಯಾ ರಾಜನ್ ಫಲಮಭ್ಯೇತ್ಯ ಯಾಚಿತಃ |
ವಿಕೃತೇನ ಚ ಮೇ ದತ್ತಂ ವಿಶುದ್ಧೇನಾಂತರಾತ್ಮನಾ ॥ 93 ॥
ವಿರೂಪ ಮಹಾರಾಜನೇ, ಆ ವಿವರವನ್ನೆಲ್ಲ ತಿಳಿಸುತ್ತೇನೆ, ಕೇಳು. ಹಿಂದೆ ಈ ವಿಕೃತನು ತಪಸ್ಸ್ವಾಧ್ಯಾಯಶೀಲನಾದ ಬ್ರಾಹ್ಮಣನಾದ ನನಗೆ ಉತ್ತಮವಾದ ಒಂದು ಗೋವನ್ನು ದಾನ ಮಾಡಿದನು. ಬಳಿಕ ನಾನು ಇವನಲ್ಲಿಗೆ ಹೋಗಿ ಆ ಗೋದಾನದ ಫಲವನ್ನು ಬೇಡಿದೆನು. ಅದರಂತೆಯೇ ಶುದ್ಧವಾದ ಮನಸ್ಸಿನಿಂದ ನನಗೆ ಆ ಫಲವನ್ನು ಕೊಟ್ಟುಬಿಟ್ಟನು.
ತತೋ ಮೇ ಸುಕೃತಂ ಕರ್ಮ ಕೃತಮಾತ್ಮವಿಶುದ್ಧಯೇ |
ಗಾವೌ ಹಿ ಕಪಿಲೇ ಕೃತ್ವಾ ವತ್ಸಲೇ ಬಹುದೋಹನೇ ॥ 94 ॥
ಬಳಿಕ ಪಾಪನಿವೃತ್ತಿಗಾಗಿ ಕೆಲವು ಪುಣ್ಯಕರ್ಮಗಳನ್ನು ನಾನು ನಡೆಸಿದೆನು. ಆ ದಾನವನ್ನು ಪಡೆದ ಕಪಿಲ ಹಸುವಿನಿಂದ ಹುಟ್ಟಿದ ಎರಡು ಕರುಗಳಿಂದ ಬಹಳಷ್ಟು ಹಾಲನ್ನು ಸ್ವೀಕರಿಸಿ ಹೆಚ್ಚಾಗಿ ಹಾಲನ್ನು ಕರೆಯುತ್ತಿದ್ದ ಆ ಹಸುಗಳನ್ನು ಉಂಛವೃತ್ತಿಯಲ್ಲಿ ನಿರತನಾದ ವಿಕೃತನಿಗೆ ದಾನ ಮಾಡಿದೆನು.
ತೇ ಚೋಂಛವೃತ್ತಯೇ ರಾಜನ್ಮಯಾ ಸಮಪವರ್ಜಿತೇ |
ಯಥಾವಿಧಿ ಯಥಾಶ್ರದ್ಧಂ ತದಸ್ಯಾಹಂ ಪುನಃ ಪ್ರಭೋ ॥ 95 ॥
ವಿಧಿಬದ್ಧವಾಗಿ ಶ್ರದ್ಧೆಯಿಂದ ಆ ಗೋದಾನ ಫಲವನ್ನು ಈತನಿಗೆ ಕೊಡಬೇಕೆಂದು ಪುನಃ ಪುನಃ ಬೇಡಿಕೊಳ್ಳುತ್ತಿದ್ದೇನೆ.
ಇಹಾದ್ಯ ವೈ ಗೃಹೀತ್ವಾ ತತ್ ಪ್ರಯಚ್ಛೇ ದ್ವಿಗುಣಂ ಫಲಮ್ |
ಏಕಸ್ಯಾಃ ಪುರುಷವ್ಯಾಘ್ರ ಕಃ ಶುದ್ಧಃ ಕೋಽತ್ರ ದೋಷವಾನ್ ॥ 96 ॥
ಯಾರು ವಸ್ತುವನ್ನು ಸ್ವೀಕರಿಸುತ್ತಾನೋ ಅದನ್ನು ಪುನಃ ಮತ್ತೊಬ್ಬರಿಗೆ ನೀಡಿದಾಗ ಅದರ ಫಲವು ಎರಡು ಪಟ್ಟಾಗುತ್ತದೆ. ಇಲ್ಲಿರುವ ಸಂಗತಿ ಇಷ್ಟೆ. ಮೊದಲು ದಾನವನ್ನು ಸ್ವೀಕರಿಸಿದ ನಾನು ಈತನಿಗೆ ದಾನ ಮಾಡಲು ಮುಂದಾದಾಗ ಇವನು ನಿರಾಕರಿಸುತ್ತಿದ್ದಾನೆ.

ನಮ್ಮಿರ್ವರಲ್ಲಿ ಶುದ್ಧನ್ಯಾರು, ದೋಷಿಯಾರು ಎಂದು ನೀನೇ ನಿರ್ಣಯವನ್ನು ನೀಡು.
ಏವಂ ವಿವದಮಾನೌ ಸ್ವಸತ್ವಮಿಹಾಭ್ಯಾಗತೌ ನೃಪ |
ಕುರು ಧರ್ಮಮಧರ್ಮಂ ವಾ ವಿನಯೇ ನೌ ಸಮಾಧಯ ॥ 97 ॥
ಇದಕ್ಕಾಗಿಯೇ ವಾದ ಮಾಡುತ್ತಾ ನಿನ್ನಲ್ಲಿಗೆ ಬಂದಿದ್ದೇವೆ. ಧರ್ಮವೋ, ಅಧರ್ಮವೋ ನೀನು ಹೇಳಿದ ತೀರ್ಮಾನಕ್ಕೆ ನಾವು ಒಳಪಡುತ್ತೇವೆ. ನಮ್ಮಿರ್ವರಲ್ಲಿ ಸಮಾಧಾನವನ್ನು ನೆಲೆಸುವಂತೆ ಮಾಡು.
ಯದಿ ನೇಚ್ಛತಿ ಮೇ ದಾನಂ ಯಥಾ ದತ್ತಮನೇನ ವೈ |
ಭವಾನತ್ರ ಸ್ಥಿರೋ ಭೂತ್ವಾ ಮಾರ್ಗೇ ಸ್ಥಾಪಯತು ಪ್ರಭುಃ ॥ 98 ॥
ಇವನು ಕೊಟ್ಟ ದಾನವನ್ನು ಸ್ವೀಕರಿಸಿದೆ. ಆದರೆ ನಾನು ಕೊಟ್ಟ ದಾನವನ್ನು ಇವನು ಸ್ವೀಕರಿಸುತ್ತಿಲ್ಲ. ರಾಜನಾದ ನೀನೇ ನ್ಯಾಯವನ್ನು ನಿರ್ಣಯಿಸಿ ಸರಿಯಾದ ಮಾರ್ಗದಲ್ಲಿ ನಮ್ಮನ್ನು ನಿಲ್ಲಿಸಬೇಕು.
ರಾಜಾ
ದೀಯಮಾನಂ ನ ಗೃಹ್ಣಾಸಿ ಋಣಂ ಕಸ್ಮಾತ್ತ್ವಮದ್ಯ ವೈ |
ಯಥೈವ ತೇಽಭ್ಯನುಜ್ಞಾತಂ ತಥಾ ಗೃಹ್ಣೀಷ್ವ ಮಾಚಿರಮ್ ॥ 99 ॥
ರಾಜ ಅಯ್ಯಾ ಬ್ರಾಹ್ಮಣನೇ, ನಿನಗೆ ಕೊಡಬೇಕಾದ ಸಾಲವನ್ನು ಹಿಂತಿರುಗಿ ಕೊಟ್ಟರೆ ನೀನೇಕೆ ತೆಗೆದುಕೊಳ್ಳುತ್ತಿಲ್ಲ? ಹಿಂದೆ ನೀನು ಕೊಟ್ಟಂತೆ ನೀನು ಸ್ವೀಕರಿಸುವುದು ಧರ್ಮವಾಗಿದೆ ಎಂದು ಹೇಳಿದನು.
ವಿಕೃತಃ
ದೀಯತಾಮಿತ್ಯನೇನೋಕ್ತಂ ದದಾನೀತಿ ತಥಾ ಮಯಾ |
ನಾಯಂ ಮೇ ಧಾರಯತ್ಯತ್ರ ಗಮ್ಯತಾಂ ಯತ್ರ ವಾಂಛತಿ ॥ 100 ॥
ವಿಕೃತ ರಾಜನೇ, ಈ ವಿಷಯವು ಹಾಗಲ್ಲ. ಇವನು ನನ್ನಲ್ಲಿ ಋಣಿ ಎಂದು ಹೇಳಿಕೊಂಡಿದ್ದಾನೆ. ನಾನು ಅವನಿಗೆ ಕೊಡಬೇಕಾದರೆ ಇವನು ನನ್ನ ಋಣಿ ಎಂದು ಭಾವಿಸಿಲ್ಲ. ಆದ್ದರಿಂದ ಇವನೆಂದಿಗೂ ಸಾಲಗಾರನಲ್ಲ. ಅವನು ನನಗೆ ಕೊಡದೆ ಹೊರಟು ಹೋಗಲಿ.
ರಾಜಾ
ದದತೋಽಸ್ಯ ನ ಗೃಹ್ಣಾಸಿ ವಿಷಮಂ ಪ್ರತಿಭಾತಿ ಮೇ |
ದಂಡ್ಯೋ ಹಿ ತ್ವಂ ಮಮ ಮತೋ ನಾಸ್ತ್ಯತ್ರ ಖಲು ಸಂಶಯಃ ॥101॥
ರಾಜ ಬ್ರಾಹ್ಮಣನೇ, ಅವನಾಗಿ ಕೊಡುತ್ತಿರುವಾಗ ನೀನು ನಿರಾಕರಿಸುತ್ತಿರುವುದು ನನಗೆ ಸರಿಯಾಗಿ ತೋರುತ್ತಿಲ್ಲ. ಇದರಲ್ಲಿ ಸ್ವೀಕರಿಸದ ನೀನು ನಿಸ್ಸಂದೇಹವಾಗಿ ದೋಷಿ ಎಂದು ತೋರುತ್ತಿದೆ. ಆದ್ದರಿಂದ ನೀನೇ ಶಿಕ್ಷೆಗೆ ಅರ್ಹನಾಗಿದ್ದಿ. ಇದರಲ್ಲಿ ಯಾವ ಸಂಶಯವೂ ಇಲ್ಲ.
ವಿಕೃತಃ
ಮಯಾಸ್ಯ ದತ್ತಂ ರಾಜರ್ಷೇ ಗೃಹ್ಣೀಯಾಂ ತತ್ ಕಥಂ ಪುನಃ |
ಕಾಮಮತ್ರಾಪರಾಧೋ ಮೇ ದಂಡ್ಯಮಾಜ್ಞಾಪಯ ಪ್ರಭೋ ॥ 102 ॥
ವಿಕೃತ ರಾಜೇಂದ್ರನೇ, ನಾನು ಇವನಿಗೆ ದಾನವಾಗಿ ಕೊಟ್ಟ ಮೇಲೆ ಅದನ್ನು ಹಿಂದಿರುಗಿ ತೆಗೆದುಕೊಳ್ಳುವುದು ಹೇಗೆ? ನನ್ನ ಅಪರಾಧವಿಲ್ಲ ಎಂದು ಭಾವಿಸಿದ್ದೇನೆ. ದೋಷವಿದ್ದಲ್ಲಿ ನೀನು ನನ್ನನ್ನು ದಂಡಿಸು.
ವಿರೂಪಃ
ದೀಯಮಾನಂ ಯದಿ ಮಯಾ ನೇಷಿಷ್ಯಸಿ ಕಥಂಚನ |
ನಿಯಂಸ್ಯತಿ ತ್ವಾ ನೃಪತಿರಯಂ ಧರ್ಮಾನುಶಾಸಕಃ ॥ 103 ॥
ವಿರೂಪ ನಾನು ಕೊಡಲು ಸಿದ್ಧವಾಗಿರುವಾಗಲೂ ನೀನು ಸ್ವೀಕರಿಸಲು ನಿರಾಕರಿಸುತ್ತಿದ್ದಿ. ಆದ್ದರಿಂದ ಧರ್ಮನಿಯಂತ್ರಣವೆನಿಸಿದ ಈ ರಾಜನ ದಂಡಕ್ಕೆ ನೀನೇ ಪಾತ್ರನಾಗಬೇಕು.
ವಿಕೃತಃ
ಯಂ ಮಯಾ ಯಾಚಿತೇನೇಹ ದತ್ತಂ ಕಥಮಿಹಾದ್ಯ ತತ್ |
ಗೃಹ್ಣೀಯಾಂ ಗಚ್ಛತು ಭವಾನಭ್ಯನುಜ್ಞಾಂ ದದಾನಿ ತೇ ॥ 104 ॥
ವಿಕೃತ ವಿರೂಪನೇ, ನಾನು ಬೇಡದಿದ್ದಾಗಲೂ ದಾನ ಮಾಡಲು ನೀನು ಏಕೆ ಬರುತ್ತಿರುವಿ? ದಾನವಾಗಿ ಕೊಟ್ಟದ್ದನ್ನು ನಾನು ಹೇಗೆ ಸ್ವೀಕರಿಸಲಿ? ನಾನಾಗಿ ನಿನಗೆ ಮನಃಪೂರ್ವಕವಾಗಿ ಕೊಟ್ಟಿದ್ದೇನೆ. ಆದ್ದರಿಂದ ಹೊರಟು ಹೋಗು.
ಬ್ರಾಹ್ಮಣಃ
ಶ್ರುತಮೇತತ್ತ್ವಯಾ ರಾಜನ್ನನಯೋಃ ಕಥಿತಂ ದ್ವಯೋಃ |
ಪ್ರತಿಜ್ಞಾತಂ ಮಯಾ ಯತ್ತೇ ತದ್ಗೃಹಾಣಾವಿಚಾರಿತಮ್ ॥ 105 ॥
ಬ್ರಾಹ್ಮಣ ರಾಜನೇ, ಇವರಿಬ್ಬರ ಮಾತನ್ನು ನೀನು ಕೇಳಿಸಿಕೊಂಡೆ. ಇನ್ನು ನಾನು ನಿನಗೆ ಕೊಡುವುದಾಗಿ ನಾನು ಪ್ರತಿಜ್ಞೆ ಮಾಡಿದುದನ್ನು ನೀನೂ ನಿಸ್ಸಂದೇಹವಾಗಿ ತೆಗೆದುಕೊಳ್ಳಬಹುದಲ್ಲವೇ? ನೀನೇ ಈ ನಿರ್ಣಯವನ್ನು ಕೊಟ್ಟಿರುತ್ತಿಯಷ್ಟೆ? ಆದ್ದರಿಂದ ಸ್ವೀಕರಿಸು ಎಂದನು.
ರಾಜಾ
ಪ್ರಸ್ತುತಂ ಸುಮಹತ್ ಕಾರ್ಯಮಾವಯೋರ್ಗಹ್ವರಂ ಯಥಾ |
ಜಾಪಕಸ್ಯ ದೃಢೀಕಾರಃ ಕಥಮೇತದ್ಭವಿಷ್ಯತಿ ॥ 106 ॥
ಯದಿ ತಾವನ್ನ ಗೃಹ್ಣಾಮಿ ಬ್ರಾಹ್ಮಣೇನಾಪವರ್ಜಿತಮ್ |

ಕಥಂ ನ ಲಿಪ್ಯೇಯಮಹಂ ದೋಷೇಣ ಮಹತಾದ್ಯ ವೈ ॥ 107 ॥
ರಾಜ ಇವರಿಬ್ಬರ ಬ್ರಾಹ್ಮಣರ ವಿವಾದವು ಬಹಳ ಕಠಿಣವಾದ, ಅಗಾಧವಾದ ಸಮಸ್ಯೆಯಾಗಿದೆ. ಇವರಿಬ್ಬರ ಸಮಸ್ಯೆಯನ್ನು ಬಿಡಿಸಲಾಗುತ್ತಿಲ್ಲ. ಈ ಜಾಪಕ ಬ್ರಾಹ್ಮಣನು ಹಠವನ್ನು ಬಿಡುತ್ತಿಲ್ಲ. ಇವನು ಕೊಟ್ಟದ್ದನ್ನು ನಾನು ಸ್ವೀಕರಿಸದಿದ್ದರೆ ಮಹಾಪಾಪವು ಬಂದೇ ಬರುತ್ತದೆ. ಇದಕ್ಕೇನು ಮಾಡಲಿ? ಈ ದೋಷದಿಂದ ಲಿಪ್ತನಾಗದಿರುವಂತೆ ನಾನೇನು ಮಾಡಲಿ ಎಂದು ಚಿಂತಾಗ್ರಸ್ಥನಾದನು.
ಭೀಷ್ಮಃ
ತೌ ಚೋವಾಚ ಸ ರಾಜರ್ಷಿಃ ಕೃತಕಾರ್ಯೌ ಗಮಿಷ್ಯಥಃ |
ನೇದಾನೀಂ ಮಾಮಿಹಾಸಾದ್ಯ ರಾಜಧರ್ಮೋ ಭವೇನ್ಮೃಷಾ ॥ 108 ॥
ಸ್ವಧರ್ಮಃ ಪರಿಪಾಲ್ಯಶ್ಚ ರಾಜ್ಞಾಮೇಷ ವಿನಿಶ್ಚಯಃ |
ವಿಪ್ರಧರ್ಮಶ್ಚ ಸುಗುರುರ್ಮಾಮನಾತ್ಮಾನಮಾವಿಶತ್ ॥ 109 ॥
ಭೀಷ್ಮ ಆ ಪ್ರಸಂಗದಲ್ಲಿ ಆಲೋಚಿಸಿ ರಾಜನು ಆ ಇಬ್ಬರು ಪುರುಷರನ್ನು ನೋಡಿ ನಿಮ್ಮ ವಿವಾದವು ಪರಿಹಾರವಾದಂತಾಯಿತು. ನಿಮ್ಮಿಬ್ಬರ ವಿಷಯದಲ್ಲಿ ರಾಜನಾದ ನಾನು ತೀರ್ಮಾನಿಸಿದ್ದೇನೆ. ಆದರೆ ನನ್ನ ರಾಜಧರ್ಮವು ತಪ್ಪಬಾರದು. ನನಗೆ ಅದನ್ನು ರಕ್ಷಿಸಬೇಕಾದದ್ದು ಕರ್ತವ್ಯವಾಗಿದೆ. ಆದರೆ ಬುದ್ಧಿಹೀನನಾದ ನನ್ನನ್ನು ಕಠಿಣವಾದ ಬ್ರಾಹ್ಮಣನ ಪ್ರತಿಗ್ರಹವು ಬಂಧಿಸುತ್ತಿದೆಯಲ್ಲ! ನಾನೇನು ಮಾಡಲಿ? ಎಂದು ಹೇಳಿದನು.
ಬ್ರಾಹ್ಮಣಃ
ಗೃಹಾಣ ಧಾರಯೇಽಹಂ ತೇ ಯಾಚಿತಂ ತೇ ಶ್ರುತಂ ಮಯಾ |
ನ ಚೇದ್ ಗ್ರಹೀಷ್ಯಸೇ ರಾಜನ್ ಶಪಿಷ್ಯೇ ತ್ವಾಂ ನ ಸಂಶಯಃ ॥110॥
ಬ್ರಾಹ್ಮಣ ರಾಜನೇ, ನೀನು ಮೊದಲು ಕೊಡು ಎಂದು ಕೇಳಿದೆ. ನಾನೂ ಕೊಡುತ್ತೇನೆಂದು ಪ್ರತಿಜ್ಞೆ ಮಾಡಿದೆ. ಈಗ ಸಾಲತೀರಿಸಬೇಕಾದವನು ನಾನು. ನೀನು ತೆಗೆದುಕೊಳ್ಳದಿದ್ದರೆ ನನ್ನ ಶಾಪಕ್ಕೆ ತಪ್ಪದೇ ಗುರಿಯಾಗುತ್ತಿ ಎಂದನು.
ರಾಜಾ
ಧಿಗ್ ರಾಜಧರ್ಮಂ ಯಸ್ಯಾಯಂ ಕಾರ್ಯಸ್ಯೇಹ ವಿನಿಶ್ಚಯಃ |
ಇತ್ಯರ್ಥಂ ಮೇ ಗ್ರಹೀತವ್ಯಂ ಕಥಂ ತುಲ್ಯಂ ಭವೇದಿತಿ ॥ 111 ॥
ರಾಜ ಈ ರಾಜಧರ್ಮಕ್ಕೆ ಧಿಕ್ಕಾರವಿರಲಿ. ಇಂತಹ ಧರ್ಮಸಂಕಟವು ಒದಗಿ ಬಂದಿದೆ. ಏನು ಮಾಡಬೇಕೆಂದು ನಿರ್ಣಯಿಸಲು ನನ್ನಿಂದಾಗುತ್ತಿಲ್ಲ. ನಮ್ಮಿಬ್ಬರ ಪ್ರತಿಗ್ರಹವು ಸಮಾನವಾಗಿದ್ದರೆ ರಾಜಧರ್ಮ ಸಮ್ಮತವೆಂದು ಸ್ವೀಕರಿಸಬಹುದಿತ್ತು.
ಏಷ ಪಾಣಿರಪೂರ್ವಂ ಭೋ ನಿಕ್ಷೇಪಾರ್ಥಂ ಪ್ರಸಾರಿತಃ |
ಯನ್ಮೇ ಧಾರಯಸೇ ವಿಪ್ರ ತದಿದಾನೀಂ ಪ್ರದೀಯತಾಮ್ ॥ 112 ॥
ಬ್ರಾಹ್ಮಣನೇ, ಪ್ರತಿಗ್ರಹಕ್ಕಾಗಿ ನನ್ನ ಪಾಣಿಯನ್ನು ಎಂದಿಗೂ ನೀಡಿರಲಿಲ್ಲ. ಇದೋ ಈಗ ನಿನ್ನಲ್ಲಿ ಪ್ರತಿಗ್ರಹಕ್ಕಾಗಿ ನೀಡುತ್ತಿದ್ದೇನೆ. ನನಗಾಗಿ ನೀನು ಯಾವ ವಿಷಯದಲ್ಲಿ ಸಾಲಗಾರ ಎಂದು ಎಣಿಸಿ ದಾನ ಮಾಡಲು ಮುಂದಾಗಿರುತ್ತೀಯೋ ಅದನ್ನು ಕೊಟ್ಟುಬಿಡು.
ಬ್ರಾಹ್ಮಣಃ
ಸಂಹಿತಾಂ ಜಪತಾ ಯಾವಾನ್ಮಯಾ ಕಶ್ಚಿದ್ಗುಣಃ ಕೃತಃ |
ತತ್ ಸರ್ವಂ ಪ್ರತಿಗೃಹ್ಣೀಷ್ವ ಯದಿ ಕಿಂಚಿದಿಹಾಸ್ತಿ ಮೇ ॥ 113 ॥
ಬ್ರಾಹ್ಮಣ ರಾಜೇಂದ್ರನೇ, ಗಾಯತ್ರೀ ಜಪದಿಂದ ನನಗೇನಾದರೂ ಫಲವು ಲಭಿಸಿರುವುದಾದರೆ ಅದೆಲ್ಲವೂ ನಿನಗೆ ಸೇರಲಿ. ಅದೆಲ್ಲವನ್ನೂ ನೀನೇ ಸ್ವೀಕರಿಸು ಎಂದನು.
ರಾಜಾ
ಜಲಮೇತನ್ನಿಪತಿತಂ ಮಮ ಪಾಣೌ ದ್ವಿಜೋತ್ತಮ |
ಸಮಮಸ್ತು ಸಹೈವಾಸ್ತು ಪ್ರತಿಗೃಹ್ಣಾತು ವೈ ಭವಾನ್ ॥ 114 ॥
ರಾಜ ಬ್ರಾಹ್ಮಣೋತ್ತಮನೇ, ನಿನ್ನ ಜಪದ ಫಲವನ್ನು ದಾನ ಮಾಡಲು ನನ್ನ ಕೈಯಲ್ಲಿ ದಾನಜಲವನ್ನು ಹಾಕಿರುವಿ. ನಮ್ಮಿಬ್ಬರಲ್ಲಿ ದಾನ-ಪ್ರತಿಗ್ರಹಗಳು ಸಮಾನವಾಗಿರಬೇಕು. ಆದ್ದರಿಂದ ನೀನು ಕೊಟ್ಟಾಯಿತು. ನನ್ನಿಂದ ಏನನ್ನಾದರೂ ಸ್ವೀಕರಿಸು.
ವಿರೂಪಃ
ಕಾಮಕೋಧೌ ವಿದ್ಧಿ ನೌ ತ್ವಮಾವಾಭ್ಯಾಂ ಕಾರಿತೋ ಭವಾನ್ |
ಜಿಜ್ಞಾಸಮಾನೌ ಯುವಯೋರ್ಮನೋಽಚ್ಛಂ ತು ದ್ವಿಜೋತ್ತಮ ॥115॥
ವಿರೂಪ ರಾಜೇಂದ್ರನೇ, ನೀನು ಕಳವಳವನ್ನು ಹೊಂದಬೇಡ. ನಮ್ಮಿಬ್ಬರನ್ನು ಕಾಮ-ಕ್ರೋಧವೆಂದು ತಿಳಿ. ನಿಮ್ಮಿಬ್ಬರ ಸ್ವಚ್ಛ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ನಾವು ಮಾಡಿದೆವು.
ನಾಯಂ ಧಾರಯತೇ ಕಿಂಚಿಜ್ಜಿಜ್ಞಾಸಾ ತ್ವತ್ಕೃತೇ ಕೃತಾ |
ಕಾಲೋ ಧರ್ಮಸ್ತಥಾ ಮೃತ್ಯುಃ ಕಾಮಕ್ರೋಧೌ ತಥಾ ಯುವಾಮ್ ॥
ನಿಮ್ಮಿಬ್ಬರ ಧರ್ಮದ ದಾರ್ಢ್ಯವನ್ನು ಪರೀಕ್ಷಿಸಲು ಇಂತಹ ಜಿಜ್ಞಾಸೆಯಿಂದ ವಿಕೃತ ವೇಷದಲ್ಲಿ ಬಂದಿದ್ದೇವೆ. ಪರಸ್ಪರ ನಿಮ್ಮಿಬ್ಬರ ವಿವಾದವನ್ನು ಕಾಲಪುರುಷನು, ಧರ್ಮನು, ಮೃತ್ಯುವು, ಕಾಮಕ್ರೋಧಗಳು ಅರ್ಥಾತ್ ಇದರ ಅಭಿಮಾನಿಗಳು ನೋಡಿದ್ದಾರೆ. ಜಗತ್ತೆಲ್ಲವೂ ನೋಡುತ್ತಿದೆ.
ಸರ್ವಮನ್ಯೋನ್ಯನಿಕಷೇ ನಿಕೃಷ್ಟಂ ಪಶ್ಯತೇ ತವ |
ಗಚ್ಛ ಲೋಕಾನ್ ಜಿತಾನ್ ಸ್ವೇನ ಕರ್ಮಣಾ ಯತ್ರ ವಾಂಛಸಿ ॥117॥
ನಿಮ್ಮಿಬ್ಬರಿಗೂ ಸಮಾನವಾದ ಫಲಗಳೇ ದೊರೆಯುವಂತಾಗಲಿ. ನಿಮ್ಮಿಬ್ಬರಿಗೂ ಪುಣ್ಯಲೋಕಗಳು ಸಮಾನವಾಗಿರಲಿ. ಈ

ವಿಕೃತನೆಂಬ ವ್ಯಕ್ತಿಯು ನನಗೆ ಕೊಡಬೇಕಾದುದೇನೂ ಇಲ್ಲ. ನಿಮ್ಮಿಬ್ಬರ ಧರ್ಮದ ಜಿಜ್ಞಾಸೆಯಿಂದ ಹೀಗೆ ವರ್ತಿಸಿದ್ದೇವೆ. ನಾವೆಲ್ಲರೂ ನಿಮ್ಮ ಧರ್ಮದ ನಿರ್ಣಯಕ್ಕೋಸ್ಕರವೇ ಆಗಮಿಸಿದವರನ್ನಾಗಿ ತಿಳಿಯಿರಿ. ನಿಮ್ಮ ಸತ್ಕರ್ಮದ ಫಲವಾಗಿ ಸಮಸ್ತ ಲೋಕಗಳನ್ನು ಸಂಚರಿಸಿರಿ.
ಸರ್ವೇಷಾಮುಪರಿ ಸ್ಥಾನಂ ಬ್ರಹ್ಮಣೋಽವ್ಯಕ್ತಜನ್ಮನಃ |
ಯುವಯೋಃ ಸ್ಥಾನಮತುಲಂ ನಿರ್ದ್ವಂದ್ವಮಮಲಾತ್ಮಕಮ್ |
ಸರ್ವೇ ಗಚ್ಛಾಮ ಯತ್ರ ಸ್ವಾನ್ ಸ್ವಾಂಲ್ಲೋಕಾಂಶ್ಚ ತಥಾ ವಯಮ್ ॥
ಪುನರ್ಜನ್ಮರಹಿತವಾದ ಪರಬ್ರಹ್ಮನ ಸ್ಥಾನವು ಎಲ್ಲಕ್ಕಿಂತಲೂ ಮಿಗಿಲಾದುದು. ಅದಕ್ಕೆ ಎಣೆಯಿಲ್ಲ. ದ್ವಂದ್ವರಹಿತವಾಗಿದೆ, ನಿರ್ಮಲವಾಗಿದೆ. ಆ ಸ್ಥಾನವು ನಿಮ್ಮಿಬ್ಬರಿಗೂ ಲಭಿಸಲಿ. ನಾವು ನಮ್ಮ ಲೋಕಗಳಿಗೆ ತೆರಳುತ್ತೇವೆ. ನೀವು ನಿಮ್ಮ ಇಷ್ಟದಂತೆ ನಿಮ್ಮ ಕರ್ಮದಿಂದ ಜಯಿಸಿದ ಉತ್ತಮ ಲೋಕಕ್ಕೆ ಹೋಗಿ ನೆಲೆಸಿರಿ.
ತತೋ ಧರ್ಮಯಮಾದ್ಯಾಸ್ತೇ ವಾಕ್ಯಮೂಚುರ್ನೃಪದ್ವಿಜೌ |
ಅಸ್ಮಾಕಂ ಯಃ ಸ್ಮೃತೋ ಮೂರ್ಧಾ ಬ್ರಹ್ಮಲೋಕಮಿತಿ ಸ್ಮೃತಮ್ ॥
ತತ್ರಸ್ಥೌ ಹಿ ಭವಂತೌ ಹಿ ಯುವಾಭ್ಯಾಂ ನಿರ್ಜಿತಾ ವಯಮ್ |
ಯುವಯೋಃ ಕಾಮ ಆಪನ್ನಸ್ತತ್ಕಾಮ್ಯಮವಿಶಂಕಯಾ ॥ 120 ॥
ಹೀಗೆ ಹೇಳಿದ ಬಳಿಕ ಧರ್ಮ-ಯಮಾದಿಗಳೆಲ್ಲರೂ ಮತ್ತೊಮ್ಮೆ ರಾಜನು, ಬ್ರಾಹ್ಮಣನನ್ನು ನೋಡಿ ಮಹಾತ್ಮರೇ ನಮಗೆಲ್ಲಾ ಶಿರಸ್ಥಾನದಲ್ಲಿರುವ ಬ್ರಹ್ಮಲೋಕವೆಂದು ಪ್ರಖ್ಯಾತವಾದ ಉತ್ತಮ ಸ್ಥಾನವನ್ನು ನೀವು ಸೇರುತ್ತೀರಿ. ನೀವಿಬ್ಬರು ನಮ್ಮ ಐದೂ ಜನರನ್ನು ಜಯಿಸಿದ್ದೀರಿ. ನೀವು ಬಯಸಿದ ಲೋಕಗಳಿಗೆಲ್ಲಾ ನಿಸ್ಸಂದೇಹವಾಗಿ ಸಾಗಬಹುದು. ನಿಮಗೆಲ್ಲವೂ ಸಿದ್ಧಿಸಿದೆ.
ಭೀಷ್ಮಃ
ಜಾಪಕಾನಾಂ ಫಲಾವಾಪ್ತಿರ್ಮಯಾ ತೇ ಸಂಪ್ರಕೀರ್ತಿತಾ |
ಗತಿಃ ಸ್ಥಾನಂ ಚ ಲೋಕಾಶ್ಚ ಜಾಪಕೇನ ಯಥಾ ಜಿತಾಃ ॥ 121 ॥
ಭೀಷ್ಮ ಧರ್ಮಪುತ್ರನೇ, ಜಪಶೀಲರಿಗೆ ಲಭಿಸುವ ಫಲಗಳು, ಅವರು ಹೋಗುವ ಗತಿಗಳು, ಜಯಿಸುವ ಲೋಕಗಳು- ಇವೆಲ್ಲವನ್ನೂ ನಿನಗೆ ತಿಳಿಸಿದ್ದೇನೆ.
ಪ್ರಯಾತಿ ಸಂಹಿತಾಧ್ಯಾಯೀ ಬ್ರಾಹ್ಮಣಂ ಪರಮೇಷ್ಠಿನಮ್ |
ಅಥ ವಾಗ್ನಿಂ ಸಮಾಯಾತಿ ಸೂರ್ಯಮಾವಿಶತೇಽಪಿ ವಾ ॥ 122 ॥
ಗಾಯತ್ರಿಮಂತ್ರವನ್ನು ಜಪಿಸುವವರು ಪರಬ್ರಹ್ಮಸ್ಥಾನವನ್ನೇ ಹೊಂದುತ್ತಾರೆ. ಅವರು ಇಚ್ಛೆ ಪಟ್ಟರೆ ಅಗ್ನಿಲೋಕವನ್ನೂ, ಸೂರ್ಯಲೋಕವನ್ನೂ ಹೊಂದಬಹುದು.
ಸ ತೈಜಸೇನ ಭಾವೇನ ಯದಿ ತತ್ರಾಶ್ನುತೇ ರತಿಮ್ |
ಗುಣಾಂಸ್ತೇಷಾಂ ಸಮಾದತ್ತೇ ರಾಗೇಣ ಪ್ರತಿಮೋಹಿತಃ ॥ 123 ॥
ಅವರು ಅಲ್ಲಿಗೆ ತೇಜೋರೂಪದಿಂದ ಹೋಗಿ ರಮಣ ಮಾಡುತ್ತಾ ಆ ಲೋಕದಲ್ಲಿರುವ ಎಲ್ಲಾ ಸುಖಗಳನ್ನು ಆಸಕ್ತಿಯಿಂದ ಅನುಭವಿಸುತ್ತಾರೆ.
ಏವಂ ಸೋಮೇ ತಥಾ ವಾಯೌ ಭೂಮ್ಯಾಕಾಶಶರೀರಗಃ |
ಸರಾಗಸ್ತತ್ರ ವಸತಿ ಗುಣಾಂಸ್ತೇಷಾಂ ಸಮಾಚರನ್ ॥ 124 ॥
ಇದರಂತೆ ಅವರು ಜಪದ ಫಲದಿಂದ ಸೋಮಲೋಕವನ್ನು, ವಾಯು- ಲೋಕವನ್ನು, ಭೂಮ್ಯಾಕಾಶಗಳಲ್ಲಿಯೂ ಆಸಕ್ತರಾಗಿ ಅಲ್ಲಿನ ಗುಣಗಳನ್ನು ತಮ್ಮಲ್ಲಿ ಹೊಂದುತ್ತಾರೆ.
ಅಥ ತತ್ರ ವಿರಾಗೀ ಸ ಗಚ್ಛತಿ ತ್ವಥ ಸಂಶಯಮ್ |
ಪರಮವ್ಯಯಮಿಚ್ಛನ್ ಸ ತಮೇವಾವಿಶತೇ ಪುನಃ ॥ 125 ॥
ಇಲ್ಲಿ ಇದ್ದಾಗ ಅಲ್ಲಿನ ಸೌಖ್ಯಗಳೆಲ್ಲವೂ ಅಶಾಶ್ವತವಾದವುಗಳು ಎಂದು ನಿಶ್ಚಯ ಬುದ್ಧಿಯನ್ನು ಹೊಂದಿ, ವೈರಾಗ್ಯವನ್ನು ಹೊಂದಿದ ಅವರು ಅದಕ್ಕಿಂತಲೂ ಶ್ರೇಷ್ಠವಾದ ನಾಶರಹಿತವಾದ ಪರಮಪದಕ್ಕೆ ಹೋಗುತ್ತಾರೆ.
ಅಮೃತಾಚ್ಚಾಮೃತಂ ಪ್ರಾಪ್ತಃ ಶೀತೀಭೂತೋ ನಿರಾತ್ಮವಾನ್ |
ಬ್ರಹ್ಮಭೂತಃ ಸ ನಿರ್ದ್ವಂದ್ವಃ ಸುಖೀ ಶಾಂತೋ ನಿರಾಮಯಃ ॥ 126 ॥
ಅಮೃತಕ್ಕೂ ಅಮೃತಪ್ರಾಯವಾದ ಆ ಉತ್ತಮಸ್ಥಾನವನ್ನು ಹೊಂದಿದ ಬಳಿಕ ಆಸೆ, ಅಹಂಕಾರಗಳೆಲ್ಲ ನೀಗುತ್ತವೆ. ದ್ವಂದ್ವರಹಿತವಾಗಿ ಪರಮಾತ್ಮನಲ್ಲಿ ಆಸಕ್ತರಾಗಿ ನಿರಾಮಯರಾಗಿ ಶಾಂತಿ-ಸೌಖ್ಯಗಳಿಂದ ರಮಿಸುತ್ತಾರೆ.
ಬ್ರಹ್ಮಸ್ಥಾನಮನಾವರ್ತಮೇಕಮಕ್ಷರಸಂಜ್ಞಕಮ್ |
ಅದುಃಖಮಜರಂ ಶಾಂತಂ ಸ್ಥಾನಂ ತತ್ ಪ್ರತಿಪದ್ಯತೇ ॥ 127 ॥
ಆ ಪರಬ್ರಹ್ಮನ ಸ್ಥಾನವನ್ನು ಪಡೆದ ಬಳಿಕ ಪುನರಾವರ್ತಿಯು ಇರುವುದಿಲ್ಲ. ಆ ಸ್ಥಾನವು ಅಸಮಾನವಾದುದು, ನಾಶರಹಿತವಾದುದು, ದುಃಖರಹಿತವಾದುದು, ಅಚಲವಾದುದು, ಶಾಂತವಾದುದು. ಅಂತಹ ಸ್ಥಾನವನ್ನು ಹೊಂದುತ್ತಾರೆ.
ಚತುರ್ಭಿರ್ಲಕ್ಷಣೈರ್ಹೀನಂ ತಥಾ ಸಷೋಡಶೈಃ |
ಪುರುಷಂ ಸಮತಿಕ್ರಮ್ಯ ಆಕಾಶಂ ಪ್ರತಿಪದ್ಯತೇ ॥ 128 ॥
ಆ ಪರಮಪದವಾದರೂ ಅಂಡಜ, ಸ್ವೇದಜ, ಉದ್ಭಿಜ, ಜರಾಯುಜ ಎಂಬ ನಾಲ್ಕು ಲಕ್ಷಣಗಳಿಂದ ಕೂಡಿದ ಸಂಸಾರದಿಂದ ದೂರವಾಗಿದೆ. ಏಕಾದಶ ಇಂದ್ರಿಯಗಳು, ಪಂಚಭೂತಗಳೆಂಬ ಷೋಡಶ ಕಲಾರಹಿತವಾಗಿದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಅರಿಷಡ್ವರ್ಗದಿಂದ ದೂರವಾಗಿದೆ. ಇವುಗಳಿಂದ ದೂರವಾದ ಪರಬ್ರಹ್ಮನನ್ನು ಹೊಂದಿ ಸಮಸ್ತ ದಿಕ್ಕುಗಳಲ್ಲೂ

ಬೆಳಗುವ ಆಕಾಶಪದವಾಚ್ಯನಾದ ಪರಮಾತ್ಮನನ್ನು ಪ್ರತೀಕಾಲನೆನಿಸಿದ ಜೀವನು ಗಾಯತ್ರೀ ಮಂತ್ರದ ಫಲವಾಗಿ ಹೊಂದುತ್ತಾನೆ.
ಅಥ ವೇಚ್ಛತಿ ರಾಗಾತ್ಮಾ ಸರ್ವಂ ತದಧಿತಿಷ್ಠತಿ |
ಯಚ್ಚ ಪ್ರಾರ್ಥಯತೇ ತಚ್ಚ ಮನಸಾ ಪ್ರತಿಪದ್ಯತೇ ॥ 129 ॥
ಅಥವಾ ಅವನು ಬಯಸಿದ ಬೇರೆ ಎಲ್ಲಾ ಕಾಮನೆಗಳನ್ನು ಹೊಂದುತ್ತಾನೆ. ಯಾವುದ್ಯಾವುದನ್ನು ಮನಸ್ಸಿನಲ್ಲಿ ಚಿಂತಿಸುತ್ತಾನೋ ಅವೆಲ್ಲವನ್ನೂ ಹೊಂದುವ ಫಲವನ್ನು ಗಾಯತ್ರೀಮಂತ್ರದ ಫಲದಿಂದ ಹೊಂದುತ್ತಾನೆ.
ಅಥ ವಾ ವೀಕ್ಷತೇ ಲೋಕಾನ್ ಸರ್ವಾನ್ನಿರಯಸಂಸ್ಥಿತಾನ್ |
ನಿಃಸ್ಪೃಹಃ ಸರ್ವತೋ ಮುಕ್ತಸ್ತತ್ರೈವ ರಮತೇ ಸುಖೀ ॥ 130 ॥
ಅಥವಾ ಸಮಸ್ತ ಲೋಕಗಳನ್ನು ನಿರಯಲೋಕಗಳು ಎಂದು ಭಾವಿಸಿ, ನಿಸ್ಪೃಹನಾಗಿ, ಎಲ್ಲ ವಿಷಯಪದಾರ್ಥಗಳಿಂದ ಮುಕ್ತನಾಗಿ ವೈಕುಂಠಲೋಕದಲ್ಲಿ ಭಗವಂತನಿಂದಲೇ ಸಂಬಂಧವನ್ನು ಹೊಂದಿ ಸುಖಿಯಾಗಿ ರಮಣಮಾಡುತ್ತಾನೆ.
ಏವಮೇಷಾ ಮಹಾರಾಜ ಜಾಪಕಸ್ಯ ಗತಿರ್ಯಥಾ |
ಏತತ್ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ 131 ॥
ಧರ್ಮರಾಜನೇ, ಜಾಪಕನು ಹೊಂದಿದ ಗತಿ ಎಂಬುದನ್ನು ತಿಳಿಸುವ ಮೂಲಕ ಗಾಯತ್ರೀಮಂತ್ರದ ಮಹಿಮೆಯನ್ನೂ, ನರಕಗಳೆಂದರೆ ಏನು ಎಂಬುದನ್ನು ವಿಸ್ತಾರವಾಗಿ ವಿವರಿಸಿದ್ದೇನೆ. ಪುನಃ ಮತ್ತೇನು ಕೇಳಲು ಇಚ್ಛೆಯುಳ್ಳವನಾಗಿರುವಿ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಜಾಪಕೋಪಾಖ್ಯಾನ
ಯುಧಿಷ್ಠಿರಃ
ಕಿಮುತ್ತರಂ ತದಾ ತೌ ಸ್ಮ ಚಕ್ರತುಸ್ತೇನ ಭಾಷಿತೇ |
ಬ್ರಾಹ್ಮಣೋ ವಾಥ ವಾ ರಾಜಾ ತನ್ಮೇ ಬ್ರೂಹಿ ಪಿತಾಮಹ ॥ 1 ॥
ಯುಧಿಷ್ಠಿರ ಪಿತಾಮಹನೇ, ವಿರೂಪನು ಹಾಗೆ ಹೇಳಿದ ಬಳಿಕ ಇಕ್ಷ್ವಾಕು ರಾಜ ಮತ್ತು ಬ್ರಾಹ್ಮಣನು ಏನು ಮಾಡಿದರು? ಯಾವ ಉತ್ತರವನ್ನು ಅವನಿಗೆ ನೀಡಿದರು? ಅದನ್ನು ನನಗೆ ತಿಳಿಸಿರಿ.
ಅಥ ವಾ ತೌ ಗತೌ ತತ್ರ ಯದೇತತ್ ಕೀರ್ತಿತಂ ತ್ವಯಾ |
ಸಂವಾದೋ ವಾ ತಯೋಃ ಕೋಽಭೂತ್ ಕಿಂ ವಾ ತೌ ತತ್ರ ಚಕ್ರತುಃ ॥
ಅಥವಾ ಅವರು ಯಾವ ಗತಿಯನ್ನು ಹೊಂದಿದರು? ಅವರಿಬ್ಬರಲ್ಲಿ ನಡೆದ ಸಂವಾದಗಳೇನು? ನೀವು ಹೇಳಿದ ಆ ಕಥೆಯಲ್ಲಿರುವ ನನ್ನ ಜಿಜ್ಞಾಸೆಯನ್ನು ಪೂರ್ಣ ಮಾಡಿರಿ. ಇಕ್ಷ್ವಾಕು ರಾಜನು ಮತ್ತು ಬ್ರಾಹ್ಮಣನು ಬಳಿಕ ಏನು ಮಾಡಿದರು ಎಂದು ತಿಳಿಯಲು ಕುತೂಹಲವಿದೆ.
ಭೀಷ್ಮಃ
ತಥೇತ್ಯೇವಂ ಪ್ರತಿಶ್ರುತ್ಯ ಧರ್ಮಂ ಸಂಪೂಜ್ಯ ಚಾಭಿಭೋ |
ಯಮಂ ಕಾಲಂ ಚ ಮೃತ್ಯುಂ ಚ ಸ್ವರ್ಗಂ ಸಂಪೂಜ್ಯ ಚಾರ್ಹತಃ ॥ 3 ॥
ಭೀಷ್ಮ ಬಳಿಕ ಬ್ರಾಹ್ಮಣನು ಹಾಗೆಯೇ ಆಗಲೆಂದು ಕಾಲ, ಧರ್ಮ, ಮೃತ್ಯು ದೇವತೆಗಳನ್ನು, ಸ್ವರ್ಗವನ್ನು ಪೂಜಿಸಿ, ನೀವು ಹೇಳಿದಂತೆ ಆಗಲಿ ಎಂದನು.
ಪೂರ್ವಂ ಯೇ ಚಾಪರೇ ತತ್ರ ಸಮೇತಾ ಬ್ರಾಹ್ಮಣರ್ಷಭಾಃ |
ಸರ್ವಾನ್ ಸಂಪೂಜ್ಯ ಶಿರಸಾ ರಾಜಾನಂ ಸೋಽಬ್ರವೀದ್ವಚಃ ॥ 4 ॥
ಅಲ್ಲಿ ನೆರೆದಿದ್ದ ಇತರ ಬ್ರಾಹ್ಮಣರನ್ನು ಪೂಜಿಸಿ ರಾಜನನ್ನು ನೋಡಿ, ರಾಜನಿಗೆ ಹೀಗೆ ಹೇಳಿದನು.
ಫಲೇನಾನೇನ ಸಂಯುಕ್ತೋ ರಾಜರ್ಷೇ ಗಚ್ಛ ಪುಣ್ಯತಾಮ್ |
ಭವತಾ ಚಾಭ್ಯನುಜ್ಞಾತೋ ಜಪೇಯಂ ಭೂಯ ಏವ ಹಿ ॥ 5 ॥
ರಾಜರ್ಷಿಯೇ, ನನ್ನ ಜಪಫಲದಿಂದ ನೀನು ಉತ್ತಮಫಲವನ್ನು ಹೊಂದು. ನನಗೆ ತಿರುಗಿ ಇದೇ ಜಪದಲ್ಲಿರಲು ಅನುಮತಿಯನ್ನು ನೀಡು. ನಿನ್ನ ಅನುಮತಿಯಿಂದ ನಾನು ಪುನಃ ಜಪದಲ್ಲೇ ನಿರತನಾಗುತ್ತೇನೆ.
ವರಶ್ಚ ಮಮ ಪೂರ್ವಂ ಹಿ ದೇವ್ಯಾ ದತ್ತೋ ಮಹಾಬಲ |
ಶ್ರದ್ಧಾ ತೇ ಜಪತೋ ನಿತ್ಯಂ ಭವಿತೇತಿ ವಿಶಾಂ ಪತೇ ॥ 6 ॥
ಹಿಂದೆ ಇದೇ ಜಪದಲ್ಲಿ ನಿತ್ಯಶ್ರದ್ಧೆ ಉಂಟಾಗಲಿ ಎಂದು ಸಾವಿತ್ರೀ ದೇವಿಯು ನನಗೆ ವರವನ್ನು ಕೊಟ್ಟಿರುವಳು.
ರಾಜಾ
ಯದ್ಯೇವಮಫಲಾ ಸಿದ್ಧಿಃ ಶ್ರದ್ಧಾ ಚ ಜಪಿತುಂ ತವ |
ಗಚ್ಛ ವಿಪ್ರ ಮಯಾ ಸಾರ್ಧಂ ಜಾಪಕಂ ಫಲಮಾಪ್ನುಹಿ ॥ 7 ॥
ರಾಜ ಎಲೈ ವಿಪ್ರೋತ್ತಮನೇ, ನನಗೆ ಜಪದ ಫಲವನ್ನು ಕೊಟ್ಟಿದ್ದರಿಂದ ಇಲ್ಲಿಯ ತನಕ ಮಾಡಿದ ನಿನ್ನ ಜಪದ ಫಲವು ನಾಶವಾಯಿತೆಂದು ನೀನು ಪುನಃ ಜಪವನ್ನು ಮಾಡಲು ಸಂಕಲ್ಪಿಸಿದ್ದಲ್ಲಿ, ನೀನು ನನಗೆ ಕೊಟ್ಟ ಜಪದ ಫಲದಲ್ಲಿ ನನ್ನೊಡನೆ ನೀನೂ ಅರ್ಧವನ್ನು ಅನುಭವಿಸು. ನನ್ನ ಜೊತೆಗೆ ಆಗಮಿಸಿ ನಿನ್ನ ಜಪದ ಫಲವನ್ನು ಹೊಂದುವವನಾಗು.

ಬ್ರಾಹ್ಮಣಃ
ಕೃತಃ ಪ್ರಯತ್ನಃ ಸುಮಹಾನ್ ಸರ್ವೇಷಾಂ ಸನ್ನಿಧಾವಿಹ |
ಸಹ ತುಲ್ಯಫಲೌ ಚಾವಾಂ ಗಚ್ಛಾವೋ ಯತ್ರ ನೌ ಗತಿಃ ॥ 8 ॥
ಬ್ರಾಹ್ಮಣ ರಾಜೇಂದ್ರನೇ, ಹಿಂದೆ ನೀನು ನಾನು ಜಪದ ಫಲವನ್ನು ಕೊಡುವುದರ ಮೊದಲೇ ನಿನ್ನ ಕರ್ಮಫಲವನ್ನು ಕೊಡುವುದಕ್ಕೆ ಎಷ್ಟೋ ಪ್ರಯತ್ನವನ್ನು ಮಾಡಿರುವೆ. ನಾವಿಬ್ಬರೂ ಇನ್ನೊಂದು ಜನ್ಮದಲ್ಲಿ ಸಮಾನವಾದ ಫಲವನ್ನು ಹೊಂದಿ ಸ್ವರ್ಗಕ್ಕೆ ಹೋಗೋಣ.
ಭೀಷ್ಮಃ
ವ್ಯವಸಾಯಂ ತಯೋಸ್ತತ್ರ ವಿದಿತ್ವಾ ತ್ರಿದಶೇಶ್ವರಃ |
ಸಹ ದೇವೈರುಪಯಯೌ ಲೋಕಪಾಲೈಸ್ತಥೈವ ಚ ॥ 9 ॥
ಭೀಷ್ಮ ಇವರ ಈ ನಿಶ್ಚಯವಾದ ಅಭಿಪ್ರಾಯವನ್ನು ತಿಳಿದ ದೇವೇಂದ್ರನು ಎಲ್ಲಾ ದಿಕ್ಪಾಲಕರಿಂದ, ದೇವತೆಗಳಿಂದ ಒಡಗೂಡಿ ಅವರು ಇರುವ ಸ್ಥಳಕ್ಕೆ ಆಗಮಿಸಿದನು.
ಸಾಧ್ಯಾ ವಿಶ್ವೇಽಥ ಮರುತೋ ವಾಕ್ಯಾನಿ ಸುಮಹಾಂತಿ ಚ |
ನದ್ಯಃ ಶೈಲಾಃ ಸಮುದ್ರಾಶ್ಚ ತೀರ್ಥಾನಿ ವಿವಿಧಾನಿ ಚ ॥ 10 ॥
ತಪಾಂಸಿ ಸಂಯೋಗವಿಧಿರ್ವೇದಾಃ ಸ್ತೋಭಾಃ ಸರಸ್ವತೀ |
ನಾರದಃ ಪರ್ವತಶ್ಚೈವ ವಿಶ್ವಾವಸುರ್ಹಹಾ ಹುಹೂಃ |
ತುಂಬುರುಪ್ರಮುಖಾಶ್ಚೈವ ಹಾಹಾ ಹೂಹೂಸ್ತಥೈವ ಚ |
ಆಜಗಾಮ ಚ ದೇವೇಶೋ ಬ್ರಹ್ಮಾ ವೇದಮಯೋಽವ್ಯಯಃ ॥ 11 ॥
ಸಾಧ್ಯರು, ವಿಶ್ವೇದೇವತೆಗಳು, ಮರುತ್ತುಗಳು ಇವರೆಲ್ಲರೂ ಭಾರತ, ಪುರಾಣಾದಿ ಪೌರುಷೇಯ ವಾಕ್ಯಗಳ ಅಭಿಮಾನಿ ದೇವತೆಗಳು, ನದ್ಯಭಿಮಾನಿಗಳು, ಸಮುದ್ರಾಭಿ- ಮಾನಿಗಳು, ವಿವಿಧ ತೀರ್ಥಾಭಿಮಾನಿ ದೇವತೆಗಳು, ಸಮಸ್ತ ತಪಸ್ಸುಗಳು, ಸಮೀಚೀನವಾದ ಯೋಗವಿಧಿಗಳು, ವೇದಗಳು, ಸಾಮಗಾನದಲ್ಲಿ ಬರುವ ಹಾ ಊ ಇತ್ಯಾದಿ ಸ್ತೋಭಾಕ್ಷರಗಳ ಅಭಿಮಾನಿದೇವತೆಗಳು, ಸರಸ್ವತೀ ದೇವಿ, ನಾರದರು, ಪರ್ವತ ಎಂಬ ಮುನಿ, ವಿಶ್ವಾವಸು, ಹಹಾ, ಹುಹೂ, ತುಂಬುರು ಮುಂತಾದ ಪ್ರಮುಖರಾದವರು, ಹಾಹಾ-ಹುಹೂ ಗಂಧರ್ವರ ಜೊತೆಗೆ ಆಗಮಿಸಿದರು. ನಾಶರಹಿತನಾದ, ದೇವೇಶನಾದ ಚತುರ್ಮುಖಬ್ರಹ್ಮನೂ ಅಲ್ಲಿಗೆ ಆಗಮಿಸಿದನು.
ಗಂಧರ್ವಶ್ಚಿತ್ರಸೇನಶ್ಚ ಪರಿವಾರಗಣೈರ್ಯುತಃ |
ನಾಗಾಃ ಸಿದ್ಧಾಶ್ಚ ಮುನಯೋ ದೇವದೇವಃ ಪ್ರಜಾಪತಿಃ |
ವಿಷ್ಣುಃ ಸಹಸ್ರಶೀರ್ಷಶ್ಚ ದೇವೋಽಚಿಂತ್ಯಃ ಸಮಾಗಮತ್ ॥ 12 ॥
ಗಂಧರ್ವರು, ಚಿತ್ರಸೇನನು, ಪರಿವಾರ ಗಣಗಳಿಂದ ಸಹಿತರಾಗಿ ಆಗಮಿಸಿದರು. ನಾಗರು, ಸಿದ್ಧರು, ಮುನಿಗಳು, ದೇವದೇವನಾದ ಪ್ರಜಾಪತಿಯು, ಅಚಿಂತ್ಯ ಮಹಿಮನೂ, ಸಹಸ್ರಶೀರ್ಷನೂ ಆದ ವಿಷ್ಣುವು ಎಲ್ಲರೂ ಅಲ್ಲಿಗೆ ಬಂದು ಸೇರಿದರು.
ಅವಾದ್ಯಂತಾಂತರಿಕ್ಷೇ ಚ ಭೇರ್ಯಸ್ತೂರ್ಯಾಣಿ ಚಾಭಿಭೋ |
ಪುಷ್ಪವರ್ಷಾಣಿ ದಿವ್ಯಾನಿ ತತ್ರ ತೇಷಾಂ ಮಹಾತ್ಮನಾಮ್ |
ನನೃತುಶ್ಚಾಪ್ಸರಃಸಂಘಾಸ್ತತ್ರ ತತ್ರ ಸಮಂತತಃ ॥ 13 ॥
ಈ ಸಂಭ್ರಮದ ಸಮಯದಲ್ಲಿ ಅಂತರಿಕ್ಷದಿಂದ ದಿವ್ಯವಾದ ವಾದ್ಯಘೋಷಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿಯನ್ನು ಸುರಿದರು. ಅಪ್ಸರೆಯರು ನರ್ತಿಸಿದರು. ಎಲ್ಲರೂ ಸಾಮೂಹಿಕವಾಗಿ ಸಂಭ್ರಮಿಸಿದರು.
ಅಥ ಸ್ವರ್ಗಸ್ತಥಾ ರೂಪೀ ಬ್ರಾಹ್ಮಣಂ ವಾಕ್ಯಮಬ್ರವೀತ್ |
ಸಂಸಿದ್ಧಸ್ತ್ವಂ ಮಹಾಭಾಗ ತ್ವಂ ಚ ಸಿದ್ಧಸ್ತಥಾ ನೃಪ ॥ 14 ॥
ಅದೇ ಪ್ರಸಂಗದಲ್ಲಿ ಮೂರ್ತಿಮತ್ತಾದ ಸ್ವರ್ಗವು ಬ್ರಾಹ್ಮಣನನ್ನೂ, ರಾಜನನ್ನು ನೋಡಿ ನೀವಿಬ್ಬರೂ ಯೋಗಸಿದ್ಧಿಯನ್ನು ಹೊಂದಿದಿರಿ ಎಂದು ಹೇಳಿತು.
ಅಥ ತೌ ಸಹಿತೌ ರಾಜನ್ನನ್ಯೋನ್ಯೇನ ವಿಧಾನತಃ |
ವಿಷಯಪ್ರತಿಸಂಹಾರಮುಭಾವೇವ ಪ್ರಚಕ್ರತುಃ ॥ 15 ॥
ಪ್ರಾಣಾಪಾನೌ ತಥೋದಾನಂ ಸಮಾನಂ ವ್ಯಾನಮೇವ ಚ |
ಏವಂ ತಾನ್ಮನಸಿ ಸ್ಥಾಪ್ಯ ದಧತುಃ ಪ್ರಾಣಯೋರ್ಮನಃ ॥ 16 ॥
ಧರ್ಮಪುತ್ರನೇ, ಬ್ರಾಹ್ಮಣನೂ ರಾಜನು ಹೀಗೆ ಪರಸ್ಪರವಾಗಿ ತಮಗೆ ಕ್ಷೇಮವನ್ನು ಆಚರಿಸಿಕೊಂಡು ಪ್ರಪಂಚದ ವಿಷಯದಿಂದ ಎಲ್ಲಾ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಪ್ರಾಣಾದಿ ಪಂಚವಾಯುಗಳನ್ನು ಹೃದಯದಲ್ಲಿ ನಿಲ್ಲಿಸಿ, ಮನಸ್ಸನ್ನು ಪ್ರಾಣಾಪಾನವೆಂಬ ವಾಯುವಿನಲ್ಲಿ ನೆಲೆಗೊಳಿಸಿದರು.
ಉಪಸ್ಥಿತಕೃತೌ ತತ್ರ ನಾಸಿಕಾಗ್ರಮಧೋ ಭ್ರುವೌ |
ಕುಂಕುಣ್ಯಾಂ ಚೈವ ಮನಸಾ ಶನೈರ್ಧಾರಯತಃ ಸ್ಮ ತೌ ॥ 17 ॥
ನಿಶ್ಚೇಷ್ಟಾಭ್ಯಾಂ ಶರೀರಾಭ್ಯಾಂ ಸ್ಥಿರದೃಷ್ಟೀ ಸಮಾಹಿತೌ |
ಜಿತಾಸನೌ ತಥಾಧಾಯ ಮೂರ್ಧನ್ಯಾತ್ಮಾನಮೇವ ಚ ॥ 18 ॥
ವಾಯುಗಳನ್ನು ನಿಗ್ರಹಿಸಿಕೊಂಡು ಮೂಗಿನ ತುದಿಯಲ್ಲಿ ಬೀರಲ್ಪಟ್ಟ ದೃಷ್ಟಿಗಳಾಗಿ, ಹುಬ್ಬಿಗೂ ದೃಷ್ಟಿಗೂ ಮಧ್ಯದಲ್ಲಿರುವ ಸಂಧಿಸ್ಥಾನದಲ್ಲಿ ಪ್ರಾಣವಾಯುವಿನ ಜೊತೆಗೆ ಮನಸ್ಸನ್ನು ತಂದು ಸೇರಿಸಿದರು. ಹೀಗೆ ಅವರೀರ್ವರೂ ಯೋಗದಲ್ಲಿ ನಿರತರಾಗಿರಲು ಸ್ಥಿರವಾದ ದೃಷ್ಟಿಯಿಂದ ಭಗವಂತನನ್ನೇ ಧ್ಯಾನಿಸುತ್ತಾ ದೇಹದಿಂದ ನಿಶ್ಚೇಷ್ಟರಾದರು. ಆಸನಜಯವನ್ನು ಸಂಪಾದಿಸಿ

ಸಮಾಧಿಯಿಂದ ತಮ್ಮ ಪ್ರಾಣವನ್ನು ಸುಷುಮ್ನೆಯ ಮೂಲಕ ಮೂರ್ಧಸ್ಥಾನಕ್ಕೆ ಸೇರಿಸಿದರು.
ತಾಲುದೇಶಮಥೋದ್ದಾಲ್ಯ ಬ್ರಾಹ್ಮಣಸ್ಯ ಮಹಾತ್ಮನಃ |
ಜ್ಯೋತಿರ್ಜ್ವಾಲಾ ಸುಮಹತೀ ಜಗಾಮ ತ್ರಿದಿವಂ ತದಾ ॥ 19 ॥
ತಲೆಯ ಮಧ್ಯದ ಕೆಳಭಾಗದಲ್ಲಿರುವ ತಾಲುದೇಶದಲ್ಲಿ ಪ್ರಾಣವನ್ನು ನೇಮಿಸಿಕೊಂಡು ಇರುತ್ತಿರಲು ಮಹಾತ್ಮನಾದ ಬ್ರಾಹ್ಮಣನ ಆತ್ಮವು ಜ್ವಲಿಸುವ ಜ್ಯೋತಿಯ ಆಕಾರವನ್ನು ತಾಳಿ ಆ ಪ್ರಸಂಗದಲ್ಲಿ ಸ್ವರ್ಗವನ್ನು ಹೊಂದಿತು.
ಹಾಹಾಕಾರಸ್ತತೋ ದಿಕ್ಷು ಸರ್ವಾಸು ಸುಮಹಾನಭೂತ್ |
ತಜ್ಜ್ಯೋತಿಃ ಸ್ತೂಯಮಾನಂ ಸ್ಮ ಬ್ರಹ್ಮಾಣಂ ಪ್ರಾವಿಶತ್ತದಾ ॥ 20 ॥
ಆ ಪ್ರಸಂಗದಲ್ಲಿ ಸಮಸ್ತ ದಿಕ್ಕುಗಳಲ್ಲಿ ದೊಡ್ಡ ಹಾಹಾಕಾರವು ಉಂಟಾಯಿತು. ಬ್ರಾಹ್ಮಣನ ನಡುನೆತ್ತಿಯನ್ನು ಜ್ವಲಿಸಿಕೊಂಡು ಹೊರಟ ಜ್ಯೋತಿಯು ಎಲ್ಲಾ ದೇವತೆಗಳ ಸ್ತುತಿವಾಕ್ಯಗಳೊಡನೆ ಪರಬ್ರಹ್ಮನಲ್ಲಿ ಸೇರಿತು.
ತತಃ ಸ್ವಾಗತಮಿತ್ಯಾಹ ತತ್ತೇಜಃ ಸ ಪಿತಾಮಹಃ |
ಪ್ರಾದೇಶಮಾತ್ರಂ ಪುರುಷಂ ಪ್ರತ್ಯುದ್ಗಮ್ಯ ವಿಶಾಂಪತೇ ॥ 21 ॥
ಆ ತೇಜಸ್ಸು ಆಗಮಿಸುವಾಗ ಪಿತಾಮಹನೆನಿಸಿದ ಬ್ರಹ್ಮನು ಅದನ್ನು ಕುರಿತು ಸ್ವಾಗತ ಎಂದು ಹೇಳಿ ಪ್ರಾದೇಶ ಪರಿಮಿತಿಯುಳ್ಳ ಆ ದಿವ್ಯಾಕೃತಿಯನ್ನು ಸತ್ಕರಿಸಿದನು.
ಭೂಯಶ್ಚೈವಾಪರಂ ಪ್ರಾಹ ವಚನಂ ಮಧುರಂ ಸ್ಮ ಸಃ |
ಜಾಪಕೈಸ್ತುಲ್ಯಫಲತಾ ಯೋಗಾನಾಂ ನಾತ್ರ ಸಂಶಯಃ ॥ 22 ॥
ಪುನಃ ಮಧುರವಾದ ವಚನವನ್ನು ಆ ದಿವ್ಯಾಕೃತಿಯನ್ನು ಕುರಿತು ಹೇಳಿದನು. ಜಪಶೀಲರಿಗೂ, ಯೋಗಿಗಳಿಗೂ ಸಮಾನವಾದ ಫಲವುಂಟು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.
ಯೋಗಸ್ಯ ತಾವದೇತೇಭ್ಯಃ ಫಲಂ ಪ್ರತ್ಯಕ್ಷದರ್ಶನಮ್ |
ಜಾಪಕಾನಾಂ ವಿಶಿಷ್ಟಂ ತು ಪ್ರತ್ಯುತ್ಥಾನಂ ಸಮಾಧಿಕಮ್ ॥ 23 ॥
ಉಷ್ಯತಾಂ ಮಯಿ ಚೇತ್ಯುಕ್ತ್ವಾಚೇತಯತ್ಸ ತತಃ ಪುನಃ |
ಅಥಾಸ್ಯ ಪ್ರವಿವೇಶಾಸ್ಯಂ ಬ್ರಾಹ್ಮಣೋ ವಿಗತಜ್ವರಃ ॥ 24 ॥
ಯೋಗಫಲವು ಇಲ್ಲಿಯೇ ಪ್ರತ್ಯಕ್ಷವಾಗಿದೆ. ಜಾಪಕರಲ್ಲಿ ಇರುವ ವೈಶಿಷ್ಟ್ಯವೇನೆಂದರೆ ಜಾಪಕರಿಗೆ ಬ್ರಹ್ಮದೇವರೇ ಎದ್ದು ಬಂದು ಸ್ವಾಗತವನ್ನು ಹೇಳುತ್ತಾರೆ ಎಂಬುದು.  ಈ ರೀತಿಯಾದ ಪ್ರಿಯವಾಕ್ಯಗಳನ್ನು ನುಡಿದು, ಇನ್ನು ಮುಂದೆ ನೀನು ನನ್ನ ಬಳಿಯೇ ಸುಖವಾಗಿ ವಾಸಿಸು ಎನ್ನುತ್ತಾ ಪರಬ್ರಹ್ಮನು ತನ್ನ ಬಾಯನ್ನು ತೆರೆದನು. ಕೂಡಲೇ ಬ್ರಾಹ್ಮಣನು ಯಾವುದೇ ಸಂಶಯವಿಲ್ಲದೆ ಬ್ರಹ್ಮನ ಮುಖವನ್ನು ಪ್ರವೇಶಿಸಿದನು.
ರಾಜಾಪ್ಯೇತೇನ ವಿಧಿನಾ ಭಗವಂತಂ ಪಿತಾಮಹಮ್ |
ಯಥೈವ ದ್ವಿಜಶಾರ್ದೂಲಸ್ತಥೈವ ಪ್ರಾವಿಶತ್ತದಾ ॥ 25 ॥
ಇದೇ ಕ್ರಮದಿಂದ ರಾಜನೂ ಬ್ರಹ್ಮನ ಮುಖದಲ್ಲಿ ಪ್ರವೇಶಿಸಿದನು.
ಸ್ವಯಂಭುವಮಥೋ ದೇವಾ ಅಭಿವಾದ್ಯ ತತೋಽಬ್ರುವನ್ |
ಜಾಪಕಾರ್ಥಮಯಂ ಯತ್ನಸ್ತದರ್ಥಂ ವಯಮಾಗತಾಃ ॥ 26 ॥
ಅಲ್ಲಿ ನೆರೆದಿದ್ದ ದೇವತೆಗಳೆಲ್ಲರೂ ಬ್ರಹ್ಮದೇವನಿಗೆ ವಂದಿಸಿ ಜಪಮಾಡಿದವರಲ್ಲಿ ಬ್ರಹ್ಮದೇವರು ಹೇಗೆ ಎದ್ದುನಿಂತು ಗೌರವಿಸುತ್ತಾರೆಂಬುದನ್ನು ನೋಡಲು ನಾವು ಇಲ್ಲಿಗೆ ಆಗಮಿಸಿದೆವು. ಜಾಪಕರಿಗಿರುವ ವಿಶೇಷವನ್ನು ತೋರಲು ನಮ್ಮ ಈ ಆಗಮನದ ಪ್ರಯತ್ನವು ನಡೆದಿದೆ.
ಕೃತಪೂಜಾವಿಮೌ ತುಲ್ಯಂ ತ್ವಯಾ ತುಲ್ಯಫಲಾವಿಮೌ |
ಯೋಗಜಾಪಕಯೋರ್ದೃಷ್ಟಂ ಫಲಂ ಸುಮಹದದ್ಯ ವೈ |
ಸರ್ವಾಂಲ್ಲೋಕಾನತೀತ್ಯೈತೌ ಗಚ್ಛೇತಾಂ ಯತ್ರ ವಾಂಛಿತಮ್ ॥ 27 ॥
ಈ ಪ್ರಸಂಗದಲ್ಲಿ ಬ್ರಾಹ್ಮಣನಿಗೂ, ರಾಜನಿಗೂ ಸಮಾನವಾದ ಫಲವನ್ನುಂಟು ಮಾಡಿ ಇಬ್ಬರನ್ನೂ ಸಮಸ್ಥಾನದಲ್ಲಿ ಕುಳ್ಳಿರಿಸಿ ಸಮಾನವಾದ ಪೂಜೆಯನ್ನೇ ಮಾಡಿದಂತಾಗಿದೆ. ಯೋಗಿಗಳಿಗೂ, ಜಾಪಕರಿಗೂ ಉಂಟಾಗುವ ಮಹಾಫಲವನ್ನು ನಾವು ಪ್ರತ್ಯಕ್ಷವಾಗಿ ನೋಡಿದಂತಾಯಿತು. ಈ ಮಹಾತ್ಮರು ಸಮಸ್ತ ಲೋಕಗಳನ್ನು ಸಂಚರಿಸುತ್ತಾ ತಮ್ಮ ಇಷ್ಟಬಂದ ಗತಿಗೆ ಹೋಗಲು ಅರ್ಹರಾಗಿದ್ದಾರೆ ಎಂದನು.
ಬ್ರಹ್ಮಾ
ಮಹಾಸ್ಮೃತಿಂ ಪಠೇದ್ಯಸ್ತು ತಥೈವಾನುಸ್ಮೃತಿಂ ಶುಭಾಮ್ |
ತಾವಪ್ಯೇತೇನ ವಿಧಿನಾ ಗಚ್ಛೇತಾಂ ಮತ್ಸಲೋಕತಾಮ್ ॥ 28 ॥
ಬ್ರಹ್ಮಾ ದೇವತೆಗಳೇ, ಯಾರು ಜಾಪಕಬ್ರಾಹ್ಮಣನ ಚರಿತ್ರೆ ಎಂಬ ಈ ಮಹಾಸ್ಮೃತಿಯನ್ನು, ಅವನಿಗೆ ಅನುಕೂಲವಾಗಿರುವ ಇಕ್ಷ್ವಾಕು ರಾಜನ ಚರಿತ್ರೆ ಎಂಬ ಅನುಸ್ಮೃತಿಯನ್ನು ಅಧ್ಯಯನ ಮಾಡಿದರೂ ಇದೇ ರೀತಿಯಾದ ವಿಧಿಯಿಂದ ನನ್ನ ಲೋಕವನ್ನೇ ಹೊಂದುತ್ತಾರೆ.
ಯಶ್ಚ ಯೋಗೇ ಭವೇದ್ಭಕ್ತಃ ಸೋಽಪಿ ನಾಸ್ತ್ಯತ್ರ ಸಂಶಯಃ |
ವಿಧಿನಾನೇನ ದೇಹಾಂತೇ ಮಮ ಲೋಕಾನವಾಪ್ನುಯಾತ್ |
ಗಮ್ಯತಾಂ ಸಾಧಯಿಷ್ಯಾಮಿ ಯಥಾಸ್ಥಾನಾನಿ ಸಿದ್ಧಯೇ ॥ 29 ॥
ಯೋಗಭಕ್ತಿಯುಳ್ಳವರು ತಮ್ಮ ದೇಹಾವಸಾನ ಸಮಯದಲ್ಲಿ ಇದೇ ವಿಧದಿಂದ ನನ್ನ ಲೋಕಗಳನ್ನು ಹೊಂದುತ್ತಾರೆ. ಇದರಲ್ಲಿ

ಯಾವ ಸಂಶಯವೂ ಇಲ್ಲ. ನೀವು ನಿಮ್ಮ ಕಾರ್ಯಗಳಿಗಾಗಿ ನಿಮ್ಮ ಸ್ಥಾನಕ್ಕೆ ಹೊರಡಿರಿ ಎಂದು ಆದೇಶಿಸಿದನು.
ಭೀಷ್ಮಃ
ಇತ್ಯುಕ್ತಾಸ್ತೇ ಸ ತದಾ ದೇವಸ್ತತ್ರೈವಾಂತರಧೀಯತ |
ಆಮಂತ್ರ್ಯ ತಂ ತತೋ ದೇವಾ ಯಯುಃ ಸ್ವಂ ಸ್ವಂ ನಿವೇಶನಮ್ ||
ಭೀಷ್ಮ ಈ ರೀತಿಯಾದ ಬ್ರಹ್ಮನ ಮಾತನ್ನು ಕೇಳಿಸಿಕೊಂಡ ದೇವತೆಗಳು ಅಲ್ಲಿಯೇ ಅದೃಶ್ಯರಾದರು. ಬ್ರಹ್ಮನನ್ನು ತಮ್ಮ ಸ್ಥಾನಕ್ಕೆ ಆಗಮಿಸಬೇಕೆಂದು ಆಹ್ವಾನಿಸಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.
ತೇ ಚ ಸರ್ವೇ ಮಹಾತ್ಮಾನೋ ಧರ್ಮಂ ಸತ್ಕೃತ್ಯ ತತ್ರ ವೈ |
ಪೃಷ್ಠತೋಽನುಯಯೂ ರಾಜನ್ ಸರ್ವೇ ಸುಪ್ರೀತಮಾನಸಾಃ || 31 ||
ಮಹಾತ್ಮರಾದ ಅವರೆಲ್ಲರೂ ಧರ್ಮವನ್ನು ಸತ್ಕರಿಸಿ ಪ್ರೀತರಾಗಿ ಅವನನ್ನು ಹಿಂಬಾಲಿಸಿ ಹೊರಟರು. ಅವರೆಲ್ಲರೂ ಸಂತುಷ್ಟವಾದ ಮನಸ್ಸುಳ್ಳವರಾಗಿದ್ದರು.
ಏತತ್ಫಲಂ ಜಾಪಕಾನಾಂ ಗತಿಶ್ಚೈವ ಪ್ರಕೀರ್ತಿತಾ |
ಯಥಾಶ್ರುತಂ ಮಹಾರಾಜ ಕಿಂ ಭೂಯಃ ಶ್ರೋತುಮಿಚ್ಛಸಿ || 32 ||
ಜಪಶೀಲರಿಗೆ ಲಭಿಸುವ ಫಲವು, ಅವರಿಗೆ ದೊರೆಯುವ ಸದ್ಗತಿಯು ಈ ತರವಾಗಿದೆ. ನಾನು ಕೇಳಿದಂತೆ ಹೇಳಿದ್ದೇನೆ. ಮತ್ತೇನು ಕೇಳಬಯಸುತ್ತಿ ಹೇಳು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಷಡ್ವಿಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಜ್ಞಾನಯೋಗಾದಿಗಳ ಫಲವನ್ನು, ಭಗವತ್ಸ್ವರೂಪವನ್ನು ತಿಳಿಯುವ ಮಾರ್ಗವನ್ನು ಭೀಷ್ಮರು ಮನು-ಬೃಹಸ್ಪತಿಗಳ ಸಂವಾದದ ಮೂಲಕ ಧರ್ಮರಾಜನಿಗೆ ತಿಳಿಸಿದುದು.
ಯುಧಿಷ್ಠಿರಃ
ಕಿಂ ಫಲಂ ಜ್ಞಾನಯೋಗಸ್ಯ ವೇದಾನಾಂ ನಿಯಮಸ್ಯ ಚ |
ಭೂತಾತ್ಮಾ ವಾ ಕಥಂ ಜ್ಞೇಯಸ್ತನ್ಮೇ ಬ್ರೂಹಿ ಪಿತಾಮಹ || 1 ||
ಯುಧಿಷ್ಠಿರ ತಾತನೇ, ಜ್ಞಾನಯೋಗಕ್ಕೆ ಫಲವೇನು? ವೇದನಿಯಮವೆನಿಸಿದ ಅಗ್ನಿಹೋತ್ರಾದಿಗಳಿಗೆ ಲಭಿಸುವ ಫಲವೇನು? ಭೂತಾತ್ಮನನ್ನು ತಿಳಿಯುವ ಉಪಾಯವೇನು? ಇವೆಲ್ಲವನ್ನೂ ನನಗೆ ತಿಳಿಸು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮನೋಃ ಪ್ರಾಜಾಪತೇರ್ವಾದಂ ಮಹರ್ಷೇಶ್ಚ ಬೃಹಸ್ಪತೇಃ || 2 ||
ಭೀಷ್ಮ ಧರ್ಮರಾಜನೇ, ಇದೇ ವಿಷಯದಲ್ಲಿ ಹಿಂದೆ ಮನು-ಬೃಹಸ್ಪತಿಗೆ ನಡೆದ ಸಂವಾದರೂಪವಾದ ಇತಿಹಾಸವನ್ನು ಹೇಳುತ್ತಾರೆ.
ಪ್ರಜಾಪತಿಂ ಶ್ರೇಷ್ಠತಮಂ ಪೃಥಿವ್ಯಾಂ
ದೇವರ್ಷಿಸಂಘಪ್ರವರೋ ಮಹರ್ಷಿಃ |
ಬೃಹಸ್ಪತಿಃ ಪ್ರಶ್ನಮಿಮಂ ಪುರಾಣಂ
ಪಪ್ರಚ್ಛಶಿಷ್ಯೋಽಥ ಗುರುಂ ಪ್ರಣಮ್ಯ || 3 ||
ಹಿಂದೆ ದೇವಗುರುವಾದ ಬೃಹಸ್ಪತಿಯು ತನಗೆ ಗುರುವಾದ ಚೇಷ್ಟತಮನಾದ ಮನುಪ್ರಜಾಪತಿಯ ಬಳಿಗೆ ಹೋಗಿ ನಮಸ್ಕರಿಸಿ ಗುರುವಿನ ಬಳಿ ಶಿಷ್ಯತ್ವವನ್ನು ಹೊಂದಿ ಈ ರೀತಿಯಾದ ಪ್ರಶ್ನೆಯನ್ನು ಕೇಳಿದನು.
ಯತ್ ಕಾರಣಂ ಮಂತ್ರವಿಧಿಃ ಪ್ರವೃತ್ತೋ
ಜ್ಞಾನೇ ಫಲಂ ಯತ್ ಪ್ರವದಂತಿ ವಿಪ್ರಾಃ |
ಯನ್ಮಂತ್ರಶಬ್ದೈರಕೃತ ಪ್ರಕಾಶಂ
ತದುಚ್ಯತಾಂ ಮೇ ಭಗವನ್ ಯಥಾವತ್ || 4 ||
ಆಚಾರ್ಯಪುರುಷರೇ, ಯಾವ ಕಾರಣದಿಂದ ವೇದೋಕ್ತವಾದ ಮಂತ್ರವಿಧಿಗಳು ಪ್ರವೃತ್ತಿಯನ್ನು ಹೊಂದಿವೆ? ಜ್ಞಾನಕ್ಕೆ ದೊರೆಯುವ ಫಲವೇನೆಂದು ಜ್ಞಾನಿಗಳು ತಿಳಿಸುತ್ತಾರೆ? ಯಾವುದನ್ನು ಮಂತ್ರಶಬ್ದವೆನಿಸಿದ ವೇದಗಳಿಂದ ಪ್ರಸಿದ್ಧಿ ಪಡಿಸಿದ್ದಾರೆ. ಪೂಜ್ಯರಾದ ನೀವು ಇವೆಲ್ಲವನ್ನೂ ಯಥಾವತ್ತಾಗಿ ಹೇಳಿರಿ.
ಯದರ್ಥಶಾಸ್ತ್ರಾಗಮಮಂತ್ರವಿದ್ಭಿ-
ರ್ಯಜ್ಞೈರನೇಕೈರ್ವರಗೋಪ್ರದಾನೈಃ |
ಫಲಂ ಮಹದ್ಭಿರ್ಯದುಪಾಸ್ಯತೇ ಚ
ತತ್ಕಿಂ ಕಥಂ ವಾ ಭವಿತಾ ಕ್ವ ವಾ ತತ್ || 5 ||
ಅರ್ಥಶಾಸ್ತ್ರ, ಆಗಮ, ಮಂತ್ರಾದಿಗಳನ್ನೆಲ್ಲಾ ತಿಳಿದ ಮಹಾತ್ಮರು ಯಜ್ಞ- ದಾನಾದಿಗಳನ್ನು ನಡೆಸಿ ಪಡೆಯುವ ಫಲ ಯಾವುದು? ಆ ಫಲವು ಎಲ್ಲಿಂದ ಲಭಿಸುತ್ತದೆ? ಹೇಗೆ ಲಭಿಸುತ್ತದೆ?
ಮಹೀ ಮಹೀಜಾಃ ಪವನೋಽಂತರಿಕ್ಷಂ

ಜಲೌಕಸಶ್ಚೈವ ಜಲಂ ದಿವಂ ಚ |
ದಿವೌಕಸಶ್ಚೈವ ಯತಃ ಪ್ರಸೂತಾ-
ಸ್ತದುಚ್ಯತಾಂ ಮೇ ಭಗವನ್ ಪುರಾಣಮ್ ॥ 6 ॥
ಈ ಭೂಮಿಯು, ಭೂಮಿಯಲ್ಲಿ ಹುಟ್ಟುವ ಪದಾರ್ಥಗಳು, ಗಾಳಿ, ಅಂತರಿಕ್ಷ, ನೀರು, ನೀರಿನೊಳಗಿರುವ ಜಂತುಗಳು, ದೇವಲೋಕ, ದೇವಲೋಕದಲ್ಲಿರುವ ದೇವತೆಗಳು ಇವರೆಲ್ಲರೂ ಯಾರ ದೆಸೆಯಿಂದ ಹುಟ್ಟನ್ನು ಪಡೆದಿದ್ದಾರೆ? ಈ ಪ್ರಾಚೀನವಾದ ಇತಿಹಾಸವನ್ನು ಪೂಜ್ಯರೇ, ನನಗೆ ತಿಳಿಸಿರಿ.
ಜ್ಞಾನಂ ಯತಃ ಪ್ರಾರ್ಥಯತೇ ನರೋ ವೈ
ತತಸ್ತದರ್ಥಾ ಭವತಿ ಪ್ರವೃತ್ತಿಃ |
ನ ಚಾಪ್ಯಹಂ ವೇದ ಪರಂ ಪುರಾಣಂ
ಮಿಥ್ಯಾಪ್ರವೃತ್ತಿಂ ಚ ಕಥಂ ನು ಕುರ್ಯಾಮ್ ॥ 7 ॥
ಮನುಷ್ಯನಾದವನು ಪ್ರಾರ್ಥಿಸಬೇಕಾದದ್ದು ಜ್ಞಾನವನ್ನಷ್ಟೇ! ಆದ್ದರಿಂದ ಎಲ್ಲಾ ಪ್ರವೃತ್ತಿಗಳು ಜ್ಞಾನಕ್ಕಾಗಿಯೇ. ನನಗಾದರೂ ಸರ್ವೋತ್ತಮನಾದ, ಪುರಾಣ ಪುರುಷನಾದ ಆ ಭಗವಂತನ ಐಶ್ವರ್ಯ-ಶಕ್ತಿಗಳು ಯಾವುದೂ ತಿಳಿದಿರುವುದಿಲ್ಲ. ಹೀಗೆ ತಿಳಿಯಲಾರದ ವಿಚಾರದಲ್ಲಿ ಸುಮ್ಮನೆ ಪ್ರವೃತ್ತಿಯನ್ನು ಹೇಗೆ ನಾನು ಹೊಂದಲು ಸಾಧ್ಯ?
ಋಕ್ಸಾಮಸಂಘಾಂಶ್ಚ ಯಜೂಂಷಿ ಚಾಹಂ
ಛಂದಾಂಸಿ ನಕ್ಷತ್ರಗತಿಂ ನಿರುಕ್ತಮ್ |
ಅಧೀತ್ಯ ಚ ವ್ಯಾಕರಣಂ ಸಕಲ್ಪಂ
ಶಿಕ್ಷಾಂ ಚ ಭೂತಪ್ರಕೃತಿಂ ನ ವೇದ್ಮಿ ॥ 8 ॥
ಋಗ್ವೇದ, ಸಾಮವೇದ ಮೊದಲಾದ ವೇದಸಮುದಾಯವು, ಛಂದಸ್ಸು, ಯಜುರ್ವೇದ, ಜ್ಯೋತಿಷ್ಯ, ನಿರುಕ್ತ, ವ್ಯಾಕರಣ, ಕಲ್ಪಸೂತ್ರ, ಶಿಕ್ಷೆಗಳೆಂಬ ವೇದಾಂಗಗಳನ್ನೆಲ್ಲ ನಾನು ಅಧ್ಯಯನ ಮಾಡಿದ್ದೇನೆ.
ಸ ಮೇ ಭವಾನ್ ಶಂಸತು ಸರ್ವಮೇತ-
ಜ್ಜ್ಞಾನೇ ಫಲಂ ಕರ್ಮಣಿ ವಾ ಯದಸ್ತಿ |
ಯಥಾ ಚ ದೇಹಾಚ್ಚ್ಯವತೇ ಶರೀರೀ
ಪುನಃ ಶರೀರಂ ಚ ಯಥಾಭ್ಯುಪೈತಿ ॥ 9 ॥
ಆದರೆ ಈ ಜ್ಞಾನಗಳ ಫಲವೇನು ಎನ್ನುವುದನ್ನು ಸರಿಯಾಗಿ ತಿಳಿದಿರುವುದಿಲ್ಲ. ಕರ್ಮದ ಫಲವೇನು ಎಂಬುದನ್ನೂ ತಿಳಿದಿರುವುದಿಲ್ಲ. ಅದೆಲ್ಲವನ್ನೂ ಹೇಳಲು ನೀವು ಅರ್ಹರಾಗಿರುತ್ತೀರಿ. ಜೀವನು ಈ ದೇಹವನ್ನು ತ್ಯಜಿಸಿದ ಬಳಿಕ ಪುನಃ ಶರೀರವನ್ನು ಹೇಗೆ ಹೊಂದುತ್ತಾನೆ ಎಂಬ ವಿಚಾರವನ್ನು ತಿಳಿಸಿರಿ.
ಮನುಃ
ಯದ್ಯತ್ ಪ್ರಿಯಂ ಯಸ್ಯ ಸುಖಂ ತದಾಹು-
ಸ್ತದೇವ ದುಃಖಂ ಪ್ರವದಂತ್ಯನಿಷ್ಟಮ್ |
ಇಷ್ಟಂ ಚ ಮೇ ಸ್ಯಾದಿತರಚ್ಚ ನ ಸ್ಯಾ-
ದೇತತ್ಕೃತೇ ಕರ್ಮವಿಧಿಃ ಪ್ರವೃತ್ತಃ |
ಇಷ್ಟಂ ತ್ವನಿಷ್ಟಂ ಚ ನ ಮಾಂ ಭಜೇತೇ-
ತ್ಯೇತತ್ಕೃತೇ ಜ್ಞಾನವಿಧಿಃ ಪ್ರವೃತ್ತಃ ॥ 10 ॥
ಮನು ಬೃಹಸ್ಪತಿಯೇ ಕೇಳು. ಲೋಕದಲ್ಲಿ ಒಬ್ಬನಿಗೆ ಯಾವುದು ಪ್ರಿಯವೋ ಅದೇ ಸುಖವೆನಿಸುತ್ತದೆ. ಅಪ್ರಿಯವಾದುದು ಅವನಿಗೆ ದುಃಖವೆನಿಸುತ್ತದೆ. ಸಾಂಸಾರಿಕ ಸುಖಗಳು ನನಗೆ ಇರಲಿ, ಸಾಂಸಾರಿಕ ದುಃಖಗಳು ನನಗೆ ಬೇಡ. ಈ ರೀತಿಯಾಗಿ ಸಾಂಸಾರಿಕ ಸುಖ-ದುಃಖಗಳ ಉದ್ದೇಶವನ್ನು ಹಿಡಿದು ಕರ್ಮಗಳು ಪ್ರವೃತ್ತವಾಗಿವೆ. ಈ ಸಾಂಸಾರಿಕವಾದ ಇಷ್ಟಾನಿಷ್ಟಗಳು ನನಗೆ ಬೇಡ ಎಂದು ತಿಳಿಸುವ ದೃಷ್ಟಿಯಿಂದ ಜ್ಞಾನವಿಧಿಯು ಪ್ರವೃತ್ತಿಯನ್ನು ಹೊಂದಿದೆ.
ಕಾಮಾತ್ಮಕಾಶ್ಛಂದಸಿ ಕರ್ಮಯೋಗಾ
ಏಭಿರ್ವಿಮುಕ್ತಃ ಪರಮಶ್ನುವೀತ |
ನಾನಾವಿಧೇ ಕರ್ಮಪಥೇ ಸುಖಾರ್ಥೀ
ನರಃ ಪ್ರವೃತ್ತೋ ನ ಪರಂ ಪ್ರಯಾತಿ |
ಪಲಂ ಹಿ ತತ್ ಕರ್ಮಪಥಾದಪೇತಂ
ನಿರಾಶಿಷಂ ಬ್ರಹ್ಮಪರಂ ಹ್ಯವಶ್ಯಮ್ ॥ 11 ॥
ವೇದೋಕ್ತಕರ್ಮದ ವಿಧಿಗಳೆಲ್ಲಾ ಲೌಕಿಕವಾದ ಆಸೆಯುಳ್ಳವರಿಗೆ ಸಂಬಂಧಿಸಿವೆ. ಈ ಆಸೆಯನ್ನು ಮೀರಿದವರು ಗುಣಪರಿಪೂರ್ಣನಾದ ಪರಮಾತ್ಮನ ಮೂಲಕ ಸುಖವನ್ನು ಅನುಭವಿಸುತ್ತಾರೆ. ಅವನನ್ನು ಮರೆತು ಲೌಕಿಕ ಸುಖಾಭಿಲಾಷೆಯಿಂದ ಕರ್ಮಮಾರ್ಗವನ್ನು ಅನುಸರಿಸುವವನು ನರಕಕ್ಕೆ ಹೋಗುತ್ತಾನೆ. ಸಮಸ್ತ ಲೌಕಿಕ ಆಸೆಗಳನ್ನು ತೊರೆದ ಪುರುಷನು ಪರಬ್ರಹ್ಮನನ್ನು ಹೊಂದಿ ಕರ್ಮಫಲಗಳನ್ನು ತ್ಯಜಿಸುತ್ತಾನೆ.
ಪ್ರಜಾಃ ಸೃಷ್ಟ್ವಾ ಮನಸಾ ಕರ್ಮಣಾ ಚ
ದ್ವಾವಪ್ಯೇತೌ ಸತ್ಪಥೌ ಲೋಕಜುಷ್ಟೌ |
ದೃಷ್ಟ್ವಾ ಕರ್ಮ ಶಾಶ್ವತಂ ಚಾಂತವಚ್ಚ

ಮನಸ್ತ್ಯಾಗಃ ಕಾರಣಂ ನಾನ್ಯದಸ್ತಿ ॥ 12 ॥
ಲೋಕದ ಪ್ರಜೆಗಳ ಸೃಷ್ಟಿಯು ಮನಸ್ಸು, ಕರ್ಮವಿಧಿ ಇವೆರಡರ ಸಂಬಂಧದಿಂದ ಉಂಟಾಗಿದೆ. ಲೋಕದಲ್ಲಿ ಮಾನ್ಯವಾದ ಇವೆರಡು ಸತ್ಪಥಗಳೇ ಎನಿಸಿವೆ. ಕರ್ಮದ ಫಲವು ಅಶಾಶ್ವತವೆನಿಸಿದೆ. ಫಲಾಕಾಂಕ್ಷೆಯಿಲ್ಲದೆ ನಡೆಸಿದ ಫಲವು ಶಾಶ್ವತವೆನಿಸಿದೆ. ಆದ್ದರಿಂದ ಶಾಶ್ವತಫಲಗಳಿಗೆ ಮನಸ್ಸಿನ ಕಾಮನಾತ್ಯಾಗಗಳೇ ಮುಖ್ಯಕಾರಣವೆನಿಸಿವೆ. ಬೇರೇನೂ ಅಲ್ಲ.

ಸ್ವೇನಾತ್ಮನಾ ಚಕ್ಷುರಿವ ಪ್ರಣೇತಾ
ನಿಶಾತ್ಯಯೇ ತಮಸಾ ಸಂವೃತಾತ್ಮಾ |
ಜ್ಞಾನಂ ತು ವಿಜ್ಞಾನಗುಣೇನ ಯುಕ್ತಂ
ಕರ್ಮಾಶುಭಂ ಪಶ್ಯತಿ ವರ್ಜನೀಯಮ್ ॥ 13 ॥
ಕತ್ತಲೆಯು ಕಳೆದುಹೋದಾಗ ಪ್ರಾಣಿಗಳನ್ನು ಚಕ್ಷುರಿಂದ್ರಿಯವು ತಾನಾಗಿಯೇ ಸರಿಯಾದ ದಾರಿಯಲ್ಲಿ ನಡೆಸಿಕೊಂಡು ಹೋಗುವಂತೆ ಜ್ಞಾನವು ಪರಮಾತ್ಮನ ವಿಜ್ಞಾನವೆಂಬ ಗುಣವನ್ನು ಹೊಂದಿದ ಬಳಿಕ ಅಶುಭವಾದ ಕರ್ಮ ಯಾವುದು, ಶುಭಕರ್ಮ ಯಾವುದು ಎಂಬುದನ್ನು ಸರಿಯಾಗಿ ತಿಳಿಸಿಕೊಡುತ್ತದೆ.

ಸರ್ಪಾನ್ ಕುಶಾಗ್ರಾಣಿ ತಥೋದಪಾನಂ
ಜ್ಞಾತ್ವಾ ಮನುಷ್ಯಾಃ ಪರಿವರ್ಜಯಂತಿ |
ಅಜ್ಞಾನತಸ್ತತ್ರ ಪತಂತಿ ಮೂಢಾ
ಜ್ಞಾನೇ ಫಲಂ ಪಶ್ಯ ಯಥಾ ವಿಶಿಷ್ಟಮ್ ॥ 14 ॥
ಕಣ್ಣಿದ್ದ ಮನುಷ್ಯರು ದಾರಿಯಲ್ಲಿ ಸಿಗುವ ಹಾವು, ಮುಳ್ಳು, ಬಾವಿ ಮೊದಲಾದವುಗಳನ್ನು ಕಂಡುಕೊಂಡು ಅದನ್ನು ತಪ್ಪಿಸಿಕೊಂಡು ಹೋಗುತ್ತಾರೆ. ಕಣ್ಣಿದ್ದರೂ ವಿವೇಕವಿಲ್ಲದ ಮೂರ್ಖರು ಅವುಗಳ ಮೇಲೆ ಕಾಲಿಟ್ಟು ಅಪಾಯಕ್ಕೆ ತುತ್ತಾಗುತ್ತಾರೆ. ಜ್ಞಾನದ ಫಲವು ವಿಶಿಷ್ಟವಾದುದು ಎನ್ನುವುದನ್ನು ಅರ್ಥಮಾಡಿಕೊ.

ಕೃತ್ಸ್ನಸ್ತು ಮಂತ್ರೋ ವಿಧಿವತ್ ಪ್ರಯುಕ್ತೋ
ಯಜ್ಞಾ ಯಥೋಕ್ತಾಸ್ತ್ವಥ ದಕ್ಷಿಣಾಶ್ಚ |
ಅನ್ನಪ್ರದಾನಂ ಮನಸಃ ಸಮಾಧಿಃ
ಪಂಚಾತ್ಮಕಂ ಕರ್ಮಫಲಂ ವದಂತಿ ॥ 15 ॥
ವಿಧ್ಯುಕ್ತವಾಗಿ ಜಪಿಸಿದ ಮಂತ್ರಗಳು, ಯಜ್ಞಗಳು, ದಕ್ಷಿಣೆಗಳು, ಅನ್ನದಾನಗಳು, ಮನಸ್ಸಿನ ಸಮಾಧಿ ಎಂಬ ಈ ಐದು ಫಲಪ್ರದಗಳಾದ ಸತ್ಕರ್ಮಗಳೇ ಆಗಿವೆ.

ಗುಣಾತ್ಮಕಂ ಕರ್ಮ ವದಂತಿ ವೇದಾ-
ಸ್ತಸ್ಮಾನ್ಮಂತೋ ಮಂತ್ರಪೂರ್ವಂ ಹಿ ಕರ್ಮ |
ವಿಧಿರ್ವಿಧೇಯಂ ಮನಸೋಪಪತ್ತಿಃ
ಫಲಸ್ಯ ಭೋಕ್ತಾ ತು ಯಥಾ ಶರೀರೀ ॥ 16 ॥
ವೇದಗಳು ಗುಣಾತ್ಮಕವಾದ ಕರ್ಮವನ್ನು ಹೇಳುತ್ತಿವೆ. ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳ ಫಲದಿಂದ ಈ ಜನ್ಮದಲ್ಲಿ ವೇದಮಂತ್ರಗಳು ದೊರೆಯುತ್ತವೆ. ಪುನಃ ಈ ಜನ್ಮದಲ್ಲಿ ಮಂತ್ರಪೂರ್ವಕವಾಗಿ ಮಾಡಿದ ಕರ್ಮವು ಜನ್ಮಾಂತರದ ಕರ್ಮಫಲಗಳಿಗೆ ಕಾರಣವಾಗುತ್ತದೆ. ಕರ್ಮಗಳಿಗೆ ಫಲವೇನೆಂಬುದು ಮನಸ್ಸನ್ನನುಸರಿಸಿದೆ. ಮನಸ್ಸಿಗನುಗುಣವಾದ ಫಲವನ್ನು ಜೀವನು ಅನುಭವಿಸುತ್ತಾನೆ.

ಶಬ್ದಾಶ್ಚ ರೂಪಾಣಿ ರಸಾಶ್ಚ ಪುಣ್ಯಾಃ
ಸ್ಪರ್ಶಾಶ್ಚ ಗಂಧಾಶ್ಚ ಶುಭಾಸ್ತಥೈವ |
ನರೋಽತ್ರ ಹಿ ಸ್ಥಾನಗತಃ ಪ್ರಭುಃ ಸ್ಯಾ-
ದೇತತ್ಫಲಂ ಸಿಧ್ಯತಿ ಕರ್ಮಲೋಕೇ ॥ 17 ॥
ಆದ್ದರಿಂದ ಮನುಷ್ಯನು ಅನುಭವಿಸುವ ಶಬ್ದ, ರೂಪ, ರಸ, ಗಂಧ, ಸ್ಪರ್ಶ - ಈ ಎಲ್ಲ ಶುಭಸುಖಗಳು ಹಿಂದೆ ನಡೆಸಿದ ಅವನ ಕರ್ಮವನ್ನು ಅನುಸರಿಸಿ ಒದಗುತ್ತವೆ. ಪುಣ್ಯಕರ್ಮಗಳಿಂದ ಲಭಿಸುವ ಸ್ವರ್ಗಾದಿಗಳಲ್ಲಿ ಅನುಭವಿಸುವ ಫಲಗಳು ಈ ಲೋಕದಲ್ಲಿಯೂ ರೂಪ-ರಸ-ಗಂಧಾದಿಗಳ ಮೂಲಕ ಲಭಿಸುತ್ತವೆ.

ಯದ್ಯಚ್ಛರೀರೇಣ ಕರೋತಿ ಕರ್ಮ
ಶರೀರಯುಕ್ತಃ ಸಮುಪಾಶ್ನುತೇ ತತ್ |
ಶರೀರಮೇವಾಯತನಂ ಸುಖಸ್ಯ
ದುಃಖಸ್ಯ ಚಾಪ್ಯಾಯತನಂ ಶರೀರಮ್ ॥ 18 ॥
ಶರೀರವನ್ನು ಅವಲಂಬಿಸಿಕೊಂಡು ಯಾವ ಯಾವ ವಿಧವಾದ ಕರ್ಮಗಳನ್ನು ಆಚರಿಸುತ್ತಾನೋ ಆ ಕರ್ಮದ ಫಲಗಳನ್ನು ದಿವ್ಯಶರೀರವನ್ನು ಹೊಂದಿಕೊಂಡೇ ಅನುಭವಿಸುತ್ತಾನೆ. ಸುಖ-ದುಃಖಗಳಿಗೆ ಆಶ್ರಯವಾದುದು ಶರೀರವೇ ಆಗಿದೆ.

ವಾಚಾ ತು ಯತ್ ಕರ್ಮ ಕರೋತಿ ಕಿಂಚಿ-
ದ್ವಾಚೈವ ಸರ್ವಂ ಸಮುಪಾಶ್ನುತೇ ತತ್ |
ಮನಸ್ತು ಯತ್ ಕರ್ಮ ಕರೋತಿ ಕಿಂಚಿ-
ನ್ಮನಃಸ್ಥ ಏವಾಯಮುಪಾಶ್ನುತೇ ತತ್ ॥ 19 ॥
ಮನುಷ್ಯನು ವಾಕ್ಯದಿಂದ ನಡೆಸಿದ ಕರ್ಮದ ಫಲವನ್ನು ವಾಕ್‌ನಿಂದಲೇ ಅನುಭವಿಸುತ್ತಾನೆ. ಮನಸ್ಸಿನಿಂದ ಮಾಡಿದ ಕರ್ಮವನ್ನು

ಮನಸ್ಸಿನಿಂದಲೇ ಅನುಭವಿಸುತ್ತಾನೆ.
ಯಥಾಗುಣಂ ಕರ್ಮಗಣಂ ಫಲಾರ್ಥೀ
ಕರೋತ್ಯಯಂ ಕರ್ಮಫಲೇ ನಿವಿಷ್ಟಃ |
ತಥಾ ತಥಾಯಂ ಗುಣಸಂಪ್ರಯುಕ್ತಃ
ಶುಭಾಶುಭಂ ಕರ್ಮಫಲಂ ಭುನಕ್ತಿ ॥ 20 ॥
ಫಲವನ್ನು ಉದ್ದೇಶಿಸಿ ಒಬ್ಬನು ಯಾವ ವಿಧವಾದ ಗುಣವುಳ್ಳ ಕರ್ಮಗಳನ್ನು ನಡೆಸುತ್ತಾನೋ ಆಯಾ ಗುಣವುಳ್ಳ ಶುಭಾಶುಭ ಫಲಗಳನ್ನು ಆ ಕರ್ಮಕ್ಕೆ ಅನುಗುಣವಾಗಿಯೇ ಅನುಭವಿಸುತ್ತಾನೆ.
ಮತ್ಸ್ಯೋ ಯಥಾ ಸೋತ ಇವಾಭಿಪಾತೀ
ತಥಾ ಕೃತಂ ಪೂರ್ವಮುಪೈತಿ ಕರ್ಮ |
ಶುಭೇ ತ್ವಸೌ ತುಷ್ಯತಿ ದುಷ್ಕೃತೇ ತು
ನ ತುಷ್ಯತೇ ವೈ ಪರಮಃ ಶರೀರೀ ॥ 21 ॥
ಮತ್ಸ್ಯವೊಂದು ಪ್ರವಾಹವನ್ನು ಅನುಸರಿಸಿ ಹೋಗುವಂತೆ ಮನುಷ್ಯನು ತನ್ನ ಪ್ರಾರಬ್ಧಕರ್ಮವನ್ನು ಹಿಂಬಾಲಿಸಿಕೊಂಡು ಹೋಗುತ್ತಾನೆ. ಶುಭಫಲವು ದೊರೆತಾಗ ಸಂತುಷ್ಟನಾಗುತ್ತಾನೆ. ದುಷ್ಕರ್ಮಜನ್ಯವಾದ ದುಷ್ಫಲವು ದೊರೆತಾಗ ಕುಗ್ಗುತ್ತಾನೆ. ಈ ಜೀವನು ಶರೀರದ ಸಂಬಂಧದಿಂದ ಹೀಗೆ ಸುಖ-ದುಃಖಗಳನ್ನು ಅನುಭವಿಸುತ್ತಾನೆ.
ಯತೋ ಜಗತ್ ಸರ್ವಮಿದಂ ಪ್ರಸೂತಂ
ಜ್ಞಾತ್ವಾತ್ಮವಂತೋ ವ್ಯತಿಯಾಂತಿ ಯತ್ತತ್ |
ಯನ್ಮಂತ್ರಶಬ್ದೈರಕೃತಪ್ರಕಾಶಂ
ತದುಚ್ಯಮಾನಂ ಶೃಣು ಮೇ ಪರಂ ಯತ್ ॥ 22 ॥
ಯಾವ ಭಗವಂತನ ದೆಸೆಯಿಂದ ಈ ಜಗತ್ತೆಲ್ಲವೂ ಸೃಷ್ಟಿಯನ್ನು ಹೊಂದಿದೆಯೋ, ಈ ಪ್ರಪಂಚದ ಬಂಧನಗಳನ್ನು ಯಾವ ಪರಮಾತ್ಮನ ಜ್ಞಾನದಿಂದ ಜ್ಞಾನಿಗಳು ದಾಟಿ ಹೋಗುತ್ತಾರೋ, ಯಾವ ಪರಬ್ರಹ್ಮ ವಸ್ತುವು ವೇದಮಂತ್ರಗಳಲ್ಲೇ ಇರುವ ಆಕಾಶ, ಪ್ರಾಣ ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟರೂ ಶಬ್ದಗಳು ಅನ್ಯತ್ರ ಪ್ರಸಿದ್ಧವಾಗಿ ಪರಮಾತ್ಮನನ್ನು ತಿಳಿಸುವುದರಲ್ಲಿ ಅಸಮರ್ಥವಾಗಿವೆಯೋ ಅಂತಹ ಪರಬ್ರಹ್ಮ ವಸ್ತುವನ್ನು ವೇದಾರ್ಥನಿರ್ಣಾಯಕಗಳಾದ ಬ್ರಹ್ಮಮೀಮಾಂಸಾ ಶಾಸ್ತ್ರಗಳಿಂದಲೇ ತಿಳಿಯಬೇಕಾಗಿದೆ. ಅಂತಹ ಪರಬ್ರಹ್ಮ ವಸ್ತುವಿನ ಬಗ್ಗೆ ತಿಳಿಸುತ್ತೇನೆ, ಕೇಳಿಸಿಕೊ.
ರಸೈರ್ವಿಯುಕ್ತಂ ವಿವಿಧೈಶ್ಚ ಗಂಧೈ-
ರಶಬ್ದಮಸ್ಪರ್ಶಮರೂಪವಚ್ಚ |
ಅಗ್ರಾಹ್ಯಮವ್ಯಕ್ತಮವರ್ಣಮೇಕಂ
ಪಂಚಪ್ರಕಾರಂ ಸಸೃಜೇ ಪ್ರಜಾನಾಮ್ ॥ 23 ॥
ಆ ಪರಬ್ರಹ್ಮನೆಂಬ ವಸ್ತುವು ಪ್ರಾಕೃತರಸಗಳ ಮೂಲಕ ತಿಳಿಯಲಾರದು. ವಿವಿಧವಾದ ಪ್ರಾಕೃತ ಗಂಧಗಳಿಂದಲೂ ವಿದುರವಾಗಿಹುದು. ಸಂಸಾರ-ವಿಚಾರಗಳನ್ನು ಮಾಡುವ ಶಬ್ದಗಳಿಂದ ಅತ್ಯಂತ ದೂರವಾದುದು. ಪ್ರಾಕೃತವಾದ ಹಸ್ತವೇ ಮೊದಲಾದವುಗಳಿಂದ ಮುಟ್ಟಲು ಅಶಕ್ಯವಾದುದು. ಪ್ರಾಕೃತರೂಪರಹಿತವಾದುದು. ಪ್ರಾಕೃತವಾದ ಕಣ್ಣಿಗೆ ಕಾಣಿಸದು. ಅವ್ಯಕ್ತವೆನಿಸಿದುದು. ಪ್ರಾಕೃತವರ್ಣ, ಪ್ರಾಕೃತ ರೂಪದಿಂದ ರಹಿತವಾದುದು. ಇಂತಹ ಪರಬ್ರಹ್ಮ ವಸ್ತುವು ರೂಪ, ರಸಾದಿ ಪಂಚ ವಿಷಯಗಳನ್ನು ಪ್ರಜೆಗಳಿಗೋಸ್ಕರ ಸೃಷ್ಟಿಸಿದೆ.
ವ್ಯಾಖ್ಯಾನ ವಿಶೇಷ ಭಗವಂತನಲ್ಲಿ ಕೆಲವರು ಅರೂಪವನ್ನೇ ಹೇಳುತ್ತಾರೆ. ಭಗವಂತನು ಸರ್ವಾತ್ಮನಾ ರೂಪರಹಿತನು ಎಂದು ಹೇಳಬಾರದು. ಇದಕ್ಕೆ ಭಗವದ್ಗೀತೆಯ ವಿರೋಧವಿದೆ. ಸರ್ವಥಾ ರೂಪವಿಲ್ಲವೆಂದರೆ ಕೃಷ್ಣನೇ ಗೀತೆಯಲ್ಲಿ `ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ | ಅನೇಕ ವಕ್ತನಯನಂ ಅನೇಕಾದ್ಭುತದರ್ಶನಮ್ | ಅನೇಕ ದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ | ದಿವ್ಯಮಾಲ್ಯಾ ಬರಧರಂ ದಿವ್ಯಗಂಧಾನುಲೇಪನಮ್' ಇತ್ಯಾದಿಯಾಗಿ ಭಗವಂತನ ಅಪ್ರಾಕೃತರೂಪವನ್ನು ವರ್ಣಿಸಿರುತ್ತಾನೆ.
ನ ಸ್ತ್ರೀ ಪುಮಾನ್ ವಾಪಿ ನಪುಂಸಕಂ ಚ
ನ ಸನ್ನ ಚಾಸತ್ಸದಸಚ್ಚ ತನ್ನ |
ಪಶ್ಯಂತಿ ಯದ್ ಬ್ರಹ್ಮವಿದೋ ಮನುಷ್ಯಾ-
ಸ್ತದಕ್ಷರಂ ನ ಕ್ಷರತೀತಿ ವಿದ್ಧಿ ॥ 24 ॥
ಭಗವಂತನು ಲೋಕದ ಸ್ತ್ರೀಯರಲ್ಲಿ ಒಬ್ಬ ಸ್ತ್ರೀಯಾಗಿ ಇರುವುದಿಲ್ಲ. ಭಗವಂತನು ಲೋಕದ ನಪುಂಸಕರಂತೆ ನಪುಂಸಕನಲ್ಲ. ಭಗವಂತನು ಸತ್ ಎಂದರೆ ಕಾರಣರೂಪ ಮಹದಾದಿಗಳಂತಿಲ್ಲ. ಅಸತ್ ಎಂದರೆ ಕಾರ್ಯರೂಪವಾದ ಬ್ರಹ್ಮಾಂಡಾದಿ- ಗಳಂತೆಯೂ ಇರುವುದಿಲ್ಲ. ಭಗವಂತನು ಸದಸತ್ ಎನಿಸುವುದಿಲ್ಲ ಎಂದರೆ ಕಾರಣ- ಕಾರ್ಯರೂಪವಾದ ಪ್ರಕೃತಿಯಂತೆಯೂ ಇರುವುದಿಲ್ಲ. ಬ್ರಹ್ಮಜ್ಞಾನಿಗಳು ಸಮಸ್ತ ಜಗತ್ತಿಗಿಂತ ಭಗವಂತನನ್ನು ವಿಲಕ್ಷಣನೆಂದೇ ಭಾವಿಸುತ್ತಾರೆ. ಇಂತಹ ಭಗವಂತನು ಎಂದಿಗೂ ನಾಶವೇ ಇಲ್ಲದ ಅಕ್ಷರಪುರುಷನೆಂದು ತಿಳಿದುಕೊ.
ವ್ಯಾಖ್ಯಾನ ವಿಶೇಷ ಭಗವಂತನಿಗೆ ಸ್ತ್ರೀರೂಪವೂ ಇದೆ, ಪುರುಷರೂಪವೂ ಇದೆ, ನಪುಂಸಕರೂಪವೂ ಇದೆ. ಸ್ತ್ರೀರೂಪ ಇಲ್ಲ ಎಂದು ಹೇಳಿದರೆ `ಸ್ತ್ರಿಯಃ ಸತೀಸ್ತಾಂ ಪುವೇ ಪುಂಸ ಆಹುಃ' ಎಂಬ ಶ್ರುತಿಯ ವಿರೋಧವು ಬರುತ್ತದೆ. ಭಗವಂತನು ಸ್ತ್ರೀಯರಲ್ಲಿರುವ ದೋಷಗಳಿಂದ ಆಕರ್ಷಿತನಾಗಿರುವುದಿಲ್ಲ ಎಂದು ತಿಳಿಸಲು ನಪುಂಸಕ ರೂಪದಿಂದಲೂ ಇದ್ದಾನೆ. ಸ್ತ್ರೀಯರು ಯಾವ ಗುಣಗಳಿಗೆ ಆಕರ್ಷಿತರಾಗುತ್ತಾರೋ ಅಂತಹ ದುರ್ಗುಣಗಳ ಆಕರ್ಷಣೆಯು ಪರಮಾತ್ಮನ ಮನಸ್ಸಿನಲ್ಲಿರುವುದಿಲ್ಲ ಇತ್ಯಾದಿ ವಿವರಣೆಯನ್ನು

ಶ್ರೀಮಧ್ವಾಚಾರ್ಯರು ತೈತ್ತಿರೀಯ ಭಾಷ್ಯದಲ್ಲಿ ಹೇಳಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಮನು-ಬೃಹಸ್ಪತಿಸಂವಾದದಲ್ಲಿ ಮೂಡಿಬಂದ ಸೃಷ್ಟಿಕ್ರಮವನ್ನು
ಭೀಷ್ಮರು ನಿರೂಪಿಸಿದುದು.
ಮನುಃ
ಅಕ್ಷರಾತ್ಖಂ ತತೋ ವಾಯುರ್ವಾಯೋರ್ಜ್ಯೋತಿಸ್ತತೋ ಜಲಮ್ ।
ಜಲಾತ್ ಪ್ರಸೂತಾ ಜಗತೀ ಜಗತ್ಯಾಂ ಜಾಯತೇ ಜಗತ್ ॥ 1 ॥
ಭೀಷ್ಮ ಆ ಅಕ್ಷರನೆನಿಸಿದ ಪರಬ್ರಹ್ಮನಿಂದ ಆಕಾಶವು ಉತ್ಪನ್ನವಾಯಿತು. ಆಕಾಶದಿಂದ ವಾಯುವು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಜಲವು, ಜಲದಿಂದ ಈ ಭೂಮಿಯು, ಭೂಮಿಯಿಂದ ಸ್ಥಾವರ-ಜಂಗಮಾತ್ಮಕವಾದ ಜಗತ್ತು ಹುಟ್ಟಿತು.
ಇಮೇ ಶರೀರೈರ್ಜಲಮೇವ ಗತ್ವಾ
ಜಲಾಚ್ಚ ತೇಜಃ ಪವನೋಽಂತರಿಕ್ಷಮ್ ।
ಖಾದ್ವೈ ನಿವರ್ತಂತಿ ನಭಾವಿನಸ್ತೇ
ಯೇ ಭಾವಿನಸ್ತೇ ಪರಮಾಪ್ನುವಂತಿ ॥ 2 ॥
ಈ ಸ್ಥಾವರ-ಜಂಗಮಗಳ ಶರೀರಗಳಿಂದ ಕೂಡಿದ ಜೀವರು ಕೊನೆಗೊಮ್ಮೆ ಸಂಕರ್ಷಣನ ಮುಖದಿಂದ ಹೊರಹೊಮ್ಮುವ ಅಗ್ನಿಯಿಂದ ಭಸ್ಮೀಭೂತವಾದ ಶರೀರವುಳ್ಳವರಾಗಿ, ವಿಲೋಮಕ್ರಮದಿಂದ ತಮ್ಮ ತಮ್ಮ ಉತ್ಪತ್ತಿ ಸ್ಥಾನಗಳಲ್ಲಿ ಲಯವನ್ನು ಹೊಂದುತ್ತಾರೆ. ಎಂದರೆ ಪಾರ್ಥಿವಶರೀರವು ಜಲತತ್ತ್ವದಲ್ಲಿಯೂ, ಜಲವು ಅಗ್ನಿಯಲ್ಲಿಯೂ, ಅಗ್ನಿಯು ವಾಯುವಿನಲ್ಲಿಯೂ, ವಾಯುವು ಆಕಾಶದಲ್ಲಿಯೂ ಲಯ ಹೊಂದುತ್ತದೆ. ಯಾರು ಉತ್ಪತ್ತಿಯನ್ನು ಹೊಂದಲು ಅರ್ಹರಾಗಿದ್ದಾರೋ ಅವರು ಆಕಾಶದಿಂದ ಮಳೆಗಳ ಮೂಲಕ ಪುನಃ ಈ ಭೂಮಿಗೆ ಆಗಮಿಸುತ್ತಾರೆ. ಯಾರು ಸಾಧಕರಾಗಿ ಮುಕ್ತರಾಗಿದ್ದರೋ ಅವರು ಪುನಃ ಈ ಭೂಮಿಗೆ ಆಗಮಿಸುವುದಿಲ್ಲ.
ನೋಷ್ಣಂ ನ ಶೀತಂ ಮೃದು ನಾಪಿ ತೀಕ್ಷ್ಣಂ
ನಾಮ್ಲಂ ಕಷಾಯಂ ಮಧುರಂ ನ ತಿಕ್ತಮ್ ।
ನ ಶಬ್ದವನ್ನಾಪಿ ಚ ಗಂಧವತ್ತ-
ನ್ನ ರೂಪವತ್ತತ್ ಪರಮಸ್ವಭಾವಮ್ ॥ 3 ॥
ಈ ಜಗತ್ಸೃಷ್ಟಿಕರ್ತೃವೆನಿಸಿದ ಪರಬ್ರಹ್ಮವಸ್ತುವು ಪ್ರಾಕೃತಿಕವಾದ ಔಷ್ಣ್ಯಾದಿ ದೋಷಗಳಿಂದ ರಹಿತವಾಗಿದೆ. ಪರಬ್ರಹ್ಮನು ಶೀತವೂ ಅಲ್ಲ, ಉಷ್ಣವೂ ಅಲ್ಲ, ಜಗತ್ತಿನಂತೆ ಮೃದುವೂ ಅಲ್ಲ, ಕಠಿಣವೂ ಅಲ್ಲ, ಕಹಿಯೂ ಅಲ್ಲ, ಸಿಹಿಯೂ ಅಲ್ಲ. ಅವನು ಅಪ್ರಾಕೃತನಾದ್ದರಿಂದ ಅತ್ಯಂತ ಶ್ರೇಷ್ಠವಾದ ಗಂಧ-ರಸಾದಿ ಸ್ವಭಾವ ಉಳ್ಳವನಾಗಿದ್ದಾನೆ. ಆದ್ದರಿಂದ ಬಾಹ್ಯವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಂತೆ ಪರಮಸ್ವಭಾವನಾದ ಪರಮಾತ್ಮನನ್ನು ತಿಳಿಯಬಾರದು.
ಸ್ಪರ್ಶಂ ತನುರ್ವೇದ ರಸಂ ತು ಜಿಹ್ವಾ
ಘ್ರಾಣಂ ಚ ಗಂಧಾನ್ ಶ್ರವಣೇ ಚ ಶಬ್ದಾನ್ ।
ರೂಪಾಣಿ ಚಕ್ಷುರ್ನ ಚ ತತ್ಪರಂ ಯದ್-
ಗೃಹ್ಣಂತ್ಯನಧ್ಯಾತ್ಮವಿದೋ ಮನುಷ್ಯಾಃ ॥ 4 ॥
ಮನುಷ್ಯರ ಶರೀರದಲ್ಲಿ ವ್ಯಾಪಿಸಿದ ತ್ವಗಿಂದ್ರಿಯವು ಸ್ಪರ್ಶಜ್ಞಾನವನ್ನು ಹೊಂದುತ್ತದೆ. ಜಿಹ್ವೆಯು ರಸವನ್ನು, ಘ್ರಾಣವು ಗಂಧವನ್ನು, ಕಿವಿಗಳು ಶಬ್ದವನ್ನು, ಚಕ್ಷುಸ್ಸು ರೂಪಗಳನ್ನು ಗ್ರಹಿಸುತ್ತದೆ. ಅಧ್ಯಾತ್ಮವನ್ನು ತಿಳಿಯದ ಮನುಷ್ಯನು ಇದೆಲ್ಲದಕ್ಕಿಂತಲೂ ಅತಿಶಯವಾದ ಪರಬ್ರಹ್ಮವಸ್ತುವನ್ನು ಈ ಇಂದ್ರಿಯಗಳ ಮೂಲಕ ಗ್ರಹಿಸಲಾರನು. ಪರಬ್ರಹ್ಮ ವಸ್ತುವು ಇಂದ್ರಿಯವಸ್ತುವಿಗೆ ಅಗೋಚರವಾಗಿ ಅಧ್ಯಾತ್ಮ ವಸ್ತುವಿನಿಂದಲೇ ಗೋಚರವಾಗುವುದಾಗಿದೆ.
ನಿವರ್ತಯಿತ್ವಾ ರಸನಂ ರಸೇಭ್ಯೋ
ಘ್ರಾಣಂ ಚ ಗಂಧಾಚ್ಛ್ರವಣೇ ಚ ಶಬ್ದಾತ್ ।
ಸ್ಪರ್ಶಾತ್ತನುಂ ರೂಪಗುಣಾತ್ತು ಚಕ್ಷು-
ಸ್ತತಃ ಪರಂ ಪಶ್ಯತಿ ಸ್ವಂ ಸ್ವಭಾವಮ್ ॥ 5 ॥
ಮನುಷ್ಯನು ನಾಲಿಗೆಯನ್ನು ಬಾಹ್ಯವಾದ ರಸಗಳ ಆಸಕ್ತಿಯಿಂದ ದೂರೀಕರಿಸಿದ ಮೇಲೆ, ಘ್ರಾಣೇಂದ್ರಿಯವನ್ನು ಲೌಕಿಕ ಆಸಕ್ತಿಯಿಂದ ಹಿಂದಿರುಗಿಸಿದ ಬಳಿಕ, ಕಿವಿಗಳನ್ನು ಲೌಕಿಕ ಶಬ್ದಗಳನ್ನು ಕೇಳುವುದರಿಂದ ನಿವೃತ್ತಿಗೊಳಿಸಿದ ಬಳಿಕ, ತ್ವಗಿಂದ್ರಿಯವನ್ನು ಸ್ಪರ್ಶ ಸುಖದಿಂದ, ಚಕ್ಷುರಿಂದ್ರಿಯವನ್ನು ಬಾಹ್ಯರೂಪಗುಣಗಳ ಆಸಕ್ತಿಯಿಂದ ದೂರ ಮಾಡಿದ ಬಳಿಕ ದಿವ್ಯ-ಗಂಧ-ರಸಾದಿಗಳ ಸ್ವಭಾವವುಳ್ಳ ಆ ಪರಬ್ರಹ್ಮ ವಸ್ತುವನ್ನು ನೋಡುತ್ತಾನೆ.
ಯತೋ ಗೃಹೀತ್ವಾ ಹಿ ಕರೋತಿ ಯಚ್ಚ
ಯಸ್ಮಿಂಶ್ಚ ತಾಮಾರಭತೇ ಪ್ರವೃತ್ತಿಮ್ ।
ಯಸ್ಮಿಂಶ್ಚ ಯದ್ಯೇನ ಚ ಯಶ್ಚ ಕರ್ತಾ

तत् कारणं स्वं तमुपेयमाहुः ॥ 6 ॥

ಯಾವ ಭಗವಂತನ ಪ್ರೇರಣೆಯಿಂದ ಕೈ ಮೊದಲಾದವುಗಳಲ್ಲಿ ಪದಾರ್ಥಗಳನ್ನು ಹಿಡಿದುಕೊಂಡು ಮನುಷ್ಯನು ಕಾರ್ಯಗಳನ್ನು ಮಾಡುತ್ತಾನೋ, ಯಾವ ಕಾರ್ಯಗಳನ್ನು ಆರಂಭಿಸಲು ಭಗವಂತನ ಪ್ರಸನ್ನತೆಯು ಕಾರಣವಾಗಿರುತ್ತದೆಯೋ, ಅವನ ಅನುಗ್ರಹದಿಂದಲೇ ಕರ್ಮಗಳನ್ನು ಮಾಡುತ್ತಾನೋ, ಕರ್ಮಗಳನ್ನು ಮಾಡುವಾಗ ಅವನನ್ನೇ ಉದ್ದೇಶವಾಗಿಟ್ಟುಕೊಂಡು ಮಾಡುತ್ತಾನೋ, ಈ ಜಗತ್ತೆಲ್ಲವೂ ಯಾರಿಂದ ನಿರ್ಮಿತವಾಗಿದೆಯೋ, ಯಾವ ಪರಬ್ರಹ್ಮನು ಜಗತ್ಕರ್ತ ಎನಿಸಿದ್ದಾನೋ, ಸರ್ವಪ್ರವೃತ್ತಿಗಳಿಗೂ ಕಾರಣನೆನಿಸಿದ್ದಾನೋ ಅಂತಹ ಪರಬ್ರಹ್ಮನು ನಮಗೆ ಸಂಬಂಧಿಸಿದ ಪದಾರ್ಥ ಎನಿಸಿದ್ದಾನೆ. ಅವನನ್ನು ಜೀವಾತ್ಮರು ಈ ಬದುಕಿನಲ್ಲಿ ಹೊಂದಬೇಕು ಎಂದು ಜ್ಞಾನಿಗಳು ಹೇಳುತ್ತಾರೆ. ಸ್ವಾಮಿಯಾದ ಅವನನ್ನು ಭೃತ್ಯರಾದ ನಾವು ಹೊಂದಬೇಕೇ ವಿನಾ ಎಂದಿಗೂ ಐಕ್ಯಚಿಂತನೆಯನ್ನು ಹೊಂದಬಾರದು ಎಂದು ಹೇಳುತ್ತಾರೆ.

ಯಚ್ಚಾಭಿಭೂಃ ಸಾಧಕಂ ವ್ಯಾಪಕಂ ಚ

ಯನ್ಮಂತ್ರವಚ್ಛಂಸ್ಯತೇ ಚೈವ ಲೋಕೇ |

ಯಃ ಸರ್ವಹೇತುಃ ಪರಮಾರ್ಥಕಾರೀ

ತತ್ ಕಾರಣಂ ಕಾರ್ಯಮತೋ ಯದನ್ಯತ್ ॥ 7 ॥

ಯಾವ ಪರಬ್ರಹ್ಮ ವಸ್ತುವು ಎಲ್ಲವನ್ನೂ ಮೀರಿ ನಿಂತಿದೆಯೋ, ಸಾಧಕವೂ ವ್ಯಾಪಕವೂ ಆಗಿದೆಯೋ, ಲೋಕದಲ್ಲಿ ಮಂತ್ರದಂತೆ ಪ್ರಶಂಸೆಗೆ ಪಾತ್ರವಾಗಿದೆಯೋ ಆ ಪರಬ್ರಹ್ಮ ವಸ್ತುವನ್ನು ಎಲ್ಲದಕ್ಕೂ ಕಾರಣವನ್ನಾಗಿ ತಿಳಿಯಬೇಕು. ಪರಮ ಸತ್ಯವಾದ ಜಗತ್ತನ್ನು ನಿರ್ಮಿಸಿದುದು ಎಂದು ತಿಳಿಯಬೇಕು. ಪರಮಾತ್ಮನಿಗಿಂತ ಭಿನ್ನವಾದ ಬ್ರಹ್ಮಾದಿ ಕಾರ್ಯಪ್ರಪಂಚವೇನಿದೆಯೋ ಇದಕ್ಕೆ ಭಗವಂತನೇ ಕಾರಣನು. ಪ್ರಪಂಚಕ್ಕಿಂತ ಭಿನ್ನನು ಎಂದು ತಿಳಿಯಬೇಕು.

ಯಥಾ ಚ ಕಶ್ಚಿತ್ ಸುಕೃತೈರ್ಮನುಷ್ಯಃ

ಶುಭಾಶುಭಂ ಪ್ರಾಪ್ನುತೇಽಥಾವಿರೋಧಾತ್ |

ಏವಂ ಶರೀರೇಷು ಶುಭಾಶುಭೇಷು

ಸ್ವಕರ್ಮಭಿರ್ಜ್ಞಾನಮಿದಂ ನಿಬದ್ಧಮ್ ॥ 8 ॥

ಒಬ್ಬ ಪುರುಷನು ತಾನು ಮಾಡಿದ ಸತ್ಕರ್ಮದ ಫಲವಾಗಿ ಶುಭವನ್ನೂ, ಅಸತ್ಕರ್ಮದ ಫಲವಾಗಿ ಅಶುಭವನ್ನೂ ಹೇಗೆ ಸ್ವೀಕರಿಸುತ್ತಾನೋ ಇದೇ ರೀತಿಯಾಗಿ ಶುಭಾಶುಭ ಕರ್ಮಗಳಲ್ಲಿ ನಿಬದ್ಧವಾದ ಶರೀರದಲ್ಲಿರುವ ಜೀವನು ತಾನು ಮಾಡಿದ ನಿವೃತ್ತರೂಪಕರ್ಮಗಳಿಂದ ಈ ಪರಮಾತ್ಮನ ಜ್ಞಾನವನ್ನು ಹೊಂದಬಲ್ಲನು.

ಯಥಾ ಪ್ರದೀಪಃ ಪುರತಃ ಪ್ರದೀಪ್ತಃ

ಪ್ರಕಾಶಮನ್ಯಸ್ಯ ಕರೋತಿ ದೀಪ್ಯನ್ |

ತಥೇಹ ಪಂಚೇಂದ್ರಿಯದೀಪವೃಕ್ಷಾ

ಜ್ಞಾನಪ್ರದೀಪ್ತಾಃ ಪರವಂತ ಏವ ॥ 9 ॥

ಯಥಾ ಹಿ ರಾಜ್ಞೋ ಬಹವೋ ಹ್ಯಮಾತ್ಯಾಃ

ಪೃಥಕ್ ಪ್ರಮಾಣಂ ಪ್ರವದಂತಿ ಯುಕ್ತಾಃ |

ತದ್ವಚ್ಛರೀರೇಷು ಭವಂತಿ ಪಂಚ

ಜ್ಞಾನೈಕದೇಶಃ ಪರಮಃ ಸ ತೇಭ್ಯಃ ॥ 10 ॥

ಯಾವ ರೀತಿಯಾಗಿ ದೀಪದ ಬೆಳಕು ಮುಂದೆ ಇರುವ ಪದಾರ್ಥಗಳನ್ನು ಬೆಳಗುತ್ತಾ ಮತ್ತೊಂದು ಪದಾರ್ಥವನ್ನು ಬೆಳಗುವಂತೆ ಮಾಡುತ್ತದೋ, ಅದೇ ರೀತಿ ಪಂಚೇಂದ್ರಿಯ ಎಂಬ ದೀಪದಿಂದ ಸಹಿತವಾದ ದೇಹವೆಂಬ ವೃಕ್ಷವು ದೇಹದ ಒಳಗೆ ಇರುವ ಪರಮಾತ್ಮನನ್ನು ಪ್ರಕಾಶನಗೊಳಿಸುವ ಸಾಮರ್ಥ್ಯವನ್ನು ಹೊಂದಿದೆ. ರಾಜನಿಗೆ ಅಧೀನರಾದ ಮಂತ್ರಿಗಳು, ಅವನಿಗೆ ಅನುಗುಣವಾದ ಮಂತ್ರಾಲೋಚನೆಯನ್ನು ಮಾಡಿ ಹೇಗೆ ಹೇಳುತ್ತಾರೋ ಅದರಂತೆ ದೇಹದಲ್ಲಿರುವ ಇಂದ್ರಿಯಗಳು ಜ್ಞಾನಕ್ಕೆ ಅಧೀನವಾಗಿವೆ. ಆ ಇಂದ್ರಿಯಗಳಿಂದ ಉತ್ಪನ್ನವಾಗುವ ಜ್ಞಾನದಿಂದ ಸರ್ವೋತ್ತಮನಾದ ಭಗವಂತನೇ ತಿಳಿಯಲು ಯೋಗ್ಯನಾಗಿದ್ದಾನೆ.

ಯಥಾರ್ಚಿಷೋಽಗ್ನೇಃ ಪವನಸ್ಯ ವೇಗಾ

ಮರೀಚಯೋಽರ್ಕಸ್ಯ ನದೀಷು ಚಾಪಃ |

ಗಚ್ಛಂತಿ ಚಾಯಾಂತಿ ಚ ತನ್ಯಮಾನಾ-

ಸ್ತದ್ವಚ್ಛರೀರಾಣಿ ಶರೀರಿಣಾಂ ತು ॥ 11 ॥

ಬೆಂಕಿಗೆ ಜ್ವಾಲೆಗಳು, ವಾಯುವಿಗೆ ವೇಗವು, ಸೂರ್ಯನಿಗೆ ಕಿರಣಗಳು, ನದಿಗಳಿಗೆ ಜಲವು ಹೇಗೆ ಹೆಜ್ಜೆ ಹೆಜ್ಜೆಗೂ ಗತಿಸಿದಷ್ಟು ಪುನಃ ಪುನಃ ಆ ಗುಣಗಳು ಬರುತ್ತಾ ಇರುತ್ತವೋ ಅದರಂತೆ ಪ್ರಾಣಿಗಳಿಗೆ ಶರೀರಗಳು ಹಾಗೆಯೇ ಪುನಃ ಪುನಃ ಬರುತ್ತಿರುತ್ತವೆ.

ಯಥಾ ಚ ಕಶ್ಚಿತ್ ಪರಶುಂ ಗೃಹೀತ್ವಾ

ಧೂಮಂ ನ ಪಶ್ಯೇಜ್ಜ್ವಲನಂ ಚ ಕಾಷ್ಠೇ |

ತದ್ವಚ್ಛರೀರೋದರಪಾಣಿಪಾದಂ

ಛಿತ್ತ್ವಾ ನ ಪಶ್ಯಂತಿ ತತೋ ಯದನ್ಯತ್ ॥ 12 ॥

ಒಬ್ಬನು ಒಂದು ಕೊಡಲಿಯನ್ನು ಹಿಡಿದು ಕಟ್ಟಿಗೆಯೊಂದನ್ನು ಸೀಳಿದಾಗ ಆ ಕಟ್ಟಿಗೆಯಲ್ಲಿರುವ ಹೊಗೆಯಾಗಲೀ, ಬೆಂಕಿಯಾಗಲೀ ಕಾಣಿಸುವುದಿಲ್ಲ. ಆದರೆ ಆ ಕಟ್ಟಿಗೆಯಲ್ಲಿ ಬೆಂಕಿ ಇರುವುದು ಪರಮಸತ್ಯ. ಇದರಂತೆ ಕಟ್ಟಿಗೆಯಂತಿರುವ ದೇಹದಲ್ಲಿ ಕೈ-ಕಾಲು-ಹೊಟ್ಟೆ ಮುಂತಾದವುಗಳನ್ನು ಸೀಳಿದಾಗ ಅಲ್ಲಿರುವ ಪರಮಾತ್ಮನು ಕಾಣಿಸಲಾರ. ಆದರೆ ಈ ಶರೀರಾವಯವಗಳ ಅಂತರ್ಯಾಮಿಯಾಗಿ ಜ್ಯೋತಿ ರೂಪನಾದ ಪರಮಾತ್ಮನು ಕಟ್ಟಿಗೆಯಲ್ಲಿ ಬೆಂಕಿ ಇರುವಂತೆ ಇರುವುದಂತೂ ಸತ್ಯ.

ತಾನ್ಯೇವ ಕಾಷ್ಠಾನಿ ಯಥಾ ವಿಮಥ್ಯ
ಧೂಮಂ ಚ ಪಶ್ಯೇಜ್ಜ್ವಲನಂ ಚ ಯೋಗಾತ್ |
ತದ್ವತ್ ಸುಬುದ್ಧಿಃ ಸಮಮಿಂದ್ರಿಯತ್ವಾದ್
ಬುಧಃ ಪರಂ ಪಶ್ಯತಿ ತತ್ಸ್ವಭಾವಮ್ ॥ 13 ॥

ಅದೇ ಕಟ್ಟಿಗೆಯನ್ನು ಚೆನ್ನಾಗಿ ಮಥಿಸಿದಾಗ ಅದರಿಂದ ಹೊಗೆಯ ಜೊತೆಗೆ ಬೆಂಕಿಯು ಹೊರಹೊಮ್ಮುವುದನ್ನು ಕಾಣುತ್ತೇವೆ. ಇದರಂತೆಯೇ ಉತ್ತಮ ಬುದ್ಧಿಯುಳ್ಳವನು ತನ್ನ ಇಂದ್ರಿಯಗಳಿಂದ ಮಥನ ಮಾಡಿ ಪರಮಾತ್ಮ ತತ್ತ್ವವನ್ನು ಕಟ್ಟಿಗೆಯಲ್ಲಿ ಅಡಕವಾದ ಬೆಂಕಿಯನ್ನು ಮಥನದಿಂದ ಕಾಣುವಂತೆ ಮಾಡುತ್ತಾನೆ.

ಯಥಾತ್ಮನೋಽಂಗಂ ಪತಿತಂ ಪೃಥಿವ್ಯಾಂ
ಸ್ವಪ್ನಾಂತರೇ ಪಶ್ಯತಿ ಚಾತ್ಮನೋಽನ್ಯತ್ |
ಶ್ರೋತ್ರಾದಿಯುಕ್ತಃ ಸುಮನಾಃ ಸುಬುದ್ಧಿ-
ರ್ಲಿಂಗಾತ್ತಥಾ ಗಚ್ಛತಿ ಲಿಂಗಮನ್ಯತ್ ॥ 14 ॥

ಒಬ್ಬನು ತನ್ನ ಕನಸಿನಲ್ಲಿ ತನ್ನ ದೇಹವೇ ತನ್ನಿಂದ ಬೇರೆಯಾಗಿ ಕಾಣಿಸಿದೆ ಎನ್ನುವುದನ್ನು ನೋಡುತ್ತಾನೆ. ಕಿವಿ ಮೊದಲಾದ ಇಂದ್ರಿಯಗಳೊಡನೆ, ಮನಸ್ಸಿನೊಡನೆ, ಬುದ್ಧಿಯೊಡನೆಯೂ ಕೂಡಿ ಮನುಷ್ಯನು ಮರಣದ ಬಳಿಕ ತನ್ನ ದೇಹವು ತನ್ನಿಂದ ದೂರವಾಗಿದೆ ಎನ್ನುವುದನ್ನು ನೋಡುತ್ತಾನೆ. ಹಿಂದಿನ ದೇಹಕ್ಕಿಂತ ಮುಂದಿನ ದೇಹವು ಬೇರೆ ಎನ್ನುವುದನ್ನು ನೋಡುತ್ತಾನೆ. ಇದರಂತೆ ಜ್ಞಾನಿಯಾದವನು ತನ್ನಿಂದ ಭಿನ್ನನಾದ ಪರಮಾತ್ಮನನ್ನು ನೋಡುತ್ತಾನೆ.

ಉತ್ಪತ್ತಿವೃದ್ಧಿಕ್ಷಯಸನ್ನಿಪಾತೈ-
ರ್ನ ಯುಜ್ಯತೇಽಸೌ ಪರಮಃ ಶರೀರೀ |
ಅನೇನ ಲಿಂಗೇನ ತು ಲಿಂಗಮನ್ಯದ್
ಗಚ್ಛತ್ಯದೃಷ್ಟಃ ಪ್ರತಿಸಂಧಿಯೋಗಾತ್ ॥ 15 ॥

ಜೀವನು ತಾನು ಮಾಡಿದ ಕರ್ಮಗಳ ಫಲವಾಗಿ ಉತ್ಪತ್ತಿಯನ್ನು, ದೈಹಿಕವಾದ ವೃದ್ಧಿಯನ್ನೂ, ದೇಹದ ಕ್ಷಯವನ್ನೂ, ಪುನಃ ಉತ್ಪತ್ತಿಯನ್ನು - ಹೀಗೆ ಇವುಗಳನ್ನು ಹೊಂದುತ್ತಲೇ ಇರುತ್ತಾನೆ. ಆದರೆ ಉತ್ತಮನಾದ ದೇಹಾಂತರ್ಯಾಮಿಯಾದ ನಾರಾಯಣನು ಈ ಜೀವರಂತೆ ಉತ್ಪತ್ತಿ-ವೃದ್ಧಿ-ಕ್ಷಯ ಸನ್ನಿಪಾತಗಳಿಂದ ಬವಣೆ ಪಡುವಂತೆ ದುಃಖಿತನಾಗಲಾರ. ಜೀವನಲ್ಲಿರುವ ವಿರುದ್ಧ ಧರ್ಮಗಳು ಅರ್ಥಾತ್ ಉತ್ಪತ್ಯಾದಿ ರಾಹಿತ್ಯಗಳು ಪರಮಾತ್ಮನಲ್ಲಿವೆ. ಆದ್ದರಿಂದ ಎಂದಿಗೂ ಜೀವನು ಪರಬ್ರಹ್ಮನಾಗಲಾರ. ಜೀವನು ಜನನಾದಿ ದೋಷಗ್ರಸ್ತನಾಗಿದ್ದಾನೆ. ಪರಮಾತ್ಮನು ಜನನಾದಿ ದೋಷಗಳಿಂದ ದೂರನಾಗಿದ್ದಾನೆ. ಹೀಗೆ ವಿರುದ್ಧ ಧರ್ಮಾಕ್ರಾಂತರಾದ ಜೀವ-ಪರಮಾತ್ಮನಿಗೆ ಐಕ್ಯವು ಹೊಂದುವುದಿಲ್ಲ. ಈ ಜೀವನು ಕರ್ಮಫಲಾನುಸಾರ- ವಾಗಿ ಈ ದೇಹವನ್ನು ಮರಣಕಾಲದಲ್ಲಿ ತ್ಯಜಿಸಿ ಬೇರೆ ರೂಪದಿಂದ ಇನ್ನೊಂದು ದೇಹವನ್ನು ಕುರಿತು ಹೋಗುತ್ತಾನೆ. ಯಾವ ಬಂಧು-ಬಾಂಧವರಿಗೂ ಈ ಜೀವನ ಕರ್ಮವಾಗಲಿ, ಅವನ ಗಮನವಾಗಲಿ ತಿಳಿಯುವುದಿಲ್ಲ. ಒಂದು ವೇಳೆ ಈ ಜೀವಾತ್ಮನು ಪರಮಾತ್ಮನಿಂದ ಅಭಿನ್ನನಾಗಿದ್ದಲ್ಲಿ ಪೂರ್ವದೇಹ ವಿಯೋಗ ಎಂಬ ನಾಶವು, ಉತ್ತರ ದೇಹ ಸ್ವೀಕಾರವೆಂಬ ಜನ್ಮವು ಹೊಂದಿಕೆಯಾಗುವುದಿಲ್ಲ ಎಂದು ಭಾವ.

ನ ಚಕ್ಷುಷಾ ಪಶ್ಯತಿ ರೂಪಮಾತ್ಮನೋ
ನ ಚಾಪಿ ಸಂಸ್ಪರ್ಶಮುಪೈತಿ ಕಿಂಚಿತ್ |
ನ ಚಾಪಿ ತೈಃ ಸಾಧಯತೇಽಥ ಕಾರ್ಯಂ
ತೇ ತಂ ನ ಪಶ್ಯಂತಿ ಸ ಪಶ್ಯತೇ ತಾನ್ ॥ 16 ॥

ಈ ಜೀವಾತ್ಮನು ಪರಮಾತ್ಮನ ರೂಪವನ್ನು ತನ್ನ ಈ ಪ್ರಾಕೃತ ಕಣ್ಣಿನಿಂದ ನೋಡಲಾರ. ಈ ಜೀವಾತ್ಮನು ಪರಮಾತ್ಮನ ರೂಪವನ್ನು ಸ್ಪರ್ಶದಿಂದ ತಿಳಿಯಲಾರ. ಯಾವ ಇಂದ್ರಿಯಗಳೂ ತಮ್ಮ ವ್ಯಾಪಾರಗಳ ಮೂಲಕ ಆ ಪರಬ್ರಹ್ಮ ವಸ್ತುವನ್ನು ತಿಳಿಸಿಕೊಡಲಾರವು. ಆದರೆ ಆ ಪರಬ್ರಹ್ಮನು ಈ ಜೀವಾತ್ಮರ ಸ್ಥಿತಿಯನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದಾನೆ. ಆದ್ದರಿಂದ ಸರ್ವಜ್ಞನಾದ ಪರಮಾತ್ಮನಿಗೂ, ಅಸರ್ವಜ್ಞರಾದ ಜೀವರಿಗೂ ಭೇದವೇ ಇದೆ ಎಂದು ತಿಳಿಯಬೇಕು.

ಯಥಾ ಸಮೀಪೇ ಜ್ವಲತೋಽನಲಸ್ಯ
ಸಂತಾಪಜಂ ರೂಪಮುಪೈತಿ ಕಿಂಚಿತ್ |
ನ ಚಾಂತರಂ ರೂಪಗುಣಂ ಬಿಭರ್ತಿ
ತಥೈವ ತದ್ದೃಶ್ಯತೇ ರೂಪಮಸ್ಯ ॥ 17 ॥

ಅಗ್ನಿಸ್ತಂಭನ ಶಕ್ತಿಯನ್ನು ಹೊಂದಿದ ಒಬ್ಬ ಪುರುಷನು ಉರಿಯುತ್ತಿರುವ ಬೆಂಕಿಯ ಸಮೀಪಕ್ಕೆ ಹೋಗಿ ಆ ಬೆಂಕಿಯ ಮಧ್ಯದಲ್ಲಿ ತನ್ನ ಶರೀರವನ್ನು ಇಟ್ಟರೂ ಆ ಬೆಂಕಿಯು ತನ್ನ ಶಕ್ತಿಯಿಂದ ಸ್ತಂಭನ ವಿದ್ಯೆಯನ್ನು ಬಲ್ಲವನನ್ನು ಸುಟ್ಟು ಅವನ ಶರೀರದ ರೂಪವನ್ನು ವ್ಯತ್ಯಾಸಗೊಳಿಸಲಾಗುವುದಿಲ್ಲ. ಇದರಂತೆ ಪರಮಾತ್ಮನು ನಮ್ಮೆಲ್ಲರ ಅಂತರ್ಯಾಮಿಯಾಗಿ ಇದ್ದಾನೆ. ಅನೇಕ ವಿಧವಾದ ದುಃಖಗಳಿಂದ ಸಂತಾಪವನ್ನು ಹೊಂದುತ್ತಿರುವ ಜೀವನ ಹೃದಯದಲ್ಲಿ ಪರಮಾತ್ಮನು ಸನ್ನಿಹಿತನಾಗಿದ್ದರೂ ಅಗ್ನಿಸ್ತಂಭನ ವಿದ್ಯೆಯನ್ನು ಬಲ್ಲವನಂತೆ ತನ್ನ ಸಾಮರ್ಥ್ಯಾತಿಶಯದಿಂದ ಈ ಜೀವನು ಅನುಭವಿಸುವ ಸಾಂಸಾರಿಕ ದುಃಖಗಳನ್ನು ಹೊಂದುವುದಿಲ್ಲ. ನಮ್ಮ ಸಂಗದಿಂದ ಅವನ ರೂಪವು ಬದಲಾಗುವುದಿಲ್ಲ.

ಯಥಾ ಮನುಷ್ಯಃ ಪರಿಮುಚ್ಯ ಕಾಯ-
ಮದೃಶ್ಯಮನ್ಯದ್ ವಿಶತೇ ಶರೀರಮ್ |
ವಿಸೃಜ್ಯ ಭೂತೇಷು ಮಹತ್ಸು ದೇಹಂ
ತದಾಶ್ರಯಂ ಚೈವ ಬಿಭರ್ತಿ ರೂಪಮ್ ॥ 18 ॥

ಯಾವ ರೀತಿಯಾಗಿ ಮನುಷ್ಯನು ಕರ್ಮಜನಿತವಾದ ಶರೀರವನ್ನು ಕಾಲಿಕವಾಗಿ ತೊರೆದು ಬೇರೆ ಶರೀರವನ್ನು ಹೊಂದುತ್ತಾನೋ, ಪೂರ್ವ ಶರೀರವನ್ನು ತ್ಯಜಿಸಿದಾಗ ಆ ಶರೀರದ ಪಂಚಭೂತಗಳು ತಮ್ಮ ಮೂಲರೂಪವನ್ನು ಹೋಗಿ ಸೇರುತ್ತವೋ, ಈ ಜೀವನು ರೂಪಾಂತರವನ್ನು ಹೊಂದುತ್ತಾನೋ ಅದರಂತೆ ಸಮಸ್ತ ಜೀವರು ಪಂಚಭೂತಗಳು ತಮ್ಮ ಮೂಲರೂಪವನ್ನು ಆಶ್ರಯಿಸುವಂತೆ ಎಲ್ಲಾ ಜೀವರು ಪರಮಾತ್ಮನನ್ನೇ ಆಶ್ರಯಿಸುತ್ತಾರೆ.

ಖಂ ವಾಯುಮಗ್ನಿಂ ಸಲಿಲಂ ತಥೋರ್ವೀಂ
ಸಮಂತತೋಽಭ್ಯಾವಿಶತೇ ಶರೀರೀ |
ನಾನ್ಯಾಶ್ರಯಾಃ ಕರ್ಮಸು ವರ್ತಮಾನಾಃ
ಶ್ರೋತ್ರಾದಯಃ ಪಂಚ ಗುಣಾನ್ ಶ್ರಯಂತೇ ॥ 19 ॥

ಜೀವನು ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ ಎಂಬ ಪಂಚಭೂತಗಳನ್ನೇ ಎಲ್ಲಿ ಹೋದರೂ ಹೊಂದುತ್ತಾನೆ. ಈ ಜೀವರಿಗೆ ದೇಹಕ್ಕಿಂತ ಬೇರೆಯಾದ ಆಶ್ರಯವು ಇರುವುದಿಲ್ಲ. ತಮ್ಮ ತಮ್ಮ ವ್ಯಾಪಾರಗಳನ್ನು ಮಾಡುವ ಶ್ರೋತ್ರವೇ ಮೊದಲಾದ ಪಂಚಜ್ಞಾನೇಂದ್ರಿಯಗಳು, ಅವುಗಳಿಗೆ ನೆಲೆಯಾದ ಶಬ್ದ-ಸ್ಪರ್ಶಾದಿ ಗುಣಗಳನ್ನು ಆಶ್ರಯಿಸುತ್ತವೆ.

ಶ್ರೋತ್ರಂ ಖತೋ ಘ್ರಾಣಮಥೋ ಪೃಥಿವ್ಯಾ-
ಸ್ತೇಜೋಮಯಂ ರೂಪಮಥೋ ವಿಪಾಕಃ |
ಜಲಾಶ್ರಯಃ ಸ್ವೇದ ಕ್ತೋ ರಸಶ್ಚ
ವಾಯ್ವಾತ್ಮಕಃ ಸ್ಪರ್ಶಕೃತೋ ಗುಣಶ್ಚ ॥ 20 ॥

ಕಿವಿಯು ಆಕಾಶಗುಣವಾದ ಶಬ್ದವನ್ನೂ, ಮೂಗು ಭೂಮಿಯ ಗುಣವಾದ ಗಂಧವನ್ನೂ, ಕಣ್ಣು ತೇಜೋಗುಣವಾದ ರೂಪವನ್ನೂ, ನಾಲಿಗೆಯು ಜಲಗುಣವಾದ ರಸವನ್ನೂ, ತ್ವಕ್ ವಾಯುಗುಣವಾದ ಸ್ಪರ್ಶವನ್ನೂ ಆಶ್ರಯಿಸಿಕೊಂಡಿದೆ.

ಮಹತ್ಸು ಭೂತೇಷು ವಸಂತಿ ಪಂಚ
ಪಂಚೇಂದ್ರಿಯಾರ್ಥಾಶ್ಚ ತಥೇಂದ್ರಿಯೇಷು |
ಸರ್ವಾಣಿ ಚೈತಾನಿ ಮನೋನುಗಾನಿ
ಬುದ್ಧಿಂ ಮನೋಽನ್ವೇತಿ ಮತಿಃ ಸ್ವಭಾವಮ್ ॥ 21 ॥

ಈ ಐದುಗುಣಗಳು ಪಂಚಮಹಾಭೂತಗಳನ್ನು ಆಶ್ರಯಿಸಿಕೊಂಡಿವೆ. ಪಂಚ ಜ್ಞಾನೇಂದ್ರಿಯಗಳು ಮನಸ್ಸನ್ನೂ, ಮನಸ್ಸು ಬುದ್ಧಿಯನ್ನೂ, ಬುದ್ಧಿಯು ತನ್ನ ಕಾರಣವಾದ ಆತ್ಮಸ್ವಭಾವವನ್ನು ಅನುಸರಿಸಿಕೊಂಡಿದೆ.

ಶುಭಾಶುಭಂ ಕರ್ಮ ಕೃತಂ ಯದಸ್ಯ
ತದೇವ ಪ್ರತ್ಯಾದದತೇ ಸ್ವದೇಹೇ |
ಮನೋಽನುವರ್ತಂತಿ ಪರಾವರಾಣಿ
ಜಲೌಕಸಃ ಸ್ರೋತ ಇವಾನುಕೂಲಮ್ ॥ 22 ॥

ಜೀವನು ಹಿಂದಿನ ಜನ್ಮದಲ್ಲಿ ಮಾಡಿದ ಶುಭಾಶುಭಕರ್ಮಗಳನ್ನು ಈ ಜನ್ಮದಲ್ಲಿ ಪಡೆದ ದೇಹದಲ್ಲಿ ಮತ್ತೆ ಸ್ವೀಕರಿಸುತ್ತಾನೆ. ನೀರಿನಲ್ಲಿ ಸಂಚರಿಸುವ ಜಲಚರಪ್ರಾಣಿಗಳು ಪ್ರವಾಹವನ್ನನುಸರಿಸಿ ಹೋಗುವಂತೆ ಈ ದೇಹಗತವಾದ ಇಂದ್ರಿಯಗಳು ಅಥವಾ ಕರ್ಮಗಳು ಮನಸ್ಸನ್ನನುಸರಿಸಿ ನಡೆಯುತ್ತವೆ.

ಚಲಂ ಯಥಾ ದೃಷ್ಟಿಪಥಂ ಪರೈತಿ
ಸೂಕ್ಷ್ಮಂ ಮಹದ್ರೂಪಮಿವಾಭಿಪಾತಿ |
ಸ್ವರೂಪಮಾಲೋಚಯತೇ ಚ ಧೀರೋ
ಪರಂ ತಥಾ ಬುದ್ಧಿಪಥಂ ಪರೈತಿ ॥ 23 ॥

ಸೂಕ್ಷ್ಮವಾದ ಜೀವನ ರೂಪವು ಪ್ರಕಾಶದಿಂದಾಗಿ ಮಹತ್ತಾಗಿ ತೋರುತ್ತದೆ. ಅಪರೋಕ್ಷ ಜ್ಞಾನವನ್ನು ಪಡೆದ ಬಳಿಕ ಸೂಕ್ಷ್ಮವಾದ ಜೀವನು ಅಪರೋಕ್ಷ ಜ್ಞಾನಿಗಳಿಗೆ ಪ್ರಕಾಶರೂಪನಾಗಿ ಮಹತ್ತಾಗಿ ತೋರುತ್ತಾನೆ. ಇದರಂತೆ ಅಪರೋಕ್ಷ ಜ್ಞಾನಿಯು ತನ್ನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಸ್ವರೂಪವನ್ನು ತನ್ನ ಜ್ಞಾನಮಾರ್ಗದಿಂದ ಚೆನ್ನಾಗಿ ತಿಳಿಯುತ್ತಾನೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *

## ಇಪ್ಪತ್ತೊಂಬತ್ತನೆಯ ಅಧ್ಯಾಯ

### ಮನು-ಬೃಹಸ್ಪತಿ ಸಂವಾದ

ಮನುಃ

ಯದಿಂದ್ರಿಯೈಸ್ತೂಪಕೃತಾನ್ ಪುರಸ್ತಾತ್
ಪ್ರಾಪ್ತಾನ್ ಗುಣಾನ್ ಸಂಸ್ಮರತೇ ಚಿರಾಯ |
ತೇಷ್ವಿಂದ್ರಿಯೇಷೂಪಹತೇಷು ಪಶ್ಚಾತ್
ಸ ಬುದ್ಧಿರೂಪಃ ಪರಮಃ ಸ್ವಭಾವಃ ॥ 1 ॥

ಮನು ಬೃಹಸ್ಪತಿಯೇ, ಇಂದ್ರಿಯಗಳೊಡನೆ ಬೆರೆತ ಮನಸ್ಸು ಹಿಂದೆ ಅನುಭವಿಸಿದ ವಿಷಯಗಳನ್ನು ಬಹಳ ಕಾಲದ ಬಳಿಕ ಪುನಃ ಸ್ಮರಿಸುತ್ತದೆ. ಆ ಇಂದ್ರಿಯಗಳೆಲ್ಲವೂ ತಮ್ಮ ಬಾಹ್ಯವಾದ ವ್ಯಾಪಾರವನ್ನು ನಿಲ್ಲಿಸಿದಾಗ ಮನಸ್ಸಿನ ಏಕಾಗ್ರತೆಯಿಂದ ಬುದ್ಧಿಯಲ್ಲಿ

ಪರಮಸ್ವಭಾವನೆನಿಸಿದ ಪರಮಾತ್ಮನು ಗೋಚರನಾಗುತ್ತಾನೆ.
ಯಥೇಂದ್ರಿಯಾರ್ಥಾನ್ ಯುಗಪತ್ ಸಮಸ್ತಾ-
ನ್ನಾವೇಕ್ಷತೇ ಕೃತ್ಸ್ನಮತುಲ್ಯಕಾಲಮ್ |
ಯಥಾಬಲಂ ಸಂಚರತೇ ಸ ವಿದ್ವಾಂ-
ಸ್ತಸ್ಮಾತ್ಸ ಏಕಃ ಪರಮಃ ಶರೀರೀ ॥ 2 ॥
ಯಾವ ರೀತಿಯಾಗಿ ಮನಸ್ಸು ಇಂದ್ರಿಯಗಳಿಂದ ಗ್ರಹಿಸಿದ ವಿಷಯಗಳನ್ನು ಏಕ ಕಾಲದಲ್ಲಿ ಸಮಗ್ರವಾಗಿ ಗ್ರಹಿಸಲು ಸಮರ್ಥವಾಗಿದೆಯೋ ಆ ಮನಸ್ಸು, ಇಂದ್ರಿಯಗಳಲ್ಲಿ ತನ್ನ ಕರ್ಮಬಲವನ್ನು ಅನುಸರಿಸಿ ಜೀವನು ಸಂಚರಿಸುತ್ತಾನೆ. ಆದ್ದರಿಂದ ಈ ಶರೀರ, ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮರಲ್ಲಿ ಜೀವನೇ ಶ್ರೇಷ್ಠನೆನಿಸಿದ್ದಾನೆ.
ರಜಸ್ತಮಃ ಸತ್ತ್ವಮಥೋ ತೃತೀಯಂ
ಗಚ್ಛತ್ಯಸೌ ಜ್ಞಾನಗುಣಾನ್ ವಿರೂಪಾನ್ |
ತಥೇಂದ್ರಿಯಾಣ್ಯಾವಿಶತೇ ಶರೀರೀ
ಹುತಾಶನಂ ವಾಯುರಿವೇಂಧನಸ್ಥಮ್ ॥ 3 ॥
ರಜಸ್ಸು, ತಮಸ್ಸು, ಮೂರನೆಯದ್ದಾದ ಸತ್ತ್ವಗುಣಗಳನ್ನು ರೂಪ, ರಸಾದಿ ಜ್ಞಾನವೆಂಬ ಗುಣಗಳನ್ನು, ಇಂದ್ರಿಯಗುಣಗಳ ಅನೇಕ ಪ್ರಕಾರವನ್ನು ಈ ಶರೀರದಲ್ಲಿರುವ ಜೀವನು ಪ್ರವೇಶಿಸುತ್ತಾನೆ. ಕಟ್ಟಿಗೆಯೊಳಗಿನ ಬೆಂಕಿಯನ್ನು ಗಾಳಿಯು ಪ್ರವೇಶಿಸಿದಂತೆ ಈ ಇಂದ್ರಿಯಾದಿಗಳಲ್ಲಿ ಜೀವನು ಪ್ರವೇಶಿಸುತ್ತಾನೆ.
ನ ಚಕ್ಷುಷಾ ಪಶ್ಯತಿ ರೂಪಮಾತ್ಮನೋ
ನ ಪಶ್ಯತಿ ಸ್ಪರ್ಶನಮಿಂದ್ರಿಯಾಣಾಮ್ |
ನ ಶ್ರೋತ್ರಲಿಂಗಂ ಶ್ರವಣೇ ನಿದರ್ಶನಂ
ತಥಾಗತಂ ಪಶ್ಯತಿ ತದ್ ವಿನಶ್ಯತಿ ॥ 4 ॥
ಈ ಜೀವನಾದರೂ ಇಂದ್ರಿಯಗಳ ಮಧ್ಯದಲ್ಲಿರುವ ಚಕ್ಷುರಿಂದ್ರಿಯದಿಂದ ಪರಮಾತ್ಮನನ್ನು ನೋಡಲಾರ. ತ್ವಗಿಂದ್ರಿಯವು ಪರಮಾತ್ಮನನ್ನು ನೋಡದು. ಶ್ರೋತ್ರೇಂದ್ರಿಯವು ಪರಮಾತ್ಮನನ್ನು ತಿಳಿಸಲಾರದು, ಅರ್ಥಾತ್ ಶ್ರವಣಾದಿ ಜನಿತ ಜ್ಞಾನವು ಪರಮಾತ್ಮನನ್ನು ನೋಡಲಾರದು. ಇದರಂತೆ ಇಂದ್ರಿಯಗಳಿಂದ ಆಚರಿಸಲ್ಪಟ್ಟ ಕರ್ಮಕ್ಕೂ ಪರಮಾತ್ಮನನ್ನು ತಿಳಿಸುವ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದಲೇ ಜೀವನು ಪರಮಾತ್ಮನನ್ನು ಅರಿಯದೆ ನಾಶಹೊಂದುತ್ತಾನೆ.
ಶ್ರೋತ್ರಾದೀನಿ ನ ಪಶ್ಯಂತಿ ಸ್ವಂ ಸ್ವಮಾತ್ಮಾನಮಾತ್ಮನಾ |
ಸರ್ವಜ್ಞಃ ಸರ್ವದರ್ಶೀ ಚ ಕ್ಷೇತ್ರಜ್ಞಸ್ತಾನಿ ಪಶ್ಯತಿ ॥ 5 ॥
ಶ್ರೋತ್ರವೇ ಮೊದಲಾದ ಇಂದ್ರಿಯಗಳು ತಮ್ಮ ತಮ್ಮ ರೂಪಗಳನ್ನು ತಾವು ತಿಳಿಯಲಾರವು. ಕ್ಷೇತ್ರಜ್ಞನೆನಿಸಿದ ಪರಮಾತ್ಮನು ಅವೆಲ್ಲವನ್ನೂ ತಿಳಿಯಬಲ್ಲವ- ನಾದ್ದರಿಂದ ಸರ್ವದರ್ಶೀ, ಸರ್ವಜ್ಞನೆನಿಸಿದ್ದಾನೆ.
ಯಥಾ ಹಿಮವತಃ ಪಾರ್ಶ್ವಂ ಪೃಷ್ಠಂ ಚಂದ್ರಮಸೋ ಯಥಾ |
ನ ದೃಷ್ಟಪೂರ್ವಂ ಮನುಜೈರ್ನ ಚ ತನ್ನಾಸ್ತಿ ತಾವತಾ ॥ 6 ॥
ಹಿಮಾಲಯ ಬೆಟ್ಟದ ಹಿಂದಿನ ಭಾಗವನ್ನು, ಚಂದ್ರಮಂಡಲದ ಹಿಂಭಾಗವನ್ನು ಮನುಷ್ಯನು ನೋಡಲಿಲ್ಲ ಎಂದ ಮಾತ್ರಕ್ಕೆ ಅದರ ಹಿಂಭಾಗಗಳೇ ಇಲ್ಲವೆಂದು ಅರ್ಥವಲ್ಲ.
ತದ್ವದ್ ಭೂತೇಷು ಭೂತಾತ್ಮಾ ಸೂಕ್ಷ್ಮೋ ಜ್ಞಾನಾತ್ಮವಾನಸೌ |
ಅದೃಷ್ಟಪೂರ್ವಶ್ಚಕ್ಷುರ್ಭ್ಯಾಂ ನ ಚಾಸೌ ನಾಸ್ತಿ ತಾವತಾ ॥ 7 ॥
ಅದರಂತೆ ಜ್ಞಾನರೂಪಿಯಾದ, ಸೂಕ್ಷ್ಮನಾದ, ಸಮಸ್ತ ಭೂತಗಳ ಅಂತರ್ಯಾಮಿಯಾದ ಪರಮಾತ್ಮನು ಇಂದ್ರಿಯಗಳಿಗೆ ಗೋಚರವಾಗಿಲ್ಲವೆಂದ ಮಾತ್ರಕ್ಕೆ ಇಲ್ಲವೆಂದೇ ಅರ್ಥವಲ್ಲ.
ಪಶ್ಯನ್ನಪಿ ಯಥಾ ಲಕ್ಷ್ಮ ಜಗತ್ಸೋಮೇ ನ ವಿಂದತಿ |
ಏವಮಸ್ತಿ ನ ವೇತ್ತ್ಯೇತನ್ನ ಚ ತನ್ನ ಪರಾಯಣಮ್ ॥ 8 ॥
ಜಗತ್ತಿನಲ್ಲಿ ಚಂದ್ರಮಂಡಲವನ್ನು ಅದರಲ್ಲಿರುವ ಚಿಹ್ನೆಯನ್ನು ನೋಡುತ್ತಿದ್ದರೂ ಆ ಪುರುಷನು ಆ ಚಿಹ್ನೆಯನ್ನು ಏನೆಂದು ಹೇಗೆ ತಿಳಿಯನೋ, ಒಳಗೆ ಇರುವ ಆ ಚಿಹ್ನೆಯ ಸ್ವರೂಪವನ್ನು ಅರಿಯದಿರುವಂತೆ ಉತ್ತಮ ಜ್ಞಾನಿಯಾದವನೂ ಪರಮಾತ್ಮನ ಸ್ವರೂಪವನ್ನು ಅರ್ಥಮಾಡಿಕೊಳ್ಳುತ್ತಾನೆ. ಆದರೆ ಮಧ್ಯಮದಲ್ಲಿರುವ ಜೀವನು ಹೃದಯದಲ್ಲಿ ಪರಮಾತ್ಮನು ಇದ್ದಾನೋ ಇಲ್ಲವೋ ಎಂದು ಸಂಶಯಗ್ರಸ್ತನಾಗುತ್ತಾನೆ. ಮಿಥ್ಯಾಜ್ಞಾನಿಯಾದವನು ಎಲ್ಲರಿಗೂ ಆಶ್ರಯನಾದ ಮುಕ್ತಾಧಾರನಾದ ನಾರಾಯಣನನ್ನು ಇಲ್ಲವೆಂದೇ ತಿಳಿಯುತ್ತಾನೆ. ಅವನು ಪರಮಾತ್ಮನನ್ನು ತಿಳಿಯುವುದೇ ಇಲ್ಲ.
ರೂಪವಂತಮರೂಪತ್ವಾದುದಯಾಸ್ತಮಯೇ ಬುಧಾಃ |
ಧಿಯಾ ಸಮನುಪಶ್ಯಂತಿ ತದ್ಗತಾಃ ಸವಿತುರ್ಗತಿಮ್ ॥ 9 ॥
ತಥಾ ಬುದ್ಧಿಪ್ರದೀಪೇನ ದೂರಸ್ಥಂ ಸುವಿಪಶ್ಚಿತಃ |
ಪ್ರತ್ಯಾಸನ್ನಂ ನಿಷೀದಂತಿ ಜ್ಞೇಯಂ ಜ್ಞಾನಾಭಿಸಂಹಿತಮ್ ॥ 10 ॥
ಸೂರ್ಯನನ್ನು ಕಂಡ ಜ್ಞಾನಿಗಳು ಲೋಕದ ವಸ್ತುಗಳಲ್ಲಿ ಕಾಣದೆ ಇರುವ ರೂಪವುಳ್ಳವನಲ್ಲ. ಅಲೌಕಿಕ ರೂಪವುಳ್ಳವನು ಎಂದು ತಿಳಿಯುತ್ತಾರೆ. ಉದಯಾಸ್ತಮಾನಗಳ ಮೂಲಕ ಸೂರ್ಯನಲ್ಲಿರುವ ಚಲನೆಯನ್ನು ಬುದ್ಧಿಯಿಂದಲೇ ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾರೆ. ಇದರಂತೆ ಬುದ್ಧಿಯೆಂಬ ಬೆಳಕಿನ ಸಹಾಯದಿಂದ ಜ್ಞಾನಿಗಳಾದವರು ಅತ್ಯಂತ ದೂರನಾದ ಪರಮಾತ್ಮನು ಹೃದಯದಲ್ಲೇ ಇದ್ದಾನೆಂದೂ, ಅವನೇ ತಿಳಿಯಬೇಕಾದ ಪದಾರ್ಥವೆಂದೂ, ಜ್ಞಾನಪರಿಪೂರ್ಣನೆಂದೂ ತಿಳಿಯುತ್ತಾರೆ.

ನ ಹಿ ಖಲ್ವನುಪಾಯೇನ ಕಶ್ಚಿದರ್ಥೋಽಭಿಸಿದ್ಧ್ಯತಿ |
ಸೂತ್ರಜಾಲೈರ್ಯಥಾ ಮತ್ಸ್ಯಾನ್ ಬಧ್ನಂತಿ ಜಲಜೀವಿನಃ ॥ 11 ॥
ಜಗತ್ತಿನಲ್ಲಿ ಒಂದು ವಸ್ತುವು ಲಭಿಸಬೇಕಾದರೆ ಅದರ ಪ್ರಾಪ್ತಿಗೆ ಬೇಕಾದ ಉಪಾಯವನ್ನು ಹೂಡಲೇಬೇಕು. ಯುಕ್ತಿಬದ್ಧವಾದ ಉಪಾಯವಿಲ್ಲದೆ ಸಾಮಾನ್ಯ ಪದಾರ್ಥಗಳು ಸಿಗಲು ಸಾಧ್ಯವಿಲ್ಲ. ಜಲಚರ ಪ್ರಾಣಿಗಳಾದ ಮತ್ಸ್ಯಾದಿಗಳಿಂದಲೇ ಜೀವನವನ್ನು ಸಾಗಿಸುವ ಬೆಸ್ತರು ಬಲೆಗಳ ಸಮುದಾಯದಿಂದ ಯುಕ್ತಿಬದ್ಧವಾಗಿ ಮೀನುಗಳನ್ನು ಹೇಗೆ ಹಿಡಿಯುತ್ತಾರೋ ಅದರಂತೆ ಜೀವನದ ಪದಾರ್ಥಗಳನ್ನು ಹೊಂದಬಹುದು.
ಮೃಗೈರ್ಮೃಗಾಣಾಂ ಗ್ರಹಣಂ ಪಕ್ಷಿಣಾಂ ಪಕ್ಷಿಭಿರ್ಯಥಾ |
ಗಜಾನಾಂ ಚ ಗಜೈರೇವಂ ಜ್ಞೇಯಂ ಜ್ಞಾನೇನ ಗೃಹ್ಯತೇ ॥ 12 ॥
ಬೇಡರು ಮೃಗಗಳಿಂದ ಮೃಗಗಳನ್ನು ಹಿಡಿಯುತ್ತಾರೆ. ಪಕ್ಷಿಗಳ ಮೂಲಕ ಪಕ್ಷಿಗಳನ್ನು ಹಿಡಿಯುತ್ತಾರೆ. ಆನೆಗಳ ಮೂಲಕವೇ ಕಾಡಾನೆಗಳನ್ನು ವಶಪಡಿಸಿಕೊಳ್ಳುತ್ತಾರೆ. ಇದರಂತೆ ತಿಳಿಯಲು ಅರ್ಹನಾದ ಪರಮಾತ್ಮನನ್ನು, ಜ್ಞಾನರೂಪಿಯಾದ ಪರಮಾತ್ಮನನ್ನು ಜ್ಞಾನದ ಮೂಲಕವೇ ಕಂಡುಕೊಳ್ಳಬೇಕು.
ಅಹಿರೇವ ಹ್ಯಹೇಃ ಪಾದಾನ್ ಪಶ್ಯತೀತಿ ನಿದರ್ಶನಮ್ |
ತದ್ವನ್ಮೂರ್ತಿಷು ಮೂರ್ತಿಷ್ಠಂ ಜ್ಞೇಯಂ ಜ್ಞಾನೇನ ಪಶ್ಯತಿ ॥ 13 ॥
ಹಾವಿನ ಹೆಜ್ಜೆಯನ್ನು ಹಾವೇ ಬಲ್ಲದು ಎಂಬ ನಾಣ್ನುಡಿಯಿದೆ. ಅದೇ ರೀತಿಯಾಗಿ ಸ್ಥೂಲದೇಹದಲ್ಲಿರುವ ಸೂಕ್ಷ್ಮರೂಪಿಯಾದ ಪರಮಾತ್ಮನನ್ನು ಜ್ಞಾನಿಯು ಜ್ಞಾನದ ಸಹಾಯದಿಂದಲೇ ನೋಡಬೇಕು.
ನೋತ್ಸಹಂತೇ ಯಥಾ ವೇತ್ತುಮಿಂದ್ರಿಯೈರಿಂದ್ರಿಯಾಣ್ಯಪಿ |
ತಥೈವೇಹ ಪರಾ ಬುದ್ಧಿಃ ಪರಂ ಬುದ್ಧ್ಯಾ ನ ಪಶ್ಯತಿ ॥ 14 ॥
ಜನರು ತಮ್ಮ ಇಂದ್ರಿಯಗಳನ್ನು ತಮ್ಮ ಇಂದ್ರಿಯಗಳಿಂದಲೇ ಕಾಣಲಾರರು. ಅದರಂತೆ ಪರಮಾತ್ಮನ ಸ್ವರೂಪವನ್ನು ಕೇವಲ ಬುದ್ಧಿಬಲದಿಂದ ತಿಳಿಯಲಾಗದು.
ಯಥಾ ಚಂದ್ರೋ ಹ್ಯಮಾವಾಸ್ಯಾಮಲಿಂಗತ್ವಾನ್ನ ದೃಶ್ಯತೇ |
ನ ಚ ನಾಶೋಽಸ್ಯ ಭವತಿ ತಥಾ ವಿದ್ಧಿ ಶರೀರಿಣಮ್ ॥ 15 ॥
ಚಂದ್ರನು ಅಮಾವಾಸ್ಯೆಯಲ್ಲಿ ಕಾಣಿಸದಿದ್ದ ಮಾತ್ರಕ್ಕೆ ಅವನು ನಾಶ- ಹೊಂದಿದನೆಂದು ಯಾರೂ ಹೇಳುವುದಿಲ್ಲ. ಅದರಂತೆ ಶರೀರದಲ್ಲಿರುವ ಪರಮಾತ್ಮನು ಕಾಣಿಸದಿದ್ದರೂ ಅವನು ಇಲ್ಲವೆಂದು ಅರ್ಥವಲ್ಲ.
ಕ್ಷೀಣಕೋಶೋ ಹ್ಯಮಾವಾಸ್ಯಾಂ ಚಂದ್ರಮಾ ನ ಪ್ರಕಾಶತೇ |
ತದ್ವನ್ಮೂರ್ತಿವಿಯುಕ್ತಃ ಸನ್ ಶರೀರೀ ನೋಪಲಭ್ಯತೇ ॥ 16 ॥
ಅಮಾವಾಸ್ಯೆಯಲ್ಲಿ ಚಂದ್ರನು ಕ್ಷೀಣಮಂಡಲನಾದುದರಿಂದ ಕಣ್ಣಿಗೆ ಕಾಣಿಸುವುದಿಲ್ಲ. ಅದರಂತೆ ಜೀವರ ಅಂತರ್ಯಾಮಿಯಾದ ಪರಮಾತ್ಮನು ಜ್ಞಾನದ ಸಹಾಯದಿಂದ ಪ್ರಜ್ವಲಿತನಾಗಿಲ್ಲವಾದುದರಿಂದ ಕಾಣಿಸುತ್ತಿಲ್ಲ ಎಂದು ತಿಳಿಯಬೇಕೇ ಹೊರತು ಇಲ್ಲವೇ ಇಲ್ಲ ಎಂದು ಭಾವಿಸಬಾರದು.
ಯಥಾ ಕೋಶಾಂತರಂ ಪ್ರಾಪ್ಯ ಚಂದ್ರಮಾ ಭ್ರಾಜತೇ ಪುನಃ |
ತದ್ವಲ್ಲಿಂಗಾಂತರಂ ಪ್ರಾಪ್ಯ ಶರೀರೀ ಭ್ರಾಜತೇ ಪುನಃ॥ 17 ॥
ಚಂದ್ರನು ಆಕಾಶದಲ್ಲಿ ಅದೃಶ್ಯನಾಗಿದ್ದು ಮೋಡದ ಮಧ್ಯದಲ್ಲಿ ಸಿಲುಕಿ ಕಾಣಿಸದಿದ್ದರೂ ಪುನಃ ಬೇರೆ ಸ್ಥಳಕ್ಕೆ ಹೋದಾಗ ಸ್ವಪ್ರಕಾಶದಿಂದ ಹೇಗೆ ಬೆಳಗುತ್ತಾನೋ ಅದರಂತೆ ಜೀವನೂ ಇನ್ನೊಂದು ಶರೀರವನ್ನು ಹೊಂದಿ ತತ್ತ್ವಜ್ಞಾನದ ಬೆಳಕಿನಿಂದ ಪುನಃ ಬೆಳಗುತ್ತಾನೆ.
ಜನ್ಮವೃದ್ಧಿಕ್ಷಯಶ್ಚಾಸ್ಯ ಪ್ರತ್ಯಕ್ಷೇಣೋಪಲಭ್ಯತೇ |
ಸಾ ತು ಚಂದ್ರಮಸೋ ವ್ಯಕ್ತಿರ್ನ ತು ತಸ್ಯ ಶರೀರಿಣಃ ॥ 18 ॥
ನಮ್ಮ ಕಣ್ಣಿಗೆ ಕಾಣಿಸುವ ಚಂದ್ರಮಂಡಲದಲ್ಲಿ ನಡೆಯುವ ಚಂದ್ರನ ಜನ್ಮ-ವೃದ್ಧಿ- ಕ್ಷಯಗಳು ಚಂದ್ರಮಂಡಲದ ಗುಣವೇ ಹೊರತು ಅವು ಚಂದ್ರನ ಗುಣಗಳಾಗಿರುವುದಿಲ್ಲ. ಇದರಂತೆ ಉತ್ಪತ್ತಿ-ಕ್ಷಯಗಳೆಲ್ಲ ಆತ್ಮನ ದೇಹಕ್ಕೆ ಸಂಬಂಧ ಪಟ್ಟವೇ ವಿನಾ ಜೀವನಿಗಲ್ಲ.
ಉತ್ಪತ್ತಿವೃದ್ಧಿವ್ಯಯತೋ ಯಥಾ ಸ ಇತಿ ಗೃಹ್ಯತೇ |
ಚಂದ್ರ ಏವ ತ್ವಮಾವಾಸ್ಯಾಂ ತಥಾ ಭವತಿ ಮೂರ್ತಿಮಾನ್ ॥ 19 ॥
ಚಂದ್ರನು ಅಮಾವಾಸ್ಯೆಯ ದಿವಸದಲ್ಲಿ ಕಾಣಿಸದಿದ್ದರೂ ಅದೇ ಚಂದ್ರನು ಮತ್ತೆ ಉದಿಸಿದಾಗ, ವೃದ್ಧಿಯನ್ನು ಹೊಂದಿದಾಗ ಅದೇ ಚಂದ್ರನೇ ಬಂದನೆಂದು ಭಾವಿಸುತ್ತಾರೆ ವಿನಾ ಅಮಾವಾಸ್ಯೆಯಂದು ಚಂದ್ರ ಸತ್ತನು, ಬೇರೆ ಚಂದ್ರನು ಮರುದಿವಸ ಹುಟ್ಟಿದನು ಎಂದು ಯಾರೂ ತಿಳಿಯರು. ಇದರಂತೆ ಜೀವರಿಗೆ ಉತ್ಪತ್ತಿ-ವೃದ್ಧಿ-ಜರೆ ಇವುಗಳು ಬದಲಾಗುತ್ತಿದ್ದರೂ ಜೀವನು ಬದಲಾಗಲಾರ ಎಂದು ಭಾವಿಸಬೇಕು.
ನಾಭಿಸರ್ಪದ್ ವಿಮುಂಚದ್ವಾ ಶಶಿನಂ ದೃಶ್ಯತೇ ತಮಃ |
ವಿಸೃಜಂಶ್ಚೋಪಸರ್ಪಂಶ್ಚ ತದ್ವತ್ ಪಶ್ಯ ಶರೀರಿಣಮ್ ॥ 20 ॥
ರಾಹುವು ಚಂದ್ರನನ್ನು ನುಂಗುವುದು, ಬಿಡುವುದು ಯಾವುದೂ ನಮಗೆ ಕಾಣಿಸುವುದಿಲ್ಲ. ಅದರಂತೆ ಆತ್ಮನು ದೇಹವನ್ನು ಬಿಡುವುದು, ಮತ್ತೊಂದು ದೇಹವನ್ನು ಪ್ರವೇಶಿಸುವುದು ನಮಗೆ ತಿಳಿಯಲಾರದು.
ಯಥಾ ಚಂದ್ರಾರ್ಕಸಂಯುಕ್ತಂ ತಮಸ್ತದುಪಲಭ್ಯತೇ |
ತದ್ವಚ್ಛರೀರಸಂಯುಕ್ತಃ ಶರೀರೀತ್ಯುಪಲಭ್ಯತೇ ॥ 21 ॥
ರಾಹುವು ಚಂದ್ರ-ಸೂರ್ಯನನ್ನು ಹಿಡಿದಿದ್ದಾಗಲೇ ನಮಗೆ ಅವನು ಹಿಡಿದಿದ್ದಾನೆ. ಈಗ ಗ್ರಹಣವುಂಟಾಗಿದೆ ಎಂದು ಕಾಣಿಸುತ್ತದೆ.

ಇದರಂತೆ ಆತ್ಮನು ಶರೀರದ ಸಂಬಂಧವನ್ನು ಹೊಂದಿದಾಗಲೇ ನಮಗೆ ಜೀವನಿದ್ದಾನೆ ಎಂಬ ತಿಳಿವಳಿಕೆಯು ಬರುತ್ತದೆ.
ಯಥಾ ಚಂದ್ರಾರ್ಕನಿರ್ಮುಕ್ತಃ ಸ ರಾಹುರ್ನೋಪಲಭ್ಯತೇ |
ತದ್ವಚ್ಛರೀರನಿರ್ಮುಕ್ತಃ ಶರೀರೀ ನೋಪಲಭ್ಯತೇ ॥ 22 ॥
ಚಂದ್ರ-ಸೂರ್ಯರನ್ನು ಬಿಟ್ಟು ಹೋದ ರಾಹುವು ಬಳಿಕ ಹೇಗೆ ಕಾಣಿಸುವುದಿಲ್ಲವೋ ಅದರಂತೆ ಶರೀರವನ್ನು ಜೀವನು ಬಿಟ್ಟುಹೋಗಲು ಶರೀರಿಯು ಅರ್ಥಾತ್ ಜೀವನು ಕಾಣಿಸುವುದಿಲ್ಲ.
ಯಥಾ ಚಂದ್ರೋ ಹ್ಯಮಾವಾಸ್ಯಾಂ ನಕ್ಷತ್ರೈರ್ಯುಜ್ಯತೇ ಗತಃ |
ತದ್ವಚ್ಛರೀರನಿರ್ಮುಕ್ತಃ ಫಲೈರ್ಯುಜ್ಯತಿ ಕರ್ಮಣಃ ॥ 23 ॥
ಅಮಾವಾಸ್ಯೆಯ ಚಂದ್ರನು ಮುಚ್ಚಿಹೋಗಿದ್ದರೂ ನಕ್ಷತ್ರಗಳು ಅಲ್ಲಿಯೇ ಇರುವಂತೆ ಆತ್ಮನು ದೇಹವನ್ನು ಬಿಟ್ಟುಹೋದ ಮೇಲೂ ಆ ದೇಹಕೃತವಾದ ಕರ್ಮಗಳು ಹಾಗೆಯೇ ಇರುತ್ತವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಪರಮಾತ್ಮನ ಸಾಕ್ಷಾತ್ಕಾರ, ಉಪಾಯ ಮತ್ತು ಅದರ ಮಹತ್ವ
ಮನುಃ
ಯಥಾ ವ್ಯಕ್ತಮಿದಂ ಶೇತೇ ಸ್ವಪ್ನೇ ಚರತಿ ಚೇತನಮ್ |
ಜ್ಞಾನಮಿಂದ್ರಿಯಸಂಯುಕ್ತಂ ತದ್ವತ್ ಪ್ರೇತ್ಯ ಭವಾಭವೌ ॥ 1 ॥
ಮನು ಸ್ವಪ್ನಾವಸ್ಥೆಯಲ್ಲಿರುವ ಮನುಷ್ಯನ ಸ್ಥೂಲಶರೀರವು ಮಲಗಿದ್ದರೂ ಸೂಕ್ಷ್ಮ ಚೇತನವು ಯಾವ ರೀತಿಯಲ್ಲಿ ಸಂಚರಿಸುತ್ತದೋ ಅದೇ ರೀತಿಯಲ್ಲಿ ಜ್ಞಾನ- ರೂಪಿಯಾದ ಆತ್ಮನು ಇಂದ್ರಿಯಗಳ ಜೊತೆ ಸಂಯುಕ್ತವಾದಾಗ ಮತ್ತು ಅವುಗಳ ಜೊತೆಗೆ ಬಿಡುಗಡೆಯನ್ನು ಹೊಂದಿದಾಗ ಬಂಧ-ಮೋಕ್ಷಗಳನ್ನು ಅನುಭವಿಸುತ್ತಾನೆ. ಇಂದ್ರಿಯಸಂಯೋಗವಾದಾಗ ಬಂಧನವಾಗುತ್ತದೆ, ಅದರಿಂದ ಬಿಡುಗಡೆಯಾದಾಗ ಮೋಕ್ಷವಾಗುತ್ತದೆ.
ಯಥಾಂಭಸಿ ಪ್ರಸನ್ನೇ ತು ರೂಪಂ ಪಶ್ಯತಿ ಚಕ್ಷುಷಾ |
ತದ್ವತ್ ಪ್ರಸನ್ನೇಂದ್ರಿಯವಾನ್ ಜ್ಞೇಯಂ ಜ್ಞಾನೇನ ಪಶ್ಯತಿ ॥ 2 ॥
ನಿಶ್ಚಲವಾದ ನೀರಿನಲ್ಲಿ ಮನುಷ್ಯನು ಯಾವ ರೀತಿಯಾಗಿ ತನ್ನ ರೂಪವನ್ನು ತನ್ನ ಕಣ್ಣಿನಿಂದಲೇ ನೋಡಿಕೊಳ್ಳಬಲ್ಲನೋ ಅದೇ ರೀತಿಯಾಗಿ ಜ್ಞಾನಿಯು ಇಂದ್ರಿಯಗಳು ಮತ್ತು ಮನಸ್ಸು ಶುದ್ಧವಾದಾಗ, ಕಾಮ-ಕ್ರೋಧಗಳಿಂದ ವಿದುರವಾದಾಗ ಜ್ಞೇಯವಾದ ಪರಬ್ರಹ್ಮನನ್ನು ಜ್ಞಾನದ ಮೂಲಕವಾಗಿ ನೋಡುತ್ತಾನೆ.
ಸ ಏವ ಲುಲಿತೇ ತಸ್ಮಿನ್ ಯಥಾ ರೂಪಂ ನ ಪಶ್ಯತಿ |
ತಥೇಂದ್ರಿಯಾಕುಲೀಭಾವೇ ಜ್ಞೇಯಂ ಜ್ಞಾನೇ ನ ಪಶ್ಯತಿ ॥ 3 ॥
ಚಂಚಲವಾದ ನೀರಿನಲ್ಲಿ ತನ್ನ ರೂಪವನ್ನು ಹೇಗೆ ನೋಡಿಕೊಳ್ಳಲು ಸಾಧ್ಯವಿಲ್ಲವೋ ಅದರಂತೆ ಅಸ್ಥಿರವಾದ, ಚಂಚಲವಾದ ಇಂದ್ರಿಯಗಳಿಂದ ಕೂಡಿದ ಬುದ್ಧಿಯುಳ್ಳ ಮನುಷ್ಯನು ಜ್ಞೇಯನಾದ ಪರಮಾತ್ಮನನ್ನು ಕಾಣಲಾರ.
ಅಬುದ್ಧಿರಜ್ಞಾನಕೃತಾ ಅಬುದ್ಧ್ಯಾ ದುಷ್ಯತೇ ಮನಃ |
ದುಷ್ಟಸ್ಯ ಮನಸಃ ಪಂಚ ಸಂಪ್ರದುಷ್ಯಂತಿ ಮಾನಸಾಃ ॥ 4 ॥
ಅಜ್ಞಾನದಿಂದಾಗಿ ಬುದ್ಧಿಯು ಹಾಳಾಗುತ್ತದೆ. ಬುದ್ಧಿ ಹಾಳಾದಾಗ ಮನಸ್ಸು ರಾಗ- ದ್ವೇಷಗಳಿಂದ ಕದಡಿಹೋಗುತ್ತದೆ. ಮನಸ್ಸು ದುಷ್ಟವಾದಾಗ ಪ್ರಧಾನವಾದ ಮನಸ್ಸಿನ ಅಭಿಪ್ರಾಯವನ್ನು ಪಂಚಜ್ಞಾನೇಂದ್ರಿಯಗಳು ಅನುಸರಿಸುತ್ತಾ ಅವುಗಳೂ ಕಲುಷಿತವಾಗುತ್ತವೆ.
ಅಜ್ಞಾನತೃಪ್ತೋ ವಿಷಯೇಷ್ವವಗಾಢೋ ನ ದೃಶ್ಯತೇ |
ಅದೃಷ್ಟ್ವೈವ ತು ಪೂತಾತ್ಮಾ ವಿಷಯೇಭ್ಯೋ ನಿವರ್ತತೇ ॥ 5 ॥
ಅಜ್ಞಾನದಿಂದ ಆವೃತನಾದ ಜೀವನು ವಿಷಯಸುಖಗಳಲ್ಲಿಯೇ ಮುಳುಗಿ ಹೋಗಿ ನಿರಂತರ ಅವುಗಳನ್ನೇ ಅನುಭವಿಸುತ್ತಿದ್ದರೂ ತೃಪ್ತಿಯನ್ನು ಹೊಂದುವುದಿಲ್ಲ. ಅದೃಷ್ಟ ವಶದಿಂದ ಭಗವಂತನ ಅನುಗ್ರಹದಿಂದ ಕೆಲವೊಮ್ಮೆ ಜೀವನು ವಿಷಯ ಸುಖಗಳಿಂದ ಹಿಂದಿರುಗುತ್ತಾನೆ. ಆಗ ಅವನು ಮೋಕ್ಷದ ಮಾರ್ಗವನ್ನು ಅವಲಂಬಿಸುತ್ತಾನೆ.
ತರ್ಷಚ್ಛೇದೋ ನ ಭವತಿ ಪುರುಷಸ್ಯೇಹ ಕಲ್ಮಷಾತ್ |
ನಿವರ್ತತೇ ತಥಾ ತರ್ಷಃ ಪಾಪಮಂತಂ ಗತಂ ಯಥಾ ॥ 6 ॥
ಪಾಪದ ಕಾರಣದಿಂದಾಗಿ ಮನುಷ್ಯನಿಗೆ ಆಕಾಂಕ್ಷೆಗಳು ಪೂರ್ಣವಾಗುವುದಿಲ್ಲ. ಪಾಪವು ಯಾವಾಗ ವಿನಾಶ ಹೊಂದುತ್ತದೋ ಆಗ ತೃಷ್ಣೆಯು ನಿವೃತ್ತಿಯಾಗುತ್ತದೆ. ಪಾಪ ಹೊಂದಿದವನನ್ನು ತೃಷ್ಣೆಗಳು ಪುನಃ ಪುನಃ ಪೀಡಿಸುತ್ತವೆ.
ಅಂತರ್ಗತೇನ ಪಾಪೇನ ದಹ್ಯಮಾನೇನ ಚೇತಸಾ |
ಶುಭಾಶುಭವಿಕಾರೇಣ ನ ಸ ಭೂಯೋಽಭಿಜಾಯತೇ ॥ 7 ॥
ಪಾಪವು ಜೀವನನ್ನು ಸೇರಿಕೊಂಡಾಗ ಅದರಿಂದ ಸುಡಲ್ಪಡುತ್ತಿರುವ ಜೀವನು ಶುಭಾಶುಭ ವಿಕಾರಗಳಿಗೆ ತುತ್ತಾಗಿ ಶ್ರೇಷ್ಠತ್ವವನ್ನು ಹೊಂದುವುದಿಲ್ಲ.
ವಿಷಯೇಷು ಚ ಸಂಸರ್ಗಾಚ್ಛಾಶ್ವತಸ್ಯ ಚ ಸಂಶಯಾತ್ |

ಮನಸಾ ಚಾನ್ಯದಾಕಾಂಕ್ಷನ್ ಪರಂ ನ ಪ್ರತಿಪದ್ಯತೇ ॥ 8 ॥
ಮನುಷ್ಯನು ವಿಷಯಗಳಲ್ಲಿ ಸಂಸರ್ಗವನ್ನು ಹೊಂದುವುದರಿಂದ, ನಿರಂತರವೂ ವಿಷಯಸುಖಗಳನ್ನೇ ಆಶ್ರಯಿಸುವುದರಿಂದ ಆತ್ಮಸಾಧನೆಗೆ ವಿರುದ್ಧವಾದುದನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಪರಮಾತ್ಮನನ್ನು ಹೊಂದುವುದಿಲ್ಲ.
ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ |
ಅಥಾದರ್ಶತಲಪ್ರಖ್ಯೇ ಪಶ್ಯತ್ಯಾತ್ಮಾನಮಾತ್ಮನಿ ॥ 9 ॥
ಸ್ವಚ್ಛವಾದ ಕನ್ನಡಿಯಲ್ಲಿ ಪುರುಷನ ಪ್ರತಿಬಿಂಬವು ಚೆನ್ನಾಗಿ ಕಾಣಲು ಸಾಧ್ಯವಾಗುವಂತೆ ಪಾಪಕರ್ಮಗಳು ವಿನಾಶವಾದ ಬಳಿಕವೇ ಪುರುಷನ ಅಂತಃಕರಣದಲ್ಲಿ ಜ್ಞಾನದ ಉದಯವಾಗುತ್ತದೆ. ಕನ್ನಡಿಯಂತೆ ಸ್ವಚ್ಛವಾದ ಅಂತಃಕರಣದ ಮೂಲಕ ಪುರುಷನು ಜ್ಞಾನರೂಪಿಯಾದ ಪರಮಾತ್ಮನನ್ನು ತನ್ನಲ್ಲಿ ಕಂಡುಕೊಳ್ಳುತ್ತಾನೆ.
ಪ್ರಸೃತೈರಿಂದ್ರಿಯೈರ್ದುಃಖೀ ತೈರೇವ ನಿಯತೈಃ ಸುಖೀ |
ತಸ್ಮಾದಿಂದ್ರಿಯರೂಪೇಭ್ಯೋ ಯಚ್ಛೇದಾತ್ಮಾನಮಾತ್ಮನಾ ॥ 10 ॥
ವಿಷಯ ಪದಾರ್ಥಗಳ ಕಡೆ ಇಂದ್ರಿಯಗಳನ್ನು ಹರಿಬಿಟ್ಟರೆ ಮನುಷ್ಯನು ದುಃಖಕ್ಕೆ ತುತ್ತಾಗುತ್ತಾನೆ. ಆದ್ದರಿಂದ ಇಂದ್ರಿಯಗಳನ್ನು ಬುದ್ಧಿಯ ಮೂಲಕವಾಗಿ ವಿಷಯ ಪದಾರ್ಥಗಳಿಂದ ತಡೆ ಹಿಡಿಯಬೇಕು.
ಇಂದ್ರಿಯೇಭ್ಯೋ ಮನಃ ಪೂರ್ವಂ ಬುದ್ಧಿಃ ಪರತರಾ ತತಃ |
ಬುದ್ಧೇಃ ಪರತರಂ ಜ್ಞಾನಂ ಜ್ಞಾನಾತ್ ಪರತರಂ ಪರಮ್ ॥ 11 ॥
ಇಂದ್ರಿಯಾಭಿಮಾನಿ ದೇವತೆಗಳಿಗಿಂತಲೂ ಮನೋಭಿಮಾನಿಯಾದ ರುದ್ರನು ಶ್ರೇಷ್ಠನಾಗಿದ್ದಾನೆ. ಮನೋಭಿಮಾನಿಯಾದ ರುದ್ರನಿಗಿಂತ ಬುದ್ಧ್ಯಭಿಮಾನಿ ಸರಸ್ವತಿಯು ಉತ್ತಮಳು. ಬುದ್ಧ್ಯಭಿಮಾನಿಗಿಂತಲೂ ವಿಜ್ಞಾನತತತ್ತ್ವಭಿಮಾನಿಯಾದ ಚತುರ್ಮುಖ ಬ್ರಹ್ಮನು ಶ್ರೇಷ್ಠನು. ಆ ಚತುರ್ಮುಖ ಬ್ರಹ್ಮನಿಗಿಂತಲೂ ಪರಬ್ರಹ್ಮನು ಅತ್ಯಂತ ಶ್ರೇಷ್ಠನು.
ಅವ್ಯಕ್ತಾತ್ ಪ್ರಸೃತಂ ಜ್ಞಾನಂ ತತೋ ಬುದ್ಧಿಸ್ತತೋ ಮನಃ |
ಮನಃ ಶ್ರೋತ್ರಾದಿಭಿರ್ಯುಕ್ತಂ ಶಬ್ದಾದೀನ್ ಸಾಧು ಪಶ್ಯತಿ ॥ 12 ॥
ಅವ್ಯಕ್ತ ತತ್ತ್ವದಿಂದ ಉತ್ಪನ್ನವಾದ ಜ್ಞಾನವು ಬುದ್ಧಿತತ್ತ್ವವನ್ನು ಜಾಗೃತಗೊಳಿಸುತ್ತದೆ. ಬುದ್ಧಿತತ್ತ್ವದಿಂದ ಮನಸ್ಸು, ಮನಸ್ಸಿನಿಂದ ಶ್ರೋತ್ರಾದಿ ಇಂದ್ರಿಯಗಳು, ಅವುಗಳ ಮೂಲಕ ಶಬ್ದವೇ ಮೊದಲಾದ ಇಂದ್ರಿಯಾರ್ಥಗಳನ್ನು ಚೆನ್ನಾಗಿ ಅನುಭವಿಸುತ್ತವೆ.
ಯಸ್ತಾಂಸ್ತ್ಯಜತಿ ಶಬ್ದಾದೀನ್ ಸರ್ವಾಶ್ಚ ವ್ಯಕ್ತಯಸ್ತಥಾ |
ವಿಮುಂಚತ್ಯಾಕೃತಿಗ್ರಾಮಾಂಸ್ತಾನ್ ಮುಕ್ತತ್ವಮೃತಮಶ್ನುತೇ ॥ 13 ॥
ಯಾವ ಮನುಷ್ಯನು ಶಬ್ದಾದಿವಿಷಯಗಳನ್ನು, ಅವುಗಳಿಗೆ ಆಶ್ರಯವಾದ ಶಬ್ದಾದಿಗಳಿಂದ ಉತ್ಪನ್ನವಾಗುವ ಜ್ಞಾನಗಳನ್ನು, ಇಂದ್ರಿಯಗ್ರಾಮಗಳನ್ನು ಪರಿತ್ಯಜಿಸುತ್ತಾನೋ ಅಂತಹ ಮನುಷ್ಯನು ಮುಕ್ತನಾಗಿ ಅಮೃತರೂಪಿಯಾದ ಪರಮಾತ್ಮನನ್ನು ಹೊಂದುತ್ತಾನೆ.
ಉದ್ಯನ್ ಹಿ ಸವಿತಾ ಯದ್ವತ್ ಸೃಜತೇ ರಶ್ಮಿಮಂಡಲಮ್ |
ಸ ಏವಾಸ್ತಮುಪಾಗಚ್ಛಂಸ್ತದೇವಾತ್ಮನಿ ಯಚ್ಛತಿ ॥ 14 ॥
ಸೂರ್ಯನು ಉದಯಿಸುತ್ತಿರುವಾಗಲೇ ರಶ್ಮಿಮಂಡಲವನ್ನು ಸೃಷ್ಟಿಸುತ್ತಾನೆ. ಅದೇ ಸೂರ್ಯನು ತಾನು ಅಸ್ತಮಾನ ಹೊಂದುವಾಗ ರಶ್ಮಿಗಳನ್ನು ತನ್ನಲ್ಲೇ ಉಪಸಂಹರಿಸಿಕೊಳ್ಳುತ್ತಾನೆ.
ಅಂತರಾತ್ಮಾ ತಥಾ ದೇಹಮಾವಿಶ್ಯೇಂದ್ರಿಯರಶ್ಮಿಭಿಃ |
ಪ್ರಾಪ್ಯೇಂದ್ರಿಯಗುಣಾನ್ ಪಂಚ ಸೋಽಸ್ತಮಾವೃತ್ಯ ಗಚ್ಛತಿ ॥ 15 ॥
ಇದರಂತೆ ಅಂತರಾತ್ಮನು ಇಂದ್ರಿಯಗಳ ರಶ್ಮಿಗಳ ಸಹಿತವಾಗಿ ದೇಹವನ್ನು ಪ್ರವೇಶಿಸುತ್ತಾನೆ. ದೇಹದ ಮೂಲಕ ಇಂದ್ರಿಯಗುಣಗಳನ್ನು ಅರ್ಥಾತ್ ವಿಷಯಗಳನ್ನು ಸ್ವೀಕರಿಸುತ್ತಾನೆ. ಪುನಃ ಜೀವನು ಶರೀರವನ್ನು ಬಿಟ್ಟು ಹೋಗುವಾಗ ಪಂಚೇಂದ್ರಿಯಗಳನ್ನು ತನ್ನಲ್ಲಿಯೇ ಉಪಸಂಹರಿಸಿಕೊಂಡು ಹೋಗುತ್ತಾನೆ.
ಗ್ರಸ್ತಂ ಹ್ಯುದ್ಗಿರತೇ ನಿತ್ಯಮುದ್ಗೀಥಂ ವೇತ್ತಿ ನಿತ್ಯಶಃ |
ಬಾಲ್ಯೇ ರಥಾಭ್ಯಾಂ ಯೋಗೇನ ತತ್ತ್ವಜ್ಞಾನಂ ತು ಸಮ್ಮತಮ್ ॥ 16 ॥
ಮನಸ್ಸಿನಿಂದ ಭಗವಂತನನ್ನು ಸ್ವೀಕರಿಸಿದ ಚೇತನನು ಅವನನ್ನೇ ಸ್ತುತಿಸುತ್ತಾ ಯಾವಾಗಲೂ ಉದ್ಗೀಥನಾದ ಅವನನ್ನೇ ತಿಳಿಯುತ್ತಾನೆ. ಜೀವನಿಗೆ ರಥದಂತಿರುವ ಸ್ಥೂಲದೇಹ, ಲಿಂಗದೇಹದಂತಿರುವ ಕೂಡಿಕೊಂಡ ಜೀವನು ತನಗೆ ಯೋಗ್ಯವಾದ ತತ್ತ್ವಜ್ಞಾನವನ್ನು ಹೊಂದುತ್ತಾನೆ.
ಪ್ರಣೀತಂ ಕರ್ಮಣಾ ಮಾರ್ಗಂ ನೀಯಮಾನಃ ಪುನಃ ಪುನಃ |
ಪ್ರಾಪ್ನೋತ್ಯಯಂ ಕರ್ಮಫಲಂ ಪ್ರವೃದ್ಧಂ ಧರ್ಮಮಾತ್ಮವಾನ್॥ 17 ॥
ಜೀವಾತ್ಮನು ಕರ್ಮಗಳ ಮೂಲಕವಾಗಿ ಕರ್ಮಮಾರ್ಗದಲ್ಲಿಯೇ ಅರ್ಥಾತ್ ಸಂಸಾರ ಚಕ್ರದಲ್ಲಿಯೇ ಪರಿಕ್ರಮಿಸುತ್ತಾ ಸುಖ-ದುಃಖರೂಪವಾದ ಕರ್ಮಫಲವನ್ನು ಅನುಭವಿಸುತ್ತಿರುತ್ತಾನೆ.
ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ |
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ 18 ॥
ವಿಷಯಭೋಗಗಳನ್ನು ತ್ಯಜಿಸಿದ ಮನುಷ್ಯನ ವಿಷಯಗಳೆಲ್ಲವೂ ಹಿಂದಿರುಗಿ ಹೋಗುತ್ತವೆ. ವಿಷಯ ಸುಖಗಳಲ್ಲಿ ಆಸಕ್ತಿಯು ಉಂಟಾಗುವುದಿಲ್ಲ. ಆದರೆ ಜಿಹ್ವಾ ಚಾಪಲ್ಯವು ಪರಮಾತ್ಮನನ್ನು ನೋಡಿಯೇ ನಿವೃತ್ತಿಯನ್ನು ಹೊಂದುತ್ತದೆ.
ಬುದ್ಧಿಃ ಕರ್ಮಗುಣೈರ್ಹೀನಾ ಯದಾ ಮನಸಿ ವರ್ತತೇ |
ತದಾ ಸಂಪದ್ಯತೇ ಬ್ರಹ್ಮ ತತ್ರೈವ ಪ್ರಲಯಂ ಗತಮ್ ॥ 19 ॥

ಯಾವಾಗ ಬುದ್ಧಿಯು ಕರ್ಮನಿರತವಾದ ಗುಣಗಳಿಂದ ಬಿಡಲ್ಪಟ್ಟು ಮನಸ್ಸಿನಿಂದ ನಿಗ್ರಹಿಸಲ್ಪಟ್ಟಿರುತ್ತದೋ ಆಗ ಪರಬ್ರಹ್ಮನನ್ನು ಹೊಂದಲು ಸಾಧ್ಯವಾಗುತ್ತದೆ. ಆ ಸಮಯದಲ್ಲಿ ವಿಶೇಷವಾಗಿ ಅವನಲ್ಲಿಯೇ ಮನಸ್ಸು ಆಸಕ್ತವಾಗಿರುತ್ತದೆ.
ಅಸ್ಪರ್ಶನಮಶೃಣ್ವಾನಮನಾಸ್ವಾದಮದರ್ಶನಮ್ |
ಅಘ್ರಾಣಮವಿತರ್ಕಂ ಚ ಸತ್ತ್ವಂ ಪ್ರವಿಶತೇ ಪರಮ್ ॥ 20 ॥
ಚಿತ್ತವು ಬಾಹ್ಯವಿಷಯಸ್ಪರ್ಶದಿಂದ ರಹಿತವಾಗಿ, ಬಾಹ್ಯಶ್ರವಣಗಳಿಂದ ನಿವೃತ್ತವಾಗಿ, ಬಾಹ್ಯರಸಗಳನ್ನು ಆಸ್ವಾದಿಸುವುದರಲ್ಲಿಯೂ ನಿವೃತ್ತವಾಗಿ, ಬಾಹ್ಯ ದರ್ಶನಗಳಿಂದ ವಿರಕ್ತವಾಗಿ, ಬಾಹ್ಯ ಘ್ರಾಣನ ಸಂಕಲ್ಪ-ವಿಕಲ್ಪಗಳಿಂದ ಹೀನವಾಗಿ ಪರಮಾತ್ಮನಲ್ಲಿಯೇ ನೆಲೆಗೊಂಡಿರುತ್ತದೆ.
ಅವ್ಯಕ್ತಾತ್ ಪ್ರಸೃತಂ ಜ್ಞಾನಂ ತತೋ ಬುದ್ಧಿಸ್ತತೋ ಮನಃ |
ಆತ್ಮನಃ ಪ್ರಸೃತೌ ಬುದ್ಧಿರವ್ಯಕ್ತಂ ಜ್ಞಾನಮುಚ್ಯತೇ ॥ 21 ॥
ಅವ್ಯಕ್ತದಿಂದ ಉತ್ಪನ್ನವಾದ ಜ್ಞಾನವು, ಜ್ಞಾನದಿಂದ ಉತ್ಪನ್ನವಾದ ಬುದ್ಧಿಯು, ಬುದ್ಧಿಯಿಂದ ಉತ್ಪನ್ನವಾದ ಮನಸ್ಸು ಎಲ್ಲವೂ ಪರಮಾತ್ಮನ ಬಳಿ ಪ್ರವೃತ್ತಿಯನ್ನು ಹೊಂದಿದಾಗ ವಿಷಯ ವ್ಯಕ್ತಿರಹಿತವಾದ ಬುದ್ಧಿಯು ವಿಜ್ಞಾನ ತತ್ತ್ವವನ್ನು ಗ್ರಹಿಸುತ್ತದೆ.
ತಸ್ಮಾದ್ ಬುದ್ಧಿಃ ಸ್ಮೃತಾ ತಜ್ಜ್ಞೈರ್ಮನಸ್ತಸ್ಮಾತ್ತತಃ ಸ್ಮೃತಮ್ |
ತಸ್ಮಾದಾಕೃತಯಃ ಪಂಚ ಮನಃ ಪರಮಮುಚ್ಯತೇ ॥ 22 ॥
ಅವ್ಯಕ್ತದಿಂದ ಬುದ್ಧಿತತ್ತ್ವ, ಬುದ್ಧಿತತ್ತ್ವದಿಂದ ಮನಸ್ತತ್ತ್ವವು, ಮನಸ್ತತ್ತ್ವದಿಂದ ವಿಷಯವನ್ನು ಪರಿವ್ಯಂಜನೆ ಮಾಡುವ ಪಂಚಜ್ಞಾನೇಂದ್ರಿಯಗಳು ಹುಟ್ಟುತ್ತವೆ. ಪಂಚಜ್ಞಾನೇಂದ್ರಿಯಗಳಿಗೆ ನಿಯಾಮಕವಾದ ಮನಸ್ಸು ಶ್ರೇಷ್ಠ ಎನಿಸುತ್ತದೆ.
ತಸ್ಮಾತ್ ಪರತರಾ ಬುದ್ಧಿರ್ಜ್ಞಾನಂ ತಸ್ಮಾತ್ ಪರಂ ಸ್ಮೃತಮ್ |
ತತಃ ಸೂಕ್ಷ್ಮಸ್ತತೋ ಹ್ಯಾತ್ಮಾ ತಸ್ಮಾತ್ಪರತರಂ ನ ಚ ॥ 23 ॥
ಆ ಮನಸ್ತತ್ತ್ವಕ್ಕಿಂತಲೂ ಶ್ರೇಷ್ಠವಾದುದು ಬುದ್ಧಿತತ್ತ್ವವು. ಬುದ್ಧಿತತ್ತ್ವಕ್ಕಿಂತಲೂ ಶ್ರೇಷ್ಠವಾದುದು ವಿಜ್ಞಾನತತ್ತ್ವವು. ಆ ವಿಜ್ಞಾನತತ್ತ್ವಕ್ಕಿಂತಲೂ ವ್ಯಾಪ್ತನಾದವನು ಸೂಕ್ಷ್ಮನೆನಿಸಿದ ಪರಮಾತ್ಮನು. ಆ ಪರಮಾತ್ಮನಿಗಿಂತಲೂ ಶ್ರೇಷ್ಠವಾದ ವಸ್ತುವು ಯಾವುದೂ ಇರುವುದಿಲ್ಲ.
ಮನಸ್ಯಾಕೃತಯೋ ಮಗ್ನಾ ಮನಸ್ತ್ವತಿಗತಂ ಮತಿಮ್ |
ಮತಿಸ್ತ್ವತಿಗತಾ ಜ್ಞಾನಂ ಜ್ಞಾನಂ ತ್ವಭಿಗತಂ ಪರಮ್ ॥ 24 ॥
ಮನಸ್ಸಿನಲ್ಲಿ ವಿಷಯರೂಪವಾದ ಶಬ್ದಾದಿ ಸಮಸ್ತವಾದ ಪಂಚೇಂದ್ರಿಯಗಳು ಲಯ ಹೊಂದುತ್ತವೆ. ಮನಸ್ಸು ಬುದ್ಧಿಯಲ್ಲಿಯೂ, ಬುದ್ಧಿಯು ವಿಜ್ಞಾನ ತತ್ತ್ವದಲ್ಲಿಯೂ, ವಿಜ್ಞಾನ ತತ್ತ್ವವು ಪರಮಾತ್ಮನಲ್ಲಿಯೂ ಕ್ರಮವಾಗಿ ಲಯವನ್ನು ಹೊಂದುತ್ತವೆ.
ಇಂದ್ರಿಯೈರ್ಮನಸಃ ಸಿದ್ಧಿರ್ನ ಬುದ್ಧಿಂ ಬುಧ್ಯತೇ ಮನಃ |
ನ ಬುದ್ಧಿರ್ಬುಧ್ಯತೇಽವ್ಯಕ್ತಂ ವ್ಯಕ್ತಿಷ್ವೇತಾನಿ ಪಶ್ಯತಿ ॥ 25 ॥
ಕಣ್ಣಿಗೆ ಕಾಣುವ ಜೀವರ ದೇಹದಲ್ಲಿರುವ ಇಂದ್ರಿಯಗಳಿಗೆ ಮನಸ್ಸು ಗೋಚರವಾಗುವುದಿಲ್ಲ. ಮನಸ್ಸು ಬುದ್ಧಿಯನ್ನು ತಿಳಿದಿರುವುದಿಲ್ಲ. ಬುದ್ಧಿಯು ವಿಜ್ಞಾನತತ್ತ್ವವನ್ನು, ವಿಜ್ಞಾನತತ್ತ್ವವು ಅವ್ಯಕ್ತವನ್ನು, ಅವ್ಯಕ್ತತತ್ತ್ವವು ಸೂಕ್ಷ್ಮ ತತ್ತ್ವವೆನಿಸಿದ ಪರಮಾತ್ಮನನ್ನು ಪೂರ್ಣವಾಗಿ ತಿಳಿದಿರುವುದಿಲ್ಲ. ಆದರೆ ಸೂಕ್ಷ್ಮನೆನಿಸಿದ ಪರಮಾತ್ಮನು ಇವರೆಲ್ಲರನ್ನೂ ತಿಳಿದಿರುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಪರಬ್ರಹ್ಮಪ್ರಾಪ್ತಿಗೆ ಉಪಾಯ.
ಮನುಃ
ಜ್ಞಾನಂ ಜ್ಞೇಯಾಭಿನಿರ್ವೃತ್ತಂ ವಿದ್ಧಿ ಜ್ಞಾನಗುಣಂ ಮನಃ |
ಪ್ರಜ್ಞಾಕರಣಸಂಯುಕ್ತಂ ತತೋ ಬುದ್ಧಿಃ ಪ್ರವರ್ತತೇ ॥ 1 ॥
ಮನು ಬೃಹಸ್ಪತಿಯೇ, ಜ್ಞೇಯನೆನಿಸಿದ ಪರಮಾತ್ಮನ ಅಸ್ತಿತ್ವವನ್ನು ನಿರ್ಣಯಿಸಿಕೊಡುವುದೇ ಜ್ಞಾನ ಎಂದು ತಿಳಿ. ಜ್ಞಾನಗುಣವುಳ್ಳ ಮನಸ್ಸು ಜ್ಞಾನಕ್ಕೆ ಕರಣಗಳಾದ ಇಂದ್ರಿಯಗಳಿಂದ ಕೂಡಿದಾಗ ವಿಷಯಗಳ ಕಡೆ ಪ್ರವೃತ್ತಿಯನ್ನು ಹೊಂದುತ್ತದೆ.
ಯದಾ ಕರ್ಮಗುಣೋಪೇತಾ ಬುದ್ಧಿರ್ಮನಸಿ ವರ್ತತೇ |
ತದಾ ಪ್ರಜ್ಞಾಯತೇ ಬ್ರಹ್ಮ ಧ್ಯಾನಯೋಗಸಮಾಧಿನಾ ॥ 2 ॥
ಯಾವಾಗ ಬುದ್ಧಿಯು ಕರ್ಮ ಮತ್ತು ಗುಣಗಳಿಂದ ದೂರ ಸರಿದು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತದೋ ಆಗ ಧ್ಯಾನಯೋಗದಿಂದ ಲಭ್ಯವಾಗುವ ಸಮಾಧಿಯ ಮೂಲಕವಾಗಿ ಗುಣಪರಿಪೂರ್ಣವಾದ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ.
ಸೇಯಂ ಗುಣವತೀ ಬುದ್ಧಿರ್ಗುಣೇಷ್ವೇವಾಭಿವರ್ತತೇ |
ಅಪರಾ ತ್ವಭಿನಿಃಸ್ರೌತಿ ಗಿರೇಃ ಶೃಂಗಾದಿವೋದಕಮ್ ॥ 3 ॥
ಇದೇ ಬುದ್ಧಿಯು ಇಂದ್ರಿಯಗುಣಯುಕ್ತವಾದರೆ ಪರ್ವತಶಿಖರದಿಂದ ನೀರು ಹರಿದು ಬರುವಂತೆ ಪರಮಾತ್ಮನ ಸನ್ನಿಧಾನದಿಂದ ಚ್ಯುತವಾಗಿ ವಿಷಯ ಪದಾರ್ಥಗಳಲ್ಲಿ ಆಸಕ್ತವಾಗಿ ಜಗತ್ತಿನ ಕಡೆ ಧಾವಿಸುತ್ತದೆ.
ಯದಾ ನಿರ್ಗುಣಮಾಪ್ನೋತಿ ಧ್ಯಾನಂ ಮನಸಿ ಪೂರ್ವಜಮ್ |
ತದಾ ಪ್ರಜ್ಞಾಯತೇ ಬ್ರಹ್ಮ ನಿಕಷಂ ನಿಕಷೇ ಯಥಾ ॥ 4 ॥

ಯಾವಾಗ ಸಾಧಕನು ಮನಸ್ಸಿನಲ್ಲಿ ಹಿಂದಿನ ಸಾಧನೆಗಳಿಂದುಂಟಾದ ಪ್ರಾಕೃತವಾದ ಪರಮಾತ್ಮನನ್ನು ಹೊಂದುತ್ತಾನೋ ಆಗ ಅವನು ಒರೆಗಲ್ಲಿನ ಮೇಲಿರುವ ಚಿನ್ನದ ರೇಖೆಯಂತೆ ಬುದ್ಧಿಯಲ್ಲಿ ಪರಬ್ರಹ್ಮವಸ್ತುವನ್ನು ಅರ್ಥೈಸಿಕೊಳ್ಳುತ್ತಾನೆ.
ಮನಸ್ಸ್ವಪಹೃತಂ ಬುದ್ಧಿಮಿಂದ್ರಿಯಾರ್ಥನಿದರ್ಶನಮ್ |
ನ ಸಮಕ್ಷಂ ಗುಣಾವೇಕ್ಷಿ ನಿರ್ಗುಣಸ್ಯ ನಿದರ್ಶನಮ್ ॥ 5 ॥
ಇಂದ್ರಿಯಗಳ ಕಡೆ ಧಾವಿಸುವ ಇಂದ್ರಿಯಗಳಿಗೆ ಬೇಕಾದ ಭೋಗ ಪದಾರ್ಥಗಳನ್ನೇ ಯಾವಾಗಲೂ ನೋಡುತ್ತಿರುವ, ಇಂದ್ರಿಯ ಸುಖಗಳನ್ನೇ ಅಪೇಕ್ಷಿಸುವ ಮನಸ್ಸು, ಪ್ರಾಕೃತಗುಣರಹಿತನಾದ ಪರಮಾತ್ಮನನ್ನು ನೋಡಲು ಸಮರ್ಥವಾಗುವುದಿಲ್ಲ.
ಸರ್ವಾಣ್ಯೇತಾನಿ ಸಂವಾರ್ಯ ದ್ವಾರಾಣಿ ಮನಸಿ ಸ್ಥಿತಃ |
ಮನಸ್ಯೇಕಾಗ್ರತಾಂ ಕೃತ್ವಾ ತತ್ ಪರಂ ಪ್ರತಿಪದ್ಯತೇ ॥ 6 ॥
ಶರೀರದಲ್ಲಿರುವ ಇಂದ್ರಿಯರೂಪ ದ್ವಾರಗಳನ್ನು ನಿರೋಧಿಸಿಕೊಂಡು ಮನಸ್ಸನ್ನು ಏಕಾಗ್ರಗೊಳಿಸಿ ಹೃದಯದಲ್ಲಿರುವ ಪರಮಾತ್ಮನನ್ನು ಧ್ಯಾನ ಮಾಡುವುದರಿಂದ ಆ ಪರಬ್ರಹ್ಮವಸ್ತುವನ್ನು ತಿಳಿದುಕೊಳ್ಳುತ್ತಾನೆ.
ಯಥಾ ಮಹಾಂತಿ ಭೂತಾನಿ ನಿವರ್ತಂತೇ ಗುಣಕ್ಷಯೇ |
ತಥೇಂದ್ರಿಯಾಣ್ಯುಪಾದಾಯ ಬುದ್ಧಿರ್ಮನಸಿ ವರ್ತತೇ ॥ 7 ॥
ಯಾವ ರೀತಿಯಾಗಿ ಶಬ್ದ-ಸ್ಪರ್ಶಾದಿ ಪಂಚತನ್ಮಾತ್ರಗಳು ನಾಶವಾದಾಗ ಅದರ ಮೂಲವಾದ ಪಂಚಮಹಾಭೂತಗಳು ನಾಶವಾಗುತ್ತವೋ ಅದೇ ರೀತಿಯಲ್ಲಿ ಇಂದ್ರಿಯಗಳು ಬಾಹ್ಯವಿಷಯಗಳಿಂದ ನಿವೃತ್ತಿಯನ್ನು ಹೊಂದಿದಾಗ ಬುದ್ಧಿಯು ಮನಸ್ಸಿನಲ್ಲಿಯೇ ನೆಲೆಗೊಂಡಿರುತ್ತದೆ.
ಯದಾ ಮನಸಿ ಸಾ ಬುದ್ಧಿರ್ವರ್ತತೇಽಂತರಚಾರಿಣೀ |
ವ್ಯವಸಾಯಗುಣೋಪೇತಾ ತದಾ ಸಂಪದ್ಯತೇ ಮನಃ ॥ 8 ॥
ಯಾವಾಗ ನಿಶ್ಚಯಾತ್ಮಕವಾದ ಬುದ್ಧಿಯು ಮನಸ್ಸಿನ ಜೊತೆಗೆ ಸೇರಿ ಪರಬ್ರಹ್ಮನ ಧ್ಯಾನದಲ್ಲಿಯೇ ನೆಲೆಸಿರುತ್ತದೋ ಆಗ ನಿರಂತರ ವಿಮರ್ಶೆ ಮಾಡಿದ ಗುಣವುಳ್ಳ ಆ ಜ್ಞಾನವು ದೃಢವಾಗುತ್ತದೆ. ಮನಸ್ಸು ಆ ಜ್ಞಾನವನ್ನೇ ದೃಢೀಕರಿಸಿಕೊಳ್ಳುತ್ತದೆ.
ಗುಣವದ್ಭಿರ್ಗುಣೋಪೇತಂ ಯದಾ ಧ್ಯಾನಗುಣಂ ಮನಃ |
ತದಾ ಸರ್ವಗುಣಾನ್ ಹಿತ್ವಾ ನಿರ್ಗುಣಂ ಪ್ರತಿಪದ್ಯತೇ ॥ 9 ॥
ಇಂದ್ರಿಯಗಳಿಂದ ಪ್ರತ್ಯಾಹಾರವೆಂಬ ಗುಣವನ್ನು ಹೊಂದಿರುವ ಮನಸ್ಸು ಯಾವಾಗ ಧ್ಯಾನಯೋಗಜನಿತವಾದ ಗುಣಗಳಿಂದ ಸಂಪನ್ನವಾಗುತ್ತದೋ ಆಗ ಇಂದ್ರಿಯಗಳಿಗೆ ಸಂಬಂಧಿಸಿದ ಸಮಸ್ತ ಗುಣಗಳನ್ನು ತ್ಯಾಗ ಮಾಡಿ ಪ್ರಾಕೃತಗುಣ ರಹಿತನಾದ ಪರಮಾತ್ಮನನ್ನು ಹೊಂದುತ್ತದೆ.
ಅವ್ಯಕ್ತಸ್ಯೇಹ ವಿಜ್ಞಾನೇ ನಾಸ್ತಿ ತುಲ್ಯಂ ನಿದರ್ಶನಮ್ |
ಯತ್ರ ನಾಸ್ತಿ ಪದನ್ಯಾಸಃ ಕಸ್ತಂ ವಿಷಯಮಾಪ್ನುಯಾತ್ ॥ 10 ॥
ಅವ್ಯಕ್ತನೆನಿಸಿದ ಪರಮಾತ್ಮ ವಿಜ್ಞಾನಕ್ಕೆ ಸಮಾನವಾದ ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ. ಯಾವ ಪರಬ್ರಹ್ಮನ ವಿಷಯದಲ್ಲಿ ಯಾವ ವಾಣಿಯ ವ್ಯಾಪಾರವೇ ಇಲ್ಲವೋ ಯಾವುದನ್ನು ವೇದಗಳು ಸಾಕಲ್ಯೇನ ಬಣ್ಣಿಸಲಾರವೋ ಅಂತಹ ಪರಬ್ರಹ್ಮ ವಸ್ತುವನ್ನು ವರ್ಣನೆಗೆ ವಿಷಯವಾಗಿ ಯಾರು ಮಾಡಿಕೊಳ್ಳಬಲ್ಲರು?
ತಪಸಾ ಚಾನುಮಾನೇನ ಗುಣೈರ್ಜಾತ್ಯಾ ಶ್ರುತೇನ ಚ |
ನಿನೀಷೇತ್ತತ್ಪರಂ ಬ್ರಹ್ಮ ವಿಶುದ್ಧೇನಾಂತರಾತ್ಮನಾ ॥ 11 ॥
ತಪಸ್ಸಿನಿಂದಲೂ, ತರ್ಕದಿಂದಲೂ, ಭಗವನ್ನಿಷ್ಠ ಸರ್ವಜ್ಞತ್ವಾದಿ ಅಸಾಧಾರಣ ಗುಣದಿಂದಲೂ, ಸರ್ವೇಶ್ವರತ್ವ ಜಾತಿಯಿಂದಲೂ, ಶಾಸ್ತ್ರಗಳ ಅಧ್ಯಯನದಿಂದಲೂ ಅಂತಃಕರಣವನ್ನು ಶುದ್ಧಿಮಾಡಿಕೊಂಡು ಆ ಪರಬ್ರಹ್ಮವಸ್ತುವನ್ನು ಹೊಂದಲು ಇಚ್ಛಿಸಬೇಕು.
ಗುಣಹೀನೋ ಹಿ ತಂ ಮಾರ್ಗಂ ಬಹಿಃ ಸಮನುವರ್ತತೇ |
ಗುಣಾಭಾವಾತ್ ಪ್ರಕೃತ್ಯಾ ಚ ನಿಸ್ತರ್ಕ್ಯಂ ಜ್ಞೇಯಸಮ್ಮಿತಮ್ ॥ 12॥
ರೂಪ-ರಸಾದಿ ಗುಣಗಳಿಂದ ಹೀನನಾದ ವ್ಯಕ್ತಿಯು ಆ ಅಧ್ಯಾತ್ಮ ಮಾರ್ಗವನ್ನು ಚೆನ್ನಾಗಿ ಅನುಸರಿಸುತ್ತಾನೆ. ರೂಪ-ರಸಾದಿ ಗುಣಗಳಲ್ಲಿ ಸಂಜ್ಞೆ ಇಲ್ಲದಿರುವುದರಿಂದ ಯೋಗ್ಯತೆಯನ್ನು ಹೊಂದಿ ತರ್ಕಕ್ಕೂ ನಿಲುಕದ, ತಿಳಿಯಲು ಅರ್ಹನಾದ ಭಗವಂತನನ್ನು ಚಿಂತಿಸುತ್ತಾನೆ.
ನೈರ್ಗುಣ್ಯಾದ್ ಬ್ರಹ್ಮ ಚಾಪ್ನೋತಿ ಸಗುಣತ್ವಾನ್ನಿವರ್ತತೇ |
ಗುಣಪ್ರಸಾರಿಣೀ ಬುದ್ಧಿರ್ಹುತಾಶನ ಇವೇಂಧನೇ ॥ 13 ॥
ಅಗ್ನಿಯು ಯಾವ ರೀತಿಯಲ್ಲಿ ಒಣಗಿದ ಕಟ್ಟಿಗೆಯನ್ನು ಚೆನ್ನಾಗಿ ಸುಡುತ್ತದೋ ಅದೇ ರೀತಿಯಲ್ಲಿ ಬಾಹ್ಯ ರೂಪಾದಿ ಗುಣಗಳಲ್ಲಿ ಆಸಕ್ತಿಶೂನ್ಯವಾದ ಬುದ್ಧಿಯು ಪರಮಾತ್ಮನ ಗುಣಗಳಲ್ಲೇ ಆಸಕ್ತವಾಗಿ ಪಕ್ವವಾಗಿ ಅವನಲ್ಲಿಯೇ ಸಂಚರಿಸುವ ಸಾಮರ್ಥ್ಯವನ್ನು ಹೊಂದುತ್ತದೆ.
ಯದಾ ಪಂಚ ವಿಮುಕ್ತಾನಿ ಇಂದ್ರಿಯಾಣಿ ಸ್ವಕರ್ಮಭಿಃ |
ತದಾ ತತ್ ಪರಮಂ ಬ್ರಹ್ಮ ವಿಮುಕ್ತಂ ಪ್ರಕೃತೇಃ ಪರಮ್ ॥ 14 ॥
ಯಾವ ರೀತಿಯಾಗಿ ಪಂಚೇಂದ್ರಿಯಗಳು ಯಾವಾಗ ತಮ್ಮ ವಿಷಯಗಳೆನಿಸಿದ ರೂಪ-ರಸಾದಿಗಳಿಂದ ವಿಮುಕ್ತವಾಗುತ್ತವೋ, ಶಬ್ದಾದಿ ಗುಣಗಳಿಂದ ಭಿನ್ನವಾಗುತ್ತವೆಯೋ ಅದೇ ರೀತಿಯಲ್ಲಿ ಪರಬ್ರಹ್ಮವಸ್ತುವು ಪ್ರಕೃತಿ ತತ್ತ್ವಕ್ಕಿಂತ ಭಿನ್ನವೂ ಉತ್ತಮವೂ ಆಗಿದೆ.
ಏವಂ ಪ್ರಕೃತಿತಃ ಸರ್ವೇ ಪ್ರಭವಂತಿ ಶರೀರಿಣಃ |
ನಿವರ್ತಂತೇ ನಿವೃತ್ತೌ ಚ ಸರ್ಗಂ ನೈವೋಪಯಾಂತಿ ಚ ॥ 15 ॥
ಹೀಗೆ ಸಮಸ್ತ ಪ್ರಾಣಿಗಳು ಪ್ರಕೃತಿಯ ದೆಸೆಯಿಂದ ಹುಟ್ಟು-ಸಾವುಗಳಿಂದ ಸಂಸಾರ ಚಕ್ರದಲ್ಲಿ ಪ್ರವೃತ್ತವಾಗುತ್ತವೆ. ಪ್ರಕೃತಿಯ

ಸಹಾಯದಿಂದಲೇ ಸಂಸಾರ ನಿವೃತ್ತಿಯನ್ನು ಹೊಂದುತ್ತವೆ. ಬಳಿಕ ಈ ಸೃಷ್ಟಿಯನ್ನು ಹೊಂದುವುದಿಲ್ಲ.
ಪುರುಷಃ ಪ್ರಕೃತಿರ್ಬುದ್ಧಿರ್ವಿಶೇಷಾಶ್ಚೇಂದ್ರಿಯಾಣಿ ಚ |
ಅಹಂಕಾರೋಽಭಿಮಾನಶ್ಚ ಸಂಭೂತೋ ಭೂತಸಂಜ್ಞಕಃ ॥ 16 ॥
ಪುರುಷ, ಪ್ರಕೃತಿ, ಬುದ್ಧಿ, ಶಬ್ದಾದಿ ವಿಷಯಗಳು, ದಶೇಂದ್ರಿಯಗಳು, ಅಹಂಕಾರ, ಮನಸ್ಸು, ಪಂಚಮಹಾಭೂತಗಳು ಈ ಇಪ್ಪತ್ತೈದು ತತ್ತ್ವಗಳ ಸಮೂಹವು ಭೂತ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ.
ಏಕಸ್ಮಾದ್ಯಾ ಪ್ರವೃತ್ತಿಸ್ತು ಪ್ರಧಾನಾತ್ ಸಂಪ್ರವರ್ತತೇ |
ದ್ವಿತೀಯಾ ಮಿಥುನವ್ಯಕ್ತಿಮವಿಶೇಷಾನ್ನಿಯಚ್ಛತಿ ॥ 17 ॥
ಸಕಲ ಜೀವಪ್ರಧಾನನೆನಿಸಿದ ಚತುರ್ಮುಖ ಬ್ರಹ್ಮನ ಸೃಷ್ಟಿಯು ಕೇವಲ ಮೂಲ ಪ್ರಕೃತಿಯಿಂದ ಉಂಟಾಗುತ್ತದೆ. ಎರಡನೆಯ ಸೃಷ್ಟಿಯು ಸಾಮಾನ್ಯತಃ ಮೈಥುನ ಧರ್ಮದಿಂದ ನಿಯಮಪೂರ್ವಕವಾಗಿ ಅಭಿವ್ಯಕ್ತವಾಗುತ್ತದೆ.
ಧರ್ಮಾದುತ್ಕೃಷ್ಯತೇ ಶ್ರೇಯಸ್ತಥಾಶ್ರೇಯೋಽಪ್ಯಧರ್ಮತಃ |
ರಾಗವಾನ್ ಪ್ರಕೃತಿಂ ಹ್ಯೇತಿ ವಿರಕ್ತೋ ಜ್ಞಾನವಾನ್ ಭವೇತ್ ॥ 18 ॥
ಧರ್ಮಮಾರ್ಗಪ್ರವೃತ್ತಿಯಿಂದಲೇ ಮನುಷ್ಯನಿಗೆ ಶ್ರೇಯಸ್ಸಿನ ವೃದ್ಧಿಯಾಗುತ್ತದೆ. ಅಧರ್ಮಮಾರ್ಗಪ್ರವೃತ್ತಿಯಿಂದ ಅಶ್ರೇಯಸ್ಸುಂಟಾಗುತ್ತದೆ. ವಿಷಯಾಸಕ್ತನಾದ ಪುರುಷನು ನಿರಂತರವಾಗಿ ಪ್ರಕೃತಿಬಂಧನದಲ್ಲಿಯೇ ಸುತ್ತುತ್ತಾನೆ. ವಿರಕ್ತನಾದ ಪುರುಷನು ಪರಮಾತ್ಮನ ಜ್ಞಾನವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆರಡನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಮನು-ಬೃಹಸ್ಪತಿ ಸಂವಾದದ ಅನುವಾದವನ್ನು ಮುಕ್ತಾಯಗೊಳಿಸಿದುದು.
ಮನುಃ
ತದೇವ ಸತತಂ ಮನ್ಯೇ ನ ಶಕ್ಯಮನುವರ್ಣಿತುಮ್ |
ಯಥಾ ನಿದರ್ಶನಂ ವಸ್ತು ನ ಶಕ್ಯಮನುಬೋಧಿತುಮ್ ॥ 1 ॥
ಮನು ಬೃಹಸ್ಪತಿಯೇ, ಆ ಪರಬ್ರಹ್ಮನ ವಿಷಯವಾಗಿಯೇ ನಿರಂತರ ಚಿಂತಿಸುತ್ತಿದ್ದೇನೆ. ಆದರೆ ಸಮಗ್ರವಾಗಿ ಅದನ್ನು ಬಣ್ಣಿಸಲು ನನ್ನಿಂದ ಶಕ್ಯವಾಗದು. ಆ ವಸ್ತುವಿಗೆ ಸಮಾನವಾದ ಮತ್ತೊಂದು ದೃಷ್ಟಾಂತವೇ ಇರುವುದಿಲ್ಲವಾದ್ದರಿಂದ ಅದನ್ನು ತಿಳಿದೂ ಬಣ್ಣಿಸಲು ಸಾಧ್ಯವಾಗದು.
ಯಥಾ ಹಿ ಸಾರಂ ಜಾನಾತಿ ನ ಕಥಂಚನ ಸಂಸ್ಥಿತಮ್ |
ಪರಕಾಯಚ್ಛವಿಸ್ತದ್ವದ್ದೇಹೇಽಯಂ ಚೇತನಸ್ತಥಾ ॥ 2 ॥
ಯಾವುದನ್ನು ದೃಷ್ಟಾಂತದಿಂದ ಯಥಾವತ್ತಾಗಿ ತಿಳಿಯಲು ಸಾಧ್ಯವಿಲ್ಲವೋ ಅದನ್ನು ವರ್ಣಿಸಿ ಹೇಳುವುದು ಅಸಾಧ್ಯವೇ ಆಗಿದೆ. ಮನುಷ್ಯನ ದೇಹದ ನೆರಳು ಶರೀರಕ್ಕಿಂತಲೂ ಬೇರೆಯಾಗಿ ಅದರ ಪಕ್ಕದಲ್ಲಿಯೇ ಇದ್ದರೂ ಅದನ್ನು ನಮ್ಮಿಂದ ಅರಿಯಲಾಗದಷ್ಟೆ!
ವಿನಾ ಕಾಯಂ ನ ಸಾ ಚ್ಛಾಯಾ ತಾಂ ವಿನಾ ಕಾಯಮಸ್ತ್ಯುತ |
ತದ್ವದ್ದೇವಂ ವಿನಾ ನಾಸ್ತಿ ಪ್ರಕೃತೇರಿಹ ವರ್ತನಮ್ ॥ 3 ॥
ಈ ಶರೀರದೊಳಗೆ ಆತ್ಮವಿದೆ. ಶರೀರವನ್ನು ಬಿಟ್ಟು ನೆರಳು ಇರಲು ಸಾಧ್ಯವಿಲ್ಲ. ಆದರೆ ನೆರಳನ್ನು ಬಿಟ್ಟು ಶರೀರವಿರಬಹುದು. ಅದರಂತೆಯೇ ಮೂಲಕಾರಣವೆನಿಸಿದ ಆತ್ಮವಿಲ್ಲದೆ ಶರೀರವಿಲ್ಲ. ಶರೀರವನ್ನು ಬಿಟ್ಟು ಆತ್ಮನಿರಬಹುದು.
ಇದಂ ವಿನಾ ಪರಂ ನಾಸ್ತಿ ನೇದಮಸ್ತಿ ಪರಂ ವಿನಾ |
ಜೀವಾತ್ಮನಾ ತ್ವಸೌ ಭಿನ್ನಸ್ತ್ವೇಷ ಚೈವ ಪರಾತ್ಮನಾ ॥ 4 ॥
ಈ ಲೋಕದಲ್ಲಿ ಮಾಡಲ್ಪಟ್ಟ ಪುಣ್ಯವನ್ನು ಬಿಟ್ಟು ಪರಲೋಕವನ್ನು ಹೊಂದಲಾಗದು. ಆದರೆ ಪರಲೋಕದ ದೇವತೆಗಳ ಕರುಣೆಯಿಲ್ಲದೆ ಈ ಪುಣ್ಯವು ಇರುವುದಿಲ್ಲ. ಈ ಜೀವಾತ್ಮನಿಂದ ಪರಮಾತ್ಮನು ಭಿನ್ನನಾಗಿಯೇ ಇದ್ದಾನೆ. ಈ ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನೆಂಬುದು `ದ್ವಾಸುಪರ್ಣಾ' ಎಂಬ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. ಪರಮಾತ್ಮನಿಗಿಂತ ಜೀವಾತ್ಮನು ಭಿನ್ನನೇ ಆಗಿದ್ದಾನೆ.
ತತ್ತಥೇತಿ ವಿದುಃ ಕೇಚಿದತಥ್ಯಮಿತಿ ಚಾಪರೇ |
ಉಭಯಂ ಮೇ ಮತಂ ವಿದ್ವನ್ಮುಕ್ತಿಹೇತೌ ಸಮಾಹಿತಮ್ ॥ 5 ॥
ಈ ಜೀವ-ಪರಮಾತ್ಮರ ಭೇದವು ನಿಜ ಎಂದು ಕೆಲವರು ಹೇಳುತ್ತಾರೆ. ಸುಳ್ಳು ಎಂದು ಕೆಲವರು ಹೇಳುತ್ತಾರೆ. ಆದರೆ ಜೀವಪ್ರತಿಯೋಗಿಕ ಪರಮಾತ್ಮನಿಷ್ಠ ಭೇದವು, ಪರಮಾತ್ಮ ಪ್ರತಿಯೋಗಿಕ ಜೀವನಿಷ್ಠ ಭೇದವು ಇವೆರಡೂ ನನಗೆ ಸಮ್ಮತವಾದದ್ದು ಹೊರತು ಜೀವ-ಪರಮಾತ್ಮರಿಗೆ ಭೇದವೂ ಸತ್ಯ, ಜೀವ-ಪರಮಾತ್ಮರಿಗೆ ಭೇದವು ಮಿಥ್ಯಾ ಅನ್ನುವ ವಾದವು ಪರಸ್ಪರ ವಿರುದ್ಧವಾದುದರಿಂದ ನನಗೆ ಸಮ್ಮತವಲ್ಲ. ಜೀವ ಸತ್ಯ ಎಂಬ ವಾದವೇ ನನಗೆ ಸಮ್ಮತವಾದದ್ದು. ಇದೇ ಮುಕ್ತಿಗೆ ಕಾರಣವಾದುದು.
ವಿಮುಕ್ತೈಶ್ಚ ಮೃಗಃ ಸೋಽಪಿ ದೃಶ್ಯತೇ ಸಂಯತೇಂದ್ರಿಯೈಃ |
ಸರ್ವೇಷಾಂ ನಹಿ ದೃಶ್ಯೋ ಹಿ ತಟಿದ್ವತ್ ಸ್ಫುರತಿ ಹ್ಯಸೌ ॥ 6 ॥
ಪರಮಾತ್ಮನೆಂಬ ವಸ್ತುವಾದರೂ ಮುಕ್ತಾತ್ಮರಿಂದಲೂ ಕೂಡ ವಿಚಾರ ಮಾಡಲು ಯೋಗ್ಯವಾದುದು. ಜಿತೇಂದ್ರಿಯರಿಂದ ಮಾತ್ರ ಕಾಣಲು ಅರ್ಹವಾಗಿದೆ. ಎಲ್ಲರಿಂದಲೂ ನೋಡಲು ಅಶಕ್ಯವಾದುದು. ಮಿಂಚಿನಂತೆ ಕೆಲವೊಮ್ಮೆ ಹೊಳೆಯುತ್ತದೆ.

ಬ್ರಾಹ್ಮಣಸ್ಯ ಸಮಾದೃಶ್ಯೋ ವರ್ತತೇ ಸೋಽಪಿ ಕಿಂ ಪುನಃ |
ವಿದ್ಯತೇ ಪರಮಃ ಶುದ್ಧಃ ಸಾಕ್ಷಿಭೂತೋ ವಿಭಾವಸುಃ ॥ 7 ॥
ಆ ಪರಮಾತ್ಮನೆಂಬ ವಸ್ತುವಾದರೂ ಚತುರ್ಮುಖ ಬ್ರಹ್ಮನಿಂದಲೇ ಪೂರ್ಣವಾಗಿ ತಿಳಿಯಲಾರದು ಎಂದ ಬಳಿಕ ಉಳಿದವರ ಅವಸ್ಥೆಯನ್ನು ಏನು ಬಣ್ಣಿಸಲಿ? ಆ ಪರಮಾತ್ಮ ಎಂಬ ವಸ್ತುವು ಸಮಸ್ತ ದೋಷದಿಂದ ದೂರವಾಗಿದೆ. ಸಮಸ್ತ ಜೀವರ ಸಾಕ್ಷಿ ವಿಷಯವಾಗಿದೆ. ವಿಶೇಷವಾದ ಪ್ರಭೆಯೇ ಸಂಪತ್ತಾಗಿ ಉಳ್ಳ ಸೂರ್ಯನಂತೆ ಪ್ರಕಾಶಿಸುತ್ತದೆ ಎಂದು ಜ್ಞಾನಿಗಳು ಹೇಳುತ್ತಾರೆ.
ಶ್ರುತಿರೇಷಾ ತತೋ ನಿತ್ಯಾ ತಸ್ಮಾದೇಕಃ ಪರೋ ಮತಃ |
ನ ಪ್ರಯೋಜನಮುದ್ದಿಶ್ಯ ಚೇಷ್ಟಾ ತಸ್ಯ ಮಹಾತ್ಮನಃ ॥ 8 ॥
ನಿತ್ಯವಾದ ದ್ವಾಸುಪರ್ಣಾ ಮೊದಲಾದ ಶ್ರುತಿಯು `ಯತ್ತದದ್ರೇಶ್ಯಂ ಅಗ್ರಾಹ್ಯಂ ಯೇತ ಸರ್ವೇಶ್ವರಃ' ಮೊದಲಾದ ಶ್ರುತಿಗಳು ಭಗವಂತನೇ ಸರ್ವೋತ್ತಮನೆಂದು ವರ್ಣಿಸುತ್ತಿವೆ. ಪರಮಾತ್ಮನು ಸೃಷ್ಟಿ ಮೊದಲಾದ ಕಾರ್ಯಗಳನ್ನು ಸ್ವಪ್ರಯೋಜನದ ಉದ್ದೇಶದಿಂದ ನಡೆಸುವುದಿಲ್ಲ.
ತಾದೃಶೋಽಸೆತ್ಯತಿ ಮಂತವ್ಯಸ್ತಥಾ ಸತ್ಯಂ ಮಹಾತ್ಮನಾ |
ನಾನಾಸಂಸ್ಥೇನ ಭೇದೇನ ಸದಾ ಗತಿವಿಭೇದವಿತ್ |
ತಸ್ಯ ಭೇದಃ ಸಮಾಖ್ಯಾತೋ ಭೇದೋಽಪ್ಯಸ್ತಿ ತಥಾವಿಧಃ ॥ 9 ॥
ತತ್ತ್ವಜ್ಞಾನಿಗಳು ಆ ಪರಮಾತ್ಮನ ಸ್ತುತಿಯನ್ನು ಚೆನ್ನಾಗಿ ತಿಳಿಯಬಲ್ಲರು. ಜೀವರಲ್ಲಿಯೇ ನಾನಾ ವಿಧವಾದ ಭೇದವೂ ಇದೆ. ಅವರ ಸಾಧನಭೇದ ನಿಮಿತ್ತದಿಂದ ಗತಿಭೇದವನ್ನು ತಿಳಿಯಬೇಕು. ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು, ತಮೋಯೋಗ್ಯರು ಎಂಬ ಭೇದವನ್ನು ತಿಳಿದವರು ಪರಮಾತ್ಮನನ್ನು ಯಥಾ ಯೋಗ್ಯವಾಗಿ ಹೊಂದುತ್ತಾರೆ. ಪರಮಾತ್ಮನ ಸತ್ಯವು ಎಷ್ಟು ಪರಮಾರ್ಥವೋ ಅದರಂತೆಯೇ ಈ ಭೇದವೂ ಅಷ್ಟೇ ಸತ್ಯವಾದುದು. ಧರ್ಮಸಕ್ತ ಸಮಾನ ಸತ್ತಾಕವಾದುದು ಎಂದು ಭಾವ.
ಏವಂ ವಿದ್ವನ್ ವಿಜಾನೀಹಿ ಪರಮಾತ್ಮಾನಮವ್ಯಯಮ್ |
ತತ್ತದ್ಗುಣವಿಶೇಷೇಣ ಸಂಜ್ಞಾನಾಮಾನುಸಂಯುತಮ್ ॥ 10 ॥
ಈ ರೀತಿಯಾಗಿ ಭಗವಂತನ ಮಹತ್ವವನ್ನು ತಿಳಿದುಕೊ. ಪರಮಾತ್ಮನನ್ನು ಅವ್ಯಯನೆಂದೂ, ಕರ್ತಾ, ಹರ್ತಾ, ಪಾತಾ, ನಿಯಂತಾ, ಭರ್ತಾ, ಪಿತಾ ಮೊದಲಾದ ಅನೇಕ ಸಂಜ್ಞಾರೂಪದಿಂದ ಮುಖ್ಯವಾದ ವ್ಯವಹಾರಕ್ಕೆ ಅರ್ಹನಾಗಿ ಕೂಡಿದ್ದಾನೆಂಬುದನ್ನು ತಿಳಿದುಕೊ.
ಸರ್ವೇಶ್ವರಃ ಸರ್ವಮಯಃ ಸ ಚ ಸರ್ವಪ್ರವರ್ತಕಃ |
ಸರ್ವಾತ್ಮಕಃ ಸರ್ವಶಕ್ತಿಃ ಸರ್ವಕಾರಣಕಾರಣಮ್ ॥ 11 ॥
ಭಗವಂತನು ಎಲ್ಲರಿಗೂ ಈಶ್ವರನೂ, ಎಲ್ಲರ ಅಂತರ್ಯಾಮಿಯೂ, ಎಲ್ಲರ ಜೀವನದ ಪ್ರವೃತ್ತಿಗಳಿಗೂ ಮುಖ್ಯಕಾರಣನೂ, ಎಲ್ಲರಿಗಿಂತ ಪ್ರಧಾನನೂ, ಎಲ್ಲ ರೀತಿಯಾದ ಹೀನ-ಉಚ್ಚ ಪ್ರಾಣಿಗಳಲ್ಲಿ ಅಂತರ್ಯಾಮಿಯೂ, ತಾನೊಬ್ಬನೇ ಪ್ರಧಾನನೂ ಆಗಿರುವನೆಂದು ತಿಳಿದುಕೊ.
ವ್ಯಾಖ್ಯಾನವಿಶೇಷ ಆದ್ದರಿಂದ ಹಿಂದೆಲ್ಲ ಹೇಳಿದ ನಿರ್ಗುಣಶಬ್ದಕ್ಕೂ ಪ್ರಾಕೃತಗುಣರಹಿತನೆಂದೇ ವ್ಯಾಖ್ಯಾನ ಮಾಡಬೇಕೇ ವಿನಾ ಸರ್ವಥಾ ಗುಣರಹಿತನೆಂದು ವ್ಯಾಖ್ಯಾನಿಸಬಾರದು. ಸರ್ವೇಶ್ವರತ್ವಾದಿ ಗುಣಗಳನ್ನು ಬೃಹಸ್ಪತಿಗಳಿಗೆ ಇಲ್ಲಿ ವರ್ಣಿಸುತ್ತಿರುವುದರಿಂದ ಮನುವಿಗೆ ಭಗವಂತನ ನಿರ್ಗುಣತ್ವವನ್ನು ಹೇಳುವುದರಲ್ಲಿ ಇಲ್ಲಿ ತಾತ್ಪರ್ಯವಿಲ್ಲ ಎಂದು ಭಾವ.
ಸರ್ವಸಾಧಾರಣಃ ಸರ್ವೈರುಪಾಸ್ಯಶ್ಚ ಮಹಾತ್ಮಭಿಃ |
ವಾಸುದೇವೇತಿ ವಿಖ್ಯಾತಸ್ತಂ ವಿದಿತ್ವಾಽಶ್ನುತೇಽಮೃತಮ್ ॥ 12 ॥
ಎಲ್ಲರಿಗಿಂತ ಪ್ರಧಾನನಾದ ಪರಮಾತ್ಮನು ಮಹಾತ್ಮರಾದ ಎಲ್ಲರಿಂದಲೂ ಉಪಾಸ್ಯನಾಗಿದ್ದಾನೆ. ವಾಸುದೇವ ಎಂದು ಪ್ರಸಿದ್ಧಿಯನ್ನು ಹೊಂದಿದ್ದಾನೆ. ಇವನನ್ನು ತಿಳಿದವನು ಅಮೃತತತ್ವವನ್ನು ಹೊಂದುತ್ತಾನೆ.
ಮನುಃ
ಯದಾ ತೇ ಪಂಚಭಿಃ ಪಂಚ ವಿಮುಕ್ತಾ ಮನಸಾ ಸಹ |
ಅಥ ತದ್ ದ್ರಕ್ಷ್ಯಸೇ ಬ್ರಹ್ಮ ಮಣೌ ಸೂತ್ರಮಿವಾರ್ಪಿತಮ್ ॥ 13 ॥
ಮನು ಬೃಹಸ್ಪತಿಯೇ, ಯಾವಾಗ ರೂಪಾದಿ ವಿಷಯಗಳಿಂದ ಕೂಡಿದ ಪಂಚೇಂದ್ರಿಯಗಳು ನಿನ್ನ ಅಧೀನದಲ್ಲಿರುತ್ತವೋ ಆ ಅಧೀನವಾದ ಇಂದ್ರಿಯಗಳಿಂದ ಕೂಡಿದ ಮನಸ್ಸಿನಿಂದ ಆ ಪರಬ್ರಹ್ಮ ವಸ್ತುವನ್ನು ನೀನು ನೋಡುತ್ತಿ. ಒಂದು ನೂಲಿನಲ್ಲಿ ಮಣಿಗಳು ಜೋಡಿಸಲ್ಪಟ್ಟಂತೆ ಆ ಪರಮಾತ್ಮನ ಸೂತ್ರದಲ್ಲಿಯೇ ಸಮಗ್ರ ಜಗತ್ತು ಹೊಂದಿಕೊಂಡಿದೆ.
ತದೇವ ಚ ಯಥಾ ಸೂತ್ರಂ ಸುವರ್ಣೇ ವರ್ತತೇ ಪುನಃ |
ಮುಕ್ತಾಸ್ವಥ ಪ್ರವಾಲೇಷು ಮೃನ್ಮಯೇ ರಾಜತೇ ತಥಾ ॥ 14 ॥
ತದ್ವದ್ ಗೋಷು ಮನುಷ್ಯೇಷು ತದ್ವದ್ಧಸ್ತಿಮೃಗಾದಿಷು |
ತದ್ವತ್ ಕೀಟಪತಂಗೇಷು ಪ್ರಸಕ್ತಾತ್ಮಾ ಸ್ವಕರ್ಮಭಿಃ ॥ 15 ॥
ಯೇನ ಯೇನ ಶರೀರೇಣ ಯದ್ಯತ್ ಕರ್ಮ ಕರೋತ್ಯಯಮ್ |
ತೇನ ತೇನ ಶರೀರೇಣ ತತ್ತತ್ಫಲಮುಪಾಶ್ನುತೇ ॥ 16 ॥
ಮುತ್ತು, ಹವಳ, ಬಂಗಾರ, ಗುಂಡು, ಕರಿಮಣಿ, ಗಾಜಿನ ಮಣಿ ಮುಂತಾದವು ಒಂದು ಸೂತ್ರದ ಆಧಾರದಲ್ಲಿ ಹೆಣೆಯಲ್ಪಟ್ಟಂತೆ ಆನೆ, ಕುದುರೆ, ಮನುಷ್ಯ, ಹಸು, ಕ್ರಿಮಿ-ಕೀಟಾದಿಗಳು, ಪಕ್ಷಿ ಮೊದಲಾದವುಗಳು, ತಮ್ಮ ಕರ್ಮಾನುಸಾರವಾಗಿ ಹುಟ್ಟಿರುವ ಬೇರೆ ಬೇರೆ ಪ್ರಾಣಿಗಳು ಯಾವ ಯಾವ ದೇಹಕ್ಕಾಗಿ ಯಾವ ಯಾವ ಕರ್ಮಗಳನ್ನು ಮಾಡಿವೆಯೋ ಆಯಾ ದೇಹವನ್ನು ಭಗವಂತನ ದೆಶೆಯಿಂದ ಪಡೆದು ಈ ಕರ್ಮಫಲಗಳನ್ನು ಅನುಭವಿಸುತ್ತವೆ.

ಯಥಾ ಹ್ಯೇಕರಸಾ ಭೂಮಿರೋಷಧ್ಯಾತ್ಮಾನುಸಾರಿಣೀ |
ತಥಾ ಕರ್ಮಾನುಗಾ ಬುದ್ಧಿರಂತರಾತ್ಮಾನುದರ್ಶಿನೀ ॥ 17 ॥
ಭೂಮಿಯು ಒಂದೇ ಇದ್ದರೂ ಆ ಭೂಮಿಯಲ್ಲಿ ನೆಡಲ್ಪಟ್ಟ ಗಿಡಗಳ ಸ್ವಭಾವಕ್ಕೆ ಅನುಗುಣವಾಗಿ ರಸಗಳನ್ನು ತುಂಬುತ್ತದೆ. ತಿಕ್ತವಾದ ವನಸ್ಪತಿಯಲ್ಲಿ ಭೂಮಿಯು ತಿಕ್ತರಸವನ್ನೇ ದಾನ ಮಾಡುತ್ತದೆ. ಮಧುರವಾದ ವನಸ್ಪತಿಯಲ್ಲಿ ಭೂಮಿಯು ಮಧುರವನ್ನೇ ದಾನ ಮಾಡುತ್ತದೆ. ಹುಳಿಯಾದ ವನಸ್ಪತಿಯಲ್ಲಿ ಭೂಮಿಯು ಆಮ್ಲರಸವನ್ನೇ ದಾನ ಮಾಡುತ್ತದೆ. ಅವುಗಳ ಅರ್ಹತೆಗನುಗುಣವಾಗಿ ಆಯಾ ರಸಗಳನ್ನು ದಾನ ಮಾಡುವಂತೆ, ತ್ರಿಗುಣಾತ್ಮಕವಾದ ಬುದ್ಧಿಯು ಕರ್ಮಾನುಸಾರವಾಗಿ ಹೃದಯದಲ್ಲಿರುವ ಜೀವನನ್ನು ನೋಡುತ್ತದೆ. ಆ ಕರ್ಮಾನುಸಾರವಾಗಿ ಬಂದಿರುವ ಬುದ್ಧಿಯು ಜೀವಾತ್ಮನಿಗೆ ಪರತತ್ತ್ವವನ್ನು ತೋರಿಸುತ್ತದೆ. ಉತ್ತಮ ಸ್ವಭಾವದ ಬುದ್ಧಿಯು, ಮಧ್ಯಮ ರಾಜಸ ಸ್ವಭಾವದ ಬುದ್ಧಿಯು, ಅಧಮ ತಾಮಸವಾದ ಬುದ್ಧಿಯು ಆಯಾ ಉತ್ತಮ-ಮಧ್ಯಮ-ಅಧಮ ಜೀವರಿಗೆ ಅರ್ಹವಾದ ಪರತತ್ತ್ವವನ್ನು ತೋರಿಸುತ್ತದೆ. ಉತ್ತಮರು ಸರ್ವೋತ್ತಮನೆಂದು, ಮಧ್ಯಮರು ಇದೋ-ಅದೋ ಎಂದು, ಅಧಮರು ನಾನೇ ದೇವನೆಂದು ಭಾವಿಸುತ್ತಾರೆ. ಗಿಡಗಳಲ್ಲೇ ಇರುವ ಭಿನ್ನತೆಗಳು ಅವುಗಳ ರಸಕ್ಕೆ ಅವುಗಳೇ ಕಾರಣವಾಗುವಂತೆ ಅವರವರ ಚಿಂತನೆಗಳಿಗೆ ಅವರವರ ಸ್ವಭಾವ, ಯೋಗ್ಯತೆಗಳೇ ಕಾರಣವಾಗಿವೆ.
ಜ್ಞಾನಪೂರ್ವೋದ್ಭವಾ ಲಿಪ್ಸಾ ಲಿಪ್ಸಾಪೂರ್ವಾಭಿಸಂಧಿತಾ |
ಅಭಿಸಂಧಿಪೂರ್ವಕಂ ಕರ್ಮ ಕರ್ಮಮೂಲಂ ತತಃ ಫಲಮ್ ॥ 18 ॥
ವಿಷಯಗಳಲ್ಲಿ ಇಂದ್ರಿಯಗಳು ಆಸಕ್ತವಾದಾಗ ಜ್ಞಾನದಿಂದಾಗಿ ಅವುಗಳಲ್ಲಿ ಆಸಕ್ತಿಯು ಉಂಟಾಗುತ್ತದೆ. ಆಸೆಯನ್ನು ಮುಂದಿಟ್ಟುಕೊಂಡು ಅದರ ವಿಷಯಗಳಲ್ಲಿ ಅಭಿಸಂಧಿಯು ಉಂಟಾಗುತ್ತದೆ. ಅಭಿಸಂಧಿಯನ್ನು ಮುಂದಿಟ್ಟುಕೊಂಡು ಕರ್ಮಗಳು ನಡೆಯುತ್ತವೆ. ಆ ಕರ್ಮಫಲಗಳನ್ನನುಸರಿಸಿ ಸುಖಫಲಗಳು ಉಂಟಾಗುತ್ತವೆ.
ಫಲಂ ಕರ್ಮಾತ್ಮಕಂ ವಿದ್ಯಾತ್ ಕರ್ಮ ಜ್ಞೇಯಾತ್ಮಕಂ ತಥಾ |
ಜ್ಞೇಯಂ ಜ್ಞಾನಾತ್ಮಕಂ ವಿದ್ಯಾಜ್ಜ್ಞಾನಂ ಸದಸದಾತ್ಮಕಮ್ ॥ 19 ॥
ಕರ್ಮಕ್ಕೆ ಬುದ್ಧಿಯು ಕಾರಣವು. ಬುದ್ಧಿಗೆ ವಿಷಯಜ್ಞಾನವು ಕಾರಣವು. ಆ ವಿಷಯ ಜ್ಞಾನಕ್ಕೆ ಆತ್ಮನು, ಜೀವನು ಆಶ್ರಯನು. ಆತ್ಮನಲ್ಲಿ ವೈವಿಧ್ಯವು ಇರುವುದರಿಂದ ಆತ್ಮನಲ್ಲಿರುವ ಜ್ಞಾನದಲ್ಲಿಯೇ ಉತ್ತಮ ಜ್ಞಾನವು, ಅಧಮ ಜ್ಞಾನವು, ಮಿಶ್ರ ಜ್ಞಾನವು ಎಂದು ಜ್ಞಾನದಲ್ಲಿ ತ್ರೈವಿಧ್ಯವಿದೆ.
ತದೇವಮಿಷ್ಯತೇ ಬ್ರಹ್ಮ ಶಾಸನಾದ್ವಿನಿಭಿದ್ಯತೇ |
ಜ್ಞಾನಾನಾಂ ಚ ಫಲಾನಾಂ ಚ ಜ್ಞೇಯಾನಾಂ ಕರ್ಮಣಾಂ ತಥಾ |
ಜ್ಞೇಯಾಂತೇ ತತ್ಫಲಂ ದಿವ್ಯಂ ಜ್ಞಾನಂ ಜ್ಞೇಯಪ್ರತಿಷ್ಠಿತಮ್ ॥ 20 ॥
ಈ ಕಾರಣದಿಂದ ಪರಬ್ರಹ್ಮನೆಂಬ ವಸ್ತುವು ನಾನು ಹೇಳಿದ ರೀತಿಯಲ್ಲಿ ಅನೇಕ ಸಂಜ್ಞಾನಗಳಿಂದ ಹೊಂದಲ್ಪಡುತ್ತದೆ. ಆ ಪರಬ್ರಹ್ಮ ವಸ್ತುವು ಹೊಂದಿದ ಬಳಿಕವೂ ಅದರ ಅಧೀನವಾಗಿಯೇ ಮುಕ್ತಿಯಲ್ಲಿರುತ್ತಾರೆ. ಮುಕ್ತಿಯಲ್ಲಿಯೂ ಜೀವರನ್ನು ಶಾಸನ ಮಾಡುತ್ತದೆ. ಆದ್ದರಿಂದ ಮುಕ್ತಿಯಲ್ಲಿಯೂ ಜೀವನು ಪರಮಾತ್ಮನ ಅಧೀನನಾಗಿಯೇ ಇರುತ್ತಾನೆ. ಜ್ಞಾನಫಲ, ಜ್ಞಾನ ವಿಷಯಗಳು, ಕರ್ಮಗಳು ಇವುಗಳನ್ನೆಲ್ಲಾ ಹೊಂದಿದ ಮೇಲೆ, ಇವುಗಳನ್ನು ತಿಳಿಯುವ ಶಾಸ್ತ್ರವನ್ನು ಚೆನ್ನಾಗಿ ತಿಳಿದ ಬಳಿಕ ಯಾವ ದಿವ್ಯಜ್ಞಾನವು ಉತ್ಪನ್ನವಾಗುತ್ತದೋ ಅಂತಹ ಜ್ಞಾನಯೋಗ್ಯನಾದ ಜೀವನಲ್ಲಿ ಈ ಪರಬ್ರಹ್ಮ ವಸ್ತುವು ಸುಪ್ರತಿಷ್ಠಿತವಾಗಿ ಗೋಚರವಾಗುತ್ತದೆ.
ಮಹದ್ಧಿ ಪರಮಂ ಭೂತಂ ಯುಕ್ತಾಃ ಪಶ್ಯಂತಿ ಯೋಗಿನಃ |
ಅಬುಧಾಸ್ತಂ ನ ಪಶ್ಯಂತಿ ಹ್ಯಾತ್ಮಸ್ಥಂ ಗುಣಬುದ್ಧಯಃ ॥ 21 ॥
ಸಮಸ್ತ ಯೋಗಿಗಳು ಪರಮಾತ್ಮನನ್ನು ಮಹತ್ತಾದ ಶ್ರೇಷ್ಠವಾದ ಭೂತವೆಂದು ಕಂಡುಕೊಳ್ಳುತ್ತಾರೆ. ರೂಪಾದಿ ವಿಷಯಲಂಪಟರಾದ ಜೀವರು ಪರಮಾತ್ಮನು ಹೃದಯದಲ್ಲಿದ್ದರೂ ದಡ್ಡರಾಗಿ ಅವನನ್ನು ನೋಡುವುದಿಲ್ಲ.
ಪೃಥಿವ್ಯಾರೂಪತೋ ರೂಪಮಪಾಮಿಹ ಮಹತ್ತರಮ್ |
ಅದ್ಭ್ಯೋ ಮಹತ್ತರಂ ತೇಜಸ್ತೇಜಸಃ ಪವನೋ ಮಹಾನ್ ॥ 22 ॥
ಪೃಥಿವ್ಯಭಿಮಾನಿ ದೇವತೆಗಳಿಗಿಂತಲೂ ಜಲಾಭಿಮಾನಿದೇವತೆಯ ರೂಪವು ಮಹತ್ತರವಾದುದು. ಜಲಾಭಿಮಾನಿ ದೇವತೆಯ ರೂಪಕ್ಕಿಂತಲೂ ತೇಜೋಭಿಮಾನಿ ದೇವತೆಯ ರೂಪವು ಮಹತ್ತರವಾದುದು. ತೇಜೋಭಿಮಾನಿ ರೂಪಕ್ಕಿಂತಲೂ ವಾಯು ಅಭಿಮಾನಿ ದೇವತೆಯ ರೂಪವು ಮಹತ್ತರವಾದುದು.
ಪವನಾಚ್ಚ ಮಹದ್ವ್ಯೋಮ ತಸ್ಮಾತ್ ಪರತರಂ ಮನಃ |
ಮನಸೋ ಮಹತೀ ಬುದ್ಧಿರ್ಬುದ್ಧೇಃ ಕಾಲೋ ಮಹಾನ್ ಸ್ಮೃತಃ ॥23॥
ವಾಯು ಅಭಿಮಾನಿ ದೇವತೆಗಿಂತಲೂ ಆಕಾಶತತ್ತ್ವಭಿಮಾನಿ ದೇವತೆಯ ರೂಪವು ಮಹತ್ತರವಾದುದು. ಆ ಆಕಾಶತತ್ತ್ವಭಿಮಾನಿ ದೇವತೆಗಿಂತಲೂ ಮನಸ್ತತ್ತ್ವಾಭಿಮಾನಿ ದೇವತೆಯ ರೂಪವು ಪರತರವಾದುದು. ಮನಸ್ತತ್ತ್ವಾಭಿಮಾನಿ ದೇವತೆಯ ರೂಪಕ್ಕಿಂತಲೂ ಮಹತತ್ತ್ವಭಿಮಾನಿ ಎನಿಸಿದ ಬುದ್ಧ್ಯಭಿಮಾನಿಯು ಮಹತ್ತರವಾದುದು. ಬುದ್ಧಿ ತತ್ತ್ವಭಿಮಾನಿ ದೇವತೆಗಿಂತಲೂ ನಿತ್ಯಾಪರೋಕ್ಷ ಜ್ಞಾನಿಯಾದ, ಕಾಲನಾಮಕನಾದ ಚತುರ್ಮುಖ ಬ್ರಹ್ಮನು ಶ್ರೇಷ್ಠನಾದವನು.
ಕಾಲಾತ್ಸ ಭಗವಾನ್ ವಿಷ್ಣುರ್ಯಸ್ಯ ಸರ್ವಮಿದಂ ಜಗತ್ |
ನಾದಿರ್ನ ಮಧ್ಯಂ ನೈವಾಂತಸ್ತಸ್ಯ ದೇವಸ್ಯ ವಿದ್ಯತೇ ॥ 24 ॥
ಕಾಲನೆನಿಸಿದ ಚತುರ್ಮುಖ ಬ್ರಹ್ಮನಿಗಿಂತಲೂ ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ಸರ್ವೋತ್ತಮನು. ಯಾವ ವಿಷ್ಣುವಿನಿಂದಲೇ ಈ ಸಮಗ್ರ ಜಗತ್ತು ನಡೆಯುತ್ತಿದೆಯೋ ಈ ಜಗನ್ನಿಯಾಮಕನಾದ ವಿಷ್ಣುವಿಗೆ ಆದಿಯಾಗಲೀ, ಮಧ್ಯವಾಗಲೀ, ಕೊನೆಯಾಗಲೀ ಇರುವುದಿಲ್ಲ.
ಅನಾದಿತ್ವಾದಮಧ್ಯತ್ವಾದನಂತತ್ವಾಚ್ಚ ಸೋಽವ್ಯಯಃ |

ಅತ್ಯೇತಿ ಜೀವಜಾತಂ ಹಿ ದುಃಖಂ ಹ್ಯಂತವದುಚ್ಯತೇ ॥ 25 ॥
ಅನಾದಿಯೂ, ಮಧ್ಯರಹಿತನಾದುದರಿಂದಲೂ, ಅನಂತನಾದುದರಿಂದಲೂ ಅವ್ಯಯನೆನಿಸಿದ್ದಾನೆ. ಸಮಸ್ತ ದುಃಖಗಳನ್ನೂ ಮೀರಿ ನಿಂತಿದ್ದಾನೆ. ದುಃಖವನ್ನೇ ಅಂತ ಕೊನೆ ಎಂದು ಕರೆಯುತ್ತಾನೆ. ಈ ದುಃಖದಿಂದ ಪರಬ್ರಹ್ಮನು ನಿತ್ಯಮುಕ್ತನಾಗಿದ್ದಾನೆ. ದುಃಖವುಳ್ಳಂತಹ ಜೀವಸಮುದಾಯವು ನಾಶದಿಂದ ಕೂಡಿದೆ. ಇವನು ನಾಶವಿಲ್ಲದವನಾಗಿದ್ದರಿಂದ ಜೀವರಂತೆ ದುಃಖಿಯೂ ಅಲ್ಲ.
ತದ್ ಬ್ರಹ್ಮ ಪರಮಂ ಪ್ರೋಕ್ತಂ ತದ್ಧಾಮ ಪರಮಂ ಸ್ಮೃತಮ್ |
ತದ್ ಗತ್ವಾ ಕಾಲವಿಷಯಾದ್ ವಿಮುಕ್ತಾ ಮೋಕ್ಷಮಾಶ್ರಿತಾಃ ॥ 26॥
ಆ ಗುಣಪರಿಪೂರ್ಣವಾದ ವಸ್ತುವೇ ಸರ್ವೋತ್ತಮವಾಗಿದೆ. ಅವನು ವಾಸ ಮಾಡುವ ಮನೆಯೇ ಪರಮ ಎಂದು ಕರೆಯಲ್ಪಟ್ಟಿದೆ. ಅಂತಹ ಪರಮಾತ್ಮನ ಮನೆ ಎಂಬ ಮೋಕ್ಷವನ್ನು ಆಶ್ರಯಿಸಿದ ನಿರ್ಮುಕ್ತರು ಮೃತ್ಯುವಿಷಯದಿಂದ ನಿರ್ಮುಕ್ತರಾಗಿರುತ್ತಾರೆ.
ಗುಣೇಷ್ವೇತೇ ಪ್ರಕಾಶಂತೇ ನಿರ್ಗುಣತ್ವಾತ್ತತಃ ಪರಮ್ |
ನಿವೃತ್ತಿಲಕ್ಷಣೋ ಧರ್ಮಸ್ತಥಾನಂತ್ಯಾಯ ಕಲ್ಪತೇ ॥ 27 ॥
ಈ ಜೀವರು ರೂಪಾದಿ ಗುಣಪಂಚಕಗಳಲ್ಲಿ ಪ್ರಕಾಶಿಸುತ್ತಾರೆ. ಗುಣಗಳ ಸಂಬಂಧವೇ ಇಲ್ಲದಿರುವಂತಹ ಪರಮಾತ್ಮನು ಈ ಜೀವಸಮೂಹಕ್ಕಿಂತ ವಿಲಕ್ಷಣನಾಗಿ ಪ್ರಕಾಶಿಸುತ್ತಾನೆ. ಕಾಮನಾರಹಿತವಾಗಿ, ಜ್ಞಾನಪೂರ್ವಕವಾಗಿ ಮಾಡಿದ ಧರ್ಮಾಚರಣೆಗಳು ಆ ಸರ್ವೋತ್ತಮನಾದ ಪರಬ್ರಹ್ಮನನ್ನು ನಿತ್ಯವೂ ಹೊಂದಲು ಕಾರಣವಾಗುತ್ತವೆ.
ಋಚೋ ಯಜೂಂಷಿ ಸಾಮಾನಿ ಶರೀರಾಣಿ ವ್ಯಪಾಶ್ರಿತಾಃ |
ಜಿಹ್ವಾಗ್ರೇಷು ಪ್ರವರ್ತಂತೇ ಯಜ್ಞಸಾಧ್ಯಾವಿನಾಶಿನಃ ॥ 28 ॥
ಯಾರಲ್ಲಿ ಋಗ್ವೇದ, ಯಜುರ್ವೇದ, ಸಾಮವೇದಗಳು ನಾಲಿಗೆ ತುದಿಯಲ್ಲಿಯೇ ಭಗವದ್ಗುಣವಾಚಕಗಳಾಗಿ ಪ್ರವೃತ್ತಿಯನ್ನು ಹೊಂದುತ್ತವೋ ಅವರು ಯಜ್ಞನಾಮಕನಾದ ಪರಮಾತ್ಮನ ಅನುಗ್ರಹದಿಂದ ಅವಿನಾಶಿಯಾಗಿರುವಂತಹ ಮೋಕ್ಷವನ್ನು ಹೊಂದುತ್ತಾರೆ.
ನ ಚೈವಮಿಷ್ಯತೇ ಬ್ರಹ್ಮ ಶರೀರಾಶ್ರಯಸಂಭವಮ್ |
ನ ಯತ್ನಸಾಧ್ಯಂ ತದ್ ಬ್ರಹ್ಮ ನಾದಿಮಧ್ಯಂ ನ ಚಾಂತವತ್ ॥ 29 ॥
ಗುಣಪರಿಪೂರ್ಣವಾದ ಪರಬ್ರಹ್ಮನೆಂಬ ವಸ್ತುವನ್ನು ಸಮಸ್ತ ಜೀವರ ಉತ್ಪತ್ತಿಗೆ ಕಾರಣವಾದುದರಿಂದ ಜೀವರಂತೆ ಇದ್ದಾನೆಂದು ಜ್ಞಾನಿಗಳು ಅಂಗೀಕರಿಸುವುದಿಲ್ಲ. ಅವನ ಮಹಿಮೆಯನ್ನು ಅವನ ಅನುಗ್ರಹದಿಂದಲೇ ತಿಳಿಯಬೇಕೇ ವಿನಾ ನಮ್ಮ ಪ್ರಯತ್ನಗಳಿಂದ ತಿಳಿಯಲಾಗದು. ಆದಿ-ಮಧ್ಯ-ಅಂತ್ಯಗಳಿಲ್ಲದ ಗುಣಪರಿಪೂರ್ಣ- ವಾದ ವಸ್ತು ಪರಬ್ರಹ್ಮನೆನಿಸಿದ್ದಾನೆ.
ಋಚಾಮಾದಿಸ್ತಥಾ ಸಾಮ್ನಾಂ ಯಜುಷಾಮಾದಿರುಚ್ಯತೇ |
ಅಂತಶ್ಚಾದಿಮತಾಂ ದೃಷ್ಟೋ ನ ಚಾದಿರ್ಬ್ರಹ್ಮಣಃ ಸ್ಮೃತಃ ॥ 30 ॥
ಋಗ್ವೇದಗಳಿಗೂ ಆದಿ ಇದೆ. ಸಾಮವೇದಗಳಿಗೂ ಆದಿ ಇದೆ. ಯಜುರ್ವೇದಗಳಿಗೂ ಆದಿ ಇದೆ. ಆದಿಯುಳ್ಳವುಗಳೆಲ್ಲ ಅಂತವುಳ್ಳವುಗಳು ಆಗಿವೆ. ಆದರೆ ಗುಣಪರಿಪೂರ್ಣನಾದ ಬ್ರಹ್ಮನು ಆದಿಯುಳ್ಳವನೂ ಅಲ್ಲ, ಆದ್ದರಿಂದ ಅಂತ್ಯವುಳ್ಳವನೂ ಅಲ್ಲ.
ವ್ಯಾಖ್ಯಾನ ವಿಶೇಷ ಶಾರೀರಿಕ ಆದಿವುಳ್ಳವರು ಜೀವರು. ಅವರಿಗೆ ಶರೀರದ ವಿನಾಶವು ಇದೆ. ಆದಿವುಳ್ಳದ್ದು ಅಂತ್ಯವನ್ನು ಹೊಂದುತ್ತದೆ ಎಂಬುದು ಸಾಮಾನ್ಯ ನಿಯಮ. ಕೆಲವೊಂದಕ್ಕೆ ಆದಿ ಇದೆ, ಅಂತ್ಯವಿಲ್ಲ. ಘಟದ ಧ್ವಂಸವು ಉತ್ಪತ್ತಿಯಾಗುತ್ತದೆ. ಆದರೆ ನಿತ್ಯವೆನಿಸಿದೆ. ಅದರಂತೆ ಇಲ್ಲಿ ವೇದಗಳ ಆದಿಯಾಗಲಿ, ಅಂತ್ಯಗಳೆಂದರೆ ಅಭಿವ್ಯಕ್ತಿ, ಅನಭಿವ್ಯಕ್ತಿಯನ್ನು ಇಟ್ಟುಕೊಂಡು ಹೇಳಲಾಗಿದೆ.
ಅನಾದಿತ್ವಾದನಂತತ್ವಾತ್ತದನಂತಮಥಾವ್ಯಯಮ್ |
ಅವ್ಯಯತ್ವಾಚ್ಚ ನಿರ್ದ್ವಂದ್ವಂ ದ್ವಂದ್ವಾಭಾವಾತ್ತತಃ ಪರಮ್ ॥ 31 ॥
ಪರಮಾತ್ಮನು ಅನಾದಿ, ಅನಂತವಾದುದರಿಂದ ಅವನು ಅನಂತನೆಂದೂ, ಅವ್ಯಯನೆಂದೂ, ಅವ್ಯಯನಾದುದರಿಂದ ಸುಖ-ದುಃಖಗಳನ್ನು ಅತಿಕ್ರಮಿಸಿದವನು ಎಂದೂ, ದ್ವಂದ್ವಾತೀತನಾದುದರಿಂದ ಎಲ್ಲಕ್ಕಿಂತ ಉತ್ತಮನೆಂದೂ ಹೇಳಲ್ಪಟ್ಟಿದ್ದಾನೆ.
ಅದೃಷ್ಟತೋಽನುಪಾಯಾಚ್ಚ ಅಪ್ಯಭಿಸಂಧೇಶ್ಚ ಕರ್ಮಣಃ |
ನ ತೇನ ಮರ್ತ್ಯಾಃ ಪಶ್ಯಂತಿ ಯೇನ ಗಚ್ಛಂತಿ ತತ್ ಪರಮ್ ॥ 32 ॥
ಪರಮಾತ್ಮನನ್ನು ಅದೃಷ್ಟದಿಂದ ಹೊಂದಲಾಗುವುದಿಲ್ಲ. ಕರ್ಮಾಭಿಸಂಧಿಯಿಂದ ಹೊಂದಲಾಗುವುದಿಲ್ಲ. ಅವುಗಳಿಂದ ಮರ್ತ್ಯರು ಪರಬ್ರಹ್ಮನನ್ನು ನೋಡಲಾರರು. ತತ್ತ್ವಜ್ಞಾನದಿಂದಲೇ ಆ ಪರಬ್ರಹ್ಮನನ್ನು ಹೊಂದುತ್ತಾರೆ. ಅಂತಹ ವಸ್ತುವು ಸರ್ವೋತ್ತಮವಾಗಿದೆ.
ವಿಷಯೇಷು ಚ ಸಂಸರ್ಗಾಚ್ಛಾಶ್ವತಸ್ಯ ಚ ದರ್ಶನಾತ್ |
ಮನಸಾ ಚಾನ್ಯದಾಕಾಂಕ್ಷನ್ ಪರಂ ನ ಪ್ರತಿಪದ್ಯತೇ ॥ 33 ॥
ನಿರಂತರವೂ ಮನಸ್ಸು ವಿಷಯಗಳ ಸಂಪರ್ಕವನ್ನೇ ಹೊಂದಿದ್ದಲ್ಲಿ, ಮನಸ್ಸು ಬೇರೆಯದನ್ನೇ ಆಕಾಂಕ್ಷಿಸುವುದರಿಂದ ಪರಬ್ರಹ್ಮನನ್ನು ಹೊಂದಲಾಗುವುದಿಲ್ಲ.
ಗುಣಾನ್ ಯದಿಹ ಪಶ್ಯಂತಿ ತದಿಚ್ಛಂತ್ಯಪರೇ ಜನಾಃ |
ಪರಂ ನೈವಾಭಿಕಾಂಕ್ಷಂತಿ ನಿರ್ಗುಣತ್ವಾದ್ ಗುಣಾರ್ಥಿನಃ ॥ 34 ॥
ರೂಪಾದಿ ವಿಷಯಗಳನ್ನೇ ಯಾರು ಇಲ್ಲಿ ನೋಡಲು ಬಯಸುತ್ತಾರೋ ಅಂತಹ ಜನರಿಗೆ ಅವುಗಳಲ್ಲಿಯೇ ಆಸಕ್ತಿ ಹುಟ್ಟುತ್ತದೆ. ಪರಬ್ರಹ್ಮ ವಸ್ತುವನ್ನು ನೋಡಲು ಅವರು ಬಯಸುವುದಿಲ್ಲ. ವಿಷಯಗಳಲ್ಲಿ ಬಯಕೆಯುಳ್ಳವರಿಗೆ ವಿಷಯಗಳಿಗಿಂತ ಅತೀ ದೂರನಾದ ಭಗವಂತನಲ್ಲಿ ಅಪೇಕ್ಷೆ ಹುಟ್ಟುವುದಿಲ್ಲ.
ಗುಣೈರ್ಯಸ್ತ್ವವರೈರ್ಯುಕ್ತಃ ಕಥಂ ವಿದ್ಯಾದ್ ಗುಣಾನಿಮಾನ್ |
ಅನುಮಾನಾದ್ಧಿ ಗಂತವ್ಯಂ ಗುಣೈರವಯವೈಃ ಸಹ ॥ 35 ॥
ರೂಪ-ರಸಾದಿ ಗುಣಗಳಿಗಿಂತ ಭಗವಂತನ ಸರ್ವೇಶ್ವರತ್ವಾದಿ ಗುಣಗಳು ಉತ್ತಮವಾಗಿವೆ. ಆದ್ದರಿಂದ ರೂಪ-ರಸಾದಿ ಅಧಮ

ಗುಣಗಳನ್ನು ಚಿಂತಿಸುವವರು ಭಗವಂತನ ಸರ್ವೇಶ್ವರತ್ವಗುಣಗಳನ್ನು ಹೇಗೆ ಚಿಂತಿಸಿಯಾರು? ಇಷ್ಟಾಗಿ ಪರವಾದಿಗಳು ಹೇಳುವಂತೆ ಭಗವಂತನ ನಿರ್ಗುಣತ್ವ, ನಿರಾಕಾರತ್ವಗಳು ಸರ್ವಥಾ ವಿದ್ವಜ್ಜನರಿಗೆ ಸಮ್ಮತವಾದುವಲ್ಲ. ಭಗವಂತನನ್ನು ಸಕಲ ಜಗತ್ಕರ್ತೃತ್ವ ಅನುಮಾನದಿಂದ, ಸರ್ವಜ್ಞತ್ವಾದಿ ಗುಣಗಳಿಂದ, ಜ್ಞಾನಾನಂದಮಯ ಕರ-ಚರಣಾದಿ ಅವಯವಗಳಿಂದ ತಿಳಿಯಬೇಕು. ಭಗವಂತನಲ್ಲಿ ಸರ್ವಜ್ಞತ್ವವು ಇಲ್ಲದಿದ್ದಲ್ಲಿ ಸಕಲ ಪ್ರಪಂಚಕ್ಕೆ ಆಶ್ರಯವಾದ ವಿಶ್ವರೂಪ ಎಂಬ ಬೃಹತ್ತಾದ ದೇಹವೇ ಇಲ್ಲದಿದ್ದಲ್ಲಿ ಜಗತ್ಕರ್ತೃತ್ವ ಲಕ್ಷಣವು ಹೊಂದುವುದಿಲ್ಲ ಎಂದು ಭಾವ.

ಸೂಕ್ಷ್ಮೇಣ ಮನಸಾ ವಿದ್ಮೋ ವಾಚಾ ವಕ್ತುಂ ನ ಶಕ್ನುಮಃ |
ಮನೋ ಹಿ ಮನಸಾ ಗ್ರಾಹ್ಯಂ ದರ್ಶನೇನ ಚ ದರ್ಶನಮ್ ॥ 36 ॥

ಆ ಪರಬ್ರಹ್ಮ ವಸ್ತುವನ್ನು ಸೂಕ್ಷ್ಮವಾದ ಮನಸ್ಸಿನಿಂದ ತಿಳಿಯಬಹುದು. ಮಾತಿನಿಂದ ಹೇಳಲು ಸಾಧ್ಯವಿಲ್ಲ. ಮನಸ್ಸನ್ನು ಜ್ಞಾನದಿಂದಲೇ ಬಾಹ್ಯ ವಿಷಯದಲ್ಲಿ ಸಾಗದಂತೆ ನಿಗ್ರಹಿಸಿಕೊಳ್ಳಬೇಕು. ವಿಷಯಪದಾರ್ಥಗಳಲ್ಲಿ ದೋಷಗಳನ್ನು ಕಂಡು ವಿಷಯಪದಾರ್ಥಗಳ ಕಡೆ ಮನಸ್ಸು ಸಾಗದಂತೆ ನಿಗ್ರಹಿಸಿಕೊಳ್ಳಬೇಕು.

ಜ್ಞಾನೇನ ನಿರ್ಮಲೀಕೃತ್ಯ ಬುದ್ಧಿಂ ಬುದ್ಧ್ಯಾ ತಥಾ ಮನಃ |
ಮನಸಾ ಚೇಂದ್ರಿಯಗ್ರಾಮಮನಂತಂ ಪ್ರತಿಪದ್ಯತೇ॥ 37 ॥

ಬುದ್ಧಿಯನ್ನು ನಿಶ್ಚಯವಾದ ಬುದ್ಧಿಯಿಂದ, ಭಗವದ್‌ಜ್ಞಾನದಿಂದ ಸ್ವಚ್ಛ ಮಾಡಿಕೊಂಡು ಅದರಂತೆ ಮನಸ್ಸನ್ನೂ ಬುದ್ಧಿಪೂರ್ವಕವಾಗಿ ಸ್ವಚ್ಛ ಮಾಡಿಕೊಂಡು ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಅನಂತನಾದ ಬ್ರಹ್ಮನನ್ನು ಹೊಂದುತ್ತಾನೆ.

ಬುದ್ಧಿಪ್ರಹೀಣೋ ಮನಸಾಸಮೃದ್ಧ-
ಸ್ತಥಾಽನಿರಾಶೀರ್ಗುಣತಾಮುಪೈತಿ |
ಪರಂ ತ್ಯಜಂತೀಹ ವಿಲೋಭ್ಯಮಾನಾ
ಹುತಾಶನಂ ವಾಯುರಿವೇಂಧನಸ್ಥಮ್ ॥ 38 ॥

ದುರ್ಬುದ್ಧಿಯಿಂದ ಹೀನನಾದವನು ಮನಸ್ಸಿನಿಂದ ಎಂದರೆ ಭಗವದ್ವಿಷಯಕವಾದ ಮನಸ್ಸಿನಿಂದ ಸಮೃದ್ಧಿಯನ್ನು ಹೊಂದಿ ನೈರಾಶ್ಯವನ್ನು, ಬಾಹ್ಯವಿಷಯಗಳಲ್ಲಿ ಅನಾಸಕ್ತಿಯನ್ನು ಹೊಂದುತ್ತಾನೆ. ವಿಷಯಪದಾರ್ಥಗಳಿಂದ ಯಾರು ವಂಚಿತರಾಗುತ್ತಾರೋ ಅವರು ಪರಬ್ರಹ್ಮನನ್ನು ಹೊಂದುವುದಿಲ್ಲ. ಕಟ್ಟಿಗೆಯಲ್ಲಿರುವ ಅಗ್ನಿಯನ್ನು ವಾಯುವು ಮುಟ್ಟಲಾಗದಂತೆ ವಿಷಯಗಳಲ್ಲಿ ಆಸಕ್ತರಾದವರು ಪರಬ್ರಹ್ಮನನ್ನು ಮುಟ್ಟಲಾರರು.

ಗುಣಾದಾನೇ ವಿಪ್ರಯೋಗೇ ಚ ತೇಷಾಂ
ಮನಃ ಸದಾ ವಿದ್ಧಿಪರಾವರಾಭ್ಯಾಮ್ |
ಅನೇನೈವ ವಿಧಿನಾ ಸಂಪ್ರವೃತ್ತೋ
ಗುಣಾದಾನೇ ಬ್ರಹ್ಮಶರೀರಮೇತಿ ॥ 39 ॥

ಮನಸ್ಸು ಯಾವಾಗಲೂ ಗುಣಾದಾನ ವಿಪ್ರಯೋಗ ಬುದ್ಧಿಯನ್ನು ಹೊಂದಿರಬೇಕು. ಇದನ್ನೇ `ಪರಾವರಾಭ್ಯಾಂ' ಎಂದು ಹೇಳಿದ್ದಾರೆ. ಗುಣಾದಾನವು ಪರ ಎನಿಸಿದೆ. ವಿಪ್ರಯೋಗವು ಅವರ ಎನಿಸಿದೆ. ಎಂದರೆ ಅಪ್ರಾಕೃತ ದಿವ್ಯರೂಪ ರಸ ಜ್ಞಾನಗಳುಳ್ಳ ಪರಬ್ರಹ್ಮನ ಗುಣಗಳನ್ನು ಮನಸ್ಸು ಸ್ವೀಕರಿಸಬೇಕು. ಅಧಮ ಎನಿಸಿದ ರೂಪಾದಿ ಪ್ರಾಕೃತಗುಣಗಳನ್ನು ಮನಸ್ಸು ತ್ಯಜಿಸಬೇಕು. ಈ ರೀತಿಯಾದ ಮನಸ್ಸಿನಿಂದ ಯಾವಾಗಲೂ ಕೂಡಿದ ವ್ಯಕ್ತಿಯು ಸಾಧಕನಾಗಿ ಈ ಕ್ರಮವನ್ನು ಅನುಷ್ಠಾನ ಮಾಡಿದುದರಿಂದ ವೈಕುಂಠಾದಿ ಲೋಕಸ್ಥಿತ ಪರಬ್ರಹ್ಮನ ಶರೀರವನ್ನು ಹೊಂದುತ್ತಾನೆ.

ವ್ಯಾಖ್ಯಾನ ವಿಶೇಷ ನಿರ್ಗುಣ ನಿರಾಕಾರ ಬ್ರಹ್ಮಾವಾಪ್ತಿಯೇ ಮೋಕ್ಷ ಎಂದು ಕೆಲವರು ಹೇಳುತ್ತಾರೆ. ಅದನ್ನು ನಿರಾಕರಿಸಲು ಬ್ರಹ್ಮಶರೀರ ಎಂದು ವ್ಯಾಸರು ಪ್ರಯೋಗಿಸುವ ಮೂಲಕ ಗುಣಪರಿಪೂರ್ಣನಾದ ಪರಬ್ರಹ್ಮನು, ಪರಬ್ರಹ್ಮನ ಶರೀರ ಎಂದು ನಿರ್ಗುಣ ವಾದವನ್ನು ನಿರಾಕರಿಸಿದ್ದಾರೆ.

ಅವ್ಯಕ್ತಾತ್ಮಾ ಪುರುಷೋಽವ್ಯಕ್ತಕರ್ಮಾ
ಸೋಽವ್ಯಕ್ತತ್ವಂ ಗಚ್ಛತಿ ಹ್ಯಂತಕಾಲೇ |
ತೈರೇವಾಯಂ ಚೇಂದ್ರಿಯೈರ್ವರ್ಧಮಾನೈ-
ರ್ಗ್ಲಾಯದ್ಭಿರ್ವಾ ವರ್ತತೇ ಕರ್ಮರೂಪಃ ॥ 40 ॥

ಯಾವ ಸಾಧಕನು ಅವ್ಯಕ್ತನೆನಿಸಿದ ಪರಮಾತ್ಮನಲ್ಲಿಯೇ ಮನಸ್ಸುಳ್ಳವನಾಗಿ ಇರುತ್ತಾನೋ, ಅವ್ಯಕ್ತನೆನಿಸಿದ ಪರಮಾತ್ಮನಲ್ಲಿ ನಿವೃತ್ತಿರೂಪವಾದ ಕರ್ಮವನ್ನು ಸಮರ್ಪಿಸುತ್ತಾನೋ ಅವನು ಮತ್ತೂ ಮತ್ತೂ ಸಾಂಸಾರಿಕವಾದ ದೇಹಗಳನ್ನು ಹೊಂದುವುದರಿಂದ ಮುಕ್ತನಾಗುತ್ತಾನೆ. ಅದೇ ಬಾಹ್ಯೇಂದ್ರಿಯಗಳಿಂದ ವಿಷಯ ಪದಾರ್ಥಗಳು ಅಭಿವೃದ್ಧಿಯನ್ನು ಹೊಂದುತ್ತಿರಲು ಅದೇ ಇಂದ್ರಿಯಗಳು ಜೀವನನ್ನು ದುಃಖಿತನನ್ನಾಗಿ ಮಾಡಿ ಕರ್ಮದಲ್ಲಿಯೇ ರತನಾಗಿ ಇರುತ್ತಾನೆ. ಅವುಗಳ ಸುಳಿಯಲ್ಲಿಯೇ ಸಂಸಾರವನ್ನು ಹೊಂದಿರುತ್ತಾನೆ. ಇದನ್ನು ದಾಟಲು ನಿವೃತ್ತರೂಪ ಕರ್ಮವನ್ನು ಆಶ್ರಯಿಸಬೇಕು.

ಸರ್ವೈರಯಂ ಚೇಂದ್ರಿಯೈಃ ಸಂಪ್ರಯುಕ್ತೋ
ದೇಹಃ ಪ್ರಾಪ್ತಃ ಪಂಚಭೂತಾಶ್ರಯಃ ಸ್ಯಾತ್ |
ನ ಸಾಮರ್ಥ್ಯಾದ್ ಗಚ್ಛತಿ ಕರ್ಮಣೇಹ
ಹೀನಸ್ತೇನ ಪರಮೇಣಾವ್ಯಯೇನ ॥ 41 ॥

ಈ ಜೀವನು ಸಮಸ್ತ ಇಂದ್ರಿಯಗಳಿಂದ ಪರಮಾತ್ಮನಿಂದಲೇ ನಿಯೋಜಿಸಲ್ಪಟ್ಟಿದ್ದಾನೆ. ದೇಹವನ್ನು ಹೊಂದಿದ್ದಾನೆ. ಪಂಚಭೂತಗಳನ್ನು ಆಶ್ರಯಿಸಿದ್ದಾನೆ. ಈ ಸಂಸಾರದಲ್ಲಿ ತೊಳಲುತ್ತಿರುವ ಜೀವನು ಪರಮಾತ್ಮನ ಅನುಗ್ರಹವನ್ನು ಸಂಪಾದಿಸದೆ

ಕೇವಲ ಪ್ರವೃತ್ತಿಕರ್ಮಗಳನ್ನೇ ಮಾಡುತ್ತಿದ್ದಲ್ಲಿ ಆ ಪ್ರವೃತ್ತಿಕರ್ಮದ ಬಲದಿಂದ ಪರಲೋಕವನ್ನು ಅವನಿಂದ ಹೊಂದಲಾಗುವುದಿಲ್ಲ.

ಪೃಥ್ವ್ಯಾಂ ನರಃ ಪಶ್ಯತಿ ನಾಂತಮಸ್ಯಾ
ಹ್ಯಂತಶ್ಚಾಸ್ಯಾ ಭವಿತಾ ಚೇತಿ ವಿದ್ಧಿ |
ಪರಂ ನಯಂತೀಹ ವಿಲೋಭ್ಯಮಾನಂ
ಯಥಾ ಪ್ಲವಂ ವಾಯುರಿವಾರ್ಣವಸ್ಥಮ್ ॥ 42 ॥
ಮನುಷ್ಯನು ಈ ಭೂಮಿಯ ಕೊನೆಯನ್ನು ಕಂಡಿರುವುದಿಲ್ಲ. ಹೀಗಿದ್ದರೂ ಭೂಮಿಗೆ ಕೊನೆಯಿಲ್ಲ ಎಂದು ತಿಳಿದಿಲ್ಲ. ಅಂತವನ್ನು ತಿಳಿದಿದ್ದಾನೆ. ಅದರಂತೆ ಸುಖ- ದುಃಖಗಳೆರಡಕ್ಕೂ ಅಂತವಿದ್ದೇ ಇದೆ. ಸಮುದ್ರದಲ್ಲಿ ಅಲೆದಾಡುತ್ತಿರುವ ಹಡಗು ಅನುಕೂಲವಾದ ವಾಯುವು ಸಿಗದಿದ್ದಲ್ಲಿ ಬಿರುಗಾಳಿಯ ಹೊಡೆತದಿಂದಾಗಿ ಹೇಗೆ ಹಾನಿಗೀಡಾಗುತ್ತದೋ ಅದರಂತೆ ಈ ಬಾಹ್ಯವಾದ ಸುಖ-ದುಃಖಗಳ ಬಿರುಗಾಳಿಯಲ್ಲಿ ಸಿಕ್ಕಿಬಿದ್ದ ಮನುಷ್ಯನು ತನ್ನ ಪ್ರಾಪ್ಯಸ್ಥಾನವನ್ನು ಹೊಂದಲಾರನು.
ದಿವಾಕರೋ ಗುಣಮುಪಲಭ್ಯ ನಿರ್ಗುಣೋ
ಯಥಾ ಭವೇದ್ ವ್ಯಪಗತರಶ್ಮಿಮಂಡಲಃ |
ತಥಾ ಹ್ಯಸೌ ಮುನಿರಿಹ ನಿರ್ವಿಶೇಷವಾನ್
ಸ ನಿರ್ಗುಣಂ ಪ್ರವಿಶತಿ ಬ್ರಹ್ಮ ಚಾವ್ಯಯಮ್ ॥ 43 ॥
ಸೂರ್ಯನು ಹಗಲಿನಲ್ಲಿ ತನ್ನ ಕಿರಣಗಳಿಂದ ಘಟ-ಪಟಾದಿಗಳಲ್ಲಿರುವ ರೂಪಾದಿ ಗುಣಗಳನ್ನು ಸ್ಪರ್ಶಿಸಿ ಅರ್ಥಾತ್ ಪದಾರ್ಥಗಳನ್ನು ತನ್ನ ಕಿರಣಗಳಿಂದ ಗೋಚರವಾಗುವಂತೆ ಮಾಡಿ ಅಸ್ತಮಾನ ಹೊಂದುವ ಸಮಯದಲ್ಲಿ ತನ್ನ ರಶ್ಮಿಗಳನ್ನು ಸ್ವೀಕರಿಸಿ ಹೋಗುತ್ತಾನೆ. ಘಟ-ಪಟಾದಿ ಗುಣಗಳ ಸಂಬಂಧವನ್ನು ಹೊಂದಿದ ಸೂರ್ಯನಿಗೆ ಅಸ್ತಮಾನದ ಸಮಯದಲ್ಲಿ ಅದರ ಅತಿಯಾದ ಸಂಗವು ಇರುವುದಿಲ್ಲ. ನಿರ್ಲಿಪ್ತನಾಗಿ ಆ ಪದಾರ್ಥಗಳನ್ನು ಬಿಟ್ಟು ತೆರಳುತ್ತಾನೆ. ಇದೇ ರೀತಿಯಾಗಿ ಬಾಹ್ಯ ಗುಣಗಳ ಆಸೆಯನ್ನು ತ್ಯಜಿಸಿದಲ್ಲಿ ಅಪ್ರಾಕೃತ ಗುಣಗಳಿಂದ ಕೂಡಿದ ಅವ್ಯಯನಾದ ಪರಬ್ರಹ್ಮನನ್ನು ಹೊಂದುತ್ತಾನೆ.
ಅನಾಗತಂ ಸುಕೃತಿಮತಾಂ ಪರಾಂ ಗತಿಂ
ಸ್ವಯಂಭುವಂ ಪ್ರಭವನಿಧಾನಮವ್ಯಯಮ್ |
ಸನಾತನಂ ಯದಮೃತಮವ್ಯಯಂ ಪದಂ
ವಿಚಾರ್ಯ ತಂ ಶಮಮಮೃತತ್ವಮಶ್ನುತೇ ॥ 44 ॥
ಪರಮಾತ್ಮನು ಅನಾಗತ ಎನಿಸಿದ್ದಾನೆ. ಎಂದರೆ ಪೂರ್ಣವಾಗಿ ತಿಳಿಯಲಾಗದು ಎಂದರ್ಥ. ಪುಣ್ಯವುಳ್ಳವರಿಗೆ ಮಾತ್ರ ಈ ಪರಬ್ರಹ್ಮನನ್ನು ಹೊಂದಲು ಸಾಧ್ಯವಾಗುತ್ತದೆ. ಪರಬ್ರಹ್ಮನಾದರೂ ಸ್ವಯಂ ವ್ಯಕ್ತನೂ, ಸಮಗ್ರ ಪ್ರಪಂಚದ ಉತ್ಪತ್ತಿಗೆ, ಲಯಕ್ಕೆ ಕಾರಣನೂ, ಸನಾತನನೂ, ಆದಿ-ಮಧ್ಯಾಂತ ರಹಿತನೂ, ಸತ್ಯಸ್ವರೂಪನೂ ಆಗಿದ್ದಾನೆ. ಇಂತಹ ಪರಮಾತ್ಮನನ್ನು ಯಾವ ಸಾಧಕನು ಕಂಡುಕೊಳ್ಳುತ್ತಾನೋ ಅವನು ಅಮೃತತ್ವವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ನಿಬಂಧನನೆಂಬ ಮುನಿಯು ತನ್ನ ತಾಯಿಗೆ ಸಂಸಾರವನ್ನು ಅರಣ್ಯರೂಪವಾಗಿ ನಿರೂಪಿಸಿದ ಕಥೆಯನ್ನು ಹೇಳಿದುದು. ಅದರಂತೆ ನಾರದ, ಸಾವಿತ್ರೀ ಸಂವಾದವನ್ನು, ನಾರದರ ತಪಸ್ಸು, ವಿಷ್ಣುವಿಗೆ ನಾರದರಿಗೆ ಪ್ರತ್ಯಕ್ಷವಾದ ಬಗೆ - ಇವುಗಳನ್ನು ನಿರೂಪಿಸಿದುದು.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ದುಃಖಶೋಕಸಮಾಕುಲೇ |
ಸಂಸಾರಚಕ್ರೇ ಲೋಕಾನಾಂ ನಿರ್ವೇದೋ ನಾಸ್ತಿ ಕಿನ್ವಿದಮ್ ॥ 1 ॥
ಯುಧಿಷ್ಠಿರ ತಾತನೇ, ಕೇವಲ ದುಃಖ-ಶೋಕಗಳಿಂದ ಕೂಡಿರುವ ಈ ಸಂಸಾರ ಚಕ್ರದಲ್ಲಿ ಜನರಿಗೆ ವೈರಾಗ್ಯವು ಏಕೆ ಹುಟ್ಟುತ್ತಿಲ್ಲ? ಇದರ ರಹಸ್ಯವನ್ನು ತಿಳಿಸಬೇಕು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಿಬಂಧನಸ್ಯ ಸಂವಾದಂ ಭೋಗವತ್ಯಾ ನೃಪೋತ್ತಮ ॥ 2 ॥
ಭೀಷ್ಮ ನೃಪೋತ್ತಮನೇ, ಇದೇ ವಿಚಾರದಲ್ಲಿ ನಿಬಂಧನನೆಂಬ ಮುನಿಗೂ ಅವನ ತಾಯಿಯಾದ ಭೋಗವತಿಗೂ ನಡೆದ ಪುರಾತನವಾದ ಸಂಭಾಷಣೆ ಇದೆ.
ಮುನಿಂ ನಿಬಂಧನಂ ಶುಷ್ಕಂ ಧಮನೀಯಾಕೃತಂ ತಥಾ |
ನಿರಾರಂಭಂ ನಿರಾಲಂಬಮಸಜ್ಜಂತಂ ಚ ಕರ್ಮಣಿ |
ಪುತ್ರಂ ದೃಷ್ಟ್ವಾಽಪ್ಯುವಾಚಾರ್ತಂ ಮಾತಾ ಭೋಗವತೀ ತದಾ ॥ 3 ॥
ಹಿಂದೆ ನಿಬಂಧನನೆಂಬ ಮುನಿಯು ಯಾವ ಕಾರ್ಯದಲ್ಲಿಯೂ ಉತ್ಸಾಹವಿಲ್ಲದೆ, ಜೀವನಕ್ಕೂ ಯಾವ ಉಪಾಯಗಳಿಲ್ಲದೆ, ಅತ್ಯಂತ ಕಷ್ಟದಿಂದ ಕೃಶಶರೀರಿಯಾಗಿ ಇರುವುದನ್ನು ಕಂಡ ಅವನ ತಾಯಿಯು ದುಃಖಿತನಾದ ಮಗನನ್ನು ಉದ್ದೇಶಿಸಿ ಹೀಗೆ ಹೇಳಿದಳು.

ಉತ್ತಿಷ್ಠ ಮೂಢ ಕಿಂ ಶೇಷೇ ನಿರಪೇಕ್ಷಃ ಸುಹೃಜ್ಜನೈಃ |
ನಿರಾಲಂಬೋ ಧನೋಪಾಯೇ ಪೈತೃಕಂ ತವ ಕಿಂ ಧನಮ್ ॥ 4 ॥
ಮೂಢನೇ, ಎದ್ದೇಳು. ನಿನಗೆ ಸಂಪಾದನೆಯ ದಾರಿ ತಿಳಿಯದು. ಜೀವನಕ್ಕೆ ಮಾರ್ಗವಿಲ್ಲ. ನಿನಗೆ ಲೋಕದಲ್ಲಿ ಮಿತ್ರರೇ ಇದ್ದಂತಿಲ್ಲ. ಸ್ನೇಹ ಮಾಡುವ ಬಗೆಯನ್ನು ಅರಿತಿಲ್ಲ. ಪಿತೃಗಳಿಗೆ ಸಂಬಂಧಿಸಿದ ನಿನ್ನ ಧನವು ಯಾವುದಿದೆ? ಎಂದು ಆಲಸಿಯಾಗಿರುವೆ ಎಂದು ಸಂಬೋಧಿಸಿದಾಗ ನಿಬಂಧನನು ಹೀಗೆ ಹೇಳಿದನು.
ನಿಬಂಧನಃ
ಪೈತೃಕಂ ಮೇ ಮಹನ್ನಾತಃ ಸರ್ವದುಃಖಾಲಯಂ ತ್ವಿಹ |
ಅಸ್ಯೇತತ್ತ್ವಿಘಾತಾಯ ಯತಿಷ್ಯೇ ತತ್ರ ಮಾ ಶುಚಃ ॥ 5 ॥
ನಿಬಂಧನ ತಾಯಿಯೇ, ನನಗೆ ತಂದೆಯು ಸಂಪಾದಿಸಿಕೊಟ್ಟ ಆಸ್ತಿ ಇದೆ. ಅದೇ ನನಗೆ ಬಹಳ ದೊಡ್ಡ ದುಃಖಕ್ಕೆ ಎಡೆಮಾಡಿಕೊಟ್ಟಿದೆ. ಪ್ರಪಂಚದಲ್ಲಿನ ಸಮಸ್ತ ದುಃಖಗಳಿಗೂ, ಕಷ್ಟಗಳಿಗೂ ನೆಲೆಯಾಗಿದೆ. ಇರುವ ಆ ಆಸ್ತಿಯನ್ನು ಹೇಗೆ ತ್ಯಜಿಸಬೇಕೆಂಬುದೇ ನನ್ನ ಚಿಂತೆಯಾಗಿದೆ. ಅದಕ್ಕಾಗಿ ನಾನು ಪ್ರಯತ್ನಿಸುತ್ತಿದ್ದೇನೆ.
ಇದಂ ಶರೀರಮತ್ಯುಗ್ರಂ ಪಿತ್ರಾ ದತ್ತಮಸಂಶಯಮ್ |
ತಮೇವ ಪಿತರಂ ಗತ್ವಾ ಧನಂ ತಿಷ್ಠತಿ ಶಾಶ್ವತಮ್ ॥ 6 ॥
ಅತ್ಯಂತ ಉಗ್ರವಾದ ತಂದೆಯಿಂದ ನೀಡಲ್ಪಟ್ಟ ಈ ನನ್ನ ಶರೀರವೇ ದೊಡ್ಡ ಆಸ್ತಿ ಎನಿಸಿದೆ. ಈ ಆಸ್ತಿಯನ್ನು ನಾನು ನನ್ನ ತಂದೆಯ ಬಳಿ ಹೋಗಿ ಒಪ್ಪಿಸಿಬಿಡುತ್ತೇನೆ. ಅವರು ಕೊಟ್ಟಿರುವ ಈ ಶರೀರವೆಂಬ ಧನವು ಅವನಿಗೇ ಶಾಶ್ವತವಾದ ಧನವಾಗಿರಲಿ.
ಕಶ್ಚಿನ್ಮಹತಿ ಸಂಸಾರೇ ವರ್ತಮಾನೋ ಧನೇಚ್ಛಯಾ |
ವನದುರ್ಗಮಭಿಪ್ರಾಪ್ತೋ ಮಹತ್ಕ್ರವ್ಯಾದಸಂಕುಲಮ್ ॥ 7 ॥
ಹಿಂದೆ ಒಬ್ಬನು ಈ ಶರೀರವೆಂಬ ಧನವನ್ನು ಧರಿಸಿಕೊಂಡು ಇನ್ನೂ ಅಧಿಕ ಧನಕ್ಕಾಗಿ ಆಸೆ ಪಡುತ್ತಾ ಮಾಂಸಭಕ್ಷಕರಿಂದ ತುಂಬಿದ ಅತ್ಯಂತ ಘೋರವಾದ ಅರಣ್ಯ ಪ್ರದೇಶವನ್ನು ಹೊಕ್ಕನು.
ಸಿಂಹವ್ಯಾಘ್ರಗಜಾಕಾರೈರತಿಘೋರೈರ್ಮಹಾಶನೈಃ |
ಸಮಂತಾತ್ ಸುಪರಿಕ್ಷಿಪ್ತಂ ಸ ದೃಷ್ಟ್ವಾ ವ್ಯಥತೇ ಪುಮಾನ್ ॥ 8 ॥
ಸ ತದ್ವನಂ ಹ್ಯನುಚರನ್ ವಿಪ್ರಧಾವನ್ನಿತಸ್ತತಃ |
ವೀಕ್ಷಮಾಣೋ ದಿಶಃ ಸರ್ವಾಃ ಶರಣಾರ್ಥಂ ಪ್ರಧಾವತಿ ॥ 9 ॥
ಆ ಅರಣ್ಯವಾದರೂ ಸಿಂಹ, ಹುಲಿ ಮೊದಲಾದ ದುಷ್ಟಪ್ರಾಣಿಗಳಿಂದ ನಿಬಿಡವಾಗಿತ್ತು. ಅಲ್ಲಿಗೆ ಪ್ರವೇಶಿಸಿ ನಿರಂತರವೂ ಭಯದಿಂದ ಆಚೆ-ಈಚೆ ಸಂಚರಿಸುತ್ತಾ ತತ್ತರಿಸುತ್ತಾ ಎಲ್ಲಿಯೂ ಆಶ್ರಮವನ್ನು ಕಾಣದೆ ದಿಕ್ಕುದಿಕ್ಕುಗಳಲ್ಲಿ ತಿರುಗುತ್ತಿದ್ದನು. ಆಶ್ರಯಕ್ಕಾಗಿ ಆಚೆ-ಈಚೆ ಓಡುತ್ತಲೇ ಇದ್ದನು.
ಅಥಾಪಶ್ಯದ್ವನಂ ರೂಢಂ ಸಮಂತಾದ್ ವಾಗುರಾವೃತಮ್ |
ವನಮಧ್ಯೇ ಚ ತತ್ರಾಸೀದುದಪಾನಃ ಸಮಾವೃತಃ ॥ 10 ॥
ಬಳಿಕ ಮುಂದೆ ಹೋಗುತ್ತಾ ಆ ಕಾಡಿನ ಅನೇಕ ಕಡೆಗಳಲ್ಲಿ ಬಲೆಗಳು ಕಟ್ಟಿದ್ದನ್ನು ಕಂಡನು. ಆ ಬಲೆಗಳನ್ನು ತಪ್ಪಿಸಿಕೊಳ್ಳುವ ಮಾರ್ಗವನ್ನು ಹುಡುಕುತ್ತಾ ಮುಂದೆ ಆ ಅರಣ್ಯದಲ್ಲಿ ದೊಡ್ಡ ಗಿಡಗಂಟೆಗಳಿಂದ ಮುಚ್ಚಿಹೋಗಿದ್ದ ಬಾವಿಯ ಕಡೆ ಆಗಮಿಸಿದನು.
ವಲ್ಲಿಭಿಸ್ತೃಣಸಂಛನ್ನೈರ್ಗೂಢಾಭಿರಭಿಸಂವೃತಃ |
ಸ ಪಪಾತ ದ್ವಿಜಸ್ತತ್ರ ವಿಜನೇ ಸಲಿಲಾಶಯೇ ॥ 11 ॥
ಅಲ್ಲಿ ಒಂದು ಆಳವಾದ ಬಾವಿಯು ದಟ್ಟವಾದ ಬಳ್ಳಿಗಳಿಂದ, ತೃಣಗಳಿಂದ ಮುಚ್ಚಿಹೋಗಿತ್ತು. ಅದರಲ್ಲಿ ನೀರು ತುಂಬಿತ್ತು. ಆಳವಾದ ಹಾಳುಬಾವಿಯಲ್ಲಿ ತಿಳಿಯದೆ ಅವನು ಬಿದ್ದುಬಿಟ್ಟನು.
ವಿಲಗ್ನಶ್ಚಾಭವತ್ತಸ್ಮಿಲ್ಲತಾಸಂತಾಲಸಂಕುಲೇ |
ಬಾಹುಭ್ಯಾಂ ಸಂಪರಿಷ್ವಕ್ತಸ್ತಯಾ ಪರಮಸತ್ತ್ವಯಾ ॥ 12 ॥
ಸ ತಥಾ ಲಂಬತೇ ತತ್ರ ಊರ್ಧ್ವಪಾದೋ ಹ್ಯಧಃಶಿರಾಃ |
ಅಧಸ್ತತ್ರೈವ ಜಾತಶ್ಚ ಜಂಬೂವೃಕ್ಷಃ ಸುದುಸ್ತರಃ ॥ 13 ॥
ಹೀಗೆ ಬೀಳುತ್ತಾ ಹಿಂದೆ ಮುಂದೆ ಏನೂ ಅರಿಯದ ಅವನು ನಡುವೆ ತನ್ನ ಕೈಗೆ ಸಿಕ್ಕಿದ ಬಳ್ಳಿಯನ್ನು ಹಿಡಿದುಕೊಂಡು ಅದರ ಆಶ್ರಯದಿಂದ ತಲೆಕೆಳಗಾಗಿ ನೇತಾಡುತ್ತಿದ್ದನು. ಗಟ್ಟಿಯಾದ ಬಳ್ಳಿಯು ಅವನನ್ನು ಹಿಡಿದಿತ್ತಾದರೂ ತಲೆಕೆಳಗಾಗಿ ಊರ್ಧ್ವಪಾದನಾಗಿ ಅಲ್ಲಿಯೇ ನೇತಾಡುತ್ತಿದ್ದನು. ಆ ಪಾಳುಬಾವಿಯಲ್ಲಿ ಬಿದ್ದಿರುವ ಅವನಿಗೆ ಅದೇ ಬಾವಿಯ ಪಕ್ಕದಲ್ಲಿರುವ ಎತ್ತರವಾದ ಒಂದು ನೇರಳೆ ಮರ ಕಂಡಿತು.
ಕೂಪಸ್ಯ ತಸ್ಯ ವೇಲಾಯಾ ಅಪಶ್ಯತ್ ಸುಮಹಾಫಲಮ್ |
ವೃಕ್ಷಂ ಬಹುವಿಧಂ ವ್ಯೋಮಂ ವಲ್ಲೀಪುಷ್ಪಸಮಾಕುಲಮ್ ॥ 14 ॥
ನಾನಾರೂಪಾ ಮಧುಕರಾಸ್ತಸ್ಮಿನ್ ವೃಕ್ಷೇಽಭವನ್ ಕಿಲ |
ತೇಷಾಂ ಮಧೂನಾಂ ಬಹುಧಾ ಧಾರಾ ಪ್ರವವೃತೇ ತದಾ ॥ 15 ॥
ಬಾವಿಯ ಪಕ್ಕದಲ್ಲಿರುವ ನೇರಳೆ ಮರದಲ್ಲಿ ಅನೇಕ ರಸಭರಿತವಾದ ಹಣ್ಣುಗಳು ತುಂಬಿದ್ದವು. ಆ ನೇರಳ ವೃಕ್ಷವು ಅನೇಕ ಶಾಖೋಪಶಾಖೆಗಳಿಂದ ಹರಡಿಕೊಂಡಿತ್ತು. ಲತೆಗಳಿಂದಲೂ ಪುಷ್ಪಗಳಿಂದಲೂ ಆವೃತವಾಗಿತ್ತು.ಅನೇಕ ವಿಧವಾದ ದುಂಬಿಗಳು ಆ ವೃಕ್ಷದಲ್ಲಿ ನೆಲೆಸಿದ್ದವು. ಆ ಮಧುಕರಗಳ ಜೇನುತುಪ್ಪವು ಅನೇಕ ವಿಧವಾಗಿತ್ತು. ಅವುಗಳ ಧಾರೆಗಳು ಆ ವೃಕ್ಷದಿಂದ ಕೆಳಗೆ ಸುರಿಯುತ್ತಿದ್ದವು.

ವಿಲಂಬಮಾನಃ ಸ ಪುಮಾನ್ ಧಾರಾಂ ಪಿಬತಿ ಸರ್ವದಾ |
ನ ತಸ್ಯ ತೃಷ್ಣಾ ವಿರತಾ ಪೀಯಮಾನಸ್ಯ ಸಂಕಟೇ ॥ 16 ॥
ಈ ಬಾವಿಯಲ್ಲಿ ನೇತಾಡುತ್ತಿರುವ ಪುರುಷನು ಯಾವಾಗಲೂ ಸುರಿಯುತ್ತಿರುವ ಆ ಮಧುವನ್ನು ಕುಡಿದನು. ಇಷ್ಟು ಸಂಕಟದಲ್ಲಿ ತಲೆಕೆಳಗಾಗಿ ಜೋತಾಡುತ್ತಿರುವ ಆ ವ್ಯಕ್ತಿಗೂ ಆ ಜೇನುತುಪ್ಪದ ರಸವನ್ನು ಕುಡಿಯುವ ಅಪೇಕ್ಷೆಯು ಮತ್ತೂ ಮತ್ತೂ ಹುಟ್ಟಿತು.
ಪರೀಪ್ಸತಿ ಚ ತಾಂ ನಿತ್ಯಮತೃಪ್ತಃ ಸ ಪುನಃಪುನಃ |
ಏವಂ ಸ ವಸತೇ ತತ್ರ ದುಃಖಿದುಃಖೀ ಪುನಃಪುನಃ ॥ 17 ॥
ಆ ಜೇನುತುಪ್ಪದ ಧಾರೆಯನ್ನು ಸವಿದ ಆತನು ಪುನಃ ಪುನಃ ಅದನ್ನೇ ಸವಿಯಬೇಕೆಂದು ಅಪೇಕ್ಷೆ ಪಟ್ಟನು. ಅತ್ಯಂತ ದುಃಖದಿಂದ ಪುನಃ ಪುನಃ ಆ ಪಾಳುಬಾವಿಯಲ್ಲಿಯೇ ಈ ಮಧುವಿನ ಆಸೆಗೆ ಅಲ್ಲಿಯೇ ನೇತಾಡುತ್ತಿದ್ದನು.
ಮಯಾ ತು ತದ್ಧನಂ ದೇಯಂ ತವ ದಾಸ್ಯಾಮಿ ಚೇಚ್ಛಸಿ |
ತಸ್ಯ ಚ ಪ್ರಾರ್ಥಿತಃ ಸೋಽಥ ದತ್ವಾ ಮುಕ್ತಿಮವಾಪ ಸಃ ॥ 18 ॥
ತಾಯಿಯೇ, ಈಗ ನನ್ನ ಬಳಿ ಇರುವ ಧನವು ಅಂತಹ ಕಷ್ಟಗಳನ್ನು ಅನುಭವಿಸುವ ದೇಹವೆಂಬ ಧನವೇ ಆಗಿದೆ. ಅಂತಹ ಧನವನ್ನು ನಾನು ಆ ಬ್ರಾಹ್ಮಣನ ಬಳಿ ಇಂತಹ ದೇಹವೆಂಬ ಧನವನ್ನು ಕೊಡು ಎಂದು ಕೇಳಿದಾಗ, ಅವನೂ ದೇಹವೆಂಬ ಧನವನ್ನೇ ಕೊಟ್ಟು ಅವನು ಮುಕ್ತಿಯನ್ನು ಹೊಂದಿದ್ದಾನೆ. ಇದನ್ನೇ ಪೈತೃಕಧನ ಎಂದು ನಾನು ಹೇಳಿದೆ. ಇಂತಹ ಧನವನ್ನು ನೀನು ಬಯಸುವಿಯಾದರೆ ನಿನಗೆ ಧನವನ್ನು ಕೊಡಲು ಸಿದ್ಧನಿದ್ದೇನೆ.
ಸಾ ಚ ತ್ಯಕ್ತತ್ವರ್ಥಸಂಕಲ್ಪಂ ಜಗಾಮ ಪರಮಾಂ ಗತಿಮ್ ॥ 19 ॥
ತನ್ನ ಮಗನಾದ ನಿಬಂಧನನ ಈ ವಾಕ್ಯವನ್ನು ಕೇಳಿಸಿಕೊಂಡ ಭೋಗವತಿಯು ತನಗಿರುವ ಅರ್ಥದ ವಿಷಯದ ಆತುರವನ್ನು ನೀಗಿಸಿಕೊಂಡು ಕೊನೆಗೆ ಉತ್ತಮವಾದ ಗತಿಯನ್ನು ಹೊಂದಿದಳು.
ಏವಂ ಸಂಸಾರಚಕ್ರಸ್ಯ ಸ್ವರೂಪಜ್ಞಾ ನೃಪೋತ್ತಮ |
ಪರಂ ವೈರಾಗ್ಯಮಾಗಮ್ಯ ಗಚ್ಛಂತಿ ಪರಮಂ ಪದಮ್ ॥ 20 ॥
ಯುಧಿಷ್ಠಿರನೇ, ಈ ವಿಧವಾದ ಸಂಸಾರಚಕ್ರದ ಸ್ಥಿತಿಯನ್ನು ತಿಳಿದವನೇ ವೈರಾಗ್ಯವನ್ನು ಹೊಂದಿ ಪರಮಪದವನ್ನು ಹೊಂದಬಹುದು.
ಯುಧಿಷ್ಠಿರಃ
ಏವಂ ಸಂಸಾರಚಕ್ರಸ್ಯ ಸ್ವರೂಪಂ ವಿದಿತಂ ನ ಮೇ |
ಪೈತೃಕಂ ತು ಧನಂ ಪ್ರೋಕ್ತಂ ಕಿಂ ತದ್ ವಿದ್ವನ್ಮಹಾತ್ಮನಾ ॥ 21 ॥
ಕಾಂತಾರಮಿತಿ ಕಿಂ ಪ್ರೋಕ್ತಂ ಕೋ ಹಸ್ತೀ ಸ ತು ಕೂಪಕಃ |
ಕಿಂಸಂಜ್ಞಕೋ ಮಹಾವೃಕ್ಷೋ ಮಧು ವಾಽಪಿ ಪಿತಾಮಹ ॥ 22 ॥
ಯುಧಿಷ್ಠಿರ ಇಲ್ಲಿಯತನಕ ನೀನು ಬಣ್ಣಿಸಿದ ಸಂಸಾರಚಕ್ರದ ಸ್ವರೂಪವು ನನಗೆ ಪೂರ್ಣವಾಗಿ ಅರ್ಥವಾಗಲಿಲ್ಲ. ನೀನು ಹೇಳಿದ ತಂದೆಯ ಆಸ್ತಿ ಎಂಬುದೇನು? ಅದನ್ನು ಅರಣ್ಯರೂಪವಾಗಿ ಮಹರ್ಷಿಯು ಏಕೆ ವರ್ಣಿಸಿದನು? ಆ ಅರಣ್ಯದಲ್ಲಿ ಹೇಳಿದ ಆನೆ ಮೊದಲಾದ ಪ್ರಾಣಿಗಳು ಯಾವುವು? ಬಾವಿಯ ದಡದಲ್ಲಿದ್ದ ಮರ ಎಂಬುದ್ಯಾವುದು? ಅಲ್ಲಿರುವ ಮಧು ಎಂದರೇನು?
ಏತಂ ಮೇ ಸಂಶಯಂ ವಿದ್ಧಿ ಧನಶಬ್ದಂ ಕಿಮುಚ್ಯತೇ |
ಕಥಂ ಲಬ್ಧಂ ಧನಂ ತೇನ ತಥಾ ಚ ಕಿಮಿದಂ ತ್ವಿಹ ॥ 23 ॥
ಪಿತಾಮಹನೇ, ಈ ನನ್ನ ಸಂಶಯವನ್ನೆಲ್ಲ ನೀನು ಪರಿಹರಿಸಬೇಕು. ಧನ ಎಂಬ ಶಬ್ದವನ್ನು ಈ ದೇಹಕ್ಕೆ ಯಾಕೆ ಹೇಳುತ್ತಾರೆ? ಆ ದೇಹವೆಂಬ ಧನವನ್ನು ಬ್ರಾಹ್ಮಣನಿಂದ ಅವನು ಹೇಗೆ ಪಡೆದನು? ಆ ಧನವೇ ಈ ಶರೀರವಾಗುವುದು ಎಂದರೆ ಏನು?
ಭೀಷ್ಮಃ
ಉಪಾಖ್ಯಾನಮಿದಂ ಸರ್ವಂ ಮೋಕ್ಷವಿದ್ಭಿರುದಾಹೃತಮ್ |
ಸುಮತಿಂ ವಿಂದತೇ ಯೇನ ಬಂಧನಾಶಶ್ಚ ಭಾರತ ॥ 24 ॥
ಭೀಷ್ಮ ಭಾರತನೇ, ಮೋಕ್ಷಜ್ಞಾನಿಗಳೆಲ್ಲರೂ ಈ ಉಪಾಖ್ಯಾನವನ್ನೇ ಅಲ್ಲಲ್ಲಿ ಉದಾಹರಿಸುತ್ತಾರೆ. ಇದನ್ನು ಚೆನ್ನಾಗಿ ಅರಿತು ಬುದ್ಧಿವಂತನಾದವನು ಬಂಧ- ಮೋಕ್ಷಗಳನ್ನು, ಅದರ ಮರ್ಮವನ್ನು ತಿಳಿದುಕೊಳ್ಳಬಹುದು.
ಏತದುಕ್ತಂ ಹಿ ಕಾಂತಾರಂ ಮಹಾನ್ ಸಂಸಾರ ಏವ ಸಃ |
ಯೇ ತೇ ಪ್ರತಿಷ್ಠಿತಾ ವ್ಯಾಲಾ ವ್ಯಾಧಯಸ್ತೇ ಪ್ರಕೀರ್ತಿತಾಃ ॥ 25 ॥
ಈ ಕಥೆಯಲ್ಲಿ ಹೇಳಿದ ದೊಡ್ಡ ಕಾಡೆಂಬುದೇ ಸಂಸಾರಚಕ್ರವು. ಅದರಲ್ಲಿರುವ ಕ್ರೂರಸರ್ಪಗಳೆಂದರೆ ವ್ಯಾಧಿಗಳು.
ಯಾ ಸಾ ನಾರೀ ಮಹಾಘೋರಾ ವರ್ಣರೂಪವಿನಾಶಿನೀ |
ತಾಮಾಹುಶ್ಚ ಜರಾಂ ಪ್ರಾಜ್ಞಾಃ ಪರಿಷ್ವಕ್ತಂ ಯಯಾ ಜಗತ್ ॥ 26 ॥
ಅಲ್ಲಿ ರೂಪ, ಬಣ್ಣ, ಬಲವನ್ನು ಹಾಳು ಮಾಡುವ ಮಹಾಘೋರಳಾದ ಸ್ತ್ರೀಯೊಬ್ಬಳಿದ್ದಾಳೆ. ಅವಳಿಗೆ ಜರೆ ಎಂದು ಹೆಸರು. ಸಮಗ್ರ ಜಗತ್ತು ನಿಯಮೇನ ಇವಳನ್ನು ಆಲಿಂಗಿಸಿಕೊಳ್ಳುತ್ತದೆ.
ಯಸ್ತತ್ರ ಕೂಪೇ ವಸತೇ ಮಹಾಹಿಃ ಕಾಲ ಏವ ಸಃ |
ಯೋ ವೃಕ್ಷಃ ಸ ಚ ಮೃತ್ಯುರ್ಹಿ ಸ್ವಕೃತಂ ತಸ್ಯ ತತ್ಫಲಮ್ ॥ 27 ॥
ಆ ಕೂಪದಲ್ಲಿ ವಾಸ ಮಾಡುವ ದೊಡ್ಡ ಭುಸುಗುಟ್ಟುವ ಒಂದು ಹಾವಿದೆ. ಕಾಲಪುರುಷನನ್ನೇ ಹಾವು ಎಂದು ವರ್ಣಿಸಲಾಗಿದೆ. ಮೇಲೆ ಕಾಣುವ ಜಂಬೂವೃಕ್ಷ ಎಂದು ಏನು ಬಣ್ಣಿಸಿದ್ದಾರೋ ಆ ವೃಕ್ಷವೆಂಬುದೇ ಮೃತ್ಯುವೆನಿಸಿದೆ. ಆ ವೃಕ್ಷದಲ್ಲಿರುವ ಫಲವೆಂದರೆ ತಾನು ಮಾಡಿದ ಪುಣ್ಯ-ಪಾಪ ಕರ್ಮಫಲಗಳು.

ಯೇ ತು ಕೃಷ್ಣಾಃ ಸಿತಾ ರಾಜನ್ಮೂಷಿಕಾ ರಾತ್ರ್ಯಹಾನಿ ವೈ ॥ 28 ॥
ಅದರಲ್ಲಿ ಕಪ್ಪು ಮತ್ತು ಬಿಳಿಯಾದ ಇಲಿಗಳಿವೆ ಎಂದು ಹೇಳಿರುತ್ತಾರೆ. ರಾತ್ರಿ ಮತ್ತು ಹಗಲುಗಳೇ ಆ ಇಲಿಗಳೆನಿಸಿವೆ.
ದ್ವಿಷಟ್‌ಪದಸಂಯುಕ್ತೋ ಯೋ ಹಸ್ತೀ ಷಣ್ಮುಖಾಕೃತಿಃ |
ಸ ಚ ಸಂವತ್ಸರಃ ಪ್ರೋಕ್ತಃ ಪಾದಾ ಮಾಸರ್ತವೋ ಮುಖಾಃ ॥ 29 ॥
ಹನ್ನೆರಡು ಕಾಲುಗಳಿಂದ ಕೂಡಿದ, ಆರು ಮುಖಗಳಿಂದ ಕೂಡಿದ ಒಂದು ಆನೆ ಇದೆ. ಆ ಆನೆಯಾದರೂ ಸಂವತ್ಸರವೆನಿಸಿದೆ. ಹನ್ನೆರಡು ಮಾಸಗಳೇ ಪಾದವೆನಿಸಿವೆ. ಆರು ಋತುಗಳೇ ಮುಖವೆನಿಸಿದೆ.
ಏತತ್ಸಂಸಾರಚಕ್ರಸ್ಯ ಸ್ವರೂಪಂ ವ್ಯಾಹೃತಂ ಮಯಾ |
ಏವಂ ಲಬ್ಧಧನಂ ರಾಜಂಸ್ತತ್ಸ್ವರೂಪಂ ವಿನಾಶಯ ॥ 30 ॥
ಆ ಸಂಸಾರಚಕ್ರಸ್ವರೂಪವೆಂಬುದೇನಿದೆಯೋ ಅದನ್ನು ನೀನು ತಿಳಿದಂತಾಯಿತು. ಇದರಂತೆಯೇ ಅಂತಹ ಪೈತೃಕಧನವನ್ನೂ, ಅದರ ಸ್ವರೂಪವನ್ನು ತಿಳಿದ ನೀನು ಇದರಲ್ಲಿ ವಿರಕ್ತಿಯಿಂದಿರಬೇಕು.
ಏತಜ್ಜ್ಞಾತ್ವಾ ತು ಸಾ ರಾಜನ್ ಪರಂ ವೈರಾಗ್ಯಮಾಸ್ಥಿತಾ |
ಯಥೋಕ್ತವಿಧಿನಾ ಭೂಯಃ ಪರಂ ಪದಮವಾಪ ಸಃ ॥ 31 ॥
ಈ ರೀತಿಯಾದ ನಿಬಂಧನನ ಸಂಸಾರ ಎಂಬ ವನದ ಉಪದೇಶವನ್ನು ಅರ್ಥ ಮಾಡಿಕೊಂಡ ಅವನ ತಾಯಿಯು ಉತ್ಕೃಷ್ಟವಾದ ವೈರಾಗ್ಯವನ್ನು ಹೊಂದಿದಳು. ಯಾವ ಕ್ರಮದಿಂದ ವೈರಾಗ್ಯದ ವಿಧಿಯನ್ನು ತಾಳಬೇಕೋ ಅಂತಹ ವೈರಾಗ್ಯವನ್ನು ತಾಳಿ ಮುಕ್ತಿಯನ್ನು ಹೊಂದಿದಳು. ಅವನೂ ಮುಕ್ತಿಯನ್ನು ಹೊಂದಿದನು.
ಧತ್ತೇ ಧಾರಯತೇ ಚೈವ ಏತಸ್ಮಾತ್ಕಾರಣಾದ್ಧನಮ್ |
ತದ್ ಗಚ್ಛ ಚಾಮೃತಂ ಶುದ್ಧಂ ಹಿರಣ್ಯಮಮೃತಂ ತಪಃ ॥ 32 ॥
ಕೆಳಗೆ ಬೀಳುವ ಈ ಶರೀರವನ್ನು ಧರಿಸಿದ್ದಾನೆ. ಜ್ಞಾನ-ಭಕ್ತ್ಯಾದಿ ಗುಣಗಳನ್ನು ಧರಿಸಿದ್ದಾನೆ. ಈ ಕಾರಣದಿಂದ ಈ ಶರೀರಕ್ಕೆ ಧನ ಎಂದು ಕರೆದಿದ್ದಾರೆ. ಇದನ್ನು ಅರ್ಥ ಮಾಡಿಕೊಂಡು ಅಶಾಶ್ವತವಾದ ಧನವನ್ನು ತೊರೆದು ಶುದ್ಧವೂ, ಶಾಶ್ವತವೂ ಆದ ತಪೋಧನವನ್ನು ಧರಿಸಿಕೊ.
ತತ್ಸ್ವರೂಪೋ ಮಹಾದೇವಃ ಕೃಷ್ಣೋ ದೇವಕಿನಂದನಃ |
ತಸ್ಯ ಪ್ರಸಾದಾದ್ದುಃಖಸ್ಯ ನಾಶಂ ಪ್ರಾಪ್ಸ್ಯಸಿ ಮಾನದ ॥ 33 ॥
ಆ ತಪಸ್ಸಿಗೆ ಫಲರೂಪನಾದವನು ದೇವಕೀ ಸುತನಾದ ಕೃಷ್ಣನೇ ಆಗಿದ್ದಾನೆ. ಅವನ ಅನುಗ್ರಹದಿಂದಲೇ ಎಲ್ಲ ವಿಧವಾದ ದುಃಖದಿಂದ ಬಿಡುಗಡೆಯು.
ಏಕಃ ಕರ್ತಾ ಸ ಕೃಷ್ಣಶ್ಚ ಜ್ಞಾನಿನಾಂ ಪರಮಾ ಗತಿಃ ॥ 34 ॥
ಆ ಕೃಷ್ಣಪರಮಾತ್ಮನು ಸಮಸ್ತ ಲೋಕಗಳಿಗೆ ಕರ್ತನಾಗಿದ್ದಾನೆ. ಎಲ್ಲಾ ಜ್ಞಾನಿಗಳಿಗೂ ಅವನೇ ಪರಮಗತಿ ಎನಿಸಿದ್ದಾನೆ.
ಇದಮಾಶ್ರಿತ್ಯ ದೇವೇಂದ್ರೋ ದೇವಾ ರುದ್ರಾಸ್ತಥಾಽಶ್ವಿನೌ |
ಸ್ವೇ ಸ್ವೇ ಪದೇ ವಿವಿಶಿರೇ ಮುಕ್ತಿಮುಕ್ತಿವಿದೋ ಜನಾಃ ॥ 35 ॥
ಕೃಷ್ಣನೆಂಬ ಈ ಧನವನ್ನು ಆಶ್ರಯಿಸಿಯೇ ಇಂದ್ರ-ರುದ್ರಾದಿಗಳೆಲ್ಲರೂ ತಮ್ಮ ತಮ್ಮ ಉತ್ತಮ ಸ್ಥಾನಗಳಲ್ಲಿ ಬೆಳಗುತ್ತಿದ್ದಾರೆ. ಅವನ ಆಶ್ರಯದಿಂದಲೇ ಸಮಸ್ತರಿಗೂ ಭೋಗ-ಮೋಕ್ಷಗಳು.
ಭೂತಾನಾಮಂತರಾತ್ಮಾಽಸೌ ಸ ನಿತ್ಯಪದಸಂವೃತಃ |
ಶ್ರೂಯತಾಮಸ್ಯ ಸದ್ಭಾವಃ ಸಮ್ಯಗ್ ಜ್ಞಾನಂ ಯಥಾ ತವ ॥ 36 ॥
ಸಮಸ್ತ ಜೀವರಿಗೂ ಇವನೇ ಅಂತರಾತ್ಮ. ಎಲ್ಲಕ್ಕಿಂತಲೂ ಮಿಗಿಲಾದ, ಉತ್ತಮವಾದ, ಶಾಶ್ವತವಾದ ಸ್ಥಾನದಲ್ಲಿರುವವನೂ ಇವನೇ. ಭಗವಂತನ ಮಹಿಮೆಯನ್ನು, ಅದಕ್ಕೆ ಯೋಗ್ಯವಾದ ತತ್ತ್ವಜ್ಞಾನದ ಇನ್ನೊಂದು ವಿಷಯವನ್ನು ತಿಳಿಸುತ್ತೇನೆ, ಕೇಳು.
ಭವೇದೇತನ್ನಿಬೋಧ ತ್ವಂ ನಾರದಾಯ ಪುರಾ ಹರಿಃ |
ದರ್ಶಯಿತ್ವಾಽಽತ್ಮನೋ ರೂಪಂ ಯದವೋಚತ್ ಸ್ವಯಂ ಪ್ರಭುಃ ॥
ಹಿಂದೆ ನಾರದರಿಗೆ ಶ್ರೀಹರಿಯು ತನ್ನ ನಿಜರೂಪವನ್ನು ತೋರಿಸಿದನು. ಈ ವಿಚಾರವನ್ನು ಸ್ವಯಂ ಸಮರ್ಥನಾದ ಭಗವಂತನೇ ಹಿಂದೆ ಹೇಳಿದ್ದಾನೆ.
ಪುರಾ ದೇವಋಷಿಃ ಶ್ರೀಮಾನ್ನಾರದಃ ಪರಮಾರ್ಥವಾನ್ |
ಚಚಾರ ಪೃಥಿವೀಂ ಕೃತ್ಸ್ನಾಂ ತೀರ್ಥಾನ್ಯನುಚರನ್ ಪ್ರಭುಃ ॥ 38 ॥
ಹಿಮವತ್ಪಾದಮಾಶ್ರಿತ್ಯ ವಿಚಾರ್ಯ ಚ ಪುನಃಪುನಃ |
ಸ ದದರ್ಶ ಹ್ರದಂ ತತ್ರ ಪದ್ಮೋತ್ಪಲಸಮಾಕುಲಮ್ ॥ 39 ॥
ಹಿಂದೆ ದೇವರ್ಷಿಯಾದ ಮಂಗಳರೂಪಿಯಾದ ನಾರದನು ಲೋಕದಲ್ಲಿ ಪರಮಾರ್ಥವೇನೆಂಬುದನ್ನು ತಿಳಿಯುವ ಉದ್ದೇಶದಿಂದ ಭೂಮಂಡಲದಲ್ಲಿರುವ ತೀರ್ಥಗಳನ್ನೆಲ್ಲಾ ಸೇವಿಸುತ್ತಾ ಕೊನೆಗೆ ಹಿಮಾಲಯ ಪರ್ವತವನ್ನು ಸೇರಿ ಪುನಃ ಪುನಃ ಅಲ್ಲಿ ಭಗವತ್ಸ್ವರೂಪವನ್ನು ವಿಮರ್ಶಿಸುತ್ತಾ ಅಲ್ಲಿಯೇ ಸಂಚರಿಸುತ್ತಿರುವಾಗ ಅವನಿಗೆ ಅತ್ಯಂತ ರಮಣೀಯವಾದ ಒಂದು ಪದ್ಮಸರೋವರವು ಕಂಡಿತು.
ದದರ್ಶ ಕನ್ಯಾಂ ತತ್ತೀರೇ ಸರ್ವಾಭರಣಭೂಷಿತಾಮ್ |
ಶೋಭಮಾನಾಂ ಶ್ರಿಯಾ ರಾಜನ್ ಕ್ರೀಡಂತೀಮುತ್ಪಲೈಸ್ತಥಾ ॥ 40 ॥
ಆ ಸರೋವರದ ತೀರದಲ್ಲಿ ಸರ್ವಾಭರಣಭೂಷಿತೆಯಾದ ಯುವತಿಯೊಬ್ಬಳು ಕಾಣಿಸಿಕೊಂಡಳು. ಅತ್ಯಂತ ಸುಂದರಿಯಾದ ಆಕೆ ನೇದಿಲೆ ಹೂಗಳನ್ನು ಹಿಡಿದು ವಿನೋದದಿಂದ ಆಟವಾಡುತ್ತಿದ್ದಳು.

ಸಾ ಮಹಾತ್ಮಾನಮಾಲೋಕ್ಯ ನಾರದೇತ್ಯಾಹ ಭಾಮಿನೀ |
ತಸ್ಯಾಃ ಸಮೀಪಮಾಸಾದ್ಯ ತಸ್ಥೌ ವಿಸ್ಮಿತಮಾನಸಃ ॥ 41 ॥
ಆ ಸುಂದರಿಯು ಮಹಾತ್ಮನಾದ ನಾರದನನ್ನು ಕಂಡು ತನ್ನ ಕಲಕಂಠ ನಾದದಿಂದ ನಾರದ ಎಂದು ಹೆಸರನ್ನು ಹಿಡಿದು ಕರೆದಳು. ಇದರಿಂದ ಆಶ್ಚರ್ಯಚಕಿತನಾದ ನಾರದನು ಅವಳ ಸಮೀಪಕ್ಕೆ ಆಗಮಿಸಿ ನಿಂತನು.
ವೀಕ್ಷಮಾಣಂ ತಮಾಜ್ಞಾಯ ಸಾ ಕನ್ಯಾ ಚಾರುವಾಸಿನೀ |
ವಿಜಜೃಂಭೇ ಮಹಾಭಾಗ ಸ್ಮಯಮಾನಾ ಪುನಃಪುನಃ ॥ 42 ॥
ಆ ಸಮಯದಲ್ಲಿ ಯುವತಿಯು ನಾರದರಿಗೆ ಆಶ್ಚರ್ಯವಾಗುವಂತೆ ದೊಡ್ಡದಾಗಿ ಬಾಯ್ತೆರೆದು ಆಕಳಿಸಿದಳು. ಚಾರುವಾಸಿನಿಯಾದ ಆಕೆಯು ಪುನಃ ಪುನಃ ಹೀಗೆಯೇ ಆಕಳಿಸಿದಳು.
ತಸ್ಮಾತ್ ಸಮಭವದ್ ವಕ್ತ್ರಾತ್ ಪುರುಷಾಕೃತಿಸಂಯುತಃ |
ರತ್ನಬಿಂದುಚಿತಾಂಗಸ್ತು ಸರ್ವಾಭರಣಸಂಯುತಃ ॥ 43 ॥
ಆದಿತ್ಯಸದೃಶಾಕಾರಃ ಶಿರಸಾ ಧಾರಯನ್ ಮಣಿಮ್ |
ಪುನರೇವ ತದಾಕಾರಃ ಸದೃಶಃ ಸಮಜಾಯತ ॥ 44 ॥
ತೃತೀಯಸ್ತು ಮಹಾರಾಜ ವಿವಿಧಾಭರಣೈರ್ಯುತಃ |
ಪ್ರದಕ್ಷಿಣಂ ತು ತಾಂ ಕೃತ್ವಾ ವಿವಿಧಧ್ವನಯಸ್ತು ತಾಮ್ ॥ 45 ॥
ಆ ಸಮಯದಲ್ಲಿ ಅವಳ ಮುಖದಿಂದ ಒಂದು ಪುರುಷಾಕೃತಿಯು ಹೊರಟು ಬಂದಿತು. ಆ ಪುರುಷನಿಗೋ ಸೂರ್ಯಸಮಾನವಾದ ತೇಜಸ್ಸಿತ್ತು. ಅಲ್ಲಲ್ಲಿ ರತ್ನಗಳನ್ನು ಕೆತ್ತಿದಂತೆ ರತ್ನದಿಂದ ವ್ಯಾಪ್ತವಾದ ದೇಹವು, ಆ ದೇಹದಲ್ಲಿ ವಿವಿಧ ಆಭರಣಗಳು. ಇಂತಹ ಆಭರಣದಿಂದ ಪ್ರಕಾಶಮಾನವಾದ ಮಣಿಯು ತಲೆಯಲ್ಲಿಯೂ ಕಾಣಿಸುತ್ತಿತ್ತು. ದೇಹದ ಕಾಂತಿ, ಆಭರಣದ ಕಾಂತಿ, ಶಿರೋಮಣಿಯ ಕಾಂತಿ ಸಮಾನವಾಗಿತ್ತು. ಇಂತಹ ಪುರುಷನು ಆವಿರ್ಭವಿಸಿದನು. ಮುಂದಿನ ಕ್ಷಣದಲ್ಲಿ ಅದೇ ಆಕಾರವುಳ್ಳ ಮತ್ತೊಬ್ಬ ಪುರುಷನು ಹೊರಕ್ಕೆ ಬಂದನು. ಅದರಂತೆ ಇನ್ನೊಬ್ಬನೂ ಬಂದನು. ಅವನೂ ವಿವಿಧವಾದ ಆಭರಣಗಳಿಂದ ಕೂಡಿದ್ದನು. ಅವಳ ಬಾಯಿಂದ ಆವರಿಸಿದ ಮೂರು ದಿವ್ಯಾಕೃತಿಗಳು ವಿವಿಧ ಧ್ವನಿಗಳೊಡನೆ ಆ ತರುಣಿಗೆ ಪ್ರದಕ್ಷಿಣೆ ಮಾಡಿದವು.
ತತಃ ಸರ್ವೇಣ ವಿಪ್ರರ್ಷಿಃ ಕನ್ಯಾಂ ಪಪ್ರಚ್ಛ ತಾಂ ಶುಭಾಮ್ ॥ 46 ॥
ಇದನ್ನೆಲ್ಲಾ ನೋಡಿದ ನಾರದರು ಆಶ್ಚರ್ಯಚಕಿತರಾಗಿ ಆ ತರುಣಿಯನ್ನು ಕುರಿತು ಎಲ್ಲಾ ಪ್ರಕಾರದಿಂದಲೂ ನೀನು ಯಾರೆಂದು ಪುನಃ ಪುನಃ ಕೇಳಿದರು.
ಕಾ ತ್ವಂ ಪರಮಕಲ್ಯಾಣಿ ಪದ್ಮೇಂದುಸದೃಶಾನನೇ |
ನ ಜಾನೇ ತ್ವಾಂ ಮಹಾದೇವಿ ಬ್ರೂಹಿ ಸತ್ಯಮನಿಂದಿತೇ ॥ 47 ॥
ಪರಮಕಲ್ಯಾಣಿಯೇ, ನೀನು ಯಾರೆಂದು ನನಗೆ ತಿಳಿಯಲಿಲ್ಲ. ನನಗೆ ವಾಸ್ತವದಲ್ಲಿ ತಿಳಿಸಬೇಕು. ಪದ್ಮೇಂದುಸದೃಶವಾದ ಮುಖವುಳ್ಳವಳೇ, ಮಹಾದೇವಿಯೇ, ಅನಿಂದಿತಳೇ, ನೀನು ಯಾರೆಂದು ಸತ್ಯವಾಗಿ ನನಗೆ ಹೇಳು.
ಕನ್ಯಾ
ಸಾವಿತ್ರೀ ನಾಮ ವಿಪ್ರರ್ಷೇ ಶೃಣು ಭದ್ರಂ ತವಾಸ್ತು ವೈ |
ಕಿಂ ಕರಿಷ್ಯಾಮಿ ತದ್ ಬ್ರೂಹಿ ತವ ಯಚ್ಚೇತಸಿ ಸ್ಥಿತಮ್ ॥ 48 ॥
ಕನ್ಯೆ ವಿಪ್ರರ್ಷಿಯೇ, ನಾನು ಸಾವಿತ್ರಿ. ನಿನಗೆ ಶುಭವಾಗಲಿ. ನಿನ್ನ ಅಪೇಕ್ಷೆಗಳೇನಿದ್ದರೂ ತಿಳಿಸು. ನಾನು ನಿನ್ನ ಮನಸ್ಸಿನಲ್ಲಿರುವ ಆ ಅಪೇಕ್ಷೆಯನ್ನು ಈಡೇರಿಸುತ್ತೇನೆ.
ನಾರದಃ
ಅಭಿವಾದಯೇ ತ್ವಾಂ ಸಾವಿತ್ರಿ ಕೃತಾರ್ಥೋಽಹಮನಿಂದಿತೇ |
ಏತಂ ಮೇ ಸಂಶಯಂ ದೇವಿ ವಕ್ತುಮರ್ಹಸಿ ಶೋಭನೇ ॥ 49 ॥
ನಾರದರು ಅನಿಂದಿತಳಾದ ಸಾವಿತ್ರಿಯೇ, ನಿನ್ನ ದರ್ಶನದಿಂದ ಕೃತಾರ್ಥನಾದ ನಾನು ನಿನಗೆ ನಮಸ್ಕರಿಸುತ್ತೇನೆ. ನನಗೊಂದು ಸಂಶಯವಿದೆ. ದೇವಿಯೇ, ಶೋಭನೆಯೇ, ಅದಕ್ಕೆ ಉತ್ತರಿಸಲು ನೀನು ಅರ್ಹಳಾಗಿರುತ್ತಿ.
ಯಸ್ತು ವೈ ಪ್ರಥಮೋತ್ಪನ್ನಃ ಕೋಽಸೌ ಸ ಪುರುಷಾಕೃತಿಃ |
ಬಿಂದವಸ್ತು ಮಹಾದೇವಿ ಮೂರ್ಧ್ನಿ ಜ್ಯೋತಿರ್ಮಯಾಕೃತಿಃ ॥ 50 ॥
ನಿನ್ನ ದೇಹದಿಂದ ಮೊದಲು ಉತ್ಪತ್ತಿಯು ಪಡೆದ ಆ ಪುರುಷಾಕೃತಿಯ ವ್ಯಕ್ತಿಯು ಯಾರು? ಅವನ ತಲೆಯಲ್ಲಿದ್ದ ಅನೇಕ ಮುತ್ತುಗಳು, ಮಣಿಗಳು, ಜ್ಯೋತಿರ್ಮಯವಾದ ಆಕೃತಿಗಳು ಯಾವುವು? ನನಗೆ ತಿಳಿಸು.
ಕನ್ಯಾ
ಅಗ್ರಜಃ ಪ್ರಥಮೋತ್ಪನ್ನೋ ಯಜುರ್ವೇದಸ್ತಥಾಽಪರಃ |
ತೃತೀಯಃ ಸಾಮವೇದಸ್ತು ಸಂಶಯೋ ವ್ಯೇತು ತೇ ಮುನೇ ॥ 51 ॥
ಕನ್ಯಾ ಮೊದಲನೆಯ ಪುರುಷಾಕೃತಿಯೇ ಋಗ್ವೇದವು. ಎರಡನೆಯ ಪುರುಷಾಕೃತಿಯು ಯಜುರ್ವೇದವು. ಮೂರನೆಯ ಪುರುಷಾಕೃತಿಯು ಸಾಮವೇದವು. ನಿನ್ನ ಸಂಶಯವನ್ನು ನಿಜಾರ್ಥವನ್ನು ತಿಳಿಯುವ ಮೂಲಕ ಪರಿಹರಿಸಿಕೊ.
ವೇದಾಶ್ಚ ಬಿಂದುಸಂಯುಕ್ತಾ ಯಜ್ಞಸ್ಯ ಫಲಸಂಶ್ರಿತಾಃ |
ತತ್ತದ್ ದೃಷ್ಟಂ ಮಹಜ್ಜ್ಯೋತಿರ್ಜ್ಯೋತಿರಿತ್ಯುಚ್ಯತೇ ಬುಧೈಃ ॥ 52 ॥
ಬಿಂದುವಿನಿಂದ ಕೂಡಿದ ವೇದಗಳು ಎಂದರೆ (ಬಿಂದುಗಳು ಎಂದರೆ) ಇಲ್ಲಿ ಪ್ರಣವ ಎಂದರ್ಥ. ಆ ವೇದಗಳ ಶಿರಸ್ಸಿನಲ್ಲಿರುವ ವೇದೋಪನಿಷತ್ ಸ್ಥಾನೀಯವಾದ ಯಾವ ಜ್ಯೋತಿಯನ್ನು ನೀನು ನೋಡಿದೆಯೋ ಅದನ್ನು ಪರಂಜ್ಯೋತಿ ಅರ್ಥಾತ್

ಪರಮಾತ್ಮನೆಂದು ಜ್ಞಾನಿಗಳು ಹೇಳುತ್ತಾರೆ.
ಋಷೇಮಯಚಾಽಪೀತ್ಯುಕತ್ವ ಚಾಂತರಧೀಯತ |
ತತಃ ಸ ವಿಸ್ಮಯಾವಿಷ್ಟೋ ನಾರದಃ ಪುರುಷರ್ಷಭ ॥ 53 ॥
ಋಷಿಯೇ, ಆ ಜ್ಯೋತಿಯೇ ನಮಗೆಲ್ಲರಿಗೂ ಜ್ಞೇಯವಾದ, ಉತ್ತಮವಾದ ವಸ್ತುವೆಂದು ತಿಳಿ. ಆ ಜ್ಯೋತಿಯ ಬಗ್ಗೆ ಪೂರ್ಣವಾಗಿ ಹೇಳಲು ನನ್ನಿಂದಲೂ ಸಾಧ್ಯವಿಲ್ಲ ಎಂದು ಹೇಳುತ್ತಾ ಆ ಕನ್ಯೆಯು ಅಂತರ್ಧಾನವನ್ನು ಹೊಂದಿದಳು. ಅದೆಲ್ಲವನ್ನೂ ಕಂಡ ನಾರದನು ವಿಸ್ಮಿತನಾಗಿ ಆ ಪರಂಜ್ಯೋತಿಯನ್ನೇ ಧ್ಯಾನಿಸುತ್ತಾ ತನ್ನನ್ನೇ ತಾನು ಮರೆತುಬಿಟ್ಟನು. ಹೀಗೆ ಬಹಳ ಹೊತ್ತಿನ ತನಕ ಆ ಪರಂಜ್ಯೋತಿಯಲ್ಲೇ ಅವನ ಮನಸ್ಸು ನೆಲೆಸಿತ್ತು.
ತತಃ ಸ್ನಾತ್ವಾ ಮಹಾತೇಜಾ ವಾಗ್ಯತೋ ನಿಯತೇಂದ್ರಿಯಃ |
ತುಷ್ಟಾವ ಪುರುಷವ್ಯಾಘ್ರೋ ಜಿಜ್ಞಾಸುಶ್ಚ ತದದ್ಭುತಮ್ ॥ 54 ॥
ಕ್ರಮವಾಗಿ ಎಚ್ಚೆತ್ತುಕೊಂಡ ನಾರದ ಮಹರ್ಷಿಯು ಆ ಸರೋವರದಲ್ಲಿ ಸ್ನಾನವನ್ನು ಮಾಡಿ ಬಂದು ನಿಯಮನಿಷ್ಠನಾಗಿ ಆ ದಿವ್ಯರೂಪದ ನಿಜಸ್ಥಿತಿಯನ್ನು ತಿಳಿಯಬೇಕೆಂದು ಸ್ತುತಿಸತೊಡಗಿದನು. ಆ ಅದ್ಭುತವಾದ ರೂಪದ ಜಿಜ್ಞಾಸೆಯಿಂದ ಅನೇಕ ಸ್ತುತಿ ಮಾತುಗಳಿಂದ ಆ ಭಗವಂತನನ್ನು ಸಂತೋಷಗೊಳಿಸಿದನು.
ತತೋ ವರ್ಷಶತೇ ಪೂರ್ಣೇ ಭಗವಾಂಲ್ಲೋಕಭಾವನಃ |
ಪ್ರಾದುಶ್ಚಕಾರ ವಿಶ್ವಾತ್ಮಾ ಋಷೇಃ ಪರಮಸೌಹೃದಾತ್ ॥ 55 ॥
ಹೀಗೆ ನೂರು ವರ್ಷಗಳು ಪೂರ್ಣವಾಗಲು ಲೋಕಕರ್ತನೂ, ವಿಶ್ವಾತ್ಮಕನೂ ಆದ ನಾರಾಯಣನು ನಾರದನ ಭಕ್ತಿಗೆ ಮೆಚ್ಚಿ ಅತ್ಯಂತ ಪ್ರೀತಿಯಿಂದಲೇ ಪ್ರಾದುರ್ಭೂತನಾದನು.
ತಮಾಗತಂ ಜಗನ್ನಾಥಂ ಸರ್ವಕಾರಣಕಾರಣಮ್ |
ಅಖಿಲಾಮರಮೌಲ್ಯಂಗರುಕ್ಕಾರುಣಪದದ್ವಯಮ್ ॥ 56 ॥
ವೈನತೇಯಪದಸ್ಪರ್ಶಕಿಣಶೋಭಿತಜಾನುಕಮ್ |
ಪೀತಾಂಬರಲಸತ್ಕಾಂಚೀದಾಮಬದ್ಧಕಟೀತಟಮ್ ॥ 57 ॥
ಶ್ರೀವತ್ಸವಕ್ಷಸಂ ಚಾರುಮಣಿಕೌಸ್ತುಭಕಂಧರಮ್ |
ಮಂದಸ್ಮಿತಮುಖಾಂಭೋಜಂ ಚಲದಾಯತಲೋಚನಮ್ ॥ 58 ॥
ಸಮಸ್ತ ಕಾರಣಗಳಿಗೂ ಆದಿಕಾರಣನಾದ, ಸಮಸ್ತ ದೇವತೆಗಳ ತಲೆಯ ಮೇಲಿರುವ ಕಿರೀಟದ ಮಣಿಗಳಿಂದ ಕೆಂಪಾದ ಪಾದಕಮಲಗಳುಳ್ಳ ಜಗನ್ನಾಥನಾದ ಆಗಮಿಸಿದ ಪರಮಾತ್ಮನನನ್ನು ಕಂಡನು. ಆ ಪರಮಾತ್ಮನಾದರೂ ಗರುಡನು ಶ್ರೀಹರಿಯ ಪಾದವನ್ನು ಸ್ಪರ್ಶ ಮಾಡಿದಾಗ ಆ ಪಾದದಲ್ಲಿ ಉತ್ಪನ್ನವಾಗುವ ಯಾವ ಪಾದಾರವಿಂದದ ಧೂಳಿನ ಕಣಗಳಿದ್ದವೋ ಆ ಕಣಗಳು ಗರುಡನು ರೆಕ್ಕೆಯನ್ನು ಬಡಿಯುವಾಗ ಮೇಲೆ ಧೂಳಿನಂತೆ ಹಾರಿ ಶ್ರೀಹರಿಯ ಜಾನುಮಂಡಲವೆಲ್ಲವೂ ಶೋಭಾಯಮಾನವಾಗಿ ಕಾಣಿಸುತ್ತಿತ್ತು. ಇಂತಹ ಶೋಭಿತವಾದ ಜಾನುಮಂಡಲದಿಂದ ಕೂಡಿದ ಪೀತಾಂಬರಧಾರಿಯಾದ, ಕಾಂಚೀದಾಮದಿಂದ ಕಟ್ಟಲ್ಪಟ್ಟ ಕಟಿತಟವುಳ್ಳ, ಶ್ರೀವತ್ಸಚಿಹ್ನೆಯಿಂದ ಅಲಂಕೃತನಾದ, ಕೌಸ್ತುಭಧಾರಿಯಾದ, ನೀಲಮೇಘಶ್ಯಾಮನಾದ ಶ್ರೀಹರಿಯು ಮಂದಹಾಸದಿಂದ ಕೂಡಿದ ಮುಖಕಮಲ ಉಳ್ಳವನಾಗಿದ್ದನು. ಚಂಚಲವಾದ ವಿಶಾಲವಾದ ಕಣ್ಣುಗಳಿಂದ ಮನೋಹರನಾಗಿದ್ದನು.
ನಮ್ರಚಾಪಾನುಕರಣನಮ್ರಭ್ರೂಯುಗಶೋಭಿತಮ್ |
ನಾನಾರತ್ನಮಣೀವಜ್ರಸ್ಫುರನ್ಮಕರಕುಂಡಲಮ್ ॥ 59 ॥
ಬಗ್ಗಿದ ಧನುಸ್ಸನ್ನು ಅನುಕರಿಸುವಂತೆ ಇರುವ ಬಾಗಿದ ಭ್ರೂಯುಗದಿಂದ (ಹುಬ್ಬು) ಶೋಭಿತನಾಗಿದ್ದನು. ಮಹಾಲಕುಮಿಯೇ ನಾನಾರತ್ನ ಮಣಿಗಳಿಂದ ಕೂಡಿದ ರತ್ನಮಾಲೆಯಾಗಿ ಭಗವಂತನ ವಕ್ಷಸ್ಸ್ಥಲದಲ್ಲಿ ಶೋಭಿಸುತ್ತಿದ್ದಳು. ವಜ್ರದಿಂದ ಹೊಳೆಯುವ ಮಕರ ಕುಂಡಲವನ್ನು ಧರಿಸಿದ್ದನು.
ಇಂದ್ರನೀಲನಿಭಾಭಂ ತಂ ಕೇಯೂರಮುಕುಟೋಜ್ಜ್ವಲಮ್ |
ದೇವೈರಿಂದ್ರಪುರೋಗೈಶ್ಚ ಋಷಿಸಂಘೈರಭಿಷ್ಟುತಮ್ ॥ 60 ॥
ಇಂದ್ರನೀಲ ಮಣಿಯ ಕಾಂತಿಗೆ ಸದೃಶವಾದ ಕಾಂತಿಯಿಂದ, ಕೇಯೂರಗಳಿಂದ ಅಲಂಕೃತವಾದ ಉಜ್ವಲವಾದ ಮುಕುಟಗಳಿಂದ ಶೋಭಿತನಾಗಿದ್ದನು. ಇಂದ್ರನೇ ಮೊದಲಾದ ದೇವತೆಗಳಿಂದ, ಋಷಿಸಂಘಗಳಿಂದ ಪೂಜಿಸಲ್ಪಡುತ್ತಿದ್ದನು.
ನಾರದೋ ಜಯಶಬ್ದೇನ ವವಂದೇ ಶಿರಸಾ ಹರಿಮ್ ॥ 61 ॥
ಇಂತಹ ಸರ್ವೋತ್ತಮನಾದ ಭಗವಂತನನ್ನು ಜಯಶಬ್ದದ ಮೂಲಕ ನಾರದನು ಶಿರಸಾ ವಂದಿಸಿದನು.
ತತಃ ಸ ಭಗವಾನ್ ಶ್ರೀಮಾನ್ ಮೇಘಗಂಭೀರಯಾ ಗಿರಾ |
ಪ್ರಾಹೇಶಃ ಸರ್ವಭೂತಾನಾಂ ನಾರದಂ ಪತಿತಂ ಕ್ಷಿತೌ ॥ 62 ॥
ಬಳಿಕ ಷಡ್ಗುಣೈಶ್ವರ್ಯ ಸಂಪನ್ನನಾದ, ಕಾಂತಿಯುಕ್ತನಾದ ಶ್ರೀಹರಿಯು ಮೇಘಗಂಭೀರವಾದ ಮಾತಿನಿಂದ ಭೂಮಿಯಲ್ಲಿ ಸಾಷ್ಟಾಂಗವೆರಗಿ ನಮಿಸುತ್ತಿರುವ ಸಮಸ್ತ ಪ್ರಾಣಿಗಳಿಗೂ ಹಿತಚಿಂತಕನಾದ ನಾರದನನ್ನು ಕುರಿತು ಈ ರೀತಿ ಹೇಳಿದನು.
ಭದ್ರಮಸ್ತು ಋಷೇ ತುಭ್ಯಂ ವರಂ ವರಯ ಸುವ್ರತ |
ಯತ್ತೇ ಮನಸಿ ಸುವ್ಯಕ್ತಮಸ್ತಿ ಚ ಪ್ರದದಾಮಿ ತತ್ ॥ 63 ॥
ನಾರದಮಹರ್ಷಿಯೇ, ನಿನಗೆ ಮಂಗಳವಾಗಲಿ. ಸದಾಚಾರಸಂಪನ್ನನೇ ನನ್ನ ಬಳಿ ವರವನ್ನು ಕೇಳಿಕೊ. ನಿನ್ನ ಮನಸ್ಸಿನಲ್ಲಿ ಕೇಳಬೇಕೆಂಬ ಬಯಕೆ ಏನಿದೆಯೋ ಅದನ್ನು ನಾನು ಕೊಡಲು ಬಯಸುತ್ತೇನೆ.
ಸ ಚೇಮಂ ಜಯಶಬ್ದೇನ ಪ್ರಸೀದೇತ್ಯಾತುರೋ ಮುನಿಃ |
ಪ್ರೋವಾಚ ಹೃದಿ ಸಂರೂಢಂ ಶಂಖಚಕ್ರಗದಾಧರಮ್ ॥ 64 ॥

ಈ ರೀತಿಯಾಗಿ ಭಗವಂತನು ನುಡಿಯಲು ಆತುರನಾದ ಮುನಿಯು ಜಯಶಬ್ದದಿಂದ ಭಗವಂತನನ್ನು ಪ್ರಸನ್ನನಾಗು ಎಂದು ಹೇಳುತ್ತಾ ಶಂಖ-ಚಕ್ರ- ಗದಾಧರನಾದ ಭಗವಂತನ ಬಳಿ ತನ್ನ ಹೃದಯದಲ್ಲಿರುವ ಬಯಕೆಯನ್ನು ಹೇಳಿಕೊಂಡನು.
ವಿವಕ್ಷಿತಂ ಜಗನ್ನಾಥ ಮಯಾ ಜ್ಞಾತಂ ತ್ವಯಾಽಚ್ಯುತ |
ತತ್ ಪ್ರಸೀದ ಹೃಷೀಕೇಶ ಶ್ರೋತುಮಿಚ್ಛಾಮಿ ತದ್ದರೇ ॥ 65 ॥
ಅಚ್ಯುತನೇ, ಜಗನ್ನಾಥನೇ, ನನ್ನ ಹೃದಯದಲ್ಲಿರುವ ಬಯಕೆ ಏನೆಂಬುದನ್ನು ಸರ್ವಜ್ಞನಾದ ನೀನು ತಿಳಿದಿರುವಿ. ಆ ವಿಷಯದಲ್ಲಿ ಹೃಷೀಕೇಶನೇ ನೀನು ಪ್ರಸನ್ನನಾಗು. ಆ ವಿಷಯವನ್ನು ತಿಳಿಯಬೇಕೆಂದು ನಾನು ಇಚ್ಛಿಸುತ್ತಿದ್ದೇನೆ.
ತತಃ ಸ್ಮಯನ್ ಮಹಾವಿಷ್ಣುರಭ್ಯಭಾಷತ ನಾರದಮ್ |
ಯದ್ ದೃಷ್ಟಂ ಮಮ ರೂಪಂ ತು ವೇದಾನಾಂ ಶಿರಸಿ ತ್ವಯಾ ॥
ನಿರ್ದ್ವಂದ್ವಾ ನಿರಹಂಕಾರಾಃ ಶುಚಯಃ ಶುದ್ಧಲೋಚನಾಃ |
ತಂ ಮಾಂ ಪಶ್ಯಂತಿ ಸತತಂ ತಾನ್ ಪೃಚ್ಛ ಯದಿಹೇಚ್ಛಸಿ ॥ 67 ॥
ಬಳಿಕ ಮಂದಹಾಸವನ್ನು ಬೀರುತ್ತಾ ನಾರದನನ್ನು ಕುರಿತು ವಿಷ್ಣುವು ಹೇಳಿದನು: ನಾರದರೇ, ವೇದಗಳ ಶಿರಸ್ಸಿನಲ್ಲಿ ನೀನು ನನ್ನ ಯಾವ ಪರಮಮಂಗಳವಾದ ರೂಪವನ್ನು ನೋಡಿದ್ದೀಯೋ, ಅಂತಹ ರೂಪವನ್ನು ದ್ವಂದ್ವಗಳನ್ನು ಮೀರಿ ನಿಂತ ನಿರಹಂಕಾರಿಯಾದ, ಶುದ್ಧಹೃದಯವುಳ್ಳ, ಕಾಮ-ಕ್ರೋಧಗಳಿಲ್ಲದ ಜ್ಞಾನಿಗಳು ಯಾವಾಗಲೂ ನೋಡುತ್ತಾರೆ. ನಿನಗೆ ಆ ನನ್ನ ರೂಪದ ಬಗ್ಗೆ ತಿಳಿಯಬೇಕೆಂಬ ಕುತೂಹಲವಿದ್ದಲ್ಲಿ ಅಂತಹ ಜ್ಞಾನಿಗಳ ಬಳಿ ಕೇಳು.
ಯೇ ಯೋಗಿನೋ ಮಹಾಪ್ರಾಜ್ಞಾ ಮದಂಶಾ ಯೇ ವ್ಯವಸ್ಥಿತಾಃ |
ತೇಷಾಂ ಪ್ರಸಾದಂ ದೇವರ್ಷೇ ಮತ್ಪ್ರಸಾದಮವೈಹಿ ತತ್ ॥ 68 ॥
ಮಹಾಪ್ರಾಜ್ಞರಾದ ಯಾವ ಯೋಗಿಗಳಿದ್ದಾರೋ ಅವರು ನನ್ನ ಸನ್ನಿಧಾನ ಪಾತ್ರರಾಗಿದ್ದಾರೆ. ಅವನ ಪ್ರಸನ್ನತೆಯನ್ನು ಪಡೆದ ನೀನು ನನ್ನ ಅನುಗ್ರಹದಿಂದ ಆ ವಿಚಾರವನ್ನು ತಿಳಿದುಕೊ.
ಭೀಷ್ಮಃ
ಇತ್ಯುಕತ್ವ ಸ ಜಗಾಮಾಥ ಭಗವಾನ್ ಭೂತಭಾವನಃ |
ತಸ್ಮಾದ್ ವ್ರಜ ಹೃಷೀಕೇಶಂ ಕೃಷ್ಣಂ ದೇವಕಿನಂದನಮ್ ॥ 69 ॥
ಭೀಷ್ಮ ಈ ರೀತಿಯಾಗಿ ಷಡ್ಗುಣೈಶ್ವರ್ಯಸಂಪನ್ನನಾದ, ಭೂತಭಾವನನಾದ ಭಗವಂತನು ನಾರದರನ್ನು ಕುರಿತು ಹೇಳಿ ಹೊರಟು ಹೋದನು. ಆದ್ದರಿಂದ ಯುಧಿಷ್ಠಿರನೇ, ದೇವಕೀನಂದನನಾದ, ಹೃಷೀಕೇಶನಾದ ಕೃಷ್ಣನನ್ನು ನೀನು ಜ್ಞಾನಕ್ಕಾಗಿ ಶರಣು ಹೊಂದು.
ಏತಮಾರಾಧ್ಯ ಗೋವಿಂದಂ ಗತಾ ಮುಕ್ತಿಂ ಮಹರ್ಷಯಃ |
ಏಷ ಕರ್ತಾ ವಿಕರ್ತಾ ಚ ಸರ್ವಕಾರಣಕಾರಣಮ್ ॥ 70 ॥
ಅನೇಕ ಮಹರ್ಷಿಗಳು ಈ ಗೋವಿಂದನನ್ನು ಆರಾಧಿಸಿ ಮುಕ್ತಿಗೆ ಹೋಗಿದ್ದಾರೆ. ಈ ಗೋವಿಂದನೇ ಸೃಷ್ಟಿಕರ್ತನಾಗಿದ್ದಾನೆ. ಲಯಕರ್ತನೂ ಆಗಿದ್ದಾನೆ. ಸಮಸ್ತ ಕಾರಣಗಳಿಗೆ ಕಾರಣನೂ ಆಗಿದ್ದಾನೆ.
ಮಯಾಽಪ್ಯೇತಚ್ಛ್ರುತಂ ರಾಜನ್ನಾರದಾತ್ತು ನಿಬೋಧ ತತ್ |
ಸ್ವಯಮೇವ ಸಮಾಚಷ್ಟ ನಾರದೋ ಭಗವಾನ್ ಮುನಿಃ ॥ 71 ॥
ಈ ತತ್ತ್ವವನ್ನು ನಾನು ನಾರದರಿಂದ ಹೇಗೆ ತಿಳಿದುಕೊಂಡಿದ್ದೇನೋ ಅದನ್ನು ನಿನಗೆ ತಿಳಿಸಿದ್ದೇನೆ. ಪೂಜ್ಯನಾದ ನಾರದಮುನಿಯು ತಾನಾಗಿಯೇ ಈ ವಿಚಾರಗಳನ್ನು ತಿಳಿಸಿರುತ್ತಾನೆ.
ಸಮಸ್ತಸಂಸಾರವಿಘಾತಕಾರಣಂ
ಭಜಂತಿ ಯೇ ವಿಷ್ಣುಮನನ್ಯಮಾನಸಾಃ |
ತೇ ಯಾಂತಿ ಸಾಯುಜ್ಯಮತೀವ ದುರ್ಲಭ-
ಮಿತೀವ ನಿತ್ಯಂ ಹೃದಿ ವರ್ಣಯಂತಿ ॥ 72 ॥
ಸಮಸ್ತ ಸಂಸಾರಜೀವರ ಸಂಸಾರದುಃಖದ ನಾಶಕ್ಕೆ ಕಾರಣನಾದ ವಿಷ್ಣುವನ್ನು ಅನನ್ಯ ಮನಸ್ಸಿನಿಂದ ಯಾರು ಭಜಿಸುತ್ತಾರೋ ಅವರು ಹೃದಯದಲ್ಲಿ ಅವನನ್ನು ಚಿಂತಿಸುತ್ತಾ ದುರ್ಲಭವಾದ ಸಾಯುಜ್ಯ ಮುಕ್ತಿಯನ್ನು ಹೊಂದುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ತ್ರಯಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತಮೂರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ನಾಲ್ಕನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ಭಗವಂತನ ಸೃಷ್ಟಿಯ ಪ್ರಕಾರವನ್ನೂ, ಭಗವಂತನ ಅವತಾರ ಕ್ರಮಗಳನ್ನೂ, ಶ್ರೀಕೃಷ್ಣನ ಸರ್ವೋತ್ತಮತ್ವವನ್ನೂ ನಿರೂಪಿಸಿದುದು.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಪುಂಡರೀಕಾಕ್ಷಮಚ್ಯುತಮ್ |
ಕರ್ತಾರಮಕೃತಂ ವಿಷ್ಣುಂ ಭೂತಾನಾಂ ಪ್ರಭವಾಪ್ಯಯಮ್ ॥ 1 ॥
ನಾರಾಯಣಂ ಹೃಷೀಕೇಶಂ ಗೋವಿಂದಮಪರಾಜಿತಮ್ |
ತತ್ತ್ವೇನ ಭರತಶ್ರೇಷ್ಠ ಶ್ರೋತುಮಿಚ್ಛಾಮಿ ಕೇಶವಮ್ ॥ 2 ॥
ಯುಧಿಷ್ಠಿರ ಪಿತಾಮಹನೇ, ಮಹಾಪ್ರಾಜ್ಞನೇ, ಅಚ್ಯುತನಾದ, ಪುಂಡರೀಕಾಕ್ಷನಾದ, ಜಗತ್ತಿನ ಸೃಷ್ಟಿಕರ್ತನಾದ, ಯಾವ ಕರ್ಮಗಳ

ಬಂಧನಕ್ಕೂ ಸಿಲುಕದ, ಜೀವರ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನಾದ ಕೇಶವನ, ನಾರಾಯಣನ, ಹೃಷೀಕೇಶನ ಅವತಾರಭೂತನಾದ, ಅಪರಾಜಿತನಾದ ಗೋವಿಂದನ ಮಹಿಮೆಯನ್ನು ಯಥಾರ್ಥವಾಗಿ ಕೇಳಲು ಬಯಸುತ್ತೇನೆ.
ಭೀಷ್ಮಃ
ಶ್ರುತೋಽಯಮರ್ಥೋ ರಾಮಸ್ಯ ಜಾಮದಗ್ನ್ಯಸ್ಯ ಜಲ್ಪತಃ |
ನಾರದಸ್ಯ ಚ ದೇವರ್ಷೇಃ ಕೃಷ್ಣದ್ವೈಪಾಯನಸ್ಯ ಚ ॥ 3 ॥
ಭೀಷ್ಮ ಈ ಗೋವಿಂದನ ಮಹಿಮೆಯನ್ನು ಜಮದಗ್ನಿಗಳ ಮಗನೆನಿಸಿದ ಪರಶುರಾಮರು ಹಿಂದೆ ಹೇಳಿದ್ದನ್ನು, ದೇವರ್ಷಿಗಳಾದ ನಾರದರು ಹಿಂದೆ ಹೇಳಿದ್ದನ್ನು ಮತ್ತು ವೇದವ್ಯಾಸರು ಹೇಳಿದ್ದನ್ನು ನಿನಗೆ ತಿಳಿಸುತ್ತೇನೆ.
ಅಸಿತೋ ದೇವಲಸ್ತಾತ ವಾಲ್ಮೀಕಿಶ್ಚ ಮಹಾತಪಾಃ |
ಮಾರ್ಕಂಡೇಯಶ್ಚ ಗೋವಿಂದೇ ಕಥಯತ್ಯದ್ಭುತಂ ಮಹತ್ ॥ 4 ॥
ಈ ಕೃಷ್ಣನ ಅದ್ಭುತವಾದ ಚರಿತ್ರೆಯನ್ನು ಅಸಿತರು, ದೇವಲರು, ಮಹಾತಪಸ್ವಿಗಳಾದ ವಾಲ್ಮೀಕಿಗಳು, ಮಾರ್ಕಂಡೇಯರು ಮಹತ್ತರವಾದ ಅದ್ಭುತವಾದ ಗೋವಿಂದನ ಮಹಿಮೆಯನ್ನು ಹೇಳಿದ್ದರು.
ಕೇಶವೋ ಭರತಶ್ರೇಷ್ಠ ಭಗವಾನೀಶ್ವರಃ ಪ್ರಭುಃ |
ಪುರುಷಃ ಸರ್ವಮಿತ್ಯೇವ ಶ್ರೂಯತೇ ಬಹುಧಾ ವಿಭುಃ ॥ 5 ॥
ಕಿಂ ತು ಯಾನಿ ವಿದುರ್ಲೋಕೇ ಬ್ರಾಹ್ಮಣಾಃ ಶಾರ್ಙ್ಗಧನ್ವನಃ |
ಮಾಹಾತ್ಮ್ಯಾನಿ ಮಹಾಬಾಹೋ ಶೃಣು ತಾನಿ ಯುಧಿಷ್ಠಿರ ॥ 6 ॥
ಯುಧಿಷ್ಠಿರನೇ, ಕೇಶವನ ಗುಣಗಳನ್ನು ವರ್ಣಿಸಲು ನನ್ನಿಂದ ಸಾಧ್ಯವಾಗುವುದಿಲ್ಲ. ಸರ್ವೋತ್ತಮವಾದ ಪದಾರ್ಥಗಳಿಗಿಂತ ಉತ್ತಮನಾದ ಹೃಷೀಕೇಶನಾದ ವಾಸುದೇವನ ಮಹಿಮೆಯು ಅಪಾರವಾದುದು. ಪುರುಷನೆನಿಸಿದ ಭಗವಂತನಲ್ಲಿಯೇ ಸಕಲ ಜಗತ್ತು ನೆಲೆಗೊಂಡಿದೆ ಎಂದು ಭಗವಂತನ ಮಹಿಮೆಯು ಶ್ರುತಿಗಳ ಮೂಲಕ ಅನೇಕ ರೀತಿಯಲ್ಲಿ ಕೇಳಲ್ಪಟ್ಟಿದೆ. ಇಂತಹ ಷಡ್ಗುಣೈಶ್ವರ್ಯಸಂಪನ್ನನಾದ ಕೇಶವನೇ ಜಗತ್ತಿಗೆ ಈಶ್ವರನಾಗಿದ್ದಾನೆ. ಶಾರ್ಙ್ಗಧನುರ್ಧಾರಿಯಾದ ಭಗವಂತನ ವಿಷಯದಲ್ಲಿ ಬ್ರಹ್ಮಜ್ಞಾನಿಗಳು ಲೋಕದಲ್ಲಿ ಏನು ತಿಳಿದುಕೊಂಡಿದ್ದಾರೋ ಮಹಾನುಭಾವನಾದ ಆ ಕೃಷ್ಣನ ಮಹಿಮೆಯನ್ನು ಮಹಾಬಾಹುವೇ ನನ್ನಿಂದ ಕೇಳಿಸಿಕೊ.
ಯಾನಿ ಚಾಹುರ್ಮನುಷ್ಯೇಂದ್ರ ಯೇ ಪುರಾಣವಿದೋ ಜನಾಃ |
ಅಶೇಷೇಣ ಹಿ ಗೋವಿಂದೇ ಕೀರ್ತಯಿಷ್ಯಾಮಿ ತಾನ್ಯಹಮ್ ॥ 7 ॥
ಭಗವಂತನ ವಿಷಯಕವಾಗಿ ವೇದಜ್ಞರು, ಪೌರಾಣಿಕರು ಏನು ತಿಳಿದು ಹೇಳುತ್ತಾರೋ ಅಂತಹ ಸಮಸ್ತ ಗೋವಿಂದನ ಮಹಿಮೆಗಳನ್ನು ನಾನು ಕೇಳಿಸಿಕೊಂಡಿದ್ದನ್ನು ನಿನಗೆ ಹೇಳುತ್ತೇನೆ.
ಮಹಾಭೂತಾನಿ ಭೂತಾತ್ಮಾ ಮಹಾತ್ಮಾ ಪುರುಷೋತ್ತಮಃ |
ವಾಯುರ್ಜ್ಯೋತಿಸ್ತಥಾ ಚಾಪಃ ಖಂ ಗಾಂ ಚೈವಾನ್ವಕಲ್ಪಯತ್ ॥ 8 ॥
ಆ ಗೋವಿಂದನು ಪುರುಷೋತ್ತಮನೆನಿಸಿದ್ದಾನೆ. ಮಹಾತ್ಮನಾದ, ಸಮಸ್ತ ಭೂತಾಂತರ್ಯಾಮಿಯಾದ ಭಗವಂತನು ಪಂಚಮಹಾಭೂತಗಳನ್ನೂ, ವಾಯು, ಅಗ್ನಿ, ಜಲ, ಆಕಾಶ, ಭೂಮಿ ಎಂಬವುಗಳನ್ನೂ ಸೃಷ್ಟಿಸಿದ್ದಾನೆ.
ಸ ದೃಷ್ಟ್ವಾ ಪೃಥಿವೀಂ ಚೈವ ಸರ್ವಭೂತೇಶ್ವರಃ ಪ್ರಭುಃ |
ಅಪ್ಸ್ವೇವ ಶಯನಂ ಚಕ್ರೇ ಮಹಾತ್ಮಾ ಪುರುಷೋತ್ತಮಃ ॥ 9 ॥
ಸರ್ವಭೂತೇಶ್ವರನಾದ ಮಹಾತ್ಮನಾದ, ಪುರುಷೋತ್ತಮನಾದ ಪ್ರಭುವು ಪೃಥಿವಿಯನ್ನು ಸೃಷ್ಟಿಸಿ ನೀರಿನ ಮೇಲೆಯೇ ತಾನು ಮಲಗಿದ್ದನು.
ಸರ್ವತೇಜೋಮಯಸ್ತಸ್ಮಿನ್ ಶಯಾನಃ ಶಯನೇ ಶುಭೇ |
ಸೋಽಗ್ರಜಂ ಸರ್ವಭೂತಾನಾಂ ಸಂಕರ್ಷಣಮಚಿಂತಯತ್ ॥ 10 ॥
ಸರ್ವತೇಜೋಮಯನಾದ ಭಗವಂತನು ಆ ನೀರಿನ ಮಧ್ಯದಲ್ಲಿ ಹಾಸಿಗೆಯನ್ನು ನಿರ್ಮಿಸಿಕೊಂಡು ಮಲಗಿದ್ದಾಗ ಸಮಸ್ತ ಭೂತಗಳಿಗೂ ಮೊದಲಿಗನಾದ ಸಂಕರ್ಷಣನನ್ನು ತನ್ನ ಮನಸ್ಸಿನಲ್ಲಿ ಧ್ಯಾನಿಸಿದನು.
ಆಶ್ರಯಂ ಸರ್ವಭೂತಾನಾಂ ಮನಸೇತಿ ವಿಶುಶ್ರುಮ |
ಸ ಧಾರಯತಿ ಭೂತಾತ್ಮಾ ಉಭೇ ಭೂತಭವಿಷ್ಯತೀ ॥ 11 ॥
ಆ ಸಂಕರ್ಷಣನೇ ಭವಿಷ್ಯತ್-ಭೂತಗಳಿಗೂ ಆಧಾರನೆನಿಸಿದ್ದಾನೆ.
ಪ್ರದ್ಯುಮ್ನಮಸೃಜತ್ ತಸ್ಮಾತ್ ಸರ್ವತೇಜಃಪ್ರಕಾಶಕಮ್ |
ಅನಿರುದ್ಧಸ್ತತೋ ಜಜ್ಞೇ ಸರ್ವಶಕ್ತಿರ್ಮಹಾದ್ಯುತಿಃ ॥ 12 ॥
ಆ ಭಗವಂತನು ಸಂಕರ್ಷಣನ ಮೂಲಕ ಪ್ರದ್ಯುಮ್ನನನ್ನು ಸೃಷ್ಟಿ ಮಾಡಿದನು. ಸಮಸ್ತ ಬೆಳಗುವ ಪದಾರ್ಥಗಳನ್ನು ಬೆಳಗುವ ಸಾಮರ್ಥ್ಯ ಪ್ರದ್ಯುಮ್ನನದ್ದು. ಅವನ ಮೂಲಕ ಸರ್ವಶಕ್ತಿಸಂಪನ್ನನಾದ ಅನಿರುದ್ಧನು ಸೃಷ್ಟಿಗೊಂಡನು. ಇವನು ಮಹಾಕಾಂತಿ ಸಂಪನ್ನನು.
ಅಪ್ಸು ವ್ಯೋಮಗತಃ ಶ್ರೀಮಾನ್ ಯೋಗನಿದ್ರಾಮುಪೇಯಿವಾನ್ |
ತಸ್ಮಾತ್ ಸಂಜಜ್ಞಿರೇ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ |
ಲಯಸ್ಥಿತ್ಯಂತಕರ್ಮಾಣಸ್ತ್ರಯಸ್ತೇ ಸುಮಹೌಜಸಃ ॥ 13 ॥
ನೀರಿನಲ್ಲಿ ಆಕಾಶದಲ್ಲಿರುವ ಕಾಂತಿಯುಕ್ತನಾದ ಭಗವಂತನು ಯೋಗನಿದ್ರೆಯನ್ನು ಕೈಗೊಂಡನು. ಅಂತಹ ಭಗವಂತನಿಂದ ಬ್ರಹ್ಮ-ವಿಷ್ಣು-ಮಹೇಶ್ವರರಾದ ದೇವತೆಗಳು ಉತ್ಪನ್ನರಾದರು. ಆ ಮೂವರು ಮಹಾತೇಜಸ್ವಿಗಳಾಗಿ ಲಯ-ಸ್ಥಿತಿ-ಉತ್ಪತ್ತಿ ಎಂಬ

ಕರ್ಮಗಳನ್ನು ಮಾಡುವವರಾಗಿದ್ದಾರೆ.
ವ್ಯಾಖ್ಯಾನ ವಿಶೇಷ ಬ್ರಹ್ಮನ ಸೃಷ್ಟಿ ರುದ್ರನ ಸೃಷ್ಟಿಗಳನ್ನು ಮುಂದೆ ಹೇಳುವುದರಿಂದ ಸೃಷ್ಟಿ ಮಾಡುವುದಕ್ಕೋಸ್ಕರ ಗುಣಪರಿಪೂರ್ಣನಾದ ಭಗವಂತನು ಬ್ರಹ್ಮ-ರುದ್ರರ ಸೃಷ್ಟಿಗಳ ಪೂರ್ವದಲ್ಲಿ ತಾನು ಬ್ರಹ್ಮನಾಮಕನಾಗಿ ಅವತಾರ ಮಾಡಿದನು. ಚತುರ್ಮುಖನೆಂಬ ಬ್ರಹ್ಮನ ಅಧಿಷ್ಠಾನದಲ್ಲಿ ಮುಂದೆ ಸೃಷ್ಟಿಯನ್ನು ಮಾಡುತ್ತಾನೆ. ಪಾಲನೆಯನ್ನು ಸ್ವತಃ ವಿಷ್ಣುನಾಮಕನಾದ ಭಗವಂತನೇ ಮಾಡುತ್ತಾನೆ. ಸಂಹಾರಕ್ಕಾಗಿ ರುದ್ರ ಎಂಬ ಹೆಸರಿನ ತನ್ನ ರೂಪವನ್ನೇ ಸೃಷ್ಟಿಸಿದನು. ಮುಂದೆ ಸಂಹಾರಕ್ಕೆ ಮಹರುದ್ರನನ್ನು ಅಧಿಷ್ಠಾನ ಮಾಡಿಕೊಳ್ಳುವ ರೂಪ ಈ ಭಗವಂತನ ರುದ್ರರೂಪವಾಗಿದೆ. ಹೀಗಾಗಿ ಬ್ರಹ್ಮನ ಅಂತರ್ಯಾಮಿಯಾದ ಬ್ರಹ್ಮ, ಸ್ವಯಂ ವಿಷ್ಣು, ರುದ್ರಾಂತರ್ಯಾಮಿಯಾದ ರುದ್ರ ಎಂಬ ಮೂರು ರೂಪಗಳು ಪದ್ಮನಾಭ ಮೂರ್ತಿಯಿಂದ ಹುಟ್ಟಿದವು. ಆದ್ದರಿಂದಲೇ ತಾತ್ಪರ್ಯನಿರ್ಣಯದಲ್ಲಿ `ಸ್ಥಿತ್ಯಾದಯೇ ಹರಿವಿರಂಚ ಹರೇತಿ ಸಂಜ್ಞಾಃ ದತ್ತೇ' ಸ್ಥಿತ್ಯಾದಿಗಳು ನಡೆಯಬೇಕೆಂದು ಭಗವಂತನು ಹರಿ-ವಿರಂಚ-ಹರ ಎಂಬ ಹೆಸರುಗಳನ್ನು ಹೊಂದಿದ್ದಾನೆ ಎಂದು ಹೇಳಿದ್ದಾರೆ. ಚತುರ್ಮುಖ ಬ್ರಹ್ಮನು ಸತಿಯಾದ ಸರಸ್ವತಿಯನ್ನು ಹೃದಯದಲ್ಲಿಟ್ಟುಕೊಂಡು ಅವಳಿಂದ ಪ್ರಚೋದಿತನಾಗಿ ಸೃಷ್ಟಿಯನ್ನು ಮಾಡಿದನು ಎಂಬ ಪ್ರಮಾಣಗಳು ಈ ವಿಷಯದಲ್ಲಿ ಆಧಾರವಾಗಿವೆ. `ಸೃಜಾಮಿತನ್ನಿಯುಕ್ತೋಹಂ ಹರೋ ಹರತಿ ತದ್ವಶಃ | ವಿಶ್ವಂ ಪುರುಷರೂಪೇಣ ಪರಿಪಾತಿತ್ರಿಶಕ್ತಿಧೃಕ್' ಚತುರ್ಮುಖ ಬ್ರಹ್ಮನು ಹೇಳುವ ಮಾತು- ಭಗವಂತನಿಂದ ನಿಯುಕ್ತನಾದ ನಾನು ಸೃಷ್ಟಿಯನ್ನು ಮಾಡುತ್ತೇನೆ. ಆ ಭಗವಂತನಿಗೆ ವಶನಾಗಿಯೇ ರುದ್ರನು ಸಂಹಾರ ಮಾಡುತ್ತಾನೆ. ಹೀಗೆ ಮೂರು ಶಕ್ತಿಗಳನ್ನು ಧರಿಸಿದ ಭಗವಂತನು ಜಗತ್ತನ್ನು ತಾನು ಪುರುಷರೂಪದಿಂದ ಪರಿಪಾಲಿಸುತ್ತಿದ್ದಾನೆ ಎಂಬುದು ಇನ್ನೊಂದು ಪ್ರಮಾಣ. ಇದರಂತೆ ಭಗವಂತನು ಅಮೃತಮಥನದ ಕಾಲದಲ್ಲಿ ಅಸುರರಲ್ಲಿ ಅಸುರರೂಪದಿಂದ ನಿಂತು ಅವರಲ್ಲಿ ಬಲ- ವೀರ್ಯಗಳನ್ನು ಪ್ರಚೋದಿಸಿದನು. ದೇವತೆಗಳ ಗುಂಪಿನಲ್ಲಿ ದೇವತೆಗಳ ಅಂತರ್ಯಾಮಿಯಾಗಿ ನಿಂತು ಅವರನ್ನೂ ಅಮೃತಮಥನದ ಕಾಲದಲ್ಲಿ ಪ್ರಚೋದಿಸಿದನು. ಮತ್ತೊಂದು ರೂಪದಿಂದ ವಾಸುಕಿಯಲ್ಲಿದ್ದು ಮಥನಕ್ಕೆ ಯೋಗ್ಯವಾಗುವಂತೆ ಪ್ರಚೋದಿಸಿದನು. ಮುಂತಾದ ವಚನಗಳು ಭಾಗವತದಲ್ಲಿವೆ.

ತತಸ್ತಸ್ಮಿನ್ ಮಹಾಬಾಹೋ ಪ್ರಾದುರ್ಭೂತೇ ಮಹಾತ್ಮನಿ |
ಭಾಸ್ಕರಪ್ರತಿಮಂ ದಿವ್ಯಂ ನಾಭ್ಯಾಂ ಪದ್ಮಮಜಾಯತ ॥ 14 ॥

ಬಳಿಕ ಮಹಾಬಾಹುವಾದ, ಮಹಾತ್ಮನಾದ ಭಗವಂತನು ಪ್ರಾದುರ್ಭವಿಸುತ್ತಿರಲು ಉದಿಸುವ ಸೂರ್ಯನಂತೆ ದಿವ್ಯವಾದ ಒಂದು ಕಮಲವು ಪದ್ಮನಾಭರೂಪಿಯಾದ ಭಗವಂತನ ನಾಭಿಯಿಂದ ಉತ್ಪನ್ನವಾಯಿತು.

ಸ ತತ್ರ ಭಗವಾನ್ ದೇವಃ ಪುಷ್ಕರೇ ಭಾಸಯನ್ ದಿಶಃ |
ಬ್ರಹ್ಮಾ ಸಮಭವತ್ತಾತ ಸರ್ವಭೂತಪಿತಾಮಹಃ ॥ 15 ॥

ಅಂತಹ ನಾಭಿಯಲ್ಲಿ ಅರಳಿದ ಕಮಲವನ್ನು ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು ಬೆಳಗುತ್ತಿರಲು ಆ ಕಮಲದಲ್ಲಿ ಸರ್ವಭೂತಗಳಿಗೂ ಪಿತಾಮಹನೆನಿಸಿದ ಚತುರ್ಮುಖ ಬ್ರಹ್ಮನು ಸೃಷ್ಟನಾದನು.

ತಸ್ಮಿನ್ನಪಿ ಮಹಾಬಾಹೋ ಪ್ರಾದುರ್ಭೂತೇ ಮಹಾತ್ಮನಿ |
ತಮಸಃ ಪೂರ್ವಜೋ ಜಜ್ಞೇ ಮಧುರ್ನಾಮ ಮಹಾಸುರಃ ॥ 16 ॥

ಮಹಾತ್ಮನಾದ ಚತುರ್ಮುಖಬ್ರಹ್ಮನು ಆ ನಾಭಿಕಮಲದಿಂದ ಪ್ರಾದುರ್ಭೂತನಾಗುತ್ತಿರಲು ತಮೋಗುಣದ ಸೃಷ್ಟಿಗಿಂತ ಮೊದಲೇ ಮಹಾಸುರನಾದ ಮಧುನಾಮಕನಾದ ದೈತ್ಯನು ಹುಟ್ಟಿದನು.

ತಮುಗ್ರಮುಗ್ರಕರ್ಮಾಣಮುಗ್ರಾಂ ಬುದ್ಧಿಂ ಸಮಾಸ್ಥಿತಮ್ |
ಬ್ರಹ್ಮಣೋಪಚಿತಿಂ ಕುರ್ವನ್ ಜಘಾನ ಪುರುಷೋತ್ತಮಃ ॥ 17 ॥

ಆ ಮಧುನಾಮಕ ದೈತ್ಯನು ಉಗ್ರನಾಗಿದ್ದನು. ಉಗ್ರವಾದ ಕರ್ಮವನ್ನು ಅನುಷ್ಠಾನ ಮಾಡುತ್ತಿದ್ದನು. ಕ್ರೂರವಾದ ಬುದ್ಧಿಯನ್ನು ಹೊಂದಿದ್ದನು. ಇಂತಹ ದೈತ್ಯನನ್ನು ಪುರುಷೋತ್ತಮನು ಚತುರ್ಮುಖ ಬ್ರಹ್ಮನಿಗೆ ಶ್ರೇಯಸ್ಸನ್ನುಂಟು ಮಾಡುವ ದೃಷ್ಟಿಯಿಂದ ಸಂಹರಿಸಿದನು.

ತಸ್ಯ ತಾತ ವಧಾತ್ ಸರ್ವೇ ದೇವದಾನವಮಾನವಾಃ |
ಮಧುಸೂದನಮಿತ್ಯಾಹುರ್ಋಷಭಂ ಸರ್ವಸಾತ್ವತಾಮ್ ॥ 18 ॥

ಆ ಮಧುನಾಮಕ ದೈತ್ಯನ ವಧೆಯಿಂದ ಸಮಸ್ತ ದೇವ-ದಾನವ-ಮಾನವರು ಸತ್ವವುಳ್ಳಂತಹ ವ್ಯಕ್ತಿಗಳಿಗೆಲ್ಲ ಶ್ರೇಷ್ಠನಾಗಿರುವ ಈ ಭಗವಂತನನ್ನು ಮಧುಸೂದನ ಎಂದೇ ಹೇಳುತ್ತಾರೆ.

ಬ್ರಹ್ಮಾ ತು ಸಸೃಜೇ ಪುತ್ರಾನ್ ಮಾನಸಾನ್ ದಕ್ಷಸಪ್ತಮಾನ್ |
ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಮ್ ॥ 19 ॥

ಬಳಿಕ ಚತುರ್ಮುಖ ಬ್ರಹ್ಮನು ಮರೀಚಿ ಮೊದಲಾದ ಕ್ರತುವಿನ ತನಕ ಏಳು ಮಂದಿ ಮಾನಸ ಪುತ್ರರನ್ನು ಸೃಷ್ಟಿಸಿದನು. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ವಸಿಷ್ಠ, ಕ್ರತುಗಳು ಬ್ರಹ್ಮನ ಮಾನಸ ಪುತ್ರರು.

ಮರೀಚಿಃ ಕಶ್ಯಪಂ ತಾತ ಪುತ್ರಂ ಚಾಸೃಜದಗ್ರಜಮ್ |
ಮಾನಸಂ ಜನಯಾಮಾಸ ತೈಜಸಂ ಬ್ರಹ್ಮಸತ್ತಮಮ್ ॥ 20 ॥

ಬಳಿಕ ಮರೀಚಿಯು ತನಗೆ ಮೊದಲನೆಯ ಮಗನನ್ನಾಗಿ ಕಶ್ಯಪನನ್ನು ಪಡೆದನು. ಈ ಕಶ್ಯಪನ ಸೃಷ್ಟಿಯು ಮನಸ್ಸಿನಿಂದಲೇ ಆಗಿದೆ. ತೇಜೋರೂಪನಾದ ಈತನು ಬ್ರಹ್ಮಜ್ಞಾನಿ ಎನಿಸಿದ್ದಾನೆ.

ಅಂಗುಷ್ಠಾದಸೃಜದ್ ಬ್ರಹ್ಮಾ ಮರೀಚೇರಪಿ ಪೂರ್ವಜಮ್ |
ಸೋಽಭವದ್ಭರತಶ್ರೇಷ್ಠ ದಕ್ಷೋ ನಾಮ ಪ್ರಜಾಪತಿಃ ॥ 21 ॥

ಬ್ರಹ್ಮನು ಮರೀಚಿಗೂ ಜ್ಯೇಷ್ಠನೆನಿಸಿದ ಒಬ್ಬನನ್ನು ತನ್ನ ಅಂಗುಷ್ಠದಿಂದ ಸೃಷ್ಟಿಸಿದನು. ಅವನೇ ದಕ್ಷನೆಂದು ಪ್ರಖ್ಯಾತಗೊಂಡ ಪ್ರಜಾಪತಿಯು.

ತಸ್ಯ ಪೂರ್ವಮಜಾಯಂತ ದಶ ತಿಸ್ರಶ್ಚ ಭಾರತ |
ಪ್ರಜಾಪತೇರ್ದುಹಿತರಸ್ತಾಸಾಂ ಜ್ಯೇಷ್ಠಾಭವದ್ದಿತಿಃ ॥ 22 ॥
ಆ ದಕ್ಷಪ್ರಜಾಪತಿಗೂ ಮೊದಲು ಹದಿಮೂರು ಮಂದಿ ಕನ್ಯೆಯರಾದರು. ಅವರಲ್ಲಿ ದಿತಿ ಎಂಬುವವಳು ಹಿರಿಯಳು.
ಸರ್ವಧರ್ಮವಿಶೇಷಜ್ಞಃ ಪುಣ್ಯಕೀರ್ತಿರ್ಮಹಾಯಶಾಃ |
ಮಾರೀಚಃ ಕಶ್ಯಪಸ್ತಾತ ಸರ್ವಾಸಾಮಭವತ್ ಪತಿಃ ॥ 23 ॥
ಸರ್ವಧರ್ಮವಿಶೇಷಜ್ಞನೂ, ಯಶಸ್ಸಂಪನ್ನನೂ, ಮರೀಚಿಪುತ್ರನೂ ಆದ ಕಶ್ಯಪನು ಆ ಕನ್ಯೆಯರೆಲ್ಲರಿಗೂ ಪತಿಯಾದನು.
ಉತ್ಪಾದ್ಯ ತು ಮಹಾಭಾಗಸ್ತಾಸಾಮವರಜಾ ದಶ |
ದದೌ ಧರ್ಮಾಯ ಧರ್ಮಜ್ಞೋ ದಕ್ಷ ಏವ ಪ್ರಜಾಪತಿಃ ॥ 24 ॥
ಬಳಿಕ ಆ ದಕ್ಷಪ್ರಜಾಪತಿ ಮತ್ತೂ ಹತ್ತು ಮಂದಿ ಕನ್ಯೆಯರನ್ನು ಪಡೆದು ಧರ್ಮದೇವನಿಗೆ ವಿವಾಹ ಮಾಡಿಕೊಟ್ಟನು.
ಧರ್ಮಸ್ಯ ವಸವಃ ಪುತ್ರಾ ರುದ್ರಾಶ್ಚಾಮಿತತೇಜಸಃ |
ವಿಶ್ವೇದೇವಾಶ್ಚ ಸಾಧ್ಯಾಶ್ಚ ಮರುತ್ವಂತಶ್ಚ ಭಾರತ ॥ 25 ॥
ಅಪರಾಸ್ತು ಯವೀಯಸ್ಯಸ್ತಾಭ್ಯೋಽನ್ಯಾಃ ಸಪ್ತವಿಂಶತಿಃ |
ಸೋಮಸ್ತಾಸಾಂ ಮಹಾಭಾಗಃ ಸರ್ವಾಸಾಮಭವತ್ ಪತಿಃ ॥ 26 ॥
ಆ ಧರ್ಮನಿಗೆ ವಸುಗಳು, ರುದ್ರರು, ವಿಶ್ವೇದೇವತೆಗಳು, ಸಾಧ್ಯರು, ಮರುತ್ವಂತರು ಪುತ್ರರಾದರು. ಬಳಿಕ ದಕ್ಷಪ್ರಜಾಪತಿಗೆ ಹತ್ತು ಮಂದಿ ಕನ್ಯೆಯರ ಬಳಿಕ ಪುನಃ ಇಪ್ಪತ್ತೇಳು ಮಂದಿ ಕನ್ಯೆಯರಾದರು. ಆ ಇಪ್ಪತ್ತೇಳು ಕನ್ಯೆಯರಿಗೂ ಚಂದ್ರನು ಪತಿಯಾದನು.
ಇತರಾಸ್ತು ವ್ಯಜಾಯಂತ ಗಂಧರ್ವಾಂಸ್ತುರಗಾನ್ ದ್ವಿಜಾನ್ |
ಗಾಶ್ಚ ಕಿಂಪುರುಷಾನ್ ಮತ್ಸ್ಯಾನೌದ್ಭಿದಾಂಶ್ಚ ವನಸ್ಪತೀನ್ ॥ 27
ಕಶ್ಯಪ ಪತ್ನಿಯರಲ್ಲಿ ಗಂಧರ್ವರು-ಕಿನ್ನರರು, ಕಿಂಪುರುಷರು, ಪಕ್ಷಿಗಳು, ಪಶುಗಳು, ಮತ್ಸ್ಯಗಳು, ಗಿಡ-ಮರ ಬಳ್ಳಿಗಳು ಮೊದಲಾದ ಸಸ್ಯವರ್ಗವೆಲ್ಲವೂ ಜನಿಸಿದವು.
ಆದಿತ್ಯಾನದಿತಿರ್ಜಜ್ಞೇ ದೇವಶ್ರೇಷ್ಠಾನ್ ಮಹಾಬಲಾನ್ |
ತೇಷಾಂ ವಿಷ್ಣುರ್ವಾಮನೋಽಭೂದ್ ಗೋವಿಂದಶ್ಚಾಭವತ್ ಪ್ರಭುಃ॥
ಅದಿತಿಯಲ್ಲಿ ಮಹಾಬಲಾಢ್ಯರೂ ದೇವಶ್ರೇಷ್ಠರೂ ಆದ ಆದಿತ್ಯರು ಹುಟ್ಟಿದರು. ವಾಮನರೂಪಿಯಾದ ವಿಷ್ಣುವು ಆ ಆದಿತ್ಯರೆಲ್ಲರಿಗೂ ಪ್ರಮುಖನಾದನು.
ತಸ್ಯ ವಿಕ್ರಮಣಾದೇವ ದೇವಾನಾಂ ಶ್ರೀರ್ವ್ಯವರ್ಧತ |
ದಾನವಾಶ್ಚ ಪರಾಭೂತಾ ದೈತೇಯೀ ಚಾಸುರೀ ಪ್ರಜಾ ॥ 29 ॥
ಈ ವಾಮನರೂಪಿಯಾದ ಭಗವಂತನ ಪರಾಕ್ರಮದಿಂದಲೇ ದೇವತೆಗಳ ಸಂಪತ್ತು ವೃದ್ಧಿಯನ್ನು ಪಡೆದು ದಾನವರೆಲ್ಲರೂ ಸೋತುಹೋದರು.
ವಿಪ್ರಚಿತ್ತಿಪ್ರಧಾನಾಂಶ್ಚ ದಾನವಾನಸೃಜದ್ ದನುಃ |
ದಿತಿಸ್ತು ಸರ್ವಾನಸುರಾನ್ ಮಹಾಸತ್ತ್ವಾನ್ ವ್ಯಜಾಯತ ॥ 30 ॥
ದನುವೆಂಬುವಳಲ್ಲಿ ವಿಪ್ರಚಿತ್ತಿ ಮೊದಲಾದ ದಾನವರು ಹುಟ್ಟಿದರು. ಅಸುರರನ್ನೆಲ್ಲ ಪಡೆದವಳು ದಿತಿದೇವಿ.
ಮಹಾಪರಾಕ್ರಮಶಾಲಿಯಾದ ಅಸುರರಿಗೆಲ್ಲಾ ದಿತಿಯೇ ತಾಯಿಯಾದಳು.
ತತಃ ಸಸರ್ಜ ಭಗವಾನ್ ಮೃತ್ಯುಂ ಲೋಕಭಯಂಕರಮ್ |
ಹರ್ತಾರಂ ಸರ್ವಭೂತಾನಾಂ ಸಸರ್ಜ ಚ ಜನಾರ್ದನಃ ॥ 31 ॥
ಹೀಗೆ ದೇವ-ದಾನವರ ಸೃಷ್ಟಿಗಳೆಲ್ಲ ನಡೆದ ಬಳಿಕ, ಲೋಕಭಯಂಕರನೂ, ಸಮಸ್ತಭೂತಗಳ ಪ್ರಾಣ ಅಪಹಾರಕನೂ ಆದ ಮೃತ್ಯುವನ್ನು ಸೃಷ್ಟಿಸಿದನು.
ಅಹೋರಾತ್ರಂ ಚ ಕಾಲಂ ಚ ಯಥರ್ತು ಮಧುಸೂದನಃ |
ಪೂರ್ವಾಹ್ಣಂ ಚಾಪರಾಹ್ಣಂ ಚ ಸರ್ವಮೇವಾನ್ವಕಲ್ಪಯತ್ ॥ 32 ॥
ಬಳಿಕ ಅಹೋರಾತ್ರಿಗಳನ್ನು, ಕಾಲವನ್ನು, ಋತುಗಳನ್ನು, ಪೂರ್ವಾಹ್ಣ, ಅಪರಾಹ್ಣ- ಇವೆಲ್ಲವನ್ನೂ ಭಗವಂತನು ಸೃಷ್ಟಿಸಿದನು.
ಬುದ್ಧ್ವಾಪಃ ಸೋಽಸೃಜನ್ಮೇಘಾಂಸ್ತಥಾ ಸ್ಥಾವರಜಂಗಮಾನ್ |
ಪೃಥಿವೀಂ ಸೋಽಸೃಜದ್ ವಿಶ್ವಾಂ ಸಹಿತಾಂ ಭೂರಿತೇಜಸಾ ॥ 33 ॥
ಬಳಿಕ ನೀರುಗಳನ್ನು ಪಡೆದು ಅದಕ್ಕೆ ಆಶ್ರಯವಾದ ಮೇಘಗಳನ್ನೂ, ಸ್ಥಾವರ- ಜಂಗಮಗಳನ್ನೂ, ಸಮಸ್ತ ಪೃಥಿವೀ ಮಂಡಲವನ್ನು ತನ್ನ ಪರಾಕ್ರಮದಿಂದ, ಹೀಗೆ ವಿಶ್ವವನ್ನು ಸೃಷ್ಟಿಸಿದನು.
ತತಃ ಕೃಷ್ಣೋ ಮಹಾಬಾಹುಃ ಪುನರೇವ ಯುಧಿಷ್ಠಿರ |
ಬ್ರಾಹ್ಮಣಾನಾಂ ಶತಂ ಶ್ರೇಷ್ಠಂ ಮುಖಾದಸೃಜತ ಪ್ರಭುಃ ॥ 34 ॥
ಬಳಿಕ ಮಹಾಭಾಗನಾದ ಕೃಷ್ಣನು ಪುನಃ ನೂರು ಮಂದಿ ಶ್ರೇಷ್ಠ ಬ್ರಾಹ್ಮಣರನ್ನು ತನ್ನ ಮುಖದಿಂದಲೇ ಸೃಷ್ಟಿಸಿದನು.
ಬಾಹುಭ್ಯಾಂ ಕ್ಷತ್ರಿಯಶತಂ ವೈಶ್ಯಾನಾಮೂರುತಃ ಶತಮ್ |
ಪದ್ಭ್ಯಾಂ ಶೂದ್ರಶತಂ ಚೈವ ಕೇಶವೋ ಭರತರ್ಷಭ ॥ 35 ॥
ತನ್ನ ಬಾಹುಗಳಿಂದ ನೂರು ಕ್ಷತ್ರಿಯರನ್ನು, ತನ್ನ ತೊಡೆಗಳಿಂದ ನೂರು ವೈಶ್ಯರನ್ನು, ಪಾದಗಳಿಂದ ನೂರು ಶೂದ್ರರನ್ನು ಕೇಶವನು ಸೃಷ್ಟಿಸಿದನು.
ಸ ಏವಂ ಚತುರೋ ವರ್ಣಾನ್ ಸಮುತ್ಪಾದ್ಯ ಮಹಾಯಶಾಃ |

ಅಧ್ಯಕ್ಷಂ ಸರ್ವಭೂತಾನಾಂ ಧಾತಾರಮಕರೋತ್ ಪ್ರಭುಃ ॥ 36 ॥
ಮಹಾತಪಸ್ವಿಯಾದ ಭಗವಂತನು ಹೀಗೆ ನಾಲ್ಕು ವರ್ಣಗಳನ್ನು ಸೃಷ್ಟಿಸಿ ಸಮಸ್ತ ಭೂತಗಳಿಗೂ ಚತುರ್ಮುಖ ಬ್ರಹ್ಮನನ್ನು ಅಧ್ಯಕ್ಷನನ್ನಾಗಿ ನಿಯಮಿಸಿದನು.
ವೇದವಿದ್ಯಾವಿಧಾತಾರಂ ಬ್ರಹ್ಮಾಣಮಮಿತದ್ಯುತಿಮ್ ।
ಭೂತಮಾತೃಗಣಾಧ್ಯಕ್ಷಂ ವಿರೂಪಾಕ್ಷಂ ಚ ಸೋಽಸೃಜತ್ ॥ 37 ॥
ವೇದವಿದ್ಯೆಗಳನ್ನು ನಿರ್ಮಾಣ ಮಾಡುವ, ಅಮಿತದ್ಯುತಿಯಾದ ಚತುರ್ಮುಖ ಬ್ರಹ್ಮನು ಸರ್ವಭೂತಗಳಿಗೂ ಅಧ್ಯಕ್ಷನಾದನು. ಭೂತಗಣಗಳಿಗೂ, ಮಾತೃಗಣಗಳಿಗೂ ವಿರೂಪಾಕ್ಷನನ್ನು ಅಧ್ಯಕ್ಷನನ್ನಾಗಿ ಮಾಡಿದನು.
ಶಾಸಿತಾರಂ ಚ ಪಾಪಾನಾಂ ಪಿತೃಣಾಂ ಸಮವರ್ತಿನಮ್ ।
ಅಸೃಜತ್ ಸರ್ವಭೂತಾತ್ಮಾ ನಿಧಿಪಂ ಚ ಧನೇಶ್ವರಮ್ ॥ 38 ॥
ಪಾಪಗಳನ್ನು ಶಿಕ್ಷಿಸಲು ಪಾಪಿಗಳಿಗೆ ಪಿತೃದೇವನಾದ ಯಮನನ್ನು, ಧನಾದಿಪತಿಯಾಗಿ ಕುಬೇರನನ್ನು ನಿಯೋಜಿಸಿದನು.
ಯಾದಸಾಮಸೃಜನ್ನಾಥಂ ವರುಣಂ ಚ ಜಲೇಶ್ವರಮ್ ।
ವಾಸವಂ ಸರ್ವದೇವಾನಾಮಧ್ಯಕ್ಷಮಕರೋತ್ ಪ್ರಭುಃ ॥ 39 ॥
ನೀರಿಗೂ, ಜಲಚರಪ್ರಾಣಿಗಳಿಗೂ ಅಧಿಪತಿಯಾಗಿ ವರುಣನನ್ನೂ, ದೇವಾಧಿಪತಿಯಾಗಿ ಇಂದ್ರನನ್ನು ನಿಯಮಿಸಿದನು.
ಯಾವದ್ಯಾವದಭೂಚ್ಛ್ರದ್ಧಾ ದೇಹಂ ಧಾರಯಿತುಂ ನೃಣಾಮ್ ।
ತಾವತ್ತಾವದಜೀವಂಸ್ತೇ ನಾಸೀದ್ಯಮಕೃತಂ ಭಯಮ್ ॥ 40 ॥
ಹೀಗೆ ಪುರುಷರಿಗೆ ಎಲ್ಲಿಯ ತನಕ ದೇಹವನ್ನು ಧರಿಸಲು ಇಷ್ಟವಿರುತ್ತದೋ ಅಲ್ಲಿಯ ತನಕವೂ ಅವರು ಬದುಕುತ್ತಿದ್ದರು. ಅವರಿಗೆ ಯಮನ ಭಯವು ಸೃಷ್ಟಿಯ ಆರಂಭದಲ್ಲಿ ಇರಲಿಲ್ಲ.
ನ ಚೈಷಾಂ ಮೈಥುನೋ ಧರ್ಮೋ ಬಭೂವ ಭರತರ್ಷಭ ।
ಸಂಕಲ್ಪಾದೇವ ಚೈತೇಷಾಮಪತ್ಯಮುದಪದ್ಯತ ॥ 41 ॥
ಮತ್ತು ಸ್ತ್ರೀ-ಪುರುಷರ ಸಂಯೋಗವಿಲ್ಲದೆ ಸಂಕಲ್ಪ ಮಾತ್ರದಿಂದ ಗರ್ಭೋತ್ಪತ್ತಿಯು ಆಗುತ್ತಿತ್ತು.
ತತ್ರ ತ್ರೇತಾಯುಗೇ ಕಾಲೇ ಸಂಕಲ್ಪಾಜ್ಜಾಯತೇ ಪ್ರಜಾ ।
ನ ಹ್ಯಭೂನ್ಮೈಥುನೋ ಧರ್ಮಸ್ತೇಷಾಮಪಿ ಜನಾಧಿಪ ॥ 42 ॥
ಬಳಿಕ ಮೊದಲನೆಯ ಕೃತಯುಗ ಧರ್ಮವು ಹೀಗೆ ನಡೆದು ತ್ರೇತಾಯುಗ ಬರುತ್ತಿರಲು ಸ್ಪರ್ಶಮಾತ್ರದಿಂದ ಪ್ರಜೋತ್ಪತ್ತಿಯಾಗುತ್ತಿತ್ತು. ಆ ಯುಗದಲ್ಲಿಯೂ ಪ್ರಜೆಗಳ ಉತ್ಪತ್ತಿಗೆ ಮೈಥುನ ಧರ್ಮವು ಅವಲಂಬಿತವಾಗಿರಲಿಲ್ಲ.
ದ್ವಾಪರೇ ಮೈಥುನೋ ಧರ್ಮಃ ಪ್ರಜಾನಾಮಭವನ್ನೃಪ ।
ತಥಾ ಕಲಿಯುಗೇ ರಾಜನ್ ದ್ವಂದ್ವಮಾಪೇದಿರೇ ಜನಾಃ ॥ 43 ॥
ನಂತರ ದ್ವಾಪರಯುಗದಲ್ಲಿ ಸ್ತ್ರೀಪುರುಷರ ಸಂಯೋಗದಿಂದ ಪ್ರಜೋತ್ಪತ್ತಿ ಎಂಬ ವ್ಯವಸ್ಥೆಯು ಏರ್ಪಟ್ಟಿತು. ನಂತರ ಕಲಿಯುಗ ಪ್ರವೇಶ ಕಾಲಕ್ಕೆ ಪೂರ್ಣವಾಗಿ ಪರಸ್ಪರ ಸಮಾಗಮದಿಂದಲೇ ಸೃಷ್ಟಿ ಎಂಬ ವ್ಯವಸ್ಥೆಯು ದೃಢವಾಯಿತು.
ಏಷ ಭೂತಪತಿಸ್ತಾತ ಸ್ವಧ್ಯಕ್ಷಶ್ಚ ಪ್ರಕೀರ್ತಿತಃ ।
ನಿರಧ್ಯಕ್ಷಾಂಸ್ತು ಕೌಂತೇಯ ಕೀರ್ತಯಿಷ್ಯಾಮಿ ತಾನಪಿ ॥ 44 ॥
ಯುಧಿಷ್ಠಿರನೇ, ಇಲ್ಲಿಯ ತನಕವೂ ಭೂತಪತಿಗಳನ್ನು ಅವುಗಳ ಅಧ್ಯಕ್ಷನಾದ ಭಗವಂತನ ಮಹಿಮೆಯನ್ನು ಶ್ರೇಷ್ಠ ಅಧ್ಯಕ್ಷನ ಮಹಿಮೆಯ ಜೊತೆಗೆ ವರ್ಣಿಸಿದ್ದೇನೆ. ಮುಂದೆ ಪಾಪಕಾರ್ಯರತರಾಗಿ ನರಕವನ್ನೇ ಹೊಂದುವ ಜನರು ಯಾರೆಂಬುದನ್ನು ವರ್ಣಿಸುತ್ತೇನೆ, ಕೇಳು.
ದಕ್ಷಿಣಾಪಥಜನ್ಮಾನಃ ಸರ್ವೇ ತಲವರಾಂಧ್ರಕಾಃ ।
ಉತ್ಸಾಃ ಪುಲಿಂದಾಃ ಶಬರಾಶ್ಚೂಚುಪಾ ಮಂಡಪೈಃ ಸಹ ॥ 45 ॥
ಉತ್ತರಾಪಥಜನ್ಮಾನಃ ಕೀರ್ತಯಿಷ್ಯಾಮಿ ತಾನಪಿ ।
ಯೌನಕಾಂಬೋಜಗಾಂಧಾರಾಃ ಕಿರಾತಾ ಬರ್ಬರೈಃ ಸಹ ॥ 46 ॥
ದಕ್ಷಿಣಾಪಥದಲ್ಲಿ ನಿನಗೆ ಕಪ್ಪವನ್ನೊಪ್ಪಿಸುತ್ತಿರುವ ಆಂಧ್ರರು, ಉತ್ಸರು, ಪುಲಿಂದರು, ಶಬರರು, ಚೂಚುಪರು, ಮದ್ರಕರು ಇವರ ಜೊತೆಗೆ ಉತ್ತರಾಪಥದಲ್ಲಿ ಜನ್ಮವನ್ನು ತಾಳಿದ ವ್ಯಕ್ತಿಗಳನ್ನು ಹೇಳುತ್ತೇನೆ. ಯೌನಕರು, ಕಾಂಭೋಜರು, ಗಾಂಧಾರರು, ಕಿರಾತರು, ಬರ್ಬರರು ಎಲ್ಲಾ ಒಂದೇ ಗುಂಪಿನವರಾಗಿದ್ದಾರೆ.
ಏತೇ ಪಾಪಕೃತಸ್ತಾತ ಚರಂತಿ ಪೃಥಿವೀಮಿಮಾಮ್ ।
ಶ್ವಕಾಕಬಲಗೃಧ್ರಾಣಾಂ ಸಧರ್ಮಾಣೋ ನರಾಧಿಪ ॥ 47 ॥
ಇವರೆಲ್ಲರೂ ಬಕ, ಗೃಧ್ರ, ಚಂಡಾಲಾದಿಗಳು ಹೇಗೋ ಹಾಗೆ ಜನ್ಮಬಾಧ್ಯರಾಗಿ, ಪಾಪ ಮಾಡಿದವರಾಗಿ ಈ ಭೂಮಿಯಲ್ಲಿ ಸಂಚರಿಸುತ್ತಾರೆ.
ನೈತೇ ಕೃತಯುಗೇ ತಾತ ಚರಂತಿ ಪೃಥಿವೀಮಿಮಾಮ್ ।
ತ್ರೇತಾಪ್ರಭೃತಿ ವರ್ತಂತೇ ತೇ ಜನಾ ಭರತರ್ಷಭ ॥ 48 ॥
ಕೃತಯುಗದಲ್ಲಿ ಇಂತಹ ಕ್ರೂರಜನರ ಸುಳಿವೇ ಇರುವುದಿಲ್ಲ. ತ್ರೇತಾಯುಗದಿಂದ ಆರಂಭಿಸಿ ಸ್ವಲ್ಪ ಸ್ವಲ್ಪವಾಗಿ ಈ ಪಾಪಕರ್ಮಿಗಳು ಅಭಿವೃದ್ಧಿಯನ್ನು ಹೊಂದುತ್ತಾರೆ.
ತತಸ್ತಸ್ಮಿನ್ ಮಹಾಘೋರೇ ಸಂಧ್ಯಾಕಾಲೇ ಯುಗಾಂತಿಕೇ ।
ರಾಜಾನಃ ಸಮಸಜ್ಜಂತ ಸಮಾಸಾದ್ಯೇತರೇತರಮ್ ॥ 49 ॥

ತ್ರೇತಾ, ದ್ವಾಪರ ಸಂಧಿ ಎಂಬ ಕ್ರೂರಕಾಲಗಳಲ್ಲಿ ಅಸುರ ಭಾವದಿಂದ ರಾಜರು ಒಬ್ಬರ ಮೇಲೆ ಒಬ್ಬರು ಬಿದ್ದು ಯುದ್ಧವನ್ನು ಮಾಡುತ್ತಾರೆ.
ಐಂದ್ರಂ ರೂಪಂ ಸಮಾಸ್ಥಾಯ ಹ್ಯಸುರೇಭ್ಯೋ ಚರನ್ಮಹೀಮ್ |
ಸ ಏವ ಭಗವಾನ್ ದೇವೋ ವೇದಿತ್ವಂ ಚ ಗತಾ ಮಹೀ ॥ 50 ॥
ಇಂತಹ ವ್ಯಕ್ತಿಗಳನ್ನು ಅಡಗಿಸುವುದಕ್ಕಾಗಿ ದೇವದೇವನಾದ ಭಗವಂತನು ಇಂದ್ರರೂಪದಿಂದ ಭೂಮಿಯಲ್ಲಿ ಸಂಚರಿಸತೊಡಗಿದನು. ಭೂಮಿಯು ಆ ಸಮಯದಲ್ಲಿ ಯುದ್ಧವೆಂಬ ಯಾಗಕ್ಕೆ ವೇದಿಕೆಯಂತಿತ್ತು.
ಏವಂಭೂತೇ ತದಾ ಸೃಷ್ಟಿರ್ನಾರಸಿಂಹಾದಯಃ ಕ್ರಮಾತ್ |
ಪ್ರಾದುರ್ಭಾವಾಃ ಸ್ಮೃತಾ ವಿಷ್ಣೋರ್ಜಗತೀರಕ್ಷಣಾಯ ವೈ ॥ 51 ॥
ಲೋಕದಲ್ಲಿ ಇಂತಹ ಕಠಿಣ ಸ್ಥಿತಿ ಎರಗಿದಾಗಲೇ ಭಗವಂತನು ನರಸಿಂಹನೇ ಮೊದಲಾದ ಅವತಾರಗಳನ್ನು ತಳೆದು ದುಷ್ಟರನ್ನು ಸಂಹರಿಸಬೇಕಾಯಿತು. ಜಗತ್ತಿನ ರಕ್ಷಣೆಯು ಈ ಮೂಲಕ ಅನಿವಾರ್ಯವಾಗಿತ್ತು.
ಏಷ ಕೃಷ್ಣೋ ಮಹಾಯೋಗೀ ತತ್ತತ್ಕಾರ್ಯಾನುರೂಪಣಮ್ |
ಹಿರಣ್ಯಕಶಿಪುಂ ದೈತ್ಯಂ ಹಿರಣ್ಯಾಕ್ಷಂ ತಥೈವ ಚ ॥ 52 ॥
ರಾವಣಂ ಚ ಮಹಾದೈತ್ಯಂ ಹತ್ವಾಸೌ ಪುರುಷೋತ್ತಮಃ |
ಭೂಮೇರ್ದುಃಖೋಪನಾಶಾರ್ಥಂ ಬ್ರಹ್ಮಶಕ್ರಾದಿಭಿಃ ಸ್ತುತಃ ॥ 53 ॥
ಆತ್ಮನೋಽಂಗಾನ್ಮಹಾತೇಜಾ ಉದ್ಬಬರ್ಹ ಜನಾರ್ದನಃ |
ಸಿತಕೃಷ್ಣೌ ಮಹಾರಾಜ ಕೇಶೌ ಹರಿರುದಾರಧೀಃ ॥ 54 ॥
ಇಂತಹ ಸ್ಥಿತಿಯಲ್ಲಿ ಮಹಾಯೋಗಿಯಾದ ಭಗವಾನ್ ಕೃಷ್ಣನು ಆಯಾ ಲೋಕಕಾರ್ಯಕ್ಕನುಸಾರವಾಗಿ ಅವತಾರವನ್ನು ಮಾಡುತ್ತಾನೆ. ಹಿರಣ್ಯಕಶಿಪು ದೈತ್ಯನನ್ನೂ, ಅದರಂತೆ ಹಿರಣ್ಯಾಕ್ಷ ದೈತ್ಯನನ್ನು, ರಾವಣನೆಂಬ ಮಹಾದೈತ್ಯನನ್ನು ಪುರುಷೋತ್ತಮನು ಕೊಂದು, ಭೂಮಿಯ ದುಃಖವನ್ನು ಉಪಶಮನ ಮಾಡಲು ಬ್ರಹ್ಮ- ರುದ್ರ-ಇಂದ್ರಾದಿಗಳಿಂದ ಸ್ತುತನಾಗಿ ತನ್ನ ದೇಹದಿಂದಲೇ ಮಹಾತೇಜಸ್ವಿಯಾದ ಜನಾರ್ದನನು ಈ ಭೂಮಿಯನ್ನು ಧರಿಸಿದ್ದಾನೆ. ಉತ್ಕೃಷ್ಟವಾದ ಬುದ್ಧಿಯುಳ್ಳ ಭಗವಂತನು ಬಿಳಿ ಮತ್ತು ಕೃಷ್ಣ ಎಂಬ ಕೇಶಗಳಿಂದ ಈ ಜಗತ್ತನ್ನು ರಕ್ಷಿಸುತ್ತಿದ್ದಾನೆ.
ವಸುದೇವಸ್ಯ ದೇವಕ್ಯಾಮೇಷ ಜಾತ ಇಹೋತ್ತಮಃ |
ದೇಹವಾನಿಹ ವಿಶ್ವಾತ್ಮಾ ಸಂಬಂಧೀ ತೇ ಜನಾರ್ದನಃ ॥ 55 ॥
ಆವಿರ್ಬಭೂವ ಯೋಗೀಂದ್ರೋ ಮನೋತೀತೋ ಜಗತ್ಪತಿಃ |
ಅಚಿಂತ್ಯಃ ಪುರುಷವ್ಯಾಘ್ರ ನೈವ ಕೇವಲಮಾನುಷಃ ॥ 56 ॥
ಅವರಲ್ಲಿ ಭಗವಂತನ ಅವತಾರವಾದ ಕೃಷ್ಣನು ನಿನಗೆ ಬಂಧುವಾಗಿಯೇ ಇದ್ದಾನೆ. ಅವನು ಅಪ್ರಮೇಯನೂ, ಅಚಿಂತ್ಯನೂ, ಯೋಗೀಶ್ವರನೂ, ಜಗತ್ಪತಿಯೂ ಆಗಿದ್ದು ವಸುದೇವ-ದೇವಕಿಯರನ್ನು ನೆಪಮಾಡಿಕೊಂಡು ಅವತಾರ ಮಾಡಿದ್ದಾನೆ. ಲೀಲಾಮಾನುಷವಿಗ್ರಹನಾದ ಭಗವಂತನು ಸಾಮಾನ್ಯ ಮನುಷ್ಯರಂತೆ ಕಾಣಿಸಿದರೂ ಅವನು ಮನುಷ್ಯನಲ್ಲ.
ಅವ್ಯಕ್ತಾದಿವಿಶೇಷಾಂತಂ ಪರಿಮಾಣಾರ್ಥಸಂಯುತಮ್ |
ಕ್ರೀಡಾ ಹರೇರಿದಂ ಸರ್ವಂ ಕ್ಷರಮಿತ್ಯೇವ ಧಾರ್ಯತಾಮ್ ॥ 57 ॥
ಅವ್ಯಕ್ತದಿಂದ ಆರಂಭಿಸಿ ವಿಶೇಷದ ತನಕ ವಿವಿಧ ಪರಿಮಾಣವುಳ್ಳ ಆಕಾರಗಳುಳ್ಳ ಸಮಸ್ತ ಜಗತ್ತು ಶ್ರೀಹರಿಯ ಲೀಲೆಯಿಂದಲೇ ನಡೆಯುತ್ತಿದೆ ಎಂದು ತಿಳಿ. ಈ ಜಗತ್ತೆಲ್ಲವೂ ನಶ್ವರವಾದವು.
ಅಕ್ಷರಂ ತತ್ಪರಂ ನಿತ್ಯಂ ವೈರೂಪ್ಯಂ ಜಗತೋ ಹರೇಃ |
ತದ್ವಿದ್ಧಿ ರೂಪಮತುಲಮಮೃತತ್ವಂ ಭವಂಜಿತಮ್ ॥ 58 ॥
ಭಗವಂತನ ರೂಪವು ಎಂದೆಂದಿಗೂ ನಾಶರಹಿತವಾದುದು. ಕ್ಷರಾಕ್ಷರ ಜಗತ್ತಿಗಿಂತಲೂ ವಿಲಕ್ಷಣವಾದುದು. ಇಂತಹ ಅಸಮಾನವಾದ ಸರ್ವೋತ್ತಮ ರೂಪವನ್ನು ತಿಳಿದಾಗಲೇ ನೀನು ಮೋಕ್ಷಸಾಮ್ರಾಜ್ಯವನ್ನು ಧರಿಸಲು ಸಾಧ್ಯವಾಗುತ್ತದೆ.
ತದೇವ ಕೃಷ್ಣೋ ದಾಶಾರ್ಹಃ ಶ್ರೀಮಾನ್ ಶ್ರೀವತ್ಸಲಕ್ಷಣಃ |
ನ ಭೂತಸೃಷ್ಟಿಸಂಸ್ಥಾನಂ ದೇಹೋಽಸ್ಯ ಪರಮಾತ್ಮನಃ ॥ 59 ॥
ಆ ಮೂಲರೂಪಿಯಾದ ನಾರಾಯಣನೇ ಕೃಷ್ಣನಾಗಿ ಯಾದವಕುಲದಲ್ಲಿ ಕಾಂತಿಯುಕ್ತನಾಗಿ, ಶ್ರೀವತ್ಸಲಕ್ಷಣದಿಂದ ಕೂಡಿದವನಾಗಿ ಇದ್ದಾನೆ. ಅವನ ದೇಹವು ಪಂಚಭೂತಗಳ ವಿಕಾರದಿಂದ ಉಂಟಾಗಿರುವುದಿಲ್ಲ.
ದೇಹವಾನಿವ ಯೋ ವಿಷ್ಣುರಸೌ ಮಾಯಾಮಯೋ ಹರಿಃ |
ಆತ್ಮನೋ ಲೋಕರಕ್ಷಾರ್ಥಂ ಧ್ಯಾಹಿ ನಿತ್ಯಂ ಸನಾತನಮ್ ॥ 60 ॥
ಅವನು ನಮ್ಮೆಲ್ಲರಿಗೂ ಸಾಮಾನ್ಯದೇಹಿಯಂತೆ ತೋರಿದರೂ ವಿಷ್ಣುವು ತನ್ನ ಇಚ್ಛಾಶಕ್ತಿಯಿಂದ ಹಾಗೆ ತೋರಿಸುತ್ತಿದ್ದಾನೆ. ಅವನು ಲೋಕರಕ್ಷಣೆಗೋಸ್ಕರವೇ ಬಂದಿರುವ ಸನಾತನನೆಂದು ನಿತ್ಯವೂ ಅವನನ್ನು ಧ್ಯಾನಿಸು.
ಅಂಗಾನಿ ಚತುರೋ ವೇದಾ ಮೀಮಾಂಸಾ ನ್ಯಾಯವಿಸ್ತರಃ |
ಇತಿಹಾಸಪುರಾಣಾನಿ ಧರ್ಮಾಃ ಸ್ವಾಯಂಭುವಾದಯಃ ॥ 61 ॥
ಯ ಏನಂ ಪ್ರತಿವರ್ತಂತೇ ವೇದಾಂತಾನಿ ಚ ಸರ್ವಶಃ |
ಭಕ್ತಿಹೀನಾ ನ ತೈರ್ಯಾಂತಿ ನಿತ್ಯಮೇನಂ ಕಥಂಚನ ॥ 62 ॥
ನಾಲ್ಕು ವೇದಗಳು, ಷಡಂಗಗಳು, ಮೀಮಾಂಸಾ, ನ್ಯಾಯಶಾಸ್ತ್ರ, ಇತಿಹಾಸ- ಪುರಾಣಗಳು, ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳು ಇವೆಲ್ಲವೂ ಪರಮಪುರುಷನನ್ನೇ ಎಲ್ಲಾ ವಿಧದಿಂದಲೂ ಪ್ರತಿಪಾದಿಸುತ್ತಿವೆ. ಹೀಗಿದ್ದರೂ ಭಕ್ತಿಹೀನರು ಅವುಗಳ ಆಧಾರದಿಂದ

ಆತನನ್ನು ಯಾವ ರೀತಿಯಲ್ಲಿಯೂ ತಿಳಿಯಲಾರರು.
ಸರ್ವಭೂತೇಷು ಭೂತಾತ್ಮಾ ತತ್ತದ್ಬುದ್ಧಿಂ ಸಮಾಸ್ಥಿತಃ।
ತಸ್ಮಾದ್ ಬುದ್ಧಸ್ತ್ವಮೇವೈನಂ ಧ್ಯಾಹಿ ನಿತ್ಯಮತಂದ್ರಿತಃ ॥ 63 ॥
ಪರಮಾತ್ಮ ಸಮಸ್ತ ಭೂತಗಳಲ್ಲಿಯೂ ಅಂತರ್ಯಾಮಿಯಾಗಿದ್ದಾನೆ. ಆ ಪರಮಾತ್ಮನು ಅವರವರ ಬುದ್ಧಿಗೆ ತಕ್ಕಂತೆ ಗೋಚರಿಸತಕ್ಕವನು. ಆದ್ದರಿಂದ ಬುದ್ಧಿಬಲವುಳ್ಳ ನೀನು ಎಚ್ಚರತಪ್ಪದೆ ಅವನನ್ನು ನಿತ್ಯವೂ ಧ್ಯಾನಿಸುತ್ತಿರು.
ಏವಮೇಷ ಕುರುಶ್ರೇಷ್ಠ ಪ್ರಾದುರ್ಭಾವೋ ಮಹಾತ್ಮನಃ।
ದೇವದೇವರ್ಷಿರಾಚಷ್ಟ ನಾರದಃ ಸರ್ವಲೋಕದೃಕ್ ॥ 64 ॥
ಆ ಪರಮಾತ್ಮನ ಅವತಾರ ಚರಿತ್ರೆಗಳು ವಿಧವಿಧವಾಗಿವೆ. ಸಮಸ್ತ ಲೋಕಗಳನ್ನು ಸಾಕ್ಷಾತ್ಕರಿಸಿಕೊಂಡ ನಾರದರೇ ನನಗೆ ಈ ತತ್ತ್ವಗಳನ್ನು ಹೇಳಿದ್ದಾರೆ.
ನಾರದೋಽಪ್ಯಥ ಕೃಷ್ಣಸ್ಯ ಪರಂ ಮೇನೇ ನರಾಧಿಪ।
ಶಾಶ್ವತತ್ವಂ ಮಹಾಬಾಹೋ ಯಥಾವದ್ಭರತರ್ಷಭ ॥ 65 ॥
ನಾರದರು ಶ್ರೀಕೃಷ್ಣನು ಪರಮನೆಂದೂ, ಶಾಶ್ವತನೆಂದೂ ತಿಳಿಸಿದ್ದಾರೆ. ಆ ಕೃಷ್ಣನ ಪರಾಕ್ರಮವು ಅಮೋಘವಾದುದು.
ಏವಮೇಷ ಮಹಾಬಾಹುಃ ಕೇಶವಃ ಸತ್ಯವಿಕ್ರಮಃ।
ಅಚಿಂತ್ಯಃ ಪುಂಡರೀಕಾಕ್ಷೋ ನೈಷ ಕೇವಲಮಾನುಷಃ ॥ 66 ॥
ಭರತರ್ಷಭನೇ, ಈ ರೀತಿಯಾಗಿ ಮಹಾಬಾಹುವಾದ, ಸತ್ಯವಿಕ್ರಮನಾದ ಕೇಶವನು ಅಚಿಂತ್ಯನೂ, ಪುಂಡರೀಕಾಕ್ಷನೂ ಆಗಿದ್ದಾನೆ. ಅವನನ್ನು ಎಂದಿಗೂ ಮನುಷ್ಯನೆಂದು ಭಾವಿಸಬಾರದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಚತುಸ್ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ಮರೀಚ್ಯಾದಿಗಳಲ್ಲಿರುವ ವಂಶಕ್ರಮವನ್ನೂ, ಬೇರೆ ಬೇರೆ ದಿಕ್ಕುಗಳಲ್ಲಿರುವ ಮಹರ್ಷಿಗಳನ್ನು ಭೀಷ್ಮರು ಯುಧಿಷ್ಠಿರನಿಗೆ ತಿಳಿಸಿದುದು.
ಯುಧಿಷ್ಠಿರಃ
ಕೇ ಪೂರ್ವಮಾಸನ್ ಪತಯಃ ಪ್ರಜಾನಾಂ ಭರತರ್ಷಭ।
ಕೇ ಚರ್ಷಯೋ ಮಹಾಭಾಗಾ ದಿಕ್ಷು ಪ್ರತ್ಯೇಕಶಃ ಸ್ಮೃತಾಃ ॥ 1 ॥
ಯುಧಿಷ್ಠಿರ ಪಿತಾಮಹನೇ, ಆದಿಪ್ರಜಾಪತಿಗಳು ಯಾರು? ಮಹರ್ಷಿಗಳಲ್ಲಿ ಮಹಾಮಹಿಮೆಯುಳ್ಳ ಪ್ರಮುಖರು ಯಾರು? ಪ್ರತಿ ದಿಕ್ಕುಗಳಲ್ಲಿಯೂ ಅಧಿಪತಿಗಳಾಗಿ ಯಾರಿದ್ದಾರೆ?
ಭೀಷ್ಮಃ
ಶ್ರೂಯತಾಂ ಭರತಶ್ರೇಷ್ಠ ಯನ್ಮಾ ತ್ವಂ ಪರಿಪೃಚ್ಛಸಿ।
ಪ್ರಜಾನಾಂ ಪತಯೋ ಯೇ ಸ್ಮ ದಿಕ್ಷು ಪ್ರತ್ಯೇಕಶಃ ಸ್ಮೃತಾಃ ॥ 2 ॥
ಭೀಷ್ಮ ಭರತಶ್ರೇಷ್ಠನೇ, ಯಾವ ಪ್ರಶ್ನೆಗಳನ್ನು ನನ್ನನ್ನು ಕುರಿತು ಕೇಳಿದ್ದೀಯೋ ವಿವರಿಸುತ್ತೇನೆ, ಕೇಳು. ಪ್ರಜಾಪತಿಗಳು, ದಿಕ್ಕುಗಳಿಗೆ ಅಧಿಪತಿಗಳಾದ ಋಷಿಗಳ್ಯಾರು ಎಲ್ಲವನ್ನೂ ವಿವರಿಸುತ್ತೇನೆ.
ಏಕಃ ಸ್ವಯಂಭೂರ್ಭಗವಾನಾದ್ಯೋ ಬ್ರಹ್ಮಾ ಸನಾತನಃ।
ಬ್ರಹ್ಮಣಃ ಸಪ್ತ ಪುತ್ರಾ ವೈ ಮಹಾತ್ಮಾನಃ ಸ್ವಯಂಭುವಃ ॥ 3 ॥
ಸ್ವಯಂಭೂವೆನಿಸಿದ ಬ್ರಹ್ಮನು ಸೃಷ್ಟಿಯ ಆರಂಭದಲ್ಲಿ ಇದ್ದನು. ಅವನಿಗೆ ಏಳು ಮಂದಿ ಮಹಾತ್ಮರು ಮಕ್ಕಳಾಗಿ ಹುಟ್ಟಿದರು.
ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ।
ವಸಿಷ್ಠಶ್ಚ ಮಹಾಭಾಗಃ ಸದೃಶಾ ವೈ ಸ್ವಯಂಭುವಾ ॥ 4 ॥
ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಎಂಬ ಏಳು ಋಷಿಗಳು ಬ್ರಹ್ಮಸಮಾನರಾಗಿದ್ದರು.
ಸಪ್ತ ಬ್ರಾಹ್ಮಣ ಇತ್ಯೇಷ ಪುರಾಣೇ ನಿಶ್ಚಯೋ ಗತಃ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಸರ್ವಾನೇವ ಪ್ರಜಾಪತೀನ್ ॥ 5 ॥
ಪುರಾಣಗಳಲ್ಲಿ ಇವರೇ ಏಳು ಮಂದಿ ಬ್ರಹ್ಮರೆಂದು ಪ್ರಸಿದ್ಧಿಯನ್ನು ಹೊಂದಿರುತ್ತಾರೆ. ಇವರಿಂದಾಚೆಗೆ ಬಂದ ಪ್ರಜಾಪತಿಗಳನ್ನು ವಂಶಾನುಕ್ರಮವಾಗಿ ವಿವರಿಸುತ್ತೇನೆ.
ಅತ್ರಿವಂಶಸಮುತ್ಪನ್ನೋ ಬ್ರಹ್ಮಯೋನಿಃ ಸನಾತನಃ।
ಪ್ರಾಚೀನಬರ್ಹಿರ್ಭಗವಾಂಸ್ತಸ್ಮಾತ್ ಪ್ರಚೇತಸೋ ದಶ ॥ 6 ॥
ಅತ್ರಿಯ ವಂಶದಲ್ಲಿ ಪ್ರಾಚೀನಬರ್ಹಿ ಎಂಬುವನು ಉತ್ಪನ್ನನಾದನು. ಸನಾತನನಾದ ಈತನು ಬ್ರಹ್ಮಯೋನಿ ಎನಿಸಿದ್ದಾನೆ. ಇವನ ಮೂಲಕ ಹತ್ತು ಮಂದಿ ಪ್ರಾಚೇತಸರು ಹುಟ್ಟಿದರು.
ದಶಾನಾಂ ತನಯಸ್ತ್ವೇಕೋ ದಕ್ಷೋ ನಾಮ ಪ್ರಜಾಪತಿಃ।
ತಸ್ಯ ದ್ವೇ ನಾಮನೀ ಲೋಕೇ ದಕ್ಷಃ ಕ ಇತಿ ಚೋಚ್ಯತೇ ॥ 7 ॥
ಈ ಹತ್ತುಜನರಲ್ಲಿ ದಕ್ಷನೆಂಬ ಪ್ರಜಾಪತಿಯು ಒಬ್ಬನು. ಈತನಿಗೆ ಲೋಕದಲ್ಲಿ ಎರಡು ಹೆಸರುಗಳಿವೆ. ದಕ್ಷ ಮತ್ತು ಕ ಎಂದು.
ಮರೀಚೇಃ ಕಶ್ಯಪಃ ಪುತ್ರಸ್ತಸ್ಯ ದ್ವೇ ನಾಮನೀ ಶ್ರುತೇ।

ಅರಿಷ್ಟನೇಮಿರಿತ್ಯೇಕಂ ಕಶ್ಯಪೇತ್ಯಪರಂ ವಿದುಃ ॥ 8 ॥
ಮರೀಚಿಯ ಮಗನು ಕಶ್ಯಪನು. ಇವನಿಗೂ ಎರಡು ಹೆಸರುಗಳಿವೆ. ಕೆಲವರು ಕಶ್ಯಪನನ್ನೇ ಅರಿಷ್ಟನೇಮಿ ಎಂದೂ, ಕೆಲವರು ಕಶ್ಯಪನೆಂದು ಕರೆಯುತ್ತಾರೆ.
ಅಂಗಶ್ಚೈವೌರಸಃ ಶ್ರೀಮಾನ್ ರಾಜಾ ಭೌಮಶ್ಚ ವೀರ್ಯವಾನ್ |
ಸಹಸ್ರಂ ಯಶ್ಚ ದಿವ್ಯಾನಾಂ ಯುಗಾನಾಂ ಪರ್ಯುಪಾಸಿತಾ ॥ 9 ॥
ಅತ್ರಿಗೆ ಔರಸಪುತ್ರನಾಗಿ ಹುಟ್ಟಿದವನು ವೀರ್ಯವಂತ ರಾಜನಾದ ಸೋಮನು. ಇವನು ಸಾವಿರದಿವ್ಯಯುಗಗಳವರೆಗೆ ತಪಸ್ಸಿನಲ್ಲಿ ನಿರತನಾಗಿದ್ದನು.
ಅರ್ಯಮಾ ಚೈವ ಭಗವಾನ್ ಯೇ ಚಾನ್ಯೇ ತನಯಾ ವಿಭೋ |
ಏತೇ ಪ್ರದೇಶಾಃ ಕಥಿತಾ ಭುವನಾನಾಂ ಪ್ರಭಾವನಾಃ ॥ 10 ॥
ಪೂಜ್ಯನಾದ ಅರ್ಯಮನು ಇನ್ನೂ ಅವನ ಬೇರೆ ಪುತ್ರರು ಸೃಷ್ಟಿಕರ್ತರೆಂದು ಲೋಕಕ್ಕೆ ಆಜ್ಞಾಪಕರೆಂದು ಹೇಳಲ್ಪಡುವರು.
ಶಶಬಿಂದೋಶ್ಚ ಭಾರ್ಯಾಣಾಂ ಸಹಸ್ರಾಣಿ ದಶಾಚ್ಯುತ |
ಏಕೈಕಸ್ಯಾಂ ಸಹಸ್ರಂ ತು ತನಯಾನಾಮಭೂತ್ತದಾ ॥ 11 ॥
ಶಶಬಿಂದುವಿನ ಭಾರ್ಯೆಯರಲ್ಲಿ ಒಬ್ಬೊಬ್ಬಳಲ್ಲಿಯೂ ಸಾವಿರಮಂದಿ ಮಕ್ಕಳಾದರು. ಶಶಬಿಂದುವಿಗೆ ಹತ್ತುಸಾವಿರ ಮಂದಿ ಭಾರ್ಯೆಯರಿದ್ದರು.
ಏವಂ ಶತಸಹಸ್ರಾಣಾಂ ಶತಂ ತಸ್ಯ ಮಹಾತ್ಮನಃ |
ಪುತ್ರಾಣಾಂ ನ ಚ ತೇ ಕಂಚಿದಿಚ್ಛಂತ್ಯನ್ಯಂ ಪ್ರಜಾಪತಿಮ್ ॥ 12 ॥
ಹೀಗೆ ಹತ್ತುಸಾವಿರವನ್ನು ಸಾವಿರದಿಂದ ಗುಣಿಸಿದಾಗ ಹತ್ತುಲಕ್ಷ ಪ್ರಜೆಗಳು ಈ ಮಹಾತ್ಮನಿಗೆ ಉಂಟಾದರು. ಆ ಮಕ್ಕಳಲ್ಲಿ ಯಾರೂ ತಮ್ಮನ್ನು ಹೊರತು ಪ್ರಜಾಪತಿಗಳೆಂದು ಅಂಗೀಕರಿಸದೆ ಹೋದರು.
ಪ್ರಜಾಮಾಚಕ್ಷತೇ ವಿಪ್ರಃ ಪೌರಾಣೀಂ ಶಾಶಬಿಂದವೀಮ್ |
ಸ ವೃಷ್ಣಿವಂಶಪ್ರಭವೋ ಮಹಾನ್ ವಂಶಃ ಪ್ರಜಾಪತೇಃ ॥ 13 ॥
ಇದಕ್ಕಾಗಿ ಪುರಾತನ ಮಹರ್ಷಿಗಳು ಪ್ರಜೆಗಳಿಗೆ ಶಶಬಿಂದು ವಂಶೀಯರೆಂದೇ ಹೆಸರನ್ನಿಟ್ಟರು. ಈ ಶಶಬಿಂದುವಿನ ವಂಶವೇ ವೃಷ್ಣಿವಂಶದ ಉತ್ಪತ್ತಿಗೂ ಮೂಲವಾಯಿತು.
ಏತೇ ಪ್ರಜಾನಾಂ ಪತಯಃ ಸಮುದ್ದಿಷ್ಟಾ ಯಶಸ್ವಿನಃ |
ಅತಃ ಪರಂ ಪ್ರವಕ್ಷ್ಯಾಮಿ ದೇವಾಂಸ್ತ್ರಿಭುವನೇಶ್ವರಾನ್ ॥ 14 ॥
ನಾನು ಇಲ್ಲಿಯ ತನಕ ಹೇಳಿದವರೆಲ್ಲರೂ ಪ್ರಜಾಪಧಿಪತಿಗಳೆಂದೇ ಹೆಸರನ್ನು ಹೊಂದಿರುತ್ತಾರೆ. ಎಲ್ಲರೂ ಕೀರ್ತಿಸಂಪನ್ನರು. ಇನ್ನು ಮುಂದೆ ಮೂರುಲೋಕಗಳಿಗೆ ಒಡೆಯರಾದ ದೇವತೆಗಳ್ಯಾರೆಂಬುದನ್ನು ತಿಳಿಸುತ್ತೇನೆ.
ಭಗೋಽಂಶಶ್ಚಾರ್ಯಮಾ ಚೈವ ಮಿತ್ರೋಽಥ ವರುಣಸ್ತಥಾ |
ಸವಿತಾ ಚೈವ ಧಾತಾ ಚ ವಿವಸ್ವಾಂಶ್ಚ ಮಹಾಬಲಃ ॥ 15 ॥
ಪೂಷಾ ತ್ವಷ್ಟಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ |
ತ ಏತೇ ದ್ವಾದಶಾದಿತ್ಯಾಃ ಕಶ್ಯಪಸ್ಯಾತ್ಮಸಂಭವಾಃ ॥ 16 ॥
ಭಗನೂ, ಅಂಶನೂ, ಅರ್ಯಮನೂ, ಮಿತ್ರನೂ, ವರುಣನೂ, ಸವಿತೃ, ಧಾತೃ, ಮಹಾಬಲನಾದ ವಿವಸ್ವಂತನೂ, ಪೂಷನೂ, ತ್ವಷ್ಟನೂ, ಇಂದ್ರನೂ ಕೊನೆಯಲ್ಲಿ ಹನ್ನೆರಡನೆಯವನಾದವನು ವಿಷ್ಣುವೆನಿಸುತ್ತಾನೆ. ಈ ಹನ್ನೆರಡು ಜನರು ಕಶ್ಯಪನ ಮಕ್ಕಳು. ಕಶ್ಯಪನಿಂದಲೇ ಹುಟ್ಟಿದವರು. ಇವರನ್ನೇ ದ್ವಾದಶಾದಿತ್ಯರು ಎನ್ನಲಾಗುತ್ತದೆ.
ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವಪಿ |
ಮಾರ್ತಾಂಡಸ್ಯಾತ್ಮಜಾವೇತಾವಷ್ಟಮಸ್ಯ ಪ್ರಜಾಪತೇಃ ॥ 17 ॥
ನಾಸತ್ಯನೂ, ದಸ್ರ ಎಂಬ ಇವರಿಬ್ಬರು ಅಶ್ವಿನೀದೇವತೆಗಳು. ಇವರಿಬ್ಬರೂ ಎಂಟನೆಯ ಪ್ರಜಾಧಿಪತಿಯಾದ ಮಾರ್ತಾಂಡನ ಮಕ್ಕಳು.
ತ್ವಷ್ಟುಶ್ಚೈವಾತ್ಮಜಃ ಶ್ರೀಮಾನ್ ವಿಶ್ವರೂಪೋ ಮಹಾಯಶಾಃ |
ಅಜೈಕಪಾದಹಿರ್ಬುಧ್ನ್ಯೋ ವಿರೂಪಾಕ್ಷೋಽಥ ರೈವತಃ ॥ 18 ॥
ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚ ಸುರೇಶ್ವರಃ |
ಸಾವಿತ್ರಶ್ಚ ಜಯಂತಶ್ಚ ಪಿನಾಕೀ ಚಾಪರಾಜಿತಃ |
ಪೂರ್ವಮೇವ ಮಹಾಭಾಗಾ ವಸವೋಽಷ್ಟೌ ಪ್ರಕೀರ್ತಿತಾಃ ॥ 19 ॥
ಮಹಾಯಶಸ್ವಿಯಾದ ವಿಶ್ವರೂಪನೆಂಬುವನು ತ್ವಷ್ಟ್ರುವಿನ ಮಗನು. ಅಜೈಕಪಾತ್, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸಾವಿತ್ರ, ಜಯಂತ, ಪಿನಾಕಿ, ಇವರೊಡನೆ ವಿಶ್ವರೂಪನೂ ಸೇರಿದಾಗ ಹನ್ನೊಂದು ಮಂದಿಯಾಗುತ್ತಾರೆ. ಇವರೆಲ್ಲರೂ ಅಪರಾಜಿತರೆನಿಸಿದ್ದಾರೆ. ಅಷ್ಟವಸುಗಳು ಯಾರೆಂಬುದನ್ನು ನಾನು ಹಿಂದೆಯೇ ಹೇಳಿರುತ್ತೇನೆ.
ಏತ ಏವಂವಿಧಾ ದೇವಾ ಮನೋರೇವ ಪ್ರಜಾಪತೇಃ |
ತೇ ಚ ಪೂರ್ವೇ ಸುರಾಶ್ಚೇತಿ ದ್ವಿವಿಧಾಃ ಪಿತರಃ ಸ್ಮೃತಾಃ ॥ 20 ॥
ಈ ದೇವತೆಗಳೆಲ್ಲರೂ ಮನುವಿನಿಂದಲೇ ಹುಟ್ಟಿದವರು. ಈ ದೇವತೆಗಳಲ್ಲಿ ಸುರರೆಂದು, ಪಿತೃಗಳೆಂದು ಎರಡು ವಿಭಾಗಗಳಿವೆ.
ಶೀಲಯೌವನಯೋಸ್ತ್ವನ್ಯೇ ತಥಾನ್ಯೇ ಸಿದ್ಧಸಾಧ್ಯಯೋಃ |
ಋಭವೋ ಮರುತಶ್ಚೈವ ದೇವಾನಾಂ ಚೋದಿತಾ ಗಣಾಃ ॥ 21 ॥
ಸಿದ್ಧ-ಸಾಧ್ಯರಲ್ಲಿಯೂ ಶೀಲ, ಯೌವನ ಎಂಬ ದೇವತೆಗಳ ಎರಡು ಗುಂಪಿದೆ. ದೇವತೆಗಳನ್ನು ಪೂರ್ವದಲ್ಲಿ ಋಕ್‌ಗಳೆಂದು,

ಮರುತ್ತುಗಳೆಂದು ಎರಡು ಪಂಗಡವನ್ನಾಗಿ ವಿಭಾಗ ಮಾಡಿದ್ದಾರೆ.
ಏವಮೇತೇ ಸಮಾಮ್ನಾತಾ ವಿಶ್ವೇದೇವಾಸ್ತಥಾಶ್ವಿನೌ |
ಆದಿತ್ಯಾಃ ಕ್ಷತ್ರಿಯಾಸ್ತೇಷಾಂ ವಿಶಸ್ತು ಮರುತಸ್ತಥಾ ॥ 22 ॥
ಇದರಂತೆ ವಿಶ್ವೇದೇವತೆಗಳು, ಅಶ್ವಿನೀದೇವತೆಗಳು ಎಂದು ಗುರುತಿಸಲ್ಪಡುತ್ತಿದ್ದರು. ಇವರಲ್ಲಿಯೂ ಆದಿತ್ಯರು ಕ್ಷತ್ರಿಯರೆನಿಸಿದ್ದಾರೆ. ಮರುತ್ತುಗಳು ವೈಶ್ಯರೆನಿಸಿದ್ದಾರೆ.
ಅಶ್ವಿನೌ ತು ಮತೌ ಶೂದ್ರೌ ತಪಸ್ಯುಗ್ರೇ ಸಮಾಹಿತೌ |
ಸ್ಮೃತಾಸ್ತ್ವಂಗಿರಸೋ ದೇವಾ ಬ್ರಾಹ್ಮಣಾ ಇತಿ ನಿಶ್ಚಯಃ |
ಇತ್ಯೇತತ್ ಸರ್ವದೇವಾನಾಂ ಚಾತುರ್ವರ್ಣ್ಯಂ ಪ್ರಕೀರ್ತಿತಮ್ ॥23॥
ಅಶ್ವಿನೀದೇವತೆಗಳಿಬ್ಬರೂ ಶೂದ್ರರೆಂದು ಕರೆಯಲ್ಪಡುತ್ತಾರೆ. ಅವರಿಬ್ಬರೂ ಉಗ್ರವಾದ ತಪಸ್ಸಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಂಗಿರಸ ವಂಶದಲ್ಲಿ ಹುಟ್ಟಿದ ದೇವತೆಗಳನ್ನು ಬ್ರಾಹ್ಮಣರೆನ್ನುತ್ತಾರೆ. ಹೀಗೆ ದೇವತೆಗಳಲ್ಲಿಯೂ ಚಾತುರ್ವರ್ಣ್ಯವು ವ್ಯವಸ್ಥಿತವಾಗಿದೆ.
ಏತಾನ್ ವೈ ಪ್ರಾತರುತ್ಥಾಯ ದೇವಾನ್ಯಸ್ತು ಪ್ರಕೀರ್ತಯೇತ್ |
ಸ್ವಜಾದನ್ಯಕೃತಾಚ್ಚೈವ ಸರ್ವಪಾಪಾತ್ ಪ್ರಮುಚ್ಯತೇ ॥ 24 ॥
ಈ ದೇವತೆಗಳನ್ನು ಪ್ರಾತಃಕಾಲದಲ್ಲಿ ಎದ್ದು ಯಾರು ಸ್ತುತಿಸುತ್ತಾರೋ ಅವರು ತಿಳಿದೋ, ತಿಳಿಯದೆಯೋ ಮಾಡಿದ ತಮ್ಮ ಅರ್ಜಿತವಾದ ಪಾಪಗಳನ್ನು, ತಮಗೆ ಪರರ ಸಂಬಂಧದಿಂದ ಸಂಬಂಧಿಸಿದ ಪಾಪಗಳಿಂದಲೂ ಮುಕ್ತರಾಗುತ್ತಾರೆ.
ಯವಕ್ರೀತೋಽಥ ರೈಭ್ಯಶ್ಚ ಅರ್ವಾವಸುಪರಾವಸೂ |
ಔಶಿಜಶ್ಚೈವ ಕಕ್ಷೀವಾನ್ನಲಶ್ಚಾಂಗಿರಸಃ ಸುತಾಃ ॥ 25 ॥
ಋಷೇರ್ಮೇಧಾತಿಥೇಃ ಪುತ್ರಃ ಕಣ್ವೋ ಬರ್ಹಿಷದಸ್ತಥಾ |
ತ್ರೈಲೋಕ್ಯಭಾವನಾಸ್ತಾತ ಪ್ರಾಚ್ಯಾಂ ಸಪ್ತರ್ಷಯಸ್ತಥಾ ॥ 26 ॥
ಧರ್ಮಪುತ್ರನೇ, ಮಹರ್ಷಿಗಳ ವಾಸಸ್ಥಾನವನ್ನು ಕೇಳು. ಯವಕ್ರೀತ, ರೈಭ್ಯ, ಅರ್ವಾವಸು, ಪರಾವಸು, ಔಶಿಜ, ಕಕ್ಷೀವಾನ್, ಅಂಗಿರಸನ ಮಗನಾದ ನಲ, ಬರ್ಹಿಷದನೆನಿಸಿದ ಮೇಧಾತಿಥಿಯ ಮಗನಾದ ಕಣ್ವ ಈ ಏಳು ಮಂದಿ ಮಹರ್ಷಿಗಳು ಪೂರ್ವದಿಕ್ಕಿನಲ್ಲಿದ್ದಾರೆ. ಇವರು ಮೂರುಲೋಕಗಳನ್ನು ಸೃಷ್ಟಿ ಮಾಡಬಲ್ಲ ಮಹಾಮಹಿಮರು.
ಉನ್ಮುಚೋ ವಿಮುಚಶ್ಚೈವ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್ |
ಪ್ರಮುಚಶ್ಚೇಧ್ಮವಾಹಶ್ಚ ಭಗವಾಂಶ್ಚ ದೃಢವ್ರತಃ ॥ 27 ॥
ಮಿತ್ರಾವರುಣಯೋಃ ಪುತ್ರಸ್ತಥಾಗಸ್ತ್ಯಃ ಪ್ರತಾಪವಾನ್ |
ಏತೇ ಬ್ರಹ್ಮರ್ಷಯೋ ನಿತ್ಯಮಾಶ್ರಿತಾ ದಕ್ಷಿಣಾಂ ದಿಶಮ್ ॥ 28 ॥
ಉನ್ಮುಚ, ವಿಮುಚ, ವೀರ್ಯವಂತನಾದ ಸ್ವಸ್ತ್ಯಾತ್ರೇಯ, ಪ್ರಮುಚ, ಇಧ್ಮವಾಹ, ಪೂಜ್ಯನಾದ ದೃಢವ್ರತ, ಮಿತ್ರಾವರುಣರ ಪುತ್ರಹಾಗೂ ಮಹಾತೇಜಸ್ವಿಯಾದ ಅಗಸ್ತ್ಯ - ಈ ಏಳು ಮಂದಿ ಬ್ರಹ್ಮರ್ಷಿಗಳು ನಿತ್ಯವೂ ದಕ್ಷಿಣ ದಿಕ್ಕನ್ನು ಆಶ್ರಯಿಸಿದ್ದಾರೆ.
ರುಷದ್ಗುಃ ಕವಷೋ ಧೌಮ್ಯಃ ಪರಿವ್ಯಾಧಶ್ಚ ವೀರ್ಯವಾನ್ |
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹರ್ಷಯಃ ॥ 29 ॥
ಅತ್ರೇಃ ಪುತ್ರಶ್ಚ ಭಗವಾಂಸ್ತಥಾ ಸಾರಸ್ವತಃ ಪ್ರಭುಃ |
ಏತೇ ನವ ಮಹಾತ್ಮಾನಃ ಪಶ್ಚಿಮಾಮಾಶ್ರಿತಾ ದಿಶಮ್ ॥ 30 ॥
ರುಷದ್ಗು, ಕವಷ, ಧೌಮ್ಯ, ವೀರ್ಯವಂತನಾದ ಪರಿವ್ಯಾಧ, ಏಕತ, ದ್ವಿತ, ತ್ರಿತ ಎಂಬ ಮಹರ್ಷಿಗಳು, ಅತ್ರಿಪುತ್ರನಾದ ಭಗವಾನ್ ಸಾರಸ್ವತನು - ಈ ಒಂಬತ್ತು ಮಂದಿ ಮಹಾತ್ಮರು ಪಶ್ಚಿಮದಿಕ್ಕನ್ನು ಆಶ್ರಯಿಸಿರುತ್ತಾರೆ.
ಆತ್ರೇಯಶ್ಚ ವಸಿಷ್ಠಶ್ಚ ಕಶ್ಯಪಶ್ಚ ಮಹಾನೃಷಿಃ |
ಗೌತಮಃ ಸಭರದ್ವಾಜೋ ವಿಶ್ವಾಮಿತ್ರೋಽಥ ಕೌಶಿಕಃ ॥ 31 ॥
ತಥೈವ ಪುತ್ರೋ ಭಗವಾನೃಚೀಕಸ್ಯ ಮಹಾತ್ಮನಃ |
ಜಮದಗ್ನಿಶ್ಚ ಸಪ್ತೈತೇ ಉದೀಚೀಂ ದಿಶಮಾಶ್ರಿತಾಃ ॥ 32 ॥
ಆತ್ರೇಯ, ವಸಿಷ್ಠ, ಮಹಾತ್ಮನಾದ ಕಶ್ಯಪ, ಗೌತಮ, ಭರದ್ವಾಜ, ಕುಶಿಕ ವಂಶದ ವಿಶ್ವಾಮಿತ್ರ, ಋಚೀಕಪುತ್ರನಾದ ಜಮದಗ್ನಿ - ಈ ಏಳು ಮಂದಿ ಉತ್ತರದಿಕ್ಕನ್ನು ಆಶ್ರಯಿಸಿದ್ದಾರೆ.
ಏತೇ ಪ್ರತಿದಿಶಂ ಸರ್ವೇ ಕೀರ್ತಿತಾಸ್ತಿಗ್ಮತೇಜಸಃ |
ಸಾಕ್ಷಿಭೂತಾ ಮಹಾತ್ಮಾನೋ ಭುವನಾನಾಂ ಪ್ರಭಾವನಾಃ ॥ 33 ॥
ಈ ಮಹಾತ್ಮರೆಲ್ಲರೂ ತಮ್ಮ ತೀಕ್ಷ್ಣ ತೇಜಸ್ಸಿನಿಂದ ದಿಕ್ಪಾಲಕ ಋಷಿಗಳೆನಿಸಿಕೊಂಡಿದ್ದಾರೆ. ಲೋಕಕ್ಕೆಲ್ಲಾ ಸಾಕ್ಷೀಭೂತರಾಗಿ ಲೋಕಗಳಿಗೂ ಉತ್ಪಾದಕರಾಗಿದ್ದಾರೆ.
ಏವಮೇತೇ ಮಹಾತ್ಮಾನಃ ಸ್ಥಿತಾಃ ಪ್ರತ್ಯೇಕಶೋ ದಿಶಃ |
ಏತೇಷಾಂ ಕೀರ್ತನಂ ಕೃತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ 34 ॥
ಇವರೆಲ್ಲ ಮಹಾತ್ಮರು ಪ್ರತ್ಯೇಕ ಪ್ರತ್ಯೇಕ ದಿಕ್ಕುಗಳಲ್ಲಿದ್ದಾರೆ. ಇವರ ಹೆಸರುಗಳನ್ನು ಹೇಳಿದಾಗ ಸಮಸ್ತ ಪಾಪಗಳು ಬಿಡುಗಡೆ ಹೊಂದುತ್ತವೆ.
ಯಸ್ಯಾಂ ಯಸ್ಯಾಂ ದಿಶಿ ಹ್ಯೇತೇ ತಾಂ ದಿಶಂ ಶರಣಂ ಗತಃ |
ಮುಚ್ಯತೇ ಸರ್ವಪಾಪೇಭ್ಯಃ ಸ್ವಸ್ತಿಮಾಂಶ್ಚ ಗೃಹಾನ್ ವ್ರಜೇತ್ ॥ 35॥

ಯಾವ ಯಾವ ದಿಕ್ಕುಗಳಲ್ಲಿ ಇವರಿದ್ದಾರೆ ಎಂದು ತಿಳಿದು ಸಾಧಕರು ಆಯಾ ದಿಕ್ಕನ್ನು ಆಶ್ರಯಿಸುತ್ತಾರೋ ಅವರು ಸಮಸ್ತ ಪಾಪಗಳಿಂದ ಮುಕ್ತರಾಗಿ ಕ್ಷೇಮವನ್ನು ಹೊಂದಿ ಮನೆಗಳಲ್ಲಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಪಂಚತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತಾರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಹರಿಯ ವರಾಹಾವತಾರ
ಚರಿತ್ರೆಯನ್ನು ನಿರೂಪಿಸಿದುದು.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಯುಧಿ ಸತ್ಯಪರಾಕ್ರಮ |
ಶ್ರೋತುಮಿಚ್ಛಾಮಿ ಕಾರ್ತ್ಸ್ನ್ಯೇನ ಕೃಷ್ಣಮವ್ಯಯಮೀಶ್ವರಮ್ ॥ 1 ॥
ಯುಧಿಷ್ಠಿರ ಪಿತಾಮಹನೇ, ಮಹಾಪ್ರಾಜ್ಞನೇ, ಯುದ್ಧದಲ್ಲಿ ಸತ್ಯವಾದ ಪರಾಕ್ರಮವುಳ್ಳವನೇ, ಅವ್ಯಯ ಈಶ್ವರನಾದ ಕೃಷ್ಣನ ಸಮಗ್ರ ಮಹಿಮೆಯನ್ನು ನಿನ್ನಿಂದ ಕೇಳಲು ಬಯಸುತ್ತೇನೆ.
ಯಚ್ಚಾಸ್ಯ ತೇಜಃ ಸುಮಹದ್ ಯಚ್ಚ ಕರ್ಮ ಪುರಾ ಕೃತಮ್ |
ತನ್ಮೇ ಸರ್ವಂ ಯಥಾತತ್ತ್ವಂ ಬ್ರೂಹಿ ತ್ವಂ ಪುರುಷರ್ಷಭ ॥ 2 ॥
ಭಗವಂತನ ಅದ್ಭುತವಾದ ತೇಜಸ್ಸು, ಕೃಷ್ಣನು ಹಿಂದೆ ನಡೆಸಿದ ಅಸಾಧಾರಣ ಕಾರ್ಯಗಳು ಇವೆಲ್ಲವನ್ನೂ ಯಥಾವತ್ತಾಗಿ ಪುರುಷರ್ಷಭನಾದ ನೀನು ನನಗೆ ಹೇಳು.
ತಿರ್ಯಗ್ಯೋನಿಗತೋ ರೂಪಂ ಕಥಂ ಧಾರಿತವಾನ್ ಪ್ರಭುಃ |
ಕೇನ ಕಾರ್ಯನಿಸರ್ಗೇಣ ತಮಾಖ್ಯಾಹಿ ಮಹಾಬಲ ॥ 3 ॥
ಸರ್ವಸಮರ್ಥನಾದ ಭಗವಂತನು ತಿರ್ಯಗ್ಯೋನಿಯ (ನೀಚ) ರೂಪವನ್ನು ಹೇಗೆ ಹೊಂದಿದನು? ಯಾವ ಕಾರ್ಯದ ನಿಮಿತ್ತವಾಗಿ ಆ ರೂಪವನ್ನು ಪಡೆದನೋ ಅದನ್ನು ನನಗೆ ಮಹಾಬಲನೇ, ತಿಳಿಸು.
ಭೀಷ್ಮಃ
ಪುರಾಽಹಂ ಮೃಗಯಾಂ ಯಾತೋ ಮಾಕಂಡೇಯಾಶ್ರಮೇ ಸ್ಥಿತಃ |
ತತ್ರಾಪಶ್ಯಂ ಮುನಿಗಣಾನ್ ಸಮಾಸೀನಾನ್ ಸಹಸ್ರಶಃ ॥ 4 ॥
ಭೀಷ್ಮ ಧರ್ಮಪುತ್ರನೇ, ಹಿಂದೊಮ್ಮೆ ನಾನು ಬೇಟೆಗಾಗಿ ಹೊರಟು ಮಾರ್ಕಂಡೇಯರ ಆಶ್ರಮದ ಬಳಿ ಆಗಮಿಸಿದೆನು. ಅಲ್ಲಿ ಸಾವಿರಾರು ಮಂದಿ ಮಹರ್ಷಿಗಳು ಗುಂಪುಗೂಡಿದ್ದನ್ನು ನಾನು ನೋಡಿದೆನು.
ತತಸ್ತೇ ಮಧುಪರ್ಕೇಣ ಪೂಜಾಂ ಚಕ್ರುರಥೋ ಮಯಿ |
ಪ್ರತಿಗೃಹ್ಯ ಚ ತಾಂ ಪೂಜಾಂ ಪ್ರತ್ಯನಂದಮೃಷೀನಹಮ್ ॥ 5 ॥
ನನ್ನನ್ನು ಕಂಡ ಕೂಡಲೇ ಆ ಋಷಿವರ್ಗವು ನನ್ನನ್ನು ಮಧುಪರ್ಕಾದಿಗಳಿಂದ ಸತ್ಕರಿಸಿತು. ನಾನು ಅವರ ಸತ್ಕಾರವನ್ನೆಲ್ಲ ಸ್ವೀಕರಿಸಿ ಅವರನ್ನೂ ಯಥೋಚಿತವಾಗಿ ಪೂಜಿಸಿದೆನು.
ಕಥೈಷಾ ಕಥಿತಾ ತತ್ರ ಕಶ್ಯಪೇನ ಮಹರ್ಷಿಣಾ |
ಮನಃಪ್ರಹ್ಲಾದಿನೀಂ ದಿವ್ಯಾಂ ತಾಮಿಹೈಕಮನಾಃ ಶೃಣು ॥ 6 ॥
ಆ ಕಾಲದಲ್ಲಿ ಅಲ್ಲಿದ್ದ ಕಶ್ಯಪಮುನಿಯು ಮನಸ್ಸಿಗೆ ಸಂತೋಷಕರವಾದ ಭಗವಂತನ ಚರಿತ್ರೆಯನ್ನು ಅಲ್ಲಿನ ಮಹರ್ಷಿಗಳಿಗೆ ಹೇಳುತ್ತಿದ್ದರು. ಅದನ್ನು ನಿನಗೆ ಹೇಳುತ್ತೇನೆ. ಇಲ್ಲೇ ಮನಸ್ಸಿಟ್ಟು ಕೇಳು.
ಪುರಾ ದಾನವಮುಖ್ಯಾ ಹಿ ಕ್ರೋಧಲೋಭಸಮನ್ವಿತಾಃ |
ಬಲೇನ ಮತ್ತಾಃ ಶತಶೋ ನರಕಾದ್ಯಾಃ ಮಹಾಸುರಾಃ ॥ 7 ॥
ಹಿಂದೆ ನರಕಾಸುರನೇ ಮೊದಲಾದ ಬಲಗರ್ವಿತರಾಗಿದ್ದ ಪ್ರಮುಖ ದಾನವರು ದೇವತೆಗಳ ಭಾಗ್ಯಸಮೃದ್ಧಿಯನ್ನು ನೋಡಿ ಕ್ರೋಧ-ಲೋಭಗಳಿಂದ ತಮ್ಮ ಬಲದಿಂದಲೂ ಮತ್ತರಾಗಿ ದೇವತೆಗಳನ್ನು ನಿಗ್ರಹಿಸಬೇಕೆಂದು ಯತ್ನಿಸುತ್ತಿದ್ದರು.
ತಥೈವ ಚಾನ್ಯೇ ಬಹವೋ ದಾನವಾ ಯುದ್ಧದುರ್ಮದಾಃ |
ನ ಸನ್ವಂತೇ ಸ್ಮ ದೇವಾನಾಂ ಸಮೃದ್ಧಿಂ ತಾಮನುತ್ತಮಾಮ್ ॥ 8 ॥
ಅವರಂತೆ ಯುದ್ಧದುರ್ಮದರಾದ ಅನೇಕ ದಾನವರು ದೇವತೆಗಳ ಮಿಗಿಲಾಗಿರುವ ಸಮೃದ್ಧಿಯನ್ನು ನೋಡಿ ಸಹಿಸುತ್ತಿರಲಿಲ್ಲ.
ನರಕಾದ್ಯಾ ಮಹಾಘೋರಾ ಹಿರಣ್ಯಾಕ್ಷಮುಪಾಶ್ರಿತಾಃ |
ಉದ್ಯೋಗಂ ಪರಮಂ ಚಕ್ರುರ್ದೇವಾನಾಂ ನಿಗ್ರಹೇ ತದಾ ॥ 9 ॥
ನರಕಾಸುರನೇ ಮೊದಲಾದ ಘೋರದೈತ್ಯರು ಹಿರಣ್ಯಾಕ್ಷನನ್ನು ಆಶ್ರಯಿಸಿದರು. ದೇವತೆಗಳನ್ನು ನಿಗ್ರಹಿಸಬೇಕೆಂದು ಮಹಾಪ್ರಯತ್ನವನ್ನು ಆ ಸಂದರ್ಭದಲ್ಲಿ ಮಾಡಿದರು.
ನಿಯುತಂ ವತ್ಸರಾಣಾಂ ತು ವಾಯುಭಕ್ಷ್ಯೋಽಭವತ್ತದಾ |
ಹಿರಣ್ಯಾಕ್ಷೋ ಮಹಾರೌದ್ರೋ ಲೇಭೇ ದೇವಾತ್ ಪಿತಾಮಹಾತ್ |
ವರಾನಚಿಂತ್ಯಾನತುಲಾನ್ ಶತಶೋಽಥ ಸಹಸ್ರಶಃ ॥ 10 ॥
ಈ ಉದ್ದೇಶದಿಂದ ಇಪ್ಪತ್ತು ಸಾವಿರ ವರ್ಷಗಳ ಕಾಲ ಗಾಳಿಯನ್ನೇ ಸ್ವೀಕರಿಸುತ್ತಾ ಉಗ್ರವಾದ ತಪಸ್ಸನ್ನು ಮಾಡಿ ಹಿರಣ್ಯಾಕ್ಷನು

ಅತ್ಯಂತ ಪ್ರಬಲನಾದನು. ಅಚಿಂತ್ಯವಾದ, ಅತುಲವಾದ ನೂರಾರು ಸಾವಿರಾರು ವರಗಳನ್ನು ಚತುರ್ಮುಖ ಬ್ರಹ್ಮದೇವನಿಂದಲೇ ಪಡೆದುಕೊಂಡನು.
ದಾನವೈರರ್ದ್ಯಮಾನಾಸ್ತು ದೇವಾ ದೇವರ್ಷಯಸ್ತಥಾ |
ನ ಶರ್ಮ ಲೇಭಿರೇ ರಾಜನ್ ಕ್ಲಿಶ್ಯಮಾನಾಸ್ತತಸ್ತತಃ ॥ 11 ॥
ರಾಜನೇ, ಹಿರಣ್ಯಾಕ್ಷರೇ ಪ್ರಮುಖರಾದ ದಾನವರಿಂದ ಪೀಡಿತರಾದ ದೇವತೆಗಳು, ದೇವರ್ಷಿಗಳು ತುಂಬಾ ಕ್ಲೇಶವನ್ನು ಹೊಂದಿದವರಾಗಿ ಎಲ್ಲಿ ಓಡಿದರೂ ಶಾಂತಿಯನ್ನು ಅವರು ಹೊಂದಲಿಲ್ಲ.
ಪೃಥಿವೀಮಾರ್ತರೂಪಾಂ ತೇ ಸಮಪಶ್ಯನ್ ದಿವೌಕಸಃ |
ದಾನವೈರಭಿಸಂಕೀರ್ಣಾಂ ಘೋರರೂಪೈರ್ಮಹಾಬಲೈಃ |
ಭಾರಾರ್ತಾಮಪ್ರಹೃಷ್ಟಾಂ ಚ ದುಃಖಿತಾಂ ಸನ್ನಿಮಜ್ಜತೀಮ್ ॥ 12 ॥
ದೇವತೆಗಳೆಲ್ಲರೂ ಈ ದೈತ್ಯನ ಉಪಟಳದಿಂದಾಗಿ ಸಮಗ್ರ ಭೂಮಂಡಲವೇ ಆರ್ತರೂಪವಾದುದನ್ನು ಕಂಡರು. ಮಹಾಬಲಿಷ್ಠರಾದ, ಘೋರರೂಪಿಗಳಾದ ದಾನವರಿಂದ ತುಂಬಿಹೋಗಿರುವ ಮೇದಿನಿಯು ದುಷ್ಕರ ಭಾರದಿಂದ ದುಃಖಿತಳಾಗಿ ಕುಗ್ಗಿಹೋಗುತ್ತಿರುವ ದೃಶ್ಯವನ್ನು ನೋಡಿದರು.
ಗೃಹೀತ್ವಾ ಪೃಥಿವೀ ದೇವೀ ಪಾತಾಲೇ ನ್ಯವಸತ್ತದಾ |
ತತಸ್ತ್ರೈಲೋಕ್ಯಮಖಿಲಂ ನಿರೋಷಧಿಗಣಾನ್ವಿತಮ್ |
ನಿಃಸ್ವಾಧ್ಯಾಯವಷಟ್ಕಾರಮಭೂತ್ ಸರ್ವಂ ಸಮಂತತಃ ॥ 13 ॥
ಹಿರಣ್ಯಾಕ್ಷನು ಸಮಗ್ರ ಭೂಮಿಯನ್ನು ನೀರಿನಲ್ಲಿ ಮುಳುಗಿಸಿದನು. ಆ ಮುಳುಗಿದ ಭೂಮಿಯಲ್ಲಿರುವ ಓಷಧಿಗಳನ್ನು ದೈತ್ಯರು ತಿಂದುಹಾಕುತ್ತಿದ್ದರು. ಇದರಿಂದ ಹೆದರಿದ ಪೃಥಿವಿಯ ಅಭಿಮಾನಿನಿಯಾದ ಭೂದೇವಿಯು ಸೂಕ್ಷ್ಮರೂಪವನ್ನು ತಾಳಿ ಪಾತಾಳ ರೂಪದ ಒಂದು ಮೂಲೆಯಲ್ಲಿ ವಾಸಿಸಲಾರಂಭಿಸಿದಳು. ಆ ಸಂದರ್ಭದಲ್ಲಿ ಆ ಭೂಮಿಯಲ್ಲಿ ಎಲ್ಲಿಯೂ ಬೆಳೆಯು ಬೆಳೆಯಲಿಲ್ಲ. ಅಧ್ಯಯನಾದಿ ಕರ್ಮಗಳೂ ನಡೆಯಲಿಲ್ಲ. ಯಾಗಗಳೂ ಇಲ್ಲ. ಎಲ್ಲೆಡೆಯೂ ಭೂಮಿಯು ಎಲ್ಲದರಿಂದಲೂ ಬಂಜರಾಯಿತು.
ಅಥಾದಿತೇಯಾಃ ಸಂತ್ರಸ್ತಾಃ ಬ್ರಹ್ಮಾಣಮಿದಮಬ್ರುವನ್ |
ಕಥಂ ಶಕ್ಷ್ಯಾಮಹೇ ಬ್ರಹ್ಮನ್ ದಾನವೈರಭಿಮರ್ದನಮ್ ॥ 14 ॥
ಆ ಸಂದರ್ಭದಲ್ಲಿ ದೇವತೆಗಳು ಸಂತ್ರಸ್ತರಾಗಿ ಚತುರ್ಮುಖ ಬ್ರಹ್ಮನಲ್ಲಿ ಮೊರೆಯಿಟ್ಟು ಹೀಗೆ ಪ್ರಾರ್ಥಿಸಿದರು: ಎಲೈ ಪ್ರಭುವೇ, ಸಮಗ್ರ ಭೂಮಂಡಲವೇ ದಾನವರಿಂದ ಅರ್ದಿತ(ಪೀಡಿತ)ವಾಗಿದೆ. ಇದನ್ನು ನಾವು ಹೇಗೆ ತಾನೆ ಸಹಿಸೋಣ?
ಹಿರಣ್ಯಾಕ್ಷೇಣ ಭಗವನ್ ಗೃಹೀತೇಯಂ ವಸುಂಧರಾ |
ನ ಶಕ್ಷ್ಯಾಮೋ ವಯಂ ತತ್ರ ಪ್ರವೇಷ್ಟುಂ ಜಲದುರ್ಗಮಮ್ ॥ 15 ॥
ಪೂಜ್ಯನೇ, ಭೂಮಿಯನ್ನು ಹಿರಣ್ಯಾಕ್ಷನು ಹಿಡಿದು ಸಮುದ್ರದಲ್ಲಿ ಹೊಕ್ಕಿದ್ದಾನೆ. ಆ ಮಹಾಜಲದೊಳಗೆ ಪ್ರವೇಶಿಸಲು ನಾವ್ಯಾರೂ ಸಮರ್ಥರಲ್ಲ.
ತಾನಾಹ ಭಗವಾನ್ ಬ್ರಹ್ಮಾ ಮುನಿರೇವ ಪ್ರಸಾದ್ಯತಾಮ್ |
ಅಗಸ್ತ್ಯೋಽಸೌ ಮಹಾತೇಜಾಃ ಪಾತುಂ ತಜ್ಜಲಮಂಜಸಾ ॥ 16 ॥
ಅವರನ್ನು ಕುರಿತು ಬ್ರಹ್ಮನು ಹೇಳಿದನು: ಎಲೈ ದೇವತೆಗಳಿರಾ, ಮಹಾತೇಜಸ್ವಿಯಾದ ಅಗಸ್ತ್ಯ ಮುನಿಯು ಆ ಸಮುದ್ರಜಲವನ್ನು ಸಮಗ್ರವಾಗಿ ಪಾನ ಮಾಡಲು ಸಮರ್ಥನಾಗಿದ್ದಾನೆ. ಅವನನ್ನು ಸಂತೋಷಗೊಳಿಸಿ ಪ್ರಾರ್ಥಿಸಿರಿ.
ತಥೇತಿ ಚೋಕ್ತ್ವಾ ತೇ ದೇವಾ ಮುನಿಮೂಚುರ್ಮುದಾನ್ವಿತಾಃ |
ತ್ರಾಯಸ್ವ ಲೋಕಾನ್ ವಿಪ್ರರ್ಷೇ ಜಲಮೇತತ್ ಕ್ಷಯಂ ನಯ ॥ 17 ॥
ದೇವತೆಗಳು ಬ್ರಹ್ಮನ ಮಾತಿನಿಂದ ಸಂತುಷ್ಟರಾಗಿ ಹಾಗೆಯೇ ಆಗಲಿ ಎಂದು ಹೇಳಿ ಅಗಸ್ತ್ಯಮುನಿಯ ಬಳಿ ಸಾಗಿದರು. ವಿಪ್ರರ್ಷಿಯೇ, ತುಂಬಿದ ನೀರನ್ನೆಲ್ಲ ನಾಶ ಮಾಡಿ ಲೋಕವನ್ನು ರಕ್ಷಿಸು ಎಂದು ಪ್ರಾರ್ಥಿಸಿದರು.
ತಥೇತಿ ಚೋಕ್ತ್ವಾ ಭಗವಾನ್ ಕಾಲಾನಲಸಮದ್ಯುತಿಃ |
ಧ್ಯಾಯನ್ ಜಲಾದನಿವಹಾನ್ ತದ್ರೂಪೇಣ ಜಲಮ್ ಪಪೌ ॥ 18 ॥
ಪ್ರಳಯಕಾಲದಂತೆ ಕಾಂತಿಯುಳ್ಳ ಅಗಸ್ತ್ಯನು ದೇವತೆಗಳ ಪ್ರಾರ್ಥನೆಯಂತೆ ಹಾಗೆಯೇ ಆಗಲೆಂದು ಮನಸ್ಸಿನಲ್ಲಿ ಹರಿಯನ್ನು ಧ್ಯಾನಿಸುತ್ತಾ ಮೇಘಗಳ ರೂಪದಲ್ಲಿ ನಿಂತು ಸಮುದ್ರದ ನೀರನ್ನು ಪಾನ ಮಾಡಿದನು.
ವ್ಯಾಖ್ಯಾನ ವಿಶೇಷ ನಾವಿರುವ ಭೂಭಾಗದಿಂದ ರಸಾತಳವು ಕೆಳಭಾಗದಲ್ಲಿ ಅರವತ್ತುಸಾವಿರ ಯೋಜನಾತ್ಮಕವಾದ ಪ್ರದೇಶದಲ್ಲಿದೆ. ಅದರ ಕೆಳಗಡೆ ಪರ್ವತಗಳಿಂದ ಕೂಡಿದ ಈ ಭೂಮಿಯು ಹಿರಣ್ಯಾಕ್ಷನಿಂದ ಕೊಂಡೊಯ್ಯಲ್ಪಟ್ಟಿದೆ. ಘನೋದಕದ ಒಳಗಡೆ ಲಕ್ಷಯೋಜನ ಪರ್ಯಂತ ಕೆಳಗಿರುವ ಈ ಭೂಮಿಯು ಮುಳುಗಿ ಹೋಯಿತು ಎಂದು ಅರ್ಥ. ಭೂಮಿಯ ಊರ್ಧ್ವಭಾಗವು ನಾವು ನಿಂತಿರುವ ಭಾಗದಿಂದ ಗಮನಿಸಿದಾಗ ಅರವತ್ತು ಸಾವಿರ ಯೋಜನ ಕೆಳಗಡೆ ಇದೆ. ಆದ್ದರಿಂದ ಹಿರಣ್ಯಾಕ್ಷನು ರಸಾತಳದಲ್ಲಿ ಭೂಮಿಯನ್ನು ಅಡಗಿಸಿಟ್ಟ ಎಂದರೆ ಘನೋದಕದಲ್ಲಿ ಮುಳುಗಿದ ಭೂಮಿಯ ಶಿಖರವು ರಸಾತಳದಲ್ಲಿ ಕಾಣಿಸುತ್ತಿತ್ತು ಎಂದು ಅರ್ಥ. ಇಲ್ಲದಿದ್ದರೆ ಏಳುಕೋಟಿ ಹದಿನಾಲ್ಕು ಲಕ್ಷ ವಿಸ್ತಾರವುಳ್ಳ ಭೂಮಿಯು ಹತ್ತು ಸಾವಿರ ಯೋಜನ ಪರಿಮಿತಿಯುಳ್ಳ; ಭೂಮಿಯ ಹೊಂಡದಂತೆ ಇರುವ ರಸಾತಳಲೋಕದಲ್ಲಿ ಹೇಗೆ ಪ್ರವೇಶಿಸಲು ಸಾಧ್ಯ? ಆದ್ದರಿಂದ ಹಿರಣ್ಯಾಕ್ಷನು ಭೂಮಿಯನ್ನು ಮುಳುಗಿಸಿಟ್ಟಿದ್ದು ಘನೋದಕದಲ್ಲಿ. ಅದರ ಶಿಖರಭಾಗವು ರಸಾತಳಲೋಕದಲ್ಲಿ ಕಾಣಿಸುತ್ತಿತ್ತು ಎಂದು ಅಭಿಪ್ರಾಯ. ಇಲ್ಲದಿದ್ದರೆ ಹತ್ತು ಸಾವಿರ ಯೋಜನ ಪರಿಮಿತಿಯುಳ್ಳ ರಸಾತಳದಲ್ಲಿ ಏಳು ಕೋಟಿ ಹದಿನಾಲ್ಕು ಲಕ್ಷ ಪರಿಮಿತಿಯ ಭೂಮಿಯನ್ನು ಅಡಗಿಸುವುದು ಅಸಂಭವವಾಗುತ್ತದೆ. ಆದ್ದರಿಂದ ಭೂಮಿಯನ್ನು ಘನೋದಕದಲ್ಲಿ ಮುಳುಗಿಸಿಟ್ಟಾಗ ಆ ನೀರು ಅರವತ್ತು ಸಾವಿರ ಯೋಜನ ಈ ಭೂಕಕ್ಷೆಯಿಂದ ಕೆಳಭಾಗದಲ್ಲಿರುವ ರಸಾತಳದಲ್ಲಿ ಕಾಣಿಸಿತು. ಆ ಭೂಮಿಯ ಮೇಲ್ಭಾಗದಲ್ಲಿ ಘನೋದಕದ

ನೀರೆಲ್ಲವೂ ತುಂಬಿ ಹೋಯಿತು. ವಿಸ್ತಾರವಾಗಿ ಭೂಮಿಯ ಮೇಲ್ಭಾಗದಲ್ಲಿ ತುಂಬಿರುವ ನೀರನ್ನು ಅಗಸ್ತ್ಯರು ಮೇಘ ರೂಪದಲ್ಲಿ ನಿಂತು ಪಾನ ಮಾಡಿದರು. ಹೀಗಿದ್ದಾಗ ಆ ಭೂಮಿಯು ಕಣ್ಣಿಗೆ ಕಾಣಿಸುತ್ತಿತ್ತೆ ವಿನಾ ತನ್ನ ಕಕ್ಷೆಯನ್ನು ಸೇರಿರಲಿಲ್ಲ. ಆ ಪ್ರಸಂಗದಲ್ಲಿ ವರಾಹರೂಪಿಯಾದ ಪರಮಾತ್ಮನು ಘನೋದಕದ ಪ್ರದೇಶದಲ್ಲಿ ಪ್ರವೇಶಿಸಿ ಘನೋದಕ ಸಮುದ್ರದಲ್ಲಿ ಅಡಕವಾಗಿರುವ ಭೂಮಿಯನ್ನು, ಆ ಜಲದಲ್ಲಿಯೇ ವಿಹರಿಸಿ ತನ್ನ ಕೋರೆದಾಡೆಯಿಂದ ಭೂಮಿಯನ್ನು ಧರಿಸಿಕೊಂಡು ಮೇಲೆ ಆಗಮಿಸಲು ಆರಂಭಿಸಿದನು. ಆ ಸಂದರ್ಭದಲ್ಲಿ ಭೂಮಿಯ ಒಳಗಡೆ ಸೇರಿರುವ ಹಿರಣ್ಯಾಕ್ಷನು ವರಾಹನ ಬಳಿ ಯುದ್ಧಕ್ಕೆ ಆಗಮಿಸಿದನು. ಅವನ ಪರಿವಾರದವರೂ ಯುದ್ಧಕ್ಕೆ ಆಗಮಿಸಿದರು. ಆ ಹಿರಣ್ಯಾಕ್ಷನನ್ನು, ಅವನಿಗೆ ಸಂಬಂಧಿಸಿದ ದೈತ್ಯರನ್ನು ಸಂಹರಿಸಿ ಅದೇ ಭೂಮಿಯನ್ನು ಯಥಾಸ್ಥಾನಕ್ಕೆ ತಂದು ಕಕ್ಷೆಯಲ್ಲಿ ನಿಲ್ಲಿಸಿ ಈ ಭೂಮಂಡಲದಲ್ಲಿ ಕೊನೆಯ ಭಾಗದಲ್ಲಿರುವ ಘನೀಭೂತವಾದ ತಮಸ್ಸನ್ನು, ಕತ್ತಲೆಯನ್ನು ತೆಗೆದುಕೊಂಡು ಇನ್ನಾರೂ ಹಂದಾಡಿಸದಂತೆ ಅತ್ಯಂತ ದೃಢವಾಗಿ ಭೂಮಿಯನ್ನು ಕತ್ತಲೆಯಿಂದ ಘಟ್ಟಿಗೊಳಿಸಿ ಜೋಡಿಸಿದನು. ಆದ್ದರಿಂದ ವರಾಹರೂಪಿಯಾದ ಭಗವಂತನು ಸಮುದ್ರದಲ್ಲಿ ವಿಹಾರ ಮಾಡಿ ಭೂಮಿಯನ್ನು ತಂದ ಎಂಬ ಕಥೆಯ ಆಧಾರದಲ್ಲಿ ಅಗಸ್ತ್ಯರ ಜಲಪಾನವಾಗಲಿ ವಿರುದ್ಧವಾಗುವುದಿಲ್ಲ.

ಶೋಷಿತೇ ತು ಸಮುದ್ರೇ ಚ ದೇವಾಃ ಸರ್ಷಿಪುರೋಗಮಾಃ |
ಬ್ರಹ್ಮಾಣಂ ಪ್ರಣಿಪತ್ಯೋಚುರ್ಮುನಿನಾ ಶೋಷಿತಂ ಜಲಮ್ |
ಇತಿ ಭೂಯಃ ಸಮಾಚಕ್ಷ್ವ ಕಿಂ ಕರಿಷ್ಯಾಮಹೇ ವಿಭೋ ॥ 19 ॥

ಅಗಸ್ತ್ಯರು ದೇವತೆಗಳ ಪ್ರಾರ್ಥನೆಯಂತೆ ಭೂಮಿಯ ಮೇಲ್ಭಾಗದಲ್ಲಿರುವ ನೀರಿನ ಸಮುದ್ರವನ್ನು ತನ್ನ ಸಾಮರ್ಥ್ಯಾತಿಶಯದಿಂದ ಒಣಗಿಸಿದ ಬಳಿಕ ಋಷಿಗಳಿಂದ ಕೂಡಿರುವ ದೇವತೆಗಳೆಲ್ಲರೂ ಚತುರ್ಮುಖ ಬ್ರಹ್ಮನ ಬಳಿ ಪುನಃ ಸಾಗಿ ನಮಸ್ಕರಿಸಿ ಹೀಗೆ ಕೇಳಿದರು: ಬ್ರಹ್ಮನೇ, ಅಗಸ್ತ್ಯಮುನಿಗಳು ಜಲವನ್ನು ಒಣಗಿಸಿದ್ದಾರೆ. ಆದರೆ ಭೂಮಿಯು ಇನ್ನೂ ಕೆಳಭಾಗದಲ್ಲಿಯೇ ಇದೆ. ಮುಂದೆ ಏನು ಮಾಡಬೇಕೆಂಬುದರ ಬಗ್ಗೆ ನೀನೇ ನಮಗೆ ತಿಳಿಸು.

ಸ್ವಯಂಭೂಸ್ತಾನುವಾಚೇದಂ ನಿಸೃಷ್ಟೋಽತ್ರ ವಿಧಿರ್ಮಯಾ |
ತೇ ವರೇಣಾಭಿಸಂಪನ್ನಾ ಬಲೇನ ಚ ಮದೇನ ಚ ॥ 20 ॥
ನಾವಬುದ್ಧ್ಯಂತಿ ಸಮ್ಮೂಢಾ ವಿಷ್ಣುಮವ್ಯಕ್ತದರ್ಶನಮ್ |
ವರಾಹರೂಪಿಣಂ ದೇವಮಧೃಷ್ಯಮಮರೈರಪಿ ॥ 21 ॥

ಬ್ರಹ್ಮನು ಹೇಳುತ್ತಾನೆ ಎಲೈ ದೇವತೆಗಳಿರಾ, ಮುಂದೆ ನಡೆಯಬೇಕಾದ ಕಾರ್ಯವೆಲ್ಲವೂ ಮೊದಲೇ ವಿಧಿಸಲ್ಪಟ್ಟಿದೆ. ಬಲಗರ್ವಿತರಾದ ದಾನವರು ನನ್ನ ವರಗಳಿಂದ ಕೊಬ್ಬಿ ಅಂಧರಾಗಿ ಮಿತಿಮೀರಿ ಹೋಗುತ್ತಿದ್ದಾರೆ. ಇದಕ್ಕಾಗಿ ವಿಷ್ಣುವು ವರಾಹರೂಪವನ್ನು ಧರಿಸಿ, ತನ್ನ ಇಚ್ಛಾಶಕ್ತಿಯಿಂದ ತನ್ನ ರೂಪವು ಯಾರಿಗೂ ತಿಳಿಯದಂತೆ ಮರೆಮಾಚಿಕೊಂಡು ದೇವತೆಗಳಿಗೂ ಅರಿಯದಂತಿದ್ದಾನೆ.

ಏಷ ವೇಗೇನ ಗತ್ವಾ ಹಿ ಯತ್ರ ತೇ ದಾನವಾಧಮಾಃ |
ಅಂತರ್ಭೂಮಿಗತಾ ಘೋರಾ ನಿವಸಂತಿ ಸಹಸ್ರಶಃ |
ಶಮಯಿಷ್ಯತಿ ತಚ್ಛ್ರುತ್ವಾ ಜಹೃಷುಃ ಸುರಸತ್ತಮಾಃ ॥ 22 ॥

ಈ ವರಾಹರೂಪಿ ಭಗವಂತನು ವೇಗದಿಂದ ಭೂಮಿಯ ಒಳಗಡೆ ಹೋಗಿ ಅಲ್ಲಿರುವ ನೀಚ ದಾನವರನ್ನು ನಿಗ್ರಹಿಸುತ್ತಾನೆ. ನೀಚ ದಾನವರಾದರೂ ಸಾವಿರಾರು ಸಂಖ್ಯೆಯಿಂದ ಈ ಭೂಮಿಯ ವಿವರದ ಒಳಗಡೆಯೇ ವಾಸಿಸುತ್ತಿದ್ದಾರೆ. ಅವರೆಲ್ಲರನ್ನೂ ಭಗವಂತನು ನಿಗ್ರಹಿಸುತ್ತಾನೆ ಎಂದು ಹೇಳಿದಾಗ ದೇವತೆಗಳಿಗೆ ಬಹಳ ಸಂತೋಷವುಂಟಾಯಿತು.

ತತೋ ವಿಷ್ಣುರ್ಮಹಾತೇಜಾ ವಾರಾಹಂ ರೂಪಮಾಸ್ಥಿತಃ |
ಅಂತರ್ಭೂಮಿಂ ಸಂಪ್ರವಿಶ್ಯ ಜಗಾಮ ದಿತಿಜಾನ್ ಪ್ರತಿ ॥ 23 ॥

ಇಷ್ಟರಲ್ಲಿಯೇ ಬ್ರಹ್ಮನು ಹೇಳಿದಂತೆ ಭಗವಂತನು ವರಾಹರೂಪವನ್ನು ಧರಿಸಿ ಭೂಮಿಯ ಒಳಗಡೆ ಪ್ರವೇಶ ಮಾಡಿ ದೈತ್ಯರಿದ್ದಲ್ಲಿಗೆ ಸಾಗಿದನು.

ದೃಷ್ಟ್ವಾ ಚ ಸಹಿತಾಃ ಸರ್ವೇ ದೈತ್ಯಾಃ ಸತ್ವಮಮಾನುಷಮ್ |
ಪ್ರಸಹ್ಯ ತರಸಾ ಸರ್ವೇ ಸಂತಸ್ಥುಃ ಕಾಲಮೋಹಿತಾಃ ॥ 24 ॥

ಆ ವರಾಹನನ್ನು ಕಂಡ ಎಲ್ಲಾ ದೈತ್ಯರೂ ಒಟ್ಟಾಗಿ ಮೃತ್ಯುವಶರಾಗಿ ಅಮಾನುಷನಾದ ಭಗವಂತನನ್ನು ಒಮ್ಮೆಲೆ ಎದುರಿಸಲು ನಿಂತರು.

ತತಸ್ತೇ ಸಮಭಿದ್ರುತ್ಯ ವರಾಹಂ ಜಗೃಹುಃ ಸಮಮ್ |
ಸಂಕ್ರುದ್ಧಾಶ್ಚ ವರಾಹಂ ತಂ ವ್ಯಕರ್ಷಂತ ಸಮಂತತಃ ॥ 25 ॥

ವರಾಹನನ್ನು ಸುತ್ತಲೂ ಮುತ್ತಿಕೊಂಡು ತನ್ನ ಬಲವನ್ನು ತೋರಿಸಲು ಆರಂಭಿಸಿದರು. ತಮ್ಮ ಮಹಾಕಾರ್ಯಗಳಿಂದ ವರಾಹನ ಮೇಲೆ ಬಿದ್ದು ಆಚೆ-ಈಚೆ ಅವನನ್ನು ಸೆಳೆಯಲು ಪ್ರಯತ್ನಿಸಿದರು.

ದಾನವೇಂದ್ರಾ ಮಹಾಕಾಯಾ ಮಹಾವೀರ್ಯಬಲೋಚ್ಛ್ರಿತಾಃ |
ನಾಶಕ್ನುವಂಶ್ಚ ಕಿಂಚಿತ್ತೇ ತಸ್ಯ ಕರ್ತುಂ ತದಾ ವಿಭೋ ॥ 26 ॥

ಆ ದಾನವರೆಲ್ಲರೂ ಮಹಾಕಾಯವುಳ್ಳವರೂ, ಮಹಾವೀರ್ಯ, ಬಲಗಳಿಂದ ಗರಿಷ್ಠರೂ ಆಗಿದ್ದರು. ಆದರೂ ಅವರಿಂದ ವರಾಹನ ಮೇಲೆ ತಮ್ಮ ದರ್ಪವನ್ನು ತೋರಿಸಲು ಕಿಂಚಿತ್ತೂ ಸಾಧ್ಯವಾಗಲಿಲ್ಲ.

ತತೋಽಗಚ್ಛನ್ ವಿಸ್ಮಯಂ ತೇ ದಾನವೇಂದ್ರಾ ಭಯಂ ತಥಾ |
ಸಂಶಯಂ ಗತಮಾತ್ಮಾನಂ ಮೇನಿರೇ ಚ ಸಹಸ್ರಶಃ ॥ 27 ॥

ಅವರೆಲ್ಲ ಭಯಾಶ್ಚರ್ಯಗಳಿಂದ ಬಸವಳಿದರು. ತಾವು ಇನ್ನು ಬದುಕುವುದು ಸಂಶಯವೆಂದು ಸಾವಿರಾರು ಸಂಖ್ಯೆಯಲ್ಲಿರುವ ಆ ದೈತ್ಯರಿಗೆ ತೋರಿತು.

ತತೋ ದೇವಾಧಿದೇವಃ ಸ ಯೋಗಾತ್ಮಾ ಯೋಗಸಾರಥಿಃ |
ಯೋಗಮಾಸ್ಥಾಯ ಭಗವಾಂಸ್ತದಾ ಭರತಸತ್ತಮ ॥ 28 ॥
ವಿನನಾದ ಮಹಾನಾದಂ ಕ್ಷೋಭಯನ್ ದೈತ್ಯದಾನವಾನ್ |
ಸನ್ನಾದಿತಾ ಯೇನ ಲೋಕಾಃ ಸರ್ವಾಶ್ಚೈವ ದಿಶೋ ದಶ ॥ 29 ॥
ಇಷ್ಟರಲ್ಲಿ ಯೋಗೇಶ್ವರನಾದ, ಯೋಗಾತ್ಮನೆನಿಸಿದ, ದೇವಾಧಿದೇವನಾದ ಭಗವಂತನು ತನ್ನ ಯೋಗವನ್ನು ಅವಲಂಬಿಸಿ ದೈತ್ಯರ ಎದೆ ನಡುಗುವಂತೆ ದೊಡ್ಡದಾದ ಸಿಂಹನಾದವನ್ನು ಮಾಡಿದನು. ಆ ನಾದಕ್ಕೆ ಸಮಸ್ತ ಲೋಕಗಳು ನಡುಗಿದವು. ಅದರ ಪ್ರತಿಧ್ವನಿಯು ಹತ್ತು ದಿಕ್ಕುಗಳಲ್ಲಿಯೂ ಮೊಳಗಿತು.
ತೇನ ಸನ್ನಾದಶಬ್ದೇನ ಲೋಕಾನಾಂ ಕ್ಷೋಭ ಆಗಮತ್ |
ಸಂಭ್ರಾಂತಾಶ್ಚ ದಿಶಃ ಸರ್ವಾ ದೇವಾಃ ಶಕ್ರಪುರೋಗಮಾಃ ॥ 30 ॥
ಆ ವರಾಹನ ಭಯಂಕರವಾದ ನಾದದಿಂದ ಉಂಟಾದ ಶಬ್ದದಿಂದ ಸಮಸ್ತ ಲೋಕಗಳೇ ಕ್ಷೋಭೆಗೊಂಡವು. ದಿಕ್ಕುಗಳು ಬಳಲಿದವು. ಇಂದ್ರನೇ ಮೊದಲಾದ ದೇವತೆಗಳೂ ಭಯಭೀತರಾದರು.
ನಿರ್ವಿಚೇಷ್ಟಂ ಜಗಚ್ಚಾಪಿ ಬಭೂವಾತಿಭೃಶಂ ತದಾ |
ಸ್ಥಾವರಂ ಜಂಗಮಂ ಚೈವ ತೇನ ನಾದೇನ ಮೋಹಿತಮ್ ॥ 31 ॥
ಸಮಗ್ರ ಜಗತ್ತು ಕ್ಷಣ ಕಾಲ ನಿಶ್ಚೇಷ್ಟಿತವಾಯಿತು. ಆ ವರಾಹನಾದವು ಅತ್ಯಂತ ಭಯಂಕರವಾಗಿತ್ತು. ಸ್ಥಾವರ-ಜಂಗಮಾತ್ಮಕವಾದ ಪ್ರಪಂಚವು ನಾದದಿಂದಲೇ ಮೋಹಿತವಾಗಿತ್ತು.
ತತಸ್ತೇ ದಾನವಾಃ ಸರ್ವೇ ತೇನ ನಾದೇನ ಭೀಷಿತಾಃ |
ಪೇತುರ್ಗತಾಸವಶ್ಚೈವ ವಿಷ್ಣುತೇಜಃಪ್ರಮೋಹಿತಾಃ ॥ 32 ॥
ಸಮಸ್ತ ದಾನವರು ಆ ನಾದದಿಂದಲೇ ಭಯಗ್ರಸ್ಥರಾಗಿ ಪ್ರಾಣಗಳನ್ನು ಕಳೆದುಕೊಂಡು ಬಿದ್ದರು. ವಿಷ್ಣುವಿನ ತೇಜಸ್ಸಿನಿಂದ ಮೋಹಿತರಾದರು.
ತ್ರಸ್ತಾಂಶ್ಚ ದೇವಾನಾಲೋಕ್ಯ ಬ್ರಹ್ಮಾ ಪ್ರಾಹ ಪಿತಾಮಹಃ |
ಯೋಗೇಶ್ವರೋಽಯಂ ಭಗವಾನ್ ವಾರಾಹಂ ರೂಪಮಾಸ್ಥಿತಃ |
ನರ್ದಮಾನೋಽತ್ರ ಸಂಯಾತಿ ಮಾ ಭೈಷ್ಟ ಸುರಸತ್ತಮಾಃ ॥ 33 ॥
ಸಮಸ್ತ ದೇವತೆಗಳೆಲ್ಲರೂ ವರಾಹನಾದದಿಂದ ಹೆದರಿಹೋದಾಗ ಪಿತಾಮಹರಾದ ಬ್ರಹ್ಮದೇವರು ಅವರನ್ನು ಕುರಿತು ಹೇಳಿದರು: ದೇವತೆಗಳೇ, ಷಡ್ಗುಣೈಶ್ವರ್ಯ ಸಂಪನ್ನನಾದ ಯೋಗೇಶ್ವರನಾದ ಭಗವಂತನು ವರಾಹರೂಪವನ್ನು ತಾಳಿದ್ದಾನೆ. ದೈತ್ಯರನ್ನೆಲ್ಲ ಸದೆಬಡಿದು ಭೂಮಿಯನ್ನು ಹೊತ್ತು ತರುತ್ತಾನೆ. ಸುರೋತ್ತಮರೇ, ಹೆದರಬೇಡಿರಿ.
ಏವಮುಕತ್ವ ತತೋ ಬ್ರಹ್ಮಾ ನಮಶ್ಚಕ್ರೇ ಪಿತಾಮಹಃ |
ದೇವತಾ ಮುನಯಶ್ಚೈವ ವಿಷ್ಣುಂ ವೈ ಮುಕ್ತಿಹೇತವೇ ॥ 34 ॥
ಈ ರೀತಿಯಾಗಿ ಚತುರ್ಮುಖ ಬ್ರಹ್ಮನು ಹೇಳಿ ಆ ವರಾಹನಿಗೆ ನಮಸ್ಕರಿಸಿದನು. ದೇವತೆಗಳು ಮುನಿಗಳೆಲ್ಲರೂ ಮುಕ್ತಿಗಾಗಿ ಆ ವಿಷ್ಣುವನ್ನು ನಮಸ್ಕರಿಸಿದರು.
ತತೋ ಹರಿರ್ಮಹಾತೇಜಾ ಬ್ರಹ್ಮಾಣಮಭಿನಂದ್ಯ ಚ |
ರಸಾತಲಗತಶ್ಚಾಪಿ ವರಾಹಸ್ತ್ರಿದಶದ್ವಿಷಾಮ್ |
ಖುರೈರ್ವಿದಾರಯಾಮಾಸ ಮಾಂಸಮೇದೋಽಸ್ಥಿಸಂಚಯಾನ್ ॥ 35 ॥
ಬಳಿಕ ಮಹಾತೇಜಸ್ವಿಯಾದ ಶ್ರೀಹರಿಯು ಚತುರ್ಮುಖಬ್ರಹ್ಮನನ್ನು ಅಭಿನಂದಿಸಿ ರಸಾತಳದಲ್ಲಿದ್ದವನಾದರೂ ವರಾಹರೂಪಿಯಾದ ಪರಮಾತ್ಮನು ದೇವತೆಗಳನ್ನು ದ್ವೇಷಿಸುವ ದೈತ್ಯರನ್ನು ತನ್ನ ಖುರ(ಉಗುರು)ಗಳಿಂದಲೇ ಸೀಳಿಹಾಕಿದನು. ಮಾಂಸ, ಮೇದ, ಅಸ್ಥಿಗಳ ಬೆಟ್ಟವನ್ನೇ ಪೇರಿಸಿದನು.
ನಾದೇನ ತೇನ ಮಹತಾ ಸನಾತನ ಇತಿ ಸ್ಮೃತಃ |
ಪದ್ಮನಾಭೋ ಮಹಾಯೋಗೀ ಭೂತಾತ್ಮಾ ಭೂತಭಾವನಃ ॥ 36 ॥
ಉತ್ತಮವಾದ ನಾದದಿಂದ ಸಹಿತನಾದುದರಿಂದಲೇ ಭಗವಂತನು ಸನಾದನ ಎಂಬ ಶಬ್ದದಿಂದ ಕರೆಸಿಕೊಳ್ಳಲ್ಪಟ್ಟಿದ್ದಾನೆ. ಸನಾದನ ಶಬ್ದವೇ ನಿರುಕ್ತದಿಂದ ಸನಾತನ ಎನಿಸಿದೆ. ಪದ್ಮನಾಭನು ಮಹಾಯೋಗಿಯೂ, ಭೂತಭಾವನನೂ, ಭೂತಾತ್ಮನೂ ಆಗಿದ್ದಾನೆ.
ತತೋ ದೇವಗಣಾಃ ಸರ್ವೇ ಪಿತಾಮಹಮುಪಾದ್ರವನ್ |
ತತ್ರ ಗತ್ವಾ ಮಹಾತ್ಮಾನಮೂಚುಶ್ಚೈವ ಜಗತ್ಪತಿಮ್ ॥ 37 ॥
ಬಳಿಕ ಸಮಸ್ತ ದೇವತೆಗಳು ಚತುರ್ಮುಖ ಬ್ರಹ್ಮನನ್ನು ಕುರಿತು ಸ್ತುತಿಸಲು ಆಗಮಿಸಿದರು. ಎಲ್ಲರೂ ಆಗಮಿಸಿ ಚತುರ್ಮುಖ ಬ್ರಹ್ಮನನ್ನು ಕುರಿತು ಹೀಗೆ ಹೇಳಿದರು.
ನಾದೋಽಯಂ ಕೀದೃಶೋ ದೇವ ನೈತಂ ವಿದ್ಮ ವಯಂ ಪ್ರಭೋ |
ಕೋಽಸೌ ಹಿ ಕಸ್ಯ ವಾ ನಾದೋ ಯೇನ ವಿಹ್ವಲಿತಂ ಜಗತ್ |
ದೇವಾಶ್ಚ ದಾನವಾಶ್ಚೈವ ಮೋಹಿತಾಸ್ತಸ್ಯ ತೇಜಸಾ ॥ 38 ॥
ದೇವೋತ್ತಮನೇ, ಇದು ಯಾವ ನಾದವು? ಎಂದಿಗೂ ಇಂತಹ ನಾದದ ಸ್ವರೂಪವನ್ನೇ ನಾವು ಕೇಳಿಸಿಕೊಂಡಿಲ್ಲ. ಈ ನಾದವನ್ನು ಮಾಡಿದ ವ್ಯಕ್ತಿಯು ಯಾರು? ಯಾರ ನಾದವು ಇದು? ಈ ನಾದದಿಂದ ಜಗತ್ತೇ ಕಂಗಾಲಾಗಿದೆ. ಅವನ ನಾದದ ತೇಜಸ್ಸಿನಿಂದಲೇ ದೇವ-ದಾನವರೆಲ್ಲರೂ ಮೋಹಿತರಾಗಿದ್ದಾರೆ.
ಏತಸ್ಮಿನ್ನಂತರೇ ವಿಷ್ಣುರ್ವಾರಾಹಂ ರೂಪಮಾಸ್ಥಿತಃ |

ಉದತಿಷ್ಠನ್ಮಹಾಬಾಹೋ ಸ್ತೂಯಮಾನೋ ಮಹರ್ಷಿಭಿಃ ॥ 39 ॥
ಈ ನಡುವೆ ವಿಷ್ಣುವು ವರಾಹರೂಪವನ್ನು ಹೊಂದಿದ್ದ, ವರಾಹರೂಪದಿಂದ ಪ್ರಕಟನಾದ. ಮಹರ್ಷಿಗಳಿಂದಲೂ, ದೇವತೆಗಳಿಂದಲೂ ಸ್ತೋತ್ರಪಾತ್ರನಾದ ಮೇಲೆ ಆಗಮಿಸಿದನು.
ಪಿತಾಮಹಃ
ದಿವ್ಯಂ ಮಹತ್ ಯುದ್ಧಮಾಸೀನ್ಮಹಾತ್ಮನೋಃ |
ಹಿರಣ್ಯಾಕ್ಷಸ್ಯ ವಿಷ್ಣೋಶ್ಚ ಸರ್ವಸಂಕ್ಷೋಭಕಾರಣಮ್ ॥ 40 ॥
ಚತುರ್ಮುಖ ಬ್ರಹ್ಮ ದೇವತೆಗಳೇ, ಮಹಾತ್ಮನಾದ ಹಿರಣ್ಯಾಕ್ಷನಿಗೂ, ವಿಷ್ಣುವಿಗೂ ಭಯಂಕರವಾದ ಯುದ್ಧವು ಸಮಸ್ತ ಜಗತ್ತೇ ನಾಶವಾಗುವಂತೆ ನಡೆಯಿತು.
ಜಘಾನ ಚ ಹಿರಣ್ಯಾಕ್ಷಮಂತರ್ಭೂಮಿಗತಂ ಹರಿಃ |
ತದಾಕರ್ಣ್ಯ ಮಹಾತೇಜಾ ಬ್ರಹ್ಮಾ ಮಧುರಮಬ್ರವೀತ್ ॥ 41 ॥
ಭೂಮಿಯ ವಿವರದೊಳಗೆ ಸೇರಿರುವ ಹಿರಣ್ಯಾಕ್ಷನನ್ನು ಶ್ರೀಹರಿಯು ಕೊಂದಿದ್ದಾನೆ. ಹೀಗೆ ಆ ಶಬ್ದವನ್ನು ಕೇಳಿಸಿಕೊಂಡೇ ಚತುರ್ಮುಖ ಬ್ರಹ್ಮನು ಹಿರಣ್ಯಾಕ್ಷನ ಸಂಹಾರದ ಮಧುರವಾರ್ತೆಯನ್ನು ದೇವತೆಗಳಿಗೆ ಹೇಳಿದನು.
ನಿಹತ್ಯ ದಾನವಪತೀನ್ ಮಹಾವರ್ಷ್ಮಾ ಮಹಾಬಲಃ |
ಏಷ ದೇವೋ ಮಹಾಯೋಗೀ ಭೂತಾತ್ಮಾ ಭೂತಭಾವನಃ ॥ 42 ॥
ಸರ್ವಭೂತೇಶ್ವರೋ ಯೋಗೀ ಮುನಿರಾತ್ಮಾ ತಥಾಽಽತ್ಮನಃ |
ಸ್ಥಿರೀಭವತ ಕೃಷ್ಣೋಽಯಂ ಸರ್ವವಿಘ್ನವಿನಾಶನಃ ॥ 43 ॥
ಎಲೈ ದೇವತೆಗಳಿರಾ, ಮಹಾಯೋಗೀಶ್ವರನೆನಿಸಿದ ಸರ್ವೇಶ್ವರನಾದ ಭಗವಂತನೇ ಇವನು. ಇವನು ದೊಡ್ಡ ಆಕಾರದಿಂದಲೂ, ಮಹಾಬಲದಿಂದಲೂ ಕೂಡಿದವನಾಗಿ, ಸಮುದ್ರದೊಳಗಿದ್ದ ದಾನವರನ್ನೆಲ್ಲ ಸಂಹರಿಸಿ ಆಗಮಿಸುತ್ತಿದ್ದಾನೆ. ಇವನೇ ಸಮಸ್ತ ಜೀವರಿಗೂ ಆತ್ಮಭೂತನು. ನಿಮ್ಮ ವಿಘ್ನಗಳನ್ನು ನಿವಾರಿಸುವಂತಹ ಕೃಷ್ಣನೇ ಇವನಾಗಿದ್ದಾನೆ. ನೀವೆಲ್ಲರೂ ಸ್ಥಿರವಾಗಿ ನಿಲ್ಲಿರಿ. ಹೆದರಬೇಡಿ.
ಕೃತ್ವಾ ಕರ್ಮಾತಿಸಾಧ್ವೇತದಶಕ್ಯಮಮಿತಪ್ರಭಃ |
ಸಮಾಯಾತಃ ಸ್ವಮಾತ್ಮಾನಂ ಮಹಾಭಾಗೋ ಮಹಾದ್ಯುತಿಃ ॥ 44 ॥
ಇವನು ಅಮೃತವಾದ ತೇಜಸ್ಸುಳ್ಳ ಮಹಾನುಭಾವನು. ಬೇರೊಬ್ಬರಿಗೆ ಸಾಧ್ಯವಾಗದ ಕಾರ್ಯಗಳನ್ನು ನಡೆಸಿಬಂದು ತನ್ನ ಶುದ್ಧರೂಪದಿಂದ ಕಾಣಿಸುತ್ತಿದ್ದಾನೆ. ಇವನನ್ನು ನೋಡಿರಿ.
ಪದ್ಮನಾಭೋ ಮಹಾಯೋಗೀ ಪುರಾಣಪುರುಷೋತ್ತಮಃ |
ನ ಸಂತಾಪೋ ನ ಭೀಃ ಕಾರ್ಯಾ ಶೋಕೋ ವಾ ಸುರಸತ್ತಮೈಃ ॥45॥
ಪದ್ಮನಾಭನು ಈತನೇ. ಮಹಾಯೋಗಿಯಾದ ಪುರಾಣಪುರುಷೋತ್ತಮನು ಈತನೇ. ಈತನನ್ನು ಕಂಡ ನೀವು ಸಂತಾಪವನ್ನು ಪಡಬೇಡಿ, ಹೆದರಬೇಡಿ. ಸುರೋತ್ತಮರೇ ಶೋಕಕ್ಕೆ ತುತ್ತಾಗದಿರಿ.
ವಿಧಿರೇಷ ಪ್ರಭಾವಶ್ಚ ಕಾಲಃ ಸಂಕ್ಷಯಕಾರಕಃ |
ಲೋಕಾನ್ ಧಾರಯತಾ ತೇನ ನಾದೋ ಮುಕ್ತೋ ಮಹಾತ್ಮನಾ ॥46॥
ಇವನೇ ಸೃಷ್ಟಿಕರ್ತನು. ಈತನೇ ದೈವವು. ಇವನೇ ಲೋಕಧಾರಕನು. ಎಲ್ಲವನ್ನೂ ಸಂಹರಿಸುವ ಕಾಲನೂ ಇವನೇ. ನಾವು ಕೇಳಿದ ಮಹಾಧ್ವನಿಯೂ ಈ ಮಹಾತ್ಮನದ್ದೇ.
ಸ ಏಷ ಹಿ ಮಹಾಬಾಹುಃ ಸರ್ವಲೋಕನಮಸ್ಕೃತಃ |
ಅಚ್ಯುತಃ ಪುಂಡರೀಕಾಕ್ಷಃ ಸರ್ವಭೂತಾದಿರೀಶ್ವರಃ ॥ 47 ॥
ಅಚ್ಯುತನೂ, ಪುಂಡರೀಕಾಕ್ಷನೂ, ಸಮಸ್ತಕ್ಕೂ ಆದಿಕಾರಣನೂ ಆದ ಈ ಮಹಾಪುರುಷನು ಸಮಸ್ತ ಲೋಕಗಳಿಂದ ನಮಸ್ಕರಿಸಲ್ಪಡತಕ್ಕವನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೇಳನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ನಾರದರ ಕಥೆಯ ಮೂಲಕವಾಗಿ ಶ್ರೀಕೃಷ್ಣನ ತತ್ತ್ವವನ್ನು ನಿರೂಪಿಸಿದುದು.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಕೇಶವಸ್ಯ ಮಹಾತ್ಮನಃ |
ವಕ್ತುಮರ್ಹಸಿ ತತ್ತ್ವೇನ ಮಾಹಾತ್ಮ್ಯಂ ಪುನರೇವ ತು ॥ 1 ॥
ಯುಧಿಷ್ಠಿರ ಪಿತಾಮಹನೇ, ಮಹಾಪ್ರಾಜ್ಞನೇ, ಮಹಾತ್ಮನಾದ ಕೇಶವನ ಮಾಹಾತ್ಮ್ಯವನ್ನು ಮತ್ತೂ ಯಥಾರ್ಥವಾಗಿ ನನಗೆ ಹೇಳಲು ಅರ್ಹನಾಗಿದ್ದಿ.
ನ ತೃಪ್ಯಾಮ್ಯಹಮಪ್ಯೇನಂ ಪಶ್ಯನ್ ಶೃಣ್ವಂಶ್ಚ ಭಾರತ |
ಏವಂ ಕೃಷ್ಣಂ ಮಹಾಬಾಹೋ ತಸ್ಮಾದೇತದ್ ಬ್ರವೀಹಿ ಮೇ ॥ 2 ॥

ಶ್ರೀಕೃಷ್ಣನ ಕುರಿತಾದ ವಿಚಾರವನ್ನು ಎಷ್ಟೆಷ್ಟು ಕೇಳಿದರೂ, ಅವನನ್ನು ಎಷ್ಟೆಷ್ಟು ನೋಡಿದರೂ ನನಗೆ ತೃಪ್ತಿಯಾಗುವುದಿಲ್ಲ.
ಆದ್ದರಿಂದ ಕೃಷ್ಣನ ಕುರಿತಾಗಿ ಮತ್ತೂ ಚೆನ್ನಾಗಿ ನನಗೆ ವಿವರಿಸಿ ಹೇಳು.
ಭೀಷ್ಮಃ
ಶೃಣು ರಾಜನ್ ಕಥಾಮೇತಾಂ ವೈಷ್ಣವೀಂ ಪಾಪನಾಶನೀಮ್ |
ನಾರದೋ ಮಾಂ ಪುರಾ ಪ್ರಾಹ ಯಾಮಹಂ ತೇ ವದಾಮಿ ತಾಮ್ ॥
ಭೀಷ್ಮ ರಾಜನೇ, ಪಾಪನಾಶಕನಾದ ಶ್ರೀವಿಷ್ಣುವಿನ ಪರತತ್ತ್ವವನ್ನು ಕುರಿತು ಹಿಂದೊಮ್ಮೆ ನನಗೆ ನಾರದರು ಹೇಳಿದ ಕಥೆಯನ್ನೇ
ನಾನು ನಿನಗೆ ತಿಳಿಸುತ್ತೇನೆ.
ದೇವರ್ಷಿರ್ನಾರದಃ ಪೂರ್ವಂ ತತ್ತ್ವಂ ವೇತ್ಸ್ಯಾಮಿ ವೈ ಹರೇಃ |
ಇತಿ ಸಂಚಿಂತ್ಯ ಮನಸಾ ದಧ್ಯೌ ಬ್ರಹ್ಮ ಸನಾತನಮ್ ॥ 4 ॥
ಹಿಮಾಲಯೇ ಶುಭೇ ದಿವ್ಯೇ ದಿವ್ಯಂ ವರ್ಷಶತಂ ಕಿಲ |
ಅನುಚ್ಛ್ವಸನ್ನಿರಾಹಾರಃ ಸಂಯತಾತ್ಮಾ ಜಿತೇಂದ್ರಿಯಃ ॥ 5 ॥
ಹಿಂದೆ ನಾರದರು ಶ್ರೀಹರಿಯ ತತ್ತ್ವವನ್ನು ತಿಳಿಯಬೇಕೆಂದು ಬಯಸಿ ಹಿಮಾಲಯ ಪರ್ವತದಲ್ಲಿ ನೂರು ದಿವ್ಯವರ್ಷಗಳವರೆಗೆ
ಬ್ರಹ್ಮಧ್ಯಾನರೂಪವಾದ ತಪಸ್ಸನ್ನು ಆಚರಿಸಿದರು. ಅಲ್ಲಿಯ ತನಕ ಶ್ವಾಸವನ್ನು ನಿಗ್ರಹಿಸಿ ಆಹಾರವನ್ನೂ ತೊರೆದು ಮನಸ್ಸನ್ನು,
ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಧ್ಯಾನರತರಾಗಿದ್ದರು.
ತತೋಽಂತರಿಕ್ಷೇ ವಾಗಾಸೀತ್ತಂ ಮುನಿಪ್ರವರಂ ಪ್ರತಿ |
ಮೇಘಗಂಭೀರನಿರ್ಘೋಷಾ ದಿವ್ಯಾ ಬಾಹ್ಯಾಽಶರೀರಿಣೀ ॥ 6 ॥
ಬಳಿಕ ಮುನಿಶ್ರೇಷ್ಠರಾದ ನಾರದರನ್ನು ಕುರಿತು ಅಂತರಿಕ್ಷದಲ್ಲಿ ಮೇಘ ಗಂಭೀರ ಧ್ವನಿಯುಳ್ಳ ಅಶರೀರಧ್ವನಿ ಕೇಳಿಸಿತು.
ಕಿಮರ್ಥಂ ತ್ವಂ ಸಮಾಪನ್ನೋ ಧ್ಯಾನಂ ಮುನಿವರೋತ್ತಮ |
ಅಹಂ ದದಾಮಿ ತೇ ಜ್ಞಾನಂ ಧರ್ಮಾದ್ಯಂ ವಾ ವೃಣೀಷ್ವ ಮಾಮ್ ॥
ಎಲೈ ಮುನೀಂದ್ರನೇ, ನೀನು ಹೀಗೇಕೆ ಧ್ಯಾನಮಗ್ನನಾಗಿರುವಿ? ನಾನು ನಿನಗೆ ಧ್ಯಾನವನ್ನೂ, ಧರ್ಮವನ್ನು, ಬೇಕಾದ್ದನ್ನೆಲ್ಲ ನೀಡಲು
ತಯಾರಿದ್ದೇನೆ. ನಿನಗೆ ಇಷ್ಟವಾದುದನ್ನು ಕೇಳು.
ತಚ್ಛ್ರುತ್ವಾ ಮುನಿರಾಲೋಚ್ಯ ಸಂಭ್ರಮಾವಿಷ್ಟಮಾನಸಃ |
ಕಿನ್ನು ಸ್ಯಾದಿತಿ ಸಂಚಿಂತ್ಯ ವಾಕ್ಯಮಾಹಾಪರಂ ಪ್ರತಿ ॥ 8 ॥
ಈ ಮಾತನ್ನು ಕೇಳಿಸಿಕೊಂಡ ಮುನಿಯು ಅತ್ಯಂತ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಇದೇನಿರಬಹುದೆಂದು ಆಲೋಚಿಸಿ
ಆ ಅಶರೀರವಾಣಿಯ ಕಡೆಗೆ ತಿರುಗಿ ಹೀಗೆ ಹೇಳಿದನು.
ಕಸ್ಮಾದ್ ಭವಾನದ್ಯ ಬಿಭೇದ ಮಧ್ಯೇ
ಸಮಾಸ್ಥಿತೋ ವಾಕ್ಯಮುದೀರಯನ್ ಮಾಮ್ |
ನ ರೂಪಮನ್ಯತ್ತವ ದೃಶ್ಯತೇ ವೈ
ಈದೃಗ್ವಿಧಸ್ತ್ವಂ ಸಮಧಿಷ್ಠಿತೋಽಸಿ ॥ 9 ॥
ನೀನು ನನ್ನ ಧ್ಯಾನವನ್ನು ಏಕೆ ಕೆಡಿಸಿದೆ? ಧ್ಯಾನ ಮಾಡುತ್ತಿರುವ ಮಧ್ಯದಲ್ಲಿ ಈ ವಾಕ್ಯವನ್ನು ಏಕೆ ಹೇಳುತ್ತಿರುವಿ? ನಿನ್ನ ರೂಪವು
ನನಗೆ ಕಾಣಿಸುತ್ತಿಲ್ಲ? ನೀನು ಹೀಗೇಕೆ ತೋರುತ್ತಿರುವಿ? ಏಕೆ ಗೂಢರೂಪನಾಗಿರುವಿ?
ಪುನಸ್ತಮಾಹ ಸ ಮುನಿಮನಂತೋಽಹಂ ಬೃಹತ್ತರಃ |
ನ ಮಾಂ ಮೂಢಾ ವಿಜಾನಂತಿ ಜ್ಞಾನಿನೋ ಮಾಂ ವಿದಂತ್ಯುತ ॥10॥
ಪುನಃ ಆ ಪುರುಷನು ನಾರದನನ್ನು ಕುರಿತು ಹೇಳಿದನು: ನಾನು ಅನಂತನು. ಎಲ್ಲರಿಗಿಂತ ದೊಡ್ಡವನು. ನನ್ನನ್ನು ಅಜ್ಞಾನಿಗಳು
ತಿಳಿಯಲಾರರು. ಜ್ಞಾನಿಗಳು ಮಾತ್ರ ನನ್ನನ್ನು ಕಾಣಬಲ್ಲರು (ತಿಳಿಯುವರು) ಎಂದನು.
ತಂ ಪ್ರತ್ಯಾಹ ಮುನಿಃ ಶ್ರೀಮಾನ್ ಪ್ರಣತೋ ವಿನಯಾನ್ವಿತಃ |
ಭವಂತಂ ಜ್ಞಾತುಮಿಚ್ಛಾಮಿ ತವ ತತ್ತ್ವಂ ಬ್ರುವೀಹಿ ಮೇ ॥ 11 ॥
ಈ ಮಾತನ್ನು ಕೇಳಿ ನಾರದರು ವಿನಮ್ರರಾಗಿ, ನಿನ್ನ ನಿಜಸ್ಥಿತಿಯನ್ನು ನಾನು ತಿಳಿಯಬೇಕೆಂದು ತವಕಗೊಂಡಿರುವೆ. ನೀನು
ದರ್ಶನವನ್ನು ನೀಡದಿದ್ದಲ್ಲಿ ಬಾಯಿಂದಲಾದರೂ ನಿನ್ನ ತತ್ತ್ವವನ್ನು ನನಗೆ ಉಪದೇಶಿಸು ಎಂದನು.
ತಸ್ಯ ತದ್ವಚನಂ ಶ್ರುತ್ವಾ ನಾರದಂ ಪ್ರಾಹ ಲೋಕಪಃ |
ಜ್ಞಾನೇನ ಮಾಂ ವಿಜಾನೀಹಿ ನಾನ್ಯಥಾ ಶಕ್ತಿರಸ್ತಿ ತೇ ॥ 12 ॥
ನಾರದರ ಈ ಮಾತನ್ನು ಕೇಳಿಸಿಕೊಂಡ ಆ ಪುರುಷನು ನಾರದರನ್ನು ಕುರಿತು ಹೇಳಿದನು: ನನ್ನನ್ನು ಜ್ಞಾನದಿಂದಲೇ ನೀನು
ತಿಳಿದುಕೊ. ಬೇರೆ ಯಾವುದರಿಂದಲೂ ನನ್ನನ್ನು ತಿಳಿಯಲು ಶಕ್ತಿ ಇರುವುದಿಲ್ಲ.
ನಾರದಃ
ಕೀದೃಗ್ವಿಧಂ ತು ತಜ್ಜ್ಞಾನಂ ಯೇನ ಜಾನಾಮಿ ತೇ ತನುಮ್ |
ಅನಂತ ತನ್ಮೇ ಬ್ರೂಹಿ ತ್ವಂ ಯದ್ಯನುಗ್ರಹವಾನಹಮ್ ॥ 13 ॥
ನಾರದ ನಿನ್ನ ರೂಪವನ್ನು ತಿಳಿದುಕೊಳ್ಳಲು ಸಾಧಕವಾದ ಜ್ಞಾನವು ಯಾವುದು? ಯಾವ ಜ್ಞಾನದಿಂದ ನಿನ್ನ ಸ್ವರೂಪವನ್ನು
ತಿಳಿಯುವೆನು? ಅನಂತನೇ, ನಿನಗೆ ನನ್ನಲ್ಲಿ ಅನುಗ್ರಹ ದೃಷ್ಟಿಯಿದ್ದರೆ ಅದನ್ನಾದರೂ ಉಪದೇಶಿಸು.
ಲೋಕಪಾಲಃ
ವಿಕಲ್ಪಹೀನಂ ವಿಪುಲಂ ತಸ್ಯ ಚೂರಂ ಶಿವಂ ಪರಮ್ |

ಜ್ಞಾನಂ ತತ್ತೇನ ಜಾನಾಸಿ ಸಾಧನಂ ಪ್ರತಿ ತೇ ಮುನೇ ॥ 14 ॥
ಲೋಕಪಾಲ ನನ್ನನ್ನು ಕುರಿತು ಜ್ಞಾನವೆಂಬುದು ಮಹತ್ತರವಾದುದು, ವಿಪುಲವಾದುದು, ವಿಕಲ್ಪರಹಿತವು. ಅದು ಸರ್ವಶ್ರೇಯಸ್ಸಿಗೂ ಕಾರಣವಾದುದು. ಆ ಜ್ಞಾನಬಲದಿಂದ ನೀನು ನಿನಗೆ ಬೇಕಾದ ಸಾಧನವನ್ನು ಪಡೆಯಬಹುದು.
ಅತ್ರಾವೃತ್ಯ ಸ್ಥಿತಂ ಹ್ಯೇತತ್ ತಚ್ಛುದ್ಧಮಿತರನ್ಮೃಷಾ |
ಏತತ್ತೇ ಸರ್ವಮಾಖ್ಯಾತಂ ಸಂಕ್ಷೇಪಾನ್ಮುನಿಸತ್ತಮ ॥ 15 ॥
ಆ ಜ್ಞಾನವು ಲೋಕದಲ್ಲಿ ಬಚ್ಚಿಟ್ಟುಕೊಂಡಿದೆ. ಅದೊಂದೇ ಶುದ್ಧವಾದ ಜ್ಞಾನವೆನಿಸಿದೆ. ಉಳಿದ ಲೋಕದ ಜ್ಞಾನವೆಲ್ಲವೂ ವ್ಯರ್ಥವೆನಿಸಿದೆ. ಇದೆಲ್ಲವನ್ನೂ ಸಂಗ್ರಹವಾಗಿ ಮುನಿಸತ್ತಮನೇ, ನಿನಗೆ ತಿಳಿಸಿದ್ದೇನೆ.
ನಾರದಃ
ತ್ವಮೇವ ತವ ಯತ್ತತ್ತ್ವಂ ಬ್ರೂಹಿ ಲೋಕಗುರೋ ಮಮ |
ಭವಂತಂ ಜ್ಞಾತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 16 ॥
ನಾರದ ಆ ನಿನ್ನ ಪರತತ್ತ್ವ ಏನಿದೆಯೋ ಅದನ್ನು ನೀನೇ ನನಗೆ ಉಪದೇಶಿಸಬಾರದೇಕೆ? ನೀನೇ ನನಗೆ ಲೋಕಗುರುವು. ಅವ್ಯಯನೇ, ನೀನು ಯಾವ ರೀತಿಯಾಗಿರುವಿ ಎಂದು ತಿಳಿಯಲು ಬಯಸುತ್ತೇನೆ.
ತತಃ ಪ್ರಹಸ್ಯ ಭಗವಾನ್ ಮೇಘಗಂಭೀರಯಾ ಗಿರಾ |
ಪ್ರಾಹೇಶಃ ಸರ್ವಭೂತಾನಾಂ ನ ಮೇ ಚಾಸ್ಯಂ ಶ್ರುತಿರ್ನ ಚ ॥ 17 ॥
ನಾರದ ಮುನಿಯು ಹೀಗೆ ಹೇಳಲಾಗಿ ಆ ಪುರುಷನು ಜೋರಾಗಿ ನಕ್ಕು ಮೇಘ ಗಂಭೀರ ಧ್ವನಿಯಿಂದ ಹೀಗೆ ಹೇಳಿದನು: ಎಲೈ ಮುನಿವರನೇ, ನನಗೆ ಪ್ರಾಕೃತವಾದ ಶ್ರವಣಾದಿ ಇಂದ್ರಿಯಗಳಿರುವುದಿಲ್ಲ.
ನ ಘ್ರಾಣಜಿಹ್ವೇ ದೃಕ್ಚೈವ ತ್ವಚಾ ನಾಸ್ತಿ ತಥಾ ಮುನೇ |
ಕಥಂ ವಕ್ಷ್ಯಾಮಿ ಚಾತ್ಮಾನಮಶರೀರಸ್ತಥಾಪ್ಯಹಮ್ ॥ 18 ॥
ನನಗೆ ಪ್ರಾಕೃತವಾದ ಘ್ರಾಣೇಂದ್ರಿಯವಾಗಲಿ, ಜಿಹ್ವೆಯಾಗಲಿ, ತ್ವಗಿಂದ್ರಿಯವಾಗಲಿ ಇರುವುದಿಲ್ಲ. ಹೀಗಿರಲು ಪ್ರಾಕೃತಶರೀರರಹಿತನಾದ ನಾನು ಪ್ರಾಕೃತಶರೀರ ಶಬ್ದಗಳನ್ನು ಅವಲಂಬಿಸಿಕೊಂಡ ನಿನಗೆ ಹೇಗೆ ಹೇಳಲಿ?
ವ್ಯಾಖ್ಯಾನ ವಿಶೇಷ ಕೆಲವರು ಭಗವಂತನಿಗೆ ಕೈ-ಕಾಲುಗಳೇ ಇಲ್ಲದ ನಿರ್ಗುಣವಸ್ತು ಎನ್ನುತ್ತಾರೆ. ಆದರೆ `ದಿವ್ಯ ಬಾಹ್ಯ ಅಶರೀರಿಣಿ' ಎಂದು ಬಾಹ್ಯಶರೀರವನ್ನು ಕೃಷ್ಣನಿಗೆ ನಿರಾಕರಿಸಿದ್ದಾರೆ. ಅಪ್ರಾಕೃತವಾದ ಎಲ್ಲ ಅವಯವಗಳು ಭಗವಂತನಲ್ಲಿವೆ ಎಂದು ಹಿಂದಿನ ಅಧ್ಯಾಯದಲ್ಲೇ ಭೀಷ್ಮರು ವರ್ಣಿಸಿದ್ದಾರೆ. ಅವಯವಾದಿ ರಾಹಿತ್ಯವನ್ನು ಹೇಳಿದರೆ ಪೂರ್ವೋತ್ತರ ವಿರೋಧ ಉಂಟಾಗುತ್ತದೆ.
ತಜ್ಜ್ಞಾತ್ವಾ ವಿಸ್ಮಯಾವಿಷ್ಟೋ ಮುನಿರಾಹ ಪ್ರಣಮ್ಯ ತಮ್ |
ಯೇನ ತ್ವಂ ಪೂರ್ವಮಾತ್ಮಾನಮನಂತೋಽಹಂ ಬೃಹತ್ತರಃ |
ಶತೋಽಹಮಿತಿ ಮಾಂ ಪ್ರೀತಃ ಪ್ರೋಕ್ತವಾನಸಿ ತತ್ಕಥಮ್ ॥ 19 ॥
ನಾರದರು ಆ ಮಾತಿಗೆ ಆಶ್ಚರ್ಯಗೊಂಡು ಅವನ ಮುಂದೆ ನಮಸ್ಕರಿಸಿ, ಓ ಮಹಾತ್ಮನೇ, ನೀನು ಮೊದಲು ನನ್ನೊಡನೆ ನಾನು ಅನಂತನು, ಬಹಳದೊಡ್ಡವನು, ನಾನಾ ರೂಪದಿಂದ ಇರುವವನು ಎಂದು ಹೇಗೆ ಹೇಳಿಕೊಂಡೆ?
ಪುನಸ್ತಮಾಹ ಭಗವಾಂಸ್ತವಾಪ್ಯಕ್ಷಾಣಿ ಸಂತಿ ವೈ |
ತ್ವಮೇನಂ ಬ್ರೂಹಿ ಚಾತ್ಮಾನಂ ಯದಿ ಶಕ್ನೋಷಿ ನಾರದ ॥ 20 ॥
ಆಗ ಪುರುಷನು ಎಲೈ ಮುನೀಂದ್ರನೇ, ನಿನಗೂ ಇಂದ್ರಿಯಗಳು ಇವೆಯಲ್ಲವೆ? ನಿನ್ನ ಹೃದಯದಲ್ಲಿ ಧ್ಯೇಯನಾಗಿರುವ ಅಂತರ್ಯಾಮಿಯಾದ ಪರಮಾತ್ಮನನ್ನು ನೀನು ತಿಳಿದುಕೊಂಡಿದ್ದಲ್ಲಿ ನೀನೇ ಹೇಳು.
ಆತ್ಮಾ ಯಥಾ ತವ ಮುನೇ ವಿದಿತಸ್ತು ಭವಿಷ್ಯತಿ |
ಮಾಂ ಚ ಜಾನಾಸಿ ತೇನ ತ್ವಮೇಕಂ ಸಾಧನಮಾವಯೋಃ |
ಇತ್ಯುಕತ್ವ ಭಗವಾನ್ ದೇವಸ್ತತೋ ನೋವಾಚ ಕಿಂಚನ ॥ 21 ॥
ನಿನ್ನ ಆತ್ಮಸ್ವರೂಪವು ನಿನಗೆ ಹೇಗೆ ತಿಳಿದಿದೆಯೋ ಅದರಂತೆ ನೀನು ನನ್ನನ್ನು ತಿಳಿಯಬಲ್ಲೆ. ನನ್ನನ್ನೂ, ನಿನ್ನನ್ನೂ ತಿಳಿಯಲು ಬೇಕಾಗಿರುವ ಜ್ಞಾನಸಾಧನವು ಒಂದೇ ಎನಿಸಿದೆ. ಈ ರೀತಿಯಾಗಿ ಭಗವಂತನು ಹೇಳುತ್ತಾ ಮಾತಿನಿಂದ ವಿರಮಿಸಿದನು. ಬಳಿಕ ಮತ್ತೇನೂ ಹೇಳಲಿಲ್ಲ.
ನಾರದೋಽಪ್ಯುತ್ಸ್ಮಯನ್ ಖಿನ್ನಃ ಕ್ವ ಗತೋಽಸಾವಿತಿ ಪ್ರಭುಃ |
ಸ್ಥಿತ್ವಾ ಸ ದೀರ್ಘಕಾಲಂ ಚ ಮುನಿರ್ವ್ಯಾಮೂಢಮಾನಸಃ ॥ 22 ॥
ನಾರದನು ಆ ಅದೃಶ್ಯರೂಪವನ್ನೂ, ಅದರ ಮಾತನ್ನೂ ಕೇಳಿ ಆಶ್ಚರ್ಯಚಕಿತನಾಗಿ ಭಗವಂತನು ಎಲ್ಲಿಗೆ ಹೋದನು? ನಾನು ಕಾಣುತ್ತಿಲ್ಲವಲ್ಲ ಎಂದು ಮನಸ್ಸಿಗೆ ಏನೊಂದೂ ತೋರದೆ ಸ್ತಬ್ಧನಾಗಿದ್ದನು.
ಆಹ ಮಾಂ ಭಗವಾನ್ ದೇವಸ್ತ್ವನಂತೋಽಹಂ ಬೃಹತ್ತರಃ |
ತೇನಾಹಮಿತಿ ಸರ್ವಸ್ಯ ಕೋ ವಾನಂತೋ ಬೃಹತ್ತರಃ ॥ 23 ॥
ಬಳಿಕ ನಾರದನು ತನ್ನೊಳಗೆ ತಾನು ಆ ಭಗವಂತನು ಅನಂತನೆಂದೂ, ದೊಡ್ಡವನೆಂದೂ ಹೇಳಿದನು. ಆದ್ದರಿಂದ ಲೋಕದಲ್ಲಿ ಅನಂತವೂ, ಎಲ್ಲಕ್ಕಿಂತಲೂ ದೊಡ್ಡದೂ ಆದ ಪದಾರ್ಥವೇನೆಂದು ವಿಚಾರ ಮಾಡುತ್ತೇನೆ. ಈ ನಿಜಾಂಶವನ್ನು ತಿಳಿಯದೆ ಅವನನ್ನು ತಿಳಿಯಲಾಗದು.
ಕೇಯಮುರ್ವೀ ಹ್ಯನಂತಾಖ್ಯಾ ಬೃಹತೀ ನೂನಮೇವ ಸಾ |
ಯಸ್ಯಾಂ ಜಾನಂತಿ ಭೂತಾನಿ ವಿಲೀನಾನಿ ತತಸ್ತತಃ |
ಏನಾಂ ಪೃಚ್ಛಾಮಿ ತರುಣೀಂ ಸ್ಯೈಷಾ ನೂನಮುವಾಚ ಮಾಮ್ ॥24॥

ಇತ್ಯೇವಂ ಸ ಮುನಿಃ ಶ್ರೀಮಾನ್ ಕೃತ್ವಾ ನಿಶ್ಚಯಮಾತ್ಮನಃ |
ಸ ಭೂತಲಂ ಸಮಾವಿಶ್ಯ ಪ್ರಣಿಪತ್ಯೇದಮಬ್ರವೀತ್ ॥ 25 ॥
ಈ ಭೂಮಿಯಲ್ಲಿ ಎಲ್ಲಾ ಭೂತಗಳ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಆಧಾರವೆನಿಸಿದ ಭೂಮಿಯೇ ಅನಂತವಾಗಿರಬಹುದೇ? ಈ ಭೂಮಿಯನ್ನೇ ಕೇಳಿ ತಿಳಿಯುತ್ತೇನೆ ಎಂದು ನಿಶ್ಚಯಿಸಿ, ಭೂತಳದೊಳಗೆ ಪ್ರವೇಶಿಸಿ ಅಲ್ಲಿಯ ಭೂಮಿಯನ್ನು ನಮಸ್ಕರಿಸಿ, ಅವಳೇ ನನಗೆ ಉತ್ತರಿಸುತ್ತಾಳೆ ಎಂಬ ಭಾವದಿಂದ ನಾರದನು ಹೀಗೆ ಹೇಳಿದನು.
ಆಶ್ಚರ್ಯಾಸಿ ಚ ಧನ್ಯಾಸಿ ಬೃಹತೀ ತ್ವಂ ವಸುಂಧರೇ |
ತ್ವಾಮತ್ರ ವೇತ್ತುಮಿಚ್ಛಾಮಿ ಯಾದೃಗ್ಭೂತಾಽಸಿ ಶೋಭನೇ ॥ 26 ॥
ತಾಯಿಯೇ, ನೀನೇ ಧನ್ಯಳು. ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ನೀನೇ ದೊಡ್ಡವಳು. ನಿನ್ನ ಸ್ವರೂಪವನ್ನು ನಾನು ವಿವರವಾಗಿ ತಿಳಿಯಲು ಬಯಸುತ್ತೇನೆ. ನೀನೆಂಥವಳು? ನಿನ್ನ ಪ್ರಭಾವವನ್ನು ನನಗೆ ತಿಳಿಸು.
ತಚ್ಛ್ರುತ್ವಾ ಧರಣೀ ದೇವೀ ಸ್ಮಯಮಾನಾಽಬ್ರವೀದಿದಮ್ |
ನಾಹಂ ಹಿ ಬೃಹತೀ ವಿಪ್ರ ನ ಚಾನಂತಾ ಚ ಸತ್ತಮ ॥ 27 ॥
ನಾರದರ ಈ ಮಾತನ್ನು ಕೇಳಿಸಿಕೊಂಡ ಧರಣೀದೇವಿಯು ಮಂದಹಾಸವನ್ನು ಬೀರುತ್ತಾ ಹೀಗೆ ಹೇಳಿದಳು: ನಾರದನೇ, ನಾನು ಎಂದಿಗೂ ದೊಡ್ಡವಳಲ್ಲ. ಎಂದಿಗೂ ಅಂತವಿಲ್ಲದವಳೂ ಅಲ್ಲ.
ಕಾರಣಂ ಮೇ ಜಲಂ ಮತ್ತೋ ಬೃಹತ್ತರತಮಂ ಹಿ ತತ್ ॥ 29 ॥
ನನಗೂ ಕಾರಣವೆನಿಸಿದ ಗಂಧಗುಣವಿದೆ. ನೀನು ಅಲ್ಲಿಗೆ ಹೋಗಿ ಕೇಳು ಎಂದಳು. ಬಳಿಕ ಮುನಿಯು ಆಗಲೆಂದು ಗಂಧದ ಬಳಿಗೆ ಬಂದು ಗಂಧವೇ ನೀನೇ ಪ್ರಪಂಚದಲ್ಲಿ ಅನಂತನೂ, ಬೃಹತ್ತೂ ಆಗಿರುವೆ ಎಂದು ಹೇಳಿದನು. ಆಗ ಗಂಧವು ಅಯ್ಯಾ! ನನಗೂ ಕಾರಣನಾದ ಜಲವು ನನಗಿಂತ ಬೃಹತ್ತೂ, ಅನಂತವೂ ಆಗಿದೆ ಎಂದಿತು.
ಸ ಸಮುದ್ರಂ ಮುನಿರ್ಗತ್ವಾ ಪ್ರಣಿಪತ್ಯೇದಮಬ್ರವೀತ್ |
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ ॥ 30 ॥
ಪುನಃ ನಾರದನು ಸಮುದ್ರವನ್ನು ಪ್ರವೇಶಿಸಿ ಆ ಜಲರಾಶಿ ಮುಂದೆ ನಮಸ್ಕರಿಸಿ ಹೇಳಿದನು: ಸಮುದ್ರರಾಜನೇ, ನೀನೇ ಆಶ್ಚರ್ಯನೂ, ನೀನೇ ಧನ್ಯನೂ, ನೀನೇ ಅನಂತನೂ, ನೀನೇ ಬೃಹತ್ತರನು.
ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ |
ತಚ್ಛ್ರುತ್ವಾ ಸರಿತಾಂನಾಥಃ ಸಮುದ್ರೋ ಮುನಿಮಬ್ರವೀತ್ ॥ 31 ॥
ನಿನ್ನನ್ನು ತಿಳಿಯಲು ನಾನು ಬಯಸುತ್ತೇನೆ. ನಿನ್ನ ಸ್ವರೂಪನು ಏನು? ಅವ್ಯಯನೇ, ತಿಳಿಸು. ಈ ರೀತಿಯಾದ ನಾರದಮುನಿಯ ಮಾತನ್ನು ಕೇಳಿಸಿಕೊಂಡ, ನದಿಗಳಿಗೆಲ್ಲ ನಾಥನಾದ ಸಮುದ್ರರಾಜನು ನಾರದರನ್ನು ಕುರಿತು ಹೀಗೆ ಹೇಳಿದನು.
ಕಾರಣಂ ಮೇಽತ್ರ ಸಂಪೃಚ್ಛ ರಸಾತ್ಮಾನಂ ಬೃಹತ್ತರಮ್ |
ತತೋಬೃಹತ್ತರಂ ವಿದ್ವಂಸ್ತ್ವಂ ಪೃಚ್ಛ ಮುನಿಸತ್ತಮ ॥ 32 ॥
ನಾರದನೇ, ನನಗಿಂತಲೂ ಎಷ್ಟೋ ದೊಡ್ಡದಾದುದು ರಸವೆಂಬ ಗುಣವು. ಅಲ್ಲಿಗೆ ಹೋಗಿ ನೀನು ಪ್ರಶ್ನಿಸು ಎಂದು ಹೇಳಿದನು.
ತತೋ ಮುನಿರ್ಯಥಾಯೋಗಂ ಜಲಂ ತತ್ವಮವೇಕ್ಷ್ಯ ತತ್ |
ಜಲಾತ್ಮಾನಂ ಪ್ರಣಮ್ಯಾಹ ಜಲತತ್ವಸ್ಥಿತೋ ಮುನಿಃ ॥ 33 ॥
ಬಳಿಕ ನಾರದಮುನಿಯು ಜಲತತ್ತ್ವವು ಹೇಳಿದ ಅಭಿಪ್ರಾಯವನ್ನು ಕೇಳಿಸಿಕೊಂಡು ಜಲಸ್ವರೂಪಿಯಾದ ಸಮುದ್ರನನ್ನು ನಮಸ್ಕರಿಸಿ ಮುಂದೆ ರಸತತ್ವದ ಬಳಿ ಹೊರಟನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |
ಭವಂತಂ ಶ್ರೋತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 34 ॥
ರಸತತ್ವವೇ, ನೀನೇ ಆಶ್ಚರ್ಯನೂ, ಧನ್ಯನೂ, ಅನಂತನೂ, ಬೃಹತ್ತರನು. ನಿನ್ನ ಮಹಿಮೆಯನ್ನೂ, ಸ್ವರೂಪವನ್ನೂ ತಿಳಿಯಲು ಬಯಸುತ್ತೇನೆ.
ತತೋ ರಸಾತ್ಮರೋತತ್ವಃ ಮುನಿಮಾಹ ಪುನಃಪುನಃ |
ಮಮಾಪಿ ಕಾರಣಂ ಪೃಚ್ಛ ತೇಜೋರೂಪಂ ವಿಭಾವಸುಮ್ |
ನಾಹಂ ಬೃಹತ್ತರೋ ಬ್ರಹ್ಮನ್ನಾಪ್ಯನಂತಶ್ಚ ಸತ್ತಮ ॥ 35 ॥
ಬಳಿಕ ರಸಾತ್ಮಕವಾದ ತತ್ತ್ವವು ನಾರದಮುನಿಯನ್ನು ಕುರಿತು ಪುನಃ ಪುನಃ ಹೇಳಿತು: ನಾರದನೇ, ನನಗೂ ಕಾರಣನಾದ ತೇಜೋರೂಪನಾದ ವಿಭಾವಸುವನ್ನು ಪ್ರಶ್ನಿಸು. ನಾನು ಅವನ ಮುಂದೆ ಬೃಹತ್ತರನೂ ಅಲ್ಲ, ಅನಂತನೂ ಅಲ್ಲ.
ತತೋಽಗ್ನಿಂ ಪ್ರಣಿಪತ್ಯಾಹ ಮುನಿರ್ವಿಸ್ಮಿತಮಾನಸಃ |
ಯಜ್ಞಾತ್ಮಾನಂ ಮಹಾವಾಸಂ ಸರ್ವಭೂತನಮಸ್ಕೃತಮ್ ॥ 36 ॥
ಬಳಿಕ ನಾರದ ಮುನಿಯು ಆಶ್ಚರ್ಯಚಕಿತವಾದ ಮನಸ್ಸುಳ್ಳವನಾಗಿ ಅಗ್ನಿಯನ್ನು ಕುರಿತು ನಮಸ್ಕರಿಸಿ, ಯಜ್ಞಸ್ವರೂಪಿಯಾದ ಮಹಾವಾಸನೆನಿಸಿದ, ಸರ್ವಭೂತ ನಮಸ್ಕೃತನಾದ ಅಗ್ನಿದೇವನನ್ನು ಕುರಿತು ಕೇಳಿದನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತಶ್ಚ ಬೃಹತ್ತರಃ |
ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 37 ॥
ಅಗ್ನಿದೇವನೇ, ನೀನೇ ಆಶ್ಚರ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಸ್ವರೂಪವೇನು? ಅವ್ಯಯನೇ ತಿಳಿಸು.
ತತಃ ಪ್ರಹಸ್ಯ ಭಗವಾನ್ ಮುನಿಂ ಸ್ವಿಷ್ಟಕೃದಬ್ರವೀತ್ |

ನಾಹಂ ಬೃಹತ್ತರೋ ಬ್ರಹ್ಮನ್ನಾಪ್ಯನಂತಶ್ಚ ಸತ್ತಮ |
ಕಾರಣಂ ಮಮ ರೂಪಂ ಯತ್ ತಂ ಪೃಚ್ಛ ಮುನಿಸತ್ತಮ ॥ 38 ॥
ಸ್ವಿಷ್ಟಕೃತ್ ಎನಿಸಿದ ಅಗ್ನಿಯು ನಾರದಮುನಿಯನ್ನು ಕುರಿತು ಮಂದಹಾಸವನ್ನು ಬೀರುತ್ತಾ ಹೀಗೆ ಹೇಳಿದನು: ಮುನೀಂದ್ರನೇ, ನಾನು ಬೃಹತ್ತರನಲ್ಲ, ಅನಂತನಲ್ಲ. ನನಗೆ ಕಾರಣವಾದ ರೂಪವು ನನಗಿಂತ ಮಿಗಿಲಾದುದು. ಅವನ ಬಳಿ ಹೋಗಿ ಪ್ರಶ್ನಿಸು ಎಂದನು.
ತತೋ ಯೋಗಕ್ರಮೇಣೈವ ಪ್ರತೀತಂ ತಂ ಪ್ರವಿಶ್ಯ ಸಃ |
ರೂಪಾತ್ಮಾನಂ ಪ್ರಣಮ್ಯಾಹ ನಾರದೋ ವದತಾಂವರಃ ॥ 39 ॥
ಬಳಿಕ ನಾರದ ಮುನಿಯು ಯೋಗಕ್ರಮದಲ್ಲಿಯೇ ಆ ರೂಪವನ್ನು ಸಮೀಪಿಸಿ ರೂಪಾತ್ಮನಾದ ದೇವನನ್ನು ನಮಸ್ಕರಿಸಿ ಮಾತುಗಾರರಲ್ಲಿ ಶ್ರೇಷ್ಠನಾದ ನಾರದನು ಹೇಳಿದನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |
ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 40 ॥
ರೂಪಾತ್ಮನೇ, ನೀನೇ ಆಶ್ಚರ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಸ್ವರೂಪವೇನು? ಅವ್ಯಯನೇ, ತಿಳಿಸು.
ಉತ್ಸ್ಮಯಿತ್ವಾ ತು ರೂಪಾತ್ಮಾ ತಂ ಮುನಿಂ ಪ್ರತ್ಯುವಾಚ ಹ |
ವಾಯುರ್ಮೇ ಕಾರಣಂ ಬ್ರಹ್ಮಂಸ್ತಂ ಪೃಚ್ಛ ಮುನಿಸತ್ತಮ |
ಮತ್ತೋ ಬಹುತರಃ ಶ್ರೀಮಾನಂತಶ್ಚ ಮಹಾಬಿಲಮ್ ॥ 41 ॥
ರೂಪಾತ್ಮನು ನಾರದರನ್ನು ಕುರಿತು ಮಂದಹಾಸವನ್ನು ಬೀರಿ ಉತ್ತರಿಸಿದನು: ಪೂಜ್ಯನೇ, ನನಗೆ ವಾಯುವು ಕಾರಣನು. ನನಗಿಂತ ಬೃಹತ್ತರನು. ಅನಂತನೂ, ಮಹಾಬಿಲನು. ಅವನನ್ನು ಪ್ರಶ್ನಿಸು.
ಸ ಮಾರುತಂ ಪ್ರಣಮ್ಯಾಹ ಭಗವಾನ್ ಮುನಿಸತ್ತಮಃ |
ಯೋಗಸಿದ್ಧೋ ಮಹಾಯೋಗೀ ಜ್ಞಾನವಿಜ್ಞಾನಪಾರಗಃ ॥ 42 ॥
ನಾರದಮುನಿಯು ಮಾರುತನನ್ನು ನಮಸ್ಕರಿಸಿ, ಯೋಗಸಿದ್ಧನೂ, ಮಹಾಯೋಗಿಯೂ, ಜ್ಞಾನ-ವಿಜ್ಞಾನಪಾರಗನೂ ಆದ ಮುನಿಯು ಪ್ರಶ್ನಿಸಿದನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |
ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 43 ॥
ವಾಯುವೇ, ನೀನೇ ಆಶ್ಚರ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಸ್ವರೂಪವೇನು? ಅವ್ಯಯನೇ, ತಿಳಿಸು.
ತತೋ ವಾಯುರ್ಹಿ ಸಂಪ್ರಾಹ ನಾರದಂ ಮುನಿಸತ್ತಮಮ್ |
ಕಾರಣಂ ಪೃಚ್ಛ ಭಗವನ್ ಸ್ಪರ್ಶಾತ್ಮಾನಂ ಮಮಾದ್ಯ ವೈ ॥ 44 ॥
ಮುನಿಶ್ರೇಷ್ಠನಾದ ನಾರದನನ್ನು ಕುರಿತು ವಾಯುವು ಹೇಳಿದನು: ನನಗೂ ಕಾರಣನಾದವನು ವಾಯುತನ್ಮಾತ್ರನಾದ ಸ್ಪರ್ಶನು. ಅವನ ಬಳಿ ಹೋಗಿ ಪ್ರಶ್ನಿಸು.
ಮತ್ತೋ ಬೃಹತ್ತರಃ ಶ್ರೀಮಾನನಂತಶ್ಚ ತಥೈವ ಸಃ |
ತತೋಽಸ್ಯ ವಚನಂ ಶ್ರುತ್ವಾ ಸ್ಪರ್ಶಾತ್ಮಾನಮುವಾಚ ಸಃ ॥ 45 ॥
ನನಗಿಂತಲೂ ಬೃಹತ್ತರನೂ, ಕಾಂತಿಯುಕ್ತನೂ, ಅನಂತನೂ ಅವನೇ ಆಗಿದ್ದಾನೆ ಎಂದು ಹೇಳಲು, ನಾರದರು ವಾಯುವಿನ ಮಾತನ್ನು ಕೇಳಿ ಸ್ಪರ್ಶಾತ್ಮನನ್ನು ಕುರಿತು ಹೇಳಿದನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |
ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 46 ॥
ಸ್ಪರ್ಶಾತ್ಮನೇ, ನೀನೇ ಆಶ್ಚರ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಸ್ವರೂಪವೇನು? ಅವ್ಯಯನೇ, ತಿಳಿಸು.
ತಸ್ಯ ತದ್ ವಚನಂ ಶ್ರುತ್ವಾ ಸ್ಪರ್ಶಾತ್ಮಾ ಮುನಿಮಬ್ರವೀತ್ |
ನಾಹಂ ಬೃಹತ್ತರೋ ಬ್ರಹ್ಮನ್ನಪ್ಯನಂತಶ್ಚ ಸತ್ತಮ ॥ 47 ॥
ಅವನ ಮಾತನ್ನು ಕೇಳಿಸಿಕೊಂಡ ಸ್ಪರ್ಶಾತ್ಮನು ಮುನಿಯನ್ನು ಕುರಿತು ಹೇಳಿದನು. ಪೂಜ್ಯನೇ, ಶ್ರೇಷ್ಠ ನೇ, ನಾನು ಬೃಹತ್ತರನೂ ಅಲ್ಲ, ಅನಂತನೂ ಅಲ್ಲ.
ಕಾರಣಂ ಮಮ ಚೈವೇಮಮಾಕಾಶಂ ಚ ಬೃಹತ್ತರಮ್ |
ತಂ ಪೃಚ್ಛ ಮುನಿಶಾರ್ದೂಲ ಸರ್ವವ್ಯಾಪಿನಮವ್ಯಯಮ್ ॥ 48 ॥
ನನಗೂ ಕಾರಣನಾದವನು ಆಕಾಶನು. ಅವನೇ ಬೃಹತ್ತರನು. ನಾಶರಹಿತನಾದ, ಸರ್ವವ್ಯಾಪಿಯಾದ ಅವನನ್ನು ಮುನಿಶಾರ್ದೂಲನೇ, ಪ್ರಶ್ನಿಸು.
ತಚ್ಛ್ರುತ್ವಾ ನಾರದಃ ಶ್ರೀಮಾನ್ ವಾಕ್ಯಂ ವಾಕ್ಯವಿಶಾರದಃ |
ಆಕಾಶಂ ಸಮುಪಾಗಮ್ಯ ಪ್ರಣಮ್ಯಾಹ ಕೃತಾಂಜಲಿಃ ॥ 49 ॥
ವಾಕ್ಯವಿಶಾರದನಾದ ಪೂಜ್ಯನಾದ ನಾರದನು ಸ್ಪರ್ಶಾತ್ಮನ ಮಾತನ್ನು ಕೇಳಿಸಿಕೊಂಡು ಆಕಾಶವನ್ನು ಕುರಿತು ನಮಸ್ಕರಿಸಿ ಕೃತಾಂಜಲಿ ಸ್ಫುಟನಾಗಿ ಹೀಗೆ ಹೇಳಿದನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |

ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 50 ॥
ಆಕಾಶನೇ, ನೀನೇ ಆಶ್ಚರ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಸ್ವರೂಪವೇನು? ಅವ್ಯಯನೇ, ತಿಳಿಸು.
ಆಕಾಶಸ್ತಮುವಾಚೇದಂ ಪ್ರಹಸನ್ ಮುನಿಸತ್ತಮಮ್ |
ನಾಹಂ ಬೃಹತ್ತರೋ ಬ್ರಹ್ಮನ್ ಶಬ್ದೋ ವೈ ಕಾರಣಂ ಮಮ |
ತಂ ಪೃಚ್ಛ ಮುನಿಶಾರ್ದೂಲ ಸ ವೈ ಮತ್ತೋ ಬೃಹತ್ತರಃ ॥ 51 ॥
ಆಕಾಶನು ಮಂದಹಾಸವನ್ನು ಬೀರುತ್ತಾ ಮುನಿಯನ್ನು ಕುರಿತು ಹೇಳಿದನು: ಮುನಿಯೇ, ನನಗಿಂತ ಬೃಹತ್ತರನು ನನಗೆ ಕಾರಣನಾದ ಶಬ್ದನು. ಅವನೇ ಬೃಹತ್ತರನಾಗಿದ್ದಾನೆ. ಅವನನ್ನು ಕುರಿತು ಕೇಳು.
ತತೋ ಹ್ಯಾವಿಶ್ಯ ಚಾಕಾಶಂ ಶಬ್ದಾತ್ಮಾನಮುವಾಚ ಹ |
ಸ್ವರವ್ಯಂಜನಸಂಯುಕ್ತಂ ನಾನಾಹೇತುವಿಭೂಷಿತಮ್ |
ವೇದಾಖ್ಯಂ ಪರಮಂ ಗುಹ್ಯಂ ವೇದಕಾರಣಮಚ್ಯುತಮ್ ॥ 52 ॥
ಶಬ್ದನಾದರೂ ಸ್ವರ-ವ್ಯಂಜನದಿಂದ ಕೂಡಿದವನಾಗಿದ್ದಾನೆ. ನಾನಾಯುಕ್ತಿಗಳಿಂದ ಅಲಂಕೃತನಾಗಿದ್ದಾನೆ. ವೇದವೆಂಬ ಪರಮಗುಹ್ಯನಾಗಿದ್ದಾನೆ. ಅಂತಹ ಚ್ಯುತಿರಹಿತನಾದ ಶಬ್ದಾತ್ಮನ ಬಳಿ ಹೋಗಿ ನಾರದನು ಶಬ್ದಾತ್ಮನನ್ನು ಕುರಿತು ಹೇಳಿದನು:
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |
ಭವಂತಂ ಶ್ರೋತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 53 ॥
ಶಬ್ದಾತ್ಮನೇ, ನೀನೇ ಆಶ್ಚರ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಸ್ವರೂಪವೇನು? ಅವ್ಯಯನೇ, ತಿಳಿಸು.
ವೇದಾತ್ಮಾ ಪ್ರತ್ಯುವಾಚೇದಂ ನಾರದಂ ಮುನಿಪುಂಗವಮ್ |
ಮಯಾ ಕಾರಣಭೂತೇನ ಸರ್ವವೇತ್ತಾ ಪಿತಾಮಹಃ ॥ 54 ॥
ಈ ಪ್ರಸಂಗದಲ್ಲಿ ವೇದಾತ್ಮ ಎನಿಸಿದ ಸರಸ್ವತಿಯು ನಾರದ ಮುನಿಪುಂಗವನನ್ನು ಕುರಿತು ಹೀಗೆ ಹೇಳಿದಳು: ನನಗೂ ಕಾರಣೀಭೂತನಾದವನು ಸರ್ವಜ್ಞನಾದ ಪಿತಾಮಹನು.
ಬ್ರಹ್ಮಣೋ ಬುದ್ಧಿಸಂಸ್ಥಾನಮಾಸ್ಥಿತೋಽಹಂ ಮಹಾಮುನೇ |
ತಸ್ಮಾದ್ ಬೃಹತ್ತರೋ ಮತ್ತಃ ಪದ್ಮಯೋನಿರ್ಮಹಾಮತಿಃ |
ತಂ ಪೃಚ್ಛ ಮುನಿಶಾರ್ದೂಲ ಸರ್ವಕಾರಣಕಾರಣಮ್ ॥ 55 ॥
ನಾನು ಆ ಚತುರ್ಮುಖಬ್ರಹ್ಮನ ಬುದ್ಧಿಯನ್ನೇ ಆಶ್ರಯಿಸಿಕೊಂಡಿದ್ದೇನೆ. ಪದ್ಮಯೋನಿಯಾದ ಮಹಾಮತಿಯಾದ ಬ್ರಹ್ಮನು ನನಗಿಂತಲೂ ಬೃಹತ್ತರನಾಗಿದ್ದಾನೆ. ಮುನಿಶಾರ್ದೂಲನೇ, ಎಲ್ಲ ಕಾರಣಗಳಿಗೂ ಕಾರಣನಾದ ಅವನ ಬಳಿಗೆ ಹೋಗಿ ಪ್ರಶ್ನಿಸು.
ಬ್ರಹ್ಮಲೋಕಂ ತತೋ ಗತ್ವಾ ನಾರದೋ ಮುನಿಪುಂಗವೈಃ |
ಸೇವ್ಯಮಾನಂ ಮಹಾತ್ಮಾನಂ ಲೋಕಪಾಲೈರ್ಮರುದ್ಗಣೈಃ ॥ 56 ॥
ಸಮುದ್ರೈಶ್ಚ ಸರಿದ್ಭಿಶ್ಚ ಭೂತತತ್ತ್ವೈಃ ಸಭೂಧರೈಃ |
ಗಂಧರ್ವೈರಪ್ಸರೋಭಿಶ್ಚ ಜ್ಯೋತಿಷಾಂ ಚ ಗಣೈಸ್ತಥಾ ॥ 57 ॥
ಸ್ತುತಿಸ್ತೋಮಗ್ರಹಸ್ತೋಭೈಸ್ತಥಾ ವೇದೈರ್ಮುನೀಶ್ವರೈಃ |
ಉಪಾಸ್ಯಮಾನಂ ಬ್ರಹ್ಮಾಣಂ ಲೋಕನಾಥಂ ಪರಾತ್ಪರಮ್ ॥ 58 ॥
ಹಿರಣ್ಯಗರ್ಭಂ ವಿಶ್ವೇಶಂ ಚತುರ್ವಕ್ತ್ರೇಣ ಭೂಷಿತಮ್ |
ಪ್ರಣಮ್ಯ ಪ್ರಾಂಜಲಿಃ ಪ್ರಹ್ವಸ್ತಮಾಹ ಮುನಿಪುಂಗವಃ ॥ 59 ॥
ಮುನಿಪುಂಗವರಿಂದ ಕೂಡಿದ ನಾರದರು ಬ್ರಹ್ಮಲೋಕವನ್ನು ಕುರಿತು ಹೋದನು. ಲೋಕಪಾಲಕರಿಂದ ಮರುದ್ಗಣಗಳಿಂದ ಸೇವ್ಯಮಾನನಾದ ಮಹಾತ್ಮನಾದ ಚತುರ್ಮುಖ ಬ್ರಹ್ಮನನ್ನು ಸಮುದ್ರಗಳಿಂದ, ಸರೋವರಗಳಿಂದ, ಭೂತತತ್ತ್ವಗಳಿಂದ, ಪರ್ವತಗಳಿಂದ, ಗಂಧರ್ವರಿಂದ, ಅಪ್ಸರೆಯರಿಂದ, ಜ್ಯೋತಿರ್ಮಂಡಲಗಳಿಂದ, ಸಮಸ್ತ ಗ್ರಹಗಳಿಂದ, ವೇದಗಳಿಂದ, ಮುನೀಶ್ವರರಿಂದ ಸ್ತೋತ್ರಪರಾಯಣನಾದ, ಉಪಾಸ್ಯಮಾನನಾದ, ಪರಾತ್ಪರನಾದ, ಲೋಕನಾಥನಾದ ಚತುರ್ಮುಖ ಬ್ರಹ್ಮನನ್ನು ನಾಲ್ಕು ವದನಗಳಿಂದ ಭೂಷಿತನಾದ, ಹಿರಣ್ಯಗರ್ಭನಾದ, ವಿಶ್ವೇಶನನ್ನು ನಮಸ್ಕರಿಸಿ ಸ್ತುತಿಸುತ್ತಾ ಪ್ರಾಂಜಲಿ ಬದ್ಧನಾಗಿ ಮುನಿಪುಂಗವನು ಹೀಗೆ ಹೇಳಿದನು.
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತೋಽಸಿ ಬೃಹತ್ತರಃ |
ಭವಂತಂ ವೇತ್ತುಮಿಚ್ಛಾಮಿ ಕೀದೃಗ್ಭೂತಸ್ತ್ವಮವ್ಯಯ ॥ 60 ॥
ಪಿತಾಮಹನೇ, ನೀನೇ ಆಶ್ಚರ್ಯನೂ, ಧನ್ಯನೂ, ಅನಂತನೂ, ಬೃಹತ್ತರನೂ ಆಗಿರುವಿ. ನಿನ್ನ ಸ್ವರೂಪವೆಂತಹದ್ದು? ಅವ್ಯಯನೇ, ಅದನ್ನು ತಿಳಿಯಲು ಬಯಸಿದ್ದೇನೆ.
ತಚ್ಛ್ರುತ್ವಾ ಭಗವಾನ್ ಬ್ರಹ್ಮಾ ಸರ್ವಲೋಕಪಿತಾಮಹಃ |
ಉತ್ಸ್ಮಯನ್ ಮುನಿಮಾಹೇದಂ ಕರ್ಮಮೂಲಸ್ಯ ಲೋಪಕಮ್ ॥61॥
ಸರ್ವಲೋಕಪಿತಾಮಹನಾದ ಭಗವಾನ್ ಬ್ರಹ್ಮನು ನಾರದಮುನಿಯ ಮಾತನ್ನು ಕೇಳಿ, ಮಂದಹಾಸ ಬೀರುತ್ತಾ, ಮುನಿಯನ್ನು ಕುರಿತು ಸಮಸ್ತಲೋಕಪಾಲನಾದ ಭಗವಂತನನ್ನು ಚಿಂತಿಸುತ್ತಾ ಹೇಳಿದನು:
ನಾಹಂ ಬೃಹತ್ತರೋ ಬ್ರಹ್ಮನ್ನಪ್ಯನಂತಶ್ಚ ಸತ್ತಮ |
ಲೋಕಾನಾಂ ಮಮ ಸರ್ವೇಷಾಂ ನಾಥಭೂತೋ ಬೃಹತ್ತರಃ ॥ 62 ॥

ನಾನು ಬೃಹತ್ತರನಲ್ಲ, ಅನಂತನೂ ಅಲ್ಲ, ನನ್ನ ಸಮಸ್ತ ಲೋಕಗಳಿಗೂ ಸ್ವಾಮಿಯಾದವನೇ ಬೃಹತ್ತರನು.
ನಂದಗೋಪಕುಲೇ ಗೋಪಕುಮಾರ್ಯೈಃ ಪರಿವಾರಿತಃ |
ಸಮಸ್ತಜಗತಾಂ ಗೋಪ್ತಾ ಗೋಪವೇಷೇಣ ಸಂಸ್ಥಿತಃ ॥ 63 ॥
ನಂದಗೋಪಕುಲದಲ್ಲಿ ಗೋಪಕುಮಾರರೊಂದಿಗೆ ಸುತ್ತುವರಿದಿದ್ದಾನೆ. ಸಮಸ್ತ ಜಗತ್ತನ್ನು ಅವನೇ ರಕ್ಷಿಸುತ್ತಿದ್ದಾನೆ.
ಗೋಪವೇಷದಿಂದ ಜನರ ಕಣ್ಣಿಗೆ ಕಾಣಿಸುತ್ತಿದ್ದಾನೆ.
ಮದ್ರೂಪಂ ಚ ಸಮಾಸ್ಥಾಯ ಜಗತ್ಸೃಷ್ಟಿಂ ಕರೋತಿ ಸಃ |
ಐಶಾನರೂಪಮಾಸ್ಥಾಯಃ ಶ್ರೀಮಾನ್ ಹಂತಿ ನಿತ್ಯಂ ಹಿ ಪಾತಿ ಚ ॥
ನನ್ನ ರೂಪವನ್ನು ಆಶ್ರಯಿಸಿ ಅರ್ಥಾತ್ ಬ್ರಹ್ಮಾ ಎಂಬ ರೂಪವನ್ನು ಧರಿಸಿದ ಭಗವಂತನು ಜಗತ್ತಿನ ಸೃಷ್ಟಿಯನ್ನು ಮಾಡುತ್ತಿದ್ದಾನೆ.
ಶಿವ ಎಂಬ ರೂಪದಿಂದ ಜಗತ್ತಿನ ಸಂಹಾರವನ್ನೂ ಮಾಡುತ್ತಿದ್ದಾನೆ. ಸ್ವಯಂ ತಾನೇ ಈ ಜಗತ್ತನ್ನು ಪರಿಪಾಲಿಸುತ್ತಿದ್ದಾನೆ.
ವಿಷ್ಣುಃ ಸ್ವರೂಪರೂಪೋಽಸೌ ಕಾರಣಂ ಸ ಹರಿರ್ಮಮ |
ತಂ ಪೃಚ್ಛ ಮುನಿಶಾರ್ದೂಲ ಸ ಚಾನಂತೋ ಬೃಹತ್ತರಃ ॥ 65 ॥
ಕೇವಲ ಕೃಷ್ಣ ಸ್ವರೂಪದಿಂದ ಅಲ್ಲದೆ ಬ್ರಹ್ಮ-ಶಿವರಂತೆ ಅಂತರ್ಯಾಮಿಯಾಗಿರುವ ಸ್ವರೂಪರೂಪನಾದ ಭಗವಂತನು
ಬ್ರಹ್ಮರೂಪವನ್ನೂ ತಾಳಿ, ಶಿವರೂಪವನ್ನೂ ತಾಳಿ, ವಿಷ್ಣುವೆಂಬ ರೂಪವನ್ನೂ ತಾಳಿ ಜಗತ್ತಿಗೆಲ್ಲ ಕಾರಣನಾಗಿದ್ದಾನೆ. ನನಗೂ
ಕಾರಣನು ಅವನೇ. ಅನಂತನೂ, ಬೃಹತ್ತರನೂ ಆದವನು ವಿಷ್ಣುವೇ ಆಗಿದ್ದಾನೆ. ಮುನಿಯೇ, ಅವನನ್ನು ಪ್ರಶ್ನಿಸು.
ತತೋಽವತೀರ್ಯ ಭಗವಾನ್ ಬ್ರಹ್ಮಲೋಕಾನ್ಮಹಾಮುನಿಃ |
ನಂದಗೋಪಕುಲೇ ವಿಷ್ಣುಮೇನಂ ಕೃಷ್ಣಂ ಜಗತ್ಪತಿಮ್ ॥ 66 ॥
ಬಾಲಕ್ರೀಡನಕಾಸಕ್ತಂ ವತ್ಸಜಾಲವಿಭೂಷಿತಮ್ |
ಪಾಯಯಿತ್ವಾಥ ಬಧ್ನಂತಂ ಧೂಲಧೂಮ್ರಾನನಂ ಪರಮ್ ॥ 67 ॥
ಗಾಹಮಾನೈರ್ಹಸದ್ಭಿಶ್ಚ ನೃತ್ಯದ್ಭಿಶ್ಚ ಸಮಂತತಃ |
ಪಾಣಿವಾದನಕೈಶ್ಚೈವ ಸಂವೃತಂ ವೇಣುವಾದಕೈಃ ॥ 68 ॥
ಪ್ರಣಿಪತ್ಯಾಬ್ರವೀದೇನಂ ನಾರದೋ ಭಗವಾನ್ ಮುನಿಃ |
ಆಶ್ಚರ್ಯೋಽಸಿ ಚ ಧನ್ಯೋಽಸಿ ಹ್ಯನಂತಶ್ಚ ಬೃಹತ್ತರಃ |
ವೇತ್ತಾಽಸಿ ಚಾವ್ಯಯಶ್ಚಾಸಿ ವೇತ್ತುಮಿಚ್ಛಾಮಿ ಯಾದೃಶಮ್ ॥ 69 ॥
ಬಳಿಕ ಪೂಜ್ಯನಾದ ನಾರದನು ಬ್ರಹ್ಮಲೋಕದಿಂದ ಕೆಳಗಿಳಿದು ಬಂದು ನಂದಗೋಪಕುಲದಲ್ಲಿ ಜಗತ್ಪತಿಯಾಗಿರುವ ವಿಷ್ಣುವಾದ
ಕೃಷ್ಣನನ್ನು, ಅನೇಕ ಕರುಗಳ ನಡುವೆ ಅಲಂಕೃತನಾದ, ಬಾಲಕ್ರೀಡೆಯನ್ನು ಮಾಡುತ್ತಿರುವ ಕರುಗಳಿಗೆ ಹಾಲನ್ನು ಕುಡಿಸಿ ಹಗ್ಗದಿಂದ
ಕಟ್ಟುತ್ತಿರುವ, ಗೋಧೂಳಿಗಳಿಂದ ಆವೃತನಾದ, ಮುಖವೆಲ್ಲ ಧೂಳು ಕವಿದುಕೊಂಡಿರುವ ಸರ್ವೋತ್ತಮನಾದ, ಓಡುತ್ತಿರುವ,
ನಗುತ್ತಿರುವ, ಸುತ್ತಲೂ ನರ್ತನ ಮಾಡುತ್ತಿರುವ, ಚಪ್ಪಾಳೆ ತಟ್ಟುತ್ತಿರುವ, ವೇಣುವಾದಕರಿಂದ ಸುತ್ತುಗಟ್ಟಿರುವ, ಹೀಗೆ ಅನೇಕ
ಗೋಪಾಲ ಬಾಲಕರಿಂದ ನೆರೆದಿರುವ ಕೃಷ್ಣನನ್ನು ನಮಸ್ಕರಿಸಿ ಭಗವಾನ್ ನಾರದಮುನಿಯು ಹೀಗೆ ಹೇಳಿದನು: ಕೃಷ್ಣನೇ, ನೀನೇ
ಆಶ್ಚರ್ಯನೂ, ಧನ್ಯನೂ, ಅನಂತನೂ, ಬೃಹತ್ತರನು. ಎಲ್ಲವನ್ನೂ ಬಲ್ಲವನೂ, ಅವ್ಯಯನೂ, ಇಂತಹ ನಿನ್ನ ಸ್ವರೂಪವನ್ನು
ತಿಳಿಯಲು ಬಯಸುತ್ತೇನೆ.
ತತಃ ಪ್ರಹಸ್ಯ ಭಗವಾನ್ನಾರದಂ ಪ್ರತ್ಯುವಾಚ ಹ |
ಮತ್ತಃ ಪರತರಂ ನಾಸ್ತಿ ಮತ್ತಃ ಸರ್ವಂ ಪ್ರತಿಷ್ಠಿತಮ್ ॥ 70 ॥
ಬಳಿಕ ಭಗವಾನ್ ಕೃಷ್ಣನು ಮಂದಹಾಸವನ್ನು ಬೀರಿ ನಾರದರನ್ನು ಕುರಿತು ಹೇಳಿದನು: ನಾರದರೇ ನನಗಿಂತ ಸರ್ವೋತ್ತಮವಾದ
ವಸ್ತುವು ಜಗತ್ತಿನಲ್ಲಿ ಯಾವುದೂ ಇಲ್ಲ. ನನ್ನಿಂದಲೇ ಎಲ್ಲವೂ ಪ್ರತಿಷ್ಠಿತವಾಗಿವೆ.
ವ್ಯಾಖ್ಯಾನ ವಿಶೇಷ ಸಮಸ್ತ ದೇವತೆಗಳು ತಾವು ಹೇಳುವಾಗ ಪೃಥಿವೀ, ಗಂಧ, ಜಲ, ರಸಾದಿ ವಸ್ತುಗಳ ಅಭಿಮಾನಿದೇವತೆಗಳು
ತಾರತಮ್ಯಕ್ರಮದಲ್ಲಿ ಉತ್ತಮತ್ವವನ್ನು ಹೇಳುತ್ತಾ ಬಂದಿದ್ದಾರೆಂದು ತಿಳಿಯಬೇಕು. ಪ್ರಶ್ನೆಗೆ ಉತ್ತರವನ್ನು ಹೇಳುವ ನೆಪದಲ್ಲಿ
ಪೃಥಿವ್ಯಾದಿ ದೇವತೆಗಳ ತಾರತಮ್ಯವನ್ನೂ ಇಲ್ಲಿ ತಿಳಿಸಿದಂತಾಗಿದೆ. ಜೊತೆಗೆ ಪರಮಾತ್ಮನಿಗಿಂತಲೂ ಇವರಿಗೆ ಅತ್ಯಂತ ಭೇದವಿದೆ
ಎಂಬ ವಿಚಾರವೂ, ಕೊನೆಗೆ ಭಗವಂತನೇ ಸರ್ವೋತ್ತಮನೆಂಬುದನ್ನೂ ತಿಳಿಸಲು ನಾರದರು ಮಾಡಿದ ಪ್ರಯತ್ನವು ಎಂದು ಈ ಸಮಗ್ರ
ಪ್ರಕರಣದ ಅಭಿಪ್ರಾಯ. ಪ್ರತೀ ವ್ಯಕ್ತಿಯ ಬಳಿ ನಾರದರು ಸಾಗಿದಾಗಲೂ ಎಲ್ಲರೂ ಬೃಹತ್ತರನಲ್ಲ ಎಂದು ತಮ್ಮ ಸ್ವರೂಪದ
ವಿಚಾರವನ್ನು ತಿಳಿಸುವುದರ ಜೊತೆಗೆ ಭಗವಂತನೇ ಸರ್ವೋತ್ತಮನೆಂದು ಅಭಿಪ್ರಾಯವನ್ನು ಹೊಂದಿದುದರಿಂದ ಸರ್ವೋತ್ತಮನಾದ
ನಾರಾಯಣನು ಜಗತ್ತಿಗಿಂತ ಅತ್ಯಂತ ಭಿನ್ನನೂ, ಸರ್ವೋತ್ತಮನೂ ಎಂಬುದನ್ನು ಈ ಪ್ರಕರಣದಲ್ಲಿ ಸ್ಪಷ್ಟವಾಗಿ ಹೇಳಿದಂತಾಯಿತು.
ಈ ಅಭಿಮಾನಿದೇವತೆಗಳ ತಾರತಮ್ಯವನ್ನು ಶ್ರೀಭಾವೀಸಮೀರ ವಾದಿರಾಜಗುರುಸಾರ್ವಭೌಮರು ತಮ್ಮ ಮಹಾಭಾರತತಾತ್ಪರ್ಯ
ನಿರ್ಣಯದ ಪ್ರಕಾಶಿಕಾ ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಆದ್ದರಿಂದ ಇಲ್ಲಿ ಸಂಕ್ಷಿಪ್ತವಾಗಿ ವ್ಯಾಖ್ಯಾನಿಸಿದ್ದಾರೆ ಎಂದು
ತಿಳಿಯಬೇಕು.
ಮತ್ತೋ ಬೃಹತ್ತರಂ ನಾನ್ಯದಹಮೇವ ಬೃಹತ್ತರಃ |
ಆಕಾಶೇ ಚ ಸ್ಥಿತಃ ಪೂರ್ವಮುಕ್ತವಾನಹಮೇವ ತೇ ॥ 71 ॥
ನನಗಿಂತಲೂ ಬೃಹತ್ತರವಾದುದು ಬೇರೆ ಯಾವುದೂ ಇಲ್ಲ. ನಾನೇ ಬೃಹತ್ತರನು. ಹಿಂದೆ ಆಕಾಶದಲ್ಲಿ ಅಶರೀರವಾಣಿಯಾಗಿ ಈ
ಅಭಿಪ್ರಾಯವನ್ನು ನಾನೇ ನಿನಗೆ ತಿಳಿಸಿದ್ದೆ.
ನ ಮಾಂ ವೇತ್ತಿ ಜನಃ ಕಶ್ಚಿನ್ಮಾಯಾ ಮಮ ದುರತ್ಯಯಾ |
ಭಕ್ತ್ಯಾ ತ್ವನನ್ಯಯಾ ಯುಕ್ತಾ ಮಾಂ ವಿಜಾನಂತಿ ಯೋಗಿನಃ ॥ 72 ॥

ಸಾಮಾನ್ಯ ಜನರು ನನ್ನ ಸ್ವರೂಪವನ್ನು ಅರಿಯಲಾರರು. ನನ್ನ ಇಚ್ಛಾಶಕ್ತಿಯನ್ನು ಯಾರೂ ದಾಟಲಾಗದು. ಯಾರಲ್ಲೂ ಇಲ್ಲದ ಅನನ್ಯವಾದ ಭಕ್ತಿಯಿಂದ ಯೋಗಿಗಳು ನನ್ನನ್ನು ತಿಳಿಯುತ್ತಾರೆ.
ಪ್ರಿಯೋಽಸಿ ಮಮ ಭಕ್ತೋಽಸಿ ಮಮ ತತ್ತ್ವಂ ವಿಲೋಕಯ |
ದದಾಮಿ ತವ ತಜ್ಜ್ಞಾನಂ ಯೇನ ತತ್ತ್ವಂ ಪ್ರಪಶ್ಯಸಿ || 73 ||
ನಾರದನೇ, ನೀನು ನನಗೆ ಪ್ರೀತಿಪಾತ್ರನಾಗಿರುವಿ. ಭಕ್ತನಾಗಿರುವಿ. ನನ್ನ ತತ್ತ್ವವನ್ನು ನೀನೇ ನೋಡು. ನಿನಗೆ ನನ್ನನ್ನು ನೋಡುವ ಜ್ಞಾನವನ್ನು ನೀಡುತ್ತೇನೆ. ಇದರಿಂದ ನನ್ನ ತತ್ತ್ವವನ್ನು ಚೆನ್ನಾಗಿ ನೋಡುತ್ತಿ.
ಅನ್ಯೇಷಾಂ ಚೈವ ಭಕ್ತಾನಾಂ ಮಮ ಯೋಗರತಾತ್ಮನಾಮ್ |
ದದಾಮಿ ದಿವ್ಯಂ ಜ್ಞಾನಂ ಚ ಯೇನ ತತ್ತ್ವಂ ಪ್ರಪಶ್ಯಸಿ || 74 ||
ಬೇರೆ ನನ್ನ ಭಕ್ತರಿಗೂ ಯೋಗರತರಾದ ಭಕ್ತರಿಗೂ ದಿವ್ಯಜ್ಞಾನವನ್ನು ನೀಡುತ್ತೇನೆ. ನೀನು ಯಾವ ತತ್ತ್ವವನ್ನು ನೋಡುತ್ತೀಯೋ ಅವರೂ ಅದರಂತೆ ನೋಡುತ್ತಾರೆ.
ಅನ್ಯೇಷಾಂ ಚೈವ ಭಕ್ತಾನಾಂ ಮಮ ಯೋಗರತಾತ್ಮನಾಮ್ |
ದದಾಮಿ ದಿವ್ಯಂ ಜ್ಞಾನಂ ಚ ತೇನ ತೇ ಯಾಂತಿ ಮತ್ಪದಮ್ || 75 ||
ನನ್ನ ಯೋಗದಲ್ಲೇ ರತರಾದ ಬೇರೆ ಭಕ್ತರಿಗೂ ದಿವ್ಯಜ್ಞಾನವನ್ನು ನೀಡುತ್ತೇನೆ. ಅದರಿಂದ ನನ್ನ ಸ್ಥಾನವೆನಿಸಿದ ಮುಕ್ತಿಯನ್ನು ಹೊಂದುತ್ತಾರೆ.
ಏವಮುಕತ್ವ ಯಯೌ ಕೃಷ್ಣೋ ನಂದಗೋಪಗೃಹಂ ಹರಿಃ || 76 ||
ಈ ರೀತಿಯಾಗಿ ನಾರದರನ್ನು ಕುರಿತು ಹೇಳಿದ ಕೃಷ್ಣನು ನಂದಗೋಪಗೃಹಕ್ಕೆ ಹೊರಟನು.
ಭೀಷ್ಮಃ
ಏತತ್ತೇ ಕಥಿತಂ ರಾಜನ್ ವಿಷ್ಣುತತ್ತ್ವಮನುತ್ತಮಮ್ |
ಭಜಸ್ವೈನಂ ವಿಶಾಲಾಕ್ಷಂ ಜಪನ್ ಕೃಷ್ಣೇತಿ ಸತ್ತಮ || 77 ||
ಭೀಷ್ಮ ರಾಜನೇ, ಅನುತ್ತಮವಾದ ವಿಷ್ಣುತತ್ತ್ವವನ್ನು ನಿನಗೆ ಹೇಳಿದ್ದೇನೆ. ಈ ತತ್ತ್ವವನ್ನು ಚೆನ್ನಾಗಿ ಚಿಂತಿಸು. ಪೂಜ್ಯನೇ, ಕೃಷ್ಣಾ ಎಂದು ಜಪಿಸುತ್ತಾ ಇವನನ್ನೇ ಭಜಿಸು.
ಮೋಹಯನ್ ಮಾಂ ತಥಾ ತ್ವಾಂ ಚ ಶೃಣೋತ್ಯೇಷ ಮಯೇರಿತಾನ್ |
ಧರ್ಮಾತ್ಮಾ ಚ ಮಹಾಬಾಹೋ ಭಕ್ತಾನ್ ರಕ್ಷತಿ ನಾನ್ಯಥಾ || 78 ||
ಅನಂತ ಕಲ್ಯಾಣ ಗುಣಪರಿಪೂರ್ಣನಾದ ಭಗವಂತನು ನನ್ನನ್ನು ಮೋಹಿಸುತ್ತಾ ನಿನ್ನಿಂದ ಕೇಳಿಸುತ್ತಾ ನನ್ನಿಂದ ಹೇಳಿದ ಈ ಗುಣಗಳನ್ನು ಅವನು ಕೇಳುತ್ತಲೇ ಇದ್ದಾನೆ. ಅವನು ಭಕ್ತರಕ್ಷಕನು, ಧರ್ಮಾತ್ಮನು. ಮಹಾಬಾಹುವೇ, ಭಗವಂತನ ಸ್ವರೂಪವು ಹೀಗೆ ನಿಶ್ಚಿತವಾಗಿಯೂ ಇದೆ. ಅವನಂತೆ ಸರ್ವೋತ್ತಮನು ಯಾರೂ ಇಲ್ಲ. ಈ ವಿಚಾರದಲ್ಲಿ ಅಭಿಪ್ರಾಯಭೇದವನ್ನು ಹೊಂದಬೇಡ. ಇದು ಸಿದ್ಧವು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಸಪ್ತತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆಂಟನೆಯ ಅಧ್ಯಾಯ
ವಿಷ್ಣುವು ನಾರದರಿಗೆ ಮನುಷ್ಯನು ತನ್ನ ಅವಸಾನಕಾಲದಲ್ಲಿ ಜಪಿಸುವ ಮಂತ್ರವನ್ನುಪದೇಶಿಸಿದ ವಿಷಯವನ್ನು ಭೀಷ್ಮನು ಯುಧಿಷ್ಠಿರನಿಗೆ ಹೇಳಿದುದು.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಪ್ರಯಾಣಕಾಲೇ ಕಿಂ ಜಪ್ಯಂ ಮೋಕ್ಷಿಭಿಸ್ತತ್ತ್ವಚಿಂತಕೈಃ || 1 ||
ಕಿನ್ನು ಸ್ಮರನ್ ಕುರುಶ್ರೇಷ್ಠ ಮರಣೇ ಸಮುಪಸ್ಥಿತೇ |
ಪ್ರಾಪ್ನುಯಾತ್ ಪರಮಾಂ ಸಿದ್ಧಿಂ ಶ್ರೋತುಮಿಚ್ಛಾಮಿ ತತ್ತ್ವತಃ || 2 ||
ಯುಧಿಷ್ಠಿರ ಪಿತಾಮಹನೇ, ಮಹಾಪ್ರಾಜ್ಞನೇ, ಸರ್ವಶಾಸ್ತ್ರ ವಿಶಾರದನೇ, ಪ್ರಯಾಣ ಕಾಲದಲ್ಲಿ ಮೋಕ್ಷಾರ್ಥಿಗಳು ಏನನ್ನು ಜಪಿಸಬೇಕು? ಮರಣಕಾಲದಲ್ಲಿ ಯಾವುದನ್ನು ಸ್ಮರಿಸಿದರೆ ಉತ್ತಮ ಗತಿಯನ್ನು ಹೊಂದುತ್ತಾರೆ? ಇದನ್ನು ಕೇಳಲು ಬಯಸುತ್ತೇನೆ.
ಭೀಷ್ಮಃ
ತ್ವದ್ಯುಕ್ತಶ್ಚ ಹಿತಃ ಸೂಕ್ಷ್ಮ ಉಕ್ತಃ ಪ್ರಶ್ನಸ್ತ್ವಯಾಽನಘ |
ಶೃಣುಷ್ವಾವಹಿತೋ ರಾಜನ್ನಾರದೇನ ಪುರಾ ಶ್ರುತಮ್ || 3 ||
ಶ್ರೀವತ್ಸಾಂಕಂ ಜಗದ್ಬೀಜಮನಂತಂ ಲೋಕಸಾಕ್ಷಿಣಮ್ |
ಪುರಾ ನಾರಾಯಣಂ ದೇವಂ ನಾರದಃ ಪರ್ಯಪೃಚ್ಛತ || 4 ||
ಭೀಷ್ಮ ಅನಘನೇ, ನೀನು ಹಿತವೂ, ಸೂಕ್ಷ್ಮವೂ, ಯುಕ್ತವೂ ಆದ ಪ್ರಶ್ನೆಯನ್ನು ಕೇಳಿರುವೆ. ಹಿಂದೆ ನಾರದ ಮುನಿಯು ಶ್ರೀವತ್ಸಲಾಂಛನನೂ, ಅವ್ಯಯನೂ, ಜಗತ್ಕಾರಣನೂ ಆದ ಶ್ರೀಮನ್ನಾರಾಯಣನಲ್ಲಿ ಹೀಗೆಯೇ ಪ್ರಶ್ನೆಯನ್ನು ಮಾಡಿದ್ದನು.
ಅಕ್ಷರಂ ಪರಮಂ ಬ್ರಹ್ಮ ನಿರ್ಗುಣಂ ತಮಸಃ ಪರಮ್ |
ಆಹುರ್ವೇದ್ಯಂ ಪರಂ ಧಾಮ ಬ್ರಹ್ಮಾದಿಕಮಲೋದ್ಭವಮ್ || 5 ||

ಜಗದೀಶ್ವರನೇ, ಅವ್ಯಯನೆನಿಸಿದ, ನಾಶರಹಿತನಾದ, ಪ್ರಕೃತಿಗಿಂತಲೂ ಉತ್ತಮನಾದ, ಪ್ರಾಕೃತಗುಣರಹಿತನಾದ, ಎಲ್ಲಕ್ಕಿಂತಲೂ ಉತ್ತಮನಾಗಿರುವ, ಚತುರ್ಮುಖ ಬ್ರಹ್ಮನಿಗೂ ಆದಿಭೂತವಾದ, ಕಮಲಕ್ಕೂ ಕಾರಣನಾದ ಪರವಸ್ತುವನ್ನು ತಿಳಿಯಬೇಕೆಂದು ಹಿರಿಯರು ಹೇಳುತ್ತಾರೆ.
ಭಗವನ್ ಭೂತಭವ್ಯೇಶ ಶ್ರದ್ದಧಾನೈರ್ಜಿತೇಂದ್ರಿಯೈಃ |
ಕಥಂ ಭಕ್ತೈರ್ವಿಚಿಂತ್ಯೋಽಸಿ ಯೋಗಿಭಿರ್ಮೋಕ್ಷಕಾಂಕ್ಷಿಭಿಃ ॥ 6 ॥
ಪೂಜ್ಯನೇ, ಹಿಂದೆ ಹುಟ್ಟಿದ, ಮುಂದೆ ಹುಟ್ಟುವ ಸ್ಥಾವರ-ಜಂಗಮಗಳಿಗೆ ಒಡೆಯನೆ, ಶ್ರದ್ಧಾಳುಗಳು ಜಿತೇಂದ್ರಿಯರೂ ಆದ ಯೋಗಿಗಳಿಗೆ ನೀನು ಚಿಂತಿಸಲು ಹೇಗೆ ಅರ್ಹನಾಗಿರುವಿ? ಮೋಕ್ಷಾಕಾಂಕ್ಷಿಯಾದ ಯೋಗಿಗಳಿಗೆ ನೀನು ಹೇಗೆ ಗೋಚರನಾಗುತ್ತಿ?
ಕಿನ್ನು ಜಪ್ಯಂ ಜಪೇನ್ನಿತ್ಯಂ ಕಾಲ್ಯಮುತ್ಥಾಯ ಮಾನವಃ |
ಸ್ಮರೇಚ್ಚ ಮ್ರಿಯಮಾಣೋ ವೈ ವಿಶೇಷೇಣ ಮಹಾದ್ಯುತೇ ॥ 7 ॥
ಕಥಂ ಯುಂಜನ್ ಸಮಾಧ್ಯಾಯೇದ್ ಬ್ರೂಹಿ ತತ್ತ್ವಂ ಸನಾತನಮ್ ॥
ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದಕೂಡಲೇ ಜಪಿಸಬೇಕಾದ ಮಂತ್ರಯಾವುದು? ಮರಣೋನ್ಮುಖನಾದ ವ್ಯಕ್ತಿಯು ಏನನ್ನು ಜಪಿಸಬೇಕು? ಸಮಾಧಿಯಲ್ಲಿದ್ದಾಗ ಏನನ್ನು ಧ್ಯಾನಿಸಬೇಕು? ಸನಾತನತತ್ತ್ವವನ್ನೆಲ್ಲ ನೀನು ತಿಳಿಸಬೇಕು.
ಶ್ರುತ್ವಾ ಚ ನಾರದೋಕ್ತಂ ತು ದೇವಾನಾಮೀಶ್ವರಃ ಸ್ವಯಮ್ |
ಪ್ರೋವಾಚ ಭಗವಾನ್ ವಿಷ್ಣುರ್ನಾರದಂ ವರದಃ ಪ್ರಭುಃ ॥ 9 ॥
ನಾರದನು ಹೇಳಿದ್ದನ್ನೆಲ್ಲ ಕೇಳಿಸಿಕೊಂಡ ಭಗವಂತನು ಸಮಸ್ತ ದೇವತೆಗಳಿಗೆ ಸ್ವಯಂ ಈಶ್ವರನಾಗಿದ್ದರೂ ವರದನಾದ ಪ್ರಭುವಾದ ಭಗವಾನ್ ವಿಷ್ಣುವು ನಾರದರನ್ನು ಕುರಿತು ಹೇಳಿದನು.
ಹಂತ ತೇ ಕಥಯಿಷ್ಯಾಮಿ ಇಮಾಂ ದಿವ್ಯಾಮನುಸ್ಮೃತಿಮ್ |
ಯಾಮಧೀತ್ಯ ಪ್ರಯಾಣೇ ತು ಮದ್ಭಾವಾಯೋಪಪದ್ಯತೇ ॥ 10 ॥
ನಾರದನೇ, ಮನುಷ್ಯನು ತನ್ನ ಅವಸಾನಕಾಲದಲ್ಲಿ ಯಾವ ಮಂತ್ರವನ್ನು ಜಪಿಸಿದರೆ ನನ್ನಂತೆ ನಿರ್ದುಃಖರೂಪವನ್ನು ಹೊಂದುತ್ತಾನೋ ಅಂತಹ ಅನುಸ್ಮೃತಿಯನ್ನು ಹೇಳುತ್ತೇನೆ, ಕೇಳು.
ಓಂಕಾರಮಗ್ರತಃ ಕೃತ್ವಾ ಮಾಂ ನಮಸ್ಕೃತ್ಯ ನಾರದ |
ಏಕಾಗ್ರಃ ಪ್ರಯತೋ ಭೂತ್ವಾ ಇಮಂ ಮಂತ್ರಮುದೀರಯೇತ್ ॥11॥
ನಾರದನೇ, ಆರಂಭದಲ್ಲಿ ಓಂಕಾರವನ್ನು ಹೇಳುತ್ತಾ ನನ್ನನ್ನು ನಮಸ್ಕರಿಸಿ ಜಿತೇಂದ್ರಿಯನಾಗಿ ಏಕಾಗ್ರಬುದ್ಧಿಯಿಂದ ಈ ಮಂತ್ರವನ್ನು ಹೇಳಬೇಕು.
ಓಂ ನಮೋ ಭಗವತೇ ವಾಸುದೇವಾಯೇತಿ ॥ 12 ॥
`ಓಂ ನಮೋ ಭಗವತೇ ವಾಸುದೇವಾಯ' ಎಂದು.
ಇತ್ಯುಕ್ತೋ ನಾರದಃ ಪ್ರಾಹ ಪ್ರಾಂಜಲಿಃ ಪ್ರಣತಃ ಸ್ಥಿತಃ |
ಸರ್ವದೇವೇಶ್ವರಂ ವಿಷ್ಣುಂ ಸರ್ವಾತ್ಮಾನಂ ಹರಿಂ ಪ್ರಭುಮ್ ॥ 13 ॥
ಈ ರೀತಿಯಾಗಿ ಭಗವಂತನು ಹೇಳಿದಾಗ ನಮಸ್ಕರಿಸುತ್ತಾ ಪ್ರಾಂಜಲಿಬದ್ಧರಾಗಿ ನಿಂತಿರುವ ನಾರದರು ಹೇಳುತ್ತಾರೆ:
ಸರ್ವದೇವೇಶ್ವರನೂ, ಸರ್ವಾತ್ಮನೂ, ಪ್ರಭುವೂ, ಹರಿಯೂ ಆದ ವಿಷ್ಣುವನ್ನು ಕುರಿತು ಹೀಗೆ ಹೇಳಿದರು.
ನಾರದಃ
ಅವ್ಯಯಂ ಶಾಶ್ವತಂ ದೇವಂ ಪ್ರಭವಂ ಪುರುಷೋತ್ತಮಮ್ |
ಪ್ರಪದ್ಯೇ ಪ್ರಾಂಜಲಿರ್ವಿಷ್ಣುಮಕ್ಷರಂ ಪರಮಂ ಪದಮ್ ॥ 14 ॥
ನಾರದರು ಅವ್ಯಯನೂ, ಶಾಶ್ವತನೂ, ಕ್ರೀಡಾದಿಗುಣವಿಶಿಷ್ಟನೂ, ಲೋಕಕರ್ತನೂ, ಪುರುಷೋತ್ತಮನೂ, ಅಕ್ಷರನೂ, ಪರಮಪದನೂ ಆದ ವಿಷ್ಣುವನ್ನು ನಾನು ಹೊಂದುತ್ತೇನೆ.
ಪುರಾಣಂ ಪ್ರಭವಂ ವಿಷ್ಣುಮಕ್ಷಯಂ ಲೋಕಸಾಕ್ಷಿಣಮ್ |
ಪ್ರಪದ್ಯೇ ಪುಂಡರೀಕಾಕ್ಷಮೀಶಂ ಭಕ್ತಾನುಕಂಪಿನಮ್ ॥ 15 ॥
ಪುರಾಣನೂ, ಸಮಸ್ತ ಜಗತ್ತಿಗೆ ಉತ್ಪತ್ತಿಕಾರಣನೂ, ಅಕ್ಷಯನೂ, ಲೋಕಸಾಕ್ಷಿಯೂ, ಪುಂಡರೀಕಾಕ್ಷನೂ, ಸರ್ವಶಕ್ತನೂ, ಭಕ್ತಾನುಕಂಪಿಯೂ ಆದ ವಿಷ್ಣುವನ್ನು ಹೊಂದುತ್ತೇನೆ.
ಲೋಕನಾಥಂ ಸಹಸ್ರಾಕ್ಷಮದ್ಭುತಂ ಪರಮಂ ಪದಮ್ |
ಭಗವಂತಂ ಪ್ರಪನ್ನೋಽಸ್ಮಿ ಭೂತಭವ್ಯಭವತ್ಪ್ರಭುಮ್ ॥ 16 ॥
ಲೋಕನಾಥನೂ, ಸಹಸ್ರಾಕ್ಷನೂ, ಅದ್ಭುತನೂ, ಪರಮಪದನೂ, ಹಿಂದೆ ಹುಟ್ಟಿದ ಮುಂದೆ ಹುಟ್ಟುವ ಜೀವನಿಗೆ ಪ್ರಭುವೂ ಆದ ಭಗವಂತನಾದ ನಿನ್ನನ್ನು ಶರಣು ಹೊಂದುತ್ತೇನೆ.
ಸ್ರಷ್ಟಾರಂ ಸರ್ವಲೋಕಾನಾಮನಂತಂ ಸರ್ವತೋಮುಖಮ್ |
ಪದ್ಮನಾಭಂ ಹೃಷೀಕೇಶಂ ಪ್ರಪದ್ಯೇ ಸತ್ಯಮಚ್ಯುತಮ್ ॥ 17 ॥
ಸಮಸ್ತ ಲೋಕಗಳ ಸೃಷ್ಟಿಕಾರಣನಾದ, ಅನಂತನಾದ, ಸಮಸ್ತ ದಿಕ್ಕುಗಳಿಗೂ ನಿಯಾಮಕನಾದ, ಪದ್ಮನಾಭನಾದ, ಹೃಷೀಕೇಶನಾದ, ಅಚ್ಯುತನಾದ ನಿನ್ನನ್ನು ಹೊಂದುತ್ತೇನೆ.
ಹಿರಣ್ಯಗರ್ಭಮಮೃತಂ ಭೂಗರ್ಭಂ ಪರತಃಪರಮ್ |
ಪ್ರಭೋಃ ಪ್ರಭುಮನಾದ್ಯಂತಂ ಪ್ರಪದ್ಯೇ ತಂ ರವಿಪ್ರಭಮ್ ॥ 18 ॥
ಅಮೃತನಾದ, ಹಿರಣ್ಯಗರ್ಭನಾದ, ಭೂಗರ್ಭನಾದ, ಸರ್ವೋತ್ತಮ ಪದಾರ್ಥಕ್ಕಿಂತ ಉತ್ತಮನಾದ, ಪ್ರಭುಗಳಿಗೂ ಪ್ರಭುವಾದ,

ಅನಾದಿಯಾದ, ಅನಂತನಾದ, ರವಿಪ್ರಭೆಯಿಂದ ಕೂಡಿದ ನಿನ್ನನ್ನು ಹೊಂದುತ್ತೇನೆ.
ಸಹಸ್ರಶೀರ್ಷಂ ಪುರುಷಂ ಮಹರ್ಷಿಂ ತತ್ತ್ವಭಾವನಮ್ |
ಪ್ರಪದ್ಯೇ ಸೂಕ್ಷ್ಮಮಚಲಂ ವರೇಣ್ಯಮಭಯಪ್ರದಮ್ ॥ 19 ॥
ಸಹಸ್ರಶೀರ್ಷನೂ, ಮಹರ್ಷಿಯೂ, ಎಲ್ಲಾ ತತ್ತ್ವಗಳ ಉತ್ಪತ್ತಿ ಕಾರಣನೂ, ಸೂಕ್ಷ್ಮನೂ, ಅಚಲನೂ, ವರೇಣ್ಯನೂ, ಅಭಯಪ್ರದನೂ ಆದ ನಿನ್ನನ್ನು ಹೊಂದುತ್ತೇನೆ.
ನಾರಾಯಣಂ ಪುರಾಣರ್ಷಿಂ ಯೋಗಾತ್ಮಾನಂ ಸನಾತನಮ್ |
ಸಂಸ್ಥಾನಂ ಸರ್ವತತ್ತ್ವನಾಂ ಪ್ರಪದ್ಯೇ ಧ್ರುವಮೀಶ್ವರಮ್ ॥ 20 ॥
ನಾರಾಯಣನೂ, ಪುರಾಣರ್ಷಿಯೂ, ಯೋಗಾತ್ಮನೂ, ಸನಾತನನೂ, ಸಮಸ್ತ ತತ್ತ್ವಗಳಿಗೆ ಆಶ್ರಯಸ್ಥಾನನಾದ, ಈಶ್ವರನಾದ ನಿನ್ನನ್ನು ಹೊಂದುತ್ತೇನೆ.
ಯಃ ಪ್ರಭುಃ ಸರ್ವಭೂತಾನಾಂ ಯೇನ ಸರ್ವಮಿದಂ ತತಮ್ |
ಪರಾವರಗುರುರ್ವಿಷ್ಣುಃ ಸ ಮೇ ದೇವಃ ಪ್ರಸೀದತು ॥ 21 ॥
ಸರ್ವಭೂತಗಳಿಗೂ ಯಾವನು ಪ್ರಭುವಾಗಿದ್ದಾನೋ, ಯಾವುದರಿಂದ ವ್ಯಾಪ್ತನಾಗಿದ್ದಾನೋ, ಉತ್ತಮರಿಗೂ, ಅವರರಿಗೂ ಯಾವ ವಿಷ್ಣುವೇ ಗುರುವಾಗಿದ್ದಾನೋ ಅಂತಹ ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.
ಯಸ್ಮಾದುತ್ಪದ್ಯತೇ ಬ್ರಹ್ಮಾ ಪದ್ಮಯೋನಿಃ ಸನಾತನಃ |
ಬ್ರಹ್ಮಯೋನಿರ್ಹಿ ವಿಶ್ವಾತ್ಮಾ ಸ ಮೇ ವಿಷ್ಣುಃ ಪ್ರಸೀದತು ॥ 22 ॥
ಯಾವ ಭಗವಂತನಿಂದ ಪದ್ಮಯೋನಿಯಾದ, ಸನಾತನನಾದ ಚತುರ್ಮುಖ ಬ್ರಹ್ಮನು ಉತ್ಪತ್ತಿಯನ್ನು ಹೊಂದುತ್ತಾನೋ ಅಂತಹ ವಿಶ್ವಾತ್ಮನಾದ ಬ್ರಹ್ಮಯೋನಿಗೆ ಕಾರಣನಾದ ವಿಷ್ಣುವು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.
ಯಃ ಪುರಾ ಪ್ರಳಯೇ ಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ |
ಬ್ರಹ್ಮಾದಿಷು ಪ್ರಲೀನೇಷು ನಷ್ಟೇ ಲೋಕಪರಾವರೇ ॥ 23 ॥
ಆಭೂತಸಂಪ್ಲವೇ ಚೈವ ಪ್ರಲೀನೇಽಪ್ರಾಕೃತೋ ಮಹಾನ್ |
ಏಕಸ್ತಿಷ್ಠತಿ ವಿಶ್ವಾತ್ಮಾ ಸ ಮೇ ವಿಷ್ಣುಃ ಪ್ರಸೀದತು ॥ 24 ॥
ಯಾವ ಭಗವಂತನು ಹಿಂದೆ ಪ್ರಳಯಕಾಲವು ಪ್ರಾಪ್ತವಾದಾಗ, ಸ್ಥಾವರ- ಜಂಗಮಗಳೆಲ್ಲವೂ ಲಯ ಹೊಂದಿದಾಗ ಬ್ರಹ್ಮಾದಿ ದೇವತೆಗಳು, ಉತ್ತಮಾಧಮ ಜೀವರೆಲ್ಲರೂ ಲಯ ಹೊಂದಿದಾಗ, ಸಮಸ್ತ ಜೀವರ ಪ್ರಳಯವು ಉಂಟಾದಾಗ, ಅಪ್ರಾಕೃತನಾದ, ಸರ್ವೋತ್ತಮನಾದ, ವಿಶ್ವಾತ್ಮನಾದ ಭಗವಂತನು ಒಬ್ಬನೇ ಇರುತ್ತಾನೋ ಅಂತಹ ವಿಷ್ಣುವು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.
ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ |
ಹೂಯತೇ ಚ ಪುನರ್ದ್ವಾಭ್ಯಾಂ ಸ ಮೇ ವಿಷ್ಣುಃ ಪ್ರಸೀದತು ॥ 25 ॥
`ಆಶ್ರಾವಯ ಅಸ್ತು ಶ್ರೌಷಟ್ ಯೇ ಯಜಾಮಹೇ' ಎಂಬ ನಾಲ್ಕು-ನಾಲ್ಕು ಎರಡು-ಐದು ಅಕ್ಷರಗಳಿಂದ ಯಾವಾಗಲೂ ಯಾವ ಭಗವಂತನು ಹೋಮಿಸಲ್ಪಡುತ್ತಾನೋ ಅಂತಹ ವಿಷ್ಣುವು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.
ಪರ್ಜನ್ಯಃ ಪೃಥಿವೀ ಸಸ್ಯಂ ಕಾಲೋ ಧರ್ಮಃ ಕ್ರಿಯಾಕ್ರಿಯೇ |
ಗುಣಾಕರಃ ಸ ಮೇ ಬಭ್ರುರ್ವಾಸುದೇವಃ ಪ್ರಸೀದತು ॥ 26 ॥
ಪರ್ಜನ್ಯನೂ, ಪೃಥಿವಿಯೂ, ಸತ್ಯನೂ, ಕಾಲನೂ, ಧರ್ಮನೂ, ಕ್ರಿಯೆಯೂ, ಅಕ್ರಿಯೆಯೂ, ಗುಣಾಕರವೂ ಎನಿಸಿದ ಇವುಗಳಲ್ಲಿ ನಿಯಾಮಕನಾದ ಕನಕವರ್ಣದವನಾದ್ದರಿಂದ ಬಭ್ರು ಎನಿಸಿದ ವಾಸುದೇವನು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.
ಅಗ್ನೀಷೋಮಾರ್ಕತಾರಾಣಾಂ ಬ್ರಹ್ಮರುದ್ರೇಂದ್ರಯೋಗಿನಾಮ್ |
ಯಸ್ತೇಜಯತಿ ತೇಜಾಂಸಿ ಸ ಮೇ ವಿಷ್ಣುಃ ಪ್ರಸೀದತು ॥ 27 ॥
ಅಗ್ನಿ, ಚಂದ್ರ, ಸೂರ್ಯ, ನಕ್ಷತ್ರಗಳು, ಬ್ರಹ್ಮೇಂದ್ರ-ರುದ್ರರು, ಯೋಗಿಗಳು, ಇವರೆಲ್ಲರ ತೇಜಸ್ಸನ್ನು ತುಂಬಿಕೊಂಡಿರುವ ವಿಷ್ಣುವು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.
ಯೋಗಾವಾಸ ನಮಸ್ತುಭ್ಯಂ ಸರ್ವಾವಾಸ ವರಪ್ರದ |
ಯಜ್ಞಗರ್ಭ ಹಿರಣ್ಯಾಂಗ ಪಂಚಯಜ್ಞ ನಮೋಽಸ್ತು ತೇ ॥ 28 ॥
ಯೋಗವಾಸನೇ, ಸರ್ವನಿವಾಸನೇ, ವರಪ್ರದನೇ, ಯಜ್ಞಗರ್ಭನೇ, ಹಿರಣ್ಯಾಂಗನೇ, ಪಂಚಯಜ್ಞಸ್ವರೂಪನೇ ನಿನಗೆ ನಮಸ್ಕಾರವು ನಮಸ್ಕಾರವು.
ಚತುರ್ಮೂರ್ತೇ ಪರಂ ಧಾಮ ಲಕ್ಷ್ಮ್ಯಾವಾಸ ಪರಾರ್ಚಿತ |
ಸರ್ವಾವಾಸ ನಮಸ್ತೇಽಸ್ತು ವಾಸುದೇವ ಪ್ರಧಾನಕೃತ್ ॥ 29 ॥
ನಿರ್ದುಷ್ಟವಾದ ಮಾರ್ಗವುಳ್ಳವನೇ, ಪ್ರಧಾನಕರ್ತೃವೇ, ವಾಸುದೇವನೇ, ಲಕ್ಷ್ಮ್ಯಾವಾಸನೇ, ಚತುರ್ಮೂರ್ತಿಯೇ, ಉತ್ತಮರಿಂದ ಅರ್ಚಿತನೇ, ಚತುರ್ಮೂರ್ತಿಯನ್ನು ನಿರ್ಮಿಸುವವನೇ ನಿನಗೆ ನಮಸ್ಕಾರವು.
ಅಜಸ್ತ್ವನಾಮಯಃ ಪಂಥಾ ಹ್ಯಮೂರ್ತಿರ್ವಿಶ್ವಮೂರ್ತಿಧೃತ್ |
ವಿಕರ್ತಃ ಪಂಚಕಾಲಜ್ಞ ನಮಸ್ತೇ ಜ್ಞಾನಸಾಗರ ॥ 30 ॥
ಹುಟ್ಟಿಲ್ಲದವನೇ, ನಿರ್ದುಷ್ಟವಾದ ಮಾರ್ಗವುಳ್ಳವನೇ, ನಿರ್ದಿಷ್ಟವಾದ ಮೂರ್ತಿಯಿಲ್ಲದವನೆ, ವಿಶ್ವಮೂರ್ತಿಯನ್ನೇ ಧರಿಸಿದವನೇ, ವಿಕರ್ತನೇ, ಅನದ್ಯತನಭೂತ, ಅದ್ಯತನಭೂತ, ವರ್ತಮಾನ, ಅದ್ಯತನಭವಿಷ್ಯತ್, ಅನದ್ಯತನ ಭವಿಷ್ಯತ್ ಎಂಬ ಪಂಚಕಾಲಗಳನ್ನು ತಿಳಿದ ಜ್ಞಾನಸಾಗರನೇ ನಿನಗೆ ನಮಸ್ಕಾರವು.
ಅವ್ಯಕ್ತಾದ್ ವ್ಯಕ್ತಮುತ್ಪನ್ನಮವ್ಯಕ್ತಾದ್ಯಃ ಪರೋಽಕ್ಷರಃ |

ಯಸ್ಮಾತ್ ಪರತರಂ ನಾಸ್ತಿ ತಮಸ್ಮಿ ಶರಣಂ ಗತಃ ॥ 31 ॥
ವ್ಯಕ್ತಪ್ರಪಂಚಕ್ಕೆ ಉತ್ಪತ್ತಿ ಕಾರಣನಾದ, ಅವ್ಯಕ್ತಕ್ಕಿಂತಲೂ ಪರನಾದ, ಅಕ್ಷರನಾದ, ತನಗಿಂತಲೂ ಮೇಲಾದುದು ಒಂದೂ ಇಲ್ಲದ ಆ ಪರಮಪುರುಷನನ್ನು ಶರಣು ಹೊಂದುತ್ತೇನೆ.
ನ ಪ್ರಧಾನೋ ನ ಚ ಮಹಾನ್ ಪುರುಷಶ್ಚೇತನೋ ಹ್ಯಜಃ |
ಅನಯೋರ್ಯಃ ಪರತರಸ್ತಮಸ್ಮಿ ಶರಣಂ ಗತಃ ॥ 32 ॥
ಪ್ರಧಾನ, ಮಹತ್ತು ಇವೆರಡಕ್ಕಿಂತಲೂ ಮಿಗಿಲೆನಿಸಿದ, ಜನ್ಮರಹಿತನೂ, ಪುರುಷನೂ, ಚೇತನಾತ್ಮಕನೂ ಆದ ಭಗವಂತನನ್ನು ಶರಣು ಹೊಂದುತ್ತೇನೆ.
ಚಿಂತಯಂತೋ ಹಿ ಯಂ ನಿತ್ಯಂ ಬ್ರಹ್ಮೇಶಾನಾದಯಃ ಪ್ರಭುಮ್ |
ನಿಶ್ಚಯಂ ನಾಧಿಗಚ್ಛಂತಿ ತಮಸ್ಮಿ ಶರಣಂ ಗತಃ ॥ 33 ॥
ಯಾವ ಭಗವಂತನನ್ನು ಬ್ರಹ್ಮೇಶಾನಾದರೇ ಮೊದಲಾದ ದೇವಶ್ರೇಷ್ಠರು ನಿರಂತರ ಚಿಂತಿಸುತ್ತಿದ್ದರೂ ಅವನ ನಿಶ್ಚಯಜ್ಞಾನವನ್ನು ಹೊಂದಲಾರರೋ ಅಂತಹ ದೇವದೇವನನ್ನು ಶರಣು ಹೊಂದುತ್ತೇನೆ.
ಜಿತೇಂದ್ರಿಯಾ ಮಹಾತ್ಮಾನೋ ಜ್ಞಾನಧ್ಯಾನಪರಾಯಣಾಃ |
ಯಂ ಪ್ರಾಪ್ಯ ನ ನಿವರ್ತಂತೇ ತಮಸ್ಮಿ ಶರಣಂ ಗತಃ ॥ 34 ॥
ಜಿತೇಂದ್ರಿಯರೂ, ಜ್ಞಾನಿಗಳೂ, ಧ್ಯಾನರತರೂ ಆದ ಮಹಾತ್ಮರು ಯಾವನನ್ನು ಹೊಂದಿದ ಮೇಲೆ ತಿರುಗಿ ಹಿಂದಿರುಗಲಾರರೋ ಅಂತಹ ಪರಮಾತ್ಮನನ್ನು ಶರಣು ಹೊಂದುತ್ತೇನೆ.
ಏಕಾಂಶೇನ ಜಗತ್ ಸರ್ವಮವಷ್ಟಭ್ಯ ವಿಭುಃ ಸ್ಥಿತಃ |
ಅಗ್ರಾಹ್ಯಂ ನಿರ್ಗುಣಂ ನಿತ್ಯಂ ತಮಸ್ಮಿ ಶರಣಂ ಗತಃ ॥ 35 ॥
ಜಗತ್ತನ್ನೆಲ್ಲ ತನ್ನ ಒಂದಂಶದಿಂದಲೇ ವ್ಯಾಪಿಸಿದ, ಪ್ರಾಕೃತಗುಣರಹಿತನೂ, ನಿತ್ಯನೂ ಆದ ಪ್ರಭುವಾದ ಭಗವಂತನನ್ನು ಶರಣು ಹೊಂದುತ್ತೇನೆ.
ಸೋಮಾರ್ಕಾಗ್ನಿಮಯಂ ತೇಜೋ ಯಾ ಚ ತಾರಾಮಯೀ ದ್ಯುತಿಃ |
ದಿವಿ ಸಂಜಾಯತೇ ಯೋಽಯಂ ಸ ಮಹಾತ್ಮಾ ಪ್ರಸೀದತು ॥ 36 ॥
ಸೂರ್ಯ-ಚಂದ್ರಾಗ್ನಿ-ನಕ್ಷತ್ರರೂಪದಿಂದ ಆಕಾಶದಲ್ಲಿ ತೇಜೋಮಯನಾಗಿ ಪ್ರಕಾಶಿಸುತ್ತಿರುವ, ಅವರ ಅಂತರ್ಯಾಮಿಯಾದ ಪರಂಜ್ಯೋತಿಯೂ ಮಹಾತ್ಮನೂ ನನ್ನಲ್ಲಿ ಪ್ರಸನ್ನನಾಗಲಿ.
ಗುಣಾದಿರ್ನಿರ್ಗುಣಶ್ಚಾದ್ಯೋ ಲಕ್ಷ್ಮೀವಾಂಶ್ಚೇತನೋ ಹ್ಯಜಃ |
ಸೂಕ್ಷ್ಮಃ ಸರ್ವಗತೋ ಯೋಗೀ ಸ ಮಹಾತ್ಮಾ ಪ್ರಸೀದತು ॥ 37 ॥
ಗುಣಗಳಿಗೆಲ್ಲಾ ಆದಿಯೂ, ಪ್ರಾಕೃತಗುಣರಹಿತನೂ, ಆದ್ಯನೂ, ಶ್ರೀಮಂತನೂ, ಸೂಕ್ಷ್ಮನೂ, ಸರ್ವಗತನೂ, ಯೋಗಿಯೂ ಆದ ಆ ಮಹಾತ್ಮನು ನನ್ನಲ್ಲಿ ಪ್ರಸನ್ನನಾಗಲಿ.
ಸಾಂಖ್ಯಯೋಗಾಶ್ಚ ಯೇ ಚಾನ್ಯೇ ಸಿದ್ಧಾಶ್ಚ ಪರಮರ್ಷಯಃ |
ಯಂ ವಿದಿತ್ವಾ ವಿಮುಚ್ಯಂತೇ ಸ ಮಹಾತ್ಮಾ ಪ್ರಸೀದತು ॥ 38 ॥
ಸಾಂಖ್ಯಯೋಗನಿರತರೂ, ಬೇರೆ ಸಿದ್ಧ ಪುರುಷರು, ಪರಮರ್ಷಿಗಳು, ಯಾವ ಭಗವಂತನನ್ನು ತಿಳಿದು ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾರೋ ಆ ಮಹಾತ್ಮನು ನನ್ನಲ್ಲಿ ಪ್ರಸನ್ನನಾಗಲಿ.
ಅವ್ಯಕ್ತಃ ಸಮಧಿಷ್ಠಾತಾ ಅಚಿಂತ್ಯಃ ಸದಸತ್ಪರಃ |
ಅಸ್ಥಿತಿಃ ಪ್ರಕೃತಿಶ್ರೇಷ್ಠಃ ಸ ಮಹಾತ್ಮಾ ಪ್ರಸೀದತು ॥ 39 ॥
ಇಂದ್ರಿಯಗಳಿಗೆ ಗೋಚರನಲ್ಲದ್ದರಿಂದ ಅವ್ಯಕ್ತನಾದ, ಅಧಿಷ್ಠನಾದ, ಅಚಿಂತ್ಯನಾದ, ಕಾರ್ಯಕಾರಣಗಳಿಗಿಂತಲೂ ಪರನಾದ, ಸ್ಥಳವಿಲ್ಲದ ಅ ಮಹಾತ್ಮನು ನನ್ನಲ್ಲಿ ಪ್ರಸನ್ನನಾಗಲಿ.
ಕ್ಷೇತ್ರಜ್ಞಃ ಪಂಚಧಾ ಭುಂಕ್ತೇ ಪ್ರಕೃತಿಂ ಪಂಚಭಿರ್ಮುಖೈಃ |
ಮಹಾನ್ ಗುಣಾಂಶ್ಚ ಯೋ ಭುಂಕ್ತೇ ಸ ಮಹಾತ್ಮಾ ಪ್ರಸೀದತು ॥40॥
ಜೀವಾಂತರ್ಯಾಮಿಯಾಗಿ ಕ್ಷೇತ್ರಜ್ಞನೆನಿಸಿಕೊಂಡಿರುವ ಪಂಚೇಂದ್ರಿಯಗಳಿಂದ ಪ್ರಕೃತಿಯನ್ನು ಐದುವಿಧವಾಗಿ ಅನುಭವಿಸುತ್ತಿರುವ ಹಾಗೆಯೇ ಗುಣಗಳನ್ನು ಅನುಭವಿಸುತ್ತಿರುವ ಆ ಮಹಾತ್ಮನು ನನ್ನಲ್ಲಿ ಪ್ರಸನ್ನನಾಗಲಿ.
ಸೂರ್ಯಮಧ್ಯೇ ಸ್ಥಿತಃ ಸೋಮಸ್ತಸ್ಯ ಮಧ್ಯೇ ಚ ಯಾ ಸ್ಥಿತಾ |
ಭೂತಬಾಹ್ಯಾ ಚ ಯಾ ದೀಪ್ತಿಃ ಸ ಮಹಾತ್ಮಾ ಪ್ರಸೀದತು ॥ 41 ॥
ನಮ್ಮ ಹೃದಯಕಮಲದಲ್ಲಿರುವ ಸೂರ್ಯಮಂಡಲ, ಸೋಮಮಂಡಲ, ಅಗ್ನಿ ಮಂಡಲಗಳ ಮಧ್ಯದಲ್ಲಿ ಅಪ್ರಾಕೃತ ಜ್ಞಾನಾನಂದರೂಪಗಳಿಂದ ಬೆಳಗುವ ಆ ಪರಮಾತ್ಮನು ನನ್ನಲ್ಲಿ ಪ್ರಸನ್ನನಾಗಲಿ.
ನಮಸ್ತೇ ಸರ್ವತಃ ಸರ್ವ ಸರ್ವತೋಽಕ್ಷಿಶಿರೋಮುಖ |
ನಿರ್ವಿಕಾರ ನಮಸ್ತೇಽಸ್ತು ಸಾಕ್ಷೀ ಕ್ಷೇತ್ರಧ್ರುವಸ್ಥಿತಿಃ ॥ 42 ॥
ಸರ್ವಸ್ವರೂಪಿಯಾಗಿ, ಸರ್ವತೋಮುಖವಾದ ಶಿರಸ್ಸುಗಳು, ಕಣ್ಣುಗಳು ಇವುಗಳಿಂದ ಕೂಡಿದ ನಿನಗೆ ಎಲ್ಲ ಕಡೆಯಿಂದಲೂ ನಮಸ್ಕಾರವು. ಕ್ಷೇತ್ರದಲ್ಲಿ ಅರ್ಥಾತ್ ಶರೀರದಲ್ಲಿ ಸಾಕ್ಷಿಭೂತನಾಗಿ ನೆಲೆಗೊಂಡಿರುವ ಅತೀಂದ್ರಿಯನಾದ ನಿನಗೆ ನಮಸ್ಕಾರವು.
ಅತೀಂದ್ರಿಯ ನಮಸ್ತುಭ್ಯಂ ಲಿಂಗೈರ್ವ್ಯಕ್ತೈರ್ನ ಮೀಯಸೇ |
ಯೇ ಚ ತ್ವಾಂ ನಾಭಿಜಾನಂತಿ ಸಂಸಾರೇ ಸಂಸರಂತಿ ತೇ ॥ 43 ॥
ಸ್ಪಷ್ಟವಾದ ಯಾವ ಚಿಹ್ನೆಯಿಂದಲೂ ನಿನ್ನನ್ನು ತಿಳಿಯಲಾಗುವುದಿಲ್ಲ. ನಿನ್ನನ್ನು ಯಾರು ತಿಳಿಯರೋ ಅವರು ಸಂಸಾರದಲ್ಲಿಯೇ

ತೊಳಲುತ್ತಿರುತ್ತಾರೆ.
ಕಾಮಕ್ರೋಧವಿನಿರ್ಮುಕ್ತಾ ರಾಗದ್ವೇಷವಿವರ್ಜಿತಾಃ |
ಮಾನ್ಯಭಕ್ತಾ ವಿಜಾನಂತಿ ನ ಪುನರ್ಭವಕಾ ದ್ವಿಜಾಃ ॥ 44 ॥
ಕಾಮ-ಕ್ರೋಧಗಳನ್ನು ಜಯಿಸಿ, ರಾಗ-ದ್ವೇಷಗಳನ್ನು ತೊರೆದು ಮಾನ್ಯರಾದ ಭಕ್ತರು ನಿನ್ನ ಸ್ವರೂಪವನ್ನು ಚೆನ್ನಾಗಿ ತಿಳಿಯುತ್ತಾರೆ. ನಿನ್ನನ್ನು ಚೆನ್ನಾಗಿ ತಿಳಿದವರು ಪುನರ್ಜನ್ಮದಿಂದ ಮುಕ್ತರಾಗುತ್ತಾರೆ.
ಏಕಾಂತಿನೋ ಹಿ ನಿರ್ದ್ವಂದ್ವಾ ನಿರಾಶೀಃ ಕರ್ಮಕಾರಿಣಃ |
ಜ್ಞಾನಾಗ್ನಿದಗ್ಧಕರ್ಮಾಣಸ್ತ್ವಾಂ ವಿಶಂತಿ ವಿಚಿಂತಕಾಃ ॥ 45 ॥
ನಿನ್ನಲ್ಲಿಯೇ ಏಕಾಂತ ಭಕ್ತಿಯುಳ್ಳವರು ದ್ವಂದ್ವಗಳನ್ನು ಮೀರಿದವರು, ಬಾಹ್ಯ ಆಸೆಗಳನ್ನು ಮೀರಿದವರು, ನಿಷ್ಕಾಮಕರ್ಮಗಳನ್ನು ಆಶ್ರಯಿಸಿದವರು ಜ್ಞಾನಾಗ್ನಿಯಿಂದ ಪ್ರಾರಬ್ಧವನ್ನು ಸುಟ್ಟುಕೊಂಡವರು ನಿನ್ನನ್ನೇ ವಿಶೇಷವಾಗಿ ಆಲೋಚಿಸುವವರು ನಿನ್ನ ಪಾದವನ್ನು ಸೇರುತ್ತಾರೆ.
ಅಶರೀರಂ ಶರೀರಸ್ಥಂ ಸಮಂ ಸರ್ವೇಷು ದೇಹಿಷು |
ಪುಣ್ಯಪಾಪವಿನಿರ್ಮುಕ್ತಾ ಭಕ್ತಾಸ್ತ್ವಾಂ ಪ್ರಾವಿಶಂತ್ಯುತ ॥ 46 ॥
ನೀನು ಸಮಸ್ತ ಜೀವರ ಶರೀರದಲ್ಲಿ ಪರತರನಾಗಿದ್ದರೂ, ಆ ಶರೀರದ ಸಂಬಂಧವಿಲ್ಲದೆ ಇರುವಿ. ಪುಣ್ಯ-ಪಾಪಗಳಿಂದ ಮುಕ್ತನಾಗಿರುವಿ. ಅಂತಹ ನಿನ್ನನ್ನು ಭಕ್ತರು ಹೊಂದುತ್ತಾರೆ.
ಅವ್ಯಕ್ತಂ ಬುದ್ಧ್ಯಹಂಕಾರಮನೋಭೂತೇಂದ್ರಿಯಾಣಿ ಚ |
ತ್ವಯಿ ತಾನಿ ಚ ತೇಷು ತ್ವಂ ನ ತೇಷು ತ್ವಂ ನ ತೇ ತ್ವಯಿ ॥ 47 ॥
ಅವ್ಯಕ್ತ ಬುದ್ಧಿ, ಅಹಂಕಾರ, ಮನಸ್ಸು, ಪಂಚಭೂತಗಳು, ಸಮಸ್ತ ಇಂದ್ರಿಯಗಳು ಇವೆಲ್ಲವೂ ನಿನ್ನಲ್ಲಿವೆ. ಅವುಗಳಲ್ಲಿ ನೀನು ಇರುವಿ. ಆದರೆ ನಿಜವಾಗಿ ಚಿಂತಿಸಿದಲ್ಲಿ ಅವುಗಳಲ್ಲಿ ನೀನಿಲ್ಲ. ನಿನ್ನಲ್ಲಿಯೂ ಅವುಗಳಿಲ್ಲ. ಅರ್ಥಾತ್ ನೀನು ಆ ಇಂದ್ರಿಯಗಳ ಒಳಗಡೆ ನಿರ್ಲೇಪನಾಗಿರುವಿ ಎಂದು ಭಾವ.
ಏಕತ್ವಾನ್ಯತ್ವನಾನಾತ್ವಂ ಯೇ ವಿದುರ್ಯಾಂತಿ ತೇ ಪರಮ್ |
ಸಮೋಽಸಿ ಸರ್ವಭೂತೇಷು ನ ತೇ ದ್ವೇಷ್ಯೋಽಸ್ತಿ ನ ಪ್ರಿಯಃ ॥ 48 ॥
ಯಾರು ನಿನ್ನ ಸರ್ವೋತ್ತಮತ್ವವನ್ನು, ಸಕಲ ಜಗತ್‌ಭಿನ್ನತ್ವವನ್ನು, ನಾನಾವತಾರತ್ವವನ್ನು, ಪರತ್ವವನ್ನು ತಿಳಿದಿದ್ದಾರೋ ಅವರು ನಿನ್ನ ಪರಮಗತಿಯನ್ನು ಹೊಂದುತ್ತಾರೆ. ನೀನು ಸರ್ವಸಮನು. ನಿನಗೆ ಶತ್ರುವೂ ಇಲ್ಲ, ಮಿತ್ರನೂ ಇಲ್ಲ.
ಸಮತ್ವಮಭಿಕಾಂಕ್ಷೇಽಹಂ ಭಕ್ತ್ಯಾ ವೈ ನಾನ್ಯಚೇತಸಾ |
ಚರಾಚರಮಿದಂ ಸರ್ವಂ ಭೂತಗ್ರಾಮಂ ಚತುರ್ವಿಧಮ್ |
ತ್ವಯಾ ತ್ವಯ್ಯೇವ ತತ್ಪ್ರೋತಂ ಸೂತ್ರೇ ಮಣಿಗಣಾ ಇವ ॥ 49 ॥
ನನ್ನ ಮನಸ್ಸನ್ನು ಮತ್ತೊಂದು ಕಡೆ ಕಳಿಸದೆ ನಿನ್ನ ಭಕ್ತಿಯೊಂದನ್ನೇ ಹಿಡಿದು ಏಕಾಗ್ರತೆಯಿಂದ ಸುಖ-ದುಃಖಗಳನ್ನು ಸಮಾನವಾಗಿ ಕಾಣುವ ನಾನು ಅನನ್ಯ ಮನಸ್ಸಿನಿಂದ ನಿನ್ನನ್ನು ಹೊಂದುತ್ತೇನೆ. ಚರಾಚರವಾದ ನಾಲ್ಕು ವಿಧವಾದ ಜೀವವರ್ಗಗಳೊಡನೆ ಜಗತ್ತೆಲ್ಲ ದಾರದಲ್ಲಿರುವ ಮಣಿಗಳಂತೆ ನಿನ್ನಿಂದಲೇ ಸೃಷ್ಟಿಯನ್ನು ಹೊಂದಿದೆ.
ಸ್ರಷ್ಟಾ ಭೋಕ್ತಾಸಿ ಕೂಟಸ್ಥೋ ಅತತ್ತ್ವಸ್ತತ್ತ್ವಕಃ |
ಅಕರ್ತಾ ಹೇತುರಚಲಃ ಪೃಥಗಾತ್ಮನ್ಯವಸ್ಥಿತಃ ॥ 50 ॥
ನೀನೇ ಸೃಷ್ಟಿಕರ್ತನಾಗಿರುವಿ. ಎಲ್ಲರ ಜೀವಾಂತರ್ಯಾಮಿಯಾಗಿ ಭೋಕ್ತೃವೂ ಆಗಿರುವಿ. ನಿರ್ವಿಕಾರನಾಗಿರುವಿ. ಚತುರ್ವಿಂಶತಿ ತತ್ತ್ವಗಳಲ್ಲಿ ಅಂತರ್ಯಾಮಿಯಾಗಿದ್ದರೂ ಅವುಗಳಿಗಿಂತ ಭಿನ್ನನಾಗಿರುವಿ. ಸ್ವತಂತ್ರವೆಂಬ ಶಬ್ದಕ್ಕೆ ಭಾಜನನಾಗಿರುವಿ. ನೀನು ಅಕರ್ತನೂ, ಕಾರಣನೂ, ಅಚಲನೂ, ಶರೀರಕ್ಕಿಂತಲೂ, ಜೀವಾತ್ಮರಿಗಿಂತಲೂ, ಪೃಥಗಾತ್ಮನೆನಿಸಿ ಇರುವಿ.
ನ ತೇ ಭೂತೇಷು ಸಂಯೋಗೋ ಭೂತತತ್ವಗುಣಾಧಿಕಃ |
ಅಹಂಕಾರೇಣ ಬುದ್ಧ್ಯಾ ವಾ ನ ತೇ ಯೋಗಸ್ತ್ರಿಭಿರ್ಗುಣೈಃ ॥ 51 ॥
ಭೂತತತ್ತ್ವಗಳ ಗುಣಗಳಿಂದಲೂ ನಿನಗೆ ಸಂಬಂಧವಿರುವುದಿಲ್ಲ. ಅವುಗಳಿಗಿಂತ ಅಧಿಕನಾಗಿರುವಿ. ಅಹಂಕಾರತತ್ತ್ವದಿಂದಾಗಲೀ, ಬುದ್ಧಿತತ್ತ್ವದಿಂದಾಗಲೀ, ಮೂರು ಗುಣಗಳಿಂದಾಗಲೀ (ಸತ್ವ-ರಜಸ್-ತಮಸ್) ನಿನಗೆ ಸಂಬಂಧವಿರುವುದಿಲ್ಲ.
ನ ಮೋಕ್ಷಧರ್ಮೋ ವಾ ನ ತ್ವಂ ನಾರಂಭೋ ಜನ್ಮ ವಾ ಪುನಃ |
ಜರಾಮರಣಮೋಕ್ಷಾರ್ಥಂ ತ್ವಾಂ ಪ್ರಪನ್ನೋಽಸ್ಮಿ ಸರ್ವಗ ॥ 52 ॥
ನೀನು ಮೋಕ್ಷಧರ್ಮಗಳಾಗಲೀ ಅದರ ಪ್ರಯತ್ನವಾಗಲೀ ಇಲ್ಲದವನು. ಜನ್ಮರಹಿತನೂ, ಅಂತಹ ಸರ್ವಾಂತರ್ಯಾಮಿಯಾದ ಭಗವಂತನೇ, ನಾನು ನಿನ್ನನ್ನು ಜರಾ-ಮರಣಗಳ ಮೋಕ್ಷಕ್ಕಾಗಿ ಶರಣು ಹೊಂದಿದ್ದೇನೆ.
ಈಶ್ವರೋಽಸಿ ಜಗನ್ನಾಥ ತತಃ ಪರಮ ಉಚ್ಯಸೇ |
ಭಕ್ತಾನಾಂ ಯದ್ಧಿತಂ ದೇವ ತದ್ ಧ್ಯಾಹಿ ತ್ರಿದಶೇಶ್ವರ ॥ 53 ॥
ಜಗನ್ನಾಥನೇ, ನೀನೇ ಈಶ್ವರನು, ನೀನೇ ಸರ್ವೋತ್ತಮನು. ತ್ರಿದಶೇಶ್ವರನೇ, ಭಕ್ತರಿಗೆ ಯಾವುದು ಹಿತವೋ ಅದನ್ನು ದಯಪಾಲಿಸು.
ವಿಷಯೈರಿಂದ್ರಿಯೈರ್ವಾಽಪಿ ನ ಮೇ ಭೂಯಃ ಸಮಾಗಮಃ |
ಪೃಥಿವೀಂ ಯಾತು ಗಂಧೋ ವೈ ರಸಂ ಯಾತು ಜಲಂ ತಥಾ ॥54॥
ತೇಜೋ ಹುತಾಶನಂ ಯಾತು ಸ್ಪರ್ಶೋ ಯಾತು ಚ ಮಾರುತಮ್ |
ಶ್ರೋತ್ರಮಾಕಾಶಮಪ್ಯೇತು ಮನೋ ವೈಕಾರಿಕಂ ಪುನಃ ॥ 55 ॥
ಇಂದ್ರಿಯಾಣ್ಯಪಿ ಸಂಯಾಂತು ಸ್ವಾಸು ಸ್ವಾಸು ಚ ಯೋನಿಷು |

ಪೃಥಿವೀ ಯಾತು ಸಲಿಲಮಾಪೋಽಗ್ನಿಮನಲೋಽನಿಲಮ್ ॥ 56 ॥
ವಾಯುರಾಕಾಶಮಪ್ಯೇತು ಮನಶ್ಚಾಕಾಶ ಏವ ಚ |
ಅಹಂಕಾರಂ ಮನೋ ಯಾತು ಮೋಹನಂ ಸರ್ವದೇಹಿನಾಮ್ ॥57॥
ಅಹಂಕಾರಸ್ತತೋ ಬುದ್ಧಿಂ ಬುದ್ಧಿರವ್ಯಕ್ತಮಚ್ಯುತ ॥ 58 ॥
ಪ್ರಧಾನೇ ಪ್ರಕೃತಿಂ ಯಾತೇ ಗುಣಸಾಮ್ಯೇ ವ್ಯವಸ್ಥಿತೇ |
ವಿಯೋಗಃ ಸರ್ವಕರಣೈರ್ಗುಣೈರ್ಭೂತೈಶ್ಚ ಮೇ ಭವೇತ್ ॥ 59 ॥
ನನಗೆ ಇನ್ನು ಮೇಲೆ ವಿಷಯೇಂದ್ರಿಯಗಳ ಜೊತೆಗೆ ಸಂಬಂಧವಿಲ್ಲದಂತಾಗಲಿ. ನನ್ನನ್ನು ಸೇರಿದ ಗಂಧವು ಭೂಮಿಯನ್ನು, ರಸವು ಜಲವನ್ನು, ರೂಪವು ಅಗ್ನಿಯನ್ನು, ಸ್ಪರ್ಶವು ವಾಯುವನ್ನು, ಶಬ್ದವು ಆಕಾಶವನ್ನು, ಮನಸ್ಸು ಅಹಂಕಾರವನ್ನು, ಅಹಂಕಾರವು ಬುದ್ಧಿಯನ್ನು, ಬುದ್ಧಿಯು ಪ್ರಧಾನವನ್ನು ಹೊಂದಲಿ. ತಮ್ಮ ತಮ್ಮ ಕಾರಣ ವಸ್ತುಗಳಲ್ಲಿ ಆಯಾ ಇಂದ್ರಿಯಗಳು ಲಯವನ್ನು ಹೊಂದಲಿ. ಪ್ರಕೃತಿಯು ತನ್ನಲ್ಲಿ ಗುಣಸಾಮ್ಯವನ್ನು ಹೊಂದಿದಾಗ ನಾನು ಸಮಸ್ತ ಗುಣಗಳಿಂದಲೂ, ಇಂದ್ರಿಯಗಳಿಂದಲೂ, ಭೂತಗಳಿಂದಲೂ ಮುಕ್ತನಾಗುತ್ತೇನೆ.
ನಿಷ್ಕೇವಲಂ ಪದಂ ತಾತ ಕಾಂಕ್ಷೇಽಹಂ ಪರಮಂ ತವ |
ಏಕೀಭಾವಸ್ತ್ವಯಾ ಮೇಽಸ್ತು ನ ಮೇ ಜನ್ಮ ಭವೇತ್ಪುನಃ ॥ 60 ॥
ಭಗವಂತನೇ, ಪ್ರಕೃತಿಯ ಸಂಬಂಧವಿಲ್ಲದೇ ಇರುವ ನಿನ್ನ ಪಾದಕಮಲವನ್ನು ನಾನು ಅಪೇಕ್ಷಿಸುತ್ತೇನೆ. ಕೊಟ್ಟಿಗೆಯಲ್ಲಿ ಹಸುಗಳು ಒಟ್ಟಾಗಿ ಸೇರುವಂತೆ ನಿನ್ನ ಜೊತೆಗೆ ಇರುವ ಅವಕಾಶವು ನನಗೆ ಒದಗಿ ಬರಲಿ. ಮತ್ತೊಮ್ಮೆ ಜನ್ಮವನ್ನು ನನಗೆ ನೀಡಬೇಡ.
ತ್ವದ್ಬುದ್ಧಿಸ್ತ್ವದ್ಗತಪ್ರಾಣಸ್ತ್ವದ್ಭಕ್ತಿಸ್ತ್ವತ್ಪರಾಯಣಃ |
ತ್ವಾಮೇವಾಹಂ ಸ್ಮರಿಷ್ಯಾಮಿ ಮರಣೇ ಪರ್ಯುಪಸ್ಥಿತೇ ॥ 61 ॥
ನಿನ್ನಲ್ಲೇ ಬುದ್ಧಿಯನ್ನಿಟ್ಟು, ನಿನ್ನಲ್ಲಿ ಪ್ರಾಣವನ್ನರ್ಪಿಸಿ, ನಿನ್ನಲ್ಲೇ ಭಕ್ತಿಯನ್ನು ಮಾಡುತ್ತಾ, ನಿನ್ನನ್ನೇ ಚಿಂತಿಸುತ್ತಾ, ಮರಣವು ಆಗಮಿಸಿದಾಗ ನಿನ್ನನ್ನೇ ನಿರಂತರ ಸ್ಮರಿಸುತ್ತೇನೆ.
ಪೂರ್ವದೇಹಕೃತಾ ಯೇ ತು ವ್ಯಾಧಯಃ ಪ್ರವಿಶಂತು ಮಾಮ್ |
ಅರ್ದಯಂತು ಚ ದುಃಖಾನಿ ಋಣಂ ಮೇ ಪ್ರವಿಮುಂಚತು ॥ 62 ॥
ಪೂರ್ವದೇಹಜನ್ಮಾರ್ಜಿತವಾದ ವ್ಯಾಧಿಗಳು ನನ್ನನ್ನು ಬಾಧಿಸಲಿ. ನನ್ನನ್ನು ದುಃಖಗಳು ಅರ್ದಿಸಲಿ. ನನ್ನ ಋಣವು ತೀರಿಹೋಗಲಿ.
ಅನುಧ್ಯಾತೋಽಸಿ ದೇವೇಶ ನ ಮೇ ಜನ್ಮ ಭವೇತ್ಪುನಃ |
ತಸ್ಮಾದ್ ಬ್ರವೀಮಿ ಕರ್ಮಾಣಿ ಋಣಂ ಮೇ ನ ಭವೇದಿತಿ ॥ 63 ॥
ಭಗವಂತನೇ, ಹೃದಯದಲ್ಲಿ ನೀನೇ ಧ್ಯಾನಿಸಲ್ಪಟ್ಟಿರುವಿ. ನನಗೆ ಪುನರ್ಜನ್ಮವು ಒದಗುವುದು ಬೇಡ. ಆದ್ದರಿಂದಲೇ ಕರ್ಮಗಳಾಗಲೀ, ಋಣಗಳಾಗಲೀ ನನಗೆ ಪುನಃ ಉಂಟಾಗದಿರಲೆಂದು ಹೀಗೆ ಪ್ರಾರ್ಥಿಸುತ್ತಿದ್ದೇನೆ.
ನೋಪತಿಷ್ಠಂತು ಮಾಂ ಸರ್ವೇ ವ್ಯಾಧಯಃ ಪೂರ್ವಸಂಚಿತಾಃ |
ಅನೃಣೋ ಗಂತುಮಿಚ್ಛಾಮಿ ತದ್ವಿಷ್ಣೋಃ ಪರಮಂ ಪದಮ್ ॥ 64 ॥
ಭಗವಂತನೇ, ಪುನಃ ನನ್ನನ್ನು ವ್ಯಾಧಿಗಳಾಗಲೀ, ಪೂರ್ವಸಂಚಿತ ಕರ್ಮಗಳಾಗಲೀ ಬಾಧಿಸಬಾರದೆಂದು ಅವುಗಳನ್ನು ಅನುಭವಿಸಿ ಅನೃಣಿಯಾಗಿ ನಿನ್ನ ಪರಮ ಪದವನ್ನು ಹೊಂದಬೇಕೆಂದು ಬಯಸುತ್ತಿದ್ದೇನೆ.
ಶ್ರೀಭಗವಾನ್
ಅಹಂ ಭಗವತಸ್ತಸ್ಯ ಮಮ ಚಾಸೌ ಸನಾತನಃ |
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ 65 ॥
ಶ್ರೀಭಗವಾನ್ ನಾರದನೇ, ನಾನು ನಿನಗೆ ಸಂಬಂಧಿಸಿದ್ದೇನೆ. ನೀನು ನನಗೆ ಸಂಬಂಧಿಸಿದ್ದೀಯಾ. ನನ್ನನ್ನು ಧ್ಯಾನಿಸಿದ ನಿನಗೆ ಮರಣವು ಇಲ್ಲ. ನಿನ್ನ ವಿಷಯದಲ್ಲಿ ನಾನು ದೂರನಾಗುವುದಿಲ್ಲ.
ಕರ್ಮೇಂದ್ರಿಯಾಣಿ ಸಂಯಮ್ಯ ಪಂಚ ಬುದ್ಧೀಂದ್ರಿಯಾಣಿ ಚ |
ದಶೇಂದ್ರಿಯಾಣಿ ಮನಸಿ ಅಹಂಕಾರೇ ತಥಾ ಪುನಃ ॥ 66 ॥
ಅಹಂಕಾರಂ ತಥಾ ಬುದ್ಧೌ ಬುದ್ಧಿಮಾತ್ಮನಿ ಯೋಜಯೇತ್ |
ಯತಬುದ್ಧೀಂದ್ರಿಯಃ ಪಶ್ಯೇದ್ಬುದ್ಧ್ಯಾ ಬುದ್ಧ್ಯೇತ್ಪರಾತ್ಪರಮ್ ॥ 67 ॥
ನಾರದನೇ, ದಶೇಂದ್ರಿಯಗಳನ್ನು ನಿಗ್ರಹಿಸಿಕೊಂಡು ಮನಸ್ಸನ್ನು ಅಹಂಕಾರದಲ್ಲಿಯೂ, ಬುದ್ಧಿ ಮೊದಲಾದ ಕರ್ಮೇಂದ್ರಿಯಗಳನ್ನು ನಿಗ್ರಹಿಸಿಕೊಂಡು ಅಹಂಕಾರವನ್ನು ಬುದ್ಧಿಯಲ್ಲಿಯೂ, ಬುದ್ಧಿಯನ್ನು ಪರಮಾತ್ಮನಲ್ಲಿಯೂ ಸಂಯೋಜಿಸಬೇಕು. ನಿಗ್ರಹವುಳ್ಳ ಬುದ್ಧಿ ಎಂಬ ಇಂದ್ರಿಯದಿಂದ ಚಿಂತಿಸುತ್ತಾ ಪರಾತ್ಪರನಾದ ಭಗವಂತನನ್ನು ತಿಳಿಯಬೇಕು.
ಮಮಾಯಮಿತಿ ಯಸ್ಯಾಹಂ ಯೇನ ಸರ್ವಮಿದಂ ತತಮ್ |
ಆತ್ಮನಾಽಽತ್ಮನಿ ಸಂಯೋಜ್ಯ ಏತ್ತೈರಾತ್ಮಾಹ್ಯನುಸ್ಮರೇತ್ |
ತತೋ ಬುದ್ಧೇಃ ಪರಂ ಬುದ್ಧ್ವಾ ಲಭತೇ ನ ಪುನರ್ಭವಮ್ ॥ 68 ॥
ಉತ್ತಮ ಪುರುಷನ ಪಾಲಿಗೆ ನಾನು, ನನ್ನ ಪಾಲಿಗೆ ಅವನು ಯಾವಾಗಲೂ ಇರುವವರೆಂದು ತಿಳಿ. ಯಾವ ಭಗವಂತನಿಂದಲೇ ಇವೆಲ್ಲವೂ ವ್ಯಾಪ್ತವಾಗಿದೆ. ನಿನ್ನ ಮನಸ್ಸನ್ನು ಭಗವಂತನಲ್ಲಿ ಏಕಾಗ್ರಗೊಳಿಸಿ ಹಿಂದೆ ಹೇಳಿದ ಪ್ರಕಾರದಿಂದ ಅವನನ್ನು ಚಿಂತಿಸಬೇಕು. ಆ ಭಗವಂತನು ಬುದ್ಧಿಯನ್ನೂ ಮೀರಿದ ಸರ್ವೋತ್ತಮನೂ, ಅಚಿಂತ್ಯನೂ ಎಂದು ತಿಳಿದವನು ಪುನಃ ಹುಟ್ಟನ್ನು ಹೊಂದುವುದಿಲ್ಲ.
ಮರಣೇ ಸಮನುಪ್ರಾಪ್ತೇ ಯಶ್ಚೈವಂ ಮಾಮನುಸ್ಮರೇತ್ |

ಅಪಿ ಪಾಪಸಮಾಚಾರಃ ಸ ಯಾತಿ ಪರಮಾಂ ಗತಿಮ್ ॥ 69 ॥
ಯಾವನು ಮರಣಕಾಲವು ಸನ್ನಿಹಿತವಾದಾಗ ನನ್ನನ್ನು ಹೀಗೆ ಸ್ಮರಿಸುತ್ತಾನೋ ಅವನು ಅನೇಕ ಪಾಪಕರ್ಮಗಳನ್ನು ಆಚರಿಸಿದ್ದರೂ ಪರಮಗತಿಯನ್ನು ಹೊಂದುತ್ತಾನೆ.
ಓಂ ನಮೋ ಭಗವತೇ ತಸ್ಮೈ ದೇಹಿನಾಂ ಪರಮಾತ್ಮನೇ |
ನಾರಾಯಣಾಯ ಭಕ್ತಾನಾಮೇಕನಿಷ್ಠಾಯ ಶಾಶ್ವತೇ ॥ 70 ॥
ಇಮಾಮನುಸ್ಮೃತಿಂ ದಿವ್ಯಾಂ ವೈಷ್ಣವೀಂ ಸುಸಮಾಹಿತಃ |
ಸ್ವಪನ್ ವಿಬುದ್ಧಶ್ಚ ಪಠೇದ್ ಯತ್ರ ತತ್ರ ಸಮಭ್ಯಸೇತ್ ॥ 71 ॥
ನಾರದನೇ, `ಓಂ ನಮೋ ಭಗವತೇ ತಸ್ಮೈ ದೇಹಿನಾಂ ಪರಮಾತ್ಮನೇ, ನಾರಾಯಣಾಯ ಭಕ್ತಾನಾಮೇಕನಿಷ್ಠಾಯ ಶಾಶ್ವತೇ' ಎಂಬ ನನ್ನ ವಿಷಯವಾದ ಅನುಸ್ಮೃತಿಯನ್ನು ದಿವ್ಯವಾದ ವೈಷ್ಣವಮಂತ್ರವನ್ನು ಏಕಾಗ್ರಚಿತ್ತದಿಂದ ಚಿಂತಿಸುತ್ತಾ ಎಚ್ಚರದಲ್ಲಿಯೂ, ಮಲಗಿದ್ದಾಗಲೂ ಶ್ರದ್ಧೆಯಿಂದ ಈ ಮಂತ್ರವನ್ನು ಪಠಿಸುತ್ತಿರಬೇಕು.
ಪೌರ್ಣಮಾಸ್ಯಾಮಮಾವಾಸ್ಯಾಂ ದ್ವಾದಶ್ಯಾಂ ಚ ವಿಶೇಷತಃ |
ಶ್ರಾವಯೇಚ್ಛ್ರದ್ಧಧಾನಾಂಶ್ಚ ಮದ್ಭಕ್ತಾಂಶ್ಚ ವಿಶೇಷತಃ ॥ 72 ॥
ಮುಖ್ಯವಾಗಿ ಹುಣ್ಣಿಮೆ, ಅಮಾವಾಸ್ಯೆ, ದ್ವಾದಶೀ ಮೊದಲಾದ ಪುಣ್ಯ ದಿವಸಗಳಲ್ಲಿ ಇದನ್ನು ಪಠಿಸಬೇಕು. ವಿಶೇಷವಾಗಿ ಶ್ರದ್ಧೆಯುಳ್ಳಂತಹ ನನ್ನ ಭಕ್ತರಿಗೆ ಶ್ರವಣ ಮಾಡಿಸಬೇಕು.
ಯದ್ಯಹಂಕಾರಮಾಶ್ರಿತ್ಯ ಯಜ್ಞದಾನತಪಃಕ್ರಿಯಾಃ |
ಕುರ್ವಂಸ್ತತ್ಫಲಮಾಪ್ನೋತಿ ಪುನರಾವರ್ತನಂ ನ ತು ॥ 73 ॥
ಅಂತಹ ವ್ಯಕ್ತಿಯು ಒಂದು ವೇಳೆ ಅಹಂಕಾರವನ್ನು ಅವಲಂಬಿಸಿಕೊಂಡು ಯಜ್ಞ- ದಾನ-ತಪಸ್ಸು ಮೊದಲಾದ ಕ್ರಿಯೆಗಳನ್ನು ಮಾಡಿದರೆ ಅವುಗಳ ಫಲವನ್ನು ಹೊಂದುತ್ತಾನೆ. ಎಂದಿಗೂ ಅವನು ಪುನರ್ಜನ್ಮವನ್ನು ಹೊಂದುವುದಿಲ್ಲ.
ಅಭ್ಯರ್ಚಯನ್ ಪಿತೄನ್ ದೇವಾನ್ ಪಠನ್ ಜುಹ್ವನ್ ಬಲಿಂ ದದತ್ |
ಜ್ವಲನ್ನಗ್ನಿಂ ಸ್ಮರೇದ್ಯೋ ಮಾಂ ಸ ಯಾತಿ ಪರಮಾಂ ಗತಿಮ್ ॥ 74 ॥
ಪಿತೃಪೂಜೆ, ದೇವಪೂಜೆ, ಜಪ, ಹೋಮ, ಬಲಿದಾನ ಮುಂತಾದವುಗಳಲ್ಲಿಯೂ ನನ್ನ ಸ್ಮರಣೆಯಲ್ಲಿರುವವನೇ ಉತ್ತಮ ಗತಿಯನ್ನು ಹೊಂದುತ್ತಾನೆ.
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಶರೀರಿಣಾಮ್ |
ಯಜ್ಞಂ ದಾನಂ ತಪಸ್ತಸ್ಮಾತ್ ಕುರ್ಯಾದಾಶೀರ್ವಿವರ್ಜಿತಃ ॥ 75 ॥
ಯಜ್ಞ, ದಾನ, ತಪಸ್ಸುಗಳೆಂಬ ಈ ಮೂರು ಪವಿತ್ರಕರ್ಮಗಳೇ ಆಗಿದ್ದರೂ ಇವುಗಳನ್ನು ಫಲದ ಅಪೇಕ್ಷೆ ಇಲ್ಲದೆ ನಡೆಸಬೇಕು.
ನಮ ಇತ್ಯೇವ ಯೋ ಬ್ರೂಯಾನ್ಮದ್ಭಕ್ತಃ ಶ್ರದ್ಧಯಾನ್ವಿತಃ |
ತಸ್ಯಾಕ್ಷಯೋ ಭವೇಲ್ಲೋಕಃ ಶ್ವಪಾಕಸ್ಯಾಪಿ ನಾರದ ॥ 76 ॥
ಶ್ರದ್ಧಾ-ಭಕ್ತಿಗಳಿಂದ ನನ್ನನ್ನುದ್ದೇಶಿಸಿ ಮಾಡಿದ ನಮಸ್ಕಾರವು, ನಮಸ್ಕಾರ ಎಂದು ಹೇಳಿದ ಶಬ್ದವು ಚಂಡಾಲನಿಗೂ ಅಕ್ಷಯಲೋಕವನ್ನು ನೀಡುತ್ತದೆ.
ಕಿಂ ಪುನರ್ಯೇ ಯಜಂತೇ ಮಾಂ ಸಾಧಕಾ ವಿಧಿಪೂರ್ವಕಮ್ |
ಶ್ರದ್ಧಾವಂತೋ ಯತಾತ್ಮಾನಸ್ತೇ ಮಾಂ ಯಾಂತಿ ಮದಾಶ್ರಿತಾಃ ॥ 77 ॥
ಹೀಗಿರಲು ಶ್ರದ್ಧಾ-ಭಕ್ತಿಗಳಿಂದ ನನ್ನನ್ನೇ ನಂಬಿದ ವಿಧ್ಯುಕ್ತವಾಗಿ ನನ್ನನ್ನು ಆರಾಧಿಸುವ ಭಕ್ತರು ನನ್ನನ್ನು ಹೊಂದುವುದರಲ್ಲಿ ಸಂಶಯವೇ ಇಲ್ಲ.
ಕರ್ಮಾಣ್ಯಾದ್ಯಂತವಂತೀಹ ಮದ್ಭಕ್ತೋಽಮೃತಮಶ್ನುತೇ |
ಮಾಮೇವ ತಸ್ಮಾದ್ದೇವರ್ಷೇ ಧ್ಯಾಹಿ ನಿತ್ಯಮತಂದ್ರಿತಃ ॥ 78 ॥
ಕರ್ಮಗಳಿಗೆ ಆದಿಯೂ ಇದೆ, ವಿನಾಶವೂ ಇದೆ. ಆದರೆ ನನ್ನಲ್ಲಿ ಭಕ್ತಿಯನ್ನು ಮಾಡಿದ ಮನುಜನು ಮುಕ್ತಿಯನ್ನು ಹೊಂದುತ್ತಾನೆ. ಆದ್ದರಿಂದ ದೇವರ್ಷಿಯೇ, ಆಲಸ್ಯವನ್ನು ತೊರೆದು ನನ್ನನ್ನೇ ನಿತ್ಯವೂ ಧ್ಯಾನಿಸು. ಬಳಿಕ ನೀನು ಸಿದ್ಧಿಯನ್ನು ಹೊಂದಿ ನನ್ನನ್ನೇ ನೋಡುತ್ತಿ. ನನ್ನ ಪದವನ್ನು ಹೊಂದುತ್ತಿ.
ಅಜ್ಞಾನಿನೇ ಚ ಯೋ ಜ್ಞಾನಂ ದದ್ಯಾದ್ಧರ್ಮೋಪದೇಶನಮ್ |
ಕೃತ್ಸ್ನಾಂ ವಾ ಪೃಥಿವೀಂ ದದ್ಯಾತ್ತೇನ ತುಲ್ಯಂ ನ ತತ್ಫಲಮ್ ॥ 79 ॥
ಅಜ್ಞರಿಗೆ ಜ್ಞಾನವನ್ನು, ಧರ್ಮವನ್ನುಪದೇಶಿಸಿ, ಅವರನ್ನು ಉದ್ಧರಿಸುವ ವ್ಯಕ್ತಿಗಳು ಹೊಂದುವ ಫಲಕ್ಕೆ ಭೂಮಿಯ ಸರ್ವಸ್ವವನ್ನು ದಾನ ಮಾಡಿದರೂ ಯೋಗ್ಯವಾದ ಪ್ರತಿಫಲವಾಗಲಾರದು.
ತಸ್ಮಾತ್ ಪ್ರದೇಯಂ ಸಾಧುಭ್ಯೋ ಜನ್ಮಬಂಧಭಯಾಪಹಮ್ |
ಏವಂ ದತ್ವಾ ನರಶ್ರೇಷ್ಠ ಶ್ರೇಯೋ ವೀರ್ಯಂ ಚ ವಿಂದತಿ ॥ 80 ॥
ಆದ್ದರಿಂದ ಪುನರ್ಜನ್ಮದಿಂದ ಉಂಟಾಗುವ ಭಯವನ್ನು ನೀಗಿಸುವ ಈ ಜ್ಞಾನವನ್ನು ನೀನು ಸಾಧಕರಿಗೆ ಉಪದೇಶಿಸುತ್ತಿರು. ಇದರಿಂದ ನಿನಗೂ ಶ್ರೇಯಸ್ಸುಂಟಾಗುತ್ತದೆ.
ಅಶ್ವಮೇಧಸಹಸ್ರಾಣಾಂ ಸಹಸ್ರಂ ಯಃ ಸಮಾಚರೇತ್ |
ನಾಸೌ ಪದಮವಾಪ್ನೋತಿ ಮದ್ಭಕ್ತೈರ್ಯದವಾಪ್ಯತೇ ॥ 81 ॥
ಯಾವನು ಹತ್ತುಲಕ್ಷ ಅಶ್ವಮೇಧ ಯಜ್ಞಗಳನ್ನು ಮಾಡುತ್ತಾನೋ ಅವನೂ ಸಹ ನನ್ನ ಭಕ್ತರು ಹೊಂದುವ ಉತ್ತಮ ಲೋಕಗಳನ್ನು ಹೊಂದಲಾರನು.

ಭೀಷ್ಮಃ
ಏವಂ ಪೃಷ್ಟಃ ಪುರಾ ತೇನ ನಾರದೇನ ಸುರರ್ಷಿಣಾ |
ಯದುವಾಚ ತದಾಽಸೌ ಭೋ ತದುಕ್ತಂ ತವ ಸುವ್ರತ ॥ 82 ॥
ಭೀಷ್ಮ ಹೀಗೆ ಭಗವಂತನು ಸುರರ್ಷಿಯಾದ ನಾರದರಿಂದ ಕೇಳಲ್ಪಟ್ಟವನಾಗಿ ಏನನ್ನು ಹೇಳಿದನೋ ಅದನ್ನು ಸುವ್ರತನೇ, ನಾನು ನಿನಗೆ ತಿಳಿಸಿದ್ದೇನೆ.
ತ್ವಮಪ್ಯೇಕಮನಾ ಭೂತ್ವಾ ಧ್ಯಾಹಿ ಜ್ಞೇಯಂ ಗುಣಾನ್ವಿತಮ್ |
ಭಜಸ್ವ ಸರ್ವಭಾವೇನ ಪರಮಾತ್ಮಾನಮವ್ಯಯಮ್ ॥ 83 ॥
ನೀನು ಏಕಾಗ್ರಚಿತ್ತನಾಗಿದ್ದು, ತ್ರಿಗುಣಗಳನ್ನೂ ಮೀರಿ ಜ್ಞೇಯವಸ್ತುವಾದ ಆ ಪರಮಾತ್ಮನನ್ನು ಧ್ಯಾನಿಸು. ಅವ್ಯಯನೆನಿಸಿದ ಆ ಪರಬ್ರಹ್ಮನನ್ನೇ ಎಲ್ಲ ವಿಧದಿಂದಲೂ ಭಜಿಸುತ್ತಿರು.
ಶ್ರುತ್ವೈತನ್ನಾರದೋ ವಾಕ್ಯಂ ದಿವ್ಯಂ ನಾರಾಯಣೇರಿತಮ್ |
ಅತ್ಯಂತಭಕ್ತಿಮಾನ್ ದೇವ ಏಕಾಂತತ್ವಮುಪೇಯಿವಾನ್ ॥ 84 ॥
ನಾರದರು ಭಗವಂತನ ಈ ದಿವ್ಯೋಪದೇಶವನ್ನು ಮೊದಲು ಕೇಳಿದರು. ಅವನನ್ನು ಅನನ್ಯ ಭಕ್ತಿಯಿಂದ ಭಜಿಸುತ್ತಿದ್ದರು. ಕೊನೆಗೆ ಅವನಲ್ಲಿಯೇ ಏಕಾಂತ ಭಕ್ತಿಯನ್ನು ಹೊಂದಿದರು.
ನಾರಾಯಣಮೃಷಿಂ ದೇವಂ ದಶವರ್ಷಾಣ್ಯನನ್ಯಭಾಕ್ |
ಇದಂ ಜಪನ್ ವೈ ಪ್ರಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ 85 ॥
ಶ್ರೀಮನ್ನಾರಾಯಣನನ್ನು ಯಾವ ಪುರುಷನು ಬೇರೆ ಕಾರ್ಯಗಳಿಗೆ ಮಹತ್ವವನ್ನು ನೀಡದೆ ಹತ್ತು ಸಂವತ್ಸರಗಳ ಕಾಲ ಸರ್ವೋತ್ತಮನೆಂದು ಭಜಿಸುತ್ತಾ ಈ ಮಂತ್ರವನ್ನು ಜಪಿಸುತ್ತಾನೋ ಅವನು ವಿಷ್ಣುಪದವನ್ನೇ ಹೊಂದುತ್ತಾನೆ.
ಕಿಂ ತಸ್ಯ ಬಹುಭಿರ್ಮಂತ್ರೈರ್ಭಕ್ತಿರ್ಯಸ್ಯ ಜನಾರ್ದನೇ |
ನಮೋ ನಾರಾಯಣಾಯೇತಿ ಮಂತ್ರಃ ಸರ್ವಾರ್ಥಸಾಧಕಃ ॥ 86 ॥
ಅಂತಹ ಭಗವಂತನಲ್ಲಿ ಭಕ್ತಿಯುಳ್ಳವನಿಗೆ ಬೇರೆ ಯಾವ ಮಂತ್ರಗಳೂ ಬೇಕಾಗುವುದಿಲ್ಲ. `ಓಂ ನಮೋ ನಾರಾಯಣಾಯ' ಎಂಬ ಮಂತ್ರ ಒಂದೇ ಸರ್ವಾರ್ಥಸಾಧಕವಾದುದು.
ಇಮಾಂ ರಹಸ್ಯಾಂ ಪರಮಾಮನುಸ್ಮೃತಿ-
ಮಧೀತ್ಯ ಬುದ್ಧಿಂ ಲಭತೇ ಚ ನೈಷ್ಠಿಕೀಮ್ |
ವಿಹಾಯ ದುಃಖಾನ್ಯವಮುಚ್ಯ ಸಂಕಟಾ-
ತ್ಸ ವೀತರಾಗೋ ವಿಗತಜ್ವರಃ ಸುಖೀ ॥ 87 ॥
ಅತ್ಯಂತ ರಹಸ್ಯವಾದ, ಶ್ರೇಷ್ಠವಾದ ಈ ಅನುಸ್ಮೃತಿಯನ್ನು ಅಧ್ಯಯನ ಮಾಡಿದವನು ನಿತ್ಯವೂ ಸರ್ವೋತ್ತಮನೆಂಬ ಸ್ಥಿರವಾದ ಬುದ್ಧಿಯನ್ನು ಹೊಂದುತ್ತಾನೆ. ಅವನು ಸಮಸ್ತ ದುಃಖಗಳನ್ನು ಪರಿಹರಿಸಿಕೊಂಡು ಶೋಕಗಳಿಂದ, ರಾಗಗಳಿಂದ ಮುಕ್ತನಾಗಿ ನಿಶ್ಚಿಂತನಾಗಿ ಶಾಶ್ವತವಾದ ಸುಖವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಅಷ್ಟತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂಬತ್ತನೆಯ ಅಧ್ಯಾಯ
ಭೀಷ್ಮಾಚಾರ್ಯರು ಗರುಡನು ತನಗೆ ತಿಳಿಸಿದ್ದ ಭಗವಂತನ
ಮಹಿಮೆಯನ್ನು ಯುಧಿಷ್ಠಿರನಿಗೆ ತಿಳಿಸಿದುದು.
ಯುಧಿಷ್ಠಿರಃ
ದೇವಾಸುರಮನುಷ್ಯೇಷು ಋಷಿಮುಖ್ಯೇಷು ವಾ ಪುನಃ |
ವಿಷ್ಣೋಸ್ತತ್ವಂ ಯಥಾಖ್ಯಾತಂ ಕೋ ವಿದ್ವಾನನುವೇತ್ತಿ ತತ್ ॥ 1 ॥
ಯುಧಿಷ್ಠಿರ ಪಿತಾಮಹನೇ, ದೇವಾಸುರಮನುಷ್ಯರಲ್ಲೇ ಆಗಲೀ, ಮಹರ್ಷಿಗಳಲ್ಲೇ ಆಗಲಿ ಆ ಮಹಾವಿಷ್ಣುವಿನ ಮಹಿಮೆಯನ್ನು ಯಥಾರ್ಥವಾಗಿ ತಿಳಿದ ಜ್ಞಾನಿಯು ಯಾರು?
ಏತನ್ಮೇ ಸರ್ವಮಾಚಕ್ಷ್ವ ನ ಮೇ ತೃಪ್ತಿರ್ಹಿ ತತ್ವತಃ |
ವರ್ತತೇ ಭರತಶ್ರೇಷ್ಠ ಸರ್ವಜ್ಞೋಽಸೀತಿ ಮೇ ಮತಿಃ ॥ 2 ॥
ಭಗವಂತನ ಮಹಿಮೆಯನ್ನು ಎಷ್ಟು ಕೇಳುತ್ತಿದ್ದರೂ ನನಗೆ ತೃಪ್ತಿಯಿಲ್ಲ. ನೀನು ಸರ್ವಜ್ಞನೆಂದು ನನ್ನ ಮನಸ್ಸು ಹೇಳುತ್ತಿದೆ. ಆದ್ದರಿಂದ ಭಗನ್ಮಹಿಮೆಯನ್ನು ಯಥಾರ್ಥವಾಗಿ ತಿಳಿಸು.
ಭೀಷ್ಮಃ
ಕಾರಿತೋಽಹಂ ತ್ವಯಾ ರಾಜನ್ ಯದ್ವೃತ್ತಂ ಚ ಪುರಾ ಮಮ |
ಗರುಡೇನ ಪುರಾ ಮಹ್ಯಂ ಸಂವಾದೋ ಭೂಭೃತೋತ್ತಮ ॥ 3 ॥
ಭೀಷ್ಮ ರಾಜನೇ, ಇದೇ ವಿಚಾರವಾಗಿ ಹಿಂದೊಮ್ಮೆ ಗರುಡನ ಜೊತೆಗೆ ಸಂವಾದವು ನಡೆಯಿತು. ಆ ವಿಚಾರವನ್ನು ನೀನು ನೆನಪಿಸಿದಂತಾಯಿತು.
ಪುರಾಹಂ ತಪ ಆಸ್ಥಾಯ ವಾಸುದೇವಪರಾಯಣಃ |

ಧ್ಯಾಯನ್ ಸ್ತುವನ್ನಮಸ್ಯಂಶ್ಚ ಯಜಮಾನಸ್ತಮೇವ |
ಗಂಗಾದ್ವೀಪೇ ಸಮಾಸೀನೋ ದಶವರ್ಷಾಣಿ ಭಾರತ ॥ 4 ॥
ಹಿಂದೆ ನಾನು ಶ್ರೀಹರಿ ಪರಾಯಣನಾಗಿ, ಅವನಲ್ಲಿಯೇ ಮನಸ್ಸನ್ನಿಟ್ಟು ಗಂಗಾನದಿಯ ಮಧ್ಯದಲ್ಲಿರುವ ಒಂದು ದ್ವೀಪದಲ್ಲಿ ತಪಸ್ಸನ್ನು ಆಚರಿಸಿದೆನು. ಆಗ ನಾನು ನಿರಂತರ ಹತ್ತುವರ್ಷಗಳ ತನಕ ವಾಸುದೇವನಲ್ಲಿಯೇ ಮನಸ್ಸನ್ನಿಟ್ಟು ಧ್ಯಾನದಲ್ಲಿ ನಿರತನಾದೆನು.
ಗಂಗಾ ಚ ಮಮ ಸಾ ದೇವೀ ಜನನೀ ಲೋಕಪಾವನೀ |
ಸಮಾಸೀನಾ ಸಮೀಪೇ ಮೇ ರಕ್ಷಣಾರ್ಥಂ ಮಮಾಚ್ಯುತ ॥ 5 ॥
ತಸ್ಮಿನ್ ಕಾಲೇಽದ್ಭುತಃ ಶ್ರೀಮಾನ್ ಸರ್ವವೇದಮಯಃ ಪ್ರಭುಃ |
ಸುಪರ್ಣಃ ಪತತಾಂಶ್ರೇಷ್ಠೋ ಮೇರುಮಂದರಸನ್ನಿಭಃ ॥ 6 ॥
ಆಗ ನನ್ನ ತಾಯಿಯಾದ ಗಂಗಾದೇವಿಯು ನನ್ನ ರಕ್ಷಣೆಗಾಗಿ ನನ್ನ ಸಮೀಪದಲ್ಲಿಯೇ ಇರುತ್ತಿದ್ದಳು. ಹೀಗಿರುವಾಗ ಅಕಸ್ಮಾತ್ತಾಗಿ ಅಲ್ಲಿಗೆ ಗರುಡದೇವನು ಆಗಮಿಸಿದನು. ಮೇರು-ಮಂದರಪರ್ವತಗಳಿಗೆ ಸಮಾನವಾದ ಆಕಾರವುಳ್ಳ, ಶುದ್ಧಾತ್ಮನಾದ ಗರುಡನು ನನ್ನ ತಾಯಿಯನ್ನು ನೋಡಲು ಆಗಮಿಸಿದ್ದನು.
ತಮಾಗತಂ ಮಹಾತ್ಮಾನಂ ಪ್ರತ್ಯುದ್ಗಮ್ಯಾಹಮರ್ಥಿತಃ |
ಪ್ರಣಿಪತ್ಯ ಯಥಾನ್ಯಾಯಂ ಕೃತಾಂಜಲಿರವಸ್ಥಿತಃ ॥ 7 ॥
ಆಗಮಿಸಿದ ಮಹಾತ್ಮನಾದ ಗರುಡದೇವನನ್ನು ನಾನು ಎದ್ದುನಿಂತು ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತಿದ್ದೆನು.
ಸೋಽಪಿ ದೇವೋ ಮಹಾಭಾಗಾಮಭಿನಂದ್ಯ ಚ ಜಾಹ್ನವೀಮ್ |
ತಯಾ ಚ ಪೂಜಿತಃ ಶ್ರೀಮಾನ್ಭ್ಯುಪಾವಿಶದಾಸನೇ ॥ 8 ॥
ಆ ಗರುಡನಾದರೂ ನನ್ನ ತಾಯಿಯಾದ ಗಂಗಾದೇವಿಗೆ ನಮಸ್ಕರಿಸಿ, ಅವನು ನನ್ನ ತಾಯಿಯಿಂದ ಸತ್ಕೃತನಾಗಿ ನಮ್ಮ ಸಮೀಪದಲ್ಲಿಯೇ ಕುಳಿತನು.
ತತಃ ಕಥಾಂತರೇ ತಂ ವೈ ವಚನಂ ಚೇದಮಬ್ರವಮ್ ॥ 9 ॥
ಬಳಿಕ ನಾವೆಲ್ಲರೂ ಪರಸ್ಪರ ಮಾತುಗಳನ್ನಾಡುತ್ತಿರುವಾಗ ನಡುವೆ ನಾನು ಗರುಡನನ್ನು ಕುರಿತು ಹೀಗೆ ಹೇಳಿದೆನು.
ವೇದವೇದ ಮಹಾವೀರ್ಯ ವೈನತೇಯ ಮಹಾಬಲ |
ನಾರಾಯಣಂ ಹೃಷೀಕೇಶಂ ಸಹಮಾನೋಽನಿಶಂ ಹರಿಮ್ |
ಜಾನಾಸಿ ತಂ ಯಥಾ ವಕ್ತುಂ ಯಾದೃಗ್ಭೂತೋ ಜನಾರ್ದನಃ |
ಮಮಾಪಿ ತಸ್ಯ ಸದ್ಭಾವಂ ವಕ್ತುಮರ್ಹಸಿ ಸತ್ತಮ ॥ 10 ॥
ಓ ಮಹಾವೀರನಾದ ಬಲಿಷ್ಠನಾದ ಗರುಡದೇವನೇ, ನೀನು ನಿರಂತರವೂ ನಾರಾಯಣನನ್ನೂ ಹೃಷೀಕೇಶನನ್ನು ನಿನ್ನ ಬೆನ್ನಿನ ಮೇಲೆ ಹೊತ್ತು ಸಂಚರಿಸುತ್ತಿರುವಿ. ಅವನು ಎಂತಹವನು ಎಂಬ ತತ್ತ್ವವು ಎಲ್ಲರಿಗಿಂತಲೂ ಅಧಿಕವಾಗಿ ನಿನಗೆ ತಿಳಿದಿರುತ್ತದೆ. ಅವನ ಮಹಿಮೆಯನ್ನು ನೀನು ನನಗೂ ತಿಳಿಸಬೇಕು ಎಂದು ಕೇಳಿದೆನು.
ಗರುಡಃ
ಶೃಣು ಭೀಷ್ಮ ಯಥಾನ್ಯಾಯಂ ಪುರಾ ತ್ವಮಿಹ ಸತ್ತಮಾಃ |
ಅನೇಕೇ ಮುನಯಃ ಸಿದ್ಧಾ ಮಾನಸೋತ್ತರವಾಸಿನಃ |
ಸಿದ್ಧಾಸ್ತೇತು ಮಹಾಪ್ರಾಜ್ಞಾ ವಾಸುದೇವಪರಾಯಣಾಃ ॥ 11 ॥
ಪಕ್ಷೀಂದ್ರ ವಾಸುದೇವಸ್ಯ ತತ್ತ್ವಂ ವೇತ್ಸಿ ಪರಂ ಪದಮ್ |
ತ್ವಯಾ ಸಮೋ ನ ತಸ್ಯಾಸ್ತಿ ಸನ್ನಿಕೃಷ್ಟಪ್ರಿಯೋಽಪಿ ಚ ॥ 12 ॥
ಗರುಡ ಭೀಷ್ಮನೇ, ಕೇಳು. ಈಗ ನೀನು ಕೇಳುವಂತೆಯೇ ಮಾನಸೋತ್ತರ ಎಂಬಲ್ಲಿ ವಾಸ ಮಾಡುತ್ತಿದ್ದ ಅನೇಕ ಮಹರ್ಷಿಗಳು, ಸಿದ್ಧರು ವಾಸುದೇವನಲ್ಲೇ ಮನಸ್ಸನ್ನು ನೆಟ್ಟವರಾಗಿ, ನೀನು ಯಾವಾಗಲೂ ಶ್ರೀಹರಿಯ ಸಮೀಪದಲ್ಲಿದ್ದುಕೊಂಡು ಅವನ ಮಹಿಮೆಯನ್ನು ತಿಳಿದುಕೊಂಡಿರುವಿ. ಅವನಿಗೆ ನಿನ್ನಂತೆ ಪ್ರಿಯರಾದವರು ಬೇರೊಬ್ಬರಿಲ್ಲ. ಅವನ ಸ್ವರೂಪವನ್ನು ನೀನು ಚೆನ್ನಾಗಿ ಬಲ್ಲವನಾಗಿರುವಿ. ನಮಗೆ ತಿಳಿಸು ಎಂದು ಕೇಳಿದರು.
ತೇಷಾಮಹಂ ವಚಃ ಶ್ರುತ್ವಾ ಪ್ರಣಿಪತ್ಯ ಮಹಾಹರಿಮ್ |
ಅಬ್ರುವಂ ಚ ಯಥಾವೃತ್ತಂ ಮಮ ನಾರಾಯಣಸ್ಯ ಚ ॥ 13 ॥
ನಾನು ಆ ಮುನೀಂದ್ರರ ಮಾತನ್ನು ಕೇಳಿಸಿಕೊಂಡು, ಶ್ರೀಮನ್ನಾರಾಯಣನನ್ನು ನಮಸ್ಕರಿಸಿ ಶ್ರೀಹರಿಗೂ, ನನಗೂ ನಡೆದ ಒಂದು ಸಂವಾದವನ್ನು ಅವರ ಮುಂದೆ ಹೇಳಿದೆನು.
ಶೃಣುಧ್ವಂ ಮುನಿಶಾರ್ದೂಲಾ ಹತ್ವಾ ಸೋಮಮಹಂ ಪುರಾ |
ಆಕಾಶೇ ಪತಮಾನಸ್ತು ವಾಕ್ಯಂ ತತ್ರ ಶೃಣೋಮಿ ವೈ ॥ 14 ॥
ಮುನಿಶಾರ್ದೂಲರೇ, ಹಿಂದೆ ನಾನು ಅಮೃತವನ್ನು ಅಪಹರಿಸಿಕೊಂಡು ಗರ್ವದಿಂದ ಆಕಾಶದಲ್ಲಿ ಹಾರಿ ಹಿಂದಿರುಗಿ ಬರುತ್ತಿರುವಾಗ ನನಗೊಂದು ಅಶರೀರವಾಣಿಯು ಕಿವಿಯಲ್ಲಿ ಬಿದ್ದಿತು.
ಸಾಧು ಸಾಧು ಮಹಾಬಾಹೋ ಪ್ರೀತೋಽಸ್ಮಿ ತವ ದರ್ಶನಾತ್ |
ವೃಣೀಷ್ವ ವಚನಂ ಮತ್ತಃ ಪಕ್ಷೀಂದ್ರ ಗರುಡಾಧುನಾ ॥ 15 ॥
ಪಕ್ಷೀಂದ್ರನೇ, ಸಾಧು ಸಾಧು (ಒಳ್ಳೆಯದು). ಮಹಾಬಾಹುವೇ, ನಿನ್ನ ದರ್ಶನದಿಂದಲೇ ನನಗೆ ಸಂತೋಷವಾಗಿದೆ. ನಿನ್ನ ಸಾಹಸಕ್ಕೆ ಮೆಚ್ಚಿದ್ದೇನೆ. ಪಕ್ಷೀಂದ್ರನೇ, ಬೇಕಾದ ವರವನ್ನು ಈ ಕ್ಷಣದಲ್ಲಿಯೇ ಕೇಳಿಕೊ.

ತ್ವಾಮಹಂ ಭಕ್ತಿತತ್ವಜ್ಞೋ ಬ್ರುವೈ ವಚನಮುತ್ತಮಮ್ |
ಇತ್ಯಾಹ ಸ್ಮ ಧ್ರುವಂ ತತ್ರ ಮಾಮಾಹ ಭಗವಾನ್ ಪುನಃ ॥ 16 ॥
ನಿನ್ನ ನಿಜವಾದ ಭಕ್ತಿಯನ್ನೇ ತಿಳಿದು ನಾನು ನಿನಗೆ ಹಿತವನ್ನು ಹೇಳುತ್ತಿದ್ದೇನೆ ಎಂಬ ಮಾತು ಕೇಳಿಸಿತು. ನಾನು ಸುಮ್ಮನಿದ್ದಾಗ ಆಗ ಅದೇ ದಿವ್ಯವಾಣಿಯು ಪುನಃ ಕೇಳಿಸಿತು.
ಋಷಿರಸ್ಮಿ ಮಹಾವೀರ್ಯ ನ ಮಾಂ ಜಾನಾತಿ ವಾ ಮಯಿ |
ಅಸೂಯತಿ ಚ ಮಾಂ ಮೂಢ ತಚ್ಛ್ರುತ್ವಾ ಗರ್ವಮಾಸ್ಥಿತಃ ॥ 17 ॥
ಮಹಾವೀರ್ಯವುಳ್ಳ ನಾನು ಋಷಿಯಾಗಿದ್ದೇನೆ. ನನ್ನನ್ನು ನೀನು ಅರ್ಥೈಸಿಕೊಳ್ಳಲಾರೆ. ಮೂಢನಾದ ನೀನು ನನ್ನಲ್ಲಿಯೇ ಮಾತ್ಸರ್ಯಪಡುವಂತಿರುವಿ, ಎಂಬ ಮಾತು ಕೇಳಿಬಂತು. ನಾನು ಆ ಮಾತಿನಿಂದ ಗರ್ವಿತನಾದೆನು.
ಅಹಂ ದೇವನಿಕಾಯಾನಾಂ ಮಧ್ಯೇ ವಚನಮಬ್ರುವಮ್ |
ಋಷೇ ಪೂರ್ವಂ ವರಂ ಮತ್ತಸ್ತ್ವಂ ವೃಣೀಷ್ವ ತತೋ ಹ್ಯಹಮ್ |
ವೃಣೇ ತ್ವತ್ತೋ ವರಂ ಪಶ್ಚಾದಿತ್ಯೇವಂ ಮುನಿಸತ್ತಮಾಃ ॥ 18 ॥
ನಾನು ಆ ದೇವಸಮೂಹದ ನಡುವೆ ದಿವ್ಯರೂಪಿಯನ್ನು ಕುರಿತು- `ಎಲೈ ಮಹರ್ಷಿಯೇ, ಮೊದಲು ಬೇಕಾದರೆ ನೀನು ನನ್ನಿಂದ ವರವನ್ನು ಪಡೆ. ಆಮೇಲೆ ನಾನು ನಿನ್ನಿಂದ ವರವನ್ನು ಪಡೆಯುತ್ತೇನೆ' ಎಂದು ಗರ್ವದಿಂದಲೇ ನುಡಿದೆನು.
ತಸ್ಮಾತ್ತತ್ವಂ ಭಗವಾನ್ ದೇವಃ ಶ್ರೀಮಾನ್ ಶ್ರೀವತ್ಸಲಕ್ಷಣಃ |
ಅದ್ಯ ಪಶ್ಯತಿ ಪಕ್ಷೀಂದ್ರ ವಾಹನಂ ಭವ ಮೇ ಸದಾ |
ವೃಣೇಽಹಂ ವರಮೇತದ್ಧಿ ತ್ವತ್ತೋಽದ್ಯ ಪತಗೇಶ್ವರ ॥ 19 ॥
ಆ ಸಮಯದಲ್ಲಿ ಶ್ರೀವತ್ಸಾಂಕಿತನಾದ ಭಗವಂತನು ಪ್ರತ್ಯಕ್ಷನಾಗಿ `ಪಕ್ಷಿರಾಜನೇ, ನೀನು ನನಗೆ ವರವನ್ನು ಕೊಡುವುದಾದರೆ ನನ್ನ ವಾಹನನಾಗಿರಬೇಕು' ಎಂದು ಹೇಳುತ್ತಾ `ನನಗೆ ಇನ್ನೂ ವರವನ್ನು ನೀನು ನೀಡಬೇಕು' ಎಂದನು.
ತಥೇತಿ ತಂ ವೀಕ್ಷ್ಯ ಮಾತಾಮಾನಹಂಕಾರಮಾಸ್ಥಿತಮ್ |
ಜೇತುಕಾಮೋ ಹ್ಯಹಂ ವಿಷ್ಣುಂ ಮಾಯಯಾ ಮಾಯಿನಂ ಹರಿಮ್ ॥
ನಾನು ಹಾಗೆಯೇ ಆಗಲಿ ಎಂದು ಹೇಳಿದೆನು. ಆದರೆ ಮಾಯಾವಿಯಾದ ಭಗವಂತನನ್ನು ಜಯಿಸಬೇಕೆಂಬ ಅಹಂಕಾರದಿಂದ ಅವನನ್ನು ಕುರಿತು ನಾನು ಹೀಗೆ ಹೇಳಿದ್ದೆನು.
ತ್ವತ್ತೋ ಹ್ಯಹಂ ವೃಣೇ ತ್ವದ್ಯ ವರಂ ಋಷಿವರೋತ್ತಮಮ್ |
ತವೋಪರಿಷ್ಟಾತ್ ಸ್ಥಾಸ್ಯಾಮಿ ವರಮೇತತ್ ಪ್ರಯಚ್ಛ ಮೇ ॥ 21 ॥
ಋಷಿವರೋತ್ತಮನೇ, ನಾನು ನಿನ್ನಿಂದಲೂ ಒಂದು ವರವನ್ನು ಪಡೆಯಲು ಬಯಸುತ್ತೇನೆ. ನಾನು ಯಾವಾಗಲೂ ನಿನ್ನ ಮೇಲೆಯೇ ಕುಳಿತುಕೊಳ್ಳಬೇಕು. ಇಂತಹ ವರವನ್ನು ಕೇಳಿದೆನು.
ತಥೇತಿ ಚ ಹಸನ್ ಪ್ರಾಹ ಹರಿರ್ನಾರಾಯಣಃ ಪ್ರಭುಃ |
ಧ್ವಜಂ ಚ ಮೇ ಭವ ಸದಾ ತ್ವಮೇವ ವಿಹಗೇಶ್ವರ |
ಉಪರಿಷ್ಟಾತ್ ಸ್ಥಿತಿಸ್ತೇಽಸ್ತು ಮಮ ಪಕ್ಷೀಂದ್ರ ಸರ್ವದಾ ॥ 22 ॥
ಮಹಾವಿಷ್ಣುವು ನಸುನಗುತ್ತಾ ಹಾಗೆಯೇ ಆಗಲಿ. ನೀನು ನನ್ನ ಧ್ವಜದ ಚಿಹ್ನೆಯಾಗಿ ನನ್ನ ಮೇಲೆಯೇ ಕಾಣಿಸುತ್ತಿರು ಎಂದನು.
ಇತ್ಯುಕ್ತತ್ವ ಭಗವಾನ್ ದೇವಃ ಶಂಖಚಕ್ರಗದಾಧರಃ |
ಸಹಸ್ರಚರಣಃ ಶ್ರೀಮಾನ್ ಸಹಸ್ರಾದಿತ್ಯಸನ್ನಿಭಃ ॥ 23 ॥
ಈ ರೀತಿಯಾಗಿ ಹೇಳಿದ ಬಳಿಕ ಮಹಾತ್ಮನಾದ ಭಗವಂತನು ಕ್ಷಣಕಾಲ ನಾಲ್ಕು ತೋಳುಗಳ ಜೊತೆಗೆ ಶಂಖಚಕ್ರಗದಾಧರನಾಗಿ ನನಗೆ ಕಾಣಿಸಿಕೊಂಡನು. ಹೊಳೆಯುವ ಸೂರ್ಯಸದೃಶವಾದ ಕಾಂತಿಯುಳ್ಳವನಾಗಿದ್ದನು.
ಸಹಸ್ರಶೀರ್ಷಾ ಪುರುಷಃ ಸಹಸ್ರನಯನೋ ಮಹಾನ್ |
ಸಹಸ್ರಮುಕುಟೋಽಚಿಂತ್ಯಃ ಸಹಸ್ರವದನೋ ವಿಭುಃ ॥ 24 ॥
ವಿದ್ಯುನ್ಮಾಲಾನಿಭೈರ್ದಿವ್ಯೈರ್ನಾನಾಭರಣರಾಜಿಭಿಃ |
ಕ್ವಚಿತ್ ಸಂದೃಶ್ಯಮಾನಸ್ತು ಚತುರ್ಬಾಹುಃ ಕ್ವಚಿದ್ಧರಿಃ ॥ 25 ॥
ಸಹಸ್ರಶೀರ್ಷನೂ, ಸಹಸ್ರನಯನನೂ, ಸಹಸ್ರಮಕುಟನೂ, ಅಚಿಂತ್ಯನೂ, ಸಹಸ್ರವದನನೂ, ಸರ್ವಸಮರ್ಥನೂ, ಮಿಂಚಿನಂತೆ ಹೊಳೆಯುವ ಮಾಲೆಗಳಿಂದ ಕಂಗೊಳಿಸುವವನೂ, ದಿವ್ಯವಾದ ನಾನಾಭರಣಗಳಿಂದ ಹೊಳೆಯುವವನೂ, ಹೀಗೆ ಥಳಥಳಿಸುವ ರೂಪದಿಂದ ಕೆಲವೊಮ್ಮೆ ಕಾಣಿಸಿದನು. ಕೆಲವೊಮ್ಮೆ ಚತುರ್ಬಾಹುವಾಗಿ ಕಂಗೊಳಿಸಿದನು.
ಕ್ವಚಿಜ್ಜ್ಯೋತಿರ್ಮಯೋಽಚಿಂತ್ಯಃ ಕ್ವಚಿತ್ ಸ್ಕಂಧೇ ಸಮಾಹಿತಃ |
ಏವಂ ಮಮ ಜಯನ್ ದೇವಸ್ತತ್ರೈವಾಂತರಧೀಯತ ॥ 26 ॥
ಕೆಲವೊಮ್ಮೆ ಜ್ಯೋತಿರ್ಮಯನಾಗಿ, ಅಚಿಂತ್ಯನಾಗಿ, ಕೆಲವೊಮ್ಮೆ ನನ್ನ ಬೆನ್ನಿನ ಮೇಲೆ ಕುಳಿತಂತೆ, ಈ ರೀತಿಯಾಗಿ ಹಲವು ಬಗೆಯಾಗಿ ನನ್ನ ಜಯಿಸುತ್ತಾ ಅಲ್ಲಿಯೇ ಅಂತರ್ಧಾನ ಹೊಂದಿದನು.
ತತೋಽಹಂ ವಿಸ್ಮಯಾಪನ್ನಃ ಕೃತ್ವಾ ಕಾರ್ಯಮನುತ್ತಮಮ್ |
ಅಸ್ಯಾ ವಿಮುಚ್ಯಜನನೀಂ ಮಯಾ ಸಹ ಮುನೀಶ್ವರಾಃ ॥ 27 ॥
ಇದನ್ನೆಲ್ಲ ನೋಡಿ ಆಶ್ಚರ್ಯವಶನಾಗಿ ನಾನು ಅಲ್ಲಿಂದ ಹೊರಟೆನು. ಬಳಿಕ ಅಮೃತಾಪಹರಣದಿಂದ ನನ್ನ ತಾಯಿಯಾದ ವಿನತೆಯನ್ನೂ, ನನ್ನನ್ನು ಕದ್ರುವಿನ ಸೆರೆಯಿಂದ ಬಿಡಿಸಿಕೊಂಡೆನು.
ಅಚಿಂತ್ಯೋಽಯಮಹಂ ಭೂಯಃ ಕೋಽಸೌ ಮಾಮಬ್ರವೀತ್ಪುರಾ |

ಕೀದೃಗ್ವಿಧಃ ಸ ಭಗವಾನಿತಿ ಮತ್ವಾ ತಮಾಸ್ಥಿತಃ ॥ 28 ॥
ಆದರೆ ನನ್ನ ಮನಸ್ಸಿನಲ್ಲಿ ಅಚಿಂತ್ಯಮಹಿಮನಾದ ಆ ವ್ಯಕ್ತಿಯು ಯಾರು? ಆ ಭಗವಂತನು ಹೇಗಿದ್ದಾನೆ? ನನ್ನನ್ನು ಮಾತನಾಡಿಸಿದವನು ಯಾರು? ಈ ರೀತಿಯಾಗಿ ಜಿಜ್ಞಾಸೆಯ ಆತುರತೆಯು ಅಧಿಕವಾಯಿತು.
ಅನಂತರಂ ದೇವದೇವಂ ಸ್ಕಂಧೇ ಮಮ ಸಮಾಶ್ರಿತಮ್ |
ಅದ್ರಾಕ್ಷಂ ಪುಂಡರೀಕಾಕ್ಷಂ ವಹಮಾನೋಽಹಮದ್ಭುತಮ್ ॥ 29 ॥
ಅವಶಸ್ತಸ್ಯ ಭಾವೇನ ಯತ್ರ ಯತ್ರ ಸ ಚೇಚ್ಛತಿ |
ವಿಸ್ಮಯಾಪನ್ನಹೃದಯೋ ಹ್ಯಹಂ ಕಿಮಿತಿ ಚಿಂತಯನ್ |
ಅಂತರ್ಜಲಮಹಂ ಸರ್ವಂ ವಹಮಾನೋಽಗಮಂ ಪುನಃ ॥ 30 ॥
ಇಷ್ಟರಲ್ಲಿ ಅದೇ ದಿವ್ಯಪುರುಷಾಕೃತಿಯು ನನ್ನ ಬೆನ್ನಿನ ಮೇಲೆಯೇ ಏರಿ ಕುಳಿತಿರುವುದನ್ನು ಕಂಡೆನು. ಪುಂಡರೀಕಾಕ್ಷನಾದ ಮಹಾಪುರುಷನನ್ನು ನೋಡಿ, ಅದ್ಭುತವಾದ ಅವನ ರೂಪವನ್ನು ಹೊತ್ತುಕೊಂಡಿರುವನಾದ ನಾನು ಪರವಶನಾದೆನು. ಆ ಮಹಾತ್ಮನು ಎಲ್ಲೆಲ್ಲಿಗೆ ಹೋಗಬೇಕೆಂದು ಅಪೇಕ್ಷಿಸುತ್ತಾನೋ ಅವನನ್ನು ಆಯಾ ದಿಕ್ಕುಗಳಿಗೆ ಹೊತ್ತುಕೊಂಡು ಅವನ ಅಧೀನನಾಗಿಯೇ ಪರವಶನಾಗಿ ಸಂಚರಿಸುತ್ತಿದ್ದೆನು. ಆ ಪರಮಪುರುಷನನ್ನು ಹೊತ್ತುಕೊಂಡು ಸಮುದ್ರದ ಜಲದೊಳಗೆಯೂ ಪ್ರವೇಶಿಸಿದೆನು.
ಸೇಂದ್ರೈರ್ದೇವೈರ್ಮಹಾಭಾಗೈರ್ಬ್ರಹ್ಮಾದ್ಯೈಃ ಕಲ್ಪಜೀವಿಭಿಃ |
ಸ್ತೂಯಮಾನೋ ಹ್ಯಹಮಪಿ ತೈಸ್ತೈರಭ್ಯರ್ಚಿತಃ ಪೃಥಕ್ ॥ 31 ॥
ಕ್ಷೀರೋದಸ್ಯೋತ್ತರೇ ಕೂಲೇ ದಿವ್ಯೇ ಮಣಿಮಯೇ ಶುಭೇ |
ವೈಕರ್ಣನಾಭ ಸದನಂ ಹರೇಸ್ತಸ್ಯ ಮಹಾತ್ಮನಃ ॥ 32 ॥
ಇಂದ್ರಾದಿ ದೇವತಾ ಪರಿವಾರದ ಮತ್ತು ಬ್ರಹ್ಮಾದಿಗಳ ಸ್ತೋತ್ರಕ್ಕೂ ಪಾತ್ರನಾದ, ಕಲ್ಪಾಂತದವರೆಗೆ ಜೀವಿಸುವಂತಹ ಇಂತಹ ಮಹಾಮಹಿಮರಿಂದ ಪೂಜಾಪಾತ್ರನಾದ ಅವರವರಿಂದ ಪ್ರತ್ಯೇಕವಾಗಿ ಪೂಜಿಸಲ್ಪಡುತ್ತಿರುವ ಭಗವಂತನನ್ನು ಹೊತ್ತುಕೊಂಡು ಕ್ಷೀರಸಮುದ್ರದ ಉತ್ತರದ ತೀರದಲ್ಲಿರುವ ತೇಜೋಮಯವಾದ ಒಂದು ದಿವ್ಯ ಭವನದ ಕಡೆಗೆ ಸಾಗಿದೆನು. ಆ ದಿವ್ಯಮಂದಿರವು ಮಣಿಮಯವಾಗಿತ್ತು. ಭಗವಂತನ ವೈಕರ್ಣ ಎಂಬ ಹೆಸರಿನ ಅರಮನೆಯೇ ಅದಾಗಿತ್ತು.
ದಿವ್ಯಂ ತೇಜೋಮಯಂ ಶ್ರೀಮದಚಿಂತ್ಯಮಮರೈರಪಿ |
ತೇಜೋಽನಿಲಮಯೈಃ ಸ್ತಂಭೈರ್ನಾನಾಸಂಸ್ಥಾನಸಂಸ್ಥಿತೈಃ ॥ 33 ॥
ವಿಭೂಷಿತಂ ಹಿರಣ್ಮಯೇನ ಭಾಸ್ವರೇಣ ಸಮಂತತಃ |
ದಿವ್ಯಂ ಜ್ಯೋತಿಃಸಮಾಯುಕ್ತಂ ಗೀತವಾದಿತ್ರಶೋಭಿತಮ್ ॥ 34 ॥
ದೇವತೆಗಳಿಂದಲೂ ಅಚಿಂತ್ಯವಾದ ವಿವಿಧ ಸನ್ನಿವೇಶಗಳಿಂದ ಕೂಡಿದ ವಾಯು ಮತ್ತು ತೇಜೋಮಯವಾದ ಸ್ತಂಭಗಳಿಂದ ಕೂಡಿರುವ ನೂರಾರು ಸುವರ್ಣಾಲಂಕಾರಗಳಿಂದ ಹೊಳೆಯುತ್ತಿರುವ, ಕಣ್ಣನ್ನು ಕೋರೈಸುವಂತೆ ದಿವ್ಯ ತೇಜಸ್ಸಿನಿಂದ ಕೂಡಿರುವ, ಕಿವಿಗಿಂಪಾದ ಗೀತ-ವಾದ್ಯಗಳಿಂದ ಶೋಭಿತವಾಗಿರುವ ಅರಮನೆಯನ್ನು ಕಂಡೆನು.
ಶೃಣೋಮಿ ಶಬ್ದಂ ತತ್ರಾಹಂ ನ ಪಶ್ಯಾಮಿ ಶರೀರಿಣಮ್ |
ನ ಚ ಸ್ಥಲಂ ನ ಚಾನ್ಯಚ್ಚ ಪಾದಯೋಸ್ತಂ ಸಮಂತತಃ ॥ 35 ॥
ಆದರೆ ಅಲ್ಲಿ ಕೇವಲ ಧ್ವನಿ ಮಾತ್ರ ಕೇಳಿಸುತ್ತಿತ್ತೇ ವಿನಾ ಒಂದು ಪ್ರಾಣಿಯಾಗಲೀ, ನೆಲಗಟ್ಟಾಗಲೀ, ಹೆಜ್ಜೆಯ ಚಿಹ್ನೆಯಾಗಲೀ, ಹೆಜ್ಜೆಯ ಗುರುತಾಗಲೀ ನನಗೆ ತಿಳಿಯಲಿಲ್ಲ. ಈ ಸನ್ನಿವೇಶದಿಂದ ಭಯದಿಂದ ನಡುಗುತ್ತಾ ಬದ್ಧಾಂಜಲಿಯಾಗಿ ಸುಮ್ಮನೆ ನಿಂತೆನು.
ತತೋ ಬ್ರಹ್ಮಾದಯೋ ದೇವಾ ಲೋಕಪಾಲಾಸ್ತಥೈವ ಚ |
ಸನಂದನಾದ್ಯಾ ಮುನಯಸ್ತಥಾಽನ್ಯೇ ಪರಜೀವಿನಃ ॥ 36 ॥
ಪ್ರಾಪ್ತಾಸ್ತತ್ರ ಸಭಾದ್ವಾರಿ ದೇವಗಂಧರ್ವಸತ್ತಮಾಃ |
ಬ್ರಹ್ಮಾಣಂ ಪರತಃ ಕೃತ್ವಾ ಕೃತಾಂಜಲಿಪುಟಾಸ್ತದಾ ॥ 37 ॥
ಇಷ್ಟರಲ್ಲಿ ಬ್ರಹ್ಮದೇವರನ್ನು ಮುಂದಿಟ್ಟುಕೊಂಡು ಸಮಸ್ತ ದೇವತೆಗಳು, ಲೋಕಪಾಲಕರು, ಸನಕ-ಸನಂದನಾದಿ ಮುನಿಗಳು, ದೇವ-ಗಂಧರ್ವಶ್ರೇಷ್ಠರೂ ಆ ಸಭಾದ್ವಾರಕ್ಕೆ ಬಂದು ಸೇರಿ ಕೃತಾಂಜಲಿಪುಟರಾಗಿ ಭಗವಂತನ ಮುಂದೆ ನಿಂತರು.
ತತಸ್ತದಂತರೇ ತಸ್ಮಿನ್ ಕ್ಷೀರೋದಾರ್ಣವಶೀಕರೈಃ |
ಬೋಧ್ಯಮಾನೋ ಮಹಾವಿಷ್ಣುರಾವಿರ್ಭೂತ ಇವಾಬಭೌ ॥ 38 ॥
ಅದೇ ಸಮಯಕ್ಕೆ ಸರಿಯಾಗಿ ಕ್ಷೀರಸಮುದ್ರದ ಅಲೆಗಳ ತುಂತುರುಗಳಿಂದ ಎಚ್ಚರಗೊಂಡಂತೆ ನಾರಾಯಣನು ಅಲ್ಲೇ ಮೇಲೆದ್ದು ಕಾಣಿಸಿದನು.
ಫಣಾಸಹಸ್ರಲೋಲಾಢ್ಯಂ ಶೇಷಮವ್ಯಕ್ತಸಂಸ್ಥಿತಮ್ |
ಪಶ್ಯಾಮ್ಯಹಂ ಮುದಾಽಽಕಾಶೇ ಯಸ್ಯೋಪರಿ ಜನಾರ್ದನಮ್ ॥
ದೀರ್ಘವೃತ್ತೈಃ ಸಮೈಃ ಪೀನೈಃ ಕೇಯೂರವಲಯೋಜ್ಜ್ವಲೈಃ |
ಚತುರ್ಭಿರ್ಬಾಹುಭಿರ್ಯುಕ್ತಂ ಲಕ್ಷ್ಮ್ಯಾಲಿಂಗಿತವಕ್ಷಸಮ್ ॥ 40 ॥
ಪೀತಾಂಬರೇಣ ಸಂವೀತಂ ಕೌಸ್ತುಭೇನ ವಿರಾಜಿತಮ್ |
ವಕ್ಷಃಸ್ಥಲೇನ ಸಂಯುಕ್ತಂ ಪದ್ಮಯಾಽಧಿಷ್ಠಿತೇನ ಚ ॥ 41 ॥
ಈಷದುನ್ಮೀಲಿತಾಕ್ಷಂ ತಂ ಸರ್ವಕಾರಣಕಾರಣಮ್ |
ಕ್ಷೀರೋದಸ್ಯೋಪರಿ ಬಭೌ ನೀಲಾಭ್ರಂ ಪರಮಂ ಯಥಾ ॥ 42 ॥

ಸಹಸ್ರಹೆಡೆಗಳಿಂದ ಶೋಭಿಸುತ್ತಿದ್ದರೂ ಭಗವಂತನ ದಿವ್ಯತೇಜಸ್ಸಿನಲ್ಲಿ ಅವ್ಯಕ್ತನಾಗಿಯೇ ತೋರುತ್ತಿದ್ದ ಆದಿಶೇಷನ ಮೇಲೆ ದುಂಡಗಿರುವ, ಸಮವಾದ, ಕೇಯೂರ, ಕಂಕಣಗಳಿಂದ ಅಲಂಕೃತವಾದ ನಾಲ್ಕು ತೋಳುಗಳು, ಲಕ್ಷ್ಮೀದೇವಿಯಿಂದ ಅಲಂಕೃತವಾದ ವಕ್ಷಸ್ಸ್ಥಲವು ಹೀಗೆ ಶೋಭಾಯಮಾನನಾದ ಜನಾರ್ದನನು ಅರೆಬಿರಿದ ಕಣ್ಣುಗಳಿಂದ ಮಲಗಿರುವ ದೃಶ್ಯವನ್ನು ಕಂಡೆನು. ಪೀತಾಂಬರ, ಕೌಸ್ತುಭಾದ್ಯಾಭರಣಗಳಿಂದ ಅಲಂಕೃತನಾಗಿದ್ದನು. ಹೀಗೆ ಸಮುದ್ರದ ಮೇಲೆ ನೀಲಮೇಘದಂತೆ ಶೋಭಿಸುತ್ತಿದ್ದನು.
ನ ಕಶ್ಚಿದ್ವದತೇ ಕಶ್ಚಿನ್ನ ವ್ಯಾಹರತಿ ಕಶ್ಚನ |
ಬ್ರಹ್ಮಾದಿಸ್ತಂಭಪರ್ಯಂತಂ ಮಾಶಬ್ದಮಿತಿ ರೋಷಿತಮ್ |
ಭ್ರುಕುಟೀಕುಟಿಲಾಕ್ಷಾಸ್ತೇ ನಾನಾಭೂತಗಣಾಃ ಸ್ಥಿತಾಃ ॥ 43 ॥
ಆ ಮಹಾವಿಷ್ಣುವನ್ನು ಕಂಡು ಆನಂದ, ಆಶ್ಚರ್ಯಗಳಿಂದ ಮೈಮರೆತೆನು. ನಾನೇನು, ಅಲ್ಲಿ ಮೆರೆದಿರುವ ಬ್ರಹ್ಮಾದಿ ದೇವಗಣಗಳಲ್ಲಿ ಒಬ್ಬರೂ ಮಾತನಾಡಲಿಲ್ಲ. ಪರಸ್ಪರ ಸಂಭಾಷಣೆ ಇಲ್ಲ. ಅಲ್ಲಿ ಹುಬ್ಬುಗಂಟುಗಳಿಂದ ಭಯಂಕರ ಆಕಾರವುಳ್ಳ ಅನೇಕ ಬಗೆಯ ಭೂತಗಣಗಳು ವಕ್ರದೃಷ್ಟಿಯಿಂದ ನೋಡುತ್ತಾ ಬ್ರಹ್ಮಾದಿ ಸ್ತಂಭಪರ್ಯಂತವಾಗಿ ಬ್ರಹ್ಮಾದಿ ಸಮಸ್ತ ದೇವತೆಗಳ ಗುಂಪನ್ನು `ಸದ್ದು-ಸದ್ದು' ಎಂದು ಎಚ್ಚರಿಸುತ್ತಿದ್ದವು.
ತತೋಽಚಿಂತ್ಯೋ ಹರಿಃ ಶ್ರೀಮಾನಾಲೋಕ್ಯ ಚ ಪಿತಾಮಹಮ್ |
ಕೃತ್ವಾ ಚ ಪ್ರಸ್ಥಿತಂ ತತ್ರ ಜಗತಾಂ ಹಿತಕಾಮ್ಯಯಾ ॥ 44 ॥
ಬಳಿಕ ಮಹಾವಿಷ್ಣುವು ಬ್ರಹ್ಮದೇವನನ್ನು ನೋಡಿ, ಲೋಕಹಿತಕ್ಕಾಗಿ ನೀವಿನ್ನು ಹೋಗಬಹುದು ಎಂದು ದೇವಸಮೂಹವನ್ನು ಕಳುಹಿಸಿಕೊಟ್ಟನು. ಬಳಿಕ ನನ್ನ ಕಡೆ ನೋಡಿ ಗರುಡ ಎಂದು ಕರೆದನು.
ತತೋಽಹಂ ಪ್ರಣಿಪತ್ಯಾಗ್ರೇ ಕೃತಾಂಜಲಿರವಸ್ಥಿತಃ |
ಆಗಚ್ಛೇತಿ ಚ ಮಾಮುಕ್ತ್ವಾ ಪೂರ್ವೋತ್ತರಪಥಂ ಗತಃ ॥ 45 ॥
ನಾನು ಮಹಾಭಯದಿಂದ ಮುಂದೆ ಹೋಗಿ ಕೈಜೋಡಿಸಿಕೊಂಡು ನಿಂತೆನು. ಅವನು ನನ್ನನ್ನು ಕುರಿತು ನೀನು ನನ್ನೊಡನೆ ಬಾ ಎಂದು ಹೇಳಿ ಪೂರ್ವೋತ್ತರ ದಿಕ್ಕಿನೆಡೆಗೆ ಹೊರಟನು.
ಅತೀವ ಮೃದುಭಾವೇನ ಗಚ್ಛನ್ನಿವ ಸ ದೃಶ್ಯತೇ |
ಅಯುತಂ ನಿಯುತಂ ಚಾಹಂ ಪ್ರಯುತಂ ಚಾರ್ಬುದಂ ತಥಾ |
ಪತಮಾನೋಽಹಮನಿಶಂ ಯೋಜನಾನಿ ತತಸ್ತತಃ ॥ 46 ॥
ಪ್ರಯಾಣದಲ್ಲಿ ಅವನು ಬಹಳ ಮೆಲ್ಲಗೆ ನಡೆಯುವಂತೆ ತೋರಿತು. ಅವನನ್ನು ಹಿಂಬಾಲಿಸಿ ಹೋಗುತ್ತಿದ್ದ ನನಗಾದರೂ ಎಷ್ಟು ದೂರ ನಡೆದರೂ ತೀರದಂತೆ ಅಯುತ, ನಿಯುತ, ಪ್ರಯುತ, ಅರ್ಬುದ ಸಂಖ್ಯೆಯ ಅರ್ಥಾತ್ ಲಕ್ಷೋಪಲಕ್ಷ ಕೋಟಿ ಸಂಖ್ಯೆಯ ಯೋಜನಗಳು ಸಾಗಿದವು. ನನಗೆ ಮುಂದೆ ಹೋಗಲು ಸಾಧ್ಯವಿಲ್ಲದಂತೆ ತೋರಿತು. ಮುಂದೆ ಮುಂದೆ ಮುಗ್ಗರಿಸಿ ಬೀಳುವಂತಹ ಸ್ಥಿತಿಯು ಬಂದಿತು.
ನನು ತತ್ವಮಹಂ ಭಕ್ತೋ ವಿಷ್ಮಿತೋಽಸ್ಮಿ ಪ್ರಶಾಸ್ತು ನಃ |
ಆಗಚ್ಛ ಗರುಡೇತ್ಯೇವಂ ಪುನರಾಹ ಸ ಮಾಧವಃ ॥ 47 ॥
ಭಗವಂತನೇ, ನಾನು ನಿನ್ನ ಭಕ್ತನಾಗಿದ್ದೇನೆ. ನನಗೆ ಆಯಾಸವಾಗಿದೆ. ನನ್ನನ್ನು ರಕ್ಷಿಸು ಎಂದು ಬೊಬ್ಬೆ ಹೊಡೆದೆನು. ಆಗ ಮಾಧವನು ಗರುಡ, ನನ್ನ ಜೊತೆ ಬಾ ಎಂದು ಪುನಃ ಕರೆದನು.
ತತೋ ಭೂಯೋ ಹ್ಯಹಂ ಪಾತಂ ಪತಮಾನೋ ವಿಹಾಯಸಮ್ |
ಆಜಗಾಮ ತತೋ ಘೋರಂ ಶತಕೋಟಿಸಮಾವೃತಮ್ ॥ 48 ॥
ಪುನಃ ನಾನು ಹೊಸ ಶಕ್ತಿ ಬಂದಂತೆ ವೇಗದಿಂದ ಆಕಾಶಕ್ಕೆ ಹಾರಿ ಅವನನ್ನೇ ಹಿಂಬಾಲಿಸಿ ಹೊರಟೆನು. ಹಾಗೆ ಹೋಗುವಾಗ ನೂರಾರು ಕೋಟಿ ಯೋಜನಗಳಿಂದ ತುಂಬಿದ ಭಯಂಕರವಾದ ಸ್ಥಳವೊಂದು ಕಾಣಿಸಿತು.
ತಾಮಸಾನೀವ ಭೂತಾನಿ ಪರ್ವತಾಭಾನಿ ತತ್ರ ಹ |
ಸಮಾನಾನೀವ ಪದ್ಮಾನಿ ತತೋಽಹಂ ಭೀತ ಆಸ್ಥಿತಃ ॥ 49 ॥
ನೂರುಕೋಟಿ ಯೋಜನವನ್ನಾವರಿಸಿದ ಆ ಸ್ಥಳದಲ್ಲಿ ಅಂಧಕಾರ ಸ್ವರೂಪಗಳಾಗಿ ಬೆಟ್ಟದಂತೆ ಎತ್ತರವಾಗಿ, ಒಂದೇ ಸಮಾನ ಆಕಾರವುಳ್ಳ ಪದ್ಮಸಂಖ್ಯೆಯ ಭೂತಗಣಗಳನ್ನು ನೋಡಿದೆನು. ನೋಡಿದ ಕೂಡಲೇ ಹೃದಯದಲ್ಲಿ ನನಗೆ ಭಯವುಂಟಾಯಿತು.
ತತೋ ಮಾಂ ಕಿಂಕರೋ ಘೋರಃ ಶತಯೋಜನಮಾಯತಮ್ |
ನಿಗೃಹ್ಯ ಪಾಣಿನಾ ತಸ್ಮಾಚ್ಚಿಕ್ಷೇಪ ಚ ಸ ಲೋಷ್ಟವತ್ ॥ 50 ॥
ನಾನು ಭಯಪಡುತ್ತಿರುವಾಗಲೇ ಆ ಭೂತಗಣಗಳಿಂದ ಘೋರರೂಪಿಯಾದ ಕಿಂಕರನೊಬ್ಬನು ಬಂದು ಶತಯೋಜನಗಳ ವಿಸ್ತಾರವುಳ್ಳ ನನ್ನನ್ನು ಕೈಯಿಂದ ಹಿಡಿದೆತ್ತಿ ಮಣ್ಣುಂಡೆಯನ್ನು ಹೇಗೋ ಹಾಗೆ ದೂರಕ್ಕೆ ಎಸೆದುಬಿಟ್ಟನು.
ತತ್ತಮೋಽಹಮತಿಕ್ರಮ್ಯ ಹ್ಯಾಪಂ ಚೈವ ವಿಹಾಯಸಮ್ |
ಹುಂಕಾರಘೋಷಂ ತತ್ರಾಹಮಶನೀಪಾತಸನ್ನಿಭಾನ್ |
ಕರ್ಣಮೂಲೇ ಹ್ಯಶೃಣ್ವಂತಸ್ತತೋ ಭೂತ್ಯೈಃ ಸಮಾಸ್ಥಿತಃ ॥ 51 ॥
ತತೋಽಹಂ ದೇವದೇವೇಶ ತ್ರಾಹಿ ಮಾಂ ಪುಷ್ಕರೇಕ್ಷಣ |
ಇತ್ಯಬ್ರುವಮಹಂ ತತ್ರ ತತೋ ವಿಷ್ಣುರುವಾಚ ಮಾಮ್ ॥ 52 ॥
ನಾನು ಆ ಅಂಧಕಾರಪ್ರದೇಶದಿಂದ ಹೊರಗೆ ಹೋಗಿ ಅವನು ಎಸೆದ ವೇಗದಿಂದ ಅಂತರಿಕ್ಷಮಾರ್ಗದಲ್ಲಿದ್ದೆನು. ಇಷ್ಟರಲ್ಲಿ ಸಿಡಿಲಿನಂತೆ ಮಹಾಘೋರವಾದ ಹೂಂಕಾರದ ಘೋಷವೊಂದು ನನ್ನ ಕಿವಿಗೆ ಅಪ್ಪಳಿಸಿತು. ಇದೇನೆಂದು ದಿಗ್ಭ್ರಾಂತವಾಗಿ ನೋಡುತ್ತಿರುವಾಗಲೇ ದೇವದೇವೇಶನೇ, ಪುಷ್ಕರೇಕ್ಷಣನೇ, ನನ್ನನ್ನು ರಕ್ಷಿಸು ಎಂದು ಬೊಬ್ಬೆ ಹೊಡೆದೆನು. ಬಳಿಕ ವಿಷ್ಣುವು ನನ್ನನ್ನು ಕುರಿತು ಹೀಗೆ

ಹೇಳಿದನು.
ಸುಷಿರಸ್ಯ ಮುಖೇ ಕಶ್ಚಿನ್ಮಾಂ ಚಿಕ್ಷೇಪ ಭಯಂಕರಃ |
ಅತೀತೋಽಹಂ ಕ್ಷಣಾದಗ್ನಿಮಪಶ್ಯಂ ವಾಯುಮಂಡಲಮ್ ॥ 53 ॥
ವಿಷ್ಣುವು ನನ್ನನ್ನು ಸಮಾಧಾನಪಡಿಸುತ್ತಿರುವ ಪ್ರಸಂಗದಲ್ಲಿಯೇ ಭಯಂಕರ ಪುರುಷನೊಬ್ಬನು ನನ್ನನ್ನು ಹಿಡಿದೆತ್ತಿ ಒಂದು ದೊಡ್ಡ ಗುಹೆಯ ಬಾಗಿಲಿನ ಕಡೆ ಬಿಸಾಡಿದನು. ಆಮೇಲೆ ಒಂದು ಕ್ಷಣದಲ್ಲಿಯೇ ನಾನು ಅಗ್ನಿಮಂಡಲವನ್ನು ದಾಟಿ ವಾಯುಮಂಡಲವನ್ನು ಸೇರಿದೆನು.
ಆಕಾಶಮಿವ ಸಂಪ್ರೇಕ್ಷ್ಯ ಕ್ಷೇಪ್ತುಕಾಮಮುಪಾಗತಃ |
ತತ್ರಾಹಂ ದುಃಖಿತೋ ಭೂತಃ ಕೋಶಮಾನೋ ಹ್ಯವಸ್ಥಿತಃ ॥ 54 ॥
ಅಲ್ಲಿಯೂ ಒಬ್ಬನು ಆಗಮಿಸಿ ನನ್ನನ್ನು ಹಿಡಿದೆತ್ತಿ ಆಕಾಶಕ್ಕೇ ಒಗೆಯುವ ದೃಷ್ಟಿಯಿಂದ ಬಂದದ್ದನ್ನು ಕಂಡು ನಾನು ದುಃಖದಿಂದ ಕೂಗಿಕೊಂಡೆನು.
ಕ್ಷಣಾಂತರೇಣ ಘೋರೇಣ ಕ್ರುದ್ಧೋ ಹಿ ಪರಮಾತ್ಮನಾ |
ಸ್ವಪಕ್ಷರಾಜಿನಾ ದೃಷ್ಟ್ವಾ ಮಾಂ ಚಿಕ್ಷೇಪ ಭಯಂಕರಃ ॥ 55 ॥
ಅಷ್ಟರಲ್ಲಿಯೇ ಕ್ಷಣಕಾಲದಲ್ಲಿಯೇ ಸ್ವಭಾವದಿಂದ ಕೋಪಿಷ್ಠನೂ, ಸ್ವಪಕ್ಷದಲ್ಲಿ ಪ್ರಮುಖನೂ ಆದ ಆ ಪುರುಷನು ನನ್ನನ್ನು ಹಿಡಿದು ಎಸೆದುಬಿಟ್ಟನು.
ಅನೇಕ ಗರುಡಕುಲಂ ಸಹಸ್ರಾದಿತ್ಯಸನ್ನಿಭಮ್ |
ಮಾಂ ದೃಷ್ಟ್ವಾಽಪ್ಯಥ ಸಂಸ್ಥೇಽಥ ಹ್ಯಲ್ಪಕಾಲೋಽತಿದುರ್ಬಲಃ ॥ 56 ॥
ಅಹೋ ವಿಹಂಗಮಃ ಪ್ರಾಪ್ತ ಇತಿ ವಿಸ್ಮಯಮಾನಸಾಃ |
ಮಾಂ ದೃಷ್ಟ್ವೋಚುರಹಂ ತತ್ರ ಪಶ್ಯಾಮಿ ಗರುಡಧ್ವಜಮ್ ॥ 57 ॥
ಸಹಸ್ರಯೋಜನಾಯಾಮಂ ಸಹಸ್ರಾದಿತ್ಯವರ್ಚಸಮ್ |
ಸಹಸ್ರಗರುಡಾರೂಢಂ ಗರುಡಾಸ್ತೇ ಮಹಾಬಲಾಃ ॥ 58 ॥
ಬಳಿಕ ನನಗೆ ನಾನು ಬಿದ್ದ ಜಾಗದಲ್ಲಿ ಸಹಸ್ರಸೂರ್ಯಪ್ರಭೆಯುಳ್ಳ ಅನೇಕ ಗರುಡಗಳು ಕಾಣಿಸಿದವು. ಆ ಗರುಡ ಪಕ್ಷಿಗಳೆಲ್ಲ ನನ್ನನ್ನು ನೋಡಿ, ಯಾವುದು ಈ ಸಣ್ಣ ಹಕ್ಕಿ? ಅಲ್ಪಾಯುಷಿಯೂ, ಅತಿದುರ್ಬಲವೂ ಆದ ಹಕ್ಕಿ ಎಲ್ಲಿಂದ ಆಗಮಿಸಿತು? ಎಂದು ವಿಸ್ಮಯದಿಂದ ನೋಡಲು ಬಂದವು. ಇಷ್ಟರಲ್ಲಿಯೇ ಆ ಗರುಡ ಸಮೂಹಗಳ ಹಿಂದೆ ಸಹಸ್ರ ಸೂರ್ಯಸಮಾನನೂ, ಸಹಸ್ರ ಯೋಜನ ಪ್ರಮಾಣವುಳ್ಳವನೂ ಆದ ಸಹಸ್ರ ಗರುಡಗಳ ಮೇಲೆ ಏರಿ ಮೆರೆಯುವವನೂ ಆದ ವಿಷ್ಣುವನ್ನು ಕಂಡೆನು.
ಅತ್ಯಾಶ್ಚರ್ಯಮಿಮಂ ದೇವ ವಪುಷಾಽಸ್ಮತ್ಕುಲೋದ್ಭವಃ |
ಸ್ವಲ್ಪಪ್ರಾಣಃ ಸ್ವಲ್ಪಕಾಯಃ ಕೋಽಸೌ ಪಕ್ಷೀ ಇಹಾಗತಃ ॥ 59 ॥
ಅಲ್ಲಿ ಮಹಾಬಲಿಷ್ಠರಾದ ಕೆಲವು ಮಂದಿ ಗರುಡರು ವಿಷ್ಣುವಿನ ಬಳಿ ಬಂದು ಓ ದೇವನೇ, ಇದೊಂದು ಆಶ್ಚರ್ಯವು. ಈ ಪಕ್ಷಿಯು ರೂಪದಲ್ಲಿ ನಮ್ಮ ಜಾತಿಯಂತೆ ಕಾಣಿಸುತ್ತಿದೆ. ಆದರೆ ಬಲದಿಂದ ಅಲ್ಪವಾಗಿದೆ. ಈ ಪಕ್ಷಿಯು ಎಲ್ಲಿಂದ ಬಂದಿತು? ಎಂದು ಹಾಸ್ಯಪೂರ್ವಕವಾಗಿ ಪ್ರಶ್ನಿಸಿದರು.
ತಚ್ಛ್ರುತ್ವಾಽಹಂ ನಷ್ಟಗರ್ವೋ ಭೀತೋ ಲಜ್ಜಾಸಮನ್ವಿತಃ |
ಸ್ವಯಂ ಬುದ್ಧಶ್ಚ ಸಂವಿಗ್ನಸ್ತತೋ ಹ್ಯಶೃಣವಂ ಪುನಃ ॥ 60 ॥
ಅವರ ಮಾತುಗಳನ್ನು ಕೇಳಿ ನಾನು ನಾಚಿಕೆಯಿಂದ ಗರ್ವವನ್ನು ಪರಿಹರಿಸಿಕೊಂಡು ಹೆದರಿಕೊಂಡು ಲಜ್ಜೆಯಿಂದ ಕೂಡಿದವನಾಗಿ ಭಯದಿಂದ ಕಂಗಾಲಾಗಿ ನಿಂತಿದ್ದೆನು. ಸ್ವಲ್ಪ ಹೊತ್ತಿನಲ್ಲಿಯೇ ನನಗೆ ನಾನೇ ಚೇತರಿಸಿಕೊಂಡು ಭಯದಿಂದ ಕಂಗಾಲಾಗಿದ್ದಾಗ ಪುನಃ ಒಂದು ಮಾತನ್ನು ಕೇಳಿಸಿಕೊಂಡೆನು.
ಆಗಚ್ಛ ಗರುಡೇತ್ಯೇವ ತತೋಽಹಂ ಯಾನಮಾಸ್ಥಿತಃ |
ಪರಾರ್ಧ್ಯಂ ಚ ತತೋ ಗತ್ವಾ ಯೋಜನಾನಾಂ ಶತಂ ಪುನಃ |
ತತ್ರಾಪಶ್ಯಮಹಂ ಯೋ ವೈ ಬ್ರಹ್ಮಾಣಂ ಪರಮೇಷ್ಠಿನಮ್ ॥ 61 ॥
ಗರುಡ, ಬಾ ಎಂಬ ಧ್ವನಿಯು ಕೇಳಿಸಿತು. ಒಡನೆಯೇ ನಾನು ಅಲ್ಲಿಂದ ಹೊರಟೆನು. ನೂರು ಪರಾರ್ಧ ಯೋಜನಗಳಷ್ಟು ದೂರ ಓಡಿದೆನು. ಅಲ್ಲಿ ಒಂದು ಕಡೆ ಪರಮೇಷ್ಠಿಯಾದ ಬ್ರಹ್ಮನನ್ನು ನಾನು ನೋಡಿದೆನು.
ವ್ಯಾಖ್ಯಾನ ವಿಶೇಷ ಗರುಡನ ಗರ್ವವನ್ನು ಪರಿಹರಿಸಲು ಭಗವಂತನು ಗರುಡನ ಸಹಾಯವೇ ಇಲ್ಲದೆ ತನ್ನ ಶಕ್ತಿಯಿಂದಲೇ ಕೋಟಿ ಕೋಟಿ ಯೋಜನ ದೂರ ವೇಗವಾಗಿ ಆಗಮಿಸಿದನು. ಅಂಧಂತಮಸ್ಸನ್ನು ದಾಟಿ ಅನಂತರಾದ ಮುಕ್ತಬ್ರಹ್ಮ, ಗರುಡರ ಆವಾಸಸ್ಥಾನವಾದ ಅನಂತಾಸನವೆಂಬ ತನ್ನ ಲೋಕಕ್ಕೆ ಹೋಗಿ ಅಲ್ಲಿ ತನ್ನ ವಾಹನವಾಗಿರುವ ಅನೇಕ ಗರುಡಗಳನ್ನು ತೋರಿಸಿ ಈ ರೀತಿಯಾದ ಅನಂತ ಬ್ರಹ್ಮಾಂಡಗಳಿಗೂ ನಾನೇ ಆಧಾರಭೂತನಾಗಿದ್ದೇನೆ ಎಂದು ಅನಂತ ಗರುಡರು, ಅನಂತ ಬ್ರಹ್ಮರೂ ನನ್ನ ಮುಂದೆ ಅಲ್ಪರಾಗಿದ್ದಾರೆ. ಆ ಅನಂತ ಗರುಡನಲ್ಲಿ ಒಬ್ಬ ಗರುಡನ ಮುಂದೆಯೂ ನೀನು ಅಲ್ಪನಾಗಿದ್ದಿ. ಹೀಗಿರಲು ನನ್ನನ್ನು ಹೊತ್ತೊಯ್ಯಲು ನಿನಗೆಲ್ಲಿಂದ ಸಾಮರ್ಥ್ಯ? ನನಗೆ ನೀನು ಆಧಾರನಾಗಲು ಸಾಧ್ಯವೇ? ಎಂಬ ಶಿಕ್ಷಣವನ್ನು ಅವನಿಗೆ ನೀಡುತ್ತಾ ತನ್ನ ಮಾಹಾತ್ಮ್ಯವನ್ನು ಗರುಡನಿಗೆ ತೋರಿಸಿದ ಎಂಬುದನ್ನು ಸಮಸ್ತ ಅಧ್ಯಾಯದ ತಾತ್ಪರ್ಯವನ್ನಾಗಿ ತಿಳಿಯಬೇಕು.
ತತ್ರಾಪಿ ಚಾಪರಂ ತತ್ರ ಶತಕೋಟಿಪಿತಾಮಹಾನ್ |
ಪುನರೇಹೀತ್ಯುವಾಚೋಚ್ಚೈರ್ಭಗವಾನ್ ಮಧುಸೂದನಃ ॥ 62 ॥
ಆ ತೆರಳಿದ ಪ್ರದೇಶದಲ್ಲಿಯೂ ಹಿಂದಿನಂತೆಯೇ ಇನ್ನೊಬ್ಬ ಬ್ರಹ್ಮನು ಕಾಣಿಸಿದನು. ಹೀಗೆಯೇ ಮೇಲೆ ಮೇಲೆ ನೂರಾರು ಕೋಟಿ ಬ್ರಹ್ಮದೇವರನ್ನು ನಾನು ನೋಡಿದೆನು. ಪುನಃ ಮಹಾವಿಷ್ಣುವು, ಮಧುಸೂದನನು ಗಂಭೀರವಾದ ಧ್ವನಿಯಿಂದ ಗರುಡನೇ ಬಾ

ಎಂದು ಕರೆದನು.
ಮಹಾಕುಲಂ ತತೋಽಪಶ್ಯಂ ಪ್ರಮಾಣಾನಿ ತಮವ್ಯಯಮ್ |
ಕಪಿತ್ಥಫಲಸಂಕಾಶೈರಂಧಕಾರೈಃ ಸಮಾಶ್ರಿತಮ್ ॥ 63 ॥
ಅದರಂತೆ ನಾನು ಮುಂದೆ ಹೋಗುವಾಗ ಅಳತೆಗೆ ಸಿಗದಿರುವ, ಸಂಸಾರವೃಕ್ಷದಂತಿರುವ, ಅಕ್ಷಯವಾದ ಒಂದು ದೊಡ್ಡ ಬೇಲದ ಹಣ್ಣಿನ ಮರವೊಂದನ್ನು ಕಂಡೆನು. ಬಳಿಕ ಅಂಧಕಾರದಿಂದ ಆವೃತವಾದ ಅನೇಕ ಮೊಟ್ಟೆಗಳು ಕಾಣಿಸಿದವು.
ತತ್ರ ಸ್ಥಿತೋ ಹರಿಃ ಶ್ರೀಮಾನಂಡಮೇಕಂ ಬಿಭೇದ ಹ |
ಮಹದ್ಭೂತಂ ಹಿ ಮಾಂ ಗೃಹ್ಯ ದತ್ವಾ ವೈ ಪ್ರಾಕ್ಷಿಪತ್ ಪುನಃ ॥ 64 ॥
ಶ್ರೀಹರಿಯು ಆ ಮೊಟ್ಟೆಗಳ ಸಮುದಾಯದಲ್ಲಿ ಒಂದು ಮೊಟ್ಟೆಯನ್ನು ಭೇದಿಸಲು ಕೂಡಲೇ ಒಂದು ಮಹಾಭೂತವು ನನ್ನನ್ನು ಬಂದು ಹಿಡಿದುಕೊಂಡು ದೂರಕ್ಕೆ ಪುನಃ ನನ್ನನ್ನು ಬಿಸಾಡಿತು.
ತನ್ಮಧ್ಯೇ ಸಾಗರಾನ್ ಸಪ್ತ ಬ್ರಹ್ಮಾಣಂ ಚ ತಥಾ ಸುರಾನ್ |
ಪಶ್ಯಾಮ್ಯಹಂ ಯಥಾಯೋಗಂ ಮಾತರಂ ಸ್ವಕುಲಂ ತಥಾ ॥ 65 ॥
ಆಗ ನನಗೆ ಆ ಬಿದ್ದ ಜಾಗದ ನಡುವೆ ಸಪ್ತಸಮುದ್ರಗಳೂ, ಸೃಷ್ಟಿಕರ್ತನಾದ ಬ್ರಹ್ಮನು, ದೇವತೆಗಳು, ನನ್ನ ಸಜಾತೀಯರಾದ ಅನೇಕ ಗರುಡರು, ನನ್ನ ತಾಯಿಯಾದ ವಿನತೆಯು ಕಾಣಿಸಿದರು.
ಏವಂ ಮಯಾಽನುಭೂತಂ ಹಿ ತತ್ತ್ವಾನ್ವೇಷಣಕಾಂಕ್ಷಿಣಾ |
ಶಿಬಿಕಾಸದೃಶಂ ಮಾಂ ವೈ ಪಶ್ಯಧ್ವಂ ಮುನಿಸತ್ತಮಾಃ ॥ 66 ॥
ಓ ಮಹರ್ಷಿಗಳಿರಾ, ನಾನು ಆ ನಾರಾಯಣನ ತತ್ತ್ವವನ್ನು ತಿಳಿಯಬೇಕೆಂದು ಬಯಸಿ ಇಷ್ಟೆಲ್ಲ ಕಷ್ಟಗಳನ್ನು ಅನುಭವಿಸಿ ಬಂದೆನು. ನೀವೆಲ್ಲರೂ ನನ್ನನ್ನು ಹೊರುವ ಪಲ್ಲಕ್ಕಿ ಎಂದು ಭಾವಿಸಿರಿ. ಪಲ್ಲಕ್ಕಿಗೆ ಪ್ರೇರಕರಿಲ್ಲದೆ ಹೇಗೆ ಚಲಿಸದೋ ಹಾಗೆ ಭಗವಂತನ ಪ್ರೇರಣೆ ಇಲ್ಲದೆ ಗರುಡನೂ ಚಲಿಸಲಾರ, ಯಾರೂ ಚಲಿಸರೂ ಎಂಬುದನ್ನು ನನ್ನ ಕಥೆಯ ಮೂಲಕ ಅರ್ಥಮಾಡಿಕೊಳ್ಳಿರಿ.
ಇತ್ಯೇವಮಬ್ರುವಂ ವಿಪ್ರಾನ್ ಭೀಷ್ಮ ಯನ್ಮೇ ಪುರಾಽಭವನ್ |
ತತ್ತೇ ಸರ್ವಂ ಯಥಾನ್ಯಾಯಮುಕ್ತವಾನಸ್ಮಿ ಸತ್ತಮ ॥ 67 ॥
ಈ ರೀತಿಯಾಗಿ ನಾನು ಬ್ರಾಹ್ಮಣರನ್ನು ಕುರಿತು ಉಪದೇಶಿಸಿದೆನು. ಎಲೈ ಭೀಷ್ಮನೇ, ನಾನು ಅಲ್ಲಿ ನನ್ನನ್ನು ಪ್ರಶ್ನೆ ಮಾಡಿದ ಬ್ರಾಹ್ಮಣರಿಗೆಲ್ಲ ಇದೇ ಅಭಿಪ್ರಾಯವನ್ನು ತಿಳಿಸಿದೆನು. ಅದನ್ನೇ ನಿನಗೂ ಹೇಳಿದ್ದೇನೆ.
ಯೋಗಿನಸ್ತಂ ಪ್ರಪಶ್ಯಂತಿ ಜ್ಞಾನಂ ದೃಷ್ಟ್ವಾ ಪರಂ ಹರಿಮ್ |
ನಾನ್ಯಥಾ ಶಕ್ಯರೂಪೋಽಸೌ ಜ್ಞಾನಗಮ್ಯಃ ಪರಃ ಪುಮಾನ್ ॥ 68 ॥
ಯೋಗಿಗಳು ತಮ್ಮ ಉತ್ತಮ ಜ್ಞಾನಬಲದಿಂದ ಭಗವಂತನನ್ನು ತಿಳಿಯಬಲ್ಲರೇ ಹೊರತು ಆ ಪರಮಪುರುಷನನ್ನು ಬೇರೆ ವಿಧದಿಂದ ತಿಳಿಯಲು ಅಸಾಧ್ಯವು. ಭಗವಂತನು ಜ್ಞಾನಗಮ್ಯನಾಗಿದ್ದಾನೆ.
ಅನನ್ಯಯಾ ಚ ಭಕ್ತ್ಯಾ ಚ ಪ್ರಾಪ್ತುಂ ಶಕ್ಯೋ ಮಹಾಹರಿಃ ॥ 69 ॥
ಅನನ್ಯವಾದ ಭಕ್ತಿಯಿಂದಲೂ ಅವನನ್ನು ಹೊಂದಲು ಸಾಧ್ಯವಾಗುತ್ತದೆ.
ಭೀಷ್ಮಃ
ಇತ್ಯೇವಮುಕತ್ತ್ವ ಭಗವಾನ್ ಸುಪರ್ಣಃ ಪಕ್ಷಿರಾಟ್ ಪ್ರಭುಃ |
ಆಮಂತ್ರ್ಯ ಜನನೀಂ ಮೇ ವೈ ತತ್ರೈವಾಂತರಧೀಯತ ॥ 70 ॥
ಭೀಷ್ಮ ಧರ್ಮಪುತ್ರನೇ, ಪಕ್ಷಿರಾಜನಾದ ಗರುಡದೇವನು ಈ ವಿಷಯವನ್ನು ತಿಳಿಸಿ ಬಳಿಕ ನನ್ನ ತಾಯಿಯಾದ ಗಂಗಾದೇವಿಯ ಅನುಮತಿಯನ್ನು ಪಡೆದು ಅಲ್ಲೇ ಅದೃಶ್ಯನಾದನು.
ತಸ್ಮಾದ್ ರಾಜೇಂದ್ರ ಸರ್ವಾತ್ಮಾ ವಾಸುದೇವಃ ಪ್ರಧಾನಕೃತ್ |
ಜ್ಞಾನೇನ ಭಕ್ತ್ಯಾ ಸುಲಭೋ ನಾನ್ಯಥೇತಿ ಮತಿರ್ಮಮ ॥ 71 ॥
ಆದ್ದರಿಂದ ಜ್ಞಾನ-ಭಕ್ತಿಗಳಿಲ್ಲದೆ ಸರ್ವಾಂತರ್ಯಾಮಿಯಾದ ಆ ವಾಸುದೇವನು ಸುಲಭನಲ್ಲ ಎಂದು ನನ್ನ ಅಭಿಪ್ರಾಯ ಎಂದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕಾಧಿಕದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಗುರು-ಶಿಷ್ಯ ಸಂವಾದದಿಂದ
ಅಧ್ಯಾತ್ಮ ತತ್ತ್ವವನ್ನು ತಿಳಿಸಿದುದು.
ಯುಧಿಷ್ಠಿರಃ
ಯೋಗಂ ಮೇ ಪರಮಂ ತಾತ ಮೋಕ್ಷಸ್ಯ ವದ ಭಾರತ |
ತಮಹಂ ತತ್ತ್ವತೋ ಜ್ಞಾತುಮಿಚ್ಛಾಮಿ ವದತಾಂ ವರ ॥ 1 ॥
ಯುಧಿಷ್ಠಿರ ಪಿತಾಮಹನೇ, ಮೋಕ್ಷಕ್ಕೆ ಸಾಧನವಾದ ಉತ್ತಮ ಜ್ಞಾನಯೋಗವನ್ನು ನಿನ್ನಿಂದ ತಿಳಿಯಲು ನಾನು ಅಪೇಕ್ಷಿಸುತ್ತೇನೆ.
ಭೂಯೋಽಪಿ ಜ್ಞಾನಸದ್ಭಾವೇ ಸ್ಥಿತ್ಯರ್ಥಂ ತ್ವಾಂ ಬ್ರವೀಮ್ಯಹಮ್ |
ಅಚಿಂತ್ಯಂ ವಾಸುದೇವಾಖ್ಯಂ ತಸ್ಮಾತ್ ಪ್ರಬ್ರೂಹಿ ಸತ್ತಮ ॥ 2 ॥
ಆ ಜ್ಞಾನಯೋಗದಲ್ಲಿ ಸ್ಥಿರವಾಗಿ ನಿಲ್ಲಬೇಕೆಂಬ ಉದ್ದೇಶದಿಂದಲೇ ಅಚಿಂತ್ಯನಾದ ವಾಸುದೇವನ ನಿಜಸ್ವರೂಪವನ್ನು ಪುನಃ ಪುನಃ

ತಿಳಿಯಲು ಬಯಸುತ್ತಿದ್ದೇನೆ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಂವಾದಂ ಮೋಕ್ಷಸಂಯುಕ್ತಂ ಶಿಷ್ಯಸ್ಯ ಗುರುಣಾ ಸಹ ॥ 3 ॥
ಭೀಷ್ಮ ಧರ್ಮಪುತ್ರನೇ, ಇದಕ್ಕೆ ಸಂಬಂಧಿಸಿದಂತೆ ಪುರಾತನವಾದ ಗುರು-ಶಿಷ್ಯ ಸಂವಾದದ ಇತಿಹಾಸವನ್ನು ಉದಾಹರಿಸುತ್ತಾರೆ. ಮೋಕ್ಷವಿಷಯಕವಾದ ಆ ಸಂವಾದವನ್ನೇ ನಿನಗೆ ತಿಳಿಸುತ್ತೇನೆ.
ಕಶ್ಚಿದ್ ಬ್ರಾಹ್ಮಣಮಾಸೀನಮಾಚಾರ್ಯಮೃಷಿಸತ್ತಮಮ್ |
ತೇಜೋರಾಶಿಂ ಮಹಾತ್ಮಾನಂ ಸತ್ಯಸಂಧಂ ಜಿತೇಂದ್ರಿಯಮ್ ॥ 4 ॥
ಬ್ರಹ್ಮರ್ಷಿಶ್ರೇಷ್ಠನಾದ ಒಬ್ಬ ಆಚಾರ್ಯಪುರುಷನಿದ್ದನು. ಅವನು ಮಹಾತೇಜಸ್ವಿಯೂ, ಸತ್ಯಸಂಧನೂ, ಜಿತೇಂದ್ರಿಯನೂ, ಮಹಾತ್ಮನೂ ಆಗಿದ್ದನು.
ಶಿಷ್ಯಃ ಪರಮಮೇಧಾವೀ ಶ್ರೇಯೋರ್ಥೀ ಸುಸಮಾಹಿತಃ |
ಚರಣಾವುಪಸಂಗೃಹ್ಯ ಸ್ಥಿತಃ ಪ್ರಾಂಜಲಿರಬ್ರವೀತ್ ॥ 5 ॥
ಅವನಿಗೆ ಅವನಂತೆ ಮೇಧಾವಿಯಾದ, ಜಿತೇಂದ್ರಿಯನಾದ ಒಬ್ಬ ಶಿಷ್ಯನಿದ್ದನು. ತನ್ನ ಶ್ರೇಯಸ್ಸಿಗಾಗಿ ಯಾವಾಗಲೂ ಭಗವದುಪಾಸನೆ ಮಾಡುತ್ತಿದ್ದನು. ಒಂದು ಬಾರಿ ಶಿಷ್ಯನು ಗುರುವಿನ ಪಾದವನ್ನು ಹಿಡಿದುಕೊಂಡು ಕೈಮುಗಿದು ಹೀಗೆ ಹೇಳಿದನು.
ಉಪಾಸನಾತ್ ಪ್ರಸನ್ನೋಽಸಿ ಯದಿ ವೈ ಭಗವನ್ಮಮ |
ಸಂಶಯೋ ಮೇ ಮಹಾನ್ ಕಶ್ಚಿತ್ತನ್ಮೇ ವ್ಯಾಖ್ಯಾತುಮರ್ಹಸಿ |
ಕುತಶ್ಚಾಹಂ ಕುತಶ್ಚ ತ್ವಂ ತತ್ ಸಮ್ಯಗ್ ಬ್ರೂಹಿ ಯತ್ ಪರಮ್ ॥6॥
ಆಚಾರ್ಯನೇ, ನೀನು ನನ್ನ ಶುಶ್ರೂಷೆಗೆ ಪ್ರಸನ್ನನಾಗಿರುವುದಾದಲ್ಲಿ ನನ್ನದೊಂದು ಸಂದೇಹವಿದೆ. ಅದನ್ನು ನೀಗಿಸಬೇಕು. ಈ ಸಂಶಯವು ನಿರಂತರವೂ ನನ್ನ ಮನಸ್ಸನ್ನು ಕಳವಳಗೊಳಿಸಿದೆ. ನಾನು ಎಲ್ಲಿಂದ ಬಂದೆನು? ನೀನೆಲ್ಲಿಂದ ಬಂದಿರುವಿ? ನಮ್ಮೆಲ್ಲರಿಗಿಂತಲೂ ಉತ್ತಮವಾದ ವಸ್ತುವು ಯಾವುದ?
ಕಥಂ ಚ ಸರ್ವಭೂತೇಷು ಸಮೇಷು ದ್ವಿಜಸತ್ತಮ |
ಸಮ್ಯಗ್ ವೃತ್ತಾ ನಿವರ್ತಂತೇ ವಿಪರೀತಾಃ ಕ್ಷಯೋದಯಾಃ ॥ 7 ॥
ಲೋಕದಲ್ಲಿ ಎಲ್ಲಾ ಪ್ರಾಣಿಗಳೂ ಪಂಚಭೂತಗಳಿಂದ ಸೃಷ್ಟಿಯನ್ನು ಹೊಂದಿರುವಾಗ ಈ ಜನನ-ಮರಣಗಳಲ್ಲಿ ಇಂತಹ ವೈಪರೀತ್ಯಕ್ಕೆ, ವಿಷಮತೆಗೆ ಕಾರಣವೇನು?
ವೇದೇಷು ಚಾಪಿ ಯದ್ವಾಕ್ಯಂ ಲೌಕಿಕಂ ವ್ಯಾಪಕಂ ಚ ಯತ್ |
ಏತದ್ ವಿದ್ವನ್ ಯಥಾತತ್ತ್ವಂ ಸರ್ವಂ ವ್ಯಾಖ್ಯಾತುಮರ್ಹಸಿ ॥ 8 ॥
ವೇದಗಳಲ್ಲಿಯೂ ವರ್ಣವಿಭಾಗಗಳನ್ನು ಏಕೆ ಮಾಡಿದ್ದಾರೆ? ಬೇರೆ ಬೇರೆ ಧರ್ಮಗಳ ವಿವರಣೆಯನ್ನು ಏಕೆ ನೀಡಿದ್ದಾರೆ? ಸ್ಮೃತಿವಾಕ್ಯಗಳು ಆ ವೇದವನ್ನೇ ಏಕೆ ಅನುಸರಿಸುತ್ತಿವೆ? ಇದನ್ನು ತಿಳಿಸಿ ಸಂಶಯವನ್ನು ಪರಿಹರಿಸಿ.
ಗುರುಃ
ಶೃಣು ಶಿಷ್ಯ ಮಹಾಪ್ರಾಜ್ಞ ಬ್ರಹ್ಮ ಗುಹ್ಯಮಿದಂ ಪರಮ್ |
ಅಧ್ಯಾತ್ಮಂ ಸರ್ವಭೂತಾನಾಮಾಗಮಾನಾಂ ಚ ಯದ್ವಸು ॥ 9 ॥
ಗುರು ನೀನು ಕೇಳುವ ವಿಚಾರವು ಬ್ರಹ್ಮಗುಹ್ಯವೆನಿಸಿದೆ. ಅಧ್ಯಾತ್ಮವೆನಿಸಿದೆ. ಸಮಸ್ತ ಜೀವರಿಗೂ ಇದೇ ಸಂಪತ್ತು. ಈ ಆಗಮಗಳಲ್ಲಿ ತುಂಬಿರುವ ಸಂಪತ್ತೇ ಇದು.
ವಾಸುದೇವಃ ಸರ್ವಮಿದಂ ವಿಶ್ವಸ್ಯ ಬ್ರಹ್ಮಣೋ ಮುಖಮ್ |
ಸತ್ಯಂ ದಾನಮಥೋ ಯಜ್ಞಸ್ತಿತಿಕ್ಷಾ ದಮ ಆರ್ಜವಮ್ ॥ 10 ॥
ಪುರುಷಂ ಸನಾತನಂ ವಿಷ್ಣುಂ ಯತ್ತದ್ವೇದವಿದೋ ವಿದುಃ |
ಸರ್ಗಪ್ರಳಯಕರ್ತಾರಮವ್ಯಕ್ತಂ ಬ್ರಹ್ಮ ಶಾಶ್ವತಮ್ ॥ 11 ॥
ಜಗತ್ತೆಲ್ಲವೂ ವಾಸುದೇವನಿಂದಲೇ ವ್ಯಾಪ್ತವಾಗಿದೆ ಎಂದು ತಿಳಿ. ವೇದದ ಮುಖವೆನಿಸಿಕೊಂಡ ಪ್ರಣವವು ಅವನೇ ಆಗಿದ್ದಾನೆ. ಸತ್ಯ, ದಾನ, ತಪಸ್ಸು, ಯಜ್ಞ, ತಿತಿಕ್ಷ, ದಮ, ಆರ್ಜವ ಇವುಗಳಿಂದ ಲಭ್ಯನಾದ ಸನಾತನ ಪುರುಷನಾದ ವಿಷ್ಣುವನ್ನು ವೇದಜ್ಞರು ಕೊಂಡಾಡುತ್ತಾರೆ. ಅವನು ಸೃಷ್ಟಿ-ಸ್ಥಿತಿ-ಪ್ರಳಯಗಳನ್ನು ಮಾಡುವ ಅವ್ಯಕ್ತನಾದ, ಗುಣಪರಿಪೂರ್ಣನಾದ ಶಾಶ್ವತ ವಸ್ತುವಾಗಿದ್ದಾನೆ.
ತದಿದಂ ಬ್ರಹ್ಮ ವಾರ್ಷ್ಣೇಯಮಿತಿಹಾಸಂ ಶೃಣುಷ್ವ ಮೇ |
ಬ್ರಾಹ್ಮಣೋ ಬ್ರಾಹ್ಮಣೈಃ ಶ್ರಾವ್ಯೋ ರಾಜನ್ ಯಃ ಕ್ಷತ್ರಿಯೈಸ್ತಥಾ |
ವೈಶ್ಯೋ ವೈಶ್ಯೈಸ್ತಥಾ ಶ್ರಾವ್ಯಃ ಶೂದ್ರಃ ಶೂದ್ರೈರ್ಮಹಾಮನಾಃ ॥12॥
ಈ ರೀತಿಯಾದ ಗುಣಪರಿಪೂರ್ಣವಾದ ವಸ್ತುವನ್ನು ವಾರ್ಷ್ಣೇಯ ಎಂದು ಕರೆಯುತ್ತಾರೆ. ಇಂತಹ ಇತಿಹಾಸವನ್ನು ಹೇಳುತ್ತೇನೆ, ಕೇಳು. ಬ್ರಾಹ್ಮಣರು ಬ್ರಾಹ್ಮಣರಿಂದಲೂ, ಕ್ಷತ್ರಿಯರು ಕ್ಷತ್ರಿಯರಿಂದಲೂ, ವೈಶ್ಯರು ವೈಶ್ಯರಿಂದಲೂ, ಶೂದ್ರರು ಶೂದ್ರರಿಂದಲೂ ಕೇಳಿ ತಿಳಿಯಬಹುದು.
ಮಾಹಾತ್ಮ್ಯಂ ದೇವದೇವಸ್ಯ ವಿಷ್ಣೋರಮಿತತೇಜಸಃ |
ಅರ್ಹಸ್ತ್ವಮಸಿ ಕಲ್ಯಾಣ ವಾರ್ಷ್ಣೇಯಂ ಶೃಣು ಯತ್ ಪರಮ್ ॥13॥
ದೇವದೇವನಾದ, ಅಮಿತತೇಜಸ್ವಿಯಾದ ಭಗವಂತನ ಮಹಾಮಹಿಮೆಯನ್ನು ಕೇಳಿ ತಿಳಿಯಬಹುದು. ಅದನ್ನು ಕೇಳುವುದಕ್ಕೆ ನೀನು ಯೋಗ್ಯನಾಗಿರುವಿ. ವಾರ್ಷ್ಣೇಯವೆನಿಸಿದ ಈ ಉತ್ತಮವಾದ ಇತಿಹಾಸವನ್ನು ನಿನಗೆ ಹೇಳುತ್ತೇನೆ.

ಯಮಚ್ಯುತಂ ಪರಂ ನಿತ್ಯಂ ಲಿಂಗಹೀನಂ ಚ ನಿರ್ಮಲಮ್ |
ನಿರ್ವಾಣಮಮೃತಂ ಶ್ರೀಮತ್ ತದ್ವಿಷ್ಣೋಃ ಪರಮಂ ಪದಮ್ ॥ 14 ॥
ಯಾವ ಅಚ್ಯುತ ಎನಿಸಿದ, ಪರಮವಾದ, ನಿತ್ಯವಾದ ವಸ್ತುವಿದೆಯೋ ಅದು ಒಂದು ಯುಕ್ತಿಯಿಂದ ನಿರ್ಣಯಿಸುವಂತಹದ್ದಲ್ಲ, ನಿರ್ಮಲವಾದುದು. ಆ ವಿಷ್ಣುವಿನ ಸ್ಥಾನವೇ ನಿರ್ವಾಣ ಎನಿಸಿದೆ. ಮೋಕ್ಷವೆನಿಸಿದೆ. ಐಶ್ವರ್ಯಸಂಪನ್ನವಾಗಿದೆ.
ಭವೇ ಚ ಭೇದವದ್ಭಿನ್ನಂ ಪ್ರಧಾನಂ ಗುಣಕಾರಕಮ್ |
ತಸ್ಮಿನ್ನ ಸಜ್ಯತೇ ನಿತ್ಯಂ ಸ ಏಷ ಪುರುಷೋಽಪರಃ ॥ 15 ॥
ಗುಣಗಳಿಗೆ ಕಾರಣವಾದ ಪ್ರಕೃತಿಯು ಪ್ರತೀ ಸಂಸಾರದಲ್ಲಿಯೂ ಭಿನ್ನ ಭಿನ್ನ ಲಕ್ಷಣಗಳಿಂದ ಕಾಣಿಸುತ್ತದೆ. ಆ ಪ್ರಕೃತಿಯ ಸಂಬಂಧವನ್ನು ಹೊಂದದೇ ಇರುವ ಈ ಪುರುಷನು ಪ್ರಕೃತಿಯಿಂದ ಭಿನ್ನನೆನಿಸಿದ ನಿತ್ಯನಾಗಿದ್ದಾನೆ.
ಪುರುಷಾಧಿಷ್ಠಿತಂ ನಿತ್ಯಂ ಪ್ರಧಾನಂ ಬ್ರಹ್ಮ ಕಾರಣಮ್ |
ಕಾಲಸ್ವರೂಪಂ ರೂಪೇಣ ವಿಷ್ಣುನಾ ಪ್ರಭವಿಷ್ಣುನಾ ॥ 16 ॥
ಕ್ಷೋಭ್ಯಮಾಣಂ ಸೃಜತ್ಯೇವ ನಾನಾಭೂತಾನಿ ಭಾಗಶಃ |
ತದ್ ದೃಷ್ಟ್ವಾ ಪುರುಷೋ ತತ್ವಂ ಸಾಕ್ಷೀ ಭೂತ್ವಾ ಪ್ರವರ್ತತೇ |
ತತ್ ಪ್ರವಿಶ್ಯ ಯಥಾಯೋಗಮಭಿನ್ನೋ ಭಿನ್ನಲಕ್ಷಣಃ ॥ 17 ॥
ಪುರುಷನಿಂದ ಅಧಿಷ್ಠಿತವಾಗಿ, ವ್ಯಾಪಕವಾಗಿ, ಲೋಕಕ್ಕೆ ಕಾರಣವಾಗಿ ಕಾಲ ರೂಪವೆನಿಸಿದ ಪ್ರಧಾನವು ಸರ್ವಶಕ್ತನಾದ ವಿಷ್ಣುವಿನಿಂದ ಕ್ಷೋಭೆಗೆ ತುತ್ತಾದಾಗ ನಾನಾ ಭೂತಗಳ ರೂಪದಲ್ಲಿ ಸೃಷ್ಟಿಯನ್ನು ಹೊಂದುತ್ತದೆ. ಇದೇ ಭೂತಸೃಷ್ಟಿ. ಪುರುಷನು ಸಾಕ್ಷೀಭೂತನಾಗಿದ್ದುಕೊಂಡು ಆ ವಸ್ತುವಿನ ಒಳಗದೆ ತಾನೇ ಪ್ರವೇಶ ಮಾಡಿ ಸ್ವಯಂ ತನ್ನ ಅನೇಕ ರೂಪಗಳಲ್ಲಿ ಭೇದವಿಲ್ಲದಿದ್ದರೂ ವಿಶೇಷ ಬಲದಿಂದ ಭಿನ್ನ ಲಕ್ಷಣಗಳನ್ನು ಹೊಂದಿದವನಾಗಿ ಆಯಾ ಪದಾರ್ಥಗಳನ್ನು ಪ್ರವೇಶಿಸುತ್ತಾನೆ.
ವ್ಯಾಖ್ಯಾನ ವಿಶೇಷ `ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್ | ತದನುಪ್ರವಿಶ್ಯ ಸಚ್ಚತ್ಯಚ್ಚಾ ಭವತ್' ಎಂಬ ತೈತ್ತಿರೀಯ ಮಂತ್ರದ ವಿವರಣೆಯನ್ನು ಇಲ್ಲಿ ನೋಡಬಹುದು.
ಕಾಲಚಕ್ರಮನಾದ್ಯಂತಂ ಭಾವಾಭಾವಸ್ವಲಕ್ಷಣಮ್ |
ತ್ರೈಲೋಕ್ಯಂ ಸರ್ವಭೂತೇಷು ಚಕ್ರವತ್ ಪರಿವರ್ತತೇ ॥ 18 ॥
ಈ ಕಾಲಚಕ್ರವು ಆದಿ-ಅಂತ್ಯಗಳಿಲ್ಲದೆ ಇರುವಂತಹದ್ದು. ಭಾವಾಭಾವ ಎಂಬ ಲಕ್ಷಣಗಳಿಂದ ಕೂಡಿದೆ. ಮೂರುಲೋಕಗಳಲ್ಲಿರುವ ಸರ್ವಭೂತಗಳಲ್ಲಿಯೂ ಕಾಲಚಕ್ರವು ಪರಿವರ್ತನೆಯನ್ನು ಹೊಂದುತ್ತಿರುತ್ತದೆ.
ಯತ್ತದಕ್ಷರಮವ್ಯಕ್ತಮಮೃತಂ ಬ್ರಹ್ಮ ಶಾಶ್ವತಮ್ |
ವದಂತಿ ಪುರುಷವ್ಯಾಘ್ರಂ ಕೇಶವಂ ಪುರುಷರ್ಷಭಮ್ ॥ 19 ॥
ತದಕ್ಷರಮಚಿಂತ್ಯಂ ವೈ ಭಿನ್ನರೂಪೇಣ ದೃಶ್ಯತೇ |
ಪಶ್ಯ ಕಾಲಾಖ್ಯಮನಿಶಂ ನ ಚೋಷ್ಣಂ ನಾತಿಶೀತಲಮ್ ॥ 20 ॥
ಆ ಬ್ರಹ್ಮನೆಂಬ ವಸ್ತುವು ನಾಶರಹಿತವಾದುದು. ಅಚಿಂತ್ಯವಾದುದು. ಸ್ವಯಂ ಅಭಿನ್ನವಾದರೂ ಭಿನ್ನರೂಪದಿಂದ ಕಾಣಿಸುತ್ತದೆ. ಅಚಿಂತ್ಯವಾದ ಆ ಕಾಲಸ್ವರೂಪವನ್ನು ನೀನೇ ನೋಡು. ಈ ಕಾಲಸ್ವರೂಪಕ್ಕೆ ಶೀತೋಷ್ಣಾದಿ ಗುಣಭೇದಗಳು ಇರುವುದಿಲ್ಲ.
ನ ಸಂತ್ಯೇತೇ ಗುಣಾಸ್ತಸ್ಮಿಂಸ್ತಥಾ ತಸ್ಮಾತ್ ಪ್ರವರ್ತತೇ |
ಶೀತೋಽಯಂಸಮನುಪ್ರಾಪ್ತಃ ಕಾಲೋ ಗ್ರೀಷ್ಮಸ್ತಥೈವ ಚ ॥ 21 ॥
ಈ ಸ್ಪರ್ಶಾದಿ ಪ್ರಾಕೃತಗುಣಗಳು ಪ್ರಕೃತಿಯಲ್ಲಿ ಇರುವುದಿಲ್ಲ. ಆ ರೀತಿಯಾಗಿ ಕಾಲಚಕ್ರವು ಮುಂದುವರೆಯುತ್ತಿರುತ್ತದೆ. ಇದು ಶೀತಕಾಲ, ಇದು ಗ್ರೀಷ್ಮ ಕಾಲವು ಎಂದು ಹೇಳುತ್ತಾರೆ. ಈ ಗುಣಗಳು ಕಾಲದಲ್ಲಿಲ್ಲ. ಗುಣಗಳೆಲ್ಲವೂ ಕಾಲವನ್ನು ಅನುಸರಿಸುತ್ತವೆ.
ವಕ್ಷ್ಯಂತಿ ಸರ್ವಭೂತಾನಿ ಹ್ಯೇತೇ ಸೂರ್ಯೋದಯಂ ಪ್ರತಿ |
ನ ಗಚ್ಛತಿ ನಿವರ್ತಂತಿ ಸ ಕಾಲೋ ವ್ಯಾಪ್ಯ ತಿಷ್ಠತಿ ॥ 22 ॥
ಸಮಸ್ತ ಭೂತಗಳು ಸೂರ್ಯೋದಯವಾದಾಗ ಕಾಲ ಬಂದಿತು ಎನ್ನುತ್ತಾರೆ. ಅಸ್ತಮಾನವಾದಾಗ ಕಾಲ ಹೋಯಿತು ಎನ್ನುತ್ತಾರೆ. ಅಂತಹ ಕಾಲವು ಅರ್ಥಾತ್ ಕಾಲನಿಯಾಮಕನಾದ ಭಗವಂತನು ಬರುವುದೂ ಇಲ್ಲ, ಹೋಗುವುದೂ ಇಲ್ಲ. ಎಲ್ಲೆಡೆಯೂ ವ್ಯಾಪಿಸಿ ಇರುತ್ತಾನೆ.
ನ ಚೈವ ಪ್ರಕೃತಿಸ್ತೇನ ಕಾಲಯುಕ್ತೇನ ನಿತ್ಯಶಃ |
ಗುಣೈಃ ಸಂಭೋಗಮರತಿಸ್ತತ್ವವಿಜ್ಞಾನಕೋವಿದಮ್ |
ಪುರುಷಾಧಿಷ್ಠಿತಾ ನಿತ್ಯಂ ಪ್ರಕೃತಿಃ ಸೂಯತೇ ಪರಾ ॥ 23 ॥
ಗುಣಜನ್ಯಗಳಾದ ಸುಖ-ದುಃಖಗಳು ಯಾವಾಗಲೂ ಗುಣಗಳಿಂದ ಸುಖವನ್ನೂ, ದುಃಖವನ್ನೂ ನೀಡುತ್ತವೆ. ಆದರೆ ಇದೆಲ್ಲವೂ ಅಜ್ಞಾನಿಗಳಿಗೆ ಮಾತ್ರ. ತತ್ತ್ವಜ್ಞಾನಿಯಾದವನಿಗೆ ಗುಣಜನ್ಯವಾದ ಈ ಸುಖ-ದುಃಖಗಳು ಮುಟ್ಟಲಾರವು. ಮೂಲಪ್ರಕೃತಿಯು ಭಗವಂತನನ್ನಾಶ್ರಯಿಸಿ ಈ ಜಗತ್ತನ್ನು ಸೃಷ್ಟಿಸುತ್ತದೆ.
ಪಿತೄನ್ ದೇವಾನೃಷೀಂಶ್ಚೈವ ತಥಾ ವೈ ಯಕ್ಷದಾನವಾನ್ |
ನಾಗಾಸುರಮನುಷ್ಯಾಂಶ್ಚ ಸೃಜತೇ ಪರಮೋಽವ್ಯಯಃ ॥ 24 ॥
ದೇವತೆಗಳು, ಪಿತೃಗಳು, ಋಷಿಗಳು, ಯಕ್ಷ-ರಾಕ್ಷಸರು, ನಾಗರು, ಅಸುರರು, ಮನುಷ್ಯರು ಎಂಬ ನಾನಾ ವರ್ಗಗಳನ್ನು ಅವ್ಯಯನಾದ ಪರಮಾತ್ಮನು ಮನಸ್ಸಿನಿಂದ ಸೃಷ್ಟಿಸುತ್ತಾನೆ.
ತಥೈವ ವೇದಶಾಸ್ತ್ರಾಣಿ ಲೋಕಧರ್ಮಾಂಶ್ಚ ಶಾಶ್ವತಾನ್ |
ಪ್ರಲಯೇ ಪ್ರಕೃತಿಂ ಪ್ರಾಪ್ಯ ಯುಗಾದೌ ಸೃಜತೇ ಪ್ರಭುಃ ॥ 25 ॥

ಇದರಂತೆ ಅನೇಕ ವೇದಶಾಸ್ತ್ರಗಳನ್ನೂ, ಶಾಶ್ವತವಾದ ಲೋಕಧರ್ಮಗಳನ್ನು ಸೃಷ್ಟಿಸುತ್ತಾನೆ. ಪ್ರಳಯಕಾಲದಲ್ಲಿ ಮೂಲಸ್ವರೂಪವನ್ನು ಹೊಂದಿದ ತತ್ತ್ವಗಳನ್ನು ಪುನಃ ಸೃಷ್ಟಿಯ ಆರಂಭದಲ್ಲಿ ಸ್ಥೂಲರೂಪವನ್ನು ಹೊಂದುವಂತೆ ಮಾಡುತ್ತಾನೆ.
ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ |
ದೃಶ್ಯಂತೇ ತಾನಿ ತಾನ್ಯೇವ ತಥಾ ಬ್ರಹ್ಮಾಹರಾತ್ರಿಷು ॥ 26 ॥
ಅಥ ಯದ್ಯದ್ ಯದಾ ಭಾವಿ ಕಾಲಯೋಗಾದ್ಯುಗಾದಿಷು |
ತತ್ತದುತ್ಪದ್ಯತೇ ಜ್ಞಾನಂ ಲೋಕಯಾತ್ರಾವಿಧಾನಜಮ್ ॥ 27 ॥
ಯಾವ ರೀತಿಯಾಗಿ ಆಯಾ ಋತುಭೇದಗಳಿಂದ ಗಿಡಗಳಲ್ಲಿ ರೂಪಭೇದಗಳು, ಫಲಭೇದಗಳು ಉಂಟಾಗಿ, ಋತುವು ಕಳೆದ ಬಳಿಕ ಅವೆಲ್ಲವೂ ಹೊರಟು ಹೋಗುತ್ತವೋ ಪುನಃ ಅದೇ ಋತುವು ಬಂದಾಗ ಹಿಂದಿನ ಲಕ್ಷಣಗಳು ಕಾಣಿಸಿಕೊಳ್ಳುತ್ತವೋ ಇದರಂತೆ ಯುಗದ ಆರಂಭದಲ್ಲಿ ಪುನಃ ಹಿಂದಿನ ಯುಗದ ಆರಂಭದ ಲಕ್ಷಣಗಳೇ ತಲೆದೋರುತ್ತವೆ.
ಶ್ರುತಿರೇಷಾ ಸಮಾಖ್ಯಾತಾ ತದರ್ಥಂ ಕಾರಣಾತ್ಮನಾ |
ಅನಾಮ್ನಾಯವಿಧಾನಾದ್ವೈ ವೇದಾ ಹ್ಯಂತರ್ಹಿತಾ ಯಥಾ ॥ 28 ॥
ಶ್ರುತಿಯು ಈ ಕಾರಣದಿಂದಲೇ ಪ್ರಳಯ ಕಾಲದಲ್ಲಿ ಕಾರಣರೂಪದಿಂದ ಜಗತ್ತು ಸತ್ಯವಾಗಿದೆ ಎಂದೇ ಹೇಳುತ್ತಿದೆ. ಸರಿಯಾಗಿ ವೇದವನ್ನು ಅರಿಯದವರ ವಿಷಯದಲ್ಲಿ ವೇದಗಳು ತಮ್ಮ ರಹಸ್ಯವನ್ನು ಮುಚ್ಚಿಡುತ್ತವೆ.
ಯುಗಾಂತೇಽಂತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ |
ಲೇಭಿರೇ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ ॥ 29 ॥
ಜಗತ್ತಿನ ಪ್ರಳಯವಾದಾಗ ಬೇರೆ ಬೇರೆ ವೇದಶಾಸ್ತ್ರಗಳು ಅವ್ಯಕ್ತರೂಪವನ್ನು ಹೊಂದಿ, ಪುನಃ ಸೃಷ್ಟಿಯಾದ ಮೇಲೆ ಬ್ರಹ್ಮನ ಆಜ್ಞೆಯಂತೆ ಮಹರ್ಷಿಗಳು ಆ ವೇದಗಳನ್ನು ತಪೋಮಹಿಮೆಯಿಂದ ಬ್ರಹ್ಮನಿಂದ ಅನುಜ್ಞಾತರಾಗಿ ಪುನಃ ಪ್ರಕಟಪಡಿಸುತ್ತಾರೆ.
ನಿಯೋಗಾದ್ ಬ್ರಹ್ಮಣೋ ವಿಪ್ರಾ ಲೋಕತಂತ್ರಪ್ರವರ್ತಕಾಃ |
ವೇದವಿದ್ ವೇದ ಭಗವಾನ್ ವೇದಾಂಗಾನಿ ಬೃಹಸ್ಪತಿಃ |
ಭಾರ್ಗವೋ ನೀತಿಶಾಸ್ತ್ರಂ ಚ ಜಗಾದ ಜಗತೋ ಹಿತಮ್ ॥ 30 ॥
ಲೋಕತಂತ್ರ ಪ್ರವರ್ತಕರಾದ ಬ್ರಾಹ್ಮಣರು ಚತುರ್ಮುಖ ಬ್ರಹ್ಮನ ಆದೇಶದಂತೆ ವೇದಗಳನ್ನು ಸ್ವೀಕರಿಸಿದರು. ವೇದಾಂಗಗಳು ದೇವಗುರುವಾದ ಬೃಹಸ್ಪತಿಗೆ ಲಭಿಸಿದವು. ನೀತಿಶಾಸ್ತ್ರವನ್ನು ಭೃಗುಕುಮಾರನಾದ ಶುಕ್ರನು ಜಗತ್ತಿಗೆ ಹಿತವಾಗುವ ರೀತಿಯಲ್ಲಿ ಹೇಳಿದನು.
ಗಾಂಧರ್ವಂ ನಾರದೋ ವೇದಂ ಭರದ್ವಾಜೋ ಧನುರ್ಗ್ರಹಮ್ |
ದೇವರ್ಷಿಚರಿತಂ ಗಾರ್ಗ್ಯಃ ಕೃಷ್ಣಾತ್ರೇಯಶ್ಚಿಕಿತ್ಸಿತಮ್ ॥ 31 ॥
ಗಾಂಧರ್ವಕಲೆಯನ್ನು ನಾರದರು ತಿಳಿದರು. ಧನುರ್ವೇದ ಕಲೆಯನ್ನು ಭರದ್ವಾಜರು ತಿಳಿದರು. ಹಾಗೆಯೇ ದೇವರ್ಷಿಗಳ ಚರಿತ್ರೆಯನ್ನು ಗರ್ಗಮುನಿಗಳು, ವೈದ್ಯಕಲೆಯನ್ನು ಕೃಷ್ಣಾತ್ರೇಯರು ತಿಳಿದರು.
ನ್ಯಾಯತಂತ್ರಂ ಹಿ ಕಾರ್ತ್ಸ್ನ್ಯೇನ ಗೌತಮೋ ವೇದ ತತ್ತ್ವತಃ |
ವೇದಾಂತಕರ್ಮಯೋಗಂ ಚ ವೇದವಿದ್ ಬ್ರಹ್ಮವಿದ್ ವಿಭುಃ |
ದ್ವೈಪಾಯನೋ ನಿಜಗ್ರಾಹ ಶಿಲ್ಪಶಾಸ್ತ್ರಂ ಭೃಗುಃ ಪುನಃ ॥ 32 ॥
ನ್ಯಾಯಕಲೆಯನ್ನು ಸಮಗ್ರವಾಗಿ ಗೌತಮರು ತಿಳಿದರು. ವೇದಾಂತ, ಕರ್ಮ ಯೋಗಗಳನ್ನು ವೇದಜ್ಞರಾದ, ಭಗವಂತನನ್ನು ಪೂರ್ಣವಾಗಿ ತಿಳಿದ, ಸಮರ್ಥರಾದ ದ್ವೈಪಾಯನರು ಸ್ವೀಕರಿಸಿದರು. ಪುನಃ ಶಿಲ್ಪಶಾಸ್ತ್ರಗಳನ್ನು ಭೃಗುಗಳು ಸ್ವೀಕರಿಸಿದರು.
ನ್ಯಾಯತಂತ್ರಾಣ್ಯನೇಕಾನಿ ತೈಸ್ತೈರುಕ್ತಾನಿ ವಾದಿಭಿಃ |
ಹೇತ್ವಾಗಮಸದಾಚಾರ್ಯೈರ್ಯದುಕ್ತಂ ತದುಪಾಸ್ಯತೇ ॥ 33 ॥
ಅನೇಕ ವಿಧವಾದ ತರ್ಕಶಾಸ್ತ್ರಗಳು ಬೇರೆ ಬೇರೆ ವಿದ್ವಾಂಸರಿಂದ ಪ್ರವರ್ತಿಸಲ್ಪಟ್ಟವು. ಯುಕ್ತಿಯಿಂದಲೂ, ಶಾಸ್ತ್ರಗಳಿಂದಲೂ, ಸದಾಚಾರಿಗಳಿಂದಲೂ ನಿರ್ಣಯಿಸಲ್ಪಟ್ಟ ಬ್ರಹ್ಮನೇ ಮುಖ್ಯೋಪಾಸ್ಯನೆಂದು ಅಂಗೀಕೃತನಾಗಿದ್ದಾನೆ.
ಅನಾದ್ಯಂ ಯತ್ ಪರಂ ಬ್ರಹ್ಮ ನ ದೇವಾ ನರ್ಷಯೋ ವಿದುಃ |
ಏಕಸ್ತದ್ವೇದ ಭಗವಾನ್ ಧಾತಾ ನಾರಾಯಣಃ ಪ್ರಭುಃ ॥ 34 ॥
ಅನಾದ್ಯನಂತನಾದ ಬ್ರಹ್ಮನ ಮಹಿಮೆಯನ್ನು ದೇವತೆಗಳಾಗಲೀ, ಋಷಿಗಳಾಗಲೀ ತಿಳಿಯಲಾರರು. ಲೋಕಕರ್ತನೂ, ಪ್ರಭುವಾದ ನಾರಾಯಣನೊಬ್ಬನೇ ತನ್ನ ಮಹಿಮೆಯನ್ನು ತಾನು ಅರಿಯಬಲ್ಲನು.
ನಾರಾಯಣಾದೃಷಿಗಣಾಸ್ತಥಾ ಮುಖ್ಯಾಃ ಸುರಾಸುರಾಃ |
ರಾಜರ್ಷಯಃ ಪುರಾಣಾಶ್ಚ ಪರಮಂ ದುಃಖಭೇಷಜಮ್ |
ವಕ್ಷ್ಯೇಽಹಂ ತವ ಯತ್ ಪ್ರಾಪ್ತಮೃಷೇರ್ದ್ವೈಪಾಯನಾನ್ಮಯಾ ॥35॥
ನಾರಾಯಣನ ದೆಸೆಯಿಂದ ಸಮಸ್ತ ಋಷಿಗಣಗಳು, ಅದರಂತೆ ಶ್ರೇಷ್ಠರಾದ ಸುರಾಸುರರು, ರಾಜರ್ಷಿಗಳು ಯಥಾಯೋಗ್ಯವಾಗಿ ತಿಳಿದಿದ್ದಾರೆ. ಬ್ರಹ್ಮಜ್ಞಾನವೇ ಸಮಸ್ತ ದುಃಖಗಳಿಗೂ ಔಷಧಿಯಂತಿದೆ. ವ್ಯಾಸಮಹರ್ಷಿಯು ನನಗೆ ಹೇಗೆ ತಿಳಿಸಿದ್ದಾರೋ ಅದರಂತೆ ನಿನಗೆ ಸಂಗ್ರಹಿಸಿ ಹೇಳುತ್ತೇನೆ.
ಪುರುಷಾಧಿಷ್ಠಿತಂ ಭಾವಂ ಪ್ರಕೃತಿಃ ಸೂಯತೇ ಸದಾ |
ಹೇತುಯುಕ್ತಮತಃ ಸರ್ವಂ ಜಗತ್ ಸಂಪರಿವರ್ತತೇ ॥ 36 ॥
ಪ್ರಕೃತಿ ಎಂಬುದು ಪುರುಷನಿಂದ ಅಧಿಷ್ಠಿತವಾಗಿ ಅವನಿಂದ ಪ್ರೇರಿಸಲ್ಪಟ್ಟು ಅವನ ಸಂಕಲ್ಪಕ್ಕನುಗುಣವಾಗಿ ಯಾವಾಗ ವಸ್ತುಗಳನ್ನು ಸೃಷ್ಟಿಸತೊಡಗಿತೋ ಆಗ ಶುಭಾಶುಭ ಕರ್ಮಗಳನ್ನೇ ಕಾರಣವಾಗಿ ಉಳ್ಳ ಪ್ರಪಂಚವು ಉತ್ಪನ್ನವಾಯಿತು.

ದೀಪಾದನ್ಯೇ ಯಥಾ ದೀಪಾಃ ಪ್ರವರ್ತಂತೇ ಸಹಸ್ರಶಃ |
ಪ್ರಕೃತಿಃ ಸೃಜತೇ ತದ್ವದಾನಂತ್ಯಾನ್ನಾಪಚೀಯತೇ ॥ 37 ॥
ಒಂದೇ ದೀಪದಿಂದ ಸಾವಿರಾರು ದೀಪಗಳು ಬೆಳಗುವಂತೆ ಪ್ರಕೃತಿಯೊಂದೇ ಸಾವಿರಾರು ವಸ್ತುಗಳನ್ನು ಹುಟ್ಟಿಸುತ್ತದೆ. ಅದೆಂದಿಗೂ ಕ್ಷೀಣಿಸುವುದಿಲ್ಲ.
ಅವ್ಯಕ್ತಕರ್ಮಜಾ ಬುದ್ಧಿರಹಂಕಾರಂ ಪ್ರಸೂಯತೇ |
ಆಕಾಶಂ ಚಾಪ್ಯಹಂಕಾರಾದ್ವಾಯುರಾಕಾಶಸಂಭವಃ ॥ 39 ॥
ಮೂಲಪ್ರಕೃತಿಯ ವಿಕಾರದಿಂದ ಹುಟ್ಟಿದ ಬುದ್ಧಿಯು ವಿಜ್ಞಾನವೆಂಬ ಮಹತ್ತತ್ತ್ವವನ್ನು ಹುಟ್ಟಿಸುತ್ತದೆ. ಅದರಿಂದ ಅಹಂಕಾರತತ್ತ್ವವು, ಅಹಂಕಾರ ತತ್ತ್ವದಿಂದ ಆಕಾಶತತ್ತ್ವವು ಹುಟ್ಟುತ್ತದೆ.
ವಾಯೋಸ್ತೇಜಸ್ತತಶ್ಚಾಪಸ್ತ್ವದ್ಭ್ಯೋ ಹಿ ವಸುಧೋದ್ಗತಾ |
ಮೂಲಪ್ರಕೃತಯೋಽಷ್ಟೌ ತಾ ಜಗದೇತಾಸ್ವವಸ್ಥಿತಮ್ ॥ 40 ॥
ಆಕಾಶದಿಂದ ವಾಯುವು, ವಾಯುವಿನಿಂದ ತೇಜಸ್ಸು, ತೇಜಸ್ಸಿನಿಂದ ಜಲವು, ಜಲದಿಂದ ಭೂಮಿಯು ಹುಟ್ಟುತ್ತದೆ. ಈ ಎಂಟರ ಸಮುದಾಯವೇ ಮೂಲ ಪ್ರಕೃತಿ ಎನಿಸಿದೆ. ಲೋಕವೆಲ್ಲವೂ ಇದನ್ನೇ ಆಶ್ರಯಿಸಿಕೊಂಡಿದೆ.
ಜ್ಞಾನೇಂದ್ರಿಯಾಣ್ಯತಃ ಪಂಚ ಪಂಚ ಕರ್ಮೇಂದ್ರಿಯಾಣ್ಯಪಿ |
ವಿಷಯಾಃ ಪಂಚ ಚೈಕಂ ಚ ವಿಕಾರೇ ಷೋಡಶಂ ಮನಃ ॥ 41 ॥
ಈ ಎಂಟರ ಸಮುದಾಯದಿಂದಲೇ ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ತನ್ಮಾತ್ರಗಳು, ಮನಸ್ಸು ಹದಿನಾರನೆಯದ್ದಾಗಿ ಹುಟ್ಟಿದೆ.
ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ಘ್ರಾಣಂ ಪಂಚೇಂದ್ರಿಯಾಣ್ಯಪಿ |
ಪಾದೌ ಪಾಯುರುಪಸ್ಥಶ್ಚ ಹಸ್ತೌ ವಾಕ್ಕರ್ಮಣಾಮಪಿ ॥ 42 ॥
ಶಬ್ದಃ ಸ್ಪರ್ಶೋಽಥ ರೂಪಂ ಚ ರಸೋ ಗಂಧಸ್ತಥೈವ ಚ |
ವಿಜ್ಞೇಯಂ ವ್ಯಾಪಕಂ ಚಿತ್ತಂ ತೇಷು ಸರ್ವಗತಂ ಮನಃ ॥ 43 ॥
ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎಂಬ ಐದು ಜ್ಞಾನೇಂದ್ರಿಯಗಳು; ಕೈ, ಕಾಲು, ಪಾಯು, ಉಪಸ್ಥ ಎಂಬ ಪಂಚ ಕರ್ಮೇಂದ್ರಿಯಗಳು; ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಇಂದ್ರಿಯಾರ್ಥಗಳು; ಮನಸ್ಸೆಂಬುದು ಎಲ್ಲಾ ಇಂದ್ರಿಯಗಳ ಜೊತೆಗೆ ಬೆರೆತು ಆಯಾ ರೂಪದಿಂದ ಕೆಲಸ ಮಾಡುತ್ತದೆ.
ಬುದ್ಧೀಂದ್ರಿಯಾರ್ಥಾ ಇತ್ಯುಕ್ತಾ ದಶಸಂಸರ್ಗಯೋನಯಃ |
ಸದಸದ್ಭಾವಯೋಗೇ ಚ ಮನ ಇತ್ಯಭಿಧೀಯತೇ ॥ 44 ॥
ಮನಸ್ಸು ಎಲ್ಲಾ ಸಂದರ್ಭದಲ್ಲಿಯೂ ಸಮಸ್ತ ಇಂದ್ರಿಯಗಳ ಜೊತೆಗೂ ಸಂಯೋಜನೆಯನ್ನು ಹೊಂದಿ ಒಳ್ಳೆ ಮತ್ತು ಕೆಟ್ಟ ಕರ್ಮಗಳಲ್ಲಿ ಪ್ರವೃತ್ತಿಯನ್ನು ಹೊಂದುವಂತೆ ಮಾಡುತ್ತದೆ. ಈ ಸಾಮರ್ಥ್ಯವುಳ್ಳದ್ದಕ್ಕೆ ಮನಸ್ಸು ಎಂದು ಹೆಸರು.
ವ್ಯವಸಾಯಗುಣಾ ಬುದ್ಧಿರಹಂಕಾರೋಽಭಿಮಾನಕಃ |
ನ ಬೀಜಂ ದೇಹಯೋಗೇ ಚ ಕರ್ಮಬೀಜಪ್ರವರ್ತನಾತ್ ॥ 43 ॥
ವ್ಯವಸಾಯಗುಣವುಳ್ಳ ಬುದ್ಧಿಯು ಅಹಂಕಾರಕ್ಕೆ ಅಭಿಮಾನಿಯಾಗಿದ್ದು ಕರ್ಮ ಬೀಜವನ್ನು ಹುಟ್ಟಿಸುವುದರಿಂದ ದೇಹದ ಸಂಬಂಧವನ್ನು ಇದು ಹುಟ್ಟಿಸುವುದಿಲ್ಲ.
ರಸಜ್ಞಾನೇ ತು ಜಿಹ್ವೇಯಂ ವ್ಯಾಹೃತೇ ವಾಕ್ತಥೈವ ಚ |
ಇಂದ್ರಿಯೈರ್ವಿವಿಧೈರ್ಯುಕ್ತಂ ಸರ್ವಂ ವ್ಯಸ್ತಂ ಮನಸ್ತಥಾ ॥ 45 ॥
ಮಾತನಾಡುವ ಸಂದರ್ಭದಲ್ಲಿ ವಾಗಿಂದ್ರಿಯವೇ ಕರ್ಮೇಂದ್ರಿಯವೆನಿಸುವುದು. ಹೀಗೆ ಆಯಾ ಇಂದ್ರಿಯಗಳ ಜೊತೆಗೂಡಿದ ಮನಸ್ಸು ಅವುಗಳಿಂದ ಗ್ರಹಿಸಲ್ಪಡುವ ವಿಷಯಗಳು ತಾನೇ ಆಗುತ್ತದೆ.
ವಿದ್ಯಾತ್ತು ಷೋಡಶೈತಾನಿ ದೈವತಾನಿ ವಿಭಾಗಶಃ |
ದೇಹೇಷು ಜ್ಞಾನಕರ್ತಾರಮುಪಾಸೀನಮುಪಾಸತೇ ॥ 46 ॥
ಈ ರೀತಿಯಾಗಿ ಈ ಹದಿನಾರು ಇಂದ್ರಿಯಗಳು ಮನಸ್ಸಿನಿಂದ ಸೇರಿಕೊಂಡು ಬೇರೆ ಬೇರೆ ಅಭಿಮಾನಿದೇವತೆಗಳಿಂದ ಯುಕ್ತವಾಗಿದ್ದು, ಶರೀರಗಳಲ್ಲಿ ಸೇರಿ ಜ್ಞಾನಕರ್ತಾರನಾದ ಪರಮಾತ್ಮನನ್ನು ಉಪಾಸನೆ ಮಾಡುತ್ತವೆ.
ತತ್ರ ಸೋಮಗುಣಾ ಜಿಹ್ವಾ ಗಂಧಸ್ತು ಪೃಥಿವೀಗುಣಃ |
ಶ್ರೋತ್ರಂ ಶಬ್ದಗುಣಂ ಚೈವ ಚಕ್ಷುರಗ್ನೇರ್ಗುಣಸ್ತಥಾ |
ಸ್ಪರ್ಶಂ ವಾಯುಗುಣಂ ವಿದ್ಯಾತ್ ಸರ್ವಭೂತೇಷು ಸರ್ವದಾ ॥ 47 ॥
ರಸವು ಜಿಹ್ವೆಯ ಗುಣವೆನಿಸಿದೆ. ಗಂಧವು ಪೃಥಿವಿಯ ಗುಣವೆನಿಸಿದೆ. ಎರಡು ಶ್ರೋತ್ರೇಂದ್ರಿಯಗಳು ಶಬ್ದಗುಣವೆನಿಸಿವೆ. ಚಕ್ಷುರಿಂದ್ರಿಯವು ಅಗ್ನಿಗುಣವೆನಿಸಿದೆ. ಸ್ಪರ್ಶವು ವಾಯುಗುಣವೆನಿಸಿದೆ. ಈ ಗುಣಗಳನ್ನು ಎಲ್ಲಾ ಭೂತಗಳಲ್ಲಿಯೂ ನಿರಂತರ ಚಿಂತಿಸಬೇಕು.
ಮನಃ ಸತ್ತ್ವಗುಣಂ ಪ್ರಾಹುಃ ಸತ್ತ್ವಮವ್ಯಕ್ತಜಂ ತಥಾ |
ಸರ್ವಭೂತಾತ್ಮಭೂತಸ್ಥಂ ತಸ್ಮಾದ್ ಬುಧ್ಯೇತ ಬುದ್ಧಿಮಾನ್ ॥ 48 ॥
ಮನಸ್ಸು ಸತ್ವಗುಣದ ಕಾರ್ಯವು. ಸತ್ವವು ಅವ್ಯಕ್ತದಿಂದ ಹುಟ್ಟಿದುದು. ಆದ್ದರಿಂದ ಜ್ಞಾನಿಯಾದವನು ಸಮಸ್ತ ಭೂತಗಳಿಗೂ ಅಂತರ್ಯಾಮಿಯಾಗಿರುವ ಅವ್ಯಕ್ತದಲ್ಲಿಯೂ ಇರುವ ಭಗವಂತನನ್ನು ಚಿಂತಿಸಬೇಕು.
ಏತೇ ಭಾವಾ ಜಗತ್ ಸರ್ವಂ ವಹಂತಿ ಸಚರಾಚರಮ್ |

ಶ್ರಿತಾ ವಿರಜಸಂ ದೇವಂ ಯಮಾಹುಃ ಪರಮಂ ಪದಮ್ ॥ 49 ॥
ಮೇಲೆ ಹೇಳಿದ ಎಲ್ಲಾ ತತ್ತ್ವಗಳು ಚರಾಚರಾತ್ಮಕವಾದ ಜಗತ್ತನ್ನು ಧರಿಸುತ್ತಾ ರಜೋಗುಣದಿಂದ ರಹಿತನಾದ ಪರಬ್ರಹ್ಮನನ್ನು ಆಶ್ರಯಿಸಿವೆ. ಪರಮಪದನಾದ ಭಗವಂತನೇ ಇವುಗಳಿಗೆ ಆಶ್ರಯ.
ನವದ್ವಾರಂ ಪುರಂ ಪುಣ್ಯಮೇತೈರ್ಭಾವೈಃ ಸಮನ್ವಿತಮ್ |
ವ್ಯಾಪ್ಯ ಶೇತೇ ಮಹಾನಾತ್ಮಾ ತಸ್ಮಾತ್ ಪುರುಷ ಉಚ್ಯತೇ ॥ 50 ॥
ಒಂಬತ್ತು ದ್ವಾರಗಳುಳ್ಳ ಮನುಷ್ಯನ ಶರೀರವೆಂಬ ಪವಿತ್ರವಾದ ಪಟ್ಟಣದಲ್ಲಿ ಸರ್ವವ್ಯಾಪಿಯಾದ ಭಗವಂತನು ಮಲಗಿರುವುದರಿಂದಲೇ ಅವನಿಗೆ ಪುರುಷ ಎಂಬ ಹೆಸರುಂಟಾಗಿದೆ.
ಅಜರಃ ಸೋಽಮರಶ್ಚೈವ ವ್ಯಕ್ತಾವ್ಯಕ್ತೋಪದೇಶವಾನ್ |
ವ್ಯಾಪಕಃ ಸಗುಣಃ ಸೂಕ್ಷ್ಮಃ ಸರ್ವಭೂತಗುಣಾಶ್ರಯಃ ॥ 51 ॥
ಆ ಪುರುಷನಾದರೂ ಅಜರನೂ, ಅಮರನೂ, ವ್ಯಕ್ತಾವ್ಯಕ್ತ ಉಪದೇಶವುಳ್ಳವನೂ, ವ್ಯಾಪಕನೂ, ಸಗುಣನೂ, ಸೂಕ್ಷ್ಮನೂ, ಸರ್ವಭೂತಗಳಿಗೆ ಆಶ್ರಯನೂ ಆಗಿದ್ದಾನೆ.
ಯಥಾ ದೀಪಃ ಪ್ರಕಾಶಾತ್ಮಾ ಹ್ರಸ್ವೋ ವಾ ಯದಿ ವಾ ಮಹಾನ್ |
ಜ್ಞಾನಾತ್ಮಾನಂ ತಥಾ ವಿದ್ಯಾತ್ ಪುರುಷಂ ಸರ್ವಜಂತುಷು ॥ 52 ॥
ಯಾವ ರೀತಿಯಾಗಿ ದೀಪವು ಸಣ್ಣದಾಗಿದ್ದರೂ, ದೊಡ್ಡದಾಗಿದ್ದರೂ ಪ್ರಕಾಶ ರೂಪವೇ ಆಗಿರುತ್ತದೆಯೋ ಅದರಂತೆ ಪುರುಷನಾಮಕನಾದ ಸಮಸ್ತ ಜೀವರಲ್ಲಿ ಅಂತರ್ಯಾಮಿಯಾದ ಭಗವಂತನನ್ನು ಜ್ಞಾನಸ್ವರೂಪಿ ಎಂದೇ ತಿಳಿಯಬೇಕು.
ಸೋಽತ್ರ ವೇದಯತೇ ವೇದ್ಯಂ ಸ ಶೃಣೋತಿ ಸ ಪಶ್ಯತಿ |
ಕಾರಣಂ ತಸ್ಯ ದೇಹೋಽಯಂ ಸ ಕರ್ತಾ ಸರ್ವಕರ್ಮಣಾಮ್ ॥53॥
ದೇಹದಲ್ಲಿ ಕೇಳಬೇಕಾದುದ್ದನ್ನು ಕೇಳಿಸುವ ಮೂಲಕ ತಿಳಿಸಿಕೊಡುತ್ತದೆ. ಜೀವನು ಕೇಳಿಸಿಕೊಂಡು ಆ ಪದಾರ್ಥವನ್ನು ನೋಡುತ್ತಾನೆ. ಅದಕ್ಕೆ ಕಾರಣವಾದುದು ಈ ದೇಹ. ಈ ದೇಹವನ್ನು ನಿರ್ಮಿಸಿದ ಭಗವಂತನು ಸರ್ವಕರ್ಮಗಳಿಗೂ ಕಾರಣನೆನಿಸಿದ್ದಾನೆ.
ಅಗ್ನಿರ್ದಾರುಗತೋ ಯದ್ವದ್ಭಿನ್ನೇ ದಾರೌ ನ ದೃಶ್ಯತೇ |
ತಥೈವಾತ್ಮಾ ಶರೀರಸ್ಥೋ ಯೋಗೇನೈವಾತ್ರ ದೃಶ್ಯತೇ ॥ 54 ॥
ಕಟ್ಟಿಗೆಯಲ್ಲಿ ಅಗ್ನಿಯು ಯಾವಾಗಲೂ ಒಳಗೆ ಅಡಗಿದ್ದರೂ ಕಟ್ಟಿಗೆಯನ್ನು ಒಡೆದು ನೋಡಿದರೂ ಅಗ್ನಿಯು ಕಾಣಿಸುವುದಿಲ್ಲ. ಅದರಂತೆ ಶರೀರದಲ್ಲಿರುವಂತಹ ಭಗವಂತನು ಶರೀರವನ್ನು ತುಂಡರಿಸಿದರೂ ಕಣ್ಣಿಗೆ ಕಾಣಿಸಲಾರ. ಇವನನ್ನು ಯೋಗಶಕ್ತಿಯಿಂದಲೇ ಕಾಣಬೇಕು.
ನದೀಷ್ವಾಪೋ ಯಥಾ ಯುಕ್ತಾ ಯಥಾ ಸೂರ್ಯೇ ಮರೀಚಯಃ |
ಸಂತನ್ವಾನಾ ಯಥಾ ಯಾಂತಿ ತಥಾ ದೇಹಾಃ ಶರೀರಿಣಾಮ್ ॥ 55 ॥
ಯಾವ ರೀತಿಯಾಗಿ ನದಿಗಳನ್ನು ನೀರು, ಸೂರ್ಯನನ್ನು ಕಿರಣಗಳು ಹಿಂಬಾಲಿಸುತ್ತಿವೆಯೋ ಅದರಂತೆ ಪರಮಾತ್ಮನನ್ನು ಶರೀರವೆಂಬುದು ಹಿಂಬಾಲಿಸುತ್ತಿರುವುದು.
ಸ್ವಪ್ನಯೋಗೇ ಯಥೈವಾತ್ಮಾ ಪಂಚೇಂದ್ರಿಯಸಮಾಗತಃ |
ದೇಹಮುತ್ಸೃಜ್ಯ ವೈ ಯಾತಿ ತಥೈವಾತ್ರೋಪಲಭ್ಯತೇ ॥ 56 ॥
ಜೀವನಿಗೆ ಕನಸು ಬೀಳುವಾಗ ಜೀವನು ಪಂಚಜ್ಞಾನೇಂದ್ರಿಯಗಳಿಂದ ಸಹಿತವಾಗಿ ಹೊರಗೆ ಸಂಚರಿಸುವಂತೆ ಜೀವಾತ್ಮನು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಹೊಂದುತ್ತಾನೆ.
ಕರ್ಮಣಾ ವ್ಯಾಪ್ಯತೇ ಪೂರ್ವಂ ಕರ್ಮಣಾ ಚೋಪಪದ್ಯತೇ |
ಕರ್ಮಣಾ ನೀಯತೇಽನ್ಯತ್ರ ಸ್ವಕೃತೇನ ಬಲೀಯಸಾ ॥ 57 ॥
ಸಮಸ್ತ ಜಗತ್ತು ಕರ್ಮವನ್ನನುಸರಿಸಿಯೇ ನಡೆಯುತ್ತದೆ. ಕರ್ಮದಿಂದಲೇ ಉತ್ಪತ್ತಿಯನ್ನು ಪಡೆಯುತ್ತದೆ. ಕರ್ಮದಿಂದಲೇ ಜೀವಾತ್ಮನನ್ನು ಕೊಂಡೊಯ್ಯುತ್ತದೆ. ಬೇರೆ ಜನ್ಮದಲ್ಲಿ ಮಾಡಿದ ಬಲಿಷ್ಠವಾದ ಕರ್ಮಗಳೇ ಜನ್ಮಾಂತರದಲ್ಲಿ ಕಾರಣವಾಗುತ್ತವೆ.
ಸ ತು ದೇಹಾದ್ ಯಥಾ ದೇಹಂ ತ್ಯಕ್ತ್ವಾನ್ಯಂ ಪ್ರತಿಪದ್ಯತೇ |
ತಥಾ ತಂ ಸಂಪ್ರವಕ್ಷ್ಯಾಮಿ ಭೂತಗ್ರಾಮಂ ಸ್ವಕರ್ಮಜಮ್ ॥ 58 ॥
ಕರ್ಮವನ್ನನುಸರಿಸಿದ ಜೀವಾತ್ಮನಾದರೂ ಒಂದು ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಹೊಂದುತ್ತಾನೆ. ಅವನವನ ಪ್ರಾರಬ್ಧಕರ್ಮವೇ ದೇಹದಿಂದ ದೇಹಕ್ಕೆ ಸೆಳೆದುಕೊಂಡು ಹೋಗುತ್ತವೆ ಎಂದು ತಿಳಿಯಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ॥ ಮೋಕ್ಷಧರ್ಮಪರ್ವಣಿ ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂದನೆಯ ಅಧ್ಯಾಯ
ಜಗತ್ಸೃಷ್ಟ್ಯಾದಿ ಪ್ರತಿಪಾದಕ ಗುರು-ಶಿಷ್ಯ ಸಂವಾದವನ್ನು ಭೀಷ್ಮರು ಯುಧಿಷ್ಠಿರನನ್ನು ಕುರಿತು ಹೇಳಿದುದು.
ಗುರುಃ
ಚತುರ್ವಿಧಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ |

ಅವ್ಯಕ್ತಪ್ರಭವಾನ್ಯಾಹುರವ್ಯಕ್ತನಿಧನಾನಿ ಚ |
ಅವ್ಯಕ್ತಲಕ್ಷಣಂ ವಿದ್ಯಾದವ್ಯಕ್ತಾತ್ಮಾತ್ಮಕಂ ಮನಃ ॥ 1 ॥
ಗುರು ವತ್ಸನೇ, ಸ್ಥಾವರ-ಜಂಗಮ ಪ್ರಾಣಿಗಳು ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ ಎಂದು ನಾಲ್ಕು ಪ್ರಕಾರಗಳಾಗಿವೆ. ಆ ಪ್ರಾಣಿಗಳೆಲ್ಲವೂ ಅವ್ಯಕ್ತ ತತ್ತ್ವದಿಂದಲೇ ಜನ್ಮವನ್ನು ತಾಳುತ್ತವೆ. ಅರ್ಥಾತ್ ಮೂಲಪ್ರಕೃತಿಯಲ್ಲಿ ಹುಟ್ಟಿ ಮೂಲ ಪ್ರಕೃತಿಯಲ್ಲಿಯೇ ಲಯವನ್ನು ಹೊಂದುತ್ತವೆ. ಆದ್ದರಿಂದ ಜಗತ್ತನ್ನು ಅವ್ಯಕ್ತ ಸ್ವರೂಪವೆಂದು ಹೇಳುತ್ತಾರೆ. ಮನಸ್ಸು ಅವ್ಯಕ್ತವಾಗಿದ್ದರೂ ತ್ರಿಗುಣಾತ್ಮಕವಾಗಿದೆ. ಪ್ರಕೃತಿಯೂ ತ್ರಿಗುಣಾತ್ಮಕ.
ಯಥಾಶ್ವತ್ಥಕಣೀಕಾಯಾಮಂತರ್ಭೂತೋ ಮಹಾದ್ರುಮಃ |
ನಿಷ್ಪನ್ನೋ ದೃಶ್ಯತೇ ವ್ಯಕ್ತಮವ್ಯಕ್ತಾತ್ ಸಂಭವಸ್ತಥಾ ॥ 2 ॥
ಯಾವ ರೀತಿಯಲ್ಲಿ ಅತ್ಯಂತ ಅಣುವಾಗಿರುವ ಅಶ್ವತ್ಥ ಬೀಜದಲ್ಲಿ ಮಹಾವೃಕ್ಷವೇ ಅವ್ಯಕ್ತ ರೂಪದಿಂದ ಅಡಗಿರುವುದೋ, ಬೀಜವು ಮೊಳೆತ ಬಳಿಕ ಮಹಾವೃಕ್ಷದಲ್ಲಿ ವ್ಯಕ್ತವಾಗುವುದೋ ಅದೇ ರೀತಿಯಲ್ಲಿ ಅವ್ಯಕ್ತದಿಂದ ಜಗತ್ತು ವ್ಯಕ್ತವಾಗಿ ಬೆಳೆದು ನಿಂತಿದೆ.
ಆತ್ಮಾನಮನುಸಂಯಾತಿ ಬುದ್ಧಿರವ್ಯಕ್ತಜಾ ತಥಾ |
ತಾಮನ್ವೇತಿ ಮನೋ ಯದ್ವಲ್ಲೋಹವನ್ಮಣಿಸನ್ನಿಧೌ ॥ 3 ॥
ಅವ್ಯಕ್ತ ತತ್ತ್ವದಿಂದ ಉತ್ಪನ್ನವಾದ ಬುದ್ಧಿಯು ಜೀವನನ್ನು ಅನುಸರಿಸುತ್ತದೆ. ಅಯಸ್ಕಾಂತವನ್ನು ಅನುಸರಿಸಿ ಕಬ್ಬಿಣವು ಹೇಗೆ ಚಲಿಸುತ್ತದೋ ಅದರಂತೆ ಅನುಸರಿಸುತ್ತದೆ.
ಅಭಿದ್ರವತ್ಯಯಸ್ಕಾಂತಮಯೋ ನಿಶ್ಚೇತನಾವುಭೌ |
ಸ್ವಭಾವಹೇತುಜಾ ಭಾವಾ ಯದ್ವದನ್ಯದಪೀದೃಶಮ್ ॥ 4 ॥
ಯಾವ ರೀತಿಯಲ್ಲಿ ಲೋಹವು ಅಚೇತನವಾಗಿದ್ದರೂ ಅಯಸ್ಕಾಂತದ ಕಡೆ ಚಲಿಸುತ್ತದೋ ಅದರಂತೆ ಶರೀರವು ಹುಟ್ಟಿದ ಕೂಡಲೇ ಪ್ರಾಣಿಯ ಪೂರ್ವಸಂಸ್ಕಾರದಿಂದ ಹುಟ್ಟಿದ ಸ್ವಾಭಾವಿಕವಾದ ಅವಿದ್ಯಾಕಾಮ ಕರ್ಮಗಳೆಲ್ಲವೂ ಶರೀರದ ಕಡೆಗೆ ಸೆಳೆಯಲ್ಪಡುತ್ತವೆ.
ತದ್ವದವ್ಯಕ್ತಜಾ ಭಾವಾಃ ಕರ್ತುಃ ಕಾರಣಲಕ್ಷಣಾಃ |
ಅಚೇತನಾಶ್ಚೇತಯಿತುಃ ಕಾರಣಾದಭಿಸಂಗತಾಃ ॥ 5 ॥
ಈ ರೀತಿ ಅವ್ಯಕ್ತದಿಂದ ಹುಟ್ಟಿದವುಗಳಾಗಿ ಜೀವನ ಕಾಮಕರ್ಮಾದಿ ಭಾವಗಳು ಎಲ್ಲವೂ ಜೀವನಿಗೆ ಚೈತನ್ಯವನ್ನು ತುಂಬುವ ಕಾಲ ಅದೃಷ್ಟಾದಿ ಕಾರಣನಾದ ಪರಮಾತ್ಮನಿಂದಲೇ ಒಟ್ಟಾಗಿ ಸೇರಿಸಲ್ಪಟ್ಟಿವೆ.
ನ ಭೂಃ ಖಂ ದ್ಯೌರ್ನ ಭೂತಾನಿ ನರ್ಷಯೋ ನ ಸುರಾಸುರಾಃ |
ನಾನ್ಯದಾಸೀದೃತೇ ಜೀವಮಾಸೇದುರ್ನ ತು ಸಂಹಿತಮ್ ॥ 6 ॥
ಹಿಂದೆ ಪೃಥಿವಿ, ಆಕಾಶ, ಸ್ವರ್ಗ, ಭೂತಗಣ, ಋಷಿಗಣ, ದೇವತೆಗಳು, ಅಸುರರು ಇವರು ಯಾರೂ ಇರಲಿಲ್ಲ. ಜೀವನೆನಿಸಿದ ನಾರಾಯಣನ ಅನುಗ್ರಹವಿಲ್ಲದೆ ಯಾವುದೂ ಇರಲಿಲ್ಲ. ಜಡಚೇತನಗಳ ಸಂಬಂಧವೂ ಆಗಿರಲಿಲ್ಲ.
ಪೂರ್ವಂ ನಿತ್ಯಂ ಸರ್ವಗತಂ ಮನೋಹೇತು ತ್ವಲಕ್ಷಣಮ್ |
ಅಜ್ಞಾನಂಕರ್ಮ ನಿರ್ದಿಷ್ಟಮೇತತ್ ಕಾರಣಲಕ್ಷಣಮ್ ॥ 7 ॥
ಕರ್ಮವು ಪ್ರವಾಹತಃ ನಿತ್ಯವಾದುದು. ಎಲ್ಲ ಜನ್ಮಕ್ಕೆ ಕಾರಣವಾಗಿ ಎಲ್ಲರಲ್ಲಿಯೂ ಇದೆ. ಕರ್ಮಜನ್ಮಕ್ಕೆ ಮನಸ್ಸು ಕಾರಣವು. ಜ್ಞಾನಕ್ಕಿಂತ ಭಿನ್ನವಾದುದು. ಪುಣ್ಯ-ಪಾಪ ಎಂದು ಎರಡು ವಿಧವು. ಈ ಸಂಸಾರಚಕ್ರಕ್ಕೆ ಕಾರಣವಾದುದು ಕರ್ಮವು.
ತತ್ಕಾರಣೇನ ಸಂಯುಕ್ತಂ ಕಾರ್ಯಸಂಗ್ರಹಕಾರಕಮ್ |
ಯೇನೈತದ್ವರ್ತತೇ ಚಕ್ರಮನಾದಿನಿಧನಂ ಮಹತ್ ॥ 8 ॥
ಜೀವಸ್ವಭಾವವೆಂಬ ಕಾರಣದಿಂದ ಭಗವಂತನಿಂದ ಅಜ್ಞಾನಿಯಾದ, ಪುಣ್ಯ- ಪಾಪಕರ್ಮಗಳ ಸಂಬಂಧವನ್ನು ಹೊಂದಿದ, ಸಂಸಾರಚಕ್ರದಲ್ಲಿ ಸುತ್ತುವ ಅರ್ಹತೆಯನ್ನು ಪಡೆದ ಈ ಜೀವನು ಅವನಿಂದಲೇ ನಿರ್ದೇಶಿಸಲ್ಪಟ್ಟಿದ್ದಾನೆ. ಮನೋಜನ್ಯವಾದ ಕರ್ಮಗಳಿಗಾಗಲೀ, ಸಂಸಾರಕ್ಕಾಗಲೀ ಕಾರಣನಾಗಿದ್ದಾನೆ. ಆದ್ದರಿಂದ ಶ್ರೀಹರಿಯೇ ಎಲ್ಲದಕ್ಕೂ ಮೂಲಕಾರಣ.
ಯೇನ ಸ್ವಭಾವಸದ್ಭಾವಂ ಹೇತುಭೂತಾ ಸಕಾರಣಾ |
ಏವಂ ಪ್ರಾಕೃತವಿಸ್ತಾರೋ ಹ್ಯಾಶ್ರಿತ್ಯ ಪುರುಷಂ ಪರಮ್ ॥ 9 ॥
ವಾಸನಾದಿ ಕಾರಣಗಳಿಂದ, ಸ್ವಭಾವ ಕಾರಣದಿಂದ ಯುಕ್ತನಾದ ಜೀವನು ಹಿಂದಿನ ಸಂಸ್ಕಾರಗಳನ್ನು ಅನುಸರಿಸಿ ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ. ಇದಕ್ಕೆ ನಿಯಾಮಕನಾಗಿ ಭಗವಂತನಿದ್ದಾನೆ. ಈ ಸಂಸಾರಚಕ್ರವು ಅನಾದಿಯೂ, ಅನಂತವೂ ಆಗಿ ಭಗವಂತನಿಂದ ಚಲನೆಯನ್ನು ಹೊಂದುತ್ತಲೇ ಇದೆ.
ಅವ್ಯಕ್ತನಾಭಂ ವ್ಯಕ್ತಾರಂ ವಿಕಾರಪರಿಮಂಡಲಮ್ |
ಕ್ಷೇತ್ರಜ್ಞಾಧಿಷ್ಠಿತಂ ಚಕ್ರಂ ಸ್ನಿಗ್ಧಾಕ್ಷಂ ವರ್ತತೇ ಧ್ರುವಮ್ ॥ 10 ॥
ಜನನ-ಮರಣ ಪ್ರವಾಹರೂಪವಾದ ಸಂಸಾರವು ಚಕ್ರದಂತೆ ತಿರುಗುತ್ತಿದೆ. ಮೂಲಪ್ರಕೃತಿಯೇ ಈ ಸಂಸಾರಚಕ್ರದ ನಾಭಿಸ್ಥಾನೀಯವಾದ ಧ್ರುವವೆನಿಸಿದೆ. ಮಹತ್ತತ್ತ್ವ, ಅಹಂಕಾರತತ್ತ್ವ, ಬುದ್ಧಿತತ್ತ್ವಗಳೇ ಚಕ್ರದ ಅರಗಳೆನಿಸುತ್ತವೆ. ಏಕಾದಶೇಂದ್ರಿಯಗಳು, ಪಂಚಭೂತಗಳೆಂಬ ಹದಿನಾರು ವಿಕಾರಗಳೇ ಚಕ್ರದ ಮಂಡಲಾಕಾರದ ಅಚ್ಚಾಗಿರುತ್ತದೆ. ಈ ಚಕ್ರವು ತಿರುಗುತ್ತಲೇ ಇರುತ್ತದೆ. ಕ್ಷೇತ್ರಜ್ಞನಾದ ಪರಮಾತ್ಮನಿಂದ ಧರಿಸಲ್ಪಟ್ಟಿದೆ. ಮನೋಹರವಾದ ಕಾಲವೆಂಬ ಚಕ್ರವು ಭಗವಂತನಿಂದ ನಿಯಮ್ಯವಾಗಿದೆ.
ಸ್ನಿಗ್ಧತ್ವಾತ್ತಿಲವತ್ ಸರ್ವಂ ಚಕ್ರೇಽಸ್ಮಿನ್ ಪೀಡ್ಯತೇ ಜಗತ್ |
ತಿಲಪೀಡೈರಿವಾಕ್ರಮ್ಯ ಭೋಗೈರಜ್ಞಾನಸಂಭವೈಃ ॥ 11 ॥
ಸಂಸಾರಚಕ್ರದಲ್ಲಿ ಪರಸ್ಪರ ಸ್ನೇಹವು ತುಂಬಿರುವುದರಿಂದ ಎಳ್ಳಿನಲ್ಲಿ ತುಂಬಿದ ಎಣ್ಣೆಯನ್ನು ಗಾಣಕ್ಕೆ ಹಾಕಿ ಅರೆಯುವಂತೆ

ಪ್ರಪಂಚವು ಅಜ್ಞಾನಾಸ್ಕಂದಿತವಾದ ಭೋಗಾದಿಗಳಿಂದ ಆಕ್ರಮಿಸಲ್ಪಟ್ಟು, ಜನನ-ಮರಣ ರೂಪವಾದ ಚಕ್ರದಲ್ಲಿ ಅರೆಯಲ್ಪಡುತ್ತದೆ.
ಪ್ರಾಣೋ ನಾಯಂ ಹಿ ಶಾಂತೇ ತು ವಿರೋಧಾತ್ ಪ್ರತಿಪಾಲನಮ್ |
ದೇಹಸ್ಯೇಷೂನ್ಯ ಆಸ್ತೇ ಯಃ ಶುದ್ಧೋಽಚಿಂತ್ಯಃ ಸನಾತನಃ ॥ 12 ॥
ಜೀವಾತ್ಮನು ನಿತ್ಯ ಸುಖಸ್ವರೂಪಿಯಾದ ಪರಮಾತ್ಮನ ಅಧೀನನಾಗಿದ್ದಾನೆ. ಅನಾದ್ಯನಂತ ಕಾಲದಿಂದಲೂ ಪರಮಾತ್ಮನು ನಿರ್ವಿಕಾರನಾಗಿ ಜೀವನನ್ನು ರಕ್ಷಿಸುತ್ತಿದ್ದಾನೆ. ಇವನನ್ನು ಜೀವಾತ್ಮನು ಅರಿತಾಗ ಜನನ-ಮರಣಾದಿ ವ್ಯಾಪಾರಗಳನ್ನು ಮಾಡುವ ಕಾಲಚಕ್ರವು ಪುನಃ ಈ ಸಂಸಾರದಲ್ಲಿ ತಿರುಗುವುದಿಲ್ಲ. ಅರ್ಥಾತ್ ಪರಮಾತ್ಮನೇ ಈ ಸಂಸಾರಚಕ್ರದ ಗತಿಯನ್ನು ನಿಲ್ಲಿಸುತ್ತಾನೆ. ಪರಮಾತ್ಮನಾದರೂ ಪ್ರಾಕೃತದೇಹಶೂನ್ಯನಾಗಿದ್ದಾನೆ. ಅಂತಹ ಶುದ್ಧನಾದ, ಅಚಿಂತ್ಯನಾದ ಪರಮಾತ್ಮನ ಸನ್ನಿಧಾನದಲ್ಲಿಯೇ ಜೀವಾತ್ಮನು ಇದ್ದಾನೆ.
ಭ್ರಾಮಯನ್ನೇಷತೋ ಯಾತಿ ಕಾಲಚಕ್ರಸಮನ್ವಿತಃ |
ಭೂತಾನಿ ಮೋಹಯನ್ನಿತ್ಯಂ ಚಕ್ರಸ್ಯ ಚ ರಥಂ ಗತಃ ॥ 13 ॥
ಕಾಲಚಕ್ರದಲ್ಲಿ ಸಿಲುಕಿದ ಜೀವನು ಭ್ರಮೆಯಿಂದಲೇ ಬಾಹ್ಯಸುಖಗಳನ್ನು ಬಯಸುತ್ತಾ ಸಾಗುತ್ತಾನೆ. ಭಗವಂತನು ಸಂಸಾರಚಕ್ರದ ವೇಗಕ್ಕೆ ಈ ಜೀವನನ್ನು ಮೋಹವೆಂಬ ಪಾಶದಿಂದ ಸಿಲುಕಿಸಿ ನಿತ್ಯವೂ ಇದರಲ್ಲಿಯೇ ಪರಿಭ್ರಮಣೆ ಹೊಂದುವಂತೆ ಮಾಡುತ್ತಾನೆ.
ಸ್ನೇಹದ್ರವ್ಯಸಮಾಯೋಗೇ ಕ್ಷೇತ್ರಪಾಯಂ ನ ವಸ್ತುಷು |
ತಿಲವತ್ ಪೀಡಿತೇ ಚಕ್ರೇ ಹ್ಯಾಧಿಯಂತ್ರನಿಪೀಡಿತೇ |
ಬಹಿಶ್ಚಾಧಿಷ್ಠಿತೇ ಯದ್ವಜ್ಞಾನಿನಾಂ ಕರ್ಮಸಂಭವಮ್ ॥ 14 ॥
ಸ್ನೇಹವೆಂಬ ಗುಣದ ಸಮಾಯೋಗವಾದಾಗ ಜೀವನು ಸಂಸಾರದ ಆದಿ ಎಂಬ ಯಂತ್ರದಿಂದ ನಿತರಾಂ ಪೀಡಿತನಾಗಿ ಸಂಸಾರಚಕ್ರದಲ್ಲಿ ತಿಲದಂತೆ ಪೀಡಿಸಲ್ಪಡುತ್ತಾನೆ. ಶೂಲದಲ್ಲಿ ಚುಚ್ಚಿದ ಮಾಂಸವನ್ನು ಇಷ್ಟಸಾಧನ ಎಂದು ತಿಳಿದ ಮತ್ಸ್ಯಗಳು ಹೇಗೆ ತಿನ್ನಲು ಹೋಗಿ ಸಿಲುಕಿ ಬೀಳುತ್ತಾವೋ ಇದರಂತೆ ಕರ್ಮದಿಂದ ಉತ್ಪನ್ನವಾಗುವ ಮೂಢಜೀವರು ಬಾಹ್ಯಸಾಧನ ಸುಖದಲ್ಲಿ ಇಷ್ಟಸಾಧನತ್ವ ಬುದ್ಧಿಯಿಂದ ಸಂಸಾರ ಚಕ್ರದಲ್ಲಿ ಸಿಲುಕಿಕೊಳ್ಳುತ್ತಾರೆ.
ಕರ್ಮ ತತ್ಕುರುತೇ ತರ್ಷಾದಹಂಕಾರಪರಿಗ್ರಹಮ್ |
ಕಾರ್ಯಕಾರಣಸಂಯೋಗೇ ಸ ಹೇತುರುಪಪಾದಿತಃ ॥ 15 ॥
ಜೀವನು ಅಹಂಕಾರಕ್ಕೆ ಅಧೀನನಾಗಿ ತೃಷ್ಣೆಯಿಂದ ಕರ್ಮಗಳನ್ನು ಆಚರಿಸುತ್ತಾನೆ. ಹಾಗೆ ಆಚರಿಸುವ ಕರ್ಮಗಳೇ ಮುಂದಿನ ಕಾರ್ಯಕಾರಣಗಳ ಸಂಬಂಧಕ್ಕೆ, ಮತ್ತೊಂದು ದೇಹದ ಸಂಬಂಧಕ್ಕೆ ಕಾರಣವಾಗುತ್ತದೆ.
ಯಥಾ ಚಾಕರ್ಣ್ಯ ತಚ್ಛಿಷ್ಯಸ್ತ್ವತ್ವಜ್ಞಾನಮನುತ್ತಮಮ್ |
ನಾತ್ಯೇತಿ ಕಾರಣಂ ಕಾರ್ಯಂ ನ ಕಾರ್ಯಂ ಕಾರಣಂ ತಥಾ |
ಕಾರ್ಯಾಣಾಂ ತೂಪಕರಣೇ ಕಾಲೋ ಭವತಿ ಹೇತುಮಾನ್ ॥ 16 ॥
ಯಥಾಕರ್ಣ್ಯ ಚ ತಚ್ಛಿಷ್ಯಸ್ತತ್ತ್ವಜ್ಞಾನಮನುತ್ತಮಮ್ |
ನಾತ್ಯೇತಿ ಕಾರಣಂ ಕಾರ್ಯಂ ನ ಕಾರ್ಯಂ ಕಾರಣಂ ತಥಾ ॥ 17 ॥
ಯಾವ ರೀತಿಯಾಗಿ ಅನುತ್ತಮವಾದ ತತ್ತ್ವಜ್ಞಾನವನ್ನು ಗುರುವಿನಿಂದ ಪಡೆದ ಶಿಷ್ಯನು ಗುರುವನ್ನು ಬಿಟ್ಟು ಹೋಗುವುದಿಲ್ಲವೋ ಅದರಂತೆ ಕಾರಣವು ಕಾರ್ಯವನ್ನು ಬಿಟ್ಟುಹೋಗುವುದಿಲ್ಲ. ಕಾರ್ಯವು ಕಾರಣವನ್ನು ಅನುಸರಿಸಿಯೂ ಹೋಗುವುದಿಲ್ಲ. ಕಾರ್ಯ ಮಾಡುವ ಸಮಯದಲ್ಲಿ ಕಾರ್ಯದ ಸಿದ್ಧಿಗೆ ಅಥವಾ ಅಸಿದ್ಧಿಗೆ ಕಾಲವೇ ಕಾರಣವಾಗಿರುತ್ತದೆ. ಇಲ್ಲಿ ಕಾಲನಿಯಾಮಕನಾದವನು ನಾರಾಯಣನೇ ಆಗಿದ್ದಾನೆ.
ಹೇತುಯುಕ್ತಾಃ ಪ್ರಕೃತಯೋ ವಿಕಾರಾಶ್ಚ ಪರಸ್ಪರಮ್ |
ಅನ್ಯೋನ್ಯಮಭಿವರ್ತಂತೇ ಪುರುಷಾಧಿಷ್ಠಿತಾಃ ಸದಾ ॥ 18 ॥
ಕಾರಣಸಹಿತವಾದ ಎಂಟು ಮೂಲಪ್ರಕೃತಿಗಳು, ಅವುಗಳ ಹದಿನಾರು ವಿಕಾರಗಳು ಪುರುಷನಲ್ಲಿ ಆಶ್ರಯವನ್ನು ಪಡೆದು ಪರಸ್ಪರವಾಗಿ ಸೇರುತ್ತಿರುತ್ತವೆ. ಇದರಂತೆ ಸೃಷ್ಟಿಯನ್ನು ಬೆಳೆಸುತ್ತಿರುತ್ತವೆ.
ಸರಜಸ್ತಾಮಸೈರ್ಭಾವೈಶ್ಚ್ಯುತೋ ಹೇತುಬಲಾನ್ವಿತಃ |
ಕ್ಷೇತ್ರಜ್ಞಮೇವಾನುಯಾತಿ ಪಾಂಸುರ್ವಾತೇರಿತೋ ಯಥಾ |
ನ ಚ ತೈಃ ಸ್ಪೃಶ್ಯತೇ ಭಾವೋ ನ ತೇ ತೇನ ಮಹಾತ್ಮನಾ ॥ 19 ॥
ರಾಜಸ-ತಾಮಸ ಭಾವಗಳಿಂದ ರಹಿತನಾದ, ಪರಮಾತ್ಮನೆಂಬ ಬಲವನ್ನು ಹೊಂದಿದ ಜ್ಞಾನಿಯು ಕ್ಷೇತ್ರಜ್ಞನೆನಿಸಿದ ನಾರಾಯಣನನ್ನು ಅನುಸರಿಸುತ್ತಾನೆ. ಬಾಹ್ಯವಾದ ಜಗತ್ತಿನ ವಿಕಾರಗಳ ಸ್ಪರ್ಶವು ಆ ಮಹಾತ್ಮನಿಗೆ ಆಗುವುದಿಲ್ಲ. ಭೂಮಿಯ ಧೂಳಿನ ಜೊತೆಗೆ ಗಾಳಿಯು ಬೀಸಿದಾಗ ಭೂಮಿಯಲ್ಲಿದ್ದ ವಾಯುವು ಭೂಮಿಯ ರಜಸ್ಸಿನಿಂದ ಕೂಡಿದ್ದರೂ ಅದೇ ಗಾಳಿಯು ಆಕಾಶದಲ್ಲಿ ಬೀಸುವಾಗ ಯಾವ ಧೂಳಿನ ಸಂಬಂಧವೂ ಹೇಗೆ ಉಂಟಾಗುವುದಿಲ್ಲವೋ, ಪ್ರಕೃತಿಯ ವಿಷಯಗಳ ಸಂಬಂಧವನ್ನು ಜೀವನು ಹೊಂದಿದಾಗ ರಜೋಗುಣಗಳ ವಿಕಾರಗಳಿಗೆ ತುತ್ತಾಗುತ್ತಿದ್ದರೂ ಆಕಾಶದಂತೆ ಅಸಂಗನಾದ ಪರಮಾತ್ಮನ ಸಂಬಂಧವನ್ನು ಹೊಂದಿದಾಗ ಪ್ರಕೃತಿಯ ಸಂಬಂಧದಿಂದ ದೂರನಾಗುತ್ತಾನೆ.
ಸರಜಸ್ಕೋಽರಜಸ್ಕಶ್ಚ ಸ ವೈ ವಾಯುರ್ಯಥಾ ಭವೇತ್ |
ತಥೈತದಂತರಂ ವಿದ್ಯಾತ್ ಸತ್ತ್ವಕ್ಷೇತ್ರಜ್ಞಯೋರ್ಬುಧಃ |
ಅಭ್ಯಾಸಾತ್ ಸ ತಥಾ ಯುಕ್ತೋ ನ ಗಚ್ಛೇತ್ ಪ್ರಕೃತಿಂ ಪುನಃ ॥20॥
ಒಂದೇ ಗಾಳಿಯು ಭೂಮಿಯ ಸಂಬಂಧವನ್ನು ಹೊಂದಿದಾಗ ಧೂಳಿನಿಂದ ಸಹಿತವಾಗುತ್ತದೆ. ಅದೇ ಗಾಳಿಯು ಆಕಾಶದ

ಸಂಬಂಧವನ್ನು ಹೊಂದಿದಾಗ ಧೂಳಿನಿಂದ ರಹಿತವಾಗಿರುತ್ತದೆ. ಇದರಂತೆ ಎಂದಿಗೂ ರಜೋಗುಣದ ಸಂಬಂಧವೇ ಇಲ್ಲದಿದ್ದವನು ಕ್ಷೇತ್ರಜ್ಞನಾದ ಪರಮಾತ್ಮನಾಗಿದ್ದಾನೆ. ಪ್ರಕೃತಿಯ ಸಂಬಂಧವನ್ನು ಹೊಂದುವವನು ಜೀವನೆನಿಸಿದ್ದಾನೆ. ತ್ರಿಗುಣವರ್ಜಿತನಾದ ಪರಮಾತ್ಮನಿಗೂ, ತ್ರಿಗುಣಗಳಿಂದ ಬದ್ಧರಾದ ಜೀವರಿಗೂ ಈ ಅಂತರವನ್ನು ಅರ್ಥಮಾಡಿಕೊಳ್ಳಬೇಕು. ಜೀವನು ಪ್ರಕೃತಿಗುಣಗಳಿಂದ ಬದ್ಧನಾಗಿದ್ದಾನೆ. ಪುನಃ ಪುನಃ ಅಂತರ್ಯಾಮಿಯಾದ ಕ್ಷೇತ್ರಜ್ಞನನ್ನು ಚಿಂತಿಸುವುದರಿಂದ ಅವನು ಈ ಪ್ರಕೃತಿಯ ಸಂಬಂಧದಿಂದ ದೂರನಾಗಿ ಅಸಂಗನಾಗಿರುತ್ತಾನೆ. ಪುನಃ ಈ ಸಂಸಾರಚಕ್ರದಲ್ಲಿ ತಿರುಗುವುದಿಲ್ಲ.

ಸಂದೇಹಮೇತಮುತ್ಪನ್ನಮಚ್ಛಿನದ್ಭಗವಾನೃಷಿಃ |
ತಥಾ ವಾರ್ತಾಂ ಸಮೀಕ್ಷೇತ ಕೃತಲಕ್ಷಣಸಮ್ಮಿತಾಮ್ ॥ 21 ॥

ಯುಧಿಷ್ಠಿರನೇ, ಹೀಗೆ ಗುರುವು ಶಿಷ್ಯನ ಮನಸ್ಸಿನಲ್ಲಿ ಹುಟ್ಟಿದ ಸಂದೇಹವನ್ನು ಪರಿಹರಿಸಿದನು. ಆದ್ದರಿಂದ ವಿದ್ವಾಂಸನಾದವನು ನಮ್ಮ ಉದ್ದೇಶ ಸಿದ್ಧಿಗೆ ಯಾವ ಉಪಾಯವು ಸಹಾಯಕವಾಗುತ್ತದೋ ಅಂತಹ ಉಪಾಯವನ್ನೇ ಅನ್ವೇಷಿಸಬೇಕು.

ಬೀಜಾನ್ಯಗ್ನ್ಯುಪದಗ್ಧಾನಿ ನ ರೋಹಂತಿ ಯಥಾ ಪುನಃ |
ಜ್ಞಾನದಗ್ಧೈಸ್ತಥಾ ಕ್ಲೇಶೈರ್ನಾತ್ಮಾ ಸಂಬದ್ಧ್ಯತೇ ಪುನಃ ॥ 22 ॥

ಯಾವ ರೀತಿಯಲ್ಲಿ ಬೆಂಕಿಯಲ್ಲಿ ಹುರಿದ ಬೀಜಗಳು ಪುನಃ ಮೊಳಕೆಯನ್ನು ಹೊಂದುವುದಿಲ್ಲವೋ ಅದೇ ರೀತಿ ಭಗವಂತನ ಜ್ಞಾನವೆಂಬ ಅಗ್ನಿಯಿಂದ ದಗ್ಧವಾದ ಕ್ಲೇಶಗಳಿಂದ ಕೂಡಿರುವ ಜೀವಾತ್ಮನಿಗೆ ಪುನಃ ಈ ಸಂಸಾರವು ಮೊಳೆಯುವುದಿಲ್ಲ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕಚತ್ವಾರಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.

* * * * *

## ನಲವತ್ತೆರಡನೆಯ ಅಧ್ಯಾಯ

ನಿಷಿದ್ಧಾಚರಣೆಗಳ ತ್ಯಾಗ. ಸತ್ತ್ವ-ರಜಸ್ತಮೋಗುಣಗಳ ಕಾರ್ಯ
ಮತ್ತು ಅವುಗಳ ಪರಿಣಾಮಗಳ ಬಗ್ಗೆ ನಡೆದ ಗುರು-ಶಿಷ್ಯರ
ಸಂವಾದವನ್ನು ಭೀಷ್ಮರು ಯುಧಿಷ್ಠಿರನಿಗೆ ತಿಳಿಸಿದುದು.

ಗುರುಃ

ಪ್ರವೃತ್ತಿಲಕ್ಷಣೋ ಧರ್ಮೋ ಯಥಾಯಮುಪಪದ್ಯತೇ |
ತೇಷಾಂ ವಿಜ್ಞಾನನಿಷ್ಠಾನಾಮನ್ಯತ್ತತ್ತ್ವಂ ನ ರೋಚತೇ ॥ 4 ॥

ಗುರು ಕರ್ಮನಿಷ್ಠರಾದ ಪುರುಷರಿಗೆ ಪ್ರವೃತ್ತಿಲಕ್ಷಣಗಳಿಂದ ಕೂಡಿರುವ ಧರ್ಮವು ಬಹಳ ಬೇಗ ರುಚಿಸುತ್ತದೆ. ಅದೇ ರೀತಿ ಜ್ಞಾನನಿಷ್ಠರಾದ ಪುರುಷರಿಗೆ ಜ್ಞಾನಕ್ಕಿಂತಲೂ ಬೇರೆಯಾದ ಯಾವ ತತ್ತ್ವವೂ ರುಚಿಸುವುದಿಲ್ಲ.

ದುರ್ಲಭಾ ವೇದವಿದ್ವಾಂಸೋ ವೇದೋಕ್ತೇಷು ವ್ಯವಸ್ಥಿತಾಃ |
ಪ್ರಯೋಜನಮತಸ್ತ್ವತ್ರ ಮಾರ್ಗಮಿಚ್ಛಂತಿ ಸಂಸ್ತುತಮ್ ॥ 2 ॥

ಜಗತ್ತಿನಲ್ಲಿ ವೇದವಿಹಿತವಾದ ಅಗ್ನಿಹೋತ್ರಾದಿ ಸತ್ಕರ್ಮಗಳನ್ನು ಆಚರಿಸುತ್ತಾ ಶಮ-ದಮಾದಿಗಳಲ್ಲಿ ನಿರತರಾಗಿರುವ ವೇದವಿದ್ವಾಂಸರು ಅತ್ಯಂತ ದುರ್ಲಭರಾಗಿದ್ದಾರೆ. ಬುದ್ಧಿವಂತರಾದವರು ವೇದೋಕ್ತವಾದ ಮೋಕ್ಷದ ಮಹತ್ವವನ್ನು, ಪ್ರಯೋಜನವನ್ನು ಪ್ರಶಂಸನೀಯವಾದುದೆಂದು ತಿಳಿದು ಅದನ್ನೇ ಹೊಂದಲು ಇಚ್ಛಿಸುತ್ತಾರೆ.

ವೇದಸ್ಯ ನ ವಿದುರ್ಭಾವಂ ಜ್ಞಾನಮಾರ್ಗಪ್ರತಿಷ್ಠಿತಮ್ |
ಸದ್ಭಿರಾಚರಿತತ್ವಾತ್ತು ವೃತ್ತಮೇತದಗರ್ಹಿತಮ್ |
ಇಯಂ ಸಾ ಬುದ್ಧಿರನ್ಯೇಯಂ ಯಯಾ ಯಾತಿ ಪರಾಂ ಗತಿಮ್ ॥ 3 ॥

ಕೆಲವರು ವೇದಗಳು ಬೋಧಿಸುತ್ತಿರುವ ಜ್ಞಾನಮಾರ್ಗವನ್ನು ಅರ್ಥ ಮಾಡಿಕೊಳ್ಳರು. ಸಜ್ಜನರು ವೇದವಿಹಿತವಾದ ಜ್ಞಾನಮಾರ್ಗವನ್ನೇ ಅನುಸರಿಸಿರುವುದರಿಂದ ಈ ರೀತಿಯಾಗಿ ಜ್ಞಾನಮಾರ್ಗದಲ್ಲಿಯೇ ಸಾಗುವುದು ಅನಿಂದಿತವಾದ ಮಾರ್ಗವೆನಿಸಿದೆ. ಈ ಜ್ಞಾನಮಾರ್ಗವನ್ನು ಅನುಸರಿಸಿ ನಡೆಯುವವರು ಉತ್ತಮವಾದ ಮೋಕ್ಷವನ್ನು ಹೊಂದುತ್ತಾರೆ.

ಶರೀರವಾನುಪಾದತ್ತೇ ಮೋಹಾತ್ ಸರ್ವಪರಿಗ್ರಹಾನ್ |
ಕಾಮಕ್ರೋಧಾದಿಭಿರ್ಭಾವೈರ್ಯುಕ್ತೋ ರಾಜಸತಾಮಸೈಃ ॥ 4 ॥

ದೇಹಾಭಿಮಾನವನ್ನು ಹೊಂದಿದ ಪುರುಷನು ಮೋಹದಿಂದಾಗಿ, ಕ್ರೋಧ ಲೋಭಗಳೇ ಮೊದಲಾದ ರಾಜಸ-ತಾಮಸಗಳಿಂದ ಕೂಡಿದವನಾಗಿ ಎಲ್ಲಾ ವಸ್ತುಗಳನ್ನೂ ಸಂಗ್ರಹಿಸುತ್ತಾ ಸಾಗುತ್ತಾನೆ.

ನಾಶುದ್ಧಮಾಚರೇತ್ ತಸ್ಮಾದಭೀಪ್ಸನ್ ದೇಹಯಾಪನಮ್ |
ಕರ್ಮಣೋ ವಿವರಂ ಕುರ್ವನ್ನ ಲೋಕಾನಾಪ್ನುಯಾಚ್ಛುಭಾನ್ ॥ 5 ॥

ಆದ್ದರಿಂದ ದೇಹಬಂಧನದಿಂದ ಮುಕ್ತನಾಗಲು ಅಪೇಕ್ಷೆ ಪಡುವ ವ್ಯಕ್ತಿಯು ಅಶುದ್ಧವಾದ ಆಚರಣೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಬಾರದು. ನಿಷ್ಕಾಮ ಕರ್ಮಗಳ ಮೂಲಕ ಸದ್ಗತಿಯನ್ನು ಹೊಂದಲು ಬಯಸಬೇಕು. ಕಾಮ್ಯಕರ್ಮಗಳಿಗೆ ಅವಕಾಶವನ್ನು ನೀಡಿ ಪುಣ್ಯಲೋಕವನ್ನು ಹೊಂದಲು ಎಂದೂ ಬಯಸಬಾರದು.

ಲೋಹಯುಕ್ತಂ ಯಥಾ ಹೇಮ ವಿಪಕ್ವಂ ನ ವಿರಾಜತೇ |
ತಥಾಪಕ್ವಕಷಾಯಾಖ್ಯಂ ವಿಜ್ಞಾನಂ ನ ಪ್ರಕಾಶತೇ ॥ 6 ॥

ಇತರ ಲೋಹಗಳಿಂದ ಮಿಶ್ರಣವನ್ನು ಹೊಂದಿದ ಬಂಗಾರವನ್ನು ಬೆಂಕಿಯಲ್ಲಿ ಹಾಕಿ ಶುದ್ಧಗೊಳಿಸದಿದ್ದರೆ ಹೇಗೆ ಪ್ರಕಾಶಿಸುವುದಿಲ್ಲವೋ ಅದರಂತೆ ಜೀವನ ಚಿತ್ತದಲ್ಲಿರುವ ರಾಗ-ದ್ವೇಷಾದಿ ದೋಷಗಳಿಂದ ಜೀವಾತ್ಮನು ಎಂದಿಗೂ ಪ್ರಕಾಶವನ್ನು

ಹೊಂದುವುದಿಲ್ಲ. ಪರಮಾತ್ಮನ ಜ್ಞಾನವೆಂಬ ಬೆಂಕಿಯಲ್ಲಿ ಜೀವಾತ್ಮನನ್ನು ಹೋಮಿಸಿ ಪ್ರಕಾಶಿಸುವಂತೆ ಮಾಡಬೇಕು.
ಕೇಚಿದಾತ್ಮಗುಣಂ ಪ್ರಾಪ್ತಾಸ್ತೇ ಮುಕ್ತಾಶ್ಚಕ್ರಬಂಧನಾತ್ |
ಇತರೇ ದುಃಖಸಂದ್ವಂದ್ವಾಸ್ತಥಾ ದುಃಖಪರಾಯಣಾಃ ॥ 7 ॥
ಕೆಲವರು ಪರಮಾತ್ಮನ ಜ್ಞಾನವನ್ನು ಹೊಂದಿದವರಾಗಿ ಈ ಸಂಸಾರಚಕ್ರ ಬಂಧನದಿಂದ ಬಿಡುಗಡೆಯನ್ನು ಹೊಂದಿರುತ್ತಾರೆ. ಇನ್ನು ಕೆಲವರು ಸುಖ-ದುಃಖಗಳ ಈ ದ್ವಂದ್ವಗಳಲ್ಲೇ ಸಿಲುಕಿದವರಾಗಿ, ದುಃಖಪರಾಯಣರಾಗಿ ಇಲ್ಲಿಯೇ ಸುತ್ತುತ್ತಾರೆ.
ಶೋಕಕರ್ಮಾನುರೂಪಂ ತೇ ಜಾಯಮಾನಾಃ ಪುನಃ ಪುನಃ |
ಕ್ರೋಧಲೋಭಮದಾವಿಷ್ಟಾ ಮೂಢಾಂತಃಕರಣಾಃ ಸದಾ ॥ 8 ॥
ಕರ್ಮಾನುಗುಣವಾದ ಶೋಕದಿಂದಲೇ ಪುನಃ ಪುನಃ ಹುಟ್ಟನ್ನು ಪಡೆಯುವರಾಗಿ ಕ್ರೋಧ-ಲೋಭ-ಮದಾವಿಷ್ಟರಾಗಿ ಮೂಢಾಂತಃಕರಣವುಳ್ಳವರಾಗಿ ಯಾವಾಗಲೂ ಇಲ್ಲೇ ಹುಟ್ಟುತ್ತಿರುತ್ತಾರೆ.
ಯಥಾ ವೃಕ್ಷಸ್ಯ ಸಂಛಾಯಾ ನಾಸ್ತಿ ನಿತ್ಯತಯಾ ಪರಾ |
ಗುಣಾನೇವ ತಥಾ ಚಿಂತ್ಯಾ ಸಂತ್ಯೇತೇ ಚ ವಿದುರ್ಬುಧಾಃ ॥ 9 ॥
ಯಾವ ರೀತಿಯಾಗಿ ವೃಕ್ಷದ ನೆರಳು ನಿತ್ಯವೂ ಬುಡದಲ್ಲಿ ಕುಳಿತಿರುವವರನ್ನು ರಕ್ಷಿಸುವುದಿಲ್ಲವೋ ಅದರಂತೆ ಈ ತ್ರಿಗುಣಗಳು ಜೀವರನ್ನು ನಿತ್ಯವೂ ರಕ್ಷಿಸುವುದಿಲ್ಲ ಎಂಬುದನ್ನು, ರೂಪಾದಿ ಗುಣಗಳ ಅನಿತ್ಯತೆಯನ್ನು ಜ್ಞಾನಿಗಳು ತಿಳಿದಿರುತ್ತಾರೆ.
ಯಶ್ಚಾಧರ್ಮಂ ಚರೇನ್ಮೋಹಾತ್ ಕಾಮಲೋಭಾವನು ಪ್ಲವನ್ |
ಧರ್ಮ್ಯಂ ಪಂಥಾನಮಾಕ್ರಮ್ಯ ಸಾನುಬಂಧೋ ವಿನಶ್ಯತಿ ॥ 10 ॥
ಯಾವ ವ್ಯಕ್ತಿಯು ಲೋಭವಶನಾಗಿ ಕಾಮ-ಕ್ರೋಧಾದಿಗಳನ್ನೇ ಅನುಸರಿಸುತ್ತಾ ಹೋಗುತ್ತಾನೋ ಅವನು ಧರ್ಮಮಾರ್ಗವನ್ನು ಉತ್ಕ್ರಮಿಸಿದ ಕಾರಣದಿಂದ ಜ್ಞಾತಿ ಬಂಧುಗಳ ಸಹಿತವಾಗಿ ವಿನಾಶವನ್ನು ಹೊಂದುತ್ತಾನೆ.
ಅಚಲಂ ಜ್ಞಾನಮಪ್ರಾಪ್ಯ ಚಲಚಿತ್ತಶ್ಚಲಾನಿಯಾತ್ |
ಶಬ್ದಾದೀನ್ ವಿಷಯಾಂಸ್ತಸ್ಮಾದಸಂರಾಗಾದನುಪ್ಲವೇತ್ |
ಕ್ರೋಧಹರ್ಷೌ ವಿಷಾದಶ್ಚ ಜಾಯಂತೇ ಹಿ ಪರಸ್ಪರಮ್ ॥ 11 ॥
ಚಂಚಲವಾದ ಮನಸ್ಸುಳ್ಳವನು ನಿಶ್ಚಲವಾದ ಭಗವದ್‌ಜ್ಞಾನವನ್ನು ಹೊಂದದಿದ್ದಲ್ಲಿ ಪುನಃ ಪುನಃ ಚಂಚಲವಾದ ಪ್ರಕೃತಿಯನ್ನೇ ಹೊಂದುತ್ತಿರುತ್ತಾನೆ. ಶಬ್ದಾದಿ ವಿಷಯಗಳಲ್ಲಿಯೇ ರಾಗವನ್ನು ಹೊಂದುತ್ತಾ ಈ ಸಂಸಾರದಲ್ಲಿಯೇ ಮುಳುಗುತ್ತಾನೆ. ಈ ವಿಷಯಗಳ ಸಂಗದಿಂದ ಕ್ರೋಧ-ಹರ್ಷ-ವಿಷಾದಗಳು ಒಂದರಿಂದ ಒಂದು ಹುಟ್ಟಿಕೊಳ್ಳುತ್ತವೆ.
ಗುಣಾಃ ಕಾರ್ಯಾಃ ಕ್ರೋಧಹರ್ಷೌ ಸುಖದುಃಖೇ ಪ್ರಿಯಾಪ್ರಿಯೇ |
ದ್ವಂದ್ವಾನ್ಯಥೈವಮಾದೀನಿ ವಿಜಯೇಚ್ಚೈವ ಸರ್ವವಿತ್ ॥ 12 ॥
ಕ್ರೋಧ-ಹರ್ಷಗಳು ಮೂರುಗುಣಗಳ ಕಾರ್ಯ ಎನಿಸಿವೆ. ಸುಖ-ದುಃಖಗಳು, ಪ್ರಿಯ-ಅಪ್ರಿಯಗಳು ಮೊದಲಾದ ದ್ವಂದ್ವಗಳನ್ನು ಭಗವಂತನ ಜ್ಞಾನದಿಂದಲೇ ಜಯಿಸಿಕೊಳ್ಳಬೇಕು.
ಪಂಚಭೂತಾತ್ಮಕೇ ದೇಹೇ ಸತ್ತ್ವರಾಜಸತಾಮಸೇ |
ಕಮಭಿಷ್ಟುವತೇ ಚಾಯಂ ಕಂ ವಾ ಕ್ರೋಶತಿ ಕಿಂ ವದೇತ್ ॥ 13 ॥
ದೇಹವು ಪಂಚಭೂತಾತ್ಮಕವಾಗಿದೆ. ಸತ್ತ್ವರಜಸ್ತಮೋಗುಣಗಳೆಂಬ ಮೂರು ಗುಣಗಳಿಂದ ಕೂಡಿದೆ. ಇಂತಹ ದೇಹದಲ್ಲಿರುವ ಜೀವನು ಯಾರನ್ನು ಸ್ತುತಿಸುತ್ತಾನೆ? ಯಾರನ್ನು ನಿಂದಿಸುತ್ತಾನೆ? ಏನನ್ನು ಹೇಳಿಕೊಂಡು ಕಿರುಚಾಡುತ್ತಾನೆ? ಬಾಹ್ಯವಾಗಿರುವ ಈ ಇಂದ್ರಿಯವ್ಯಾಪಾರಗಳು ಆತ್ಮನಿಗೆ ಸಂಬಂಧಿಸಿರುವುದಿಲ್ಲ.
ಸ್ಪರ್ಶರೂಪರಸಾದ್ಯೇಷು ಸಂಗಂ ಗಚ್ಛಂತಿ ಬಾಲಿಶಾಃ |
ನಾವಗಚ್ಛಂತ್ಯವಿಜ್ಞಾನಾದಾತ್ಮಜಂ ಪಾರ್ಥಿವಂ ಗುಣಮ್ ॥ 14 ॥
ಅಜ್ಞಾನಿಗಳಾದ ಪುರುಷರು ರೂಪ, ಸ್ಪರ್ಶ, ರಸಾದಿ ವಿಷಯ ಸುಖಗಳಲ್ಲಿಯೇ ಆಸಕ್ತರಾಗಿರುತ್ತಾರೆ. ಅವರಿಗೆ ಭಗವಂತನ ಜ್ಞಾನವು ಇಲ್ಲದಿರುವುದರಿಂದ ದೇಹದಿಂದ ಕೂಡಿಕೊಂಡು ಹುಟ್ಟಿರುವ ಜೀವನು ತನ್ನ ದೇಹವು ಪೃಥಿವಿಯ ವಿಕಾರವಾಗಿದೆ ಎಂಬುದನ್ನು ತಿಳಿಯುವುದಿಲ್ಲ.
ಮೃನ್ಮಯಂ ಶರಣಂ ಯದ್ವನ್ಮೃದೈವ ಪರಿಲಿಪ್ಯತೇ |
ಪಾರ್ಥಿವೋಽಯಂ ತಥಾ ದೇಹೋ ಮೃದ್ವಿಕಾರೈರ್ವಿಲಿಪ್ಯತೇ ॥ 15 ॥
ಹೇಗೆ ಮಣ್ಣಿನಿಂದ ಕಟ್ಟಿದ ಮನೆಯು ಮಣ್ಣಿನ ಲೇಪನದಿಂದಲೇ ಸುರಕ್ಷಿತವಾಗಿ ನಿಲ್ಲುತ್ತದೋ ಅದರಂತೆ ಪೃಥಿವಿಯ ವಿಕಾರರೂಪವಾದ ಈ ಪಾರ್ಥಿವ ಶರೀರವು ಪೃಥಿವಿಯ ವಿಕಾರವೆನಿಸಿದ ಅನ್ನಾದಿಗಳ ಸೇವನೆಯಿಂದಲೇ ರಕ್ಷಿತವಾಗಿದೆ.
ಮಧು ತೈಲಂ ಪಯಃ ಸರ್ಪಿರ್ಮಾಂಸಾನಿ ಲವಣಂ ಗುಡಃ |
ಧಾನ್ಯಾನಿ ಫಲಮೂಲಾನಿ ಮೃದ್ವಿಕಾರಾಃ ಸಹಾಂಭಸಾ ॥ 16 ॥
ಜೇನುತುಪ್ಪ, ಎಣ್ಣೆ, ಹಾಲು, ತುಪ್ಪ, ಮಾಂಸ, ಉಪ್ಪು, ಬೆಲ್ಲ, ಧಾನ್ಯಗಳು, ಹಣ್ಣುಗಳು, ಗೆಡ್ಡೆಗಳು ಮತ್ತು ನೀರು - ಇವೆಲ್ಲವೂ ಪೃಥಿವಿಯ ವಿಕಾರಗಳೇ ಆಗಿವೆ.
ಯದ್ವತ್ ಕಾಂತಾರಮಾತಿಷ್ಠನ್ನೌತ್ಸುಕ್ಯಂ ಸಮನುವ್ರಜೇತ್ |
ಶ್ರಮಾದಾಹಾರಮಾದದ್ಯಾದಸ್ವಾದ್ವಪಿ ಹಿ ಯಾಪನಮ್ ॥ 17 ॥
ತದ್ವತ್ ಸಂಸಾರಕಾಂತಾರಮಾತಿಷ್ಠನ್ ಶ್ರಮತತ್ಪರಃ |
ಯಾತ್ರಾರ್ಥಮದ್ಯಾದಾಹಾರಂ ವ್ಯಾಧಿತೋ ಭೇಷಜಂ ಯಥಾ ॥ 18 ॥
ಹೇಗೆ ಅರಣ್ಯದಲ್ಲಿ ವಾಸ ಮಾಡುವ ವಿರಕ್ತನಾದ ತಪಸ್ವಿಯು ತುಂಬಾ ಹಸಿವೆಯು ಉಂಟಾದಾಗ ಆ ಪ್ರದೇಶದಲ್ಲಿ ಸಿಕ್ಕಿದ

ಆಹಾರವನ್ನು ಅದು ರುಚಿಸದಿದ್ದರೂ ಸೇವಿಸಿ ದೇಹವನ್ನು ರಕ್ಷಿಸಿಕೊಳ್ಳುತ್ತಾನೋ ಇದರಂತೆ ಸಂಸಾರವೆಂಬ ಅರಣ್ಯದಲ್ಲಿರುವ ಜೀವನು ಶ್ರಮ ಉಂಟಾದಾಗ ದೇಹಯಾತ್ರೆಗೆ ಎಷ್ಟು ಬೇಕೋ ಅಷ್ಟೇ ಆಹಾರವನ್ನು ರೋಗಿಯು ಔಷಧಿಯನ್ನು ಸೇವಿಸುವಂತೆ ಸ್ವಲ್ಪ ಪ್ರಮಾಣದಲ್ಲಿ ಸೇವಿಸಬೇಕು. ಸಿಹಿ-ಕಹಿಗಳಿಗೆ ಹೆಚ್ಚು ಮಹತ್ವವನ್ನು ಬ್ರಹ್ಮಜ್ಞಾನಿಯಾದವನು ನೀಡಬಾರದು ಎಂದು ಭಾವ.

ಭಕ್ಷಣೇ ಶ್ವಾಪದ್ಯೈರ್ಮಾರ್ಗಾದಿತಿ ಚಾರಂ ಕರೋತಿ ಚೇತ್ |
ಏವಂ ಸಂಸಾರಮಾರ್ಗೇಣ ಯಾತ್ರಾರ್ಥಂ ವಿಷಯಾಣಿ ಚ ॥ 19 ॥

ಪದಾರ್ಥಗಳನ್ನು ಹೊರಗಡೆ ಇರಿಸಿದಾಗ ನಾಯಿಗಳು ಅವುಗಳನ್ನು ತಿಂದಾವು ಎಂದು ಒಬ್ಬ ಚಾರನನ್ನು ನಿಯೋಜಿಸಿ ರಕ್ಷಿಸುವಂತೆ ಸಂಸಾರ ಮಾರ್ಗದಲ್ಲಿ ಚಲಿಸುವ ಸಾಧಕನ ದೇಹಯಾತ್ರೆಯ ರಕ್ಷಣೆಗಾಗಿ ವಿಷಯಗಳನ್ನು ಭಗವಂತನು ಇರಿಸಿದ್ದಾನೆ.

ನ ಗಚ್ಛೇದ್ಭೋಗವಿಜ್ಞಾನಾದುನ್ಮಾರ್ಗೇ ಪದ್ಯತೇ ತದಾ |
ತಸ್ಮಾದದುಃಖತೋ ಮಾರ್ಗಮಾಸ್ಥಿತಸ್ತಮನುಸ್ಮರೇತ್ ॥ 20 ॥

ಆದ್ದರಿಂದ ದೇಹಯಾತ್ರೆಗೆ ಕಾರಣವಾದ ವಿಷಯಪದಾರ್ಥಗಳಲ್ಲಿಯೇ ಭೋಗವನ್ನು ಹೊಂದುತ್ತಾ ತನ್ನ ಯಾತ್ರೆಯ ಮಾರ್ಗವನ್ನು ಬಿಟ್ಟು ಹೋಗಬಾರದು. ವಿಷಯಪದಾರ್ಥಗಳನ್ನು ಅನುಸರಿಸಿ ಹೋಗುವ ಮಾರ್ಗವು ದುಃಖದಾಯಕವಾದುದು. ಆದ್ದರಿಂದ ದುಃಖವಿಲ್ಲದೇ ಇರುವ ಮೋಕ್ಷ ಮಾರ್ಗಕ್ಕಾಗಿ ಭಗವಂತನನ್ನೇ ಸ್ಮರಿಸುತ್ತಿರಬೇಕು.

ನಾನಾಪರ್ಣಫಲಾ ವೃಕ್ಷಾ ಬಹವಃ ಸಂತಿ ತತ್ರ ಹಿ |
ಭೋಕ್ತಾರೋ ಮುನಯಶ್ಚೈವ ತಸ್ಮಾತ್ಪರತರಂ ವನಮ್ ॥ 21 ॥

ನಾನಾ ಎಲೆಗಳಿಂದ, ಹಣ್ಣುಗಳಿಂದ ತುಂಬಿದ ಅನೇಕ ವೃಕ್ಷಗಳು ಈ ಸಂಸಾರದ ಮಾರ್ಗದಲ್ಲಿ ಅಲ್ಲಲ್ಲಿ ದೊರೆಯುತ್ತವೆ. ಮುನಿಗಳು ಇವುಗಳನ್ನು ಅನುಭವಿಸುತ್ತಿದ್ದರೂ ದೇವರು ನಿರ್ಮಾಣ ಮಾಡಿದ ಈ ಪದಾರ್ಥಗಳನ್ನು ದೇಹಯಾತ್ರೆಗೆ ಮಾತ್ರ ಸ್ವೀಕರಿಸಿ ಇವುಗಳಿಗಿಂತ ಪರತರನೆನಿಸಿದ ಪರಮಾತ್ಮನೆಂಬ ಅರಣ್ಯವನ್ನು ಪ್ರವೇಶಿಸುತ್ತಾರೆ.

ಅನುಮಾನೈಸ್ತಥಾ ಶಾಸ್ತ್ರೈರ್ಯಶಸಾ ವಿಕ್ರಮೇಣ ಚ |
ಸತ್ಯಶೌಚಾರ್ಜವತ್ಯಾಗೈರ್ಯಶಸಾ ವಿಕ್ರಮೇಣ ಚ |
ಕ್ಷಾಂತ್ಯಾ ಧೃತ್ಯಾ ಚ ಬುದ್ಧ್ಯಾ ಚ ಮನಸಾ ತಪಸೈವ ಚ ॥ 22 ॥
ಭಾವಾನ್ ಸರ್ವಾನ್ ಯಥಾವೃತ್ತಾನ್ ಸಂವಸೇತ ಯಥಾಕ್ರಮಮ್ |
ಶಾಂತಿಮಿಚ್ಛನ್ನದೀನಾತ್ಮಾ ಸಂಯಚ್ಛೇದಿಂದ್ರಿಯಾಣಿ ಚ ॥ 23 ॥

ಯುಕ್ತಿಗಳಿಂದ, ಶಾಸ್ತ್ರದಲ್ಲಿ ಹೇಳಿದ ಸನ್ಮಾರ್ಗಗಳಿಂದ, ತಮ್ಮ ಮನೋಬಲದಿಂದ, ಸತ್ಯ-ಶೌಚ-ಸರಳತೆ-ತ್ಯಾಗ-ತೇಜಸ್ಸು-ಪರಾಕ್ರಮ-ಕ್ಷಮೆ-ಧೈರ್ಯ-ಬುದ್ಧಿ-ಮನಸ್ಸು- ತಪಸ್ಸು ಇವುಗಳ ಪ್ರಭಾವದಿಂದ ವಿಷಯಪದಾರ್ಥಗಳಲ್ಲಿರುವ ಮನಸ್ಸಿನ ಆಸಕ್ತಿಗಳನ್ನು ವಿಮರ್ಶಿಸಿ, ಶಾಂತಿಯನ್ನು ಬಯಸುತ್ತಾ ಇಂದ್ರಿಯಗಳನ್ನು ತನ್ನ ನಿಗ್ರಹದಲ್ಲಿ ಇಟ್ಟುಕೊಳ್ಳಬೇಕು.

ಸತ್ತ್ವೇನ ರಜಸಾ ಚೈವ ತಮಸಾ ಚೈವ ಮೋಹಿತಾಃ |
ಚಕ್ರವತ್ ಪರಿವರ್ತಂತೇ ಹ್ಯಜ್ಞಾನಾಜ್ಜಂತವೋ ಭೃಶಮ್ ॥ 24 ॥

ಇಂದ್ರಿಯನಿಗ್ರಹ ಇಲ್ಲದ ಅಜ್ಞಾನಿಗಳು ಸತ್ವ-ರಜಸ್ಸು-ತಮಸ್ಸುಗಳಿಂದ ಮೋಹಿತರಾಗಿ ನಿರಂತರವೂ ಚಕ್ರದಂತೆ ಈ ಸಂಸಾರದಲ್ಲಿಯೇ ತಿರುಗುತ್ತಿರುತ್ತಾರೆ.

ತಸ್ಮಾತ್ ಸಮ್ಯಕ್ಪರೀಕ್ಷೇತ ದೋಷಾನಜ್ಞಾನಸಂಭವಾನ್ |
ಅಜ್ಞಾನಪ್ರಭವಂ ನಿತ್ಯಮಹಂಕಾರಂ ಪರಿತ್ಯಜೇತ್ ॥ 25 ॥

ಆದ್ದರಿಂದ ವಿವೇಕಿಯಾದ ಮನುಷ್ಯನು ಅಜ್ಞಾನದಿಂದ ಉಂಟಾಗುವ ದೋಷಗಳನ್ನು ಚೆನ್ನಾಗಿ ವಿಮರ್ಶಿಸಿ ಆ ಅಜ್ಞಾನದಿಂದಲೇ ಉಂಟಾದ ದುಃಖವನ್ನೂ, ಅಹಂಕಾರವನ್ನೂ ಪರಿತ್ಯಾಗ ಮಾಡಬೇಕು.

ಮಹಾಭೂತಾನೀಂದ್ರಿಯಾಣಿ ಗುಣಾಃ ಸತ್ತ್ವಂ ರಜಸ್ತಮಃ |
ದೇಹಮೂಲಂ ವಿಜಾನೀಹಿ ನೈತಾನಿ ಭಗವಾನತಃ ॥ 26 ॥

ಪಂಚಮಹಾಭೂತಗಳು, ದಶೇಂದ್ರಿಯಗಳು, ಶಬ್ದ-ಸ್ಪರ್ಶಾದಿ ಗುಣಗಳು, ಸತ್ತ್ವ- ರಜಸ್ಸು-ತಮಸ್ಸು ಎಂಬ ಮೂರು ಗುಣಗಳು ಇವುಗಳು ಈ ಪ್ರಾಕೃತಿಕ ದೇಹಕ್ಕೆ ಮೂಲಕಾರಣವಾಗಿದ್ದಾವೆ ಎಂದು ತಿಳಿದುಕೊ. ಇವುಗಳಿಂದಲೂ ದೂರನಾದವನು ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು.

ಉಪಾಯತಃ ಪ್ರವಕ್ಷ್ಯಾಮಿ ತಂ ಚ ಮೃತ್ಯುಂ ದುರಾಸದಮ್ |
ತ್ರೈಲೋಕ್ಯಂ ಸೇಶ್ವರಂ ಸರ್ವಮಹಂಕಾರೇ ಪ್ರತಿಷ್ಠಿತಮ್ ॥ 27 ॥

ಸುಲಭವಾಗಿ ದಾಟಲಾಗದ ಮೃತ್ಯುವನ್ನು ದಾಟುವ ಉಪಾಯವನ್ನು ನಿನಗೆ ತಿಳಿಸುತ್ತೇನೆ. ಮೂರು ಲೋಕಗಳು ಲೋಕಪಾಲಕರಿಂದ ಸಹಿತವಾಗಿ ಎಲ್ಲವೂ ಅಹಂಕಾರದಲ್ಲಿಯೇ ಪ್ರತಿಷ್ಠಿತವಾಗಿವೆ.

ಯಥೇಹ ನಿಯತಃ ಕಾಲೋ ದರ್ಶಯತ್ಯಾರ್ತವಾನ್ ಗುಣಾನ್ |
ತದ್ವದ್ ಭೂತೇಷ್ವಹಂಕಾರಂ ವಿದ್ಯಾದ್ಭೂತಪ್ರವರ್ತಕಮ್ ॥ 28 ॥

ಈ ಜಗತ್ತಿನಲ್ಲಿ ನಿಯತವಾದ ಕಾಲದಲ್ಲಿ ಋತುಸಂಬಂಧವಾದ ಗುಣಗಳ ಆವಿರ್ಭಾವವು ಆಗುತ್ತದೆಯೋ ಅದರಂತೆ ಎಲ್ಲಾ ಪ್ರಾಣಿಗಳಲ್ಲಿಯೂ ಕರ್ಮ ಪ್ರವರ್ತಕವಾದುದು ಅಹಂಕಾರವೆಂದೇ ತಿಳಿಯಬೇಕು.

ಸಮ್ಮೋಹಕಂ ತಮೋ ವಿದ್ಯಾತ್ ಕೃಷ್ಣಮಜ್ಞಾನಸಂಭವಮ್ |
ಪ್ರಕೃತೇರ್ಗುಣಸಂಜಾತೋ ಮಹಾನಹಂಕ್ರಿಯಾ ತತಃ ॥ 29 ॥

ಅಹಂಕಾರವು ಸಾತ್ವಿಕ, ರಾಜಸ, ತಾಮಸ ಎಂದು ಮೂರು ಪ್ರಕಾರಗಳಿಂದ ಕೂಡಿದೆ. ತಮೋಗುಣವು ಸಮ್ಮೋಹಕವಾಗಿದೆ.

ಅಜ್ಞಾನದಿಂದ ಹುಟ್ಟುವ ಈ ತಮೋಗುಣದ ಬಣ್ಣ ಕಪ್ಪು. ಸಾತ್ವಿಕ ಅಹಂಕಾರವು ಪ್ರೀತಿಯನ್ನು ಹುಟ್ಟಿಸುತ್ತದೆ. ರಾಜಸ ಅಹಂಕಾರವು ದುಃಖವನ್ನು ಹುಟ್ಟಿಸುತ್ತದೆ. ಹೀಗೆ ಮೂರು ಗುಣಗಳ ಸ್ವರೂಪವನ್ನು ತಿಳಿಯಬೇಕು.
ಅಹಂಕಾರಾತ್ಪುನಃ ಪಶ್ಚಾದ್ ಭೂತಗ್ರಾಮಮುದಾಹೃತಮ್ |
ಅವ್ಯಕ್ತಸ್ಯ ಗುಣೇಭ್ಯಸ್ತು ತದ್ಗುಣಾಂಶ್ಚ ನಿಬೋಧ ತಾನ್ ॥ 30 ॥
ಪ್ರೀತಿದುಃಖನಿಬದ್ಧಾಂಶ್ಚ ಸಮಸ್ತಾಂಸ್ತ್ರೀನಥೋ ಗುಣಾನ್ |
ಸತ್ತ್ವಸ್ಯ ರಜಸಶ್ಚೈವ ತಮಸಶ್ಚ ನಿಬೋಧ ತಾನ್ ॥ 31 ॥
ಪ್ರಕೃತಿಯ ಗುಣದಿಂದಲೇ ಮಹತ್ತಾದ ಅಹಂಕಾರ ಕ್ರಿಯೆಯು ಉತ್ಪನ್ನವಾಗಿದೆ. ಅಹಂಕಾರದಿಂದ ಪಂಚಭೂತಗಳಿಗೆ ಸಂಬಂಧಿಸಿದ ಇಂದ್ರಿಯಗಳು, ಪ್ರಕೃತಿಯ ಸತ್ವ-ರಜಸ್-ತಮೋಗುಣಗಳಿಂದ ಆ ಇಂದ್ರಿಯಗಳಲ್ಲಿ ಉಂಟಾಗುವ ಗುಣಗಳು ಇವುಗಳನ್ನು ತಿಳಿದುಕೊ. ಸಮಸ್ತ ಗುಣಗಳು ಪ್ರೀತಿ, ದುಃಖಗಳಿಂದ ನಿಬದ್ಧವಾಗಿದ್ದಾವೆ ಎಂದು ತಿಳಿದುಕೊ. ಸತ್ವ-ರಜಸ್-ತಮೋಗುಣಗಳ ಕಾರ್ಯವನ್ನು ಹೇಳುತ್ತೇನೆ, ಕೇಳು.
ಪ್ರಮೋಹೋ ಹರ್ಷಜಃ ಪ್ರೀತಿರಸಂದೇಹೋ ಧೃತಿಃ ಸ್ಮೃತಿಃ |
ಏತಾನ್ ಸತ್ತ್ವಗುಣಾನ್ ವಿದ್ಯಾದಿಮಾನ್ ರಾಜಸತಾಮಸಾನ್ ॥ 32 ॥
ಪ್ರಸನ್ನತೆ, ಹರ್ಷದಿಂದ ಹುಟ್ಟಿದ ಪ್ರೀತಿ, ಸಂದೇಹವಿಲ್ಲದಿರುವಿಕೆ, ಧೈರ್ಯ, ಜ್ಞಾಪಕ ಶಕ್ತಿ ಇವುಗಳನ್ನು ಸತ್ವಗುಣದ ಕಾರ್ಯಗಳಾಗಿದ್ದಾವೆ ಎಂದು ತಿಳಿಯಬೇಕು. ಇದರಂತೆ ರಾಜಸ-ತಾಮಸ ಗುಣಗಳನ್ನು ತಿಳಿದುಕೊಳ್ಳಬೇಕು.
ಅಸಂತೋಷೋಽಕ್ಷಮಾಽಧೈರ್ಯಮತೃಪ್ತಿರ್ವಿಷಯಾದಿಷು |
ರಾಜಸಾಶ್ಚ ಗುಣಾ ಹ್ಯೇತೇ ತತ್ಪರಂ ತಾಮಸಾನ್ ಶೃಣು ॥ 33 ॥
ಅಸಂತೋಷ, ಅಕ್ಷಮಾ, ಅಧೈರ್ಯ, ವಿಷಯಾದಿಗಳಲ್ಲಿ ಅತೃಪ್ತಿ ಇವುಗಳು ರಾಜಸ ಗುಣದ ಕಾರ್ಯಗಳು. ಮುಂದೆ ತಾಮಸ ಗುಣದ ಕಾರ್ಯವನ್ನು ಕೇಳು.
ಮೋಹತಂದ್ರೀ ತಥಾ ದುಃಖಂ ನಿದ್ರಾಽಽಲಸ್ಯಂ ಪ್ರಮಾದತಾ |
ವಿಷಾದೀ ದೀರ್ಘಸೂತ್ರಶ್ಚ ತತ್ತಾಮಸಮುದಾಹೃತಮ್ ॥ 34 ॥
ಮೋಹ, ತೂಕಡಿಕೆ, ದುಃಖ, ನಿದ್ರೆ, ಆಲಸ್ಯ, ಪ್ರಮಾದ, ವಿಷಾದ, ಆಲಸ್ಯದಿಂದ ಕಾಲವನ್ನು ಮುಂದೂಡುವಿಕೆ ಇವೆಲ್ಲವೂ ತಾಮಸಗುಣದ ಕಾರ್ಯಗಳಾಗಿವೆ.
ಕಾಮಕ್ರೋಧೌ ಪ್ರಮಾದಶ್ಚ ಲೋಭಮೋಹೌ ಭಯಂ ಕ್ಲಮಃ |
ವಿಷಾದಶೋಕಾವರತಿರ್ಮಾನದರ್ಪಾವನಾರ್ಯತಾ ॥ 35 ॥
ದೋಷಾಣಾಮೇವಮಾದೀನಾಂ ಪರೀಕ್ಷ್ಯ ಗುರುಲಾಘವಮ್ |
ವಿಮೃಶೇದಾತ್ಮಸಂಸ್ಥಾನಾಮೇಕೈಕಮನುಸಂತತಮ್ ॥ 36 ॥
ಕಾಮ, ಕ್ರೋಧ, ಲೋಭ, ಮೋಹ, ಭಯ, ಬಳಲುವಿಕೆ, ವಿಷಾದ, ಶೋಕ, ಅಪ್ರಸನ್ನತೆ, ಮಾನ, ದರ್ಪ, ಅನಾರ್ಯತೆ - ಇವೇ ಮೊದಲಾದ ದೋಷಗಳನ್ನು ತಿಳಿದು ಆ ದೋಷಗಳು ತನ್ನಲ್ಲಿ ಸಣ್ಣ ಪ್ರಮಾಣದಲ್ಲಿದ್ದಾವೋ, ದೊಡ್ಡ ಪ್ರಮಾಣದಲ್ಲಿದ್ದಾವೋ ಎಂದು ಪರೀಕ್ಷಿಸಿ ಪ್ರತಿಯೊಂದು ತನ್ನಲ್ಲಿರುವ ದೋಷಗಳನ್ನು ದೂರೀಕರಿಸಲು ನಿರಂತರ ಪ್ರಯತ್ನಿಸಬೇಕು.
ಯಸ್ಮಿನ್ ಪ್ರತಿಷ್ಠಿತಂ ಚೇದಂ ಯಸ್ಮಿನ್ ಸಂಜ್ಞಾನನಿರ್ಗತಿಃ |
ಸರ್ವಭೂತಾಧಿಕಂ ನಿತ್ಯಮಹಂಕಾರಂ ವಿಲೋಕಯೇತ್ ॥ 37 ॥
ಯಾವ ಅಹಂಕಾರದಲ್ಲಿಯೇ ಇವೆಲ್ಲವೋ ಪ್ರತಿಷ್ಠಿತವಾಗಿವೆಯೋ ಅಜ್ಞಾನದ ಪ್ರಾಪ್ತಿಗೆ ಯಾವ ಅಹಂಕಾರವೇ ಕಾರಣವಾಗಿದೆಯೋ, ಸಮಸ್ತ ಭೂತಗಳಿಗಿಂತಲೂ ಬಲಿಷ್ಠವಾದ ಈ ಅಹಂಕಾರವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು.
ವಿಲೋಕಮಾನಃ ಸ ತದಾ ಸ್ವಬುದ್ಧ್ಯಾ ಸೂಕ್ಷ್ಮಯಾ ಪುನಃ |
ತದೇವ ಭಾತಿ ತದ್ರೂಪಮಾತ್ಮನಾ ಯತ್ ಸುನಿರ್ಮಲಮ್ ॥ 38 ॥
ಈ ಕ್ರಮದಲ್ಲಿ ಅಹಂಕಾರವನ್ನು ತನ್ನ ಸೂಕ್ಷ್ಮವಾದ ಬುದ್ಧಿಯಿಂದ ಪುನಃ ಪುನಃ ವಿಮರ್ಶಿಸುತ್ತಾ ನಿರ್ಮಲನಾದ ಪರಮಾತ್ಮನನ್ನು ತನ್ನ ಮನಸ್ಸಿನಿಂದ ಚಿಂತಿಸಲು ಆ ರೂಪವೇ ಮನಸ್ಸಿನಲ್ಲಿ ತೋರುತ್ತದೆ.
ಶಿಷ್ಯಃ
ಕೇ ದೋಷಾ ಮನಸಾ ತ್ಯಕ್ತಾಃ ಕೇ ಬುದ್ಧ್ಯಾ ಶಿಥಿಲೀಕೃತಾಃ |
ಕೇ ಪುನಃ ಪುನರಾಯಾಂತಿ ಕೇ ಮೋಹಾದಫಲಾ ಇವ ॥ 39 ॥
ಶಿಷ್ಯ ಪೂಜ್ಯನೇ, ಪೂರ್ವಕಾಲದ ಮುಮುಕ್ಷುಗಳು ತಮ್ಮ ಬುದ್ಧಿಯಿಂದ ಯಾವ ದೋಷಗಳನ್ನು ಮನಸ್ಸಿನಿಂದ ತ್ಯಜಿಸಿದರು? ಬುದ್ಧಿಯ ಪ್ರಭಾವದಿಂದ ಯಾವ ದೋಷಗಳನ್ನು ಶಿಥಿಲೀಕರಿಸಿದರು? ಯಾವ ದೋಷಗಳು ಪುನಃ ಪುನಃ ಬರುತ್ತಲೇ ಇರುತ್ತವೆ? ಯಾವ ದೋಷಗಳು ಅಜ್ಞಾನದ ಕಾರಣದಿಂದ ಅಚಲವಾಗಿ ಉಳಿಯುತ್ತವೆ?
ಕೇಷಾಂ ಬಲಾಬಲಂ ಬುದ್ಧ್ಯಾ ಹೇತುಭಿರ್ವಿಮೃಶೇದ್ ಬುಧಃ |
ಏತತ್ ಸರ್ವಂ ಸಮಾಚಕ್ಷ್ವ ಯಥಾ ವಿದ್ಯಾಮಹಂ ಪ್ರಭೋ |
ಮಹ್ಯಂ ಶುಶ್ರೂಷವೇ ವಿದ್ವನ್ ವಕ್ಷ್ಯೇತದ್ ಬುದ್ಧಿನಿಶ್ಚಿತಮ್ ॥ 40 ॥
ವಿದ್ವಾಂಸನಾದ ಪುರುಷನು ತನ್ನ ಬುದ್ಧಿ ಮತ್ತು ಯುಕ್ತಿಗಳ ಮೂಲಕ ಯಾವ ದೋಷಗಳ ಬಲಾಬಲವನ್ನು ಪರೀಕ್ಷಿಸಬೇಕು? ಇವುಗಳನ್ನು ಚೆನ್ನಾಗಿ ತಿಳಿಯುವಂತೆ ನೀನು ಎಲ್ಲವನ್ನೂ ನನಗೆ ತಿಳಿಸು. ನಿನ್ನ ಸೇವಕನಾಗಿರುವ ನನಗೆ ವಿದ್ವಾಂಸನಾದ ಪೂಜ್ಯನೇ, ನೀನು ಈ ಬುದ್ಧಿ ನಿಶ್ಚಯವನ್ನು ಹೇಗೆ ಹೊಂದಬೇಕೆಂಬುದನ್ನು ತಿಳಿಸು.
ಶಾಂತತ್ವಾದಪರಾಂತಾಚ್ಚ ಆರಂಭಾದಪಿ ಚೈಕತಃ |

ಪ್ರೋಕ್ತೋ ಹ್ಯತ್ರ ಯಥಾ ಹೇತುರೇವಮಾಹುರ್ಮನೀಷಿಣಃ ॥ 41 ॥
ಜ್ಞಾನಿಗಳು ಈ ದೋಷಗಳನ್ನು ದಾಟಲು ಸಹನಶೀಲಗುಣವುಳ್ಳ, ಶಾಂತನಾದ, ಜ್ಞಾನಿಗಳ ಸಮೀಪದಲ್ಲೇ ವಾಸ ಮಾಡುವ, ಪುಣ್ಯಕರ್ಮಗಳಿಗೆ ಪ್ರೇರಕನಾದ ಭಗವಂತನನ್ನೇ ಧ್ಯಾನಿಸಬೇಕು ಎಂದು ಕಾರಣವನ್ನು ಹೇಳುತ್ತಾರೆ. ನನಗೆ ಸ್ಪಷ್ಟಪಡಿಸು.
ಗುರುಃ
ದೋಷೈರ್ಮೂಲಾದವಚ್ಛಿನ್ನೈರ್ವಿಶುದ್ಧಾತ್ಮಾ ವಿಮುಚ್ಯತೇ |
ವಿನಾಶಯತಿ ಸಂಭೂತಮಯಸ್ಮಯಮಯೋ ಯಥಾ |
ತಥಾ ಕೃತಾತ್ಮಾ ಸಹಜೈರ್ದೋಷೈರ್ನಶ್ಯತಿ ರಾಜಸೈಃ ॥ 42 ॥
ಗುರು ಶಿಷ್ಯನೇ, ಈ ದೋಷಗಳಿಗೆ ಮೂಲಕಾರಣವು ಪ್ರಮಾದ ವಶದಿಂದ ಉಂಟಾದ ಅಜ್ಞಾನವೇ ಆಗಿದೆ. ಆದ್ದರಿಂದ ಮೂಲಸಹಿತವಾಗಿ ಈ ದೋಷಗಳ ವಿನಾಶವಾದ ನಂತರ ಮನುಷ್ಯನ ಅಂತಃಕರಣವು ವಿಶುದ್ಧವಾಗುತ್ತದೆ. ಅವನು ಸಂಸಾರದಿಂದ ಮುಕ್ತನಾಗುತ್ತಾನೆ. ಲೋಹದಿಂದ ಮಾಡಿದ ಉಳಿಯ ತುದಿಯು ಲೋಹವನ್ನು ಕತ್ತರಿಸುತ್ತಲೇ ತಾನೂ ಮೊಂಡಾಗಿ ಹೋಗುವಂತೆ ಧ್ಯಾನದಿಂದ ಸಂಸ್ಕೃತವಾದ ಬುದ್ಧಿಯು ತಮೋಗುಣ ಜನಿತವಾದ ಅನಾದಿ ದೋಷಗಳನ್ನು ನಾಶ ಮಾಡಿ ಅವುಗಳೊಡನೆ ತಾನೂ ನಾಶ ಹೊಂದುತ್ತದೆ.
ಸಹಜೈರವಿಶುದ್ಧಾತ್ಮಾ ದೋಷೈರ್ನಶ್ಯತಿ ತಾಮಸೈಃ |
ರಾಜಸಂ ತಾಮಸಂ ಚೈವ ಶುದ್ಧಾತ್ಮಾಕರ್ಮಸಂಭವಮ್ ॥ 43 ॥
ಸಹಜವಾಗಿ ಹುಟ್ಟಿದ ದೋಷಗಳಿಂದ ಮಲಿನನಾದ ಚೇತನನು ತಾಮಸ ದೋಷಗಳಿಂದಲೇ ನಾಶ ಹೊಂದುತ್ತಾನೆ. ರಾಜಸ-ತಾಮಸ ಗುಣಗಳಿಂದ ಶುದ್ಧಾತ್ಮನಾದರೂ ಕಾಲಿಕವಾಗಿ ಆ ದೋಷಗಳಿಗೆ ಬದ್ಧನಾಗಿರುತ್ತಾನೆ.
ಶಮಯೇತ್ ಸತ್ತ್ವಮಾಸ್ಥಾಯ ಬುದ್ಧ್ಯಾ ಕೇವಲಯಾ ದ್ವಿಜಃ |
ತ್ಯಜೇಚ್ಚ ಮನಸಾ ಚೇತಃ ಶುದ್ಧಾತ್ಮಾ ಬುದ್ಧಿಮಾಸ್ಥಿತಃ ॥ 44 ॥
ಈ ರಾಜಸ-ತಾಮಸವೆಂಬ ಕಾಲಿಕವಾಗಿ ಉತ್ಪನ್ನವಾಗುವ ದೋಷಗಳನ್ನು ಸತ್ವಗುಣವನ್ನು ಆಶ್ರಯಿಸಿಕೊಂಡು ಬುದ್ಧಿಪೂರ್ವಕವಾಗಿ ಬ್ರಾಹ್ಮಣನು ತ್ಯಜಿಸಬೇಕು. ಮನಃಪೂರ್ವಕವಾಗಿ ಬುದ್ಧಿಯ ಸಹಕಾರದಿಂದ ಸತ್ವಗುಣವನ್ನಾಶ್ರಯಿಸಿ ರಾಜಸ-ತಾಮಸ ಗುಣಗಳನ್ನು ತ್ಯಜಿಸಿದಲ್ಲಿ ಶುದ್ಧಾತ್ಮನಾಗುತ್ತಾನೆ.
ತತ್ ಸರ್ವಂ ದೇಹಿನಾಂ ಬೀಜಂ ಸರ್ವಮಾತ್ಮವತಃ ಸಮಮ್ |
ತಸ್ಮಾದಾತ್ಮವತಾ ವರ್ಜ್ಯಂ ರಜಶ್ಚ ತಮ ಏವ ಚ ॥ 45 ॥
ಜಿತಮನಸ್ಕನಾದ ಜೀವನಿಗೆ ಸತ್ವಗುಣದ ಅವಲಂಬನೆಯು ಆದಲ್ಲಿ ರಜೋಗುಣವನ್ನು ಗೆದ್ದಂತೆಯೇ. ಆದ್ದರಿಂದ ಜಿತಮನಸ್ಸಿನಿಂದ ರಜೋಗುಣ, ತಮೋಗುಣಗಳನ್ನು ಸತ್ವಗುಣವನ್ನಾಶ್ರಯಿಸಿ ಬಿಡಬೇಕು. ರಜೋಗುಣ, ತಮೋಗುಣಗಳಿಂದ ನಿರ್ಮುಕ್ತವಾದ ಮನಸ್ಸು ನಿರ್ಮಲ ಭಾವವನ್ನು ಹೊಂದುತ್ತದೆ.
ರಜಸ್ತಮೋಭ್ಯಾಂ ನಿರ್ಮುಕ್ತಂ ಸತ್ತ್ವಂ ನಿರ್ಮಲತಾಮಿಯಾತ್ |
ಆಹಾರಾನ್ ವರ್ಜಯೇನ್ನಿತ್ಯಂ ರಾಜಸಾಂಸ್ತಾಮಸಾನಪಿ ॥ 46 ॥
ಆ ಮನೋನೈರ್ಮಲ್ಯಕ್ಕಾಗಿ ರಾಜಸ-ತಾಮಸ ಆಹಾರಗಳನ್ನು ವರ್ಜಿಸಬೇಕು. ರಜೋಗುಣ, ತಮೋಗುಣಗಳಿಂದ ನಿರ್ಮುಕ್ತವಾದ ಮನಸ್ಸು ನಿರ್ಮಲ ಭಾವವನ್ನು ಹೊಂದುತ್ತದೆ.
ತೇ ಬ್ರಹ್ಮ ಪುನರಾಯಾಂತಿ ನ ಮೋಹಾದಚಲಾ ಇವ |
ಅಥ ವಾ ಮಂತ್ರವದ್ ಬ್ರೂಯುರ್ಮಾಂಸಾದಾನಾಂ ಯಜುಷ್ಕೃತಮ್॥
ಯಾರು ಈ ರೀತಿಯಾಗಿ ಅನುಷ್ಠಾನ ಮಾಡುತ್ತಾರೋ, ವಿಷಯ- ಮೋಹಗಳಿಗೆ ತುತ್ತಾಗುವುದಿಲ್ಲವೋ ಅವರು ಪರಬ್ರಹ್ಮನನ್ನು ಸೇರಿ ಈ ಸಂಸಾರಚಕ್ರಕ್ಕೆ ಪುನಃ ಆಗಮಿಸುವುದಿಲ್ಲ. ಅಥವಾ ಯಜ್ಞದಲ್ಲಿ ಹೋಮಿಸಲ್ಪಟ್ಟ ಮಾಂಸವು ಮಂತ್ರಪೂತ ವಾದವುಗಳಿಂದ ಹೇಗೆ ಪವಿತ್ರವೆನಿಸುತ್ತವೋ, ಭಗವಂತನ ಜ್ಞಾನದ ಹಿನ್ನೆಲೆಯಲ್ಲಿ ಸ್ವೀಕರಿಸಿದ ಪದಾರ್ಥಗಳೂ ಮನಸ್ಸನ್ನು ಮೋಹಗೊಳಿಸವು.
ಹೇತುಃ ಸ ಏವಾನಾದಾನೇ ಶುದ್ಧಧರ್ಮಾನುಪಾಲನೇ |
ರಜಸಾ ಧರ್ಮಯುಕ್ತಾನಿ ಕಾರ್ಯಾಣ್ಯಪಿ ಸಮಾಪ್ನುಯಾತ್ |
ಅರ್ಥಯುಕ್ತಾನಿ ಚಾತ್ಯರ್ಥಂ ಕಾಮಾನ್ ಸರ್ವಾಂಶ್ಚ ಸೇವತೇ ॥ 48 ॥
ಶುದ್ಧವಾದ ಧರ್ಮದಲ್ಲಿ ವರ್ತಿಸಲು ತಮೋ-ರಜ ಗುಣಗಳು ಮನಸ್ಸಿಗೆ ಬಾರದಿರುವಂತೆ ಮಾಡಲು ನಿಷ್ಕಾಮ ಭಾವವು ಸತ್ತ್ವಗುಣವನ್ನು ಆಶ್ರಯಿಸುವುದೇ ಕಾರಣವಾಗಿದೆ. ರಜೋಗುಣವನ್ನು ಹೊಂದಿದಾಗ ಕಾಮಯುಕ್ತವಾದ ಮನಸ್ಸು ರಜೋಗುಣದ ಕಾರ್ಯಗಳನ್ನು ಮಾಡಲು ಬಯಸುತ್ತದೆ. ಅರ್ಥಕಾಮನೆಗಳಿಗಾಗಿ ಅತ್ಯಂತ ಆಸಕ್ತಿಯಿಂದ ಕರ್ಮಗಳನ್ನು ಮಾಡಲು ತೊಡಗುತ್ತಾನೆ. ಅರ್ಥಕಾಮಗಳಲ್ಲಿಯೇ ಮನಸ್ಸಿಟ್ಟು ವಿಷಯಭೋಗಗಳಲ್ಲಿ ಅತ್ಯಾಸಕ್ತಿಯನ್ನು ಹೊಂದುತ್ತಾನೆ. ಅವುಗಳನ್ನು ಸೇವಿಸುತ್ತಾನೆ.
ತಮಸಾ ಲೋಭಯುಕ್ತಾನಿ ಕ್ರೋಧಜಾನಿ ಚ ಸೇವತೇ |
ಹಿಂಸಾವಿಹಾರಾಭಿರತಸ್ತಂದ್ರೀನಿದ್ರಾಸಮನ್ವಿತಃ ॥ 49 ॥
ತಮೋಗುಣದಿಂದ ಲೋಭಯುಕ್ತನಾಗಿ ಕ್ರೋಧಜನಿತವಾದ ಕರ್ಮಗಳನ್ನು ಮಾಡಲು ತೊಡಗುತ್ತಾನೆ. ಹಿಂಸಾತ್ಮಕವಾದ ಕಾರ್ಯಗಳಲ್ಲಿಯೇ ಅವನಿಗೆ ಆಸಕ್ತಿ ಹುಟ್ಟುತ್ತದೆ. ಬಳಿಕ ತೂಕಡಿಕೆ, ನಿದ್ರೆಗಳಿಂದ ಕೂಡಿದವನಾಗುತ್ತಾನೆ.
ಸತ್ತ್ವಸ್ಥಃ ಸಾತ್ತ್ವಿಕಾನ್ ಭಾವಾನ್ ಶುದ್ಧಾನ್ ಪಶ್ಯತಿ ಸಂಶ್ರಿತಃ |
ಸ ದೇಹೀ ವಿಮಲಃ ಶ್ರೀಮಾನ್ ಶುದ್ಧೋ ವಿದ್ಯಾಸಮನ್ವಿತಃ ॥ 50 ॥
ಸತ್ತ್ವಗುಣಸಂಪನ್ನನಾದ ಮನುಷ್ಯನು ಯಾವಾಗಲೂ ಸಾತ್ವಿಕವಾದ ಭಾವನೆಗಳನ್ನೇ ನೋಡುತ್ತಾ ಅವುಗಳಲ್ಲಿಯೇ ನಿಷ್ಠನಾಗಿರುತ್ತಾನೆ. ಅವನು ಅತ್ಯಂತ ನಿರ್ಮಲನೂ, ಕಾಂತಿಯುಕ್ತನೂ ಆಗಿರುತ್ತಾನೆ. ಶ್ರದ್ಧೆ ಮತ್ತು ವಿದ್ಯೆಗಳಿಂದ

ಕೂಡಿದವನಾಗಿರುತ್ತಾನೆ. ಶ್ರದ್ಧಾ-ವಿದ್ಯೆಗಳೇ ಇವನಲ್ಲಿ ಪ್ರಧಾನವಾಗಿ ತೋರುತ್ತವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ದ್ವಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ಮೂರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಅಧ್ಯಾತ್ಮವನ್ನು ಅನುವಾದಿಸಿದುದು.
ಗುರುಃ
ರಜಸಾ ಸಾಧ್ಯತೇ ಮೋಹಸ್ತಮಸಾ ಚ ನರರ್ಷಭ |
ಕ್ರೋಧಲೋಭೌ ಭಯಂ ದರ್ಪ ಏತೇಷಾಂ ಸಾಧನಾಚ್ಛುಚಿಃ ॥ 1 ॥
ಗುರು ನರಶ್ರೇಷ್ಠನೇ, ರಜೋಗುಣ ತಮೋಗುಣದಿಂದ ಮೋಹವು ಉತ್ಪತ್ತಿಯಾಗುತ್ತದೆ. ಆ ಮೋಹದಿಂದ
ಕ್ರೋಧ-ಲೋಭ-ಭಯ-ದರ್ಪಗಳು ಹುಟ್ಟುತ್ತವೆ. ಇವುಗಳನ್ನೆಲ್ಲ ನಾಶೊಳಿಸುವುದರಿಂದ ಮನುಷ್ಯನು ಪರಿಶುದ್ಧನಾಗುತ್ತಾನೆ.
ಪರಮಂ ಪರಮಾತ್ಮಾನಂ ದೇವಮಕ್ಷಯಮವ್ಯಯಮ್ |
ವಿಷ್ಣುಮವ್ಯಕ್ತಸಂಸ್ಥಾನಂ ದಿಶಂತೇ ದೇವಸತ್ತಮಮ್ ॥ 2 ॥
ಸರ್ವೋತ್ತಮನಾದ ಮಹಾವಿಷ್ಣುವನ್ನು ಪರಬ್ರಹ್ಮನೆಂದು, ಕ್ಷಯರಹಿತನೆಂದು, ಅವಿನಾಶಿಯೆಂದು, ಅವ್ಯಕ್ತಸ್ವರೂಪನೆಂದು
ಮಹರ್ಷಿಗಳು ಹೇಳುತ್ತಾರೆ.
ತಸ್ಯ ಮಾಯಾವಿದಗ್ಧಾಂಗಾ ಜ್ಞಾನಭ್ರಷ್ಟಾ ನಿರಾಶಿಷಃ |
ಮಾನನಾಜ್ಞಾನಸಮ್ಮೋಹಾತ್ತತಃ ಕಾಮಂ ಪ್ರಯಾಂತಿ ವೈ ॥ 3 ॥
ಆ ಮಹಾವಿಷ್ಣುವಿನ ಇಚ್ಛಾಶಕ್ತಿಯಿಂದ ಬಂಧಿತರಾದ ಮನುಷ್ಯರು ಅಜ್ಞಾನಿಗಳು, ವಿವೇಕರಹಿತರೂ ಆಗಿರುತ್ತಾರೆ. ಅಹಂಕಾರ,
ಅಜ್ಞಾನ, ಸಮ್ಮೋಹಗಳಿಂದ ಅಭಿಭೂತರಾಗಿ ಕಾಮವನ್ನು ಹೊಂದಿರುತ್ತಾರೆ.
ಕಾಮಾತ್ ಕ್ರೋಧಮವಾಪ್ಯಾಥ ಲೋಭಮೋಹೌ ಚ ಮಾನವಾಃ |
ಮಾನದರ್ಪಾದಹಂಕಾರಮಹಂಕಾರಾತ್ತತಃ ಕ್ರಿಯಾಃ ॥ 4 ॥
ಅವರು ಕಾಮದಿಂದ ಕ್ರೋಧವನ್ನು ಹೊಂದಿದವರಾಗಿ, ಲೋಭ, ಮೋಹಗಳನ್ನು, ಮಾನ, ದರ್ಪ, ಅಹಂಕಾರಗಳನ್ನು
ಹೊಂದಿದವರಾಗಿ ಹುಟ್ಟು-ಸಾವುಗಳಿಗೆ ಕಾರಣವಾದ ಕ್ರಿಯೆಗಳನ್ನು ಆಚರಿಸುತ್ತಾರೆ.
ಕ್ರಿಯಾಭಿಃ ಸ್ನೇಹಸಂಬಂಧಃ ಸ್ನೇಹಾಚ್ಛೋಕಮನಂತರಮ್ |
ಸುಖದುಃಖಸಮಾರಂಭಾಜ್ಜನ್ಮಾಜನ್ಮಕೃತಕ್ಷಣಾಃ ॥ 5 ॥
ಅಂತಹ ಕ್ರಿಯೆಗಳಿಂದ ಸ್ನೇಹದ ಸಂಬಂಧವನ್ನು, ವಿಷಯಾಸಕ್ತಿಯಿಂದ ಶೋಕವನ್ನೂ ಹೊಂದುತ್ತಾರೆ. ಸುಖ-ದುಃಖಗಳನ್ನು
ಉಂಟುಮಾಡುವ ಕಾರ್ಯಗಳನ್ನು ಮಾಡುವುದರಿಂದ ಹುಟ್ಟು-ಸಾವುಗಳ ಕಷ್ಟವನ್ನು ಅನುಭವಿಸುತ್ತಾರೆ.
ಜನ್ಮತೋ ಗರ್ಭವಾಸಂ ತು ಶುಕ್ರಶೋಣಿತಸಂಭವಮ್ |
ಪುರೀಷಮೂತ್ರವಿಕ್ಲೇದಶೋಣಿತಪ್ರಭವಾವಿಲಮ್ ॥ 6 ॥
ಜನ್ಮದ ನಿಮಿತ್ತವಾಗಿ ಗರ್ಭವಾಸವನ್ನು ಅನುಭವಿಸಬೇಕಾಗುತ್ತದೆ. ಶುಕ್ರ- ಶೋಣಿತಗಳಿಂದಾಗಿ ಉತ್ಪತ್ತಿಯನ್ನೂ, ಅದೇ ಸಮಯದಲ್ಲಿ
ತಾಯಿಯ ಗರ್ಭದಲ್ಲಿ ಮಲ-ಮೂತ್ರಗಳಿಂದ ನಾರುತ್ತಿರುವ ರಕ್ತದ ವಿಕಾರದಿಂದ ಮಲಿನವಾಗಿರುವ ಸ್ಥಿತಿಯನ್ನು ಹೊಂದಿರುತ್ತಾರೆ.
ತೃಷ್ಣಾಭಿಭೂತಸ್ತೈರ್ಬದ್ಧಸ್ತಾನೇವಾಭಿಪರಿಪ್ಲವನ್ |
ತಥಾ ನರಕಗರ್ತಸ್ಥಸ್ತೃಷ್ಣಾರಜ್ಜುಭಿರಾಚಿತಃ |
ಪುಣ್ಯಪಾಪಪ್ರಣುನ್ನಾಂಗೋ ಜಾಯತೇ ಸ ಯಥಾ ಕೃಮಿಃ ॥ 7 ॥
ವಿಷಯಗಳ ದುರಾಸೆಯಿಂದ ಆಕ್ರಮಿಸಲ್ಪಟ್ಟ ಮನುಷ್ಯರು ಅವುಗಳಲ್ಲಿಯೇ ಬಂಧಿತರಾಗಿ ಅವುಗಳನ್ನೇ ಅನುಸರಿಸುತ್ತಾರೆ.
ಬಳಿಕ ನರಕದ ಹೊಂಡಗಳಲ್ಲಿ ಇರುವ ಅತಿಯಾದ ಆಸೆಗಳೆಂಬ ರಜ್ಜುಗಳಿಂದ ಬಂಧಿತರಾಗಿ ಪುಣ್ಯ-ಪಾಪಗಳಿಂದ ದುಃಖಿತವಾದ
ಅಂಗಗಳುಳ್ಳವರಾಗಿ ಕ್ರಿಮಿಗಳಂತೆ ದುಃಖಿತರಾಗಿ ಹುಟ್ಟುತ್ತಾರೆ.
ಮಶಕೈರ್ಮತ್ಕುಣೈರ್ದಷ್ಟಸ್ತಥಾ ಚಿತ್ರವಧಾರ್ದಿತಃ |
ನಾನಾವ್ಯಾಧಿಭಿರಾಕೀರ್ಣಃ ಕಥಂಚಿದ್ ಯೌವನಂ ಗತಃ ॥ 8 ॥
ಸೊಳ್ಳೆಗಳಿಂದ, ತಿಗಣೆಗಳಿಂದ ಕಚ್ಚಲ್ಪಟ್ಟವರಾಗಿ, ಬಗೆಬಗೆಯ ವಧೆಗಳಿಂದ ಅರ್ದಿತ(ಪೀಡಿತ)ರಾಗಿ, ನಾನಾ ವಿಧವಾದ
ರೋಗಗಳಿಂದ ಆಕೀರ್ಣರಾಗಿ (ಕೂಡಿಕೊಂಡು) ಕಷ್ಟದಿಂದ ಯೌವನವನ್ನು ಹೊಂದುತ್ತಾರೆ.
ಕರ್ಮೋತ್ಸೃಜತಿ ಭೂಯಶ್ಚ ರಜ್ಜುಃ ಸ್ವಸ್ವಮುಖೇಪ್ಸಯಾ |
ಯೋಷಿತಂ ನರಕಂ ಗೃಹ್ಯ ಜನ್ಮಕರ್ಮವಶಾನುಗಃ ॥ 9 ॥
ಯೌವನ ಬಂದ ಬಳಿಕ ಮುಂದೆ ಮುಂದೆ ಜನ್ಮಾಂತರಗಳನ್ನು ಹೆಚ್ಚಿಸುವಂತಹ ಕರ್ಮಬಂಧನಗಳಿಂದ ಬಿಗಿಯಲ್ಪಟ್ಟು ಆ
ದಾರಿಯಲ್ಲಿಯೇ ಸಾಗುತ್ತಾನೆ. ಸ್ತ್ರೀ ಎಂಬ ನರಕದಲ್ಲಿ ಬಿದ್ದು ಅದರಲ್ಲಿಯೂ ಸುಖಭ್ರಾಂತಿಯಿಂದ ಪುನಃ ಪುನಃ ತನ್ನನ್ನು
ಸಂಸಾರದಲ್ಲಿಯೇ ಕಟ್ಟಿಹಾಕುವಂತಹ ಕರ್ಮಗಳನ್ನೇ ನಡೆಸುತ್ತಾನೆ.
ಪುರಕ್ಷೇತ್ರನಿಮಿತ್ತಂ ಯದ್ ದುಃಖಂ ವಕ್ತುಂ ನ ಶಕ್ಯತೇ |
ಕಸ್ತತ್ರ ನಿಂದಕಶ್ಚೈವ ನರಕೇ ಪಚ್ಯತೇ ಭೃಶಮ್ ॥ 10 ॥
ಆ ವ್ಯಕ್ತಿಯು ಸಂಸಾರದಲ್ಲಿ ಹೊಲ-ಗದ್ದೆಗಳಿಗಾಗಿ, ಮನೆ-ಮಠಗಳಿಗಾಗಿ ಪಡುವ ಕಷ್ಟ ಏನೆಂಬುದನ್ನು ಹೇಳಲು ಸಾಧ್ಯವಿಲ್ಲ. ಇವನು

ನರಕದಲ್ಲಿ ನಿರಂತರ ದುಃಖಪಡುವ ಸ್ಥಿತಿಯನ್ನು ಯಾರು ತಾನೇ ನಿಂದಿಸಲು ಸಾಧ್ಯ?
ವಾರ್ಧಕ್ಯಮನುಲಂಘೇತ ತತ್ರ ಕರ್ಮಾರಭೇತ್ ಪುನಃ |
ಭಗವಾನ್ ಸಂಸ್ತುತಃ ಪಶ್ಚಾತ್ ಕಿಂ ಪ್ರವಕ್ಷ್ಯಾಮಿ ತೇ ಭೃಶಮ್ ॥ 11 ॥
ಆ ಜೀವನು ವಾರ್ಧಕ್ಯವನ್ನು ಹೊಂದಿದಾಗಲೂ ಪುನಃ ಬಂಧಕವಾದ ಕರ್ಮಗಳನ್ನೇ ಮಾಡುತ್ತಿರುತ್ತಾನೆ. ಇದನ್ನು ದಾಟಿ ಸಾಗುವುದಿಲ್ಲ. ಸಕಲ ಶ್ರುತಿಗಳಿಂದ ಭಗವಂತನು ಚೆನ್ನಾಗಿ ಕೊಂಡಾಡಲ್ಪಡುತ್ತಿದ್ದರೂ ಆ ದೇವರಿಗೆ ಬೆನ್ನು ಹಾಕಿ ಸಾಗುವ ಈ ಜೀವನ ಬಗ್ಗೆ ಏನೆಂದು ಹೇಳಲಿ? ಹೇಳಲು ಲಜ್ಜೆಯಾಗುತ್ತದೆ ಎಂದು ಭಾವ.
ಸಂಸಾರತಂತ್ರವಾಹಿನ್ಯಸ್ತತ್ರ ಬುದ್ಧ್ಯೇತ ಯೋಷಿತಃ |
ಪ್ರಕೃತ್ಯಾ ಕ್ಷೇತ್ರಭೂತಾಸ್ತಾ ನರಾಃ ಕ್ಷೇತ್ರಜ್ಞಲಕ್ಷಣಾಃ |
ತಸ್ಮಾದೇತಾ ವಿಶೇಷೇಣ ನರೋಽತೀಯುರ್ವಿಪಶ್ಚಿತಃ ॥ 12 ॥
ಸ್ತ್ರೀಯರೇ ಸಂಸಾರವೆಂಬ ಯಂತ್ರವನ್ನು ನಡೆಸುವವರು ಎಂದು ತಿಳಿ. ಅವರೇ ಪ್ರಕೃತಿಯೆಂಬ ಮಾಯೆಯ ಕ್ಷೇತ್ರವೆನಿಸುವರು. ಆದ್ದರಿಂದ ವಿವೇಕವುಳ್ಳವರು ಸಾಮಾನ್ಯ ಸ್ಥಿತಿಯಲ್ಲಿಯೂ, ವಿಶೇಷ ಸ್ಥಿತಿಯಲ್ಲಿಯೂ ಮಾಯಾರೂಪರಾದ ಸ್ತ್ರೀಯರ ಸಹವಾಸವನ್ನು ದೂರ ಮಾಡಬೇಕು.
ಕೃತ್ಯಾ ಹ್ಯೇತಾ ಘೋರರೂಪಾ ಮೋಹಯಂತ್ಯವಿಚಕ್ಷಣಾನ್ |
ರಜಸ್ಯಂತರ್ಹಿತಾ ಮೂರ್ತಿರಿಂದ್ರಿಯಾಣಾಂ ಸನಾತನೀ ॥ 13 ॥
ಸ್ತ್ರೀಯರು ಭಯಂಕರವಾದ ರೂಪದಿಂದ ಕೂಡಿರುವ ಕೃತ್ಯಕ್ಕೆ ಸಮಾನರಾಗಿರುತ್ತಾರೆ. ಅಜ್ಞಾನಿಯಾಗಿರುವ ಮನುಷ್ಯನನ್ನು ವಿಮೋಹಗೊಳಿಸುತ್ತಾರೆ. ಇಂದ್ರಿಯಾದಿ ವಿಕಾರವನ್ನುಂಟು ಮಾಡುವ ಸನಾತನವಾದ ನಾರೀಮೂರ್ತಿಯು ವಿವೇಕ ಇಲ್ಲದವರನ್ನೇ ಮರಳು ಮಾಡಿ ಕೆಡಿಸುತ್ತದೆ. ರಜೋಗುಣದಲ್ಲಿ ಮುಳುಗಿದ ಇಂದ್ರಿಯಗಳ ಸಾಕಾರಮೂರ್ತಿಯೇ ಸ್ತ್ರೀಯರಾಗಿರುತ್ತಾರೆ.
ತಸ್ಮಾತ್ತರ್ಷಾತ್ಮಕಾದ್ರಾಗಾದ್ ಬೀಜಾಜ್ಜಾಯಂತಿ ಜಂತವಃ |
ಸ್ವದೇಹಜಾತಾಸ್ವಸಂಜ್ಞಾನ್ ಯದ್ವದಂಗಾತ್ಕೃಮೀಂಸ್ತ್ಯಜೇತ್ |
ಸ್ವಸಂಜ್ಞಾನಸ್ವಜಾಂಸ್ತದ್ವತ್ ಸುತಸಂಜ್ಞಾನ್ ಕೃಮೀಂಸ್ತ್ಯಜೇತ್ ॥ 14॥
ಆದ್ದರಿಂದ ಸ್ತ್ರೀಸಂಬಂಧವಾದ ಅನುರಾಗದ ಕಾರಣದಿಂದ ಪುರುಷನ ವೀರ್ಯದಿಂದ ಜೀವರ ಉತ್ಪತ್ತಿಯಾಗುತ್ತದೆ. ತನ್ನ ದೇಹದಿಂದ ಹುಟ್ಟಿದ ಮಕ್ಕಳಾದರೂ ಸಂಸಾರಕ್ಕೆ ಕಾರಣವೇ ಆಗುತ್ತಾರೆ. ಹೇನು ಮೊದಲಾದ ಕ್ರಿಮಿಗಳು ತಮ್ಮ ತಮ್ಮ ದೇಹದಲ್ಲಿ ಹುಟ್ಟಿದವಾಗಿದ್ದರೂ ಅವುಗಳಿಗೆ ಸ್ವಕೀಯರಲ್ಲ, ಅಸ್ವರು ಎಂದು ಹೇಗೆ ಕರೆಯುತ್ತೇವೋ ನಮ್ಮ ಮನುಷ್ಯರಂತೆ ಹೆಸರಿಲ್ಲದ ಕಾರಣದಿಂದ ಜಂತುವೆಂದು, ಮಕ್ಕಳೆಂಬ ವಾತ್ಸಲ್ಯವಿಡದೆ ನಮ್ಮ ದೇಹದಿಂದ ಹೊರಗಿಡಲು ಹೇಗೆ ಯತ್ನಿಸುತ್ತೇವೋ ನಮ್ಮ ಸಂತಾನವನ್ನು ಹಾಗೇ ಭಾವಿಸಬೇಕು.
ಶುಕ್ರತೋ ರಸತಶ್ಚೈವ ಸ್ನೇಹಾಜ್ಜಾಯಂತಿ ಜಂತವಃ |
ಸ್ವಭಾವಾತ್ ಕರ್ಮಯೋಗಾದ್ವಾ ತಾನುಪೇಕ್ಷೇತ ಬುದ್ಧಿಮಾನ್ ॥ 15 ॥
ಶರೀರದ ವೀರ್ಯದ ಮೂಲಕವಾಗಿ, ಪ್ರಾರಬ್ಧಕರ್ಮಕ್ಕನುಗುಣವಾಗಿ ಮಕ್ಕಳು ಹುಟ್ಟುತ್ತಾರೆ. ಬೆವರಿನ ಮೂಲಕ ಕರ್ಮಕ್ಕನುಗುಣವಾಗಿ ಹುಳ-ಹುಪ್ಪಟೆಗಳು ಹುಟ್ಟುತ್ತವೆ. ಬುದ್ಧಿವಂತನಾದವನು ಹುಳ-ಹುಪ್ಪಟೆಗಳಂತೆ ಅವರನ್ನು ಉಪೇಕ್ಷಿಸಬೇಕು (ಬಂಧಕವಾದ ಯಾವ ಕರ್ಮವನ್ನೂ ಆಚರಿಸಬಾರದು. ಕಾಮ-ಕ್ರೋಧಗಳ ವಿಕಾರದಿಂದ ಹುಟ್ಟಿದ ಮಕ್ಕಳಲ್ಲಿ ಮೋಹವನ್ನು ತಾಳದೆ ಕರ್ತವ್ಯವನ್ನು ಭೋಗಿಸಬೇಕು ಎಂದು ತಾತ್ಪರ್ಯ).
ರಜಸ್ತಮಸಿ ಪರ್ಯಸ್ತಂ ಸತ್ತ್ವಂ ತಮಸಿ ಸಂಸ್ಥಿತಮ್ |
ಜ್ಞಾನಾಧಿಷ್ಠಾನಮಜ್ಞಾನಂ ಬುದ್ಧ್ಯಹಂಕಾರಲಕ್ಷಣಮ್ ॥ 16 ॥
ರಜೋಗುಣವು ತಮೋಗುಣದಲ್ಲಿ ಲಯ ಹೊಂದುವುದು. ಸತ್ತ್ವಗುಣ ರಜೋಗುಣದಲ್ಲಿ ಲಯ ಹೊಂದುವುದು. ಅಜ್ಞಾನವು ಜ್ಞಾನದಲ್ಲಿ ಲಯ ಹೊಂದುವುದು. ಶರೀರ ಪ್ರಾಪ್ತಿಗೆ ಅಜ್ಞಾನವೇ ಕಾರಣವಾಗಿದೆ. ಅವ್ಯಕ್ತನಾದ ಆತ್ಮನು ಬುದ್ಧಿ-ಅಹಂಕಾರದಿಂದ ಯುಕ್ತನಾಗಿದ್ದಾನೆ.
ತದ್ ಬೀಜಂ ದೇಹಿನಾಮಾಹುಸ್ತದ್ ಬೀಜಂ ಜೀವಸಂಜ್ಞಿತಮ್ |
ಕರ್ಮಣಾ ಕಾಲಯುಕ್ತೇನ ಸಂಸಾರಪರಿವರ್ತಕಮ್ ॥ 17 ॥
ಅವ್ಯಕ್ತನಾದ ಆ ಜೀವನೇ ದೇಹಧಾರಿಗಳಾದ ಪ್ರಾಣಿಗಳಿಗೆ ಬೀಜರೂಪನಾಗಿದ್ದಾನೆ. ಜೀವಭೂತನಾದ ಆತ್ಮನೇ ಗುಣಗಳ ಸಂಗದಿಂದ ಜೀವನೆಂದು ಕರೆಯಲ್ಪಡುತ್ತಾನೆ. ಆ ಜೀವನೇ ಕಾಲಾನುಗುಣವಾದ ಕರ್ಮದಿಂದ ಪ್ರೇರಿತನಾಗಿ ಸಂಸಾರ ಚಕ್ರದಲ್ಲಿ ತಿರುಗುತ್ತಾನೆ.
ರಮತ್ಯಯಂ ಯಥಾ ಸ್ವಪ್ನೇ ಮನಸಾ ದೇಹವಾನಿವ |
ಕರ್ಮಗರ್ಭೈರ್ಗುಣೈರ್ದೇಹೀ ಗರ್ಭೇ ತದುಪಪದ್ಯತೇ ॥ 18 ॥
ಯಾವ ರೀತಿಯಲ್ಲಿ ಸ್ವಪ್ನಾವಸ್ಥೆಯಲ್ಲಿದ್ದಾಗ ಜೀವನು ಮನಸ್ಸಿನ ಮೂಲಕ ಮತ್ತೊಂದು ಶರೀರವನ್ನು ಧರಿಸಿರುವಂತೆ ಚೇಷ್ಟೆಗಳನ್ನು ಮಾಡುತ್ತಾನೋ ಅದೇ ರೀತಿ ಕರ್ಮ ಸಂಬಂಧದಿಂದ ತಾಯಿಯ ಗರ್ಭದಲ್ಲಿ ಜನ್ಮವನ್ನು ತಾಳುತ್ತಾನೆ.
ಕರ್ಮಣಾ ಬೀಜಭೂತೇನ ಚೋದ್ಯತೇ ಯದ್ ಯದಿಂದ್ರಿಯಮ್ |
ಜಾಯತೇ ತದಹಂಕಾರಾದ್ರಾಗಯುಕ್ತೇನ ಚೇತಸಾ ॥ 19 ॥
ಹೀಗೆ ಜನ್ಮಕಾರಣವಾದ ಕರ್ಮದಿಂದ ಅವನು ಯಾವ ಇಂದ್ರಿಯಗಳನ್ನು ಮುಂದಿಟ್ಟು ಆಸೆಗಳಿಂದ ಕೂಡಿದ ಮನಸ್ಸನ್ನು ತೊಳಲಿಸುತ್ತಾನೋ ಅವೆಲ್ಲ ಆಯಾ ಇಂದ್ರಿಯಗಳಿಂದ, ಅಹಂಕಾರದಿಂದಲೇ ಉಂಟಾದವು.
ಶಬ್ದರಾಗಾಚ್ಛ್ರೋತ್ರಮಸ್ಯ ಜಾಯತೇ ಭಾವಿತಾತ್ಮನಃ |
ರೂಪರಾಗಾತ್ತಥಾ ಚಕ್ಷುರ್ಘ್ರಾಣಂ ಗಂಧಚಿಕೀರ್ಷಯಾ ॥ 20 ॥

ತಾಯಿಯ ಗರ್ಭದಲ್ಲಿರುವ ಜೀವನಿಗೆ ವಿಷಯ ಸಂಸ್ಕಾರಗಳ ಸಂಬಂಧದಿಂದ ಶಬ್ದಗಳನ್ನು ಕೇಳುವ ಆಸಕ್ತಿಯುಂಟಾಗಿ ಕಿವಿಗಳು ಮೂಡುತ್ತವೆ. ಪ್ರಾರಬ್ಧ ಕರ್ಮಕ್ಕನುಗುಣವಾಗಿ ರೂಪವನ್ನು ನೋಡಬೇಕೆಂಬ ಆಸಕ್ತಿ ಹುಟ್ಟಿದಾಗಲೇ ಕಣ್ಣುಗಳು ಹುಟ್ಟಿಕೊಳ್ಳುತ್ತವೆ. ಗಂಧವನ್ನು ಆಘ್ರಾಣಿಸಬೇಕೆಂಬ ಇಚ್ಛೆಗನುಗುಣವಾಗಿ ಮೂಗು ಹುಟ್ಟುತ್ತದೆ.

ಸ್ಪರ್ಶನೇಭ್ಯಸ್ತಥಾ ವಾಯುಃ ಪ್ರಾಣಾಪಾನವ್ಯಪಾಶ್ರಯಃ |
ವ್ಯಾನೋದಾನೌ ಸಮಾನಶ್ಚ ಪಂಚಧಾ ದೇಹಯಾಪನಾ ॥ 21 ॥

ಸ್ಪರ್ಶ ಸುಖವನ್ನು ಅನುಭವಿಸಬೇಕೆಂಬ ಇಚ್ಛೆಯುಂಟಾದೊಡನೆ ಚರ್ಮವು ಬೆಳೆದುಕೊಳ್ಳುತ್ತದೆ. ಅಂತೆಯೇ ವಾಯುವು ಪ್ರಕಟವಾಗುತ್ತದೆ. ವಾಯುವು ಪ್ರಾಣಾಪಾನಗಳನ್ನು ಆಶ್ರಯಿಸುತ್ತದೆ. ಆ ವಾಯುವೇ ಉದಾನ, ವ್ಯಾನ, ಸಮಾನ ಎನಿಸುತ್ತದೆ. ಹೀಗೆ ಐದು ಪ್ರಕಾರಗಳಿಂದ ಪ್ರಕಟಗೊಂಡ ವಾಯುವು ಶರೀರ ಯಾತ್ರೆಯನ್ನು ನಿರ್ವಹಿಸುತ್ತದೆ.

ಸಂಜಾತೈರ್ಜಾಯತೇ ಗಾತ್ರೈಃ ಕರ್ಮಜೈರ್ವಷ್ಮಣಾ ವೃತಃ |
ದುಃಖಾದ್ಯಂತೈರ್ದುಃಖಮಧ್ಯೈರ್ನರಃ ಶಾರೀರಮಾನಸೈಃ ॥ 22 ॥

ಹೀಗೆ ಜನ್ಮಕಾಲದಲ್ಲಿ ಪೂರ್ಣತೆಯನ್ನು ಪಡೆದು ಕರ್ಮಜನಿತವಾಗಿ ಹುಟ್ಟಿದ, ಶರೀರಾವಯವಗಳಿಂದ ಸೂಕ್ಷ್ಮ ಶರೀರದಿಂದ ಕೂಡಿದ ಜೀವನು ಶಾರೀರಿಕ, ಮಾನಸಿಕವಾದ ದುಃಖಗಳಿಂದ ಆದಿ-ಮಧ್ಯಾಂತಗಳಲ್ಲಿಯೂ ಪೀಡಿಸಲ್ಪಡುತ್ತಿರುತ್ತಾನೆ.

ದುಃಖಂ ವಿದ್ಯಾದುಪಾದಾನಾದಭಿಮಾನಾಚ್ಚ ವರ್ಧತೇ |
ತ್ಯಾಗಾತ್ತೇಭ್ಯೋ ನಿರೋಧಃ ಸ್ಯಾನ್ನಿರೋಧಜ್ಞೋ ವಿಮುಚ್ಯತೇ ॥ 23 ॥

ಜೀವರಿಗೆ ಒಂದು ವಸ್ತುವನ್ನು ಸ್ವೀಕರಿಸಿದ ಕೂಡಲೇ ಅಭಿಮಾನ ನಿಮಿತ್ತದಿಂದ ದುಃಖವು ಉಂಟಾಗುತ್ತದೆ. ಆ ವಸ್ತುವಿನಲ್ಲಿ ಕ್ಷಣಕ್ಷಣವೂ ಅಭಿಮಾನವು ಅಭಿವೃದ್ಧಿಯನ್ನು ಹೊಂದುವುದರಿಂದ ದುಃಖವೂ ಅಭಿವೃದ್ಧಿಯನ್ನು ಹೊಂದುತ್ತದೆ. ದುಃಖದ ತ್ಯಾಗದಿಂದ ಎಲ್ಲಾ ದುಃಖಗಳು ನಿವಾರಣೆ ಹೊಂದುತ್ತವೆ. ಯಾವನು ದುಃಖವನ್ನು ಪರಿಹರಿಸುವ ಉಪಾಯವನ್ನು ತಿಳಿದಿದ್ದಾನೋ ಅವನು ಸಂಸಾರದಿಂದ ಮುಕ್ತನಾಗುತ್ತಾನೆ.

ಇಂದ್ರಿಯಾಣಾಂ ರಜಸ್ಯೇವ ಪ್ರಭವಪ್ರಲಯಾವುಭೌ |
ಪರೀಕ್ಷ್ಯ ಸಂಚರೇದ್ ವಿದ್ವಾನ್ ಯಥಾವಚ್ಛಾಸ್ತ್ರಚಕ್ಷುಷಾ ॥ 24 ॥

ಇಂದ್ರಿಯಗಳ ಉತ್ಪತ್ತಿ ಮತ್ತು ಲಯ ಇವೆರಡು ಕಾರ್ಯಗಳೂ ರಜೋಗುಣದಿಂದಲೇ ಉಂಟಾಗುತ್ತವೆ. ವಿದ್ವಾಂಸನಾದ ಪುರುಷನು ಶಾಸ್ತ್ರದ ದೃಷ್ಟಿಯಿಂದ ಈ ವಿಷಯವನ್ನು ಚೆನ್ನಾಗಿ ಪರೀಕ್ಷಿಸಿದ ಬಳಿಕ ಯೋಗ್ಯವಾಗಿ ನಡೆದುಕೊಳ್ಳಬೇಕು.

ಜ್ಞಾನೇಂದ್ರಿಯಾಣೀಂದ್ರಿಯಾರ್ಥಾನ್ನೋಪಸರ್ಪಂತ್ಯತರ್ಷುಲಮ್ |
ಹೀನೈಶ್ಚ ಕರಣೈರ್ದೇಹೀ ನ ದೇಹಂ ಪುನರರ್ಹತಿ ॥ 25 ॥

ಯಾವ ವ್ಯಕ್ತಿಯು ಆಸೆಯನ್ನು ಜಯಿಸಿ ಇರುತ್ತಾನೋ ಅವನಿಗೆ ಇಂದ್ರಿಯಗಳು, ಅವುಗಳಿಗೆ ಬೇಕಾದ ವಿಷಯಗಳು ಸನ್ನಿಹಿತವಾಗಿದ್ದರೂ ಅವುಗಳು ಅವನನ್ನು ಕೆಡಿಸಲಾರವು. ಅಂತಹ ಇಂದ್ರಿಯಗಳನ್ನು ಧಿಕ್ಕರಿಸಿದ ವ್ಯಕ್ತಿಯು ಪುನಃ ಈ ಶರೀರದಲ್ಲಿ ಹುಟ್ಟುವುದಿಲ್ಲ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ತ್ರಿಚತ್ವಾರಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.

* * * * *

## ನಲವತ್ನಾಲ್ಕನೆಯ ಅಧ್ಯಾಯ

ಬ್ರಹ್ಮಚರ್ಯ ಮತ್ತು ವೈರಾಗ್ಯದಿಂದ ಮುಕ್ತಿ ಕಥನವು.

ಗುರುಃ

ಅತ್ರೋಪಾಯಂ ಪ್ರವಕ್ಷ್ಯಾಮಿ ಯಥಾವಚ್ಛಾಸ್ತ್ರಚಕ್ಷುಷಾ |
ತದ್ವಿಜ್ಞಾನಾಚ್ಚರನ್ ಪ್ರಾಜ್ಞಃ ಪ್ರಾಪ್ನುಯಾತ್ ಪರಮಾಂ ಗತಿಮ್ ॥ 1 ॥

ಗುರು ಶಿಷ್ಯನೇ, ನಾನು ನಿನಗೆ ಮೋಕ್ಷೋಪಾಯವನ್ನು ಶಾಸ್ತ್ರದೃಷ್ಟಿಯಿಂದ ಯಥಾವತ್ತಾಗಿ ಹೇಳುತ್ತೇನೆ. ಮನುಷ್ಯನು ಶಾಸ್ತ್ರವಿಹಿತವಾದ ಕರ್ಮಗಳನ್ನು ನಿಷ್ಕಾಮ ಭಾವದಿಂದ ಆಚರಿಸುತ್ತಾ ತತ್ತ್ವಜ್ಞಾನದಿಂದ ಪರಮಗತಿಯನ್ನು ಹೊಂದುತ್ತಾನೆ.

ಸರ್ವೇಷಾಮೇವ ಭೂತಾನಾಂ ಪುರುಷಃ ಶ್ರೇಷ್ಠ ಉಚ್ಯತೇ |
ಪುರುಷೇಭ್ಯೋ ದ್ವಿಜಾನಾಹುರ್ದ್ವಿಜೇಭ್ಯೋ ಮಂತ್ರವಾದಿನಃ ॥ 2 ॥

ಸಮಸ್ತ ಪ್ರಾಣಿಗಳಲ್ಲಿಯೂ ಮನುಷ್ಯನೇ ಶ್ರೇಷ್ಠನಾದವನು ಎಂದು ಹೇಳಲ್ಪಟ್ಟಿದೆ. ಮನುಷ್ಯರಲ್ಲಿ ದ್ವಿಜರು ಶ್ರೇಷ್ಠರು. ದ್ವಿಜರಲ್ಲಿಯೂ ಮಂತ್ರಜ್ಞರಾದ ಬ್ರಾಹ್ಮಣರು ಶ್ರೇಷ್ಠರು.

ಸರ್ವಭೂತವಿಶಿಷ್ಟಾಸ್ತೇ ಸರ್ವಜ್ಞಾಃ ಸರ್ವದರ್ಶಿನಃ |
ಬ್ರಾಹ್ಮಣಾ ವೇದತತ್ತ್ವಜ್ಞಾಸ್ತತ್ತ್ವಾರ್ಥಗತಿನಿಶ್ಚಯಾಃ ॥ 3 ॥

ಮಂತ್ರಜ್ಞರಾದ ಬ್ರಾಹ್ಮಣರು ಸಮಸ್ತ ಪ್ರಾಣಿಗಳಲ್ಲಿಯೂ ವಿಶಿಷ್ಟರಾಗಿರುತ್ತಾರೆ. ಅವರು ಎಲ್ಲವನ್ನೂ ಅರ್ಥಮಾಡಿಕೊಂಡು, ಎಲ್ಲ ಕಡೆಯೂ ದೃಷ್ಟಿಯುಳ್ಳವರಾಗಿ, ಬ್ರಹ್ಮನಿಷ್ಠರಾಗಿ, ವೇದಗಳ ಅಂತರಂಗವನ್ನು ಬಲ್ಲವರಾಗಿ ಪರಮಾರ್ಥ ತತ್ತ್ವದಲ್ಲಿ ನಿಶ್ಚಯವುಳ್ಳವರಾಗಿರುತ್ತಾರೆ.

ನೇತ್ರಹೀನೋ ಯಥಾ ಹ್ಯೇಕಃ ಕೃಚ್ಛ್ರಾಣಿ ಲಭತೇಽಧ್ವನಿ |
ಜ್ಞಾನಹೀನಸ್ತಥಾ ಲೋಕೇ ತಸ್ಮಾಜ್ಜ್ಞಾನವಿದೋಽಧಿಕಾಃ ॥ 4 ॥

ಹೇಗೆ ಕಣ್ಣಿನಲ್ಲದವನು ಯಾವ ರೀತಿ ಏಕಾಕಿಯಾಗಿ ಪ್ರಯಾಣವನ್ನು ಮಾಡುವಾಗ ದಾರಿಯಲ್ಲಿ ಅನೇಕ ಕಷ್ಟಗಳಿಗೆ

ಗುರಿಯಾಗುತ್ತಾನೋ ಹಾಗೆ ಜ್ಞಾನಹೀನನಾದವನು ಸಂಸಾರದಲ್ಲಿ ಬಿದ್ದು, ಅದನ್ನು ದಾಟುವ ಉಪಾಯವನ್ನು ಕಾಣದೆ ಅನೇಕ ಕಷ್ಟಕೋಟಲೆಗಳಿಗೆ ತುತ್ತಾಗುತ್ತಾನೆ. ಆದ್ದರಿಂದ ಸಾಮಾನ್ಯ ಮನುಷ್ಯರಿಗಿಂತ ಜ್ಞಾನಿಗಳೇ ಶ್ರೇಷ್ಠರು.

ತಾಂಸ್ತಾನುಪಾಸತೇ ಧರ್ಮಾನ್ ಧರ್ಮಕಾಮಾ ಯಥಾಗಮಮ್ |
ನ ತ್ವೇಷಾಮರ್ಥಸಾಮಾನ್ಯಮಂತರೇಣ ಗುಣಾನಿಮಾನ್ ॥ 5 ॥

ಮನುಷ್ಯರು ಶಾಸ್ತ್ರವಿಧಿಗೆ ಅನುಸಾರವಾದ ಧರ್ಮಗಳನ್ನು ಅಪೇಕ್ಷಿಸುತ್ತಾರೆ. ಅಗ್ನಿಷ್ಟೋಮಾದಿ ಸಕಾಮ ಕರ್ಮಗಳನ್ನು ಮಾಡುತ್ತಿರುತ್ತಾರೆ. ಆದರೆ ಅವರಲ್ಲಿ ಮುಂದೆ ಹೇಳುವ ಗುಣಗಳು ಇಲ್ಲದಿದ್ದಲ್ಲಿ ಅವರು ಮೋಕ್ಷರೂಪವಾದ ಪುರುಷಾರ್ಥವನ್ನು ಹೊಂದಲಾರರು.

ವಾಗ್ದೇಹಮನಸಾಂ ಶೌಚಂ ಕ್ಷಮಾ ಸತ್ಯಂ ಧೃತಿಃ ಸ್ಮೃತಿಃ |
ಸರ್ವಧರ್ಮೇಷು ಧರ್ಮಜ್ಞಾ ಜ್ಞಾಪಯಂತಿ ಗುಣಾನಿಮಾನ್ ॥ 6 ॥

ಮಾತು, ಮನಸ್ಸು, ಶರೀರಗಳ ಪಾವಿತ್ರ್ಯ, ಕ್ಷಮೆ, ಸತ್ಯ, ಧೈರ್ಯ, ಮೇಧಾಶಕ್ತಿ ಈ ಗುಣಗಳನ್ನು ಸಾಮಾನ್ಯವಾಗಿ ಸಮಸ್ತ ಧರ್ಮಗಳಲ್ಲಿಯೂ ಕಲ್ಯಾಣವನ್ನುಂಟು ಮಾಡುವ ಗುಣಗಳೆಂದು ಜ್ಞಾನಿಗಳು ಹೇಳುತ್ತಾರೆ.

ಯದಿದಂ ಬ್ರಹ್ಮಣೋ ರೂಪಂ ಬ್ರಹ್ಮಚರ್ಯಮಿತಿ ಸ್ಮೃತಮ್ |
ಪರಂ ತತ್ ಸರ್ವಭೂತೇಭ್ಯಸ್ತೇನ ಯಾಂತಿ ಪರಾಂ ಗತಿಮ್ ॥ 7 ॥

ವೇದಗಳಿಂದ ಚಿಂತನೆಯನ್ನು ಮಾಡಲು ಯೋಗ್ಯವಾದ ಬ್ರಹ್ಮಚರ್ಯವನ್ನು ಶಾಸ್ತ್ರಗಳಲ್ಲಿ ಭಗವಂತನ ರೂಪವೇ ಎಂದು ಹೇಳಿದ್ದಾರೆ. ಬ್ರಹ್ಮಚರ್ಯವು ಸರ್ವಧರ್ಮಗಳಿಗಿಂತಲೂ ಶ್ರೇಷ್ಠವಾದುದು. ಬ್ರಹ್ಮಚರ್ಯದ ಪಾಲನೆಯಿಂದ ಮನುಷ್ಯನು ಪರಮ ಪದವನ್ನು ಹೊಂದುತ್ತಾನೆ.

ಲಿಂಗಸಂಯೋಗಹೀನಂ ಯಚ್ಛರೀರಸ್ಪರ್ಶವರ್ಜಿತಮ್ |
ಶ್ರೋತ್ರೇಣ ಶ್ರವಣಂ ಚೈವ ಚಕ್ಷುಷಾ ಚೈವ ದರ್ಶನಮ್ ॥ 8 ॥
ಜಿಹ್ವಯಾ ರಸನಂ ಯತ್ ತನ್ಮನಃಪರಿವರ್ಜಿತಮ್ |
ಬುದ್ಧ್ಯಾ ಚ ವ್ಯವಸಾಯೇನ ಬ್ರಹ್ಮಚರ್ಯಮಕಲ್ಮಷಮ್ ॥ 9 ॥

ಬ್ರಹ್ಮಚರ್ಯವು ಲಿಂಗದೇಹವನ್ನು ಭಂಗ ಮಾಡುವಂತಹದ್ದು. ಸ್ಥೂಲದೇಹವನ್ನು ಪರಿಹರಿಸುವಂತಹದ್ದು. ಕಿವಿಯಿಂದ ಕೇಳುವಿಕೆ, ಕಣ್ಣಿನಿಂದ ನೋಡುವಿಕೆ, ಜಿಹ್ವೆಯಿಂದ ರಸವನ್ನು ಸ್ವೀಕರಿಸುವಿಕೆ ಇವುಗಳನ್ನು ಬಿಟ್ಟಾಗ, ಸಂಶಯ ಕಾರಣವಾಗುವ ವಸ್ತುವನ್ನು ಬಿಡುವ ಮನಸ್ಸನ್ನು ಹೊಂದದಿರುವಿಕೆ, ಕೃಷಿಯಿಂದ ಬುದ್ಧಿಯನ್ನು ಹೊಂದುವಿಕೆ - ಇವುಗಳಿಂದ ಬ್ರಹ್ಮಚರ್ಯವು ನಿರ್ದುಷ್ಟವಾಗುತ್ತದೆ.

ಸಮ್ಯಗ್ ವೃತ್ತಿರ್ಬ್ರಹ್ಮಲೋಕಂ ಪ್ರಾಪ್ನುಯಾನ್ಮಧ್ಯಮಃ ಸುರಾನ್ |
ದ್ವಿಜಾಗ್ರ್ಯೋ ಜಾಯತೇ ವಿದ್ವಾನ್ ಸನ್ನ್ಯಸೀಂ ವೃತ್ತಿಮಾಸ್ಥಿತಃ ॥ 10 ॥

ಯಾವ ಮನುಷ್ಯನು ಇಂತಹ ಬ್ರಹ್ಮಚರ್ಯವನ್ನು ಸರಿಯಾಗಿ ಪರಿಪಾಲಿಸುವನೋ ಅವನು ಬ್ರಹ್ಮಲೋಕವನ್ನೇ ಹೊಂದುತ್ತಾನೆ. ಮಧ್ಯಮಶ್ರೇಣಿಯ ಬ್ರಹ್ಮಚಾರಿಯು ದೇವತೆಗಳ ಲೋಕವನ್ನು ಪಡೆದು ಬಳಿಕ ಸಮಸ್ತವನ್ನು ತ್ಯಜಿಸುವ ವಿರಕ್ತನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

ಸುದುಷ್ಕರಂ ಬ್ರಹ್ಮಚರ್ಯಮುಪಾಯಂ ತತ್ರ ಮೇ ಶೃಣು |
ಸಂಪ್ರವೃತ್ತಮುದೀರ್ಣಂ ಚ ನಿಗೃಹ್ಣೀಯಾದ್ ದ್ವಿಜೋ ಮನಃ ॥ 11 ॥

ಬ್ರಹ್ಮಚರ್ಯದ ಪಾಲನೆಯು ಅತ್ಯಂತ ಕಠಿಣವಾದುದು. ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುವ ಉಪಾಯವನ್ನು ಹೇಳುತ್ತೇನೆ, ಕೇಳು. ಬ್ರಹ್ಮಚರ್ಯವನ್ನು ಪಾಲಿಸಲು ಇಚ್ಛಿಸುವ ಬ್ರಾಹ್ಮಣನು ಕ್ಷಣಕ್ಷಣಕ್ಕೂ ಉತ್ಪನ್ನವಾಗುವ ಕಾಮ-ಕ್ರೋಧಗಳನ್ನು ನಿಗ್ರಹಿಸಬೇಕು.

ಯೋಷಿತಾಂ ನ ಕಥಾಃ ಶ್ರಾವ್ಯಾ ನ ನಿರೀಕ್ಷ್ಯಾ ನಿರಂಬರಾಃ |
ಕದಾಚಿದ್ ದರ್ಶನಾದಾಸಾಂ ದುರ್ಬಲಾನಾವಿಶೇದ್ ರಜಃ ॥ 12 ॥

ಸ್ತ್ರೀಯರಿಗೆ ಸಂಬಂಧಿಸಿದ ಸಂಭಾಷಣೆಯನ್ನು ಕೇಳಬಾರದು. ನಗ್ನಾವಸ್ಥೆಯಲ್ಲಿರುವ ಸ್ತ್ರೀಯರನ್ನು ನೋಡಬಾರದು. ಯಾವುದಾದರೂ ಕಾರಣದಿಂದ ಸ್ತ್ರೀಯರು ನಗ್ನಾವಸ್ಥೆಯಲ್ಲಿರುವುದನ್ನು ನೋಡಿದರೆ ದುರ್ಬಲವಾದ ಮನಸ್ಸುಳ್ಳ ಮನುಷ್ಯರ ಮನಸ್ಸನ್ನು ರಜೋಗುಣವು ಬಹಳ ಬೇಗ ಪ್ರವೇಶಿಸುತ್ತದೆ.

ರಾಗೋತ್ಪತ್ತೌ ಚರೇತ್ ಕೃಚ್ಛ್ರಮಹ್ನಸಿತ್ರಃ ಪ್ರವಿಶೇದಪಃ |
ಮನಃ ಸ್ವಪ್ನೇ ಚ ಮನಸಾ ತ್ರಿರ್ಜಪೇದಘಮರ್ಷಣಮ್ ॥ 13 ॥

ಬ್ರಹ್ಮಚಾರಿಯು ಮನಸ್ಸಿನಲ್ಲಿ ಕಾಮವಿಕಾರಗಳಿಗೆ ತುತ್ತಾದಲ್ಲಿ ಕೃಚ್ಛ್ರ ವ್ರತವನ್ನು ಆಚರಿಸಬೇಕು. ಮನಸ್ಸಿನಲ್ಲಿ ಸ್ತ್ರೀಯನ್ನು ಸ್ಮರಿಸಿದ ಪಾಪಕ್ಕೆ ಮೂರುಬಾರಿ ಅಘಮರ್ಷಣ ಸೂಕ್ತವನ್ನು ನೀರಿನಲ್ಲಿ ಮುಳುಗಿ ಜಪಿಸಬೇಕು.

ವ್ಯಾಖ್ಯಾನ ವಿಶೇಷ ಮೂರು ದಿವಸ ಪ್ರಾತಃಕಾಲದಲ್ಲಿಯೂ ಮೂರು ದಿವಸ ಸಾಯಂಕಾಲದಲ್ಲಿಯೂ ಭೋಜನ ಮಾಡಬೇಕು. ಮುಂದೆ ಮೂರು ದಿವಸ ಅಯಾಚಿತವಾದ ಅನ್ನವನ್ನು ಭೋಜನ ಮಾಡಬೇಕು. ನಂತರದ ಮೂರು ದಿವಸ ಉಪವಾಸವಿರಬೇಕು. ಒಟ್ಟು ಹನ್ನೆರಡು ದಿವಸಗಳ ವ್ರತಕ್ಕೆ ಪ್ರಾಜಾಪತ್ಯ ಕೃಚ್ಛ್ರ ಎನ್ನುತ್ತಾರೆ. `ತ್ರಯಂ ಪ್ರಾತಃ ತ್ರಯಂ ಸಾಯಂ ತ್ರಯಂ ಅದ್ಯಾತ್ ಅಯಾಚಿತಮ್ | ಪರಂ ಚ ನಾಶ್ನೀಯಾತ್ ಪ್ರಾಜಾಪತ್ಯೋಯಮುಚ್ಯತೇ' (ಮನುಸ್ಮೃತಿ 11-22).

ಪಾಪ್ಮಾನಂ ನಿರ್ದಹೇದೇವಮಂತರ್ಭೂತಂ ರಜೋಮಯಮ್ |
ಜ್ಞಾನಯುಕ್ತೇನ ಮನಸಾ ಸಂತತೇನ ವಿಚಕ್ಷಣಃ ॥ 14 ॥

ವಿವೇಕಿಯಾದ ಪುರುಷನು ಈ ರೀತಿಯಲ್ಲಿ ಜ್ಞಾನಯುಕ್ತವಾದ, ಸಂಯಮ ಶೀಲವಾದ ಮನಸ್ಸಿನಿಂದ ಕೂಡಿದವನಾಗಿ

ಅಂತಃಕರಣದಲ್ಲಿ ಹುಟ್ಟುವ ಪಾಪಮಯವಾದ, ರಜೋಮಯವಾದ ಕಾಮವಿಕಾರವನ್ನು ಭಸ್ಮ ಮಾಡಬೇಕು.
ಕುಣಪಾಮೇಧ್ಯಸಂಯುಕ್ತಂ ಯದ್ವದಚ್ಛಿದ್ರಬಂಧನಮ್ |
ತದ್ವದ್ದೇಹಗತಂ ವಿದ್ಯಾದಾತ್ಮಾನಂ ದೇಹಬಂಧನಮ್ ॥ 15 ॥
ದುರ್ವಾಸನೆಯಿಂದ ಕೂಡಿರುವ ಮಲಯುಕ್ತವಾದ ಕೋಶವನ್ನು ಕರುಳು ಯಾವ ರೀತಿಯಲ್ಲಿ ದೃಢವಾಗಿ ಬಂಧಿಸುವುದೋ ಅದೇ ರೀತಿ ದೇಹದಲ್ಲಿರುವ ಆತ್ಮನನ್ನು ದೇಹವು ದೃಢವಾಗಿ ಬಂಧಿಸಿರುತ್ತದೆಂದು ತಿಳಿಯಬೇಕು.
ವಾತಪಿತ್ತಕಫಾನ್ ರಕ್ತಂ ತ್ವಙ್ಮಾಂಸಂ ಸ್ನಾಯುಮಸ್ಥಿ ಚ |
ಮಜ್ಜಾಂ ಚೈವ ಸಿರಾಜಾಲೈಸ್ತರ್ಪಯಂತಿ ರಸಾ ನೃಣಾಮ್ ॥ 16 ॥
ಮನುಷ್ಯನು ಭೋಜನ ಮಾಡುವುದರಿಂದ ಉಂಟಾಗುವ ಅನ್ನರಸಗಳು ನಾಡಿ ಸಮೂಹಗಳ ಮೂಲಕ ಮನುಷ್ಯರ ವಾತ-ಪಿತ್ತ-ಕಫಗಳನ್ನೂ, ರಕ್ತ-ಪಿತ್ತ-ಸ್ನಾಯು-ಅಸ್ಥಿ ಮಜ್ಜೆ, ಸಮಸ್ತ ದೇಹವನ್ನು ಪುಷ್ಟಿಗೊಳಿಸುತ್ತದೆ.
ದಶ ವಿದ್ಯಾದ್ಧಮನ್ಯೋಽತ್ರ ಪಂಚೇಂದ್ರಿಯಗುಣಾವಹಾಃ |
ಯಾಭಿಃ ಸೂಕ್ಷ್ಮಾಃ ಪ್ರತಾಯಂತೇ ಧಮನ್ಯೋಽನ್ಯಾಃ ಸಹಸ್ರಶಃ ॥ 17 |
ಈ ಶರೀರದೊಳಗೆ ಅನ್ನರಸವನ್ನು ಕೊಂಡೊಯ್ಯುವ ಹತ್ತುನಾಡಿಗಳಿವೆ. ಅವುಗಳೇ ಪಂಚೇಂದ್ರಿಯಗಳಿಗೆ ಶಬ್ದಾದಿ ಗುಣಗಳನ್ನು ಗ್ರಹಿಸುವ ಶಕ್ತಿಯನ್ನು ನೀಡುತ್ತವೆ. ಈ ಹತ್ತು ನಾಡಿಗಳಿಂದ ಸೂಕ್ಷ್ಮವಾದ ಸಾವಿರಾರು ನಾಡಿಗಳು ದೇಹಾದ್ಯಂತವಾಗಿ ಪಸರಿಸಿವೆ.
ಏವಮೇತಾಃ ಸಿರಾನದ್ಯೋ ರಸೋದಾ ದೇಹಸಾಗರಮ್ |
ತರ್ಪಯಂತಿ ಯಥಾಕಾಲಮಾಪಗಾ ಇವ ಸಾಗರಮ್ ॥ 18 ॥
ನದಿಗಳು ಕಾಲಾನುಗುಣವಾಗಿ ಪ್ರವಾಹದಿಂದ ತುಂಬಿಕೊಂಡು ಸಮುದ್ರವನ್ನು ತೃಪ್ತಿಗೊಳಿಸುವಂತೆ ರಸವಾಹಿನಿಗಳಾದ ಈ ನಾಡಿಲೋಕದ ನದಿಗಳು ದೇಹವೆಂಬ ಸಾಗರವನ್ನು ತೃಪ್ತಿಪಡಿಸುತ್ತವೆ.
ಮಧ್ಯೇ ಚ ಹೃದಯಸ್ಯೈಕಾ ಸಿರಾ ತ್ವತ್ರ ಮನೋವಹಾ |
ಶುಕ್ರಂ ಸಂಕಲ್ಪಜಂ ನೃಣಾಂ ಸರ್ವಗಾತ್ರೈರ್ವಿಮುಂಚತಿ ॥ 19 ॥
ಹೃದಯದ ಮಧ್ಯದಲ್ಲಿ ಅನ್ನರಸಗಳಿಂದ ಮನಸ್ಸನ್ನು ಸಂತೋಷಗೊಳಿಸುವ ಮನೋವಹಾ ಎಂಬ ನಾಡಿಯಿದೆ. ಈ ನಾಡಿಯು ಮನುಷ್ಯನಲ್ಲಿರುವ ರೇತಸ್ಸನ್ನು ಕಾಮವಿಷಯಕವಾದ ಸಂಕಲ್ಪದ ಮೂಲಕ ದೇಹದ ಅಂಗಾಂಗಗಳಿಂದಲೂ ಸಂಗ್ರಹಿಸಿ ಉಪಸ್ಥದ ಕಡೆ ಸಾಗುವಂತೆ ಮಾಡುತ್ತದೆ. ರೇತಸ್ಸೇಚನ ಕಾರ್ಯವನ್ನು ಮಾಡುತ್ತದೆ.
ಸರ್ವಗಾತ್ರಪ್ರತಾಯಿನ್ಯಸ್ತಸ್ಯಾ ಹ್ಯನುಗತಾಃ ಸಿರಾಃ |
ನೇತ್ರಯೋಃ ಪ್ರತಿಪದ್ಯಂತೇ ವಹಂತ್ಯಸ್ತೈಜಸಂ ಗುಣಮ್ ॥ 20 ॥
ಮನೋವಹ ನಾಡಿಯನ್ನನುಸರಿಸಿ ಹೋಗುವ ಶರೀರದ ಸಮಗ್ರ ಭಾಗದಲ್ಲಿ ಸಂಚಾರ ಹೊಂದುವ ನಾಡಿಗಳು ತೇಜಸ್ಸಿನ ಗುಣಗಳನ್ನು ಸಂಗ್ರಹಿಸುತ್ತಾ ಕಣ್ಣುಗಳನ್ನು ಸೇರುತ್ತವೆ.
ಪಯಸ್ಯಂತರ್ಹಿತಂ ಸರ್ಪಿರ್ಯದ್ವನ್ನಿರ್ಮಥ್ಯತೇ ಖಜೈಃ |
ಶುಕ್ರಂ ನಿರ್ಮಥ್ಯತೇ ತದ್ವದ್ದೇಹಸಂಕಲ್ಪಜೈಃ ಖಜೈಃ ॥ 21 ॥
ಹಾಲಿನಲ್ಲಿ ಅಡಗಿರುವ ತುಪ್ಪವು ಯಾವ ರೀತಿ ಕಡಗೋಲಿನಿಂದ ಮಥಿತವಾಗಿದೆಯೋ ಅದೇ ರೀತಿ ದೇಹ ಮತ್ತು ಮನಸ್ಸಿನ ಸಂಕಲ್ಪಗಳಿಂದ ಮಥಿಸಲ್ಪಟ್ಟ ಕಾಮೋಪಕರಣ ರೂಪವಾದ ಕಡೆಗೋಲಿನಿಂದ ವೀರ್ಯವು ಮಥಿಸಲ್ಪಡುತ್ತದೆ.
ಸ್ವಪ್ನೇಽಪ್ಯೇವಂ ಯಥಾಭ್ಯೇತಿ ಮನಃಸಂಕಲ್ಪಜಂ ರಜಃ |
ಶುಕ್ರಮಸ್ಪರ್ಶಜಂ ದೇಹಾತ್ ಸೃಜಂತ್ಯಸ್ಯ ಮನೋವಹಾ ॥ 22 ॥
ಸ್ವಪ್ನದಲ್ಲಿ ಸ್ತ್ರೀಯರ ಸಂಪರ್ಕವಾಗಿದ್ದರೂ ಮನಸ್ಸಿನ ಸಂಕಲ್ಪದಿಂದಲೇ ಸ್ತ್ರೀ ಸಂಗದಿಂದ ಅನುರಾಗವು ಹುಟ್ಟುತ್ತದೆ. ಮನೋವಹ ನಾಡಿಯು ಆ ಅನುರಾಗ ಜನ್ಯವಾದ ವೀರ್ಯವನ್ನು ಮನುಷ್ಯನ ದೇಹದಿಂದ ಹೊರಹಾಕುತ್ತದೆ.
ಮಹರ್ಷಿರ್ಭಗವಾನತ್ರಿರ್ವೇದ ತಚ್ಛುಕ್ರಸಂಭವಮ್ |
ತ್ರಿಬೀಜಮಿಂದ್ರದೈವತ್ಯಂ ತಸ್ಮಾದಿಂದ್ರಿಯಮುಚ್ಯತೇ ॥ 23 ॥
ಈ ವೀರ್ಯದ ಉತ್ಪತ್ತಿ ಮತ್ತು ಗತಿಗಳನ್ನು ಮಹರ್ಷಿಗಳಾದ ಅತ್ರಿ ಋಷಿಗಳು ತಿಳಿದವರಾಗಿದ್ದಾರೆ. ಅವರ ಪ್ರಕಾರ ವೀರ್ಯವು ತ್ರಿಬೀಜಯುಕ್ತವಾದುದು. ಮನೋವಹ ಎಂಬ ನಾಡಿ, ಸಂಕಲ್ಪ ಮತ್ತು ಅನ್ನರಸ ಈ ಮೂರು ವೀರ್ಯಕ್ಕೆ ಕಾರಣಗಳಾಗಿವೆ. ಈ ವೀರ್ಯಕ್ಕೆ ಇಂದ್ರನು ದೇವತೆಯಾಗಿದ್ದಾನೆ. ಆದ್ದರಿಂದ ವೀರ್ಯವನ್ನು ಇಂದ್ರಿಯ ಎನ್ನುತ್ತಾರೆ.
ಯೇ ವೈ ಶುಕ್ರಗತಿಂ ವಿದ್ಯುರ್ಭೂತಸಂಕರಕಾರಿಕಾಮ್ |
ವಿರಾಗಾ ದಗ್ಧದೋಷಾಸ್ತೇ ನಾಪ್ನುಯುರ್ದೇಹಸಂಭವಮ್ ॥ 24 ॥
ಯಾರು ವೀರ್ಯದ ಗತಿಯು ಉದ್ರೇಕಗೊಂಡು ಅವಿವೇಕದಿಂದ ವರ್ಣ ಸಂಕರವನ್ನು ಉಂಟುಮಾಡುತ್ತದೆಂದು ತಿಳಿಯುತ್ತಾರೋ, ತಿಳಿದು ವಿರಕ್ತರಾಗುತ್ತಾರೋ ಅವರು ತಮ್ಮಲ್ಲಿರುವ ದೋಷಗಳನ್ನು ಸುಟ್ಟುಕೊಂಡು ದೇಹಬಂಧನದಿಂದ ಮುಕ್ತರಾಗುತ್ತಾರೆ. ಅವರು ಪುನಃ ಹುಟ್ಟನ್ನು ಪಡೆಯುವುದಿಲ್ಲ.
ಗುಣಾನಾಂ ಸಾಮ್ಯಮಾಗಮ್ಯ ಮನಸ್ಯೇವ ಮನೋವಹಮ್ |
ದೇಹಕರ್ಮಾ ನುದನ್ ಪ್ರಾಣಾನಂತಕಾಲೇ ವಿಮುಚ್ಯತೇ ॥ 25 ॥
ದೇಹನಿರ್ವಾಹಕ್ಕಾಗಿ ಕರ್ಮನಿರತನಾದ ವಿರಕ್ತನು ಮನಸ್ಸಿನಿಂದಲೇ ಬಾಹ್ಯ ಸಂಕಲ್ಪಗಳನ್ನು ತ್ಯಜಿಸಿ, ಪ್ರಾಣಗಳನ್ನು ಊರ್ಧ್ವಗತಿಯಲ್ಲಿ ಪ್ರೇರಿಸುತ್ತಾ ಶರೀರ ಬಂಧನದಿಂದ ಮುಕ್ತನಾಗುತ್ತಾನೆ.
ಭವಿತಾ ಮನಸೋ ಜ್ಞಾನಂ ಮನ ಏವ ಪ್ರತಾಯತೇ |
ಜ್ಯೋತಿಷ್ಮದ್ ವಿರಜೋ ದಿವ್ಯಮತ್ರ ಸಿದ್ಧಂ ಮಹಾತ್ಮನಾಮ್ ॥ 26 |

ಇದನ್ನೇ ಗುಣಸಾಮ್ಯ ಎನ್ನುತ್ತಾರೆ. ಇದನ್ನು ಸಾಧಿಸಿಕೊಂಡ ಮನಸ್ಸಿನಿಂದ ಜ್ಞಾನವು, ಭಗವದ್‌ಜ್ಞಾನವು ಉತ್ಪನ್ನವಾಗುತ್ತದೆ. ರಜೋಗುಣರಹಿತವಾದ, ಕಾಂತಿಯುಕ್ತವಾದ ಮನಸ್ಸು ಮಹಾತ್ಮರಿಗೆ ಪ್ರಣವಸಿದ್ಧಿಯನ್ನು ಉಂಟುಮಾಡುತ್ತದೆ.
ತಸ್ಮಾತ್ತದವಿಘಾತಾಯ ಕರ್ಮ ಕುರ್ಯಾದಕಲ್ಮಷಮ್ |
ರಜಸ್ತಮಶ್ಚ ಹಿತ್ವೇಹ ನ ತಿರ್ಯಗ್ಗತಿಮಾಪ್ನುಯಾತ್ ॥ 27 ॥
ಆದ್ದರಿಂದ ಮನುಷ್ಯನು ಮನಸ್ಸನ್ನು ನಿಯಂತ್ರಣದಲ್ಲಿಟ್ಟುಕೊಂಡು ದೋಷರಹಿತವಾದ ಕರ್ಮಗಳನ್ನೇ ಮಾಡಬೇಕು. ಲೋಕದಲ್ಲಿ ರಜೋಗುಣ, ತಮೋಗುಣಗಳನ್ನು ತ್ಯಜಿಸಿದ ಬಳಿಕವೇ ಮನುಷ್ಯನು ತನ್ನ ಈಪ್ಸಿತವಾದ ಸ್ಥಾನವನ್ನು ಹೊಂದಬಹುದು.
ತರುಣಾಧಿಗತಂ ಜ್ಞಾನಂ ಜರಾದುರ್ಬಲತಾಂ ಗತಮ್ |
ಪರಿಪಕ್ವಬುದ್ಧಿಃ ಕಾಲೇನ ಆದತ್ತೇ ಮಾನಸಂ ಬಲಮ್ ॥ 28 ॥
ಯೌವನಾವಸ್ಥೆಯಲ್ಲಿ ಹೊಂದಿದ ಜ್ಞಾನವು ವೃದ್ಧಾಪ್ಯದಲ್ಲಿ ಶೈಥಿಲ್ಯವನ್ನು ಹೊಂದುತ್ತದೆ. ಆದರೆ ಪರಿಪಕ್ವವಾದ ಜ್ಞಾನವನ್ನು ಪಡೆದ ಮನುಷ್ಯನು ಕಾಲಕ್ರಮದಲ್ಲಿಯೂ ಜ್ಞಾನವು ಕ್ಷೀಣಿಸದಂತೆ ಮನೋಬಲವನ್ನು ಹೊಂದಿರುತ್ತಾನೆ.
ಸುದುರ್ಗಮಿವ ಪಂಥಾನಮತೀತ್ಯ ಗುಣಬಂಧನಮ್ |
ಯದಾ ಪಶ್ಯೇತ್ತದಾ ದೋಷಾನತೀತ್ಯಾಮೃತಮಶ್ನುತೇ ॥ 29 ॥
ಬುದ್ಧಿಯ ಪಕ್ವತೆಯನ್ನು ಪಡೆದ ಮನುಷ್ಯನು ಕಷ್ಟಮಾರ್ಗದಂತಿರುವ ತ್ರಿಗುಣಗಳ ಬಂಧನವನ್ನು ದಾಟಿ, ತನ್ನಲ್ಲಿ ಯಾವ ದೋಷಗಳು ಇದ್ದಾವೋ ಆ ದೋಷಗಳನ್ನು ಕಂಡುಕೊಂಡು ಕ್ರಮವಾಗಿ ಅವುಗಳನ್ನು ಅತಿಕ್ರಮಿಸಿ ಕೊನೆಯಲ್ಲಿ ಅಮೃತಮಯವಾದ ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಚತುಶ್ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೈದನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು, ವೈರಾಗ್ಯವು ಮೋಕ್ಷಕ್ಕೆ
ಕಾರಣವೆಂದು ತಿಳಿಸಿದುದು.
ಗುರುಃ
ದುರಂತೇಷ್ವಿಂದ್ರಿಯಾರ್ಥೇಷು ಸಕ್ತಾಃ ಸೀದಂತಿ ಜಂತವಃ |
ಯೇ ತ್ವಸಕ್ತಾ ಮಹಾತ್ಮಾನಸ್ತೇ ಯಾಂತಿ ಪರಮಾಂ ಗತಿಮ್ ॥ 1 ॥
ಗುರು ಮೊದಲು ಸುಖದ ಭ್ರಮೆಯನ್ನುಂಟು ಮಾಡಿ ಕೊನೆಗೆ ಅಪಾರವಾದ ದುಃಖವನ್ನು ನೀಡುವ ಇಂದ್ರಿಯಾರ್ಥಗಳಲ್ಲಿ ಸಿಲುಕಿದ ಪ್ರಾಣಿಗಳು ಯಾವಾಗಲೂ ಕಷ್ಟವನ್ನೇ ಹೊಂದುತ್ತಾರೆ. ಅದರಲ್ಲಿರುವ ಸಂಬಂಧವನ್ನು ಬಿಟ್ಟ ಮಹಾತ್ಮರು ಉತ್ತಮ ಗತಿಯನ್ನು ಹೊಂದುತ್ತಾರೆ.
ಜನ್ಮಮೃತ್ಯುಜರಾದುಃಖೈರ್ವ್ಯಾಧಿಭಿರ್ಮನಸಃ ಕ್ಲಮೈಃ |
ದೃಷ್ಟ್ವೇಮಂ ಸಂತತಂ ಲೋಕಂ ಘಟೇನ್ಮೋಕ್ಷಾಯ ಬುದ್ಧಿಮಾನ್ ॥ 2 ॥
ಆದ್ದರಿಂದ ಬುದ್ಧಿವಂತನಾದವನು ಜನನ, ಜರಾ (ಮುಪ್ಪು), ಮರಣ, ದುಃಖ, ವ್ಯಾಧಿ, ಚಿಂತೆ ಮೊದಲಾದ ಕಷ್ಟಗಳಿಂದ ಜಗತ್ತೇ ತುಂಬಿದೆ ಎಂಬುದನ್ನು ತಿಳಿದು ಮೋಕ್ಷಕ್ಕಾಗಿ ಪ್ರಯತ್ನಿಸಬೇಕು.
ವಾಙ್ಮನೋಭ್ಯಾಂ ಶರೀರೇಣ ಶುಚಿಃ ಸ್ಯಾದನಹಂಕೃತಃ |
ಪ್ರಶಾಂತೋ ಜ್ಞಾನವಾನ್ ಭಿಕ್ಷುರ್ನಿರಪೇಕ್ಷಶ್ಚರೇತ್ ಸುಖಮ್ ॥ 3 ॥
ಮನೋವಾಕ್ಕಾಯಗಳಲ್ಲಿ ಶುಚಿಯಾಗಿ ಅಹಂಕಾರವಿಲ್ಲದೆ ಮನಶ್ಶಾಂತಿಯಿಂದ ಜ್ಞಾನಮಾರ್ಗವನ್ನು ಅನುಸರಿಸಿ ವಿಷಯಗಳಲ್ಲಿ ಅಪೇಕ್ಷೆಯನ್ನು ತೊರೆದು ವೈರಾಗ್ಯದಿಂದ ಭಿಕ್ಷುವೃತ್ತಿಯನ್ನು ಅನುಸರಿಸಿ ನಿಶ್ಚಿಂತನಾಗಿ ಸಂಚರಿಸಬೇಕು.
ವಶಾ ಮೋಕ್ಷವತಾಂ ಪಾಶಾಸ್ತಾಸಾಂ ರೂಪಂ ಪ್ರದರ್ಶಕಮ್ |
ದುರ್ಗ್ರಹಂ ಪಶ್ಯಮಾನೋಽಪಿ ಮನ್ಯತೇ ಮೋಹಿತಸ್ತದಾ ॥ 4 ॥
ಮುಕ್ತರಿಗೆ ಆಶಾಪಾಶಗಳೆಲ್ಲ ಅವರ ಅಧೀನವಾಗಿರುತ್ತವೆ. ಆ ಪಾಶಗಳನ್ನು ಅರಿಯುವುದು ಬಹಳ ಕಷ್ಟವಾಗಿದೆ. ಕೆಲವರು ಮೋಹಪಾಶಗಳನ್ನೇ ಇಷ್ಟವೆಂದು ಅವುಗಳಲ್ಲಿಯೇ ಮೋಹಿತರಾಗುತ್ತಾರೆ.
ಏವಂ ಪಶ್ಯಂಸ್ತಮಾತ್ಮಾನಮನುಧ್ಯಾತಂ ಹಿ ಬಂಧುಷು |
ಅಯಥಾತ್ವೇನ ಜಾನಾತಿ ಭೇದರೂಪೇಣ ಸಂಸ್ಥಿತಮ್ ॥ 5 ॥
ಈ ರೀತಿಯಾಗಿ ಸಾಂಸಾರಿಕ ಜಂಜಾಟಗಳನ್ನು ಅರ್ಥಮಾಡಿಕೊಂಡು ಪರಮಾತ್ಮನನ್ನೇ ಧ್ಯಾನಿಸುತ್ತಾ, ಸಮಸ್ತ ಜೀವನದ ಬಂಧುವರ್ಗವು ಯಥಾರ್ಥವಾದುದಲ್ಲ ಎಂಬುದನ್ನು ಯಾವನು ತಿಳಿದಿರುತ್ತಾನೋ ಅವನು ಅದಕ್ಕಿಂತ ವಿಲಕ್ಷಣನಾಗಿದ್ದು ವಿರಕ್ತನಾಗಿದ್ದವನಾಗಿ ಸಾಧಕನಾಗುತ್ತಾನೆ.
ಅಥ ವಾ ಮನಸಃ ಸಂಗಂ ಪಶ್ಯೇದ್ಭೂತಾನುಕಂಪಯಾ |
ಅತ್ರಾಪ್ಯುಪೇಕ್ಷಾಂ ಕುರ್ವೀತ ಜ್ಞಾತ್ವಾ ಕರ್ಮಫಲಂ ಜಗತ್ ॥ 6 ॥
ಅಥವಾ ಮನಸ್ಸಿನ ಸಂಬಂಧಗಳನ್ನು ಪಂಚಭೂತಾದಿಗಳಲ್ಲಿ ಹೇಗಿದೆಯೋ ಹಾಗೆ ಕಾಣಬೇಕು. ಅರ್ಥಾತ್ ಅನಿತ್ಯವೆಂದು ಭಾವಿಸಬೇಕು. ಅವುಗಳನ್ನು ಉಪೇಕ್ಷಿಸಿ ವಿವೇಕದಿಂದ ಜಗತ್ತಿನಲ್ಲಿರುವ ಕರ್ಮಫಲವನ್ನು ಅರ್ಥಮಾಡಿಕೊಳ್ಳಬೇಕು.
ಯತ್ಕೃತಂ ಪ್ರಾಕ್ ಶುಭಂ ಕರ್ಮ ಪಾಪಂ ವಾ ತದುಪಾಶ್ನುತೇ |

ತಸ್ಮಾಚ್ಛುಭಾನಿ ಕರ್ಮಾಣಿ ಕುರ್ಯಾದ್ ವಾಗ್ಬುದ್ಧಿಕರ್ಮಭಿಃ ॥ 7 ॥
ತಾನು ಏನು ಮಾಡಿದ್ದಾನೋ ಅದನ್ನು ಅನುಭವಿಸುತ್ತಾನೆ. ಶುಭಕರ್ಮವನ್ನು ಆಚರಿಸಿದ್ದಲ್ಲಿ ಶುಭವನ್ನೂ, ಪಾಪಕರ್ಮದ ಫಲವಾಗಿ ಪಾಪವನ್ನು ಅನುಭವಿಸುತ್ತಾನೆ. ಆದ್ದರಿಂದ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದ ತಿಳಿದು ಶುಭಕರ್ಮಗಳನ್ನೇ ಆಚರಿಸಬೇಕು.
ಅಹಿಂಸಾ ಸತ್ಯವಚನಂ ಸರ್ವಭೂತೇಷು ಚಾರ್ಜವಮ್ ।
ಕ್ಷಮಾ ಚೈವಾಪ್ರಮಾದಶ್ಚ ಯಸ್ಯೈತೇ ಸ ಸುಖೀ ಭವೇತ್ ॥ 8 ॥
ಅಹಿಂಸೆ, ಸತ್ಯಮಾತು, ಪ್ರಾಣಿಗಳಲ್ಲಿ ನಿಷ್ಕಪಟವಾಗಿ ವರ್ತಿಸುವಿಕೆ, ತಾಳ್ಮೆ, ಅಪ್ರಮತ್ತತೆ, ಈ ಗುಣಗಳು ಯಾರಲ್ಲಿದೆಯೋ ಅವನು ಸುಖವಾಗಿರುತ್ತಾನೆ.
ಅನಕ್ಷಸಾಧ್ಯಂ ತದ್ ಬ್ರಹ್ಮ ನಿರ್ಮಲಂ ಜಗತಃ ಪರಮ್ ।
ಸ್ವಾತ್ಮಪ್ರಕಾಶಮಗ್ರಾಹ್ಯಮಹೇತುಕಮಚಂಚಲಮ್ ॥ 9 ॥
ಆ ಗುಣಪರಿಪೂರ್ಣವಾದ ವಸ್ತುವು ಕಣ್ಣಿನಿಂದ ನೋಡಲಾಗದು. ನಿರ್ಮಲವಾದುದು. ಜಗತ್ತಿಗಿಂತ ಶ್ರೇಷ್ಠವಾದದ್ದು. ಸ್ವಾತ್ಮಪ್ರಕಾಶವುಳ್ಳದ್ದು. ಅಗ್ರಾಹ್ಯವು. ತರ್ಕಗಳಿಂದ ತಿಳಿಯಲಾಗದ್ದು, ಅಚಂಚಲವಾದದ್ದು.
ವಿವೇಕಜ್ಞಾನವಾನ್ ಮಿಶ್ರಃ ಹ್ಯಾಶುರೂಪೇಣ ಸಂಸ್ಥಿತಃ ।
ವೈಕಾರಿಕಾತ್ ಪ್ರದೃಶ್ಯೇತೇ ಗೈರಿಕೇ ಮಧುಧಾರವತ್ ॥ 10 ॥
ವಿವೇಕಜ್ಞಾನವುಳ್ಳದ್ದು. ಜಗದ್ವ್ಯಾಪ್ತವಾದುದು. ಎಲ್ಲೆಡೆಯಲ್ಲಿಯೂ ಸುಖಶೀಲವಾದುದು. ವಿವೇಕಿಯಾದ ಜ್ಞಾನಿಗೆ ವೈಕಾರಿಕವೆನಿಸಿದ ಮನಸ್ಸಿನಿಂದ ಜೀವಾತ್ಮ, ಪರಮಾತ್ಮರೆಂಬ ಜ್ಞಾನವು ನಿರಂತರವೂ ಗಿರಿಯಿಂದ ಉತ್ಪನ್ನವಾಗುವ ಮಧುಧಾರೆಯಂತೆ ಗೋಚರವಾಗುತ್ತದೆ.
ಯಶ್ಚೈನಂ ಪರಮಂ ಧರ್ಮಂ ಸರ್ವಭೂತಸುಖಾವಹಮ್ ।
ದುಃಖಾನ್ನಿಃಸರಣಂ ವೇದ ಸ ತತ್ತ್ವಜ್ಞಃ ಸುಖೀ ಭವೇತ್ ॥ 11 ॥
ಯಾವಾತನು ತನ್ನ ಬುದ್ಧಿಯಿಂದ ಸಮಸ್ತ ಭೂತಗಳಿಗೆ ಸುಖವನ್ನು ತಂದೊಡ್ಡುವ ಪರಮಾತ್ಮನೆಂಬ ಪರಮಧರ್ಮವನ್ನು, ಸಮಸ್ತ ದುಃಖಗಳನ್ನು ಪರಿಹರಿಸುತ್ತದೆಂದು ತಿಳಿಯುತ್ತಾನೋ ಆ ತತ್ತ್ವಜ್ಞನು ಸುಖಿಯಾಗಿರುತ್ತಾನೆ.
ತಸ್ಮಾತ್ ಸಮಾಹಿತಂ ಬುದ್ಧ್ಯಾ ಮನೋ ಭೂತೇಷು ಧಾರಯೇತ್ ।
ನಾಪಧ್ಯಾಯೇನ್ನ ಸ್ಪೃಹಯೇನ್ನಾಬದ್ಧಂ ಚಿಂತಯೇದಸತ್ ॥ 12 ॥
ಆದ್ದರಿಂದ ಸಾಧಕನು ಶಾಂತಿಯಿಂದ ಮನಸ್ಸನ್ನು ನಿಗ್ರಹಿಸಿಕೊಂಡು ಪ್ರಾಣಿಗಳ ಹಿತಚಿಂತನೆಯಲ್ಲಿ ಮನಸ್ಸು ವರ್ತಿಸುವಂತೆ ಮಾಡಬೇಕು. ಯಾವ ಪ್ರಾಣಿಗಳಿಗೂ ಕೇಡನ್ನೆಸಗಬಾರದು. ಯಾವುದೇ ಆಸೆಗಳಿಗೂ ತುತ್ತಾಗಬಾರದು. ಅಯೋಗ್ಯವಾದುದನ್ನು, ಹೀನವಾಗಿದ್ದನ್ನು ಮನಸ್ಸಿನಲ್ಲಿ ಚಿಂತಿಸಬಾರದು.
ಅವಾಗ್ಯೋಗಪ್ರಯೋಗೇಣ ಮನೋಜ್ಞಂ ಸಂಪ್ರವರ್ತತೇ ।
ವಿವಕ್ಷತಾ ವಾ ಸದ್ವಾಕ್ಯಂ ಧರ್ಮಂ ಸೂಕ್ಷ್ಮಮವೇಕ್ಷತಾ ।
ಸತ್ಯಾಂ ವಾಚಮಹಿಂಸ್ರಾಂ ಚ ವದೇದನಪವಾದಿನೀಮ್ ॥ 13 ॥
ನಿರಂತರವೂ ವ್ಯರ್ಥವಾದ ಪ್ರಯತ್ನದಿಂದ ಮನಸ್ಸನ್ನು ಪರಮಾತ್ಮನ ಜ್ಞಾನದಲ್ಲಿ ನೆಲೆಗೊಳಿಸಬೇಕು. ಪ್ರಿಯವಾದ ಮಾತುಗಳನ್ನು ನುಡಿಯುವುದರಿಂದ ಜ್ಞಾನೋದಯವಾಗುತ್ತದೆ.
ತಾನು ನುಡಿಯಬೇಕಾದ ಮಾತನ್ನು ಯೋಗ್ಯರೀತಿಯಲ್ಲಿ ನಿರ್ಧರಿಸಿಕೊಂಡು ಧರ್ಮಸೂಕ್ಷ್ಮವನ್ನು ವಿಮರ್ಶಿಸಿ ಸತ್ಯವಾಗಿಯೂ ಸಜ್ಜನರಿಗೆ ಹಾನಿಯಾಗದಂತೆಯೂ ಮತ್ತೊಬ್ಬರ ದೋಷವನ್ನು ಹೇಳದಂತೆಯೂ ಇರುವ ಮಾತುಗಳನ್ನೇ ಆಡಬೇಕು.
ಕಲ್ಕಾಪೇತಾಮಪರುಷಾಮನೃಶಂಸಾಮಪೈಶುನಾಮ್ ।
ಈದೃಗಲ್ಪಂ ಚ ವಕ್ತವ್ಯಮವಿಕ್ಷಿಪ್ತೇನ ಚೇತಸಾ ॥ 14 ॥
ಮಾತಿನಲ್ಲಿ ವಂಚನೆ ಇರಬಾರದು. ಕ್ರೌರ್ಯ ಇರಬಾರದು. ಯಾರಿಗೂ ಹಾನಿಯಾಗಬಾರದು. ಪರರ ದೋಷವನ್ನು ಉದ್ಘಾಟಿಸಬಾರದು. ಇಂತಹ ಮಾತುಗಳನ್ನೇ ನಿರ್ಮಲವಾದ ಮನಸ್ಸಿನಿಂದ ಮಿತವಾಗಿ ಹೇಳಬೇಕು.
ವಾಕ್ಪ್ರಬುದ್ಧೋ ಹಿ ಸಂರಾಗಾದ್ ವಿರಾಗಾದ್ ವ್ಯಾಹರೇದ್ ಯದಿ ।
ಬುದ್ಧ್ಯಾ ಹ್ಯನಿಗೃಹೀತೇನ ಮನಸಾ ಕರ್ಮ ತಾಮಸಮ್ ॥ 15 ॥
ವೈರಾಗ್ಯಗೊಂಡವನು ಸದ್ಬುದ್ಧಿಯನ್ನಾಶ್ರಯಿಸಿ ಶಾಂತಮನಸ್ಕನಾಗಿ ತಾನು ಮಾಡಿದ ತಾಮಸಕರ್ಮಗಳನ್ನು ತಾನೇ ಹೇಳಿಕೊಳ್ಳಬೇಕು.
ರಜೋಭೂತೈರ್ಹಿ ಕರಣೈಃ ಕರ್ಮಣಾ ಪ್ರತಿಪದ್ಯತೇ ।
ಸ ದುಃಖಂ ಪ್ರಾಪ್ಯ ಲೋಕೇಽಸ್ಮಿನ್ನರಕಾಯೋಪಪದ್ಯತೇ ।
ತಸ್ಮಾನ್ಮನೋವಾಕ್ಶರೀರೈರಾಚರೇದ್ ಧೈರ್ಯಮಾತ್ಮನಃ ॥ 16 ॥
ಯಾವನು ವಿರಕ್ತಿಯನ್ನು ತಾಳದೆ ರಜೋಗುಣವನ್ನೇ ಆಶ್ರಯಿಸಿ ಕಾರ್ಯವನ್ನು ಮಾಡುತ್ತಾನೋ ಅವನು ಈ ಲೋಕದಲ್ಲಿ ದುಃಖಕ್ಕೆ ತುತ್ತಾಗಿ ಕೊನೆಗೆ ನರಕವನ್ನು ಹೊಂದುತ್ತಾನೆ. ಆದ್ದರಿಂದ ಮನಸ್ಸು, ಮಾತು, ಕೃತಿಗಳಿಂದ ಮನುಷ್ಯನು ನಿಶ್ಚಲವಾಗಿ ಧೈರ್ಯವನ್ನು ಅವಲಂಬಿಸಬೇಕು.
ಪ್ರಕೀರ್ಣಮೇಷಭಾರೋ ಹಿ ಯದ್ವದ್ಧಾರ್ಯೇತ ದಸ್ಯುಭಿಃ ।
ಪ್ರತಿಲೋಮಾಂ ದಿಶಂ ಬುದ್ಧ್ವಾ ಸಂಸಾರಮಬುಧಾಸ್ತಥಾ ॥ 17 ॥
ದಾರಿಯು ಕೆಟ್ಟದ್ದೆಂಬುದನ್ನು ತಿಳಿದು ಅದೇ ದಾರಿಯಲ್ಲಿ ಪ್ರಯಾಣ ಬೆಳೆಸಿದರೆ ಸಂಪತ್ತನ್ನೆಲ್ಲ ಕಳ್ಳರು ಅಪಹರಿಸುತ್ತಾರೆ. ಅದರಂತೆ ಸಂಸಾರದಲ್ಲಿರುವ ದೋಷಗಳನ್ನು ತಿಳಿದು ಅಲ್ಲಿಯೇ ಸಾಗುವವರು ಆಶಾಪಾಶಗಳಿಂದ ಸೆಳೆಯಲ್ಪಟ್ಟು ದುಃಖಕ್ಕೀಡಾಗುತ್ತಾರೆ.

ಆದ್ದರಿಂದ ಸಂಸಾರ ಮಾರ್ಗದಲ್ಲಿರುವ ವ್ಯಕ್ತಿಗಳು ಅತಿಯಾದ ಲೋಭಗಳನ್ನು ಬಿಡಬೇಕು.
ತಾನೇವ ಚ ಯಥಾ ದಸ್ಯೂನ್ ಕ್ಷಿಪಿತ್ವ ಗಚ್ಛೇಚ್ಛಿವಾಂ ದಿಶಮ್ |
ತಥಾ ರಜಸ್ತಮಃಕರ್ಮಾಣ್ಯುತ್ಸೃಜ್ಯ ಪ್ರಾಪ್ನುಯಾತ್ ಸುಖಮ್ ॥ 18 ॥
ಸಂಸಾರದಲ್ಲಿದ್ದರೂ ದಾರಿ ತಪ್ಪಿ ಹೋದವನು ತನ್ನಲ್ಲಿರುವ ಧೈರ್ಯದಿಂದ ಕಳ್ಳರನ್ನಡಗಿಸಿ ಸರಿಯಾದ ದಾರಿಯನ್ನನುಸರಿಸಿ ಹೋಗುವಂತೆ ರಾಜಸ-ತಾಮಸಗಳನ್ನು ಬಿಟ್ಟಾಗ ಕ್ಷೇಮವನ್ನು ಹೊಂದುತ್ತಾನೆ.
ನಿಃಸಂದಿಗ್ಧಮನೀಹೋ ವೈ ಮುಕ್ತಃ ಸರ್ವಪರಿಗ್ರಹೈಃ |
ವಿವಿಕ್ತಚಾರೀ ಲಘ್ವಾಶೀ ತಪಸ್ವೀ ನಿಯತೇಂದ್ರಿಯಃ ॥ 19 ॥
ಜ್ಞಾನದಗ್ಧಪರಿಕ್ಲೇಶಃ ಪ್ರಯೋಗರತಿರಾತ್ಮವಾನ್ |
ನಿಷ್ಪ್ರಚಾರೇಣ ಮನಸಾ ಪರಂ ತದಧಿಗಚ್ಛತಿ ॥ 20 ॥
ಆಸೆಯನ್ನು ಬಿಡುವುದು, ಪರಿಗ್ರಹಗಳನ್ನೆಲ್ಲಾ ತ್ಯಜಿಸುವುದು, ಏಕಾಂತಸ್ಥಳದಲ್ಲಿ ವಾಸ ಮಾಡುವುದು, ಲಘುವಾದ ಆಹಾರ ಸೇವನೆ, ಮನಸ್ಸು ಮತ್ತು ಇಂದ್ರಿಯಗಳ ಏಕಾಗ್ರತೆಯನ್ನು ಹೊಂದುವುದು, ಜ್ಞಾನದಿಂದ ದುಃಖಗಳನ್ನು ದಹಿಸಿಕೊಳ್ಳುವುದು, ಯೋಗಸಮಾಧಿಗೆ ಬೇಕಾದಂತೆ ಅವಯವಗಳನ್ನು ಉತ್ಸಾಹದಿಂದ ಬಳಸಿಕೊಳ್ಳುವುದು ಇಂತಹ ಗುಣವುಳ್ಳವನು ನಿಶ್ಚಲವಾದ ಮನಸ್ಸಿನಿಂದ ಪರಬ್ರಹ್ಮನನ್ನು ಹೊಂದುತ್ತಾನೆ.
ಧೃತಿಮಾನಾತ್ಮವಾನ್ ಬುದ್ಧಿಂ ನಿಗೃಹ್ಣೀಯಾದಸಂಶಯಮ್ |
ಮನೋ ಬುದ್ಧ್ಯಾ ನಿಗೃಹ್ಣೀಯಾದ್ ವಿಷಯಾನ್ ಮನಸಾತ್ಮನಃ ॥21॥
ಧೈರ್ಯವಂತನೂ, ಬುದ್ಧಿವಂತನೂ ಆದ ಮನುಷ್ಯನು ಮೊದಲು ಬುದ್ಧಿಯನ್ನು, ಬುದ್ಧಿಯಿಂದ ಮನಸ್ಸನ್ನು, ಮನಸ್ಸಿನಿಂದ ವಿಷಯವನ್ನು ಅಡಗಿಸಬೇಕು. ಆ ಮನಸ್ಸನ್ನು ಪರಮಾತ್ಮನಲ್ಲಿ ಲಯಗೊಳಿಸಿ ನಿರಂತರವೂ ಧ್ಯಾನಿಸಬೇಕು.
ಯೋಜಯಿತ್ವಾ ಮನಸ್ತತ್ರ ನಿಶ್ಚಲಂ ಪರಮಾತ್ಮನಿ |
ಯೋಗಾಭಿಸಂಧಿಯುಕ್ತಸ್ಯ ಬ್ರಹ್ಮ ತತ್ಸಂಪ್ರಕಾಶತೇ |
ಐಕಾಂತ್ಯಂ ತದಿದಂ ವಿದ್ಧಿ ಸರ್ವವಸ್ತ್ವಂತರಸ್ಥಿತಿಃ ॥ 22 ॥
ಪರಮಾತ್ಮನ ಧ್ಯಾನದಲ್ಲಿಯೇ ಉತ್ಸಾಹಗೊಂಡವನಿಗೆ ಬ್ರಹ್ಮಸ್ವರೂಪವು ಅಭಿವ್ಯಕ್ತವಾಗುತ್ತದೆ. ಎಲ್ಲರ ಅಂತರ್ಯಾಮಿಯಾದ ಬ್ರಹ್ಮನಲ್ಲಿ ಮನಸ್ಸನ್ನು ಲಯಗೊಳಿಸುವುದೇ ಮನಸ್ಸಿನ ಏಕಾಂತಸ್ಥಿತಿ ಎಂದು ತಿಳಿ.
ವಿಶೇಷಹೀನಂ ಗೃಹ್ಣಂತಿ ವಿಶೇಷಾಂ ಕಾರಣಾತ್ಮಿಕಾಮ್ |
ಅಥವಾ ನ ಪ್ರಭುಸ್ತತ್ರ ಪರಮಾತ್ಮನಿ ವರ್ತಿತುಮ್ |
ಆಗಮಿತತ್ವಂ ಯೋಗಾತ್ಮಾ ಯೋಗತಂತ್ರಮುಪಕ್ರಮೇತ್ ॥ 23 ॥
ಇಂದ್ರಿಯಗಳು ಬಾಹ್ಯಪದಾರ್ಥಗಳನ್ನು ತೊರೆದಾಗ ಬದುಕಿಗೆ ಕಾರಣನೆನಿಸಿದ ಪರಮಾತ್ಮನನ್ನು ಮನಸ್ಸು ತಿಳಿಯುತ್ತದೆ. ವಿಷಯಪದಾರ್ಥಗಳಿಂದ ಮುಕ್ತವಾಗದ ಮನಸ್ಸು ಪರಮಾತ್ಮನಲ್ಲಿಯೇ ವರ್ತಿಸಲು ಸಮರ್ಥವಾಗುವುದಿಲ್ಲ. ಆದ್ದರಿಂದ ಯೋಗದಲ್ಲಿಯೇ ಮನಸ್ಸುಳ್ಳ ವ್ಯಕ್ತಿಯು ಮುಂದೆ ಕಾಣಬೇಕಾದ ಭಗವತತ್ತ್ವಕ್ಕಾಗಿ ಯೋಗವನ್ನು ಹೊಂದಬೇಕು.
ನಿಗೃಹೀತೇಂದ್ರಿಯಸ್ಯಾಸ್ಯ ಕುರ್ವಾಣಸ್ಯ ಮನೋ ವಶೇ |
ದೇವತಾಸ್ತಾಃ ಪ್ರಕಾಶಂತೇ ಹೃಷ್ಟಾ ಯಾಂತಿ ತಮೀಶ್ವರಮ್ ॥ 24 ॥
ಇಂದ್ರಿಯವನ್ನು ನಿಗ್ರಹಿಸಿಕೊಂಡು ಮನಸ್ಸನ್ನು ವಶದಲ್ಲಿಟ್ಟುಕೊಂಡಂಥ ಮನುಷ್ಯನಲ್ಲಿ ದೇವತೆಗಳು ಪ್ರಸನ್ನರಾಗಿ ಅಂತರ್ಯಾಮಿಯಾದ ಭಗವಂತನನ್ನು ತೋರಿಸುತ್ತಾರೆ.
ತಾಭಿಃ ಸಂಸಕ್ತಮನಸೋ ಬ್ರಹ್ಮವತ್ ಸಂಪ್ರಕಾಶತೇ |
ಏತೈಶ್ಚಾಪಗತೈಃ ಸರ್ವೈರ್ಬ್ರಹ್ಮಭೂಯಾಯ ಕಲ್ಪತೇ ॥ 25 ॥
ಆ ದೇವತೆಗಳಿಂದ ಭಗವಂತನಲ್ಲಿ ನೆಲೆಗೊಳಿಸಲ್ಪಟ್ಟ ಸಾಧಕನ ಮನಸ್ಸಿನಲ್ಲಿ ಗುಣಪರಿಪೂರ್ಣನಾದ ಭಗವಂತನು ಕಾಣಿಸುತ್ತಾನೆ. ಕ್ರಮವಾಗಿ ಬಾಹ್ಯೇಂದ್ರಿಯದಿಂದ ಮುಕ್ತನಾಗುತ್ತಿರಲು ಸತ್ತ್ವಗುಣವನ್ನು ಆಶ್ರಯಿಸಿದ ವ್ಯಕ್ತಿಯು ಭಗವಂತನನ್ನೇ ಹೊಂದುತ್ತಾನೆ.
ಅಥ ವಾ ನ ಪ್ರವರ್ತೇತ ಯೋಗತಂತ್ರೈರುಪಕ್ರಮೇತ್ |
ಯೇನ ತಂತ್ರಮಯಂ ತಂತ್ರಂ ವೃತ್ತಿಃ ಸ್ಯಾತ್ತತ್ತದಾಚರೇತ್ ॥ 26 ॥
ಯಾವನಿಗೆ ಪರಬ್ರಹ್ಮನನ್ನು ಜ್ಞಾನದಲ್ಲಿ ಸ್ಥಿರವಾಗಿ ನೆಲೆಗೊಳಿಸಲು ಶಕ್ತಿಯಿಲ್ಲವೋ ಅವನು ಬುದ್ಧಿಯನ್ನು ಯೋಗತಂತ್ರದಲ್ಲಿ ನೆಲೆಗೊಳಿಸಿ ಯೋಗತಂತ್ರ ಎಂದರೆ ಯೋಗ ಉಪಾಯಸಾಧನೆಗಳಿಂದ ಜೀವನವನ್ನು ಆಶ್ರಯಿಸಿ ಜೀವನೋಪಾಯವನ್ನು ಆಶ್ರಯಿಸುತ್ತಾ ಯೋಗಪ್ರಾಪ್ತಿಯ ದೆಶೆಯಲ್ಲಿ ಹೀಗೆ ವರ್ತಿಸಬೇಕು.
ಕಣಕುಲ್ಮಾಷಪಿಣ್ಯಾಕಶಾಕಯಾವಕಸಕ್ತವಃ |
ತಥಾ ಮೂಲಫಲಂ ಭೈಕ್ಷಂ ಪರ್ಯಾಯೇಣೋಪಯೋಜಯೇತ್ ॥
ಕಣ ಎಂದರೆ ಭತ್ತ ಬಡಿದ ಮೇಲೆ ಅವರೆಲ್ಲರೂ ಸ್ವೀಕರಿಸಿದ ಬಳಿಕ ಬಿತ್ತಿರುವ ಭತ್ತಗಳನ್ನು ಕಣ ಎಂದಿದ್ದಾರೆ. ಕಾಡಿನ ಉದ್ದನ್ನು ಕುಣ್ಮಾಶ ಎಂದಿದ್ದಾರೆ. ಇಂತಹ ವ್ರೀಹಿ, ಉದ್ದು, ಹಿಂಡಿ, ಕಾಯಿ-ಕಸರುಗಳು, ಗೆಡ್ಡೆ-ಗೆಣಸುಗಳು, ಹಿಟ್ಟು ಮುಂತಾದವುಗಳನ್ನೇ ಪರ್ಯಾಯವಾಗಿ ಸೇವಿಸುತ್ತಾ ಬರಬೇಕು.
ಆಹಾರಂ ನಿಯತಂ ಚೈವ ದೇಶೇ ಕಾಲೇ ಚ ಸಾತ್ತ್ವಿಕಮ್ |
ತತ್ಪರೀಕ್ಷ್ಯಾನುವರ್ತೇತ ಯತ್ ಪ್ರವೃತ್ತ್ಯನುವರ್ತಕಮ್ ॥ 28 ॥
ಸಾತ್ವಿಕನಾಗಿದ್ದುಕೊಂಡು ತನ್ನ ಯೋಗಸಾಧನೆಗೆ ವಿರುದ್ಧವಲ್ಲದ ಆ ಆಹಾರವನ್ನು ಸ್ವೀಕರಿಸುತ್ತಿರಬೇಕು. ಯಾವುದು ತನ್ನ ಜ್ಞಾನಮಾರ್ಗಕ್ಕೆ ಪ್ರತಿಬಂಧವಲ್ಲವೋ ಅದನ್ನು ತಿಳಿದು ಆಹಾರವನ್ನು ಪರೀಕ್ಷಿಸಿ ಸ್ವೀಕರಿಸಬೇಕು.

ಪ್ರವೃತ್ತಂ ನೋಪರುಂಧೇತ ಶನೈರಗ್ನಿಮಿವೇಂಧಯೇತ್ |
ಜ್ಞಾನೇಂಧಿತಂ ತತೋ ಜ್ಞಾನಮರ್ಕವತ್ ಸಂಪ್ರಕಾಶತೇ ॥ 29 ॥
ಆರಂಭಿಸಿದ ಕರ್ಮವನ್ನು ಬಿಡಬಾರದು. ಅಗ್ನಿಯನ್ನು ಬೆಳಗಿಸುವ ಹಾಗೆ ಜ್ಞಾನಪ್ರಕಾಶವನ್ನು ಅರ್ಥಾತ್ ಭಗವದ್‌ಜ್ಞಾನವನ್ನು ಸ್ವಲ್ಪ ಸ್ವಲ್ಪವಾಗಿ ಹೆಚ್ಚಿಸಿಕೊಳ್ಳಬೇಕು. ಪ್ರಕಾಶಗೊಂಡ ಜ್ಞಾನವು ಸೂರ್ಯನು ಪದಾರ್ಥಗಳನ್ನು ಹೇಗೋ ಹಾಗೆ ಬ್ರಹ್ಮಸ್ವರೂಪವನ್ನು ತೋರಿಸುತ್ತದೆ.
ಜ್ಞಾನಾಧಿಷ್ಠಾನಮಜ್ಞಾನಂ ತ್ರೀಂಲ್ಲೋಕಾನಧಿತಿಷ್ಠತಿ |
ವಿಜ್ಞಾನಾನುಗತಂ ಜ್ಞಾನಮಜ್ಞಾನಾದಪಕೃಷ್ಯತೇ ॥ 30 ॥
ಜ್ಞಾನವನ್ನೇ ಆಶ್ರಯವಾಗಿ ಉಳ್ಳ ಅಜ್ಞಾನವೆಂಬುದು ಮೂರು ಲೋಕಗಳನ್ನೂ, ಮೂರು ಅವಸ್ಥೆಗಳನ್ನೂ ವ್ಯಾಪಿಸಿದೆ. ಬುದ್ಧಿಯನ್ನು ಅವಲಂಬಿಸಿದ ಆ ಜ್ಞಾನವು ಅಜ್ಞಾನದಿಂದ ದೂರವಾಗುತ್ತದೆ.
ಪೃಥಕತ್ವಸಂಪ್ರಯೋಗಾಚ್ಚ ನಾಸೂಯುರ್ವೇದಶಾಶ್ವತಮ್ |
ಸ ತಯೋರಪವರ್ಗಜ್ಞೋ ವೀತರಾಗೋ ವಿಮುಚ್ಯತೇ ॥ 31 ॥
ಜೀವಾತ್ಮನು ಮೂರು ಅವಸ್ಥೆಗಳಿಂದ ಬೇರೆಯಾಗಿದ್ದರೂ ಅದರೊಡನೆ ಸೇರಿದಂತೆ ತಿಳಿದಿದ್ದರಿಂದ ಮೋಹಗೊಳ್ಳುತ್ತಾನೆ.ಅಸೂಯಾ ರಹಿತನಾಗಿ ಶಾಶ್ವತವಾದ ಹರಿಯನ್ನು ತಿಳಿಸು. ಕ್ರಮವಾಗಿ ಜೀವನು ಆ ಜ್ಞಾನಾಜ್ಞಾನಗಳ ನಡುವೆ ಇರುವ ಅಪವರ್ಗವನ್ನು ತಿಳಿದ ಬಳಿಕ ರಾಗದಿಂದ ಮುಕ್ತನಾಗಿ ಬಿಡುಗಡೆ ಹೊಂದುತ್ತಾನೆ.
ವಯೋತೀತೋ ಜರಾಮೃತ್ಯೂ ಜಿತ್ವಾ ಬ್ರಹ್ಮ ಸನಾತನಮ್ |
ಅಮೃತಂ ತದವಾಪ್ನೋತಿ ಯತ್ತದಕ್ಷರಮವ್ಯಯಮ್ ॥ 32 ॥
ಆಸೆಯನ್ನು ತೊರೆದಾಗ ಜರಾ-ಮರಣಗಳನ್ನು ಜಯಿಸಿ, ಸನಾತನವೂ, ಅಮೃತವೂ, ಅವ್ಯಯವೂ ಆದ ಗುಣಪರಿಪೂರ್ಣನಾದ ಅಕ್ಷರನಾದ ಭಗವಂತನನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಪಂಚಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತಾರನೆಯ ಅಧ್ಯಾಯ
ಭೀಷ್ಮರು ಗುರು-ಶಿಷ್ಯರ ಸಂವಾದದಲ್ಲಿ ತಿಳಿಸಲ್ಪಟ್ಟ ಪರಮಾತ್ಮನ
ಸಾಕ್ಷಾತ್ಕರಿಸುವ ಮಾರ್ಗಗಳನ್ನು ಯುಧಿಷ್ಠಿರನಿಗೆ ತಿಳಿಸಿದುದು.
ಗುರುಃ
ನಿಷ್ಕಲ್ಮಷಂ ಬ್ರಹ್ಮಚರ್ಯಮಿಚ್ಛತಾ ಚರಿತುಂ ಸದಾ |
ನಿದ್ರಾ ಸರ್ವಾತ್ಮನಾ ತ್ಯಾಜ್ಯಾ ಸ್ವಪ್ನದೋಷಾನವೇಕ್ಷತಾ ॥ 1 ॥
ಗುರು ನಿಷ್ಕಲ್ಮಷವಾದ ಬ್ರಹ್ಮಚರ್ಯವನ್ನು ಆಚರಿಸಬೇಕು ಎಂಬ ಇಚ್ಛೆಯುಳ್ಳವನು ನಿದ್ರೆಯಲ್ಲಿರುವ ದೋಷಗಳನ್ನು ಮೊದಲು ಕಂಡು ಆ ನಿದ್ರೆಯನ್ನು ಜಯಿಸಬೇಕು.
ಸ್ವಪ್ನೇ ಹಿ ರಜಸಾ ದೇಹೀ ತಮಸಾ ಚಾಭಿಭೂಯತೇ |
ದೇಹಾಂತರಮಿವಾಪನ್ನಶ್ಚರತ್ಯಪಗತಸ್ಮೃತಿಃ ॥ 2 ॥
ನಿದ್ರೆಯಲ್ಲಿ ಮನುಷ್ಯನಿಗೆ ರಜೋಗುಣ, ತಮೋಗುಣಗಳು ಆಕ್ರಮಿಸಿ ಕುತ್ತು ತರುತ್ತವೆ. ಅವನು ನಿದ್ರಾಸಮಯದಲ್ಲಿ ಬೇರೆ ದೇಹವನ್ನು ಹೊಂದಿದಂತೆ, ಹಿಂದಿನ ಸ್ಮರಣೆಯೇ ಇಲ್ಲದಂತೆ ಬಿದ್ದಿರುತ್ತಾನೆ.
ಜ್ಞಾನಾಭ್ಯಾಸಾಜ್ಜಾಗರತೋ ಜಿಜ್ಞಾಸಾರ್ಥಮನಂತರಮ್ |
ವಿಜ್ಞಾನಾಭಿನಿವೇಶಾತ್ತು ಜಾಗರ್ತ್ಯನಿಶಂ ಸದಾ ॥ 3 ॥
ಯೋಗಿಯಾದವನು ಬ್ರಹ್ಮಜ್ಞಾನಾರ್ಜನೆಗಾಗಿ ಪ್ರಯತ್ನಿಸುತ್ತಾ ಆ ಜ್ಞಾನಾರ್ಜನೆಅ ಅಭ್ಯಾಸಕ್ಕಾಗಿ ರಾತ್ರಿ-ಹಗಲು ಯಾವಾಗಲೂ ಜಾಗರೂಕನಾಗಿರಬೇಕು.
ಅತ್ರಾಹ ಕೋಽನ್ವಯಂ ಭಾವಃ ಸ್ವಪ್ನೇ ವಿಷಯವಾನಿವ |
ಪ್ರಲೀನೈರಿಂದ್ರಿಯೈರ್ದೇಹೀ ವರ್ತತೇ ದೇಹವಾನಿವ ॥ 4 ॥
ವಿಷಯಗಳಲ್ಲಿ ಸೇರದಂತಿರುವ ಆ ಸ್ವಪ್ನಾವಸ್ಥೆಯು ದೇಹವುಳ್ಳ ಆತ್ಮನಿಗೆ ಯಾವುದಾಗಿರಬಹುದು? ಸ್ವಪ್ನದಲ್ಲಿ ಯಾವ ಸ್ವಭಾವವನ್ನು ಹೊಂದಿರುತ್ತಾನೆ? ಇಂದ್ರಿಯಗಳೆಲ್ಲ ಪೂರ್ಣವಾಗಿ ಲೀನವಾಗಿದ್ದರೂ ಜ್ಞಾನ-ಕರ್ಮೇಂದ್ರಿಯಗಳಿಂದ ಕೂಡಿರುವ ಶರೀರವುಳ್ಳವನಂತೆ ಕಾಣಿಸುತ್ತಾನಲ್ಲವೇ? ಎಂದು ಕೆಲವರು ಹೇಳಬಹುದು.
ಅತ್ರೋಚ್ಯತೇ ಯಥಾ ಹ್ಯೇತದ್ ವೇದ ಯೋಗೇಶ್ವರೋ ಹರಿಃ |
ತಥೈತದುಪಪನ್ನಾರ್ಥಂ ವರ್ಣಯಂತಿ ಮಹರ್ಷಯಃ ॥ 5 ॥
ಈ ವಿಷಯದಲ್ಲಿ ಯೋಗಿಗಳು ಹೀಗೆ ಹೇಳುತ್ತಾರೆ- ಸ್ವಪ್ನಾವಸ್ಥೆಯಲ್ಲಿ ಭಗವಂತನೇ ರಥಗಳನ್ನೂ, ರಥಯೋಗಗಳನ್ನೂ, ಮಾರ್ಗಗಳನ್ನೂ ಸೃಷ್ಟಿಸುತ್ತಾನೆ. `ಸಂದೇಸೃಷ್ಟಿರಾಹ ಹಿ' ಎಂದು ಬ್ರಹ್ಮಸೂತ್ರವು ಹೇಳುತ್ತಿದೆ. ಆದ್ದರಿಂದ ಭಗವಂತನ ಸೃಷ್ಟಿಯಿಂದ ಸ್ವಪ್ನಸ್ಥಾನವು ಉಪಪನ್ನವಾಗಿದೆ ಎಂದು ಶಾಸ್ತ್ರಜ್ಞರು ಭಗವಂತನ ಯೋಗೇಶ್ವರ ಶಕ್ತಿಯನ್ನು ವರ್ಣಿಸುತ್ತಾರೆ.
ಇಂದ್ರಿಯಾಣಾಂ ಶ್ರಮಾತ್ ಸ್ವಪ್ನಮಾಹುಃ ಸರ್ವಗತಂ ಬುಧಾಃ |
ಅನ್ಯಥಾ ಹೀಂದ್ರಿಯಾಣ್ಯಾಹುಸ್ತಾವದ್ ಗಚ್ಛಂತಿ ತಾನಿ ವೈ ॥ 6 ॥

ಇಂದ್ರಿಯಗಳಿಗೆ ಅಧಿಕ ಶ್ರಮವುಂಟಾದರೆ ಸ್ವಪ್ನವು ಉಂಟಾಗುತ್ತದೆ ಎಂದು ಶಾಸ್ತ್ರಜ್ಞರು ಹೇಳುತ್ತಾರೆ. ಆಗ ಮನಸ್ಸೆಂಬುದು ಎಲ್ಲ ವಿಷಯಗಳನ್ನು ಸೇರುತ್ತದೆ ಎಂದು ಅವರ ಅಭಿಪ್ರಾಯ. ಸ್ವಪ್ನವಿಲ್ಲದೇ ಇದ್ದಾಗ ಇಂದ್ರಿಯಗಳು ಏನನ್ನು ಬಯಸುತ್ತವೋ, ತಾವು ಅಪೇಕ್ಷಿಸಿದ್ದ ಪದಾರ್ಥಗಳ ಬಳಿ ಸಾಗುತ್ತವೆ.

ಅತ್ರಾಹುಸ್ತ್ರಿತಯಂ ನಿತ್ಯಮತಥ್ಯಮಿತಿ ಚೇಚ್ಚ ನ |
ಪ್ರಥಮೇ ವರ್ತಮಾನೋಽಸೌ ತ್ರಿತಯಂ ವೇತ್ತಿ ಸರ್ವದಾ ॥ 7 ॥

ಕೆಲವರು ಪದಾರ್ಥವು, ಪದಾರ್ಥಜ್ಞಾನವು, ಪದಾರ್ಥಜ್ಞಾನ ಹೊಂದಿದ ಮೇಲೆ ಆ ವಿಷಯದಲ್ಲಿ ನಡೆಸುವ ಪ್ರಯತ್ನವು ಅಥವಾ ಸುಖ-ದುಃಖಗಳ ಭೋಗ ಇವುಗಳನ್ನು ಸತ್ಯ ಎಂದು ಹೇಳುತ್ತಾರೆ. ಕೆಲವರು ಮಿಥ್ಯಾ ಎಂದು ಹೇಳುತ್ತಾರೆ. ಸತ್ಯ ಎನ್ನುವ ಪಕ್ಷದಲ್ಲಿ ಪರಮಾತ್ಮನು ಈ ಮೂರನ್ನೂ ನಿಯಮಿಸುವುದು ಸತ್ಯ ಎಂದು ತಿಳಿಯುತ್ತಾರೆ.

ನೇತರಾವುಪಸಂಗಮ್ಯ ವಿಜಾನಾತಿ ಕಥಂಚನ |
ಸ್ವಪ್ನಾವಸ್ಥಾಗತೋ ಹ್ಯೇಷ ಸ್ವಪ್ನ ಇತ್ಯೇವ ವೇತ್ತಿ ಚ ॥ 8 ॥

ಇನ್ನು ಕೆಲವರು ಜಾಗರಾವಸ್ಥೆಯಲ್ಲಿದ್ದಾಗ ಜೀವನು ಮೂರು ಅವಸ್ಥೆಗಳನ್ನು ತಿಳಿಯಬಲ್ಲನು. ಸ್ವಪ್ನ-ಸುಷುಪ್ತಿ ಅವಸ್ಥೆಗಳಲ್ಲಿ ಅವನಿಗೆ ತಿಳಿವಳಿಕೆ ಇರುವುದಿಲ್ಲ. ಸ್ವಪ್ನಾವಸ್ಥೆಯಲ್ಲಿದ್ದಾಗ ಸ್ವಪ್ನವನ್ನು ಮಾತ್ರ ತಿಳಿಯಬಲ್ಲನು ಎಂದು ಕೆಲವರು ಹೇಳುತ್ತಾರೆ.

ತದಪ್ಯಸದೃಶಂ ಯುಕ್ತ್ಯಾ ತ್ರಿತಯಂ ಮೋಹಲಕ್ಷಣಮ್ |
ಯದಾತ್ಮತ್ರಿತಯಾನ್ಮುಕ್ತಸ್ತದಾ ಜಾನಾತ್ಯಸತ್ಕೃತಃ ॥ 9 ॥

ಅದೂ ಯುಕ್ತಿಯುಕ್ತವಾಗುವುದಿಲ್ಲ. ಈ ಮೂರು ಅವಸ್ಥೆಗಳು ಮೋಹವೆಂದೇ ಕರೆಸಿಕೊಳ್ಳಲ್ಪಡುತ್ತವೆ. ಮೂರನ್ನು ಇವನು ಸರಿಯಾಗಿ ತಿಳಿದಿರುವುದಿಲ್ಲ. ಯಾವಾಗ ಈ ಮೂರು ಅವಸ್ಥೆಗಳು ತನಗೆ ಸಹಜವಲ್ಲ, ತಾತ್ಕಾಲಿಕವೆಂದು ತಿಳಿಯುತ್ತಾನೋ ಆಗ ಮೂರು ಅವಸ್ಥೆಗಳಿಂದ ಮುಕ್ತನಾಗುತ್ತಾನೆ.

ಮನಸಸ್ತು ಪ್ರಲೀನತ್ವಾತ್ ತತ್ತದಾಹುರ್ನಿದರ್ಶನಮ್ |
ಕಾರ್ಯವ್ಯಾಸಕ್ತಮನಸಃ ಸಂಕಲ್ಪೋ ಜಾಗ್ರತೋ ಹ್ಯಪಿ |
ಯದ್ವನ್ಮನೋರಥೈಶ್ವರ್ಯಂ ಸ್ವಪ್ನೇ ತದ್ವನ್ಮನೋಗತಮ್ ॥ 10 ॥

ಸ್ವಪ್ನದಲ್ಲಿ ಇಂದ್ರಿಯಗಳು ಲೀನವಾಗಿದ್ದರೂ ಮನಸ್ಸು ವ್ಯಾಪಾರವುಳ್ಳದ್ದಾಗಿಯೇ ಇರುತ್ತದೆಂದೂ, ಇದೇ ಸ್ವಪ್ನಕ್ಕೆ ಕಾರಣವೆಂದೂ ಹೇಳುತ್ತಾರೆ. ಆದರೆ ಸುಷುಪ್ತಿಯ ಅವಸ್ಥೆಯಲ್ಲಿ ಮನಸ್ಸು ಲೀನವಾಗಿರುತ್ತದೆ. ಆಗ ಜೀವನು ಸಾಕ್ಷಿಯಿಂದಲೇ ಸ್ವರೂಪ ಸುಖವನ್ನು ಅನುಭವಿಸುತ್ತಾನೆ. ಸುಷುಪ್ತಿಯಲ್ಲಿ ಅನುಭವಿಸುವ ಸುಖವು ಮುಕ್ತಿ ಸುಖಕ್ಕೆ ದೃಷ್ಟಾಂತವಾಗಿದೆ. ಎಚ್ಚರದಲ್ಲಿದ್ದಾಗ ಬೇರೆ ಬೇರೆ ಕಾರ್ಯಗಳಲ್ಲಿ ಮನಸ್ಸಿಟ್ಟಿರುವಾಗ ಅವನಿಗೆ ತೋರುವ ಸಂಕಲ್ಪಗಳೆಲ್ಲ ಅವನ ಮನಸ್ಸಿನಲ್ಲೇ ಮೂಡಿದವುಗಳು ಹೇಗೋ ಹಾಗೆ ಸ್ವಪ್ನದಲ್ಲಿ ತೋರುವ ಪದಾರ್ಥಗಳು ಮನಸ್ಸಿಗೆ ಸಂಬಂಧಪಟ್ಟವುಗಳೇ.

ಸಂಸಾರಾಣಾಮಸಂಖ್ಯಾನಾಂ ಕಾಮಾತ್ಮಾ ತದವಾಪ್ನುಯಾತ್ |
ಮನಸ್ಯಂತರ್ಹಿತಂ ಸರ್ವಂ ವೇದ ಸೋತ್ತಮಪೂರುಷಃ ॥ 11 ॥

ಜೀವನು ಲೆಕ್ಕ ಸಿಗದಿರುವಷ್ಟು ಜನ್ಮವನ್ನು ತಾಳಿರುವುದರಿಂದ ಯಾವ ಜನ್ಮದಲ್ಲಿ ಕಾಮಿಸಿದ ಸಂಕಲ್ಪಗಳಿವೆಯೋ ಅವೆಲ್ಲವನ್ನೂ ಮನಸ್ಸಿನಲ್ಲಿ ಹೊಂದಿದ್ದು ಸ್ವಪ್ನಾವಸ್ಥೆಯಲ್ಲಿ ನೋಡುತ್ತಾನೆ. ಮನಸ್ಸಿನಲ್ಲಿ ಅಡಕವಾದ ಅನಂತ ಜನ್ಮಗಳ ಸಂಸ್ಕಾರಗಳನ್ನು ಪುರುಷೋತ್ತಮನಾದ ಭಗವಂತನು ಸಮಗ್ರವಾಗಿ ತಿಳಿದಿರುತ್ತಾನೆ.

ಗುಣಾನಾಮಪಿ ಯದ್ಯೇತತ್ ಕರ್ಮ ಜಾನಾತ್ಯುಪಸ್ಥಿತಿಮ್ |
ತತ್ತಚ್ಛಂಸಂತಿ ಭೂತಾನಿ ಮನೋ ಯದ್ಭಾವಿತಂ ಯಥಾ ॥ 12 ॥

ಸತ್ತ್ವ-ರಜಸ್-ತಮೋಗುಣಗಳ ದೆಸೆಯಿಂದ ಉತ್ತಮ-ಮಧ್ಯಮ-ಅಧಮ ರೂಪವಾದ ಕರ್ಮಗಳಲ್ಲಿ ಮನಸ್ಸು ಪ್ರವೃತ್ತಿಯನ್ನು ಹೊಂದುತ್ತದೆ. ಮನಸ್ಸು ಹೇಗೆ ಸಂಕಲ್ಪಗಳನ್ನು ಮಾಡುತ್ತದೋ ಆ ರೀತಿಯಾಗಿ ಆ ಜೀವರು ಆಯಾ ಕರ್ಮಗಳನ್ನು ತಿಳಿಯುತ್ತಾರೆ.

ತತಸ್ತಮುಪವರ್ತಂತೇ ಗುಣಾ ರಾಜಸತಾಮಸಾಃ |
ಸಾತ್ತ್ವಿಕೋ ವಾ ಯಥಾಯೋಗಮಾನಂತರ್ಯಫಲೋದಯಃ ॥ 13 ॥

ಮನಸ್ಸು ಯಾವ ರೀತಿಯಾಗಿ ಸಾಗುತ್ತದೋ ಅದರಂತೆ ರಾಜಸ-ತಾಮಸ-ಸಾತ್ವಿಕ ಗುಣಗಳಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಅವರವರ ಕರ್ಮಾನುಸಾರವಾಗಿ ಮನಸ್ಸು ಪ್ರವೃತ್ತಿಯನ್ನು ಹೊಂದುತ್ತದೆ. ಜನ್ಮಾಂತರದ ಫಲಗಳ ಉದಯಕ್ಕೆ ಈ ಮನಸ್ಸಿನ ಗತಿಯೇ ಕಾರಣವಾಗಿದೆ.

ತತಃ ಪಶ್ಯತ್ಯಸಂಬಂಧಾನ್ ವಾತಪಿತ್ತಕಫೋತ್ತರಾನ್ |
ರಜಸ್ತಮೋಭವೈರ್ಭಾವೈಸ್ತದಪ್ಯಾಹುರ್ದುರನ್ವಯಮ್ ॥ 14 ॥

ಸ್ವಪ್ನಾವಸ್ಥೆಯಲ್ಲಿ ಜೀವನು ಹಿಂದೆ ಮುಂದೆ ಸಂಬಂಧವಿಲ್ಲದಿರುವಂತಹ ಸ್ವಪ್ನ ಪದಾರ್ಥಗಳನ್ನು ನೋಡುತ್ತಾನೆ. ವಾತ-ಪಿತ್ತ-ಕಫಗಳ ನಿಮಿತ್ತವಾಗಿ ಸ್ವಪ್ನವು ಉಂಟಾಗಿದೆ ಎಂದು ತಿಳಿಯುತ್ತಾನೆ. ಅಂತಹ ಶರೀರ ಸಂಬಂಧವನ್ನು ತಪ್ಪಿಸಿಕೊಳ್ಳುವುದು ಕಷ್ಟವೆಂದು ಹೇಳುತ್ತಾರೆ.

ಪ್ರಸನ್ನೈರಿಂದ್ರಿಯೈರ್ಯದ್ಯತ್ ಸಂಕಲ್ಪಯತಿ ಮಾನಸಮ್ |
ತತ್ತತ್ ಸ್ವಪ್ನೇಽಪ್ಯುಪರತೇ ಮನೋದೃಷ್ಟಿರ್ನಿರೀಕ್ಷತೇ ॥ 15 ॥

ಮನುಷ್ಯನು ಎಚ್ಚರಗೊಂಡಾಗ ಚಟುವಟಿಕೆಯಿಂದ ಕೂಡಿದ ಇಂದ್ರಿಯಗಳಿಂದ ಮನಸ್ಸಿನಲ್ಲಿ ಯಾವ ಯಾವ ವಿಷಯಗಳನ್ನು ಸಂಕಲ್ಪಿಸುತ್ತಾನೋ ಅವುಗಳನ್ನೆಲ್ಲ ಸ್ವಪ್ನಾವಸ್ಥೆಯಲ್ಲಿಯೂ ಭಗವಂತನ ವ್ಯಾಪಾರದಿಂದ ಮನಸ್ಸು ಕಾಣಬಲ್ಲದು.

ವ್ಯಾಪಕಂ ಸರ್ವಭೂತೇಷು ವರ್ತತೇಽಪ್ರತಿಘಂ ಮನಃ |
ಮನಸ್ಯಂತರ್ಹಿತಂ ದ್ವಾರಂ ದೇಹಮಾಸ್ಥಾಯ ಮಾನಸಮ್ ॥ 16 ॥

ಮನಸ್ಸು ಯಾವಾಗಲೂ ಸಮಸ್ತ ಭೂತಗಳಲ್ಲಿಯೂ ವ್ಯಾಪಕವಾಗಿದೆ. ದೀಪದಂತೆ ವ್ಯಾಪಿಸಿರುವಂತಹ ಮನಸ್ಸು ಜೀವಾತ್ಮನ ಪ್ರಭಾವದಿಂದ ಶಕ್ತಿಯನ್ನು ಪಡೆದು ಎಲ್ಲಾ ಪ್ರಾಣಿಗಳು ಮನಸ್ಸಿನ ಸಹಾಯದಿಂದ ವ್ಯಾಪಾರಗಳನ್ನು ಮಾಡುತ್ತಿದ್ದಾರೆ. ಮನಸ್ಸಿನಲ್ಲಿಯೇ ಎಲ್ಲಾ ದೇವತೆಗಳು ನೆಲೆಸಿದ್ದು ವ್ಯಾಪಾರವನ್ನು ನಡೆಸುತ್ತಿದ್ದಾರೆ.

ಯತ್ತತ್ ಸದಸದವ್ಯಕ್ತಂ ಸ್ವಪಿತ್ಯಸ್ಮಿನ್ನಿದರ್ಶನಮ್ |
ವ್ಯಕ್ತಭೇದಮತೀತೋಽಸೌ ಚಿನ್ಮಾತ್ರಂ ಪರಿದೃಶ್ಯತೇ |
ಸರ್ವಭೂತಾತ್ಮಭೂತತ್ವಂ ತದಧ್ಯಾತ್ಮಗುಣಂ ವಿದುಃ ॥ 17 ॥

ದೇಹಾದಿಗಳಿಗೆ ಕಾರಣವಾದ ಕರ್ಮವು ಈ ಮನಸ್ಸಿನಲ್ಲಿ ಸೇರಿಕೊಂಡಿದೆ. ಮನಸ್ಸು ಈ ಮನುಷ್ಯದೇಹವನ್ನು ಅವಲಂಬಿಸಿಕೊಂಡಿದೆ. ಈ ದೇಹ-ಮನಸ್ಸುಗಳಲ್ಲಿ ಅಜ್ಞೇಯನಾದ, ಸೂಕ್ಷ್ಮನಾದ, ಸರ್ವಜ್ಞನಾದ, ಗುಣಪರಿಪೂರ್ಣನಾದ ಪರಬ್ರಹ್ಮನು ಜೀವಾತ್ಮನನ್ನು ಆಲಿಂಗಿಸಿ ಮಲಗಿದ್ದಾನೆ. ಪ್ರಾಜ್ಞನಾದ ಪರಮಾತ್ಮನಿಂದ ಆಲಿಂಗಿತನಾದ ಜೀವಾತ್ಮನು ಈ ದೇಹದಲ್ಲಿ ಮಲಗಿರುತ್ತಾನೆ. ಜ್ಞಾನಿಗಳು ನಿದ್ರಾತೀತನಾದ ಪರಮಾತ್ಮನು ಜೀವನಿಂದ ಅತ್ಯಂತ ಭಿನ್ನನೆಂದೂ, ಕೇವಲ ಜ್ಞಾನಾನಂದಾತ್ಮಕ ಕರ-ಚರಣಾದಿಗಳುಳ್ಳವನೆಂದು ತಿಳಿಯಲ್ಪಡುತ್ತಾನೆ. ಸಮಸ್ತ ಜೀವರ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಜೀವರಿಗಿಂತ ಜ್ಞಾನಾದಿ ಗುಣಗಳಲ್ಲಿ ಅಧಿಕನೆಂದು ಜ್ಞಾನಿಗಳು ತಿಳಿದಿರುತ್ತಾರೆ.

ಲಿಪ್ಸೇತ ಮನಸಾ ಯದ್ಯತ್ ಸಂಕಲ್ಪಾದೈಶ್ವರಂ ಗುಣಮ್ |
ಆತ್ಮಪ್ರಸಾದಾತ್ತಂ ವಿದ್ಯಾತ್ ಸರ್ವಾ ಹ್ಯಾತ್ಮನಿ ದೇವತಾಃ ॥ 18 ॥

ಯಾವ ಸಾಧಕನು ಮನಸ್ಸಿನಲ್ಲಿ ನಿರ್ದುಃಖತ್ವ, ನಿತ್ಯಸುಖಿತ್ವ ಎಂಬ ಗುಣಗಳಿಂದ ಕೂಡಿರುವ ಮೋಕ್ಷವನ್ನು ಈಶ್ವರ ಸಂಬಂಧಿ ಎಂದು ತಿಳಿದು ಅಪೇಕ್ಷಿಸುತಾನೋ ಅವನು ಪರಮಾತ್ಮನ ಅನುಗ್ರಹದಿಂದ ಅದನ್ನು ಹೊಂದುತ್ತಾನೆ. ಬ್ರಹ್ಮಾದಿ ದೇವತೆಗಳೂ ಪರಮಾತ್ಮನನ್ನು ಆಶ್ರಯಿಸಿಯೇ ಇದ್ದಾರೆ.

ಏವಂ ಹಿ ತಪಸಾ ಯುಕ್ತಮರ್ಕವತ್ತಮಸಃ ಪರಮ್ |
ತ್ರೈಲೋಕ್ಯಪ್ರಕೃತಿರ್ದೇಹೀ ತಪಸಾ ತಂ ಮಹೇಶ್ವರಮ್ ॥ 19 ॥

ಈ ರೀತಿಯಾಗಿ ತಪಸ್ಸಿನಿಂದ ಕತ್ತಲೆಯನ್ನು ಮೀರಿರುವ, ಉದಿಸುವ ಸೂರ್ಯನಿಗೆ ಸದೃಶವಾದ ಕಾಂತಿಯುಳ್ಳ ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು. ಅಜ್ಞಾನವೆಂಬ ಕತ್ತಲೆಯನ್ನು ದಾಟಿದ ಬಳಿಕ ಜೀವನು ಮೂರುಲೋಕಗಳಿಗೆ ಕಾರಣನಾದ ಭಗವಂತನನ್ನು ಹೊಂದುತ್ತಾನೆ.

ತಪೋ ಹ್ಯಧಿಷ್ಠಿತಂ ದೇವೈಸ್ತಪೋಘ್ನಮಸುರೈಸ್ತಮಃ |
ಏತದ್ ದೇವಾಸುರೈರ್ಗುಪ್ತಂ ತದಾಹುರ್ಜ್ಞಾನಲಕ್ಷಣಮ್ ॥ 20 ॥

ದೇವತೆಗಳೆಲ್ಲ ತಪಸ್ಸನ್ನೇ ಹೊಂದಿದರು. ಅಸುರರು ತಪಸ್ಸಿಗೆ ವಿಘ್ನವನ್ನೇ ಆಚರಿಸಿದರು. ಹೀಗೆ ಜ್ಞಾನವು ದೇವತೆಗಳಿಂದ ರಕ್ಷಿಸಲ್ಪಟ್ಟಿದ್ದರೆ ಅಜ್ಞಾನವು ದೈತ್ಯರಿಂದ, ಅಸುರರಿಂದ ರಕ್ಷಿಸಲ್ಪಟ್ಟಿದೆ.

ಸತ್ತ್ವಂ ರಜಸ್ತಮಶ್ಚೇತಿ ದೇವಾಸುರಗುಣಾನ್ ವಿದುಃ |
ಸತ್ತ್ವಂ ದೇವಗುಣಂ ವಿದ್ಯಾದಿತರಾವಾಸುರೌ ಗುಣೌ ॥ 21 ॥

ಸತ್ತ್ವ-ರಜಸ್ಸು-ತಮಸ್ಸು ಎಂಬುದು ದೇವತೆಗಳ, ಅಸುರರ ಗುಣಗಳು ಎಂದು ಹೇಳುತ್ತಾರೆ. ಸತ್ತ್ವಗುಣ ದೇವತೆಗಳ ಗುಣವಾದರೆ, ರಜಸ್ಸು-ತಮಸ್ಸು ಗುಣಗಳು ಆಸುರಿ ಗುಣಗಳೆನಿಸಿವೆ.

ಸತ್ತ್ವಂ ಮನಸ್ತಥಾ ಬುದ್ಧಿರ್ದೇವಾ ಇತ್ಯಭಿಶಬ್ದಿತಾಃ |
ತೈರೇವ ಹಿ ವೃತಸ್ಸಮ್ಯಗ್ಜ್ಞಾತ್ವೈವಂ ಪರಮಂ ಪದಮ್ ॥ 22 ॥

ಸತ್ತ್ವಗುಣ, ಮನಸ್ಸು, ಬುದ್ಧಿ ಇವೆಲ್ಲವೂ ದೇವ ಅನ್ನುವ ಶಬ್ದದಿಂದ ಕರೆಯಲ್ಪಟ್ಟಿವೆ. ಆ ದೇವತೆಗಳ ಅನುಗ್ರಹದಿಂದ ಕೂಡಿದ ಜೀವನು ಅವರ ಅನುಗ್ರಹದಿಂದಲೇ ಭಗವಂತನನ್ನು ತಿಳಿದು ಪರಮಪದವನ್ನು ಹೊಂದುತ್ತಾನೆ.

ನಿದ್ರಾಂ ವಿಕಲ್ಪೇತ ಸತಾಂ ಮನೋ ವಿಶತಿ ಲೋಕವತ್ |
ಸ್ವಸ್ಥೋ ಭವತಿ ಗೂಢಾತ್ಮಾ ಕಲುಷೈಃ ಪರಿವರ್ಜಿತಃ ॥ 23 ॥

ಸಜ್ಜನರ ಮನಸ್ಸಿನಲ್ಲಿ ಸಾಮಾನ್ಯ ಜನರಂತೆ ನಿದ್ರೆಯು ಪ್ರವೇಶಿಸುತ್ತದೆ. ಆ ತಮೋಗುಣದ ಕಾರ್ಯವಾದ ನಿದ್ರೆಯನ್ನು ಜಯಿಸಿದವನು ಕಷ್ಮಲಗಳನ್ನು ದಾಟುತ್ತಾನೆ. ಶಾಂತಚಿತ್ತನಾಗುತ್ತಾನೆ.

ನಿಶಾದಿಕಾ ಯೇ ಕಥಿತಾ ಲೋಕಾನಾಂ ಕಲುಷಾ ಮತಾಃ |
ತೈರ್ಹೀನಂ ಯತ್ಪರಂ ಶುದ್ಧಂ ಬಾಹ್ಯಾಭ್ಯಂತರವರ್ತಿನಮ್ |
ಸದಾನಂದಮಯಂ ನಿತ್ಯಂ ಭೂತ್ವಾ ತತ್ಪರಮನ್ವಿಯಾತ್ ॥ 24 ॥

ಯಾವ ಪರಬ್ರಹ್ಮವೆಂಬ ವಸ್ತುವು ಮೂರು ಅವಸ್ಥೆಗಳಿಂದ ದೂರವಾಗಿದೆಯೋ, ಶುದ್ಧವಾಗಿದೆಯೋ, ಒಳಗೆ-ಹೊರಗೆ ವ್ಯಾಪಕವಾಗಿದೆಯೋ, ನಿತ್ಯವೂ ಆನಂದಮಯವಾಗಿ ಇದೆಯೋ ಅಂತಹ ಪರಬ್ರಹ್ಮ ವಸ್ತುವನ್ನು ಜೀವಾತ್ಮನು ಚಿಂತಿಸಬೇಕು.

ಏವಮಾಖ್ಯಾತಮತ್ಯರ್ಥಂ ಬ್ರಹ್ಮಚರ್ಯಮಕಲ್ಮಷಮ್ |
ಸರ್ವಸ್ಥಂ ಯೋಗಹೀನಂ ತದ್ ವಿಷ್ಣ್ವಾಖ್ಯಂ ಪರಮಂ ಪದಮ್ |
ಅಚಿಂತ್ಯಮದ್ಭುತಂ ಲೋಕೇ ಜ್ಞಾನೇನ ಪರಿವರ್ತತೇ ॥ 25 ॥

ನಿಷ್ಕಲ್ಮಶವಾದ ಬ್ರಹ್ಮಚರ್ಯವು ಈ ವಿಧವಾದುದು. ಸಮಸ್ತ ಸಂಗಗಳಿಂದಲೂ ಮುಕ್ತವಾಗಿ ವಿಷ್ಣುವೆಂಬ ಹೆಸರುಳ್ಳದ್ದಾಗಿ, ಅಚಿಂತ್ಯವೂ, ಅದ್ಭುತವೂ ಆದ ಪರವೆಂಬ ವಸ್ತುವು ಲೇಪರಹಿತವಾಗಿ ಲೋಕದಲ್ಲಿ ಎಲ್ಲ ಕಡೆಯೂ ವ್ಯಾಪ್ತವಾಗಿ ಕೇವಲ ಜ್ಞಾನದಿಂದ ಜಗತ್ತನ್ನು ನೇಮಿಸುತ್ತಿದೆ.

ಬ್ರಹ್ಮ ತತ್ ಪರಮಂ ವೇದ್ಯಮಮೃತಂ ಜ್ಯೋತಿರಕ್ಷರಮ್ |

ಯೇ ವಿದುರ್ಭಾವಿತಾತ್ಮಾನಸ್ತೇ ಯಾಂತಿ ಪರಮಾಂ ಗತಿಮ್ ॥ 26 ॥
ಆ ಗುಣಪರಿಪೂರ್ಣವಾದ ವಸ್ತುವು ಸರ್ವೋತ್ತಮವು. ಜ್ಞಾನರೂಪವು, ಅಮೃತವೂ, ಜ್ಯೋತಿಯೂ, ಅಕ್ಷರವೂ ಎಂದು ಕರೆಯಲ್ಪಡುತ್ತದೆ. ಶುದ್ಧವಾದ ಅಂತಃಕರಣವುಳ್ಳವರು ಯಾರು ಇಂತಹ ಪರಬ್ರಹ್ಮ ವಸ್ತುವನ್ನು ತಿಳಿಯುತ್ತಾರೋ ಅವರೂ ಪರಮಗತಿಯನ್ನು ಹೊಂದುತ್ತಾರೆ.
ಹೇತುಮಚ್ಛಕ್ಯಮಾಖ್ಯಾತುಮೇತಾವಜ್ಜ್ಞಾನಚಕ್ಷುಷಾ |
ಪ್ರತ್ಯಾಹಾರೇಣ ವಾ ಶಕ್ಯಮವ್ಯಕ್ತಂ ಬ್ರಹ್ಮ ವೇದಿತುಮ್ ॥ 27 ॥
ಬ್ರಹ್ಮನ ವಿಷಯವಾಗಿ ಯುಕ್ತಿಯಿಂದ ಹೇಳಲು ಇಷ್ಟೇ ಸಾಧ್ಯ. ಜ್ಞಾನದೃಷ್ಟಿಯಿಂದಲೂ, ವಿಷಯಗಳಿಂದ ನಿವೃತ್ತವಾದ ಇಂದ್ರಿಯಗಳಿಂದಲೂ ಅವ್ಯಕ್ತನಾದ ಪರಬ್ರಹ್ಮನನ್ನು ಮನುಷ್ಯನು ತನ್ನಲ್ಲೇ ತಾನು ಅನುಭವಿಸಿ ತಿಳಿಯಬಹುದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಷಟ್‌ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೇಳನೆಯ ಅಧ್ಯಾಯ
ಪರಮಾತ್ಮನ ಜ್ಞಾನವನ್ನು ಪಡೆಯುವ ಮಾರ್ಗಗಳನ್ನು ಗುರು-ಶಿಷ್ಯರ
ಸಂವಾದದ ಮೂಲಕ ಭೀಷ್ಮರು ಯುಧಿಷ್ಠಿರನಿಗೆ ಬೋಧಿಸಿದುದು.
ಗುರುಃ
ನ ಸ ವೇದ ಪರಂ ಬ್ರಹ್ಮಂ ಯೋ ನ ವೇದ ಚತುಷ್ಟಯಮ್ |
ವ್ಯಕ್ತಾವ್ಯಕ್ತೇ ಚ ಯತ್ತತ್ತ್ವಂ ಸಂಪ್ರಾಪ್ತಂ ಪರಮರ್ಷಿಣಾ ॥ 1 ॥
ಗುರು ಯಾವನು ನಾಲ್ಕು ವೇದಗಳನ್ನು ಅರಿತಿಲ್ಲವೋ ಅವನು ಪರಬ್ರಹ್ಮನನ್ನು ಅರಿತಿಲ್ಲ ಎಂದೇ ಅರ್ಥ. ವ್ಯಕ್ತ-ಅವ್ಯಕ್ತ ಎಂಬ ಎರಡು ತತ್ತ್ವಗಳನ್ನು ಪರಮರ್ಷಿಯಿಂದ ಹೇಳಲ್ಪಟ್ಟಿವೆ.
ವ್ಯಕ್ತಂ ಮೃತ್ಯುಮುಖಂ ವಿದ್ಯಾದವ್ಯಕ್ತಮಮೃತಂ ಪದಮ್ |
ಪ್ರವೃಲಕ್ಷಣಂ ಧರ್ಮಮೃಷಿರ್ನಾರಾಯಣೋಽಬ್ರವೀತ್ ॥ 2 ॥
ಈ ಎರಡು ತತ್ತ್ವಗಳಲ್ಲಿ ವ್ಯಕ್ತವು ಮೃತ್ಯುವಿನ ದ್ವಾರವೆಂದೂ, ಅವ್ಯಕ್ತವು ಶಾಶ್ವತವಾದ ಪದವೆಂದೂ ಹೇಳಲ್ಪಡುತ್ತವೆ. ಪರಮರ್ಷಿಯಾದ ನಾರಾಯಣನು ನಿವೃತ್ತಿ ಲಕ್ಷಣಧರ್ಮವನ್ನು ಉಪದೇಶಿಸಿದ್ದಾನೆ.
ಅತ್ರೈವಾವಸ್ಥಿತಂ ಸರ್ವಂ ತ್ರೈಲೋಕ್ಯಂ ಸಚರಾಚರಮ್ |
ನಿವೃತ್ತಿಲಕ್ಷಣಂ ಧರ್ಮಮವ್ಯಕ್ತಂ ಬ್ರಹ್ಮ ಶಾಶ್ವತಮ್ ॥ 3 ॥
ಚರಾಚರಾತ್ಮಕವಾದ ತ್ರೈಲೋಕ್ಯವು ಆ ನಿವೃತ್ತಿಧರ್ಮವನ್ನೇ ಆಶ್ರಯಿಸಿಕೊಂಡಿದೆ. ನಿವೃತ್ತಿ ಎಂಬ ಧರ್ಮವೇ ಇಂದ್ರಿಯಗಳಿಗೆ ಅಗೋಚರನಾದ ಬ್ರಹ್ಮನ ಬಳಿ ಕರೆದೊಯ್ಯುತ್ತದೆ.
ಪ್ರವೃತ್ತಿಲಕ್ಷಣಂ ಧರ್ಮಂ ಪ್ರಜಾಪತಿರಥಾಬ್ರವೀತ್ |
ಪ್ರವೃತ್ತಿಃ ಪುನರಾವೃತ್ತಿರ್ನಿವೃತ್ತಿಃ ಪರಮಾ ಗತಿಃ ॥ 4 ॥
ಚತುರ್ಮುಖ ಬ್ರಹ್ಮನು ಪ್ರವೃತ್ತಿ ಧರ್ಮವನ್ನು ಉಪದೇಶಿಸಿದ್ದಾನೆ. ಪ್ರವೃತ್ತಿ ಧರ್ಮ ಎಂದರೆ ಪುನಃ ಸಂಸಾರಕ್ಕೆ ಮರಳಿ ಬರುವುದು. ನಿವೃತ್ತಿ ಧರ್ಮ ಎಂದರೆ ಪರಮಗತಿಯನ್ನು ಸೇರುವುದು.
ತಾಂ ಗತಿಂ ಪರಮಾಮೇತಿ ನಿವೃತ್ತಿಪರಮೋ ಮುನಿಃ |
ಜ್ಞಾನತತ್ತ್ವಪರೋ ನಿತ್ಯಂ ಶುಭಾಶುಭನಿದರ್ಶಕಃ ॥ 5 ॥
ನಿವೃತ್ತಿ ಮಾರ್ಗವನ್ನೇ ಶ್ರೇಷ್ಠವೆಂದು ತಿಳಿದ ಜ್ಞಾನಿಯು ಪರಮಪದವನ್ನು ಹೊಂದುತ್ತಾನೆ. ಜ್ಞಾನತತ್ತ್ವದಲ್ಲಿ ನಿರತನಾಗಿ ಶುಭಾಶುಭಗಳನ್ನು ಪ್ರತ್ಯೇಕವಾಗಿ ತಿಳಿಯುವ ಸಾಮರ್ಥ್ಯ ನಿವೃತ್ತಿ ಧರ್ಮನಿರತನಿಗೆ ಇರುತ್ತದೆ.
ತದೇವಮೇತೌ ವಿಜ್ಞೇಯಾವವ್ಯಕ್ತಪುರುಷಾವುಭೌ |
ಅವ್ಯಕ್ತಪುರುಷಾಭ್ಯಾಂ ತು ಯತ್ ಸ್ಯಾದನ್ಯನ್ಮಹತ್ತರಮ್ ॥ 6 ॥
ಈ ರೀತಿಯಾಗಿ ಜಡಪ್ರಕೃತಿಯನ್ನು, ಜೀವನನ್ನು ಚೆನ್ನಾಗಿ ತಿಳಿದಿರಬೇಕು. ಅಲ್ಲದೇ ಮೂಲಪ್ರಕೃತಿ ಮತ್ತು ಜೀವ ಇವರಿಬ್ಬರಿಗಿಂತಲೂ ವಿಲಕ್ಷಣನಾದ, ಉತ್ತಮನಾದ, ಅತಿಶಯನಾದ ಪರಬ್ರಹ್ಮನನ್ನು ಚೆನ್ನಾಗಿ ತಿಳಿಯಬೇಕು.
ತಂ ವಿಶೇಷಮವೇಕ್ಷೇತ ವಿಶೇಷೇಣ ವಿಚಕ್ಷಣಃ |
ಅನಾದ್ಯಂತಾವುಭಾವೇತಾವಲಿಂಗೌ ಚಾಪ್ಯುಭಾವಪಿ ॥ 7 ॥
ಈ ಪ್ರಕೃತಿ-ಪುರುಷರೆಂಬ ಎರಡು ತತ್ತ್ವಗಳು ಆದ್ಯಂತರಹಿತವಾದವುಗಳು. ಈ ಪ್ರಕೃತಿ-ಜೀವರಿಗೆ ನಿರ್ದಿಷ್ಟವಾದ ಚಿಹ್ನೆಗಳಿಲ್ಲ. ಇವೆರಡೂ ನಾಶವಿಲ್ಲದವುಗಳು.
ಉಭೌ ನಿತ್ಯೌ ಸೂಕ್ಷ್ಮತರೌ ಮಹದ್ಭ್ಯಶ್ಚ ಮಹತ್ತರೌ |
ಸಾಮಾನ್ಯಮೇತದುಭಯೋರೇವಂ ಹ್ಯನ್ಯದ್ ವಿಶೇಷಣಮ್ ॥ 8 ॥
ಇವೆರಡೂ ತತ್ತ್ವಗಳು ನಿತ್ಯವಾದವುಗಳು. ಮಹತ್ತಿಗಿಂತಲೂ ಮಹತ್ತರವಾದವುಗಳು. ಇವೆರಡರಲ್ಲಿಯೂ ಇರುವ ವೈಲಕ್ಷಣ್ಯವನ್ನು ತಿಳಿಸುತ್ತೇನೆ, ಕೇಳು.
ಪ್ರಕೃತ್ಯಾ ಸರ್ಗಧರ್ಮಿಣ್ಯಾ ತಥಾ ತ್ರಿವಿಧಸತ್ತ್ವಯಾ |
ವಿಪರೀತಮತೋ ವಿದ್ಯಾದಾತ್ಮಾನಂ ತಮಲಕ್ಷಣಮ್ ॥ 9 ॥

ಪ್ರಕೃತಿ ಎಂಬುದು ತ್ರಿಗುಣಾತ್ಮಕವಾಗಿದೆ. ಸೃಷ್ಟಿ ಮಾಡುವುದೇ ಇದರ ಧರ್ಮವಾಗಿದೆ. ಪುರುಷನಾದರೂ ಜಡತ್ವಾದಿ ಪ್ರಕೃತಿಲಕ್ಷಣ ರಹಿತನಾಗಿದ್ದಾನೆ. ಪ್ರಕೃತಿತತ್ತ್ವಕ್ಕಿಂತ ವಿಲಕ್ಷಣನೆಂದು ತಿಳಿಯಬಹುದು.
ಪ್ರಕೃತೇಶ್ಚ ವಿಕಾರಾಣಾಂ ದ್ರಷ್ಟಾರಮಗುಣಾನ್ವಿತಮ್ |
ಕ್ಷೇತ್ರಜ್ಞಮಾಹುರ್ಜೀವಂ ತು ಕರ್ತಾರಂ ಗುಣಸಂವೃತಮ್ ॥ 10 ॥
ಜೀವನು ಪ್ರಕೃತಿಯಲ್ಲಿರುವ ವಿಕಾರಗಳನ್ನು ತಿಳಿಯಬಲ್ಲನು. ಸ್ವರೂಪದಲ್ಲಿ ಪ್ರಕೃತಿಯ ಮೂರುಗುಣಗಳನ್ನು ಮೀರಿದವನು. ಆದರೆ ತ್ರಿಗುಣಗಳಿಂದ ಆವೃತನಾಗಿ ಕಾರ್ಯಗಳನ್ನು ನಡೆಸುವ ಈ ಜೀವನನ್ನು ಕ್ಷೇತ್ರಜ್ಞನೆಂದು ಹೇಳುತ್ತಾರೆ.
ಅಗ್ರಾಹ್ಯಂ ಯೇನ ಜಾನಂತಿ ತಜ್ಜ್ಞಾನಂ ದಂಶಿತಶ್ಚ ತತ್ |
ತೇನೈವ ದಂಶಿತೋ ನಿತ್ಯಂ ನ ಗುಣಃ ಪರಿಭೂಯತೇ ॥ 11 ॥
ಜೀವನು ಪ್ರಕೃತಿಯ ಗುಣಗಳಿಂದ ಅಭಿಭೂತನಾಗಿರುವುದರಿಂದ ತನ್ನ ಸ್ವರೂಪವನ್ನು ತಿಳಿಯಲಾರನು. ಪ್ರಕೃತಿಗುಣಗಳಿಂದ ನಿತ್ಯವೂ ಬದ್ಧನಾಗಿರುವುದರಿಂದ ಅದನ್ನು ಮೀರಿ ನಡೆಯಲು ಸ್ವಯಂ ಸಮರ್ಥನಾಗುವುದಿಲ್ಲ.
ಅಗ್ರಾಹ್ಯೌ ಪುರುಷಾವೇತಾವಲಿಂಗತ್ವಾದಸಂಹಿತೌ |
ಸಂಯೋಗಲಕ್ಷಣೋತ್ಪತ್ತಿಃ ಕರ್ಮಜಾ ಗೃಹ್ಯತೇ ಯಯಾ ॥ 12 ॥
ಈ ಪ್ರಕೃತಿ-ಪುರುಷರು ಪ್ರತ್ಯಕ್ಷಕ್ಕೆ ಗೋಚರರಾಗುವುದಿಲ್ಲ. ಯುಕ್ತಿಗಳಿಂದ ತರ್ಕಿಸಲಾಗುವುದಿಲ್ಲ. ಅಸಂಗಿಗಳಾಗಿದ್ದಾರೆ. ಹೀಗಿದ್ದರೂ ಕರ್ಮದ ಬಂಧನದಿಂದ ಪ್ರಕೃತಿಯ ಸಂಬಂಧವು ಈ ಜೀವನಿಗೆ ಉಂಟಾಗುತ್ತದೆ.
ಕರಣೈಃ ಕರ್ಮನಿರ್ವೃತ್ತೈಃ ಕರ್ತಾ ಯದ್ಯದ್ ವಿಚೇಷ್ಟತೇ |
ಕೀರ್ತ್ಯತೇ ಶಬ್ದಸಂಜ್ಞಾಭಿಃ ಕೋಽಹಮೇಷೋಽಪ್ಯಸಾವಿತಿ ॥ 13 ॥
ಕರ್ತನೆನಿಸಿದ ಜೀವನು ಕರ್ಮಗಳನ್ನು ನಡೆಸುವುದಕ್ಕೆ ಸಾಧನವೆನಿಸಿದ ಇಂದ್ರಿಯಗಳಿಂದ ಯಾವ ಯಾವ ಕರ್ಮಗಳನ್ನು ಹೇಗೆ ನಡೆಸುತ್ತಾನೋ ಅದಕ್ಕೆ ತಕ್ಕಂತೆ ಜನಿಸುತ್ತಾನೆ. ನಾನು ಯಾರು? ಅದ್ಯಾವುದು? ಇದೇನು? ಎಂಬ ನಾಮ ಭೇದಗಳಿಂದ ವ್ಯವಹರಿಸಲ್ಪಡುತ್ತಾನೆ.
ಅನ್ಯಚ್ಚ ಧರ್ಮಸಾಮ್ಯಂ ಯತ್ ತಪಸ್ತತ್ಕೀರ್ತ್ಯತೇ ಪುನಃ |
ಉಷ್ಣೀಷವಾನ್ ಯಥಾ ವಸ್ತ್ರೈಸ್ತ್ರಿಭಿರ್ಭವತಿ ಸಂವೃತಃ ॥ 14 ॥
ಮಮಾಪಿ ಕಾಯಮಿತಿ ಚ ತದಜ್ಞೋ ನಿತ್ಯಸಂವೃತಃ |
ಸಂವೃತೋಽಯಂ ತಥಾ ದೇಹೀ ಸತ್ತ್ವರಾಜಸತಾಮಸೈಃ ॥ 15 ॥
ನಿತ್ಯವೂ ಈ ಜೀವನು ಈ ದೇಹವನ್ನು ನನ್ನದು ಎಂದು ಅಜ್ಞಾನದಿಂದ ತಿಳಿದಿರುತ್ತಾನೆ. ಒಬ್ಬ ವ್ಯಕ್ತಿಯು ಯಾವ ರೀತಿಯಾಗಿ ರುಮಾಲನ್ನು ತನ್ನ ತಲೆಗೆ ಬಿಗಿದಿರುತ್ತಾನೋ, ಆದ್ದರಿಂದ ಅವನ ನಡುತಲೆಯು ಕಾಣಿಸುವುದಿಲ್ಲವೋ ಅದರಂತೆ ಸಾತ್ವಿಕ, ರಾಜಸ, ತಾಮಸಗಳಿಂದ ಸಂವೃತನಾದ ಜೀವನು ತನ್ನ ಸ್ವರೂಪವನ್ನು ಅರಿಯಲಾರನು.
ಭೇದವಸ್ತು ತ್ವಭೇದೇನ ಜಾನಾತಿ ಸ ಯದಾ ಪುಮಾನ್ |
ತದಾ ಪರಂ ಪರಾತ್ಮಾಽಸೌ ಭವತ್ಯೇವ ನಿರಂಜನಃ ॥ 16 ॥
ಯಾವಾಗ ಜೀವನು ಪಂಚಭೇದಗಳಿಗಿಂತ ಭಿನ್ನವಾದ ಜೀವ-ಈಶ್ವರ-ಜಡ ಎಂಬ ವಸ್ತುಗಳನ್ನು ಚೆನ್ನಾಗಿ ತಿಳಿಯುತ್ತಾನೋ ಆಗ ಉತ್ತಮ ಸ್ವಭಾವವನ್ನು ಹೊಂದಿದ ಜೀವನು ಮುಕ್ತನಾಗುತ್ತಾನೆ.
ಕ್ರಿಯಾಯೋಗೇ ಚ ಭೇದಾಖ್ಯೇ ಬಹು ಸಂಕ್ಷಿಪ್ಯತೇ ಕ್ವಚಿತ್ |
ವಸುರುದ್ರಗಣಾದ್ಯೇಷು ಸ್ವಾನುಭೋಗೇನ ಭೋಗತಃ ॥ 17 ॥
ಭೇದವೆಂಬ ವಸ್ತುವಿನಲ್ಲಿ ಜೀವರ ನಿಯಮನ ರೂಪವಾದ ಕ್ರಿಯೆಗಳಿಗೆ ಉಪಾಯವು ಭಗವಂತನಿಂದ ನಿರೂಪಿತವಾಗಿದೆ. ಭಗವಂತನಾದರೂ ವಸುಗಣ, ರುದ್ರಗಣ ಮುಂತಾದ ಬಹುಜೀವರಲ್ಲಿ ವ್ಯಾಪ್ತನಾಗಿದ್ದಾನೆ. ನಾರಾಯಣನೆಂಬ ಪರಬ್ರಹ್ಮನು ಸೃಷ್ಟಿ ಕಾಲದಲ್ಲಿ ತನ್ನ ರೂಪವನ್ನು ಸೂಕ್ಷ್ಮವಾಗಿಸಿರುತ್ತಾನೆ. ತನಗೆ ಅನುಕೂಲವಾದ ಭೋಗದಿಂದ ಅರ್ಥಾತ್ ತನ್ನ ಇಚ್ಛೆಯಿಂದ ಸುಖಮಾತ್ರ ಭೋಗವುಳ್ಳವನಾಗಿ ಜೀವರಲ್ಲಿ ವಿಹರಿಸುತ್ತಾನೆ.
ಏವಮೇಷ ಪರಸ್ತತೌತತ್ವೇ ನಾನಾರೂಪೇಣ ಸಂಸ್ಥಿತಃ |
ಸಂಕ್ಷಿಪ್ತೋ ದೃಶ್ಯತೇ ಪಶ್ಚಾದೇಕರೂಪೇಣ ವಿಷ್ಠಿತಃ ॥ 18 ॥
ಇಂತಹ ಸ್ವತಂತ್ರತತ್ತ್ವರೂಪನಾದ ಭಗವಂತನು ಅನಂತಜೀವರ ಹೃದಯದಲ್ಲಿ ಅನಂತ ರೂಪದಿಂದ ನೆಲೆಸಿದ್ದಾನೆ. ಪ್ರಳಯಕಾಲದಲ್ಲಿ ಆ ಅನಂತರೂಪಗಳನ್ನು ಒಂದುಗೂಡಿಸಿ ವಟಪತ್ರಶಾಯಿಯಾಗಿ ಕಾಣಿಸುತ್ತಾನೆ. ಹೀಗೆ ಭಗವಂತನ ಸೃಷ್ಟಿ, ಸಂಹಾರ ಮೊದಲಾದ ವ್ಯಾಪಾರಗಳನ್ನು ತಿಳಿಸುವ ನಾಲ್ಕು ವೇದಗಳನ್ನು ಅಧ್ಯಯನ ಮಾಡಬೇಕು. ಆ ವೇದಗಳಲ್ಲಿ ಆವೃತನಾದ ಭಗವಂತನು ಅಧ್ಯಯನಶೀಲನಿಗೆ ಗೋಚರಿಸುತ್ತಾನೆ.
ವಾಯುರ್ವಿಧೋ ಯಥಾ ಭಾನುರ್ವಿಪ್ರಕಾಶಂ ಗಮಿಷ್ಯತಿ |
ಈ ರೀತಿಯಾಗಿ ಭಗವಂತನನ್ನು ಚೆನ್ನಾಗಿ ಅರಿತವನು ಅಂತ್ಯಕಾಲದಲ್ಲಿ ಮೋಹವನ್ನು ಹೊಂದುವುದಿಲ್ಲ. ವಾಯುವಿನಿಂದ ಮೇಘಗಳು ಚದುರಿದಾಗ ಸೂರ್ಯನು ವಿಶೇಷ ಪ್ರಕಾಶವನ್ನು ಹೊಂದುವಂತೆ ಹೃದಯದಲ್ಲಿ ಕಾಮ- ಕ್ರೋಧಗಳನ್ನು ತೊರೆದು ಭಗವಂತನ ಬಗ್ಗೆ ತಿಳಿದಾಗ ಭಗವಂತನು ಗೋಚರನಾಗುತ್ತಾನೆ.
ಶ್ರಿಯಂ ದಿವ್ಯಾಮಭಿಪ್ರೇಪ್ಸುರ್ವರ್ಷ್ಮವಾನ್ ಮನಸಾ ಶುಚಿಃ |
ಶಾರೀರೈರ್ನಿಯಮೈರುಗ್ರೈಶ್ಚರೇನ್ನಿಷ್ಕಲ್ಮಷಂ ತಪಃ ॥ 19 ॥
ದಿವ್ಯಸಂಪತ್ತನ್ನು ಬಯಸುವವನು ಮನಶ್ಶುದ್ಧಿಯಿಂದಲೂ, ಶರೀರಕ್ಕೆ ಸಂಬಂಧಿಸಿದ ಕಠಿಣ ನಿಯಮಗಳಿಂದಲೂ ಫಲಾಕಾಂಕ್ಷೆಯಿಲ್ಲದೆ ನಿಷ್ಕಲ್ಮಶವಾದ ತಪಸ್ಸನ್ನು ಮಾಡಬೇಕು.

ತ್ರೈಲೋಕ್ಯಂ ತಪಸಾ ವ್ಯಾಪ್ತಮಂತರ್ಭೂತೇನ ಭಾಸ್ವತಾ |
ಸೂರ್ಯಶ್ಚ ಚಂದ್ರಮಾಶ್ಚೈವ ಭಾಸತಸ್ತಪಸಾ ದಿವಿ ॥ 20 ॥
ಈ ಯೋಗಶಕ್ತಿ ಎಂಬುದು ತ್ರೈಲೋಕ್ಯವನ್ನು ವ್ಯಾಪಿಸಿ ಅದರೊಳಗಿನ ಸಮಸ್ತವನ್ನೂ ಪ್ರಕಾಶಿಸುತ್ತದೆ. ಆ ತಪಸ್ಸು ಎಂಬ ಯೋಗದಿಂದಲೇ ಸೂರ್ಯನು, ಚಂದ್ರನು ಆಕಾಶದಲ್ಲಿ ಬೆಳಗುತ್ತಿದ್ದಾರೆ.
ತಸ್ಮಾಚ್ಚತುಷ್ಟಯಂ ವೇದ್ಯಮೇತೈರ್ಹೇತುಭಿರಾಚಿತಮ್ |
ಯಥಾಸಂಜ್ಞೋ ಹ್ಯಯಂ ಸಮ್ಯಗಂತಕಾಲೇ ನ ಮುಹ್ಯತಿ ॥ 20 ॥
ಶ್ರಿಯಂ ದಿವ್ಯಾಮಭಿಪ್ರೇಪ್ಸುರ್ಬ್ರಹ್ಮ ವಾಙ್ಮನಸಾ ಶುಚಿಃ |
ಶಾರೀರೈರ್ನಿಯಮೈರುಗ್ರೈಶ್ಚರೇನ್ನಿಷ್ಕಲ್ಮಷಂ ತಪಃ ॥ 21 ॥
ಅನ್ಯಚ್ಚ ಧರ್ಮಸಾಮ್ಯಂ ಯತ್ ತಪಸ್ತತ್ಕೀರ್ತ್ಯತೇ ಪುನಃ |
ಪ್ರಾಪ್ತಸ್ತಪಸೋ ಜ್ಞಾನಂ ಲೋಕೇ ಸಂಶಬ್ದಿತಂ ತಪಃ ॥ 23 ॥
ರಜಸ್ತಮೋಘ್ನಂ ಯತ್ಕರ್ಮ ತಪಸಸ್ತತ್ ಸ್ವಲಕ್ಷಣಮ್ |
ತ್ರಿತಯಂ ಹ್ಯೇತದಾಖ್ಯಾತಂ ಯದ್ ಯಸ್ಮಾದ್ ಭಾಸಿತುಂ ಪುನಃ ॥24॥
ಎಲ್ಲಾ ಧರ್ಮಗಳ ಫಲವು ತಪಸ್ಸಿನಲ್ಲೇ ಅಡಕವಾಗಿದೆ. ಯೋಗಕ್ಕೆ ಫಲವು ಜ್ಞಾನವೇ ಆಗಿದೆ. ಆದರೆ ರಜಸ್ಸು, ತಮಸ್ಸುಗಳನ್ನು ನೀಗಿದ ಜ್ಞಾನವೇ ಯೋಗಕ್ಕೆ ನಿಜವಾದ ಫಲವೆನಿಸುತ್ತದೆ. ಲೋಕದಲ್ಲಿ ಯೋಗವನ್ನು ಎಲ್ಲದಕ್ಕಿಂತಲೂ ಮಹತ್ತಾದದ್ದೆನ್ನುತ್ತಾರೆ.
ಜೀವ-ಪರಮಾತ್ಮ-ಪ್ರಕೃತಿ ಎಂಬ ಮೂರರ ಬಗ್ಗೆ ಹೇಳಲ್ಪಟ್ಟಿದೆ. ಜ್ಞಾನಲಕ್ಷಣ ಯೋಗದಿಂದ ಇವುಗಳನ್ನು ತಿಳಿಯಬಹುದು.
ಸ್ವಭಾಸಾ ಭಾಸಯಂಶ್ಚಾಪಿ ಚಂದ್ರಮಾ ಹ್ಯತ್ರ ವರ್ತತೇ |
ಸೂರ್ಯಯೋಗೇ ತು ಯಃ ಸಂಧಿಸ್ತಪಃ ಸರ್ವಂ ಪ್ರದೀಪ್ಯತೇ ॥ 25 ॥
ಚಂದ್ರನು ತನ್ನ ಬೆಳಕಿನಿಂದಲೇ ಬೆಳಗುವವನಾಗಿದ್ದರೂ ಸೂರ್ಯನ ಮುಂದೆ ಚಂದ್ರನೇ ಸೂರ್ಯನ ಬೆಳಕಿನಿಂದ ಬೆಳಗುತ್ತಾನೆ. ಇದರಂತೆ ತಪಸ್ಸಿನಿಂದ ಎಲ್ಲವೂ ಬೆಳಗುತ್ತದೆ.
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ |
ವಾಙ್ಮನೋನಿಯಮಃ ಸಾಮ್ಯಂ ಮಾನಸಂ ತಪ ಉಚ್ಯತೇ ॥ 26 ॥
ಬ್ರಹ್ಮಚರ್ಯ-ಅಹಿಂಸಾ ಇವುಗಳು ಶಾರೀರಿಕ ತಪಸ್ಸು ಎನಿಸುತ್ತವೆ. ಮಾತು, ಮನಸ್ಸುಗಳ ನಿಗ್ರಹವು ಮಾನಸಿಕ ತಪಸ್ಸು ಎನಿಸುತ್ತದೆ.
ವಿಧಿಜ್ಞೇಭ್ಯೋ ದ್ವಿಜಾತಿಭ್ಯೋ ಗ್ರಾಹ್ಯಮನ್ನಂ ವಿಶಿಷ್ಯತೇ |
ಆಹಾರನಿಯಮೇನಾಸ್ಯ ಪಾಪ್ಮಾ ನಶ್ಯತಿ ರಾಜಸಃ ॥ 27 ॥
ವಿಧಿ-ನಿಷೇಧಗಳನ್ನು ಚೆನ್ನಾಗಿ ಅರಿತ ಬ್ರಾಹ್ಮಣರಿಂದ ಸ್ವೀಕರಿಸಲ್ಪಟ್ಟ ಅನ್ನವು ಶ್ರೇಷ್ಠವೆನಿಸುತ್ತದೆ. ಆಹಾರವನ್ನು ಯೋಗ್ಯರಿಂದಲೇ ಸ್ವೀಕರಿಸಬೇಕು. ಇದರಿಂದ ಮನುಷ್ಯನಲ್ಲಿರುವ ರಜೋಗುಣಗಳು ಪರಿಹಾರವನ್ನು ಹೊಂದುತ್ತವೆ.
ವೈಮನಸ್ಯಂ ಚ ವಿಷಯೇ ಯಾಂತ್ಯಸ್ಯ ಕರಣಾನಿ ಚ |
ತಸ್ಮಾತ್ತನ್ಮಾತ್ರಮಾದದ್ಯಾದ್ ಯಾವದತ್ರ ಪ್ರಯೋಜನಮ್ ॥ 28 ॥
ಶುದ್ಧವಾದ ಆಹಾರದಿಂದ ವಿಷಯಪದಾರ್ಥಗಳಲ್ಲಿ ಮನಸ್ಸು ಸಾಗುವುದಿಲ್ಲ. ಮನಸ್ಸು ನಿಗ್ರಹಕ್ಕೆ ಬಂದಲ್ಲಿ ಇಂದ್ರಿಯಗಳು ಸರಿಯಾದ ಮಾರ್ಗದಲ್ಲಿಯೇ ಚಲಿಸುತ್ತವೆ. ಆದ್ದರಿಂದ ದೇಹಧಾರಣೆಗೆ ಯೋಗ್ಯವಾದಷ್ಟು ಆಹಾರವನ್ನು ವಿಧಿ-ನಿಷೇಧಗಳನ್ನು ತಿಳಿದ ಬ್ರಾಹ್ಮಣರಿಂದ ಸ್ವೀಕರಿಸಬೇಕು.
ಅಂತಕಾಲೇ ವಯೋತ್ಕರ್ಷಾಚ್ಛನೈಃ ಕುರ್ಯಾದನಾತುರಃ |
ಏವಂ ಯುಕ್ತೇನ ಮನಸಾ ಜ್ಞಾನಂ ತದುಪಪದ್ಯತೇ ॥ 29 ॥
ಅವಸಾನ ಕಾಲದಲ್ಲಿ ಪ್ರಯತ್ನಪೂರ್ವಕವಾಗಿ ಮನಸ್ಸನ್ನು ಯೋಗದಲ್ಲಿ ನೆಲೆಗೊಳಿಸಬೇಕು. ಅದರಿಂದ ಕ್ರಮವಾಗಿ ಉತ್ತಮ ಜ್ಞಾನ ಉಂಟಾಗುವಂತೆ ಮಾಡಿಕೊಳ್ಳಬೇಕು.
ರಜಸಾ ಚಾಪ್ಯಯಂ ದೇಹೀ ದೇಹವಾನ್ ಶಬ್ದವಚ್ಚರೇತ್ |
ಕಾರ್ಯೈರವ್ಯಾಹತಮತಿರ್ವೈರಾಗ್ಯಾತ್ ಪ್ರಕೃತೌ ಸ್ಥಿತಃ |
ಆ ದೇಹಾದಪ್ರಮಾದಾಚ್ಚ ದೇಹಾಂತಾದ್ ವಿಪ್ರಮುಚ್ಯತೇ ॥ 30 ॥
ಜೀವನು ರಜೋಗುಣದಿಂದ ಮುಕ್ತನಾದರೂ ಕೂಡಲೇ ಮುಕ್ತಿಗೆ ಹೋಗದೆ ಸೂಕ್ಷ್ಮ ಶರೀರವುಳ್ಳವನಾಗಿ ಶಬ್ದದಂತೆ ತಿಳಿಯದವನಾಗಿ ಸಂಚರಿಸುತ್ತಾನೆ. ಆಗ ಅವನು ಕರ್ಮದಿಂದ ಕಳವಳಗೊಳ್ಳದ ಬುದ್ಧಿಯುಳ್ಳವನಾಗಿದ್ದರೆ ರಜೋಗುಣ ಮುಕ್ತನಾದುದರಿಂದ ಪ್ರಕೃತಿಯಲ್ಲಿದ್ದರೂ ವಿರಕ್ತನಾಗಿಯೇ ಇರುತ್ತಾನೆ. ಪ್ರಕೃತಿಯ ಸಂಬಂಧವನ್ನು ಹೊಂದುವುದಿಲ್ಲ.
ಹೇತುಯುಕ್ತಃ ಸದೋತ್ಸರ್ಗೋ ಭೂತಾನಾಂ ಪ್ರಲಯಸ್ತಥಾ |
ಪರಪ್ರತ್ಯಯಸರ್ಗೇ ತು ನಿಯತಂ ನಾತಿವರ್ತತೇ ॥ 31 ॥
ದೇಹವಿರುವ ತನಕ ವಿಷಯಗಳಿಗೆ ತುತ್ತಾಗದೆ ಇರುವವನು, ಪ್ರಮಾದಕ್ಕೆ ಈಡಾಗದೇ ಇರುವವನು ದೇಹದ ಕೊನೆಯಲ್ಲಿ ಬಿಡುಗಡೆಯನ್ನು ಹೊಂದುತ್ತಾನೆ. ಸಮಸ್ತ ಜೀವರಿಗೆ ಸೃಷ್ಟಿ-ಪ್ರಳಯಗಳು ಅಜ್ಞಾನದಿಂದ ಉಂಟಾಗುತ್ತಿರುತ್ತವೆ.
ಏವಂ ಪ್ರಜ್ಞಾಂ ಧಾರಯಂತೇ ಆಸತೇ ಯೇ ವಿಪರ್ಯಯೇ |
ಯಾವಾಗ ಜೀವಾತ್ಮನಿಗೆ ಪರಮಾತ್ಮನ ಜ್ಞಾನೋದಯವು ಉಂಟಾಗುತ್ತದೋ, ಆ ಭಗವದ್‌ಜ್ಞಾನದ ನಿಯಮದಿಂದ ಸೃಷ್ಟಿ ಮತ್ತು ಪ್ರಳಯಗಳನ್ನು ಮೀರಿ ನಿಲ್ಲುತ್ತಾನೆ.
ಧೃತ್ವಾ ದೇಹಾನ್ ಧಾರಯಂತೋ ಬುದ್ಧಿಸಂಕ್ಷಿಪ್ತಮಾನಸಾಃ |
ಸ್ಥಾನೇಭ್ಯೋ ಧ್ವಂಸಮಾನಾಶ್ಚ ಸೂಕ್ಷ್ಮತ್ವಾತ್ತಾನುಪಾಸತೇ ॥ 32 ॥

ಯೋಗಧಾರಣೆಯಿಂದ ದೇಹವನ್ನು ಧರಿಸಿದವರಾಗಿ, ಬುದ್ಧಿಯಿಂದ ವಿಷಯಗಳನ್ನು ಸಂಕೋಚಗೊಳಿಸಿಕೊಂಡು, ಸೂಕ್ಷ್ಮಬುದ್ಧಿಯಿಂದ ಪ್ರಕೃತಿಯ ಸ್ಥಾನಗಳನ್ನು ಪರಿಹರಿಸಿಕೊಂಡು ಭಗವಂತನನ್ನೇ ಉಪಾಸನೆ ಮಾಡುತ್ತಾರೆ.

ಯಥಾಗಮಂ ಚ ತತ್ ಸರ್ವಂ ಬುದ್ಧ್ಯಾ ತನ್ನೈವ ಬುಧ್ಯತೇ |
ದೇಹಾಂತಂ ಕಶ್ಚಿದನ್ವಾಸ್ತೇ ಭಾವಿತಾತ್ಮಾ ನಿರಾಶ್ರಯಃ ॥ 33 ॥

ಆ ಸಾಧಕರು ಆಗಮಗಳಲ್ಲಿ ಹೇಗಿದೆಯೋ ಹಾಗೆ ಶ್ರೇಷ್ಠವಾದ ಬುದ್ಧಿಯಿಂದ ಭಗವಂತನ ಚರಿತ್ರೆಗಳನ್ನು ಚೆನ್ನಾಗಿ ತಿಳಿದು ಅವನಿಗಿಂತ ಮಿಗಿಲಾದ ಯಾವ ವಿಚಾರಗಳಲ್ಲಿಯೂ ಆಸಕ್ತಿಯನ್ನು ಹೊಂದುವುದಿಲ್ಲ. ಭಗವಂತನಲ್ಲಿಯೇ ಮನಸ್ಸಿಟ್ಟ ಅವರು ಭಗವಂತನನ್ನೇ ಆಶ್ರಯಿಸಿ ದೇಹಾವಸಾನದಲ್ಲಿ ಭಗವಂತನನ್ನೇ ಹೊಂದುತ್ತಾರೆ.

ಯುಕ್ತೋ ಧಾರಣಯಾ ಕಶ್ಚಿತ್ ಸತ್ತಾಂ ಕೇಚಿದುಪಾಸತೇ |
ಅಭ್ಯಸ್ಯಂತಿ ಪರಂ ದೇವಂ ವಿದ್ಯಾಸಂಶಬ್ದಿತಾಕ್ಷರಮ್ ॥ 34 ॥

ಭಗವಂತನನ್ನು ತಿಳಿಸಿಕೊಡುವ ಪ್ರತಿಭೆಯಿಂದ ಕೂಡಿದ ಅವರು ಎಲ್ಲೆಡೆಯೂ ಭಗವಂತನ ಇರುವಿಕೆಯನ್ನೇ ಉಪಾಸನೆ ಮಾಡುತ್ತಾರೆ. ಎಷ್ಟು ವೇದಾಕ್ಷರಗಳನ್ನು ಪಠಿಸುತ್ತೇವೋ ಆ ಎಲ್ಲಾ ಅಕ್ಷರಗಳಿಂದಲೂ ಪ್ರತಿಪಾದ್ಯನಾದವನು ಭಗವಂತನೇ ಎಂಬ ಆ ಪರತತ್ತ್ವವನ್ನೇ ಚೆನ್ನಾಗಿ ಅಭ್ಯಾಸ ಮಾಡುತ್ತಾರೆ.

ಅಂತಕಾಲೇ ಹ್ಯುಪಾಸನ್ನಾಸ್ತಪಸಾ ದಗ್ಧಕಿಲ್ಬಿಷಾಃ |
ಸರ್ವ ಏತೇ ಮಹಾತ್ಮಾನೋ ಗಚ್ಛಂತಿ ಪರಮಾಂ ಗತಿಮ್ ॥ 35 ॥

ಭಗವತತ್ತ್ವದ ಉಪಾಸನೆಯ ತಪಸ್ಸಿನಿಂದ ಕಾಮ-ಕ್ರೋಧಾದಿ ಮಲಿನಗಳನ್ನು ತೊಳೆದುಕೊಂಡು ಅಂತ್ಯಕಾಲದಲ್ಲಿಯೂ ಭಗವಂತನನ್ನೇ ಉಪಾಸನೆ ಮಾಡುತ್ತಾರೆ. ಈ ರೀತಿಯಾದ ಮಹಾತ್ಮರೆಲ್ಲರೂ ಪರಮಗತಿಯನ್ನು ಹೊಂದುತ್ತಾರೆ.

ಸೂಕ್ಷ್ಮಂ ವಿಶೇಷಣಂ ತೇಷಾಮವೇಕ್ಷೇಚ್ಛಾಸ್ತ್ರಚಕ್ಷುಷಾ |
ದೇಹಂ ತು ಪರಮಂ ವಿದ್ಯಾದ್ ವಿಮುಕ್ತಮಪರಿಗ್ರಹಮ್ ॥ 36 ॥

ಭಗವಂತನ ಗುಣಗಳ ಮಧ್ಯದಲ್ಲಿ ಅಣುತ್ವ, ಮಹತ್ವ, ಕರ್ತೃತ್ವ, ನಿರ್ಲೇಪತ್ವಾದಿ ಸೂಕ್ಷ್ಮಗುಣಗಳನ್ನು ಶಾಸ್ತ್ರಚಕ್ಷುಸ್ಸಿನಿಂದ ಈ ಸಾಧಕರು ನೋಡುತ್ತಾರೆ. ಮುಕ್ತಿಯಲ್ಲಿ ಹೊಂದುವ ದೇಹವನ್ನು ಉತ್ಕೃಷ್ಟವಾದ ದೇಹವೆಂದು ತಿಳಿದಿರುತ್ತಾರೆ.

ಅಂತರಿಕ್ಷಾದನ್ಯತರಂ ಧಾರಣಾಸಕ್ತಮಾನಸಮ್ |
ಮರ್ತ್ಯಲೋಕಾದ್ ವಿಮುಚ್ಯಂತೇ ವಿದ್ಯಾಸಂಯುಕ್ತಮಾನಸಾಃ ॥37॥

ಬಿಂಬಭೂತನಾದ ಪರಮಾತ್ಮನಿಂದ ಅತ್ಯಂತ ಭಿನ್ನವಾದ ಈ ದೇಹ, ಪ್ರಕೃತಿ, ಜಗತ್ತನ್ನು ತಮ್ಮ ಧಾರಣಾಸಕ್ತವಾದ ಮನಸ್ಸಿನಿಂದ ತಿಳಿದ ಸಾಧಕರು ಭಗವತತ್ತ್ವದಲ್ಲಿಯೇ ಆಸಕ್ತ ಮನಸ್ಸುಳ್ಳವರಾಗಿ ಈ ಮರಣಶೀಲವಾದ ಲೋಕದಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಬ್ರಹ್ಮಭೂತಾ ವಿರಜಸಸ್ತತೋ ಯಾಂತಿ ಪರಾಂ ಗತಿಮ್ |
ಕಷಾಯವರ್ಜಿತಂ ಜ್ಞಾನಂ ಯೇಷಾಮುತ್ಪದ್ಯತೇಽಚಲಮ್ ॥ 38 ॥

ಬ್ರಹ್ಮನಲ್ಲೇ ಮನಸ್ಸಿಟ್ಟಿರುವ ಆ ಸಾಧಕರು ರಜೋಗುಣರಹಿತರಾಗಿ ಪರಮ ಗತಿಯನ್ನು ಹೊಂದುತ್ತಾರೆ. ಆದ್ದರಿಂದ ವೇದಜ್ಞರಾದ ಜನರು, ಧರ್ಮವು ಒಂದೇ ಆಶ್ರಯವುಳ್ಳದ್ದು. ಪರಮಾತ್ಮ ಜ್ಞಾನವನ್ನು ಆಶ್ರಯಿಸುವ ಧರ್ಮವೇ ಧರ್ಮ ಎಂದು ಹೇಳುತ್ತಾರೆ.

ತೇ ಯಾಂತಿ ಪರಮಾಂಲ್ಲೋಕಾನ್ ವಿಶುದ್ಧ್ಯಂತೋ ಯಥಾಬಲಮ್ |
ಭಗವಂತಮಜಂ ದಿವ್ಯಂ ವಿಷ್ಣುಮವ್ಯಕ್ತಸಂಜ್ಞಿತಮ್ |
ಭಾವೇನ ಯಾಂತಿ ಶುದ್ಧಾ ಯೇ ಜ್ಞಾನತೃಪ್ತಾ ನಿರಾಶಿಷಃ ॥ 39 ॥

ಆ ಭಗವಂತನ ಜ್ಞಾನವನ್ನೇ ಉಪಾಸನೆ ಮಾಡುತ್ತಾ ಸಾಧಕರೆಲ್ಲರೂ ಪರಮ ಗತಿಯನ್ನು ಹೊಂದುತ್ತಾರೆ. ಮನಸ್ಸಿನ ಕಾಮ-ಕ್ರೋಧಾದಿಗಳೆಲ್ಲವೂ ಈ ಉಪಾಸನೆಯಿಂದ ಪರಿಹೃತವಾಗಿ ಹೃದಯವು ನಿರ್ಮಲವಾಗುತ್ತದೆ. ಭಗವಂತನನ್ನೇ ಚಿಂತಿಸಿದ ಇಂತಹ ಸಾಧಕರು ತಮ್ಮ ಯೋಗ್ಯತೆಗೆ ತಕ್ಕಂತೆ ಅವನ ಅನುಗ್ರಹದಿಂದ ಶುದ್ಧಿಯನ್ನು ಹೊಂದುತ್ತಾರೆ.

ಯಾರು ಅವ್ಯಕ್ತ ಎಂಬ ಶಬ್ದದಿಂದ ಕರೆಸಿಕೊಳ್ಳುವ ವಿಷ್ಣುವನ್ನು, ಷಡ್ಗುಣೈಶ್ವರ್ಯ ಸಂಪನ್ನನನ್ನೂ, ಹುಟ್ಟಿಲ್ಲದವನನ್ನು, ಬೆಳಗುವ ವ್ಯಕ್ತಿತ್ವ ಉಳ್ಳವನನ್ನು ಜ್ಞಾನತೃಪ್ತರಾಗಿ ಆಸೆಗಳನ್ನು ತೊರೆದು ಶುದ್ಧವಾದ ಹೃದಯದಿಂದ ಚಿಂತಿಸುತ್ತಾರೋ ಅವರು ಅವನ ಪಾದವನ್ನೇ ಸೇರುತ್ತಾರೆ.

ಜ್ಞಾತ್ವಾತ್ಮಸ್ಥಂ ಹರಿಂ ಚೈವ ನಿವರ್ತಂತೇ ನ ತೇಽವ್ಯಯಾಃ |
ಪ್ರಾಪ್ಯ ತತ್ ಪರಮಂ ಸ್ಥಾನಂ ಮೋದಂತೇಽಕ್ಷರಮವ್ಯಯಮ್ ॥40॥

ಹೃದಯದಲ್ಲಿರುವ ಪರಮಾತ್ಮನನ್ನು ಚಿಂತಿಸಿದ ಸಾಧಕರು ಅವ್ಯಯ ಎನಿಸಿದ ಮುಕ್ತಿಯಿಂದ ಪುನಃ ತಿರುಗಿ ಬರುವುದಿಲ್ಲ. ಅಕ್ಷರನಾದ ಅವ್ಯಯನಾದ ಪರಮಾತ್ಮನನ್ನು ಹೊಂದಿದ ಆ ಸಾಧಕರು ಮೋಕ್ಷವನ್ನು ಪಡೆದು ಸುಖವನ್ನು ಹೊಂದುತ್ತಾರೆ.

ಏತಾವದೇತದ್ ವಿಜ್ಞಾನಮೇತದಸ್ತಿ ಚ ನಾಸ್ತಿ ಚ |
ತೃಷ್ಣಾಬದ್ಧಂ ಜಗತ್ ಸರ್ವಂ ಚಕ್ರವತ್ ಪರಿವರ್ತತೇ ॥ 41 ॥

ಸಮಸ್ತ ಜ್ಞಾನದ ಸಾರವು ಇಷ್ಟೇ ಆಗಿದೆ. ಈ ಪರಮಾತ್ಮ ತತ್ತ್ವವನ್ನು ತಿಳಿದವರಿಗೆ ಈ ಜ್ಞಾನಸಾರವು ಅನುಭವಕ್ಕೆ ಬರುತ್ತದೆ. ಇಲ್ಲದಿದ್ದರೆ ಇಲ್ಲ. ಸಾಮಾನ್ಯವಾಗಿ ಜಗತ್ತೆಲ್ಲವೂ ಆಸೆಗಳಿಂದ ಬದ್ಧವಾಗಿ ಚಕ್ರದಂತೆ ಸುತ್ತುತ್ತಿರುತ್ತದೆ.

ಬಿಸತಂತುರ್ಯಥೈವಾಯಮಂತಃಸ್ಥಃ ಸರ್ವತೋ ಬಿಸೇ |
ತೃಷ್ಣಾತಂತುರನಾದ್ಯಂತಸ್ತಥಾ ದೇಹಗತಃ ಸದಾ ॥ 42 ॥

ತಾವರೆದಂಟಿನಲ್ಲಿರುವ ನೂಲೆಳೆಗಳು ಆ ದಂಟಿನಲ್ಲಿರುವ ಒಂದು ಭಾಗವನ್ನು ವ್ಯಾಪಿಸಿರುವಂತೆ ತೃಷ್ಣಾ(ಆಶೆ)ತಂತುಗಳು ಕೊನೆ-ಮೊದಲು ಇಲ್ಲದಂತೆ ದೇಹದ ಸಮಗ್ರ ಭಾಗವನ್ನೂ ಆವರಿಸಿಕೊಂಡಿರುತ್ತವೆ.

ಸೂಚ್ಯಾ ಸೂತ್ರಂ ಯಥಾ ವಸ್ತ್ರೇ ಸಂಸಾರಯತಿ ವಾಯಕಃ |
ತದ್ವತ್ ಸಂಸಾರಸೂತ್ರಂ ಹಿ ತೃಷ್ಣಾಸೂಚ್ಯಾ ನಿಬಧ್ಯತೇ ॥ 43 ॥
ಬಟ್ಟೆಗಳನ್ನು ಹೊಲಿಯುವವನು ಸೂಜಿಯ ಮೂಲಕವಾಗಿ ನೂಲನ್ನು ಹೊಲಿಸುವಂತೆ ಆಸೆಯೆಂಬ ಸೂಜಿಯಿಂದ ಸಂಸಾರವೆಂಬ ನೂಲು ಹೊಲಿಯಲ್ಪಡುತ್ತದೆ. ಸಂಸಾರದಲ್ಲಿ ಅತ್ತಿಂದಿತ್ತ ಜನನ-ಮರಣಗಳಲ್ಲಿ ಹೊರಳಾಡಿಸುತ್ತಾ ಆಸೆಯು ಜೀವನ ಸ್ವರೂಪವನ್ನೇ ಮರೆಮಾಚಿಬಿಡುತ್ತದೆ.
ಇತಸ್ತತಃ ಸಮಾಹೃತ್ಯ ರೂಪಂ ನಿರ್ವರ್ತಯಿಷ್ಯತಿ |
ವಿಕಾರಂ ಪ್ರಕೃತಿಂ ಚೈವ ಪುರುಷಂ ಚ ಸನಾತನಮ್ ॥ 44 ॥
ಪ್ರಕೃತಿಯನ್ನು, ಅದರ ವಿಕಾರವನ್ನು, ಭಗವಂತನನ್ನು, ಜೀವನನ್ನು ಎಲ್ಲವನ್ನೂ ಮುಚ್ಚುವ ಸಾಮರ್ಥ್ಯ ಆಸೆಗೆ ಇದೆ.
ಯೋ ಯಥಾವದ್ ವಿಜಾನಾತಿ ಸ ವಿತೃಷ್ಣೋ ವಿಮುಚ್ಯತೇ |
ಯಾತಿ ನಿತ್ಯಂ ಸ ಸದ್ಭಾವಮಾತ್ಮನೋ ವೈ ಮಹದ್ಧ್ರುವಮ್ ॥ 45 ॥ |
ಯಾವನು ಕಾರ್ಯ-ಕಾರಣರೂಪವಾದ ಪ್ರಪಂಚವನ್ನು, ಸನಾತನನಾದ ಭಗವಂತನನ್ನು ಚೆನ್ನಾಗಿ ತಿಳಿಯಬಲ್ಲನೋ ಅವನು ತೃಷ್ಣೆಯನ್ನು ಜಯಿಸಬಲ್ಲನು. ಬಳಿಕ ತನ್ನೊಳಗೆ ಭಗವಂತನನ್ನು ಧ್ಯಾನಿಸಿ ಶಾಶ್ವತವಾದ ಮಹತ್ತಾದ ಸ್ಥಾನವನ್ನು ಹೊಂದುತ್ತಾನೆ.
ಭೀಷ್ಮಃ
ಪ್ರಕಾಶಂ ಭಗವಾನೇತದೃಷಿರ್ನಾರಾಯಣೋಽಮೃತಮ್ |
ಭೂತಾನಾಮನುಕಂಪಾರ್ಥಂ ಜಗಾದ ಜಗತೋ ಹಿತಮ್ ॥ 46 ॥
ಭೀಷ್ಮ ಈ ರೀತಿಯಾದ ಅಮೃತಮಯವಾದ ತತ್ತ್ವಜ್ಞಾನದ ಉಪದೇಶವನ್ನು ಭಗವಾನ್ ನಾರಾಯಣ ಋಷಿಯು ಜಗತ್ತಿಗೆ ಹಿತವಾಗಲೆಂದು ಪ್ರಾಣಿಗಳ ಮೇಲಿನ ದಯೆಯಿಂದ ಹೇಳಿರುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೆಂಟನೆಯ ಅಧ್ಯಾಯ
ಪಂಚಶಿಖನಿಗೂ ಜನಕನಿಗೂ ನಡೆದ ಸಂವಾದವನ್ನು, ನಾಸ್ತಿಕಮತ
ಖಂಡನೆಯನ್ನು ಯುಧಿಷ್ಠಿರನಿಗೆ ಭೀಷ್ಮರು ತಿಳಿಸಿದುದು.
ಯುಧಿಷ್ಠಿರಃ
ಕೇನ ವೃತ್ತೇನ ವೃತ್ತಜ್ಞೋ ಜನಕೋ ಮಿಥಿಲಾಧಿಪಃ |
ಜಗಾಮ ಮೋಕ್ಷಂ ಧರ್ಮಜ್ಞೋ ಭೋಗಾನುತ್ಸೃಜ್ಯ ಮಾನುಷಾನ್ ॥1॥
ಯುಧಿಷ್ಠಿರ ಪಿತಾಮಹನೇ, ಸಚ್ಚಾರಿತ್ರ್ಯವನ್ನರಿತ ಮಿಥಿಲಾಧಿಪತಿಯಾದ ಜನಕ ಮಹಾರಾಜನು ಯಾವ ಸಚ್ಚಾರಿತ್ರ್ಯದಿಂದ ಧರ್ಮಜ್ಞನಾಗಿ ಮನುಷ್ಯಲೋಕಕ್ಕೆ ಸಂಬಂಧಿಸಿದ ಭೋಗಗಳನ್ನೆಲ್ಲ ತೊರೆದು ಮೋಕ್ಷಕ್ಕೆ ಹೋದನು?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯೇನ ವೃತ್ತೇನ ವೃತ್ತಜ್ಞಃ ಸ ಜಗಾಮ ಮಹತ್ ಸುಖಮ್ ॥ 2 ॥
ಭೀಷ್ಮ ಯುಧಿಷ್ಠಿರನೇ, ಇದಕ್ಕೂ ಪುರಾತನವಾದ ಒಂದು ಇತಿಹಾಸವನ್ನು ಉದಾಹರಿಸುತ್ತಾರೆ. ಯಾವ ಸಚ್ಚಾರಿತ್ರ್ಯದಿಂದ ಚಾರಿತ್ರ್ಯವನ್ನು ಅರಿತ ರಾಜನು ಮಹತ್ತರವಾದ ಸುಖಸ್ಥಾನವನ್ನು ಹೊಂದಿದನು ಎಂಬುದರ ಬಗ್ಗೆ ಇತಿಹಾಸವಿದೆ.
ಜನಕೋ ಜನದೇವಸ್ತು ಮಿಥಿಲಾಯಾಂ ಜನಾಧಿಪಃ |
ಔರ್ಧ್ವದೇಹಿಕಧರ್ಮಾಣಾಮಾಸೀದ್ಯುಕ್ತೋ ವಿಚಿಂತನೇ ॥ 3 ॥
ಮಿಥಿಲಾಪಟ್ಟಣಕ್ಕೆ ಜನದೇವ ಎಂಬ ಜನಕನು ರಾಜನಾಗಿದ್ದನು. ಅವನು ನಿರಂತರ ದೇಹಾವಸಾನದಲ್ಲಿ ನಡೆಸಬೇಕಾದ ಚಿಂತನೆಗಳೇನೆಂಬುದನ್ನೇ ಮನಸ್ಸಿನಲ್ಲಿ ಯೋಚಿಸುತ್ತಿದ್ದನು. ಅದರಲ್ಲೇ ಅವನಿಗೆ ಆಸಕ್ತಿ ಇದ್ದಿತು.
ತಸ್ಯ ಸ್ಮ ಶತಮಾಚಾರ್ಯಾ ವಸಂತಿ ಸತತಂ ಗೃಹೇ |
ದರ್ಶಯಂತಃ ಪೃಥಗ್ಧರ್ಮಾನ್ನಾನಾಪಾಷಂಡವಾದಿನಃ ॥ 4 ॥
ಆದರೆ ಅವನ ಮನೆಯಲ್ಲಿ ಬೇರೆ ಬೇರೆ ಧರ್ಮಗಳನ್ನು ಯಾವಾಗಲೂ ಉಪನ್ಯಾಸ ಮಾಡುತ್ತಿದ್ದ ಪಾಷಂಡ ಮತಗಳನ್ನು ಅವಲಂಬಿಸಿದ ನಾನಾ ವಿಧರಾದ ನೂರು ಮಂದಿ ಆಚಾರಪುರುಷರು ವಾಸ ಮಾಡುತ್ತಿದ್ದರು.
ಸ ತೇಷಾಂ ಪ್ರೇತ್ಯಭಾವೇ ಚ ಪ್ರೇತ್ಯಜಾತೌ ವಿನಿಶ್ಚಯೇ |
ಆಗಮಸ್ಥಃ ಸ ಭೂಯಿಷ್ಠಮಾತ್ಮತತ್ತ್ವೇನ ತುಷ್ಯತಿ ॥ 5 ॥
ಜನಕರಾಜನಾದರೂ ವೈದಿಕ ಧರ್ಮದಲ್ಲಿ ನಿಷ್ಠೆಯುಳ್ಳವನಾಗಿದ್ದನು. ಆದ್ದರಿಂದ ಆ ಮತಾಚಾರ್ಯರು ಆತ್ಮಸ್ವರೂಪ ವಿಷಯವಾಗಿ, ಪುನರ್ಜನ್ಮ ವಿಷಯವಾಗಿ ದೇಹದೊಡನೆ ಆತ್ಮವೂ ನಾಶವಾಗುತ್ತದೆ ಎಂದು ಹೇಳುತ್ತಿದ್ದ ಸಿದ್ಧಾಂತಗಳೆಲ್ಲವೂ ರಾಜನ ಮನಸ್ಸಿಗೆ ಹಿಡಿಸದೆ ಹೋಯಿತು. ರಾಜನಾದರೂ ಪರಮಾತ್ಮ ತತ್ತ್ವದಲ್ಲಿಯೇ ಬಹಳವಾದ ನಂಬಿಕೆಯುಳ್ಳವನಾಗಿದ್ದನು.
ತತ್ರ ಪಂಚಶಿಖೋ ನಾಮ ಕಾಪಿಲೇಯೋ ಮಹಾಮುನಿಃ |
ಪರಿಧಾವನ್ಮಹೀಂ ಕೃತ್ಸ್ನಾಂ ಜಗಾಮ ಮಿಥಿಲಾಮಪಿ ॥ 6 ॥
ಹೀಗಿರುವಾಗ ಒಮ್ಮೆ ಕಪಿಲಕುಮಾರನಾದ ಪಂಚಶಿಖನೆಂಬ ಮಹರ್ಷಿಯು ಭೂಮಿಯಲ್ಲಿ ಸಂಚರಿಸುತ್ತಾ ಮಿಥಿಲೆಗೆ ಬಂದು

ಸೇರಿದನು.
ಸರ್ವಸಂನ್ಯಾಸಧರ್ಮಾಣಾಂ ತತ್ತ್ವಜ್ಞಾನವಿನಿಶ್ಚಯೇ |
ಸುಪರ್ಯವಸಿತಾರ್ಥಶ್ಚ ನಿರ್ದ್ವಂದ್ವೋ ನಷ್ಟಸಂಶಯಃ ॥ 7 ॥
ಆ ಪಂಚಶಿಖನು ಸಮಸ್ತ ಸಂನ್ಯಾಸ ಧರ್ಮಗಳ ತತ್ತ್ವಗಳನ್ನು ತಿಳಿದಿದ್ದನು. ಬೇರೆ ಬೇರೆ ಸಿದ್ಧಾಂತಗಳ ನಿರ್ಣಯವನ್ನು ಬಲ್ಲವನಾಗಿದ್ದನು. ಸುಖದುಃಖಾದಿ ದ್ವಂದ್ವಗಳನ್ನು ಜಯಿಸಿದ್ದನು. ಎಲ್ಲಾ ವಿಷಯಗಳನ್ನು ವಿಮರ್ಶಿಸಿ ಸಂಶಯಗಳನ್ನು ಪರಿಹರಿಸಿಕೊಂಡು ಯಥಾರ್ಥ ಜ್ಞಾನವನ್ನು ಹೊಂದಿದ್ದನು.
ಋಷೀಣಾಮಾಹುರೇಕಂ ಯಂ ಕಾಮಾದವಸಿತಂ ನೃಷು |
ಶಾಶ್ವತಂ ಸುಖಮತ್ಯಂತಮನ್ವಿಚ್ಛನ್ ಸ ಸುದುರ್ಲಭಮ್ ॥ 8 ॥
ಇಷ್ಟಬಂದ ಕಡೆಯಲ್ಲಿ ಯಥೇಷ್ಟವಾಗಿ ಸಂಚರಿಸುವ ಮಹರ್ಷಿ ಶ್ರೇಷ್ಠನು ಎಂದು ಪ್ರಸಿದ್ಧಿಯನ್ನು ಹೊಂದಿದ್ದನು. ಅವನು ದುರ್ಲಭವೂ, ಶಾಶ್ವತವೂ ಆದ ಆತ್ಯಂತಿಕ ಸುಖಕ್ಕಾಗಿಯೇ ಅನ್ವೇಷಣೆ ಮಾಡುತ್ತಿದ್ದನು.
ಯಮಾಹುಃ ಕಪಿಲಂ ಸಾಂಖ್ಯಾಃ ಪರಮರ್ಷಿಂ ಪ್ರಜಾಪತಿಮ್ |
ಸ ಮನ್ಯೇ ತೇನ ರೂಪೇಣ ವಿಸ್ಮಾಪಯತಿ ಹಿ ಸ್ವಯಮ್ ॥ 9 ॥
ಅವನು ಸಾಂಖ್ಯರಿಂದ ಕಪಿಲ ಪ್ರಜಾಪತಿ ಎಂದು ಕರೆಯಲ್ಪಡುವ ಮಹರ್ಷಿಯ ಸ್ವರೂಪದಂತೆ ಕಾಣಿಸುತ್ತಿದ್ದನು. ಲೋಕದ ಜನರನ್ನೆಲ್ಲ ವಿಸ್ಮಯಗೊಳಿಸುತ್ತಾ ಸಂಚರಿಸುತ್ತಿದ್ದನು.
ಆಸುರೇಃ ಪ್ರಥಮಂ ಶಿಷ್ಯಂ ಯಮಾಹುಶ್ಚಿರಜೀವಿನಮ್ |
ಪಂಚಸ್ರೋತಸಿ ಯಃ ಸತ್ರಮಾಸ್ತೇ ವರ್ಷಸಹಸ್ರಿಕಮ್ ॥ 10 ॥
ಇವನು ಆಸುರಿ ಎಂಬ ಹೆಸರುಳ್ಳ ಕಪಿಲರೂಪಿ ಭಗವಂತನ ಮೊದಲನೆಯ ಶಿಷ್ಯನು (ಕಪಿಲರೂಪಿ ಭಗವಂತನ ಮೊದಲನೆಯ ಶಿಷ್ಯನು ಆಸುರಿ. ಅವನ ಶಿಷ್ಯನು ಪಂಚಶಿಖನು). ಇವನಿಗೆ ಚಿರಜೀವಿ ಎಂದು ಹೆಸರು. ಆಸುರಿಯು ಪಂಚಸ್ರೋತಸ್ (ಪಂಜಾಬ್) ಎಂಬ ಸ್ಥಳದಲ್ಲಿ ಸಹಸ್ರವರ್ಷಗಳ ಕಾಲ ಸತ್ರಯಾಗವನ್ನು ನಡೆಸಿದ್ದನು.
ತಂ ಸಮಾಸೀನಮಾಗಮ್ಯ ಮಂಡಲಂ ಕಾಪಿಲಂ ಮಹತ್ |
ಪುರುಷಾವಸ್ಥಮವ್ಯಕ್ತಂ ಪರಮಾರ್ಥಂ ನಿಬೋಧಯತ್ ॥ 11 ॥
ಅವನು ಅಲ್ಲಿನ ಪಂಚಪ್ರವಾಹ ಸಂಗಮಸ್ಥಳದಲ್ಲಿ ನಿತ್ಯಕರ್ಮಗಳನ್ನಾಚರಿಸುತ್ತಾ ಕಪಿಲ ರೂಪಿಯಾದ ಪರಮಾತ್ಮನು ಉಪದೇಶಿಸಿದ ಉಪಾಸನೆಯನ್ನು ಮಾಡಿದವನು. ಅವ್ಯಕ್ತನೂ, ಸಮಸ್ತ ಜೀವರ ಅಂತರ್ಯಾಮಿಯೂ, ಪರಮಾರ್ಥನೂ ಆದ ಭಗವಂತನನ್ನು ಕುರಿತು ಎಲ್ಲರಿಗೂ ಉಪದೇಶಿಸಿದ್ದನು.
ಇಷ್ಟಿಸತ್ರೇಣ ಸಂಸಿದ್ಧೋ ಭೂಯಶ್ಚ ತಪಸಾ ಮುನಿಃ |
ಕ್ಷೇತ್ರಕ್ಷೇತ್ರಜ್ಞಯೋರ್ವ್ಯಕ್ತಿಂ ಬುಬುಧೇ ದೇವದರ್ಶನಃ ॥ 12 ॥
ಆ ಸತ್ರಯಾಗವನ್ನು ಮಾಡಿ ಅಧಿಕವಾದ ತಪಸ್ಸನ್ನು ಹೊಂದಿದ ಮುನಿಯು ಕ್ಷೇತ್ರ- ಕ್ಷೇತ್ರಜ್ಞರ ಸ್ವರೂಪವನ್ನು ಚೆನ್ನಾಗಿ ತಿಳಿದಿದ್ದನು. ಭಗವಂತನನ್ನೇ ನೋಡಿದವನಾಗಿದ್ದನು.
ಯತ್ತದೇಕಾಕ್ಷರಂ ಬ್ರಹ್ಮ ನಾನಾರೂಪಂ ಪ್ರದೃಶ್ಯತೇ |
ಆಸುರಿರ್ಮಂಡಲೇ ತಸ್ಮಿನ್ ಪ್ರತಿಪೇದೇ ತದವ್ಯಯಮ್ ॥ 13 ॥
ಏಕಾಕ್ಷರನೆನಿಸಿದ ಗುಣಪರಿಪೂರ್ಣನಾದ ಭಗವಂತನೇ ಅನೇಕ ಜೀವರಲ್ಲಿ ಅನೇಕ ರೂಪದಿಂದ ಇವನಿಗೆ ತೋರುತ್ತಿದ್ದನು. ಅಂತಹ ಆಸುರಿಯು ಯಜ್ಞಮಂಡಲದಲ್ಲಿ ಅವ್ಯಯನಾದ ಭಗವಂತನನ್ನೇ ಚಿಂತಿಸುತ್ತಾ ಅವನನ್ನು ಹೊಂದಿದನು.
ತಸ್ಯ ಪಂಚಶಿಖಃ ಶಿಷ್ಯೋ ಮಾನುಷ್ಯಾ ಪಯಸಾ ಭೃತಃ |
ಬ್ರಾಹ್ಮಣೀ ಕಪಿಲಾ ನಾಮ ಕಾಚಿದಾಸೀತ್ ಕುಟುಂಬಿನೀ ॥ 14 ॥
ಆ ಆಸುರಿಗೆ ಪಂಚಶಿಖನು ಶಿಷ್ಯನು. ಈ ಪಂಚಶಿಖನು ಕಪಿಲೆ ಎಂಬ ಹೆಸರುಳ್ಳ ಬ್ರಾಹ್ಮಣಗೃಹಿಣಿಗೆ ಸಾಕುಮಗನಾಗಿ ಅವಳ ಸ್ತನ್ಯಪಾನವನ್ನು ಮಾಡಿ ಬೆಳೆದನು.
ತಸ್ಯಾಃ ಪುತ್ರತ್ವಮಾಗಮ್ಯ ಸ್ತ್ರಿಯಾಃ ಸ ಪಿಬತಿ ಸ್ತನೌ |
ತತಃ ಸ ಕಾಪಿಲೇಯತ್ವಂ ಲೇಭೇ ಬುದ್ಧಿಂ ಚ ನೈಷ್ಠಿಕೀಮ್ ॥ 15 ॥
ಅವಳಿಗೆ ಮಗನಾಗಿ ಅವಳ ಸ್ತನ್ಯಪಾನವನ್ನೇ ಮಾಡಿದ್ದರಿಂದ ಅವನಿಗೆ ಕಾಪಿಲೇಯ ಎಂಬ ಹೆಸರು ಉಂಟಾಯಿತು. ಅವನಲ್ಲಿ ಬುದ್ಧಿಯು ಜ್ಞಾನವಾಗಿಯೂ ದೃಢವಾಗಿ ನೆಲೆಗೊಂಡಿದ್ದವು.
ಏತನ್ಮೇ ಭಗವಾನಾಹ ಕಾಪಿಲೇಯಾಯ ಸಂಭವಮ್ |
ತಸ್ಯ ತತ್ ಕಾಪಿಲೇಯತ್ವಂ ಸರ್ವವಿತ್ತ್ವಮನುತ್ತಮಮ್ ॥ 16 ॥
ಈ ಪಂಚಶಿಖನು ಬೆಳೆದ ವೃತ್ತಾಂತವನ್ನು ನನಗೆ ಭಗವಂತನೇ ಹೇಳಿದನು. ಆ ಕಾಪಿಲೇಯನ ಅನುತ್ತಮವಾದ ಸರ್ವಜ್ಞತ್ವವನ್ನು ಅವನೇ ನನಗೆ ಬೋಧಿಸಿದನು.
ಸಾಮಾನ್ಯಂ ಕಪಿಲೋ ಜ್ಞಾತ್ವಾ ಧರ್ಮಜ್ಞಾನಾಮನುತ್ತಮಮ್ |
ಉಪೇತ್ಯ ಶತಮಾಚಾರ್ಯಾನ್ಮೋಹಯಾಮಾಸ ಹೇತುಭಿಃ ॥ 17 ॥
ಕಪಿಲರೂಪಿಯಾದ ಭಗವಂತನಿಂದ ಅನುತ್ತಮವಾದ ಧರ್ಮಜ್ಞಾನಗಳನ್ನು ಹೊಂದಿರುವ ಈ ಪಂಚಶಿಖನು ಧರ್ಮಜ್ಞನಾದ ಜನದೇವನ ಬಳಿಗೆ ಆಗಮಿಸಿ ಅವನ ಬಳಿ ಇರುವ ನೂರು ಮಂದಿ ಚಾರ್ವಾಕ ಮತಾಚಾರ್ಯರನ್ನು ಯುಕ್ತಿವಾದಗಳಿಂದ ಮೋಹಗೊಳಿಸಿದನು.
ಜನಕಸ್ತ್ವಭಿಸಂರಕ್ತಃ ಕಾಪಿಲೇಯಾನುದರ್ಶನಾತ್ |

ಉತ್ಸೃಜ್ಯ ಶತಮಾಚಾರ್ಯಾನ್ ಪೃಷ್ಠತೋಽನುಜಗಾಮ ತಮ್ ॥18॥
ಆ ಆಚಾರ್ಯರೆಲ್ಲರನ್ನೂ ನಿರಾಕರಿಸುವಂತೆ ಜನಕನಿಗೂ ಸಯುಕ್ತಿಕವಾದ ಅನೇಕ ಕಾರಣಗಳನ್ನು ವಿವರಿಸಿದಾಗ ಜನಕನಾದ ಜನದೇವನಿಗೆ ಪಂಚಶಿಖನ ಸಾಮರ್ಥ್ಯವನ್ನು ನೋಡಿ ಅವನಲ್ಲಿ ಗೌರವಭಾವವು ಹೆಚ್ಚಾಯಿತು. ಬಳಿಕ ಜನಕನು ತನ್ನ ಬಳಿ ಇರುವ ನೂರುಮಂದಿ ಮತಾಚಾರ್ಯರನ್ನು ನಿರಾಕರಿಸಿ ಪಂಚಶಿಖನ ಮತವನ್ನೇ ಅನುಸರಿಸಿದನು. ಪಂಚಶಿಖನ ಶಿಷ್ಯನಾಗಿ ಹೊರಟನು.
ತಸ್ಮೈ ಪರಮಕಲ್ಯಾಯ ಪ್ರಣತಾಯ ಚ ಧರ್ಮತಃ |
ಅಬ್ರವೀತ್ ಪರಮಂ ಮೋಕ್ಷಂ ಯತ್ತತ್ ಸಾಂಖ್ಯಂ ವಿಧೀಯತೇ ॥19॥
ಪಂಚಶಿಖನಾದರೂ ತನ್ನಲ್ಲಿ ವಿಧೇಯನಾಗಿ ತನ್ನ ಉಪದೇಶಗಳನ್ನು ಸ್ವೀಕರಿಸುವುದರಲ್ಲಿ ಸಮರ್ಥನಾದ ರಾಜನಿಗೆ ಯಥಾರ್ಥವೆನಿಸಿದ ಸಾಂಖ್ಯದಲ್ಲಿ ಹೇಳಿದ ಮೋಕ್ಷ ಸ್ವರೂಪವನ್ನು ಚೆನ್ನಾಗಿ ತಿಳಿಸಿದನು.
ಜಾತಿನಿರ್ವೇದಮುಕತ್ವ ಹಿ ಕರ್ಮನಿರ್ವೇದಮಬ್ರುವೀತ್ |
ಕರ್ಮನಿರ್ವೇದಮುಕತ್ವ ಚ ಸರ್ವನಿರ್ವೇದಮಬ್ರುವೀತ್ ॥ 20 ॥
ಪಂಚಶಿಖನು ಮೊದಲಿಗೆ ಜಾತಿಗಳ ಪದ್ಧತಿಯನ್ನು, ಆ ಜಾತಿಗಳಿಗನುಗುಣವಾದ ಕರ್ಮದ ವಿಧಿ-ವಿಧಾನಗಳನ್ನು, ಹೀಗೆ ಕರ್ಮದ ವಿಧಿ-ವಿಧಾನಗಳ ಬಳಿಕ ಸಮಸ್ತ ಕರ್ತವ್ಯಗಳನ್ನು ಉಪದೇಶಿಸಿದನು.
ಯದರ್ಥಂ ಕರ್ಮಸಂಸರ್ಗಃ ಕರ್ಮಣಾಂ ಚ ಫಲೋದಯಃ |
ತದನಾಶ್ವಾಸಿಕಂ ಮೋಘಂ ವಿನಾಶಿ ಚಲಮಧ್ರುವಮ್ ॥ 21 ॥
ಯಾವುದಕ್ಕಾಗಿ ಕರ್ಮಗಳನ್ನು ವಿಧಿಸಿದ್ದಾರೆಂದು, ಕರ್ಮಗಳಿಗಿರುವ ಫಲವೇನೆಂಬುದನ್ನು, ಕರ್ಮಫಲದಿಂದುಂಟಾಗುವ ದುಃಖಗಳನ್ನು, ವ್ಯರ್ಥವಾದ ವಿನಾಶಿಯಾದ, ಅನಿಶ್ಚಿತವಾದ, ವಿಶ್ವಾಸ ಅರ್ಹವಲ್ಲದ ಕರ್ಮಗಳನ್ನು ಬೋಧಿಸಿದನು.
ದೃಶ್ಯಮಾನೇ ವಿನಾಶೇ ಚ ಪ್ರತ್ಯಕ್ಷೇ ಲೋಕಸಾಕ್ಷಿಕೇ |
ಆಗಮಾತ್ ಪರಮಸ್ತೀತಿ ಬ್ರುವನ್ನಪಿ ಪರಾಜಿತಃ ॥ 22 ॥
ಎಲ್ಲರಿಗೂ ದೇಹದ ನಾಶವು ಪ್ರತ್ಯಕ್ಷವಾಗಿ ಕಾಣಿಸುತ್ತಿರಲು ಪಾಂಚಭೌತಿಕ ದೇಹವು ಮಾತ್ರ ನಾಶವಾಗುತ್ತದೆ. ವಿನಾಶದ ಬಳಿಕ ಪರಲೋಕ ಗಮನವು ಜೀವನಿಗೆ ಇದೆ. ಆಗಮಪ್ರಮಾಣವನ್ನು ಅವಲಂಬಿಸಿಕೊಂಡು ಪರಲೋಕವಿದೆ ಎಂದು ಉಪದೇಶಿಸುತ್ತಾ, ಪಂಚಶಿಖನು ಆ ಚಾರ್ವಾಕ ವಾದಿಗಳ ಅಬದ್ಧವಾದ ಮತಗಳನ್ನು ನಿರಾಕರಿಸಿ ಸನ್ಮತವನ್ನು ಬೋಧಿಸಿದನು.
ಅನಾತ್ಮಾ ಹ್ಯಾತ್ಮನೋ ಮೃತ್ಯುಃ ಕ್ಲೇಶೋ ಮೃತ್ಯುರ್ಜರಾಮಯಃ |
ಆತ್ಮಾನಂ ಮನ್ಯತೇ ಮೋಹಾತ್ತದಸಮ್ಯಕ್ಪರಂ ಮತಮ್ ॥ 23 ॥
ಚಾರ್ವಾಕಮತವಾದಿಗಳು-ದೇಹಕ್ಕೆ ವಿನಾಶವೆಂಬುದು ಪ್ರತ್ಯಕ್ಷವು. ಪ್ರತ್ಯಕ್ಷ ಪ್ರಮಾಣಕ್ಕೆ ಲೋಕವೇ ಸಾಕ್ಷಿ. ಆದ್ದರಿಂದ ಕೇವಲ ಆಗಮ-ಪ್ರಮಾಣಗಳಿಂದ ಶರೀರಕ್ಕಿಂತ ಬೇರೆಯಾದ ಆತ್ಮ ಇದ್ದಾನೆಂದು ಹೇಳುವ ವಾದವು ಸರಿಯಲ್ಲ. ಆದ್ದರಿಂದ ಜೀವ ಎಂಬುವವನೇ ಇಲ್ಲ. ಜೀವನಿಗೆ ದುಃಖ-ವ್ಯಾಧಿ-ಜರಾ-ಮರಣಗಳೆಲ್ಲವೂ ಸಹಜವಾದವುಗಳು. ಇದನ್ನು ಅರಿಯದೆ ದೇಹಕ್ಕಿಂತ ಅತಿರಿಕ್ತನಾದ ಜೀವನಿದ್ದಾನೆಂದು ಮೋಹದಿಂದ ತಪ್ಪು ತಿಳಿದಿದ್ದಾರೆ.
ಅಥ ಚೇದೇವಮಪ್ಯಸ್ತಿ ಯಲ್ಲೋಕೇ ನೋಪಪದ್ಯತೇ |
ಅಜರೋಽಯಮಮೃತ್ಯುಶ್ಚ ರಾಜಾಸೌ ಮನ್ಯತೇ ತಥಾ ॥ 24 ॥
ದೇಹವು ಹೋದ ಬಳಿಕ ಆತ್ಮವು ಉಳಿದಿರುತ್ತದೆ ಎಂಬ ವಾದವು ಸರಿಯಲ್ಲ. ಲೋಕದಲ್ಲಿ ಯುಕ್ತಿಗೆ ಅನುಕೂಲವಾಗಿ ಇರದಿದ್ದರೂ ಜನರು ಅದನ್ನು ಸಾಧಿಸುತ್ತಾರೆ. ಆದರೆ ಇದು ಯುಕ್ತವಾದುದಲ್ಲ. ಜಗತ್ತಿನ ಜನರು ಜೀವತತ್ತ್ವ, ಪರಮಾತ್ಮ ತತ್ತ್ವ ಎಂಬ ಎರಡು ತತ್ತ್ವಗಳನ್ನು ಅಂಗೀಕರಿಸಿಲ್ಲ. ಹೀಗಿದ್ದರೂ ಜೀವಾತ್ಮ-ಪರಮಾತ್ಮರು ಅಜರರು, ಮೃತ್ಯುರಹಿತರು ಎಂದು ಇಬ್ಬರೂ ಇದ್ದಾರೆಂದು ಜನಕರಾಜನು ತಿಳಿದಿದ್ದಾನೆ.
ಅಸ್ತಿ ನಾಸ್ತೀತಿ ಚಾಪ್ಯೇತತ್ತಸ್ಮಿನ್ನಸತಿ ಲಕ್ಷಣೇ |
ಕಿಮಧಿಷ್ಠಾಯ ತದ್ ಬ್ರೂಯಾಲ್ಲೋಕಯಾತ್ರಾವಿನಿಶ್ಚಯಮ್ ॥ 25 ॥
ಪರಲೋಕ ಇದೆ ಎನ್ನಲು ಪ್ರತ್ಯಕ್ಷ-ಪ್ರಮಾಣ ಇಲ್ಲದಿದ್ದಾಗಲೂ ಕೆಲವರು ಪರಲೋಕ ಇದೆ ಎನ್ನುವುದು ಎಷ್ಟು ಸರಿ? ಕೆಲವರು ಪರಲೋಕ ಇಲ್ಲ ಎನ್ನುತ್ತಾರೆ. ಆತ್ಮನು ಪರಲೋಕಕ್ಕೆ ಸಾಗಿದ ಎಂದು ತಿಳಿಸಲು ಯಾವ ಪ್ರಮಾಣವು ಆಧಾರವಾಗುತ್ತದೆ?
ಪ್ರತ್ಯಕ್ಷಂ ಹ್ಯೇತಯೋರ್ಮೂಲಂ ಕೃತಾಂತೈತಿಹ್ಯಯೋರಪಿ |
ಪ್ರತ್ಯಕ್ಷೋ ಹ್ಯಾಗಮೋಽಭಿನ್ನಃ ಕೃತಾಂತೋ ವಾ ನ ಕಿಂಚನ ॥ 26 ॥
ಯತ್ರ ತತ್ರಾನುಮಾನೇಽಸ್ತಿ ಕೃತಂ ಭಾವಯತೇಽಪಿ ವಾ |
ಅನ್ಯೋ ಜೀವಃ ಶರೀರಸ್ಯ ನಾಸ್ತಿಕಾನಾಂ ಮತೇ ಸ್ಮೃತಃ ॥ 27 ॥
ಸಿದ್ಧಾಂತ, ಇತಿಹಾಸಗಳಿಗೆ ಪ್ರತ್ಯಕ್ಷವೇ ಮೂಲವಾಗಿದೆ. ಪ್ರತ್ಯಕ್ಷಕ್ಕಿಂತ ಭಿನ್ನವಾದ ಆಗಮವೂ ಇರುವುದಿಲ್ಲ, ಸಿದ್ಧಾಂತವೂ ಇರುವುದಿಲ್ಲ. ಆದ್ದರಿಂದ ಯಾವ ಪ್ರಮಾಣದ ಆಧಾರದಲ್ಲಿ ಪರಲೋಕ ಯಾತ್ರೆಯ ನಿಶ್ಚಯವನ್ನು ಹೇಳಲು ಸಾಧ್ಯ? ಎಂದು ಚಾರ್ವಾಕ ಮತಾನುವಾದವು. ಅಲ್ಲದೇ ಆಗಮಕ್ಕಾಗಲೀ, ಅನುಮಾನಕ್ಕಾಗಲೀ ಪ್ರತ್ಯಕ್ಷವೇ ಮೂಲವೆನಿಸಿರುತ್ತದೆ. ಅನೇಕ ವೇಳೆ ಆಗಮಗಳು ಪ್ರತ್ಯಕ್ಷದಿಂದ ಬಾಧಿಸಲ್ಪಡುತ್ತವೆ. ಅನುಮಾನದಿಂದಲೇ ನಿಶ್ಚಯವೆಂಬುದು ದೃಢವಾದುದಲ್ಲ. ವಿಷಯವು ಎಂತಹದ್ದಾಗಿದ್ದರೂ ಅನುಮಾನದಿಂದ ಸಾಧಿಸಬೇಕಾಗಿಲ್ಲ. ಆದ್ದರಿಂದ ಶರೀರಕ್ಕಿಂತಲೂ ಬೇರೆಯಾದ ಆತ್ಮ ಇದ್ದಾನೆಂದು ಹೇಳಲು ಅವಕಾಶವೇ ಇರುವುದಿಲ್ಲ. ಈ ಶರೀರವನ್ನೇ ಜೀವ ಎನ್ನುತ್ತಾರೆ. ಈ ರೀತಿಯಾದ ವಾದವು ನಾಸ್ತಿಕ ಮತದವರಲ್ಲಿ ಪ್ರಸಿದ್ಧವಾಗಿದೆ.
ರೇತೋ ಧಾತುರ್ವಟಕಣಿಕಾ ಘೃತಪಾಕಾಧಿವಾಸನಮ್ |
ಜಾತಿಸ್ಮೃತಿರಯಸ್ಕಾಂತಃ ಸೂರ್ಯಕಾಂತೋಽಂಬುಭಕ್ಷಣಮ್ ॥ 28 ॥
ಪ್ರೇತ್ಯ ಭೂತಾತ್ಯಯಶ್ಚೈವ ದೇವತಾಭ್ಯುಪಯಾಚನಮ್ |

ಮೃತೇ ಕರ್ಮನಿವೃತ್ತಿಶ್ಚ ಪ್ರಮಾಣಮಿತಿ ನಿಶ್ಚಯಃ ॥ 29 ॥
ರೇತಸ್ಸು, ವಾತ-ಪಿತ್ತಾದಿ ಧಾತುಗಳು, ಆಲದ ಮರದ ಬೀಜ, ತುಪ್ಪ, ಹೊಗೆಯ ಮೂಲಿಕೆ, ಜನ್ಮಾಂತರ ಸ್ಮರಣೆ, ಅಯಸ್ಕಾಂತ, ಸೂರ್ಯಕಾಂತಮಣಿ, ಜಲಪಾನ, ಸತ್ತ ಬಳಿಕ ಶರೀರವು ಪಂಚಭೂತಗಳಲ್ಲಿ ಸೇರಿಕೊಳ್ಳುವುದು, ದೇವತಾಪ್ರಾರ್ಥನೆ, ಸತ್ತ ಬಳಿಕ ಶರೀರದಲ್ಲಿ ಕ್ರಿಯಾನಿವೃತ್ತಿ- ಇದರಿಂದ ಕಣ್ಣಿಗೆ ಕಾಣದ ಅಲೌಕಿಕ ವಿಷಯಗಳನ್ನು ಊಹಿಸಬಹುದು. ಆದ್ದರಿಂದ ನಾಸ್ತಿಕ್ಯವಾದವು ಸರಿಯಾದುದಲ್ಲ.
ವ್ಯಾಖ್ಯಾನ ವಿಶೇಷ ಬ್ರಹ್ಮಸೂತ್ರದ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಈ ಮೋಕ್ಷದಲ್ಲಿ ಬರುವ ವಚನಗಳನ್ನು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಉಲ್ಲೇಖಿಸುತ್ತಾ ಅತೀಂದ್ರಿಯ ವಸ್ತುಗಳೇ ಇಲ್ಲವೆಂದ ಬಳಿಕ ಶಾಸ್ತ್ರದಿಂದ ಪರಮಾತ್ಮನ ಅಸ್ತಿತ್ವವು ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ಆಸ್ತಿಕ್ಯವಾದವನ್ನು ಸಮರ್ಥಿಸುವ ಈ ಪ್ರಸಂಗವನ್ನು ಉಲ್ಲೇಖಿಸಿದ್ದಾರೆ.
ರೇತಸ್ಸು- ಸ್ತ್ರೀ ಶರೀರದಲ್ಲಿ ವಿಸರ್ಜಿತವಾದ ಪುರುಷನ ರೇತಸ್ಸಿನಿಂದ ಗರ್ಭಧಾರಣೆ ಆಗುತ್ತದೆ. ಆದರೆ ಇದು ಕಣ್ಣಿಗೆ ಕಾಣಿಸುವುದಿಲ್ಲ. ಮುಂದೆ ಈ ಸ್ತ್ರೀಯ ಗರ್ಭದಲ್ಲಿ ಶಿಶುವಿದೆ ಎಂಬುದನ್ನು ಸ್ಥೂಲೋದರತ್ವವೇ ಮೊದಲಾದ ಪ್ರಾಮಾಣಿಕ ಅನುಮಾನಗಳಿಂದ ನಿರ್ಣಯಿಸಿಕೊಳ್ಳುತ್ತೇವೆ. ಮೃತಶರೀರದಲ್ಲಿ ಗರ್ಭವು ಉತ್ಪನ್ನವಾಗುವುದಿಲ್ಲ. ಆದ್ದರಿಂದ ಶರೀರ ಭಿನ್ನನಾದ ಜೀವನಿದ್ದಾನೆಂಬುದು ನಿರ್ಣಯವಾಗುತ್ತದೆ. ಇಷ್ಟೇ ಅಲ್ಲದೆ ಎಲ್ಲಾ ಸ್ತ್ರೀ ಶರೀರದಲ್ಲಿಯೂ ಗರ್ಭಧಾರಣೆಯು ಆಗುವುದಿಲ್ಲ. ಆದ್ದರಿಂದ ಅದೃಷ್ಟ-ಈಶ್ವರಾದಿಗಳ ಸಿದ್ಧಿಯಾಗುತ್ತದೆ. ಕೆಲವರಲ್ಲಿ ಮಾತ್ರ ಗರ್ಭಧಾರಣೆ. ಕೆಲವರಲ್ಲಿ ಆಗುವುದಿಲ್ಲ ಎಂಬುದರಿಂದ ಭಗವಂತನೂ, ಪುಣ್ಯ- ಪಾಪಗಳೂ ಸಿದ್ಧವಾಗುತ್ತವೆ.
ರೇತೋಧಾತು ವಾತ-ಪಿತ್ತ-ಕಫಗಳೆಂಬುವು ಮೂರು ಧಾತುಗಳು. ಈ ಧಾತುಗಳು ಅಪಥ್ಯಾಚರಣೆಯಿಂದ ಜೀವಿಸಿರುವ ಜೀವನ ಶರೀರದಲ್ಲಿ ಕೆರಳುತ್ತವೆ. ಈ ಧಾತುಗಳಾದರೂ ಪ್ರತ್ಯಕ್ಷದಿಂದ ತಿಳಿಯಲಾರವು, ಅನುಮಾನದಿಂದಲೇ ತಿಳಿಯಬೇಕು. ಮೃತಶರೀರದಲ್ಲಿ ಈ ಧಾತುಗಳ ಪರಿಣಾಮವು ಇರುವುದಿಲ್ಲ. ಆದ್ದರಿಂದ ಶರೀರಾತಿರಿಕ್ತ ಜೀವನಿದ್ದಾನೆ ಎಂಬುದು ಸಿದ್ಧವಾಗುತ್ತದೆ. ಜೀವಂತವಾದ ಶರೀರದಲ್ಲಿಯೂ ಎಲ್ಲ ಕಡೆಯಲ್ಲಿಯೂ ಈ ಧಾತುಗಳ ವಿಕಾರವು ಉಂಟಾಗುವುದಿಲ್ಲ. ಕೆಲವು ಕಡೆ ಮಾತ್ರ ಈ ಧಾತುಗಳು ಕೆರಳುತ್ತವೆ. ಇದರಿಂದ ಈಶ್ವರ-ಅದೃಷ್ಟ ಎರಡೂ ಸಿದ್ಧವಾಗುತ್ತವೆ.
ವಟಕಣಿಕ ಆಲದ ಬೀಜದಿಂದ ಆಲದ ಮರವು ಹುಟ್ಟುತ್ತದೆ. ಹುರಿದ ಬೀಜದಿಂದ ಮೊಳಕೆ ಬರುವುದಿಲ್ಲ. ಹುರಿಯದೇ ಇರುವ ಎಲ್ಲಾ ಬೀಜಗಳಿಂದಲೂ ಮರಗಳು ಹುಟ್ಟುವುದಿಲ್ಲ.
ಘೃತ- ತುಪ್ಪದಿಂದ ದೇಹವು ಬೆಳೆಯುತ್ತದೆ. ಮೃತಶರೀರವು ಬೆಳೆಯುವುದಿಲ್ಲ. ಜೀವಚ್ಛರೀರವು ಕೆಲವೊಂದು ಎಷ್ಟು ತುಪ್ಪ ತಿಂದರೂ ಪುಷ್ಟಿಯನ್ನು ಹೊಂದುವುದಿಲ್ಲ.
ಧೂಮಾದಿವಾಸನ ಕೆಲವು ಮರಗಳು ಹೂಬಿಡಲು ಹೊಗೆ ಹಾಕಬೇಕಾಗುತ್ತದೆ. ಹೊಗೆ ಹಾಕಿದ ಬಳಿಕ ಆ ಮರದಲ್ಲಿ ಹೂ ಮೊದಲಾದವುಗಳು ಉಂಟಾಗುತ್ತವೆ. ಒಣಗಿದ ಮರದಲ್ಲಿ ಹೂಗಳು ಉಂಟಾಗುವುದಿಲ್ಲ. ಜೀವಂತವಾದ ಎಲ್ಲಾ ಮರಗಳಲ್ಲಿಯೂ ಹೂಗಳು ಉಂಟಾಗುವುದಿಲ್ಲ. ಇದರಿಂದ ಜೀವ, ಅದೃಷ್ಟಗಳು ಸಿದ್ಧವಾಗುತ್ತವೆ.
ಜಾತಿಸ್ಮೃತಿ ಕೆಲವರಿಗೆ ತಪಸ್ಸೇ ಮೊದಲಾದ ಸಾಧನ ವಿಶೇಷಗಳಿಂದ ಪೂರ್ವಜನ್ಮದ ಸ್ಮರಣೆ ಉಂಟಾಗುತ್ತದೆ. ಮೃತನಾದ ವ್ಯಕ್ತಿಗೆ ಜಾತಿಸ್ಮರಣೆ ಇರುವುದಿಲ್ಲ. ಇರುವ ವ್ಯಕ್ತಿಗಳೆ ಎಲ್ಲರಿಗೂ ಉಂಟಾಗುವುದಿಲ್ಲ. ಆದ್ದರಿಂದ ಇಲ್ಲಿಯೂ ಈಶ್ವರ-ಪೂರ್ವಪುಣ್ಯಗಳನ್ನು ಕಾರಣವೆಂದು ಹೇಳಬೇಕು.
ಅಯಸ್ಕಾಂತ- ಅಯಸ್ಕಾಂತವು ಕಬ್ಬಿಣವನ್ನು ಸೆಳೆಯುತ್ತದೆ. ಅಚೇತನದಲ್ಲಿ ಇಂತಹ ವಿಚಿತ್ರವಾದ ಶಕ್ತಿಯು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಇಂಥ ವಿಶೇಷ ಶಕ್ತಿಯನ್ನು ತುಂಬಿದ ಭಗವಂತನನ್ನು ಇಲ್ಲಿಯೂ ಚಿಂತಿಸಬೇಕು. ಇದರಿಂದ ಈಶ್ವರನ ಸಿದ್ಧಿಯಾಗುತ್ತದೆ.
ಸೂರ್ಯಕಾಂತ ಸೂರ್ಯಕಾಂತಶಿಲೆಯಿಂದ ಅಗ್ನಿಯು ಉತ್ಪತ್ತಿಯಾಗುತ್ತದೆ. ಕೇವಲ ಜಡಪದಾರ್ಥಗಳಲ್ಲಿ ಈ ಶಕ್ತಿಯು ಕಂಡಿರುವುದಿಲ್ಲ. ಈ ರೀತಿಯಾದ ಶಕ್ತಿಯ ವೈಚಿತ್ರ್ಯಕ್ಕೆ ಈಶ್ವರನು ಪ್ರೇರಕನಾಗಿದ್ದಾನೆಂದು ಇಲ್ಲಿಯೂ ಅಂಗೀಕರಿಸಬೇಕು.
ಅಂಬುಭಕ್ಷಣ ನೀರು ಕುಡಿದಾಗ ಬಾಯಾರಿಕೆಯು ಪರಿಹಾರವಾಗುತ್ತದೆ. ಮೃತಶರೀರದಲ್ಲಿ ಹೀಗೆ ಆಗುವುದಿಲ್ಲ. ಆದ್ದರಿಂದ ಇದರಿಂದಲೂ ಜೀವನು ಸಿದ್ಧನಾಗುತ್ತಾನೆ.
ಪ್ರೇತ್ಯಭೂತಾಪ್ಯಯ ಮೃತಶರೀರವು ಮಣ್ಣಾಗುತ್ತದೆ. ಮರಣಾನಂತರ ದೇಹದಲ್ಲಿರುವ ಪಂಚಭೂತಗಳು ನಾಶಹೊಂದುತ್ತವೆ. ಜೀವಚ್ಛರೀರದಲ್ಲಿ ಹೀಗಾಗುವುದಿಲ್ಲ. ನಾವು ಬಯಸಿದರೂ ಅದು ಮಣ್ಣಾಗುವುದಿಲ್ಲ.
ದೇವತಾಭ್ಯುಪಯಾಚನಮ್ ದೇವತಾ ಪ್ರಾರ್ಥನೆಯಿಂದ ಕೆಲವರಿಗೆ ಭಾಗ್ಯವು ದೊರೆಯುತ್ತದೆ. ಮೃತನಾದವನು ದೇವತಾ ಯಾಚನೆ ಮಾಡಲು ಸಾಧ್ಯವಿಲ್ಲ. ಇದರಿಂದ ದೇವತಾ ಸಿದ್ಧಿಯು, ಜೀವಸಿದ್ಧಿಯು ಉಂಟಾಗುತ್ತದೆ.
ಮೃತೇ ಕರ್ಮನಿವೃತ್ತಿ ಮೃತಶರೀರದಲ್ಲಿ ಹಸ್ತಚಲನಾದಿ ಕರ್ಮವು ಉಂಟಾಗುವುದಿಲ್ಲ. ಜೀವಚ್ಛರೀರದಲ್ಲೇ ಉಂಟಾಗುತ್ತದೆ. ಇದರಿಂದ ಜೀವನ ಸಿದ್ಧಿಯಾಗುತ್ತದೆ.
ನ ತ್ವೇತೇ ಹೇತವಃ ಸಂತಿ ಯೇ ಕೇಚಿನ್ಮೂರ್ತಿಸಂಸ್ಥಿತಾಃ |
ಅಮರ್ತ್ಯಸ್ಯ ಹಿ ಮರ್ತ್ಯೇನ ಸಾಮಾನ್ಯಂ ನೋಪಪದ್ಯತೇ ॥ 30 ॥
ಹೀಗೆ ರೇತಸ್ಸು, ಧಾತು ಮುಂತಾದವುಗಳ ಕಾರ್ಯೋತ್ಪತ್ತಿ, ಕಾರ್ಯ ಅನುತ್ಪತ್ತಿ, ಹೇತುಗಳು ದೇಹದಲ್ಲಿ ಇರುವುದಿಲ್ಲ. ಆದ್ದರಿಂದ ದೇಹಾತಿರಿಕ್ತವಾದ ಅದೃಷ್ಟಾದಿಗಳು ನಿಯಾಮಕವೆಂದು ಹೇಳಬೇಕು. ಅಮೂರ್ತವೆನಿಸಿದ ದೇಹವ್ಯತಿರಿಕ್ತವಾದ ಅದೃಷ್ಟಾದಿಗಳಿಗೂ, ಮೂರ್ತವೆನಿಸಿದ ದೇಹಕ್ಕೂ ಸಾಮ್ಯವನ್ನು ಹೇಳುವುದು ಸರಿಯಾಗುವುದಿಲ್ಲ. ಅದೃಷ್ಟದ ಶಕ್ತಿಯೇ ಬೇರೆ, ದೇಹದ ಶಕ್ತಿಯೇ ಬೇರೆ.
ಅವಿದ್ಯಾಕರ್ಮಚೇಷ್ಟಾನಾಂ ಕೇಚಿದಾಹುಃ ಪುನರ್ಭವಮ್ |
ಕಾರಣಂ ಲೋಭಮೋಹೌ ತು ದೋಷಾಣಾಂ ಚ ನಿಷೇವಣಮ್ ॥
ಅವಿದ್ಯೆ, ಕರ್ಮ, ಆಸೆ, ಲೋಭ, ಮೋಹ ಇವುಗಳು ದೋಷಗಳು. ಈ ದೋಷಗಳನ್ನು ಸೇವಿಸುವುದು ಪುನರ್ಜನ್ಮಕ್ಕೆ ಕಾರಣವಾಗುತ್ತದೆಂದು ಕೆಲವು ವಿದ್ವಾಂಸರು ಹೇಳುತ್ತಾರೆ.

ಅವಿದ್ಯಾಂ ಕ್ಷೇತ್ರಮಾಹುರ್ಹಿ ಕರ್ಮ ಬೀಜಂ ತಥಾ ಕೃತಮ್ |
ತೃಷ್ಣಾಸಂಜನನಂ ಸ್ನೇಹ ಏಷ ತೇಷಾಂ ಪುನರ್ಭವಃ ॥ 32 ॥
ಆ ವಿದ್ವಾಂಸರು ಅವಿದ್ಯೆಯನ್ನು ಕ್ಷೇತ್ರವೆಂದು ಕರೆಯುತ್ತಾರೆ. ಪೂರ್ವಜನ್ಮದಲ್ಲಿ ಮಾಡಿರುವ ಶುಭಾಶುಭ ಕರ್ಮಗಳೇ ಬೀಜವಾಗಿರುತ್ತದೆ. ತೃಷ್ಣೆ ಎಂಬುದು ಬೀಜದಲ್ಲಿ ಅಂಕುರವನ್ನುಂಟು ಮಾಡುವ ಸ್ನೇಹ ಅಥವಾ ಜಲ ಎನಿಸಿದೆ. ಇವರ ಅಭಿಪ್ರಾಯದಲ್ಲಿ ಇವುಗಳೇ ಪುನರ್ಜನ್ಮಕ್ಕೆ ಕಾರಣವಾಗಿರುತ್ತವೆ.
ತಸ್ಮಿನ್ ವ್ಯೂಢೇ ಚ ದಗ್ಧೇ ಚ ಚಿತ್ತೇ ಮರಣಧರ್ಮಿಣಿ |
ಅನ್ಯೋಽನ್ಯಾಜ್ಜಾಯತೇ ದೇಹಸ್ತಮಾಹುಃ ಸತ್ತ್ವಸಂಕ್ಷಯಮ್ ॥ 33 ॥
ಸಾಯುವ ಧರ್ಮವುಳ್ಳ ಈ ದೇಹವನ್ನು ಮಣ್ಣಿನಲ್ಲಿ ಹೂತು ಹಾಕಿದರೂ, ಬೆಂಕಿಯಲ್ಲಿ ಸುಟ್ಟರೂ, ಶಸ್ತ್ರದಿಂದ ಭೇದಿಸಿದರೂ ಪುನಃ ಶುಭಾಶುಭಕರ್ಮಗಳಿಂದ ಮತ್ತೊಂದು ದೇಹವು ಉಂಟಾಗುತ್ತದೆ. ಆ ಕರ್ಮದ ಬೀಜವು ಭಗವಜ್ಞಾನದಿಂದ ನಾಶ ಹೊಂದಿದರೆ ಮರುಹುಟ್ಟು ನಾಶಹೊಂದುತ್ತದೆ.
ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ |
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ ॥ 34 ॥
ಯಾವ ಕಾರಣದಿಂದ ಜೀವನು ಅಣುಸ್ವರೂಪನಾಗಿದ್ದಾನೆ? ಶರೀರವು ಸ್ಥೂಲ ರೂಪವನ್ನು ಹೊಂದಿದೆ? ಅಣುತ್ವ, ಸ್ಥೂಲತ್ವ ಎಂಬ ವಿರುದ್ಧ ಧರ್ಮಗಳಿಂದ ಈ ಚೇತನತ್ವ, ಜಡತ್ವ ಎಂಬ ಜಾತಿಗಳಿಂದ ಜೀವನಿದ್ದಾನೆ, ದೇಹವಿದೆ ಎಂದು ಪ್ರತಿಪಾದಿಸುವ ಶ್ರುತಿಗಳಿರುವುದರಿಂದ, ಜೀವನು ಸುಖಭೋಕ್ತೃವು, ದೇಹವು ಸುಖ ಭೋಕ್ತೃವಲ್ಲ ಎಂಬ ಪ್ರಯೋಜನವಿರುವುದರಿಂದ, ಜೀವಕ್ಕಿಂತ ಭಿನ್ನವಾದ ದೇಹವು ಇದೆ. ಆದಕಾರಣದಿಂದ ಆ ದೇಹವೇ ನಾನಾಗಿದ್ದೇನೆ ಎಂಬುದು ಎಷ್ಟು ಮಾತ್ರಕ್ಕೂ ಸರಿಯಾಗದು.
ಏವಂ ಸತಿ ಚ ಕಾ ಪ್ರೀತಿರ್ದಾನವಿದ್ಯಾತಪೋಬಲೈಃ |
ಯದನ್ಯಾಚರಿತಂ ಕರ್ಮ ಸರ್ವಮನ್ಯಃ ಪ್ರಪದ್ಯತೇ ॥ 35 ॥
ಈ ರೀತಿಯಾಗಿದ್ದಾಗಲೂ ಚಾರ್ವಾಕ ಸಿದ್ಧಾಂತವನ್ನೇ ಮಾನ್ಯ ಮಾಡುವುದಾದರೆ ವಿದ್ಯೆ, ದಾನ, ತಪಸ್ಸು, ಬಲ ಇವುಗಳಲ್ಲಿ ಯಾರಿಗೂ ಪ್ರೀತಿಯುಂಟಾಗಲಾರದು. ಒಬ್ಬರು ಮಾಡಿದ ಕರ್ಮಫಲವನ್ನು ಮತ್ತೊಬ್ಬನು ಉಪಭೋಗಿಸುತ್ತಾನೆ. ಹೀಗಾದರೆ ಮನುಷ್ಯನಿಗೆ ಕರ್ಮ ಮಾಡುವ ಆಸಕ್ತಿಯಾದರೂ ಹೇಗೆ ಉಂಟಾಗುತ್ತದೆ?
ಯದಾ ಹ್ಯಯಮಿಹೈವಾನ್ಯೈಃ ಪ್ರಾಕೃತೈರ್ದುಃಖಿತೋ ಭವೇತ್ |
ಸುಖಿತೈರ್ದುಃಖಿತೈರ್ವಾಪಿ ದೃಶ್ಯೋಽಪ್ಯಸ್ಯ ವಿನಿರ್ಣಯಃ ॥ 36 ॥
ಈ ಚಾರ್ವಾಕ ಮತವನ್ನೇ ಅಂಗೀಕರಿಸಿದಲ್ಲಿ ಇವನು ಮತ್ತೊಬ್ಬನಿಂದ, ಮತ್ತೊಬ್ಬನು ಇವನಿಂದ ದುಃಖಿತನಾಗುತ್ತಾನೆ. ಪ್ರಕೃತಿಯನ್ನು ಮಾತ್ರ ಹೊಂದಿರುವ ಇವರು ಧರ್ಮಾಧರ್ಮಗಳ ಎಚ್ಚರವಿಲ್ಲದೆ ಹಿಂಸಿಸಬಹುದು. ಸುಖ-ದುಃಖಗಳಿಗೆಲ್ಲ ನಿರ್ಣಯವೇ ಇಲ್ಲ ಎಂದಾಗುತ್ತದೆ. ಯಾವನೋ ಮಾಡಿದ ಕರ್ಮಕ್ಕೆ ಯಾರೋ ಸುಖವನ್ನು, ಕಷ್ಟವನ್ನು ಅನುಭವಿಸಬೇಕಾಗುತ್ತದೆ.
ತಥಾ ಹಿ ಮುಸಲೈರ್ಹನ್ಯುಃ ಶರೀರಂ ತತ್ ಪುನರ್ಭವೇತ್ |
ಪೃಥಗ್ಜ್ಞಾನಂ ಯದನ್ಯಚ್ಚ ತೇನೈವಂ ಸೋಪಪದ್ಯತೇ ॥ 37 ॥
ಈ ಉಚ್ಛೃಂಖಲೆಯಿಂದ ಪುಣ್ಯ-ಪಾಪಗಳ ಭಯವಿಲ್ಲದೆ ಕೆಲವರು ಒನಕೆಗಳಿಂದಲೇ ಹೊಡೆದು ಸಂಹರಿಸಬಹುದು. ಸಂಹರಿಸಿದಾಗಲೂ ಸತ್ತ ಮನುಷ್ಯನು ಪುನಃ ಪ್ರೇತನಾಗಿ ಹುಟ್ಟುತ್ತಾನೆ. ಪ್ರೇತನಾಗಿ ಹುಟ್ಟಿದಾಗ ಆ ಜೀವನಿಗೆ ಇವನೇ ನನ್ನ ತಲೆಯನ್ನು ಒಡೆದವನು ಎಂಬ ಜ್ಞಾನವಿದೆ. ಆದ್ದರಿಂದ ದೇಹವೇ ಜೀವ ಎಂದು ಹೇಳಿದಲ್ಲಿ ಪ್ರೇತಗಳು ವಿರೋಧಿಸುತ್ತವೆ. ಆದ್ದರಿಂದ ಚಾರ್ವಾಕ ಮತವು ಅಪ್ರಾಮಾಣಿಕವಾಗಿದೆ.
ಋತುಃ ಸಂವತ್ಸರಾಸ್ತಿಥ್ಯಃ ಶೀತೋಷ್ಣೇ ಚ ಪ್ರಿಯಾಪ್ರಿಯೇ |
ಯಥಾತೀತಾನಿ ಪಶ್ಯಂತಿ ತಾದೃಶಃ ಸತ್ತ್ವಸಂಕ್ಷಯಃ ॥ 38 ॥
ಋತು, ಸಂವತ್ಸರ, ತಿಥಿಗಳು, ಯುಗ, ಚಳಿಗಾಲ, ಬೇಸಿಗೆಕಾಲ, ಪ್ರಿಯ-ಅಪ್ರಿಯ ಎಲ್ಲವೂ ಬರುತ್ತಿರುತ್ತವೆ. ಆದ್ದರಿಂದ ಕಾಲವು ನಾಶವನ್ನು ಹೊಂದುವುದಿಲ್ಲ. ಅದರಂತೆ ಜೀವನು ನಿತ್ಯನಾಗಿರುತ್ತಾನೆ. ಜೀವನಿಗೆ ಎಂದೂ ನಾಶವಿರುವುದಿಲ್ಲ.
ಜರಯಾ ಹಿ ಪರೀತಸ್ಯ ಮೃತ್ಯುನಾ ವಾ ವಿನಾಶಿನಾ |
ದುರ್ಬಲಂ ದುರ್ಬಲಂ ಪೂರ್ವಂ ಗೃಹಸ್ಯೇವ ವಿನಶ್ಯತಿ ॥ 39 ॥
ಯಾವ ರೀತಿಯಾಗಿ ಹಳೆಯ ಮನೆಯು ಮರಮಟ್ಟುಗಳು ದುರ್ಬಲವಾಗಿ ನಾಶವನ್ನು ಹೊಂದುತ್ತದೋ ಅದರಂತೆ ಈ ಜೀವನಿಗೆ ಸಂಬಂಧಿಸಿದ ಶರೀರವು ಜರಾಗ್ರಸ್ತವಾಗಿ, ಮೃತ್ಯುವಿನಿಂದ ಆಕ್ರಾಂತವಾಗಿ, ಅಂಗಾಂಗಗಳಲ್ಲಿ ದೌರ್ಬಲ್ಯ ಉಂಟಾಗಿ ನಾಶವನ್ನು ಹೊಂದುತ್ತದೆ.
ಇಂದ್ರಿಯಾಣಿ ಮನೋ ವಾಯುಃ ಶೋಣಿತಂ ಮಾಂಸಮಸ್ಥಿ ಚ |
ಆನುಪೂರ್ವ್ಯಾ ವಿನಶ್ಯಂತಿ ಸ್ವಂ ಧಾತುಮುಪಯಾಂತಿ ಚ ॥ 40 ॥
ಇಂದ್ರಿಯಗಳು, ಮನಸ್ಸು, ಪ್ರಾಣ, ರಕ್ತ, ಮಾಂಸ, ಮೂಳೆ ಇವು ಕ್ರಮವಾಗಿ ವಿನಾಶ ಹೊಂದುತ್ತವೆ. ಬಳಿಕ ಇವುಗಳು ಕಾರಣಭೂತಗಳಾದ ಪೃಥಿವ್ಯಾದಿ ಪಂಚಭೂತಗಳಲ್ಲಿ ಸೇರಿಹೋಗುತ್ತವೆ.
ಲೋಕಯಾತ್ರಾವಿಧಾನಂ ಚ ದಾನಧರ್ಮಫಲಾಗಮಃ |
ಯದರ್ಥಂ ವೇದಶಬ್ದಾಶ್ಚ ವ್ಯವಹಾರಾಶ್ಚ ಲೌಕಿಕಾಃ ॥ 41 ॥
ಇತಿಸಮ್ಯಕ್ ಮನಸ್ಯೇತೇ ಬಹವಃ ಸಂತಿಹೇತವಃ |
ಏತದಸ್ತೀದಮಸ್ತೀತಿ ನ ಕಿಂಚಿತ್ಪ್ರತಿದೃಶ್ಯತೇ ॥ 42 ॥
ಶರೀರಭಿನ್ನನಾದ ಆತ್ಮನನ್ನು ಅಂಗೀಕರಿಸದಿದ್ದರೆ ಲೋಕದ ವ್ಯವಹಾರವೇ ನಿರ್ವಹಿಸಲಾಗುವುದಿಲ್ಲ. ದಾನ-ಧರ್ಮಗಳಿಂದ

ಫಲವನ್ನು ಪಡೆದುಕೊಳ್ಳುವ ಆಸಕ್ತಿಯು ಯಾರಿಗೂ ಇರುವುದಿಲ್ಲ. ವೈದಿಕ ಶಬ್ದಗಳು ಲೋಕದ ವ್ಯವಹಾರಗಳೆಲ್ಲವೂ ಆತ್ಮನ ಸುಖಕ್ಕಾಗಿಯೇ ಹೊರಟಿದ್ದಾವೆ. ಈ ರೀತಿಯಾಗಿ ಮನಸ್ಸಿನಲ್ಲಿಯೇ ಅನೇಕ ಹೇತುಗಳಿದ್ದಾವೆ. ಇದು ಪಾರಲೌಕಿಕ, ಇದು ಐಹಿಕವು ಎಂದು ಹೇಳುವುದರಿಂದಲೇ ಏನನ್ನೂ ಹೊಂದುವುದಿಲ್ಲ.
ತೇಷಾಂ ವಿಮೃಶತಾಮೇವಂ ತತ್ತತ್ಸಮಭಿಧಾವತಾಮ್ |
ಕ್ವಚಿನ್ನಿವಿಶತೇ ಬುದ್ಧಿಸ್ತತ್ರ ಜೀರ್ಯತಿ ವೃಕ್ಷವತ್ ॥ 43 ॥
ಈ ರೀತಿಯಾಗಿ ಆತ್ಮನ ಅಸ್ತಿತ್ವವನ್ನು ವಿಮರ್ಶಿಸುತ್ತಾ ಆಯಾ ವಿಷಯಗಳನ್ನು ಚರ್ಚಿಸುತ್ತಾ ಸಾಗುವ ಬುದ್ಧಿಗೆ ಒಂದು ಕಡೆ ದಾರ್ಢ್ಯವು ಹುಟ್ಟುತ್ತದೆ. ಆ ಸಿದ್ಧಾಂತವನ್ನೇ ಹೊಂದಿ ವೃಕ್ಷದಂತೆ ಬುದ್ಧಿಯು ಜೀರ್ಣವಾಗುತ್ತದೆ.
ಏವಮರ್ಥೈರನರ್ಥೈಶ್ಚ ದುಃಖಿತಾಃ ಸರ್ವಜಂತವಃ |
ಆಗಮೈರಪಕೃಷ್ಯಂತಿ ಹಸ್ತಿನೋ ಹಸ್ತಿಪೈರ್ಯಥಾ ॥ 44 ॥
ಹೀಗೆ ಎಲ್ಲಾ ಪ್ರಾಣಿಗಳು ವಿಶೇಷವಾದ ಅಭಿಲಾಷೆಗಳಿಂದಲೂ, ಪ್ರಯೋಜನವಿಲ್ಲದ ವಿಷಯಗಳಿಂದಲೂ ದುಃಖಿತರಾಗಿರುತ್ತಾರೆ. ಮಾವುತನು ಆನೆಯನ್ನು ಅಂಕುಶದಿಂದ ನಿಯಂತ್ರಿಸುವಂತೆ ಶಾಸ್ತ್ರಗಳು ಮಾತ್ರ ಮನುಷ್ಯನನ್ನು ಸನ್ಮಾರ್ಗದಲ್ಲಿ ನಿಯಂತ್ರಿಸುತ್ತವೆ.
ಅರ್ಥಾಂಸ್ತಥಾಽತ್ಯಂತದುಃಖಾವಹಾಂಶ್ಚ
ಲಿಪ್ಸಂತ ಏಕೇ ಬಹವೋ ವಿಶುಷ್ಕಾಃ |
ಮಹತ್ತರಂ ದುಃಖಮಭಿಪ್ರಪನ್ನಾ
ಹಿತ್ವಾ ಸುಖಂ ಮೃತ್ಯುವಶಂ ಪ್ರಯಾಂತಿ ॥ 45 ॥
ಉದ್ದೇಶವೇ ಇಲ್ಲದ ಮನುಷ್ಯರು ಅತ್ಯಂತ ಸುಖವೆಂದು ಭಾವಿಸುವ ವಿಷಯ ಸುಖಗಳನ್ನು ಅಪೇಕ್ಷಿಸುತ್ತಿರುತ್ತಾರೆ. ಆದರೆ ಇವರ ಆಸೆ ಎಂದಿಗೂ ನಿಲ್ಲದೆ ಇನ್ನೂ ದುಃಖವನ್ನೇ ಎದುರಿಸುತ್ತಾರೆ. ಕೊನೆಗೆ ಸಮಸ್ತ ಸುಖಭೋಗಗಳನ್ನೂ ಕಳೆದುಕೊಂಡು ಮೃತ್ಯುವಶರಾಗುತ್ತಾರೆ.
ವಿನಾಶಿನೋ ಹ್ಯಧ್ರುವಜೀವಿತಸ್ಯ ಕಿಂ ಬಂಧುಭಿರ್ಮಂತ್ರ ಪರಿಗ್ರಹೈಶ್ಚ |
ವಿಹಾಯ ಯೋ ಗಚ್ಛತಿ ಸರ್ವಮೇವ ಕ್ಷಣೇನ ಗತ್ವಾ ನ ನಿವರ್ತತೇ ಚ ॥
ನಾಶಹೊಂದುವ ಸ್ವಭಾವವುಳ್ಳ ಅನಿತ್ಯವಾದ ಜೀವನವುಳ್ಳ ಈ ಜೀವನಿಗೆ ಹೆಂಡತಿ, ಮಕ್ಕಳಿಂದಾಗಲೀ, ಬಂಧುಗಳಿಂದಾಗಲೀ, ಗೃಹ-ಸಂಪತ್ತು ಮೊದಲಾದವುಗಳ ಸಂಗ್ರಹದಿಂದಾಗಲೀ ಏನು ಪ್ರಯೋಜನವಿದೆ? ಇದನ್ನು ಅರಿತು ಸರ್ವಸ್ವವನ್ನೂ ಕ್ಷಣ ಮಾತ್ರದಲ್ಲಿ ಪರಿತ್ಯಾಗ ಮಾಡಿ, ಅಧ್ಯಾತ್ಮಮಾರ್ಗವನ್ನು ಹಿಡಿದು ಯಾರು ಹೊರಡುತ್ತಾರೋ ಅವರು ಪುನರ್ಜನ್ಮವನ್ನು ಹೊಂದುವುದಿಲ್ಲ.
ಖಂ ಭೂಮಿತೋಯಾನಲವಾಯವೋ ಹಿ
ಸದಾ ಶರೀರಂ ಪ್ರತಿಪಾಲಯಂತಿ |
ಇತೀದಮಾಲಕ್ಷ್ಯ ಕುತೋ ರತಿರ್ಭವೇತ್
ವಿನಾಶಿನೋ ಹ್ಯಸ್ಯ ನ ಕರ್ಮ ವಿದ್ಯತೇ ॥ 47 ॥
ಭೂಮಿ, ಆಕಾಶ, ನೀರು, ಅಗ್ನಿ, ವಾಯುಗಳು (ಅದರ ಅಭಿಮಾನಿ ದೇವತೆಗಳು) ಸರ್ವಕಾಲದಲ್ಲಿಯೂ ಶರೀರವನ್ನು ಪಾಲಿಸುತ್ತಿರುತ್ತಾರೆ. ಪಂಚಭೂತಗಳಿಂದಲೇ ರಕ್ಷಣೆಯಾಗುತ್ತಿದೆ ಎಂಬುದನ್ನು ಅರ್ಥೈಸಿಕೊಂಡರೆ ಹೇಗೆ ಈ ಶರೀರದಲ್ಲಿ ಅನುರಾಗವು ಹುಟ್ಟುತ್ತದೆ? ನಷ್ಟವಾಗುವ ಈ ಶರೀರದಿಂದ ಯಾವ ಸುಖವೂ ದೊರೆಯದು.
ಇದಮನುಪಧಿವಾಕ್ಯಮಚ್ಛಲಂ
ಪರಮನಿರಾಮಯಮಾತ್ಮಸಾಕ್ಷಿಕಮ್ |
ನರಪತಿಮನುವೀಕ್ಷ್ಯ ವಿಸ್ಮಿತಃ
ಪುನರನುಯೋಕ್ತುಮಿದಂ ಪ್ರಚಕ್ರಮೇ ॥ 48 ॥
ಧರ್ಮಜನೇ, ಜನಕನೆನಿಸಿದ ಜನದೇವರಾಜನು ಭ್ರಮೆಯನ್ನು ಪರಿಹರಿಸುವ, ವಂಚನೆಯಿಂದ ರಹಿತವಾದ, ದೋಷರಹಿತವಾದ, ಆತ್ಮಸಾಕ್ಷಾತ್ಕಾರವನ್ನು ಹೊಂದಿಸುವ ಪಂಚಶಿಖನ ಉಪದೇಶವನ್ನು ಕೇಳಿ ಆಶ್ಚರ್ಯವನ್ನು ಹೊಂದಿದವನಾಗಿ ಪುನಃ ಇನ್ನೂ ಅನೇಕ ಪ್ರಶ್ನೆಗಳನ್ನು ಕೇಳಲು ಆರಂಭಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಅಷ್ಟಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತೊಂಬತ್ತನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಪಂಚಶಿಖನು ಜನಕರಾಜನಿಗೆ
ಹೇಳಿದ ಉಪದೇಶಗಳನ್ನು ತಿಳಿಸಿದುದು.
ಭೀಷ್ಮಃ
ಜನಕೋ ನರದೇವಸ್ತು ಜ್ಞಾಪಿತಃ ಪರಮರ್ಷಿಣಾ |
ಪುನರೇವಾನುಪಪ್ರಚ್ಛ ಸಾಂಪರಾಯೇ ಭವಾಭವೌ ॥ 1 ॥
ಭೀಷ್ಮ ನರದೇವನಾದ ಜನಕರಾಜನು ಪರಮರ್ಷಿಯಾದ ಪಂಚಶಿಖನಿಂದ ತತ್ತ್ವೋಪದೇಶವನ್ನು ಹೊಂದಿದವನಾಗಿ ಪುನಃ

ಮೋಕ್ಷದ ಬಗ್ಗೆ, ಹುಟ್ಟು-ಸಾವುಗಳ ಬಗ್ಗೆ ಪ್ರಶ್ನಿಸಿದನು.
ಭಗವನ್ ಯದಿದಂ ಪ್ರೇತ್ಯ ಸಂಜ್ಞಾ ಭವತಿ ಕಸ್ಯಚಿತ್ |
ಏವಂ ಸತಿ ಕಿಮಜ್ಞಾನಂ ಜ್ಞಾನಂ ವಾ ಕಿಂ ಕರಿಷ್ಯತಿ ॥ 2 ॥
ಪೂಜ್ಯರೇ, ಯಾವಾಗ ಸಾಧಕನಾದ ಜೀವನು ಪರಮಾತ್ಮನ ಜ್ಞಾನವನ್ನು ಪಡೆದು ತತ್ತ್ವಜ್ಞಾನವನ್ನು ಹೊಂದಿರುತ್ತಾನೋ ಆವಾಗ ಮೊದಲಿರುವ ಅಜ್ಞಾನ ಅಥವಾ ಲೋಕ ವಿಷಯ ಜ್ಞಾನಗಳು ಏನು ಮಾಡುತ್ತವೆ? ಅವುಗಳ ವ್ಯಾಪಾರವೇನು?
ವಿವಾದಾದೇವ ಸಿದ್ಧೋಽಸೌ ಕಾರಣಸ್ಯೇವ ವೇದನಾ |
ಚೇತನೋ ವಿದ್ಯತೇ ಹ್ಯತ್ರ ಹೈತುಕಂ ಚ ಮನೋಗತಮ್ ॥ 3 ॥
ವೇದನೆಯ ಕಾರಣವು ಚರ್ಚೆಯಿಂದ, ವಿಚಾರದಿಂದ ಹೇಗೆ ಸಿದ್ಧವಾಗುತ್ತದೋ ಅದರಂತೆ ಆತ್ಮನು ವಿಮರ್ಶೆಯಿಂದಲೇ, ಗುರು-ಶಿಷ್ಯರ ಚರ್ಚೆಯಿಂದಲೇ ಸಿದ್ಧನಾಗುತ್ತಾನೆ. ಅವನ ಮನಸ್ಸಿನಲ್ಲಿರುವ ಪುಣ್ಯ-ಪಾಪಾದಿ ಕಾರಣಗಳು ಚೇತನನಿದ್ದಾನೆ ಎನ್ನಲು ಪ್ರಮಾಣವಾಗುತ್ತವೆ.
ಆಗಮಾದೇವ ಸಿದ್ಧೋಽಸೌ ಸ್ವತಃಸಿದ್ಧಾ ಇತಿ ಶ್ರುತಿಃ |
ವರ್ತತೇ ಪೃಥಗನ್ಯೋನ್ಯಂ ನ ಹ್ಯಪಃಶ್ರಿತ್ಯ ಕರ್ಮಸು ॥ 4 ॥
ವೇದಗಳಿಂದಲೇ ಭಗವಂತನು ಸಿದ್ಧನಾಗುತ್ತಾನೆ. ಸ್ವತಃಸಿದ್ಧನಾದವನು ಭಗವಂತನು ಎಂದು ಶ್ರುತಿ ಇದೆ. ಜೀವ-ಪರಮಾತ್ಮರು ಭಿನ್ನರಾಗಿದ್ದರೂ ಜೀವನು ಪರಮಾತ್ಮನನ್ನು ಆಶ್ರಯಿಸಿದ್ದಾನೆ. ಅನ್ಯೋನ್ಯ ಸಂಬಂಧ ಇವರಿಗಿದೆ. ಕರ್ಮಗಳಲ್ಲಿ ಒಬ್ಬನ ವ್ಯಾಪಾರವೇ ನಡೆಯುವುದಿಲ್ಲ. ಭಗವತಪ್ರೇರಣೆಯಿಂದಲೇ ಜೀವನು ವರ್ತಿಸುತ್ತಾನೆ.
ಚೇತನೋ ಹ್ಯಂಶವಸ್ತತ್ರ ಸ್ವಮೂರ್ತಂ ಧಾರಯಂತ್ಯತಃ |
ಸ್ವಭಾವಂ ಪೌರುಷಂ ಕರ್ಮ ಹ್ಯಾತ್ಮಾನಂ ತಮುಪಾಶ್ರಿತಾಃ |
ತಮಾಶ್ರಿತ್ಯ ಪ್ರವರ್ತಂತೇ ದೇಹಿನೋ ದೇಹಬಂಧನಾಃ ॥ 5 ॥
ಚೇತನನ ಅಂಶಗಳೇ ಕ್ರಿಯೆಗಳನ್ನು ಧರಿಸಿರುತ್ತವೆ. ಪುರುಷನಿಂದ ನಡೆಯುವ ಕರ್ಮಗಳು ಸ್ವಭಾವವನ್ನನುಸರಿಸಿರುತ್ತವೆ. ಪರಮಾತ್ಮನನ್ನು ಆಶ್ರಯಿಸಿರುವ ಜೀವರು ಪರಮಾತ್ಮನನ್ನು ಆಶ್ರಯಿಸಿಕೊಂಡೇ ದೇಹಬಂಧನಾದಿಗಳಲ್ಲಿ ಪ್ರವೃತ್ತಿಯನ್ನು ಹೊಂದುತ್ತಾರೆ.
ಗುಣಜ್ಞಾನಮಭಿಜ್ಞಾನಂ ತಸ್ಯ ಲಿಂಗಾನಿ ಶಬ್ದವತ್ |
ಪೃಥಿವ್ಯಾದಿಷು ಭೂತೇಷು ತತ್ತದಾಹುರ್ನಿದರ್ಶನಮ್ ॥ 6 ॥
ಪರಮಾತ್ಮನ ಪ್ರಕಾಶಾದಿ ಗುಣಜ್ಞಾನವು `ಸೋಽಯಂ' ಎಂಬ ಪ್ರತ್ಯಭಿಜ್ಞಾ ಪ್ರತ್ಯಕ್ಷವು ವೇದದಂತೆ ಜ್ಞಾಪಕಗಳು. ಪೃಥಿವ್ಯಾದಿ ಪಂಚಭೂತಗಳಲ್ಲಿ ಪ್ರತ್ಯಭಿಜ್ಞಾ ಪ್ರತ್ಯಕ್ಷಗಳೇ ಭಗವಂತನ ಅಸ್ತಿತ್ವಕ್ಕೆ ಜ್ಞಾಪಕಗಳಾಗಿವೆ.
ಆತ್ಮಾಽಸೌ ವರ್ತತೇ ಭಿನ್ನಸ್ತತ್ರ ತತ್ರ ಸಮನ್ವಿತಃ |
ಪರಮಾತ್ಮಾ ತಥೈವೈಕೋ ದೇಹೇಽಸ್ಮಿನ್ನಿತಿ ವೈ ಶ್ರುತಿಃ ॥ 7 ॥
ಎಲ್ಲ ಕಡೆಯೂ ಅಂತರ್ಯಾಮಿಯಾಗಿರುವ ಪರಮಾತ್ಮನು ಆಯಾ ವಸ್ತುಗಳಿಂದ ಭಿನ್ನನೇ ಆಗಿದ್ದಾನೆ. ಪರಮಾತ್ಮನು, ಜೀವಾತ್ಮನು ಈ ದೇಹದಲ್ಲಿದ್ದಾರೆ ಎಂದು ಹೇಳಲು `ದ್ವಾಸುಪರ್ಣಾ' ಶ್ರುತಿಯು ಪ್ರಮಾಣವಾಗಿದೆ.
ಆಕಾಶಂ ವಾಯುರೂಷ್ಮಾ ಚ ಸ್ನೇಹೋ ಯಚ್ಚಾಪಿ ಪಾರ್ಥಿವಮ್ |
ಯಥಾ ತ್ರಿಧಾ ಪ್ರವರ್ತಂತೇ ತಥಾಽಸೌ ಪುರುಷಃ ಸ್ಮೃತಃ ॥ 8 ॥
ಆಕಾಶ, ವಾಯು, ತೇಜಸ್ಸು, ಜಲ, ಪೃಥಿವಿ - ಈ ಪಂಚಭೂತಗಳು ಜಲೀಯ, ತೈಜಸ, ಪಾರ್ಥಿವ ಶರೀರಗಳಲ್ಲಿ ಮೂರುಪ್ರಕಾರಗಳಿಂದ ಹೇಗೆ ಪ್ರವೃತ್ತಿಯನ್ನು ಹೊಂದುತ್ತವೋ, ಪಾರ್ಥಿವ ಶರೀರದಲ್ಲಿ ಪೃಥಿವಿಯು ಅಧಿಕವಾಗಿರುತ್ತದೆ. ಜಲೀಯ ಶರೀರದಲ್ಲಿ ನೀರಿನ ಅಂಶವು ಅಧಿಕವಾಗಿರುತ್ತದೆ. ತೈಜಸ ಶರೀರದಲ್ಲಿ ತೇಜಸ್ಸಿನ ಅಂಶವು ಅಧಿಕವಾಗಿರುತ್ತದೆ. ಆಯಾ ಶರೀರಗಳಿಗೆ ಪಂಚಭೂತಗಳು ಹೇಗೆ ಪ್ರೇರಕವಾಗಿದ್ದಾವೋ ಹಾಗೆ ಈ ಜೀವರಿಗೆ ಭಗವಂತನು ಪ್ರೇರಕನಾಗಿರುತ್ತಾನೆ.
ಪಯಸ್ಯಂತರ್ಹಿತಂ ಯದ್ವತ್ತದ್ವದ್ ವ್ಯಾಪ್ತಂ ಮಹಾತ್ಮಕಮ್ |
ಪೂರ್ವಂ ನೈಶ್ವರ್ಯಯೋಗೇನ ತಸ್ಮಾದೇತನ್ನ ಶೇಷವಾನ್ ॥ 9 ॥
ಹಾಲಿನಲ್ಲಿ ತುಪ್ಪವು ಹೇಗೆ ಸೇರಿಕೊಂಡಿದೆಯೋ, ವ್ಯಾಪ್ತವಾಗಿದೆಯೋ ಹಾಗೆ ಮಹಾತ್ಮಕವಾದ ಭಗವತತ್ತ್ವವು ಎಲ್ಲೆಡೆಯೂ ವ್ಯಾಪ್ತವಾಗಿದೆ. ಇವನನ್ನು ತಿಳಿಯಲು ಐಶ್ವರ್ಯಶಕ್ತಿಯು ಬೇಕು. ಐಶ್ವರ್ಯಶಕ್ತಿಯು ಇಲ್ಲದಿದ್ದಾಗ ಇವನನ್ನು ತಿಳಿಯಲಾಗದು.
ಶಬ್ದಃ ಕಾಲಃ ಕ್ರಿಯಾ ದೇಹೋ ಮಮ್ಯೈಕಸ್ಯೈವ ಕಲ್ಪನಾ |
ಸ್ವಭಾವಂ ತನ್ಮಯಂ ತ್ವೇತತ್ ಮಾಯಾರೂಪಂ ತು ಭೇದವತ್ ॥ 10 ॥
ಶಬ್ದವು, ಕಾಲವು, ಕ್ರಿಯೆಯು, ದೇಹವು ಎಲ್ಲವೂ ನನ್ನಿಂದ ಒಂದೇ ಆಗಿದೆ ಎನ್ನುವುದು ಭ್ರಾಂತಿಯಾಗಿದೆ. ನಾನಾ ಸ್ವಭಾವಗಳಾಗಲೀ, ಪ್ರಕೃತಿರೂಪವಾದ ಜಗತ್ತಾಗಲೀ ನಾರಾಯಣನಿಂದಲೇ ವ್ಯಾಪ್ತವಾಗಿದೆ. ನಾರಾಯಣನಿಂದ ಅತ್ಯಂತ ಭಿನ್ನವಾಗಿದೆ. ಶಬ್ದ-ಕಾಲಾದಿಗಳಲ್ಲಿ ಪರಸ್ಪರ ಭೇದವಿದೆ.
ನಾನಾಖ್ಯಂ ಪರಮಂ ಶುದ್ಧಂ ನಿರ್ವಿಕಲ್ಪಂ ಪರಾತ್ಮಕಮ್ |
ಲಿಂಗಾದಿ ದೇವಮಧ್ಯಾಸ್ತೇ ಜ್ಞಾನಂ ದೇವಸ್ಯ ತತ್ತಥಾ ॥ 11 ॥
ಪರಮಾತ್ಮನೆಂಬ ವಸ್ತುವು ಭೇದದಿಂದ ಕೂಡಿದೆ. ಅರ್ಥಾತ್ ಜಗತ್ತಿಗಿಂತ ವಿಲಕ್ಷಣವಾಗಿದೆ. ಸರ್ವೋತ್ತಮವಾಗಿದೆ. ಪ್ರಾಕೃತಿಕ ಗುಣರಹಿತವಾದುದರಿಂದ ಶುದ್ಧವಾಗಿದೆ. ಸಂಶಯರಹಿತವಾದುದರಿಂದ ನಿರ್ವಿಕಲ್ಪ ಎನಿಸಿದೆ. ಸರ್ವೋತ್ತಮ- ವಾದುದರಿಂದ ಪರಾತ್ಮಕ ಎನಿಸಿದೆ. ಈ ಪರಬ್ರಹ್ಮನ ಜ್ಞಾನವನ್ನು ಅನುಮಾನ, ಶ್ರುತ್ಯಾದಿಗಳಿಂದ ಹೊಂದಬೇಕಾಗಿದೆ. ಪ್ರತ್ಯಕ್ಷದಿಂದ ತಿಳಿಯಲಾಗದು.
ಚಿನ್ಮಯೋಽಯಂ ಹಿ ನಾದಾಖ್ಯಃ ಶಬ್ದಶ್ಚಾಸೌ ಮನೋ ಮಹಾನ್ |

ಗತಿಮಾನುತ ಸಂಧತ್ತೇ ವರ್ಣಮತ್ತತ್ಪದಾನ್ವಿತಮ್ ॥ 12 ॥
ಈ ಭಗವಂತನು ಚಿನ್ಮಯನಾಗಿದ್ದಾನೆ. ಪ್ರಣವವೆಂಬ ನಾದದಿಂದ ಉಪಾಸ್ಯನಾಗಿದ್ದಾನೆ. ವೇದಪ್ರತಿಪಾದ್ಯನಾದುದರಿಂದ ಶಬ್ದನೆನಿಸಿದ್ದಾನೆ. ಮನಸ್ಸಿನಲ್ಲಿ ಚಿಂತಿಸಲು ಅರ್ಹನಾಗಿರುವುದರಿಂದ ಮನ ಎನಿಸಿದ್ದಾನೆ, ಮಹಾನ್ ಎನಿಸಿದ್ದಾನೆ. ಊರ್ಧ್ವಗತಿಯುಳ್ಳಂತಹ ಸಾಧಕನು ಕೈಕಾಲುಗಳಿಂದ ಕೂಡಿರುವಂತಹ ಭಗವಂತನ ಸುಂದರರೂಪವನ್ನು ಅನುಸಂಧಾನ ಮಾಡುತ್ತಾನೆ.
ಕಾಯೋ ನಾಸ್ತಿ ಚ ತೇಷಾಂ ವೈ ಅವಕಾಶಸ್ತಥಾ ಪರಮ್ |
ಏತೇನೋಢಾ ಇತಿ ಖ್ಯಾತಾಃ ಸರ್ವೇ ತೇ ಧರ್ಮದೂಷಕಾಃ ॥ 13 ॥
ಭಗವಂತನಿಗೆ ದೇಹವು ಇರುವುದಿಲ್ಲ. ಇತ್ಯಾದಿಯಾಗಿ ಪ್ರಮಾಣವಿಲ್ಲದೆ ಮಾತನಾಡುವವರಿಗೆ ಉತ್ತಮವಾದ ಅವಕಾಶವು ಇಲ್ಲಿ ಇರುತ್ತದೆ. ಇಂತಹ ವಿಚಾರಗಳಿಂದಲೇ ಇವರು ಪ್ರಸಿದ್ಧರು. ಇವರೆಲ್ಲರೂ ಧರ್ಮದೂಷಕರು.
ಅನುಬಂಧಾನ್ನ ವಿಜ್ಞಾನಂ ಜ್ಞಾನತೋ ಧ್ರುವಮವ್ಯಯಮ್ |
ನಾನಾಭೇದವಿಕಲ್ಪೇನ ಯೇಷಾಮಾತ್ಮಾ ಸ್ಮೃತಃ ಸದಾ ॥ 14 ॥
ಪ್ರಕೃತೇರಪರಸ್ತೇಷಾಂ ಬಹವೋ ಹ್ಯಾತ್ಮವಾದಿನಃ ॥ 15 ॥
ದೇಹದಲ್ಲಿಯೇ ಸ್ನೇಹವಿರುವುದರಿಂದ ನಮ್ಮ ಜ್ಞಾನದಿಂದ ವಿಶಿಷ್ಟ ಜ್ಞಾನವು ಉಂಟಾಗುವುದಿಲ್ಲ. ಆದ್ದರಿಂದಲೇ ನಾಶರಹಿತವಾದ ಮೋಕ್ಷವು ಉಂಟಾಗುವುದಿಲ್ಲ ಎಂದು ಹೇಳುವವರ ಮತದಲ್ಲಿಯೂ ಪ್ರಕೃತಿಗಿಂತ ಉತ್ತಮನಾದ ಜೀವನು ಇದ್ದಾನೆ ಎಂದು ಹೇಳಲೇಬೇಕು. ಆತ್ಮಾವಾದಿಗಳು ಬಹಳ ಮಂದಿ ಇರುವುದರಿಂದ ಇದನ್ನು ಅಂಗೀಕರಿಸಲೇಬೇಕು. ಅನೇಕ ವಿಧವಾದ ವಿಕಲ್ಪಗಳಿಂದ ಆತ್ಮ ಇದ್ದಾನೆಂದ ಹೇಳಿದ್ದಾರೆ. ಆತ್ಮನನ್ನೇ ಅಂಗೀಕರಿಸದೆ ಆತ್ಮನಲ್ಲಿ ಅಜ್ಞಾನವಿದೆ ಎಂದು ಹೇಳುವುದು ವಿರುದ್ಧವಾಗುತ್ತದೆ. ಆತ್ಮನನ್ನು ಅಂಗೀಕರಿಸಿ ಪರಮಾತ್ಮನನ್ನು ಅಂಗೀಕರಿಸದಿದ್ದಲ್ಲಿ ಅವರು ವೇದಬಾಹ್ಯರೆನಿಸಿ ನಿಂದಿತರಾಗುತ್ತಾರೆ.
ಏಕಾನೇಕಾತ್ಮಕಂ ತೇಷಾಂ ಪ್ರತಿಷೇಧೋ ಹಿ ಭೇದನುತ್ |
ತಸ್ಮಾದ್ವೇದಸ್ಯ ಹೃದಯಂ ನ ದ್ವೈಧ್ಯಮಿತಿ ವಿದ್ಧಿ ತತ್ ॥ 16 ॥
ಭೇದವನ್ನು ಸಾಧನೆ ಮಾಡುವ ವಾದಿಯು ಜೀವನು ಒಬ್ಬನೋ ಇಬ್ಬರೋ ಎಂದು ಚರ್ಚಿಸಿದ್ದಾನೆ ವಿನಾ ಚಾರ್ವಾಕ ಮತಕ್ಕೆ ಸಂಬಂಧಿಸಿದಂತೆ ಅಥವಾ ವೇದಬಾಹ್ಯರ ಮತಕ್ಕೆ ಸಂಬಂಧಿಸಿದಂತೆ ಚರ್ಚಿಸಿರುವುದಿಲ್ಲ. ವೇದದ ಹೃದಯವು ಜೀವರ ಏಕತ್ವ, ಬಹುತ್ವಗಳ ಚರ್ಚೆಯ ಬಗ್ಗೆ ವಿನಾ ಚಾರ್ವಾಕಾದಿ ಮತಗಳನ್ನು ವೇದವು ಅಂಗೀಕರಿಸಿರುವುದೇ ಇಲ್ಲ.
ವೇದಾದೃಷ್ಟೇರಯಂ ಲೋಕಃ ಸರ್ವಾರ್ಥೇಷು ಪ್ರವರ್ತತೇ |
ತಸ್ಮಾಚ್ಚ ಸ್ಮೃತಯೋ ಜಾತಾಃ ಸೇತಿಹಾಸಾಃ ಪೃಥಗ್ವಿಧಾಃ ॥ 17 ॥
ಸಮಸ್ತ ಪದಾರ್ಥಗಳಲ್ಲಿಯೂ ಈ ಜಗತ್ತು ವೇದ-ಅದೃಷ್ಟಗಳನ್ನು ಅವಲಂಬಿಸಿಕೊಂಡು ಪ್ರವರ್ತಿಸುತ್ತಿದೆ. ಆ ವೇದಗಳಿಂದಲೇ ಸ್ಮೃತಿಗಳು, ಬೇರೆ ಬೇರೆ ವಿಧವಾದ ಇತಿಹಾಸಗಳು ಉತ್ಪನ್ನವಾಗಿವೆ.
ನ ಯನ್ನ ಸಾಧ್ಯಂ ತದ್ಬ್ರಹ್ಮ ನಾದಿಮಧ್ಯಂ ನ ಚಾಂತವತ್ |
ಇಂದ್ರಿಯಾಣಿ ಸಭೂತಾನಿ ಪರಾ ಚ ಪ್ರಕೃತಿರ್ಮನಃ ॥ 18 ॥
ಆತ್ಮಾ ಚ ಪರಮಃ ಶುದ್ಧಃ ಪ್ರೋಕ್ತೋಽಸೌ ಪರಮಃ ಪುಮಾನ್ ॥ 19 ॥
ಪರಬ್ರಹ್ಮ ವಸ್ತುವನ್ನು ಪ್ರತ್ಯಕ್ಷ, ಅನುಮಾನ, ಆಗಮಗಳಿಂದ `ಇದಮಿತ್ಥಂ' ಎಂದು ನಿರ್ಣಯಿಸಿ ಹೇಳಲಾಗದು. ಆದಿ, ಮಧ್ಯ, ಅಂತಗಳು ಇಲ್ಲದೇ ಇರುವ ಪದಾರ್ಥವು. ಇಂದ್ರಿಯಗಳು, ಪಂಚಭೂತಗಳು, ಪರ ಎನಿಸಿದ ಪ್ರಕೃತಿ, ಮನಸ್ಸು, ಆತ್ಮ ಅರ್ಥಾತ್ ಜೀವ ಇವರೆಲ್ಲರಿಗಿಂತಲೂ, ಜಡಾಜಡಪ್ರಪಂಚಕ್ಕಿಂತಲೂ ಭಗವಂತನು ಉತ್ತಮನಾಗಿದ್ದಾನೆ, ಶುದ್ಧನೆನಿಸಿದ್ದಾನೆ.
ಉತ್ಪತ್ತಿಲಕ್ಷಣಂ ಚೇದಂ ವಿಪರೀತಮಥೋಭಯೋಃ |
ಯೋ ವೇತ್ತಿ ಪ್ರಕೃತಿಂ ನಿತ್ಯಂ ತಥಾ ಚೈವಾತ್ಮನಸ್ತು ತಾಮ್ |
ಪ್ರದಹತ್ಯೇಷ ಕರ್ಮಾಖ್ಯಂ ದಾವೋದ್ಭೂತ ಇವಾನಲಃ ॥ 20 ॥
ಜಡ-ಜೀವರ ಅಥವಾ ಜಗತ್ತು-ಬ್ರಹ್ಮನ ಉತ್ಪತ್ತಿ ಲಕ್ಷಣಗಳನ್ನು ಚೆನ್ನಾಗಿ ಅರಿತವರು, ಅನುತ್ಪತ್ತಿ ಲಕ್ಷಣಗಳನ್ನು ಯಾರು ಅರಿತಿರುತ್ತಾರೋ, ಜೀವಾತ್ಮ-ಪರಮಾತ್ಮ ಪ್ರಕೃತಿಗಳ ನಿತ್ಯತ್ವವನ್ನು ಯಾರು ಅರಿತಿರುತ್ತಾರೋ ಅವರು ಕರ್ಮಬಂಧನಗಳನ್ನು ದಹಿಸುತ್ತಾರೆ. ಅರಣ್ಯದಲ್ಲಿ ಉತ್ಪನ್ನವಾದ ಕಾಡ್ಗಿಚ್ಚು ಅರಣ್ಯವನ್ನೇ ದಹಿಸುವಂತೆ ಈ ಜ್ಞಾನವು ಸಂಸಾರದ ಕರ್ಮಬಂಧನವನ್ನೇ ದಹಿಸುತ್ತದೆ.
ಚಿನ್ಮಾತ್ರಪರಮಃ ಶುದ್ಧಃ ಸರ್ವಾಕೃತಿಷು ವರ್ತತೇ ॥ 21 ॥
ಜ್ಞಾನಾನಂದಾತ್ಮಕನಾದ, ಸರ್ವೋತ್ತಮನಾದ, ಶುದ್ಧನಾದ ಭಗವಂತನು ಪ್ರತಿಯೊಂದು ಪದಾರ್ಥಗಳ ಒಳಗಡೆಯೂ ಅಂತರ್ಯಾಮಿಯಾಗಿ ಇದ್ದಾನೆ.
ಆಕಾಶಕಲ್ಪಂ ವಿಮಲಂ ನಾನಾಶಕ್ತಿಸಮನ್ವಿತಮ್ |
ತಾಪನಂ ಸರ್ವಭೂತಾನಾಂ ಜ್ಯೋತಿಷಾಂ ಮಧ್ಯಮಸ್ಥಿತಿಮ್ |
ದುಃಖಮಾಸ್ತೇ ಸ ನಿರ್ದುಃಖಃ ತದ್ವಿದ್ವಾನ್ನ ಚ ಲಿಪ್ಯತಿ ॥ 22 ॥
ಆಕಾಶದಂತೆ ಅಸಂಗನಾಗಿ, ನಿರ್ಮಲನಾಗಿ, ನಾನಾಶಕ್ತಿಗಳಿಂದ ಕೂಡಿದವನಾಗಿ, ಸಮಸ್ತ ಜೀವರಿಗೂ ತಾಪದಾಯಕನೂ, ಜ್ಯೋತಿರ್ಮಂಡಲದ ಮಧ್ಯದಲ್ಲಿ ಇರುವವನಾದ ಇಂತಹ ಭಗವಂತನು ದುಃಖಭರಿತವಾದ ಜೀವರ ದೇಹದಲ್ಲಿ ಸಾಕ್ಷಿಯಾಗಿದ್ದಾನೆ ಎಂದು ತಿಳಿಯುವವನು ಕರ್ಮಗಳಿಂದ ಲಿಪ್ತನಾಗುವುದಿಲ್ಲ.
ಅಸಾವಶ್ನಾತಿ ಯದ್ವತ್ತದ್ ಭ್ರಮರೋಽಶ್ನಾತಿ ಯನ್ಮಧು |
ಏವಮೇಷ ಮಹಾನಾತ್ಮಾ ನಾತ್ಮಾ ತಮವಬುಧ್ಯತೇ ॥ 23 ॥

ದುಂಬಿಯು ಹೂಗಳಲ್ಲಿ ತುಂಬಿದ ಸಾರಭೂತವಾದ ಮಕರಂದವನ್ನು ಮಾತ್ರ ಸ್ವೀಕರಿಸುತ್ತದೆ. ಅದರಂತೆ ಸಮಸ್ತ ಜೀವರ ಅಂತರ್ಯಾಮಿಯಾದ ಭಗವಂತನು ಶುಭರಸವನ್ನು ಮಾತ್ರ ಸ್ವೀಕರಿಸುತ್ತಾನೆ. ಇಂತಹ ಪರಮಾತ್ಮನು ಸರ್ವೋತ್ತಮನಾಗಿದ್ದಾನೆ. ಇವನನ್ನು ಜೀವಾತ್ಮನು ತನ್ನ ಹೃದಯಗುಹೆಯಲ್ಲಿದ್ದಾನೆ ಎಂದು ತಿಳಿಯುವುದಿಲ್ಲ.

ಏವಂಭೂತಸ್ತ್ವಮಿತ್ಯತ್ರ ಸ್ವಾಧಿತೋ ಬುದ್ಧ್ಯತೇ ಪರಮ್ |
ಬುಧಸ್ಯ ಬೋಧನಂ ತತ್ರ ಕ್ರಿಯತೇ ಸದ್ಭಿರಿತ್ಯುತ |
ನಬುಧಸ್ಯೇತಿ ವೈ ಕಶ್ಚಿನ್ನ ತಥಾವಚ್ಛೃಣುಷ್ವ ಮೇ ॥ 24 ॥

ಈ ರೀತಿಯಾದ ನೀನು ಜೀವ-ಪರಮಾತ್ಮರ ನಡುವೆ ಗುರುಮುಖದಿಂದ ಅಧ್ಯಯನ ಮಾಡಿದಾಗ ಸರ್ವೋತ್ತಮನಾದ ಭಗವಂತನು ತಿಳಿಯುತ್ತಾನೆ. ಮಿಥ್ಯಾಜ್ಞಾನಿಯಾದವನು, ಭಗವಂತನ ಸ್ವರೂಪವು ಹೇಗಿದೆಯೋ ಅದರಂತೆ ನಿನಗೆ ತಿಳಿಸುತ್ತೇನೆ. ಆ ಭಗವಂತನನ್ನು ತಿಳಿದುಕೊ ಎಂದು ಯಾರಿಗೂ ಬೋಧಿಸುವುದಿಲ್ಲ.

ಶೋಕಮಸ್ಯ ನ ಗತ್ವಾ ತೇ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ |
ಲೋಕಂ ನಿಘ್ನಂತಿ ಸಂಭಿನ್ನಾ ಜ್ಞಾತಿನೋಽತ್ರ ವದಂತ್ಯುತ ॥ 25 ॥

ಶಾಸ್ತ್ರಗಳ ಈ ಮರ್ಮವನ್ನು ಅರಿಯದೆ ಶಾಸ್ತ್ರಕಳ್ಳರೆನಿಸಿದ ಚಾರ್ವಾಕಾದಿಗಳು ತಪ್ಪಾದ ತಿಳಿವಳಿಕೆಯಿಂದ ಲೋಕವನ್ನೇ ಕೊಲ್ಲುತ್ತಾರೆ.

ಏವಂ ತಸ್ಯ ವಿಭೋ ಕೃತ್ಯಂ ಧಾತುರಸ್ಯ ಮಹಾತ್ಮನಃ |
ಕ್ಷಮಂತಿ ತೇ ಮಹಾತ್ಮಾನಂ ಸರ್ವದ್ವಂದ್ವವಿವರ್ಜಿತಾಃ ॥ 26 ॥

ಎಲೈ ಜನಕರಾಜನೇ, ದುರ್ಜನರು ಇರುವಂತೆ ತತ್ತ್ವವನ್ನು ಬೋಧಿಸದಿದ್ದರೂ ವಿರುದ್ಧವಾದ ತತ್ತ್ವಗಳನ್ನು ಹೇಳಿದರೂ ಕೂಡ ದುರ್ಜನರ ಈ ಕ್ರಿಯೆಗಳನ್ನು ದ್ವಂದ್ವಗಳನ್ನು ಬಿಟ್ಟಿರುವ ನಾರಾಯಣನ ಭಕ್ತರು ಕ್ಷಮಿಸುತ್ತಾರೆ.

ಅತೋಽನ್ಯಥಾ ಮಹಾತ್ಮಾನಮನ್ಯಥಾ ಪ್ರತಿಪದ್ಯತೇ |
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥ 27 ॥

ಈ ಕಾರಣದಿಂದ ಜಗತ್ತಿಗಿಂತ ವಿಲಕ್ಷಣನಾಗಿ ಸರ್ವೋತ್ತಮನಾಗಿ ಇರುವ ನಾರಾಯಣನನ್ನು ತಪ್ಪಾಗಿ ಬೋಧಿಸುವ ಇಂತಹ ದುರಾತ್ಮರಿಂದ ಭಗವಂತನ ಗುಣಗಳನ್ನೇ ಕಳ್ಳತನ ಮಾಡುವ ಕಳ್ಳರಿಂದ ಯಾವ ಪಾಪಕಾರ್ಯವು ಮಾಡಲ್ಪಟ್ಟಿಲ್ಲ? ಎಲ್ಲ ವಿಧವಾದ ಅಪರಾಧಗಳೂ ಅವರಿಂದ  ಆಚರಿಸಲ್ಪಟ್ಟಂತಾಯಿತು.

ತಸ್ಯ ಸಂಯೋಗಯೋಗೇನ ಶುಚಿರಪ್ಯಶುಚಿರ್ಭವೇತ್ |
ಅಶುಚಿಶ್ಚ ಶುಚಿಶ್ಚಾಪಿ ಜ್ಞಾನಜ್ಞೇಯಾದಯೋ ಯಥಾ ॥ 28 ॥

ಅಶುದ್ಧನಿಗೆ ಜ್ಞಾನ-ಜ್ಞೇಯಾದಿಗಳ ಲಾಭವಾದಲ್ಲಿ ಜ್ಞಾನ-ಜ್ಞೇಯಗಳೂ ಅಶುಚಿಯಾಗುತ್ತವೆ. ಶುದ್ಧನಿಗೆ ಜ್ಞಾನ-ಜ್ಞೇಯಾದಿಗಳು ಲಾಭವಾದರೆ ಜ್ಞಾನ- ಜ್ಞೇಯಗಳೂ ಶುಚಿಯಾಗುತ್ತವೆ. ಇದರಂತೆ ಅಶುದ್ಧನು ಆಚರಿಸಿದ ಕರ್ಮ ಅಶುದ್ಧವೇ ಆಗುತ್ತದೆ. ಶುದ್ಧನು ಆಚರಿಸಿದ ಕರ್ಮ ಶುದ್ಧವೇ ಆಗುತ್ತದೆ. ಇದನ್ನೇ ಮುಂದೆ ಸ್ಪಷ್ಟಪಡಿಸುತ್ತಾರೆ.

ದೃಶ್ಯಂ ನ ಚೈವ ದೃಷ್ಟಂ ಸ್ಯಾದ್ ದೃಷ್ಟಂ ದೃಶ್ಯಂ ತು ನೈವ ಚ ॥ 29 ॥

ಅಶುಚಿಯಾದ ಪುರುಷನಿಗೆ ದರ್ಶನಯೋಗ್ಯವಾದ ಶುದ್ಧಬ್ರಹ್ಮವಸ್ತುವು ಎಂದಿಗೂ ಗೋಚರವಾಗುವುದಿಲ್ಲ ಹೊರತು ಅಶುದ್ಧಿ ಎನಿಸಿದ ದೇಹ, ಗೇಹ, ಕಳತ್ರಾದಿಗಳೇ ಕಾಣಿಸುತ್ತವೆ. ಶುದ್ಧನಾದ ಪುರುಷನಿಗೆ ಅಶುದ್ಧವಾದ ದೇಹ, ಗೇಹ, ಕಳತ್ರಾದಿಗಳು ಎಂದಿಗೂ ದರ್ಶನಯೋಗ್ಯವೆನಿಸುವುದಿಲ್ಲ. ಶುದ್ಧಬ್ರಹ್ಮನೇ ದರ್ಶನ ಯೋಗ್ಯನೆನಿಸುತ್ತಾನೆ.

ಅತೀತತ್ರಿತಯಃ ಸಿದ್ಧೋ ಜ್ಞಾನರೂಪೇಣ ಸರ್ವದಾ |
ಏವಂ ನ ಪ್ರತಿಪದ್ಯಂತೇ ರಾಗಮೋಹಮದಾನ್ವಿತಾಃ ॥ 30 ॥

ಮೂರುಗುಣಗಳಿಂದ ಅತೀತನಾದ ಬ್ರಹ್ಮಜ್ಞಾನಿಯೂ ಯಾವಾಗಲೂ ಬ್ರಹ್ಮಜ್ಞಾನದಿಂದಲೇ ಪ್ರವೃತ್ತಿಯನ್ನು ಮಾಡುತ್ತಿರುತ್ತಾನೆ. ಆದರೆ ರಾಗ-ಮೋಹ- ಮದಗಳಿಂದ ಕೂಡಿದ ವ್ಯಕ್ತಿಯು ಬ್ರಹ್ಮಜ್ಞಾನವನ್ನು ಎಂದಿಗೂ ಹೊಂದುವುದಿಲ್ಲ.

ವೇದಬಾಹ್ಯಾ ದುರಾತ್ಮಾನಃ ಸಂಸಾರೇ ದುಃಖಭಾಗಿನಃ |
ಆಗಮಾನುಗತಜ್ಞಾನಾ ಬುದ್ಧಿಯುಕ್ತಾಃ ಭವಂತಿ ತೇ ॥ 31 ॥

ವೇದಬಾಹ್ಯರಾದ ದುರಾತ್ಮರು ನಿತ್ಯವೂ ಸಂಸಾರದಲ್ಲಿ ದುಃಖಭಾಗಿಗಳಾಗಿರುತ್ತಾರೆ. ಆದರೆ ಜ್ಞಾನಿಗಳು ಆಗಮಾನುಗತವಾದ ಜ್ಞಾನವುಳ್ಳವರಾಗಿ ಭಗವಂತನಲ್ಲೇ ಬುದ್ಧಿಯನ್ನು ಹೊಂದಿದವರಾಗಿ ಇರುತ್ತಾರೆ.

ಬುದ್ಧ್ವಾ ಭವತಿ ಬುದ್ಧ್ಯಾತ್ತಂ ಯದ್ಬುದ್ಧಂ ಚಾತ್ಮರೂಪವತ್ |
ತಮಸ್ಯಂಧೇ ನಸಂದೇಹಾತ್ ಪರಂ ಯಾಂತಿ ನ ಸಂಶಯಃ ॥ 32 ॥

ಪರಮಾತ್ಮನ ರೂಪದಂತಿರುವ ಶುದ್ಧಜ್ಞಾನಾತ್ಮಕವಾದ ಯಾವ ರೂಪವಿದೆಯೋ ಅದೇ ರೂಪದಿಂದ ಆ ಪರಮಾತ್ಮನನ್ನು ಜೀವರ ಅಂತರ್ಯಾಮಿಯಾಗಿದ್ದಾನೆಂದು ವಿವೇಕದ ಬುದ್ಧಿಯಿಂದ ತಿಳಿಯಬೇಕು. ಇದರಲ್ಲಿ ನಿಶ್ಚಯಜ್ಞಾನವು ಇರಬೇಕು. ಅವರು ಉತ್ತಮ ಪದವಿಯನ್ನು ಹೊಂದುತ್ತಾರೆ. ಯಾರು ವಿಪರೀತವಾಗಿ ಪರಮಾತ್ಮನ ಸ್ವರೂಪವನ್ನು ಜೀವರಲ್ಲೇ ಆರೋಪಿಸಿ ತಿಳಿಯುತ್ತಾರೋ ಅವರು ನಿಸ್ಸಂದೇಹವಾಗಿ ಅಂಧಂತಮಸ್ಸಿನಲ್ಲಿ ಬೀಳುತ್ತಾರೆ.

ನಿತ್ಯನೈಮಿತ್ತಿಕಾನ್ ಕೃತ್ವಾ ಪಾಪಹಾನಿಮವಾಪ್ಯ ಚ |
ಶುದ್ಧಸತ್ವಾ ಮಹಾತ್ಮಾನೋ ಜ್ಞಾನನಿರ್ಧೂತಕಲ್ಮಷಾಃ ॥ 33 ॥
ಅಸಕ್ತಾಃ ಪರಿವರ್ತಂತೇ ಸಂಸರಂತ್ಯಥ ವಾಯುವತ್ |
ನ ಯುಜ್ಯಂತೇಽಥವಾ ಕ್ಲೇಶೈರಹಂಭಾವೋದ್ಭವೈಃ ಸಹ ॥ 34 ॥

ಶುದ್ಧಸತ್ವರಾದ ಮಹಾತ್ಮರು ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸುತ್ತಾ ಪಾಪಗಳನ್ನು ತೊಡೆದುಕೊಳ್ಳುತ್ತಾರೆ.

ಭಗವದ್ಜ್ಞಾನದಿಂದ ಮನಸ್ಸಿನ ಕಷ್ಮಲಗಳನ್ನು ಪರಿಹರಿಸಿಕೊಳ್ಳುತ್ತಾರೆ. ವಾಯುವು ಅಸಂಗವಾಗಿ ಹೇಗೆ ಸಂಚರಿಸುತ್ತದೋ ಅದರಂತೆ ವಿಷಯಗಳ ಮಧ್ಯದಲ್ಲಿದ್ದರೂ ಅಸಂಗರಾಗಿ ಸಂಚರಿಸುತ್ತಾರೆ. ಅಹಂಕಾರ- ಮಮಕಾರಗಳಿಂದ ಉಂಟಾಗುವ ದುಃಖಗಳಿಗೆ ಈ ಸಾತ್ವಿಕಪುರುಷರು ಎಂದಿಗೂ ಈಡಾಗುವುದಿಲ್ಲ.
ಇತಸ್ತತಃ ಸಮಾಹೃತ್ಯ ಜ್ಞಾನಂ ನಿರ್ವರ್ಣಯಂತ್ಯುತ |
ಜ್ಞಾನಾನ್ವಿತಸ್ತಮೋ ಹನ್ಯಾದರ್ಕವತ್ಸ ಮಹಾಮತಿಃ ॥ 35 ॥
ಜ್ಞಾನಿಗಳು ಈಚೆ-ಆಚೆಯಲ್ಲಿ ಸಂಚರಿಸಿದರೂ ಆ ಭಗವದ್ಜ್ಞಾನವನ್ನೇ ಮನಸ್ಸಿನಲ್ಲಿ ತಂದುಕೊಂಡು ಸಾತ್ವಿಕರಲ್ಲಿ ಆ ಬ್ರಹ್ಮಜ್ಞಾನವನ್ನೇ ವರ್ಣಿಸಿ ಹೇಳುತ್ತಾರೆ. ಭಗವದ್ ಜ್ಞಾನದಿಂದ ಕೂಡಿದ ಅವರು ಮಹಾಮತಿಗಳಾಗಿ ಸೂರ್ಯನು ಕತ್ತಲೆಯನ್ನು ಕೊಲ್ಲುವಂತೆ ಅಜ್ಞಾನವನ್ನು ಪರಿಹರಿಸಿಕೊಳ್ಳುತ್ತಾರೆ.
ಏವಮಾತ್ಮಾನಮನ್ವೀಕ್ಷ್ಯ ನಾನಾದುಃಖಸಮನ್ವಿತಮ್ |
ದೇಹಂ ಪಂಕಮಲೇ ಮಗ್ನಂ ನಿರ್ಮಲಂ ಪರಮಾರ್ಥತಃ ॥ 36 ॥
ಈ ರೀತಿಯಾಗಿ ಜೀವಾತ್ಮನು ಸ್ವಯಂ ಜ್ಞಾನಾನಂದಗಳಿಂದ ಕೂಡಿದ್ದರೂ ಸಾಂಸಾರಿಕವಾದ ನಾನಾ ದುಃಖಗಳಿಂದ ಕ್ಲೇಶವನ್ನು ಹೊಂದುತ್ತಿದ್ದಾನೆ. ದೇಹವೆಂಬ ಕೆಸರಿನಲ್ಲಿ ಸಿಲುಕಿದ್ದಾನೆ. ವಾಸ್ತವಿಕವಾಗಿ ಜೀವಾತ್ಮನು ನಿರ್ಮಲನಾಗಿದ್ದಾನೆ.
ತಮೇವಂ ಸರ್ವದುಃಖಾತ್ತು ಮೋಚಯೇತ್ ಪರಮಾತ್ಮವಾನ್ |
ಬ್ರಹ್ಮಚರ್ಯವ್ರತೋಪೇತಃ ಸರ್ವಸಂಗಬಹಿಷ್ಕೃತಃ |
ಲಘ್ವಾಹಾರೋ ವಿಶುದ್ಧಾತ್ಮಾ ಪರಂ ನಿರ್ವಾಣಮೃಚ್ಛತಿ ॥ 37 ॥
ಈ ರೀತಿ ಶುದ್ಧನಾದ ಚೇತನನು ಪರಮಾತ್ಮನ ಜ್ಞಾನವನ್ನು ಹೊಂದಿ, ಪರಮಾತ್ಮನ ಭಕ್ತನಾಗಿದ್ದು ಸಮಸ್ತ ದುಃಖಗಳನ್ನು ಪರಿಹರಿಸಿಕೊಳ್ಳಬೇಕು. ಬ್ರಹ್ಮಚರ್ಯ ವ್ರತನಿಷ್ಠನಾಗಿ ಸಮಸ್ತ ಸಂಗಗಳಿಂದಲೂ ದೂರವಿದ್ದು, ಅಲ್ಪಾಹಾರಿಯೂ, ಶುದ್ಧವಾದ ಅಂತಃಕರಣವುಳ್ಳವನೂ ಆಗಿ ಪರಬ್ರಹ್ಮನನ್ನು ಧ್ಯಾನಿಸುತ್ತಿದ್ದರೆ ಅವನು ಉತ್ತಮವಾದ ಶಾಂತಿಯನ್ನು ಹೊಂದುತ್ತಾನೆ.
ಇಂದ್ರಿಯಾಣಿ ಮನೋ ವಾಯುಃ ಶೋಣಿತಂ ಮಾಂಸಮಸ್ಥಿ ಚ |
ಆನುಪೂರ್ವಾದ್ ವಿನಶ್ಯಂತಿ ಸ್ವಂ ಧಾತುಮುಪಯಾಂತಿ ಚ ॥ 38 ॥
ಜೀವನಿಗೆ ಅಂಟಿದ ಬಾಹ್ಯೇಂದ್ರಿಯಗಳು, ವಾಯು, ರಕ್ತ, ಮಾಂಸ, ಅಸ್ಥಿ ಇವೆಲ್ಲವೂ ಕ್ರಮವಾಗಿ ಬ್ರಹ್ಮಜ್ಞಾನವನ್ನು ಹೊಂದಿದ ಬಳಿಕ ನಾಶ ಹೊಂದುತ್ತವೆ. ಎಲ್ಲವೂ ಆಕಾಶತತ್ತ್ವದಲ್ಲಿ ಸೇರಿಕೊಳ್ಳುತ್ತವೆ.
ಕಾರಣಾನುಗತಂ ಕಾರ್ಯಂ ಯದಿ ತಚ್ಚ ವಿನಶ್ಯತಿ |
ಅಲಿಂಗಸ್ಯ ಕಥಂ ಲಿಂಗಂ ಯುಜ್ಯತೇ ತನ್ಮೃಷಾ ದೃಢಮ್ ॥ 39 ॥
ಕಾರಣವನ್ನು ಅನುಸರಿಸಿ ಕಾರ್ಯವು ನಡೆಯುತ್ತದೆ. ಕಾರಣವೇ ನಾಶ ಹೊಂದಿದರೆ ಕಾರ್ಯವು ನಡೆಯದು. ಆದ್ದರಿಂದ ಜೀವಾತ್ಮನಿಗೆ ಲಿಂಗದೇಹದ ಕಾರಣದಿಂದ ಸ್ಥೂಲದೇಹದಲ್ಲಿ ಅವಸ್ಥಾನವು. ಸ್ಥೂಲದೇಹದ ಕಾರ್ಯವು ಲಿಂಗದೇಹವೇ ನಾಶವಾದ ಬಳಿಕ ನಿಂತುಹೋಗುತ್ತದೆ. ಜೀವನಿಗೆ ಅನಾದಿ ಕಾಲದಿಂದಲೂ ಲಿಂಗದೇಹದ ಸಂಬಂಧವು, ಇದ್ದರೂ ಅದು ಜೀವನ ಸ್ವರೂಪಕ್ಕೆ ಸಂಬಂಧಿಸಿದುದಲ್ಲ.
ನ ತ್ವೇವ ಹೇತವಃ ಸಂತಿ ಯೇ ಕೇಚಿನ್ಮೂರ್ತಿಸಂಸ್ಥಿತಾಃ |
ಅಮರ್ತ್ಯಸ್ಯ ಚ ಮರ್ತ್ಯೇನ ಸಾಮಾನ್ಯಂ ನೋಪಪದ್ಯತೇ ॥ 40 ॥
ಇದರಂತೆ ಈ ಸ್ಥೂಲಶರೀರದಲ್ಲಿರುವಂತಹ ಯಾವ ದುಃಖಕಾರಣಗಳಿದ್ದಾವೋ ಅವುಗಳು ಬ್ರಹ್ಮಜ್ಞಾನ ಪಡೆದ ಬಳಿಕ ದೂರವಾಗುತ್ತವೆ. ಮರಣಶೀಲನಲ್ಲದ ಜೀವನಿಗೆ ಮರಣಶೀಲವಾದ ದೇಹದ ಸಂಬಂಧವು ಆ ದೇಹದ ಕಾರಣದಿಂದುಂಟಾಗುವ ದುಃಖಗಳು ಕೂಡುವುದಿಲ್ಲ.
ಲೋಕದೃಷ್ಟೋ ಯಥಾ ಜಾತೇಃ ಸ್ವೇದಜಃ ಪುರುಷಃ ಸ್ತ್ರಿಯಾಮ್ |
ಕೃತಾನುಸ್ಮರಣಾತ್ ಸಿದ್ಧೋ ವೇದಗಮ್ಯಃ ಪರಃ ಪುಮಾನ್ ॥ 41 ॥
ಸ್ತ್ರೀ-ಪುರುಷರಲ್ಲಿರುವ ಶುಕ್ರ (ವೀರ್ಯ)ಗಳಿಂದಲೇ ಮನುಷ್ಯನ ಶಾರೀರಿಕ ಜಾತಿಯು ನಿರ್ಣಯವಾಗುತ್ತದೆ ಎಂಬುದು ಲೋಕದಲ್ಲಿ ಕಂಡಿದೆ. ಇದರಂತೆ ಭಗವಂತನ ಸೃಷ್ಟ್ಯಾದಿ ಕರ್ಮಾನು ಸ್ಮರಣೆಯಿಂದ ಸರ್ವೋತ್ತಮನಾದ ಭಗವಂತನು ವೇದಗಮ್ಯನು ಎಂದು ಸಿದ್ಧವಾಗುತ್ತದೆ.
ಪ್ರತ್ಯಕ್ಷಾನುಗತೋ ವೇದೋ ನಾಮಹೇತುಭಿರಿಷ್ಯತೇ |
ಯಥಾ ಶಾಖಾ ಹಿ ವೈ ಶಾಖಾ ತರೋಃ ಸಂಬದ್ಧ್ಯತೇ ತದಾ ॥ 42 ॥
ಪ್ರತ್ಯಕ್ಷಕ್ಕೆ ಅನುಗುಣವಾಗಿ ಇರುವ ವೇದವು ನಾಮಗಳಿಂದಲೂ, ಯುಕ್ತಿಗಳಿಂದಲೂ ಭಗವಂತನನ್ನು ಪ್ರತಿಪಾದಿಸುತ್ತಿದೆ. ಭಗವಂತನ ಪ್ರತಿಪಾದನೆಗೆ ಮೂಲವಾದುದು ವೇದವೇ ಆಗಿದೆ. ಒಂದು ಶಾಖೆಯಂತೆ ಮರದ ಇನ್ನೊಂದು ಶಾಖೆಯು ಕಾಣಿಸುತ್ತಿದ್ದರೆ ಆ ಎಲ್ಲಾ ಶಾಖೆಗಳಿಗೂ ಮೂಲಕಾರಣವಾದದ್ದು ವೃಕ್ಷವು ಹೇಗೋ ಹಾಗೆ ಜಗತ್ತಿನಲ್ಲಿ ಪ್ರತ್ಯಕ್ಷವಾಗಿ ಕಾಣುವ ಎಲ್ಲಾ ಸ್ಥಾವರ-ಜಂಗಮಗಳಿಗೂ ಭಗವಂತನೇ ಕಾರಣನಾಗಿದ್ದಾನೆ. ಇದಕ್ಕೆ ಮೂಲ ವೇದವಾಗಿದೆ.
ಶ್ರುತ್ವಾ ತಥಾಪರೋಽಪ್ಯಾತ್ಮಾ ದೃಶ್ಯತೇ ಸೋಽಪ್ಯಲಿಂಗವಾನ್ |
ಅಲಿಂಗಸಾಧ್ಯಂ ತದ್ ಬ್ರಹ್ಮ ಬಹವಃ ಸಂತಿ ಹೇತವಃ ॥ 43 ॥
ಜೀವಾತ್ಮನಿಗಿಂತ ಭಿನ್ನನಾದ ಪರಮಾತ್ಮನು ವೇದಗಳಿಂದ ತಿಳಿಯಲ್ಪಡುತ್ತಾನೆ. ಆ ಪರಮಾತ್ಮನಾದರೂ ಅಲಿಂಗಸಾಧ್ಯನಾಗಿದ್ದಾನೆ. ಎಂದರೆ ಕಾರಣಗಳಿಂದ ಅವನನ್ನು ತಿಳಿಯಲಾಗದು. ವೇದಗಮ್ಯನೇ ಆಗಿದ್ದಾನೆ. ಒಮ್ಮೆಲೆ ಭಗವಂತನಲ್ಲಿ ಅಣುತ್ವ, ಮಹತ್ವ ಎಂಬ ಗುಣಗಳಿರುವುದರಿಂದ ಜಗತ್ತಿನ ಯುಕ್ತಿಗಳಿಂದ ಪರಬ್ರಹ್ಮನೆಂಬ ವಸ್ತುವನ್ನು ತಿಳಿಯಲಾಗದು. ಜಗತ್ತಿನಲ್ಲಿ ಅಣುತ್ವವಿದ್ದಲ್ಲಿ ಮಹತ್ವವಿರುವುದಿಲ್ಲ. ಉಷ್ಣತ್ವ ಇದ್ದಲ್ಲಿ ಅನುಷ್ಣತ್ವವು ವಿರುದ್ಧವೆನಿಸಿದೆ. ಭಗವಂತನಲ್ಲಿ ಏಕಕಾಲದಲ್ಲಿಯೇ

ವಿಶೇಷಗಳನ್ನವಲಂಬಿಸಿ ವಿರುದ್ಧ ಧರ್ಮಗಳು ಇರುವುದರಿಂದ ಲೋಕಲಿಂಗಗಳಿಂದ ಪರಮಾತ್ಮನನ್ನು ತಿಳಿಯಲು ಬರುವುದಿಲ್ಲ. ಆದ್ದರಿಂದ ವೇದಗಳಿಂದಲೇ ಪರಮಾತ್ಮನನ್ನು ತಿಳಿಯಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮಪರ್ವಣಿ ಏಕೋನಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂದನೆಯ ಅಧ್ಯಾಯ
ಪಂಚಶಿಖನು ಜನಕಮಹಾರಾಜನಿಗೆ ಮೋಕ್ಷತತ್ತ್ವವನ್ನು ಉಪದೇಶಿಸಿದ ಬಗೆಯನ್ನು ಯುಧಿಷ್ಠಿರನಿಗೆ ಭೀಷ್ಮರು ತಿಳಿಸಿದುದು.
ಭೀಷ್ಮಃ
ಜನಕೋ ನರದೇವಸ್ತು ಜ್ಞಾಪಿತಃ ಪರಮರ್ಷಿಣಾ |
ಪುನರೇವಾನುಪಪ್ರಚ್ಛ ಸಾಂಪರಾಯೇ ಭವಾಭವೌ ॥1॥
ಭೀಷ್ಮ ಯುಧಿಷ್ಠಿರನೇ, ಮಹರ್ಷಿಯಾದ ಪಂಚಶಿಖನು ಜನದೇವನೆನಿಸಿದ ಜನಕರಾಜನಿಗೆ ಉಪದೇಶಿಸಿದ ತರುವಾಯ, ಜನಕರಾಜನು ಮಹರ್ಷಿಯನ್ನು ಕುರಿತು, ಮೋಕ್ಷಜ್ಞಾನದ ವಿಷಯದಲ್ಲಿ ಯೋಗ್ಯವ್ಯಾಪಾರಗಳು ಯಾವುದು? ಪ್ರತಿಬಂಧಕವಾದ ವ್ಯಾಪಾರಗಳು ಯಾವುವು? ಎಂದು ಪ್ರಶ್ನಿಸಿದನು.
ಭಗವನ್ ಯದಿದಂ ಪ್ರೇತ್ಯ ಸಂಜ್ಞಾ ಭವತಿ ಕಸ್ಯಚಿತ್ |
ಏವಂ ಸತಿ ಕಿಮಜ್ಞಾನಂ ಜ್ಞಾನಂ ವಾ ಕಿಂ ಕರಿಷ್ಯತಿ ॥2॥
ಪೂಜ್ಯರೇ, ಮರಣಾನಂತರದಲ್ಲಿ ಯಾರಿಗೂ ಯಾವ ವಿಧವಾದ ಜ್ಞಾನವು ಇಲ್ಲದಿರುವಾಗ ಆ ಸಮಯದಲ್ಲಿ ಅಜ್ಞಾನವಾಗಲೀ, ಜ್ಞಾನವಾಗಲೀ ಏನು ಮಾಡೀತು?
ಸರ್ವಮುಚ್ಛೇದನಿಷ್ಠಂ ಸ್ಯಾತ್ ಪಶ್ಯ ಚೈತದ್ ದ್ವಿಜೋತ್ತಮ |
ಅಪ್ರಮತ್ತಃ ಪ್ರಮತ್ತೋ ವಾ ಕಿಂ ವಿಶೇಷಂ ಕರಿಷ್ಯತಿ ॥3॥
ವಿಪ್ರಶ್ರೇಷ್ಠನೇ, ಮನುಷ್ಯನು ಮರಣದ ತನಕ ಏನೆಲ್ಲ ಸಾಧನೆಯನ್ನು ಮಾಡಿದ್ದಾನೋ ಅವುಗಳು ಮರಣದ ಜೊತೆಗೆ ನಾಶವನ್ನು ಹೊಂದುತ್ತವೆ. ಮರಣದ ಸಮಯದಲ್ಲಿ ಜ್ಞಾನವೇ ಇಲ್ಲವೆಂದಾದ ಬಳಿಕ ಸುಖ-ದುಃಖ ಭೋಗಾದಿಗಳೆಲ್ಲವೂ ನಾಶವಾದಂತೆ ಆಯಿತು. ಆ ಸಮಯದಲ್ಲಿ ಅವನು ಪ್ರಮತ್ತನಾಗಿರಲಿ, ಅಪ್ರಮತ್ತನಾಗಿರಲಿ, ಯಾವ ಕಾರ್ಯವನ್ನು ಮಾಡಲು ಸಾಧ್ಯ?
ಅಸಂಸರ್ಗೋ ಹಿ ಭೂತೇಷು ಸಂಸರ್ಗೋ ವಾ ವಿನಾಶಿಷು |
ಕಸ್ಮೈ ಕ್ರಿಯೇತ ಕಲ್ಪೇನ ನಿಶ್ಚಯಃ ಕೋಽತ್ರ ತತ್ತ್ವತಃ ॥4॥
ಪರಲೋಕವೆಂಬ ಫಲ ಇಲ್ಲದಿದ್ದರೂ ಪುತ್ರ-ಮಿತ್ರ-ಕಳತ್ರವೆಂಬ ಅವರ ಸಂಬಂಧ ರೂಪವಾದ ಫಲಕ್ಕಾಗಿ ಕರ್ಮದ ಪ್ರವೃತ್ತಿಯುಂಟಾಗಬಹುದಲ್ಲವೇ ಎಂದರೆ ಉತ್ತರಿಸುತ್ತಾರೆ. ಮರಣಾನಂತರದಲ್ಲಿ ವಿನಾಶ ಹೊಂದುವ ಪಂಚಭೂತಗಳಿಗೂ ಜೀವಾತ್ಮನಿಗೂ ಸಂಬಂಧವು ಏರ್ಪಡುವುದಿಲ್ಲ. ಇರುವ ಸಂಬಂಧವು ನಾಶವಾಗುತ್ತದೆ. ಪಂಚಭೂತಗಳ ಜೊತೆಗೆ ಆತ್ಮನೂ ನಾಶವಾಗುತ್ತಾನೆ ಎಂದರೆ ಅವನು ಯಾವ ದೃಷ್ಟಿಯಿಂದ ಕರ್ಮವನ್ನು ಮಾಡಬೇಕು? ಇದರಲ್ಲಿ ನಮ್ಮ ತತ್ತ್ವವನ್ನು ಹೇಗೆ ನಿಶ್ಚಯಿಸಿಕೊಳ್ಳಬೇಕು?
ತಮಸಾ ಹಿ ಪ್ರತಿಚ್ಛನ್ನಂ ವಿಭ್ರಾಂತಮಿವ ಚಾತುರಮ್ |
ಪುನಃ ಪ್ರಶಮಯನ್ವಾಕ್ಯೈಃ ಕವಿಃ ಪಂಚಶಿಖೋಽಬ್ರವೀತ್ ॥5॥
ವಿದ್ವಾಂಸನಾದ ಪಂಚಶಿಖನು, ಅಜ್ಞಾನಾಂಧಕಾರದಿಂದ ಮುಳುಗಿರುವ ಆತ್ಮ ವಿಷಯಕವಾಗಿ ಭ್ರಾಂತನಾಗಿರುವಂತೆ ಕಾಣುತ್ತಿರುವ, ಆದ್ದರಿಂದಲೇ ಅತ್ಯಂತ ಕಳವಳಗೊಂಡಿರುವ ಜನಕನನ್ನು ಕುರಿತು ಸಮಾಧಾನದ ಮಾತುಗಳನ್ನು ಹೇಳಿದನು.
ಉಚ್ಛೇದನಿಷ್ಠಾ ನೇಹಾಸ್ತಿ ಭಾವನಿಷ್ಠಾ ನ ವಿದ್ಯತೇ |
ಅಯಂ ಹ್ಯಪಿ ಸಮಾಹಾರಃ ಶರೀರೇಂದ್ರಿಯಚೇತಸಾಮ್ |
ವರ್ತತೇ ಪೃಥಗನ್ಯೋನ್ಯಮಪ್ಯಪಾಶ್ರಿತ್ಯ ಕರ್ಮಸು ॥6॥
ಜನಕ ಮಹಾರಾಜನೇ, ಮರಣಾನಂತರದಲ್ಲಿ ಜೀವನು ಅಲ್ಲಿಯ ತನಕ ಮಾಡಿದ ಸತ್ಕರ್ಮಗಳಾಗಲೀ, ದುಷ್ಕರ್ಮಗಳಾಗಲೀ ನಾಶವನ್ನು ಹೊಂದುವುದಿಲ್ಲ. ಅವನು ಇಲ್ಲಿಯ ತನಕ ಮಾಡಿದ ಸತ್ಕರ್ಮದ ಫಲವಾಗಿ ಮುಕ್ತಿಯಲ್ಲಿ ಸುಖದ ಭೋಗವನ್ನು ಅನುಭವಿಸುತ್ತಾನೆ, ದುಷ್ಕರ್ಮದ ಫಲವಾಗಿ ಅಂಧಂತಮಸ್ಸಿನಲ್ಲಿ ದುಃಖಭೋಗವನ್ನು ಅನುಭವಿಸುತ್ತಾನೆ.
`ನ ಪ್ರೇತ್ಯ ಸಂಜ್ಞಾ ಅಸ್ತಿ' ಎಂಬ ಶ್ರುತಿಯಲ್ಲಿ ಅನಿತ್ಯಜ್ಞಾನವನ್ನೇ ನಿಷೇಧ ಮಾಡಿದ್ದಾರೆ ಹೊರತು ನಿತ್ಯಜ್ಞಾನವನ್ನಲ್ಲ. ಶರೀರ, ಇಂದ್ರಿಯ, ಮನಸ್ಸು ಇವುಗಳು ಪ್ರತ್ಯೇಕವಾಗಿರುವಂತೆ ಕಂಡುಬಂದರೂ ಇವುಗಳು ಪರಸ್ಪರ ಆಶ್ರಯಿಸಿಕೊಂಡು ಕರ್ಮದಲ್ಲಿ ಪ್ರವೃತ್ತಿಯನ್ನು ಹೊಂದುತ್ತವೆ. ಇವುಗಳ ಫಲವನ್ನು ಜೀವನು ಮುಂದೆ ಅನುಭವಿಸುತ್ತಾನೆ.
ಧಾತವಃ ಪಂಚಶಾಖೋಽಯಂ ಖಂ ವಾಯುರ್ಜ್ಯೋತಿರಂಬು ಭೂಃ |
ತೇ ಸ್ವಭಾವೇನ ತಿಷ್ಠಂತಿ ವಿಯುಜ್ಯಂತೇ ಸ್ವಭಾವತಃ ॥7॥
ಪ್ರಾಣಿಗಳ ಶರೀರದಲ್ಲಿ ಆಕಾಶ, ವಾಯು, ತೇಜಸ್ಸು, ಜಲ, ಪೃಥಿವಿ ಎಂಬ ಪಂಚಭೂತಗಳಿವೆ. ಅವುಗಳು ಸ್ವಭಾವದಿಂದಲೇ ಸ್ವಾಭಾವಿಕವಾಗಿ ಸೇರುತ್ತವೆ, ಸ್ವಾಭಾವಿಕವಾಗಿ ವಿಯೋಗವನ್ನು ಹೊಂದುತ್ತವೆ.
ಆಕಾಶಂ ವಾಯುರೂಷ್ಮಾ ಚ ಸ್ನೇಹೋ ಯಚ್ಚಾಪಿ ಪಾರ್ಥಿವಮ್ |
ಏಷ ಪಂಚಸಮಾಹಾರಃ ಶರೀರಮಿತಿ ನೈಕಧಾ ॥8॥
ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ- ಈ ಪಂಚತತ್ತ್ವಗಳ ಸಮ್ಮೇಳನದಿಂದಲೇ ಅನೇಕ ವಿಧವಾಗಿ ಶರೀರಗಳು ನಿರ್ಮಾಣವನ್ನು

ಹೊಂದುತ್ತವೆ.
ಅಹಂ ವಾಚ್ಯಂ ದ್ವಿಜಾನಾಂ ಯದ್ ವಿಶಿಷ್ಟಂ ಬುದ್ಧಿರೂಪವತ್ |
ವಾಚಾಮಗೋಚರಂ ನಿತ್ಯಂ ಜ್ಞೇಯಮೇವಂ ಭವಿಷ್ಯತಿ ॥9॥
ಭಗವಂತನು ಅಹೇಯನಾದುದರಿಂದ `ಅಹಂ' ಎಂದು ಕರೆಸಿಕೊಳ್ಳುತ್ತಾನೆ. ಅಂತಹ `ಅಹಂ' ಎಂಬ ಶಬ್ದಕ್ಕೆ ಮುಖ್ಯವಾಚ್ಯನಾಗಿರುವುದರಿಂದ ಭಗವಂತನ ಜ್ಞಾನವನ್ನು ಪಡೆದವನು ಉತ್ತಮ ಬ್ರಾಹ್ಮಣ್ಯ ಸಂಪಾದಿಸಿದವನಾಗುತ್ತಾನೆ. ಆ ಭಗವಂತನು ಮಾತುಗಳಿಗೆ ನಿಲುಕದವನು, ನಿತ್ಯವೆನಿಸಿದ್ದಾನೆ. ಅವನೇ ಜ್ಞೇಯನಾಗಿದ್ದಾನೆ ಎಂದು ತಿಳಿ.
ಜ್ಞಾನಂ ಜ್ಞೇಯಂ ತಥಾ ಜ್ಞಾನಂ ತ್ರಿವಿಧಂ ಜ್ಞಾನಮುಚ್ಯತೇ |
ಜ್ಞಾನಮೂಷ್ಮಾ ಚ ವಾಯುಶ್ಚ ತ್ರಿವಿಧಃ ಕರ್ಮಸಂಗ್ರಹಃ ॥10॥
ಸಾಮಾನ್ಯ ಜ್ಞಾನವೆನಿಸಿದ ಪರೋಕ್ಷ ಜ್ಞಾನ, ಜ್ಞಾನ ವಿಷಯನಾದ ಬ್ರಹ್ಮ, ಈ ಬ್ರಹ್ಮ ವಿಷಯಕವಾದ ಜ್ಞಾನವನ್ನು ವಿಶಿಷ್ಟ ಜ್ಞಾನ, ಅಪರೋಕ್ಷ ಜ್ಞಾನ ಎಂದು ಕರೆಯುತ್ತಾರೆ. ಹೀಗೆ ಸಾಮಾನ್ಯ ಜ್ಞಾನ, ಅಪರೋಕ್ಷ ಜ್ಞಾನ, ಆ ಜ್ಞಾನನಾದ ಭಗವಂತ - ಈ ಮೂರನ್ನು ಜ್ಞಾನ ಎಂದೇ ಕರೆಯುತ್ತಾರೆ. ಜ್ಞಾನವು ಜಠರಾಗ್ನಿ, ಪ್ರಾಣಾದಿ ಪಂಚವಾಯುಗಳು, ಕರ್ಮಗಳು ಈ ಮೂರಕ್ಕೂ ಅಂಗವೆನಿಸಿರುತ್ತವೆ. ಇಲ್ಲಿ ಕರ್ಮಕಾಂಡ ಜ್ಞಾನ, ಅಗ್ನಿ, ಅಗ್ನಿವೃತ್ತಾಪಕನಾದ ವಾಯು - ಈ ಮೂರು ಜ್ಞಾನಕ್ಕೆ ಅಂಗವೆನಿಸಿದೆ. ಅರ್ಥಾತ್ ಕರ್ಮದ ದ್ವಾರಾ ಜ್ಞಾನವನ್ನು ಸಂಪಾದಿಸಬೇಕು.
ಇಂದ್ರಿಯಾಣೀಂದ್ರಿಯಾರ್ಥಾಶ್ಚ ಸ್ವಭಾವಶ್ಚೇತನಾ ಮನಃ |
ಪ್ರಾಣಾಪಾನೌ ವಿಕಾರಶ್ಚ ಧಾತವಶ್ಚಾತ್ರ ನಿಃಸೃತಾಃ ॥11॥
ಇವುಗಳಿಂದಲೇ ಇಂದ್ರಿಯಗಳು, ಇಂದ್ರಿಯಗಳ ವಿಷಯಗಳು, ಸತ್ವ-ರಜಸ್- ತಮೋಗುಣಗಳು, ಚೈತನ್ಯ, ಮನಸ್ಸು, ಪ್ರಾಣ, ಅಪಾನ, ವಿಕಾರಗಳು, ಧಾತುಗಳು ಪ್ರಕಟವಾಗುತ್ತವೆ.
ಶ್ರವಣಂ ಸ್ಪರ್ಶನಂ ಜಿಹ್ವಾ ದೃಷ್ಟಿರ್ನಾಸಾ ತಥೈವ ಚ |
ಇಂದ್ರಿಯಾಣೀತಿ ಪಂಚೈತೇ ಚಿತ್ತಪೂರ್ವಂಗಮಾ ಗುಣಾಃ ॥12॥
ಶ್ರವಣ, ಚರ್ಮ, ನಾಲಿಗೆ, ಕಣ್ಣು, ಮೂಗು - ಈ ಐದು ಪಂಚಜ್ಞಾನೇಂದ್ರಿಯಗಳಾಗಿವೆ. ಶಬ್ದಾದಿ ಗುಣಗಳು ಚಿತ್ತದ ಜೊತೆಗೆ ಬೆರೆತು ಇಂದ್ರಿಯಗಳಿಗೆ ವಿಷಯವಾಗುತ್ತವೆ.
ತತ್ರ ವಿಜ್ಞಾನಸಂಯುಕ್ತಾ ತ್ರಿವಿಧಾ ಚೇತನಾ ಧ್ರುವಾ |
ಸುಖದುಃಖೇತಿ ಯಾಮಾಹುರದುಃಖೇತ್ಯಸುಖೇತಿ ಚ ॥13॥
ವಿಜ್ಞಾನಯುಕ್ತವಾದ ಶಾಶ್ವತವಾದ ಮನಸ್ಸು ಸಾತ್ವಿಕ-ರಾಜಸ-ತಾಮಸ ಭೇದದಿಂದ ಮೂರುವಿಧವಾಗಿದೆ. ಸುಖ-ದುಃಖಗಳ ಮಿಶ್ರಣವು ಮಧ್ಯಮ ಜೀವರಲ್ಲಿಯೂ, ನಿತ್ಯಸುಖವು ಉತ್ತಮ ಜೀವರಲ್ಲಿಯೂ, ನಿತ್ಯದುಃಖವು ಅಧಮ ಜೀವರಲ್ಲಿಯೂ ಉಂಟಾಗುತ್ತದೆ ಎಂದು ಹೇಳುತ್ತಾರೆ.
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಮೂರ್ತ್ಯಥ |
ಏತೇ ಹ್ಯಾಮರಣಾತ್ ಪಂಚ ಷಡ್ಗುಣಾ ಜ್ಞಾನಸಿದ್ಧಯೇ ॥14॥
ಶಬ್ದ, ಸ್ಪರ್ಶ, ರೂಪ, ರಸ, ಗಂಧ ಮತ್ತು ಮನಸ್ಸು ಎಂಬ ಆರು ಜ್ಞಾನೇಂದ್ರಿಯಗಳಿಗೆ ಸಾಧಕಗಳಾದ ಗುಣಗಳಾಗಿವೆ. ಜೀವನಿಗೆ ಜ್ಞಾನದ ಸಿದ್ಧಿಗಾಗಿ ಈ ಆರು ಜ್ಞಾನಕ್ಕೆ ವಿಷಯಗಳಾಗಿ ಮರಣದ ತನಕವೂ ಜೀವನ ಜೊತೆಗೆ ಇರುತ್ತವೆ.
ತೇಷು ಕರ್ಮವಿಸರ್ಗಶ್ಚ ಸರ್ವತತ್ತತ್ತ್ವಾರ್ಥನಿಶ್ಚಯಃ |
ತಮಾಹುಃ ಪರಮಂ ಶುಕ್ರಂ ಪಾರೇ ಚ ರಜಸಃ ಪ್ರಭುಮ್ ॥15॥
ಕರ್ಮೇಂದ್ರಿಯಗಳಲ್ಲಿ ಕರ್ಮಫಲ ತ್ಯಾಗರೂಪವಾದ ಸಂನ್ಯಾಸವು, ಸರ್ವ ತತ್ತತ್ತ್ವಾರ್ಥಗಳಲ್ಲಿ ನಿಶ್ಚಯವು ಉಂಟಾಗುತ್ತದೆ. ಈ ಸರ್ವತತ್ತತ್ತ್ವಾರ್ಥ ನಿಶ್ಚಯವನ್ನೇ ಮೋಕ್ಷಕ್ಕೆ ಬೀಜ ಎಂದು ವಿದ್ವಾಂಸರು ಹೇಳುತ್ತಾರೆ. ಈ ಜ್ಞಾನವೇ ರಜೋಗುಣವನ್ನು ಮೆಟ್ಟುವ ಪ್ರಭು ಎಂದು ಹೇಳುತ್ತಾರೆ.
ವಿರಾಗಾದ್ ವರ್ತತೇ ತಸ್ಮಿನ್ ಮನೋ ರಜಸಿ ನಿತ್ಯಗಮ್ |
ತಸ್ಮಿನ್ ಪ್ರಸನ್ನೇ ಸಂಪಶ್ಯೇದ್ ಬುದ್ಧಿರಿತ್ಯವ್ಯಯಂ ಮಹತ್ ॥16॥
ರಜೋಗುಣದಲ್ಲಿ ಆಸಕ್ತವಾದ ಮನಸ್ಸು ನಿತ್ಯವೂ ವಾಮ ಮಾರ್ಗದಲ್ಲಿಯೇ ಸಾಗುತ್ತದೆ. ಭಗವಂತನು ಪ್ರಸನ್ನನಾದಾಗ ಯಾವ ಜೀವನ ವಿಷಯದಲ್ಲಿ ಭಗವಂತನು ಪ್ರಸನ್ನತೆಯನ್ನು ಹೊಂದಿದ್ದಾನೋ ಆಗ ಅವನ ಬುದ್ಧಿಯು ಹಿಂದೆ-ಮುಂದೆ ಹೇಳಿದ ಗುಣಗಳಿಂದ ತುಂಬಿದ ಭಗವಂತನನ್ನು ನೋಡುತ್ತದೆ.
ಇಮಂ ಗುಣಸಮಾಹಾರಮಾತ್ಮಭಾವೇನ ಪಶ್ಯತಃ |
ಅಸಮ್ಯಗ್ದರ್ಶನೈರ್ದುಃಖಮನಂತಂ ನೋಪಶಾಮ್ಯತಿ ॥17॥
ಜ್ಞಾನಾದಿ ಗುಣಗಳಿಂದ ಪೂರ್ಣನಾದ ಈ ಪರಮಾತ್ಮನನ್ನು ಯಾವ ಜೀವನು ತನ್ನ ಸ್ವರೂಪವೆಂದು ಅಭೇದ ಬುದ್ಧಿಯಿಂದ ಚಿಂತಿಸುತ್ತಾನೋ ಅಂತಹ ಜ್ಞಾನಹೀನನಾದ, ತಪ್ಪಾಗಿ ತಿಳಿವಳಿಕೆಯನ್ನು ಹೊಂದಿದ ಆ ಜೀವನು ಅನಂತ ದುಃಖಕ್ಕೆ ಗುರಿಯಾಗುತ್ತಾನೆ.
ತಸ್ಮಾದೇತೇಷು ಮೇಧಾವೀ ನ ಪ್ರಸಜ್ಯೇತ ಬುದ್ಧಿಮಾನ್ |
ಅನಾತ್ಮೇತಿ ಚ ಯದ್ದುಷ್ಟಂ ತನ್ನಾಹಂ ನ ಮಮೇತ್ಯಪಿ ॥18॥
ಆದ್ದರಿಂದ ಜ್ಞಾನಿಯಾದವನು ಐಕ್ಯಜ್ಞಾನಿಗಳ ಸಹವಾಸವನ್ನು ಮಾಡಬಾರದು.
ಅನಾತ್ಮೇತಿ ಚ ಯದ್ ದೃಷ್ಟಂ ತೇನಾಹಂ ನ ಮಮೇತ್ಯಪಿ |
ವರ್ತತೇ ಕಿಮಧಿಷ್ಠಾನಾ ಪ್ರಸಕ್ತಾ ದುಃಖಸಂತತಿಃ ॥19॥

ಪರಮಾತ್ಮನು ಜೀವಾತ್ಮನು ಆಗಲಾರ ಎಂದು `ದ್ವಾಸುಪರ್ಣಾ' ಮುಂತಾದ ಶ್ರುತಿಗಳಲ್ಲಿ ದೃಷ್ಟವಾಗಿದೆ. ಆದ್ದರಿಂದ ಆ ಬ್ರಹ್ಮಸ್ವರೂಪನು ನಾನಲ್ಲ. ನನ್ನ ಸ್ವರೂಪನು ಆ ಬ್ರಹ್ಮನಲ್ಲ ಎಂದು ಯಾವ ಜ್ಞಾನಿಯು ತಿಳಿದಿದ್ದಾನೋ ಆ ಜ್ಞಾನಿಯ ದುಃಖ ಸಂತತಿಗಳಿಗೆ ಅಧಿಷ್ಠಾನವೇ ಇಲ್ಲದಂತಾಗುತ್ತದೆ. ಅರ್ಥಾತ್ ಅವನು ದುಃಖವನ್ನು ಹೊಂದಲಾರ.

ತತ್ರ ಸಮ್ಯಙ್ಮನೋ ನಾಮ ತ್ಯಾಗಮಾತ್ರಮನುತ್ತಮಮ್ |
ಶೃಣು ಯತ್ ತವ ಮೋಕ್ಷಾಯ ಭಾಷ್ಯಮಾಣಂ ಭವಿಷ್ಯತಿ ||20||

ಯಾವ ಮನಸ್ಸು ವಿಷಯಪದಾರ್ಥಗಳನ್ನು ತ್ಯಜಿಸಲು ಬಯಸುತ್ತದೋ ಅದೇ ಉತ್ತಮವಾದ ಮನಸ್ಸೆನಿಸಿದೆ. ನಿನ್ನ ಮೋಕ್ಷಕ್ಕೆ ಕಾರಣವಾದುದು ಯಾವುದು ಎಂಬುದನ್ನು ಮುಂದೆ ಹೇಳುತ್ತೇನೆ, ಕೇಳಿಸಿಕೊ.

ತ್ಯಾಗ ಏವ ಹಿ ಸರ್ವೇಷಾಮುಕ್ತಾನಾಮಪಿ ಕರ್ಮಣಾಮ್ |
ನಿತ್ಯಂ ಮಿಥ್ಯಾವಿನೀತಾನಾಂ ಕ್ಲೇಷೋ ದುಃಖಾವಹೋ ಮತಃ ||21||

ಮೋಕ್ಷಾರ್ಥಿಗಳಿಗೆಲ್ಲ ಕರ್ಮದ ಫಲತ್ಯಾಗವು ಸುಖಕರವಾಗಿದೆ. ನಿತ್ಯ ದುಃಖಗಳಿಗೆಲ್ಲ ನೆಲೆಯಾದುದು ಕರ್ಮದ ಫಲ ಸಂಬಂಧವು ಎಂದು ತಿಳಿಯಬೇಕು. ಯಾರಿಗೆ ಕರ್ಮಫಲದ ಸಂಬಂಧದ ವಿಷಯದಲ್ಲಿ ಅಹಂಕಾರವಿದೆಯೋ ಅವರ ಕರ್ಮಗಳೆಲ್ಲವೂ ವ್ಯರ್ಥವೇ.

ದ್ರವ್ಯತ್ಯಾಗೇ ತು ಕರ್ಮಾಣಿ ಭೋಗತ್ಯಾಗೇ ವ್ರತಾನ್ಯಪಿ |
ಸುಖತ್ಯಾಗೇ ತಪೋಯೋಗಃ ಸರ್ವತ್ಯಾಗೇ ಸಮಾಪನಾ ||22||

ದ್ರವ್ಯವನ್ನು ತ್ಯಾಗ ಮಾಡಿದಾಗ ಯಜ್ಞಕರ್ಮಾದಿಗಳು ಉಂಟಾಗುತ್ತವೆ. ಭೋಗ ತ್ಯಾಗವನ್ನು ಮಾಡಿದಾಗ ವ್ರತ, ಚಾಂದ್ರಾಯಣಾದಿ ಫಲಗಳು ಉಂಟಾಗುತ್ತವೆ. ದೈಹಿಕ ಸುಖಗಳನ್ನು ತ್ಯಾಗ ಮಾಡಿದಾಗ ತಪೋಯೋಗವು ಉಂಟಾಗುತ್ತದೆ. ಐಹಿಕ, ಆಮುಷ್ಮಿಕ, ಸಕಲ ಭೋಗಗಳ ಆಸೆಯನ್ನು ತ್ಯಜಿಸಿದಾಗ ಭಗವತ್ಪ್ರಾಪ್ತಿಯು ಉಂಟಾಗುತ್ತದೆ.

ತಸ್ಯ ಮಾರ್ಗೋಯಮದ್ವೈಧಃ ಸರ್ವತ್ಯಾಗಸ್ಯ ದರ್ಶಿತಃ |
ವಿಪ್ರಹಾಣಾಯ ದುಃಖಸ್ಯ ದುರ್ಗತಿರ್ಹ್ಯನ್ಯಥಾ ಭವೇತ್ ||23||

ವಿರುದ್ಧಗಳಾದ ಎರಡು ಪ್ರಕಾರಗಳನ್ನು ಅವಲಂಬಿಸಿದ ಕರ್ಮ ಮಾರ್ಗಗಳನ್ನು ನಿನಗೆ ತಿಳಿಸಿಕೊಟ್ಟಿದ್ದೇನೆ. ಸರ್ವತ್ಯಾಗಿಯಾದವನಿಗೆ ಸಿಗುವ ಫಲವೇನೆಂಬುದನ್ನು ಹೇಳಿದ್ದೇನೆ. ಇದಕ್ಕೆ ವಿಪರೀತವಾಗಿ ವರ್ತಿಸುವವನಿಗೆ ದುರ್ಗತಿಯೇ ಪ್ರಾಪ್ತವಾಗುತ್ತದೆ.

ಶೇತೇ ಜರಾಮೃತ್ಯುಭಯೈರ್ವಿಮುಕ್ತಃ
    ಕ್ಷೀಣೇ ಪುಣ್ಯೇ ವಿಗತೇ ಚ ಪಾಪೇ |
ತಪೋನಿಮಿತ್ತೇ ವಿಗತೇ ಚ ನಿಷ್ಠೇ
    ಫಲೇ ಯಥಾಕಾಶಮಲಿಂಗ ಏವ ||24||

ತಾನು ಮಾಡಿದ ಪುಣ್ಯಗಳೆಲ್ಲ ಕ್ಷೀಣಿಸಿ, ಪಾಪಗಳೆಲ್ಲವೂ ನಶಿಸಿ, ತಪೋನಿಷ್ಠೆಯು ತೀರಿದ ಬಳಿಕ ಮನುಷ್ಯನು ಜರಾ-ಮರಣ ಭಯಗಳಿಂದ ಮುಕ್ತನಾಗಿ ಆಕಾಶದಂತೆ ಲಿಂಗಶರೀರ ರಹಿತನಾಗಿ ಸುಖವಾಗಿ ಇರುತ್ತಾನೆ.

ಪಂಚ ಜ್ಞಾನೇಂದ್ರಿಯಾಣ್ಯುಕತತ್ವ ಮನಃಷಷ್ಠಾನಿ ಚೇತಸಿ |
ಮನಃಷಷ್ಠಾನಿ ವಕ್ಷ್ಯಾಮಿ ಪಂಚ ಕರ್ಮೇಂದ್ರಿಯಾಣಿ ತು ||25||

ಬುದ್ಧಿಯಲ್ಲಿರುವ ಮನಸ್ಸಿನಿಂದ ಯುಕ್ತವಾದ ಐದು ಜ್ಞಾನೇಂದ್ರಿಯಗಳ ವಿಷಯವನ್ನು ಹೇಳಿದ ಬಳಿಕ ಐದು ಕರ್ಮೇಂದ್ರಿಯಗಳ ವಿಷಯವನ್ನು ಹೇಳುತ್ತೇನೆ. ಅದರೊಡನೆ ಆರನೆಯ ಮನಸ್ಸಿನ ವಿಷಯವನ್ನು ಹೇಳುತ್ತೇನೆ.

ಹಸ್ತೌ ಕರ್ಮೇಂದ್ರಿಯಂ ಜ್ಞೇಯಮಥ ಪಾದೌ ಗತೀಂದ್ರಿಯಮ್ |
ಪ್ರಜನಾನಂದಯೋಃ ಶೇಫೋ ವಿಸರ್ಗೇ ಪಾಯುರಿಂದ್ರಿಯಮ್ ||26||

ಎರಡು ಕೈಗಳು ಕೆಲಸವನ್ನು ಮಾಡುವ ಕರ್ಮೇಂದ್ರಿಯವೆನಿಸಿವೆ. ಎರಡು ಪಾದಗಳು ನಡೆದಾಡುವ ಕರ್ಮೇಂದ್ರಿಯಗಳು. ಲಿಂಗವು ಸಂತಾನೋತ್ಪಾದಕವಾದ ಮೈಥುನದಿಂದ ಆನಂದವನ್ನುಂಟು ಮಾಡುವ ಕರ್ಮೇಂದ್ರಿಯವು. ಗುದವು ಮಲವನ್ನು ಹೊರಹಾಕುವ ಕರ್ಮೇಂದ್ರಿಯವು.

ವಾಕ್ತು ಶಬ್ದವಿಶೇಷಾರ್ಥಂ ಗತಿಂ ಪಂಚಾನ್ವಿತಾಂ ವಿದುಃ |
ಏವಮೇಕಾದಶೈತಾನಿ ಬುದ್ಧ್ಯಾ ತ್ವವಸೃಜೇನ್ಮನಃ ||27||

ಮಾತು ಶಬ್ದವಿಶೇಷವನ್ನು ಉಚ್ಚರಿಸುವ ಕರ್ಮೇಂದ್ರಿಯವು. ಈ ಐದು ಕರ್ಮೇಂದ್ರಿಯವು ಐದು ವಿಧವಾದ ಕರ್ಮಗಳನ್ನು ಹೊಂದಿವೆ ಎಂದು ವಿದ್ವಾಂಸರು ಹೇಳುತ್ತಾರೆ. ಮನಸ್ಸಿನಿಂದ ಕೂಡಿದ ಹನ್ನೊಂದು ಇಂದ್ರಿಯಗಳನ್ನು, ಅವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಶೀಘ್ರವಾಗಿ ಬುದ್ಧಿಯಿಂದಲೇ ತ್ಯಜಿಸಬೇಕು.

ಕರ್ಣೌ ಶಬ್ದಶ್ಚ ಚಿತ್ತಂ ಚ ತ್ರಯಃ ಶ್ರವಣಸಂಗ್ರಹೇ |
ತಥಾ ಸ್ಪರ್ಶೇ ತಥಾ ರೂಪೇ ತಥೈವ ರಸಗಂಧಯೋಃ ||28||

ಶ್ರವಣಕಾಲದಲ್ಲಿ ಶ್ರೋತ್ರೇಂದ್ರಿಯಕ್ಕೂ, ಶಬ್ದರೂಪವಾದ ವಿಷಯಕ್ಕೂ, ಚಿತ್ತಕ್ಕೂ ಸಂಯೋಗ ಉಂಟಾಗುತ್ತದೆ. ಈ ಕರ್ಮದಲ್ಲಿಯೇ ಸ್ಪರ್ಶದ ಸಮಯದಲ್ಲಿ ತ್ವಗಿಂದ್ರಿಯ, ವಿಷಯ, ಚಿತ್ತ; ಕಣ್ಣಿನಿಂದ ನೋಡುವಾಗ ನೇತ್ರ, ನೇತ್ರಕ್ಕೆ ವಿಷಯವಾದ ರೂಪ, ಅದನ್ನು ಗ್ರಹಿಸುವ ಚಿತ್ತ ಇವುಗಳಿಗೆ ಸಂಯೋಗವಿದೆ. ರುಚಿ ನೋಡುವಾಗ ಜಿಹ್ವೆ, ರಸ, ಚಿತ್ತ; ಆಘ್ರಾಣಿಸುವಾಗ ನಾಸಿಕ, ಗಂಧ, ಚಿತ್ತ ಹೀಗೆ ಪರಸ್ಪರ ಸಂಯೋಗವಿದೆ.

ಏವಂ ಪಂಚತ್ರಿಕಾ ಹ್ಯೇತೇ ಗುಣಾಸ್ತದುಪಲಬ್ಧಯೇ |
ಯೇನ ಯಸ್ತ್ರಿವಿಧೋ ಭಾವಃ ಪರ್ಯಾಯಾತ್ ಸಮುಪಸ್ಥಿತಃ ||29||

ಹೀಗೆ ಮೂರು ಮೂರರಂತೆ ಐದು ಗುಂಪುಗಳಿವೆ. ಇದಕ್ಕೆ ಗುಣಗಳೆನ್ನುತ್ತಾರೆ. ಈ ಗುಣಗಳಿಂದ ಶಬ್ದಾದಿ ವಿಷಯಗಳ ಗ್ರಹಣವಾಗುತ್ತದೆ. ಅನುಭವವನ್ನು ತಿಳಿಸುವ ಕಾರಣದಿಂದ ಇವು ಕರ್ತ, ಕರ್ಮ, ಕರಣ ಎಂದು ಮೂರು ವಿಧವಾದ ಭಾವವನ್ನು ಹೊಂದಿವೆ. ಅವು

ಕ್ರಮವಾಗಿ ಉಪಸ್ಥಿತವಾಗುತ್ತವೆ.
ಸಾತಿತ್ವಕೋ ರಾಜಸಶ್ಚೈವ ತಾಮಸಶ್ಚೈವ ತೇ ತ್ರಯಃ |
ತ್ರಿವಿಧಾ ವೇದನಾ ಯೇಷು ಪ್ರಸೂತಾ ಸರ್ವಸಾಧನಾ ॥28॥
ಗುಣಗಳಲ್ಲಿಯೂ ಸಾತ್ವಿಕ, ರಾಜಸ, ತಾಮಸ ಎಂದು ಮೂರು ಭೇದವಿದೆ. ಇವುಗಳಿಂದ ದೊರಕುವ ಅನುಭವವು ಹರ್ಷ, ಪ್ರೀತಿ, ವಿಷಾದ ಎಂದು ಮೂರು ಪ್ರಕಾರವಾಗಿದೆ. ಇವು ಎಲ್ಲ ಸಾಧನೆಗಳನ್ನು ಉಂಟುಮಾಡುತ್ತವೆ.
ಪ್ರಹರ್ಷಃ ಪ್ರೀತಿರಾನಂದಃ ಸುಖಂ ಸಂಶಾಂತಚಿತ್ತತಾ |
ಅಕುತಶ್ಚಿತ್ ಕುತಶ್ಚಿದ್ವಾ ಚಿತ್ತತಃ ಸಾತಿತ್ವಕೋ ಗುಣಃ ॥31॥
ಹರ್ಷ, ಪ್ರೀತಿ, ಆನಂದ, ಚಿತ್ತಶಾಂತಿ ಇವುಗಳು ಕಾರಣದಿಂದಲೋ, ಅಕಾರಣದಿಂದಲೋ ಉಂಟಾಗಲಿ. ಇವುಗಳೆಲ್ಲವನ್ನೂ ಸಾತ್ವಿಕಗುಣವೆನ್ನುತ್ತಾರೆ.
ಅತುಷ್ಟಿಃ ಪರಿತಾಪಶ್ಚ ಶೋಕೋ ಲೋಭಸ್ತಥಾಕ್ಷಮಾ |
ಲಿಂಗಾನಿ ರಜಸಸ್ತಾನಿ ದೃಶ್ಯಂತೇ ಹೇತ್ವಹೇತುತಃ ॥32॥
ಅಸಂತೋಷ, ಸಂತಾಪ, ಶೋಕ, ಲೋಭ, ಅಸಹನಶೀಲತೆ - ಇವುಗಳು ನಮಗೆ ತಿಳಿಯದ ಕಾರಣದಿಂದಲಾಗಲೀ ಉಂಟಾದಲ್ಲಿ ಇವುಗಳನ್ನು ರಾಜಸ ಗುಣದ ಕಾರ್ಯ ಎನ್ನುತ್ತಾರೆ.
ಅವಿವೇಕಸ್ತಥಾ ಮೋಹಃ ಪ್ರಮಾದಃ ಸ್ವಪ್ನತಂದ್ರಿತಾ |
ಕಥಂಚಿದಪಿ ವರ್ತಂತೇ ವಿವಿಧಾಸ್ತಾಮಸಾ ಗುಣಾಃ ॥33॥
ಅವಿವೇಕ, ಮೋಹ, ಪ್ರಮಾದ, ಸ್ವಪ್ನ, ಆಲಸ್ಯ - ಇವುಗಳು ಯಾವುದೇ ಕಾರಣದಿಂದ ಉಂಟಾಗಲಿ, ಉಂಟಾಗದಿರಲಿ, ಇವೆಲ್ಲವೂ ತಮೋಗುಣದ ಕಾರ್ಯವೆನಿಸಿದೆ.
ತತ್ರ ಯತ್ ಪ್ರೀತಿಸಂಯುಕ್ತಂ ಕಾಯೇ ಮನಸಿ ವಾ ಭವೇತ್ |
ವರ್ತತೇ ಸಾತಿತ್ವಕೋ ಭಾವ ಇತ್ಯಪೇಕ್ಷೇತ ತತ್ತಥಾ ॥34॥
ಅವುಗಳಲ್ಲಿ ಯಾವುದು ಶರೀರದಲ್ಲಿ, ಮನಸ್ಸಿನಲ್ಲಿ ಪ್ರೀತಿಯ ಸಂಯೋಗದಿಂದ ಹುಟ್ಟುತ್ತದೊ ಅದು ಸಾತ್ವಿಕವೆನಿಸಿದೆ. ಯಾವಾಗಲೂ ಹರ್ಷಚಿತ್ತನಾಗಿರುವುದು ಸಾತ್ವಿಕ ಗುಣಾಧಿಕ್ಯವುಳ್ಳವನ ಲಕ್ಷಣ.
ಯತ್ತು ಸಂತಾಪಸಂಯುಕ್ತಮಪ್ರೀತಿಕರಮಾತ್ಮನಃ |
ಪ್ರವೃತ್ತಂ ರಜ ಇತ್ಯೇವ ತತಸ್ತದಭಿಚಿಂತಯೇತ್ ॥35॥
ರಜೋಗುಣವು ಅಸಂತೋಷದಿಂದ ಕೂಡಿದ್ದು. ಮನಸ್ಸಿಗೆ ಅಪ್ರಿಯವನ್ನುಂಟು ಮಾಡತಕ್ಕದ್ದು. ಯಾವಾಗಲೂ ಅಸಂತೋಷ, ಅಪ್ರೀತಿಗಳಿದ್ದರೆ ರಜೋಗುಣದ ಅಭಿವೃದ್ಧಿಯನ್ನು ಚಿಂತಿಸಬೇಕು.
ಅಥ ಯನ್ಮೋಹಸಂಯುಕ್ತಂ ಕಾಯೇ ಮನಸಿ ವಾ ಭವೇತ್ |
ಅಪ್ರತರ್ಕ್ಯಮವಿಜ್ಞೇಯಂ ತಮಸ್ತದುಪಧಾರಯೇತ್ ॥36॥
ಶರೀರದಲ್ಲಿ, ಮನಸ್ಸಿನಲ್ಲಿ ಹೇಳಲಾಗದ ಮೋಹಭಾವವು ಉಂಟಾದಲ್ಲಿ ತಿಳಿಯಲಾಗದ ಇದಕ್ಕೆ ತಮೋಗುಣದ ಅಭಿವೃದ್ಧಿ ಎಂದು ತಿಳಿಯಬೇಕು.
ತದ್ಧಿ ಶ್ರೋತ್ರಾಶ್ರಯಂ ಭೂತಂ ಶಬ್ದಃ ಶ್ರೋತ್ರಂ ಸಮಾಶ್ರಿತಃ |
ನೋಭಯಂ ಶಬ್ದವಿಜ್ಞಾನೇ ವಿಜ್ಞಾನಸ್ಯೇತರಸ್ಯ ವಾ ॥37॥
ಶ್ರೋತ್ರಕ್ಕೆ ಆಶ್ರಯವೆನಿಸಿದ ಭೂತವು ಶಬ್ದವು. ಶ್ರೋತ್ರೇಂದ್ರಿಯವನ್ನು ಶಬ್ದವು ಆಶ್ರಯಿಸಿದೆ. ಶ್ರೋತ್ರೇಂದ್ರಿಯವು ಕೇವಲ ಶಬ್ದವಿಜ್ಞಾನದಲ್ಲಿಯೇ ಕಾರಣವಾಗಿರುವುದಿಲ್ಲ. ಕೆಲವೊಮ್ಮೆ ಅಜ್ಞಾನಕ್ಕೂ ಕಾರಣವಾಗುತ್ತದೆ. ಸುಷುಪ್ತಿ ದೆಸೆಯಲ್ಲಿ ಶ್ರೋತ್ರವು ಅಜ್ಞಾನಕ್ಕೂ, ಜಾಗ್ರದವಸ್ಥೆಯಲ್ಲಿ ವಿಜ್ಞಾನಕ್ಕೂ ಕಾರಣವಾಗುತ್ತದೆ ಎಂದು ಭಾವ.
ಏವಂ ತ್ವಕ್ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ |
ಸ್ಪರ್ಶೇ ರೂಪೇ ರಸೇ ಗಂಧೇ ವಾಚಿ ಚೇತೋ ಮನಶ್ಚ ಯತ್ ॥38॥
ಹೀಗೆ ಚರ್ಮ, ಕಣ್ಣು, ನಾಲಿಗೆ, ಮೂಗು ಇವುಗಳು ಕ್ರಮವಾಗಿ ಸ್ಪರ್ಶ, ರೂಪ, ರಸ, ಗಂಧಗಳಿಗೆ ಆಶ್ರಯಗಳಾಗಿವೆ. ಆದರೆ ಇವುಗಳೆಲ್ಲದಕ್ಕೂ ಎಲ್ಲ ಕಡೆಯೂ ಸಂಕಲ್ಪ- ವಿಕಲ್ಪಗಳಿಗೆ ಕಾರಣವು ಮನಸ್ಸೇ ಆಗಿದೆ.
ಸ್ವಕರ್ಮಯುಗಪದ್ಭಾವೋ ದಶಸ್ವೇತೇಷು ತಿಷ್ಠತಿ |
ಚಿತ್ತಮೇಕಾದಶಂ ವಿದ್ಧಿ ಬುದ್ಧಿರ್ದ್ವಾದಶಮೀ ಭವೇತ್ ॥39॥
ಹತ್ತು ಇಂದ್ರಿಯಗಳಿಗೂ ತಮ್ಮ ತಮ್ಮ ವ್ಯಾಪಾರಗಳಲ್ಲಿ ಯೌಗಪದ್ಯವು ಎಂದರೆ ಕೇಳುತ್ತೇನೆ, ನೋಡುತ್ತೇನೆ, ಹೋಗುತ್ತೇನೆ, ಧರಿಸುತ್ತೇನೆ, ಕುಡಿಯುತ್ತೇನೆ ಎಂಬ ಭಾವವನ್ನು ಮನಸ್ಸು ಜೀವನಿಗೆ ಹುಟ್ಟಿಸುತ್ತದೆ. ಆದ್ದರಿಂದ ಹತ್ತು ಇಂದ್ರಿಯಗಳ ಜೊತೆಗೂ ಏಕಕಾಲದಲ್ಲಿ ವ್ಯಾಪಾರ ಮಾಡುವ ಸಾಮರ್ಥ್ಯವು ಮನಸ್ಸಿನದ್ದು. ಇದು ಹನ್ನೊಂದನೆಯ ಇಂದ್ರಿಯವೆನಿಸಿದರೆ, ಇದನ್ನು ನಿಯಮಿಸುವ ಬುದ್ಧಿಯು ಹನ್ನೆರಡನೆಯ ಇಂದ್ರಿಯ ಎನಿಸಿದೆ.
ತೇಷಾಮಯುಗಪದ್ಭಾವೇ ಉಚ್ಛೇದೋ ನಾಸ್ತಿ ತಾಮಸಃ |
ಆಸ್ಥಿತೋ ಯುಗಪದ್ಭಾವೇ ವ್ಯವಹಾರಃ ಸ ಲೌಕಿಕಃ ॥40॥
ತಮೋಗುಣ ಜನಿತವಾದ ಸುಷುಪ್ತಿಕಾಲದಲ್ಲಿ ಇಂದ್ರಿಯಗಳೆಲ್ಲವೂ ಮನಸ್ಸಿನಲ್ಲಿ ಲಯ ಹೊಂದಿರುವುದರಿಂದ ಮನಸ್ಸು ವಿಷಯಗಳನ್ನು ಗ್ರಹಿಸುವುದಿಲ್ಲ. ಆದ್ದರಿಂದ ಆ ಸುಷುಪ್ತಿಯ ಸಮಯದಲ್ಲಿ ಕ್ಲೇಶವು ಇರುವುದಿಲ್ಲ. ಇಂದ್ರಿಯಗಳು ವಿಷಯಗಳನ್ನು ಏಕಕಾಲದಲ್ಲಿ ಗ್ರಹಣ ಮಾಡುತ್ತವೆ ಎಂಬುದು ಲೌಕಿಕ ವ್ಯವಹಾರದಲ್ಲಿಯೇ ಕಂಡು ಬರುತ್ತದೆ.
ಇಂದ್ರಿಯಾಣ್ಯವಸೃಜ್ಯಾಪಿ ದೃಷ್ಟ್ವಾ ಪೂರ್ವಂ ಶ್ರುತಾಗಮಮ್ |

ಚಿಂತಯನ್ನಾನುಪರ್ಯೇತಿ ತ್ರಿಭಿರೇವಾನ್ವಿತೋ ಗುಣೈಃ ॥41॥
ಜಾಗ್ರದವಸ್ಥೆಯಲ್ಲಿ ಶಬ್ದಾದಿ ವಿಷಯಗಳ ಪ್ರಾಪ್ತಿಯು ಉಂಟಾಗುವುದರಿಂದ ಸ್ವಪ್ನಾವಸ್ಥೆಯಲ್ಲಿಯೂ ಪುರುಷನು ಸೂಕ್ಷ್ಮ ಇಂದ್ರಿಯಗಳ ಮೂಲಕ ವಿಷಯಾಸಕ್ತಿಯನ್ನು ಹೊಂದಿ ಮೂರುಗುಣಗಳಿಂದ ಯುಕ್ತನಾಗಿ ಶರೀರದಲ್ಲಿ ಸಂಚರಿಸುತ್ತಾನೆ.
ಯತ್ತಮೋಪಹತಂ ಚಿತ್ತಮಾಶು ಸಂಚಿರಮಧ್ರುವಮ್ |
ಕರೋತ್ಯುಪರಮಂ ಕಾಲೇ ತದಾಹುಸ್ತಾಮಸಂ ಸುಖಮ್ ॥42॥
ಸುಷುಪ್ತಿಕಾಲದಲ್ಲಿ ಮನಸ್ಸು ತಮೋಗುಣದಿಂದ ಕೂಡಿ ತನ್ನ ಪ್ರವೃತ್ತಿಗಳನ್ನು ಉಪಸಂಹರಿಸಿ ಸಂತೋಷವನ್ನು ಹೊಂದುತ್ತದೆ. ಅದನ್ನು ತಾಮಸ ಸುಖ ಎನ್ನುತ್ತಾರೆ ವಿದ್ವಾಂಸರು.
ಯದ್ಯದಾಗಮಸಂಯುಕ್ತಂ ನ ಕೃತ್ಸ್ನಮುಪಶಾಮ್ಯತಿ |
ಅಥ ತತ್ರಾಪ್ಯುಪಾದತ್ತೇ ತಮೋ ವ್ಯಕ್ತಮಿವಾನ್ರುತಮ್ ॥43॥
ಮನುಷ್ಯನು ಕನಸ್ಸಿನಲ್ಲಿ ಕಾಣುವ ಕಷ್ಟಗಳನ್ನು ಸುಷುಪ್ತಿಯ ಕಾಲದಲ್ಲಿ ಕಾಣುವುದಿಲ್ಲ. ಸುಷುಪ್ತಿ ಕಾಲದಲ್ಲಿಯೂ ಅಂಧಕಾರದಂತೆ ವ್ಯಾಪಿಸಿದ ತಮೋಗುಣದಿಂದ ಬದ್ಧನಾಗಿ ಜೀವನು ಮಿಥ್ಯಾಸುಖವನ್ನು ಅನುಭವಿಸುತ್ತಾನೆ.
ಏವಮೇಷ ಪ್ರಸಂಖ್ಯಾತಃ ಸ್ವಕರ್ಮಪ್ರತ್ಯಯೋ ಗುಣಃ |
ಕಥಂಚಿದ್ ವರ್ತತೇ ಸಮ್ಯಕ್ ಕೇಷಾಂಚಿದ್ ವಾ ನಿವರ್ತತೇ ॥44॥
ಹೀಗೆ ಕರ್ಮಾನುಸಾರವಾಗಿ ಗುಣವು ಪ್ರಾಪ್ತವಾಗುವ ಬಗೆಯನ್ನು ಹೇಳಿಯಾಯಿತು. ಅಜ್ಞಾನಿಗಳಾದ ತಾಮಸರಲ್ಲಿ ತಮೋಗುಣವು ಬೃಹದ್ರೂಪದಲ್ಲಿರುತ್ತದೆ. ಜ್ಞಾನಿಗಳಿಂದ ದೂರವಾಗಿರುತ್ತದೆ.
ಅಹಮಿತ್ಯೇಷ ವೈ ಭಾವೋ ನಾನ್ಯತ್ರ ಪ್ರತಿತಿಷ್ಠತಿ |
ಯಸ್ಯ ಭಾವೋ ಹ್ಯಜೇ ನಿತ್ಯಂ ಸ ವೈ ವಿದ್ವಾಂನ್ನಚೇತರಃ ॥45॥
ಯಾವ ಪುರುಷನು ಅಹಂ ಎಂಬ ಭಾವವನ್ನು ತನ್ನಲ್ಲಿ ಬಿಟ್ಟು ಬೇರೆ ಕಡೆ ತಿಳಿಯುವುದಿಲ್ಲವೋ, ನಾನು ಬ್ರಹ್ಮನು, ಸರ್ವ ಜೀವರು ನಾನೇ ಆಗಿದ್ದೇನೆ ಎಂದು ಯಾರ ಬುದ್ಧಿಯು ಕೆಲಸ ಮಾಡುವುದಿಲ್ಲವೋ, ಯಾರ ಬುದ್ಧಿಯಲ್ಲಿ ಪರಮಾತ್ಮನ ವಿಷಯಕವಾದ ಭಕ್ತಿಯು ದೃಢವಾಗಿರುತ್ತದೋ ಅವನೇ ವಿದ್ವಾಂಸನೆನಿಸುತ್ತಾನೆ, ಬೇರೆಯವನಲ್ಲ.
ದೇಹಧರ್ಮಸ್ತಥಾ ನಿತ್ಯಂ ಸರ್ವಭೂತೇಷು ವೈ ದೃಢಃ |
ಏತೇನೈವಾನುಮಾನೇನ ತ್ಯಾಜ್ಯೋ ಧರ್ಮಸ್ತಥಾ ಹ್ಯಸೌ ॥46॥
ಜೀವರಲ್ಲಿ ದೇಹಧರ್ಮಗಳಾದ ಸುಖ-ದುಃಖಾದಿಗಳು ಚಿತ್ರವಿಚಿತ್ರವಾಗಿ ಹೇಗೆ ಕಾಣಿಸುತ್ತವೋ ಪ್ರತಿಯೊಬ್ಬರ ಸುಖ-ದುಃಖಗಳು ಭಿನ್ನಭಿನ್ನವೋ ಇದೇ ಯುಕ್ತಿಯಿಂದ ಜೀವಾತ್ಮ-ಪರಮಾತ್ಮರು ಅತ್ಯಂತ ಭಿನ್ನರೇ ಆಗಿದ್ದಾರೆ. ಹಿಮ-ಅಗ್ನಿಗಳಲ್ಲಿ ಹೇಗೆ ಅಭೇದವು ತ್ಯಾಜ್ಯವೊ ಹಾಗೆ ಜೀವ-ಪರಮಾತ್ಮರಲ್ಲಿಯೂ ಅಭೇದವು ತ್ಯಾಜ್ಯವಾಗಿದೆ.
ಜ್ಞಾನೇನ ಮುಚ್ಯತೇ ಜಂತುರ್ಧರ್ಮಾತ್ಮಾ ಜ್ಞಾನವಾನ್ ಭವೇತ್ |
ಧರ್ಮೇಣ ಧಾರ್ಯತೇ ಲೋಕಃ ಸರ್ವಂ ಧರ್ಮೇ ಪ್ರತಿಷ್ಠಿತಮ್ ॥
ಭಗವಂತನ ಜ್ಞಾನದಿಂದಲೇ ಜಂತುವು ಬಿಡುಗಡೆಯನ್ನು ಹೊಂದುತ್ತಾನೆ. ಧರ್ಮಾತ್ಮನಾದ ವ್ಯಕ್ತಿಯು ಭಗವದ್‌ಜ್ಞಾನವನ್ನು ಹೊಂದುತ್ತಾನೆ. ಧರ್ಮದಿಂದ ಲೋಕವೇ ಧರಿಸಲ್ಪಟ್ಟಿದೆ. ಎಲ್ಲವೂ ಧರ್ಮದಲ್ಲೇ ಪ್ರತಿಷ್ಠಿತವಾಗಿದೆ.
ಸರ್ವಾರ್ಥಜನಕಶ್ಚೈವ ಧರ್ಮಃ ಸರ್ವಸ್ಯ ಕಾರಣಮ್ |
ಸರ್ವೋ ಹಿ ದೃಶ್ಯತೇ ಲೋಕೇ ನ ಸರ್ವಾರ್ಥಃ ಕಥಂಚನ ॥48॥
ಸಮಸ್ತ ಪುರುಷಾರ್ಥಗಳನ್ನು ಹುಟ್ಟಿಸುವುದು ಧರ್ಮವೇ ಆಗಿದೆ. ಆದ್ದರಿಂದ ಎಲ್ಲದಕ್ಕೂ ಕಾರಣವಾದುದು ಧರ್ಮವು. ಜಗತ್ತಿನಲ್ಲಿ ಎಲ್ಲವೂ ಕಾಣಿಸುತ್ತದೆ. ಆದರೆ ಯಾವುದನ್ನೂ ಜೀವನು ಪುರುಷಾರ್ಥವೆಂದು ಭಾವಿಸಬಾರದು.
ಸರ್ವತ್ಯಾಗೇ ಕೃತೇ ತಸ್ಮಾತ್ ಪರಮಾತ್ಮಾ ಪ್ರಸೀದತಿ |
ವ್ಯಕ್ತಾದವ್ಯಕ್ತಮತುಲಂ ಲೋಕೇಷು ಪರಿವರ್ತತೇ ॥49॥
ಸಮಸ್ತವನ್ನೂ ತ್ಯಜಿಸಿದ ಬಳಿಕ ಅದರಿಂದ ಪರಮಾತ್ಮನು ಪ್ರಸನ್ನನಾಗುತ್ತಾನೆ. ಕ್ಷಿತ್ಯಾದಿ ಕಾರ್ಯಕ್ಕಿಂತಲೂ ಅವ್ಯಕ್ತನಾದ ಅರ್ಥಾತ್ ಅದೃಶ್ಯನಾದ ಬ್ರಹ್ಮನು ಲೋಕದಲ್ಲಿ ಅಂತರ್ಯಾಮಿಯಾಗಿದ್ದು ಎಲ್ಲರನ್ನೂ ನಿಯಮಿಸುತ್ತಿದ್ದಾನೆ.
ಏವಮಾಹುಃ ಸಮಾಹಾರಂ ಕ್ಷೇತ್ರಮಧ್ಯಾತ್ಮಚಿಂತಕಾಃ |
ಸ್ಥಿತೋ ಮನಸಿ ಯೋ ಭಾವಃ ಸ ವೈ ಕ್ಷೇತ್ರಜ್ಞ ಉಚ್ಯತೇ ॥50॥
ಜ್ಞಾನಿಗಳು, ಅಧ್ಯಾತ್ಮಚಿಂತಕರು, ಸ್ವದೇಹದಲ್ಲಿರುವ ಪರಮಾತ್ಮನನ್ನು ಚಿಂತಿಸುವ ವ್ಯಕ್ತಿಗಳು ಇದನ್ನು ಸಮಾಹಾರವೆನ್ನುತ್ತಾರೆ. ಸಮಸ್ತ ದೇಹವ್ಯಾಪಾರ ಎಂದು ತಿಳಿಯುವವನು ಕ್ಷೇತ್ರಜ್ಞನೆನಿಸಿದ ಜೀವನಾಗಿದ್ದಾನೆ.
ಏವಂ ಸತಿ ಕ ಉಚ್ಛೇದಃ ಶಾಶ್ವತೋ ವಾ ಕಥಂ ಭವೇತ್ |
ಸ್ವಭಾವಾದ್ ವರ್ತಮಾನೇಷು ಸರ್ವಭೂತೇಷು ಹೇತುಷು ॥51॥
ಹೀಗಿರುತ್ತಿರಲು ಮರಣಾನಂತರದಲ್ಲಿ ಮೋಕ್ಷದಲ್ಲಿ ಜ್ಞಾನವು ಇರುವುದಿಲ್ಲ. ಎಂದರೆ ಅಪ್ರಾಕೃತ ಜ್ಞಾನವನ್ನು ಪಡೆದಾಗ ಪ್ರಾಕೃತ ಜ್ಞಾನವು ಇರುವುದಿಲ್ಲ ಎಂದೇ ಹೇಳಬೇಕು. `ಏವಂ ಸತಿ' ಎಂದರೆ ಪರಮಾತ್ಮನ ಉದರವನ್ನು ಹೊಂದುತ್ತಿರಲು ಹೇಗೆ ಜ್ಞಾನವಿಲ್ಲವಾಗುತ್ತದೆ ಎಂದರೆ ಅಪ್ರಾಕೃತಜ್ಞಾನ ಉಂಟಾಗುತ್ತದೆ, ಪ್ರಾಕೃತಜ್ಞಾನ ಇಲ್ಲವಾಗುತ್ತದೆ ಎಂದೇ ಅರ್ಥ. ಏಕೆಂದರೆ ಸಕಲ ಪ್ರಾಕೃತ ದೇಹೇಂದ್ರಿಯಾದಿ- ಗಳೆಲ್ಲವೂ ಆತ್ಮನ ವಿಷಯದಲ್ಲಿ ನಾಶ ಹೊಂದಿರುತ್ತವೆ. ಸಮಸ್ತ ದೇಹೇಂದ್ರಿಯಾದಿಗಳನ್ನು ಸಂಹರಿಸಿಕೊಂಡು ಭಗವಂತನು ಜೀವನನ್ನು ಅನುಗ್ರಹಿಸುತ್ತಿರಲು ಲೌಕಿಕ ಜ್ಞಾನವು ಉಂಟಾಗುವುದಿಲ್ಲ. ಶಾಶ್ವತವಾದ ಅಪ್ರಾಕೃತ ಜ್ಞಾನವೇ ಜೀವನಿಗೆ ಲಭಿಸುತ್ತದೆ. ಆದ್ದರಿಂದ ಪ್ರಕೃತಿಗೆ ಅನುಸಾರವಾದ ಜ್ಞಾನವು ಶಾಶ್ವತ ಹೇಗೆ ಆಗುತ್ತದೆ?ಜೀವನ ಸ್ವರೂಪಭೂತವಾದ ಗುಣಗಳು ಸಮಸ್ತ ಜೀವರಲ್ಲೂ ಇರುವುದರಿಂದ ಈಗಿರುವ ಜ್ಞಾನವು ನಿತ್ಯಜ್ಞಾನವೆನಿಸುವುದಿಲ್ಲ. ಜೀವನ

ಸ್ವರೂಪಭೂತವಾದ ಗುಣಗಳೇ ನಿತ್ಯವೆನಿಸಿವೆ ಎಂದು ತಾತ್ಪರ್ಯ.
ಯಥಾರ್ಣವಗತಾ ನದ್ಯೋ ವ್ಯಕ್ತೀರ್ಜಹತಿ ನಾಮ ಚ |
ನ ಚ ಸ್ವತಾಂ ನಿಯಚ್ಛಂತಿ ತಾದೃಶಃ ಸತ್ತ್ವಸಂಕ್ಷಯಃ ॥52॥
ನದಿಗಳು ಸಮುದ್ರದೊಡನೆ ಸೇರಿ ತಮ್ಮ ವ್ಯಕ್ತಿತ್ವವನ್ನು, ಹೆಸರನ್ನು ಹೇಗೆ ಕಳೆದುಕೊಳ್ಳುತ್ತವೋ, ಎಲ್ಲ ನದಿಗಳು ಸಮುದ್ರದಲ್ಲಿ ಸೇರಿದಾಗ ತಮ್ಮ ಹೆಸರು ನಾಮಗಳನ್ನು ಬಿಡುವಂತೆ ಸಾತ್ವಿಕರು ತಮ್ಮ ಮೂಲಕಾರಣದಲ್ಲಿ ಸೇರಿದಾಗ ಪ್ರಕೃತಿ ವ್ಯವಹಾರದಲ್ಲಿರುವ ನಾಮಗಳನ್ನು ಬುದ್ಧಿಯು ಬಿಡುತ್ತದೆ. ಸ್ವರೂಪಭೂತವಾದ ಗುಣಗಳನ್ನು ಸಂಗ್ರಹಿಸಿಕೊಳ್ಳುತ್ತದೆ.
ವ್ಯಾಖ್ಯಾನ ವಿಶೇಷ ನದಿಗಳು ಸಮುದ್ರವನ್ನು ಸೇರಿದಾಗ ಗಂಗಾ, ಯಮುನಾ, ಸರಸ್ವತಿ ಎಂಬ ವ್ಯವಹಾರ ಇಲ್ಲದೇ ಇದ್ದರೂ ಸಮುದ್ರರಾಜನಿಗೆ ಈ ಸಮಸ್ತ ನದಿಗಳ ಸ್ವರೂಪಜ್ಞಾನವು ಇದೆ. ಜಗತ್ತಿನ ಲೋಕವ್ಯವಹಾರ ನಿಲ್ಲುತ್ತದೆ ಎಂಬುದಷ್ಟು ಮಾತ್ರ ಸತ್ಯವೇ ವಿನಾ ನದಿಗಳ ಸ್ವರೂಪವೇ ನಾಶವಾಗುತ್ತದೆ ಎಂದು ಅರ್ಥವಲ್ಲ. ಇದರಂತೆ ಜೀವನ ಪ್ರಾಕೃತಜ್ಞಾನಗಳು ನಾಶವಾದರೂ ಸ್ವರೂಪಭೂತಜ್ಞಾನಗಳು ಅಭಿವ್ಯಕ್ತಿಯನ್ನು ಹೊಂದುತ್ತವೆ ಎಂದೇ ಅರ್ಥ.
ಏವಂ ಸತಿ ಕುತಃ ಸಂಜ್ಞಾ ಪ್ರೇತ್ಯಭಾವೇ ಪುನರ್ಭವೇತ್ |
ಪ್ರತಿಸಂಮಿಶ್ರಿತೇ ಜೀವೇ ಗೃಹ್ಯಮಾಣೇ ಚ ಸರ್ವತಃ ॥53॥
ಈ ರೀತಿಯಾಗಿರಲು ಮರಣಾನಂತರ ಈ ಲೌಕಿಕವಾದ ಪ್ರಜ್ಞೆಯನ್ನು ಜೀವನು ಹೇಗೆ ಹೊಂದಲು ಸಾಧ್ಯ? ಭಗವಂತನು ಜೀವನ ಜೊತೆಗೆ ಮಿಶ್ರಣವಾದ ಲೌಕಿಕ ಗುಣಗಳನ್ನು ಸಂಹರಿಸಿ ಸ್ವರೂಪಭೂತವಾದ ಗುಣಗಳನ್ನು ಸ್ವೀಕರಿಸಿದ್ದರಿಂದ ಲೌಕಿಕ ಜ್ಞಾನವಿಲ್ಲವೆಂದೇ ಹೇಳಬೇಕು.
ಇಮಾಂ ತು ಯೋ ವೇದ ವಿಮೋಕ್ಷಬುದ್ಧಿ-
ಮಾತ್ಮಾನಮನ್ವಿಚ್ಛತಿ ಚಾಪ್ರಮತ್ತಃ |
ನ ಲಿಪ್ಯತೇ ಕರ್ಮಫಲೈರನಿಷ್ಟೈಃ
ಪತ್ರಂ ಬಿಸಸ್ಯೇವ ಜಲೇನ ಸಿಕ್ತಮ್ ॥54॥
ಯಾವನು ಇಂತಹ ಮೋಕ್ಷವಿದ್ಯೆಯನ್ನು ತಿಳಿಯುತ್ತಾನೋ ಅವನು ಅಪ್ರಮತ್ತನಾಗಿ ಆತ್ಮತತ್ತ್ವವನ್ನು ಅನುಸಂಧಾನ ಮಾಡಿದ ಕಾರಣದಿಂದ ನೀರಿನಿಂದ ಕೂಡಿರುವ ತಾವರೆಯ ಎಲೆಯಂತೆ ಅನಿಷ್ಟವಾದ ಕರ್ಮಫಲದಿಂದ ಯುಕ್ತನಾಗುವುದಿಲ್ಲ.
ದೃಢೈಶ್ಚ ಪಾಶೈರ್ಬಹುಭಿರ್ವಿಮುಕ್ತಃ
ಪ್ರಜಾನಿಮಿತ್ತೈರಪಿ ದೈವತೈಶ್ಚ |
ಯದಾ ಹ್ಯಸೌ ಸುಖದುಃಖೇ ಜಹಾತಿ
ಮುಕ್ತಸ್ತದಾಗ್ರ್ಯಾಂ ಗತಿಮೇತ್ಯಲಿಂಗಃ ॥55॥
ದೃಢವಾದ ಪಾಶವೆನಿಸಿದ ಅವಿದ್ಯಾ ಕಾಮಕರ್ಮಗಳಿಂದ ಮುಕ್ತನಾದ ಜೀವನು ಪುತ್ರ, ಕಳತ್ರಾದಿ ನಿಮಿತ್ತಗಳಿಂದ ಮುಕ್ತನಾದ ಕಾರಣದಿಂದ, ದೇವತಾನಿಮಿತ್ತವಾದ ಕರ್ಮಗಳನ್ನೂ ತ್ಯಜಿಸಿದ್ದರಿಂದ, ಬಾಹ್ಯವಾದ ಸುಖ-ದುಃಖಗಳನ್ನೆಲ್ಲ ಲಿಂಗದೇಹವನ್ನು ಕಳೆದುಕೊಂಡು ಪರಿಹರಿಸಿಕೊಂಡಿರುವ ಕಾರಣದಿಂದ ಮುಕ್ತನಾಗಿರುವ ಚೇತನನು ಶ್ರೇಷ್ಠವಾದ ಸ್ಥಿತಿಯನ್ನು ಹೊಂದುತ್ತಾನೆ.
ಶ್ರುತಿಪ್ರಮಾಣಾಗಮಮಂಗಲೈಶ್ಚ
ಶೇತೇ ಜರಾಮೃತ್ಯುಭಯಾದತೀತಃ ॥56॥
ಬ್ರಹ್ಮನನ್ನು ಕೊಂಡಾಡುವ ಶ್ರುತಿ-ಪ್ರಮಾಣಗಳನ್ನು ಸರಿಯಾಗಿ ತಿಳಿದು ಸಾಗಿದಾಗ ಜರಾ-ಮರಣಗಳಿಂದ ಅತೀತನಾಗಿ ಶಾಂತಿಯಿಂದ ನಿದ್ರಿಸುತ್ತಾನೆ.
ಕ್ಷೀಣೇ ಚ ಪುಣ್ಯೇ ವಿಗತೇ ಚ ಪಾಪೇ
ತತೋಽನಿಮಿತ್ತೇ ಚ ಫಲೇ ವಿನಷ್ಟೇ |
ಅಲೇಪಮಾಕಾಶಮಲಿಂಗಮೇವ-
ಮಾಸ್ಥಾಯ ಪಶ್ಯಂತಿ ಮಹದ್ವ್ಯಸಕ್ತಾಃ ॥57॥
ಅನಿಷ್ಟ ಪುಣ್ಯಗಳು ನಾಶವಾದ ಬಳಿಕ, ಪಾಪಗಳೂ ನಾಶವಾದ ಬಳಿಕ, ಅದರಿಂದ ಉಂಟಾದ ಸುಖ-ದುಃಖಾದಿ ಫಲಗಳೂ ನಾಶವಾದ ಬಳಿಕ ಲಿಂಗದೇಹರಹಿತನಾದ, ಆಕಾಶದಂತೆ ನಿರ್ಲಿಪ್ತನಾದ ಜೀವನು ತನ್ನ ಸ್ವರೂಪವನ್ನು ಹೊಂದಿ ಸಂಸಾರದಲ್ಲಿ ನಿರಾಸಕ್ತಿಯನ್ನು ಹೊಂದುತ್ತಾನೆ. ಸ್ವರೂಪೇಂದ್ರಿಯಗಳಿಂದಲೇ ಎಲ್ಲವನ್ನೂ ನೋಡುತ್ತಾನೆ.
ಯಥೋರ್ಣನಾಭಿಃ ಪರಿವರ್ತಮಾನ-
ಸ್ತಂತುಕ್ಷಯೇ ತಿಷ್ಠತಿ ಪಾತ್ಯಮಾನಃ |
ತಥಾ ವಿಮುಕ್ತಃ ಪ್ರಜಹಾತಿ ದುಃಖಂ
ವಿಧ್ವಂಸತೇ ಲೋಷ್ಟ ಇವಾದ್ರಿಮರ್ಚ್ಛನ್ ॥58॥
ಯಾವ ರೀತಿಯಾಗಿ ಜೇಡರ ಹುಳುವು ತಾನೇ ಕಲ್ಪಿಸಿಕೊಂಡ ಬಲೆಯಲ್ಲಿ ಸೇರಿಕೊಂಡಿರುತ್ತದೆ. ತನ್ನ ಗೂಡನ್ನು ಬಿಟ್ಟು ಹೊರಗೆ ಬಂದಾಗ ಬಲೆಯಿಂದ ಮುಕ್ತವಾಗುತ್ತದೆ. ಇದರಂತೆ ಮುಕ್ತಾತ್ಮನು ಕಲ್ಲಿನ ಪರ್ವತದಿಂದ ಬಿದ್ದ ಹೆಂಟೆಯು ಪುಡಿಪುಡಿಯಾಗುವಂತೆ ಸಮಸ್ತ ದುಃಖಬಂಧನಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.
ಯಥಾ ರುರುಃ ಶೃಂಗಮಥೋ ಪುರಾಣಂ
ಹಿತ್ವಾ ತ್ವಚಂ ವಾಪ್ಯುರಗೋ ಯಥಾವತ್ |
ವಿಹಾಯ ಗಚ್ಛತ್ಯನವೇಕ್ಷಮಾಣ-
ಸ್ತಥಾ ವಿಮುಕ್ತೋ ವಿಜಹಾತಿ ದುಃಖಮ್ ॥59॥

ಹಾವು ತನ್ನ ಪೊರೆಯನ್ನು ಸುಲಿದುಕೊಂಡು ತೆಗೆದ ಮೇಲೆ ತನ್ನ ಅವಯವ ಎನಿಸಿದ ಪೊರೆಯನ್ನು ಕಣ್ಣೆತ್ತಿಯೂ ನೋಡದೆ ಹೊರಟು ಹೋಗುತ್ತದೋ ಮನುಷ್ಯನು ತನ್ನ ಸಮಸ್ತ ಭೌತಿಕ ಸಂಗಗಳನ್ನು ಬಿಟ್ಟು ದುಃಖಗಳನ್ನೆಲ್ಲ ನೀಗಿದ ಬಳಿಕ ಮೋಹ ವಿಮುಕ್ತನಾಗಿ ದುಃಖವನ್ನು ಕಳೆದುಕೊಂಡು ಸುಖವನ್ನು ಅನುಭವಿಸುತ್ತಾನೆ.

ದ್ರುಮಂ ಯಥಾ ವಾಪ್ಯುದಕೇ ಪತಂತ-
ಮುತ್ಸೃಜ್ಯ ಪಕ್ಷೀ ಪ್ರಪತತ್ಯಸಕ್ತಃ |
ತಥಾ ಹ್ಯಸೌ ಸುಖದುಃಖೇ ವಿಹಾಯ
ಮುಕ್ತಃ ಪರಾರ್ಧ್ಯಾಂ ಗತಿಮೇತ್ಯಲಿಂಗಃ ॥60॥

ಒಂದು ಮರದ ಮೇಲೆ ಕುಳಿತಿರುವ ಪಕ್ಷಿಯು ಆ ಮರವು ನೀರಿನಲ್ಲಿ ಮುಳುಗಿ ಹೋಗುವ ಸ್ಥಿತಿ ಬಂದಾಗ ಕೂಡಲೇ ಅದನ್ನು ಬಿಟ್ಟು ಅದರ ಚಿಂತೆಯೇ ಇಲ್ಲದೆ ಹೇಗೆ ಓಡಿಹೋಗುತ್ತದೋ, ಮುಕ್ತಾತ್ಮನು ಇದರಂತೆ ಲಿಂಗಶರೀರವನ್ನು ಬಿಟ್ಟು ಸುಖ-ದುಃಖಗಳ ಸಂಬಂಧವಿಲ್ಲದೇ ಅತ್ಯಂತ ಶ್ರೇಯಸ್ಕರವಾದ ಗತಿಯನ್ನು ಹೊಂದುತ್ತಾನೆ.

ಇಮಾನ್ ಸ್ವಲೋಕಾನನುಪಶ್ಯ ಸರ್ವಾನ್
ವ್ರಜತ್ಯಥಾಕಾಶಮಿವಾಪ್ತುಕಾಮಃ |
ಇಮಾಂ ಹಿ ಗಾಥಾಂ ಪ್ರಲಪನ್ ಯಥಾಸ್ತಿ
ಸಮಸ್ತಸಂಕಲ್ಪವಿಶೇಷಮುಕ್ತಃ ॥61॥
ಅಯಂ ಹಿ ಸರ್ವಂ ಕಿಲ ಸರ್ವಭಾವೇ
ಹ್ಯಹಂ ತದಂತರ್ಹ್ಯಹಮೇವ ಭೋಕ್ತಾ ॥62॥

ಈ ತಮ್ಮ ಲೋಕಗಳನ್ನು ನೋಡುತ್ತಿರುವ ಸಾಧಕನು ಎಲ್ಲಾ ಲೋಕಗಳನ್ನು ಸುತ್ತುತ್ತಾ ಇವುಗಳಲ್ಲಿರುವ ನಶ್ವರತೆಯನ್ನು ಕಂಡು ಆಕಾಶನಾಮಕನಾದ ಭಗವಂತನನ್ನೇ ಹೊಂದಲು ಹೇಗೆ ಬಯಸುತ್ತಾನೋ ಅವನು ಮದಾಧಾರಭೂತನಾದ ಪರಮಾತ್ಮನೇ ಸರ್ವ ಎನಿಸಿದ್ದಾನೆ. ಸಮಸ್ತ ಜೀವರನ್ನು ಸೃಷ್ಟಿಸುವುದರಿಂದ ಸರ್ವಭಾವನೆನಿಸಿದ್ದಾನೆ. ಸರ್ವವ್ಯಾಪ್ತನಾದ ಸರ್ವಶಬ್ದವಾಚ್ಯನಾದ ಭಗವಂತನೇ ಅಹಂ ಎನಿಸಿದ್ದಾನೆ. ಮುಕ್ತಿಯಲ್ಲಿಯೂ ಆ ಪರಮಾತ್ಮನ ಉದರದಲ್ಲಿ ಸೇರಿದವನು ನಾನು. ಎಂದಿಗೂ ಅವನ ಜೊತೆ ಐಕ್ಯವನ್ನು ಹೊಂದಲಿಲ್ಲ. ನನ್ನ ಯೋಗ್ಯತೆಗನುಗುಣವಾಗಿ ನಾನು ಸುಖವನ್ನು ಅನುಭವಿಸುತ್ತೇನೆ. ಹೀಗೆ ತಿಳಿಯುತ್ತಾ ಸಮಸ್ತ ಬಾಹ್ಯ ಸಂಕಲ್ಪದಿಂದಲೂ ಮುಕ್ತನಾಗಿ ಭಗವಂತನ ಅನುಗ್ರಹದ ಬಗ್ಗೆಯೇ ಮಾತನಾಡುತ್ತಿರುತ್ತಾನೆ.

ಅಪಿ ಚ ಭವತಿ ಮೈಥಿಲೇನ ಗೀತಂ
ನಗರಮುಪಾಹಿತಮಗ್ನಿನಾಭಿವೀಕ್ಷ್ಯ |
ನ ಖಲು ಮಮ ತುಷೋಽಪಿ ದಹ್ಯತೇಽತ್ರ
ಸ್ವಯಮಿದಮಾಹ ಕಿಲ ಸ್ಮ ಭೂಮಿಪಾಲಃ ॥63॥

ಹಿಂದೊಮ್ಮೆ ಮಿಥಿಲಾದಿಪತಿಯಾದ ಜನಕನು ತನ್ನ ನಗರವೆಲ್ಲವೂ ಸುಡುತ್ತಿರುವುದನ್ನು ನೋಡಿ ನನ್ನ ಪಟ್ಟಣವೆಲ್ಲವೂ ದಗ್ಧವಾದರೂ ನನ್ನದೊಂದೂ ಸುಡಲಿಲ್ಲ ಎಂದು ವಿರಕ್ತನಾಗಿ ಹೇಳಿದನಂತೆ.

ಇದಮಮೃತಪದಂ ವಿದೇಹರಾಜಃ
ಸ್ವಯಮಿಹ ಪಂಚಶಿಖೇನ ಭಾಷ್ಯಮಾಣಃ |
ನಿಖಿಲಮಭಿಸಮೀಕ್ಷ್ಯ ನಿಶ್ಚಿತಾರ್ಥಂ
ಪರಮಸುಖೀ ವಿಜಹಾರ ವೀತಶೋಕಃ ॥64॥

ಪಂಚಶಿಖನು ಹೇಳಿದ ಅಮೃತಮಯವಾದ ಜ್ಞಾನೋಪದೇಶವನ್ನು ಕೇಳಿ ಜನದೇವನೆನಿಸಿದ ಜನಕನು ನಿಶ್ಚಿತವಾದ ಸಿದ್ಧಾಂತಕ್ಕೆ ಬಂದನು. ಪಂಚಶಿಖನು ಹೇಳಿದ್ದೆಲ್ಲವನ್ನೂ ಮನಸ್ಸಿನಲ್ಲಿಯೇ ವಿಚಾರ ಮಾಡುತ್ತಾ ಅದೇ ನಿಜವಾದ ತತ್ತ್ವವೆಂದು ನಿಶ್ಚಯಿಸಿ ಪರಮಸುಖದಿಂದಿದ್ದನು.

ಇಮಂ ಹಿ ಯಃ ಪಠತಿ ವಿಮೋಕ್ಷನಿಶ್ಚಯಂ
ನ ಹೀಯತೇ ಸತತಮವೇಕ್ಷತೇ ತಥಾ |
ಉಪದ್ರವಾನ್ನಾನುಭವತ್ಯದುಃಖಿತಃ
ಪ್ರಮುಚ್ಯತೇ ಕಪಿಲಮಿವೈತ್ಯ ಮೈಥಿಲಃ ॥65॥

ಯುಧಿಷ್ಠಿರನೇ, ಮೋಕ್ಷವಿಚಾರವಾದ ಈ ಸಂವಾದವನ್ನು ಯಾರು ಬಾಯಿಂದ ಪಠಿಸುತ್ತಾರೋ, ಮನಸ್ಸಿನಿಂದ ಚಿಂತಿಸುತ್ತಾರೋ ಅವರು ಸಮಸ್ತ ದುಃಖಗಳಿಂದ ಮುಕ್ತರಾಗಿ ಮಿಥಿಲಾಧಿಪತಿಯಾದ ಜನಕನಂತೆ ಮೋಕ್ಷಕ್ಕೆ ಭಾಗಿಯಾಗುತ್ತಾರೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
॥ ಪಂಚಶಿಖವಾಕ್ಯಂ ಸಮಾಪ್ತಮ್ ॥
* * * * *

ಐವತ್ತೆರಡನೆಯ ಅಧ್ಯಾಯ

ಭೀಷ್ಮರು ಯುಧಿಷ್ಠಿರನನ್ನು ಕುರಿತು ಜನಕನ ಉಪಾಖ್ಯಾನವನ್ನು ಹೇಳಿದುದು.

ಯುಧಿಷ್ಠಿರಃ
ಕಿಂ ಕಾರಣಂ ಮಹಾಪ್ರಾಜ್ಞ ದಹ್ಯಮಾನಸ್ಯ ಮೈಥಿಲಃ |

ಮಿಥಿಲಾಂ ನೇಹ ಧರ್ಮಾತ್ಮಾ ಪ್ರಾಹ ವೀಕ್ಷ್ಯ ವಿದಾಹಿತಾಮ್ ॥1॥
ಯುಧಿಷ್ಠಿರ ಮಹಾಪ್ರಾಜ್ಞನಾದ ಭೀಷ್ಮನೇ, ಜನಕ ಮಹಾರಾಜನು ತನ್ನ ಮಿಥಿಲಾ ಪಟ್ಟಣವು ಭಸ್ಮವಾಗುತ್ತಿರಲು ತನ್ನದ್ದೇನು ನಾಶವಾಗಲಿಲ್ಲವೆಂದು ಹೇಳಿದ ಎಂದು ಕೇಳಿಸಿಕೊಂಡಿದ್ದೇನೆ. ಜನಕರಾಜನು ಹೀಗೆ ಹೇಳಲು ಕಾರಣವೇನು?
ಭೀಷ್ಮಃ
ಶ್ರೂಯತಾಂ ನೃಪಶಾರ್ದೂಲ ಯದರ್ಥಂ ದೀಪಿತಾ ಪುರಾ |
ವಹ್ನಿನಾ ದೀಪಿತಾ ಸಾ ತು ತನ್ಮೇ ಶೃಣು ಮಹಾಮತೇ ॥2॥
ಭೀಷ್ಮ ರಾಜಶ್ರೇಷ್ಠನೇ, ನನ್ನ ಮಾತನ್ನು ಕೇಳಿಸಿಕೊ. ಜನಕ ಕುಲದ ಜನದೇವನು ತನ್ನಲ್ಲಿ ತಾನೇ ಕರ್ಮಗಳನ್ನು ಕುರಿತು ವಿಚಾರ ಮಾಡುತ್ತಾ, ಅದೇ ಧ್ಯಾನದಿಂದ ಇರುವಾಗ ಯಾವ ಕಾರಣದಿಂದ ಪಟ್ಟಣವು ಬೆಂಕಿಯಿಂದ ಸುಟ್ಟಿತೋ ಅದಕ್ಕೆ ಸಂಬಂಧಿಸಿದಂತಹ ವಿಚಾರವನ್ನು ಹೇಳುತ್ತೇನೆ, ಕೇಳಿಸಿಕೊ.
ಜನಕೋ ಜನದೇವಸ್ತು ಕರ್ಮಾಣ್ಯಾಧ್ಯಾಯ ಚಾತ್ಮನಿ |
ಸರ್ವಭಾವಮನುಪ್ರಾಪ್ಯ ಭಾವೇನ ವಿಚಚಾರ ಸಃ ॥3॥
ಜನದೇವನಾದ ಜನಕ ಮಹಾರಾಜನು ತನ್ನಲ್ಲಿ ತಾನೇ ಕರ್ಮಗಳನ್ನು ವಿಚಾರ ಮಾಡುತ್ತಾ, ಎಲ್ಲರನ್ನೂ ಸೃಷ್ಟಿಸಿದ ಭಗವಂತನಲ್ಲಿಯೇ ಏಕಾಗ್ರಚಿತ್ತದಿಂದ ಧ್ಯಾನ ಮಾಡುತ್ತಾ ಆ ಧ್ಯಾನದಿಂದಲೇ ಸಂಚರಿಸುತ್ತಿದ್ದನು.
ಯಜನ್ ದದಂಸ್ತಥಾ ಜುಹ್ವನ್ ಪಾಲಯನ್ ಪೃಥಿವೀಮಿಮಾಮ್ |
ಅಧ್ಯಾತ್ಮವಿನ್ಮಹಾಪ್ರಾಜ್ಞಸ್ತನ್ಮಯತ್ವೇನ ನಿಷ್ಠಿತಃ ॥4॥
ಯಜ್ಞವನ್ನು ಮಾಡುವಾಗ, ದಾನಾದಿ ಕರ್ಮಗಳನ್ನು ಮಾಡುವಾಗ, ಭೂಮಿಯನ್ನು ಪಾಲಿಸುವಾಗ ಎಲ್ಲಾ ಕಾಲಗಳಲ್ಲಿಯೂ ಭಗವಂತನ ವಿಷಯದಲ್ಲಿಯೇ ಜನಕ ಮಹಾರಾಜನು ಮಗ್ನನಾಗಿರುತ್ತಿದ್ದನು.
ಸ ತಸ್ಯ ಹೃದಿ ಸಂಕಲ್ಪಂ ಜ್ಞಾತುಮೈಚ್ಛತ್ ಸ್ವಯಂ ಪ್ರಭುಃ |
ಸರ್ವಲೋಕಾಧಿಪಸ್ತತ್ರ ದ್ವಿಜರೂಪೇಣ ಸಂಯುತಃ ॥5॥
ಸರ್ವೇಶ್ವರನಾದ ಭಗವಂತನು ಸ್ವಯಂ ತಾನೇ ಜನಕ ಮಹಾರಾಜನ ಮನಸ್ಸನ್ನು ಪರೀಕ್ಷಿಸಬೇಕೆಂದು ಸಂಕಲ್ಪಿಸಿ ಬ್ರಾಹ್ಮಣ ವೇಷದಿಂದ ಮಿಥಿಲೆಗೆ ಆಗಮಿಸಿದನು.
ಮಿಥಿಲಾಯಾಂ ಮಹಾಬುದ್ಧಿರ್ವ್ಯಲೀಕಂ ಕಿಂಚಿದಾಚರನ್ |
ಸ ಗೃಹೀತ್ವಾ ದ್ವಿಜಶ್ರೇಷ್ಠೈಃ ನೃಪಾಯ ಪ್ರತಿವೇದಿತಃ ॥6॥
ಆ ಬ್ರಾಹ್ಮಣ ವೇಷದಲ್ಲಿ ಆಗಮಿಸಿದ ಭಗವಂತನು ಮಹಾಜಾಣನಾಗಿದ್ದರೂ ಮಿಥಿಲಾ ಪಟ್ಟಣದಲ್ಲಿ ಏನೋ ಒಂದು ತಪ್ಪನ್ನು ರಾಜನಿಗೆ ತಿಳಿಯುವಂತೆ ಮಾಡಿದನು. ಆ ತಪ್ಪಿಗಾಗಿ ಬ್ರಾಹ್ಮಣರೆಲ್ಲರೂ ಒಟ್ಟಾಗಿ ತಪ್ಪು ಮಾಡಿದ ಬ್ರಾಹ್ಮಣವೇಷದ ಭಗವಂತನನ್ನು ಬಂಧಿಸಿ ರಾಜನ ಮುಂದೆ ತಂದೊಪ್ಪಿಸಿದರು.
ಅಪರಾಧಂ ಸಮುದ್ದಿಶ್ಯ ತಂ ರಾಜಾ ಪ್ರತ್ಯಭಾಷತ |
ನ ತ್ವಾಂ ಬ್ರಾಹ್ಮಣ ದಂಡೇನ ನಿಯೋಕ್ಷ್ಯಾಮಿ ಕಥಂಚನ ॥7॥
ತಪ್ಪು ಮಾಡಿದ ಬ್ರಾಹ್ಮಣನನ್ನು ಉದ್ದೇಶಿಸಿ ರಾಜನು ಪ್ರತಿಯಾಗಿ ಹೀಗೆ ಹೇಳಿದನು: ವಿಪ್ರೋತ್ತಮನೇ, ನೀನು ಅಪರಾಧಿಯಾಗಿದ್ದರೂ ನಾನು ನಿನಗೆ ಕಠಿಣವಾದ ದಂಡನೆಯನ್ನು ಯಾವುದೇ ಕಾರಣದಿಂದ ನೀಡುವುದಿಲ್ಲ.
ಮಮ ರಾಜ್ಯಾದ್ ವಿನಿರ್ಗಚ್ಛ ಯಾವತ್ಸೀಮಾ ಭುವೋ ಮಮ |
ತಚ್ಛ್ರುತ್ವಾ ಬ್ರಾಹ್ಮಣೋ ಗತ್ವಾ ರಾಜಾನಂ ಪ್ರತ್ಯುವಾಚ ಹ ॥8॥
ನೀನು ಈ ಅಪರಾಧದಿಂದಾಗಿ ನನ್ನ ರಾಜ್ಯದ ಸೀಮೆಯನ್ನು ದಾಟಿ ಹೊರಟು ಹೋಗು ಎಂದು ಹೇಳಿದನು. ಆಗ ಬ್ರಾಹ್ಮಣನು ರಾಜನನ್ನು ಕುರಿತು ಹೇಳುತ್ತಾನೆ.
ಕರಿಷ್ಯೇ ವಚನಂ ರಾಜನ್ ಬ್ರವೀಹಿ ಮಮ ಜಾನತಃ |
ಕಾ ಸೀಮಾ ತವ ಭೂಮೇಸ್ತು ಬ್ರೂಹಿ ಧರ್ಮಂ ಮಮಾದ್ಯ ವೈ ॥9॥
ಪ್ರಭು, ನಿನ್ನ ಆಜ್ಞೆಯಂತೆ ನಾನು ನಡೆದುಕೊಳ್ಳುತ್ತೇನೆ. ಆದರೆ ನನಗೆ ತಿಳಿದ ಒಂದು ಅಭಿಪ್ರಾಯವನ್ನು ನಿನ್ನ ಮುಂದೆ ಹೇಳಲು ಇಚ್ಛಿಸುತ್ತೇನೆ. ಈ ನಿನ್ನ ರಾಜ್ಯದ ಸೀಮೆ ಯಾವುದು ಎಂಬುದನ್ನು ಪ್ರಾಮಾಣಿಕವಾಗಿ, ಧರ್ಮದಿಂದ ನನಗೆ ತಿಳಿಸಿಕೊಡು ಎಂದು ಹೇಳಿದನು.
ತಚ್ಛ್ರುತ್ವಾ ಮೈಥಿಲೋ ರಾಜಾ ಲಜ್ಜಯಾವನತಾನನಃ |
ನೋವಾಚ ವಚನಂ ವಿಪ್ರಂ ತತ್ತ್ವಬುದ್ಧ್ಯಾ ಸಮೀಕ್ಷ್ಯ ತತ್ ॥10॥
ಬ್ರಾಹ್ಮಣನ ಈ ಮಾತನ್ನು ಕೇಳಿಸಿಕೊಂಡ ಜನಕರಾಜನು ಬ್ರಾಹ್ಮಣನ ಮಾತಿನ ಆಂತರ್ಯವನ್ನು ತಿಳಿದು, ತಾತ್ವಿಕವಾದ ಅವನ ಮಾತಿನಿಂದ ಲಜ್ಜಿತನಾಗಿ ತಲೆ ತಗ್ಗಿಸಿದನು. ಏನನ್ನೂ ಹೇಳದೆ ಮೌನವಹಿಸಿದನು.
ಪುನಃ ಪುನಶ್ಚ ತಂ ವಿಪ್ರಶ್ಚೋದಯಾಮಾಸ ಸತ್ವರಮ್ |
ಬ್ರೂಹಿ ರಾಜೇಂದ್ರ ಗಚ್ಛಾಮಿ ತವ ರಾಜ್ಯಾದ್ ವಿವಾಸಿತಃ ॥11॥
ಆದರೆ ಮೌನಿಯಾದ ರಾಜನನ್ನು ವಿಪ್ರನಾದರೂ ಪುನಃ ಪುನಃ ಹೇಳು ಹೇಳು ಎಂದು ಪ್ರಚೋದಿಸಿದನು. ರಾಜನೇ, ನಿನ್ನ ರಾಜ್ಯದ ಸೀಮೆಯನ್ನು ದಾಟಿ ನಾನು ಎಲ್ಲಿಗೆ ಹೋಗಲಿ? ನನಗೆ ಹೇಳು ಎಂದು ಒತ್ತಾಯಿಸಿದನು.
ತತೋ ನೃಪೋ ವಿಚಾರ್ಯೈವಮಾಹ ಬ್ರಾಹ್ಮಣಪುಂಗವಮ್ |
ಆವಾಸೋ ವಾ ನ ಮೇಽಸ್ತ್ಯತ್ರ ಸರ್ವಾ ವಾ ಪೃಥಿವೀ ಮಮ |
ಗಚ್ಛ ವಾ ತಿಷ್ಠ ವಾ ಬ್ರಹ್ಮನ್ನಿತಿ ಮೇ ನಿಶ್ಚಿತಾ ಮತಿಃ ॥12॥

ಈ ಬ್ರಾಹ್ಮಣನ ಮಾತನ್ನು ಕೇಳಿಸಿಕೊಂಡ ಜನಕರಾಜನು ವಿಚಾರ ಮಾಡಿ ಬ್ರಾಹ್ಮಣ ಶ್ರೇಷ್ಠನನ್ನು ಕುರಿತು ಹೇಳುತ್ತಾನೆ- `ಬ್ರಾಹ್ಮಣನೇ, ಈ ಜಗತ್ತಿನ ಯಾವ ಒಂದು ಭೂಮಿಯ ತುಣುಕೂ ನನ್ನದ್ದಲ್ಲ. ಆದರೆ ಈ ಸಮಗ್ರ ಭೂಮಂಡಲವು ಸದ್ಯದಲ್ಲಿ ನನ್ನ ಆಳ್ವಿಕೆಗೆ ಒಳಪಟ್ಟಿದೆ. ನೀನು ಈ ಸ್ಥಳದಿಂದ ಹೊರಡಬಹುದು ಅಥವಾ ಇಲ್ಲಿಯೇ ಇರಬಹುದು. ನಿನ್ನನ್ನು ನಿರ್ಬಂಧಿಸುವ ಅಧಿಕಾರ ನನಗಿಲ್ಲ ಎಂದು ನನ್ನ ಬುದ್ಧಿಯು ನಿಶ್ಚಿತವಾಗಿ ಹೇಳುತ್ತಿದೆ'.
ಇತ್ಯುಕ್ತಃ ಸ ತಥಾ ತೇನ ಮೈಥಿಲೇನ ದ್ವಿಜೋತ್ತಮಃ |
ಅಬ್ರವೀತ್ ತಂ ಮಹಾತ್ಮಾನಂ ರಾಜಾನಂ ಮಂತ್ರಿಭಿರ್ವೃತಮ್ ॥13॥
ಈ ರೀತಿಯಾಗಿ ಜನಕಮಹಾರಾಜನು ಬ್ರಾಹ್ಮಣನನ್ನು ಕುರಿತು ಹೇಳುತ್ತಿರಲು ದ್ವಿಜಶ್ರೇಷ್ಠನು ಮಹಾತ್ಮನಾದ ರಾಜನನ್ನು ಕುರಿತು, ಮಂತ್ರಿಗಳಿಂದ ಸಹಿತನಾಗಿರುವ ರಾಜನಿಗೆ ಹೀಗೆ ಹೇಳಿದನು.
ತ್ವಮೇವಂ ಪದ್ಮನಾಭಸ್ಯ ನಿತ್ಯಂ ಪಕ್ಷಪದಾಹಿತಃ |
ಅಹೋ ಸಿದ್ಧಾರ್ಥರೂಪೋಽಸಿ ಗಮಿಷ್ಯೇ ಸ್ವಸ್ತಿ ತೇಽಸ್ತು ವೈ ॥14॥
ರಾಜನೇ, ನೀನು ಪ್ರತಿದಿನವೂ ಪದ್ಮನಾಭರೂಪಿಯಾದ ಪರಮಾತ್ಮನ ಪಾದಾವಲಂಬಿಯಾಗಿ ಅವನ ಸಿದ್ಧಾಂತವನ್ನು ಅನುಸರಿಸಿ ರಾಜ್ಯಭಾರವನ್ನು ನಡೆಸುತ್ತಿರುವಿ. ನೀನು ಸಾಧನೆಯ ಮಜಲಿನ ಎತ್ತರವನ್ನು ಏರಿರುತ್ತಿ. ನಿನಗೆ ಮಂಗಳವಾಗಲಿ, ನಾನು ಹೋಗಿ ಬರುತ್ತೇನೆ.
ಇತ್ಯುಕ್ತ್ವಾ ಪ್ರಯಯೌ ವಿಪ್ರಸ್ತಜ್ಜಿಜ್ಞಾಸುರ್ದ್ವಿಜೋತ್ತಮಮ್ |
ಅದಹಚ್ಚಾಗ್ನಿನಾ ತಸ್ಯ ಮಿಥಿಲಾಂ ಭಗವಾನ್ ಸ್ವಯಮ್ ॥15॥
ಈ ರೀತಿಯಾಗಿ ಬ್ರಾಹ್ಮಣನು ಹೇಳಿ ಹೊರಟನು. ಅಲ್ಲಿ ನೆರೆದಿರುವ ಬ್ರಾಹ್ಮಣರೆಲ್ಲರಿಗೂ ಜನಕ ಮಹಾರಾಜನ ಮನೋದಾರ್ಢ್ಯವೇನೆಂಬುದನ್ನು ತಿಳಿಯ ಪಡಿಸಲು ಕಣ್ಮರೆಯಾದನು. ಮಾತ್ರವಲ್ಲದೆ ಸ್ವಲ್ಪ ಹೊತ್ತಿನ ಬಳಿಕ ಭಗವಂತನು ಜನಕನ ರಾಜಧಾನಿಯಾದ ಮಿಥಿಲೆಗೆ ಬೆಂಕಿಯನ್ನೊಡ್ಡಿದನು.
ಪ್ರದೀಪ್ಯಮಾನಾಂ ಮಿಥಿಲಾಂ ದೃಷ್ಟ್ವಾ ರಾಜಾ ನ ಕಮ್ಪಿತಃ |
ಜನೈಃ ಸ ಪರಿಪೃಷ್ಟಸ್ತು ವಾಕ್ಯಮೇತದುವಾಚ ಹ ॥16॥
ಜನಕನ ಪುರವು ಸುಟ್ಟು ಹೋಗುತ್ತಿರುವುದನ್ನು ನೋಡಿಯೂ ಜನಕರಾಜನು ಎದೆಗುಂದದೆ ನಿಶ್ಚಲವಾಗಿದ್ದನು. ಜನರೆಲ್ಲರೂ ಬಂದು ರಾಜನಲ್ಲಿ ಮಿಥಿಲೆಗೆ ಬೆಂಕಿ ಬಿದ್ದಿದೆ, ಆದರೂ ಮೌನವಹಿಸಿರುವಿ ಏಕೆ? ಎಂದು ಕೇಳಲು ಜನಕರಾಜನು ಹೀಗೆ ಹೇಳಿದನು.
ಅನಂತಂ ಬತ ಮೇ ವಿತ್ತಂ ಭಾವ್ಯಂ ಮೇ ನಾಸ್ತಿ ಕಿಂಚನ |
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತೇ ॥17॥
ಪ್ರಪಂಚದಲ್ಲಿ ನನ್ನ ಧನವು ಎಂದಿಗೂ ನಾಶವನ್ನು ಹೊಂದುವುದಿಲ್ಲ. ಮಹಾಜನರೇ, ಈ ಪ್ರಪಂಚದಲ್ಲಿ ನನ್ನದ್ದು ಎಂದು ಭಾವಿಸುವ ಯಾವ ಪದಾರ್ಥವೂ ಇರುವುದಿಲ್ಲ. ಮಿಥಿಲಾ ಪಟ್ಟಣವೇ ಭಸ್ಮವಾಗಿ ಹೋದರೂ ನನಗೆ ಸಂಬಂಧಪಟ್ಟ ಯಾವುದೂ ಭಸ್ಮವಾಗುವುದಿಲ್ಲ ಎಂದು ಹೇಳಿದನು.
ತದಸ್ಯ ಭಾಷಮಾಣಸ್ಯ ಶ್ರುತ್ವಾ ಶ್ರುತ್ವಾ ಹೃದಿ ಸ್ಥಿತಮ್ |
ಪುನಃ ಸಂಜೀವಯಾಮಾಸ ಮಿಥಿಲಾಂ ತಾಂ ದ್ವಿಜೋತ್ತಮಃ ॥18॥
ರಾಜನ ಈ ದೃಢಸಂಕಲ್ಪವನ್ನು ಕೇಳಿ ಎಲ್ಲರೂ ಆಶ್ಚರ್ಯಚಕಿತರಾದರು. ಪುನಃ ಬ್ರಾಹ್ಮಣವೇಷದಿಂದ ಆಗಮಿಸಿದ ಭಗವಂತನು ಮಿಥಿಲಾನಗರವನ್ನು ಮೊದಲಿನಂತೆಯೇ ಉದ್ಧಾರ ಮಾಡಿ ಜನಕನ ಮುಂದೆ ಪ್ರತ್ಯಕ್ಷವಾಗಿ ನಿಂತನು.
ಆತ್ಮಾನಂ ದರ್ಶಯಾಮಾಸ ವರಂ ಚಾಸ್ಮೈ ದದೌ ಪುನಃ |
ಧರ್ಮೇ ತಿಷ್ಠತು ಸದ್ಭಾವೋ ಬುದ್ಧಿಸ್ತೇಽರ್ಥೇ ನರಾಧಿಪ ॥19॥
ತನ್ನ ಪ್ರತ್ಯಕ್ಷ ದರ್ಶನವನ್ನು ಜನಕನಿಗೆ ನೀಡಿ ಆ ಜನಕನಿಗೆ ಪುನಃ ವರವನ್ನು ನೀಡಿದನು. ಜನಕರಾಜನೇ, ನಿನಗೆ ಇದೇ ರೀತಿಯಾಗಿ ನಿರಂತರವೂ ಯಥಾರ್ಥವಾದ ಬುದ್ಧಿಯು ಧರ್ಮದಲ್ಲಿ ನೆಲೆಯಾಗಿರಲಿ. ಪರಮಾತ್ಮನಲ್ಲಿ ಎಂದಿಗೂ ಬುದ್ಧಿಯು ಪ್ರವರ್ತಿಸುತ್ತಿರಲಿ. ಅರ್ಥದಲ್ಲಿಯೂ ನಿನ್ನ ಬುದ್ಧಿಯು ಪ್ರವರ್ತಿಸುತ್ತಿರಲಿ.
ಸತ್ಯೇ ತಿಷ್ಠಸ್ವ ನಿರ್ವಿಣ್ಣಃ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ |
ಇತ್ಯುಕ್ತ್ವಾ ಭಗವಾಂಶ್ಚೈನಂ ತತ್ರೈವಾಂತರಧೀಯತ |
ಏತತ್ ತೇ ಕಥಿತಂ ರಾಜನ್ ಕಿಂ ಭೂಯಃ ಶ್ರೋತುಮಿಚ್ಛಸಿ ॥20॥
ಸತ್ಯದ ವಿಷಯದಲ್ಲಿ ನೆಲೆಗೊಂಡು ಇರುವ ನಿನಗೆ ಮಂಗಳವಾಗಲಿ. ನಾನು ಹೋಗಿ ಬರುತ್ತೇನೆ ಎಂದು ಭಗವಂತನು ಹೇಳಿ ಅಲ್ಲಿಯೇ ಅದೃಶ್ಯನಾದನು. ಧರ್ಮರಾಜನೇ, ನೀನು ಕೇಳಿದ ಪ್ರಶ್ನೆಗೆ ಉತ್ತರಿಸಿದ್ದೇನೆ. ಮತ್ತೂ ಏನನ್ನು ಕೇಳಲು ಬಯಸುತ್ತಿ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಐವತ್ಮೂರನೆಯ ಅಧ್ಯಾಯ
ಗೃಹಸ್ಥಾಶ್ರಮದಲ್ಲಿಯೂ ಮೋಕ್ಷಸಾಧನೆಯನ್ನು ಮಾಡಿಕೊಳ್ಳಬಹುದು ಎಂದು ತಿಳಿಸಲು ಭೀಷ್ಮರು ಯುಧಿಷ್ಠಿರನಿಗೆ ಸುವರ್ಚಲೋಪಾಖ್ಯಾನವನ್ನು ಹೇಳಿದುದು.
ಯುಧಿಷ್ಠಿರಃ
ಅಸ್ತಿ ಕಶ್ಚಿದ್ ಯದಿ ವಿಭೋ ಸದಾರೋ ನಿಯತೋ ಗೃಹೇ |

ಅತೀತಸರ್ವಸಂಸಾರಃ ಸರ್ವದ್ವಂದ್ವವಿವರ್ಜಿತಃ |
ತಂ ಮೇ ಬ್ರೂಹಿ ಮಹಾಪ್ರಾಜ್ಞ ದುರ್ಲಭಃ ಪುರುಷೋ ಮಹಾನ್ ॥1॥
ಯುಧಿಷ್ಠಿರ ಪಿತಾಮಹನೇ, ಜಗತ್ತಿನಲ್ಲಿ ಪತ್ನೀಸಹಿತನಾಗಿ ಇರುವ ಗೃಹಸ್ಥಾಶ್ರಮಿಯು ತನ್ನ ಆಶ್ರಮದಲ್ಲಿಯೇ ಇದ್ದುಕೊಂಡು, ಸಂಸಾರವನ್ನು ದಾಟಿ ಸುಖ- ದುಃಖಗಳೆಂಬ ದ್ವಂದ್ವಗಳನ್ನು ಜಯಿಸಲು ಸಾಧ್ಯವೇ? ಈ ರೀತಿಯಾಗಿ ಜಯಿಸಿದ ಮನುಷ್ಯನು ಯಾವನಾದರೂ ಇದ್ದಾನೆಯೇ? ಅಂತಹ ಮಹಾತ್ಮರು ದುರ್ಲಭ ಎಂದು ನನಗೆ ತೋರುತ್ತಿದೆ.
ಭೀಷ್ಮಃ
ಶೃಣು ರಾಜನ್ ಯಥಾವೃತ್ತಂ ಯನ್ಮಾಂ ತ್ವಂ ಪೃಷ್ಟವಾನಸಿ |
ಇತಿಹಾಸಮಿಮಂ ಶುದ್ಧಂ ಸಂಸಾರಭಯಭೇಷಜಮ್ ॥2॥
ಭೀಷ್ಮ ಯುಧಿಷ್ಠಿರನೇ, ಇದಕ್ಕೂ ಒಂದು ಇತಿಹಾಸವಿದೆ. ನೀನು ನನ್ನ ಬಳಿ ಪ್ರಶ್ನೆಯನ್ನು ಕೇಳಿರುತ್ತಿ. ಸಂಸಾರಭಯಕ್ಕೆ ಔಷಧಿಯಂತಿರುವ ಈ ಶುದ್ಧವಾದ ಇತಿಹಾಸವನ್ನು ಕೇಳಿಸಿಕೊ.
ದೇವಲೋ ನಾಮ ವಿಪ್ರರ್ಷಿಃ ಸರ್ವಶಾಸ್ತ್ರಾರ್ಥಕೋವಿದಃ |
ಕ್ರಿಯಾವಾನ್ ಧಾರ್ಮಿಕೋ ನಿತ್ಯಂ ದೇವಬ್ರಾಹ್ಮಣಪೂಜಕಃ ॥3॥
ಹಿಂದೆ ದೇವಲ ಎಂಬ ಬ್ರಹ್ಮರ್ಷಿಯೊಬ್ಬನಿದ್ದನು. ಅವನು ಸಮಸ್ತ ಶಾಸ್ತ್ರಗಳಲ್ಲಿ ಜ್ಞಾನಿಯಾಗಿದ್ದನು. ಆಚಾರಶೀಲನೂ, ಧಾರ್ಮಿಕನೂ, ನಿತ್ಯವೂ ದೇವ-ಬ್ರಾಹ್ಮಣ- ಪೂಜಕನೂ ಆಗಿದ್ದನು.
ಸುತಾ ಸುವರ್ಚಲಾ ನಾಮ ತಸ್ಯ ಕಲ್ಯಾಣಲಕ್ಷಣಾ |
ನಾತಿಹ್ರಸ್ವಾ ನಾತಿಕೃಶಾ ನಾತಿದೀರ್ಘಾ ಯಶಸ್ವಿನೀ ॥4॥
ಇಂತಹ ಶ್ರೇಷ್ಠನಾದ ಬ್ರಾಹ್ಮಣನಿಗೆ ಕಲ್ಯಾಣಲಕ್ಷಣಗಳಿಂದ ಕೂಡಿರುವ ಸುವರ್ಚಲೆ ಎಂಬ ಮಗಳಿದ್ದಳು. ಅವಳು ಆಕಾರದಲ್ಲಿ ಅತಿ ಉದ್ದವೂ ಇಲ್ಲದೆ, ಅತೀ ಗಿಡ್ಡಳೂ ಅಲ್ಲದೆ, ಅತ್ಯಂತ ಕೃಶಳೂ ಅಲ್ಲದೆ ಯಶಸ್ವಿನಿಯಾಗಿ, ಲಕ್ಷಣಸಂಪನ್ನೆಯಾಗಿ ಇದ್ದಳು. ಅವಳಿಗೆ ಒಂದು ಬಾರಿ ಯೋಗ್ಯವಾದ ವಯಸ್ಸು ಬಂದಿರುವುದನ್ನು ಕಂಡು ತಂದೆಯಾದ ದೇವಲನು ಯೋಚಿಸಿದನು, ಚಿಂತಿಸಿದನು.
ಅಸ್ಯಾಃ ಪತಿಃ ಕುತೋ ವೇತಿ ಬ್ರಾಹ್ಮಣಃ ಶ್ರೋತ್ರಿಯಃ ಪರಃ |
ವಿದ್ವಾನ್ ವಿಪ್ರೋ ಹ್ಯಕುಟುಂಬಃ ಪ್ರಿಯವಾದೀ ಮಹಾತಪಾಃ ॥5॥
ಈ ನನ್ನ ಮಗಳಿಗೆ ಯೋಗ್ಯನಾದ ಪತಿಯು ಎಲ್ಲಿದ್ದಾನೆ? ಶುದ್ಧನಾದ, ಶಾಸ್ತ್ರೀಯ ಸಂಪನ್ನನಾದ, ಶ್ರೋತ್ರಿಯನಾದ ಬ್ರಾಹ್ಮಣನು ಎಲ್ಲಿ ದೊರಕುತ್ತಾನೆ? ಈ ರೀತಿಯಾದ ಬ್ರಾಹ್ಮಣೋತ್ತಮನೂ ಪ್ರಿಯವಾದಿಯೂ, ವಿದ್ವಾಂಸನೂ ಆದ ಬ್ರಹ್ಮಚಾರಿಗೆ ಈಕೆಯನ್ನು ಕೊಟ್ಟು ವಿವಾಹ ಮಾಡಬೇಕೆಂದು ಚಿಂತಿಸಿದನು.
ವ್ಯಾಖ್ಯಾನ ವಿಶೇಷ `ವಿದ್ವಾನ್ ವಿಪ್ರೋ ಹ್ಯಕುಟುಂಬಃ' ವ್ಯಾಸರ ಮಾತು. ಹ್ಯಕೂಟುಂಬಃ ಎಂದು ದೀರ್ಘವಾದಲ್ಲಿ ಛಂದೋಭಂಗವಾಗದು. ಅಕುಟುಂಬಃ ಎಂದು ಛಂದೋಭಂಗವಾಗದಂತೆ ವ್ಯಾಸರು ಪ್ರಯೋಗಿಸಿದ್ದಾರೆ. `ಅಪಿ ಮಾಷಂ ಮಷಂ ಕುರ್ಯಾತ್ ಛಂದೋಭಂಗಂ ನ ಕಾರಯೇತ್' ಎಂಬ ಪ್ರಮಾಣದ ಆಧಾರದಲ್ಲಿ ಅಕೂಟುಂಬಃ ಎಂದು ಹೇಳುವ ಬದಲು ಅಕುಟುಂಬಃ ಎಂದು ಹೇಳಿದ್ದಾರೆ.
ಇತ್ಯೇವಂ ಚಿಂತಯಾನಂ ತಂ ರಹಸ್ಯಾಹ ಸುವರ್ಚಲಾ ॥6॥
ಅಂಧಾಯ ಮಾಂ ಮಹಾಪ್ರಾಜ್ಞ ದೇಹ್ಯನಂಧಾಯ ವೈ ಪಿತಃ |
ಏವಂ ಸ್ಮರ ಸದಾ ವಿದ್ವನ್ ಮಮೇದಂ ಪ್ರಾರ್ಥಿತಂ ಮುನೇ ॥7॥
ಈ ರೀತಿಯಾಗಿ ತಂದೆಯು ಚಿಂತಿಸುತ್ತಿರಲು ಸುವರ್ಚಲೆಯು ಏಕಾಂತದಲ್ಲಿ ತಂದೆಯನ್ನು ಕುರಿತು ಹೀಗೆ ಹೇಳಿದಳು. ಜನಕನೇ, ನೀನು ನನ್ನನ್ನು ಕುರಿತು ವಿವಾಹ ಮಾಡುವುದಾದರೆ ಕುರುಡನಾಗಿಯೂ, ಕುರುಡನಲ್ಲದೆಯೂ ಇರುವ ವ್ಯಕ್ತಿಗೆ ನನ್ನನ್ನು ಕೊಡು. ಈ ಅಂಶವನ್ನು ನೆನಪಿನಲ್ಲಿಟ್ಟುಕೊಂಡು ವರಾನ್ವೇಷಣೆಯನ್ನು ಮಾಡು. ಈ ರೀತಿಯಾದ ವರನೇ ಬೇಕೆಂಬ ನನ್ನ ಬಯಕೆ ಇದೆ ಎಂದು ರಹಸ್ಯವಾಗಿ ತಿಳಿಸಿದಳು.
ಪಿತಾ
ನ ಶಕ್ಯಂ ಪ್ರಾರ್ಥಿತಂ ವತ್ಸೇ ತ್ವಯಾಽದ್ಯ ಪ್ರತಿಭಾತಿ ಮೇ |
ಅಂಧತಾನಂಧತಾ ಚೇತಿ ವಿಕಾರೋ ಮಮ ಜಾಯತೇ ॥8॥
ಪಿತಾ ಮಗಳೇ, ಏನು ಹೇಳುತ್ತಿರುವೆ? ನಿನ್ನ ಅಪೇಕ್ಷೆಯನ್ನು ನಡೆಸುವುದು ಅಸಂಭವವು. ಒಬ್ಬನೇ ಮನುಷ್ಯನು ಕುರುಡನಾಗಿಯೂ, ಕುರುಡನಲ್ಲದೆಯೂ ಇರಲು ಹೇಗೆ ಸಾಧ್ಯ? ನನ್ನ ಮನಸ್ಸಿನಲ್ಲಿ ನಿನ್ನ ಮಾತಿನ ಅರ್ಥವು ಕಳವಳಗೊಳ್ಳುತ್ತಿದೆ.
ಉನ್ಮತ್ತೇವಾಶುಭಂ ವಾಕ್ಯಂ ಭಾಷಸೇ ಶುಭಲೋಚನೇ ॥9॥
ಹುಚ್ಚಿಯಂತೆ ಅಶುಭವಾದ ಮಾತನ್ನು ಶುಭಲೋಚನೆಯಾದ ನೀನು ಹೇಳುತ್ತಿರುವಿ.
ಸುವರ್ಚಲಾ
ನಾಹಮುನ್ಮತ್ತಭೂತಾಽದ್ಯ ಬುದ್ಧಿಪೂರ್ವಂ ಬ್ರವೀಮಿ ತೇ |
ವಿದ್ಯತೇ ಚೋತ್ಪತಿಸ್ತಾದೃಕ್ ಸ ಮಾಂ ಭರತಿ ವೇದವಿತ್ ॥10॥
ಸುವರ್ಚಲೆ ತಂದೆಯೇ ನಾನು ಹುಚ್ಚಿಯಲ್ಲ. ಯೋಚಿಸಿ ಬುದ್ಧಿಪೂರ್ವಕವಾಗಿ ಈ ಮಾತನ್ನು ಆಡುತ್ತಿದ್ದೇನೆ. ಈ ರೀತಿಯಾದ ಪತಿಯೇ ನನ್ನನ್ನು ವರಿಸಲು ಅರ್ಹನಾಗಿದ್ದಾನೆ. ಅವನೇ ನಿಜವಾದ ವೇದಜ್ಞನು ಎಂದು ಭಾವಿಸಿದ್ದೇನೆ.
ಯೇಭ್ಯಸ್ತ್ವಂ ಮನ್ಯಸೇ ದಾತುಂ ಮಾಮಿಹಾನಯ ತಾನ್ ದ್ವಿಜಾನ್ |
ತಾದೃಶಂ ತಂ ಪತಿಂ ತೇಷು ವರಯಿಷ್ಯೇ ಯಥಾತಥಮ್ ॥11॥
ನೀನು ಯಾವ ಬ್ರಾಹ್ಮಣನಿಗೆ ನನ್ನನ್ನು ಕೊಟ್ಟು ವಿವಾಹ ಮಾಡಲು ಬಯಸುತ್ತೀಯೋ ಅವನನ್ನು ನನ್ನ ಬಳಿ ಕರೆದುಕೊಂಡು ಬಾ.

ನೀನು ಕರೆದುತಂದ ವ್ಯಕ್ತಿಗಳಲ್ಲಿ ಆ ರೀತಿಯಾದ ಪತಿಯನ್ನೇ ಆರಿಸಿ ನಾನು ಹಿಂದೆ ಹೇಳಿದಂತೆ ವರಿಸುತ್ತೇನೆ.
ಭೀಷ್ಮ:
ತಥೇತಿ ಚೋಕತ್ವ ತಾಂ ಕನ್ಯಾಮೃಷಿಃ ಶಿಷ್ಯಾನುವಾಚ ಹ |
ಬ್ರಾಹ್ಮಣಾನ್ ವೇದಸಂಪನ್ನಾನ್ ಯೋನಿಗೋತ್ರವಿಶೋಧಿತಾನ್ ॥12॥
ಮಾತೃತಃ ಪಿತೃತಃ ಶುದ್ಧಾನ್ ಶುದ್ಧಾನಾಚರತಃ ಶುಭಾನ್ |
ಅರೋಗಾನ್ ಬುದ್ಧಿಸಂಪನ್ನಾನ್ ಶೀಲಸತ್ವಗುಣಾನ್ವಿತಾನ್ ॥13॥
ಅಸಂಕೀರ್ಣಾಂಶ್ಚ ಗೋತ್ರೇಷು ವೇದವ್ರತಸಮನ್ವಿತಾನ್ |
ಬ್ರಾಹ್ಮಣಾನ್ ಸ್ನಾತಕಾನ್ ಶೀಘ್ರಂ ಮಾತಾಪಿತೃಸಮನ್ವಿತಾನ್ |
ನಿವೇಷ್ಟುಕಾಮಾನ್ ಕನ್ಯಾಂ ಮೇ ದೃಷ್ಟ್ವಾಽಽನಯತ ಶಿಷ್ಯಕಾಃ ॥14॥
ಭೀಷ್ಮ ದೇವಲರು ಹಾಗೆಯೇ ಆಗಲೆಂದು ಮಗಳಿಗೆ ಹೇಳಿ, ತನ್ನ ಶಿಷ್ಯರನ್ನು ಕುರಿತು ಹೇಳುತ್ತಾರೆ- ಶಿಷ್ಯರೇ, ಜಾತಿ-ಗೋತ್ರಗಳನ್ನು, ಕುಲಾಚಾರಗಳನ್ನು ವಿಚಾರ ಮಾಡಿ ವೇದಸಂಪನ್ನರಾದ ಬ್ರಾಹ್ಮಣರನ್ನು ತಂದೆಯಿಂದಲೂ, ತಾಯಿಯಿಂದಲೂ ಶುದ್ಧವಾದ ಪರಂಪರೆಯಲ್ಲಿ ಆಗಮಿಸಿರುವ, ಆಚಾರದಿಂದ ಶುದ್ಧರಾಗಿರುವ, ನೋಡಲು ಮಂಗಳ ಸ್ವರೂಪರಾದ, ರೋಗರಹಿತರಾದ, ಬುದ್ಧಿಸಂಪನ್ನರಾದ, ಶೀಲ-ಸತ್ವಗುಣಗಳಿಂದ ತುಂಬಿರುವ, ನಮ್ಮ ಗೋತ್ರದಿಂದ ಭಿನ್ನರಾಗಿರುವ, ವೇದವ್ರತಗಳಲ್ಲಿ ಆಸಕ್ತರಾಗಿರುವ, ಸ್ನಾತಕರಾದ, ತಂದೆ-ತಾಯಿಗಳಿಂದ ಕೂಡಿರುವ ಬ್ರಾಹ್ಮಣರನ್ನು ಕೂಡಲೇ ಕರೆದುಕೊಂಡು ಬನ್ನಿರಿ. ನನ್ನ ಮಗಳಿಗೆ ಇಷ್ಟವಾಗುವಂತಹ ಪುರುಷರು ಅವರು ಆಗಿರಬೇಕು ಎಂದು ಹೇಳಿದರು.
ತಚ್ಛ್ರುತ್ವಾ ತ್ವರಿತಾಃ ಶಿಷ್ಯಾ ಹ್ಯಾಶ್ರಮೇಷು ತತಸ್ತತಃ |
ಗ್ರಾಮೇಷು ಚ ತತೋ ಗತ್ವಾ ಬ್ರಾಹ್ಮಣೇಭ್ಯೋ ನ್ಯವೇದಯನ್ ॥15॥
ಒಡನೆಯೇ ಶಿಷ್ಯರು ಅಲ್ಲಲ್ಲಿ ಆಶ್ರಮಗಳಲ್ಲಿಯೂ, ಗ್ರಾಮಗಳಲ್ಲಿಯೂ ಸುತ್ತಾಡಿ ಅಲ್ಲಲ್ಲಿನ ಬ್ರಾಹ್ಮಣರಿಗೆ ಈ ಅಂಶಗಳನ್ನು ಹೇಳಿದರು.
ಋಷೇಃ ಪ್ರಭಾವಂ ಮತ್ವಾ ತೇ ಕನ್ಯಾಯಾಶ್ಚ ದ್ವಿಜೋತ್ತಮಾಃ |
ಅನೇಕಮುನಯೋ ರಾಜನ್ ಸಂಪ್ರಾಪ್ತಾ ದೇವಲಾಶ್ರಮಮ್ ॥16॥
ದೇವಲರ ಪ್ರಭಾವವನ್ನು, ಆ ದೇವಲರ ಮಗಳಾದ ಸುವರ್ಚಲೆಯ ಪ್ರಭಾವವನ್ನು ತಿಳಿದಿರುವ ಅನೇಕ ಬ್ರಾಹ್ಮಣಕುಮಾರರು, ಅನೇಕ ಮುನಿಗಳು ದೇವಲರ ಆಶ್ರಮಕ್ಕೆ ಈ ಸುದ್ದಿಯನ್ನು ಕೇಳಿ ಆಗಮಿಸಿದರು.
ಅನುಮಾನ್ಯ ಯಥಾನ್ಯಾಯಂ ಮುನೀನ್ ಮುನಿಕುಮಾರಕಾನ್ |
ಅಭ್ಯರ್ಚ್ಯ ವಿಧಿವತ್ ತತ್ರ ಕನ್ಯಾ ಪ್ರಾಹ ಪಿತಾ ಮಹಾನ್ ॥17॥
ಆಶ್ರಮಕ್ಕೆ ಆಗಮಿಸಿದ ವ್ಯಕ್ತಿಗಳನ್ನೆಲ್ಲ ದೇವಲರು ಅತ್ಯಂತ ಗೌರವದಿಂದ ಬರಮಾಡಿಕೊಂಡು ಅವರನ್ನು ವಿಧಿವತ್ತಾಗಿ ಪೂಜಿಸಿ ಶ್ರೇಷ್ಠ ತಂದೆಯಾದ ದೇವಲರು ಕನ್ಯೆಯನ್ನು ಕುರಿತು ಹೇಳಿದರು.
ಏತೇಽಪಿ ಮುನಯೋ ವತ್ಸೇ ಸ್ವಪುತ್ರೈಕಮತಾ ಇಹ |
ವೇದವೇದಾಂಗಸಂಪನ್ನಾಃ ಕುಲೀನಾಃ ಶೀಲಸಮ್ಮತಾಃ ॥18॥
ವತ್ಸೇ, ಇಲ್ಲಿ ನೋಡು. ಆಗಮಿಸಿರುವ ಋಷಿಕುಮಾರರನ್ನು ಅವಲೋಕಿಸು. ಇವರೆಲ್ಲರೂ ತಮ್ಮ ಮಕ್ಕಳಲ್ಲಿಯೇ ಅಭಿಪ್ರಾಯವುಳ್ಳವರಾಗಿ ಅರ್ಥಾತ್ ಉತ್ತಮ ಸಂತಾನಾರ್ಥಿಗಳಾಗಿ ಆಗಮಿಸಿದ್ದಾರೆ. ಎಲ್ಲರೂ ವೇದವೇದಾಂಗ ಸಂಪನ್ನರು, ಕುಲೀನರು, ಶೀಲಸಂಪನ್ನರು.
ಯೇಽಮೀ ತೇಷು ವರಂ ಭದ್ರೇ ತ್ವಮಿಚ್ಛಸಿ ಮಹಾವ್ರತಮ್ |
ತಂ ಕುಮಾರಂ ವೃಣೀಷ್ವಾದ್ಯ ತಸ್ಮೈ ದಾಸ್ಯಾಮ್ಯಹಂ ಶುಭೇ ॥19॥
ಇಲ್ಲಿ ಆಗಮಿಸಿರುವ ಕುಮಾರರಲ್ಲಿ ಇಷ್ಟಬಂದವರನ್ನು ನೀನು ವರಿಸಬಹುದು. ನೀನು ಒಪ್ಪಿದವನಿಗೆ ನಿನ್ನನ್ನು ವಿವಾಹ ಮಾಡಿಕೊಡಲು ನಾನು ಸಿದ್ಧನಾಗಿದ್ದೇನೆ ಎಂದು ಹೇಳಿದರು.
ತಥೇತಿ ಚೋಕತ್ವ ಕಲ್ಯಾಣೀ ತಪ್ತಹೇಮನಿಭಾ ತದಾ |
ಸರ್ವಲಕ್ಷಣಸಂಪನ್ನಾ ವಾಕ್ಯಮಾಹ ಯಶಸ್ವಿನೀ ॥20॥
ವಿಪ್ರಾಣಾಂ ಸಮಿತೀರ್ದೃಷ್ಟ್ವಾ ಪ್ರಣಿಪತ್ಯ ತಪೋಧನಾನ್ |
ಯದ್ಯಸ್ತಿ ಸಮಿತೌ ವಿಪ್ರೋ ಹ್ಯಂಧೋಽನಂಧಃ ಸ ಮೇ ವರಃ ॥21॥
ಬ್ರಾಹ್ಮಣನ ಮಾತಿಗೆ ಆಗಲೆಂದು ಹೇಳಿದ ಸುವರ್ಚಲೆಯು ಸರ್ವಲಕ್ಷಣ ಸಂಪನ್ನೆಯಾಗಿ ಚಲಿಸುವ ಬಂಗಾರದಂತಹ ದೇಹಚ್ಛಾಯೆಯನ್ನು ಹೊಂದಿದ್ದಳು. ಆ ಬ್ರಾಹ್ಮಣರ ಮುಂದೆ ಆಗಮಿಸಿ ನಮಸ್ಕರಿಸಿ ಯಶಸ್ವಿನಿಯಾದ ಸುವರ್ಚಲೆಯು ಹೀಗೆ ಹೇಳಿದಳು- `ಓ ಮಹಾತ್ಮರೇ, ನಿಮ್ಮಲ್ಲಿ ಅಂಧನೂ ಅಂಧನಲ್ಲದೇ ಇರುವವನೂ ಆದ ವ್ಯಕ್ತಿಯು ನನಗೆ ವರನಾಗಬಹುದು' ಎಂದು ಹೇಳಿದಳು.
ತತ್ ಶ್ರುತ್ವಾ ಮುನಯಸ್ತತ್ರ ವೀಕ್ಷಮಾಣಾಃ ಪರಸ್ಪರಮ್ |
ನೋಚುರ್ವಿಪ್ರಾ ಮಹಾಭಾಗಾಃ ಕನ್ಯಾಂ ಮತತ್ವ ಹ್ಯವೇದಿಕಾಮ್ ॥
ಆಗಮಿಸಿದ ಬ್ರಾಹ್ಮಣರು ಕನ್ಯೆಯ ಈ ಮಾತುಗಳನ್ನು ಕೇಳಿಸಿಕೊಂಡು ಕನ್ಯೆಯು ಅಪ್ರಬುದ್ಧಳಾಗಿದ್ದಾಳೆ ಎಂದು ತಿಳಿದು ಮಹಾಭಾಗರಾದ ಅವರೆಲ್ಲರೂ ಪರಸ್ಪರ ತಮ್ಮ ಮುಖಗಳನ್ನೇ ನೋಡಿಕೊಂಡರು. ಏನನ್ನೂ ಹೇಳಲಿಲ್ಲ.
ಕುತ್ಸಯಿತ್ವಾ ಮುನಿಂ ತತ್ರ ಮನಸಾ ಮುನಿಸತ್ತಮಾಃ |
ಯಥಾಗತಂ ಯಯುಃ ಕ್ರುದ್ಧಾ ನಾನಾದೇಶನಿವಾಸಿನಃ ॥23॥
ಮನಸ್ಸಿನಿಂದಲೇ ಆ ಬ್ರಾಹ್ಮಣಶ್ರೇಷ್ಠರೆಲ್ಲರೂ ದೇವಲಮುನಿಯನ್ನು ನಿಂದಿಸಿಕೊಂಡು, ಬಂದ ದಾರಿಯನ್ನೇ ಅನುಸರಿಸಿ ಹೊರಟರು.

ನಾನಾ ದೇಶಗಳಿಂದ ಆಗಮಿಸಿದ ಎಲ್ಲರೂ ಕ್ರುದ್ಧರಾಗಿ ಹೊರಟು ಹೋದರು.
ಕನ್ಯಾ ಚ ಸಂಸ್ಥಿತಾ ತತ್ರ ಪಿತೃವೇಶ್ಮನಿ ಭಾಮಿನೀ ॥24॥
ಬಳಿಕ ಸ್ವಲ್ಪ ದಿನಗಳ ತನಕವೂ ಸುವರ್ಚಲೆಯು ತಂದೆಯ ಮನೆಯಲ್ಲಿಯೇ ವಾಸ ಮಾಡುತ್ತಿದ್ದಳು.
ತತಃ ಕದಾಚಿದ್ ಬ್ರಹ್ಮಣ್ಯೋ ವಿದ್ವಾನ್ ನ್ಯಾಯವಿಶಾರದಃ ।
ಊಹಾಪೋಹವಿಧಾನಜ್ಞೋ ಬ್ರಹ್ಮವರ್ಚಸಮನ್ವಿತಃ ॥25॥
ಸ್ವಲ್ಪ ದಿನಗಳ ಬಳಿಕ ಶ್ವೇತಕೇತು ಎಂಬ ಋಷಿಕುಮಾರನಿಗೆ ಇಲ್ಲಿ ನಡೆದ ಸಮಾಚಾರವು ತಿಳಿಯಿತು. ಆತನಾದರೂ ಬ್ರಾಹ್ಮಣಪ್ರಿಯನು, ಊಹಾಪೋಹ ವಿದ್ವಾಂಸನು, ನ್ಯಾಯಶಾಸ್ತ್ರ ಪಂಡಿತನೂ, ಸ್ಥಿರವಾದ ಬ್ರಹ್ಮಚರ್ಯದಲ್ಲಿ ರತನೂ ಆಗಿದ್ದನು.
ವೇದವಿದ್ ವೇದತತ್ವಜ್ಞಃ ಕ್ರಿಯಾಕಲ್ಪವಿಶಾರದಃ ।
ಆತ್ಮತತ್ವವಿಭಾಗಜ್ಞಃ ಪಿತೃಮಾನ್ ಗುಣಸಾಗರಃ ॥26॥
ವೇದಗಳನ್ನು, ವೇದದ ರಹಸ್ಯಗಳನ್ನು, ಕರ್ಮಸ್ವರೂಪಗಳನ್ನು, ಅವುಗಳ ಫಲಗಳನ್ನು, ಪರಮಾತ್ಮನ ಸ್ವರೂಪವನ್ನು, ಪರಮಾತ್ಮನಿಗೂ ತನಗೂ ಇರುವ ಭೇದವನ್ನು ಇವೆಲ್ಲವನ್ನೂ ಚೆನ್ನಾಗಿ ಬಲ್ಲವನಾಗಿದ್ದನು. ತಂದೆಯುಳ್ಳವನಾಗಿದ್ದನು. ಗುಣಗಳ ಸಾಗರನಾಗಿದ್ದನು.
ಶ್ವೇತಕೇತುರಿತಿ ಖ್ಯಾತಃ ಶ್ರುತ್ವಾ ವೃತ್ತಾಂತಮಾದರಾತ್ ।
ಕನ್ಯಾರ್ಥಂ ದೇವಲಂ ಚಾಪಿ ಶೀಘ್ರಂ ತತ್ರಾಗತೋಽಭವತ್ ॥27॥
ಶ್ವೇತಕೇತು ಎಂದು ಹೆಸರನ್ನು ಹೊಂದಿದ ಈ ಋಷಿಕುಮಾರನನು ಸಂತೋಷದಿಂದ ಈ ವೃತ್ತಾಂತವನ್ನು ಕೇಳಿಸಿಕೊಂಡು ಕನ್ಯಾರ್ಥಿಯಾಗಿ ಶೀಘ್ರವಾಗಿ ದೇವಲರ ಆಶ್ರಮಕ್ಕೆ ಆಗಮಿಸಿದನು.
ಉದ್ದಾಲಕಸುತಂ ದೃಷ್ಟ್ವಾ ಶ್ವೇತಕೇತುಂ ಮಹಾವ್ರತಮ್ ।
ಯಥಾನ್ಯಾಯಂ ಚ ಸಂಪೂಜ್ಯ ದೇವಲಃ ಪ್ರತ್ಯಭಾಷತ ॥28॥
ಮಹಾವ್ರತನಿಷ್ಠನಾದ, ಉದ್ದಾಲಕರ ಸುತನಾದ ಶ್ವೇತಕೇತುವು ತನ್ನ ಆಶ್ರಮಕ್ಕೆ ಆಗಮಿಸಿದ್ದನ್ನು ಕಂಡು ಅವನನ್ನು ಸತ್ಕರಿಸಿ ಅವನನ್ನು ಕುರಿತು ಹೇಳಿದರು.
ಕನ್ಯೇ ಏಷ ಮಹಾಭಾಗ ಪ್ರಾಪ್ತೋ ಋಷಿಕುಮಾರಕಃ ।
ವರಯೈನಂ ಮಹಾಪ್ರಾಜ್ಞಂ ವೇದವೇದಾಂಗಪಾರಗಮ್ ॥29॥
ಭಾಗ್ಯಶಾಲಿನಿಯಾದ ಸುವರ್ಚಲೆಯೇ, ಋಷಿಕುಮಾರನಾದ ಶ್ವೇತಕೇತುವು ಆಗಮಿಸಿದ್ದಾನೆ. ವೇದವೇದಾಂಗ ಪಾರಗನಾದ ಮಹಾಪ್ರಾಜ್ಞನನ್ನು ನೀನು ವರಿಸು.
ತಚ್ಛ್ರುತ್ವಾ ಕುಪಿತಾ ಕನ್ಯಾ ಋಷಿಪುತ್ರಮುದೈಕ್ಷತ ।
ತಾಂ ಕನ್ಯಾಮಾಹ ವಿಪ್ರರ್ಷಿಃ ಸೋಽಹಂ ಭದ್ರೇ ಸಮಾಗತಃ ॥30॥
ತಂದೆಯ ಮಾತನ್ನು ಕೇಳಿದ ಕನ್ಯೆಯು ಸಿಟ್ಟಿನಿಂದಲೇ ಋಷಿಪುತ್ರನನ್ನು ನೋಡಿದಳು. ಬ್ರಾಹ್ಮಣಶ್ರೇಷ್ಠನು ಆ ಕನ್ಯೆಯನ್ನು ಕುರಿತು ಮಂಗಳೆಯೇ, ನಾನೇ ಶ್ವೇತಕೇತುವು, ಆಗಮಿಸಿದ್ದೇನೆ ಎಂದು ಹೇಳಿದನು.
ಅಂಧೋಽಹಮತ್ರ ತತ್ತ್ವಂ ಹಿ ತಥಾ ಮನ್ಯೇ ಚ ಸರ್ವದಾ ।
ವಿಶಾಲನಯನಂ ವಿದ್ಧಿ ತಥಾ ಮಾಂ ಹೀನಸಂಶಯಮ್ ॥31॥
ಎಲೈ ಭದ್ರೆಯೇ, ಇದೋ ನಾನು ನಿನ್ನ ವಿವಾಹಕ್ಕಾಗಿ ಬಂದಿದ್ದೇನೆ. ನಿನ್ನ ಶಪಥದಂತೆ ನಾನು ಈ ಸಂಸಾರದಲ್ಲಿ ನಿಜವಾಗಿಯೂ ಕುರುಡನಾಗಿದ್ದೇನೆ. ನಿನ್ನ ಭಾವನೆಗೆ ಅನುಗುಣವಾದ ಭಾವ ನನ್ನಲ್ಲಿದೆ. ಆದರೆ ನನಗೆ ಸಂಶಯರಹಿತವಾದ ಭಗವದ್ ಜ್ಞಾನವು ವಿಶಾಲವಾಗಿರುವುದರಿಂದ ನನ್ನ ಕಣ್ಣುಗಳು ಸ್ಪಷ್ಟವಾಗಿವೆ ಎಂದು ತಿಳಿ. ಆದ್ದರಿಂದ ನಿನ್ನ ಉದ್ದೇಶದಂತೆ ಅಂಧನೂ, ನಿರಂಧನೂ ಆಗಿರುವ ನನ್ನನ್ನು ಉತ್ತಮಳಾದ ನೀನು ಸ್ವೀಕರಿಸು. ನಾನು ನಿನ್ನನ್ನು ಪ್ರೀತಿಯಿಂದಲೇ ಸ್ವೀಕರಿಸುತ್ತೇನೆ.
ಯೇನೇದಂ ವೀಕ್ಷತೇ ನಿತ್ಯಂ ವೃಣೋತಿ ಸ್ಪೃಶತೇಽಥವಾ ।
ಘ್ರಾಯತೇ ವಕ್ತಿ ಸತತಂ ಯೇನೇದಂ ಸಾರ್ಯತೇ ಪುನಃ ॥32॥
ಯಾವ ಪರಮಾತ್ಮನಿಂದ ಈ ಜೀವನು ನೋಡಲ್ಪಡುತ್ತಾನೋ, ನಿತ್ಯವೂ ಜೀವನು ಶ್ರವಣ, ಸ್ಪರ್ಶನ, ಘ್ರಾಣಾದಿಗಳನ್ನು ಅನುಭವಿಸುತ್ತಾನೋ, ಯಾವ ಭಗವಂತನ ಅನುಗ್ರಹದಿಂದ ಕರ್ಮಗಳನ್ನು ಆಚರಿಸುತ್ತಾನೋ,
ಯೇನೇದಂ ಮನ್ಯತೇ ತತ್ತ್ವಂ ಯೇನ ಬುಧ್ಯತಿ ವಾ ಪುನಃ ।
ನ ಚಕ್ಷುರ್ವಿದ್ಯತೇ ಹ್ಯೇಷಃ ಸ ವೈ ಭೂತಾಂಧ ಉಚ್ಯತೇ ॥33॥
ಯಾವ ಭಗವಂತನ ಅನುಗ್ರಹದಿಂದ ತತ್ತ್ವಗಳನ್ನು ತಿಳಿಯುತ್ತಾನೋ, ಯಾವ ಭಗವಂತನ ಅನುಗ್ರಹದಿಂದಲೇ ಪುನಃ ಪುನಃ ಅರ್ಥಮಾಡಿಕೊಳ್ಳುತ್ತಾನೋ, ಅಂಥ ಈ ಜೀವಾತ್ಮನಿಗೆ ಪರಮಾತ್ಮನೇ ಚಕ್ಷುಸ್ಸೆನಿಸಿದ್ದಾನೆ. ಭಗವಂತನೆಂಬ ಕಣ್ಣು ಯಾರಿಗಿಲ್ಲವೋ ಅವನು ಪ್ರಾಣಿ ಪ್ರಪಂಚದಲ್ಲೇ ಅಂಧ ಎಂದು ಕರೆಸಿಕೊಳ್ಳುತ್ತಾನೆ.
ಯಸ್ಮಿನ್ ಪ್ರವರ್ತತೇ ಚೇದಂ ಪಶ್ಯನ್ ಶೃಣ್ವನ್ ಸ್ಪೃಶನ್ನಪಿ ।
ಜಿಘ್ರಂಶ್ಚ ರಸಯಂಸ್ತದ್ವದ್ ವರ್ತತೇ ಯೇನ ಚಕ್ಷುಷಾ ॥34॥
ಜಗತ್ತಿನಂತೆ ಯಾವ ಪರಮಾತ್ಮನಿಂದ ಈ ಜಗತ್ತಿನಲ್ಲಿ ಪ್ರವೃತ್ತಿಯನ್ನು ಹೊಂದುತ್ತದೋ ಅದರಂತೆ ಜೀವನು ಭಗವಂತನ ಅಧೀನವಾಗಿಯೇ ಇರುತ್ತಾನೆ. ನೋಡುವ ಕಣ್ಣು ನನ್ನದಲ್ಲ. ಈ ಜಗತ್ತನ್ನು ನೋಡಲು ನಾನು ಅಂಧನೇ ಆಗಿದ್ದೇನೆ. ಆದ್ದರಿಂದ ನನ್ನನ್ನು ಅಂಧನೆಂದೇ ಭಾವಿಸಬಹುದು. ನೋಡುತ್ತಲೂ, ಕೇಳುತ್ತಲೂ, ಸ್ಪರ್ಶಿಸುತ್ತಲೂ, ಘ್ರಾಣಿಸುತ್ತಲೂ, ರಸವನ್ನು ಸವಿಯುತ್ತಲೂ ಇರುವ ವಿಷಯದ ಕಣ್ಣು ನನಗೆ ಇರುವುದಿಲ್ಲ.
ತನ್ಮೇ ನಾಸ್ತಿ ತತೋ ಹ್ಯಂಧೋ ವೃಣು ಭದ್ರೇಽದ್ಯ ಮಾಮತಃ ।

ಲೋಕದೃಷ್ಟ್ಯಾ ಕರೋಮೀಹ ನಿತ್ಯನೈಮಿತ್ತಿಕಾದಿಕಮ್ ॥35॥
ಆತ್ಮದೃಷ್ಟ್ಯಾ ಚ ತತ್ಸರ್ವಂ ವಿಲಿಪ್ಯಾಮಿ ಚ ನಿತ್ಯಶಃ।
ಸ್ಥಿತೋಽಹಂ ನಿರ್ಭರಃ ಶಾಂತಃ ಕಾರ್ಯಕಾರಣಭಾವನಃ ॥36॥
ಆದ್ದರಿಂದ ಈ ವಿಷಯದಲ್ಲಿ ನಾನು ಅಂಧನೇ ಆಗಿದ್ದೇನೆ. ತತ್ತ್ವಜ್ಞಾನದಲ್ಲಿ ಸಂಶಯರಹಿತನಾಗಿದ್ದೇನೆ. ನನ್ನ ಕಣ್ಣುಗಳು ಸ್ವಚ್ಛವಾಗಿಯೂ ಇವೆಯೆಂದು ತಿಳಿ. ನನ್ನನ್ನು ನೀನು ವರಿಸಬಹುದು. ಪರಮಾತ್ಮನಲ್ಲಿಯೇ ಜ್ಞಾನವುಳ್ಳ ನಾನು ಜಗತ್ತಿನ ಕರ್ಮವನ್ನು ಮಾಡುತ್ತಿದ್ದರೂ ನಿತ್ಯವೂ ಅವುಗಳ ಲೇಪವನ್ನು ಹೊಂದದಂತೆ ಎಚ್ಚರವನ್ನು ವಹಿಸುತ್ತೇನೆ. (ಪರಮಾತ್ಮನಲ್ಲಿ ದೃಷ್ಟಿಯುಳ್ಳವರಲ್ಲಿ ಕರ್ಮವು ಲೇಪಿಸವು ಎಂದು ಭಾವ). ನಿತ್ಯವೂ ನಾನು ಕಾರ್ಯರೂಪವಾದ ಪ್ರಪಂಚಕ್ಕೆ ಕಾರಣನೆನಿಸಿದ ಪರಮಾತ್ಮನನ್ನೇ ಧ್ಯಾನಿಸುತ್ತಾ ನಿರ್ಭರನಾಗಿ ಶಾಂತನಾಗಿರುತ್ತೇನೆ.
ಅವಿದ್ಯಯಾ ತರನ್ ಮೃತ್ಯುಂ ವಿದ್ಯಯಾ ತಂ ತಥಾಽಮೃತಮ್।
ಯಥಾಪ್ರಾಪ್ತಂ ತು ಸಂದೃಶ್ಯ ವಸಾಮೀಹ ವಿಮತ್ಸರಃ।
ಕ್ರೀತೇ ವ್ಯವಸಿತಂ ಭದ್ರೇ ಭರ್ತಾಽಹಂ ತೇ ವೃಣೀಷ್ವ ಮಾಮ್ ॥37॥
ನಿಂದಿತವಾದ ದುಶ್ಶಾಸ್ತ್ರಗಳನ್ನು ನಾನು ಖಂಡಿಸುತ್ತಾ ಭಗವಂತನ ಪ್ರಸಾದಕ್ಕೆ ಪಾತ್ರನಾಗಿ, ಮೃತ್ಯುವನ್ನು ಜಯಿಸುತ್ತಾ, ಭಗವಂತನ ವಿದ್ಯೆಯಿಂದ ಮೋಕ್ಷರೂಪವಾದ ಸಂಪತ್ತನ್ನು ಹೊಂದುತ್ತಾ, ಅಸೂಯಾರಹಿತನಾಗಿ ಯಥಾಯೋಗ್ಯನಾಗಿ ಈ ಜಗತ್ತನ್ನು ನೋಡುತ್ತಾ ವಾಸಿಸಿದ್ದೇನೆ. ಎಲೈ ಭದ್ರೆಯೇ, ನಿನ್ನ ಶಪಥದಂತೆ ಈಗ ನೀನು ನನಗೆ ವಿಕ್ರಯಿಸಲ್ಪಟ್ಟವಳಾಗಿರುವಿ. ನಾನು ನಿನ್ನ ಗಂಡನು. ನೀನು ನನ್ನನ್ನು ಇನ್ನು ಸ್ವೀಕರಿಸಬೇಕು ಎಂದು ಹೇಳಿದನು.
ಭೀಷ್ಮಃ
ತತಃ ಸುವರ್ಚಲಾ ದೃಷ್ಟ್ವಾ ಪ್ರಾಹ ತಂ ದ್ವಿಜಸತ್ತಮಮ್।
ಮನಸಾಽಪಿ ವೃತೋ ವಿದ್ವನ್ ಶೇಷಕರ್ತಾ ಪಿತಾ ಮಮ।
ವೃಣೀಷ್ವ ಪಿತರಂ ಮಹ್ಯಮೇಷ ವೇದವಿಧಿಕ್ರಮಃ ॥38॥
ಭೀಷ್ಮ ಬಳಿಕ ಸುವರ್ಚಲೆಯು ಬ್ರಾಹ್ಮಣನನ್ನು ನೋಡುತ್ತಾ ಹೀಗೆ ಹೇಳಿದಳು- ಎಲೈ ಪ್ರಾಜ್ಞನೇ, ಹಾಗಿದ್ದರೆ ನಾನು ನಿನ್ನನ್ನು ಮನಸ್ಸಿನಿಂದ ವರಿಸಿದ್ದೇನೆ. ಮುಂದಿನ ಕಾರ್ಯಗಳನ್ನು ನಡೆಸಬೇಕಾದವನು ನನ್ನ ತಂದೆಯು. ಆದ್ದರಿಂದ ನನ್ನ ವಿಷಯವನ್ನು ಕುರಿತು ನನ್ನ ತಂದೆಯ ಬಳಿ ಹೋಗಿ ಪ್ರಾರ್ಥಿಸು. ಇದು ಶಾಸ್ತ್ರದಲ್ಲಿ ವಿಧಿಸಿದ ರೀತಿಯು ಎಂದು ಹೇಳಿದಳು.
ತದ್ ವಿಜ್ಞಾಯ ಪಿತಾ ತಸ್ಯಾ ದೇವಲೋ ಮುನಿಸತ್ತಮಃ।
ಶ್ವೇತಕೇತುಂ ಚ ಸಂಪೂಜ್ಯ ತಥೈವೋದ್ದಾಲಕೇನ ತಮ್ ॥39॥
ಈ ಅಭಿಪ್ರಾಯವನ್ನು ತಿಳಿದ ಮಹಾಜ್ಞಾನಿಯಾದ ಅವಳ ತಂದೆ ದೇವಲನು ಶ್ವೇತಕೇತುವನ್ನು ಗೌರವದಿಂದ ಸತ್ಕರಿಸಿ ಶ್ವೇತಕೇತುವಿನ ವಿವಾಹವನ್ನಾಚರಿಸಲು ಅವನ ತಂದೆಯಾದ ಉದ್ದಾಲಕನನ್ನು ಕರೆಸಿದನು.
ಮುನೀನಾಮಗ್ರತಃ ಕನ್ಯಾಂ ಪ್ರದದೌ ಜಲಪೂರ್ವಕಮ್।
ಉದಾಹರಂತಿ ವೈ ತತ್ರ ಶ್ವೇತಕೇತುಂ ನಿರೀಕ್ಷ್ಯ ತಮ್ ॥40॥
ಹೃತ್ಪುಂಡರೀಕನಿಲಯಃ ಸರ್ವಭೂತಾತ್ಮಕೋ ಹರಿಃ।
ಶ್ವೇತಕೇತುಸ್ವರೂಪೇಣ ಸ್ಥಿತೋಽಸೌ ಮಧುಸೂದನಃ ॥41॥
ಸಮಸ್ತ ಮುನಿಗಳ ನಡುವೆ ಧಾರಾಪೂರ್ವಕವಾಗಿ ತನ್ನ ಕನ್ಯೆಯನ್ನು ಶ್ವೇತಕೇತುವಿಗೆ ಧಾರೆ ಎರೆದುಕೊಟ್ಟನು. ಆಗ ಅಲ್ಲಿರುವವರು ಶ್ವೇತಕೇತುವನ್ನು ನೋಡಿ- ಇವನು ಸಾಮಾನ್ಯ ಮುನಿಯಲ್ಲ. ಹೃತ್ಪುಂಡರೀಕನಿಲಯನಾದ, ಸರ್ವಭೂತಾತ್ಮಕನಾದ ಮಧುಸೂದನನೇ ಶ್ವೇತಕೇತುವಿನ ಅಂತರ್ಯಾಮಿಯಾಗಿ ನಿಂತು ಇಲ್ಲಿಗೆ ಆಗಮಿಸಿದ್ದಾನೆ. ಈ ರೀತಿಯಾದ ವ್ಯಾಪಾರವನ್ನು ಮಾಡಿದ್ದಾನೆ ಎಂದು ಮಾತನಾಡಿಕೊಳ್ಳುತ್ತಿದ್ದರು.
ಪ್ರೀಯತಾಂ ಮಾಧವೋ ದೇವಃ ಪತ್ನೀ ಚೇಯಂ ಸುತಾ ಮಮ।
ಪ್ರತಿಪಾದಯಾಮಿ ತೇ ಕನ್ಯಾಂ ಸಹಧರ್ಮಚರೀಂ ಶುಭಾಮ್।
ಇತ್ಯುಕ್ತ್ವಾ ಪ್ರದದೌ ತಸ್ಮೈ ದೇವಲೋ ಮುನಿಪುಂಗವಃ ॥42॥
ದೇವದೇವನಾದ ಮಾಧವನು ನನ್ನ ವಿಷಯದಲ್ಲಿ ಪ್ರೀತನಾಗಲಿ. ನನ್ನ ಮಗಳು ನಿನ್ನ ಪತ್ನಿಯಾಗಿದ್ದಾಳೆ. ಇವಳನ್ನು ನಿನಗೆ ಸಹಧರ್ಮಚಾರಿಣಿಯಾಗಿ ಒಪ್ಪಿಸಿದ್ದೇನೆ ಎಂದು ಹೇಳಿ ಆ ಕನ್ಯೆಯನ್ನು ಶ್ವೇತಕೇತುವಿನ ಕೈಗೆ ಮುನಿಪುಂಗವನಾದ ದೇವಲನು ಒಪ್ಪಿಸಿದನು.
ಪ್ರತಿಗೃಹ್ಯ ಚ ತಾಂ ಕನ್ಯಾಂ ಶ್ವೇತಕೇತುರ್ಮಹಾಯಶಾಃ।
ಉಪಯಮ್ಯ ಯಥಾನ್ಯಾಯಮತ್ರ ಕೃತ್ವಾ ಯಥಾವಿಧಿ ॥43॥
ಶ್ವೇತಕೇತುವು ಆ ಕನ್ಯೆಯ ಪಾಣಿಗ್ರಹಣವನ್ನು ಮಾಡಿ ಶಾಸ್ತ್ರೋಕ್ತವಿಧಿಯಿಂದ ವಿವಾಹ ಮಾಡಿಕೊಂಡನು.
ಸಮಾಪ್ಯ ತಂತ್ರಂ ಮುನಿಭಿರ್ವೈವಾಹಿಕಮನುತ್ತಮಮ್।
ಸ ಗಾರ್ಹಸ್ಥ್ಯೇ ವಸನ್ ಧೀಮಾನ್ ಭಾರ್ಯಾಂ ತಾಮಿದಮಬ್ರವೀತ್ ॥
ಅನೇಕ ಋಷಿ-ಮುನಿಗಳನ್ನು ಮುಂದಿಟ್ಟುಕೊಂಡು ವಿವಾಹಕಾರ್ಯವನ್ನು ನಡೆಸಿಕೊಂಡ ಅವನು ಅವಳೊಡನೆ ಗೃಹಸ್ಥಾಶ್ರಮದಲ್ಲಿರುತ್ತಿದ್ದನು. ಒಂದು ಬಾರಿ ಸುವರ್ಚಲೆಯನ್ನು ಕುರಿತು ಶ್ವೇತಕೇತುವು ಹೀಗೆ ಇರುತ್ತಿರಲು ಒಂದು ಮಾತನ್ನು ಹೇಳಿದನು.
ಯಾನಿ ಚೋಕ್ತಾನಿ ವೇದೇಷು ತತ್ಸರ್ವಂ ಕುರು ಶೋಭನೇ।
ಮಯಾ ಸಹ ಯಥಾನ್ಯಾಯಂ ಸಹಧರ್ಮಚರೀ ಮಮ ॥45॥

ಶುಭಗೇ, ನೀನು ನನ್ನ ಸಹಧರ್ಮಚಾರಿಣಿಯಾಗಿರುವಿ. ಆದ್ದರಿಂದ ವೇದೋಕ್ತ ಮಾರ್ಗದಲ್ಲಿ ನ್ಯಾಯರೀತಿಯಲ್ಲಿ ನೀನು ಸಹಾಯಕಳಾಗಿರಬೇಕು. ವೇದವಿಧಿಗೆ ಅನುಗುಣವಾಗಿ ನೀನು ನನಗೆ ಸಹಧರ್ಮಚಾರಿಣಿಯಾಗಿರು.

ಅಹಮಿತ್ಯೇವ ಭಾವೇನ ಸ್ಥಿತಸ್ತ್ವಮತಥೈವ ಚ |
ತಸ್ಮಾತ್ ಕರ್ಮಾಣಿ ಕುರ್ವೀಥಾಃ ಕುರ್ಯಾಂ ತೇ ಚ ತತಃ ಪರಮ್ ||

ನಾನಾದರೂ ತಂದೆಯಾದ ಉದ್ದಾಲಕರ ಉಪದೇಶದಿಂದ ಸರ್ವಜ್ಞಾದಿಗುಣ ವಿಶಿಷ್ಟನಾದ ಭಗವಂತನು ನಾನಲ್ಲ ಎಂಬುದನ್ನು ಅರ್ಥಮಾಡಿಕೊಂಡಿದ್ದೇನೆ. ಮೊದಲು ಅಹಂಕಾರ ಹೊಂದಿದ ನಾನು ಉಪದೇಶದಿಂದ ಈ ಅಹಂಕಾರ ತ್ಯಜಿಸಿದ್ದೇನೆ. ನೀನು ನನ್ನಂತೆಯೇ ಭಗವತ್ಪ್ರಜ್ಞೆಯನ್ನು ರೂಪಿಸಿಕೊಂಡು ಸತ್ಕರ್ಮಗಳನ್ನು ಆಚರಿಸು. ಬಳಿಕ ನಾನು ನಿನಗೆ ಹಿತವನ್ನು ಮಾಡುತ್ತೇನೆ.

ನ ಮಮೇತಿ ಚ ಭಾವೇನ ಜ್ಞಾನಾಗ್ನಿನಿಲಯೇನ ಚ |
ಅನಂತರಂ ತಥಾ ಕುರ್ಯಾಸ್ತಾನಿ ಕರ್ಮಾಣಿ ಭಸ್ಮಸಾತ್ ||47||

ನಾನು ಆಚರಿಸುವ ಕರ್ಮ ನಾನು ಮಾಡುತ್ತಿಲ್ಲ. ಭಗವಂತನೇ ಈ ಕರ್ಮಗಳನ್ನು ನನ್ನ ಮೂಲಕ ಮಾಡಿಸುತ್ತಿದ್ದಾನೆ. ಈ ರೀತಿಯಾದ ಜ್ಞಾನದ ಸಂಬಂಧದಿಂದ ಕರ್ಮಗಳಿಂದುಂಟಾಗುವ ದೋಷಗಳನ್ನು ಭಸ್ಮ ಮಾಡಿಕೊಳ್ಳಬೇಕು. ನಾನು ಹಾಗೆ ಆಚರಿಸುತ್ತಿದ್ದೇನೆ.

ಏವಂ ತ್ವಯಾ ಚ ಕರ್ತವ್ಯಂ ಸರ್ವದಾ ದುರ್ಭಗಾ ಮಯಾ |
ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ |
ತಸ್ಮಾಲ್ಲೋಕಸ್ಯ ಸಿದ್ಧ್ಯರ್ಥಂ ಕರ್ತವ್ಯಂ ಚಾತ್ಮಸಿದ್ಧಯೇ ||48||

ನಿನ್ನಿಂದಲೂ ಯಾವಾಗಲೂ ದುಷ್ಟವಾದ ಭಾವಗಳನ್ನು ತ್ಯಜಿಸಿ ಇದರಂತೆ ಕರ್ತವ್ಯಗಳು ಮಾಡಲ್ಪಡಬೇಕು. ಸತ್ಪುರುಷರು ಯಾವುದನ್ನು ಆಚರಿಸುತ್ತಾರೋ ಇತರರೂ ಅದನ್ನೇ ಆಚರಿಸುತ್ತಾರೆ. ಆದ್ದರಿಂದ ಲೋಕದ ಸನ್ನಡತೆಯ ಸಿದ್ಧಿಗಾಗಿ, ಪರಮಾತ್ಮನ ಪ್ರಾಪ್ತಿಗಾಗಿ ಕರ್ತವ್ಯಗಳನ್ನು ಮಾಡಬೇಕು.

ಉಕ್ತ್ವೈವಂ ಸ ಮಹಾಪ್ರಾಜ್ಞಃ ಸರ್ವಜ್ಞಾನೈಕಭಾಜನಃ |
ಪುತ್ರಾನುತ್ಪಾದ್ಯ ತಸ್ಯಾಂ ಚ ಯಜ್ಞೈಃ ಸಂತರ್ಪ್ಯ ದೇವತಾಃ ||49||

ಮಹಾಬುದ್ಧಿವಂತನಾದ, ಸರ್ವಜ್ಞನಾದ ಭಗವಂತನಲ್ಲಿಯೇ ರತನಾದ ಶ್ವೇತಕೇತುವು ತನ್ನ ಹೆಂಡತಿಯನ್ನು ಅಧ್ಯಾತ್ಮಿಕವಾಗಿ ಹೀಗೆ ನಡೆಸಿಕೊಂಡು, ದೇವತೆಗಳನ್ನೆಲ್ಲ ಯಜ್ಞದ ಮೂಲಕ ಸಂತೋಷಪಡಿಸಿ, ಅವಳ ಮೂಲಕ ಅನೇಕ ಸಂತತಿಯನ್ನು ಪಡೆದನು.

ಆತ್ಮಯೋಗಪರೋ ನಿತ್ಯಂ ನಿರ್ದ್ವಂದ್ವೋ ನಿಷ್ಪರಿಗ್ರಹಃ |
ಭಾರ್ಯಾಂ ತಾಂ ಸದೃಶೀಂ ಪ್ರಾಪ್ಯ ಬುದ್ಧಿಂ ಕ್ಷೇತ್ರಜ್ಞಯೋರಿವ ||50||

ನಿತ್ಯವೂ ಪರಮಾತ್ಮನ ಯೋಗದಲ್ಲಿಯೇ ರತನಾದ, ಸುಖ-ದುಃಖಗಳನ್ನು ಮೀರಿರುವ, ಪರಿಗ್ರಹವನ್ನು ಮೀರಿರುವ ಶ್ವೇತಕೇತುವು ಜೀವ-ಪರಮಾತ್ಮರಲ್ಲಿರುವ ಭೇದಬುದ್ಧಿಯಂತೆ ತನ್ನಂತೆ ಸಮಾನ ಮನಸ್ಕಳಾದ ಬುದ್ಧಿಯನ್ನು ಹೊಂದಿರುವ, ಜೀವ- ಪರಮಾತ್ಮರ ಜ್ಞಾನವನ್ನು ಹೊಂದಿರುವ ಸುವರ್ಚಲೆಯಲ್ಲಿ ಸಂತಾನವನ್ನು ಹೊಂದಿದನು.

ಲೋಕಮನ್ಯಮನುಪ್ರಾಪ್ತೌ ಭಾರ್ಯಾ ಭರ್ತಾ ತಥೈವ ಚ |
ಸಾಕ್ಷಿಭೂತೌ ಜಗತ್ಯಸ್ಮಿಂಶ್ಚರಮಾಣೌ ಮುದಾಽನ್ವಿತೌ ||51||

ಈ ಇಬ್ಬರು ದಂಪತಿಗಳು ಸಂತೋಷದಿಂದ ಈ ಲೋಕಕ್ಕೆ ಸಾಕ್ಷಿಭೂತರಾಗಿದ್ದು, ಲೋಕದಲ್ಲಿದ್ದಾಗಲೂ ಲೋಕಾಂತರರಂತೆ ಇರುತ್ತಿದ್ದರು.

ತತಃ ಕದಾಚಿದ್ ಭರ್ತಾರಂ ಶ್ವೇತಕೇತುಂ ಸುವರ್ಚಲಾ |
ಪಪ್ರಚ್ಛ ಕೋ ಭವಾನತ್ರ ಬ್ರೂಹಿ ಮೇ ತದ್ ದ್ವಿಜೋತ್ತಮ ||52||

ಹೀಗೆ ಇರುವಾಗ ಒಮ್ಮೆ ಸುವರ್ಚಲೆಯು ತನ್ನ ಪತಿಯಾದ ಶ್ವೇತಕೇತುವನ್ನು ಕುರಿತು ಬ್ರಾಹ್ಮಣೋತ್ತಮನೇ, ನೀನು ಯಾರು? ನನಗೆ ನಿನ್ನ ಬಗ್ಗೆ ತಿಳಿಸಬೇಕು ಎಂದು ಪ್ರಶ್ನಿಸಿದಳು.

ತಾಮಾಹ ಭಗವಾನ್ ವಾಗ್ಮೀ ತಯಾ ಜ್ಞಾತೋ ನ ಸಂಶಯಃ |
ದ್ವಿಜೋತ್ತಮೇತಿ ಮಾಮುಕತ್ವ ಪುನಃ ಕಮನುಪೃಚ್ಛಸಿ ||53||

ಆಗ ಶ್ವೇತಕೇತುವು ನಸುನಗುತ್ತಾ- `ಎಲೈ ಪ್ರಿಯತಮೆ, ಈಗಲೇ ನೀನು ನನ್ನನ್ನು ಬ್ರಾಹ್ಮಣೋತ್ತಮ ಎಂದು ಕರೆದೆಯಲ್ಲವೆ? ಆದ್ದರಿಂದ ನಾನು ನಿನಗೆ ಯಾರೆಂದು ತಿಳಿದಂತಾಯಿತಲ್ಲವೆ? ಪುನಃ ನೀನು ಏಕೆ ಪ್ರಶ್ನಿಸುತ್ತಿ?' ಎಂದು ಕೇಳಿದನು.

ಸಾ ತಮಾಹ ಮಹಾತ್ಮಾನಂ ಪೃಚ್ಛಾಮಿ ಹೃದಿ ಶಾಯಿನಮ್ |
ತಚ್ಛ್ರುತ್ವಾ ಪ್ರತ್ಯುವಾಚೈನಾಂ ಸ ನ ವಕ್ಷ್ಯತಿ ಭಾಮಿನಿ ||54||

ಆಗ ಸುವರ್ಚಲೆಯು- `ನಾಥನೇ, ಹಾಗಲ್ಲ. ನಿನ್ನ ಹೃದಯದಲ್ಲಿ ಅಡಗಿರುವ ಆತ್ಮವನ್ನು ಕುರಿತು ನಾನು ಪ್ರಶ್ನಿಸುತ್ತಿದ್ದೇನೆ'. ಈ ರೀತಿಯಾಗಿ ಹೇಳಲು ಅವಳ ಮಾತನ್ನು ಕೇಳಿದ ಶ್ವೇತಕೇತುವು ಹೇಳುತ್ತಾನೆ- `ಪ್ರಿಯೆ, ಆ ಆತ್ಮನು ಮಾತನಾಡಲಾರನು'.

ನಾಮಗೋತ್ರಸಮಾಯುಕ್ತಮಾತ್ಮಾನಂ ಮನ್ಯಸೇ ಯದಿ |
ತನ್ಮಿಥ್ಯಾ ಗೋತ್ರಸದ್ಭಾವೇ ವರ್ತತೇ ದೇಹಬಂಧನಮ್ ||55||

ಸುವರ್ಚಲೆಯೇ, ಆತ್ಮಕ್ಕೆ ನಾಮ, ಗೋತ್ರಗಳು ಇವೆಯೆಂದು ನೀನು ಭಾವಿಸುವ ಪಕ್ಷದಲ್ಲಿ ಅದು ತಪ್ಪಾದ ತಿಳಿವಳಿಕೆಯಾಗಿದೆ. ಆತ್ಮನಿಗೆ ನಾಮ-ಗೋತ್ರಾದಿಗಳು ಅನಿತ್ಯವು, ವ್ಯರ್ಥವು ಆಗಿವೆ. ಈ ಅನಿತ್ಯವಾದ ಗೋತ್ರಾದಿಗಳಿಂದ ದೇಹಬಂಧನವು ಉಂಟಾಗಿದೆ.

ಅಹಮಿತ್ಯೇಷ ಭಾವೋಽತ್ರ ತ್ವಯಿ ಚಾಪಿ ಸಮಾಹಿತಃ |
ತ್ವಮಪ್ಯಹಮಹಂ ಸರ್ವಮಹಮಿತ್ಯೇವ ವರ್ತತೇ |
ನಾತ್ರ ತತ್ಪರಮಾರ್ಥಂ ವೈ ಕಿಮರ್ಥಮನುಪೃಚ್ಛಸಿ ||56||

ಸುವರ್ಚಲೆಯೇ, ನೀನು ಅಹಂ ಎಂದೇ ಭಾವಿಸುತ್ತಿರುವಿ. ಆ ಅಹಂಭಾವವು ನನ್ನಲ್ಲಿಯೂ ಇದೆ. ಸಮಸ್ತ ಜಗತ್ತು

ಅಹಂಭಾವದಿಂದಲೇ ವರ್ತಿಸುತ್ತಿದೆ. ನಾವೆಲ್ಲರೂ ಅಹಂಕಾರಿಗಳೇ ಆಗಿದ್ದೇವೆ. ಅಹಂಕಾರಿ ಪುರುಷರಲ್ಲಿ ಪರಮಾರ್ಥರೂಪವಾದ ಪರಬ್ರಹ್ಮವಸ್ತುವು ಮಾತನಾಡುವುದಿಲ್ಲ. ಆದ್ದರಿಂದ ಏಕಾಗಿ ಪ್ರಶ್ನಿಸುತ್ತಿರುವಿ?

ತತಃ ಪ್ರಹಸ್ಯ ಸಾ ಹೃಷ್ಟಾ ಭರ್ತಾರಂ ಧರ್ಮಚಾರಿಣೀ |
ಉವಾಚ ವಚನಂ ಕಾಲೇ ಸ್ಮಯಮಾನಾ ತದಾ ನೃಪ ॥57॥

ಆ ಸಮಯದಲ್ಲಿ ಮಂದಹಾಸವನ್ನು ಬೀರುತ್ತಾ ಸಂತುಷ್ಟಳಾದ, ಧರ್ಮಚಾರಿಣಿಯಾದ ಸುವರ್ಚಲೆಯು ನಸುನಗುತ್ತಲೇ ಗಂಡನನ್ನು ಕುರಿತು ಹೀಗೆ ಹೇಳಿದಳು.

ಕಿಮನೇಕಪ್ರಕಾರೇಣ ವಿರೋಧೇನ ಪ್ರಯೋಜನಮ್ |
ಕ್ರಿಯಾಕಲಾಪೈರ್ಬ್ರಹ್ಮರ್ಷೇ ಜ್ಞಾನನಷ್ಟೋಽಸಿ ಸರ್ವದಾ ॥58॥

ಶ್ವೇತಕೇತುವೇ, ಸಂಬಂಧವಿಲ್ಲದ ಈ ರೀತಿಯಾದ ವಿರುದ್ಧವಾದ ಮಾತುಗಳಿಂದ ನನಗೇನು ಪ್ರಯೋಜನ? ನೀನು ನಿರಂತರವೂ ಕರ್ಮನಿರತನಾಗಿ ಜ್ಞಾನದ ನಾಶವನ್ನು ಹೊಂದಿರುತ್ತಿ. ಮಹಾಜಾಣನಾದ ನೀನು, ನಾನು ನಿನ್ನನ್ನು ಅನುಸರಿಸಿ ಹೇಗಿರಬೇಕೆಂಬುದನ್ನು ನನಗೆ ತಿಳಿಸಿಕೊಡು.

ಶ್ವೇತಕೇತು

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ |
ವರ್ತತೇ ತೇನ ಲೋಕೋಽಯಂ ಸಂಕೀರ್ಣಶ್ಚ ಭವಿಷ್ಯತಿ ॥59॥

ಶ್ವೇತಕೇತು ಸತ್ಪುರುಷರು ಏನನ್ನು ಆಚರಿಸುತ್ತಾರೋ ಇತರ ಪುರುಷರೂ ಅದನ್ನೇ ಆಚರಿಸುತ್ತಾರೆ. ಜಗತ್ತೆಲ್ಲವೂ ಆ ಆಚರಣೆಗಳಿಂದಲೇ ಸಂಕೀರ್ಣವಾಗಿ ನಡೆಯುತ್ತಿದೆ.

ಸಂಕೀರ್ಣೇ ಚ ತಥಾ ಧರ್ಮೇ ವರ್ಣಃ ಸಂಕರಮೇತಿ ಚ |
ಸಂಕರೇ ಚ ಪ್ರವೃತ್ತೇ ತು ಮಾತ್ಸ್ಯೋ ನ್ಯಾಯಃ ಪ್ರವರ್ತತೇ ॥60॥

ಧರ್ಮದಲ್ಲಿ ಸಾಂಕರ್ಯ ಉಂಟಾದಾಗ ಜಾತಿ ಸಾಂಕರ್ಯವು ಏರ್ಪಡುತ್ತದೆ. ಸಾಂಕರ್ಯದಿಂದಾಗಿ ಧರ್ಮವು ಮುನ್ನಡೆಯುತ್ತಿರಲು ಸಣ್ಣ ಮೀನನ್ನು ದೊಡ್ಡ ಮೀನು ನುಂಗುವಂತೆ, ದೊಡ್ಡ ಮೀನನ್ನು ಅದಕ್ಕಿಂತಲೂ ಮಿಗಿಲಾದ ಮೀನು ನುಂಗುತ್ತದೆ. ಹೀಗೆ ಧರ್ಮಗಳೆಲ್ಲವೂ ನಾಶ ಹೊಂದುತ್ತವೆ.

ತದನಿಷ್ಟಂ ಹರೇರ್ಭದ್ರೇ ಧಾತುರಸ್ಯ ಮಹಾತ್ಮನಃ |
ಪರಮೇಶ್ವರಸಂಕ್ರೀಡಾ ಲೋಕಸೃಷ್ಟಿರಿಯಂ ಶುಭೇ ॥61॥

ಈ ರೀತಿಯಾಗಿ ಜಗತ್ತು ನಡೆಯುವುದು ಹರಿಗೆ ಇಷ್ಟವಾಗಿರುವುದಿಲ್ಲ. ಜಗತ್ತೆಂಬುದು ಭಗವಂತನ ಲೀಲೆಯಾಗಿದೆ.

ಯಾವತ್ ಪಾಂಸವ ಉದ್ದಿಷ್ಟಾಸ್ತಾವತ್ಯೋಽಸ್ಯ ವಿಭೂತಯಃ |
ತಾವತ್ಯಶ್ಚೈವ ಮಾಯಾಸ್ತು ತಾವತ್ಯೋಽಸ್ಯಾಶ್ಚ ಶಕ್ತಯಃ ॥62॥
ಏವಂ ಸುಗಹ್ವರೇ ಯುಕ್ತೋ ಯತ್ರ ಮೇ ತದ್ಭವಾಭವಮ್ |
ಛಿತ್ವಾ ಜ್ಞಾನಾಸಿನಾ ಗಚ್ಛೇತ್ ಸ ವಿದ್ವಾನ್ ಸ ಚ ಮೇ ಪ್ರಿಯಃ |
ಸೋಽಹಮೇವ ನ ಸಂದೇಹಃ ಪ್ರತಿಜ್ಞಾ ಇತಿ ತಸ್ಯ ವೈ ॥63॥

ಭಗವಂತನ ವಿಭೂತಿಗಳು ಈ ಭೂಮಿಯಲ್ಲಿ ಧೂಳಿನ ಕಣಗಳು ಹೇಗೆ ಅಸಂಖ್ಯಾತವಾದವುಗಳೋ ಅದರಂತೆ ಭಗವಂತನ ಮಾಹಾತ್ಮ್ಯಗಳು ಗಣಿಸಲು ಸಾಧ್ಯವಾದವುಗಳಲ್ಲ. ಅಸಂಖ್ಯ ಮಹಿಮಾ ಸಂಪನ್ನನು ಭಗವಂತನು. ಭಗವಂತನು ಭಕ್ತರನ್ನು ಕುರಿತು ಹೀಗೆ ಪ್ರತಿಜ್ಞೆ ಮಾಡಿ ಹೇಳುತ್ತಾನೆ- ಯಾವ ವ್ಯಕ್ತಿಯು ಸಂಸಾರದಲ್ಲಿದ್ದಾಗಲೂ ಭಗವಂತನಿಂದುಂಟಾಗುವ ಹುಟ್ಟು-ಸಾವುಗಳನ್ನು ಜ್ಞಾನದ ಖಡ್ಗದಿಂದ ತುಂಡರಿಸಿ ಸಾಗುತ್ತಾನೋ ಅವನೇ ನನಗೆ ಪ್ರೀತಿಪಾತ್ರನು. ಅನಂತ ಐಶ್ವರ್ಯಸಂಪನ್ನನಾದವನು ಭಗವಂತನೇ ಆಗಿದ್ದಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ ಎಂದು ಭಗವಂತನೇ ಪ್ರತಿಜ್ಞೆ ಮಾಡಿ ಹೇಳಿರುತ್ತಾನೆ. ಅಥವಾ `ತತ್' `ತ್ವಂ' ಎಂಬ ಪದಗಳಲ್ಲಿ ತತ್ಪದವಾಚ್ಯನಾದವನು ಭಗವಂತನೇ ಆಗಿದ್ದಾನೆ. ಜೀವನು ಅತತ್ಪದವಾಚ್ಯನಾಗಿದ್ದಾನೆ. ನನ್ನ ಐಕ್ಯವು ಜೀವನಿಗೆ ಎಂದಿಗೂ ಕೂಡುವುದಿಲ್ಲ. ಅವನು ತನ್ನ ಜ್ಞಾನದಿಂದಲೇ ಬಿಡುಗಡೆ ಹೊಂದುತ್ತಾನೆ ಎಂದು ಭಗವಂತನು ಪ್ರತಿಜ್ಞೆ ಮಾಡುತ್ತಾನೆ.

ಯೇ ಮೂಢಾಸ್ತೇ ದುರಾತ್ಮಾನೋ ಧರ್ಮಸಂಕರಕಾರಕಾಃ |
ಮರ್ಯಾದಾಭೇದಕಾ ನೀಚಾ ನರಕೇ ಯಾಂತಿ ಜಂತವಃ ॥64॥

ಮೂಢರು, ದುರಾತ್ಮರು ಧರ್ಮಸಂಕರದಲ್ಲಿ ಪ್ರವರ್ತಿಸಿ, ಲೋಕ ಮರ್ಯಾದೆಯನ್ನು ತಿದ್ದುವವರು ಆದ ನೀಚರು ನರಕದಲ್ಲಿಯೇ ಬೀಳುತ್ತಾರೆ.

ಆಸುರೀಂ ಯೋನಿಮಾಪನ್ನಾ ಇತಿ ದೇವಾನುಶಾಸನಮ್ ॥65॥

ಆಸುರ ಜನ್ಮವನ್ನು ಹೊಂದುತ್ತಾರೆ ಎಂದು ದೇವಾನುಶಾಸನವಿದೆ.

ಭಗವತ್ಯಾ ತಥಾ ಲೋಕೇ ರಕ್ಷಿತವ್ಯಂ ನ ಸಂಶಯಃ |
ಮರ್ಯಾದಾಲೋಕರಕ್ಷಾರ್ಥಮೇವಮಸ್ಮಿ ತಥಾ ಸ್ಥಿತಃ ॥66॥

ಆದ್ದರಿಂದ ಪ್ರಾಚೀನರಾದ ಜ್ಞಾನಿಗಳ ಕ್ರಮವನ್ನು, ಲೋಕ ಮರ್ಯಾದೆಯನ್ನು ನೀನೂ ರಕ್ಷಿಸಬೇಕು, ನಾನೂ ರಕ್ಷಿಸಬೇಕು. ಇಬ್ಬರೂ ಈ ಲೋಕದ ಸದಾಚಾರ ರಕ್ಷಣೆಗೆ ಕಟಿಬದ್ಧರಾಗಿ ನಿಲ್ಲಬೇಕು. ಇದರಲ್ಲಿ ಯಾವ ಸಂಶಯವೂ ಇಲ್ಲ.

ಸುವರ್ಚಲಾ

ಶಬ್ದಃ ಕೋಽತ್ರ ಇತಿ ಖ್ಯಾತಸ್ತಥಾರ್ಥಂ ಚ ಮಹಾಮುನೇ |
ಆಕೃತ್ಯಾ ಪತಯೋ ಬ್ರೂಹಿ ಲಕ್ಷಣೇನ ಪೃಥಕ್ ಪೃಥಕ್ ॥67॥

ಸುವರ್ಚಲಾ ಮಹರ್ಷಿಯೇ, ಲೋಕದಲ್ಲಿ ಶಬ್ದ ಎಂದರೆ ಏನು? ಅರ್ಥ ಎಂಬುದು ಯಾವುದು? ಪರಮಾತ್ಮ ಪ್ರತಿಪಾದಕವಾದ

ಶಬ್ದಗಳ ಗುಣ-ಸ್ವರೂಪ- ಲಕ್ಷಣ ಭೇದಗಳನ್ನು ನನಗೆ ತಿಳಿಸು.
ವ್ಯತ್ಯಯೇನ ಚ ವರ್ಣಾನಾಂ ಪರಿವಾದಿಕೃತೋ ಹಿ ಯಃ |
ಸ ಶಬ್ದ ಇತಿ ವಿಜ್ಞೇಯಸ್ತನ್ನಿಪಾತೋಽರ್ಥ ಉಚ್ಯತೇ ॥68॥
ಶ್ವೇತಕೇತು ಪ್ರಿಯೇ, ವರ್ಣಗಳನ್ನು ಹಿಂದೆ ಮುಂದೆ, ಮೇಲೆ-ಕೆಳಗೆ ಜೋಡಿಸಿ ಹೇಳುವುದರಿಂದ ಶಬ್ದಗಳು ಸರ್ವವಿಧದಿಂದಲೂ ಪರಮಾತ್ಮನೆಂಬ ಅರ್ಥವನ್ನೇ ಹೇಳುತ್ತವೆ. ಈ ಶಬ್ದಗಳು ಪರಮಾತ್ಮ ಪ್ರತಿಪಾದಕಗಳು ಹೇಗಿದ್ದಾವೆಂಬುದನ್ನು ಬ್ರಹ್ಮ ಮೀಮಾಂಸಾ ಶಾಸ್ತ್ರವು ತುಂಬಾ ಚೆನ್ನಾಗಿ ಸಾಧಿಸಿದೆ. ಆದ್ದರಿಂದಲೇ ಅದು ಪರಿವಾದಿ ಎನಿಸಿದೆ. ಹೊರತು ಕಚಟಪಾದಿ ವರ್ಣಮಾಲೆಗಳು ಎಂದು ಅರ್ಥವಲ್ಲ. ಆ ಶಬ್ದಗಳ ಸಮುದಾಯದಿಂದ ಭಗವಂತನೇ ಪ್ರತಿಪಾದಿಸಲ್ಪಡುವ ಅರ್ಥವೆನಿಸಿದ್ದಾನೆ.
ಸುವರ್ಚಲಾ
ಶಬ್ದಾರ್ಥಯೋರ್ಹಿ ಸಂಬಂಧಸ್ತ್ವನಯೋರಸ್ತಿ ವಾ ನ ವಾ |
ತನ್ಮೇ ಬ್ರೂಹಿ ಯಥಾ ತತ್ತ್ವಂ ಶಬ್ದಸ್ಥಾನೇಽರ್ಥ ಏವ ಚೇತ್ ॥69॥
ಸುವರ್ಚಲಾ ಶಬ್ದವಿದ್ದಬಳಿಕ ಅದಕ್ಕೆ ಅರ್ಥದ ಜೊತೆಗೆ ಸಂಬಂಧ ನಿಯಮೇನ ಉಂಟಾಗುತ್ತದಲ್ಲವೆ? ಶಬ್ದವಿದ್ದ ಕಡೆಯೆಲ್ಲ ಅರ್ಥವಿದ್ದ ಪಕ್ಷದಲ್ಲಿ ಶಬ್ದಾರ್ಥಗಳಿಗಿರುವ ಸಂಬಂಧವೆಂತಹದ್ದು? ಇದನ್ನು ಯಥಾರ್ಥವಾಗಿ ತಿಳಿಸು.
ಶ್ವೇತಕೇತುಃ
ಶಬ್ದಾರ್ಥಯೋರ್ನ ಚೈವಾಸ್ತಿ ಸಂಬಂಧೋಽತ್ಯಂತ ಏವ ಹಿ |
ಪುಷ್ಕರೇ ಚ ಯಥಾ ತೋಯಂ ತಥಾಽಸ್ತೀತಿ ಚ ವೇತ್ಥ ತತ್ ॥70॥
ಶ್ವೇತಕೇತು ಸುವರ್ಚಲೆಯೇ, ವೇದರೂಪ ಶಬ್ದಕ್ಕೂ, ಅರ್ಥರೂಪನೆನಿಸಿದ ಭಗವಂತನಿಗೂ ಪ್ರತಿಪಾದಕ-ಪ್ರತಿಪಾದ್ಯ ರೂಪವಾದ ಸಂಬಂಧವು ಇರುತ್ತದೆ. ಈ ಸಂಬಂಧವು ಪದ್ಮಪತ್ರದಲ್ಲಿ ಬಿದ್ದ ನೀರಿನ ಹನಿಯಂತೆ ಎಂದು ತಿಳಿಯಬೇಕು.
ಸುವರ್ಚಲಾ
ಅರ್ಥೇ ಸ್ಥಿತಿರ್ಹಿ ಶಬ್ದಸ್ಯ ನಾನ್ಯಥಾ ಚ ಸ್ಥಿತಿರ್ಭವೇತ್ |
ವಿದ್ಯತೇ ಚೇನ್ಮಹಾಪ್ರಾಜ್ಞ ವಿನಾಽರ್ಥಂ ಬ್ರೂಹಿ ಸತ್ತಮ ॥71॥
ಸುವರ್ಚಲಾ ಶಬ್ದದ ಸ್ಥಿತಿಯು ಅರ್ಥದಿಂದಲೇ ಅಲ್ಲವೆ? ಸ್ಥಿತಿಯು ಸಂಬಂಧವಿಲ್ಲದೆ ಇರಲು ಸಾಧ್ಯವಿಲ್ಲ. ಅರ್ಥದಲ್ಲಿ ಸಂಬಂಧವಿಲ್ಲದ ಶಬ್ದವಿದ್ದಲ್ಲಿ ಅದನ್ನು ನನಗೆ ವಿವರಿಸು.
ಶ್ವೇತಕೇತುಃ
ಸ ಸಂಸರ್ಗೋತಿಮಾತ್ರಸ್ತು ವಾಚಕತ್ವೇನ ವರ್ತತೇ |
ಅಸ್ತಿ ಚೇದ್ವರ್ತತೇ ನಿತ್ಯಂ ವಿಕಾರೋಚ್ಚಾರಣೇನ ವೈ ॥72॥
ಶ್ವೇತಕೇತು ಸಂಬಂಧವು ಶಬ್ದಾರ್ಥಗಳಿಗೆ ವಿಶೇಷವಾಗಿದ್ದ ಪಕ್ಷದಲ್ಲಿ ಅದು ಅರ್ಥವನ್ನು ಭೋಗಿಸುವ ಸಂಬಂಧವೆಂದು ತಿಳಿ. ಅರ್ಥ ಇದೆ ಎಂದಾದಲ್ಲಿ ವಿವಿಧಾಕಾರ ಉಚ್ಚಾರವುಳ್ಳ ಶಬ್ದವು ಇದೆ ಎಂಬುದೇ ನಿಶ್ಚಯವು.
ಸುವರ್ಚಲಾ
ಶಬ್ದಸ್ಥಾನೋಽತ್ರ ಇತ್ಯುಕ್ತಸ್ತಥಾಽರ್ಥ ಇತಿ ಮೇ ಕೃತಮ್ |
ಅರ್ಥಾಸ್ಥಿತೋ ನ ತಿಷ್ಠೇಚ್ಚ ವಿರೂಢಮಿಹ ಭಾಷಿತಮ್ ॥73॥
ಸುವರ್ಚಲಾ ವೇದಗಳಿಗೆ ಆಧಾರಭೂತವಾದುದು ಪರಬ್ರಹ್ಮರೂಪ ಅರ್ಥವು. ಅದನ್ನು ನಾನು ಅಂಗೀಕರಿಸುತ್ತೇನೆ. ವೇದವು ಪರಬ್ರಹ್ಮರೂಪ ಅರ್ಥವನ್ನು ಆಶ್ರಯಿಸದೆ ವೇದವು ಇರಲು ಸಾಧ್ಯವಿಲ್ಲ. ಇದು ನಿನ್ನ ಮಾತಿನ ನಿಶ್ಚಿತ ಅಭಿಪ್ರಾಯವೆಂದು ಭಾವಿಸಿದ್ದೇನೆ.
ಶ್ವೇತಕೇತುಃ
ನ ವಿಕೂಲೋಽತ್ರ ಕಥಿತೋ ನಾಕಾಶಂ ಹಿ ವಿನಾ ಜಗತ್ |
ಸಂಬಂಧಸ್ತತ್ರ ನಾಸ್ತ್ಯೇವ ತದ್ವದಿತ್ಯೇಷ ಮನ್ಯತಾಮ್ ॥74॥
ಶ್ವೇತಕೇತು ತಾವರೆ ಎಲೆಯಂತೆ ಎಂದು ಶಬ್ದಕ್ಕೂ ಅರ್ಥಕ್ಕೂ ಸಂಬಂಧವು ಇರುವುದಿಲ್ಲ ಎಂದು ದೃಷ್ಟಾಂತವನ್ನು ಹೇಳಿರುವುದು ತಪ್ಪಾದ ದೃಷ್ಟಾಂತವೇನಲ್ಲ. ಲೋಕವು ಆಕಾಶವನ್ನು ಬಿಟ್ಟಿರಲಾರದು. ಲೋಕಕ್ಕೂ ಆಕಾಶಕ್ಕೂ ಸಮಗ್ರವಾದ ಸಂಬಂಧವಿದ್ದರೂ ಆಕಾಶವು ಲೋಕದ ಸಂಬಂಧದಿಂದ ನಿರ್ಲಿಪ್ತವಾಗಿದೆ. ಹಾಗೆಯೇ ವೈದಿಕವಾದ ಸಮಸ್ತ ಶಬ್ದಗಳು ಭಗತ್ಪ್ರತಿಪಾದಕವಾಗಿದ್ದರೂ ಭಗವಂತನು ಆ ಶಬ್ದದ ಸಂಬಂಧವಾದ ಶಬ್ದವನ್ನು ಆಶ್ರಯಿಸಿಕೊಂಡು ಭಗವಂತನು ಇರುವುದಿಲ್ಲ. ಅಸಂಗನಾಗಿದ್ದಾನೆ.
ಸುವರ್ಚಲಾ
ಸದಾಽಹಂಕಾರಶಬ್ದೋಽಯಂ ವ್ಯಕ್ತಮಾತ್ಮನಿ ಸಂಶ್ರಿತಃ |
ನ ವಾಚಸ್ತತ್ರ ವರ್ತಂತೇ ಇತಿ ಮಿಥ್ಯಾ ಭವಿಷ್ಯತಿ ॥75॥
ಸುವರ್ಚಲಾ ಅಹಂ ಎಂದು ಕರೆಸಿಕೊಳ್ಳುವ ಅಹಂ ಶಬ್ದವಾಚ್ಯನಾದ ಜೀವನು ಪರಮಾತ್ಮನ ಸ್ವರೂಪದಲ್ಲಿ ಎಲ್ಲ ಕಡೆಯೂ ಆಶ್ರಿತನಾಗಿದ್ದಾನೆ. ಆದ್ದರಿಂದ ಅಹಂ ಶಬ್ದವು ಸಮಗ್ರವಾಗಿ ಪ್ರವೃತ್ತಿಯನ್ನು ಹೊಂದುವುದಿಲ್ಲ ಎಂಬ ಮಾತು ಸುಳ್ಳಾಗುವುದಿಲ್ಲವೆ? ಅಹಂ ಎಂಬ ಶಬ್ದವು ಸ್ವಪ್ರಕಾಶಮಾನವಾದ ಆಕಾಶದಲ್ಲಿ ಎಲ್ಲ ಕಡೆಯಲ್ಲಿಯೂ ಇರುವುದರಿಂದ ಎಲ್ಲೆಡೆಯೂ ಅದರ ಸಂಬಂಧ ಇರುವಿಕೆಯು. ಶಬ್ದದ ಸಂಬಂಧವು ಪರಮಾತ್ಮನೆಂಬ ಅರ್ಥದ ಜೊತೆಗೆ ಇರುವುದಿಲ್ಲ ಎಂಬುದು ಹೇಗೆ ಕೂಡುತ್ತದೆ?
ಶ್ವೇತಕೇತುಃ
ಅಹಂಶಬ್ದೋ ಹ್ಯಹಂಭಾವೋ ನಾತ್ಮಭಾವೇ ಶುಭವ್ರತೇ |
ನ ವರ್ತತೇ ಪರೇಽಚಿಂತ್ಯೇ ವಾಚಃ ಸಗುಣಲಕ್ಷಣಾಃ ॥76॥

ಶ್ವೇತಕೇತು ಸುವರ್ಚಲೆಯೇ, ಅಹಂ ಎಂಬ ಶಬ್ದವು ಪರಮಾತ್ಮನ ಸ್ವಭಾವ ಭೂತವಾದ ಅನಂತ ಗುಣಸಮುದಾಯವನ್ನು ಹೇಳುವುದಿಲ್ಲ. ಆದ್ದರಿಂದ ಅಹಂ ಎಂಬ ಶಬ್ದವು ಭಗವಂತನೆಂಬ ಪದಾರ್ಥದಲ್ಲಿ ಏಕದೇಶದ ಗುಣ ಪ್ರತಿಪಾದಕ ಸಂಬಂಧವನ್ನು ಹೊಂದಿದೆ ವಿನಾ ಸಮಸ್ತ್ಯೇನ ಭಗವತ್ಪ್ರತಿಪಾದಕ ಎದು ಆಗಲಿಲ್ಲ. ಹಾಗಾಗಿ ಶಬ್ದಕ್ಕೂ, ಪದಾರ್ಥಕ್ಕೂ ಸಮಸ್ತ ಸಂಬಂಧವಿಲ್ಲ ಎಂಬುದನ್ನೇ ತಿಳಿಯಬೇಕು. ಯಾವ ಶಬ್ದವು ಯಾವ ಗುಣವನ್ನು ಹೇಳುತ್ತಿದೆಯೋ ಆ ಶಬ್ದಕ್ಕೆ ಆ ಗುಣದ ಜೊತೆಗೆ ಮಾತ್ರ ಸಂಬಂಧವನ್ನು ಹೇಳಬಹುದು. ಆಕಾಶ ಶಬ್ದವು ಎಲ್ಲ ದಿಕ್ಕಿನಲ್ಲಿಯೂ ಪ್ರಕಾಶಿಸುತ್ತಾನೆ ಎಂಬ ಅರ್ಥವನ್ನು ಹೇಳುತ್ತದೆ. ಆನಂದಮಯ ಶಬ್ದವು ಭಗವಂತನ ಆನಂದಪೂರ್ಣತ್ವವನ್ನು ಹೇಳುತ್ತದೆ. ಈ ಆನಂದಮಯ, ಆಕಾಶ ಎಂಬ ಶಬ್ದಗಳಿಗೆ ಭಗವಂತನ ಬೇರೆ ಗುಣಗಳನ್ನು ಪ್ರತಿಪಾದಿಸುವ ಶಕ್ತಿ ಇರುವುದಿಲ್ಲ. ಆದ್ದರಿಂದ ಸರ್ವಗುಣಪ್ರತಿಪಾದಕವಾದ ಒಂದು ಶಬ್ದವೆಂಬುದು ಇರುವುದಿಲ್ಲ. ಅನಂತ ಶಬ್ದಸ್ವರೂಪವಾದ ವೇದಗಳು ವೇದದಲ್ಲಿ ಇಲ್ಲದೆ ಇರುವ ಭಗವಂತನ ಗುಣಗಳನ್ನು ಹೇಳಲು ಸಮರ್ಥವಾಗುವುದಿಲ್ಲ. ಆದ್ದರಿಂದಲೇ ಭಗವಂತನು ಅಚಿಂತ್ಯನೆನಿಸಿದ್ದಾನೆ. ಆದ್ದರಿಂದ ನಾನು ಹೇಳಿದಂತೆ ಶಬ್ದಕ್ಕೂ, ಭಗವತ್ಪದಾರ್ಥಕ್ಕೂ ಸಮಗ್ರವಾದ ಸಂಬಂಧವನ್ನು ಹೇಳಲಾಗದು.

ಸುವರ್ಚಲಾ

ಅಹಂ ಗಾತ್ರೈಕತಃಶ್ಯಾಮಾ ಭವಾನಪಿ ತಥೈವ ಚ |
ತನ್ಮೇ ಬ್ರೂಹಿ ಯಥಾನ್ಯಾಯಮೇವಂ ಚೇನ್ಮುನಿಸತ್ತಮ ॥77॥

ಸುವರ್ಚಲಾ ನಾನು ಒಂದು ಶರೀರವನ್ನು ಧರಿಸಿದಾಗ ಶ್ಯಾಮಲ ವರ್ಣದವಳಾಗಿರುತ್ತೇನೆ. ಬೇರೆ ಜನ್ಮದಲ್ಲಿ ಇನ್ನೊಂದು ವರ್ಣವನ್ನು ಹೊಂದಿರುತ್ತೇನೆ. ರೇತಸ್ಸಿನಿಂದ ವಿಕಾರವನ್ನು ಹೊಂದುವ ಶರೀರದಲ್ಲಿ ಇದೇ ರೀತಿಯ ಬಣ್ಣ ಎಂದು ನಿಶ್ಚಯಿಸಲು ಬರುವುದಿಲ್ಲ. ಇದರಂತೆ ನಿನ್ನ ಸ್ಥಿತಿಯು. ಹೀಗಿದ್ದಾಗ ಪರಮಾತ್ಮನು ನಮ್ಮಂತೆ ಬದಲಾವಣೆಯನ್ನು ಹೊಂದುತ್ತಾನೋ? ಹೊಂದುವುದಿಲ್ಲವೋ? ಈ ವಿಷಯದಲ್ಲಿ ನನಗೆ ಉತ್ತರಿಸು.

ಶ್ವೇತಕೇತು

ಮೃಣ್ಮಯೇ ಹಿ ಘಟೇ ಭಾವಸ್ತಾದೃಗ್ಭಾವ ಇಹೇಷ್ಯತೇ |
ಅಯಂ ಭಾವಃ ಪರೇಽಚಿಂತ್ಯೇ ಹ್ಯಾತ್ಮಭಾವೋ ಯಥಾ ಚ ಮೃತ್ ॥

ಶ್ವೇತಕೇತು ಸುವರ್ಚಲೆಯೇ, ಪರಮಾತ್ಮನ ಸ್ವರೂಪವು ಎಂದಿಗೂ ವ್ಯತ್ಯಾಸವಾಗದು. ಮಣ್ಣಿನಿಂದ ಮಾಡಿದ ಪದಾರ್ಥಗಳನ್ನು ಘಟ, ಶರಾವ ಮೊದಲಾದ ಶಬ್ದಗಳಿಂದ ಕರೆಯುತ್ತೇವೆ. ಮಣ್ಣು ಮಡಿಕೆಯಾಗಲಿ, ಶರಾವವಾಗಲಿ ಮಣ್ಣಿನ ಅಂಶದ ಸ್ವರೂಪವು ನಾಶವಾಗುವುದಿಲ್ಲ. ಅದರಂತೆ ಅಚಿಂತ್ಯನಾದ ಪರಮಾತ್ಮ ನಮ್ಮೆಲ್ಲರ ಅಂತರ್ಯಾಮಿಯಾಗಿದ್ದಾನೆ. ಆ ಪರಮಾತ್ಮನ ಸ್ವರೂಪವು ಮಣ್ಣಿನಂತೆ ಒಂದೇ ರೀತಿಯಾಗಿರುತ್ತದೆ.

ಅಹಂ ತ್ವಮೇತದಿತ್ಯೇವ ಪರೇ ಸಂಕಲ್ಪನಾಮ ಯಾ |
ತಸ್ಮಾದ್ ವಾಚೋ ನ ವರ್ತಂತ ಇತಿ ನೈವ ವಿರುದ್ಧ್ಯತೇ ॥79॥
ತಸ್ಮಾದ್ ವಾಚೋ ನ ವರ್ತಂತೇ ಇತಿ ನೈವ ವಿರುದ್ಧ್ಯತೇ |
ತಸ್ಮಾದ್ ವಾಮೇನ ವರ್ತಂತೇ ಮನಸಾ ಭೀರು ಸರ್ವಶಃ ॥80॥

ಅಹಂ, ತ್ವಂ, ಈಶಃ ಇತ್ಯಾದಿ ಶಬ್ದಗಳು ಭಗವಂತನಲ್ಲಿ ವಿರುದ್ಧಗಳಾಗುವುದಿಲ್ಲ. `ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ' ಎಂಬಲ್ಲಿ ಅಹಂ ಶಬ್ದವು ಪರಮಾತ್ಮನಲ್ಲಿ ಪ್ರಯೋಗಿಸಲ್ಪಟ್ಟಿದೆ. `ಅನಂತವೀರ್ಯಾಮಿತವಿಕ್ರಮಸ್ತ್ವಮ್' ಎಂಬಲ್ಲಿ ತ್ವಂ ಎಂಬ ಶಬ್ದವು ಪರಮಾತ್ಮನಲ್ಲಿ ಪ್ರಯೋಗಿಸಲ್ಪಟ್ಟಿದೆ. `ಏಷ ಆತ್ಮೇತಿ ಹೋ ವಾಚ' ಎಂಬಲ್ಲಿ ಏಷ ಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆ. `ಅಹಂ ಏಷಃ ತ್ವಮ್' ಇತ್ಯಾದಿ ಶಬ್ದಗಳು ಪರಮಾತ್ಮನ ಸ್ವಲ್ಪ ಗುಣಗಳನ್ನು ಪ್ರತಿಪಾದಿಸುತ್ತವೆ ಹೊರತು ಸರ್ವನಾಮ ಶಬ್ದಗಳು ಭಗವಂತನ ಸರ್ವಗುಣಪ್ರತಿಪಾದಕವಾದವುಗಳಲ್ಲ. ಆದ್ದರಿಂದ `ಯತೋವಾಚೋ ನಿವರ್ತಂತೇ' ಎಂಬ ಶಬ್ದವು ಭಗವಂತನ ಗುಣಗಳನ್ನು ಹೇಳುವುದಿಲ್ಲ ಎಂಬ ಅರ್ಥವಲ್ಲ. ಸಮಗ್ರವಾಗಿ ಭಗವಂತನ ಗುಣಪ್ರತಿಪಾದಕವಾಗುವುದಿಲ್ಲ ಎಂದು ಅರ್ಥ. ಹಾಗಾಗಿ ವಾಚ್ಯತ್ವ, ಅವಾಚ್ಯತ್ವ ಶಬ್ದಗಳಲ್ಲಿ ವಿರೋಧವಿರುವುದಿಲ್ಲ. ಆದ್ದರಿಂದ ಭಗವಂತನ ಗುಣಗಳನ್ನು ಮನಃಪೂರ್ವಕವಾಗಿ ಸಮಗ್ರವಾಗಿ ಕೊಂಡಾಡಲು ವೇದಗಳು ಹೆದರುತ್ತವೆ. ಎಂದರೆ ಸಾಕಲ್ಯೇನ ಹೇಳಲಾಗುವುದಿಲ್ಲ ಎಂದೇ ಅರ್ಥ. ಆಕಾಶವು ವಿಶ್ವದಲ್ಲಿ ಎಲ್ಲ ಕಡೆ ವ್ಯಾಪಿಸಿದೆ ಎಂದು ಕಾಣಿಸಿದರೂ ಆಕಾಶದ ವ್ಯಾಪ್ತಿ ಹೇಗೆ ತಿಳಿಯಲಾಗದೋ ಅದರಂತೆ ಭಗವಂತ ಎಲ್ಲ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದರೂ ಅವನ ಸ್ವರೂಪವನ್ನು ಶಬ್ದಗಳಿಗೆ ಸಾಕಲ್ಯೇನ ಬೋಧಿಸಲು ಸಾಧ್ಯವಾಗುವುದಿಲ್ಲ.

ಸಂಸರ್ಗೇ ಸತಿ ಸಂಬಂಧಾತ್ ತದ್ವಿಕಾರಃ ಭವಿಷ್ಯತಿ |
ಅನಾಕಾಶಗತಂ ಸರ್ವಂ ವಿಕಾರೇ ಚ ಸದಾ ಗತಮ್ ॥81॥

ಪದಾರ್ಥಗಳು ಆಕಾಶದಲ್ಲಿ ಸಂಬಂಧ ಹೊಂದಿದಂತೆ ಕಾಣುತ್ತವೆ. ಶಬ್ದಗಳು ಭಗವಂತನಲ್ಲಿ ಸಂಬಂಧ ಹೊಂದಿದಂತೆ ಕಾಣಿಸುವುದಿಲ್ಲ. ಆದ್ದರಿಂದ ಭಗವಂತನು ವಿಕಾರ ಎನಿಸಿದ್ದಾನೆ. ವಿಲಕ್ಷಣ ಆಕಾರ ಎಂದು ಇದರ ಅರ್ಥ. ಆಕಾಶದ ಸಮಗ್ರ ಸಂಬಂಧವನ್ನು ಪದಾರ್ಥಗಳು ಹೇಗೆ ಹೊಂದಿಲ್ಲವೋ ಹಾಗೆ ಶಬ್ದಗಳು ಸಮಗ್ರವಾಗಿ ಭಗವಂತನ ಸಂಬಂಧವನ್ನು ಹೊಂದಿರುವುದಿಲ್ಲ.

ತದ್ ಬ್ರಹ್ಮ ಪರಮಂ ಶುದ್ಧಮನೌಪಮ್ಯಂ ನ ಶಕ್ಯತೇ |
ನ ದೃಶ್ಯತೇ ತಥಾ ತಚ್ಚ ದೃಶ್ಯತೇ ಚ ಮತಿರ್ಮಮ ॥82॥

ಆ ಪರಬ್ರಹ್ಮನಾದರೂ ಸರ್ವೋತ್ತಮನಾಗಿದ್ದಾನೆ. ಪ್ರಕೃತಿಗುಣ ರಹಿತನಾಗಿದ್ದಾನೆ. ಉಪಮೆಗೆ ನಿಲುಕದವನಾಗಿದ್ದಾನೆ. ಅಗೋಚರನಾಗಿದ್ದರೂ ಜ್ಞಾನಚಕ್ಷುಸ್ಸಿಗೆ ಗೋಚರನಾಗಿದ್ದಾನೆ ಎಂದೇ ನನ್ನ ಭಾವ.

ಸುವರ್ಚಲಾ

ನಿರ್ವಿಕಾರಂ ಹ್ಯಮೂರ್ತಿಂ ಚ ನಿರಯಂ ಸರ್ವಗಂ ತಥಾ |

ದೃಶ್ಯತೇ ಚ ವಿಯನ್ನಿತ್ಯಂ ದೃಗಾತ್ಮಾ ತೇನ ದೃಶ್ಯತೇ ॥83॥
ಸುವರ್ಚಲಾ ಆಕಾಶವು ನಿರ್ವಿಕಾರವು. ಮೂರ್ತಿ ಇಲ್ಲದುದು. ನಾಶವಿಲ್ಲದುದು, ವ್ಯಾಪ್ತವಾದುದು. ಈ ರೀತಿಯಾಗಿ ಆಕಾಶವು ಇರುವಂತೆ ಜ್ಞಾನ ಸ್ವರೂಪಿಯಾದ ಭಗವಂತನು ಹೀಗೆಯೇ ಆಗಿರುತ್ತಾನೆಯೇ?
ಶ್ವೇತಕೇತುಃ
ತ್ವಚಾ ಸ್ಪೃಶತಿ ವೈ ವಾಯುಮಾಕಾಶಸ್ಥಂ ಪುನಃ ಪುನಃ |
ತತ್ಸ್ಥಂ ಗಂಧಂ ತಥಾಘ್ರಾತಿ ಜ್ಯೋತಿಃ ಪಶ್ಯತಿ ಚಕ್ಷುಷಾ ॥84॥
ಶ್ವೇತಕೇತು ಪ್ರಿಯೆ, ಆಕಾಶದಲ್ಲಿರುವ ವಾಯುವನ್ನು ನನ್ನ ತ್ವಗಿಂದ್ರಿಯವು ಮುಟ್ಟಿ ತಿಳಿಯುತ್ತದೆ. ಗಾಳಿಯಲ್ಲಿರುವ ವಾಸನೆಯನ್ನು ಮೂಗು ಮೂಸಿ ತಿಳಿಯುತ್ತದೆ. ತೇಜಸ್ಸಿನಲ್ಲಿರುವ ಬೆಳಕಿನ ಕಿರಣಗಳನ್ನು ಕಣ್ಣು ತಿಳಿಯುತ್ತದೆ.
ತಮೋರಶ್ಮಿಗಣಶ್ಚೈವ ಮೇಘಜಾಲಂ ತಥೈವ ಚ |
ವರ್ಷಂ ತಾರಾಗಣಂ ಚೈವ ನಾಕಾಶಂ ದೃಶ್ಯತೇ ಪುನಃ ॥85॥
ಕತ್ತಲೆ, ಕಿರಣ ಸಮೂಹಗಳು, ಮೇಘಸಮೂಹಗಳು, ನಕ್ಷತ್ರಗಳು, ಮಳೆ ಇವುಗಳೆಲ್ಲವೂ ನನ್ನ ಕಣ್ಣಿಗೆ ಕಾಣಿಸುತ್ತವೆ. ಆದರೆ ಆಕಾಶವು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ.
ಆಕಾಶಸ್ಯಾಪ್ಯಥಾಕಾಶಂ ಸದ್ರೂಪಮಿತಿ ನಿಶ್ಚಿತಮ್ |
ತದರ್ಥೇ ಕಲ್ಪಿತಾ ಹ್ಯೇತೇ ತತ್ಸತ್ಯೋ ವಿಷ್ಣುರೇವ ಚ |
ಯಾನಿ ನಾಮಾನಿ ಗೌಣಾನಿ ಹ್ಯುಪಚಾರಾತ್ ಪರಾತ್ಮನಿ ॥86॥
ಆಕಾಶವು ಅಸ್ತಿತ್ವವನ್ನು ಹೊಂದುವ ಪದಾರ್ಥವಾಗಿದ್ದರೂ ಹೇಗೆ ಕಣ್ಣಿಗೆ ಕಾಣಿಸುವುದಿಲ್ಲವೋ ಅದರಂತೆ ಅವಕಾಶಪ್ರದವಾದ ಆಕಾಶದಂತೆ ಪರಮಾತ್ಮನ ಸದೃಶವಾದ ರೂಪವು ಕಣ್ಣಿಗೆ ಕಾಣಿಸುವುದಿಲ್ಲ. ಕಣ್ಣಿಗೆ ಕಾಣಿಸದ ಮಾತ್ರಕ್ಕೆ ಆಕಾಶದ ಅಸ್ತಿತ್ವವು ಹೇಗೆ ಅಪ್ರಾಮಾಣಿಕವಲ್ಲವೋ ಹಾಗೆ ಸದ್ರೂಪನಾದ ಭಗವಂತನ ರೂಪವು ಅಪ್ರಾಮಾಣಿಕವಾದುದಲ್ಲ. ಯಾವ ಭಗವಂತನ ನಾಮಗಳು ಇವೆಯೋ ಅವೆಲ್ಲವೂ ಭಗವಂತನ ಗುಣಗಳನ್ನು ಹೇಳುವುದರಲ್ಲಿ ಪ್ರವೃತ್ತಿಯನ್ನು ಹೊಂದುತ್ತವೆ.
ನ ಚಕ್ಷುಷಾ ನ ಮನಸಾ ನ ಚಾನ್ಯೇನ ಪರೋ ವಿಭುಃ |
ಚಿಂತ್ಯತೇ ಸೂಕ್ಷ್ಮಯಾ ಬುದ್ಧ್ಯಾ ವಾಚಾ ವಕ್ತುಂ ನ ಶಕ್ಯತೇ ॥87॥
ಏತತ್ಪ್ರಪನ್ನಮಖಿಲಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್ |
ಮಹಾಘಟೋಽಲ್ಪಕಶ್ಚೈವ ಯಥಾ ಮಹ್ಯಾಂ ಪ್ರತಿಷ್ಠಿತೌ ॥88॥
ಈ ಪರಮಾತ್ಮನು ಬಾಹ್ಯಕಣ್ಣಿಗಾಗಲಿ, ಜಡವಾದ ಮನಸ್ಸಿಗಾಗಲಿ, ಬೇರೆ ಸಾಧನಗಳಿಂದಾಗಲಿ ತಿಳಿಯಲು ಸಾಧ್ಯನಲ್ಲ. ಸೂಕ್ಷ್ಮವಾದ ಬುದ್ಧಿಯಿಂದಲೇ ಅವನನ್ನು ತಿಳಿಯಬೇಕು. ಬಾಯಿಂದ ಹೇಳಿ ತಿಳಿಸಲು ಸಾಧ್ಯನಲ್ಲ. ಭೂಮಿಯಲ್ಲಿ ಮಣ್ಣಿನಿಂದಲೇ ಸಣ್ಣ, ದೊಡ್ಡ ಗಡಿಗೆಗಳೆಲ್ಲ ಹುಟ್ಟುವಂತೆ ಸಮಸ್ತ ಪ್ರಪಂಚವು ಪರಮಾತ್ಮನಿಂದಲೇ ಉತ್ಪತ್ತಿಯನ್ನು ಹೊಂದುತ್ತಿದೆ. ಪ್ರಪಂಚವೆಲ್ಲವೂ ಪರಮಾತ್ಮನಲ್ಲೇ ಶರಣು ಹೊಂದಿದೆ.
ನ ಚ ಸ್ತ್ರೀ ನ ಪುಮಾಂಶ್ಚೈವ ಯಥೈವ ನ ನಪುಂಸಕಃ |
ಕೇವಲಜ್ಞಾನಮಾತ್ರಂ ತತ್ ತಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥89॥
ಭಗವಂತನು ಜಗತ್ತಿನಲ್ಲಿರುವ ಸ್ತ್ರೀಯರಂತೆ ರಾಗಾದಿಗಳಿಂದ ಆಕಾಂಕ್ಷಿತನಲ್ಲ. ಜಗತ್ತಿನಲ್ಲಿರುವ ಪುರುಷರಂತೆ ಕಾಮಾದಿಗಳಿಂದಲೂ ಆಸಕ್ತನಲ್ಲ. ಜಗತ್ತಿನ ನಪುಂಸಕರಂತೆ ನಿರ್ವೀರ್ಯನೂ ಅಲ್ಲ. ಕೇವಲ ಜ್ಞಾನರೂಪಿಯಾದ ಭಗವಂತನಲ್ಲಿ ಜಗತ್ತೆಲ್ಲವೂ ಆಶ್ರಯವನ್ನು ಹೊಂದಿದೆ.
ಭೂಮಿಸಂಸ್ಥಾನಯೋಗೇನ ವಸ್ತುಸಂಸ್ಥಾನಯೋಗತಃ |
ರಸಭೇದಾ ಯಥಾ ತೋಯೇ ಪ್ರಕೃತ್ಯಾಮಾತ್ಮನಸ್ತಥಾ ॥90॥
ಭೂಮಿಯ ಗುಣದಿಂದ, ಪದಾರ್ಥಗಳ ಸಂಬಂಧದಿಂದ ನೀರಿನಲ್ಲಿ ಹೇಗೆ ರಸಭೇದವು ತೋರುತ್ತದೋ ಹಾಗೆ ಪರಮಾತ್ಮಾಧೀನವಾದ ಜಡಪ್ರಕೃತಿಯಲ್ಲಿ ಈ ಭಿನ್ನ ಜಗತ್ತು ತೋರುತ್ತಿದೆ.
ತದ್ವಾಕ್ಯಸ್ಮರಣಾನ್ನಿತ್ಯಂ ತೃಪ್ತಿಂ ವಾರಿ ಪಿಬನ್ನಿವ |
ಪ್ರಾಪ್ನೋತಿ ಜ್ಞಾನಮಖಿಲಂ ತೇನ ತತ್ಸುಖಮೇಧತೇ ॥91॥
ಭಗವಂತನ ಸ್ಮರಣೆಯಿಂದ ಭಗವದ್ಭಕ್ತನು ತೃಷಿಕನಾದವನು ಜಲಪಾನ ಮಾಡಿದಾಗ ತೃಪ್ತಿಯನ್ನು ಹೊಂದುವಂತೆ ಸಂತೃಪ್ತಿಯನ್ನು ಹೊಂದುತ್ತಾನೆ. ಭಗವಂತನ ಜ್ಞಾನವನ್ನು ಹೊಂದಿದ ಜಗತ್ತು ಸ್ವರೂಪ ಸುಖವನ್ನು ಅನುಭವಿಸಲು ಸಮರ್ಥವಾಗುತ್ತದೆ.
ಸುವರ್ಚಲಾ
ಅನೇನ ಸಾಧ್ಯಂ ಕಿಂ ಸ್ಯಾದ್ವೈ ಶಬ್ದೇನೇತಿ ಮತಿರ್ಮಮ |
ವೇದಗಮ್ಯಃ ಪರೋಽಚಿಂತ್ಯ ಇತಿ ಪೌರಾಣಿಕಾ ವಿದುಃ ॥92॥
ಸುವರ್ಚಲಾ ಶ್ವೇತಕೇತುವೇ, ಅಚಿಂತ್ಯನಾದ ಪರಮಾತ್ಮನನ್ನು ವೇದಗಳು ಖಂಡಶಃ ಹೇಳುತ್ತವೆ. ಸಾಕಲ್ಯೇನ ಹೇಳಲಾಗುವುದಿಲ್ಲ ಎಂದು ನೀನು ನಿರೂಪಿಸಿರುತ್ತಿ. ಹೀಗಿದ್ದಾಗ ವೇದಗಳು ಭಗವಂತನ ಒಂದೊಂದು ಗುಣಗಳನ್ನು ಮಾತ್ರ ಹೇಳುವುದರಿಂದ ಪುರಾಣಿಕರು ಹೇಳುವಂತೆ ಅಚಿಂತ್ಯನಾದ, ಸರ್ವೋತ್ತಮನಾದ ಭಗವಂತನು ವೇದಗಮ್ಯನು ಹೇಗೆ ಆಗುತ್ತಾನೆ?
ನಿರರ್ಥಕೋ ಯಥಾ ಲೋಕೇ ತದ್ವತ್ಸ್ಯಾದಿತಿ ಮೇ ಮತಿಃ |
ನಿರೀಕ್ಷ್ಯೈವಂ ಯಥಾನ್ಯಾಯಂ ವಕ್ತುಮರ್ಹಸಿ ಮೇಽನಘ ॥93॥
ಹೊಟ್ಟೆ ಹಸಿದು ಊಟಕ್ಕೆ ಕುಳಿತ ವ್ಯಕ್ತಿಯು ಹೊಟ್ಟೆ ತುಂಬಲೆಂದು ಒಂದೊಂದೇ ತುತ್ತನ್ನು ತಿಂದರೆ ಆ ತುತ್ತುಗಳು ಹೇಗೆ ನಿರರ್ಥಕವೋ ಹಾಗೆ ಭಗವಂತನ ಒಂದೊಂದೇ ಗುಣಗಳಿಂದ ಅವನ ಪೂರ್ಣತೆಯನ್ನು ಬೋಧಿಸಿದಂತೆ ಆಗುವುದಿಲ್ಲ. ನೀನು ಹೇಳಿದ

ಈ ಉಪದೇಶವನ್ನು ಮತ್ತೊಮ್ಮೆ ವಿಮರ್ಶಿಸಿ ಯೋಗ್ಯವಾದ ಉತ್ತರವನ್ನು ನಿರ್ದುಷ್ಟನೇ, ನನಗೆ ಬೋಧಿಸು.
ಶ್ವೇತಕೇತುಃ
ವೇದಗಮ್ಯಂ ಪರಂ ಶುದ್ಧಮಿತಿ ಸತ್ಯಾ ಪರಾ ಶ್ರುತಿಃ |
ವ್ಯಾವೃತ್ತ್ಯಾ ನೈತದಿತ್ಯಾಹ ತೂಪಲಿಂಗೇ ಚ ವರ್ತತೇ ॥94॥
ಶ್ವೇತಕೇತು ಪ್ರಿಯೆ, ಪೌರಾಣಿಕರು ಪರಮಾತ್ಮನ ಸ್ವರೂಪವನ್ನು ವೇದದಿಂದ ತಿಳಿಯಬೇಕೆಂದು ಹೇಳುವುದು ಯಥಾರ್ಥವೇ. ಭಗವಂತನು ವೇದಗಮ್ಯನು, ಸರ್ವೋತ್ತಮನು, ಶುದ್ಧನು ಆಗಿದ್ದಾನೆ. `ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ' ಎಂದು ಶ್ರುತಿಯು ಹೇಳಿರುವುದು ಭಗವಂತನು ವೇದಗಮ್ಯನೆಂದು ಹೇಳಿರುವುದನ್ನು ನಿರಾಕರಿಸುವ ದೃಷ್ಟಿಯಿಂದ ಅಲ್ಲ. ಸಾಕಲ್ಯೇನ ಎಂಬ ಅಭಿಪ್ರಾಯದಲ್ಲಿ ಹೇಳಿದ್ದು ಸರಿಯಾಗಿದೆ.
ನಿರರ್ಥಕೋ ನ ಚೈವಾಸ್ತಿ ಶಬ್ದೋ ಲೌಕಿಕ ಉತ್ತಮೇ |
ಅನನ್ವಯಾಃ ಸ್ಮೃತಾಃ ಶಬ್ದಾ ನಿರರ್ಥಾ ಇತಿ ಲೌಕಿಕೈಃ ॥95॥
ಸರ್ವೋತ್ತಮನಾದ ಭಗವಂತನ ವಿಷಯದಲ್ಲಿ ಯಾವ ಲೌಕಿಕ ಶಬ್ದಗಳೂ ವ್ಯರ್ಥವಾದವುಗಳಲ್ಲ. `ಗೌರಶ್ವಃ ಪುರುಷೋ ಹಸ್ತೀ' ಎಂಬ ಲೌಕಿಕ ಶಬ್ದಗಳಲ್ಲಿ ಅನ್ವಯವೂ ಇರುವುದಿಲ್ಲ. ಇದರಂತೆ ಪರಮಾತ್ಮನ ವಿಷಯದಲ್ಲಿ ವೈದಿಕ ಶಬ್ದಗಳು ಅನ್ವಯ ರಹಿತವಾದವುಗಳಾಗಿ ಇರುವುದಿಲ್ಲ. ಒಂದೊಂದು ಭಗವಂತನ ಗುಣಗಳನ್ನು ಹೇಳುವುದರಲ್ಲಿ ವೈದಿಕವಾದ ಶಬ್ದಗಳಿಗೆ ತಾತ್ಪರ್ಯವಿದೆ.
ಗೃಹ್ಯಂತೇ ತದ್ವದಿತ್ಯೇವ ನ ವರ್ತಂತೇ ಪರಾತ್ಮನಿ |
ಅಗೋಚರತ್ವಂ ವಚಸಾಂ ಯುಕ್ತಮೇವಂ ತಥಾ ಶುಭೇ ॥96॥
ಬ್ರಹ್ಮಮೀಮಾಂಸ ಕರ್ತೃಗಳಾದ ವ್ಯಾಸರೇ ಮೊದಲಾದವರು ಭಗವಂತನ ಗುಣಗಳು ವೇದಗಳಿಂದ ಗಮ್ಯವಾಗಿವೆ ಎಂದೇ ಹೇಳಿದ್ದಾರೆ. `ಯತೋ ವಾಚೋ ನಿ ವರ್ತಂತೇ' ಎಂಬ ಶ್ರುತಿಯು ಸಾಕಲ್ಯೇನ ಭಗವಂತನು ಶಬ್ದವಾಚ್ಯನಲ್ಲ ಎಂದು ಹೇಳುತ್ತಿದೆ. ಆದ್ದರಿಂದ ಮಂಗಳಸ್ವರೂಪಿಯೇ, ಈ ನನ್ನ ಮಾತಿನಲ್ಲಿ ಸಮಂಜಸವೇ ಇದೆ. ಯಾವ ವಿರೋಧವೂ ಇರುವುದಿಲ್ಲ.
ಸಾಧನಸ್ಯೋಪದೇಶಾಚ್ಚ ಹ್ಯುಪಾಯಸ್ಯ ಚ ಸೂಚನಾತ್ |
ಉಪಲಕ್ಷಣಯೋಗೇನ ವ್ಯಾವೃತ್ತ್ಯಾ ಚ ಪ್ರದರ್ಶನಾತ್ |
ವೇದಗಮ್ಯಃ ಪರಃ ಶುದ್ಧ ಇತಿ ಮೇ ಧೀಯತೇ ಮತಿಃ ॥97॥
`ಆಕಾಶಸ್ತಲ್ಲಿಂಗಾತ್' ಮೊದಲಾದ ಸೂತ್ರಗಳಲ್ಲಿ ಭಗವಂತನು ಆಕಾಶ ಶಬ್ದದಿಂದ ವಾಚ್ಯನಾಗಿದ್ದಾನೆ ಎಂದು ವ್ಯಾಸರು ಉಪದೇಶಿಸಿದ್ದಾರೆ. ಅದೇ ಆಕಾಶ ಶಬ್ದವು ಪಂಚಭೂತದಲ್ಲಿ ಇರುವ ಆಕಾಶವನ್ನು ಹೇಳುತ್ತಿದೆ ಎಂದು ಸೂಚಿಸಿದ್ದಾರೆ. `ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂಬ ಸೂತ್ರದಲ್ಲಿ ಆದಿಪದದಿಂದ ಅದೃಶ್ಯಕ್ಕಿಂತ ಬೇರೆಯಾದ ಗುಣಗಳನ್ನು ಸಂಗ್ರಹ ಮಾಡಬೇಕೆಂದು ಉಪಾಯವನ್ನು ಸೂಚಿಸಿದ್ದಾರೆ. `ನೇತಿ ನೇತ್ಯಾತ್ಮಾ ಅದೃಶ್ಯ' ಎಂಬ ಶ್ರುತಿಯಲ್ಲಿ ಭಗವಂತನು ಜಡದಂತೆ ಅಲ್ಲ, ಜೀವನಂತೆ ಅಲ್ಲ, ಸಕಲ ಜಗತ್ತಿಗಿಂತ ವಿಲಕ್ಷಣನು ಎಂದು ವೇದವ್ಯಾಸದೇವರು ತೋರಿಸಿರುವುದರಿಂದ ಪರಮನಾದ, ಶುದ್ಧನಾದ ಭಗವಂತನು ವೇದಗಮ್ಯನಾಗಿದ್ದಾನೆ ಎಂಬುದೇ ನನ್ನ ಬುದ್ಧಿಯು.
ಅಧ್ಯಾತ್ಮಧ್ಯಾನಸಂಭೂತಮಭೂತಂ ಭೂತವತ್ ಸ್ಫುಟಮ್ |
ಜ್ಞಾನಂ ವಿದ್ಧಿ ಶುಭಾಚಾರೇ ತೇನ ಯಾಂತಿ ಪರಾಂ ಗತಿಮ್ ॥98॥
ಪರಮಾತ್ಮನು ಶ್ರೇಷ್ಠವಾದ ಅತ್ಮವಾಗಿರುವುದರಿಂದ ಅಧ್ಯಾತ್ಮ ಎನಿಸಿದ್ದಾನೆ. ಇಂತಹ ಪರಮಾತ್ಮನು ನಿಧಿಧ್ಯಾಸನರೂಪವಾದ ಧ್ಯಾನದಿಂದ ಗೋಚರನಾಗುತ್ತಾನೆ. `ಉಪನಿಷದೇಕ ಸಮಧಿಗಮ್ಯ'ನಾಗಿರುವುದರಿಂದ ಅವನನ್ನು ನಮ್ಮ ಶಕ್ತಿಯಿಂದ ತಿಳಿಯಲಾಗದು. ಆದ್ದರಿಂದ ಅಭೂತನೆನಿಸಿದ್ದಾನೆ. ಬ್ರಹ್ಮಾದಿ ದೇವತೆಗಳಲ್ಲಿ ಅಪರೋಕ್ಷ ಜ್ಞಾನದಲ್ಲಿ ಗಮ್ಯನಾಗಿರುವುದರಿಂದ ಭೂತನೆನಿಸಿದ್ದಾನೆ. ಇಂತಹ ಭಗವಂತನ ಜ್ಞಾನವನ್ನು ಹೊಂದಿದವರು ಪರಮಪದವಿಯನ್ನು ಹೊಂದುತ್ತಾರೆ ಎಂಬುದನ್ನು ಶುಭಾಚಾರ ಸಂಪನ್ನಳೇ, ತಿಳಿದುಕೊ.
ನಾನಾರೂಪವದಸ್ಯೈವಮೈಶ್ವರ್ಯಂ ದೃಶ್ಯತೇ ಶುಭೇ |
ನ ವಾಯುಸ್ತಂ ನ ಸೂರ್ಯಸ್ತಂ ನಾಗ್ನಿಸ್ತತ್ತು ಪರಂ ಪದಮ್ ॥100॥
ಭಗವಂತನ ಐಶ್ವರ್ಯವು, ವಿಭೂತಿಗಳು ಹಲವು ಬಗೆಗಳಿಂದ ಇವೆ. ವಾಯುವಾಗಲೀ, ಸೂರ್ಯನಾಗಲೀ, ಅಗ್ನಿಯಾಗಲೀ ಆ ಭಗವಂತನ ಸ್ವರೂಪವನ್ನು ತಿಳಿಸಲಾರರು.
ಅನೇನ ಪೂರ್ಣಮೇತದ್ಧಿ ಹೃದಿ ಭೂತಿಮಿಹೇಷ್ಯತೇ |
ಏತಾವದಾತ್ಮವಿಜ್ಞಾನಮೇತಾವದ್ ಯದಹಂ ಸ್ಮೃತಮ್ |
ಆವಯೋರ್ನ ಚ ಸತ್ವೇ ವೈ ತಸ್ಮಾದಜ್ಞಾನಬಂಧನಮ್ ॥101॥
ಈ ಭಗವಂತನಿಂದಲೇ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಅವನೇ ನಮ್ಮ ಮನಸ್ಸಿನಲ್ಲಿ ನೆಲೆಗೊಂಡು ಪ್ರಕಾಶಿಸುತ್ತಿದ್ದಾನೆ. ಆತ್ಮಜ್ಞಾನವೆಂಬುದು ಇಷ್ಟೆ. ನಾನು ಇಷ್ಟನ್ನು ಮಾತ್ರ ತಿಳಿದಿದ್ದೇನೆ. ಪರಮಾತ್ಮನಲ್ಲಿ ನಮ್ಮಿಬ್ಬರಿಗೆ ಸರಿಯಾದ ಜ್ಞಾನವು ಇನ್ನೂ ದೃಢವಾಗಿಲ್ಲದ ಕಾರಣ ಈ ಅಜ್ಞಾನಬಂಧನದಲ್ಲಿ ಸಿಲುಕಿದ್ದೇವೆ.
ಭೀಷ್ಮಃ
ಏವಂ ಸುವರ್ಚಲಾ ಹೃಷ್ಟಾ ಪ್ರೋಕ್ತಾ ಭರ್ತ್ರಾ ಯಥಾರ್ಥವತ್ |
ಪರಿಚರ್ಯಮಾಣಾ ಹ್ಯನಿಶಂ ತತ್ವಬುದ್ಧಿಸಮನ್ವಿತಾ ॥102॥
ಭರ್ತಾ ಚ ತಾಮನುಪ್ರೇಕ್ಷ್ಯ ನಿತ್ಯನೈಮಿತ್ತಿಕಾನ್ವಿತಃ |
ಪರಮಾತ್ಮನಿ ಗೋವಿಂದೇ ವಾಸುದೇವೇ ಮಹಾತ್ಮನಿ ॥103॥

ಭೀಷ್ಮ ಈ ರೀತಿಯಾಗಿ ಸುವರ್ಚಲೆಯು ಪ್ರಿಯನಾದ ಶ್ವೇತಕೇತುವು ಹೇಳಿದ ಯಥಾರ್ಥ ಭಗವದ್‌ವಿಜ್ಞಾನದಿಂದ ಸಂತೋಷಗೊಂಡು, ಯಾವಾಗಲೂ ತನ್ನ ಪತಿಯಾದ ಶ್ವೇತಕೇತುವಿನ ಸೇವೆಯಲ್ಲಿಯೇ ನಿರತಳಾಗಿ, ತತ್ತ್ವಜ್ಞಾನವನ್ನು ಹೊಂದಿದ್ದಳು. ಗಂಡನಾದ ಶ್ವೇತಕೇತುವಾದರೂ ಪತ್ನಿಯಾದ ಸುವರ್ಚಲೆಯ ಜೊತೆ ನಿತ್ಯ ನೈಮಿತ್ತಿಕಕರ್ಮಗಳನ್ನು ಅನುಷ್ಠಾನ ಮಾಡುತ್ತಾ, ಸರ್ವೋತ್ತಮನಾದ ವಾಸುದೇವನಾದ ಮಹಾತ್ಮನಾದ ಗೋವಿಂದನಲ್ಲಿ ಸಮಸ್ತ ಕರ್ಮಗಳನ್ನು ಅವನ ಪೂಜಾರೂಪವಾಗಿ ಸಮರ್ಪಿಸುತ್ತಾ, ವಿಸ್ತಾರವಾದ ಕಾಲದಿಂದ ಭಗವತ್ಪೂಜಾ ರೂಪವನ್ನು ಮಾಡಿ ಪರಮಗತಿಯನ್ನು ಹೊಂದಿದನು.

ಸಮಾಧಾಯ ಚ ಕರ್ಮಾಣಿ ತನ್ಮಯತ್ವೇನ ಭಾವಿತಃ |
ಕಾಲೇನ ಮಹತಾ ರಾಜನ್ ಯಸ್ಮಾತ್ ತ್ವಂ ಪರಿಪೃಚ್ಛಸಿ |
ಗಾರ್ಹಸ್ಥ್ಯಂ ಚ ಸಮಾಸ್ಥಾಯ ಗತೌ ಜಾಯಾಪತೀ ಪರಮ್ ॥105॥

ಹೀಗೆ ಗಂಡ-ಹೆಂಡಂದಿರು ಗಾರ್ಹಸ್ಥ್ಯಧರ್ಮವನ್ನು ಹೊಂದಿಯೇ ಭಗವಂತನನ್ನು ಧ್ಯಾನಿಸಿ ಮೋಕ್ಷಕ್ಕೆ ಹೋದ ದೃಷ್ಟಾಂತವಿದೆ. ನೀನು ಪ್ರಶ್ನಿಸಿದ ನಿನ್ನ ಪ್ರಶ್ನೆಗೆ ಅನುಗುಣವಾಗಿ ಅದೆಲ್ಲವನ್ನು ಉತ್ತರಿಸಿದ್ದೇನೆ.

॥ ಇತಿ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಪಂಚಾಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ಮೂರನೆಯ ಅಧ್ಯಾಯ ಮುಗಿಯಿತು.

* * * * *

ಐವತ್ನಾಲ್ಕನೆಯ ಅಧ್ಯಾಯ

ಭೀಷ್ಮರು ಯುಧಿಷ್ಠಿರನಿಗೆ ದಮದ ಮಹಿಮೆಯನ್ನು ಬೋಧಿಸಿದುದು.

ಯುಧಿಷ್ಠಿರಃ

ಕಿಂ ಕುರ್ವನ್ ಸುಖಮಾಪ್ನೋತಿ ಕಿಂ ಕುರ್ವನ್ ದುಃಖಮಾಪ್ನುತೇ |
ಕಿಂ ಕುರ್ವನ್ನಿರ್ಭಯೋ ಲೋಕೇ ಸಿದ್ಧಶ್ಚರತಿ ಭಾರತ ॥1॥

ಯುಧಿಷ್ಠಿರ ಪಿತಾಮಹನೇ, ಮನುಷ್ಯನು ಯಾವ ಅನುಷ್ಠಾನದಿಂದ ಸುಖವನ್ನು ಹೊಂದುತ್ತಾನೆ? ಯಾವ ಕರ್ಮವನ್ನು ಮಾಡುವುದರಿಂದ ದುಃಖವನ್ನು ಹೊಂದುತ್ತಾನೆ? ಯಾವ ಕರ್ಮದಿಂದ ನಿರ್ಭಯನಾಗಿ ಸಿದ್ಧಪುರುಷನಂತೆ ಸಂಚರಿಸುತ್ತಾನೆ?

ಭೀಷ್ಮಃ

ದಮಮೇವ ಪ್ರಶಂಸಂತಿ ವೃದ್ಧಾಃ ಶ್ರುತಿಸಮಾಧಯಃ |
ಸರ್ವೇಷಾಮೇವ ವರ್ಣಾನಾಂ ಬ್ರಾಹ್ಮಣಸ್ಯ ವಿಶೇಷತಃ ॥2॥

ಭೀಷ್ಮ ಯುಧಿಷ್ಠಿರನೇ, ವೇದವಿಚಾರಗಳಲ್ಲಿ ಸಿದ್ಧರಾದ ಪುರುಷರು ಸಾಮಾನ್ಯವಾಗಿ ಎಲ್ಲ ವರ್ಣದವರಿಗೂ, ಅದರಲ್ಲಿಯೂ ಬ್ರಾಹ್ಮಣನಿಗೆ ಬೇಕಾಗಿರುವ ಗುಣ ದಮ ಎಂಬ ಗುಣ ಎಂದು ಪ್ರಶಂಸೆ ಮಾಡುತ್ತಾರೆ.

ನಾದಾಂತಸ್ಯ ಕ್ರಿಯಾಸಿದ್ಧಿರ್ಯಥಾವದುಪಲಭ್ಯತೇ |
ಕ್ರಿಯಾ ತಪಶ್ಚ ವೇದಾಶ್ಚ ದಮೇ ಸರ್ವಂ ಪ್ರತಿಷ್ಠಿತಮ್ ॥3॥

ಇಂದ್ರಿಯಗಳ ಸಂಯಮವಿಲ್ಲದ ವ್ಯಕ್ತಿಗೆ ಮಾಡುವ ಕಾರ್ಯಗಳು ಯಥಾವತ್ತಾಗಿ ಸಿದ್ಧಿಸುವುದಿಲ್ಲ. ಕಾರಣ ಕ್ರಿಯೆ, ತಪಸ್ಸು, ಸತ್ಯ - ಈ ಮೂರು ದಮದಲ್ಲಿ ಪ್ರತಿಷ್ಠಿತವಾಗಿವೆ.

ದಮಸ್ತೇಜೋ ವರ್ಧಯತಿ ಪವಿತ್ರಂ ದಮ ಉಚ್ಯತೇ |
ವಿಪಾಪ್ಮಾ ನಿರ್ಭಯೋ ದಾಂತಃ ಪುರುಷೋ ವಿಂದತೇ ಮಹತ್ ॥4॥

ದಮ ತೇಜಸ್ಸನ್ನು ವರ್ಧಿಸುತ್ತದೆ. ಅತ್ಯಂತ ಪವಿತ್ರವಾದುದು. ಆತ್ಮಸಂಯಮ ಉಳ್ಳವನು ಪಾಪರಹಿತನಾಗಿ, ಭಯರಹಿತನಾಗಿ ಮಹಾಫಲವನ್ನು ಹೊಂದುತ್ತಾನೆ.

ಸುಖಂ ದಾಂತಃ ಪ್ರಸ್ವಪಿತಿ ಸುಖಂ ಚ ಪ್ರತಿಬುಧ್ಯತೇ |
ಸುಖಂ ಲೋಕೇ ವಿಪರ್ಯೇತಿ ಮನಶ್ಚಾಸ್ಯ ಪ್ರಸೀದತಿ ॥5॥

ಇಂದ್ರಿಯನಿಗ್ರಹವನ್ನು ಹೊಂದಿರುವ ಮನುಷ್ಯನು ಸುಖವಾಗಿ ನಿದ್ರಿಸುತ್ತಾನೆ. ಸುಖವಾಗಿ ಎಚ್ಚರಗೊಳ್ಳುತ್ತಾನೆ. ಸುಖವಾಗಿ ಲೋಕದಲ್ಲಿ ಸಂಚರಿಸುತ್ತಾನೆ. ಅವನ ಮನಸ್ಸು ಯಾವಾಗಲೂ ಪ್ರಸನ್ನವಾಗಿರುತ್ತದೆ.

ತೇಜೋ ದಮೇನ ಧ್ರಿಯತೇ ನ ತತ್ ತೀಕ್ಷ್ಣೋಽಧಿಗಚ್ಛತಿ |
ಅಮಿತ್ರಾಂಶ್ಚ ಬಹೂನ್ನಿತ್ಯಂ ಪೃಥಗಾತ್ಮನಿ ಪಶ್ಯತಿ ॥6॥

ತೇಜಸ್ಸು ಇಂದ್ರಿಯನಿಗ್ರಹದಿಂದಲೇ ಧರಿಸಲ್ಪಟ್ಟಿದೆ. ದಮವಿಲ್ಲದ ಪುರುಷನು ತೇಜಸ್ಸನ್ನು ಹೊಂದುವುದಿಲ್ಲ. ಇಂದ್ರಿಯನಿಗ್ರಹವಿಲ್ಲದ ವ್ಯಕ್ತಿಯ ಹೃದಯದಲ್ಲಿ ಕಾಮ- ಕ್ರೋಧ ಮೊದಲಾದ ಅನೇಕ ಶತ್ರುಗಳನ್ನು ಆತನು ಕಾಣುತ್ತಾನೆ.

ಕ್ರವ್ಯಾದ್ಭ್ಯ ಇವ ಭೂತಾನಾಮದಾಂತೇಭ್ಯಃ ಸದಾ ಭಯಮ್ |
ತೇಷಾಂ ವಿಪ್ರತಿಷೇಧಾರ್ಥಂ ರಾಜಾ ಸೃಷ್ಟಃ ಸ್ವಯಂಭುವಾ ॥7॥

ಮಾಂಸವನ್ನು ತಿನ್ನುವ ಹುಲಿ ಮೊದಲಾದವುಗಳಿಂದ ಜಿಂಕೆ ಮೊದಲಾದವುಗಳಿಗೆ ಭಯವುಂಟಾಗುವಂತೆ ಇಂದ್ರಿಯಗಳನ್ನು ನಿಗ್ರಹಿಸದೆ ಇರುವ ಮನುಷ್ಯರಿಗೆ ವಿಷಯ ಪದಾರ್ಥಗಳ ಭಯವಿದೆ. ಆದ್ದರಿಂದ ಮನುಷ್ಯರ ಮನಸ್ಸನ್ನು ನಿಗ್ರಹಿಸಿಕೊಳ್ಳುವ ದೃಷ್ಟಿಯಿಂದಲೇ ಬ್ರಹ್ಮನು ರಾಜರನ್ನು ಸೃಷ್ಟಿಸಿರುತ್ತಾನೆ.

ಆಶ್ರಮೇಷು ಚ ಸರ್ವೇಷು ದಮ ಏವ ವಿಶಿಷ್ಯತೇ |
ಯಚ್ಚ ತೇಷು ಫಲಂ ಧರ್ಮೇ ಭೂಯೋ ದಾಂತೇ ತದುಚ್ಯತೇ ॥8॥

ನಾಲ್ಕು ಆಶ್ರಮಗಳಲ್ಲಿ ದಮ ಎಂಬ ಗುಣವೇ ಶ್ರೇಷ್ಠವಾಗಿದೆ. ನಾಲ್ಕು ಆಶ್ರಮ ಧರ್ಮಗಳನ್ನು ಪಾಲಿಸುವುದರಿಂದ ಲಭಿಸುವ

ಫಲಗಳಲ್ಲಿ ಇಂದ್ರಿಯನಿಗ್ರಹವು ಶ್ರೇಷ್ಠವಾದ ಫಲವೆನಿಸಿದೆ.
ತೇಷಾಂ ಲಿಂಗಾನಿ ವಕ್ಷ್ಯಾಮಿ ಯೇಷಾಂ ಸಮುದಯೋ ದಮಃ |
ಅಕಾರ್ಪಣ್ಯಮಸಂರಂಭಃ ಸಂತೋಷಃ ಶ್ರದ್ದಧಾನತಾ ॥9॥
ದಮದಿಂದ ಒದಗಿ ಬರುವ ಅನೇಕ ಗುಣಗಳ ಪಟ್ಟಿಯನ್ನು ಹೇಳುತ್ತೇನೆ. ಈ ಗುಣಗಳ ಸಮುದಾಯವೇ ದಮ ಎನಿಸಿದೆ. ಕೃಪಣತೆ ಇಲ್ಲದಿರುವುದು, ಸಂಭ್ರಮ ಇಲ್ಲದೇ ಇರುವುದು, ಯಾವಾಗಲೂ ಸಂತೋಷದಿಂದಿರುವುದು, ಶ್ರದ್ಧೆಯಿಂದ ಇರುವುದು.
ಅಕ್ರೋಧ ಆರ್ಜವಂ ನಿತ್ಯಂ ನಾತಿವಾದೋ ನ ಮಾನಿತಾ |
ಗುರುಪೂಜಾನಸೂಯಾ ಚ ದಯಾ ಭೂತೇಷ್ವಪೈಶುನಮ್ ॥10॥
ಸಿಟ್ಟಿಲ್ಲದಿರುವುದು, ಸರಳತನ, ನಿತ್ಯವೂ ಮಿತಭಾಷಣ, ಅಭಿಮಾನ ತ್ಯಾಗ, ಗುರು- ಹಿರಿಯರ ಸೇವೆ, ಯಾರಲ್ಲಿಯೂ ದೋಷವನ್ನೆಣಿಸದಿರುವುದು (ಅಸೂಯೆ ಇಲ್ಲದಿರುವುದು) ಭೂತದಯಾ, ಚಾಡಿ ಹೇಳದಿರುವಿಕೆ.
ಜನವಾದಮೃಷಾವಾದಸ್ತುತಿನಿಂದಾವಿವರ್ಜನಮ್ |
ಸಾಧುಕಾಮಶ್ಚಾಸ್ಪೃಹಯನ್ನಾಯಾತಿ ಪ್ರತ್ಯಯಂ ನೃಷು ॥11॥
ಲೋಕಾಪವಾದಕ್ಕೆ ಗುರಿಯಾಗದಿರುವುದು, ಸುಳ್ಳು ಹೇಳದಿರುವುದು, ಇತರರ ಸ್ತುತಿಯನ್ನಾಗಲೀ, ನಿಂದನೆಯನ್ನಾಗಲೀ ಮಾಡದಿರುವುದು, ಸತ್ಪುರುಷರ ಸಹವಾಸವನ್ನು ಇಚ್ಛಿಸುವುದು, ಮುಂದೆ ಬರುವ ಸುಖಕ್ಕೋಸ್ಕರ ಹಂಬಲಿಸದಿರುವುದು, ದುಃಖಕ್ಕಾಗಿ ಚಿಂತೆಗೀಡಾಗದಿರುವುದು - ಇವು ದಾಂತನ ಲಕ್ಷಣಗಳಾಗಿವೆ.
ಅವ್ಯೆರಕೃತ್ ಸೂಪಚಾರಃ ಸಮೋ ನಿಂದಾಪ್ರಶಂಸಯೋಃ |
ಸುವೃತ್ತಃ ಶೀಲಸಂಪನ್ನಃ ಪ್ರಸನ್ನಾತ್ಮಾತ್ಮವಾನ್ ಶುಚಿಃ ॥12॥
ಪ್ರಾಪ್ಯ ಲೋಕೇ ಚ ಸತ್ಕಾರಂ ಸ್ವರ್ಗಂ ವೈ ಪ್ರೇತ್ಯ ಗಚ್ಛತಿ |
ದುರ್ಗಮಂ ಸರ್ವಭೂತಾನಾಂ ಪ್ರಾಪಯನ್ ಮೋದತೇ ಸುಖೀ ॥13॥
ಇಂದ್ರಿಯನಿಗ್ರಹವುಳ್ಳವನು ಯಾರಲ್ಲಿಯೂ ದ್ವೇಷವನ್ನು ಕಟ್ಟಿಕೊಳ್ಳಲಾರ. ಎಲ್ಲರೊಡನೆ ಸದ್ವ್ಯವಹಾರವನ್ನೇ ಮಾಡುತ್ತಾನೆ. ನಿಂದಾ-ಸ್ತುತಿಗಳ ವಿಷಯದಲ್ಲಿ ಸಮಭಾವ ಹೊಂದಿರುತ್ತಾನೆ. ಸದಾಚಾರ ತತ್ಪರನಾಗಿರುತ್ತಾನೆ. ಶೀಲವಂತನೂ, ಪ್ರಸನ್ನಚಿತ್ತನೂ, ಧೈರ್ಯವಂತನೂ, ತನ್ನಲ್ಲಿರುವ ದೋಷವನ್ನು ದಮನ ಮಾಡುವ ಸಾಮರ್ಥ್ಯವುಳ್ಳವನು ಆಗಿರುತ್ತಾನೆ. ಇಂತಹ ದಾಂತಪುರುಷನು ಇಹಲೋಕದಲ್ಲಿ ಸಮ್ಮಾನಿತನಾಗಿ ಸತ್ತ ಬಳಿಕ ಸ್ವರ್ಗವನ್ನು ಹೊಂದುತ್ತಾನೆ.
ಸರ್ವಭೂತಹಿತೇ ಯುಕ್ತೋ ನ ಸ್ಮಯಾದ್ ದ್ವೇಷ್ಟಿ ವೈ ಜನಮ್ |
ಮಹಾಹ್ರದ ಇವಾಕ್ಷೋಭ್ಯ ಪ್ರಜ್ಞಾತೃಪ್ತಃ ಪ್ರಸೀದತಿ ॥14॥
ದಾಂತನಾದ ಪುರುಷನು ಸಮಸ್ತ ಜೀವರ ಹಿತದಲ್ಲಿ ಆಸಕ್ತನಾಗಿ ಯಾರನ್ನೂ ದ್ವೇಷಿಸದೆ ದೊಡ್ಡ ಜಲಾಶಯದಂತೆ ಯಾವಾಗಲೂ ಗಂಭೀರನಾಗಿರುತ್ತಾನೆ. ಜ್ಞಾನತೃಪ್ತನಾದ ಈತನ ಮನಸ್ಸು ಯಾವಾಗಲೂ ಸಂತೋಷದಿಂದಿರುತ್ತದೆ.
ಅಭಯಂ ಸರ್ವಭೂತೇಭ್ಯಃ ಸರ್ವೇಷಾಮಭಯಂ ಯತಃ |
ನಮಸ್ಯಃ ಸರ್ವಭೂತಾನಾಂ ದಾಂತೋ ಭವತಿ ಜ್ಞಾನವಾನ್ ॥15॥
ದಾಂತನಾದವನು ಎಲ್ಲ ಪ್ರಾಣಿಗಳಿಗೂ ಅಭಯದಾನ ಮಾಡಿ, ತಾನೂ ಪ್ರಾಣಿಗಳ ದೆಸೆಯಿಂದ ಅಭಯವನ್ನು ಹೊಂದಿರುತ್ತಾನೆ. ಜ್ಞಾನಿಯಾದ ದಾಂತ ಪುರುಷನು ಸಮಸ್ತ ಭೂತಗಳಿಂದ ನಮಸ್ಕಾರ ಅರ್ಹನಾಗಿರುತ್ತಾನೆ.
ನ ಹೃಷ್ಯತಿ ಮಹತ್ಯರ್ಥೇ ವ್ಯಸನೇ ಚ ನ ಶೋಚತಿ |
ಸ ವೈ ಪರಿಮಿತಪ್ರಜ್ಞಃ ಸ ದಾಂತೋ ದ್ವಿಜ ಉಚ್ಯತೇ ॥16॥
ದಾಂತನು ಮಹಾಸಂಪತ್ತಿನಿಂದ ಸಂತುಷ್ಟನಾಗುವುದಿಲ್ಲ. ಮಹಾದುಃಖವು ಒದಗಿ ಬಂದರೆ ಚಿಂತಿಸುವುದಿಲ್ಲ. ಇಂತವಹನನ್ನು ಪರಿಮಿತಪ್ರಜ್ಞೆಯುಳ್ಳ ದಾಂತನಾದ ದ್ವಿಜ ಎಂದು ಕರೆಯುತ್ತಾರೆ.
ಕರ್ಮಭಿಃ ಶ್ರುತಸಂಪನ್ನಃ ಸದ್ಭಿರಾಚರಿತೈಃ ಶುಭೈಃ |
ಸದೈವ ದಮಸಂಯುಕ್ತಸ್ತಸ್ಯ ಭುಂಕ್ತೇ ಮಹತ್ಫಲಮ್ ॥17॥
ವೇದಶಾಸ್ತ್ರ ಸಂಪನ್ನನಾದ ದಾಂತನು ಸತ್ಪುರುಷರು ಆಚರಿಸಿದ ಕರ್ಮಗಳನ್ನು ಆಚರಿಸುತ್ತಾನೆ. ಯಾವಾಗಲೂ ದಮಸಂಯುಕ್ತನಾದ ವ್ಯಕ್ತಿಯು ಮಹತ್ತರವಾದ ಫಲವನ್ನೇ ಅನುಭವಿಸುತ್ತಾನೆ.
ಅನಸೂಯಾ ಕ್ಷಮಾ ಶಾಂತಿಃ ಸಂತೋಷಃ ಪ್ರಿಯವಾದಿತಾ |
ಸತ್ಯಂ ದಾನಮನಾಯಾಸೋ ನೈಷ ಮಾರ್ಗೋ ದುರಾತ್ಮನಾಮ್ ॥18॥
ಅಸೂಯೆ ಪಡದಿರುವುದು, ಕ್ಷಮೆ, ಶಾಂತಿ, ಸಂತೋಷ, ಪ್ರಿಯವಾದ ಮಾತು, ಸತ್ಯಭಾಷಣ, ದಾನಶೀಲತೆ, ಬಾಹ್ಯ ಸುಖಕ್ಕೆ ಆಯಾಸ ಪಡದಿರುವುದು - ಇವುಗಳು ದಾಂತನ ಗುಣಗಳು. ದುರಾತ್ಮರಿಗೆ ಇವು ರುಚಿಸವು.
ಕಾಮಕ್ರೋಧೌ ಚ ಲೋಭಶ್ಚ ಪರಸ್ಯಾರ್ಥೇ ವಿಕತ್ಥನಾ |
ಅತುಷ್ಟಿರನೃತಂ ಮೋಹ ಏಷ ಮಾರ್ಗೋ ದುರಾತ್ಮನಾಮ್ ॥19॥
ಕಾಮಕ್ರೋಧೌ ವಶೇ ಕೃತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ |
ವಿಕ್ರಮ್ಯ ಘೋರೇ ತಪಸಿ ಬ್ರಾಹ್ಮಣಃ ಸಂಶಿತವ್ರತಃ |
ಕಾಲಾಕಾಂಕ್ಷೀ ಚರೇಲ್ಲೋಕಾನ್ನಿರಪಾಯ ಇವಾತ್ಮವಾನ್ ॥20॥
ಅದಾಂತನಾದ ಪುರುಷನು ಕಾಮ-ಕ್ರೋಧ-ಲೋಭಗಳಿಗೆ ಬಲಿಯಾಗಿ ಅರ್ಥವು ದೊರೆತಾಗ ಮತ್ತೊಬ್ಬರನ್ನು ಅವಮಾನಿಸುತ್ತಾನೆ. ಜಿತೇಂದ್ರಿಯನಾದ ಬ್ರಹ್ಮಚಾರಿಯು ಕಾಮ-ಕ್ರೋಧಗಳನ್ನು ವಶದಲ್ಲಿಟ್ಟುಕೊಂಡು ಘೋರವಾದ ತಪಸ್ಸಿನಲ್ಲಿ ತೊಡಗಿಸಿಕೊಂಡು ಮೃತ್ಯುಕಾಲವನ್ನು ನಿರೀಕ್ಷಿಸುತ್ತಾ ಯಾವ ವಿಧವಾದ ಅಪಾಯವೂ ಇಲ್ಲದಂತೆ ಧೈರ್ಯದಿಂದ ಕೂಡಿದವನಾಗಿ ಲೋಕದಲ್ಲಿ

ಸಂಚರಿಸುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಃಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೈದನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ವ್ರತ-ತಪಸ್ಸು-ಉಪವಾಸ-ಬ್ರಹ್ಮಚರ್ಯ- ಅತಿಥಿಸೇವೆ ಮೊದಲಾದವುಗಳ ಬಗ್ಗೆ ತಿಳಿಸಿದುದು.
ಯುಧಿಷ್ಠಿರಃ
ದ್ವಿಜಾತಯೋ ವ್ರತೋಪೇತಾ ಯದಿದಂ ಭುಂಜತೇ ಹವಿಃ |
ಅನ್ನಂ ಬ್ರಾಹ್ಮಣಕಾಮಾಯ ಕಥಮೇತತ್ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ವ್ರತವನ್ನು ಸಂಕಲ್ಪಿಸಿರುವ ಕೆಲವು ಬ್ರಾಹ್ಮಣರು ಇತರರ ಮನೆಗಳಲ್ಲಿ ಆಹ್ವಾನಿಸಲ್ಪಟ್ಟು ಹವಿಷ್ಯದ ಅನ್ನವನ್ನು ಭುಂಜಿಸುತ್ತಾರೆ. ವ್ರತದೀಕ್ಷಿತರು ಹೀಗೆ ಮಾಡುವುದು ಸರಿಯೇ?
ಭೀಷ್ಮಃ
ಅವೇದೋಕ್ತವ್ರತೋಪೇತಾ ಭುಂಜಾನಾಃ ಕಾರ್ಯಕಾರಿಣಃ |
ವೇದೋಕ್ತೇಷು ಚ ಭುಂಜಾನಾ ವ್ರತಲುಪ್ತಾ ಯುಧಿಷ್ಠಿರ ॥2॥
ಭೀಷ್ಮ ಯುಧಿಷ್ಠಿರನೇ, ವೇದವಿಹಿತರಲ್ಲದಿರುವ ವ್ರತದೀಕ್ಷಿತರು ಪರಾನ್ನ ಭೋಜನ ಮಾಡುವುದು ಅಪ್ರಾಮಾಣಿಕವೆನಿಸಿದೆ. ವೇದೋಕ್ತವ್ರತಗಳನ್ನು ಕೈಗೊಂಡವರೂ ಕೂಡ ಇತರರ ಮನೆಗಳಲ್ಲಿ ಭುಂಜಿಸಿದರೆ ಅವರನ್ನೂ ವ್ರತಭ್ರಷ್ಟರು ಎಂದೇ ಹೇಳುತ್ತಾರೆ.
ಯುಧಿಷ್ಠಿರಃ
ಯದಿದಂ ತಪ ಇತ್ಯಾಹುರುಪವಾಸಂ ಪೃಥಗ್ಜನಾಃ |
ಏತತ್ ತಪೋ ಮಹಾರಾಜ ಉತಾಹೋ ಕಿಂ ತಪೋ ಭವೇತ್ ॥3॥
ಯುಧಿಷ್ಠಿರ ಮಹಾರಾಜನೇ, ಪ್ರಪಂಚದ ಸಾಮಾನ್ಯ ಜನರು ಉಪವಾಸ ವ್ರತವನ್ನು ತಪಸ್ಸೆಂದು ಹೇಳುತ್ತಾರೆ. ಉಪವಾಸವು ತಪಸ್ಸಾಗುವುದು ಹೇಗೆ? ಅಥವಾ ಉಪವಾಸಕ್ಕಿಂತ ಉತ್ಕೃಷ್ಟವಾದ ತಪಸ್ಸು ಇದೆಯೇ?
ಭೀಷ್ಮಃ
ಮಾಸಪಕ್ಷೋಪವಾಸೇನ ಮನ್ಯಂತೇ ಯತ್ ತಪೋ ಜನಾಃ |
ಆತ್ಮತಂತ್ರೋಪಘಾತಸ್ಯ ನ ತಪಸ್ತತ್ ಸತಾಂ ಮತಮ್ |
ತ್ಯಾಗಶ್ಚ ಸನ್ನತಿಶ್ಚೈವ ಶಿಷ್ಯತೇ ತಪ ಉತ್ತಮಮ್ ॥4॥
ಭೀಷ್ಮ ಮಾಸ ಅಥವಾ ಪಕ್ಷಕಾಲ ಮಾಡುವ ಉಪವಾಸವನ್ನು ತಪಸ್ಸೆಂದು ಯಾವ ಜನರು ತಿಳಿದಿರುತ್ತಾರೋ ಅದು ನಿಜವಾದ ತಪಸ್ಸೆನಿಸುವುದಿಲ್ಲ. ಇದು ಕೇವಲ ಪರಮಾತ್ಮನ ಪೂಜೆಗೆ ಪ್ರತಿಬಂಧಕವಾಗಿ ದೇವಬ್ರಾಹ್ಮಣ-ಪೂಜಾದಿ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಟ್ಟಂತೆ ಪಾಪಕ್ಕೆ ಕಾರಣವಾಗುತ್ತದೆ. ಆದ್ದರಿಂದ ಸತ್ಪುರುಷರ ಅಭಿಪ್ರಾಯದಲ್ಲಿ ತ್ಯಾಗ ಮತ್ತು ವಿನಯಗಳೇ ನಿಜವಾದ ತಪಸ್ಸೆನಿಸಿವೆ.

ಸದೋಪವಾಸೀ ಚ ಭವೇದ್ ಬ್ರಹ್ಮಚಾರೀ ಸದೈವ ಚ |
ಮುನಿಶ್ಚ ಸ್ಯಾತ್ ಸದಾ ವಿಪ್ರೋ ದೈವತಂ ಚ ಸದಾ ಭಜೇತ್ ॥5॥
ತ್ಯಾಗಶೀಲನೂ, ವಿನಯಶೀಲನೂ ಆದ ಪುರುಷನು ನಿತ್ಯೋಪವಾಸಿ, ಬ್ರಹ್ಮಚಾರಿ ಎಂದೇ ಕರೆಸಿಕೊಳ್ಳಲ್ಪಡುತ್ತಾನೆ. ತ್ಯಾಗಿಯೂ, ವಿನಯಶೀಲನೂ ಆಗಿರುವ ಬ್ರಾಹ್ಮಣನು ಮುನಿಯೂ ದೇವತೆಯೂ ಆಗಿರುತ್ತಾನೆ.
ಕುಟುಂಬಿಕೋ ಧರ್ಮಕಾಮಃ ಸದಾಸ್ವಪ್ನಶ್ಚ ಭಾರತ |
ಅಮಾಂಸಾಶೀ ಸದಾ ಚ ಸ್ಯಾತ್ ಪವಿತ್ರಂ ಚ ಸದಾ ಜಪೇತ್ ॥6॥
ಅವನು ಸಂಸಾರಿಯಾಗಿದ್ದರೂ ಧರ್ಮವನ್ನೇ ಬಯಸುವವನಾಗಿ ಇರುವುದರಿಂದ ನಿದ್ರಾಲಸ್ಯಗಳನ್ನು ತೊರೆದವನಾಗಿರುತ್ತಾನೆ. ಎಂದಿಗೂ ಮಾಂಸವನ್ನು ಭುಂಜಿಸನು. ಸದಾ ಪರಿಶುದ್ಧನಾಗಿರುತ್ತಾನೆ.
ಅಮೃತಾಶೀ ಸದಾ ಚ ಸ್ಯಾನ್ನ ಚ ಸ್ಯಾದ್ ವಿಷಭೋಜನಃ |
ವಿಘಸಾಶೀ ಸದಾ ಚ ಸ್ಯಾತ್ ಸದಾ ಚೈವಾತಿಥಿಪ್ರಿಯಃ ॥7॥
ಅನಿಷಿದ್ಧವಾದ ಪದಾರ್ಥಗಳನ್ನು ಸ್ವೀಕರಿಸುವ ವ್ಯಕ್ತಿಯು ಎಂದೂ ದೇವರಿಗೆ ಸಮರ್ಪಿಸದೆ ಇರುವ ವಿಷಸದೃಶವಾದ ಅನ್ನವನ್ನು ತಿನ್ನನು. ಯಜ್ಞಶೇಷವನ್ನೇ ಭುಂಜಿಸುತ್ತಾನೆ. ನಿರಂತರವೂ ಅತಿಥಿಪ್ರಿಯನಾಗಿರುತ್ತಾನೆ.
ಯುಧಿಷ್ಠಿರಃ
ಕಥಂ ಸದೋಪವಾಸೀ ಸ್ಯಾದ್ ಬ್ರಹ್ಮಚಾರೀ ಕಥಂ ಭವೇತ್ |
ವಿಘಸಾಶೀ ಕಥಂ ಚ ಸ್ಯಾತ್ ಸದಾ ಚೈವಾತಿಥಿಪ್ರಿಯಃ ॥8॥
ಯುಧಿಷ್ಠಿರ ಪಿತಾಮಹನೇ, ಸದೋಪವಾಸಿಯು ಹೇಗೆ ಆಗುತ್ತಾನೆ? ಬ್ರಹ್ಮಚಾರಿಯು ಹೇಗೆ ಆಗುತ್ತಾನೆ? ಯಜ್ಞಶೇಷವನ್ನು ತಿನ್ನುವವನು ಹೇಗೆ ಆಗುತ್ತಾನೆ? ಅತಿಥಿಪ್ರಿಯನು ಹೇಗೆ ಆಗುತ್ತಾನೆ?
ಭೀಷ್ಮಃ
ಅಂತರಾ ಪ್ರಾತರಾಶಂ ಚ ಸಾಯಮಾಶಂ ತಥೈವ ಚ |
ಸದೋಪವಾಸೀ ಚ ಭವೇದ್ಯೋ ನ ಭುಂಕ್ತೇ ಕಥಂಚನ ॥9॥

ಭೀಷ್ಮ ಮಹಾರಾಜನೇ, ಪ್ರಾತಃಕಾಲ ಮತ್ತು ಸಾಯಂಕಾಲ ಭೋಜನದ ಮಧ್ಯದಲ್ಲಿ ಯಾವಾತನು ಏನನ್ನೂ ಸ್ವೀಕರಿಸುವುದಿಲ್ಲವೋ, ಯಾವ ಕಾರಣದಿಂದಲೂ ಏನನ್ನೂ ಭುಂಜಿಸುವುದಿಲ್ಲವೋ ಅವನು ನಿತ್ಯೋಪವಾಸಿ ಎಂದೇ ಕರೆಸಿಕೊಳ್ಳಲ್ಪಡುತ್ತಾನೆ.
ಭಾರ್ಯಾಂ ಗಚ್ಛನ್ ಬ್ರಹ್ಮಚಾರೀ ಋತೌ ಭವತಿ ಬ್ರಾಹ್ಮಣಃ |
ಋತವಾದೀ ಸದಾ ಚ ಸ್ಯಾಜ್ಜ್ಞಾನನಿತ್ಯಶ್ಚ ಯೋ ನರಃ ॥10॥
ಯಾವ ಗೃಹಸ್ಥನು ಋತುಕಾಲ ಸನ್ನಿಹಿತವಾದಾಗ ಮಾತ್ರ ಭಾರ್ಯೆಯೊಡನೆ ಸಮಾಗಮವನ್ನು ಮಾಡುತ್ತಾನೋ ಅವನು ಬ್ರಹ್ಮಚಾರಿ ಎನಿಸಿಕೊಳ್ಳುತ್ತಾನೆ. ಯಾವಾಗಲೂ ಸತ್ಯವನ್ನು ಹೇಳುವವನು, ಭಗವದ್‌ಜ್ಞಾನದಲ್ಲಿಯೇ ರತನಾದವನೂ ಬ್ರಹ್ಮಚಾರಿ ಎನಿಸುತ್ತಾನೆ.
ಅಭಕ್ಷಯನ್ ವೃಥಾಮಾಂಸಮಮಾಂಸಾಶೀ ಭವತ್ಯುತ |
ದಾನನಿತ್ಯಃ ಪವಿತ್ರಶ್ಚ ಅಸ್ವಪ್ನಶ್ಚ ದಿವಾಸ್ವಪನ್ ॥11॥
ವ್ಯರ್ಥವಾಗಿ ಸುಖಕ್ಕೋಸ್ಕರವಾಗಿ ಮಾಂಸವನ್ನು ತಿನ್ನದೆ ಇರುವವನು ಮಾಂಸಾಹಾರಿ ಎನಿಸುವುದಿಲ್ಲ. ನಿತ್ಯವೂ ದಾನರತನಾದವನು ಪವಿತ್ರನಾಗಿರುತ್ತಾನೆ. ಹಗಲು ಮಲಗದೆ ಇರುವವನು ಜಾಗರಣೆ ಮಾಡಿದವನು ಎನಿಸುತ್ತಾನೆ.
ಭೃತ್ಯಾತಿಥಿಷು ಯೋ ಭುಂಕ್ತೇ ಭುಕ್ತವತ್ಸು ಸದಾ ಸ ಹ |
ಅಮೃತಂ ಸಕಲಂ ಭುಂಕ್ತ ಇತಿ ವಿದ್ಧಿ ಯುಧಿಷ್ಠಿರ ॥12॥
ಯಾವ ವ್ಯಕ್ತಿಯು ಭೃತ್ಯಾತಿಥಿಗಳು ಭುಂಜಿಸಿದ ಬಳಿಕ ಊಟ ಮಾಡುತ್ತಾನೋ ಅವನು ಸಕಲ ವಿಧವಾದ ಅಮೃತವನ್ನೂ ಅನುಭವಿಸುತ್ತಾನೆ ಎಂದೇ ಯುಧಿಷ್ಠಿರನೇ, ತಿಳಿದುಕೊ.
ಅಭುಕ್ತವತ್ಸು ನಾಶ್ನಾನಃ ಸತತಂ ಯಸ್ತು ವೈ ದ್ವಿಜಃ |
ಅಭೋಜನೇನ ತೇನಾಸ್ಯ ಜಿತಃ ಸ್ವರ್ಗೋ ಭವತ್ಯುತ ॥13॥
ಯಾವ ಬ್ರಾಹ್ಮಣನು ಭೃತ್ಯಾತಿಥಿಗಳು ಊಟ ಮಾಡದೆ ಊಟ ಮಾಡುವುದಿಲ್ಲವೋ ಇಂತಹ ಭೋಜನವ್ರತದಿಂದ ಅವನು ಸ್ವರ್ಗವನ್ನೇ ಜಯಿಸಿರುತ್ತಾನೆ.
ದೇವತಾಭ್ಯಃ ಪಿತೃಭ್ಯಶ್ಚ ಭೃತ್ಯೇಭ್ಯೋಽತಿಥಿಭಿಃ ಸಹ |
ಅವಶಿಷ್ಟಂ ತು ಯೋಽಶ್ನಾತಿ ತಮಾಹುರ್ವಿಘಸಾಶಿನಮ್ ॥14॥
ದೇವತೆಗಳಿಗೆ, ಪಿತೃಗಳಿಗೆ, ಭೂತಗಳಿಗೆ, ಅತಿಥಿಗಳಿಗೆ ಕೊಟ್ಟ ಬಳಿಕ ಯಾವಾತನು ಊಟ ಮಾಡುತ್ತಾನೋ ಅವನನ್ನು ಯಜ್ಞಶೇಷ ಉಂಡವನು ಎನ್ನುತ್ತಾರೆ.
ತೇಷಾಂ ಲೋಕಾ ಹ್ಯಪರ್ಯಂತಾಃ ಸದನೇ ಬ್ರಹ್ಮಣಾ ಸಹ |
ಉಪಸ್ಥಿತಾಶ್ಚಾಪ್ಸರೋಭಿಃ ಪರಿಯಾಂತಿ ದಿವೌಕಸಃ ॥15॥
ಇಂತಹ ಪುರುಷರಿಗೆ ಅಕ್ಷಯವಾದ ಲೋಕಗಳು ದೊರೆಯುತ್ತವೆ. ಬ್ರಹ್ಮನಿಂದಲೂ, ಅಪ್ಸರೆಯರಿಂದಲೂ ಸಹಿತರಾದ ದೇವತೆಗಳು ಅವನ ಮನೆಯಲ್ಲಿಯೇ ತಿರುಗುತ್ತಿರುತ್ತಾರೆ.
ದೇವತಾಭಿಶ್ಚ ಯೇ ಸಾರ್ಧಂ ಪಿತೃಭಿಶ್ಚೋಪಭುಂಜತೇ |
ರಮಂತೇ ಪುತ್ರಪೌತ್ರೈಶ್ಚ ತೇಷಾಂ ಗತಿರನುತ್ತಮಾ ॥16॥
ಯಾರು ದೇವತೆಗಳೊಡನೆ, ಪಿತೃಗಳೊಡನೆ ಭೋಜನ ಮಾಡುತ್ತಾರೋ ಅರ್ಥಾತ್ ಅವರಿಗೆ ಸಮರ್ಪಿಸಿದ ಬಳಿಕ ಭುಂಜಿಸುತ್ತಾರೋ ಅವರು ಮಕ್ಕಳು- ಮೊಮ್ಮಕ್ಕಳೊಡನೆ ಆನಂದದಿಂದಿರುತ್ತಾರೆ. ಅವರಿಗೆ ಉತ್ತಮ ಗತಿ ದೊರೆಯುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತಾರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಭಗವತ್ಸ್ವರೂಪನಿರೂಪವನ್ನು
ನಿರೂಪಿಸುವ ಸನತ್ಕುಮಾರಮುನಿಗಳ ಸಂವಾದವನ್ನು ತಿಳಿಸಿದುದು.
ಯುಧಿಷ್ಠಿರಃ
ಕೇಚಿದಾಹುರ್ದ್ವಿಧಾ ಲೋಕೇ ತ್ರಿಧಾ ರಾಜನ್ನನೇಕಧಾ |
ನ ಪ್ರತ್ಯಯೋ ನ ಚಾನ್ಯಚ್ಚ ದೃಶ್ಯತೇ ಬ್ರಹ್ಮ ನೈವ ತತ್ ॥1॥
ಯುಧಿಷ್ಠಿರ ಪಿತಾಮಹನೇ, ಕೆಲವರು ಜಗತ್ತಿನಲ್ಲಿ ಜೀವ-ಜಡ ಎಂಬ ಎರಡು ಪ್ರಕಾರಗಳನ್ನು ಹೇಳುತ್ತಾರೆ. ಕೆಲವರು ಜೀವರಲ್ಲಿಯೇ ದೇವ-ಅಸುರ-ಮನುಷ್ಯ ಎಂಬ ಮೂರು ಭೇದವಿದೆ ಎನ್ನುತ್ತಾರೆ. ಕೆಲವರು ಜಡದಲ್ಲಿ ತೇಜಸ್ಸು, ಜಲ, ಅನ್ನವೆಂಬ ಭೇದವನ್ನು ಹೇಳುತ್ತಾರೆ. ಇನ್ನು ಕೆಲವರು ಪಂಚಭೂತಾತ್ಮಕವಾದುದು ಎಂದು ಅನೇಕ ಪ್ರಕಾರವನ್ನು ಹೇಳುತ್ತಾರೆ. ಇವುಗಳಲ್ಲಿ ಯಾವುದರಲ್ಲಿಯೂ ವಿಶ್ವಾಸವು ಕಾಣಿಸುವುದಿಲ್ಲ. ಸರ್ವಥಾ ಅವಿಶ್ವಾಸವೂ ತೋರುವುದಿಲ್ಲ. ಹೇಳಲ್ಪಟ್ಟ ಈ ಯಾವುದು ಪರಬ್ರಹ್ಮನಂತೂ ಆಗಿರುವುದಿಲ್ಲ.
ನಾನಾವಿಧಾನಿ ಶಾಸ್ತ್ರಾಣಿ ಉಕ್ತಾಶ್ಚೈವ ಪೃಥಗ್ವಿಧಾಃ |
ಕಿಮಧಿಷ್ಠಾಯ ತಿಷ್ಠಾಮಿ ತನ್ಮೇ ಬ್ರೂಹಿ ಪಿತಾಮಹ ॥2॥
ನಾನಾ ವಿಧವಾದ ಶಾಸ್ತ್ರಗಳು ಹೇಳಲ್ಪಟ್ಟಿರುತ್ತವೆ. ಅನೇಕ ವಿಧವಾದ ದೇವತಾ ಸಮುದಾಯವೂ ಹೇಳಲ್ಪಟ್ಟಿವೆ. ಯಾವ ತತ್ತ್ವವನ್ನು ಆಶ್ರಯಿಸಿ ನಾನು ವರ್ತಿಸಬೇಕೆಂಬುದನ್ನು ತಿಳಿಸು.
ಭೀಷ್ಮಃ

ಸ್ವೇ ಸ್ವೇ ಯುಕ್ತಾ ಮಹಾತ್ಮಾನಃ ಶಾಸ್ತ್ರೇಷು ಪ್ರಭವಿಷ್ಣವಃ |
ವರ್ತಂತೇ ಪಂಡಿತಾ ಲೋಕೇ ಕೋ ವಿದ್ವಾನ್ ಕಶ್ಚ ಪಂಡಿತಃ ॥3॥
ಭೀಷ್ಮ ಯುಧಿಷ್ಠಿರನೇ, ಸ್ವಧರ್ಮನಿರತರಾಗಿ ಶಾಸ್ತ್ರದಲ್ಲಿ ನಿಪುಣರಾಗಿ, ಮಹಾತ್ಮರೆನಿಸಿರುವ ಪಂಡಿತರು ಲೋಕದಲ್ಲಿ ಎಷ್ಟೋ ಮಂದಿ ಇದ್ದಾರೆ. ಆದರೆ ಅವರಲ್ಲಿ ನಿಜವಾದ ವಿದ್ವಾಂಸರು ಯಾರು? ತತ್ತ್ವಜ್ಞರು ಯಾರು? ಎಂಬುದನ್ನು ವಿಮರ್ಶಿಸಬೇಕು.
ಸರ್ವೇಷಾಂ ತತ್ವಮಜ್ಞಾಯ ಯಥಾರುಚಿ ತಥಾ ಭವೇತ್ |
ಅಸ್ಮಿನ್ನರ್ಥೇ ಪುರಾಭೂತಮಿತಿಹಾಸಂ ಪುರಾತನಮ್ ॥4॥
ನಿಯಮೇನ ಎಲ್ಲರೂ ತತ್ತ್ವಜ್ಞರೆನಿಸಲು ಸಾಧ್ಯವಿಲ್ಲ. ವಿಮರ್ಶೆಯಿಂದ ಹೇಗೆ ತೋರುತ್ತದೋ ಅದರಂತೆ ವರ್ತಿಸಬೇಕು. ಈ ವಿಷಯದಲ್ಲಿ ಹಿಂದೆ ನಡೆದ ಒಂದು ಪುರಾತನ ಇತಿಹಾಸವಿದೆ.
ಮಹಾವಿವಾದಸಂಯುಕ್ತಮೃಷೀಣಾಂ ಭಾವಿತಾತ್ಮನಾಮ್ |
ಹಿಮವತ್ಪಾರ್ಶ್ವ ಆಸೀನಾ ಋಷಯಃ ಸಂಶಿತವ್ರತಾಃ ॥5॥
ಜ್ಞಾನನಿಷ್ಠರೂ, ಧೀಮಂತರೂ ಆದ ಋಷಿಗಳಲ್ಲಿ ಹಿಂದೆ ಒಂದು ದೊಡ್ಡ ವಿವಾದವು ಏರ್ಪಟ್ಟಿತು. ಹಿಮವದ್ ಪರ್ವತದ ಪಾರ್ಶ್ವದಲ್ಲಿ ದೃಢವ್ರತರಾದ ಅನೇಕ ಮಹರ್ಷಿಗಳು ಸೇರಿದ್ದರು.
ಷಣ್ಣಾಂ ತಾನಿ ಸಹಸ್ರಾಣಿ ಋಷೀಣಾಂ ಗಣಮಾಹಿತಮ್ |
ತತ್ರ ಕೇಚಿದ್ ಧ್ರುವಂ ವಿಶ್ವಂ ಸೇಶ್ವರಂ ತು ನಿರೀಶ್ವರಮ್ ॥6॥
ಅಲ್ಲಿ ಆರುಸಾವಿರ ಮಂದಿ ಮುನಿಗಳು ಗುಂಪಾಗಿ ಸೇರಿದ್ದರು. ಆ ಗುಂಪಿನಲ್ಲಿ ಕೆಲವರು ಲೋಕವನ್ನು ಶಾಶ್ವತವೆಂದು, ಇನ್ನು ಕೆಲವರು ಜಗತ್ತೆಲ್ಲವೂ ಈಶ್ವರನಿಂದ ನಿಯಮ್ಯವೆಂದು, ಇನ್ನು ಕೆಲವರು ಜಗತ್ತಿಗೆ ಈಶ್ವರನು ಕಾರಣನಲ್ಲವೆಂದು ಹೇಳುತ್ತಿದ್ದರು.
ಪ್ರಾಕೃತಂ ಕಾರಣಂ ನಾಸ್ತಿ ಸರ್ವಂ ನೈವಮಿದಂ ಜಗತ್ |
ಅನೇನ ಚಾಪರೇ ವಿಪ್ರಾಃ ಸ್ವಭಾವಂ ಕರ್ಮ ಚಾಪರೇ ॥7॥
ಇನ್ನು ಕೆಲವರು ಜಗತ್ತಿಗೆ ಪ್ರಕೃತಿಯು ಕಾರಣವಲ್ಲ, ನಮ್ಮ ಅಜ್ಞಾನವೇ ಕಾರಣವಾಗಿದೆ. ಕಣ್ಣಿಗೆ ಕಾಣುವಂತಹ ಜಗತ್ತು ಅಪ್ರಾಮಾಣಿಕವಾದುದು. ಶೂನ್ಯವಾದುದೇ ಜಗತ್ತು. ಇನ್ನು ಕೆಲವರು ಪ್ರಕೃತಿಯಿಂದಲೇ ಈ ಜಗತ್ತು ನಿರ್ಮಾಣವಾಗಿದೆ. ಇನ್ನು ಕೆಲವರು ಜಗತ್ತು ಸ್ವಾಭಾವಿಕವೆಂದು, ಇನ್ನು ಕೆಲವರು ಕರ್ಮವೆಂದು ವಾದಗಳನ್ನು ಮುಂದಿಟ್ಟರು.
ಪೌರುಷಂ ಕರ್ಮ ದೈವಂ ಚ ಯಃ ಸ್ವಭಾವಾದಿರೇವ ತಮ್ |
ನಾನಾಹೇತುಶತೈರ್ಯುಕ್ತಾ ನಾನಾಶಾಸ್ತ್ರಪ್ರವರ್ತಕಾಃ ॥8॥
ಮತ್ತೆ ಕೆಲವರು ಪುರುಷಪ್ರಯತ್ನದಿಂದ ನಿರ್ಮಿತವಾದುದೆಂದು, ಕೆಲವರು ಪುಣ್ಯ-ಪಾಪಗಳ ಸಂಬಂಧದಿಂದ ಒದಗಿಬಂದಿರುವುದೆಂದು, ಇನ್ನು ಕೆಲವರು ಸ್ವಭಾವ, ಪ್ರಯತ್ನ, ದೈವ - ಈ ಮೂರರಿಂದ ನಿರ್ಮಿತವಾಗಿರುವುದೆಂದು ಹೇಳತೊಡಗಿದರು. ಅವರೆಲ್ಲರೂ ಅನೇಕ ವಿಧವಾದ ನೂರಾರು ಯುಕ್ತಿಗಳಿಂದ ಸಂಪನ್ನರಾಗಿದ್ದರು. ನಾನಾ ಶಾಸ್ತ್ರಗಳ ಪ್ರವರ್ತಕರೂ ಆಗಿದ್ದರು.
ಸ್ವಭಾವಾದ್ ಬ್ರಾಹ್ಮಣಾ ರಾಜನ್‌ಜಿಗೀಷಂತಃ ಪರಸ್ಪರಮ್ |
ತತಸ್ತು ಮೂಲಮುದ್ಭೂತಂ ವಾದಿಪ್ರತ್ಯರ್ಥಿಸಂಯುತಮ್ ॥9॥
ರಾಜನೇ, ಇವರಲ್ಲಿ ಎಲ್ಲರೂ ಸ್ವಾಭಾವಿಕವಾಗಿ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಹಠದಿಂದ ಪ್ರತಿವಾದಿಗಳ ಬಳಿ ವಾದಿಸುತ್ತಿದ್ದರು.
ಪಾತ್ರದಂಡವಿಘಾತಂ ಚ ವಲ್ಕಲಾಜಿನವಾಸಸಮ್ |
ಏಕೇ ಮನ್ಯುಸಮಾಪನ್ನಾಸ್ತತಃ ಶಾಂತಾ ದ್ವಿಜೋತ್ತಮಾಃ ॥10॥
ಕೆಲವರು ವಾದದ ಭರದಲ್ಲಿ ಒಬ್ಬರ ಮೇಲೆ ಒಬ್ಬರು ಎರಗುತ್ತಾ, ಅವರು ಧರಿಸಿರುವ ಭಿಕ್ಷಾ ಪಾತ್ರೆಗಳನ್ನು, ದಂಡಗಳನ್ನು ಹೊಡೆದು ತುಂಡರಿಸುತ್ತಿದ್ದರು. ಅವರು ಧರಿಸಿರುವ ನಾರುಮಡಿಗಳನ್ನು, ಅಜಿನಗಳನ್ನು, ಬಟ್ಟೆಗಳನ್ನು ಹರಿದು ಹಾಕುತ್ತಿದ್ದರು. ಇನ್ನು ಕೆಲವರು ಸಿಟ್ಟಿನಿಂದಾಗಿ ಮತ್ತೊಬ್ಬರನ್ನು ನಿಂದಿಸುತ್ತಿದ್ದರು. ಇದರಂತೆ ಶಾಂತ ಸ್ವಭಾವದವರೂ ಅಲ್ಲಿದ್ದರು.
ವಸಿಷ್ಠಮಬ್ರುವನ್ ಸರ್ವೇ ತ್ವಂ ನೋ ಬ್ರೂಹಿ ಸನಾತನಮ್ |
ನಾಹಂ ಜಾನಾಮಿ ವಿಪ್ರೇಂದ್ರಾಃ ಪ್ರತ್ಯುವಾಚ ಸ ತಾನ್ ಪ್ರಭುಃ ॥11॥
ಆ ಸಂದರ್ಭದಲ್ಲಿ ಪ್ರತಿಯೊಬ್ಬರು ಕೊನೆಗೆ ಶಾಂತರಾಗಿದ್ದು, ವಸಿಷ್ಠರ ಬಳಿ ಬಂದು ಸನಾತನವಾದ ನಿಜವಾದ ಧರ್ಮ ಯಾವುದೆಂಬುದನ್ನು ನಮಗೆ ತಿಳಿಸಿ ಎಂದು ಕೇಳಿದರು. ಆದರೆ ಪ್ರಭುಗಳಾದ ವಸಿಷ್ಠರು ವಿಪ್ರೇಂದ್ರರೇ, ಆ ತತ್ತ್ವವನ್ನು ನಾನು ತಿಳಿದಿರುವುದಿಲ್ಲ ಎಂದು ಉತ್ತರಿಸಿದರು.
ತೇ ಸರ್ವೇ ಸಹಿತಾ ವಿಪ್ರಾಃ ನಾರದಮ್ ಋಷಿಮಬ್ರುವನ್ |
ತ್ವಂ ನೋ ಬ್ರೂಹಿ ಮಹಾಭಾಗ ತತ್ವವಿಜ್ಞ ಭವಾನಸಿ ॥12॥
ಅವರಿಂದ ಉತ್ತರವನ್ನು ಪಡೆಯದೆ ಇರುವ ಬ್ರಾಹ್ಮಣರೆಲ್ಲರೂ ನಾರದ ಋಷಿಗಳ ಬಳಿ ಕೇಳಿದರು. ನಾರದರೇ, ಮಹಾಭಾಗರೇ, ನೀವು ತತ್ತ್ವಜ್ಞರಾಗಿರುತ್ತೀರಿ. ಸನಾತನ ಧರ್ಮ ಯಾವುದೆಂಬುದನ್ನು ನಮಗೆ ತಿಳಿಸಿ.
ನಾಹಂ ದ್ವಿಜಾ ವಿಜಾನಾಮಿ ಕ್ವ ಹಿ ಗಚ್ಛಾಮ ಸಮ್ಮತಾಃ |
ಇತಿ ತಾನಾಹ ಭಗವಾಂಸ್ತತಃ ಪ್ರಾಹ ಚ ಸ ದ್ವಿಜಾನ್ ॥13॥
ನಾರದರು ನಾನೂ ಆ ತತ್ತ್ವವನ್ನು ತಿಳಿದಿರುವುದಿಲ್ಲ ಎಂದು ಹೇಳಿದಾಗ ಬ್ರಾಹ್ಮಣರೆಲ್ಲರೂ ಹಾಗಾದರೆ ನಾವು ಈ ತತ್ತ್ವವನ್ನು ತಿಳಿಯಲು ಎಲ್ಲಿಗೆ ಹೋಗಬೇಕು ಎಂದು ನಾರದರನ್ನೇ ಪ್ರತಿಯಾಗಿ ಪ್ರಶ್ನಿಸಿದರು. ಅವರನ್ನು ಕುರಿತು ಆ ಪ್ರಸಂಗದಲ್ಲಿ ಒಂದು ಅಶರೀರವಾಣಿ ಹೀಗೆ ಕೇಳಿಸಿತು.
ಕೋ ವಿದ್ವಾನಿಹ ಲೋಕೇಽಸ್ಮಿನ್ ನ ಮೋಹೋಽಮೃತಮದ್ಭುತಮ್ |

ತಚ್ಚ ತೇ ಶುಶ್ರುವುರ್ವಾಕ್ಯಂ ಬ್ರಾಹ್ಮಣಾ ಹ್ಯಶರೀರಿಣಃ ॥14॥
ಈ ಜಗತ್ತಿನಲ್ಲಿ ವಿದ್ವಾಂಸರು ಯಾರಿದ್ದಾರೆ? ಶಾಶ್ವತವಾದ, ಅದ್ಭುತವಾದ ವಿಚಾರದಲ್ಲಿ ಯಾರಿಗೆ ಮೋಹವು ಇರುವುದಿಲ್ಲ? ಎಂದು ಜಿಜ್ಞಾಸೆ ಮಾಡುತ್ತಿರಲು ಆ ಬ್ರಾಹ್ಮಣರ ನಡುವೆ ಒಂದು ಅಶರೀರವಾಣಿ ಕೇಳಿಸಿತು. ಎಲ್ಲರೂ ಆ ವಾಕ್ಯವನ್ನು ಕೇಳಿಸಿಕೊಂಡರು.
ಸನದ್ಧಾಮ ದ್ವಿಜಾ ಗತ್ವಾ ಪೃಚ್ಛಧ್ವಂ ಸ ಚ ವಕ್ಷ್ಯತಿ ॥15॥
ಬ್ರಾಹ್ಮಣರೇ, ಸನತ್ಕುಮಾರನೆಂಬ ಬ್ರಾಹ್ಮಣನು ಇರುತ್ತಾನೆ. ಅವನ ಮನೆಗೆ ಹೋಗಿ ನಿಮ್ಮ ಮನಸ್ಸಿನಲ್ಲಿರುವ ಸಂಶಯವನ್ನು ಪ್ರಶ್ನಿಸಿರಿ. ಅವನು ನಿಮಗೆ ಉತ್ತರಿಸುತ್ತಾನೆ ಎಂದು ಅಶರೀರವಾಣಿಯು ನುಡಿಯಿತು.
ತಮಾಹ ಕಶ್ಚಿದ್ ದ್ವಿಜವರ್ಯಸತ್ತಮೋ
ವಿಭಾಂಡಕೋ ಮಂಡಿತವೇದರಾಶಿಃ।
ಕಸ್ತ್ವಂ ಭವಾನರ್ಥವಿಭೇದಮಧ್ಯೇ
ನ ದೃಶ್ಯತೇ ವಾಕ್ಯಮುದೀರಯಂಶ್ಚ ॥16॥
ಹೀಗೆ ಅಶರೀರವಾಣಿಯು ಕೇಳಿದ ಬಳಿಕ, ಆ ಗುಂಪಿನಲ್ಲಿ ವಾಸಿಸುತ್ತಿರುವ ಸಮಸ್ತ ವೇದಗಳ ಸಮುದಾಯವನ್ನು ಬಲ್ಲವನಾದ ವಿಭಾಂಡಕಮುನಿಯು ಆ ಅಶರೀರ ವಾಣಿಯನ್ನು ನುಡಿದ ಪುರುಷನನ್ನು ಕುರಿತು ಪ್ರಶ್ನಿಸುತ್ತಾರೆ- ನಾವೆಲ್ಲರೂ ಶಾಸ್ತ್ರಾರ್ಥ ನಿಮಿತ್ತದಿಂದ ಕಲಹ ಮಾಡುತ್ತಿರುವಾಗ ಮಧ್ಯದಲ್ಲಿ ಕಣ್ಣಿಗೆ ಕಾಣದಂತೆ ನುಡಿದ ನೀನು ಯಾರು? ನಮ್ಮ ಕಣ್ಣಿಗೇಕೆ ಕಾಣಿಸುತ್ತಿಲ್ಲ?
ಅಥಾಹೇದಂ ತಂ ಭಗವಾನ್ ಸನಂತಂ
ಮಹಾಮುನೇ ವಿದ್ಧಿ ಮಾಂ ಪಂಡಿತೋಽಸಿ।
ಋಷಿಂ ಪುರಾಣಂ ಸತತೈಕರೂಪಂ
ಯಮಕ್ಷಯಂ ವೇದವಿದೋ ವದಂತಿ ॥17॥
ಆ ಅದೃಶ್ಯ ಪುರುಷನು `ಎಲೈ ಮಹರ್ಷಿಯೇ, ನೀನು ಸಮಸ್ತ ವೇದಗಳನ್ನು ತಿಳಿದವನು, ಪಂಡಿತನು. ವೇದಜ್ಞರು ಯಾವನನ್ನು ಏಕರೂಪನೆಂದು, ಅಕ್ಷಯನೆಂದು, ಪುರಾತನ ಋಷಿ ಎಂದು ಹೇಳುತ್ತಾರೋ ಅಂತಹ ಸನತ್ಕುಮಾರ ಋಷಿಯೇ ನಾನಾಗಿದ್ದೇನೆ' ಎಂದನು.
ಪುನಸ್ತಮಾಹೇದಮಸೌ ಮಹಾತ್ಮಾ
ಸ್ವರೂಪಸಂಸ್ಥಂ ವದ ಆಹ ಪಾರ್ಥ।
ತ್ವಮೇಕೋಽಸ್ಯದೃಷಿಪುಂಗವಾಯ
ನಸತ್ಸ್ವರೂಪಮಥವಾ ಪುನಃ ಕಿಮ್ ॥18॥
ಆಗ ವಿಭಾಂಡಕ ಮುನಿಗಳು ಪುನಃ ಹಾಗಿದ್ದರೆ ನಿನ್ನ ಸ್ವರೂಪ ಯಾವುದು? ನಿನ್ನ ಸ್ಥಿತಿಯು ಎಂತಹದ್ದು? ಎಲೈ ಮುನಿಸತ್ತಮನೇ, ಲೋಕಕ್ಕೆಲ್ಲ ನೀನೊಬ್ಬನೇ ಇರುವಿಯಷ್ಟೆ? ಈ ಕಾರಣಸ್ವರೂಪ ಸತ್ತೋ, ಅಸತ್ತೋ? ನಿನಗಿಂತ ಬೇರೆಯೋ, ಒಂದೆಯೋ? ಯಾವ ವಿಧವಾಗಿದೆ? ತಿಳಿಸು.
ಅಥಾಹ ಗಂಭೀರತರಾನುವಾದಂ
ವಾಕ್ಯಂ ಮಹಾತ್ಮಾ ಹ್ಯಶರೀರ ಆದಿಃ।
ನ ತೇ ಮುನೇ ಶ್ರೋತ್ರಮುಖೇಽಪಿ ಚಾಸ್ಯಂ
ನ ಪಾದಹಸ್ತೌ ಪ್ರಪದಾತ್ಮಕೇ ನ ॥19॥
ಬಳಿಕ ಆ ಪುರುಷನು ಗಂಭೀರವಾಕ್ಯದಿಂದ- `ಮಹರ್ಷಿಯೇ, ನನಗೆ ಕಣ್ಣು, ಮೂಗು, ಕಿವಿ, ಕೈ, ಕಾಲು, ಪಾದಾಗ್ರ, ಯಾವುದೂ ಇರುವುದಿಲ್ಲ. ನನ್ನ ಸ್ವರೂಪವೇ ಈ ರೀತಿಯಾಗಿದೆ' ಎಂದು ಹೇಳಿದನು.
ಬ್ರುವನ್ ಮುನೀನ್ ಸತ್ಯಮಥೋ ನಿರೀಕ್ಷ್ಯ
ಸ್ವಮಾಹ ವಿದ್ವಾನ್ ಮನಸಾ ನಿಗಮ್ಯ।
ಋಷೇ ಕಥಂ ವಾಕ್ಯಮಿದಂ ಬ್ರವೀಷಿ
ನ ಚಾಸ್ಯ ಮಂತಾ ನ ಚ ವಿದ್ಯತೇ ಚೇತ್ ॥20॥
ಆಗ ಋಷಿಗಳು- `ಎಲೈ ಮಹಾತ್ಮನೇ, ಹಾಗಿದ್ದಲ್ಲಿ ನೀನು ಹೇಗೆ ಮಾತನಾಡುತ್ತಿರುವಿ? ನಿನಗೆ ಯೋಚಿಸಲು ಮನಸ್ಸೂ ಇಲ್ಲ. ಮನಸ್ಸಿನ ಭಾವನೆಯನ್ನು ತೋರಿಸುವ ಯೋಗ್ಯವಾದ ಅಂಗವೂ ಇಲ್ಲ. ಹೀಗಿದ್ದ ಮೇಲೆ ಮಾತುಗಳು ನಿನ್ನಿಂದ ಹೇಗೆ ಹೊರ ಹೊರಡುತ್ತವೆ?' ಎಂದರು.
ನ ಶುಶ್ರುವುಸ್ತತಸ್ತತ್ತು ಪ್ರತಿವಾಕ್ಯಂ ದ್ವಿಜೋತ್ತಮಾಃ।
ನಿರೀಕ್ಷಮಾಣಾ ಆಕಾಶಂ ಪ್ರಹಸಂತಸ್ತತಸ್ತತಃ ॥21॥
ಬ್ರಾಹ್ಮಣೋತ್ತಮರಿಗೆ ಮುಂದೆ ಪ್ರತ್ಯುತ್ತರವೇ ಕೇಳಿಸದೆ ಹೋಯಿತು. ಆಗ ಮುನಿಗಳು ಕೇವಲ ಆಕಾಶವನ್ನು ನೋಡುತ್ತಾ, ಒಬ್ಬರ ಮುಖವನ್ನು ಒಬ್ಬರು ನೋಡಿ ನಸುನಕ್ಕರು.
ಆಶ್ಚರ್ಯಮಿತಿ ಮತ್ವಾ ತೇ ಯಯುರ್ಹೈಮಂ ಮಹಾಗಿರಿಮ್।
ಸನತ್ಕುಮಾರಸಂಕಾಶಂ ಸಗಣಾ ಮುನಿಸತ್ತಮಾಃ ॥22॥
ಇದೇನಾಶ್ಚರ್ಯವೆಂದು ತಮ್ಮಲ್ಲಿ ತಾವೇ ವಿಸ್ಮಿತರಾದರು. ಬಳಿಕ ಎಲ್ಲರೂ ಒಂದಾಗಿ ಸೇರಿ ಹಿಮಗಿರಿಯ ಹತ್ತಿರದಲ್ಲಿ ಇರುವಂಥ ಸನತ್ಕುಮಾರರು ಇದ್ದ ಸ್ಥಳಕ್ಕೆ ಹೋದರು.
ತಂ ಪರ್ವತಂ ಸಮಾರುಹ್ಯ ದದೃಶುರ್ಧ್ಯಾನಮಾಶ್ರಿತಾಃ।
ಕುಮಾರಂ ದೇವಮರ್ಹಂತಂ ವೇದಪಾರಾವಿವರ್ಜಿತಮ್ ॥23॥

ತತಃ ಸಂವತ್ಸರೇ ಪೂರ್ಣೇ ಪ್ರಕೃತಿಸ್ಥಂ ಮಹಾಮುನಿಮ್ |
ಸನತ್ಕುಮಾರಂ ರಾಜೇಂದ್ರ ಪ್ರಣಿಪತ್ಯ ದ್ವಿಜಾಃ ಸ್ಥಿತಾಃ ॥24॥
ಆ ಪರ್ವತದಲ್ಲಿ ಕೇವಲ ಧ್ಯಾನನಿಷ್ಠರಾಗಿ, ವೇದಾಂತವಿಚಾರದಲ್ಲಿಯೇ ಮಗ್ನರಾಗಿರುವ ಸನತ್ಕುಮಾರ ಮುನಿಯನ್ನು ಕಂಡರು. ಬಳಿಕ ಅವರೆಲ್ಲರೂ ಒಂದು ವರ್ಷ ಕಾಲದ ತನಕ ಅವನ ಎಚ್ಚರವನ್ನೇ ನಿರೀಕ್ಷಿಸುತ್ತಾ ಆ ಸುಂದರವಾದ ಪ್ರಕೃತಿಯ ನಡುವೆ ಇರುವ ಸನತ್ಕುಮಾರನನ್ನು ಸಾಷ್ಟಾಂಗ ನಮಸ್ಕರಿಸಿ ಅವನ ಬಳಿ ನಿಂತರು.
ಆಗತಾನ್ ಭಗವಾನಾಹ ಜ್ಞಾನನಿರ್ಧೂತಕಲ್ಮಷಃ |
ಜ್ಞಾತಂ ಮಯಾ ಮುನಿಗಣಾ ವಾಕ್ಯಂ ತದಶರೀರಿಣಃ |
ಕಾರ್ಯಮದ್ಯ ಯಥಾಕಾಮಂ ಪೃಚ್ಛಧ್ವಂ ಮುನಿಪುಂಗವಾಃ ॥25॥
ತಪಸ್ಸಿನಿಂದ ಸಮಸ್ತ ಪಾಪಗಳನ್ನು ಸುಟ್ಟುಕೊಂಡಿರುವ ಸನತ್ಕುಮಾರರು ಆ ಬ್ರಾಹ್ಮಣರನ್ನು ನೋಡಿ, ಮುನೀಂದ್ರರೇ ನೀವು ಕೇಳಿದ ಅಶರೀರ ಮಾತಿನ ವಿಚಾರವನ್ನು ನಾನು ಬಲ್ಲೆನು. ನಿಮಗೆ ಯಾವ ಸಂದೇಹವಿದ್ದರೂ ನನ್ನಲ್ಲಿ ಕೇಳಬಹುದು ಎಂದು ಹೇಳಿದರು.
ತಮಬ್ರುವನ್ ಪ್ರಾಂಜಲಯೋ ಮಹಾಮುನಿಂ
ದ್ವಿಜೋತ್ತಮಂ ಜ್ಞಾನನಿಧಿಂ ಸುನಿರ್ಮಲಮ್ |
ಕಥಂ ವಯಂ ಜ್ಞಾನನಿಧಿಂ ವರೇಣ್ಯಂ
ಯಕ್ಷ್ಯಾಮಹೇ ವಿಶ್ವರೂಪಂ ಕುಮಾರ ॥26॥
ಜ್ಞಾನನಿಧಿಯೂ, ಮಹಾತ್ಮನೂ ಆದ ಬ್ರಾಹ್ಮಣನ ಮುಂದೆ ಮಹರ್ಷಿಗಳು ಕೈಮುಗಿದು ನಿಂತು ಹೀಗೆ ಹೇಳಿದರು- ಮಹಾತ್ಮನೇ, ವಿಶ್ವಸ್ವರೂಪನಾದ ಈಶ್ವರನನ್ನು ನಾವು ಉಪಾಸಿಸುವುದು ಹೇಗೆ?
ಪ್ರಸೀದ ನೋ ಭಗವನ್ ಜ್ಞಾನಲೇಶಂ
ಮಧುಪ್ರಯಾತಾಯ ಸುಖಾಯ ಸಂತಃ |
ಯತ್ ತತ್ಪದಂ ವಿಶ್ವರೂಪಂ ಮಹಾಮುನೇ
ತದ್ ಬ್ರೂಹಿ ಕಿಂ ಕುತ್ರ ಮಹಾನುಭಾವ ॥ 27॥
ಈ ವಿಚಾರದಲ್ಲಿ ಜ್ಞಾನಪ್ರಸಾದವನ್ನು ನಮಗೆ ನೀಡಬೇಕು. ಸಾಧುಗಳು ಜೇನಿನಂತೆ ಪ್ರಿಯವಾದ ಮೋಕ್ಷಸುಖಕ್ಕಾಗಿ, ವಿಶ್ವರೂಪಿಯಾದ ಯಾವ ರೀತಿಯಾದ ವಸ್ತುವನ್ನು ಹೊಂದಲು ಅಪೇಕ್ಷಿಸುತ್ತಾರೋ ಆ ಪರವಸ್ತುವಿನ ಬಗ್ಗೆ ಮಹಾನುಭಾವನೇ, ನಮಗೆ ತಿಳಿಸು.
ಸ ತೈರ್ವಿಯುಕ್ತೋ ಭಗವಾನ್ ಮಹಾತ್ಮಾ
ಯಃ ಸಂಗವಾನ್ ಸತ್ಯವಿತ್ ತಚ್ಛೃಣುಷ್ವ |
ಅನೇಕ ಸಾಹಸ್ರಕಲೇಷು ಚೈವ
ಪ್ರಸನ್ನಧಾತುಂ ಚ ಶುಭಾಜ್ಞಯಾ ಸತ್ ॥28॥
ಆ ಸನತ್ಕುಮಾರರಾದರೂ ಸಾವಿರಾರು ಕಲೆಗಳನ್ನು ಅರಿತಿದ್ದರು. ಸತ್ಯವಾದ ವಸ್ತುವನ್ನು ತಿಳಿದಿದ್ದರು. ಅದರಲ್ಲಿಯೇ ದೃಢವಾದ ಬುದ್ಧಿಯುಳ್ಳವರಾಗಿದ್ದರು. ಅಂತಹ ಮಹಾತ್ಮರಾದ ಸನತ್ಕುಮಾರರು ಪರಮಾತ್ಮನ ಅನುಜ್ಞೆಯನ್ನು ಪ್ರಾರ್ಥನೆ ಮಾಡಿ ಋಷಿಗಳನ್ನು ಕುರಿತು- `ಮುನೀಂದ್ರರೇ, ಆ ಪರಮಾತ್ಮನ ವಿಷಯವನ್ನು ತಿಳಿಸುತ್ತೇನೆ, ಕೇಳಿರಿ'.
ಯಥಾಹ ಪೂರ್ವಂ ಯುಷ್ಮಾಸು ಹ್ಯಶರೀರೀ ದ್ವಿಜೋತ್ತಮಾಃ |
ತಥೈವ ವಾಕ್ಯಂ ತತ್ಸತ್ಯಮಜಾನಂತಶ್ಚ ಕೀರ್ತಿತಮ್ ॥29॥
ಹಿಂದೆ ಅದೃಶ್ಯ ಪುರುಷನು ಸೂಕ್ಷ್ಮವಾಗಿ ನಿಮಗೆ ಯಾವ ವಿಚಾರವನ್ನು ಸೂಚಿಸಿದ್ದನೋ ಅದೆಲ್ಲವೂ ಸತ್ಯವಾಗಿದೆ. ಅವನು ಕೊಟ್ಟ ಉತ್ತರವು ನಿಮಗೆ ಅರ್ಥವಾಗಿಲ್ಲವೆಂದು ತೋರುತ್ತದೆ.
ಅಹನ್ಯಹನಿ ಪಾಕವಿಶೇಷೋ ದೃಶ್ಯತೇ |
ತೇನ ಮಿಶ್ರಂ ಸರ್ವಂ ಮಿಶ್ರಯತೇ |
ಯಥಾ ಮಂಡಲೀ ದೃಶಿ ಸರ್ವೇಷಾಮಸ್ತಿ ನಿದರ್ಶನಮ್ |
ಅಸ್ತಿ ಚಕ್ಷುಷ್ಮತಾಮಸ್ತಿ ಜ್ಞಾನೇ ಸ್ವರೂಪಂ ಪಶ್ಯತಿ |
ತಥಾ ದರ್ಪಣಾಂತಂ ನಿದರ್ಶನಮ್ ॥30॥
ಈ ಲೋಕಕ್ಕೆ ಪ್ರಧಾನವಾದ ಕಾರಣವೊಂದಿದೆ. ಅದನ್ನು ತಿಳಿಯುವುದು ಹೇಗೆ ಎಂದು ನೀವು ಪ್ರಶ್ನಿಸಬಹುದು. ಲೋಕದಲ್ಲಿ ಪ್ರತಿದಿನವೂ ಈ ಶರೀರದಲ್ಲಿ ಅಥವಾ ಧನ-ಧಾನ್ಯ-ಫಲಾದಿಗಳಲ್ಲಿ ಪರಿಪಾಕವಿಶೇಷವು ಕಾಣಿಸುತ್ತಿದೆ. ಇಂತಹ ಪಾಕದಿಂದಲೇ ಜಗತ್ತನ್ನು ನಾವು ಕಾಣುತ್ತಿದ್ದೇವೆ. ಇಂತಹ ಪಾಕಕ್ಕೆ ಕಾರಣವಾದದ್ದೇ ಕಾರಣವಸ್ತುವೆನಿಸುತ್ತದೆ. ಕಣ್ಣುಳ್ಳ ಪುರುಷರಿಗೆ ಪದಾರ್ಥಗಳನ್ನು ಕಣ್ಣು ನೋಡುವಾಗ ಆ ಕಣ್ಣಿನಲ್ಲಿ ಸಾಕ್ಷಿಭೂತನಾದ ಪುರುಷನು ಬೇರೆಯಾಗಿರುವಂತೆ ಈ ಲೋಕವನ್ನೆಲ್ಲ ನಿಯಮಿಸುವ ಪುರುಷನು ಅಂತರ್ಯಾಮಿಯಾಗಿ ಬೇರೆಯಾಗಿದ್ದಾನೆ. ಜ್ಞಾನಿಯಾದವನು ಜ್ಞಾನಕ್ಕೆ ವಿಷಯನಾದ ಭಗವಂತನ ಯಾವ ಸ್ವರೂಪವಿದೆಯೋ ಆ ಸ್ವತಂತ್ರನಾದ ಪರಮಾತ್ಮನ ರೂಪವನ್ನೇ ಈ ಜಗತ್ತಿನಲ್ಲಿ ಕಾಣುತ್ತಾನೆ. ಕನ್ನಡಿಯಲ್ಲಿ ಪ್ರತಿಬಿಂಬವು ಕಂಡಾಗ ಅವಿವೇಕಿಯಾದವನು ಪ್ರತಿಬಿಂಬವನ್ನು ಮಾತ್ರ ಕಾಣುತ್ತಾನೆ. ವಿವೇಕಿಯಾದವನು ಪ್ರತಿಬಿಂಬಕ್ಕೆ ನಿಯಾಮಕವಾದ ಬಿಂಬಭೂತವಾದ ಮುಖವನ್ನು ನೋಡುತ್ತಾನೆ. ಇದರಂತೆ ಜಗತ್ತಿನಲ್ಲಿ ಅವಿವೇಕಿ ಪುರುಷರು ಜಗತ್ತನ್ನು ಮಾತ್ರ ಕಾಣುತ್ತಾರೆ. ಅಲ್ಲಿಯೇ ಕಾರಣಗಳನ್ನು ಹುಡುಕುವ ಪ್ರಯತ್ನವನ್ನು ಮಾಡುತ್ತಾರೆ. ವಿವೇಕಿಯಾದ ಜ್ಞಾನಿಗಳು ಜಗತ್ತಿಗೆಲ್ಲ ನಿಯಾಮಕನಾದ, ಬಿಂಬರೂಪಿಯಾದ ಪರಮಾತ್ಮನನ್ನು ಕಾಣುತ್ತಾರೆ.
ಸ ಏವ ಸರ್ವಂ ವಿದ್ವಾನ್ನ ಬಿಭೇತಿ ನ ಗಚ್ಛತಿ | ಕುತ್ರಾಹಂ ಕಸ್ಯ ನಾಹಂ ಕೇನ ಕೇನೇತ್ಯವರ್ತಮಾನೋ ವಿಜಾನಾತಿ ॥ 31॥
ಸಮಗ್ರ ಈ ಜಗತ್ತೆಲ್ಲವನ್ನು ಅರ್ಥ ಮಾಡಿಕೊಂಡಿರುವ ಆ ಪರಮಾತ್ಮನೊಬ್ಬನು ಭಯವನ್ನು ಹೊಂದಲಾರ. ಅವನು

ವ್ಯಾಪ್ತನಾಗಿರುವುದರಿಂದ ಎಲ್ಲಿಗೂ ಹೋಗಲಾರ. `ಕಿಂಸ್ವಿದಾಸೀದಧಿಷ್ಠಾನಮ್' ಎಂಬ ಶ್ರುತಿಯಂತೆ ಭಗವಂತನು ಯಾವ ಆಧಾರದಲ್ಲಿದ್ದಾನೆ ಎಂದರೆ ಜಗತ್ತಿಗೆ ಆಧಾರನಾದ ಇವನಿಗೆ ಯಾವ ಆಧಾರವೂ ಇಲ್ಲ. `ನ ಋತೇ ತ್ವತ್ಕ್ರಿಯತೇ ಕಿಂಚನ' ಎಂಬ ಶ್ರುತಿಯಂತೆ ಜಗತ್ತನ್ನೆಲ್ಲ ನಿಯಮಿಸುವ ಅವನಿಗೆ ಯಾವನೂ ನಿಯಾಮಕನಿರುವುದಿಲ್ಲ. `ಆರಂಭಣಂ ಕತಮತ್ಸ್ವಿತ್' ಎಂಬ ಶ್ರುತಿಯಂತೆ ಯಾವ ಯಾವ ಸಾಧನಗಳನ್ನು ಉಪಯೋಗಿಸಿಕೊಂಡು ಜಗತ್ತನ್ನು ಸೃಷ್ಟಿಸುತ್ತಾನೆ. ಅರ್ಥಾತ್ ಯಾರ ಅವಲಂಬನೆಯು ಇಲ್ಲದೆ ಸ್ವತಂತ್ರನಾಗಿ ಭಗವಂತನು ಆಯಾ ಪದಾರ್ಥಗಳನ್ನು ನೆಪ ಮಾಡಿಕೊಂಡು ಜಗತ್ತನ್ನು ಸೃಷ್ಟಿಸುತ್ತಾನೆ. ಈ ರೀತಿಯಾಗಿಯೇ ಭಗವಂತನು ಜಗತ್ತಿನ ಬಗ್ಗೆ ನಿತ್ಯ ತಿಳಿದಿರುವುದರಿಂದ ಅವನು ಹೆದರುವುದಿಲ್ಲ.
ಸ ಯುಗತೋ ವ್ಯಾಪೀ | ಸ ಪೃಥಕ್ ಸ್ಥಿತಃ | ತದಪರಮಾರ್ಥಮ್ ॥
ಆ ಭಗವಂತನು ಜಗತ್ತಿನ ಬಲ ಬದಿಯಲ್ಲಿ, ಎಡ ಬದಿಯಲ್ಲಿ, ಎಲ್ಲ ಕಡೆಯಲ್ಲಿಯೂ ವ್ಯಾಪಿಸಿದ್ದಾನೆ. ಸರ್ವತ್ರ ವ್ಯಾಪ್ತನಾದವನು. ಆ ಭಗವಂತನೇ ಪ್ರತ್ಯೇಕವಾಗಿ ಜೀವ- ಜಡಾತ್ಮಕವಾದ ಪ್ರಪಂಚಕ್ಕಿಂತ ಅತ್ಯಂತ ಭಿನ್ನನಾಗಿ ಇದ್ದಾನೆ. ಆ ಭಗವಂತನ ದೆಸೆಯಿಂದ ಬೇರೆಯಾದ ಜಗತ್ತು ತನ್ನ ಪುರುಷಾರ್ಥವಶದಿಂದಲೇ ಹುಟ್ಟಿರುವುದಿಲ್ಲ. ಭಗವಂತನಂತೆ ಜಗತ್ತು ಪೂರ್ಣವಾಗಿಯೂ ಇರುವುದಿಲ್ಲ.
ಯಥಾ ವಾಯುರೇಕಃ ಸನ್ ಬಹುಧೇರಿತಃ | ಆಶ್ರಯವಿಶೇಷೋ ವಾ ಯಸ್ಯಾಶ್ರಯೋ ವಾ | ಯಥಾವದ್ ದ್ವಿಜೇ ಮೃಗೇ ವ್ಯಾಘ್ರೇ ಚ ಮನುಜೇ ವೇಣುಸಂಶ್ರಯೋ ಭಿದ್ಯತೇ ವಾಯುರಥೈಕಃ | ಆತ್ಮಾ ತಥಾಸೌ ಪರಮಾತ್ಮಾಸಾವನ್ಯ ಇವ ಭಾತಿ ॥33॥
ಭಗವಂತನು ವಾಯುವಿನಂತೆ ಇದ್ದಾನೆ. ವಾಯುವು ಒಂದೇ ಆಗಿದ್ದರೂ ಅನೇಕ ರೂಪಗಳನ್ನು ತಾಳಿ ಹೇಗೆ ಪ್ರೇರಿಸುತ್ತದೋ ಅದರಂತೆ ಒಬ್ಬನೇ ಆದ ಭಗವಂತನು ಅನಂತ ಭಿನ್ನತೆಯಿಂದ ಕೂಡಿದ ಈ ಜಗತ್ತಿನ ಒಳಗಡೆ ಅಂತರ್ಯಾಮಿಯಾಗಿ ಪ್ರೇರಕನಾಗಿದ್ದಾನೆ. ಪಕ್ಷಿಗಳಲ್ಲಿ, ಮೃಗಗಳಲ್ಲಿ, ವ್ಯಾಘ್ರಗಳಲ್ಲಿ, ಮನುಷ್ಯರಲ್ಲಿ, ಬಿದಿರಿನಲ್ಲಿ ಸೇರಿರುವ ಒಂದೇ ಆದ ವಾಯುವು ಆಯಾ ಸ್ಥಾನಗಳಿಂದ ಭಿನ್ನವಾಗಿ ಹೇಗೆ ತೋರುತ್ತದೋ ಅದರಂತೆ ಒಬ್ಬನೇ ಆದ ಪರಮಾತ್ಮನು ಜಗತ್ತಿನ ಅಂತರ್ಯಾಮಿಯಾಗಿ ಇದ್ದಾನೆ. ಬೇರೆ ಬೇರೆಯವರಲ್ಲಿ ವ್ಯಾಪಾರ ಮಾಡುವಾಗ ಭಿನ್ನನಂತೆ ತೋರುತ್ತಾನೆ. ಭಗವಂತನ ಅಂತರ್ಯಾಮಿ ರೂಪಗಳಿಗೆ ಭೇದವಿರುವುದಿಲ್ಲ.
ಏವಮಾತ್ಮಾ ಸ ಏವ ಗಚ್ಛತಿ ಸರ್ವಮಾತ್ಮಾಪಶ್ಯನ್
ಶೃಣೋತಿ ನ ಜಿಘ್ರತಿ ನ ಭಾಷತೇ ॥34॥
ಈ ವಾಯುವಿನಂತೆ ಜಗತ್ತಿನ ಅಂತರ್ಯಾಮಿಯಾದ ಪರಮಾತ್ಮನು ಎಲ್ಲ ಕಡೆಯೂ ಸಂಚರಿಸುತ್ತಾನೆ, ಎಲ್ಲವನ್ನೂ ನೋಡುತ್ತಾನೆ. ಆದರೆ ಜಗತ್ತಿನ ಪುರುಷರಂತೆ ಕೆಟ್ಟದ್ದನ್ನು ನೋಡುವುದಿಲ್ಲ. ಎಲ್ಲವನ್ನೂ ಕೇಳುತ್ತಾನೆ, ಆದರೆ ಕೆಟ್ಟದ್ದನ್ನು ಕೇಳುವುದಿಲ್ಲ. ದುರ್ಗಂಧವನ್ನು ಆಘ್ರಾಣಿಸುವುದಿಲ್ಲ. ದುರ್ಜನರ ಜೊತೆ ಮಾತನಾಡುವುದಿಲ್ಲ.
ಚಕ್ರೇऽಸ್ಯ ತಂ ಮಹಾತ್ಮಾನಂ ಪರಿತೋ ದಶ ರಶ್ಮಯಃ |
ವಿನಿಷ್ಕ್ರಮ್ಯ ಯಥಾ ಸೂರ್ಯಮನುಗಚ್ಛಂತಿ ತಂ ಪ್ರಭುಮ್ ॥35॥
ಸುದರ್ಶನ ಚಕ್ರದಿಂದ ಹೊರಹೊಮ್ಮಿದ ಅನೇಕ ಕಿರಣಗಳು ಸೂರ್ಯನನ್ನೇ ಅನುಸರಿಸಿ ಹೋಗುವಂತೆ ಜೀವರ ಹತ್ತು ಇಂದ್ರಿಯಗಳು ಆ ಪರಮಾತ್ಮನನ್ನು ಅನುಸರಿಸಿ ಹೋಗುತ್ತವೆ.
ದಿನೇ ದಿನೇऽಸ್ತಮಭ್ಯೇತಿ ಪುನರುದ್ಗಚ್ಛತೇ ದಿಶಃ |
ತಾವುಭೌ ನ ರವೌ ಚಾಸ್ತಾಂ ತಥಾ ವಿತ್ತ ಶರೀರಿಣಮ್ ॥36॥
ಪ್ರತಿದಿವಸವೂ ಸೂರ್ಯನು ಅಸ್ತಮಾನ ಹೊಂದುತ್ತಾನೆ. ಪುನಃ ದಿಕ್ಕುಗಳಲ್ಲಿ ಉದಯಿಸುತ್ತಾನೆ. ಈ ಉದಯಾಸ್ತಮಾನಗಳು ಸೂರ್ಯನಲ್ಲಿ ಇರುವುದಿಲ್ಲ. ಅವನು ನಿತ್ಯವೂ ಉದಿತನಾಗಿಯೇ ಇರುತ್ತಾನೆ. ಮನುಷ್ಯರ ದೃಷ್ಟಿಯಿಂದ ಈ ಉದಯಾಸ್ತ ಮಾನಗಳು ಕಾಣಿಸುತ್ತವೆ. ಸೂರ್ಯನು ಅಸ್ತಮಾನವಾಗುವುದೂ ಇಲ್ಲ, ಉದಯಿಸುವುದೂ ಇಲ್ಲ. ಒಂದೇ ರೀತಿಯಲ್ಲಿ ಇರುತ್ತಾನೆ. ಇದರಂತೆ ಜೀವರು ಹುಟ್ಟು-ಸಾವುಗಳನ್ನು ಪಡೆಯುತ್ತಿದ್ದರೂ ಪರಮಾತ್ಮನು ನಿರಂತರವೂ ಒಂದೇ ರೀತಿ ಇರುತ್ತಾನೆ. ಆದ್ದರಿಂದ ಈ ಶರೀರದಲ್ಲಿ ಅಂತರ್ಯಾಮಿಯಾದವನು ನಾರಾಯಣನೆಂದು ತಿಳಿಯಿರಿ.
ಪತಿತೇ ವಿತ್ತ ವಿಪ್ರೇಂದ್ರಾಃ ಭಕ್ಷಣೇ ಚರಣೇ ಪರಃ | ಊರ್ಧ್ವಮೇಕಸ್ತಥಾಧಸ್ತಾದೇಕಸ್ತಿಷ್ಠತಿ ಚಾಪರಃ ॥37॥
ಬ್ರಾಹ್ಮಣರೇ, ಜೀವರಲ್ಲಿ ಪತನ-ಭಕ್ಷಣ-ಸಂಚರಣ-ಊರ್ಧ್ವಗಮನ- ಅಧೋಗಮನ ಎಂಬ ಆರು ಅಲೆಗಳಿವೆ. ಈ ಆರು ಅಲೆಗಳನ್ನು ಜೀವರಲ್ಲಿ ನಿಂತು ಭಗವಂತನೇ ಪ್ರೇರಿಸುತ್ತಾನೆ. ಭಗವಂತನನ್ನು ಹೊರತು ಬೇರೆ ಯಾರೂ ಪ್ರೇರಕರು ಸುಮ್ಮನಿರುವ ಈ ಜೀವನಿಗೆ ಇರುವುದಿಲ್ಲ.
ಹಿರಣ್ಯಸದನಂ ಜ್ಞೇಯಂ ಸಮೇತ್ಯ ಪರಮಂ ಪದಮ್ |
ಆತ್ಮನಾ ಹ್ಯಾತ್ಮದೀಪಂ ತಮಾತ್ಮನಿ ಹ್ಯಾತ್ಮಪೂರುಷಮ್ ॥38॥
ವಿಪ್ರೇಂದ್ರರೇ, ಭಗವಂತನನ್ನು ಜೀವರು ಸುಖಸ್ವರೂಪಿ ಎಂದು ತಿಳಿಯಬೇಕು. ಅಥವಾ ಕಿರೀಟಾದಿ ಅಲಂಕಾರಕ್ಕೆ ಅರ್ಹವಾದ ಸುವರ್ಣವೇ ಸದನವಾಗಿ ಉಳ್ಳವನು ಎಂದು ತಿಳಿಯಬೇಕು. ಜೀವರನ್ನೆಲ್ಲ ಹಿರಣ್ಯನಂತೆ ಬೆಳಗುವವನು ಇವನೇ ಆಗಿದ್ದಾನೆ. ಸಮಸ್ತ ಜೀವರ ಅಂತರ್ಯಾಮಿ ಪುರುಷನಾಗಿದ್ದಾನೆ. ಇಂತಹ ಪರಮಾತ್ಮನನ್ನು ಹೃದಯದಲ್ಲಿ ಕಂಡು ಪರಮಪದವನ್ನು ಹೊಂದಬೇಕು.
ಸಂಚಿತಂ ಸಂಚಿತಂ ಪೂರ್ವಂ ಭ್ರಮರೋ ವರ್ತತೇ ಭ್ರಮನ್ |
ಯೋऽಭಿಮಾನೀವ ಜಾನಾತಿ ನ ಮುಹ್ಯತಿ ನ ಹೀಯತೇ ॥39॥
ದುಂಬಿಯು ಮಧುವನ್ನು ಪುನಃ ಪುನಃ ಸಂಗ್ರಹಿಸುತ್ತಾ ಸಂಗ್ರಹಿಸುತ್ತಾ ಆ ಮಧುವಿನಲ್ಲೇ ಆಸಕ್ತವಾಗಿರುತ್ತದೆ. ತಾನು ಮಧುವನ್ನು ಸಂಗ್ರಹಿಸಿದ ಸ್ಥಳಗಳನ್ನು ಸರಿಯಾಗಿ ಅರಿತಿರುತ್ತದೆ. ದುಂಬಿಯಂತೆ ಜೀವರಿಗೆ ನಿಯಾಮಕನಾದ ಭಗವಂತನು ಎಲ್ಲ ಜೀವರ, ಜಗತ್ತಿನ, ಜಡಗಳ ಸ್ವರೂಪವನ್ನು ತಿಳಿದಿರುತ್ತಾನೆ. ಅವನಿಗೆ ಎಂದಿಗೂ ಮೋಹವಿಲ್ಲ. ಎಂದಿಗೂ ನಾಶವಿಲ್ಲ.
ನ ಚಕ್ಷುಷಾ ಪಶ್ಯತಿ ಕಶ್ಚನೈನಂ
ಹೃದಾ ಮನೀಷಾ ಪಶ್ಯತಿ ರೂಪಮಸ್ಯ |
ನ ಶುಕ್ಲಂ ನ ಕೃಷ್ಣಂ ಪರಮಾರ್ಥಭಾವಂ

ಗುಹಾಶಯಂ ಜ್ಞಾನದೇವೀಕರಸ್ಥಮ್ ॥40॥
ಈ ಭಗವಂತನನ್ನು ಜಡವಾದ ಕಣ್ಣಿನಿಂದ ಯಾರೂ ನೋಡಲಾರರು. ಈ ಜಡವಾದ ಬುದ್ಧಿಗೂ ಅವನು ನಿಲುಕನು. ಅವನು ಪ್ರಕೃತಿಗೆ ಸಂಬಂಧಿಸಿದಂತೆ ಶುಕ್ಲ- ಕೃಷ್ಣ ರೂಪಗಳಿಂದ ಕೂಡಿದವನಲ್ಲ. ಸಮಸ್ತ ಜೀವರ ಅಂತರ್ಯಾಮಿಯಾಗಿ ಅವರ ಹೃದಯಗುಹೆಯಲ್ಲಿರುವ ಭಗವಂತನ ಪರಮಾರ್ಥ ಸ್ವರೂಪವನ್ನು, ಜ್ಞಾನದೇವಿಯ ಕೈಯಲ್ಲಿರುವ ಭಗವಂತನನ್ನು ಅರ್ಥಮಾಡಿಕೊಳ್ಳಬೇಕು.
ಬ್ರಾಹ್ಮಣಸ್ಯ ನ ಸಾದೃಶ್ಯೇ ವರ್ತತೇ ಸೋಽಪಿ ಕಿಂ ಪುನಃ |
ಇಜ್ಯತೇ ಯಸ್ತು ಮಂತ್ರೇಣ ಯಜಮಾನೋ ದ್ವಿಜೋತ್ತಮಃ ॥41॥
ಯಾಗಶೀಲನೂ, ಮಂತ್ರವಚನಗಳಿಂದ ಪೂಜಿಸುವವನೂ ಆದ ಬ್ರಾಹ್ಮಣೋತ್ತಮನು ಕೂಡ ಬ್ರಹ್ಮಜ್ಞಾನಿಗೆ ಸಮಾನವಾದ ಸ್ತುತಿಯನ್ನು ಹೊಂದಲಾರನು. ಹೀಗಿರಲು ಬೇರೆಯವರ ಪಾಡೇನು?
ನೈವ ಧರ್ಮೀ ನ ಚಾಧರ್ಮೀ ದ್ವಂದ್ವಾತೀತೋ ವಿಮತ್ಸರಃ |
ಜ್ಞಾನತೃಪ್ತಃ ಸುಖಂ ಶೇತೇ ಹ್ಯಮೃತಾತ್ಮಾ ನ ಸಂಶಯಃ ॥42॥
ಬಂಧಕಗಳಾದ ಧರ್ಮಾಧರ್ಮಗಳನ್ನು ನೀಗಿ, ಸುಖ-ದುಃಖಗಳ ದ್ವಂದ್ವಗಳನ್ನು ತೊರೆದು, ಮಾತ್ಸರ್ಯರಹಿತನಾಗಿ ಭಗವಂತನ ಜ್ಞಾನದಲ್ಲಿಯೇ ತೃಪ್ತನಾದವನು ಮೋಕ್ಷದಲ್ಲಿ ಮುಕ್ತನಾಗಿ ಸುಖವಾಗಿ ವಿಹರಿಸುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಏವಮೇಷ ಜಗತ್ಸೃಷ್ಟಿಂ ಕುರುತೇ ಮಾಯಯಾ ಪ್ರಭುಃ |
ನ ಜಾನಾತಿ ವಿರೂಢಾತ್ಮಾ ಕಾರಣಂ ಚಾತ್ಮನೋ ಹ್ಯಸೌ ॥43॥
ಹೀಗೆ ಭಗವಂತನು ಜಗತ್ತಿನ ಸೃಷ್ಟಿಯನ್ನು ತನ್ನ ಸಂಕಲ್ಪದಿಂದ ಸಮಗ್ರವಾಗಿ ಮಾಡುತ್ತಲೇ ಇದ್ದಾನೆ. ವಿಶೇಷವಾದ ಪ್ರಾದುರ್ಭೂತಸ್ವರೂಪವುಳ್ಳ ಪರಮಾತ್ಮನು ತನಗೆ ಮತ್ತೊಂದು ಕಾರಣವೇ ಇಲ್ಲದಿರುವುದರಿಂದ ತನಗೊಂದು ಕಾರಣವಿದೆ ಎಂದು ಎಂದಿಗೂ ತಿಳಿಯುವುದಿಲ್ಲ. ಯಾವಾಗಲೂ ಭಗವಂತನು ಒಂದೇ ರೀತಿಯಾಗಿ ಇರುತ್ತಾನೆ.
ಧ್ಯಾತಾ ದ್ರಷ್ಟಾ ತಥಾ ಮಂತಾ ಬೋದ್ಧಾ ದೃಷ್ಟಾನ್ ಸ ಏವ ಸಃ |
ಕೋ ವಿದ್ವಾನ್ ಪರಮಾತ್ಮಾನಮನಂತಂ ಶ್ಲೋಕಭಾವನಮ್ |
ಯತ್ ತು ಶಕ್ಯಂ ಮಯಾ ಪ್ರೋಕ್ತಂ ಗಚ್ಛಧ್ವಂ ಮುನಿಪುಂಗವಾಃ ॥44॥
ಯಾವನು ಈ ಭಗವಂತನನ್ನೇ ಧ್ಯಾನಿಸುತ್ತಾ, ನೋಡುತ್ತಾ, ಮನನ ಮಾಡುತ್ತಾ ತಿಳಿಯುತ್ತಾ ಇರುತ್ತಾನೋ ಅವನು ಆ ಭಗವಂತನಂತೆ ಸಾದೃಶ್ಯವನ್ನು ಹೊಂದುತ್ತಾನೆ. ಸಮಸ್ತ ಜೀವರ ಉತ್ಪತ್ತಿಗೆ ಕಾರಣನಾದ ಈ ಅನಂತನಾದ ಭಗವಂತನನ್ನು ಯಾರು ತಾನೇ ತಿಳಿಯಲು ಸಾಧ್ಯ? ನಾನು ಹೇಳಿದ ಈ ಭಗವತ್ತತ್ತ್ವವನ್ನು ಯಾರಿಂದಲೂ ತಿಳಿಯಲಾಗದು. ಮುನಿಪುಂಗವರೇ, ನೀವೆಲ್ಲರೂ ಬಂದ ದಾರಿಯನ್ನು ಅನುಸರಿಸಿರಿ.
ಭೀಷ್ಮಃ
ಏವಂ ಪ್ರಣಮ್ಯ ವಿಪ್ರೇಂದ್ರಾ ಜ್ಞಾನಸಾಗರಸಂಭವಮ್ |
ಸನತ್ಕುಮಾರಂ ಸಂದ್ರಷ್ಟಾ ಜಗ್ಮುಸ್ತೇ ರುಚಿರಂ ಪುನಃ ॥45॥
ಭೀಷ್ಮ ಆಗ ಮುನಿಗಳೆಲ್ಲರೂ ಜ್ಞಾನನಿಧಿಯಾದ ಸನತ್ಕುಮಾರರನ್ನು ನಮಸ್ಕರಿಸಿ ಮನಬಂದಲ್ಲಿ ಹೊರಟು ಹೋದರು.
ತಸ್ಮಾತ್ ತ್ವಮಪಿ ಕೌಂತೇಯ ಜ್ಞಾನಯೋಗಪರೋ ಭವ |
ಜ್ಞಾನಮೇವಂ ಮಹಾರಾಜ ಸರ್ವದುಃಖವಿನಾಶನಮ್ ॥46॥
ಆದ್ದರಿಂದ ಯುಧಿಷ್ಠಿರನೇ, ನೀನು ಆ ಭಗವಜ್ಜ್ಞಾನವನ್ನು ಪ್ರಧಾನವೆಂದು ತಿಳಿದು ಅವನನ್ನೇ ಅನುಸರಿಸು. ಆ ಭಗವಜ್ಜ್ಞಾನವೇ ನಿನ್ನ ಸಮಸ್ತ ದುಃಖಗಳನ್ನು ಪರಿಹರಿಸುತ್ತದೆ.
ಇದಂ ಮಹಾದುಃಖಸಮಾಕರಣಾಂ
ನೃಣಾಂ ಪರಿತ್ರಾಣವಿನಿರ್ಮಿತಂ ಪುರಾ |
ಪುರಾಣಪುಂಸಾ ಋಷಿಣಾ ಮಹಾತ್ಮನಾ
ಮಹಾಮುನೀನಾಂ ಪ್ರವರೇಣ ತದ್ಧ್ರುವಮ್ ॥47॥
ಇಂತಹ ಶ್ರೇಷ್ಠವಾದ ವಿಚಾರವನ್ನು ಪುರಾತನ ಮಹರ್ಷಿಯು ಸಮಸ್ತ ಜೀವರ ಮಹತ್ತಾದ ದುಃಖವನ್ನು ಪರಿಹರಿಸಲು, ಅವರನ್ನು ಉದ್ಧರಿಸಲು ಮುನಿಗಳಲ್ಲೇ ಶ್ರೇಷ್ಠರಾದ ಸನತ್ಕುಮಾರರಿಂದ ಶಾಶ್ವತವಾದ ವಿಚಾರವು ಹೇಳಲ್ಪಟ್ಟಿದೆ.
॥ ಇತಿ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಟ್‌ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೇಳನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ತಪಃಶಬ್ದಕ್ಕೆ ಅನೇಕ ಅರ್ಥವನ್ನು
ಹೇಳುವ ಮೂಲಕ ತಮ್ಮ ಮತದ ಪ್ರಕಾರ ತಪಃಶಬ್ದಕ್ಕೆ ಜ್ಞಾನವೆಂಬ
ಅರ್ಥವನ್ನು ಹೇಳಿದುದು. ಜ್ಞಾನವು ಮೋಕ್ಷಸಾಧನವೆಂದು ದೃಷ್ಟಾಂತವನ್ನು ತಿಳಿಸಲು ಸುವರ್ಚಲಾ ಚರಿತ್ರವನ್ನು ಪುನಃ ಹೇಳಿದುದು.
ಯುಧಿಷ್ಠಿರಃ
ಯದಿದಂ ತಪ ಇತ್ಯಾಹುಃ ಕಿಂ ತಪಃ ಸಂಪ್ರಕೀರ್ತಿತಮ್ |

ಉಪವಾಸಮಥಾನ್ಯತ್ ತು ವೇದಾಚಾರಮಥೋ ನು ಕಿಮ್ |
ಶಾಸ್ತ್ರಂ ತಪೋ ಮಹಾಪ್ರಾಜ್ಞ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ತಪಸ್ಸು ಎಂದು ಏನನ್ನು ಹೇಳುತ್ತಾರೋ ಆ ತಪಸ್ಸೆಂದರೆ ಏನು? ತಪಸ್ಸೆಂದರೆ ಉಪವಾಸವೇ ಅಥವಾ ವೇದಾಧ್ಯಯನವೇ ಅಥವಾ ಇದೆಲ್ಲಕ್ಕಿಂತಲೂ ವಿಲಕ್ಷಣವೇ? ಶಾಸ್ತ್ರವನ್ನೂ ತಪಸ್ಸೇ ಎಂದು ಹೇಳುತ್ತಾರೆ. ಪಿತಾಮಹನೇ, ಇದನ್ನು ವಿವರಿಸು.
ಭೀಷ್ಮಃ
ಪಕ್ಷಮಾಸೋಪವಾಸಾದೀನ್ ಮನ್ಯಂತೇ ವೈ ತಪೋಧನಾಃ |
ವೇದವ್ರತಾದೀನಿ ತಪ ಅಪರೇ ವೇದಪಾರಗಾಃ |
ವೇದಪಾರಾಯಣಂ ಚಾನ್ಯೇ ಚಾಹುಸ್ತತ್ತ್ವಮಥಾಪರೇ ॥2॥
ಭೀಷ್ಮ ಪಕ್ಷ, ಮಾಸಗಳಲ್ಲಿ ಆಚರಿಸುವ ಕೆಲವು ಉಪವಾಸಗಳನ್ನು ತಪೋಧನರು ತಪಸ್ಸು ಎನ್ನುತ್ತಾರೆ. ವೇದಾಧ್ಯಯನವನ್ನು ವೇದಪಾರಗರು ತಪಸ್ಸು ಎನ್ನುತ್ತಾರೆ. ಇನ್ನು ಕೆಲವರು ವೇದಪಾರಾಯಣವನ್ನೇ ತಪಸ್ಸು ಎನ್ನುತ್ತಾರೆ. ಇನ್ನು ಕೆಲವರು ಭಗವತತ್ತ್ವವನ್ನು ತಪಸ್ಸು ಎನ್ನುತ್ತಾರೆ.
ಯಥಾವಿಹಿತಮಾಚಾರಸ್ತಪಃ ಸರ್ವಂ ವ್ರತಂ ಗತಾಃ |
ಆತ್ಮವಿದ್ಯಾವಿಧಾನಂ ಯತ್ ತತ್ ತಪಃ ಪರಿಕೀರ್ತಿತಮ್ ॥3॥
ವಿಧಿಬದ್ಧವಾಗಿ ಆಚಾರದಲ್ಲಿ ರತರಾದವರು ಹಿಂದೆ ಹೇಳಿದ ಸಮಸ್ತ ವೇದಾಧ್ಯಯನಾದಿ ಅನುಷ್ಠಾನ ರೂಪವಾದ ತಪಸ್ಸನ್ನು ಆಚರಿಸಿದವರು ಭಗವತತ್ತ್ವದ ವಿಧಾನವನ್ನು ಯಾವುದರಿಂದ ಅರ್ಥಮಾಡಿಕೊಳ್ಳುತ್ತಾರೋ ನಿಜವಾಗಿಯೂ ಅದೇ ತಪಸ್ಸೆಂದು ಹೇಳಲ್ಪಟ್ಟಿದೆ.
ತ್ಯಾಗಸ್ತಪಸ್ತಥಾ ಶಾಂತಿಸ್ತಪ ಇಂದ್ರಿಯನಿಗ್ರಹಃ |
ಬ್ರಹ್ಮಚರ್ಯಂ ತಪಃ ಪ್ರೋಕ್ತಮಾಹುರೇವಂ ದ್ವಿಜಾತಯಃ ॥4॥
ಕೆಲವರು ತ್ಯಾಗವನ್ನು, ಕೆಲವರು ಶಾಂತಿಯನ್ನು, ಕೆಲವರು ಇಂದ್ರಿಯನಿಗ್ರಹವನ್ನು, ಬ್ರಾಹ್ಮಣರು ಬ್ರಹ್ಮಚರ್ಯವನ್ನು ತಪಸ್ಸು ಎಂದು ಹೇಳಿದ್ದಾರೆ.
ಸದೋಪವಾಸೋ ಯೋ ವಿದ್ವಾನ್ ಬ್ರಹ್ಮಚಾರೀ ಸದಾ ಭವೇತ್ ॥5॥
ಯಾವಾಗಲೂ ಭಗವಂತನನ್ನೇ ಧ್ಯಾನಿಸುವವನು ನಿತ್ಯೋಪವಾಸಿ ಎಂದೇ ಎನಿಸಿಕೊಳ್ಳುತ್ತಾನೆ.
ಯೋ ಮುನಿಶ್ಚ ಸದಾ ಧೀಮಾನ್ ವಿಘಸಾಶೀ ವಿಮತ್ಸರಃ |
ತತಸ್ತ್ವನಂತಮಪ್ಯಾಹುರ್ಯೋ ನಿತ್ಯಮತಿಥಿಪ್ರಿಯಃ ॥6॥
ಯಾವಾತನು ನಿಷಿದ್ಧ ಆಹಾರವನ್ನು ಸ್ವೀಕರಿಸದೆ ಮಾತ್ಸರ್ಯರಹಿತನಾಗಿ, ನಿತ್ಯವೂ ಅತಿಥಿಪ್ರಿಯನಾಗಿ ಇದ್ದಾನೋ ಅವನನ್ನೇ ಭಗವಂತನ ಭಕ್ತರೆನ್ನುತ್ತಾರೆ.
ನಾಂತರಾಶೀಸ್ತತೋ ನಿತ್ಯಮುಪವಾಸೀ ಮಹಾವ್ರತಃ |
ಋತುಗಾಮೀ ತಥಾ ಪ್ರೋಕ್ತೋ ವಿಘಸಾಶೀ ಸ್ಮೃತೋ ಬುಧೈಃ ॥7॥
ಮಧ್ಯಾಹ್ನ, ರಾತ್ರಿ ಭೋಜನಗಳ ನಡುವೆ ಯಾವನು ಯಾವ ಆಹಾರಗಳನ್ನು ಸ್ವೀಕರಿಸುವುದಿಲ್ಲವೋ ಅವನೇ ಉಪವಾಸವೆಂಬ ಮಹಾವ್ರತವನ್ನು ಆಚರಿಸಿದವನು. ಋತುಕಾಲದಲ್ಲಿ ಭಾರ್ಯೆಯ ಸಮಾಗಮವನ್ನು ಮಾಡುವವನು, ನಿಷಿದ್ಧವಾದ ಪದಾರ್ಥಗಳನ್ನು ಸ್ವೀಕರಿಸದವನು ಮಹಾವ್ರತನೆನಿಸಿದ್ದಾನೆ.
ಭೃತ್ಯಶೇಷಂ ತು ಯೋ ಭುಂಕ್ತೇ ಯಜ್ಞಶೇಷಂ ತಥಾಽಮೃತಮ್ |
ಏವಂ ನಾನಾರ್ಥಸಂಯೋಗಂ ತಪಃ ಶಶ್ವದುದಾಹೃತಮ್ ॥8॥
ಯಾವನು ಅತಿಥಿ-ಭೃತ್ಯರು ಉಂಡ ಬಳಿಕ ಭೋಜನ ಮಾಡುತ್ತಾನೋ ಯಜ್ಞಶೇಷವನ್ನು ಭುಂಜಿಸುತ್ತಾನೋ, ಈ ರೀತಿಯಾಗಿ ಅನೇಕ ವಿಧವಾಗಿ ತಪಸ್ಸಿನ ಅರ್ಥವನ್ನು ವರ್ಣಿಸುತ್ತಾರೆ.
ಯೇಽಪಿ ಕರ್ಮಮಯಂ ಪ್ರಾಹುಸ್ತೇ ದ್ವಿಜಾ ಬ್ರಾಹ್ಮಣಾಃ ಸ್ಮೃತಾಃ |
ರಮಂತೇ ದಿವ್ಯಭೋಗೈಶ್ಚ ಪೂಜಿತಾ ಹ್ಯಪ್ಸರೋಗಣೈಃ ॥9॥
ಯಾವ ಬ್ರಾಹ್ಮಣರು ನಿತ್ಯ-ನೈಮಿತ್ತಿಕ ಕರ್ಮಗಳನ್ನು ಆಚರಿಸುತ್ತಾ ಸತ್ಯವ್ರತರಾಗಿರುತ್ತಾರೋ ಅವರಿಗೆ ಕೊನೆಯಿಲ್ಲದ ಲೋಕಗಳು ದೊರೆಯುತ್ತವೆ. ಅವರೇ ನಿಜವಾದ ಬ್ರಾಹ್ಮಣರೆಂದು ಕರೆಸಿಕೊಳ್ಳುತ್ತಾರೆ. ಅವರು ಅಪ್ಸರೋಗಣಗಳಿಂದ ಪೂಜಿತರಾಗಿ ದಿವ್ಯಭೋಗಗಳಿಂದ ರಮಣ ಮಾಡುತ್ತಾರೆ.
ಜ್ಞಾನಾತ್ಮಕಂ ತಪಶ್ಶಬ್ದಂ ಯೇ ವದಂತಿ ವಿನಿಶ್ಚಿತಾಃ |
ತೇ ಹ್ಯಂತರಾಽಽತ್ಮಸದ್ಭಾವಂ ಪ್ರಪನ್ನಾ ನೃಪಸತ್ತಮ ॥10॥
ಜ್ಞಾನಿಗಳಾದವರು ಪರಮಾತ್ಮನ ಜ್ಞಾನವನ್ನು ತಪಸ್ಸು ಎನ್ನುತ್ತಾರೆ. ಪರಮಾತ್ಮನು ಅಂತರ್ಯಾಮಿಯಾಗಿ ನಿಯಾಮಕನಾಗಿದ್ದಾನೆ ಎಂದು ಅವನಲ್ಲಿ ಮಾಡುವ ಸದ್ಭಕ್ತಿಯು ತಪಸ್ಸು ಎನಿಸಿದೆ.
ಏತತ್ತೇ ನೃಪಶಾರ್ದೂಲ ಪ್ರೋಕ್ತಂ ಯತ್ ಪೃಷ್ಟವಾನಸಿ |
ಯಥಾವಸ್ಥೂನಿ ಸಂಜ್ಞಾನಿ ವಿವಿಧಾನಿ ಭವಂತ್ಯುತ ॥11॥
ರಾಜಶ್ರೇಷ್ಠನೇ, ಯಾವ ತಪಸ್ಸಿನ ಬಗ್ಗೆ ನೀನು ಪ್ರಶ್ನಿಸಿದೆಯೋ, ಯಾವ ತಪಸ್ಸು ವಿಧವಿಧವಾಗಿ ಅನೇಕ ಸಂಜ್ಞೆಗಳನ್ನು ಹೊಂದಿದೆಯೋ ಅದೆಲ್ಲವನ್ನೂ ನಿನಗೆ ಹೇಳಿರುತ್ತೇನೆ.
ಯುಧಿಷ್ಠಿರಃ

ಪಿತಾಮಹ ಮಹಾಪ್ರಾಜ್ಞ ರಾಜಾಧೀನಾ ನೃಪಾಃ ಪುನಃ |
ಅನ್ಯಾನಿ ಚ ಸಹಸ್ರಾಣಿ ನಾಮಾನಿ ವಿವಿಧಾನಿ ಚ ॥12॥
ಯುಧಿಷ್ಠಿರ ಪಿತಾಮಹನೇ, ಮಹಾಪ್ರಾಜ್ಞನೇ, ರಾಜನ ಅಧೀನರಾದ ರಾಜರೆಲ್ಲರೂ ಸಾವಿರಾರು ಬೇರೆ ಬೇರೆ ನಾಮಗಳನ್ನು ಹೊಂದಿರುತ್ತಾರೆ.
ಪ್ರತಿಯೋಗೀನಿ ವೈ ತೇಷಾಂ ಛನ್ನಾನ್ಯಸ್ತಮಿತಾನಿ ಚ |
ದೃಢಂ ಸರ್ವಂ ಪ್ರಾಕೃತಕಮಿದಂ ಸರ್ವತ್ರ ಪಶ್ಯ ವೈ ॥13॥
ನಿಗೂಢವಾದ, ಗುಹ್ಯಭಾಷೆಯಲ್ಲಿ ಹೇಳಿದ, ಮಹಾತ್ಮರು ಮೊದಲಾದ ನಾಮಗಳು ಬಾಲಕ, ಯುವಕ, ಸ್ಥವಿರ (ವೃದ್ಧ) ಮೊದಲಾದ ನಾಮಗಳು ಮುಂದಿನ ಮುಂದಿನ ಅವಸ್ಥೆಗಳು ದೊರೆತಾಗ ಹಿಂದಿನ ನಾಮಗಳು ಅಸ್ತಮಿತವಾಗುತ್ತವೆ. ಆದ್ದರಿಂದ ಸಾವಿರಾರು ನಾಮಗಳಿಂದ ಬದಲಾವಣೆಯನ್ನು ಹೊಂದುತ್ತಿರುವ ಈ ಜಗತ್ತನ್ನು ಕಂಡಾಗ ಎಲ್ಲವೂ ಪ್ರಾಕೃತ ಎಂದೇ ಅನಿಸುತ್ತಿದೆ. ನೀನೂ ಇದನ್ನು ಎಲ್ಲರಂತೆ ನೋಡಬಹುದು.
ತಸ್ಮಾದ್ ಯಥಾಗತಂ ರಾಜನ್ ಯಥಾರುಚಿ ನೃಣಾಂ ಭವೇತ್ |
ಅಸ್ಮಿನ್ನರ್ಥೇ ಪುರಾವೃತ್ತಂ ಶೃಣು ರಾಜನ್ ಯುಧಿಷ್ಠಿರ ॥14॥
ಹೀಗೆ ಹೇಳಿದಾಗ ಭೀಷ್ಮರು ಹೇಳುತ್ತಾರೆ- ರಾಜನೇ, ಈ ಜಗತ್ತು ಹೇಗೆ ಬಂದಿದೆ ಎನ್ನುವುದರ ವಿಷಯದಲ್ಲಿ ಹಿಂದೆ ನಡೆದ ಒಂದು ಸಮಾಚಾರವನ್ನು ಹೇಳುತ್ತೇನೆ, ಕೇಳಿಸಿಕೊ.
ಬ್ರಾಹ್ಮಣಾನಾಂ ಸಮೂಹೇ ತು ಯದುವಾಚ ಸುವರ್ಚಲಾ |
ದೇವಲಸ್ಯ ಸುತಾ ವಿದ್ವನ್ ಸರ್ವಲಕ್ಷಣಶೋಭಿತಾ ॥15॥
ಸರ್ವಲಕ್ಷಣ ಸಂಪನ್ನೆಯಾದ, ದೇವಲಋಷಿಗಳ ಮಗಳಾದ ಸುವರ್ಚಲೆಯು ಬ್ರಾಹ್ಮಣರ ಸಮೂಹದಲ್ಲಿ ಏನನ್ನು ಹೇಳಿದ್ದಾಳೋ ಅದನ್ನು ನಿನಗೆ ತಿಳಿಸುತ್ತೇನೆ.
ಕನ್ಯಾ ಸುವರ್ಚಲಾ ನಾಮ ಯೋಗಭಾವಿತಚೇತನಾ |
ಹೇತುನಾ ಕೇನ ಜಾತಾ ಸಾ ನಿರ್ದ್ವಂದ್ವಾ ನಷ್ಟಸಂಶಯಾ ॥16॥
ಸುವರ್ಚಲಾ ಎಂಬ ಕನ್ಯೆಯು ಯೋಗದಲ್ಲೇ ನಿಷ್ಠಳಾದ ಮನಸ್ಸಿನಿಂದ ಕೂಡಿದವಳಾಗಿ, ಯಾವ ಕಾರಣದಿಂದ ಅವಳಲ್ಲಿರುವ ದ್ವಂದ್ವಗಳನ್ನು, ಸಂಶಯಗಳನ್ನು ಪರಿಹರಿಸಿಕೊಂಡಳು ಎಂಬುದನ್ನು ಹೇಳುತ್ತೇನೆ.
ಸಾಽಬ್ರುವೀತ್ ಪಿತರಂ ವಿಪ್ರಂ ವರಾನ್ವೇಷಣತತ್ಪರಾ ॥17॥
ಸುವರ್ಚಲೆಯು ತಂದೆಯು ತನಗೆ ವರನನ್ನು ಅನ್ವೇಷಣೆ ಮಾಡುವುದರಲ್ಲಿ ತತ್ಪರನಾಗಿರುವುದನ್ನು ಕಂಡು ಅವನನ್ನು ಕುರಿತು ಹೀಗೆ ಹೇಳಿದಳು.
ಅಂಧಾಯ ಮಾಂ ಮಹಾಪ್ರಾಜ್ಞ ದೇಹಿ ವೀಕ್ಷ್ಯ ಸುಲೋಚನಮ್ |
ಏವಂ ಸ್ಮ ಚ ಪಿತಃ ಶಶ್ವನ್ಮಯೇದಂ ಪ್ರಾರ್ಥಿತಂ ಮುನೇ ॥18॥
ಮಹಾಪ್ರಾಜ್ಞನಾದ ತಂದೆಯೇ, ಕಣ್ಣುಗಳಿರುವ ಅಂಧನಿಗೆ ನೀನು ನೀಡು ಎಂದು ಸುವರ್ಚಲೆಯು ತಂದೆಯ ಬಳಿ ತನ್ನ ಪ್ರಾರ್ಥನೆಯನ್ನು ಮುಂದಿಟ್ಟಳು.
ಪಿತಾ
ನ ಶಕ್ಯಂ ಪ್ರಾರ್ಥಿತುಂ ವತ್ಸೇ ತ್ವಯಾಽದ್ಯ ಪ್ರತಿಭಾತಿ ಮೇ |
ಅಂಧತಾಽನಂಧತಾ ಚೇತಿ ವಿಚಾರೋ ಮಮ ಜಾಯತೇ |
ಉನ್ಮತ್ತೇವ ಸುತೇ ವಾಕ್ಯಂ ಭಾಷಸೇ ಪೃಥುಲೋಚನೇ ॥19॥
ಪಿತಾ ಮಗಳೇ, ಈ ರೀತಿಯಾಗಿ ನೀನು ಪ್ರಾರ್ಥಿಸುವುದು ತರವಲ್ಲ ಎಂದು ನನಗೆ ತೋರುತ್ತಿದೆ. ನಿನ್ನ ಪತಿಯು ಅಂಧನಾಗಿರಬೇಕು, ಅನಂಧನೂ ಆಗಿರಬೇಕು ಎಂಬ ನಿನ್ನ ಮಾತನ್ನು ಕೇಳುತ್ತಾ, ಹುಚ್ಚು ಹಿಡಿದವರಂತೆ ಮಾತನ್ನು ಹೇಳುತ್ತಿರುವಿ ಎಂದೆನಿಸುತ್ತಿದೆ.
ಕನ್ಯಾ
ನಾಹಮುನ್ಮತ್ತಭೂತಾಽದ್ಯ ಬುದ್ಧಿಪೂರ್ವಂ ಬ್ರವೀಮಿ ತೇ |
ವಿದ್ಧಿ ವೈ ತಾದೃಶಂ ಲೋಕೇ ಸ ಮಾಂ ಭಜತಿ ವೇದವಿತ್ ॥20॥
ಕನ್ಯಾ ತಂದೆಯೇ, ನಾನು ಹುಚ್ಚು ಹಿಡಿದು ಈ ಮಾತನ್ನಾಡುತ್ತಿಲ್ಲ. ಬುದ್ಧಿ ಪೂರ್ವಕವಾಗಿ ಹೇಳುತ್ತಿದ್ದೇನೆ. ಈ ರೀತಿಯಾದ ಪುರುಷನೇ ವೇದಜ್ಞನಾಗಿರುತ್ತಾನೆ. ಅಂತಹ ಅಂಧನು, ಅನಂಧನೂ ಆದ ವ್ಯಕ್ತಿಯೇ ನನ್ನನ್ನು ಹೊಂದಲು ಅರ್ಹನಾಗಿರುತ್ತಾನೆ.
ಯಾನ್ಯಾಂಸ್ತ್ವಂ ಮನ್ಯಸೇ ದಾತುಂ ಮಾಂ ದ್ವಿಜೋತ್ತಮ ತಾನಿಹ |
ಆನಯಾನ್ಯಾನ್ ಮಹಾಭಾಗ ಹ್ಯಹಂ ದ್ರಕ್ಷ್ಯಾಮಿ ತೇಷು ತಮ್ ॥21॥
ನೀನು ಯಾವ ಪುರುಷರಿಗೆ ನನ್ನನ್ನು ಕೊಡಲು ಇಚ್ಛಿಸುತ್ತೀಯೋ ಅವನನ್ನು ನಮ್ಮ ಆಶ್ರಮಕ್ಕೆ ಬರಹೇಳು. ಅವನು ನನ್ನನ್ನು ವರಿಸಲು ಯೋಗ್ಯನಾಗಿದ್ದಾನೋ ಎಂಬುದನ್ನು ನಾನೇ ತಿಳಿದುಕೊಳ್ಳುತ್ತೇನೆ.
ತಥೇತಿ ಚೋಕ್ತ್ವಾ ತಾಂ ವಿಪ್ರಃ ಪ್ರೇಷಯಾಮಾಸ ಶಿಷ್ಯಕಾನ್ |
ಋಷೇಃ ಪ್ರಭಾವಂ ದೃಷ್ಟ್ವಾ ತೇ ಕನ್ಯಾಯಾಶ್ಚ ದ್ವಿಜೋತ್ತಮಾಃ ॥22॥
ದೇವಲನು ಮಗಳ ಮಾತಿನಂತೆ ಹಾಗೇ ಆಗಲೆಂದು ಹೇಳಿ, ಶಿಷ್ಯರನ್ನೆಲ್ಲ ವರಗಳನ್ನು ಕರೆದು ತರಲು ಕಳುಹಿಸಿಕೊಟ್ಟರು. ದೇವಲರ ಪ್ರಭಾವವನ್ನೂ, ಕನ್ಯೆಯ ಪ್ರಭಾವವನ್ನೂ ಕೇಳಿ ತಿಳಿದ ಅನೇಕ ದ್ವಿಜೋತ್ತಮರು ಬಹುಸಂಖ್ಯೆಯಿಂದ ದೇವಲರ ಆಶ್ರಮಕ್ಕೆ ಆಗಮಿಸಿದರು.
ತಾನಾಗತಾನಥಾಭ್ಯರ್ಚ್ಯ ಕನ್ಯಾಮಾಹ ಪಿತಾ ಮಹಾನ್ |

ಯದೀಚ್ಛಸಿ ವರಂ ಭದ್ರೇ ತಂ ವಿಪ್ರಂ ವರಯ ಸ್ವಯಮ್ ॥23॥
ಆ ಆಗಮಿಸಿದ ಋಷಿಕುಮಾರರನ್ನೆಲ್ಲ ಆರಾಧಿಸಿದ ದೇವಲರು ತನ್ನ ಮಗಳನ್ನು ಕುರಿತು ಹೇಳಿದರು- ಮಗಳೇ, ನಿನಗೆ ಯೋಗ್ಯನಾದ ವರನು ಇಲ್ಲಿದ್ದರೆ ಅವನನ್ನು ನಿನ್ನ ಪತಿಯನ್ನಾಗಿ ಸ್ವೀಕರಿಸು.
ತಥೇತಿ ಚೋಕತತ್ವ ಕಲ್ಯಾಣೀ ತಪ್ತಹೇಮನಿಭಾನನಾ |
ಕರಸಮ್ಮಿತಮಧ್ಯಾಂಗೀ ವಾಕ್ಯಮಾಹ ತಪೋಧನಾನ್ ॥24॥
ಪುಟಕ್ಕಿಟ್ಟ ಬಂಗಾರದಂತೆ ಶೋಭೆಯುಳ್ಳ ಕಲ್ಯಾಣಿ ಸುವರ್ಚಲೆಯು ಹಾಗೆ ಆಗಲೆಂದು ಹೇಳುತ್ತಾ, ಮುಷ್ಟಿಯಲ್ಲಿ ಹಿಡಿಯಬಹುದಾದ ನಡುದೇಹವುಳ್ಳ ಸುವರ್ಚಲೆಯು (ಸುಂದರಿಯಾದ) ತಪೋಧನರನ್ನು ಕುರಿತು ಹೇಳಿದಳು.
ಯದ್ಯಸ್ತಿ ಸಮ್ಮತೋ ವಿಪ್ರೋ ಹ್ಯಂಧೋಽನಂಧಃ ಸ ಮೇ ವರಃ |
ನೋಚುರ್ವಿಪ್ರಾ ಮಹಾಭಾಗಾಂ ಪ್ರತಿವಾಕ್ಯಂ ಯಯುಶ್ಚ ತೇ ॥25॥
ತಪೋಧನರೇ, ನಿಮ್ಮಲ್ಲಿ ಅಂಧರು, ಅನಂಧರೂ ಆದ ವ್ಯಕ್ತಿಗಳು ಯಾರಾದರೂ ಇದ್ದಲ್ಲಿ ಅವರು ನನ್ನನ್ನು ವರಿಸಲು ಅರ್ಹರಾಗುತ್ತಾರೆ ಎಂದು ಹೇಳಿದಾಗ ಮಹಾಭಾಗಳಾದ ಸುವರ್ಚಲೆಗೆ ಋಷಿಕುಮಾರರು ಏನನ್ನೂ ಉತ್ತರಿಸದೆ, ಬಂದ ದಾರಿಯನ್ನು ಅನುಸರಿಸಿದರು.
ಕನ್ಯಾ ಚ ತಿಷ್ಠತಾಮತ್ರ ಪಿತುರ್ವೇಶ್ಮನಿ ಭಾರತ ॥26॥
ಭಾರತನೇ, ಕನ್ಯೆಯಾದರೂ ಬಹಳ ಕಾಲ ತಂದೆಯ ಮನೆಯಲ್ಲಿಯೇ ವಾಸ ಮಾಡುತ್ತಿದ್ದಳು.
ಶ್ವೇತಕೇತುಃ ಕಹೋಲಸ್ಯ ಶ್ಯಾಲಃ ಪರಮಧರ್ಮವಿತ್ |
ಶ್ರುತ್ವಾ ಬ್ರಹ್ಮಾ ತದಾಗಮ್ಯ ಕನ್ಯಾಮಾಹ ಮಹೀಪತೇ ॥27॥
ಈ ಪ್ರಸಂಗದಲ್ಲಿ ಕಹೋಲನ ಅಳಿಯನಾದ, ಪರಮಧರ್ಮಜ್ಞನಾದ ಶ್ವೇತಕೇತುವು ಈ ವಾರ್ತೆಯನ್ನು ಕೇಳಿಸಿಕೊಂಡು, ದೇವಲರ ಮನೆಗೆ ಆಗಮಿಸಿ ಕನ್ಯೆಯನ್ನು ಕುರಿತು ಹೀಗೆ ಹೇಳಿದನು.
ಸೋಹಂ ಭದ್ರೇ ಸಮಾವೃತ್ತಸ್ತ್ವಯೋಕ್ತೋ ಯಃ ಪುರಾ ದ್ವಿಜಃ |
ವಿಶಾಲನಯನಂ ವಿದ್ಧಿ ಮಾಮಂಧೋಽಹಂ ವೃಣೀಷ್ವ ಮಾಮ್ ॥28॥
ಪರಮಮಂಗಳೆಯೇ, ನಾನು ಶ್ವೇತಕೇತುವು. ಹಿಂದೆ ನೀನು ಅಂಧರು, ಅನಂಧರನ್ನು ಸ್ವೀಕರಿಸುತ್ತೇನೆಂದು ತಿಳಿಸಿರುವಿಯಷ್ಟೆ! ನಾನು ವಿಶಾಲನಯನನೂ ಆಗಿದ್ದೇನೆ, ಅಂಧನೂ ಆಗಿದ್ದೇನೆ. ನನ್ನನ್ನು ಸ್ವೀಕರಿಸು ಎಂದನು.
ಸುವರ್ಚಲಾ
ಕಥಂ ವಿಶಾಲನೇತ್ರೋಽಸಿ ಕಥಂ ವಾ ತ್ವಮಲೋಚನಃ |
ಬ್ರೂಹಿ ಪಶ್ಚಾದಹಂ ವಿದ್ವನ್ ಪರೀಕ್ಷೇ ತ್ವಾಂ ದ್ವಿಜೋತ್ತಮ ॥29॥
ಸುವರ್ಚಲೆ ಶ್ವೇತಕೇತುವೇ, ನೀನು ವಿಶಾಲನೇತ್ರನೂ ಅಂಧನೂ ಹೇಗೆ ಆಗಿರುತ್ತಿ ಎಂಬುದನ್ನು ಮೊದಲು ತಿಳಿಸು. ನಿನ್ನನ್ನು ಪರೀಕ್ಷೆ ಮಾಡಿದ ಬಳಿಕ ನಾನು ಸ್ವೀಕರಿಸುತ್ತೇನೆ.
ದ್ವಿಜಃ
ಶಬ್ದೇ ಸ್ಪರ್ಶೇ ತಥಾ ರೂಪೇ ರಸೇ ಗಂಧೇ ಸಹೇತುಕಮ್ |
ನ ಮೇ ಪ್ರವರ್ತತೇ ಚೇತೋ ನ ಪ್ರತ್ಯಕ್ಷಂ ಹಿ ತೇಷು ಮೇ |
ಅಲೋಚನೋಽಹಂ ತಸ್ಮಾದ್ಧಿ ನ ಗತಿರ್ವಿದ್ಯತೇ ಯತಃ ॥30॥
ದ್ವಿಜ ನನ್ನ ಮನಸ್ಸು ಶಬ್ದ-ಸ್ಪರ್ಶ-ರೂಪ-ಗಂಧಗಳಲ್ಲಿ ಬುದ್ಧಿಪೂರ್ವಕವಾಗಿ ಚಲಿಸುವುದಿಲ್ಲ. ಆದ್ದರಿಂದ ಕಣ್ಣಿಗೆ ಪದಾರ್ಥಗಳು ಕಾಣಿಸುತ್ತಿದ್ದರೂ ನನ್ನ ಮನಸ್ಸಿನ ಪ್ರವೃತ್ತಿ ಅವುಗಳಲ್ಲಿ ಇಲ್ಲದಿರುವುದರಿಂದ ನಾನು ಕಣ್ಣಿದ್ದು ವಿಷಯ ಪದಾರ್ಥಗಳಲ್ಲಿ ಕುರುಡಾಗಿದ್ದೇನೆ. ನನಗೆ ಆ ವಿಷಯಗಳಲ್ಲಿ ಆಸಕ್ತಿ ಇರುವುದಿಲ್ಲ.
ಯೇನ ಪಶ್ಯತಿ ಸುಶ್ರೋಣಿ ಭಾಷತೇ ಸ್ಪೃಶತೇ ಪುನಃ |
ಭುಜ್ಯತೇ ಘ್ರಾಯತೇ ನಿತ್ಯಂ ಶೃಣೋತಿ ಮನುತೇ ಯಥಾ ॥31॥
ತಚ್ಚಕ್ಷುರ್ವಿದ್ಯತೇ ಮಹ್ಯಂ ಯೇನ ಪಶ್ಯತಿ ವೈ ಸ್ಫುಟಮ್ |
ಸುಲೋಚನೋಽಹಂ ಭದ್ರೇ ವೈ ಪೃಚ್ಛ ವಾ ಕಿಂ ವದಾಮಿ ತೇ |
ಸರ್ವಮಸ್ಮಿನ್ನ ಮೇಽವಿದ್ಯಾ ವಿದ್ವಾನ್ ಹಿ ಪರಮಾರ್ಥತಃ ॥32॥
ನಾನು ನೋಡುವ ಪದಾರ್ಥಗಳನ್ನೆಲ್ಲ ಯಾವ ಭಗವಂತನ ಅನುಗ್ರಹದಿಂದ ನೋಡುತ್ತೇನೋ, ಮುಟ್ಟುತ್ತೇನೋ, ತಿನ್ನುತ್ತೇನೋ, ಆಘ್ರಾಣಿಸುತ್ತೇನೋ, ಕೇಳುತ್ತೇನೋ, ಮನನ ಮಾಡುತ್ತೇನೋ ಅಂತಹ ಭಗವಂತನನ್ನು ನೋಡಲು ನಾನು ಅಶಕ್ತನಾಗಿದ್ದೇನೆ. ಅವನು ನನ್ನನ್ನು ನೋಡುತ್ತಿದ್ದಾನೆ. ಆದ್ದರಿಂದ ಆ ಭಗವಂತನ ವಿಷಯದಲ್ಲಿ ನಾನು ಅಂಧನೇ ಆಗಿದ್ದೇನೆ. ಜಗತ್ತಿನ ವಿಷಯದಲ್ಲಿ ನನಗೆ ದೃಷ್ಟಿ ಇಲ್ಲ. ಹಿಂದೆ ಭಗವಂತನನ್ನು ನೋಡಲು ನಾನು ಅಂಧನಾಗಿದ್ದೆ. ಜಗತ್ತನ್ನು ಚೆನ್ನಾಗಿ ನೋಡುತ್ತಿದ್ದೆ. ತತ್ತ್ವಜ್ಞಾನವನ್ನು ತಂದೆಯಿಂದ ಪಡೆದ ಬಳಿಕ ಜಗತ್ತಿನ ವಿಷಯದಲ್ಲಿ ಅಂಧನಾಗಿದ್ದೇನೆ, ಭಗವಂತನ ವಿಷಯದಲ್ಲಿ ನಾನು ಕಣ್ಣುಳ್ಳವನಾಗಿದ್ದೇನೆ. ಆದ್ದರಿಂದ ಅಂಧತ್ವ, ಅನಂಧತ್ವಗಳ ವಿಭಾಗವನ್ನು ನಾನು ತಿಳಿದಿದ್ದೇನೆ. ಪರಮಾತ್ಮನ ವಿಷಯದಲ್ಲಿ ಜಗತ್ತೆಲ್ಲವೂ ನೆಲೆಗೊಂಡಿದೆ. ಇದನ್ನು ಅರ್ಥೈಸಿಕೊಂಡ ನನಗೆ `ಅಹಂ ಮಮತಾದಿ ರೂಪ' ಅಹಂಕಾರ-ಮಮಕಾರಗಳು ಇರುವುದಿಲ್ಲ. ನಾನು ಎಲ್ಲವನ್ನೂ ಸರಿಯಾಗಿ ಭಗವಂತನ ವಿಷಯದಲ್ಲಿ ಅರ್ಥಮಾಡಿಕೊಂಡಿದ್ದೇನೆ. ನಿನಗೆ ಮತ್ತೂ ಏನನ್ನು ಹೇಳಲಿ? ತಿಳಿಸು.
ವ್ಯಾಖ್ಯಾನ ವಿಶೇಷ ಈ ಅಧ್ಯಾಯದ ವಿಚಾರಗಳು 53ನೇ ಅಧ್ಯಾಯದಲ್ಲಿ 7ನೇ ಶ್ಲೋಕದಿಂದ ಹೇಳಲ್ಪಟ್ಟಿವೆ. ಹೀಗಿದ್ದರೂ ಭಗವತ್ಪ್ರಜ್ಞೆಯ ಚಕ್ಷುಸ್ಸು ತುಂಬಾ ಮುಖ್ಯವಾದುದು ಎಂದು ತಿಳಿಸಲು ಪುನಃ ಈ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ಭೀಷ್ಮರು ಹೇಳಿದ್ದಾರೆ ಎಂದು ಭಾವಿಸಬೇಕು. ಕೆಲವು ಮಾತೃಕೆಗಳಲ್ಲಿ ಈ ಅಧ್ಯಾಯವು ಇರುವುದಿಲ್ಲ. ಆದರೆ ಇದು ಪ್ರಧಾನವಾದ ತತ್ತ್ವ ಎಂದು

ತಿಳಿಸಲು ವ್ಯಾಸರು ಇದನ್ನು ಆವೃತ್ತಿ ಮಾಡಿದ್ದಾರೆ ಎಂಬುದಾಗಿ ಲಕ್ಷಾಲಂಕಾರದಲ್ಲಿ ವಾದಿರಾಜ ಗುರುಸಾರ್ವಭೌಮರು ತಿಳಿಸಿರುತ್ತಾರೆ. ಆದ್ದರಿಂದ ಈ ಅಧ್ಯಾಯವನ್ನು ಪ್ರಕ್ಷಿಪ್ತವೆಂದು ಭಾವಿಸಬಾರದು.

ಸಾ ವಿಶುದ್ಧಾ ತತೋ ಭೂತ್ವಾ ಶ್ವೇತಕೇತುಂ ಮಹಾಮುನಿಮ್ |
ಪ್ರಣಮ್ಯ ಪೂಜಯಾಮಾಸ ತಾಂ ಭಾರ್ಯಾಂ ಸ ಚ ಲಬ್ಧವಾನ್ ||33||

ಸುವರ್ಚಲೆಯು ಶ್ವೇತಕೇತುವಿನ ಅಭಿಪ್ರಾಯವನ್ನು ತಿಳಿದು, ತುಂಬಾ ಸಂತುಷ್ಟಳಾಗಿ ಮಹಾಮುನಿಯನ್ನು ನಮಸ್ಕರಿಸಿ ಪೂಜಿಸಿದಳು. ಪತಿಯನ್ನಾಗಿ ವರಿಸುವ ಸಂಕಲ್ಪವನ್ನು ಮಾಡಿದಳು. ಶ್ವೇತಕೇತುವಾದರೂ ಅವಳನ್ನು ಭಾರ್ಯೆಯನ್ನಾಗಿ ಸ್ವೀಕರಿಸಿದನು.

ವೈರಾಗ್ಯಸಂಯುತಾ ಕನ್ಯಾ ತಾದೃಶಂ ಪತಿಮುತ್ತಮಮ್ |
ಪ್ರಾಪ್ತಾ ರಾಜನ್ ಮಹಾಪ್ರಾಜ್ಞ ತಸ್ಮಾದರ್ಥಃ ಪೃಥಕ್ಪೃಥಕ್ ||34||

ವೈರಾಗ್ಯಸಂಯುತಳಾದ ಕನ್ಯೆಯು ಶ್ವೇತಕೇತುವಿನಂಥ ಉತ್ತಮ ಪತಿಯನ್ನು ಸ್ವೀಕರಿಸಿದಳು. ಆದ್ದರಿಂದ ಒಂದೊಂದು ಶಬ್ದಕ್ಕೂ ಬೇರೆ ಬೇರೆಯಾದ ಅರ್ಥವಿರುತ್ತದೆ ಎನ್ನಲು ಇವಳ ಮಾತೇ ದೃಷ್ಟಾಂತವಾಗಿದೆ.

ಏತತ್ ತೇ ಕಥಿತಂ ರಾಜನ್ ಕಿಂ ಭೂಯಃ ಶ್ರೋತುಮಿಚ್ಛಸಿ ||35||

ಈ ರೀತಿಯಾಗಿ ನಿನ್ನ ಪ್ರಶ್ನೆಗೆ ಅನುಗುಣವಾಗಿ ಉತ್ತರಿಸಿದ್ದೇನೆ. ಧರ್ಮರಾಜನೇ, ಪುನಃ ಏನನ್ನು ಕೇಳಲು ಬಯಸುತ್ತಿ?

|| ಇತಿ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಪಂಚಾಶೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು

* * * * *

ಐವತ್ತೆಂಟನೆಯ ಅಧ್ಯಾಯ

ಭೀಷ್ಮರು ಯುಧಿಷ್ಠಿರನನ್ನು ಕುರಿತು ಜ್ಞಾನವೇ ಮೋಕ್ಷಸಾಧನವೆಂದು ತಿಳಿಸಲು ಇಂದ್ರ-ಪ್ರಹ್ಲಾದರ ಸಂವಾದವನ್ನು ನಿರೂಪಿಸಿದುದು.

ಯುಧಿಷ್ಠಿರಃ

ಯದಿದಂ ಕರ್ಮ ಲೋಕೇಽಸ್ಮಿನ್ ಶುಭಂ ವಾ ಯದಿ ವಾಽಶುಭಮ್ |
ಪುರುಷಂ ಯೋಜಯತ್ಯೇವ ಫಲಯೋಗೇನ ಭಾರತ ||1||
ಕರ್ತಾ ಸ್ವಿತ್ ತಸ್ಯ ಪುರುಷ ಉತಾಹೋ ನೇತಿ ಸಂಶಯಃ |
ಏತದಿಚ್ಛಾಮಿ ತತ್ತ್ವೇನ ತ್ವತ್ತಃ ಶ್ರೋತುಂ ಪಿತಾಮಹ ||2||

ಯುಧಿಷ್ಠಿರ ಪಿತಾಮಹನೇ, ಲೋಕದಲ್ಲಿ ಶುಭಾಶುಭ ಕರ್ಮಗಳು ಪುರುಷನನ್ನು ಸುಖ-ದುಃಖಗಳಲ್ಲಿ ಬಂಧಿಸುತ್ತವೆ. ಆದರೆ ಈ ಶುಭಾಶುಭ ಕರ್ಮಗಳಿಗೆ ಪುರುಷನು ಕರ್ತೃವಾಗಿದ್ದಾನೋ ಇಲ್ಲವೋ ಎಂಬ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಇದನ್ನು ಯಥಾರ್ಥವಾಗಿ ನಿನ್ನಿಂದ ತಿಳಿಯಲು ಬಯಸುತ್ತೇನೆ.

ಭೀಷ್ಮಃ

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪ್ರಹ್ಲಾದಸ್ಯ ಚ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ||3||

ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಪ್ರಹ್ಲಾದನಿಗೂ ಮತ್ತು ಇಂದ್ರನಿಗೂ ನಡೆದ ಪುರಾತನವಾದ, ಇತಿಹಾಸರೂಪವಾದ ಸಂವಾದವನ್ನು ಉದಾಹರಿಸುತ್ತಾರೆ. ಅದನ್ನು ನಿನಗೂ ತಿಳಿಸುತ್ತೇನೆ, ಕೇಳು.

ಅಸಕ್ತಂ ಧೂತಪಾಪ್ಮಾನಂ ಕುಲೇ ಜಾತಂ ಬಹುಶ್ರುತಮ್ |
ಅಸ್ತಂಭಮನಹಂಕಾರಂ ಸತ್ತ್ವಸ್ಥಂ ಸಮಯೇ ರತಮ್ ||4||

ಒಂದು ಕಾಲದಲ್ಲಿ ಪಾಪಗಳನ್ನು ಪರಿಹರಿಸಿಕೊಂಡವನು, ಯಾವ ವಿಷಯದಲ್ಲಿಯೂ ಸಂಗ ಇಲ್ಲದವನು, ಸತ್ಕುಲಪ್ರಸೂತನೂ, ಬಹುಶ್ರುತನೂ, ಅಹಂಕಾರ-ಮಮಕಾರಗಳಿಂದ ರಹಿತನಾದವನು, ಧರ್ಮದ ಮರ್ಯಾದೆಯನ್ನು ರಕ್ಷಿಸುವವನು, ಸತ್ತ್ವಗುಣದಲ್ಲಿಯೇ ಆಸಕ್ತನಾದವನು,

ತುಲ್ಯನಿಂದಾಸ್ತುತಿಂ ದಾಂತಂ ಶೂನ್ಯಾಗಾರನಿವೇಶನಮ್ |
ಚರಾಚರಾಣಾಂ ಭೂತಾನಾಂ ವಿದಿತಪ್ರಭವಾಪ್ಯಯಮ್ ||5||

ಸ್ತುತಿ-ನಿಂದೆಗಳನ್ನು ಸಮಾನವಾಗಿ ಕಾಣುವವನು, ಇಂದ್ರಿಯನಿಗ್ರಹವನ್ನು ಹೊಂದಿದವನು, ಏಕಾಂತದಲ್ಲಿ ವಾಸ ಮಾಡುವವನು, ಸಮಸ್ತ ಜೀವರ ಸೃಷ್ಟಿ-ಲಯಗಳನ್ನು ಅರಿತವನು,

ಅಕ್ರುದ್ಧ್ಯಂತಮಹೃಷ್ಯಂತಮಪ್ರಿಯೇಷು ಪ್ರಿಯೇಷು ಚ |
ಕಾಂಚನೇ ವಾಥ ಲೋಷ್ಟೇ ವಾ ಉಭಯೋಃ ಸಮದರ್ಶನಮ್ ||6||

ಅಪ್ರಿಯವಾದುದರಲ್ಲಿ ಸಿಟ್ಟುಗೊಳ್ಳದೆ, ಅತಿಯಾಗಿ ಸಂತೋಷಗೊಳ್ಳದೆ, ಪ್ರಿಯವಾದುದರಲ್ಲಿ ಹರ್ಷಗೊಳ್ಳದೆ, ಸುವರ್ಣವನ್ನು ಮಣ್ಣಿನ ಹೆಂಟೆಯನ್ನು ಎರಡನ್ನೂ ಸಮಾನವಾಗಿ ಕಾಣುವವನು,

ಆತ್ಮನಿಃಶ್ರೇಯಸಜ್ಞಾನೇ ಧೀರಂ ನಿಶ್ಚಿತನಿಶ್ಚಯಮ್ |
ಪರಾವರಜ್ಞಂ ಭೂತಾನಾಂ ಸರ್ವಜ್ಞಂ ಸಮದರ್ಶನಮ್ ||7||

ತನಗೆ ಒಳಿತನ್ನು ಮಾಡುವ ಪರಮಾತ್ಮನ ಜ್ಞಾನದಲ್ಲಿ ನಿಶ್ಚಿತವಾದ ಬುದ್ಧಿಯುಳ್ಳವನು, ಜೀವರಲ್ಲಿ ಅಧಮರು ಯಾರು, ಉತ್ತಮರು ಯಾರು ಎಂಬುದನ್ನು ತಿಳಿದವನು, ಸರ್ವಜ್ಞನು, ಸಮದರ್ಶಿಯೂ,

ಅವ್ಯಕ್ತಾತ್ಮನಿ ಗೋವಿಂದೇ ವಾಸುದೇವೇ ಮಹಾತ್ಮನಿ |
ಹೃದಯೇನ ಸಮಾವಿಷ್ಟಂ ಸರ್ವಭಾವಪ್ರಿಯಂಕರಮ್ ||8||

ಅವ್ಯಕ್ತ ಸ್ವಭಾವದವನಾದ ಗೋವಿಂದನಲ್ಲಿ; ಮಹಾತ್ಮನಾದ ವಾಸುದೇವನಲ್ಲಿ ಮನಸ್ಸನ್ನು ನೆಲೆಗೊಳಿಸಿ ಎಲ್ಲ ಭೂತಗಳಿಗೂ ಪ್ರಿಯವನ್ನುಂಟು ಮಾಡುವವನು,
ಭಕ್ತಂ ಭಾಗವತಂ ನಿತ್ಯಂ ನಾರಾಯಣಪರಾಯಣಮ್ |
ಧ್ಯಾಯಂತಂ ಪರಮಾತ್ಮಾನಂ ಹಿರಣ್ಯಕಶಿಪೋಃ ಸುತಮ್ ॥9॥
ಭಗವದ್ ಭಕ್ತನಾದ, ನಿತ್ಯವೂ ಪಾರಾಯಣನಲ್ಲಿಯೇ ಆಸಕ್ತವಾದ ಮನಸ್ಸುಳ್ಳ, ಪರಮಾತ್ಮನ ಧ್ಯಾನರತನಾದ ಹಿರಣ್ಯಕಸಿಪುವಿನ ಮಗನಾದ,
ಶಕ್ರಃ ಪ್ರಹ್ಲಾದಮಾಸೀನಮೇಕಾಂತೇ ಸಂಯತೇಂದ್ರಿಯಮ್ |
ಬುಭುತ್ಸಮಾನಸ್ತತ್ ಪ್ರಜ್ಞಾಮಭಿಗಮ್ಯೇದಮಬ್ರವೀತ್ ॥10॥
ಜಿತೇಂದ್ರಿಯನೂ ಆದ, ಏಕಾಂತದಲ್ಲಿ ಕುಳಿತಿರುವ ಪ್ರಹ್ಲಾದನನ್ನು ಇಂದ್ರದೇವನು ತತ್ತ್ವವನ್ನು ತಿಳಿಯುವ ದೃಷ್ಟಿಯಿಂದ ಅವನ ಜ್ಞಾನವನ್ನು ಗೌರವಿಸಿ, ಪ್ರಹ್ಲಾದನ ಬಳಿ ಆಗಮಿಸಿ ಹೀಗೆ ಹೇಳಿದನು.
ಯೈಃ ಕೈಶ್ಚಿತ್ ಸಮ್ಮತೋ ಲೋಕೇ ಗುಣೈಃ ಸ್ಯಾತ್ ಪುರುಷೋ ನೃಷು |
ಭವತ್ಯನಪಗಾನ್ ಸರ್ವಾಂಸ್ತಾನ್ ಗುಣಾಲ್ಲಕ್ಷಯಾಮಹೇ ॥11॥
ದೈತ್ಯರಾಜನೇ, ಲೋಕದಲ್ಲಿ ಪುರುಷನು ಯಾವ ಗುಣಗಳಿಂದ ಜನರಿಂದ ಸನ್ಮಾನಿತನಾಗುತ್ತಾನೆ? ಆ ಎಲ್ಲ ಗುಣಗಳು ನಿನ್ನಲ್ಲಿ ಸ್ಥಿರವಾಗಿ ಇರುವುದನ್ನು ನಾನು ಕಾಣುತ್ತಿದ್ದೇನೆ.
ಅಥ ತೇ ಲಕ್ಷ್ಯತೇ ಬುದ್ಧಿಃ ಸಮಾ ಬಾಲಜನೈರಿಹ |
ಆತ್ಮಾನಂ ಮನ್ಯಮಾನಃ ಸಂಶ್ರೇಯಃ ಕಿಮಿಹ ಮನ್ಯಸೇ ॥12॥
ಬಾಲಜನರ ಬುದ್ಧಿಯು ಹೇಗೆ ರಾಗ-ದ್ವೇಷಗಳಿಂದ ರಹಿತವಾಗಿರುತ್ತದೋ ಹಾಗೆನಿನ್ನ ಬುದ್ಧಿಯು ಕಾಣಿಸುತ್ತಿದೆ. ನೀನು ಪರಮಾತ್ಮನನ್ನು ಚೆನ್ನಾಗಿ ತಿಳಿದು ಈ ಪರಮಾತ್ಮನ ಜ್ಞಾನಕ್ಕೆ ಶ್ರೇಷ್ಠವಾದ ಸಾಧನ ಯಾವುದೆಂದು ಭಾವಿಸಿರುವಿ?
ಬದ್ಧಃ ಪಾಶೈಶ್ಚ್ಯುತಃ ಸ್ಥಾನಾದ್ವಿಷತಾಂ ವಶಮಾಗತಃ |
ಶ್ರಿಯಾ ವಿಹೀನಃ ಪ್ರಹ್ಲಾದ ಶೋಚಿತವ್ಯೇ ನ ಶೋಚಸಿ ॥13॥
ನೀನೀಗ ಪಾಶಗಳಿಂದ ಬಂಧಿಸಲ್ಪಟ್ಟಿರುವಿ. ಚಕ್ರವರ್ತಿಯ ಸ್ಥಾನದಿಂದ ಚ್ಯುತನಾಗಿರುವಿ. ಶತ್ರುಗಳ ವಶನಾಗಿರುವಿ.ಸಂಪತ್ತಿನಿಂದ ಹೀನನಾಗಿರುವಿ. ಹೀಗಿದ್ದರೂ ದುಃಖಪಡುತ್ತಿಲ್ಲ. ಇದು ಹೇಗೆ ಸಾಧ್ಯವಾಗುತ್ತಿದೆ?
ಪ್ರಜ್ಞಾಲಾಭಾತ್ ತು ದೈತೇಯ ಉತಾಹೋ ಧೃತಿಮತ್ತಯಾ |
ಪ್ರಹ್ಲಾದ ಸ್ವಸ್ಥರೂಪೋಽಸಿ ಪಶ್ಯನ್ ವ್ಯಸನಮಾತ್ಮನಃ ॥14॥
ಪ್ರಹ್ಲಾದನೇ, ವ್ಯಸನಗಳನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದರೂ ನೀನು ಹೇಗೆ ನಿಶ್ಚಿಂತನಾಗಿರುವಿ. ದೈತ್ಯರಾಜನೇ, ನಿನ್ನ ವ್ಯಸನವಾದ ಸಮಸ್ಥಿತಿಗೆ ಪರಮಾತ್ಮನ ಜ್ಞಾನವು ಕಾರಣವೆ? ಅಥವಾ ಧೈರ್ಯವು ಕಾರಣವೆ?
ಭೀಷ್ಮಃ
ಇತಿ ಸಂಚೋದಿತಸ್ತೇನ ಧೀರೋ ನಿಶ್ಚಿತನಿಶ್ಚಯಃ |
ಉವಾಚ ಶ್ಲಕ್ಷ್ಣಯಾ ವಾಚಾ ಸ್ವಾಂ ಪ್ರಜ್ಞಾಮನುವರ್ಣಯನ್ ॥15॥
ಈ ರೀತಿಯಾಗಿ ಇಂದ್ರನು ಉತ್ತರಿಸುವಂತೆ ಕೇಳಿದ ಬಳಿಕ ಬ್ರಹ್ಮಜ್ಞಾನವನ್ನು ನಿಶ್ಚಯವಾಗಿ ತಿಳಿದಿದ್ದ ಧೀರನಾದ ಪ್ರಹ್ಲಾದನು ತನ್ನಲ್ಲಿರುವ ಪರಮಾತ್ಮನ ಪ್ರಜ್ಞೆಯನ್ನು ವರ್ಣಿಸುತ್ತಾ ಗಂಭೀರವಾದ ಮಾತಿನಿಂದ ಹೀಗೆ ಹೇಳಿದನು.
ಪ್ರಹ್ಲಾದಃ
ಪ್ರವೃತ್ತಿಂ ಚ ನಿವೃತ್ತಿಂ ಚ ಭೂತಾನಾಂ ಯೋ ನ ಬುಧ್ಯತೇ |
ತಸ್ಯ ಸ್ತಂಭೋ ಭವೇದ್ ಬಾಲ್ಯಾನ್ನಾಸ್ತಿ ಸ್ತಂಭೋನುಪಶ್ಯತಃ ॥16॥
ದೇವರಾಜನೇ, ಸಮಸ್ತ ಪ್ರಾಣಿಗಳ ಪ್ರವೃತ್ತಿ ನಿವೃತ್ತಿಗಳ ರಹಸ್ಯವನ್ನು ಯಾರು ಅರಿತಿಲ್ಲವೋ ಅವನಿಗೆ ಬಾಲ್ಯದಿಂದ ಗರ್ವವು ಉತ್ಪನ್ನವಾಗುತ್ತದೆ. ದೇವದಿಂದಲೇ ಎಲ್ಲವೂ ನಡೆಯುತ್ತಿದೆ ಎಂದು ಅರಿತವನಿಗೆ ಗರ್ವವು ಉಂಟಾಗುವುದಿಲ್ಲ.
ಗಹನಂ ಸರ್ವಭೂತಾನಾಂ ಧ್ಯೇಯಂ ನಿತ್ಯಂ ಸನಾತನಮ್ |
ಅನಿಗ್ರಹಮನೌಪಮ್ಯಂ ಸರ್ವಾಕಾರಂ ಪರಾತ್ ಪರಮ್ ॥17॥
ಎಲ್ಲ ಜೀವರಲ್ಲಿ ಅಡಗಿದ ನಿತ್ಯವೂ ಸನಾತನವೂ ಆದ ಹರಿಯನ್ನು ಧ್ಯಾನಿಸಬೇಕು. ಶ್ರೀಹರಿಯನ್ನು ಯಾರಿಂದಲೂ ನಿಗ್ರಹಿಸಲಾಗದು. ಉಪಮಾನರಹಿತನು, ಎಲ್ಲ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದು ಆಯಾ ಆಕಾರ ನೀಡಿದವನು, ಪರಾತ್ಪರನು.
ಸರ್ವಾವರಣಸಂಭೂತಂ ತಸ್ಮಾದೇತತ್ ಪ್ರವರ್ತತೇ |
ತನ್ಮಯಾ ಅಪಿ ಸಂಪಶ್ಯ ನಾನಾಲಕ್ಷಣಲಕ್ಷಿತಾಃ ॥18॥
ಸಮಸ್ತ ವಿಶ್ವದ ಆವರಣಗಳಿಂದ ಕೂಡಿರುವ ಹರಿಯಿಂದಲೇ ಎಲ್ಲವೂ ನಡೆಯುತ್ತದೆ. ಎಲ್ಲರೂ ಶ್ರೀಹರಿಯಿಂದಲೇ ಅನೇಕ ಲಕ್ಷಣಗಳನ್ನು ಹೊಂದಿದ್ದಾರೆ. ನನ್ನನ್ನೂ ಹೀಗೆಯೇ ತಿಳಿ.
ಸ ವೈ ಪಾತಿ ಜಗತ್ಸ್ರಷ್ಟಾ ವಿಷ್ಣುರಿತ್ಯಭಿಶಬ್ದಿತಃ |
ಪುನರ್ದಂಶತಿ ಸಂಪ್ರಾಪ್ತೇ ಅವಸಾನೇ ಸುರೇಶ್ವರಃ ॥19॥
ಜಗತ್ತನ್ನು ಸೃಷ್ಟಿಸಿದ ವಿಷ್ಣು ಶಬ್ದವಾಚ್ಯನಾದ ಶ್ರೀಹರಿಯೇ ಜಗತ್ತನ್ನು ಪರಿಪಾಲಿಸುತ್ತಾನೆ. ಪ್ರಳಯಕಾಲ ಬಂದಾಗ ಜಗತ್ತನು ಶ್ರೀಹರಿಯು ಭುಂಜಿಸಿ ಲಯಗೊಳಿಸುತ್ತಾನೆ.
ಸ್ವಭಾವಾತ್ ಸಂಪ್ರವರ್ತಂತೇ ನಿವರ್ತಂತೇ ತಥೈವ ಚ |
ಸರ್ವೇ ಭಾವಾಸ್ತಥಾಭಾವಾಃ ಪುರುಷಾರ್ಥೋ ನ ವಿದ್ಯತೇ ॥20॥

ಈ ವಿಧವಾದ ಸಮಸ್ತ ಜೀವರ ಹುಟ್ಟು-ಸಾವುಗಳು ಭಗವಂತನ ದೆಸೆಯಿಂದಲೇ ನಡೆಯುತ್ತಿದೆ ಹೊರತು ಈ ಕಣ್ಣಿಗೆ ಕಾಣುವ ಪುರುಷರಿಂದ ಯಾವ ಪ್ರಯತ್ನವು ನಡೆಯುವುದಿಲ್ಲ.
ಪುರುಷಾರ್ಥಸ್ಯ ಚಾಭಾವೇ ನಾಸ್ತಿ ಕಶ್ಚಿತ್ ಸ್ವಕಾರಕಃ |
ಸ್ವಯಂ ತು ಕುರ್ವತಸ್ತಸ್ಯ ಜಾತು ಮಾನೋ ಭವೇದಿಹ ॥21॥
ಪುರುಷನು ತನ್ನ ಪ್ರಯತ್ನದಿಂದ ಕೆಲಸ ಮಾಡದಿದ್ದಾಗ ಅವನು ಆ ಕ್ರಿಯೆಗಳಿಗೆ ಕರ್ತೃವಾಗುವುದಿಲ್ಲ. ಹೀಗಿದ್ದರೂ ಯಾವುದನ್ನೂ ಮಾಡದೆ ಈ ಜಗತ್ತಿನಲ್ಲಿ ವಾಸ ಮಾಡುತ್ತಾ ಕೆಲವರು ನಾನು ಮಾಡಿದೆನೆಂಬ ಅಭಿಮಾನಕ್ಕೆ ತುತ್ತಾಗುತ್ತಾರೆ.
ಯಸ್ತು ಕರ್ತಾರಮಾತ್ಮಾನಂ ಮನ್ಯತೇ ಸಾಧ್ವಸಾಧುನೋಃ |
ತಸ್ಯ ದೋಷವತೀ ಪ್ರಜ್ಞಾ ಸ್ವಮೂರ್ತ್ಯಜ್ಞೇತಿ ಮೇ ಮತಿಃ ॥22॥
ಯಾರು ಶುಭಾಶುಭ ಕರ್ಮಗಳಿಗೆ ಸ್ವತಂತ್ರನಾಗಿ ತಾನೇ ಕರ್ತೃವೆಂದು ಭಾವಿಸಿದ್ದಾನೋ ಅವನ ಬುದ್ಧಿಯು ದೋಷಲಿಪ್ತವಾಗಿ ತತ್ತ್ವಜ್ಞಾನರಹಿತವಾಗಿರುತ್ತದೆ.
ಯದಿ ಸ್ಯಾತ್ ಪುರುಷಃ ಕರ್ತಾ ಶಕ್ರಾತ್ಮಶ್ರೇಯಸೇ ಧ್ರುವಮ್ |
ಆರಂಭಾಸ್ತಸ್ಯ ಸಿದ್ಧ್ಯೇರನ್ನ ಚ ಜಾತು ಪರಾಭವೇತ್ ॥23॥
ಒಂದು ವೇಳೆ ಪರಮ ಪುರುಷನಾದ ಭಗವಂತನಂತೆ ಜೀವನು ಸ್ವತಂತ್ರಕರ್ತೃವಾಗಿದ್ದರೆ ಆಗ ತನ್ನ ಕಲ್ಯಾಣಕ್ಕಾಗಿ ನಿಶ್ಚಯವಾಗಿ ಪ್ರಯತ್ನ ಮಾಡುತ್ತಿದ್ದನು. ಅವನ ಪ್ರಯತ್ನವೆಲ್ಲವೂ ಸಿದ್ಧಿಸುತ್ತಿದ್ದವು. ಎಂದಿಗೂ ಪರಾಭವ ಹೊಂದುತ್ತಿರಲಿಲ್ಲ.
ಅನಿಷ್ಟಸ್ಯ ಹಿ ನಿರ್ವೃತ್ತಿರನಿವೃತ್ತಿಃ ಪ್ರಿಯಸ್ಯ ಚ |
ಲಕ್ಷ್ಯತೇ ಯತಮಾನಾನಾಂ ಪುರುಷಾರ್ಥಸ್ತತಃ ಕುತಃ ॥24॥
ಆದರೆ ಜೀವನು ಅನಿಷ್ಟದಲ್ಲಿ ನಿರಂತರ ಪ್ರವೃತ್ತಿಯುಳ್ಳವನಾಗಿದ್ದಾನೆ. ಪ್ರಿಯದಲ್ಲಿ ಪ್ರವೃತ್ತಿಯನ್ನು ಹೊಂದುತ್ತಿಲ್ಲ. ಆದ್ದರಿಂದ ಪ್ರಯತ್ನಶೀಲನಾದ ಈ ಜೀವನಿಗೆ ತನ್ನ ಇಚ್ಛೆಯಿಂದಲೇ ಪುರುಷಾರ್ಥವು ಹೇಗೆ ಲಭಿಸುತ್ತಿದೆ?
ಅನಿಷ್ಟಸ್ಯಾಭಿನಿರ್ವೃತ್ತಿಮಿಷ್ಟಸಂವೃತ್ತಿಮೇವ ಚ |
ಅಪ್ರಯತ್ನೇನ ಪಶ್ಯಾಮಃ ಕೇಷಾಂಚಿತ್ತತ್ಸ್ವಭಾವತಃ ॥25॥
ಇನ್ನು ಕೆಲವರಿಗೆ ಭಗವಂತನ ಸ್ವಾತಂತ್ರ್ಯ ಸ್ವಭಾವದಿಂದ ಪ್ರಯತ್ನವಿಲ್ಲದೆ ಅನಿಷ್ಟವು ನಿವಾರಣೆಯಾಗುತ್ತಿದೆ. ಇಷ್ಟವು ಪ್ರಯತ್ನವಾಗಿಯೇ ಪ್ರಾಪ್ತವಾಗುತ್ತಿದೆ. ಇದನ್ನು ನೋಡುತ್ತಿದ್ದೇವೆ. ಈ ಎರಡು ಭಗವಂತನ ಸ್ವಾತಂತ್ರ್ಯ ಗುಣದಿಂದಲೇ ನಡೆಯುತ್ತಿದೆ ಎಂದು ತಿಳಿಯಬೇಕು.
ಪ್ರತಿರೂಪಧರಾಃ ಕೇಚಿದ್ ದೃಶ್ಯಂತೇ ಬುದ್ಧಿಸತ್ತಮಾಃ |
ವಿರೂಪೇಭ್ಯೋಽಲ್ಪಬುದ್ಧಿಭ್ಯೋ ಲಿಪ್ಸಮಾನಾ ಧನಾಗಮಮ್ ॥26॥
ಕೆಲವರು ಹೆಚ್ಚು ಬುದ್ಧಿವಂತರಾದ ಸುಂದರ ಪುರುಷರು ಕುರೂಪಿಗಳಾದ ಅಲ್ಪ ಬುದ್ಧಿಯವರಿಂದ ಹಣವನ್ನು ಕಿತ್ತುಕೊಳ್ಳಲು ಅಪೇಕ್ಷಿಸುತ್ತಾರೆ.
ಸ್ವಭಾವಪ್ರೇರಿತಾಃ ಸರ್ವೇ ನಿವಿಶಂತೇ ಗುಣಾ ಯದಾ |
ಶುಭಾಶುಭಾಸ್ತದಾ ತತ್ರ ತಸ್ಯ ಕಿಂ ಮಾನಕಾರಣಮ್ ॥27॥
ಎಲ್ಲಾ ಗುಣಗಳು, ಎಲ್ಲಾ ಕರ್ಮಗಳು ಸ್ವಭಾವದಿಂದಲೇ ಪ್ರೇರಿತವಾಗಿ ನಿರ್ವಾಹವಾಗುತ್ತವೆ ಎನ್ನುವುದಾದರೆ ಅದನ್ನು ನಾನೇ ಮಾಡಿದೆನೆಂದು ಅಭಿಮಾನ ಪಡಲು ಯಾವ ಕಾರಣವಿದೆ? ಯೋಚಿಸು.
ಸ್ವಭಾವಾದೇವ ತತ್ ಸರ್ವಮಿತಿ ಮೇ ನಿಶ್ಚಿತಾ ಮತಿಃ |
ಆತ್ಮಪ್ರತಿಷ್ಠಿತಾ ಪ್ರಜ್ಞಾ ಮಮ ನಾಸ್ತಿ ತತೋಽನ್ಯಥಾ ॥28॥
ಭಗವಂತನ ಅನುಗ್ರಹದಿಂದ ಜೀವನಿಷ್ಟವಾದ ಕರ್ಮಗಳೇ ಪ್ರವೃತ್ತಿಯನ್ನು ಹೊಂದುತ್ತವೆ ಎಂದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ. ಪರಮಾತ್ಮನಲ್ಲಿ ದೃಢವಾದ ಪ್ರಜ್ಞೆಯುಳ್ಳ ನನಗೆ ಅದಕ್ಕಿಂತ ಬೇರೆಯಾದ ಪ್ರೇರಕ ಶಕ್ತಿಯು ಕಾಣಿಸುವುದಿಲ್ಲ.
ಕರ್ಮಜಂ ತ್ವಿಹ ಮನ್ಯೇಽಹಂ ಫಲಯೋಗಂ ಶುಭಾಶುಭಮ್ |
ಕರ್ಮಣಾಂ ವಿಷಯಂ ಕೃತ್ಸ್ನಮಹಂ ವಕ್ಷ್ಯಾಮಿ ತಚ್ಛೃಣು ॥29॥
ಶುಭಾಶುಭ ಫಲಪ್ರಾಪ್ತಿಗೆ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳು ಕಾರಣವೆಂದು ನಾನು ಭಾವಿಸುತ್ತೇನೆ. ಮುಂದೆ ಈ ಕರ್ಮಗಳ ವಿಷಯದಲ್ಲಿ ಸಮಗ್ರವಾಗಿ ಹೇಳುತ್ತೇನೆ, ಕೇಳು.
ಯಥಾ ವೇದಯತೇ ಕಶ್ಚಿದೋದನಂ ಪಾಯಸಂ ತ್ವದನ್ |
ಏವಂ ಸರ್ವಾಣಿ ಕರ್ಮಾಣಿ ಸ್ವಭಾವಸ್ಯೈವ ಲಕ್ಷಣಮ್ ॥30॥
ಯಾವ ರೀತಿ ಒಬ್ಬನು ಪಾಯಸದ ಅನ್ನವನ್ನೇ ತಿನ್ನುತ್ತಾ ತನ್ನ ಹಲ್ಲುಗಳಿಂದ ತನ್ನ ನಾಲಿಗೆಯನ್ನೇ ಕಚ್ಚಿಕೊಂಡು ದುಃಖವನ್ನು ಹೊಂದುತ್ತಾನೆ ಇದರಿಂದ ಭಗವಂತನೇ ಸ್ವತಂತ್ರನು. ಅವನ ಸಂಕಲ್ಪದಂತೆ ಎಲ್ಲಾ ಕರ್ಮಗಳು ನಡೆಯುತ್ತವೆ ಎಂಬುದನ್ನು ತಿಳಿಯಬಹುದು.
ವಿಕಾರಾನೇವ ಯೋ ವೇದ ನ ವೇದ ಪ್ರಕೃತಿಂ ಪರಾಮ್ |
ತಸ್ಯ ಸ್ತಂಭೋ ಭವೇದ್ ಬಾಲ್ಯಾನ್ನಾಸ್ತಿ ಸ್ತಂಭೋನುಪಶ್ಯತಃ ॥31॥
ಯಾವ ಮನುಷ್ಯನು ಕಾರ್ಯಗಳಾಗುವುದಕ್ಕೆ ಕಾರಣವೇನೆಂಬುದನ್ನು ತಿಳಿಯದೆ ಕಾರ್ಯವನ್ನು ಮಾತ್ರ ತಿಳಿದಿರುತ್ತಾನೋ ಮೂಲಪ್ರಕೃತಿಯೆನಿಸಿದ ನಾರಾಯಣನನ್ನು, ಕಾರಣನನ್ನು ತಿಳಿದಿಲ್ಲವೋ ಅವನಿಗೆ ಬಾಲ್ಯದಿಂದಲೇ ಗರ್ವವು ಉಂಟಾಗುತ್ತದೆ. ಕಾರಣ ಪುರುಷನಾದ ಭಗವಂತನನ್ನು ಕಾಣುವವನಿಗೆ ಗರ್ವವು ಉಂಟಾಗುವುದಿಲ್ಲ.
ಸ್ವಭಾವಭಾವಿನೋ ಭಾವಾನ್ ಸರ್ವಾನೇವೇಹ ನಿಶ್ಚಯೇ |

ಬುದ್ಧ್ಯಮಾನಸ್ಯ ದರ್ಪೋ ವಾ ಮಾನೋ ವಾ ಕಿಂ ಕರಿಷ್ಯತಿ ॥32॥
ಸಮಸ್ತ ಕ್ರಿಯೆಗಳು ಸ್ವಭಾವದಿಂದಲೇ ಉಂಟಾಗುತ್ತವೆ. ಯಾರು ಈ ವಿಷಯವನ್ನು ನಿಶ್ಚಯ ಜ್ಞಾನದಿಂದ ತಿಳಿದಿರುತ್ತಾರೋ ಅವರಿಗೆ ದರ್ಪವಾಗಲಿ, ಅಭಿಮಾನವಾಗಲಿ ಏನು ಮಾಡೀತು?
ವೇದ ಧರ್ಮವಿಧಿಂ ಕೃತ್ಸ್ನಂ ಭೂತಾನಾಂ ಚಾಪ್ಯನಿತ್ಯತಾಮ್ |
ತಸ್ಮಾಚ್ಛಕ್ರ ನ ಶೋಚಾಮಿ ಸರ್ವಂ ಹ್ಯೇವೇದಮಂತವತ್ ॥33॥
ಇಂದ್ರನೇ, ನಾನು ಸಮಗ್ರವಾಗಿ ಧರ್ಮವಿಧಿಗಳನ್ನು, ಸಮಸ್ತ ಪ್ರಾಣಿಗಳ ಅನಿತ್ಯತೆಯನ್ನು ಅರಿತಿದ್ದೇನೆ. ಎಲ್ಲವೂ ನಾಶವುಳ್ಳ ಸ್ವಭಾವವುಳ್ಳದ್ದು ಎಂದು ತಿಳಿದು ನಾನು ಈ ರಾಜ್ಯೈಶ್ವರ್ಯಗಳಿಗೆ ಹಲುಬುತ್ತಿಲ್ಲ, ಶೋಕವನ್ನೂ ಪಡುತ್ತಿಲ್ಲ.
ನಿರ್ಮಮೋ ನಿರಹಂಕಾರೋ ನಿರೀಹೋ ಮುಕ್ತಬಂಧನಃ |
ಸ್ವಸ್ಥೋಽವ್ಯಪೇತಃ ಪಶ್ಯಾಮಿ ಭೂತಾನಾಂ ಪ್ರಭವಾಪ್ಯಯೌ ॥34॥
ಅಹಂಕಾರ-ಮಮಕಾರಗಳನ್ನು ತೊರೆದು, ಎಲ್ಲ ವಿಧ ಬಂಧನಗಳಿಂದ ಮುಕ್ತನಾಗಿ, ಅಸಂಗನಾಗಿ, ಭಗವಂತನಲ್ಲಿ ಬುದ್ಧಿಯುಳ್ಳವನಾಗಿ, ಪ್ರಾಣಿಗಳ ಉದಯ, ಅಸ್ತಮಾನಗಳನ್ನು ನೋಡುತ್ತಿದ್ದೇನೆ.
ಕೃತಪ್ರಜ್ಞಸ್ಯ ದಾಂತಸ್ಯ ವಿತೃಷ್ಣಸ್ಯ ನಿರಾಶಿಷಃ |
ನಾಯಾಸೋ ವಿದ್ಯತೇ ಶಕ್ರ ಪಶ್ಯತೋ ಲೋಕವಿದ್ಯಯಾ ॥35॥
ಸಂಸ್ಕೃತ ಬುದ್ಧಿಯನ್ನು ಹೊಂದಿರುವ ಇಂದ್ರಿಯನಿಗ್ರಹವನ್ನು ಸಂಪಾದಿಸಿರುವ, ಆಸೆಯಿಂದ ಮುಕ್ತನಾಗಿ ಯಾವುದನ್ನೂ ಅಪೇಕ್ಷಿಸದಿರುವ ನನಗೆ ಯಾವುದೇ ವಿಧವಾದ ಆಯಾಸವು ಇರುವುದಿಲ್ಲ. ಜಗತ್ತಿನ ಸಹಜವಾದ ಧರ್ಮಗಳನ್ನು ನಾನು ನೋಡುತ್ತಿರುತ್ತೇನೆ.
ಪ್ರಕೃತೌ ಚ ವಿಕಾರೇ ಚ ನ ಮೇ ಪ್ರೀತಿರ್ನ ಚ ದ್ವಿಷೇ |
ದ್ವೇಷ್ಟಾರಂ ನ ಚ ಪಶ್ಯಾಮಿ ಯೋ ಮಮಾದ್ಯ ಮಮಾಯತೇ ॥36॥
ಪ್ರಕೃತಿ ಮತ್ತು ಅದರ ಕಾರ್ಯಗಳ ವಿಷಯದಲ್ಲಿ ನನಗೆ ಪ್ರೀತಿಯೂ ಇಲ್ಲ, ದ್ವೇಷವೂ ಇಲ್ಲ. ನಾನು ಯಾರನ್ನೂ ನನ್ನ ದ್ವೇಷಿ ಎಂದಾಗಲೀ, ನನ್ನ ಮೋಹದ ವಸ್ತುವೆಂದಾಗಲೀ ತಿಳಿಯುವುದಿಲ್ಲ.
ನೋರ್ಧ್ವಂ ನಾವಾ ನ ತಿರ್ಯಕ್ಚ ನ ಕ್ವಚಿಚ್ಛಕ್ರ ಕಾಮಯೇ |
ನ ವಿಜ್ಞಾನೇ ನ ಹಿ ಜ್ಞೇಯೇ ನಾಜ್ಞಾನೇ ಶರ್ಮ ವಿದ್ಯತೇ ॥37॥
ನಾನು ಮೇಲಾಗಲಿ, ಕೆಳಗಾಗಲಿ, ಅಡ್ಡವಾಗಲಿ, ಯಾವುದೇ ಸ್ಥಳದಲ್ಲಾಗಲೀ ಏನನ್ನೂ ಬಯಸುವುದಿಲ್ಲ. ರೂಪ-ರಸಾದಿಗಳ ಜ್ಞಾನದಲ್ಲಿಯಾಗಲಿ, ವಿಜ್ಞಾನದಲ್ಲೇ ಆಗಲಿ, ನನಗೆ ಯಾವುದೇ ರೀತಿಯಾದ ಆಯಾಸವಿರುವುದಿಲ್ಲ. ಅವುಗಳ ಪ್ರಲೋಭನೆಗೆ ನಾನು ಸಿಲುಕಿರುವುದಿಲ್ಲ ಎಂದು ಭಾವ.
ಶಕ್ರಃ
ಯೇನೈಷಾ ಲಭ್ಯತೇ ಪ್ರಜ್ಞಾ ಯೇನ ಶಾಂತಿರವಾಪ್ಯತೇ |
ಪ್ರಬ್ರೂಹಿ ತಮುಪಾಯಂ ಮೇ ಸಮ್ಯಕ್ ಪ್ರಹ್ಲಾದ ಪೃಚ್ಛತೇ ॥38॥
ಇಂದ್ರ ಪ್ರಹ್ಲಾದನೇ, ಯಾವ ಉಪಾಯದಿಂದ ಈ ಪ್ರಜ್ಞೆಯು ಲಭಿಸುತ್ತದೆ? ಯಾವ ಉಪಾಯದಿಂದ ಮನಶ್ಶಾಂತಿಯು ಲಭಿಸುತ್ತದೆ. ಈ ಉಪಾಯವನ್ನು ನನಗೆ ತಿಳಿಸು.
ಪ್ರಹ್ಲಾದಃ
ಆರ್ಜವೇನಾಪ್ರಮಾದೇನ ಪ್ರಸಾದೇನಾತ್ಮವತ್ತಯಾ |
ವೃದ್ಧಶುಶ್ರೂಷಯಾ ಶಕ್ರ ಪುರುಷೋ ಲಭತೇ ಮಹತ್ ॥39॥
ಪ್ರಹ್ಲಾದ ದೇವೇಂದ್ರನೇ, ಋಜುಭಾವ, ಅಪ್ರಮಾದ, ಬುದ್ಧಿಯ ನೈರ್ಮಲ್ಯ, ಭಗವತ್ಪ್ರಜ್ಞೆ, ವೃದ್ಧರ ಸೇವೆ ಇವುಗಳಿಂದ ಪುರುಷನು ಮಹತ್ವವನ್ನು ಹೊಂದುತ್ತಾನೆ.
ಸ್ವಭಾವಾಲ್ಲಭತೇ ಪ್ರಜ್ಞಾಂ ಶಾಂತಿಮೇತಿ ಸ್ವಭಾವತಃ |
ಸ್ವಭಾವಾದೇವ ತತ್ ಸರ್ವಂ ಯತ್ಕಿಂಚಿದನುಪಶ್ಯಸಿ ॥40॥
ಸ್ವತಂತ್ರನಾದ ನಾರಾಯಣನಿಂದ ಒಳ್ಳೆಯ ಪ್ರಜ್ಞೆಯನ್ನು, ಶಾಂತಿಯನ್ನು ಜೀವನು ಹೊಂದುತ್ತಾನೆ. ನಾರಾಯಣನಿಂದಲೇ ಎಲ್ಲವೂ ಲಭಿಸುತ್ತದೆ. ಏನೆಲ್ಲ ನೋಡಲು ಬಯಸುತ್ತೀಯೋ ಅದೆಲ್ಲವೂ ನಾರಾಯಣನ ಅನುಗ್ರಹದಿಂದಲೆ.
ನೈವಾಂತರಂ ವಿಜಾನಾತಿ ಶ್ರುತ್ವಾ ಗುರುಮುಖಾತ್ ತತಃ |
ವಾಕ್ಯಂ ವಾಕ್ಯಾರ್ಥವಿಜ್ಞಾನಮಾಲೋಕ್ಯ ಮನಸಾ ಯತಿಃ ॥41॥
ಯಾವನು ಗುರುಮುಖದಿಂದ ವಾಕ್ಯವನ್ನು, ವಾಕ್ಯಾರ್ಥವನ್ನು, ಅದರ ವಿಜ್ಞಾನವನ್ನು ಚೆನ್ನಾಗಿ ತಿಳಿದಿದ್ದಾನೋ ಅವನು ಮನಸ್ಸಿನಿಂದ ಪಕ್ವತೆಯನ್ನು ಪಡೆದ ಕಾರಣದಿಂದ ಭಗವಂತನ ವ್ಯಾಪಾರಗಳಲ್ಲಿ ಭೇದಗಳನ್ನು ತಿಳಿಯಲಾರನು.
ವಿವೇಕಪ್ರತ್ಯಯಾಪನ್ನಮಾತ್ಮಾನಮನುಪಶ್ಯತಿ |
ವಿರಜ್ಯತಿ ತತೋ ಭೀತ್ಯಾ ಪರಮೇಶ್ವರಮೃಚ್ಛತಿ ॥42॥
ವಿವೇಕದಿಂದ ಜ್ಞಾನವನ್ನು ಹೊಂದಿದ ವ್ಯಕ್ತಿಯು ಪರಮಾತ್ಮನನ್ನು ಹೃದಯದಲ್ಲಿ ನೋಡುತ್ತಾನೆ. ವಿಷಯಪದಾರ್ಥಗಳಿಂದ ವಿರಕ್ತನಾಗುತ್ತಾನೆ. ಪರಮಾತ್ಮನನ್ನೇ ಬಯಸುತ್ತಾನೆ.
ತ್ರಾತಾರಂ ಸರ್ವದುಃಖಾನಾಂ ತತ್ಸುಖಾನ್ವೇಷಣಂ ತತಃ |
ಕರೋತಿ ಸದ್ಭಿಃ ಸಂಸರ್ಗಮಲಂ ಸಂತಃ ಸುಖಾಯ ವೈ ॥43॥
ಸಮಸ್ತ ದುಃಖಗಳಿಂದ ರಕ್ಷಿಸುವ ಭಗವಂತನಿಂದಲೇ ಸುಖವನ್ನು ಬಯಸುತ್ತಾನೆ. ಸಜ್ಜನರ ಸಂಗವನ್ನು ಮಾಡುತ್ತಾನೆ. ಅನಂತ

ಸುಖಕ್ಕೋಸ್ಕರ ಭಗವನ್ನಿಷ್ಠನಾಗಿಯೇ ಇರುತ್ತಾನೆ.
ಸತಾಂ ಸಕಾಶಾದಾಜ್ಞಾಯ ಮಾರ್ಗಂ ಲಕ್ಷಣವತ್ತಯಾ |
ಸರ್ವಸಂಗವಿನಿರ್ಮುಕ್ತಃ ಪರಮಾತ್ಮಾನಮೃಚ್ಛತಿ ॥44॥
ಸಜ್ಜನರ ಸಹವಾಸದಿಂದ ಭಗವಂತನ ಲಕ್ಷಣಗಳನ್ನು, ಅವನ ಮಾರ್ಗಗಳನ್ನು ಚೆನ್ನಾಗಿ ತಿಳಿದು, ಸರ್ವಸಂಗಗಳಿಂದ ಮುಕ್ತನಾಗಿ ಪರಮಾತ್ಮನನ್ನೇ ಹೊಂದುತ್ತಾನೆ.
ವಿಷಯೇಚ್ಛಾಕೃತೋ ಧರ್ಮಂ ಸರಜಸ್ಕೋ ಭಯಾವಹಃ |
ಧರ್ಮಹಾನಿಮವಾಪ್ನೋತಿ ಕ್ರಮಾತ್ ತೇನ ನರಃ ಪುನಃ ॥45॥
ಯಾವನು ವಿಷಯಪದಾರ್ಥಗಳನ್ನೇ ಬಯಸುತ್ತಾ ರಜೋಗುಣದಿಂದ ಧರ್ಮವನ್ನು ತ್ಯಜಿಸುತ್ತಾನೋ ಅವನು ಧರ್ಮಹಾನಿಯನ್ನು ಹೊಂದಿದವನಾಗಿ, ಭಯವನ್ನು ಹೊಂದಿದವನಾಗಿ ಪುನಃ ಪುನಃ ಈ ಜಗತ್ತಿನ ಹಾನಿಗಳಿಗೆ ತುತ್ತಾಗುತ್ತಾನೆ.
ಭಕ್ತಿಹೀನೋ ಭವತ್ಯೇವ ಪರಮಾತ್ಮನಿ ಚಾಚ್ಯುತ |
ವಾಚಕೇ ವಾಽಪಿ ಚ ಸ್ಥಾನಂ ನ ಹಂತ್ಯೇವ ವಿಮೋಚಿತಃ ॥46॥
ವಿಷಯಪದಾರ್ಥಗಳ ಸಂಗದಿಂದ ಭಗವಂತನಲ್ಲಿ ಅವನು ಭಕ್ತಿಹೀನನಾಗುತ್ತಾನೆ. ಸದ್ವಿಚಾರವನ್ನು ಉಪದೇಶಿಸುವ ಆಚಾರ್ಯರ ವಚನಗಳು ಬಂಧನ ಬಿಡುಗಡೆಗಾಗಿ ಪ್ರಯತ್ನಿಸಿದರೂ ವಿಷಯಾಸಕ್ತನ ಬಂಧನಗಳು ಪರಿಹಾರವಾಗುವುದಿಲ್ಲ.
ಸಾಕ್ಷ್ಯೇ ಚಾಸ್ಯ ರತಿರ್ನಿತ್ಯಂ ಸಂಸಾರೇ ಚ ರತಿರ್ಭವೇತ್ |
ತಸ್ಯ ನಿತ್ಯಮವಿಜ್ಞಾನಾದಾತ್ಮಾ ಚೈವ ನ ಸಿದ್ಧ್ಯತಿ ॥47॥
ಇಂದ್ರಿಯಗೋಚರಗಳಾದ ವಿಷಯಗಳಲ್ಲಿಯೇ ಅವನಿಗೆ ಪ್ರೀತಿಯು ಹೆಚ್ಚುತ್ತದೆ. ಸಂಸಾರದಲ್ಲಿ ರತಿ ಹುಟ್ಟುತ್ತದೆ. ಅಜ್ಞಾನದ ಮುದ್ದೆಯಾದ ಅವನಿಗೆ ಪರಮಾತ್ಮನ ಜ್ಞಾನವು ಸಿದ್ಧಿಸದು.
ಉನ್ಮತ್ತವೃತ್ತಿರ್ಭವತಿ ಕ್ರಮಾದೇವಂ ಪ್ರವರ್ತತೇ |
ಆಶೌಚಂ ವರ್ಧತೇ ನಿತ್ಯಂ ನ ಶಾಮ್ಯತಿ ಕಥಂಚನ ॥48॥
ಅವನು ವಿಷಯಗಳಲ್ಲಿಯೇ ಆಸಕ್ತನಾಗಿ ಹುಚ್ಚನಂತೆ ಆಗುತ್ತಾನೆ. ಅವನಿಗೆ ಆತ್ಮಶುದ್ಧಿಯೂ ಇಲ್ಲ, ಶಾಂತಿಯೂ ಇಲ್ಲ. ವಿಷಯಗಳ ತೃಷ್ಣೆಯು ಎಂದಿಗೂ ಉಪಶಮನ ಹೊಂದುವುದಿಲ್ಲ.
ವಿಷಯೇ ಚಾನ್ವಿತಸ್ಯಾಸ್ಯ ಮೋಕ್ಷವಾಂಛಾ ನ ಜಾಯತೇ |
ಹೇತ್ವಾಭಾಸೇಷು ಸಂಲೀನಃ ಸ್ತೌತಿ ವೈಷಯಿಕಾನ್ ಗುಣಾನ್ ॥49॥
ವಿಷಯ ಪದಾರ್ಥಗಳಿಂದಲೇ ಆಸಕ್ತನಾದವನಿಗೆ ಮೋಕ್ಷದ ವಿಷಯದ ಅಪೇಕ್ಷೆಯೇ ಹುಟ್ಟುವುದಿಲ್ಲ. ನಿಜವಾದ ಕಾರಣಗಳಲ್ಲದ ವಿಷಯಗಳಲ್ಲಿ ಕಾರಣತ್ವವನ್ನು ಚಿಂತಿಸುತ್ತಾ, ಆ ವಿಷಯಗಳನ್ನೇ ಸ್ತುತಿಸುತ್ತಾ ವಿಷಯ ಗುಣಗಳಲ್ಲಿಯೇ ಮುಳುಗಿ ಹೋಗುತ್ತಾನೆ.
ನ ಶಾಸ್ತ್ರಾಣಿ ಶೃಣೋತ್ಯೇವ ಮಾನದರ್ಪಸಮನ್ವಿತಃ |
ಸ್ವತಃ ಸಿದ್ಧಂ ನ ಭೋಗಸ್ತಂ ಸ್ವತಃಸಿದ್ಧಂ ನ ವೇತ್ತಿ ಚ |
ಚಿದ್ರೂಪಧಾರಣಂ ಚೈವ ಪರಸ್ಪಷ್ಟಮಥಾವ್ಯಯಮ್ ॥50॥
ಮಾನದರ್ಪಗಳಿಂದ ಕೂಡಿದವನು ಶಾಸ್ತ್ರಗಳನ್ನು ಕೇಳುವುದೇ ಇಲ್ಲ. ಭಗವಂತನಿಂದ ಯಾವ ಸುಖಗಳನ್ನು ಅನುಭವಿಸಲಾರ. ಭಗವಂತನನ್ನೂ ತಿಳಿಯಲಾರ. ಅವನಿಗೆ ಜ್ಞಾನರೂಪಿಯಾದ ಪರಮಾತ್ಮನ ಜ್ಞಾನವು ಉಂಟಾಗುವುದಿಲ್ಲ. ನಾಶರಹಿತವಾದ ಅವನ ಸೃಷ್ಟ್ಯಾದಿ ವ್ಯಾಪಾರಗಳು ತಿಳಿಯುವುದಿಲ್ಲ.
ನಾನಾಯೋನಿಗತಸ್ತೇನ ಭ್ರಾಮ್ಯಮಾಣಃ ಸ್ವಕರ್ಮಭಿಃ |
ತೀರ್ಣಪಾರಂ ನ ಜಾನಾತಿ ಮಹಾಮೋಹಸಮನ್ವಿತಃ |
ಆಚಾರ್ಯಸಂಶ್ರಯಾದ್ ವಿದ್ಯಾದ್ ವಿನಯಂ ಸಮುಪಾಗತಃ ॥51॥
ಆತನು ತನ್ನ ಕರ್ಮಗಳಿಂದಲೇ ಅನೇಕ ಯೋನಿಗಳಲ್ಲಿ ಹುಟ್ಟುತ್ತಾ, ಮಹಾಮೋಹಗಳಲ್ಲಿ ಸಿಲುಕಿ ಬಿದ್ದು ಸಂಸಾರವನ್ನು ದಾಟಿಸುವ ಯಾವ ಮಹಾತ್ಮರನ್ನೂ ಕಾಣಲಾರನು. ಇಂದ್ರನೇ, ಆಚಾರ್ಯಪುರುಷರನ್ನು ಆಶ್ರಯಿಸಿಯೇ ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು.
ಅನುಕೂಲೇಷು ಧರ್ಮೇಷು ಚಿನೋತ್ಯೇನಂ ತತಸ್ತತಃ |
ಆಚಾರ್ಯ ಇತಿ ಚ ಖ್ಯಾತಸ್ತೇನಾಸೌ ಬಲವೃತ್ರಹನ್ ॥52॥
ಆ ಆಚಾರ್ಯಪುರುಷನೇ ಸಾಧಕನನ್ನು ಅನುಕೂಲವಾದ ಧರ್ಮಗಳಲ್ಲಿ ಪ್ರವೃತ್ತಿಯನ್ನು ಹೊಂದುವಂತೆ ಮಾಡುತ್ತಾನೆ. ಅಧರ್ಮದಲ್ಲಿ ಅವನ ಮನಸ್ಸು ಪ್ರವರ್ತಿಸದಂತೆ ಮಾಡುತ್ತಾನೆ.
ನಿಯತೇನೈವ ಸದ್ಭಾವಸ್ತೇನ ಜನ್ಮಾಂತರಾದಿಷು |
ಕರ್ಮಸಂಚಯತೂಲೌಘಃ ಕ್ಷಿಪ್ಯತೇ ಜ್ಞಾನವಾಯುನಾ ॥53॥
ಆ ಆಚಾರ್ಯ ಪುರುಷನು ಮೂಡಿಸಿದ ಭಗವದ್ಜ್ಞಾನವೆಂಬ ವಾಯುವು ಆ ಸಾಧಕಪುರುಷನ ಜನ್ಮಾಂತರಕ್ಕೆ ಕಾರಣವಾದ ಪ್ರಾರಬ್ಧಕರ್ಮವೆಂಬ ಹತ್ತಿಯ ರಾಶಿಯನ್ನು ತೂರಿಬಿಡುತ್ತದೆ.
ಏವಂ ಯುಕ್ತಸಮಾಚಾರಃ ಸಂಸಾರವಿನಿವರ್ತಕಃ |
ಅನುಕೂಲವೃತ್ತಿಂ ಸತತಂ ಭಿನತ್ತ್ಯೇವ ಭೃಗುರ್ಯಥಾ ॥54॥
ಹೀಗೆ ಸದಾಚಾರಪರನಾಗಿ ಸಂಸಾರವನ್ನು ನೀಗಿಸಿಕೊಳ್ಳುವ ವ್ಯಕ್ತಿಯು ಈ ಲೋಕದಲ್ಲಿ ಭೃಗು ಋಷಿಯು ಶಾಪದಿಂದ ಅಗ್ನಿಯನ್ನು ಹೇಗೆ ನಾಶ ಮಾಡಿದನೋ (ಆದಿಪರ್ವದಲ್ಲಿ ಬರುವ ಕಥೆ) ಅದರಂತೆ ಜ್ಞಾನಿಯು ಸಂಸಾರವೆಂಬ ಅಗ್ನಿಯನ್ನು ನಾಶ ಮಾಡುತ್ತಾನೆ.
ಯೇನ ಚಾಯಂ ಸಮಾಪನ್ನೋ ವೈತೃಷ್ಣ್ಯಂ ನಾಧಿಗಚ್ಛತಿ |
ಆಭ್ಯಂತರಃ ಸ್ಮೃತಃ ಶಕ್ರ ತತ್ಸಾಮ್ಯಂ ಪರಿವರ್ಜಯೇತ್ ॥55॥

ಈ ಸಂಸಾರದಿಂದ ಪ್ರಾಪ್ತವಾದ ತೃಷ್ಣೆಯನ್ನು ಜೀವನು ಭಗವಂತನ ಅನುಗ್ರಹದಿಂದ ಪರಿಹರಿಸಿಕೊಳ್ಳುತ್ತಾನೆ. ಹೃದಯದಲ್ಲಿ ಅಂತರ್ಯಾಮಿಯಾದ ನಾರಾಯಣನನ್ನು ಧ್ಯಾನಿಸಬೇಕು. ಎಂದಿಗೂ ಜೀವನು ಅವನಿಗೆ ಸಮಾನನೆಂದು ಭಾವಿಸಬಾರದು.
ಪ್ರಥಮಂ ತತ್ಕೃತೇನೈವ ಕರ್ಮಣಾ ಪರಿಮೃಚ್ಛತಿ |
ದ್ವಿತೀಯಂ ಸ್ವಪ್ನಯೋಗಂ ಚ ಕರ್ಮಣಾ ಪರಿಗಚ್ಛತಿ ॥56॥
ಮೊದಲನೆಯ ಅವಸ್ಥೆ ಎನಿಸಿದ ಜಾಗೃದವಸ್ಥೆಗೆ ಭಗವಂತನೇ ಪ್ರೇರಕನೆಂದು ಸಾಧಕನು ತಿಳಿದುಕೊಳ್ಳುತ್ತಾನೆ. ಸ್ವಪ್ನಾವಸ್ಥೆಯ ವ್ಯಾಪಾರಗಳಿಗೂ ಭಗವಂತನೇ ಕಾರಣನು ಎಂದು ಸಾಧಕನು ತಿಳಿದುಕೊಳ್ಳುತ್ತಾನೆ.
ಏತೈರಕ್ಷೈಃ ಸಮಾಪನ್ನಃ ಪ್ರತ್ಯಕ್ಷೋಽಸೌ ಸಮಾಸ್ಥಿತಃ |
ಸುಷುಪ್ತ್ಯಾಖ್ಯಸ್ತುರೀಯೋಽಸೌ ನ ಚ ಹ್ಯಾವರಣಾನ್ವಿತಃ ॥57॥
ಈ ರೀತಿಯಾದ ಜಾಗೃತ್-ಸ್ವಪ್ನಾವಸ್ಥೆಗಳಿಗೆ ನಿಯಾಮಕನಾಗಿ ಭಗವಂತನಿದ್ದಾನೆ ಎಂದು ಪ್ರತ್ಯಕ್ಷವಾಗಿ ಅರ್ಥಮಾಡಿಕೊಳ್ಳುವ ಸಾಧಕನು ಸುಷುಪ್ತಿ ಎಂಬ ಅವಸ್ಥೆಗೂ ಭಗವಂತನೇ ನಿಯಾಮಕನೆಂದು ಅಜ್ಞಾನವಿಲ್ಲದೆ ತಿಳಿದುಕೊಳ್ಳುತ್ತಾನೆ.
ಲೋಕವೃತ್ತ್ಯಾ ತಮೀಶಾನಂ ಯಜನ್ ಜುಹ್ವನ್ ಯಮೀ ಭವೇತ್ |
ಆತ್ಮನ್ಯಾಯಾಸಯೋಗೇನ ನಿಷ್ಕ್ರಿಯಂ ಸ ಪರಾತ್ಪರಮ್ ॥58॥
ಆಯಾಮೇ ತಾಂ ವಿಜಾನಾತಿ ಮಾಯೈಷಾ ಪರಮಾತ್ಮನಃ |
ಪ್ರಾತಿಭಾಸಿಕಸಾಮಾನ್ಯಾದ್ಬುದ್ಧೇರ್ಯಾ ಸಂವಿದಾತ್ಮಿಕಾ ॥59॥
ಯಾವನು ಭಗವಂತನನ್ನೇ ಯಜಿಸುತ್ತಾ, ಹೋಮಿಸುತ್ತಾ ಜಿತೇಂದ್ರಿಯನಾಗಿ ಧ್ಯಾನಿಸುತ್ತಿರುತ್ತಾನೋ, ತನ್ನಲ್ಲಿರುವ ಕ್ಲೇಶ ಸಂಬಂಧದಿಂದ ದೂರನಾಗಿ ಭಗವಂತನನ್ನು ಹೊಂದುತ್ತಾನೆ. ಯೋಗದ ಪಕ್ವತೆಯಲ್ಲಿ ಈ ಎಲ್ಲವೂ ಭಗವಂತನ ಇಚ್ಛೆಯಿಂದಲೇ ನಡೆಯುತ್ತದೆ ಎಂದು ತಿಳಿಯುತ್ತಾನೆ. ಪ್ರತಿಭಾಸ ಯೋಗ್ಯವಾದ ವಸ್ತುವನ್ನು ಬುದ್ಧಿಯು ತೋರಿಸುತ್ತಿದೆ ಎಂದು ಎಚ್ಚರಗೊಂಡು ನಿರ್ಲಿಪ್ತನಾಗಿರುತ್ತಾನೆ.
ಸ್ಫುಲಿಂಗಸತ್ತ್ವಸದೃಶಾದಗ್ನಿಭಾವೋ ಯಥಾ ಭವೇತ್ |
ಶಿಶೂನಾಮೇವಮಜ್ಞಾನಾಮಾತ್ಮಭಾವೋಽನ್ಯಥಾ ಸ್ಮೃತಃ ॥60॥
ಅಗ್ನಿಯು ತೃಣಾದಿಗಳಲ್ಲಿ ಸೇರಿದಾಗ ತೃಣಾದಿಗಳು ಅಗ್ನಿಯಂತೆ ಹೇಗೆ ಕಾಣುತ್ತವೋ ಅದರಂತೆ ತನ್ನದಲ್ಲದೇ ಇರುವ ದೇಹಾದಿಗಳಲ್ಲಿ ಜೀವನು ತನ್ನದ್ದೆಂದು ಭ್ರಾಂತನಾಗಿ ತಿಳಿದುಕೊಳ್ಳುತ್ತಾನೆ. ಅರಿಯದ ಬಾಲಕರಿಗೆ ತಪ್ಪಾದ ತಿಳುವಳಿಕೆ ಇಲ್ಲದೆ ಇರುವಂತೆ ಜೀವನು ತನ್ನದ್ದಲ್ಲದೇ ಇರುವ ಪದಾರ್ಥಗಳಲ್ಲಿ ಅನ್ಯಥಾ ತಿಳಿದವನಾಗಿದ್ದಾನೆ.
ಸಾಧ್ಯೇಽಪ್ಯವಸ್ತುಭೂತಾಖ್ಯೇ ಮಿತ್ರಾಮಿತ್ರಾದಯಃ ಕುತಃ |
ತದಭಾವೇ ತು ಶೋಕಾದ್ಯಾ ನ ವರ್ತಂತೇ ಸುರೇಶ್ವರ ॥61॥
ಯಾವ ವಸ್ತುಗಳು ತನ್ನದ್ದಲ್ಲ, ತನ್ನಿಂದ ಪಡೆಯಲು ಸಾಧ್ಯವಿಲ್ಲ ಎಂದು ನಿಶ್ಚಯ ಜ್ಞಾನ ಹುಟ್ಟಿದ ಬಳಿಕ ಮಿತ್ರತ್ವ, ಶತ್ರುತ್ವಾದಿಗಳು ಏಕೆ? ಅವುಗಳನ್ನು ತೊರೆದವನಿಗೆ ಹರ್ಷ-ಶೋಕಾದಿಗಳು ಇರುವುದಿಲ್ಲ.
ಏವಂ ಬುಧ್ಯಸ್ವ ಭಗವನ್ ಸಮಬುದ್ಧಿಂ ಸಮನ್ವಿಯಾತ್ |
ಉಪಾಯಮೇತದಾಖ್ಯಾತಂ ಮಾ ವಕ್ರಂ ಗಚ್ಛ ದೇವಪ ॥62॥
ಜ್ಞಾನೇನ ಪಶ್ಯತೇ ಕರ್ಮ ಜ್ಞಾನಿನಾಂ ನ ಪ್ರವರ್ತಕಮ್ |
ಯಾವದಾರಬ್ಧಮಸ್ಯೇಹ ತಾವನ್ನೈವೋಪಶಾಮ್ಯತಿ ॥63॥
ದೇವೇಂದ್ರನೇ, ಆದ್ದರಿಂದ ಸಮಬುದ್ಧಿಯೇ ಮನಶ್ಶಾಂತಿಗೆ ಉಪಾಯವೆಂದು ತಿಳಿದುಕೊ. ಅದನ್ನು ತಿಳಿದು ವಕ್ರವಾದ ದಾರಿಯಲ್ಲಿ ಸಾಗಬಾರದು. ನಿನ್ನ ಪ್ರಜ್ಞೆಯಿಂದಲೇ ಇದನ್ನು ವಿಚಾರ ಮಾಡಿ ನೋಡು. ಪರಮವು ಜ್ಞಾನಿಗಳಿಗೆ ಪ್ರವೃತ್ತಿಯನ್ನು ಹುಟ್ಟಿಸದು. ಹಾಗಿದ್ದರೂ ಪ್ರಾರಬ್ಧಕರ್ಮವು ಮುಗಿಯುವ ತನಕ ಕರ್ಮಬಂಧನವನ್ನು ಬಿಡಿಸಿಕೊಳ್ಳಲಾಗದು.
ತದಂತೇ ತಂ ಪ್ರಯಾತ್ಯೇವ ನ ವಿದ್ವಾನಿತಿ ಮೇ ಮತಿಃ |
ಯದಸ್ಯ ವಾಚಕಂ ವಕ್ಷ್ಯೇಯೇ ತಸ್ಮಾದೇತದ್ ಭವೇತ್ ಸದಾ ॥64॥
ಪರಮಾತ್ಮನನ್ನು ಹೇಳುವ ರಾಮ-ಕೃಷ್ಣಾದಿ ನಾಮಗಳು ಏನಿವೆಯೋ ಅವುಗಳನ್ನು ಕೊಂಡಾಡುವ ಇಂದ್ರಿಯಗಳಿಂದ ಸಹಿತನಾದ ಜೀವನು ಸಂಸಾರದ ಕಷ್ಟಗಳನ್ನು ದಾಟುತ್ತಾನೆ. ಭಗವಂತನ ನಾಮಸಂಕೀರ್ತನೆಯ ಉಪಾಯದಿಂದ ಸಂಸಾರವನ್ನು ನೀಗಬಹುದು. ಅಲ್ಲಿಯ ಭಗವಂತನ ಪ್ರಜ್ಞೆಯು ಜಾಗೃತವಾಗದ ತನಕ ಸಾಧಕನು ವಿದ್ವಾಂಸನಾಗುವುದಿಲ್ಲ ಎಂದೇ ನನ್ನ ಮತಿಯು.
ತೇನ ತೇನ ಚ ಭಾವೇನ ಅಪಾಯಂ ತತ್ರ ಪಶ್ಯತಿ |
ಸ್ಥಾನಭೇದೇಷು ವಾಗೇಷಾ ತಾಲುಸಂಸ್ಥಾ ಯಥಾ ತಥಾ ॥65॥
ಆಯಾ ಪದಾರ್ಥಗಳಲ್ಲಿಯೇ ಆಸಕ್ತವಾದಾಗ ಆ ಪದಾರ್ಥಗಳಿಂದಲೇ ಅಪಾಯವು ಒದಗಿಬರುತ್ತದೆ. ತಾಲುವಿನಲ್ಲಿರುವ ವಾಗಿಂದ್ರಿಯವು ಸ್ಥಾನಭೇದಗಳನ್ನು ಮುಟ್ಟಿದಾಗ ಯಾವ ರೀತಿಯಾಗಿ ಬೇರೆ ಬೇರೆ ಶಬ್ದ ಪ್ರಯೋಗಗಳಿಂದ ಅಪಾಯವನ್ನು ಹೊಂದುತ್ತದೋ ಆ ರೀತಿಯಾಗಿ ಮನಸ್ಸಿನಲ್ಲಿ ಭಾವಿಸುವ ತಪ್ಪಾದ ವಿಷಯಗಳ ಅಭಿಲಾಷೆಯು ಅಪಾಯವನ್ನೇ ಹುಟ್ಟಿಸುತ್ತದೆ. ನಾಲಿಗೆ ಇದ್ದರೂ ಬೇರೆ ಬೇರೆ ಸ್ಥಾನಗಳಲ್ಲಿ ನಾಲಿಗೆಯ ಸ್ಪರ್ಶವಾಗಿ ಶಬ್ದೋಚ್ಚಾರಣೆಯಾದಾಗ ತಪ್ಪಾದ ಶಬ್ದಗಳ ಪ್ರಯೋಗದಿಂದ ಇದೇ ನಾಲಿಗೆಯಿಂದಲೇ ಅಪಾಯ ಒದಗಿಬರುತ್ತದೆ. ಇದೇ ನಾಲಿಗೆಯಲ್ಲಿ ರಾಮ- ಕೃಷ್ಣಾದಿ ನಾಮಗಳನ್ನು ಉಚ್ಚರಿಸಿದಾಗ ಯೋಗಕ್ಕೆ ಇದೇ ನಾಲಿಗೆ ಉಪಾಯವೂ ಆಗುತ್ತದೆ ಎಂದು ಭಾವ.
ತದ್ವದ್ ಬುದ್ಧಿಗತಾ ಹ್ಯರ್ಥಾ ಬುದ್ಧಿಮಾತ್ಮಗತಃ ಸದಾ ॥66॥
ಇದರಂತೆ ಪದಾರ್ಥಗಳೆಲ್ಲವೂ ಬುದ್ಧಿಯನ್ನು ಆಶ್ರಯಿಸಿವೆ. ಆ ಬುದ್ಧಿಯು ಪರಮಾತ್ಮನಲ್ಲಿ ಸ್ಥಿರವಾಗಿ ಯಾವಾಗಲೂ ಇದೆ.
ಸಮಸ್ತಸಂಕಲ್ಪವಿಶೇಷಯುಕ್ತಂ

ಪರಂ ಪರಾಣಾಂ ಪರಮಂ ಮಹಾತ್ಮಾ |
ತ್ರಯ್ಯಂತವಿದ್ಭಿಃ ಪರಿಗೀಯತೇಽಸೌ
ವಿಷ್ಣುರ್ವಿಭುರ್ವಾಸ್ತಿ ಗುಣೋ ನ ನಿತ್ಯಮ್ ॥67॥
ಎಲ್ಲ ರೀತಿಯಾದ ಸಂಕಲ್ಪಗಳಿಂದ ಮುಕ್ತನಾಗಿ ಪರಾತ್ಪರನೂ, ಪರಮಾತ್ಮನೂ, ಸರ್ವವ್ಯಾಪಕನೂ, ಮಹಾತ್ಮನೂ ಆದ ವಿಷ್ಣುವಿನ ಸ್ವರೂಪವನ್ನು ವೇದಾಂತಿಗಳು ಈ ರೀತಿಯಾಗಿ ನಿರೂಪಿಸಿದ್ದಾರೆ. ಅವನಲ್ಲಿ ತ್ರಿಗುಣಗಳ ಸಂಬಂಧವು ಇರುವುದಿಲ್ಲ.
ವರ್ಣೇಷು ಲೋಕೇಷು ವಿಶೇಷಣೇಷು
ಸ ವಾಸುದೇವೋ ವಸನಾನ್ಮಹಾತ್ಮಾ |
ಗುಣಾನುರೂಪಂ ಸ ಚ ಕರ್ಮರೂಪಂ
ದದಾತಿ ಸರ್ವಸ್ಯ ಸಮಸ್ತರೂಪಮ್ |
ನ ಸಂದೃಶೇ ತಿಷ್ಠತಿ ರೂಪಮಸ್ಯ
ನ ಚಕ್ಷುಷಾ ಪಶ್ಯತಿ ಕಶ್ಚಿದೇನಮ್ ॥68॥
ಅವನು ಲೋಕದೊಳಗಿನ ಸಮಸ್ತ ಜಾತಿಗಳಲ್ಲಿಯೂ, ಅವುಗಳನ್ನು ಅನುಸರಿಸಿದ ವಿಶೇಷ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿದ್ದಾನೆ. ಆದ್ದರಿಂದಲೇ ವಾಸುದೇವನೆಂದು ಕರೆಯಲ್ಪಡುತ್ತಾನೆ. ಗುಣಗಳಿಂದ, ಕರ್ಮಗಳಿಗೆ ಅನುಸಾರವಾಗಿ ಸಮಸ್ತ ಫಲಗಳನ್ನು ಜಗತ್ತಿಗೆ ನೀಡುತ್ತಾನೆ. ಅವುಗಳನ್ನು ಚೆನ್ನಾಗಿ ನೋಡಲು ಕಣ್ಣಿನಿಂದ ಸಾಧ್ಯವಿಲ್ಲ. ಯಾರೂ ಅವನನ್ನು ಕಣ್ಣಿನಿಂದ ನೋಡಲಾರರು.
ಭಕ್ತ್ಯಾ ಚ ಧೃತ್ಯಾ ಚ ಸಮಾಹಿತಾತ್ಮಾ
ಜ್ಞಾನಸ್ವರೂಪಂ ಪರಿಪಶ್ಯತೀಹ |
ವದಂತಿ ತನ್ಮೇ ಭಗವಾನ್ ದದೌ ಸ
ಸ ಏವ ಶೇಷಂ ಮಘವಾನ್ ಮಹಾತ್ಮಾ ॥69॥
ಏವಂ ಮಮೋಪಾಯಮವೈಹಿ ಶಕ್ರ
ತಸ್ಮಾಲ್ಲೋಕೋ ನಾಸ್ತಿ ಮಹ್ಯಂ ಸದೈವ ॥70॥
ಭಗವಂತನಲ್ಲೇ ನೆಲೆಗೊಂಡಿರುವ ಧೃತಿಯಿಂದ, ಭಕ್ತಿಯಿಂದ ಜ್ಞಾನಸ್ವರೂಪಿಯಾದ ಭಗವಂತನನ್ನು ಕಾಣಬಲ್ಲರು. ಈ ರೀತಿಯಾಗಿ ಗುರುಗಳು ನನಗೆ ಉಪದೇಶಿಸಿದ್ದಾರೆ. ಭಗವಂತನೇ ಅಂತಹ ಗುರುಗಳನ್ನು ಒದಗಿಸಿದ್ದಾನೆ. ಇಂದ್ರದೇವನೇ, ಕೊನೆಗೆ ಸ್ಥಿರವಾಗಿ ಉಳಿಯುವ ಪದಾರ್ಥ ಭಗವಂತನೊಬ್ಬನೇ ಆಗಿದ್ದಾನೆ. ಈ ರೀತಿಯಾಗಿ ನಾನು ಹೇಳುವ ಉಪಾಯಗಳನ್ನು ಇಂದ್ರನೇ ನೀನು ತಿಳಿದುಕೋ ಆದ್ದರಿಂದ ಅವನಿಗಿಂತ ಅಧಿಕವಾದ ಪದಾರ್ಥವು ಈ ಜಗತ್ತಿನಲ್ಲಿ ಇರುವುದಿಲ್ಲ.
ಭೀಷ್ಮಃ
ಇತ್ಯುಕ್ತೋ ದೈತ್ಯಪತಿನಾ ಶಕ್ರೋ ವಿಸ್ಮಯಮಾಗಮತ್ |
ಪ್ರೀತಿಮಾಂಶ್ಚ ತದಾ ರಾಜಂಸ್ತದ್ವಾಕ್ಯಂ ಪ್ರತ್ಯಪೂಜಯತ್ ॥71॥
ಭೀಷ್ಮ ದೈತ್ಯಪತಿಯಾದ ಪ್ರಹ್ಲಾದನು ಈ ರೀತಿಯಾಗಿ ಉಪದೇಶಿಸಲು ಇಂದ್ರನು ಆಶ್ಚರ್ಯವನ್ನು ಹೊಂದಿದನು. ಅವನಲ್ಲಿ ಪ್ರೀತಿಯುಳ್ಳವನೂ ಆದನು. ಅವನು ಹೇಳಿದ ವಿಚಾರವನ್ನು ಅಭಿನಂದಿಸಿದನು.
ಸ ತದಾಭ್ಯರ್ಚ್ಯ ದೈತ್ಯೇಂದ್ರಂ ತ್ರೈಲೋಕ್ಯಪತಿರೀಶ್ವರಃ |
ಅಸುರೇಂದ್ರಮುಪಾಮಂತ್ರ್ಯ ಜಗಾಮ ಸ್ವಂ ನಿವೇಶನಮ್ ॥72॥
ತ್ರೈಲೋಕ್ಯಪತಿಯಾದ ಇಂದ್ರನು ಈ ಮಾತುಗಳಿಂದ ಸಂತುಷ್ಟನಾಗಿ ಪ್ರಹ್ಲಾದನನ್ನು ಆರಾಧಿಸಿ, ಪ್ರಹ್ಲಾದನನ್ನು ತನ್ನ ಲೋಕಕ್ಕೆ ಆಹ್ವಾನಿಸಿ ತನ್ನ ಮನೆಯನ್ನು ಕುರಿತು ಹೊರಟನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂಬತ್ತನೆಯ ಅಧ್ಯಾಯ
ಇಂದ್ರ ಮತ್ತು ಬಲಿಯ ಸಂವಾದ. ಇಂದ್ರನು ತನ್ನನ್ನು ಅವಮಾನವಾಗುವಂತೆ ಮಾತನಾಡಿದ ಎಂದು ಕತ್ತೆ ರೂಪದಿಂದ ಬಲಿಯು ಆಗಮಿಸಿ, ಅವನಿಗೆ ಗರ್ವಭಂಗವಾಗುವಂತೆ ಉತ್ತರವನ್ನು ನೀಡಿದ ಪ್ರಸಂಗವನ್ನು ಯುಧಿಷ್ಠಿರನಿಗೆ ಭೀಷ್ಮರು ನಿರೂಪಿಸಿದುದು.
ಯುಧಿಷ್ಠಿರಃ
ಯಯಾ ಬುದ್ಧ್ಯಾ ಮಹೀಪಾಲೋ ಭ್ರಷ್ಟಶ್ರೀರ್ವಿಚರೇನ್ಮಹೀಮ್ |
ಕಾಲದಂಡವಿನಿಷ್ಪಿಷ್ಟಸ್ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ರಾಜನಿಗೆ ಯಾವ ರೀತಿಯಾದ ಬುದ್ಧಿಯು ಇದ್ದರೆ ಕಾಲದಂಡದಿಂದ ಹಿಂಡಲ್ಪಟ್ಟವನಾದರೂ, ರಾಜ್ಯಭ್ರಷ್ಟನಾದರೂ ಭೂಮಿಯಲ್ಲಿ ಓಡಾಡುತ್ತಾನೆ? ಈ ವಿಷಯವನ್ನು ನನಗೆ ತಿಳಿಸು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |

ವಾಸವಸ್ಯ ಚ ಸಂವಾದಂ ಬಲೇರ್ವೈರೋಚನಸ್ಯ ಚ ॥2॥
ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಇಂದ್ರನಿಗೂ ಮತ್ತು ವಿರೋಚನನ ಮಗನಾದ ಬಲಿಗೂ ನಡೆದ ಪುರಾತನವಾದ ಇತಿಹಾಸರೂಪವಾದ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಪಿತಾಮಹಮುಪಾಗಮ್ಯ ಪ್ರಣಿಪತ್ಯ ಕೃತಾಂಜಲಿಃ |
ಸರ್ವಾನೇವಾಸುರಾನ್ ಜಿತ್ವಾ ಬಲಿಂ ಪಪ್ರಚ್ಛ ವಾಸವಃ ॥3॥
ಒಮ್ಮೆ ಇಂದ್ರನು ಎಲ್ಲ ಅಸುರರನ್ನು ಜಯಿಸಿ, ಪಿತಾಮಹರಾದ ಬ್ರಹ್ಮನ ಬಳಿ ಬಂದು ಬದ್ಧಾಂಜಲಿಯಾಗಿ ನಮಸ್ಕರಿಸಿ, ತನ್ನ ರಾಜ್ಯಭರಣದ ಕಾಲದಲ್ಲಿ ಬಲಿಯು ಕಾಣಿಸದೆ ಇದ್ದಾಗ ಬಲಿ ಚಕ್ರವರ್ತಿಯು ಇದ್ದಾನೆಯೇ ಎಂದು ಬ್ರಹ್ಮದೇವರ ಬಳಿ ಪ್ರಶ್ನಿಸಿದನು.
ಯಸ್ಯ ಸ್ಮ ದದತೋ ವಿತ್ತಂ ನ ಕದಾಚನ ಹೀಯತೇ |
ತಂ ಬಲಿಂ ನಾಧಿಗಚ್ಛಾಮಿ ಬ್ರಹ್ಮನ್ನಾಚಕ್ಷ್ವ ಮೇ ಬಲಿಮ್ ॥4॥
ಬ್ರಹ್ಮದೇವ, ಯಾವ ವ್ಯಕ್ತಿಯು ದಾನ ಮಾಡುತ್ತಿದ್ದರೂ ಅವನ ಬೊಕ್ಕಸವು ಎಂದಿಗೂ ಬರಿದಾಗಲಿಲ್ಲವೋ ಅಂತಹ ಬಲಿಚಕ್ರವರ್ತಿಯನ್ನು ನಾನು ಎಷ್ಟು ಹುಡುಕಿದರೂ ಕಾಣದವನಾಗಿದ್ದಾನೆ. ಅವನೆಲ್ಲಿದ್ದಾನೆಂಬುದನ್ನು ನನಗೆ ತಿಳಿಸಿ.
ಸ ಏವ ಹ್ಯಸ್ತಮಯತೇ ಸ ಸ್ಮ ವಿದ್ಯೋತತೇ ದಿಶಃ |
ಸ ವರ್ಷತಿ ಸ್ಮ ವರ್ಷಾಣಿ ಯಥಾಕಾಲಮತಂದ್ರಿತಃ |
ತಂ ಬಲಿಂ ನಾಧಿಗಚ್ಛಾಮಿ ಬ್ರಹ್ಮನ್ನಾಚಕ್ಷ್ವ ಮೇ ಬಲಿಮ್ ॥5॥
ಯಾವ ಬಲಿಯು ಸೂರ್ಯನಾಗಿ ದಿಕ್ಕುಗಳನ್ನೆಲ್ಲ ಬೆಳಗಿ ಅಸ್ತಮಿಸುತ್ತಿದ್ದನೋ ಅವನೇ ಸಕಾಲಕ್ಕೆ ಪ್ರಾಣಿಗಳಿಗಾಗಿ ಮಳೆ ಸುರಿಸುತ್ತಿದ್ದನು. ಅಂತಹ ಬಲಿಯು ಈಗ ಕಣ್ಣಿಗೂ ಕಾಣಿಸುತ್ತಿಲ್ಲವಲ್ಲ. ಈಗ ಅವನು ಎಲ್ಲಿ ಅವಿತುಕೊಂಡಿದ್ದಾನೆ? ನನಗೆ ತಿಳಿಸಿರಿ.
ಸ ವಾಯುರ್ವರುಣಶ್ಚೈವ ಸ ರವಿಃ ಸ ಚ ಚಂದ್ರಮಾಃ |
ಸೋಽಗ್ನಿಸ್ತಪತಿ ಭೂತಾನಿ ಪೃಥಿವೀ ಚ ಭವತ್ಯುತ |
ತಂ ಬಲಿಂ ನಾಧಿಗಚ್ಛಾಮಿ ಬ್ರಹ್ಮನ್ನಾಚಕ್ಷ್ವ ಮೇ ಬಲಿಮ್ ॥6॥
ನನ್ನ ಅಧಿಕಾರಕ್ಕಿಂತ ಮೊದಲು ಯಾವ ಬಲಿಯು ವಾಯುವಾಗಿ, ವರುಣನಾಗಿ ಬೆಳಕನ್ನು ಕೊಡುವ ಸೂರ್ಯ-ಚಂದ್ರರಾಗಿಯೂ, ಉಷ್ಣವನ್ನು ಕೊಡುವ ಅಗ್ನಿಯಾಗಿಯೂ, ಜಲವಾಗಿಯೂ, ಪೃಥಿವಿಯಾಗಿಯೂ ಇರುತ್ತಿದ್ದನೋ ಅಂತಹ ಬಲಿಯ ಸುಳಿವನ್ನೇ ನಾನು ಕಾಣುತ್ತಿಲ್ಲ. ಈಗ ಅವನು ಎಲ್ಲಿದ್ದಾನೆ?
ಬ್ರಹ್ಮಾ
ನೈತತ್ ತೇ ಸಾಧು ಮಘವನ್ ಯದೇತದನುಪೃಚ್ಛಸಿ |
ಪೃಷ್ಟಸ್ತು ನಾನೃತಂ ಬ್ರೂಯಾತ್ತಸ್ಮಾದ್ ವಕ್ಷ್ಯಾಮಿ ತೇ ಬಲಿಮ್ ॥7॥
ಬ್ರಹ್ಮಾ ಇಂದ್ರನೇ, ನೀನು ಗರ್ವದಿಂದ ಈ ರೀತಿಯಾಗಿ ಮಾತುಗಳನ್ನಾಡುವುದು ಯೋಗ್ಯವಾಗುವುದಿಲ್ಲ. ಆದರೆ ಪ್ರಶ್ನೆ ಮಾಡಿದವನಿಗೆ ಸುಳ್ಳು ಹೇಳಬಾರದು ಎಂಬ ಕಾರಣದಿಂದ ನಿನಗೆ ರಹಸ್ಯವನ್ನು ಹೇಳುತ್ತೇನೆ.
ಉಷ್ಟ್ರೇಷು ಯದಿ ವಾ ಗೋಷು ಖರೇಷ್ವಶ್ವೇಷು ವಾ ಪುನಃ |
ವರಿಷ್ಠೋ ಭವಿತಾ ಜಂತುಃ ಶೂನ್ಯಾಗಾರೇ ಶಚೀಪತೇ ॥8॥
ಈಗ ಬಲಿಯು ಹಸು, ಕತ್ತೆ, ಕುದುರೆ ಇವುಗಳಲ್ಲಿ ಯಾವುದೋ ಒಂದು ಜಂತುವಾಗಿ ಆ ಜಾತಿಯವರಿಗೆ ಮುಖ್ಯನೆನಿಸಿಕೊಂಡು ಒಂದು ಹಾಳು ಮನೆಯನ್ನು ಸೇರಿರುತ್ತಾನೆ ಎಂದು ಉತ್ತರಿಸಿದರು.
ಶಕ್ರಃ
ಯದಿ ಸ್ಮ ಬಲಿನಾ ಬ್ರಹ್ಮನ್ ಶೂನ್ಯಾಗಾರೇ ಸಮೇಯಿವಾನ್ |
ಹನ್ಯಾಮೇನಂ ನ ವಾ ಹನ್ಯಾಂ ತದ್ ಬ್ರಹ್ಮನ್ನನುಶಾಧಿ ಮಾಮ್ ॥9॥
ಇಂದ್ರ ಹಾಗಾದರೆ ಶೂನ್ಯಗೃಹದಲ್ಲಿ ಬಲಿಯು ಇರುವುದಾದರೆ ಅವನನ್ನು ನಾನು ಈಗಲೇ ಕೊಂದು ಬರಲೆ? ಅಥವಾ ಹಾಗೆ ಬಿಡಲೆ? ಈ ವಿಷಯದಲ್ಲಿ ನಿಮ್ಮ ಆದೇಶವೇನು? ನನಗೆ ಹೇಳಿರಿ.
ಬ್ರಹ್ಮಾ
ಮಾ ಸ್ಮ ಶಕ್ರ ಬಲಿಂ ಹಿಂಸೀರ್ನ ಬಲಿರ್ವಧಮರ್ಹತಿ |
ನ್ಯಾಯಾಂಸ್ತು ಶಕ್ರ ಪ್ರಷ್ಟವ್ಯಸ್ತ್ವಯಾ ವಾಸವ ಕಾಮ್ಯಯಾ ॥10॥
ಬ್ರಹ್ಮಾ ದೇವೇಂದ್ರನೇ, ಆ ಬಲಿಯನ್ನು ಎಂದಿಗೂ ನೀನು ವಧೆ ಮಾಡಬೇಡ. ನೀನು ಅವನನ್ನು ಸಂಧಿಸುವ ಪಕ್ಷದಲ್ಲಿ ನಿನಗೆ ಬೇಕಾದ ಧರ್ಮಗಳನ್ನು ನೀನು ಅವನಿಂದ ಕೇಳಿ ತಿಳಿಯುವುದು ಯೋಗ್ಯ ಎಂದು ನನಗೆ ಅನಿಸುತ್ತದೆ.
ಭೀಷ್ಮಃ
ಏವಮುಕ್ತೋ ಭಗವತಾ ಮಹೇಂದ್ರಃ ಪೃಥಿವೀಂ ತದಾ |
ಚಚಾರೈರಾವತಸ್ಕಂಧಮಧಿರುಹ್ಯ ಶ್ರಿಯಾ ವೃತಃ ॥11॥
ಭೀಷ್ಮ ಈ ರೀತಿಯಾಗಿ ಚತುರ್ಮುಖ ಬ್ರಹ್ಮದೇವರು ಹೇಳಿದ ಕೂಡಲೇ ಇಂದ್ರನು ಅಟ್ಟಹಾಸವನ್ನು ಮಾಡುತ್ತಾ ಐರಾವತದ ಬೆನ್ನನ್ನೇರಿ ಬಹಳ ವೈಭವದೊಡನೆ ಬಲಿಯನ್ನು ಭೂಮಿಯಲ್ಲಿ ಹುಡುಕುತ್ತಾ ಹೊರಟನು.
ತತೋ ದದರ್ಶ ಸ ಬಲಿಂ ಖರವೇಷೇಣ ಸಂವೃತಮ್ |
ಯಥಾಖ್ಯಾತಂ ಭಗವತಾ ಶೂನ್ಯಾಗಾರಕೃತಾಲಯಮ್ ॥12॥
ಆ ಸಂದರ್ಭದಲ್ಲಿ ಬ್ರಹ್ಮನು ಹೇಳಿದಂತೆ ಹಾಳಾದ ಮನೆಯೊಂದರಲ್ಲಿ ಕತ್ತೆ ರೂಪದಿಂದ ವಾಸಿಸುತ್ತಿದ್ದ ಬಲಿಯನ್ನು ಕಂಡನು. ಆಗ ಇಂದ್ರನು ಕತ್ತೆಯನ್ನು ನೋಡಿ ಹೇಳುತ್ತಾನೆ.

ಶಕ್ರಃ
ಖರಯೋನಿಮನುಪ್ರಾಪ್ತಸ್ತುಷಭಕ್ಷೋಽಸಿ ದಾನವ |
ಇಯಂ ತೇ ಯೋನಿರಧಮಾ ಶೋಚಸ್ಯಾಹೋ ನ ಶೋಚಸಿ ॥13॥
ಇಂದ್ರ ಎಲೈ ದಾನವನೇ, ಈಗ ನೀನು ಕತ್ತೆಯ ಜನ್ಮವನ್ನೆತ್ತಿ ಧಾನ್ಯದ ಹೊಟ್ಟನ್ನು ತಿಂದು ಜೀವಿಸುತ್ತಿರುವಿ. ಎಂದಿಗೂ ಈ ಜೀವನವು ಯೋಗ್ಯವಾದುದಲ್ಲ. ಇದರಿಂದ ಬಹಳ ದುಃಖವನ್ನು ಹೊಂದಿರುತ್ತೀಯಲ್ಲವೆ?
ಅದೃಷ್ಟಂ ಬತ ಪಶ್ಯಾಮಿ ದ್ವಿಷತಾಂ ವಶಮಾಗತಮ್ |
ಶ್ರಿಯಾ ವಿಹೀನಂ ಮಿತ್ರೈಶ್ಚ ಭ್ರಷ್ಟವೀರ್ಯಪರಾಕ್ರಮಮ್ ॥14॥
ಅದೃಷ್ಟದ ವ್ಯಾಪಾರವನ್ನು ನಾನು ನೋಡುತ್ತಿದ್ದೇನೆ. ಐಶ್ವರ್ಯವನ್ನೆಲ್ಲ ಕಳೆದುಕೊಂಡು, ಮಿತ್ರರನ್ನು ತೊರೆದು, ಶತ್ರುವಶನಾಗಿ, ನಿರ್ವೀರ್ಯನಾಗಿ, ಪರಾಕ್ರಮವನ್ನೆಲ್ಲ ಕಳೆದುಕೊಂಡು ಶೋಚನೀಯ ಅವಸ್ಥೆಯಲ್ಲಿರುವೆ.
ಯತ್ತದ್ ಯಾನಸಹಸ್ರೇಣ ಜ್ಞಾತಿಭಿಃ ಪರಿವಾರಿತಃ |
ಲೋಕಾನ್ ಪ್ರತಾಪಯನ್ ಸರ್ವಾನ್ ಯಾಸ್ಯಸ್ಮಾನವಿತರ್ಕಯನ್ ॥
ಹಿಂದೆ ನೀನು ಅನುಭವಿಸಿದ ವೈಭವಗಳೆಷ್ಟು? ನೀನು ಹೊರಟರೆ ಸಾವಿರಾರು ವಾಹನಗಳು ನಿನ್ನ ಹಿಂದೆ ಬರುತ್ತಿದ್ದವು. ಎಷ್ಟೋ ಮಂದಿ ಜ್ಞಾತಿಗಳು ನಿನ್ನನ್ನು ಹಿಂಬಾಲಿಸುತ್ತಿದ್ದರು. ನೀನು ನಿನ್ನ ಪರಾಕ್ರಮದಿಂದ ಲೋಕಗಳನ್ನೆಲ್ಲ ತಾಪಗೊಳಿಸುತ್ತಾ ದೇವತೆಗಳಾದ ನಮ್ಮನ್ನು ಲಕ್ಷ್ಯಮಾಡದೆ ಸುತ್ತುತ್ತಿದ್ದೆ.
ತ್ವನ್ಮುಖಾಶ್ಚೈವ ದೈತೇಯಾ ವ್ಯತಿಷ್ಠಂಸ್ತವ ಶಾಸನೇ |
ಅಕೃಷ್ಟಪಚ್ಯಾ ಪೃಥಿವೀ ತವೈಶ್ವರ್ಯೇ ಬಭೂವ ಹ |
ಇದಂ ಚ ತೇಽದ್ಯ ವ್ಯಸನಂ ಶೋಚಸ್ಯಾಹೋ ನ ಶೋಚಸಿ ॥16॥
ದೈತ್ಯರೆಲ್ಲರು ನಿನ್ನನ್ನು ಪ್ರಭುವನ್ನಾಗಿ ಭಾವಿಸಿ ನಿನ್ನ ಶಾಸನಕ್ಕೆ ಬದ್ಧರಾಗಿದ್ದರು. ನಿನ್ನ ಐಶ್ವರ್ಯದಲ್ಲಿ ಭೂಮಿಯು ಕೃಷಿ ಮಾಡದೆ ಫಲ ನೀಡುತ್ತಿತ್ತು. ಅಂತಹ ನಿನಗೆ ಈ ಅವಸ್ಥೆ ಒದಗಿತಲ್ಲ! ಇದಕ್ಕಾಗಿ ನೀನು ದುಃಖಪಡುತ್ತಿದ್ದೀಯೋ ಅಥವಾ ದುಃಖ ಪಡುತ್ತಿಲ್ಲವೋ?
ಯದಾತಿಷ್ಠಃ ಸಮುದ್ರಸ್ಯ ಪೂರ್ವಕೂಲೇ ವಿಲೇಲಿಹನ್ |
ಜ್ಞಾತಿಭ್ಯೋ ವಿಭಜನ್ ವಿತ್ತಂ ತದಾಸೀತ್ತೇ ಮನಃ ಕಥಮ್ ॥17॥
ಹಿಂದೆ ನೀನು ಸಮುದ್ರದ ಪೂರ್ವತೀರದಲ್ಲಿ ವಾಸ ಮಾಡುತ್ತಾ, ನಿನ್ನ ಬಂಧುಗಳಿಗೆಲ್ಲ ಧನವನ್ನು ಯಥೇಚ್ಛವಾಗಿ ಹಂಚಿಕೊಡುವಾಗ ನಿನ್ನ ಮನಸ್ಸು ಹೇಗಿತ್ತು? ಈಗ ಹೇಗಿದೆ?
ಯತ್ತೇ ಸಹಸ್ರಸಮಿತಾ ನನೃತುರ್ದೇವಯೋಷಿತಃ |
ಬಹೂನಿ ವರ್ಷಪೂಗಾನಿ ವಿಹಾರೇ ದೀಪ್ಯತಃ ಶ್ರಿಯಾ ॥18॥
ಹಿಂದೆ ನೀನು ಐಶ್ವರ್ಯದಿಂದ ಬೆಳಗುತ್ತಿರುವಾಗ ಸಾವಿರಾರು ಮಂದಿ ಅಪ್ಸರಾಸ್ತ್ರೀಯರು ಕಾಂತಿಯಿಂದ ಬೆಳಗುತ್ತಾ ನಿನ್ನ ಮುಂದೆ ನರ್ತನ ಮಾಡುತ್ತಿರುವುದನ್ನು ನೋಡಿದಾಗ ನಿನ್ನ ಮನಸ್ಸು ಹೇಗಿತ್ತು? ಈಗ ಹೇಗಿದೆ?
ಸರ್ವಾಃ ಪುಷ್ಕರಮಾಲಿನ್ಯಃ ಸರ್ವಾಃ ಕಾಂಚನಸಪ್ರಭಾಃ |
ಕಥಮದ್ಯ ತದಾ ಚೈವ ಮನಸ್ತೇ ದಾನವೇಶ್ವರ ॥19॥
ಪದ್ಮಮಾಲೆಗಳನ್ನು ಧರಿಸಿ, ಬಂಗಾರದ ಪ್ರಭೆಗಳಿಂದ ಬೆಳಗುವ ಅಂತಹ ಸ್ತ್ರೀಯರು ಇಲ್ಲದಿರುವಾಗ ಸ್ಥಿತಿ ಹೇಗಿದೆ? ಇದ್ದಾಗ ಸ್ಥಿತಿ ಹೇಗಿತ್ತು?
ಛತ್ರಂ ತವಾಸೀತ್ ಸುಮಹತ್ ಸೌವರ್ಣಂ ಮಣಿಭೂಷಿತಮ್ |
ನನೃತುರ್ಯತ್ರ ಗಂಧರ್ವಾಃ ಷಟ್ ಹಸ್ರಾಣಿ ಸಪ್ತಧಾ ॥20॥
ನಿನಗೆ ಶ್ರೇಷ್ಠವಾದ, ಮಣಿಭೂಷಿತವಾದ ಬಂಗಾರದ ಛತ್ರವು ಹಿಂದೆ ಇತ್ತು. ನಲವತ್ತೆರಡು ಸಾವಿರ ಮಂದಿ ಗಂಧರ್ವರು ನಿನ್ನ ಮುಂದೆ ಗಾನ-ನರ್ತನಗಳನ್ನು ಮಾಡುತ್ತಿದ್ದರು.
ಯೂಪಸ್ತವಾಸೀತ್ ಸುಮಹಾನ್ಯಜತಃ ಸರ್ವಕಾಂಚನಃ |
ಯತ್ರಾದದಃ ಸಹಸ್ರಾಣಾಮಯುತಾನಿ ಗವಾಂ ದಶ ॥21॥
ನೀನು ಯಜ್ಞವನ್ನು ಮಾಡಿದಾಗ ಬಂಗಾರದ ಗಟ್ಟಿಯಿಂದಲೇ ಯೂಪಸ್ತಂಭಗಳನ್ನು ಮಾಡಿಸುತ್ತಿದ್ದೆ. ಲಕ್ಷೋಪಲಕ್ಷ ಗೋವುಗಳನ್ನು ದಾನ ಮಾಡಿರುವಿ.
ಯದಾ ತು ಪೃಥಿವೀಂ ಸರ್ವಾಂ ಯಜಮಾನೋಽನುಪರ್ಯಯಾಃ |
ಶಮ್ಯಾಕ್ಷೇಪೇಣ ವಿಧಿನಾ ತದಾಸೀತ್ ಕಿಂ ನು ತೇ ಹೃದಿ ॥22॥
ಸಮಗ್ರ ಭೂಮಂಡಲಕ್ಕೆ ನೀನು ಯಜಮಾನನಾಗಿ ಮೆರೆಯುತ್ತಿದ್ದಾಗ ಶಮ್ಯಾಕ್ಷೇಪಣ ಎಂಬ ವಿಧಿಯಿಂದ ಅದ್ಭುತವಾದ ಯಾಗಗಳನ್ನು ಮಾಡುತ್ತಿದ್ದಿ. ಅಂತಹ ಯಾಗಗಳನ್ನು ಅನುಷ್ಠಾನ ಮಾಡುವಾಗ ನಿನ್ನ ಹೃದಯ ಹೇಗಿತ್ತು? ಈಗ ಹೇಗಿರುವಿ?
ವ್ಯಾಖ್ಯಾನ ವಿಶೇಷ ಶಮ್ಯಾಕ್ಷೇಪಣ ವಿಧಿ ಎಂದರೆ ಬನ್ನಿಮರದ ಸಮಿತ್ತನ್ನು ಯಜ್ಞದ ರಕ್ಷಣೆಗಾಗಿ ಹತ್ತುದಿಕ್ಕುಗಳಲ್ಲೂ ಬಲಾಢ್ಯನೊಬ್ಬನು ಬೀಸಿ ಎಸೆದು, ಮಧ್ಯದಲ್ಲಿ ಯಜ್ಞವನ್ನು ಮಾಡುತ್ತಿದ್ದರು. ಇದಕ್ಕೆ ದೇವ-ಯಜನ ಎಂದು ಹೆಸರು. ಈ ವಿಧಿಯಿಂದ ಬಲಿಚಕ್ರವರ್ತಿಯು ಅನೇಕ ಯಾಗಗಳನ್ನು ಆಚರಿಸಿರುತ್ತಾನೆ.
ನ ತೇ ಪಶ್ಯಾಮಿ ಭೃಂಗಾರಂ ನ ಛತ್ರಂ ವ್ಯಜನಂ ನ ಚ |
ಬ್ರಹ್ಮದತ್ತಾಂ ಚ ತೇ ಮಾಲಾಂ ನ ಪಶ್ಯಾಮ್ಯಸುರಾಧಿಪ ॥23॥
ಆ ಪ್ರಸಂಗದಲ್ಲಿ ನಿನ್ನ ಬಳಿ ಇದ್ದ ಚಿನ್ನದ ಗಿಣಿಯಾಗಲೀ, ಶ್ವೇತಚ್ಛತ್ರವಾಗಲೀ, ರಾಜಚಿಹ್ನೆ ಎನಿಸಿದ ಚಾಮರವಾಗಲೀ ಯಾವುದೂ ನಿನ್ನ ಬಳಿ ಕಾಣಿಸುತ್ತಿಲ್ಲ. ಹಿಂದೆ ಬ್ರಹ್ಮನಿಂದ ಕೊಡಲ್ಪಟ್ಟ ದಿವ್ಯಮಾಲೆಯನ್ನೂ ನಾನು ಈಗ ಕಾಣುತ್ತಿಲ್ಲ.

ಭೀಷ್ಮಃ
ತತಃ ಪ್ರಸಹ್ಯ ಚ ಬಲಿರ್ವಾಸವೇನ ಸಮೀರಿತಮ್ |
ನಿಶಾಮ್ಯ ಮಾನಂ ಗಂಭೀರಂ ಸುರರಾಜಮಥಾಬ್ರವೀತ್ ॥24॥
ಅಹೋ ಹಿ ತವ ಬಾಲಿಶ್ಯಮಿಹ ದೇವಗಣಾಧಿಪ |
ಅಯುಕ್ತಂ ದೇವರಾಜಸ್ಯ ತವ ಕಷ್ಟಮಿದಂ ವಚಃ ॥25॥
ಭೀಷ್ಮ ಇಂದ್ರನ ಮಾತನ್ನು ಕೇಳುತ್ತಾ ಬಲಿಯು ನಸುನಗುತ್ತಾ ಇಂದ್ರನನ್ನು ಕುರಿತು- `ಎಲೈ ಇಂದ್ರನೇ, ನಿನ್ನ ಅವಿವೇಕಕ್ಕೆ ನಾನೇನೆಂದು ಹೇಳಲಿ? ನೀನು ನನ್ನೊಡನೆ ಇಂತಹ ಕಠಿಣವಾದ ಮಾತುಗಳನ್ನಾಡಬಾರದು ಎಂದು ಇಂದ್ರನ ಗರ್ವದ ನುಡಿಗಳನ್ನು ಕೇಳಿಸಿಕೊಂಡು ಬಲಿಯು ಗಂಭೀರವಾಗಿ ನುಡಿದನು.
ಬಲಿಃ
ನ ತ್ವಂ ಪಶ್ಯಸಿ ಭೃಂಗಾರಂ ನ ಛತ್ರಂ ವ್ಯಜನಂ ನ ಚ |
ಬ್ರಹ್ಮದತ್ತಾಂ ಚ ಮೇ ಮಾಲಾಂ ನ ತ್ವಂ ದ್ರಕ್ಷ್ಯಸಿ ವಾಸವ ॥26॥
ಬಲಿ ಇಂದ್ರನೇ, ಈಗ ನೀನು ನನ್ನ ಬಂಗಾರದ ಗಿಂಡಿಯನ್ನಾಗಲೀ, ನನ್ನ ಶ್ವೇತಚ್ಛತ್ರವನ್ನಾಗಲೀ, ಚಾಮರವನ್ನಾಗಲೀ, ಬ್ರಹ್ಮನು ಕೊಟ್ಟ ದಿವ್ಯಮಾಲೆಯನ್ನಾಗಲಿ ನೋಡಲಾರೆ.
ಗುಹಾಯಾಂ ನಿಹಿತಾನಿ ತ್ವಂ ಮಮ ರತ್ನಾನಿ ಪೃಚ್ಛಸಿ |
ಯದಾ ಮೇ ಭವಿತಾ ಕಾಲಸ್ತದಾ ತ್ವಂ ತಾನಿ ದ್ರಕ್ಷ್ಯಸಿ ॥27॥
ಆ ಉತ್ತಮ ವಸ್ತುಗಳೆಲ್ಲ ತಾತ್ಕಾಲಿಕವಾಗಿ ಒಂದು ಗುಹೆಯಲ್ಲಿ ಮುಚ್ಚಿಡಲ್ಪಟ್ಟಿವೆ. ಪುನಃ ಕಾಲ ಬಂದಾಗ ಅವೆಲ್ಲವನ್ನೂ ಇದೇ ನಿನ್ನ ಕಣ್ಣಿನಿಂದ ನನ್ನ ಬಳಿ ನೋಡುತ್ತೀಯೆ.
ನ ತ್ವೇತದನುರೂಪಂ ತೇ ಯಶಸೋ ವಾ ಕುಲಸ್ಯ ವಾ |
ಸಮೃದ್ಧಾರ್ಥೋಽಸಮೃದ್ಧಾರ್ಥಂ ಯನ್ಮಾಂ ಕತ್ಥಿತುಮಿಚ್ಛಸಿ ॥28॥
ಆದರೆ ಈಗಿನ ನಿನ್ನ ನಡತೆಯು ನಿನ್ನ ಯಶಸ್ಸಿಗೂ, ನಿನ್ನ ಕುಲಕ್ಕೂ ಯೋಗ್ಯವಾದುದಲ್ಲ. ಈಗ ಐಶ್ವರ್ಯದಿಂದ ಮೆರೆಯುತ್ತಿರುವ ನೀನು ಐಶ್ವರ್ಯಭ್ರಷ್ಟನಾದ ನನ್ನನ್ನು ನೋಡಿ ಹಾಸ್ಯ ಮಾಡಲು ಬಯಸುತ್ತಿರುವೆ.
ನ ಹಿ ದುಃಖೇಷು ಶೋಚಂತಿ ನ ಪ್ರಹೃಷ್ಯಂತಿ ಚರ್ದ್ಧಿಷು |
ಕೃತಪ್ರಜ್ಞಾ ಜ್ಞಾನತೃಪ್ತಾಃ ಕ್ಷಾಂತಾಃ ಸಂತೋ ಮನೀಷಿಣಃ ॥29॥
ಒಳ್ಳೆಯ ಪ್ರಜ್ಞಾವಂತರಾದ, ಶಾಂತರಾದ, ಜ್ಞಾನತೃಪ್ತರಾದ ವ್ಯಕ್ತಿಗಳು ಎಂದಿಗೂ ದುಃಖಕ್ಕಾಗಿ ಶೋಕಿಸುವುದಿಲ್ಲ. ಸಂಪತ್ತಿಗಾಗಿ ಸಂತೋಷಿಸುವುದೂ ಇಲ್ಲ.
ತ್ವಂ ತು ಪ್ರಾಕೃತಯಾ ಬುದ್ಧ್ಯಾ ಪುರಂದರ ವಿಕತ್ಥಸೇ |
ಯದಾಹಮಿವ ಭಾವೀ ತ್ವಂ ತದಾ ನೈವಂ ವದಿಷ್ಯಸಿ ॥30॥
ನೀನಾದರೂ ಅಲ್ಪಬುದ್ಧಿಯಿಂದ ಹೀಗೆ ಗರ್ವದಿಂದ ಮಾತನಾಡುತ್ತಿರುವೆ. ನನ್ನ ಸ್ಥಿತಿಯು ನಿನಗೆ ಬಂದಾಗ ನೀನು ಈ ರೀತಿಯಾಗಿ ಮಾತನಾಡಲಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತನೆಯ ಅಧ್ಯಾಯ
ಇಂದ್ರ-ಬಲಿಯ ಸಂವಾದ. ಬಲಿಯು ಕಾಲದ ಮಹಿಮೆಯನ್ನು ಪ್ರತಿಪಾದಿಸುತ್ತಾ ಇಂದ್ರನನ್ನು ನಿಂದಿಸಿದುದು.
ಭೀಷ್ಮಃ
ಪುನರೇವ ತು ತಂ ಶಕ್ರಃ ಪ್ರಹಸನ್ನಿದಮಬ್ರವೀತ್ |
ನಿಃಶ್ವಸಂತಂ ಯಥಾ ನಾಗಂ ಪ್ರತ್ಯಾಹಾರಾಯ ಭಾರತ ॥1॥
ಭೀಷ್ಮ ಯುಧಿಷ್ಠಿರನೇ, ಹೀಗೆ ಹೇಳಿ ಸರ್ಪದಂತೆ ಭುಸುಗುಟ್ಟುತ್ತಿರುವ ಬಲಿಚಕ್ರವರ್ತಿಯನ್ನು ನೋಡಿದ ಇಂದ್ರನು ಗಹಗಹಿಸಿ ನಗುತ್ತಾ ಪುನಃ ಅವನಿಗೆ ನೆನಪಿಸಲು ಇಂತಹ ಮಾತುಗಳನ್ನಾಡಿದನು.
ಯತ್ ತದ್ಯಾನಸಹಸ್ರೇಣ ಜ್ಞಾತಿಭಿಃ ಪರಿವಾರಿತಃ |
ಲೋಕಾನ್ ಪ್ರತಾಪಯನ್ ಸರ್ವಾನ್ಯಾಸ್ಯಸ್ಮಾನವಿತರ್ಕಯನ್ ॥2॥
ದೃಷ್ಟ್ವಾ ಸುಕೃಪಣಾಂ ಚೇಮಾಮವಸ್ಥಾಮಾತ್ಮನೋ ಬಲೇ |
ಜ್ಞಾತಿಮಿತ್ರಪರಿತ್ಯಕ್ತಃ ಶೋಚಸ್ಯಾಹೋ ನ ಶೋಚಸಿ ॥3॥
ಬಲಿಯೇ, ಹಿಂದೆ ನೀನು ಸಾವಿರಾರು ವಾಹನಗಳಿಂದ, ವಾಹನದಲ್ಲಿರುವ ಬಂಧುಗಳಿಂದ ಕೂಡಿದವನಾಗಿ ಎಲ್ಲಾ ಲೋಕಗಳಲ್ಲಿಯೂ ಪ್ರಭಾವವನ್ನು ಬೀರುತ್ತಿದ್ದೆ. ದೇವತೆಗಳಾದ ನಮ್ಮನ್ನು ನೀನು ಗಣನೆಗೆ ತರುತ್ತಿರಲಿಲ್ಲ. ಇಂದು ಜ್ಞಾತಿ-ಮಿತ್ರರಿಂದ ಪರಿತ್ಯಕ್ತನಾದ ನೀನು ಅತ್ಯಂತ ದೈನ್ಯಾವಸ್ಥೆಯನ್ನು ಹೊಂದಿರುವಿ. ಈಗ ಶೋಕ ಪಡುತ್ತಿದ್ದೀಯೋ? ಇಲ್ಲವೋ?
ಪ್ರೀತಿಂ ಪ್ರಾಪ್ಯಾತುಲಾಂ ಪೂರ್ವಂ ಲೋಕಾಂಶ್ಚಾತ್ಮವಶೇ ಸ್ಥಿತಾನ್ |
ವಿನಿಪಾತಮಿಮಂ ಚಾದ್ಯ ಶೋಚಸ್ಯಾಹೋ ನ ಶೋಚಸಿ ॥4॥
ಅಪಾರವಾದ ಸಂತೋಷವನ್ನು ಹಿಂದೆ ಅನುಭವಿಸಿದ ನೀನು ಸಮಸ್ತ ಲೋಕಗಳನ್ನು ವಶಪಡಿಸಿಕೊಂಡಿದ್ದೆ. ಆದರೆ

ಬಾಹ್ಯಜಗತ್ತಿನಲ್ಲಿ ಇಂದು ಅಧಃಪತನಕ್ಕೆ ತುತ್ತಾಗಿ ಶೋಕಪಡುತ್ತಿರುವಿಯೋ ಇಲ್ಲವೋ?
ಬಲಿಃ
ಅನಿತ್ಯಮುಪಲಕ್ಷ್ಯೇದಂ ಕಾಲಪರ್ಯಾಯಮಾತ್ಮನಃ |
ತಸ್ಮಾಚ್ಛಕ್ರ ನ ಶೋಚಾಮಿ ಸರ್ವಂ ಹ್ಯೇವೇದಮಂತವತ್ ॥5॥
ಅಂತವಂತ ಇಮೇ ದೇಹಾ ಭೂತಾನಾಮಮರಾಧಿಪ |
ತೇನ ಶಕ್ರ ನ ಶೋಚಾಮಿ ನಾಪರಾಧಾದಿದಂ ಮಮ ॥6॥
ಬಲಿ ಇಂದ್ರನೇ, ಕಾಲಚಕ್ರವು ಪರಿವರ್ತನಶೀಲವಾಗಿದೆ. ಲೋಕದಲ್ಲಿರುವ ಎಲ್ಲ ವೈಭೋಗಗಳು ಅನಿತ್ಯವಾದವುಗಳೇ. ಪ್ರಪಂಚದ ಈ ಅನಿತ್ಯತೆಯನ್ನು ನೋಡಿ ಈ ದುಸ್ಥಿತಿಗೆ ನಾನು ದುಃಖವನ್ನು ಪಡುತ್ತಿಲ್ಲ. ಇಂದ್ರದೇವನೇ, ಇಂದಲ್ಲ ನಾಳೆ ಸಮಸ್ತ ಪ್ರಾಣಿಗಳ ಶರೀರಗಳಿಗೂ ಮರಣವು ನಿಶ್ಚಿತವಾಗಿ ಒದಗಿ ಬರುತ್ತದೆ. ಇಷ್ಟೇ ಅಲ್ಲದೆ, ನನ್ನ ಅಪರಾಧದಿಂದ ಈ ಶರೀರವು ನನಗೆ ಬಂದಿರುವುದಿಲ್ಲ. ಆದ್ದರಿಂದ ನಾನು ಶೋಕಕ್ಕೆ ತುತ್ತಾಗುವುದಿಲ್ಲ.
ಜೀವಿತಂ ಚ ಶರೀರಂ ಚ ಪ್ರೇತ್ಯ ವೈ ಸಹ ಜಾಯತೇ |
ಉಭೇ ಸಹ ವಿವರ್ಧೇತೇ ಉಭೇ ಸಹ ವಿನಶ್ಯತಃ ॥7॥
ನನ್ನ ಬದುಕು, ನನ್ನ ಶರೀರ ಜೊತೆ ಜೊತೆಯಲ್ಲಿಯೇ ಹುಟ್ಟುತ್ತವೆ. ಜೊತೆಯಲ್ಲೇ ವೃದ್ಧಿಯನ್ನು ಹೊಂದುತ್ತವೆ. ಜೊತೆಯಲ್ಲಿಯೇ ವಿನಾಶವನ್ನು ಹೊಂದುತ್ತವೆ.
ತದೀದೃಶಮಿದಂ ಭಾವಮವಶಃ ಪ್ರಾಪ್ಯ ಕೇವಲಮ್ |
ಯದ್ಯೇವಮಭಿಜಾನಾಮಿ ಕಾ ವ್ಯಥಾ ಮೇ ವಿಜಾನತಃ ॥8॥
ನಾನು ಈ ಕತ್ತೆಯ ಶರೀರವನ್ನು ಹೊಂದಿದ್ದರೂ ನಾನು ದುಃಖಿಯಾಗಿರುವುದಿಲ್ಲ. ನನ್ನ ಪರಿಚಯ ನನಗೆ ಚೆನ್ನಾಗಿ ಇದೆ. ದೇಹದ ಅನಿತ್ಯತೆಯನ್ನು, ಆತ್ಮದ ನಿತ್ಯತೆಯನ್ನು ತಿಳಿದಿರುವ ನಾನು ಏಕೆ ದುಃಖಪಡಲಿ?
ಭೂತಾನಾಂ ನಿಧನಂ ನಿಷ್ಠಾ ಸ್ರೋತಸಾಮಿವ ಸಾಗರಃ |
ನೈತತ್ ಸಮ್ಯಗ್ವಿಜಾನಂತೋ ನರಾ ಮುಹ್ಯಂತಿ ವಜ್ರಭೃತ್ ॥9॥
ನದಿಗಳಿಗೆಲ್ಲ ಸಮುದ್ರವು ಹೇಗೋ ಹಾಗೆ ಸಮಸ್ತ ಪ್ರಾಣಿಗಳಿಗೂ ಮೃತ್ಯುವು ಕೊನೆಯ ಆಶ್ರಯವಾಗಿದೆ. ಇದನ್ನು ಅರಿತ ನಾನು ಮೋಹಗೊಳ್ಳುವುದಿಲ್ಲ. ಇದನ್ನು ಅರಿಯದ ಮನುಷ್ಯರು ಮೋಹಗೊಳ್ಳುತ್ತಾರೆ.
ಯೇ ತ್ವೇವಂ ನಾಭಿಜಾನಂತಿ ರಜೋಮೋಹಪರಾಯಣಾಃ |
ತೇ ಕೃಚ್ಛ್ರಂ ಪ್ರಾಪ್ಯ ಸೀದಂತಿ ಬುದ್ಧಿರ್ಯೇಷಾಂ ಪ್ರಣಶ್ಯತಿ ॥10॥
ಯಾರು ಈ ಅಸ್ಥಿರತೆಯನ್ನು ಅರ್ಥಮಾಡಿಕೊಳ್ಳರೋ ಅವರು ರಜೋಗುಣ, ತಮೋಗುಣಗಳಿಗೆ ಅಧೀನರಾಗಿರುತ್ತಾರೆ. ಕಷ್ಟ ಬಂದಾಗ ಬುದ್ಧಿಗೆಟ್ಟು ನಾಶ ಹೊಂದುತ್ತಾರೆ.
ಬುದ್ಧಿಲಾಭೇ ಹಿ ಪುರುಷಃ ಸರ್ವಂ ನುದತಿ ಕಿಲ್ಬಿಷಮ್ |
ವಿಪಾಪ್ಮಾ ಲಭತೇ ಸತ್ತ್ವಂ ಸತ್ತ್ವಸ್ಥಃ ಸಂಪ್ರಸೀದತಿ ॥11॥
ಬುದ್ಧಿಯ ಲಾಭವನ್ನು ಹೊಂದಿದ ಪುರುಷನು ಎಲ್ಲ ಪಾಪಗಳನ್ನು ಸತ್ಕರ್ಮಗಳ ಮೂಲಕ ಕಳೆದುಕೊಳ್ಳುತ್ತಾನೆ. ಪಾಪಹೀನನಾಗಿ ಸತ್ತ್ವಗುಣಸಂಪನ್ನನಾಗುತ್ತಾನೆ. ಸತ್ತ್ವಗುಣವನ್ನೇ ಆಶ್ರಯಿಸಿದವನಾಗಿ ಪ್ರಸನ್ನತೆಯನ್ನು ಹೊಂದುತ್ತಾನೆ.
ತತಸ್ತು ಯೇ ನಿವರ್ತಂತೇ ಜಾಯಂತೇ ವಾ ಪುನಃ ಪುನಃ |
ಕೃಪಣಾಃ ಪರಿತಪ್ಯಂತೇ ತೇಽನರ್ಥೈಃ ಪರಿಚೋದಿತಾಃ ॥12॥
ಸತ್ತ್ವಗುಣವನ್ನು ಆಶ್ರಯಿಸದ ಜೀವರು ಪುನಃ ಪುನಃ ಹುಟ್ಟುತ್ತಾ ರಜೋಗುಣದ ಪ್ರಭಾವದಿಂದ ಮೋಹಕ್ಕೆ ತುತ್ತಾಗಿ ಪರಿತಪಿಸುತ್ತಾರೆ.
ಅರ್ಥಸಿದ್ಧಿಮನರ್ಥಂ ಚ ಜೀವಿತಂ ಮರಣಂ ತಥಾ |
ಸುಖದುಃಖಫಲಂ ಚೈವ ನ ದ್ವೇಷ್ಮಿ ನ ಚ ಕಾಮಯೇ ॥13॥
ಇಷ್ಟಾರ್ಥವು ಲಭಿಸಲಿ, ಲಭಿಸದಿರಲಿ, ಜೀವನವು ದೊರೆಯಲಿ ಅಥವಾ ಮರಣವೇ ಒದಗಿ ಬರಲಿ, ಸುಖ-ದುಃಖಗಳೆಂಬ ಫಲಗಳು ಬರಲಿ, ಬರದಿರಲಿ, ನಾನು ಅವುಗಳನ್ನು ಬಯಸುವುದಿಲ್ಲ, ಬೇಡವೆಂದು ದ್ವೇಷಿಸುವುದೂ ಇಲ್ಲ.
ಹತಂ ಹಂತಿ ಹತೋ ಹ್ಯೇವ ಯೋ ನರೋ ಹಂತಿ ಕಂಚನ |
ಉಭೌ ತೌ ನ ವಿಜಾನೀತೋ ಯಶ್ಚ ಹಂತಿ ಹತಶ್ಚ ಯಃ ॥14॥
ಒಬ್ಬನು ಮತ್ತೊಬ್ಬನನ್ನು ಕೊಂದರೆ ಕೊಂದ ವ್ಯಕ್ತಿಯನ್ನೇ ಕೊಂದಂತೆ. ಏಕೆಂದರೆ ಅವನು ಕಾಲದಿಂದ ಹತನಾದವನೆ. ಹಾಗೆ ಕೊಂದ ಅವನೂ ಕಾಲವಶನಾಗುತ್ತಾನೆ. ಆದ್ದರಿಂದ ಕೊಂದವನಾಗಲಿ, ಕೊಲೆಗೆ ತುತ್ತಾದವನಾಗಲಿ ಇಬ್ಬರೂ ಕೊಲೆಗೆ ಕರ್ತೃವೆಂದು ಕಾಲನು ತಿಳಿಯುವುದಿಲ್ಲ. ಕಾಲನೇ ಇವರಿಬ್ಬರಿಗೂ ಕರ್ತೃವೆನಿಸಿದ್ದಾನೆ.
ಹತ್ವಾ ಜಿತ್ವಾ ಚ ಮಘವನ್ಯಃ ಕಶ್ಚಿತ್ ಪುರುಷಾಯತೇ |
ಅಕರ್ತಾ ಹ್ಯೇವ ಭವತಿ ಕರ್ತಾ ತ್ವೇವ ಕರೋತಿ ತತ್ ॥15॥
ಯಾವ ವ್ಯಕ್ತಿಯು ಒಬ್ಬನನ್ನು ಕೊಂದು ಅಥವಾ ಜಯಿಸಿ ಆ ಕಾರ್ಯವನ್ನು ನಾನೇ ಮಾಡಿದ್ದೇನೆಂದು ಗರ್ವ ಪಡುತ್ತಾನೋ ಅವನು ಕರ್ತೃವೆನಿಸುವುದಿಲ್ಲ. ಅವನಿಗೂ ಕರ್ತೃವಾದ ಕಾಲನಾಮಕನಾದ ಭಗವಂತನೇ ಅದೆಲ್ಲವನ್ನೂ ಮಾಡಿಸಿದ್ದಾನೆ.
ಕೋ ಹಿ ಲೋಕಸ್ಯ ಕುರುತೇ ವಿನಾಶಪ್ರಭವಾವುಭೌ |
ಕೃತಂ ಹಿ ತತ್ಕೃತೇನೈವ ಕರ್ತಾ ತಸ್ಯಾಪಿ ಚಾಪರಃ ॥16॥
ಜಗತ್ತಿನ ಸಂಹಾರ, ಸೃಷ್ಟಿ ಇದೆರಡನ್ನೂ ಯಾರಿಂದ ಮಾಡಲು ಸಾಧ್ಯ? ಸೃಷ್ಟಿ- ಸಂಹಾರಗಳಿಗೆ ನಾನು ನಿಯಾಮಕ ಎಂದು ಬೀಗುವುದು ಸರಿಯಲ್ಲ. ಇವುಗಳಿಗೆ ಜೀವನು ಕರ್ತೃವೇ ಆಗಲಾರ. ಇವನಿಗೂ ಕರ್ತೃವಾದವನು ನಾರಾಯಣನೇ ಆಗಿದ್ದಾನೆ.

ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಏತದ್ಯೋನೀನಿ ಭೂತಾನಿ ತತ್ರ ಕಾ ಪರಿದೇವನಾ ॥17॥
ಪೃಥಿವಿ, ವಾಯು, ಆಕಾಶ, ಜಲ, ಜ್ಯೋತಿ ಹೀಗೆ ಪಂಚಭೂತಗಳು ಎಲ್ಲ ಜೀವರ ಶರೀರಕ್ಕೂ ಕಾರಣಗಳಾಗಿವೆ. ಹೀಗಿರುವಾಗ ನಾನು ಕತ್ತೆಯ ಶರೀರದಲ್ಲಿರುವುದಕ್ಕೆ ಏಕೆ ದುಃಖಿಸಬೇಕು?
ಮಹಾವಿದ್ಯೋಽಲ್ಪವಿದ್ಯಶ್ಚ ಬಲವಾನ್ ದುರ್ಬಲಶ್ಚ ಯಃ |
ದರ್ಶನೀಯೋ ವಿರೂಪಶ್ಚ ಸುಭಗೋ ದುರ್ಭಗಶ್ಚ ಯಃ ॥18॥
ಸರ್ವಂ ಕಾಲಃ ಸಮಾದತ್ತೇ ಗಂಭೀರಃ ಸ್ವೇನ ತೇಜಸಾ |
ತಸ್ಮಿನ್ ಕಾಲವಶಂ ಪ್ರಾಪ್ತೇ ಕಾ ವ್ಯಥಾ ಮೇ ವಿಜಾನತಃ ॥19॥
ಮಹಾವಿದ್ಯಾ ಸಂಪನ್ನನಾದ ವಿದ್ವಾಂಸನಾಗಲಿ, ಅಲ್ಪವಿದ್ಯೆ ಇರುವವನಾಗಲಿ, ಬಲಿಷ್ಠನಾಗಲಿ, ದುರ್ಬಲನಾಗಲಿ, ಸುಂದರನಾಗಲಿ, ಕುರೂಪಿಯಾಗಲಿ, ಸುಭಗನಾಗಲಿ, ದುರ್ಭಗನಾಗಲಿ ಎಲ್ಲರನ್ನೂ ಗಂಭೀರನಾದ ಕಾಲ ಪುರುಷನು ತನ್ನ ತೇಜಸ್ಸಿನಿಂದ ಸೆಳೆದುಕೊಳ್ಳುತ್ತಾನೆ. ಹೀಗೆ ಜಗತ್ತೆಲ್ಲ ಕಾಲನಾಮಕನಾದ ಭಗವಂತನ ವಶವಾಗಿರುವಾಗ ಇದನ್ನರಿತಿರುವ ನನಗೆ ವ್ಯಥೆ ಎಲ್ಲಿಯದು?
ದಗ್ಧಮೇವಾನುದಹತಿ ಹತಮೇವಾನುಹಂತಿ ಚ |
ನಶ್ಯತೇ ನಷ್ಟಮೇವಾಗ್ರೇ ಲಬ್ಧವ್ಯಂ ಲಭತೇ ನರಃ ॥20॥
ಕಾಲ ಸುಟ್ಟಿದ್ದನ್ನು ಬಳಿಕ ಜನರು ದಹಿಸುತ್ತಾರೆ, ಕಾಲವು ಕೊಂದಿದ್ದನ್ನು ಬಳಿಕ ಜನರು ಕೊಲ್ಲುತ್ತಾರೆ. ಮೊದಲೇ ಯಾವುದು ನಷ್ಟವಾಗಿದೆಯೋ ಜನರು ಅದನ್ನು ಪುನಃ ನಾಶಪಡಿಸುತ್ತಾರೆ. ಯಾವುದು ಜನರಿಗೆ ಲಭಿಸಬೇಕೆಂದು ಮೊದಲೇ ನಿಶ್ಚಿತವಾಗಿದೆಯೋ ಅದನ್ನು ಮನುಷ್ಯ ಪಡೆದುಕೊಳ್ಳುತ್ತಾನೆ. ಎಲ್ಲವೂ ಕಾಲನಾಮಕನಾದ ಭಗವಂತನ ಸಂಕಲ್ಪಾನುಸಾರ ನಡೆಯುತ್ತಿದೆ. ಮನುಷ್ಯನ ಕರ್ತೃತ್ವ ಈ ವಿಷಯದಲ್ಲಿ ಇರುವುದಿಲ್ಲ.
ನಾಸ್ಯ ದ್ವೀಪಃ ಕುತಃ ಪಾರಂ ನಾವಾರಃ ಸಂಪ್ರದೃಶ್ಯತೇ |
ನಾಂತಮಸ್ಯ ಪ್ರಪಶ್ಯಾಮಿ ವಿಧೇರ್ದಿವ್ಯಸ್ಯ ಚಿಂತಯನ್ ॥21॥
ನಾನು ಎಷ್ಟೇ ಯೋಚಿಸಿದರೂ ಈ ಸಂಸಾರಸಮುದ್ರದ ಕೊನೆಯನ್ನು ಕಾಣುತ್ತಿಲ್ಲ. ದೇವಸಂಬಂಧಿಯಾದ ವಿಧಿಯ ಅಂತ್ಯವು ಎಲ್ಲಿದೆ ಎಂಬುದನ್ನು ನಾನು ಕಾಣುತ್ತಿಲ್ಲ. ಹೀಗಿರಲು ಈಚೆಯ ದಡ, ಆಚೆಯ ದಡ ಕಾಣದಿರುವ ನನಗೆ ದಡವೆಲ್ಲಿ ದೊರೆತೀತು?
ಯದಿ ಮೇ ಪಶ್ಯತಃ ಕಾಲೋ ಭೂತಾನಿ ನ ವಿನಾಶಯೇತ್ |
ಸ್ಯಾನ್ಮೇ ಹರ್ಷಶ್ಚ ದರ್ಪಶ್ಚ ಕ್ರೋಧಶ್ಚೈವ ಶಚೀಪತೇ ॥22॥
ಶಚೀಪತಿಯೇ, ನಾನು ನೋಡುತ್ತಿರುವಾಗ ಕಾಲನು ಪ್ರಾಣಿಗಳನ್ನು ಸಾಯಿಸದಿದ್ದಲ್ಲಿ ನನಗೆ ಸಂತೋಷ ಉಂಟಾಗುತ್ತಿತ್ತು. ಗರ್ವವು ಉಂಟಾಗುತ್ತಿತ್ತು. ಕ್ರೂರಿಯಾದ ಕಾಲನ ಮೇಲೆ ಕೋಪವು ಉಂಟಾಗುತ್ತಿತ್ತು. ಆದರೆ ಕಾಲನು ನನ್ನ ಕಣ್ಣಿಗೆ ಕಾಣಿಸದೆ ಇದ್ದು ಈ ವ್ಯಾಪಾರವನ್ನು ಮಾಡುತ್ತಿರುವಾಗ ಕಾಣದ ವಸ್ತುವಿನಲ್ಲಿ ಕ್ರೋಧವನ್ನು ಹೇಗೆ ತೋರಲಿ?
ತುಷಭಕ್ಷಂ ತು ಮಾಂ ಜ್ಞಾತ್ವಾ ಪ್ರವಿವಿಕ್ತಜನೇ ಗೃಹೇ |
ಬಿಭ್ರತಂ ಗಾರ್ದಭಂ ರೂಪಮಾದಿಶ್ಯ ಪರಿಗರ್ಹಸೇ ॥23॥
ಇದೆಲ್ಲವನ್ನೂ ಅರಿತ ನೀನು ಕತ್ತೆರೂಪವನ್ನು ಧರಿಸಿ, ಯಾರೂ ಇಲ್ಲದೆ ಇರುವ ಏಕಾಂತದ ಮನೆಯಲ್ಲಿ ಧಾನ್ಯದ ಹೊಟ್ಟನ್ನು ತಿಂದು ಬದುಕುತ್ತಿರುವ ನನ್ನ ಬಳಿ ಬಂದು ನನ್ನನ್ನು ಹೀಗೆ ನಿಂದಿಸುತ್ತಿರುವುದು ಸರಿಯೇ ಅಥವಾ ಯೋಗ್ಯವೆ?
ಇಚ್ಛನ್ನಹಂ ವಿಕುರ್ಯಾಂ ಹಿ ರೂಪಾಣಿ ಬಹುಧಾತ್ಮನಃ |
ವಿಭೀಷಣಾನಿ ಯಾನೀಕ್ಷ್ಯ ಪಲಾಯೇಥಾಸ್ತ್ವಮೇವ ಮೇ ॥24॥
ನಾನು ಬಯಸಿದರೆ ಅನೇಕ ರೂಪಗಳನ್ನು ಧರಿಸಬಲ್ಲೆ. ನೀನು ಪಲಾಯನ ಮಾಡುವಷ್ಟು ಭಯಾನಕ ರೂಪವನ್ನೂ ಧರಿಸಬಲ್ಲೆನು.
ಕಾಲಃ ಸರ್ವಂ ಸಮಾದತ್ತೇ ಕಾಲಃ ಸರ್ವಂ ಪ್ರಯಚ್ಛತಿ |
ಕಾಲೇನ ವಿಧೃತಂ ಸರ್ವಂ ಮಾ ಕೃಥಾಃ ಶಕ್ರ ಪೌರುಷಮ್ ॥25॥
ಕಾಲವೇ ಎಲ್ಲವನ್ನೂ ನುಂಗುತ್ತದೆ. ಕಾಲವೇ ಎಲ್ಲವನ್ನೂ ಕೊಡುತ್ತದೆ. ಕಾಲದಿಂದ ಪ್ರಪಂಚದ ಆಗು-ಹೋಗುಗಳೆಲ್ಲ ನಿರ್ಣಯಿಸಲ್ಪಟ್ಟಿದೆ. ಕಾಲದಿಂದಲೇ ಎಲ್ಲವೂ ಮಾಡಲ್ಪಡುತ್ತದೆ. ಆದ್ದರಿಂದ ನಿನ್ನ ಪೌರುಷದಿಂದ ಗರ್ವಪಡಬೇಡ.
ಪುರಾ ಸರ್ವಂ ಪ್ರವ್ಯಥತೇ ಮಯಿ ಕ್ರುದ್ಧೇ ಪುರಂದರ |
ಅವೈಮಿ ತ್ವಸ್ಯ ಲೋಕಸ್ಯ ಧರ್ಮಂ ಶಕ್ರ ಸನಾತನಮ್ ॥26॥
ಪುರಂದರನೇ, ಹಿಂದೆ ನಾನು ಕುಪಿತನಾಗಿದ್ದಲ್ಲಿ ಪ್ರಪಂಚವೇ ದುಃಖಿಸುತ್ತಿತ್ತು. ಲೋಕದ ವೃದ್ಧಿ-ಕ್ಷಯಧರ್ಮವನ್ನು ಚೆನ್ನಾಗಿ ತಿಳಿದುಕೊಂಡಿರುತ್ತೇನೆ.
ತ್ವಮಪ್ಯೇವಮಪೇಕ್ಷಸ್ವ ಮಾತ್ಮನಾ ವಿಸ್ಮಯಂ ಗಮಃ |
ಪ್ರಭವಶ್ಚ ಪ್ರಭಾವಶ್ಚ ನಾತ್ಮಸಂಸ್ಥಃ ಕದಾಚನ ॥27॥
ನೀನೂ ಹೀಗೆ ತಿಳಿದುಕೊ. ನಿನ್ನ ವಿಷಯದಲ್ಲಿ ಗರ್ವ ಬೇಡ. ಉತ್ಪತ್ತಿ, ಪ್ರಭುತ್ವ ಯಾವುದೂ ನಮ್ಮ ಅಧೀನವಲ್ಲ.
ಕೌಮಾರಮೇವ ತೇ ಚಿತ್ತಂ ತಥೈವಾದ್ಯ ಯಥಾ ಪುರಾ |
ಸಮವೇಕ್ಷಸ್ವ ಮಘವನ್ ಬುದ್ಧಿಂ ವಿಂದಸ್ವ ನೈಷ್ಠಿಕೀಮ್ ॥28॥
ನೀನು ದೇವತೆಗಳಿಗೆ ಒಡೆಯನಾದಾಗಲೂ ಬಾಲಬುದ್ಧಿಯವನೇ ಆಗಿರುವೆ. ಹಿಂದೆ ನಿನ್ನ ಬುದ್ಧಿ ಹೇಗಿತ್ತೋ ಈಗಲೂ ಹಾಗೆಯೇ ಇದೆ. ಪುನಃ ಪರ್ಯಾಲೋಚಿಸಿ ಸ್ಥಿರ ಬುದ್ಧಿಯನ್ನು ಹೊಂದು.
ದೇವಾ ಮನುಷ್ಯಾಃ ಪಿತರೋ ಗಂಧರ್ವೋರಗರಾಕ್ಷಸಾಃ |
ಆಸನ್ ಸರ್ವೇ ಮಮ ವಶೇ ತತ್ ಸರ್ವಂ ವೇತ್ಥ ವಾಸವ ॥29॥

ಇಂದ್ರನೇ, ದೇವತೆಗಳು, ಮನುಷ್ಯರು, ಪಿತೃಗಳು, ಗಂಧರ್ವರು, ಸರ್ಪಗಳು, ರಾಕ್ಷಸರು ಎಲ್ಲರೂ ನನ್ನ ಅಧೀನದಲ್ಲಿದ್ದರು. ಈ ವಿಷಯವು ನಿನಗೂ ಚೆನ್ನಾಗಿ ತಿಳಿದಿದೆ.

ನಮಸ್ತಸ್ಯೈ ದಿಶೇಽಪ್ಯಸ್ತು ಯಸ್ಯಾಂ ವೈರೋಚನೋ ಬಲಿಃ |
ಇತಿ ಮಾಮಭ್ಯಪದ್ಯಂತ ಬುದ್ಧಿಮಾತ್ಸರ್ಯಮೋಹಿತಾಃ ॥30॥

ನನ್ನ ಶತ್ರುಗಳು ಬುದ್ಧಿಯಿಂದ ವಿಮೋಹಿತರಾಗಿ ದ್ವೇಷ ಮಾಡುತ್ತಿದ್ದರೂ ವಿರೋಚನನ ಮಗನಾದ ಬಲಿಯು ಯಾವ ದಿಕ್ಕಿನಲ್ಲಿದ್ದರೂ ಆ ದಿಕ್ಕಿಗೆ ನಮಸ್ಕಾರ ಎಂದು ಹೇಳಿಕೊಂಡು ನನ್ನ ಬಳಿಗೆ ಬರುತ್ತಿದ್ದರು.

ನಾಹಂ ತದನುಶೋಚಾಮಿ ನಾತ್ಮಭ್ರಂಶಂ ಶಚೀಪತೇ |
ಏವಂ ಮೇ ನಿಶ್ಚಿತಾ ಬುದ್ಧಿಃ ಶಾಸ್ತುಸ್ತಿಷ್ಠಾಮ್ಯಹಂ ವಶೇ ॥31॥

ನಾನಿಂದು ರಾಜ್ಯ ಕಳೆದುಕೊಂಡೆ ಎಂದು ಖಂಡಿತಾ ಶೋಕಿಸುವುದಿಲ್ಲ. ಯಾವಾಗಲೂ ಎಲ್ಲರಿಗೂ ನಿಯಾಮಕನಾದ ಕಾಲಪುರುಷನ ಅಧೀನನಾಗಿಯೇ ನಾನು ಇರುತ್ತೇನೆ. ಇದನ್ನು ಬುದ್ಧಿಯಿಂದ ನಿಶ್ಚಯಿಸಿಕೊಂಡಿದ್ದೇನೆ.

ದೃಶ್ಯತೇ ಹಿ ಕುಲೇ ಜಾತೋ ದರ್ಶನೀಯಃ ಪ್ರತಾಪವಾನ್ |
ದುಃಖಂ ಜೀವನ್ ಸಹಾಮಾತ್ಯೋ ಭವಿತವ್ಯಂ ಹಿ ತತ್ತಥಾ ॥32॥

ಒಬ್ಬನು ಸತ್ಕುಲಪ್ರಸೂತನಾಗಿರುತ್ತಾನೆ, ಸುಂದರನಾಗಿರುತ್ತಾನೆ, ಪ್ರತಾಪವಂತನಾಗಿರುತ್ತಾನೆ. ಹೀಗಿದ್ದರೂ ಅವನು ತನ್ನ ಒಡನಾಡಿಗಳೊಡನೆ ದುಃಖದಿಂದಲೇ ಕಾಲ ಕಳೆಯುತ್ತಾನೆ. ಇದು ವಿಧಿಯ ಪ್ರಭಾವ.

ದೌಷ್ಕುಲೇಯಸ್ತಥಾ ಮೂಢೋ ದುರ್ಜಾತಃ ಶಕ್ರ ದೃಶ್ಯತೇ |
ಸುಖಂ ಜೀವನ್ ಸಹಾಮಾತ್ಯೋ ಭವಿತವ್ಯಂ ಹಿ ತತ್ತಥಾ ॥33॥

ಮತ್ತೊಬ್ಬ ದುಷ್ಟಕುಲದಲ್ಲಿ ಹುಟ್ಟಿರುತ್ತಾನೆ. ಮೂರ್ಖನಾಗಿರುತ್ತಾನೆ. ಹೀನ ಜಾತಿಯವನಾಗಿರುತ್ತಾನೆ. ಅಂತಹವನು ಒಡನಾಡಿಗಳ ಜೊತೆ ಸುಖದಿಂದ ಜೀವಿಸುತ್ತಾನೆ. ಇದು ಕಾಲದ ಸಂಕಲ್ಪವೆ.

ಕಲ್ಯಾಣೀ ರೂಪಸಂಪನ್ನಾ ದುರ್ಭಗಾ ಶಕ್ರ ದೃಶ್ಯತೇ |
ಅಲಕ್ಷಣಾ ವಿರೂಪಾ ಚ ಸುಭಗಾ ಶಕ್ರ ದೃಶ್ಯತೇ ॥34॥

ಒಬ್ಬಳು ಕಲ್ಯಾಣರೂಪವುಳ್ಳವಳಾಗಿರುತ್ತಾಳೆ. ಅವಳು ದೌರ್ಭಾಗ್ಯದಿಂದ ದುಃಖಿಸುತ್ತಾಳೆ. ಮತ್ತೊಬ್ಬಳು ದುರ್ಲಕ್ಷಣಗಳಿಂದ ಕುರೂಪಿಯಾಗಿರುತ್ತಾಳೆ, ಸುಭಗಳಂತೆ ಮೆರೆಯುತ್ತಾಳೆ.

ನೈತದಸ್ಮತ್ಕೃತಂ ಶಕ್ರ ನೈತಚ್ಛಕ್ರ ತ್ವಯಾ ಕೃತಮ್ |
ಯತ್ತ್ವಮೇವಂಗತೋ ವಜ್ರಿನ್ಯದ್ವಾಪ್ಯೇವಂಗತಾ ವಯಮ್ ॥35॥

ನೀನಿಂದು ಸಂಪತ್ತಿನ ಸಮೃದ್ಧಿಯನ್ನು ಹೊಂದಿರುವೆ. ನಾನಿಂದು ರಾಜ್ಯಲಕ್ಷ್ಮಿಯಿಂದ ಭ್ರಷ್ಟನಾಗಿದ್ದೇನೆ. ನಾನು ಮಾಡಿದ ಅಪರಾಧವೂ ಅಲ್ಲ. ನೀನು ತೋರಿದ ಪೌರುಷವೂ ಇಲ್ಲಿ ಕಾರಣವಲ್ಲ.

ನ ಕರ್ಮ ತವ ನಾನ್ಯೇಷಾಂ ಕುತೋ ಮಮ ಶತಕ್ರತೋ |
ಋದ್ಧಿರ್ವಾಪ್ಯಥ ವಾ ನರ್ದ್ಧಿಃ ಪರ್ಯಾಯಕೃತಮೇವ ತತ್ ॥36॥

ಇಂದ್ರನೇ, ನಾನು ಮಾಡಿದ ಕರ್ಮದಿಂದ ಈ ದುಃಸ್ಥಿತಿಯಲ್ಲ. ಸಂಪತ್ತು, ದಾರಿದ್ರ್ಯ ಇವು ಪರ್ಯಾಯವಾಗಿ ಬರುತ್ತಿರುತ್ತವೆ. ಯಾವುದೂ ಶಾಶ್ವತವಲ್ಲ.

ಪಶ್ಯಾಮಿ ತ್ವಾ ವಿರಾಜಂತಂ ದೇವರಾಜಮವಸ್ಥಿತಮ್ |
ಶ್ರೀಮಂತಂ ದ್ಯುತಿಮಂತಂ ಚ ಗರ್ಜಂತಂ ಚ ಮಮೋಪರಿ ॥37॥

ನೀನು ಈ ಸಮಯದಲ್ಲಿ ಇಂದ್ರ ಪದವಿಯಲ್ಲಿ ಪ್ರತಿಷ್ಠಿತನಾಗಿರುವಿ. ಕಾಂತಿಯಿಂದ ಬೆಳಗುತ್ತಿರುವಿ. ತೇಜಸ್ಸಿನಿಂದ ಕೂಡಿರುವಿ. ನನ್ನ ಮೇಲೆ ಗರ್ವದಿಂದ ಗರ್ಜಿಸುತ್ತಿರುವುದನ್ನು ನೋಡುತ್ತಿದ್ದೇನೆ.

ಏತಚ್ಚೈವಂ ನ ಚೇತ್ ಕಾಲೋ ಮಾಮಾಕ್ರಮ್ಯ ಸ್ಥಿತೋ ಭವೇತ್ |
ಪಾತಯೇಯಮಹಂ ತ್ವಾದ್ಯ ಸವಜ್ರಮಪಿ ಮುಷ್ಟಿನಾ ॥38॥

ಕಾಲದ ಅತಿಕ್ರಮವಿಲ್ಲದಿದ್ದರೆ ನಾನು ಹಿಂದಿನ ಬಲಿಯೇ ಆಗಿರುತ್ತಿದ್ದೆ. ನೀನು ವಜ್ರಾಯುಧವನ್ನು ಧರಿಸಿದ್ದರೂ ಮುಷ್ಟಿಪ್ರಹಾರದಿಂದಲೇ ನಿನ್ನನ್ನು ಸಂಹರಿಸುತ್ತಿದ್ದೆ.

ನ ತು ವಿಕ್ರಮಕಾಲೋಽಯಂ ಕ್ಷಮಾಕಾಲೋಽಯಮಾಗತಃ |
ಕಾಲಃ ಸ್ಥಾಪಯತೇ ಸರ್ವಂ ಕಾಲಃ ಪಚತಿ ವೈ ತಥಾ ॥39॥

ಆದರೆ ಇಂದು ನನಗೆ ಪರಾಕ್ರಮವನ್ನು ತೋರಿಸುವ ಕಾಲವಿಲ್ಲ. ಶಾಂತಿಯಿಂದ ಇರುವ ಕಾಲವಾಗಿದೆ. ಕಾಲವೇ ಎಲ್ಲರನ್ನೂ ಬೇರೆ ಬೇರೆ ಅವಸ್ಥೆಗಳಲ್ಲಿ ಸ್ಥಾಪಿಸುತ್ತದೆ. ಕಾಲವೇ ಕಾಲಾಂತರದಲ್ಲಿ ಪ್ರಾಣಿಗಳನ್ನು ಕ್ಷೀಣಗೊಳಿಸುತ್ತದೆ.

ಮಾಂ ಚೇದಭ್ಯಾಗತಃ ಕಾಲೋ ದಾನವೇಶ್ವರಮೂರ್ಜಿತಮ್ |
ಗರ್ಜಂತಂ ಪ್ರತಪಂತಂ ಚ ಕಮನ್ಯಂ ನಾಗಮಿಷ್ಯತಿ ॥40॥

ದಾನವಶ್ರೇಷ್ಠರಿಂದ ಪೂಜಿಸಲ್ಪಡುತ್ತಿದ್ದ, ಗರ್ಜಿಸುತ್ತಿದ್ದ, ಶತ್ರುಗಳನ್ನು ಪರಿತಾಪಗೊಳಿಸುತ್ತಿದ್ದ, ನನ್ನ ಮೇಲೆ ಕಾಲವು ಆಕ್ರಮಿಸಿದೆ ಎಂದ ಬಳಿಕ ಯಾರನ್ನು ಕಾಲವು ಬಿಡುತ್ತದೆ?

ದ್ವಾದಶಾನಾಂ ಹಿ ಭವತಾಮಾದಿತ್ಯಾನಾಂ ಮಹಾತ್ಮನಾಮ್ |
ತೇಜಾಂಸ್ಯೇಕೇನ ಸರ್ವೇಷಾಂ ದೇವರಾಜ ಹೃತಾನಿ ಮೇ ॥41॥

ದೇವರಾಜನೇ, ಹಿಂದೆ ಮಹಾತ್ಮರಾದ ಹನ್ನೆರಡು ಮಂದಿ ಆದಿತ್ಯರೆಲ್ಲರ ತೇಜಸ್ಸನ್ನು ನಾನೊಬ್ಬನೇ ನುಂಗಿ ಹಾಕಿದ್ದೆನು.

ಅಹಮೇವೋದ್ವಹಾಮ್ಯಾಪೋ ವಿಸೃಜಾಮಿ ಚ ವಾಸವ |

ತಪಾಮಿ ಚೈವ ತ್ರೈಲೋಕ್ಯಂ ವಿದ್ಯೋತಾಮ್ಯಹಮೇವ ಚ ॥42॥
ನಾನೇ ಆದಿತ್ಯರೂಪನಾಗಿ ಭೂಮಿಯಲ್ಲಿರುವ ನೀರನ್ನು ನನ್ನ ಕಿರಣಗಳ ಮೂಲಕ ಮೇಲೆ ಎತ್ತುತ್ತಿದ್ದೆ. ಮೇಘರೂಪದಿಂದ ಮಳೆ ಸುರಿಸುತ್ತಿದ್ದೆ. ಮೂರು ಲೋಕಗಳಿಗೂ ಅಗ್ನಿಯಾಗಿ ಶಾಖ ನೀಡುತ್ತಿದ್ದೆ, ಬೆಳಕನ್ನೂ ನೀಡುತ್ತಿದ್ದೆ.
ಸಂರಕ್ಷಾಮಿ ವಿಲುಂಪಾಮಿ ದದಾಮ್ಯಹಮಥಾದದೇ |
ಸಂಯಚ್ಛಾಮಿ ನಿಯಚ್ಛಾಮಿ ಲೋಕೇಷು ಪ್ರಭುರೀಶ್ವರಃ ॥43॥
ಪ್ರಜೆಗಳನ್ನು ರಕ್ಷಿಸುತ್ತಿದ್ದೆ, ದರೋಡೆಕೋರರನ್ನು ಸಂಹರಿಸಿ ಐಶ್ವರ್ಯವನ್ನು ಅಪಹರಿಸುತ್ತಿದ್ದೆ. ಸತ್ಪಾತ್ರರಿಗೆ ದಾನ ಮಾಡುತ್ತಿದ್ದೆ. ಪ್ರಜೆಗಳಿಂದ ಕಪ್ಪ ಕಾಣಿಕೆಯನ್ನು ಸ್ವೀಕರಿಸುತ್ತಿದ್ದೆ. ಲೋಕದಲ್ಲಿ ಪ್ರಭುವೂ ಈಶ್ವರನೂ ಆಗಿ ಶಾಸನ ಮಾಡುತ್ತಿದ್ದೆ.
ತದದ್ಯ ವಿನಿವೃತ್ತಂ ಮೇ ಪ್ರಭುತ್ವಮಮರಾಧಿಪ |
ಕಾಲಸೈನ್ಯಾವಗಾಢಸ್ಯ ಸರ್ವಂ ನ ಪ್ರತಿಭಾತಿ ಮೇ ॥44॥
ಅಮರೇಶ್ವರನೇ, ಇಂದು ನನ್ನ ಆ ಪ್ರಭುತ್ವವು ಇಲ್ಲವಾಗಿದೆ. ಕಾಲನ ಸೈನಿಕರು ನನ್ನನ್ನು ಆಕ್ರಮಿಸಿದ್ದಾರೆ. ನನ್ನ ಐಶ್ವರ್ಯವೆಲ್ಲ ತೇಜೋಹೀನವಾಗಿದೆ.
ನಾಹಂ ಕರ್ತಾ ನ ಚೈವ ತ್ವಂ ನಾನ್ಯಃ ಕರ್ತಾ ಶಚೀಪತೇ |
ಪರ್ಯಾಯೇಣ ಹಿ ಭುಜ್ಯಂತೇ ಲೋಕಾಃ ಶಕ್ರ ಯದೃಚ್ಛಯಾ ॥45॥
ಶಚೀಪತಿಯೇ, ಈಗಿನ ನನ್ನ ಸ್ಥಿತಿಗೆ ನಾನು ಕಾರಣನಲ್ಲ. ನಿನ್ನ ಸ್ಥಿತಿಗೆ ನೀನೂ ಕಾರಣನಲ್ಲ. ಬೇರೆ ಯಾರೂ ಕಾರಣರಲ್ಲ. ಕಾಲನಾಮಕನಾದ ಭಗವಂತನ ಸಂಕಲ್ಪದಂತೆ ಲೋಕದಲ್ಲಿ ಪರ್ಯಾಯವಾಗಿ ರಾಜರಿಂದ ಅನುಭವಿಸಲ್ಪಡುತ್ತವೆ.
ಮಾಸಾರ್ಧಮಾಸವೇಶ್ಮಾನಮಹೋರಾತ್ರಾಭಿಸಂವೃತಮ್ |
ಋತುದ್ವಾರಂ ವರ್ಷಮುಖಮಾಹುರ್ವೇದವಿದೋ ಜನಾಃ ॥46॥
ಮಾಸ, ಪಕ್ಷ, ಇವುಗಳನ್ನು ವೇದಜ್ಞರು ಕಾಲ ಪುರುಷನ ಶರೀರವೆನ್ನುತ್ತಾರೆ. ದಿನ ರಾತ್ರಿಗಳನ್ನು ಕಾಲನ ಹೊದಿಯುವ ವಸ್ತ್ರವೆನ್ನುತ್ತಾರೆ. ಋತುಗಳು ಕಾಲ ಪುರುಷನ ದ್ವಾರ ರೂಪವಾದ ಮನಸ್ಸು ಮತ್ತು ಇಂದ್ರಿಯಗಳಾಗಿವೆ. ವರ್ಷವೇ ಅವನ ಮುಖ. ಅಂತಹ ಕಾಲನು ಆಯುಃಸ್ವರೂಪನಾಗಿದ್ದಾನೆ.
ಆಹುಃ ಸರ್ವಮಿದಂ ಚಿಂತ್ಯಂ ಜನಾಃ ಕೇಚಿನ್ಮನೀಷಯಾ |
ಅನಿತ್ಯಂ ಪಂಚವರ್ಷಾಣಿ ಷಷ್ಠೋ ದೃಶ್ಯತಿ ದೇಹಿನಾಮ್ |
ಅಸ್ಯಾಃ ಪಂಚೈವ ಚಿಂತಾಯಾಃ ಪರ್ಯೇಷ್ಯಾಣಿ ಚ ಪಂಚಧಾ ॥47॥
ಈ ಕಾಲನ ಸ್ವರೂಪವನ್ನು ಎಲ್ಲ ಜನರು ತಮ್ಮ ಬುದ್ಧಿಯಿಂದಲೇ ಸರಿಯಾಗಿ ಯೋಚಿಸಬೇಕು. ಹುಟ್ಟಿದ ಬಳಿಕ ಐದು ವರ್ಷಗಳ ತನಕ ಅವನು ಬದುಕುತ್ತಾನೋ, ಇಲ್ಲವೋ ಎಂಬುದೇ ನಿರ್ಣಯವಾಗುವುದಿಲ್ಲ. ಐದು ವರ್ಷದ ಒಳಗೆ ದೈವದಿಂದ ಮರಣವೂ ಉಂಟಾಗಬಹುದು. ಬಳಿಕ ಆರನೆಯ ವರ್ಷ ಆರಂಭವಾಗುತ್ತದೆ. ಆರನೆಯ ವರ್ಷದ ತನಕವೂ ತಂದೆ-ತಾಯಂದಿರೇ ಮಕ್ಕಳ ಬಾಯಿಗೆ ತುತ್ತನ್ನು ಹಾಕುತ್ತಾರೆ. ನಂತರದ ಆರು ವರ್ಷಗಳಲ್ಲಿಯೂ ಅವರೇ ರಕ್ಷಿಸುತ್ತಾರೆ. ಹನ್ನೆರಡು- ಹದಿಮೂರನೆಯ ವರ್ಷದ ಬಳಿಕ ಹೊಟ್ಟೆ ತುಂಬಿಸುವ ಉಪಾಯವೇನು ಎಂಬ ಚಿಂತೆಯು ಆರಂಭವಾಗುತ್ತದೆ. ಹದಿನೈದು ದಾಟಿದ ಬಳಿಕ ಮದುವೆಯಾಗಲು ಆ ಕಾಲವು ತಲುಪಿಸುತ್ತದೆ. ಹದಿನಾರನೆಯ ವರ್ಷದ ಬಳಿಕ ಆಯುಷ್ಯವು ಹೇಗೆ ಕಳೆಯುತ್ತದೆ ಎಂಬುದನ್ನು ಯಾರಿಗೂ ತಿಳಿಯಲಾಗುವುದಿಲ್ಲ. ಅದೊಂದು ರೀತಿ ಉನ್ಮಾದದ ದೆಸೆ. ಅದರ ವೇಗವನ್ನು ಯಾರಿಂದಲೂ ತಿಳಿಯಲಾಗದು. ಹೀಗೆ ಮನುಷ್ಯನ ಜೀವಿತವು ಕಾಲನ ಪ್ರಭಾವದಿಂದ ಅನೇಕ ರೀತಿ ವಿಭಕ್ತವಾಗಿದೆ.
ಗಂಭೀರಂ ಗಹನಂ ಬ್ರಹ್ಮ ಮಹತ್ತೋಯಾರ್ಣವಂ ಯಥಾ |
ಅನಾದಿನಿಧನಂ ಚಾಹುರಕ್ಷರಂ ಪರಮೇವ ಚ ॥48॥
ಕಾಲನಿಯಾಮಕವಾದ ಪರಬ್ರಹ್ಮವು ದೊಡ್ಡದಾದ ಅನಂತ ಜಲರಾಶಿಯಿಂದ ತುಂಬಿರುವ ಮಹಾಸಾಗರದಂತೆ ಗಂಭೀರವೂ ಗಹನವೂ ಆಗಿದೆ. ಇದಕ್ಕೆ ಆದಿಯಾಗಲಿ, ಅಂತ್ಯವಾಗಲಿ ಇರುವುದಿಲ್ಲ. ಇದನ್ನೇ ಅಕ್ಷರವೂ, ಉತ್ತಮವೂ ಎಂದು ವಿದ್ವಾಂಸರು ಹೇಳುತ್ತಾರೆ.
ಸತ್ತ್ವೇಷು ಲಿಂಗಮಾವೇಶ್ಯ ನಲಿಂಗಮಪಿ ತತ್ಸ್ವಯಮ್ |
ಮನ್ಯಂತೇऽಧ್ರುವಮೇವೈನಂ ಯೇ ನರಾಸ್ತತ್ತ್ವದರ್ಶಿನಃ ॥49॥
ಕಾಲರೂಪವಾದ ಆ ಪರಬ್ರಹ್ಮನು ತಾನು ಸ್ವಯಂ ನಿರ್ವಿಕಾರನಾಗಿದ್ದರೂ ಜೀವರಿಗೆ ಸ್ತ್ರೀ-ಪುಂ ಎಂಬ ಸ್ಥಿತಿಯನ್ನು ನೀಡುತ್ತಾನೆ. ತತ್ತ್ವದರ್ಶಿಗಳಾದ ಜ್ಞಾನಿಗಳು ಈ ಜೀವನನ್ನು ಅಧ್ರುವ ಎಂದೇ ಹೇಳುತ್ತಾರೆ. ಮರಣಶೀಲನೆಂದೇ ಕರೆಯುತ್ತಾರೆ.
ಭೂತಾನಾಂ ತು ವಿಪರ್ಯಾಸಂ ಮನ್ಯತೇ ಗತವಾನಿತಿ |
ನ ಹ್ಯೇತಾವದ್ ಭವೇದ್ ಗ್ರಾಹ್ಯಂ ನ ಯಸ್ಯಾಃ ಪ್ರಕೃತೇಃ ಪುನಃ ॥50॥
ಕಾಲನಾಮಕನಾದ ಭಗವಂತನೇ ಸಮಸ್ತ ಪ್ರಾಣಿಗಳ ಅವಸ್ಥೆಗಳಲ್ಲಿಯೂ ವಿಪರ್ಯಾಸವನ್ನುಂಟು ಮಾಡುತ್ತಾನೆ. ಪಂಚಭೂತಗಳ ವಿಪರ್ಯಾಸವನ್ನೇ ನೋಡುತ್ತಾ ಜೀವನುಗತಿಸಿದ ಎನ್ನುತ್ತಾರೆ. ಇಷ್ಟನ್ನೇ ತಿಳಿಯಬಾರದು. ಸತ್ತಪ್ರಕೃತಿ ಪುನಃ ಹುಟ್ಟದು. ನಿತ್ಯನಾದ ಜೀವನು ಪುನಃ ಆವಿರ್ಭವಿಸುತ್ತಾನೆ.
ಗತಿಂ ಹಿ ಸರ್ವಭೂತಾನಾಮಗತ್ವಾ ಕ್ವ ಗಮಿಷ್ಯಸಿ |
ಯೋ ಧಾವತಾ ನ ಹಾತವ್ಯಸ್ತಿಷ್ಠನ್ನಪಿ ನ ಹೀಯತೇ |
ತಮಿಂದ್ರಿಯಾಣಿ ಸರ್ವಾಣಿ ನಾನುಪಶ್ಯಂತಿ ಪಂಚಧಾ ॥51॥
ಸರ್ವಪ್ರಾಣಿಗಳಿಗೂ ರಕ್ಷಕವಾದ ಕಾಲವನ್ನು (ಹರಿಯನ್ನು) ಆಶ್ರಯಿಸದೆ ಪ್ರಾಣಿಯು ಎಲ್ಲಿಗೆ ಹೋಗಬಲ್ಲನು? ಮನುಷ್ಯನು ಓಡಿ ಹೋದರೂ ಅವನನ್ನು ಕಾಲವು ಬಿಡುವುದಿಲ್ಲ. ಅವನು ಒಂದು ಕಡೆ ಸ್ಥಿರವಾಗಿ ನಿಂತರೂ ಕಾಲವು ಅವನನ್ನು ಬಿಟ್ಟು

ಹೋಗುವುದಿಲ್ಲ. ಪಂಚಜ್ಞಾನೇಂದ್ರಿಯಗಳು ಐದು ಬಗೆಯಾಗಿ ಅವನನ್ನು ಹುಡುಕಿದರೂ ಆ ಕಾಲನು ಅವನಿಗೆ ಕಾಣಲಾರ.
ಆಹುಶ್ಚೈನಂ ಕೇಚಿದಗ್ನಿಂ ಕೇಚಿದಾಹುಃ ಪ್ರಜಾಪತಿಮ್ |
ಋತುಮಾಸಾರ್ಧಮಾಸಾಂಶ್ಚ ದಿವಸಾಂಸ್ತು ಕ್ಷಣಾಂಸ್ತಥಾ ||52||
ಕೆಲವರು ಈ ಕಾಲನನ್ನು ಅಗ್ನಿ ಎನ್ನುತ್ತಾರೆ. ಕೆಲವರು ಪ್ರಜಾಪತಿ ಎನ್ನುತ್ತಾರೆ. ಇನ್ನು ಕೆಲವರು ಋತು, ಮಾಸ, ಪಕ್ಷ, ದಿನ ಎನ್ನುತ್ತಾರೆ.
ಪೂರ್ವಾಹ್ಣಮಪರಾಹ್ಣಂ ಚ ಮಧ್ಯಾಹ್ನಮಪಿ ಚಾಪರೇ |
ಮುಹೂರ್ತಮಪಿ ಚೈವಾಹುರೇಕಂ ಸಂತಮನೇಕಧಾ |
ತಂ ಕಾಲಮವಜಾನೀಹಿ ಯಸ್ಯ ಸರ್ವಮಿದಂ ವಶೇ ||53||
ಇನ್ನು ಕೆಲವರು ಪೂರ್ವಾಹ್ಣ, ಅಪರಾಹ್ಣ, ಮಧ್ಯಾಹ್ನ ಎಂದು ಕರೆಯುತ್ತಾರೆ. ಮುಹೂರ್ತವೆಂದೂ ಕರೆಯುತ್ತಾರೆ. ಹೀಗೆ ಕಾಲವು ಒಂದೇ ಆಗಿದ್ದರೂ ಜನರು ಅನೇಕ ವಿಧವಾಗಿ ಕರೆಯುತ್ತಾರೆ. ಇಂದ್ರನೇ, ಜಗತ್ತೆಲ್ಲವೂ ಯಾರ ಅಧೀನದಲ್ಲಿದೆಯೋ ಅದನ್ನೇ ಕಾಲ ಎನ್ನುತ್ತಾರೆ.
ಬಹೂನೀಂದ್ರಸಹಸ್ರಾಣಿ ಸಮತೀತಾನಿ ವಾಸವ |
ಬಲವೀರ್ಯೋಪಪನ್ನಾನಿ ಯಥೈವ ತ್ವಂ ಶಚೀಪತೇ ||54||
ಇಂದ್ರನೇ, ನಿನ್ನಂತೆ ಬಲ-ವೀರ್ಯಸಂಪನ್ನರಾದ ಸಾವಿರಾರು ಇಂದ್ರರು ಆಗಿ ಹೋಗಿದ್ದಾರೆ ಎಂಬ ಎಚ್ಚರವಿರಲಿ.
ತ್ವಾಮಪ್ಯತಿಬಲಂ ಶಕ್ರಂ ದೇವರಾಜಂ ಬಲೋತ್ಕಟಮ್ |
ಪ್ರಾಪ್ತೇ ಕಾಲೇ ಮಹಾವೀರ್ಯಃ ಕಾಲಃ ಸಂಶಮಯಿಷ್ಯತಿ ||55||
ಇಂದ್ರನೇ, ನಿನ್ನನ್ನು ಬಲದಿಂದ ಶ್ರೇಷ್ಠನು ಎಂದು ಭಾವಿಸಿಕೊಂಡಿರುವೆ. ಆದರೆ ಕಾಲವು ಪ್ರಾಪ್ತವಾದಾಗ ಬಲಿಷ್ಠನಾದ ನಿನ್ನನ್ನೂ ಶಮನಗೊಳಿಸುತ್ತದೆ.
ಯ ಇದಂ ಸರ್ವಮಾದತ್ತೇ ತಸ್ಮಾಚ್ಛಕ್ರ ಸ್ಥಿರೋ ಭವ |
ಮಯಾ ತ್ವಯಾ ಚ ಪೂರ್ವೈಶ್ಚ ನ ಸ ಶಕ್ಯೋಽತಿವರ್ತಿತುಮ್ ||56||
ಕಾಲವೇ ಸಂಪೂರ್ಣವಾದ ಜಗತ್ತನ್ನು ತನ್ನ ವಶಕ್ಕೆ ಪಡೆದುಕೊಂಡಿರುತ್ತದೆ. ಆದ್ದರಿಂದ ನೀನು ಸ್ಥಿರಚಿತ್ತನಾಗು. ನನ್ನಿಂದಾಗಲೀ, ನಿನ್ನಿಂದಾಗಲೀ ಕಾಲವನ್ನು ಅತಿಕ್ರಮಿಸಲು ಸಾಧ್ಯವಿಲ್ಲ. ಹಿಂದಿನವರಿಂದಲೂ ಸಾಧ್ಯವಾಗಿಲ್ಲ.
ಯಾಮೇತಾಂ ಪ್ರಾಪ್ಯ ಜಾನೀಷೇ ರಾಜಶ್ರಿಯಮನುತ್ತಮಾಮ್ |
ಸ್ಥಿತಾ ಮಯೀತಿ ತನ್ಮಿಥ್ಯಾ ನೈಷಾ ಹ್ಯೇಕತ್ರ ತಿಷ್ಠತಿ ||57||
ಇಂದ್ರನೇ, ಅತ್ಯಂತ ಶ್ರೇಷ್ಠವಾದ ರಾಜ್ಯಸಂಪತ್ತನ್ನು ಪಡೆದಿರುವ ನೀನು ರಾಜ್ಯಲಕ್ಷ್ಮಿಯು ಸ್ಥಿರವಾಗಿ ನಿನ್ನಲ್ಲೇ ಉಳಿದುಕೊಳ್ಳುವಳು ಎಂದು ಭಾವಿಸಿರುವಿ. ಆದರೆ ಇದು ಸುಳ್ಳು. ಅವಳು ಚಂಚಲೆಯು. ಯಾರ ಬಳಿಯೂ ಸ್ಥಿರವಾಗಿ ನಿಲ್ಲಳು.
ಸ್ಥಿತಾ ಹೀಂದ್ರಸಹಸ್ರೇಷು ತ್ವದ್ವಿಶಿಷ್ಟತಮೇಷ್ವಿಯಮ್ |
ಮಾಂ ಚ ಲೋಲಾ ಪರಿತ್ಯಜ್ಯ ತ್ವಾಮಗಾದ್ ವಿಬುಧಾಧಿಪ ||58||
ಇಂದ್ರನೇ, ಇಂತಹ ಸಂಪತ್ತು ನಿನಗಿಂತಲೂ ಶ್ರೇಷ್ಠರಾದ ಸಾವಿರಾರು ಇಂದ್ರರ ಬಳಿ ಹಿಂದೆ ಇತ್ತು. ಚಂಚಲಳಾದ ಆ ರಾಜ್ಯಲಕ್ಷ್ಮಿಯು ನನ್ನ ಬಳಿಯೂ ಇದ್ದಳು. ಈಗ ನನ್ನನ್ನು ಬಿಟ್ಟು ನಿನ್ನನ್ನು ಸೇರಿದ್ದಾಳೆ.
ಮೈವಂ ಶಕ್ರ ಪುನಃ ಕಾರ್ಷೀಃ ಶಾಂತೋ ಭವಿತುಮರ್ಹಸಿ |
ತ್ವಾಮಪ್ಯೇವಂಗತಂ ತ್ಯಕ್ತ್ವಾ ಕ್ಷಿಪ್ರಮನ್ಯಂ ಗಮಿಷ್ಯತಿ ||59||
ಶಕ್ರನೇ, ಇನ್ನು ಮುಂದಾದರೂ ನೀನು ಇಷ್ಟು ಗರ್ವಿಯಾಗಿ ವರ್ತಿಸಬೇಡ. ಶಾಂತಿಯಿಂದ ಇರುವುದು ಯೋಗ್ಯವಾಗಿದೆ. ನಿನ್ನ ಈ ಕ್ರಮದ ಹೀನಬುದ್ಧಿಯನ್ನು ತಿಳಿದ ಕೂಡಲೇ ರಾಜ್ಯಲಕ್ಷ್ಮಿಯು ಬೇರೆ ವ್ಯಕ್ತಿಯ ಬಳಿ ಹೊರಟು ಹೋಗುತ್ತಾಳೆ, ಎಚ್ಚರವಿರಲಿ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *

ಅರವತ್ತೊಂದನೆಯ ಅಧ್ಯಾಯ
ಇಂದ್ರನಿಗೆ ಲಕ್ಷ್ಮೀ ಮಾಡಿದ ಅನುಗ್ರಹ
ಭೀಷ್ಮಃ
ಶತಕ್ರತುರಥಾಪಶ್ಯದ್ ಬಲೇರ್ದೀಪ್ತಾಂ ಮಹಾತ್ಮನಃ |
ಸ್ವರೂಪಿಣೀಂ ಶರೀರಾದ್ಧಿ ತದಾ ನಿಷ್ಕ್ರಾಮತೀಂ ಶ್ರಿಯಮ್ ||1||
ಈ ಸಂಭಾಷಣಗಳು ಮುಗಿಯುವಷ್ಟರಲ್ಲಿ, ಆ ಬಲಿಯ ದೇಹದಿಂದ ದಿವ್ಯಕಾಂತಿಯಿಂದ ಬೆಳಗುವ ಒಂದು ಸ್ತ್ರೀವ್ಯಕ್ತಿಯು ಮೇಲೆ ಹೊರಟಿತು.
ತಾಂ ದೀಪ್ತಾಂ ಪ್ರಭಯಾ ದೃಷ್ಟ್ವಾ ಭಗವಾನ್ ಪಾಕಶಾಸನಃ |
ವಿಸ್ಮಯೋತ್ಫುಲ್ಲನಯನೋ ಬಲಿಂ ಪಪ್ರಚ್ಛ ವಾಸವಃ ||2||
ಕಾಂತಿವಿಹಿಷ್ಟವಾದ ಆ ಸ್ತ್ರೀವ್ಯಕ್ತಿಯನ್ನು ನೊಡಿ ಇಂದ್ರನು ಆಶ್ಚರ್ಯಗೊಂಡು, ನಟ್ಟ ಕಣ್ಣಿಂದ ನೋಡುತ್ತ ಬಲಿಯನ್ನು ಪ್ರಶ್ನೆ ಮಾಡಿದನು.
ಬಲೇ ಕೇಯಮಪಕ್ರಾಂತಾ ರೋಚಮಾನಾ ಶಿಖಂಡಿನೀ |
ತ್ವತ್ತಃ ಸ್ಥಿತಾ ಸಕೇಯೂರಾ ದೀಪ್ಯಮಾನಾ ಸ್ವತೇಜಸಾ ||3||

`ಓ ದೈತ್ಯರಾಜಾ! ಯಾರೀ ಹೆಂಗಸು? ದಿವ್ಯಕಾಂತಿಯಿಂದ ಬೆಳಗುತ್ತ, ತೋಳ್ಬಳೆಯನ್ನೂ, ಕಿರೀಟವನ್ನೂ ಧರಿಸಿರುವಳು. ಇಂತಹ ಸ್ತ್ರೀವ್ಯಕ್ತಿಯು ನಿನ್ನನ್ನು ಬಿಟ್ಟು ಬಂದ ಕಾರಣವೇನು?' ಎಂದನು.
ಬಲಿಃ
ನ ಹೀಮಾಮಾಸುರೀಂ ವೇದ್ಮಿ ನ ದೈವೀಂ ನ ಚ ಮಾನುಷೀಮ್ |
ತ್ವಮೇವೈನಾಂ ಪೃಚ್ಛ ಮಾ ವಾ ಯಥೇಷ್ಟಂ ಕುರು ವಾಸವ ||4||
ಅದಕ್ಕೆ ಆ ಬಲಿಯು `ಇಂದ್ರಾ! ಅದೊಂದನ್ನೂ ನಾನರಿಯೆನು. ಅವಳು ದೇವಸ್ತ್ರೀಯೋ, ದೈತ್ಯರಮಣಿಯೋ, ಮನುಷ್ಯಕಾಂತೆಯೋ ಅದೂ ನನಗೆ ತಿಳಿಯದು! ಬೇಕಾದರೆ ಅವಳನ್ನೇ ಕೇಳು! ಬೇಡವಾದರೆ ಬಿಡು! ನಿನ್ನ ಇಷ್ಟದಂತೆ ಮಾಡು' ಎಂದನು.
ಶಕ್ರಃ
ಕಾ ತ್ವಂ ಬಲೇರಪಕ್ರಾಂತಾ ರೋಚಮಾನಾ ಶಿಖಂಡಿನೀ |
ಅಜಾನತೋ ಮಮಾಚಕ್ಷ್ವ ನಾಮಧೇಯಂ ಶುಚಿಸ್ಮಿತೇ ||5||
ಕಾ ತ್ವಂ ತಿಷ್ಠಸಿ ಮಾಯೇವ ದೀಪ್ಯಮಾನಾ ಸ್ವತೇಜಸಾ |
ಹಿತ್ವಾ ದೈತ್ಯೇಶ್ವರಂ ಸುಭ್ರು ತನ್ಮಮಾಚಕ್ಷ್ವ ತತ್ತ್ವತಃ ||6||
ಆಗ ಇಂದ್ರನು `ಅಮ್ಮಾ! ದಿವ್ಯಕಾಂತಿಯಿಂದ ಬೆಳಗುತ್ತಿರುವ ನೀನು ಯಾರೆಂದು ತಿಳಿಯಲಿಲ್ಲ. ನಿನ್ನ ಹೆಸರನ್ನು ತಿಳಿಸು. ಈ ಬಲಿಯ ದೇಹದಿಂದ ಹೊರಟು ನನ್ನ ಬಳಿಯಲ್ಲಿ ನೀನು ನಿಂತ ಕಾರಣವೇನು? ಎಂದನು.
ಶ್ರೀಃ
ನ ಮಾ ವಿರೋಚನೋ ವೇದ ನ ಮಾ ವೈರೋಚನೋ ಬಲಿಃ |
ಆಹುರ್ಮಾಂ ದುಃಸಹೇತ್ಯೇವಂ ವಿಧಿತ್ಸೇತಿ ಚ ಮಾಂ ವಿದುಃ ||7||
ಅದಕ್ಕೆ ಆ ಲಕ್ಷ್ಮಿಯು `ನನ್ನನ್ನು ಈ ಬಲಿಯಾಗಲಿ, ಇವನ ಆಪ್ತನಾಗಲಿ ತಿಳಿಯನು. ನನ್ನನ್ನು ದುಸ್ಸಹೆಯೆಂದೂ, ವಿಧಿತ್ಸೆಯೆಂದೂ ಕರೆಯುವರು.
ಭೂತಿರ್ಲಕ್ಷ್ಮೀತಿ ಮಾಮಾಹುಃ ಶ್ರೀರಿತ್ಯೇವಂ ಚ ವಾಸವ |
ತ್ವಂ ಮಾಂ ಶಕ್ರ ನ ಜಾನೀಷೇ ಸರ್ವೇ ದೇವಾ ನ ಮಾಂ ವಿದುಃ ||8||
ನನಗೆ ಭೂತಿಯೆಂದೂ, ಲಕ್ಷ್ಮಿಯೆಂದೂ, ಶ್ರೀಯೆಂದೂ ಇನ್ನೂ ಎಷ್ಟೋ ಹೆಸರುಗಳುಮ್ಟು. ನೀನೂ ನನ್ನನ್ನು ತಿಳಿಯಲಾರೆ. ನಿನ್ನ ಕಡೆಯ ದೇವತೆಗಳಾರೂ ನನ್ನನ್ನು ಅರಿಯರು!' ಎಂದಳು.
ಶಕ್ರಃ
ಕಿಮಿದಂ ತ್ವಂ ಮಮ ಕೃತೇ ಉತಾಹೋ ಬಲಿನಃ ಕೃತೇ |
ದುಃಸಹೇ ವಿಜಹಾಸ್ಯೇನಂ ಚಿರಸಂವಾಸಿನೀ ಸತೀ ||9||
ಆಗ ಇಂದ್ರನು `ಲಕ್ಷ್ಮೀ! ಬಹುಕಾಲದಿಂದ ಬಲಿಯಲ್ಲಿದ್ದ ನೀನು ಈಗ ಅವನನ್ನು ಬಿಟ್ಟು ಹೋಗುವುದೇಕೆ? ನೀನು ಅವನನ್ನು ತ್ಯಜಿಸಿ ನನ್ನಲ್ಲಿಗೆ ಬಂದ ಕಾರಣವೇನು? ಇದು ಅವನ ಪಾಪಕರ್ಮದಿಂದಲೋ, ಅಥವಾ ನನ್ನ ಪುಣ್ಯಕರ್ಮದಿಂದಲೋ, ಯಥಾರ್ಥವನ್ನು ಹೇಳು' ಎಂದನು.
ಶ್ರೀಃ
ನ ಧಾತಾ ನ ವಿಧಾತಾ ಮಾಂ ವಿದಧಾತಿ ಕಥಂಚನ |
ಕಾಲಸ್ತು ಶಕ್ರ ಪರ್ಯಾಯಾನ್ಮೈನಂ ಶಕ್ರಾವಮನ್ಯಥಾಃ ||10||
ಅದಕ್ಕೆ ಆ ಲಕ್ಷ್ಮಿಯು `ಧಾತನಾಗಲಿ, ವಿಧಾತನಾಗಲಿ ನನ್ನನ್ನು ನಿಯಮಿಸಿ ನಡೆಸಲು ಶಕ್ತನಲ್ಲ. ಕಾಲವೇ ನನ್ನನ್ನು ಸ್ಥಳದಿಂದ ಸ್ಥಳಕ್ಕೆ ಸುತ್ತಿಸುತ್ತಿರುವುದು. ಆದುದರಿಂದ ದೇವೇಂದ್ರಾ! ನೀನು ಈ ಬಲಿಯನ್ನು ಅವಮಾನಗೊಳಿಸಿ ಮಾತನಾಡಬಾರದು' ಎಂದಳು.
ಶಕ್ರಃ
ಕಥಂ ತ್ವಯಾ ಬಲಿಸ್ತ್ಯಕ್ತಃ ಕಿಮರ್ಥಂ ವಾ ಶಿಖಂಡಿನಿ |
ಕಥಂ ಚ ಮಾಂ ನ ಜಹ್ಯಾಸ್ತ್ವಂ ತನ್ಮೇ ಬ್ರೂಹಿ ಶುಚಿಸ್ಮಿತೇ ||11||
ಆಗ ಇಂದ್ರನು `ಅಮ್ಮಾ! ಈಗ ನೀನು ಬಲಿಯನ್ನು ಬಿಟ್ಟುದಕ್ಕೆ ಕಾರಣವೇನು? ಹೀಗೆಯೇ ನೀನು ಮುಂದೆ ನನ್ನನ್ನೂ ಬಿಡುವೆಯಾ? ನನ್ನನ್ನು ಬಿಡದೆ ಯಾವಾಗಲೂ ನನ್ನಲ್ಲಿಯೇ ನೀನು ಸ್ಥಿರವಾಗಿ ನಿಲ್ಲಬೇಕಾದರೆ ಅದಕ್ಕೆ ಉಪಾಯವೇನು? ಅದನ್ನು ನನಗೆ ತಿಳಿಸಬೇಕು' ಎಂದನು.
ಶ್ರೀಃ
ಸತ್ಯೇ ಸ್ಥಿತಾಸ್ಮಿ ದಾನೇ ಚ ವ್ರತೇ ತಪಸಿ ಚೈವ ಹಿ |
ಪರಾಕ್ರಮೇ ಚ ಧರ್ಮೇ ಚ ಪರಾಚೀನಸ್ತತೋ ಬಲಿಃ ||12||
ಆಗ ಲಕ್ಷ್ಮಿಯು `ಇಂದ್ರಾ! ನಾನು ಸತ್ಯದಲ್ಲಿ ಸ್ಥಿರವಾಗಿರುವೆನು. ಹಾಗೆಏ ವ್ರತದಲ್ಲಿರುವೆನು. ತಪಸ್ಸಿನಲ್ಲಿರುವೆನು. ಪರಾಕ್ರಮದಲ್ಲಿಯೂ, ಧರ್ಮದಲ್ಲಿಯೂ ನಾನು ನೆಲೆಗೊಂಡಿರುವೆನು. ಈಗ ಬಲಿಯು ಅವೆಲ್ಲವನ್ನೂ ಬಿಟ್ಟುಬಿಟ್ಟನು.
ಬ್ರಹ್ಮಣ್ಯೋಽಯಂ ಸದಾ ಭೂತ್ವಾ ಸತ್ಯವಾದೀ ಜಿತೇಂದ್ರಿಯಃ |
ಅಭ್ಯಸೂಯದ್ ಬ್ರಾಹ್ಮಣಾನ್ ವೈ ಉಚ್ಛಿಷ್ಟಶ್ಚಾಸ್ಪೃಶದ್ ಘೃತಮ್ ||13||
ಹಿಂದೆ ಇವನು ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿದ್ದನು. ಈಚೆಗೆ ಇವನಿಗೆ ಬ್ರಾಹ್ಮಣರಲ್ಲಿ ಅಸೂಯೆ ಹುಟ್ಟಿತು. `ಎಂಜಲು ಕೈಯಿಂದ ಘೃತವನ್ನು ಸ್ಪರ್ಶಿಸಿದನು.
ಯಜ್ಞಶೀಲಃ ಪುರಾ ಭೂತ್ವಾ ಮಾಮೇವ ಯಜತೇತ್ಯಯಮ್ |

ಪ್ರೋವಾಚ ಲೋಕಾನ್ ಮೂಢಾತ್ಮಾ ಕಾಲೇನೋಪನಿಪೀಡಿತಃ ॥14॥
ಹಿಂದೆ ಇವನು ಯಜ್ಞಶೀಲನಾಗಿದ್ದು, ಈಗ ಧನಾಶೆಯಿಂದ ಎಲ್ಲವನ್ನೂ ಬಿಟ್ಟು ಮೂಢಾತ್ಮನಾಗಿ ಕಾಲಪೀಡಿತನಾದನು.
ಅಪಾಕೃತಾ ತತಃ ಶಕ್ರ ತ್ವಯಿ ವತ್ಸ್ಯಾಮಿ ವಾಸವ |
ಅಪ್ರಮತ್ತೇನ ಧಾರ್ಯಾಸ್ಮಿ ತಪಸಾ ವಿಕ್ರಮೇಣ ಚ ॥15॥
ಇದಕ್ಕಾಗಿಯೇ ನಾನು ಅವನನ್ನು ಬಿಟ್ಟೆನು. ಈಗ ನಾನು ನಿನ್ನಲ್ಲಿ ಸೇರುವೆನು. ಇನ್ನು ಮೇಲೆ ನೀನು ಎಚ್ಚರತಪ್ಪದಿದ್ದರೆ ತಪಸ್ಸಿನಿಂದಲೂ, ಪರಾಕ್ರಮದಿಂದಲೂ ನನ್ನನ್ನು ದೃಢವಾಗಿ ನಿಲ್ಲಿಸಿಕೊಳ್ಳಬಹುದು' ಎಂದಳು.
ಶಕ್ರಃ
ಅಸ್ತಿ ದೇವಮನುಷ್ಯೇಷು ಸರ್ವಭೂತೇಷು ವಾ ಪುಮಾನ್ |
ಯಸ್ತ್ವಾಮೇಕೋ ವಿಷಹಿತುಂ ಶಕ್ನುಯಾತ್ ಕಮಲಾಲಯೇ ॥16॥
ದೇವೇಂದ್ರನು `ದೇವೀ! ಅದು ಸಾಧ್ಯವೆಂದು ನನಗೆ ತೋರಲಿಲ್ಲ. ದೇವ, ಗಂಧರ್ವ, ದೈತ್ಯ, ರಾಕ್ಷಸರಲ್ಲಿ ಯಾವನೊಬ್ಬನೂ ನಿನ್ನನ್ನು ಸ್ಥಿರವಾಗಿ ನಿಲ್ಲಿಸಿಕೊಂಡವನಿಲ್ಲವಷ್ಟೆ?'
ಶ್ರೀಃ
ನೈವ ದೇವೋ ನ ಗಂಧರ್ವೋ ನಾಸುರೋ ನ ಚ ರಾಕ್ಷಸಃ |
ಯೋ ಮಾಮೇಕೋ ವಿಷಹಿತುಂ ಶಕ್ತಃ ಕಶ್ಚಿತ್ ಪುರಂದರ ॥17॥
ಇಂದ್ರಾ! ವಾಸ್ತವವೇ! ದೇವ, ದಾನವ, ಗಂಧರ್ವ, ರಾಕ್ಷಸರಲ್ಲಿ ನನ್ನನ್ನು ಸ್ಥಿರವಾಗಿ ನಿಲ್ಲಿಸಿಕೊಂಡವನು ಯಾವನೂ ಇಲ್ಲ'.
ಶಕ್ರಃ
ತಿಷ್ಠೇಥಾ ಮಯಿ ನಿತ್ಯಂ ತ್ವಂ ಯಥಾ ತದ್ ಬ್ರೂಹಿ ಮೇ ಶುಭೇ |
ತತ್ ಕರಿಷ್ಯಾಮಿ ತೇ ವಾಕ್ಯಮೃತಂ ತ್ವಂ ವಕ್ತುಮರ್ಹಸಿ ॥18॥
`ನೀನು ನನ್ನಲ್ಲಿಯೇ ಸ್ಥಿರವಾಗಿ ನಿಲ್ಲುವಂತೆ ಮಾಡಿಕೊಳ್ಳಬೇಕಾದರೆ ಹೇಗೆ ನಡೆದುಕೊಳ್ಳಬೇಕು? ಆ ವಿಷಯದಲ್ಲಿ ನಿನ್ನ ಆಜ್ಞೆಯಂತೆ ನಡೆಯುವೆನು. ನೀನು ಮಾತ್ರ ಸತ್ಯವನ್ನು ಹೇಳಬೇಕು'.
ಶ್ರೀಃ
ಸ್ಥಾಸ್ಯಾಮಿ ನಿತ್ಯಂ ದೇವೇಂದ್ರ ಯಥಾ ತ್ವಯಿ ನಿಬೋಧ ತತ್ |
ವಿಧಿನಾ ವೇದದೃಷ್ಟೇನ ಚತುರ್ಧಾ ವಿಭಜಸ್ವ ಮಾಮ್ ॥19॥
`ಇಂದ್ರಾ! ನಾನು ನಿನ್ನಲ್ಲಿ ನಿತ್ಯವಾಗಿ ನೆಲೆಸಿರುವುದಕ್ಕೆ ಉಪಾಯವನ್ನು ತಿಳಿಸುವೆನು, ಕೇಳು. ವೇದೋಕ್ತವಿಧಿಯಿಂದ ನನ್ನನ್ನು ನಾಲ್ಕುಕಡೆಯಲ್ಲಿ ವಿಭಾಗಿಸಿಡಬೇಕು'.
ಶಕ್ರಃ
ಅಹಂ ವೈ ತ್ವಾ ನಿಧಾಸ್ಯಾಮಿ ಯಥಾಶಕ್ತಿ ಯಥಾಬಲಮ್ |
ನ ತು ಮೇಽತಿಕ್ರಮಃ ಸ್ಯಾದ್ವೈ ಸದಾ ಲಕ್ಷ್ಮಿ ತವಾಂತಿಕೇ ॥20॥
ಭೂಮಿರೇವ ಮನುಷ್ಯೇಷು ಧಾರಣೀ ಭೂತಭಾವಿನೀ |
ಸಾ ತೇ ಪಾದಂ ತಿತಿಕ್ಷೇತ ಸಮರ್ಥಾ ಹೀತಿ ಮೇ ಮತಿಃ ॥21॥
`ದೇವೀ! ಹಾಗೆಯೇ ಆಗಲಿ! ನಾನು ನಿನ್ನನ್ನು ಶಕ್ತಿಗೂ, ಬಲಕ್ಕೂ ತಕ್ಕಂತೆ ಆಯಾ ಸ್ಥಳದಲ್ಲಿರಿಸುವೆನು. ಆದರೆ ನಿನ್ನಲ್ಲಿ ನಾನು ತಪ್ಪಿ ನಡೆಯಬಾರದು. ಮನುಷ್ಯರಲ್ಲಿ ಎಲ್ಲರಿಗೂ ಉತ್ಪತ್ತಿಕಾರಿಣಿಯಾದ ಈ ಭೂಮಿಯು ನಿನ್ನ ಒಂದು ಭಾಗವನ್ನು ಧರಿಸಬಲ್ಲವಳು. ಆದುದರಿಂದ ಅವಳಲ್ಲಿ ನಿನ್ನ ನಾಲ್ಕನೇ ಒಂದು ಭಾಗಕ್ಕೆ ಸ್ಥಳ ಮಾಡುವೆನು'.
ಶ್ರೀಃ
ಏಷ ಮೇ ನಿಹಿತಃ ಪಾದೋ ಯೋಽಯಂ ಭೂಮೌ ಪ್ರತಿಷ್ಠಿತಃ |
ದ್ವಿತೀಯಂ ಶಕ್ರ ಪಾದಂ ಮೇ ತಸ್ಮಾತ್ ಸುನಿಹಿತಂ ಕುರು ॥22॥
`ಹಾಗೆಯೇ ನನ್ನ ಒಂದು ಪಾದವನ್ನು ಭೂಮಿಯಲ್ಲಿಡುವೆನು. ಉಳಿದ ಭಾಗಗಳಿಗೆ ತಕ್ಕ ಆಧಾರವನ್ನು ಏರ್ಪಡಿಸು!'
ಶಕ್ರಃ
ಆಪ ಏವ ಮನುಷ್ಯೇಷು ದ್ರವಂತ್ಯಃ ಪರಿಚಾರಿಕಾಃ |
ತಾಸ್ತೇ ಪಾದಂ ತಿತಿಕ್ಷಂತಾಮಲಮಾಪಸ್ತಿತಿಕ್ಷಿತುಮ್ ॥23॥
`ದೇವೀ! ಜಲವು ದ್ರವರೂಪದಿಂದ ಮನುಷ್ಯರಿಗೆ ಅನೇಕ ಕಾರ್ಯಗಳಿಗೆ ಉಪಯೋಗ ಪಡುವುದು. ನಿನ್ನ ಮತ್ತೊಂದು ಪಾದವನ್ನು ಅದು ಧರಿಸಬಲ್ಲದು'.
ಶ್ರೀಃ
ಏಷ ಮೇ ನಿಹಿತಃ ಪಾದೋ ಯೋಽಯಮಪ್ಸು ಪ್ರತಿಷ್ಠಿತಃ |
ತೃತೀಯಂ ಶಕ್ರ ಪಾದಂ ಮೇ ತಸ್ಮಾತ್ ಸುನಿಹಿತಂ ಕುರು ॥24॥
`ಅದರ ಮೇಲೆಯೂ ಒಂದು ಪಾದವನ್ನು ಇಟ್ಟೆನು. ಇನ್ನು ಮೂರನೇ ಪಾದಕ್ಕೆ ಆಧಾರ ಯಾವುದು?'
ಶಕ್ರಃ
ಯಸ್ಮಿನ್ ದೇವಾಶ್ಚ ಯಜ್ಞಾಶ್ಚ ಯಸ್ಮಿನ್ ವೇದಾಃ ಪ್ರತಿಷ್ಠಿತಾಃ |
ತೃತೀಯಂ ಪಾದಮಗ್ನಿಸ್ತೇ ಸುಧೃತಂ ಧಾರಯಿಷ್ಯತಿ ॥25॥
`ದೇವೀ! ಅಗ್ನಿಯು ನಿನ್ನ ಮೂರನೆಯ ಪಾದವನ್ನು ಧರಿಸಲಿ! ಅದರಲ್ಲಿ ಇಂದ್ರನೂ, ವೇದಗಳೂ, ಯಜ್ಞಗಳೂ, ಇತರ ದೇವತೆಗಳೂ

ನೆಲೆಗೊಂಡಿರುವರು'.
ಶ್ರೀಃ
ಏಷ ಮೇ ನಿಹಿತಃ ಪಾದೋ ಯೋಽಯಮಗ್ನೌ ಪ್ರತಿಷ್ಠಿತಃ |
ಚತುರ್ಥಂ ಶಕ್ರ ಪಾದಂ ಮೇ ತಸ್ಮಾತ್ ಸುನಿಹಿತಂ ಕುರು ॥26॥
`ಇಂದ್ರಾ! ಅಗ್ನಿಯಲ್ಲಿ ಮೂರನೇ ಪಾದವನ್ನಿಟ್ಟೇನು. ಇನ್ನು ನಾಲ್ಕನೇ ಪಾದಕ್ಕೆ ಸ್ಥಳ ಯಾವುದು?'
ಶಕ್ರಃ
ಯೇ ವೈ ಸಂತೋ ಮನುಷ್ಯೇಷು ಬ್ರಹ್ಮಣ್ಯಾಃ ಸತ್ಯವಾದಿನಃ |
ತೇ ತೇ ಪಾದಂ ತಿತಿಕ್ಷಂತಾಮಲಂ ಸಂತಸ್ತಿತಿಕ್ಷಿತುಮ್ ॥27॥
`ಅಮ್ಮಾ! ಮನುಷ್ಯರಲ್ಲಿ ಸಾಧುಗಳಾಗಿ, ಸತ್ಯವಾದಿಗಳಾಗಿ, ಬ್ರಾಹ್ಮಣಭಕ್ತಿ ಉಳ್ಳವರು ಆ ನಿನ್ನ ನಾಲ್ಕನೇ ಪಾದವನ್ನು ಧರಿಸಲಿ'.
ಶ್ರೀಃ
ಏಷ ಮೇ ನಿಹಿತಃ ಪಾದೋ ಯೋಽಯಂ ಸತ್ಸು ಪ್ರತಿಷ್ಠಿತಃ |
ಏವಂ ವಿನಿಹಿತಾಂ ಶಕ್ರ ಭೂತೇಷು ಪರಿಧತ್ಸ್ವ ಮಾಮ್ ॥28॥
`ಸಾಧುಗಳ ಮೇಲೆ ನೆಲೆಗೊಳಿಸತಕ್ಕ ಆ ನಾಲ್ಕನೇ ಪಾದವನ್ನು ಅಲ್ಲಿಯೇ ಇಡುವೆನು. ಹೀಗೆ ಭೂಲೋಕದಲ್ಲಿ ಇಟ್ಟು ನನ್ನ ನಾಲ್ಕು ಪಾದಗಳನ್ನೂ ನೀನು ಪಾಲಿಸುತ್ತಿರು'.
ಶಕ್ರಃ
ಭೂಮಿಶುದ್ಧಿಂ ತತಃ ಕೃತ್ವಾ ಅದ್ಭಿಃ ಸಂತರ್ಪಯಂತಿ ಯೇ |
ಭೂತಾನಿ ಚ ಯಜಂತ್ಯಗ್ನೌ ತೇಷಾಂ ತ್ವಮನಪಾಯಿನೀ ॥29॥
ಯೇ ಕ್ರಿಯಾಭಿಃ ಸುರಕ್ತಾಭಿರ್ಹೇತುಯುಕ್ತಾಃ ಸಮಾಹಿತಾಃ |
ಜ್ಞಾನವಂತೋ ವಿವತ್ಸ್ಯಾಯಾಂ ಲಬ್ಧಾ ಮಾದ್ಯಂತಿ ಯೋಗಿನಃ ॥30॥
`ದೇವೀ! ಯಾರು ಭೂಮಿಯನ್ನು ಶುದ್ಧಿಮಾಡಿ, ಜಲದಿಂದ ಪ್ರಾಣಿಗಳಿಗೆ ತೃಪ್ತಿ ಉಂಟುಮಾಡುತ್ತ, ಅಗ್ನಿಯಲ್ಲಿ ಸಂತೋಷದಿಂದ ಹೋಮಮಾಡುವರೋ, ಅವರಿಗೆ ನೀನು ಎಂದೆಂದಿಗೂ ಪ್ರಸನ್ನಳಾಗಿ ಅವರಲ್ಲಿ ನೆಲೆಗೊಂಡಿರಬೇಕು.
ಭೂತಾನಾಮಿಹ ವೈ ಯಸ್ತ್ವಾ ಮಯಾ ವಿನಿಹಿತಾಂ ಸತೀಮ್ |
ಉಪಹನ್ಯಾತ್ ಸ ಮೇ ದ್ವಿಷ್ಯಾತ್ತಥಾ ಶೃಣ್ವಂತು ಮೇ ವಚಃ ॥31॥
ಹೀಗೆ ಭೂತಗಳಲ್ಲಿ ನಾನು ನಿನ್ನನ್ನು ವಿಭಾಗಿಸಿರುವೆನು. ನೀನಿರತಕ್ಕ ಸ್ಥಳಕ್ಕೆ ವಿರೋಧವನ್ನು ಮಾಡುವವರನ್ನು ನಾನು ದಂಡಿಸುವೆನು' ಎಂದನು.
ಭೀಷ್ಮಃ
ತಥೇತಿ ಚೋಕ್ತತ್ವ ಸಾ ವತ್ಸಾ ಸರ್ವಲೋಕನಮಸ್ಕೃತಾ |
ವಾಸವಂ ಪಾಲಯಾಮಾಸ ಸಾ ದೇವೀ ಕಮಲಾಲಯಾ ॥32॥
ಹಾಗೆಯೇ ಆಗಲೆಂದು ಶ್ರೀವತ್ಸ ರೂಪಳಾದ ಸರ್ವಲೋಕ ನಮಸ್ಕೃತಳಾದ ಲಕ್ಷ್ಮಿಯು ಹೇಳಿ ಬಲಿಯನ್ನು ಬಿಟ್ಟು ಬಂದು ಇಂದ್ರನಿಗೆ ಪ್ರಸನ್ನಳಾದಳು.
ತತಸ್ತ್ಯಕ್ತಃ ಶ್ರಿಯಾ ರಾಜಾ ದೈತ್ಯಾನಾಂ ಬಲಿರಬ್ರವೀತ್ |
ಯಾವತ್ ಪುರಸ್ತಾತ್ ಪ್ರತಪೇತ್ತಾವದ್ವೈ ದಕ್ಷಿಣಾಂ ದಿಶಮ್ ॥33॥
ಹೀಗೆ ಲಕ್ಷ್ಮಿಯಿಂದ ತ್ಯಜಿಸಲ್ಪಟ್ಟ ಬಲಿಯು ಹೀಗೆಂದು ಹೇಳುವನು. `ಈಗ ಸೂರ್ಯನು ಪಶ್ಚಿಮದಲ್ಲಿ ಹೇಗೋ ಹಾಗೇ ಪೂರ್ವದಲ್ಲಿಯೂ, ಉತ್ತರದಲ್ಲಿ ಹೇಗೋ ಹಾಗೆ ದಕ್ಷಿಣದಲ್ಲಿಯೂ ಮೇರುವಿನ ಸುತ್ತಲೂ ಪ್ರಕಾಶಿಸುವನು.
ಪಶ್ಚಿಮಾಂ ತಾವದೇವಾಪಿ ತಥೋದೀಚೀಂ ದಿವಾಕರಃ |
ತಥಾ ಮಧ್ಯಂದಿನೇ ಸೂರ್ಯೋ ಅಸ್ತಮೇತಿ ಯದಾ ತದಾ |
ಪುನರ್ದೇವಾಸುರಂ ಯುದ್ಧಂ ಭಾವಿ ಜೇತಾಸ್ಮಿ ವಸ್ತದಾ ॥34॥
ಉದಿಸಿದ ಸೂರ್ಯನು ನಾಲ್ಕು ದಿಕ್ಕುಗಳನ್ನು ಬೆಳಗುತ್ತಾ ಮಧ್ಯಾಹ್ನಕಾಲದಲ್ಲಿ ಅಲ್ಪ ಪ್ರಭೆಯನ್ನು ಹೊಂದಿದ ವಿಪರೀತ ಕಾಲವು ಅಸುರಜಯಕಾಲವು ಆಗ ದೇವತೆಗಳಿಗೂ, ಅಸುರರಿಗೂ ತಿರುಗಿ ಮಹಾಯುದ್ಧವು ಪ್ರಾಪ್ತವಾಗುವುದು.
ಸರ್ವಲೋಕಾನ್ ಯದಾದಿತ್ಯೋ ಹ್ಯೇಕಸ್ಥಸ್ತಾಪಯಿಷ್ಯತಿ |
ತದಾ ದೇವಾಸುರೇ ಯುದ್ಧೇ ಜೇತಾಹಂ ತ್ವಾಂ ಶತಕ್ರತೋ ॥35॥
ಯಾವಾಗ ಸೂರ್ಯ ಉದಯಾಸ್ತಮಾನ ಕಾಲಗಳಂತೆ ಮಧ್ಯಾಹ್ನ ಕಾಲದಲ್ಲಿಯೂ ತೋರುತ್ತಾನೋ ಆಗ ಇಂದ್ರನೇ ದೇವಾಸುರ ಯುದ್ಧದಲ್ಲಿ ನಿಮ್ಮನ್ನು ಸೋಲಿಸುತ್ತಾನೆ. ಆ ಯುದ್ಧದಲ್ಲಿ ನಾನು ದೇವತೆಗಳಾದ ನಿಮ್ಮೆಲ್ಲರನ್ನೂ ಜಯಿಸಿ ಓಡಿಸುವೆನು' ಎಂದನು.
ಶಕ್ರಃ
ಬ್ರಹ್ಮಣಾಸ್ಮಿ ಸಮಾದಿಷ್ಟೋ ನ ಹಂತವ್ಯೋ ಭವಾನಿತಿ |
ತೇನ ತೇಹಂ ಬಲೇ ವಜ್ರಂ ನ ವಿಮುಂಚಾಮಿ ಮೂರ್ಧನಿ ॥36॥
ಆಗ ದೇವೇಂದ್ರನು ಬಲಿಯನ್ನು ನೋಡಿ `ದೈತ್ಯರಾಜಾ! ಬ್ರಹ್ಮನು ನನಗೆ ನಿನ್ನನ್ನು ಕೊಲ್ಲಬಾರದೆಂದೇ ಆಜ್ಞಾಪಿಸಿರುವನು. ಅದರಿಂದಲೇ ನಾನು ನಿನ್ನ ತಲೆಯಮೇಲೆ ನನ್ನ ವಜ್ರಾಯುಧವನ್ನು ಪ್ರಯೋಗಿಸದೆ ಬಿಟ್ಟೇನು.
ಯಥೇಷ್ಟಂ ಗಚ್ಛ ದೈತ್ಯೇಂದ್ರ ಸ್ವಸ್ತಿ ತೇಽಸ್ತು ಮಹಾಸುರ |
ಆದಿತ್ಯೋ ನಾವತಪಿತಾ ಕದಾಚಿನ್ಮಧ್ಯತಃ ಸ್ಥಿತಃ ॥37॥

ಇನ್ನು ನೀನು ನಿನ್ನ ಇಷ್ಟದಂತೆ ಹೋಗಬಹುದು. ನಿನಗೆ ಮಂಗಳವಾಗಲಿ, ಸೂರ್ಯನು ಎಲ್ಲ ದಿಕ್ಕುಗಳನ್ನೂ ಬಿಟ್ಟು ಮೇರುಮಧ್ಯದಲ್ಲಿ ಮಾತ್ರ ಪ್ರಕಾಶಿಸುವ ಸಂಭವವೇ ಇರದು.
ಸ್ಥಾಪಿತೋ ಹ್ಯಸ್ಯ ಸಮಯಃ ಪೂರ್ವಮೇವ ಸ್ವಯಂಭುವಾ |
ಅಜಸ್ರಂ ಪರಿಯಾತ್ಯೇಷ ಸತ್ಯೇನಾವತಪನ್ ಪ್ರಜಾಃ ||38||
ಭಗವಂತನು ಮೊದಲೇ ಈ ಸೂರ್ಯಗತಿಯನ್ನು ಹೀಗೆಯೇ ಇರಬೇಕೆಂದು ಕಟ್ಟಳೆ ಮಾಡಿರುವನು. ಎಲ್ಲಾ ಪ್ರಾಣಿಗಳಿಗೂ ಉಷ್ಣವನ್ನೂ, ಬೆಳಕನ್ನೂ ಕೊಡುವುದಕ್ಕಾಗಿ ಸೂರ್ಯನು ಎಡೆಬಿಡದೆ ಸುತ್ತುತ್ತಲೇ ಇರಬೇಕು.
ಅಯನಂ ತಸ್ಯ ಷಣ್ಮಾಸಾ ಉತ್ತರಂ ದಕ್ಷಿಣಂ ತಥಾ |
ಯೇನ ಸಂಯಾತಿ ಲೋಕೇಷು ಶೀತೋಷ್ಣೇ ವಿಸೃಜನ್ ರವಿಃ ||39||
ಆರುತಿಂಗಳು ಉತ್ತರಮಾರ್ಗವಾಗಿಯೂ, ಇನ್ನಾರು ತಿಂಗಳು ದಕ್ಷಿಣ ಮಾರ್ಗವಾಗಿಯೂ ಸುತ್ತುವನು. ಈ ಪರ್ಯಾಯಗತಿಗಳಿಂದ ಭೂಮಿಗೆ ಶೀತೋಷ್ಣಗಳನ್ನೂ, ಋತುಭೇದಗಳನ್ನೂ ಉಂಟುಮಾಡುವವನೂ ಅವನೇ' ಎಂದನು.
ಭೀಷ್ಮಃ
ಏವಮುಕ್ತಸ್ತು ದೈತ್ಯೇಂದ್ರೋ ಬಲಿರಿಂದ್ರೇಣ ಭಾರತ |
ಜಗಾಮ ದಕ್ಷಿಣಾಮಾಶಾಮುದೀಚೀಂ ತು ಪುರಂದರಃ ||40||
ಇತ್ಯೇತದ್ ಬಲಿನಾ ಗೀತಮನಹಂಕಾರಸಂಜ್ಞಿತಮ್ |
ವಾಕ್ಯಂ ಶ್ರುತ್ವಾ ಸಹಸ್ರಾಕ್ಷಃ ಖಮೇವಾರುರುಹೇ ತದಾ ||41||
ಈ ಮಾತನ್ನು ಕೇಳಿ ಬಲಿಯು ಇಂದ್ರನನ್ನು ಬಿಟ್ಟು ಅತ್ತಲಾಗಿ ದಕ್ಷಿಣ ದಿಕ್ಕಿಗೆ ಹೋದನು. ಇತ್ತಲಾಗಿ ಇಂದ್ರನೂ ಉತ್ತರದಿಕ್ಕಿಗೆ ಹೋದನು. ಬಲಿಯು ಹೇಳಿದ ನಿರಹಂಕಾರ ಗೀತೆಯೆಂಬ ಈ ನೀತಿ ವಾಕ್ಯಗಳನ್ನು ಕೇಳಿ ಇಂದ್ರನು ವಿಸ್ಮಿತನಾಗಿ ಅಂತರಿಕ್ಷಕ್ಕೆ ಹಾರಿದನು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ಇಂದ್ರ-ನಮುಚಿಗಳ
ಸಂವಾದವನ್ನು ನಿರೂಪಿಸಿದುದು.
ಭೀಷ್ಮಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಶತಕ್ರತೋಶ್ಚ ಸಂವಾದಂ ನಮುಚೇಶ್ಚ ಯುಧಿಷ್ಠಿರ ||1||
ಭೀಷ್ಮ ಅನಹಂಕಾರ ಎಂಬ ಹೆಸರಿನಿಂದ ಇಂದ್ರನಿಗೂ ನಮುಚಿಗೂ ನಡೆದ ಸಂಭಾಷಣರೂಪವಾದ ಪುರಾತನವಾದ ಇತಿಹಾಸವನ್ನು ಪುರಾತನರು ಹೇಳುತ್ತಾರೆ.
ಶ್ರಿಯಾ ವಿಹೀನಮಾಸೀನಮಕ್ಷೋಭ್ಯಮಿವ ಸಾಗರಮ್ |
ಭವಾಭವಜ್ಞಂ ಭೂತಾನಾಮಿತ್ಯುವಾಚ ಪುರಂದರಃ ||2||
ಹಿಂದೊಮ್ಮೆ ಇಂದ್ರನು ಸಂಪತ್ತಿನಿಂದ ಭ್ರಷ್ಟನಾಗಿದ್ದು, ಪ್ರಶಾಂತವಾದ ಮಹಾಸಮುದ್ರದಂತೆ ಯಾವ ವಿಧವಾದ ಕ್ಷೋಭೆಗೂ ತುತ್ತಾಗದೆ ಕುಳಿತಿರುವಾಗ ದೈತ್ಯರಾಜನಾದ ನಮುಚಿಗೆ ಕಾಲಿಕವಾಗಿ ಸಂಭವಿಸುವ ಜನನ-ಮರಣಗಳ ರಹಸ್ಯವನ್ನು ಇಂದ್ರನು ಹೇಳಿದನು.
ಬದ್ಧಃ ಪಾಶೈಶ್ಚ್ಯುತಃ ಸ್ಥಾನಾದ್ದ್ವಿಷತಾಂ ವಶಮಾಗತಃ |
ಶ್ರಿಯಾ ವಿಹೀನೋ ನಮುಚೇ ಶೋಚಸ್ಯಾಹೋ ನ ಶೋಚಸಿ ||3||
ನಮುಚಿಯೇ, ನೀನು ಪಾಶಗಳಿಂದ ಬಂಧಿಸಲ್ಪಟ್ಟಿರುವಿ. ರಾಜ್ಯಭ್ರಷ್ಟನಾಗಿರುವಿ. ಶತ್ರುಗಳ ವಶನಾಗಿರುವಿ. ಧನಸಂಪತ್ತಿನಿಂದಲೂ ವಿಹೀನನಾಗಿರುವಿ. ಇಂತಹ ನಿನ್ನ ದುರವಸ್ಥೆಗೆ ನೀನು ಶೋಚಿಸುತ್ತೀಯೋ ಇಲ್ಲವೋ?
ನಮುಚಿಃ
ಅನವಾಪ್ಯಂ ಚ ಶೋಕೇನ ಶರೀರಂ ಚೋಪತಪ್ಯತೇ |
ಅಮಿತ್ರಾಶ್ಚ ಪ್ರಹೃಷ್ಯಂತಿ ನಾಸ್ತಿ ಶೋಕೇ ಸಹಾಯತಾ ||4||
ನಮುಚಿ ದೇವರಾಜನೇ, ಶೋಕವನ್ನು ನಾನು ತಡೆದುಕೊಳ್ಳದಿದ್ದರೆ ಅದು ನನ್ನ ಶರೀರಕ್ಕೆ ತಾಪವನ್ನುಂಟು ಮಾಡುತ್ತದೆ. ಶತ್ರುಗಳು ಶೋಕವನ್ನು ನೋಡಿ ಸಂತೋಷಗೊಳ್ಳುತ್ತಾರೆ. ಶೋಕದಿಂದ ನನ್ನ ವಿಪತ್ತು ದೂರವಾಗುತ್ತದೆಯೇ? ಶೋಕದಿಂದ ಯಾವ ಉಪಯೋಗವೂ ಇಲ್ಲ.
ತಸ್ಮಾಚ್ಛಕ್ರ ನ ಶೋಚಾಮಿ ಸರ್ವಂ ಹ್ಯೇವೇದಮಂತವತ್ |
ಸಂತಾಪಾದ್ ಭ್ರಶ್ಯತೇ ರೂಪಂ ಧರ್ಮಶ್ಚೈವ ಸುರೇಶ್ವರ ||5||
ಆದ್ದರಿಂದಲೇ ಈ ಕಾರಣಗಳಿಂದ ನಾನು ಶೋಕಪಡುವುದಿಲ್ಲ. ವೈಭವವು ನಾಶ ಹೊಂದುವ ಸ್ವಭಾವವುಳ್ಳದ್ದಾಗಿದೆ. ಇದನ್ನು ಅರ್ಥಮಾಡಿಕೊಂಡ ನಾನು ಸಂತಾಪಗೊಂಡಲ್ಲಿ ನನ್ನ ರೂಪವು ಹಾಳಾಗುತ್ತದೆ. ನನ್ನ ಧರ್ಮವು, ಆಯುಷ್ಯವು ಕ್ಷಯವಾಗುತ್ತದೆ.
ವಿನೀಯ ಖಲು ತದ್ ದುಃಖಮಾಗತಂ ವೈಮನಸ್ಯಜಮ್ |

ಧ್ಯಾತವ್ಯಂ ಮನಸಾ ಹೃದ್ಯಂ ಕಲ್ಯಾಣಂ ಸಂವಿಜಾನತಾ ॥6॥
ಈ ರಹಸ್ಯವನ್ನು ಅರ್ಥಮಾಡಿಕೊಂಡಿರುವ ಪುರುಷನು ವೈಮನಸ್ಯದಿಂದ ಉತ್ಪನ್ನವಾದ ದುಃಖವನ್ನು ದೂರೀಕರಿಸಿ ಹೃದಯಸ್ಥಮಾನವಾಗಿರುವ ಕಲ್ಯಾಣಮಯ ಪರಮಾತ್ಮನನ್ನು ಮನಸ್ಸಿನಲ್ಲಿ ಧ್ಯಾನ ಮಾಡಬೇಕು.
ಯಥಾ ಯಥಾ ಹಿ ಪುರುಷಃ ಕಲ್ಯಾಣೇ ಕುರುತೇ ಮನಃ |
ತದೈವಾಸ್ಯ ಪ್ರಸೀದಂತಿ ಸರ್ವಾರ್ಥಾ ನಾತ್ರ ಸಂಶಯಃ ॥7॥
ಯಾವ ರೀತಿಯಾಗಿ ಪುರುಷನು ಕಲ್ಯಾಣ ಸ್ವರೂಪಿಯಾದ ಪರಮಾತ್ಮನ ಧ್ಯಾನವನ್ನು ಮಾಡುತ್ತಾನೋ, ಅವನಲ್ಲಿಯೇ ಮನಸ್ಸನ್ನು ಸಂಯೋಜಿಸುತ್ತಾನೋ ಆಗಲೇ ಸಮಸ್ತ ಪುರುಷಾರ್ಥಗಳು ಸಿದ್ಧಿಸುತ್ತವೆ. ಇದರಲ್ಲಿ ಸಂಶಯವಿಲ್ಲ.
ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ
ಗರ್ಭೇ ಶಯಾನಂ ಪುರುಷಂ ಶಾಸ್ತಿ ಶಾಸ್ತಾ |
ತೇನಾನುಶಿಷ್ಟಃ ಪ್ರವಣಾದಿವೋದಕಂ
ಯಥಾ ನಿಯುಕ್ತೋಽಸ್ಮಿ ತಥಾ ವಹಾಮಿ ॥8॥
ಜಗತ್ತನ್ನು ಶಾಸನ ಮಾಡುವವನು ಆ ಪರಮಾತ್ಮನೇ ಆಗಿದ್ದಾನೆ. ಬೇರೆಯವನಿಲ್ಲ. ಆ ಭಗವಂತನು ಗರ್ಭದಲ್ಲಿ ಮಲಗಿರುವ ಜೀವರಿಗೂ ಶಾಸಕನಾಗಿದ್ದಾನೆ. ಇಳಿಜಾರಿನ ಪ್ರದೇಶದಲ್ಲಿ ನೀರು ಸಹಜವಾಗಿ ಹರಿದು ಹೋಗುವಂತೆ ಆ ಭಗವಂತನಿಂದಲೇ ಪ್ರೇರಿತನಾದ ಜೀವನು ಅವನ ಸಂಕಲ್ಪವನ್ನು ಅನುಸರಿಸಿ ನಡೆಯುತ್ತಾನೆ. ಆ ಭಗವಂತನ ಶಾಸನದ ಆದೇಶದಂತೆ ಸಮಸ್ತ ಕಾರ್ಯಭಾರಗಳನ್ನು ಹೊರುತ್ತಿದ್ದೇನೆ.
ಭಾವಾಭಾವಾವಭಿಜಾನನ್ ಗರೀಯೋ
ಜಾನಾಮಿ ಶ್ರೇಯೋ ನ ತು ತತ್ ಕರೋಮಿ |
ಆಶಾಃ ಸುಶರ್ಮ್ಯಾಃ ಸುಹೃದಾಂ ಸುಕುರ್ವನ್
ಯಥಾ ನಿಯುಕ್ತೋಽಸ್ಮಿ ತಥಾ ವಹಾಮಿ ॥9॥
ಪ್ರಾಣಿಗಳ ಬಂಧ-ಮೋಕ್ಷಗಳ ತತ್ತ್ವವನ್ನು ತಿಳಿದಿರುತ್ತೇನೆ. ಶ್ರೇಷ್ಠವಾದ ತತ್ತ್ವವು ಯಾವುದೆಂಬುದನ್ನು ತಿಳಿದಿರುತ್ತೇನೆ. ಜ್ಞಾನದಿಂದಲೇ ಶ್ರೇಯಸ್ಸು ಎಂಬುದು ಅರ್ಥವಾಗಿದೆ. ಹೀಗಿದ್ದರೂ ನಾನು ಜ್ಞಾನ ಮಾರ್ಗದಲ್ಲೇ ನಡೆದುಕೊಳ್ಳುತ್ತಿಲ್ಲ. ಜ್ಞಾನಕ್ಕೆ ವಿಪರೀತವಾದ ಕಾಮ್ಯಕರ್ಮಗಳಲ್ಲಿ ನನ್ನ ಅಂತರ್ಯಾಮಿಯ ಪ್ರೇರಣೆಯು ನನಗೆ ಉಂಟಾಗುತ್ತಿದೆ. ಆದ್ದರಿಂದ ಆ ಪ್ರೇರಣೆಯಂತೆ ಕಾರ್ಯಭಾರವನ್ನು ನಡೆಸುತ್ತಿದ್ದೇನೆ.
ಯಥಾ ಯಥಾಸ್ಯ ಪ್ರಾಪ್ತವ್ಯಂ ಪ್ರಾಪ್ನೋತ್ಯೇವ ತಥಾ ತಥಾ |
ಭವಿತವ್ಯಂ ಯಥಾ ಯಚ್ಚ ಭವತ್ಯೇವ ತಥಾ ತಥಾ ॥10॥
ಯಾವ ರೀತಿಯಲ್ಲಿ ಯಾವ ವಸ್ತುವು ಹೊಂದಬೇಕೋ ಅದೇ ರೀತಿ ಆ ವಸ್ತುವು ಲಭಿಸುತ್ತದೆ. ಯಾವುದು ಹೇಗೆ ನಡೆಯಬೇಕೋ ಹಾಗೆ ನಡೆಯುತ್ತದೆ.
ಯತ್ರ ಯತ್ರೈವ ಸಂಯುಂಕ್ತೇ ಧಾತಾ ಗರ್ಭಂ ಪುನಃ ಪುನಃ |
ತತ್ರ ತತ್ರೈವ ವಸತಿ ನ ಯತ್ರ ಸ್ವಯಮಿಚ್ಛತಿ ॥11॥
ಬ್ರಹ್ಮನು ಯಾವ ಯಾವ ಗರ್ಭದಲ್ಲಿ ಯಾರನ್ನು ವಾಸಿಸಲು ಪ್ರೇರಿಸುತ್ತಾನೋ ಆಯಾ ಗರ್ಭದಲ್ಲಿ ಜೀವನು ವಾಸಿಸುತ್ತಾನೆ. ತನ್ನ ಸಂಕಲ್ಪಕ್ಕನುಗುಣವಾಗಿ ಗರ್ಭವನ್ನು ಹೊಂದಲಾರನು.
ಭಾವೋ ಯೋಽಯಮನುಪ್ರಾಪ್ತೋ ಭವಿತವ್ಯಮಿದಂ ಮಮ |
ಇತಿ ಯಸ್ಯ ಸದಾ ಭಾವೋ ನ ಸ ಮುಹ್ಯೇತ್ ಕದಾಚನ ॥12॥
ನನಗೆ ಯಾವ ಈ ಅವಸ್ಥೆಯು ಒದಗಿ ಬಂದಿದೆಯೋ ಇದು ಅವನ ಸಂಕಲ್ಪಾನುಸಾರವಾಗಿಯೇ ಬಂದಿದೆ. ಹೀಗೆ ಯಾರು ಚಿಂತಿಸುತ್ತಾರೋ ಅವನು ತನಗೆ ಪ್ರಾಪ್ತವಾದ ದುಃಖದ ವಿಷಯದಲ್ಲಿ ಮೋಹಗೊಳ್ಳುವುದಿಲ್ಲ.
ಪರ್ಯಾಯೈರ್ಹನ್ಯಮಾನಾನಾಮಭಿಷಂಗೋ ನ ವಿದ್ಯತೇ |
ದುಃಖಮೇತತ್ತು ಯದ್ ದ್ವೇಷ್ಟಾ ಕರ್ತಾಹಮಿತಿ ಮನ್ಯತೇ ॥13॥
ಬೇರೆ ಬೇರೆ ಕ್ರಮದಲ್ಲಿ ನಿರಂತರ ಬರುವ ಕಷ್ಟಗಳಿಂದ ಪೀಡಿತರಾದವರು ಒಂದೇ ದುಃಖದಲ್ಲಿ ಕುಳಿತು ಎಂದೂ ಇರುವುದಿಲ್ಲ. ಯಾರು ದುಃಖವನ್ನೇ ದ್ವೇಷಿಸುತ್ತಾರೋ ಆ ಕಷ್ಟಕ್ಕೆ ತಾನೇ ಕರ್ತೃವೆಂದು ಭಾವಿಸುತ್ತಾರೆ. ಇದು ಮತ್ತೂ ದುಃಖಕ್ಕೆ ಕಾರಣವಾಗುತ್ತದೆ.
ಋಷೀಂಶ್ಚ ದೇವಾಂಶ್ಚ ಮಹಾಸುರಾಂಶ್ಚ
ತ್ರೈವಿದ್ಯವೃದ್ಧಾಂಶ್ಚ ವನೇ ಮುನೀಂಶ್ಚ |
ಕಾನ್ನಾಪದೋ ನೋಪನಮಂತಿ ಲೋಕೇ
ಪರಾವರಜ್ಞಾಸ್ತು ನ ಸಂಭ್ರಮಂತಿ ॥14॥
ಋಷಿಗಳು, ದೇವತೆಗಳು, ಮಹಾಸುರರು, ಮೂರು ವೇದಜ್ಞರಾದ ಜ್ಞಾನಿಗಳು, ಅರಣ್ಯಸ್ಥ ಮುನಿಗಳು ಇವರೆಲ್ಲರಿಗೂ ಆಪತ್ತು ಒದಗುತ್ತದೆ. ವಿವೇಕಿಗಳಾದವರು ಈ ಆಪತ್ತಿನಿಂದ ಭ್ರಾಂತರಾಗುವುದಿಲ್ಲ.
ನ ಪಂಡಿತಃ ಕ್ರುಧ್ಯತಿ ನಾಪಿ ಸಜ್ಜತೇ
ನ ಚಾಪಿ ಸಂಸೀದತಿ ನ ಪ್ರಹಷ್ಯತಿ |
ನ ಚಾರ್ಥಕೃಚ್ಛ್ರವ್ಯಸನೇಷು ಶೋಚತಿ
ಸ್ಥಿತಃ ಪ್ರಕೃತ್ಯಾ ಹಿಮವಾನಿವಾಚಲಃ ॥15॥
ಪಂಡಿತನು ಕೋಪಗೊಳ್ಳುವುದಿಲ್ಲ. ಅತಿಯಾದ ಆಸಕ್ತಿಯನ್ನಿಟ್ಟುಕೊಳ್ಳುವುದಿಲ್ಲ. ಆಪತ್ತಿನಿಂದ ಕುಗ್ಗುವುದಿಲ್ಲ. ಸುಖದಿಂದ

ಹಿಗ್ಗುವುದಿಲ್ಲ. ನಿರ್ಧನನಾದಾಗ, ವ್ಯಸನಿಯಾದಾಗ ಶೋಕಿಸುವುದಿಲ್ಲ. ಹಿಮದಂತೆ ಸ್ಥಿರವಾದ ಸ್ವಭಾವವುಳ್ಳವ- ನಾಗಿರುತ್ತಾನೆ.
ಯಮರ್ಥಸಿದ್ಧಿಃ ಪರಮಾ ನ ಹರ್ಷಯೇತ್
ತಥೈವ ಕಾಲೇ ವ್ಯಸನಂ ನ ಮೋಹಯೇತ್ ।
ಸುಖಂ ಚ ದುಃಖಂ ಚ ತಥೈವ ಮಧ್ಯಮಂ
ನಿಷೇವತೇ ಯಃ ಸ ಧುರಂಧರೋ ನರಃ ॥16॥
ಮಹತ್ತರವಾದ ಅರ್ಥಸಿದ್ಧಿಯು ಯಾವಾತನನ್ನು ಮೋಹಗೊಳಿಸುವುದಿಲ್ಲವೋ, ಕಾಲಾನುಗುಣವಾಗಿ ಬಂದಿರುವ ದುಃಖವೂ ಯಾವನನ್ನು ಮೋಹಗೊಳಿಸುವು- ದಿಲ್ಲವೋ, ಸುಖ-ದುಃಖಗಳನ್ನು ಸಮಾನವಾಗಿ ಯಾವಾತನು ಕಾಣುತ್ತಾನೋ ಅವನು ಮಹಾಭಾರವನ್ನು ಸಾಧಿಸುವ ಶ್ರೇಷ್ಠ ಪುರುಷನೆನಿಸುತ್ತಾನೆ.
ಯಾಂ ಯಾಮವಸ್ಥಾಂ ಪುರುಷೋಽಧಿಗಚ್ಛೇತ್
ತಸ್ಯಾಂ ರಮೇತಾಪರಿತಪ್ಯಮಾನಃ ।
ಏವಂ ಪ್ರವೃದ್ಧಂ ಪ್ರಣುದೇನ್ಮನೋಜಂ
ಸಂತಾಪಮಾಯಾಸಕರಂ ಶರೀರಾತ್ ॥17॥
ಪುರುಷನು ಯಾವುದೇ ಸ್ಥಿತಿಯನ್ನು ಹೊಂದಿದರೂ ತನ್ನ ಸ್ಥಿತಿಗಾಗಿ ದುಃಖಗೊಳ್ಳಬಾರದು. ಸಂತಾಪವನ್ನುಂಟು ಮಾಡುವ, ದಿನದಿನಕ್ಕೂ ವರ್ಜಿಸುವ ಎಲ್ಲಾ ಕಾಮನೆಗಳನ್ನು ಶರೀರದಿಂದಲೂ, ಮನಸ್ಸಿನಿಂದಲೂ ದೂರಗೊಳಿಸಿ ತಾನು ಇರುವ ಸ್ಥಿತಿಯಲ್ಲಿಯೇ ಸಂತೋಷ ಹೊಂದಬೇಕು.
ತತ್ ಸದಃ ಸ ಪರಿಷತ್ಸಭಾಸದಃ
ಪ್ರಾಪ್ಯ ಯೋ ನ ಕುರುತೇ ಸಭಾಭಯಮ್ ।
ಧರ್ಮತತ್ತ್ವಮವಗಾಹ್ಯ ಬುದ್ಧಿಮಾನ್
ಯೋಽಭ್ಯುಪೈತಿ ಸ ಪುಮಾನ್ ಧುರಂಧರಃ ॥18॥
ಯಾವ ಧಾರ್ಮಿಕ ಸಭೆಯಲ್ಲಿ ಮನುಷ್ಯನು ಧರ್ಮ-ಮರ್ಯಾದೆಗೆ ಭಯ ಹೊಂದುವುದಿಲ್ಲವೋ ಅದು ಸತ್ಸಭೆಯಲ್ಲ. ಧರ್ಮ-ಮರ್ಯಾದೆಗೆ ಭಯಪಟ್ಟು ನಡೆದರೆ ಅದು ಸತ್ಸಭೆ ಎನ್ನುತ್ತಾರೆ. ಬುದ್ಧಿವಂತನಾದ ಮನುಷ್ಯನು ಧರ್ಮತತ್ತ್ವದಲ್ಲಿ ಮುಳುಗಿ ಅದನ್ನು ಅನುಷ್ಠಾನ ಮಾಡುತ್ತಾನೋ ಅವನೇ ಮಹಾಭಾರವನ್ನು ಧರಿಸಲು ಸಮರ್ಥನಾದ ಪುರುಷನು.
ಪ್ರಾಜ್ಞಸ್ಯ ಕರ್ಮಾಣಿ ದುರನ್ವಯಾನಿ
ನ ವೈ ಪ್ರಾಜ್ಞೋ ಮುಹ್ಯತಿ ಮೋಹಕಾಲೇ ।
ಸ್ಥಾನಾಚ್ಚ್ಯುತಶ್ಚೇನ್ನ ಮುಮೋಹ ಗೌತಮ-
ಸ್ತಾವತ್ಕೃಚ್ಛ್ರಾಮಾಪದಂ ಪ್ರಾಪ್ಯ ವೃದ್ಧಃ ॥19॥
ಪ್ರಾಜ್ಞನ ಕಾರ್ಯಗಳು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಮೋಹದ ಕಾಲದಲ್ಲಿಯೂ ಪ್ರಾಜ್ಞನು ಮೋಹಗೊಳ್ಳುವುದಿಲ್ಲ. ವೃದ್ಧನಾದ ಗೌತಮನು ಸ್ಥಾನದಿಂದ ಚ್ಯುತನಾದರೂ ಮೋಹವಶನಾಗಲಿಲ್ಲ. ಎಷ್ಟು ಆಪತ್ತುಗಳನ್ನು ಅನುಭವಿಸಿದರೂ ಮೋಹಗೊಳ್ಳದೆ ಎದುರಿಸಿದನು.
ನ ಮಂತ್ರಬಲವೀರ್ಯೇಣ ಪ್ರಜ್ಞಯಾ ಪೌರುಷೇಣ ವಾ ।
ಅಲಭ್ಯಂ ಲಭತೇ ಮರ್ತ್ಯಸ್ತತ್ರ ಕಾ ಪರಿದೇವನಾ ॥20॥
ಮನುಷ್ಯನು ಅಲಭ್ಯವಾದ ವಸ್ತುಗಳನ್ನು ಮಂತ್ರದಿಂದಾಗಲಿ, ಬಲದಿಂದಾಗಲಿ, ಪರಾಕ್ರಮದಿಂದಾಗಲಿ, ಬುದ್ಧಿಯಿಂದಾಗಲಿ, ಪುರುಷಪ್ರಯತ್ನದಿಂದಾಗಲಿ ಪಡೆದುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಇದರಲ್ಲಿ ಶೋಕಪಡಬೇಕಾದ ಕಾರಣವಿಲ್ಲ.
ಯದೇವಮನುಜಾತಸ್ಯ ಧಾತಾರೋ ವಿದಧುಃ ಪುರಾ ।
ತದೇವಾನುಭವಿಷ್ಯಾಮಿ ಕಿಂ ಮೇ ಮೃತ್ಯುಃ ಕರಿಷ್ಯತಿ ॥21॥
ಹೀಗೆ ಕರ್ಮಾನುಗುಣವಾಗಿ ಹುಟ್ಟಿರುವ ನನಗೆ ಸೃಷ್ಟಿಕರ್ತರು ಏನನ್ನು ಪಡೆಯಬೇಕೆಂದು ನಿಯಮಿಸಿದ್ದಾರೋ ಅದನ್ನೇ ಅನುಸರಿಸಿ ವಿಧಾತನ ಶಾಸನ ಒಂದನ್ನೇ ನಂಬಿ ನಡೆಯುತ್ತಿದ್ದೇನೆ. ನನ್ನನ್ನು ಮೃತ್ಯುವು ಏನು ಮಾಡಿಯಾನು?
ಲಬ್ಧವ್ಯಾನ್ಯೇವ ಲಭತೇ ಗಂತವ್ಯಾನ್ಯೇವ ಗಚ್ಛತಿ ।
ಪ್ರಾಪ್ತವ್ಯಾನ್ಯೇವ ಪ್ರಾಪ್ನೋತಿ ದುಃಖಾನಿ ಚ ಸುಖಾನಿ ಚ ॥22॥
ವಿಧಾತೃವಿನ ಶಾಸನದಂತೆ ಯಾವನು ಯಾವುದನ್ನು ಹೊಂದಬೇಕೋ ಅದನ್ನು ಹೊಂದಿಯೇ ತೀರುತ್ತಾನೆ. ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಹೋಗಿಯೇ ತೀರುತ್ತಾನೆ. ದುಃಖದ ಪ್ರಾಪ್ತಿ ಇದ್ದರೆ ದುಃಖವನ್ನು ಅನುಭವಿಸುತ್ತಾನೆ. ಸುಖದ ಪ್ರಾಪ್ತಿ ಇದ್ದರೆ ಸುಖವನ್ನು ಅನುಭವಿಸುತ್ತಾನೆ.
ಏತದ್ ವಿದಿತ್ವಾ ಕಾರ್ತ್ಸ್ನ್ಯೇನ ಯೋ ನ ಮುಹ್ಯತಿ ಮಾನವಃ ।
ಕುಶಲಃ ಸುಖದುಃಖೇಷು ಸ ವೈ ಸರ್ವಧನೇಶ್ವರಃ ॥23॥
ಈ ರಹಸ್ಯವನ್ನು ಸಮಗ್ರವಾಗಿ ತಿಳಿದು ಯಾವ ಮನುಷ್ಯನು ಪರ್ಯಾಯವಾಗಿ ಬರುವ ಸುಖ-ದುಃಖಗಳ ವಿಷಯದಲ್ಲಿ ಮೋಹಗೊಳ್ಳುವುದಿಲ್ಲವೋ ಅವನು ದುಃಖದಲ್ಲಿಯೂ ಕುಶಲಿಯಾಗಿರುತ್ತಾನೆ. ಸಮಗ್ರವಾದ ಐಶ್ವರ್ಯವನ್ನು ಪಡೆಯುವವನಾಗುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.

* * * * *

अरवत्तूरनेय अध्याय

ಭೀಷ್ಮರು ಯುಧಿಷ್ಠಿರನನ್ನು ಕುರಿತು, ವಿಪತ್ತಿನಲ್ಲಿ ಧೈರ್ಯವನ್ನು ಅವಲಂಬಿಸಲು ಸುಖ ಸಾಧನವನ್ನು ಪ್ರತಿಪಾದಿಸುವ ಬಲಿ-ಶಕ್ರರ ಸಂವಾದವನ್ನು ನಿರೂಪಿಸಿದುದು.

ಯುಧಿಷ್ಠಿರಃ

ಮಗ್ನಸ್ಯ ವ್ಯಸನೇ ಕೃಚ್ಛ್ರೇ ಕಿಂ ಶ್ರೇಯಃ ಪುರುಷಸ್ಯ ಹಿ |
ಬಂಧುನಾಶೇ ಮಹೀಪಾಲ ರಾಜ್ಯನಾಶೇಽಪಿ ವಾ ಪುನಃ ||1||

ಯುಧಿಷ್ಠಿರ ಪಿತಾಮಹನೇ, ಬಂಧುಗಳ ನಾಶದಿಂದ ಅಥವಾ ರಾಜ್ಯನಾಶದಿಂದ ಮಹಾಸಂಕಟದಲ್ಲಿ ಬೀಳುವ ಮನುಷ್ಯನಿಗೆ ಯಾವುದರಿಂದ ಪುನಃ ಶ್ರೇಯಸ್ಸು ಲಭಿಸುತ್ತದೆ?

ತ್ವಂ ಹಿ ನಃ ಪರಮೋ ವಕ್ತಾ ಲೋಕೇಽಸ್ಮಿನ್ ಭರತರ್ಷಭ |
ಏತದ್ಭವಂತಂ ಪೃಚ್ಛಾಮಿ ತನ್ಮೇ ವಕ್ತುಮಿಹಾರ್ಹಸಿ ||2||

ಈ ಪ್ರಪಂಚದಲ್ಲಿ ನಮ್ಮ ಶ್ರೇಷ್ಠ ಬೋಧಕನು ನೀನೇ ಆಗಿರುವಿ. ಆದ್ದರಿಂದಲೇ ನಿನ್ನನ್ನು ಪ್ರಶ್ನಿಸುತ್ತಿದ್ದೇನೆ. ಉತ್ತರವನ್ನು ಹೇಳುವ ಕೃಪೆ ತೋರು.

ಭೀಷ್ಮ ಃ

ಪುತ್ರದಾರೈಃ ಸುಖೈಶ್ಚೈವ ವಿಯುಕ್ತಸ್ಯ ಧನೇನ ಚ |
ಮಗ್ನಸ್ಯ ವ್ಯಸನೇ ಕೃಚ್ಛ್ರೇ ಧೃತಿಃ ಶ್ರೇಯಸ್ಕರೀ ನೃಪ ||3||

ಭೀಷ್ಮ ಯುಧಿಷ್ಠಿರನೇ, ಯಾರು ಮಡದಿ, ಮಕ್ಕಳು ಮೊದಲಾದ ಬಂಧುವರ್ಗವನ್ನು, ಸಂಪತ್ತನ್ನು ಕಳೆದುಕೊಂಡು, ಸುಖಗಳಿಂದ ವಂಚಿತರಾಗಿ ಅಗಾಧವಾದ ದುಃಖವನ್ನು ಹೊಂದುತ್ತಾರೋ ಅವರು ಧೈರ್ಯವನ್ನೇ ಅವಲಂಬಿಸಬೇಕು. ಅದೇ ಶ್ರೇಯಸ್ಕರವಾದುದು.

ಧೈರ್ಯೇಣ ಯುಕ್ತಸ್ಯ ಸತಃ ಶರೀರಂ ನ ವಿಶೀರ್ಯತೇ |
ಆರೋಗ್ಯಾಚ್ಚ ಶರೀರಸ್ಯ ಸ ಪುನರ್ವಿಂದತೇ ಶ್ರಿಯಮ್ ||4||

ಧೈರ್ಯದಿಂದ ಕೂಡಿರುವ ವ್ಯಕ್ತಿಯ ಶರೀರವು ಕ್ಷೀಣಿಸುವುದಿಲ್ಲ. ಆರೋಗ್ಯವು ಚೆನ್ನಾಗಿದ್ದರೆ ಅವನು ಪುನಃ ಸಂಪತ್ತನ್ನು ಪಡೆದುಕೊಳ್ಳಬಹುದು.

ಯಸ್ಯ ರಾಜ್ಞೋ ನರಾಸ್ತಾತ ಸಾತ್ತ್ವಿಕೀಂ ವೃತ್ತಿಮಾಸ್ಥಿತಾಃ |
ತಸ್ಯ ಸ್ಥೈರ್ಯಂ ಚ ಧೈರ್ಯಂ ಚ ವ್ಯವಸಾಯಶ್ಚ ಕರ್ಮಸು ||5||

ಯಾವ ಮನುಷ್ಯನು ಪ್ರಾಜ್ಞನಾಗಿ ಸಾತ್ವಿಕವೃತ್ತಿಯನ್ನೇ ಆಶ್ರಯಿಸಿ ವ್ಯವಹರಿಸುತ್ತಾನೋ ಅವನಿಗೆ ಐಶ್ವರ್ಯವು ಲಭಿಸುತ್ತದೆ, ಧೈರ್ಯವೂ ಇರುತ್ತದೆ. ಅಂತಹವನು ಕಾರ್ಯಗಳಲ್ಲಿ ನಿಶ್ಚಯ ಬುದ್ಧಿಯುಳ್ಳವನಾಗಿರುತ್ತಾನೆ.

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಬಲಿವಾಸವಸಂವಾದಂ ಪುನರೇವ ಯುಧಿಷ್ಠಿರ ||6||

ಇದೇ ವಿಷಯದಲ್ಲಿ ಹಿಂದೆ ಬಲಿಗೂ ಇಂದ್ರನಿಗೂ ನಡೆದ ಇತಿಹಾಸ ರೂಪವಾದ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ, ಕೇಳು.

ವೃತ್ತೇ ದೇವಾಸುರೇ ಯುದ್ಧೇ ದೈತ್ಯದಾನವಸಂಕ್ಷಯೇ |
ವಿಷ್ಣುಕ್ರಾಂತೇಷು ಲೋಕೇಷು ದೇವರಾಜೇ ಶತಕ್ರತೌ ||7||

ಹಿಂದೆ ದೇವತೆಗಳಿಗೂ ಅಸುರರಿಗೂ ಯುದ್ಧವು ಏರ್ಪಟ್ಟಿತು. ದೈತ್ಯ-ದಾನವರು ವಿನಾಶ ಹೊಂದಿದರು. ಬಲಿಚಕ್ರವರ್ತಿಯಿಂದ ವಾಮನನು ಮೂರು ಪಾದಗಳನ್ನು ಕೇಳಿ, ತ್ರಿವಿಕ್ರಮನಾಗಿ ಬೆಳೆದು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಆಕ್ರಮಿಸಿದನು. ಬಳಿಕ ಇಂದ್ರನು ದೇವತೆಗಳಿಗೆ ಅಧಿಪತಿಯಾದನು.

ಇಜ್ಯಮಾನೇಷು ದೇವೇಷು ಚಾತುರ್ವರ್ಣ್ಯೇ ವ್ಯವಸ್ಥಿತೇ |
ಸಮೃಧ್ಯಮಾನೇ ತ್ರೈಲೋಕ್ಯೇ ಪ್ರೀತಿಯುಕ್ತೇ ಸ್ವಯಂಭುವಿ ||8||

ದೇವತೆಗಳ ಪ್ರೀತ್ಯರ್ಥವಾಗಿ ಯಾಗಾದಿಗಳು ಆರಂಭವಾದವು. ಚತುರಾಶ್ರಮಿಗಳು ತಮ್ಮ ಧರ್ಮವನ್ನು ಅನುಷ್ಠಾನ ಮಾಡಿದರು. ಇದರಿಂದ ಮೂರು ಲೋಕಗಳು ಸಮೃದ್ಧಿಯನ್ನು ಹೊಂದಿದವು. ಅದನ್ನು ನೋಡಿ ಬ್ರಹ್ಮನಿಗೆ ಸಂತೋಷ ಉಂಟಾಯಿತು.

ರುದ್ರೈರ್ವಸುಭಿರಾದಿತ್ಯೈರಶ್ವಿಭ್ಯಾಮಪಿ ಚರ್ಷಿಭಿಃ |
ಗಂಧರ್ವೈರ್ಭುಜಗೇಂದ್ರೈಶ್ಚ ಸಿದ್ಧೈಶ್ಚಾನ್ಯೈರ್ವೃತಃ ಪ್ರಭುಃ ||9||

ಚತುರ್ದಂತಂ ಸುದಾಂತಂ ಚ ವಾರಣೇಂದ್ರಂ ಶ್ರಿಯಾ ವೃತಮ್ |
ಆರುಹ್ಯೈರಾವತಂ ಶಕ್ರಸ್ತ್ರೈಲೋಕ್ಯಮನುಸಂಯಯೌ ||10||

ಹೀಗೆ ಇರುತ್ತಿರಲು ರುದ್ರ-ವಸು-ಆದಿತ್ಯ-ಅಶ್ವಿನಿ-ಋಷಿ-ಗಂಧರ್ವ-ಸಿದ್ಧ- ಚಾರಣ ಮೊದಲಾದವರಿಂದ ಕೂಡಿಕೊಂಡು, ಸುಂದರವಾದ ನಾಲ್ಕು ದಂತಗಳಿಂದ ಕಂಗೊಳಿಸುವ ಐರಾವತವೆಂಬ ಆನೆಯನ್ನು ಹತ್ತಿ ದೇವೇಂದ್ರನು ಲೋಕಯಾತ್ರೆಗಾಗಿ ಹೊರಟನು.

ಸ ಕದಾಚಿತ್ ಸಮುದ್ರಾಂತೇ ಕಸ್ಮಿಂಶ್ಚಿದ್ ಗಿರಿಗಹ್ವರೇ |
ಬಲಿಂ ವೈರೋಚನಿಂ ವಜ್ರೀ ದದರ್ಶೋಪಸಸರ್ಪ ಚ ||11||

ಹೀಗೆ ಪ್ರಯಾಣ ಮಾಡುತ್ತಿದ್ದಾಗ ಇಂದ್ರನು ಸಮುದ್ರ ತೀರದಲ್ಲಿರುವ ಒಂದು ಸಮುದ್ರದ ಗುಹೆಯಲ್ಲಿ ವಿರೋಚನನ ಮಗನಾದ ಬಲಿಯನ್ನು ನೋಡಿ ಅವನ ಬಳಿ ಸಾಗಿದನು.

ತಮೈರಾವತಮೂರ್ಧಸ್ಥಂ ಪ್ರೇಕ್ಷ್ಯ ದೇವಗಣೈರ್ವೃತಮ್ |

ಸುರೇಂದ್ರಮಿಂದ್ರಂ ದೈತ್ಯೇಂದ್ರೋ ನ ಶುಶೋಚ ನ ವಿವ್ಯಥೇ ॥12॥
ದೇವಗಣಗಳಿಂದ ಆವೃತನಾಗಿ ಐರಾವತದ ತಲೆಯ ಮೇಲೆ ಕುಳಿತಿರುವ ಇಂದ್ರನನ್ನು ನೋಡಿ ದೈತ್ಯೇಂದ್ರನು ಶೋಕಿಸಲೂ ಇಲ್ಲ, ವ್ಯಥೆಯನ್ನೂ ಹೊಂದಲಿಲ್ಲ.
ದೃಷ್ಟ್ವಾ ತಮವಿಕಾರಸ್ಥಂ ತಿಷ್ಠಂತಂ ನಿರ್ಭಯಂ ಬಲಿಮ್ |
ಅಧಿರೂಢೋ ದ್ವಿಪಶ್ರೇಷ್ಠಮಿತ್ಯುವಾಚ ಶತಕ್ರತುಃ ॥13॥
ಬಲಿಚಕ್ರವರ್ತಿಯು ನಿರ್ವಿಕಾರನಾಗಿದ್ದನು, ನಿರ್ಭೀತಿಯಿಂದಿದ್ದನು. ಇಂತಹ ಬಲಿಯನ್ನು ಕುರಿತು ಐರಾವತದ ಮೇಲೆ ಕುಳಿತೇ ಇಂದ್ರನು ಹೀಗೆ ಪ್ರಶ್ನಿಸಿದನು.
ದೈತ್ಯ ನ ವ್ಯಥಸೇ ಶೌರ್ಯಾದಥ ವಾ ವೃದ್ಧಸೇವಯಾ |
ತಪಸಾ ಭಾವಿತತ್ವಾದ್ವಾ ಸರ್ವಥೈತತ್ ಸುದುಷ್ಕರಮ್ ॥14॥
ದೈತ್ಯೇಂದ್ರನೇ, ಶತ್ರುವಿನ ಸಮೃದ್ಧಿಯನ್ನು ಕಂಡು ನೀನು ದುಃಖ ಪಡುತ್ತಿಲ್ಲ. ಇಂತಹ ಸ್ಥಿತಿಯು ಸಾಮಾನ್ಯ ಮನುಷ್ಯರಿಗೆ ದುಷ್ಕರವು. ಈ ಗುಣವನ್ನು ನೀನು ಶೌರ್ಯದಿಂದ ಅಥವಾ ವೃದ್ಧರ ಸೇವೆಯಿಂದ ಅಥವಾ ತಪಸ್ಸಿನ ಫಲದ ಪ್ರಭಾವದಿಂದ ಮೈಗೂಡಿಸಿಕೊಂಡಿರುವೆಯಾ? ಈ ಗುಣವು ಹೇಗೆ ಬಂದಿತು?
ಶತ್ರುಭಿರ್ವಶಮಾನೀತೋ ಹೀನಃ ಸ್ಥಾನಾದನುತ್ತಮಾತ್ |
ವೈರೋಚನೇ ಕಿಮಾಶ್ರಿತ್ಯ ಶೋಚಿತವ್ಯೇ ನ ಶೋಚಸಿ ॥15॥
ಬಲಿಯೇ, ನೀನು ಶತ್ರುವಶನಾಗಿರುವಿ. ಉತ್ತಮ ಸ್ಥಾನದಿಂದ ಚ್ಯುತನಾಗಿರುವಿ. ಇಂತಹ ಸ್ಥಿತಿಯಲ್ಲಿಯೂ ಶೋಕ ಹೊಂದದಿರಲು ಯಾರನ್ನು ಆಶ್ರಯಿಸಿರುವಿ? ಶೋಕ ಪಡದೇ ಇರಲು ಏನು ಕಾರಣ?
ಶ್ರೈಷ್ಠ್ಯಂ ಪ್ರಾಪ್ಯ ಸ್ವಜಾತೀನಾಂ ಭುಕ್ತ್ವಾ ಭೋಗಾನನುತ್ತಮಾನ್ |
ಹೃತಸ್ವಬಲರಾಜ್ಯಸ್ತ್ವಂ ಬ್ರೂಹಿ ಕಸ್ಮಾನ್ನ ಶೋಚಸಿ ॥16॥
ನೀನು ಸಜಾತೀಯರಲ್ಲೇ ಶ್ರೇಷ್ಠತೆಯನ್ನು ಗಳಿಸಿದ್ದಿ. ಉತ್ತಮ ಭೋಗಗಳನ್ನು ಅನುಭವಿಸಿದ್ದಿ. ಈಗ ನಿನ್ನ ಐಶ್ವರ್ಯ, ರತ್ನ, ರಾಜ್ಯ ಎಲ್ಲವನ್ನೂ ಕಳೆದುಕೊಂಡಿರುವಿ. ಹೀಗಿದ್ದರೂ ಶೋಕಿಸುತ್ತಿಲ್ಲ. ಇದು ಹೇಗೆ?
ಈಶ್ವರೋ ಹಿ ಪುರಾ ಭೂತ್ವಾ ಪಿತೃಪೈತಾಮಹೇ ಪದೇ |
ತತ್ತ್ವಮದ್ಯ ಹೃತಂ ದೃಷ್ಟ್ವಾ ಸಪತ್ನೈಃ ಕಿಂ ನ ಶೋಚಸಿ ॥17॥
ನೀನು ನಿನ್ನ ತಾತ-ಮುತ್ತಾತರು ಕುಳಿತ ಸಿಂಹಾಸನದಲ್ಲಿ ಕುಳಿತು ಮೂರು ಲೋಕಗಳಿಗೂ ಈಶ್ವರನಾಗಿ ರಾಜ್ಯಭಾರವನ್ನು ನಡೆಸುತ್ತಿದ್ದೆ. ಇಂದು ಅದು ಶತ್ರುವಶವಾಗಿದೆ. ಇದು ದುಃಖದ ಸಂಗತಿ. ಆದರೂ ನೀನು ಶೋಕಿಸುತ್ತಿಲ್ಲ, ಹೇಗೆ?
ಬದ್ಧಶ್ಚ ವಾರುಣೈಃ ಪಾಶೈರ್ವಜ್ರೇಣ ಚ ಸಮಾಹತಃ |
ಹೃತದಾರೋ ಹೃತಧನೋ ಬ್ರೂಹಿ ಕಸ್ಮಾನ್ನ ಶೋಚಸಿ ॥18॥
ನೀನು ವರುಣನ ಪಾಶಗಳಿಂದ ಬಂಧಿತನಾಗಿರುವಿ. ವಜ್ರಾಯುಧದ ಪೆಟ್ಟಿನಿಂದ ದುಃಖಿತನಾಗಿರುವಿ. ಪತ್ನಿ-ಸಂಪತ್ತು ಎಲ್ಲವನ್ನೂ ಕಳೆದುಕೊಂಡಿರುವಿ. ಹೀಗಿದ್ದರೂ ದುಃಖಿಸದಿರಲು ಕಾರಣವೇನು?
ಭ್ರಷ್ಟಶ್ರೀರ್ವಿಭವಭ್ರಷ್ಟೋ ಯನ್ನ ಶೋಚಸಿ ದುಷ್ಕರಮ್ |
ತ್ರೈಲೋಕ್ಯರಾಜ್ಯನಾಶೇ ಹಿ ಕೋಽನ್ಯೋ ಜೀವಿತುಮುತ್ಸಹೇತ್ ॥19॥
ರಾಜ್ಯಲಕ್ಷ್ಮಿಯು ನಷ್ಟವಾಗಿದ್ದಾಳೆ. ಧನವೈಭವದಿಂದ ಭ್ರಷ್ಟನಾಗಿರುವಿ. ಹೀಗಿದ್ದರೂ ಶೋಕಿಸುತ್ತಿಲ್ಲ. ಮೂರು ಲೋಕದ ರಾಜ್ಯವನ್ನು ಕಳೆದುಕೊಂಡ ಬಳಿಕ ನಿನ್ನನ್ನು ಹೊರತು ಬೇರೆ ಯಾರಿಗೂ ಜೀವಿಸಲು ಉತ್ಸಾಹ ಬಾರದು.
ಏತಚ್ಚಾನ್ಯಚ್ಚ ಪರುಷಂ ಬ್ರುವಂತಂ ಪರಿಭೂಯ ತಮ್ |
ಶ್ರುತ್ವಾ ಸುಖಮಸಂಭ್ರಾಂತೋ ಬಲಿರ್ವೈರೋಚನೋಽಬ್ರವೀತ್ ॥20॥
ಈ ರೀತಿಯಾಗಿ ಅನೇಕ ಕಠಿಣವಾದ ಮಾತುಗಳನ್ನು ತಿರಸ್ಕರಿಸಿ ಹೇಳುತ್ತಿರುವ ಇಂದ್ರನ ಮಾತನ್ನು ಬಲಿಚಕ್ರವರ್ತಿಯು ಕೇಳಿಸಿಕೊಂಡು, ಯಾವುದೇ ಕಳವಳಕ್ಕೆ ತುತ್ತಾಗದೆ ಇಂದ್ರನನ್ನು ಕುರಿತು ಉತ್ತರ ಹೇಳಿದನು.
ನಿಗೃಹೀತೇ ಮಯಿ ಭೃಶಂ ಶಕ್ರ ಕಿಂ ಕತ್ಥಿತೇನ ತೇ |
ವಜ್ರಮುದ್ಯಮ್ಯ ತಿಷ್ಠಂತಂ ಪಶ್ಯಾಮಿ ತ್ವಾಂ ಪುರಂದರ ॥21॥
ಪುರಂದರನೇ, ಶತ್ರುಗಳಿಂದ, ಕಾಲನಿಂದ ದಹಿಸಲ್ಪಟ್ಟಿದ್ದೇನೆ. ಪುನಃ ಪುನಃ ನನ್ನನ್ನು ಹೀಗಳೆಯುವುದರಿಂದ ನಿನಗಾಗುವ ಲಾಭವೇನು? ವಜ್ರಾಯುಧ ಪಾಣಿಯಾಗಿರುವ ನಿನ್ನನ್ನು ನಾನು ಕಾಣುತ್ತಿದ್ದೇನೆ.
ಅಶಕ್ತಃ ಪೂರ್ವಮಾಸೀಸ್ತ್ವಂ ಕಥಂಚಿಚ್ಛಕ್ತತಾಂ ಗತಃ |
ಕಸ್ತ್ವದನ್ಯ ಇಮಾ ವಾಚಃ ಸುಕ್ರೂರಾ ವಕ್ತುಮರ್ಹತಿ ॥22॥
ಹಿಂದೆ ನೀನು ನನ್ನ ಮುಂದೆ ಅಶಕ್ತನಾಗಿದ್ದಿ. ಕಷ್ಟದಿಂದ ಶಕ್ತಿವಂತನಾದೆ. ಹೀಗಿದ್ದರೂ ರಾಜ್ಯಭ್ರಷ್ಟನಾಗಿರುವ ಶತ್ರುವಿನ ಮುಂದೆ ನಿಂತು ನೀನಲ್ಲದೆ ಯಾವನು ಇಂತಹ ನಿಷ್ಠುರವಾದ ಮಾತುಗಳನ್ನಾಡಲು ಸಾಧ್ಯ?
ಯಸ್ತು ಶತ್ರೋರ್ವಶಸ್ಥಸ್ಯ ಶಕ್ತೋಽಪಿ ಕುರುತೇ ದಯಾಮ್ |
ಹಸ್ತಪ್ರಾಪ್ತಸ್ಯ ವೀರಸ್ಯ ತಂ ಚೈವ ಪುರುಷಂ ವಿದುಃ ॥23॥
ಮಹಾಶಕ್ತಿಶಾಲಿಯಾಗಿದ್ದರೂ ತನ್ನ ಕೈವಶನಾಗಿರುವ ಶತ್ರುವಿನ ವಿಷಯದಲ್ಲಿ ಯಾವನು ದಯೆ ತೋರುತ್ತಾನೋ ಅವನನ್ನೇ ಉತ್ತಮ ಪುರುಷನೆಂದು ವಿದ್ವಾಂಸರು ಹೇಳುತ್ತಾರೆ.
ಅನಿಶ್ಚಯೋ ಹಿ ಯುದ್ಧೇಷು ದ್ವಯೋರ್ವಿವದಮಾನಯೋಃ |
ಏಕಃ ಪ್ರಾಪ್ನೋತಿ ವಿಜಯಮೇಕಶ್ಚೈವ ಪರಾಭವಮ್ ॥24॥

ಯುದ್ಧದಲ್ಲಿ ಜಯ-ಪರಾಜಯಗಳು ಅನಿಶ್ಚಿತವು. ಯುದ್ಧ ಮಾಡುವ ವಿಷಯದಲ್ಲಿ ಒಬ್ಬನಿಗೆ ವಿಜಯ, ಮತ್ತೊಬ್ಬನಿಗೆ ಪರಾಜಯ ಸಹಜವಾದುದು. ಇಬ್ಬರೂ ಜಯಶಾಲಿಯಾಗಲಾರರು, ಇಬ್ಬರೂ ಪರಾಜಿತರಾಗಲಾರರು.
ಮಾ ಚ ತೇ ಭೂತ್ಸ್ವಭಾವೋಽಯಂ ಮಯಾ ದೈವತಪುಂಗವ |
ಈಶ್ವರಃ ಸರ್ವಭೂತಾನಾಂ ವಿಕ್ರಮೇಣ ಜಿತೋ ಬಲಾತ್ ॥25॥
ಸುರಶ್ರೇಷ್ಠನೇ, ಎಲ್ಲ ಪ್ರಾಣಿಗಳಿಗೂ ನಾನೇ ಒಡೆಯ. ನನ್ನ ಪರಾಕ್ರಮದಿಂದ ಬಲಿಯನ್ನು ಜಯಿಸಿದ್ದೇನೆ ಎಂಬ ಅಹಂಕಾರವು ನಿನಗೆ ಉಂಟಾಗದಿರಲಿ.
ನೈತದಸ್ಮತ್ಕೃತಂ ಶಕ್ರ ನೈತಚ್ಛಕ್ರ ತ್ವಯಾ ಕೃತಮ್ |
ಯತ್ತ್ವಮೇವಂಗತೋ ವಜ್ರಿನ್ ಯದ್ವಾಪ್ಯೇವಂ ಗತಾ ವಯಮ್ ॥26॥
ವಜ್ರಪಾಣಿಯೇ, ನೀನು ಇಂದು ರಾಜ್ಯಸಂಪತ್ತನ್ನು ಪಡೆದು ವೈಭವದಿಂದ ಕೂಡಿರುವುದಕ್ಕೂ, ನಾನು ರಾಜ್ಯಭ್ರಷ್ಟನಾಗಿರುವುದಕ್ಕೂ ನಾವೀರ್ವರೂ ಕಾರಣರಲ್ಲ.
ಅಹಮಾಸಂ ಯಥಾದ್ಯ ತ್ವಂ ಭವಿತಾ ತ್ವಂ ಯಥಾ ವಯಮ್ |
ಮಾವಮಂಸ್ಥಾ ಮಯಾ ಕರ್ಮ ದುಷ್ಕೃತಂ ಕೃತಮಿತ್ಯುತ ॥27॥
ನೀನು ಇಂದು ಹೇಗೆ ವೈಭವವನ್ನು ಹೊಂದಿರುವೆಯೋ ಇದೇ ವೈಭವದಿಂದ ಹಿಂದೆ ನಾನು ಇದ್ದೆನು. ಈಗಿನ ನನ್ನ ಸ್ಥಿತಿಯು ಮುಂದೆ ನಿನಗೂ ಬರುತ್ತದೆ. ಅತ್ಯಂತ ಕಷ್ಟಕರವಾದ ಸಾಹಸವನ್ನು ತೋರಿ ಶತ್ರುವನ್ನು ದಮನ ಮಾಡಿದ್ದೇನೆ ಎಂದು ದರ್ಪವನ್ನು ತೋರಿ ಅಹಂಕಾರದಿಂದ ನನ್ನನ್ನು ಅಪಮಾನಿಸಬೇಡ.
ಸುಖದುಃಖೇ ಹಿ ಪುರುಷಃ ಪರ್ಯಾಯೇಣಾಧಿಗಚ್ಛತಿ |
ಪರ್ಯಾಯೇಣಾಸಿ ಶಕ್ರತ್ವಂ ಪ್ರಾಪ್ತಃ ಶಕ್ರ ನ ಕರ್ಮಣಾ ॥28॥
ಪ್ರತಿಯೊಬ್ಬ ಮನುಷ್ಯನು ಸುಖ-ದುಃಖಗಳನ್ನು ಕ್ರಮವಾಗಿ ಹೊಂದುತ್ತಾನೆ. ಸುಖದ ನಂತರ ಕಷ್ಟ, ಕಷ್ಟದ ನಂತರ ಸುಖ. ಈ ಕ್ರಮದಲ್ಲಿಯೇ ನಿನಗೆ ಇಂದ್ರ ಪದವಿಯು ಬಂದಿದೆ. ನಿನ್ನ ಪರಾಕ್ರಮದಿಂದ ನೀನು ಇಂದ್ರಪದವಿಯನ್ನು ಪಡೆದಿರುವುದಿಲ್ಲ.
ಕಾಲಃ ಕಾಲೇ ನಯತಿ ಮಾಂ ತ್ವಾಂ ಚ ಕಾಲೋ ನಯತ್ಯಯಮ್ |
ತೇನಾಹಂ ತ್ವಂ ಯಥಾ ನಾದ್ಯ ತ್ವಂ ಚಾಪಿ ನ ಯಥಾ ವಯಮ್
॥29॥
ಕಾಲನಾಮಕನಾದ ಭಗವಂತನೇ ತನ್ನ ವಶದಿಂದ ಇಂಥಿಂಥ ಗತಿಗಳನ್ನು ಒದಗಿಸುತ್ತಾನೆ. ಆ ಕಾಲನಿಂದ ನಿನಗೆ ಈ ಗತಿ ಬಂದಿದೆ. ಆದ್ದರಿಂದ ನಿನ್ನಂತೆ ನಾನು ಸಾರ್ವಭೌಮನಾಗಿರುವುದಿಲ್ಲ. ಮುಂದೆ ನನ್ನಂತೆ ನೀನಿರಲು ಸಾಧ್ಯವಿಲ್ಲ.
ನ ಮಾತೃಪಿತೃಶುಶ್ರೂಷಾ ನ ಚ ದೈವತಪೂಜನಮ್ |
ನಾನ್ಯೋ ಗುಣಸಮಾಚಾರಃ ಪುರುಷಸ್ಯ ಸುಖಾವಹಃ ॥30॥
ಕಾಲನಿಂದ ಪೀಡಿತನಾದ ಮನುಷ್ಯನಿಗೆ ತಂದೆ-ತಾಯಿಗಳ ಸೇವೆ, ದೇವತಾ ಪೂಜೆ, ಸದ್ಗುಣ-ಸಮಾಚಾರಗಳು ಸುಖವನ್ನುಂಟು ಮಾಡವು. ಅವನನ್ನು ರಕ್ಷಿಸವು.
ನ ವಿದ್ಯಾ ನ ತಪೋ ದಾನಂ ನ ಮಿತ್ರಾಣಿ ನ ಬಾಂಧವಾಃ |
ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಮ್ ॥31॥
ವಿದ್ಯೆ, ತಪಸ್ಸು, ದಾನ, ಬಂಧು, ಮಿತ್ರ, ಹೀಗೆ ಯಾರೂ ಕಾಲಪೀಡಿತನನ್ನು ರಕ್ಷಿಸಲು ಸಮರ್ಥರಾಗುವುದಿಲ್ಲ.
ನಾಗಾಮಿನಮನರ್ಥಂ ಹಿ ಪ್ರತಿಘಾತಶತೈರಪಿ |
ಶಕ್ನುವಂತಿ ಪ್ರತಿವ್ಯೋಢುಮೃತೇ ಬುದ್ಧಿಬಲಾನ್ನರಾಃ ॥32॥
ಮನುಷ್ಯರು ಕಾಲಾಕ್ರಾಂತರಾದಾಗ ಬುದ್ಧಿಬಲದ ಜೊತೆಗೆ ನೂರಾರು ಪ್ರತೀಕಾರ ಕ್ರಮಗಳನ್ನು ಅನುಸರಿಸಿದರೂ ಅನರ್ಥವನ್ನು ನಿವಾರಿಸಿಕೊಳ್ಳಲು ಸಮರ್ಥರಾಗಲಾರರು.
ಪರ್ಯಾಯೈರ್ಹನ್ಯಮಾನಾನಾಂ ಪರಿತ್ರಾತಾ ನ ವಿದ್ಯತೇ |
ಇದಂ ತು ದುಃಖಂ ಯಚ್ಛಕ್ರ ಕರ್ತಾಹಮಿತಿ ಮನ್ಯತೇ ॥33॥
ಅವರವರ ಸರದಿಗೆ ತಕ್ಕಂತೆ ಹಿಂಸೆಗೆ ತುತ್ತಾಗುವವರನ್ನು ಯಾರೂ ರಕ್ಷಿಸಲಾರರು. ಹೀಗಿರುವಾಗ ಬಲಿಯ ದುರ್ಗತಿಗೆ ನಾನೇ ಕಾರಣನು ಎಂಬ ನಿನ್ನ ಅಹಂಕಾರವು ಶೋಚನೀಯವಾಗಿದೆ.
ಯದಿ ಕರ್ತಾ ಭವೇತ್ ಕರ್ತಾ ನ ಕ್ರಿಯೇತ ಕದಾಚನ |
ಯಸ್ಮಾತ್ ವಿಕ್ರಿಯತೇ ಕರ್ತಾ ತಸ್ಮಾತ್ ಕರ್ತಾಪ್ಯನೀಶ್ವರಃ ॥34॥
ಒಂದು ವೇಳೆ ಕಾರ್ಯವನ್ನು ಮಾಡುವವನು ನಿಜವಾದ ಜೀವನೇ ಆಗಿದ್ದರೆ ಅಂತಹ ಜೀವನನ್ನು ಸೃಷ್ಟಿಸುವವರು ಬೇರೆ ಯಾರೂ ಇರುತ್ತಿರಲಿಲ್ಲ. ಇಂತಹ ಜೀವನಿಗೂ ಕಾರಣನಾದ ಭಗವಂತನು ಇರುವುದರಿಂದ, ಜೀವನು ಎಂದಿಗೂ ಈಶ್ವರನಾಗಲಾರ.
ಕಾಲೇನ ತ್ವಾಹಮಜಯಂ ಕಾಲೇನಾಹಂ ಜಿತಸ್ತ್ವಯಾ |
ಗಂತಾ ಗತಿಮತಾಂ ಕಾಲಃ ಕಾಲಃ ಕಲಯತಿ ಪ್ರಜಾಃ ॥35॥
ಕಾಲದ ಯೋಗದಿಂದ ನಾನು ನಿನ್ನನ್ನು ಜಯಿಸಿದ್ದೆ. ಅದೇ ಯೋಗದಿಂದ ನಾನು ನಿನ್ನಿಂದ ಪರಾಜಿತನಾದೆ. ಮುನ್ನಡೆಯುತ್ತಿರುವ ಪ್ರಾಣಿಗಳ ಜೊತೆಗೆ ಕಾಲವು ಸಾಗುತ್ತದೆ. ನಡೆಯುವ ಶಕ್ತಿಯನ್ನು ಕಾಲವೇ ನೀಡುತ್ತದೆ. ಎಲ್ಲವನ್ನೂ ಕೊಂಡೊಯ್ಯುವುದು ಕಾಲವೇ ಆಗಿದೆ. ಪ್ರಜೆಗಳ ಸಂಹಾರವನ್ನು ಕಾಲವೇ ಮಾಡುತ್ತದೆ.
ಇಂದ್ರ ಪ್ರಾಕೃತಯಾ ಬುದ್ಧ್ಯಾ ಪ್ರಲಪನ್ನಾವಬುಧ್ಯಸೇ |
ಕೇಚಿತ್ತತ್ತ್ವಂ ಬಹು ಮನ್ಯಂತೇ ಶ್ರೈಷ್ಠ್ಯಂ ಪ್ರಾಪ್ತಂ ಸ್ವಕರ್ಮಣಾ ॥36॥

ಇಂದ್ರನೇ, ಸಾಧಾರಣ ಬುದ್ಧಿಯುಳ್ಳವನು ನೀನು. ಆದ್ದರಿಂದ ನಿವಾರಿಸಲಾಗದ ವಿನಾಶದ ಬಗ್ಗೆ ತಿಳುವಳಿಕೆಯನ್ನು ಹೊಂದಿರುವುದಿಲ್ಲ. ಕೆಲವರು ಅಜ್ಞಾನಿಗಳು ಇಂದ್ರನು ತನ್ನ ಪರಾಕ್ರಮದಿಂದಲೇ ಔನ್ನತ್ಯವನ್ನು ಹೊಂದಿದ್ದಾನೆಂದು ಭಾವಿಸಿ ಗೌರವಿಸುತ್ತಾರೆ.
ಕಥಮಸ್ಮದ್ವಿಧೋ ನಾಮ ಜಾನಲ್ಲೋಕಪ್ರವತ್ತಯಃ |
ಕಾಲೇನಾಭ್ಯಾಹತಃ ಶೋಚೇನ್ಮುಹ್ಯೇದ್ ವಾಪ್ಯರ್ಥಸಂಭ್ರಮೇ ॥37॥
ಲೋಕದ ಪ್ರವೃತ್ತಿಗಳನ್ನು ಚೆನ್ನಾಗಿ ತಿಳಿದ ನನ್ನಂಥವನು ಕಾಲಪೀಡಿತನಾದ ನಿನ್ನ ವಿಷಯದಲ್ಲಿ ಅಥವಾ ನನ್ನ ವಿಷಯದಲ್ಲಿ ಶೋಕಿಸುವುದೂ ಇಲ್ಲ, ಮೋಹಕ್ಕೂ ತುತ್ತಾಗಲಾರ, ಭ್ರಾಂತನೂ ಆಗಲಾರ.
ನಿತ್ಯಂ ಕಾಲಪರೀತಸ್ಯ ಮಮ ವಾ ಮದ್ವಿಧಸ್ಯ ವಾ |
ಬುದ್ಧಿರ್ವ್ಯಸನಮಾಸಾದ್ಯ ಭಿನ್ನಾ ನೌರಿವ ಸೀದತಿ ॥38॥
ನಾನೇ ಆಗಲಿ, ಯಾರೇ ಆಗಲಿ, ಕಾಲಪೀಡಿತರಾದಾಗ ಅವರ ಬುದ್ಧಿಯು ದುಃಖದಲ್ಲಿ ಸಿಲುಕಿ ಭಿನ್ನವಾದ ಹಡಗಿನಂತೆ ಶಿಥಿಲವಾಗುತ್ತದೆ.

ಅಹಂ ಚ ತ್ವಂ ಚ ಯೇ ಚಾನ್ಯೇ ಭವಿಷ್ಯಂತಿ ಸುರಾಧಿಪಾಃ |
ತೇ ಸರ್ವೇ ಶಕ್ರ ಯಾಸ್ಯಂತಿ ಮಾರ್ಗಮಿಂದ್ರಶತೈರ್ಗತಮ್ ॥39॥
ನಾನೇ ಆಗಲಿ, ನೀನೇ ಆಗಲಿ, ಬೇರೆ ಯಾರೇ ಆಗಲಿ, ಒಳ್ಳೆಯ ಕಾಲ ಒದಗಿದಾಗ ದೇವತೆಗಳಿಗೆ ಅಧಿಪತಿಗಳಾಗುತ್ತಾರೆ. ಅವರೆಲ್ಲರೂ ಕಾಲಪೀಡಿತರಾಗಿ ಹಿಂದಿನ ನೂರಾರು ಇಂದ್ರರು ಹೋದ ಮಾರ್ಗವನ್ನೇ ಅನುಸರಿಸಿ ಹೋಗುತ್ತಾರೆ.
ತ್ವಾಮಪ್ಯೇವಂ ಸುದುರ್ಧರ್ಷಂ ಜ್ವಲಂತಂ ಪರಯಾ ಶ್ರಿಯಾ |
ಕಾಲೇ ಪರಿಣತೇ ಕಾಲಃ ಕಾಲಯಿಷ್ಯತಿ ಮಾಮಿವ ॥40॥
ನೀನು ಇಂದು ಶತ್ರುಗಳಿಂದ ಎದುರಿಸಲು ಅಸಾಧ್ಯನಾಗಿರುವಿ. ಶ್ರೇಷ್ಠವಾದ ಸಂಪತ್ತಿನಿಂದ ಜ್ವಲಿಸುತ್ತಿರುವಿ. ಆದರೆ ಕಾಲವು ಪಕ್ವವಾದ ಕೂಡಲೇ ಕಾಲ ಪುರುಷನು ನನ್ನನ್ನು ನಾಶಗೊಳಿಸಿದಂತೆ ನಿನ್ನನ್ನೂ ವಿನಾಶಗೊಳಿಸುತ್ತಾನೆ.
ಬಹೂನೀಂದ್ರಸಹಸ್ರಾಣಿ ದೈತೇಯಾನಾಂ ಯುಗೇ ಯುಗೇ |
ಅಭ್ಯತೀತಾನಿ ಕಾಲೇನ ಕಾಲೋ ಹಿ ದುರತಿಕ್ರಮಃ ॥41॥
ಪ್ರತಿಯುಗಗಳಲ್ಲಿಯೂ ಅರ್ಥಾತ್ ಪ್ರತಿ ಮನ್ವಂತರಗಳಲ್ಲಿಯೂ ನಿನ್ನಂತಹ ಇಂದ್ರರು ವ್ಯತ್ಯಾಸ ಹೊಂದುತ್ತಲೇ ಇರುತ್ತಾರೆ. ಇಲ್ಲಿಯ ತನಕ ದೇವತೆಗಳ ಗುಂಪಿಗೆ ನಿನ್ನಂತಹ ಸಾವಿರಾರು ಇಂದ್ರರು ರಾಜರಾಗಿ ಕಾಲವಶರಾಗಿ ಹೋಗಿದ್ದಾರೆ. ಕಾಲವನ್ನು ಅತಿಕ್ರಮಿಸಲು ನಿಶ್ಚಯವಾಗಿಯೂ ಅಸಾಧ್ಯವು.
ಇದಂ ತು ಲಬ್ಧ್ವಾ ತ್ವಂ ಸ್ಥಾನಮಾತ್ಮಾನಂ ಬಹು ಮನ್ಯಸೇ |
ಸರ್ವಭೂತಭವಂ ದೇವಂ ಬ್ರಹ್ಮಾಣಮಿವ ಶಾಶ್ವತಮ್ ॥42॥
ನ ಚೇದಮಚಲಂ ಸ್ಥಾನಮನಂತಂ ವಾಪಿ ಕಸ್ಯಚಿತ್ |
ತ್ವಂ ತು ಬಾಲಿಶಯಾ ಬುದ್ಧ್ಯಾ ಮಮೇದಮಿತಿ ಮನ್ಯಸೇ ॥43॥
ಇಂತಹ ಅಶಾಶ್ವತ ಸ್ಥಾನ ಗಳಿಸಿರುವ ನೀನು ನಿನ್ನನ್ನು ಸೃಷ್ಟಿಕರ್ತನಾದ, ದೇವದೇವನಾದ, ಶಾಶ್ವತನಾದ ಬ್ರಹ್ಮನಂತೆ ಮಹಾತ್ಮನೆಂದು ಭಾವಿಸಿಕೊಂಡಿರುವಿ. ಈ ಇಂದ್ರಪದವಿಯು ಯಾರಿಗೂ ಸ್ಥಿರವಾದುದಲ್ಲ. ಅನಂತಕಾಲೀನವಲ್ಲ. ನೀನು ಮೂಢಬುದ್ಧಿಯಿಂದ ಇಂದ್ರಪದವಿಯು ಶಾಶ್ವತವೆಂದು ಭಾವಿಸಿರುವಿ.
ಅವಿಶ್ವಾಸ್ಯೇ ವಿಶ್ವಸಿಷಿ ಮನ್ಯಸೇ ಚಾಧ್ರುವಂ ಧ್ರುವಮ್ |
ಮಮೇಯಮಿತಿ ಮೋಹಾತ್ತ್ವಂ ರಾಜಶ್ರಿಯಮಭೀಪ್ಸಸಿ ॥44॥
ಎಲ್ಲಿ ವಿಶ್ವಾಸವಿಡಬಾರದೋ ಅಲ್ಲಿ, ಅಂತಹ ವೈಭವದ ವಿಷಯದಲ್ಲಿ ವಿಶ್ವಾಸವನ್ನಿಟ್ಟಿರುವಿ. ಅಶಾಶ್ವತ ಇಂದ್ರಪದವಿಯನ್ನು ಶಾಶ್ವತವೆಂದು ಭಾವಿಸಿರುವಿ. ಕಾಲಪುರುಷನಿಂದ ಆಕ್ರಾಂತನಾದ ವ್ಯಕ್ತಿಯು ಈ ರೀತಿ ವಿಪರೀತ ಭ್ರಮೆಗೆ ತುತ್ತಾಗುತ್ತಾನೆ.
ನೇಯಂ ತವ ನ ಚಾಸ್ಮಾಕಂ ನ ಚಾನ್ಯೇಷಾಂ ಸ್ಥಿರಾ ಮತಾ |
ಅತಿಕ್ರಮ್ಯ ಬಹೂನನ್ಯಾಂಸ್ತ್ವಯಿ ತಾವದಿಯಂ ಸ್ಥಿತಾ ॥45॥
ಈ ರಾಜಶ್ರೀಯು ನಿನ್ನದ್ದಲ್ಲ, ನನ್ನದ್ದೂ ಅಲ್ಲ. ಇತರರಲ್ಲಿಯೂ ಇರುವುದಲ್ಲ. ಚಂಚಲ ಸ್ವಭಾವದ ರಾಜ್ಯಲಕ್ಷ್ಮಿಯು ಅನೇಕ ಇಂದ್ರರನ್ನು ಅತಿಕ್ರಮಿಸಿ ಈಗ ನಿನ್ನ ಬಳಿ ಬಂದಿರುತ್ತಾಳೆ.
ಕಂಚಿತ್ ಕಾಲಮಿಯಂ ಸ್ಥಿತ್ವಾ ತ್ವಯಿ ವಾಸವ ಚಂಚಲಾ |
ಗೌರ್ನಿಪಾನಮಿವೋತ್ಸೃಜ್ಯ ಪುನರನ್ಯಂ ಗಮಿಷ್ಯತಿ ॥46॥
ಸ್ವಲ್ಪ ಸಮಯ ನಿನ್ನ ಬಳಿ ಇದ್ದು ಹಸುವು ನೀರುಂಡ ಬಳಿಕ ಜಲಾಶಯವನ್ನು ತೊರೆದು ಹೋಗುವಂತೆ ನಿನ್ನನ್ನು ತ್ಯಜಿಸಿ ಮತ್ತೊಬ್ಬರ ಬಳಿ ಹೋಗುತ್ತಾಳೆ.
ರಾಜಲೋಕಾ ಹ್ಯತಿಕ್ರಾಂತಾ ಯಾನ್ನ ಸಂಖ್ಯಾತುಮುತ್ಸಹೇ |
ತ್ವತ್ತೋ ಬಹುತರಾಶ್ಚಾನ್ಯೇ ಭವಿಷ್ಯಂತಿ ಪುರಂದರ ॥47॥
ರಾಜ್ಯಲಕ್ಷ್ಮಿಯು ಇಲ್ಲಿಯ ತನಕ ಎಷ್ಟು ಮಂದಿ ರಾಜರನ್ನು ಬಿಟ್ಟು ಹೋಗಿದ್ದಾಳೆಂದು ಎಣಿಕೆ ಮಾಡಲಾಗದು. ನಿನ್ನ ಬಳಿಕವೂ ಅನೇಕ ಇಂದ್ರರು ಸಾಲಾಗಿ ನಿಂತಿದ್ದಾರೆ.
ಸವೃಕ್ಷೌಷಧಿರತ್ನೇಯಂ ಸಸರಿತ್ಪರ್ವತಾಕರಾ |
ತಾನಿದಾನೀಂ ನ ಪಶ್ಯಾಮಿ ಯೈರ್ಭುಕ್ತೇಯಂ ಪುರಾ ಮಹೀ ॥48॥
ವೃಕ್ಷಗಳಿಂದ, ಔಷಧಿ ಲತೆಗಳಿಂದ, ಅನೇಕ ವಿಧ ವಜ್ರ-ವೈಡೂರ್ಯಾದಿಗಳಿಂದ, ಪ್ರಾಣಿಗಳಿಂದ, ವನಗಳಿಂದ ಸಮೃದ್ಧಳಾದ ಈ

ಭೂಮಿಯನ್ನು ಉಪಭೋಗಿಸಿದ ಸಾವಿರಾರು ರಾಜರು ಈಗ ಕಾಣಿಸುತ್ತಿಲ್ಲ. ಆದರೆ ಕೆಲವರ ಹೆಸರನ್ನು ಮಾತ್ರ ಹೇಳುತ್ತೇನೆ.
ಪೃಥುರೈಲೋ ಮಯೋ ಭೌಮೋ ನರಕಃ ಶಂಬರಸ್ತಥಾ |
ಅಶ್ವಗ್ರೀವಃ ಪುಲೋಮಾ ಚ ಸ್ವರ್ಭಾನುರಮಿತಧ್ವಜಃ ॥49॥
ಪ್ರಹ್ಲಾದೋ ನಮುಚಿರ್ದಕ್ಷೋ ವಿಪ್ರಚಿತ್ತಿರ್ವಿರೋಚನಃ |
ಹ್ರೀನಿಷೇಧಃ ಸುಹೋತ್ರಶ್ಚ ಭೂರಿಹಾ ಪುಷ್ಪವಾನ್ ವೃಷಃ ॥50॥
ಸತ್ಯೇಷುರ್ಋಷಭೋ ರಾಹುಃ ಕಪಿಲಾಶ್ವೋ ವಿರೂಪಕಃ |
ಬಾಣಃ ಕಾರ್ತಸ್ವರೋ ವಹ್ನಿರ್ವಿಶ್ವದಂಷ್ಟ್ರೋಽಥ ನೈರ್ಋತಃ ॥51॥
ರಿತ್ಥಾಹುತೌ ವೀರತಾಮ್ರೌ ವರಾಹಾಶ್ವೋ ರುಚಿಃ ಪ್ರಭುಃ |
ವಿಶ್ವಜಿತ್ ಪ್ರತಿಶೌರಿಶ್ಚ ವೃಷಾಂಡೋ ವಿಷ್ಕರೋ ಮಧುಃ ॥52॥
ಹಿರಣ್ಯಕಶಿಪುಶ್ಚೈವ ಕೈಟಭಶ್ಚೈವ ದಾನವಃ |
ದೈತ್ಯಾಶ್ಚ ಕಾಲಖಂಜಶ್ಚ ಸರ್ವೇ ತೇ ನೈರ್ಋತೈಃ ಸಹ ॥53॥
ಪೃಥು, ಇಲಾ ಪುತ್ರನಾದ ಪುರೂರವ, ಮಯ, ಭೀಮ, ನರಕಾಸುರ, ಶಂಬರಾಸುರ, ಅಶ್ವಗ್ರೀವ, ಪುಲೋಮ, ಸ್ವರ್ಭಾನು, ಅಮಿತಧ್ವಜ, ಪ್ರಹ್ಲಾದ, ನಮುಚಿ, ದಕ್ಷ, ವಿಪ್ರಚಿತ್ತಿ, ವಿರೋಚನ, ಹ್ರೀನಿಷೇಧ, ಸುಹೋತ್ರ, ಭೂರಿಹಾ, ಪುಷ್ಪವಂತ, ವೃಷ, ಸತ್ಯೇಷು, ಋಷಭ, ರಾಹು, ಕಪಿಲಾಶ್ವ, ವಿರೂಪಕ, ಬಾಣ, ಕಾರ್ತಸ್ವರ, ವಹ್ನಿ, ವಿಶ್ವದಂಷ್ಟ್ರ, ನೈರ್ಋತಿ, ರಿತ್ಥ, ಆಹುತ್ಥ, ವೀರ, ತಾಮ್ರ, ವರಾಹಾಶ್ವ, ರುಚಿ, ವಿಶ್ವಜಿತ್, ಪ್ರತಿಶೌರಿ, ವೃಷಾಂಡ, ವಿಷ್ಕರ, ಮಧು, ಹಿರಣ್ಯಕಶಿಪು, ಕೈಟಭ- ಇವರು ಇನ್ನೂ ಅನೇಕ ದೈತ್ಯ-ದಾನವ ರಾಕ್ಷಸರು ಈ ಭೂಮಿಗೆ ಒಡೆಯರಾಗಿದ್ದರು.
ಏತೇ ಚಾನ್ಯೇ ಚ ಬಹವಃ ಪೂರ್ವೇ ಪೂರ್ವತರಾಶ್ಚ ಯೇ |
ದೈತ್ಯೇಂದ್ರಾ ದಾನವೇಂದ್ರಾಶ್ಚ ಯಾಂಶ್ಚಾನ್ಯಾನನುಶುಶ್ರುಮ ॥54॥
ಬಹವಃ ಪೂರ್ವದೈತ್ಯೇಂದ್ರಾಃ ಸಂತ್ಯಜ್ಯ ಪೃಥಿವೀಂ ಗತಾಃ |
ಕಾಲೇನಾಭ್ಯಾಹತಾಃ ಸರ್ವೇ ಕಾಲೋ ಹಿ ಬಲವತ್ತರಃ ॥55॥
ಹಿಂದೆ ಮತ್ತು ಅದಕ್ಕಿಂತಲೂ ಹಿಂದಿನ ರಾಜರೇ ಅಲ್ಲದೆ ನಾವು ಕೇಳಿದ ಅನೇಕ ದೈತ್ಯೇಂದ್ರರು, ದಾನವೇಂದ್ರರು ಕಾಲಪೀಡಿತರಾಗಿ ಪೃಥಿವಿಯನ್ನು ಬಿಟ್ಟು ಹೋಗಿದ್ದಾರೆಂದು ಕೇಳಿದ್ದೇವೆ. ಕಾಲವು ಮಹಾಬಲಿಷ್ಠವಾದುದು. ಯಾರನ್ನೂ ಶಾಶ್ವತವಾಗಿ ಈ ಭೂಮಿಯಲ್ಲಿರಲು ಬಿಡುವುದಿಲ್ಲ.
ಸರ್ವೈಃ ಕ್ರತುಶತೈರಿಷ್ಟಂ ನ ತ್ವಮೇಕಃ ಶತಕ್ರತುಃ |
ಸರ್ವೇ ಧರ್ಮಪರಾಶ್ಚಾಸನ್ ಸರ್ವೇ ಸತತಸತ್ರಿಣಃ ॥56॥
ಇಂದ್ರನೇ, ನೂರು ಅಶ್ವಮೇಧ ಯಾಗಗಳನ್ನು ನಾನೊಬ್ಬನೇ ಮಾಡಿದ್ದೇನೆಂದು ಭಾವಿಸಬೇಡ. ನಾನು ಹೇಳಿದ ಇವರೆಲ್ಲರೂ ನೂರು ಅಶ್ವಮೇಧ ಯಾಗಗಳನ್ನು ಮಾಡಿದವರೇ ಆಗಿದ್ದಾರೆ. ಎಲ್ಲರೂ ಧರ್ಮಪರಾಯಣರಾಗಿದ್ದವರು. ಎಲ್ಲರೂ ನಿರಂತರ ಸತ್ರಯಾಗದಲ್ಲಿಯೇ ನಿರತರಾದವರು.
ಅಂತರಿಕ್ಷಚರಾಃ ಸರ್ವೇ ಸರ್ವೇಽಭಿಮುಖಯೋಧಿನಃ |
ಸರ್ವೇ ಸಂಹನನೋಪೇತಾಃ ಸರ್ವೇ ಪರಿಘಬಾಹವಃ ॥57॥
ಎಲ್ಲರೂ ಅಂತರಿಕ್ಷದಲ್ಲಿ ಪ್ರಯಾಣ ಮಾಡುವ ಸಾಮರ್ಥ್ಯವನ್ನು ಹೊಂದಿದ್ದರು. ಶತ್ರುಗಳಿಗೆ ಅಭಿಮುಖವಾಗಿ ನಿಂತು ಯುದ್ಧವನ್ನು ಮಾಡುತ್ತಿದ್ದರು. ಅವರು ಶರೀರ ದಾರ್ಢ್ಯವುಳ್ಳವರಾಗಿದ್ದರು. ಬಾಹುಗಳೆಲ್ಲ ಪರಿಘಾಯುಧಕ್ಕೆ ಸಮಾನವಾಗಿದ್ದವು.
ಸರ್ವೇ ಮಾಯಾಶತಧರಾಃ ಸರ್ವೇ ತೇ ಕಾಮಚಾರಿಣಃ |
ಸರ್ವೇ ಸಮರಮಾಸಾದ್ಯ ನ ಶ್ರೂಯಂತೇ ಪರಾಜಿತಾಃ ॥58॥
ಎಲ್ಲರೂ ನೂರಾರು ಮಾಯೆಗಳನ್ನು ತಿಳಿದವರಾಗಿದ್ದರು. ತಮಗೆ ಬೇಕಾದಂತಹ ರೂಪಗಳನ್ನು ಧರಿಸುವವರಾಗಿದ್ದರು. ಎಲ್ಲರೂ ಯುದ್ಧವನ್ನು ಹೊಂದಿ ಪರಾಜಿತರೇ ಆಗಿ ಹೋಗಿದ್ದರು ಎಂದು ಕೇಳಿದ್ದೇವೆ.
ಸರ್ವೇ ಸತ್ಯವ್ರತಪರಾಃ ಸರ್ವೇ ಕಾಮವಿಹಾರಿಣಃ |
ಸರ್ವೇ ವೇದವ್ರತಪರಾಃ ಸರ್ವೇ ಚಾಸನ್ ಬಹುಶ್ರುತಾಃ ॥59॥
ಎಲ್ಲರೂ ಸತ್ಯವ್ರತನಿಷ್ಠರಾಗಿದ್ದರು. ಇಚ್ಛಾನುಸಾರಿಗಳಾಗಿ ಮನಬಂದಂತೆ ಸಂಚರಿಸುತ್ತಿದ್ದರು. ವೇದವ್ರತಪರರೂ, ಅನೇಕ ಶಾಸ್ತ್ರವಿದ್ವಾಂಸರೂ ಆಗಿದ್ದರು.
ಸರ್ವೇ ಸಂಹತಮೈಶ್ವರ್ಯಮೀಶ್ವರಾಃ ಪ್ರತಿಪೇದಿರೇ |
ನ ಚೈಶ್ವರ್ಯಮದಸ್ತೇಷಾಂ ಭೂತಪೂರ್ವೋ ಮಹಾತ್ಮನಾಮ್ ॥60॥
ಲೋಕೇಶ್ವರರಾದ ಅವರೆಲ್ಲರೂ ಮನಸ್ಸಿನಲ್ಲಿ ಬಯಸಿದ ಐಶ್ವರ್ಯವನ್ನು ಹೊಂದಿದವರಾಗಿದ್ದರು. ಆದರೆ ಮಹಾತ್ಮರಾದ ಅವರಿಗೆ ಐಶ್ವರ್ಯಮದವೆಂಬುದು ಬಂದಿರಲಿಲ್ಲ.
ಸರ್ವೇ ಯಥಾರ್ಥದಾತಾರಃ ಸರ್ವೇ ವಿಗತಮತ್ಸರಾಃ |
ಸರ್ವೇ ಸರ್ವೇಷು ಭೂತೇಷು ಯಥಾವತ್ ಪ್ರತಿಪೇದಿರೇ ॥61॥
ಅವರೆಲ್ಲರೂ ಯಥಾಯೋಗ್ಯವಾಗಿ ದಾನವನ್ನು ಮಾಡುತ್ತಿದ್ದರು. ಮಾತ್ಸರ್ಯದಿಂದ ದೂರವಾಗಿದ್ದರು. ಎಲ್ಲಾ ಪ್ರಾಣಿಗಳ ವಿಷಯದಲ್ಲಿ ಯೋಗ್ಯವಾಗಿ ವ್ಯವಹರಿಸುತ್ತಿದ್ದರು.
ಸರ್ವೇ ದಾಕ್ಷಾಯಣೀಪುತ್ರಾಃ ಪ್ರಾಜಾಪತ್ಯಾ ಮಹಾಬಲಾಃ |
ಜ್ವಲಂತಃ ಪ್ರತ್ತಪಂತಶ್ಚ ಕಾಲೇನ ಪ್ರತಿಸಂಹೃತಾಃ ॥62॥

ಅವರೆಲ್ಲರೂ ದಕ್ಷಕನ್ಯೆಯರ ಗರ್ಭದಲ್ಲೇ ಜನ್ಮವನ್ನು ತಾಳಿದ್ದರು. ಮಹಾಬಲಿಷ್ಠರಾದ ಅವರೆಲ್ಲರೂ ಕಶ್ಯಪ ಪ್ರಜಾಪತಿಯ ಸುತರಾಗಿದ್ದರು.
ತ್ವಂ ಚೈವೇಮಾಂ ಯದಾ ಭುಕತ್ವಾ ಪೃಥಿವೀಂ ತ್ಯಕ್ಷ್ಯಸೇ ಪುನಃ |
ನ ಶಕ್ಷ್ಯಸಿ ತದಾ ಶಕ್ರ ನಿಯಂತುಂ ಶೋಕಮಾತ್ಮನಃ ॥63॥
ಮುಂಚೇಚ್ಛಾಂ ಕಾಮಭೋಗೇಷು ಮುಂಚೇಮಂ ಶ್ರೀಭವಂ ಮದಮ್ |
ಏವಂ ಸ್ವರಾಜ್ಯನಾಶೇ ತ್ವಂ ಶೋಕಂ ಸಂಪ್ರಸಹಿಷ್ಯಸಿ ॥64॥
ಎಲ್ಲಾ ರಾಜರೂ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದರು. ಶತ್ರುಗಳಿಗೆ ದುಃಖವನ್ನುಂಟು ಮಾಡುತ್ತಿದ್ದರು. ಅವರೆಲ್ಲರೂ ಕಾಲಿಕವಾಗಿ ಕಾಲನ ಪ್ರಭಾವದಿಂದ ಸಂಹೃತರಾದರು. ನೀನಾದರೂ ಈ ವಿಸ್ತಾರವಾದ ರಾಜ್ಯವನ್ನು ಉಪಭೋಗಿಸುತ್ತಿರುವಿ. ಕಾಲನ ಅತಿಕ್ರಮಣ ಆದಾಗ ನೀನೂ ಬಿಡಬೇಕಾಗುತ್ತದೆ. ಇದನ್ನು ಅರ್ಥ ಮಾಡಿಕೊಂಡು ಸಂಪತ್ತಿನಿಂದ ಉತ್ಪನ್ನವಾಗುವ ಮದವನ್ನು ತ್ಯಜಿಸು. ಇದನ್ನು ಅರ್ಥಮಾಡಿಕೊಳ್ಳಲಾಗಿದ್ದಲ್ಲಿ ನಿನ್ನ ಹೃದಯದಲ್ಲಿ ಹುಟ್ಟುವ ದುಃಖವನ್ನು ನಿಯಂತ್ರಿಸಿಕೊಳ್ಳಲು ನೀನು ಸಮರ್ಥನಾಗುವುದಿಲ್ಲ. ನಿನ್ನ ರಾಜ್ಯನಾಶವಾದಾಗ ನೀನೂ ಶೋಕದಲ್ಲಿ ಬೆಂದು ಹೋಗುತ್ತಿ.
ಶೋಕಕಾಲೇ ಶುಚೋ ಮಾ ತ್ವಂ ಹರ್ಷಕಾಲೇ ಚ ಮಾ ಹೃಷಃ |
ಅತೀತಾನಾಗತೇ ಹಿತ್ವಾ ಪ್ರತ್ಯುತ್ಪನ್ನೇನ ವರ್ತಯ ॥65॥
ಶೋಕಕಾಲವು ಬಂದಾಗ ದುಃಖವನ್ನು ಹೊಂದಬೇಡ. ಹರ್ಷಕಾಲದಲ್ಲಿ ಸಂತೋಷ ಹೊಂದಬೇಡ. ಕಳೆದದ್ದನ್ನು, ಬಾರದಿದ್ದನ್ನು ಯೋಚಿಸದೆ ವರ್ತಮಾನ ಕಾಲದಲ್ಲಿ ಸಿಕ್ಕಿದ್ದರ ಪ್ರಾಮಾಣಿಕವಾಗಿ ವರ್ತಿಸು.
ಮಾಂ ಚೇದಭ್ಯಾಗತಃ ಕಾಲಃ ಸದಾಯುಕ್ತಮತಂದ್ರಿತಮ್ |
ಕ್ಷಮಸ್ವ ನಚಿರಾದಿಂದ್ರ ತ್ವಾಮಪ್ಯುಪಗಮಿಷ್ಯತಿ ॥66॥
ನಾನು ನಿದ್ರಾಲಸ್ಯಗಳಿಲ್ಲದೆ ಸದಾ ಸತ್ಕರ್ಮಗಳಲ್ಲಿಯೇ ರತನಾಗಿದ್ದೆನು. ಆದರೂ ಕಾಲನು ನನ್ನನ್ನು ಅತಿಕ್ರಮಿಸಿದನು. ಇಂದ್ರನೇ, ನೀನೂ ತಡೆದುಕೊ. ನಿನ್ನನ್ನೂ ಕಾಲವು ಅತಿಕ್ರಮಿಸುತ್ತದೆ.
ತ್ರಾಸಯನ್ನಿವ ದೇವೇಂದ್ರ ವಾಗ್ಭಿಸ್ತಕ್ಷಸಿ ಮಾಮಿಹ |
ಸಂಯತೇ ಮಯಿ ನೂನಂ ತ್ವಮಾತ್ಮಾನಂ ಬಹು ಮನ್ಯಸೇ ॥67॥
ದೇವೇಂದ್ರನೇ, ಸಂತಾಪವನ್ನುಂಟು ಮಾಡುವ ಮಾತುಗಳಿಂದ ನೀನು ನನ್ನನ್ನು ಚುಚ್ಚುತ್ತಿರುವೆ. ನಾನು ನನ್ನ ಮನಸ್ಸನ್ನು ನಿಗ್ರಹಿಸಿಕೊಂಡು ಶಾಂತನಾಗಿದ್ದೇನೆ. ಇದರಿಂದಲೇ ನೀನು ನನ್ನನ್ನು ಮಹಾಮಹಿಮನೆಂದು ಭಾವಿಸಿಕೊಳ್ಳುತ್ತಿರುವೆ.
ಕಾಲಃ ಪ್ರಥಮಮಾಯಾನ್ಮಾಂ ಪಶ್ಚಾತ್ತತ್ವಮನುಧಾವತಿ |
ತೇನ ಗರ್ಜಸಿ ದೇವೇಂದ್ರ ಪೂರ್ವಂ ಕಾಲಹತೇ ಮಯಿ ॥68॥
ಕಾಲನು ಮೊದಲು ನನ್ನನ್ನು ಅತಿಕ್ರಮಿಸಿದ್ದಾನೆ. ಅದೇ ಕಾಲನು ನಿನ್ನನ್ನು ಬೆನ್ನಟ್ಟಿ ಬರುತ್ತಾನೆ. ಕಾಲಪೀಡಿತನಾಗಿಯೇ ನಿಂತ ನನ್ನ ಬಳಿ ನೀನು ಗರ್ಜನೆ ಮಾಡುತ್ತಿರುವಿ.
ಕೋ ಹಿ ಸ್ಥಾತುಮಲಂ ಲೋಕೇ ಕ್ರುದ್ಧಸ್ಯ ಮಮ ಸಂಯುಗೇ |
ಕಾಲಸ್ತು ಬಲವಾನ್ ಪ್ರಾಪ್ತಸ್ತೇನ ತಿಷ್ಠಸಿ ವಾಸವ ॥69॥
ಇಂದ್ರನೇ, ಕ್ರುದ್ಧನಾಗಿ ಯುದ್ಧಕ್ಕೆ ನಿಂತ ನನ್ನ ಮುಂದೆ ಯಾರು ತಾನೇ ನಿಲ್ಲಲು ಸಮರ್ಥರಾಗಿದ್ದರು? ಆದರೆ ಕಾಲನು ಮಹಾಬಲಿಷ್ಠನು. ಅವನು ನನ್ನ ಬಲ ಪರಾಕ್ರಮಗಳನ್ನು ನಾಶ ಮಾಡಿದ್ದಾನೆ. ಆದ್ದರಿಂದಲೇ ನೀನು ನನ್ನ ಮುಂದೆ ಧೈರ್ಯವಾಗಿ ನಿಂತಿರುವಿ.
ಯತ್ತದ್ವರ್ಷಸಹಸ್ರಾಂತಂ ಪೂರ್ಣಂ ಭವಿತುಮರ್ಹತಿ |
ಯಥಾ ಮೇ ಸರ್ವಗಾತ್ರಾಣಿ ನಸ್ವಸ್ಥಾನಿ ಹತೌಜಸಃ ॥70॥
ದೇವತೆಗಳ ಒಂದು ಸಾವಿರ ವರ್ಷ ಮುಗಿಯುವ ತನಕ ನೀನು ಇಂದ್ರಪದವಿಯಲ್ಲಿ ಇರಲು ಅರ್ಹನಾಗಿರುವಿ. ಬಳಿಕ ಕಾಲನ ಪ್ರಭಾವದಿಂದ ಮಹಾಪರಾಕ್ರಮಿಯಾದ ನನ್ನ ಅಂಗಾಂಗಗಳು ಶೈಥಿಲ್ಯವನ್ನು ಹೊಂದಿದ್ದಾವೋ, ತೇಜಸ್ಸಿನಿಂದ ಹೀನವಾಗಿದ್ದಾವೋ;
ಅಹಮೈಂದ್ರಚ್ಚ್ಯುತಃ ಸ್ಥಾನಾತ್ತ್ವಮಿಂದ್ರಃ ಪ್ರಕೃತೋ ದಿವಿ |
ಸುಚಿತ್ರೇ ಜೀವಲೋಕೇಽಸ್ಮಿನ್ನುಪಾಸ್ಯಃ ಕಾಲಪರ್ಯಯಾತ್ ॥71॥
ಇಂದ್ರಪದವಿಯಿಂದ ನಾನು ಹೇಗೆ ಚ್ಯುತನಾಗಿದ್ದೇನೋ ಇದರಂತೆ ಇಂದ್ರ ಪದವಿಯಲ್ಲಿರುವ ನಿನಗೂ ಈ ಅವಸ್ಥೆಗಳು ಒದಗಿ ಬರುತ್ತವೆ. ವಿಚಿತ್ರವಾದ ಈ ಜೀವಲೋಕದಲ್ಲಿ ಕಾಲದ ವೈಪರೀತ್ಯದಿಂದಲೇ ನೀನು ಎಲ್ಲರಿಂದಲೂ ಆರಾಧ್ಯನಾಗಿರುವಿ.
ಕಿಂ ಹಿ ಕೃತ್ವಾ ತ್ವಮಿಂದ್ರೋಽದ್ಯ ಕಿಂ ಹಿ ಕೃತ್ವಾ ಚ್ಯುತಾ ವಯಮ್ |
ಕಾಲಃ ಕರ್ತಾ ವಿಕರ್ತಾ ಚ ಸರ್ವಮನ್ಯದಕಾರಣಮ್ ॥72॥
ಇಂದ್ರನೇ, ನೀನು ಯಾವ ಸತ್ಕರ್ಮದಿಂದ ಈ ಇಂದ್ರಪದವಿಯನ್ನು ಹೊಂದಿರುವಿ ಬಲ್ಲೆಯಾ? ನಾವು ಯಾವ ಅಸತ್ಕರ್ಮದಿಂದ ಇಂದ್ರಪದವಿಯಿಂದ ಪತನ ಹೊಂದಿದೆವು, ಬಲ್ಲೆಯಾ? ಮನುಷ್ಯರ ಅಭ್ಯುದಯ- ಪತನಗಳಿಗೆ ಕಾಲನೇ ಕರ್ತೃವಾಗಿದ್ದಾನೆ. ಬೇರೆ ಎಲ್ಲವೂ ಕೇವಲ ನಿಮಿತ್ತ ಮಾತ್ರ. ಕರ್ತಾ, ವಿಕರ್ತಾ ಎಲ್ಲವೂ ಕಾಲನೇ ಆಗಿದ್ದಾನೆ.
ನಾಶಂ ವಿನಾಶಮೈಶ್ವರ್ಯಂ ಸುಖದುಃಖೇ ಭವಾಭವೌ |
ವಿದ್ವಾನ್ ಪ್ರಾಪ್ಯೈವಮತ್ಯರ್ಥಂ ನ ಪ್ರಹೃಷ್ಯೇನ್ನ ಚ ವ್ಯಥೇತ್ ॥73॥
ವಿದ್ವಾಂಸರು ನಾಶ, ವಿನಾಶ, ಐಶ್ವರ್ಯ, ಸುಖ-ದುಃಖ, ಹುಟ್ಟು-ಸಾವು ಇವುಗಳನ್ನು ಹೊಂದುತ್ತಿರಲು ಬಹಳ ಸಂತೋಷಕ್ಕೂ ಅಣಿಯಾಗಬಾರದು, ಬಹಳ ಶೋಕಿಸಲೂ ಬಾರದು.
ತ್ವಮೇವ ಹೀಂದ್ರ ವೇತ್ಥಾಸ್ಮಾನ್ ವೇದಾಹಂ ತ್ವಾಂ ಚ ವಾಸವ |

ವಿಕತ್ಥಸೇ ಮಾಂ ಕಿಂ ಬದ್ಧಂ ಕಾಲೇನ ನಿರಪತ್ರಪ ॥74॥
ಇಂದ್ರನೇ, ನಾವು ಯಾರೆಂಬುದನ್ನು ನೀನು ಚೆನ್ನಾಗಿ ತಿಳಿದಿರುವಿ. ನೀನು ಯಾರೆಂಬುದನ್ನು ನಾವು ಬಲ್ಲೆವು. ಹೀಗಿದ್ದರೂ ನೀನು ನಾಚಿಕೆಯಿಲ್ಲದೆ ಗರ್ವ ಪಡುತ್ತಿರುವಿ. ನೀನು ಕಾಲನಿಂದ ಬದ್ಧನಲ್ಲವೆ? ಯೋಚಿಸು.
ತ್ವಮೇವ ಹಿ ಪುರಾ ವೇತ್ಥ ಯತ್ತದಾ ಪೌರುಷಂ ಮಮ |
ಸಮರೇಷು ಚ ವಿಕ್ರಾಂತಂ ಪರ್ಯಾಪ್ತಂ ತನ್ನಿದರ್ಶನಮ್ ॥75॥
ನನ್ನಲ್ಲಿ ಯಾವ ಪೌರುಷವಿತ್ತು ಎಂಬುದನ್ನು ನೀನೇ ಅರಿತಿರುವಿ. ನಾನು ಸಮರದಲ್ಲಿ ಪರಾಕ್ರಮಿಯಾಗಿದ್ದೆ ಎನ್ನಲು ಒಂದು ನಿದರ್ಶನ ಸಾಕು.
ಆದಿತ್ಯಾಶ್ಚೈವ ರುದ್ರಾಶ್ಚ ಸಾಧ್ಯಾಶ್ಚ ವಸುಭಿಃ ಸಹ |
ಮಯಾ ವಿನಿರ್ಜಿತಾಃ ಸರ್ವೇ ಮರುತಶ್ಚ ಶಚೀಪತೇ ॥76॥
ತ್ವಮೇವ ಶಕ್ರ ಜಾನಾಸಿ ದೇವಾಸುರಸಮಾಗಮೇ |
ಸಮೇತಾ ವಿಬುಧಾ ಭಗ್ನಾಸ್ತರಸಾ ಸಮರೇ ಮಯಾ ॥77॥
ಶಚೀಪತಿಯೇ, ದೇವ-ದೈತ್ಯರಿಗೆ ಯುದ್ಧ ನಡೆದಾಗ ನಾನು ಏಕಾಕಿಯಾಗಿ ದ್ವಾದಶಾದಿತ್ಯರನ್ನು, ಏಕಾದಶ ರುದ್ರರನ್ನು, ಸಾಧ್ಯರನ್ನು, ವಸುಗಳನ್ನು, ಮರುತ್ತುಗಳನ್ನು ಪರಾಜಯಗೊಳಿಸಿದ್ದೆನು. ಅದು ನಿನಗೂ ತಿಳಿದಿದೆ. ಒಟ್ಟಾಗಿ ಯುದ್ಧಕ್ಕೆ ಬಂದಿದ್ದ ಎಲ್ಲಾ ದೇವತೆಗಳು ನನ್ನಿಂದ ಭಗ್ನಗೊಂಡ ವಿಷಯ ನಿನಗೂ ತಿಳಿದಿದೆ.
ಪರ್ವತಾಶ್ಚಾಸಕೃತ್ ಕ್ಷಿಪ್ತಾಃ ಸವನಾಃ ಸವನೌಕಸಃ |
ಸಟಂಕಶಿಖರಾ ಘೋರಾಃ ಸಮರೇ ಮೂರ್ಧ್ನಿ ತೇ ಮಯಾ ॥78॥
ವನಗಳಿಂದಲೂ, ವನವಾಸಿಗಳಿಂದಲೂ ಕೂಡಿದ ನೂರಾರು ಪರ್ವತಗಳನ್ನೇ ಎತ್ತಿ ನಾನು ದೇವತೆಗಳ ಕಡೆ ಎಸೆಯುತ್ತಿದ್ದೆನು. ಆ ಸಮಯದಲ್ಲಿ ನಿನ್ನ ತಲೆಯ ಮೇಲೆ ಅಪ್ಪಳಿಸಿದ ಎಷ್ಟೋ ಶಿಖರಗಳು ಭಿನ್ನವಾಗಿ ಹೋಗಿವೆ.
ಕಿಂ ನು ಶಕ್ಯಂ ಮಯಾ ಕರ್ತುಂ ಯತ್ಕಾಲೋ ದುರತಿಕ್ರಮಃ |
ನ ಹಿ ತ್ವಾಂ ನೋತ್ಸಹೇ ಹಂತುಂ ಸವಜ್ರಮಪಿ ಮುಷ್ಟಿನಾ ॥79॥
ಆದರೆ ಈಗ ನಾನು ಏನು ತಾನೇ ಮಾಡಲು ಸಾಧ್ಯ? ಕಾಲವೆಂಬುದು ದಾಟಲು ಅಸಾಧ್ಯವು. ನೀನು ವಜ್ರಾಯುಧವನ್ನು ಹಿಡಿದು ಬಂದಿದ್ದರೂ ಮುಷ್ಟಿಯಿಂದಲೇ ನಾನು ನಿನ್ನನ್ನು ಹೊಡೆದು ಸಂಹರಿಸಬಹುದು. ಆದರೆ ಇದು ಆ ಕಾಲವಲ್ಲ ಎಂದು ನಾನು ಉತ್ಸಾಹವನ್ನು ಹೊಂದುತ್ತಿಲ್ಲ.
ನ ತು ವಿಕ್ರಮಕಾಲೋಽಯಂ ಕ್ಷಮಾಕಾಲೋಽಯಮಾಗತಃ |
ತೇನ ತ್ವಾ ಮರ್ಷಯೇ ಶಕ್ರ ದುರ್ಮರ್ಷಣತರಸ್ತ್ವಯಾ ॥80॥
ಪರಾಕ್ರಮವನ್ನು ತೋರುವ ಕಾಲವು ಇದಾಗಿರುವುದಿಲ್ಲ. ಕ್ಷಮೆಯಿಂದ ವರ್ತಿಸುವ ಕಾಲವು ನನಗೆ ಒದಗಿ ಬಂದಿದೆ. ಆದ್ದರಿಂದ ನೀನು ಮಾಡಿದ ಅಪರಾಧವನ್ನೆಲ್ಲ ನಾನು ಸಹಿಸಿಕೊಂಡಿರುತ್ತೇನೆ.
ತ್ವಂ ಮಾ ಪರಿಣತೇ ಕಾಲೇ ಪರೀತಂ ಕಾಲವಹ್ನಿನಾ |
ನಿಯತಂ ಕಾಲಪಾಶೇನ ಬದ್ಧಂ ಶಕ್ರ ವಿಕತ್ಥಸೇ ॥81॥
ನಾನು ಕಾಲಾಗ್ನಿಯಿಂದ ಸುತ್ತುವರಿಯಲ್ಪಟ್ಟಿದ್ದೇನೆ. ಕಾಲಪಾಶದಿಂದ ಬದ್ಧನಾದ ನನ್ನ ಬಳಿ ಬಂದು ನೀನು ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿರುವಿ.
ಅಯಂ ಸ ಪುರುಷಃ ಶ್ಯಾಮೋ ಲೋಕಸ್ಯ ದುರತಿಕ್ರಮಃ |
ಬದ್ಧ್ವಾ ತಿಷ್ಠತಿ ಮಾಂ ರೌದ್ರಃ ಪಶುಂ ರಶನಯಾ ಯಥಾ ॥82॥
ಪುರುಷನು ಯಜ್ಞಪಶುವನ್ನು ಪಾಶದಿಂದ ಬಂಧಿಸುವಂತೆ ಶ್ಯಾಮಲ ವರ್ಣನಾಗಿರುವ, ಲೋಕದ ಜನರಿಂದ ದಾಟಲು ದುಸ್ಸಾಧ್ಯನಾದ, ಭಯಂಕರನಾದ ಕಾಲಪುರುಷನು ಪಾಶಗಳಿಂದ ನನ್ನನ್ನು ಬಂಧಿಸಿಟ್ಟಿದ್ದಾನೆ.
ಲಾಭಾಲಾಭೌ ಸುಖಂ ದುಃಖಂ ಕಾಮಕ್ರೋಧೌ ಭವಾಭವೌ |
ವಧೋ ಬಂಧಃ ಪ್ರಮೋಕ್ಷಶ್ಚ ಸರ್ವಂ ಕಾಲೇನ ಲಭ್ಯತೇ ॥83॥
ಲಾಭ-ನಷ್ಟಗಳು, ಸುಖ-ದುಃಖಗಳು, ಕಾಮ-ಕ್ರೋಧಗಳು, ಹುಟ್ಟು-ಸಾವುಗಳು, ವಧೆ, ಬಂಧ-ಮೋಕ್ಷಗಳು ಎಲ್ಲವೂ ಕಾಲಾನುಸಾರವಾಗಿಯೇ ಮನುಷ್ಯರಿಗೆ ಪ್ರಾಪ್ತವಾಗುತ್ತವೆ.
ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ |
ಸೋಽಯಂ ಪಚತಿ ಕಾಲೋ ಮಾಂ ವೃಕ್ಷೇ ಫಲಮಿವಾಗತಮ್ ॥84॥
ಈ ನನ್ನ ದುರವಸ್ಥೆಗೆ ನಾನು ಕರ್ತೃವಲ್ಲ. ನೀನೂ ಕರ್ತೃವಲ್ಲ. ನಿತ್ಯವೂ ಯಾವಾಗಲೂ ಯಾವನು ಪ್ರಭುವಾಗಿದ್ದಾನೋ ಅಂತಹ ಕಾಲಪುರುಷನೇ ವೃಕ್ಷದಲ್ಲಿ ಹಣ್ಣನ್ನು ಪಾಕ (ಪಕ್ವ) ಮಾಡುವಂತೆ ನಮ್ಮನ್ನು ಪಾಕ (ಪಕ್ವ) ಮಾಡುತ್ತಾನೆ.
ಯಾನ್ಯೇವ ಪುರುಷಃ ಕುರ್ವನ್ ಸುಖೈಃ ಕಾಲೇನ ಯುಜ್ಯತೇ |
ಪುನಸ್ತಾನ್ಯೇವ ಕುರ್ವಾಣೋ ದುಃಖೈಃ ಕಾಲೇನ ಯುಜ್ಯತೇ ॥85॥
ಪುರುಷ ಕಾರ್ಯವನ್ನು ಮಾಡಿದಾಗ ಕಾಲಪುರುಷನು ಆ ಕಾರ್ಯಗಳ ಪರವಾಗಿ ಪುರುಷನಿಗೆ ಸುಖವುಂಟಾಗುವಂತೆ ಮಾಡುತ್ತಾನೆ. ಮತ್ತೊಮ್ಮೆ ಅದೇ ವಿಧವಾದ ಕಾರ್ಯವನ್ನು ಮಾಡಿದಾಗ ದುಃಖವುಂಟಾಗುವಂತೆಯೂ ಮಾಡುತ್ತಾನೆ.
ನ ಚ ಕಾಲೇನ ಕಾಲಜ್ಞಃ ಸ್ಪೃಷ್ಟಃ ಶೋಚಿತುಮರ್ಹತಿ |
ತೇನ ಶಕ್ರ ನ ಶೋಚಾಮಿ ನಾಸ್ತಿ ಶೋಕೇ ಸಹಾಯತಾ ॥86॥
ಕಾಲನ ಪ್ರಭಾವವನ್ನು ಅರಿತಿರುವ ವ್ಯಕ್ತಿಯು ಕಾಲಾಕ್ರಾಂತನಾಗಿದ್ದರೂ ಶೋಕಿಸುವುದಿಲ್ಲ. ಶೋಕದಿಂದ ಯಾವ ಲಾಭವೂ ಇಲ್ಲ.

ಆದ್ದರಿಂದ ನಾನು ನನ್ನ ಸ್ಥಿತಿಗೆ ಎಂದೂ ದುಃಖಪಡುವುದಿಲ್ಲ.
ಯದಾ ಹಿ ಶೋಚತಾಂ ಶೋಕೋ ವ್ಯಸನಂ ನಾಪಕರ್ಷತಿ |
ಸಾಮರ್ಥ್ಯಂ ಶೋಚತೋ ನಾಸ್ತಿ ನಾದ್ಯ ಶೋಚಾಮ್ಯಹಂ ತತಃ ॥87॥
ಮನುಷ್ಯನು ಶೋಕಪಡುತ್ತಿದ್ದರೆ ಆ ಶೋಕವು ಹೃದಯದಿಂದ ಹೊರ ಹೋಗುವುದಿಲ್ಲ. ಶೋಕದಿಂದ ದುಃಖವನ್ನು ಪರಿಹರಿಸಿಕೊಳ್ಳಲು ಅವನು ಅಸಮರ್ಥನಾಗಿದ್ದಾನೆ. ಆದ್ದರಿಂದ ನಾನು ಶೋಕ ಪಡಬಾರದೆಂದೇ ನಾನು ನಿಶ್ಚಯ ಮಾಡಿಕೊಂಡಿದ್ದೇನೆ.
ಏವಮುಕ್ತಃ ಸಹಸ್ರಾಕ್ಷೋ ಭಗವಾನ್ ಪಾಕಶಾಸನಃ |
ಪ್ರತಿಸಂಹೃತ್ಯ ಸಂರಂಭಮಿತ್ಯುವಾಚ ಶತಕ್ರತುಃ ॥88॥
ಯುಧಿಷ್ಠಿರನೇ, ಬಲಿಯಿಂದ ಈ ರೀತಿಯಾದ ಮಾತನ್ನು ಕೇಳಿಸಿಕೊಂಡ ಸಹಸ್ರಾಕ್ಷನಾದ ಭಗವಾನ್ ಇಂದ್ರನು ಬಲಿಯ ಮೇಲೆ ಉಂಟಾಗಿದ್ದ ತನ್ನ ಕೋಪವನ್ನು ಉಪಸಂಹರಿಸಿಕೊಂಡು ಶಾಂತನಾಗಿ ಬಲಿಯನ್ನು ಕೇಳುತ್ತಾನೆ.
ಸವಜ್ರಮುದ್ಯತಂ ಬಾಹುಂ ದೃಷ್ಟ್ವಾ ಪಾಶಾಂಶ್ಚ ವಾರುಣಾನ್ |
ಕಸ್ಯೇಹ ನ ವ್ಯಥೇದ್ ಬುದ್ಧಿರ್ಮೃತ್ಯೋರಪಿ ಜಿಘಾಂಸತಃ ॥89॥
ದೈತ್ಯರಾಜನೇ, ವಜ್ರಾಯುಧ ಸಹಿತನಾಗಿ ಮೇಲಕ್ಕೆತ್ತಿದ ನನ್ನ ಬಾಹುಗಳನ್ನು, ವರುಣಪಾಶಗಳನ್ನು ನೋಡಿದ ವ್ಯಕ್ತಿಯು ಪ್ರಾಣಾಪಹಾರಿಯಾದ ಮೃತ್ಯುವೇ ಆಗಿದ್ದರೂ ಅವನಿಗೂ ಭಯವುಂಟಾಗಿ ಬುದ್ಧಿಯು ವ್ಯಸನಕ್ಕೆ ತುತ್ತಾಗುತ್ತದೆ.
ಸಾ ತೇ ನ ವ್ಯಥತೇ ಬುದ್ಧಿರಚಲಾ ತತ್ತ್ವದರ್ಶಿನೀ |
ಬ್ರುವನ್ನ ವ್ಯಥಸೇ ಸ ತ್ವಂ ವಾಕ್ಯಂ ಸತ್ಯಪರಾಕ್ರಮ ॥90॥
ಆದರೆ ಇಂತಹ ನನ್ನನ್ನು ನೋಡಿಯೂ ನಿನ್ನ ಬುದ್ಧಿಯು ಅಚಲವಾಗಿಯೇ ಇದೆ. ಇದಕ್ಕೆ ಕಾರಣ ನಿನ್ನ ಬುದ್ಧಿಯು ನಿಷ್ಫಲವಾದ ಭಗವತ್ತತ್ತ್ವವನ್ನು ಅರಿತುಕೊಂಡಿದೆ. ಆದಕಾರಣದಿಂದಲೇ ನೀನು ನಿನ್ನ ಸ್ಥಿತಿಗೆ ದುಃಖಪಡುತ್ತಿಲ್ಲ.
ಕೋ ಹಿ ವಿಶ್ವಾಸಮರ್ಥೇಷು ಶರೀರೇ ವಾ ಶರೀರಭೃತ್ |
ಕರ್ತುಮುತ್ಸಹತೇ ಲೋಕೇ ದೃಷ್ಟ್ವಾ ಸಂಪ್ರಸ್ಥಿತಂ ಜಗತ್ ॥91॥
ಪ್ರಪಂಚವೇ ನಾಶದ ಕಡೆ ಸಾಗುತ್ತಿರುವಾಗ ಇದನ್ನು ಕಂಡ ಶರೀರಧಾರಿಯಾದ ಪುರುಷನು ತನ್ನ ಶರೀರದಲ್ಲಾಗಲೀ, ಧನ-ವೈಭವ ವಿಷಯ ಭೋಗಗಳಲ್ಲಾಗಲೀ ವಿಶ್ವಾಸವನ್ನಿಡುವ ಉತ್ಸಾಹವನ್ನು ತಾಳಲಾರನು.
ಅಹಮಪ್ಯೇವಮೇವೈನಂ ಲೋಕಂ ಜಾನಾಮ್ಯಶಾಶ್ವತಮ್ |
ಕಾಲಾಗ್ನಾವಾಹಿತಂ ಘೋರೇ ಗುಹ್ಯೇ ಸತತಗೇಕ್ಷರೇ ॥92॥
ನಿನ್ನಂತೆ ನಾನೂ ಸರ್ವವ್ಯಾಪಿಯಾದ, ಅವಿನಾಶಿಯಾದ, ಘೋರವಾದ, ನಿಗೂಢವಾದ ಕಾಲಾಗ್ನಿಯಿಂದಲೇ ದಹಿಸಲ್ಪಡುವ ಈ ಲೋಕವು ಅಶಾಶ್ವತವೆಂಬುದಾಗಿ ತಿಳಿದಿರುತ್ತೇನೆ.
ನ ಚಾತ್ರ ಪರಿಹಾರೋಽಸ್ತಿ ಕಾಲಸ್ಪೃಷ್ಟಸ್ಯ ಕಸ್ಯಚಿತ್ |
ಸೂಕ್ಷ್ಮಾಣಾಂ ಮಹತಾಂ ಚೈವ ಭೂತಾನಾಂ ಪರಿಪಚ್ಯತಾಮ್ ॥93॥
ಕಾಲನ ಅಧೀನನಾಗಿರುವ ವ್ಯಕ್ತಿಗೆ ಪರಿಹಾರವೆಂಬುದಿಲ್ಲ. ಸೂಕ್ಷ್ಮ ಪ್ರಾಣಿಯಾಗಲಿ, ಮಹಾಪ್ರಾಣಿಯಾಗಲೀ ಯಾವ ತಾರತಮ್ಯವೂ ಇಲ್ಲದೆ ಕಾಲಾಗ್ನಿಯು ಎಲ್ಲರನ್ನೂ ದಹಿಸುತ್ತದೆ. ಯಾರಿಗೂ ಅದನ್ನು ಬಿಡಿಸಿಕೊಳ್ಳಲು ಸಾಧ್ಯವಿಲ್ಲ.
ಅನೀಶಸ್ಯಾಪ್ರಮತ್ತಸ್ಯ ಭೂತಾನಿ ಪಚತಃ ಸದಾ |
ಅನಿವೃತ್ತಸ್ಯ ಕಾಲಸ್ಯ ಕ್ಷಯಂ ಪ್ರಾಪ್ತೋ ನ ಮುಚ್ಯತೇ ॥94॥
ಕಾಲನನ್ನು ನಿಯಂತ್ರಿಸುವವರು ಯಾರೂ ಇಲ್ಲ. ಅವರಿಗೆ ಬೇರೊಬ್ಬ ಸ್ವಾಮಿಯಿಲ್ಲ. ಸ್ವಯಂ ಪ್ರಭುವಾಗಿದ್ದಾನೆ. ಯಾವಾಗಲೂ ಜಾಗರೂಕನಾಗಿದ್ದು ಪ್ರಾಣಿಗಳನ್ನು ದುಃಖವೆಂಬ ಬೆಂಕಿಯಲ್ಲಿ ಸುಡುತ್ತಾನೆ. ಯಾವುದೇ ಕಾರಣದಿಂದ ಹಿಂದಿರುಗದೆ ಇರುವ ಮನೆಯನ್ನು ಸೇರಿದ ಪ್ರಾಣಿಯು ಅವನಿಂದ ಬಿಡಿಸಿಕೊಳ್ಳಲಾರದು.
ಅಪ್ರಮತ್ತಃ ಪ್ರಮತ್ತೇಷು ಕಾಲೋ ಜಾಗರ್ತಿ ದೇಹಿಷು |
ಪ್ರಯತ್ನೇನಾಪ್ಯತಿಕ್ರಾಂತೋ ದೃಷ್ಟಪೂರ್ವೋ ನ ಕೇನಚಿತ್ ॥95॥
ಅಪ್ರಮತ್ತನಾದ ಕಾಲಪುರುಷನು ಪ್ರಮತ್ತರಾದ ಜನರ ವಿಷಯದಲ್ಲಿ ಜಾಗೃತನಾಗಿರುತ್ತಾನೆ. ಈ ಕಾಲನನ್ನು ಪ್ರಯತ್ನಪೂರ್ವಕವಾಗಿ ದಾಟಿದ ವ್ಯಕ್ತಿ ಯಾವೊಬ್ಬನನ್ನೂ ನಾನು ಕಂಡಿರುವುದಿಲ್ಲ.
ಪುರಾಣಃ ಶಾಶ್ವತೋ ಧರ್ಮಃ ಸರ್ವಪ್ರಾಣಭೃತಾಂ ಸಮಃ |
ಕಾಲೋ ನ ಪರಿಹಾರ್ಯಶ್ಚ ನ ಚಾಸ್ಯಾಸ್ತಿ ವ್ಯತಿಕ್ರಮಃ ॥96॥
ಕಾಲನು ಪುರಾಣನು, ಶಾಶ್ವತನು, ಧರ್ಮಸ್ವರೂಪನು. ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳನ್ನು ಸಮಾನನಾಗಿ ಕಾಣುವವನು. ಅವನನ್ನು ದೂರೀಕರಿಸಲು ಸಾಧ್ಯವಿಲ್ಲ. ಅವನನ್ನು ನಿರಾಕರಿಸಲಂತೂ ಸಾಧ್ಯವೇ ಇಲ್ಲ.
ಅಹೋರಾತ್ರಾಂಶ್ಚ ಮಾಸಾಂಶ್ಚ ಕ್ಷಣಾಂಕಾಷ್ಠಾಃ ಕಲಾ ಲವಾನ್ |
ಸಂಪಿಂಡಯತಿ ನಃ ಕಾಲೋ ವೃದ್ಧಿಂ ವಾರ್ಧುಷಿಕೋ ಯಥಾ ॥97॥
ಯಾವ ರೀತಿ ಬಡ್ಡಿಯಿಂದಲೇ ಜೀವಿಸುವ ವ್ಯಕ್ತಿಯು ಒಂದು ಬಿಡಿಗಾಸನ್ನೂ ಬಿಡದೆ ಲೆಕ್ಕ ಹಾಕಿ ಬಡ್ಡಿಯನ್ನು ವಸೂಲಿ ಮಾಡುವನೋ ಅದರಂತೆ ಕಾಲನು ಹಗಲು-ರಾತ್ರಿ-ಮಾಸ-ಕ್ಷಣ-ಕಾಷ್ಠ-ಕಲ-ಲವ ಎಲ್ಲವನ್ನೂ ಲೆಕ್ಕಹಾಕಿ ಪ್ರಾಣಿಗಳನ್ನು ಪೀಡಿಸುತ್ತಾನೆ.
ಇದಮದ್ಯ ಕರಿಷ್ಯಾಮಿ ಶ್ವಃ ಕರ್ತಾಸ್ಮೀತಿ ವಾದಿನಮ್ |
ಕಾಲೋ ಹರತಿ ಸಂಪ್ರಾಪ್ತೋ ನದೀವೇಗ ಇವೋಡುಪಮ್ ॥98॥

ಈ ಕೆಲಸವನ್ನು ಇಂದು ಮಾಡುತ್ತೇನೆ, ಆ ಕೆಲಸವನ್ನು ನಾಳೆ ಮಾಡುತ್ತೇನೆ ಎಂದು ಚಿಂತಿಸುತ್ತಿರುವ ಮನುಷ್ಯನನ್ನು ನದಿ ಪ್ರವಾಹವು ತೀರದಲ್ಲಿರುವ ಸಣ್ಣ ದೋಣಿಗಳನ್ನು ಕೊಚ್ಚಿಕೊಂಡು ಹೋಗುವಂತೆ ಇವನನ್ನು ಅಪಹರಿಸಿಕೊಂಡು ಹೋಗುತ್ತಾನೆ.

ಇದಾನೀಂ ತಾವದೇವಾಸೌ ಮಯಾ ದೃಷ್ಟಃ ಕಥಂ ಮೃತಃ |
ಇತಿ ಕಾಲೇನ ಹ್ರಿಯತಾಂ ಪ್ರಲಾಪಃ ಶ್ರೂಯತೇ ನೃಣಾಮ್ ॥99॥

ನಾನು ಈಗ ತಾನೆ ಇವನನ್ನು ನೋಡಿದ್ದೆನು. ಇಷ್ಟು ಬೇಗ ಇವನು ಸತ್ತುಹೋದನು. ಅಯ್ಯೋ ಆಶ್ಚರ್ಯವು! ಹೀಗೆ ಕಾಲನಿಂದ ಅಪಹೃತರಾದವರ ವಿಷಯವಾಗಿ ಬೇರೆ ಮನುಷ್ಯರು ಮಾತನಾಡುವುದನ್ನು ಕೇಳುತ್ತಲೇ ಇರುತ್ತೇವೆ.

ನಶ್ಯಂತ್ಯರ್ಥಾಸ್ತಥಾ ಭೋಗಾಃ ಸ್ಥಾನಮೈಶ್ವರ್ಯಮೇವ ಚ |
ಅನಿತ್ಯಮಧ್ರುವಂ ಸರ್ವಂ ವ್ಯವಸಾಯೋ ಹಿ ದುಷ್ಕರಃ |
ಉಚ್ಛ್ರಾಯಾ ವಿನಿಪಾತಾಂತಾ ಭಾವೋಽಭಾವಸ್ಸ ಏವ ಚ ॥100॥

ನಾವು ಗಳಿಸಿದ ಧನ-ಕನಕಾದಿಗಳು, ಸಮಸ್ತ ಭೋಗಗಳು, ಸ್ಥಾನ-ಐಶ್ವರ್ಯಗಳು, ಜೀವಲೋಕದ ಜೀವಿತವು ನಿಯಮೇನ ಒಯ್ಯಲ್ಪಡುತ್ತವೆ. ಉಚ್ಛ್ರಾಯ ಸ್ಥಿತಿಯು ಅಧಃಪತನದಲ್ಲಿ ಪರ್ಯವಸಾನ ಹೊಂದುತ್ತದೆ. ಭಾವ-ಅಭಾವ ಎಲ್ಲದಕ್ಕೂ ಕಾಲನೇ ನಿಯಾಮಕನು.

ಸಾ ತೇ ನ ವ್ಯಥತೇ ಬುದ್ಧಿರಚಲಾ ತತ್ತ್ವದರ್ಶಿನೀ |
ಅಹಮಾಸಂ ಪುರಾ ಚೇತಿ ಮನಸಾಪಿ ನ ಬುದ್ಧ್ಯಸೇ ॥101॥

ದೈತ್ಯರಾಜನೇ, ನಿನ್ನ ಬುದ್ಧಿಯು ಈ ತತ್ತ್ವವನ್ನು ತಿಳಿದುಕೊಂಡಿದೆ. ಆದ್ದರಿಂದಲೇ ಸ್ಥಿರವಾಗಿದೆ. ಆದುದರಿಂದಲೇ ಇಂತಹ ಸ್ಥಿತಿಯಲ್ಲಿಯೂ ದುಃಖಿಸುತ್ತಿಲ್ಲ. ನಾನು ಹಿಂದೆ ಐಶ್ವರ್ಯವಂತನಾಗಿದ್ದೆನು ಎನ್ನುವುದನ್ನು ಮನಸ್ಸಿನಲ್ಲಿಯೂ ಸ್ಮರಿಸಿಕೊಳ್ಳುತ್ತಿಲ್ಲ.

ಕಾಲೇನಾಕ್ರಮ್ಯ ಲೋಕೇಽಸ್ಮಿನ್ ಪಚ್ಯಮಾನೇ ಬಲೀಯಸಾ |
ಅಜ್ಯೇಷ್ಠಮಕನಿಷ್ಠಂ ಚ ಕ್ಷಿಪ್ಯಮಾಣೋ ನ ಬುದ್ಧ್ಯಸೇ ॥102॥

ಅತ್ಯಂತ ಬಲಿಷ್ಠವಾದ ಕಾಲವು ಈ ಲೋಕವೆಲ್ಲವನ್ನೂ ಆಕ್ರಮಿಸಿ ಶ್ರೇಷ್ಠ, ಕನಿಷ್ಠ ಎಂಬ ವ್ಯತ್ಯಾಸವಿಲ್ಲದೆ ತನ್ನೊಳಗೆ ತೂರಿಸಿಕೊಂಡು ಬೇಯಿಸುತ್ತಿದ್ದರೂ ಯಾರಿಗೂ ಇದು ಕಾಲನ ಪ್ರಭಾವ, ಅವನ ನಡೆ ಎಂಬುದು ಅರ್ಥವೇ ಆಗುವುದಿಲ್ಲ.

ಈರ್ಷ್ಯಾಭಿಮಾನಲೋಭೇಷು ಕಾಮಕ್ರೋಧಭಯೇಷು ಚ |
ಸ್ಪೃಹಾಮೋಹಾಭಿಮಾನೇಷು ಲೋಕಃ ಸಕ್ತೋ ವಿಮುಹ್ಯತಿ ॥103॥

ಜನರೆಲ್ಲ ಹೊಟ್ಟೆಕಿಚ್ಚು, ಅಭಿಮಾನ, ಲೋಭ, ಕಾಮ, ಕ್ರೋಧ, ಭಯ, ಆಸೆ, ಮೋಹ ಇವುಗಳಲ್ಲಿಯೇ ಆಸಕ್ತರಾಗಿ, ವಿವೇಕಭ್ರಷ್ಟರಾಗಿ ಭ್ರಾಂತರಾಗಿದ್ದಾರೆ.

ಭವಾಂಸ್ತು ಭಾವತತ್ತ್ವಜ್ಞೋ ವಿದ್ವಾನ್ ಜ್ಞಾನತಪೋನ್ವಿತಃ |
ಕಾಲಂ ಪಶ್ಯತಿ ಸುವ್ಯಕ್ತಂ ಪಾಣಾವಾಮಲಕಂ ಯಥಾ ॥104॥

ದೈತ್ಯೇಂದ್ರನೇ, ನೀನಾದರೂ ಭಗವಂತನ ಅಭಿಪ್ರಾಯವನ್ನು ಚೆನ್ನಾಗಿ ತಿಳಿದಿರುವಿ. ವಿದ್ವಾಂಸನಾಗಿರುವಿ. ಜ್ಞಾನ-ತಪಸ್ಸಿನಿಂದ ಕೂಡಿರುವಿ. ಕೈಯಲ್ಲಿರುವ ಸ್ವಚ್ಛವಾದ  ನೀರಿನಂತೆ ಅಥವಾ ನೆಲ್ಲೀಕಾಯಿಯಂತೆ ಕಾಲನ ಅತಿಕ್ರಮಣವನ್ನು ತುಂಬಾ ಚೆನ್ನಾಗಿ ನೋಡುತ್ತಿರುವಿ.

ಕಾಲಚಾರಿತ್ರತತ್ತ್ವಜ್ಞಃ ಸರ್ವಶಾಸ್ತ್ರವಿಶಾರದಃ |
ವೈರೋಚನೇ ಕೃತಾತ್ಮಾಸಿ ಸ್ಪೃಹಣೀಯೋ ವಿಜಾನತಾಮ್ ॥105॥

ಕಾಲನ ಸ್ವರೂಪವನ್ನು ಚೆನ್ನಾಗಿ ತಿಳಿದಿರುವ ಸರ್ವಶಾಸ್ತ್ರವಿಶಾರದನಾದ ವಿರೋಚನನ ಮಗನೇ, ಜ್ಞಾನಿಗಳಿಗೆ ನೀನು ಇಷ್ಟನಾಗಿರುವಿ.

ಸರ್ವಲೋಕೋ ಹ್ಯಯಂ ಮನ್ಯೇ ಬುದ್ಧ್ಯಾ ಪರಿಗತಸ್ತ್ವಯಾ |
ವಿಹರನ್ ಸರ್ವತೋ ಮುಕ್ತೋ ನ ಕ್ವಚಿತ್ ಪರಿಷಜ್ಜಸೇ ॥106॥

ನೀನು ನಿನ್ನ ಬುದ್ಧಿಯಿಂದ ಸಮಸ್ತಲೋಕಗಳ ತತ್ತ್ವಗಳನ್ನು ತಿಳಿದಿದ್ದಿ ಎಂದು ಭಾವಿಸಿದ್ದೇನೆ. ಮುಕ್ತನಾಗಿ ಎಲ್ಲ ಕಡೆಯಲ್ಲಿಯೂ ವಿಹರಿಸುವ ನೀನು ಯಾವ ಕಡೆಯಲ್ಲಿಯೂ ಆಸಕ್ತನಾಗಿಲ್ಲ.

ರಜಶ್ಚ ಹಿ ತಮಶ್ಚ ತ್ವಾ ಸ್ಪೃಶತೋ ನ ಜಿತೇಂದ್ರಿಯಮ್ |
ನಿಷ್ಪ್ರೀತಿಂ ನಷ್ಟಸಂತಾಪಂ ತ್ವಮಾತ್ಮಾನಮುಪಾಸಸೇ ॥107॥

ಜಿತೇಂದ್ರಿಯನಾದ ನಿನ್ನ ಬಳಿ ರಜಸ್ಸು, ತಮಸ್ಸುಗಳು ಸುಳಿಯುತ್ತಿಲ್ಲ. ಯಾವುದು ಹರ್ಷರಹಿತವಾಗಿದೆಯೋ ದುಃಖರಹಿತವಾಗಿದೆಯೋ ಅಂತಹ ಪರಮಾತ್ಮನನ್ನು ನೀನು ಉಪಾಸನೆ ಮಾಡುತ್ತಿರುವಿ.

ಸುಹೃದಂ ಸರ್ವಭೂತಾನಾಂ ನಿರ್ವೈರಂ ಶಾಂತಮಾನಸಮ್ |
ದೃಷ್ಟ್ವಾ ತ್ವಾಂ ಮಮ ಸಂಜಾತಾ ತ್ವಯ್ಯನುಕ್ರೋಶಿನೀ ಮತಿಃ ॥108॥

ಸಮಸ್ತ ಜೀವರಲ್ಲಿಯೂ ಸುಹೃದ್ಭಾವನೆಯಿಂದ, ವೈರರಹಿತವಾಗಿರುವ, ಶಾಂತ ಮನಸ್ಸಿನಿಂದ ಕೂಡಿರುವ ನಿನ್ನನ್ನು ನೋಡಿದೊಡನೆ ನನಗೆ ಸಿಟ್ಟು ದೂರವಾಗಿ ದಯಾ ಪೂರ್ಣವಾದ ಬುದ್ಧಿಯು ಉಂಟಾಗಿದೆ.

ನಾಹಮೇತಾದೃಶಂ ಬುದ್ಧಂ ಹಂತುಮಿಚ್ಛಾಮಿ ಬಂಧನೇ |
ಆನೃಶಂಸ್ಯಂ ಪರೋ ಧರ್ಮೋ ಅನುಕ್ರೋಶಸ್ತಥಾ ತ್ವಯಿ ॥109॥

ಇಂತಹ ಜ್ಞಾನಿಯನ್ನು ಬಂಧಿಸಲು ಅಥವಾ ಸಂಹರಿಸಲು ನಾನು ಇಷ್ಟಪಡುವುದಿಲ್ಲ. ಯಾರೊಡನೆಯೂ ಕಾಠಿಣ್ಯದಿಂದ ವ್ಯವಹರಿಸದೆ ಇರುವುದೇ ಪರಮಧರ್ಮವಾಗಿದೆ. ನಿನ್ನ ಮೇಲೆ ಸಂಪೂರ್ಣ ಕರುಣೆಯುಂಟಾಗಿದೆ.

ಮೋಕ್ಷ್ಯಂತೇ ವಾರುಣಾಃ ಪಾಶಾಸ್ತವೇಮೇ ಕಾಲಪರ್ಯಯಾತ್ |

ಪ್ರಜಾನಾಮಪಚಾರೇಣ ಸ್ವಸ್ತಿ ತೇಽಸ್ತು ಮಹಾಸುರ ॥110॥
ನಾನು ನಿನ್ನನ್ನು ಬಂಧಿಸಿರುವ ವರುಣಪಾಶಗಳು ಸ್ವಲ್ಪಕಾಲದಲ್ಲಿಯೇ ತಾವಾಗಿಯೇ ಕಳಚಿ ಬೀಳುತ್ತವೆ. ಪ್ರಜೆಗಳು ಯಾವಾಗ ಧರ್ಮವಿರುದ್ಧವಾಗಿ ವ್ಯವಹರಿಸುತ್ತಾರೋ ಆಗ ನಿನಗೆ ಕಲ್ಯಾಣವುಂಟಾಗುತ್ತದೆ.
ಯದಾ ಶ್ವಶ್ರೂಂ ಸ್ನುಷಾ ವೃದ್ಧಾಂ ಪರಿಚಾರೇಣ ಯೋಕ್ಷ್ಯತೇ |
ಪುತ್ರಶ್ಚ ಪಿತರಂ ಮೋಹಾತ್ ಪ್ರೇಷಯಿಷ್ಯತಿ ಕರ್ಮಸು ॥111॥
ಬ್ರಾಹ್ಮಣೈಃ ಕಾರಯಿಷ್ಯಂತಿ ವೃಷಲಾಃ ಪಾದಧಾವನಮ್ |
ಶೂದ್ರಾಶ್ಚ ಬ್ರಾಹ್ಮಣೀಂ ಭಾರ್ಯಾಮುಪಯಾಸ್ಯಂತಿ ನಿರ್ಭಯಾಃ ॥
ವಿಯೋನಿಷು ಚ ಬೀಜಾನಿ ಮೋಕ್ಷ್ಯಂತೇ ಪುರುಷಾ ಯದಾ |
ಸಂಕರಂ ಕಾಂಸ್ಯಭಾಂಡೈಶ್ಚ ಬಲಿಂ ಚಾಪಿ ಕುಪಾತ್ರಕೈಃ ॥113॥
ಚಾತುರ್ವರ್ಣ್ಯಂ ಯದಾ ಕೃತ್ಸ್ನಮುನ್ಮರ್ಯಾದಂ ಭವಿಷ್ಯತಿ |
ಏಕೈಕಸ್ತೇ ತದಾ ಪಾಶಃ ಕ್ರಮಶಃ ಪ್ರತಿಮೋಕ್ಷ್ಯತೇ ॥114॥
ಯಾವಾಗ ಸೊಸೆಯು ಅತ್ತೆಯನ್ನೇ ಸೇವೆ ಮಾಡಲು ಹೇಳುತ್ತಾಳೋ, ಮಗನು ಅಜ್ಞಾನದಿಂದ ತಂದೆಯ ಬಳಿ ಮನೆಕೆಲಸ ಮಾಡುವಂತೆ ಆಜ್ಞಾಪಿಸುತ್ತಾನೋ, ಬ್ರಾಹ್ಮಣರಿಂದ ಶೂದ್ರರು ಯಾವಾಗ ಕಾಲುಗಳನ್ನು ತೊಳೆಸಿಕೊಳ್ಳುತ್ತಾರೋ, ಶೂದ್ರರು ಯಾವಾಗ ಭಯರಹಿತರಾಗಿ ಬ್ರಾಹ್ಮಣಕನ್ಯೆಯರನ್ನು ವಿವಾಹವಾಗುತ್ತಾರೋ, ಮನುಷ್ಯರು ಲಜ್ಜಾರಹಿತರಾಗಿ ವಿರುದ್ಧಯೋನಿಗಳಲ್ಲಿ ವೀರ್ಯಸೇಚನೆ ಮಾಡುತ್ತಾರೋ, ಉಚ್ಚ-ನೀಚ ಜಾತಿ ಭೇದವಿಲ್ಲದೆ ಒಂದೇ ಕಡೆ ಕುಳಿತು, ಒಂದೇ ಕಂಚಿನ ತಟ್ಟೆಯಲ್ಲಿ ಎಲ್ಲರೂ ಊಟ ಮಾಡುತ್ತಾರೋ, ನಾನಾ ವರ್ಣದವರಿಗೂ ಒಂದೇ ಪಂಕ್ತಿಯಲ್ಲಿ ಕೂಡಿಸಿ ಅನ್ನದಾನ ಮಾಡುತ್ತಾರೋ, ಊಟ ಮಾಡುವ ಅಪವಿತ್ರವಾದ ಪಾತ್ರೆಗಳಲ್ಲೇ ದೇವತೆಗಳಿಗೆ ನೈವೇದ್ಯವನ್ನು ಅರ್ಪಿಸುತ್ತಾರೋ, ಈ ರೀತಿಯಾಗಿ ವರ್ಣಾಶ್ರಮ ಧರ್ಮಗಳೆಲ್ಲವೂ ಮರ್ಯಾದೆಯನ್ನು ಮೀರಿದಾಗ ನಾನು ನಿನ್ನನ್ನು ಬಂಧಿಸಿರುವ ವರುಣನ ಪಾಶಗಳು ಒಂದೊಂದಾಗಿ ಕಳಚಿ ಬೀಳುತ್ತವೆ.
ವ್ಯಾಖ್ಯಾನ ವಿಶೇಷ ಒಂದೊಂದೇ ಪಾಶಗಳು ಎಂದರೆ ಧನವಿರೋಧಿಯಾದ ಕಾಲಪಾಶ, ಧಾನ್ಯವಿರೋಧಿಯಾದ ಪಾಶ, ಭಾಗ್ಯವಿರೋಧಿಯಾದ ಪಾಶ, ರಾಜ್ಯ ವಿರೋಧಿಯಾದ ಪಾಶ ಎಂದು ಅನೇಕ ಪಾಶಗಳಿವೆ. ಆ ಎಲ್ಲಾ ಪಾಶಗಳು ಕಳಚುತ್ತವೆ ಎಂದು ಅರ್ಥ.
ಅಸ್ಮತ್ತಸ್ತೇ ಭಯಂ ನಾಸ್ತಿ ಸಮಯಂ ಪ್ರತಿಪಾಲಯ |
ಸುಖೀ ಭವ ನಿರಾಬಾಧಃ ಸ್ವಸ್ಥಚೇತಾ ನಿರಾಮಯಃ ॥115॥
ದೈತ್ಯೇಂದ್ರನೇ, ನಮ್ಮಿಂದ ನಿನಗೆ ಯಾವ ವಿಧವಾದ ಭಯವೂ ಇರುವುದಿಲ್ಲ. ಸಮಯವನ್ನು ಪ್ರತೀಕ್ಷಿಸುತ್ತಿರು. ಯಾವ ವಿಧವಾದ ಬಾಧೆಗಳು ಇಲ್ಲದೆ ಸ್ವಸ್ಥ ಚಿತ್ತನಾಗಿ ಸುಖವಾಗಿರು.
ಭೀಷ್ಮಃ
ತಮೇವಮುಕ್ತ್ವಾ ಭಗವಾನ್ ಶತಕ್ರತುಃ
ಪ್ರತಿಪ್ರಯಾತೋ ಗಜರಾಜವಾಹನಃ |
ವಿಜಿತ್ಯ ಸರ್ವಾನಸುರಾನ್ ಸುರಾಧಿಪೋ
ನನಂದ ಹರ್ಷೇಣ ಬಭೂವ ಚೈಕರಾಟ್ ॥116॥
ಭೀಷ್ಮ ಯುಧಿಷ್ಠಿರನೇ, ಐರಾವತ ವಾಹನದಲ್ಲಿ ಏರಿದ, ಶತಕ್ರತುವು ಆದ ಇಂದ್ರನು ಬಲಿಯ ಬಳಿ ಹೀಗೆ ಹೇಳಿ, ಐರಾವತದಲ್ಲಿ ಕುಳಿತು ತನ್ನ ಸ್ಥಾನಕ್ಕೆ ಹೊರಟು ಹೋದನು. ಸುರಾಧಿಪನಾದ ಇಂದ್ರನು ಸಮಸ್ತ ಅಸುರರನ್ನು ದಹಿಸಿ, ಮೂರು ಲೋಕಗಳಿಗೂ ಏಕಚಕ್ರಾಧಿಪತಿಯಾಗಿ ಸಂತೋಷದಿಂದ ಆನಂದ ಹೊಂದಿದನು.
ಮಹರ್ಷಯಸ್ತುಷ್ಟುವುರಂಜಸಾ ಚ ತಂ
ವೃಷಾಕಪಿಂ ಸರ್ವಚರಾಚರೇಶ್ವರಮ್ |
ಹಿಮಾಪಹೋ ಹವ್ಯಮುದಾವಹಂಸ್ತ್ವರಂ-
ಸ್ತಥಾಮೃತಂ ಚಾರ್ಪಿತಮೀಶ್ವರಾಯ ಹ ॥117॥
ಅಂತಹ ಇಂದ್ರನನ್ನು ಕಂಡು, ಅವನ ಅಂತರ್ಯಾಮಿಯಾದ ವೃಷಾಕಪಿಯನ್ನು ಉದ್ದೇಶಿಸಿಕೊಂಡು ಅಥವಾ ಸ್ವರ್ಗದಲ್ಲಿರುವ ಉಪೇಂದ್ರನಾಮಕ ವಿಷ್ಣುವನ್ನು ಚಿಂತಿಸುತ್ತಾ ಋಷಿಗಳೆಲ್ಲರೂ ಸರ್ವಚರಾಚರ ಪ್ರಪಂಚಕ್ಕೆ ಈಶ್ವರನಾದ ಭಗವಂತನನ್ನೇ ಎಲ್ಲ ವಿಧವಾಗಿ ಪ್ರಶಂಸಿಸಿದರು. ಯಜ್ಞೇಶ್ವರನು ಯಜ್ಞಗಳಲ್ಲಿ ಅರ್ಪಿಸುತ್ತಿದ್ದ ಹವಿಸ್ಸುಗಳನ್ನು ಆಯಾ ದೇವತೆಗಳಿಗೆ ತಂದೊಪ್ಪಿಸಿದನು. ದೇವೇಶ್ವರನಾದ ಇಂದ್ರನು ತನಗೆ ಅರ್ಪಿಸಿದ ಅಮೃತವನ್ನು ಪಾನ ಮಾಡಿದನು.
ದ್ವಿಜೋತ್ತಮೈಃ ಸರ್ವಗತೈರಭಿಷ್ಟುತೋ
ವಿದೀಪ್ತತೇಜಾ ಗತಮನ್ಯುರೀಶ್ವರಃ |
ಪ್ರಶಾಂತಚೇತಾ ಮುದಿತಃ ಸ್ವಮಾಲಯಂ
ತ್ರಿವಿಷ್ಟಪಂ ಪ್ರಾಪ್ಯ ಮುಮೋದ ವಾಸವಃ ॥118॥
ಹೀಗೆ ಬ್ರಾಹ್ಮಣಶ್ರೇಷ್ಠರಿಂದ ಎಲ್ಲೆಡೆಯಿಂದಲೂ ಸ್ತೋತ್ರ ಮಾಡಲ್ಪಟ್ಟ, ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿದ್ದ, ಕೋಪರಹಿತನಾಗಿ ಶಾಂತಚಿತ್ತನಾದ ಇಂದ್ರನು ಪರಮಸಂತುಷ್ಟನಾಗಿ ತನ್ನ ನಿಜಸ್ಥಾನವಾದ ಸ್ವರ್ಗವನ್ನು ಸೇರಿ ಆನಂದ ಹೊಂದಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ಮೂರನೆಯ ಅಧ್ಯಾಯ ಮುಗಿಯಿತು.

* * * * *
အ
ಅರವತ್ನಾಲ್ಕನೆಯ ಅಧ್ಯಾಯ
ಗಂಗಾತೀರದಲ್ಲಿದ್ದ ಇಂದ್ರ-ನಾರದರ ಬಳಿಗೆ ಲಕ್ಷ್ಮಿಯು ಬಂದು,
ತಾನು ಸೇರಿರುವ ಪುರುಷನಲ್ಲಿ ಇರಬೇಕಾಗಿರುವ ಗುಣಗಳನ್ನು,
ಕಾರಣಗಳಾದ ದೋಷಗಳನ್ನು ಅವರಿಗೆ ತಿಳಿಸಿದುದು.
ಯುಧಿಷ್ಠಿರಃ
ಪೂರ್ವರೂಪಾಣಿ ಮೇ ರಾಜನ್ ಪುರುಷಸ್ಯ ಭವಿಷ್ಯತಃ |
ಪರಾಭವಿಷ್ಯತಶ್ಚೈವ ತ್ವಂ ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ರಾಜನಾದ ಭೀಷ್ಮನೇ, ಪಿತಾಮಹನೇ, ಉನ್ನತಿಯನ್ನು ಹೊಂದಲಿರುವ ಪುರುಷನ ಮತ್ತು ಪರಾಭವವನ್ನು ಹೊಂದುವಂತಹ ಪುರುಷನ ಭಾಗ್ಯೋದಯಕ್ಕೂ ಪರಾಭವಕ್ಕೂ ಕಾರಣಗಳಾದ ಪೂರ್ವಕರ್ಮಗಳು ಯಾವವು ಎಂಬುದನ್ನು ನನಗೆ ತಿಳಿಸಿ. ಯಾವ ಕಾರಣದಿಂದ ಜಯವಾಗುತ್ತದೆ, ಯಾವ ಕಾರಣದಿಂದ ಪರಾಜಯವಾಗುತ್ತದೆ ಎಂಬುದನ್ನೂ ನನಗೆ ತಿಳಿಸಿ.
ಭೀಷ್ಮಃ
ಮನ ಏವ ಮನುಷ್ಯಸ್ಯ ಪೂರ್ವರೂಪಾಣಿ ಶಂಸತಿ |
ಭವಿಷ್ಯತಶ್ಚ ಭದ್ರಂ ತೇ ತಥೈವ ನಭವಿಷ್ಯತಃ ||2||
ಭೀಷ್ಮ ಯುಧಿಷ್ಠಿರನೇ, ಮಂಗಳವಾಗಲಿ, ಯಾವ ಮನುಷ್ಯನು ಭಾಗ್ಯೋದಯವನ್ನು ಅಥವಾ ಪರಾಭವವನ್ನು ಹೊಂದಲಿದ್ದಾನೋ ಅದಕ್ಕೆ ಅವನ ಮನಸ್ಸೇ ಪೂರ್ವಕಾರಣಗಳು ಏನೆಂಬುದನ್ನು ನಿರ್ಣಯಿಸುತ್ತದೆ.
ವ್ಯಾಖ್ಯಾನ ವಿಶೇಷ ದೋಷಗಳನ್ನು ತ್ಯಜಿಸಿ ಕೇವಲ ಗುಣಗಳಲ್ಲಿಯೇ ಆಸಕ್ತನಾದ ವ್ಯಕ್ತಿಯ ಮನಸ್ಸನ್ನು ನೋಡಿ ಅಥವಾ ಗುಣಗಳನ್ನೆಲ್ಲ ತ್ಯಜಿಸಿ ಕೇವಲ ದೋಷಗಳಲ್ಲಿಯೇ ಆಸಕ್ತನಾದ ವ್ಯಕ್ತಿಯ ಮನಸ್ಸನ್ನು ನೋಡಿ, ಮೊದಲನೆಯವನಿಗೆ ಲಕ್ಷ್ಮಿಯು ಒಲಿಯುತ್ತಾಳೆ, ನಂತರದವನಿಗೆ ಪರಾಭವವನ್ನು ನೀಡುತ್ತಾಳೆ ಎಂಬುದನ್ನು ವಿಸ್ತಾರವಾಗಿ ಹೇಳಲು ಆರಂಭಿಸುತ್ತಾರೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶ್ರಿಯಾ ಶಕ್ರಸ್ಯ ಸಂವಾದಂ ತನ್ನಿಬೋಧ ಯುಧಿಷ್ಠಿರ ||3||
ಧರ್ಮಜನೇ, ಈ ನಿನ್ನ ಪ್ರಶ್ನೆಗೆ ಸಂಬಂಧಿಸಿದಂತೆ ಲಕ್ಷ್ಮಿ ಮತ್ತು ಇಂದ್ರರಿಗೆ ನಡೆದ ಪುರಾತನವಾದ ಇತಿಹಾಸರೂಪವಾದ ಸಂಭಾಷಣೆಯನ್ನು ವಿದ್ವಾಂಸರು ಉದಾಹರಿಸುತ್ತಾರೆ. ಅದನ್ನು ನಿನಗೆ ತಿಳಿಸುತ್ತೇನೆ, ಕೇಳು.
ಮಹತಸ್ತಪಸೋ ವ್ಯುಷ್ಟ್ಯಾ ಪಶ್ಯಲ್ಲೋಕೌ ಪರಾವರೌ |
ಸಾಮಾನ್ಯಮೃಷಿಭಿರ್ಗತ್ವಾ ಬ್ರಹ್ಮಲೋಕನಿವಾಸಿಭಿಃ ||4||
ಬ್ರಹ್ಮೈವಾಮಿತದೀಪ್ತೌಜಾಃ ಶಾಂತಪಾಪ್ಮಾ ಮಹಾತಪಾಃ |
ವಿಚಚಾರ ಯಥಾಕಾಮಂ ತ್ರಿಷು ಲೋಕೇಷು ನಾರದಃ ||5||
ಹಿಂದೊಮ್ಮೆ ಮಹಾತಪಸ್ವಿಗಳಾದ, ಪಾಪರಹಿತರಾದ, ಬ್ರಹ್ಮನಂತೆ ಅಮಿತವಾದ ತೇಜಸ್ಸಿನಿಂದ ಬೆಳಗುತ್ತಿದ್ದ, ಬ್ರಹ್ಮಲೋಕದ ನಿವಾಸಿಗಳೊಡನೆ ಬೆರೆತಿದ್ದ ನಾರದ ಮಹರ್ಷಿಗಳು ತಮ್ಮ ಮಹತ್ತಾದ ತಪಸ್ಸಿನ ಸಮುದಾಯದಿಂದ ಮೇಲಿನ ಮತ್ತು ಕೆಳಗಿನ ಲೋಕಗಳನ್ನು, ಬ್ರಹ್ಮಲೋಕ ನಿವಾಸಿಗಳಾದ ಋಷಿಗಳಿಂದ ಕೂಡಿಕೊಂಡು ಸಂಚರಿಸಿದರು. ತಮಗೆ ಇಷ್ಟಬಂದಲ್ಲಿ ಮೂರುಲೋಕಗಳಲ್ಲಿಯೂ ಪ್ರಯಾಣ ಮಾಡಿದರು.
ಕದಾಚಿತ್ ಪ್ರಾತರುತ್ಥಾಯ ಪಿಸ್ಪೃಕ್ಷುಃ ಸಲಿಲಂ ಶುಚಿ |
ಧ್ರುವದ್ವಾರಭವಾಂ ಗಂಗಾಂ ಜಗಾಮಾವತತಾರ ಚ ||6||
ಒಮ್ಮೆ ನಾರದರು ಬೆಳಗಾಗುತ್ತಲೇ ಮೇಲೆದ್ದು, ಪವಿತ್ರವಾದ ನೀರನ್ನು ಮುಟ್ಟಿ ಸ್ನಾನ ಮಾಡಬೇಕೆಂಬ ಅಪೇಕ್ಷೆಯಿಂದ ಧ್ರುವದ್ವಾರದಿಂದ ಹುಟ್ಟಿದ ಅರ್ಥಾತ್ ಉತ್ತರ ದಿಕ್ಕಿನಲ್ಲಿ ಹುಟ್ಟುವ ಗಂಗಾನದಿಯ ತೀರಕ್ಕೆ ಸ್ನಾನಕ್ಕಾಗಿ ಆಗಮಿಸಿದರು.
ಮೇರುಪಾದೋದ್ಭವಾಂ ಗಂಗಾಂ ನಾರಾಯಣಪದಚ್ಯುತಾಮ್ |
ಸ ವೀಕ್ಷಮಾಣೋ ಹೃಷ್ಟಾತ್ಮಾ ತಂ ದೇಶಮಭಿಜಗ್ಮಿವಾನ್ ||7||
ಯಂ ತು ದೇವಜವಾಕೀರ್ಣಂ ಸೂಕ್ಷ್ಮಕಾಂಚನವಾಲುಕಮ್ |
ಗಂಗಾದ್ವೀಪಂ ಸಮಾಸಾದ್ಯ ನಾನಾವೃಕ್ಷೈರಲಂಕೃತಮ್ ||8||
ಗಂಗೆಯು ಮೇರುಪಾದದಿಂದ ಹುಟ್ಟಿದವಳು. ನಾರಾಯಣನ ಪಾದಕಮಲಗಳಿಂದ ಚ್ಯುತಳಾದವಳು. ಅಂತಹ ಗಂಗೆಯನ್ನು ನೋಡಿದ ನಾರದರು ಸಂತುಷ್ಟರಾಗಿ ಆ ಪ್ರದೇಶಕ್ಕೆ ಆಗಮಿಸಿದರು. ಆ ಗಂಗಾತೀರದಲ್ಲಿಯಾದರೂ ತಣ್ಣನೆಯ ಗಾಳಿಯು ಬೀಸುತ್ತಿತ್ತು. ಸೂಕ್ಷ್ಮವಾದ ಬಂಗಾರದಂತಹ ಉಸುಕಿನ ಕಣಗಳಿಂದ ತುಂಬಿತ್ತು. ನಾನಾ ವೃಕ್ಷಗಳಿಂದ ಅಲಂಕೃತವಾಗಿತ್ತು. ಇಂತಹ ಗಂಗಾದ್ವೀಪವನ್ನು ಸಮೀಪಿಸಿದರು.
ಸಾಲತಾಲಾಶ್ವಕರ್ಣಾನಾಂ ಚಂದನಾನಾಂ ಚ ರಾಜಿಭಿಃ |
ಮಂಡಿತಂ ವಿವಿಧೈಃ ಪುಷ್ಪೈರ್ಹಂಸಕಾರಂಡವಾಯುತಮ್ ||9||
ಗಂಗೆಯ ಪಾರ್ಶ್ವಗಳಲ್ಲಿ ಸಾಲ, ತಾಳೆ, ಅಶ್ವಕರ್ಣ ಮೊದಲಾದ ವೃಕ್ಷಗಳು ವಿರಾಜಮಾನವಾಗಿದ್ದವು. ನಾನಾ ವಿಧವಾದ ಪುಷ್ಪಗಳಿಂದಲೂ, ಹಂಸ, ಕಾರಂಡವ ಪಕ್ಷಿಗಳಿಂದಲೂ ಶೋಭಾಯಮಾನವಾಗಿತ್ತು.
ನದೀಪುಲಿನಮಾಸಾದ್ಯ ಸ್ನಾತ್ವಾ ಸಂತರ್ಪ್ಯ ದೇವತಾಃ |
ಜಜಾಪ ಜಪ್ಯಂ ಧರ್ಮಾತ್ಮಾ ತನ್ಮಯತ್ವೇನ ಭಾಸ್ವತಾ ||10||
ಇಂತಹ ನದಿಯ ತೀರದಲ್ಲಿ ಸ್ನಾನ ಮಾಡಿ ಕುಳಿತು ದೇವತೆಗಳಿಗೆಲ್ಲ ತರ್ಪಣವನ್ನು ನೀಡಿ, ಮನಸ್ಸಿನಲ್ಲಿ ಭಗವಂತನೇ ಪ್ರಧಾನನೆಂದು

ಚಿಂತಿಸುತ್ತಾ ಧರ್ಮಾತ್ಮರಾದ ನಾರದರು ಜಪಿಸಿದರು.
ಸಹಸ್ರನಯನಶ್ಚಾಪಿ ವಜ್ರೀ ಶಂಬರಪಾಕಹಾ |
ತಸ್ಯಾ ದೇವರ್ಷಿಜುಷ್ಟಾಯಾಸ್ತೀರಮಭ್ಯಾಜಗಾಮ ಹ ॥11॥
ಇದೇ ಪ್ರಸಂಗದಲ್ಲಿ ಸಹಸ್ರಾಕ್ಷನಾದ ಇಂದ್ರನು ಸ್ನಾನಕ್ಕೆಂದು ಆ ನದಿತೀರಕ್ಕೆ ಆಗಮಿಸಿದನು. ಯಾವ ಭಾಗದಲ್ಲಿ ದೇವರ್ಷಿ ನಾರದರು ಜಪಾನುಷ್ಠಾನ ಮಾಡುತ್ತಿದ್ದರೋ ಅದೇ ಜಾಗಕ್ಕೆ ಶಂಬರ, ಪಾಕ ಎಂಬ ಅಸುರರನ್ನು ಸಂಹರಿಸಿದ, ವಜ್ರಾಯುಧವನ್ನು ಧರಿಸಿದ ಇಂದ್ರದೇವನು ಆಗಮಿಸಿದನು.
ತಾವಾಪ್ಲುತ್ಯ ಯತಾತ್ಮಾನೌ ಕೃತಜಪ್ಯೌ ಸಮಾಸತುಃ |
ನದ್ಯಾಃ ಪುಲಿನಮಾಸಾದ್ಯ ಸೂಕ್ಷ್ಮಕಾಂಚನವಾಲುಕಮ್ ॥12॥
ಪುಣ್ಯಕರ್ಮಭಿರಾಖ್ಯಾತಾ ದೇವರ್ಷಿಕಥಿತಾಃ ಕಥಾಃ |
ಚಕ್ರತುಸ್ತೌ ಕಥಾಶೀಲೌ ಶುಚಿಸಂಹೃಷ್ಟಮಾನಸೌ |
ಪೂರ್ವವೃತ್ತವ್ಯಪೇತಾನಿ ಕಥಯಂತೌ ಸಮಾಹಿತೌ ॥13॥
ಬಳಿಕ ಇಂದ್ರ-ನಾರದರು ಇಬ್ಬರು ಗಂಗಾನದಿಯಲ್ಲಿ ಸ್ನಾನ ಮಾಡಿ ಏಕಾಗ್ರಚಿತ್ತರಾಗಿ ಜಪಾದಿಗಳನ್ನು ಮುಗಿಸಿ, ಸೂಕ್ಷ್ಮವಾದ ಮತ್ತು ಸುವರ್ಣಮಯವಾದ ಕಣಗಳಿಂದ ಕೂಡಿರುವ ನದಿಯ ಮರಳಿನ ಮೇಲೆ ಕುಳಿತು, ಪುಣ್ಯಾತ್ಮರಿಂದಲೂ, ದೇವರ್ಷಿಗಳಿಂದಲೂ, ಮಹರ್ಷಿಗಳಿಂದಲೂ ಹೇಳಲ್ಪಟ್ಟ ಕಥೆಗಳನ್ನು ಪರಸ್ಪರ ಹೇಳಿಕೊಳ್ಳುತ್ತಿದ್ದರು. ಹೀಗೆ ಹಿಂದೆ ನಡೆದ ಚರಿತ್ರೆಗಳನ್ನು ಅನ್ಯೋನ್ಯವಾಗಿ ಹೇಳಿಕೊಳ್ಳುವ ಸಂದರ್ಭದಲ್ಲಿ,
ಅಥ ಭಾಸ್ಕರಮುದ್ಯಂತಂ ರಶ್ಮಿಜಾಲಪುರಸ್ಕೃತಮ್ |
ಪೂರ್ಣಮಂಡಲಮಾಲೋಕ್ಯ ತಾವುತ್ಥಾಯೋಪತಸ್ಥತುಃ ॥14॥
ಅನೇಕ ಕಿರಣಗಳ ಸಮುದಾಯದೊಡನೆ ಉದಯಮಾನನಾಗುತ್ತಿದ್ದ ಸೂರ್ಯನ ಪೂರ್ಣಮಂಡಲವು ಕಾಣಿಸಿತು. ಕೂಡಲೇ ಎದ್ದುನಿಂತು ಸೂರ್ಯೋಪಸ್ಥಾನವನ್ನು ಮಾಡಿದರು.
ಅಭಿತಸ್ತೂದಯಂತಂ ತಮರ್ಕಮರ್ಕಮಿವಾಪರಮ್ |
ಆಕಾಶೇ ದದೃಶೇ ಜ್ಯೋತಿರುದ್ಯತಾರ್ಚಿಃಸಮಪ್ರಭಮ್ ॥15॥
ಅದೇ ಸಂದರ್ಭದಲ್ಲಿ ಸೂರ್ಯನಂತೆ ಬೆಳಗುವ, ಎಲ್ಲ ಕಡೆಯೂ ಪ್ರಕಾಶದಿಂದ ತುಂಬಿರುವ, ಅಗ್ನಿಯ ಜ್ವಾಲೆಗೆ ಸಮಾನವಾದ ಪ್ರಭೆಗಳಿಂದ ಕಂಗೊಳಿಸುವ ದಿವ್ಯವಾದ ವಿಮಾನ ಒಂದನ್ನು ಆಕಾಶದಲ್ಲಿ ನೋಡಿದರು.
ತಯೋಃ ಸಮೀಪಂ ಸಂಪ್ರಾಪ್ತಂ ಪ್ರತ್ಯದೃಶ್ಯತ ಭಾರತ |
ತತ್ ಸುಪರ್ಣಾರ್ಕಚರಿತಮಾಸ್ಥಿತಂ ವೈಷ್ಣವಂ ಪದಮ್ |
ಭಾಭಿರಪ್ರತಿಮಂ ಭಾತಿ ತ್ರೈಲೋಕ್ಯಮವಭಾಸಯತ್ ॥16॥
ಆ ವಿಮಾನವು ಕ್ರಮವಾಗಿ ಇಂದ್ರ-ನಾರದರ ಸಮೀಪಕ್ಕೆ ಆಗಮಿಸುತ್ತಿರುವಂತೆ ಕಾಣಿಸುತ್ತಿತ್ತು. ಗರುಡ ಮತ್ತು ಸೂರ್ಯರ ಮಾರ್ಗವನ್ನೇ ಅನುಸರಿಸಿ ಹೋಗುತ್ತಿದ್ದ ಆ ವಿಮಾನವು ಆಕಾಶದ ನಡುವೆ ತನ್ನ ಕಾಂತಿಯಿಂದ ಅಪ್ರತಿಮವಾಗಿ ಬೆಳಗುತ್ತಿತ್ತು. ಮೂರುಲೋಕಗಳನ್ನೇ ತನ್ನ ಬೆಳಕಿನಿಂದ ಬೆಳಗಿಸುತ್ತಿತ್ತು.
ದಿವ್ಯಾಭಿರೂಪಶೋಭಾಭಿರಪ್ಸರೋಭಿಃ ಪುರಸ್ಕೃತಾಮ್ |
ಬೃಹತೀಮಂಶುಮತ್ಪ್ರಖ್ಯಾಂ ಬೃಹದ್ಭಾನೋರಿವಾರ್ಚಿಷಮ್ ॥17॥
ದೇವಲೋಕದಿ ಬೆಳಗುವ ಅಪ್ಸರಾಸ್ತ್ರೀಯರಿಂದ ಪುರಸ್ಕೃತವಾಗಿತ್ತು. ಶ್ರೇಷ್ಠವಾದ ಅಂಶುಮಾಲಿಯಾದ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ,
ನಕ್ಷತ್ರಕಲ್ಪಾಭರಣಾಂ ತಾರಾಪಂಕ್ತಿಸಮಸ್ರಜಮ್ |
ಶ್ರಿಯಂ ದದೃಶತುಃ ಪದ್ಮಾಂ ಸಾಕ್ಷಾತ್ ಪದ್ಮತಲಸ್ಥಿತಾಮ್ ॥18॥
ನಕ್ಷತ್ರ ಸದೃಶವಾದ ಆಭರಣಗಳಿಂದ ಅಲಂಕೃತಳಾಗಿರುವ, ನಕ್ಷತ್ರ ಪಂಕ್ತಿಯಂತೆ ವಿರಾಜಿಸುವ ಮಾಲೆಯನ್ನು ಧರಿಸಿರುವ, ಕಮಲದ ದಳಗಳ ನಡುವೆ ನಿಂತಿರುವ ಶ್ರೀರೂಪಿಣಿಯಾದ ಪದ್ಮಾ ಎನಿಸಿದ ಸಾಕ್ಷಾತ್ ಮಹಾಲಕ್ಷ್ಮಿಯನ್ನು ಇವರೀರ್ವರು ನೋಡಿದರು.
ಸಾವರುಹ್ಯ ವಿಮಾನಾಗ್ರಾದಂಗನಾನಾಮನುತ್ತಮಾ |
ಅಭ್ಯಗಚ್ಛತ್ ತ್ರಿಲೋಕೇಶಂ ಶಕ್ರಂ ಚರ್ಷಿಂ ಚ ನಾರದಮ್ ॥19॥
ಅಂಗನೆಯರಲ್ಲೇ ಅನುತ್ತಮಳಾದ ಲಕ್ಷ್ಮೀದೇವಿಯು ವಿಮಾನದಿಂದ ಕೆಳಗಿಳಿದು ತ್ರಿಲೋಕೇಶನಾದ ಇಂದ್ರನನ್ನು, ಋಷಿಗಳಾದ ನಾರದರನ್ನು ಸಮೀಪಿಸಿದರು.
ನಾರದಾನುಗತಃ ಸಾಕ್ಷಾನ್ಮಘವಾಂಸ್ತಾಮುಪಾಗಮತ್ |
ಕೃತಾಂಜಲಿಪುಟೋ ದೇವೀಂ ನಿವೇದ್ಯಾತ್ಮಾನಮಾತ್ಮನಾ ॥20॥
ನಾರದರಿಂದ ಕೂಡಿದ ಸಾಕ್ಷಾತ್ ಇಂದ್ರನು ಲಕ್ಷ್ಮಿಯನ್ನು ಸಮೀಪಿಸಿದನು. ಮನಃಪೂರ್ವಕವಾಗಿ ಭಕ್ತಿಯಿಂದ ಕೈಮುಗಿದು ದೇವಿಯ ಬಳಿ ನಿಂತನು.
ಚಕ್ರೇ ಚಾನುಪಮಾಂ ಪೂಜಾಂ ತಸ್ಯಾಶ್ಚಾಪಿ ಸ ಸರ್ವವಿತ್ |
ದೇವರಾಜಃ ಶ್ರಿಯಂ ರಾಜನ್ ವಾಕ್ಯಂ ಚೇದಮುವಾಚ ಹ ॥21॥
ಅಸದೃಶವಾದ ಪೂಜೆಯನ್ನು ಆ ಲಕ್ಷ್ಮೀದೇವಿಗೆ ಸಲ್ಲಿಸಿದನು. ಉತ್ತಮರ ಸೇವೆಯನ್ನು ಇಂದ್ರನು ಚೆನ್ನಾಗಿ ಬಲ್ಲವನಾಗಿದ್ದನು. ಬಳಿಕ ಇಂದ್ರನು ಲಕ್ಷ್ಮಿಯನ್ನು ಕುರಿತು ಈ ಮುಂದಿನ ಮಾತನ್ನು ಹೇಳಿದನು.
ಕಾ ತ್ವಂ ಕೇನ ಚ ಕಾರ್ಯೇಣ ಸಂಪ್ರಾಪ್ತಾ ಚಾರುಹಾಸಿನಿ |

ಕುತಶ್ಚಾಗಮ್ಯತೇ ಸುಭ್ರು ಗಂತವ್ಯಂ ಕ್ವ ಚ ತೇ ಶುಭೇ ॥22॥
ಚಾರುಹಾಸಿನಿಯೇ, ನೀನು ಯಾರು? ಯಾವ ಕಾರ್ಯಕ್ಕಾಗಿ ಇಲ್ಲಿಗೆ ಆಗಮಿಸಿರುವಿ. ಏಕೆ ಇಲ್ಲಿಗೆ ಆಗಮಿಸಿರುವಿ? ಸುಂದರವಾದ ಹುಬ್ಬುಳ್ಳವಳೇ, ಪರಮಮಂಗಳೆಯೇ, ನೀನು ಈಗ ಎಲ್ಲಿಗೆ ಹೋಗುವವಳಿದ್ದಿ?
ಶ್ರೀಃ
ಪುಣ್ಯೇಷು ತ್ರಿಷು ಲೋಕೇಷು ಸರ್ವೇ ಸ್ಥಾವರಜಂಗಮಾಃ |
ಮಮಾತ್ಮಭಾವಮಿಚ್ಛಂತೋ ಯತಂತೇ ಪರಮಾತ್ಮನಾ ॥23॥
ಲಕ್ಷ್ಮಿ ಪುಣ್ಯತಮಗಳಾದ ಮೂರುಲೋಕಗಳಲ್ಲಿಯೂ ಇರುವ ಸಮಸ್ತ ಚರಾಚರ ಪ್ರಾಣಿಗಳು ನನ್ನ ಅನುಗ್ರಹವನ್ನು ಪಡೆಯಬೇಕೆಂಬ ಇಚ್ಛೆಯಿಂದ ಬಹಳ ಉತ್ಸಾಹ ಪೂರ್ವಕವಾಗಿ ಪ್ರಯತ್ನಗಳನ್ನು ಮಾಡುತ್ತಿರುತ್ತಾರೆ.
ಸಾಹಂ ವೈ ಪಂಕಜೇ ಜಾತಾ ಸೂರ್ಯರಶ್ಮಿವಿಬೋಧಿತೇ |
ಭೂತ್ಯರ್ಥಂ ಸರ್ವಭೂತಾನಾಂ ಪದ್ಮಾ ಶ್ರೀಃ ಪದ್ಮಮಾಲಿನೀ ॥24॥
ಅಂತಹ ಪ್ರಾಣಿಗಳಿಗೂ ಸಮಸ್ತ ವಿಧವಾದ ಐಶ್ವರ್ಯಗಳನ್ನು ಕೊಡುವ ಕಾರಣಗಳಿಂದ ನಾನು ಸೂರ್ಯನ ಕಿರಣಗಳಿಂದ ಹುಟ್ಟಿದವಳು. ನಾನೇ ಪದ್ಮೆಯೂ, ಶ್ರೀಯು, ಪದ್ಮಮಾಲೆಯನ್ನು ಧರಿಸಿದವಳು.
ಅಹಂ ಲಕ್ಷ್ಮೀರಹಂ ಭೂತಿಃ ಶ್ರೀಶ್ಚಾಹಂ ಬಲಸೂದನ |
ಅಹಂ ಶ್ರದ್ಧಾ ಚ ಮೇಧಾ ಚ ಸನ್ನತಿರ್ವಿಜಿತಿಃ ಸ್ಥಿತಿಃ ॥25॥
ಬಲಸೂದನನೇ, ಲಕ್ಷ್ಮಿಯು ನಾನೇ. ಭೂತಿಯೂ ನಾನೇ. ಶ್ರೀ ಎನ್ನುವವಳೂ ನಾನೇ. ಶ್ರದ್ಧಾ, ಮೇಧಾ, ಸನ್ನತಿ, ವಿಜಿತಿ, ಸ್ಥಿತಿಯೂ ನಾನೇ ಆಗಿದ್ದೇನೆ.
ಅಹಂ ಧೃತಿರಹಂ ಸಿದ್ಧಿರಹಂ ತ್ವಿಡ್ಭೂತಿರೇವ ಚ |
ಅಹಂ ಸ್ವಾಹಾ ಸ್ವಧಾ ಚೈವ ಸಂಸ್ತುತಿರ್ನಿಯತಿಃ ಕೃತಿಃ ॥26॥
ನಾನೇ ಧೃತಿ, ಸಿದ್ಧಿ, ಕಾಂತಿ, ಭೂತಿ, ಸ್ವಾಹಾ, ಸ್ವಧಾ, ಸಂಸ್ತುತಿ, ನಿಯತಿ, ಕೃತಿ ಮೊದಲಾದ ನಾಮಗಳಿಂದ ಭೂಷಿತಳಾಗಿದ್ದೇನೆ.
ರಾಜ್ಞಾಂ ವಿಜಯಮಾನಾನಾಂ ಸೇನಾಗ್ರೇಷು ಧ್ವಜೇಷು ಚ |
ನಿವಾಸೇ ಧರ್ಮಶೀಲಾನಾಂ ವಿಷಯೇಷು ಪುರೇಷು ಚ ॥27॥
ವಿಜಯವನ್ನು ಬಯಸುವ ರಾಜರ ಸೇನಾಗ್ರಗಳಲ್ಲಿ, ಪತಾಕೆಗಳಲ್ಲಿ ಧರ್ಮಶೀಲರಾದ ಶ್ರೇಷ್ಠ ಪುರುಷರ ನಿವಾಸ ಸ್ಥಾನಗಳಲ್ಲಿ ಅಂತಹ ಧರ್ಮಶೀಲತೆ ಇರುವ ದೇಶಗಳಲ್ಲಿ, ಪಟ್ಟಣಗಳಲ್ಲಿಯೂ ನಾನು ಯಾವಾಗಲೂ ವಾಸ ಮಾಡುತ್ತೇನೆ.
ಜಿತಕಾಶಿನಿ ಶೂರೇ ಚ ಸಂಗ್ರಾಮೇಷ್ವನಿವರ್ತಿನಿ |
ನಿವಸಾಮಿ ಮನುಷ್ಯೇಂದ್ರೇ ಸದೈವ ಬಲಸೂದನ ॥28॥
ಬಲಸೂದನನೇ, ಯುದ್ಧಭೂಮಿಯಿಂದ ವಿಮುಖನಾಗಿ ಹಿಂದಿರುಗದೆ ವಿಜಯದಿಂದ ಬೆಳಗುವ ಶೂರನಾದ ರಾಜನಲ್ಲಿಯೂ ನಾನು ವಾಸ ಮಾಡುತ್ತೇನೆ.
ಧರ್ಮನಿತ್ಯೇ ಮಹಾಬುದ್ಧೌ ಬ್ರಹ್ಮಣ್ಯೇ ಸತ್ಯವಾದಿನಿ |
ಪ್ರಶ್ರಿತೇ ದಾನಶೀಲೇ ಚ ಸದೈವ ನಿವಸಾಮ್ಯಹಮ್ ॥29॥
ನಿತ್ಯವೂ ಧರ್ಮದಲ್ಲಿ ರತನಾಗಿರುವ ಮಹಾಬುದ್ಧಿಶಾಲಿಯಾದ, ಬ್ರಾಹ್ಮಣ ಪ್ರಿಯನಾದ, ಸತ್ಯವಾದಿಯಾದ, ವಿನಯಶೀಲನಾದ, ದಾನಶೀಲನಾದ ಪುರುಷನಲ್ಲಿ ನಾನು ಯಾವಾಗಲೂ ವಾಸ ಮಾಡುತ್ತೇನೆ.
ಅಸುರೇಷ್ವವಸಂ ಪೂರ್ವಂ ಸತ್ಯಧರ್ಮನಿಬಂಧನಾ |
ವಿಪರೀತಾಂಸ್ತು ತಾನ್ ಬುದ್ಧ್ವಾ ತ್ವಯಿ ವಾಸಮರೋಚಯಮ್ ॥30॥
ಅಸುರರಲ್ಲಿದ್ದ ಸತ್ಯ-ಧರ್ಮಗಳಿಂದ ಬಂಧಿಸಲ್ಪಟ್ಟವಳಾಗಿ ನಾನು ಈ ಮೊದಲು ಅಸುರರಲ್ಲಿಯೇ ವಾಸ ಮಾಡಿದ್ದೆನು. ಆದರೆ ಅವರು ಸತ್ಯ-ಧರ್ಮಗಳನ್ನು ಅತಿಕ್ರಮಿಸಿದರೆಂದು ತಿಳಿದು ನಿನ್ನಲ್ಲಿ ವಾಸ ಮಾಡಬೇಕೆಂದು ಅಪೇಕ್ಷಿಸಿದ್ದೇನೆ.
ಶಕ್ರಃ
ಕಥಂವೃತ್ತೇಷು ದೈತ್ಯೇಷು ತ್ವಮವಾತ್ಸೀರ್ವರಾನನೇ |
ದೃಷ್ಟ್ವಾ ಚ ಕಿಮಿಹಾಗಾಸ್ತ್ವಂ ಹಿತ್ವಾ ದೈತೇಯದಾನವಾನ್ ॥31॥
ಸುಮುಖಿಯೇ, ಯಾವ ವಿಧವಾದ ಆಚಾರ-ವ್ಯವಹಾರಗಳನ್ನಿಟ್ಟು ಕೊಂಡಿದ್ದ ದೈತ್ಯರಲ್ಲಿ ನೀನು ವಾಸ ಮಾಡಿಕೊಂಡಿದ್ದೆ? ನೀನು ಆ ದೈತ್ಯ-ದಾನವರನ್ನು ತ್ಯಜಿಸಿ ಬರಲು ಕಂಡ ದುರ್ಗುಣಗಳೇನು?
ಶ್ರೀಃ
ಸ್ವಧರ್ಮಮನುತಿಷ್ಠತ್ಸು ಧೈರ್ಯಾದಚಲಿತೇಷು ಚ |
ಸ್ವರ್ಗಮಾರ್ಗಾಭಿರಾಮೇಷು ಸತ್ತ್ವೇಷು ನಿರತಾ ಹ್ಯಹಮ್ ॥32॥
ಇಂದ್ರನೇ, ಯಾರು ತಮ್ಮ ಧರ್ಮಗಳಲ್ಲಿ ನಿರತರಾಗಿರುತ್ತಾರೋ, ಧೈರ್ಯದಿಂದ ವಿಲಚಿತರಾಗುವುದಿಲ್ಲವೋ, ಸ್ವರ್ಗಮಾರ್ಗಗಳಲ್ಲಿ ಆಸಕ್ತರಾಗಿರುತ್ತಾರೋ ಅಂತಹ ಸತ್ತ್ವಯುತರಲ್ಲಿ ನಾನು ವಾಸ ಮಾಡುತ್ತೇನೆ.
ದಾನಾಧ್ಯಯನಯಜ್ಞೇಜ್ಯಾ ಗುರುದೈವತಪೂಜನಮ್ |
ವಿಪ್ರಾಣಾಮತಿಥೀನಾಂ ಚ ತೇಷಾಂ ನಿತ್ಯಮವರ್ತತ ॥33॥
ಹಿಂದೆ ದೈತ್ಯರು ದಾನ, ಅಧ್ಯಯನ, ಯಜ್ಞ, ಗುರು-ದೇವತಾಪೂಜೆ, ವಿಪ್ರರುಗಳಿಗೆ ಅತಿಥಿಗಳಿಗೆ ಆರಾಧನೆ, ಇವುಗಳನ್ನು ನಿತ್ಯವೂ ಮಾಡುತ್ತಿದ್ದರು.
ಸುಸಮ್ಮೃಷ್ಟಗೃಹಾಶ್ಚಾಸನ್ ಜಿತಸ್ತ್ರೀಕಾ ಹುತಾಗ್ನಯಃ |

ಗುರುಶುಶ್ರೂಷವೋ ದಾಂತಾ ಬ್ರಹ್ಮಣ್ಯಾಃ ಸತ್ಯವಾದಿನಃ ॥34॥
ಚೆನ್ನಾಗಿ ಗುಡಿಸಿ, ಸಾರಿಸಿದ ಶುದ್ಧವಾದ ಮನೆಗಳಲ್ಲಿ ಇರುತ್ತಿದ್ದರು. ಪತ್ನಿಯರನ್ನು ತಮ್ಮ ಅಂತಃಕರಣದಿಂದ ಜಯಿಸಿಕೊಂಡಿದ್ದರು. ಅಗ್ನಿಹೋತ್ರಿಗಳಾಗಿದ್ದರು. ಗುರು ಶುಶ್ರೂಷೆಯಲ್ಲಿ ಆಸಕ್ತರಾಗಿದ್ದರು. ಇಂದ್ರಿಯನಿಗ್ರಹಶೀಲರು, ಬ್ರಾಹ್ಮಣಪ್ರಿಯರು, ಸತ್ಯವಾದಿಗಳು ಆಗಿದ್ದರು.
ಶ್ರದ್ದಧಾನಾ ಜಿತಕ್ರೋಧಾ ದಾನಶೀಲಾನಸೂಯಕಾಃ |
ಭೃತಪುತ್ರಾ ಭೃತಾಮಾತ್ಯಾ ಭೃತದಾರಾ ಹ್ಯನೀರ್ಷವಃ ॥35॥
ಶ್ರದ್ಧಾವಂತರು, ಜಿತಕ್ರೋಧರು, ದಾನಶೀಲರು, ಅಸೂಯಾ ರಹಿತರಾಗಿ, ಮಕ್ಕಳು, ಮಂತ್ರಿಗಳು, ಹೆಂಡಂದಿರು ಇವರನ್ನು ಚೆನ್ನಾಗಿ ಪೋಷಿಸುತ್ತಿದ್ದರು. ಯಾರಲ್ಲಿಯೂ ಈರ್ಷ್ಯೆಯನ್ನು ಹೊಂದುತ್ತಿರಲಿಲ್ಲ.
ಅಮರ್ಷಣಾ ನ ಚಾನ್ಯೋನ್ಯಂ ಸ್ಪೃಹಯಂತಿ ಕದಾಚನ |
ನ ಚ ಜಾತೂಪತಪ್ಯಂತೇ ಧೀರಾಃ ಪರಸಮೃದ್ಧಿಭಿಃ ॥36॥
ಸಿಟ್ಟಿನಿಂದ ಮತ್ತೊಬ್ಬರು ಇನ್ನೊಬ್ಬರ ಸಂಪತ್ತಿಗೆ ಆಸೆ ಪಡುತ್ತಿರಲಿಲ್ಲ. ಯಾವಾಗಲೂ ಬೇರೆಯವರ ಸಮೃದ್ಧಿಯಿಂದ ಪರಿತಾಪ ಪಡುತ್ತಿರಲಿಲ್ಲ.
ದಾತಾರಃ ಸಂಗೃಹೀತಾರ ಆರ್ಯಾಃ ಕರುಣವೇದಿನಃ |
ಮಹಾಪ್ರಸಾದಾ ಋಜವೋ ದೃಢಭಕ್ತಾ ಜಿತೇಂದ್ರಿಯಾಃ ॥37॥
ದಾನಬುದ್ಧಿಯುಳ್ಳವರಾಗಿದ್ದರು. ಸನ್ಮಾರ್ಗದಿಂದ ಸಂಪಾದಿಸುತ್ತಿದ್ದರು. ಪೂಜ್ಯರಾಗಿದ್ದರು. ಕರುಣಾಹೃದಯಿಗಳಾಗಿದ್ದರು. ಇತರರಲ್ಲಿ ಉತ್ತಮ ಬುದ್ಧಿಯುಳ್ಳವರಾಗಿದ್ದರು. ಸರಳ ಸ್ವಭಾವದವರು, ದೃಢಭಕ್ತರು, ಜಿತೇಂದ್ರಿಯರೂ ಆಗಿದ್ದರು.
ಸಂತುಷ್ಟಭೃತ್ಯಸಚಿವಾಃ ಕೃತಜ್ಞಾಃ ಪ್ರಿಯವಾದಿನಃ |
ಯಥಾರ್ಥಮಾನಾರ್ಥಕರಾ ಹ್ರೀನಿಷೇವಾ ಯತವ್ರತಾಃ ॥38॥
ಭೃತ್ಯರು, ಮಂತ್ರಿಗಳು ಸಂತುಷ್ಟರಾಗಿರುವಂತೆ ನೋಡಿಕೊಳ್ಳುತ್ತಿದ್ದರು. ಕೃತಜ್ಞತೆ, ಪ್ರಿಯವಾದಿತ್ವ, ಯೋಗ್ಯರಿಗೆ ಸನ್ಮಾನ, ಲಜ್ಜೆ, ವ್ರತನಿಯಮಗಳು ಇವುಗಳಲ್ಲಿ ರತರಾಗಿದ್ದರು.
ನಿತ್ಯಂ ಪರ್ವಸು ಸುಸ್ನಾತಾಃ ಸ್ವನುಲಿಪ್ತಾಃ ಸ್ವಲಂಕೃತಾಃ |
ಉಪವಾಸತಪಃಶೀಲಾಃ ಪ್ರತೀತಾ ಬ್ರಹ್ಮವಾದಿನಃ ॥39॥
ಯಾವಾಗಲೂ ಪರ್ವದಿವಸಗಳಲ್ಲಿ ವಿಶೇಷವಾಗಿ ಸ್ನಾನ ಮಾಡಿ, ಗಂಧವನ್ನು ಹಚ್ಚಿಕೊಂಡು, ತಮ್ಮ ಶರೀರವನ್ನು ತುಂಬಾ ಚೆನ್ನಾಗಿ ಅಲಂಕರಿಸಿಕೊಳ್ಳುತ್ತಿದ್ದರು. ಉಪವಾಸ, ತಪಸ್ಸುಗಳಲ್ಲಿ ಆಸಕ್ತರಾಗಿದ್ದರು. ಬ್ರಹ್ಮವಾದಿಗಳೆಂದೇ ಪ್ರಸಿದ್ಧರಾಗಿದ್ದರು.
ನೈನಾನಭ್ಯುದಿಯಾತ್ ಸೂರ್ಯೋ ನ ಚಾಪ್ಯಾಸನ್ ಪ್ರಗೇನಿಶಾಃ |
ರಾತ್ರೌ ದಧಿ ಚ ಸಕ್ತೂಂಶ್ಚ ನಿತ್ಯಮೇವ ವ್ಯವರ್ಜಯನ್ ॥40॥
ದೈತ್ಯರು ಏಳುವ ಮೊದಲು ಸೂರ್ಯನು ಉದಯಿಸುತ್ತಿರಲಿಲ್ಲ. ಅರ್ಥಾತ್ ಸೂರ್ಯೋದಯಕ್ಕಿಂತ ಮೊದಲು ಏಳುತ್ತಿದ್ದರು. ರಾತ್ರಿಯಲ್ಲಿ ಮೊಸರನ್ನಾಗಲೀ, ಹುರಿ ಹಿಟ್ಟನ್ನಾಗಲೀ ನಿತ್ಯವೂ ತ್ಯಾಗ ಮಾಡಿದ್ದರು.
ಕಾಲ್ಯಂ ಘೃತಂ ಚಾನ್ವವೇಕ್ಷನ್ ಪ್ರಯತಾ ಬ್ರಹ್ಮಚಾರಿಣಃ |
ಮಂಗಲಾನಪಿ ಚಾಪಶ್ಯನ್ ಬ್ರಾಹ್ಮಣಾಂಶ್ಚಾಪ್ಯಪೂಜಯನ್ ॥41॥
ಜಿತೇಂದ್ರಿಯರು, ಬ್ರಹ್ಮಚಾರಿಗಳು ಆಗಿ ಪ್ರಾತಃಕಾಲದಲ್ಲಿ ಎದ್ದು ತುಪ್ಪದಲ್ಲಿ ಮುಖವನ್ನು ನೋಡಿಕೊಳ್ಳುತ್ತಿದ್ದರು. ಹಾಗೆ ಮಂಗಳವಸ್ತುಗಳನ್ನು ಸಂದರ್ಶಿಸುತ್ತಿದ್ದರು. ಬ್ರಾಹ್ಮಣರನ್ನು ಪೂಜಿಸುತ್ತಿದ್ದರು.
ಸದಾ ಹಿ ದದತಾಂ ಧರ್ಮಃ ಸದಾ ಚಾಪ್ರತಿಗೃಹ್ಣತಾಮ್ |
ಅರ್ಧಂ ಚ ರಾತ್ರ್ಯಾಃ ಸ್ವಪತಾಂ ದಿವಾ ಚಾಸ್ವಪತಾಂ ತಥಾ ॥42॥
ಯಾವಾಗಲೂ ಧರ್ಮವನ್ನು ಧರಿಸಿದ್ದರು. ದಾನ ತೆಗೆದುಕೊಳ್ಳುತ್ತಿರಲಿಲ್ಲ. ರಾತ್ರಿಯ ಅರ್ಧಭಾಗವು ಕಳೆದ ಬಳಿಕ ಮಲಗುತ್ತಿದ್ದರು. ಹಗಲಿನಲ್ಲಿ ಮಲಗುತ್ತಿರಲಿಲ್ಲ.
ಕೃಪಣಾನಾಥವೃದ್ಧಾನಾಂ ದುರ್ಬಲಾತುರಯೋಷಿತಾಮ್ |
ದಾಯಂ ಚ ಸಂವಿಭಾಗಂ ಚ ನಿತ್ಯಮೇವಾನುಮೋದತಾಮ್ ॥43॥
ಕೃಪಣರ, ಅನಾಥರ, ವೃದ್ಧರ, ದುರ್ಬಲರ, ಸ್ತ್ರೀಯರ ವಿಷಯದಲ್ಲಿ ದಯೆಯನ್ನು ತೋರಿಸುತ್ತಿದ್ದರು. ಅವರಿಗೆ ಬೇಕಾದ ಅನ್ನ-ವಸ್ತ್ರಗಳನ್ನು ವಿಭಾಗಿಸಿಕೊಡುತ್ತಿದ್ದರು. ನಿತ್ಯವೂ ಇಂತಹ ಸತ್ಕಾರ್ಯಗಳನ್ನು ಅನುಮೋದನೆ ಮಾಡುತ್ತಿದ್ದ ದಾನವೇಂದ್ರರಲ್ಲಿ ನಾನು ವಾಸಿಸುತ್ತಿದ್ದೆನು.
ವಿಷಣ್ಣಂ ತ್ರಸ್ತಮುದ್ವಿಗ್ನಂ ಭಯಾರ್ತಂ ವ್ಯಾಧಿಪೀಡಿತಮ್ |
ಹೃತಸ್ವಂ ವ್ಯಸನಾರ್ತಂ ಚ ನಿತ್ಯಮಾಶ್ವಾಸಯಂತಿ ತೇ ॥44॥
ದುಃಖಿತನೂ, ಹೆದರಿದವನೂ, ಉದ್ವೇಗಿಯೂ, ದುಃಖಿತನೂ, ವ್ಯಾಧಿಪೀಡಿತನೂ, ಸಂಪತ್ತನ್ನು ಕಳೆದುಕೊಂಡವನೂ, ವ್ಯಸನದಿಂದ ದುಃಖಿತನೂ ಇವರನ್ನು ನಿತ್ಯವೂ ಸಂತೈಸುತ್ತಿದ್ದರು.
ಧರ್ಮಮೇವಾನ್ವವರ್ತಂತ ನ ಹಿಂಸಂತಿ ಪರಸ್ಪರಮ್ |
ಅನುಕೂಲಾಶ್ಚ ಕಾರ್ಯೇಷು ಗುರುವೃದ್ಧೋಪಸೇವಿನಃ ॥45॥
ಯಾವಾಗಲೂ ಧರ್ಮಮಾರ್ಗವನ್ನೇ ಅನುಸರಿಸಿ ನಡೆಯುತ್ತಿದ್ದರು. ಒಬ್ಬರು ಮತ್ತೊಬ್ಬರನ್ನು ಹಿಂಸಿಸುತ್ತಿರಲಿಲ್ಲ. ಪರಸ್ಪರ ಸಹಕಾರವುಳ್ಳವರಾಗಿದ್ದರು. ಗುರು- ವೃದ್ಧರನ್ನು ಸೇವಿಸುತ್ತಿದ್ದರು.
ಪಿತೃದೇವಾತಿಥೀಂಶ್ಚೈವ ಯಥಾವತ್ತೇಭ್ಯಪೂಜಯನ್ |

ಅವಶೇಷಾಣಿ ಚಾಶ್ನಂತಿ ನಿತ್ಯಂ ಸತ್ಯತಪೋರತಾಃ ॥46॥
ಪಿತೃಗಳು, ದೇವತೆಗಳು, ಅತಿಥಿಗಳು ಇವರನ್ನು ವಿಧಿವತ್ತಾಗಿ ಪೂಜಿಸುತ್ತಿದ್ದರು. ಅವರಿಗೆ ನೀಡಿ, ಉಳಿದ ಪದಾರ್ಥವನ್ನು ಸತ್ಯ-ತಪಸ್ಸಿನಲ್ಲಿ ನಿರತರಾದ ಅವರು ನಿತ್ಯವೂ ಸೇವಿಸುತ್ತಿದ್ದರು.
ನೈಕೇಽಶ್ನಂತಿ ಸುಸಂಪನ್ನಂ ನ ಗಚ್ಛಂತಿ ಪರಸ್ತ್ರಿಯಮ್ |
ಸರ್ವಭೂತೇಷ್ವವರ್ತಂತ ಯಥಾತ್ಮನಿ ದಯಾಂ ಪ್ರತಿ ॥47॥
ಎಂದಿಗೂ ಮೃಷ್ಟಾನ್ನವನ್ನು ಒಬ್ಬರೇ ಉಣ್ಣುತ್ತಿರಲಿಲ್ಲ. ಬಂಧು-ಬಾಂಧವರೊಂದಿಗೆ ಸೇರಿಕೊಂಡು ಭೋಜನ ಮಾಡುತ್ತಿದ್ದರು. ಪರಸ್ತ್ರೀ ಸಂಗವನ್ನು ಮಾಡುತ್ತಿರಲಿಲ್ಲ. ಇತರರನ್ನು ತಮ್ಮಂತೆ ಕಂಡು ಎಲ್ಲಾ ಪ್ರಾಣಿಗಳ ವಿಷಯದಲ್ಲಿ ದಯೆ ತೋರುತ್ತಿದ್ದರು.
ನೈವಾಕಾಶೇ ನ ಪಶುಷು ನಾಯೋನೌ ನ ಚ ಪರ್ವಸು |
ಇಂದ್ರಿಯಸ್ಯ ವಿಸರ್ಗಂ ತೇಽರೋಚಯಂತ ಕದಾಚನ ॥48॥
ಆಕಾಶದಲ್ಲಾಗಲೀ, ಪಶುಗಳಲ್ಲಾಗಲೀ, ನೀಚಯೋನಿಗಳಲ್ಲಾಗಲೀ, ಪರ್ವ ಸಮಯಗಳಲ್ಲಾಗಲೀ, ವೀರ್ಯೋತ್ಸರ್ಜನೆಯನ್ನು ಮಾಡಲು ಅವರು ಇಷ್ಟ ಪಡುತ್ತಿರಲಿಲ್ಲ.
ನಿತ್ಯಂ ದಾನಂ ತಥಾ ದಾಕ್ಷ್ಯಮಾರ್ಜವಂ ಚೈವ ನಿತ್ಯದಾ |
ಉತ್ಸಾಹಶ್ಚಾನಹಂಕಾರಃ ಪರಮಂ ಸೌಹೃದಂ ಕ್ಷಮಾ ॥49॥
ಯಾವಾಗಲೂ ದಾನ, ಇಂದ್ರಿಯನಿಗ್ರಹ, ಸರಳತೆ, ಉತ್ಸಾಹ, ಅನಹಂಕಾರ, ಶ್ರೇಷ್ಠ ಸೌಹಾರ್ದ, ಕ್ಷಮೆ ಇವುಗಳಲ್ಲಿ ನಿರತರಾಗಿದ್ದರು.
ಸತ್ಯಂ ದಾನಂ ತಪಃ ಶೌಚಂ ಕಾರುಣ್ಯಂ ವಾಗನಿಷ್ಠುರಾ |
ಮಿತ್ರೇಷು ಚಾನಭಿದ್ರೋಹಃ ಸರ್ವಂ ತೇಷ್ವಭವತ್ ಪ್ರಭೋ ॥50॥
ಸತ್ಯ, ದಾನ, ತಪಸ್ಸು, ಶೌಚ, ಕಾರುಣ್ಯ, ಮೃದುಮಾತು, ಮಿತ್ರರಲ್ಲಿ ಅದ್ರೋಹ - ಇವೆಲ್ಲ ಗುಣಗಳು ಹಿಂದೆ ಅವರಲ್ಲಿದ್ದವು.
ನಿದ್ರಾ ತಂದ್ರೀರಸಂಪ್ರೀತಿರಸೂಯಾ ಚಾನವೇಕ್ಷಿತಾ |
ಅರತಿಶ್ಚ ವಿಷಾದಶ್ಚ ನ ಸ್ಪೃಹಾ ಚಾವಿಶಂತ ತಾನ್ ॥51॥
ನಿದ್ರೆ, ಆಲಸ್ಯ, ಅಪ್ರಸನ್ನತೆ, ಅಸೂಯೆ, ದೋಷದೃಷ್ಟಿ, ಅವಿವೇಕ, ಅಪ್ರೀತಿ, ವಿಷಾದ, ಕಾಮನೆ ಈ ಯಾವ ದುರ್ಗುಣಗಳೂ ಅವರನ್ನು ಪ್ರವೇಶಿಸುತ್ತಿರಲಿಲ್ಲ.
ಸಾಹಮೇವಂಗುಣೇಷ್ವೇವ ದಾನವೇಷ್ವವಸಂ ಪುರಾ |
ಪ್ರಜಾಸರ್ಗಮುಪಾದಾಯ ನೈಕಂ ಯುಗವಿಪರ್ಯಯಮ್ ॥52॥
ಹೀಗೆ ಅನೇಕ ಗುಣಗಳನ್ನು ಹೊಂದಿದ್ದ ದಾನವರ ಬಳಿಯಲ್ಲಿ, ಸೃಷ್ಟಿಯ ಆರಂಭದಿಂದ ಇಲ್ಲಿಯ ತನಕ ಅನೇಕ ಯುಗಗಳ ಪರ್ಯಂತ ವಾಸ ಮಾಡಿದ್ದೆನು.
ತತಃ ಕಾಲವಿಪರ್ಯಾಸೇ ತೇಷಾಂ ಗುಣವಿಪರ್ಯಯಾತ್ |
ಅಪಶ್ಯಂ ವಿಗತಂ ಧರ್ಮಂ ಕಾಮಕ್ರೋಧವಶಾತ್ಮನಾಮ್ ॥53॥
ಬಳಿಕ ಕಾಲವ್ಯತ್ಯಾಸದಿಂದ ದೈತ್ಯರಲ್ಲಿದ್ದ ಗುಣಗಳೆಲ್ಲ ವ್ಯತ್ಯಾಸ ಹೊಂದಿದವು. ಒಳ್ಳೆಯ ಗುಣಗಳು ಕೆಟ್ಟ ಗುಣಗಳಾದವು. ಕಾಲ ವಿಪರ್ಯಾಸದಿಂದ ಕಾಮ, ಕ್ರೋಧ ವಶರಾದ ಅವರಿಂದ ಧರ್ಮವು ದೂರ ಸರಿಯಿತು. ಇದನ್ನು ನಾನು ಕಂಡೆನು.
ಸಭಾಸದಾಂ ತೇ ವೃದ್ಧಾನಾಂ ಸತ್ಯಾಃ ಕಥಯತಾಂ ಕಥಾಃ |
ಪ್ರಾಹಸನ್ನಭ್ಯಸೂಯಂಶ್ಚ ಸರ್ವವೃದ್ಧಾನ್ ಗುಣಾವರಾಃ ॥54॥
ರಾಜಸಭೆಗಳಲ್ಲಿ ವೃದ್ಧರು ನೀತಿಯುಕ್ತವಾದ ಕಥೆಗಳನ್ನು ಹೇಳಿದರೆ ಅವುಗಳನ್ನು ಅಧಮರಾದ ರಾಕ್ಷಸರು ಅಪಹಾಸ್ಯ ಮಾಡಿ ತಿರಸ್ಕರಿಸುತ್ತಿದ್ದರು. ವೃದ್ಧ ಸಮ್ಮತವಾದ ಮಾತುಗಳಲ್ಲಿ ದೋಷಗಳನ್ನೇ ಈಗ ಕಾಣುತ್ತಿದ್ದಾರೆ.
ಯೂನಃ ಸಹಸಮಾಸೀನಾನ್ ವೃದ್ಧಾನಭಿಗತಾನ್ ಸತಃ |
ನಾಭ್ಯುತ್ಥಾನಾಭಿವಾದಾಭ್ಯಾಂ ಯಥಾಪೂರ್ವಮಪೂಜಯನ್ ॥55॥
ಸಣ್ಣವರಾದ ವ್ಯಕ್ತಿಗಳು, ವೃದ್ಧರು ಮುಂದೆ ಬಂದಾಗ ಆಸನದಿಂದ ಎದ್ದು ನಿಂತು ಗೌರವಿಸುವುದಿಲ್ಲ. ಹಿಂದಿನಂತೆ ಎದ್ದು ನಿಂತು ಅಭಿವಾದನ ಮಾಡಿ ಅವರನ್ನು ಪೂಜಿಸುವ ಸ್ವಭಾವವನ್ನು ಮರೆತಿದ್ದಾರೆ.
ವರ್ತಯಂತ್ಯೇವ ಪಿತರಿ ಪುತ್ರಾಃ ಪ್ರಭವತಾಽಽತ್ಮನಃ |
ಅಮಿತ್ರಭೃತ್ಯತಾಂ ಪ್ರಾಪ್ಯ ಖ್ಯಾಪಯಂತೋಽನಪತ್ರಪಾಃ ॥56॥
ತಂದೆಯು ಬದುಕಿದ್ದಾಗಲೇ ಮಗನೇ ಯಜಮಾನನಾಗುತ್ತಾನೆ. ಶತ್ರುವಿನ ದಾಸನಾಗುವುದರ ಜೊತೆಗೆ ಆ ದಾಸ್ಯವನ್ನು ನಾಚಿಕೆಯಿಲ್ಲದೆ ಬೇರೆಯವರ ಬಳಿ ಹೇಳಿಕೊಳ್ಳುತ್ತಾರೆ.
ತಥಾ ಧರ್ಮಾದಪೇತೇನ ಕರ್ಮಣಾ ಗರ್ಹಿತೇನ ಯೇ |
ಮಹತಃ ಪ್ರಾಪ್ನುವಂತ್ಯರ್ಥಾಂಸ್ತೇಷ್ವೇಷಾಮಭವತ್ ಸ್ಪೃಹಾ ॥57॥
ಧರ್ಮವಿರುದ್ಧವಾದ, ನಿಂದಿತವಾದ ವೃತ್ತಿಗಳಿಂದ ಧನ ಸಂಪಾದಿಸುತ್ತಿದ್ದಾರೆ. ಈ ಧನ ಸಂಗ್ರಹದಿಂದ ಅವರ ಅಭಿಲಾಷೆಯು ಮತ್ತೂ ಅಧಿಕವಾಗುತ್ತಿದೆ.
ಉಚ್ಚೈಶ್ಚಾಪ್ಯವದನ್ ರಾತ್ರೌ ನೀಚೈಸ್ತತ್ರಾಗ್ನಿರಜ್ವಲತ್ |
ಪುತ್ರಾಃ ಪಿತೄನಭ್ಯವದನ್ ಭಾರ್ಯಾಶ್ಚಾಭ್ಯವದನ್ ಪತೀನ್ ॥58॥
ದೈತ್ಯರು ರಾತ್ರಿ ಸಮಯದಲ್ಲಿ ಜೋರಾಗಿ ಕಿರುಚುತ್ತಾರೆ. ಅಗ್ನಿಹೋತ್ರಕ್ಕೆ ಸಂಬಂಧಿಸಿದ ಅಗ್ನಿಯು ಶಾಂತವಾಗಿ ನಶಿಸುತ್ತಿದೆ. ಮಕ್ಕಳು ತಂದೆಯನ್ನು, ಸ್ತ್ರೀಯರು ಪತಿಯನ್ನು ಅತಿಕ್ರಮಿಸಿ ವರ್ತಿಸುತ್ತಿದ್ದಾರೆ.
ಮಾತರಂ ಪಿತರಂ ವೃದ್ಧಮಾಚಾರ್ಯಮತಿಥಿಂ ಗುರುಮ್ |

ಗುರುವನ್ನಾಭ್ಯನಂದಂತ ಕುಮಾರಾನ್ನಾನ್ವಪಾಲಯನ್ ॥59॥
ತಂದೆ-ತಾಯಿಗಳನ್ನು, ವೃದ್ಧರನ್ನು, ಆಚಾರ್ಯರನ್ನು, ಅತಿಥಿಗಳನ್ನು, ಗುರುಗಳನ್ನು ಕಿರಿಯರಿಂದು ಗೌರವಿಸುತ್ತಿಲ್ಲ. ಮಕ್ಕಳ ಲಾಲನೆ-ಪಾಲನೆಗಳನ್ನು ಸರಿಯಾಗಿ ಮಾಡುತ್ತಿಲ್ಲ.
ಭಿಕ್ಷಾಂ ಬಲಿಮದತ್ವಾ ಚ ಸ್ವಯಮನ್ನಾನಿ ಭುಂಜತೇ |
ಅನಿಷ್ಟ್ವಾ ಸಂವಿಭಜ್ಯಾಥ ಪಿತೃದೇವಾತಿಥೀನ್ ಗುರೂನ್ ॥60॥
ಭಿಕ್ಷೆಯನ್ನಾಗಲೀ, ವೈಶ್ವದೇವ- ಬಲಿಯನ್ನಾಗಲೀ ಕೊಡದೆ, ಯಜ್ಞವನ್ನು ಮಾಡದೆ, ಪಿತೃ-ದೇವ-ಗುರುಗಳಿಗೆ ಸಲ್ಲಿಸಬೇಕಾದ್ದನ್ನು ವಿಭಾಗ ಮಾಡಿಕೊಡದೆ ದೈತ್ಯರು ಮೃಷ್ಟಾನ್ನವನ್ನು ತಾವೇ ಉಣ್ಣಲು ಪ್ರಾರಂಭಿಸಿದ್ದಾರೆ.
ನ ಶೌಚಮನುರುದ್ಧ್ಯಂತ ತೇಷಾಂ ಸೂದಜನಾಸ್ತಥಾ |
ಮನಸಾ ಕರ್ಮಣಾ ವಾಚಾ ಭಕ್ತಮಾಸೀದನಾವೃತಮ್ ॥61॥
ದೈತ್ಯರು ಮತ್ತು ಅವರಿಗೆ ಅಡುಗೆ ಮಾಡುವವರು ಶೌಚಾಚಾರಗಳನ್ನು ಅನುಷ್ಠಾನ ಮಾಡುತ್ತಿಲ್ಲ. ಮಾತು, ಮನಸ್ಸು, ಕೃತಿಗಳಿಂದ ತಪ್ಪುಗಳನ್ನು ಮಾಡುತ್ತಿದ್ದಾರೆ. ತಿನ್ನುವ ಪದಾರ್ಥಗಳನ್ನು ಮುಚ್ಚಿಡುವ ಪದ್ಧತಿಗಳನ್ನು ಬಿಟ್ಟಿದ್ದಾರೆ. ಎಲ್ಲರ ದೃಷ್ಟಿ ಬೀಳುವ ಪದಾರ್ಥಗಳನ್ನು ತಿನ್ನುತ್ತಿದ್ದಾರೆ ಎಂದು ಭಾವ.
ವಿಪ್ರಕೀರ್ಣಾನಿ ಧಾನ್ಯಾನಿ ಕಾಕಮೂಷಕಭೋಜನಮ್ |
ಅಪಾವೃತಂ ಪಯೋಽತಿಷ್ಠದುಚ್ಛಿಷ್ಟಾಶ್ಚಾಸ್ಪೃಶನ್ ಘೃತಮ್ ॥62॥
ದೈತ್ಯರ ಮನೆಗಳಲ್ಲಿ ಧಾನ್ಯಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುತ್ತವೆ. ಆ ಬಿದ್ದಿರುವ ಧಾನ್ಯಗಳನ್ನು ಕಾಗೆಗಳು ತಿನ್ನುತ್ತವೆ. ಹಾಲಿನ ಪಾತ್ರೆಯನ್ನು ಮುಚ್ಚಿಡುತ್ತಿಲ್ಲ. ಎಂಜಲು ಕೈಯಿಂದ ತುಪ್ಪವನ್ನು ಮುಟ್ಟುತ್ತಾರೆ.
ಕುದ್ದಾಲಪಾಟೀಪಿಟಕಂ ಪ್ರಕೀರ್ಣಂ ಕಾಂಸ್ಯಭಾಜನಮ್ |
ದ್ರವ್ಯೋಪಕರಣಂ ಸರ್ವಂ ನಾನ್ವವೈಕ್ಷತ್ ಕುಟುಂಬಿನೀ ॥63॥
ಹಾರೆ, ಗುದ್ದಲಿ, ಕುಕ್ಕಲಿ, ಮರ, ಕಂಚಿನ ಪಾತ್ರೆ ಮೊದಲಾದ ಮನೆಯ ಪದಾರ್ಥಗಳನ್ನೆಲ್ಲ ಮನೆಯಲ್ಲಿ ಅಲ್ಲಲ್ಲಿ ಬಿಸಾಡಿರುತ್ತಾರೆ. ಗೃಹಿಣಿಯಾದರೂ ಅದನ್ನು ಕರ್ತವ್ಯದಿಂದ ಎತ್ತಿಡುತ್ತಿಲ್ಲ.
ಪ್ರಾಕಾರಾಗಾರವಿಧ್ವಂಸಾನ್ನ ಸ್ಮ ತೇ ಪ್ರತಿಕುರ್ವತೇ |
ನಾದ್ರಿಯಂತೇ ಪಶೂನ್ ಬದ್ಧ್ವಾ ಯವಸೇನೋದಕೇನ ಚ ॥64॥
ಬಿದ್ದುಹೋದ ಪ್ರಾಕಾರಗಳನ್ನಾಗಲೀ, ಮುರಿದು ಬಿದ್ದಿರುವ ಮನೆಗಳನ್ನಾಗಲೀ ದೈತ್ಯರು ಸರಿಪಡಿಸುತ್ತಿಲ್ಲ. ಗೋಶಾಲೆಯಲ್ಲಿ ಕಟ್ಟಿಹಾಕಿರುವ ಹಸು ಮೊದಲಾದ ಪ್ರಾಣಿಗಳಿಗೆ ಮೇವು ಹಾಕಿ, ನೀರು ಕುಡಿಸಿ ಉಪಚರಿಸುತ್ತಿಲ್ಲ.
ಬಾಲಾನಾಂ ಪ್ರೇಕ್ಷಮಾಣಾನಾಂ ಸ್ವಯಂ ಭಕ್ಷಾನಭಕ್ಷಯನ್ |
ತಥಾ ಭೃತ್ಯಜನಂ ಸರ್ವಂ ಪರ್ಯಶ್ನಂತಿ ಚ ದಾನವಾಃ ॥65॥
ಮಕ್ಕಳು ನೋಡುತ್ತಿರುವಂತೆ ಅವರಿಗೆ ತಿನ್ನಲು ಕೊಡದೆ, ಅವರ ಮುಂದೆ ಭಕ್ಷ್ಯವನ್ನು ತಿನ್ನುತ್ತಾರೆ. ದೇವತೆಗಳನ್ನಾಗಲೀ, ಪರಿವಾರದವರನ್ನಾಗಲೀ ತೃಪ್ತಿಗೊಳಿಸದೆ ತಾವು ಮಾತ್ರ ಸುಖಭೋಗಗಳಲ್ಲಿ ಆಸಕ್ತರಾಗಿದ್ದಾರೆ.
ಪಾಯಸಂ ಕೃಸರಂ ಮಾಂಸಮಪೂಪಾನಥ ಶಷ್ಕುಲೀಃ |
ಅಪಾಚಯನ್ನಾತ್ಮನೋಽರ್ಥೇ ವೃಥಾಮಾಂಸಾನ್ಯಭಕ್ಷಯನ್ ॥66॥
ಪಾಯಸ, ಎಳ್ಳನ್ನ, ಮಾಂಸ, ಅಪೂಪ, ಚಕ್ಕುಲಿ ಇವುಗಳನ್ನು ಜಿಹ್ವಾ ಚಾಪಲ್ಯದಿಂದ ತಾವು ತಿನ್ನಲು ಮಾಡಿಸಿಕೊಳ್ಳುತ್ತಾರೆ. ಕಾರಣವಿಲ್ಲದೆ ಚಾಪಲ್ಯದಿಂದಲೇ ಮಾಂಸವನ್ನೂ ತಿನ್ನುತ್ತಾರೆ.
ಉತ್ಸೂರ್ಯಶಾಯಿನಶ್ಚಾಸನ್ ಸರ್ವೇ ಚಾಸನ್ನಹರ್ನಿಶಾಃ |
ಅವರ್ತನ್ ಕಲಹಾಶ್ಚಾತ್ರ ದಿವಾರಾತ್ರಂ ಗೃಹೇ ಗೃಹೇ ॥67॥
ಸೂರ್ಯೋದಯವಾದಾಗಲೂ ಮಲಗಿರುತ್ತಾರೆ. ಪ್ರಾತಃಕಾಲವನ್ನು ರಾತ್ರಿ ಎಂದು ಭಾವಿಸುತ್ತಾರೆ. ಪ್ರತಿ ದೈತ್ಯರಿಗೂ ಯಾವುದೋ ಕಾರಣದಿಂದ ಹಗಲು-ರಾತ್ರಿ ಎನ್ನದೆ ಕಲಹಗಳು ನಡೆಯುತ್ತಿರುತ್ತವೆ.
ಅನಾರ್ಯಾಶ್ಚಾರ್ಯಮಾಸೀನಂ ಪರ್ಯುಪಾಸನ್ನ ತತ್ರ ಹ |
ಆಶ್ರಮಸ್ಥಾನ್ ವಿಕರ್ಮಸ್ಥಾಃ ಪ್ರದ್ವಿಷಂತಿ ಪರಸ್ಪರಮ್ |
ಸಂಕರಾಶ್ಚಾಪ್ಯವರ್ತಂತ ನ ಚ ಶೌಚಮವರ್ತತ ॥68॥
ಅನಾರ್ಯರಾದ ದೈತ್ಯರು ಮನೆಯಲ್ಲಿರುವ ಆರ್ಯಪುರುಷರನ್ನು ಸೇವಿಸುವುದಿಲ್ಲ. ಅಧರ್ಮಪರಾಯಣರಾದ ಅವರು ಒಬ್ಬರನ್ನೊಬ್ಬರು ದ್ವೇಷಿಸುತ್ತಾರೆ. ಆಶ್ರಮ ವಾಸಿಗಳಾದ ಮಹಾತ್ಮರನ್ನು ದ್ವೇಷಿಸುತ್ತಾರೆ. ದೈತ್ಯರಲ್ಲಿ ವರ್ಣಸಂಕರವಾಗ ತೊಡಗಿದೆ. ಯಾರಲ್ಲಿಯೂ ಪಾವಿತ್ರ್ಯವಿಲ್ಲ.
ಯೇ ಚ ವೇದವಿದೋ ವಿಪ್ರಾ ವಿಸ್ಪಷ್ಟಮನೃಚಶ್ಚ ಯೇ |
ನಿರಂತರವಿಶೇಷಾಸ್ತೇ ಬಹುಮಾನಾವಮಾನಯೋಃ ॥69॥
ವೇದಾಧ್ಯಯನ ಮಾಡಿರುವ ಬ್ರಾಹ್ಮಣರಲ್ಲಿಯೂ, ವೇದಾಧ್ಯಯನವನ್ನು ಮಾಡದೆ ಇರುವ ವ್ಯಕ್ತಿಗಳಲ್ಲಿಯೂ ದೈತ್ಯರು ವ್ಯತ್ಯಾಸವನ್ನು ತಿಳಿಯುತ್ತಿಲ್ಲ.
ಹಾವಮಾಭರಣಂ ವೇಷಂ ಗತಿಂ ಸ್ಥಿತಿಮವೇಕ್ಷಿತುಮ್ |
ಅಸೇವಂತ ಭುಜಿಷ್ಯಾ ವೈ ದುರ್ಜನಾಚರಿತಂ ವಿಧಿಮ್ ॥70॥
ಮನೆಯಲ್ಲಿರುವ ದಾಸಿಯರು ಕೆಟ್ಟ ನಡತೆಯುಳ್ಳವರಾಗಿ, ಹಾವ-ಭಾವಗಳಿಂದ ಸುವರ್ಣಾದಿ ಆಭರಣಗಳನ್ನು ಧರಿಸಿ, ಉತ್ತಮ ವೇಷ, ಇಷ್ಟಬಂದ ಗತಿ, ಇಷ್ಟ ಬಂದ ಸ್ಥಿತಿ ಇವುಗಳಿಂದ ಕೂಡಿರುತ್ತಾರೆ. ಹೆಂಗಸರು ಸಿಂಗರಿಸಿಕೊಂಡು ಸ್ವಚ್ಛಂದರಾಗಿ ಯುವಕರಿದ್ದಲ್ಲಿ ಕಣ್ಣು

ಹಾಯಿಸುತ್ತಾರೆ. ದುರ್ಜನರಿಂದ ಆಚರಿಸಲ್ಪಡುವ ವ್ಯಭಿಚಾರ ವಿಧಿಯನ್ನು ಅನುಸರಿಸುತ್ತಿದ್ದಾರೆ.
ಸ್ತ್ರಿಯಃ ಪುರುಷವೇಷೇಣ ಪುಂಸಃ ಸ್ತ್ರೀವೇಷಧಾರಿಣಃ |
ಕ್ರೀಡಾರತಿವಿಹಾರೇಷು ಪರಾಂ ಮುದಮವಾಪ್ನುವನ್ ॥71॥
ಸ್ತ್ರೀಯರು ಆಟ-ಪಾಠಗಳಲ್ಲಿಯೂ ರತಿಕಾಲಗಳಲ್ಲಿಯೂ, ವಿಹಾರದ ಸಮಯದಲ್ಲಿಯೂ ಪುರುಷವೇಷವನ್ನು, ಪುರುಷರು ಸ್ತ್ರೀವೇಷವನ್ನು ಧರಿಸಿ ಪರಸ್ಪರ ಪರಮಾನಂದವನ್ನು ಪಡುತ್ತಿದ್ದಾರೆ.
ಪ್ರಭವದ್ಭಿಃ ಪುರಾ ದಾಯಾನರ್ಹೇಭ್ಯಃ ಪ್ರತಿಪಾದಿತಾನ್ |
ನಾಭ್ಯವರ್ತಂತ ನಾಸ್ತಿಕ್ಯಾದ್ವರ್ತಂತಃ ಸಂಭವೇಷ್ವಪಿ ॥72॥
ಕೆಲವು ದಾನವರು, ತಮ್ಮ ಹಿಂದಿನವರು ಯೋಗ್ಯ ಬ್ರಾಹ್ಮಣರಿಗೆ ಉಂಬಳಿಯಾಗಿ ನೀಡಿದ ಭೂಮಿ, ಕಾಣಿಕೆಗಳನ್ನು ನಾಸ್ತಿಕ್ಯಬುದ್ಧಿಯಿಂದ ಅವರ ಬಳಿ ಇರಬಾರದೆನ್ನುತ್ತಿದ್ದಾರೆ. ಜೀವನನಿರ್ವಹಣೆಗೆ ಬೇರೆ ಅವಕಾಶವಿದ್ದರೂ ಆ ಉಂಬಳಿಗಳನ್ನು ಬ್ರಾಹ್ಮಣರಿಂದ ಅಪಹರಿಸುತ್ತಿದ್ದಾರೆ.
ಮಿತ್ರೇಣಾಭ್ಯರ್ಥಿತಂ ಮಿತ್ರಮರ್ಥೇ ಸಂಶಯಿತೇ ಕ್ವಚಿತ್ |
ಪಾಲಕಾಭ್ಯಗ್ರಮಾತ್ರೇಣ ಸ್ವಾರ್ಥೇನಾಪ್ನುತ ತದ್ವಸು ॥73॥
ಭೂಮಿ, ಅರ್ಥಸಂಕಟದಲ್ಲಿ ಒಬ್ಬನು ವ್ಯಾಜ್ಯವನ್ನು ಪರಿಹರಿಸೆಂದು ಮಿತ್ರನಲ್ಲಿ ಕೇಳಿದಾಗ ಆತನು ಕೂದಲಿನ ತುದಿಗೆ ಸಮಾನವಾದ ಸ್ವಾರ್ಥದಿಂದಲೇ ಅವನ ಸ್ವತ್ತನ್ನು ಯುಕ್ತಿಯಿಂದ ಇವನೇ ಲಪಟಾಯಿಸುತ್ತಾನೆ. ಇಂತಹ ಸ್ವಾರ್ಥವು ದೈತ್ಯರಲ್ಲುಂಟಾಗಿದೆ.
ಪರಸ್ವಾದಾನರುಚಯೋ ವಿಪಣ್ಯವ್ಯವಹಾರಿಣಃ |
ಅದೃಶ್ಯಂತಾರ್ಯವರ್ಣೇಷು ಶೂದ್ರಾಶ್ಚಾಪಿ ತಪೋಧನಾಃ ॥74॥
ಪರಸ್ಪರ ಸ್ವತ್ತಿನಲ್ಲಿ ಆಸಕ್ತರಾದ ದೈತ್ಯರು ಮತ್ತೊಬ್ಬರ ಸ್ವತ್ತನ್ನು ಅಪಹರಿಸುವಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಅಂಗಡಿ-ಮುಂಗಟ್ಟುಗಳಲ್ಲಿ ವ್ಯವಹಾರ ಮಾಡುವವರಾಗಿದ್ದಾರೆ. ಆರ್ಯರ ನಾಲ್ಕು ವರ್ಣಗಳಲ್ಲಿ ಶೂದ್ರರು ತಪೋಧನರಾಗ ತೊಡಗಿದ್ದಾರೆ.
ಅಧೀಯಂತೇಽವ್ರತಾಃ ಕೇಚಿದ್ ವೃಥಾವ್ರತಮಥಾಪರೇ |
ಅಶುಶ್ರೂಷುರ್ಗುರೋಃ ಶಿಷ್ಯಃ ಕಶ್ಚಿಚ್ಛಿಷ್ಯಸಖೋ ಗುರುಃ ॥75॥
ಬ್ರಹ್ಮಚರ್ಯವನ್ನು ಪರಿಪಾಲನೆ ಮಾಡದೆ ವೇದಾಧ್ಯಯನ ಮಾಡುತ್ತಾರೆ. ಕೆಲವರು ಬ್ರಹ್ಮಚರ್ಯದಲ್ಲಿದ್ದರೂ ವೇದಾಧ್ಯಯನ ಮಾಡುತ್ತಿಲ್ಲ. ಶಿಷ್ಯನು ಗುರು ಸೇವೆಯನ್ನು ಮಾಡಲು ಬಯಸುವುದಿಲ್ಲ. ಕೆಲವು ಕಡೆ ಶಿಷ್ಯನು ಗುರುವಿನ ಬಳಿ ಮಿತ್ರನಂತೆ ವ್ಯವಹರಿಸುತ್ತಾನೆ.
ಪಿತಾ ಚೈವ ಜನಿತ್ರೀ ಚ ಶ್ರಾಂತೌ ವೃತ್ತೋತ್ಸವಾವಿವ |
ಅಪ್ರಭುತ್ವೇ ಸ್ಥಿತೌ ವೃದ್ಧಾವನ್ನಂ ಪ್ರಾರ್ಥಯತಃ ಸುತಾನ್ ॥76॥
ತಂದೆ-ತಾಯಿಗಳು ಕಳೆದು ಹೋದ ಉತ್ಸವಗಳಂತೆ ಇವರ ಮನೆಗಳಲ್ಲಿ ಬಳಲಿದ್ದಾರೆ. ಅವರಿಗೆ ಯಾವ ಅಧಿಕಾರವೂ ಇಲ್ಲದೆ ಇರುವುದರಿಂದ ವೃದ್ಧರು ಅನ್ನಕ್ಕಾಗಿ ಮಕ್ಕಳನ್ನು ಬೇಡುವ ಸ್ಥಿತಿಯು ದಾನವರ ಮನೆಗಳಲ್ಲುಂಟಾಗಿದೆ.
ತತ್ರ ವೇದವಿದಃ ಪ್ರಾಜ್ಞಾ ಗಾಂಭೀರ್ಯೇ ಸಾಗರೋಪಮಾಃ |
ಕೃಷ್ಯಾದಿಷ್ವಭವನ್ ಸಕ್ತಾ ಮೂರ್ಖಾಃ ಶ್ರಾದ್ಧಾನ್ಯಭುಂಜತ ॥77॥
ದಾನವರ ನಗರಗಳಲ್ಲಿ ವೇದಜ್ಞರಾದ, ಪ್ರಾಜ್ಞರಾದ, ಗಾಂಭೀರ್ಯದಲ್ಲಿ ಸಾಗರದಂತಿರುವ ಪುರುಷರು ಕೃಷಿಯೇ ಮೊದಲಾದ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇದಕ್ಕಿಂತಲೂ ಮಿಗಿಲಾಗಿ ಮೂರ್ಖರಾಗಿ ಶ್ರಾದ್ಧಾನ್ನಗಳನ್ನು ತಿನ್ನಲು ಆರಂಭಿಸಿದ್ದಾರೆ.
ಪ್ರಾತಃ ಪ್ರಾತಶ್ಚ ಸುಪ್ರಶ್ನಂ ಕಲ್ಪನಂ ಪ್ರೇಷಣಕ್ರಿಯಾಃ |
ಶಿಷ್ಯಾನುಪ್ರಹಿತಾಸ್ತಸ್ಮಿನ್ನಕುರ್ವನ್ ಗುರವಶ್ಚ ಹ ॥78॥
ಗುರುಗಳಾದವರು ಪ್ರತಿದಿನವೂ ಪ್ರಾತಃಕಾಲದಲ್ಲಿ ಶಿಷ್ಯರ ಮನೆಗೆ ಹೋಗಿ ಕುಶಲ ಪ್ರಶ್ನೆಗಳನ್ನು ಮಾಡುತ್ತಿದ್ದಾರೆ. ಸೇವಕರು ಮಾಡುವ ಕೆಲಸಗಳನ್ನು ಗುರುಗಳೇ ಶಿಷ್ಯರಿಗೆ ಮಾಡುತ್ತಿದ್ದಾರೆ. ಶಿಷ್ಯರ ಪ್ರೀತಿಗಾಗಿ ಗುರುಗಳೇ ವಾರ್ತಾವಾಹಕರಾಗಿ ಕೆಲಸಗಳನ್ನು ಮಾಡುತ್ತಿದ್ದಾರೆ.
ಶ್ವಶ್ರೂಶ್ವಶುರಯೋರ್ಮಧ್ಯೇ ಭರ್ತಾರಂ ಕೃತಕಂ ಯಥಾ |
ಪ್ರೇಕ್ಷಯಂತಿ ಚ ನಿರ್ಲಜ್ಜಾ ನಾರ್ಯಃ ಕುಲಜಲಕ್ಷಣಾಃ ॥79॥
ಸೊಸೆಯು ಅತ್ತೆ-ಮಾವಂದಿರ ಮುಂದೆ ದಾರ್ಢ್ಯದಿಂದ ಅಪ್ಪಣೆ ಮಾಡುತ್ತಾಳೆ. ಪತಿಗೂ ಆಜ್ಞೆ ನೀಡುತ್ತಾಳೆ. ಪತಿಯ ಹೆಸರನ್ನು ಹಿಡಿದು ಅವನೊಡನೆ ಎಲ್ಲರ ಸಮಕ್ಷಮದಲ್ಲಿ ಹರಟೆ ಹೊಡೆಯುತ್ತಾಳೆ.
ಪ್ರಯತ್ನೇನಾಪಿ ಚಾರಕ್ಷಚ್ಚಿತ್ತಂ ಪುತ್ರಸ್ಯ ವೈ ಪಿತಾ |
ವ್ಯಭಜಂಶ್ಚಾಪಿ ಸಂರಂಭಾದ್ದುಃಖವಾಸಂ ತಥಾವಸನ್ ॥80॥
ತಂದೆಯಾದವನು ಪ್ರಯತ್ನಪೂರ್ವಕವಾಗಿ ಮಗನ ಮನಸ್ಸು ಸಿಟ್ಟಾಗಬಾರದಂತೆ ವ್ಯವಹರಿಸುತ್ತಿದ್ದಾನೆ. ಮಕ್ಕಳ ಕೋಪಕ್ಕೆ ಹೆದರಿ ತನ್ನ ಸರ್ವಸ್ವವನ್ನೂ ಕೊಡುತ್ತಿದ್ದಾನೆ. ಹೀಗೆ ತಂದೆಯು ಬಹಳ ದುಃಖದಿಂದಲೇ ಅಸುರರ ಮನೆಯಲ್ಲಿ ಕಾಲ ಕಳೆಯಬೇಕಾಗಿದೆ.
ಅಗ್ನಿದಾಹೇನ ಚೋರೈರ್ವಾ ರಾಜಭಿರ್ವಾ ಹೃತಂ ಧನಮ್ |
ದೃಷ್ಟ್ವಾ ದ್ವೇಷಾತ್ ಪ್ರಾಹಸಂತ ಸುಹೃತ್ಸಂಭಾವಿತಾ ಹ್ಯಪಿ ॥81॥
ಸುಹೃದರು, ಹಿತೈಷಿಗಳು ಎಂದು ತಿಳಿದ ವ್ಯಕ್ತಿಗಳು ಮಿತ್ರರ ಮನೆಯ ಒಡವೆ- ವಸ್ತುಗಳು ಸುಟ್ಟುಹೋದರೆ, ಕಳ್ಳ-ಕಾಕರಿಂದ ಅಪಹೃತವಾದರೆ ಈ ವಿಷಯವನ್ನು ಕೇಳಿ ದ್ವೇಷದಿಂದ ಸಂಭ್ರಮಿಸುತ್ತಾರೆ.
ಕೃತಘ್ನಾ ನಾಸ್ತಿಕಾಃ ಪಾಪಾ ಗುರುದಾರಾಭಿಮರ್ಶಿನಃ |

ಅಭಕ್ಷ್ಯಭಕ್ಷಣರತಾ ನಿರ್ಮರ್ಯಾದಾ ಹತತ್ವಿಷಃ ॥82॥
ದೈತ್ಯರು ಕೃತಘ್ನರಾಗಿದ್ದಾರೆ, ನಾಸ್ತಿಕರಾಗಿದ್ದಾರೆ, ಪಾಪಿಗಳಾಗಿದ್ದಾರೆ, ಗುರುಪತ್ನಿಯ ಸಮಾಗಮ ಮಾಡುತ್ತಾರೆ, ತಿನ್ನಬಾರದ್ದನ್ನು ತಿನ್ನುತ್ತಾರೆ, ಧರ್ಮದ ಮರ್ಯಾದೆಯನ್ನು ಮೀರಿ ಮನಬಂದಂತೆ ವರ್ತಿಸುತ್ತಾರೆ. ಆದ್ದರಿಂದಲೇ ಅವರು ಕಾಂತಿಹೀನರಾಗಿದ್ದಾರೆ.
ಬಾಲಾನಾಂ ಪ್ರೇಕ್ಷಮಾಣಾನಾಂ ಭಕ್ತಾನ್ಯಶ್ನಂತಿ ಮೋಹಿತಾಃ|
ಏಕೋ ದಾಸೋ ಭವೇತ್ ತೇಷಾಂ ದಾಸೀದ್ವಯಂ ತಥಾ ॥83॥
ಮಕ್ಕಳು ನೋಡುತ್ತಿರುವಾಗಲೂ ಆ ಮಕ್ಕಳ ಕೈಗೆ ಆಹಾರವನ್ನು ಕೊಡದೆ ದೊಡ್ಡವರೇ ತಿನ್ನುತ್ತಿದ್ದಾರೆ. ಅವರಲ್ಲಿ ಒಬ್ಬನಿಗೆ ಒಬ್ಬನೇ ದಾಸನು, ಇಬ್ಬರು ದಾಸಿಯರು ಇರುತ್ತಿದ್ದಾರೆ.
ತ್ರಿಗವಾ ದಾನವಾಃ ಕೇಚಿತ್ ಚತುರೋಜಾಸ್ತಥಾ ಪರೇ|
ಷಡಶ್ವಾಃ ಸಪ್ತಮಾತಂಗಾಃ ಪಂಚಮಾಹಿಷಿಕಾಃ ಪರೇ ॥84॥
ಕೆಲವರು ದಾನವರು ಮೂರು ಹಸುಗಳನ್ನು ಹೊಂದಿದ್ದಾರೆ. ಕೆಲವರು ನಾಲ್ಕು ಮೇಕೆಗಳನ್ನು, ಕೆಲವರು ಐದು ಎಮ್ಮೆಗಳನ್ನು, ಕೆಲವರು ಆರು ಕುದುರೆಗಳನ್ನು, ಕೆಲವರು ಏಳು ಆನೆಗಳನ್ನು ಹೊಂದಿದ್ದಾರೆ.
ರಾತ್ರೌ ದಧಿ ಚ ಸಕ್ತೂಂಶ್ಚ ನಿತ್ಯಮೇವಾವಿವರ್ಜಿತಾಃ|
ಅಂತರ್ದಶಾಹೇ ಚಾಶ್ನಂತಿ ಗವಾಂ ಕ್ಷೀರಂ ವಿಚೇತನಾಃ ॥85॥
ರಾತ್ರಿಯಲ್ಲಿ ಅವರು ಮೊಸರನ್ನವನ್ನು ತಿನ್ನದೆ ಇರುತ್ತಿಲ್ಲ. ಕರು ಹಾಕಿದ ಹತ್ತು ದಿನಗಳ ಒಳಗೆ ಹಸುಗಳ ಹಾಲನ್ನು ಕರೆದು ಕುಡಿಯುತ್ತಿದ್ದಾರೆ.
ಕ್ರಮದೋಹಂ ನ ಕುರ್ವಂತಿ ವತ್ಸಸ್ತನ್ಯಾನಿ ಭುಂಜತೇ|
ಅನಾಥಾಂ ಕೃಪಣಾಂ ಭಾರ್ಯಾಂ ಘ್ನಂತಿ ನಿತ್ಯಂ ಶಪಂತಿ ಚ ॥86॥
ದೈತ್ಯರು ಹೊತ್ತಿಗೆ ಸರಿಯಾಗಿ ಹಸುವಿನ ಹಾಲನ್ನು ಕರೆಯುತ್ತಿರಲಿಲ್ಲ. ಅಳತೆಗೆ ಸರಿಯಾಗಿಯೂ ಕರೆಯುತ್ತಿಲ್ಲ. ಕರುಗಳಿಗೆ ಸ್ವಲ್ಪವೂ ಹಾಲನ್ನೂ ಬಿಡದೆ ತಾವೇ ಕರೆದು ಕುಡಿದು ಬಿಡುತ್ತಿದ್ದಾರೆ. ಅನಾಥೆಯಾದ ಹೆಂಡತಿಯನ್ನು ಯಾವಾಗಲೂ ಹೊಡೆದು, ಬಡಿದು ಹಿಂಸಿಸುತ್ತಿದ್ದಾರೆ. ಅವರನ್ನು ನಿಂದಿಸುತ್ತಿದ್ದಾರೆ.
ಮಾರ್ಜಾರಕುಕ್ಕುಟಶ್ವಾನೈಃ ಕ್ರೀಡಾಂ ಕುರ್ವಂತಿ ಮಾನವಾಃ|
ಗೃಹೇ ಕಂಟಕಿನೋ ವೃಕ್ಷಾಸ್ತೇಷಾಮಾಸನ್ ದುರಾತ್ಮನಾಮ್ ॥87॥
ಮನೆಯಲ್ಲಿ ದೈತ್ಯರು ಬೆಕ್ಕು, ನಾಯಿ, ಕೋಳಿ ಇವುಗಳನ್ನು ಸಾಕುತ್ತಾ ಅವುಗಳೊಡನೆ ಆಟವಾಡುತ್ತಿದ್ದಾರೆ. ಅವರ ಮನೆಯಲ್ಲಿ ಮುಳ್ಳು ಗಿಡಗಳು ಅವರೇ, ಮೊದಲಾದ ಗಿಡಗಳು ಬೆಳೆಯಲು ಆರಂಭಿಸಿವೆ.
ಯಜ್ಞಿಯಾಶ್ಚ ತಥಾ ವೃಕ್ಷ್ಯಾಸ್ತೇಷಾಮಾಸನ್ ದುರಾತ್ಮನಾಮ್|
ಕೂಪಸ್ನಾನರತಾ ನಿತ್ಯಂ ಪರ್ವಮೈಥುನಗಾಮಿನಃ ॥88॥
ದೈತ್ಯರು ಯಜ್ಞಯೋಗ್ಯವಾದ ಅಶ್ವತ್ಥ ಮೊದಲಾದ ವೃಕ್ಷಗಳನ್ನು ತುಂಡರಿಸುತ್ತಿದ್ದಾರೆ. ಪ್ರತಿದಿನವೂ ಕೂಪಸ್ನಾನವನ್ನು ಮಾಡುತ್ತಿದ್ದಾರೆ. ಪರ್ವಕಾಲದಲ್ಲಿ ಮೈಥುನ ರತರಾಗಿದ್ದಾರೆ.
ತಿಲಾನಶ್ನಂತಿ ರಾತ್ರೌ ಚ ತೈಲಾಭ್ಯಕ್ತಾಶ್ಚ ಶೇರತೇ|
ವಿಭೀತಕಕರಂಜನಾಂ ಛಾಯಾಮೂಲನಿವಾಸಿನಃ ॥89॥
ರಾತ್ರಿಯಲ್ಲಿ ಎಳ್ಳನ್ನು ತಿನ್ನುತ್ತಾರೆ. ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಿ ಮಲಗುತ್ತಾರೆ. ತಾಳೆ ಗಿಡ, ಹೊಂಗೆ ಗಿಡಗಳ ನೆರಳಿನಲ್ಲಿ ಮಲಗುತ್ತಾರೆ.
ಕರವೀರಂ ಚ ತೇ ಪುಷ್ಪಂ ಧಾರಯಂತಿ ಚ ಮೋಹಿತಾಃ|
ಪದ್ಮಬೀಜಾನಿ ಖಾದಂತಿ ಪುಷ್ಪಂ ಜಿಘ್ರಂತಿ ಮೋಹಿತಾಃ ॥90॥
ಕಣಗಿಲೆಯ ಹೂವನ್ನು ಮುಡಿಯುತ್ತಾರೆ. ತಾವರೆಬೀಜಗಳನ್ನು ತಿನ್ನುತ್ತಾರೆ. ಹೂವುಗಳನ್ನು ವಿಷ್ಣುವಿಗೆ ಅರ್ಪಿಸದೆ ಮೂಸಿ ನೋಡುತ್ತಾರೆ.
ನ ಭೋಕ್ಷ್ಯಂತಿ ತಥಾ ನಿತ್ಯಂ ದೈತ್ಯಾಃ ಕಾಲೇನ ಮೋಹಿತಾಃ|
ನಿಂದಂತಿ ಸ್ತವನಂ ವಿಷ್ಣೋಸ್ತಸ್ಯ ನಿತ್ಯದ್ವಿಷೋ ಜನಾಃ ॥91॥
ಅತಿಥಿಗಳಿಗೆ ಭೋಜನವನ್ನು ಮಾಡಿಸುವುದಿಲ್ಲ. ಕಾಲದಿಂದ ದೈತ್ಯರೆಲ್ಲರೂ ಮೋಹಿತರಾಗಿದ್ದಾರೆ. ಅವರಲ್ಲಿ ವಿಷ್ಣುದ್ವೇಷವು ಹೆಚ್ಚಾಗಿದೆ. ಭಗವಂತನ ಮಹಿಮೆಯನ್ನು ನಿಂದಿಸತೊಡಗಿದ್ದಾರೆ.
ಹೋಮಧೂಮೋ ನ ತತ್ರಾಸೀದ್ ವೇದಘೋಷಸ್ತಥೈವ ಚ|
ಯಜ್ಞಾಶ್ಚ ನ ಪ್ರವರ್ತಂತೇ ಯಥಾಪೂರ್ವಂ ಗೃಹೇಗೃಹೇ ॥92॥
ಶಿಷ್ಯಾಚಾರ್ಯಕ್ರಮೋ ನಾಸೀತ್ ಪುತ್ರೈರಾತ್ಮಪಿತುಃ ಪಿತಾ|
ವಿಷ್ಣುಂ ಬ್ರಹ್ಮಣ್ಯದೇವೇಶಂ ಹಿತ್ವಾ ಪಾಷಂಡಮಾಶ್ರಿತಾಃ ॥93॥
ಮೊದಲಿನಂತೆ ಅವರ ಮನೆಯಲ್ಲಿ ಹೋಮಧೂಮಗಳಿಲ್ಲ. ವೇದಘೋಷಗಳಿಲ್ಲ. ಯಾಗಗಳಿಲ್ಲ. ಆಚಾರ್ಯ-ಶಿಷ್ಯರೆಂಬ ಭಾವನೆಯೂ ಇರುವುದಿಲ್ಲ. ಪಿತಾ-ಪುತ್ರ ಸಂಬಂಧವಿರುವುದಿಲ್ಲ. ವಿಷ್ಣುವನ್ನು ನಿರಾಕರಿಸಿ ಪಾಖಂಡಿಗಳನ್ನು ಆಶ್ರಯಿಸಿದ್ದಾರೆ.
ಹವ್ಯಕವ್ಯವಿಹೀನಾಶ್ಚ ಜ್ಞಾನಾಧ್ಯಯನವರ್ಜಿತಾಃ|
ದೇವಸ್ವಾದಾನರುಚಯೋ ಬ್ರಹ್ಮಸ್ವರುಚಯಸ್ತಥಾ ॥94॥
ಹವ್ಯ-ಕವ್ಯದ ಚಿಂತೆಯೇ ಅವರಿಗಿರುವುದಿಲ್ಲ. ಜ್ಞಾನ-ಅಧ್ಯಯನದಲ್ಲಿ ಆಸಕ್ತಿ ಇಲ್ಲ. ದೇವತೆಗಳ ಮತ್ತು ಬ್ರಾಹ್ಮಣರ ಧನವನ್ನು ಸಂಗ್ರಹಿಸುವುದರಲ್ಲಿ ಅವರಿಗೆ ಆಸೆಯು ಅಧಿಕವಾಗಿದೆ. ದೇವಾಲಯಗಳಲ್ಲಿ ವೇದಪಠನಗಳು, ಮಂಗಳವಾದ್ಯಗಳು ದೈತ್ಯರಿಂದ

ನಿಲ್ಲಿಸಲ್ಪಟ್ಟಿವೆ.
ಉಭಾಭ್ಯಾಮೇವ ಪಾಣಿಭ್ಯಾಂ ಶಿರಃಕಂಡೂಯನಾನ್ವಿತಾಃ |
ಗೃಹಜಾಲಾಭಿಸಂಸ್ಥಾನಾ ಹ್ಯಾಸಂಸ್ತತ್ರ ಸ್ತ್ರಿಯಃ ಪುನಃ ॥95॥
ಹೆಂಗಸರು ಎರಡು ಕೈಗಳಿಂದ ತಲೆಯನ್ನು ತುರಿಸಿಕೊಳ್ಳುತ್ತಿದ್ದಾರೆ. ಮನೆಯ ಹೆಬ್ಬಾಗಿಲಿನಲ್ಲಿ ನಿಂತು ಇಂತಹ ವಿಕೃತವಾದ ಚರ್ಯೆಯಲ್ಲಿ ರತರಾಗಿದ್ದಾರೆ.
ತೇಷ್ವೇವಮಾದೀನಾಚಾರಾನಾಚರತ್ಸು ವಿಪರ್ಯಯೇ |
ನಾಹಂ ದೇವೇಂದ್ರ ವತ್ಸ್ಯಾಮಿ ದಾನವೇಷ್ವಿತಿ ಮೇ ಮತಿಃ ॥96॥
ಶಚೀಪತಿಯೇ, ಕಾಲವಿಪರ್ಯಾಸದಿಂದ ದೈತ್ಯರು ಹೀಗೆ ಅನೇಕ ದುರಾಚಾರಗಳಲ್ಲಿ ನಿರತರಾಗಿರಲು, ಅವರ ಬಳಿ ಇರಬಾರದೆಂದು ನಾನು ನಿಶ್ಚಯಿಸಿದ್ದೇನೆ.
ತಾಂ ಮಾಂ ಸ್ವಯಮನುಪ್ರಾಪ್ತಾಮಭಿನಂದ ಶಚೀಪತೇ |
ತ್ವಯಾರ್ಚಿತಾಂ ಮಾಂ ದೇವೇಶ ಪುರೋಧಾಸ್ಯಂತಿ ದೇವತಾಃ ॥97॥
ನೀನು ನನ್ನನ್ನು ಅಭಿನಂದಿಸು. ನಿನ್ನ ಬಳಿ ಆಗಮಿಸಿದ್ದೇನೆ. ನಿನ್ನಿಂದ ಸಮ್ಮಾನಿತಳಾದ ನನ್ನನ್ನು ದೇವತೆಗಳು ಸಮ್ಮಾನಿಸುತ್ತಾರೆ.
ಯತ್ರಾಹಂ ತತ್ರ ಮತ್ಕಾಂತಾ ಮದ್ವಿಶಿಷ್ಟಾ ಮದರ್ಪಣಾಃ |
ಸಪ್ತ ದೇವ್ಯೋ ಮಯಾಷ್ಟಮ್ಯೋ ವಾಸಂ ಚೇಷ್ಯಂತಿ ಮೇಽಷ್ಟಧಾ ॥98॥
ನಾನು ಎಲ್ಲಿರುತ್ತೇನೋ ನನ್ನ ಜೊತೆಗೆ ನನಗೆ ಸಮರ್ಪಿಸಿಕೊಂಡ ಏಳು ಜನ ದೇವಿಯರು ಜಯಾ ಎಂಬ ಎಂಟನೆ ದೇವಿಯು ವಾಸ ಮಾಡುತ್ತಾರೆ. ಎಲ್ಲರೂ ಅಷ್ಟಲಕ್ಷ್ಮಿಯರು ಸರ್ವಸ್ವವನ್ನು ನನಗೆ ಅರ್ಪಿಸಿಕೊಳ್ಳುತ್ತಾರೆ.
ಆಶಾ ಶ್ರದ್ಧಾ ಧೃತಿಃ ಕಾಂತಿರ್ವಿಜಿತಿಃ ಸನ್ನತಿಃ ಕ್ಷಮಾ |
ಅಷ್ಟಮೀ ವೃತ್ತಿರೇತಾಸಾಂ ಪುರೋಗಾ ಪಾಕಶಾಸನ ॥99॥
ಇಂದ್ರನೇ, ಪುಣ್ಯಗಳಲ್ಲಿ ಆಸೆಯನ್ನು ಹುಟ್ಟಿಸುವ ಆಶಾ ಎನ್ನುವವಳು, ಶ್ರದ್ಧಾ, ಧೃತಿ, ಕಾಂತಿ, ವಿಜಿತಿ, ಸನ್ನತಿ, ಕ್ಷಮಾ, ಇವರು ಎಂಟನೆಯವಳಾದ ವೃತ್ತಿ ಎಂಬವಳು ಎಲ್ಲರಿಗೂ ಪ್ರಮುಖಳೆನಿಸಿದ್ದಾಳೆ.
ತಾಶ್ಚಾಹಂ ಚಾಸುರಾಂಸ್ತ್ಯಕತ್ವ ಯುಷ್ಮದ್ವಿಷಯಮಾಗತಾ |
ತ್ರಿದಶೇಷು ನಿವತ್ಸ್ಯಾಮೋ ಧರ್ಮನಿಷ್ಠಾಂತರಾತ್ಮಸು ॥100॥
ಆ ಎಂಟು ಭಾಗ್ಯಲಕ್ಷ್ಮಿಯರಿಂದ ಕೂಡಿದ ನಾನು ಅಸುರರನ್ನು ತ್ಯಜಿಸಿ ನಿನ್ನ ಬಳಿ ಆಗಮಿಸಿದ್ದೇನೆ. ಧರ್ಮನಿಷ್ಠವಾದ ಅಂತರಾತ್ಮವುಳ್ಳ ದೇವತೆಗಳಲ್ಲಿ ನಾವು ಇನ್ನು ವಾಸ ಮಾಡುತ್ತೇವೆ.
ಭೀಷ್ಮಃ
ಇತ್ಯುಕ್ತವಚನಾಂ ದೇವೀಮತ್ಯರ್ಥಂ ತೌ ನನಂದತುಃ |
ನಾರದಶ್ಚ ತ್ರಿಲೋಕರ್ಷಿರ್ವೃತ್ರಹಂತಾ ಚ ವಾಸವಃ ॥101॥
ಲಕ್ಷ್ಮೀದೇವಿಯು ಹೀಗೆ ಹೇಳಿದ ಬಳಿಕ ದೇವರ್ಷಿಗಳಾದ ನಾರದರು ಮತ್ತು ವೃತ್ರಹಂತಕನಾದ ಇಂದ್ರನು ದೇವಿಯನ್ನು ಪ್ರಸನ್ನಗೊಳಿಸುವ ಸಲುವಾಗಿ ಅಭಿನಂದಿಸಿದರು.
ತತೋಽನಲಸಖೋ ವಾಯುಃ ಪ್ರವವೌ ದೇವವೇಶ್ಮಸು |
ಇಷ್ಟಗಂಧಃ ಸುಖಸ್ಪರ್ಶಃ ಸರ್ವೇಂದ್ರಿಯಸುಖಾವಹಃ ॥102॥
ಆ ಸಮಯದಲ್ಲಿ ಇಷ್ಟವಾದ ಗಂಧದಿಂದ ಕೂಡಿದ್ದ, ಸರ್ವೇಂದ್ರಿಯಗಳಿಗೂ ಸುಖವನ್ನು ನೀಡುವ, ಸ್ಪರ್ಶಮಾತ್ರದಿಂದ ಸುಖವನ್ನುಂಟು ಮಾಡುವ ಅಗ್ನಿಮಿತ್ರನಾದ ವಾಯುದೇವನು ಮೆಲ್ಲಮೆಲ್ಲನೆ ಬೀಸಲಾರಂಭಿಸಿದನು.
ಶುಚೌ ಚಾಭ್ಯರ್ಚಿತೇ ದೇಶೇ ತ್ರಿದಶಾಃ ಪ್ರಾಯಶಃ ಸ್ಥಿತಾಃ |
ಲಕ್ಷ್ಮ್ಯಾ ಸಹಿತಮಾಸೀನಂ ಮಘವಂತಂ ದಿದೃಕ್ಷವಃ ॥103॥
ಪರಮಪವಿತ್ರವಾದ, ಮನಸ್ಸಿಗೆ ಇಷ್ಟಾರ್ಥಪ್ರದವಾದ ಪ್ರದೇಶದಲ್ಲಿ ಲಕ್ಷ್ಮಿಯಿಂದ ಕೂಡಿಕೊಳ್ಳುತ್ತಿರುವ ಇಂದ್ರನನ್ನು ನೋಡುವ ಬಯಕೆಯಿಂದ ಸಮಸ್ತ ದೇವತೆಗಳು ಪ್ರಾಯಶಃ ಅಲ್ಲಿಗೆ ಆಗಮಿಸಿದರು.
ತತೋ ದಿವಂ ಪ್ರಾಪ್ಯ ಸಹಸ್ರಲೋಚನಃ
ಶ್ರಿಯೋಪಪನ್ನಃ ಸುಹೃದಾ ಸುರರ್ಷಿಣಾ |
ರಥೇನ ಹರ್ಯಶ್ವಯುಜಾ ಸುರರ್ಷಭಃ
ಸದಃ ಸುರಾಣಾಮಭಿಸತ್ಕೃತೋ ಯಯೌ ॥104॥
ಬಳಿಕ ಸಹಸ್ರಾಕ್ಷನಾದ, ಸುರಶ್ರೇಷ್ಠನಾದ ಇಂದ್ರನು ಲಕ್ಷ್ಮೀದೇವಿಯಿಂದಲೂ ಸುಹೃದರಾದ ನಾರದರಿಂದಲೂ ಕೂಡಿಕೊಂಡು ಹರಿತಬಣ್ಣದ ಕುದುರೆಗಳಿಂದ ಕೂಡಿದ ರಥದಲ್ಲಿ ಕುಳಿತು ಸ್ವರ್ಗದ ರಾಜಧಾನಿಗೆ ಹೋಗಿ ದೇವತೆಗಳಿಂದ ಸತ್ಕೃತನಾಗಿ ದೇವಸಭೆಗೆ ಹೋದನು.
ಅಥೇಂಗಿತಂ ವಜ್ರಧರಸ್ಯ ನಾರದಃ
ಶ್ರಿಯಾಶ್ಚ ದೇವ್ಯಾ ಮನಸಾ ವಿಚಾರಯನ್ |
ಶ್ರಿಯೈ ಶಶಂಸಾಮರದೃಷ್ಟಪೌರುಷಃ
ಶಿವೇನ ತತ್ರಾಗಮನಂ ಮಹರ್ದ್ಧಿಮತ್ ॥105॥
ಇಂದ್ರನು ಲಕ್ಷ್ಮಿಯೊಡನೆ ಸಿಂಹಾಸನದಲ್ಲಿ ಕುಳಿತ ಬಳಿಕ, ದೇವತೆಗಳ ಪೌರುಷವನ್ನು ಪ್ರತ್ಯಕ್ಷವಾಗಿ ನೋಡಿದ ನಾರದರು ಇಂದ್ರ-ಲಕ್ಷ್ಮಿಯರ ಅಭಿಪ್ರಾಯವನ್ನು ತಿಳಿದು, ಅಲ್ಲಿಗೆ ಆಗಮಿಸಿರುವ ಋಷಿಗಳ ಬಳಿ ಇಂದ್ರ ಮಾಡಿದ ಪುಣ್ಯವನ್ನು, ಇಂದ್ರನ

ಮನೆಯಲ್ಲಿ ಲಕ್ಷ್ಮೀದೇವಿಯು ಬಂದು ವೃದ್ಧಿಯನ್ನು ಹೊಂದಿರುವುದನ್ನು ವಿಶೇಷವಾಗಿ ಪ್ರಶಂಸಿಸಿದರು.
ತತೋಽಮೃತಂ ದ್ಯೌಃ ಪ್ರವವರ್ಷ ಭಾಸ್ವತೀ
ಪಿತಾಮಹಸ್ಯಾಯತನೇ ಸ್ವಯಂಭುವಃ |
ಅನಾಹತಾ ದುಂದುಭಯಶ್ಚ ನೇದಿರೇ
ತಥಾ ಪ್ರಸನ್ನಾಶ್ಚ ದಿಶಶ್ಚಕಾಶಿರೇ ॥106॥
ಬಳಿಕ ನಿರ್ಮಲವಾದ, ಪ್ರಕಾಶಪೂರ್ಣವಾದ ಆಕಾಶಮಂಡಲವು ಪಿತಾಮಹನಾದ ಬ್ರಹ್ಮನ ಲೋಕದಲ್ಲಿ ಅಮೃತವನ್ನು ಸುರಿಸಿತು. ಬಾರಿಸದೆ ಇದ್ದರೂ ದೇವ-ದುಂದುಭಿಗಳು ಮೊಳಗಿದವು. ಎಲ್ಲಾ ದಿಕ್ಕುಗಳು ಪ್ರಸನ್ನತೆಯಿಂದ ಕಂಗೊಳಿಸಿದವು.
ಯಥರ್ತು ಸಸ್ಯೇಷು ವವರ್ಷ ವಾಸವೋ
ನ ಧರ್ಮಮಾರ್ಗಾದ್ ವಿಚಚಾಲ ಕಶ್ಚನ |
ಅನೇಕರತ್ನಾಕರಭೂಷಣಾ ಚ ಭೂಃ
ಸುಘೋಷಘೋಷಾ ಭುವನೌಕಸಾಂ ಜಯೇ ॥107॥
ಲಕ್ಷ್ಮಿಯು ಸ್ವರ್ಗದಲ್ಲಿ ವಾಸ ಮಾಡಿದ ಬಳಿಕ ಇಂದ್ರನು ಋತುಧರ್ಮಕ್ಕೆ ಅನುಗುಣವಾಗಿ ಪ್ರಪಂಚದಲ್ಲಿರುವ ಸಸ್ಯಗಳ ಮೇಲೆ ಮಳೆ ಸುರಿಸುತ್ತಿದ್ದನು. ಯಾರೂ ಧರ್ಮಭ್ರಷ್ಟರಾಗುತ್ತಿರಲಿಲ್ಲ. ರತ್ನಾಕರಗಳಿಂದ ಅಲಂಕೃತವಾದ ಭೂಮಿಯು ದೇವತೆಗಳ ವಿಜಯಸೂಚಕವಾಗಿ ಸಮುದ್ರಗಳ ಗರ್ಜನೆಯ ರೂಪದಲ್ಲಿ ಜಯಘೋಷಗಳನ್ನು ಮೊಳಗಿಸಿತು.
ಕ್ರಿಯಾಭಿರಾಮಾ ಮನುಜಾ ಯಶಸ್ವಿನೋ
ಬಭುಃ ಶುಭೇ ಪುಣ್ಯಕೃತಾಂ ಪಥಿ ಸ್ಥಿತಾಃ |
ನರಾಮರಾಃ ಕಿನ್ನರಯಕ್ಷರಾಕ್ಷಸಾಃ
ಸಮೃದ್ಧಿಮಂತಃ ಸುಖಿನೋ ಯಶಸ್ವಿನಃ ॥108॥
ಆ ಸಮಯದಲ್ಲಿ ಮನನಶೀಲರಾದ ಮಾನವರು ಪುಣ್ಯಾತ್ಮರ ಮಂಗಳ- ಮಯವಾದ ಮಾರ್ಗವನ್ನೇ ಆಶ್ರಯಿಸಿ, ಸತ್ಕರ್ಮಗಳನ್ನು ಆಚರಿಸುತ್ತಾ, ಕಾಂತಿಯಿಂದ ಪ್ರಕಾಶಿಸಿದರು. ಅದೇ ರೀತಿ ದೇವತೆಗಳು, ಕಿನ್ನರ, ಯಕ್ಷ-ರಾಕ್ಷಸ-ಮಾನವರು, ಸಮೃದ್ಧಶಾಲಿಗಳು, ಸುಖಿಗಳು, ಕೀರ್ತಿಸಂಪನ್ನರೂ ಆದರು.
ನ ಜಾತ್ವಕಾಲೇ ಕುಸುಮಂ ಕುತಃ ಫಲಂ
ಪಪಾತ ವೃಕ್ಷಾತ್ ಪವನೇರಿತಾದಪಿ |
ರಸಪ್ರದಾಃ ಕಾಮದುಘಾಶ್ಚ ಧೇನವೋ
ನ ದಾರುಣಾ ವಾಗ್ವಿಚಚಾರ ಕಸ್ಯಚಿತ್ ॥109॥
ಅಕಾಲದಲ್ಲಿ ಗಾಳಿಯಿಂದ ಹತವಾಗುತ್ತಿದ್ದರೂ ವೃಕ್ಷದಿಂದ ಕುಸುಮವು ಬೀಳುತ್ತಿರಲಿಲ್ಲ. ಕುಸುಮವೇ ಬೀಳದಿದ್ದ ಬಳಿಕ ಅಕಾಲದಲ್ಲಿ ಫಲಗಳು ಭೂಮಿಗೆ ಕಳಚಿ ಬೀಳಲು ಹೇಗೆ ಸಾಧ್ಯ? ಹಸುಗಳು ಸತ್ವಪೂರ್ಣವಾದ ಹಾಲನ್ನು ಯಥೇಷ್ಟವಾಗಿ ನೀಡುತ್ತಿದ್ದವು. ಯಾರಿಂದಲೂ ಕಠೋರವಾದ ಮಾತು ಹೊರಹೊಮ್ಮುತ್ತಿರಲಿಲ್ಲ.
ಇಮಾಂ ಸಪರ್ಯಾಂ ಸಹ ಸರ್ವಕಾಮದೈಃ
ಶ್ರಿಯಾಶ್ಚ ಶಕ್ರಪ್ರಮುಖೈಶ್ಚ ದೈವತೈಃ |
ಪಠಂತಿ ಯೇ ವಿಪ್ರಸದಃ ಸಮಾಗಮೇ
ಸಮೃದ್ಧಕಾಮಾಃ ಶ್ರಿಯಮಾಪ್ನುವಂತಿ ತೇ ॥110॥
ಸಕಲ ವಿಧವಾದ ಇಷ್ಟಾರ್ಥಗಳನ್ನು ದಯಪಾಲಿಸುವ, ಇಂದ್ರನೇ ಮೊದಲಾದ ದೇವತೆಗಳಿಂದ ಸ್ತುತಿಸಲ್ಪಟ್ಟ ಲಕ್ಷ್ಮಿಯ ಈ ಪೂಜಾ ಪ್ರಕರಣವನ್ನು ಯಾರು ಬ್ರಾಹ್ಮಣರ ಸಭೆಗೆ ಬಂದು ಪಠನ ಮಾಡುತ್ತಾರೋ ಅವರು ಸಮಸ್ತ ಇಷ್ಟಾರ್ಥಗಳನ್ನು ಪಡೆದು ಸಂಪತ್ತನ್ನು ಹೊಂದುತ್ತಾರೆ.
ತ್ವಯಾ ಕುರೂಣಾಂ ವರ ಯತ್ ಪ್ರಚೋದಿತಂ
ಭವಾಭವಸ್ಯೇಹ ಪರಂ ನಿದರ್ಶನಮ್ |
ತದದ್ಯ ಸರ್ವಂ ಪರಿಕೀರ್ತಿತಂ ಮಯಾ
ಪರೀಕ್ಷ್ಯ ತತ್ತ್ವಂ ಪರಿಗಂತುಮರ್ಹಸಿ ॥111॥
ಕುರುಶ್ರೇಷ್ಠನೇ, ಯುಧಿಷ್ಠಿರನೇ, ನೀನು ಪ್ರಶ್ನಿಸಿದ ಉನ್ನತಿ ಮತ್ತು ಅಧೋಗತಿಗಳ ಪೂರ್ವಕಾರಣಗಳನ್ನು ಅನೇಕ ದೃಷ್ಟಾಂತಗಳೊಡನೆ ಹೇಳಿದ್ದೇನೆ. ನೀನೇ ಎಲ್ಲಾ ಹೇಳಿದ ವಿಚಾರಗಳನ್ನು ಪರೀಕ್ಷಿಸಿ, ತತ್ತ್ವವನ್ನು ನಿಶ್ಚಯಿಸಲು ಅರ್ಹನಾಗಿರುವಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಃಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೈದನೆಯ ಅಧ್ಯಾಯ
ಬ್ರಹ್ಮಜ್ಞಾನಿಗಳ ಲಕ್ಷಣಗಳನ್ನು ಕುರಿತು ದೇವಲಋಷಿಗೂ, ಜೈಗೀಷವ್ಯರಿಗೂ ನಡೆದ ಸಂವಾದ. ಶಿವ-ಪಾರ್ವತಿಯರು ಜೈಗೀಷವ್ಯರನ್ನು ಪರೀಕ್ಷಿಸಿದುದು.
ಯುಧಿಷ್ಠಿರಃ
ಕಿಂಶೀಲಃ ಕಿಂಸಮಾಚಾರಃ ಕಿಂವಿದ್ಯಃ ಕಿಂಪರಾಯಣಃ |

ಪ್ರಾಪ್ನೋತಿ ಬ್ರಹ್ಮಣಃ ಸ್ಥಾನಂ ಯತ್ ಪರಂ ಪ್ರಕೃತೇರ್ಧ್ರುವಮ್ ॥1॥
ಪಿತಾಮಹನೇ, ಮನುಷ್ಯನು ಯಾವ ಶೀಲದಿಂದ, ಯಾವ ಆಚಾರದಿಂದ, ಯಾವ ವಿದ್ಯೆಯಿಂದ ಅಥವಾ ಯಾವ ಪ್ರಯತ್ನದಿಂದ ಪ್ರಕೃತಿಗಿಂತಲೂ ಉತ್ತಮನಾದ, ಅರ್ಥಾತ್ ಪ್ರಕೃತಿಯ ಅಭಿಮಾನಿಯಾದ ಲಕ್ಷ್ಮೀದೇವಿಗಿಂತಲೂ ಉತ್ತಮನಾದ ಭಗವಂತನ ಸ್ಥಾನವನ್ನು ಹೊಂದುತ್ತಾನೆ?
ಭೀಷ್ಮಃ
ಮೋಕ್ಷಧರ್ಮೇಷು ನಿಯತೋ ಲಘ್ವಾಹಾರೋ ಜಿತೇಂದ್ರಿಯಃ |
ಪ್ರಾಪ್ನೋತಿ ಬ್ರಹ್ಮಣಃ ಸ್ಥಾನಂ ಯತ್ ಪರಂ ಪ್ರಕೃತೇರ್ಧ್ರುವಮ್ ॥2॥
ಧರ್ಮರಾಜನೇ, ಕೇಳು. ಯಾವನು ಮುಕ್ತಿಗೆ ಸಾಧನವೆನಿಸಿದ ನಿವೃತ್ತಿ ಮಾರ್ಗವನ್ನು ಆಶ್ರಯಿಸಿ ಜಿತೇಂದ್ರಿಯನಾಗಿ ಅಲ್ಪ ಆಹಾರವನ್ನು ಸ್ವೀಕರಿಸುತ್ತಾ ಸಾಧನೆಯ ಮಾರ್ಗದಲ್ಲಿ ನಡೆಯುವನೋ ಅವನು ಪ್ರಕೃತಿಗಿಂತಲೂ ಉತ್ತಮನೆನಿಸಿದ ಭಗವಂತನ ಸ್ಥಾನವನ್ನು ಹೊಂದುತ್ತಾನೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಜೈಗೀಷವ್ಯಸ್ಯ ಸಂವಾದಮಸಿತಸ್ಯ ಚ ಭಾರತ ॥3॥
ಇದೇ ವಿಷಯದಲ್ಲಿ ದೇವಲ ಋಷಿಗೂ, ಜೈಗೀಷವ್ಯರಿಗೂ ನಡೆದ ಸಂವಾದ ರೂಪವಾದ ಇತಿಹಾಸವನ್ನು ಉದಾಹರಿಸುತ್ತಾರೆ.
ಮಹಾದೇವಾಂತರೇ ವೃತ್ತಂ ದೇವ್ಯಾಶ್ಚೈವಾಂತರೇ ತಥಾ |
ಯಥಾವಚ್ಛೃಣು ರಾಜೇಂದ್ರ ಜ್ಞಾನದಂ ಪಾಪನಾಶನಮ್ ॥4॥
ಶಿವ-ಪಾರ್ವತಿಯರಿಗೆ ಒಮ್ಮೆ ಅವಕಾಶವು ದೊರೆತಾಗ ಅವರಿಬ್ಬರೇ ಪರಸ್ಪರವಾಗಿ ಸಂವಾದವನ್ನು ನಡೆಸಿದ ಒಂದು ಜ್ಞಾನಪ್ರದವಾದ, ಪಾಪನಾಶಕವಾದ ಇತಿಹಾಸವಿದೆ. ಅದನ್ನು ಕೇಳು.
ಜೈಗೀಷವ್ಯಂ ಮಹಾಪ್ರಾಜ್ಞಂ ಧರ್ಮಾಣಾಮಾಗತಾಗಮಮ್ |
ಅಕ್ರುದ್ಧ್ಯಂತಮಹೃಷ್ಯಂತಮಸಿತೋ ದೇವಲೋಽಬ್ರವೀತ್ ॥5॥
ಒಮ್ಮೆ ಅಸಿತನೆಂಬ ಹೆಸರುಳ್ಳ ದೇವಲಮುನಿಯು ಮಹಾಪ್ರಾಜ್ಞನೂ, ಧರ್ಮಜ್ಞನೂ ಆದ ಜೈಗೀಷವ್ಯಮುನಿಯನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು.
ನ ಪ್ರೀಯಸೇ ವಂದ್ಯಮಾನೋ ನಿಂದ್ಯಮಾನೋ ನ ಕುಪ್ಯಸಿ |
ಕಾ ತೇ ಪ್ರಜ್ಞಾ ಕುತಶ್ಚೈಷಾ ಕಿಂ ಚೈತಸ್ಯಾಃ ಪರಾಯಣಮ್ ॥6॥
ಜೈಗೀಷವ್ಯರೇ, ಮಹಾತ್ಮರೇ, ನೀವು ಸ್ತೋತ್ರ ಮಾಡಿದಾಗ ಹಿಗ್ಗುವುದಿಲ್ಲ, ನಿಂದಿಸಿದಾಗ ಕುಪಿತರಾಗುವುದಿಲ್ಲ. ಇದಕ್ಕೆ ಕಾರಣವಾದ ಜ್ಞಾನ ಎಲ್ಲಿಂದ ಲಭಿಸಿತು? ಇದರ ಉತ್ತರವೇನು? ಎಂದು ಪ್ರಶ್ನಿಸಿದರು.
ಭೀಷ್ಮಃ
ಇತಿ ತೇನಾನುಯುಕ್ತಃ ಸ ತಮುವಾಚ ಮಹಾತಪಾಃ |
ಮಹದ್ವಾಕ್ಯಮಸಂದಿಗ್ಧಂ ಪುಷ್ಕಲಾರ್ಥಪದಂ ಶುಚಿ ॥7॥
ಈ ರೀತಿಯಾಗಿ ದೇವಲರು ಪ್ರಶ್ನಿಸಿದಾಗ ಮಹಾತಪಸ್ವಿಗಳಾದ ಜೈಗೀಷವ್ಯರು ಅನಂತ ಅರ್ಥಗಳನ್ನು ನೀಡುವ ಶ್ರುತಿಯಾದ, ಸಂಶಯರಹಿತವಾದ ಶ್ರೇಷ್ಠವಾದ ವಾಕ್ಯವನ್ನು ದೇವಲರನ್ನು ಕುರಿತು ಹೇಳಿದರು.
ಜೈಗೀಷವ್ಯಃ
ಯಾ ಗತಿರ್ಯಾ ಪರಾ ನಿಷ್ಠಾ ಯಾ ಶಾಂತಿಃ ಪುಣ್ಯಕರ್ಮಣಾಮ್ |
ತಾಂ ತೇಽಹಂ ಸಂಪ್ರವಕ್ಷ್ಯಾಮಿ ಯನ್ಮಾಂ ಪೃಚ್ಛಸಿ ವೈ ದ್ವಿಜ ॥8॥
ಎಲೈ ಬ್ರಾಹ್ಮಣನೇ, ಪುಣ್ಯಶೀಲರಿಗೆ ಯಾವುದು ಉತ್ತಮ ಗತಿಗೂ ದೊಡ್ಡ ನಿಷ್ಠೆಗೂ, ಶಾಂತಿ ಎನಿಸುವುದೋ ಅದನ್ನು ನಿನಗೆ ತಿಳಿಸುತ್ತೇನೆ, ಕೇಳು.
ನಿಂದತ್ಸು ಚ ಸಮೋ ನಿತ್ಯಂ ಪ್ರಶಂಸತ್ಸು ಚ ದೇವಲ |
ನಿಹ್ನುವಂತಿ ಚ ಯೇ ತೇಷಾಂ ಸಮಯಂ ಸುಕೃತಂ ಚ ಯತ್ ॥9॥
ಲೋಕದಲ್ಲಿ ತನ್ನನ್ನು ನಿಂದಿಸುವವರನ್ನು, ಸ್ತುತಿಸುವವರನ್ನು ಸಮ ಬುದ್ಧಿಯಿಂದಲೇ ಭಾವಿಸಬೇಕು. ನಿಂದಿಸುವವರ ಮಧ್ಯದಲ್ಲಿ ಯಾರು ಅಪಲಾಪ ಮಾಡುತ್ತಾರೋ ಅವರ ವಿಷಯದಲ್ಲಿ ಮೌನ ವಹಿಸಬೇಕು. ತಮ್ಮ ಸತ್ಕರ್ಮಗಳನ್ನು ಗೌಪ್ಯವಾಗಿರಿಸಿಕೊಳ್ಳಬೇಕು.
ಉಕ್ತಾಶ್ಚ ನ ವಿವಕ್ಷಂತಿ ವಕ್ತಾರಮಹಿತೇ ರತಮ್ |
ಪ್ರತಿಹಂತುಂ ನ ಚೇಚ್ಛಂತಿ ಹಂತಾರಂ ವೈ ಮನೀಷಿಣಃ ॥10॥
ಇನ್ನೊಬ್ಬರು ಅಹಿತವಾದುದನ್ನು ಹೇಳುತ್ತಿದ್ದರೂ ಯಾರು ಎದುರು ಮಾತನಾಡುವುದಿಲ್ಲವೋ, ತನ್ನನ್ನು ಹೊಡೆದವನನ್ನು ಹಿಂತಿರುಗಿ ಹೊಡೆಯಲು ಪ್ರಯತ್ನಿಸುವುದಿಲ್ಲವೋ ಇದೇ ಉತ್ತಮ ಪ್ರಜ್ಞೆ ಎನಿಸುತ್ತದೆ.
ನಾಪ್ರಾಪ್ತಮನುಶೋಚಂತಿ ಪ್ರಾಪ್ತಕಾಲಾನಿ ಕುರ್ವತೇ |
ನ ಚಾತೀತಾನಿ ಶೋಚಂತಿ ನ ಚೈನಾನ್ ಪ್ರತಿಜಾನತೇ ॥11॥
ಒದಗಿ ಬಂದುದ್ದರಲ್ಲಿ ಸಂತೋಷವನ್ನು ಪಡುತ್ತಾರೆ. ಕಳೆದುಹೋದುದ್ದಕ್ಕಾಗಿ ಚಿಂತಿಸುವುದಿಲ್ಲ. ಅದರ ಬಗ್ಗೆ ಮನಸ್ಸಿನಲ್ಲಿ ಶೋಕವನ್ನು ಪುನಃ ಪುನಃ ಎಣಿಸುವುದಿಲ್ಲ.
ಸಂಪ್ರಾಪ್ತಾನಾಂ ಚ ಪೂಜ್ಯಾನಾಂ ಕಾಮಾದರ್ಥೇಷು ದೇವಲ |
ಯಥೋಪಪತ್ತಿಂ ಕುರ್ವಂತಿ ಶಕ್ತಿಮಂತಃ ಕೃತವ್ರತಾಃ ॥12॥
ಯಾರು ಧೀರರಾಗಿ, ದೃಢವ್ರತರಾಗಿದ್ದು ತಮ್ಮ ಬಳಿ ಅರ್ಥಿಗಳಾಗಿ ಆಗಮಿಸುತ್ತಾರೋ ಅವರಿಗೆ ತಮ್ಮಿಂದ ಸಾಧ್ಯವಾದಷ್ಟು

ಉಪಕಾರವನ್ನು ಮಾಡುತ್ತಾರೋ;
ಪಕ್ವವಿದ್ಯಾ ಮಹಾಪ್ರಾಜ್ಞಾ ಜಿತಕ್ರೋಧಾ ಜಿತೇಂದ್ರಿಯಾಃ |
ಮನಸಾ ಕರ್ಮಣಾ ವಾಚಾ ನಾಪರಾಧ್ಯಂತಿ ಕಸ್ಯಚಿತ್ ॥13॥
ಅವರು ವಿದ್ಯೆಯ ಪಕ್ವತೆಯನ್ನು ಪಡೆದವರು, ಮಹಾಪ್ರಾಜ್ಞರು, ಜಿತಕ್ರೋಧರು, ಜಿತೇಂದ್ರಿಯರು ಎನಿಸುತ್ತಾರೆ.
ಮನೋವಾಕ್-ಕಾಯಗಳಿಂದಲೂ ಯಾರಿಗೂ ಅವರು ವಿರೋಧವನ್ನು ಮಾಡುವವರಲ್ಲ.
ಅನೀರ್ಷವೋ ನ ಚಾನ್ಯೋನ್ಯಂ ವಿಹಿಂಸಂತಿ ಕದಾಚನ |
ನ ಚ ಜಾತೂಪತಪ್ಯಂತೇ ಧೀರಾಃ ಪರಸಮೃದ್ಧಿಭಿಃ ॥14॥
ಅಸೂಯಾರಹಿತರಾಗಿ, ಬೇರೆ ಯಾರ ಮನಸ್ಸನ್ನು ಎಂದಿಗೂ ನೋಯಿಸದೆ, ಮತ್ತೊಬ್ಬರ ಸಮೃದ್ಧಿಯನ್ನು ಕಂಡು ಎಂದಿಗೂ ಅಸೂಯೆಯನ್ನು ಹೊಂದದೆ ಇರುವವರು ಧೀರ ಪುರುಷರೆನಿಸುತ್ತಾರೆ.
ನಿಂದಾಪ್ರಶಂಸೇ ಚಾತ್ಯರ್ಥಂ ನ ವದಂತಿ ಪರಸ್ಯ ಯೇ |
ನ ಚ ನಿಂದಾಪ್ರಶಂಸಾಭ್ಯಾಂ ವಿಕ್ರಿಯಂತೇ ಕದಾಚನ ॥15॥
ಪರನಿಂದನೆಯನ್ನು ಅಥವಾ ಮತ್ತೊಬ್ಬರ ಅತಿಯಾದ ಪ್ರಶಂಸೆಯನ್ನು ಇವರು ಎಂದಿಗೂ ಮಾಡಲು ಹೋಗುವುದಿಲ್ಲ. ಅಥವಾ ಇನ್ನೊಬ್ಬರು ಮಾಡುವ ನಿಂದನೆ ಅಥವಾ ಪ್ರಶಂಸೆಗಳಿಂದ ಮಾನಸಿಕ ವಿಕಾರಗಳಿಗೆ ಎಂದಿಗೂ ತುತ್ತಾಗುವುದಿಲ್ಲ.
ಸರ್ವತಶ್ಚ ಪ್ರಶಾಂತಾ ಯೇ ಸರ್ವಭೂತಹಿತೇ ರತಾಃ |
ನ ಕ್ರುದ್ಧ್ಯಂತಿ ನ ಹೃಷ್ಯಂತಿ ನಾಪರಾಧ್ಯಂತಿ ಕಸ್ಯಚಿತ್ |
ವಿಮುಚ್ಯ ಹೃದಯಗ್ರಂಥೀಂಶ್ಚಂಕ್ರಮ್ಯಂತೇ ಯಥಾಸುಖಮ್ ॥16॥
ಯಾರು ಎಲ್ಲ ವಿಧದಲ್ಲಿಯೂ ಶಾಂತಸ್ವಭಾವದವರಾಗಿರುತ್ತಾರೋ, ಸಮಸ್ತ ಪ್ರಾಣಿಗಳ ಹಿತದಲ್ಲಿ ಆಸಕ್ತರಾಗಿರುತ್ತಾರೋ, ಕ್ರೋಧವನ್ನು ಹೊಂದುವುದಿಲ್ಲವೋ, ಸಂತುಷ್ಟರಾಗಿರುತ್ತಾರೋ, ಯಾರ ವಿಷಯದಲ್ಲಿ ಅಪರಾಧವನ್ನು ಎಸಗುವುದಿಲ್ಲವೋ, ಇವರು ತಮ್ಮ ಹೃದಯಗ್ರಂಥಿಗಳನ್ನೆಲ್ಲ ನಿಸ್ಸಂದೇಹವಾಗಿ ಅರ್ಥಾತ್ ಸಂಶಯಗಳನ್ನೆಲ್ಲ ನಿಸ್ಸಂದೇಹವಾಗಿ ಬಿಡಿಸಿಕೊಂಡು ಸುಖದಿಂದ ಸಂಚರಿಸುತ್ತಾರೆ.
ನ ಯೇಷಾಂ ಬಾಂಧವಾಃ ಸಂತಿ ಯೇ ಚಾನ್ಯೇಷಾಂ ನ ಬಾಂಧವಾಃ |
ಅಮಿತ್ರಾಶ್ಚ ನ ಸಂತ್ಯೇಷಾಂ ಯೇ ಚಾಮಿತ್ರಾ ನ ಕಸ್ಯಚಿತ್ ॥17॥
ಯಾವ ಬಂಧು-ಬಾಂಧವರಲ್ಲಿಯೂ ಅತಿಯಾದ ಸ್ನೇಹವಿಲ್ಲ, ಇವರಲ್ಲಿಯೂ ಇತರ ಬಂಧುಗಳಿಗೆ ಅತಿಯಾದ ಸ್ನೇಹವಿಲ್ಲ.
ಯ ಏವಂ ಕುರ್ವತೇ ಮರ್ತ್ಯಾಃ ಸುಖಂ ಜೀವಂತಿ ಸರ್ವದಾ |
ಯೇ ಧರ್ಮಂ ಚಾನುರುಧ್ಯಂತೇ ಧರ್ಮಜ್ಞಾ ದ್ವಿಜಸತ್ತಮಾಃ |
ಯೇ ಹ್ಯತೋ ವಿಚ್ಯುತಾ ಮಾರ್ಗಾತ್ ತೇ ಹೃಷ್ಯಂತ್ಯುದ್ವಿಜಂತಿ ಚ ॥18॥
ಇವರಿಗೆ ಮತ್ತೊಬ್ಬರ ಶತ್ರುತ್ವವಿಲ್ಲ. ಇವರಿಗೆ ಶತ್ರುಗಳಿಲ್ಲ. ಈ ರೀತಿಯಾಗಿ ಯಾವ ಮನುಷ್ಯರು ವರ್ತಿಸುತ್ತಾರೋ ಅವರು ಯಾವಾಗಲೂ ಸುಖದಿಂದ ಜೀವಿಸುತ್ತಾರೆ. ಯಾವ ಬ್ರಾಹ್ಮಣಶ್ರೇಷ್ಠರು ಧರ್ಮವನ್ನು ವಿರೋಧಿಸುತ್ತಾರೋ, ಯಾರು ಧರ್ಮದಿಂದ ಚ್ಯುತರಾಗಿ ಮತ್ತೊಬ್ಬರನ್ನು ಉದ್ವೇಗಕ್ಕೆ ತುತ್ತಾಗುವಂತೆ ಮಾಡುತ್ತಾರೋ, ಇದರಿಂದ ತೃಪ್ತರಾಗುತ್ತಾರೋ, ಅವರು ದುಃಖಕ್ಕೆ ಭಾಗಿಗಳಾಗುತ್ತಾರೆ.
ಆಸ್ಥಿತಸ್ತಮಹಂ ಮಾರ್ಗಮಸೂಯಿಷ್ಯಾಮಿ ಕಂ ಕಥಮ್ |
ನಿಂದ್ಯಮಾನಃ ಪ್ರಶಂಸ್ಯೋ ವಾ ಹೃಷ್ಯೇಯಂ ಕೇನ ಹೇತುನಾ ॥19॥
ನಾನು ಇಂತಹ ಧರ್ಮವಿರುದ್ಧವಾದ ಮಾರ್ಗಗಳನ್ನು ದ್ವೇಷಿಸುತ್ತೇನೆ. ಆದ್ದರಿಂದ ಯಾರ ಸ್ತುತಿ-ನಿಂದೆಗಳಿಂದಾಗಲೀ ನನ್ನ ಮನಸ್ಸು ಸ್ವಲ್ಪವೂ ಕದಡುವುದಿಲ್ಲ.
ಯದ್ ಯದಿಚ್ಛಂತಿ ತತ್ ತಸ್ಮಾದಧಿಗಚ್ಛಂತಿ ಮಾನವಾಃ |
ನ ಮೇ ನಿಂದಾಪ್ರಶಂಸಾಭ್ಯಾಂ ಹ್ರಾಸವೃದ್ಧೀ ಭವಿಷ್ಯತಃ ॥20॥
ಯಾರು ಯಾವುದನ್ನು ಬಯಸುತ್ತಾರೋ ಅದರಿಂದ ಆ ಮಾನವರು ಅದಕ್ಕೆ ಸಂಬಂಧಪಟ್ಟ ಸುಖ-ದುಃಖಗಳನ್ನು ಹೊಂದುತ್ತಾರೆ. ನನಗೆ ನಿಂದಾ-ಪ್ರಶಂಸೆಗಳ ಅಗತ್ಯವೇ ಇರುವುದಿಲ್ಲವಾದ್ದರಿಂದ ಹ್ರಾಸವೂ ವೃದ್ಧಿಯೂ ಇರುವುದಿಲ್ಲ.
ಅಮೃತಸ್ಯೇವ ಸಂತೃಪ್ಯೇದವಮಾನಸ್ಯ ತತ್ತ್ವವಿತ್ |
ವಿಷಸ್ಯೇವೋದ್ವಿಜೇನ್ನಿತ್ಯಂ ಸಮ್ಮಾನಸ್ಯ ವಿಚಕ್ಷಣಃ ॥21॥
ತತ್ತ್ವಜ್ಞನಾದ ವ್ಯಕ್ತಿಯು ತನಗುಂಟಾದ ಅವಮಾನವನ್ನು ಅಮೃತದಂತೆ ಭಾವಿಸಬೇಕು. ಸನ್ಮಾನವನ್ನು ವಿಷದಂತೆ ಭಾವಿಸಿ ಅಲಕ್ಷ್ಯ ಮಾಡಬೇಕು.
ಅವಜ್ಞಾತಃ ಸುಖಂ ಶೇತೇ ಇಹ ಚಾಮುತ್ರ ಚೋಭಯೋಃ |
ವಿಮುಕ್ತಃ ಸರ್ವಪಾಪೇಭ್ಯೋ ಯೋಽವಮಂತಾ ಸ ಬಧ್ಯತೇ ॥22॥
ಯಾವನು ಈ ಸನ್ಮಾನ-ಅವಮಾನಗಳನ್ನು ದಾಟಿರುತ್ತಾನೋ ಅವನು ಅವಮಾನಿತನಾದರೂ ಸುಖವಾಗಿ ನಿದ್ರಿಸುತ್ತಾನೆ. ಅವನನ್ನು ಅವಮಾನಗೊಳಿಸಿದವನೆ ಕಷ್ಟಕ್ಕೀಡಾಗುತ್ತಾನೆ. ಇಹಲೋಕದಲ್ಲಿ ಪರಲೋಕದಲ್ಲಿಯೂ ಸಮಸ್ತ ಪಾಪಗಳಿಂದ ವಿಮುಕ್ತನಾಗಿ ಸುಖವನ್ನೇ ಹೊಂದುತ್ತಾನೆ.
ಪರಾಂ ಗತಿಂ ಚ ಯೇ ಕೇಚಿತ್ ಪ್ರಾರ್ಥಯಂತಿ ಮನೀಷಿಣಃ |
ಏತದ್ ವ್ರತಂ ಸಮಾಶ್ರಿತ್ಯ ಸುಖಮೇಧಂತಿ ತೇ ಜನಾಃ ॥23॥
ಪರಗತಿಯನ್ನು ಬಯಸುವ ಪ್ರಾಜ್ಞರು ಇಂತಹ ವ್ರತವನ್ನೇ ಪ್ರಾರ್ಥಿಸುತ್ತಾರೆ. ಇಂದ್ರಿಯಗಳಿಂದ ಇಂತಹ ವ್ರತವನ್ನೇ ಆಶ್ರಯಿಸಿ

ಸುಖವನ್ನೇ ಹೊಂದುತ್ತಾರೆ.
ಸರ್ವತಶ್ಚ ಸಮಾಹೃತ್ಯ ಕ್ರತೂನ್ ಸರ್ವಾನ್ ಜಿತೇಂದ್ರಿಯಃ |
ಪ್ರಾಪ್ನೋತಿ ಬ್ರಹ್ಮಣಃ ಸ್ಥಾನಂ ಯತ್ ಪರಂ ಪ್ರಕೃತೇರ್ಧ್ರುವಮ್ ||24||
ಇಂದ್ರಿಯಗಳನ್ನು ಜಯಿಸಿದವನೇ ಎಲ್ಲ ಯಜ್ಞಗಳನ್ನು ನಡೆಸಿದವನಾಗುತ್ತಾನೆ. ಅಂತಹವನು ಪ್ರಕೃತಿಗಿಂತಲೂ ಉತ್ತಮನೆನಿಸಿದ ಶಾಶ್ವತನಾದ ಭಗವಂತನನ್ನು ಹೊಂದುತ್ತಾನೆ.
ನಾಸ್ಯ ದೇವಾ ನ ಗಂಧರ್ವಾ ನ ಪಿಶಾಚಾ ನ ರಾಕ್ಷಸಾಃ |
ಪದಮನ್ವವರೋಹಂತಿ ಪ್ರಾಪ್ತಸ್ಯ ಪರಮಾಂ ಗತಿಮ್ ||25||
ಇಂತಹ ಉತ್ತಮ ಪದವಿಯು ದೇವತೆಗಳಿಗಾಗಲೀ, ಗಂಧರ್ವಗಳಿಗಾಗಲೀ, ರಾಕ್ಷಸ, ಪಿಶಾಚಿಗಳಿಗಾಗಲೀ ಯಾರಿಗೇ ಆದರೂ ಲಭಿಸಲು ಸಾಧ್ಯವಿಲ್ಲ.
ಏತಚ್ಛ್ರುತ್ವಾ ಮುನೇಸ್ತಸ್ಯ ವಚನಂ ದೇವಲಸ್ತಥಾ |
ತದಧೀನೋ ಭವಚ್ಛಿಷ್ಯಃ ಸರ್ವದ್ವಂದ್ವವಿನಿಷ್ಠಿತಃ ||26||
ಈ ಮಾತನ್ನು ಮೊದಲು ಕೇಳಿಸಿಕೊಂಡವನು ದೇವಲನು. ಆತನು ಈ ಮಾತಿನಿಂದ ದ್ವಂದ್ವಗಳನ್ನೆಲ್ಲ ಪರಿಹರಿಸಿಕೊಂಡು ಜೈಗೀಷವ್ಯನ ಶಿಷ್ಯನಾಗಿದ್ದಾನೆ.
ಅಥಾನ್ಯತ್ ತು ಪುರಾವೃತ್ತಂ ಜೈಗೀಷವ್ಯಸ್ಯ ಧೀಮತಃ |
ಶೃಣು ರಾಜನ್ನವಹಿತಃ ಸರ್ವಜ್ಞಾನಸಮನ್ವಿತಃ ||27||
ಇದೇ ಜೈಗೀಷವ್ಯನ ವಿಷಯದಲ್ಲಿ ಇನ್ನೊಂದು ವೃತ್ತಾಂತವೂ ಇದೆ. ಸಮಸ್ತ ಜ್ಞಾನಗಳಿಗೆ ಸಾರವೆನಿಸಿದ ಆ ವಿಚಾರವನ್ನು ಕೇಳು.
ಯಮಾಹುಃ ಸರ್ವಲೋಕೇಶಂ ಸರ್ವಲೋಕನಮಸ್ಕೃತಮ್ |
ಅಷ್ಟಮೂರ್ತಿಂ ಜಗನ್ಮೂರ್ತಿಮಿಷ್ಟಸಂಧಿವಿಭೂಷಿತಮ್ |
ಯಂ ಪ್ರಾಪ್ತಾ ನ ವಿಷೀದಂತಿ ನ ಶೋಚಂತ್ಯುದ್ವಿಜಂತಿ ಚ ||28||
ಸಮಸ್ತ ಲೋಕಗಳಿಗೆ ಈಶನೆಂದು, ಸರ್ವಲೋಕ ನಮಸ್ಕೃತನೆಂದು, ಅಷ್ಟಮೂರ್ತಿ ಎಂದು, ಜಗನ್ಮೂರ್ತಿ ಎಂದು, ಭಕ್ತಾಭೀಷ್ಟಪ್ರದನೆಂದು, ಯಾವ ಈಶ್ವರನನ್ನು ನಂಬಿರುತ್ತಾರೋ ಅವರು ಭಯಶೋಕಾದಿಗಳಿಗೆ ಈಡಾಗುವುದಿಲ್ಲ, ಉದ್ವೇಗಕ್ಕೂ ತುತ್ತಾಗುವುದಿಲ್ಲ.
ಯಸ್ಯ ಸ್ವಾಭಾವಿಕೀ ಶಕ್ತಿರಿದಂ ವಿಶ್ವಂ ಚರಾಚರಮ್ |
ಯಾತಿ ಸಜ್ಜತಿ ಸರ್ವಾತ್ಮಾ ಸ ದೇವಃ ಪರಮೇಶ್ವರಃ ||29||
ಯಾವ ಈಶ್ವರನ ಸ್ವಾಭಾವಿಕವಾದ ಶಕ್ತಿಯಿಂದಲೇ ಈ ಚರಾಚರ ಪ್ರಪಂಚವೆಲ್ಲವೂ ನಡೆಯುತ್ತಿದೆಯೋ ಅಂತಹ ಸರ್ವಾತ್ಮನಾದ, ದೇವದೇವನಾದ ಪರಮೇಶ್ವರನನ್ನು ಸಾಧಕನು ಹೊಂದುತ್ತಾನೆ.
ಮೇರೋರುತ್ತರಪೂರ್ವೇ ತು ಸರ್ವರತ್ನವಿಭೂಷಿತೇ |
ಅಚಿಂತ್ಯೇ ವಿಮಲೇ ಸ್ಥಾನೇ ಸರ್ವರ್ತುಕುಸುಮಾನ್ವಿತೇ ||30||
ಅಂತಹ ಪರಮೇಶ್ವರನು ಒಮ್ಮೆ ಮೇರುಪರ್ವತದ ಉತ್ತರದಲ್ಲಿ ಸಕಲ ರತ್ನ ಸಮೃದ್ಧವಾದ ಒಂದು ಸ್ಥಾನಕ್ಕೆ ಹೋದನು. ಅವನು ಸಮಸ್ತ ಋತುಗಳಲ್ಲಿ ಉಂಟಾಗುವ ಫಲ-ಪುಷ್ಪಗಳ ಸಮೃದ್ಧಿಯಿಂದ ಕೂಡಿತ್ತು.
ವೃಕ್ಷೈಶ್ಚ ಶೋಭಿತೇ ನಿತ್ಯಂ ದಿವ್ಯವಾಯುಸಮೀರಿತೇ |
ನಾನಾಭೂತಗಣೈರ್ಯುಕ್ತಃ ಸರ್ವದೇವನಮಸ್ಕೃತಃ ||31||
ನಾನಾ ವೃಕ್ಷಗಳಿಂದ ಶೋಭಿತವಾದ, ನಿತ್ಯವೂ ದಿವ್ಯವಾದ ವಾಯುವಿನಿಂದ ಪೂರಿತವಾದ, ನಾನಾ ಭೂತಗಣಗಳಿಂದ ಕೂಡಿದ, ಸರ್ವದೇವನಮಸ್ಕೃತನಾದ ಪರಮೇಶ್ವರನು ಅಲ್ಲಿ ವಿಹರಿಸುತ್ತಿದ್ದನು.
ತತ್ರ ವಿದ್ಯಾಧರಗಣಾ ಗಂಧರ್ವಾಪ್ಸರಸಾಂ ಗಣಾಃ |
ಲೋಕಪಾಲಾಃ ಸಮುದ್ರಾಶ್ಚ ನದ್ಯಃ ಶೈಲಾಃ ಸರಾಂಸಿ ಚ ||32||
ವಿದ್ಯಾಧರಗಣಗಳು, ಗಂಧರ್ವಾಪ್ಸರ ಸ್ತ್ರೀಯರ ಗಣಗಳು, ಲೋಕಪಾಲಕರು, ಸಮುದ್ರಗಳು, ನದಿಗಳು, ಪರ್ವತಗಳು ಮತ್ತು ಸರೋವರಗಳು;
ಋಷಯೋ ವಾಲಖಿಲ್ಯಾಶ್ಚ ಯಜ್ಞಾಃ ಸ್ತೋಭಾಹ್ವಯಾಸ್ತಥಾ |
ಉಪಾಸಾಂಚಕ್ರಿರೇ ದೇವಂ ಪ್ರಜಾನಾಂ ಪತಯಸ್ತಥಾ ||33||
ವಾಲಖಿಲ್ಯಾದಿ ಋಷಿಗಳು, ಯಜ್ಞಗಳು, ಹಾಹುವಾ ಇತ್ಯಾದಿ ಸ್ತೋಭಮಂತ್ರಗಳು, ಸೃಷ್ಟಿಕರ್ತರು ಎಲ್ಲರೂ ಅಲ್ಲಿಗೆ ಬಂದು ಸಾಕ್ಷಾತ್ತಾಗಿ ಪರಮೇಶ್ವರನನ್ನು ಉಪಾಸಿಸುತ್ತಿದ್ದರು.
ತತ್ರ ರುದ್ರೋ ಮಹಾದೇವೋ ದೇವ್ಯಾ ಚೈವ ಸಹೋಮಯಾ |
ಆಸ್ತೇ ವೃಷಧ್ವಜಃ ಶ್ರೀಮಾನ್ ಸೋಮಸೂರ್ಯಾಗ್ನಿಲೋಚನಃ ||34||
ಅಲ್ಲಿ ಮಹಾದೇವನಾದ ರುದ್ರನು ಪಾರ್ವತಿಯಿಂದ ಕೂಡಿಕೊಂಡು, ಚಂದ್ರ- ಸೂರ್ಯ-ಅಗ್ನಿಯ ಕಣ್ಣುಗಳುಳ್ಳವನಾಗಿ ವೃಷಭಧ್ವಜನಾಗಿ ಶೋಭಿಸುತ್ತಿದ್ದಾನೆ.
ತತ್ರೈವಂ ದೇವಮಾಲೋಕ್ಯ ದೇವೀ ಧಾತ್ರೀ ವಿಭಾವರೀ |
ಉಮಾ ದೇವೀ ಪರೇಶಾನಮಪೃಚ್ಛದ್ ವಿನಯಾನ್ವಿತಾ ||35||
ಆ ಮಹಾದೇವನೊಡನೆ ಅಲ್ಲಿಯೇ ಕ್ರೀಡಿಸುತ್ತಿರುವ, ಭೂರೂಪಿಣಿಯಾದ ಉಮಾದೇವಿಯು ಒಮ್ಮೆ ತನ್ನ ಪತಿಯನ್ನು ಕುರಿತು `ನಾಥನೇ, ಅರ್ಥ ಎಂಬುದು ಯಾವುದು? ಅರ್ಥದ ಶಕ್ತಿ ಏನು? ಪೂಜ್ಯನೇ, ನನ್ನ ಪ್ರಾರ್ಥನೆಗನುಗುಣವಾಗಿ ಇದನ್ನು ನೀನು

ತಿಳಿಸಬೇಕು'. ಅದಕ್ಕೆ ರುದ್ರದೇವರು ಅವಳು ಕೇಳಿದಾಗ ಹೀಗೆ ಉತ್ತರಿಸಿದರು.
ಅರ್ಥೋಽಹಮರ್ಥಶಕ್ತಿಸ್ತ್ವಂ ಭೋಕ್ತಾಽಹಂ ಭೋಜ್ಯಮೇವ ಚ |
ರೂಪಂ ವಿದ್ಧಿ ಮಹಾಭಾಗೇ ಪ್ರಕೃತಿಸ್ತ್ವಂ ಪರೋ ಹ್ಯಹಮ್ ॥36॥
ದೇವಿಯೇ, ನಾನು ಅರ್ಥ, ನೀನು ಅರ್ಥಶಕ್ತಿ. ನಾನು ಭೋಕ್ತ, ನೀನು ಭೋಜ್ಯ ವಸ್ತು. ನೀನು ಪ್ರಕೃತಿ, ನಾನು ಪ್ರಕೃತಿಗಿಂತಲೂ ಪರ(ಶ್ರೇಷ್ಠ)ನಾದವನು ಎಂದು ರುದ್ರನು ಉತ್ತರಿಸಿದನು.
ವ್ಯಾಖ್ಯಾನ ವಿಶೇಷ ರುದ್ರದೇವರು ಪಾರ್ವತಿದೇವಿಯು ಪ್ರಶ್ನಿಸಿದಾಗ, ತನ್ನನ್ನೇ ಪರಮೇಶ್ವರನೆಂದು ಸಮಸ್ತ ದೇವತಾ, ಋಷಿ ಗಣಗಳ ಮಧ್ಯದಲ್ಲಿ ಹೇಳಿಕೊಳ್ಳುತ್ತಾನೆ. ಆದರೆ ಈ ಪ್ರಸಂಗದಲ್ಲಿಯೂ ಯಾವ ಅಪೇಕ್ಷೆಯೂ ಇಲ್ಲದ ಮುನಿಗಳು ತತ್ತ್ವವಿಷಯದಲ್ಲಿ ವಿಷ್ಣುವು ಸರ್ವೋತ್ತಮನಾಗಿದ್ದಾನೆ. ಆದ್ದರಿಂದ ರುದ್ರದೇವರು ಇಂತಹ ವಚನಗಳನ್ನು ಹೇಳಿದರೂ ಅವರು ಅದನ್ನು ನಿರಾಕರಿಸುತ್ತಾರೆ ಎಂಬುದನ್ನು ತೋರಿಸಲು ಮಾಯಾವಾದವನ್ನು ಇಲ್ಲಿ ಅನುವಾದ ಮಾಡುತ್ತಾರೆ. ಆದ್ದರಿಂದ ಇಲ್ಲಿ ಹೇಳಿದ ರುದ್ರದೇವರ ವಚನಗಳು ದರ್ಶನ ಭಾಷೆಯಲ್ಲಿ ಹೇಳಿದ ವಚನವಾಗಿವೆ ಎಂದು ಭಾವಿಸಬೇಕು.
ಅಹಂ ವಿಷ್ಣುರಹಂ ಬ್ರಹ್ಮಾ ಹ್ಯಹಂ ಯಜ್ಞಸ್ತಥೈವ ಚ |
ಆವಯೋರ್ನ ಚ ಭೇದೋಽಸ್ತಿ ಪರಮಾರ್ಥಸ್ತತೋಽಬಲೇ |
ತಥಾಪಿ ವಿದ್ಮಸ್ತೇ ಭೇದಂ ಕಿಂ ಮಾಂ ತ್ವಂ ಪರಿಪೃಚ್ಛಸಿ ॥37॥
ನಾನೇ ವಿಷ್ಣುವೂ ಆಗಿದ್ದೇನೆ. ನಾನು ಬ್ರಹ್ಮನಾಗಿದ್ದೇನೆ. ಯಜ್ಞವೂ ನಾನೇ ಆಗಿದ್ದೇನೆ. ನಮ್ಮೀರ್ವರಲ್ಲಿ ಯಾವ ಭೇದವೂ ಇಲ್ಲ, ಅಗಲಿಕೆಯೂ ಇಲ್ಲ. ಇದೇ ಪರಮಾರ್ಥವು. ಹೀಗಿದ್ದರೂ ನನಗೂ, ನಿನಗೂ ಭೇದವಿರುವಂತೆ ಕಾಣಿಸುತ್ತಿದೆ. ಇಷ್ಟು ನಿನ್ನ ಪ್ರಶ್ನೆಗೆ ಉತ್ತರಿಸಿರುವೆ. ಇನ್ನೂ ಏನನ್ನು ಪ್ರಶ್ನಿಸುತ್ತಿ ಹೇಳು.
ಏವಮುಕ್ತಾ ತತಃ ಪ್ರಾಹ ಹ್ಯಧಿಕಂ ಹ್ಯೇತಯೋರ್ವದ |
ಶ್ರೇಷ್ಠಂ ವೇದ ಮಹಾದೇವ ನಮ ಇತ್ಯೇವ ಭಾಮಿನೀ ॥38॥
ಈ ರೀತಿಯಾಗಿ ರುದ್ರದೇವರು ಹೇಳಿದಾಗ ಪಾರ್ವತಿಯು ಹೇಳುತ್ತಾಳೆ `ಕಾಂತನೇ, ಅರ್ಥ-ಶಕ್ತಿ ಇವುಗಳಲ್ಲಿ ಶ್ರೇಷ್ಠವಾದುದು ಯಾವುದು? ಕೈಮುಗಿದು ಪ್ರಾರ್ಥಿಸುತ್ತೇನೆ. ಮಹಾದೇವನೇ ತಿಳಿಸು'.
ತದಂತರೇ ಸ್ಥಿತೋ ವಿದ್ವಾನ್ ವಸುರೂಪೋ ಮಹಾಮುನಿಃ |
ಜೈಗೀಷವ್ಯಃ ಸ್ಮಯನ್ ಪ್ರಾಹ ಹ್ಯರ್ಥ ಇತ್ಯೇವ ನಾದಯನ್ ॥39॥
ಇದೇ ಸಮಯದಲ್ಲಿ ಅವರಿಬ್ಬರ ನಡುವೆ ಇದ್ದ ವಸುರೂಪಿಯಾದ, ತತ್ತ್ವಜ್ಞಾನವೆಂಬ ಧನವನ್ನೇ ವಸು ಎಂದು ಭಾವಿಸಿರುವ, ತಪ್ಪಾದ ಮಾತುಗಳನ್ನು ಕೇಳಿಸಿಕೊಂಡಿರುವ, ಅಪಹಾಸ್ಯವನ್ನು ಮಾಡುತ್ತಾ, ಸಕಲ ವೇದಾರ್ಥಭೂತನಾದ ಭಗವಂತನನ್ನು ಬಿಟ್ಟು, ಅಸುರಜನರ ಮೋಹಕ್ಕೋಸ್ಕರ ನನ್ನನ್ನೇ ವಿಷ್ಣು ಎಂದು ಹೇಳಿರುವಂತಹ ರುದ್ರನನ್ನು ನೋಡುತ್ತಾ ಗಟ್ಟಿಯಾಗಿ ನಸುನಕ್ಕು ಹೀಗೆ- ಸಕಲ ವೇದಾರ್ಥಭೂತನಾದ ಭಗವಂತನೇ ಶ್ರೇಷ್ಠ ಎನ್ನುತ್ತಾ ಉತ್ತರಿಸುತ್ತಾನೆ.
ಶ್ರೇಷ್ಠೋಽನ್ಯೋಽಸ್ಮಾನ್ಮಹೀಪಿಂಡಾ ತಲ್ಲೀನಾ ಶಕ್ತಿರಾಪರಾ |
ಮುದ್ರಿಕಾದಿವಿಶೇಷೇಣ ವಿಸ್ತೃತಾ ಸಂಭೃತೇತಿ ಚ ॥40॥
ಪಾರ್ವತಿಯೇ, ರುದ್ರದೇವನು ಹೇಳಿದಂತೆ ನಿನ್ನ ಪತಿಯಾದ ರುದ್ರನು ಅರ್ಥನೆನಿಸುವುದಿಲ್ಲ. ಅರ್ಥಶಬ್ದವಾಚ್ಯಳು ಪರಮಾತ್ಮನು ಎಲ್ಲಿಯ ತನಕ ಇರುತ್ತಾನೋ ಅಲ್ಲಿಯ ತನಕ ಇರುವ, ಪರಮಾತ್ಮನ ಜೊತೆಯಲ್ಲಿ ಯಾವಾಗಲೂ ಇರುವ ಲಕ್ಷ್ಮೀದೇವಿಯೇ ಅರ್ಥಶಕ್ತಿ ಎನಿಸಿದ್ದಾಳೆ ಎನ್ನುತ್ತಾ ಎಲ್ಲರಿಗೂ ಕೇಳಿಸುವಂತೆ ಉಚ್ಚಸ್ವರದಿಂದ ಮಾತನಾಡಿದನು. ಪ್ರಳಯಕಾಲದಲ್ಲಿಯೂ ವಿದ್ಯಮಾನನಾದ ವೇದದ ಅರ್ಥವು ನಾರಾಯಣನೇ ಆಗಿದ್ದಾನೆ. ಅರ್ಥಶಕ್ತಿಯು ಲಕ್ಷ್ಮಿಯೇ ಆಗಿದ್ದಾಳೆ. ಶಿವ- ಪಾರ್ವತಿಯರು ಪ್ರಳಯ ಕಾಲದಲ್ಲಿ ನಿದ್ರಿಸುವುದರಿಂದ ಇಬ್ಬರೂ ಅರ್ಥರೂ ಅಲ್ಲ, ಅರ್ಥಶಕ್ತಿ ಉಳ್ಳವರೂ ಅಲ್ಲ. ಆದ್ದರಿಂದ ಮೋಸಕ್ಕೋಸ್ಕರ ಹೇಳಿದ ಶಿವನ ವಚನವನ್ನು ನೀವ್ಯಾರು ವಿಶ್ವಾಸ ಮಾಡಬೇಡಿರಿ. ಭಗವಂತನ ಶರೀರದಲ್ಲಿ ಅಂಗುಲಿ ಮೊದಲಾದವುಗಳಲ್ಲಿ ಆಭರಣದ ರೂಪದಲ್ಲಿ ವಿಸ್ತೃತಳಾಗಿ ವ್ಯಾಪಿಸಿಕೊಂಡಿರುವ ಲಕ್ಷ್ಮೀದೇವಿಯು ಭಗವಂತನ ವಕ್ಷಸ್ಸ್ಥಲದಲ್ಲಿ ಪ್ರಲಯಕಾಲದಲ್ಲಿಯೂ ಧರಿಸಲ್ಪಟ್ಟಿರುತ್ತಾಳೆ. ಆದ್ದರಿಂದ ನಿತ್ಯವೂ ಅರ್ಥನು ಪರಮಾತ್ಮನೇ ಆಗಿದ್ದಾನೆ. ಅರ್ಥಶಕ್ತಿಯು ಲಕ್ಷ್ಮಿಯೇ ಆಗಿದ್ದಾಳೆ.
ತಚ್ಛ್ರುತ್ವಾ ವಚನಂ ದೇವೀ ಕೋಽಸಾವಿತ್ಯಬ್ರುವೀದ್ ರುಷಾ |
ವಾಕ್ಯಮಸ್ಯಾದ್ಯ ಸ್ತಂಭಿತ್ವಾ ಪ್ರೋಕ್ತವಾನಿತಿ ಶಂಕರಮ್ ॥41॥
ಈ ರೀತಿಯಾಗಿ ಉಚ್ಚಸ್ವರದಿಂದ ಜೈಗೀಷವ್ಯರು ಉತ್ತರವನ್ನು ನೀಡುತ್ತಿರಲು, ತನ್ನ ವಿಚಾರದ ನಡುವೆ ಬಾಯಿ ಹಾಕಿ ಉಚ್ಚಕಂಠದಿಂದ ಉತ್ತರವನ್ನು ನೀಡಿದ ಈ ವ್ಯಕ್ತಿಯು ಯಾರು ಎಂದು ಶಂಕರನನ್ನು ಕುರಿತು ಕೇಳಿದರು.
ತಚ್ಛ್ರುತ್ವಾ ನಿರ್ಗತೋ ಧೀಮಾನಾಶ್ರಮಂ ಸ್ವಂ ಮಹಾಮುನಿಃ |
ಸ್ಥಾನಾತ್ ಸ್ವರ್ಗಗಣೇ ವಿದ್ವಾನ್ ಯೋಗೈಶ್ವರ್ಯಸಮನ್ವಿತಃ ॥42॥
ಈ ಪಾರ್ವತಿಯ ಮಾತನ್ನು ಕೇಳಿಸಿಕೊಂಡು ಧೀಮಂತನಾದ ಮಹಾಮುನಿಯು ಆ ಆಶ್ರಮದಿಂದ ಹೊರಟನು.
ಯೋಗೈಶ್ವರ್ಯಸಮನ್ವಿತನಾಗಿ ಸ್ವರ್ಗಸ್ಥಾನವನ್ನು ಏರಿದನು.
ತತಃ ಪ್ರಹಸ್ಯ ಭಗವಾನ್ ಸರ್ವಪಾಪಹರೋ ಹರಃ |
ಪ್ರಾಹ ದೇವೀಂ ಪ್ರಶಾಂತಾತ್ಮಾ ಜೈಗೀಷವ್ಯೋ ಮಹಾಮುನಿಃ ॥43॥
ಬಳಿಕ ಪೂಜ್ಯನಾದ, ಸರ್ವಪಾಪಗಳನ್ನು ಪರಿಹರಿಸುವ ಹರನು ನಸುನಕ್ಕು ಪಾರ್ವತಿಯನ್ನು ಕುರಿತು ಹೇಳಿದನು- ಉಚ್ಚಕಂಠದಿಂದ ನಡುವೆ ಮಾತನಾಡಿದ ವ್ಯಕ್ತಿಯು ಮಹಾಮುನಿಯಾದ, ಪ್ರಶಾಂತಾತ್ಮನಾದ ಜೈಗೀಷವ್ಯನು ಎಂದು.
ಭಕ್ತೋ ಮಮ ಸಖಾ ಚೈವ ಶಿಷ್ಯಶ್ಚಾತ್ರ ಮಹಾಮುನಿಃ |
ಜೈಗೀಷವ್ಯ ಇತಿ ಖ್ಯಾತಃ ಪ್ರೋಕತತ್ವಽಸೌ ನಿರ್ಗತಃ ಶುಭೇ ॥44॥

ಪಾರ್ವತಿಯೇ, ಇವನು ನನ್ನ ಭಕ್ತನಾಗಿದ್ದಾನೆ. ನನ್ನ ಸ್ನೇಹಿತನಾಗಿದ್ದಾನೆ. ನನ್ನ ಶಿಷ್ಯನೂ ಆಗಿದ್ದಾನೆ. ವೇದಾಂತದ ಸಮಯದಲ್ಲಿ ನಾನೇ ಇವನಿಗೆ ಸರ್ವೋತ್ತಮನಾದವನು ಭಗವಂತ ಎಂದು ಉಪದೇಶಿಸಿದ್ದೇನೆ. ಆದ್ದರಿಂದ ಅಸುರ ಜನ ಮೋಹಕ್ಕೋಸ್ಕರ ಹೇಳಿದ ಈ ನನ್ನ ಕಥೆಯನ್ನು ಅವನು ಹೇಗೆ ತಾನೆ ಸಹಿಸುತ್ತಾನೆ? ಆದ್ದರಿಂದ ನಡುವೆ ಬಾಯಿಹಾಕಿ ಜೈಗೀಷವ್ಯ ಎಂಬ ಮುನಿಯು ನನ್ನ ಅಸುರಜನ ಮೋಹಕ್ಕೋಸ್ಕರ ಹೇಳಿದ ಮಾತನ್ನು ನಿರಾಕರಿಸಿ ಇಲ್ಲಿಂದ ಹೊರಟಿದ್ದಾನೆ.

ತಚ್ಛ್ರುತ್ವಾ ಸಾಽಥ ಸಂಕ್ರುದ್ಧಾ ನ ನ್ಯಾಯ್ಯಂ ತೇನ ವೈ ಕೃತಮ್ |
ವಿಕೃತಾಽಹಂ ತ್ವಯಾ ದೇವ ಮುನಿನಾ ಚ ತಥಾಕೃತಾ ॥45॥

ರುದ್ರದೇವರ ಈ ಮಾತನ್ನು ಕೇಳಿಸಿಕೊಂಡು ಪಾರ್ವತಿಯು ಹೇಳುತ್ತಾಳೆ- ಇದು ನ್ಯಾಯವಲ್ಲ. ಜೈಗೀಷವ್ಯ ಮುನಿಯು ಹೀಗೆ ಮಾಡಿದ್ದು ಧರ್ಮಸಮ್ಮತವಲ್ಲ. ನನ್ನ ಮಾತನ್ನು ನೀನೂ ಮುನಿ ಇಬ್ಬರೂ ಸೇರಿಕೊಂಡು ವ್ಯರ್ಥ ಮಾಡಿರುವಿರಿ.

ಅತಜ್ಞಾ ದಯ ದೇವೇಶ ಮಧ್ಯೇ ಪ್ರಾಪ್ತಂ ನ ತಚ್ಛ್ರುತಮ್ |
ತಚ್ಛ್ರುತ್ವಾ ಭಗವಾನಾಹ ಮಹಾದೇವಃ ಪಿನಾಕಧೃತ್ ॥46॥

ಅದಿರಲಿ, ನಮ್ಮ ಮಾತಿನ ನಡುವೆ ಅಡ್ಡಬಂದ ಆ ಮುನಿಯ ಮಾತು ನನಗೆ ಸರಿಯಾಗಿ ಕೇಳಿಸಲಿಲ್ಲ. ಅದನ್ನು ವಿವರಿಸಿ, ಅವನ ಅಭಿಪ್ರಾಯವನ್ನೇ ತಿಳಿಸಿ ಎಂದು ಕೇಳಿದಳು. ಪಿನಾಕಧಾರಿಯಾದ ಮಹಾದೇವನು ಪಾರ್ವತಿಗೆ ಉತ್ತರಿಸಿದನು.

ನಿರಪೇಕ್ಷೋ ಮುನಿರ್ಯೋಗೀ ಮಾಮುಪಾಶ್ರಿತ್ಯ ಸಂಸ್ಥಿತಃ |
ನಿರ್ದ್ವಂದ್ವಃ ಸತತಂ ಧೀಮಾನ್ ಸಮರೂಪಸ್ವಭಾವಧೃತ್ ॥47॥

ದೇವಿ, ಜೈಗೀಷವ್ಯ ಮುನಿಯು ಆಸೆಗಳನ್ನೆಲ್ಲ ಜಯಿಸಿದ್ದಾನೆ. ನನ್ನನ್ನೇ ಮೊರೆ ಹೊಕ್ಕಿದವನು. ದ್ವಂದ್ವಗಳನ್ನು ನೀಗಿದವನು. ಯಾವಾಗಲೂ ನಿಶ್ಚಲವಾದ ಒಂದೇ ಸ್ವಭಾವದಲ್ಲಿ ನೆಲೆಗೊಂಡವನು.

ತಸ್ಮಾತ್ ಕ್ಷಮಸ್ವ ತಂ ದೇವಿ ರಕ್ಷಿತವ್ಯಸ್ತ್ವಯಾ ಚ ಸಃ ॥48॥

ಆದ್ದರಿಂದ ಅವನ ಮಾತನ್ನು ಮನ್ನಿಸಿ ಅವನನ್ನು ರಕ್ಷಿಸಬೇಕು ಎಂದು ಹೇಳಿದನು.

ಇತ್ಯುಕ್ತಾ ಪ್ರಾಹ ಸಾ ದೇವೀ ಮುನೇಸ್ತಸ್ಯ ಮಹಾತ್ಮನಃ |
ನಿರಾಶತ್ವಮಹಂ ದ್ರಷ್ಟುಮಿಚ್ಛಾಮ್ಯಂತಕನಾಶನ ॥49॥

ಈ ರೀತಿಯಾಗಿ ಹೇಳಿದ ಬಳಿಕ ಪಾರ್ವತಿಯು ನಾಥನೇ, ಹಾಗಿದ್ದರೆ ಮಹರ್ಷಿಯ ನಿರಾಶಿತ್ವವನ್ನು ನಾನೇ ಪರೀಕ್ಷಿಸಿ ತಿಳಿಯಬೇಕೆಂದುಕೊಂಡಿದ್ದೇನೆ ಎಂದು ಹೇಳಿದಳು.

ತಥೇತಿ ಚೋಕ್ತತ್ವ ತಾಂ ದೇವೋ ವೃಷಮಾರುಹ್ಯ ಸತ್ವರಮ್ |
ದೇವಗಂಧರ್ವಸ್ಯರೆಂಶ್ಚ ಸ್ತೂಯಮಾನೋ ಜಗತ್ಪತಿಃ ॥50॥

ರುದ್ರದೇವರು ಸರಿ, ಅದರಂತೆಯೇ ಆಗಲಿ ಎಂದು ಹೇಳಿದರು. ಒಡನೆಯೇ ವೃಷಭವನ್ನೇರಿ, ದೇವ-ಗಂಧರ್ವಾದಿಗಳಿಂದ ಸ್ತುತಿಸಲ್ಪಟ್ಟ ಮಹಾರುದ್ರನು ಜೈಗೀಷವ್ಯರ ಬಳಿ ಆಗಮಿಸಿದನು.

ಅಜರಾಮರಶುದ್ಧಾತ್ಮಾ ಯತ್ರಾಸ್ತೇ ಸ ಮಹಾಮುನಿಃ |
ಇತಸ್ತತಃ ಸಮಾಹೃತ್ಯ ವೀರಸ್ಯರೆಂರ್ಮಹಾಯಶಾಃ ॥51॥

ನಾರಾಯಣನಲ್ಲಿಯೇ ಮನಸ್ಸನ್ನಿಟ್ಟು ಶುದ್ಧಾತ್ಮನಾಗಿರುವ, ಮಹಾಕೀರ್ತಿಸಂಪನ್ನನಾದ, ಜ್ಞಾನಿಗಳ ಸಂಗದಲ್ಲಿಯೇ ಸಂಚರಿಸುವ ಆ ಜೈಗೀಷವ್ಯ ಮುನಿಯು ದೇಹದ ಸ್ಥಿತಿಗಾಗಿ ಆಚೆ-ಈಚೆ ಓಡಾಡುತ್ತಿದ್ದನು.

ದೇಹಪ್ರಾವರಣಾರ್ಥಂ ವೈ ಸಂಸರನ್ ಸ ತದಾ ಮುನಿಃ |
ಪ್ರತ್ಯುದ್ಗಮ್ಯ ಮಹಾದೇವಂ ಯಥಾರ್ಹಂ ಪ್ರತಿಪೂಜ್ಯ ಚ |
ಪುನಃ ಸ ಪೂರ್ವವತ್ ಕಥಾಂ ಸೂಚ್ಯಾ ಸೂತ್ರೇಣ ಸೂಚಯನ್ ॥52॥

ಮಹಾದೇವನನ್ನು ಕಂಡ ಕೂಡಲೇ ಎದ್ದು ನಿಂತು, ಯಥೋಚಿತವಾಗಿ ಅವನನ್ನು ಎದುರುಗೊಂಡು ಸತ್ಕರಿಸಿ, ಹಿಂದಿನ ಅಭಿಪ್ರಾಯವನ್ನೇ ತಿಳಿಸುವಂತೆ ಒಂದು ಸೂಚಿ, ಒಂದು ದಾರವನ್ನು ತಂದು ಚಿಂದಿಯ ಬಟ್ಟೆಗಳನ್ನು ಹೊಲಿಯುತ್ತಾ ಕುಳಿತನು.

ತಮಾಹ ಭಗವಾನ್ ಶಂಭುಃ ಕಿಂ ಪ್ರದಾಸ್ಯಾಮಿ ತೇ ಮುನೇ |
ವೃಣೀಷ್ವ ಮತ್ತಃ ಸರ್ವಂ ತ್ವಂ ಜೈಗೀಷವ್ಯ ಯದೀಚ್ಛಸಿ ॥53॥

ಆ ಪ್ರಸಂಗದಲ್ಲಿ ರುದ್ರನು ಜೈಗೀಷವ್ಯನನ್ನು ಕುರಿತು `ಮಹರ್ಷಿಯೇ, ನಾನು ನಿನಗೆ ಏನನ್ನು ದಯಪಾಲಿಸಲಿ? ಬೇಕಾದ್ದನ್ನೆಲ್ಲ ನೀಡುತ್ತೇನೆ, ಕೇಳಿಕೊ' ಎಂದನು.

ನಾವಲೋಕಯಮಾನಸ್ತು ದೇವದೇವಂ ಮಹಾಮುನಿಃ |
ಅನವಾಪ್ತಂ ನ ಪಶ್ಯಾಮಿ ತ್ವತ್ತೋ ಗೋವೃಷಭಧ್ವಜ |
ಕೃತಾರ್ಥಃ ಪರಿಪೂರ್ಣೋಽಹಂ ಯತ್ ತೇ ಕಾರ್ಯಂ ತು ಗಮ್ಯತಾಮ್॥

ಆದರೆ ಮಹಾಮುನಿಯು ದೇವನೇ, ನಿನ್ನಿಂದ ದುರ್ಲಭವಾದುದೊಂದೂ ಇಲ್ಲವೆಂದು ನಾನು ಬಲ್ಲೆ. ಆದರೆ ಈಗ ನಾನು ಕೃತಾರ್ಥನು. ನಾನು ಹೊಂದದೆ ಇರುವುದು ಯಾವುದೂ ಇಲ್ಲ. ಆದ್ದರಿಂದ ನೀನು ಹೋಗಬಹುದು ಎಂದು ಹೇಳಿದನು.

ಪ್ರಹಸಂಸ್ತು ಪುನಃ ಶರ್ವೋ ವೃಣೀಷ್ವೇತಿ ತಮಬ್ರವೀತ್ |
ಅವಶ್ಯಂ ಹಿ ವರೋ ಮತ್ತಃ ಶ್ರಾವ್ಯಂ ವರಮನುತ್ತಮಮ್ ॥55॥

ಮುನೀಂದ್ರನೇ, ನೀನು ಅವಶ್ಯವಾಗಿ ನನ್ನಿಂದ ವರವನ್ನು ಕೇಳಬೇಕು. ಅನುತ್ತಮವಾದ ವರಗಳನ್ನು ಕೊಡಲು ಸಿದ್ಧನಾಗಿದ್ದೇನೆ ಎಂದು ಹೇಳಿದನು.

ಜೈಗೀಷವ್ಯಸ್ತಮಾಹೇದಂ ಶ್ರೋತವ್ಯಂ ಚ ತ್ವಯಾ ಮಮ |
ಸೂಚೀಮನು ಮಹದೇವ ಸೂತ್ರಂ ಸಮನುಗಚ್ಛತಃ ॥56॥

ದೇವನೇ, ನಾನು ಈ ಸೂಚಿಯೊಳಗಿನ ನೂಲನ್ನೇ ಹಿಂಬಾಲಿಸುತ್ತಿದ್ದೇನೆ. ನನ್ನ ಮಾತನ್ನು ಕೇಳಿಸಿಕೊ ಎಂದು ಹೇಳಿದನು.
ತತಃ ಪ್ರಹಸ್ಯ ಭಗವಾನ್ ಗೌರೀಮಾಲೋಕ್ಯ ಶಂಕರಃ |
ಸ್ವಸ್ಥಾನಂ ಪ್ರಯಯೌ ಹೃಷ್ಟಃ ಸರ್ವದೇವನಮಸ್ಕೃತಃ ॥57॥
ಅವನ ಮಾತನ್ನು ಕೇಳಿ ರುದ್ರದೇವರು ಉಮಾದೇವಿಯನ್ನು ನೋಡುತ್ತಾ ನಸುನಕ್ಕು ಸರ್ವದೇವ ನಮಸ್ಕೃತನಾದ ಶಂಕರನು ತನ್ನ ಸ್ಥಾನಕ್ಕೆ ಹೊರಟು ಹೋದನು.
ಏತತ್ ತೇ ಕಥಿತಂ ರಾಜನ್ ಯಸ್ಮಾತ್ ತ್ವಂ ಪರಿಪೃಚ್ಛಸಿ |
ನಿರ್ದ್ವಂದ್ವಾ ಯೋಗಿನೋ ನಿತ್ಯಾಃ ಸರ್ವಶಸ್ತೇ ಸ್ವಯಂಭುವಃ ॥58॥
ರಾಜನೇ, ಯೋಗಿಗಳಾದವರು ತಮ್ಮ ಸಂಕಲ್ಪಾನುಸಾರವಾಗಿ ಸನ್ಮಾರ್ಗದಲ್ಲಿ ಹೋಗುತ್ತಾರೆ. ಇನ್ನೊಬ್ಬರನ್ನು ಸಂತೋಷ ಪಡಿಸಲು ಅನಿವಾರ್ಯವಾಗಿಯೂ ದುರ್ಮಾರ್ಗದಲ್ಲಿ ಸಂಚರಿಸರು ಎನ್ನಲು ಇದೇ ದೊಡ್ಡ ದೃಷ್ಟಾಂತವಾಗಿದೆ. ದ್ವಂದ್ವಗಳನ್ನೆಲ್ಲ ಅತಿಕ್ರಮಿಸಿದವರಾಗಿ, ಮನಸ್ಸಿಗೆ ಯೋಗ್ಯವಾಗುವಂತೆ ನಡೆಯುವವರಾಗಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತ
ಮೋಕ್ಷಧರ್ಮಪರ್ವ
ಅರವತ್ತಾರನೆಯ ಅಧ್ಯಾಯ
ಸದ್ಗುಣಗಳೇ ಲೋಕಗಳನ್ನೆಲ್ಲ ವಶೀಕರಿಸುತ್ತವೆ ಎಂಬುದಕ್ಕೆ ನಿದರ್ಶನವಾಗಿ ನಾರದರ ಮಹತ್ವವನ್ನು ಕುರಿತು ಉಗ್ರಸೇನ ಮತ್ತು ಕೃಷ್ಣನಿಗೂ ನಡೆದ ಸಂವಾದ.
ಯುಧಿಷ್ಠಿರಃ
ಪ್ರಿಯಃ ಸರ್ವಸ್ಯ ಲೋಕಸ್ಯ ಸರ್ವಸತ್ತ್ವಾಭಿನಂದಿತಃ |
ಗುಣೈಃ ಸರ್ವೈರುಪೇತಶ್ಚ ಕೋನ್ವಸಿ ಭುವಿ ಮಾನವಃ ॥1॥
ಪಿತಾಮಹನೇ, ಸರ್ವಲೋಕಪ್ರಿಯನಾಗಿ, ಸಮಸ್ತ ಪ್ರಾಣಿಗಳಿಗೂ ರಕ್ಷಕನಾಗಿ, ಸಮಸ್ತ ಗುಣಗಳಿಂದ ಕೂಡಿದ ಪುರುಷನು ಯಾವನಾದರೂ ಈ ಭೂಮಿಯಲ್ಲಿ ಇದ್ದಾನೆಯೇ? ಇದ್ದರೆ ಯಾವನು?
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಪೃಚ್ಛತೋ ಭರತರ್ಷಭ |
ಉಗ್ರಸೇನಸ್ಯ ಸಂವಾದಂ ನಾರದೇ ಕೇಶವಸ್ಯ ಚ ॥2॥
ರಾಜನೇ, ನೀನು ಕೇಳುವ ವಿಷಯದಲ್ಲಿ ಕೃಷ್ಣನಿಗೆ ಉಗ್ರಸೇನನಿಗೆ ನಡೆದ ಸಂವಾದರೂಪವಾದ ಇತಿಹಾಸವಿದೆ. ನಾರದರ ವಿಷಯದಲ್ಲಿ ನಡೆದ ಇವರೀರ್ವರ ಸಂವಾದವನ್ನು ಕೇಳಿಸಿಕೊ.
ಉಗ್ರಸೇನಃ
ಯಸ್ಯ ಸಂಕಲ್ಪತೇ ಲೋಕೋ ನಾರದಸ್ಯ ಪ್ರಕೀರ್ತನೇ |
ಮನ್ಯೇ ಸ ಗುಣಸಂಪನ್ನೋ ಬ್ರೂಹಿ ತನ್ಮಮ ಪೃಚ್ಛತಃ ॥3॥
ಕಂಸನ ತಂದೆಯಾದ ಉಗ್ರಸೇನನು ಕೃಷ್ಣನ ಜೊತೆ ಕೇಳುತ್ತಾನೆ- ವಾಸುದೇವನೇ, ಜಗತ್ತೆಲ್ಲವೂ ನಾರದನನ್ನು ಕೊಂಡಾಡುತ್ತಿದೆ. ಅವನೇ ಸಕಲ ಗುಣಸಂಪನ್ನನೆಂದು ನನಗೆ ತೋರುತ್ತಿದೆ. ಇದರ ನಿಜಾಂಶವನ್ನು ನನಗೆ ತಿಳಿಸು.
ವಾಸುದೇವಃ
ಕುಕ್ಕುರಾಧಿಪ ಯಾನ್ಮನ್ಯೇ ಶೃಣು ತಾನ್ ಮೇ ವಿವಕ್ಷತಃ |
ನಾರದಸ್ಯ ಗುಣಾನ್ ಸಾಧೂನ್ ಸಂಕ್ಷೇಪೇಣ ನರಾಧಿಪ ॥4॥
ಯಾದವೇಂದ್ರನೇ, ನನ್ನನ್ನು ಕುರಿತು ನಾರದರ ವಿಷಯದಲ್ಲಿ ನೀನು ಪ್ರಶ್ನಿಸುತ್ತಿದ್ದಿ. ನಾರದರಲ್ಲಿ ಅಸಾಧಾರಣ ಗುಣಗಳಿವೆ. ನನಗೆ ತಿಳಿದ ಕೆಲವು ಗುಣಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು.
ನ ಚಾರಿತ್ರನಿಮಿತ್ತೋಽಸ್ಯಾಹಂಕಾರೋ ದೇಹಪಾತನಃ |
ಅಭಿನ್ನಶ್ರುತಚಾರಿತ್ರಸ್ತಸ್ಮಾತ್ ಸರ್ವತ್ರ ಪೂಜಿತಃ ॥5॥
ನಾರದರು ಸಚ್ಚಾರಿತ್ರ್ಯಸಂಪನ್ನರು. ಆದರೆ ನಾನು ಚಾರಿತ್ರ್ಯಶೀಲನೆಂಬ ಅಹಂಕಾರ ಅವರಲ್ಲಿಲ್ಲ. ನಡತೆಯಲ್ಲಿ ಹೇಗೆ ಶ್ರೇಷ್ಠತೆ ಇದೆಯೋ ಜ್ಞಾನದಲ್ಲಿಯೂ ಅಂತಹ ಶ್ರೇಷ್ಠತೆಯನ್ನು ಹೊಂದಿದವರು. ಆದ್ದರಿಂದಲೇ ಎಲ್ಲ ಕಡೆಯಲ್ಲಿಯೂ ಪೂಜಿಸಲ್ಪಡುತ್ತಾರೆ.
ಅರತಿಃ ಕ್ರೋಧಚಾಪಲ್ಯೇ ಭಯಂ ನೈತಾನಿ ನಾರದೇ |
ಅದೀರ್ಘಸೂತ್ರಃ ಶೂರಶ್ಚ ತಸ್ಮಾತ್ ಸರ್ವತ್ರ ಪೂಜಿತಃ ॥6॥
ಅತೃಪ್ತಿ, ಕ್ರೋಧ, ಚಾಪಲ್ಯ, ಭಯ ಮೊದಲಾದ ದುರ್ಗುಣಗಳು ನಾರದನಲ್ಲಿಲ್ಲ. ಸತ್ಕಾರ್ಯದಲ್ಲಿ ವಿಳಂಬ ಮಾಡುವವನಲ್ಲ. ಶೂರನಾಗಿದ್ದಾನೆ. ಆದ್ದರಿಂದಲೇ ಎಲ್ಲ ಕಡೆಯಲ್ಲಿಯೂ ಪೂಜಿತನಾಗಿದ್ದಾನೆ.
ಉಪಾಸ್ಯೋ ನಾರದೋ ಬಾಢಂ ವಾಚಿ ನಾಸ್ಯ ವ್ಯತಿಕ್ರಮಃ |
ಕಾಮತೋ ಯದಿ ವಾ ಲೋಭಾತ್ ತಸ್ಮಾತ್ ಸರ್ವತ್ರ ಪೂಜಿತಃ ॥7॥
ಈ ಗುಣಗಳಿಂದ ನಾರದನು ಉಪಾಸ್ಯನಾಗಿದ್ದಾನೆ. ಮಾತಿನಲ್ಲಿ ಇವನನ್ನು ಮೀರಿದವರು ಯಾರೂ ಇಲ್ಲ. ಕಾಮ-ಲೋಭಗಳಿಗೆ ಅವನು

ಎಂದಿಗೂ ತುತ್ತಾಗುವವನಲ್ಲ. ಆದ್ದರಿಂದಲೇ ಪೂಜಿತನಾಗಿದ್ದಾನೆ.
ಅಧ್ಯಾತ್ಮವಿಧಿತತ್ತ್ವಜ್ಞಃ ಕ್ಷಾಂತಃ ಶಕ್ತೋ ಜಿತೇಂದ್ರಿಯಃ |
ಋಜುಶ್ಚ ಸತ್ಯವಾದೀ ಚ ತಸ್ಮಾತ್ ಸರ್ವತ್ರ ಪೂಜಿತಃ ॥8॥
ಅಧ್ಯಾತ್ಮವಿಧಿಯನ್ನು ಸರಿಯಾಗಿ ತಿಳಿದವನಾಗಿದ್ದಾನೆ. ತಾಳ್ಮೆ, ಶಕ್ತಿ, ಇಂದ್ರಿಯಜಯ, ಋಜು (ಸರಳ)ಸ್ವಭಾವ, ಸತ್ಯವಾದಿತ್ವ ಮೊದಲಾದ ಗುಣಗಳು ಇರುವುದರಿಂದಲೇ ಪೂಜಿತನಾಗಿದ್ದಾನೆ.
ತೇಜಸಾ ಯಶಸಾ ಬುದ್ಧ್ಯಾ ಜ್ಞಾನೇನ ವಿನಯೇನ ಚ |
ಜನ್ಮನಾ ತಪಸಾ ವೃದ್ಧಸ್ತಸ್ಮಾತ್ ಸರ್ವತ್ರ ಪೂಜಿತಃ ॥9॥
ತೇಜಸ್ಸು, ಯಶಸ್ಸು, ಬುದ್ಧಿ, ಜ್ಞಾನ, ವಿನಯ, ಜನ್ಮ, ತಪಸ್ಸು ಇವುಗಳಿಂದ ಅಭಿವೃದ್ಧಿಯನ್ನು ಪಡೆದಿರುವುದರಿಂದ ಎಲ್ಲೆಡೆಯೂ ಪೂಜಿತನಾಗಿದ್ದಾನೆ.
ಸುಶೀಲಃ ಸುಖಸಂವೇಶಃ ಸುಭೋಜಃ ಸ್ವಾದರಃ ಶುಚಿಃ |
ಸುವಾಕ್ಯಶ್ಚಾಪ್ಯನೀರ್ಷ್ಯಶ್ಚ ತಸ್ಮಾತ್ ಸರ್ವತ್ರ ಪೂಜಿತಃ ॥10॥
ಸಚ್ಚಾರಿತ್ರ್ಯಸಂಪನ್ನನೂ, ಶುದ್ಧವಾದ ವಸ್ತ್ರಧಾರಿಯೂ, ಶುದ್ಧವಾದ ಮನೆಯುಳ್ಳವನು, ಶುದ್ಧವಾದ ಭೋಜನವುಳ್ಳವನು, ಆದರನು, ಶುಚಿಯೂ, ಸುವಾಕ್ಯ ಉಳ್ಳವನು, ಹೊಟ್ಟೆಕಿಚ್ಚು ಇಲ್ಲದವನು, ಆದ್ದರಿಂದಲೇ ಎಲ್ಲ ಕಡೆಯೂ ಪೂಜಿತನಾಗಿದ್ದಾನೆ.
ಕಲ್ಯಾಣಂ ಕುರುತೇ ಬಾಢಂ ಪಾಪಮಸ್ಮಿನ್ನ ವಿದ್ಯತೇ |
ನ ಪ್ರೀಯತೇ ಪರಾನರ್ಥೈಸ್ತಸ್ಮಾತ್ ಸರ್ವತ್ರ ಪೂಜಿತಃ ॥11॥
ಇವನು ಎಲ್ಲರಿಗೂ ಹಿತವನ್ನೇ ಮಾಡುತ್ತಾನೆ. ಆದ್ದರಿಂದ ಇವನಲ್ಲಿ ಪಾಪಕ್ಕೆ ಪ್ರಸಕ್ತಿಯಿಲ್ಲ. ಇತರರ ಅನರ್ಥಕ್ಕಾಗಿ ಎಂದಿಗೂ ಸಂತೋಷವನ್ನು ಹೊಂದುವುದಿಲ್ಲ. ಇವೇ ಅವನ ಪೂಜ್ಯತೆಗೆ ಕಾರಣಗಳು.
ವೇದಶ್ರುತಿಭಿರಾಖ್ಯಾನೈರರ್ಥಾನಭಿಜಿಗೀಷತಿ |
ತಿತಿಕ್ಷುರನವಜ್ಞಶ್ಚ ತಸ್ಮಾತ್ ಸರ್ವತ್ರ ಪೂಜಿತಃ ॥12॥
ವೇದಗಳನ್ನು ಪುರಾಣಗಳನ್ನು ಚೆನ್ನಾಗಿ ಅಧ್ಯಯನ ಮಾಡಿದವನಾಗಿ, ವಿಷಯ ಸುಖಗಳಿಂದ ವಿಮುಖನಾಗಿ, ಬಹಳ ಕ್ಷಮಾಶೀಲನಾಗಿ ಇದ್ದಾನೆ. ಯಾರನ್ನೂ ಅಪಮಾನಿಸುವುದಿಲ್ಲ. ಆದ್ದರಿಂದಲೇ ಪೂಜ್ಯನಾಗಿದ್ದಾನೆ.
ಸಮತ್ವಾಚ್ಚ ಪ್ರಿಯೋ ನಾಸ್ತಿ ನಾಪ್ರಿಯಶ್ಚ ಕಥಂಚನ |
ಮನೋಽನುಕೂಲವಾದೀ ಚ ತಸ್ಮಾತ್ ಸರ್ವತ್ರ ಪೂಜಿತಃ ॥13॥
ಅವನು ಸರ್ವವಸ್ತುಗಳಲ್ಲಿ ಸಮಬುದ್ಧಿಯುಳ್ಳವನು. ಇವನಿಗೆ ಪ್ರಿಯರು ಅಪ್ರಿಯರು ಎಂಬುವರಿಲ್ಲ. ಮನಸ್ಸಿಗೆ ಹಿತವಾಗುವಂತೆ ಮಾತನಾಡುವವನು. ಆದ್ದರಿಂದ ಇವನು ಎಲ್ಲ ಕಡೆಗಳಲ್ಲಿಯೂ ಪೂಜಿತನಾಗಿದ್ದಾನೆ.
ಬಹುಶ್ರುತಶ್ಚಿತ್ರಕಥಃ ಪಂಡಿತೋಽನಲಸೋಽಶಠಃ |
ಅದೀನೋಽಕ್ರೋಧನೋಽಲುಬ್ಧಸ್ತಸ್ಮಾತ್ ಸರ್ವತ್ರ ಪೂಜಿತಃ ॥14॥
ಅವನು ಬಹುಶ್ರುತ ವಿದ್ವಾಂಸನು, ಚಿತ್ರ-ವಿಚಿತ್ರವಾದ ಕಥೆಗಳನ್ನು ಹೇಳುವವನು, ಪಂಡಿತನು, ಉತ್ಸಾಹಿಯು, ಜ್ಞಾನಿಯು ಆಗಿದ್ದಾನೆ. ಇವನಲ್ಲಿ ಕಾರ್ಪಣ್ಯ, ಕ್ರೋಧ, ಲೋಭ, ಮೊದಲಾದ ದುರ್ಗುಣಗಳಿಲ್ಲ. ಆದ್ದರಿಂದಲೇ ಪೂಜಿತನಾಗಿದ್ದಾನೆ.
ನಾರ್ಥೇ ಧನೇ ವಾ ಕಾಮೇ ವಾ ಭೂತಪೂರ್ವೋಽಸ್ಯ ವಿಗ್ರಹಃ |
ದೋಷಾಶ್ಚಾಸ್ಯ ಸಮುಚ್ಛಿನ್ನಾಸ್ತಸ್ಮಾತ್ ಸರ್ವತ್ರ ಪೂಜಿತಃ ॥15॥
ಅರ್ಥ, ಧನ, ಕಾಮಗಳಲ್ಲಾಗಲಿ ಇವನು ಯಾರ ಜೊತೆಗೂ ವಿವಾದ ಮಾಡಿಕೊಂಡಿಲ್ಲ. ಅವನಲ್ಲಿ ದೋಷಲೇಶಕ್ಕೂ ಎಡೆಯಿಲ್ಲದ್ದರಿಂದ ಲೋಕ ಪೂಜ್ಯನಾಗಿದ್ದಾನೆ.
ದೃಢಭಕ್ತಿರನಿಂದ್ಯಾತ್ಮಾ ಶ್ರುತವಾನನೃಶಂಸವಾನ್ |
ವೀತಸಮ್ಮೋಹದೋಷಶ್ಚ ತಸ್ಮಾತ್ ಸರ್ವತ್ರ ಪೂಜಿತಃ ॥16॥
ಅವನು ದೃಢಭಕ್ತಿಯುಳ್ಳವನು. ನಿರ್ದುಷ್ಟ ಹೃದಯನು, ಶ್ರುತಿಗಳಲ್ಲಿ ನಿಪುಣನು, ಕ್ರೌರ್ಯ, ಮೋಹಗಳಿಲ್ಲದವನು. ಇದರಿಂದ ಲೋಕಪೂಜಿತನಾಗಿದ್ದಾನೆ.
ಅಸಕ್ತಃ ಸರ್ವಸಂಗೇಷು ಸಕ್ತಾತ್ಮೇವ ಚ ಲಕ್ಷ್ಯತೇ |
ಅದೀರ್ಘಸಂಶಯೋ ವಾಗ್ಮೀ ತಸ್ಮಾತ್ ಸರ್ವತ್ರ ಪೂಜಿತಃ ॥17॥
ಸರ್ವಸಂಗಗಳಲ್ಲಿಯೂ ಅಸಕ್ತನಾಗಿದ್ದಾನೆ. ಸಂಗವುಳ್ಳ ಪುರುಷನಂತೆ ತೋರಿಸಿಕೊಳ್ಳುತ್ತಾನೆ. ಅವನಿಗೆ ಯಾವುದೇ ತುಂಬಾ ಕಾಲದಿಂದ ಭ್ರಮೆಗಳಿರುವುದಿಲ್ಲ. ವಾಗ್ಮಿಯಾಗಿದ್ದಾನೆ. ಆದ್ದರಿಂದಲೇ ಎಲ್ಲೆಡೆಯಲ್ಲಿಯೂ ಪೂಜಿತನಾಗಿದ್ದಾನೆ.
ಸಮಾಧಿರ್ನಾಸ್ಯ ಕಾಮಾರ್ಥೇ ನಾತ್ಮಾನಂ ಸ್ತೌತಿ ಕರ್ಹಿಚಿತ್ |
ಅನೀರ್ಷುರ್ಮೃದುಸಂವಾದಸ್ತಸ್ಮಾತ್ ಸರ್ವತ್ರ ಪೂಜಿತಃ ॥18॥
ಸ್ವಾರ್ಥಕ್ಕಾಗಿ ಎಂದೂ ತಪಸ್ಸನ್ನು ಮಾಡುವುದಿಲ್ಲ. ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವುದಿಲ್ಲ. ಅವನಿಗೆ ಮಾತ್ಸರ್ಯವಿಲ್ಲ. ಮೃದುವಾಗಿ ಮಾತನಾಡುತ್ತಾನೆ. ಆದ್ದರಿಂದ ಸರ್ವತ್ರ ಪೂಜಿತನಾಗಿದ್ದಾನೆ.
ನಾಹಂಕಾರೇ ಮುಕ್ತಿರಸ್ಯ ಚಾರಿತ್ರೇ ಬುದ್ಧಿರಾಸ್ಥಿತಾ |
ವೇದಾರ್ಥವಿದ್ ವಿಭಾಗೇನ ಯಜ್ಞವಿದ್ಯೋಗವಿತ್ ಕವಿಃ |
ಭಕ್ತಿಮಾನ್ ಸ ಸದಾ ವಿದ್ವಾಂಸ್ತಸ್ಮಾತ್ ಸರ್ವತ್ರ ಪೂಜಿತಃ ॥19॥
ಅಹಂಕಾರ ಇರುವುದಿಲ್ಲ. ಚಾರಿತ್ರ್ಯದಲ್ಲಿ ಬುದ್ಧಿಯು ನಿಶ್ಚಲವಾಗಿದೆ. ವೇದಾರ್ಥ ಜ್ಞಾನಿಯಾಗಿದ್ದಾನೆ. ಯಜ್ಞಗಳನ್ನು ವಿಭಾಗದ ಮೂಲಕ ಅರ್ಥೈಸಿಕೊಂಡಿದ್ದಾನೆ. ಯೋಗಜ್ಞನಾಗಿದ್ದಾನೆ. ಕವಿಯಾಗಿದ್ದಾನೆ. ಭಕ್ತಿಮಾನ್ ಆಗಿದ್ದಾನೆ. ಯಾವತ್ತೂ

ಬ್ರಹ್ಮಜ್ಞಾನದಲ್ಲಿಯೇ ರತನಾಗಿರುತ್ತಾನೆ. ಆದ್ದರಿಂದ ಲೋಕಪೂಜಿತನಾಗಿದ್ದಾನೆ.
ತ್ರಿಗುಣಂ ಗುಣಭೋಕ್ತಾರಂ ಪಂಚಯಜ್ಞಾತ್ಮಕಂ ತಥಾ |
ಯಥಾವತ್ ಸ ವಿಜಾನಾತಿ ತಸ್ಮಾತ್ ಸರ್ವತ್ರ ಪೂಜಿತಃ ||20||
ಮೂರುಗುಣಗಳಲ್ಲಿದ್ದು ಶುಭಗುಣ ಭೋಕ್ತೃನೆನಿಸಿದ, ಪಂಚಯಜ್ಞಾತ್ಮಕನಾದ ಭಗವಂತನನ್ನು ಯಥಾರ್ಥವಾಗಿ ತಿಳಿದಿದ್ದಾನೆ. ಆದ್ದರಿಂದಲೇ ಸರ್ವತ್ರ ಪೂಜಿತನಾಗಿದ್ದಾನೆ.
ಲೋಕಸ್ಯ ವಿವಿಧಂ ಚಿತ್ತಂ ಪ್ರೇಕ್ಷತೇ ಚಾಪ್ಯಕುತ್ಸಯನ್ |
ಸಂಸರ್ಗವಿದ್ಯಾಕುಶಲಸ್ತಸ್ಮಾತ್ ಸರ್ವತ್ರ ಪೂಜಿತಃ ||21||
ಲೋಕದ ಅನೇಕ ವಿಧವಾದ ಮನೋವೈವಿಧ್ಯಗಳನ್ನು ನಿಂದಿಸದೆ ನೋಡುತ್ತಾನೆ. ಮತ್ತೊಬ್ಬರ ಜೊತೆಗೆ ಹೇಗೆ ನಡೆದುಕೊಳ್ಳಬೇಕು ಎಂಬುದರ ಬಗ್ಗೆ ಪ್ರಾವೀಣ್ಯ ಪಡೆದವನು ಈತ. ಆದ್ದರಿಂದಲೇ ಸರ್ವತ್ರ ಪೂಜಿತನಾಗಿದ್ದಾನೆ.
ನಾಸೂಯತ್ಯಾಗಮಂ ಕಂಚಿತ್ ಸ್ವನಯೇನೋಪಜೀವತಿ |
ಅವಂಧ್ಯಕಾಲೋಽವಶ್ಯಾತ್ಮಾ ತಸ್ಮಾತ್ ಸರ್ವತ್ರ ಪೂಜಿತಃ ||22||
ಇವನು ವೇದಗಳನ್ನು ದ್ವೇಷಿಸುವುದಿಲ್ಲ. ತನ್ನ ಬುದ್ಧಿಯಿಂದಲೇ ಎಚ್ಚರದಿಂದ ಬದುಕುತ್ತಾನೆ. ಕಾಲವನ್ನು ವ್ಯರ್ಥಮಾಡುವುದಿಲ್ಲ. ಆದ್ದರಿಂದಲೇ ಸರ್ವತ್ರ ಪೂಜಿತನಾಗಿದ್ದಾನೆ.
ಕೃತಶ್ರಮಃ ಕೃತಪ್ರಜ್ಞೋ ನ ಚ ತೃಪ್ತಃ ಸಮಾಧಿತಃ |
ನಿತ್ಯಯುಕ್ತೋಽಪ್ರಮತ್ತಶ್ಚ ತಸ್ಮಾತ್ ಸರ್ವತ್ರ ಪೂಜಿತಃ ||23||
ಇವನು ಸರಿಯಾದ ಪ್ರಯತ್ನ ಮಾಡುತ್ತಿರುತ್ತಾನೆ. ಸರಿಯಾದ ಪ್ರಜ್ಞೆಯನ್ನು ಹೊಂದಿದ್ದಾನೆ. ಧ್ಯಾನದಿಂದ ಎಂದಿಗೂ ತೃಪ್ತಿಯನ್ನು ಹೊಂದುವುದಿಲ್ಲ. ನಿತ್ಯವೂ ಭಗವನ್ನಿಷ್ಠ ಬುದ್ಧಿಯುಳ್ಳವನು. ಅಪ್ರಮತ್ತನು. ವಿಷಯ ಪದಾರ್ಥಗಳ ಮೋಹ ಇರುವುದಿಲ್ಲ. ಆದ್ದರಿಂದಲೇ ಪೂಜಿತನಾಗಿದ್ದಾನೆ.
ನಾಪತ್ರಪಶ್ಚ ಯುಕ್ತಶ್ಚ ನಿಯುಕ್ತಃ ಶ್ರೇಯಸೇ ಪರೈಃ |
ಅಭೇತ್ತಾ ಪರಗುಹ್ಯಾನಾಂ ತಸ್ಮಾತ್ ಸರ್ವತ್ರ ಪೂಜಿತಃ ||24||
ಇವನೆಂದಿಗೂ ಲಜ್ಜೆ ಬಿಟ್ಟವನಲ್ಲ. ಉತ್ತಮರಿಂದ ಜಗತ್ತಿನ ಶ್ರೇಯಸ್ಸಿಗೋಸ್ಕರ ನಿಯುಕ್ತನಾದವನು. ಮತ್ತೊಬ್ಬರ ರಹಸ್ಯಗಳನ್ನು ಭೇದಿಸುವುದಿಲ್ಲ. ಮತ್ತೊಬ್ಬರ ಮುಂದೆ ಹೇಳುವುದಿಲ್ಲ. ಆದ್ದರಿಂದಲೇ ಸರ್ವತ್ರ ಪೂಜಿತನಾಗಿದ್ದಾನೆ.
ನ ಹೃಷ್ಯತ್ಯರ್ಥಲಾಭೇಷು ನಾಲಾಭೇ ತು ವ್ಯಥತ್ಯಪಿ |
ಸ್ಥಿರಬುದ್ಧಿರಸಕ್ತಾತ್ಮಾ ತಸ್ಮಾತ್ ಸರ್ವತ್ರ ಪೂಜಿತಃ ||25||
ಅರ್ಥಲಾಭವಾದಾಗ ಸಂತುಷ್ಟನಲ್ಲ, ಸಿಗದಿದ್ದಾಗ ವ್ಯಥಿತನೂ ಅಲ್ಲ. ಸ್ಥಿರ ಬುದ್ಧಿಯುಳ್ಳವನು, ಅಸಕ್ತಾತ್ಮನು. ಆದ್ದರಿಂದಲೇ ಸರ್ವತ್ರ ಪೂಜಿತನಾಗಿದ್ದಾನೆ.
ತಂ ಸರ್ವಗುಣಸಂಪನ್ನಂ ದಕ್ಷಂ ಶುಚಿಮನಾಮಯಮ್ |
ಕಾಲಜ್ಞಂ ಚ ಪ್ರಿಯಜ್ಞಂ ಚ ಕಃ ಪ್ರಿಯಂ ನ ಕರಿಷ್ಯತಿ ||26||
ಆದ್ದರಿಂದಲೇ ಸರ್ವಗುಣಸಂಪನ್ನನಾದ, ದಕ್ಷನಾದ, ಶುಚಿಯಾದ, ರೋಗ ರಹಿತನಾದ, ಕಾಲಜ್ಞನಾದ, ಪ್ರಿಯಜ್ಞನಾದ ಈ ವ್ಯಕ್ತಿಯು ಯಾರಿಗೆ ತಾನೇ ಅಪ್ರಿಯನಾಗುತ್ತಾನೆ?
ಇತ್ಯುಕ್ತಃ ಸಂಪ್ರಶಸ್ಯೈನಮುಗ್ರಸೇನೋ ಗತೋ ಗೃಹಾತ್ |
ಆಸ್ತೇ ಕೃಷ್ಣಸ್ತಥೈಕಾಂತೇ ಪರ್ಯಂಕೇ ರತ್ನಭೂಷಿತೇ ||27||
ಕೃಷ್ಣನ ಈ ಮಾತನ್ನು ಕೇಳಿಸಿಕೊಂಡು ಉಗ್ರಸೇನನು ನಾರದರನ್ನು ಮನಸ್ಸಿನಲ್ಲಿಯೇ ಬಹಳವಾಗಿ ಕೊಂಡಾಡುತ್ತಾ ತನ್ನ ಮನೆಗೆ ಹೊರಟನು. ಅಲ್ಲಿ ಕೃಷ್ಣನು ರತ್ನಾಲಂಕೃತವಾದ ಪರ್ಯಂಕದಲ್ಲಿ ಏಕಾಂತದಲ್ಲಿ ಕುಳಿತಿದ್ದನು.
ಕದಾಚಿತ್ ತತ್ರ ಭಗವಾನ್ ಪ್ರವಿವೇಶ ಮಹಾಮುನಿಃ |
ತಮಭ್ಯರ್ಚ್ಯ ಯಥಾನ್ಯಾಯಂ ತೂಷ್ಣೀಮಾಸ್ತೇ ಜನಾರ್ದನಃ ||28||
ಅಂತಹ ಪ್ರಸಂಗದಲ್ಲಿ ಒಂದು ಬಾರಿ ಭಗವಾನ್ ನಾರದ ಮಹಾಮುನಿಯು ಕೃಷ್ಣನ ಮನೆಗೆ ಆಗಮಿಸಿದನು. ಅವನನ್ನು ಯಥಾಯೋಗ್ಯವಾಗಿ ಪೂಜಿಸಿ ಜನಾರ್ದನನು ಸುಮ್ಮನೆ ಕುಳಿತನು.
ತಂ ಖಿನ್ನಮಿವ ಸಂಲಕ್ಷ್ಯ ಕೇಶವಂ ವಾಕ್ಯಮಬ್ರವೀತ್ |
ಕಿಮಿದಂ ಕೇಶವ ತವ ವೈಮನಸ್ಯಂ ಜನಾರ್ದನ |
ಅಭೂತಪೂರ್ವಂ ಗೋವಿಂದ ತನ್ಮೇ ವ್ಯಾಖ್ಯಾತುಮರ್ಹಸಿ ||29||
ಕೃಷ್ಣನು ದುಃಖಿತನಾಗಿದ್ದಾನೋ ಎಂದು ತಿಳಿದ ನಾರದನು ಕೃಷ್ಣನನ್ನು ಕುರಿತು ಹೀಗೆ ಹೇಳಿದನು- `ಕೇಶವನೇ, ನಿನ್ನ ಮನಸ್ಸು ಏಕೆ ದುಃಖಿತವಾಗಿದೆ? ಎಂದಿಗೂ ನಿನ್ನ ಈ ದುಃಖವನ್ನು ನಾನು ಕಂಡಿರಲಿಲ್ಲ. ಏಕೆಂದು ತಿಳಿಸು'.
ವಾಸುದೇವಃ
ನಾಸುಹೃತ್ ಪರಮಂ ಮೇಽದ್ಯ ನಾಪದೋಽರ್ಹತಿ ವೇದಿತುಮ್ |
ಅಪಂಡಿತೋ ವಾಪಿ ಸುಹೃತ್ ಪಂಡಿತೋ ವಾಽಪ್ಯನಾತ್ಮವಾನ್ ||30||
ನಾರದ ಮುನೀಂದ್ರನೇ, ಬಹಳ ಮುಖ್ಯ ವಿಚಾರವೊಂದು ನನ್ನ ಮನಸ್ಸನ್ನು ಕಳವಳಗೊಳಿಸುತ್ತಿದೆ. ಆದರೆ ನನಗೆ ಬಹಳ ಮಿತ್ರನಾದ, ಪಂಡಿತನಾಗಿಯೂ ಇರುವ ವ್ಯಕ್ತಿಗೆ ಮಾತ್ರ ಅದನ್ನು ತಿಳಿಸಬಹುದು. ಪಂಡಿತನಲ್ಲದ ಅಮಿತ್ರನಿಗಾಗಲೀ, ಮಿತ್ರನಲ್ಲದ ಪಂಡಿತನಿಗಾಗಲೀ ತಿಳಿಸುವಂತಹ ವಿಷಯವಲ್ಲ.
ಸ ತ್ವಂ ಸುಹೃಚ್ಚ ವಿದ್ವಾಂಶ್ಚ ಜಿತಾತ್ಮಾ ಶ್ರೋತುಮರ್ಹಸಿ |

ಅಪ್ಯೇತದ್ ಹೃದಿ ಯದ್ ದುಃಖಂ ತದ್ ಭವಾನ್ ಶ್ರೋತುಮರ್ಹತಿ ॥
ನೀನು ಮಿತ್ರನೂ ಆಗಿರುವಿ, ಪಂಡಿತನೂ ಆಗಿರುವಿ. ಜಿತಾತ್ಮನಾಗಿರುವಿ. ಆದ್ದರಿಂದ ಕೇಳಲು ಅರ್ಹನಾಗಿರುವಿ. ನನ್ನ ಮನಸ್ಸಿನ ದುಃಖವನ್ನು ನೀನು ಧಾರಾಳವಾಗಿ ಕೇಳಲು ಅರ್ಹನಾಗಿರುವಿ. ನಿನಗೆ ಹೇಳುತ್ತೇನೆ.
ದಾಸ್ಯಮೈಶ್ವರ್ಯವಾದೇನ ಜ್ಞಾತೀನಾಂ ಚ ಕರೋಮ್ಯಹಮ್ |
ದ್ವಿಷಂತಿ ಸತತಂ ಖದ್ದಾ ಜ್ಞಾತಿಸಂಬಂಧಿಬಾಂಧವಾಃ ॥ 32॥
ನಾನು ಜಗತ್ತಿಗೆಲ್ಲ ಅಧಿಪತಿಯು. ಐಶ್ವರ್ಯವುಳ್ಳವನು. ಈ ಭಾವದಿಂದ ನಾನೆಂದೂ ದೂರವಾಗದೆ ನನ್ನ ಜ್ಞಾತಿಗಳಿಗೆ, ಸಂಬಂಧಿಗಳಿಗೆ ಸೇವೆಯನ್ನು ಮಾಡುತ್ತಿರುತ್ತೇನೆ. ಆದರೆ ಜ್ಞಾತಿಗಳು, ಸಂಬಂಧಿಗಳು, ಬಾಂಧವರು ನನ್ನಲ್ಲಿ ಕೋಪಗೊಂಡು ನನ್ನನ್ನು ಯಾವಾಗಲೂ ದ್ವೇಷಿಸುತ್ತಲೇ ಇರುತ್ತಾರೆ.
ದಿವ್ಯಾ ಅಪಿ ತಥಾ ಭೋಗಾ ದತ್ತಾಸ್ತೇಷಾಂ ಯಥಾ ಪೃಥಕ್ |
ತಥಾಽಪಿ ಚ ದ್ವಿಷಂತೋ ಮಾಂ ವರ್ತಂತೇ ಚ ಪರಸ್ಪರಮ್ ॥33॥
ನಾನು ಅವರಿಗೆ ಬೇರೆ ಬೇರೆಯಾದ ದಿವ್ಯಭೋಗಗಳನ್ನೆಲ್ಲ ಒದಗಿಸಿಕೊಡುತ್ತಲೇ ಇದ್ದೇನೆ. ಹಾಗಿದ್ದರೂ ಅವರು ನನ್ನನ್ನು ತಮ್ಮೊಳಗೆ ಪ್ರತಿಯೊಬ್ಬರೂ ದ್ವೇಷಿಸುತ್ತಿದ್ದಾರೆ. ಇದಕ್ಕೇನು ಮಾಡಲಿ?
ನಾರದಃ
ಅನಾಯಸೇನ ಶಸ್ತ್ರೇಣ ಪರಿಮೃಜ್ಯಾನುಮೃಜ್ಯ ಚ |
ಜಿಹ್ವಾಮುದ್ಧರ ಚೈತೇಷಾಂ ನ ವಕ್ಷ್ಯಂತಿ ತತಃ ಪರಮ್ ॥34॥
ಶ್ರೀಹರಿಯೇ, ನಿನ್ನ ವಿರುದ್ಧ ಹಾಗೆ ಮಾತನಾಡುವವರ ನಾಲಿಗೆಯನ್ನು ಲೋಹಮಯವಲ್ಲದ ಆಯುಧದಿಂದ ಸೀಳಿ ಕತ್ತರಿಸಿ ತೆಗೆದುಬಿಡು. ಬಳಿಕ ನಿನ್ನ ವಿಷಯದಲ್ಲಿ ಹಾಗೆ ಮಾತನಾಡಲಾರರು.
ಭಗವಾನ್
ಅನಾಯಸಂ ಕಥಂ ವಿಂದ್ಯಾಂ ಶಸ್ತ್ರಂ ಮುನಿವರೋತ್ತಮ |
ಯೇನೈಷಾಮುದ್ಧರೇ ಜಿಹ್ವಾ ಬ್ರೂಹಿ ತನ್ಮೇ ಯಥಾತಥಮ್ ॥35॥
ಮುನೀಂದ್ರನೇ, ಅವರ ನಾಲಿಗೆಯನ್ನು ಕಬ್ಬಿಣರಹಿತ ಆಯುಧದಿಂದ ಹೇಗೆ ಸೀಳಿ ತೆಗೆಯಲಿ? ಅಂತಹ ಆಯುಧ ಯಾವುದು? ಎಂದು ನನಗೆ ತಿಳಿಸಬೇಕು.
ನಾರದಃ
ಗೋಹಿರಣ್ಯಂ ಚ ವಾಸಾಂಸಿ ರತ್ನಾದ್ಯಂ ಯದ್ಧನಂ ಬಹು |
ಆಸ್ಯೇ ಪ್ರಕ್ಷಿಪ ಚೈತೇಷಾಂ ಶಸ್ತ್ರಮೇತದನಾಯಸಮ್ ॥36॥
ಕೃಷ್ಣನೇ, ಪಶುಗಳು, ವಸ್ತ್ರಗಳು, ರತ್ನಗಳು ಮುಂತಾದ ವಸ್ತುಗಳನ್ನು ವಿಶೇಷವಾಗಿ ಅವರ ಬಾಯಿಗೆ ಹಾಕುತ್ತಿರು. ಆಗ ಅವರ ನಾಲಿಗೆ ಅಡಗಿ ಹೋಗುತ್ತದೆ. ಇದೇ ಕಬ್ಬಿಣರಹಿತ ಆಯುಧವು.
ಸುಹೃತ್ಸಂಬಂಧಿಮಿತ್ರಾಣಾಂ ಗುರೂಣಾಂ ಸ್ವಜನಸ್ಯ ಚ |
ಆಖ್ಯಾತಂ ಶಸ್ತ್ರಮೇತದ್ಧಿ ತೇನ ಚ್ಛಿಂಧಿ ಪುನಃ ಪುನಃ ॥37॥
ಮಿತ್ರರು, ಬಂಧುಗಳು, ಗುರುಗಳು, ಸ್ವಜನರಿಗೆ ಇವೇ ಅವರ ನಾಲಿಗೆಯನ್ನು ಕುಯ್ಯುವ ಕಬ್ಬಿಣದ ಆಯುಧಗಳೆಂದು ತಿಳಿ. ಅದರಿಂದ ಮತ್ತೆ ಮತ್ತೆ ಅವರ ನಾಲಿಗೆಯನ್ನು ಸೀಳುತ್ತಿರು.
ತವೈಶ್ವರ್ಯಪ್ರದಾನಾನಿ ಶ್ಲಾಘ್ಯಮೇಷಾಂ ವಚಾಂಸಿ ಚ |
ಸಮರ್ಥಂ ತ್ವಾಮಭಿಜ್ಞಾಯ ಪ್ರವದಂತಿ ಚ ತೇ ನರಾಃ ॥39॥
ಐಶ್ವರ್ಯವನ್ನು ಕೊಡುವ ನಿನ್ನನ್ನು ಅವರ ನಾಲಿಗೆಯು ಹೊಗಳಲು ಆರಂಭಿಸುತ್ತದೆ. ನಿನ್ನನ್ನು ಸಮರ್ಥ ಎನ್ನುತ್ತಾರೆ. ನಿನ್ನನ್ನೇ ಸರ್ವೋತ್ತಮ ಎಂದು ಪ್ರಶಂಸಿಸುತ್ತಾರೆ ಮಾನವರು.
ಭೀಷ್ಮಃ
ತತಃ ಪ್ರಹಸ್ಯ ಭಗವಾನ್ ಸಂಪೂಜ್ಯ ಚ ಮಹಾಮುನಿಮ್ |
ತಥಾಽಕರೋನ್ಮಹಾತೇಜಾ ಮುನಿವಾಕ್ಯೇನ ಚೋದಿತಃ ॥40॥
ನಾರದರ ಮಾತಿಗೆ ಕೃಷ್ಣನು ನಸುನಕ್ಕು ನಾರದರನ್ನು ಸತ್ಕರಿಸಿ ಕಳುಹಿಸಿ ಅವರ ಮಾತಿನಂತೆಯೇ ನಡೆಯುತ್ತಿದ್ದನು.
ಏವಂಪ್ರಭಾವೋ ಬ್ರಹ್ಮರ್ಷಿರ್ನಾರದೋ ಮುನಿಸತ್ತಮಃ |
ಪೃಷ್ಟವಾನಸಿ ಯನ್ಮಾಂ ತ್ವಂ ತದುಕ್ತಂ ರಾಜಸತ್ತಮ ॥41॥
ಈ ರೀತಿಯಾದ ಪ್ರಭಾವವುಳ್ಳವನು ನಾರದ ಮಹರ್ಷಿಯು. ಮುನಿಸತ್ತಮನೇ, ನಾರದರ ಬುದ್ಧಿಯ ಪ್ರಭಾವ ಏನೆಂಬುದನ್ನು ನಿನಗೆ ನಾನು ತಿಳಿಸಿದ್ದೇನೆ.
ಸರ್ವಧರ್ಮಹಿತೇ ಯುಕ್ತಾಃ ಸತ್ಯಧರ್ಮಪರಾಯಣಾಃ |
ಲೋಕಪ್ರಿಯತ್ವಂ ಗಚ್ಛಂತಿ ಜ್ಞಾನವಿಜ್ಞಾನಕೋವಿದಾಃ ॥42॥
ಹೀಗೆ ಎಲ್ಲಾ ಧರ್ಮಗಳಿಗೂ ವಿರೋಧವಿಲ್ಲದೆ ನಡೆಯುತ್ತಾ, ಸದ್ಧರ್ಮಗಳನ್ನೇ ಮಹತ್ತಾಗಿ ಭಾವಿಸಿ, ಜ್ಞಾನ-ವಿಜ್ಞಾನಗಳಲ್ಲಿ ಸಮರ್ಥನಾದವನು ಲೋಕದಲ್ಲಿ ಪ್ರಿಯನೆನಿಸುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಟ್‌ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.

* * * * *
അരവത്തേಳನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಸೃಷ್ಟಿಕ್ರಮವನ್ನು ಪ್ರತಿಪಾದಿಸುವ ವ್ಯಾಸ-ಶುಕರ ಸಂವಾದವನ್ನು ಅನುವಾದಿಸಿದುದು.
ಯುಧಿಷ್ಠಿರಃ
ಆದ್ಯಂತಂ ಸರ್ವಭೂತಾನಾಂ ಜ್ಞಾತುಮಿಚ್ಛಾಮಿ ಕೌರವ |
ಜ್ಞಾನಂ ಕರ್ಮ ಚ ಕಾಲಂ ಚ ತಥೈವಾಯುರ್ಯುಗೇಯುಗೇ ॥1॥
ಪಿತಾಮಹನೇ, ಸಮಸ್ತ ಜೀವರ ಹುಟ್ಟು-ಸಾವುಗಳನ್ನು, ಇದರಂತೆ ಪ್ರತಿಯುಗಗಳಲ್ಲಿಯೂ ಜ್ಞಾನ-ಕರ್ಮ-ಕಾಲ ಇವುಗಳ ಗತಿಯನ್ನು ನಿನ್ನಿಂದ ತಿಳಿಯಲು ಅಪೇಕ್ಷಿಸುತ್ತೇನೆ.
ಲೋಕತತ್ತ್ವಂ ಚ ಕಾರ್ತ್ಸ್ನ್ಯೇನ ಭೂತಾನಾಮಾಗತಿಂ ಗತಿಮ್ |
ಸರ್ಗಶ್ಚ ನಿಧನಂ ಚೈವ ಕುತ ಏತತ್ ಪ್ರವರ್ತತೇ ॥2॥
ಪ್ರಪಂಚದ ಉತ್ಪತ್ತಿ ಮತ್ತು ಪ್ರವೃತ್ತಿಗಳು, ಭೂತಗಳು ಈ ಪ್ರಪಂಚಕ್ಕೆ ಬರುವ ಕ್ರಮ, ಇದನ್ನು ಬಿಟ್ಟು ಹೋಗುವ ರೀತಿ, ಸೃಷ್ಟಿ-ಪ್ರಲಯಗಳ ತತ್ತ್ವ, ಇವೆಲ್ಲವನ್ನು ಸಮಗ್ರವಾಗಿ ನನಗೆ ತಿಳಿಸಬೇಕು.
ಭೇದಕಂ ಭೇದತತ್ತ್ವಂ ಚ ತಥಾಽನ್ಯೇಷಾಂ ಮತಂ ತಥಾ |
ಅವಸ್ಥಾತ್ರಿತಯಂ ಚೈವ ಯಾದೃಶಂ ಚ ಪಿತಾಮಹ ॥3॥
ಭೇದಕ ಧರ್ಮಗಳನ್ನು, ಭೇದತತ್ತ್ವವನ್ನು, ಈ ವಿಷಯದಲ್ಲಿರುವ ಬೇರೆ ಬೇರೆ ಮತಗಳನ್ನು, ಇದೇ ರೀತಿ ನಡೆಯುವ ಬಾಲ್ಯ-ಕೌಮಾರ-ಯೌವನ ಅವಸ್ಥೆಗಳನ್ನು ನನಗೆ ತಿಳಿಸಬೇಕು.
ಯದಿ ತೇಽನುಗ್ರಹೇ ಬುದ್ಧಿರಸ್ಮಾಸ್ವಿಹ ಸತಾಂ ವರ |
ಏತದ್ ಭವಂತಂ ಪೃಚ್ಛಾಮಿ ತದ್ ಭವಾನ್ ಪ್ರಬ್ರವೀತು ಮೇ ॥4॥
ಈ ವಿಷಯಗಳ ಬಗ್ಗೆ ನಿನ್ನ ಬುದ್ಧಿಯು ವಿಸ್ತಾರವಾಗಿ ವಿಚಾರ ಮಾಡಿದೆ. ಅದನ್ನು ನೀನು ನಮಗೆಲ್ಲ ತಿಳಿಸಿದಲ್ಲಿ ಪರಮಾನುಗ್ರಹವಾಗುತ್ತದೆ. ಆದ್ದರಿಂದ ಪೂಜ್ಯನಾದ ನಿನ್ನ ಬಳಿ ಪ್ರಶ್ನಿಸಿದ್ದೇನೆ.
ಪೂರ್ವಂ ಹಿ ಕಥಿತಂ ಶ್ರುತ್ವಾ ಭೃಗುಭಾಷಿತಮುತ್ತಮಮ್ |
ಭರದ್ವಾಜಸ್ಯ ವಿಪ್ರರ್ಷೇಸ್ತತೋ ಮೇ ಬುದ್ಧಿರುತ್ತಮಾ ॥5॥
ಜಾತಾ ಪರಮಧರ್ಮಿಷ್ಠಾ ದಿವ್ಯಸಂಸ್ಥಾನಸಂಸ್ಥಿತಾ |
ತತೋ ಭೂಯಸ್ತು ಪೃಚ್ಛಾಮಿ ತದ್ ಭವಾನ್ ವಕ್ತುಮರ್ಹತಿ ॥6॥
ಹಿಂದೆ ಇದೇ ವಿಷಯದಲ್ಲಿ ನೀನು ಭೃಗು-ಭರದ್ವಾಜರಿಗೆ ನಡೆದ ಸಂವಾದವನ್ನು ಹೇಳಿದಾಗ ನನ್ನ ಬುದ್ಧಿಯು ಅಜ್ಞಾನವನ್ನು ಪರಿಹರಿಸಿಕೊಂಡು ದೃಢವಾದ ಧರ್ಮದಲ್ಲಿ ನೆಲೆಗೊಳ್ಳುವಂತಾಯಿತು. ಆದ್ದರಿಂದ ಅದೇ ವಿಚಾರವನ್ನು ವಿಸ್ತಾರವಾಗಿ ನಿನ್ನಿಂದ ಕೇಳಬೇಕೆಂದು ಬಯಸುತ್ತಿದ್ದೇನೆ. ಹೇಳಲು ಅರ್ಹನಾಗಿರುತ್ತಿ.
ಭೀಷ್ಮಃ
ಅತ್ರ ತೇ ವರ್ತಯಿಷ್ಯೇಽಹಮಿತಿಹಾಸಂ ಪುರಾತನಮ್ |
ಜಗೌ ಯದ್ ಭಗವಾನ್ ವ್ಯಾಸಃ ಪುತ್ರಾಯ ಪರಿಪೃಚ್ಛತೇ ॥7॥
ಇದೇ ವಿಷಯದಲ್ಲಿ ವ್ಯಾಸಪುತ್ರನಾದ ಶುಕನು ಪ್ರಶ್ನಿಸಿದಾಗ ವ್ಯಾಸರು ಹೇಳಿದ ಪುರಾತನವಾದ ಇತಿಹಾಸವಿದೆ. ಅದನ್ನು ನಿನಗೆ ಹೇಳುತ್ತೇನೆ.
ಅಧೀತ್ಯ ವೇದಾನಖಿಲಾನ್ ಸಾಂಗೋಪನಿಷದಸ್ತಥಾ |
ಅನ್ವಿಚ್ಛನ್ನೈಷ್ಠಿಕಂ ಕರ್ಮ ಧರ್ಮನೈಪುಣದರ್ಶನಾತ್ ॥8॥
ಕೃಷ್ಣದ್ವೈಪಾಯನಂ ವ್ಯಾಸಂ ಪುತ್ರೋ ವೈಯಾಸಕಿಃ ಶುಕಃ |
ಪಪ್ರಚ್ಛ ಸಂಶಯಮಿಮಂ ಛಿನ್ನಧರ್ಮಾರ್ಥಸಂಶಯಮ್ ॥9॥
ಶುಕನು ವೇದವೇದಾಂಗಗಳನ್ನು, ಉಪನಿಷತ್ತುಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ ಧರ್ಮತತ್ತ್ವವನ್ನು ತಿಳಿದವನು. ಅವನು ಬ್ರಹ್ಮಚರ್ಯದಲ್ಲಿದ್ದಾಗ ಧರ್ಮಾರ್ಥ ತತ್ತ್ವಗಳಲ್ಲಿ ಸಂಶಯರಹಿತವಾದ, ಯಥಾರ್ಥ ಜ್ಞಾನವುಳ್ಳ, ತಂದೆಯಾದ ವ್ಯಾಸರನ್ನು ಕುರಿತು ಪ್ರಶ್ನಿಸಿದನು.
ಶ್ರೀಶುಕಃ
ಭೂತಗ್ರಾಮಸ್ಯ ಕರ್ತಾರಂ ಕಾಲಜ್ಞಾನೇ ಚ ನಿಶ್ಚಿತಮ್ |
ಜ್ಞಾನಂ ಬ್ರಹ್ಮ ಚ ಯೋಗಂ ಚ ಗವಾತ್ಮಕಮಿದಂ ಜಗತ್ ॥10॥
ತಂದೆಯೇ, ಕಾಲದ ಬಗ್ಗೆ ನಿಶ್ಚಿತ ಜ್ಞಾನವನ್ನು ಹೊಂದಿ ಸಕಲ ಭೂತಗಳಿಗೂ ಕರ್ತೃವೆನಿಸಿದವನು ಯಾವನು? ಭಗವಂತನ ಜ್ಞಾನ, ವೇದಗಳು, ಯೋಗ ಈ ರೀತಿಯಾಗಿ ಜ್ಞಾನಾತ್ಮಕವಾದುದು ಈ ಜಗತ್ತು.
ತ್ರಿತಯೇ ತ್ವೇನಮಾಯಾತಿ ತಥಾ ಹ್ಯೇಷೋಽಪಿ ವಾ ಪುನಃ |
ಕೇನೈವ ಚ ವಿಭಾಗಃ ಸ್ಯಾತ್ ತುರೀಯೋ ಲಕ್ಷಣೈರ್ವಿನಾ ॥11॥
ಈ ಮೂರರ ಆಧಾರದಲ್ಲಿಯೇ ಈ ಜೀವನನ್ನು ಭಗವಂತನು ಸೃಷ್ಟಿಸುತ್ತಾನೆ. ಇವುಗಳಿಂದಲೇ ಜ್ಞೇಯನಾಗಿದ್ದಾನೆ. ಈ ಮೂರರ ವಿಭಾಗವು ಯಾರಿಂದಾಯಿತು? ತುರೀಯನ ಲಕ್ಷಣವಿಲ್ಲದೆ ಹೇಗೆ ಜ್ಞೇಯನು?
ಜ್ಞಾನಜ್ಞೇಯಾಂತರೇ ಕೋಸೌ ಕೋಯಂ ಭಾವಸ್ತು ಭೇದವತ್ |
ಯಜ್ಞಾನಂ ಲಕ್ಷಣಂ ಚೈವ ತೇಷಾಂ ಕರ್ತಾರಮೇವ ಚ |

ಬ್ರಾಹ್ಮಣಸ್ಯ ಚ ಯತ್ಕೃತ್ಯಂ ತದ್ ಭವಾನ್ ವಕ್ತುಮರ್ಹತಿ ॥12॥
ಜ್ಞಾನ-ಜ್ಞೇಯಗಳ ಅಂತರವೇನು? ಇದಕ್ಕೆ ನಿಯಾಮಕರು ಯಾರು? ಭೇದವುಳ್ಳಂತಹ ವಸ್ತುವನ್ನು ತಿಳಿಯುವ ಬಗೆ ಹೇಗೆ? ಅವನು ಯಾರು? ಜ್ಞಾನದ ಲಕ್ಷಣವೇನು? ಜೀವರ ಸೃಷ್ಟಿ ಕರ್ತರು ಯಾರು? ಬ್ರಾಹ್ಮಣರ ಕೃತ್ಯವೇನು? ಇವೆಲ್ಲವನ್ನೂ ತಿಳಿಸಲು ಅರ್ಹನಾಗಿರುತ್ತಿ.
ಭೀಷ್ಮ:
ತಸ್ಮೈ ಪ್ರೋವಾಚ ತತ್ಸರ್ವಂ ಪಿತಾ ಪುತ್ರಾಯ ಪೃಚ್ಛತೇ |
ಅತೀತಾನಾಗತೇ ವಿದ್ವಾನ್ ಸರ್ವಜ್ಞಃ ಸರ್ವಧರ್ಮವಿತ್ ॥13॥
ಈ ರೀತಿಯಾಗಿ ಪ್ರಶ್ನಿಸಿ ಮಗನಿಗೆ ವ್ಯಾಸರು ಉತ್ತರಿಸುತ್ತಾರೆ. ಈ ಜಗತ್ತಿನ ಭೂತ-ಭವಿಷ್ಯತ್‌ಗಳನ್ನು ತಿಳಿದವನು, ಸರ್ವಧರ್ಮವೇತ್ತೃವು, ಸರ್ವಜ್ಞನು ಆದ ವ್ಯಾಸರು ಉತ್ತರಿಸುತ್ತಾರೆ.
ಪೃಚ್ಛತಸ್ತವ ಸತ್ಪುತ್ರ ಯಥಾವತ್ ಕೀರ್ತಯಾಮ್ಯಹಮ್ |
ಶೃಣುಷ್ವಾವಹಿತೋ ಭೂತ್ವಾ ಯಥಾಽಽವೃತಮಿದಂ ಜಗತ್ ॥14॥
ಪ್ರಶ್ನಿಸುತ್ತಿರುವ ಕುಮಾರನೇ, ನಿನಗೆ ಯಥಾವತ್ತಾಗಿ ಈ ವಿಷಯದ ಬಗ್ಗೆ ಉತ್ತರಿಸುತ್ತೇನೆ. ಸಮಾಧಾನದಿಂದ, ಜಗತ್ತು ಹೇಗೆ ಆವರಿಸಲ್ಪಟ್ಟಿದೆ ಎನ್ನುವ ವಿಚಾರವನ್ನು ತಿಳಿದುಕೊ.
ಕಾರ್ಯಾದಿ ಕಾರಣಾಂತಂ ಯತ್ ಕಾರ್ಯಾಂತಂ ಕಾರಣಾದಿಕಮ್ |
ಜ್ಞಾನಂ ತದುಭಯಂ ವಿತತ್ತ್ವ ಸತ್ಯಂ ಚ ಪರಮಂ ಶುಭಮ್ ॥15॥
ಈ ಜಗತ್ತು ಮೊದಲು ಕಾರ್ಯವಾಗಿದ್ದು ಬಳಿಕ ಕಾರಣರೂಪವಾಗಿದೆಯೋ ಅಥವಾ ಮೊದಲು ಕಾರಣವಾಗಿದ್ದು ಆಮೇಲೆ ಕಾರ್ಯರೂಪವಾಗಿದೆಯೋ? ಈ ಎರಡು ವಿಧದಿಂದ ಕಾಣುತ್ತಲೂ ಇದೆ, ಅವ್ಯಕ್ತವಾಗಿಯೂ ಇದೆ. ಆ ಜಗತ್ತು ಮತ್ತು ಬ್ರಹ್ಮ ಎಂಬ ಎರಡು ಕಾರಣಗಳನ್ನು ತಿಳಿದುಕೊ. ಪರಬ್ರಹ್ಮನು ಸತ್ಯನು, ಪರಮನು, ಕಲ್ಯಾಣನು ಎಂದು ತಿಳಿದುಕೊ.
ಬ್ರಹ್ಮೇತಿ ಚಾಭಿವಿಖ್ಯಾತಂ ತದ್ವೈ ಪಶ್ಯಂತಿ ಸೂರಯಃ |
ಬ್ರಹ್ಮತೇಜೋಮಯಂ ಭೂತಂ ಭೂತಕಾರಣಮದ್ಭುತಮ್ ॥16॥
ಈ ಜಗತ್ತಿಗೆ ಕಾರಣವಾದ ವಸ್ತುವನ್ನು ಬ್ರಹ್ಮ ಎಂದು ಹೇಳುತ್ತಾರೆ. ಆ ವಸ್ತುವನ್ನೇ ಅನ್ವೇಷಣೆ ಮಾಡುತ್ತಾರೆ. ಈ ಪಂಚಭೂತಾತ್ಮಕವಾದ ಜಗತ್ತು ಪರಬ್ರಹ್ಮನ ಸಾಮರ್ಥ್ಯದಿಂದಲೇ ಉತ್ಪನ್ನವಾಗಿದೆ. ಈ ಪಂಚಭೂತಗಳಿಗೆ ಕಾರಣನಾದ ಪರಬ್ರಹ್ಮನು ಅದ್ಭುತನೆನಿಸಿದ್ದಾನೆ.
ಆಸೀದಾದೌ ತತಸತ್ತ್ವಹುಃ ಪ್ರಾಧಾನ್ಯಮಿತಿ ತದ್ವಿದಃ |
ತ್ರಿಗುಣಾಂ ತಾಂ ಮಹಾಮಾಯಾಂ ವೈಷ್ಣವೀಂ ಪ್ರಕೃತಿಂ ವಿದುಃ ॥17॥
ಈ ಸೃಷ್ಟಿಯ ಆರಂಭದಲ್ಲಿದ್ದ ವಸ್ತುವೇ ಇದು. ಈ ಪರಬ್ರಹ್ಮನೆಂಬ ವಸ್ತುವಿನಿಂದ ತ್ರಿಗುಣಾತ್ಮಕವಾದ, ಮಹಾಮಾಯೆ ಎನಿಸಿದ, ವಿಷ್ಣು ಸಂಬಂಧಿನಿಯಾದ ಪ್ರಕೃತಿಯು ಸೃಷ್ಟಳಾದಳು.
ತದೀದೃಶಮನಾದ್ಯಂತಮವ್ಯಕ್ತಮಜರಂ ಧ್ರುವಮ್ |
ಅಪ್ರತರ್ಕ್ಯಮವಿಜ್ಞೇಯಂ ಬ್ರಹ್ಮಾಗ್ರೇ ವಿಕೃತಂ ಚ ತತ್ ॥18॥
ಈ ಮೂಲಪ್ರಕೃತಿಯು ಅನಾದಿ-ಅನಂತವು, ಅವ್ಯಕ್ತವು, ಜರಾರಹಿತವೂ, ಶಾಶ್ವತವು, ಊಹೆಗೂ ನಿಲುಕದಿರುವುದು, ತಿಳಿಯಲಾಗದುದು. ಬ್ರಹ್ಮನ ಬುದ್ಧಿಯಿಂದ ಕಾರ್ಯರೂಪದಲ್ಲಿ ಪರಿಣಾಮ ಹೊಂದಿಹುದು.
ತದ್ವೈ ಪ್ರಧಾನಮುದ್ದಿಷ್ಟಂ ತ್ರಿಸೂಕ್ಷ್ಮಂ ತ್ರಿಗುಣಾತ್ಮಕಮ್ |
ಸಮ್ಯಗ್ಯೋಗಗುಣಂ ಸ್ವಸ್ಥಂ ತದಿಚ್ಛಾಕ್ಷೋಭಿತಂ ಮಹತ್ ॥19॥
ಈ ಮೂಲಪ್ರಕೃತಿಯನ್ನೇ ಪ್ರಧಾನ ಎಂದು ಕರೆಯುತ್ತಾರೆ. ಶ್ರೀ-ಭೂ- ದುರ್ಗಾತ್ಮಕವಾದ ರೂಪಗಳು ಸತ್ತ್ವ, ರಜಸ್, ತಮೋಗುಣಗಳಿಗೆ ನಿಯಾಮಕಗಳು ಆಗಿವೆ. ಈ ಮೂರುಗುಣಗಳ ಸೂಕ್ಷ್ಮ ಅಣುಗಳೇ ಈ ಮೂರು ರೂಪಗಳಿಗೆ ನಿಯಾಮಕಗಳು. ಸ್ವಸ್ಥವೂ, ಉತ್ತಮ ಗುಣಗಳಿಂದ ಕೂಡಿರುವ ಈ ಪ್ರಕೃತಿಯು ನಾರಾಯಣನ ಇಚ್ಛೆಯಿಂದಲೇ ಶೋಭಿತವಾಗಿ ಮಹತ್ತೆನಿಸಿದೆ.
ಶಕ್ತಿತ್ರಯಾತ್ಮಿಕಾ ತಸ್ಯ ಪ್ರಕೃತಿಃ ಕಾರಣಾತ್ಮಿಕಾ |
ಅಸ್ವತಂತ್ರಾ ಚ ಸತತಂ ವಿದಧಿಷ್ಠಾನಸಂಯುತಾ ॥20॥
ಮೂರುಗುಣಗಳಿಂದ ಕೂಡಿರುವ, ಕಾರಣಾತ್ಮಿಕೆ ಎನಿಸಿದ ಪ್ರಕೃತಿಯು ಭಗವಂತನ ದೆಸೆಯಿಂದ ನೆಲೆಗೊಂಡಿದೆ. ನಿರಂತರವೂ ಈ ಮೂಲಪ್ರಕೃತಿಯು ಭಗವಂತನ ಅಧೀನವಾದುದರಿಂದ ಅಸ್ವತಂತ್ರವೆನಿಸಿದೆ. ಭಗವಂತನೆಂಬ ಆಧಾರವನ್ನೇ ಆಶ್ರಯಿಸಿದೆ.
ಸ್ವಭಾವಾಖ್ಯಂ ಸಮಾಪನ್ನಾ ಮೋಹವಿಗ್ರಹಧಾರಿಣೀ |
ವಿವಿಧಸ್ಯಾಸ್ಯ ಜೀವಸ್ಯ ಭೋಗಾರ್ಥಂ ಸಮುಪಾಗತಾ ॥21॥
ಅಸ್ವತಂತ್ರವಾದ ಈ ಪ್ರಕೃತಿಯು ಸ್ವಭಾವವೆಂಬ ನಾಮಾಂತರವುಳ್ಳದ್ದಾಗಿ, ಮೋಹರೂಪವೆನಿಸಿ, ನಾನಾ ಜೀವಗಳ ಭೋಗವನ್ನುದ್ದೇಶಿಸಿ ಪ್ರಪಂಚವಾಗಿ ಹೊರಹೊಮ್ಮಿದೆ.
ಯಥಾ ಸನ್ನಿಧಿಮಾತ್ರೇಣ ಗಂಧಕ್ಷೋಭಾಯ ಜಾಯತೇ |
ಮನಸ್ತದ್ವದಶೇಷಸ್ಯ ಪರಾತ್ ಪರ ಇತಿ ಸ್ಮೃತಃ ॥22॥
ಮನಸ್ಸು ತನ್ನ ಸಾನ್ನಿಧ್ಯಮಾತ್ರದಿಂದ ಘ್ರಾಣೇಂದ್ರಿಯವನ್ನು ಗಂಧಾದಿಗಳಲ್ಲಿ ಚಲಿಸಲು ಹೇಗೆ ಕಾರಣವಾಗುತ್ತದೋ ಇದರಂತೆ ಪರಾತ್ಪರನಾದ ಭಗವಂತನು ಅಶೇಷವಾದ ಈ ಜಗತ್ತಿಗೆ ತನ್ನ ಸಾನ್ನಿಧ್ಯದಿಂದಲೇ ಕಾರಣನೆನಿಸಿದ್ದಾನೆ.
ಸೃಷ್ಟ್ವಾ ಪ್ರವಿಶ್ಯ ತತ್ ತಸ್ಮಿನ್ ಕ್ಷೋಭಯಾಮಾಸ ವಿಷ್ಣುತಃ |
ಸಾತ್ವಿಕೋ ರಾಜಸಶ್ಚೈವ ತಾಮಸಶ್ಚ ತ್ರಿಧಾ ಮಹಾನ್ ॥23॥

ಪರಮಾತ್ಮನು ಪ್ರಧಾನವನ್ನು ಸೃಷ್ಟಿಸಿ, ಅದರಲ್ಲಿ ತಾನೂ ಪ್ರವೇಶಿಸಿ, ಅದನ್ನು ಕ್ಷೋಭೆಗೊಳಿಸಿದಾಗ ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ಭೇದವುಳ್ಳ ಮಹತ್‌ತತ್ತ್ವ ಅಥವಾ ಪ್ರಧಾನತತ್ತ್ವ ಎನಿಸಿತು.
ಪ್ರಧಾನತತ್ತ್ವಾದುದ್ಭೂತೋ ಮಹತ್ತ್ವಾಚ್ಚ ಮಹಾನ್ ಸ್ಮೃತಃ |
ಪ್ರಧಾನತತ್ತ್ವಮುದ್ಭೂತಂ ಮಹತ್ತತ್ತ್ವಂ ಸಮಾವೃಣೋತ್ ॥24॥
ಪ್ರಧಾನತತ್ತ್ವದಿಂದ ಸೃಷ್ಟಿಯನ್ನು ಪಡೆದ ಕಾರಣದಿಂದ ಮಹತ್ವ ಇರುವುದರಿಂದಲೂ ಮೂರು ಗುಣಗಳಿಂದ ಉತ್ಪನ್ನವಾದ ತತ್ತ್ವಕ್ಕೆ ಮಹತ್ತತ್ತ್ವ ಎನ್ನಲಾಗಿದೆ. ಮಹತ್ತತ್ತ್ವವು ಪ್ರಧಾನತತ್ತ್ವದಿಂದ ಆವೃತವಾಗಿದೆ.
ಕಾಲಾತ್ಮನಾಽಭಿಭೂತಂ ತತ್ಕಾಲೋಽಂಶಃ ಪರಮಾತ್ಮನಃ |
ಪುರುಷಶ್ಚಾಪ್ರಮೇಯಾತ್ಮಾ ಸ ಏವ ಇತಿ ಗೀಯತೇ ॥25॥
ಮಹತ್ತತ್ತ್ವವು ಕಾಲಸ್ವರೂಪಿಯಾದ ಭಗವಂತನಿಂದ ಆವೃತವಾಗಿದೆ. ಆ ಕಾಲವೆಂಬ ಅಂಶವು ಪರಮಾತ್ಮನ ಅಂಶವೇ ಆಗಿದೆ. ಆ ಕಾಲಪುರುಷನೇ ಅಪ್ರಮೇಯನು ಎಂದು ಕರೆಸಿಕೊಳ್ಳಲ್ಪಡುತ್ತಾನೆ.
ತ್ರಿಗುಣೋಸೌ ಮಹಾಜ್ಞಾತಃ ಪ್ರಧಾನ ಇತಿ ವೈ ಶ್ರುತಿಃ ॥26॥
ಸತ್ತ್ವ-ರಜಸ್-ತಮೋಗುಣಗಳೇ ವಿಸ್ತಾರಗೊಂಡಿವೆ. ಇವುಗಳನ್ನೇ ಪ್ರಧಾನ ಎಂದು ಶ್ರುತಿಯು ಹೇಳುತ್ತಿದೆ.
ಸಾತ್ವಿಕೋ ರಾಜಸಶ್ಚೈವ ತಾಮಸಶ್ಚ ತ್ರಿಧಾತ್ಮಕಃ |
ತ್ರಿವಿಧೋಽಯಮಹಂಕಾರೋ ಮಹತ್ತತ್ತ್ವಾದಜಾಯತ ॥27॥
ಮಹತ್ತತ್ತ್ವದ ದೆಸೆಯಿಂದ ಸಾತ್ವಿಕ-ರಾಜಸ-ತಾಮಸವೆಂಬ ಮೂರುವಿಧವಾದ ಅಹಂಕಾರತತ್ತ್ವದ ಸೃಷ್ಟಿಯಾಯಿತು.
ತಾಮಸೋಽಸಾವಹಂಕಾರೋ ಭೂತಾದಿರಿತಿ ಸಂಜ್ಞಿತಃ |
ಭೂತಾನಾಮಾದಿಭೂತತ್ವಾದ್ ರಕ್ತಾಹಿಸ್ತಾಮಸ ಸ್ಮೃತಃ ॥28॥
ತಾಮಸ ಅಹಂಕಾರವು ಭೂತಾದಿ ಎಂಬ ಸಂಜ್ಞೆಯನ್ನು ಹೊಂದಿದೆ. ಸಮಸ್ತ ಭೂತಗಳಿಗೂ ಮೂಲಕಾರಣವಾದುದರಿಂದ ಜಗತ್ತನ್ನು ನುಂಗುವಂತಹ ಕೆಂಪು ಬಣ್ಣದ ಸರ್ಪವಾದ ಇದನ್ನೇ ತಾಮಸ ಅಹಂಕಾರ ಎನ್ನುತ್ತಾರೆ.
ಭೂತಾದಿಃ ಸ ವಿಕುರ್ವಾಣಃ ಶಿಷ್ಟಂ ತನ್ಮಾತ್ರಕಂ ತತಃ |
ಸಸರ್ಜ ಶಬ್ದಂ ತನ್ಮಾತ್ರಮಾಕಾಶಂ ಶಬ್ದಲಕ್ಷಣಮ್ ॥29॥
ಭೂತಾದಿ ಎನಿಸಿದ ತಾಮಸ ಅಹಂಕಾರವು ಭೇದ ಹೊಂದಿ, ಉಳಿದ ಶಬ್ದಾದಿ ತನ್ಮಾತ್ರಗಳನ್ನು ಸೃಷ್ಟಿಸಿತು. ಆ ತನ್ಮಾತ್ರವು ಶಬ್ದಮಯವಾದ ಆಕಾಶವನ್ನು ಹುಟ್ಟಿಸಿತು.
ಶಬ್ದಲಕ್ಷಣಮಾಕಾಶಂ ಶಬ್ದಮಾತ್ರಂ ಸಮಾವೃಣೋತ್ |
ತೇನ ಸಂಪೀಡ್ಯಮಾನಸ್ತು ಸ್ಪರ್ಶಮಾತ್ರಂ ಸಸರ್ಜ ಹ ॥30॥
ಶಬ್ದಗುಣವುಳ್ಳ ಆಕಾಶವು ಆ ತನ್ಮಾತ್ರವನ್ನು ಘಟವು ಮಣ್ಣನ್ನು ಆವರಿಸುವಂತೆ ಆವರಿಸಿತು. ಶಬ್ದತನ್ಮಾತ್ರದಿಂದ ಕ್ಷೋಭೆಗೆ ತುತ್ತಾದ ಆಕಾಶವು ಸ್ಪರ್ಶ ತನ್ಮಾತ್ರವನ್ನು ಹುಟ್ಟಿಸಿತು.
ಶಬ್ದಮಾತ್ರಂ ತದಾಕಾಶಂ ಸ್ಪರ್ಶಮಾತ್ರಂ ಸಮಾವೃಣೋತ್ |
ಸಸರ್ಜ ವಾಯುಸ್ತೇನಾಸೌ ಪೀಡ್ಯಮಾನ ಇತಿ ಶ್ರುತಿಃ ॥31॥
ಸೂಕ್ಷ್ಮ ಶಬ್ದವುಳ್ಳ ಆಕಾಶವು ಸ್ಪರ್ಶ ತನ್ಮಾತ್ರವನ್ನು ಆವರಿಸಿಕೊಂಡಿತು. ಆ ಆಕಾಶದ ಚಲನೆಯಿಂದ ಸ್ಪರ್ಶವು ವಾಯುವನ್ನು ಹುಟ್ಟಿಸಿತು.
ಸ್ಪರ್ಶಮಾತ್ರಂ ತದಾ ವಾಯೂ ರೂಪಮಾತ್ರಂ ಸಮಾವೃಣೋತ್ |
ತೇನ ಸಂಪೀಡ್ಯಮಾನಸ್ತು ಸಸರ್ಜಾಗ್ನಿಮಿತಿ ಶ್ರುತಿಃ ॥32॥
ರೂಪಮಾತ್ರಂ ತತೋ ವಹ್ನಿಂ ಸಮುತ್ಸಜ್ಯ ಸಮಾವೃಣೋತ್ |
ತೇನ ಸಂಪೀಡ್ಯಮಾನಸ್ತು ರಸಮಾತ್ರಂ ಸಸರ್ಜ ಹ ॥33॥
ಬಳಿಕ ಸ್ಪರ್ಶವಾಯುವು ರೂಪತನ್ಮಾತ್ರವನ್ನು ಹುಟ್ಟಿಸಿ ಅದನ್ನು ಆವರಿಸಿತು. ರೂಪ ತನ್ಮಾತ್ರವು ಕ್ಷೋಭೆಗೊಂಡು ಆ ರೂಪವು ಅಗ್ನಿಯನ್ನು ಹುಟ್ಟಿಸಿತು. ಬಳಿಕ ಆ ರೂಪವು ಆವರಿಸಿಕೊಂಡಾಗ ಆ ರೂಪದ ಕ್ಷೋಭೆಯಿಂದ ಅಗ್ನಿಯಲ್ಲಿ ರಸತನ್ಮಾತ್ರವು ಹುಟ್ಟಿತು. ವ್ಯಾಖ್ಯಾನ ವಿಶೇಷ ಹಿಂದೆ ಪ್ರಶ್ನೆ ಮಾಡುವಾಗ ಕಾರ್ಯವು ಕಾರಣವನ್ನು ಆವರಿಸಿತು. ಕಾರಣವು ಕಾರ್ಯವನ್ನು ಆವರಿಸಿತು. ಎರಡು ಬಗೆಯಾದ ಸ್ಥಿತಿಯನ್ನು ಉತ್ತರಿಸಿ ಎಂದು ಶುಕರು ಪ್ರಶ್ನಿಸಿದ್ದಾರೆ. ಅದಕ್ಕನುಗುಣವಾಗಿ ವ್ಯಾಸರು ಹಿಂದೆ ಕಾರ್ಯವು ಕಾರಣವನ್ನು ಆವರಿಸಿತು ಎಂದು ಹೇಳಿ, ಇಲ್ಲಿ ಕಾರಣವು ಕಾರ್ಯವನ್ನು ಆವರಿಸಿತು ಎಂದು ಹೇಳುತ್ತಿದ್ದಾರೆ. ಈ ಪಂಚಭೂತ, ತನ್ಮಾತ್ರಗಳಲ್ಲಿ ಅನ್ಯೋನ್ಯ ವ್ಯಾಪ್ತಿ ಇರುವುದರಿಂದ ಕಾರ್ಯವು ಕಾರಣವನ್ನು, ಕಾರಣವು ಕಾರ್ಯವನ್ನು ಆವರಿಸಿತು ಎಂಬ ವಚನಗಳು ಸಮಂಜಸವಾಗುತ್ತವೆ.
ರೂಪಮಾತ್ರಗತಂ ತೇಜೋ ರಸಮಾತ್ರಂ ಸಮಾವೃಣೋತ್ |
ತೇನ ಸಂಪೀಡ್ಯಮಾನಸ್ತು ಸಸರ್ಜಾಂಭ ಇತಿ ಶ್ರುತಿಃ ॥34॥
ಸೂಕ್ಷ್ಮರೂಪವನ್ನು ಹೊಂದಿದ ಅಗ್ನಿಯು ರಸತನ್ಮಾತ್ರವನ್ನು ಆವರಿಸಿತು. ಆ ಅಗ್ನಿಯಿಂದ ಚೆನ್ನಾಗಿ ಕ್ಷೋಭಿತವಾಗಲ್ಪಟ್ಟ ರಸವು ಜಲವನ್ನು ಸೃಷ್ಟಿಸಿತು.
ರಸಮಾತ್ರಾತ್ಮಕಂ ಭೂಯೋ ರಸಂ ತನ್ಮಾತ್ರಮಾವೃಣೋತ್ |
ತೇನ ಸಂಪೀಡ್ಯಮಾನಸ್ತು ಗಂಧತನ್ಮಾತ್ರಕಂ ತತಃ ॥35॥
ಪುನಃ ಆ ರಸವು ಜಲವನ್ನು ಆವರಿಸಿತು. ಆ ರಸದಿಂದ ಶೋಭಿತವಾದ ಜಲವು ಗಂಧತನ್ಮಾತ್ರವನ್ನು ಹುಟ್ಟಿಸಿತು.
ಸಸರ್ಜ ಗಂಧತನ್ಮಾತ್ರಮಾವೃಣೋತ್ಮರಕಂ ತತಃ |

ತೇನ ಸಂಪೀಡ್ಯಮಾನಸ್ತು ಕಾಠಿನ್ಯಂ ಚ ಸಸರ್ಜ ಹ ॥36॥
ಜಲವು ಸೂಕ್ಷ್ಮವಾದ ಆ ಗಂಧವನ್ನು ಆವರಿಸಿತು. ಆ ಜಲದಿಂದ ಕ್ಷೋಭಿಸಲ್ಪಟ್ಟ ಗಂಧವು ಕಾಠಿಣ್ಯವನ್ನು ಅರ್ಥಾತ್ ಕಲ್ಲಿನಂತಹ ಪೃಥಿವಿಯನ್ನು ಹುಟ್ಟಿಸಿತು.
ಪೃಥಿವೀ ಜಾಯತೇ ತಸ್ಮಾದ್ ಗಂಧತನ್ಮಾತ್ರಜಾತ್ ತಥಾ ॥37॥
ಆ ಕಾಠಿಣ್ಯದಿಂದಲೇ ಭೂಮಿಯು ಹುಟ್ಟಿತು. ಆ ಗಂಧತನ್ಮಾತ್ರದಿಂದ ಹುಟ್ಟಿದ ಅಂಶವೇ ಪೃಥಿವಿ ಎನಿಸಿದೆ.
ಅಮ್ಮಯಂ ಸರ್ವಮೇವೇದಮಾಪಸ್ತಸ್ತಂಭಿರೇ ತಯಾ |
ಭೂತಾನೀಮಾನಿ ಜಾತಾನಿ ಪೃಥಿವ್ಯಾದೀನಿ ವೈ ಶ್ರುತಿಃ ॥38॥
ಪೃಥಿವಿ ರೂಪವಾದ ಈ ಜಗತ್ತೆಲ್ಲವೂ ನೀರಿನಿಂದಲೇ ತುಂಬಿದೆ. ಈ ಪೃಥಿವಿಯ ಅಧೋಭಾಗದಲ್ಲಿರುವ ಘನೋದಕವೆಂಬ ನೀರಿನ ಸಮುದಾಯವು ಭೂಮಿಯನ್ನು ಧರಿಸಿದೆ. ಈ ಪೃಥಿವಿಯಿಂದ ಕಣ್ಣಿಗೆ ಕಾಣುವ ಈ ಸಮಸ್ತ ಭೂತಗಳು ಉತ್ಪತ್ತಿಯನ್ನು ಪಡೆದಿವೆ ಎಂದು ಶ್ರುತಿ ಇದೆ.
ಭೂತಾನಾಂ ಮೂರ್ತಿರೇವೈಷಾಮನ್ನಂ ಚೈಷಾಂ ಮತಾ ಬುಧೈಃ |
ತಸ್ಮಿಂಸ್ತಸ್ಮಿಂಸ್ತು ತನ್ಮಾತ್ರಾ ತನ್ಮಾತ್ರಾ ಇತಿ ತೇ ಸ್ಮೃತಾಃ ॥ 39॥
ಈ ಭೂತಶರೀರಗಳೆಲ್ಲ ಅನ್ನವೆಂದೇ ಪ್ರಾಜ್ಞರ ಮತವು. ಈ ಭೂತದಲ್ಲಿರುವ ಸೂಕ್ಷ್ಮಭಾಗವೇ ತನ್ಮಾತ್ರಗಳೆಂದು ಹೇಳಲ್ಪಡುತ್ತವೆ.
ತೈಜಸಾನೀಂದ್ರಿಯಾಣ್ಯಾಹುರ್ದೇವಾ ವೈಕಾರಿಕಾ ದಶ |
ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾ ಸ್ಮೃತಾಃ ॥40॥
ತೇಜೋರೂಪವಾದ ಹತ್ತು ಇಂದ್ರಿಯಗಳನ್ನು ಕಾರ್ಯರೂಪವನ್ನು ಹೊಂದಿದ ದೇವತೆಗಳೆಂದು ಹೇಳುತ್ತಾರೆ. ಹನ್ನೊಂದನೆಯದ್ದು ಮನಸ್ಸೆಂಬ ಇಂದ್ರಿಯ ಎನ್ನುತ್ತಾರೆ. ದೇವತೆಗಳೇ ಹೀಗೆ ವಿಕಾರ ಸ್ವಭಾವವನ್ನು ಹೊಂದಿದ ಇಂದ್ರಿಯರೂಪಿಗಳೆಂದು ಕರೆಸಿಕೊಳ್ಳಲ್ಪಡುತ್ತಾರೆ.
ಏಷಾಮುದ್ವರ್ತಕಃ ಕಾಲೋ ನಾನಾಭೇದವದಾಸ್ಥಿತಃ |
ಪರಮಾತ್ಮಾ ಚ ಭೂತಾತ್ಮಾ ಗುಣಭೇದೇನ ಸಂಸ್ಥಿತಃ |
ಏಕ ಏವ ತ್ರಿಧಾ ಭಿನ್ನಃ ಕರೋತಿ ವಿವಿಧಾಃ ಕ್ರಿಯಾಃ ॥41॥
ಈ ಎಲ್ಲ ತತ್ತ್ವಗಳನ್ನು ನಿರಂತರವೂ ಧರಿಸಿದವನು ಕಾಲನಾಮಕನಾದ ಭಗವಂತನೇ ಆಗಿದ್ದಾನೆ. ನಾನಾ ಭೇದವುಳ್ಳವನಂತೆ ಭಿನ್ನವಾದ ಪದಾರ್ಥಗಳಲ್ಲಿ ಸವಿಶೇಷಾಭಾವದಿಂದ ಸನ್ನಿಹಿತನಾಗಿದ್ದಾನೆ. ಭೂತಾತ್ಮನೆನಿಸಿದ ಪರಮಾತ್ಮನು ಸೃಷ್ಟಿ- ಸ್ಥಿತಿ-ಸಂಹಾರ ಎಂಬ ಮೂರುಗುಣಗಳಿಂದ ಜಗತ್ತಿನಲ್ಲಿ ಇದ್ದಾನೆ. ಒಬ್ಬನೇ ಆದ ಪರಮಾತ್ಮನು ಬ್ರಹ್ಮನಲ್ಲಿ ಬ್ರಹ್ಮರೂಪದಿಂದ, ರುದ್ರನಲ್ಲಿ ರುದ್ರರೂಪದಿಂದ ಇದ್ದು ಸೃಷ್ಟಿ- ಸಂಹಾರಗಳನ್ನು ನಡೆಸುತ್ತಾ, ಸ್ವಯಂ ವಿಷ್ಣುರೂಪದಿಂದ ಸ್ಥಿತಿಯನ್ನು ನಿರ್ವಹಿಸುತ್ತಿದ್ದಾನೆ. ಈ ರೀತಿಯಾದ ಅನೇಕ ಕ್ರಿಯೆಗಳು ಭಗವಂತನಿಂದಲೇ ನಡೆಯುತ್ತಿವೆ.
ವ್ಯಾಖ್ಯಾನ ವಿಶೇಷ `ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ | ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃಕ್ ॥' ಎಂಬ ಭಾಗವತದ ದ್ವಿತೀಯ ಸ್ಕಂಧದ ಆರನೆಯ ಅಧ್ಯಾಯದ ಮೂವತ್ತೊಂದನೆಯ ಶ್ಲೋಕದ ಅಭಿಪ್ರಾಯವು ಇಲ್ಲಿಯೂ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.
ಬ್ರಹ್ಮಾ ಸೃಜತಿ ಭೂತಾನಿ ಪಾತಿ ನಾರಾಯಣೋಽವ್ಯಯಃ |
ರುದ್ರೋ ಹಂತಿ ಜಗನ್ಮೂರ್ತಿಃ ಕಾಲ ಏಷ ಕ್ರಿಯಾಬುಧಃ ॥42॥
ಬ್ರಹ್ಮನಲ್ಲಿರುವ ರೂಪದಿಂದ ಭಗವಂತನು ಸೃಷ್ಟಿಯನ್ನು ಮಾಡುತ್ತಾನೆ. ಸ್ವಯಂ ನಾರಾಯಣನಾಗಿ ಪಾಲಿಸುತ್ತಾನೆ. ರುದ್ರ ಎಂಬ ರೂಪದಿಂದ ಜಗತ್ತನ್ನು ಸಂಹರಿಸುತ್ತಾನೆ. ಇವನನ್ನೇ ಕಾಲ ಎಂದು ಕ್ರಿಯೆಗಳನ್ನು ತಿಳಿದ ಜ್ಞಾನಿಗಳು ಹೇಳುತ್ತಾರೆ.
ಕಾಲೋಽಪಿ ತನ್ಮಯೋಽಚಿಂತ್ಯಸ್ತ್ರಿಗುಣಾತ್ಮಾ ಸನಾತನಃ |
ವ್ಯಕ್ತೋಽಸಾವಚಿಂತ್ಯೋಽಸೌ ವರ್ತತೇ ಭಿನ್ನಲಕ್ಷಣಃ ॥43॥
ಕಾಲನಿಯಾಮಕನಾದ, ಕಾಲಾಂತರ್ಯಾಮಿಯಾದ ಭಗವಂತನಾದರೂ ಅಚಿಂತ್ಯನೂ, ಮೂರುಗುಣವುಳ್ಳವನೂ, ಸನಾತನನೂ, ಅವ್ಯಕ್ತನೂ, ಜಗತ್ತಿಗಿಂತ ಅತ್ಯಂತ ವಿಲಕ್ಷಣನೂ ಆಗಿ ಇದ್ದಾನೆ.
ಕಾಲಾತ್ಮನಾ ತ್ವಿದಂ ಭಿನ್ನಮಭಿನ್ನಂ ಶ್ರೂಯತೇ ಹಿ ಯತ್ |
ಅನಾದ್ಯಂತಮಜಂ ದಿವ್ಯಮವ್ಯಕ್ತಮಜರಂ ಧ್ರುವಮ್ |
ಅಪ್ರತರ್ಕ್ಯಮವಿಜ್ಞೇಯಂ ಬ್ರಹ್ಮಾಗ್ರೇ ಸಂಪ್ರವರ್ತತೇ ॥44॥
ಹೀಗೆ ಬ್ರಹ್ಮ, ವಿಷ್ಣು, ರುದ್ರ, ಕಾಲ ಎಂಬ ನಾಲ್ಕು ರೂಪಗಳಿಂದ ಭಗವಂತನು ಕಾರ್ಯಪ್ರಪಂಚಕ್ಕೆ ಕಾರಣನಾಗಿ ಅವತಾರವನ್ನು ತಾಳಿದ್ದಾನೆ. ಈ ನಾಲ್ಕು ರೂಪಗಳು ಮೂಲರೂಪದ ಜೊತೆಗೆ ಅಭಿನ್ನವೇ ಆಗಿರುತ್ತವೆ. ಅನಾದಿಯೂ, ಅನಂತನೂ, ಹುಟ್ಟಿಲ್ಲದವನೂ, ಅಜರನೂ, ಅವ್ಯಕ್ತನೂ, ಶಾಶ್ವತನೂ, ಊಹೆಗೆ ನಿಲುಕದವನೂ, ತಿಳಿಯಲಾಗದವನೂ ಆಗಿ ನಾರಾಯಣನು ಇದ್ದಾನೆ.
ಕಾಷ್ಠಾ ನಿಮೇಷಾ ದಶ ಪಂಚ ಚೈವ
ತ್ರಿಂಶತ್ತು ಕಾಷ್ಠಾ ಗಣಯೇತ್ ಕಲಾಂ ತಾಮ್ |
ತ್ರಿಂಶತ್ಕಲಶ್ಚಾಪಿ ಭವೇನ್ಮುಹೂರ್ತೋ
ಭಾಗಃ ಕಲಾಯಾ ದಶಮಶ್ಚ ಯಃ ಸ್ಯಾತ್ ॥45॥
ತ್ರಿಂಶನ್ಮುಹೂರ್ತಂ ತು ಭವೇದಹಶ್ಚ
ರಾತ್ರಿಶ್ಚ ಸಂಖ್ಯಾ ಮುನಿಭಿಃ ಪ್ರಣೀತಾ |
ಮಾಸಃ ಸ್ಮೃತೋ ರಾತ್ರ್ಯಹನೀ ಚ ತ್ರಿಂಶತ್

ಸಂವತ್ಸರೋ ದ್ವಾದಶಮಾಸ ಉಕ್ತಃ ॥46॥
ಸಂವತ್ಸರಂ ದ್ವೇ ಅಯನೇ ವದಂತಿ
ಸಂಖ್ಯಾವಿದೋ ದಕ್ಷಿಣಮುತ್ತರಂ ಚ ॥47॥
ಕಾಲದಲ್ಲಿಯೂ ಅನೇಕ ಭೇದಗಳು ಇವೆ. ಹದಿನೈದು ನಿಮಿಷಗಳು ಒಂದು ಕಾಷ್ಠ. ಮೂವತ್ತು ಕಾಷ್ಠಗಳು ಒಂದು ಕಲೆ. ಮೂವತ್ತು ಕಲೆಗಳು ಅದರ ಮೇಲೆ ಒಂದು ಕಲೆಯ ಹತ್ತನೆಯ ಒಂದು ಭಾಗವೂ ಸೇರಿ ಮುಹೂರ್ತ ಎನಿಸುತ್ತದೆ. ಮೂವತ್ತು ಮುಹೂರ್ತಗಳು ಅಹೋರಾತ್ರವೆನಿಸುತ್ತವೆ. ಮೂವತ್ತು ಅಹೋರಾತ್ರಿಗಳು ಮಾಸವೆನಿಸುತ್ತವೆ. ಹನ್ನೆರಡು ಮಾಸಗಳು ಒಂದು ಸಂವತ್ಸರವೆನಿಸುತ್ತದೆ. ದಕ್ಷಿಣೋತ್ತರಗಳೆಂಬ ಎರಡು ಅಯನಗಳಾಗಿ ಸಂವತ್ಸರವು ವಿಭಾಗಿಸಲ್ಪಟ್ಟಿದೆ.
ಅಹೋರಾತ್ರೌ ವಿಭಜತೇ ಸೂರ್ಯೋ ಮಾನುಷಲೌಕಿಕೌ |
ರಾತ್ರಿಃ ಸ್ವಪ್ನಾಯ ಸಂಯಾತಿ ಚೇಷ್ಟಾಯೈ ಕರ್ಮಣಾಮಹಃ ॥48॥
ಮನುಷ್ಯರ ವ್ಯವಹಾರಕ್ಕಾಗಿ ಸೂರ್ಯನೇ ಹಗಲು-ರಾತ್ರಿಗಳನ್ನು ಉಂಟು ಮಾಡುತ್ತಾನೆ. ರಾತ್ರಿಯು ಎಲ್ಲಾ ಭೂತಗಳ ನಿದ್ರೆಗೂ, ಹಗಲು ಅವುಗಳು ಕರ್ಮಗಳನ್ನು ಅನುಭವಿಸುವುದಕ್ಕಾಗಿಯೂ ಏರ್ಪಟ್ಟಿದೆ.
ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತಯೋಃ ಪುನಃ |
ಶುಕ್ಲೋಽಹಃ ಕರ್ಮಚೇಷ್ಟಾಯಾಂ ಕೃಷ್ಣಃ ಸ್ವಪ್ನಾಯ ಶರ್ವರೀ ॥49॥
ಮನುಷ್ಯಮಾನದಲ್ಲಿ ಒಂದು ಮಾಸವು ಪಿತೃಗಳಿಗೆ ಒಂದು ಅಹೋರಾತ್ರ ಎನಿಸುತ್ತದೆ. ಶುಕ್ಲಪಕ್ಷದ ಹದಿನೈದು ದಿನಗಳು ಪಿತೃಗಳು ಕರ್ಮಗಳನ್ನು ನಡೆಸುವ ಹಗಲುಗಳಾಗಿವೆ. ಕೃಷ್ಣಪಕ್ಷವು ಪಿತೃಗಳಿಗೆ ನಿದ್ರಾಕಾಲವಾಗಿಯೂ ವಿಭಾಗಿಸಲ್ಪಟ್ಟಿದೆ.
ದೈವೇ ರಾತ್ರ್ಯಹನೀ ಹ್ಯಬ್ದಃ ಪ್ರವಿಭಾಗಸ್ತಯೋಃ ಪುನಃ |
ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ ದಕ್ಷಿಣಾಯನಮ್ ॥50॥
ಮನುಷ್ಯಮಾನದಲ್ಲಿ ಒಂದು ಸಂವತ್ಸರವು ದೇವತೆಗಳಿಗೆ ಒಂದು ಅಹೋರಾತ್ರ ಎನಿಸಿದೆ. ದೇವತೆಗಳಿಗೆ ಉತ್ತರಾಯಣವು ಹಗಲು ಎನಿಸಿದೆ. ದಕ್ಷಿಣಾಯನವು ರಾತ್ರಿ ಎನಿಸಿದೆ.
ಯೇ ತೇ ರಾತ್ರ್ಯಹನೀ ಪೂರ್ವಂ ಕೀರ್ತಿತೇ ದೈವಲೌಕಿಕೇ |
ತಯೋಃ ಸಂಖ್ಯಾಯ ವರ್ಷಾಗ್ರಂ ಬ್ರಾಹ್ಮೇ ವಕ್ಷ್ಯಾಮ್ಯಹಃಕ್ಷಪೇ ॥51॥
ತೇಷಾಂ ಸಂವತ್ಸರಾಗ್ರಾಣಿ ಪ್ರವಕ್ಷ್ಯಾಮ್ಯನುಪೂರ್ವಶಃ |
ಕೃತೇ ತ್ರೇತಾಯುಗೇ ಚೈವ ದ್ವಾಪರೇ ಚ ಕಲೌ ತಥಾ ॥52॥
ಇದೇ ಮನುಷ್ಯಮಾನದಲ್ಲಿ ಬ್ರಹ್ಮನಿಗೂ ಹಗಲು-ರಾತ್ರಿಗಳು, ಸಂವತ್ಸರಗಳು ಎನಿಸಲ್ಪಡುತ್ತವೆ. ಅನೇಕ ಸಂವತ್ಸರಗಳು ಯುಗವೆನಿಸುತ್ತವೆ. ಆ ಯುಗಗಳು ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಭಾಗಗಳಾಗಿವೆ.
ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಮ್ |
ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥53॥
ಕೃತಯುಗಕ್ಕೆ ನಾಲ್ಕು ಸಾವಿರ ದಿವ್ಯಸಂವತ್ಸರಗಳು. ಆ ಯುಗಸಂಧ್ಯೆಯು ಪೂರ್ವಾಂಶ, ಉತ್ತರಾಂಶ ಎಂದು ಎರಡು ಅಂಶಗಳಿಂದ ಕೂಡಿದೆ. ಪೂರ್ವಾಂಶವು ಇನ್ನೂರು ವರ್ಷಗಳು. ಉತ್ತರಾಂಶವು ಇನ್ನೂರು ವರ್ಷವು. ಒಟ್ಟು ಯುಗಸಂಧ್ಯೆಯು ನಾಲ್ಕುನೂರು ವರ್ಷಗಳಾಗುತ್ತವೆ. ಅದರಂತೆ ಕೃತ-ತ್ರೇತಾಯುಗಗಳ ಸಂಧ್ಯೆಯಲ್ಲಿ ಪೂರ್ವಾಂಶವು ನಾಲ್ಕುನೂರು, ಉತ್ತರಾಂಶವು ನಾಲ್ಕುನೂರು ಎಂದು ಗ್ರಹಿಸಿದರೆ ಎಂಟುನೂರು ವರ್ಷಗಳಾಗುತ್ತದೆ. ಇದೆಲ್ಲವೂ ಸೇರಿ ನಾಲ್ಕುಸಾವಿರದ ಎಂಟು ನೂರು ವರ್ಷಗಳು ಕೃತಯುಗವಾಗಿ ಗಣಿಸಲ್ಪಡುತ್ತದೆ.
ವ್ಯಾಖ್ಯಾನ ವಿಶೇಷ ತ್ರೇತಾಯುಗ, ದ್ವಾಪರ ಯುಗಗಳ ಸಂಧ್ಯೆಯಲ್ಲಿಯೂ ಒಂದು ಪಾದ ಕಡಿಮೆಯಾಗಿ ಮುನ್ನೂರು ಸಂವತ್ಸರಗಳಾಗುತ್ತವೆ. ಸಂಧ್ಯೆಯ ಪೂರ್ವಾಂಶವು, ಉತ್ತರಾಂಶವು ಎಂದು ವಿಭಾಗಿಸಿದರೆ ನೂರ ಐವತ್ತು ವರ್ಷ ಪೂರ್ವಾಂಶವಾಗುತ್ತದೆ. ಉತ್ತರಾಂಶವು ನೂರ ಐವತ್ತು ಸಂವತ್ಸರಗಳಾಗುತ್ತದೆ. ಪುನಃ ತ್ರೇತಾಯುಗ, ದ್ವಾಪರಯುಗಗಳ, ಪೂರ್ವಾಂಶ ಉತ್ತರಾಂಶ ಎಂದು ಸೇರಿಸಿದರೆ ಆರಂಭದ ಮುನ್ನೂರು ವರ್ಷ, ನಂತರದ ಮುನ್ನೂರು ವರ್ಷ ಒಟ್ಟಿನಲ್ಲಿ ಆರು ನೂರು ವರ್ಷ ಸಂಧಿಕಾಲವೆನಿಸುತ್ತದೆ. ತ್ರೇತಾಯುಗವು ಮೂರು ಸಾವಿರ ವರ್ಷ. ಒಟ್ಟು ಮೂರುಸಾವಿರದ ಆರು ನೂರು ವರ್ಷಗಳಾಗುತ್ತದೆ. ಅದರಂತೆ ದ್ವಾಪರ ಯುಗಕ್ಕೆ ಎರಡು ಸಾವಿರ ವರ್ಷ. ಅದರಲ್ಲಿಯೂ ಸಂಧಿಕಾಲವು ಪಾದಾಂಶ ಕಡಿಮೆ ಎಂದು ಗ್ರಹಿಸಿದರೆ ಪೂರ್ವಾಂಶವು ನೂರು, ಉತ್ತರಾಂಶವು ನೂರು. ದ್ವಾಪರ-ಕಲಿಯುಗಗಳ ಸಂಧಿಯ ಆರಂಭ ಕೊನೆಯ ಅಂಶಗಳನ್ನು ಪೂರ್ವಾಂಶ, ಉತ್ತರಾಂಶ ಎಂದು ಗ್ರಹಿಸಿದರೆ ಇನ್ನೂರು-ಇನ್ನೂರು ವರ್ಷಗಳಾಗುತ್ತವೆ. ಒಟ್ಟಿನಲ್ಲಿ ದ್ವಾಪರ ಯುಗಕ್ಕೆ ಎರಡು ಸಾವಿರದ ನಾಲ್ಕು ನೂರು ವರ್ಷಗಳಾಗುತ್ತವೆ. ಇದರಂತೆ ಕಲಿಯುಗ ಕೃತಯುಗಗಳ ಸಂಧಿಯು ಪಾದಾಂಶ ಊನವಾದುದರಿಂದ ಪೂರ್ವಾಂಶವು ಐವತ್ತು, ಉತ್ತರಾಂಶವು ಐವತ್ತು. ಎರಡು ಸಂಧಿಕಾಲಗಳು ನೂರು ನೂರು ಎನಿಸುತ್ತದೆ. ಒಟ್ಟಿನಲ್ಲಿ ಕಲಿಯುಗದಲ್ಲಿ ಸಾವಿರದ ಇನ್ನೂರು ದಿವ್ಯ ಸಂವತ್ಸರಗಳಾಗುತ್ತದೆ. ಹೀಗೆ ಚತುರ್ಯುಗಗಳ ಸಂಧಿಗಳ ಸಂವತ್ಸರಗಳನ್ನು ಮಾತ್ರ ಎರಡು ಸಾವಿರ ಸಂವತ್ಸರಗಳು ಎಂದು ಇಟ್ಟುಕೊಂಡು, ಆ ಎರಡು ಸಾವಿರ ಸಂವತ್ಸರಗಳನ್ನು ನಾಲ್ಕು ಯುಗಗಳಿಗೆ ವಿಭಾಗಿಸಿಕೊಳ್ಳಬೇಕು.
ಇತರೇಷು ಸಸಂಧ್ಯೇಷು ಸಂಧ್ಯಾಂಶೇಷು ತತಸ್ತ್ರಿಷು |
ಏಕಾಪಾಯೇನ ಸಂಯಾಂತಿ ಸಹಸ್ರಾಣಿ ಶತಾನಿ ಚ ॥54॥
ಮುಂದಿನ ಮೂರು ಯುಗಗಳಲ್ಲಿಯೂ, ಯುಗ, ಸಂಧ್ಯೆ, ಸಂಧ್ಯಾಂಶವೆಂಬ ಮೂರು ವಿಭಾಗದಲ್ಲಿ ಒಂದೊಂದರಲ್ಲಿಯೂ ಕ್ರಮವಾಗಿ ಕಾಲುಭಾಗದಷ್ಟು ಕಡಿಮೆಯಾಗುತ್ತಾ ಬರುತ್ತದೆ. ಎಂದರೆ ತ್ರೇತಾಯುಗದ ಕಾಲಪ್ರಮಾಣವು ಕೃತಯುಗದ ಕಾಲಪ್ರಮಾಣದಲ್ಲಿ ಮುಕ್ಕಾಲು ಪಾಲು ಅರ್ಥಾತ್ ಮೂರು ಸಾವಿರ ವರ್ಷಗಳು. ಇದರಂತೆ ಯುಗಸಂಧಿಗಳಲ್ಲಿ ಸಂಧ್ಯಂಶಗಳಲ್ಲಿ ಕಾಲು ಭಾಗ ತಗ್ಗುತ್ತಾ ಬರುವುದರಿಂದ ತ್ರೇತಾಯುಗದ ಕಾಲವು ಮೂರು ಸಾವಿರದ ಆರುನೂರು ದಿವ್ಯವರ್ಷಗಳಾಗುತ್ತವೆ. ಅದರಂತೆ ದ್ವಾಪರಯುಗಕ್ಕೆ

ಎರಡು ಸಾವಿರದ ನಾಲ್ಕುನೂರು ವರ್ಷಗಳು. ಕಲಿಯುಗಕ್ಕೆ ಸಾವಿರದ ಇನ್ನೂರು ದಿವ್ಯಸಂವತ್ಸರಗಳಾಗುತ್ತವೆ.
ಏತಾನಿ ಶಾಶ್ವತಾನ್ ಲೋಕಾನ್ ಧಾರಯಂತಿ ಸನಾತನಾನ್ |
ಏತದ್ ಬ್ರಹ್ಮವಿದಾಂ ತಾತ ವಿದಿತಂ ಬ್ರಹ್ಮ ಶಾಶ್ವತಮ್ ॥55॥
ಈ ಕಾಲವು ಎಂದೆಂದಿಗೂ ಕೊನೆಯಿಲ್ಲದಂತೆ ಸಾಗುತ್ತಾ ಲೋಕಗಳನ್ನು ಧರಿಸುತ್ತಿದೆ. ಬ್ರಹ್ಮಜ್ಞರು ಈ ಕಾಲವನ್ನೇ ಶಾಶ್ವತವೆನ್ನುತ್ತಾರೆ. ಬ್ರಹ್ಮ ಎನ್ನುತ್ತಾರೆ.
ವ್ಯಾಖ್ಯಾನ ವಿಶೇಷ ಕಾಲನಿಯಾಮಕನಾದ ಭಗವಂತನು ಕಾಲ ಎಂದೇ ಕರೆಸಿಕೊಂಡಿದ್ದಾನೆ.
ಚತುಷ್ಪಾತ್ ಸಕಲೋ ಧರ್ಮಃ ಸತ್ಯಂ ಚೈವ ಕೃತೇ ಯುಗೇ |
ನಾಧರ್ಮೇಣಾಗಮಃ ಕಶ್ಚಿದ್ ಯುಗೇ ತಸ್ಮಿನ್ ಪ್ರವರ್ತತೇ ॥56॥
ಕೃತಯುಗದಲ್ಲಿ ಧರ್ಮ, ಸತ್ಯಗಳೆರಡು ನಾಲ್ಕು ಪಾದಗಳನ್ನು ಊರಿ ಪೂರ್ಣವಾಗಿ ನಡೆಯುವುದರಿಂದ ಆ ಯುಗದಲ್ಲಿ ಅಧರ್ಮದ ಸಂಪರ್ಕವೇ ಇರುವುದಿಲ್ಲ.
ಇತರೇಷ್ವಾಗಮಾದ್ ಧರ್ಮಃ ಪಾದಶಸ್ತ್ವವರೋಪ್ಯತೇ |
ಸತ್ಯಂ ಶೌಚಂ ತಥಾಯುಶ್ಚ ಧರ್ಮಶ್ಚಾಪ್ಯೆತಿ ಪಾದಶಃ |
ಚೌರ್ಯಕಾನೃತಮಾಯಾಭಿರಧರ್ಮಶ್ಚೋಪಚೀಯತೇ ॥57॥
ಮುಂದಿನ ಯುಗದಲ್ಲಿ ಮೋಕ್ಷಧರ್ಮಗಳಲ್ಲಿ ಒಂದೊಂದು ಪಾದವೂ ತಗ್ಗುತ್ತಾ ಬರುತ್ತದೆ. ಸತ್ಯವೂ, ಶೌಚವೂ, ಆಯುಷ್ಯ- ಹೀಗೆ ಒಂದೊಂದು ಪಾದವು ಕಡಿಮೆಯಾಗುತ್ತಾ ಬರುತ್ತದೆ. ಅದಕ್ಕೆ ತಕ್ಕಂತೆ ಚೌರ್ಯ, ಅಸತ್ಯ, ವಂಚನೆ ಮೊದಲಾದವು ಹೆಚ್ಚುತ್ತಾ ಅಧರ್ಮವು ಅಭಿವೃದ್ಧಿಯನ್ನು ಹೊಂದುತ್ತದೆ.
ಅರೋಗಾಃ ಸರ್ವಸಿದ್ಧಾರ್ಥಾಶ್ಚತುರ್ವರ್ಷಶತಾಯುಶಃ |
ಕೃತೇ ತ್ರೇತಾಯುಗೇ ತ್ವೇಷಾಂ ಪಾದಶೋ ಹ್ರಸತೇ ವಯಃ ॥58॥
ಕೃತಯುಗದಲ್ಲಿ ಜನರು ರೋಗರಹಿತರಾಗಿ, ಸಕಲಾಭೀಷ್ಟಗಳನ್ನು ಹೊಂದಿ ನಾಲ್ಕು ನೂರು ಸಂವತ್ಸರಗಳ ತನಕ ಬದುಕುತ್ತಾರೆ. ತ್ರೇತಾಯುಗದಲ್ಲಿ ಜನರ ಆಯುಷ್ಯ ಕೃತಯುಗದ ಕಾಲುಭಾಗದಷ್ಟು ತಗ್ಗುತ್ತದೆ.
ವೇದವಾದಾಶ್ಚಾನುಯುಗಂ ಹ್ರಸಂತೀತೀಹ ನಃ ಶ್ರುತಮ್ |
ಆಯೂಂಷಿ ಚಾಶಿಷಶ್ಚೈವ ವೇದಸ್ಯೈವ ಚ ಯತ್ ಫಲಮ್ ॥59॥
ಒಂದೊಂದು ಯುಗದಲ್ಲಿಯೂ ಕ್ರಮವಾಗಿ ವೇದವಾದಗಳು ತಗ್ಗುತ್ತವೆ. ಆಯುಸ್ಸು ಕರ್ಮಗಳು, ಕರ್ಮಫಲಗಳು ಇವುಗಳೆಲ್ಲವೂ ಕ್ರಮವಾಗಿ ತಗ್ಗುತ್ತಾ ಬರುತ್ತವೆ.
ಅನ್ಯೇ ಕೃತಯುಗೇ ಧರ್ಮಾಸ್ತ್ರೇತಾಯಾಂ ದ್ವಾಪರೇಽಪರೇ |
ಅನ್ಯೇ ಕಲಿಯುಗೇ ಧರ್ಮಾ ಯಥಾಶಕ್ತಿ ಕೃತಾ ಇವ ॥60॥
ಕೃತಯುಗದ ಧರ್ಮಗಳೇ ಬೇರೆ. ತ್ರೇತಾಯುಗದ ಧರ್ಮಗಳೇ ಬೇರೆ. ದ್ವಾಪರ- ಕಲಿಯುಗದ ಧರ್ಮಗಳೇ ಬೇರೆ ಬೇರೆ. ಈ ಧರ್ಮಾಚರಣೆಯು ಆಯಾ ಯುಗಗಳಿಗೆ ತಕ್ಕಂತೆ ಮಾರ್ಪಾಡಾಗುತ್ತದೆ.
ತಪಃ ಪರಂ ಕೃತಯುಗೇ ತ್ರೇತಾಯಾಂ ಸತ್ಯಮುತ್ತಮಮ್ |
ದ್ವಾಪರೇ ಯಜ್ಞಮೇವಾಹುರ್ದಾನಮೇವ ಕಲೌ ಯುಗೇ ॥61॥
ಕೃತಯುಗದಲ್ಲಿ ತಪಸ್ಸೇ ಪ್ರಧಾನವು. ತ್ರೇತಾಯುಗದಲ್ಲಿ ಸತ್ಯವು ಪ್ರಧಾನವು. ದ್ವಾಪರ ಯುಗದಲ್ಲಿ ಯಜ್ಞವು, ಕಲಿಯುಗದಲ್ಲಿ ದಾನವು ಪ್ರಧಾನವು.
ಏತಾಂ ದ್ವಾದಶಸಾಹಸ್ರೀಂ ಯುಗಾಖ್ಯಾಂ ಕವಯೋ ವಿದುಃ |
ಸಹಸ್ರಪರಿವರ್ತಂ ತದ್ ಬ್ರಾಹ್ಮಂ ದಿವಸಮುಚ್ಯತೇ ॥62॥
ಹಿಂದೆ ಹೇಳಿದಂತೆ ಹನ್ನೆರಡು ಸಾವಿರ ದಿವ್ಯ ವರ್ಷಗಳು ಸೇರಿ ಒಂದು ಯುಗ ಪರಿವರ್ತನೆಯಾಗುತ್ತದೆ. ಇಂತಹ ನಾಲ್ಕು ಚತುರ್ಯುಗಗಳು ಸಾವಿರ ಬಾರಿ ಮುಗಿದರೆ ಬ್ರಹ್ಮನಿಗೆ ಅದು ಒಂದು ಹಗಲೆನಿಸುತ್ತದೆ.
ರಾತ್ರಿಸ್ತು ತಾವತೀ ಬ್ರಾಹ್ಮೀ ತದಾದೌ ವಿಶ್ವಮೀಶ್ವರಃ |
ಪ್ರಲಯೇ ಧ್ಯಾನಮಾವಿಶ್ಯ ಸುಪ್ತ್ವಾ ಸೋಽಂತೇ ವಿಬುಧ್ಯತೇ ॥63॥
ಅಷ್ಟೇ ಯುಗಗಳು ಬ್ರಹ್ಮನಿಗೆ ಒಂದು ರಾತ್ರಿ ಎನಿಸುತ್ತದೆ. ಬ್ರಹ್ಮನಿಗೆ ಹಗಲಿನ ಆರಂಭದಲ್ಲಿ ಜಗತ್ತು ಸೃಷ್ಟಿಯನ್ನು ಹೊಂದುತ್ತದೆ. ಹಗಲು ಮುಗಿದು ರಾತ್ರಿಯು ಆರಂಭಿಸುವಾಗ ಜಗತ್ತೆಲ್ಲವನ್ನೂ ತನ್ನ ಉದರದಲ್ಲಿ ಲಯಗೊಳಿಸಿಕೊಂಡು ರಾತ್ರಿಯು ಕಳೆಯುವ ತನಕ ಯೋಗನಿದ್ರಾಸಕ್ತನಾಗಿ ಬಳಿಕ ಎಚ್ಚರಗೊಳ್ಳುತ್ತಾನೆ.
ಸಹಸ್ರಯುಗಪರ್ಯಂತಮಹರ್ಯದ್ ಬ್ರಹ್ಮಣೋ ವಿದುಃ |
ರಾತ್ರಿಂ ಯುಗಸಹಸ್ರಾಂ ತಾಂ ತೇಽಹೋರಾತ್ರವಿದೋ ಜನಾಃ ॥64॥
ಜ್ಞಾನಿಗಳು ಸಾವಿರ ಯುಗಪರ್ಯಂತವಾದ ಕಾಲವನ್ನು ಬ್ರಹ್ಮನ ಹಗಲೆಂದೂ, ಸಾವಿರಯುಗಗಳ ವ್ಯಾಪ್ತಿಯುಳ್ಳ ಕಾಲವನ್ನು ಬ್ರಹ್ಮನ ರಾತ್ರಿ ಎಂದು ಹೀಗೆ ಅಹೋರಾತ್ರಗಳನ್ನು ಹೇಳುತ್ತಾರೆ.
ಪ್ರತಿಬುದ್ಧೋ ವಿಕುರುತೇ ಬ್ರಹ್ಮಾಕ್ಷಯ್ಯಂ ಕ್ಷಪಾಕ್ಷಯೇ |
ಸೃಜತೇ ಚ ಮಹದ್ಭೂತಂ ತಸ್ಮಾದ್ ವ್ಯಕ್ತಾತ್ಮಕಂ ಮನಃ ॥65॥
ಎಚ್ಚರಗೊಂಡ ಭಗವಂತನು ತನ್ನಲ್ಲಿ ಲಯಗೊಂಡಿರುವ ಮಹತ್ತತ್ತ್ವವನ್ನು ಸೃಷ್ಟಿಸುತ್ತಾನೆ. ಆ ಮಹತ್ತತ್ತ್ವದಿಂದ ವ್ಯಕ್ತಾತ್ಮನೆನಿಸಿದ ಮನಸ್ಸನ್ನು ಸೃಷ್ಟಿಸುತ್ತಾನೆ.
ಮನಃ ಸೃಷ್ಟಿಂ ವಿಕುರುತೇ ಚೋದ್ಯಮಾನಂ ಸಿಸೃಕ್ಷಯಾ |

ಆಕಾಶಂ ಜಾಯತೇ ತಸ್ಮಾತ್ ತಸ್ಯ ಶಬ್ದೋ ಗುಣೋ ಮತಃ ॥66॥
ಆ ಸೃಷ್ಟಿಯಾದ ಮನಸ್ಸಿಗೆ ಸೃಷ್ಟಿಸಬೇಕೆಂಬ ಬಯಕೆಯನ್ನು ಹುಟ್ಟಿಸಿ ಸೃಷ್ಟಿಯನ್ನು ಆರಂಭಿಸುತ್ತಾನೆ. ಆದ್ದರಿಂದ ಅದರ ಮೂಲಕ ಮೊದಲು ಆಕಾಶವು ಹುಟ್ಟುತ್ತದೆ. ಆಕಾಶದ ಗುಣ ಶಬ್ದವು.
ಆಕಾಶಾತ್ ತು ವಿಕುರ್ವಾಣಾತ್ ಸರ್ವಗಂಧವಹಃ ಶುಚಿಃ |
ಬಲವಾನ್ ಜಾಯತೇ ವಾಯುಸ್ತಸ್ಯ ಸ್ಪರ್ಶೋ ಗುಣೋ ಮತಃ ॥67॥
ಆಕಾಶವು ವಿಕಾರವನ್ನು ಹೊಂದಿ ತನ್ನಿಂದ ಸ್ಪರ್ಶಗುಣವುಳ್ಳ ವಾಯುವನ್ನು ಹುಟ್ಟಿಸುತ್ತದೆ.
ವಾಯೋರಪಿ ವಿಕುರ್ವಾಣಾಜ್ಜ್ಯೋತಿರ್ಭವತಿ ಭಾಸ್ವರಮ್ |
ರೋಚನಂ ಜನಯೇದ್ ಶುದ್ಧಂ ತದ್ ರೂಪಗುಣಮುಚ್ಯತೇ ॥68॥
ಆ ವಾಯುವು ವಿಕಾರ ಹೊಂದುತ್ತಾ ಬಂದು ಅದರಿಂದ ಪ್ರಕಾಶಗುಣವುಳ್ಳ ಅಗ್ನಿಯು ಹುಟ್ಟುತ್ತದೆ. ಅದರ ಗುಣವೇ ರೂಪವು. ಶುದ್ಧವಾದ ರೂಪವು ಅಗ್ನಿಯ ಗುಣವೆನಿಸಿದೆ.
ಜ್ಯೋತಿಷೋಽಪಿ ವಿಕುರ್ವಾಣಾದ್ ಭವಂತ್ಯಾಪೋ ರಸಾತ್ಮಿಕಾಃ |
ಅದ್ಭ್ಯೋ ಗಂಧವಹಾ ಭೂಮಿಃ ಪೂರ್ವೇಷಾಂ ಸೃಷ್ಟಿರುಚ್ಯತೇ ॥69॥
ಅಗ್ನಿಯು ವಿಕಾರವನ್ನು ಹೊಂದುತ್ತಾ ಅದರಿಂದ ರಸಾತ್ಮಕವಾದ ಜಲವು ಹುಟ್ಟುತ್ತದೆ. ಆ ಜಲದಿಂದ ಗಂಧಗುಣವುಳ್ಳ ಭೂಮಿ ಹುಟ್ಟುತ್ತದೆ. ಇದನ್ನೇ ಭೂತಸೃಷ್ಟಿಯ ಕ್ರಮ ಎಂದು ಹೇಳುತ್ತಾರೆ.
ಬ್ರಹ್ಮತೇಜೋಮಯಂ ಶುಕ್ಲಂ ಯಸ್ಯ ಸರ್ವಮಿದಂ ಜಗತ್ |
ಏಕಸ್ಯ ಬ್ರಹ್ಮಭೂತಸ್ಯ ದ್ವಯಂ ಸ್ಥಾವರಜಂಗಮಮ್ ॥70॥
ಬ್ರಹ್ಮನ ತೇಜೋಮಯವಾದ ಶುಕ್ಲವೇ ಈ ಜಗತ್ತು ಎಂದು ಕರೆಸಿಕೊಳ್ಳುತ್ತದೆ. ಏಕನಾದ ವಿಷ್ಣು ಎಂಬ ಮಹಾಭೂತದಿಂದಲೇ ಸ್ಥಾವರ-ಜಂಗಮ ಎಂಬ ಎರಡು ಅಂಶಗಳು ಸೃಷ್ಟವಾಗಿವೆ.
ಅಹರ್ಮುಖೇ ವಿಬುದ್ಧಂ ತತ್ಸೃಜತೇ ವಿದ್ಯಯಾ ಜಗತ್ |
ಅಗ್ರ ಏವ ಮಹದ್ಭೂತಮಾಶು ವ್ಯಕ್ತಾತ್ಮಕಂ ಮನಃ ॥71॥
ಬ್ರಹ್ಮನ ಹಗಲಿನಲ್ಲಿಯೇ ಜಗತ್ತನ್ನು ಜ್ಞಾನಮುಖವಾಗಿ ಸಾಗುವಂತೆ ವಿದ್ಯೆಯಿಂದ ಸೃಷ್ಟಿಸುತ್ತಾನೆ. ಈ ಸೃಷ್ಟಿಯ ಆರಂಭದಲ್ಲಿ ಮಹದ್ಭೂತದಿಂದ ಸೃಷ್ಟವಾದುದು ಮನಃತತ್ತ್ವವು.
ಅಭಿಭೂಯೇಹ ಚಾತಿಷ್ಠದ್ವ್ಯಸೃಜತ್ ಸಪ್ತ ಮಾನಸಾನ್ |
ದೂರಗಂ ಬಹುಧಾಗಾಮಿ ಪ್ರಾರ್ಥನಾಸಂಶಯಾತ್ಮಕಮ್ ॥72॥
ಭಗವಂತನು ತನ್ನ ಮನಸ್ಸಿನಿಂದ ಹುಟ್ಟಿದ ಬುದ್ಧಿ, ಮನಸ್ಸು, ಪಂಚಭೂತಗಳಿಂದ ಜಗತ್ತನ್ನು ವ್ಯಾಪಿಸಿರುತ್ತಾನೆ. ಮನಸ್ಸಾದರೂ ಬಹಳ ದೂರ ಸಂಚರಿಸುವ ಸ್ವಭಾವವುಳ್ಳದ್ದಾಗಿದೆ. ಅನೇಕ ರೀತಿಯಲ್ಲಿ ಸಾಗುತ್ತದೆ. ಪ್ರಾರ್ಥನಾ ರೂಪವು ಸಂಶಯಾತ್ಮಕವೂ ಆಗಿದೆ.
ಮನಃ ಸೃಷ್ಟಿಂ ನ ಕುರುತೇ ಚೋದ್ಯಮಾನಂ ಸಿಸೃಕ್ಷಯಾ |
ಆಕಾಶಂ ಜಾಯತೇ ತಸ್ಮಾತ್ತಸ್ಯ ಶಬ್ದೋ ಗುಣೋ ಮತಃ ॥73॥
ಮನಸ್ಸು ಪ್ರೇರಿಸಲ್ಪಟ್ಟಾಗ ಸೃಷ್ಟಿಗೆ ಪ್ರೇರಿತವಾದ ಮನಸ್ಸು ಸೃಷ್ಟಿಯನ್ನು ಮಾಡುತ್ತದೆ. ಮನಸ್ಸಿನಿಂದ ಆಕಾಶವು ಹುಟ್ಟುತ್ತದೆ. ಆಕಾಶದ ಗುಣವು ಶಬ್ದ ಎನಿಸಿದೆ.
ಆಕಾಶಾತ್ತು ವಿಕುರ್ವಾಣಾತ್ ಸರ್ವಗಂಧವಹಃ ಶುಚಿಃ |
ಬಲವಾಂಜಯತೇ ವಾಯುಸ್ತಸ್ಯ ಸ್ಪರ್ಶೋ ಗುಣೋ ಮತಃ ॥74॥
ಆಕಾಶದಿಂದ ವಿಕಾರ ಹೊಂದಿದ ತತ್ತ್ವವು ವಾಯುವೆನಿಸಿದೆ. ಗಂಧವನ್ನು ಹೊತ್ತೊಯ್ಯಬಲ್ಲ ಸಾಮರ್ಥ್ಯವು ವಾಯುವಿನ ಗುಣವು. ವಾಯುವು ತುಂಬಾ ಬಲಿಷ್ಠವಾದುದು. ಅದರ ಗುಣವನ್ನೇ ಸ್ಪರ್ಶ ಎನ್ನುತ್ತಾರೆ.
ವಾಯೋರಪಿ ವಿಕುರ್ವಾಣಾಜ್ಜ್ಯೋತಿರ್ಭೂತಂ ತಮೋನುದಮ್ |
ರೋಚಿಷ್ಣು ಜಾಯತೇ ತತ್ರ ತದ್ರೂಪಗುಣಮುಚ್ಯತೇ ॥75॥
ವಾಯುವಿನ ವಿಕಾರವೇ ಅಗ್ನಿಯು. ಕತ್ತಲೆಯನ್ನು ಪರಿಹರಿಸುತ್ತದೆ. ಬೆಳಗುವಂತಹ ಆ ಅಗ್ನಿತತ್ತ್ವದಿಂದ ಹುಟ್ಟಿದ ಗುಣವೇ ರೂಪವೆನಿಸಿದೆ.
ಜ್ಯೋತಿಷೋಽಪಿ ವಿಕುರ್ವಾಣಾದ್ ಭವಂತ್ಯಾಪೋ ರಸಾತ್ಮಿಕಾಃ |
ಅದ್ಭ್ಯೋ ಗಂಧಗುಣಾ ಭೂಮಿಃ ಪೂರ್ವೈಷಾ ಸೃಷ್ಟಿರುಚ್ಯತೇ ॥76॥
ಅಗ್ನಿಯ ವಿಕಾರವನ್ನೇ ಜಲ ಎನ್ನುತ್ತಾರೆ. ರಸ ಎಂಬ ಗುಣವು ಜಲದ ಗುಣವು. ಆ ಜಲವೇ ವಿಕಾರ ಹೊಂದಿ ಭೂಮಿ ಸೃಷ್ಟಿಯಾಗಿದೆ. ಗಂಧವು ಭೂಮಿಯ ಗುಣವು. ಇವೇ ಮೊದಲಿನ ಸೃಷ್ಟಿ ಎನಿಸಿವೆ.
ಗುಣಾಃ ಪೂರ್ವಸ್ಯ ಪೂರ್ವಸ್ಯ ಪ್ರಾಪ್ನುವಂತ್ಯುತ್ತರೋತ್ತರಮ್ |
ತೇಷಾಂ ಯಾವತ್ತಿಥಂ ಯದ್ಯತ್ ತತ್ತತ್ ತಾವದ್ಗುಣಂ ಸ್ಮೃತಮ್ ॥77॥
ಆರಂಭದ ಭೂತಗಳ ಗುಣಗಳು ಅದರ ಅದರ ಮುಂದಿನ ಭೂತಗಳಲ್ಲಿ ಸೇರಿ ಬರುತ್ತವೆ. ಅವುಗಳಲ್ಲಿ ಒಂದೊಂದರಲ್ಲಿರುವ ಎಲ್ಲಾ ಗುಣಗಳು ಅದರದರ ಕಾರ್ಯಗಳಿಗೆ ಸಂಬಂಧಿಸಿದವು.
ಉಪಲಭ್ಯಾಪ್ಸು ಚೇದ್ ಗಂಧಂ ಕೇಚಿದ್ ಬ್ರೂಯುರನೈಪುಣಾತ್ |
ಪೃಥಿವ್ಯಾಮೇವ ತಂ ವಿದ್ಯಾದಪಾಂ ವಾಯೋಶ್ಚ ಸಂಶ್ರಿತಮ್ ॥78॥
ಕೆಲವರು ಅಜ್ಞಾನದಿಂದ ನೀರಿನಲ್ಲಿ ಕಾಣುವ ಗಂಧವನ್ನು ನೋಡಿ ಅದು ಜಲದ ಗುಣವೆಂದು ಭ್ರಮಿಸುತ್ತಾರೆ. ಆದರೆ ಆ ಗಂಧಗುಣವು ಭೂಮಿಯಲ್ಲಿ ಮಾತ್ರವೇ ಇರುತ್ತದೆ. ಪೃಥಿವಿಯ ಸಂಬಂಧದಿಂದ ಜಲದಲ್ಲಿಯೂ, ವಾಯುವಿನಲ್ಲಿಯೂ ಆ ಗಂಧಗುಣವು

ತೋರುತ್ತದೆಂದು ತಿಳಿಯಬೇಕು.
ಏತೇ ತು ಸಪ್ತ ಪುರುಷಾ ನಾನಾವೀರ್ಯಾಃ ಪೃಥಕ್ಪೃಥಕ್ ।
ನಾಶಕ್ನುವನ್ ಪ್ರಜಾಃ ಸ್ರಷ್ಟುಮಸಮಾಗಮ್ಯ ಸರ್ವತಃ ॥79॥
ಈ ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚಭೂತಗಳೆಂಬ ಏಳರಲ್ಲಿಯೂ ಒಂದೊಂದಕ್ಕೂ ಬೇರೆ ಬೇರೆಯಾದ ವೀರ್ಯ-ಬಲಗಳಿದ್ದಾವೆ. ಇವುಗಳು ಮೊದಲು ಒಂದಕ್ಕೊಂದು ಬೇರೆಯಾಗಿದ್ದು ಪರಸ್ಪರ ಸಂಬಂಧ ಇಲ್ಲದೆ ಇದ್ದದ್ದರಿಂದ ಪ್ರಜೆಗಳನ್ನು ಸೃಷ್ಟಿಸಲು ಅಸಮರ್ಥವಾಗಿದ್ದವು.
ತೇ ಸಮೇತ್ಯ ಮಹಾತ್ಮಾನಮನ್ಯೋನ್ಯಮಭಿಸಂಶ್ರಿತಾಃ ।
ಶರೀರಾಶ್ರಯಣಂ ಪ್ರಾಪ್ತಾಸ್ತತಃ ಪುರುಷ ಉಚ್ಯತೇ ॥80॥
ಮಹತ್ತಾದ ಆಕಾರವುಳ್ಳ ಆ ಭೂತಗಳು ಪರಸ್ಪರವಾಗಿ ಸಂಬಂಧ ಹೊಂದಿದ ಮೇಲೆ ಶರೀರದ ಅವಯವಗಳಾಗಿ ಸೃಷ್ಟಿಗೊಂಡವು. ಇವುಗಳ ಸೇರುವಿಕೆಯೇ ಶರೀರವೆನಿಸುತ್ತದೆ. ಅಂತಹ ಶರೀರವನ್ನು ಹೊಂದಿದ ಆತ್ಮನೇ ಪುರುಷನೆನಿಸುತ್ತಾನೆ.
ಶ್ರಯಣಾಚ್ಛರೀರಂ ಭವತಿ ಮೂರ್ತಿಮತ್ ಷೋಡಶಾತ್ಮಕಮ್ ।
ತದಾವಿಶಂತಿ ಭೂತಾನಿ ಮಹಾಂತಿ ಸಹ ಕರ್ಮಣಾ ॥81॥
ಶರೀರವುಳ್ಳವನಾದ್ದರಿಂದ ಶರೀರಿ ಎನಿಸುತ್ತಾನೆ. ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚವಾಯುಗಳು, ಮನಸ್ಸು ಎಂಬ ಈ ಹದಿನಾರು ಅಂಶಗಳುಳ್ಳದ್ದೇ ಸೂಕ್ಷ್ಮಶರೀರವು. ಮನಸ್ಸುಗಳುಳ್ಳ ಸೂಕ್ಷ್ಮಶರೀರವನ್ನು ಕರ್ಮಗಳು, ಪಂಚಮಹಾಭೂತಗಳು ಸೇರಿಕೊಳ್ಳುತ್ತವೆ.
ಸರ್ವಭೂತಾನ್ಯುಪಾದಾಯ ತಪಸಶ್ಚರಣಾಯ ಚ ।
ಆದಿಕರ್ತಾ ಮಹಾಭೂತಂ ತಮೇವಾಹುಃ ಪ್ರಜಾಪತಿಮ್ ॥82॥
ಆದಿಕರ್ತನಾದ ಭಗವಂತನು ಸಮಸ್ತ ಭೂತಗಳಿಂದ ತುಂಬಿರುವ ಮಹಾಭೂತ ಒಂದನ್ನು ತಪಸ್ಸನ್ನಾಚರಿಸಲು ಮೊದಲು ಸೃಷ್ಟಿಸಿದನು. ಅವನನ್ನೇ ಪ್ರಜಾಪತಿ ಎಂದು ಕರೆಯುತ್ತಾರೆ.
ಸ ವೈ ಸೃಜತಿ ಭೂತಾನಿ ಸ ಏವ ಪುರುಷಃ ಪರಃ ।
ಅಜೋ ಜನಯತೇ ಬ್ರಹ್ಮಾ ದೇವರ್ಷಿಪಿತೃಮಾನವಾನ್ ॥83॥
ಈ ಪ್ರಜಾಪತಿಯೇ ಪ್ರಾಣಿಗಳನ್ನು ಸೃಷ್ಟಿಸುತ್ತಾನೆ. ಇವನೇ ಪುರುಷನು, ಪರನು, ಅಜನು ಎನಿಸುತ್ತಾನೆ. ಈ ಚತುರ್ಮುಖ ಬ್ರಹ್ಮನು ದೇವತೆಗಳನ್ನು, ಪಿತೃಗಳನ್ನು, ಮಾನವರನ್ನು ಸೃಷ್ಟಿಸುತ್ತಾನೆ.
ಲೋಕಾನ್ನದೀಃ ಸಮುದ್ರಾಂಶ್ಚ ದಿಶಃ ಶೈಲಾನ್ ವನಸ್ಪತೀನ್ ।
ನರಕಿನ್ನರರಕ್ಷಾಂಸಿ ವಯಃಪಶುಮೃಗೋರಗಾನ್ ।
ಅವ್ಯಯಂ ಚ ವ್ಯಯಂ ಚೈವ ದ್ವಯಂ ಸ್ಥಾವರಜಂಗಮಮ್ ॥84॥
ಲೋಕಗಳನ್ನು, ನದಿಗಳನ್ನು, ಸಮುದ್ರಗಳನ್ನು, ದಿಕ್ಕುಗಳನ್ನು, ಪರ್ವತಗಳನ್ನು, ವೃಕ್ಷಗಳನ್ನು, ನರರನ್ನು, ಕಿನ್ನರರನ್ನು, ರಾಕ್ಷಸರನ್ನು, ಪಕ್ಷಿಗಳನ್ನು, ಪಶುಗಳನ್ನು, ಮೃಗಗಳನ್ನು, ಸರ್ಪಗಳನ್ನೆಲ್ಲವನ್ನೂ ನಾಶಹೊಂದುವ, ನಾಶ ಹೊಂದದೆ ಇರುವ ಎಂಬ ಸಮಸ್ತ ಸ್ಥಾವರ-ಜಂಗಮಗಳನ್ನು ಸೃಷ್ಟಿಸುತ್ತಾನೆ.
ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ಸೃಷ್ಟ್ಯಾಂ ಪ್ರತಿಪೇದಿರೇ ।
ತಾನ್ಯೇವ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ॥85॥
ಹೀಗೆ ಸೃಷ್ಟಿ ಮಾಡಿದ ಪದಾರ್ಥಗಳಲ್ಲಿ ಪ್ರತಿಯೊಂದೂ ತನಗೆ ಸಂಬಂಧಿಸಿದ ಪೂರ್ವಸೃಷ್ಟಿಯಲ್ಲಿ ಉಂಟಾದ ಕರ್ಮಗಳನ್ನು ಅನುಸರಿಸಿರುತ್ತವೆ. ಆ ಕರ್ಮ ಸಂಬಂಧದಿಂದಲೇ ಮುಂದಿನ ಮುಂದಿನ ಸೃಷ್ಟಿಯಲ್ಲಿಯೂ ಹುಟ್ಟನ್ನು ಪಡೆಯುತ್ತಾ ಪುನಃ ಪುನಃ ಈ ಕರ್ಮಸಂಬಂಧದಿಂದಲೇ ಮತ್ತೂ ಹುಟ್ಟನ್ನು ಪಡೆಯುತ್ತವೆ.
ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೇ ಋತಾನೃತೇ ।
ಅತೋ ಯನ್ಮನ್ಯತೇ ಧಾತಾ ತಸ್ಮಾತ್ತತ್ತಸ್ಯ ರೋಚತೇ ॥86॥
ಹಿಂಸೆ, ಅಹಿಂಸೆ, ಸತ್ಯ, ಸುಳ್ಳು, ಮೃದು, ಕ್ರೌರ್ಯ, ಧರ್ಮ, ಅಧರ್ಮ ಎಂಬ ವಿರುದ್ಧ ಗುಣಗಳಲ್ಲಿ ಒಂದೊಂದನ್ನು ಹೊಂದಿಸಿ ಪುನಃ ಪುನಃ ಹೊಸ ಸೃಷ್ಟಿಯಲ್ಲಿಯೂ ಅವೇ ಅವೇ ಗುಣಗಳನ್ನು ಹೊಂದುವಂತೆ ಮಾಡುತ್ತಾನೆ. ಆದ್ದರಿಂದಲೇ ಆಯಾ ಗುಣಗಳು ಕರ್ಮದ ಹಿಂದಿನ ಸಂಸ್ಕಾರದಿಂದ ಆಯಾ ವ್ಯಕ್ತಿಗಳಿಗೆ ಪ್ರಿಯವಾಗಿರುತ್ತವೆ.
ಮಹಾಭೂತೇಷು ನಾನಾತ್ವಮಿಂದ್ರಿಯಾರ್ಥೇಷು ಮೂರ್ತಿಷು ।
ವಿನಿಯೋಗಂ ಚ ಭೂತಾನಾಂ ಧಾತೈವ ವಿದಧಾತ್ಯುತ ॥87॥
ಸೃಷ್ಟಿಕರ್ತನಾದ ಚತುರ್ಮುಖನು ಆಕಾಶಾದಿ ಮಹಾಭೂತಗಳಲ್ಲಿಯೂ, ಇಂದ್ರಿಯ ವಿಷಯಗಳೆನಿಸಿದ ಶಬ್ದಾದಿಗಳಲ್ಲಿಯೂ, ಶರೀರಾಕೃತಿಗಳಲ್ಲಿಯೂ ತೋರುವ ನಾನಾ ವಿಧವಾದ ಭೇದಗಳನ್ನು ಕಲ್ಪಿಸಿ, ಪ್ರಾಣಿಗಳಿಗೆ ಅವುಗಳ ವಿವಿಧ ಉಪಯೋಗಗಳನ್ನು ಸೃಷ್ಟಿಸುತ್ತಾನೆ.
ಕೇಚಿತ್ ಪುರುಷಕಾರಂ ತು ಪ್ರಾಹುಃ ಕರ್ಮವಿದೋ ಜನಾಃ ।
ದೈವಮಿತ್ಯಪರೇ ವಿಪ್ರಾಃ ಸ್ವಭಾವಂ ಭೂತಚಿಂತಕಾಃ ॥88॥
ಕರ್ಮಗಳ ಗತಿಯನ್ನು ತಿಳಿದ ಕೆಲವರು ಫಲಪ್ರಾಪ್ತಿಗೆ ಪೌರುಷವೇ ಪ್ರಧಾನ ಎನ್ನುತ್ತಾರೆ. ಕೆಲವರು ಅದೃಷ್ಟವು ಕಾರಣ ಎನ್ನುತ್ತಾರೆ. ಇನ್ನು ಕೆಲವರು ಸ್ವಭಾವವೇ ಎಲ್ಲದಕ್ಕೂ ಕಾರಣ ಎನ್ನುತ್ತಾರೆ.
ಪೌರುಷಂ ಕರ್ಮ ದೈವಂ ಚ ಫಲವೃತ್ತಿಸ್ವಭಾವತಃ ।
ತ್ರಯ ಏತೇಽಪೃಥಗ್ಭೂತಾ ನವಿವೇಕಂ ತು ಕೇಚನ ॥89॥

ಆದರೆ ಪೌರುಷವಾಗಲಿ, ಕರ್ಮವಾಗಲಿ, ಅದೃಷ್ಟವಾಗಲಿ ತಮ್ಮ ತಮ್ಮ ಫಲಗಳನ್ನು ಪ್ರತ್ಯೇಕವಾಗಿ ನೀಡಲು ಇವುಗಳಿಗೆ ಸಾಧ್ಯವಾಗುವುದಿಲ್ಲ. ಎಲ್ಲವೂ ಸೇರಿ ಫಲ ಪ್ರಾಪ್ತಿಗೆ ಸಾಧಕವಾಗುತ್ತವೆ ಎಂದು ಕೆಲವರು ಹೇಳುತ್ತಾರೆ.
ಏವಮೇತಚ್ಚ ನೈವಂ ಚ ಯದ್ಭೂತಂ ಸೃಜತೇ ಜಗತ್ |
ಕರ್ಮಸ್ಥಾ ವಿಷಮಂ ಬ್ರೂಯುಃ ಸತ್ತ್ವಸ್ಥಾಃ ಸಮದರ್ಶಿನಃ ॥90॥
ಈ ಜಗತ್ತಿನ ಸೃಷ್ಟಿಗೆ ದೈವವು ಕಾರಣ, ಕರ್ಮವು ಕಾರಣ. ಇದರಿಂದ ಭೂತಗಳ ಸೃಷ್ಟಿಯಾಗುತ್ತದೆ ಎಂದು ಕರ್ಮವನ್ನು ಆಶ್ರಯಿಸಿದ ಜನರು ಹೀಗೆ ಹೇಳುತ್ತಾರೆ. ಆದರೆ ಭಗವನ್ನಿಷ್ಠರಾದ ತತ್ತ್ವಜ್ಞಾನಿಗಳು, ಸಮದರ್ಶಿಗಳು ಭಗವಂತನೇ ಕಾರಣ ಎಂದು ಹೇಳುತ್ತಾರೆ.
ತತೋ ನಿಃಶ್ರೇಯಸಂ ಜಂತೋಸ್ತಸ್ಯ ಮೂಲಂ ದಮಃ ಶಮಃ |
ತೇನ ಸರ್ವಾನವಾಪ್ನೋತಿ ಯಾನ್ ಕಾಮಾನ್ ಮನಸೇಚ್ಛತಿ ॥91॥
ಅಂತಹ ಭಗವಂತನನ್ನು ಆಶ್ರಯಿಸಿದ ಶ್ರೇಯಸ್ಸನ್ನು ಜೀವನು ಪಡೆಯಬೇಕಾದರೆ ಅದಕ್ಕೆ ಮೂಲವಾದ ಶಮ-ದಮಾದಿಗಳನ್ನು ಹೊಂದಬೇಕು. ಶಮ-ದಮಾದಿಗಳಿಂದ ಏನೇನು ಮನಸ್ಸಿನಲ್ಲಿ ಬಯಸುತ್ತಾನೋ ಅದೆಲ್ಲವನ್ನೂ ಹೊಂದುತ್ತಾನೆ.
ತಪಸಾ ತದವಾಪ್ನೋತಿ ಯದ್ಭೂತಂ ಸೃಜತೇ ಜಗತ್ |
ಸ ತದ್ಭೂತಶ್ಚ ಸರ್ವೇಷಾಂ ಭೂತಾನಾಂ ಭವತಿ ಪ್ರಭುಃ ॥92॥
ತಪಸ್ಸಿನಿಂದ ಜಗತ್ಕರ್ತನಾದ ಭಗವಂತನನ್ನು ಹೊಂದುತ್ತಾನೆ. ಹಾಗೆ ಭಗವಂತನನ್ನು ಹೊಂದಿದ ವ್ಯಕ್ತಿಯು ಭೂತಗಳಿಗೆಲ್ಲ, ಪ್ರಭುವೆನಿಸುತ್ತಾನೆ.
ಋಷಯಸ್ತಪಸಾ ವೇದಾನಧ್ಯೈಷಂತ ದಿವಾನಿಶಮ್ |
ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ॥93॥
ಋಷಿಗಳು ತಪಸ್ಸಿನಿಂದಲೇ ಹಗಲು-ರಾತ್ರಿ ವೇದಾಧ್ಯಯನವನ್ನು ಮಾಡುತ್ತಾರೆ. ಆರಂಭದಲ್ಲಿ ಸ್ವಯಂಭುವಾದ ಬ್ರಹ್ಮನು ಆದ್ಯಂತರಹಿತವಾದ ನಿತ್ಯವಾದ ವೇದಗಳನ್ನು ಹೊರಹಾಕಿದನು.
ನಾಮಧೇಯಾನಿ ಚರ್ಷೀಣಾಂ ಯಾಶ್ಚ ವೇದೇಷು ಸೃಷ್ಟಯಃ |
ಶರ್ವರ್ಯಂತೇಷು ಜಾತಾನಾಂ ತಾನ್ಯೇವೈಭ್ಯೋ ದದಾತಿ ಸಃ ॥94॥
ನಾನಾ ಬಗೆಯ ಕರ್ಮಗಳು, ಋಷಿಯ ನಾಮಗಳು, ಸೃಷ್ಟಿಗೊಂಡ ಎಲ್ಲಾ ವಸ್ತುಗಳು, ಭೂತಗಳ ನಾನಾ ರೂಪಗಳು, ಅವುಗಳ ಕರ್ಮಪ್ರವೃತ್ತಿಗಳು ವೇದದಿಂದಲೇ ಪ್ರಕಟಗೊಂಡವು.
ನಾಮಭೇದಸ್ತಪಃಕರ್ಮಯಜ್ಞಾಖ್ಯಾ ಲೋಕಸಿದ್ಧಯಃ |
ಆತ್ಮಸಿದ್ಧಿಸ್ತು ವೇದೇಷು ಪ್ರೋಚ್ಯತೇ ದಶಭಿಃ ಕ್ರಮೈಃ ॥95॥
ಭಗವಂತನು ಎಲ್ಲವನ್ನೂ ವೇದಶಬ್ದದಿಂದಲೇ ಆರಂಭದಲ್ಲಿ ನಿರ್ಮಿಸಿದನು. ಋಷಿ ನಾಮಗಳೇ ಮೊದಲಾದ ಸೃಷ್ಟಿಗೊಂಡಿರುವ ಸಮಸ್ತ ಪದಾರ್ಥಗಳು ವೇದಗಳಲ್ಲಿಯೇ ಅಡಕವಾಗಿವೆ. ಬ್ರಹ್ಮನು ತನ್ನ ರಾತ್ರಿಕಾಲವು ಮುಗಿದು ಪ್ರಾತಃಕಾಲ ಪ್ರಾಪ್ತವಾದ ಕೂಡಲೇ ಪೂರ್ವಕಲ್ಪದಲ್ಲಿದ್ದ ಸೂಕ್ಷ್ಮ ಪ್ರಕೃತಿಯನ್ನು ಅನುಸರಿಸಿ ಜಗತ್ತನ್ನು ಸೃಷ್ಟಿಸುತ್ತಾನೆ.
ಯದುಕ್ತಂ ವೇದವಾದೇಷು ಗಹನಂ ವೇದದೃಷ್ಟಿಭಿಃ |
ತದಂತೇಷು ಯಥಾಯುಕ್ತಂ ಕ್ರಮಯೋಗೇನ ಲಕ್ಷ್ಯತೇ ॥96॥
ಆತ್ಮಸಿದ್ಧಿಗಾಗಿ ವೇದಗಳಲ್ಲಿ ಹತ್ತು ಕ್ರಮಗಳು ಹೇಳಲ್ಪಡುತ್ತವೆ. ನಾಮ ಭೇದಗಳು, ತಪಸ್ಸು, ಕರ್ಮ, ಯಜ್ಞ, ವೇದಾಧ್ಯಯನ, ಗೃಹಸ್ಥವೃತ್ತಿ, ವಾನಪ್ರಸ್ಥಾಶ್ರಮ, ಯಶಸ್ಕರ ಕಾರ್ಯಗಳು, ವಿವಿಧ ಧ್ಯಾನಗಳು, ಐಹಿಕಸಿದ್ಧಿ, ಮೋಕ್ಷಸಿದ್ಧಿ ಎಂಬುದಾಗಿ.
ಕರ್ಮಜೋಯಂ ಪೃಥಗ್ಭಾವೋ ದ್ವಂದ್ವಯುಕ್ತೋ ವಿಯೋಗಿನಃ |
ಆತ್ಮಸಿದ್ಧಿಸ್ತು ವಿಜ್ಞಾತಾ ಜಹಾತಿ ಪ್ರಾಯಶೋ ಬಲಮ್ ॥97॥
ದ್ವೇ ಬ್ರಹ್ಮಣೀ ವೇದಿತವ್ಯೇ ಶಬ್ದಬ್ರಹ್ಮ ಪರಂ ಚ ಯತ್ |
ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ ॥98॥
ವೇದಜ್ಞರು ವೇದದಲ್ಲಿ ನಿರೂಪಿಸಿದ ಆ ಪರಬ್ರಹ್ಮನನ್ನು ಈ ಹತ್ತು ಕ್ರಮಗಳನ್ನು ಅನುಷ್ಠಾನ ಮಾಡುವುದರಿಂದ ತಿಳಿಯಬಹುದು. ಜೀವನು ಕರ್ಮದಿಂದಾಗಿ ಈ ಭಿನ್ನವಾದ ಪ್ರಕೃತಿಯ ಸ್ಥಿತಿಯನ್ನು ಹೊಂದಿರುತ್ತಾನೆ. ಸುಖ-ದುಃಖಗಳಲ್ಲಿ ಕೂಡಿರುತ್ತಾನೆ. ಯಾವಾಗ ಪರಮಾತ್ಮನ ಜ್ಞಾನವನ್ನು ಹೊಂದುತ್ತಾನೋ ಆಗ ಈ ಪ್ರಕೃತಿಯ ಬಂಧನಗಳನ್ನು ಬಿಡುತ್ತಾನೆ. ಆದ್ದರಿಂದ ಎರಡು ಬ್ರಹ್ಮಗಳನ್ನು ತಿಳಿದುಕೊಳ್ಳಬೇಕು. ಒಂದು ಶಬ್ದಬ್ರಹ್ಮನೆನಿಸಿದ ವೇದಗಳು, ಪರಬ್ರಹ್ಮನೆನಿಸಿದ ಭಗವಂತ. ಶಬ್ದಬ್ರಹ್ಮನೆನಿಸಿದ ವೇದಗಳಲ್ಲಿ ನಿಷ್ಣಾತನಾದವನು ಪರಬ್ರಹ್ಮನನ್ನು ಹೊಂದುತ್ತಾನೆ.
ಆಲಂಭಯಜ್ಞಾಃ ಕ್ಷತ್ರಸ್ಯ ಹವಿರ್ಯಜ್ಞಾ ವಿಶಸ್ತಥಾ |
ಪರಿಚಾರಯಜ್ಞಾಃ ಶೂದ್ರಾಸ್ತು ತಪೋಯಜ್ಞಾ ದ್ವಿಜಾತಯಃ ॥99॥
ಕ್ಷತ್ರಿಯರಿಗೆ ಯಜ್ಞದಲ್ಲಿ ನಡೆಸುವ ಹಿಂಸೆಯು ವಿಧಿಸಲ್ಪಟ್ಟಿದೆ. ವೈಶ್ಯರಿಗೆ ಕೃಷಿಯೇ ಯಜ್ಞವು. ಶೂದ್ರರಿಗೆ ಮೂರು ವರ್ಣದವರ ಸೇವೆಯೇ ಯಜ್ಞವು. ಆದರೆ ಬ್ರಾಹ್ಮಣರಿಗೆ ಬ್ರಹ್ಮೋಪಾಸನೆ ಎಂಬ ತಪಸ್ಸೇ ವಿಧಿಸಲ್ಪಟ್ಟಿದೆ.
ತ್ರೇತಾಯುಗೇ ವಿಧಿಸ್ತ್ವೇಷಾಂ ಯಜ್ಞಾನಾಂ ನ ಕೃತೇ ಯುಗೇ |
ದ್ವಾಪರೇ ವಿಪ್ಲವಂ ಯಾಂತಿ ಯಜ್ಞಾಃ ಕಲಿಯುಗೇ ತಥಾ ॥100॥
ಕೃತಯುಗಕ್ಕೆ ಯಜ್ಞಗಳು ವಿಹಿತವಲ್ಲ. ತ್ರೇತಾಯುಗದಲ್ಲಿ ಯಜ್ಞವು ಅವಶ್ಯವಾಗಿದೆ. ದ್ವಾಪರ ಮತ್ತು ಕಲಿಯುಗದಲ್ಲಿ ಯಜ್ಞಗಳ ರೀತಿಗಳೇ ಹಾಳಾಗುತ್ತವೆ.
ಅಪೃಥಗ್ಧರ್ಮಿಣೋ ಮರ್ತ್ಯಾ ಋಕ್ಸಾಮಾನಿ ಯಜೂಂಷಿ ಚ |
ಕಾಮ್ಯಾಂ ಪುಷ್ಟಿಂ ಪೃಥಗ್ದೃಷ್ಟ್ವಾ ತಪೋಭಿಸ್ತಪ ಏವ ಚ ॥101॥

ಕೃತಯುಗದಲ್ಲಿ ಮಾನವರು ಭಗವಂತನನ್ನು ಬಿಟ್ಟು ಬೇರೆ ಯಾವ ಧರ್ಮಗಳನ್ನೂ ಉಪಾಸನೆ ಮಾಡದೆ ಕಾಮ್ಯಕರ್ಮಗಳಲ್ಲಿ ತಿರಸ್ಕಾರವನ್ನು ಹೊಂದಿ ಋಗ್ವೇದ, ಯಜುರ್ವೇದ, ಸಾಮವೇದಗಳೊಡನೆ ಭಗವಂತನನ್ನೇ ಚಿಂತಿಸುತ್ತಿದ್ದರು. ಕಾಮ್ಯ ಕರ್ಮಗಳನ್ನು ಅನುಷ್ಠಾನ ಮಾಡುತ್ತಿರಲಿಲ್ಲ.
ತ್ರೇತಾಯಾಂ ತು ಸಮಸ್ತಾಸ್ತೇ ಪ್ರಾದುರಾಸನ್ ಮಹಾಬಲಾಃ |
ಸಂಯಂತಾರಃ ಸ್ಥಾವರಾಣಾಂ ಜಂಗಮಾನಾಂ ಚ ಸರ್ವಶಃ ॥102॥
ತ್ರೇತಾಯಾಂ ಸಂಹತಾ ಹ್ಯೇತೇ ಯಜ್ಞಾ ವರ್ಣಾಸ್ತಥೈವ ಚ |
ಸಂರೋಧಾದಾಯುಷಸ್ತ್ವೇತೇ ವ್ಯಸ್ಯಂತೇ ದ್ವಾಪರೇ ಯುಗೇ ॥103॥
ತ್ರೇತಾಯುಗದಲ್ಲಿ ವೇದಗಳು ಜನರನ್ನು ನಿರ್ಬಂಧಿಸುವ ಕಠಿಣ ವಿಧಿಗಳಾಗಿ ಇವೆ ಎಂಬುದಾಗಿ ಜನರು ಭಾವಿಸಿದರು. ಸ್ಥಾವರ-ಜಂಗಮಗಳನ್ನೆಲ್ಲ ನಿರ್ಬಂಧಿಸುವ ವಿಧಿಗಳು ವೇದಗಳು ಎಂದು ಭಾವಿಸಿದರು. ಮತ್ತು ಆ ಯುಗದಲ್ಲಿ ವೇದಗಳು, ಯಜ್ಞಗಳು, ವರ್ಣಾಶ್ರಮಗಳು, ಒಂದಕ್ಕೊಂದು ಪೂರಕವಾಗಿ ಒಟ್ಟಾಗಿ ಇದ್ದವು. ದ್ವಾಪರ ಯುಗದಲ್ಲಿ ಪ್ರಾಣಿಗಳ ಆಯುಃಪ್ರಮಾಣವು ತಗ್ಗುತ್ತಾ ಬಂದು ಅವೆಲ್ಲವೂ ವಿಭಾಗವಾಗುತ್ತಾ ಬಂದವು.
ದೃಶ್ಯಂತೇ ನ ಚ ದೃಶ್ಯಂತೇ ವೇದಾಃ ಕಲಿಯುಗೇಽಖಿಲಾಃ |
ಉತ್ಸೀದಂತೇ ಸಯಜ್ಞಾಶ್ಚ ಕೇವಲಾ ಧರ್ಮಸೇತವಃ ॥104॥
ಕಲಿಯುಗದಲ್ಲಾದರೂ ವೇದಗಳೇ ನಿರಾಕೃತವಾಗುತ್ತಾ ಬಂದಿವೆ. ಯಜ್ಞಗಳು ನಶಿಸುತ್ತಿವೆ. ಅಧ್ಯಯನಯಜ್ಞ, ಧರ್ಮಾದಿಗಳೆಲ್ಲ ಕಲಿಯುಗದಲ್ಲಿ ಕಂಡೂ ಕಾಣದಂತೆ ಇರುತ್ತವೆ.
ಕೃತೇ ಯುಗೇ ಯಸ್ತು ಧರ್ಮೋ ಬ್ರಾಹ್ಮಣೇಷು ಪ್ರದೃಶ್ಯತೇ |
ಆತ್ಮವತ್ಸು ತಪೋವತ್ಸು ಶ್ರುತವತ್ಸು ಪ್ರತಿಷ್ಠಿತಃ ॥105॥
ಕೃತಯುಗದಲ್ಲಿ ಧರ್ಮವು ಸಾಮಾನ್ಯವಾಗಿ ಶುದ್ಧಾತ್ಮರು, ತಪೋಧನರು, ಶ್ರುತವಂತರೂ ಆದ ಬ್ರಾಹ್ಮಣರಲ್ಲಿ ಕಾಣಿಸುತ್ತವೆ.
ಸಧರ್ಮಃ ಪ್ರೈತಿ ಸಂಯೋಗಂ ಯಥಾಧರ್ಮಂ ಯುಗೇ ಯುಗೇ |
ವಿಕ್ರಿಯಂತೇ ಸ್ವಧರ್ಮಸ್ಥಾ ವೇದವಾದಾ ಯಥಾಯುಗಮ್ ॥106॥
ಕೃತಯುಗದಲ್ಲಿದ್ದ ಧರ್ಮವು ಮುಂದಿನ ಯುಗಗಳಲ್ಲಿ ಅಧರ್ಮ ಪ್ರಾಬಲ್ಯದಿಂದ ಪೀಡಿಸಲ್ಪಟ್ಟು ತಗ್ಗುತ್ತಾ ಬರುತ್ತವೆ. ಅನೂಚಾನವಾಗಿ ಬಂದಿರುವ ವೇದಗಳು ಬಹು ಮುಖವಾಗಿ ವಿಕಾರವನ್ನು ಹೊಂದುತ್ತವೆ.
ಯಥಾ ವಿಶ್ವಾನಿ ಭೂತಾನಿ ವೃಷ್ಟ್ಯಾ ಭೂಯಾಂಸಿ ಪ್ರಾವೃಷಿ |
ಸೃಜ್ಯಂತೇ ಜಂಗಮಸ್ಥಾನಿ ತಥಾ ಧರ್ಮಾ ಯುಗೇ ಯುಗೇ ॥107॥
ಯಾವ ರೀತಿಯಾಗಿ ಮಳೆಗಾಲದಲ್ಲಿ ವೇಗವಾಗಿ ಬೀಳುವ ಮಳೆಯಿಂದ ಭೂಮಿಯಲ್ಲಿ ನಾನಾ ವಿಧವಾದ ಸಸ್ಯವರ್ಗಗಳು ಮೊಳಕೆ ಒಡೆದು ತಲೆದೋರುತ್ತವೆಯೋ ಹಾಗೆ ಪ್ರತಿ ಯುಗದಲ್ಲಿಯೂ ಹೊಸಹೊಸ ವಿಧವಾದ ಧರ್ಮಗಳು ತಲೆ ಎತ್ತುತ್ತವೆ.
ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ |
ದೃಶ್ಯಂತೇ ತಾನಿ ತಾನ್ಯೇವ ತಥಾ ಬ್ರಹ್ಮಹರಾದಿಷು ॥108॥
ಒಂದು ಸಂವತ್ಸರದಲ್ಲಿ ಆಯಾ ಋತುಗಳು ಬಂದಾಗ ಸಸ್ಯವರ್ಗಗಳು ಹಿಂದಿನ ಋತುವಿನಲ್ಲಿದ್ದ ಲಕ್ಷಣಗಳನ್ನೆಲ್ಲ ಹೇಗೆ ಹೊಂದುತ್ತವೋ ಅದರಂತೆ ಚತುರ್ಮುಖ ಬ್ರಹ್ಮನ ದಿವಸದಲ್ಲಿ ಆಯಾ ಯುಗಗಳಲ್ಲಿ ಬರುವ ಧರ್ಮಗಳು ಪುನಃ ಪುನಃ ಅದೇ ಅದೇ ಯುಗಗಳಲ್ಲಿ ಹಿಂದಿನ ಯುಗಗಳಂತೆಯೇ ನಡೆಯುತ್ತವೆ.
ವಿಹಿತಂ ಕಾಲನಾನಾತ್ವಮನಾದಿನಿಧನಂ ತಥಾ |
ಕೀರ್ತಿತಂ ಯತ್ ಪುರಸ್ತಾತ್ತೇ ತತ್ಸೂತೇ ಚಾತ್ತಿ ಚ ಪ್ರಜಾಃ ॥109॥
ಕುಮಾರನೇ, ಹೀಗೆ ಜಗತ್ತಿನಲ್ಲಿ ನಾನಾ ವಿಧ ವಿಕಾರಗಳನ್ನು ಪ್ರಕಟಪಡಿಸುತ್ತಾ ಆದ್ಯಂತವಿಲ್ಲದೆ ನಡೆಯುತ್ತಿರುವ, ಕಾಲಾಂತರ್ಯಾಮಿಯಾದ ಭಗವಂತನ ವ್ಯಾಪಾರವನ್ನು ಮೊದಲೇ ನಿನಗೆ ತಿಳಿಸಿದ್ದೇನೆ.
ದಧಾತಿ ಪ್ರಭವೇ ಸ್ಥಾನಂ ಭೂತಾನಾಂ ಸಂಯಮೋ ಯಮಃ |
ಸ್ವಭಾವೇನೈವ ವರ್ತಂತೇ ದ್ವಂದ್ವಯುಕ್ತಾನಿ ಭೂರಿಶಃ ॥110॥
ಈ ಕಾಲನಾಮಕನಾದ ಭಗವಂತನೇ ಎಲ್ಲರನ್ನೂ ಹುಟ್ಟಿಸುತ್ತಾನೆ, ಸಂಹರಿಸುತ್ತಾನೆ. ಶೀತೋಷ್ಣಾದಿ ದ್ವಂದ್ವಗಳಿಗೆ ಒಳಗಾದ ಸಮಸ್ತ ಭೂತಗಳನ್ನು ಧರಿಸುವವನು ಕಾಲನೇ ಆಗಿದ್ದಾನೆ.
ಸರ್ಗಃ ಕಾಲಃ ಕ್ರಿಯಾ ವೇದಾಃ ಕರ್ತಾ ಕಾರ್ಯಂ ಕ್ರಿಯಾ ಫಲಮ್ |
ಪ್ರೋಕ್ತಂ ತೇ ಪುತ್ರ ಸರ್ವಂ ವೈ ಯನ್ಮಾಂ ತ್ವಂ ಪರಿಪೃಚ್ಛಸಿ ॥111॥
ಮಗನೇ, ನೀನು ಕೇಳಿದ ಭೂತಸೃಷ್ಟಿ, ಕಾಲಸ್ವರೂಪ, ಯಜ್ಞಾದಿ ಕ್ರಿಯೆಗಳು, ವೇದಗಳು, ಜಗತ್ಕರ್ತಾ, ಕಾರ್ಯ, ಕ್ರಿಯಾಫಲ ಎಲ್ಲವನ್ನೂ ನಿನಗೆ ತಿಳಿಸಿರುತ್ತೇನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆಂಟನೆಯ ಅಧ್ಯಾಯ
ಬ್ರಾಹ್ಮಪ್ರಳಯ ಮತ್ತು ಮಹಾಪ್ರಳಯಗಳ ವರ್ಣನೆ.
ವ್ಯಾಸಃ

ಪ್ರತ್ಯಾಹಾರಂ ತು ವಕ್ಷ್ಯಾಮಿ ಶರ್ವರ್ಯಾದೌ ಗತೇಽಹನಿ |
ಯಥೇದಂ ಕುರುತೇಧ್ಯಾತ್ಮಂ ಸುಸೂಕ್ಷ್ಮಂ ವಿಶ್ವಮೀಶ್ವರಃ ॥1॥
ಶುಕಮುನಿಯೇ, ಈಗ ನಾನು ನಿನಗೆ ಬ್ರಹ್ಮನ ಹಗಲು ಕಳೆದ ಬಳಿಕ ರಾತ್ರಿಯು ಪ್ರಾರಂಭವಾಗುವುದಕ್ಕಿಂತ ಮೊದಲು ಬ್ರಹ್ಮನಿಂದ ಆದ ಸೃಷ್ಟಿಯು ಯಾವ ರೀತಿಯಲ್ಲಿ ಲಯ ಹೊಂದುತ್ತದೆ, ಭಗವಂತನು ಸ್ಥೂಲವಾದ ಈ ಜಗತ್ತನ್ನು ಅತ್ಯಂತ ಸೂಕ್ಷ್ಮವನ್ನಾಗಿಸಿ ತನ್ನಲ್ಲಿ ಹೇಗೆ ಇಟ್ಟುಕೊಳ್ಳುತ್ತಾನೆ ಎಂಬ ವಿಷಯವನ್ನು ಹೇಳುತ್ತೇನೆ.
ದಿವಿ ಸೂರ್ಯಾಸ್ತಥಾ ಸಪ್ತ ದಹಂತಿ ಶಿಖಿನೋಽರ್ಚಿಷಾ |
ಸರ್ವಮೇತತ್ತದಾರ್ಚಿರ್ಭಿಃ ಪೂರ್ಣಂ ಜಾಜ್ವಲ್ಯತೇ ಜಗತ್ ॥2॥
ಪ್ರಳಯ ಕಾಲದಲ್ಲಿ ಆಕಾಶದಲ್ಲಿ ಏಳು ಮಂದಿ ಸೂರ್ಯರು ಏಕ ಕಾಲದಲ್ಲಿ ಉದಯಿಸಿ ಭೂಮಂಡಲವನ್ನು ಸುಡುತ್ತಾರೆ. ಏಳು ಜ್ವಾಲೆಗಳು ವಿಶ್ವವನ್ನೇ ಸುಡಲು ಆರಂಭಿಸುತ್ತವೆ. ಈ ಸಂಪೂರ್ಣ ಜಗತ್ತು ಆ ಸಮಯದಲ್ಲಿ ಸೂರ್ಯನ ಪ್ರಖರವಾದ ಕಿರಣಗಳಿಂದ, ಅಗ್ನಿಯ ಜ್ವಾಲೆಗಳಿಂದ ಸಮಗ್ರವಾಗಿ ಸುಟ್ಟು ಹೋಗುತ್ತದೆ.
ಪೃಥಿವ್ಯಾಂ ಯಾನಿ ಭೂತಾನಿ ಜಂಗಮಾನಿ ಧ್ರುವಾಣಿ ಚ |
ತಾನ್ಯೇವಾಗ್ರೇ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ ॥3॥
ಭೂಮಂಡಲದಲ್ಲಿ ಯಾವ ಚರಾಚರ ಪ್ರಾಣಿಗಳಿವೆಯೋ ಅವೆಲ್ಲವೂ ನಾಶವನ್ನೇ ಹೊಂದಿ ಮಣ್ಣಾಗಿ ಬಿಡುತ್ತವೆ.
ತತಃ ಪ್ರಲೀನೇ ಸರ್ವಸ್ಮಿನ್ ಸ್ಥಾವರೇ ಜಂಗಮೇ ತಥಾ |
ಅಕಾಷ್ಠಾ ನಿಸ್ತೃಣಾ ಭೂಮಿರ್ದೃಶ್ಯತೇ ಕೂರ್ಮಪೃಷ್ಠವತ್ ॥4॥
ಹೀಗೆ ಸಮಸ್ತ ಚರಾಚರ ಪ್ರಾಣಿಗಳೆಲ್ಲವೂ ಭೂಮಿಯಲ್ಲಿ ಮಣ್ಣಾಗಲು ಗಿಡ, ಮರ, ಬಳ್ಳಿಗಳಿಂದಲೂ, ಗರಿಕೆ ಮೊದಲಾದ ಹುಲ್ಲುಗಳಿಂದಲೂ ರಹಿತವಾದ ಭೂಮಿಯು ಆಮೆಯ ಬೆನ್ನಿನಂತೆ ಬೋಳು ಬೋಳಾಗಿ ಕಾಣುತ್ತದೆ.
ಭೂಮೇರಪಿ ಗುಣಂ ಗಂಧಮಾಪ ಆದದತೇ ಯದಾ |
ಆತ್ತಗಂಧಾ ತದಾ ಭೂಮಿಃ ಪ್ರಲಯತ್ವಾಯ ಕಲ್ಪತೇ ॥5॥
ಭೂಮಿಯ ಗುಣವಾದ ಗಂಧವನ್ನು ನೀರು ಗ್ರಹಿಸುತ್ತದೆ. ಗಂಧಹೀನವಾದ ಭೂಮಿಯು ತನಗೆ ಕಾರಣವಾದ ನೀರಿನಲ್ಲಿ ಲಯ ಹೊಂದಲು ಸಿದ್ಧವಾಗುತ್ತದೆ.
ಆಪಸ್ತತಃ ಪ್ರತಿಷ್ಠಂತಿ ಊರ್ಮಿಮತ್ಯೋ ಮಹಾಸ್ವನಾಃ |
ಸರ್ವಮೇವೇದಮಾಪೂರ್ಯ ತಿಷ್ಠಂತಿ ಚ ಚರಂತಿ ಚ ॥6॥
ಬಳಿಕ ದೊಡ್ಡ ದೊಡ್ಡ ಅಲೆಗಳಿಂದ ಭಯಂಕರವಾದ ಶಬ್ದವನ್ನು ಮಾಡುತ್ತಾ ನೀರಿನ ಸಮುದಾಯವು ಸಮಗ್ರ ಭೂಮಂಡಲವನ್ನು ಆವರಿಸುತ್ತದೆ. ಸಮಸ್ತ ವಿಶ್ವವನ್ನೂ ತನ್ನಲ್ಲಿ ಕದಡಿಸಿಬಿಡುತ್ತದೆ.
ಅಪಾಮಪಿ ಗುಣಾಂಸ್ತಾತ ಜ್ಯೋತಿರಾದದತೇ ಯದಾ |
ಆಪಸ್ತದಾ ಆತ್ತಗುಣಾ ಜ್ಯೋತಿಷ್ಯುಪರಮಂತಿ ಚ ॥7॥
ನೀರಿನ ಗುಣವಾದ ರಸವನ್ನು ತೇಜಸ್ಸು ಗ್ರಹಿಸುತ್ತದೆ. ರಸದಿಂದ ಹೀನವಾದ ನೀರು ತೇಜಸ್ಸಿನಲ್ಲಿ ಲಯ ಹೊಂದುತ್ತದೆ.
ಯದಾದಿತ್ಯಂ ಸ್ಥಿತಂ ಮಧ್ಯೇ ಗೂಹಂತಿ ಶಿಖಿನೋಽರ್ಚಿಷಃ |
ಸರ್ವಮೇವೇದಮರ್ಚಿರ್ಭಿಃ ಪೂರ್ಣಂ ಜಾಜ್ವಲ್ಯತೇ ನಭಃ ॥8॥
ಆಕಾಶದ ಮಧ್ಯದಲ್ಲಿರುವ ಸೂರ್ಯನನ್ನು ಅಗ್ನಿಯ ಏಳು ಜ್ವಾಲೆಗಳು ಯಾವಾಗ ಮುಚ್ಚುತ್ತವೆಯೋ ಆಗ ಆಕಾಶವೆಲ್ಲವೂ ಜ್ವಾಲೆಗಳಿಂದ ತುಂಬಿಕೊಂಡಿರುತ್ತದೆ.
ಜ್ಯೋತಿಷೋಽಪಿ ಗುಣಂ ರೂಪಂ ವಾಯುರಾದದತೇ ಯದಾ |
ಪ್ರಶಾಮ್ಯತಿ ತದಾ ಜ್ಯೋತಿರ್ವಾಯುರ್ದೋಧೂಯತೇ ಮಹಾನ್ ॥9॥
ಅಗ್ನಿಯ ಗುಣವಾದ ರೂಪವನ್ನು ವಾಯುವು ನುಂಗುತ್ತದೆ. ಅಗ್ನಿಯು ವಾಯುವಿನಲ್ಲಿ ಲಯ ಹೊಂದುತ್ತದೆ. ವಾಯುವು ಭಯಂಕರವಾದ ವೇಗದಿಂದ ಆಕಾಶವನ್ನು ಕ್ಷೋಭೆಗೊಳಿಸುತ್ತದೆ.
ತತಸ್ತು ಮೂಲಮಾಸಾದ್ಯ ವಾಯುಃ ಸಂಭವಮಾತ್ಮನಃ |
ಅಧಶ್ಚೋರ್ಧ್ವಂ ಚ ತಿರ್ಯಕ್ಚ ದೋಧವೀತಿ ದಿಶೋ ದಶ ॥10॥
ಬಳಿಕ ವಾಯುವು ಮಹಾಶಬ್ದದಿಂದ ಕೂಡಿಕೊಂಡು ತನ್ನ ಉತ್ಪತ್ತಿಗೆ ಕಾರಣವಾದ ಆಕಾಶವನ್ನು ಸೇರಿಕೊಂಡು, ಹತ್ತು ದಿಕ್ಕುಗಳಲ್ಲಿಯೂ ಮೇಲೆ ಕೆಳಗೆ, ಎಲ್ಲೆಡೆಯೂ ಬಲವಾಗಿ ಬೀಸುತ್ತದೆ.
ವಾಯೋರಪಿ ಗುಣಂ ಸ್ಪರ್ಶಮಾಕಾಶಂ ಗ್ರಸತೇ ಯದಾ |
ಪ್ರಶಾಮ್ಯತಿ ತದಾ ವಾಯುಃ ಖಂ ತು ತಿಷ್ಠತಿ ನಾನದತ್ ॥11॥
ವಾಯುವಿನ ಗುಣವಾದ ಸ್ಪರ್ಶವನ್ನು ಆಕಾಶವು ನುಂಗುತ್ತದೆ. ಆ ಗುಣವನ್ನು ಕಳೆದುಕೊಂಡ ವಾಯುವು ಆಕಾಶದಲ್ಲಿ ಲೀನವಾಗಿ ಉಪಶಮನ ಹೊಂದುತ್ತದೆ. ಕೊನೆಗೆ ಆಕಾಶ ಒಂದೇ ಶಬ್ದಗುಣದೊಡನೆ ಉಳಿದುಕೊಳ್ಳುತ್ತದೆ.
ಆಕಾಶಸ್ಯ ಗುಣಂ ಶಬ್ದಮಭಿವ್ಯಕ್ತಾತ್ಮಕಂ ಮನಃ |
ಮನಸೋ ವ್ಯಕ್ತಮವ್ಯಕ್ತಂ ಶಾಮ್ಯತಿ ಪ್ರತಿಸಂಚರೇ ॥12॥
ಬಳಿಕ ಆಕಾಶದ ಗುಣವಾದ ಶಬ್ದವನ್ನು ಅಭಿವ್ಯಕ್ತಿಗೊಳಿಸಿದ ಮನಸ್ಸು ಆ ಶಬ್ದವನ್ನು ತನ್ನಲ್ಲೇ ವಿಲೀನಗೊಳಿಸಿಕೊಳ್ಳುತ್ತದೆ. ಮನಸ್ತತ್ತ್ವವು ಮಹತ್ತತ್ತ್ವದಲ್ಲಿಯೂ, ಮಹತ್ತತ್ತ್ವವು ಅವ್ಯಕ್ತತತ್ತ್ವದಲ್ಲಿಯೂ ಪ್ರಳಯ ಕಾಲದಲ್ಲಿ ಲಯವನ್ನು ಹೊಂದುತ್ತದೆ.
ತದಾತ್ಮಗುಣಮಾವಿಶ್ಯ ಮನೋ ಗ್ರಸತಿ ಚಂದ್ರಮಾಃ |
ಮನಸ್ಯುಪರತೇಽಧ್ಯಾತ್ಮಾ ಚಂದ್ರಮಸ್ಯವತಿಷ್ಠತೇ ॥13॥

ಆ ಮಹಾಪ್ರಳಯದ ಕಾಲದಲ್ಲಿ ಮನಸ್ಸಿಗೆ ನಿಯಾಮಕನಾದ ಚಂದ್ರನು ಮನಸ್ಸನ್ನು ನುಂಗುತ್ತಾನೆ. ಮನಸ್ಸು ಶಾಂತವಾದರೂ ಅದು ಚಂದ್ರನಲ್ಲಿ ಪ್ರತಿಷ್ಠಿತವಾಗಿದೆ.
ತಂ ತು ಕಾಲೇನ ಮಹತಾ ಸಂಕಲ್ಪಃ ಕುರುತೇ ವಶೇ |
ಚಿತ್ತಂ ಗ್ರಸತಿ ಸಂಕಲ್ಪಂ ತಚ್ಚ ಜ್ಞಾನಮನುತ್ತಮಮ್ ॥14॥
ಚಂದ್ರನು ಬಹಳ ಕಾಲದ ಬಳಿಕ ಸಂಕಲ್ಪದ ವಶವಾಗುತ್ತಾನೆ. ಆ ಮನಸ್ಸಿನಲ್ಲಿರುವ ಸಂಕಲ್ಪವನ್ನು ಚಿತ್ತವು ನುಂಗುತ್ತದೆ. ಆ ಚಿತ್ತ ಎಂಬುದೇನಿದೆಯೋ ಅದು ಅನುತ್ತಮವಾದ ಜ್ಞಾನ ಎಂದು ಕರೆಸಿಕೊಳ್ಳುತ್ತದೆ.
ಕಾಲೋ ಗಿರತಿ ವಿಜ್ಞಾನಂ ಕಾಲೋ ಬಲಮಿತಿ ಶ್ರುತಿಃ |
ಬಲಂ ಕಾಲೋ ಗ್ರಸತಿ ತು ತಂ ವಿದ್ವಾನ್ ಕುರುತೇ ವಶೇ ॥15॥
ಕಾಲವು ವಿಜ್ಞಾನವನ್ನು ನುಂಗುತ್ತದೆ. ಕಾಲನನ್ನು ಶಕ್ತಿಯು ನುಂಗುತ್ತದೆ. ಮಹಾಕಾಲನು ಶಕ್ತಿಯನ್ನು ನುಂಗುತ್ತಾನೆ. ಅಂತಹ ಮಹಾಕಾಲನನ್ನು ವಿದ್ವಾಂಸನಾದವನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ. ಬ್ರಹ್ಮನೇ ಅಂತಹ ವಿದ್ವಾಂಸನಾಗಿದ್ದಾನೆ.
ಆಕಾಶಸ್ಯ ಯಥಾ ಘೋಷಂ ತಂ ವಿದ್ವಾನ್ ಕುರುತೇಽಽತ್ಮನಿ |
ತದವ್ಯಕ್ತಂ ಪರಂ ಬ್ರಹ್ಮ ತಚ್ಛಾಶ್ವತಮನುತ್ತಮಮ್ |
ಏವಂ ಸರ್ವಾಣಿ ಭೂತಾನಿ ಬ್ರಹ್ಮೈವ ಪ್ರತಿಸಂಚರಃ ॥16॥
ಹೇಗೆ ಆಕಾಶದ ಗುಣವಾದ ಶಬ್ದವನ್ನು ವ್ಯಕ್ತ ಮನಸ್ಸು ತನ್ನಲ್ಲಿ ಲಯಗೊಳಿಸಿ- ಕೊಂಡಿತೋ ಅದೇ ರೀತಿ ಮಹಾಕಾಲನು ತನ್ನಲ್ಲಿ ಲಯ ಮಾಡಿಕೊಳ್ಳುತ್ತಾನೆ. ಆ ಅವ್ಯಕ್ತ ತತ್ತ್ವನೆನಿಸಿದ ಪರಬ್ರಹ್ಮನು ಶಾಶ್ವತನೂ, ಅನುತ್ತಮನೂ ಆಗಿದ್ದಾನೆ. ಈ ರೀತಿಯಾಗಿ ಪ್ರತಿ ಪ್ರಳಯ ಕಾಲದಲ್ಲಿಯೂ ಸಮಸ್ತ ಭೂತಗಳು ಕೊನೆಯಲ್ಲಿ ಭಗವಂತನಲ್ಲಿಯೇ ಲಯ ಹೊಂದುತ್ತವೆ.
ಯಥಾವತ್ ಕೀರ್ತಿತಂ ಸಮ್ಯಗೇವಮೇತದಸಂಶಯಮ್ |
ಬೋಧ್ಯಂ ವಿದ್ಯಾಮಯಂ ದೃಷ್ಟ್ವಾ ಯೋಗಿಭಿಃ ಪರಮಾತ್ಮಭಿಃ ॥17॥
ಶ್ರೇಷ್ಠರಾದ ಯೋಗಿಗಳು ಜ್ಞಾನಮಯನಾದ ಭಗವಂತನನ್ನು ತಮ್ಮ ಜ್ಞಾನ ದೃಷ್ಟಿಯಿಂದ ನೋಡಿ, ಯಥಾರ್ಥವಾಗಿ ಸಂದೇಹ ಬಾರದಂತೆ ವರ್ಣಿಸಿದ್ದಾರೆ. ಅವರು ಹೇಗೆ ಹೇಳಿದ್ದಾರೋ ಅದೇ ರೀತಿ ನಾನು ನಿನಗೆ ಬ್ರಹ್ಮವಸ್ತುವಿನ ಸ್ವರೂಪವನ್ನು ತಿಳಿಸಿದ್ದೇನೆ.
ಏವಂ ವಿಸ್ತಾರಸಂಕ್ಷೇಪೌ ಬ್ರಹ್ಮಾಂಡೋಂತೇ ಪುನಃ ಪುನಃ |
ಯುಗಸಾಹಸ್ರಯೋರಾದಾವಹ್ನೋ ರಾತ್ರ್ಯಸ್ತಥೈವ ಚ ॥18॥
ಈ ರೀತಿಯಾಗಿ ಬಾರಿ ಬಾರಿಗೂ ಬ್ರಹ್ಮನ ದಿನದ ಅರ್ಥಾತ್ ಸಾವಿರ ಯುಗಗಳ ಆದಿಯಲ್ಲಿ ಪುನಃ ಸೃಷ್ಟಿಯು ಆರಂಭವಾಗುತ್ತದೆ. ಬ್ರಹ್ಮನ ರಾತ್ರಿಯು ಅಷ್ಟು ಕಾಲ ಇರುತ್ತದೆ. ಪುನಃ ಸಾವಿರ ಯುಗಗಳ ಆದಿಯಲ್ಲಿ ಸೃಷ್ಟಿಯು ಹೀಗೆ ವಿಸ್ತಾರ ಹೊಂದುತ್ತದೆ. ಕೊನೆಯಲ್ಲಿ ಪುನಃ ಸಂಕ್ಷೇಪವನ್ನು ಹೊಂದುತ್ತದೆ. ಈ ವಿಷಯವನ್ನು ಹೀಗೆ ನಿರೂಪಿಸಲಾಗಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪ್ರತ್ಯಾಹಾರಕಥನಂ ನಾಮ ಅಷ್ಟಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂಬತ್ತನೆಯ ಅಧ್ಯಾಯ
ಬ್ರಾಹ್ಮಣನ ಕರ್ತವ್ಯಗಳು ಮತ್ತು ದಾನದ ಮಹಿಮೆ.
ವ್ಯಾಸಃ
ಭೂತಗ್ರಾಮೇ ನಿಯುಕ್ತಂ ಯತ್ತದೇತತ್ ಕೀರ್ತಿತಂ ಮಯಾ |
ಬ್ರಾಹ್ಮಣಸ್ಯ ತು ಯತ್ಕೃತ್ಯಂ ತತ್ತೇ ವಕ್ಷ್ಯಾಮಿ ಪೃಚ್ಛತೇ ॥1॥
ವ್ಯಾಸರು ಮಗನೇ, ಸಮಸ್ತ ಪಂಚಭೂತಗಳ ವಿಷಯದಲ್ಲಿ ನೀನು ಪ್ರಶ್ನಿಸಿದಂತೆ ಅದಕ್ಕನುಸಾರವಾಗಿ ಉತ್ತರಿಸಿದ್ದೇನೆ. ಎಲ್ಲಾ ವಿಷಯಗಳನ್ನು ಹೇಳಿದ್ದೇನೆ. ಮುಂದೆ ಬ್ರಾಹ್ಮಣನ ಕರ್ತವ್ಯವು ಏನು ಎಂದು ನಿರೂಪಿಸುತ್ತೇನೆ. ಏಕಾಗ್ರ ಮನಸ್ಸಿನಿಂದ ಕೇಳು.
ಜಾತಕರ್ಮಪ್ರಭೃತ್ಯಸ್ಯ ಕರ್ಮಣಾಂ ದಕ್ಷಿಣಾವತಾಮ್ |
ಕ್ರಿಯಾ ಸ್ಯಾದಾಸಮಾವೃತ್ತೇರಾಚಾರ್ಯೇ ವೇದಪಾರಗೇ ॥2॥
ಬ್ರಾಹ್ಮಣನು ಮಗು ಹುಟ್ಟಿದ ಬಳಿಕ ತನ್ನ ಮಗನಿಗೆ ಜಾತಕರ್ಮದಿಂದ ಆರಂಭಿಸಿ ಸಮಾವರ್ತನ ಪರ್ಯಂತ ದಕ್ಷಿಣಾಯುಕ್ತವಾದ ಸಮಸ್ತ ಕರ್ಮಗಳನ್ನು ವೇದಜ್ಞರಾದ ಆಚಾರ್ಯ ಪುರುಷರಿಂದ ನಡೆಸಬೇಕು.
ಅಧೀತ್ಯ ವೇದಾನಖಿಲಾನ್ ಗುರುಶುಶ್ರೂಷಣೇ ರತಃ |
ಗುರೂಣಾಮನೃಣೋ ಭೂತ್ವಾ ಸಮಾವರ್ತೇತ ಯಜ್ಞವಿತ್ ॥3॥
ಉಪನಯನವಾದ ಬಳಿಕ ಬ್ರಾಹ್ಮಣ ಕುಮಾರನು ಗುರುಶುಶ್ರೂಷೆಯಲ್ಲಿ ರತನಾಗಿ, ಸಮಗ್ರ ವೇದಗಳನ್ನು ಅಧ್ಯಯನ ಮಾಡಬೇಕು. ಬಳಿಕ ಗುರುದಕ್ಷಿಣೆಯನ್ನು ನೀಡಿ, ಆಚಾರ್ಯಋಣದಿಂದ ಮುಕ್ತನಾಗಿ, ಯಜ್ಞಪ್ರಕ್ರಿಯೆಯನ್ನು ತಿಳಿದು ಸಮಾವರ್ತನ ಎಂಬ ಸಂಸ್ಕಾರವನ್ನು ಮಾಡಿಕೊಳ್ಳಬೇಕು.
ಆಚಾರ್ಯೇಣಾಭ್ಯನುಜ್ಞಾತಶ್ಚತುರ್ಣಾಮೇಕಮಾಶ್ರಮಮ್ |
ಆ ವಿಮೋಕ್ಷಾಚ್ಛರೀರಸ್ಯ ಸೋಽನುತಿಷ್ಠೇದ್ ಯಥಾವಿಧಿ ॥4॥
ಪುನಃ ಆಚಾರ್ಯರಿಂದ ಅನುಜ್ಞೆಯನ್ನು ಪಡೆದು, ನಾಲ್ಕು ಆಶ್ರಮಗಳಲ್ಲಿ ಯಾವುದಾದರೂ ಒಂದು ಆಶ್ರಮವನ್ನು ಆಶ್ರಯಿಸಿ, ಆ ಆಶ್ರಮಕ್ಕೆ ಸಂಬಂಧಿಸಿದ ನಿಯಮಗಳನ್ನು ಶಾಸ್ತ್ರವಿಧಿಯಂತೆ ಜೀವನ ಪರ್ಯಂತ ಅನುಷ್ಠಾನ ಮಾಡಬೇಕು.
ಪ್ರಜಾಸರ್ಗೇಣ ದಾರೈಶ್ಚ ಬ್ರಹ್ಮಚರ್ಯೇಣ ವಾ ಪುನಃ |

ವನೇ ಗುರುಸಕಾಶೇ ವಾ ಯತಿಧರ್ಮೇಣ ವಾ ಪುನಃ ॥5॥
ಗೃಹಸ್ಥಸ್ತ್ವೇವ ಸರ್ವೇಷಾಂ ಚತುರ್ಣಾಂ ಮೂಲಮುಚ್ಯತೇ |
ತತ್ರ ಪಕ್ವಕಷಾಯೋ ಹಿ ದಾಂತಃ ಸರ್ವತ್ರ ಸಿದ್ಧ್ಯತಿ ॥6॥
ಪತ್ನಿಯರ ಜೊತೆಗೆ ಪ್ರಜಾಸರ್ಗವಿಧಿಯಿಂದ ಕರ್ತವ್ಯನ್ನಾಚರಿಸುವ ಗೃಹಸ್ಥಾಶ್ರಮಕ್ಕಾಗಲೀ, ಬ್ರಹ್ಮಚರ್ಯಾಶ್ರಮಕ್ಕಾಗಲೀ, ಗುರುವಿನ ಬಳಿ ವಾಸಿಸುವ ವಾನಪ್ರಸ್ಥಾಶ್ರಮಕ್ಕಾಗಲೀ, ಯತಿಧರ್ಮಕ್ಕಾಗಲೀ ಗೃಹಸ್ಥಾಶ್ರಮವೇ ಆಧಾರವಾದುದು. ಆದ್ದರಿಂದ ಎಲ್ಲ ಆಶ್ರಮಗಳಿಗೂ ಮೂಲವಾದುದೇ ಗೃಹಸ್ಥಾಶ್ರಮ ಎನ್ನುತ್ತಾರೆ. ಆದ್ದರಿಂದ ಗೃಹಸ್ಥಾಶ್ರಮದಲ್ಲಿ ಇರುವ ವ್ಯಕ್ತಿಯು ರಾಗಾದಿ ದೋಷಗಳೆಲ್ಲ ನೀಗಿದ ಬಳಿಕ ಪರಿಪಕ್ವತೆಯನ್ನು ಪಡೆದು ಜಿತೇಂದ್ರಿಯನಾದಾಗ ಗೃಹಸ್ಥನು ಸಿದ್ಧಿಯನ್ನು ಹೊಂದುತ್ತಾನೆ.
ಪ್ರಜಾವಾನ್ ಶ್ರೋತ್ರಿಯೋ ಯಜ್ವಾ ಮುಕ್ತೋ ದಿವ್ಯೈಸ್ತ್ರಿಭಿರ್ಋಣೈಃ |
ಅಥಾನ್ಯಾನಾಶ್ರಮಾನ್ ಪಶ್ಚಾತ್ ಪೂತೋ ಗಚ್ಛತಿ ಕರ್ಮಭಿಃ ॥7॥
ಗೃಹಸ್ಥನು ಸಂತಾನ ಪಡೆದಾಗ ಪಿತೃ ಋಣದಿಂದಲೂ, ವೇದಾಧ್ಯಯನದಿಂದ ಋಷಿ ಋಣದಿಂದಲೂ, ಯಜ್ಞಾದಿಗಳಿಂದ ದೇವ ಋಣದಿಂದಲೂ ಮುಕ್ತನಾಗುತ್ತಾನೆ. ಈ ಕರ್ತವ್ಯಗಳಿಂದ ಪರಿಶುದ್ಧನಾದ ಈತನು ವಾನಪ್ರಸ್ಥ, ಸಂನ್ಯಾಸ ಈ ಆಶ್ರಮಗಳನ್ನು ಸ್ವೀಕರಿಸಬಹುದು.
ಯತ್ ಪೃಥಿವ್ಯಾಂ ಪುಣ್ಯತಮಂ ವಿದ್ಯಾಸ್ಥಾನಂ ತದಾವಸೇತ್ |
ಯತೇತ ತಸ್ಮಿನ್ ಪ್ರಾಮಾಣ್ಯಂ ಗಂತುಂ ಯಶಸಿ ಚೋತ್ತಮೇ ॥8॥
ಈ ಭೂಮಿಯಲ್ಲಿ ಯಾವ ಸ್ಥಳವು ಪುಣ್ಯವೆನಿಸಿದೆಯೋ, ಉತ್ತಮವೆನಿಸಿದೆಯೋ ಅಲ್ಲಿಯೇ ವಾಸ ಮಾಡಬೇಕು. ಅಲ್ಲಿಯೇ ವಾಸವಾಗಿದ್ದು ಉತ್ತಮವಾದ ಕೀರ್ತಿಯಿಂದ ಆದರ್ಶ ಪುರುಷನಾಗಿ ಇರಲು ಪ್ರಯತ್ನಿಸಬೇಕು.
ತಪಸಾ ವಾ ಸುಮಹತಾ ವಿದ್ಯಾನಾಂ ಪಾರಣೇನ ವಾ |
ಇಜ್ಯಯಾ ವಾ ಪ್ರಧಾನೈರ್ವಾ ವಿಪ್ರಾಣಾಂ ವರ್ಧತೇ ಯಶಃ ॥9॥
ತಪಸ್ಸನ್ನಾಚರಿಸಿ ಆದರ್ಶ ಪುರುಷನಾಗಬೇಕು. ಪಾಂಡಿತ್ಯವನ್ನು ಸಂಪಾದನೆ ಮಾಡುವುದರಲ್ಲಾದರೂ ಆದರ್ಶ ಪುರುಷನಾಗಬೇಕು. ಯಜ್ಞದಲ್ಲಾದರೂ ಆದರ್ಶ ಪುರುಷನಾಗಬೇಕು. ಅಥವಾ ಬ್ರಾಹ್ಮಣರಿಗೆ ದಾನ ಕೊಡುವುದರಲ್ಲಾದರೂ ಆದರ್ಶ ಪುರುಷನಾಗಬೇಕು.
ಯಾವದಸ್ಯ ಭವತ್ಯಸ್ಮಿಲ್ಲೋಕೇ ಕೀರ್ತಿರ್ಯಶಸ್ಕರೀ |
ತಾವತ್ ಪುಣ್ಯಕೃತಾಲ್ಲೋಕಾನನಂತಾನ್ ಪುರುಷೋಽಶ್ನುತೇ ॥10॥
ತಪಸ್ಸು, ವಿದ್ಯೆ, ದಾನ, ಯಜ್ಞ ಇವುಗಳಿಂದ ಬ್ರಾಹ್ಮಣನ ಕೀರ್ತಿಯು ಅಭಿವೃದ್ಧಿಯನ್ನು ಹೊಂದುತ್ತದೆ. ಎಲ್ಲಿಯ ತನಕ ಇಂತಹ ಕೀರ್ತಿ ಇರುವುದೋ ಅವನು ಪುಣ್ಯವಂತರು ಅನುಭವಿಸುವ ಅನಂತಾನಂತ ಲೋಕಗಳನ್ನು ಅಷ್ಟು ಕಾಲ ಹೊಂದಿ ಸುಖಭೋಗವನ್ನು ಅನುಭವಿಸುತ್ತಾನೆ.
ಅಧ್ಯಾಪಯೇದಧೀಯೀತ ಯಾಜಯೇತ ಯಜೇತ ಚ |
ನ ವೃಥಾ ಪ್ರತಿಗೃಹ್ಣೀಯಾನ್ನ ಚ ದದ್ಯಾತ್ ಕಥಂಚನ ॥11॥
ಬ್ರಾಹ್ಮಣನಾದವನು ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹಗಳಲ್ಲಿ ನಿರಂತರ ನಿರತನಾಗಿರಬೇಕು. ವ್ಯರ್ಥವಾದ ದಾನವನ್ನು ಸ್ವೀಕರಿಸಬಾರದು. ಅಯೋಗ್ಯರಿಗೆ ದಾನವನ್ನು ಮಾಡಲೂ ಬಾರದು.
ಯಾಜ್ಯತಃ ಶಿಷ್ಯತೋ ವಾಪಿ ಕನ್ಯಯಾ ವಾ ಧನಂ ಮಹತ್ |
ಯದ್ಯಾಗಚ್ಛೇದ್ ಯಜೇದ್ ದದ್ಯಾನ್ನೈಕೋಽಶ್ನೀಯಾತ್ ಕಥಂಚನ ॥
ಯಾಗವನ್ನು ಮಾಡಿದಾಗ ಯಜಮಾನನು ನೀಡಿದ ದಕ್ಷಿಣೆ, ಕನ್ಯಾ ಸ್ವೀಕಾರ ಮಾಡಿದಾಗ ಮಾವನು ನೀಡಿದ ವರದಕ್ಷಿಣೆ ಅಥವಾ ಪಾಠ ಹೇಳಿದಾಗ ಶಿಷ್ಯನು ಕೊಡುವ ಗುರುದಕ್ಷಿಣೆ ಇಂತಹ ಸಂಪತ್ತಿನಿಂದ ದಾನ ಮಾಡಬೇಕು. ಅಂತಹ ಧನವನ್ನು ಸ್ವಾರ್ಥಿಯಾಗಿ ತಾನೊಬ್ಬನೇ ಉಪಭೋಗಿಸಬಾರದು.
ಗೃಹಮಾವಸತೋ ಹ್ಯಸ್ಯ ನಾನ್ಯತ್ತೀರ್ಥಂ ಪ್ರತಿಗ್ರಹಾತ್ |
ದೇವರ್ಷಿಪಿತೃಗುರ್ವರ್ಥಂ ವೃದ್ಧಾತುರಬುಭುಕ್ಷತಾಮ್ ॥13॥
ದೇವತೆಗಳ, ಋಷಿಗಳ, ಪಿತೃಗಳ, ಗುರುಗಳ, ವೃದ್ಧರ, ರೋಗಿಗಳ, ಹಸಿದವರ ಸಲುವಾಗಿ ಬ್ರಾಹ್ಮಣನು ಧನವನ್ನು ಸಂಗ್ರಹಿಸಬಹುದು. ದಾನವನ್ನು ಸ್ವೀಕರಿಸಬಹುದು. ಇಂತಹ ಪವಿತ್ರವಾದ ಮಾರ್ಗಗಳನ್ನು ಬಿಟ್ಟು ಸ್ವಾರ್ಥ ದೃಷ್ಟಿಯಿಂದ ಹಣವನ್ನು ಸಂಗ್ರಹಿಸಬಾರದು.

ಅಂತರ್ಹಿತಾಭಿತಪ್ತಾನಾಂ ಯಥಾಶಕ್ತಿ ಬುಭೂಷತಾಮ್ |
ದ್ರವ್ಯಾಣಾಮತಿಶಕ್ತ್ಯಾಪಿ ದೇಯಮೇಷಾಂ ಕೃತಾದಪಿ ॥14॥
ದರಿದ್ರರಾಗಿ ದಾರಿದ್ರ್ಯವನ್ನು ಹೇಳಿಕೊಳ್ಳದೆ ಇರುವ ದುಃಖಿತರಾದ ಶ್ರೋತ್ರಿಯರಿಗೆ ಸಂಪಾದಿಸಿದ ಹಣದಲ್ಲಿ ಶಕ್ತಿ ಮೀರಿ ದಾನ ಮಾಡಬೇಕು.
ಅರ್ಹತಾಮನುರೂಪಾಣಾಂ ನಾದೇಯಂ ಹ್ಯಸ್ತಿ ಕಿಂಚನ |
ಉಚ್ಚೈಃಶ್ರವಸಮಪ್ಯಶ್ವಂ ಪ್ರಾಪಣೀಯಂ ಸತಾಂ ವಿದುಃ ॥15॥
ಅರ್ಹರಾದ ವ್ಯಕ್ತಿಗಳಿಗೆ ಕೊಡಬಾರದೆಂಬ ವಸ್ತುವೇ ಜಗತ್ತಿನಲ್ಲಿಲ್ಲ. ಸತ್ಪಾತ್ರರಿಗೆ ಇಂದ್ರನ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನಾದರೂ ದಾನ ಮಾಡಬಹುದೆಂದು ಸತ್ಪುರುಷರ ಅಭಿಪ್ರಾಯವಾಗಿದೆ.
ಅನುನೀಯ ತಥಾ ಕಾವ್ಯಃ ಸತ್ಯಸಂಧೋ ಮಹಾವ್ರತಃ |
ಸ್ವೈಃ ಪ್ರಾಣೈರ್ಬ್ರಾಹ್ಮಣಪ್ರಾಣಾನ್ ಪರಿತ್ರಾಯ ದಿವಂ ಗತಃ ॥16॥
ಮಹಾವ್ರತನಾದ, ಸತ್ಯಸಂಧನಾದ ಶುಕ್ರಾಚಾರ್ಯನು ಸ್ವೇಚ್ಛೆಯಿಂದ ತನ್ನ ಉದರದಲ್ಲಿರುವ ಕಚನೆಂಬ ಬ್ರಾಹ್ಮಣನ ಪ್ರಾಣವನ್ನು

ರಕ್ಷಿಸಲು ತನ್ನ ಪ್ರಾಣವನ್ನೇ ತೊರೆದು ಸ್ವರ್ಗವನ್ನು ಪಡೆದುಕೊಂಡನು.
ರಂತಿದೇವಶ್ಚ ಸಾಂಕೃತ್ಯೋ ವಸಿಷ್ಠಾಯ ಮಹಾತ್ಮನೇ |
ಅಪಃ ಪ್ರದಾಯ ಶೀತೋಷ್ಣಾ ನಾಕಪೃಷ್ಠೇ ಮಹೀಯತೇ ||17||
ರಂತಿದೇವನೆಂಬ ರಾಜನು ಮಹಾದುರ್ಭಿಕ್ಷಸಮಯದಲ್ಲಿ ತಾನು ಊಟ ಮಾಡದೆ ಹಗಲು-ರಾತ್ರಿ ಬಹುದಿನ ಪರ್ಯಂತ ದೀನರಾದವರಿಗೆ ಅನ್ನವನ್ನು ಕೊಟ್ಟು ತನಗೆ ಪ್ರಾಣಸಂಕಟ ಬಂದಾಗ ಬಾಯಾರಿಕೆಯನ್ನು ಪರಿಹರಿಸಿಕೊಳ್ಳಲು ತಂದ ಬಿಸಿ ನೀರನ್ನು ಕುಡಿಯಬೇಕೆಂದು ಇದ್ದಾಗ ಭಿಕ್ಷು ರೂಪದಲ್ಲಿ ವಸಿಷ್ಠರು ಆಗಮಿಸಿದರು. ಅವರಿಗೆ ಆ ನೀರನ್ನು ಕೊಟ್ಟು ಆ ಕ್ಷಣದಲ್ಲಿಯೇ ಪ್ರಾಣವನ್ನು ತೊರೆದು ಸ್ವರ್ಗಕ್ಕೆ ಹೋದನು.
ಆತ್ರೇಯಶ್ಚಂದ್ರದಮಯೋರರ್ಹತೋರ್ವಿವಿಧಂ ಧನಮ್ |
ದತ್ತ್ವಾ ಲೋಕಾನ್ಯಯೌ ಧೀಮಾನನಂತಾನ್ ಸ ಮಹೀಪತಿಃ ||18||
ಅತ್ರಿವಂಶಜನಾದ, ಬುದ್ಧಿವಂತನಾದ ಇಂದ್ರದಮನರಾಜನು ಅರ್ಹನಾದ ಒಬ್ಬ ಬ್ರಾಹ್ಮಣನಿಗೆ ಅನೇಕ ವಿಧವಾದ ಧನವನ್ನು ನೀಡಿ ಅಕ್ಷಯವಾದ ಲೋಕಗಳನ್ನು ಹೊಂದಿದನು.
ಶಿಬಿರೌಶೀನರೋಽಂಗಾನಿ ಸುತಂ ಚ ಪ್ರಿಯಮೌರಸಮ್ |
ಬ್ರಾಹ್ಮಣಾರ್ಥಮುಪಾಕೃತ್ಯ ನಾಕಪೃಷ್ಠಮಿತೋ ಗತಃ ||19||
ಉಶೀನರನ ಮಗನಾದ ಶಿಬಿಯು ಒಬ್ಬ ಬ್ರಾಹ್ಮಣನಿಗೆ ತನ್ನ ಶರೀರವನ್ನೇ ನೀಡಿ, ಪ್ರಿಯನಾದ ತನ್ನ ಔರಸ ಪುತ್ರನನ್ನು ಅವನಿಗೆ ದಾನವಾಗಿ ಕೊಟ್ಟು ಅದರ ಫಲವಾಗಿ ಸ್ವರ್ಗ ಏರಿದನು.
ಪ್ರತರ್ದನಃ ಕಾಶಿಪತಿಃ ಪ್ರದಾಯ ನಯನೇ ಸ್ವಕೇ |
ಬ್ರಾಹ್ಮಣಾಯಾತುಲಾಂ ಕೀರ್ತಿಮಿಹ ಚಾಮುತ್ರ ಚಾಶ್ನುತೇ ||20||
ಕಾಶಿರಾಜನ ಮಗನಾದ ಪ್ರತರ್ದನನು ಕುರುಡನೊಬ್ಬನಿಗೆ ತನ್ನ ಎರಡು ಕಣ್ಣುಗಳನ್ನೇ ದಾನ ಮಾಡಿ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅತುಲವಾದ ಕೀರ್ತಿಯನ್ನು ಪಡೆದುಕೊಂಡನು.
ದಿವ್ಯಂ ಮೃಷ್ಟಶಲಾಕಂ ತು ಸೌವರ್ಣಂ ಪರಮರ್ದ್ಧಿಮತ್ |
ಛತ್ರಂ ದೇವಾವೃಧೋ ದತ್ತ್ವಾ ಸರಾಷ್ಟ್ರೋಽಭ್ಯಪತದ್ ದಿವಮ್ ||21||
ದೇವಾವೃಧನೆಂಬ ರಾಜನು ಎಂಟು ಕಡ್ಡಿಗಳಿಂದ ಯುಕ್ತವಾಗಿದ್ದ, ಬಂಗಾರ- ಮಯವಾದ, ಬಹುಮೂಲ್ಯವಾದ ತನ್ನ ಛತ್ರವನ್ನೇ ಬ್ರಾಹ್ಮಣನಿಗೆ ದಾನ ಮಾಡಿ ಅದರ ಫಲವಾಗಿ ತನ್ನ ಪ್ರಜೆಗಳ ಜೊತೆ ಸ್ವರ್ಗ ಸೇರಿದನು.
ಸಾಂಕೃತಿಶ್ಚ ತಥಾತ್ರೇಯಃ ಶಿಷ್ಯೇಭ್ಯೋ ಬ್ರಹ್ಮ ನಿರ್ಗುಣಮ್ |
ಉಪದಿಶ್ಯ ಮಹಾತೇಜಾ ಗತೋ ಲೋಕಾನನುತ್ತಮಾನ್ ||22||
ಅತ್ರಿವಂಶದಲ್ಲಿ ಹುಟ್ಟಿದ ಮಹಾತೇಜಸ್ವಿಯಾದ ಸಾಂಕೃತಿಯು ತನ್ನ ಶಿಷ್ಯನಿಗೆ ಭಗವತ್ತತ್ತ್ವೋಪದೇಶವೆಂಬ ಜ್ಞಾನವನ್ನು ದಾನ ಮಾಡಿ ಉತ್ತಮ ಲೋಕವನ್ನು ಹೊಂದಿದನು.
ಅಂಬರೀಷೋ ಗವಾಂ ದತ್ತ್ವಾ ಬ್ರಾಹ್ಮಣೇಭ್ಯಃ ಪ್ರತಾಪವಾನ್ |
ಅರ್ಬುದಾನಿ ದಶೈಕಂ ಚ ಸರಾಷ್ಟ್ರೋಽಭ್ಯಪತದ್ ದಿವಮ್ ||23||
ಪ್ರತಾಪವಂತನಾದ ಅಂಬರೀಷನು ನೂರ ಹತ್ತುಕೋಟಿ ಗೋವುಗಳನ್ನು ದಾನ ಮಾಡಿ ಅದರ ಫಲವಾಗಿ ಸ್ವರ್ಗ ಸೇರಿದನು.
ಸಾವಿತ್ರೀ ಕುಂಡಲೇ ದಿವ್ಯೇ ಶರೀರಂ ಜನಮೇಜಯಃ |
ಬ್ರಾಹ್ಮಣಾರ್ಥೇ ಪರಿತ್ಯಜ್ಯ ಜಗ್ಮತುರ್ಲೋಕಮುತ್ತಮಮ್ ||24||
ಸಾವಿತ್ರಿಯು ತನ್ನ ದಿವ್ಯವಾದ ಎರಡು ಕರ್ಣ-ಕುಂಡಲಗಳನ್ನು ಬ್ರಾಹ್ಮಣನಿಗೆ ದಾನ ಮಾಡಿದಳು. ಜನಮೇಜಯನು ಬ್ರಾಹ್ಮಣನಿಗಾಗಿ ತನ್ನ ಶರೀರವನ್ನೇ ತ್ಯಾಗ ಮಾಡಿದ. ಇದರಿಂದ ಅವರಿಬ್ಬರೂ ಉತ್ತಮ ಲೋಕಗಳನ್ನು ಹೊಂದಿದರು.
ಸರ್ವರತ್ನಂ ವೃಷಾದರ್ಭೋ ಯುವನಾಶ್ವಃ ಪ್ರಿಯಾಃ ಸ್ತ್ರಿಯಃ |
ರಮ್ಯಮಾವಸಥಂ ಚೈವ ದತ್ತ್ವಾಮುಂ ಲೋಕಮಾಸ್ಥಿತಃ ||25||
ವೃಷದರ್ಭೆಯ ಮಗನಾದ ಯುವನಾಶ್ವನು ತನ್ನಲ್ಲಿದ್ದ ಸಮಸ್ತ ರತ್ನಗಳನ್ನು, ಪ್ರಿಯರಾದ ಸ್ತ್ರೀಯರನ್ನು, ರಮಣೀಯವಾದ ಮನೆಯನ್ನು ಬ್ರಾಹ್ಮಣರಿಗೆ ದಾನ ಮಾಡಿ ಅದರ ಫಲವಾಗಿ ಸ್ವರ್ಗಲೋಕವನ್ನು ಹೊಂದಿದನು.
ನಿಮೀ ರಾಷ್ಟ್ರಂ ಚ ವೈದೇಹೋ ಜಾಮದಗ್ನ್ಯೋ ವಸುಂಧರಾಮ್ |
ಬ್ರಾಹ್ಮಣೇಭ್ಯೋ ದದೌ ಚಾಪಿ ಗಯಶ್ಚೋರ್ವೀಂ ಸಪತ್ತನಾಮ್ ||26||
ವಿದೇಹರಾಜನಾದ ನಿಮಿಯು ತನ್ನ ರಾಷ್ಟ್ರವನ್ನು, ಜಮದಗ್ನಿಯ ಮಗನಾದ ಪರಶುರಾಮನು ಮತ್ತು ಗಯನು ನಗರಗಳಿಂದ ಯುಕ್ತವಾದ ಭೂಮಿಯನ್ನೇ ಬ್ರಾಹ್ಮಣರಿಗೆ ದಾನ ಮಾಡಿದರು.
ಅವರ್ಷತಿ ಚ ಪರ್ಜನ್ಯೇ ಸರ್ವಭೂತಾನಿ ಚಾಸಕೃತ್ |
ವಸಿಷ್ಠೋ ಜೀವಯಾಮಾಸ ಪ್ರಜಾಪತಿರಿವ ಪ್ರಜಾಃ ||27||
ಒಮ್ಮೆ ಬಹಳ ಸಮಯ ಪರ್ಜನ್ಯನು ಮಳೆ ಸುರಿಸಲಿಲ್ಲ. ಆಗ ವಸಿಷ್ಠ ಮಹರ್ಷಿಗಳು ಮಳೆಯನ್ನು ಸುರಿಸಿ ಪ್ರಜೆಗಳನ್ನು ಪ್ರಜಾಪತಿಗಳಂತೆ ಬದುಕಿಸಿದರು.
ಕರಂಧಮಸ್ಯ ಪುತ್ರಸ್ತು ಮರುತ್ತೋ ನೃಪತಿಸ್ತಥಾ |
ಕನ್ಯಾಮಂಗಿರಸೇ ದತ್ತ್ವಾ ದಿವಮಾಶು ಜಗಾಮ ಹ ||28||
ಕರಂಧಮನ ಮಗನಾದ, ಸತ್ಕರ್ಮರತನಾದ ಮರುತ್ತನು ಅಂಗಿರಸರಿಗೆ ಕನ್ಯೆಯನ್ನು ದಾನ ಮಾಡಿ ಅದರ ಫಲದಿಂದ ಕೂಡಲೇ ಸ್ವರ್ಗಕ್ಕೆ ಹೋದನು.

ಬ್ರಹ್ಮದತ್ತಶ್ಚ ಪಾಂಚಾಲ್ಯೋ ರಾಜಾ ಬುದ್ಧಿಮತಾಂ ವರಃ |
ನಿಧಿಂ ಶಂಖಂ ದ್ವಿಜಾಗ್ರ್ಯೇಭ್ಯೋ ದತ್ತ್ವಾ ಲೋಕಾನವಾಪ್ತವಾನ್ ॥29॥
ಪಾಂಚಾಲರಾಜನಾದ, ಬುದ್ಧಿವಂತರಲ್ಲಿ ಶ್ರೇಷ್ಠನಾದ ಬ್ರಹ್ಮದತ್ತನು ಶ್ರೇಷ್ಠ ಬ್ರಾಹ್ಮಣರಿಗೆ ನೂರು ಶತಕೋಟಿ ನಿಧಿಯನ್ನು ದಾನ ಮಾಡಿ ಪುಣ್ಯಲೋಕಗಳನ್ನು ಪಡೆದನು.
ರಾಜಾ ಮಿತ್ರಸಹಶ್ಚಾಪಿ ವಸಿಷ್ಠಾಯ ಮಹಾತ್ಮನೇ |
ಮದಯಂತೀಂ ಪ್ರಿಯಂ ದತ್ತ್ವಾ ತಯಾ ಸಹ ದಿವಂ ಗತಃ ॥30॥
ಮಿತ್ರಸಹ ರಾಜನು ಮಹಾತ್ಮರಾದ ವಸಿಷ್ಠರಿಗೆ ತನ್ನ ಪ್ರಿಯಪತ್ನಿಯಾದ ಮದಯಂತಿಯನ್ನು ಸೇವಿಸಲು ಕೊಟ್ಟು, ಅವಸಾನದ ಬಳಿಕ ಅವಳೊಡನೆ ಸ್ವರ್ಗ ಸೇರಿದನು.
ಸಹಸ್ರಜಿಚ್ಚ ರಾಜರ್ಷಿಃ ಪ್ರಾಣಾನಿಷ್ಟಾನ್ ಮಹಾಯಶಾಃ |
ಬ್ರಾಹ್ಮಣಾರ್ಥೇ ಪರಿತ್ಯಜ್ಯ ಗತೋ ಲೋಕಾನನುತ್ತಮಾನ್ ॥31॥
ಯಶೋವಂತನಾದ, ರಾಜರ್ಷಿಯಾದ ಸಹಸ್ರಜಿತ್ ರಾಜನು ಬ್ರಾಹ್ಮಣರ ನಿಮಿತ್ತದಿಂದ ತನ್ನ ಪ್ರಿಯವಾದ ಪ್ರಾಣವನ್ನೇ ಅರ್ಪಿಸಿ ಉತ್ತಮ ಲೋಕಕ್ಕೆ ಹೋದನು.
ಸರ್ವಕಾಮೈಶ್ಚ ಸಂಪೂರ್ಣಂ ದತ್ತ್ವಾ ವೇಶ್ಮ ಹಿರಣ್ಮಯಮ್ |
ಮುದ್ಗಲಾಯ ಗತಃ ಸ್ವರ್ಗಂ ಶತದ್ಯುಮ್ನೋ ಮಹೀಪತಿಃ ॥32॥
ಶತದ್ಯುಮ್ನ ಎಂಬ ಮಹೀಪತಿಯು ಸಮಸ್ತ ಭೋಗ ವಸ್ತುಗಳಿಂದ ತುಂಬಿದ ಬಂಗಾರಮಯವಾದ ಭವನವನ್ನು ಮುದ್ಗಲನೆಂಬ ವಿಪ್ರನಿಗೆ ದಾನ ಮಾಡಿ ಅದರ ಫಲವಾಗಿ ಸ್ವರ್ಗವನ್ನು ಸೇರಿದನು.
ನಾಮ್ನಾ ಚ ದ್ಯುತಿಮಾನ್ನಾಮ ಶಾಲ್ವರಾಜಃ ಪ್ರತಾಪವಾನ್ |
ದತ್ತ್ವಾ ರಾಜ್ಯಮೃಚೀಕಾಯ ಗತೋ ಲೋಕಾನನುತ್ತಮಾನ್ ॥33॥
ದ್ಯುತಿಮಂತ ಎಂಬ ಹೆಸರಿನಿಂದ ಖ್ಯಾತಿ ಗಳಿಸಿದ, ಪ್ರತಾಪವಂತನಾದ ಶಾಲ್ವರಾಜನು ಋಚೀಕನಿಗೆ ರಾಜ್ಯವನ್ನೇ ದಾನ ಮಾಡಿ ಅದರ ಫಲವಾಗಿ ಉತ್ತಮೋತ್ತಮ ಲೋಕಗಳನ್ನು ಹೊಂದಿದನು.
ಮದಿರಾಶ್ವಶ್ಚ ರಾಜರ್ಷಿರ್ದತ್ತ್ವಾ ಕನ್ಯಾಂ ಸುಮಧ್ಯಮಾಮ್ |
ಹಿರಣ್ಯಹಸ್ತಾಯ ಗತೋ ಲೋಕಾಂದೇವೈರಭಿಷ್ಟುತಾನ್ ॥34॥
ಮದಿರಾಶ್ವನೆಂಬ ರಾಜರ್ಷಿಯು ಹಿರಣ್ಯಹಸ್ತನೆಂಬ ಬ್ರಾಹ್ಮಣನಿಗೆ ಸುಂದರಿಯಾದ ಕನ್ಯೆಯನ್ನು ದಾನ ಮಾಡಿ ದೇವತೆಗಳಿಂದಲೂ ಸಮ್ಮಾನಿತವಾದ ಪುಣ್ಯಲೋಕಗಳನ್ನು ಪಡೆದುಕೊಂಡನು.
ಲೋಮಪಾದಶ್ಚ ರಾಜರ್ಷಿಃ ಶಾಂತಾಂ ದತ್ತ್ವಾ ಸುತಾಂ ಪ್ರಭುಃ |
ಋಶ್ಯಶೃಂಗಾಯ ವಿಪುಲೈಃ ಸರ್ವಕಾಮೈರಯುಜ್ಯತ ॥35॥
ಲೋಮಪಾದನೆಂಬ ರಾಜರ್ಷಿಯು ತನ್ನ ಮಗಳಾದ ಶಾಂತೆಯನ್ನು ಋಷ್ಯಶೃಂಗ ಮುನಿಗೆ ದಾನ ಮಾಡಿ ಅದರ ಫಲವಾಗಿ ಇಷ್ಟಾರ್ಥಗಳನ್ನು ಪಡೆದುಕೊಂಡನು.
ದತ್ತ್ವಾ ಶತಸಹಸ್ರಂ ತು ಗವಾಂ ರಾಜಾ ಪ್ರಸೇನಜಿತ್ |
ಸವತ್ಸಾನಾಂ ಮಹಾತೇಜಾ ಗತೋ ಲೋಕಾನನುತ್ತಮಾನ್ ॥36॥
ಮಹಾತೇಜಸ್ವಿಯಾದ ಪ್ರಸೇನಜಿತ್ ಎಂಬ ರಾಜನು ಒಂದು ಲಕ್ಷ ಗೋವುಗಳನ್ನು ಕರುಗಳ ಜೊತೆಗೆ ಬ್ರಾಹ್ಮಣರಿಗೆ ದಾನ ಮಾಡಿ ಅತ್ಯಂತ ಶ್ರೇಷ್ಠವಾದ ಲೋಕಗಳನ್ನು ಪಡೆದುಕೊಂಡನು.
ಏತೇ ಚಾನ್ಯೇ ಚ ಬಹವೋ ದಾನೇನ ತಪಸಾ ಚ ಹ |
ಮಹಾತ್ಮಾನೋ ಗತಾಃ ಸ್ವರ್ಗಂ ಶಿಷ್ಟಾತ್ಮಾನೋ ಜಿತೇಂದ್ರಿಯಾಃ ॥37॥
ಇಷ್ಟೇ ಅಲ್ಲದೆ, ಶಿಷ್ಟರಾದ, ಜಿತೇಂದ್ರಿಯರಾದ ಇನ್ನೂ ಅನೇಕ ಮಂದಿ ಮಹಾತ್ಮರು ದಾನ ಮಾಡುವುದರಿಂದಲೂ, ತಪಸ್ಸಿನಿಂದಲೂ ಸ್ವರ್ಗ ಸೇರಿರುವರು.
ತೇಷಾಂ ಪ್ರತಿಷ್ಠಿತಾ ಕೀರ್ತಿರ್ಯಾವತ್ಸ್ಥಾಸ್ಯತಿ ಮೇದಿನೀ |
ದಾನಯಜ್ಞಪ್ರಜಾಸರ್ಗೈರೇತೇ ಹಿ ದಿವಮಾಪ್ನುವನ್ ॥38॥
ಆ ದಾನ ಮಾಡಿದ ಮಹಾನುಭಾವರ ಕೀರ್ತಿಯು ಈ ಭೂಮಂಡಲ ಇರುವ ತನಕವೂ ಪ್ರಪಂಚದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಈ ಮಹಾತ್ಮರೆಲ್ಲರೂ ದಾನ, ಯಜ್ಞ, ಸತ್ಸಂತಾನಗಳಿಂದ ಸ್ವರ್ಗವನ್ನು ಪಡೆದುಕೊಂಡಿದ್ದಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತನೆಯ ಅಧ್ಯಾಯ
ಬ್ರಾಹ್ಮಣರ ಕರ್ತವ್ಯಗಳ ಪ್ರತಿಪಾದನೆ. ಕಾಲರೂಪಸಮುದ್ರವನ್ನು
ದಾಟುವ ಉಪಾಯವು.
ವ್ಯಾಸಃ
ತ್ರಯೀವಿದ್ಯಾಮವೇಕ್ಷೇತ ವೇದೇಷೂಕ್ತಾಮಥಾಂಗತಃ |

ಋಕ್ಸಾಮವರ್ಣಾಕ್ಷರತೋ ಯಜುಷೋಽಥರ್ವಣಸ್ತಥಾ ॥1॥
ಶುಕದೇವನೇ, ಬ್ರಾಹ್ಮಣನಾದವನು ಮೂರು ವೇದಗಳಲ್ಲಿ ಹೇಳಿರುವ ಭಗವದ್ವಿದ್ಯೆಯನ್ನು ಚಿಂತಿಸಬೇಕು. ಷಡಂಗಗಳಿಂದ ಸಹಿತವಾದ ವೇದಗಳಲ್ಲಿ ಹೇಳಿದ ಋಗ್ವೇದ, ಸಾಮವೇದ, ಇವುಗಳ ವರ್ಣ-ಅಕ್ಷರದಿಂದ ಯಜುರ್ವೇದ-ಅಥರ್ವಣ ವೇದದಿಂದ ಹೇಳಲ್ಪಟ್ಟ ವಿದ್ಯೆಯನ್ನು ಅಭ್ಯಾಸ ಮಾಡಬೇಕು.
ವೇದವಾದೇಷು ಕುಶಲಾ ಹ್ಯಧ್ಯಾತ್ಮಕುಶಲಾಶ್ಚ ಯೇ |
ಸತ್ತ್ವವಂತೋ ಮಹಾಭಾಗಾಃ ಪಶ್ಯಂತಿ ಪ್ರಭವಾಪ್ಯಯೌ ॥2॥
ವೇದಗಳ ಪ್ರವಚನಗಳಲ್ಲಿ ನಿಪುಣರಾದ, ಅಧ್ಯಾತ್ಮ ಜ್ಞಾನದಲ್ಲಿ ಕುಶಲರಾದ, ಸತ್ತ್ವ ಸಂಪನ್ನರಾದ, ಮಹಾಭಾಗ್ಯಶಾಲಿಗಳಾದ ಬ್ರಾಹ್ಮಣರು ಜಗತ್ತಿನ ಸೃಷ್ಟಿ-ಸಂಹಾರಗಳನ್ನು ಚೆನ್ನಾಗಿ ಶಾಸ್ತ್ರಗಳ ಮೂಲಕ ತಿಳಿದಿರುತ್ತಾರೆ.
ಏವಂ ಧರ್ಮೇಣ ವರ್ತೇತ ಕ್ರಿಯಾಃ ಶಿಷ್ಟವದಾಚರೇತ್ |
ಅಸಂರೋಧೇನ ಭೂತಾನಾಂ ವೃತ್ತಿಂ ಲಿಪ್ಸೇತ ವೈ ದ್ವಿಜಃ ॥3॥
ಆದ್ದರಿಂದ ಬ್ರಾಹ್ಮಣರು ಧರ್ಮಾನುಕೂಲವಾಗಿ ವ್ಯವಹರಿಸುತ್ತಾ ಶಿಷ್ಟಪುರುಷರಂತೆ ಸದಾಚಾರ ಸಂಪನ್ನರಾಗಿರಬೇಕು. ಬ್ರಾಹ್ಮಣನಾದವನು ಯಾರಿಗೂ ಕಷ್ಟವಾಗದ ರೀತಿಯಲ್ಲಿ ತಾನು ವೃತ್ತಿಯನ್ನು ಆಶ್ರಯಿಸಬೇಕು.
ಸದ್ಭ್ಯ ಆಗತವಿಜ್ಞಾನಃ ಶಿಷ್ಟಃ ಶಾಸ್ತ್ರವಿಚಕ್ಷಣಃ |
ಸ್ವಧರ್ಮೇಣ ಕ್ರಿಯಾ ಲೋಕೇ ಕುರ್ವಾಣಃ ಸತ್ಯಸಂಗರಃ ॥4॥
ಸತ್ಪುರುಷರ ಸೇವೆಯನ್ನು ಮಾಡುತ್ತಾ ತತ್ತ್ವಜ್ಞಾನವನ್ನು ಹೊಂದಿರಬೇಕು. ಸಜ್ಜನನಾಗಿರಬೇಕು. ಶಾಸ್ತ್ರದಲ್ಲಿ ಪಾಟವವನ್ನು ಹೊಂದಿರಬೇಕು. ವರ್ಣಾಶ್ರಮ ಧರ್ಮಗಳಿಗೆ ಉಚಿತವಾದ ಸತ್ಕರ್ಮಾನುಷ್ಠಾನ ಮಾಡುತ್ತಾ, ಸತ್ಯವಚನದಲ್ಲಿ ಆಸಕ್ತನಾಗಿರಬೇಕು.
ತಿಷ್ಠತ್ಯೇತೇಷು ಗೃಹವಾನ್ ಷಟ್ಸು ಕರ್ಮಸು ಸ ದ್ವಿಜಃ |
ಪಂಚಭಿಃ ಸತತಂ ಯಜ್ಞೈಃ ಶ್ರದ್ದಧಾನೋ ಯಜೇತ ಚ ॥5॥
ಗೃಹಸ್ಥನಾದವನು ಷಟ್ಕರ್ಮದಲ್ಲಿ ಯಾವಾಗಲೂ ರತನಾಗಿರಬೇಕು. ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಎಂಬ ಐದು ಯಜ್ಞಗಳಲ್ಲಿ ಶ್ರದ್ಧೆಯಿಂದ ಭಗವಂತನನ್ನು ಆರಾಧಿಸಬೇಕು.
ಧೃತಿಮಾನಪ್ರಮತ್ತಶ್ಚ ದಾಂತೋ ಧರ್ಮವಿದಾತ್ಮವಾನ್ |
ವೀತಹರ್ಷಭಯಕ್ರೋಧೋ ಬ್ರಾಹ್ಮಣೋ ನಾವಸೀದತಿ ॥6॥
ಧೈರ್ಯವಂತನಾಗಿರಬೇಕು. ಸತ್ಕರ್ಮಗಳಲ್ಲಿ ಅಪಚಾರಗಳನ್ನು ಎಸಗಬಾರದು. ಜಿತೇಂದ್ರಿಯನಾಗಿಯೂ, ಧರ್ಮವೇತ್ತನೂ, ಪರಮಾತ್ಮನ ಚಿಂತನೆಯುಳ್ಳವನು, ಹರ್ಷ-ಭಯ-ಕ್ರೋಧಗಳಿಂದ ದೂರನಾದವನೂ ಆದ ಇಂತಹ ಬ್ರಾಹ್ಮಣನು ಎಂದಿಗೂ ದುಃಖಿತನಾಗುವುದಿಲ್ಲ.
ದಾನಮಧ್ಯಯನಂ ಯಜ್ಞಸ್ತಪೋ ಹ್ರೀರಾರ್ಜವಂ ದಮಃ |
ಏತೈರ್ವರ್ಧಯತೇ ತೇಜಃ ಪಾಪ್ಮಾನಂ ಚಾಪಕರ್ಷತಿ ॥7॥
ದಾನ-ವೇದಾಧ್ಯಯನ-ಯಜ್ಞ-ತಪಸ್ಸು-ಲಜ್ಜೆ-ಸರಳತೆ-ಇಂದ್ರಿಯನಿಗ್ರಹ ಇಂತಹ ಸದ್ಗುಣಗಳಿಂದ ತೇಜಸ್ಸು ಅಭಿವೃದ್ಧಿಯಾಗುತ್ತದೆ. ಪಾಪವು ಕ್ಷಯ ಹೊಂದುತ್ತದೆ.
ಧೂತಪಾಪ್ಮಾ ತು ಮೇಧಾವೀ ಲಘ್ವಾಹಾರೋ ಜಿತೇಂದ್ರಿಯಃ |
ಕಾಮಕ್ರೋಧೌ ವಶೇ ಕೃತ್ವಾ ನಿನೀಷೇದ್ ಬ್ರಹ್ಮಣಃ ಪದಮ್ ॥8॥
ಬುದ್ಧಿವಂತನಾದ ಬ್ರಾಹ್ಮಣನು ತನ್ನ ಪಾಪಗಳನ್ನೆಲ್ಲ ಪರಿಹರಿಸಿಕೊಂಡು, ಆಹಾರವನ್ನು ಸ್ವಲ್ಪವೇ ಸ್ವೀಕರಿಸಿ, ಜಿತೇಂದ್ರಿಯನಾಗಿ ಕಾಮ-ಕ್ರೋಧಗಳನ್ನು ಮನಸ್ಸಿನಿಂದ ನಿಗ್ರಹಿಸಿ, ಭಗವಂತನ ಸ್ಥಾನವಾದ ವೈಕುಂಠವನ್ನು ಹೊಂದಲು ಅಪೇಕ್ಷೆಯುಳ್ಳವನಾಗಿರಬೇಕು.
ಅಗ್ನೀಂಶ್ಚ ಬ್ರಾಹ್ಮಣಾಂಶ್ಚಾರ್ಚೇದ್ ದೇವತಾಃ ಪ್ರಣಮೇತ ಚ |
ವರ್ಜಯೇದ್ರುಷತೀಂ ವಾಚಂ ಹಿಂಸಾಂ ಚಾಧರ್ಮಸಂಹಿತಾಮ್ ॥9॥
ಪ್ರತಿದಿನವೂ ಬ್ರಾಹ್ಮಣರನ್ನು ಆರಾಧಿಸಬೇಕು. ಅಗ್ನಿಯನ್ನು ಆರಾಧಿಸಬೇಕು. ದೇವತೆಗಳನ್ನು ಆರಾಧಿಸಿ ನಮಸ್ಕರಿಸಬೇಕು. ಎಂದಿಗೂ ಅಧರ್ಮಯುಕ್ತವಾದ ಅಶುಭ ಮಾತುಗಳನ್ನು ಆಡಬಾರದು. ಅಧರ್ಮಭೂಯಿಷ್ಠವಾದ ಹಿಂಸೆಯನ್ನು ಮಾಡಬಾರದು.
ಏಷಾ ಪೂರ್ವತರಾ ವೃತ್ತಿರ್ಬ್ರಾಹ್ಮಣಸ್ಯ ವಿಧೀಯತೇ |
ಜ್ಞಾನಾಗಮೇನ ಕರ್ಮಾಣಿ ಕುರ್ವನ್ ಕರ್ಮಸು ಸಿದ್ಧ್ಯತಿ ॥10॥
ಪರಂಪರಾಗತವಾದ ಈ ರೀತಿಯಾದ ಕರ್ತವ್ಯಗಳು ಬ್ರಾಹ್ಮಣನಿಗೆ ವಿಧಿಸಲ್ಪಟ್ಟಿವೆ. ಜ್ಞಾನಪ್ರಾಪ್ತಿಯಾದ ಬಳಿಕ ಕರ್ಮಗಳನ್ನು ಮಾಡುತ್ತಿದ್ದರೆ ಕರ್ಮದಲ್ಲಿ ಸಿದ್ಧಿಯನ್ನು ಹೊಂದುತ್ತಾನೆ.
ಪಂಚೇಂದ್ರಿಯಜಲಾಂ ಘೋರಾಂ ಲೋಭಕೂಲಾಂ ಸುದುಸ್ತರಾಮ್ |
ಮನ್ಯುಪಂಕಾಮನಾಧೃಷ್ಯಾಂ ನದೀಂ ತರತಿ ಬುದ್ಧಿಮಾನ್ ॥11॥
ಪಂಚಜ್ಞಾನೇಂದ್ರಿಯಗಳೇ ನದಿಯ ನೀರಿನ ಸ್ಥಾನದಲ್ಲಿವೆ. ಭಯಂಕರವಾದ ಲೋಭವೇ ಎರಡು ತೀರ ಪ್ರದೇಶಗಳು. ಕೋಪವೇ ಈ ನದಿಯ ಕೆಸರು. ಇಂತಹ ಸಂಸಾರ ನದಿಯನ್ನು ಬುದ್ಧಿವಂತನಾದವನು ದಾಟುತ್ತಾನೆ.
ಕಾಮಮನ್ಯೂದ್ಧತಂ ಯತ್ ಸ್ಯಾನ್ನಿತ್ಯಮತ್ಯಂತಮೋಹಿತಮ್ |
ಮಹತಾ ವಿಧಿದೃಷ್ಟೇನ ಬಲೇನಾಪ್ರತಿಘಾತಿನಾ |
ಸ್ವಭಾವಸ್ರೋತಸಾ ವೃತ್ತಮುಹ್ಯತೇ ಸತತಂ ಜಗತ್ ॥12॥
ಕಾಮ, ಸಿಟ್ಟುಗಳಿಂದ ಮೀರಿ ಬರುತ್ತಿರುವ, ಅತ್ಯಂತ ಮೋಹಗೊಳಿಸುತ್ತಿರುವ, ಎದುರಿಸಲು ಅಸಾಧ್ಯವಾಗಿ, ಬಲಶಾಲಿಯಾಗಿ, ವಿಧಿಯ ಪ್ರೇರಣೆಯಂತೆ ಚಲಿಸುವ ಸ್ವಭಾವವುಳ್ಳ ಕಾಲಪುರುಷನು ಈ ಜಗತ್ತನ್ನು ನಿರಂತರ ಒಯ್ಯುತ್ತಿದ್ದಾನೆ. ಸ್ವಾಭಾವಿಕವಾಗಿ ಈ ನದಿಯು

ಯಾವ ಕೊರತೆಯೂ ಇಲ್ಲದೆ ಹರಿಯುತ್ತಲೇ ಇದೆ. ಸಮಸ್ತ ಜಗತ್ತು ಇದರಲ್ಲಿ ಮೋಹಿತವಾಗುತ್ತಲೇ ಇದೆ.
ಕಾಲೋದಕೇನ ಮಹತಾ ವರ್ಷಾವರ್ತೇನ ಸಂತತಮ್ |
ಮಾಸೋರ್ಮಿಣರ್ತುವೇಗೇನ ಪಕ್ಷೋಲಪತೃಣೇನ ಚ ॥13॥
ಕಾಲವೆಂಬ ದೊಡ್ಡ ನೀರಿನ ಪ್ರವಾಹವುಳ್ಳ, ಸಂವತ್ಸರವೆಂಬ ಸುಳಿಯಿಂದ ಕೂಡಿರುವ, ಮಾಸಗಳೆಂಬ ಅಲೆಗಳಿಂದ ಕೂಡಿರುವ, ಋತುಗಳೆಂಬ ವೇಗಗಳಿಂದ ಕೂಡಿರುವ, ಪಕ್ಷಗಳೆಂಬ ಗರಿಕೆಯ ಪೊದೆಗಳಿಂದ ತುಂಬಿರುವ;
ನಿಮೇಷೋನ್ಮೇಷಫೇನೇನ ಅಹೋರಾತ್ರಜವೇನ ಚ |
ಕಾಮಗ್ರಾಹೇಣ ಘೋರೇಣ ವೇದಯಜ್ಞಪ್ಲವೇನ ಚ ॥14॥
ಕಣ್ಣುರೆಪ್ಪೆ ಮುಚ್ಚುವುದು, ತೆರೆಯುವುದು ಎಂಬ ಕಾಲದ ನೊರೆಗಳಿಂದ ತುಂಬಿರುವ, ಹಗಲು-ರಾತ್ರಿಗಳೆಂಬ ವೇಗಗಳಿಂದ ಕೂಡಿರುವ, ಕಾಮವೆಂಬ ಭಯಂಕರವಾದ ಮೊಸಳೆಯಿಂದ ಕೂಡಿರುವ, ವೇದ-ಯಜ್ಞ ಎಂಬ ದೋಣಿಯಿಂದ ಕೂಡಿರುವ;
ಧರ್ಮದ್ವೀಪೇನ ಭೂತಾನಾಂ ಚಾರ್ಥಕಾಮರವೇಣ ಚ |
ಋತಸೋಪಾನತೀರೇಣ ವಿಹಿಂಸಾತರುವಾಹಿನಾ ॥15॥
ಎಲ್ಲಾ ಜೀವರಿಗೆ ಸಂಬಂಧಿಸಿದ ಧರ್ಮದ್ವೀಪದಿಂದ ಕೂಡಿದ, ಅರ್ಥ-ಕಾಮ ಎಂಬ ಶಬ್ದದಿಂದ ಆವೃತವಾದ, ಸತ್ಯವೆಂಬ ಸೋಪಾನದ ತೀರವುಳ್ಳ, ವಿಹಿಂಸೆ ಎಂಬ ವೃಕ್ಷದಿಂದ ಚಲಿಸುವ;
ಯುಗಹ್ರದೌಘಮಧ್ಯೇನ ಬ್ರಹ್ಮಪ್ರಾಯಭವೇನ ಚ |
ಧಾತ್ರಾ ಸೃಷ್ಟಾನಿ ಭೂತಾನಿ ಕೃಷ್ಯಂತೇ ಯಮಸಾದನಮ್ ॥16॥
ಯುಗಗಳೆಂಬ ಸುಳಿಯುಳ್ಳ, ಸರೋವರಗಳ ಮಧ್ಯವುಳ್ಳ, ಒಬ್ಬ ಬ್ರಹ್ಮನ ಆಯುಷ್ಯವೆಂಬ ಹುಟ್ಟುಳ್ಳ, ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಎಲ್ಲಾ ಪ್ರಾಣಿಗಳು ಈ ಕಾಲ ಪ್ರವಾಹದಲ್ಲಿ ಬಿದ್ದು ಯಮನ ಲೋಕದ ಕಡೆ ಸೆಳೆಯಲ್ಪಡುತ್ತಿವೆ.
ಏತತ್ ಪ್ರಜ್ಞಾಮಯೈರ್ಧೀರಾ ನಿಸ್ತರಂತಿ ಮನೀಷಿಣಃ |
ಪ್ಲವೈರಪ್ಲವವಂತೋ ಹಿ ಕಿಂ ಕರಿಷ್ಯಂತ್ಯಚೇತಸಃ ॥17॥
ಬುದ್ಧಿವಂತರಾದ ಮನುಷ್ಯರು ಪ್ರಜ್ಞಾರೂಪವಾದ ನೌಕೆಗಳಿಂದ ಈ ಕಾಲ ನದಿಗಳನ್ನು ದಾಟುತ್ತಾರೆ. ಪ್ರಜ್ಞಾನೌಕೆ ಇಲ್ಲದ ಅಜ್ಞಾನಿಗಳು ಸರಿಯಾದ ಚಿಂತನೆಯಿಲ್ಲದೆ ಏನು ಮಾಡಲು ಸಾಧ್ಯ? ಕೊಚ್ಚಿಹೋಗುತ್ತಾರೆ.
ಉಪಪನ್ನಂ ಹಿ ಯತ್ ಪ್ರಾಜ್ಞೋ ನಿಸ್ತರೇನ್ನೇತರೋ ಜನಃ |
ದೂರತೋ ಗುಣದೋಷೌ ಹಿ ಪ್ರಾಜ್ಞಃ ಸರ್ವತ್ರ ಪಶ್ಯತಿ ॥18॥
ಜ್ಞಾನಿಯಾದವನು ಅಜ್ಞಾನ ನೌಕೆಯಿಂದ ಈ ಸಮುದ್ರನೌಕೆಯನ್ನು ದಾಟುತ್ತಾನೆ. ಅಜ್ಞಾನಿಯಾದವನು ದಾಟುವುದಿಲ್ಲ ಎಂಬುದು ಯೋಗ್ಯವಾಗಿದೆ. ಮೊದಲೇ ಪ್ರಾಜ್ಞನಾದವನು ಗುಣ-ದೋಷಗಳನ್ನು ಎಲ್ಲ ರೀತಿಯಲ್ಲಿಯೂ ಅರ್ಥ ಮಾಡಿಕೊಂಡಿರುತ್ತಾನೆ.
ಸಂಶಯಾತ್ಮಾ ಸ ಕಾಮಾತ್ಮಾ ಚಲಚಿತ್ತೋಽಲ್ಪಚೇತನಃ |
ಅಪ್ರಾಜ್ಞೋ ನ ತರತ್ಯೇವ ಯೋ ಹ್ಯಾಸ್ತೇ ನ ಸ ಗಚ್ಛತಿ ॥19॥
ಸಂಶಯದಿಂದ ಕೂಡಿದ ಚೇತನನು, ಕಾಮನೆಗಳಿಂದ ತುಂಬಿದ ಮನಸ್ಸುಳ್ಳವನು ಚಲಚಿತ್ತನಾಗಿ, ಅಲ್ಪಚೇತನನಾಗಿ, ಅಪ್ರಜ್ಞನಾಗಿ ಯಾವನು ಇದ್ದಾನೋ ಅವನೂ ಈ ಸಂಸಾರ ಸಮುದ್ರವನ್ನು ದಾಟುವುದಿಲ್ಲ, ಮುಂದೂ ಹೋಗುವುದಿಲ್ಲ.
ಅಪ್ಲವೋ ಹಿ ಮಹಾದೋಷಮುಹ್ಯಮಾನೋಽಧಿಗಚ್ಛತಿ |
ಕಾಮಗ್ರಾಹಗೃಹೀತಸ್ಯ ಜ್ಞಾನಮಪ್ಯಸ್ಯ ನ ಪ್ಲವಃ ॥20॥
ಜ್ಞಾನವೆಂಬ ನೌಕೆಯಿಲ್ಲದವನು ಮೋಹದಿಂದ ಮಹಾದೋಷವನ್ನೇ ಹೊಂದುತ್ತಾನೆ. ಕಾಮವೆಂಬ ಮೊಸಳೆಯಿಂದ ಬಂಧಿತನಾದವಗೆ ಜ್ಞಾನವು ಎಂದಿಗೂ ನೌಕೆಯಾಗುವುದಿಲ್ಲ. ಕಾಮಾಂಧವೆಂಬ ಶಾಸ್ತ್ರಗಳು ಉದ್ಧರಿಸುವುದಿಲ್ಲ ಎಂದು ಭಾವ.
ತಸ್ಮಾದುನ್ಮಜ್ಜನಸ್ಯಾರ್ಥೇ ಪ್ರಯತೇತ ವಿಚಕ್ಷಣಃ |
ಏತದುನ್ಮಜ್ಜನಂ ತಸ್ಯ ಯದಯಂ ಬ್ರಾಹ್ಮಣೋ ಭವೇತ್ ॥21॥
ಆದ್ದರಿಂದ ಬುದ್ಧಿವಂತನಾದ ಮನುಷ್ಯನು ಸಂಸಾರಸಾಗರವನ್ನು ದಾಟಲು ನಿರಂತರ ಪ್ರಯತ್ನಿಸಬೇಕು. ಸಂಸಾರಸಾಗರದಿಂದ ದಾಟುವುದು ಎಂದರೆ ಬ್ರಾಹ್ಮಣನಾಗಿ ಬ್ರಹ್ಮಜ್ಞಾನವನ್ನು ಹೊಂದುವುದು ಎಂದು ಅರ್ಥ.
ತ್ರ್ಯವದಾತೇ ಕುಲೇ ಜಾತಸ್ತ್ರಿಸಂದೇಹಸ್ತ್ರಿಕರ್ಮಕೃತ್ |
ತಸ್ಮಾದುನ್ಮಜ್ಜನಸ್ತಿಷ್ಠೇನ್ನಿಸ್ತರೇತ್ ಪ್ರಜ್ಞಯಾ ಯಥಾ ॥22॥
ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದವನು ದಾನ ತೆಗೆದುಕೊಳ್ಳುವುದರಲ್ಲಿ, ಪಾಠ ಮಾಡುವುದರಲ್ಲಿ, ಯಜ್ಞ ಮಾಡಿಸುವುದರಲ್ಲಿ ಅಪೇಕ್ಷೆಯನ್ನು ನಿಮಿತ್ತ ಇಟ್ಟುಕೊಳ್ಳುವಾಗ ತುಂಬಾ ಎಚ್ಚರವನ್ನು ವಹಿಸಬೇಕು. ಸಂದೇಹದಿಂದಲೇ ವಿಚಾರ ಮಾಡಿ ಮುಂದೆ ಹೋಗಬೇಕು. ಆದರೆ ಅಧ್ಯಯನ, ಯಜನ, ದಾನ ಈ ಮೂರು ಕರ್ಮಗಳನ್ನು ಮಾಡುವಾಗ ನಿಸ್ಸಂದೇಹನಾಗಿ ಇರಬೇಕು. (ಇದನ್ನೇ ಸರ್ವವೇದಾಂತ ಪ್ರತ್ಯಯಾಧಿಕರಣದಲ್ಲಿ ವಿವರಿಸಿದ್ದಾರೆ). ಆದ್ದರಿಂದ ಈ ಸಂಸಾರವೆಂಬ ಸಾಗರದಿಂದ ಮೇಲೇಳಲು ಪ್ರಯತ್ನ ಮಾಡಲೇಬೇಕು. ಅದಕ್ಕೆ ಯೋಗ್ಯವಾದ ಜ್ಞಾನವನ್ನು ಹೊಂದಲೇಬೇಕು.
ಸಂಸ್ಕೃತಸ್ಯ ಹಿ ದಾಂತಸ್ಯ ನಿಯತಸ್ಯ ಕೃತಾತ್ಮನಃ |
ಪ್ರಾಜ್ಞಸ್ಯಾನಂತರಾ ಸಿದ್ಧಿರಿಹ ಲೋಕೇ ಪರತ್ರ ಚ ॥23॥
ಸಂಸಾರದಿಂದ ಸಂಪನ್ನನಾದ, ಜಿತೇಂದ್ರಿಯನಾದ, ವ್ರತನಿಷ್ಠನಾದ, ಸತ್ಕರ್ಮಗಳನ್ನು ಮಾಡಿರುವ ಪ್ರಾಜ್ಞನಿಗೆ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ತಡವಾಗದೆ ಬೇಗ ಸಿದ್ಧಿಯಾಗುತ್ತದೆ.
ವರ್ತತೇ ತೇಷು ಗೃಹವಾನಕ್ರುದ್ಧ್ಯನ್ನನಸೂಯಕಃ |
ಪಂಚಭಿಃ ಸತತಂ ಯಜ್ಞೈರ್ವಿಘಸಾಶೀ ಯಜೇತ ಚ ॥24॥

ಕ್ರೋಧರಹಿತನಾದ ಗೃಹಸ್ಥ ಬ್ರಾಹ್ಮಣನು ಅಸೂಯಾರಹಿತನಾಗಿ ನಿಯಮಗಳನ್ನು ಪಾಲಿಸಿ, ಪಂಚ ರೀತಿಯಿಂದ ಯಜ್ಞಗಳನ್ನು ಮಾಡುತ್ತಿರಬೇಕು. ಯಜ್ಞಶಿಷ್ಟವಾದ ಅನ್ನವನ್ನೇ ಊಟ ಮಾಡಬೇಕು.
ಸತಾಂ ವೃತ್ತೇನ ವರ್ತೇತ ಕ್ರಿಯಾಃ ಶಿಷ್ಟವದಾಚರೇತ್ |
ಅಸಂರೋಧೇನ ಧರ್ಮಸ್ಯ ವೃತ್ತಿಂ ಲಿಪ್ಸೇದಗರ್ಹಿತಾಮ್ ॥25॥
ಸದ್ಧರ್ಮದಿಂದ ವರ್ತಿಸಬೇಕು. ಶಿಷ್ಟಾಚಾರವನ್ನು ಪರಿಪಾಲಿಸಬೇಕು. ಇನ್ನೊಬ್ಬರ ಜೀವನಕ್ಕೆ ತೊಂದರೆಯಾಗದಂತೆ ಅನಿಂದಿತವಾದ ಜೀವನವನ್ನು ಇಟ್ಟುಕೊಳ್ಳಬೇಕು.
ಶ್ರುತಿವಿಜ್ಞಾನತತ್ತ್ವಜ್ಞಃ ಶಿಷ್ಟಾಚಾರೋ ವಿಚಕ್ಷಣಃ |
ಸ್ವಧರ್ಮೇಣ ಕ್ರಿಯಾವಾಂಶ್ಚ ಕರ್ಮಣಾ ಸೋಽಪ್ಯಸಂಕರಃ ॥26॥
ವೇದಗಳು ತಿಳಿಸಿರುವ ರಹಸ್ಯತತ್ತ್ವವೆನಿಸಿದ ಭಗವಂತನ ವಿಚಾರವನ್ನು ತಿಳಿದಿರಬೇಕು. ಶಿಷ್ಟಾಚಾರನಾಗಿರಬೇಕು, ತುಂಬಾ ಜಾಣನಾಗಿರಬೇಕು. ಸ್ವಧರ್ಮಾಚರಣೆಯನ್ನು ಅನುಷ್ಠಾನ ಮಾಡುವುದರಲ್ಲಿ ಆಸಕ್ತನಾಗಿರಬೇಕು. ಕರ್ಮಗಳಲ್ಲಿ ಸಾಂಕರ್ಯವನ್ನು ಮಾಡಬಾರದು. ಅರ್ಥಾತ್ ತನ್ನ ಬ್ರಾಹ್ಮಣೋಚಿತವಾದ ಕರ್ಮವನ್ನೇ ತಾನು ಮಾಡಬೇಕು.
ಕ್ರಿಯಾವಾನ್ ಶ್ರದ್ದಧಾನಶ್ಚ ದಾತಾ ಪ್ರಾಜ್ಞೋಽನಸೂಯಕಃ |
ಧರ್ಮಾಧರ್ಮವಿಶೇಷಜ್ಞಃ ಸರ್ವಂ ತರತಿ ದುಸ್ತರಮ್ ॥27॥
ಕ್ರಿಯೆಗಳನ್ನು ಮಾಡುವ, ಶ್ರದ್ಧಾಳುವಾದ, ದಾನಬುದ್ಧಿಯುಳ್ಳ, ಪ್ರಾಜ್ಞನಾದ, ಅಮಾತ್ಸರ್ಯವುಳ್ಳ, ಧರ್ಮಾಧರ್ಮ ವಿಶೇಷಜ್ಞಾನವುಳ್ಳ ವ್ಯಕ್ತಿಯು ಯಾರಿಂದಲೂ ದಾಟಲಾಗದ ಕಷ್ಟಗಳೆಲ್ಲವನ್ನೂ ದಾಟುತ್ತಾನೆ.
ಧೃತಿಮಾನಪ್ರಮತ್ತಶ್ಚ ದಾಂತೋ ಧರ್ಮವಿದಾತ್ಮವಾನ್ |
ವೀತಹರ್ಷಭಯಕ್ರೋಧೋ ಬ್ರಾಹ್ಮಣೋ ನಾವಸೀದತಿ ॥28॥
ಧೈರ್ಯವಂತನಾದ, ಜಾಗರೂಕನಾದ, ದಾಂತನಾದ, ಧರ್ಮವೇತ್ತೃವಾದ, ಮನೋನಿಗ್ರಹವುಳ್ಳ, ಹರ್ಷ-ಭಯ-ಕ್ರೋಧಗಳುಳ್ಳ ಬ್ರಾಹ್ಮಣನು ಎಂದಿಗೂ ದುಃಖಿತನಾಗುವುದಿಲ್ಲ.
ಏಷಾ ಪೂರ್ವತರಾ ವೃತ್ತಿರ್ಬ್ರಾಹ್ಮಣಸ್ಯ ವಿಧೀಯತೇ |
ಜ್ಞಾನವಿತ್ತ್ವೇನ ಕರ್ಮಾಣಿ ಕುರ್ವನ್ ಸರ್ವತ್ರ ಸಿದ್ಧ್ಯತಿ ॥29॥
ಪುರಾಣ ಕಾಲದಿಂದಲೂ ಬ್ರಾಹ್ಮಣನ ವೃತ್ತಿಯು ಹೀಗೆ ವಿಧಿಸಲ್ಪಟ್ಟಿದೆ. ಜ್ಞಾನ ಪೂರ್ವಕವಾಗಿ ಕರ್ಮವನ್ನು ಮಾಡುವ ಬ್ರಾಹ್ಮಣನಿಗೆ ಎಲ್ಲ ಕಡೆಯಲ್ಲಿಯೂ ಸಿದ್ಧಿ ಉಂಟಾಗುತ್ತದೆ.
ಅಧರ್ಮಂ ಧರ್ಮಕಾಮೋಪಿ ಕರೋತಿ ಹ್ಯವಿಚಕ್ಷಣಃ |
ಧರ್ಮಂ ಚಾಧರ್ಮಸಂಕಾಶಂ ಶೋಚನ್ನಿವ ಕರೋತಿ ಸಃ ॥30॥
ಸಜ್ಜನನು ಧರ್ಮಾಚರಣೆಯನ್ನು ಹೇಗೆ ಹೆದರದೆ ಮಾಡುತ್ತಾನೋ ಹಾಗೆ ಅಜ್ಞಾನಿಯಾದ ದುರ್ಜನನು ಅಧರ್ಮವನ್ನು ಹೆದರದೆ ಮಾಡುತ್ತಾನೆ. ಉತ್ತಮ ಜ್ಞಾನಿಯಾದ ವ್ಯಕ್ತಿಯು ಅಧರ್ಮವನ್ನು ಹೆದರಿಕೊಂಡು ಶಂಕೆಯಿಂದ ಹೇಗೆ ಮಾಡುತ್ತಾನೋ ಹಾಗೆ ಅಧಮನಾದ ವ್ಯಕ್ತಿಯು ಧರ್ಮವನ್ನು ಶಂಕೆಯಿಂದಲೇ ಆಚರಿಸುತ್ತಾನೆ.
ಧರ್ಮಂ ಕರೋಮೀತಿ ಕರೋತ್ಯಧರ್ಮ-
ಮಧರ್ಮಕಾಮಶ್ಚ ಕರೋತಿ ಧರ್ಮಮ್ |
ಉಭೇ ಬಾಲಃ ಕರ್ಮಣೀ ನ ಪ್ರಜಾನನ್
ಸ ಜಾಯತೇ ಮ್ರಿಯತೇ ಚಾಪಿ ದೇಹೀ ॥31॥
ಅನ್ನದಾನಾದಿ ಧರ್ಮವನ್ನು ಮಾಡುತ್ತೇನೆಂದು ಪ್ರವೃತ್ತನಾದ ವ್ಯಕ್ತಿಯು ಪಂಕ್ತಿ ಭೇದವನ್ನು, ಬ್ರಾಹ್ಮಣರನ್ನು ಹೆದರಿಸುವುದು ಮುಂತಾದ ಅಧರ್ಮವನ್ನು ಮಾಡುತ್ತಾನೆ. ಅಧರ್ಮಕಾಮನಾದ ವ್ಯಕ್ತಿಯು ರಾತ್ರಿ ಮಾಡಬಾರದ ಅಗಮ್ಯಾಗಮನವನ್ನು ಮಾಡಿ ಪ್ರಾತಃಕಾಲದಲ್ಲಿ ತಾನು ತಪಸ್ವಿ ಎಂದು ತೋರಿಸಿಕೊಳ್ಳಲು ನಾಲ್ಕುಗಂಟೆಗೆ ಎದ್ದು ಸ್ನಾನಾದಿ ಧರ್ಮಾಚರಣೆಯನ್ನು ಮಾಡುತ್ತಾನೆ. ಈ ರೀತಿಯಾಗಿ ಅಧರ್ಮ ಮಾಡುವ ಈರ್ವರೂ ಕರ್ಮಗಳ ರಹಸ್ಯವನ್ನು ತಿಳಿದವರಲ್ಲ. ಪುನಃ ಅವರು ಹುಟ್ಟುತ್ತಾರೆ, ಪುನಃ ಸಾಯುತ್ತಾರೆ. ಕರ್ಮಬಂಧನದಲ್ಲೇ ತೊಳಲುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂದನೆಯ ಅಧ್ಯಾಯ
ಜ್ಞಾನವೇ ಮೋಕ್ಷಸಾಧನವೆಂದು ವ್ಯಾಸರು ಶುಕಮುನಿಗಳಿಗೆ ನಿರೂಪಿಸಿದುದು.
ವ್ಯಾಸಃ
ಅಥ ಚೇದ್ ರೋಚಯೇದೇತದ್ ದ್ರುಹ್ಯೇತ ಮನಸಾ ತಥಾ |
ಉನ್ಮಜ್ಜಂಶ್ಚ ನಿಮಜ್ಜಂಶ್ಚ ಜ್ಞಾನವಾನ್ ಪ್ಲವವಾನ್ ಭವೇತ್ ॥1॥
ಮಗನೇ, ಮನುಷ್ಯನ ಮನಸ್ಸೇ ಈ ಸಂಸಾರವೆಂಬ ನದಿಯಲ್ಲಿ ಮುಳುಗಿಸುವುದಕ್ಕೂ, ತೇಲಿಸುವುದಕ್ಕೂ ಕಾರಣವಾಗಿದೆ. ಇದರ ವಿರುದ್ಧ ದಾಟಬೇಕೆಂದರೆ ಜ್ಞಾನವೆಂಬ ತೆಪ್ಪವನ್ನು ಆಶ್ರಯಿಸಬೇಕು.
ಪ್ರಜ್ಞಯಾ ನಿರ್ಮಿತೈರ್ಧೀರಾಸ್ತಾರಯಂತ್ಯಬುಧಾನ್ ಪ್ಲವೈಃ |
ನಾಬುಧಾಸ್ತಾರಯಂತ್ಯನ್ಯಾನಾತ್ಮಾನಂ ವಾ ಕಥಂಚನ ॥2॥

ಭಗವತ್ತತ್ತ್ವ , ಸಂಸಾರ ಇವುಗಳನ್ನು ತಿಳಿದ ವ್ಯಕ್ತಿಗಳು ಈ ಸಂಸಾರದಲ್ಲಿ ಮೂರ್ಖರಾದವರನ್ನು ತಮ್ಮ ಜ್ಞಾನವೆಂಬ ದೋಣಿಯಿಂದ ದಾಟಿಸಲುಬಲ್ಲರು. ಮೂರ್ಖರಾದವರು ತಮ್ಮನ್ನಾಗಲಿ, ಮತ್ತೊಬ್ಬರನ್ನಾಗಲೀ ಈ ಸಂಸಾರವೆಂಬ ಕಾಲದಿಂದ ಉದ್ಧರಿಸಲು ಸಮರ್ಥರಲ್ಲ.

ಛಿನ್ನದೋಷೋ ಮುನಿರ್ಯೋಗಯುಕ್ತೋ ಯುಂಜೀತ ದ್ವಾದಶ |
ದಶಕರ್ಮಸುಖಾನರ್ಥಾನುಪಾಯಾಪಾಯನಿಷ್ಕ್ರಿಯಃ ॥3॥

ಕಾಮಾದಿ ದೋಷಗಳನ್ನು ನಿಗ್ರಹಿಸಿಕೊಂಡ, ಸಂಗಗಳನ್ನು ತ್ಯಾಗ ಮಾಡಿದ ವ್ಯಕ್ತಿಗೆ ಸಾಧನೆಗೆ ಈ ಹನ್ನೆರಡು ಗುಣಗಳು ಮುಖ್ಯವಾಗಿವೆ. ಯಜನ, ಯಾಜನ, ದಾನ, ಪ್ರತಿಗ್ರಹ, ಅಧ್ಯಯನ, ಅಧ್ಯಾಪನ ಎಂಬ ಆರು ಕರ್ಮಗಳು, ಕಾಮ-ಕ್ರೋಧ-ಲೋಭ-ಮೋಹ-ಮದ-ಮತ್ಸರವೆಂಬ ಆರು ಕರ್ಮಗಳು ಅಥವಾ ಸ್ನಾನ-ಶೌಚ- ತಪಸ್ಸು-ಸತ್ಯ-ದಯಾ-ತಿತಿಕ್ಷ ಎಂಬ ಆರು ಕರ್ಮಗಳು. ಹತ್ತು ಇಂದ್ರಿಯಗಳಿಗೆ ತೃಪ್ತಿಯನ್ನುಂಟು ಮಾಡಿಸುವ ಹತ್ತು ಕರ್ಮಗಳು. ಅವುಗಳಿಂದ ಹುಟ್ಟುವ ಆರು ಸುಖಗಳು, ಅನರ್ಥಗಳು. ಇವುಗಳ ಉಪಾಯ-ಅಪಾಯಗಳನ್ನು ಚೆನ್ನಾಗಿ ತಿಳಿದಿರಬೇಕು.

ಚಕ್ಷುರಾಚಾರಸಂಗ್ರಾಹೀ ಮನಸಾ ದರ್ಶನೇನ ಚ |
ಯಚ್ಛೇದ್ ವಾಙ್ಮನಸೀ ಬುದ್ಧ್ಯಾ ಯ ಇಚ್ಛೇಜ್ಜ್ಞಾನಮುತ್ತಮಮ್ |
ಜ್ಞಾನೇನ ಯಚ್ಛೇದಾತ್ಮಾನಂ ಯ ಇಚ್ಛೇಚ್ಛಾಂತಿಮಾತ್ಮನಃ ॥4॥

ಚಕ್ಷುರಿಂದ್ರಿಯವು ವಿಷಯಪದಾರ್ಥಗಳ ಕಡೆ ಸಂಚರಿಸುವುದರಿಂದ ಆಗುವ ದೋಷಗಳನ್ನು, ಗುಣಗಳನ್ನು ಮನಸ್ಸಿನ ವ್ಯಾಪಾರದಿಂದ ಚಿಂತಿಸಿ ಮಾತು, ಮನಸ್ಸನ್ನು ಬುದ್ಧಿಯಿಂದ ನಿಯಂತ್ರಿಸಬೇಕು. ಶಾಂತಿಯನ್ನು ಹೊಂದಲು ಬಯಸುವವನು ಜ್ಞಾನದಿಂದ ಬುದ್ಧಿಯನ್ನು ನಿಯಂತ್ರಿಸಬೇಕು.

ಏತೇಷಾಂ ಚೇದನುದ್ರಷ್ಟಾ ಪುರುಷೋಽಪಿ ಸುದಾರುಣಃ |
ಯದಿ ವಾ ಸರ್ವವೇದಜ್ಞೋ ಯದಿ ವಾಪ್ಯನೃಚೋಽಜಪಃ ॥5॥
ಯದಿ ವಾ ಧಾರ್ಮಿಕೋ ಯಜ್ವಾ ಯದಿ ವಾ ಪಾಪಕೃತ್ತಮಃ |
ಯದಿ ವಾ ಪುರುಷವ್ಯಾಘ್ರೋ ಯದಿ ವಾ ಕ್ಲೈಬ್ಯಧಾರಿತಾ ॥6॥
ತರತ್ಯೇವ ಮಹಾದುರ್ಗಂ ಜರಾಮರಣಸಾಗರಮ್ |
ಏವಂ ಹ್ಯೇತೇನ ಯೋಗೇನ ಯುಂಜಾನೋಽಪ್ಯೇಕಮಂತತಃ |
ಅಪಿ ಜಿಜ್ಞಾಸಮಾನೋ ಹಿ ಶಬ್ದಬ್ರಹ್ಮಾತಿವರ್ತತೇ ॥7॥

ಮನುಷ್ಯನು ಅತ್ಯಂತ ಕ್ರೂರನಾಗಿರಲಿ ಅಥವಾ ಸರ್ವವೇದಗಳನ್ನು ತಿಳಿದವನಾಗಿರಲಿ, ಬ್ರಾಹ್ಮಣನಾಗಿದ್ದು ವೇದಜ್ಞಾನದಿಂದ ಶೂನ್ಯನಾಗಿರಲಿ, ಧಾರ್ಮಿಕನಾಗಿರಲಿ, ಯಜ್ಞಶೀಲನಾಗಿರಲಿ, ಘೋರಪಾಪಗಳನ್ನು ಮಾಡಿದವನಾಗಿರಲಿ, ಪುರುಷಶ್ರೇಷ್ಠನಾಗಿರಲಿ, ಕಷ್ಟಮಯ ಜೀವನವನ್ನು ನಡೆಸುವವನಾಗಿರಲಿ, ಅವನು ಹಿಂದೆ ಹೇಳಿದ ಹನ್ನೆರಡು ಯೋಗಗಳನ್ನು ಆಶ್ರಯಿಸಿದ್ದೇ ಆದಲ್ಲಿ, ಆ ಯೋಗಗಳ ಉಪಾಯದಿಂದ ತನ್ನ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸಿದ್ದಾದ ಪಕ್ಷದಲ್ಲಿ ಅತ್ಯಂತ ದುರ್ಗಮವಾದ ಜರಾ-ಮರಣಗಳನ್ನು ದಾಟುತ್ತಾನೆ. ಬ್ರಹ್ಮನ ವಿಷಯದಲ್ಲಿ ಜಿಜ್ಞಾಸೆಯನ್ನು ಮಾಡುತ್ತಾ, ವೈದಿಕ ವಿಧಿ-ನಿಷೇಧಗಳನ್ನು ದಾಟಿ ಪರಮಾತ್ಮನನ್ನು ಹೊಂದುತ್ತಾನೆ.

ಧರ್ಮೋಪಸ್ಥೋ ಹ್ರೀವರೂಥ ಉಪಾಯಾಪಾಯಕೂಬರಃ |
ಅಪಾನಾಕ್ಷಃ ಪ್ರಾಣಯುಗಃ ಪ್ರಜ್ಞಾ ಯುರ್ಜೀವಬಂಧನಃ ॥8॥

ಧ್ಯಾನಯೋಗವೆಂಬುದು ಸುಂದರ ರಥದಂತಿದೆ. ರಥದಲ್ಲಿ ಕುಳಿತುಕೊಳ್ಳುವ ಸ್ಥಾನವೇ ಧರ್ಮ ಎನಿಸಿದೆ. ಲಜ್ಜೆಯು ಆವರಣವಾಗಿದೆ. ಉಪಾಯಗಳು ಮೂಕಿಗಳಾಗಿವೆ. ಅಚ್ಚುಮರವು ಅಪಾನವಾಯುವಾಗಿದೆ. ಪ್ರಾಣವಾಯುವು ನೊಗವಾಗಿದೆ. ಬುದ್ಧಿಯು ಜೀವನವಾಗಿದೆ. ಪ್ರಜ್ಞೆಯು ಆಯುಷ್ಯವಾಗಿದೆ. ಜೀವನವು ಬಂಧನವಾಗಿದೆ (ಕಟ್ಟುವಿಕೆಯು ಜೀವನವಾಗಿದೆ).

ಚೇತನಾಬಂಧುರಶ್ಚಾರುರಾಚಾರಗ್ರಹನೇಮಿವಾನ್ |
ದರ್ಶನಸ್ಪರ್ಶನವಹೋ ಘ್ರಾಣಶ್ರವಣವಾಹನಃ ॥9॥

ಚೈತನ್ಯವು ನೊಗದ ಕೆಳಗಿನ ಮೂಕಿಯ ಕಂಬವಾಗಿದೆ. ವ್ರತಾಚಾರವು ಚಕ್ರದ ನೇಮಿಯಾಗಿದೆ. ನೇತ್ರ, ತ್ವಚೆ, ಘ್ರಾಣ, ಶ್ರವಣಗಳನ್ನು ಈ ರಥವು ಹೊತ್ತುಕೊಂಡಿದೆ.

ಪ್ರಜ್ಞಾ ನಾಭಿಃ ಸರ್ವತಂತ್ರಪ್ರತೋದೋ ಜ್ಞಾನಸಾರಥಿಃ |
ಕ್ಷೇತ್ರಜ್ಞಾಧಿಷ್ಠಿತೋ ಧೀರಃ ಶ್ರದ್ಧಾದಮಪುರಃಸರಃ ॥10॥

ಪ್ರಜ್ಞೆಯು ಅದರ ನಾಭಿಯಾಗಿದೆ. ಶಾಸ್ತ್ರಗಳು ಚಾವಟಿಯಾಗಿದೆ. ಜ್ಞಾನವೇ ಸಾರಥಿಯಾಗಿದೆ. ಕ್ಷೇತ್ರಜ್ಞನಾದ ಭಗವಂತನು ಈ ರಥದಲ್ಲಿ ಕುಳಿತು ಈ ರಥವನ್ನು ಮೆಲ್ಲನೆ ನಡೆಸುತ್ತಿದ್ದಾನೆ. ಶ್ರದ್ಧೆ ಮತ್ತು ದಮಗಳನ್ನು ಮುಂದೆ ಮಾಡಿಕೊಂಡು ಈ ರಥವು ಮುಂದೆ ಸಾಗುತ್ತಿದೆ.

ತ್ಯಾಗವತ್ಮಾನುಗಃ ಕ್ಷೇಮ್ಯಃ ಶೌಚಗಾಧ್ಯಾನಗೋಚರಃ |
ಜೀವಯುಕ್ತೋ ರಥೋ ದಿವ್ಯೋ ಬ್ರಹ್ಮಲೋಕೇ ವಿರಾಜತೇ ॥11॥

ತ್ಯಾಗವೆಂಬ ಸೂಕ್ಷ್ಮಗುಣವು ಈ ರಥವನ್ನು ಹಿಂಬಾಲಿಸುತ್ತಿದೆ. ಕ್ಷೇಮವೆನಿಸಿದ ಶೌಚರತರಾದ ಮುನಿಗಳಿಗೆ ಸದಾಚಾರವೇ ಸಾಗುವ ದಾರಿ ಎನಿಸಿದೆ. ಜೀವನಿಂದ ಯುಕ್ತವಾದ ಈ ದಿವ್ಯರಥವು ಬ್ರಹ್ಮಲೋಕದಲ್ಲಿ ವಿರಾಜಿಸುತ್ತಿದೆ.

ಅಥ ಸಂತ್ವರಮಾಣಸ್ಯ ರಥಮೇತಂ ಯುಯುಕ್ಷತಃ |
ಅಕ್ಷರಂ ಗಂತುಮನಸೋ ವಿಧಿಂ ವಕ್ಷ್ಯಾಮಿ ಶೀಘ್ರಗಮ್ ॥12॥

ಈ ಧ್ಯಾನಯೋಗವೆಂಬ ರಥದಲ್ಲಿ ಕುಳಿತು ಬೇಗ ಆ ಪರಬ್ರಹ್ಮನ ಬಳಿ ಸಾಗಬೇಕು ಎಂದು ಬಯಸುವ ಸಾಧಕನಿಗೆ ಪರಬ್ರಹ್ಮನನ್ನು ಹೊಂದುವ ಉಪಾಯವನ್ನು ಹೇಳುತ್ತೇನೆ.

ಸಪ್ತ ಯೋ ಧಾರಣಾಃ ಕೃತ್ಸ್ನಾ ವಾಗ್ಯತಃ ಪ್ರತಿಪದ್ಯತೇ |
ಪೃಷ್ಠತಃ ಪಾರ್ಶ್ವತಶ್ಚಾನ್ಯಾ ಯಾವತ್ಯಸ್ತಾಃ ಪ್ರಧಾರಣಾಃ ॥13॥
ಯಾವ ಸಾಧಕನು ವಾಕ್‌ನಿಯಂತ್ರಣವನ್ನು ಸಾಧಿಸಿಕೊಳ್ಳುತ್ತಾನೋ ಅವನು ಪಂಚಜ್ಞಾನೇಂದ್ರಿಯಗಳಿಗೆ, ಮನಸ್ಸು-ಬುದ್ಧಿಗಳಿಗೆ ಸಂಬಂಧಿಸಿದ ಏಳು ಧಾರಣೆಗಳನ್ನು ಸಿದ್ಧಿ ಮಾಡಿಕೊಳ್ಳುತ್ತಾನೆ. ಇವುಗಳ ಅಧೀನವಾಗಿ ಪೃಥಿವಿ ಗುಣಗಳಾದ ಗಂಧ, ರಸಾದಿ ಪ್ರಧಾರಣೆಗಳು ಸಾಧಕನ ಹಿಂದೆ, ಆಚೆ-ಈಚೆ, ಸರ್ವಾಂಗಗಳಲ್ಲಿಯೂ ಅನುಕೂಲವಾಗಿ ಇರುತ್ತವೆ.
ಕ್ರಮಶಃ ಪಾರ್ಥಿವಂ ಯಚ್ಚ ವಾಯವ್ಯಂ ಖಂ ತಥಾ ಪಯಃ |
ಜ್ಯೋತಿಷೋ ಯತ್ತದೈಶ್ವರ್ಯಮಹಂಕಾರಸ್ಯ ಬುದ್ಧಿತಃ ॥14॥
ಸಾಧಕನು ಕ್ರಮವಾಗಿ ಭೂಮಿ, ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ವಿಜ್ಞಾನತತ್ತ್ವ ಇವುಗಳ ಮೇಲೆ ಹಿಡಿತವನ್ನು ಸಾಧಿಸಿಕೊಳ್ಳಬಹುದು.
ಅವ್ಯಕ್ತಸ್ಯ ತಥೈಶ್ವರ್ಯಂ ಕ್ರಮಶಃ ಪ್ರತಿಪದ್ಯತೇ |
ವಿಕ್ರಮಾಶ್ಚಾಪಿ ಯಸ್ಯೈತೇ ತಥಾ ಯುಂಕ್ತೇ ಸ ಯೋಗತಃ ॥15॥
ಅಥಾಸ್ಯ ಯೋಗಯುಕ್ತಸ್ಯ ಸಿದ್ಧಿಮಾತ್ಮನಿ ಪಶ್ಯತಃ |
ನಿರ್ಮಥ್ಯಮಾನಃ ಸೂಕ್ಷ್ಮತ್ವಾದ್ ರೂಪಾಣೀಮಾನಿ ದರ್ಶಯೇತ್ ॥16॥
ಬಳಿಕ ಅವ್ಯಕ್ತ ತತ್ತ್ವವು ಕ್ರಮವಾಗಿ ತನ್ನ ಅಧೀನಕ್ಕೆ ಒಳಪಡುತ್ತದೆ. ಯುಕ್ತಿಯಿಂದ ಯೋಗವನ್ನು ಅಭ್ಯಾಸ ಮಾಡುವವನಿಗೆ ಉಂಟಾಗುವ ಅನುಭವಕ್ರಮವನ್ನು, ಯೋಗಾಭ್ಯಾಸ ನಿರತನಾದ ಯೋಗಿಗೆ ಪೃಥಿವೀ ಜಯವೇ ಮೊದಲಾದ ಐಶ್ವರ್ಯಗಳು ಯಾವ ರೀತಿಯಲ್ಲಿ ಲಭಿಸುತ್ತವೆ ಎಂಬ ವಿಷಯವನ್ನು, ಸಾಧಕನು ಸ್ಥೂಲದೇಹದ ಮೇಲಿನ ಅಭಿಮಾನವನ್ನು ತೊರೆದು ಸೂಕ್ಷ್ಮದೃಷ್ಟಿಯುಳ್ಳವನಾದ ಕಾರಣ ಅವನಿಗೆ ದೊರೆಯುವ ಅಲೌಕಿಕ ಚಿಹ್ನೆಗಳು ಏನು ಎಂಬುದನ್ನು ನಿನಗೆ ತಿಳಿಸುತ್ತೇನೆ.
ಶೈಶಿರಸ್ತು ಯಥಾ ಧೂಮಃ ಸೂಕ್ಷ್ಮಃ ಸಂಶ್ರಯತೇ ನಭಃ |
ತಸ್ಯ ದೇಹಾದ್ ವಿಯುಕ್ತಸ್ಯ ಪೂರ್ವರೂಪಂ ಭವತ್ಯುತ ॥17॥
ಶಿಶಿರ ಕಾಲದ ಸೂಕ್ಷ್ಮವಾದ ಇಬ್ಬನಿಯು ಆಕಾಶವನ್ನು ಆವರಿಸಿದಂತೆ ಕಾಣುತ್ತದೆ. ಯೋಗಿಯ ಅನುಭವದಲ್ಲಿ ಇದು ಮೊದಲನೆಯ ರೂಪವಾಗಿದೆ. ಲಿಂಗದೇಹದಿಂದ ಮುಕ್ತನಾದವನಿಗೆ ಕಾಣುವ ಭಗವಂತನ ಅನುಭವವು ಹೀಗೆ ಇರುತ್ತದೆ.
ವ್ಯಾಖ್ಯಾನ ವಿಶೇಷ ಮಹಾಪ್ರಳಯ ಕಾಲದಲ್ಲಿ ಸತ್ಯಲೋಕದಲ್ಲಿರುವ ಅಪರೋಕ್ಷ ಜ್ಞಾನಿಗಳಿಗೆ ಚತುರ್ಮುಖ ಬ್ರಹ್ಮನಿಂದ ಸೇರಿಕೊಂಡು ಪೃಥಿವ್ಯಾದಿ ಆವರಣಗಳನ್ನು ದಾಟಿ ಭಗವಂತನ ಉದರದಲ್ಲಿ ಪ್ರವೇಶ ಹೊಂದುವ ಕ್ರಮವನ್ನು ಹೇಳುತ್ತಿದ್ದಾರೆ. ಜ್ಞಾನಿಗಳು ಭೋಗೋಚಿತವಾದ ದಿವ್ಯದೇಹದಿಂದ ಕೂಡಿದಾಗ ಅನಾದಿಕಾಲದಿಂದ ಇರುವ ಲಿಂಗದೇಹದಿಂದ ಕೂಡಿದವರಾಗಿರುತ್ತಾರೆ. ಹೊಗೆಯು ಸಂಪೂರ್ಣ ನಾಶವಾದ ಬಳಿಕ ಆಕಾಶದಲ್ಲಿ ಜಲಸಂಗ್ರಹ ಯೋಗ್ಯವಾದ ಮೇಘರೂಪವು ಹೇಗೆ ಕಾಣಿಸುತ್ತದೋ ಹಾಗೆ ಹೃದಯದಲ್ಲಿ ಬ್ರಹ್ಮಾಂಡಕ್ಕೆ ಆಧಾರಭೂತವಾದ, ಆದಿ ಕೂರ್ಮನಲ್ಲಿ ಆಶ್ರಯವನ್ನು ಹೊಂದಿರುವ ಜಗತ್ತನ್ನು ನೋಡುತ್ತಾನೆ. ಲಿಂಗದೇಹ ಯುಕ್ತನಾದಾಗ ಹೃದಯದಲ್ಲಿ ಲಿಂಗದೇಹದ ಧೂಮವು ಹೊರಟು ಹೋಗುತ್ತಿರಲು ಬ್ರಹ್ಮಾಂಡಾಧಾರವಾದ ಭಗವಂತನ ರೂಪವನ್ನು ಚೆನ್ನಾಗಿ ನೋಡುತ್ತಾನೆ. ಮೊದಲನೆಯ ಆವರಣದಲ್ಲಿರುವ ಬಂಗಾರದ ಕರ್ಪರಕ್ಕೆ ಆಶ್ರಯವಾದ ಆದಿ ಕೂರ್ಮರೂಪವನ್ನು ಲಿಂಗದೇಹದ ಬಂಧನವನ್ನು ಪರಿಹರಿಸಿಕೊಳ್ಳುತ್ತಾ ಸಾಧಕನು ನೋಡುತ್ತಾನೆ.
ಅಥ ಧೂಮಸ್ಯ ವಿರಮೇ ದ್ವಿತೀಯಂ ರೂಪದರ್ಶನಮ್ |
ಜಲರೂಪಮಿವಾಕಾಶೇ ತತ್ರೈವಾತ್ಮನಿ ಪಶ್ಯತಿ ॥18॥
ಅಪಾಂ ವ್ಯತಿಕ್ರಮೇ ಚಾಪಿ ವಹ್ನಿರೂಪಂ ಪ್ರಕಾಶತೇ |
ತಸ್ಮಿನ್ನುಪರತೇ ಚಾಸ್ಯ ಪೀತವಸ್ತ್ರವದಿಷ್ಯತೇ |
ಊರ್ಣಾರೂಪಸವರ್ಣಂ ಚ ತಸ್ಯ ರೂಪಂ ಪ್ರಕಾಶತೇ ॥19॥
ಭಗವಂತನ ಪೃಥಿವಿಗೆ ಆಧಾರರೂಪವಾದ ರೂಪವನ್ನು ನೋಡಿದ ಬಳಿಕ ಬ್ರಹ್ಮಾಂಡದ ಎರಡನೆಯ ಆವರಣಭೂತವಾದ ಜಲಾಧಾರಕವಾದ ಭಗವಂತನ ರೂಪವನ್ನು ನೋಡುತ್ತಾನೆ. ಅದನ್ನೂ ದಾಟಿದ ಬಳಿಕ ಮೂರನೆಯ ಆಧಾರವಾದ ಭಗವಂತನ ರೂಪವನ್ನು ನೋಡುತ್ತಾನೆ. ಅದನ್ನೂ ದಾಟಿದ ಬಳಿಕ ಹಳದಿ ಬಟ್ಟೆಯಂತೆ ಕಾಣಿಸುತ್ತಿರುವ ಉಣ್ಣೆಯ ರೂಪಕ್ಕೆ ಸಮಾನವಾದ ಬಂಗಾರದ ಬಣ್ಣದಿಂದ ಕಂಗೊಳಿಸುವ ಬುದ್ಧಿ ತತ್ತ್ವಕ್ಕೆ ಆಶ್ರಯವಾದ ವಾಯು ಆವರಣವಾದ ರೂಪವನ್ನು ನೋಡುತ್ತಾನೆ.
ಅಥ ಶ್ವೇತಾಂ ಗತಿಂ ಗತ್ವಾ ವಾಯವ್ಯಂ ಸೂಕ್ಷ್ಮಮಪ್ಯಜಃ |
ಸುಶುಕ್ಲಂ ಚೇತಸಃ ಸೌಕ್ಷ್ಮ್ಯಮವ್ಯಕ್ತಂ ಬ್ರಹ್ಮಣೋಽಸ್ಯ ವೈ ॥20॥
ಬಳಿಕ ಬಿಳಿಯಾದ ಅಂಗಕಾಂತಿಯನ್ನು ಹೊಂದಿದ ಸಾಧಕನು ಅಹಂಕಾರ ತತ್ತ್ವಕ್ಕೆ ಆಧಾರವಾದ ಭಗವದ್ರೂಪವನ್ನು ನೋಡುತ್ತಾನೆ. ಬಳಿಕ ಚಿತ್ತ-ಪ್ರವರ್ತಕವಾದ, ಮಹತ್ತತತ್ವಭಿಮಾನಿಯಾದ, ಬ್ರಹ್ಮನಿಗೆ ನಿಯಾಮಕನಾದ ಭಗವಂತನ ಶುಕ್ಲ ಸೂಕ್ಷ್ಮ ರೂಪವನ್ನು ನೋಡುತ್ತಾನೆ. ಬಳಿಕ ಅವ್ಯಕ್ತತತತ್ವಧಾರವಾದ ಭಗವಂತನ ರೂಪವನ್ನು ಯೋಗಿಯು ನೋಡುತ್ತಾನೆ.
ಏತೇಷ್ವಪಿ ಹಿ ಜಾತೇಷು ಫಲಜಾತಾನಿ ಮೇ ಶೃಣು |
ಜಾತಸ್ಯ ಪಾರ್ಥಿವೈಶ್ವರ್ಯೇ ಸೃಷ್ಟಿರಿಷ್ಟಾ ವಿಧೀಯತೇ ॥21॥
ಹಿಂದೆ ಹೇಳಿದ ತತ್ತ್ವಗಳಲ್ಲಿ ಹುಟ್ಟಿದ ಅಭಿಮಾನಿದೇವತೆಗಳಿಗೆ ಯಾವ ಯಾವ ಫಲಗಳು ಲಭಿಸುತ್ತವೆ ಎಂದು ಹೇಳುತ್ತೇನೆ, ಕೇಳು. ಪೃಥಿವಿ ತತ್ತ್ವ ಎನಿಸಿದ ಸುವರ್ಣ ಕರ್ಪರವೆಂಬ ಐಶ್ವರ್ಯದಿಂದ ಹುಟ್ಟಿದ ಪೃಥಿವಿಯ ಅಭಿಮಾನಿ ದೇವತೆಯ ದೆಸೆಯಿಂದ ಸೃಷ್ಟಿ ಮಾಡುವ ಸಾಮರ್ಥ್ಯವು ಉಂಟಾಗುತ್ತದೆ. ಅದೇ ಭೂಲೋಕವೆಂಬ ರೂಪಾಂತರವನ್ನು ಹೊಂದಿದೆ.
ಪ್ರಜಾಪತಿರಿವಾಕ್ಷೋಭ್ಯಃ ಶರೀರಾತ್ ಸೃಜತಿ ಪ್ರಜಾಃ |
ಅಂಗುಲ್ಯಂಗುಷ್ಠಮಾತ್ರೇಣ ಹಸ್ತಪಾದೇನ ವಾ ತಥಾ ॥22॥

ವಾಯುತತ್ತ್ವದಿಂದ ಹುಟ್ಟಿದ ಮುಖ್ಯಪ್ರಾಣನು ಚತುರ್ಮುಖ ಬ್ರಹ್ಮನಂತೆ ತನ್ನ ಶರೀರದಿಂದಲೇ ಪ್ರಜೆಗಳನ್ನು ಸೃಷ್ಟಿಸುತ್ತಾನೆ. ತನ್ನ ದೇಹದ ಹೆಬ್ಬೆರಳನ್ನು ಒತ್ತುವುದರಿಂದಲೇ, ಹಸ್ತ-ಪಾದಗಳ ನಿಕ್ಷೇಪದಿಂದಲೇ ಪೃಥಿವಿಯನ್ನು ಪ್ರಳಯ ಕಾಲದಲ್ಲಿ ಅಲುಗಾಡಿಸುತ್ತಾನೆ. ವಾಯುತತತ್ತ್ವಭಿಮಾನಿಯಾದ ಮುಖ್ಯಪ್ರಾಣನ ಸಾಮರ್ಥ್ಯವು ಈ ತರನಾಗಿದೆ ಎಂದು ಭಾವ.

ಪೃಥಿವೀಂ ಕಂಪಯತ್ಯೇಕೋ ಗುಣೋ ವಾಯೋರಿತಿ ಸ್ಮೃತಃ |
ಆಕಾಶಭೂತಶ್ಚಾಕಾಶೇ ಸವರ್ಣತ್ವಾತ್ ಪ್ರಕಾಶತೇ ॥23॥

ಪೃಥಿವಿಯನ್ನೇ ಚಲಿಸುವ ಸಾಮರ್ಥ್ಯಗುಣವು ವಾಯುವಿನ ಗುಣವು ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಇದರಂತೆ ಆಕಾಶತತತ್ತ್ವಭಿಮಾನಿಯಾದ, ಭೂತಾಕಾಶಕ್ಕೆ ಅಭಿಮಾನಿಯಾದ ಉತ್ತಮವಾದ ಅಭಿಮಾನ, ಅಭಿಮಾನಿ ದೇವತೆಯು ಉತ್ತಮವಾದ ಬಣ್ಣದಿಂದ ಕೂಡಿದವನಾಗಿ ಬೆಳಗುತ್ತಾನೆ.

ವರ್ಣತೋ ಗೃಹ್ಯತೇ ಚಾಪ್ಸು ನಾಪಃ ಪಿಬತಿ ಚಾಶಯಾನ್ |
ನ ಚಾಸ್ಯ ತೇಜಸಾ ರೂಪಂ ದೃಶ್ಯತೇ ಶಾಮ್ಯತೇ ತಥಾ ॥24॥

ಇಷ್ಟಬಂದಂತೆ ತನ್ನ ರೂಪವನ್ನು ಮರೆಸಿಕೊಳ್ಳುವುದಕ್ಕೆ ಸಮರ್ಥನಾಗುತ್ತಾನೆ. ಆಕಾಶದಲ್ಲಿ ನೀರು ತುಂಬಿಕೊಳ್ಳುತ್ತಿದ್ದರೂ ಆಸೆಯಿಂದ ನೀರನ್ನು ಸ್ವಯಂ ತಾನು ಕುಡಿಯುವುದಿಲ್ಲ. ಆಕಾಶತತತ್ತ್ವಭಿಮಾನಿಯು ಬೇರೆಯವರಿಗೆ ದಾನ ಮಾಡುವ ಸ್ವಭಾವವುಳ್ಳವನಾಗಿದ್ದಾನೆ. ಇತರ ಭೂತಗಳಿಗೆ ಆಯಾ ಐಶ್ವರ್ಯ ಪದಾರ್ಥಗಳನ್ನು ತನ್ನಲ್ಲಿ ಸಂಗ್ರಹಿಸಿಕೊಳ್ಳುವುದಿಲ್ಲ ಎಂದು ಭಾವ. ಅಗ್ನಿ ತತತ್ತ್ವಭಿಮಾನಿಯು ತನ್ನ ತೇಜಸ್ಸಿನಿಂದ ಬೆಳಗುತ್ತಾನೆ. ಇವನ ರೂಪವನ್ನು ಯಾರಿಂದಲೂ ನೋಡಲಾಗುವುದಿಲ್ಲ. ಆ ಮಹಾತೇಜಸ್ಸನ್ನು ಉಪಶಮನಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ.

ಅಹಂಕಾರಸ್ಯ ವಿಜಿತೇ ಪಂಚೈತೇ ಸ್ಯುರ್ವಶಾನುಗಾಃ |
ಷಣ್ಣಾಮಾತ್ಮನಿ ಬುದ್ಧೌ ಚ ಜಿತಾಯಾಂ ಪ್ರಭವತ್ಯಥ ॥25॥

ಅಹಂಕಾರವನ್ನು ಜಯಿಸಿದಾಗ ಈ ಪಂಚಭೂತಗಳು ವಶವಾಗುತ್ತವೆ. ಪಂಚಭೂತ, ಅಹಂಕಾರಗಳನ್ನು ಜಯಿಸಿದ ಬಳಿಕ ಬುದ್ಧಿಯು ವಶವಾಗುತ್ತದೆ.

ನಿರ್ದೋಷಾ ಪ್ರತಿಭಾ ಹ್ಯೇನಂ ಕೃತ್ಸ್ನಾ ಸಮಭಿವರ್ತತೇ |
ತಥೈವ ವ್ಯಕ್ತಮಾತ್ಮಾನಮವ್ಯಕ್ತಂ ಪ್ರತಿಪದ್ಯತೇ ॥26॥

ಬುದ್ಧಿಯನ್ನು ಜಯಿಸಿದ ಬಳಿಕ ನಿರ್ದುಷ್ಟವಾದ ಪ್ರತಿಭೆಯು ಈ ಸಾಧಕ ಪುರುಷನನ್ನು ಸಮಗ್ರವಾಗಿ ವ್ಯಾಪಿಸುತ್ತದೆ. ಪ್ರತಿಭಾಶೀಲನಾಗುತ್ತಾನೆ. ಬಳಿಕ ಹಿಂದೆ ಹೇಳಿದ ಪಂಚಭೂತಗಳಲ್ಲೆಲ್ಲ ಇರುವ ಗುಣಗಳನ್ನು ಹೊಂದಿರುವ, ಮಹತ್ತತತ್ತ್ವಭಿಮಾನಿಯಾದ ಚತುರ್ಮುಖ ಬ್ರಹ್ಮನನ್ನು ಸಾಧಕನು ಹೊಂದುತ್ತಾನೆ. ಚತುರ್ಮುಖ ಬ್ರಹ್ಮನನ್ನು ಹೊಂದಿದ ಬಳಿಕ ಪ್ರಕೃತಿ ತತತ್ತ್ವಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಹೊಂದುತ್ತಾನೆ.

ಯತೋ ನಿಃಸರತೇ ಲೋಕೋ ಭವತಿ ವ್ಯಕ್ತಸಂಜ್ಞಕಃ |
ತತ್ರಾವ್ಯಕ್ತಮಯೀಂ ವ್ಯಾಖ್ಯಾಂ ಶೃಣು ತ್ವಂ ವಿಸ್ತರೇಣ ಮೇ |
ತಥಾ ವ್ಯಕ್ತಮಯೀಂ ಚೈವ ಸಂಖ್ಯಾಂ ಪೂರ್ವಂ ನಿಬೋಧ ಮೇ ॥27॥

ವ್ಯಕ್ತವೆನಿಸಿದ ಈ ಜಗತ್ತೆಲ್ಲವೂ ಅವ್ಯಕ್ತತತತ್ತ್ವಭಿಮಾನಿನಿಯಾದ ಲಕ್ಷ್ಮೀದೇವಿಯಿಂದಲೇ ಹೊರಹೊಮ್ಮಿದೆ. ಆ ಅವ್ಯಕ್ತ ತತತ್ತ್ವಭಿಮಾನಿನಿಯಾದ ಲಕ್ಷ್ಮಿಯ ಬಗ್ಗೆ ವಿಸ್ತಾರವಾದ ವಿವರಣೆಯನ್ನು ನೀನು ಕೇಳಿಸಿಕೊ. ಅದರಂತೆ ವ್ಯಕ್ತವೆನಿಸಿದ ಜಗತ್ತಿನಲ್ಲಿರುವ ಸಂಖ್ಯೆ ಏನೆಂಬುದನ್ನು ಮೊದಲು ತಿಳಿದುಕೊ.

ಪಂಚವಿಂಶತಿತತತ್ತ್ವಾನಿ ತುಲ್ಯಾನ್ಯುಭಯತಃ ಸಮಮ್ |
ಯೋಗೇ ಸಾಂಖ್ಯೇऽಪಿ ಚ ತಥಾ ವಿಶೇಷಾಂಸ್ತತ್ರ ಮೇ ಶೃಣು ॥28॥

ಪ್ರಕೃತಿತತ್ತ್ವದಿಂದ ಕೂಡಿದ ಜಗತ್ತಿನಲ್ಲಿರುವ ತತ್ತ್ವಗಳು ಇಪ್ಪತ್ತೈದು ಎಂದು ಯೋಗಶಾಸ್ತ್ರದಲ್ಲಿ, ಸಾಂಖ್ಯಶಾಸ್ತ್ರದಲ್ಲಿ, ಎರಡು ಕಡೆಯೂ ಒಂದೇ ರೀತಿಯಾಗಿ ಹೇಳಿದ್ದಾರೆ. ಇವುಗಳಲ್ಲಿರುವ ವಿಶೇಷವನ್ನು ಹೇಳುತ್ತೇನೆ, ಕೇಳು.

ವ್ಯಾಖ್ಯಾನ ವಿಶೇಷ ಕೆಲವರು ಸಾಂಖ್ಯ ಎಂದರೆ ಸಾಂಖ್ಯಮತದ ಶಾಸ್ತ್ರ ಎಂದು ಭಾವಿಸಿದ್ದಾರೆ. `ಯಥಾರ್ಥಸಾಂಖ್ಯವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ' ಎಂದು ಹೇಳಿದಂತೆ ಯಥಾರ್ಥತತ್ತ್ವವನ್ನು ಹೇಳುವ ಶಾಸ್ತ್ರವೇ ಸಾಂಖ್ಯಶಾಸ್ತ್ರವೆನಿಸಿದೆ. ವೇದಶಾಸ್ತ್ರಕ್ಕೂ ಸಾಂಖ್ಯಶಾಸ್ತ್ರಕ್ಕೂ ವ್ಯತ್ಯಾಸ ಇರುವುದಿಲ್ಲ. ಹಾಗಾಗಿ ಸಾಂಖ್ಯಶಾಸ್ತ್ರ ಎಂದರೆ ವೇದಶಾಸ್ತ್ರ ಎಂದೇ ಅರ್ಥ.

ಪ್ರೋಕ್ತಂ ತದ್ ವ್ಯಕ್ತಮಿತ್ಯೇವ ಜಾಯತೇ ವರ್ಧತೇ ಚ ಯತ್ |
ಜೀರ್ಯತೇ ಮ್ರಿಯತೇ ಚೈವ ಚತುರ್ಭಿರ್ಲಕ್ಷಣೈರ್ಯುತಮ್ ॥29॥

ಯಾವುದು ಹುಟ್ಟು, ಬೆಳವಣಿಗೆ, ಮುಪ್ಪು, ಸಾವು ಎಂಬ ನಾಲ್ಕು ಲಕ್ಷಣಗಳಿಂದ ಕೂಡಿದೆಯೋ ಅದಕ್ಕೆ ವ್ಯಕ್ತ ಎಂದೇ ಹೇಳುತ್ತಾರೆ.

ವಿಪರೀತಮತೋ ಯತ್ತು ತದವ್ಯಕ್ತಮುದಾಹೃತಮ್ |
ದ್ವಾವಾತ್ಮಾನೌ ಚ ವೇದೇಷು ಸಿದ್ಧಾಂತೇಷ್ವಪ್ಯುದಾಹೃತೌ ॥30॥

ಯಾವುದು ನಾಲ್ಕು ಲಕ್ಷಣಗಳಿಂದ ಕೂಡಿಲ್ಲವೋ ಅದನ್ನು ಅವ್ಯಕ್ತ ಎನ್ನುತ್ತಾರೆ. ಮಹಾಭಾರತ, ಪಂಚರಾತ್ರ, ಬ್ರಹ್ಮಮೀಮಾಂಸಾಶಾಸ್ತ್ರಗಳಲ್ಲಿ ಜೀವ-ಪರಮಾತ್ಮ ಎಂಬ ಎರಡು ತತ್ತ್ವಗಳನ್ನು ಹೇಳಿದ್ದಾರೆ.

ಚತುರ್ಲಕ್ಷಣಜಂ ತ್ವನ್ಯಂ ಚತುರ್ವರ್ಜಂ ಪ್ರಚಕ್ಷತೇ |
ವ್ಯಕ್ತಮವ್ಯಕ್ತಜಂ ಚೈವ ತಥಾ ಬುದ್ಧಮಥೇತರತ್ |
ಸತ್ತ್ವಂ ಕ್ಷೇತ್ರಜ್ಞ ಇತ್ಯೇತದ್ ದ್ವಯಮಪ್ಯನುದರ್ಶಿತಮ್ ॥31॥

ಈ ಜೀವ-ಪರಮಾತ್ಮರಿಬ್ಬರಲ್ಲಿ ಈ ಜೀವಾತ್ಮ ತತ್ತ್ವವು ನಾಲ್ಕು ಲಕ್ಷಣಗಳಿಂದ ಎಂದರೆ ಜಾಯತೇ, ವರ್ಧತೇ, ಕ್ಷೀಯತೇ, ಮ್ರಿಯತೇ ಎಂಬ ಲಕ್ಷಣಗಳಿಂದ ಹುಟ್ಟನ್ನು ಪಡೆದಿದೆ. ಈ ಜೀವತತ್ತ್ವಕ್ಕಿಂತಲೂ ಅತ್ಯಂತ ಭಿನ್ನನಾದ ಪರಮಾತ್ಮತತ್ತ್ವವು ಜಾಯತೇ, ವರ್ಧತೇ,

ಕ್ಷೀಯತೇ, ಮ್ರಿಯತೇ ಎಂಬ ನಾಲ್ಕು ಲಕ್ಷಣಗಳಿಂದ ದೂರವಾಗಿದೆ. ಪರಮಾತ್ಮ ತತ್ತ್ವಕ್ಕಿಂತಲೂ ಅರ್ಥಾತ್ ಅವ್ಯಕ್ತತತ್ತ್ವಕ್ಕಿಂತಲೂ ಭಿನ್ನನಾದ ವ್ಯಕ್ತನೆನಿಸಿದ ಜೀವನು ಅವ್ಯಕ್ತನೆನಿಸಿದ ಪರಮಾತ್ಮನಿಂದಲೇ ಹುಟ್ಟನ್ನು ಪಡೆದಿರುತ್ತಾನೆ. ವ್ಯಕ್ತನೆನಿಸಿದ ಜೀವನನ್ನು ಸತ್ತ್ವವೆಂದು, ಅವ್ಯಕ್ತನೆನಿಸಿದ ಪರಮಾತ್ಮನನ್ನು ಕ್ಷೇತ್ರಜ್ಞನೆಂದು ಹೇಳುತ್ತಾರೆ. ಇವೆರಡರ ಲಕ್ಷಣಗಳನ್ನು ನಾನು ಹೇಳಿದ್ದೇನೆ.
ದ್ವಾವಾತ್ಮಾನೌ ಚ ವೇದೇಷು ವಿಷಯೇಷು ಚ ಲಕ್ಷಿತೌ |
ವಿಷಯಪ್ರತಿಸಂಹಾರಃ ಸಾಂಖ್ಯಾನಾಂ ಸಿದ್ಧಿಲಕ್ಷಣಃ ||32||
ಹೀಗೆ ಜೀವ ಮತ್ತು ಪರಮಾತ್ಮ ಎಂಬ ಎರಡು ತತ್ತ್ವಗಳು ವೇದಗಳಲ್ಲಿ ಹೇಳಲ್ಪಟ್ಟಿವೆ. ಅಜ್ಞಾನವೆಂಬ ವಿಷವನ್ನು ಪರಿಹರಿಸುವ ಸಿದ್ಧಾಂತವು ವಿಷಯ ಎಂದು ಕರೆಯಲ್ಪಟ್ಟಿದೆ. ವಿಷಯ ಎನಿಸಿದ ಸತ್ಸಿದ್ಧಾಂತಗಳಲ್ಲಿ ಇವರಿಬ್ಬರ ಸ್ವರೂಪವನ್ನು ಹೀಗೆ ನಿರೂಪಿಸಿದ್ದಾರೆ- ವೇದಗಳಲ್ಲಿ ಪ್ರತಿಪಾದಿತರಾದ ಇಬ್ಬರು ಆತ್ಮರು ಜೀವ- ಪರಮಾತ್ಮರು. ಅವರಿಬ್ಬರ ಲಕ್ಷಣಗಳು ವಿರುದ್ಧವಾದ ಲಕ್ಷಣಗಳಾಗಿವೆ ಎಂದು ವೇದ ಸಿದ್ಧಾಂತದಲ್ಲಿ ತೋರಿಸಲಾಗಿದೆ. ಜ್ಞಾನಿಗಳಿಗೆ ಅವ್ಯಕ್ತತತ್ತ್ವನೆನಿಸಿದ ಭಗವಂತನಿಂದಲೇ ಸಿದ್ಧಿಯು ಉಂಟಾಗುತ್ತದೆ ಎಂದು ವೇದ ಸಿದ್ಧಾಂತದಿಂದ ನಿರ್ಣಯವಾಗುತ್ತದೆ.
ನಿರ್ಮಮಶ್ಚಾನಹಂಕಾರೋ ನಿರ್ದ್ವಂದ್ವಶ್ಛಿನ್ನಸಂಶಯಃ |
ನೈವ ಕ್ರುದ್ಧ್ಯತಿ ನ ದ್ವೇಷ್ಟಿ ನಾನೃತಾ ಭಾಷತೇ ಗಿರಃ ||33||
ಆಕ್ರುಷ್ಟಸ್ತಾಡಿತಶ್ಚೈವ ಮೈತ್ರೇಣ ಧ್ಯಾತಿ ನಾಶುಭಮ್ |
ವಾಗ್ದಂಡಕರ್ಮಮನಸಾಂ ತ್ರಯಾಣಾಂ ಚ ನಿವರ್ತಕಃ ||34||
ಸಮಃ ಸರ್ವೇಷು ಭೂತೇಷು ಬ್ರಹ್ಮಾಣಮಭಿವರ್ತತೇ |
ನೈವೇಚ್ಛತಿ ನ ಚಾನಿಚ್ಛೋ ಯಾತ್ರಾಮಾತ್ರವ್ಯವಸ್ಥಿತಃ ||35||
ಯಾರು ಅಹಂಕಾರ, ಮಮಕಾರಗಳನ್ನು ಬಿಟ್ಟು ದ್ವಂದ್ವರಹಿತನಾಗಿ ಸಂಶಯಗಳನ್ನೆಲ್ಲ ಪರಿಹರಿಸಿಕೊಂಡು, ಯಾರಲ್ಲಿಯೂ ಕೋಪ-ದ್ವೇಷಗಳಿಲ್ಲದೆ, ಅಸತ್ಯವನ್ನು ಮಾತನಾಡದೆ, ತನ್ನನ್ನು ಯಾರಾದರೂ ಬೈದರೂ ಕೈ ಎತ್ತಿ ಹೊಡೆದರೂ ಅವರಲ್ಲಿ ಪ್ರೀತಿಯನ್ನು ತೋರಿಸುತ್ತಾ, ಮತ್ತೊಬ್ಬರಿಗೆ ಕೇಡನ್ನು ಬಯಸದೆ, ಮನೋ-ವಾಕ್-ಕಾಯಗಳನ್ನು ಅಡಗಿಸಿಕೊಂಡು ಎಲ್ಲ ಪ್ರಾಣಿಗಳಲ್ಲಿಯೂ ಒಂದೇ ರೀತಿಯಾಗಿ ವರ್ತಿಸುತ್ತಾನೋ ಅವನು ಗುಣಪರಿಪೂರ್ಣನಾದ ಭಗವಂತನ ಪಾದವನ್ನು ಸೇರುತ್ತಾನೆ. ಅವನು ವಿಷಯ ಸುಖಗಳಲ್ಲಿ ಅತಿಯಾದ ಅಭಿಲಾಷೆಯನ್ನಾಗಲಿ, ನಿರಾಸಕ್ತಿಯನ್ನಾಗಲಿ ಹೊಂದುವುದಿಲ್ಲ. ದೇಹಧಾರಣೆಗೆ ಬೇಕಾದಷ್ಟನ್ನೇ ಸ್ವೀಕರಿಸುತ್ತಾನೆ.
ಅಲೋಲುಪೋಽವ್ಯಥೋ ದಾಂತೋ ನ ಕೃತೀ ನ ನಿರಾಕೃತಿಃ |
ನಾಸ್ಯೇಂದ್ರಿಯಮನೇಕಾಗ್ರಂ ನಾತಿಕ್ಷಿಪ್ತಮನೋರಥಃ |
ಅಹಿಂಸ್ರಃ ಸರ್ವಭೂತಾನಾಮೀದೃಕ್ಸಾಂಖ್ಯೋ ವಿಮುಚ್ಯತೇ ||36||
ವಿಷಯಪದಾರ್ಥಗಳಲ್ಲಿ ಆಸಕ್ತನಾಗದೆ, ಅವುಗಳಿಂದ ವ್ಯತಿತನಾಗದೆ, ಭಗವನ್ನಿಷ್ಠ ಬುದ್ಧಿಯಿಂದ ಅತಿಯಾದ ಜಗತ್ತಿನ ವ್ಯಾಪಾರಗಳನ್ನು ಮಾಡದೆ, ವಿಹಿತ ಕರ್ಮಗಳನ್ನು ಮಾಡುತ್ತಾ, ಇಂದ್ರಿಯಗಳಿಗೆ ಬೇಕಾದ ಸುಖಗಳನ್ನು ಹೆಚ್ಚಾಗಿ ಗಮನಿಸದೆ, ಮನಸ್ಸಿನ ಅಭಿಲಾಷೆಗಳನ್ನು ಅತಿಯಾಗಿ ನಿರಾಕರಿಸದೆ, ಯಾವ ಪ್ರಾಣಿಗಳಿಗೂ ಹಿಂಸೆಯನ್ನು ಮಾಡದೆ ಯಾವ ವ್ಯಕ್ತಿಯು ಯಥಾರ್ಥಜ್ಞಾನವನ್ನು ಹೊಂದಿರುತ್ತಾನೋ ಅವನು ಸಂಸಾರದಿಂದ ಬಿಡುಗಡೆ ಹೊಂದುತ್ತಾನೆ.
ಅವಿಯೋಗಾದ್ ವಿಮುಚ್ಯಂತೇ ಕಾರಣೈರ್ಯೈರ್ನಿಬೋಧ ಮೇ |
ಯೋಗೈಶ್ವರ್ಯಮತಿಕ್ರಾಂತೋ ಯೋಽತಿಕ್ರಾಮತಿ ಮುಚ್ಯತೇ ||37||
ಇತ್ಯೇಷಾ ಭಾವಜಾ ಬುದ್ಧಿಃ ಕಥಿತಾ ತೇ ನ ಸಂಶಯಃ |
ಏವಂ ಭವತಿ ನಿರ್ದ್ವಂದ್ವೋ ಬ್ರಹ್ಮಾಣಂ ಚಾಧಿಗಚ್ಛತಿ ||38||
ಯಾವ ಸಾಧನದ ಉಪಾಯವನ್ನು ಬಿಡದೆ ಬಿಡುಗಡೆಯನ್ನು ಹೊಂದುತ್ತಾನೋ ಆ ಕಾರಣವನ್ನೇ ನಾನು ಹಿಂದೆ ಹೇಳಿದ್ದೇನೆ ಎಂಬುದಾಗಿ ತಿಳಿ. ಯಾರು ಪರಮಾತ್ಮನ ಯೋಗೈಶ್ವರ್ಯವನ್ನು ಅಲ್ಲಗಳೆದು, ಅದನ್ನು ಅತಿಕ್ರಮಿಸಿದ್ದು ಮಿಥ್ಯಾಜ್ಞಾನಿಯಾಗಿ ಇದ್ದಾನೋ ಅರ್ಥಾತ್ ಶ್ರುತಿ-ಸ್ಮೃತಿ-ಯುಕ್ತಿಗಳನ್ನು ಅತಿಕ್ರಮಿಸಿ ವರ್ತಿಸುತ್ತಿದ್ದಾನೋ ಅಂತಹ ಮಿಥ್ಯಾಜ್ಞಾನಿಯನ್ನು ನಿರಾಕರಿಸಿ ಅರ್ಥಾತ್ ಅದ್ವೈತ ಮತವನ್ನು ನಿರಾಕರಿಸಿ, ಯಾವಾಗಲೂ ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತಿರುತ್ತಾನೋ ಅವನು ಈ ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಈ ರೀತಿಯಾಗಿ ಮನಃಪೂರ್ವಕವಾಗಿ ಉಂಟಾದ ಜ್ಞಾನವನ್ನು ನಿನಗೆ ಉಪದೇಶಿಸಿದ್ದೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಯಾವನು ನಾನು ಹೇಳಿದ ರೀತಿಯಲ್ಲಿ ಶೀತೋಷ್ಣ, ಸುಖ-ದುಃಖ, ಲಾಭ-ಅಲಾಭಗಳಲ್ಲಿ ದ್ವಂದ್ವರಹಿತನಾಗಿ ಬದುಕುತ್ತಾನೋ ಅವನು ಗುಣಪರಿಪೂರ್ಣನಾದ ಭಗವಂತನನ್ನು ಹೊಂದುತ್ತಾನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಶುಕಾನುಪ್ರಶ್ನೇ ಮೋಕ್ಷೋಪಾಯವಿಧಿರ್ನಾಮ ಏಕಸಪ್ತತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *

ಎಪ್ಪತ್ತೆರಡನೆಯ ಅಧ್ಯಾಯ
ಸೃಷ್ಟಿಯ ಕಾರ್ಯಗಳಲ್ಲಿ ಬುದ್ಧಿಗೆ ಇರುವ ಮಹತ್ವ.
ಬುದ್ಧಿಗೆ ಅನುಗುಣವಾಗಿ ಇರುವ ತಾರತಮ್ಯದ ವರ್ಣನೆ.
ವ್ಯಾಸಃ
ಅಥ ಜ್ಞಾನಪ್ಲವಂ ಧೀರೋ ಗೃಹೀತ್ವಾ ಶಾಂತಿಮಾಸ್ಥಿತಃ |
ಉನ್ಮಜ್ಜಂಶ್ಚ ನಿಮಜ್ಜಂಶ್ಚ ಜ್ಞಾನಮೇವಾಭಿಸಂಶ್ರಯೇತ್ ||1||

ಶುಕನೇ, ತನಗೆ ಶಾಂತಿಯನ್ನು ಹೊಂದಲು ಬಯಸುವ ಧೀರನಾದ ವ್ಯಕ್ತಿಯು ಜ್ಞಾನವೆಂಬ ದೋಣಿಯನ್ನು ಅವಲಂಬಿಸಿ ಸಾಗಬೇಕು. ಸಂಸಾರದಲ್ಲಿ ಮುಳುಗಿ ಏಳುತ್ತಾ ಇರುವ ವ್ಯಕ್ತಿಗೆ ಜ್ಞಾನವೆಂಬ ದೋಣಿಯೇ ಆಶ್ರಯವಾಗಿದೆ.
ಶುಕಃ
ಕಿಂ ತಜ್ಜ್ಞಾನಮಥೋ ವಿದ್ಯಾ ಯಯಾ ನಿಸ್ತರತಿ ದ್ವಯಮ್ |
ಪ್ರವೃತ್ತಿಲಕ್ಷಣೋ ಧರ್ಮೋ ನಿವೃತ್ತಿರಿತಿ ಚೈವ ಹಿ ॥2॥
ತಂದೆಯೇ, ವಿದ್ಯೆ ಅಥವಾ ಜ್ಞಾನವು ಹುಟ್ಟು-ಸಾವು ಎಂಬ ಎರಡು ದೋಷಗಳನ್ನು ದಾಟಿಸುತ್ತದೆ. ಅದು ಹೇಗೆ ಎನ್ನುವುದನ್ನು ತಿಳಿಸು. ಪ್ರವೃತ್ತಿ ಧರ್ಮ ಎಂದರೆ ಏನು? ಅಥವಾ ನಿವೃತ್ತಿ ಧರ್ಮ ಎಂದರೆ ಏನು? ಎನ್ನುವುದನ್ನು ತಿಳಿಸು.
ವ್ಯಾಸಃ
ಯಸ್ತು ಪಶ್ಯೇತ್ ಸ್ವಭಾವೇನ ವಿನಾ ಭಾವಮಚೇತನಃ |
ಪುಷ್ಯತೇ ಚ ಪುನಃ ಸರ್ವಾನ್ ಪ್ರಜ್ಞಯಾ ಮುಕ್ತಹೇತುಕಃ ॥3॥
ಯಾವ ಬೌದ್ಧನು ಆಯಾ ವಸ್ತುಗಳ ಸ್ವಭಾವವಿಲ್ಲದೆ ಬೇರೆ ಕಾರಣವಿಲ್ಲ ಎಂದು ಹೇಳುತ್ತಾನೋ, ಈಶ್ವರ ಅದೃಷ್ಟಾದಿ ಕಾರಣಗಳನ್ನು ನಿರಾಕರಿಸಿ ಎಲ್ಲವನ್ನೂ ಬುದ್ಧಿಯಿಂದಲೇ ಸಮರ್ಪಿಸುತ್ತಾನೋ ಅವನು ಅಜ್ಞಾನಿ ಎನಿಸುತ್ತಾನೆ.
ಯೇಷಾಂ ಚೈಕಾಂತಭಾವೇನ ಸ್ವಭಾವಃ ಕಾರಣಂ ಮತಮ್ |
ದೂರ್ವಾತೃಣಬೃಸೀಕಾ ವೈ ತೇ ಲಭಂತೇ ನ ಕಿಂಚನ ॥4॥
ಸ್ವಭಾವದಿಂದಲೇ ಜಗತ್ತು ನಡೆಯುತ್ತಿದೆ. ಸ್ವಭಾವಕ್ಕಿಂತ ಭಿನ್ನವಾದ ಕಾರಣವು ಬೇರೆ ಯಾವುದೂ ಇಲ್ಲ ಎಂದು ಹೇಳುವ ಬೌದ್ಧನು ಇನ್ನೊಬ್ಬರನ್ನು ವಂಚಿಸಲು ದರ್ಭೆ ಹುಲ್ಲುಗಳ ಆಸನಗಳನ್ನು ಸ್ವೀಕರಿಸುತ್ತಾನೆ.
ಯೇ ಚೈನಂ ಪಕ್ಷಮಾಶ್ರಿತ್ಯ ವರ್ತಯಂತ್ಯಲ್ಪಚೇತಸಃ |
ಸ್ವಭಾವಂ ಕಾರಣಂ ಜ್ಞಾತ್ವಾ ನ ಶ್ರೇಯಃ ಪ್ರಾಪ್ನುವಂತಿ ತೇ ॥5॥
ಕೆಲವರು ಈ ಬೌದ್ಧ ಮತವನ್ನೇ ಅವಲಂಬಿಸಿಕೊಂಡು ಮೂರ್ಖರಾಗಿ ವರ್ತಿಸುತ್ತಾರೆ. ಎಲ್ಲದಕ್ಕೂ ಸ್ವಭಾವವೇ ಕಾರಣ ಎನ್ನುತ್ತಾ ಶ್ರೇಯಸ್ಸನ್ನು ಹೊಂದುವುದಿಲ್ಲ.
ಸ್ವಭಾವೋ ಹಿ ವಿನಾಶಾಯ ಮೋಹಕರ್ಮಮನೋಭವಃ |
ನಿರುಕ್ತಮೇತಯೋರೇತತ್ ಸ್ವಭಾವಪರಿಭಾವಯೋಃ ॥6॥
ಬೌದ್ಧರ ಕಲ್ಪನೆಯಿಂದ ಉಂಟಾಗಿರುವ ಮನಸ್ಸಿನಲ್ಲಿ ಹುಟ್ಟಿರುವ ಸ್ವಭಾವವೇ ಜಗತ್ತಿಗೆ ಕಾರಣ ಎಂದು ಅವರು ಹೇಳುತ್ತಾರೆ. ಈ ಕಾರಣದಿಂದಲೇ ಆ ವಾದಿಗಳು ವಿನಾಶಕ್ಕೆ ತುತ್ತಾಗುತ್ತಾರೆ. ಸ್ವಭಾವ, ಪರಿಭಾವ ಈ ಎರಡು ಶಬ್ದಗಳಿಗೂ ನಿರುಕ್ತ್ತರ ಪ್ರಕಾರ ಒಂದೇ ಅರ್ಥವು ಹೇಳಲ್ಪಟ್ಟಿದೆ.
ವ್ಯಾಖ್ಯಾನ ವಿಶೇಷ ಪರಿಭಾವ ಎಂದರೆ ತಿರಸ್ಕಾರ, ಅಭಾವ ಎಂದರೆ ಅರ್ಥ. ಸ್ವಭಾವ ಎಂದರೂ `ಸುಷ್ಟು ಅಭಾವಃ ಯಸ್ಮಾತ್' ಎಂಬ ಶ್ರುತಿಯಿಂದ ಅಭಾವ ಎಂಬ ಅರ್ಥವೇ ಹೇಳಲ್ಪಡುತ್ತದೆ.
ಕೃಷ್ಯಾದೀನಿ ಹಿ ಕರ್ಮಾಣಿ ಸಸ್ಯಸಂಹರಣಾನಿ ಚ |
ಪ್ರಜ್ಞಾ ವದ್ಭಿಃ ಪ್ರಕ್ಲೃಪ್ತಾನಿ ಯಾನಾಸನಗೃಹಾಣಿ ಚ ॥7॥
ಸ್ವಭಾವವೇ ಕಾರಣ ಎಂದರೆ ಕೃಷ್ಯಾದಿಗಳು ವ್ಯರ್ಥವೇ ಆದಾವು. ಕೃಷ್ಯಾದಿಗಳನ್ನು ಮಾಡುವವರು ಪ್ರಜ್ಞಾಪೂರ್ವಕವಾಗಿ ಭೂಮಿಯನ್ನು ಉಳಬೇಕು. ನೀರನ್ನು ನೀಡಬೇಕು. ಗೊಬ್ಬರಗಳನ್ನು ಹಾಕಬೇಕು. ಆದ್ದರಿಂದ ಕೃಷ್ಯಾದಿಗಳು ಕಾರಣದಿಂದಲೇ ಕೂಡಿವೆ. ಬೀಜಗಳ ಸಂಗ್ರಹವನ್ನು ಮಾಡುತ್ತಾರೆ. ಪ್ರಯಾಣ ಮಾಡಲು ಗಾಡಿಗಳನ್ನು, ಕುಳಿತುಕೊಳ್ಳಲು ಆಸನಗಳನ್ನು, ವಾಸಿಸಲು ಮನೆಗಳನ್ನು ಕಾರಣಗಳಿಂದಲೇ ಮಾಡಿಕೊಳ್ಳುತ್ತಾರೆ ಹೊರತು ಸ್ವಭಾವದಿಂದಲೇ ಇವುಗಳನ್ನು ನಿರ್ಮಿಸಲು ಆಗುವುದಿಲ್ಲ.
ಆಕ್ರೀಡಾನಾಂ ಗೃಹಾಣಾಂ ಚ ಗದಾನಾಮಗದಸ್ಯ ಚ |
ಪ್ರಜ್ಞಾವಂತಃ ಪ್ರವಕ್ತಾರೋ ಜ್ಞಾನವದ್ಭಿರನುಷ್ಠಿತಾಃ ॥8॥
ಆಟವಾಡಲು ಮೈದಾನ, ವಾಸಿಸಲು ಮನೆ ಇವೆಲ್ಲವನ್ನೂ ಪ್ರಾಜ್ಞರಾದವರು ಮಾಡಿಕೊಳ್ಳುತ್ತಾರೆ. ಆಯುರ್ವೇದವನ್ನು ತಿಳಿದವರು ರೋಗಿಗಳ ರೋಗದ ಕಾರಣವನ್ನು ತಿಳಿದು, ಅದರ ಪರಿಹಾರಕ್ಕೆ ಔಷಧವನ್ನು ಕೊಡುತ್ತಾರೆ. ಇದ್ಯಾವುದೂ ಸ್ವಭಾವದಿಂದಲೇ ನಡೆಯುವುದಲ್ಲ. ಪ್ರಜ್ಞಾವಂತರು ಅನುಷ್ಠಾನ ಮಾಡಿದ ಎಲ್ಲಾ ವ್ಯಾಪಾರಗಳು ಬುದ್ಧಿಪೂರ್ವಕವಾಗಿಯೇ ನಡೆಯುತ್ತವೆ, ಸ್ವಭಾವದಿಂದಲ್ಲ.
ಪ್ರಜ್ಞಾ ಸಂಯೋಜಯತ್ಯರ್ಥೈಃ ಪ್ರಜ್ಞಾ ಶ್ರೇಯೋಽಧಿಗಚ್ಛತಿ |
ರಾಜಾನೋ ಭುಂಜತೇ ರಾಜ್ಯಂ ಪ್ರಜ್ಞಯಾ ತುಲ್ಯಲಕ್ಷಣಾಃ ॥9॥
ಬುದ್ಧಿಯಿಂದಲೇ ಐಶ್ವರ್ಯದ ಪ್ರಾಪ್ತಿಯಾಗುತ್ತದೆ. ಬುದ್ಧಿಯಿಂದ ಶ್ರೇಯಸ್ಸನ್ನು ಹೊಂದುತ್ತಾರೆ. ಒಂದೇ ರೀತಿಯಾದ ಬುದ್ಧಿಯುಳ್ಳ ರಾಜರಲ್ಲಿ ಯಾರು ಯುಕ್ತಿ ಬದ್ಧವಾಗಿ ಆಡಳಿತವನ್ನು ನಡೆಸುತ್ತಾರೋ ಅವರು ಉಪಭೋಗಿಸುತ್ತಾರೆ.
ಪಾರಾವರ್ಯಂ ತು ಭೂತಾನಾಂ ಜ್ಞಾನೇನೈವೋಪಲಭ್ಯತೇ |
ವಿದ್ಯಯಾ ತಾತ ಸೃಷ್ಟಾನಾಂ ವಿದ್ಯೈವ ಪರಮಾ ಗತಿಃ ॥10॥
ಜೀವರಲ್ಲಿ ಕಾಣಿಸುವ ತಾರತಮ್ಯವು ಈ ಜ್ಞಾನನಿಮಿತ್ತವಾಗಿಯೇ ಹೊಂದಿಕೆ ಆಗುತ್ತದೆ. ತಾರತಮ್ಯಕ್ಕೆ ಕಾರಣವು ಜ್ಞಾನದಲ್ಲಿರುವ ತಾರತಮ್ಯವು. ಸ್ವಭಾವದಿಂದಲೇ ಎಲ್ಲವೂ ಆಗುತ್ತದೆ ಎಂದು ಬೌದ್ಧರು ಹೇಳಿದರೆ ವಿದ್ಯೆಯಿಂದಲೇ ಸಕಲ ಪ್ರಾಣಿಗಳು ಉತ್ಪತ್ತಿಯನ್ನು ಹೊಂದುತ್ತಾರೆ, ಪರಮಾತ್ಮನ ಜ್ಞಾನದಿಂದಲೇ ಉತ್ತಮ ಗತಿಯನ್ನು ಹೊಂದುತ್ತಾರೆ ಎಂಬ ಶ್ರುತಿ ನಿರ್ಣಯಕ್ಕೆ ಏನು ಅರ್ಥ?
ಭೂತಾನಾಂ ಜನ್ಮ ಸರ್ವೇಷಾಂ ವಿವಿಧಾನಾಂ ಚತುರ್ವಿಧಮ್ |
ಜರಾಯ್ವಂಡಮಥೋದ್ಭೇದಂ ಸ್ವೇದಂ ಚಾಪ್ಯುಪಲಕ್ಷಯೇತ್ ॥11॥

ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳ ಹುಟ್ಟನ್ನು ತಿಳಿದುಕೊಳ್ಳಬೇಕು. ಪ್ರಾಣಿಗಳು ನಾಲ್ಕು ವಿಧವಾಗಿವೆ. ಗರ್ಭಕೋಶದಿಂದ ಹುಟ್ಟುವ ಪ್ರಾಣಿಗಳು, ಮೊಟ್ಟೆಯಿಂದ ಜನಿಸುವ ಪ್ರಾಣಿಗಳು, ನೆಲವನ್ನು ಭೇದಿಸಿಕೊಂಡು ಹುಟ್ಟುವ ಪಾಣಿಗಳು, ಬೆವರು ನೀರಿನಿಂದ ಹುಟ್ಟುವ ಪ್ರಾಣಿಗಳು ಎಂದು. ಇವುಗಳನ್ನು ಗಮನಿಸಬೇಕು.

ಸ್ಥಾವರೇಭ್ಯೋ ವಿಶಿಷ್ಟಾನಿ ಜಂಗಮಾನ್ಯುಪಲಕ್ಷಯೇತ್ |
ಉಪಪನ್ನಂ ಹಿ ಯಚ್ಚೇಷ್ಟಾ ವಿಶಿಷ್ಯೇತ ವಿಶೇಷ್ಯಯೋಃ ॥12॥

ಚಲಿಸದೆ ಇರುವ ಗಿಡ-ಮರಗಳಿಗಿಂತಲೂ ಚಲಿಸುವ ಪ್ರಾಣಿಗಳು ಶ್ರೇಷ್ಠ. ಇದು ಯುಕ್ತಿಯುಕ್ತವೂ ಆಗಿದೆ. ಚಲಿಸುವ ಪ್ರಾಣಿಗಳಲ್ಲಿ ವಿಶೇಷ ರೂಪವನ್ನು ಕಾಣಬಹುದು.

ಆಹುರ್ದ್ವಿಬಹುಪಾದಾನಿ ಜಂಗಮಾನಿ ದ್ವಯಾನಿ ಚ |
ಬಹುಪಾದ್ಭ್ಯೋ ವಿಶಿಷ್ಟಾನಿ ದ್ವಿಪಾದಾನಿ ಬಹೂನ್ಯಪಿ ॥13॥

ಚಲಿಸುವ ಪ್ರಾಣಿಗಳಲ್ಲಿಯೂ ಅನೇಕ ಕಾಲುಗಳುಳ್ಳ ಪ್ರಾಣಿಗಳು, ದ್ವಿಪಾದ ಉಳ್ಳ ಪ್ರಾಣಿಗಳು ಎಂದು ಎರಡು ವಿಧವಿದೆ. ಬಹುಪಾದ ಪ್ರಾಣಿಗಿಂತಲೂ ಎರಡು ಪಾದವುಳ್ಳ ಪ್ರಾಣಿಗಳು ಶ್ರೇಷ್ಠವಾದವುಗಳು.

ದ್ವಿಪದಾನಿ ದ್ವಯಾನ್ಯಾಹುಃ ಪಾರ್ಥಿವಾನ್ಯುತ್ತರಾಣಿ ಚ |
ಪಾರ್ಥಿವಾನಿ ವಿಶಿಷ್ಟಾನಿ ತಾನಿ ಹ್ಯನ್ನಾನಿ ಭುಂಜತೇ ॥14॥

ಎರಡು ಪಾದವುಳ್ಳ ಪ್ರಾಣಿಗಳಲ್ಲಿಯೂ ಮನುಷ್ಯರು, ಪಕ್ಷಿಗಳು ಎಂದು ಎರಡು ಭೇದವಿದೆ. ಅದರಲ್ಲಿ ಆಕಾಶದಲ್ಲಿ ಹಾರುವ ಪಕ್ಷಿಗಳಿಗಿಂತಲೂ ಮನುಷ್ಯರು ಶ್ರೇಷ್ಠತೆಯಿಂದ, ಅನೇಕ ಅನ್ನವೇ ಮೊದಲಾದ ಭೋಗಗಳನ್ನು ಅನುಭವಿಸುತ್ತಾರೆ.

ಪಾರ್ಥಿವಾನಿ ದ್ವಯಾನ್ಯಾಹುರ್ಮಧ್ಯಮಾನೀತರಾಣಿ ಚ |
ಮಧ್ಯಮಾನಿ ವಿಶಿಷ್ಟಾನಿ ಜಾತಿಧರ್ಮೋಪಧಾರಣಾತ್ ॥15॥

ಪೃಥಿವಿಯಲ್ಲಿ ಸಂಚರಿಸುವ ಪ್ರಾಣಿಗಳಲ್ಲಿಯೂ ಮಧ್ಯಮ ಭೂತದ ಪ್ರಾಣಿಗಳು, ಅಧಮ ಭೂತಗಳ ಪ್ರಾಣಿಗಳು ಎಂದು ಎರಡು ವಿಧವಾಗಿವೆ. ಜಾತಿ, ವರ್ಣ ಧರ್ಮಗಳನ್ನು ಹೊಂದಿರುವ ಕಾರಣ ಅಧಮಭೂತ ಪ್ರಾಣಿಗಳಿಗಿಂತ ಮಧ್ಯಮ ಭೂತ ಪ್ರಾಣಿಗಳು ಶ್ರೇಷ್ಠವಾದವುಗಳು.

ಮಧ್ಯಮಾನಿ ದ್ವಯಾನ್ಯಾಹುರ್ಧರ್ಮಜ್ಞಾನೀತರಾಣಿ ಚ |
ಧರ್ಮಜ್ಞಾನಿ ವಿಶಿಷ್ಟಾನಿ ಕಾರ್ಯಾಕಾರ್ಯೋಪಧಾರಣಾತ್ ॥16॥

ಮಧ್ಯಮ ಭೂತ ಪ್ರಾಣಿಗಳಲ್ಲಿಯೂ ಅರ್ಥಾತ್ ಮನುಷ್ಯರಲ್ಲಿಯೂ ಧರ್ಮವನ್ನು ತಿಳಿದವರು, ಧರ್ಮವನ್ನು ತಿಳಿಯದಿದ್ದವರು ಎಂಬ ಎರಡು ಭೇದವಿದೆ. ಧರ್ಮಜ್ಞರು ಇವರಲ್ಲಿ ಶ್ರೇಷ್ಠರು. ಇವರು ಕಾರ್ಯಾಕಾರ್ಯಗಳನ್ನು ತಿಳಿದು ಕರ್ತವ್ಯವನ್ನು ಪಾಲಿಸುತ್ತಾರೆ.

ಧರ್ಮಜ್ಞಾನಿ ದ್ವಯಾನ್ಯಾಹುರ್ವೇದಜ್ಞಾನೀತರಾಣಿ ಚ |
ವೇದಜ್ಞಾನಿ ವಿಶಿಷ್ಟಾನಿ ವೇದೋ ಹ್ಯೇಷು ಪ್ರತಿಷ್ಠಿತಃ ॥17॥

ಧರ್ಮಜ್ಞರಲ್ಲಿಯೂ ವೇದವನ್ನು ತಿಳಿದವರು, ವೇದವನ್ನು ತಿಳಿಯದೆ ಇರುವವರು ಎಂಬ ಎರಡು ಭೇದವಿದೆ. ಕೇವಲ ಧರ್ಮಜ್ಞರಿಗಿಂತ ವೇದ ತಿಳಿದು ಧರ್ಮಜ್ಞರು ಆಗಿರುವವರು ಉತ್ತಮರು. ಕಾರಣ ಸಮಸ್ತ ಧರ್ಮಗಳಲ್ಲಿಯೂ ಶ್ರೇಷ್ಠವಾದುದು ವೇದವು. ಅದರಲ್ಲಿ ವೇದವು ಪ್ರತಿಷ್ಠಿತವಾಗಿದೆ.

ವೇದಜ್ಞಾನಿ ದ್ವಯಾನ್ಯಾಹುಃ ಪ್ರವಕ್ತೃಣೀತರಾಣಿ ಚ |
ಪ್ರವಕ್ತೃಣಿ ವಿಶಿಷ್ಟಾನಿ ಸರ್ವಧರ್ಮೋಪಧಾರಣಾತ್ ॥18॥

ವೇದಜ್ಞರಲ್ಲಿಯೂ ಎರಡು ವಿಧ. ಪ್ರವಚನಕಾರರು, ಪ್ರವಚನ ಮಾಡದೆ ಇರುವವರು. ಇವರಲ್ಲಿ ಪ್ರವಚನ ಮಾಡುವವರು ಶ್ರೇಷ್ಠರು. ಕಾರಣ ಅವರು ಎಲ್ಲ ಧರ್ಮಗಳನ್ನು ತಿಳಿದು ಬೋಧಿಸುತ್ತಾರೆ.

ವಿಜ್ಞಾಯಂತೇ ಹಿ ಯೈರ್ವೇದಾಃ ಸರ್ವಧರ್ಮಕ್ರಿಯಾಫಲಾಃ |
ಸಯಜ್ಞಾಃ ಸಖಿಲಾ ವೇದಾಃ ಪ್ರವಕ್ತೃಭ್ಯೋ ವಿನಿಃಸೃತಾಃ ॥19॥

ಇಂತಹ ಪ್ರವಕ್ತೃಗಳ ಮುಖದಿಂದ ಪ್ರವಚನ ಮೂಲಕವಾಗಿ ಹೊರಹೊಮ್ಮುವ ಧರ್ಮ-ಕರ್ಮಗಳ ಫಲದಿಂದ ಕೂಡಿದ ಸಮಸ್ತ ವೇದಗಳ ಜ್ಞಾನವು ಇತರರಿಗೆ ತಿಳಿಯುತ್ತದೆ. ಇವರಿಂದ ಬೇರೆಯವರು ಜ್ಞಾನಲಾಭವನ್ನು ಹೊಂದುತ್ತಾರೆ.

ಪ್ರವಕ್ತೃಣಿ ದ್ವಯಾನ್ಯಾಹುರಾತ್ಮಜ್ಞಾನೀತರಾಣಿ ಚ |
ಆತ್ಮಜ್ಞಾನಿ ವಿಶಿಷ್ಟಾನಿ ಜನ್ಮಾಜನ್ಮೋಪಧಾರಣಾತ್ ॥20॥

ಪ್ರವಚನ ಮಾಡುವವರಲ್ಲಿಯೂ ಆತ್ಮಜ್ಞಾನವುಳ್ಳವರು, ಆತ್ಮಜ್ಞಾನವಿಲ್ಲದೆ ಇರುವವರು ಎಂಬ ಎರಡು ಭೇದವಿದೆ. ಹುಟ್ಟು-ಸಾವುಗಳನ್ನು ತಿಳಿದವರಿಗಿಂತ ಪರಮಾತ್ಮನ ಜ್ಞಾನವನ್ನು ಹೊಂದಿದವರು ಶ್ರೇಷ್ಠರು.

ಧರ್ಮದ್ವಯಂ ಹಿ ಯೋ ವೇದ ಸ ಸರ್ವಃ ಸರ್ವಧರ್ಮವಿತ್ |
ಸ ತ್ಯಾಗೀ ಸತ್ಯಸಂಕಲ್ಪಃ ಸ ತು ಕ್ಷಾಂತಃ ಸ ಈಶ್ವರಃ ॥21॥

ಸಮಸ್ತ ಧರ್ಮಗಳನ್ನು ಧರಿಸಿದವನು ನಾರಾಯಣನೇ. ಧಾರಯತಿ ಇತಿ ಧರ್ಮಃ' ಎಂಬ ವ್ಯುತ್ಪತ್ತಿಯಿಂದ ಸಮಸ್ತ ಧರ್ಮಗಳನ್ನು ಧರಿಸಿದವನೂ, ತಿಳಿದವನು ನಾರಾಯಣನೇ ಆಗಿದ್ದಾನೆ. ಅವನೇ ಧರ್ಮಜ್ಞನು, ಅವನೇ ಸರ್ವಜ್ಞನು ಎಂದು ಜ್ಞಾನಿಗಳು ಸ್ತುತಿಸುತ್ತಾರೆ. ಧರ್ಮಪದೋಕ್ತನಾದ ನಾರಾಯಣನನ್ನೇ ತ್ಯಾಗಿ ಎಂದು ಅರ್ಥಾತ್ ದೋಷತ್ಯಾಗಿ ಎಂದು, ಸತ್ಯಸಂಕಲ್ಪನೆಂದು, ಕ್ಷಾಂತನೆಂದು, ಈಶ್ವರನೆಂದು ಸ್ತುತಿಸುತ್ತಾರೆ.

ಧರ್ಮಜ್ಞಾನಪ್ರತಿಷ್ಠಂ ಹಿ ತಂ ದೇವಾ ಬ್ರಾಹ್ಮಣಂ ವಿದುಃ |
ಶಬ್ದಬ್ರಹ್ಮಣಿ ನಿಷ್ಣಾತಂ ಪರೇ ಚ ಕೃತನಿಶ್ಚಯಮ್ ॥22॥

ಯಾವನು ಭಗವತ್ತತ್ತ್ವದಲ್ಲಿ ಜ್ಞಾನವುಳ್ಳವನಾಗಿದ್ದಾನೋ ಅವನನ್ನೇ ದೇವತೆಗಳು ಬ್ರಾಹ್ಮಣನು ಎನ್ನುತ್ತಾರೆ. ಸರ್ವೋತ್ತಮನಾದ ವಸ್ತುವಿನಲ್ಲಿ ನಿಶ್ಚಯವನ್ನು ಹೊಂದಿರುವ, ಶಬ್ದಬ್ರಹ್ಮನಲ್ಲಿ ನಿಷ್ಣಾತನಾದವನೇ ಬ್ರಾಹ್ಮಣನೆನಿಸುತ್ತಾನೆ.
ಅಂತಃಸ್ಥಂ ಚ ಬಹಿಷ್ಠಂ ಚ ಯೇಽಽಧಿಯಜ್ಞಾಧಿದೈವತಮ್ |
ಜಾನಂತಿ ತಾನ್ನಮಸ್ಯಾಮಸ್ತೇ ದೇವಾಸ್ತಾತ ತೇ ದ್ವಿಜಾಃ ॥23॥
ಅಂತರ್ಯಾಮಿಯಾಗಿರುವ, ಸರ್ವತ್ರ ವ್ಯಾಪ್ತನಾದ, ಅಧಿಯಜ್ಞನೆನಿಸಿದ, ಅಧಿದೈವನೆನಿಸಿದ ಪರಮಾತ್ಮನನ್ನು ಯಾರು ತಿಳಿದಿದ್ದಾರೋ ಅಂತಹ ಜ್ಞಾನಿಗಳಾದ ಬ್ರಾಹ್ಮಣರನ್ನು ನಮಿಸೋಣ. ಅಂತಹ ಬ್ರಾಹ್ಮಣರೇ ದೇವತಾಸದೃಶರು.
ತೇಷು ವಿಶ್ವಮಿದಂ ಭೂತಂ ಸಾಗ್ರಂ ಚ ಜಗದಾಹಿತಮ್ |
ತೇಷಾಂ ಮಾಹಾತ್ಮ್ಯಭಾವಸ್ಯ ಸದೃಶಂ ನಾಸ್ತಿ ಕಿಂಚನ ॥24॥
ಅಂತಹ ವ್ಯಕ್ತಿಗಳಲ್ಲಿ ಈ ವಿಶ್ವ, ಜಗತ್ತು, ಸಕಲ ಪ್ರಾಣಿಗಳು ಸನ್ನಿಹಿತರಾಗಿದ್ದಾರೆ. ಭಗವಂತನನ್ನೇ ಧರಿಸಿರುವುದರಿಂದ ಎಲ್ಲವೂ ಅವನಲ್ಲಿದೆ ಎನ್ನಬಹುದು. ಅವನ ಮಾಹಾತ್ಮ್ಯಕ್ಕೆ ಸದೃಶವಾದದ್ದು ಬೇರೆ ಯಾವುದೂ ಇರುವುದಿಲ್ಲ.
ಆದಿಂ ತೇ ನಿಧನಂ ಚೈವ ಕರ್ಮ ಚಾತೀತ್ಯ ಸರ್ವಶಃ |
ಚತುರ್ವಿಧಸ್ಯ ಭೂತಸ್ಯ ಸರ್ವಸ್ಯೇಶಾಃ ಸ್ವಯಂಭುವಃ ॥25॥
ಬ್ರಹ್ಮಜ್ಞಾನದಲ್ಲಿಯೇ ರತರಾದವರು ಹುಟ್ಟು-ಸಾವುಗಳ ಬಂಧನವನ್ನು ಪೂರ್ಣವಾಗಿ ದಾಟಿ, ನಾಲ್ಕು ವಿಧ ಪ್ರಾಣಿಗಳಿಗೂ ಅಧಿಪತಿಗಳಾಗಿ ಮೆರೆಯುತ್ತಾರೆ. ಕಾರಣ ಎಲ್ಲರಿಗೂ ಒಡೆಯನಾದವನು ನಾರಾಯಣ ಎಂಬ ತಿಳುವಳಿಕೆಯನ್ನು ಹೊಂದಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ದ್ವಿಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ಮೂರನೆಯ ಅಧ್ಯಾಯ
ಅನೇಕ ಪ್ರಾಣಿಗಳ ವಿಮರ್ಶಾಪೂರ್ವಕವಾದ ಕರ್ಮತತ್ತ್ವದ ವಿವೇಚನೆ. ಯುಗಧರ್ಮದ ವರ್ಣನೆ ಮತ್ತು ಕಾಲನ ಮಹಿಮೆ
ವ್ಯಾಸಃ
ಏಷಾ ಪೂರ್ವತರಾ ವೃತ್ತಿರ್ಬ್ರಹ್ಮಣಸ್ಯ ವಿಧೀಯತೇ |
ಜ್ಞಾನವಾನೇವ ಕರ್ಮಾಣಿ ಕುರ್ವನ್ ಸರ್ವತ್ರ ಸಿದ್ಧ್ಯತಿ ॥1॥
ಶುಕನೇ, ಬ್ರಾಹ್ಮಣನಿಗೆ ಈ ಅಧ್ಯಾಪನವೃತ್ತಿಯು ಬಹಳ ಹಿಂದಿನಿಂದಲೂ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿದೆ. ಜ್ಞಾನನಿಷ್ಠನಾಗಿಯೇ ನಿಷ್ಕಾಮ ಕರ್ಮವನ್ನು ಮಾಡುತ್ತಾ ಎಲ್ಲೆಡೆಯೂ ಸಿದ್ಧಿಯನ್ನು ಹೊಂದುತ್ತಾನೆ.
ತತ್ರ ಚೇನ್ನ ಭವೇದೇವಂ ಸಂಶಯಃ ಕರ್ಮನಿಶ್ಚಯೇ |
ಕಿಂ ನು ಕರ್ಮ ಸ್ವಭಾವೋಽಯಂ ಜ್ಞಾನಕರ್ಮೇತಿ ವಾ ಪುನಃ ॥2॥
ತತ್ರ ವೇದ ವಿವಿತ್ಸಾಯಾಜ್ಞಾನಂ ಚೇತ್ ಪುರುಷಂ ಪ್ರತಿ |
ಉಪಪತ್ತ್ಯುಪಲಬ್ಧಿಭ್ಯಾಂ ವರ್ಣಯಿಷ್ಯಾಮಿ ತಚ್ಛೃಣು ॥3॥
ಕರ್ಮದ ಸ್ವಭಾವವಾಗಲೀ, ಜ್ಞಾನದ ಕರ್ಮವಾಗಲೀ, ಸ್ವಭಾವವಾಗಲೀ ಯಾವುದು ಸಿದ್ಧಿಯನ್ನು ಉಂಟುಮಾಡುತ್ತದೆ ಎಂಬ ವಿಷಯದಲ್ಲಿ ನಿಶ್ಚಯವಿಲ್ಲದಿದ್ದರೆ ವೇದವಿಚಾರ ಮಾಡುವ ಪುರುಷನಿಗೆ ಜ್ಞಾನವು ಉಂಟಾಗುವುದಿಲ್ಲ. ಈ ರೀತಿಯಾಗಿ ಜ್ಞಾನವುಂಟಾಗಿದ್ದರೆ ಉಪಪತ್ತಿ-ಉಪಲಬ್ಧಗಳಿಂದ ಅರ್ಥಾತ್ ಅನುಮಾನ, ಪ್ರತ್ಯಕ್ಷಗಳಿಂದ ಧರ್ಮಜ್ಞಾನವನ್ನು ನಿನಗೆ ವರ್ಣಿಸುತ್ತೇನೆ.
ಪೌರುಷಂ ಕಾರಣಂ ಕೇಚಿದಾಹುಃ ಕರ್ಮಸು ಮಾನವಾಃ |
ದೈವಮೇಕೇ ಪ್ರಶಂಸಂತಿ ಸ್ವಭಾವಂ ಚಾಪರೇ ಜನಾಃ ॥4॥
ಕೆಲವರು ಕರ್ಮಸಿದ್ಧಿಗೆ ಪೌರುಷವೇ ಕಾರಣ ಎನ್ನುತ್ತಾರೆ. ಕೆಲವರು ದೈವವು, ಕೆಲವರು ಸ್ವಭಾವವು ಸಿದ್ಧಿಗೆ ಕಾರಣ ಎಂದು ಅಭಿಪ್ರಾಯಪಡುತ್ತಾರೆ.
ಪೌರುಷಂ ಕರ್ಮ ದೈವಂ ಚ ಫಲವೃತ್ತಿಸ್ವಭಾವತಃ |
ತ್ರಯಮೇತತ್ ಪೃಥಗ್ಭೂತಮವಿವೇಕಂ ತು ಕೇಚನ ॥5॥
ಪೌರುಷ, ಕರ್ಮ, ದೈವ ಈ ಮೂರು ಫಲಪ್ರಾಪ್ತಿಗೆ ಅಪೇಕ್ಷಿತವಾಗಿವೆ. ಕೆಲವರು ಪ್ರತ್ಯೇಕ ಪ್ರತ್ಯೇಕವಾಗಿರುವುದೆಂದು ಮೂರೂ ಸೇರಿ ಕಾರಣವಲ್ಲ ಎನ್ನುವುದು ಸರಿಯಲ್ಲ. ಆದರೆ ಇದು ಅವಿವೇಕಿಗಳ ಜ್ಞಾನವಾಗಿದೆ.
ಏತದೇವಂ ನ ಚಾಪ್ಯೇವಮುಭೇ ಚಾಪಿ ನ ಚಾಪ್ಯುಭೇ |
ಕರ್ಮಸ್ಥಾ ವಿಷಮಂ ಬ್ರೂಯುಃ ಸತ್ತ್ವಸ್ಥಾಃ ಸಮದರ್ಶಿನಃ ॥6॥
ಎಲ್ಲವೂ ಸೇರಿ ಕಾರಣ ಎಂದು ಸಜ್ಜನರು ಹೇಳುತ್ತಾರೆ. ಪುರುಷ ಪ್ರಯತ್ನ ಮತ್ತು ಕರ್ಮ ಇವು ಜಗತ್ತಿಗೆ ಕಾರಣ ಎಂದು ಮೀಮಾಂಸಕರ ಅಭಿಪ್ರಾಯ. ಪುರುಷ ಪ್ರಯತ್ನ, ಕರ್ಮ ಎರಡಲ್ಲ. ಪುರುಷಪ್ರಯತ್ನ ಒಂದೇ ಕಾರಣ ಎನ್ನುವುದು ಚಾರ್ವಾಕರ ಮತ.
ಕರ್ಮಠರಾದವರು ತಮ್ಮ ಮನಸ್ಸಿಗೆ ಯಾವುದು ವಿಷಯವೋ ಅದೇ ಕಾರಣ ಎನ್ನುತ್ತಾರೆ. ಸಾತ್ವಿಕರಾದ ಜ್ಞಾನಿಗಳು, ಸಮದರ್ಶಿಗಳು ಯಥಾರ್ಥವಾಗಿ ಯಾವ ಯಾವುದು ಸಿದ್ಧಿಗೆ ಕಾರಣವೋ ಅದೆಲ್ಲವನ್ನೂ ಅಂಗೀಕರಿಸುತ್ತಾರೆ.
ತ್ರೇತಾಯಾಂ ದ್ವಾಪರೇ ಚೈವ ಕಲಿಜಾಶ್ಚ ಸಸಂಶಯಾಃ |
ತಪಸ್ವಿನಃ ಪ್ರಶಾಂತಾಶ್ಚ ಸತ್ತ್ವಸ್ಥಾಶ್ಚ ಕೃತೇ ಯುಗೇ ॥7॥
ತ್ರೇತಾ, ದ್ವಾಪರ, ಕಲಿಯುಗದಲ್ಲಿ ಜನಿಸಿದ ಜನರು ಈ ವಿಷಯದಲ್ಲಿ ಸಂಶಯ ಉಳ್ಳವರಾಗಿದ್ದಾರೆ. ತಪಸ್ವಿಗಳು, ಪ್ರಶಾಂತಾತ್ಮರು,

ಸತ್ವಗುಣ ಸಂಪನ್ನರು ಕೃತಯುಗದ ಜನರು ಮಾತ್ರ ಆಗಿರುತ್ತಾರೆ.
ಅಪೃಥಗ್ದರ್ಶಿನಃ ಸರ್ವೇ ಋಕ್ಸಾಮಸು ಯಜುಃಷು ಚ |
ಕಾಮದ್ವೇಷೌ ಪೃಥಗ್ ದೃಷ್ಟ್ವಾ ತಪಃ ಕೃತ ಉಪಾಸತೇ ॥8॥
ಸತ್ಯಯುಗ ಎನಿಸಿದ ಕೃತಯುಗದ ಜನರು ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಪ್ರತ್ಯೇಕತೆಯನ್ನು ನೋಡದೆ ಅಖಂಡವಾದ ಒಂದೇ ವೇದ ಎಂದು ಭಾವಿಸಿ ಅಧ್ಯಯನ ಮಾಡುತ್ತಾರೆ. ಕಾಮದ್ವೇಷಗಳನ್ನು ಬಿಟ್ಟು ತಪೋನಿರತರಾಗಿರುತ್ತಾರೆ.
ತಪೋಧರ್ಮೇಣ ಸಂಯುಕ್ತಸ್ತಪೋನಿತ್ಯಃ ಸುಸಂಶಿತಃ |
ತೇನ ಸರ್ವಾನವಾಪ್ನೋತಿ ಕಾಮಾನ್ಯಾನ್ಮನಸೇಚ್ಛತಿ ॥9॥
ತಪೋಧರ್ಮದಿಂದ ಕೂಡಿರುವ ಅವರು ಕಠೋರ ವ್ರತನಿಷ್ಠರಾಗಿ ನಿತ್ಯವೂ ತಪಸ್ಸಿನಲ್ಲಿಯೇ ನಿರತರಾಗಿ ಇರುತ್ತಾ, ತಮ್ಮ ಮನೋವಾಂಛಿತವಾದ ಕಾಮನೆಗಳನ್ನು ಪಡೆದುಕೊಳ್ಳುತ್ತಾರೆ.
ತಪಸಾ ತದವಾಪ್ನೋತಿ ಯದ್ಭೂತ್ವಾ ಸೃಜತೇ ಜಗತ್ |
ಸ ತದ್ಭೂಪಸ್ತತೋ ಸರ್ವೋ ಭೂತಾನಾಂ ಭವತಿ ಪ್ರಭುಃ ॥10॥
ಯಾವ ಜಗತ್ತನ್ನು ಸೃಷ್ಟಿಸುತ್ತಾನೋ ಅಂತಹ ಭಗವಂತನನ್ನು ತಪಸ್ಸಿನಿಂದ ಸಾಧಕನು ಹೊಂದುತ್ತಾನೆ. ಜಗತ್ತಿನ ಸಮಸ್ತವನ್ನು ಸೃಷ್ಟಿಸುವ ರೂಪವುಳ್ಳಂತಹ ಭಗವಂತನು ಸರ್ವ ಎನಿಸಿದ್ದಾನೆ. ಸಮಸ್ತ ಭೂತಗಳಿಗೂ ಸ್ವಾಮಿ ಎನಿಸಿದ್ದಾನೆ.
ವ್ಯಾಖ್ಯಾನ ವಿಶೇಷ ಈ ಪದ್ಯದಿಂದ `ಹರಿಃ ಸರ್ವೋತ್ತಮಃ ಸರ್ವಸೃಷ್ಟೃತ್ವಾತ್, ವ್ಯತಿರೇಕೇಣ ದೇವದತ್ತವತ್' ಎಂಬ ಅನುಮಾನವು ಹೇಳಲ್ಪಟ್ಟಿದೆ.
ತದುಕ್ತಂ ವೇದವಾದೇಷು ಗಹನಂ ವೇದದರ್ಶಿಭಿಃ |
ವೇದಾಂತೇಷು ಪುನರ್ವ್ಯಕ್ತಂ ಕ್ರಮಯೋಗೇನ ಲಕ್ಷ್ಯತೇ ॥11॥
ಸಮಸ್ತ ವೇದಗಳಲ್ಲಿ ಆ ಪರಬ್ರಹ್ಮ ವಸ್ತುವೇ ನಿರೂಪಿಸಲ್ಪಟ್ಟಿದೆ. ಅತ್ಯಂತ ರಹಸ್ಯವಾದ ತತ್ತ್ವವನ್ನು ವೇದಜ್ಞರು ತಿಳಿಯುತ್ತಾರೆ. ಉಪನಿಷತ್ತುಗಳಲ್ಲಿಯೂ ಈ ಭಗವತ್ತತ್ತ್ವವೇ ನಿರೂಪಿತವಾಗಿದೆ. ನಿವೃತ್ತಿಕರ್ಮಯೋಗನಿರತರು ಇದನ್ನು ತಿಳಿದುಕೊಳ್ಳುತ್ತಾರೆ.
ಆಲಂಭಯಜ್ಞಾಃ ಕ್ಷತ್ರಾಶ್ಚ ಹವಿರ್ಯಜ್ಞಾ ವಿಶಃ ಸ್ಮೃತಾಃ |
ಪರಿಚಾರಯಜ್ಞಾಃ ಶೂದ್ರಾಶ್ಚ ಜಪಯಜ್ಞಾ ದ್ವಿಜಾತಯಃ ॥12॥
ಹಿಂಸಾ ಪ್ರಧಾನವಾದ ಯಜ್ಞವುಳ್ಳ ಕ್ಷತ್ರಿಯರು ಪ್ರಾಣಿಗಳನ್ನು ಯಜ್ಞದಲ್ಲಿ ಆಲಂಭನ ಮಾಡುತ್ತಾರೆ. ವೈಶ್ಯರು ಹವಿಸ್ಸೇ ಪ್ರಧಾನವಾದ ಯಜ್ಞವನ್ನು ಮಾಡುತ್ತಾರೆ. ಶೂದ್ರರು ಸೇವಾ ರೂಪವಾದ ಯಜ್ಞವನ್ನು ಮಾಡುತ್ತಾರೆ. ಬ್ರಾಹ್ಮಣರು ಜಪವೇ ಪ್ರಧಾನವಾದ ಯಜ್ಞವನ್ನು ಮಾಡುತ್ತಾರೆ.
ಪರಿನಿಷ್ಠಿತಕಾರ್ಯೋ ಹಿ ಸ್ವಾಧ್ಯಾಯೇನ ದ್ವಿಜೋ ಭವೇತ್ |
ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥13॥
ವಿಹಿತವಾದ ಕರ್ಮವನ್ನೇ ವಿಷ್ಣುಪೂಜೆ ಎಂದು ಆಚರಿಸುವ ಸ್ವಾಧ್ಯಾಯಶೀಲನಾದ ಬ್ರಾಹ್ಮಣನು ದ್ವಿಜ ಎಂದು ಕರೆಸಿಕೊಳ್ಳುತ್ತಾನೆ. ಏನು ಮಾಡಲಿ, ಮಾಡದಿರಲಿ, ಬ್ರಾಹ್ಮಣ್ಯರಕ್ಷಣೆಗೆ ಮೈತ್ರ ಎನಿಸಿದ ಗಾಯತ್ರಿಯೇ ಪ್ರಧಾನವಾಗಿದೆ.
ತ್ರೇತಾದೌ ಸಕಲಾ ವೇದಾ ಯಜ್ಞಾ ವರ್ಣಾಶ್ರಮಾಸ್ತಥಾ |
ಸಂರೋಧಾದಾಯುಷಸ್ತ್ವೇತೇ ವ್ಯಸ್ಯಂತೇ ದ್ವಾಪರೇ ಯುಗೇ ॥14॥
ತ್ರೇತಾಯುಗದ ಆದಿಯಲ್ಲಿ ಅರ್ಥಾತ್ ಕೃತಯುಗದಲ್ಲಿ ವೇದ, ಯಜ್ಞ, ವರ್ಣಾಶ್ರಮಗಳು ಏಕರೂಪವಾಗಿಯೂ ಶುದ್ಧವಾಗಿಯೂ ಇರುತ್ತವೆ. ದ್ವಾಪರ ಯುಗದಲ್ಲಿ ಮನುಷ್ಯನ ಆಯುಷ್ಯವು ಕಡಿಮೆಯಾಗುವುದರಿಂದ ಆ ವೇದಗಳಲ್ಲಿ ಯಜ್ಞ, ವರ್ಣಾಶ್ರಮಗಳ ವಿಭಾಗ ಉಂಟಾಗುತ್ತವೆ.
ದ್ವಾಪರೇ ವಿಪ್ಲವಂ ಯಾಂತಿ ವೇದಾಃ ಕಲಿಯುಗೇ ತಥಾ |
ದೃಶ್ಯಂತೇ ನಾಪಿ ದೃಶ್ಯಂತೇ ಕಲೇರಂತೇ ಪುನಃ ಪುನಃ ॥15॥
ದ್ವಾಪರ, ಕಲಿಯುಗದಲ್ಲಿ ವೇದಗಳು ಪ್ರಾಯಶಃ ಕ್ಷೋಭೆಗೆ ಒಳಗಾಗುತ್ತವೆ. ಕಲಿಯುಗದ ಕೊನೆಯಲ್ಲಿ ಕೆಲವೇ ಸ್ಥಳಗಳಲ್ಲಿ ವೇದಾಧ್ಯಯನವು ಉಳಿದಿರುತ್ತದೆ. ಕೆಲವು ಕಡೆ ವೇದದ ಹೆಸರೂ ಕೇಳಿಸುವುದಿಲ್ಲ.
ಉತ್ಸೀದಂತಿ ಸ್ವಧರ್ಮಾಶ್ಚ ತತ್ರಾಧರ್ಮೇಣ ಪೀಡಿತಾಃ |
ಗವಾಂ ಭೂಮೇಶ್ಚ ಯೇ ಚಾಪಾಮೋಷಧೀನಾಂ ಚ ಯೇ ರಸಾಃ ॥
ಕಲಿಯುಗದ ಕೊನೆಯಲ್ಲಿ ಧರ್ಮವೆಲ್ಲವೂ ನಶಿಸಿಹೋಗಿರುತ್ತದೆ. ಜನರೆಲ್ಲರೂ ಅಧರ್ಮ ವ್ಯವಹಾರದಿಂದ ಕೂಡಿರುತ್ತಾರೆ. ಹಸುಗಳು ಸಮೃದ್ಧವಾಗಿ ಹಾಲು ನೀಡುವುದಿಲ್ಲ. ಭೂಮಿಯಲ್ಲಿ ಪೈರು-ಪಚ್ಚೆಗಳು ಉದಿಸುವುದಿಲ್ಲ. ಓಷಧಿಗಳಲ್ಲಿ ಸತ್ತ್ವ ಇರುವುದಿಲ್ಲ. ಎಲ್ಲವೂ ಕ್ಷೀಣವಾಗಿರುತ್ತವೆ.
ಅಧರ್ಮಾಂತರ್ಹಿತಾ ವೇದಾ ವೇದಧರ್ಮಾಸ್ತಥಾಶ್ರಮಾಃ |
ವಿಕ್ರಿಯಂತೇ ಸ್ವಧರ್ಮಸ್ಥಾಃ ಸ್ಥಾವರಾಣಿ ಚರಾಣಿ ಚ ॥17॥
ಕಲಿಯುಗದಲ್ಲಿ ಅಧರ್ಮದಿಂದ ವೇದ, ವೈದಿಕ ಧರ್ಮ, ಕರ್ಮ, ಆಶ್ರಮ ಧರ್ಮಗಳೆಲ್ಲ ನಶಿಸಿ ಹೋಗುತ್ತವೆ. ಸ್ವಧರ್ಮನಿಷ್ಠರು, ಚರಾಚರ ಪ್ರಾಣಿಗಳು ತಮ್ಮ ಮನೋಭಾವಕ್ಕೆ ವಿರುದ್ಧವಾದ ಧರ್ಮವನ್ನು ಹೊಂದಿರುತ್ತಾರೆ. ಧರ್ಮವು ವಿಕಾರವನ್ನು ಹೊಂದುತ್ತದೆ.

ಯಥಾ ಸರ್ವಾಣಿ ಭೂತಾನಿ ವೃಷ್ಟಿರ್ಭೌಮಾನಿ ವರ್ಷತಿ |
ಸೃಜತೇ ಸರ್ವತೋಽಂಗಾನಿ ತಥಾ ವೇದಾ ಯುಗೇ ಯುಗೇ ॥18॥
ಯಾವ ರೀತಿ ಪರ್ಜನ್ಯನು ಆಯಾ ಕಾಲದಲ್ಲಿ ಮಳೆಯನ್ನು ಸುರಿಸುತ್ತಾ, ಭೂಮಿಯಲ್ಲಿರುವ ಸಮಸ್ತ ಪ್ರಾಣಿಗಳನ್ನು ರಕ್ಷಿಸಿ

ಪುಷ್ಟಿಯನ್ನು ತುಂಬುತ್ತಾನೋ ಅದರಂತೆ ವೇದಗಳು ಪ್ರತಿಯೊಂದು ವಿಧದಲ್ಲಿಯೂ ಷಡಂಗಗಳಿಂದ ಸಹಿತವಾಗಿ ಧಾರ್ಮಿಕ ಪುಷ್ಟಿಯನ್ನು ತುಂಬುತ್ತವೆ.
ವಿಸೃತಂ ಕಾಲನಾನಾತ್ವಮನಾದಿನಿಧನಂ ಚ ಯತ್ |
ಕೀರ್ತಿತಂ ತತ್ ಪುರಸ್ತಾನ್ಮೇ ಯತಃ ಸಂಯಾಂತಿ ಯಾಂತಿ ಚ ॥19॥
ಕಾಲದಲ್ಲಿ ಅನೇಕ ಬಗೆಗಳಿವೆ ಎಂಬುದು ನಿಶ್ಚಿತವಾಗಿದೆ. ಆದ್ಯಂತವಿಲ್ಲದ್ದು ಕಾಲವು. ಕಾಲವೇ ಪ್ರಜೆಗಳನ್ನು ಸೃಷ್ಟಿಸುತ್ತದೆ ಮತ್ತು ಸಂಹರಿಸುತ್ತದೆ. ಈ ವಿಷಯವನ್ನು ಹಿಂದೆ ತಿಳಿಸಲಾಗಿದೆ. ಇಲ್ಲಿ ಕಾಲವೆಂದರೆ ಕಾಲನಿಯಾಮಕನಾದ ಭಗವಂತ ಎಂದು ಅರ್ಥ.
ಧಾತೇದಂ ಪ್ರಭವಸ್ಥಾನಂ ಭೂತಾನಾಂ ಸಂಯಮೋ ಯಮಃ |
ಸ್ವಭಾವೇನ ಪ್ರವರ್ತಂತೇ ದ್ವಂದ್ವಸೃಷ್ಟಾನಿ ಭೂರಿಶಃ ॥20॥
ಭಗವಂತನೇ ಈ ಪ್ರಾಣಿಗಳ ಉತ್ಪತ್ತಿಗೆ, ಪಾಲನೆಗೆ, ಸಂಹಾರಕ್ಕೆ, ನಿಯಂತ್ರಣಕ್ಕೆ ಕಾರಣನಾಗಿದ್ದಾನೆ. ಸ್ತ್ರೀ-ಪುರುಷ ಎಂಬ ವಿಭಾಗದಿಂದ ಹುಟ್ಟಿದ ಎಲ್ಲಾ ಪ್ರಾಣಿಗಳು ಸಹಜವಾಗಿ ಕಾಲನ ನಿಯಮನಕ್ಕೆ ಒಳಪಟ್ಟು ನಡೆಯುತ್ತವೆ.
ಸರ್ಗಃ ಕಾಲೋ ಧೃತಿರ್ವೇದಾಃ ಕರ್ತಾ ಕಾರ್ಯಂ ಕ್ರಿಯಾ ಫಲಮ್ |
ಏತತ್ತೇ ಕಥಿತಂ ತಾತ ಯನ್ಮಾಂ ತ್ವಂ ಪರಿಪೃಚ್ಛಸಿ ॥21॥
ಶುಕನೇ, ನಿನ್ನ ಪ್ರಶ್ನೆಗನುಗುಣವಾಗಿ ಸೃಷ್ಟಿ, ಕಾಲ, ವೇದ, ಕರ್ತೃ, ಕಾರ್ಯ, ಕರ್ಮಫಲ ಇವುಗಳನ್ನು ತಿಳಿಸಿದ್ದೇನೆ. ಇನ್ನೂ ಏನನ್ನು ಕೇಳಬಯಸುವಿ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ನಾಲ್ಕನೆಯ ಅಧ್ಯಾಯ
ಜ್ಞಾನಸಾಧನೆ ಮತ್ತು ಅದರ ಮಹತ್ವ.
ಭೀಷ್ಮಃ
ಇತ್ಯುಕ್ತೋಭಿಪ್ರಶಂಸ್ಯೈತತ್ ಪರಮರ್ಷೇಸ್ತು ಶಾಸನಮ್ |
ಮೋಕ್ಷಧರ್ಮಾರ್ಥಸಂಯುಕ್ತಮಿದಂ ಪ್ರಷ್ಟುಂ ಪ್ರಚಕ್ರಮೇ ॥1॥
ಯುಧಿಷ್ಠಿರನೇ, ಪರಮರ್ಷಿಗಳಾದ ವೇದವ್ಯಾಸರು ಶುಕಮುನಿಯನ್ನು ಕುರಿತು ಹೀಗೆ ಉಪದೇಶಿಸಿದ ನಂತರ, ಅವರ ನಿರ್ದೇಶನವನ್ನು ಆಧರಿಸಿ ಮೋಕ್ಷ ಧರ್ಮಗಳ ಅರ್ಥದಿಂದ ಕೂಡಿದ ಪ್ರಶ್ನೆಗಳನ್ನು ಕೇಳಲು ಶುಕಮುನಿಯು ಉಪಕ್ರಮಿಸಿದನು.
ಶುಕಃ
ಪ್ರಜಾವಾನ್ ಶ್ರೋತ್ರಿಯೋ ಯಜ್ವಾ ವೃದ್ಧಃ ಪ್ರಜ್ಞೋಽನಸೂಯಕಃ |
ಅನಾಗತಮನೈತಿಹ್ಯಂ ಕಥಂ ಬ್ರಹ್ಮಾಧಿಗಚ್ಛತಿ ॥2॥
ತಂದೆಯೇ, ಪ್ರಜಾವಂತನು, ಶ್ರೋತ್ರಿಯನು, ಯಾಜ್ಞಕನು, ಹಿರಿಯನು, ಪ್ರಜಾವಂತನು, ಮಾತ್ಸರ್ಯ ಇಲ್ಲದವನು ಇಂತಹ ವ್ಯಕ್ತಿಯು ಬ್ರಹ್ಮಸ್ವರೂಪವನ್ನು ಹೇಗೆ ತಿಳಿಯಬೇಕು? ಬ್ರಹ್ಮನು ಪ್ರತ್ಯಕ್ಷಗೋಚರನಾಗುವುದಿಲ್ಲ. ಯುಕ್ತಿಗೂ ಗೋಚರಿಸುವುದಿಲ್ಲ. ವೇದಗಳಿಂದಲೂ ಹೀಗೇ ಎಂದು ನಿರೂಪಿಸಲಾಗದ ಬ್ರಹ್ಮನನ್ನು ತಿಳಿಯುವ ಬಗೆ ಹೇಗೆ?
ತಪಸಾ ಬ್ರಹ್ಮಚರ್ಯೇಣ ಸರ್ವತ್ಯಾಗೇನ ಮೇಧಯಾ |
ಸಾಂಖ್ಯೇ ವಾ ಯದಿ ವಾ ಯೋಗೇ ಏತತ್ ಪೃಷ್ಟೋಽಭಿಧತ್ಸ್ವ ಮೇ ॥
ಆ ಬ್ರಹ್ಮನನ್ನು ತಪಸ್ಸಿನಿಂದ ತಿಳಿಯಬೇಕೋ ಅಥವಾ ಬ್ರಹ್ಮಚರ್ಯದಿಂದ ತಿಳಿಯಬೇಕೋ? ಸರ್ವಸ್ವವನ್ನು ತ್ಯಾಗ ಮಾಡುವುದರಿಂದಲೋ, ಮೇಧಾಶಕ್ತಿಯಿಂದಲೋ, ಸಾಂಖ್ಯಶಾಸ್ತ್ರಗಳಿಂದಲೋ, ಯೋಗಶಾಸ್ತ್ರದಿಂದಲೋ, ಹೇಗೆ ತಿಳಿಯಬೇಕೆಂದು ಪ್ರಶ್ನಿಸುತ್ತಿರುವ ನನಗೆ ಹೇಳು.
ಮನಸಶ್ಚೇಂದ್ರಿಯಾಣಾಂ ಚಾಪ್ಯೈಕಾಗ್ರ್ಯಂ ಸಮವಾಪ್ಯತೇ |
ಯೇನೋಪಾಯೇನ ಪುರುಷೈಸ್ತಚ್ಚ ವ್ಯಾಖ್ಯಾತುಮರ್ಹಸಿ ॥4॥
ಪುರುಷನು ಯಾವ ಉಪಾಯದಿಂದ ಮನಸ್ಸಿಗೂ ಇಂದ್ರಿಯಗಳಿಗೂ ಏಕಾಗ್ರತೆಯನ್ನು ಸಾಧಿಸಿಕೊಳ್ಳಬಲ್ಲನು? ಇದನ್ನೂ ತಿಳಿಸಲು ಅರ್ಹನಾಗಿರುತ್ತಿ.
ವ್ಯಾಸಃ
ನಾನ್ಯತ್ರ ವಿದ್ಯಾತಪಸೋರ್ನಾನ್ಯತ್ರೇಂದ್ರಿಯನಿಗ್ರಹಾತ್ |
ನಾನ್ಯತ್ರ ಸರ್ವಸಂತ್ಯಾಗಾತ್ ಸಿದ್ಧಿಂ ವಿಂದತಿ ಕಶ್ಚನ ॥5॥
ಮಗನೇ, ವಿದ್ಯೆ, ತಪಸ್ಸು, ಇಂದ್ರಿಯನಿಗ್ರಹ, ಲೋಭವಿಲ್ಲದಿರುವಿಕೆ ಇವುಗಳಿಲ್ಲದಿದ್ದರೆ ಬೇರೆ ಯಾವುದರಿಂದಲೂ ಮನುಷ್ಯನು ಸಿದ್ಧಿಯನ್ನು ಹೊಂದಲಾರನು.
ಮಹಾಭೂತಾನಿ ಸರ್ವಾಣಿ ಪೂರ್ವಸೃಷ್ಟಿಃ ಸ್ವಯಂಭುವಃ |
ಭೂಯಿಷ್ಠಂ ಪ್ರಾಣಭೃದ್ ವಾಮೇ ನಿವಿಷ್ಟಾನಿ ಶರೀರಿಷು ॥6॥
ಪಂಚಮಹಾಭೂತವು ಬ್ರಹ್ಮನಿಂದ ಮೊದಲು ಸೃಷ್ಟಿಗೊಂಡಿವೆ. ಪ್ರತೀ ದೇಹವನ್ನು ಧರಿಸಿದ ಶರೀರದಲ್ಲಿಯೂ ಪಂಚಭೂತಗಳ ಅಂಶವು ನೆಲೆಸಿವೆ.
ಭೂಮೇರ್ದೇಹೋ ಜಲಾತ್ ಸಾರೋ ಜ್ಯೋತಿಷಶ್ಚಕ್ಷುಷೀ ಸ್ಮೃತೇ |

ಪ್ರಾಣಾಪಾನಾಶ್ರಯೋ ವಾಯುಃ ಖೇಷ್ವಾಕಾಶಂ ಶರೀರಿಣಾಮ್ ॥7॥
ಪ್ರಾಣಿಗಳ ದೇಹಗಳು ಭೂಮಿಯಿಂದಲೂ, ಅವುಗಳ ಉದರವು ಜಲದಿಂದಲೂ, ಕಣ್ಣುಗಳು ತೇಜಸ್ಸಿನಿಂದಲೂ, ಪ್ರಾಣಾಪಾನಾದಿ ವಾಯುವು ವಾಯುವಿನಿಂದಲೂ, ಕಿವಿಗಳೇ ಮೊದಲಾದ ರಂಧ್ರಗಳು ಉಂಟಾಗಿದೆ.
ಕ್ರಾಂತೇ ವಿಷ್ಣುರ್ಬಲೇ ಶಕ್ರಃ ಕೋಷ್ಠೇಽಗ್ನಿರ್ಭುಕ್ತಮರ್ಛತಿ ।
ಕರ್ಣಯೋಃ ಪ್ರದಿಶಃ ಶ್ರೋತ್ರೇ ಜಿಹ್ವಾಯಾಂ ವಾಕ್ ಸರಸ್ವತೀ ॥8॥
ಅದರಂತೆ ಸಮಸ್ತ ಪ್ರಾಣಿಗಳ ಪಾದದಲ್ಲಿ ವಿಷ್ಣುವು, ಕೈಯಲ್ಲಿ ಇಂದ್ರನು, ಉದರದಲ್ಲಿ ಅಗ್ನಿಯು, ಕಿವಿಗಳಲ್ಲಿ ದಿಗ್ದೇವತೆಯು, ನಾಲಿಗೆಯಲ್ಲಿ ಸರಸ್ವತಿಯು ಅಭಿಮಾನಿ ದೇವತೆಗಳಾಗಿ ನೆಲೆಸಿರುತ್ತಾರೆ.
ಕರ್ಣೌ ತ್ವಕ್ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ ।
ದರ್ಶನಾನೀಂದ್ರಿಯೋಕ್ತಾನಿ ದ್ವಾರಾಣ್ಯಾಹಾರಸಿದ್ಧಯೇ ॥9॥
ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಕ್ ಎಂಬ ಈ ಐದು ಆಯಾ ವಿಷಯಗಳನ್ನು ಗ್ರಹಿಸುತ್ತವೆ. ಆದ್ದರಿಂದ ಇವುಗಳನ್ನು ಜ್ಞಾನೇಂದ್ರಿಯಗಳೆಂದು ಕರೆಯುತ್ತಾರೆ.
ಶಬ್ದಂ ಸ್ಪರ್ಶಂ ತಥಾ ರೂಪಂ ರಸಂ ಗಂಧಂ ಚ ಪಂಚಮಮ್ ।
ಇಂದ್ರಿಯಾಣಿ ಪೃಥಕ್ತ್ವರ್ಥಾನ್ಮನಸೋ ದರ್ಶಯಂತ್ಯುತ ॥10॥
ಇವು ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ಇಂದ್ರಿಯಾರ್ಥಗಳು ಎಂದು ಕರೆಯಲ್ಪಟ್ಟಿವೆ. ಇವುಗಳು ಇಂದ್ರಿಯಗಳಿಗಿಂತಲೂ ಪ್ರತ್ಯೇಕವಾಗಿದ್ದು, ಮನಸ್ಸಿಗೆ ವಿಷಯಗಳನ್ನು ತೋರಿಸುತ್ತವೆ.
ಇಂದ್ರಿಯಾಣಿ ಮನೋ ಯುಂಕ್ತೇ ವಶ್ಯಾನ್ಯಂತೇವ ವಾಜಿನಃ ।
ಮನಶ್ಚಾಪಿ ಸದಾ ಯುಂಕ್ತೇ ಭೂತಾತ್ಮಾ ಹೃದಯಾಶ್ರಿತಃ ॥11॥
ಮನಸ್ಸು ಇಂದ್ರಿಯಗಳನ್ನು ನಿಯಮಿಸುತ್ತದೆ. ಆ ಮನಸ್ಸು ಸಾರಥಿಯು ತನ್ನ ಇಷ್ಟ ಬಂದ ಕಡೆ ಕುದುರೆಗಳನ್ನು ನಡೆಸುವ ಹಾಗೆ ಬೇಕಾದಲ್ಲಿ ಇಂದ್ರಿಯಗಳನ್ನು ಕರೆದೊಯ್ಯುತ್ತದೆ. ಈ ಮನಸ್ಸೂ ಕೂಡ ಹೃದಯನ್ನಾಶ್ರಯಿಸಿರುವ ಬುದ್ಧಿಯನ್ನು ಅವಲಂಬಿಸಿಕೊಂಡಿದೆ.
ಇಂದ್ರಿಯಾಣಾಂ ತಥೈವೇಷಾಂ ಸರ್ವೇಷಾಮೀಶ್ವರಂ ಮನಃ ।
ನಿಯಮೇ ಚ ವಿಸರ್ಗೇ ಚ ಭೂತಾತ್ಮಾ ಮನಸಸ್ತಥಾ ॥12॥
ಮನಸ್ಸಿಗೆ ಸಮಸ್ತ ಇಂದ್ರಿಯಗಳನ್ನು, ಇಂದ್ರಿಯಾರ್ಥಗಳನ್ನು ನೇಮಿಸುವುದರಲ್ಲಿ, ನಡೆಸುವುದರಲ್ಲಿ ಪ್ರಭುತ್ವವು ಇರುತ್ತದೆ.
ಇಂದ್ರಿಯಾಣೀಂದ್ರಿಯಾರ್ಥಾಶ್ಚ ಸ್ವಭಾವಶ್ಚೇತನಾ ಮನಃ ।
ಪ್ರಾಣಾಪಾನೌ ಚ ಜೀವಶ್ಚ ನಿತ್ಯಂ ದೇಹೇಷು ದೇಹಿನಾಮ್ ॥13॥
ಇಂದ್ರಿಯಗಳು, ಇಂದ್ರಿಯಾರ್ಥಗಳು, ಸ್ವಭಾವ, ಬುದ್ಧಿ, ಚೇತನ, ಮನಸ್ಸು, ಪ್ರಾಣ, ಅಪಾನ, ಜೀವ ಇವೆಲ್ಲವೂ ದೇಹಧಾರಿಗಳಲ್ಲಿ ನಿತ್ಯವೂ ನೆಲೆಗೊಂಡಿವೆ.
ಆಶ್ರಯೋಽನ್ಯೋಽಸ್ತಿ ಸತ್ತ್ವಸ್ಯ ಗುಣಃ ಸತ್ತ್ವಸ್ಯ ಚೇತನಾ ।
ಸತ್ತ್ವಂ ಹಿ ತೇಜಃ ಸೃಜತಿ ನ ಗುಣಾನ್ ವೈ ಕದಾಚನ ॥14॥
ದೇಹಕ್ಕೆ ನಿಜವಾದ ನೆಲೆ ಎಂಬುದು ಇರುವುದಿಲ್ಲ. ಆದ್ದರಿಂದ ದೇಹವೆಂಬುದು ಆತ್ಮಕ್ಕೆ ಆಶ್ರಯವೆನಿಸಲಾರದು. ಕಣ್ಣಿಗೆ ಕಾಣದಿರುವ ಭಗವಂತನೇ ಈ ಪ್ರಾಣಿ ಸಮೂಹಕ್ಕೆ ಆಶ್ರಯನಾಗಿದ್ದಾನೆ. ಮೇಲೆ ಹೇಳಿದ ಗುಣಗಳೆಲ್ಲವೂ ಬುದ್ಧಿಯ ವೃತ್ತಿಗಳೆನಿಸಿವೆ. ಜೀವನಲ್ಲಿರುವ ಸತ್ತ್ವವೇ ದರ್ಶನ, ಸ್ಪರ್ಶನಾದಿ ಸಾಮರ್ಥ್ಯವನ್ನು ಜೀವನಿಗೆ ಉಂಟುಮಾಡುತ್ತದೆ. ಆದರೆ ಸತ್ತ್ವವೆನಿಸಿದ ಬುದ್ಧಿಯು ರೂಪಾದಿ ಗುಣಗಳನ್ನು, ಸತ್ತ್ವಾದಿ ಗುಣಗಳನ್ನು ಯಾವ ರೀತಿಯಲ್ಲಿಯೂ ಸೃಷ್ಟಿಸಲು ಸಮರ್ಥವಾಗುವುದಿಲ್ಲ.
ಏವಂ ಸಪ್ತದಶಂ ದೇಹೇ ವೃತಂ ಷೋಡಶಭಿರ್ಗುಣೈಃ ।
ಮನೀಷೀ ಮನಸಾ ವಿಪ್ರಾಃ ಪಶ್ಯತ್ಯಾತ್ಮಾನಮಾತ್ಮನಿ ॥15॥
ಹೀಗೆ ಏಕಾದಶ ಇಂದ್ರಿಯಗಳು, ಪಂಚಮಹಾಭೂತಗಳು ಇವುಗಳಿಂದ ಕೂಡಿದ ಜ್ಞಾನಿಯಾದವನು ಈ ದೇಹವು ಪರಮಾತ್ಮನ ಆಧಾರದಿಂದ ನೆಲೆಸಿದೆ ಎನ್ನುವುದನ್ನು ಮನಸ್ಸಿನಿಂದ, ತಾನೂ ತನ್ನ ದೇಹವು ಭಗವಂತನ ಆಧಾರದಲ್ಲಿದೆ ಎಂದು ತಿಳಿದುಕೊಳ್ಳುತ್ತಾನೆ.
ನ ಹ್ಯಯಂ ಚಕ್ಷುಷಾ ದೃಶ್ಯೋ ನ ಚ ಸರ್ವೈರಪೀಂದ್ರಿಯೈಃ ।
ಮನಸಾ ಸಂಪ್ರದೀಪ್ತೇನ ಮಹಾನಾತ್ಮಾ ಪ್ರಕಾಶತೇ ॥16॥
ಈ ಪರಮಾತ್ಮನನ್ನು ಕಣ್ಣುಗಳಿಂದಾಗಲೀ, ಇತರ ಇಂದ್ರಿಯಗಳಿಂದಾಗಲೀ ನೋಡಲಾಗುವುದಿಲ್ಲ. ತಿಳಿಯಲೂ ಸಾಧ್ಯವಿಲ್ಲ. ಮಹಾತ್ಮನಾದ ಪರಮಾತ್ಮನು ಶುದ್ಧವಾದ ಮನೋರೂಪವಾದ ದೀಪದಿಂದ ಬುದ್ಧಿಯಲ್ಲಿ ಪ್ರಕಾಶಿಸುತ್ತಾನೆ.
ಅಶಬ್ದಸ್ಪರ್ಶರೂಪಂ ತದರಸಾಗಂಧಮವ್ಯಯಮ್ ।
ಅಶರೀರಂ ಶರೀರೇ ಸ್ವೇ ನಿರೀಕ್ಷೇತ ನಿರಿಂದ್ರಿಯಮ್ ॥17॥
ಭಗವಂತನಾದರೂ ಪ್ರಾಕೃತವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಂದ ರಹಿತನಾಗಿದ್ದಾನೆ. ಅವಿಕಾರಿಯಾಗಿದ್ದಾನೆ. ಪ್ರಾಕೃತವಾದ ಶರೀರದಿಂದಲೂ, ಇಂದ್ರಿಯಗಳಿಂದಲೂ ರಹಿತನಾಗಿದ್ದಾನೆ. ಹೀಗಿದ್ದರೂ ಅಂತಹ ಭಗವಂತನನ್ನು ನಮ್ಮ ಶರೀರದಲ್ಲಿಯೇ ಚಿಂತಿಸಬೇಕು.
ಅವ್ಯಕ್ತಂ ವ್ಯಕ್ತದೇಹೇಷು ಮರ್ತ್ಯೇಷ್ವಮರಮಾಶ್ರಿತಮ್ ।
ಯೋಽನುಪಶ್ಯತಿ ಸ ಪ್ರೇತ್ಯ ಕಲ್ಪತೇ ಬ್ರಹ್ಮಭೂಯಸೇ ॥18॥
ಪರಮಾತ್ಮನು ಮರಣಶೀಲರಾದ ಸಮಸ್ತ ಜೀವರ ದೇಹವನ್ನೇ ಆಧಾರವಾಗಿರಿಸಿಕೊಂಡು ಅವ್ಯಕ್ತನಾಗಿ ಇದ್ದಾನೆ. ಇವನನ್ನು ಜ್ಞಾನದ

ದೃಷ್ಟಿಯಿಂದ ನಿರಂತರ ಯಾವನು ನೋಡುತ್ತಾನೋ ಅವನು ಮರಣದ ಬಳಿಕ ಆ ಬ್ರಹ್ಮನ ಪಾದವನ್ನೇ ಸೇರುತ್ತಾನೆ.
ವಿದ್ಯಾಭಿಜನಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ |
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥19॥
ವಿದ್ಯೆಯಿಂದಲೂ, ಸತ್ಕುಲದಿಂದಲೂ ಸಂಪನ್ನನಾಗಿರುವ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ನಾಯಿ ಮಾಂಸವನ್ನು ತಿನ್ನುವವನಲ್ಲಿಯೂ ಪಂಡಿತರಾದವರು ಎಲ್ಲೆಡೆಯೂ ನಾರಾಯಣನನ್ನೇ ನೋಡುತ್ತಾರೆ.

ಸ ಹಿ ಸರ್ವೇಷು ಭೂತೇಷು ಜಂಗಮೇಷು ಧ್ರುವೇಷು ಚ |
ವಸತ್ಯೇಕೋ ಮಹಾನಾತ್ಮಾ ಯೇನ ಸರ್ವಮಿದಂ ತತಮ್ ॥20॥
ಆ ಪರಮಾತ್ಮನಾದರೂ ಸಮಸ್ತ ಪ್ರಾಣಿಗಳಲ್ಲಿಯೂ, ಶಾಶ್ವತವಾದ ಸ್ಥಾವರ-ಜಂಗಮಗಳಲ್ಲಿಯೂ ವಾಸಿಸುತ್ತಿದ್ದಾನೆ. ಅವನೊಬ್ಬನೇ ಪರಮ ಚೇತನನು. ಅವನಿಂದಲೇ ಜಗತ್ತೆಲ್ಲವೂ ವ್ಯಾಪ್ತವಾಗಿದೆ.
ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ |
ಯದಾ ಪಶ್ಯತಿ ಭೂತಾತ್ಮಾ ಬ್ರಹ್ಮ ಸಂಪದ್ಯತೇ ತದಾ ॥21॥
ಯಾವನು ಪರಮಾತ್ಮನನ್ನು ಸಮಸ್ತ ಪ್ರಾಣಿಗಳ ಅಂತರ್ಯಾಮಿ ಎಂದು, ಸಮಸ್ತ ಪ್ರಾಣಿಗಳು ಭಗವಂತನ ಹೃದಯದಲ್ಲಿದ್ದಾರೆಂದು ಚಿಂತಿಸುತ್ತಾನೋ ಅಂತಹ ಚೇತನನು ಪರಬ್ರಹ್ಮನನ್ನು ಹೊಂದುತ್ತಾನೆ.
ಯಾವಾನಾತ್ಮನಿ ವೇದಾತ್ಮಾ ತಾವಾನಾತ್ಮಾ ಪರಾತ್ಮನಿ |
ಯ ಏವಂ ಸತತಂ ವೇದ ಸೋಽಮೃತತ್ವಾಯ ಕಲ್ಪತೇ ॥22॥
ನಮ್ಮ ಹೃದಯದಲ್ಲಿ ಜ್ಞಾನಸ್ವರೂಪಿಯಾದ ಯಾವ ಭಗವಂತನಿದ್ದಾನೋ, ಅವನೇ ಇತರರ ಹೃದಯಗುಹೆಯಲ್ಲಿಯೂ ನೆಲೆಸಿದ್ದಾನೆ ಎಂದು ತಿಳಿದವನು ಅಮೃತತತ್ತ್ವವನ್ನು ಹೊಂದಲು ಸಮರ್ಥನಾಗುತ್ತಾನೆ.
ವ್ಯಾಖ್ಯಾನ ವಿಶೇಷ ಯಾರು ಎಷ್ಟು ಎಷ್ಟು ವೇದಾಭ್ಯಾಸವನ್ನು ಮಾಡುತ್ತಾರೋ ಅಷ್ಟು ಅಷ್ಟು ಅವರಿಗೆ ಪರಮಾತ್ಮನಿಗೂ ಅವನಿಗೂ ಇರುವ ಭೇದ ಬುದ್ಧಿಯು ನಿವಾರಣೆಯಾಗುತ್ತದೆ ಎಂದು ಭಾವ.
ಸರ್ವಭೂತಾತ್ಮಭೂತಸ್ಯ ಸರ್ವಭೂತಹಿತಸ್ಯ ಚ |
ದೇವಾಪಿ ಮಾರ್ಗೇ ಮುಹ್ಯಂತಿ ಅಪದಸ್ಯ ಪದೈಷಿಣಃ ॥23॥
ಎಲ್ಲ ಪ್ರಾಣಿಗಳ ಅಂತರ್ಯಾಮಿಯಾಗಿ ನಿಂತಿರುವ, ಸಮಸ್ತ ಭೂತಗಳ ಹಿತಚಿಂತಕನಾದ, ಪ್ರಾಕೃತದೇಹರಹಿತನಾದ ಭಗವಂತನನ್ನು ಹೊಂದಲು ಬಯಸುವ ದೇವತೆಗಳೂ ಕೂಡ ಮೋಹಕ್ಕೆ ತುತ್ತಾಗುತ್ತಾರೆ.
ಶಕುನೀನಾಮಿವಾಕಾಶೇ ಜಲೇ ವಾರಿಚರಸ್ಯ ವಾ |
ಯಥಾ ಗತಿರ್ನ ದೃಶ್ಯೇತ ತಥೈವ ಸುಮಹಾತ್ಮನಃ ॥24॥
ಆಕಾಶದಲ್ಲಿ ಹಾರಾಡುವ ಪಕ್ಷಿಗಳ ಪಾದಚಿಹ್ನೆಗಳು ಹೇಗೆ ಕಾಣಿಸುವುದಿಲ್ಲವೋ, ನೀರಿನಲ್ಲಿ ಸಂಚರಿಸುವ ಜಲಚರಪ್ರಾಣಿಗಳ ಪಾದಚಿಹ್ನೆಗಳು ಹೇಗೆ ಗೋಚರಿಸುವುದಿಲ್ಲವೋ ಹಾಗೆ ಮಹಾನುಭಾವನಾದ ಭಗವಂತನ ಗತಿಯು ಗೋಚರವಾಗುವುದಿಲ್ಲ.
ಕಾಲಃ ಪಚತಿ ಭೂತಾನಿ ಸರ್ವಾಣ್ಯೇವಾತ್ಮನಾತ್ಮನಿ |
ಯಸ್ಮಿಂಸ್ತು ಪಚ್ಯತೇ ಕಾಲಸ್ತಂ ನ ವೇದೇಹ ಕಶ್ಚನ ॥25॥
ಮೃತ್ಯುದೇವನು ಸಮಸ್ತ ಪ್ರಾಣಿಗಳನ್ನು ತನ್ನಲ್ಲಿರಿಸಿಕೊಂಡು ಪಾಕ ಮಾಡುತ್ತಾನೆ. ಅಂತಹ ಕಾಲನನ್ನು ಪಾಕ ಮಾಡುವವನು ಭಗವಂತನು. ಇವನನ್ನು ಇಲ್ಲಿ ತಿಳಿದವರು ಯಾರೂ ಇರುವುದಿಲ್ಲ.
ನ ತದೂರ್ಧ್ವಂ ನ ತಿರ್ಯಕ್ಚ ನಾಧೋ ನ ಚ ತಿರಃ ಪುನಃ |
ನ ಮಧ್ಯೇ ಪ್ರತಿಗೃಹ್ಣೀತೇ ನೈವ ಕಶ್ಚಿತ್ ಕುತಶ್ಚನ ॥26॥
ಆ ಪರಮಾತ್ಮನನ್ನು ಮೇಲೆ, ಕೆಳಗೆ, ಆಚೆ, ಈಚೆ, ಮಧ್ಯ, ಯಾವ ಕಡೆಯಿಂದಲೂ ಹಿಡಿಯಲು ಸಾಧ್ಯವಿಲ್ಲ. ಅವನನ್ನು ಈ ಲೋಕದಲ್ಲಿ ಯಾವ ಪುರುಷನು ಎಂದಿಗೂ ಹಿಡಿದಾನು ಎಂದು ಹೇಳಲು ಸಾಧ್ಯವಾಗದು.
ಸರ್ವೇಽಂತಃಸ್ಥಾ ಇಮೇ ಲೋಕಾ ಬಾಹ್ಯಮೇಷಾಂ ನ ಕಿಂಚನ |
ಯಃ ಸಹಸ್ರಂ ಸಮಾಗಚ್ಛೇದ್ಯಥಾ ಬಾಣೋ ಗುಣಚ್ಯುತಃ ॥27॥
ಸಮಸ್ತ ಲೋಕಗಳು ಅವನಲ್ಲಿ ಅಡಕವಾಗಿವೆ. ಈ ಲೋಕಗಳಲ್ಲಿ ಅವನನ್ನು ಬಿಟ್ಟು ಪ್ರತ್ಯೇಕವಾಗಿರುವ ಒಂದು ಲೋಕ ಎಂಬುದಿಲ್ಲ. ಸಿಂಜನಿಯಿಂದ ಬಿಡಲ್ಪಟ್ಟ (ಹೆದೆಯೇರಿಸಿ ಬಿಟ್ಟ) ಬಾಣವು ಎಷ್ಟು ಶೀಘ್ರವಾಗಿ ಚಲಿಸುತ್ತದೋ ಇದರಂತೆ ಈ ಭಗವಂತನು ಸಹಸ್ರಾರು ಲೋಕಗಳನ್ನು ಪ್ರವೇಶಿಸುತ್ತಲೇ ಇದ್ದಾನೆ.
ನೈವಾಂತಂ ಕಾರಣಸ್ಯೇಯಾದ್ಯದ್ಯಪಿ ಸ್ಯಾನ್ಮನೋಜವಃ |
ತಸ್ಮಾತ್ ಸೂಕ್ಷ್ಮಾತ್ ಸೂಕ್ಷ್ಮತರಂ ನಾಸ್ತಿ ಸ್ಥೂಲತರಂ ತತಃ ॥28॥
ಈ ಜಗತ್ತಿಗೆ ಕಾರಣನಾದ ಭಗವಂತನ ಕೊನೆಯನ್ನು ಮುಟ್ಟಲು ಯಾವ ಮನೋವೇಗಕ್ಕೂ ಸಾಧ್ಯವಾಗುವುದಿಲ್ಲ. ಆ ಭಗವಂತನಿಗಿಂತ ಸೂಕ್ಷ್ಮಕ್ಕಿಂತ, ಸೂಕ್ಷ್ಮವಾದ ವಸ್ತುವು ಇನ್ನೊಂದು ಇರುವುದಿಲ್ಲ. ಅವನ ಸ್ಥೂಲಕ್ಕಿಂತ ಮತ್ತೊಂದು ಸ್ಥೂಲತರವಾದ ವಸ್ತುವು ಜಗತ್ತಿನಲ್ಲಿ ಇರುವುದಿಲ್ಲ.
ಸರ್ವತಃಪಾಣಿಪಾದಂ ತತ್ ಸರ್ವತೋಕ್ಷಿಶಿರೋಮುಖಮ್ |
ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥29॥
ಆ ಪರಬ್ರಹ್ಮನ ಸ್ವರೂಪಕ್ಕಾದರೂ ಎಲ್ಲ ಕಡೆಯಲ್ಲಿಯೂ ಕೈ-ಕಾಲುಗಳಿವೆ. ಎಲ್ಲ ಕಡೆಯಲ್ಲಿಯೂ ಕಣ್ಣು, ತಲೆ, ಮುಖ ಮತ್ತು ಕಿವಿಗಳಿವೆ. ಪರಬ್ರಹ್ಮವು ಪ್ರಪಂಚದಲ್ಲಿ ಎಲ್ಲವನ್ನೂ ಆವರಿಸಿ ನಿಂತಿರುವ ಪದಾರ್ಥವೆನಿಸಿದೆ.

ತದೇವಾಣೋರಣುತರಂ ತನ್ಮಹದ್ಭ್ಯೋ ಮಹತ್ತರಮ್ |
ತದಂತಃ ಸರ್ವಭೂತಾನಾಂ ಧ್ರುವಂ ತಿಷ್ಠನ್ನ ದೃಶ್ಯತೇ ॥30॥
ಆ ಪರಬ್ರಹ್ಮ ವಸ್ತುವು ಅಣುವಿಗಿಂತಲೂ ಅಣುವಾದುದು. ಮಹತ್ತಿಗಿಂತಲೂ ಮಹತ್ತರವಾದುದು. ಎಲ್ಲ ಪ್ರಾಣಿಗಳ ಒಳಗೂ ಅದು ನಿಶ್ಚಿತವಾಗಿ ಇದೆ. ಆದರೆ ಯಾರಿಗೂ ತನ್ನ ಇರುವನ್ನು ತೋರುವುದಿಲ್ಲ.
ಅಕ್ಷರಶ್ಚಕ್ಷರಶ್ಚೈವ ದ್ವೈಧೀಭಾವೋಽಯಮಾತ್ಮನಃ |
ಕ್ಷರಃ ಸರ್ವೇಷು ಭೂತೇಷು ದಿವ್ಯಂ ಹ್ಯಮೃತಮಕ್ಷರಮ್ ॥31॥
ಪರಮಾತ್ಮನ ದೆಸೆಯಿಂದ ಜೀವರಿಗೆ ಹೇಗೆ ಭೇದವು ಸತ್ಯವಾಗಿ ಇದೆಯೋ ಅದರಂತೆ ಕ್ಷರ ಮತ್ತು ಅಕ್ಷರ ಎಂದು ಇಬ್ಬರು ಪುರುಷರು ಇದ್ದಾರೆ. ಸಮಸ್ತ ಭೂತಗಳಲ್ಲಿಯೂ ಭಗವಂತನು ಕ್ಷರನಾಮಕನಾಗಿದ್ದಾನೆ. ಮುಕ್ತಾತ್ಮರಲ್ಲಿ ಭಗವಂತನು ಅಕ್ಷರನಾಮಕನಾಗಿ ಇದ್ದಾನೆ.

ನವದ್ವಾರಂ ಪುರಂ ಗತ್ವಾ ಹಂಸೋ ಹಿ ನಿಯತೋ ವಶೀ |
ಈಶಃ ಸರ್ವಸ್ಯ ಭೂತಸ್ಯ ಸ್ಥಾವರಸ್ಯ ಚರಸ್ಯ ಚ ॥32॥
ಚರಾಚರಾದಿ ಸಮಸ್ತ ಪ್ರಾಣಿಗಳಿಗೂ ದೊರೆಯಾದ ಭಗವಂತನು ಎಲ್ಲವನ್ನೂ ತನ್ನಲ್ಲಿ ವಶಪಡಿಸಿಕೊಂಡು, ಒಂಬತ್ತು ದ್ವಾರಗಳಿಂದ ಕೂಡಿರುವ ಶರೀರವೆಂಬ ಪಟ್ಟಣವನ್ನು ಪ್ರವೇಶಿಸಿ, ಹಂಸ ಎಂಬ ಹೆಸರಿನಿಂದ ಆ ಪಟ್ಟಣಕ್ಕೆ ಪ್ರಭುವಾಗಿ ನೆಲೆಸಿದ್ದಾನೆ.
ಪಾತೇನಾಜಂ ವಿಕಲ್ಪಾನಾಂ ನವಾನಾಂ ಸಂಶಯೇನ ಶಯಃ |
ಶರೀರಾಣಾಮಜಸ್ಯಾಹುರ್ಹಂಸತ್ವಂ ಪಾರದರ್ಶಿನಃ॥33॥
ಪರಮಾತ್ಮನು ಜನ್ಮರಹಿತನಾಗಿದ್ದರೂ ಹೊಸ ಹೊಸ ಶರೀರಗಳಿಗೆ ಸಂಬಂಧ ಪಟ್ಟಂತಹ ಉತ್ಪತ್ತಿ-ಸ್ಥಿತಿ-ಲಯಗಳನ್ನು ಮಾಡುತ್ತಾನೋ ಈ ಕಾರಣದಿಂದ ಜ್ಞಾನಿಗಳು ನಾಶರಹಿತನಾದ ಪರಮಾತ್ಮನಿಗೆ ಹಂಸತ್ವವನ್ನು ಹೇಳುತ್ತಾರೆ. `ಅನಹಿಂಸಾಗತಿ' ಎಂಬ ಶಬ್ದದಿಂದ ಗತಿಯುಳ್ಳವನು. ಪ್ರತಿಯೊಂದು ಶರೀರದ ಸಾರಾಸಾರ ವಿವೇಚನೆಯನ್ನು ಮಾಡುತ್ತಾ, ಆಯಾ ಜೀವರಿಗೆ ಅವುಗಳನ್ನು ತಂದೊಡ್ಡುವವನು, ಆಯಾ ಶರೀರದಲ್ಲಿ ಗತಿಯುಳ್ಳವನು ಎಂಬರ್ಥದಲ್ಲಿ ಪಾರದರ್ಶಿಗಳು ಹಂಸತ್ವವನ್ನು ಹೇಳುತ್ತಾರೆ ಎಂದು ಭಾವ.

ಹಂಸೋಕ್ತಂ ಯತ್ ಕ್ಷರಂ ಚೈವ ಕೂಟಸ್ಥಂ ಯತ್ತದಕ್ಷರಮ್ |
ತದ್ ವಿದ್ವಾನಕ್ಷರಂ ಪ್ರಾಪ್ಯ ಜಹಾತಿ ಪ್ರಾಣಜನ್ಮನೀ॥34॥
ಕ್ಷರ ಪುರುಷನಾದ ಜೀವನನ್ನು ಹಂಸ ಎಂದು ಹೇಳುತ್ತಾರೆ. ಇದು ಕೇವಲ ಹೆಸರಿಗೆ ಮಾತ್ರ. ಸಾರಾಸಾರ ವಿವೇಕ ಇಲ್ಲದ ಹಂಸ ಜೀವನಾಗಿದ್ದಾನೆ. ಕೂಟಸ್ಥ ಎನಿಸಿದ ಅಕ್ಷರನಾಮಕನಾದ ಪರಮಾತ್ಮನ ಸ್ವರೂಪವು ವಿಕಾರ ಇಲ್ಲದೆ ಇರುವುದರಿಂದ ಮುಖ್ಯ ಹಂಸ ಎನಿಸಿದೆ. ಅಂತಹ ಅಕ್ಷರನಾಮಕನಾದ ಪರಮಾತ್ಮನನ್ನು ಯಾವನು ಚೆನ್ನಾಗಿ ತಿಳಿದು ಅವನನ್ನು ಹೊಂದುತ್ತಾನೋ ಅವನು ಹುಟ್ಟು-ಸಾವುಗಳಿಂದ ಮುಕ್ತನಾಗುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಬ್ರಹ್ಮಾಧಿಗಮೋಪಾಯವಿಧಿರ್ನಾಮ ಚತುಃಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೈದನೆಯ ಅಧ್ಯಾಯ
ವ್ಯಾಸರು ಶುಕಮುನಿಯನ್ನು ಕುರಿತು ಯೋಗಸ್ವರೂಪವನ್ನು ತಿಳಿಸಿದುದು.
ವ್ಯಾಸಃ
ಪೃಚ್ಛತಸ್ತವ ಸತ್ಪುತ್ರ ಯಥಾವದಿಹ ತತ್ತ್ವತಃ |
ಸಾಂಖ್ಯನ್ಯಾಯೇನ ಸಂಯುಕ್ತಂ ಯದೇತತ್ ಕೀರ್ತಿತಂ ಮಯಾ |
ಯೋಗಕೃತ್ಯಂ ತು ತೇ ಕೃತ್ಸ್ನಂ ವರ್ತಯಿಷ್ಯಾಮಿ ತಚ್ಛೃಣು ॥1॥
ಕುಮಾರನೇ, ಇಲ್ಲಿಯ ತನಕ ನಿನಗೆ ಜ್ಞಾನಿಗಳ ಧರ್ಮಗಳನ್ನು ತಿಳಿಸಿದ್ದೇನೆ. ಇನ್ನು ಯೋಗದ ಫಲವನ್ನು ತಿಳಿಸುತ್ತೇನೆ, ಕೇಳು.
ಏಕತ್ವಂ ಬುದ್ಧಿಮನಸೋರಿಂದ್ರಿಯಾಣಾಂ ಚ ಸರ್ವಶಃ |
ಆತ್ಮನೋ ಧ್ಯಾಯಿನಸ್ತಾತ ಜ್ಞಾನಮೇತದನುತ್ತಮಮ್ ॥2॥
ಬುದ್ಧಿ, ಮನಸ್ಸು, ಇಂದ್ರಿಯಗಳಿಂದ ಎಲ್ಲ ವಿಧದಿಂದಲೂ ಏಕವಿಷಯತ್ವವನ್ನು ಸಾಧಿಸಿಕೊಂಡು, ಪರಮಾತ್ಮನನ್ನೇ ನಿರಂತರ ಧ್ಯಾನಿಸುವಿಕೆಯೇ ಅನುತ್ತಮವಾದ ಜ್ಞಾನ ಎನಿಸುತ್ತದೆ.
ತದೇತದುಪಶಾಂತೇನ ದಾಂತೇನಾಧ್ಯಾತ್ಮಶೀಲಿನಾ |
ಆತ್ಮಾರಾಮೇಣ ಬುದ್ಧೇನ ಬೋದ್ಧವ್ಯಂ ಶುಚಿಕರ್ಮಣಾ ॥3॥
ಉತ್ತಮ ಜ್ಞಾನವನ್ನು ಮನುಷ್ಯನಾದವನು ಶಾಂತಾತ್ಮನು, ದಾಂತಾತ್ಮನು, ಅಧ್ಯಾತ್ಮ ಶೀಲನು, ಪರಮಾತ್ಮನಿಂದಲೇ ಸಂತೋಷ ಹೊಂದುವವನು, ಜ್ಞಾನಿಯೂ ಸದಾಚಾರಸಂಪನನೂ ಆದ ಗುರುಗಳ ಮುಖದಿಂದ ತಿಳಿದುಕೊಳ್ಳಬೇಕು.
ಯೋಗದೋಷಾನ್ ಸಮುಚ್ಛಿದ್ಯ ಪಂಚ ಯಾನ್ಕವಯೋ ವಿದುಃ |
ಕಾಮಂ ಕ್ರೋಧಂ ಚ ಲೋಭಂ ಚ ಭಯಂ ಸ್ವಪ್ನಂ ಚ ಪಂಚಮಮ್ ॥
ಕ್ರೋಧಂ ಶಮೇನ ಜಯತಿ ಕಾಮಂ ಸಂಕಲ್ಪವರ್ಜನಾತ್ |
ಸತ್ತ್ವಸಂಸೇವನಾದ್ಧೀರೋ ನಿದ್ರಾಮುಚ್ಛೇತ್ತುಮರ್ಹತಿ ॥5॥
ವಿದ್ವಾಂಸರು ಹೇಳಿರುವ ಐದು ಬಗೆಯ ಯೋಗದೋಷಗಳನ್ನು ಸಂಪೂರ್ಣ ಪರಿಹರಿಸಿಕೊಂಡಿರಬೇಕು. ಕಾಮ, ಕ್ರೋಧ, ಲೋಭ,

ಭಯ, ಸ್ವಪ್ನ - ಈ ಐದು ಯೋಗದೋಷಗಳೆನಿಸಿವೆ. ಮನೋನಿಗ್ರಹದಿಂದ ಕ್ರೋಧವನ್ನೂ, ಸಂಕಲ್ಪ ತ್ಯಾಗದಿಂದ ಕಾಮವನ್ನೂ, ಸತ್ತ್ವಗುಣವನ್ನಾಶ್ರಯಿಸಿ ನಿದ್ರೆಯನ್ನು ಜಯಿಸಬೇಕು.
ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ |
ಚಕ್ಷುಃ ಶ್ರೋತ್ರೇ ಚ ಮನಸಾ ಮನೋ ವಾಚಂ ಚ ಕರ್ಮಣಾ ॥6॥
ಧೈರ್ಯದಿಂದ ಉಪಸ್ಥ ಜಿಹ್ವೆಗಳನ್ನು ರಕ್ಷಿಸಬೇಕು. ಕಣ್ಣಿನಿಂದ ಕೈ-ಕಾಲುಗಳನ್ನು ಹತೋಟಿಗೆ ತಂದುಕೊಳ್ಳಬೇಕು. ಮನಸ್ಸಿನ ಸಹಾಯದಿಂದ ಕಣ್ಣು, ಕಿವಿಗಳನ್ನು ನಿಗ್ರಹಿಸಿಕೊಳ್ಳಬೇಕು. ಸತ್ಕರ್ಮಾಚರಣೆಯ ಮೂಲಕ ಮನಸ್ಸು, ಮಾತುಗಳನ್ನು ನಿಯಂತ್ರಿಸಿಕೊಳ್ಳಬೇಕು.
ಅಪ್ರಮಾದಾದ್ ಭಯಂ ಜಹ್ಯಾಲ್ಲೋಭಂ ಪ್ರಾಜ್ಞೋಪಸೇವನಾತ್ |
ಏವಮೇತಾನ್ ಯೋಗದೋಷಾನ್ ಜಯೇನ್ನಿತ್ಯಮತಂದ್ರಿತಃ ॥7॥
ಜಾಗರೂಕನಾಗಿದ್ದು ಭಯವನ್ನು ತ್ಯಜಿಸಬೇಕು. ವಿದ್ವಾಂಸರ ಸೇವೆಯಿಂದ ಅಹಂಕಾರವನ್ನು ಜಯಿಸಬೇಕು. ಈ ರೀತಿಯಾಗಿ ಪ್ರತಿದಿನವೂ ಆಲಸ್ಯ ಇಲ್ಲದವನಾಗಿ ಮೇಲೆ ಹೇಳಿದ ಯೋಗದೋಷಗಳನ್ನು ಜಯಿಸುತ್ತಿರಬೇಕು.
ಅಗ್ನೀಂಶ್ಚ ಬ್ರಾಹ್ಮಣಾಂಶ್ಚಾರ್ಚೇದ್ ದೇವತಾಃ ಪ್ರಣಮೇತ ಚ |
ವರ್ಜಯೇದುಶತೀಂ ವಾಚಂ ಹಿಂಸಾಯುಕ್ತಾಂ ಮನೋನುಗಾಮ್ ॥
ಅಗ್ನಿಗಳನ್ನು, ಬ್ರಾಹ್ಮಣರನ್ನು ಪೂಜಿಸಬೇಕು. ದೇವತೆಗಳಿಗೆ ನಮಸ್ಕರಿಸಬೇಕು. ನಿಷ್ಠುರವಾದ ಮಾತುಗಳನ್ನು ತ್ಯಜಿಸಬೇಕು. ಹಿಂಸಾಯುಕ್ತವಾದ, ಮನಸ್ಸನ್ನು ವಿಷಯದ ಕಡೆ ಒಡ್ಡುವ ಪ್ರಚೋದನೆಯ ಮಾತುಗಳನ್ನು ಆಡಬಾರದು.
ಬ್ರಹ್ಮ ತೇಜೋಮಯಂ ಶುಕ್ಲಂ ಯಸ್ಯ ಸರ್ವಮಿದಂ ತತಮ್ |
ಏತಸ್ಯ ಸೂತ್ರಭೂತಸ್ಯ ದ್ವಯಂ ಸ್ಥಾವರಜಂಗಮಮ್ ॥9॥
ಪರಮಾತ್ಮನ ಶುದ್ಧವಾದ ಯಾವ ಸ್ವರೂಪವಿದೆಯೋ ಅದರಿಂದಲೇ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಈ ಸ್ಥಾವರ-ಜಂಗಮ ಎಂಬ ಎರಡು ಈ ಭಗವಂತನ ಅಧೀನದಲ್ಲಿಯೇ ನಡೆಯುತ್ತಿದೆ.
ಧ್ಯಾನಮಧ್ಯಯನಂ ದಾನಂ ಸತ್ಯಂ ಹ್ರೀರಾರ್ಜವಂ ಕ್ಷಮಾ |
ಶೌಚಮಾಹಾರಸಂಶುದ್ಧಿರಿಂದ್ರಿಯಾಣಾಂ ಚ ನಿಗ್ರಹಃ ॥10॥
ಧ್ಯಾನ, ವೇದಾಧ್ಯಯನ, ದಾನ, ಸತ್ಯನಿಷ್ಠೆ, ಲಜ್ಜೆ, ಸರಳತೆ, ಕ್ಷಮೆ, ಶೌಚ, ಆಹಾರ ಶುದ್ಧಿ, ಇಂದ್ರಿಯನಿಗ್ರಹ;
ಏತೈರ್ವಿವರ್ಧತೇ ತೇಜಃ ಪಾಪ್ಮಾನಂ ಚಾಪಕರ್ಷತಿ |
ಸಿದ್ಧ್ಯಂತಿ ಚಾಸ್ಯ ಸರ್ವಾರ್ಥಾ ವಿಜ್ಞಾನಂ ಚ ಪ್ರವರ್ತತೇ ॥11॥
ಇವೇ ಮೊದಲಾದ ಸತ್ಕರ್ಮಗಳಿಂದ ತೇಜಸ್ಸು ವೃದ್ಧಿಯನ್ನು ಹೊಂದುತ್ತದೆ. ಪಾಪಗಳು ನಾಶವಾಗುತ್ತವೆ. ಧ್ಯಾನ-ಅಧ್ಯಯನಗಳಲ್ಲಿ ಆಸಕ್ತನಾದವನಿಗೆ ಸಮಸ್ತ ಪುರುಷಾರ್ಥಗಳು ಸಿದ್ಧಿಸುತ್ತವೆ. ಪರಮಾತ್ಮನ ವಿಷಯಕವಾದ ವಿಶೇಷ ಜ್ಞಾನವು ಉಂಟಾಗುತ್ತದೆ.
ಸಮಃ ಸರ್ವೇಷು ಭೂತೇಷು ಲಬ್ಧಾಲಬ್ಧೇನ ವರ್ತಯನ್ |
ಧೂತಪಾಪ್ಮಾ ತು ತೇಜಸ್ವೀ ಲಘ್ವಾಹಾರೋ ಜಿತೇಂದ್ರಿಯಃ |
ಕಾಮಕ್ರೋಧೌ ವಶೇ ಕೃತ್ವಾ ನಿನೀಷೇದ್ ಬ್ರಹ್ಮಣಃ ಪದಮ್ ॥12॥
ಯೋಗಿಯಾದವನು ಸಮಸ್ತ ಪ್ರಾಣಿಗಳಲ್ಲಿಯೂ ಭಗವಂತನನ್ನು ನೋಡಬೇಕು. ಏನು ಸಿಕ್ಕಲಿ ಸಿಕ್ಕದೆ ಇರಲಿ, ಯದೃಚ್ಛಾಲಾಭನಾಗಿ ವರ್ತಿಸುತ್ತಿರಬೇಕು. ಪಾಪಗಳನ್ನು ಝಾಡಿಸಿಕೊಂಡು ಪಾಪಹಾರಿಯಾಗಿ, ತೇಜಸ್ವಿಯಾಗಿ, ಜಿತೇಂದ್ರಿಯನಾಗಿ, ಕಾಮ- ಕ್ರೋಧಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಬ್ರಹ್ಮಪದವಿಯನ್ನು ಹೊಂದಲು ಬಯಸಬೇಕು.
ಮನಸಶ್ಚೇಂದ್ರಿಯಾಣಾಂ ಚ ಕೃತ್ವೈಕಾಗ್ರ್ಯಂ ಸಮಾಹಿತಃ |
ಪ್ರಾಗ್ರಾತ್ರಾಪರರಾತ್ರೇಷು ಧಾರಯೇನ್ಮನ ಆತ್ಮನಾ ॥13॥
ಯೋಗಿಯಾದವನು ಮನಸ್ಸನ್ನು ಮತ್ತು ಇಂದ್ರಿಯಗಳನ್ನು ಭಗವಂತನಲ್ಲಿ ಏಕಾಗ್ರಗೊಳಿಸಿ, ರಾತ್ರಿಯ ಮೊದಲನೆಯ ಮತ್ತು ಕೊನೆಯ ಯಾಮದಲ್ಲಿ ಧ್ಯಾನಕ್ಕೆ ಕುಳಿತು ಇಂದ್ರಿಯಗಳಿಂದ ಸಹಿತವಾದ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಬೇಕು.
ಜಂತೋಃ ಪಂಚೇಂದ್ರಿಯಸ್ಯಾಸ್ಯ ಯದೇಕಂ ಛಿದ್ರಮಿಂದ್ರಿಯಮ್ |
ತತೋಽಸ್ಯ ಸ್ರವತಿ ಪ್ರಜ್ಞಾ ದೃತೇಃ ಪಾದಾದಿವೋದಕಮ್ ॥14॥
ಒಂದೇ ಸಣ್ಣ ರಂಧ್ರವಿದ್ದರೂ ಚರ್ಮದ ಚೀಲದ ಕೆಳಭಾಗದಿಂದ ನೀರು ಸೋರಿ ಹೋಗುವಂತೆ, ಪಂಚೇಂದ್ರಿಯಗಳಲ್ಲಿ ಒಂದು ಇಂದ್ರಿಯದ ಹಿಡಿತವು ತಪ್ಪಿ ಹೋದರೂ ಮನುಷ್ಯನ ಪ್ರಜ್ಞೆಯು ಕ್ಷಯ ಹೊಂದುತ್ತದೆ.
ಮನಸ್ತು ಪೂರ್ವಮಾದದ್ಯಾತ್ಕುಮೀನಾನಿವ ಮತ್ಸ್ಯಹಾ |
ತತಃ ಶ್ರೋತ್ರಂ ತತಶ್ಚಕ್ಷುರ್ಜಿಹ್ವಾಂ ಘ್ರಾಣಂ ಚ ಯೋಗವಿತ್ ॥15॥
ಬೆಸ್ತನು ತುಂಬಾ ಚೇಷ್ಟೆ ಮಾಡುವ ಮೀನನ್ನು ಮೊದಲು ಹಿಡಿದು ಬುಟ್ಟಿಯಲ್ಲಿ ಇಟ್ಟುಕೊಳ್ಳುವಂತೆ ಯೋಗಿಯಾದವನು ತುಂಬಾ ವಿಷಯಗಳ ಕಡೆ ಚೇಷ್ಟೆ ಮಾಡಿ ಚಲಿಸುವ ಮನಸ್ಸನ್ನು ನಿಗ್ರಹಿಸಿ ವಶಪಡಿಸಿಕೊಳ್ಳಬೇಕು. ಬಳಿಕ ಕಿವಿ, ಕಣ್ಣು, ನಾಲಿಗೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು.
ತತ ಏತಾನಿ ಸಂಯಮ್ಯ ಮನಸಿ ಸ್ಥಾಪಯೇದ್ಧೃತಿಃ |
ತಥೈವಾಪೋಹ್ಯ ಸಂಕಲ್ಪಾನ್ಮನೋ ಹ್ಯಾತ್ಮನಿ ಧಾರಯೇತ್ ॥16॥
ಬಳಿಕ ಈ ಐದು ಇಂದ್ರಿಯಗಳನ್ನು ವಶಪಡಿಸಿಕೊಂಡು ಮನಸ್ಸಿನ ಹತೋಟಿಯಲ್ಲಿ ಇಡಬೇಕು. ಅದರಂತೆ ಬಾಹ್ಯ ಸಂಕಲ್ಪಗಳನ್ನೆಲ್ಲ ತೊರೆದು ಬುದ್ಧಿಯ ಹತೋಟಿಗೆ ಸಿಗುವಂತೆ ಮಾಡಬೇಕು.
ಪಂಚ ಜ್ಞಾನೇನ ಸಂಧಾಯ ಮನಸಿ ಸ್ಥಾಪಯೇದ್ಧೃತಿಃ |

ಯದೈತಾನ್ಯವತಿಷ್ಠಂತೇ ಮನಃಷಷ್ಠಾನಿ ಚಾತ್ಮನಿ |
ಪ್ರಸೀದಂತಿ ಚ ಸಂಸ್ಥಾಯ ತದಾ ಬ್ರಹ್ಮ ಪ್ರಕಾಶತೇ ||17||
ಪಂಚ ಜ್ಞಾನೇಂದ್ರಿಯಗಳನ್ನು ಮನಸ್ಸಿನಲ್ಲಿ ನೆಲೆಗೊಳಿಸಿ, ಆರನೆಯದಾದ ಮನಸ್ಸಿನಿಂದ ಕೂಡಿದ ಐದು ಇಂದ್ರಿಯಗಳು ಬುದ್ಧಿಯನ್ನು ಸೇರಿ ಯಾವಾಗ ಪ್ರಸನ್ನತೆಯನ್ನು ಹೊಂದುತ್ತವೋ ಆಗ ಯೋಗಿಗೆ ಬ್ರಹ್ಮನು ಕಾಣಿಸುತ್ತಾನೆ.
ವಿಧೂಮ ಇವ ದೀಪ್ತಾರ್ಚಿರಾದಿತ್ಯ ಇವ ದೀಪ್ತಿಮಾನ್ |
ವೈದ್ಯುತೋಽಗ್ನಿರಿವಾಕಾಶೇ ಪಶ್ಯತ್ಯಾತ್ಮಾನಮಾತ್ಮನಾ |
ಸರ್ವಂ ಚ ತತ್ರ ಸರ್ವತ್ರ ವ್ಯಾಪಕತ್ವಾಚ್ಚ ದೃಶ್ಯತೇ ||18||
ಧೂಮರಹಿತವಾದ ಅಗ್ನಿಯಂತೆ ಬೆಳಗುವ, ಸೂರ್ಯನಂತೆ ಆಕಾಶದಲ್ಲಿ ಹೊಳೆಯುವ, ಮಿಂಚಿನ ಬೆಳಕಿನಂತೆ ಇರುವ ಯೋಗಿಯು ತನ್ನ ಅಂತಃಕರಣದಲ್ಲಿ ಪರಮಾತ್ಮನನ್ನು ನೋಡುತ್ತಾನೆ. ಆ ಸಮಯದಲ್ಲಿ ತೇಜೋರೂಪಿಯಾದ ಪರಮಾತ್ಮನಲ್ಲಿಯೇ ಎಲ್ಲವೂ ಆಶ್ರಯವನ್ನು ಪಡೆದಿರುವ ದೃಶ್ಯವನ್ನು ನೋಡುತ್ತಾನೆ. ಭಗವತ್ವ್ಯಾಪ್ತಿಯ ದರ್ಶನವು ಉಂಟಾಗುತ್ತದೆ.
ತಂ ಪಶ್ಯಂತಿ ಮಹಾತ್ಮಾನೋ ಬ್ರಾಹ್ಮಣಾ ಯೇ ಮನೀಷಿಣಃ |
ಧೃತಿಮಂತೋ ಮಹಾಪ್ರಾಜ್ಞಾಃ ಸರ್ವಭೂತಹಿತೇ ರತಾಃ ||19||
ಪರಮಾತ್ಮನನ್ನು ಮಹಾತ್ಮರಾದ, ಜ್ಞಾನಿಗಳಾದ ಬ್ರಾಹ್ಮಣರು ಹೃದಯದಲ್ಲಿಯೇ ನೋಡುತ್ತಾರೆ. ಧೈರ್ಯವಂತರಾದ, ಮಹಾಪ್ರಾಜ್ಞರಾದ, ಸರ್ವಪ್ರಾಣಿಗಳ ಹಿತದಲ್ಲಿಯೇ ಆಸಕ್ತರಾದ ಅವರು ಬ್ರಹ್ಮದರ್ಶನವನ್ನು ಹೊಂದುತ್ತಾರೆ.
ಏವಂ ಪರಿಮಿತಂ ಕಾಲಮಾಚರನ್ ಸಂಶಿತವ್ರತಃ |
ಆಸೀನೋ ಹಿ ರಹಸ್ಯೇಕೋ ಗಚ್ಛೇದಕ್ಷರಸಾತ್ಮ್ಯತಾಮ್ ||20||
ಹೀಗೆ ಪ್ರತಿದಿನವೂ ನಿಯತವಾದ ಕಾಲದ ತನಕ ಏಕಾಂತ ಸ್ಥಳದಲ್ಲಿ ಒಬ್ಬನೇ ಕುಳಿತು, ಕಠೋರ ವ್ರತನಿಷ್ಠನಾಗಿ, ಯೋಗಾಭ್ಯಾಸ ನಿರತನಾಗಿ, ಅಕ್ಷರಬ್ರಹ್ಮನನ್ನು ಚಿಂತಿಸುತ್ತಿರುವವನು ಅವನಂತೆ ನಿರ್ದುಃಖಿಯಾಗುತ್ತಾನೆ.
ವಿಮೋಹೋಽಭ್ರಮ ಆವರ್ತೇ ಘ್ರಾಣಶ್ರವಣದರ್ಶನೇ |
ಅದ್ಭುತಾನಿ ರಸಸ್ಪರ್ಶೇ ಶೀತೋಷ್ಣೇ ಮಾರುತಾಕೃತಿಃ ||21||
ಯೋಗಾಭ್ಯಾಸದಲ್ಲಿಮುಂದುವರೆಯುತ್ತಿರುವಾಗ ಎಲ್ಲೆಡೆಯಿಂದಲೂ ಗಂಧವನ್ನು ಆಘ್ರಾಣಿಸುವ ವಿಷಯದಲ್ಲಿ, ಶಬ್ದವನ್ನು ಕೇಳುವ ವಿಷಯದಲ್ಲಿ, ಬಾಹ್ಯವಾದ ರೂಪ ದರ್ಶನದ ವಿಷಯದಲ್ಲಿ ಮೋಹ-ಭ್ರಮೆಗಳು ಉಂಟಾಗುವುದಿಲ್ಲ. ಇದಕ್ಕಿಂತ ವ್ಯತಿರಿಕ್ತವಾಗಿ ಕಲ್ಪನಾರಹಿತವಾದ, ಅದ್ಭುತವಾದ ರಸಗಳ ಮನೋಹರವಾದ ಸ್ಪರ್ಶಗಳ, ಶೀತೋಷ್ಣಗಳ ವಾತಾವರಣವು ಉಂಟಾಗುತ್ತದೆ. ವಾಯುರೂಪನಾಗಿ ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವು ಲಭಿಸುತ್ತದೆ.
ಪ್ರತಿಭಾಮುಪಸರ್ಗಾಂಶ್ಚಾಪ್ಯುಪಸಂಗೃಹ್ಯ ಯೋಗತಃ |
ತಾಂಸ್ತತ್ತ್ವವಿದನಾದೃತ್ಯ ಸ್ವಾತ್ಮನ್ಯೇವ ನಿವರ್ತಯೇತ್ ||22||
ದಿವ್ಯವಾದ ಪ್ರತಿಭೆಯು ಹುಟ್ಟುತ್ತದೆ. ದಿವ್ಯಭೋಗಗಳು ತಾವಾಗಿಯೇ ದೊರೆಯುತ್ತವೆ. ಎಲ್ಲ ಸಿದ್ಧಿಗಳು ಯೋಗಬಲದಿಂದ ಲಭಿಸುತ್ತಿದ್ದರೂ ತತ್ತ್ವಜ್ಞನಾದ ಯೋಗಿಯು ಆ ಸಿದ್ಧಿಗಳೆಲ್ಲವೂ ಪರಮಾತ್ಮನ ದರ್ಶನಕ್ಕೆ ವಿಘ್ನಕಾರಕವೆಂದು ಭಾವಿಸಿ ಅವುಗಳನ್ನು ತಿರಸ್ಕರಿಸಿ ಪರಮಾತ್ಮನಲ್ಲಿಯೇ ಆಸಕ್ತನಾಗಿರಬೇಕು.
ಕುರ್ಯಾತ್ ಪರಿಚಯಂ ಯೋಗೇ ತ್ರೈಕಾಲ್ಯಂ ನಿಯತೋ ಮುನಿಃ |
ಗಿರಿಶೃಂಗೇ ತಥಾ ಚೈತ್ಯೇ ವೃಕ್ಷಾಗ್ರೇಷು ಚ ಯೋಜಜೇತ್ ||23||
ಮುನಿಯು ನಿತ್ಯವೂ ನಿಯಮದಲ್ಲಿದ್ದು ಪರ್ವತದ ಶಿಖರದಲ್ಲಾಗಲಿ, ದೇವಾಲಯದ ಮೂಲದಲ್ಲಾಗಲಿ, ಮರಗಳ ಮೂಲಗಳಲ್ಲಾಗಲಿ ಕುಳಿತುಕೊಂಡು ದಿನದ ಮೂರುಕಾಲಗಳಲ್ಲಿಯೂ ಯೋಗಾಭ್ಯಾಸವನ್ನು ಅನುಷ್ಠಾನ ಮಾಡಬೇಕು.
ಸನ್ನಿಯಮ್ಯೇಂದ್ರಿಯಗ್ರಾಮಂ ಗೋಷ್ಠೇ ಭಾಂಡಮನಾ ಇವ |
ಏಕಾಗ್ರಶ್ಚಿಂತಯೇನ್ನಿತ್ಯಂ ಯೋಗಾನ್ನೋದ್ವೇಜಯೇನ್ಮನಃ ||24||
ಹಣದ ಭಂಡಾರವನ್ನು ತುಂಬಿಸಲು ಬಯಸುವವನು ಭಾಂಡಾಗಾರದಲ್ಲಿ ಹಣವನ್ನು ಸಂಗ್ರಹಿಸಿ ಇಡುವಂತೆ, ಯೋಗಸಾಧಕನು ಇಂದ್ರಿಯಗಳ ಸಮುದಾಯವನ್ನು ಮನಸ್ಸಿನ ಜೊತೆಗೂಡಿಸಿ, ಹೃತ್ಪುಂಡರೀಕದಲ್ಲಿ ನೆಲೆಗೊಳಿಸಿ, ಪರಮಾತ್ಮನನ್ನು ಏಕಾಗ್ರತೆಯಿಂದ ಧ್ಯಾನ ಮಾಡಬೇಕು. ಮನಸ್ಸು ಉದ್ವಿಗ್ನವಾಗದಂತೆ ಯೋಗಾನುಷ್ಠಾನ ಮಾಡಬೇಕು.
ಯೇನೋಪಾಯೇನ ಶಕ್ಯೇತ ಸನ್ನಿಯಂತುಂ ಚಲಂ ಮನಃ |
ತಂ ತಂ ಯುಕ್ತೋ ನಿಷೇವೇತ ನ ಚೈವ ವಿಚಲೇತ್ತತಃ ||25||
ಯಾವ ಉಪಾಯದಿಂದ ಮನಸ್ಸನ್ನು ನಿಗ್ರಹಿಸಲು ಸಾಧ್ಯವಾಗುತ್ತದೋ ಅಂತಹ ಉಪಾಯವನ್ನು ಸಾಧಕನು ಆಶ್ರಯಿಸಬೇಕು. ಈ ಸಾಧನೆಯಿಂದ ಯಾವತ್ತೂ ವಿಚಲಿತನಾಗಬಾರದು.
ಶೂನ್ಯಾ ಗಿರಿಗುಹಾಶ್ಚೈವ ದೇವತಾಯತನಾನಿ ಚ |
ಶೂನ್ಯಾಗಾರಾಣಿ ಚೈಕಾಗ್ರೋ ನಿವಾಸಾರ್ಥಮುಪಕ್ರಮೇತ್ ||26||
ಏಕಾಗ್ರಚಿತ್ತನಾದ ಯೋಗಿಯು ಜನರಿಲ್ಲದ ಪರ್ವತದ ಗುಹೆಗಳನ್ನು, ದೇವಾಲಯಗಳನ್ನು, ಏಕಾಂತವಾಗಿರುವ ಗೃಹಗಳನ್ನು ವಾಸಕ್ಕೆ ಆರಿಸಿಕೊಳ್ಳಬೇಕು.
ನಾಭಿಷ್ವಜೇತ್ ಪರಂ ವಾಚಾ ಕರ್ಮಣಾ ಮನಸಾಪಿ ವಾ |
ಉಪೇಕ್ಷಕೋ ಯತಾಹಾರೋ ಲಬ್ಧಾಲಬ್ಧೇ ಸಮೋ ಭವೇತ್ ||27||
ಯೋಗಸಾಧಕನು ಮಾತು, ಮನಸ್ಸು, ಕೃತಿಗಳಿಂದ ಬೇರೆಯವರಲ್ಲಿ ಅಧಿಕವಾದ ಸಂಗವನ್ನು ಇಟ್ಟುಕೊಳ್ಳಬಾರದು. ಪ್ರಾಪಂಚಿಕ ಮನಸ್ಸಿನಲ್ಲಿ ನಿರ್ಲಿಪ್ತನಾಗಿರಬೇಕು. ನಿಯತವಾದ ಆಹಾರವನ್ನು ಹೊಂದಿ ಲಾಭಾಲಾಭಗಳಲ್ಲಿ ಸಮನಾಗಿರಬೇಕು.

ಯಶ್ಚೈನಮಭಿನಂದೇತ ಯಶ್ಚೈನಮಪವಾದಯೇತ್ |
ಸಮಸ್ತಯೋಶ್ಚಾಪ್ಯುಭಯೋರ್ನಾಭಿಧ್ಯಾಯೇಚ್ಛುಭಾಶುಭಮ್ ॥28॥
ಯೋಗಿಯಾದವನು ಸಮ್ಮಾನಿಸುವ ಅಥವಾ ನಿಂದಿಸುವವನ ವಿಷಯದಲ್ಲಿ ಸಮನಾಗಿ ವರ್ತಿಸಬೇಕು. ಹೊಗಳಿದವನಿಗೆ ಶುಭಕಾಮನೆಯನ್ನು, ನಿಂದಿಸಿದವನಿಗೆ ಅನಿಷ್ಟ ಕಾಮನೆಯನ್ನು ಮಾಡಬಾರದು.
ನ ಪ್ರಹೃಷ್ಯೇತ ಲಾಭೇಷು ನಾಲಾಭೇಷು ಚ ಚಿಂತಯೇತ್ |
ಸಮಃ ಸರ್ವೇಷು ಭೂತೇಷು ಸಧರ್ಮಾ ಮಾತರಿಶ್ವನಃ ॥29॥
ಲಾಭದಿಂದ ಸಂತುಷ್ಟನಾಗಬಾರದು, ನಷ್ಟದಿಂದ ಚಿಂತೆಗೀಡಾಗಬಾರದು. ವಾಯುವು ಪಕ್ಷಪಾತವಿಲ್ಲದೆ ಎಲ್ಲೆಡೆಯೂ ಸಂಚರಿಸುವಂತೆ ತನ್ನ ಮನಸ್ಸು ಒಂದೇ ರೀತಿಯಲ್ಲಿ ವರ್ತಿಸುವಂತೆ ಮಾಡಬೇಕು. ವಾಯುವು ಎಲ್ಲರಲ್ಲಿಯೂ ಸಮಾನವಾಗಿ ಸಂಚರಿಸುವಂತೆ ಸಮಸ್ತ ಪ್ರಾಣಿಗಳಲ್ಲಿಯೂ ಸಮದಿಂದ ಇರಬೇಕು.
ಏವಂ ಸರ್ವಾತ್ಮನಃ ಸಾಧೋಃ ಸರ್ವತ್ರ ಸಮದರ್ಶಿನಃ |
ಷಣ್ಮಾಸಾನ್ನಿತ್ಯಯುಕ್ತಸ್ಯ ಶಬ್ದಬ್ರಹ್ಮಾತಿವರ್ತತೇ ॥30॥
ಈ ರೀತಿಯಾಗಿ ಎಲ್ಲೆಡೆಯೂ ಸಾಧುವಾದವನು ಸಮದರ್ಶಿಯಾಗಿ ಇದ್ದಾಗ ಆರು ತಿಂಗಳ ತನಕ ಯೋಗಾಭ್ಯಾಸ ರತನಾದವನು ವಿಧಿ-ನಿಷೇಧಗಳನ್ನು ಮೀರಿ ಭಗವಂತನನ್ನು ಹೊಂದುತ್ತಾನೆ.
ವೇದನಾರ್ತಾಃ ಪ್ರಜಾ ದೃಷ್ಟ್ವಾ ಸಮಲೋಷ್ಟಾಶ್ಮಕಾಂಚನಃ |
ಏತಸ್ಮಿನ್ನಿರತೋ ಮಾರ್ಗೇ ವಿರಮೇನ್ನ ವಿಮೋಹಿತಃ ॥31॥
ಯೋಗಿಯಾದವನು ವಿಷಯಪದಾರ್ಥಗಳಲ್ಲಿ ಆಸಕ್ತರಾದವರು ಯಾವ ದುಃಖವನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ಕಂಡುಕೊಂಡು, ಪ್ರಾಪಂಚಿಕ ವ್ಯವಹಾರಗಳಿಂದ ವಿರಕ್ತನಾಗಿರಬೇಕು. ಮಣ್ಣುಹೆಂಟೆ, ಕಲ್ಲು, ಚಿನ್ನ ಎಲ್ಲವನ್ನೂ ಸಮಾನವಾಗಿ ಕಾಣಬೇಕು. ಈ ಯೋಗಮಾರ್ಗದಲ್ಲಿ ನಿರತನಾದವನು ಪ್ರಾಪಂಚಿಕ ಸುಖಗಳಿಂದ ಮೋಹಿತನಾಗಿ ಯೋಗಾಭ್ಯಾಸವನ್ನು ನಿಲ್ಲಿಸಬಾರದು.
ಅಪಿ ವರ್ಣ್ಯಾಪಕೃಷ್ಟಸ್ತು ನಾರೀ ವಾ ಧರ್ಮಕಾಂಕ್ಷಿಣೀ |
ತಾವಪ್ಯೇತೇನ ಮಾರ್ಗೇಣ ಗಚ್ಛೇತಾಂ ಪರಮಾಂ ಗತಿಮ್ ॥32॥
ಧೀಕೃತನಾದ ಬ್ರಹ್ಮಚಾರಿಯಾಗಲಿ, ಧರ್ಮವನ್ನು ಬಯಸುವ ನಾರಿಮಣಿಯಾಗಲಿ ಈ ಯೋಗಮಾರ್ಗವನ್ನು ಆಶ್ರಯಿಸಿದರೆ ಅವರು ಪರಮಗತಿಯನ್ನು ಹೊಂದುತ್ತಾರೆ.
ಅಜಂ ಪುರಾಣಮಜರಂ ಸನಾತನಂ
ಯದಿಂದ್ರಿಯೈರುಪಲಭತೇ ನರೋಽಚಲಃ |
ಅಣೋರಣೀಯೋ ಮಹತೋ ಮಹತ್ತರಂ
ತದಾತ್ಮನಾ ಪಶ್ಯತಿ ಯುಕ್ತ ಆತ್ಮವಾನ್ ॥33॥
ಚಿತ್ತವನ್ನು ಜಯಿಸಿ ಯೋಗಾಭ್ಯಾಸದಲ್ಲಿ ನಿರತನಾದ ಯೋಗಿಯು ನಿಶ್ಚಲವಾದ ತನ್ನ ಇಂದ್ರಿಯಗಳಿಂದ ಜನ್ಮವಿಲ್ಲದವನೂ, ಸನಾತನನೂ, ಜರೆ (ಮುಪ್ಪು) ಇಲ್ಲದವನು, ಅಣುವಿಗಿಂತಲೂ ಅಣುವು, ಮಹತ್ತಿಗಿಂತಲೂ ಮಹತ್ತನೂ ಆದ ಪರಮಾತ್ಮನನ್ನು ಬುದ್ಧಿಯ ಮೂಲಕ ಕಂಡುಕೊಳ್ಳುತ್ತಾನೆ.
ಇದಂ ಮಹರ್ಷೇರ್ವಚನಂ ಮಹಾತ್ಮನೋ
ಯಥಾವದುಕ್ತಂ ಮನಸಾನುದೃಶ್ಯ ಚ |
ಅವೇಕ್ಷ್ಯ ಚೇಯಾತ್ ಪರಮೇಷ್ಠಿಸಾತ್ಮ್ಯತಾಂ
ಪ್ರಯಾಂತಿ ಯಾಂ ಭೂತಗತಿಂ ಮನೀಷಿಣಃ ॥34॥
ಯುಧಿಷ್ಠಿರನೇ, ವ್ಯಾಸ ಮಹರ್ಷಿಗಳು ಹೇಳಿರುವ ಉಪದೇಶ ವಚನಗಳನ್ನು ಮನಸ್ಸಿನಲ್ಲಿ ವಿಮರ್ಶಿಸಿ ಇದೇ ಯುಕ್ತವಾಗಿದೆ ಎಂದು ಚಿಂತಿಸಿ ಅವರು ಹೇಳಿದಂತೆ ಯಾರು ಯೋಗಾಭ್ಯಾಸವನ್ನು ಮಾಡುತ್ತಾರೋ ಅಂತಹ ಜ್ಞಾನಿಗಳು ಸಾಮಾನ್ಯ ಜೀವರಿಂದ ಹೊಂದಲಾಗದೆ ಇರುವ ಪರಮಾತ್ಮನ ಸಾದೃಶ್ಯವನ್ನು ಹೊಂದುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತಾರನೆಯ ಅಧ್ಯಾಯ
ವ್ಯಾಸರು ಶುಕರನ್ನು ಕುರಿತು ಕರ್ಮಜ್ಞಾನಗಳ ಬಗ್ಗೆ ವಿವರಿಸಿದುದು.
ಶುಕಃ
ಯದಿದಂ ವೇದವಚನಂ ಕುರು ಕರ್ಮ ತ್ಯಜೇತಿ ಚ |
ಕಾಂ ದಿಶಂ ವಿದ್ಯಯಾ ಯಾಂತಿ ಕಾಂ ಚ ಗಚ್ಛಂತಿ ಕರ್ಮಣಾ ॥1॥
ತಂದೆಯೇ, ಕೆಲವು ಕಡೆ ವೇದಗಳು ಕರ್ಮಗಳನ್ನು ಮಾಡು ಎಂದು ವಿಧಿಸುತ್ತಿವೆ. ಇನ್ನು ಕೆಲವು ಕಡೆ ಕರ್ಮಗಳನ್ನು ತ್ಯಜಿಸು ಎಂದು ಹೇಳುತ್ತಿವೆ. ಹೀಗಿರುವಾಗ ಮನುಷ್ಯನು ಏನು ಮಾಡಬೇಕು? ಕರ್ಮದಿಂದ ಹೊಂದುವ ಗತಿ ಯಾವುದು? ಜ್ಞಾನದಿಂದ ಹೊಂದುವ ಗತಿ ಯಾವುದು?
ಏತದ್ವೈ ಶ್ರೋತುಮಿಚ್ಛಾಮಿ ತದ್ಭವಾನ್ ಪ್ರಬ್ರವೀತು ಮೇ |

ಏತತ್ತ್ವನ್ಯೋನ್ಯವೈರೂಪ್ಯೇ ವರ್ತತೇ ಪ್ರತಿಕೂಲತಃ ॥2॥
ಈ ವೇದದ ವಚನಗಳೇ ವಿರುದ್ಧವಾಗಿ ಹೇಳುವಂತೆ ತೋರುತ್ತಿರುವುದರಿಂದ ಇದರ ಸತ್ಯಾಂಶವೇನು ಎಂಬುದನ್ನು ನಿನ್ನ ಮುಖದಿಂದ ತಿಳಿಯಲು ಬಯಸುತ್ತೇನೆ ಎಂದು ಹೇಳಿದನು.
ಭೀಷ್ಮಃ
ಇತ್ಯುಕ್ತಃ ಪ್ರತ್ಯುವಾಚೇದಂ ಪರಾಶರಸುತಃ ಸುತಮ್ |
ಕರ್ಮವಿದ್ಯಾಮಯಾವೇತೌ ವ್ಯಾಖ್ಯಾಸ್ಯಾಮಿ ಕ್ಷರಾಕ್ಷರೌ ॥3॥
ಈ ರೀತಿಯಾಗಿ ಶುಕರು ಹೇಳುತ್ತಿರಲು ಪರಾಶರ ಮಗನಾದ ವ್ಯಾಸರು ಶುಕನನ್ನು ಕುರಿತು ಉತ್ತರಿಸುತ್ತಾರೆ. ಮಗನೇ, ಕ್ಷರ-ಅಕ್ಷರ ಫಲವನ್ನು ನೀಡುವ ಕರ್ಮ- ವಿದ್ಯೆಗಳ ಬಗ್ಗೆ ನಿನಗೆ ತಿಳಿಸುತ್ತೇನೆ.
ಯಾಂ ದಿಶಂ ವಿದ್ಯಯಾ ಯಾಂತಿ ಯಾಂ ಚ ಗಚ್ಛಂತಿ ಕರ್ಮಣಾ |
ಶೃಣುಷ್ವೈಕಮನಾಃ ಪುತ್ರ ಗಹ್ವರಂ ಹ್ಯೇತದಂತರಮ್ ॥4॥
ಬ್ರಹ್ಮವಿದ್ಯೆಯಿಂದ ಯಾವ ದಿಕ್ಕಿಗೆ ಸಾಗುತ್ತಾರೊ ಕರ್ಮಾಚರಣೆಯಿಂದ ಯಾವ ದಿಕ್ಕಿಗೆ ಸಾಗುತ್ತಾರೊ ಇವೆರಡು ಅತ್ಯಂತ ಕಠಿಣವೂ, ರಹಸ್ಯವೂ ಆದ ವಿಚಾರಗಳಾಗಿವೆ. ಏಕಾಗ್ರತೆಯಿಂದ ಇವುಗಳ ಬಗ್ಗೆ ತಿಳಿದುಕೊ.
ಅಸ್ತಿ ಧರ್ಮ ಇತಿ ಹ್ಯುಕ್ತ್ವಾ ನಾಸ್ತೀತ್ಯತ್ರೈವ ಯೋ ವದೇತ್ |
ತಸ್ಯ ಪಕ್ಷಸ್ಯ ಸದೃಶಮಿದಂ ಮಮ ಭವೇದಥ ॥5॥
ನಾನು ನಿನಗೆ ಉಪದೇಶ ಮಾಡುವ ವಾಕ್ಯವು ಜ್ಞಾನಿಗಳ ಮಧ್ಯದಲ್ಲಿ ಧರ್ಮ ಇದೆ ಎಂದು ಹೇಳಿ, ಪುನಃ ಇಲ್ಲ ಎಂದು ಹೇಳಿದರೆ ಹೇಗೆ ಆಗುತ್ತದೋ ಅದರಂತೆ ನನ್ನ ವಾಕ್ಯವು ಆಗುತ್ತದೆ. ನಿನ್ನ ಪ್ರಶ್ನೆಗೆ ಸಮಾಧಾನವನ್ನು ಹೇಳುವುದು ಕಷ್ಟವಿದೆ.
ದ್ವಾವಿಮಾವಥ ಪಂಥಾನೌ ಯತ್ರ ವೇದಾಃ ಪ್ರತಿಷ್ಠಿತಾಃ |
ಪ್ರವೃತ್ತಿಲಕ್ಷಣೋ ಧರ್ಮೋ ನಿವೃತ್ತೌ ಚ ಸುಭಾಷಿತಃ ॥6॥
ವೇದದಲ್ಲಿ ಕಾಣಿಸಿರುವ ಧರ್ಮದ ಮಾರ್ಗಗಳು ಎರಡು. ಒಂದು ಪ್ರವೃತ್ತಿ ಮಾರ್ಗ, ಮತ್ತೊಂದು ನಿವೃತ್ತಿ ಮಾರ್ಗ ಎಂದು ಎರಡು ಮಾರ್ಗಗಳು ಹೇಳಲ್ಪಟ್ಟಿವೆ.
ಕರ್ಮಣಾ ಬದ್ಧ್ಯತೇ ಜಂತುರ್ವಿದ್ಯಯಾ ತು ಪ್ರಮುಚ್ಯತೇ |
ತಸ್ಮಾತ್ ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ॥7॥
ಪ್ರವೃತ್ತಿ ಕರ್ಮದಿಂದ ಜೀವನು ಬಂಧನಕ್ಕೆ ತುತ್ತಾಗುತ್ತಾನೆ. ಜ್ಞಾನ ಪೂರ್ವಕವಾಗಿ ಆಚರಿಸುವ ನಿವೃತ್ತಿ ಕರ್ಮದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಆದ್ದರಿಂದ ಸಂಸಾರದಿಂದ ದಡವನ್ನು ಮುಟ್ಟ ಬಯಸುವ ಯತಿಗಳು ಪ್ರವೃತ್ತಿ ಕರ್ಮಗಳನ್ನು ಆಚರಿಸುವುದಿಲ್ಲ.
ಕರ್ಮಣಾ ಜಾಯತೇ ಪ್ರೇತ್ಯ ಮೂರ್ತಿಮಾನ್ ಷೋಡಶಾತ್ಮಕಃ |
ವಿದ್ಯಯಾ ಜಾಯತೇ ನಿತ್ಯಮವ್ಯಯೋ ಹ್ಯವ್ಯಯಾತ್ಮಕಃ ॥8॥
ಕರ್ಮಗಳನ್ನು ಆಚರಿಸಿದವರು ಮೃತರಾದ ಮೇಲೆ ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚಭೂತಗಳು, ಮನಸ್ಸು ಎಂಬ ಹದಿನಾರು ಕಲೆಗಳ ಜೊತೆಗೆ ಪುನಃ ಜನ್ಮವನ್ನು ಹೊಂದುತ್ತಾರೆ. ಆದರೆ ವಿದ್ಯೆಯನ್ನು ಹೊಂದಿದವರು ವಿಕಾರವಿಲ್ಲದ ನಿತ್ಯವಾದ ಬ್ರಹ್ಮನನ್ನು ಹೊಂದುತ್ತಾರೆ.
ಕರ್ಮ ತ್ವೇಕೇ ಪ್ರಶಂಸಂತಿ ಸ್ವಲ್ಪಬುದ್ಧಿರತಾ ನರಾಃ |
ತೇನ ತೇ ದೇಹಜಾಲಾನಿ ರಮಯಂತ ಉಪಾಸತೇ ॥9॥
ಅಲ್ಪಬುದ್ಧಿಯುಳ್ಳ ಕೆಲವರು ಪ್ರವೃತ್ತಿ ಕರ್ಮವನ್ನೇ ಪ್ರಶಂಸೆ ಮಾಡುತ್ತಾರೆ. ಅವರು ತಾವು ಪ್ರಶಂಸೆ ಮಾಡುತ್ತಾ ಅನೇಕರನ್ನು ಮೋಹಿತರನ್ನಾಗಿ ಮಾಡಿ ತಮ್ಮ ಮಾರ್ಗಕ್ಕೇ ಸೆಳೆಯುತ್ತಾರೆ.
ಯೇ ತು ಬುದ್ಧಿಂ ಪರಾಂ ಪ್ರಾಪ್ತಾ ಧರ್ಮನೈಪುಣ್ಯದರ್ಶಿನಃ |
ನ ತೇ ಕರ್ಮ ಪ್ರಶಂಸಂತಿ ಕೂಪಂ ನದ್ಯಾಂ ಪಿಬನ್ನಿವ ॥10॥
ಯಾರು ಧರ್ಮತತ್ತ್ವವನ್ನು ಚೆನ್ನಾಗಿ ತಿಳಿದಿದ್ದಾರೋ ಅಂತಹ ಪ್ರಾಜ್ಞರು ನದಿಯ ಜಲದ ಸವಿಯನ್ನು ಸವಿದವನು ಬಾವಿ ನೀರನ್ನು ಹೇಗೆ ಉಪೇಕ್ಷಿಸುತ್ತಾನೋ ಹಾಗೆ ಜ್ಞಾನದ ಮಾರ್ಗವನ್ನು ತಿಳಿದವರಾದ್ದರಿಂದ ಕರ್ಮ ಮಾರ್ಗವನ್ನು ಆದರಿಸಲಾರರು.
ಕರ್ಮಣಃ ಫಲಮಾಪ್ನೋತಿ ಸುಖದುಃಖೇ ಭವಾಭವೌ |
ವಿದ್ಯಯಾ ತದವಾಪ್ನೋತಿ ಯತ್ರ ಗತ್ವಾ ನ ಶೋಚತಿ ॥11॥
ಮನುಷ್ಯನು ತನ್ನ ಕರ್ಮಗಳಿಗೆ ಫಲವಾಗಿ ಸುಖ-ದುಃಖಗಳನ್ನು, ಜನನ- ಮರಣಗಳನ್ನು ಅನುಭವಿಸುತ್ತಾನೆ. ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದಿ ಎಂದಿಗೂ ದುಃಖಕ್ಕೆ ತುತ್ತಾಗುವುದಿಲ್ಲ.
ಯತ್ರ ಗತ್ವಾ ನ ಮ್ರಿಯತೇ ಯತ್ರ ಗತ್ವಾ ನ ಜಾಯತೇ |
ನ ಜೀರ್ಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ ॥12॥
ಆ ಬ್ರಹ್ಮನನ್ನು ಹೊಂದಿದ ವ್ಯಕ್ತಿಯು ಸಾಯುವುದೂ ಇಲ್ಲ, ಹುಟ್ಟುವುದೂ ಇಲ್ಲ. ಜನನ-ವೃದ್ಧಿ-ಜರಾ-ಮರಣಗಳು ಇಲ್ಲದೆ ಇರುವ ಸ್ಥಿತಿಯನ್ನು ಹೊಂದುತ್ತಾನೆ.
ಯತ್ರ ತದ್ಬ್ರಹ್ಮ ಪರಮಮವ್ಯಕ್ತಮಜರಂ ಧ್ರುವಮ್ |
ಅವ್ಯಾಹತಮನಾಯಾಸಮಮೃತಂ ಚಾವಿಯೋಗಿ ಚ ॥13॥
ಆ ಬ್ರಹ್ಮನ ಸ್ವರೂಪವು ಮಾತು, ಮನಸ್ಸುಗಳಿಗೆ ನಿಲುಕದಿರುವುದರಿಂದ ಶ್ರೇಷ್ಠವೂ, ಅವ್ಯಕ್ತವೂ, ಶಾಶ್ವತವೂ, ಅವ್ಯಾಹತವೂ, ಆಯಾಸರಹಿತವೂ, ಅಮೃತವೂ, ಅವಿಯೋಗಿಯೂ ಆಗಿದೆ.

ದ್ವಂದ್ವೈರ್ಯತ್ರ ನ ಬಾಧ್ಯಂತೇ ಮಾನಸೇನ ಚ ಕರ್ಮಣಾ |
ಸಮಾಃ ಸರ್ವತ್ರ ಮೈತ್ರಾಶ್ಚ ಸರ್ವಭೂತಹಿತೇ ರತಾಃ ॥14॥
ಯಾವ ಪರಬ್ರಹ್ಮನನ್ನು ಹೊಂದಿದ ಸಾಧಕರು ಮಾನಸಿಕವಾದ ಕರ್ಮಗಳಿಂದ ಯುಕ್ತರಾಗುವುದಿಲ್ಲ. ಸುಖ-ದುಃಖವಾದ ದ್ವಂದ್ವಗಳಲ್ಲಿ ಸಿಲುಕುವುದಿಲ್ಲ. ಸಮಸ್ತ ಭೂತಗಳಲ್ಲಿಯೂ ಹಿತಚಿಂತಕರಾಗಿ ಇರುತ್ತಾರೆ. ಮೈತ್ರೀಭಾವವನ್ನು ಹೊಂದಿರುತ್ತಾರೆ. ಎಲ್ಲೆಡೆಯೂ ಭಗವಂತನನ್ನೇ ಕಾಣುತ್ತಾರೆ.
ವಿದ್ಯಾಮಯೋಽನ್ಯಃ ಪುರುಷಸ್ತಾತ ಕರ್ಮಮಯೋಽಪರಃ |
ವಿದ್ಧಿ ಚಂದ್ರಮಸಂ ದರ್ಶೇ ಸೂಕ್ಷ್ಮಯಾ ಕಲಯಾ ಸ್ಥಿತಮ್ ॥15॥
ಭಗವದ್‌ಜ್ಞಾನವನ್ನು ಸಂಪಾದಿಸುವ ಪುರುಷನೇ ಬೇರೆ, ಕರ್ಮ ಮಾರ್ಗದಲ್ಲಿ ಸಾಗುವ ಪುರುಷನೇ ಬೇರೆ. ಅಮಾವಾಸ್ಯೆ ದಿವಸ ಸೂಕ್ಷ್ಮವಾದ ಕಲೆಯಿಂದ ಸೂರ್ಯಮಂಡಲದಲ್ಲಿ ಇರುವಂತಹ ಗಮಾಗಮನವುಳ್ಳ, ವೃದ್ಧಿ-ಹ್ರಾಸವುಳ್ಳ ಚಂದ್ರನಂತೆ, ಪ್ರಳಯ ಕಾಲದಲ್ಲಿ ಭಗವಂತನ ಉದರದಲ್ಲಿ ಸೇರಿರುವ, ಸೃಷ್ಟಿ ಕಾಲದಲ್ಲಿ ಸ್ಥೂಲರೂಪದಿಂದ ಪುನಃ ಉತ್ಪತ್ತಿಯನ್ನು ಹೊಂದುವ ಜೀವನು ಕರ್ಮ ಮಯನಾದ ಪುರುಷ ಎಂದು ತಿಳಿ. ಜ್ಞಾನ ಮಾರ್ಗವನ್ನು ಬಿಟ್ಟು ಕರ್ಮ ಮಾರ್ಗದಲ್ಲೇ ಸಾಗುವ ವ್ಯಕ್ತಿಯು ಅಮಾವಾಸ್ಯೆಯ ಚಂದ್ರನಂತೆ ಹ್ರಾಸವನ್ನು, ಹುಣ್ಣಿಮೆಯ ಚಂದ್ರನಂತೆ ವೃದ್ಧಿಯನ್ನು ಅರ್ಥಾತ್ ಹುಟ್ಟು-ಸಾವುಗಳನ್ನು ಹೊಂದುತ್ತಲೇ ಇರುತ್ತಾನೆ. ಸುಖ-ದುಃಖಗಳನ್ನು ಅನುಭವಿಸುತ್ತಿರುತ್ತಾನೆ ಎಂದು ಭಾವ.
ತದೇತದೃಷಿಣಾ ಪ್ರೋಕ್ತಂ ವಿಸ್ತರೇಣಾನುಮೀಯತೇ |
ನವಜಂ ಶಶಿನಂ ದೃಷ್ಟ್ವಾ ವಕ್ರಂ ತಂತುಮಿವಾಂಬರೇ ॥16॥
ಈ ವಿಷಯವನ್ನೇ ಮಹರ್ಷಿಗಳೊಬ್ಬರು ವಿಸ್ತಾರವಾಗಿ ಹೇಳಿದ್ದಾರೆ. ಅಮಾವಾಸ್ಯೆಯ ಬಳಿಕ ಪ್ರತಿಪದೆಯ ರಾತ್ರಿಯಲ್ಲಿ ಉದಯಮಾನನಾದ ಚಂದ್ರನನ್ನು ನೋಡಿದಾಗ ಆ ಚಂದ್ರನು ವಕ್ರವಾಗಿ ಇಟ್ಟ ದಾರದಂತೆ ಕಾಣಿಸುತ್ತಾನೆ. ಅದನ್ನು ಕಂಡು ವಕ್ರ ದಾರದಂತೆ ಇರುವ ವ್ಯಕ್ತಿಯೇ ಚಂದ್ರನೆಂದು ಅನುಮಾನ ಮಾಡುತ್ತಾರೆ.
ಏಕಾದಶವಿಕಾರಾತ್ಮಾ ಕಲಾಸಂಭಾರಸಂಭೃತಃ |
ಮೂರ್ತಿಮಾನಿತಿ ತಂ ವಿದ್ಧಿ ತಾತ ಕರ್ಮಗುಣಾತ್ಮಕಮ್ ॥17॥
ಇದರಂತೆ ಹದಿನಾರು ಕಲೆಗಳ ಭಾರವನ್ನು ಧರಿಸಿರುವ ಚಂದ್ರನಮ್ತೆ, ಕರ್ಮಾಸಕ್ತನಾದ ಮನುಷ್ಯನು ಹನ್ನೊಂದು ವಿಕಾರಗಳಿಂದ ಅರ್ಥಾತ್ ಏಕಾದಶ ಇಂದ್ರಿಯಗಳ ವಿಕಾರಗಳಿಂದ ಕೂಡಿದವನಾಗಿ ಪ್ರತಿಪತ್‌ನ ಚಂದ್ರನ ರೂಪದಲ್ಲಿ ಜನ್ಮವನ್ನು ತಾಳುತ್ತಾನೆ. ಅರ್ಥಾತ್ ತ್ರಿಗುಣಾತ್ಮಕವಾದ ಶರೀರವನ್ನು ಹೊಂದುತ್ತಾನೆ. ಚಂದ್ರನಿಗೆ ವೃದ್ಧಿ-ಕ್ಷಯವಿರುವಂತೆ ಕರ್ಮಠನಾದ ಮನುಷ್ಯನಿಗೂ ವೃದ್ಧಿ-ಕ್ಷಯಗಳು ನಿರಂತರ ಒದಗಿ ಬರುತ್ತವೆ.
ತಸ್ಮಿನ್ ಯಃ ಸಂಸ್ಥಿತೋ ಹ್ಯಗ್ನಿರ್ನಿತ್ಯಂ ಸ್ಥಾಲ್ಯಾಮಿವಾಹಿತಃ |
ಆತ್ಮಾನಂ ತಂ ವಿಜಾನೀಹಿ ನಿತ್ಯಂ ತ್ಯಾಗಜಿತಾತ್ಮಕಮ್ ॥18॥
ಯಾವನು ಜ್ಞಾನಮಾರ್ಗವನ್ನೇ ಅನುಸರಿಸುತ್ತಾನೋ ಅವನು ಸೂರ್ಯ ಮಂಡಲದಲ್ಲಿ ಉಷ್ಣಭಾಸ್ವರತೇಜೋರೂಪದ ಬೆಂಕಿಯು ಯಾವಾಗಲೂ ವಿಕಾರ ರಹಿತವಾಗಿ ಇರುತ್ತದೋ ಇದರಂತೆ ನಿತ್ಯವೂ ಏಕಪ್ರಕಾರದಲ್ಲಿರುವ ಪರಮಾತ್ಮನನ್ನು ತಿಳಿದವನು ನಿರ್ವಿಕಾರಿಯಾಗಿ, ಜನನ-ಮರಣ ರಹಿತನಾಗಿ ಒಂದೇ ಕ್ರಮದಲ್ಲಿ ಇರುತ್ತಾನೆ ಎಂದು ತಿಳಿ.
ತಮೋ ರಜಶ್ಚ ಸತ್ತ್ವಂ ಚ ವಿದ್ಧಿ ಜೀವಗುಣಾತ್ಮಕಂ |
ಜೀವಮಾತ್ಮಗುಣಂ ವಿದ್ಯಾದಾತ್ಮಾನಂ ಪರಮಾತ್ಮನಃ ॥19॥
ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳು ಜೀವನ ಗುಣಗಳೆಂದು ತಿಳಿ ಹೊರತು ಇವುಗಳು ಪರಮಾತ್ಮನ ಗುಣಗಳಲ್ಲ. ಈ ಮೂರು ಗುಣಗಳು ಜೀವನಿಗೆ ತಾತ್ಕಾಲಿಕವಾಗಿವೆಯೇ ಹೊರತು ಸ್ವಭಾವಭೂತವಾದವುಗಳಲ್ಲ. ಜೀವನು ಅಂತರ್ಯಾಮಿಯಾದ ಗುಣಗಳಂತೆ ಗುಣಗಳನ್ನು ಹೊಂದಿರುತ್ತಾನೆ. ಎಂದಿಗೂ ಪ್ರತಿಬಿಂಬವು ಬಿಂಬದ ಸಾದೃಶ್ಯವನ್ನು ಹೊಂದಿರುತ್ತದೆ. ಅಂತರ್ಯಾಮಿಯಾದ ಪರಮಾತ್ಮನಾದರೂ ತನ್ನ ಮೂಲರೂಪದಂತೆ ಗುಣಗಳನ್ನು ಹೊಂದಿರುತ್ತಾನೆ ಎಂದು ತಿಳಿ.
ಅಚೇತನಂ ಜೀವಗುಣಂ ವದಂತಿ
ಸ ಚೇಷ್ಟತೇ ಚೇಷ್ಟಯತೇ ಚ ಸರ್ವಮ್ |
ತತಃ ಪರಂ ಕ್ಷೇತ್ರವಿದೋ ವದಂತಿ
ಪ್ರಾವರ್ತಯದ್ಯೋ ಭುವನಾನಿ ಸಪ್ತ ॥20॥
ಜ್ಞಾನಿಗಳು ಜೀವನಲ್ಲಿರುವ ಚೈತನ್ಯಕ್ಕೂ ಪರಮಾತ್ಮನೇ ಕಾರಣನಾದುದರಿಂದ ಪರಮಾತ್ಮನ ಅಧೀನವಾಗಿ ಚೈತನ್ಯ ಹೊಂದಿರುವ ಜೀವನನ್ನು ಅಚೇತನನದಂತೆ ವ್ಯವಹರಿಸುತ್ತಾರೆ. ಪರಮಾತ್ಮನಾದರೂ ಸ್ವತಂತ್ರವಾಗಿ ಚೇಷ್ಟೆ ಮಾಡುತ್ತಾನೆ. ಜೀವ ಜಡಾತ್ಮಕವಾದ ಜಗತ್ತನ್ನು ಇವನೇ ಬದುಕಿಸುತ್ತಾನೆ. ಆ ಕಾರಣದಿಂದ ಜ್ಞಾನಿಗಳು ಪರಮಾತ್ಮನನ್ನು ಜೀವ-ಜಡಾತ್ಮಕ ಜಗತ್ತಿಗಿಂತಲೂ ಅತ್ಯಂತ ಭಿನ್ನನೆಂದೂ, ಉತ್ತಮನೆಂದೂ ಹೇಳುತ್ತಾರೆ. ಹದಿನಾಲ್ಕು ಲೋಕಗಳನ್ನು ಸೃಷ್ಟಿಸುವ ಪರಮಾತ್ಮನನ್ನು ಸರ್ವೋತ್ತಮನೆಂದೂ ಹೇಳುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೇಳನೆಯ ಅಧ್ಯಾಯ
ವ್ಯಾಸರು ಶುಕರನ್ನು ಕುರಿತು ಬ್ರಹ್ಮಚರ್ಯದ ಮಹತ್ವವನ್ನು ತಿಳಿಸಿದುದು.

ಶುಕಃ
ಕ್ಷರಾತ್ ಪ್ರಭೃತಿ ಯಃ ಸರ್ಗಃ ಸಗುಣಾನೀಂದ್ರಿಯಾಣಿ ಚ |
ಬುದ್ಧ್ಯೈಶ್ವರ್ಯಾಭಿಸರ್ಗಾರ್ಥಂ ಯದ್ ಧ್ಯಾನಂ ಚಾತ್ಮನಃ ಶುಭಮ್ ||
ತಂದೆಯೇ, ಭಗವಂತನಿಂದ ಉಂಟಾದ ಕ್ಷರ ಮೊದಲಾದ ಇಪ್ಪತ್ನಾಲ್ಕು ತತ್ತ್ವಗಳ ಸೃಷ್ಟಿಯನ್ನು ವಿವರಿಸಿರಿ. ಪುನಃ ಜೀವನಿಗೆ ಪ್ರತ್ಯೇಕವಾಗಿ ವಿಷಯೇಂದ್ರಿಯಗಳ ಸಂಗ್ರಹದಿಂದ ಉಂಟಾಗುವ ವಿಶೇಷ ಸೃಷ್ಟಿಯನ್ನು ವಿವರಿಸಿರಿ. ಇವುಗಳಲ್ಲಿ ಜೀವರ ಸೃಷ್ಟಿಯು ಬುದ್ಧಿಯ ಪ್ರಭುತ್ವಕ್ಕೆ ಒಳಪಟ್ಟದ್ದು. ಸಾಮಾನ್ಯ ಸೃಷ್ಟಿಗಿಂತಲೂ ವಿಶೇಷ ಸೃಷ್ಟಿ ಎನಿಸಿದ ಈ ಆತ್ಮನ ಉತ್ಪತ್ತಿಯು ಅತ್ಯಂತ ಮಂಗಳಕರವಾದ ಭಗವಂತನ ಧ್ಯಾನಯೋಗವಾದ ಇದು ಶ್ರೇಷ್ಠವಾದುದೆಂದು ಭಾವಿಸಿದ್ದೇನೆ.
ಭೂಯ ಏವ ತು ಲೋಕೇಽಸ್ಮಿನ್ ಸದ್ವೃತ್ತಿಂ ವೃತ್ತಿಹೈತುಕೀಮ್ |
ಯಯಾ ಸಂತಃ ಪ್ರವರ್ತಂತೇ ತದಿಚ್ಛಾಮ್ಯನುವರ್ಣಿತಮ್ ||2||
ಈ ಲೋಕದಲ್ಲಿ ಸಜ್ಜನರು ಯಾವ ವೃತ್ತಿಯನ್ನು ಪ್ರಾಮಾಣಿಕ ಎಂದು ನಂಬಿ ಪ್ರವರ್ತಿಸುತ್ತಿದ್ದಾರೋ ಅಂತಹ ಕಾಲೋಚಿತವಾದ ಸತ್ಪುರುಷರ ಮಾರ್ಗವನ್ನೇ ನಾನೂ ಅನುಸರಿಸಲು ಇಚ್ಛಿಸಿದ್ದೇನೆ.
ವೇದೇ ವಚನಮುಕ್ತಂ ತು ಕುರು ಕರ್ಮ ತ್ಯಜೇತಿ ಚ |
ಕಥಮೇತದ್ ವಿಜಾನೀಯಾಂ ತಚ್ಚ ವ್ಯಾಖ್ಯಾತುಮರ್ಹಸಿ ||3||
ಕರ್ಮ ಮಾಡು, ಕರ್ಮವನ್ನು ತ್ಯಜಿಸು ಎಂಬ ಎರಡೂ ವಾಕ್ಯಗಳು ವೇದದಲ್ಲಿ ಇವೆ. ಯಾವ ಕರ್ಮವನ್ನು ಮಾಡಬೇಕು, ಯಾವ ಕರ್ಮವನ್ನು ಬಿಡಬೇಕು ಎಂಬುದನ್ನು ನೀನೇ ವಿವರಿಸಿ ತಿಳಿಸು.
ಲೋಕವೃತ್ತಾಂತತತ್ತ್ವಜ್ಞಃ ಪೂತೋಽಹಂ ಗುರುಶಾಸನಾತ್ |
ಕೃತ್ವಾ ಬುದ್ಧಿಂ ವಿಯುಕ್ತಾತ್ಮಾ ತ್ಯಕ್ಷ್ಯಾಮ್ಯಾತ್ಮಾನಮವ್ಯಥಃ ||4||
ತಂದೆಯೇ, ನಿಮ್ಮಂತಹ ಗುರುಗಳ ಉಪದೇಶದಿಂದಲೇ ನಾನು ಪವಿತ್ರನಾಗಿದ್ದೇನೆ. ಲೋಕವೃತ್ತಾಂತದ ತತ್ತ್ವವನ್ನು ತಿಳಿದವನಾಗಿದ್ದೇನೆ. ನಿಮ್ಮ ಉಪದೇಶದಿಂದಲೇ ಧರ್ಮಾಚರಣೆಯಿಂದ ಬುದ್ಧಿಯನ್ನು ಸಂಸ್ಕರಿಸಿಕೊಂಡು, ದೇಹಾಭಿಮಾನವನ್ನು ತೊರೆದು, ಅವಿನಾಶಿಯಾದ ಪರಮಾತ್ಮನನ್ನು ನೋಡಬಯಸುತ್ತೇನೆ.
ವ್ಯಾಸಃ
ಯೈಷಾ ವೈ ವಿಹಿತಾ ವೃತ್ತಿಃ ಪುರಸ್ತಾದ್ಬ್ರಹ್ಮಣಾ ಸ್ವಯಮ್ |
ಏಷಾ ಪೂರ್ವತರೈಃ ಸದ್ಭಿರಾಚೀರ್ಣಾ ಪರಮರ್ಷಿಭಿಃ ||5||
ಶುಕದೇವನೇ, ಹಿಂದೆ ಬ್ರಹ್ಮನು ತಾನಾಗಿ ವಿಧಿಸಿದ ಬ್ರಹ್ಮಚರ್ಯ ಎಂಬ ವೃತ್ತಿಯನ್ನು ಅನೇಕ ಋಷಿಗಳು ಆಚರಿಸಿದ್ದಾರೆ.
ಬ್ರಹ್ಮಚರ್ಯೇಣ ವೈ ಲೋಕಾನ್ ಜಯಂತಿ ಪರಮರ್ಷಯಃ |
ಆತ್ಮನಶ್ಚ ಹೃದಿ ಶ್ರೇಯಸ್ತ್ವನ್ವಿಚ್ಛ ಮನಸಾತ್ಮನಿ ||6||
ಆ ಬ್ರಹ್ಮಚರ್ಯ ವ್ರತದಿಂದಲೇ ಅವರು ಸಮಸ್ತ ಲೋಕಗಳನ್ನು ಜಯಿಸಿರುತ್ತಾರೆ. ಅವರು ತಮ್ಮ ಶ್ರೇಯಸ್ಸಿಗಾಗಿ ಮನಸ್ಸನ್ನು ಬುದ್ಧಿಯಿಂದ ನಿಯಂತ್ರಿಸಿಕೊಳ್ಳುತ್ತಾರೆ.
ವನೇ ಮೂಲಫಲಾಶೀ ಚ ತಪ್ಯನ್ ಸುವಿಪುಲಂ ತಪಃ |
ಪುಣ್ಯಾಯತನಚಾರೀ ಚ ಭೂತಾನಾಮವಿಹಿಂಸಕಃ ||7||
ಅರಣ್ಯದಲ್ಲಿ ವಾಸ ಮಾಡಿಕೊಂಡು, ಶ್ರೇಷ್ಠವಾದ ತಪಸ್ಸನ್ನು ಮಾಡುತ್ತಾ, ಫಲ-ಮೂಲಗಳನ್ನೇ ಆಹಾರವನ್ನಾಗಿಸಿಕೊಂಡು ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುತ್ತಾರೆ. ಪ್ರಾಣಿಹಿಂಸೆಯಿಂದ ವಿಮುಖರಾಗಿರುತ್ತಾರೆ.
ವಿಧೂಮೇ ಸನ್ನಮುಸಲೇ ವಾನಪ್ರಸ್ಥಪ್ರತಿಶ್ರಯೇ |
ಕಾಲೇ ಪ್ರಾಪ್ತೇ ಚರನ್ ಭೈಕ್ಷಂ ಕಲ್ಪತೇ ಬ್ರಹ್ಮಭೂಯಸೇ ||8||
ಬೆಂಕಿಯ ಹೊಗೆಯಾಗಲಿ, ಒನಕೆಯ ಶಬ್ದವಾಗಲಿ ಇಲ್ಲದಂಥ ಶಾಂತವಾದ ಮನೆಗಳಲ್ಲಿ ವಾಸ ಮಾಡಿಕೊಂಡು, ಭೋಜನಕಾಲವು ಸನ್ನಿಹಿತವಾದಾಗ ಭಿಕ್ಷಾಟನೆಯನ್ನು ಮಾಡಿ, ದೇಹವನ್ನು ಧರಿಸಿಕೊಂಡು ಸಂಚರಿಸುತ್ತಾರೆ. ಇವರು ಪರಬ್ರಹ್ಮನನ್ನು ಹೊಂದಲು ಅರ್ಹರಾಗಿರುತ್ತಾರೆ.
ನಿಃಸ್ತುತಿರ್ನಿರ್ನಮಸ್ಕಾರಃ ಪರಿತ್ಯಜ್ಯ ಶುಭಾಶುಭೇ |
ಅರಣ್ಯೇ ವಿಚರೈಕಾಕೀ ಯೇನ ಕೇನಚಿದಾಶಿತಃ ||9||
ಶುಕದೇವನೇ, ನೀನೂ ಸಹ ಇತರರು ಮಾಡುವ ಸ್ತೋತ್ರಗಳಿಂದ, ನಮಸ್ಕಾರಗಳಿಂದ ವಿಮುಖನಾಗಿ, ಶುಭಾಶುಭಗಳನ್ನು ತ್ಯಜಿಸಿ ಅರಣ್ಯದಲ್ಲಿ ಸಂಚರಿಸುತ್ತಾ, ಸಿಕ್ಕಿದ್ದನ್ನು ಸಿಕ್ಕಿದಲ್ಲಿ ಭುಂಜಿಸುತ್ತಾ ಸಂಚರಿಸುತ್ತಿರು.
ಶುಕಃ
ಯದಿದಂ ವೇದವಚನಂ ಲೋಕವಾದೇ ವಿರುಧ್ಯತೇ |
ಪ್ರಮಾಣೇ ಚಾಪ್ರಮಾಣೇ ಚ ವಿರುದ್ಧೇ ಶಾಸ್ತ್ರತಾ ಕುತಃ ||10||
ತಂದೆಯೇ, ವೇದಗಳಲ್ಲಿ ಕರ್ಮ ಮಾಡು, ಕರ್ಮ ಮಾಡಬೇಡ ಎಂಬ ಎರಡು ಪ್ರಕಾರವಾದ ವಾಕ್ಯಗಳಿವೆ. ಲೋಕದ ದೃಷ್ಟಿಯಿಂದ ಅವುಗಳು ವಿರುದ್ಧವಾದಂತೆ ಕಾಣಿಸುತ್ತವೆ. ಈ ವಾಕ್ಯಗಳು ಪ್ರಮಾಣವೋ ಅಪ್ರಮಾಣವೋ? ಪ್ರಮಾಣವೆಂದರೆ ಪರಸ್ಪರ ವಿರುದ್ಧವಾದ ವಿಚಾರವನ್ನು ಹೇಳುವ ಶಾಸ್ತ್ರವು ಹೇಗೆ ಶಾಸ್ತ್ರತ್ವವನ್ನು ಹೊಂದುತ್ತದೆ?
ಇತ್ಯೇತಚ್ಛ್ರೋತುಮಿಚ್ಛಾಮಿ ಭಗವಾನ್ ಪ್ರಬ್ರವೀತು ಮೇ |
ಕರ್ಮಣಾಮವಿರೋಧೇನ ಕಥಮೇತತ್ ಪ್ರವರ್ತತೇ ||11||
ಹೀಗೆ ಕರ್ಮಗಳಿಗೆ ವಿರೋಧವಿಲ್ಲದಂತೆ ಶಾಸ್ತ್ರದ ಪ್ರಕಾರ ಕರ್ಮಗಳನ್ನು ಮಾಡಿದರೆ ಮೋಕ್ಷಪ್ರಾಪ್ತಿಯು ಹೇಗಾಗುತ್ತದೆ ಎನ್ನುವ

ವಿಚಾರವನ್ನು ನಿಮ್ಮಿಂದ ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಇತ್ಯುಕ್ತಃ ಪ್ರತ್ಯುವಾಚೇದಂ ಗಂಧವತ್ಯಾಃ ಸುತಃ ಸುತಮ್ |
ಋಷಿಸ್ತತ್ಪೂಜಯನ್ವಾಕ್ಯಂ ಪುತ್ರಸ್ಯಾಮಿತತೇಜಸಃ ॥12॥
ಯುಧಿಷ್ಠಿರನೇ, ಶುಕಮುನಿಯು ಹೀಗೆ ಪ್ರಶ್ನಿಸಿದಾಗ ಯೋಜನ ಗಂಧಿಯ ಮಗನಾದ ವ್ಯಾಸಮಹರ್ಷಿಯು ಮಹಾತೇಜಸ್ವಿಯಾದ ಮಗನ ಪ್ರಶ್ನೆಯನ್ನು ಪ್ರಶಂಸಿಸುತ್ತಾ ಉತ್ತರವನ್ನು ನೀಡಿದರು.
ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋಽಥ ಭಿಕ್ಷುಕಃ |
ಯಥೋಕ್ತಕಾರಿಣಃ ಸರ್ವೇ ಗಚ್ಛಂತಿ ಪರಮಾಂ ಗತಿಮ್ ॥13॥
ಶುಕನೇ, ಗೃಹಸ್ಥನಾಗಲಿ, ಬ್ರಹ್ಮಚಾರಿಯಾಗಲೀ, ವಾನಪ್ರಸ್ಥ-ಸಂನ್ಯಾಸಿಗಳಾಗಲಿ ತಮ್ಮ ತಮ್ಮ ಆಶ್ರಮಕ್ಕೆ ವಿಹಿತವಾದ ಶಾಸ್ತ್ರೋಕ್ತ ಕರ್ಮಗಳನ್ನೇ ಮಾಡುತ್ತಿದ್ದರೆ ಅವರು ಉತ್ತಮ ಗತಿಯನ್ನು ಹೊಂದುತ್ತಾರೆ.
ಏಕೋ ಯ ಆಶ್ರಮಾನೇತಾನನುತಿಷ್ಠೇದ್ಯಥಾವಿಧಿ |
ಅಕಾಮದ್ವೇಷಸಂಯುಕ್ತಃ ಸ ಪರತ್ರ ಮಹೀಯತೇ ॥14॥
ಒಬ್ಬನೇ ಪುರುಷನು ರಾಗ-ದ್ವೇಷಗಳನ್ನು ತೊರೆದು ಶಾಸ್ತ್ರವಿಧಿಗನುಗುಣವಾಗಿ ಆಶ್ರಮಧರ್ಮಗಳನ್ನು ಪರಿಪಾಲಿಸಿದರೆ ಪರಮಗತಿಯನ್ನು ಹೊಂದುತ್ತಾನೆ.
ಚತುಷ್ಪದೀ ಹಿ ನಿಃಶ್ರೇಣೀ ಬ್ರಹ್ಮಣ್ಯೇಷಾ ಪ್ರತಿಷ್ಠಿತಾ |
ಏತಾಮಾಶ್ರಿತ್ಯ ನಿಃಶ್ರೇಣೀಂ ಬ್ರಹ್ಮಲೋಕೇ ಮಹೀಯತೇ ॥15॥
ನಾಲ್ಕು ಆಶ್ರಮಗಳು ಭಗವಂತನಿಂದಲೇ ಪ್ರತಿಷ್ಠಿತವಾಗಿವೆ. ಈ ನಾಲ್ಕು ಆಶ್ರಮಗಳು ಭಗವಂತನ ಬಳಿ ಸಾಗಲು ನಾಲ್ಕು ಪಾದಗಳಿಂದ ಕೂಡಿರುವ ಏಣಿಯಂತೆ ಇವೆ. ಇವುಗಳನ್ನು ಏರಿ ಹೋದವನು ಬ್ರಹ್ಮಲೋಕದಲ್ಲಿ ಪೂಜಿತನಾಗುತ್ತಾನೆ.
ಆಯುಷಸ್ತು ಚತುರ್ಭಾಗಂ ಬ್ರಹ್ಮಚಾರ್ಯನಸೂಯಕಃ |
ಗುರೌ ವಾ ಗುರುಪುತ್ರೇ ವಾ ವಸೇದ್ಧರ್ಮಾರ್ಥಕೋವಿದಃ ॥16॥
ಬ್ರಹ್ಮಚಾರಿಯು ಆಯುಷ್ಯದ ಕಾಲುಭಾಗವನ್ನು ಬ್ರಹ್ಮಚರ್ಯವ್ರತಕ್ಕಾಗಿ ಮೀಸಲಾಗಿಟ್ಟು ಗುರುವಿನ ಬಳಿಯಾಗಲೀ, ಗುರುಪುತ್ರನ ಬಳಿಯಲ್ಲಾಗಲೀ ವಾಸವಾಗಿದ್ದು, ಧರ್ಮಾರ್ಥಗಳಲ್ಲಿ ಆಸಕ್ತನಾಗಿ, ಗುರುಶುಶ್ರೂಷೆಯಲ್ಲಿ ನಿರತನಾಗಿರಬೇಕು.
ಕರ್ಮಾತಿರೇಕೇಣ ಗುರೋರಧ್ಯೇತವ್ಯಂ ಬುಭೂಷತಾ |
ದಕ್ಷಿಣೋ ನಾಪವಾದೀ ಸ್ಯಾದಾಹೂತೋ ಗುರುಮಾಶ್ರಯೇತ್ ॥17॥
ವಿದ್ಯಾಭಿಲಾಷಿಯಾದ ಬ್ರಹ್ಮಚಾರಿಯು ಗುರುಗಳ ಸೇವೆಯ ಕಾರ್ಯವು ಪೂರ್ಣವಾದ ಬಳಿಕ ಅವರ ಬಳಿ ಕುಳಿತು ಅಧ್ಯಯನವನ್ನು ಮಾಡಬೇಕು. ಯಾವಾಗಲೂ ಎಲ್ಲರ ವಿಷಯದಲ್ಲಿಯೂ ಉದಾರಿಯಾಗಿರಬೇಕು. ಯಾರ ಮೇಲೂ ಕಳಂಕವನ್ನು ಅರ್ಥಾತ್ ಚಾಡಿಯನ್ನು ಹೇಳಬಾರದು. ಗುರುಗಳು ಕರೆದ ಕೂಡಲೇ ಅವರ ಸೇವೆಗೆ ಸಿದ್ಧನಾಗಿರಬೇಕು. ಗುರುಗಳು ಕರೆದಾಗ ಅಧ್ಯಯನಕ್ಕೆ ಸಾಗಬೇಕು.
ಜಘನ್ಯಶಾಯೀ ಪೂರ್ವಂ ಸ್ಯಾದುತ್ಥಾಯೀ ಗುರುವೇಶ್ಮನಿ |
ಯಚ್ಚ ಶಿಷ್ಯೇಣ ಕರ್ತವ್ಯಂ ಕಾರ್ಯಂ ದಾಸೇನ ವಾ ಪುನಃ ॥18॥
ಗುರುಗಳು ಮಲಗಿದ ಬಳಿಕ ಮಲಗಬೇಕು. ಗುರುಗಳು ಮಲಗಿದ ಸ್ಥಳಕ್ಕಿಂತ ತಗ್ಗಾದ ಸ್ಥಳದಲ್ಲಿ ಮಲಗಬೇಕು. ಗುರುಗಳು ಏಳುವುದಕ್ಕಿಂತಲೂ ಮೊದಲೇ ಎದ್ದು, ಗುರುಗಳ ಮನೆಯಲ್ಲಿ ಶಿಷ್ಯನು ಮಾಡಬೇಕಾದ ಸಮಸ್ತ ಕಾರ್ಯಗಳನ್ನು ಅಥವಾ ದಾಸನು ಮಾಡಬೇಕಾದ ಕಾರ್ಯಗಳನ್ನು ಮಾಡಬೇಕು.
ಕೃತಮಿತ್ಯೇವ ತತ್ ಸರ್ವಂ ಕೃತ್ವಾ ತಿಷ್ಠೇತ ಪಾರ್ಶ್ವತಃ |
ಕಿಂಕರಃ ಸರ್ವಕಾರೀ ಚ ಸರ್ವಕರ್ಮಸು ಕೋವಿದಃ ॥19॥
ಗುರುಗಳು ಆದೇಶಿಸಿದಾಗ ಅವರ ಆಜ್ಞೆಯನ್ನು ಶೀಘ್ರವಾಗಿ ಮಾಡಿ ಮುಗಿಸಿ ಗುರುಗಳೇ ನಾನು ಈ ಕಾರ್ಯವನ್ನು ಮಾಡಿದ್ದೇನೆ ಎಂದು ಹೇಳಿ ಅವರ ಪಕ್ಕದಲ್ಲಿ ಮುಂದಿನ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಲ್ಲಬೇಕು. ಗುರುಗಳು ಹೇಳಿದ ಎಲ್ಲಾ ಕಾರ್ಯಗಳನ್ನು ಸೇವಕನಂತೆ ಕುಶಲನಾಗಿ ಮಾಡಿ ಮುಗಿಸಬೇಕು.
ಶುಚಿರ್ದಕ್ಷೋ ಗುಣೋಪೇತೋ ಬ್ರೂಯಾದಿಷ್ಟಮಿವಾತ್ತರಃ |
ಚಕ್ಷುಷಾ ಗುರುಮವ್ಯಗ್ರೋ ನಿರೀಕ್ಷೇತ ಜಿತೇಂದ್ರಿಯಃ ॥20॥
ಬ್ರಹ್ಮಚಾರಿಯು ಅಂತರಂಗ, ಬಹಿರಂಗ ಶುದ್ಧಿಯುಳ್ಳವನಾಗಿರಬೇಕು. ದಕ್ಷನಾಗಿರಬೇಕು. ಗುಣವಂತನಾಗಿರಬೇಕು. ಮನಸ್ಸಿನಲ್ಲಿ ಸದ್ಭಾವನೆಯನ್ನಿಟ್ಟುಕೊಂಡು ಪ್ರಿಯವಾದ ಮಾತುಗಳನ್ನೇ ಸ್ನೇಹಿತರಲ್ಲಿ ಆಡಬೇಕು. ಜಿತೇಂದ್ರಿಯನಾಗಿ, ಏಕಾಗ್ರಚಿತ್ತನಾಗಿ, ಭಕ್ತಿಪೂರ್ಣವಾದ ದೃಷ್ಟಿಯಿಂದ ಗುರುಗಳನ್ನು ನೋಡಬೇಕು. ಎಂದಿಗೂ ಸಿಟ್ಟಿನಿಂದ ಗುರುಗಳನ್ನು ನೋಡಬಾರದು.
ನಾಭುಕ್ತವತಿ ಚಾಶ್ನೀಯಾದಪೀತವತಿ ನೋ ಪಿಬೇತ್ |
ನಾತಿತಿಷ್ಠತಿ ತಥಾಸೀತ ನಾಸುಪ್ತೇ ಪ್ರಸ್ವಪೇತ ಚ ॥21॥
ಗುರುಗಳು ಊಟ ಮಾಡದೆ ತಾನು ಊಟ ಮಾಡಬಾರದು. ಗುರುಗಳು ನೀರು ಪಾನ ಮಾಡದಿದ್ದಲ್ಲಿ ತಾನೂ ಕುಡಿಯಬಾರದು. ಗುರುಗಳು ನಿದ್ರೆಯಿಂದ ಏಳದಿದ್ದಾಗ ತಾನು ಗುರುಗಳಿಗೆ ನಿದ್ರಾಭಂಗವಾಗದಂತೆ ನೋಡಿಕೊಳ್ಳಬೇಕು.
ಉತ್ತಾನಾಭ್ಯಾಂ ಚ ಪಾಣಿಭ್ಯಾಂ ಪಾದಾವಸ್ಯ ಮೃದು ಸ್ಪೃಶೇತ್ |
ದಕ್ಷಿಣಂ ದಕ್ಷಿಣೇನೈವ ಸವ್ಯಂ ಸವ್ಯೇನ ಪೀಡಯೇತ್ ॥22॥
ಎರಡು ಕೈಗಳನ್ನು ಮೇಲಕ್ಕೆತ್ತಿ ಗುರುಗಳ ಎರಡು ಪಾದಗಳನ್ನು ಮೃದುವಾಗಿ ಮುಟ್ಟಬೇಕು. ಬಲಗೈಯಿಂದ ಗುರುಗಳ ಬಲಗಾಲನ್ನು,

ಎಡಗೈಯಿಂದ ಗುರುಗಳ ಎಡಕಾಲನ್ನು ಒತ್ತಬೇಕು.
ಅಭಿವಾದ್ಯ ಗುರುಂ ಬ್ರೂಯಾದಧೀಷ್ವ ಭಗವನ್ನಿತಿ |
ಇದಂ ಕರಿಷ್ಯೇ ಭಗವನ್ನಿದಂ ಚಾಪಿ ಕೃತಂ ಮಯಾ ||23||
ಗುರುಗಳಿಗೆ ಅಭಿವಾದನ ಮಾಡಿ ಕೈಜೋಡಿಸಿಕೊಂಡು ಭಗವನ್, ನನಗೆ ವಿದ್ಯೆಯನ್ನು ಹೇಳಿಕೊಡಿ. ತಮ್ಮ ಈ ಕೆಲಸವನ್ನು ಮಾಡಿ ಮುಗಿಸಿದ್ದೇನೆ. ತಾವು ಹೇಳಿದ ಈ ಕೆಲಸವನ್ನು ಮುಂದೆ ಮಾಡುತ್ತೇನೆ. ನೀವು ಮುಂದೆ ಹೇಳಲಿರುವ ಕಾರ್ಯವನ್ನೂ ಮಾಡುತ್ತೇನೆ ಎಂದು ಪ್ರಾರ್ಥಿಸಬೇಕು.
ಇತಿ ಸರ್ವಮನುಜ್ಞಾಪ್ಯ ನಿವೇದ್ಯ ಗುರವೇ ಧನಮ್ |
ಕುರ್ಯಾತ್ಕೃತ್ವಾ ಚ ತತ್ ಸರ್ವಮಾಖ್ಯೇಯಂ ಗುರವೇ ಪುನಃ ||24||
ಹೀಗೆ ಎಲ್ಲ ವಿಷಯಗಳನ್ನು ಯಥಾ ವಿಧಿಯಾಗಿ ಗುರುಗಳಿಗೆ ಹೇಳುತ್ತಾ ಅವರಿಂದ ಅನುಜ್ಞೆಯನ್ನು ಪಡೆದು, ಅವರು ಹೇಳಿದ ಕಾರ್ಯಗಳನ್ನು ಮಾಡಿ ಮುಗಿಸಿ, ನಡೆದ ಕಾರ್ಯಗಳನ್ನೆಲ್ಲ ಮಾಡಿ ಮುಗಿಸಿ, ಪುನಃ ಗುರುಗಳ ಬಳಿಗೆ ಹೋಗಿ ನಡೆದ ಕಾರ್ಯದ ಬಗ್ಗೆ ಮಾಹಿತಿಯನ್ನು ನೀಡಬೇಕು.
ಯಾಂಸ್ತು ಗಂಧಾನ್ ರಸಾನ್ ವಾಪಿ ಬ್ರಹ್ಮಚಾರೀ ನ ಸೇವತೇ |
ಸೇವೇತ ತಾನ್ ಸಮಾವೃತ್ತ ಇತಿ ಧರ್ಮೇಷು ನಿಶ್ಚಯಃ ||25||
ವಿಧವಿಧವಾದ ಗಂಧಗಳನ್ನಾಗಲಿ, ಷಡ್ರಸಗಳಿಂದ ಕೂಡಿದ ಅನ್ನವನ್ನಾಗಲೀ ಬ್ರಹ್ಮಚಾರಿಯು ಸೇವನೆ ಮಾಡಬಾರದು. ಸಮಾವರ್ತನವಾದ ಬಳಿಕ ಇವುಗಳನ್ನು ಸೇವಿಸಬೇಕೆಂದು ಧರ್ಮಶಾಸ್ತ್ರಗಳ ನಿರ್ಣಯವಾಗಿದೆ.
ಯೇ ಕೇಚಿದ್ ವಿಸ್ತರೇಣೋಕ್ತಾ ನಿಯಮಾ ಬ್ರಹ್ಮಚಾರಿಣಃ |
ತಾನ್ ಸರ್ವಾನನುಗೃಹ್ಣೀಯಾದ್ ಭವೇಚ್ಚಾನಪಗೋ ಗುರೋಃ ||26||
ಬ್ರಹ್ಮಚಾರಿಯು ಅನುಸರಿಸಬೇಕಾದ ನಿಯಮಗಳು ಶಾಸ್ತ್ರಗಳಲ್ಲಿ ಹೇಗೆ ಹೇಳಲ್ಪಟ್ಟಿವೆಯೋ ಅವುಗಳನ್ನು ಕಟ್ಟುನಿಟ್ಟಾಗಿ ಬ್ರಹ್ಮಚಾರಿಯು ಅನುಷ್ಠಾನ ಮಾಡಬೇಕು. ಯಾವಾಗಲೂ ಗುರುಗಳ ಸಮೀಪದಲ್ಲೇ ಇರಬೇಕು.
ಸ ಏವಂ ಗುರವೇ ಪ್ರೀತಿಮುಪಹೃತ್ಯ ಯಥಾಬಲಮ್ |
ಆಶ್ರಮೇಷ್ವಾಶ್ರಮೇಷ್ವೇವಂ ಶಿಷ್ಯೋ ವರ್ತೇತ ಕರ್ಮಣಾ ||27||
ಈ ರೀತಿಯಾಗಿ ಬ್ರಹ್ಮಚಾರಿಯು ಯಥಾಶಕ್ತಿ ಗುರುಸೇವೆ ಮಾಡಿ ಅವರ ಪ್ರೀತಿ ಸಂಪಾದಿಸಬೇಕು. ಗುರುಶುಶ್ರೂಷೆಯ ಮೂಲಕ ವಿದ್ಯೆಯನ್ನು ಹೊಂದಿದ ಬಳಿಕ ಗುರುದಕ್ಷಿಣೆಯನ್ನು ನೀಡಿ, ಅವರ ಆಜ್ಞೆಯನ್ನು ಪಡೆದು ಮುಂದಿನ ಆಶ್ರಮಕ್ಕೆ ಸಾಗಬೇಕು.
ವೇದವ್ರತೋಪವಾಸೇನ ಚತುರ್ಥೇ ಚಾಯುಷೋ ಗತೇ |
ಗುರವೇ ದಕ್ಷಿಣಾಂ ದತ್ತ್ವಾ ಸಮಾವರ್ತೇದ್ ಯಥಾವಿಧಿ ||28||
ಹೀಗೆ ವೇದವ್ರತಗಳನ್ನು ಮಾಡುತ್ತಾ, ಗುರುವಿನ ಬಳಿಯಲ್ಲಿ ಕಾಲುಭಾಗದ ಆಯುಷ್ಯವನ್ನು ಕಳೆದ ಬಳಿಕ ಶಿಷ್ಯನು ಮುಂದಿನ ಸಮಾವರ್ತನ ಸಂಸ್ಕಾರವನ್ನು ವಿಧಿಬದ್ಧವಾಗಿ ಮಾಡಿಸಿಕೊಳ್ಳಬೇಕು.
ಧರ್ಮಲಬ್ಧೈರ್ಯುತೋ ದಾರೈರಗ್ನೀನುತ್ಪಾದ್ಯ ಧರ್ಮತಃ |
ದ್ವಿತೀಯಮಾಯುಷೋ ಭಾಗಂ ಗೃಹಮೇಧಿವ್ರತೀ ಭವೇತ್ ||29||
ಧರ್ಮದಿಂದ ಲಭಿಸಿದ ಕನ್ಯೆಯನ್ನು ಸ್ವೀಕರಿಸಿ, ಧರ್ಮಪತ್ನಿಯೊಡನೆ ಧಾರ್ಮಿಕವಾಗಿ ಅಗ್ನಿಪ್ರತಿಷ್ಠಾಪನೆ ಮಾಡಿ ಔಪಾಸನ, ವೈಶ್ವದೇವಾಗ್ನಿ ಹೋತ್ರಗಳನ್ನು ಆಚರಿಸಬೇಕು. ಹೀಗೆ ಬ್ರಾಹ್ಮಣನು ತನ್ನ ಆಯುಷ್ಯದ ಎರಡನೆಯ ಭಾಗವನ್ನು ಉತ್ತಮ ವ್ರತಶೀಲನಾಗಿ ಕಳೆಯಬೇಕು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಸಪ್ತತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *

## ಎಪ್ಪತ್ತೆಂಟನೆಯ ಅಧ್ಯಾಯ

ವ್ಯಾಸರು ಶುಕಮುನಿಯನ್ನು ಕುರಿತು ಗಾರ್ಹಸ್ಥ್ಯಧರ್ಮವನ್ನು ವರ್ಣಿಸಿದುದು.
ವ್ಯಾಸಃ
ದ್ವಿತೀಯಮಾಯುಷೋ ಭಾಗಂ ಗೃಹಮೇಧೀ ಗೃಹೇ ವಸೇತ್ |
ಧರ್ಮಲಬ್ಧೈರ್ಯುತೋ ದಾರೈರಗ್ನೀನುತ್ಪಾದ್ಯ ಸುವ್ರತಃ ||1||
ಮಗುವೇ, ಗೃಹಸ್ಥನು ತನ್ನ ಎರಡನೆಯ ಭಾಗದ ಆಯುಷ್ಯವನ್ನು ಮನೆಯಲ್ಲಿಯೇ ವಾಸ ಮಾಡುತ್ತಾ ಕಳೆಯಬೇಕು. ಧರ್ಮಾನುಸಾರವಾಗಿ ದೊರೆತ ಕನ್ಯೆಯನ್ನು ಸ್ವೀಕರಿಸಿ, ಆಹಿತಾಗ್ನಿಯಾಗಿ ಅದಕ್ಕೆ ಸಂಬಂಧಿಸಿದಂತೆ ವ್ರತಾನುಷ್ಠಾನವನ್ನು ಮಾಡಬೇಕು.
ಗೃಹಸ್ಥವೃತ್ತಯಶ್ಚೈವ ಚತಸ್ರಃ ಕವಿಭಿಃ ಸ್ಮೃತಾಃ |
ಕುಸೂಲಧಾನ್ಯಃ ಪ್ರಥಮಃ ಕುಂಭಧಾನ್ಯಸ್ತ್ವನಂತರಮ್ ||2||
ವಿದ್ವಾಂಸರು ಬ್ರಾಹ್ಮಣಗೃಹಸ್ಥನಿಗೆ ನಾಲ್ಕು ವಿಧವಾದ ಜೀವನದ ವೃತ್ತಿಯನ್ನು ಹೇಳಿದ್ದಾರೆ. ಮೊದಲನೆಯದ್ದು ಕುಸೂಲಧಾನ್ಯ ವೃತ್ತಿಯು. ಎರಡನೆಯದ್ದು ಕುಂಭಧಾನ್ಯ ವೃತ್ತಿಯು.
ವ್ಯಾಖ್ಯಾನ ವಿಶೇಷ ತೃಣಗಳಿಂದ ಹೆಣೆದ ಚೀಲದಲ್ಲಿ ಬಂಧಿಸಿಟ್ಟ ಧಾನ್ಯವು ಕುಸೂಲ ಧಾನ್ಯ ಎನಿಸಿದೆ. ಇಪ್ಪತ್ತನಾಲ್ಕು ಸೇರುಗಳ ಅಕ್ಕಿಯನ್ನು ಹುಲ್ಲಿನಲ್ಲಿ ಹೆಣೆದ ಚೀಲದಲ್ಲಿ ಬಂಧಿಸಿಟ್ಟರೆ ಅದು ಕುಸೂಲಧಾನ್ಯ ಎಂದು ಕರೆಸಿಕೊಳ್ಳುತ್ತದೆ. ಒಂದು ತಿಂಗಳು ಕಾಲ

ತನಗೂ, ತನ್ನ ಹೆಂಡತಿಗೂ ಜೀವನೋಪಾಯಕ್ಕೆ ಬೇಕಾದ ಧಾನ್ಯಸಂಗ್ರಹವನ್ನು ಹೊಂದಿದವನು ಕುಸೂಲಧಾನ್ಯ ಗೃಹಸ್ಥನೆನಿಸುತ್ತಾನೆ. ಕುಂಭಧಾನ್ಯ ಎಂದರೆ ದೊಡ್ಡ ಮಡಿಕೆಯಲ್ಲಿ ಅಡಿಕೆಯನ್ನು ತುಂಬಿಟ್ಟು ಜೀವನ ಮಾಡುವ ಗೃಹಸ್ಥನು ಕುಂಭಧಾನ್ಯವುಳ್ಳವನು ಎಂದು ಅರ್ಥ.

ಅಶ್ವಸ್ತನೋऽಥ ಕಾಪೋತೀಮಾಶ್ರಿತೋ ವೃತ್ತಿಮಾಹರೇತ್ |
ತೇಷಾಂ ಪರಃ ಪರೋ ಜ್ಯಾಯಾನ್ ಧರ್ಮತೋ ಲೋಕಜಿತ್ತಮಃ ||3||

ಯಾರು ಬಿಂದಿಗೆ ಮಾತ್ರ ಧಾನ್ಯವನ್ನು ಸಂಗ್ರಹಿಸಿಡುತ್ತಾನೋ ಅವನು ಅಶ್ವಸ್ತನ ಎಂದು ಕರೆಸಿಕೊಳ್ಳುತ್ತಾನೆ. ಅರ್ಥಾತ್ ಒಂದು ದಿನಕ್ಕೆ ಮಾತ್ರ ಯೋಗ್ಯಧಾನ್ಯ ಸಂಗ್ರಹವುಳ್ಳವನು ಎಂದರ್ಥ. ಆ ಕಾಲಕ್ಕೆ ಸಂಬಂಧಿಸಿದ ಆಹಾರವನ್ನು ಮಾತ್ರ ಸ್ವೀಕರಿಸುವವನು ಕಪೋತವೃತ್ತಿ ಬ್ರಾಹ್ಮಣ ಎಂದು ಕರೆಸಿಕೊಳ್ಳುತ್ತಾನೆ. ಈ ನಾಲ್ಕು ವಿಧ ಗೃಹಸ್ಥರಲ್ಲಿ ಮುಂದಿನ ಮುಂದಿನ ಗೃಹಸ್ಥರು ಉತ್ತಮ ಧರ್ಮನಿರತರು ಎಂದು ಕರೆಸಿಕೊಳ್ಳುತ್ತಾರೆ. ಮುಂದಿನ ಮುಂದಿನ ಧರ್ಮಗಳು ಶ್ರೇಷ್ಠವಾದವುಗಳು.

ಷಟ್ಕರ್ಮಾ ವರ್ತಯತ್ಯೇಕಸ್ತ್ರಿಭಿರನ್ಯಃ ಪ್ರವರ್ತತೇ |
ದ್ವಾಭ್ಯಾಮೇಕಶ್ಚತುರ್ಥಸ್ತು ಬ್ರಹ್ಮಸತ್ರೇ ವ್ಯವಸ್ಥಿತಃ ||
ಗೃಹಮೇಧಿವ್ರತಾನ್ಯತ್ರ ಮಹಾಂತೀಹ ಪ್ರಚಕ್ಷತೇ ||4||

ಕುಸೂಲಧಾನ್ಯವೃತ್ತಿಯುಳ್ಳ ಬ್ರಾಹ್ಮಣನು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪರಿಗ್ರಹ ಎಂಬ ಷಟ್ಕರ್ಮದಲ್ಲಿ ನಿರತನಾಗಿರುತ್ತಾನೆ. ಕುಂಭಧಾನ್ಯದ ವೃತ್ತಿಯ ಬ್ರಾಹ್ಮಣನು ಯಜನ, ಯಾಜನ, ದಾನ ಈ ಮೂರು ಕರ್ಮಗಳಲ್ಲಿ ನಿರತನಾಗಿರುತ್ತಾನೆ. ಅಶ್ವಸ್ತನ ವೃತ್ತಿಯಲ್ಲಿರುವ ಬ್ರಾಹ್ಮಣನು ಯಜನ, ಅಧ್ಯಯನಗಳಲ್ಲಿ ನಿರತನಾಗಿರುತ್ತಾನೆ. ನಾಲ್ಕನೆಯ ಕಾಪೋತ ವೃತ್ತಿಯಲ್ಲಿರುವ ಬ್ರಾಹ್ಮಣನು, ಬ್ರಾಹ್ಮಣರು ಮಾಡುವ ಸತ್ರಯಾಗದಲ್ಲಿ ಸೇವಕನಾಗಿ ಅದನ್ನು ತೆಗೆದುಕೊಂಡು ಬಾ, ಇದನ್ನು ತೆಗೆದುಕೊಂಡು ಬಾ ಎಂದು ಯಾಜ್ಞಿಕರು ಹೇಳುವ ಆಜ್ಞೆಯನ್ನು ಧರಿಸಿದವನಾಗಿರುತ್ತಾನೆ. ಗೃಹಸ್ಥನಾದವನಿಗೆ ಶಾಸ್ತ್ರದಲ್ಲಿ ಅನೇಕ ವಿಧವಾದ ಶ್ರೇಷ್ಠ ವ್ರತಗಳು ಹೇಳಲ್ಪಟ್ಟಿವೆ.

ನಾತ್ಮಾರ್ಥಂ ಪಾಚಯೇದನ್ನಂ ನ ವೃಥಾ ಘಾತಯೇತ್ ಪಶೂನ್ |
ಪ್ರಾಣೀ ವಾ ಯದಿ ವಾಪ್ರಾಣೀ ಸಂಸ್ಕಾರಂ ಯಜುಷಾರ್ಹತಿ ||5||

ಗೃಹಸ್ಥನಾದವನು ಕೇವಲ ತನಗಾಗಿ ಎಂದೂ ಅಡಿಗೆ ಮಾಡಿಸಬಾರದು. ಯಜ್ಞ ಸಮಯದ ಹೊರತಾಗಿ ಬೇರೆ ಕಾಲದಲ್ಲಿ ವ್ಯರ್ಥವಾಗಿ ಪಶುಗಳನ್ನು ಹಿಂಸಿಸಬಾರದು. ಪಿತೃಶ್ರಾದ್ಧಕ್ಕೋಸ್ಕರ ತಂದಿರುವ ವಸ್ತುವು ಪ್ರಾಣಿಯಾಗಲಿ, ಧಾನ್ಯವಾಗಲಿ, ನಿತ್ಯ ಭೋಜನಕ್ಕೋಸ್ಕರ ತಂದಿರುವ ವ್ರೀಹ್ಯಾದಿಗಳನ್ನು ಭೂರ್ಭುವಃಸ್ವಃ ಎಂಬ ಯಜುರ್ಮಂತ್ರದಿಂದ ಪ್ರೋಕ್ಷಿಸದೆ ಮನೆಯೊಳಗೆ ತರಬಾರದು. ಭುಂಜಿಸುವ ಪದಾರ್ಥಗಳನ್ನು ಗೃಹಸ್ಥನು ಮನೆಯೊಳಗೆ ತರಬೇಕಾದರೆ ತೊಳೆದೇ ತರಬೇಕು ಎಂದು ಅಭಿಪ್ರಾಯ.

ನ ದಿವಾ ಪ್ರಸ್ವಪೇಜ್ಜಾತು ನ ಪೂರ್ವಾಪರರಾತ್ರಯೋಃ |
ನ ಭುಂಜೀತಾಂತರಾಕಾಲೇ ನಾನೃತಾವಾಹ್ವಯೇತ್ ಸ್ತ್ರಿಯಮ್ ||6||

ಗೃಹಸ್ಥನಾದವನು ಹಗಲಿನಲ್ಲಿ ಮಲಗಬಾರದು. ರಾತ್ರಿಯಲ್ಲಿ ಮೊದಲನೆಯ ಮತ್ತು ಕೊನೆಯ ಯಾಮಗಳಲ್ಲಿ ಮಲಗಬಾರದು. ಮಧ್ಯಾಹ್ನ ವೇಳೆಯಲ್ಲಿ ಮತ್ತು ರಾತ್ರಿಯ ವೇಳೆಯಲ್ಲಿ ಮಾತ್ರ ಭೋಜನ ಮಾಡಬೇಕು. ಮಧ್ಯಕಾಲದಲ್ಲಿ ಏನನ್ನೂ ತಿನ್ನಬಾರದು. ಋತುಸಮಯದ ಹೊರತಾಗಿ ಬೇರೆ ದಿವಸಗಳಲ್ಲಿ ಪತ್ನಿಯನ್ನು ಸಮಾಗಮಕ್ಕೆ ಆಹ್ವಾನಿಸಬಾರದು.

ನಾಸ್ಯಾನಶ್ನನ್ ವಸೇದ್ ವಿಪ್ರೋ ಗೃಹೇ ಕಶ್ಚಿದಪೂಜಿತಃ |
ತಥಾಸ್ಯಾತಿಥಯಃ ಪೂಜ್ಯಾ ಹವ್ಯಕವ್ಯವಹಾಃ ಸದಾ ||7||
ವೇದವಿದ್ಯಾವ್ರತಸ್ನಾತಾಃ ಶ್ರೋತ್ರಿಯಾ ವೇದಪಾರಗಾಃ |
ಸ್ವಧರ್ಮಜೀವಿನೋ ದಾಂತಾಃ ಕ್ರಿಯಾವಂತಸ್ತಪಸ್ವಿನಃ |
ತೇಷಾಂ ಹವ್ಯಂ ಚ ಕವ್ಯಂ ಚಾಪ್ಯರ್ಹಣಾರ್ಥಂ ವಿಧೀಯತೇ ||8||

ಮನೆಗೆ ಬಂದ ಯಾವ ಬ್ರಾಹ್ಮಣಅತಿಥಿಯೂ ಭೋಜನ ಸತ್ಕಾರವಿಲ್ಲದೆ ಮನೆಯಲ್ಲಿ ವಾಸ ಮಾಡಬಾರದು. ಅತಿಥಿಗಳಿಗೆ ಭೋಜನ ನೀಡಬೇಕು. ಗೃಹಸ್ಥನ ಮನೆಯ ಬಾಗಿಲಿಗೆ ಅತಿಥಿಗಳ ರೂಪದಲ್ಲಿ ವೇದ-ವೇದಾಂತ ಪಾರಂಗತರಾದ ವಿದ್ವಾಂಸರು, ಸ್ನಾತಕರು, ಶ್ರೋತ್ರಿಯರು, ಯಜ್ಞಾನ್ನ, ಶ್ರಾದ್ಧಾನ್ನಗಳನ್ನು ಭೋಜನ ಮಾಡುವವರು, ಜಿತೇಂದ್ರಿಯರು, ಸ್ವಧರ್ಮನಿಷ್ಠರು, ಕ್ರಿಯಾನಿಷ್ಠರು, ತಪಸ್ವಿಗಳು, ಇವರು ಆಗಮಿಸಿದಾಗ ಅವರಿಗೆ ವಿಧಿವತ್ತಾಗಿ ಹವ್ಯ-ಕವ್ಯಾದಿಗಳನ್ನು ಅರ್ಪಿಸಬೇಕೆಂದು ಶಾಸ್ತ್ರವು ಹೇಳುತ್ತಿದೆ. ಹವ್ಯ-ಕವ್ಯವನ್ನು ಸ್ವೀಕರಿಸುವ ಪೂಜ್ಯರನ್ನು ಗೃಹಸ್ಥನು ನಿತ್ಯವೂ ಸತ್ಕರಿಸುತ್ತಿರಬೇಕು.

ನಖರ್ಯೈಃ ಸಂಪ್ರಯಾತಸ್ಯ ಸ್ವಧರ್ಮಾಜ್ಞಾನಕಸ್ಯ ಚ |
ಅಪವಿದ್ಧಾಗ್ನಿಹೋತ್ರಸ್ಯ ಗುರೋರ್ವಾಲೀಕಕಾರಿಣಃ ||9||
ಸಂವಿಭಾಗೋऽತ್ರ ಭೂತಾನಾಂ ಸರ್ವೇಷಾಮೇವ ಶಿಷ್ಯತೇ |
ತಥೈವಾಪಚಮಾನೇಭ್ಯಃ ಪ್ರದೇಯಂ ಗೃಹಮೇಧಿನಾ ||10||

ಶ್ರೋತ್ರಿಯನಾದ ಗೃಹಸ್ಥನು ಕೇವಲ ವೇಷಕ್ಕಾಗಿ ನಖ-ಕೇಶಗಳನ್ನು ಧರಿಸಿಕೊಂಡು ಬರುವವರಿಗೆ, ಡಂಭಕ್ಕಾಗಿ ಯಾಗಾದಿ ಕರ್ಮಗಳನ್ನು ನಡೆಸುವವರಿಗೆ, ಶಾಸ್ತ್ರ ವಿಧಿಗೆ ಬದ್ಧರಾಗದೆ ಅಗ್ನಿಹೋತ್ರಾದಿ ಕರ್ಮಗಳನ್ನು ಬಿಟ್ಟು ಭ್ರಷ್ಟರಾದವರಿಗೆ, ಗುರುವನ್ನು ಮೋಸ ಮಾಡಿದ ವಂಚಕರಿಗೆ, ಮನೆಯಲ್ಲಿ ಎಂದಿಗೂ ಪಾಕಯಜ್ಞ ಕರ್ಮವನ್ನು ಮಾಡದೆ ಇದ್ದವರಿಗೆ, ಮಾಡಿದ ಪಾಕದಲ್ಲಿ ವಿಭಾಗವನ್ನು ಮಾಡಿ ಅನ್ನವನ್ನು ನೀಡಬಾರದು.

ವ್ಯಾಖ್ಯಾನ ವಿಶೇಷ ಇಂತಹವರಿಗೂ ಅನ್ನವನ್ನು ನೀಡಬೇಕು ಎಂದು ಕೆಲವು ವ್ಯಾಖ್ಯಾನಕಾರರು ಹೇಳಿರುತ್ತಾರೆ. ಆದರೆ `ಸಂವಿಭಾಗೋ ನ' ಎಂದು ಲಕ್ಷಾಲಂಕಾರದಲ್ಲಿ ವಾದಿರಾಜರು ನೀಡಬಾರದು ಎಂದು ಅನ್ವಯ ಮಾಡಿ ಹೇಳಿದ್ದಾರೆ.

ವಿಘಸಾಶೀ ಭವೇನ್ನಿತ್ಯಂ ನಿತ್ಯಂ ಚಾಮೃತಭೋಜನಃ |

ಅಮೃತಂ ಯಜ್ಞಶೇಷಂ ಸ್ಯಾದ್ಭೋಜನಂ ಹವಿಷಾ ಸಮಮ್ |
ಭೃತ್ಯಶೇಷಂ ತು ಯೋಽಶ್ನಾತಿ ತಮಾಹುರ್ವಿಘಸಾಶಿನಮ್ ॥11॥
ಗೃಹಸ್ಥನಾದವನು ಪ್ರತಿನಿತ್ಯವೂ ಭೋಜನಶೇಷವನ್ನೂ, ಯಜ್ಞಶೇಷವನ್ನೂ ಭುಂಜಿಸಬೇಕು. ಇದರಿಂದ ಅವನು ಅಮೃತಾಶಿಯು ಆಗುತ್ತಾನೆ. ಯಜ್ಞಶೇಷವು ಅಮೃತವಾಗಿದ್ದು ಆ ಭೋಜನವು ಹವಿರ್ಭೋಜನಕ್ಕೆ ಸಮಾನವಾಗಿರುತ್ತದೆ. ಭೃತ್ಯ ವರ್ಗದವರೆಲ್ಲರಿಗೂ ಊಟ ಬಡಿಸಿದ ಬಳಿಕ ಯಾವ ಗೃಹಸ್ಥನು ಊಟ ಮಾಡುತ್ತಾನೋ ಅವನು ವಿಘಸಾಶಿ ಎಂದು ಕರೆಸಿಕೊಳ್ಳುತ್ತಾನೆ.
ಸ್ವದಾರನಿರತೋ ದಾಂತೋ ಹ್ಯನಸೂಯುರ್ಜಿತೇಂದ್ರಿಯಃ |
ಋತ್ವಿಕ್ಪುರೋಹಿತಾಚಾರ್ಯೈರ್ಮಾತುಲಾತಿಥಿಸಂಶ್ರಿತೈಃ ॥12॥
ವೃದ್ಧಬಾಲಾತುರೈರ್ವೈದ್ಯೈರ್ಜ್ಞಾತಿಸಂಬಂಧಿಬಾಂಧವೈಃ |
ಮಾತಾಪಿತೃಭ್ಯಾಂ ಜಾಮೀಭಿರ್ಭ್ರಾತ್ರಾ ಪುತ್ರೇಣ ಭಾರ್ಯಯಾ ॥13॥
ದುಹಿತ್ರಾ ದಾಸವರ್ಗೇಣ ವಿವಾದಂ ನ ಸಮಾಚರೇತ್ |
ಏತಾನ್ ವಿಮುಚ್ಯ ಸಂವಾದಾನ್ ಸರ್ವಪಾಪೈಃ ಪ್ರಮುಚ್ಯತೇ ॥14॥
ಗೃಹಸ್ಥನಾದವನು ತನ್ನ ಪತ್ನಿಯಲ್ಲಿ ಅನುರಾಗವುಳ್ಳವನಾಗಿರಬೇಕು. ಜಿತೇಂದ್ರಿಯನಾಗಿರಬೇಕು. ಅಸೂಯಾರಹಿತನಾಗಿರಬೇಕು. ಜಿತೇಂದ್ರಿಯ- ನಾಗಿರಬೇಕು. ಋತ್ವಿಜರು, ಪುರೋಹಿತರು, ಆಚಾರ್ಯರು, ಸೋದರಮಾವಂದಿರು, ಅತಿಥಿಗಳು, ಆಶ್ರಿತರು, ವೃದ್ಧರು, ಬಾಲಕರು, ರೋಗಿಗಳು, ವೈದ್ಯರು, ಜ್ಞಾತಿ-ಬಾಂಧವರು, ಸಂಬಂಧಿಗಳು, ಬಂಧುಗಳು, ತಂದೆ-ತಾಯಿಯರು, ಗಂಡುಮಕ್ಕಳು, ಹೆಣ್ಣುಮಕ್ಕಳು, ಹೆಂಡತಿ ಮತ್ತು ಸೇವಕವರ್ಗದವರು ಇವರೊಡನೆ ಯಾವಾಗಲೂ ವಿವಾದ ಮಾಡಬಾರದು. ಅವರಿಗೆ ಸೇರಬೇಕಾದ ಅಂಶವನ್ನು ಕೊಡಬೇಕು. ಇವರಲ್ಲಿ ಯಾರೊಡನೆಯೂ ವಿವಾದ ಮಾಡದಿರುವ ಗೃಹಸ್ಥನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.
ಏತೈರ್ಜಿತೈಸ್ತು ಜಯತಿ ಸರ್ವಾಲ್ಲೋಕಾನ್ನ ಸಂಶಯಃ |
ಆಚಾರ್ಯೋ ಬ್ರಹ್ಮಲೋಕೇಶಃ ಪ್ರಾಜಾಪತ್ಯೇ ಪಿತಾ ಪ್ರಭುಃ ॥15॥
ಅತಿಥಿಸ್ತ್ವಿಂದ್ರಲೋಕೇಶೋ ದೇವಲೋಕಸ್ಯ ಚರ್ತ್ವಿಜಃ |
ಜಾಮಯೋಽಪ್ಸರಸಾಂ ಲೋಕೇ ವೈಶ್ವದೇವೇ ತು ಜ್ಞಾತಯಃ ॥16॥
ಋತ್ವಿಜರು, ಪುರೋಹಿತರು ಮೊದಲಾದವರನ್ನು ಯಾವ ಗೃಹಸ್ಥನು ತನ್ನಲ್ಲಿರುವ ವಿನಯ, ಸೌಶೀಲ್ಯಾದಿ ಗುಣಗಳಿಂದ ಜಯಿಸುತ್ತಾನೋ ಅವನು ಸಮಸ್ತ ಲೋಕಗಳನ್ನು ಜಯಿಸುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಆಚಾರ್ಯನು ಬ್ರಹ್ಮಲೋಕದ ಸ್ವಾಮಿ ಎನಿಸಿದ್ದಾನೆ. ಬ್ರಹ್ಮನು ಪ್ರಜಾಪತಿ ಲೋಕಕ್ಕೆ ಒಡೆಯ ಎನಿಸಿದ್ದಾನೆ. ಅತಿಥಿಯು ಇಂದ್ರಲೋಕಕ್ಕೆ ಸ್ವಾಮಿ ಎನಿಸಿದರೆ, ಋತ್ವಿಜರು ದೇವಲೋಕಕ್ಕೆ ಅಧಿಪತಿ ಎನಿಸುತ್ತಾರೆ. ಕುಟುಂಬದ ಸ್ತ್ರೀಯರು ಅಪ್ಸರೆಯರ ಲೋಕಕ್ಕೆ ಸ್ವಾಮಿ ಎನಿಸಿರುತ್ತಾರೆ. ಜ್ಞಾತಿಗಳು ವಿಶ್ವೇದೇವತೆಗಳ ಲೋಕಕ್ಕೆ ಅಧಿಕಾರಿಗಳಾಗಿರುತ್ತಾರೆ.
ಸಂಬಂಧಿಬಾಂಧವಾ ದಿಕ್ಷು ಪೃಥಿವ್ಯಾಂ ಮಾತೃಮಾತುಲೌ |
ವೃದ್ಧಬಾಲಾತುರಕೃಶಾಸ್ತ್ವಾಕಾಶೇ ಪ್ರಭವಿಷ್ಣವಃ ॥17॥
ಸಂಬಂಧಿಗಳು ಮತ್ತು ಬಂಧುಗಳು ದಿಕ್ಪಾಲಕರ ಸ್ಥಾನವುಳ್ಳವರಾಗಿರುತ್ತಾರೆ. ತಾಯಿ ಮತ್ತು ಸೋದರ ಮಾವಂದಿರು ಭೂಮಿಯ ಆಧಿಪತ್ಯವುಳ್ಳವರಾಗಿರುತ್ತಾರೆ. ವೃದ್ಧರು, ಬಾಲಕರು, ರೋಗಿಗಳು, ದುರ್ಬಲರು ಆಕಾಶದಲ್ಲಿ ಪ್ರಭುತ್ವವುಳ್ಳವರಾಗಿರುತ್ತಾರೆ. ಇವರೆಲ್ಲರೂ ಸಂತುಷ್ಟರಾದರೆ ಅವರ ಅಧಿಕಾರದಲ್ಲಿರುವ ಲೋಕಗಳನ್ನು ಆ ಗೃಹಸ್ಥನು ಪಡೆದುಕೊಳ್ಳುತ್ತಾನೆ.
ಭ್ರಾತಾ ಜ್ಯೇಷ್ಠಃ ಸಮಃ ಪಿತ್ರಾ ಭಾರ್ಯಾ ಪುತ್ರಃ ಸ್ವಕಾ ತನುಃ |
ಛಾಯಾ ಸ್ವಾ ದಾಶವರ್ಗಸ್ತು ದುಹಿತಾ ಕೃಪಣಂ ಪರಮ್ ॥18॥
ಹಿರಿಯಣ್ಣನು ತಂದೆಗೆ ಸಮಾನನು, ಪತ್ನಿ-ಪುತ್ರರು ತನ್ನ ಶರೀರ ರೂಪರೇ ಆಗಿದ್ದಾರೆ. ಸೇವಕರು ಗೃಹಸ್ಥನ ನೆರಳಿನಂತಿದ್ದಾರೆ. ಮಗಳು ಎಲ್ಲರಿಗಿಂತ ಹೆಚ್ಚು ದಯಾ ಪಾತ್ರಳಾಗಿರುತ್ತಾಳೆ.
ತಸ್ಮಾದೇತೈರಧಿಕ್ಷಿಪ್ತಃ ಸಹೇನ್ನಿತ್ಯಮಸಂಜ್ವರಃ |
ಗೃಹಧರ್ಮರತೋ ವಿದ್ವಾಂಧರ್ಮನಿತ್ಯೋ ಜಿತಕ್ಲಮಃ ॥19॥
ಆದ್ದರಿಂದ ಗೃಹಸ್ಥನು ಇವರಿಂದ ಆಕ್ಷೇಪಿಸಲ್ಪಟ್ಟರೂ ಕ್ರೋಧರಹಿತನಾಗಿ ಅವರ ತಿರಸ್ಕಾರವನ್ನು ಸಹಿಸಿಕೊಳ್ಳಬೇಕು. ಗೃಹಸ್ಥಧರ್ಮವನ್ನು ಪಾಲಿಸುವ ವಿದ್ವಾಂಸನು ನಿಶ್ಚಿಂತನಾಗಿದ್ದು, ಶ್ರಮವನ್ನು ಜಯಿಸಿ ಧರ್ಮಶೀಲನಾಗಿರಬೇಕು.
ನ ಚಾರ್ಥಬದ್ಧಃ ಕರ್ಮಾಣಿ ಧರ್ಮಂ ವಾ ಕಂಚಿದಾಚರೇತ್ |
ಗೃಹಸ್ಥವೃತ್ತಯಸ್ತ್ರಿಸ್ತಾಸಾಂ ನಿಃಶ್ರೇಯಸಂ ಪರಮ್ ॥20॥
ಧರ್ಮಾತ್ಮನಾದ ಗೃಹಸ್ಥನು ಹಣದ ಆಸೆಗೆ ಕಟ್ಟುಬಿದ್ದು ಧರ್ಮಕಾರ್ಯಗಳನ್ನು ಮಾಡಬಾರದು. ಗೃಹಸ್ಥನ ಜೀವಿಕೆಗೆ ಯಾವ ಮೂರು ವೃತ್ತಿಗಳನ್ನು ಹೇಳಿದ್ದಾರೋ ಅವುಗಳಲ್ಲಿ ಮುಂದಿನ ಮುಂದಿನ ವೃತ್ತಿಗಳನ್ನು ಶ್ರೇಷ್ಠವೆಂದು ತಿಳಿದು ಅದನ್ನು ಆಚರಿಸಬೇಕು. ಕುಂಭಧಾನ್ಯ, ಉಂಛಶಿಲ, ಕಾಪೋತ ವೃತ್ತಿಗಳನ್ನು ಶ್ರೇಷ್ಠವೆಂದು ತಿಳಿದು ಆಚರಿಸಬೇಕು.
ಪರಸ್ಪರಂ ತಥೈವಾಹುಶ್ಚಾತುರಾಶ್ರಮ್ಯಮೇವ ತತ್ |
ಯೇ ಚೋಕ್ತಾ ನಿಯಮಾಸ್ತೇಷಾಂ ಸರ್ವಂ ಕಾರ್ಯಂ ಬುಭೂಷತಾ ॥
ನಾಲ್ಕು ಆಶ್ರಮಗಳನ್ನು ಪರಸ್ಪರ ಒಂದಕ್ಕೊಂದು ಪೂರಕವೆಂದು ಹೇಳುತ್ತಾರೆ. ಆಯಾ ಅಶ್ರಮಗಳ ನಿಯಮಗಳನ್ನು ಶಾಸ್ತ್ರೋಕ್ತ ವಿಧಿಯಿಂದ ಶ್ರೇಯಾಕಾಂಕ್ಷಿಯಾದ ಪುರುಷನು ಪರಿಪಾಲಿಸಬೇಕು.
ಕುಂಭೀಧಾನ್ಯೈರುಂಛಶಿಲೈಃ ಕಾಪೋತೀಂ ಚಾಸ್ಥಿತೈಸ್ತಥಾ |
ಯಸ್ಮಿಂಶ್ಚೈತೇ ವಸಂತ್ಯರ್ಹಾಸ್ತದ್ರಾಷ್ಟ್ರಮಭಿವರ್ಧತೇ ॥22॥
ಕುಂಭೀಧಾನ್ಯಗಳಿಂದ ಶಿಲವೃತ್ತಿ, ಉಂಛವೃತ್ತಿ (ಒಂದು ಬಾರಿ ಅಂಕಲನ್ನು ಎತ್ತಿದ ಬಳಿಕ ಸ್ವೀಕರಿಸುವುದು ಶಿಲವೃತ್ತಿ ಎನಿಸಿದೆ. ಎರಡು

ಬಾರಿ ಅಂಕಲು ಎತ್ತಿದ ಬಳಿಕ ಧಾನ್ಯವನ್ನು ಸ್ವೀಕರಿಸುವುದು ಉಂಛವೃತ್ತಿ ಎನಿಸಿದೆ). ಪಕ್ಷಿಗಳು ತಿಂದು ಉಳಿದ್ದದ್ದನ್ನು ತಿನ್ನುವ ವೃತ್ತಿಗೆ ಕಾಪೋತ ವೃತ್ತಿ ಎನ್ನುತ್ತಾರೆ. ಬ್ರಾಹ್ಮಣರಾದವರು ಇಂತಹ ವೃತ್ತಿಗಳನ್ನು ಆಶ್ರಯಿಸಿ, ಯಾವ ಸ್ಥಳದಲ್ಲಿ ವಾಸ ಮಾಡುತ್ತಾರೋ ಆ ರಾಷ್ಟ್ರವು ಬಹಳ ಅಭಿವೃದ್ಧಿಯನ್ನು ಹೊಂದುತ್ತದೆ.
ದಶ ಪೂರ್ವಾನ್ ದಶ ಪರಾನ್ ಪುನಾತಿ ಚ ಪಿತಾಮಹಾನ್ |
ಗೃಹಸ್ಥವೃತ್ತಯಸ್ತ್ವೇತಾ ವರ್ತಯೇದ್ಯೋ ಗತವ್ಯಥಃ ॥23॥
ಯಾವ ಗೃಹಸ್ಥನು ಮನಸ್ಸಿನಲ್ಲಿ ಸ್ವಲ್ಪವೂ ಕ್ಲೇಶ ಹೊಂದದೆ, ಮೂರು ವೃತ್ತಿಯಲ್ಲಿ ಯಾವುದಾದರೂ ಒಂದು ವೃತ್ತಿಯನ್ನು ಆಶ್ರಯಿಸಿ ಜೀವನ ನಡೆಸುತ್ತಾನೋ ಅಂತಹ ಗೃಹಸ್ಥನು ತನ್ನ ಹಿಂದಿನ ಪಿತೃ-ಪಿತಾಮಹರೇ ಮೊದಲಾದ ಹತ್ತು ತಲೆಮಾರಿನ ವ್ಯಕ್ತಿಗಳನ್ನು ಮುಂದಿನ ಹತ್ತು ತಲೆಮಾರಿನವರನ್ನು ಪಾವನಗೊಳಿಸುತ್ತಾನೆ.
ಸ ಚಕ್ರಚರಲೋಕಾನಾಂ ಸದೃಶೀಂ ಪ್ರಾಪ್ನುಯಾದ್ ಗತಿಮ್ |
ಯತೇಂದ್ರಿಯಾಣಾಮಥ ವಾ ಗತಿರೇಷಾ ವಿಧೀಯತೇ ॥24॥
ಇಂತಹ ಗೃಹಸ್ಥನು ಚಕ್ರವರ್ತಿಗಳು ಹೊಂದುವ ಲೋಕಗಳಿಗೆ ಸದೃಶವಾದ ಉತ್ತಮ ಲೋಕಗಳನ್ನು ಹೊಂದುತ್ತಾನೆ. ಜಿತೇಂದ್ರಿಯರಿಗೆ ಲಭಿಸುವ ಸದ್ಗತಿಯು ಇವನಿಗೆ ಲಭಿಸುತ್ತದೆ.
ಸ್ವರ್ಗಲೋಕೋ ಗೃಹಸ್ಥಾನಾಮುದಾರಮನಸಾಂ ಹಿತಃ |
ಸ್ವರ್ಗೋ ವಿಮಾನಸಂಯುಕ್ತೋ ವೇದದೃಷ್ಟಃ ಸುಪುಷ್ಪಿತಃ ॥25॥
ಶ್ರೇಷ್ಠರಾದ ಗೃಹಸ್ಥರಿಗೆ ಹಿತಕರವಾದ, ವಿಮಾನದಿಂದ ಕೂಡಿದ, ಪುಷ್ಪಗಳಿಂದ ಶೋಭಾಯಮಾನವಾಗಿರುವ, ವೇದಗಳಲ್ಲಿ ವರ್ಣಿತವಾಗಿರುವ ಸ್ವರ್ಗಲೋಕಗಳು ದೊರೆಯುತ್ತವೆ.
ಸ್ವರ್ಗಲೋಕೇ ಗೃಹಸ್ಥಾನಾಂ ಪ್ರತಿಷ್ಠಾ ನಿಯತಾತ್ಮನಾಮ್ |
ಬ್ರಹ್ಮಣಾ ವಿಹಿತಾ ಶ್ರೇಣಿರೇಷಾ ಯಸ್ಮಾತ್ ಪ್ರಮುಚ್ಯತೇ |
ದ್ವಿತೀಯಂ ಕ್ರಮಶಃ ಪ್ರಾಪ್ಯ ಸ್ವರ್ಗಲೋಕೇ ಮಹೀಯತೇ ॥26॥
ಜಿತೇಂದ್ರಿಯರಾದ ಗೃಹಸ್ಥರಿಗೆ ಸ್ವರ್ಗಲೋಕವೇ ನಿತ್ಯ ನೆಲೆಯಾಗಿರುತ್ತದೆ. ಬ್ರಹ್ಮನು ಗೃಹಸ್ಥಾಶ್ರಮವನ್ನು ಸ್ವರ್ಗಪ್ರಾಪ್ತಿಗೆ ಕಾರಣ ಎಂದಿದ್ದಾನೆ. ಅದನ್ನು ಪರಿಪಾಲಿಸುವ ವಿಧಾನವನ್ನು ಶಾಸ್ತ್ರಗಳ ಮೂಲಕ ತಿಳಿಸಿದ್ದಾನೆ. ಆದ್ದರಿಂದ ಎರಡನೆಯ ಆಶ್ರಮವೆನಿಸಿದ ಗೃಹಸ್ಥಾಶ್ರಮವನ್ನು ಪಡೆದ ಸಾಧಕನು ಅದನ್ನು ಚೆನ್ನಾಗಿ ಅನುಷ್ಠಾನ ಮಾಡಿ, ಬಳಿಕ ಸ್ವರ್ಗಲೋಕದಲ್ಲಿ ವಿರಾಜಮಾನನಾಗುತ್ತಾನೆ.
ಅತಃ ಪರಂ ಪರಮಮುದಾರಮಾಶ್ರಮಂ
ತೃತೀಯಮಾಹುಸ್ತ್ಯಜತಾಂ ಕಲೇವರಮ್ |
ವನೌಕಸಾಂ ಗೃಹಪತೀನಾಮನುತ್ತಮಂ
ಶೃಣುಷ್ವೈತತ್ಕ್ಲಿಷ್ಟಶರೀರಕಾರಿಣಾಮ್ ॥27॥
ಗೃಹಸ್ಥಾಶ್ರಮವಾದ ಬಳಿಕ ಶರೀರವನ್ನು ತ್ಯಾಗ ಮಾಡುವವರಿಗೆ ವಾನಪ್ರಸ್ಥಾಶ್ರಮ ಇದೆ. ಅದನ್ನು ಮೂರನೆಯ ಆಶ್ರಮ ಎನ್ನುತ್ತಾರೆ. ತಪಸ್ಸಿನಿಂದ ಶರೀರವನ್ನು ಕೃಶವನ್ನಾಗಿ ಮಾಡುವ ವನವಾಸಿಗಳ ವಾನಪ್ರಸ್ಥಾಶ್ರಮ ಧರ್ಮವನ್ನು ಹೇಳುತ್ತೇನೆ, ಕೇಳು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂಬತ್ತನೆಯ ಅಧ್ಯಾಯ
ವಾನಪ್ರಸ್ಥ ಮತ್ತು ಸಂನ್ಯಾಸಧರ್ಮಗಳ ಮಹತ್ವವನ್ನು ವ್ಯಾಸರು
ಶುಕಮುನಿಗೆ ನಿರೂಪಿಸಿದುದು.
ಭೀಷ್ಮಃ
ಪ್ರೋಕ್ತಾ ಗೃಹಸ್ಥವೃತ್ತಿಸ್ತೇ ವಿಹಿತಾ ಯಾ ಮನೀಷಿಣಾಮ್ |
ತದನಂತರಮುಕ್ತಂ ಯತ್ತನ್ನಿಬೋಧ ಯುಧಿಷ್ಠಿರ ॥1॥
ಯುಧಿಷ್ಠಿರನೇ, ಜ್ಞಾನಿಗಳಿಂದ ಹೇಳಲ್ಪಟ್ಟ ಗೃಹಸ್ಥಾಶ್ರಮದ ವೃತ್ತಿಯನ್ನು ವ್ಯಾಸರು ಶುಕಮುನಿಗೆ ಹೇಳಿದಂತೆ ನಿನಗೆ ತಿಳಿಸಿದ್ದೇನೆ. ಬಳಿಕ ವ್ಯಾಸರು ಹೇಳಿದ ವಿಚಾರ ಏನೆಂಬುದನ್ನು ಹೇಳುತ್ತೇನೆ, ಕೇಳು.
ಕ್ರಮಶಸ್ತ್ವವಧೂಯೈನಾಂ ತೃತೀಯಾಂ ವೃತ್ತಿಮುತ್ತಮಾಮ್ |
ಸಂಯೋಗವ್ರತಖಿನ್ನಾನಾಂ ವಾನಪ್ರಸ್ಥಾಶ್ರಮೌಕಸಾಮ್ ॥2॥
ಶ್ರೂಯತಾಂ ಪಾರ್ಥ ಭದ್ರಂ ತೇ ಸರ್ವಲೋಕಾಶ್ರಯಾತ್ಮನಾಮ್ |
ಪ್ರೇಕ್ಷಾಪೂರ್ವಂ ಪ್ರವತ್ತಾನಾಂ ಪುಣ್ಯದೇಶನಿವಾಸಿನಾಮ್ ॥3॥
ಪೃಥಾಸುತನೆ, ಕ್ರಮವಾಗಿ ಎರಡನೆಯ ಆಶ್ರಮವಾದ ಗಾರ್ಹಸ್ಥ್ಯವನ್ನು ತೊರೆದು, ಪತ್ನಿಯೊಡನೆ ವ್ರತಾನುಷ್ಠಾನದಲ್ಲಿ ಶ್ರಮವಹಿಸುತ್ತಾ, ವಾನಪ್ರಸ್ಥಾಶ್ರಮವನ್ನೇ ನೆಲೆಯನ್ನಾಗಿ ಮಾಡಿಕೊಂಡಿರುವ, ಸರ್ವಲೋಕಾಶ್ರಯವೆನಿಸಿದ ವಾನಪ್ರಸ್ಥಧರ್ಮಿಗಳ ವ್ರತ- ನಿಯಮಗಳಲ್ಲಿ ಆಸಕ್ತರಾದ, ಜ್ಞಾನಪೂರ್ವಕವಾಗಿ ಅನುಷ್ಠಾನಶೀಲರಾಗಿರುವ, ಪುಣ್ಯದೇಶ ನಿವಾಸಿಗಳಾಗಿರುವ ವಾನಪ್ರಸ್ಥಾಶ್ರಮಿಗಳ ಧರ್ಮವನ್ನು ಹೇಳುತ್ತೇನೆ, ಕೇಳು.
ವ್ಯಾಸಃ
ಗೃಹಸ್ಥಸ್ತು ಯದಾ ಪಶ್ಯೇದ್ವಲೀಪಲಿತಮಾತ್ಮನಃ |

ಅಪತ್ಯಸ್ಯೈವ ಚಾಪತ್ಯಂ ವನಮೇವ ತದಾಶ್ರಯೇತ್ ॥4॥
ತೃತೀಯಮಾಯುಷೋ ಭಾಗಂ ವಾನಪ್ರಸ್ಥಾಶ್ರಮೇ ವಸೇತ್ |
ತಾನೇವಾಗ್ನೀನ್ ಪರಿಚರೇದ್ ಯಜಮಾನೋ ದಿವೌಕಸಃ ॥5॥
ಗೃಹಸ್ಥನಾದವನು ತನ್ನ ತಲೆಯ ಕೂದಲುಗಳು ನರೆತಿರುವುದನ್ನು, ಚರ್ಮವು ಸುಕ್ಕುಗಟ್ಟಿರುವುದನ್ನು ಗಮನಿಸುತ್ತಾನೋ, ಮಕ್ಕಳಿಗೆ ಮಕ್ಕಳಾಗಿರುವುದನ್ನು ಕಾಣುತ್ತಾನೋ ಆಗ ಅವನು ತನ್ನ ಆಯುಷ್ಯದ ಮೂರನೆಯ ಭಾಗವನ್ನು ಕಳೆಯಲು ಅರಣ್ಯಕ್ಕೆ ಸಾಗಬೇಕು. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು. ಗೃಹಸ್ಥಾಶ್ರಮದಲ್ಲಿರುವ ಅಗ್ನಿಗಳನ್ನು ವಾನಪ್ರಸ್ಥಾಶ್ರಮದಲ್ಲಿಯೂ ಉಪಾಸನೆ ಮಾಡಬೇಕು. ದೇವತಾರಾಧನೆಯನ್ನೂ ಮಾಡಬೇಕು.
ನಿಯತೋ ನಿಯತಾಹಾರಃ ಷಷ್ಠಭಕ್ತೋಽಪ್ರಮಾದವಾನ್ |
ತದಗ್ನಿಹೋತ್ರಂ ತಾ ಗಾವೋ ಯಜ್ಞಾಂಗಾನಿ ಚ ಸರ್ವಶಃ ॥6॥
ನಿಯಮಸ್ಥನಾದ ವಾನಪ್ರಸ್ಥಾಶ್ರಮಿಯು ನಿಯಮಾನುಸಾರ ಭೋಜನ ಮಾಡಬೇಕು. ದಿನದ ಆರನೆಯ ಭಾಗದಲ್ಲಿ ಒಂದು ಬಾರಿ ಊಟ ಮಾಡಬೇಕು. ಜಾಗರೂಕನಾಗಿರಬೇಕು. ಅಗ್ನಿಹೋತ್ರ, ಗೋಸೇವೆ, ಯಜ್ಞಗಳು- ಈ ಎಲ್ಲವನ್ನೂ ಗೃಹಸ್ಥಾಶ್ರಮಿಯಂತೆ ಆಚರಿಸಬೇಕು.
ಅಕೃಷ್ಟಂ ವೈ ವ್ರೀಹಿಯವಂ ನೀವಾರಂ ವಿಘಸಾನಿ ಚ |
ಹವೀಂಷಿ ಸಂಪ್ರಯಚ್ಛೇತ ಮಖೇಷ್ವತ್ರಾಪಿ ಪಂಚಸು ॥7॥
ಕೃಷಿ ಮಾಡದೆ ಭೂಮಿಯಲ್ಲಿ ಬೆಳೆಯುವ ಭತ್ತ, ಗೋಧಿ, ನವಣೆ, ಅತಿಥಿಗಳಿಗೆ ನೀಡಿ ಉಳಿದ ಅನ್ನ ಇವುಗಳಿಂದ ಜೀವನ ನಿರ್ವಹಣೆಯನ್ನು ಮಾಡಬೇಕು. ಪಂಚಮಹಾಯಜ್ಞಗಳನ್ನು ಮಾಡಿ ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸಬೇಕು.
ವಾನಪ್ರಸ್ಥಾಶ್ರಮೇಽಪ್ಯೇತಾಶ್ಚತಸ್ರೋ ವೃತ್ತಯಃ ಸ್ಮೃತಾಃ |
ಸದ್ಯಃಪ್ರಕ್ಷಿಲಕಾಃ ಕೇಚಿತ್ಕೇಚಿನ್ಮಾಸಿಕಸಂಚಯಾಃ ॥8॥
ವಾರ್ಷಿಕಂ ಸಂಚಯಂ ಕೇಚಿತ್ ಕೇಚಿದ್ ದ್ವಾದಶವಾರ್ಷಿಕಮ್ |
ಕುರ್ವಂತ್ಯತಿಥಿಪೂಜಾರ್ಥಂ ಯಜ್ಞತಂತ್ರಾರ್ಥಸಿದ್ಧಯೇ ॥9॥
ವಾನಪ್ರಸ್ಥಾಶ್ರಮದಲ್ಲಿಯೂ ನಾಲ್ಕು ವಿಧ ವೃತ್ತಿಗಳಿವೆ. ಅಂದು ಸಂಗ್ರಹವಾದ ಪದಾರ್ಥಗಳನ್ನು ಅಂದೇ ತಿಂದು ಮುಗಿಸುವುದು, ಒಂದು ತಿಂಗಳಿಗೆ ಸಾಕಾಗುವಷ್ಟು ಧಾನ್ಯವನ್ನು ಸಂಗ್ರಹಿಸುವುದು, ವರ್ಷಕ್ಕೆ ಪೂರ್ತಿಯಾಗುವಷ್ಟು ಧಾನ್ಯವನ್ನು ಸಂಗ್ರಹಿಸುವುದು, ಹನ್ನೆರಡು ವರ್ಷಗಳಿಗೆ ಧಾನ್ಯವನ್ನು ಸಂಗ್ರಹಿಸಿಕೊಳ್ಳುವುದು. ಹೀಗೆ ಒಬ್ಬೊಬ್ಬರ ಆಚರಣೆಗಳು ಒಂದೊಂದು ವಿಧವಾಗಿವೆ. ಕೆಲವರು ಅತಿಥಿಗಳನ್ನು ಸತ್ಕರಿಸುವುದಕ್ಕೆ, ಯಜ್ಞಕರ್ಮಗಳಿಗಾಗಿ ಹನ್ನೆರಡು ವರ್ಷಗಳಿಗೆ ಬೇಕಾಗುವಷ್ಟು ಧಾನ್ಯವನ್ನು ಸಂಗ್ರಹಿಸಿರುತ್ತಾರೆ.
ಅಭ್ರಾವಕಾಶಾ ವರ್ಷಾಸು ಹೇಮಂತೇ ಜಲಸಂಶ್ರಯಾಃ |
ಗ್ರೀಷ್ಮೇ ಚ ಪಂಚತಪಸಃ ಶಶ್ವಚ್ಚ ಮಿತಭೋಜನಾಃ ॥10॥
ವಾನಪ್ರಸ್ಥಾಶ್ರಮಿಗಳು ಮಳೆಗಾಲದಲ್ಲಿ ಮೋಡದಿಂದ ಕೂಡಿದ ಆಕಾಶವನ್ನೇ ಹೊದ್ದಿಕೆ ಮಾಡಿಕೊಂಡಿರುತ್ತಾರೆ. ಹೇಮಂತ ಋತುವಿನಲ್ಲಿ ನೀರಿನ ಆಶ್ರಯ ಹೊಂದುತ್ತಾರೆ. ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ತಪಸ್ಸನ್ನು ಮಾಡುತ್ತಾರೆ. ಯಾವಾಗಲೂ ಮಿತಾಹಾರಿಗಳಾಗಿರುತ್ತಾರೆ.
ಭೂಮೌ ವಿಪರಿವರ್ತಂತೇ ತಿಷ್ಠೇದ್ವಾ ಪ್ರಪದೈರಪಿ |
ಸ್ಥಾನಾಸನೈರ್ವರ್ತಯಂತಿ ಸವನೇಷ್ವಭಿಷಿಂಚತೇ ॥11॥
ವಾನಪ್ರಸ್ಥಾಶ್ರಮಿಗಳು ಭೂಮಿಯಲ್ಲೇ ಮಲಗುತ್ತಾರೆ. ತುದಿಗಾಲಿನಲ್ಲಿ ನಿಂತು ತಪಸ್ಸನ್ನು ಮಾಡುತ್ತಾರೆ. ಒಂದೇ ಸ್ಥಳದಲ್ಲಿ, ಒಂದೇ ಆಸನದಲ್ಲಿ ಯಾವಾಗಲೂ ಧ್ಯಾನಾಸಕ್ತರಾಗಿರುತ್ತಾರೆ. ಮೂರುಕಾಲಗಳಲ್ಲಿಯೂ ಸ್ನಾನ ಮಾಡುತ್ತಾರೆ.
ದಂತೋಲೂಖಲಿನಃ ಕೇಚಿದಶ್ಮಕುಟ್ಟಾಸ್ತಥಾಪರೇ |
ಶುಕ್ಲಪಕ್ಷೇ ಪಿಬಂತ್ಯೇಕೇ ಯವಾಗೂಂ ಕ್ವಥಿತಾಂ ಸಕೃತ್ ॥12॥
ಕೃಷ್ಣಪಕ್ಷೇ ಪಿಬಂತ್ಯೇಕೇ ಭುಂಜತೇ ಚ ಯಥಾಕ್ರಮಮ್ |
ಮೂಲೈರೇಕೇ ಫಲೈರೇಕೇ ಪುಷ್ಪೈರೇಕೇ ದೃಢವ್ರತಾಃ ॥13॥
ವಾನಪ್ರಸ್ಥಾಶ್ರಮಿಗಳಲ್ಲಿ ಕೆಲವರು, ಧಾನ್ಯಗಳನ್ನು ಯಾವುದೇ ಯಂತ್ರೋಪಕರಣಗಳ ಸಹಾಯದಿಂದ ಕುಟ್ಟಿ ಪುಡಿಮಾಡದೆ ಹಲ್ಲುಗಳಿಂದಲೇ ಪುಡಿ ಮಾಡಿ ತಿನ್ನುತ್ತಾರೆ. ಇನ್ನು ಕೆಲವರು ಕಲ್ಲಿನಿಂದ ಕುಟ್ಟಿ ಪುಡಿಮಾಡಿ ತಿನ್ನುತ್ತಾರೆ. ಕೆಲವರು ಶುಕ್ಲಪಕ್ಷದಲ್ಲಿ ಮಾತ್ರ ಚೆನ್ನಾಗಿ ಬೇಯಿಸಿದ ಅನ್ನದ ಗಂಜಿಯನ್ನು ಕುಡಿಯುತ್ತಾರೆ. ಕೆಲವರು ಕೃಷ್ಣಪಕ್ಷದಲ್ಲಿ ಗಂಜಿಯನ್ನು ಪಾನ ಮಾಡುತ್ತಾರೆ. ಇನ್ನು ಕೆಲವರು ಸಿಕ್ಕಿದಾಗ ಭೋಜನ ಮಾಡುತ್ತಾರೆ. ಕೆಲವರು ಕಂದ-ಮೂಲಗಳಿಂದಲೂ, ಇನ್ನು ಕೆಲವರು ಹಣ್ಣು ಸೇವನೆಯಿಂದಲೂ ಜೀವನ ಮಾಡುತ್ತಾರೆ. ಕೆಲವರು ಪುಷ್ಪಗಳಿಂದಲೂ ಜೀವನ ಮಾಡುತ್ತಾರೆ.
ವರ್ತಯಂತಿ ಯಥಾನ್ಯಾಯಂ ವೈಖಾನಸಮತಂ ಶ್ರಿತಾಃ |
ಏತಾಶ್ಚಾನ್ಯಾಶ್ಚ ವಿವಿಧಾ ದೀಕ್ಷಾಸ್ತೇಷಾಂ ಮನೀಷಿಣಾಮ್ ॥14॥
ವಾನಪ್ರಸ್ಥಾಶ್ರಮ ಹೊಂದಿದವರು ಹೀಗೆ ಯೋಗ್ಯವಾದ ಮಾರ್ಗಗಳನ್ನು ಅವಲಂಬಿಸಿ, ತಮ್ಮ ಧರ್ಮಗಳಲ್ಲಿ ನಡೆದುಕೊಳ್ಳುತ್ತಾರೆ. ವಿದ್ವಾಂಸರಾದ ವಾನಪ್ರಸ್ಥಾಶ್ರಮಿಗಳಿಗೆ ಇವುಗಳೇ ಅಲ್ಲದೆ ಇನ್ನೂ ಅನೇಕ ನಿಯಮಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ.
ಚತುರ್ಥಶ್ಚೌಪನಿಷದೋ ಧರ್ಮಃ ಸಾಧಾರಣಃ ಸ್ಮೃತಃ |
ವಾನಪ್ರಸ್ಥೋ ಗೃಹಸ್ಥಶ್ಚ ತತೋಽನ್ಯಃ ಸಂಪ್ರವರ್ತತೇ ॥15॥
ನಾಲ್ಕನೆಯ ಆಶ್ರಮವಾದ ಸಂನ್ಯಾಸಕ್ಕೆ ವಿಹಿತವಾಗಿರುವ ಉಪನಿಷತ್ತಿನಲ್ಲಿ ಹೇಳಿರುವ ಕ್ಷಮ, ದಮ, ಉಪರತಿ ಮೊದಲಾದ ಧರ್ಮಗಳು ಎಲ್ಲಾ ಆಶ್ರಮಗಳಿಗೂ ಸಮಾನವಾದ ಧರ್ಮಗಳು ಎಂದು ಹೇಳಲ್ಪಟ್ಟಿವೆ. ವಾನಪ್ರಸ್ಥ, ಗೃಹಸ್ಥಾಶ್ರಮ- ಗಳಿಗಿಂತಲೂ

ಬೇರೆಯಾದ ಧರ್ಮವು ಸಂನ್ಯಾಸಿಗಳಿಗೆ ಹೇಳಲ್ಪಟ್ಟಿವೆ.
ಅಸ್ಮಿನ್ನೇವ ಯುಗೇ ತಾತ ವಿಪ್ರೈಃ ಸರ್ವಾರ್ಥದರ್ಶಿಭಿಃ |
ಅಗಸ್ತ್ಯಃ ಸಪ್ತ ಋಷಯೋ ಮಧುಚ್ಛಂದೋಽಘಮರ್ಷಣಃ ॥16॥
ಸಾಂಕೃತಿಃ ಸುದಿವಾ ತಂಡಿರ್ಯವಾನ್ನೋಽಥ ಕೃತಶ್ರಮಃ |
ಅಹೋವೀರ್ಯಸ್ತಥಾ ಕಾವ್ಯಸ್ತಾಂಡ್ಯೋ ಮೇಧಾತಿಥಿರ್ಬುಧಃ ॥17॥
ಶಲೋ ವಾಕಶ್ಚ ನಿರ್ವಾಕಃ ಶೂನ್ಯಪಾಲಃ ಕೃತಶ್ರಮಃ |
ಏವಂ ಧರ್ಮಸು ವಿದ್ವಾಂಸಸ್ತತಃ ಸ್ವರ್ಗಮುಪಾಗಮನ್ ॥18॥
ಮಗುವೇ, ಈ ಯುಗದಲ್ಲಿಯೂ ಸರ್ವಾರ್ಥದರ್ಶಿಗಳಾದ ಬ್ರಾಹ್ಮಣರು ವಾನಪ್ರಸ್ಥದ ಪಾಲನೆಯನ್ನು ಮಾಡಿರುತ್ತಾರೆ. ಹಾಗೆ ಮಾಡಿರುವ ವ್ಯಕ್ತಿಗಳಲ್ಲಿ ಪ್ರಮುಖರು ಯಾರೆಂದರೆ ಅಗಸ್ತ್ಯರು, ಸಪ್ತರ್ಷಿಗಳು, ಮಧುಚ್ಛಂದರು, ಅಘಮರ್ಶಣ, ಸಾಂಕೃತಿ, ಸುದಿವ, ತಂಡಿ, ಯವಾನ್ನ, ಕೃತಶ್ರಮ, ಅಹೋವೀರ್ಯ, ಕಾವ್ಯ, ತಾಂಡ್ಯ, ಮೇಧಾತಿಥಿ, ಬುಧ, ಶಲ, ವಾಕ, ನಿರ್ವಾಕ, ಪರಿಶ್ರಮಿಯಾದ ಶೂನ್ಯಪಾಲ ಇವರೆಲ್ಲರೂ ಧರ್ಮವನ್ನಾಚರಿಸಿ ಈಗಾಗಲೇ ಸ್ವರ್ಗವನ್ನು ಸೇರಿರುತ್ತಾರೆ.
ತಾತ ಪ್ರತ್ಯಕ್ಷಧರ್ಮಾಣಸ್ತಥಾ ಯಾಯಾವರಾ ಗಣಾಃ |
ಋಷೀಣಾಮುಗ್ರತಪಸಾಂ ಧರ್ಮನೈಪುಣದರ್ಶಿನಾಮ್ ॥19॥
ಅವಾಚ್ಯಾಪರಿಮೇಯಾಶ್ಚ ಬ್ರಾಹ್ಮಣಾ ವನಮಾಶ್ರಿತಾಃ |
ವೈಖಾನಸಾ ವಾಲಖಿಲ್ಯಾಃ ಸಿಕತಾಶ್ಚ ತಥಾಪರೇ ॥20॥
ಮಗನೇ, ಇವರೆಲ್ಲರೂ ಧರ್ಮದ ವಿಷಯದಲ್ಲಿ ಪ್ರತ್ಯಕ್ಷ ದೀಕ್ಷೆ ಉಳ್ಳವರು. ಉಗ್ರತಪಸ್ವಿಗಳಾದ ಋಷಿಗಳಲ್ಲಿ ಧರ್ಮನೈಪುಣ್ಯದರ್ಶಿಗಳಲ್ಲಿ ಯಾಯಾವರಾ ಎಂಬ ದೊಡ್ಡ ಗುಂಪೇ ಇದೆ. ವಾನಪ್ರಸ್ಥಾಶ್ರಮಿಗಳಾದ ಬ್ರಾಹ್ಮಣರು ಎಷ್ಟು ಸಂಖ್ಯೆಯಲ್ಲಿದ್ದಾರೆ ಎಂದು ಲೆಕ್ಕ ಮಾಡಲೂ ಸಾಧ್ಯವಿಲ್ಲ, ಹೇಳಲೂ ಸಾಧ್ಯವಿಲ್ಲ. ವೈಖಾನಸರು, ವಾಲಖಿಲ್ಯರು, ಸಿಕತರು ಈ ಧರ್ಮವನ್ನು ಪರಿಪಾಲಿಸಿದ್ದಾರೆ.
ಕರ್ಮಭಿಸ್ತೇ ನಿರಾನಂದಾ ಧರ್ಮನಿತ್ಯಾ ಜಿತೇಂದ್ರಿಯಾಃ |
ಗತಾಃ ಪ್ರತ್ಯಕ್ಷಧರ್ಮಾಣಸ್ತೇ ಸರ್ವೇ ವನಮಾಶ್ರಿತಾಃ |
ಅನಕ್ಷತ್ರಾ ಅನಾಧೃಷ್ಯಾ ದೃಶ್ಯಂತೇ ಜ್ಯೋತಿಷಾಂ ಗಣಾಃ ॥21॥
ಕಾಮ್ಯಕರ್ಮಗಳಿಂದ ಅವರೆಂದಿಗೂ ಆನಂದಪಟ್ಟಿಲ್ಲ. ಜಿತೇಂದ್ರಿಯರಾಗಿ ಧರ್ಮದಲ್ಲೇ ಆಸಕ್ತರಾದ ಇವರೆಲ್ಲರೂ ಸದಾ ಧರ್ಮತತ್ಪರರಾಗಿ ಇದ್ದು ವನವನ್ನು ಸೇರಿರುತ್ತಾರೆ. ಅವರು ನಕ್ಷತ್ರಗಳಿಗಿಂತ ಭಿನ್ನರಾಗಿ, ಯಾರಿಂದಲೂ ಎದುರಿಸಲಾಗದ, ಜ್ಯೋತಿರ್ಮಯವಾದ ಆಕಾರವನ್ನು ಹೊಂದಿ ಕಾಣಿಸಿಕೊಳ್ಳುತ್ತಿದ್ದಾರೆ.
ಜರಯಾ ಚ ಪರಿದ್ಯೂನೋ ವ್ಯಾಧಿನಾ ಚ ಪ್ರಪೀಡಿತಃ |
ಚತುರ್ಥೇ ಚಾಯುಷಃ ಶೇಷೇ ವಾನಪ್ರಸ್ಥಾಶ್ರಮಂ ತ್ಯಜೇತ್ |
ಸದ್ಯಸ್ಕಾರಾಂ ನಿರೂಪ್ಯೇಷ್ಟಿಂ ಸಾರ್ವವೇದಾಂ ಸದಕ್ಷಿಣಾಮ್ ॥22॥
ಮುಪ್ಪಿನಿಂದ ದುರ್ಬಲನಾದ, ನಾನಾ ವ್ಯಾಧಿಗಳಿಂದ ಪೀಡಿತನಾದ ವಾನಪ್ರಸ್ಥಾಶ್ರಮಿಯು ಆಯುಸ್ಸಿನ ಮೂರನೆಯ ಭಾಗವು ಮುಕ್ತಾಯವಾಗಿ, ನಾಲ್ಕನೆಯ ಭಾಗವು ಪ್ರಾರಂಭವಾದ ಬಳಿಕ ಆ ಆಶ್ರಮವನ್ನು ತೊರೆದು ಸಂನ್ಯಾಸಿಯಾಗಬೇಕು. ಹಾಗೆ ಸಂನ್ಯಾಸಿಯಾಗುವಾಗ ಸಮಸ್ತ ವೇದಗಳಿಗೆ ಸಂಬಂಧಿಸಿದ, ಎಲ್ಲಾ ವೇದಗಳಲ್ಲಿಯೂ ವಿಹಿತವಾದ, ದಕ್ಷಿಣಾಸಹಿತವಾದ, ಒಂದೇ ದಿನದಲ್ಲಿ ಮುಗಿಯುವ ಯಾಗವೊಂದನ್ನು ಮಾಡಿ ಸಂನ್ಯಾಸಿಯಾಗಬೇಕು.
ಆತ್ಮಯಾಜೀ ಸೋಽಽತ್ಮರತಿರಾತ್ಮಕ್ರೀಡಾತ್ಮಸಂಶ್ರಯಃ |
ಆತ್ಮನ್ಯಗ್ನೀನ್ ಸಮಾರೋಪ್ಯ ತ್ಯಕತ್ವ ಸರ್ವಪರಿಗ್ರಹಾನ್ ॥23॥
ಸಾದ್ಯಸ್ಕಾಂಶ್ಚ ಯಜೇದ್ ಯಜ್ಞಾನಿಷ್ಟೀಶ್ಚೈವೇಹ ಸರ್ವದಾ |
ಸದೈವ ಯಾಜಿನಾಂ ಯಜ್ಞಾದಾತ್ಮನೀಜ್ಯಾ ನಿವರ್ತತೇ ॥24॥
ಪರಮಾತ್ಮನಲ್ಲೇ ಯಾಗವನ್ನು ಮಾಡುವವನಾಗಿ, ಪರಮಾತ್ಮನಲ್ಲಿ ರತಿ ಹೊಂದಿದವನಾಗಿ, ಪರಮಾತ್ಮನಲ್ಲೇ ಕ್ರೀಡೆ ಹೊಂದಿದವನಾಗಿ, ಪರಮಾತ್ಮನನ್ನೇ ಆಶ್ರಯಿಸಿದವನಾಗಿ, ಪರಮಾತ್ಮನನ್ನು ಚಿಂತಿಸುತ್ತಾ, ತನ್ನಲ್ಲೇ ಅಗ್ನಿಯನ್ನು ಆರೋಪಿಸಿಕೊಂಡು, ಸಮಸ್ತ ಸ್ವೀಕಾರಗಳನ್ನು ತ್ಯಜಿಸಿ, ಆಗಲೇ ಮಾಡಿ ಮುಗಿಸಬಹುದಾದ ಬ್ರಹ್ಮಯಜ್ಞಾದಿಗಳನ್ನು, ಇಷ್ಟಿಗಳನ್ನು ಮಾಡಬೇಕು. ಯಾಜ್ಞಕರು ಮಾಡುವ ಕರ್ಮಯಜ್ಞಗಳನ್ನು ಬಿಟ್ಟು ಪರಮಾತ್ಮನನ್ನೇ ಕುರಿತು ಮಾಡುವ ಯಜ್ಞಗಳಲ್ಲಿ ರತನಾಗಿರಬೇಕು.
ತ್ರೀಂಶ್ಚೈವಾಗ್ನೀನ್ಯಜೇತ್ ಸಮ್ಯಗಾತ್ಮನ್ಯೇವಾತ್ಮಮೋಕ್ಷಣಾತ್ |
ಪ್ರಾಣೇಭ್ಯೋ ಯಜುಷಾ ಪಂಚ ಷ ಪ್ರಾಶ್ನೀಯಾದಕುತ್ಸಯನ್ ॥25॥
ಆತ್ಮನಲ್ಲಿಯೇ ಮೂರು ಅಗ್ನಿಗಳನ್ನು ವಿಧಿಪೂರ್ವಕವಾಗಿ ಸಮಾರೋಪ ಮಾಡಿಕೊಂಡು, ದೇಹಪತನವಾಗುವ ತನಕ ಪ್ರಾಣಾಗ್ನಿಹೋತ್ರದ ವಿಧಿಯಿಂದ ಶ್ರದ್ಧೆಯಿಂದಲೇ ಯಜ್ಞವನ್ನು ಮಾಡುತ್ತಿರಬೇಕು. ಯಜುರ್ವೇದದ ಪ್ರಾಣಾಯಸ್ವಾಹಾ ಮುಂತಾದ ಮಂತ್ರಗಳನ್ನು ಉಪಯೋಗಿಸುತ್ತಾ, ಐದು ಅಥವಾ ಆರು ಬಾರಿ ತುತ್ತುಗಳನ್ನು ಸ್ವೀಕರಿಸಬೇಕು. ದೊರೆತ ಅನ್ನವು ರುಚಿಯಾಗಿರಲಿ, ಅರುಚಿಯಾಗಿರಲಿ ನಿಂದಿಸದೆ ಸ್ವೀಕರಿಸಬೇಕು.
ಕೇಶಲೋಮನಖಾನ್ವಾಪ್ಯ ವಾನಪ್ರಸ್ಥೋ ಮುನಿಸ್ತತಃ |
ಆಶ್ರಮಾದಾಶ್ರಮಂ ಸದ್ಯಃ ಪೂತೋ ಗಚ್ಛತಿ ಕರ್ಮಭಿಃ ॥26॥
ವಾನಪ್ರಸ್ಥಾಶ್ರಮಿಯಾದ ಮುನಿಯು ಕೇಶ, ಲೋಮ, ಉಗುರುಗಳನ್ನು ತೆಗೆಸಿ, ಸಂನ್ಯಾಸದೀಕ್ಷೆಗೆ ಸಂಬಂಧಿಸಿದ ಹೋಮಗಳನ್ನು

ಮಾಡಿ, ಪವಿತ್ರನಾಗಿ ವಾನಪ್ರಸ್ಥಾಶ್ರಮದಿಂದ ಪುಣ್ಯಮಯವಾದ ಸಂನ್ಯಾಸಾಶ್ರಮಕ್ಕೆ ಸಾಗಬೇಕು. ಆಯಾ ಕರ್ಮಗಳಿಂದ ಪವಿತ್ರನಾಗಿ ಈ ಆಶ್ರಮಗಳಿಗೆ ಸಾಗಬೇಕು.

ಅಭಯಂ ಸರ್ವಭೂತೇಭ್ಯೋ ಯೋ ದತ್ತ್ವಾ ಪ್ರವ್ರಜೇದ್ದ್ವಿಜಃ |
ಲೋಕಾಸ್ತೇಜೋಮಯಾಸ್ತಸ್ಯ ಪ್ರೇತ್ಯ ಚಾನಂತ್ಯಮಶ್ನುತೇ ॥27॥

ಬ್ರಾಹ್ಮಣನು ಎಲ್ಲ ಪ್ರಾಣಿಗಳಿಗೂ ಅಭಯದಾನ ಮಾಡಿ, ಸಂನ್ಯಾಸಿಯಾಗಿ ಗೃಹಾದಿಗಳನ್ನು ತ್ಯಜಿಸಿ ಹೊರಟು ಹೋಗಬೇಕು. ಇವನು ಮರಣಾನಂತರದಲ್ಲಿ ತೇಜೋಮಯವಾದ ಲೋಕಗಳಿಗೆ ಹೋಗುತ್ತಾನೆ.

ಸುಶೀಲವೃತ್ತೋ ವ್ಯಪನೀತಕಲ್ಮಷೋ
ನ ಚೇಹ ನಾಮುತ್ರ ಚ ಕರ್ತುಮೀಹತೇ |
ಅರೋಷಮೋಹೋ ಗತಸಂಧಿವಿಗ್ರಹೋ
ಭವೇದುದಾಸೀನವದಾತ್ಮವಿನ್ನರಃ ॥28॥

ಇಂಥ ವ್ಯಕ್ತಿಯು ಒಳ್ಳೆಯ ಚಾರಿತ್ರ್ಯಸಂಪನ್ನನಾಗಿ ಪಾಪಗಳನ್ನು ಕಳೆದುಕೊಂಡವನಾಗಿರುತ್ತಾನೆ. ಆತ್ಮಜ್ಞಾನಿಯಾದ ಪುರುಷನು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಕಾಮ್ಯಕರ್ಮಗಳನ್ನು ಮಾಡಲು ಬಯಸುವುದಿಲ್ಲ. ಕ್ರೋಧ-ಮೋಹಗಳು ಅವನಲ್ಲಿ ಇರುವುದಿಲ್ಲ. ಸ್ನೇಹಸಂಬಂಧವನ್ನು ಇಟ್ಟುಕೊಳ್ಳುವುದಿಲ್ಲ, ಕಲಹ ಮಾಡುವುದಿಲ್ಲ. ಎಲ್ಲ ವಿಷಯಗಳಲ್ಲಿಯೂ ಉದಾಸೀನನಂತಿರುತ್ತಾನೆ.

ಯಮೇಷು ಚೈವಾತ್ಮಗತೇಷು ನ ವ್ಯಥೇತ್
ಸ್ವಶಾಸ್ತ್ರಸೂತ್ರಾಹುತಿಮಂತ್ರವಿಕ್ರಮಃ |
ಭವೇದ್ ಯಥೇಷ್ಟಾ ಗತಿರಾತ್ಮಯಾಜಿನೋ
ನ ಸಂಶಯೋ ಧರ್ಮಪರೇ ಜಿತೇಂದ್ರಿಯೇ ॥29॥

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಯಮಗಳ ಪರಿಪಾಲನೆಯಲ್ಲಿ, ಶೌಚ, ಸಂತೋಷ ಮೊದಲಾದ ತನ್ನಲ್ಲಿರುವ ವಿಷಯಗಳಲ್ಲಿ ಎಂದಿಗೂ ಅವನು ದುಃಖಿತನಾಗುವುದಿಲ್ಲ. ಹಿಂಸೆ ಎಂದು ಭಾವಿಸುವುದಿಲ್ಲ. ತನ್ನ ಶಾಸ್ತ್ರದಲ್ಲಿರುವ, ತನಗೆ ಸಂಬಂಧಪಟ್ಟ ಸೂತ್ರಗಳಲ್ಲಿರುವ ಯಾವ ಮಂತ್ರಗಳಿವೆಯೋ ಅವುಗಳಲ್ಲಿ ಎಂದಿಗೂ ಔದಾಸೀನ್ಯವನ್ನು ತಾಳುವುದಿಲ್ಲ. ಉತ್ಸಾಹವನ್ನು ಹೊಂದಿರುತ್ತಾನೆ. ಧರ್ಮಪರನಾದ, ಜಿತೇಂದ್ರಿಯನಾದ ಅಂತಹ ಆತ್ಮಜ್ಞಾನಿಗೆ ಅವನು ಬಯಸಿದ ಸದ್ಗತಿಯು ದೊರೆಯುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

ತತಃ ಪರಂ ಶ್ರೇಷ್ಠಮತೀವ ಸದ್ಗುಣೈ-
ರಧಿಷ್ಠಿತಂ ತ್ರೀನಧಿವೃತ್ತಮುತ್ತಮಮ್ |
ಚತುರ್ಥಮುಕ್ತಂ ಪರಮಾಶ್ರಮಂ ಶೃಣು
ಪ್ರಕೀರ್ತ್ಯಮಾನಂ ಪರಮಂ ಪರಾಯಣಮ್ ॥30॥

ವಾನಪ್ರಸ್ಥಧರ್ಮಕ್ಕಿಂತ ಅತ್ಯಂತ ಶ್ರೇಷ್ಠವೆನಿಸಿದ, ಸದ್ಗುಣಗಳಿಂದ ತುಂಬಿದ, ಹಿಂದೆ ಹೇಳಿದ ಮೂರು ಆಶ್ರಮಗಳಿಗಿಂತಲೂ ಅಧಿಕ ಗುಣಗಳಿಂದ ಕೂಡಿರುವ ತುರ್ಯಾಶ್ರಮವು ಶ್ರೇಷ್ಠವು ಎಂದು ಹೇಳಲ್ಪಟ್ಟಿದೆ. ಶ್ರೇಷ್ಠವಾದ ಆಶ್ರಯವೆನಿಸಿದ ಈ ತುರ್ಯಾಶ್ರಮವನ್ನೇ ಮುಂದೆ ವರ್ಣಿಸುತ್ತೇನೆ, ಕೇಳಿಸಿಕೊ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಶುಕಾನುಪ್ರಶ್ನೇ ಏಕೋನಾಶೀತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ಎಂಬತ್ತನೆಯ ಅಧ್ಯಾಯ

ವ್ಯಾಸರು ಶುಕಮುನಿಯನ್ನು ಕುರಿತು ಸಂನ್ಯಾಸಿಯ ಆಚರಣೆಗಳು ಮತ್ತು ಜ್ಞಾನವಂತನಾದ ಸಂನ್ಯಾಸಿಯ ಮಹತ್ವವನ್ನು ತಿಳಿಸುತ್ತಾರೆ.

ಶುಕಃ

ವರ್ತಮಾನಸ್ತಥೈವಾತ್ರ ವಾನಪ್ರಸ್ಥಾಶ್ರಮೇ ಯಥಾ |
ಯೋಕ್ತವ್ಯೋಽಽತ್ಮಾ ಯಥಾ ಶಕ್ತ್ಯಾ ಪರಂ ವೈ ಕಾಂಕ್ಷತಾ ಪದಮ್ ॥1॥

ತಂದೆಯೇ, ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ್ದರೂ ವಾನಪ್ರಸ್ಥಾಶ್ರಮಿ- ಯಂತೆಯೇ ಬ್ರಹ್ಮಯಜ್ಞದಲ್ಲಿಯೇ ನಿರತನಾಗಿರುವ, ಭಗವಂತನನ್ನು ಕಂಡುಕೊಳ್ಳಬೇಕೆಂದು ಆಕಾಂಕ್ಷೆಯುಳ್ಳ ಸಂನ್ಯಾಸಿಯು ತನ್ನ ಶಕ್ತಿಗೆ ಅನುಗುಣವಾಗಿ ಮನಸ್ಸನ್ನು ಪರಮಾತ್ಮನ ಚಿಂತನೆಯಲ್ಲಿ ಹೇಗೆ ತೊಡಗಿಸಬೇಕು?

ವ್ಯಾಸಃ

ಪ್ರಾಪ್ಯ ಸಂಸ್ಕಾರಮೇತಾಭ್ಯಾಮಾಶ್ರಮಾಭ್ಯಾಂ ತತಃ ಪರಮ್ |
ಯತ್ ಕಾರ್ಯಂ ಪರಮಾರ್ಥಾರ್ಥಂ ತದಿಹೈಕಮನಾಃ ಶೃಣು ॥2॥

ಶುಕಮುನಿಯೇ, ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮಗಳ ಮೂಲಕ ಸಂಸ್ಕಾರವನ್ನು ಹೊಂದಿದ ಬಳಿಕ ಭಗವಂತನ ಪ್ರಾಪ್ತಿಗಾಗಿ ಯಾವ ಕರ್ತವ್ಯಗಳನ್ನು ಮಾಡಬೇಕೆಂದು ಹೇಳುತ್ತೇನೆ, ಏಕಾಗ್ರ ಮನಸ್ಸಿನಿಂದ ಕೇಳು.

ಕಾಷಾಯಾಂಬರಯಿತ್ವಾ ತು ಶ್ರೇಣಿಸ್ಥಾನೇಷು ಚ ತ್ರಿಷು |
ಪ್ರವ್ರಜೇಚ್ಚ ಪರಂ ಸ್ಥಾನಂ ಪರಿವ್ರಜ್ಯಾಮನುತ್ತಮಾಮ್ ॥3॥

ಒಂದು, ಎರಡು, ಮೂರು ಎಂಬ ಮೆಟ್ಟಿಲುಗಳಲ್ಲಿ ಮೂರನೆಯ ಸ್ಥಾನದಲ್ಲಿರುವ ವಾನಪ್ರಸ್ಥಾಶ್ರಮಿಯು ರಾಗ-ದ್ವೇಷಗಳೆಂಬ ದೋಷಗಳನ್ನು ಮನಸ್ಸಿನಲ್ಲಿಯೇ ಸುಟ್ಟು ಹಾಕಿ, ಬಳಿಕ ಉತ್ತಮೋತ್ತಮವಾದ ನಾಲ್ಕನೆಯ ಆಶ್ರಮವಾದ ಸಂನ್ಯಾಸವನ್ನು ಸ್ವೀಕರಿಸಬೇಕು.
ತದ್ ಭವಾನೇವಮಭ್ಯಸ್ಯ ವರ್ತತಾಂ ಶ್ರೂಯತಾಂ ತಥಾ |
ಏಕ ಏವ ಚರೇನ್ನಿತ್ಯಂ ಸಿದ್ಧ್ಯರ್ಥಮಸಹಾಯವಾನ್ ॥4॥
ಶುಕನೇ, ನೀನೂ ಈ ಸಂನ್ಯಾಸಧರ್ಮದ ನಿಯಮವನ್ನು ಕೇಳಿ ಅಭ್ಯಾಸ ಮಾಡಿಕೊ. ಸಂನ್ಯಾಸಿಯಾದವನು ಸಿದ್ಧಿಯನ್ನು ಹೊಂದುವ ದೃಷ್ಟಿಯಿಂದ ಯಾರ ಉಪಕಾರವನ್ನು ಬಯಸದೆ ಏಕಾಕಿಯಾಗಿ ಸಂನ್ಯಾಸ ಧರ್ಮವನ್ನು ಪಾಲಿಸಬೇಕು.
ಏಕಶ್ಚರತಿ ಯಃ ಪಶ್ಯನ್ನ ಜಹಾತಿ ನ ಹೀಯತೇ |
ಅನಗ್ನಿರನಿಕೇತಃ ಸ್ಯಾದ್ ಗ್ರಾಮಮನ್ನಾರ್ಥಮಾಶ್ರಯೇತ್ ॥5॥
ಯಾವನು ಜಗತ್ತೆಲ್ಲವನ್ನು ಭಗವಂತನ ನಿಯಮನಕ್ಕೆ ಒಳಪಟ್ಟಿದೆ ಎಂದು ನೋಡುತ್ತಾ ಏಕಾಕಿಯಾಗಿ ಸಂಚರಿಸುತ್ತಾ ಇದ್ದಾನೋ ಅಂತಹ ಸಂನ್ಯಾಸಿಯು ಯಾರನ್ನೂ ತ್ಯಾಗ ಮಾಡುವುದಿಲ್ಲ. ಅವನನ್ನು ಇತರರು ತ್ಯಜಿಸುವುದಿಲ್ಲ. ಸಂನ್ಯಾಸಿಯಾದವನು ಅಗ್ನಿಕಾರ್ಯರಹಿತನು, ಮನೆ-ಮಠಾದಿಗಳಿಂದ ರಹಿತನೂ ಆಗಿರಬೇಕು. ಅನ್ನಕ್ಕೋಸ್ಕರ ಗ್ರಾಮದಲ್ಲಿ ಸಂಚರಿಸಬೇಕು.
ಅಶ್ವಸ್ತನವಿಧಾನಃ ಸ್ಯಾನ್ಮುನಿರ್ಭಾವಸಮನ್ವಿತಃ |
ಲಘ್ವಾಶೀ ನಿಯತಾಹಾರಃ ಸಕೃದನ್ನನಿಷೇವಿತಾ ॥6॥
ಸಂನ್ಯಾಸಿಯಾದವನು ಮರುದಿನಕ್ಕಾಗಿ ಆಹಾರವನ್ನು ಸಂಗ್ರಹಿಸಬಾರದು. ಏಕಾಗ್ರತೆಯನ್ನು ಸಂಪಾದಿಸಿಕೊಂಡು ಮೌನಿಯಾಗಿರಬೇಕು. ಸ್ವಲ್ಪವೇ ಆಹಾರವನ್ನು ನಿಯತಕಾಲದಲ್ಲಿ ಭುಂಜಿಸಬೇಕು. ದಿನಕ್ಕೆ ಒಂದೇ ಬಾರಿ ಊಟ ಮಾಡಬೇಕು.
ಕಪಾಲಂ ವೃಕ್ಷಮೂಲಾನಿ ಕುಚೇಲಮಸಹಾಯತಾ |
ಉಪೇಕ್ಷಾ ಸರ್ವಭೂತಾನಾಮೇತಾವದ್ ಭಿಕ್ಷುಲಕ್ಷಣಮ್ ॥7॥
ಭಿಕ್ಷಾಪಾತ್ರೆಯನ್ನು, ಕಮಂಡಲುವನ್ನು ಧರಿಸಿರಬೇಕು. ವೃಕ್ಷಗಳ ಬುಡದಲ್ಲಿ ವಾಸಿಸಬೇಕು. ಸಾಧಾರಣವಾದ ಖಾವಿಯ ಬಟ್ಟೆಯನ್ನು ಧರಿಸಿರಬೇಕು. ಸಹಾಯಕ್ಕಾಗಿ ಯಾರನ್ನೂ ಇಟ್ಟುಕೊಳ್ಳಬಾರದು. ಸರ್ವಪ್ರಾಣಿಗಳಲ್ಲಿಯೂ ಉದಾಸೀನ ಭಾವದಿಂದ ಇರಬೇಕು. ಇದು ಸಂನ್ಯಾಸಿಯ ಲಕ್ಷಣವು.
ಯಸ್ಮಿನ್ ವಾಚಃ ಪ್ರವಿಶಂತಿ ಕೂಪೇ ಪ್ರಾಪ್ತಾಃ ಶಿಲಾ ಇವ |
ನ ವಕ್ತಾರಂ ಪುನರ್ಯಾಂತಿ ಸ ಕೈವಲ್ಯಾಶ್ರಮೇ ವಸೇತ್ ॥8॥
ಆಳವಾದ ಹೊಂಡದಲ್ಲಿ ಬಿದ್ದ ಆನೆಗಳು ಮೇಲೆದ್ದು ಬರಲು ಸಾಧ್ಯವಾಗದೆ ಅಲ್ಲಿಯೇ ಘೀಳಿಡುವಂತೆ ಇತರರು ಆಡುವ ನಿಂದಾ-ಸ್ತುತಿ ರೂಪವಾದ ಮಾತುಗಳು ಯಾವ ಸಂನ್ಯಾಸಿಯ ಕಿವಿಯನ್ನು ಸೇರಿದ ಬಳಿಕ ಅವುಗಳು ಮತ್ತೆ ತಿರುಗಿ ಹಿಂದೆ ಬರುವುದಿಲ್ಲ. ಅಂದರೆ ಯಾವ ಸಂನ್ಯಾಸಿಯು ಮತ್ತೊಬ್ಬರ ನಿಂದಾ-ಸ್ತುತಿಗಳಲ್ಲಿ ಮುಂದುವರೆಯುವುದಿಲ್ಲವೋ ಅಂತಹವರು ಮೋಕ್ಷಾಶ್ರಮವೆನಿಸಿದ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು.
ನೈವ ಪಶ್ಯೇನ್ನ ಶೃಣುಯಾದವಾಚ್ಯಂ ಜಾತು ಕಸ್ಯಚಿತ್ |
ಬ್ರಾಹ್ಮಣಾನಾಂ ವಿಶೇಷೇಣ ನೈವ ಬ್ರೂಯಾತ್ ಕಥಂಚನ ॥9॥
ಸಂನ್ಯಾಸಿಯಾದವನು ನಿಂದಕನನ್ನು ನೋಡಬಾರದು. ಅವನ ಮಾತುಗಳನ್ನೂ ಕೇಳಬಾರದು. ಇವನೂ ಮತ್ತೊಬ್ಬರ ಬಗ್ಗೆ ಅವಾಚ್ಯ ಮಾತುಗಳನ್ನು ಹೇಳಬಾರದು. ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರ ವಿಷಯದಲ್ಲಿ ಎಂತಹ ಸಂದರ್ಭದಲ್ಲಿಯೂ ಅವಹೇಳಕಾರಿಯಾದ ಮಾತುಗಳನ್ನು ಹೇಳಬಾರದು.
ಯದ್ಬ್ರಾಹ್ಮಣಸ್ಯ ಕುಶಲಂ ತದೇವ ಸತತಂ ವದೇತ್ |
ತೂಷ್ಣೀಮಾಸೀತ ನಿಂದಾಯಾಂ ಕುರ್ವನ್ ಭೇಷಜಮಾತ್ಮನಃ ॥10॥
ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರಿಗೆ ಯಾವುದು ಹಿತವೋ ಅದನ್ನೇ ಹೇಳುತ್ತಿರಬೇಕು. ನಿಂದೆಯ ಮಾತನ್ನು ಕೇಳುತ್ತಿದ್ದರೂ ಅದನ್ನು ಭವರೋಗ ನಿವಾರಣೆಗೆ ಔಷಧವೆಂದು ಭಾವಿಸಿ ಸುಮ್ಮನಿರಬೇಕು.
ಯೇನ ಪೂರ್ಣಮಿವಾಕಾಶಂ ಭವತ್ಯೇಕೇನ ಸರ್ವದಾ |
ಶೂನ್ಯಂ ಯೇನ ಜನಾಕೀರ್ಣಂ ತಂ ದೇವಾ ಬ್ರಾಹ್ಮಣಂ ವಿದುಃ ॥11॥
ಆಕಾಶವು ಅಸಂಗವಾಗಿ, ವ್ಯಾಪ್ತವಾಗಿ, ನಿರ್ಲಿಪ್ತವಾಗಿ ಹೇಗೆ ಇರುತ್ತದೋ ಅದರಂತೆ ಸಂನ್ಯಾಸಿಯು ಏಕಾಕಿಯಾಗಿದ್ದು, ಅಸಂಗನಾದ ಭಗವಂತನ ಸಂಬಂಧವನ್ನು ಹೊಂದಿ ಜಗತ್ತೆಲ್ಲವನ್ನೂ ಉಪೇಕ್ಷಿಸಬೇಕು. ಅಂತಹವನನ್ನು ದೇವತೆಗಳು ಬ್ರಾಹ್ಮಣ ಎನ್ನುತ್ತಾರೆ.
ಯೇನ ಕೇನಚಿದಾಚ್ಛನ್ನೋ ಯೇನ ಕೇನಚಿದಾಶಿತಃ |
ಯತ್ರ ಕ್ವ ಚ ನ ಶಾಯೀ ಚ ತಂ ದೇವಾ ಬ್ರಾಹ್ಮಣಂ ವಿದುಃ ॥12॥
ಯಾವ ವ್ಯಕ್ತಿಯು ಬಟ್ಟೆ ಸಿಕ್ಕಿದರೆ ತನ್ನ ಶರೀರವನ್ನು ಮುಚ್ಚಿಕೊಳ್ಳುತ್ತಾನೋ, ಹಸಿವಾದಾಗಲೂ ಪದಾರ್ಥ ಸಿಕ್ಕಿದರೆ ತಿನ್ನುತ್ತಾನೋ, ಸಿಕ್ಕಿದ ಜಾಗದಲ್ಲಿ ಮಲಗುತ್ತಾನೋ ಅವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ಅಹೇರಿವ ಗಣಾದ್ಭೀತಃ ಸೌಹಿತ್ಯಾನ್ನರಕಾದಿವ |
ಕುಣಪಾದಿವ ಚ ಸ್ತ್ರೀಭ್ಯಸ್ತಂ ದೇವಾ ಬ್ರಾಹ್ಮಣಂ ವಿದುಃ ॥13॥
ಹಾವನ್ನು ಕಂಡಾಗ ಭಯಪಡುವಂತೆ ಯಾವ ಸಂನ್ಯಾಸಿಯು ಜನರನ್ನು ಕಂಡರೆ ಭಯಪಡುತ್ತಾನೋ, ನರಕವನ್ನು ಕಂಡಾಗ ಭಯಪಡುವಂತೆ ಮೃಷ್ಟಾನ್ನವನ್ನು ಕಂಡಾಗ ಭಯಪಡುತ್ತಾನೋ, ಹೆಣವನ್ನು ಕಂಡಾಗ ದೂರವಾಗಿ ನಿಲ್ಲುವಂತೆ ಸ್ತ್ರೀಸಂಗಕ್ಕೆ ಹೆದರಿ ದೂರ ನಿಲ್ಲುತ್ತಾನೋ ಅಂತಹವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ನ ಕ್ರುದ್ಧ್ಯೇನ್ನ ಪ್ರಹೃಷ್ಯೇಚ್ಚ ಮಾನಿತೋಮಾನಿತಶ್ಚ ಯಃ |

ಸರ್ವಭೂತೇಷ್ವಭಯದಸ್ತಂ ದೇವಾ ಬ್ರಾಹ್ಮಣಂ ವಿದುಃ ॥14॥
ಯಾವ ವ್ಯಕ್ತಿಯು ಸಮ್ಮಾನಿತನಾದರೆ ಹರ್ಷಗೊಳ್ಳುವುದಿಲ್ಲವೋ, ಯಾವ ವ್ಯಕ್ತಿಯು ಅವಮಾನಿತನಾದರೆ ದುಃಖಗೊಳ್ಳುವುದಿಲ್ಲವೋ, ಸಮಸ್ತ ಪ್ರಾಣಿಗಳಿಗೂ ಅಭಯ ದಾನ ಮಾಡುತ್ತಿದ್ದಾನೆಯೋ ಅಂತಹವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ನಾಭಿನಂದೇತ ಮರಣಂ ನಾಭಿನಂದೇತ ಜೀವಿತಮ್ |
ಕಾಲಮೇವ ಪ್ರತೀಕ್ಷೇತ ನಿದೇಶಂ ಭೃತಕೋ ಯಥಾ ॥15॥
ಸಂನ್ಯಾಸಿಯಾದವನು ಮರಣವನ್ನು ಪ್ರಶಂಸಿಸಬಾರದು, ಬದುಕನ್ನು ಹೊಗಳಬಾರದು. ಸ್ವಾಮಿಯ ಆಜ್ಞೆಯನ್ನು ಸೇವಕನು ಎದುರು ನೋಡುವಂತೆ ಸಂನ್ಯಾಸಿಯು ಭಗವಂತನ ವ್ಯಾಪಾರವನ್ನೇ ನೋಡುತ್ತಿರಬೇಕು.
ಅನಭ್ಯಾಹತಚಿತ್ತಃ ಸ್ಯಾದನಭ್ಯಾಹತವಾಕ್ತಥಾ |
ನಿರ್ಮುಕ್ತಃ ಸರ್ವಪಾಪೇಭ್ಯೋ ನಿರಮಿತ್ರಸ್ಯ ಕಿಂ ಭಯಮ್ ॥16॥
ಸಂನ್ಯಾಸಿಯ ಮನಸ್ಸು ರಾಗ-ದ್ವೇಷಗಳಿಂದ ಕಲುಷಿತವಾಗಿರಬಾರದು. ನಿಂದೆ ಮೊದಲಾದ ದೋಷಗಳಿಲ್ಲದ ಮಾತುಗಳು ಅವನಲ್ಲಿರಬೇಕು. ಸರ್ವಪಾಪಗಳಿಂದಲೂ ವಿಮುಕ್ತನಾಗಿರಬೇಕು. ಶತ್ರುರಹಿತನಾದ ಇಂತಹ ಸಂನ್ಯಾಸಿಗೆ ಭಯಕ್ಕೆ ಅವಕಾಶವೆಲ್ಲಿ?
ಅಭಯಂ ಸರ್ವಭೂತೇಭ್ಯೋ ಭೂತಾನಾಮಭಯಂ ಯತಃ |
ತಸ್ಯ ದೇಹಾದ್ ವಿಮುಕ್ತಸ್ಯ ಭಯಂ ನಾಸ್ತಿ ಕುತಶ್ಚನ ॥17॥
ಯಾವ ಸಂನ್ಯಾಸಿಯು ಸಮಸ್ತ ಪ್ರಾಣಿಗಳಿಗೂ ಅಭಯದಾನ ಮಾಡಿ, ಎಲ್ಲ ಪ್ರಾಣಿಗಳಿಂದ ತಾನೂ ಅಭಯವನ್ನು ಹೊಂದಿರುತ್ತಾನೋ, ಮೋಹದಿಂದ ವಿಮುಕ್ತನಾದ ಸಂನ್ಯಾಸಿಗೆ ಯಾವುದರಿಂದಲೂ ಯಾವುದೇ ವಿಧವಾದ ಭಯವು ಇರುವುದಿಲ್ಲ.
ಯಥಾ ನಾಗಪದೇಽನ್ಯಾನಿ ಪದಾನಿ ಪದಗಾಮಿನಾಮ್ |
ಸರ್ವಾಣ್ಯೇವಾಪಿಧೀಯಂತೇ ಪದಜಾತಾನಿ ಕೌಂಜರೇ ॥18॥
ಏವಂ ಸರ್ವಮಹಿಂಸಾಯಾಂ ಧರ್ಮಾರ್ಥಮಪಿಧೀಯತೇ |
ಅಮೃತಃ ಸ ನಿತ್ಯಂ ವಸತಿ ಯೋಽಹಿಂಸಾಂ ಪ್ರತಿಪದ್ಯತೇ ॥19॥
ಕಾಲನಿಂದ ಸಂಚರಿಸುವ ಪ್ರಾಣಿಗಳ ಹೆಜ್ಜೆಯ ಗುರುತು ಆನೆಗಳ ಹೆಜ್ಜೆಗಳ ಗುರುತಿನಲ್ಲಿ ಹೇಗೆ ಮುಚ್ಚಿಹೋಗುತ್ತದೋ, ಇದರಂತೆ ಸಮಸ್ತ ಧರ್ಮ-ಅರ್ಥಗಳು ಅಹಿಂಸಾಧರ್ಮದಲ್ಲಿ ಅಡಗಿಕೊಂಡಿವೆ. ಯಾವಾತನು ಯಾವುದೇ ಕಾರಣದಿಂದ ಹಿಂಸೆಯನ್ನು ಆಶ್ರಯಿಸುವುದಿಲ್ಲವೋ ಅಂಥವನು ಅಮೃತಮಯನಾಗಿ ಸಂನ್ಯಾಸಾಶ್ರಮದಲ್ಲಿ ಇರುತ್ತಾನೆ.
ಅಹಿಂಸಕಃ ಸಮಃ ಸತ್ಯೋ ಧೃತಿಮಾನ್ನಿಯತೇಂದ್ರಿಯಃ |
ಶರಣ್ಯಃ ಸರ್ವಭೂತಾನಾಂ ಗತಿಮಾಪ್ನೋತ್ಯನುತ್ತಮಾಮ್ ॥20॥
ಅಹಿಂಸಾ ಪಾಲಕನು, ಸರ್ವತ್ರ ಭಗವಂತನನ್ನು ಕಾಣುವವನು, ಸತ್ಯನಿಷ್ಠನು, ಧೈರ್ಯವಂತನು, ಜಿತೇಂದ್ರಿಯನು, ಪ್ರಾಣಿಗಳಿಗೆಲ್ಲ ಆಶ್ರಯದಾತನು ಇಂತಹ ಸಂನ್ಯಾಸಿಯು ಅತ್ಯಂತ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.
ಏವಂ ಪ್ರಜ್ಞಾ ನತೃಪ್ತಸ್ಯ ನಿರ್ಭಯಸ್ಯ ಮನೀಷಿಣಃ |
ನ ಮೃತ್ಯುಮತಿಗೋ ಭಾವಃ ಸ ಮೃತ್ಯುಮಧಿಗಚ್ಛತಿ ॥21॥
ಹೀಗೆ ಯಾವ ಸಂನ್ಯಾಸಿಯು ಭಗವಂತನ ಜ್ಞಾನದಿಂದ ತೃಪ್ತನಾಗಿದ್ದು, ಯಾರಿಂದಲೂ ಭಯಪಡದೆ ಆಸೆಯನ್ನು ತ್ಯಜಿಸಿ ಇದ್ದಾನೋ ಅಂತಹ ಸಂನ್ಯಾಸಿಯನ್ನು ಮೃತ್ಯುವಿಗೂ ದಾಟಲಾಗದು. ಪ್ರತಿಯಾಗಿ ಈತನೇ ಮೃತ್ಯುವನ್ನು ಅತಿಕ್ರಮಿಸುತ್ತಾನೆ, ಅಮರನಾಗುತ್ತಾನೆ.
ವಿಮುಕ್ತಂ ಸರ್ವಸಂಗೇಭ್ಯೋ ಮುನಿಮಾಕಾಶವತ್ಸ್ಥಿತಮ್ |
ಅಸ್ವಮೇಕಚರಂ ಶಾಂತಂ ತಂ ದೇವಾ ಬ್ರಾಹ್ಮಣಂ ವಿದುಃ ॥22॥
ಯಾವ ಸಂನ್ಯಾಸಿಯು ಸರ್ವಸಂಗ ತ್ಯಾಗಿಯಾಗಿ, ಮೌನಿಯಾಗಿ, ನಿರ್ಮಲವಾದ ಆಕಾಶದಂತೆ ನಿರ್ಲಿಪ್ತನಾಗಿ, ಸಮಸ್ತ ವಸ್ತುಗಳಲ್ಲಿಯೂ ಅಭಿಮಾನಶೂನ್ಯನಾಗಿ, ಏಕಾಕಿಯಾಗಿ, ಶಾಂತನಾಗಿ ಸಂಚರಿಸುತ್ತಾನೋ ಅಂತಹವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ಜೀವಿತಂ ಯಸ್ಯ ಧರ್ಮಾರ್ಥಂ ಧರ್ಮೋ ರತ್ಯರ್ಥಮೇವ ಚ |
ಅಹೋರಾತ್ರಾಶ್ಚ ಪುಣ್ಯಾರ್ಥಂ ತಂ ದೇವಾ ಬ್ರಾಹ್ಮಣಂ ವಿದುಃ ॥23॥
ಯಾರ ಜೀವನವು ಧರ್ಮಕ್ಕಾಗಿಯೇ ಇರುವುದೋ, ಆ ಧರ್ಮವು ಶ್ರೀಹರಿಯ ಪ್ರೀತಿಗೋಸ್ಕರವೇ ಆಚರಿಸಲ್ಪಡುತ್ತದೋ, ಯಾವನ ಹಗಲು-ರಾತ್ರಿಗಳು ಪುಣ್ಯ ಕಾರ್ಯದಲ್ಲಿಯೇ ರತವಾಗಿವೆಯೋ ಅಂತಹವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ನಿರಾಶಿಷಮನಾರಂಭಂ ನಿರ್ನಮಸ್ಕಾರಮಸ್ತುತಿಮ್ |
ಅಕ್ಷೀಣಂ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ ॥24॥
ಯಾವನು ಕಾಮನಾರಹಿತನೋ, ಸರ್ವಪ್ರಕಾರಗಳಿಂದಲೂ ಬಂಧಕ ಕರ್ಮಗಳನ್ನು ತ್ಯಜಿಸಿರುವನೋ, ನಮಸ್ಕಾರ- ಹೊಗಳಿಕೆಗಳಿಂದ ದೂರನಾಗಿದ್ದಾನೋ, ಸಕಲ ಬಂಧಕಗಳಿಂದ ಮುಕ್ತನಾಗಿದ್ದಾನೋ ಅಂತಹವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ಸರ್ವಾಣಿ ಭೂತಾನಿ ಸುಖೇ ರಮಂತೇ
ಸರ್ವಾಣಿ ದುಃಖಸ್ಯ ಭೃಶಂ ತ್ರಸಂತಿ |
ತೇಷಾಂ ಭಯೋತ್ಪಾದನಜಾತಖೇದಃ
ಕುರ್ಯಾನ್ನ ಕರ್ಮಾಣಿ ಹಿ ಶ್ರದ್ದಧಾನಃ ॥25॥
ಸಮಸ್ತ ಪ್ರಾಣಿಗಳು ಸುಖ ಒದಗಿದಾಗ ಪ್ರಸನ್ನವಾಗಿರುತ್ತವೆ. ದುಃಖಕ್ಕೆ ಭಯ ಪಡುತ್ತವೆ. ಪ್ರಾಣಿಗಳಿಗೆ ಭಯವನ್ನು ನೀಡುವುದರಿಂದ ಯಾವ ವ್ಯಕ್ತಿಗೆ ಸಂಕಟ ಉಂಟಾಗುತ್ತದೋ, ಶ್ರದ್ಧಾಳುವಾದ ಅಂತಹ ಮನುಷ್ಯನು ಭಯವನ್ನುಂಟು ಮಾಡುವ ದೇಹಯಾತ್ರಾ ಕರ್ಮಗಳಲ್ಲಿ ನಿರತನಾಗಬಾರದು.
ದಾನಂ ಹಿ ಭೂತಾಭಯದಕ್ಷಿಣಾಯಾಃ

ಸರ್ವಾಣಿ ದಾನಾನ್ಯಧಿತಿಷ್ಠತೀಹ |
ತೀಕ್ಷ್ಣಂ ತನುಂ ಯಃ ಪ್ರಥಮಂ ಜಹಾತಿ
ಸೋऽನಂತಮಾಪ್ನೋತ್ಯಭಯಂ ಪ್ರಜಾಭ್ಯಃ ॥26॥
ಜಗತ್ತಿನಲ್ಲಿ ಪ್ರಾಣಿಗಳಿಗೆ ಅಭಯವೆಂಬ ದಕ್ಷಿಣೆಯನ್ನು ದಾನ ಮಾಡಿದಾಗ ಸಿಗುವ ಪುಣ್ಯಕ್ಕಿಂತ ಮಿಗಿಲಾದ ಪುಣ್ಯವು ಬೇರೆ ಯಾವ ದಾನದಿಂದಲೂ ದೊರೆಯದು. ಯಾವನು ಹಿಂಸೆಯನ್ನು ತ್ಯಜಿಸುವನೋ ಅವನು ಸರ್ವಪ್ರಜೆಗಳಿಂದಲೂ ಅಭಯವನ್ನು ಪಡೆದು ಮೋಕ್ಷವನ್ನು ಹೊಂದುತ್ತಾನೆ. ಕ್ರೂರವಾದ ಮಾತುಗಳನ್ನು ಆಡದಿರುವವನು ಭಗವಂತನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ.
ಸ ದತ್ತಮಾಸ್ಯೇನ ಹವಿರ್ಜುಹೋತಿ
ಲೋಕಸ್ಯ ನಾಭಿರ್ಜಗತಃ ಪ್ರತಿಷ್ಠಾ |
ತಸ್ಯಾಂಗಮಂಗಾನಿ ಕೃತಾಕೃತಂ ಚ
ವೈಶ್ವಾನರಃ ಸರ್ವಮೇವ ಪ್ರಪೇದೇ ॥27॥
ಯಾವ ಸಂನ್ಯಾಸಿಯು ಬೇಡಿದ ಭಿಕ್ಷಾನ್ನವನ್ನೇ ವೈಶ್ವಾನರನಿಗೆ ಆಹುತಿ ಎಂದು ತನ್ನ ಬಾಯಿಯ ಮೂಲಕ, ದೇವತೆಗಳ ಮೂಲಕ ಭಗವಂತನಿಗೆ ನೀಡುತ್ತಾನೋ ಅಂತಹ ವೈಶ್ವಾನರ ಭಗವಂತನು ಲೋಕಗಳಿಗೆಲ್ಲ ಆಧಾರನೂ, ಕೇಂದ್ರನೂ, ಜಗತ್ತಿನ ಅಂಗ-ಪ್ರತ್ಯಂಗಗಳು, ಕಾರ್ಯ-ಕಾರಣಗಳು ಆಗಿರುವ ಸರ್ವೋತ್ತಮನಾಗಿದ್ದಾನೆ. ಯತಿಯಾದವನು ಸ್ವೀಕರಿಸುವ ಅನ್ನವನ್ನೇ ಯಜ್ಞ ಎಂದು ಭಾವಿಸಿದರೆ ಎಲ್ಲ ಪುಣ್ಯ ಕರ್ಮಗಳನ್ನು ಮಾಡಿದವನ ಫಲವನ್ನು ಹೊಂದುತ್ತಾನೆ.
ಪ್ರಾದೇಶಮಾತ್ರೇ ಹೃದಿ ನಿಶ್ರಿತಂ ಯತ್
ತಸ್ಮಿನ್ ಪ್ರಾಣಾನಾತ್ಮಯಾಜೀ ಜುಹೋತಿ |
ತಸ್ಯಾಗ್ನಿಹೋತ್ರಂ ಹುತಮಾತ್ಮಸಂಸ್ಥಂ
ಸರ್ವೇಷು ಲೋಕೇಷು ಸದೈವತೇಷು ॥28॥
ವೈಶ್ವಾನರ ಯಜ್ಞವನ್ನು ಮಾಡುವ ಜ್ಞಾನಿಯು ನಾಭಿಯಿಂದ ಹೃದಯದ ತನಕ ಪ್ರಾದೇಶಮಾತ್ರದಲ್ಲಿ ಪ್ರಕಟವಾಗುವ ವೈಶ್ವಾನರ ಭಗವಂತನಲ್ಲಿ ತನ್ನ ಇಂದ್ರಿಯಗಳನ್ನು ಹೋಮಿಸುತ್ತಾನೆ. ಜ್ಞಾನಿಯು ಮಾಡುವ ಪ್ರಾಣಾಗ್ನಿ ಹೋತ್ರವು ಅವನ ಶರೀರದಲ್ಲಿಯೇ ಆದರೂ ಅಂತರ್ಯಾಮಿಯಾದ ಭಗವಂತನು ತೃಪ್ತಿಯನ್ನು ಹೊಂದಿರುವುದರಿಂದ ಸಮಸ್ತ ಲೋಕಗಳಲ್ಲಿಯೂ ಪ್ರಾಣಾಗ್ನಿ ಹೋತ್ರವು ನಡೆದಂತಾಗುತ್ತದೆ.
ದೈವಂ ತ್ರಿಧಾತುಂ ತ್ರಿವೃತಂ ಸುಪೂರ್ಣಂ
ಯೇ ವಿದ್ಯುರಗ್ರ್ಯಂ ಪರಮಾರ್ಥತಾಂ ಚ |
ತೇ ಸರ್ವಲೋಕೇಷು ಮಹೀಯಮಾನಾ
ದೇವಾಃ ಸಮರ್ಥಾಃ ಸುಕೃತಂ ವ್ರಜಂತಿ॥29॥
ಯಾರು ಕಾಲ-ಪುರುಷ-ಪ್ರಕೃತಿಗಳನ್ನು ಧರಿಸಿರುವ ವಿಜ್ಞಾನ, ಐಶ್ವರ್ಯ, ಮಂತ್ರಶಕ್ತಿಗಳಿಂದ ಕೂಡಿರುವ, ಮೂರು ವೇದಗಳನ್ನು ವ್ಯಾಪಿಸಿರುವ, ಮೂರು ಲೋಕಗಳನ್ನು ವ್ಯಾಪಿಸಿರುವ, ಪರಿಪೂರ್ಣನಾದ, ಸರ್ವೋತ್ತಮನಾದ ನಾರಾಯಣನನ್ನು ಪರಮ ಚೇತನನೆಂದು ತಿಳಿದಿರುತ್ತಾರೋ ಅಂತಹ ಜ್ಞಾನಿಗಳು ಸಮಸ್ತ ಲೋಕದಿಂದಲೂ ಸಮ್ಮಾನಿತರಾಗುತ್ತಾರೆ. ದೇವತೆಗಳು ಇವರ ವಿಷಯದಲ್ಲಿ ಪುಣ್ಯಕರವಾದ ಮಾತುಗಳನ್ನು ಹೇಳುತ್ತಾರೆ.
ವೇದಾಂಶ್ಚ ವೇದ್ಯಂ ಚ ವಿಧಿಂ ಚ ಕೃತ್ಸ್ನ-
ಮಥೋ ನಿರುಕ್ತಂ ಪರಮಾರ್ಥತಾಂ ಚ |
ಸರ್ವಂ ಶರೀರಾತ್ಮನಿ ಯಃ ಪ್ರವೇದ
ತಸ್ಮೈ ಸ್ಮ ದೇವಾಃ ಸ್ಪೃಹಯಂತಿ ನಿತ್ಯಮ್ ॥30॥
ಜ್ಞಾನವನ್ನು, ಜ್ಞೇಯವನ್ನು, ಸಮಗ್ರವಾದ ವಿಧಿಗಳನ್ನು, ವೈದಿಕ ಶಬ್ದಗಳ ಅಭಯವಾರ್ತೆಗಳನ್ನು, ಪರಬ್ರಹ್ಮತತ್ತ್ವವನ್ನು , ಶರೀರದ ಅಂತರ್ಯಾಮಿಯಾಗಿರುವ ನಾರಾಯಣನನ್ನು ಯಾವನು ಚೆನ್ನಾಗಿ ತಿಳಿದುಕೊಂಡಿರುತ್ತಾನೋ ಅಂತಹ ಜ್ಞಾನಿಯ ದರ್ಶನವನ್ನು ದೇವತೆಗಳು ಅಪೇಕ್ಷಿಸುತ್ತಾರೆ.
ಭೂಮಾವಸಕ್ತಂ ದಿವಿ ಚಾಪ್ರಮೇಯಂ
ಹಿರಣ್ಮಯಂ ಯೋऽಂಡಜಮಂಡಮಧ್ಯೇ |
ಪತತ್ರಿಣಂ ಪಕ್ಷಿಣಮಂತರಿಕ್ಷೇ
ಯೋ ವೇದ ಭೋಗ್ಯಾತ್ಮನಿ ದೀಪ್ತರಶ್ಮಿಃ॥31॥
ಭೂಮಿಯಲ್ಲಿದ್ದರೂ ವಿರಕ್ತನಾಗಿರುವ, ಆಕಾಶದಲ್ಲಿದ್ದರೂ ಅಪ್ರಮೇಯನೆನಿಸಿದ, ಬ್ರಹ್ಮಾಂಡದ ಮಧ್ಯದಲ್ಲಿ ಪಿಂಡಾಂಡವೆಂಬ ಶರೀರದ ಮಧ್ಯದಲ್ಲಿ ಇದ್ದರೂ ಪಕ್ಷಿಯ ರೂಪದಲ್ಲಿರುವ ಪರಮಾತ್ಮನನ್ನು ಭೋಗಾಯತನವಾದ ಈ ಶರೀರದ ಹೃದಯಾಕಾಶದಲ್ಲಿ ತಿಳಿಯುತ್ತಾನೋ ಅವನು ತೇಜೋಮಯವಾದ ರಶ್ಮಿಗಳಿಂದ ಪ್ರಕಾಶಿಸುತ್ತಾನೆ.
ಆವರ್ತಮಾನಮಜರಂ ವಿವರ್ತನಂ
ಷಣ್ಣೇಮಿಕಂ ದ್ವಾದಶಾರಂ ಸುಪರ್ವ |
ಯಸ್ಯೇದಮಾಸ್ಯೇ ಪರಿಯಾತಿ ವಿಶ್ವಂ
ತತ್ ಕಾಲಚಕ್ರಂ ನಿಹಿತಂ ಗುಹಾಯಾಮ್ ॥32॥
ನಿರಂತರ ಸುತ್ತುತ್ತಿರುವ, ಜೀರ್ಣವಾಗದ, ಆರು ಋತುಗಳೆಂಬ ಗುಂಭಗಳನ್ನು ಹೊಂದಿರುವ, ಹನ್ನೆರಡು ಮಾಸಗಳೆಂಬ ಅರೆ ಕಾಲುಗಳನ್ನು ಹೊಂದಿರುವ, ದರ್ಶಪೂರ್ಣ ಮಾಸಾದಿ ಪರ್ವಗಳನ್ನು ಹೊಂದಿರುವ ಕಾಲಚಕ್ರವು ಬುದ್ಧಿ ಎಂಬ ಗುಹೆಯಲ್ಲಿ

ಅಡಗಿದೆ. ಈ ಕಾಲಚಕ್ರದ ಮುಖದಲ್ಲಿ ಜಗತ್ತೇ ತಿನ್ನುವ ಭಕ್ಷ್ಯದಂತೆ ಆಗಿ ಅದರ ಮುಖದಲ್ಲಿ ಬೀಳುತ್ತಿದೆ. ಈ ಕಾಲಸ್ವರೂಪಿಯು ಪರಮಾತ್ಮನೇ ಆಗಿದ್ದಾನೆ. ಅಂತಹ ಭಗವಂತನನ್ನು ಕಂಡವನನ್ನು ದೇವತೆಗಳು ಗೌರವಿಸುತ್ತಾರೆ.

ಯಃ ಸಂಪ್ರಸಾದಂ ಜಗತಃ ಶರೀರಂ
ಸರ್ವಾನ್ ಸ ಲೋಕಾನಧಿಗಚ್ಛತೀಹ |
ತಸ್ಮಿನ್ ಹುತಂ ತರ್ಪಯತೀಹ ದೇವಾಂ-
ಸ್ತೇ ವೈ ತೃಪ್ತಾಸ್ತರ್ಪಯಂತ್ಯಾಸ್ಯಮಸ್ಯ ||33||

ಯಾವನು ಪ್ರಸನ್ನತೆಯನ್ನು ಉಂಟುಮಾಡುತ್ತಾನೋ, ಜಗತ್ತಿಗೆ ಶರೀರದಂತಿದ್ದಾನೋ ಅಂತಹ ಪರಮಾತ್ಮನು ಸರ್ವಲೋಕಗಳನ್ನು ಮೀರಿ ನಿಂತಿದ್ದಾನೆ. ಆ ಪರಮಾತ್ಮನಲ್ಲಿ ಮಾಡುವ ಇಂದ್ರಿಯಾದಿಗಳ ತರ್ಪಣವು ದೇವತೆಗಳನ್ನೇ ತೃಪ್ತಿಗೊಳಿಸುತ್ತದೆ. ತೃಪ್ತರಾದ ದೇವತೆಗಳು ಹೊರಬರುವ ಜ್ಞಾನಿಯ ಮುಖದಿಂದ ಜ್ಞಾನಾಮೃತದ ಸೇಚನೆಯಿಂದ ತೃಪ್ತಿಗೊಳ್ಳುತ್ತಾರೆ.

ತೇಜೋಮಯೋ ನಿತ್ಯತನುಃ ಪುರಾಣೋ
ಲೋಕಾನನಂತಾನಭಯಾನುಪೈತಿ |
ಭೂತಾನಿ ಯಸ್ಮಾನ್ನ ತ್ರಸಂತೇ ಕದಾಚಿತ್
ಸ ಭೂತೇಭ್ಯೋ ನ ತ್ರಸತೇ ಕದಾಚಿತ್ ||34||

ತೇಜೋಮಯನು, ನಿತ್ಯವಾದ ಶರೀರವುಳ್ಳವನು, ಪುರಾಣಪುರುಷನು ಆಗಿ, ಭಯವೇ ಇಲ್ಲದ ಅಸಂಖ್ಯಾತವಾದ ಲೋಕಗಳನ್ನು ಹೊಂದುತ್ತಾನೆ. ಯಾರಿಂದ ಯಾವ ಪ್ರಾಣಿಗಳು ಭಯಪಡುವುದಿಲ್ಲವೋ ಅಂತಹವರು ಯಾವಾಗಲೂ ಯಾವ ಪ್ರಾಣಿಗಳಿಗೂ ಭಯಪಡುವುದಿಲ್ಲ.

ಅಗರ್ಹಣೀಯೋ ನ ಚ ಗರ್ಹತೇಽನ್ಯಾನ್
ಸ ವೈ ವಿಪ್ರಾಃ ಪರಮಾತ್ಮಾನಮೀಕ್ಷೇತ್ |
ವಿನೀತಮೋಹೋ ವ್ಯಪನೀತಕಲ್ಮಷೋ
ನ ಚೇಹ ನಾಮುತ್ರ ಚ ಯೋಽರ್ಥಮೃಚ್ಛತಿ ||35||

ಇತರರನ್ನು ನಿಂದಿಸದೆ, ತಾನೂ ನಿಂದ್ಯನಾಗದಿರುವ ವಿಪ್ರನೇ ವಿಪ್ರನು. ಅಂತಹವನು ಪರಮಾತ್ಮನನ್ನು ಹೃದಯದಲ್ಲಿ ನೋಡುತ್ತಾನೆ. ಮೋಹ-ಪಾಪಗಳಿಂದ ಯಾವನು ರಹಿತನೋ ಆ ಜ್ಞಾನಿಯು ಇಹ-ಪರಲೋಕಗಳಲ್ಲಿ ಆಸಕ್ತನಾಗಿರುವುದಿಲ್ಲ.

ಅರೋಷಮೋಹಃ ಸಮಲೋಷ್ಟಕಾಂಚನಃ
ಪ್ರಹೀಣಶೋಕೋ ಗತಸಂಧಿವಿಗ್ರಹಃ |
ಅಪೇತನಿಂದಾಸ್ತುತಿರಪ್ರಿಯಾಪ್ರಿಯ-
ಶ್ಚರನ್ನುದಾಸೀನವದೇಷ ಭಿಕ್ಷುಕಃ ||36||

ರೋಷ-ಮೋಹಗಳಿಲ್ಲದ ಆ ಸಂನ್ಯಾಸಿಯು ಮಣ್ಣಿನ ಹೆಂಟೆಯನ್ನು, ಚಿನ್ನವನ್ನು ಸಮಾನನಾಗಿ ಕಾಣುತ್ತಾನೆ. ಧನವಿಹೀನನಾದವನು, ಸ್ನೇಹ-ಹಗೆತನ-ನಿಂದಾ-ಸ್ತುತಿ- ಪ್ರಿಯ-ಅಪ್ರಿಯ ಈ ಎಲ್ಲವನ್ನೂ ಮೀರಿ ಉದಾಸೀನನಂತೆ ಸಂಚರಿಸುವವನೆ ನಿಜವಾದ ಸಂನ್ಯಾಸಿಯು.

|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಶೀತಿತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ಎಂಬತ್ತೊಂದನೆಯ ಅಧ್ಯಾಯ

ಪರಮಾತ್ಮನ ಸರ್ವೋತ್ತಮತ್ವ ಮತ್ತು ಶ್ರೀಹರಿಯನ್ನು ನೋಡಲು
ಬೇಕಾದ ಉಪಾಯ. ಪರಮಾತ್ಮ ಜ್ಞಾನಮಾರ್ಗವನ್ನು ಶುಕರಿಗೆ
ವ್ಯಾಸರು ತಿಳಿಸಿದುದು.

ವ್ಯಾಸಃ

ಪ್ರಕೃತೇಸ್ತು ವಿಕಾರಾ ಯೇ ಕ್ಷೇತ್ರಜ್ಞಸ್ತೈಃ ಪರಿಶ್ರಿತಃ |
ತೇ ಚೈನಂ ನ ಪ್ರಜಾನಂತಿ ಸ ತು ಜಾನಾತಿ ತಾನಪಿ ||1||

ಪ್ರಕೃತಿಯ ವಿಕಾರವೆನಿಸಿದ ಮನಸ್ಸು, ಇಂದ್ರಿಯ ಮೊದಲಾದವುಗಳಿಂದ ಪರಮಾತ್ಮನು ಜೀವಾತ್ಮನನ್ನು ಈ ಸಂಸಾರದಲ್ಲಿ ಬಂಧಿಸಿದ್ದಾನೆ. ಜಡಗಳಾದ ದೇಹೇಂದ್ರಿಯಾದಿಗಳು ಅವನನ್ನು ತಿಳಿಯಲಾರವು. ಆದರೆ ಕ್ಷೇತ್ರಜ್ಞನಾದ ಭಗವಂತನು ಇವುಗಳೆಲ್ಲವನ್ನೂ ತಿಳಿದಿದ್ದಾನೆ.

ತೈಶ್ಚೈಷ ಕುರುತೇ ಕಾರ್ಯಂ ಮನಃಷಷ್ಠೈರಿಹೇಂದ್ರಿಯೈಃ |
ಸುದಾಂತೈರಿವ ಸಂಯಂತಾ ದೃಢೈಃ ಪರಮವಾಜಿಭಿಃ ||2||

ಬುದ್ಧಿವಂತನಾದ ಸಾರಥಿಯು ಚೆನ್ನಾಗಿ ಪಳಗಿರುವ ಶ್ರೇಷ್ಠವಾದ ಕುದುರೆಗಳಿಂದ ಯಾವ ರೀತಿ ರಥವನ್ನು ಚೆನ್ನಾಗಿ ನಡೆಸುತ್ತಾನೋ ಅದೇ ರೀತಿ ಕ್ಷೇತ್ರಜ್ಞನೆನಿಸಿದ ಪರಮಾತ್ಮನು ಮನಸ್ಸಿನಿಂದ ಐದು ಇಂದ್ರಿಯಗಳಿಂದ ಕೂಡಿದ ಈ ಜೀವನ ದೇಹವೆಂಬ ರಥವನ್ನು ಮುನ್ನಡೆಸುತ್ತಿದ್ದಾನೆ.

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಃ ಪರಮಂ ಮನಃ |
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ||3||

ಇಂದ್ರಿಯಾಭಿಮಾನಿ ದೇವತೆಗಳಿಗಿಂತಲೂ ಇಂದ್ರಿಯವಿಷಯಗಳಿಗೆ ಅಭಿಮಾನಿಗಳಾದ ದೇವತೆಗಳು ಶ್ರೇಷ್ಠರು. ಇಂದ್ರಿಯಾರ್ಥಾಭಿಮಾನಿಗಳಿಗಿಂತಲೂ ಮನೋಭಿಮಾನಿ ದೇವತೆಯು ಬಲಿಷ್ಠನು. ಮನೋಭಿಮಾನಿ ದೇವತೆಗಿಂತಲೂ ಬುದ್ಧ್ಯಭಿಮಾನಿ ದೇವತೆ ಬಲಿಷ್ಠನು. ಬುದ್ಧ್ಯಭಿಮಾನಿ ದೇವತೆಗಿಂತಲೂ ಮಹತತತ್ತ್ವಭಿಮಾನಿ ದೇವತೆಯು ಶ್ರೇಷ್ಠನು.

ಮಹತಃ ಪರಮವ್ಯಕ್ತಮವ್ಯಕ್ತಾತ್ ಪರತೋಽಮೃತಮ್ |
ಅಮೃತಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥4॥

ಮಹತ್ತತತ್ತ್ವಭಿಮಾನಿ ದೇವತೆಗಿಂತಲೂ ಅವ್ಯಕ್ತ ತತತ್ತ್ವಭಿಮಾನಿನಿಯಾದ ಮಹಾಲಕುಮಿಯು ಶ್ರೇಷ್ಠಳು. ಅವ್ಯಕ್ತ ತತತ್ತ್ವಭಿಮಾನಿ ದೇವತೆಗಿಂತಲೂ ಸರ್ವೋತ್ತಮನಾದ ಅಮೃತನೆನಿಸಿದ ಭಗವಂತನು ಶ್ರೇಷ್ಠನು. ಆ ಅಮೃತಮಯನಾದ ಪರಬ್ರಹ್ಮತತ್ತ್ವವೇ ಎಲ್ಲದಕ್ಕಿಂತಲೂ ಸರ್ವೋತ್ತಮವಾಗಿದೆ. ಪರಮಾತ್ಮನಿಗಿಂತಲೂ ಮಿಗಿಲಾದ ಯಾವ ತತ್ತ್ವಗಳೂ ಇರುವುದಿಲ್ಲ. ಅವನೇ ಶ್ರೇಷ್ಠವಾದ ಗತಿಯೂ ಆಗಿದ್ದಾನೆ.

ಏವಂ ಸರ್ವೇಷು ಭೂತೇಷು ಗೂಢೋಽಽತ್ಮಾ ನ ಪ್ರಕಾಶತೇ |
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ತತ್ತ್ವದರ್ಶಿಭಿಃ ॥5॥

ಹೀಗೆ ಸಮಸ್ತ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನು ಇಂದ್ರಿಯಗಳ ಮೂಲಕ ಗೋಚರನಾಗುವುದಿಲ್ಲ. ಸೂಕ್ಷ್ಮದರ್ಶಿಗಳಾದ ಜ್ಞಾನಿಗಳು ತಮ್ಮ ಸೂಕ್ಷ್ಮವಾದ, ಶ್ರೇಷ್ಠವಾದ ಬುದ್ಧಿಯಿಂದ ಅವನನ್ನು ಕಾಣುತ್ತಾರೆ.

ಅಂತರಾತ್ಮನಿ ಸಂಲೀಯ ಮನಃಷಷ್ಠಾನಿ ಮೇಧಯಾ |
ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ಬಹು ಚಿಂತ್ಯಮಚಿಂತಯನ್ ॥6॥
ಧ್ಯಾನೋಪರಮಣಂ ಕೃತ್ವಾ ವಿದ್ಯಾಸಂಪಾದಿತಂ ಮನಃ |
ಅನೀಶ್ವರಃ ಪ್ರಶಾಂತಾತ್ಮಾ ತತೋಽರ್ಚತ್ಯಮೃತಂ ಪದಮ್ ॥7॥

ಜ್ಞಾನಿಯಾದವನು ಬುದ್ಧಿಯ ಮೂಲಕವಾಗಿ ಮನಸ್ಸಿನಿಂದ ಸಹಿತವಾದ ಇಂದ್ರಿಯಾರ್ಥಗಳನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ ಅನೇಕ ವಿಧವಾಗಿ ಇರುವ ಪ್ರಾಪಂಚಿಕ ವಿಷಯಗಳನ್ನು ಚಿಂತಿಸದೆ, ಭಗವದ್ಜ್ಞಾನದಿಂದ ಸಂಸ್ಕಾರವನ್ನು ಹೊಂದಿದ ಮನಸ್ಸನ್ನು ಧ್ಯಾನಯೋಗದಿಂದ ಪರಮಾತ್ಮನಲ್ಲೇ ನೆಲೆಗೊಳಿಸಿ, ನಾನು ದೇವನಲ್ಲ ಎಂಬ ಭಾವನೆಯನ್ನು ತೊರೆದು, ಪ್ರಶಾಂತಾತ್ಮನಾದ ವ್ಯಕ್ತಿಯು ಅಮೃತಪದವೆನಿಸಿದ ಮೋಕ್ಷವನ್ನು ಹೊಂದುತ್ತಾನೆ.

ಇಂದ್ರಿಯಾಣಾಂ ತು ಸರ್ವೇಷಾಂ ವಶ್ಯಾತ್ಮಾ ಚಲಿತಸ್ಮೃತಿಃ |
ಆತ್ಮನಃ ಸಂಪ್ರದಾನೇನ ಮರ್ತ್ಯೋ ಮೃತ್ಯುಮುಪಾಶ್ನುತೇ ॥8॥

ಯಾವ ವ್ಯಕ್ತಿಯು ಸಮಸ್ತ ಇಂದ್ರಿಯಗಳಿಗೂ ದಾಸನಾಗಿ, ಚಂಚಲವಾದ ಸ್ಮರಣೆಯುಳ್ಳವನಾಗಿ, ಕಾಮ-ಕ್ರೋಧಗಳಿಗೆ ತನ್ನನ್ನು ಸಮರ್ಪಿಸಿಕೊಂಡಿದ್ದಾನೋ ಅವನು ವಿನಾಶವನ್ನೇ ಹೊಂದುತ್ತಾನೆ.

ಹಿತ್ವಾ ತು ಸರ್ವಸಂಕಲ್ಪಾನ್ ಸತ್ತ್ವೇ ಚಿತ್ತಂ ನಿವೇಶಯೇತ್ |
ಸತ್ತ್ವೇ ಚಿತ್ತಂ ಸಮಾವೇಶ್ಯ ತತಃ ಕಾಲಂಜರೋ ಭವೇತ್ ॥9॥

ಸಮಸ್ತ ಸಂಕಲ್ಪಗಳನ್ನೂ ನೀಗಿ ಚಿತ್ತವನ್ನು ಬುದ್ಧಿಯಲ್ಲಿ ನೆಲೆಗೊಳಿಸಬೇಕು. ಹೀಗೆ ಮನಸ್ಸನ್ನು ಬುದ್ಧಿಯಲ್ಲಿ ನೆಲೆಗೊಳಿಸಿದವನು ಕಾಲವನ್ನೇ ತನ್ನಲ್ಲಿ ಜೀರ್ಣಿಸಿಕೊಳ್ಳುತ್ತಾನೆ.

ಚಿತ್ತಪ್ರಸಾದೇನ ಯತಿರ್ಜಹಾತಿ ಹಿ ಶುಭಾಶುಭಮ್ |
ಪ್ರಸನ್ನಾತ್ಮಾತ್ಮನಿ ಸ್ಥಿತ್ವಾ ಸುಖಮಾನಂತ್ಯಮಶ್ನುತೇ ॥10॥

ಮನಸ್ಸಿನ ಪ್ರಸನ್ನತೆಯಿಂದ ಯತಿಯಾದವನು ಈ ಲೋಕದಲ್ಲಿ ಕಾಣುವ ಶುಭಾಶುಭಗಳನ್ನು ಬಿಟ್ಟುಬಿಡುತ್ತಾನೆ. ಸ್ವಚ್ಛವಾದ ಮನಸ್ಸಿನಿಂದ ಕೂಡಿರುವ ಯೋಗಿಯು ಯಾವಾಗಲೂ ಪರಮಾತ್ಮನಲ್ಲಿ ತನ್ನ ಬುದ್ಧಿಯನ್ನು ಕೇಂದ್ರೀಕರಿಸಿಕೊಂಡು ಅಕ್ಷಯವಾದ ಸುಖವನ್ನು ಹೊಂದುತ್ತಾನೆ.

ಲಕ್ಷಣಂ ತು ಪ್ರಸಾದಸ್ಯ ಯಥಾ ತೃಪ್ತಃ ಸುಖಂ ಸ್ವಪೇತ್ |
ನಿವಾತೇ ವಾ ಯಥಾ ದೀಪೋ ದೀಪ್ಯಮಾನೋ ನ ಕಂಪತೇ ॥11॥

ಮನಸ್ಸಿನ ಪ್ರಸನ್ನತೆಯುಳ್ಳವನು ಯಾವುದೇ ವಿಧದ ಚಿಂತೆಗಳಿಲ್ಲದೆ ನೆಮ್ಮದಿಯಾಗಿ ನಿದ್ರಿಸುವಂತೆ, ಗಾಳಿ ಬೀಸದ ಜಾಗದಲ್ಲಿ ದೀಪವು ಚಲಿಸದೆ ಹೇಗೆ ಬೆಳಗುತ್ತದೋ ಅದರಂತೆ ಪರಮಾತ್ಮನಲ್ಲಿಯೇ ಚಿತ್ತವುಳ್ಳವನು ಪ್ರಸನ್ನನಾಗಿರುತ್ತಾನೆ.

ಏವಂ ಪೂರ್ವಾಪರೇ ರಾತ್ರೇ ಯುಂಜನ್ನಾತ್ಮಾನಮಾತ್ಮನಾ |
ಸತತತ್ವಹಾರವಿಶುದ್ಧಾತ್ಮಾ ಪಶ್ಯತ್ಯಾತ್ಮಾನಮಾತ್ಮನಿ ॥12॥

ಹೀಗೆ ಯೋಗಿಯಾದವನು ಮಿತಾಹಾರಿಯಾಗಿ, ಶುದ್ಧವಾದ ಮನಸ್ಸಿನಿಂದ ಕೂಡಿದವನಾಗಿ ರಾತ್ರಿಯ ಮೊದಲು ಮತ್ತು ಕೊನೆಯ ಯಾಮಗಳಲ್ಲಿ ತನ್ನ ಮನಸ್ಸನ್ನು ಪರಮಾತ್ಮನಲ್ಲಿ ಏಕಾಗ್ರಗೊಳಿಸುತ್ತಿದ್ದರೆ ಅಂತಹ ಅಂತರ್ಯಾಮಿಯಾದ ಪರಮಾತ್ಮನನ್ನು ತನ್ನಲ್ಲಿಯೇ ಕಂಡುಕೊಳ್ಳುತ್ತಾನೆ.

ರಹಸ್ಯಂ ಸರ್ವವೇದಾನಾಮನೈತಿಹ್ಯಮನಾಗಮಮ್ |
ಆತ್ಮಪ್ರತ್ಯಯಿಕಂ ಶಾಸ್ತ್ರಮಿದಂ ಪುತ್ರಾನುಶಾಸನಮ್ ॥13॥

ಮಗನೇ, ಇಲ್ಲಿಯ ತನಕ ನಿನಗಾಗಿ ಉಪದೇಶಿಸಿದ ಈ ಶಾಸ್ತ್ರವು ಸಮಸ್ತ ವೇದಗಳ ರಹಸ್ಯವೆಂದು ತಿಳಿದುಕೊ. ಈ ರಹಸ್ಯವನ್ನು ಕೇವಲ ಅನುಮಾನದಿಂದಾಗಲಿ, ಶಾಸ್ತ್ರದಿಂದಾಗಲಿ ತಿಳಿಯಲಾಗುವುದಿಲ್ಲ. ಅನುಭವೈಕವೇದ್ಯವಾಗಿದೆ.

ಧರ್ಮಾಖ್ಯಾನೇಷು ಸರ್ವೇಷು ಸತ್ಯಾಖ್ಯಾನೇಷು ಯದ್ವಸು |
ದೃಶೇತಋಕ್ಸಹಸ್ರಾಣಿ ನಿರ್ಮಥ್ಯಾಮೃತಮುದ್ಧೃತಮ್ ॥14॥

ಈ ಪರಮಾತ್ಮನೆಂಬ ವಸ್ತುವು ರಹಸ್ಯತತ್ತ್ವವನ್ನು ಧರ್ಮಾಖ್ಯಾನವೆನಿಸಿದ ಸ್ಮೃತಿ ಗ್ರಂಥಗಳಲ್ಲಿ, ಸತ್ಯಾಖ್ಯಾನವೆನಿಸಿದ

ವೇದ-ಪುರಾಣಗಳಲ್ಲಿ, ಸಮಸ್ತ ಶಾಸ್ತ್ರಗ್ರಂಥಗಳಲ್ಲಿ ಹೇಳಲ್ಪಟ್ಟ ಸಂಪತ್ತು ಎನಿಸಿದೆ. ಪ್ರತ್ಯಕ್ಷ ಸಹಕೃತವಾದ ಸಾವಿರಾರು ಋಗ್ವೇದದ ಮಂತ್ರವನ್ನು ಮಥನ ಮಾಡಿ ಈ ಭಗವತ್ತತ್ತ್ವವೆಂಬ ಅಮೃತವು ತೆಗೆಯಲ್ಪಟ್ಟಿದೆ.
ನವನೀತಂ ಯಥಾ ದಧ್ನಃ ಕಾಷ್ಠಾದಗ್ನಿರ್ಯಥೈವ ಚ |
ತಥೈವ ವಿದುಷಾಂ ಜ್ಞಾನಂ ಪುತ್ರಹೇತೋಃ ಸಮುದ್ಧೃತಮ್ |
ಸ್ನಾತಕಾನಾಮಿದಂ ಶಾಸ್ತ್ರಂ ವಾಚ್ಯಂ ಪುತ್ರಾನುಶಾಸನಮ್ ॥15॥
ಯಾವ ರೀತಿ ಜನರು ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯುತ್ತಾರೋ, ಅರಣಿಯನ್ನು ಮಥನ ಮಾಡಿ ಅಗ್ನಿಯನ್ನು ಪಡೆಯುತ್ತಾರೋ ಅದರಂತೆ ಶುಕನೇ, ನಿನಗಾಗಿ ಅನೇಕ ವಿದ್ವಾಂಸರ ಬುದ್ಧಿಯನ್ನು ಒಟ್ಟಾಗಿ ಮಥನ ಮಾಡಿ, ಈ ಬ್ರಹ್ಮತತ್ತ್ವವೆಂಬ ನವನೀತವನ್ನು ಹೊರತೆಗೆದಿದ್ದೇನೆ. ಈ ತತ್ತ್ವವನ್ನು ನನ್ನ ಆದೇಶದಂತೆ ಉತ್ತಮಾಧಿಕಾರಿಗಳಿಗಲ್ಲದ ಬೇರೆಯವರಿಗೆ ಉಪದೇಶಿಸಬಾರದು. ವೇದವ್ರತರೆನಿಸಿದ ಸ್ನಾತಕರಿಗೆ ಇದನ್ನು ಉಪದೇಶಿಸಬಹುದು.
ತದಿದಂ ನಾಪ್ರಶಾಂತಾಯ ನಾದಾಂತಾಯಾತಪಸ್ವಿನೇ |
ನಾವೇದವಿದುಷೇ ವಾಚ್ಯಂ ತಥಾ ನಾನುಗತಾಯ ಚ ॥16॥
ಯಾರಿಗೆ ಭಗವನ್ನಿಷ್ಠವಾದ ಬುದ್ಧಿ, ಇಂದ್ರಿಯನಿಗ್ರಹ, ತಪಸ್ಸು, ವೇದಾಧ್ಯಯನ, ಗುರೂಪಾಸನೆ ಇವುಗಳಲ್ಲಿ ಯಾವುದೂ ಇಲ್ಲವೋ ಅಂತಹವನು ಈ ಜ್ಞಾನೋಪದೇಶಕ್ಕೆ ಪಾತ್ರನೆನಿಸಲಾರ.
ನಾಸೂಯಕಾಯಾನೃಜವೇ ನ ಚಾನಿರ್ದಿಷ್ಟಕಾರಿಣೇ |
ನ ತರ್ಕಶಾಸ್ತ್ರದಗ್ಧಾಯ ತಥೈವ ಪಿಶುನಾಯ ಚ ॥17॥
ಅಸೂಯಾಪರನಿಗೆ, ಅವಿಧೇಯನಿಗೆ, ಕುಟಿಲ ಬುದ್ಧಿಯುಳ್ಳವನಿಗೆ, ಹೇಳಿದ ಕಾರ್ಯವನ್ನು ಮಾಡದವನಿಗೆ, ತರ್ಕಶಾಸ್ತ್ರದಲ್ಲಿಯೇ ಮನಸ್ಸನ್ನು ದೃಢವಾಗಿಸಿಕೊಂಡವನಿಗೆ, ಚಾಡಿಕೋರನಿಗೆ ಈ ಮೋಕ್ಷಶಾಸ್ತ್ರವನ್ನು ಉಪದೇಶಿಸಬಾರದು.
ಶ್ಲಾಘತೇ ಶ್ಲಾಘನೀಯಾಯ ಪ್ರಶಾಂತಾಯ ತಪಸ್ವಿನೇ |
ಇದಂ ಪ್ರಿಯಾಯ ಪುತ್ರಾಯ ಶಿಷ್ಯಾಯಾನುಗತಾಯ ಚ |
ರಹಸ್ಯಧರ್ಮಂ ವಕ್ತವ್ಯಂ ನಾನ್ಯಸ್ಮೈ ತು ಕಥಂಚನ ॥18॥
ಈ ರಹಸ್ಯವಾದ ಪರತತ್ತ್ವವನ್ನು, ತತ್ತ್ವಜ್ಞಾನವನ್ನು ಪ್ರಶಂಸಿಸುವ, ಹೊಗಳಿಸಿಕೊಳ್ಳುವ ಗುಣಗಳುಳ್ಳ, ಪ್ರಶಾಂತನಾದ ತಪಸ್ವಿಯಾದ, ತನ್ನ ಪ್ರಿಯ ಪುತ್ರನಿಗಾಗಲಿ, ವಿಧೇಯನಾದ ಶಿಷ್ಯನಿಗಾಗಲಿ ಉಪದೇಶಿಸಬೇಕು. ಈ ರಹಸ್ಯ ಧರ್ಮವನ್ನು ಯಾವುದೇ ಕಾರಣದಿಂದ ಇಂತಹ ಅರ್ಹತೆಯನ್ನು ಪಡೆಯದಿದ್ದವನಿಗೆ ಉಪದೇಶಿಸಬಾರದು.
ಯದ್ಯಪ್ಯಸ್ಯ ಮಹೀಂ ದದ್ಯಾದ್ ರತ್ನಪೂರ್ಣಾಮಿಮಾಂ ನರಃ |
ಇದಮೇವ ತತಃ ಶ್ರೇಯ ಇತಿ ಮನ್ಯೇತ ತತ್ತ್ವವಿತ್ ॥19॥
ಸಮಸ್ತ ರತ್ನಗಳಿಂದ ಸಮೃದ್ಧವಾದ ಸಮಗ್ರ ಈ ಭೂಮಂಡಲವನ್ನೇ ದಕ್ಷಿಣೆಯಾಗಿ ನೀಡಿದರೂ ತತ್ತ್ವಜ್ಞಾನಿಗೆ ಈ ಜ್ಞಾನದಿಂದ ಉಂಟಾಗುವಷ್ಟು ತೃಪ್ತಿ ಆ ಭೂದಾನದಿಂದ ಲಭಿಸದು. ರತ್ನಪೂರ್ಣವಾದ ಭೂಮಿಗಿಂತಲೂ ಈ ತತ್ತ್ವಜ್ಞಾನವನ್ನೇ ಶ್ರೇಷ್ಠವೆಂದು ಭಾವಿಸುತ್ತಾನೆ.
ಅತೋ ಗುಹ್ಯತರಾರ್ಥಂ ತದಧ್ಯಾತ್ಮಮತಿಮಾನುಷಮ್ |
ಯತ್ತನ್ಮಹರ್ಷಿಭಿರ್ದೃಷ್ಟಂ ವೇದಾಂತೇಷು ಚ ಗೀಯತೇ |
ತತ್ತೇಹಂ ಸಂಪ್ರವಕ್ಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ ॥20॥
ಮಗನೇ, ನೀನು ನನ್ನನ್ನು ಕುರಿತು ಯಾವ ಪ್ರಶ್ನೆಗಳನ್ನು ಕೇಳಿದೆಯೋ ಇದಕ್ಕಿಂತಲೂ ರಹಸ್ಯವೆನಿಸಿದ, ಅಲೌಕಿಕವಾದ, ಮನುಷ್ಯರಿಂದ ತಿಳಿಯಲಾಗದ, ಮಹರ್ಷಿಗಳಿಂದ ನೋಡಲ್ಪಡುತ್ತಿರುವ, ವೇದಾಂತಗಳಲ್ಲಿ ಕೊಂಡಾಡಲ್ಪಡುತ್ತಿರುವ ಅಧ್ಯಾತ್ಮ ಜ್ಞಾನವನ್ನು ಉಪದೇಶಿಸುತ್ತೇನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಏಕಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆರಡನೆಯ ಅಧ್ಯಾಯ
ವ್ಯಾಸರು ಶುಕಮುನಿಗೆ ಅಧ್ಯಾತ್ಮ ವಿಚಾರವನ್ನು ತಿಳಿಸಿದುದು.
ಶುಕಃ
ಅಧ್ಯಾತ್ಮಂ ವಿಸ್ತರೇಣೇಹ ಪುನರೇವ ವದಸ್ವ ಮೇ |
ಯದಧ್ಯಾತ್ಮಂ ಯಥಾ ಚೇದಂ ಭಗವನ್ನೃಷಿಸತ್ತಮ ॥1॥
ಪೂಜ್ಯರೇ, ಮುನಿಶ್ರೇಷ್ಠರೇ, ಪುನಃ ನೀವು ಅಧ್ಯಾತ್ಮ ಶಾಸ್ತ್ರವನ್ನೇ ನನಗೆ ವಿಸ್ತಾರವಾಗಿ ಹೇಳಿರಿ. ಅಧ್ಯಾತ್ಮವೆಂದರೆ ಏನು? ಇದನ್ನು ತಿಳಿಯುವುದು ಹೇಗೆ? ಎಂದು ವಿವರಿಸಿರಿ.
ವ್ಯಾಸಃ
ಅಧ್ಯಾತ್ಮಂ ಯದಿದಂ ತಾತ ಪುರುಷಸ್ಯೇಹ ವಿದ್ಯತೇ |
ತತ್ತೇಽಹಂ ಸಂಪ್ರವಕ್ಷ್ಯಾಮಿ ತಸ್ಯ ವ್ಯಾಖ್ಯಾಮಿಮಾಂ ಶೃಣು ॥2॥
ಮಗನೇ, ಮನುಷ್ಯನಿಗಾಗಿ ಯಾವ ಅಧ್ಯಾತ್ಮವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆಯೋ ಅದನ್ನು ನಿನಗೆ ವ್ಯಾಖ್ಯಾನ ಮಾಡುತ್ತೇನೆ. ಅಧ್ಯಾತ್ಮಕ್ಕೆ ಸಂಬಂಧಿಸಿದ ವಿಚಾರವನ್ನು ಹೇಳುತ್ತೇನೆ, ಕೇಳು.

ಭೂಮಿರಾಪಸ್ತಥಾ ಜ್ಯೋತಿರ್ವಾಯುರಾಕಾಶಮೇವ ಚ |
ಮಹಾಭೂತಾನಿ ಭೂತಾನಾಂ ಸಾಗರಸ್ಯೋರ್ಮಯೋ ಯಥಾ ॥3॥
ಪೃಥಿವಿ, ಜಲ, ಅಗ್ನಿ, ವಾಯು, ಆಕಾಶ ಎಂಬ ಈ ಪಂಚಮಹಾಭೂತಗಳು ಪ್ರಾಣಿಗಳ ಶರೀರಗಳಿಗೆ ಕಾರಣಗಳಾದ ದ್ರವ್ಯಗಳೆನಿಸಿವೆ. ಸಾಗರದಲ್ಲಿ ಹುಟ್ಟುವ ಅಲೆಗಳು ಮೇಲೇಳುತ್ತಾ ಪುನಃ ನೀರಿನಲ್ಲೇ ಲಯ ಹೊಂದುವಂತೆ ಪ್ರಾಣಿಗಳಿಗೆ ಪಂಚಭೂತಗಳು ಶರೀರ ರೂಪದಲ್ಲಿ ಅಭಿವ್ಯಕ್ತಿಯನ್ನು ಪಡೆದು, ಪುನಃ ಈ ಪಂಚಭೂತಗಳು ಅಲ್ಲೇ ಲಯವನ್ನು ಹೊಂದುತ್ತವೆ.
ಪ್ರಸಾರ್ಯೇಹ ಯಥಾಂಗಾನಿ ಕೂರ್ಮಃ ಸಂಹರತೇ ಪುನಃ |
ತದ್ವನ್ಮಹಾಂತಿ ಭೂತಾನಿ ಯವೀಯಃಸು ವಿಕುರ್ವತೇ ॥4॥
ಯಾವ ರೀತಿ ಕೂರ್ಮವು ತನಗೆ ಬೇಕಾದಾಗ ತನ್ನ ಎಲ್ಲ ಅವಯವಗಳನ್ನು ಹೊರಗೆ ಚೆಲ್ಲಿ, ಬೇಕಾದಾಗ ಪುನಃ ತನ್ನೊಳಗೆ ಸೆಳೆದುಕೊಳ್ಳುವುದೋ ಇದರಂತೆ ಮಹಾಭೂತಗಳು ದೇಹರೂಪದಲ್ಲಿ ಸ್ಥೂಲರೂಪವನ್ನು ಹೊಂದಿ ದೇಹ ಪತನವಾದ ಬಳಿಕ ಸೂಕ್ಷ್ಮವಾಗಿ ಭಾಗಶಃ ಆತ್ಮನಲ್ಲಿಯೇ ಸೇರಿಕೊಳ್ಳುತ್ತವೆ.
ವ್ಯಾಖ್ಯಾನ ವಿಶೇಷ ಪಂಚಭೂತಗಳು ಭಾಗಶಃ ಸೂಕ್ಷ್ಮಭಾಗದಿಂದ ಜೀವನಲ್ಲಿ ಸೇರಿ ಮೃತನಾದ ಬಳಿಕ ಸಾಗುವುದರಿಂದ ಪಂಚಭೂತಗಳ ಸಂಬಂಧವನ್ನು ಜೀವಾತ್ಮನು ಕೂಡಲೇ ಕಳೆದುಕೊಳ್ಳಲಾಗುವುದಿಲ್ಲ. ಈ ಸೂಕ್ಷ್ಮವಾದ ಪಂಚಭೂತಗಳೇ ಸ್ಥೂಲವಾದ ದೇಹಪ್ರಾಪ್ತಿಗೆ ಕಾರಣವಾಗುತ್ತವೆ. ಸಮುದ್ರದ ಸೂಕ್ಷ್ಮ ಅಲೆಗಳೇ ಸ್ಥೂಲ ಅಲೆಗಳಾಗಿರುವಂತೆ ಭಾಗಶಃ ಜೀವನ ಜೊತೆಗೆ ಹೋದ ಪಂಚಭೂತಗಳೇ ಪುನಃ ಜನ್ಮಾಂತರದಲ್ಲಿ ಸ್ಥೂಲದೇಹಕ್ಕೆ ಕಾರಣವಾಗುತ್ತವೆ. ಸಮುದ್ರದ ಅಲೆಗಳು ನಿರಂತರ ಹೀಗೆ ಉತ್ಪತ್ತಿಯಾಗುವಂತೆ ಜೀವನಿಗೂ ನಿರಂತರ ಈ ಪಂಚಭೂತಗಳ ಸಮಷ್ಟಿಯಾದ ಈ ದೇಹದ ಅಲೆಗಳು ಹುಟ್ಟುತ್ತಲೇ ಇರುತ್ತವೆ. ಆದ್ದರಿಂದ ಜೀವಾತ್ಮನು ವಿರಕ್ತನಾಗಿ, ಶ್ರವಣ-ಮನನಾದಿಗಳ ಮೂಲಕ ಭಗವತ್ಪ್ರಜ್ಞೆಯನ್ನು ಹೊಂದಿ, ಆ ಪರಮಾತ್ಮನ ಪ್ರಸಾದಕ್ಕೆ ಭಾಗಿಯಾಗಿ ಪಂಚಭೂತಗಳ ಬಂಧನವನ್ನು ಪರಿಹರಿಸಿಕೊಳ್ಳಬೇಕು. `ಭೂತಬಂಧಸ್ತು ಸಂಸಾರಃ ಮುಕ್ತಿಸ್ತೇಭ್ಯೋ ವಿಮೋಚನಂ' ಎಂದು ಸಾಧನಾಧ್ಯಾಯದಲ್ಲಿ ನಿರೂಪಿಸಿರುವ ಪ್ರಮೇಯವನ್ನು ವ್ಯಾಸರು ಇಲ್ಲಿ ತಿಳಿಸಿದ್ದಾರೆ.
ಇತಿ ತನ್ಮಯಮೇವೇದಂ ಸರ್ವಂ ಸ್ಥಾವರಜಂಗಮಮ್ |
ಸರ್ಗೇ ಚ ಪ್ರಲಯೇ ಚೈವ ತಸ್ಮಾನ್ನಿರ್ದಿಶ್ಯತೇ ತಥಾ ॥5॥
ಹೀಗೆ ಸಮಸ್ತ ಚರಾಚರ ಪ್ರಾಣಿಗಳೆಲ್ಲವೂ ಪಂಚಭೂತಗಳ ಸಂಬಂಧವನ್ನು ನಿತ್ಯವೂ ಪಡೆದಿರುತ್ತವೆ. ಸೃಷ್ಟಿಯ ಕಾಲದಲ್ಲಿ ಪಂಚಭೂತಗಳಿಂದಲೇ ಈ ಸ್ಥಾವರ- ಜಂಗಮಗಳ ಉತ್ಪತ್ತಿಯಾಗುತ್ತದೆ. ಲಯ ಕಾಲದಲ್ಲಿ ಕಣ್ಣಿಗೆ ಕಾಣುವ ಈ ಸ್ಥಾವರ-ಜಂಗಮಗಳೆಲ್ಲವೂ ಪಂಚಭೂತಗಳಲ್ಲೇ ಲಯ ಹೊಂದುತ್ತವೆ.
ಮಹಾಭೂತಾನಿ ಪಂಚೈವ ಸರ್ವಭೂತೇಷು ಭೂತಕೃತ್ |
ಅಕರೋತ್ ತಾತ ವೈಷಮ್ಯಂ ಯಸ್ಮಿನ್ ಯದನುಪಶ್ಯತಿ ॥6॥
ಸಮಸ್ತ ಪ್ರಾಣಿಗಳಲ್ಲಿ ಪಂಚಮಹಾಭೂತಗಳ ಸಮಾವೇಶವೇ ಕಾಣಿಸುತ್ತಿದೆ. ಹೀಗಿದ್ದರೂ ಪಂಚಮಹಾಭೂತಗಳ ಸೃಷ್ಟಿಕರ್ತನಾದ ಭಗವಂತನು ಪ್ರಾಣಿಗಳ ಕರ್ಮಾನುಗುಣವಾಗಿ ಪಂಚಮಹಾಭೂತಗಳನ್ನು ಸಮಾವೇಶಗೊಳಿಸಿದ್ದಾನೆ. ಆದ್ದರಿಂದಲೇ ಆಯಾ ಜೀವರ ಕರ್ಮಾನುಗುಣವಾಗಿ ಅವರ ಪಂಚಭೂತಾತ್ಮಕವಾದ ಶರೀರದಲ್ಲಿಯೂ ವ್ಯತ್ಯಾಸವು ಕಾಣುತ್ತದೆ.
ಶುಕಃ
ಅಕರೋದ್ ಯಚ್ಛರೀರೇಷು ಕಥಂ ತದುಪಲಕ್ಷಯೇತ್ |
ಇಂದ್ರಿಯಾಣಿ ಗುಣಾಃ ಕೇಚಿತ್ ಕಥಂ ತಾನುಪಲಕ್ಷಯೇತ್ ॥7॥
ತಂದೆಯೇ, ಬ್ರಹ್ಮನು ಮನುಷ್ಯ, ಪಶು, ಪಕ್ಷಿಗಳ ಶರೀರದಲ್ಲಿ ಏರ್ಪಡಿಸಿರುವ ವೈಷಮ್ಯ ಭಾವವನ್ನು ನಾವು ಹೇಗೆ ತಿಳಿಯಬಹುದು? ಶರೀರದಲ್ಲಿ ಇಂದ್ರಿಯಗಳು ಇವೆ. ಗುಣಗಳು ಇವೆ. ಇವುಗಳಲ್ಲಿ ಪಂಚಮಹಾಭೂತಗಳನ್ನು ವಿಭಾಗಿಸಿ ತಿಳಿಯುವ ಕ್ರಮ ಹೇಗೆ?
ವ್ಯಾಸಃ
ಏತತ್ತೇ ವರ್ತಯಿಷ್ಯಾಮಿ ಯಥಾವದಿಹ ದರ್ಶನಮ್ |
ಶೃಣು ತತ್ತ್ವಮಿಹೈಕಾಗ್ರೋ ಯಥಾತತ್ತ್ವಂ ಯಥಾ ಚ ತತ್ ॥8॥
ಮಗನೇ, ಈ ವಿಷಯದಲ್ಲಿ ಕ್ರಮವಾಗಿ ಇರುವ ತತ್ತ್ವವನ್ನು ನಿನಗೆ ತಿಳಿಸುತ್ತೇನೆ. ಸಮಸ್ತ ವಿಷಯಗಳು ಯಥಾರ್ಥವಾಗಿ ಹೇಗೆ ಇರುತ್ತವೆ ಎಂಬುದನ್ನು ಹೇಳುತ್ತೇನೆ. ಏಕಾಗ್ರತೆಯಿಂದ ಕೇಳು.
ಶಬ್ದಃ ಶ್ರೋತ್ರಂ ತಥಾ ಖಾನಿ ತ್ರಯಮಾಕಾಶಸಂಭವಮ್ |
ಪ್ರಾಣಶ್ಚೇಷ್ಟಾ ತಥಾ ಸ್ಪರ್ಶ ಏತೇ ವಾಯುಗುಣಾಸ್ತ್ರಯಃ ॥9॥
ಶಬ್ದ, ಶ್ರೋತ್ರೇಂದ್ರಿಯದ ದ್ವಾರಾ ಇವು ಆಕಾಶವೆಂಬ ಭೂತದಿಂದ ಉಂಟಾದವು. ಪ್ರಾಣ, ಚೇಷ್ಟೆ, ಸ್ಪರ್ಶ ಎಂಬ ಈ ಮೂರು ವಾಯುತತ್ತ್ವದ ಗುಣಗಳು.
ರೂಪಂ ಚಕ್ಷುರ್ವಿಪಾಕಶ್ಚ ತ್ರಿಧಾ ಜ್ಯೋತಿರ್ವಿಧೀಯತೇ |
ರಸೋಽಥ ರಸನಂ ಸ್ನೇಹೋ ಗುಣಾಸ್ತ್ವೇತೇ ತ್ರಯೋಽಂಭಸಾಮ್ ॥
ರೂಪ, ಕಣ್ಣು, ಜಠರಾಗ್ನಿ ಎಂಬ ಮೂರು ಅಗ್ನಿಯ ಗುಣಗಳು. ರಸ, ನಾಲಿಗೆ, ಜಿಡ್ಡು - ಈ ಮೂರು ಜಲತತ್ತ್ವದ ಗುಣಗಳು.
ೆರೇಯಂ ಘ್ರಾಣಂ ಶರೀರಂ ಚ ಭೂಮೇರೇತೇ ಗುಣಾಸ್ತ್ರಯಃ |
ಏತಾವಾನಿಂದ್ರಿಯಗ್ರಾಮೋ ವ್ಯಾಖ್ಯಾತಃ ಪಾಂಚಭೌತಿಕಃ ॥11॥
ಗಂಧ, ಮೂಗು, ಶರೀರ - ಈ ಮೂರು ಪೃಥಿವಿ ತತ್ತ್ವದ ಗುಣಗಳು. ಹೀಗೆ ಇಂದ್ರಿಯ ಸಮುದಾಯಗಳಿಂದ ಸಹಿತವಾದ ಈ ಶರೀರವನ್ನು ಪಾಂಚಭೌತಿಕ ಎನ್ನುತ್ತಾರೆ.
ವಾಯೋಃ ಸ್ಪರ್ಶೋ ರಸೋಽದ್ಭ್ಯಶ್ಚ ಜ್ಯೋತಿಷೋ ರೂಪಮುಚ್ಯತೇ |

ಆಕಾಶಪ್ರಭವಃ ಶಬ್ದೋ ಗಂಧೋ ಭೂಮಿಗುಣಃ ಸ್ಮೃತಃ ॥12॥
ಸ್ಪರ್ಶವು ವಾಯುವಿನ ಗುಣ. ರಸವು ನೀರಿನ ಗುಣ. ರೂಪವು ತೇಜಸ್ಸಿನ ಗುಣ. ಶಬ್ದವು ಆಕಾಶದ ಗುಣ. ಗಂಧವು ಭೂಮಿಯ ಗುಣ ಎನ್ನುತ್ತಾರೆ.
ಮನೋ ಬುದ್ಧಿಶ್ಚ ಭಾವಶ್ಚ ತ್ರಯ ಏತೇಽಽತ್ಮಯೋನಿಜಾಃ |
ನ ಗುಣಾನತಿವರ್ತಂತೇ ಗುಣೇಭ್ಯಃ ಪರಮಾ ಮತಾಃ ॥13॥
ಮನಸ್ಸು , ಬುದ್ಧಿ, ಸ್ವಭಾವ - ಈ ಮೂರು ಮನೋಮಯಗಳೆನಿಸುತ್ತವೆ. ಬಾಹ್ಯವಾದ ರೂಪ-ರಸಾದಿಗಳಿಗಿಂತಲೂ ಇವು ಶ್ರೇಷ್ಠವಾದವು. ಆದರೆ ರೂಪ- ರಸಾದಿ ಗುಣಗಳನ್ನು ಅತಿಕ್ರಮಿಸಿ ಮನಸ್ಸು, ಬುದ್ಧಿ, ಸ್ವಭಾವಗಳು ಹೋಗುವುದಿಲ್ಲ.
ಇಂದ್ರಿಯಾಣಿ ನರೇ ಪಂಚ ಷಷ್ಠಂ ತು ಮನ ಉಚ್ಯತೇ |
ಸಪ್ತಮೀಂ ಬುದ್ಧಿಮೇವಾಹುಃ ಕ್ಷೇತ್ರಜ್ಞಂ ಪುನರಷ್ಟಮಮ್ ॥14॥
ಮನುಷ್ಯನಿಗೆ ಐದು ಇಂದ್ರಿಯಗಳಿವೆ. ಆರನೆಯ ಇಂದ್ರಿಯ ಮನಸ್ಸೆನಿಸಿದೆ. ಏಳನೆಯದ್ದು ಬುದ್ಧಿ ಎನಿಸಿದೆ. ಜೀವನನ್ನು ಎಂಟನೆಯವನು ಎಂದು ಹೇಳುತ್ತಾರೆ.
ಚಕ್ಷುರಾಲೋಚನಾಯೈವ ಸಂಶಯಂ ಕುರುತೇ ಮನಃ |
ಬುದ್ಧಿರಧ್ಯವಸಾನಾಯ ಸಾಕ್ಷೀ ಕ್ಷೇತ್ರಜ್ಞ ಉಚ್ಯತೇ ॥15॥
ಕಣ್ಣು ರೂಪವನ್ನು ನೋಡುತ್ತದೆ. ಮನಸ್ಸು ಇದೋ ಅದೋ ಎಂದು ಸಂಶಯವನ್ನು ಹೊಂದುವ ಸ್ವಭಾವವುಳ್ಳದ್ದು. ಬುದ್ಧಿಯು ನಿರ್ಣಯ ಮಾಡುವ ಗುಣವುಳ್ಳದ್ದು. ಇದೆಲ್ಲದಕ್ಕೂ ಸಾಕ್ಷಿಯಾಗಿರುವವನು ಕ್ಷೇತ್ರಜ್ಞನೆನಿಸುತ್ತಾನೆ.
ರಜಸ್ತಮಶ್ಚ ಸತ್ತ್ವಂ ಚ ತ್ರಯ ಏತೇ ಸ್ವಯೋನಿಜಾಃ |
ಸಮಾಃ ಸರ್ವೇಷು ಭೂತೇಷು ತದ್ಗುಣೇಷೂಪಲಕ್ಷಯೇತ್ ॥16॥
ಸತ್ತ್ವ-ರಜಸ್-ತಮೋಗುಣಗಳು ಅವುಗಳಿಗೆ ಮೂಲಕಾರಣವೆನಿಸಿದ ಪ್ರಕೃತಿಯಿಂದ ಉತ್ಪತ್ತಿಯನ್ನು ಹೊಂದಿವೆ. ಎಲ್ಲ ಭೂತಗಳಲ್ಲಿಯೂ ಈ ಮೂರು ಗುಣಗಳಿವೆ. ಮನುಷ್ಯನ ಕಾರ್ಯಗಳ ಮೂಲಕ ಈ ಗುಣಗಳನ್ನು ಗುರುತಿಸಬಹುದು.
ಯಥಾ ಕೂರ್ಮ ಇಹಾಂಗಾನಿ ಪ್ರಸಾರ್ಯ ವಿನಿಯಚ್ಛತಿ |
ಏವಮೇವೇಂದ್ರಿಯಗ್ರಾಮಂ ಬುದ್ಧಿಃ ಸೃಷ್ಟ್ವಾ ನಿಯಚ್ಛತಿ ॥17॥
ಹೇಗೆ ಆಮೆಯು ಬೇಕಾದಾಗ ತನ್ನ ಅವಯವಗಳನ್ನು ಹೊರಗೆ ಚೆಲ್ಲಿ, ಪುನಃ ಬೇಕಾದಾಗ ಒಳಗೆ ಸೆಳೆದುಕೊಳ್ಳುವುದೋ ಇದರಂತೆ ಬುದ್ಧಿಯು ಸ್ವಾಧೀನದಲ್ಲಿರುವ ಇಂದ್ರಿಯಗಳ ಸಮೂಹವನ್ನು ಬೇಕಾದಾಗ ವಿಷಯಗಳ ಕಡೆ ಕಳುಹಿಸಿ ಪುನಃ ಅವುಗಳಿಂದ ಹಿಂದಕ್ಕೆ ಸೆಳೆದುಕೊಳ್ಳುತ್ತದೆ.
ಯದೂರ್ಧ್ವಂ ಪಾದತಳಯೋರವಾಙ್ಮೂರ್ಧ್ನಶ್ಚ ಪಶ್ಯತಿ |
ಏತಸ್ಮಿನ್ನೇವ ಕೃತ್ಯೇ ವೈ ವರ್ತತೇ ಬುದ್ಧಿರುತ್ತಮಾ ॥18॥
ಈ ಯಾವ ಕಣ್ಣಿಗೆ ಕಾಣುವ ಜಗತ್ತನ್ನು ಮನುಷ್ಯನು ತನ್ನ ಬುದ್ಧಿಯಿಂದ ಭಗವದಧೀನವೆಂದು ನೋಡುತ್ತಾನೋ ಅರ್ಥಾತ್ `ಪಾತಾಲಮೇತಸ್ಯ ಹಿ ಪಾದಮೂಲಮ್' ಎಂಬ ಭಾಗವತದ ವಚನಗಳಂತೆ ಈ ಜಗತ್ತು ಭಗವಂತನ ಪಾದತಲಗಳಿಂದ ಮೇಲಕ್ಕೂ ಇದೆ ಎಂದು ಯೋಚಿಸುತ್ತಾನೋ ಎಂದರೆ ತ್ರಿವಿಕ್ರಮಾವತಾರದಲ್ಲಿ ಭಗವಂತನು ಈ ಜಗತ್ತನ್ನು ತನ್ನಿಂದ ಕೆಳಗಡೆ ನೋಡುತ್ತಾನೆ. ವಾಮನಾವತಾರದಲ್ಲಿ ತನ್ನಿಂದ ಮೇಲೆ ನೋಡುತ್ತಾನೆ. ಅವನ ಶಕ್ತಿಯಿಂದ ಈ ಜಗತ್ತು ತುಂಬಾ ಕೆಳಗಿದೆ ಎಂದು ನೋಡುತ್ತಾನೆ. ಅವನ ರೂಪವಿಶೇಷಗಳೆಲ್ಲವೂ ಈ ಜಗತ್ತಿಗಿಂತ ಶ್ರೇಷ್ಠವಾದವುಗಳೆಂದು ನೋಡುತ್ತಾನೆ. ಈ ರೀತಿಯಾಗಿ ಭಗವಂತನ ಬುದ್ಧಿಯಲ್ಲಿ ಜಗತ್ತು ನೆಲೆಸಿದೆ. ಈ ಜಗತ್ತಿಗೆಲ್ಲ ನಿಯಾಮಕನಾದವನು ಭಗವಂತನಾಗಿದ್ದಾನೆ ಎಂದು ಭಗವಂತನ ವ್ಯಾಪಾರಗಳನ್ನು ಯಾವ ಸಾಧಕನು ತನ್ನ ಬುದ್ಧಿಯಿಂದ ಯೋಚಿಸುತ್ತಿರುತ್ತಾನೋ ಅವನ ಬುದ್ಧಿಯೇ ಉತ್ತಮ ಬುದ್ಧಿ ಎಂದು ಕರೆಸಿಕೊಳ್ಳುತ್ತದೆ.
ಗುಣಾನುನ್ನೀಯತೇ ಬುದ್ಧಿರ್ಬುದ್ಧಿರೇವೇಂದ್ರಿಯಾಣ್ಯಪಿ |
ಮನಃಷಷ್ಠಾನಿ ಸರ್ವಾಣಿ ಬುದ್ಧ್ಯಭಾವೇ ಕುತೋ ಗುಣಾಃ ॥19॥
ಬುದ್ಧಿಯು ವೈರಾಗ್ಯಾದಿ ಗುಣಗಳನ್ನು ಉನ್ನತ ಮಟ್ಟಕ್ಕೆ ಏರಿಸುತ್ತದೆ. ಇದೇ ಬುದ್ಧಿಯು ಶ್ರೋತ್ರಾದಿ ಬಾಹ್ಯೇಂದ್ರಿಯಗಳನ್ನು ನಿಯಮಿಸುತ್ತದೆ. ಮನಸ್ಸು ಮತ್ತು ಇಂದ್ರಿಯಗಳೊಡನೆ ಬುದ್ಧಿಯು ಸಮಾವೇಶಗೊಳ್ಳದಿದ್ದಲ್ಲಿ ವಿಷಯಗಳ ಅನುಭವವು ಜೀವನಿಗೆ ಹೇಗೆ ಬರಲು ಸಾಧ್ಯ?
ತತ್ರ ಯತ್ ಪ್ರೀತಿಸಂಯುಕ್ತಂ ಕಿಂಚಿದಾತ್ಮನಿ ಲಕ್ಷಯೇತ್ |
ಪ್ರಶಾಂತಮಿವ ಸಂಶುದ್ಧಂ ಸತ್ತ್ವಂ ತದುಪಧಾರಯೇತ್ ॥20॥
ಜೀವನು ತನ್ನ ಮನಸ್ಸಿನಲ್ಲಿ ಆ ಭಗವಂತನನ್ನು ಪ್ರೀತಿಯುಕ್ತವಾದ ಭಾವನೆಯಿಂದ ಕಂಡಾಗ ಪ್ರಶಾಂತವೂ, ಶುದ್ಧವೂ ಆಗಿರುವ ಸತ್ವಗುಣವು ಆವಿರ್ಭಾವವಾಗಿದೆ ಎಂದು ತಿಳಿಯಬೇಕು.
ಯತ್ತು ಸಂತಾಪಸಂಯುಕ್ತಂ ಕಾಯೇ ಮನಸಿ ವಾ ಭವೇತ್ |
ರಜಃ ಪ್ರವರ್ತಕಂ ತತ್ಸ್ಯಾತ್ ಸತತಂ ಹಾರಿ ದೇಹಿನಾಮ್ ॥21॥
ದೇಹದಲ್ಲಿಯಾಗಲಿ, ಮನಸ್ಸಿನಲ್ಲಾಗಲಿ ಸಂತಾಪಯುಕ್ತವಾದ ಭಾವವು ಕಂಡುಬಂದರೆ ರಜೋಗುಣದ ಆವಿರ್ಭಾವವಾಗಿದೆ ಎಂದು ತಿಳಿಯಬೇಕು.
ಯತ್ತು ಸಮ್ಮೋಹಸಂಯುಕ್ತಮವ್ಯಕ್ತವಿಷಯಂ ಭವೇತ್ |
ಅಪ್ರತರ್ಕ್ಯಮವಿಜ್ಞೇಯಂ ತಮಸ್ತದುಪಧಾರ್ಯತಾಮ್ ॥22॥
ಮನಸ್ಸು ಯಾವಾಗಲೂ ಭ್ರಾಂತಿಯಿಂದ ಕೂಡಿರುತ್ತದೋ, ಮನಸ್ಸಿನ ವಿಷಯವು ಅಸ್ಪಷ್ಟವಾಗಿರುತ್ತದೋ, ಊಹೆ ಮಾಡಲು ಸಾಧ್ಯವಾಗಿರುತ್ತದೋ, ಯಾವುದನ್ನೂ ತಿಳಿಯಲಾಗುವುದಿಲ್ಲವೋ ಆಗ ತಮೋಗುಣದ ಆವಿರ್ಭಾವವಾಗಿದೆ ಎಂದು ತಿಳಿಯಬೇಕು.

ಪ್ರಹರ್ಷಃ ಪ್ರೀತಿರಾನಂದಃ ಸಾಮ್ಯಂ ಸ್ವಸ್ಥಾತ್ಮಚಿತ್ತತಾ |
ಅಕಸ್ಮಾದ್ ಯದಿ ವಾ ಕಸ್ಮಾದ್ವರ್ತತೇ ಸಾತ್ತ್ವಿಕೋ ಗುಣಃ ||23||
ಅತ್ಯಂತ ಸಂತೋಷ, ಪ್ರೀತಿ, ಆನಂದ, ಸಮತೆ, ಚಿತ್ತಸ್ವಾಸ್ಥ್ಯ ಈ ಸದ್ಗುಣಗಳು ಕಾರಣವಿಲ್ಲದೆ ಅಥವಾ ಯಾವುದಾದರೂ ಕಾರ್ಯದಿಂದ ಉಂಟಾಗಿವೆ ಎಂದಿದ್ದರೆ ಅವನಲ್ಲಿ ಸಾತ್ವಿಕ ಗುಣವುಂಟಾಗಿದೆ ಎಂದು ತಿಳಿಯಬೇಕು.
ಅಭಿಮಾನೋ ಮೃಷಾವಾದೋ ಲೋಭೋ ಮೋಹಸ್ತಥಾಕ್ಷಮಾ |
ಲಿಂಗಾನಿ ರಜಸಸ್ತಾನಿ ವರ್ತಂತೇ ಹೇತ್ವಹೇತುತಃ ||24||
ಅಭಿಮಾನ, ಸುಳ್ಳುಮಾತು, ಲೋಭ, ಮೋಹ, ಅಸಹನೆ, ಇವುಗಳು ಸಕಾರಣದಿಂದಾಗಲಿ, ಅಕಾರಣದಿಂದಾಗಲಿ ಉಂಟಾದರೆ ಇವುಗಳನ್ನು ರಜೋಗುಣದ ಚಿಹ್ನೆ ಎಂದು ಭಾವಿಸಬೇಕು.
ತಥಾ ಮೋಹಃ ಪ್ರಮಾದಶ್ಚ ತಂದ್ರೀ ನಿದ್ರಾಪ್ರಬೋಧಿತಾ |
ಕಥಂಚಿದಭಿವರ್ತಂತೇ ವಿಜ್ಞೇಯಾಸ್ತಾಮಸಾ ಗುಣಾಃ ||25||
ಹೀಗೆ ಮೋಹ, ಪ್ರಮಾದ, ಆಲಸ್ಯ, ನಿದ್ರೆ, ಅಜ್ಞಾನ ಇವುಗಳು ಸಕಾರಣವಾಗಿ, ಅಕಾರಣವಾಗಿ ಒಬ್ಬನಲ್ಲಿ ಉಂಟಾದರೆ ಇವುಗಳನ್ನು ತಾಮಸಗುಣಗಳೆಂದು ತಿಳಿಯಬೇಕು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವ್ಯಶೀತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೂರನೆಯ ಅಧ್ಯಾಯ
ಶುಕಮುನಿಗೆ ವ್ಯಾಸರು ಜ್ಞಾನಸಾಧನಗಳನ್ನು ತಿಳಿಸಿದುದು.
ವ್ಯಾಸಃ
ಮನಃ ಪ್ರಸೃಜತೇ ಭಾವಂ ಬುದ್ಧಿರಧ್ಯವಸಾಯಿನೀ |
ಹೃದಯಂ ಪ್ರಿಯಾಪ್ರಿಯೇ ವೇದ ತ್ರಿವಿಧಾ ಕರ್ಮಚೋದನಾ ||1||
ಮಗನೇ, ಮನಸ್ಸು ಕರ್ಮಗಳನ್ನು ಮಾಡಲು ಅನೇಕ ವಿಧವಾದ ಪ್ರೇರಣೆಗಳನ್ನು ಹೊಂದುತ್ತದೆ. ಆ ಪ್ರೇರಣೆಗಳಲ್ಲಿ ಯೋಗ್ಯ ಯಾವುದು ಎಂಬುದನ್ನು ಬುದ್ಧಿಯು ನಿರ್ಣಯಿಸುತ್ತದೆ. ಹೃದಯವು ಪ್ರಿಯಾಪ್ರಿಯಗಳನ್ನು ತಿಳಿಯುತ್ತದೆ. ಈ ಮೂರು ಕರ್ಮಪ್ರೇರಕಗಳೆನಿಸಿವೆ.
ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಃ ಪರಮಂ ಮನಃ |
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಪರೋ ಮತಃ ||2||
ಇಂದ್ರಿಯಗಳಿಗಿಂತಲೂ ಇಂದ್ರಿಯಗಳ ವಿಷಯಗಳು ಶ್ರೇಷ್ಠವಾದವುಗಳು. ಇಂದ್ರಿಯಾರ್ಥಗಳಿಗಿಂತಲೂ ಮನಸ್ಸು ಶ್ರೇಷ್ಠವಾದುದು. ಮನಸ್ಸಿಗಿಂತಲೂ ಬುದ್ಧಿಯು ಶ್ರೇಷ್ಠವಾದುದು. ಬುದ್ಧಿಗಿಂತಲೂ ಮಹತ್ತತತ್ವಭಿಮಾನಿ ದೇವತೆಯು ಶ್ರೇಷ್ಠನಾದವನು.
ಬುದ್ಧಿರಾತ್ಮಾ ಮನುಷ್ಯಸ್ಯ ಬುದ್ಧಿರೇವಾತ್ಮನೋಽಽತ್ಮಿಕಾ |
ಯದಾ ವಿಕುರುತೇ ಭಾವಂ ತದಾ ಭವತಿ ಸಾ ಮನಃ ||3||
ಮನುಷ್ಯನಿಗೆ ಮನಸ್ಸಿಗಿಂತ ಬುದ್ಧಿಯೇ ತುಂಬಾ ಪ್ರಮುಖವಾದುದು. ಪರಮಾತ್ಮನನ್ನು ತೋರಿಸುವ ಸಾಮರ್ಥ್ಯವು ಈ ಬುದ್ಧಿಗೆ ಇದೆ. ಆ ಬುದ್ಧಿಯು ಪರಮಾತ್ಮನ ಸಂಬಂಧವನ್ನು ತೊರೆದು ವಿಕೃತಭಾವವನ್ನು ಹೊಂದಿದಾಗ ಅದೇ ಮನಸ್ಸೆಂದು ಕರೆಯಲ್ಪಡುತ್ತದೆ.
ಇಂದ್ರಿಯಾಣಾಂ ಪೃಥಗ್ಭಾವಾದ್ ಬುದ್ಧಿರ್ವಿಕ್ರಿಯತೇ ಹ್ಯಣು |
ಶೃಣ್ವತೀ ಭವತಿ ಶ್ರೋತ್ರಂ ಸ್ಪೃಶತೀ ಸ್ಪರ್ಶ ಉಚ್ಯತೇ ||4||
ಇಂದ್ರಿಯಗಳು ಪೃಥಕ್ಕಾಗಿ ಇರುವುದರಿಂದ ಅವುಗಳ ಕ್ರಿಯೆಗಳು ಭಿನ್ನವಾಗಿಯೇ ಇರುತ್ತವೆ. ಆದ್ದರಿಂದ ಬುದ್ಧಿಯು ಇಂದ್ರಿಯಗಳ ಮೂಲಕ ನಾನಾ ವಿಕಾರಗಳನ್ನು ಹೊಂದುತ್ತದೆ. ಶಬ್ದವನ್ನು ಕೇಳುವಾಗ ಬುದ್ಧಿಯು ಶ್ರೋತ್ರರೂಪವಾಗುತ್ತದೆ. ಮುಟ್ಟುವಾಗ ಸ್ಪರ್ಶರೂಪವನ್ನು ತಾಳುತ್ತದೆ.
ಪಶ್ಯಂತೀ ಭವತೇ ದೃಷ್ಟೀ ರಸತೀ ರಸನಂ ಭವೇತ್ |
ಜಿಘ್ರತೀ ಭವತಿ ಘ್ರಾಣಂ ಬುದ್ಧಿರ್ವಿಕ್ರಿಯತೇ ಪೃಥಕ್ ||5||
ನೋಡುವಾಗ ಬುದ್ಧಿಯು ದೃಷ್ಟಿರೂಪವನ್ನು ಹೊಂದುತ್ತದೆ. ಸವಿಯುವಾಗ ರಸನೇಂದ್ರಿಯವಾಗಿ, ಆಘ್ರಾಣಿಸುವಾಗ ಘ್ರಾಣೇಂದ್ರಿಯವಾಗಿ ಬುದ್ಧಿಯು ವಿಕಾರವನ್ನು ಹೊಂದುತ್ತದೆ.
ಇಂದ್ರಿಯಾಣೀತಿ ತಾನ್ಯಾಹುಸ್ತೇಷ್ವದೃಶ್ಯಾಧಿತಿಷ್ಠತಿ |
ತಿಷ್ಠತೀ ಪುರುಷೇ ಬುದ್ಧಿಸ್ತ್ರಿಷು ಭಾವೇಷು ವರ್ತತೇ ||6||
ಬುದ್ಧಿಯ ವಿಕಾರಗಳೇ ಇಂದ್ರಿಯಗಳು. ಈ ಎಲ್ಲಾ ಇಂದ್ರಿಯಗಳಿಗೂ ನಿಯಾಮಕನಾಗಿ, ಅದೃಶ್ಯನಾಗಿ ಭಗವಂತನು ಇದ್ದಾನೆ. ಹೀಗೆ ಬುದ್ಧಿಯು ದೇಹದಲ್ಲಿದ್ದು ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಭಾವಗಳಲ್ಲಿ ಪ್ರವೃತ್ತಿಯನ್ನು ಹೊಂದುತ್ತದೆ.
ಕದಾಚಿಲ್ಲಭತೇ ಪ್ರೀತಿಂ ಕದಾಚಿದಪಿ ಶೋಚತೇ |
ನ ಸುಖೇನ ನ ದುಃಖೇನ ಕದಾಚಿದಿಹ ಯುಜ್ಯತೇ ||7||
ಇದೇ ಕಾರಣದಿಂದ ಕೆಲವೊಮ್ಮೆ ಬುದ್ಧಿಯು ಸಂತೋಷದಿಂದ ಇರುತ್ತದೆ, ಮತ್ತೊಮ್ಮೆ ದುಃಖದಿಂದಲೂ, ಮಗದೊಮ್ಮೆ ಸುಖ-ದುಃಖಗಳೆರಡು ಇಲ್ಲದಂತಹ ಸ್ಥಿತಿಯಲ್ಲಿ ಇರುತ್ತದೆ.
ಸೇಯಂ ಭಾವಾತ್ಮಿಕಾ ಭಾವಾಂಸ್ತ್ರೀನೇತಾನತಿವರ್ತತೇ |

ಸರಿತಾಂ ಸಾಗರೋ ಭರ್ತಾ ಮಹಾವೇಲಾಮಿವೋರ್ಮಿಮಾನ್ ॥8॥
ಆದ್ದರಿಂದ ಬುದ್ಧಿಯ ಮುಖ್ಯಕಾರ್ಯಗಳೆಂದರೆ ಸತ್ವ-ರಜಸ್-ತಮೋ ಭಾವಗಳನ್ನು ಕಲ್ಪಿಸುವುದು. ಈ ಬುದ್ಧಿಯು ಭಗವದ್ಭಕ್ತಿಯನ್ನು ಹೊಂದಿದಾಗ ಬಾಹ್ಯವಾದ ಮೂರು ವಿಕಾರಗಳನ್ನು ಮೀರಿ ನಿಲ್ಲುತ್ತದೆ. ನದಿಗಳಿಗೆ ಒಡೆಯನಾದ ಮಹಾತರಂಗಗಳಿಂದ ಕೂಡಿರುವ ಸಮುದ್ರನು ಯಾವ ರೀತಿ ವಿಶಾಲವಾದ ಪ್ರದೇಶವನ್ನು ಉಲ್ಲಂಘಿಸುವನೋ ಆ ರೀತಿಯಾಗಿ ಸತ್ತತ್ವದಿ ಬಾಹ್ಯಗುಣಗಳ ವಿಕಾರವನ್ನು ಮೀರಿ ಭಗವಂತನಲ್ಲಿ ವರ್ತಿಸುತ್ತದೆ.
ಯದಾ ಪ್ರಾರ್ಥಯತೇ ಕಿಂಚಿತ್ತದಾ ಭವತಿ ಸಾ ಮನಃ |
ಅಧಿಷ್ಠಾನಾನಿ ವೈ ಬುದ್ಧ್ಯಾ ಪೃಥಗೇತಾನಿ ಸಂಸ್ಮರೇತ್ |
ಇಂದ್ರಿಯಾಣ್ಯೇವ ಮೇಧ್ಯಾನಿ ವಿಜೇತವ್ಯಾನಿ ಕೃತ್ಸ್ನಶಃ ॥9॥
ಯಾವಾಗ ಮನುಷ್ಯನ ಬುದ್ಧಿಯು ವಿಷಯವನ್ನು ಆಶಿಸುತ್ತದೋ ಆಗ ಆ ಬುದ್ಧಿಯೇ ಮನಸ್ಸಾಗಿ ಪರಿವರ್ತನೆಯನ್ನು ಹೊಂದುತ್ತದೆ. ಸಮಸ್ತ ಇಂದ್ರಿಯಗಳ ಗುಣಗಳು ಬುದ್ಧಿಯನ್ನೇ ಆಶ್ರಯಿಸಿಕೊಂಡಿವೆ. ಇಂದ್ರಿಯಗಳೇ ಶುದ್ಧವಾದ ಹವಿಸ್ಸುಗಳು ಎನಿಸಿವೆ. ಅಂತಹ ಇಂದ್ರಿಯಗಳನ್ನು ಪೂರ್ಣವಾಗಿ ಜಯಿಸಬೇಕು.
ಸರ್ವಾಣ್ಯೇವಾನುಪೂರ್ವ್ಯೇಣ ಯದ್ಯನ್ನಾನುವಿಧೀಯತೇ |
ಅವಿಭಾಗಗತಾ ಬುದ್ಧಿರ್ಭಾವೇ ಮನಸಿ ವರ್ತತೇ |
ಪ್ರವರ್ತಮಾನಂ ತು ರಜಃ ಸತ್ತ್ವಮಪ್ಯನುವರ್ತತೇ ॥10॥
ಬುದ್ಧಿಯು ಐದು ಇಂದ್ರಿಯಗಳನ್ನು ಕ್ರಮವಾಗಿ ಅನುಸರಿಸಿ ಹೋಗುತ್ತಿರುತ್ತದೆ. ಯಾವಾಗ ಬುದ್ಧಿಯು ಒಂದು ಇಂದ್ರಿಯವನ್ನು ಅನುಸರಿಸಿ ಸಾಗುತ್ತದೋ ಆಗ ಆ ವಿಷಯದ ಗ್ರಹಣವು ಮನಸ್ಸಿನಲ್ಲುಂಟಾಗುತ್ತದೆ. ಪ್ರವೃತ್ತಿ ಸ್ವಭಾವವುಳ್ಳ ರಜೋಗುಣವು ಸತ್ತ್ವಗುಣವನ್ನೇ ಹಿಂಬಾಲಿಸುತ್ತದೆ.
ಯೇ ಚೈವ ಭಾವಾ ವರ್ತಂತೇ ಸರ್ವ ಏಷ್ವೇವ ತೇ ತ್ರಿಷು |
ಅನ್ವರ್ಥಾಃ ಸಂಪ್ರವರ್ತಂತೇ ರಥನೇಮಿಮರಾ ಇವ ॥11॥
ಜಗತ್ತಿನಲ್ಲಿರುವ ಪದಾರ್ಥಗಳೆಲ್ಲವೂ ಅರಗಳು ಚಕ್ರದ ನೇಮಿಯನ್ನು ಹೇಗೆ ಅವಲಂಬಿಸಿವೆಯೋ ಹಾಗೆ ಮೂರುಗುಣಗಳನ್ನೇ ಆಶ್ರಯಿಸಿವೆ.
ಪ್ರದೀಪಾರ್ಥಂ ನರಃ ಕುರ್ಯಾದಿಂದ್ರಿಯೈರ್ಬುದ್ಧಿಸತ್ತಮೈಃ |
ನಿಶ್ಚರದ್ಭಿರ್ಯಥಾಯೋಗಮುದಾಸೀನೈರ್ಯದೃಚ್ಛಯಾ ॥12॥
ದೀಪವು ಕತ್ತಲೆಯಲ್ಲಿರುವ ವಸ್ತುಗಳನ್ನು ತೋರಿಸುವಂತೆ ಮನಸ್ಸೆಂಬ ದೀಪವು ಜ್ಞಾನೇಂದ್ರಿಯಗಳಿಗೆ ಪದಾರ್ಥಗಳನ್ನು ತೋರಿಸಿಕೊಡುತ್ತದೆ. ಮನಸ್ಸೇ ಇಲ್ಲದಿದ್ದಲ್ಲಿ ಜ್ಞಾನೇಂದ್ರಿಯಗಳಿಂದ ಯಾವ ಲಾಭವೂ ಇರುವುದಿಲ್ಲ.
ಏವಂಸ್ವಭಾವಮೇವೇದಮಿತಿ ವಿದ್ವಾನ್ನ ಮುಹ್ಯತಿ |
ಅಶೋಚನ್ನಪ್ರಹಷ್ಯಂಶ್ಚ ನಿತ್ಯಂ ವಿಗತಮತ್ಸರಃ ॥13॥
ಇದು ಜಗತ್ತಿನ ಸ್ವಭಾವವಾಗಿದೆ. ಇದು ಹೀಗೆ ಸರಿ ಎಂಬುದನ್ನು ತಿಳಿದ ವಿದ್ವಾಂಸನು ಮೋಹಕ್ಕೆ ತುತ್ತಾಗುವುದಿಲ್ಲ. ಸುಖದಲ್ಲಿ ಹರ್ಷಗೊಳ್ಳುವುದಿಲ್ಲ. ಸಂಕಟ ಒದಗಿದಾಗ ಶೋಕಿಸುವುದಿಲ್ಲ. ಈರ್ಷ್ಯೆ-ದ್ವೇಷ ಮೊದಲಾದ ದೋಷಗಳಿಗೆ ತುತ್ತಾಗುವುದಿಲ್ಲ.
ನ ಹ್ಯಾತ್ಮಾ ಶಕ್ಯತೇ ದ್ರಷ್ಟುಮಿಂದ್ರಿಯೈಃ ಕಾಮಗೋಚರೈಃ |
ಪ್ರವರ್ತಮಾನೈರನಯೇ ದುರ್ಧರೈರಕೃತಾತ್ಮಭಿಃ ॥14॥
ದುಷ್ಕರ್ಮಶೀಲರಾದ, ಮಲಿನ ಅಂತಃಕರಣ ಹೊಂದಿರುವ, ಅನ್ಯಾಯದಿಂದ ವ್ಯವಹರಿಸುವ ಅಜ್ಞಾನಿಗಳು ಕಾಮಾದಿಗಳಲ್ಲಿ ಆಸಕ್ತರಾಗಿ ಅಂತಹ ದುಷ್ಟ ಇಂದ್ರಿಯಗಳ ಮೂಲಕ ಪರಮಾತ್ಮನನ್ನು ನೋಡಲಾರರು.
ತೇಷಾಂ ತು ಮನಸಾ ರಶ್ಮೀನ್ ಯದಾ ಸಮ್ಯಗ್ ನಿಯಚ್ಛತಿ |
ತದಾ ಪ್ರಕಾಶತೇ ಹ್ಯಾತ್ಮಾ ಘಟೇ ದೀಪ ಇವ ಜ್ವಲನ್ |
ಸರ್ವೇಷಾಮೇವ ಭೂತಾನಾಂ ತಮಸ್ಯಪಗತೇ ಯಥಾ ॥15॥
ಯಾವಾಗ ಮನುಷ್ಯನು ಮನಸ್ಸೆಂಬ ಹಗ್ಗದಿಂದ ಇಂದ್ರಿಯಗಳೆಂಬ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳುತ್ತಾನೋ, ಅವನಿಗೆ ದೀಪದ ಪ್ರಕಾಶದಂತೆ ಹೊಳೆಯುವ ಪರಮಾತ್ಮನ ದರ್ಶನವಾಗುತ್ತದೆ. ಕತ್ತಲೆಯು ಪರಿಹಾರವಾದ ಬಳಿಕ ಪದಾರ್ಥಗಳು ಹೇಗೆ ಎಲ್ಲ ಪ್ರಾಣಿಗಳಿಗೂ ಕಾಣಿಸುತ್ತವೋ ಆ ರೀತಿ ಭಗವಂತನ ಸಾಕ್ಷಾತ್ಕಾರವನ್ನು ಹೊಂದುತ್ತಾನೆ.
ಯಥಾ ವಾರಿಚರಃ ಪಕ್ಷೀ ನ ಲಿಪ್ಯತಿ ಜಲೇ ಚರನ್ |
ಏವಮೇವ ಕೃತಪ್ರಜ್ಞೋ ನದೋಷೈರ್ವಿಷಯಾಂಶ್ಚರನ್ |
ಅಸಜ್ಜಮಾನಃ ಸರ್ವೇಷು ನ ಕಥಂಚನ ಲಿಪ್ಯತೇ ॥16॥
ನೀರಿನಲ್ಲಿ ಸಂಚರಿಸುವ ಹಕ್ಕಿಯು ನೀರಿನಿಂದ ಹೇಗೆ ಒದ್ದೆಯಾಗುವುದಿಲ್ಲವೋ ಇದರಂತೆ ಮುಕ್ತಾತ್ಮನಾದ ಯೋಗಿಯು ಪ್ರಾಕೃತ ವಿಷಯರಾಗಾದಿದೋಷಗಳಿಂದ ಲಿಪ್ತನಾಗುವುದಿಲ್ಲ. ಶುದ್ಧವಾದ ಬುದ್ಧಿಯುಳ್ಳವನು ಪುತ್ರ-ಮಿತ್ರ-ಕಳತ್ರರಲ್ಲಿ ಅನಾಸಕ್ತನಾಗಿರುವುದರಿಂದ ಅವುಗಳನ್ನನುಭವಿಸುತ್ತಿದ್ದರೂ ಆ ದೋಷಗಳ ಲೇಪ ಅವನಿಗಿರುವುದಿಲ್ಲ.
ತ್ಯಕ್ತತ್ವ ಪೂರ್ವಕೃತಂ ಕರ್ಮ ರತಿರ್ಯಸ್ಯ ಸದಾತ್ಮನಿ |
ಸರ್ವಭೂತಾತ್ಮಭೂತಸ್ಯ ಗುಣಮಾರ್ಗೇಷ್ವಸಜ್ಜತಃ ॥17॥
ಯಾವನು ಪೂರ್ವಪ್ರಾರಬ್ಧಗಳನ್ನೆಲ್ಲ ತೊಳೆದುಕೊಂಡು, ಪರಮಾತ್ಮನಲ್ಲಿ ಅನುರಕ್ತನಾಗಿ, ಸಮಸ್ತ ಪ್ರಾಣಿಗಳ ಅಂತರ್ಯಾಮಿಯಾದ ಪರಮಾತ್ಮನನ್ನೇ ನೋಡುತ್ತಾನೋ ಅವನು ಸಮಸ್ತ ಭೂತಗಳಿಗೂ ಅಂತರ್ಯಾಮಿಯಾದ ಭಗವಂತನನ್ನು ಕಾಣುವುದರಿಂದ ಸತ್ತತ್ವದಿ ಗುಣ ಸಂಬಂಧದಲ್ಲಿ ಆಸಕ್ತನಾಗುವುದಿಲ್ಲ. ಪುಣ್ಯ-ಪಾಪಗಳ ಸಂಬಂಧವನ್ನು ಹೊಂದುವುದಿಲ್ಲ ಎಂದು ಭಾವ.

ಸತ್ತ್ವಮಾತ್ಮಾ ಪ್ರಸವತಿ ಗುಣಾನ್ ವಾಪಿ ಕದಾಚನ |
ನ ಗುಣಾ ವಿದುರಾತ್ಮಾನಂ ಗುಣಾನ್ ವೇದ ಸ ಸರ್ವದಾ ॥18॥
ಸತ್ತ್ವಗುಣವು ಪರಮಾತ್ಮನನ್ನು ತೋರಿಸುತ್ತದೆ. ಬಂಧಕ ಗುಣಗಳನ್ನು ಬಳಿಕ ಹುಟ್ಟಿಸುವುದಿಲ್ಲ. ಅಪ್ರಧಾನರಾದ ಕನಿಷ್ಟ ಜೀವರು ಪರಮಾತ್ಮನನ್ನು ತಿಳಿಯರು. ಜ್ಞಾನಿಯಾದ ಜೀವನು ಪರಮಾತ್ಮನ ಗುಣಗಳನ್ನು ಯಾವಾಗಲೂ ತಿಳಿಯುತ್ತಾನೆ.
ಪರಿದ್ರಷ್ಟಾ ಗುಣಾನಾಂ ಸ ಸ್ರಷ್ಟಾ ಚೈವ ಯಥಾತಥಮ್ |
ಸತ್ತ್ವಕ್ಷೇತ್ರಜ್ಞಯೋರೇತದಂತರಂ ವಿದ್ಧಿ ಸೂಕ್ಷ್ಮಯೋಃ ॥19॥
ಭಗವಂತನೇ ಸಮಸ್ತ ಗುಣಗಳ ದ್ರಷ್ಟಾರನಾಗಿದ್ದಾನೆ. ಅವನೇ ಸ್ರಷ್ಟಾರನು ಆಗಿದ್ದಾನೆ ಅರ್ಥಾತ್ ಯಥಾವತ್ತಾಗಿ ಸೃಷ್ಟಿಯನ್ನು ಮಾಡುವವನು. ಈ ಜೀವ ಮತ್ತು ಪರಮಾತ್ಮರು ಬಾಹ್ಯ ಇಂದ್ರಿಯಗಳಿಗೆ ಅಗೋಚರರಾಗಿದ್ದಾರೆ. ಕ್ಷೇತ್ರಾಭಿಮಾನಿಯಾದ ಜೀವನಿಗೂ, ಕ್ಷೇತ್ರಜ್ಞನಾದ ಪರಮಾತ್ಮನಿಗೂ ಬಹಳ ಅಂತರವಿದೆ ಎಂದು ತಿಳಿ.
ಸೃಜತೇ ತು ಗುಣಾನೇಕ ಏಕೋ ನ ಸೃಜತೇ ಗುಣಾನ್ |
ಪೃಥಗ್ಭೂತೌ ಪ್ರಕೃತ್ಯಾ ತೌ ಸಂಪ್ರಯುಕ್ತೌ ಚ ಸರ್ವದಾ ॥20॥
ಕ್ಷೇತ್ರಜ್ಞನಾದ ಪರಮಾತ್ಮನು ಗುಣಗಳನ್ನು ಸೃಷ್ಟಿಸುತ್ತಾನೆ. ಜೀವಾತ್ಮನು ಸೃಷ್ಟಿಸುವ ವಿಷಯದಲ್ಲಿ ಅಸಮರ್ಥನಾಗಿದ್ದಾನೆ. ಸ್ವಾಭಾವಿಕವಾಗಿ ಜೀವ-ಪರಮಾತ್ಮರಲ್ಲಿ ಭೇದವಿದೆ. ಆದರೆ ಎಂದಿಗೂ ಅತ್ಯಂತ ಭಿನ್ನರಾದ ಜೀವರು ಒಟ್ಟಿಗೆ ಇರುತ್ತಾರೆ.
ಯಥಾ ಮತ್ಸ್ಯೋಽದ್ಭಿರನ್ಯಃ ಸನ್ ಸಂಪ್ರಯುಕ್ತೌ ತಥೈವ ತೌ |
ಮಶಕೋದುಂಬರೌ ಚಾಪಿ ಸಂಪ್ರಯುಕ್ತೌ ಯಥಾ ಸಹ ॥21॥
ಇಷೀಕಾ ವಾ ಯಥಾ ಮುಂಜೇ ಪೃಥಕ್ಚ ಸಹ ಚೈವ ಚ |
ತಥೈವ ಸಹಿತಾವೇತಾವನ್ಯೋನ್ಯಸ್ಮಿನ್ ಪ್ರತಿಷ್ಠಿತೌ ॥22॥
ಜಲದಲ್ಲಿರುವ ಮತ್ಸ್ಯವು ನೀರಿಗಿಂತ ಅತ್ಯಂತ ಭಿನ್ನವಾಗಿದ್ದರೂ ಆ ನೀರಿನ ಸಂಬಂಧವನ್ನು ನಿತ್ಯವೂ ಹೇಗೆ ಹೊಂದಿರುತ್ತದೋ, ಅದರಂತೆ ಜೀವ-ಪರಮಾತ್ಮರಲ್ಲಿ ಅತ್ಯಂತ ಭೇದವಿದ್ದರೂ ನಿತ್ಯಸಂಬಂಧವಿದೆ. ಅತ್ತಿಹಣ್ಣಿನಲ್ಲಿ ಇರುವ ನುಸಿಗಳಿಗೆ ಅತ್ತಿಯಂಥ ಭೇದವೇ ಇದ್ದರೂ ಅತ್ತಿಹಣ್ಣಿನ ಜೊತೆ ನಿತ್ಯಸಂಬಂಧವನ್ನು ಹೊಂದಿರುವಂತೆ ಜೀವ-ಪರಮಾತ್ಮರಿಗೆ ನಿತ್ಯ ಸಂಬಂಧವಿದೆ. ಮೌಂಜಿಹುಲ್ಲಿನಲ್ಲಿ ಕಾಸಹುಲ್ಲು ಪ್ರತ್ಯೇಕವಾಗಿ ಕಾಣುತ್ತದೆ. ಪ್ರತ್ಯೇಕವಾಗಿದ್ದರೂ ಒಟ್ಟಿಗೆಯೂ ಕಾಣಿಸುತ್ತದೆ. ಅದರಂತೆ ಜೀವ-ಪರಮಾತ್ಮರು ಪರಸ್ಪರ ಅನ್ಯೋನ್ಯ ಸಂಬಂಧವುಳ್ಳವರಾಗಿದ್ದಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರ್ಯಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ನಾಲ್ಕನೆಯ ಅಧ್ಯಾಯ
ವ್ಯಾಸರಿಂದ ಜ್ಞಾನದ ಪ್ರಶಂಸೆ.
ವ್ಯಾಸಃ
ಸೃಜತೇ ತ್ರಿಗುಣಾನ್ ಸತ್ತ್ವಂ ಕ್ಷೇತ್ರಜ್ಞಸ್ತ್ವನುತಿಷ್ಠತಿ |
ಗುಣಾನ್ ವಿಕ್ರಿಯತಃ ಸರ್ವಾನುದಾಸೀನವದೀಶ್ವರಃ ॥1॥
ಕ್ಷೇತ್ರಜ್ಞನಾದ ಪರಮಾತ್ಮನು ಉದಾಸೀನನಂತೆ ವಿಕಾರನಾದ ತ್ರಿಗುಣಗಳನ್ನು ನೋಡುತ್ತಿರುತ್ತಾನೆ. ಅವುಗಳಿಗೆ ಸ್ವಾಮಿಯಾಗಿದ್ದು ಜೀವರ ಸಮೂಹವನ್ನು, ತ್ರಿಗುಣಗಳ ಸಂಬಂಧವನ್ನು ಸೃಷ್ಟಿಸುತ್ತಾನೆ.
ವ್ಯಾಖ್ಯಾನ ವಿಶೇಷ ಅನೇಕ ಅಧ್ಯಾಯಗಳಲ್ಲಿ ಕ್ಷೇತ್ರಜ್ಞ ಎಂಬ ಶಬ್ದದ ಆವೃತ್ತಿಯಿದೆ. ಅನೇಕ ವ್ಯಾಖ್ಯಾನಕಾರರು ಕ್ಷೇತ್ರಜ್ಞನೆಂದರೆ ಜೀವ ಎಂದು ವ್ಯಾಖ್ಯಾನಿಸಿದ್ದಾರೆ. ಆದರೆ ಕೃಷ್ಣನು ಗೀತೆಯಲ್ಲಿ `ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ' ಎಂಬ ಪದ್ಯದಲ್ಲಿ ಕ್ಷೇತ್ರಜ್ಞನಾದವನು ನಾನೇ ಎಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಕ್ಷೇತ್ರಜ್ಞ ಶಬ್ದವಾಚ್ಯತ್ವ ಭಗವಂತನಲ್ಲಿಯೇ ತಿಳಿಯಬೇಕು. `ಕ್ಷೇತ್ರಜ್ಞೋ ಭಗವಾನ್ ವಿಷ್ಣುಃ ನಹ್ಯನಃ ಕ್ಷೇತ್ರಮನ್ಯಥಾ | ವೇತ್ತಸೋ ಭಗವಾನ್ ಜ್ಞೇಯೋ ವ್ಯಕ್ತಾವ್ಯಕ್ತ ವಿಲಕ್ಷಣಃ | ಸ ತು ಜೀವೇಷು ಸರ್ವೇಷು ಬಹಿಶ್ಚೈವ ವ್ಯವಸ್ಥಿತಃ | ವಿಲಕ್ಷಣಶ್ಚ ಸರ್ವೇಭ್ಯೋಪಿ ಸದೈವ ಚ ॥' ಭಗವಾನ್ ವಿಷ್ಣುವೇ ಕ್ಷೇತ್ರಜ್ಞನೆನಿಸಿದ್ದಾನೆ. ಬೇರೆ ಯಾರೂ ಅವ್ಯಕ್ತಾದಿ ಕ್ಷೇತ್ರಗಳನ್ನು ಚೆನ್ನಾಗಿ ಅರಿಯಲಾರರು. ಪರಮಾತ್ಮನು ವ್ಯಕ್ತ-ಅವ್ಯಕ್ತಗಳಿಗಿಂತಲೂ ವಿಭಿನ್ನನು. ಕ್ಷೇತ್ರಜ್ಞನಾದ ಹರಿಯು ಜೀವರ ಒಳಗೆ-ಹೊರಗೆ ನಿಯಾಮಕನಾಗಿದ್ದಾನೆ. ಆದ್ದರಿಂದ ಎಲ್ಲವನ್ನೂ ತಿಳಿಯುವ ಸಾಮರ್ಥ್ಯ ಉಳ್ಳವನು ಎಂದು ಪ್ರಮಾಣ ವಾಕ್ಯವು ಸಂವಾದಿಯಾಗಿದೆ. ಭಾಗವತದಲ್ಲಿಯೂ ಕ್ಷೇತ್ರಜ್ಞನಾದವನು ಭಗವಂತನೇ ಎಂದು ಹೇಳಲು ಅನೇಕ ಪ್ರಮಾಣಗಳಿವೆ. ಆದ್ದರಿಂದ ಪ್ರಕೃತ ಕ್ಷೇತ್ರಜ್ಞನೇ ಈ ಎಲ್ಲಾ ಅಧ್ಯಾಯಗಳಲ್ಲಿಯೂ ಪ್ರಸ್ತುತನಾಗಿದ್ದಾನೆ ಎಂದು ತಿಳಿಯಬೇಕು.
ಸ್ವಭಾವಯುಕ್ತಂ ತತ್ ಸರ್ವಂ ಯದಿಮಾನ್ ಸೃಜತೇ ಗುಣಾನ್ |
ಊರ್ಣನಾಭಿರ್ಯಥಾ ಸೂತ್ರಂ ಸೃಜತೇ ತಂತುವದ್ ಗುಣಾನ್ ॥2॥
ಪ್ರಧ್ವಸ್ತಾ ನ ನಿವರ್ತಂತೇ ಪ್ರವೃತ್ತಿರ್ನೋಪಲಭ್ಯತೇ |
ಏವಮೇಕೇ ವ್ಯವಸ್ಯಂತಿ ನಿವೃತ್ತಿರಿತಿ ಚಾಪರೇ ॥3॥
ಯಾವ ರೀತಿ ಜೇಡರ ಹುಳುವು ತನ್ನ ಶರೀರದಿಂದಲೇ ದಾರಗಳನ್ನು ಸ್ವಾಭಾವಿಕವಾಗಿ ಸೃಷ್ಟಿಸುವುದೋ ಅದರಂತೆ ಭಗವಂತನು ತ್ರಿಗುಣಾತ್ಮಕವಾದ ಸಮಸ್ತ ಪದಾರ್ಥಗಳನ್ನು ಸೃಷ್ಟಿಸುತ್ತಾನೆ. ಈ ಜಗತ್ತು ಸರ್ವಪ್ರಳಯವನ್ನು ಹೊಂದಿದ ಬಳಿಕ ಸಮಗ್ರವಾಗಿ ನಿತ್ಯವೂ ನಾಶವಾಗಿಯೇ ಇರುತ್ತದೆ. ಎಂದೂ ಉತ್ಪತ್ತಿಯನ್ನು ಹೊಂದುವುದಿಲ್ಲ ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಸರ್ವಜಗತ್ತು ನಿವೃತ್ತಿಯನ್ನು ಹೊಂದುತ್ತದೆ, ಪ್ರವೃತ್ತಿಯನ್ನೂ ಹೊಂದುತ್ತದೆ ಎಂದು ಹೇಳುತ್ತಾರೆ.

ಉಭಯಂ ಸಂಪ್ರಧಾರ್ಯೈತದಧ್ಯವಸ್ಯೇದ್ಯಥಾಮತಿ |
ಅನೇನೈವ ವಿಧಾನೇನ ಭವೇದ್ ಗರ್ಭಶಯೋ ಮಹಾನ್ ||4||
ಈ ಪ್ರವೃತ್ತಿ-ನಿವೃತ್ತಿಗಳು ನಿರಂತರವಾಗುತ್ತಿರುತ್ತದೆ ಎಂಬ ವಿಷಯವನ್ನೇ ಯಥಾಮತಿಯಾಗಿ ಗ್ರಹಿಸಬೇಕು. ಈ ರೀತಿ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನಾದ ಭಗವಂತನನ್ನೇ ಬುದ್ಧಿಯಿಂದ ಆಲೋಚಿಸುತ್ತಾ, ಸಮಸ್ತ ಜೀವರ ಹೃದಯದಲ್ಲಿ ನಿಯಾಮಕನಾಗಿದ್ದಾನೆ, ಮಹಾತ್ಮನಾಗಿದ್ದಾನೆ ಎಂದು ಭಾವಿಸಬೇಕು.
ಅನಾದಿನಿಧನಂ ನಿತ್ಯಮಾಸಾದ್ಯ ವಿಚರೇನ್ನರಃ |
ಅಕ್ರುದ್ಧ್ಯನ್ನಪ್ರಹಷ್ಯಂಶ್ಚ ನಿತ್ಯಂ ವಿಗತಮತ್ಸರಃ ||5||
ಆ ಭಗವಂತನಾದರೂ ಆದ್ಯಂತರಹಿತನಾಗಿದ್ದಾನೆ. ಅಂತಹ ಭಗವಂತನನ್ನು ತಿಳಿದ ಜ್ಞಾನಿಯು ಹರ್ಷ, ಕ್ರೋಧ, ಈರ್ಷೆ, ದ್ವೇಷಗಳಿಂದ ರಹಿತನಾಗಿ ಸಂಚರಿಸುತ್ತಾನೆ.
ಇತ್ಯೇವಂ ಹೃದಯಗ್ರನ್ಥಿಂ ಬುದ್ಧಿಚಿಂತಾಮಯಂ ದೃಢಮ್ |
ಅತೀತ್ಯ ಸುಖಮಾಸೀತ ಅಶೋಚಂಶ್ಛಿನ್ನಸಂಶಯಃ ||6||
ಈ ರೀತಿ ಸಾಧಕನಾದವನು ಬುದ್ಧಿಯ ಚಿಂತೆಯೇ ಮೊದಲಾದ ಗುಣಗಳಿಂದ ಬಂಧಿತವಾಗಿರುವ ಅಜ್ಞಾನಗ್ರಂಥಿಯನ್ನು ಭಗವಂತನ ಜ್ಞಾನದಿಂದ ಪರಿಹರಿಸಿಕೊಂಡು, ಸಂಶಯ ಮುಕ್ತನಾಗಿ, ದುಃಖರಹಿತನಾಗಿ ಸುಖದಿಂದ ವರ್ತಿಸಬೇಕು.
ತಪ್ಯೇಯುಃ ಪ್ರಚ್ಯುತಾಃ ಪೃಥ್ವ್ಯಾ ಯಥಾ ಪೂರ್ಣಾಂ ನದೀಂ ನರಾಃ |
ಅವಗಾಢಾ ಹ್ಯವಿದ್ವಾಂಸೋ ವಿದ್ಧಿ ಲೋಕಮಿಮಂ ತಥಾ ||7||
ಯಾವ ರೀತಿ ಈಜಲು ಬಾರದ ವ್ಯಕ್ತಿಯು ದಡದಿಂದ ಜಾರಿ, ಪ್ರವಾಹದಿಂದ ಹರಿಯುವ ನದಿಯಲ್ಲಿ ಬಿದ್ದು, ಮುಳುಗಿ ಪರಿತಾಪ ಹೊಂದುತ್ತಾನೋ ಅದೇ ರೀತಿ ಅಜ್ಞಾನಿಯಾದವರು ಈ ಪ್ರಾಕೃತಿಕ ಸಂಸಾರ ಸಾಗರದಲ್ಲಿ ಮುಳುಗಿ ಬ್ರಹ್ಮಜ್ಞಾನವಿಲ್ಲದೆ ಪರಿತಪಿಸುತ್ತಿದ್ದಾರೆ ಎಂಬುದನ್ನು ತಿಳಿ.
ನ ತು ತಾಮ್ಯತಿ ವೈ ವಿದ್ವಾನ್ ಸ್ಥಲೇ ಚರತಿ ತತ್ತ್ವವಿತ್ |
ಏವಂ ಯೋ ವಿಂದತೇತ್ಮಾನಂ ಕೇವಲಂ ಜ್ಞಾನಮಾತ್ಮನಃ ||8||
ಆದರೆ ಯಾವನಿಗೆ ನದಿಯಲ್ಲಿ ಈಜುವ ಪರಿಣಿತಿಯು ಇರುವುದೋ ಅವನು ಪರಿತಾಪವನ್ನು ಹೊಂದುವುದಿಲ್ಲ. ನೆಲದಲ್ಲಿ ನಡೆಯುವಂತೆ ನೀರಿನಲ್ಲಿಯೂ ಸಂಚರಿಸುತ್ತಾನೆ. ಇದರಂತೆ ಪರಮಾತ್ಮನ ಜ್ಞಾನವನ್ನು ಹೊಂದಿರುವಂತಹ ತತ್ತ್ವವೇತ್ತೃವು ಸಂಸಾರ ಸಾಗರವನ್ನು ಸುಲಭವಾಗಿ ದಾಟುತ್ತಾನೆ.
ಏವಂ ಬುದ್ಧ್ವಾ ನರಃ ಸರ್ವಾಂ ಭೂತಾನಾಮಾಗತಿಂ ಗತಿಮ್ |
ಸಮವೇಕ್ಷ್ಯ ಶನೈಃ ಸಮ್ಯಗ್ ಲಭತೇ ಶಮಮುತ್ತಮಮ್ ||9||
ಈ ರೀತಿಯಾಗಿ ಸಮಸ್ತ ಜೀವರ ಉತ್ಪತ್ತಿ ಮತ್ತು ಲಯಗಳು ಭಗವಂತನಿಂದಲೇ ನಡೆಯುತ್ತವೆ ಎಂಬ ರಹಸ್ಯವನ್ನು ತಿಳಿದಿದ್ದಾನೋ ಅವನು ಭಗವಂತನ ವ್ಯಾಪಾರವನ್ನು ನೋಡುತ್ತಾ ಕ್ರಮವಾಗಿ ಪರಮಶಾಂತಿಯನ್ನು ಹೊಂದುತ್ತಾನೆ.
ಏತದ್ವೈ ಜನ್ಮಸಾಮರ್ಥ್ಯಂ ಬ್ರಾಹ್ಮಣಸ್ಯ ವಿಶೇಷತಃ |
ಆತ್ಮಜ್ಞಾನಂ ಶಮಶ್ಚೈವ ಪರ್ಯಾಪ್ತಂ ತತ್ ಪರಾಯಣಮ್ ||10||
ವಿಶೇಷವಾಗಿ ಬ್ರಾಹ್ಮಣನ ಜನ್ಮದ ಸಾಮರ್ಥ್ಯವು ಪರಮಾತ್ಮ ಜ್ಞಾನವು, ಇಂದ್ರಿಯ ನಿಗ್ರಹವು, ಭಗವಂತನನ್ನೇ ಆಶ್ರಯ ಹೊಂದುವಿಕೆಯು ಇವುಗಳಿಂದಲೇ ಸಿದ್ಧವಾಗುತ್ತದೆ. ಬ್ರಾಹ್ಮಣನು ತನ್ನ ಬಲವನ್ನು ಆತ್ಮಜ್ಞಾನದಲ್ಲಿಯೇ ತೋರಿಸಬೇಕು ಎಂದು ಭಾವ.
ಏತದ್ ಬುದ್ಧ್ವಾ ಭವೇದ್ ಬುದ್ಧಃ ಕಿಮನ್ಯದ್ ಬುದ್ಧಲಕ್ಷಣಮ್ |
ವಿಜ್ಞಾಯೈತದ್ ವಿಮುಚ್ಯಂತೇ ಕೃತಕೃತ್ಯಾ ಮನೀಷಿಣಃ ||11||
ಭಗವಂತನನ್ನು ತಿಳಿದ ಬಳಿಕವೇ ಬುದ್ಧಿವಂತನಾಗುತ್ತಾನೆ. ಈ ಜ್ಞಾನಿಯ ಜ್ಞಾನವಿಲ್ಲದ ಬೇರೆ ಲಕ್ಷಣ ಯಾವುದು? ಭಗವಂತನನ್ನು ತಿಳಿದೇ ಕೃತಕೃತ್ಯರಾಗಿ ಸಂಸಾರದಿಂದ ಜ್ಞಾನಿಗಳಾದವರು ಬಿಡುಗಡೆ ಹೊಂದುತ್ತಾರೆ.
ನ ಭವತಿ ವಿದುಷಾಂ ಮಹದ್ಭಯಂ ಯದ್
ಅವಿದುಷಾಂ ಸುಮಹದ್ಭಯಂ ಭವೇತ್ |
ನ ಹಿ ಗತಿರಧಿಕಾಸ್ತಿ ಕಸ್ಯಚಿದ್
ಭವತಿ ಹಿ ಯಾ ವಿದುಷಃ ಸನಾತನೀ ||12||
ಪರಲೋಕದ ವಿಷಯದಲ್ಲಿ ಅಜ್ಞಾನಿಗಳಾದವರಿಗೆ ಯಾವ ಮಹಾಭಯವಿದೆಯೋ ಆ ಭಯವು ಜ್ಞಾನಿಯಾದವನಿಗೆ ಇರುವುದಿಲ್ಲ. ಜ್ಞಾನಿಯಾದವನಿಗೆ ಯಾವ ಶ್ರೇಷ್ಠವಾದ ಗತಿಯು ಲಭಿಸುವುದೋ ಅದಕ್ಕಿಂತ ಉತ್ತಮವಾದ ಬೇರೆ ಗತಿಯು ಇರುವುದಿಲ್ಲ. ಬೇರೆ ಯಾರಿಗೂ ಅದು ದೊರೆಯುವುದಿಲ್ಲ.
ಲೋಕಮಾತುರಸೂಯಂತ ಜನ-
ಸ್ತತ್ತದೇವ ಚ ನಿರೀಕ್ಷ್ಯ ಶೋಚತೇ |
ತತ್ರ ಪಶ್ಯ ಕುಶಲಾನಶೋಚತೋ
ಯೇ ವಿದುಸ್ತದುಭಯಂ ಕೃತಾಕೃತಮ್ ||13||
ಪ್ರಕೃತಿಯ ದೆಸೆಯಿಂದ ಕೆಲವು ಜನರು ದ್ವೇಷವನ್ನು ಹೊಂದುತ್ತಾರೆ. ದುಃಖಿಗಳನ್ನು, ರೋಗಿಗಳನ್ನು ನೋಡಿ ಶೋಕಪಡುತ್ತಾರೆ. ಆದರೆ ಈ ಸುಖ-ದುಃಖಗಳಿಗೆ ಕಾರಣವಾದ ಪುಣ್ಯ-ಪಾಪಗಳ ಸಂಬಂಧವನ್ನು, ಅದಕ್ಕೆ ನಿಯಾಮಕನಾದ ಭಗವಂತನನ್ನು ಜ್ಞಾನಿಗಳಾದವರು ನೋಡುತ್ತಾ ಆ ಸುಖ-ದುಃಖಗಳ ವಿಷಯದಲ್ಲಿ ಎಂದಿಗೂ ಶೋಕ ಹೊಂದುವುದಿಲ್ಲ. ವ್ಯಕ್ತಿಗಳಲ್ಲಿ ದೋಷಗಳನ್ನು

ಎಣಿಸುವುದಿಲ್ಲ. ನಿಜವಾದ ಕುಶಲರು ಅವರೇ ಎಂದು ತಿಳಿ.
ಯತ್ ಕರೋತ್ಯನಭಿಸಂಧಿಪೂರ್ವಕಂ
ತಚ್ಚ ನಿರ್ಣುದತಿ ಯತ್ ಪುರಾ ಕೃತಮ್ |
ನ ಪ್ರಿಯಂ ತದುಭಯಂ ನ ಚಾಪ್ರಿಯಂ
ತಸ್ಯ ತಜ್ಜನಯತೀಹ ಕುರ್ವತಃ ॥14॥
ಯಾವ ವಿವೇಕಿಯಾದ ಪುರುಷನು ನಿಷ್ಕಾಮ ಭಾವನೆಯಿಂದ ಭಗವತ್ಪ್ರೀತಿಗಾಗಿ ಕರ್ಮವನ್ನು ಮಾಡುತ್ತಾನೋ ಆ ಕರ್ಮವು ಅವನು ಹಿಂದೆ ಮಾಡಿದ ಅಶುಭ ಕರ್ಮದ ದುಷ್ಫಲಗಳನ್ನು ತೊಡೆದು ಹಾಕುತ್ತದೆ. ಬುದ್ಧಿಹೀನನಾಗಿ ಪುಣ್ಯಪಾಪಗಳನ್ನು ಮಾಡುವ ಪುರುಷನಿಗೆ ಅಬುದ್ಧಿಪೂರ್ವಕವಾಗಿ ಮಾಡಿದ ಪುಣ್ಯಕಾರ್ಯವು ಪ್ರಿಯ ಜನಕವಾಗುವುದಿಲ್ಲ. ಅಬುದ್ಧಿಪೂರ್ವಕವಾಗಿ ಮಾಡಿದ ಪಾಪಕರ್ಮವು ದುಃಖ ಕಾರಣವೂ ಆಗುವುದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುರಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೈದನೆಯ ಅಧ್ಯಾಯ
ಜ್ಞಾನಸಾಧನೆಯ ಉಪಾಯಗಳನ್ನು ವ್ಯಾಸರು ಶುಕಮುನಿಗೆ ನಿರೂಪಿಸಿದುದು.
ಶುಕಃ
ಯಸ್ಮಾದ್ಧರ್ಮಾತ್ ಪರೋ ಧರ್ಮೋ ವಿದ್ಯತೇ ನೇಹ ಕಶ್ಚನ |
ಯೋ ವಿಶಿಷ್ಟಶ್ಚ ಧರ್ಮೇಭ್ಯಸ್ತಂ ಭವಾನ್ ಪ್ರಬ್ರವೀತು ಮೇ ॥1॥
ಶುಕ ಜನಕನೇ, ಎಲ್ಲ ಧರ್ಮಗಳಿಗಿಂತಲೂ ಉತ್ತಮವಾದ ಧರ್ಮವು ಯಾವುದು? ಆ ಧರ್ಮಕ್ಕಿಂತ ಹಿರಿದಾದ ಬೇರೆ ಯಾವ ಧರ್ಮವು ಇಲ್ಲವೋ ಅಂತಹ ಶ್ರೇಷ್ಠವಾದ ಧರ್ಮದ ಬಗ್ಗೆ ನನಗೆ ತಿಳಿಸಿರಿ.
ವ್ಯಾಸಃ
ಧರ್ಮಂ ತೇ ಸಂಪ್ರವಕ್ಷ್ಯಾಮಿ ಪುರಾಣಮೃಷಿಸಂಸ್ತುತಮ್ |
ವಿಶಿಷ್ಟಂ ಸರ್ವಧರ್ಮೇಭ್ಯಸ್ತಮಿಹೈಕಮನಾಃ ಶೃಣು ॥2॥
ವ್ಯಾಸರು ಋಷಿಗಳು ಹೇಳಿರುವ, ಸಮಸ್ತ ಧರ್ಮಗಳಿಗಿಂತಲೂ ಉತ್ತಮವಾಗಿರುವ ಪ್ರಾಚೀನ ಧರ್ಮವನ್ನು ನಿನಗೆ ತಿಳಿಸುತ್ತೇನೆ. ಶ್ರದ್ಧೆಯಿಂದ ಕೇಳು.
ಇಂದ್ರಿಯಾಣಿ ಪ್ರಮಾಥೀನಿ ಬುದ್ಧ್ಯಾ ಸಂಯಮ್ಯ ಯತ್ನತಃ |
ಸರ್ವತೋ ನಿಷ್ಪತಿಷ್ಣೂನಿ ಪಿತಾ ಬಾಲಾನಿವಾತ್ಮಜಾನ್ ॥3॥
ನಮ್ಮನ್ನು ವಿಷಯಪದಾರ್ಥಗಳ ಕಡೆ ಸೆಳೆದಿಡುವ ಇಂದ್ರಿಯಗಳನ್ನು ಬುದ್ಧಿಯಿಂದ ನಿಯಂತ್ರಿಸಿಕೊಂಡು, ತಂದೆಯಾದವನು ತನ್ನ ಸಣ್ಣ ಮಕ್ಕಳನ್ನು ಯಾವ ರೀತಿಯಲ್ಲಿ ಅಂಕೆಯಲ್ಲಿಟ್ಟುಕೊಳ್ಳುತ್ತಾನೋ ಆ ರೀತಿ ಸಂಯಮವನ್ನು ಪ್ರಯತ್ನ ಪೂರ್ವಕವಾಗಿ ಇಂದ್ರಿಯಗಳ ವಿಷಯದಲ್ಲಿ ಹೊಂದಬೇಕು.
ಮನಸಶ್ಚೇಂದ್ರಿಯಾಣಾಂ ಚ ಹ್ಯೈಕಾಗ್ರ್ಯಂ ಪರಮಂ ತಪಃ |
ತಜ್ಜ್ಯಾಯಃ ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ ॥4॥
ಮನಸ್ಸು, ಇಂದ್ರಿಯಗಳನ್ನು ಏಕಾಗ್ರಗೊಳಿಸುವುದೇ ಶ್ರೇಷ್ಠವಾದ ತಪಸ್ಸೆನಿಸಿದೆ. ಮನಸ್ಸಿನ ಏಕಾಗ್ರತೆ ಎಂಬ ಧರ್ಮವು ಸಮಸ್ತ ಧರ್ಮಗಳಿಗಿಂತ ಶ್ರೇಷ್ಠತಮವಾದ ಧರ್ಮ ಎನಿಸಿದೆ.
ತಾನಿ ಸರ್ವಾಣಿ ಸಂಧಾಯ ಮನಃಷಷ್ಠಾನಿ ಮೇಧಯಾ |
ಆತ್ಮತೃಪ್ತ ಇವಾಸೀತ ಬಹು ಚಿಂತ್ಯಮಚಿಂತಯನ್ ॥5॥
ಸಮಸ್ತ ಇಂದ್ರಿಯಗಳನ್ನು ಬುದ್ಧಿಯ ಮೂಲಕ ಸ್ಥಿರಗೊಳಿಸಿ, ಬಾಹ್ಯ ಚಿಂತನೆಗಳಿಂದ ಮುಕ್ತನಾಗಿ, ಪರಮಾತ್ಮನ ಚಿಂತನೆಯಲ್ಲಿಯೇ ತೃಪ್ತನಾಗಿರುವಂತೆ ನಿಶ್ಚಿಂತನೂ, ಭಗವನ್ನಿಷ್ಠ ಬುದ್ಧಿಯನ್ನು ಉಳ್ಳವನೂ ಆಗಿ ನಿಶ್ಚಲನಾಗಿ ಇರಬೇಕು.
ಗೋಚರೇಭ್ಯೋ ನಿವೃತ್ತಾನಿ ಯದಾ ಸ್ಥಾಸ್ಯಂತಿ ವೇಶ್ಮನಿ |
ತದಾ ತ್ವಮಾತ್ಮನಾತ್ಮಾನಂ ಪರಂ ದ್ರಕ್ಷ್ಯಸಿ ಶಾಶ್ವತಮ್ ॥6॥
ವಿಷಯಗಳ ಕಡೆ ಸಾಗುವ ಇಂದ್ರಿಯಗಳು ಯಾವಾಗ ತಮ್ಮ ಸ್ಥಳಗಳಲ್ಲಿ ಸ್ಥಿರವಾಗಿ ನೆಲೆಸುತ್ತವೆಯೋ ಆಗ ನೀನು ಶಾಶ್ವತನಾದ, ಸರ್ವೋತ್ತಮನಾದ ಆ ಪರಬ್ರಹ್ಮನನ್ನು ನೋಡುವವನಾಗುತ್ತಿ.
ಸರ್ವಾತ್ಮಾನಂ ಮಹಾತ್ಮಾನಂ ವಿಧೂಮಮಿವ ಪಾವಕಮ್ |
ತಂ ಪಶ್ಯಂತಿ ಮಹಾತ್ಮಾನೋ ಬ್ರಾಹ್ಮಣಾ ಯೇ ಮನೀಷಿಣಃ ॥7॥
ಆ ಭಗವಂತನಾದರೂ ಸರ್ವಾಂತರ್ಯಾಮಿಯಾಗಿದ್ದಾನೆ. ಪರಮ ಚೇತನನಾಗಿದ್ದಾನೆ. ಹೊಗೆಯಿಂದ ರಹಿತನಾದ ಅಗ್ನಿಯಂತೆ ಇದ್ದಾನೆ. ಜ್ಞಾನಿಗಳಾದ ಯಾವ ಬ್ರಾಹ್ಮಣರಿದ್ದಾರೋ, ಮಹಾತ್ಮರಾದ ಅವರು ಅಂತಹ ಧೂಮರಹಿತವಾದ ಅಗ್ನಿಯಂತಿರುವ ಭಗವಂತನನ್ನು ನೋಡುತ್ತಾರೆ.
ಯಥಾ ಪುಷ್ಪಫಲೋಪೇತೋ ಬಹುಶಾಖೋ ಮಹಾದ್ರುಮಃ |
ಆತ್ಮನೋ ನಾಭಿಜಾನೀತೇ ಕ್ವ ಮೇ ಪುಷ್ಪಂ ಕ್ವ ಮೇ ಫಲಮ್ ॥8॥
ಏವಮಾತ್ಮಾ ನ ಜಾನೀತೇ ಕ್ವ ಗಮಿಷ್ಯೇ ಕುತೋ ನ್ವಹಮ್ |

ಅನ್ಯೋ ಹ್ಯತ್ರಾಂತರಾತ್ಮಾಸ್ತಿ ಯಃ ಸರ್ವಮನುಪಶ್ಯತಿ ॥9॥
ಯಾವ ರೀತಿಯಾಗಿ ಪುಷ್ಪ-ಫಲಗಳಿಂದ ಕೂಡಿರುವ, ಅನೇಕ ಶಾಖೆಗಳಿಂದ ತುಂಬಿರುವ ಮಹಾದ್ರುಮವು ತನ್ನಲ್ಲಿಯೇ ಇರುವ ಅನೇಕ ಪುಷ್ಪಗಳನ್ನಾಗಲಿ, ಫಲಗಳನ್ನಾಗಲಿ ಎಲ್ಲಿದ್ದಾವೆ ಎಂದು ತಿಳಿಯುವುದಿಲ್ಲವೋ ಅದೇ ರೀತಿಯಾಗಿ ಜೀವಾತ್ಮನು ತಾನು ಎಲ್ಲಿಂದ ಬಂದವನು? ಎಲ್ಲಿಗೆ ಹೋಗುತ್ತಾನೆ? ಎಂಬುದನ್ನು ತಿಳಿದವನಾಗಿರುವುದಿಲ್ಲ. ಶರೀರದಲ್ಲಿ ಜೀವಾತ್ಮನಲ್ಲದೆ ಸರ್ವೋತ್ತಮನಾದ ಅಂತರ್ಯಾಮಿಯಾದ ಪರಮಾತ್ಮನೂ ಇದ್ದಾನೆ. ಅವನು ಈ ಜೀವನ ಸಮಸ್ತ ಆಗು-ಹೋಗುಗಳನ್ನು ನೋಡುತ್ತಿರುತ್ತಾನೆ.
ಜ್ಞಾನದೀಪೇನ ದೀಪ್ತೇನ ಪಶ್ಯತ್ಯಾತ್ಮಾನಮಾತ್ಮನಾ |
ದೃಷ್ಟ್ವಾ ತ್ವಮಾತ್ಮನಾತ್ಮಾನಂ ನಿರಾತ್ಮಾ ಭವ ಸರ್ವವಿತ್ ॥10॥
ಪ್ರಜ್ವಲಿತವಾದ ಜ್ಞಾನಮಯ ದೀಪದ ಮೂಲಕ ಜ್ಞಾನಿಯು ತನ್ನಲ್ಲಿಯೇ ಇರುವ ಪರಬ್ರಹ್ಮನನ್ನು ಕಾಣುತ್ತಾನೆ. ಅದರಂತೆ ನೀನೂ ಅಹಂಕಾರರಹಿತನಾಗಿ ಆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಸರ್ವಜ್ಞನಾಗು.
ವಿಮುಕ್ತಃ ಸರ್ವಪಾಪೇಭ್ಯೋ ಮುಕ್ತತ್ವಚ ಇವೋರಗಃ |
ಪರಾಂ ಬುದ್ಧಿಮವಾಪ್ಯೇಹ ವಿಪಾಪ್ಮಾ ವಿಗತಜ್ವರಃ ॥11॥
ಪೊರೆಯನ್ನು ಕಳಚಿಕೊಂಡಿರುವ ಹಾವಿನಂತೆ ಸಮಸ್ತ ಪಾಪಗಳಿಂದಲೂ ಮುಕ್ತನಾಗಿ, ಪರಮಾತ್ಮ ವಿಷಯಕವಾದ ಶ್ರೇಷ್ಠವಾದ ಬುದ್ಧಿಯನ್ನು ಆಶ್ರಯಿಸಿ ಪಾಪರಹಿತನೂ, ಚಿಂತಾ ರಹಿತನೂ ಆಗು.
ಸರ್ವತಃಸ್ರೋತಸಂ ಘೋರಾಂ ನದೀಂ ಲೋಕಪ್ರವಾಹಿನೀಮ್ |
ಪಂಚೇಂದ್ರಿಯಗ್ರಾಹವತೀಂ ಮನಃಸಂಕಲ್ಪರೋಧಸಮ್ ॥12॥
ಸಂಸಾರವೆಂಬುದು ದೊಡ್ಡ ನದಿಯ ಪ್ರವಾಹದಂತೆ ಮಹಾಭಯಂಕರವಾದುದು. ನಾನಾ ಮುಖವಾಗಿ ಹರಿಯುವ ನದಿಯಂತಿದೆ. ಮಹಾನದಿಯಲ್ಲಿರುವ ಮೊಸಳೆಗಳಂತೆ ಪಂಚಜ್ಞಾನೇಂದ್ರಿಯಗಳೇ ಮೊಸಳೆಗಳು. ಮನಸ್ಸಿನ ಸಂಕಲ್ಪವೆಂಬುದೇ ಅದರ ತೀರ ಪ್ರದೇಶವಾಗಿದೆ.
ಲೋಭಮೋಹತೃಣಚ್ಛನ್ನಾಂ ಕಾಮಕ್ರೋಧಸರೀಸೃಪಾಮ್ |
ಸತ್ಯತೀರ್ಥಾನೃತಕ್ಷೋಭಾಂ ಕ್ರೋಧಪಂಕಾಂ ಸರಿದ್ವರಾಮ್ ॥13॥
ಲೋಭ-ಮೋಹಗಳೇ ಅದರ ಮೇಲೆ ಬೆಳೆದಿರುವ ಆಚ್ಛಾದಿತ ಜೊಂಡುಗಳು. ಕಾಮ-ಕ್ರೋಧಗಳೇ ಅದರೊಳಗಿನ ಹಾವುಗಳು. ಸತ್ಯವೇ ಅದರ ತೀರ್ಥವು. ಅಸತ್ಯವೆಂಬುದು ಅದರಲ್ಲಡಗಿದ ಅಲೆಯಂತಿದೆ. ಕೋಪವೆಂಬುದೇ ಸಂಸಾರ ನದಿಯ ಕೆಸರು. ಇಂತಹದ್ದು ಸಂಸಾರ ನದಿ.
ಅವ್ಯಕ್ತಪ್ರಭವಾಂ ಶೀಘ್ರಾಂ ದುಸ್ತರಾಮಕೃತಾತ್ಮಭಿಃ |
ಪ್ರತರಸ್ವ ನದೀಂ ಬುದ್ಧ್ಯಾ ಕಾಮಗ್ರಾಹಸಮಾಕುಲಾಮ್ ॥14॥
ಅವ್ಯಕ್ತ ಪ್ರಕೃತಿಯ ದೆಸೆಯಿಂದ ಇದು ಹುಟ್ಟುತ್ತದೆ. ಅತ್ಯಂತ ವೇಗದಿಂದ ಕೂಡಿದೆ. ಜಿತೇಂದ್ರಿಯರಲ್ಲದ ವ್ಯಕ್ತಿಗಳಿಗೆ, ಸತ್ಕರ್ಮಶೀಲರಲ್ಲದವರಿಗೆ ಇದನ್ನು ದಾಟಲು ಬಹಳ ದುಸ್ತರವು. ಕಾಮದಿಂದ ತುಂಬಿರುವ ಇಂತಹ ನದಿಯನ್ನು ಬ್ರಹ್ಮಜ್ಞಾನವೆಂಬ ವಿವೇಕದಿಂದ ನೀನು ದಾಟಬೇಕು.
ಸಂಸಾರಸಾಗರಗಮಾಂ ಯೋನಿಪಾತಾಲದುಸ್ತರಾಮ್ |
ಆತ್ಮಜನ್ಮೋದ್ಭವಾಂ ತಾತ ಜಿಹ್ವಾವರ್ತಾಂ ದುರಾಸದಾಮ್ ॥15॥
ಈ ನದಿಯು ಸಂಸಾರವೆಂಬ ಸಮುದ್ರವನ್ನೇ ಸೇರುತ್ತದೆ. ಜಾತಿ ವ್ಯಕ್ತಿಗಳೇ ಅದರ ಆಳವು. ಜನನವೇ ಆ ಸಂಸಾರನದಿಯ ಉಗಮವು. ಮಾತುಗಳೇ ದಾಟಲಾಗದ ಅದರ ಸುಳಿಗಳು.
ಯಾಂ ತರಂತಿ ಕೃತಪ್ರಜ್ಞಾ ಧೃತಿಮಂತೋ ಮನೀಷಿಣಃ |
ತಾಂ ತೀರ್ಣಃ ಸರ್ವತೋಮುಕ್ತೋ ವಿಪೂತಾತ್ಮಾತ್ಮವಿಚ್ಛುಚಿಃ ॥16॥
ಧೈರ್ಯಶಾಲಿಗಳಾದ ಪ್ರಾಜ್ಞರು ಈ ನದಿಯನ್ನು ದಾಟಬಲ್ಲರು. ನೀನು ಶಾಂತ ಮನಸ್ಕನಾಗಿ ಈ ನದಿಯನ್ನು ದಾಟಿದಾಗ ಶುದ್ಧನಾಗುತ್ತಿ.
ಉತ್ತಮಾಂ ಬುದ್ಧಿಮಾಸ್ಥಾಯ ಬ್ರಹ್ಮಭೂಯಂ ಗಮಿಷ್ಯಸಿ |
ಸಂತೀರ್ಣಃ ಸರ್ವಸಂಕ್ಲೇಶಾನ್ ಪ್ರಸನ್ನಾತ್ಮಾ ವಿಕಲ್ಮಷಃ ॥17॥
ಮಗನೇ, ಉತ್ತಮವಾದ ಬುದ್ಧಿಯಿಂದ ಬ್ರಹ್ಮಜ್ಞಾನವನ್ನು ನೀನು ಹೊಂದಿ, ಸಮಸ್ತ ಕ್ಲೇಶಗಳನ್ನು ದಾಟಿ, ಪ್ರಸನ್ನ ಮನಸ್ಕನಾಗಿ, ಕಲ್ಮಷರಹಿತನಾಗಿ ಸಮಸ್ತ ಕ್ಲೇಶಗಳಿಂದಲೂ ಮುಕ್ತನಾಗಿರು.
ಭೂಮಿಷ್ಠಾನೀವ ಭೂತಾನಿ ಪರ್ವತಸ್ಥೋ ನಿಶಾಮಯ |
ಅಕ್ರುದ್ಧ್ಯನ್ನಪ್ರಹಷ್ಯಂಶ್ಚ ನ ನೃಶಂಸಮತಿಸ್ತಥಾ |
ತತೋ ದ್ರಕ್ಷ್ಯಸಿ ಭೂತಾನಾಂ ಸರ್ವೇಷಾಂ ಪ್ರಭವಾಪ್ಯಯೌ ॥18॥
ಪರ್ವತದ ಮೇಲೆ ನಿಂತವನು ಕೆಳಗೆ ನಿಂತಿರುವ ಪ್ರಾಣಿಗಳನ್ನು ನೋಡುವಂತೆ ಈ ಲೋಕವನ್ನು ನೋಡುತ್ತಿರು. ಕೋಪ-ಹರ್ಷಗಳಿಗೆ ತುತ್ತಾಗದಿರು. ಸಿಟ್ಟುಗೊಳ್ಳದ ಬುದ್ಧಿ ಇದ್ದಲ್ಲಿ ನೀನು ಸಮಸ್ತ ಭೂತಗಳ ಉತ್ಪತ್ತಿ, ವಿನಾಶಗಳನ್ನು ಭಗವಂತನ ದೆಸೆಯಿಂದ ಎಂಬುದನ್ನು ಕಾಣಬಲ್ಲೆ.
ಏವಂ ವೈ ಸರ್ವಧರ್ಮೇಭ್ಯೋ ವಿಶಿಷ್ಟಂ ಮೇನಿರೇ ಬುಧಾಃ |
ಧರ್ಮಂ ಧರ್ಮಭೃತಾಂ ಶ್ರೇಷ್ಠ ಮುನಯಸ್ತತ್ತ್ವದರ್ಶಿನಃ ॥19॥
ಹಿಂದಿನ ಜ್ಞಾನಿಗಳೆಲ್ಲರೂ ಇಂತಹ ಭಗವದ್ಜ್ಞಾನವನ್ನೇ ವಿಶೇಷವಾಗಿ ಸರ್ವಧರ್ಮಗಳಿಗಿಂತಲೂ ಶ್ರೇಷ್ಠವಾದ ಜ್ಞಾನವೆಂದು ತಿಳಿದಿದ್ದಾರೆ. ಮುನಿಗಳು, ತತ್ತ್ವದರ್ಶಿಗಳು, ಧಾರ್ಮಿಕಶ್ರೇಷ್ಠರೆಲ್ಲರೂ ಹೀಗೆ ಬ್ರಹ್ಮಜ್ಞಾನದಿಂದ ಸಂಸಾರವನ್ನು ದಾಟುವುದೇ

ಶ್ರೇಷ್ಠವೆಂದು ತಿಳಿದಿದ್ದಾರೆ.
ಆತ್ಮನೋಽವ್ಯಯಿನೋ ಜ್ಞಾತ್ವಾ ಇದಂ ಪುತ್ರಾನುಶಾಸನಮ್ |
ಪ್ರಯತಾಯ ಪ್ರವಕ್ತವ್ಯಂ ಹಿತಾಯಾನುಗತಾಯ ಚ ॥20॥
ಮಗನೇ, ಈ ಉಪದೇಶವು ನಾಶರಹಿತನಾದ ಪರಮಾತ್ಮನ ಜ್ಞಾನೋಪದೇಶವು ಎಂದು ತಿಳಿದು, ನೀನು ವಿಧೇಯನಾದ, ಜಿತೇಂದ್ರಿಯನಾದ, ಅನುಸರಿಸಿ ಬರುವ ವ್ಯಕ್ತಿಗೆ ಮಾತ್ರವೇ ಈ ತತ್ತ್ವವನ್ನು ಹೇಳಬಹುದು.
ಆತ್ಮಜ್ಞಾನಮಿದಂ ಗುಹ್ಯಂ ಸರ್ವಗುಹ್ಯತಮಂ ಮಹತ್ |
ಅಬ್ರುವಂ ಯದಹಂ ತಾತ ಆತ್ಮಸಾಕ್ಷಿಕಮಂಜಸಾ ॥21॥
ಅತ್ಯಂತ ರಹಸ್ಯವಾದ ಈ ಪರಮಾತ್ಮ ಜ್ಞಾನವು ಅತ್ಯಂತ ಗಹನವಾಗಿಯೂ, ಮಹಾತ್ಮ್ಯವುಳ್ಳದ್ದೂ ಆಗಿದೆ. ನಾನು ಯಾವ ಮಹತ್ವಜ್ಞಾನವನ್ನು ನಿನಗೆ ಹೇಳಿದ್ದೇನೋ ಅದು ನನ್ನ ಪ್ರತ್ಯಕ್ಷ ಅನುಭವವಾಗಿದೆ.
ನೈವ ಸ್ತ್ರೀ ನ ಪುಮಾನೇತನ್ನೈವ ಚೇದಂ ನಪುಂಸಕಮ್ |
ಅದುಃಖಮಸುಖಂ ಬ್ರಹ್ಮ ಭೂತಭವ್ಯಭವಾತ್ಮಕಮ್ ॥22॥
ಈ ಪರಬ್ರಹ್ಮನು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ, ನಪುಂಸಕನೂ ಅಲ್ಲ. ಸುಖ-ದುಃಖಗಳನ್ನು ದಾಟಿರುವ ಭೂತ-ಭವಿಷ್ಯತ್-ವರ್ತಮಾನ ಕಾಲಗಳಲ್ಲಿ ವ್ಯಾಪ್ತವಾಗಿರುವ ಪರಿಪೂರ್ಣವಾದ ಬ್ರಹ್ಮವೆನಿಸಿದೆ.
ನೈತಜ್ಜ್ಞಾತ್ವಾ ಪುಮಾನ್ ಸ್ತ್ರೀ ವಾ ಪುನರ್ಭವಮವಾಪ್ನುಯಾತ್ |
ಅಭವಪ್ರತಿಪತ್ತ್ಯರ್ಥಮೇತದ್ ವರ್ತ್ಮ ವಿಧೀಯತೇ ॥23॥
ಈ ಬ್ರಹ್ಮಜ್ಞಾನವನ್ನು ಹೊಂದಿದ ವ್ಯಕ್ತಿ ಪುರುಷನಾಗಲಿ, ಸ್ತ್ರೀಯಾಗಲಿ ಪುನಃ ಹುಟ್ಟನ್ನು ಪಡೆಯುವುದಿಲ್ಲ. ಪುನರ್ಜನ್ಮವಾಗದಿರಲೆಂದೇ ಈ ರಹಸ್ಯವು ನಿರೂಪಿಸಲ್ಪಟ್ಟಿದೆ.
ಯಥಾ ಮತಾನಿ ಸರ್ವಾಣಿ ನ ಚೈತಾನಿ ಯಥಾ ತಥಾ |
ಕಥಿತಾನಿ ಮಯಾ ಪುತ್ರ ಭವಂತಿ ನ ಭವಂತಿ ಚ ॥24॥
ಮಗನೇ, ಬ್ರಹ್ಮಜ್ಞಾನವನ್ನು ಹೊಂದಲು ಯಾವ ಜ್ಞಾನಿಗಳ ಅಭಿಪ್ರಾಯವಿದೆಯೋ ಅದೆಲ್ಲವನ್ನೂ ಯಥಾವತ್ತಾಗಿ ಉಪದೇಶಿಸಿದ್ದೇನೆ. ಯೋಗ್ಯ ಅನುಷ್ಠಾನಶೀಲರಿಗೆ ಇವುಗಳು ಫಲಿಸುತ್ತವೆ. ಅನುಷ್ಠಾನಶೀಲರಾಗದವರಿಗೆ ಫಲಿಸುವುದಿಲ್ಲ.
ತತ್ಪ್ರೀತಿಯುಕ್ತೇನ ಗುಣಾನ್ವಿತೇನ
ಪುತ್ರೇಣ ಸತ್ಪುತ್ರಗುಣಾನ್ವಿತೇನ |
ಪೃಷ್ಟೋ ಹೀದಂ ಪ್ರೀತಿಮತಾ ಹಿತಾರ್ಥಂ
ಬ್ರೂಯಾತ್ ಸುತಸ್ಯೇಹ ಯದುಕ್ತಮೇತತ್ ॥25॥
ಶುಕಮುನಿಯೇ, ಪ್ರೀತಿಯುಳ್ಳವನು, ಗುಣವಂತನೂ, ಜಿತೇಂದ್ರಿಯನೂ ಆದ ಶಿಷ್ಯನಾಗಲಿ, ಪುತ್ರನಾಗಲಿ ಈ ಉತ್ತಮ ಧರ್ಮವನ್ನು ಕುರಿತು ಪ್ರಶ್ನಿಸಿದಾಗ ಅವರಿಗೆ ಮನಸ್ಸಂತೋಷದಿಂದ ಈ ವಿಷಯಗಳನ್ನು ನಾನು ಹೇಳಿದ ರೀತಿಯಲ್ಲಿ ಯಥಾರ್ಥವಾಗಿ ಉಪದೇಶ ಮಾಡುವುದು ನಿನ್ನ ಕರ್ತವ್ಯವೂ ಆಗಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತಾರನೆಯ ಅಧ್ಯಾಯ
ವ್ಯಾಸರು ಶುಕಮುನಿಯನ್ನು ಕುರಿತು ಜ್ಞಾನಸಾಧನ-ಸಾಮಗ್ರಿಗಳ
ಬಗ್ಗೆ ನಿರೂಪಿಸಿದುದು.
ವ್ಯಾಸಃ
ಗಂಧಾನ್ ರಸಾನ್ನಾನುರುಂಧ್ಯಾತ್ ಸುಖಂ ವಾ
ನಾಲಂಕಾರಾಂಶ್ಚಾಪ್ನುಯಾತ್ತಸ್ಯ ತಸ್ಯ |
ಮಾನಂ ಚ ಕೀರ್ತಿಂ ಚ ಯಶಶ್ಚ ನೇಚ್ಛೇತ್
ಸ ವೈ ಪ್ರಚಾರಃ ಪಶ್ಯತೋ ಬ್ರಾಹ್ಮಣಸ್ಯ ॥1॥
ಮಗನೇ, ಪರಮಾತ್ಮನ ಜ್ಞಾನವನ್ನು ಸಂಪಾದಿಸಲು ಬಯಸಿದ ಸಾಧಕನು ಸುಗಂಧವನ್ನಾಗಲಿ, ರಸವನ್ನಾಗಲಿ, ಇತರ ವಿಷಯ ಸುಖಗಳನ್ನಾಗಲಿ ಹೊಂದಲು ತವಕ ಪಡಬಾರದು. ಇವುಗಳನ್ನೆಲ್ಲ ದೂರವಿರಿಸಬೇಕು. ಮಾನ, ಕೀರ್ತಿ, ಔದಾರ್ಯ, ಇದರಿಂದ ಉಂಟಾಗುವ ಯಶಸ್ಸು ಇವುಗಳನ್ನೂ ಬಯಸಬಾರದು. ವಿದ್ವಾಂಸನಾದ ಬ್ರಾಹ್ಮಣನಿಗೆ ಇವುಗಳಲ್ಲಿರುವ ನಿರ್ಲಿಪ್ತತೆಯೇ ಮುಖ್ಯವಾದ ಲಕ್ಷಣವು.
ಸರ್ವಾನ್ ವೇದಾನಧೀಯೀತ ಶುಶ್ರೂಷುರ್ಬ್ರಹ್ಮಚರ್ಯವಾನ್ |
ಋಚೋ ಯಜೂಂಷಿ ಸಾಮಾನಿ ನ ತೇನ ನ ಸ ಬ್ರಾಹ್ಮಣಃ ॥2॥
ಬ್ರಹ್ಮಜ್ಞಾನವನ್ನು ಬಯಸುವವನು ಸಮಸ್ತ ವೇದಗಳನ್ನು ಅಧ್ಯಯನ ಮಾಡಬೇಕು. ಗುರುಸೇವೆಯನ್ನು ಮಾಡಬೇಕು. ಬ್ರಹ್ಮಚರ್ಯವನ್ನು ಪಾಲಿಸಬೇಕು. ಹೀಗೆ ಮಾಡುತ್ತಾ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಅಧ್ಯಯನ ಮಾಡಿದವನು ಶ್ರೇಷ್ಠ ಬ್ರಾಹ್ಮಣನಾಗುತ್ತಾನೆ.
ಜ್ಞಾತಿವತ್ ಸರ್ವಭೂತಾನಾಂ ಸರ್ವವಿತ್ ಸರ್ವವೇದವಿತ್ |

ನಾಕಾಮೋ ಮ್ರಿಯತೇ ಜಾತು ನ ತೇನ ನ ಚ ಬ್ರಾಹ್ಮಣಃ ॥3॥
ಸಮಸ್ತ ಪ್ರಾಣಿಗಳ ವಿಷಯದಲ್ಲಿಯೂ ಬಂಧುವಿನಂತೆ ಆತ್ಮೀಯತೆಯಿಂದ ನಡೆದುಕೊಳ್ಳಬೇಕು. ಎಲ್ಲ ಭೂತಗಳಲ್ಲಿಯೂ ಭಗವಂತನಿದ್ದಾನೆ ಎಂದು ಅರಿತವನು ವೇದಜ್ಞನು, ಸಮಸ್ತ ಶಾಸ್ತ್ರಜ್ಞನು ಆಗಿರುತ್ತಾನೆ. ಕಾಮರಹಿತನಾಗಿರುತ್ತಾನೆ. ಅವನಿಗೆ ಮೃತ್ಯುವಿನ ಭಯವಿರದು. ಅವನು ನಿಜವಾದ ಬ್ರಾಹ್ಮಣನೆನಿಸುತ್ತಾನೆ.
ಇಷ್ಟೀಶ್ಚ ವಿವಿಧಾಃ ಪ್ರಾಪ್ಯ ಕ್ರತೂಂಶ್ಚೈವಾಪ್ತದಕ್ಷಿಣಾನ್ |
ನೈವ ಪ್ರಾಪ್ನೋತಿ ಬ್ರಾಹ್ಮಣ್ಯಮಭಿಧ್ಯಾನಾತ್ ಕಥಂಚನ ॥4॥
ನಾನಾ ವಿಧವಾದ ಇಷ್ಟಿಗಳನ್ನು, ಬಹುದಕ್ಷಿಣಕವಾದ ಕ್ರತುಗಳನ್ನು ಮಾಡಿಯೂ ಬ್ರಹ್ಮಜ್ಞಾನವನ್ನು ಹೊಂದದಿದ್ದರೆ ಅವನು ಯಾವುದೇ ಕಾರಣದಿಂದಲೂ ಬ್ರಾಹ್ಮಣತ್ವವನ್ನು ಹೊಂದಿದವನಾಗುವುದಿಲ್ಲ.
ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ |
ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥5॥
ಸಾಧಕನು ಇತರ ಪ್ರಾಣಿಗಳ ವಿಷಯದಿಂದ ಯಾವಾಗ ಭಯ ಹೊಂದುವುದಿಲ್ಲವೋ, ಇತರ ಪ್ರಾಣಿಗಳಿಗೂ ಯಾವಾಗ ಭಯಪಡಿಸುವುದಿಲ್ಲವೋ, ಕಾಮ-ದ್ವೇಷಗಳಿಂದ ಮುಕ್ತನಾಗಿರುತ್ತಾನೋ ಅವನು ಗುಣಪರಿಪೂರ್ಣನಾದ ಪರಮಾತ್ಮನನ್ನು ಹೊಂದುತ್ತಾನೆ.
ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥6॥
ಯಾವ ಸಾಧಕನು ಸಮಸ್ತ ಭೂತಗಳ ವಿಷಯದಲ್ಲಿ ಮಾತು-ಮನಸ್ಸು-ಕೃತಿಗಳಿಂದ ಕೆಡಕನ್ನು ಮಾಡುವುದಿಲ್ಲವೋ ಆಗ ಅವನು ಗುಣಪರಿಪೂರ್ಣನಾದ ಭಗವಂತನನ್ನು ಹೊಂದುತ್ತಾನೆ.
ಕಾಮಬಂಧನಮೇವೈಕಂ ನಾನ್ಯದಸ್ತೀಹ ಬಂಧನಮ್ |
ಕಾಮಬಂಧನಮುಕ್ತೋ ಹಿ ಬ್ರಹ್ಮಭೂಯಾಯ ಕಲ್ಪತೇ ॥7॥
ಜಗತ್ತಿನಲ್ಲಿ ನಿಜವಾದ ಬಂಧನವೆಂದರೆ ಕಾಮದ ಅಪ್ಪುಗೆಯಾಗಿದೆ. ಬೇರೆ ಯಾವುದೂ ಬಂಧನವೆನಿಸುವುದಿಲ್ಲ. ಆದ್ದರಿಂದ ಕಾಮವನ್ನು ಸರ್ವಾತ್ಮನಾ ತ್ಯಜಿಸಿದವನು ಬ್ರಹ್ಮಜ್ಞಾನವನ್ನು ಹೊಂದಿದವನಾಗುತ್ತಾನೆ.
ಕಾಮತೋ ಮುಚ್ಯಮಾನಸ್ತು ಧೂಮ್ರಾಭ್ರಾದಿವ ಚಂದ್ರಮಾಃ |
ವಿರಜಾಃ ಕಾಲಮಾಕಾಂಕ್ಷನ್ ಧೀರೋ ಧೈರ್ಯೇಣ ವರ್ತತೇ ॥8॥
ಕಾಮನೆಗಳಿಂದ ಮುಕ್ತನಾದ ಧೀರ ಪುರುಷನು ಮೇಘಾಚ್ಛಾದಿತ ಮೋಡಗಳಿಂದ ಮುಕ್ತನಾದ ಚಂದ್ರನಂತೆ ರಜೋಗುಣಗಳಿಂದ ಮುಕ್ತನಾಗಿ, ನೈರ್ಮಲ್ಯಭಾವವನ್ನು ಹೊಂದಿ ಧೈರ್ಯದಿಂದ ತನ್ನ ಮೃತ್ಯುವನ್ನು, ಪ್ರತೀಕ್ಷೆ ಮಾಡುತ್ತಾನೆ.
ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ |
ಅಕಾಮಕಾಮೋ ನ ತು ಕಾಮಕಾಮಃ
ಸ ವೈ ಲೋಕಾತ್ ಸ್ವರ್ಗಮುಪೈತಿ ದೇಹೀ ॥9॥
ನದಿಗಳು ನೀರಿನಿಂದ ತುಂಬುತ್ತಿದ್ದರೂ ವ್ಯತ್ಯಾಸ ಹೊಂದದ ಸಮುದ್ರವನ್ನು ನೀರು ಹೋಗಿ ಸೇರುವಂತೆ, ವಿಷಯಭೋಗಗಳು ಲಭಿಸುತ್ತಿದ್ದರೂ ಮನೋವಿಕಾರವಿಲ್ಲದ ಅಪರೋಕ್ಷ ಜ್ಞಾನಿಯನ್ನು ವಿಷಯಭೋಗಗಳು ಹೊಂದುತ್ತವೆ. ಇಂತಹ ಜ್ಞಾನಿಯು ವಿಷಯಾಸಕ್ತನೆಂದು ಕರೆಸಿಕೊಳ್ಳುವುದಿಲ್ಲ. ಅವನು ಮೋಕ್ಷವನ್ನು ಹೊಂದುತ್ತಾನೆ. ನಿಷಿದ್ಧ ವಿಷಯಗಳನ್ನು ಭೋಗಿಸುವವನೇ ವಿಷಯಾಸಕ್ತನೆನಿಸುತ್ತಾನೆ. ಅವನು ಮೋಕ್ಷ ಹೊಂದುವುದಿಲ್ಲ.
ವೇದಸ್ಯೋಪನಿಷತ್ ಸತ್ಯಂ ಸತ್ಯಸ್ಯೋಪನಿಷದ್ ದಮಃ |
ದಮಸ್ಯೋಪನಿಷದ್ ದಾನಂ ದಾನಸ್ಯೋಪನಿಷತ್ತಪಃ ॥10॥
ವೇದಗಳ ರಹಸ್ಯವು ಸತ್ಯ ಎನಿಸಿದೆ. ಸತ್ಯದ ರಹಸ್ಯವು ಇಂದ್ರಿಯನಿಗ್ರಹವೆನಿಸಿದೆ. ಇಂದ್ರಿಯನಿಗ್ರಹದ ರಹಸ್ಯವು ದಾನವೆನಿಸಿದೆ. ದಾನದ ರಹಸ್ಯವು ತಪಸ್ಸು ಎನಿಸಿದೆ.
ತಪಸೋಪನಿಷತ್ತ್ಯಾಗಸ್ತ್ಯಾಗಸ್ಯೋಪನಿಷತ್ ಸುಖಮ್ |
ಸುಖಸ್ಯೋಪನಿಷತ್ಸ್ವರ್ಗಃ ಸ್ವರ್ಗಸ್ಯೋಪನಿಷಚ್ಛಮಃ ॥11॥
ತಪಸ್ಸಿನ ರಹಸ್ಯವು ತ್ಯಾಗವೆನಿಸಿದೆ. ತ್ಯಾಗದ ರಹಸ್ಯವು ಸುಖವೆನಿಸಿದೆ. ಸುಖದ ರಹಸ್ಯವು ಸ್ವರ್ಗ ಎನಿಸಿದೆ. ಸ್ವರ್ಗದ ರಹಸ್ಯವು ಭಗವನ್ನಿಷ್ಠವಾದ ಬುದ್ಧಿ ಎನಿಸಿದೆ.
ಕ್ಲೇದನೇ ಶೋಕಮನಸೋಃ ಸಂತಾಪಂ ತೃಷ್ಣಯಾ ಸಹ |
ಸತ್ತ್ವಮಿಚ್ಛಸಿ ಸಂತೋಷಾಚ್ಛಾಂತಿಲಕ್ಷಣಮುತ್ತಮಮ್ ॥12॥
ಶೋಕ, ಮನಸ್ಸುಗಳು ಅನ್ಯೋನ್ಯ ಮಿಶ್ರಣ ಹೊಂದಿದಾಗ ದುಃಖಿತನಾಗುತ್ತಾನೆ. ಈ ಮನಸ್ಸಿನಲ್ಲಿ ಆಸೆಗಳು ದೂರವಾದಾಗ ಸಂತಾಪವೂ ದೂರವಾಗುತ್ತದೆ. ಬಳಿಕ ಸತ್ತ್ವಗುಣವನ್ನು ಹೊಂದಲು ಬಯಸುತ್ತಾನೆ. ಸತ್ತ್ವಗುಣದಿಂದ ಉತ್ತಮವಾದ ಶಾಂತಿಯು ಲಭಿಸುತ್ತದೆ.
ವಿಶೋಕೋ ನಿರ್ಮಮಃ ಶಾಂತಃ ಪ್ರಸನ್ನಾತ್ಮಾತ್ಮವಿತ್ತಮಃ |
ಷಡ್ಭಿರ್ಲಕ್ಷಣವಾನೇತೈಃ ಸಮಗ್ರಃ ಪುನರೇಷ್ಯತಿ ॥13॥
ದುಃಖಪಡದಿರುವಿಕೆ, ಮಮಕಾರ ಇಲ್ಲದಿರುವಿಕೆ, ಪ್ರಶಾಂತತೆ, ಚಿತ್ತಪ್ರಸನ್ನತೆ, ಮಾತ್ಸರ್ಯರಾಹಿತ್ಯ, ಸಂತೋಷ ಮೊದಲಾದ ಆರು ಲಕ್ಷಣಗಳು ಸತ್ತ್ವಗುಣದಿಂದ ಲಭಿಸುತ್ತವೆ. ಇದರಿಂದ ಜೀವನು ಪೂರ್ಣತೆಯನ್ನು ಹೊಂದುತ್ತಾನೆ.

ಷಡ್ಭಿಃ ಸತ್ತ್ವಗುಣೋಪೇತೈಃ ಪ್ರಾಜ್ಞೈರಧಿಕಮಂತ್ರಿಭಿಃ |
ಯೇ ವಿದುಃ ಪ್ರೇತ್ಯ ಚಾತ್ಮಾನಮಿಹಸ್ಥಾಂಸ್ತಾಂಸ್ತಥಾ ವಿದುಃ ||14||
ಮೇಲೆ ಹೇಳಿದ ಆರು ಸತ್ತ್ವಗುಣಗಳನ್ನು ಹೊಂದಿದ ಪ್ರಾಜ್ಞರು ಶ್ರೇಷ್ಠವಾದ ಆಲೋಚನೆಗಳಿಂದ ಅಂತರ್ಯಾಮಿಯಾದ ಪರಮಾತ್ಮನನ್ನು ತಿಳಿಯುತ್ತಾರೋ ಅವರು ಬಳಿಕವೂ ಅಂತಹ ಪರಬ್ರಹ್ಮನನ್ನೇ ಪುನಃ ಪುನಃ ಹೊಂದುತ್ತಾರೆ.
ಅಕೃತ್ರಿಮಮಸಂಹಾರ್ಯಂ ಪ್ರಾಕೃತಂ ನಿರುಪಸ್ಕೃತಮ್ |
ಅಧ್ಯಾತ್ಮಂ ಸುಕೃತಂ ಪ್ರಾಪ್ತಃ ಸುಖಮವ್ಯಯಮಶ್ನುತೇ ||15||
ಕೃತ್ರಿಮವಲ್ಲದ, ಅವಿನಾಶಿಯಾದ, ಸ್ವಾಭಾವಿಕವಾದ, ಯಾವುದೇ ಎರವಲನ್ನು ಪಡೆಯದಿರುವ, ಅಧ್ಯಾತ್ಮ ಎಂಬ ಪುಣ್ಯವನ್ನು ಹೊಂದಿದ ವ್ಯಕ್ತಿಯು ಅಕ್ಷಯವಾದ ಸುಖವನ್ನು ಹೊಂದುತ್ತಾನೆ.
ನಿಷ್ಪ್ರಚಾರಂ ಮನಃ ಕೃತ್ವಾ ಪ್ರತಿಷ್ಠಾಪ್ಯ ಚ ಸರ್ವತಃ |
ಯಾಮಯಂ ಲಭತೇ ತುಷ್ಟಿಂ ಸಾ ನ ಶಕ್ಯಮತೋಽನ್ಯಥಾ ||16||
ಮನಸ್ಸನ್ನು ಚಂಚಲವಾಗದಿರುವಂತೆ ವಿಷಯಗಳಿಂದ ವಿಮುಖವಾಗಿಸಿ ಭಗವಂತನಲ್ಲಿಯೇ ನೆಲೆಗೊಳಿಸಿದ ಯಾವ ಪುರುಷನು ಯಾವ ಸಂತೋಷವನ್ನು ಹೊಂದುತ್ತಾನೋ ಆ ಸಂತೋಷವನ್ನು ಬೇರೆ ಯಾವ ವಿಧಾನದಿಂದಲೂ ಪಡೆದುಕೊಳ್ಳಲು ಸಾಧ್ಯವಾಗುವುದಿಲ್ಲ.
ಯೇನ ತೃಪ್ಯತ್ಯಭುಂಜಾನೋ ಯೇನ ತುಷ್ಯತ್ಯವಿತ್ತವಾನ್ |
ಯೇನಾಸ್ನೇಹೋ ಬಲಂ ಧತ್ತೇ ಯಸ್ತಂ ವೇದ ಸ ವೇದವಿತ್ ||17||
ಯಾವ ಪರಮಾತ್ಮನ ಜ್ಞಾನದಿಂದ ಊಟ ಮಾಡದೆ ಇದ್ದಲ್ಲಿಯೂ ತೃಪ್ತಿಯನ್ನು ಹೊಂದುತ್ತಾನೋ, ಧನವಿಲ್ಲದೆ ಇದ್ದರೂ ಸಂತೋಷವನ್ನು ಹೊಂದುತ್ತಾನೋ, ಯಾವ ಭಗವಂತನಿಂದ ತೈಲ-ಘೃತಾದಿ ವೈಭವವಿಲ್ಲದೇ ಇದ್ದರೂ ದೈಹಿಕವಾದ ಬಲವನ್ನು ಹೊಂದುತ್ತಾನೋ ಅಂತಹ ಬ್ರಹ್ಮಜ್ಞನನ್ನು ತಿಳಿದವನೇ ವೇದಜ್ಞನೆನಿಸುತ್ತಾನೆ.
ಸಂಗೋಪ್ಯ ಹ್ಯಾತ್ಮನೋ ದ್ವಾರಾಣ್ಯಪಿಧಾಯ ವಿಚಿಂತಯನ್ |
ಯೋ ಹ್ಯಾಸ್ತೇ ಬ್ರಾಹ್ಮಣಃ ಶಿಷ್ಟಃ ಸ ಆತ್ಮರತಿರುಚ್ಯತೇ ||18||
ಯಾವ ಸಾಧಕನು ಇಂದ್ರಿಯಗಳ ಬಾಹ್ಯವ್ಯಾಪಾರಗಳನ್ನು ತಡೆದು, ನಿಸ್ಸಂಗನಾಗಿ ಬ್ರಹ್ಮಜ್ಞಾನದಲ್ಲಿಯೇ ರತನಾಗಿರುತ್ತಾನೋ ಅಂತಹ ಶಿಷ್ಟನು ಪರಮಾತ್ಮನಲ್ಲಿಯೇ ರತಿಯುಳ್ಳವನು ಎಂದು ಕರೆಸಿಕೊಳ್ಳುತ್ತಾನೆ.
ಸಮಾಹಿತಂ ಪರೇ ತತ್ತ್ವೇ ಕ್ಷೀಣಕಾಮಮವಸ್ಥಿತಮ್ |
ಸರ್ವತಃ ಸುಖಮನ್ವೇತಿ ವಪುಶ್ಚಾಂದ್ರಮಸಂ ಯಥಾ ||19||
ಆ ಪರತತ್ತ್ವದಲ್ಲಿಯೇ ಚಿತ್ತೈಕಾಗ್ರತೆಯನ್ನು ಹೊಂದಿದವನು, ಯಾವುದೇ ಕಾಮನೆಗಳನ್ನು ಹೊಂದದಿರುವವನು ಶುಕ್ಲಪಕ್ಷದ ಚಂದ್ರನಂತೆ ಪುವೃದ್ಧಮಾನವಾದ ಸಮಸ್ತ ವಿಧವಾದ ಸುಖವನ್ನು ಹೊಂದುತ್ತಾನೆ.
ಅವಿಶೇಷಾಣಿ ಭೂತಾನಿ ಗುಣಾಂಶ್ಚಾಭಜತೋ ಮುನೇಃ |
ಸುಖೇನಾಪೋಹ್ಯತೇ ದುಃಖಂ ಭಾಸ್ಕರೇಣ ತಮೋ ಯಥಾ ||20||
ಸಮಸ್ತ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾದ ಭಗವಂತನನ್ನು ಸಮಾನವಾಗಿ ಕಾಣುತ್ತಾನೋ, ತ್ರಿಗುಣಾತೀತನಾಗಿದ್ದಾನೋ ಅಂತಹ ಸಾಧಕನ ದುಃಖವು ಸೂರ್ಯನಿಂದ ಅಂಧಕಾರವು ನೀಗಿ ಹೋಗುವಂತೆ ಅನಾಯಾಸವಾಗಿ ಹೊರಟು ಹೋಗುತ್ತದೆ.
ತಮತಿಕ್ರಾಂತಕರ್ಮಾಣಮತಿಕ್ರಾಂತಗುಣಕ್ಷಯಮ್ |
ಬ್ರಾಹ್ಮಣಂ ವಿಷಯಾಶ್ಲಿಷ್ಟಂ ಜರಾಮೃತ್ಯೂ ನ ವಿಂದತಃ ||21||
ಕಾಮ್ಯ ಕರ್ಮಗಳನ್ನು ಪರಿತ್ಯಾಗ ಮಾಡಿರುವ, ತ್ರಿಗುಣಗಳ ಸಂಬಂಧವನ್ನು ನೀಗಿರುವ, ವಿಷಯ ವಾಸನೆಯಿಂದ ರಹಿತನಾದ ಬ್ರಾಹ್ಮಣನನ್ನು ಜರಾ-ಮೃತ್ಯುಗಳು ಬಾಧಿಸುವುದಿಲ್ಲ.
ಸ ಯದಾ ಸರ್ವತೋ ಮುಕ್ತಃ ಸಮಃ ಪರ್ಯವತಿಷ್ಠತೇ |
ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ಶರೀರಸ್ಥೋಽತಿವರ್ತತೇ ||22||
ಯಾವಾಗ ಸಾಧಕನು ಸಮಸ್ತ ವಿಧವಾದ ಬಂಧನಗಳಿಂದಲೂ ವಿಮುಕ್ತನಾಗಿ ರಾಗ-ದ್ವೇಷಗಳಲ್ಲಿ ಸಮಬುದ್ಧಿಯುಳ್ಳವನಾಗಿದ್ದರೆ ಈ ಶರೀರದಲ್ಲಿರುವಾಗಲೇ ಅವನು ಇಂದ್ರಿಯಾರ್ಥಗಳನ್ನು ಮೀರಿದವನಾಗಿರುತ್ತಾನೆ.
ಕಾರಣಂ ಪರಮಂ ಪ್ರಾಪ್ಯ ಅತಿಕ್ರಾಂತಸ್ಯ ಕಾರ್ಯತಾಮ್ |
ಪುನರಾವರ್ತನಂ ನಾಸ್ತಿ ಸಂಪ್ರಾಪ್ತಸ್ಯ ಪರಾತ್ ಪರಮ್ ||23||
ಹೀಗೆ ಸಮಸ್ತ ಜಗತ್ಕಾರಣನಾದ ಪರಬ್ರಹ್ಮನನ್ನು ಹೊಂದಿ, ಕಾರ್ಯಾತ್ಮಕವಾದ ಈ ಪ್ರಕೃತಿತತ್ತ್ವವನ್ನು ಯಾವ ಸಾಧಕನು ಮೀರಿ ನಿಲ್ಲುತ್ತಾನೋ ಅಂತಹ ಪರಮ ಪದವನ್ನು ಹೊಂದಿದ ಬ್ರಹ್ಮಜ್ಞಾನಿಗೆ ಪುನರ್ಜನ್ಮದ ಭಯವು ಇರುವುದಿಲ್ಲ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಡಶೀತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೇಳನೆಯ ಅಧ್ಯಾಯ
ವ್ಯಾಸರು ಶುಕಮುನಿಯನ್ನು ಕುರಿತು ಪಂಚಭೂತಗಳ ಕಾರ್ಯ
ಮತ್ತು ಗುಣಗಳನ್ನು ವಿಸ್ತರಿಸಿದುದು.
ವ್ಯಾಸಃ

ದ್ವಂದ್ವಾನಿ ಮೋಕ್ಷಜಿಜ್ಞಾಸುರರ್ಥಧರ್ಮಾವನುಷ್ಠಿತಃ |
ವಕ್ತಾತ್ರ ಗುಣವತಾ ಶಿಷ್ಯಃ ಶ್ರಾವ್ಯಃ ಪೂರ್ವಮಿದಂ ಮಹತ್ ॥1॥
ಮಗನೇ, ಧರ್ಮಾರ್ಥಗಳನ್ನೇ ಅನುಷ್ಠಾನ ಮಾಡುತ್ತಾ, ಸುಖ- ದುಃಖಾದಿ ದ್ವಂದ್ವಗಳಲ್ಲಿ ಸಿಲುಕಿದ ಶ್ರದ್ಧೆಯುಳ್ಳ, ಮೋಕ್ಷಮಾರ್ಗವನ್ನು ಅವಲಂಬಿಸಿದ ಜಿಜ್ಞಾಸುವು ಮೊದಲಿಗೆ ಉತ್ತಮ ಪ್ರವಚನಕಾರನಾದ ಆಚಾರ್ಯಪುರುಷನಿಂದ ಈ ಮಹತ್ವಪೂರ್ಣವಾದ ಅಧ್ಯಾತ್ಮ ವಿಚಾರವನ್ನು ತಿಳಿಯಬೇಕು.
ಆಕಾಶಂ ಮಾರುತೋ ಜ್ಯೋತಿರಾಪಃ ಪೃಥ್ವೀ ಚ ಪಂಚಮೀ |
ಭಾವಾಭಾವೌ ಚ ಕಾಲಶ್ಚ ಸರ್ವಭೂತೇಷು ಪಂಚಸು ॥2॥
ಆಕಾಶ, ವಾಯು, ಜಲ, ಅಗ್ನಿ, ಪೃಥಿವಿ, ಭಾವ, ಅಭಾವ, ಕಾಲ ಇವುಗಳು ಪಂಚಭೂತಾತ್ಮಕವಾದ ಪ್ರಾಣಿಗಳ ಎಲ್ಲ ಶರೀರದಲ್ಲಿಯೂ ಇರುತ್ತವೆ.
ಅಂತರಾತ್ಮಕಮಾಕಾಶಂ ತನ್ಮಯಂ ಶ್ರೋತ್ರಮಿಂದ್ರಿಯಮ್ |
ತಸ್ಯ ಶಬ್ದಂ ಗುಣಂ ವಿದ್ಯಾನ್ಮೂರ್ತಿಶಾಸ್ತ್ರವಿಧಾನವಿತ್ ॥3॥
ಆಕಾಶವು ಬರಿ ಬಯಲಿನಿಂದ ಕೂಡಿಕೊಂಡಿದೆ. ಶ್ರವಣೇಂದ್ರಿಯವು ಆಕಾಶಮಯವಾಗಿದೆ. ಶಾಸ್ತ್ರಜ್ಞರು ಶಬ್ದವನ್ನು ಆಕಾಶದ ಗುಣವೆಂದು ಹೇಳುತ್ತಾರೆ.
ಚರಣಂ ಮಾರುತಾತ್ಮೇತಿ ಪ್ರಾಣಾಪಾನೌ ಚ ತನ್ಮಯೌ |
ಸ್ಪರ್ಶನಂ ಚೇಂದ್ರಿಯಂ ವಿದ್ಯಾತ್ತಥಾ ಸ್ಪರ್ಶಂ ಚ ತನ್ಮಯಮ್ ॥4॥
ವಾಯುವು ಚಲನಾತ್ಮಕವಾದುದು. ಪ್ರಾಣಾಪಾನಗಳು ವಾಯುಸ್ವರೂಪವಾಗಿವೆ. ಸ್ಪರ್ಶೇಂದ್ರಿಯವು ವಾಯುಮಯವಾಗಿದೆ ಎಂದು ತಿಳಿಯಬೇಕು.
ತತಃ ಪಾಕಃ ಪ್ರಕಾಶಶ್ಚ ಜ್ಯೋತಿಶ್ಚಕ್ಷುಶ್ಚ ತನ್ಮಯಮ್ |
ತಸ್ಯ ರೂಪಂ ಗುಣಂ ವಿದ್ಯಾತ್ತಮೋನ್ನವಸಿತಾತ್ಮಕಮ್ ॥5॥
ಪಾಕವು, ಬೆಳಕು, ಜೀರ್ಣಕಾರ್ಯವು, ನೇತ್ರವು - ಈ ಗುಣಗಳು ಅಗ್ನಿತತ್ತ್ವದ ಕಾರ್ಯವಾಗಿವೆ. ತೇಜಸ್ಸು ಕತ್ತಲನ್ನು ಪರಿಹರಿಸುವ ಗುಣವುಳ್ಳದ್ದು.
ಪ್ರಕ್ಲೇದಃ ಕ್ಷುದ್ರತಾ ಸ್ನೇಹ ಇತ್ಯಾಪೋ ಹ್ಯುಪದಿಶ್ಯತೇ |
ರಸನಂ ಚೇಂದ್ರಿಯಂ ಜಿಹ್ವಾ ರಸಶ್ಚಾಪಾಂ ಗುಣೋ ಮತಃ ॥6॥
ಬೆವರು, ದ್ರವ, ಜಿಡ್ಡು ಇವು ಜಲಮಯಗಳು. ರಸನೇಂದ್ರಿಯಗಳು, ರಸಗಳು ಜಲಮಯವೇ ಆಗಿವೆ.
ಸಂಘಾತಃ ಪಾರ್ಥಿವೋ ಧಾತುರಸ್ಥಿದಂತನಖಾನಿ ಚ |
ಶ್ಮಶ್ರು ಲೋಮ ಚ ಕೇಶಾಶ್ಚ ಸಿರಾಃ ಸ್ನಾಯು ಚ ಚರ್ಮ ಚ ॥7॥
ಘನವಾದ ವಸ್ತುಗಳು, ಹಲ್ಲುಗಳು, ಉಗುಳುಗಳು ಪಾರ್ಥಿವ ಎನಿಸಿವೆ. ಮೀಸೆ, ಮೈಕೂದಲು, ತಲೆಕೂದಲು, ಶ್ವಾಸಕೋಶಗಳು, ಚರ್ಮ ಇವೆಲ್ಲವೂ ಪಾರ್ಥಿವ ಎನಿಸಿವೆ.
ಇಂದ್ರಿಯಂ ಘ್ರಾಣಸಂಜ್ಞಾನಂ ನಾಸಿಕೇತ್ಯಭಿಧೀಯತೇ |
ಗಂಧಶ್ಚೈವೇಂದ್ರಿಯಾರ್ಥೋಽಯಂ ವಿಜ್ಞೇಯಃ ಪೃಥಿವೀಮಯಃ ॥8॥
ಘ್ರಾಣೇಂದ್ರಿಯವೆನಿಸಿದ ಮೂಗು, ಅದಕ್ಕೆ ವಿಷಯವಾದ ಗಂಧವು ಪೃಥಿವಿಮಯ ಎನಿಸಿದೆ.
ಉತ್ತರೇಷು ಗುಣಾಃ ಸಂತಿ ಸರ್ವೇ ಸರ್ವೇಷು ಚೋತ್ತರಾಃ |
ಪಂಚಾನಾಂ ಭೂತಸಂಘಾನಾಂ ಸಂತತಿಂ ಮುನಯೋ ವಿದುಃ ॥9॥
ಕುಮಾರನೇ, ಮೇಲೆ ಹೇಳಿದ ಪಂಚಭೂತಗಳಲ್ಲಿ ಹಿಂದಿನ ಭೂತಗಳ ಗುಣಗಳು ಮುಂದಿನ ಭೂತಗಳಲ್ಲಿ ಸೇರಿಕೊಂಡಿವೆ. ಮುಂದಿನ ಗುಣಗಳು ಹಿಂದಿನ ಭೂತಗಳಲ್ಲಿ ಇರುವುದಿಲ್ಲ ಎಂದು ಜ್ಞಾನಿಗಳು ತಿಳಿದಿದ್ದಾರೆ. ಪಂಚಭೂತಗಳ ಗುಣಗಳನ್ನು, ಕಾರ್ಯಗಳನ್ನು ಋಷಿಗಳು ಹೀಗೆ ತಿಳಿಸಿದ್ದಾರೆ.
ಮನೋ ನವಮಮೇತೇಷಾಂ ತು ಬುದ್ಧಿಸ್ತು ದಶಮೀ ಸ್ಮೃತಾ |
ಏಕಾದಶೋಽಂತರಾತ್ಮಾ ಚ ಸರ್ವತಃ ಪರ ಉಚ್ಯತೇ ॥10॥
ಹಿಂದೆ ಹೇಳಿದಂತೆ ಇಂದ್ರಿಯಪಂಚಕಗಳು, ಗುಣಪಂಚಕಗಳು ಇವುಗಳನ್ನು ಹೊಂದಿರುವ ಪಂಚಭೂತಗಳು, ಭಾವಾಭಾವ, ಕಾಲ ಎಂಬ ಎಂಟು ಪದಾರ್ಥಗಳ ನಡುವೆ ಒಂಬತ್ತನೆಯದ್ದಾಗಿ ಮನಸ್ತತ್ತ್ವವೂ ಇದೆ. ಬುದ್ಧಿಯು ಹತ್ತನೆಯ ತತ್ತ್ವ ಎನಿಸಿದೆ. ಆತ್ಮನು ಹನ್ನೊಂದನೆಯ ತತ್ತ್ವ ಎನಿಸಿದ್ದಾನೆ. ಈ ಹನ್ನೊಂದನೆಯ ತತ್ತ್ವ ಎನಿಸಿದ ಪರಮಾತ್ಮನೇ ಎಲ್ಲಕ್ಕಿಂತಲೂ ಮಿಗಿಲಾದವನು ಎನಿಸಿದ್ದಾನೆ.
ವ್ಯವಸಾಯಾತ್ಮಿಕಾ ಬುದ್ಧಿರ್ಮನೋ ವ್ಯಾಕರಣಾತ್ಮಕಮ್ |
ಕರ್ಮಾನುಮಾನಾದ್ ವಿಜ್ಞೇಯಃ ಸ ಜೀವಃ ಕ್ಷೇತ್ರಸಂಜ್ಞಕಃ ॥11॥
ಬುದ್ಧಿಯು ನಿಶ್ಚಯಾತ್ಮಕವಾದುದು. ಮನಸ್ಸು ವಿಕಾರಾತ್ಮಕವಾದುದು. ಶರೀರ, ಚೇಷ್ಟೆಗಳೆಂಬ ಕಾರಣಗಳಿಂದ ಕ್ಷೇತ್ರ ಎಂದು ಕರೆಸಿಕೊಳ್ಳುವ ಜೀವನನ್ನು ತಿಳಿದುಕೊಳ್ಳಬೇಕು. ಕ್ಷೇತ್ರಜ್ಞನಾದವನು ಭಗವಂತನೇ ಆಗಿದ್ದಾನೆ.
ಏಭಿಃ ಕಾಲಾಷ್ಟಮೈರ್ಭಾವೈರ್ಯಃ ಸರ್ವೈಃ ಸರ್ವಮನ್ವಿತಮ್ |
ಪಶ್ಯತ್ಯಕಲುಷಂ ಪ್ರಾಜ್ಞಃ ಸ ಮೋಹಂ ನಾನುವರ್ತತೇ ॥12॥
ಈ ರೀತಿಯಾಗಿ ಮನುಷ್ಯನು ಸಮಸ್ತ ಜಗತ್ತು ಪಂಚಭೂತಗಳು, ಭಾವ, ಅಭಾವ, ಕಾಲ ಎಂಬ ಎಂಟು ಪದಾರ್ಥಗಳಿಂದ ಕೂಡಿದೆ ಎಂದು ಸರಿಯಾಗಿ ತಿಳಿದಿರುವನೋ ಅವನು ಕಲುಶವಿಲ್ಲದ ಬುದ್ಧಿಯಿಂದ ಭಗವಂತನನ್ನು ನೋಡುತ್ತಾನೆ. ಅವನೆಂದಿಗೂ

ಮೋಹವಶನಾಗುವುದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆಂಟನೆಯ ಅಧ್ಯಾಯ
ಜೀವ-ಪರಮಾತ್ಮರನ್ನು ಯೋಗದ ಮೂಲಕ ಸಾಕ್ಷಾತ್ಕರಿಸುವ
ವಿಧಾನವನ್ನು ವ್ಯಾಸರು ನಿರೂಪಿಸಿದುದು.
ವ್ಯಾಸಃ
ಶರೀರಾದ್ ವಿಪ್ರಮುಕ್ತಂ ಹಿ ಸೂಕ್ಷ್ಮಭೂತಂ ಶರೀರಿಣಮ್ ।
ಕರ್ಮಭಿಃ ಪರಿಪಶ್ಯಂತಿ ಶಾಸ್ತ್ರೋಕ್ತೈಃ ಶಾಸ್ತ್ರಚೇತಸಃ ॥1॥
ಕುಮಾರನೇ, ಶಾಸ್ತ್ರಜ್ಞರು ಸ್ಥೂಲಶರೀರದಿಂದ ಮುಕ್ತರಾಗಿ ಸೂಕ್ಷ್ಮವಾದ ಲಿಂಗಶರೀರವನ್ನು ಹೊಂದಿರುವ ಜೀವಾತ್ಮನನ್ನು ಯೋಗಸಾಧನೆಗಳಿಂದ, ಸತ್ಕರ್ಮಾನುಷ್ಠಾನಗಳಿಂದಲೂ ತಿಳಿಯಬಲ್ಲರು.
ಯಥಾ ಮರೀಚ್ಯಃ ಸಹಿತಾಶ್ಚರಂತಿ
ಗಚ್ಛಂತಿ ತಿಷ್ಠಂತಿ ಚ ದೃಶ್ಯಮಾನಾಃ ।
ದೇಹೈರ್ವಿಮುಕ್ತಾ ವಿಚರಂತಿ ಲೋಕಾಂ-
ಸ್ತಥೈವ ಸತ್ತ್ವಾನ್ಯತಿಮಾನುಷಾಣಿ ॥2॥
ಯಾವ ರೀತಿಯಾಗಿ ಸೂರ್ಯನ ಕಿರಣಗಳು ಒಂದಕ್ಕೊಂದು ಹೊಂದಿಕೊಂಡು ಎಲ್ಲ ಕಡೆಯಲ್ಲಿಯೂ ಚಲಿಸುತ್ತವೆಯೋ, ಎಲ್ಲರಿಗೂ ಕಾಣುವಂತೆ ಆಕಾಶವನ್ನೆಲ್ಲ ವ್ಯಾಪಿಸಿರುತ್ತವೆಯೋ ಅದರಂತೆ ಸ್ಥೂಲದೇಹರಿಂದ ವಿಮುಕ್ತರಾದ ಜೀವರು ಮನುಷ್ಯ ಲೋಕದಿಂದ ದಾಟಿದವರಾಗಿ, ಉತ್ತಮ ಲೋಕಗಳಲ್ಲಿ ಸಂಚರಿಸುತ್ತಾರೆ.
ಪ್ರತಿರೂಪಂ ಯಥೈವಾಪ್ಸು ತಾಪಃ ಸೂರ್ಯಸ್ಯ ಲಕ್ಷ್ಯತೇ ।
ಸತ್ತ್ವವಾಂಸ್ತು ತಥಾ ಸತ್ತ್ವಂ ಪ್ರತಿರೂಪಂ ಪ್ರಪಶ್ಯತಿ ॥3॥
ಯಾವ ರೀತಿ ಸೂರ್ಯನ ಪ್ರತಿಬಿಂಬವು ಜಲಾಶಯಗಳಲ್ಲಿ ಕಾಣಿಸುತ್ತದೋ, ಸೂರ್ಯನ ತಾಪವು ನಮಗೆ ಅನುಭವ ಗೋಚರವಾಗುತ್ತದೋ ಅದೇ ರೀತಿ ಜ್ಞಾನ ಸತ್ತ್ವವುಳ್ಳ, ಸತ್ತ್ವಗುಣವುಳ್ಳ ಯೋಗಿಯು ಜೀವರಾಶಿಗಳ ಪ್ರತಿರೂಪಗಳನ್ನು ಕಾಣುತ್ತಾನೆ.
ತಾನಿ ಸೂಕ್ಷ್ಮಾಣಿ ಸತ್ತ್ವಸ್ಥಾ ವಿಮುಕ್ತಾನಿ ಶರೀರತಃ ।
ಸ್ವೇನ ತತ್ತ್ವೇನ ತತ್ತ್ವಜ್ಞಾಃ ಪಶ್ಯಂತಿ ನಿಯತೇಂದ್ರಿಯಾಃ ॥4॥
ಸ್ಥೂಲಶರೀರದಿಂದ ಬಿಡುಗಡೆ ಹೊಂದಿರುವ ಲಿಂಗಶರೀರಿಗಳಾದ ಜೀವರನ್ನು ಕಾಣಲು ಇಂದ್ರಿಯಗಳನ್ನು ವಶೀಕರಿಸಿಕೊಂಡಿರುವ ತತ್ತ್ವಜ್ಞರೇ ಸಮರ್ಥರಾಗಿರುತ್ತಾರೆ.
ಸ್ವಪತಾಂ ಜಾಗ್ರತಾಂ ಚೈವ ಸರ್ವೇಷಾಮಾತ್ಮಚಿಂತಿತಮ್ ।
ಪ್ರಧಾನದ್ವೈಧಮುಕ್ತಾನಾಂ ಜಹತಾಂ ಕರ್ಮಜಂ ರಜಃ ॥5॥
ಯಥಾಹನಿ ತಥಾ ರಾತ್ರೌ ಯಥಾ ರಾತ್ರೌ ತಥಾಹನಿ ।
ವಶೇ ತಿಷ್ಠತಿ ಸತ್ತ್ವಾತ್ಮಾ ಸತತಂ ಯೋಗಯೋಗಿನಾಮ್ ॥6॥
ತಮ್ಮ ಸಂಕಲ್ಪದಿಂದಲೂ, ಕರ್ಮದಿಂದಲೂ ಉಂಟಾಗುವ ಕಾಮಾದಿಗಳನ್ನು ತೊರೆದವರು, ಸಂಶಯದಿಂದ ಮುಕ್ತರಾದವರು, ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟವರು ಆದ ಯೋಗಿಗಳು ಮಲಗಿದ್ದರೂ, ಎಚ್ಚರಗೊಂಡಿದ್ದರೂ ರಾತ್ರಿಯಲ್ಲಿ ಹೇಗೋ ಹಾಗೆ ಹಗಲಿನಲ್ಲಿಯೂ, ಹಗಲಿನಲ್ಲಿ ಹೇಗೋ ಹಾಗೆ ರಾತ್ರಿಯಲ್ಲಿಯೂ ಅವರಿಗೆ ಜೀವಾತ್ಮನು ವಶವರ್ತಿಯಾಗಿರುತ್ತಾನೆ. ತಮ್ಮ ನಿಗ್ರಹದಲ್ಲಿ ತಾವು ಇರುತ್ತಾರೆ ಎಂದು ಭಾವ.
ತೇಷಾಂ ನಿತ್ಯಂ ಸದಾನಿತ್ಯೋ ಭೂತಾತ್ಮಾ ಸತತಂ ಗುಣೈಃ ।
ಸಪ್ತಭಿಸ್ತ್ವನ್ವಿತಃ ಸೂಕ್ಷ್ಮೈಶ್ಚರಿಷ್ಣುರಜರಾಮರಃ ॥7॥
ಮನೋಬುದ್ಧಿಪರಾಭೂತಃ ಸ್ವದೇಹಪರದೇಹವಿತ್ ।
ಸ್ವಪ್ನೇಷ್ವಪಿ ಭವತ್ಯೇಷ ವಿಜ್ಞಾತಾ ಸುಖದುಃಖಯೋಃ ॥8॥
ಸ್ವಭಾವತಃ ಸದಾ ನಿತ್ಯನಾದ, ಅಜರಾಮರನಾದ ಜೀವನು ಪಂಚ ಮಹಾಭೂತಗಳ ಗುಣಗಳಾದ ರೂಪ-ರಸಾದಿಗಳಿಂದ ನಿರಂತರವೂ ಸಂಚರಿಸುತ್ತಾ ಪಂಚೇಂದ್ರಿಯಗಳು, ಮನಸ್ಸು, ಬುದ್ಧಿಗಳಿಂದ ಕೂಡಿದವನಾಗಿ, ತನ್ನ ಸ್ವರೂಪ ಯೋಗ್ಯವಾದ ದೇಹವನ್ನು, ವಿಪರೀತ ದೇಹವನ್ನು ಕರ್ಮವಶದಿಂದ ಹೊಂದುವವನಾಗಿರುತ್ತಾನೆ. ಮನಸ್ಸು, ಬುದ್ಧಿಗಳಿಂದ ಪರಾಜಿತನಾಗಿರುತ್ತಾನೆ. ಸುಖ- ದುಃಖಗಳನ್ನು ಸ್ವಪ್ನದಲ್ಲಿಯೂ ಕಾಣುತ್ತಿರುತ್ತಾನೆ.
ತತ್ರಾಪಿ ಲಭತೇ ದುಃಖಂ ತತ್ರಾಪಿ ಲಭತೇ ಸುಖಮ್ ।
ಕ್ರೋಧಲೋಭೌ ತು ತತ್ರಾಪಿ ಕೃತ್ವಾ ವ್ಯಸನಮರ್ಚ್ಛತಿ ॥9॥
ಮನೋಬುದ್ಧಿ ಇಂದ್ರಿಯಗಳಿಗೆ ವಶನಾಗಿರುವ ಜೀವನು ಕನಸಿನಲ್ಲಿಯೂ ದುಃಖವನ್ನು ಅನುಭವಿಸುತ್ತಾನೆ, ಸುಖವನ್ನೂ ಅನುಭವಿಸುತ್ತಾನೆ. ಅವನು ನಿದ್ರಾ ಸಮಯದಲ್ಲಿಯೂ ಕ್ರೋಧ-ಲೋಭಗಳಿಗೆ ಅಧೀನನಾಗಿ ಮಹಾದುಃಖವನ್ನೇ ಅನುಭವಿಸುತ್ತಾನೆ.
ಪ್ರೀಣಿತಶ್ಚಾಪಿ ಭವತಿ ಮಹತೋರ್ಥಾನವಾಪ್ಯ ಚ ।
ಕರೋತಿ ಪುಣ್ಯಂ ತತ್ರಾಪಿ ಜಾಗ್ರನ್ನಿವ ಚ ಪಶ್ಯತಿ ॥10॥

ಸ್ವಪ್ನಾವಸ್ಥೆಯಲ್ಲಿಯೂ ಅಪಾರವಾದ ಐಶ್ವರ್ಯವನ್ನು ಪಡೆದುಕೊಂಡಾಗ ಸಂತೋಷ ಪಡುತ್ತಾನೆ. ಕನಸಿನಲ್ಲಿಯೇ ಪುಣ್ಯಕಾರ್ಯವನ್ನು ಮಾಡುತ್ತಾನೆ. ಜಾಗ್ರದವಸ್ಥೆಯಲ್ಲಿ ಎಲ್ಲವನ್ನೂ ನೋಡುವಂತೆ ಸ್ವಪ್ನಾವಸ್ಥೆಯಲ್ಲಿಯೂ ಅದೇ ರೀತಿ ಸುಖ-ದುಃಖಗಳನ್ನು ನೋಡುತ್ತಿರುತ್ತಾನೆ.

ತಮೇವಮತಿತೇಜೋಂಶಂ ಭೂತಾತ್ಮಾನಂ ಹೃದಿ ಸ್ಥಿತಮ್ |
ತಮೋರಜೋಭ್ಯಾಮಾವಿಷ್ಟಾ ನಾನುಪಶ್ಯಂತಿ ಮೂರ್ತಿಷು ॥11॥

ಅತ್ಯಂತ ತೇಜಸ್ಸಿನಿಂದ ಕೂಡಿರುವ, ಸಮಸ್ತ ಜೀವರ ಅಂತರ್ಯಾಮಿಯಾಗಿರುವ ಭಗವಂತನನ್ನು ತಮ್ಮ ಹೃದಯದಲ್ಲೇ ಇದ್ದಾನೆಂದು ರಜೋಗುಣ, ತಮೋಗುಣಗಳಿಂದ ಆವಿಷ್ಟರಾದ ಜೀವರು ಕಾಣುವುದಿಲ್ಲ.

ಶಾಸ್ತ್ರಯೋಗಪರಾ ಭೂತ್ವಾ ಸ್ವಮಾತ್ಮಾನಂ ಪರೀಪ್ಸವಃ |
ಅನುಚ್ಛ್ವಾಸಾನ್ಯಮೂರ್ತೀನಿ ಯಾನಿ ವಜ್ರೋಪಮಾನ್ಯಪಿ ॥12॥
ಪೃಥಗ್ಭೂತೇಷು ಸೃಷ್ಟೇಷು ಚತುರ್ಷ್ವಾಶ್ರಮಕರ್ಮಸು |
ಸಮಾಧೌ ಯೋಗಮೇವೈತಚ್ಛಾಂಡಿಲ್ಯಃ ಸಮಮಬ್ರವೀತ್ ॥13॥

ಯೋಗಶಾಸ್ತ್ರ ಪರಾಯಣರಾಗಿ ಭಗವಂತನನ್ನು ನೋಡಲು ಬಯಸುವವರು ಶ್ವಾಸೋಚ್ಛ್ವಾಸರಹಿತವಾದ, ವಜ್ರದಂತೆ ಅಚಲವಾದ ಶಿಖರಗಳುಳ್ಳ, ದೇಹ ರಹಿತಗಳಾದ, ಪ್ರತ್ಯೇಕವಾಗಿ ಸೃಷ್ಟಿಯನ್ನು ಹೊಂದಿರುವ, ನಾಲ್ಕು ಆಶ್ರಮಗಳಲ್ಲಿ ಕೂಡಿರುವ ಆಶ್ರಮಧರ್ಮಗಳಿಂದ, ಆಶ್ರಮ ಕರ್ಮಾನುಷ್ಠಾನದಲ್ಲಿ ನಿರತರಾಗಿರುವ ವ್ಯಕ್ತಿಗಳಿಗೆ ಸಮಾಧಿಯೋಗವೇ ಅಚಲ ಶೃಂಗಗಳಿಗೆ ಸಮಾನವಾಗಿದೆಯೋ ಅಂತಹ ಶಾಂಡಿಲ್ಯಮುನಿಯು ಭಗವತ್ಪ್ರಜ್ಞೆಯನ್ನು ಹೊಂದುವ ಬಗೆ ಹೇಗೆ ಎಂಬುದನ್ನು ತಿಳಿಸಿದ್ದಾನೆ. ಸಮಾಧಿಯ ಪ್ರಕಾರವನ್ನು ಉಚ್ಛ್ವಾಸರಹಿತವೆಂದು, ವಜ್ರದಂತ ಶೃಂಗವುಳ್ಳದ್ದೆಂದು, ದೇಹರಹಿತವಾದದ್ದೆಂದು ಇಲ್ಲಿ ತಿಳಿಸಲಾಗಿದೆ.

ವಿದಿತ್ವಾ ಸಪ್ತ ಸೂಕ್ಷ್ಮಾಣಿ ಷಡಂಗಂ ಚ ಮಹೇಶ್ವರಮ್ |
ಪ್ರಧಾನವಿನಿಯೋಗಸ್ಥಃ ಪರಂ ಬ್ರಹ್ಮಾಧಿಗಚ್ಛತಿ ॥14॥

ಪಂಚೇಂದ್ರಿಯ, ಬುದ್ಧಿ, ಮನಸ್ಸುಗಳನ್ನು ಏಳು ಸೂಕ್ಷ್ಮಗಳೆಂದಿದ್ದಾರೆ. ಇವುಗಳನ್ನು ಚೆನ್ನಾಗಿ ಅರಿತು, ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನನ್ನು ತಿಳಿದು, ಅಂತಃಕರಣದಲ್ಲಿ ಪರಮಾತ್ಮನನ್ನೇ ನೋಡುವಂತಹ ಸ್ಥಿರನಾದ ಯೋಗಿಯು ಪರಬ್ರಹ್ಮನನ್ನು ಹೊಂದುತ್ತಾನೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಾಶೀತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *

## ಎಂಬತ್ತೊಂಬತ್ತನೆಯ ಅಧ್ಯಾಯ

ವ್ಯಾಸರು ಶುಕಮುನಿಯನ್ನು ಕುರಿತು ಕಾಮಾದಿಗಳ ಜಯದ ಅನಿವಾರ್ಯತೆಯನ್ನು ನಿರೂಪಿಸಿದುದು.

ವ್ಯಾಸಃ

ಹೃದಿ ಕಾಮದ್ರುಮಶ್ಚಿತ್ರೋ ಮೋಹಸಂಚಯಸಂಭವಃ |
ಕ್ರೋಧಮಾನಮಹಾಸ್ಕಂಧೋ ವಿವಿತ್ಸಾಪರಿಮೋಚನಃ ॥1॥

ಮಗನೇ, ಮನುಷ್ಯನ ಹೃದಯದಲ್ಲಿ ಬೇರು ಬಿಡುತ್ತಿರುವ ಕಾಮವೆಂಬ ವೃಕ್ಷವು ಅತ್ಯಂತ ವಿಚಿತ್ರವಾದುದು. ಕಾಮವೆಂಬ ವೃಕ್ಷಕ್ಕೆ ಮೋಹವೇ ಬೀಜವಾಗಿದೆ. ಕ್ರೋಧ-ಅಹಂಕಾರಗಳು ಆ ವೃಕ್ಷದ ದೊಡ್ಡ ಕಾಂಡವೆನಿಸಿವೆ. ಕರ್ಮಾಸಕ್ತಿಯೇ ಅದರ ಪಾತಿ.

ತಸ್ಯ ಚಾಜ್ಞಾನಮಾಧಾರಃ ಪ್ರಮಾದಃ ಪರಿಷೇಚನಮ್ |
ಸೋಽಭ್ಯಸೂಯಾಪಲಾಶೋ ಹಿ ಪುರಾ ದುಷ್ಕೃತಸಾರವಾನ್ ॥2॥

ಅಜ್ಞಾನವೆಂಬುದು ಅದರ ಆಧಾರವಾದ ಬೇರು. ಪ್ರಮಾದವು ಅದಕ್ಕೆ ಬೇಕಾಗಿರುವ ನೀರು. ಅಸೂಯೆ ಎಂಬುದೇ ಅದರ ಎಲೆಗಳು. ದುಷ್ಕರ್ಮಗಳೇ ಅದರ ತಿರುಳು.

ಸಮ್ಮೋಹಚಿಂತಾವಿಟಪಃ ಶೋಕಶಾಖೋ ಭಯಂಕರಃ |
ಮೋಹನೀಭಿಃ ಪಿಪಾಸಾಭಿರ್ಲತಾಭಿಃ ಪರಿವೇಷ್ಟಿತಃ ॥3॥

ಮೋಹ-ಚಿಂತೆಗಳು ಆ ಮರದ ಸಣ್ಣ ಕವಲುಗಳು. ಶೋಕವು ಅದರ ಕೊಂಬೆ. ಭಯವೇ ಮೊಳಕೆ. ಮೋಹಕರವಾದ ಅಸತ್ಕಾಮನೆಗಳು ಮರವನ್ನು ಸುತ್ತಿರುವ ಬಳ್ಳಿಗಳು.

ಉಪಾಸತೇ ಮಹಾವೃಕ್ಷಂ ಸುಲುಬ್ಧಾಸ್ತಂ ಫಲೇಪ್ಸವಃ |
ಆಯಾಸೈಃ ಸಂಯತಃ ಪಾಶೈಃ ಫಲಾನಿ ಪರಿವೇಷ್ಟಯನ್ ॥4॥

ಲೋಭದಲ್ಲಿ ಆಸಕ್ತರಾದವರು ಈ ಮರದ ಫಲದಲ್ಲಿಯೇ ಆಸೆಯುಳ್ಳವರು ಆಗಿರುತ್ತಾರೆ. ಅನಾದಿ ಕಾಮವಾಸನೆ ಎಂಬ ಪಾಶಗಳಿಂದ ಬಂಧಿತರಾಗಿ ಆ ಮರದ ಸುತ್ತಲೂ ಆತುರದಿಂದ ಕಾದಿರುತ್ತಾರೆ.

ಯಸ್ತಾನ್ ಪಾಶಾನ್ವಶೇ ಕೃತ್ವಾ ತಂ ವೃಕ್ಷಮಪಕರ್ಷತಿ |
ಗತಃ ಸ ದುಃಖಯೋರಂತಂ ಯತಮಾನಸ್ತಯೋರ್ದ್ವಯೋಃ ॥5॥

ಈ ಸಂಸಾರ ವೃಕ್ಷದ ಮೋಹ ಪಾಶಗಳನ್ನೇ ತಮ್ಮ ವಶ ಮಾಡಿಕೊಂಡು, ಅದರ ಬಲದಿಂದಲೇ ಕಾಮವೃಕ್ಷವನ್ನು ಬಲವಾಗಿ ಸೆಳೆದು ನಾಶ ಮಾಡುವವರು ಈ ಸಾಂಸಾರಿಕ ದುಃಖಗಳ ಜನನ-ಮರಣವೆಂಬ ಭಯದಿಂದ ತಪ್ಪಿಸಿಕೊಳ್ಳಬಲ್ಲರು.

ಸಂರೋಹತ್ಯಕೃತಪ್ರಜ್ಞಃ ಸಂತಾಪೇನ ಹಿ ಪಾದಪಮ್ |
ಸ ತಮೇವ ತತೋ ಹಂತಿ ವಿಷಂ ಗ್ರಸ್ತಮಿವಾತುರಮ್ ॥6॥

ವಿವೇಕರಹಿತನಾದವನು ಈ ಸಂಸಾರ ವೃಕ್ಷವನ್ನು ಏರಿ, ಸಂತಾಪವೆಂಬ ಮರವನ್ನೇ ಆಶ್ರಯಿಸಿಕೊಂಡು, ಅಲ್ಲಿರುವ ವಿಷಯ ಸುಖಗಳೆಂಬ ಫಲಗಳನ್ನೇ ಭ್ರಮೆಯಿಂದ ತಿನ್ನುತ್ತಾ ಮುಳುವಿಕೆಗೆ ಈಡಾಗುತ್ತಾನೆ.
ತಸ್ಯಾನುಶಯಮೂಲಸ್ಯ ಮೂಲಮುದ್ಧ್ರಿಯತೇ ಬಲಾತ್ |
ತ್ಯಾಗಾಪ್ರಮಾದಾಕೃತಿನಾ ಸಾಮ್ಯೇನ ಪರಮಾಸಿನಾ ||7||
ವಿವೇಕಿಗಳಾದವರು ಯೋಗವೆಂಬ ಬಲವಾದ ಕತ್ತಿಯಿಂದ ಬಹಳ ಆಳಕ್ಕಿರುವ ಆ ಮರದ ಬೇರನ್ನು ಕತ್ತರಿಸಿ ಕಿತ್ತೊಗೆಯುತ್ತಾರೆ. ಆ ಕಾಮವೃಕ್ಷದ ವ್ಯಾಪ್ತಿಯನ್ನರಿತು ಅದರಿಂದುಂಟಾಗುವ ದುಃಖಗಳನ್ನು ಪರಿಹರಿಸಿಕೊಳ್ಳುತ್ತಾರೆ.
ಏವಂ ಯೋ ವೇದ ಕಾಮಸ್ಯ ಕೇವಲಂ ಪರಿಕರ್ಷಣಮ್ |
ವಧಂ ವೈ ಕಾಮಶಾಸ್ತ್ರಸ್ಯ ಸ ದುಃಖಾನ್ಯತಿವರ್ತತೇ ||8||
ಈ ರೀತಿಯಾಗಿ ಯಾವನು ಕಾಮವನ್ನು ನಿಗ್ರಹಿಸುವ ಉಪಾಯವನ್ನು ತಿಳಿದಿದ್ದಾನೋ, ಕಾಮಶಾಸ್ತ್ರದ ವಧೆಯನ್ನು ಮಾಡಲು ಬಯಸುತ್ತಾನೋ ಅವನು ದುಃಖಗಳನ್ನು ದಾಟುತ್ತಾನೆ.
ಶರೀರಂ ಪುರಮಿತ್ಯಾಹುಃ ಸ್ವಾಮಿನೀ ಬುದ್ಧಿರಿಷ್ಯತೇ |
ತತ್ರ ಬುದ್ಧೇಃ ಶರೀರಸ್ಥಂ ಮನೋ ನಾಮಾರ್ಥಚಿಂತಕಮ್ ||9||
ಶರೀರವೆಂಬುದೇ ಒಂದು ಪಟ್ಟಣವಿದ್ದಂತೆ. ಬುದ್ಧಿಯೇ ಅದನ್ನು ಆಳುವ ರಾಣಿ ಎನಿಸಿದ್ದಾಳೆ. ಬುದ್ಧಿ ಎಂಬ ರಾಣಿಗೆ ಮನಸ್ಸೆಂಬುದು ಕಾರ್ಯಾಲೋಚನೆಗೆ ಬೇಕಾಗಿರುವ ಮಂತ್ರಿಯಂತಿದೆ.
ಇಂದ್ರಿಯಾಣಿ ಜನಾಃ ಪೌರಾಸ್ತದರ್ಥಂ ತು ಪರಾ ಕೃತಿಃ |
ತತ್ರ ದ್ವೌ ದಾರುಣೌ ದೋಷೌ ತಮೋ ನಾಮ ರಜಸ್ತಥಾ ||10||
ಇಂದ್ರಿಯಗಳೇ ಪಟ್ಟಣದಲ್ಲಿ ವಾಸ ಮಾಡುವ ಜನರು. ಆ ಇಂದ್ರಿಯಗಳನ್ನುದ್ದೇಶಿಸಿ ಅನೇಕ ಕರ್ಮಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಆ ಕರ್ಮಗಳನ್ನು ಮಾಡುವಾಗ ಪ್ರಧಾನವಾದ ರಜಸ್ಸು-ತಮಸ್ಸು ಎಂಬ ಪ್ರಬಲವಾದ ಎರಡು ದೋಷಗಳು ಹುಟ್ಟಿಕೊಳ್ಳುತ್ತವೆ.
ಯದರ್ಥಮುಪಜೀವಂತಿ ಪೌರಾಃ ಸಹಪುರೇಶ್ವರಾಃ |
ಅದ್ವಾರೇಣ ತಮೇವಾರ್ಥಂ ದ್ವೌ ದೋಷಾವುಪಜೀವತಃ ||11||
ಯಾವ ಕಾರಣದಿಂದ ಇಂದ್ರಿಯಗಳೆಂಬ ಪ್ರಜೆಗಳು, ಮನಸ್ಸೆಂಬ ಮಂತ್ರಿ, ಬುದ್ಧಿ ಎಂಬ ರಾಣಿ ಇವರೆಲ್ಲರೂ ಪರಮ ಪುರುಷಾರ್ಥಗಳನ್ನು ಪಡೆಯಬೇಕೆಂದು ಈ ದೇಹವೆಂಬ ಪಟ್ಟಣದಲ್ಲಿ ವಾಸ ಮಾಡಿದ್ದಾರೋ ಅವರ ಮೇಲೆ ರಜೋಗುಣ, ತಮೋಗುಣವೆಂಬ ದೋಷಗಳು ಅತಿಕ್ರಮಣ ಮಾಡಿ, ಅವರನ್ನು ಪಡೆಯದಂತೆ ಮಾಡಿ, ತಪ್ಪು ಮಾರ್ಗದಲ್ಲಿ ಸೆಳೆದುಕೊಂಡು ಹೋಗಿ ಸಿದ್ಧಿಯಿಂದ ವಂಚಿಸುತ್ತವೆ.
ತತ್ರ ಬುದ್ಧಿರ್ಹಿ ದುರ್ಧರ್ಷಾ ಮನಃ ಸಾಧರ್ಮ್ಯಮುಚ್ಯತೇ |
ಪೌರಾಶ್ಚಾಪಿ ಮನಸ್ತ್ರಸ್ತಾಸ್ತೇಷಾಮಪಿ ಚಲಾ ಸ್ಥಿತಿಃ ||12||
ಬುದ್ಧಿ ಎಂಬ ರಾಣಿಯು ಸಾಮಾನ್ಯರಿಂದ ಸೆಳೆಯಲಾಗದ ವ್ಯಕ್ತಿತ್ವ ಉಳ್ಳವಳಾಗಿದ್ದರೂ ನನಗೆ ಮಂತ್ರಿಯಾದ ಮನಸ್ಸು ಕೆಟ್ಟ ಹಾದಿಯಲ್ಲಿ ಸಾಗಿದಾಗ ಅನಿವಾರ್ಯವಾಗಿ ಆ ಮಂತ್ರಿಯನ್ನೇ ಈ ರಾಣಿಯು ಅನುಸರಿಸಬೇಕಾಗುತ್ತದೆ. ಬಳಿಕ ಇಂದ್ರಿಯಗಳೆಂಬ ಪ್ರಜೆಗಳು ಮಂತ್ರಿಯ ದಾರಿಯನ್ನೇ ಅನುಸರಿಸಬೇಕಾಗುತ್ತದೆ. ಎಲ್ಲರೂ ಚಾಂಚಲ್ಯದ ಸ್ಥಿತಿಯನ್ನು ಹೊಂದುತ್ತಾರೆ.
ಯದರ್ಥಂ ಬುದ್ಧಿರಧ್ಯಾಸ್ತೇ ನ ಸೋಽರ್ಥಃ ಪರಿಷೀದತಿ |
ಯದರ್ಥಂ ಪೃಥಗಧ್ಯಾಸ್ತೇ ಮನಸ್ತತ್ ಪರಿಷೀದತಿ ||13||
ಪೃಥಗ್ಭೂತಂ ಯದಾ ಬುದ್ಧ್ಯಾ ಮನೋ ಭವತಿ ಕೇವಲಮ್ |
ತತ್ರೈನಂ ವಿವೃತಂ ಶೂನ್ಯಂ ರಜಃ ಪರ್ಯವತಿಷ್ಠತೇ ||14||
ಬುದ್ಧಿ ಎಂಬ ರಾಣಿಯು ಯಾವ ಪುರುಷಾರ್ಥವನ್ನು ತನಗೆ ಹಿತವೆಂದು ತಿಳಿದು ಅದನ್ನು ಪಡೆಯುವ ಉದ್ದೇಶದಿಂದ ಪ್ರಯತ್ನವನ್ನು ಹೊಂದುತ್ತದೋ ಆ ಪುರುಷಾರ್ಥಗಳೇ ಅದಕ್ಕೆ ದುಃಖಕರಗಳಾಗಿ, ಕೊನೆಗೆ ನಾಶವನ್ನು ತಂದೊಡ್ಡುತ್ತವೆ. ಯಾವಾಗ ಮನಸ್ಸು ಬುದ್ಧಿಯಿಂದ ಪ್ರತ್ಯೇಕವಾಗುವುದೋ ಆಗ ಮನಸ್ಸು ಮಾತ್ರ ಇರುತ್ತದೆ. ಆಗ ಬುದ್ಧಿಯು ಮನಸ್ಸು ಬೇರೆಯಾದ್ದರಿಂದ ಅವೆರಡು ವಿನಾಶವನ್ನು ಹೊಂದುತ್ತವೆ. ಕಾರಣ ಮನಸ್ಸು ವಿಷಯವನ್ನು ಗ್ರಹಿಸುತ್ತದೆ. ಅದರ ಸಾಧಕ- ಬಾಧಕಗಳನ್ನು ನಿರ್ಣಯಿಸಲಾರದು. ಬುದ್ಧಿ-ಮನಸ್ಸುಗಳ ಸಂಬಂಧವು ಕಳಚಿ ಹೋದುದರಿಂದ ಬುದ್ಧಿಯು ರಜೋಗುಣದ ಸಂಬಂಧವನ್ನು ಹೊಂದಿ ಬುದ್ಧಿಯೂ ಹಾಳಾಗುತ್ತದೆ. ಬುದ್ಧಿಯ ಸಹಕಾರವಿಲ್ಲದ ಮನಸ್ಸೂ ಹಾಳಾಗುತ್ತದೆ.
ತನ್ಮನಃ ಕುರುತೇ ಸಖ್ಯಂ ರಜಸಾ ಸಹ ಸಂಗತಮ್ |
ತಂ ಚಾದಾಯ ಜನಂ ಪೌರಂ ರಜಸೇ ಸಂಪ್ರಯಚ್ಛತಿ ||15||
ಮನಸ್ಸು ರಜೋಗುಣದ ಜೊತೆಗೆ ಸಖ್ಯವನ್ನು ಮಾಡಿ ತಾನು ಕೆಡುವುದಲ್ಲದೆ, ಬುದ್ಧಿ, ಇಂದ್ರಿಯಗಳು, ಆತ್ಮ ಎಲ್ಲರನ್ನೂ ಹಾಳುಮಾಡುತ್ತದೆ. ಮಂತ್ರಿಯು ಹಾಳಾದಾಗ ರಾಣಿ, ಪ್ರಜೆಗಳು ಎಲ್ಲರನ್ನೂ ತಪ್ಪು ಮಾರ್ಗಕ್ಕೆ ಸೆಳೆಯುವಂತೆ. ಇಲ್ಲಿಯೂ ರಜೋಗುಣ ತಮೋಗುಣಗಳಿಂದ ಆಗುವ ಅನರ್ಥಗಳನ್ನು ಹೀಗೆ ತಿಳಿಯಬೇಕು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಕಾಮತ್ಯಾಗೋಪಾಯಕಥನಂ ನಾಮ ಏಕೋನನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತನೆಯ ಅಧ್ಯಾಯ
ಪೃಥಿವಿ ಮೊದಲಾದ ಪಂಚಭೂತಗಳ ಬಗ್ಗೆ ವ್ಯಾಸರು ನಿರೂಪಿಸಿದುದು.

ಭೀಷ್ಮಃ
ಭೂತಾನಾಂ ಗುಣಸಂಖ್ಯಾನಂ ಭೂಯಃ ಪುತ್ರ ನಿಶಾಮಯ |
ದ್ವೈಪಾಯನಮುಖಾದ್ ಭ್ರಷ್ಟಂ ಶ್ಲಾಘಯಾ ಪರಯಾನಘ ॥1॥
ನಿರ್ದುಷ್ಟನಾದ ಧರ್ಮರಾಜನೇ, ದ್ವೈಪಾಯನರ ಮುಖದಿಂದ ವರ್ಣಿಸಲ್ಪಟ್ಟ ಪಂಚಮಹಾಭೂತಗಳ ನಿರೂಪಣೆಯನ್ನು ಪುನಃ ಹೇಳುತ್ತೇನೆ. ವಿಶೇಷವಾದ ಶ್ರದ್ಧೆಯಿಂದ ಇದನ್ನು ಕೇಳಿಸಿಕೊ.
ದೀಪ್ತಾನಲನಿಭಃ ಪ್ರಾಹ ಭಗವಾನ್ ಧೂಮ್ರವರ್ಚಸೇ |
ತತೋಽಹಮಪಿ ವಕ್ಷ್ಯಾಮಿ ಭೂಯಃ ಪುತ್ರ ನಿದರ್ಶನಮ್ ॥2॥
ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ವೇದವ್ಯಾಸರು ಹೊಗೆ ಮುಚ್ಚಿದ ಕೆಂಡದಂತಿದ್ದ ತಮ್ಮ ಮಗನಾದ ಶುಕಮುನಿಗೆ ತಿಳಿಸಿದ ಪಂಚಭೂತಗಳನ್ನೆಲ್ಲ ಯಥಾವತ್ತಾಗಿ ಉಪದೇಶಿಸುತ್ತೇನೆ, ಕೇಳು.
ಭೂಮೇಃ ಸ್ಥೈರ್ಯಂ ಪೃಥುತ್ವಂ ಚ ಕಾಠಿನ್ಯಂ ಪ್ರಸವಾತ್ಮತಾ |
ಗಂಧೋ ಗುರುತ್ವಂ ಶಕ್ತಿಶ್ಚ ಸಂಘಾತಃ ಸ್ಥಾಪನಾ ಧೃತಿಃ ॥3॥
ಸ್ಥಿರತ್ವ, ಗುರುತ್ವ, ಕಾಠಿಣ್ಯ, ಅಂಕುರೋತ್ಪಾದನ ಶಕ್ತಿ, ಗಂಧ, ಧೈರ್ಯ, ಗ್ರಹಣ ಶಕ್ತಿ, ನಿಬಿಡತೆ, ಆಧಾರವಾಗಿರುವಿಕೆ, ಧಾರಣಶಕ್ತಿ - ಈ ಹತ್ತು ಭೂಮಿಯ ಗುಣಗಳಾಗಿವೆ.
ಅಪಾಂ ಶೈತ್ಯಂ ರಸಃ ಕ್ಲೇದೋ ದ್ರವತ್ವಂ ಸ್ನೇಹಸೌಮ್ಯತಾ |
ಜಿಹ್ವಾನಿಷ್ಪಂದನಂ ಭೂಮಾ ಭೌಮಾಪ್ಯಾಸ್ರವಣಂ ತಥಾ ॥4॥
ನೀರಿನಲ್ಲಿ ಶೈತ್ಯ, ದ್ರವ, ನೆನೆಸುವಿಕೆ, ಸೋರುವಿಕೆ, ಅಂಟು, ಮೃದುತ್ವ, ರಸನೇಂದ್ರಿಯ, ಹರಿಯುವುದು, ಹೆಚ್ಚಾಗುವಿಕೆ, ಇವೆಲ್ಲವೂ ನೀರಿನ ಗುಣಗಳೆನಿಸಿವೆ.
ಅಗ್ನೇರ್ದುರ್ಧರ್ಷತಾ ತೇಜಸ್ತಾಪಃ ಪಾಕಃ ಪ್ರಕಾಶನಮ್ |
ಶೌಚಂ ರಾಗೋ ಲಘುಸ್ತೈಕ್ಷ್ಣ ್ಣ ್ಯಂ ದಶಮಂ ಚೋರ್ಧ್ವಭಾಗಿತಾ ॥5॥
ಅಗ್ನಿಯಲ್ಲಿ ಮುಟ್ಟಲಾಗದಿರುವುದು, ಪ್ರಕಾಶ, ಉಷ್ಣ, ಪಕ್ವ ಮಾಡುವಿಕೆ, ನೇತ್ರೇಂದ್ರಿಯ, ಶುಚಿತ್ವ, ರಾಗ, ಲಘುತ್ವ, ತೀಕ್ಷ್ಣತೆ, ಮೇಲ್ಮುಖವಾಗಿ ಉರಿಯುವುದು ಇಷ್ಟು ಗುಣಗಳಿವೆ.
ವಾಯೋರನಿಯಮಃ ಸ್ಪರ್ಶೋ ವಾದಸ್ಥಾನಂ ಸ್ವತಂತ್ರತಾ |
ಬಲಂ ಶೈಘ್ರ್ಯಂ ಚ ಮೋಹಶ್ಚ ಚೇಷ್ಟಾ ಕರ್ಮಕೃತಾ ಭವಃ ॥6॥
ವಾಯುವಿನಲ್ಲಿ ಶೀತ, ಉಷ್ಣ ಎಂಬ ಎರಡು, ನಿಯಮವಿಲ್ಲದ ಸ್ಪರ್ಶ, ವಾಗಿಂದ್ರಿಯ, ಚಲನೆ, ಬಲ, ಮಲ-ಮೂತ್ರಗಳ ವಿಸರ್ಜನೆಗೆ ಬೇಕಾದ ಗತಿ, ಗತಿಸ್ವಾತಂತ್ರ್ಯ, ಚೇಷ್ಟೆ, ಉಚ್ಛ್ವಾಸ, ನಿಃಶ್ವಾಸಗಳು, ಉತ್ಪತ್ತಿ-ನಾಶಗಳು ಈ ಗುಣಗಳು ಇವೆ.
ಆಕಾಶಸ್ಯ ಗುಣಃ ಶಬ್ದೋ ವ್ಯಾಪಿತ್ವಂ ಛಿದ್ರತಾಪಿ ಚ |
ಅನಾಶ್ರಯಮನಾಲಂಬಮವ್ಯಕ್ತಮವಿಕಾರಿತಾ ॥7॥
ಅಪ್ರತೀಘಾತತಾ ಚೈವ ಭೂತತ್ವಂ ವಿಕೃತಾನಿ ಚ |
ಗುಣಾಃ ಪಂಚಾಶತಂ ಪ್ರೋಕ್ತಾಃ ಪಂಚಭೂತಾತ್ಮಭಾವಿತಾಃ ॥8॥
ಶಬ್ದದಲ್ಲಿ, ವ್ಯಾಪನ ಶಕ್ತಿ, ಛಿದ್ರತೆ, ಆಧಾರವಿಲ್ಲದಿರುವಿಕೆ, ಅನಾಶ್ರಯ, ಅನಾಲಂಬ, ಅವ್ಯಕ್ತತೆ, ಅವಿಕಾರಿತ್ವ, ಅಪ್ರತಿಘಾತಿತ್ವ, ಭೂತತ್ವ, ವಿಕೃತತ್ವ ಎಂಬ ಹತ್ತು ಗುಣಗಳಿವೆ. ಹೀಗೆ ಪಂಚಭೂತಗಳಿಗೆ ಒಟ್ಟು ಐವತ್ತು ಗುಣಗಳು ಹೇಳಲ್ಪಟ್ಟಿವೆ.
ಚಲೋಪಪತ್ತಿರ್ವ್ಯಕ್ತಿಶ್ಚ ವಿಸರ್ಗಃ ಕಲ್ಪನಾ ಕ್ಷಮಾ |
ಸದಸಚ್ಛ್ಚಶುತಾ ಚೈವ ಮನಸೋ ನವ ವೈ ಗುಣಾಃ ॥9॥
ಫಲವಿಷಯಕವಾದ ಆಲೋಚನೆ, ಭ್ರಮೆ, ನೆನಪು, ತಾಳ್ಮೆ, ವೈರಾಗ್ಯ, ಕ್ಷಮಾ, ಇಚ್ಛಾ-ದ್ವೇಷಗಳು, ವೇಗ, ಚಾಂಚಲ್ಯ, ಇಷ್ಟು ಮನಸ್ಸಿನ ಒಂಬತ್ತು ಗುಣಗಳಾಗಿವೆ.
ಇಷ್ಟಾನಿಷ್ಟವಿಕಲ್ಪಶ್ಚ ವ್ಯವಸಾಯಃ ಸಮಾಧಿತಾ |
ಸಂಶಯಃ ಪ್ರತಿಪತ್ತಿಶ್ಚ ಬುದ್ಧೌ ಪಂಚೇಹ ಯೇ ಗುಣಾಃ ॥10॥
ಇಷ್ಟಾನಿಷ್ಟಗಳನ್ನು ಬಯಸದಿರುವುದು, ವ್ಯವಸಾಯ, ಚಿತ್ತನಿಯಮನ, ಚೆನ್ನಾಗಿ ಆಶ್ರಯವನ್ನು ಹೊಂದುವುದು, ನಿಶ್ಚಯಜ್ಞಾನ ಎಂಬುವನ್ನು ಬುದ್ಧಿಯ ಐದು ಗುಣಗಳೆಂದು ವಿದ್ವಾಂಸರು ಹೇಳುತ್ತಾರೆ.
ಯುಧಿಷ್ಠಿರಃ
ಕಥಂ ಪಂಚಗುಣಾ ಬುದ್ಧಿಃ ಕಥಂ ಪಂಚೇಂದ್ರಿಯಾ ಗುಣಾಃ |
ಏತನ್ಮೇ ಸರ್ವಮಾಚಕ್ಷ್ವ ಸೂಕ್ಷ್ಮಜ್ಞಾನಂ ಪಿತಾಮಹ ॥11॥
ಎಲ್ಲಕ್ಕಿಂತ ಶ್ರೇಷ್ಠವಾದ ಬುದ್ಧಿಯು ಬಹುಗುಣ ಉಳ್ಳದ್ದಾಗಿರಬೇಕಿತ್ತು. ಭೀಷ್ಮರೇ, ಬುದ್ಧಿಯು ಐದೇ ಗುಣವುಳ್ಳದ್ದಾಗಿರುವುದು ಏಕೆ? ಪಂಚಭೂತಗಳಿಗೆ ಪಂಚೇಂದ್ರಿಯಗಳು ಹೇಗೆ ಗುಣಗಳಾಗುತ್ತವೆ? ಈ ಸೂಕ್ಷ್ಮ ಜ್ಞಾನದ ವಿಷಯವಾಗಿ ನನಗೆ ತಿಳಿಸಬೇಕು.
ಭೀಷ್ಮಃ
ಆಹುಃ ಷಷ್ಟಿಂ ಭೂತಗುಣಾನ್ ವೈ ಭೂತವಿಸೃಷ್ಟಾನ್ ನಿತ್ಯವಿಷಕ್ತಾನ್ |
ಭೂತವಿಷಕ್ತಾಶ್ಚಾಕ್ಷರಸೃಷ್ಟಾನ್ ಪುತ್ರ ನ ನಿತ್ಯಂ ತದಿಹ ವದಂತಿ ॥12॥
ಧರ್ಮರಾಜನೇ, ಬುದ್ಧಿಗೆ ಅರವತ್ತು ಗುಣಗಳಿವೆ ಎಂದು ವಿದ್ವಾಂಸರು ಹೇಳುತ್ತಾರೆ. ಹೇಗೆಂದರೆ ಪಂಚಭೂತಗಳು ಬುದ್ಧಿಯ ಗುಣಗಳೇ ಆಗಿವೆ. ಬುದ್ಧಿಯ ಐದು ಗುಣಗಳು ಪಂಚಭೂತಗಳ ಐವತ್ತು ಗುಣಗಳ ಜೊತೆಗೆ ಸೇರಿ ಐವತ್ತೈದು ಆಗುತ್ತವೆ. ಅವುಗಳ ಜೊತೆಗೆ ಪಂಚಭೂತಗಳು ಬುದ್ಧಿಯ ಐದು ಗುಣಗಳೇ ಆಗಿರುವುದರಿಂದ ಅವುಗಳನ್ನೂ ಸೇರಿಸಿದರೆ ಅರವತ್ತು ಗುಣಗಳಾಗುತ್ತವೆ. ಈ ಅರವತ್ತು

ಗುಣಗಳು ಪ್ರಕೃತಿಯ ಜೊತೆಗೆ ಮೇಲನವನ್ನು ಹೊಂದಿರುತ್ತವೆ. ಒಟ್ಟಿನಲ್ಲಿ ಎಲ್ಲ ಗುಣಗಳು ಬುದ್ಧಿಯ ವಿಕಾರದಿಂದಲೇ ಉತ್ಪನ್ನವಾಗಿರುವುದರಿಂದ ಎಲ್ಲವನ್ನೂ ಬುದ್ಧಿಯ ಗುಣಗಳೇ ಎಂದು ಹೇಳಬಹುದು. ಅಸಾರತ ನಿಶ್ಚಯದಲ್ಲಿ ಬುದ್ಧಿಯೇ ವಿವೇಕವನ್ನು ಹೇಳುವುದರಿಂದ ಅರವತ್ತು ಗುಣಗಳನ್ನು ಬುದ್ಧಿಯ ಗುಣಗಳು ಎಂದು ತಿಳಿಯಬೇಕು. ಅವ್ಯಕ್ತತತ್ತ್ವದ ದೆಸೆಯಿಂದ ಪರಮಾತ್ಮನೇ ಈ ಎಲ್ಲ ಗುಣಗಳನ್ನು ಸೃಷ್ಟಿ ಮಾಡಿರುತ್ತಾನೆ. ಈ ಯಾವ ಪ್ರಕೃತಿಯ ಗುಣಗಳೂ ಜೀವನ ಜೊತೆಗೆ ನಿತ್ಯ ಸಂಬಂಧವನ್ನು ಹೊಂದಿರುವುದಿಲ್ಲ.

ತತ್ಪುತ್ರ ಚಿಂತಾಕಲಿತಂ ಯದುಕ್ತ-
ಮನಾಗತಂ ವೈ ತವ ಸಂಪ್ರತೀಹ |
ಭೂತಾರ್ಥತತ್ತ್ವಂ ತದವಾಪ್ಯ ಸರ್ವಂ
ಭೂತಪ್ರಭಾವಾದ್ ಭವ ಶಾಂತಬುದ್ಧಿಃ ||13||

ಮಗನೇ, ಇಲ್ಲಿಯ ತನಕ ಧ್ಯಾನಕ್ಕೆ ಸಂಬಂಧಿಸಿದಂತೆ ನಿನಗೆ ಏನೆಲ್ಲ ಬೋಧಿಸಿದ್ದೇನೋ ಈ ವಿಷಯಗಳನ್ನು ಯಾರೂ ತಿಳಿದಿರುವುದಿಲ್ಲ. ಈ ಭೂತಾರ್ಥ ತತ್ತ್ವಗಳನ್ನು ಚೆನ್ನಾಗಿ ತಿಳಿದು, ಇದರ ಪ್ರಭಾವವನ್ನೂ ಅರಿತು, ಇದರಲ್ಲಿ ಹೇಗೆ ವರ್ತಿಸಬೇಕೆಂದು ಕ್ರಿಯಾಲೋಚಿಸಿ ಶಾಂತಬುದ್ಧಿಯುಳ್ಳವನಾಗು.

|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಗುಣಭೂತಕಥನಂ ನಾಮ ನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.
|| ಶುಕಾನುಪ್ರಶ್ನಃ ಸಮಾಪ್ತಃ ||
* * * * *

ತೊಂಬತ್ತೊಂದನೆಯ ಅಧ್ಯಾಯ

ನಾರದನಿಗೂ ಅಕಂಪನನಿಗೂ ನಡೆದ ಸಂವಾದ.

ಯುಧಿಷ್ಠಿರಃ

ಯ ಇಮೇ ಪೃಥಿವೀಪಾಲಾಃ ಶೇರತೇ ಪೃಥಿವೀತಳೇ |
ಪೃತನಾಮಧ್ಯ ಏತೇ ಹಿ ಗತಸತ್ತ್ವ ಮಹಾಬಲಾಃ ||1||

ಪಿತಾಮಹನೇ, ಈ ರಣರಂಗದ ಮಧ್ಯದಲ್ಲಿ ಮಹಾ ಬಲಾಢ್ಯರೆನಿಸಿದ ಅನೇಕ ಮಂದಿ ರಾಜರು ಸತ್ವ ಕಳೆದುಕೊಂಡು ನೆಲದಲ್ಲಿ ಮಲಗಿರುತ್ತಾರೆ.

ಏಕೈಕಶೋ ಭೀಮಬಲಾ ನಾಗಾಯುತಬಲಾಸ್ತಥಾ |
ಏತೇ ಹಿ ನಿಹತಾಃ ಸಂಖ್ಯೇ ತುಲ್ಯತೇಜೋಬಲೈರ್ನರೈಃ ||2||

ಒಬ್ಬೊಬ್ಬರೂ ಭಯಂಕರವಾದ ಸೈನ್ಯವುಳ್ಳವರು. ಹತ್ತು ಸಾವಿರ ಆನೆಗಳ ಬಲವುಳ್ಳವರು. ಇವರೆಲ್ಲರೂ ತಮಗೆ ಸಮಾನವಾದ ತೇಜಸ್ಸು, ಬಲ ಉಳ್ಳ ಮನುಷ್ಯರಿಂದಲೇ ಹತರಾಗಿ ಬಿದ್ದಿರುತ್ತಾರೆ.

ನೈಷಾಂ ಪಶ್ಯಾಮಿ ಹಂತಾರಂ ಪ್ರಾಣಿನಾಂ ಸಂಯುಗೇ ಪುರಾ |
ವಿಕ್ರಮೇಣೋಪಸಂಪನ್ನಾಸ್ತೇಜೋಬಲಸಮನ್ವಿತಾಃ ||3||

ಇವರನ್ನು ಕೊಲ್ಲಬಲ್ಲವನು ಒಬ್ಬನೂ ಇಲ್ಲವೆಂದೇ ನಾನು ತಿಳಿದಿದ್ದೆ. ಕೊಲ್ಲುವವನಿದ್ದಾನೆಂದು ತಿಳಿದಿರಲಿಲ್ಲ. ಇವರು ಬಲ-ಪರಾಕ್ರಮಗಳಲ್ಲಿ ಕೊನೆ ಇಲ್ಲದವರು, ತುಂಬಾ ಜಾಣರು, ಧೈರ್ಯವಂತರು.

ಅಥ ಚೇಮೇ ಮಹಾಪ್ರಾಜ್ಞ ಶೇರತೇ ಹಿ ಗತಾಸವಃ |
ಮೃತಾ ಇತಿ ಚ ಶಬ್ದೋಽಯಂ ವರ್ತತ್ಯೇಷು ಗತಾಸುಷು ||4||

ಹೀಗಿದ್ದರೂ ಪ್ರಾಣವನ್ನು ತೆತ್ತು ನೆಲದಲ್ಲಿ ಬಿದ್ದಿದ್ದಾರಲ್ಲ! ಇವರನ್ನು ಮೃತರೆಂದು ಜನರು ಹೇಳುತ್ತಾರೆ. ಭಯಂಕರ ಪರಾಕ್ರಮಿಗಳಾದ ಇವರಲ್ಲಿ ಮೃತರೆಂಬ ವ್ಯವಹಾರವು ಹೇಗೆ ಹೊಂದುತ್ತದೆ?

ಇಮೇ ಮೃತಾ ನೃಪತಯಃ ಪ್ರಾಯಶೋ ಭೀಮವಿಕ್ರಮಾಃ |
ತತ್ರ ಮೇ ಸಂಶಯೋ ಜಾತಃ ಕುತಃ ಸಂಜ್ಞಾ ಮೃತಾ ಇತಿ ||5||

ಭೀಮ ಪರಾಕ್ರಮಿಗಳಾದ ಇವರೆಲ್ಲರೂ ಪ್ರಾಯಶಃ ಮೃತರಾಗಿದ್ದಾರೆ. ಇಲ್ಲಿ ನನಗೆ ಸಂಶಯ ಉಂಟಾಗಿದೆ. ಮೃತ ಎನ್ನುವ ಸಂಜ್ಞೆಯು ಯಾರಿಗೆ?

ಕಸ್ಯ ಮೃತ್ಯುಃ ಕುತೋ ಮೃತ್ಯುಃ ಕೇನ ಮೃತ್ಯುರಿಹ ಪ್ರಜಾಃ |
ಹರತ್ಯಮರಸಂಕಾಶ ತನ್ಮೇ ಬ್ರೂಹಿ ಪಿತಾಮಹ ||6||

ಯಾರಿಗೆ ಮೃತ್ಯುವು? ಯಾರಿಂದ ಮೃತ್ಯುವು? ಯಾವ ಕಾರಣದಿಂದ ಮೃತ್ಯುವು? ದೇವತೆಗಳ ಮಧ್ಯದಲ್ಲಿ ಸಂಹರಿಸುವಂತಹ ಶಕ್ತಿ ಯಾರಲ್ಲಿದೆ? ಪಿತಾಮಹನೇ, ಎಲ್ಲವನ್ನೂ ಹೇಳು.

ಭೀಷ್ಮಃ

ಪುರಾ ಕೃತಯುಗೇ ತಾತ ರಾಜಾಸೀದವಿಕಂಪಕಃ |
ಸ ಶತ್ರುವಶಮಾಪನ್ನಃ ಸಂಗ್ರಾಮೇ ಕ್ಷೀಣವಾಹನಃ ||7||

ಯುಧಿಷ್ಠಿರನೇ, ಹಿಂದೆ ಕೃತಯುಗದಲ್ಲಿ ಯಾರಿಂದಲೂ ಕಂಪನ ಹೊಂದದೆ ಇರುವ, ಅವಿಕಂಪನ ಎಂಬ ರಾಜನಿದ್ದನು. ಅವನು ಒಮ್ಮೆ ತನ್ನ ಪರಿವಾರವನ್ನೆಲ್ಲ ಯುದ್ಧದಲ್ಲಿ ಕಳೆದುಕೊಂಡನು. ಕಡೆಗೆ ಶತ್ರುಗಳ ವಶನಾದನು.

ತತ್ರ ಪುತ್ರೋ ಹರಿರ್ನಾಮ ನಾರಾಯಣಸಮೋ ಬಲೇ |

ಸ ಶತ್ರುಭಿರ್ಹತಃ ಸಂಖ್ಯೇ ಸಬಲಃ ಸಪದಾನುಗಃ ॥8॥
ಅವನಿಗೆ ವಿಷ್ಣುವಿಗೆ ಸಮಾನವಾದ ಬಲವುಳ್ಳ ಹರಿ ಎಂಬ ಮಗನಿದ್ದನು. ಅವನೂ ತನ್ನ ಶತ್ರುಸೈನ್ಯದೊಡನೆ ಕಾದಾಡಿ ಶತ್ರುಗಳಿಂದ ಹತನಾದನು.
ಸ ರಾಜಾ ಶತ್ರುವಶಗಃ ಪುತ್ರಶೋಕಸಮನ್ವಿತಃ |
ಯದೃಚ್ಛಯಾ ಶಾಂತಿಪರೋ ದದರ್ಶ ಭುವಿ ನಾರದಮ್ ॥9॥
ಶತ್ರುಗಳಿಗೆ ಸಿಕ್ಕಿ ಬಿದ್ದಿರುವ ಅಕಂಪನ ರಾಜನು ಪುತ್ರಶೋಕವನ್ನು ಹೊಂದುವ ಸ್ಥಿತಿಯಲ್ಲಿದ್ದಾಗ ಭಗವತ್ಸಂಕಲ್ಪದಂತೆ ಶಾಂತಾತ್ಮರಾದ ನಾರದರು ಭೂಮಿಯಲ್ಲಿ ಸಂಚರಿಸುತ್ತಿರುವುದನ್ನು ಕಂಡನು.
ಸ ತಸ್ಮೈ ಸರ್ವಮಾಚಷ್ಟ ಯಥಾ ವೃತ್ತಂ ಜನೇಶ್ವರಃ |
ಶತ್ರುಭಿರ್ಗ್ರಹಣಂ ಸಂಖೇ ಪುತ್ರಸ್ಯ ಮರಣಂ ತಥಾ ॥10॥
ಆ ನಾರದರನ್ನು ಕಂಡು ರಾಜನು ತನಗುಂಟಾದ ಕಷ್ಟವನ್ನು, ಯುದ್ಧದಲ್ಲಿ ಆದ ಪುತ್ರವಿಯೋಗವನ್ನು ನಾರದರಲ್ಲಿ ಹೇಳಿಕೊಂಡನು.

ತಸ್ಯ ತದ್ವಚನಂ ಶ್ರುತ್ವಾ ನಾರದೋಽಥ ತಪೋಧನಃ |
ಆಖ್ಯಾನಮಿದಮಾಚಷ್ಟ ಪುತ್ರಶೋಕಾಪಹಂ ತದಾ ॥11॥
ತಪೋಧನರಾದ ನಾರದರು ಅವನ ಮಾತುಗಳನ್ನು ಕೇಳಿಸಿಕೊಂಡು, ಪುತ್ರಶೋಕವನ್ನು ಪರಿಹರಿಸುವ ಈ ಆಖ್ಯಾನವನ್ನು ಅವನಿಗೆ ಹೇಳಿದರು.
ರಾಜನ್ ಶೃಣು ಸಮಾಖ್ಯಾನಮದ್ಯೇದಂ ಬಹುವಿಸ್ತರಮ್ |
ಯಥಾ ವೃತ್ತಂ ಶ್ರುತಂ ಚೈವ ಮಯಾಪಿ ವಸುಧಾಧಿಪ ॥12॥
ರಾಜನೇ, ಅತ್ಯಂತ ವಿಸ್ತಾರವಾದ, ದೊಡ್ಡ ಕಥೆಯೊಂದನ್ನು ಅದು ಹೇಗೆ ನಡೆದಿದೆಯೋ ಹಾಗೆ ನಾನು ಕೇಳಿದಂತೆ ನಿನಗೆ ತಿಳಿಸುತ್ತೇನೆ.
ಪ್ರಜಾಃ ಸೃಷ್ಟ್ವಾ ಮಹಾತೇಜಾಃ ಪ್ರಜಾಸರ್ಗೇ ಪಿತಾಮಹಃ |
ಅತೀವ ವೃದ್ಧಾ ಬಹುಲಾ ನಾಮೃಷ್ಯತ ಪುನಃ ಪ್ರಜಾಃ ॥13॥
ಮಹಾತೇಜಸ್ವಿಯಾದ ಪಿತಾಮಹನು ಪ್ರಜೆಗಳನ್ನು ಸೃಷ್ಟಿಸುವ ಕಾಲದಲ್ಲಿ ಅನೇಕ ಪ್ರಜೆಗಳನ್ನು ಸೃಷ್ಟಿಸಿದನು. ಆ ಪ್ರಜೆಗಳು ದಿನ ದಿನ ಚೆನ್ನಾಗಿ ಬೆಳೆದರು. ಆ ಪ್ರಜೆಗಳ ಸಂಖ್ಯೆಯು ಮಿತಿ ಮೀರಿತು. ಹುಟ್ಟಿದವರು ಯಾರೂ ಸಾಯಲೇ ಇಲ್ಲ.
ನ ಹ್ಯಂತರಮಭೂತ್ ಕಿಂಚಿತ್ ಕ್ವಚಿಜ್ಜಂತುಭಿರಚ್ಯುತ |
ನಿರುಚ್ಛ್ವಾಸಮಿವೋನ್ನದ್ಧಂ ತ್ರೈಲೋಕ್ಯಮಭವನ್ನೃಪ ॥14॥
ಬ್ರಹ್ಮನ ಸಹನೆಯು ಮೀರಿತು. ಒಂದು ಪ್ರಾಣಿಗೂ ಮತ್ತೊಂದು ಪ್ರಾಣಿಗೂ ಅಂತರವೇ ಇಲ್ಲದಷ್ಟು ಪ್ರಾಣಿಗಳ ಸಂಖ್ಯೆಯು ಬೆಳೆದು ಹೋಯಿತು. ವಿಶ್ವವೆಲ್ಲವೂ ಪ್ರಾಣಿಗಳ ಸಮುದಾಯದಿಂದಲೇ ತುಂಬಿ ಹೋಯಿತು. ಉಸಿರಾಡುವುದಕ್ಕೂ ಸಾಧ್ಯವಿಲ್ಲದೆ ಇರುವಷ್ಟು ಜನರು ತುಂಬಿ ಹೋದರು.
ತಸ್ಯ ಚಿಂತಾ ಸಮುತ್ಪನ್ನಾ ಸಂಹಾರಂ ಪ್ರತಿ ಭೂಪತೇ |
ಚಿಂತಯನ್ನಾಧ್ಯಗಚ್ಛಚ್ಚ ಸಂಹಾರೇ ಹೇತುಕಾರಣಮ್ ॥15॥
ಇಂತಹ ಪರಿಸ್ಥಿತಿಯಲ್ಲಿ ಬ್ರಹ್ಮನಿಗೆ ಚಿಂತೆಯು ಉತ್ಪನ್ನವಾಯಿತು. ಜನರ ಸಂಹಾರವನ್ನು ಹೇಗೆ ಮಾಡಬೇಕೆಂದು ಯೋಚಿಸಲಾರಂಭಿಸಿದನು. ಎಷ್ಟೇ ಚಿಂತಿಸಿದರೂ ಸಂಹಾರಕ್ಕೆ ಯುಕ್ತಿಯುಕ್ತವಾದ ಯಾವ ಕಾರಣವೂ ತೋರಲೇ ಇಲ್ಲ.
ತಸ್ಯ ರೋಷಾನ್ಮಹಾರಾಜ ಖೇಭ್ಯೋಽಗ್ನಿರುದತಿಷ್ಠತ |
ತೇನ ಸರ್ವಾ ದಿಶೋ ರಾಜಂದದಾಹ ಸ ಪಿತಾಮಹಃ ॥16॥
ಇದರಿಂದ ಬ್ರಹ್ಮನು ರೋಷಾವಿಷ್ಟನಾದನು. ಆ ರೋಷದ ಪರಿಣಾಮದಿಂದ ಬ್ರಹ್ಮನ ಇಂದ್ರಿಯಗಳಿಂದ ಅಗ್ನಿಯು ಉತ್ಪನ್ನವಾಯಿತು. ಆ ಹುಟ್ಟಿದ ಅಗ್ನಿಯಿಂದಲೇ ಪಿತಾಮಹನು ದಿಕ್ಕುಗಳನ್ನು ಸುಡಲಾರಂಭಿಸಿದನು.
ತತೋ ದಿವಂ ಭುವಂ ಖಂ ಚ ಜಗಚ್ಚ ಸಚರಾಚರಮ್ |
ದದಾಹ ಪಾವಕೋ ರಾಜನ್ ಭಗವತ್ಕೋಪಸಂಭವಃ ॥17॥
ಅವನ ಕೋಪಾಗ್ನಿಯಿಂದ ಹುಟ್ಟಿದ ಅಗ್ನಿಯು ಸ್ವರ್ಗವನ್ನು, ಭೂಮಿಯನ್ನು, ಆಕಾಶವನ್ನು, ಸಮಗ್ರ ಚರಾಚರ ಜಗತ್ತನ್ನು ಭಸ್ಮ ಮಾಡಿತು.
ತತ್ರಾದಹ್ಯಂತ ಭೂತಾನಿ ಜಂಗಮಾನಿ ಧ್ರುವಾಣಿ ಚ |
ಮಹತಾ ಕೋಪವೇಗೇನ ಕುಪಿತೇ ಪ್ರಪಿತಾಮಹೇ ॥18॥
ಆ ಪಿತಾಮಹನ ಕ್ರೋಧಾಗ್ನಿಯಿಂದಲೇ ಸ್ಥಾವರ-ಜಂಗಮ ಪ್ರಾಣಿಗಳೆಲ್ಲವೂ ಕರಕಲಾದವು.
ತತೋ ಹರಿಜಟಃ ಸ್ಥಾಣುರ್ವೇದಾಧ್ವರಪತಿಃ ಶಿವಃ |
ಜಗಾದ ಶರಣಂ ದೇವೋ ಬ್ರಹ್ಮಾಣಂ ಪರವೀರಹಾ ॥19॥
ಬಳಿಕ ವೇದಾಧ್ವರಪತಿ, ಸ್ಥಾಣು, ಹರಿಜಟ, ಶಿವ ಮುಂತಾದ ನಾಮಗಳಿಂದ ಖ್ಯಾತನಾದ, ಶತ್ರುಭಯಂಕರನಾದ ಮಹಾರುದ್ರನು ಲೋಕಭಯಕ್ಕಾಗಿ ಚತುರ್ಮುಖನನ್ನು ಮೊರೆ ಹೊಕ್ಕನು.
ತಸ್ಮಿನ್ನಭಿಗತೇ ಸ್ಥಾಣೌ ಪ್ರಜಾನಾಂ ಹಿತಕಾಮ್ಯಯಾ |
ಅಬ್ರವೀದ್ವರದೋ ದೇವೋ ಜ್ವಲನ್ನಿವ ತದಾ ಶಿವಮ್ ॥20॥
ಮಂಗಳಸ್ವರೂಪಿಯಾದ, ಪ್ರಜೆಗಳಿಗೆ ಹಿತವನ್ನುಂಟು ಮಾಡುವ ಇಚ್ಛೆಯಿಂದ ಮಹಾದೇವನು ತನ್ನ ಬಳಿ ಬಂದು ಹೀಗೆ ಪ್ರಾರ್ಥಿಸಿದಾಗ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಪರಮದೇವನಾದ ಬ್ರಹ್ಮನು ಶಿವನನ್ನು ಕುರಿತು ಹೀಗೆ ಹೇಳಿದನು.

ಕರವಾಣ್ಯದ್ಯ ಕಂ ಕಾಮಂ ವರಾಹೋಽಸಿ ಮತೋ ಮಮ |
ಕರ್ತಾ ಹ್ಯಸ್ಮಿ ಪ್ರಿಯಂ ಶಂಭೋ ತವ ಯದ್ಧೃತಿ ವರ್ತತೇ ॥21॥
ರುದ್ರನೇ, ನೀನು ನನ್ನಿಂದ ವರವನ್ನು ಪಡೆಯಲು ಅರ್ಹನಾಗಿರುವಿ. ನಿನ್ನ ಯಾವ ಇಚ್ಛೆಯನ್ನು ನಾನು ಪೂರ್ಣಗೊಳಿಸಲಿ, ನಿನ್ನ ಹೃದಯದಲ್ಲಿರುವ ಪ್ರಿಯವಾದ ಮನೋರಥವನ್ನು ನಾನು ನಡೆಸಿಕೊಡುತ್ತೇನೆ ಎಂದು ಹೇಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆರಡನೆಯ ಅಧ್ಯಾಯ
ಬ್ರಹ್ಮನು ಮೃತ್ಯುವನ್ನು ಸೃಷ್ಟಿಸಿ, ಪ್ರಜಾಸಂಹಾರಕ್ಕಾಗಿ ನಿಯಮಿಸಿದುದು.
ಸ್ಥಾಣುಃ
ಪ್ರಜಾಸರ್ಗನಿಮಿತ್ತಂ ಮೇ ಕಾರ್ಯವತ್ತಾಮಿಮಾಂ ಪ್ರಭೋ |
ವಿದ್ಧಿ ಸೃಷ್ಟಾಸ್ತ್ವಯಾ ಹೀಮಾ ಮಾ ಕ್ರುಧ್ಯಾಸಾಂ ಪಿತಾಮಹ ॥1॥
ಪ್ರಭುವೇ, ಪಿತಾಮಹನೇ, ನನ್ನ ಪ್ರಾರ್ಥನೆಯು ಪ್ರಜಾಸೃಷ್ಟಿಯ ನಿಮಿತ್ತವಾಗಿಯೇ ಇದೆ. ಪ್ರಜಾಸೃಷ್ಟಿಯ ರಕ್ಷಣೆಗಾಗಿಯೇ ನಾನು ಪ್ರಾರ್ಥಿಸುತ್ತಿದ್ದೇನೆ. ನೀನೇ ಸೃಷ್ಟಿಸಿದ ಈ ಪ್ರಜೆಗಳ ವಿಷಯದಲ್ಲಿ ಪಿತಾಮಹನೇ, ನೀನು ಕೋಪ ಹೊಂದಬೇಡ.
ತವ ತೇಜೋಗ್ನಿನಾ ದೇವ ಪ್ರಜಾ ದಹ್ಯಂತಿ ಸರ್ವಶಃ |
ತಾಂ ದೃಷ್ಟ್ವಾ ಮಮ ಕಾರುಣ್ಯಂ ಮಾ ಕ್ರುಧ್ಯಾಸಾಂ ಜಗತ್ಪ್ರಭೋ ॥2॥
ಪಿತಾಮಹನೇ, ನಿನ್ನ ಕೋಪವೆಂಬ ಮಹಾತೇಜಸ್ಸಿನಿಂದ ಹುಟ್ಟಿರುವ ಅಗ್ನಿಯಿಂದ ಪ್ರಜೆಗಳೆಲ್ಲರೂ ಕರಕಲಾಗುತ್ತಿದ್ದಾರೆ. ಹೀಗೆ ದಹಿಸುತ್ತಿರುವ ಪ್ರಜೆಗಳನ್ನು ಕಂಡು ನನಗೆ ಕರುಣೆಯುಂಟಾಗಿದೆ. ಜಗತ್ಪ್ರಭುವೇ, ಇವರಲ್ಲಿ ಕ್ರುದ್ಧನಾಗಬೇಡ.
ಪ್ರಜಾಪತಿಃ
ನ ಕುಪ್ಯೇ ನ ಚ ಮೇ ಕಾಮೋ ನ ಭವೇರನ್ ಪ್ರಜಾ ಇತಿ |
ಲಾಘವಾರ್ಥಂ ಧರಣ್ಯಾಸ್ತು ತತಃ ಸಂಹಾರ ಇಷ್ಯತೇ ॥3॥
ಮಹಾರುದ್ರನೇ, ನಾನು ಪ್ರಜೆಗಳಲ್ಲಿ ಕೋಪ ಹೊಂದುವುದಿಲ್ಲ. ಪ್ರಜೆಗಳೇ ಲೋಕದಲ್ಲಿರಬಾರದೆಂದು ನನ್ನ ಅಭಿಪ್ರಾಯವಲ್ಲ. ಆದರೆ ಪ್ರಾಣಿಗಳಿಂದ ಭೂಮಿಗೆ ಭಾರವು ಅಧಿಕವಾಗಿದೆ. ಅದಕ್ಕಾಗಿ ಈ ಸಂಹಾರಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದೇನೆ.
ಇಯಂ ಹಿ ಮಾಂ ಸದಾ ದೇವೀ ಭಾರಾರ್ತಾ ಸಮಚೋದಯತ್ |
ಸಂಹಾರಾರ್ಥಂ ಮಹಾದೇವ ಭಾರೇಣಾಪ್ಸು ನಿಮಜ್ಜತಿ ॥4॥
ಮಹಾದೇವನೇ, ಪ್ರಜೆಗಳ ಭಾರದಿಂದ ಪೀಡಿತಳಾಗಿ ನೀರಿನಲ್ಲಿ ಮುಳುಗಿ ಹೋಗುತ್ತಿರುವ ಭೂಮಿಯು ಆ ಪ್ರಜೆಗಳ ಉಪಸಂಹಾರಕ್ಕಾಗಿ ನನ್ನನ್ನು ಪ್ರಾರ್ಥಿಸುತ್ತಿದ್ದಾಳೆ.
ಯದಾಹಂ ನಾಧಿಗಚ್ಛಾಮಿ ಬುದ್ಧ್ಯಾ ಬಹು ವಿಚಾರಯನ್ |
ಸಂಹಾರಮಾಸಾಂ ವೃದ್ಧಾನಾಂ ತತೋ ಮಾಂ ಕ್ರೋಧ ಆವಿಶತ್ ॥5॥
ನಾನು ನನ್ನ ಬುದ್ಧಿಯಿಂದ ಎಷ್ಟು ವಿಚಾರ ಮಾಡಿದರೂ ಉಪಾಯವು ತೋರದೆ ನನಗೆ ಚಿಂತೆ ಏರ್ಪಟ್ಟಿದೆ. ಆದ್ದರಿಂದ ಈ ಬೆಳೆದ ಪ್ರಜಾವರ್ಗವನ್ನು ಸಂಹಾರ ಮಾಡಬೇಕು ಎಂದು ಚಿಂತಿಸುತ್ತಿರುವಾಗಲೇ ನನ್ನಲ್ಲಿ ಉಪಾಯವು ಉತ್ಪನ್ನವಾಗದೆ
ಕ್ರೋಧವುಂಟಾಯಿತು.
ಸ್ಥಾಣುಃ
ಸಂಹಾರಾಂತಂ ಪ್ರಸೀದಸ್ವ ಮಾ ಕ್ರುಧಸ್ತ್ರಿದಶೇಶ್ವರ |
ಮಾ ಪ್ರಜಾಃ ಸ್ಥಾವರಂ ವೈ ಚ ಜಂಗಮಂ ಚ ವಿನೀನಶಃ ॥6॥
ಪಿತಾಮಹನೇ, ಇಂತಹ ಸಂಹಾರ ಕಾರ್ಯವನ್ನು ನಿಲ್ಲಿಸು, ಕೋಪವನ್ನು ಅಡಗಿಸು. ಸ್ಥಾವರ-ಜಂಗಮಾತ್ಮಕವಾದ ಪ್ರಪಂಚವನ್ನು ನೀನು ಸಂಹಾರ ಮಾಡಬೇಡ.
ಪಲ್ವಲಾನಿ ಚ ಸರ್ವಾಣಿ ಸರ್ವಂ ಚೈವ ತೃಣೋಲಪಮ್ |
ಸ್ಥಾವರಂ ಜಂಗಮಂ ಚೈವ ಭೂತಗ್ರಾಮಂ ಚತುರ್ವಿಧಮ್ ॥7॥
ನಿನ್ನ ಕೋಪದಿಂದ ಜಲಾಶಯಗಳೆಲ್ಲವೂ ಇಂಗಿಹೋಗಿವೆ. ಹುಲ್ಲು ಕಡ್ಡಿಗಳೆಲ್ಲವೂ ಸುಟ್ಟು ಹೋಗುತ್ತಿವೆ. ಸಸ್ಯವರ್ಗಗಳು ಕರಕಲಾಗಿವೆ. ಚತುರ್ವಿಧ ಜಂಗಮ ಪ್ರಾಣಿಗಳು ದಗ್ಧವಾಗಿವೆ.
ತದೇತದ್ ಭಸ್ಮಸಾದ್ಭೂತಂ ಜಗತ್ ಸರ್ವಮುಪಪ್ಲುತಮ್ |
ಪ್ರಸೀದ ಭಗವನ್ ಸಾಧೋ ವರ ಏಷ ವೃತೋ ಮಯಾ ॥8॥
ಜಗತ್ತೆಲ್ಲವೂ ಅಕಾಲದಲ್ಲಿ ಭಸ್ಮವಾಗುತ್ತಿದೆ. ಮಹಾತ್ಮನೇ ಕರುಣಿಸು, ನಿನ್ನಲ್ಲಿ ವರವನ್ನು ಬೇಡುತ್ತೇನೆ.
ನಷ್ಟಾ ನ ಪುನರೇಷ್ಯಂತಿ ಪ್ರಜಾ ಹ್ಯೇತಾಃ ಕಥಂಚನ |
ತಸ್ಮಾನ್ನಿವರ್ತ್ಯತಾಮೇತತ್ತೇಜಃ ಸ್ವೇನೈವ ತೇಜಸಾ ॥9॥
ಸತ್ತ ಬಳಿಕ ಪ್ರಾಣಿಗಳು ತಿರುಗಿ ಬರಲಾರವು. ನಿನ್ನ ತೇಜಸ್ಸಿನಿಂದಲೇ ನಿನ್ನ ಕೋಪವನ್ನು ನಿಗ್ರಹಿಸಬೇಕಾಗಿದೆ.
ಉಪಾಯಮನ್ಯಂ ಸಂಪಶ್ಯ ಪ್ರಜಾನಾಂ ಹಿತಕಾಮ್ಯಯಾ |

ಯಥೇಮೇ ಜಂತವಃ ಸರ್ವೇ ನಿವರ್ತೇರನ್ ಪರಂತಪ ॥10॥
ಪ್ರಜೆಗಳ ಹಿತಕ್ಕಾಗಿ ಬೇರೆ ಯಾವುದಾದರೂ ಉಪಾಯವನ್ನು ಅನ್ವೇಷಣೆ ಮಾಡು. ಪ್ರಾಣಿಗಳೆಲ್ಲವೂ ತಮ್ಮ ಸಂತತಿಗಳಿಂದ ಬದುಕುವಂತಾಗಲಿ.
ಅಭಾವಮಭಿಗಚ್ಛೇಯುರುತ್ಸನ್ನಪ್ರಜನಾಃ ಪ್ರಜಾಃ।
ಅಧಿದೈವನಿಯುಕ್ತೋಽಸ್ಮಿ ತ್ವಯಾ ಲೋಕೇಷ್ವಿಹೇಶ್ವರ ॥11॥
ಪ್ರಜೆಗಳ ಸಂತಾನವೇ ನಾಶವಾದರೆ ಪ್ರಜೆಗಳೇ ಇರುವುದಿಲ್ಲ. ನಾನು ಪ್ರಜೆಗಳ ರಕ್ಷಣಾರ್ಥವಾಗಿಯೇ ನಿನ್ನಿಂದ ನಿಯುಕ್ತನಾಗಿದ್ದೇನೆ. ಆದ್ದರಿಂದ ನನ್ನ ಪ್ರಾರ್ಥನೆಯಂತೆ ಸಂಹಾರ ಕಾರ್ಯವನ್ನು ನಿಲ್ಲಿಸು.
ತ್ವದ್ಭವಂ ಹಿ ಜಗನ್ನಾಥ ಜಗತ್ ಸ್ಥಾವರಜಂಗಮಮ್।
ಪ್ರಸಾದ್ಯ ತ್ವಾಂ ಮಹಾದೇವ ಯಾಚಾಮ್ಯಾವೃತ್ತಿಜಾಃ ಪ್ರಜಾಃ ॥12॥
ಜಗನ್ನಾಥನೇ, ಸಮಸ್ತ ಚರಾಚರ ಪ್ರಾಣಿಗಳು ನಿನ್ನಿಂದ ಸೃಷ್ಟವಾಗಿವೆ. ಆದ್ದರಿಂದ ನಿನ್ನಲ್ಲಿಯೇ ಪ್ರಾರ್ಥಿಸುತ್ತಿದ್ದೇನೆ. ಸತ್ತ ಪ್ರಾಣಿಗಳೆಲ್ಲ ನಿನ್ನಿಂದ ಹುಟ್ಟುವಂತಾಗಲಿ.
ನಾರದಃ
ಶ್ರುತ್ವಾ ತು ವಚನಂ ದೇವಃ ಸ್ಥಾಣೋರ್ನಿಯತವಾಙ್ಮನಾಃ।
ತೇಜಸ್ತತ್ಸ್ವಂ ನಿಜಗ್ರಾಹ ಪುನರೇವಾಂತರಾತ್ಮನಾ ॥13॥
ತತೋಽಗ್ನಿಮುಪಸಂಗೃಹ್ಯ ಭಗವಾಲ್ಲೋಕಪೂಜಿತಃ।
ಪ್ರವೃತ್ತಿಂ ಚ ನಿವೃತ್ತಿಂ ಚ ಕಲ್ಪಯಾಮಾಸ ವೈ ಪ್ರಭುಃ ॥14॥
ನಿಗ್ರಹವುಳ್ಳ ಮಾತು, ಮನಸ್ಸುಗಳಿಂದ ಕೂಡಿರುವ ಚತುರ್ಮುಖ ಬ್ರಹ್ಮನು ಸ್ಥಾಣುವಿನ ಈ ಮಾತುಗಳನ್ನು ಕೇಳಿ, ಕೋಪದಿಂದ ಉಂಟಾದ ತೇಜಸ್ಸನ್ನು ತನ್ನಲ್ಲಿ ಉಪಸಂಹರಿಸಿ, ಅದನ್ನು ಅಲ್ಲಿಯೇ ಅಡಗಿಸಿಕೊಂಡನು. ಆಗ ಲೋಕ ಪೂಜಿತನಾದ ಬ್ರಹ್ಮನು ಕೋಪಾಗ್ನಿಯನ್ನು ಉಪಸಂಹಾರ ಮಾಡಿ, ಪ್ರಜೆಗಳಿಗಾಗಿ ಮತ್ತೊಂದು ಕ್ರಮದಿಂದ ಹುಟ್ಟು-ಸಾವುಗಳ ಮಾರ್ಗವನ್ನು ವ್ಯವಸ್ಥೆ ಮಾಡಿದನು.
ಉಪಸಂಹರತಸ್ತಸ್ಯ ತಮಗ್ನಿಂ ರೋಷಜಂ ತದಾ।
ಪ್ರಾದುರ್ಬಭೂವ ವಿಶ್ವೇಭ್ಯಃ ಖೇಭ್ಯೋ ನಾರೀ ಮಹಾತ್ಮನಃ ॥15॥
ಹೀಗೆ ಬ್ರಹ್ಮನು ತನ್ನ ಕೋಪದಿಂದ ಉತ್ಪನ್ನವಾದ ಅಗ್ನಿಯನ್ನು ತನ್ನಲ್ಲಿ ಉಪಸಂಹಾರ ಮಾಡಿಕೊಂಡಾಗ ಮಹಾತ್ಮನಾದ ಆ ಬ್ರಹ್ಮನ ಸಮಸ್ತ ಇಂದ್ರಿಯಗಳಿಂದ ಒಬ್ಬ ನಾರಿಯು ಉತ್ಪನ್ನಳಾದಳು.
ಕೃಷ್ಣಾ ರಕ್ತಾಂಬರಧರಾ ರಕ್ತನೇತ್ರತಲಾಂತರಾ।
ದಿವ್ಯಕುಂಡಲಸಂಪನ್ನಾ ದಿವ್ಯಾಭರಣಭೂಷಿತಾ ॥16॥
ಆಕೆಯು ಕೆಂಪು, ಕಪ್ಪು ವಸ್ತ್ರಗಳನ್ನು ಧರಿಸಿದ್ದಳು. ಗುಳಿಬಿದ್ದ ಕಪ್ಪಾದ ಕಣ್ಣುಗಳುಳ್ಳವಳಾಗಿದ್ದಳು. ದಿವ್ಯವಾದ ಕುಂಡಲಗಳಿಂದ ಅಲಂಕೃತಳಾಗಿದ್ದಳು. ದಿವ್ಯವಾದ ಆಭರಣಗಳಿಂದಲೂ ಭೂಷಿತಳಾಗಿದ್ದಳು.
ಸಾ ವಿನಿಃಸೃತ್ಯ ವೈ ಖೇಭ್ಯೋ ದಕ್ಷಿಣಾಮಾಶ್ರಿತಾ ದಿಶಮ್।
ದದೃಶಾತೇಥ ತೌ ಕನ್ಯಾಂ ದೇವೌ ವಿಶ್ವೇಶ್ವರಾವುಭೌ ॥17॥
ಆ ನಾರಿಯು ಬ್ರಹ್ಮನ ಅವಯವಗಳಿಂದ ಹೊರಟು ದಕ್ಷಿಣ ದಿಕ್ಕಿನ ಕಡೆ ತೆರಳಿದಳು. ಆ ಕನ್ಯೆಯನ್ನು ಬ್ರಹ್ಮ-ರುದ್ರರು ನೋಡಿದರು.
ತಾಮಾಹೂಯ ತದಾ ದೇವೋ ಲೋಕಾನಾಮಾದಿರೀಶ್ವರಃ।
ಮೃತ್ಯೋ ಇತಿ ಮಹೀಪಾಲ ಜಹಿ ಚೇಮಾಃ ಪ್ರಜಾ ಇತಿ ॥18॥
ಬ್ರಹ್ಮನು ಅವಳನ್ನು ಕುರಿತು ಮೃತ್ಯು ದೇವತೆಯೇ ಎಂದು ಕರೆದು, ನಾನೇ ಪ್ರಾಣಿಗಳ ಸಂಹಾರಕ್ಕಾಗಿ ನಿನ್ನನ್ನು ನಿರ್ಮಿಸಿದ್ದೇನೆ. ನೀನು ಪ್ರಜೆಗಳನ್ನು ಸಂಹರಿಸಬೇಕು ಎಂದು ಹೇಳಿದನು.
ತ್ವಂ ಹಿ ಸಂಹಾರಬುದ್ಧ್ಯಾ ಮೇ ಚಿಂತಿತಾ ರುಷಿತೇನ ಚ।
ತಸ್ಮಾತ್ ಸಂಹರ ಸರ್ವಾಸ್ತ್ವಂ ಪ್ರಜಾಃ ಸಜಡಪಂಡಿತಾಃ ॥19॥
ಅವಿಶೇಷೇಣ ಚೈವ ತ್ವಂ ಪ್ರಜಾಃ ಸಂಹರ ಭಾಮಿನಿ।
ಮಮ ತ್ವಂ ಹಿ ನಿಯೋಗೇನ ಶ್ರೇಯಃ ಪರಮವಾಪ್ಸ್ಯಸಿ ॥20॥
ರೋಷಗೊಂಡ ನನ್ನಿಂದ ಸಂಹಾರಬುದ್ಧಿಯಿಂದಲೇ ಚಿಂತಿಸಲ್ಪಟ್ಟವಳಾಗಿ ನೀನು ಉತ್ಪನ್ನಳಾಗಿರುವೆ. ಆದ್ದರಿಂದ ಪಂಡಿತ, ಮೂಢ, ಭಾಗ್ಯವಂತ ಎಂಬ ಭೇದವಿಲ್ಲದೆ ಎಲ್ಲರನ್ನೂ ನೀನು ಸಂಹರಿಸು. ನನ್ನ ಆಜ್ಞೆಯಿಂದ ನಿನಗೆ ಶ್ರೇಯಸ್ಸು ಉಂಟಾಗಲಿ.
ಏವಮುಕ್ತಾ ತು ಸಾ ದೇವೀ ಮೃತ್ಯುಃ ಕಮಲಮಾಲಿನೀ।
ಪ್ರದಧ್ಯೌ ದುಃಖಿತಾ ಬಾಲಾ ಸಾಶ್ರುಪಾತಮತೀವ ಹಿ ॥21॥
ಬ್ರಹ್ಮದೇವನ ಬಾಯಿಂದ ಹೊರಟ ಮಾತುಗಳನ್ನು ಕೇಳಿ, ಕಮಲಪುಷ್ಪಗಳ ಮಾಲೆಗಳಿಂದ ಅಲಂಕೃತಳಾಗಿದ್ದ ಮೃತ್ಯುದೇವತೆಯು ಕಣ್ಣೀರು ಸುರಿಸುತ್ತಾ ಚಿಂತಾಮಗ್ನಳಾದಳು. ಅವಳ ಕಣ್ಣಿನಿಂದ ಧಾರೆಯಾಗಿ ನೀರು ಸುರಿಯತೊಡಗಿತು.
ಪಾಣಿಭ್ಯಾಂ ಚೈವ ಜಗ್ರಾಹ ತಾನ್ಯಶ್ರೂಣಿ ಜನೇಶ್ವರಃ।
ಮಾನವಾನಾಂ ಹಿತಾರ್ಥಾಯ ಯಯಾಚೇ ಪುನರೇವ ಚ ॥22॥
ಅದನ್ನು ಕಂಡ ಬ್ರಹ್ಮನು ಅವಳ ಕಣ್ಣೀರನ್ನು ತಾನೇ ಕೈಯೊಡ್ಡಿ ತಡೆದು, ಅಂಜಲಿಯಿಂದ ಹಿಡಿದುಕೊಂಡನು. ಪ್ರಜೆಗಳ ಹಿತಕ್ಕಾಗಿಯೇ ಈ ಆದೇಶವನ್ನು ಮಾಡಿದ್ದೇನೆಂದು ಪುನಃ ಅವಳನ್ನು ಸಂತೈಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಿನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ಮೂರನೆಯ ಅಧ್ಯಾಯ
ನಾರದರು ಅಕಂಪನನ ಪುತ್ರಶೋಕವನ್ನು ಪರಿಹರಿಸಲು ಮೃತ್ಯು-ಬ್ರಹ್ಮಾದಿಗಳಿಗೆ ನಡೆದ ಸಂವಾದವನ್ನು ನಿರೂಪಿಸಿದುದು.
ನಾರದಃ
ವಿನೀಯ ದುಃಖಮಬಲಾ ಸಾ ತ್ವತೀವಾಯತೇಕ್ಷಣಾ |
ಉವಾಚ ಪ್ರಾಂಜಲಿರ್ಭೂತ್ವಾ ಲತೇವಾವರ್ಜಿತಾ ತದಾ ॥1॥
ರಾಜನೇ, ಮೃತ್ಯುದೇವತೆಯು ತನಗುಂಟಾದ ದುಃಖವನ್ನು ಪ್ರಯತ್ನ ಪೂರ್ವಕವಾಗಿ ತಡೆದುಕೊಂಡು, ಬಗ್ಗಿದ ಲತೆಯಂತೆ ವಿನಮ್ರಳಾಗಿ, ಬದ್ಧಾಂಜಲಿಯಾಗಿ ನಿಂತು ಬ್ರಹ್ಮದೇವರಿಗೆ ಹೀಗೆ ಹೇಳಿದಳು.
ತ್ವಯಾ ಸೃಷ್ಟಾ ಕಥಂ ನಾರೀ ಮಾದೃಶೀ ವದತಾಂ ವರ |
ರೌದ್ರಕರ್ಮಾಭಿಜಾಯೇತ ಸರ್ವಪ್ರಾಣಿಭಯಂಕರೀ ॥2॥
ವಾಗ್ಮಿಶ್ರೇಷ್ಠನೇ, ಒಂದು ವೇಳೆ ನಿನಗೆ ನನ್ನಿಂದ ಕ್ರೂರ ಕರ್ಮಗಳನ್ನು ಮಾಡಿಸುವ ಇಚ್ಛೆಯೇ ಇದ್ದಲ್ಲಿ, ನನ್ನಂತಹ ಕೋಮಲ ಹೃದಯಳಾದ ನಾರಿಯನ್ನು ಏಕೆ ಸೃಷ್ಟಿ ಮಾಡಿರುವಿ? ನನ್ನಂತಹ ಸ್ತ್ರೀಗೆ ಸರ್ವಪ್ರಾಣಿಗಳಿಗೂ ಭಯಂಕರವಾದ ಕ್ರೂರಕರ್ಮವನ್ನು ಮಾಡಲು ಹೇಗೆ ಸಾಧ್ಯವಾಗುತ್ತದೆ?
ಬಿಭೇಮ್ಯಹಮಧರ್ಮಸ್ಯ ಧರ್ಮ್ಯಮಾದಿಶ ಕರ್ಮ ಮೇ |
ತ್ವಂ ಮಾಂ ಭೀತಾಮವೇಕ್ಷಸ್ವ ಶಿವೇನೇಶ್ವರ ಚಕ್ಷುಷಾ ॥3॥
ಅಧರ್ಮಕ್ಕೆ ನನ್ನ ಮನಸ್ಸು ಸಮ್ಮತಿಸುತ್ತಿಲ್ಲ. ಬೇರೆ ಯಾವುದಾದರೂ ಧರ್ಮಯುಕ್ತವಾದ ಕಾರ್ಯವನ್ನು ನನಗೆ ಆದೇಶಿಸು. ಹೆದರಿರುವ ನನ್ನನ್ನು ನೀನು ನೋಡು. ಶುಭಕರವಾದ ನಿನ್ನ ದೃಷ್ಟಿಯು ನನ್ನಲ್ಲಿರಲಿ.
ಬಾಲಾನ್ವೃದ್ಧಾನ್ವಯಃಸ್ಥಾಂಶ್ಚ ನ ಹರೇಯಮನಾಗಸಃ |
ಪ್ರಾಣಿನಃ ಪ್ರಾಣಿನಾಮೀಶ ನಮಸ್ತೇಽಭಿಪ್ರಸೀದ ಮೇ ॥4॥
ನಾನು ನಿರಪರಾಧಿಗಳಾದ ಬಾಲಕರನ್ನು, ವೃದ್ಧರನ್ನು, ತರುಣರನ್ನು, ಇತರ ಪ್ರಾಣಿಗಳನ್ನು ಕಾರಣವಿಲ್ಲದೆ ಕೊಲ್ಲಲಾರೆನು. ನಿನ್ನನ್ನು ನಮಸ್ಕರಿಸಿ ಬೇಡಿಕೊಳ್ಳುತ್ತೇನೆ. ತಂದೆಯೇ, ನನ್ನ ವಿಷಯದಲ್ಲಿ ಪ್ರಸನ್ನನಾಗು.
ಪ್ರಿಯಾನ್ ಪುತ್ರಾನ್ ವಯಸ್ಯಾಂಶ್ಚ ಭ್ರಾತೃೂನ್ ಮಾತೃಃ ಪಿತೃೂನಪಿ |
ಅಪಧ್ಯಾಸ್ಯಂತಿ ಯದ್ದೇವ ಮೃತಾಂಸ್ತೇಷಾಂ ಬಿಭೇಮ್ಯಹಮ್ ॥5॥
ಪ್ರೀತಿಪಾತ್ರರಾದ ಮಕ್ಕಳು, ಬಾಲಕರು, ತಂದೆ, ತಾಯಿ, ಸಹೋದರರು ಇವರಲ್ಲಿ ಒಬ್ಬರಿಂದೊಬ್ಬರನ್ನು ಅಗಲಿಸಿ, ಸಾಯಿಸುತ್ತಾ ಹೋದರೆ ಅವರು, ಮೃತರಾದವರ ಸಂಬಂಧಿಗಳು ನನ್ನನ್ನು ಶಪಿಸದೆ ಬಿಡುತ್ತಾರೆಯೇ? ಅದನ್ನು ಸ್ಮರಿಸಿದಾಗಲೆ ನಾನು ಹೆದರುತ್ತಿದ್ದೇನೆ.
ಕೃಪಣಾಶ್ರುಪರಿಕ್ಲೇದೋ ದಹೇನ್ಮಾಂ ಶಾಶ್ವತೀಃ ಸಮಾಃ |
ತೇಭ್ಯೋಽಹಂ ಬಲವದ್ಭೀತಾ ಶರಣಂ ತ್ವಾಮುಪಾಗತಾ ॥6॥
ದುಃಖಿಸುವ ಜನರ ಕಣ್ಣೀರು ಅನೇಕ ವರ್ಷಗಳ ಕಾಲ ನನ್ನನ್ನು ಸುಟ್ಟು ಹಾಕುತ್ತದೆ. ಅಂತಹ ವ್ಯಕ್ತಿಗಳಿಂದ ನಾನು ಭೀತಳಾಗಿದ್ದೇನೆ. ನಿನ್ನಲ್ಲಿಯೇ ಶರಣು ಹೊಕ್ಕಿದ್ದೇನೆ.
ಯಮಸ್ಯ ಭವನೇ ದೇವ ಯಾತ್ಯಂತೇ ಪಾಪಕರ್ಮಿಣಃ |
ಪ್ರಸಾದಯೇ ತ್ವಾ ವರದ ಪ್ರಸಾದಂ ಕುರು ಮೇ ಪ್ರಭೋ ॥7॥
ಪಾಪಕರ್ಮಿಗಳು ಯಮನ ಗೃಹಕ್ಕೆ ಕೊನೆಗೆ ನನ್ನಿಂದ ದೂಡಲ್ಪಡುತ್ತಾರೆ. ನೀನು ಪ್ರಸನ್ನ ಮನಸ್ಸಿನಿಂದ ಅನುಗ್ರಹಿಸುವುದಾದರೆ ನನಗೊಂದು ವರವನ್ನು ನೀಡು.
ಏತಮಿಚ್ಛಾಮ್ಯಹಂ ಕಾಮಂ ತ್ವತ್ತೋ ಲೋಕಪಿತಾಮಹ |
ಇಚ್ಛೇಯಂ ತ್ವತ್ಪ್ರಸಾದಾಚ್ಚ ತಪಸ್ತಪ್ತುಂ ಸುರೇಶ್ವರ ॥8॥
ನಿನ್ನಿಂದ ಪಿತಾಮಹನೇ, ನಾನೊಂದು ವರವನ್ನು ಬೇಡಲು ಬಯಸುತ್ತೇನೆ. ನಿನ್ನ ಅನುಗ್ರಹದಿಂದ ನಾನು ತಪಸ್ಸನ್ನು ಮಾಡಲು ಹೊರಡುತ್ತೇನೆ. ನನಗೆ ಅನುಮತಿಯನ್ನು ನೀಡು.
ಪಿತಾಮಹಃ
ಮೃತ್ಯೋ ಸಂಕಲ್ಪಿತಾ ಮೇ ತ್ವಂ ಪ್ರಜಾಸಂಹಾರಹೇತುನಾ |
ಗಚ್ಛ ಸಂಹರ ಸರ್ವಾಸ್ತ್ವಂ ಪ್ರಜಾ ಮಾ ಚ ವಿಚಾರಯ ॥9॥
ಮೃತ್ಯುದೇವತೆಯೇ, ನಾನು ಕೋಪಾವೇಷದಲ್ಲಿ ಇದ್ದಾಗ ಪ್ರಜೆಗಳ ಸಂಹಾರದ ಉದ್ದೇಶದಿಂದ ನಿನ್ನನ್ನು ಸೃಷ್ಟಿಸಿದ್ದೇನೆ. ಆದ್ದರಿಂದ ನಿನ್ನ ಕೆಲಸವು ಸಂಹಾರಕ್ಕೆ ಸಂಬಂಧಿಸಿದುದಾಗಿದೆ ಎಂದು ತಿಳಿ. ಇದರಲ್ಲಿ ಯಾವ ಸಂದೇಹವನ್ನು ಹೊಂದಬೇಡ.
ಏತದೇವಮವಶ್ಯಂ ಹಿ ಭವಿತಾ ನೈತದನ್ಯಥಾ |
ಕ್ರಿಯತಾಮನವದ್ಯಾಂಗಾ ಯಥೋಕ್ತಂ ಮದ್ವಚೋಽನಘೇ ॥10॥
ಇದು ಅವಶ್ಯವಾಗಿಯೂ ಹೀಗೆ ನಡೆಯಬೇಕಲ್ಲದೆ ಇದಕ್ಕೆ ವಿರುದ್ಧವಾಗಿ ನಡೆಯಬಾರದು. ನಿರ್ದುಷ್ಟವಾದ ಶರೀರವುಳ್ಳವಳೇ, ಅನೆಯೇ, ನಾನು ಹೇಳಿದಂತೆ ನೀನು ಮಾಡು.
ನಾರದಃ

ಏವಮುಕ್ತಾ ಮಹಾಬಾಹೋ ಮೃತ್ಯುಃ ಪರಪುರಂಜಯ |
ನ ವ್ಯಾಜಹಾರ ತಸ್ಥೌ ಚ ಪ್ರಹ್ವಾ ಭಗವದುನ್ಮುಖೀ ॥11॥
ಶತ್ರುಸಂಹಾರಕನಾದ ಅಕಂಪನನೇ, ಮಹಾಬಾಹುವಾದ ಚಕ್ರವರ್ತಿಯೇ, ಈ ರೀತಿಯಾಗಿ ಚತುರ್ಮುಖ ಬ್ರಹ್ಮನು ನುಡಿಯಲು ಮೃತ್ಯುದೇವತೆಯು ಮರುಮಾತನಾಡಲಿಲ್ಲ. ಬ್ರಹ್ಮನ ಮುಂದೆ ಏನೂ ಮಾತನಾಡದೆ ತಲೆ ತಗ್ಗಿಸಿ ಸುಮ್ಮನೆ ನಿಂತಳು.
ಪುನಃ ಪುನರಥೋಕ್ತಾ ಸಾ ಗತಸತ್ತ್ವೇವ ಭಾಮಿನೀ |
ತೂಷ್ಣೀಮಾಸೀತ್ತತೋ ದೇವೋ ದೇವಾನಾಮೀಶ್ವರೇಶ್ವರಃ ॥12॥
ಪ್ರಸಸಾದ ಕಿಲ ಬ್ರಹ್ಮಾ ಸ್ವಯಮೇವಾತ್ಮನಾತ್ಮವಾನ್ |
ಸ್ಮಯಮಾನಶ್ಚ ಲೋಕೇಶೋ ಲೋಕಾನ್ ಸರ್ವಾನವೈಕ್ಷತ ॥13॥
ಚತುರ್ಮುಖ ಬ್ರಹ್ಮನಾದರೂ ಪುನಃ ಪುನಃ ಹೀಗೆ ನಿರ್ಬಂಧಿಸಿದನು. ಆ ಮೃತ್ಯುದೇವತೆಯು ಸತ್ತ್ವಹೀನಳಂತೆ ಸುಮ್ಮನೆ ನಿಂತಳು. ದೇವತೆಗಳಿಗೆಲ್ಲ ಒಡೆಯನಾದ ಬ್ರಹ್ಮನು ತಾನೇ ಕೋಪವನ್ನು ಅಡಗಿಸಿಕೊಂಡು, ಮಂದಹಾಸವನ್ನು ಬೀರುತ್ತಾ ಸಮಸ್ತ ಲೋಕಗಳನ್ನು ಪ್ರೀತಿಯಿಂದಲೇ ನೋಡಿದನು.
ನಿವೃತ್ತರೋಷೇ ತಸ್ಮಿಂಸ್ತು ಭಗವತ್ಯಪರಾಜಿತೇ |
ಸಾ ಕನ್ಯಾಪಜಗಾಮಾಸ್ಯ ಸಮೀಪಾದಿತಿ ನಃ ಶ್ರುತಮ್ ॥14॥
ಬ್ರಹ್ಮನ ಕೋಪವು ಶಾಂತವಾದ ಬಳಿಕ ಆ ಕನ್ಯೆಯು ಚತುರ್ಮುಖ ಬ್ರಹ್ಮನ ಸಮೀಪದಿಂದ ಹೊರಟು ಹೋದಳು ಎಂದು ನಾವು ಕೇಳಿಸಿಕೊಂಡಿದ್ದೇವೆ.
ಅಪಸೃತ್ಯಾಪ್ರತಿಶ್ರುತ್ಯ ಪ್ರಜಾಸಂಹರಣಂ ತದಾ |
ತ್ವರಮಾಣೇವ ರಾಜೇಂದ್ರ ಮೃತ್ಯುರ್ಧೇನುಕಮಭ್ಯಯಾತ್ ॥15॥
ಆ ಕನ್ಯೆಯು ಪ್ರಜಾಸಂಹಾರ ಕಾರ್ಯವನ್ನು ಮಾಡುತ್ತೇನೆ ಎಂದು ಸಮ್ಮತಿಯ ಮಾತುಗಳನ್ನು ಬ್ರಹ್ಮನಿಗೆ ನೀಡದೆ ಅಲ್ಲಿಂದ ಬಹಳ ವೇಗವಾಗಿ ಗೋತೀರ್ಥದ ಕಡೆಗೆ ತಪಸ್ಸನ್ನಾಚರಿಸಲು ತೆರಳಿದಳು.
ಸಾ ತತ್ರ ಪರಮಂ ದೇವೀ ತಪೋಽಚರತ ದುಶ್ಚರಮ್ |
ಸಮಾ ಹ್ಯೇಕಪದೇ ತಸ್ಥೌ ದಶ ಪದ್ಮಾನಿ ಪಂಚ ಚ ॥16॥
ಅಲ್ಲಿ ಆ ಮೃತ್ಯುದೇವಿಯು ಅತ್ಯಂತ ಘೋರವಾದ, ಯಾರಿಂದಲೂ ಆಚರಿಸಲಾಗದ ತಪಸ್ಸನ್ನು ಆಚರಿಸಲು ಪ್ರಾರಂಭಿಸಿದಳು. ಒಂದೇ ಪಾದದಲ್ಲಿ ನಿಂತು ಹದಿನೈದು ಪದ್ಮ ಸಂವತ್ಸರಗಳ ತನಕ ತಪಸ್ಸನ್ನು ಮಾಡುತ್ತಿದ್ದಳು.
ತಾಂ ತಥಾ ಕುರ್ವತೀಂ ತತ್ರ ತಪಃ ಪರಮದುಶ್ಚರಮ್ |
ಪುನರೇವ ಮಹಾತೇಜಾ ಬ್ರಹ್ಮಾ ವಚನಮಬ್ರವೀತ್ ॥17॥
ಆ ರೀತಿ ದುಶ್ಚರವಾದ ತಪಸ್ಸನ್ನು ಮಾಡುತ್ತಿರುವ ಮೃತ್ಯುದೇವತೆಯ ಬಳಿ ಮಹಾತೇಜಸ್ವಿಯಾದ ಚತುರ್ಮುಖ ಬ್ರಹ್ಮನು ಪುನಃ ಆಗಮಿಸಿ ಹೀಗೆ ಹೇಳಿದನು.
ಕುರುಷ್ವ ಮೇ ವಚೋ ಮೃತ್ಯೋ ತದನಾದೃತ್ಯ ಸತ್ವರಾ |
ತಥೈವೈಕಪದೇ ತಾತ ಪುನರನ್ಯಾನಿ ಸಪ್ತ ಸಾ ॥18॥
ಮೃತ್ಯುದೇವತೆಯೇ, ನನ್ನ ಮಾತನ್ನು ಪರಿಪಾಲಿಸು ಎಂದು ಹೇಳಿದನು. ಆದರೆ ಮೃತ್ಯುದೇವತೆಯು ಅನಾದರಣೆ ಮಾಡಿ ಪುನಃ ಒಂದೇ ಪಾದದಲ್ಲಿ ನಿಂತು ಪುನಃ ಏಳು ಪದ್ಮಸಂಖ್ಯೆಯ ಸಂವತ್ಸರಗಳ ಕಾಲ ತಪಸ್ಸನ್ನಾಚರಿಸಿದಳು.
ತಸ್ಥೌ ಪದ್ಮಾನಿ ಷಟ್ ಚೈವ ಪಂಚ ದ್ವೇ ಚೈವ ಮಾನದ |
ಭೂಯಃ ಪದ್ಮಾಯುತಂ ತಾತ ಮೃಗೈಃ ಸಹ ಚಚಾರ ಸಾ ॥19॥
ಪೂಜ್ಯನೇ, ಇದಾದ ಬಳಿಕ ಪುನಃ ಆ ಮೃತ್ಯುದೇವತೆಯು ಒಂದೇ ಬೆರಳಿನಲ್ಲಿ ಹದಿನಾರು ಸಾವಿರ ಪದ್ಮಸಂವತ್ಸರಗಳ ಕಾಲ ತಪಸ್ಸನ್ನಾಚರಿಸಿದಳು. ಪುನಃ ಮೃಗಗಳ ಜೊತೆಗೆ ಸೇರಿ ಹತ್ತು ಸಾವಿರ ಪದ್ಮವರ್ಷಗಳ ಕಾಲ ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನಾಚರಿಸಿದಳು.
ಪುನರ್ಗತ್ವಾ ತತೋ ರಾಜನ್ ಮೌನಮಾತಿಷ್ಠದುತ್ತಮಮ್ |
ಅಪ್ಸು ವರ್ಷಸಹಸ್ರಾಣಿ ಸಪ್ತ ಚೈಕಂ ಚ ಪಾರ್ಥಿವ ॥20॥
ಪುನಃ ಮೃತ್ಯುದೇವತೆಯು ಉತ್ತಮವಾದ ಮೌನವ್ರತವನ್ನು ಧರಿಸಿ ಎಂಟು ಸಾವಿರ ವರ್ಷಗಳ ಕಾಲ ನೀರಿನಲ್ಲಿ ನಿಂತು ತಪಸ್ಸನ್ನು ಮಾಡಿದಳು.
ತತೋ ಜಗಾಮ ಸಾ ಕನ್ಯಾ ಕೌಶಿಕೀಂ ಭರತರ್ಷಭ |
ತತ್ರ ವಾಯುಜಲಾಹಾರಾ ಚಚಾರ ನಿಯಮಂ ಪುನಃ ॥21॥
ಬಳಿಕ ಆ ಮೃತ್ಯುಕನ್ಯೆಯು ಕೌಶಿಕೀ ನದಿಯ ತೀರಕ್ಕೆ ಹೋದಳು. ಅಲ್ಲಿ ಪುನಃ ಗಾಳಿ ಮತ್ತು ನೀರನ್ನೇ ಆಹಾರವಾಗಿ ಮಾಡಿಕೊಂಡು ಕಠೋರವಾದ ನಿಯಮಗಳನ್ನು ಪಾಲಿಸುತ್ತಿದ್ದಳು.
ತತೋ ಯಯೌ ಮಹಾಭಾಗಾ ಗಂಗಾಂ ಮೇರುಂ ಚ ಕೇವಲಮ್ |
ತಸ್ಥೌ ದಾರ್ವಿವ ನಿಶ್ಚೇಷ್ಟಾ ಭೂತಾನಾಂ ಹಿತಕಾಮ್ಯಯಾ ॥22॥
ನಂತರ ಮಹಾಭಾಗ್ಯಶಾಲಿನಿಯಾದ ಮೃತ್ಯುದೇವತೆಯು ಗಂಗಾನದಿಯ ತೀರಕ್ಕೂ, ಅಲ್ಲಿಂದ ಮೇರುಪರ್ವತಕ್ಕೂ ಹೋಗಿ, ಪ್ರಜೆಗಳಿಗೆಲ್ಲ ಹಿತಮಾಡುವ ದೃಷ್ಟಿಯಿಂದ ಮರದ ಕೊರಡಿನಂತೆ ನಿಶ್ಚೇಷ್ಟಳಾಗಿ ನಿಂತು ತಪಸ್ಸನ್ನು ಮಾಡಿದಳು.
ತತೋ ಹಿಮವತೋ ಮೂರ್ಧ್ನಿ ಯತ್ರ ದೇವಾಃ ಸಮೀಜಿರೇ |
ತತ್ರಾಂಗುಷ್ಠೇನ ರಾಜೇಂದ್ರ ನಿಖರ್ವಮಪರಂ ತತಃ |

ತಸ್ಮೌ ಪಿತಾಮಹಂ ಚೈವ ತೋಷಯಾಮಾಸ ಯತ್ನತಃ ॥23॥
ಬಳಿಕ ಮೃತ್ಯುದೇವತೆಯು ಮೇರು ಪರ್ವತದಿಂದ ಹಿಮವದ್ ಪರ್ವತದ ಶಿಖರಕ್ಕೆ ಮರಳಿ ಬಂದು, ಕಾಲಿನ ಹೆಬ್ಬೆರಳಿನಲ್ಲಿ ನಿಂತು ನಿಖರ್ವ ವರ್ಷಗಳ ಪರ್ಯಂತ ಅರ್ಥಾತ್ ಹತ್ತುಸಾವಿರ ಕೋಟಿ ವರ್ಷಗಳ ತಪಸ್ಸನ್ನು ಮಾಡಿ, ನಿರಂತರ ಪ್ರಯತ್ನದಿಂದ ಚತುರ್ಮುಖ ಬ್ರಹ್ಮನನ್ನು ಸಂತೋಷಪಡಿಸಿದಳು.
ತತಸ್ತಾಮಬ್ರವೀತ್ತತ್ರ ಲೋಕಾನಾಂ ಪ್ರಭವಾಪ್ಯಯಃ |
ಕಿಮಿದಂ ವರ್ತತೇ ಪುತ್ರಿ ಕ್ರಿಯತಾಂ ತದ್ವಚೋ ಮಮ ॥24॥
ಲೋಕಗಳ ಸೃಷ್ಟಿಕಾರಣನಾದ ಚತುರ್ಮುಖ ಬ್ರಹ್ಮನು ಮೃತ್ಯುದೇವತೆಯ ಬಳಿ ಬಂದು ಅವಳನ್ನುದ್ದೇಶಿಸಿ- `ಮಗಳೇ, ನೀನು ಏನು ಮಾಡುತ್ತಿರುವೆ?ನಾನು ಹೇಳಿದಂತೆ ಮಾಡು' ಎಂದು ಹೇಳಿದನು.
ತತೋಽಬ್ರವೀತ್ ಪುನರ್ಮೃತ್ಯುರ್ಭಗವಂತಂ ಪಿತಾಮಹಮ್ |
ನ ಹರೇಯಂ ಪ್ರಜಾ ದೇವ ಪುನಸ್ತತ್ವಹಂ ಪ್ರಸಾದಯೇ ॥25॥
ಬ್ರಹ್ಮನ ಮಾತನ್ನು ಕೇಳಿಸಿಕೊಂಡ ಮೃತ್ಯುದೇವತೆಯು ಪೂಜ್ಯನಾದ ಪಿತಾಮಹನನ್ನುದ್ದೇಶಿಸಿ- `ದೇವನೇ, ನಾನು ಪ್ರಜೆಗಳ ಪ್ರಾಣವನ್ನು ಅಪಹರಿಸುವುದಿಲ್ಲ. ನಾನು ಪುನಃ ನನ್ನ ತಪಸ್ಸನ್ನು ಮುಂದುವರೆಸುತ್ತೇನೆ. ನಿನ್ನನ್ನು ಪ್ರಸನ್ನಗೊಳಿಸುತ್ತೇನೆ' ಎಂದು ಹೇಳಿದಳು.
ತಾಮಧರ್ಮಭಯತ್ರಸ್ತಾಂ ಪುನರೇವ ಚ ಯಾಚತೀಮ್ |
ತದಾಬ್ರವೀದ್ ದೇವದೇವೋ ನಿಗೃಹ್ಯೇದಂ ವಚಸ್ತತಃ ॥26॥
ಹೀಗೆ ಹೇಳಿ ತಪಸ್ಸಿಗೆ ಹೊರಡಲು ನಿಂತಿರುವ ಆಕೆಯನ್ನು ಕುರಿತು, ಪ್ರಾಣವನ್ನು ಅಪಹರಿಸಿದರೆ ಅಧರ್ಮವಾಗುತ್ತದೆ ಎಂದು ಭಯದಿಂದ ಭೀತಳಾಗಿದ್ದ, ಪುನಃ ಪುನಃ ಪ್ರಾರ್ಥಿಸುತ್ತಿದ್ದ ಆಕೆಯನ್ನು ಕುರಿತು ತಪಸ್ಸಿನ ಪ್ರವೃತ್ತಿಯನ್ನು ತಡೆದು, ದೇವದೇವನಾದ ಬ್ರಹ್ಮನು ಹೀಗೆ ಹೇಳಿದನು.
ಅಧರ್ಮೋ ನಾಸ್ತಿ ತೇ ಮೃತ್ಯೋ ಸಂಯಚ್ಛೇಮಾಃ ಪ್ರಜಾಃ ಶುಭೇ |
ಮಯಾ ಹ್ಯುಕ್ತಂ ಮೃಷಾ ಭದ್ರೇ ಭವಿತಾ ನೇಹ ಕಿಂಚನ ॥27॥
ಮೃತ್ಯುದೇವತೆಯೇ, ಶುಭಾಂಗಿನಿಯೇ, ನೀನು ಪ್ರಜೆಗಳನ್ನು ಸಂಹರಿಸುವುದರಿಂದ ಯಾವ ದೋಷದಿಂದಲೂ ಲಿಪ್ತಳಾಗುವುದಿಲ್ಲ. ಅಧರ್ಮವೂ ಉಂಟಾಗುವುದಿಲ್ಲ. ನಾನು ಹೇಳಿದ ವಚನವು ಎಂದಿಗೂ ಸುಳ್ಳಾಗುವುದಿಲ್ಲ.
ಧರ್ಮಃ ಸನಾತನಶ್ಚ ತ್ವಾಮಿಹೈವಾನುಪ್ರವೇಕ್ಷ್ಯತೇ |
ಅಹಂ ಚ ವಿಬುಧಾಶ್ಚೈವ ತ್ವದ್ಧಿತೇ ನಿರತಾಃ ಸದಾ ॥28॥
ಸನಾತನ ಧರ್ಮವು ನಿನ್ನ ಶರೀರವನ್ನು ಪ್ರವೇಶಿಸುತ್ತದೆ. ಸಮಸ್ತ ದೇವತೆಗಳು, ನಾನು, ಎಲ್ಲರೂ ನಿನ್ನ ಹಿತದಲ್ಲಿಯೇ ನಿರತರಾಗಿರುತ್ತೇವೆ.
ಇಮಮನ್ಯಂ ಚ ತೇ ಕಾಮಂ ದದಾಮಿ ಮನಸೇಪ್ಸಿತಮ್ |
ನ ತ್ವಾ ದೋಷೇಣ ಯಾಸ್ಯಂತಿ ವ್ಯಾಧಿಸಂಪೀಡಿತಾಃ ಪ್ರಜಾಃ ॥29॥
ನಾನು ನಿನಗೆ ಇದಲ್ಲದೆ ಮತ್ತೊಂದು ವರವನ್ನು ನೀಡುತ್ತೇನೆ. ವ್ಯಾಧಿಗಳಿಂದ ಪೀಡಿತರಾದ ಪ್ರಜೆಗಳು ಪ್ರಾಣವನ್ನು ಅಪಹರಿಸಿದ ಬಳಿಕ ನಿನ್ನ ಮೇಲೆ ದೋಷಾರೋಪಣೆಯನ್ನು ಮಾಡುವುದಿಲ್ಲ. ವ್ಯಾಧಿಯೇ ಕಾರಣ ಎಂದು ಹೇಳುತ್ತಾರೆ.
ಪುರುಷೇಷು ಚ ರೂಪೇಣ ಪುರುಷಸ್ತ್ವಂ ಭವಿಷ್ಯಸಿ |
ಸ್ತ್ರೀಷು ಸ್ತ್ರೀರೂಪಿಣೀ ಚೈವ ತೃತೀಯೇಷು ನಪುಂಸಕಮ್ ॥30॥
ನೀನು ಪುರುಷರಲ್ಲಿ ಪುರುಷರೂಪದಿಂದಲೇ ಇರುತ್ತಿರುವೆ. ಸ್ತ್ರೀಯರಲ್ಲಿ ಸ್ತ್ರೀ ರೂಪದಿಂದ, ನಪುಂಸಕರಲ್ಲಿ ನಪುಂಸಕ ರೂಪದಿಂದ ವಾಸ ಮಾಡುವೆ.
ಸೈವಮುಕ್ತಾ ಮಹಾರಾಜ ಕೃತಾಂಜಲಿರುವಾಚ ಹ |
ಪುನರೇವ ಮಹಾತ್ಮಾನಂ ನೇತಿ ದೇವೇಶಮವ್ಯಯಮ್ ॥31॥
ಈ ರೀತಿಯಾಗಿ ಬ್ರಹ್ಮನಿಂದ ಹೇಳಲ್ಪಟ್ಟ ಆಕೆಯು ಬದ್ಧಾಂಜಲಿಯಾಗಿ ನಿಂತು ಮಹಾತ್ಮನಾದ, ದೇವೇಶನಾದ, ಅವ್ಯಯನಾದ ಬ್ರಹ್ಮನನ್ನು ಕುರಿತು ಪುನಃ ನಾನು ಸಂಹರಿಸುವುದಿಲ್ಲ ಎಂದೇ ಹೇಳಿಬಿಟ್ಟಳು.
ತಾಮಬ್ರವೀತ್ತದಾ ದೇವೋ ಮೃತ್ಯೋ ಸಂಹರ ಮಾನವಾನ್ |
ಅಧರ್ಮಸ್ತೇ ನ ಭವಿತಾ ತಥಾ ಧ್ಯಾಸ್ಯಾಮ್ಯಹಂ ಶುಭೇ ॥32॥
ಬ್ರಹ್ಮದೇವನು ಸಮಾಧಾನದಿಂದಲೇ ಆಕೆಗೆ ಹೀಗೆ ಹೇಳಿದನು. ಶುಭಸ್ವರೂಪಳೇ, ಪ್ರಾಣಿಗಳನ್ನು ಸಂಹರಿಸು. ನಿನ್ನನ್ನು ಅಧರ್ಮವು ಪೀಡಿಸುವುದಿಲ್ಲ. ನಿನ್ನ ವಿಷಯದಲ್ಲಿ ನಾನು ಶುಭವನ್ನೇ ಚಿಂತಿಸುತ್ತೇನೆ. ಆದ್ದರಿಂದ ಅಧರ್ಮಕ್ಕೆ ಭಯಪಡಬೇಡ.
ಯಾನಶ್ರುಬಿಂದೂನ್ ಪತಿತಾನಪಶ್ಯಂ
ಯೇ ಪಾಣಿಭ್ಯಾಂ ಧಾರಿತಾಸ್ತೇ ಪುರಸ್ತಾತ್ |
ತೇ ವ್ಯಾಧಯೋ ಮಾನವಾನ್ ಘೋರರೂಪಾಃ
ಪ್ರಾಪ್ತೇ ಕಾಲೇ ಪೀಡಯಿಷ್ಯಂತಿ ಮೃತ್ಯೋ ॥33॥
ಮೃತ್ಯುದೇವತೆಯೇ, ಹಿಂದೆ ನೀನು ಕಣ್ಣೀರನ್ನಿಡುತ್ತಿರುವಾಗ ನಾನು ಅದನ್ನು ನೋಡಿ ನನ್ನ ಬೊಗಸೆಯಿಂದಲೇ ಆಶ್ರುಬಿಂದುವನ್ನು ಧರಿಸಿದೆನು. ನಿನ್ನ ಕಣ್ಣೀರಿನ ಹನಿಗಳೇ ವ್ಯಾಧಿಗಳಾಗಿವೆ. ಕಾಲವು ಸನ್ನಿಹಿತವಾದಾಗ ಘೋರರೂಪವಾದ ವ್ಯಾಧಿಗಳಾಗಿ, ನಿನ್ನ ಕಣ್ಣೀರು ಪರಿಣಾಮವನ್ನು ಹೊಂದಿ ಮನುಷ್ಯರನ್ನು ಮೃತ್ಯುವಶವನ್ನಾಗಿ ಮಾಡುತ್ತದೆ.
ಸರ್ವೇಷಾಂ ತ್ವಂ ಪ್ರಾಣಿನಾಮಂತಕಾಲೇ

ಕಾಮಕ್ರೋಧೌ ಸಹಿತೌ ಯೋಜಯೇಥಾಃ |
ಏವಂ ಧರ್ಮಸಾತ್ತ್ವಮುಪೈಷ್ಯತ್ಯಮೇಯೋ
ನ ಚಾಧರ್ಮಂ ಲಪ್ಸ್ಯಸೇ ತುಲ್ಯವೃತ್ತಿಃ ॥34॥
ಸಮಸ್ತ ಪ್ರಾಣಿಗಳನ್ನು ಅವರ ಅಂತ್ಯಕಾಲದಲ್ಲಿ ಕಾಮ-ಕ್ರೋಧಗಳ ಜೊತೆಗೆ ನೀನು ಸಂಯೋಜಿಸಬೇಕು. ಈ ರೀತಿ ಮಾಡುವುದರಿಂದ ಊಹಿಸಲಾರದ ಧರ್ಮವು ನಿನ್ನ ಸಹಕಾರಕ್ಕೆ ಬರುತ್ತದೆ. ಎಲ್ಲೆಡೆಯೂ ಒಂದೇ ರೀತಿ ವರ್ತಿಸುವ ನೀನು ಯಾವುದೇ ರೀತಿಯ ಪಾಪಕ್ಕೂ ಭಾಜನಳಾಗುವುದಿಲ್ಲ.
ಏವಂ ಧರ್ಮಂ ಪಾಲಯಿಷ್ಯಸ್ಯಥೋಕ್ತಂ
ನ ಚಾತ್ಮಾನಂ ಮಜ್ಜಯಿಷ್ಯಸ್ಯಧರ್ಮೇ |
ತಸ್ಮಾತ್ ಕಾಮಂ ರೋಚಯಾಭ್ಯಾಗತಂ ತ್ವಂ
ಸಂಯೋಜ್ಯಾಥೋ ಸಂಹರಸ್ವೇಹ ಜಂತೂನ್ ॥35॥
ನಾನು ಹೇಳಿದ ಧರ್ಮವನ್ನು ನೀನು ಪಾಲಿಸಿದಲ್ಲಿ ನಿನಗೆ ಪಾಪಲೇಪವು ಆಗುವುದಿಲ್ಲ. ಆದ್ದರಿಂದ ನಿನಗೆ ಲಭಿಸಿದ ಅಧಿಕಾರವನ್ನು ಸಂತೋಷವಾಗಿ ಸ್ವೀಕರಿಸು. ಮನುಷ್ಯನ ಜೊತೆಗೆ ಕಾಮವನ್ನು ಸಂಯೋಜಿಸಿ ಜಗತ್ತಿನಲ್ಲಿರುವ ಪ್ರಾಣಿಗಳನ್ನೆಲ್ಲ ಸಂಹರಿಸು.
ಸಾ ವೈ ತದಾ ಮೃತ್ಯುಸಂಜ್ಞಾಪದೇಶಾ-
ಚ್ಛಾಪಾದ್ಭೀತಾ ಬಾಢಮಿತ್ಯಬ್ರವೀತ್ತಮ್ |
ಅಥೋ ಪ್ರಾಣಾನ್ ಪ್ರಾಣಿನಾಮಂತಕಾಲೇ
ಕಾಮಕ್ರೋಧೌ ಪ್ರಾಪ್ಯ ನಿರ್ಮೋಹ್ಯ ಹಂತಿ ॥36॥
ಚತುರ್ಮುಖ ಬ್ರಹ್ಮನು ಹೀಗೆ ಹೇಳಿದ ತರುವಾಯ, ಅವನ ಮಾತನ್ನು ಕೇಳದಿದ್ದರೆ ಎಲ್ಲಿ ಬ್ರಹ್ಮನು ಶಪಿಸುತ್ತಾನೋ ಎಂಬ ಭಯದಿಂದ `ಹಾಗೆ ಆಗಲಿ' ಎಂದು ಅವನನ್ನು ಕುರಿತು ಮೃತ್ಯುದೇವತೆಯು ಹೇಳಿದಳು. ಬ್ರಹ್ಮನ ಆಜ್ಞೆಯಂತೆ ಮೃತ್ಯುದೇವತೆಯು ಅಂತ್ಯಕಾಲದಲ್ಲಿ ಜೀವರಿಗೆ ಕಾಮ-ಕ್ರೋಧವನ್ನು ಸೇರಿಸಿ ಮೋಹವಶರನ್ನಾಗಿ ಮಾಡಿ ಸಂಹರಿಸುತ್ತಾಳೆ.
ಮೃತ್ಯೋರ್ಯೇ ತೇ ವ್ಯಾಧಯಶ್ಚಾಶ್ರುಪಾತಾ
ಮನುಷ್ಯಾಣಾಂ ರುಜ್ಯತೇ ಯೈಃ ಶರೀರಮ್ |
ಸರ್ವೇಷಾಂ ವೈ ಪ್ರಾಣಿನಾಂ ಪ್ರಾಣನಾಂತೇ
ತಸ್ಮಾಚ್ಛೋಕಂ ಮಾ ಕೃಥಾ ಬುಧ್ಯ ಬುದ್ಧ್ಯಾ ॥37॥
ಹಿಂದೆ ಮೃತ್ಯುದೇವತೆಯ ಕಣ್ಣುಗಳಿಂದ ಯಾವ ಅಶ್ರುಬಿಂದುಗಳು ಉದುರಿದವೋ ಮುಂದೆ ಜ್ವರವೇ ಮೊದಲಾದ ರೋಗಗಳಾಗಿ ಪರಿಣಾಮ ಹೊಂದಿದವು. ಆದ್ದರಿಂದ ಮನುಷ್ಯನ ಶರೀರವು ಮೃತ್ಯುದೇವತೆಯ ಅಶ್ರುಬಿಂದುವಿನಿಂದ ಜರಾಗ್ರಸ್ಥವಾಗುತ್ತದೆ. ಪ್ರಾಣಿಗಳ ಆಯುಷ್ಯ ಮುಗಿದ ಬಳಿಕ ಮೃತ್ಯುದೇವತೆಯು ಪ್ರಾಣಿಗಳ ಬಳಿಗೆ ಸಾಗುತ್ತಾಳೆ. ಇದನ್ನು ಅರ್ಥೈಸಿಕೊಂಡ ನೀನು ನಿನ್ನ ಮಗನ ಮರಣಕ್ಕಾಗಿ ಶೋಕ ಹೊಂದಬೇಡ. ಆಯುಷ್ಯವು ಮುಗಿದ ಬಳಿಕ ಮೃತ್ಯುವು ಒದಗುತ್ತದೆ ಎಂಬುದು ವಿಧಿಯ ನಿರ್ಣಯವಾಗಿದೆ. ಇದನ್ನು ಸಮಾಲೋಚಿಸು.
ಸರ್ವೇ ದೇವಾಃ ಪ್ರಾಣಿನಾಂ ಪ್ರಾಯಣಾಂತೇ
ಗತ್ವಾ ವೃತ್ತಾಃ ಸನ್ನಿವೃತ್ತಾಸ್ತಥೈವ |
ಏವಂ ಸರ್ವೇ ಮಾನವಾಃ ಪ್ರಾಯಣಾಂತೇ
ಗತ್ವಾವೃತ್ತಾ ದೇವವದ್ರಾಜಸಿಂಹ ॥38॥
ಸಮಸ್ತ ದೇವತೆಗಳು ಜೀವರ ಮರಣಕಾಲದಲ್ಲಿ ಆ ದೇಹದಿಂದ ಹೊರಟು ಹೋಗುತ್ತಾರೆ. ತಮ್ಮ ಮೂಲರೂಪದಲ್ಲಿ ಸೇರಿರುತ್ತಾರೆ. ಪುನಃ ಆ ಜೀವರು ಜನ್ಮಾಂತರವನ್ನು ಹೊಂದುವ ಕಾಲದಲ್ಲಿ ಅದೇ ತತತ್ತ್ವಭಿಮಾನಿ ದೇವತೆಗಳು ಆಗಮಿಸಿ ಆ ಜೀವನ ಶರೀರದಲ್ಲಿ ಪ್ರವೇಶಿಸುತ್ತಾರೆ. ಫಲವು ಮುಗಿದ ಬಳಿಕ ಮನುಷ್ಯನೇ ಮೊದಲಾದ ಯೋನಿಗಳಲ್ಲಿ ಜನ್ಮವನ್ನು ತಾಳುತ್ತಾರೆ.
ವಾಯುರ್ಭೀಮೋ ಭೀಮನಾದೋ ಮಹೌಜಾಃ
ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ |
ಅನಾವೃತ್ತಿರ್ದೇಹಿನಾಂ ದೇಹಪಾತೇ
ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ ॥39॥
ವಾಯುದೇವರು ಅಸುರರಿಗೆ ಭಯಂಕರರು. ಏಕೆಂದರೆ ಯಮಭಟರಿಗೂ ಭಯಂಕರವಾದ ಧ್ವನಿಯು ಇವರಲ್ಲಿದೆ. ಮಹಾಬಲಿಷ್ಠರಾಗಿದ್ದಾರೆ. ಎಲ್ಲ ಪ್ರಾಣಿಗಳ ಶ್ವಾಸಾಭಿಮಾನಿ ಚೇಷ್ಟಾಪ್ರದನು. ಪ್ರಾಣಿಗಳ ದೇಹವು ಪತನ ಹೊಂದಲು ದೇಹದಲ್ಲಿ ವಾಯುದೇವನು ಇಲ್ಲದಿರುವುದೇ ಮುಖ್ಯಕಾರಣ. ಮುಮುಕ್ಷುಗಳಿಗೆ ಚರಮ ದೇಹವು ಪತನ ಹೊಂದಿದಾಗ ಅವರು ಪುನಃ ಸಂಸಾರಕ್ಕೆ ಬಾರದಿರುವಂತೆ ವಾಯುದೇವರು ಅನುಗ್ರಹಿಸುತ್ತಾರೆ. ಆದ್ದರಿಂದ ವಾಯುದೇವನೇ ದೇವತೆಗಳಿಗೂ ದೇವತೆ. ದೇವತೆಗಳಲ್ಲಿ ಸರ್ವೋತ್ಕೃಷ್ಟ ದೇವತೆ ಎನಿಸಿದ್ದಾನೆ.
ಸರ್ವೇ ದೇವಾ ಮರ್ತ್ಯಸಂಜ್ಞಾವಿಶಿಷ್ಟಾಃ
ಸರ್ವೇ ಮರ್ತ್ಯಾ ದೇವಸಂಜ್ಞಾವಿಶಿಷ್ಟಾಃ |
ತಸ್ಮಾತ್ ಪುತ್ರಂ ಮಾ ಶುಚೋ ರಾಜಸಿಂಹ
ಪುತ್ರಃ ಸ್ವರ್ಗಂ ಪ್ರಾಪ್ಯ ತೇ ಮೋದತೇ ಹ ॥40॥
ಸಮಸ್ತ ದೇವತೆಗಳು ಮರ್ತ್ಯ ಎಂಬ ಸಂಜ್ಞೆಯಿಂದ ಕೂಡಿದವರಾಗಿರುತ್ತಾರೆ. ಸಮಸ್ತ ಲೋಕದ ಮರ್ತ್ಯರು ಮರಣದ ಬಳಿಕ ಸತ್ಕಾರ್ಯದ ಫಲವಾಗಿ ಸ್ವರ್ಗಲೋಕಕ್ಕೆ ಹೋಗುವುದರಿಂದ ದೇವ ಎಂಬ ಸಂಜ್ಞೆಯನ್ನು ಹೊಂದುತ್ತಾರೆ. ಆದ್ದರಿಂದ ರಾಜಸಿಂಹನೇ,

ನೀನು ನಿನ್ನ ಮಗನ ನಿಮಿತ್ತವಾಗಿ ದುಃಖವನ್ನು ಹೊಂದಬೇಡ. ನಿನ್ನ ಮಗನು ಸ್ವರ್ಗವನ್ನು ಪಡೆದು ಆನಂದ ಹೊಂದಿದ್ದಾನೆ.
ಏವಂ ಮೃತ್ಯುರ್ದೇವಸೃಷ್ಟಾ ಪ್ರಜಾನಾಂ
ಪ್ರಾಪ್ತೇ ಕಾಲೇ ಸಂಹರಂತೀ ಯಥಾವತ್ |
ತಸ್ಯಾಶ್ಚೈವ ವ್ಯಾಧಯಸ್ತೇಽಶ್ರುಪಾತಾಃ
ಪ್ರಾಪ್ತೇ ಕಾಲೇ ಸಂಹರಂತೀಹ ಜಂತೂನ್ ॥41॥
ಯುಧಿಷ್ಠಿರನೇ, ಈ ರೀತಿಯಾಗಿ ಬ್ರಹ್ಮನೇ ಪ್ರಾಣಿಗಳ ಸಂಹಾರಕ್ಕಾಗಿ ಮೃತ್ಯುವನ್ನು ಸೃಷ್ಟಿಸಿದ್ದಾನೆ. ಕಾಲವು ಸನ್ನಿಹಿತವಾದ ಕೂಡಲೇ ನಿಯಮದಂತೆ ಮೃತ್ಯುವು ಪ್ರಾಣಿಗಳನ್ನು ಸಂಹರಿಸುತ್ತದೆ. ಮೃತ್ಯುವಿನ ಅಶ್ರುಬಿಂದುಗಳೇ ವ್ಯಾಧಿಗಳು. ವ್ಯಾಧಿಗಳು ಕಾಲವು ಸನ್ನಿಹಿತವಾದಾಗ ಮನುಷ್ಯರನ್ನು ಆಶ್ರಯಿಸಿ ಅವರನ್ನು ಸಂಹಾರ ಮಾಡುತ್ತವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಮೃತ್ಯುಪ್ರಜಾಪತಿಸಂವಾದೋ ನಾಮ ತ್ರಿನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ಮೂರನೆಯ ಅಧ್ಯಾಯ ಮುಗಿಯಿತು.

॥ ಮೃತ್ಯುಪ್ರಜಾಪತಿಸಂವಾದಃ ಸಮಾಪ್ತಃ ॥
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ಧರ್ಮಾಧರ್ಮಗಳ ಸ್ವರೂಪವನ್ನು ತಿಳಿಸಿದುದು.
ಯುಧಿಷ್ಠಿರಃ
ಇಮೇ ವೈ ಮಾನವಾಃ ಸರ್ವೇ ಧರ್ಮಂ ಪ್ರತಿ ವಿಶಂಕಿತಾಃ |
ಕೋಽಯಂ ಧರ್ಮಃ ಕುತೋ ಧರ್ಮಸ್ತನ್ಮೇ ಬ್ರೂಹಿ ಪಿತಾಮಹ ॥1॥
ಪಿತಾಮಹನೇ, ಈ ಜಗತ್ತಿನಲ್ಲಿರುವ ಎಲ್ಲ ಮಾನವರು ಧರ್ಮದ ವಿಷಯದಲ್ಲಿ ಸಂದೇಹವುಳ್ಳವರೇ ಆಗಿದ್ದಾರೆ. ಧರ್ಮ ಎಂದರೆ ಯಾವುದು? ಎಲ್ಲಿಂದ ಈ ಧರ್ಮವು ಸೃಷ್ಟವಾಗಿದೆ? ಅದನ್ನು ನನಗೆ ತಿಳಿಸಿರಿ.
ಧರ್ಮಸ್ತ್ವಯಮಿಹಾರ್ಥಃ ಕಿಮಮುತ್ರಾರ್ಥೋಽಪಿ ವಾ ಭವೇತ್ |
ಉಭಯಾರ್ಥೋಽಪಿ ವಾ ಧರ್ಮಸ್ತನ್ಮೇ ಬ್ರೂಹಿ ಪಿತಾಮಹ ॥2॥
ಲೌಕಿಕ ಪ್ರಯೋಜನಗಳನ್ನು ಒದಗಿಸಿಕೊಡುವ ಕರ್ಮಗಳು ಧರ್ಮ ಎಂದು ಕರೆಯಲ್ಪಡುತ್ತವೆಯೇ? ಅಥವಾ ಪಾರಲೌಕಿಕವಾದ ಪ್ರಯೋಜನವನ್ನು ತಂದುಕೊಡುವ ಕರ್ಮಗಳು ಧರ್ಮ ಎಂದು ಹೆಸರನ್ನು ಪಡೆಯುತ್ತವೆಯೇ? ಅಥವಾ ಇಹ-ಪರಗಳ ಪ್ರಯೋಜನಕ್ಕಾಗಿ ಹೊರಟ ಕರ್ಮಗಳಿಗೆ ಧರ್ಮ ಎಂದು ಹೆಸರೋ? ಇದನ್ನು ವಿಷದಪಡಿಸಿರಿ.
ಭೀಷ್ಮಃ
ಸದಾಚಾರಃ ಸ್ಮೃತಿರ್ವೇದಾಸ್ತ್ರಿವಿಧಂ ಧರ್ಮಲಕ್ಷಣಮ್ |
ಚತುರ್ಥಮರ್ಥಮಿತ್ಯಾಹುಃ ಕವಯೋ ಧರ್ಮಲಕ್ಷಣಮ್ ॥3॥
ಯುಧಿಷ್ಠಿರನೇ, ಸದಾಚಾರ, ಸ್ಮೃತಿ, ವೇದಗಳು - ಈ ಮೂರು ಧರ್ಮದ ಲಕ್ಷಣಗಳು. ಕೆಲವು ವಿದ್ವಾಂಸರು ಅರ್ಥವನ್ನು ನಾಲ್ಕನೆಯ ಧರ್ಮಲಕ್ಷಣ ಎಂದು ಹೇಳುತ್ತಾರೆ.
ಅಪಿ ಹ್ಯುಕ್ತಾನಿ ಕರ್ಮಾಣಿ ವ್ಯವಸ್ಯಂತ್ಯುತ್ತರಾವರೇ |
ಲೋಕಯಾತ್ರಾರ್ಥಮೇವೇಹ ಧರ್ಮಸ್ಯ ನಿಯಮಃ ಕೃತಃ |
ಉಭಯತ್ರ ಸುಖೋದರ್ಕ ಇಹ ಚೈವ ಪರತ್ರ ಚ ॥4॥
ಶಾಸ್ತ್ರೋಕ್ತ ಧರ್ಮಕಾರ್ಯಗಳಲ್ಲಿ ಕೆಲವು ಪ್ರಧಾನವಾದವುಗಳು, ಕೆಲವು ಅಪ್ರಧಾನವಾದವುಗಳು ಎಂದು ನಿರ್ಣಯಿಸಿರುತ್ತಾರೆ. ಲೋಕಯಾತ್ರೆಯ ನಿರ್ವಹಣೆಗಾಗಿಯೇ ಧರ್ಮದ ನಿಯಮವು ಮಾಡಲ್ಪಟ್ಟಿದೆ. ಧರ್ಮ ಪರಿಪಾಲಕರಿಗೆ ಇಹ-ಪರಲೋಕಗಳಲ್ಲಿಯೂ ಸುಖವಿದೆ ಎಂದು ನಿರ್ಣಯ.
ಅಲಬ್ಧ್ವಾ ನಿಪುಣಂ ಧರ್ಮಂ ಪಾಪಃ ಪಾಪೇ ಪ್ರಸಜ್ಜತಿ |
ನ ಚ ಪಾಪಕೃತಃ ಪಾಪಾನ್ಮುಚ್ಯಂತೇ ಕೇಚಿದಾಪದಿ ॥5॥
ಇಂತಹ ಧರ್ಮವನ್ನು ಆಶ್ರಯಿಸದಿರುವ ಪಾಪಿಯು ಪುನಃ ಪುನಃ ಅಸತ್ಕರ್ಮಗಳನ್ನೇ ಮಾಡುತ್ತಾ ದುಃಖಭಾಗಿಯಾಗುತ್ತಾನೆ. ಪಾಪಿಯಾದ ಮನುಷ್ಯನು ಆಪತ್ತು ಒದಗಿದಾಗಲೂ ಪಾಪಕರ್ಮದಿಂದ ನಿವೃತ್ತನಾಗುವುದಿಲ್ಲ.
ಅಪಾಪವಾದೀ ಭವತಿ ಯದಾ ಭವತಿ ಧರ್ಮವಿತ್ |
ಧರ್ಮಸ್ಯ ನಿಷ್ಠಾ ಸ್ವಾಚಾರಸ್ತಮೇವಾಶ್ರಿತ್ಯ ಭೋತ್ಸ್ಯಸೇ ॥6॥
ಅದೇ ರೀತಿ ಧರ್ಮಕಾರ್ಯಾಸಕ್ತರು ಆಪತ್ಕಾಲದಲ್ಲಿಯೂ ಪಾಪಕರ್ಮಗಳನ್ನು ಮಾಡುವುದಿಲ್ಲ. ಸದಾಚಾರವೇ ಧರ್ಮದ ಆಧಾರವೆನಿಸಿದೆ. ನೀನೂ ಈ ಸದಾಚಾರವನ್ನು ಆಶ್ರಯಿಸಿದಲ್ಲಿ ಧರ್ಮದ ಫಲವನ್ನು ಅನುಭವಿಸುತ್ತಿ.
ಯದಾಧರ್ಮಸಮಾವಿಷ್ಟೋ ಧನಂ ಗೃಹ್ಣಾತಿ ತಸ್ಕರಃ |
ರಮತೇ ನಿರ್ಹರನ್ ಸ್ತೇನಃ ಪರವಿತ್ತಮರಾಜಕೇ ॥7॥
ಧರ್ಮಮಾರ್ಗದಲ್ಲೇ ಪ್ರವೃತ್ತಿಯುಳ್ಳವನಾಗಿದ್ದರೂ ಕಳ್ಳನು ಮತ್ತೊಬ್ಬನ ಧನವನ್ನು ಅಪಹರಿಸುತ್ತಿರುತ್ತಾನೆ. ರಾಜನೇ ಇಲ್ಲದೆ ಇರುವ ದೇಶದಲ್ಲಿ ಪರರ ಸ್ವತ್ತನ್ನು ಅಪಹರಿಸಿದ ಕಳ್ಳನು ಸುಖವಾಗಿಯೇ ಇರುತ್ತಾನೆ.
ಯದಾಸ್ಯ ತದ್ಧರಂತ್ಯನ್ಯೇ ತದಾ ರಾಜಾನಮಿಚ್ಛತಿ |

ತದಾ ತೇಷಾಂ ಸ್ಪೃಹಯತೇ ಯೇ ವೈ ತುಷ್ಟಾಃ ಸ್ವಕೈರ್ಧನ್ಯೆಃ ॥8॥
ಆದರೆ ಕಳ್ಳತನ ಮಾಡಿದ ಅವನ ಧನವನ್ನೇ ಮತ್ತೊಬ್ಬರು ಅಪಹರಿಸಿದಾಗ ಆ ಕಳ್ಳನೇ ರಕ್ಷಣೆಗಾಗಿ ರಾಜನನ್ನು ಅಪೇಕ್ಷಿಸುತ್ತಾನೆ. ಆಗ ಆ ಕಳ್ಳನು ತನ್ನಲ್ಲಿರುವ ಧನದಿಂದಲೇ ತೃಪ್ತಿ ಹೊಂದುವ ಸ್ಥಿತಿಯನ್ನು ಬಯಸುತ್ತಾನೆ.
ಅಭೀತಃ ಶುಚಿರಭ್ಯೇತಿ ರಾಜದ್ವಾರಮಶಂಕಿತಃ |
ನ ಹಿ ದುಶ್ಚರಿತಂ ಕಿಂಚಿದಂತರಾತ್ಮನಿ ಪಶ್ಯತಿ ॥9॥
ಮೋಸ ಮಾಡದೆ ಇರುವ ವ್ಯಕ್ತಿಯು ಭಯವಿಲ್ಲದೆ ಶುದ್ಧ ಮನಸ್ಸಿನಿಂದಲೇ ರಾಜದ್ವಾರವನ್ನು ನಿರ್ಭೀತಿಯಿಂದ ಪ್ರವೇಶಿಸುತ್ತಾನೆ. ಕಾರಣ ಅವನ ಮನಸ್ಸಿನಲ್ಲಿ ಯಾವುದೇ ಅಧರ್ಮಗಳ ದೋಷವು ಕಾಣಿಸುವುದಿಲ್ಲ.
ಸತ್ಯಸ್ಯ ವಚನಂ ಸಾಧು ನ ಸತ್ಯಾದ್ ವಿದ್ಯತೇ ಪರಮ್ |
ಸತ್ಯೇನ ವಿಧೃತಂ ಸರ್ವಂ ಸರ್ವಂ ಸತ್ಯೇ ಪ್ರತಿಷ್ಠಿತಮ್ ॥10॥
ಸತ್ಯವನ್ನು ಹೇಳುವುದೇ ನಿಜವಾದ ಸದ್ಧರ್ಮವೆನಿಸಿದೆ. ಸತ್ಯವನ್ನು ಹೇಳುವುದಕ್ಕಿಂತ ಶ್ರೇಷ್ಠವಾದ ಧರ್ಮ ಇನ್ನೊಂದಿಲ್ಲ. ಸತ್ಯದಿಂದಲೇ ಜಗತ್ತು ಧರಿಸಲ್ಪಟ್ಟಿದೆ. ಸತ್ಯದಿಂದಲೇ ಎಲ್ಲವೂ ಪ್ರತಿಷ್ಠಾಪಿತವಾಗಿದೆ.
ಅಪಿ ಪಾಪಕೃತೋ ರೌದ್ರಾಃ ಸತ್ಯಂ ಕೃತ್ವಾ ಪೃಥಕ್ಪೃಥಕ್ |
ಅದ್ರೋಹಮವಿಸಂವಾದಂ ಪ್ರವರ್ತಂತೇ ತದಾಶ್ರಯಾಃ |
ತೇ ಚೇನ್ಮಿಥೋಽಧೃತಿಂ ಕುರ್ಯುರ್ವಿನಶ್ಯೇಯುರಸಂಶಯಮ್ ॥11॥
ಪಾಪಕಾರ್ಯದಲ್ಲಿ ಪ್ರವೃತ್ತರಾದ ಪಾಪಿಗಳು ತಮ್ಮೊಳಗೆ ತಾವು ನಿರ್ಣಯಿಸಿಕೊಂಡ ಸತ್ಯವನ್ನು ಅನುಸರಿಸಿ, ಯಾವುದೇ ಗೊಂದಲವಿಲ್ಲದೆ ತಮ್ಮ ಕಾರ್ಯವನ್ನು ನೆರವೇರಿಸಿಕೊಳ್ಳುತ್ತಾರೆ. ಅವರಲ್ಲಿಯೇ ಯಾರಾದರೂ ಒಬ್ಬ ವ್ಯಕ್ತಿಯು ಕುಹಕವನ್ನಾಶ್ರಯಿಸಿ ಸತ್ಯಕ್ಕೆ ವಿರುದ್ಧವಾಗಿ ನಡೆದಾಗ ಅದರ ಪರಿಣಾಮದಿಂದ ಎಲ್ಲರೂ ವಿನಾಶವನ್ನು ಹೊಂದುತ್ತಾರೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಯಾರು ಪರಸ್ಪರ ರಹಸ್ಯದಲ್ಲಿ ಮಾಡಿದ ಸತ್ಯಪ್ರತಿಜ್ಞೆಯನ್ನು ಮುರಿಯುತ್ತಾರೋ ಅವರು ಧರ್ಮಕ್ಕೆ ಎಸೆದ ದ್ರೋಹದಿಂದ ಪರಸ್ಪರ ಕಾದಾಡಿ ವಿನಾಶವನ್ನು ಹೊಂದುತ್ತಾರೆ.
ನ ಹರ್ತವ್ಯಂ ಪರಧನಮಿತಿ ಧರ್ಮಃ ಸನಾತನಃ |
ಮನ್ಯಂತೇ ಬಲವಂತಸ್ತಂ ದುರ್ಬಲೈಃ ಸಂಪ್ರವರ್ತಿತಮ್ |
ಯದಾ ನಿಯಂತಿ ದೌರ್ಬಲ್ಯಮಥೈಷಾಮೇವ ರೋಚತೇ ॥12॥
ಯಾವುದೇ ಕಾರಣದಿಂದ ಮತ್ತೊಬ್ಬರ ಸ್ವತ್ತನ್ನು ಅಪಹರಿಸಬಾರದೆಂಬುದು ಸನಾತನ ಧರ್ಮವು. ಧನ-ಜನ ಬಲವನ್ನು ಹೊಂದಿದ ಕೆಲವರು ಧರ್ಮಾಚರಣೆಯು ಕೇವಲ ದುರ್ಬಲರ ಅನುಷ್ಠಾನ ಎಂದು ಭಾವಿಸುತ್ತಾರೆ. ಆದರೆ ಯಾವಾಗ ವಿಪರೀತವಾದ ದೌರ್ಬಲ್ಯವನ್ನು ಹೊಂದುತ್ತಾರೋ ಆಗ ಅವರಿಗೆ ಧರ್ಮಮಾರ್ಗವೇ ರುಚಿಸುತ್ತದೆ.
ನ ಹ್ಯತ್ಯಂತಂ ಬಲಯುತಾ ಭವಂತಿ ಸುಖಿನೋಽಪಿ ವಾ |
ತಸ್ಮಾದನಾರ್ಜವೇ ಬುದ್ಧಿರ್ನ ಕಾರ್ಯಾ ತೇ ಕಥಂಚನ ॥13॥
ಧರ್ಮರಾಜನೇ, ಅತ್ಯಂತ ಬಲಿಷ್ಠರಾದವರು ಸುಖಿಗಳಾಗಿರುತ್ತಾರೆ ಎಂದು ನಿರ್ಣಯಿಸಲಾಗುವುದಿಲ್ಲ. ಆದ್ದರಿಂದ ನಿನ್ನ ಬುದ್ಧಿಯು ಎಂದಿಗೂ ಕುಟಿಲತೆಯನ್ನು ಯೋಚಿಸದಿರಲಿ.
ಅಸಾಧುಭ್ಯೋಽಸ್ಯ ನ ಭಯಂ ನ ಚೋರೇಭ್ಯೋ ನ ರಾಜತಃ |
ನ ಕಿಂಚಿತ್ ಕಸ್ಯಚಿತ್ಕುರ್ವನ್ನಿರ್ಭಯಃ ಶುಚಿರಾವಸೇತ್ ॥14॥
ಯಾವನು ಪ್ರಾಮಾಣಿಕವಾಗಿ ವರ್ತಿಸುತ್ತಾನೋ ಅವನಿಗೆ ದುರ್ಜನರಿಂದಾಗಲಿ, ಚೋರರಿಂದಾಗಲಿ, ರಾಜನಿಂದಾಗಲಿ ಭಯವು ಇರುವುದಿಲ್ಲ. ಶುದ್ಧವಾದ ಆಚಾರ- ವಿಚಾರವುಳ್ಳ ಮನುಷ್ಯನು ಯಾವಾಗಲೂ ನಿರ್ಭಯನಾಗಿರುತ್ತಾನೆ.
ಸರ್ವತಃ ಶಂಕತೇ ಸ್ತೇನೋ ಮೃಗೋ ಗ್ರಾಮಮಿವೇಯಿವಾನ್ |
ಬಹುಧಾಚರಿತಂ ಪಾಪಮನ್ಯತ್ರೈವಾನುಪಶ್ಯತಿ ॥15॥
ಕಳ್ಳನು ಯಾವಾಗಲೂ ಎಲ್ಲರ ವಿಷಯದಲ್ಲಿಯೂ ಊರಿಗೆ ಪ್ರವೇಶಿಸಿದ ಕಾಡು ಜಿಂಕೆಯಂತೆ ನಿಷ್ಕಾರಣವಾಗಿ ಭಯಪಡುತ್ತಲೇ ಇರುತ್ತಾನೆ. ದೋಷಿಯಾದವನು ಮತ್ತೊಬ್ಬರನ್ನು ಪಾಪಬುದ್ಧಿಯುಳ್ಳವರೆಂಬಂತೆ ನೋಡುತ್ತಾನೆ.
ಮುದಿತಃ ಶುಚಿರಭ್ಯೇತಿ ಸರ್ವತೋ ನಿರ್ಭಯಃ ಸದಾ |
ನ ಹಿ ದುಶ್ಚರಿತಂ ಕಿಂಚಿದಾತ್ಮನೋಽನ್ಯೇಷು ಪಶ್ಯತಿ ॥16॥
ನಿಷ್ಕಲ್ಮಶನಾದವನು ಎಲ್ಲ ಕಡೆಯೂ ಭಯರಹಿತನಾಗಿ ಸಂಚರಿಸುತ್ತಾನೆ. ಅವನು ಎಲ್ಲರನ್ನು ತನ್ನಂತೆ ನಿರ್ದುಷ್ಟನೆಂದೇ ಭಾವಿಸುತ್ತಾನೆ. ತನ್ನಲ್ಲಿರುವ ಸಣ್ಣ ದೋಷವು ಮತ್ತೊಬ್ಬರಲ್ಲಿಲ್ಲ ಎಂದೇ ಭಾವಿಸುತ್ತಾನೆ.
ದಾತವ್ಯಮಿತ್ಯಯಂ ಧರ್ಮ ಉಕ್ತೋ ಭೂತಹಿತೇ ರತೈಃ |
ತಂ ಮನ್ಯಂತೇ ಧನಯುತಾಃ ಕೃಪಣೈಃ ಸಂಪ್ರವರ್ತಿತಮ್ ॥17॥
ಪ್ರಾಣಿಗಳ ಹಿತಚಿಂತಕರಾದ ಪ್ರಾಚೀನರು ದಾನ ಮಾಡಬೇಕೆಂದು ಹೇಳಿ ಆ ಧರ್ಮವನ್ನೇ ಪ್ರಶಂಸೆ ಮಾಡಿದ್ದಾರೆ. ಆದರೆ ಧನಿಕರು, ಬಡವರು ತಮಗಾಗಿ ಮಾಡಿಟ್ಟ ನಿಯಮವೆಂದು ಅದನ್ನು ಉಪೇಕ್ಷಿಸುತ್ತಾರೆ.
ಯದಾ ನಿಯತಿಕಾರ್ಪಣ್ಯಮಥೈಷಾಮೇವ ರೋಚತೇ |
ನ ಹ್ಯತ್ಯಂತಂ ಧನವಂತೋ ಭವಂತಿ ಸುಖಿನೋಽಪಿ ವಾ ॥18॥
ಒಂದು ವೇಳೆ ಅದೇ ಶ್ರೀಮಂತರು ದೌರ್ಭಾಗ್ಯ ವಶದಿಂದ ತಮ್ಮ ಗಳಿಸಿದ ಸಂಪತ್ತನ್ನು ಕಳೆದುಕೊಂಡಾಗ, ಭಿಕ್ಷೆ ಬೇಡುವ ಅವಸ್ಥೆಯು ಒದಗಿದಾಗ ಧರ್ಮದ ನಿರ್ಣಯದ ಮಹಿಮೆ ಏನು ಎಂಬುದು ಅವರಿಗೆ ತಿಳಿಯುತ್ತದೆ. ಇಷ್ಟಾಗಿ ಅಧಿಕ ಧನವಂತರು ಸುಖಿಗಳಾಗಿರುತ್ತಾರೆ ಎಂದು ಹೇಳಲು ಬರುವುದಿಲ್ಲ.

ಯದನ್ಯೈರ್ವಿಹಿತಂ ನೇಚ್ಛೇದಾತ್ಮನಃ ಕರ್ಮ ಪೂರುಷಃ |
ನ ತತ್ಪರೇಷು ಕುರ್ವೀತ ಜಾನನ್ನಪ್ರಿಯಮಾತ್ಮನಃ ||19||
ಬೇರೆಯವರು ತನ್ನ ವಿಷಯದಲ್ಲಿ ಅಪ್ರಿಯವನ್ನು ಮಾಡಿದಾಗ ಇದು ಅಪ್ರಿಯವೆಂದು ಯಾವ ವ್ಯಕ್ತಿಯು ತಿಳಿದಿರುತ್ತಾನೋ ಅಂತಹ ಅಪ್ರಿಯವಾದ ಕಾರ್ಯವನ್ನು ಮತ್ತೊಬ್ಬರ ವಿಷಯದಲ್ಲಿ ಇವನು ಎಂದಿಗೂ ಮಾಡಬಾರದು.
ಯೋಽನ್ಯಸ್ಯ ಸ್ಯಾದುಪರತಃ ಸ ಕಂ ಕಿಂ ವಕ್ತುಮರ್ಹತಿ |
ಯದನ್ಯಸ್ತಸ್ಯ ತತ್ಕುರ್ಯಾನ್ನ ಮೃಷ್ಯೇದಿತಿ ಮೇ ಮತಿಃ ||20||
ಯಾವನು ಮತ್ತೊಬ್ಬರ ವಿಷಯದಲ್ಲಿ ನಿರುಪದ್ರವಿಯಾಗಿ, ಶಾಂತನಾಗಿದ್ದಾನೋ ಅವನ ವಿಷಯದಲ್ಲಿ ಮತ್ತೊಬ್ಬನು ಏನು ಹೇಳಲು ಸಾಧ್ಯ? ಒಂದು ವೇಳೆ ಮತ್ತೊಬ್ಬನು ಅವನನ್ನು ನಿಂದಿಸಿದಲ್ಲಿ ಧರ್ಮವೂ ಅದನ್ನು ಸಹಿಸದು ಎಂಬುದೇ ನನ್ನ ಬುದ್ಧಿಯು.
ಜೀವಿತುಂ ಯಃ ಸ್ವಯಂ ಚೇಚ್ಛೇತ್ ಕಥಂ ಸೋಽನ್ಯಂ ಪ್ರಘಾತಯೇತ್|
ಯದ್ಯದಾತ್ಮನ ಇಚ್ಛೇತ ತತ್ ಪರಸ್ಯಾಪಿ ಚಿಂತಯೇತ್ ||21||
ಯಾವನು ಸುಖವಾಗಿ ಬದುಕಬೇಕೆಂದು ಇಚ್ಛಿಸುತ್ತಾನೋ ಅವನು ಬೇರೆಯವರಿಗೆ ಹೇಗೆ ತಾನೆ ಕೇಡನ್ನು ಬಯಸುತ್ತಾನೆ? ತನಗೆ ಯಾವುದು ಬಯಸುತ್ತಾನೋ ಇತರರಿಗೂ ಅದು ಭೋಗ್ಯವೆಂದೇ ತಿಳಿಯಬೇಕು.
ಅತಿರಿಕ್ತಃ ಸಂವಿಭಜೇದ್ ಭೋಗೈರನ್ಯಾನಕಿಂಚನಾನ್ |
ಏತಸ್ಮಾತ್ ಕಾರಣಾದ್ಧಾತ್ರಾ ಕುಸೀದಂ ಸಂಪ್ರವರ್ತಿತಮ್ ||22||
ಹೆಚ್ಚಾದ ಸಂಪತ್ತುಳ್ಳವನು ತ್ಯಾಗ ಬುದ್ಧಿಯಿಂದ ಬಡವರಿಗೆ ಆ ಪದಾರ್ಥಗಳನ್ನು ಹಂಚಿಕೊಡಬೇಕು. ಈ ಬಡವರ ರಕ್ಷಣೆಗಾಗಿಯೇ ಚತುರ್ಮುಖ ಬ್ರಹ್ಮನು ಕುಸೀದ ಎಂಬ ವೃತ್ತಿಯನ್ನು ಸೃಷ್ಟಿಸಿದ್ದಾನೆ. ಬಡ್ಡಿಗಾಗಿ ಹಣ ಕೊಡುವ ವೃತ್ತಿಯನ್ನು ಸೃಷ್ಟಿಸಿದ್ದಾನೆ ಎಂದು ಭಾವ.
ಯಸ್ಮಿಂಸ್ತು ದೇವಾಃ ಸಮಯೇ ಸಂತಿಷ್ಯೇರಂಸ್ತಥಾ ಭವೇತ್ |
ಅಥ ಚೇಲ್ಲಾಭಸಮಯೇ ಸ್ಥಿತಿರ್ಧರ್ಮೇಽಪಿ ಶೋಭನಾ ||23||
ಧರ್ಮಾಚರಣೆಯ ಪ್ರತಿಯೊಂದು ಸಂದರ್ಭದಲ್ಲಿಯೂ ದೇವತೆಗಳೇ ಇದಕ್ಕೆ ಸಾಕ್ಷಿಯಾಗಿರುತ್ತಾರೆಂದು ಅವರು ಮೆಚ್ಚುವಂತೆ ವರ್ತಿಸಬೇಕು. ಯಾವುದಾದರೂ ಲಾಭವು ದೊರಕಿದ ಸಂದರ್ಭದಲ್ಲಿಯೂ ಆ ಲಾಭಾಂಶದಿಂದ ಧರ್ಮಕಾರ್ಯಗಳನ್ನು ಮಾಡುವುದು ಉತ್ತಮವೆಂದು ನಿರ್ಣಯವು.
ಸರ್ವಂ ಪ್ರಿಯಾಭ್ಯುಪಗತಂ ಧರ್ಮಮಾಹುರ್ಮನೀಷಿಣಃ |
ಪಶ್ಯೈತಂ ಲಕ್ಷಣೋದ್ದೇಶಂ ಧರ್ಮಾಧರ್ಮೇ ಯುಧಿಷ್ಠಿರ ||24||
ಯುಧಿಷ್ಠಿರನೇ, ಸಮಸ್ತ ಜನರೊಡನೆ ಪ್ರೀತಿಪೂರ್ವಕವಾಗಿ ವ್ಯವಹರಿಸುವುದೇ ಶ್ರೇಷ್ಠವಾದ ಧರ್ಮವೆಂದು ವಿದ್ವಾಂಸರು ಹೇಳುತ್ತಾರೆ. ಇದಕ್ಕೆ ವಿಪರೀತವಾದುದೇ ಅಧರ್ಮ. ಧರ್ಮಾಧರ್ಮಗಳಲ್ಲಿ ಸಂಕ್ಷೇಪ ರೂಪದಲ್ಲಿರುವ ಈ ಲಕ್ಷಣಗಳನ್ನು ನೀನು ಗಮನಿಸು.
ಲೋಕಸಂಗ್ರಹಸಂಯುಕ್ತಂ ವಿಧಾತ್ರಾ ವಿಹಿತಂ ಪುರಾ |
ಸೂಕ್ಷ್ಮಧರ್ಮಾರ್ಥನಿಯತಂ ಸತಾಂ ಚರಿತಮುತ್ತಮಮ್ ||25||
ಚತುರ್ಮುಖ ಬ್ರಹ್ಮನು ಸತ್ಪುರುಷರಿಗಾಗಿ ಹಿಂದೆ ಯಾವ ಸೂಕ್ಷ್ಮ ಸದಾಚಾರಗಳನ್ನು, ಧರ್ಮಾರ್ಥಗಳನ್ನು ನಿರ್ಣಯಿಸಿದ್ದಾನೋ ಅದು ಲೋಕ ಕಲ್ಯಾಣದ ಉದ್ದೇಶದಿಂದ ಕೂಡಿದೆ.
ಧರ್ಮಲಕ್ಷಣಮಾಖ್ಯಾತಮೇತತ್ತೇ ಕುರುಸತ್ತಮ |
ತಸ್ಮಾದನಾರ್ಜವೇ ಬುದ್ಧಿರ್ನ ಕಾರ್ಯಾ ತೇ ಕಥಂಚನ ||26||
ಕುರುಶ್ರೇಷ್ಠನೇ, ನಿನಗೆ ಧರ್ಮದ ಲಕ್ಷಣವೇನೆಂದು ತಿಳಿಸಿದ್ದೇನೆ. ನಿನ್ನ ಬುದ್ಧಿಯು ಯಾವುದೇ ಕಾರಣದಿಂದ ಕುಟಿಲತೆಯ ಮಾರ್ಗದಲ್ಲಿ ಸಾಗದಿರಲಿ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುರ್ನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೈದನೆಯ ಅಧ್ಯಾಯ
ಯುಧಿಷ್ಠಿರನು ಧರ್ಮದ ಪ್ರಾಮಾಣ್ಯದ ಬಗ್ಗೆ ಭೀಷ್ಮರನ್ನು
ಕುರಿತು ಪ್ರಶ್ನಿಸಿದುದು.
ಯುಧಿಷ್ಠಿರಃ
ಸೂಕ್ಷ್ಮಂ ಸಾಧು ಸಮಾದಿಷ್ಟಂ ಭವತಾ ಧರ್ಮಲಕ್ಷಣಮ್ |
ಪ್ರತಿಭಾ ತ್ವಸ್ತಿ ಮೇ ಕಾಚಿತ್ತಾಂ ಬ್ರೂಯಾಮನುಮಾನತಃ ||1||
ಪೂಜ್ಯರಾದ ಭೀಷ್ಮರೇ, ಸೂಕ್ಷ್ಮವಾದ ಧರ್ಮದ ಲಕ್ಷಣವೇನೆಂಬುದನ್ನು ನೀವು ಉಪದೇಶಿಸಿರುತ್ತೀರಿ. ಆದರೆ ಅನುಮಾನದಿಂದ ಈಗ ನನಗೊಂದು ವಿಚಾರವು ಬುದ್ಧಿಯಲ್ಲಿ ಹುಟ್ಟಿರುವುದು. ಈ ವಿಷಯದಲ್ಲಿ ಗುಣ- ದೋಷಗಳನ್ನು ತಿಳಿಯಬೇಕೆಂದು ನನಗೆ ತೋರುತ್ತಿದೆ.
ಭೂಯಾಂಸೋ ಹೃದಯೇ ಯೇ ಮೇ ಪ್ರಶ್ನಾಸ್ತೇ ವ್ಯಾಹೃತಾಸ್ತ್ವಯಾ |
ಇಮಮನ್ಯಂ ಪ್ರವಕ್ಷ್ಯಾಮಿ ನ ರಾಜನ್ ವಿಗ್ರಹಾದಿವ ||2||
ನನ್ನ ಹೃದಯದಲ್ಲಿ ಅನೇಕ ಪ್ರಶ್ನೆಗಳಿವೆ. ಅದರಲ್ಲಿ ಎಷ್ಟೋ ಪ್ರಶ್ನೆಗಳಿಗೆ ನೀವು ಈಗಾಗಲೇ ಉತ್ತರಿಸಿರುತ್ತೀರಿ. ಆದರೆ ನನ್ನ ಇನ್ನೊಂದು

ಪ್ರಶ್ನೆಗೆ ಉತ್ತರವನ್ನು ಹೇಳಬೇಕು. ನಾನು ತಿಳಿಯಬೇಕೆಂದು ಕೇಳುತ್ತಿದ್ದೇನೆ ಹೊರತು ವಾದಕ್ಕಾಗಿ ಕೇಳುತ್ತಿದ್ದೇನೆ ಎಂದು ಭಾವಿಸಬಾರದು.
ಇಮಾನಿ ಹಿ ಪ್ರಾಪಯಂತಿ ಸೃಜಂತ್ಯುತ್ತಾರಯಂತಿ ಚ |
ನ ಧರ್ಮಃ ಪರಿಪಾಠೇನ ಶಕ್ಯೋ ಭಾರತ ವೇದಿತುಮ್ ॥3॥
ಜಗತ್ತಿನ ಸಮಸ್ತ ಜೀವರು ಸ್ವಯಂ ಪ್ರೇರಣೆಯಿಂದ ಪ್ರಾಣಿಗಳನ್ನು ಸೃಷ್ಟಿಸುತ್ತವೆ. ಅದರಂತೆ ಬದುಕುತ್ತವೆ. ಕೊನೆಗೆ ನಾಶಮಾಡುತ್ತವೆ. ಇದೆಲ್ಲವೂ ಸ್ವಾಭಾವಿಕವಾಗಿಯೇ ನಡೆಯುತ್ತದೆ. ವೇದಗಳನ್ನು ಪಠನ ಮಾಡಿದ ಮಾತ್ರದಿಂದ ಧರ್ಮಾಧರ್ಮಗಳನ್ನು ತಿಳಿಯಲು ಸಾಧ್ಯವಿಲ್ಲ.
ಅನ್ಯೋ ಧರ್ಮಃ ಸಮಸ್ಥಸ್ಯ ವಿಷಮಸ್ಥಸ್ಯ ಚಾಪರಃ |
ಆಪದಸ್ತು ಕಥಂ ಶಕ್ಯಾಃ ಪರಿಪಾಠೇನ ವೇದಿತುಮ್ ॥4॥
ಕಾರಣ ಧರ್ಮಗಳಲ್ಲಿ ಅನೇಕ ಪ್ರಭೇದಗಳಿವೆ. ಸ್ವಸ್ವಾತ್ಮನಾದ ವ್ಯಕ್ತಿಗಿರುವ ಧರ್ಮವೇ ಬೇರೆ. ವಿಷಮ ಸ್ಥಿತಿಯಲ್ಲಿರುವವನ ಧರ್ಮವೇ ಬೇರೆ. ಆಪದ್ಧರ್ಮಗಳು ಕೇವಲ ವೇದಪಠನದಿಂದ ಹೇಗೆ ತಿಳಿಯಲು ಸಾಧ್ಯವಾಗುತ್ತವೆ?
ಸದಾಚಾರೋ ಮತೋ ಧರ್ಮಃ ಸಂತಸತ್ತ್ವಚಾರಲಕ್ಷಣಾಃ |
ಸಾಧ್ಯಾಸಾಧ್ಯಂ ಕಥಂ ಶಕ್ಯಂ ಸದಾಚಾರೋ ಹ್ಯಲಕ್ಷಣಮ್ ॥5॥
ಸತ್ಪುರುಷರ ಆಚರಣೆಯೇ ಧರ್ಮವಾಗುತ್ತದೆ. ಧರ್ಮಾಚರಣೆಯ ಲಕ್ಷಣ ಉಳ್ಳವರು ಸತ್ಪುರುಷರು ಎಂದು ನೀನು ಹೇಳಿದೆ. ಆದರೆ ಸಜ್ಜನರು ಯಾರೆಂದು ಅವರ ಸದಾಚಾರದಿಂದ ತಿಳಿಯಬೇಕಾಗಿದೆ. ಹೀಗಿದ್ದಾಗ ಧರ್ಮದಿಂದ ಸಜ್ಜನರೋ ಅಥವಾ ಸಜ್ಜನರಿಂದ ಧರ್ಮವೊ ಎಂಬ ಸಂದೇಹವು ಉಂಟಾಗುತ್ತದೆ. ಆದ್ದರಿಂದ ಸದಾಚಾರವನ್ನು ಒಂದು ಲಕ್ಷಣದಿಂದ ತಿಳಿಯುವುದು ಕಷ್ಟಕರವಾಗಿದೆ.
ದೃಶ್ಯತೇ ಧರ್ಮರೂಪೇಣ ಹ್ಯಧರ್ಮಂ ಪ್ರಾಕೃತಶ್ಚರನ್ |
ಧರ್ಮಂ ಚಾಧರ್ಮರೂಪೇಣ ಕಶ್ಚಿದಪ್ರಾಕೃತಶ್ಚರನ್ ॥6॥
ಕೆಲವರು ಜಗತ್ತಿನಲ್ಲಿ ಅಧರ್ಮವನ್ನೇ ಆಚರಿಸುತ್ತಿರುತ್ತಾರೆ. ಅಂತಹ ನೀಚ ಸ್ವಭಾವದವರು ಆ ಅಧರ್ಮದ ಮುಖವನ್ನು ಮುಚ್ಚಿಕೊಂಡು ಧರ್ಮಶೀಲರಂತೆ ತೋರಿಸಿಕೊಳ್ಳುತ್ತಾರೆ. ಉತ್ತಮನಾದ ಜೀವನು ಅಧರ್ಮ ಆಚರಿಸುವಂತೆ ಕಾಣಿಸುತ್ತಾನೆ. ಧರ್ಮಶೀಲನೇ ಆಗಿರುತ್ತಾನೆ. ಎಂದಿಗೂ ತಾನು ಮಾಡುವ ಧರ್ಮದ ಬಗ್ಗೆ ಪ್ರಶಂಸೆ ಮಾಡಿಕೊಳ್ಳುವುದಿಲ್ಲ.
ಪುನರಸ್ಯ ಪ್ರಮಾಣಂ ಹಿ ನಿರ್ದಿಷ್ಟಂ ಶಾಸ್ತ್ರಕೋವಿದೈಃ |
ವೇದವಾದಾಶ್ಚಾನುಯುಗಂ ಹ್ರಸಂತೀತಿ ಹ ನಃ ಶ್ರುತಮ್ ॥7॥
ಇದೇ ವಿಚಾರದಲ್ಲಿ ಶಾಸ್ತ್ರಜ್ಞರ ಪ್ರಮಾಣಗಳು ನಿರ್ದೇಶಿಸಲ್ಪಡುತ್ತವೆ. ವೇದ ವಾದಗಳೂ ಕೂಡ ಪ್ರತಿಯುಗದಲ್ಲಿ ಸ್ವಲ್ಪ ಸ್ವಲ್ಪ ಸಂಕುಚಿತಗಳಾಗುತ್ತಾ ಬರುತ್ತವೆಂದು ನಮಗೆ ತಿಳಿಯುತ್ತಿದೆ.
ಅನ್ಯೇ ಕೃತಯುಗೇ ಧರ್ಮಾಸ್ತ್ರೇತಾಯಾಂ ದ್ವಾಪರೇಽಪರೇ |
ಅನ್ಯೇ ಕಲಿಯುಗೇ ಧರ್ಮಾ ಯಥಾಶಕ್ತಿಕೃತಾ ಇವ ॥8॥
ಕೃತಯುಗದ ಧರ್ಮಗಳೇ ಬೇರೆ, ತ್ರೇತಾಯುಗದ ಧರ್ಮಗಳೇ ಬೇರೆ. ಇದರಂತೆ ದ್ವಾಪರ-ಕಲಿಯುಗಗಳಲ್ಲಿಯೂ ಧರ್ಮಗಳು ಭಿನ್ನಭಿನ್ನವಾದವುಗಳು. ಆಯಾ ಯುಗಗಳಲ್ಲಿ ಇರುವ ಮನುಷ್ಯರ ಶಕ್ತಿಯನ್ನನುಸರಿಸಿ ಧರ್ಮಗಳು ಬೇರೆ ರೀತಿ ವಿಧಿಸಲ್ಪಟ್ಟಿವೆ ಎಂಬಂತೆ ತೋರುತ್ತಿದೆ.
ಆಮ್ನಾಯವಚನಂ ಸತ್ಯಮಿತ್ಯಯಂ ಲೋಕಸಂಗ್ರಹಃ |
ಆಮ್ನಾಯೇಭ್ಯಃ ಪುನರ್ವೇದಾಃ ಪ್ರಸೃತಾ ವಿಶ್ವತೋಮುಖಾಃ ॥9॥
ಹೀಗೆ ವೇದವಾಕ್ಯಗಳೇ ಎಲ್ಲಾ ಯುಗಗಳಿಗೂ ಸಮವಾಗಿರುವುದಿಲ್ಲ. ವೇದ ವಚನಗಳು ಸತ್ಯ ಎಂದು ಜಗತ್ತು ಹೇಳುತ್ತಿದೆ. ಆದರೆ ವೇದಗಳಿಂದಲೇ ಅನೇಕ ಪ್ರಕಾರವಾದ ವಿಭಾಗಗಳು ವೇದವ್ಯಾಸರಿಂದ ಪ್ರಸಿದ್ಧವಾಗಿ ಬೆಳೆದು ಬಂದಿವೆ.
ತೇ ಚೇತ್ ಸರ್ವಪ್ರಮಾಣಂ ವೈ ಪ್ರಮಾಣಂ ತನ್ನ ವಿದ್ಯತೇ |
ಪ್ರಮಾಣೇ ಚಾಪ್ರಮಾಣೇ ಚ ವಿರುದ್ಧೇ ಶಾಸ್ತ್ರತಾ ಕುತಃ ॥10॥
ಆ ವೇದಗಳು ಎಲ್ಲರಿಗೂ ಪ್ರಮಾಣವೆಂದಾದಲ್ಲಿ ಧರ್ಮದ ವಿಷಯದಲ್ಲಿ ಪ್ರಮಾಣವಾಗುತ್ತವೆ. ಆದರೆ ಹಾಗೆ ಹೇಳಲು ಬರುವುದಿಲ್ಲ. ಯಾವುದು ಪ್ರಮಾಣ, ಯಾವುದು ಅಪ್ರಮಾಣ ಎಂದು ವೇದಗಳಲ್ಲೇ ಗೊಂದಲ ಉಂಟಾದಲ್ಲಿ ಅದು ಪ್ರಮಾಣವಾಗಲು ಹೇಗೆ ಸಾಧ್ಯ?
ಧರ್ಮಸ್ಯ ಹ್ರಿಯಮಾಣಸ್ಯ ಬಲವದ್ಭಿರ್ದುರಾತ್ಮಭಿಃ |
ಯಾ ಯಾ ವಿಕ್ರಿಯತೇ ಸಂಸ್ಥಾ ತತಃ ಸಾಪಿ ಪ್ರಣಶ್ಯತಿ ॥11॥
ಬಲಿಷ್ಠರಾದ ದುರಾತ್ಮರು ಧರ್ಮವನ್ನು ನಿಂದಿಸುತ್ತಿದ್ದಾರೆ. ಧರ್ಮದ ಮೂಲಸ್ಥಾನವನ್ನೇ ವಿಕೃತಗೊಳಿಸುತ್ತಿದ್ದಾರೆ. ಇದರಿಂದ ಧರ್ಮದ ಮೂಲವೆನಿಸಿದ ವೇದವು ನಾಶ ಹೊಂದುತ್ತಿದೆ.
ವಿದ್ಮ ಚೈವಂ ನ ವಾ ವಿದ್ಮ ಶಕ್ಯಂ ವಾ ವೇದಿತುಂ ನ ವಾ |
ಅಣೀಯಾಂಕ್ಷುರಧಾರಾಯಾ ಗರೀಯಾನ್ ಪರ್ವತಾದಪಿ ॥12॥
ಧರ್ಮವನ್ನು ನಾವು ತಿಳಿದಿದ್ದೇವೋ ಇಲ್ಲವೋ. ಅದನ್ನು ತಿಳಿಯಲು ಸಾಧ್ಯವಾಗುತ್ತದೋ, ಇಲ್ಲವೋ. ಆದರೆ ಇಷ್ಟನ್ನು ಹೇಳಬಹುದು- ಧರ್ಮವಿಂದು ಕತ್ತಿಯ ಅಲುಗಿಗಿಂತಲೂ ಸೂಕ್ಷ್ಮವಾದುದು. ಪರ್ವತಕ್ಕಿಂತಲೂ ದೊಡ್ಡದಾದುದು ಎಂದು.
ಗಂಧರ್ವನಗರಾಕಾರಃ ಪ್ರಥಮಂ ಸಂಪ್ರದೃಶ್ಯತೇ |
ಅನ್ವೀಕ್ಷ್ಯಮಾಣಃ ಕವಿಭಿಃ ಪುನರ್ಗಚ್ಛತ್ಯದರ್ಶನಮ್ ॥13॥
ಧರ್ಮವೆಂಬುದು ಆರಂಭದಲ್ಲಿ ಗಂಧರ್ವನಗರದಂತೆ ಕಾಣಿಸುತ್ತದೆ. ಕಾಲ್ಪನಿಕವೆಂದು ತೋರುತ್ತದೆ. ಪುನಃ ಅದನ್ನು ಸರಿಯಾಗಿ ವಿಮರ್ಶಿಸಿದಾಗ ಆ ಗಂಧರ್ವ ನಗರಿಯೇ ಮರೆಯಾಗಿ ಬಿಡುತ್ತದೆ.

ನಿಪಾನಾನೀವ ಗೋಭ್ಯಾಶೇ ಕ್ಷೇತ್ರೇ ಕುಲ್ಯೇವ ಭಾರತ |
ಸ್ಮೃತೋಽಪಿ ಶಾಶ್ವತೋ ಧರ್ಮೋ ವಿಪ್ರಹೀಣೋ ನ ದೃಶ್ಯತೇ ॥14॥
ಗೋವುಗಳೇ ಇಲ್ಲದೆ ಗೋವುಗಳು ನೀರು ಕುಡಿಯುವ ತೊಟ್ಟಿ ಇದ್ದಂತೆ, ಕೃಷಿ ಮಾಡುವ ಭೂಮಿಯೇ ಇಲ್ಲದೆ ನೀರಿನ ತೋಡು ಹರಿಯುವಂತೆ, ವಿಪ್ರರೇ ಇಲ್ಲದಿದ್ದಾಗ ಧರ್ಮವು ನಾಶವನ್ನು ಹೊಂದುತ್ತದೆ.
ಕಾಮಾದನ್ಯೇ ಭಯಾದನ್ಯೇ ಕಾರಣೈರಪರೈಸ್ತಥಾ |
ಅಸಂತೋ ಹಿ ವೃಥಾಚಾರಂ ಭಜಂತೇ ಬಹವೋಽಪರೇ ॥15॥
ಕೆಲವರು ಕಾಮದಿಂದಲೂ, ಇನ್ನು ಕೆಲವರು ಭಯದಿಂದಲೂ, ಇನ್ನು ಕೆಲವರು ಬೇರೆ ಫಲ ಲಾಭದ ಕಾರಣದಿಂದಲೂ ಧರ್ಮವನ್ನು ನಡೆಸುತ್ತಾರೆ. ಅಸಜ್ಜನರು ಅನೇಕ ಜನ ಕೇವಲ ಡಾಂಭಿಕತನದಿಂದ ಅಶ್ರದ್ಧೆಯಿಂದ ಧರ್ಮಕಾರ್ಯಗಳನ್ನು ನಡೆಸುತ್ತಾರೆ.
ಧರ್ಮೋ ಭವತಿ ಸ ಕ್ಷಿಪ್ರಾಂ ವಿಲೀನಸ್ತ್ವೇವ ಸಾಧುಷು |
ಅನ್ಯೇ ತಾನಾಹುರುನ್ಮತ್ತಾನಪಿ ಚಾವಹಸಂತ್ಯುತ ॥16॥
ಅಸಾಧುಗಳಾದ ಕೆಲವರು ನಡೆಸಿದ ವಿಪರೀತ ಧರ್ಮವೂ ಕೆಲವೊಂದು ವೇಳೆ ಧರ್ಮವೆನಿಸುತ್ತದೆ. ನಿಜವಾಗಿ ಧರ್ಮವನ್ನು ಆಚರಿಸುವವರನ್ನು ಅಸಜ್ಜನರು ಕೆಲವೊಂದು ವೇಳೆ ಉನ್ಮತ್ತರೆಂದು ಅಪಹಾಸ್ಯ ಮಾಡುತ್ತಾರೆ, ಹೀಗಳೆಯುತ್ತಾರೆ.
ಮಹಾಜನಾ ಹ್ಯುಪಾವೃತ್ತಾ ರಾಜಧರ್ಮಂ ಸಮಾಶ್ರಿತಾಃ |
ನ ಹಿ ಸರ್ವಹಿತಃ ಕಶ್ಚಿದಾಚಾರಃ ಸಂಪ್ರದೃಶ್ಯತೇ ॥17॥
ಹಿಂದೆ ಪೂಜ್ಯರಾದ ಮಹಾತ್ಮರು ಧರ್ಮ ಮಾರ್ಗವನ್ನು ಬಿಟ್ಟು ರಾಜಧರ್ಮವನ್ನು ಆಶ್ರಯಿಸಿರುತ್ತಿದ್ದರು. ಇದೆಲ್ಲವನ್ನೂ ಪರಿಶೀಲಿಸಿದಾಗ ಸಾಧಾರಣವಾಗಿ ಎಲ್ಲರಿಗೂ ಹಿತವಾದ ಧರ್ಮಾಚರಣೆ ಯಾವುದೂ ಇರುವಂತೆ ತೋರುತ್ತಿಲ್ಲ.
ತೇನೈವಾನ್ಯಃ ಪ್ರಭವತಿ ಸೋಽಪರಂ ಬಾಧತೇ ಪುನಃ |
ದೃಶ್ಯತೇ ಚೈವ ಸ ಪುನಸ್ತುಲ್ಯರೂಪೋ ಯದೃಚ್ಛಯಾ ॥18॥
ಯೇನೈವಾನ್ಯಃ ಪ್ರಭವತಿ ಸೋಽಪರಾನಪಿ ಬಾಧತೇ |
ಆಚಾರಾಣಾಮನೈಕಾಗ್ರ್ಯಂ ಸರ್ವೇಷಾಮೇವ ಲಕ್ಷಯೇತ್ ॥19॥
ಒಬ್ಬನು ಒಂದು ನಡತೆಯಿಂದ ಉನ್ನತಿಯನ್ನು ಸಾಧಿಸುತ್ತಾನೆ. ಅದೇ ನಡತೆಯು ಇನ್ನೊಬ್ಬನಿಗೆ ಹಾನಿಯನ್ನುಂಟು ಮಾಡುತ್ತದೆ. ಅದೇ ನಡತೆಯನ್ನು ಇನ್ನೊಬ್ಬನು ಅನುಸರಿಸಿದಾಗ ಯಾವುದೇ ವ್ಯತ್ಯಾಸವಿಲ್ಲದೆ ಒಂದೇ ರೀತಿಯಾಗಿರುತ್ತಾನೆ. ಒಬ್ಬನಿಗೆ ಕ್ಷೇಮವನ್ನುಂಟು ಮಾಡಿದ ಧರ್ಮ ಇನ್ನೊಬ್ಬನಿಗೆ ಹಾನಿಕಾರಕವಾಗುವುದು. ಒಟ್ಟಿನಲ್ಲಿ ಆಚಾರ-ವ್ಯವಹಾರಗಳಲ್ಲಿ ಏಕತ್ವವಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಅವರವರು ಇಚ್ಛೆಯಿಂದ ಧರ್ಮವನ್ನು ಅವಲಂಬಿಸಿದಂತೆ ಕಾಣುತ್ತಿದೆ.
ಚಿರಾಭಿಪನ್ನಃ ಕವಿಭಿಃ ಪೂರ್ವಂ ಧರ್ಮ ಉದಾಹೃತಃ |
ತೇನಾಚಾರೇಣ ಪೂರ್ವೇಣ ಸಂಸ್ಥಾ ಭವತಿ ಶಾಶ್ವತೀ ॥20॥
ಪಿತಾಮಹನೇ, ವಿದ್ವಾಂಸರು ಬಹಳ ಕಾಲದಿಂದ ಆಚರಿಸುತ್ತಿದ್ದ ಧರ್ಮವನ್ನು ನೀನು ಹೇಳಿರುವೆ. ಹಿಂದಿನವರ ಧರ್ಮವನ್ನೇ ಇಂದು ಆದರಿಸಬೇಕಾಗಿದೆ. ಆ ಹಿಂದಿನ ಆಚಾರದ ಕಟ್ಟುಪಾಡೇ ಈಗ ಶಾಶ್ವತವಾಗಿ ಇಲ್ಲಿಯ ತನಕ ನೆಲೆಗೊಂಡಿರುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತಾರನೆಯ ಅಧ್ಯಾಯ
ಜಾಜಲಿ ಮತ್ತು ತುಲಾಧಾರರ ಸಂವಾದ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ತುಲಾಧಾರಸ್ಯ ವಾಕ್ಯಾನಿ ಧರ್ಮೇ ಜಾಜಲಿನಾ ಸಹ ॥1॥
ಧರ್ಮಪುತ್ರನೇ, ನಿನ್ನ ಪ್ರಶ್ನೆಗೆ ಸಂಬಂಧಿಸಿದಂತೆ ಜಾಜಲಿ ಎಂಬ ಮಹರ್ಷಿಗೂ ತುಲಾಧಾರನೆಂಬ ವೈಶ್ಯನಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ಉದಾಹರಿಸುತ್ತಾರೆ.
ವನೇ ವನಚರಃ ಕಶ್ಚಿಜ್ಜಾಜಲಿರ್ನಾಮ ವೈ ದ್ವಿಜಃ |
ಸಾಗರೋದ್ದೇಶಮಾಗಮ್ಯ ತಪಸ್ತೇಪೇ ಮಹಾತಪಾಃ ॥2॥
ಹಿಂದೆ ಜಾಜಲಿ ಎಂಬ ಬ್ರಾಹ್ಮಣನು ವಾನಪ್ರಸ್ಥ ವೃತ್ತಿಯನ್ನು ಅವಲಂಬಿಸಿಕೊಂಡು ಕಾಡಿನಲ್ಲಿಯೇ ಸಂಚರಿಸುತ್ತಿದ್ದನು. ಅವನು ಮಹಾತಪಸ್ವಿಯಾಗಿ ಸಮುದ್ರದ ತೀರಕ್ಕೆ ಹೋಗಿ ಘೋರವಾದ ತಪಸ್ಸನ್ನು ಮಾಡಿದನು.
ನಿಯತೋ ನಿಯತಾಹಾರಶ್ಚೀರಾಜಿನಜಟಾಧರಃ |
ಮಲಪಂಕಧರೋ ಧೀಮಾನ್ ಬಹೂನ್ ವರ್ಷಗಣಾನ್ ಮುನಿಃ ॥3॥
ನಿಯಮದಿಂದ ವಾಸ ಮಾಡುತ್ತಾ ನಿಯತವಾದ ಆಹಾರವನ್ನು ಸ್ವೀಕರಿಸುತ್ತಿದ್ದನು. ನಾರುಮಡಿಯನ್ನು ಧರಿಸಿದ್ದನು. ಜಟಾಧಾರಿಯಾಗಿದ್ದನು. ಅನೇಕ ವರ್ಷಗಳ ತನಕ ಜ್ಞಾನಿಯಾದ ಅವನು ಮೈಮೇಲೆ ಅಂಟಿದ ಕೊಳೆ, ಕೆಸರನ್ನೂ ತೊಳೆಯದೆ ತಪಸ್ಸನ್ನು ಮಾಡುತ್ತಿದ್ದನು.
ಸ ಕದಾಚಿನ್ಮಹಾತೇಜಾ ಜಲವಾಸೋ ಮಹೀಪತೇ |
ಚಚಾರ ಲೋಕಾನ್ ವಿಪ್ರರ್ಷಿಃ ಪ್ರೇಕ್ಷಮಾಣೋ ಮನೋಜವಃ ॥4॥

ಸಮುದ್ರದ ನೀರಿನಲ್ಲಿಯೇ ವಾಸ ಮಾಡುತ್ತಿದ್ದ, ಮಹಾತೇಜಸ್ವಿಯಾಗಿದ್ದ, ಮನೋವೇಗದ ಗತಿಯುಳ್ಳವನಾಗಿದ್ದ ಆ ಬ್ರಾಹ್ಮಣಶ್ರೇಷ್ಠನು ಒಮ್ಮೆ ಸಮಸ್ತ ಲೋಕಗಳನ್ನು ನೋಡುತ್ತಾ ಸಂಚರಿಸುತ್ತಿದ್ದನು.
ಸ ಚಿಂತಯಾಮಾಸ ಮುನಿರ್ಜಲಮಧ್ಯೇ ಕದಾಚನ |
ವಿಪ್ರೇಕ್ಷ್ಯ ಸಾಗರಾಂತಾಂ ವೈ ಮಹೀಂ ಸವನಕಾನನಾಮ್ ॥5॥
ಸಾಗರದ ತನಕ ವ್ಯಾಪಿಸಿದ ಕಾಡು, ವನಗಳಿಂದ ಕೂಡಿದ ಭೂಮಿಯನ್ನೆಲ್ಲ ನೋಡಿದ ಬಳಿಕ ಪುನಃ ಜಲವಾಸವನ್ನೇ ಮಾಡಲು ಯೋಚಿಸಿದ ಆ ಜಾಜಲಿಯು ಹೀಗೆ ಚಿಂತಿಸಿದನು.
ನ ಮಯಾ ಸದೃಶೋಽಸ್ತೀಹ ಲೋಕೇ ಸ್ಥಾವರಜಂಗಮೇ |
ಅಪ್ಸು ವೈಹಾಯಸಂ ಗಚ್ಛೇನ್ಮಯಾ ಯೋಽನ್ಯಃ ಸಹೇತಿ ವೈ ॥6॥
ಈಗ ಜಗತ್ತಿನಲ್ಲಿ ಸ್ಥಾವರ-ಜಂಗಮ ಪ್ರಾಣಿಗಳಲ್ಲಿ ಯಾರೂ ನನಗೆ ಸಮಾನರಾದವರು ಇರುವುದಿಲ್ಲ. ನಾನು ವಾಯುಬಂಧನವನ್ನು ಮಾಡಿಕೊಂಡು ನೀರಿನ ಮೇಲೆಯೇ ನಡೆದುಕೊಂಡು ಹೋಗಬಲ್ಲೆನು.ನೀರಿನಲ್ಲಿ ಮುಳುಗದಿರುವಂತೆ ಸಂಚರಿಸುವ ನನಗೆ ಬೇರೆ ಯಾರು ಸಮಾನರಾಗಿ ಸಂಚರಿಸಲು ಸಾಧ್ಯ?
ಸ ದೃಶ್ಯಮಾನೋ ರಕ್ಷೋಭಿರ್ಜಲಮಧ್ಯೇಽವದತ್ತತಃ |
ಅಬ್ರುವಂಶ್ಚ ಪಿಶಾಚಾಸ್ತಂ ನೈವಂ ತ್ವಂ ವಕ್ತುಮರ್ಹಸಿ ॥7॥
ಈ ರೀತಿ ರಾಕ್ಷಸರಿಗೆ ಕಾಣಿಸದಂತೆ ನೀರಿನ ಮಧ್ಯದಲ್ಲಿ ವಾಸ ಮಾಡಿಕೊಂಡಿದ್ದ ಜಾಜಲಿಯು ಹೀಗೆ ಹೇಳಿದ ಕೂಡಲೇ ಪಿಶಾಚರು ಮುನಿಯನ್ನು ಕುರಿತು ನೀನು ಹೀಗೆ ಹೇಳುವುದು ಸರಿಯಲ್ಲ ಎಂದು ಹೇಳಿದವು.
ತುಲಾಧಾರೋ ವಣಿಗ್ಧರ್ಮಾ ವಾರಾಣಸ್ಯಾಂ ಮಹಾಯಶಾಃ |
ಸೋಽಪ್ಯೇವಂ ನಾರ್ಹತೇ ವಕ್ತುಂ ಯಥಾ ತ್ವಂ ದ್ವಿಜಸತ್ತಮ ॥8॥
ಕಾಶೀ ಎಂಬ ಮಹಾನಗರಿಯಲ್ಲಿ ವೈಶ್ಯವೃತ್ತಿಯನ್ನು ಆಶ್ರಯಿಸಿಕೊಂಡು ಬದುಕುತ್ತಿರುವ ತುಲಾಧಾರನೆಂಬ ಯಶೋವಂತನಾದ ವ್ಯಕ್ತಿ ಇದ್ದಾನೆ. ಅವನು ನಿನ್ನಂತೆ ಅಹಂಕಾರದ ಮಾತುಗಳನ್ನು ಹೇಳುವುದಿಲ್ಲ.
ಇತ್ಯುಕ್ತೋ ಜಾಜಲಿರ್ಭೂತೈಃ ಪ್ರತ್ಯುವಾಚ ಮಹಾತಪಾಃ |
ಪಶ್ಯೇಯಂ ತಮಹಂ ಪ್ರಾಜ್ಞಂ ತುಲಾಧಾರಂ ಯಶಸ್ವಿನಮ್ ॥9॥
ಈ ರೀತಿಯಾಗಿ ಭೂತ, ಪಿಶಾಚಿಗಳು ಜಾಜಲಿಯನ್ನು ಕುರಿತು ಹೇಳುತ್ತಿರಲು ಮಹಾತಪಸ್ವಿಯಾದ ಜಾಜಲಿಯು ಭೂತಗಳನ್ನು ಕುರಿತು ಉತ್ತರಿಸಿದನು. ಕೀರ್ತಿಸಂಪನ್ನನಾದ, ಜ್ಞಾನಿಯಾದ ತುಲಾಧಾರನನ್ನು ನಾನು ಈಗಲೇ ಹೋಗಿ ನೋಡುತ್ತೇನೆ.
ಇತಿ ಬ್ರುವಾಣಂ ತಮೃಷಿಂ ರಕ್ಷಾಂಸ್ಯುದ್ಧೃತ್ಯ ಸಾಗರಾತ್ |
ಅಬ್ರುವನ್ ಗಚ್ಛ ಪನ್ಥಾನಮಾಸ್ಥಾಯೇಮಂ ದ್ವಿಜೋತ್ತಮ ॥10॥
ಹೀಗೆ ಹೇಳಿದ ಜಾಜಲಿಯನ್ನು ರಾಕ್ಷಸರು ಸಾಗರದಿಂದ ಮೇಲಕ್ಕೆ ಎತ್ತಿ ಒಂದು ಸ್ಥಳದಲ್ಲಿ ನಿಲ್ಲಿಸಿ ಹೇಳಿದರು. ಬ್ರಾಹ್ಮಣ ಶ್ರೇಷ್ಠನೇ, ನೀನು ಈ ಮಾರ್ಗವನ್ನು ಅನುಸರಿಸಿ ಕಾಶಿಪಟ್ಟಣಕ್ಕೆ ಹೋಗಬಹುದು ಎಂದು.
ಇತ್ಯುಕ್ತೋ ಜಾಜಲಿರ್ಭೂತೈರ್ಜಗಾಮ ವಿಮನಾಸ್ತದಾ |
ವಾರಾಣಸ್ಯಾಂ ತುಲಾಧಾರಂ ಸಮಾಸಾದ್ಯಾಬ್ರುವೀದ್ ವಚಃ ॥11॥
ಈ ರೀತಿ ಜಾಜಲಿಯು ಭೂತಗಳಿಂದ ಹೇಳಲ್ಪಟ್ಟ ಬಳಿಕ ಖಿನ್ನ ಮನಸ್ಕನಾಗಿ ವಾರಣಾಸಿಯಲ್ಲಿದ್ದ ತುಲಾಧಾರನ ಬಳಿಗೆ ಹೋಗಿ ಅವನ ಬಳಿ ಹೀಗೆ ನುಡಿದನು.
ಯುಧಿಷ್ಠಿರಃ
ಕಿಂ ಕೃತಂ ಸುಕೃತಂ ಕರ್ಮ ತಾತ ಜಾಜಲಿನಾ ಪುರಾ |
ಯೇನ ಸಿದ್ಧಿಂ ಪರಾಂ ಪ್ರಾಪ್ತಸ್ತನ್ನೋ ವ್ಯಾಖ್ಯಾತುಮರ್ಹಸಿ ॥12॥
ತಂದೆಯೇ, ಅತ್ಯಂತ ಶ್ರೇಷ್ಠವಾದ ಸಿದ್ಧಿಯನ್ನು ಪಡೆಯಲು ಜಾಜಲಿಯು ಅಂತಹ ಯಾವ ಪುಣ್ಯಕ್ಕೆ ಸಂಬಂಧಿಸಿದ ಕರ್ಮವನ್ನು ಆಚರಿಸಿದ್ದ? ಈ ವಿಷಯವನ್ನು ನನಗೆ ಕೃಪೆತೋರಿ ಹೇಳಿರಿ.
ಭೀಷ್ಮಃ
ಅತೀವ ತಪಸಾ ಯುಕ್ತೋ ಘೋರೇಣ ಸ ಬಭೂವ ಹ |
ನದ್ಯುಪಸ್ಪರ್ಶನರತಃ ಸಾಯಂ ಪ್ರಾತರ್ಮಹಾತಪಾಃ ॥13॥
ಯುಧಿಷ್ಠಿರನೇ, ಜಾಜಲಿಯು ಅತ್ಯಂತ ಘೋರವಾದ ತಪಸ್ಸಿನಲ್ಲಿಯೇ ನಿರತನಾಗಿದ್ದನು. ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಪ್ರತಿದಿನವೂ ಸ್ನಾನ ಸಂಧ್ಯಾವಂದನೆಗಳನ್ನು ವಿಧಿಬದ್ಧವಾಗಿ ಆಚರಿಸುತ್ತಿದ್ದನು.
ಅಗ್ನೀನ್ ಪರಿಚರನ್ ಸಮ್ಯಕ್ಸ್ವಾಧ್ಯಾಯಪರಮೋ ದ್ವಿಜಃ |
ವಾನಪ್ರಸ್ಥವಿಧಾನಜ್ಞೋ ಜಾಜಲಿರ್ಜ್ವಲಿತಃ ಶ್ರಿಯಾ ॥14॥
ಅಗ್ನಿಹೋತ್ರವನ್ನು ಮಾಡುತ್ತಿದ್ದನು. ವೇದಾಧ್ಯಯನದಲ್ಲಿ ಆಸಕ್ತನಾಗಿರುತ್ತಿದ್ದನು. ವಾನಪ್ರಸ್ಥಾಶ್ರಮದ ವಿಧಿಗಳನ್ನೆಲ್ಲ ಚೆನ್ನಾಗಿ ಅರಿತು, ಅದನ್ನು ಪರಿಪಾಲಿಸುತ್ತಾ ಬ್ರಹ್ಮತೇಜಸ್ಸಿನಿಂದ ಕಂಗೊಳಿಸುತ್ತಿದ್ದನು.
ಸತ್ಯೇ ತಪಸಿ ತಿಷ್ಠನ್ ಸ ನ ಚ ಧರ್ಮಮವೈಕ್ಷತ |
ವರ್ಷಾಸ್ವಾಕಾಶಶಾಯೀ ಸ ಹೇಮಂತೇ ಜಲಸಂಶ್ರಯಃ ॥15॥
ವಾತಾತಪಸಹೋ ಗ್ರೀಷ್ಮೇ ನ ಚ ಧರ್ಮಮವಿಂದತ |
ದುಃಖಶಯ್ಯಾಶ್ಚ ವಿವಿಧಾ ಭೂಮೌ ಚ ಪರಿವರ್ತನಮ್ ॥16॥
ಸತ್ಯ, ತಪಸ್ಸಿನಲ್ಲಿ ನಿಷ್ಠನಾದ ಅವನು ಧರ್ಮಜ್ಞನೆಂಬ ಅಭಿಮಾನವನ್ನು ಹೊಂದಿರಲಿಲ್ಲ. ಮಳೆಗಾಲದಲ್ಲಿ ಆಕಾಶವನ್ನೇ ಹೊದ್ದಿಕೆ

ಮಾಡಿಕೊಂಡು ಹೇಮಂತ ಋತುವಿನಲ್ಲಿ ನೀರಿನಲ್ಲಿ ಕುಳಿತು, ಗ್ರೀಷ್ಮ ಋತುವಿನಲ್ಲಿ ಗಾಳಿ-ಬಿಸಿಲನ್ನು ಸಹಿಸಿಕೊಂಡು ತಪಸ್ಸು ಮಾಡುತ್ತಿದ್ದರೂ ತಾನು ಧರ್ಮಾತ್ಮನೆಂಬ ಅಹಂಕಾರವನ್ನು ಹೊಂದಿರಲಿಲ್ಲ. ಅವನು ಭೂಮಿಯಲ್ಲಿ ಮಲಗಿಕೊಂಡು ನಿದ್ರೆಬಾರದೆ ಹೊರಳಾಡುತ್ತಿದ್ದನು. ದುಃಖದಾಯಕವಾದ ಕಲ್ಲು-ಮಣ್ಣುಗಳ ನೆಲದಲ್ಲಿಯೇ ಮಲಗುತ್ತಿದ್ದನು.

ತತಃ ಕದಾಚಿತ್ಸ ಮುನಿರ್ವರ್ಷಾಸ್ವಾಕಾಶಮಾಸ್ಥಿತಃ |
ಅಂತರಿಕ್ಷಾಜ್ಜಲಂ ಮೂರ್ಧ್ನಾ ಪ್ರತ್ಯಗೃಹ್ಣಾನ್ಮುಹುರ್ಮುಹುಃ ||17||

ಹೀಗೆ ವ್ರತಾನುಷ್ಠಾನ ಮಾಡುತ್ತಿರಲು ಒಮ್ಮೆ ಮಳೆಗಾಲದಲ್ಲಿ ಆಕಾಶವನ್ನೇ ಹೊದ್ದಿಗೆಯನ್ನಾಗಿ ಮಾಡಿಕೊಂಡು ತಪಸ್ಸು ಮಾಡುತ್ತಾ ಬಯಲಿನಲ್ಲಿ ನಿಂತಿದ್ದನು. ಆ ಸಮಯದಲ್ಲಿ ಅಂತರಿಕ್ಷದಿಂದ ತಲೆಯ ಮೇಲೆ ಧಾರಾಕಾರವಾಗಿ ಮಳೆಯು ಸುರಿಯುತ್ತಿತ್ತು. ಪುನಃ ಪುನಃ ಬೀಳುತ್ತಿದ್ದ ಆ ಮಳೆಯನ್ನು ಸಹಿಸಿಕೊಳ್ಳುತ್ತಿದ್ದನು.

ಅಥ ತಸ್ಯ ಜಟಾಃ ಕ್ಲಿನ್ನಾ ಬಭೂವುರ್ಗ್ರಥಿತಾಃ ಪ್ರಭೋ |
ಅರಣ್ಯಗಮನಾನ್ನಿತ್ಯಂ ಮಲಿನೋ ಮಲಸಂಯುತಾಃ ||18||

ಆ ಮಳೆಯ ನೀರಿನಿಂದ ಅವನ ಜಟೆಯೆಲ್ಲವು ತೊಯ್ದು ಹೋಗಿ ಗಂಟು ಗಂಟಾಗುತ್ತಿದ್ದವು. ಅರಣ್ಯದಲ್ಲಿ ಸಂಚರಿಸುತ್ತಿದ್ದ ಕಾರಣ ಅವನ ಶರೀರವೆಲ್ಲವೂ ಮಲಿನವಾಗಿತ್ತು.

ಸ ಕದಾಚಿನ್ನಿರಾಹಾರೋ ವಾಯುಭಕ್ಷೋ ಮಹಾತಪಾಃ |
ತಸ್ಥೌ ಕಾಷ್ಠವದವ್ಯಗ್ರೋ ನ ಚಚಾಲ ಚ ಕರ್ಹಿಚಿತ್ ||19||

ಆ ಜಾಜಲಿಯು ಒಂದು ಬಾರಿ ಆಹಾರವನ್ನೇ ಸೇವಿಸದೆ ವಾಯುಭಕ್ಷ್ಯನಾಗಿ, ಮಹಾತಪಸ್ವಿಯಾಗಿ, ಒಂದು ಕಟ್ಟಿಗೆಯ ತುಂಡಿನಂತೆ ಸ್ಥಿರಚಿತ್ತನಾಗಿ ಅರಣ್ಯದ ಒಂದು ಸ್ಥಳದಲ್ಲಿ ತಪಸ್ಸಿಗಾಗಿ ನಿಂತನು. ಎಷ್ಟು ಸಮಯವಾದರೂ ಆ ಸ್ಥಳದಿಂದ ಚಲಿಸಲೇ ಇಲ್ಲ.

ತಸ್ಯ ಸ್ಮ ಸ್ಥಾಣುಭೂತಸ್ಯ ನಿರ್ವಿಚೇಷ್ಟಸ್ಯ ಭಾರತ |
ಕುಲಿಂಗಶಕುನೌ ರಾಜನ್ನೀಡಂ ಶಿರಸಿ ಚಕ್ರತುಃ ||20||

ಮೋಟು ಮರದಂತೆ ನಿಶ್ಚಂಚಲವಾಗಿ ನಿಂತಿರುವ, ಚೇಷ್ಟಾರಹಿತನಾದ ಆ ಜಾಜಲಿಯ ಜಟೆಗಟ್ಟಿದ ಶಿರಸ್ಸಿನಲ್ಲಿ ಗುಬ್ಬಚ್ಚಿ ದಂಪತಿಗಳು ಗೂಡು ಮಾಡಿಕೊಂಡವು.

ಸ ತೌ ದಯಾವಾನ್ ವಿಪ್ರರ್ಷಿರುಪಪ್ರೈಕ್ಷತ ದಂಪತೀ |
ಕುರ್ವಾಣಂ ನೀಡಕಂ ತತ್ರ ಜಟಾಸು ತೃಣತಂತುಭಿಃ ||21||

ದಯಾವಂತನಾದ ಬ್ರಹ್ಮರ್ಷಿಯಾದ ಜಾಜಲಿಯು ಎರಡು ಪಕ್ಷಿಗಳು ಹುಲ್ಲು ಕಡ್ಡಿಗಳನ್ನು ತಂದು ತನ್ನ ತಲೆಯ ಮೇಲೆ ಗೂಡು ಕಟ್ಟಿಕೊಳ್ಳುತ್ತಿದ್ದರೂ ಅದನ್ನು ಉಪೇಕ್ಷಿಸಿದನು.

ಯದಾ ಸ ನ ಚಲತ್ಯೇವ ಸ್ಥಾಣುಭೂತೋ ಮಹಾತಪಾಃ |
ತತಸ್ತೌ ಪರಿವಿಶ್ವಸ್ತೌ ಸುಖಂ ತತ್ರೋಷತುಸ್ತದಾ ||22||

ತಲೆಯನ್ನು ಒಮ್ಮೆಯೂ ಕೊಡವಿಕೊಳ್ಳಲೂ ಇಲ್ಲ. ಅವುಗಳಿಗೂ ತೊಂದರೆಯಾಗದಂತೆ ಸ್ಥಾಣುವಿನಂತೆ ನಿಂತನು. ಅವನು ವಿಚಲಿತನಾಗದೆ ನಿಂತ ಬಳಿಕ ವಿಶ್ವಾಸ ಹೊಂದಿದ ಗುಬ್ಬಚ್ಚಿಗಳು ಸಂತೋಷದಿಂದ ಅವನ ತಲೆಯಲ್ಲಿಯೇ ಕಾಲ ಕಳೆದವು.

ಅತೀತಾಸ್ವಥ ವರ್ಷಾಸು ಶರತ್ಕಾಲ ಉಪಸ್ಥಿತೇ |
ಪ್ರಾಜಾಪತ್ಯೇನ ವಿಧಿನಾ ವಿಶ್ವಾಸಾತ್ ಕಾಮಮೋಹಿತೌ ||23||

ಹೀಗೆ ಮಳೆಗಾಲವು ಮುಗಿದು ಶರತ್ಕಾಲವು ಆರಂಭವಾಯಿತು. ಕಾಮ ಮೋಹಿತವಾದ ಆ ಗುಬ್ಬಚ್ಚಿಗಳು ಪ್ರಾಜಾಪತ್ಯ ವಿಧಿಯಿಂದ ಸಮಾಗಮವನ್ನು ಮಾಡಿದವು.

ತತ್ರಾಪಾತಯತಾಂ ರಾಜನ್ ಶಿರಸ್ಯಂಡಾನಿ ಖೇಚರೌ |
ತಾನ್ಯಬುಧ್ಯತ ತೇಜಸ್ವೀ ಸ ವಿಪ್ರಾಃ ಸಂಶಿತವ್ರತಃ ||24||

ಮಹರ್ಷಿಯ ವಿಷಯದಲ್ಲಿ ವಿಶ್ವಾಸವಿದ್ದ ಕಾರಣ ಅವನ ತಲೆಯ ಮೇಲೆ ಇರುವ ಗೂಡಿನಲ್ಲಿ ಮೊಟ್ಟೆಗಳನ್ನು ಇಟ್ಟವು. ಕಠೋರ ವ್ರತನಿಷ್ಠನಾಗಿದ್ದ ತೇಜಸ್ವಿಯಾದ ಜಾಜಲಿಯು ತನ್ನ ತಲೆಯ ಮೇಲಿರುವ ಗೂಡಿನಲ್ಲಿ ಗುಬ್ಬಚ್ಚಿಗಳು ಮೊಟ್ಟೆ ಇಟ್ಟಿಯೆಂದು ತಿಳಿದುಕೊಂಡನು.

ಬುದ್ಧ್ವಾ ಚ ಸ ಮಹಾತೇಜಾ ನ ಚಚಾಲೈವ ಜಾಜಲಿಃ |
ಧರ್ಮೇ ಧೃತಮನಾ ನಿತ್ಯಂ ನಾಧರ್ಮಂ ಸ ತ್ವರೋಚಯತ್ ||25||

ಇದನ್ನು ತಿಳಿದ ಮಹಾತೇಜಸ್ವಿಯಾದ ಜಾಜಲಿಯು ಮತ್ತೂ ಸ್ಥಿರವಾಗಿ ನಿಂತನು. ಧರ್ಮದಲ್ಲಿಯೇ ನಿಷ್ಠವಾದ ಮನಸ್ಸುಳ್ಳ ಅವನು ತಲೆಯನ್ನಾಡಿಸಿದಲ್ಲಿ ಪಕ್ಷಿಗಳಿಗೆ ತೊಂದರೆಯಾಗುತ್ತದೆ ಎಂದು, ಅಧರ್ಮ ಮಾಡಬಾರದೆಂದು ಮತ್ತೂ ಸ್ಥಿರವಾಗಿಯೇ ನಿಂತನು.

ಅಹನ್ಯಹನಿ ಚಾಗಮ್ಯ ತತಸ್ತೌ ತಸ್ಯ ಮೂರ್ಧನಿ |
ಆಶ್ವಾಸಿತೌ ವೈ ವಸತಃ ಸಂಪ್ರಹೃಷ್ಟೌ ತದಾ ವಿಭೋ ||26||

ಪ್ರತಿದಿನವೂ ಆ ಪಕ್ಷಿಗಳು ಬೆಳಗಾದ ಕೂಡಲೇ ಆಹಾರಕ್ಕೋಸ್ಕರ ಪರಿಭ್ರಮಣ ಮಾಡಿ, ಸಾಯಂಕಾಲದಲ್ಲಿ ಋಷಿಯ ತಲೆಯ ಮೇಲಿದ್ದ ತಮ್ಮ ಗೂಡಿಗೆ ಬಂದು ಸಂತೋಷದಿಂದಲೇ ವಾಸ ಮಾಡುತ್ತಿದ್ದವು.

ಅಂಡೇಭ್ಯಸ್ತ್ವಥ ಪುಷ್ಟೇಭ್ಯಃ ಪ್ರಜಾಯಂತ ಶಕುಂತಕಾಃ |
ವ್ಯವರ್ಧಂತ ಚ ತತ್ರೈವ ನ ಚಾಕಂಪತ ಜಾಜಲಿಃ ||27||

ಆ ಮೊಟ್ಟೆಯು ಬಲಿತ ಬಳಿಕ ಅವುಗಳೆಲ್ಲ ಒಡೆದು ಆ ಮೊಟ್ಟೆಗಳಿಂದ ಪುಟ್ಟ ಪುಟ್ಟ ಹಕ್ಕಿಗಳು ಹೊರಬಂದವು. ಅವುಗಳೂ ಅವನ ತಲೆಯ ಮೇಲೆ ಬೆಳೆಯ ತೊಡಗಿದವು. ಆದರೂ ಜಾಜಲಿಯು ತನ್ನ ದೇಹವನ್ನು ಅಲ್ಲಾಡಿಸಲಿಲ್ಲ.

ಸ ರಕ್ಷಮಾಣಸ್ತ್ವಂಡಾನಿ ಕುಲಿಂಗಾನಾಂ ಯತವ್ರತಃ |

ತಥೈವ ತಸ್ಥೌ ಧರ್ಮಾತ್ಮಾ ನಿರ್ವಿಚೇಷ್ಟಃ ಸಮಾಹಿತಃ ॥28॥
ಜಿತೇಂದ್ರಿಯನಾದ ಜಾಜಲಿಯು ಗುಬ್ಬಚ್ಚಿಗಳ ಮರಿಗಳನ್ನು ಏಕಾಗ್ರತೆಯಿಂದ ಚೆನ್ನಾಗಿ ರಕ್ಷಿಸುತ್ತಾ ಅಲ್ಲಿಯೇ ನಿಂತನು.
ತತಸ್ತು ಕಾಲಸಮಯೇ ಬಭೂವುಸ್ತೇಽಥ ಪಕ್ಷಿಣಃ |
ಬುಬುಧೇ ತಾಂಶ್ಚ ಸ ಮುನಿರ್ಜಾತಪಕ್ಷಾನ್ ಶಕುಂತಕಾನ್ ॥29॥
ಸ್ವಲ್ಪ ಕಾಲವು ಕಳೆದ ಬಳಿಕ ಮರಿಗಳು ರೆಕ್ಕೆ ಬಲಿತು ಹಾರಾಡುವ ಹಕ್ಕಿಗಳಾದವು. ಗುಬ್ಬಚ್ಚಿಯ ಮರಿಗಳಿಗೆ ರೆಕ್ಕೆ ಬಲಿತಿರುವುದನ್ನು ಜಾಜಲಿಯು ತಿಳಿದುಕೊಂಡನು.
ತತಃ ಕದಾಚಿತ್ತಾಂಸ್ತತ್ರ ಪಶ್ಯನ್ ಪಕ್ಷೀನ್ಯತವ್ರತಃ |
ಬಭೂವ ಪರಮಪ್ರೀತಸ್ತದಾ ಮತಿಮತಾಂ ವರಃ ॥30॥
ವ್ರತಶೀಲನಾದ, ಬುದ್ಧಿವಂತರಲ್ಲಿ ಶ್ರೇಷ್ಠನಾದ ಜಾಜಲಿಯು ಒಂದು ಬಾರಿ ಆ ಮರಿಗಳೆಲ್ಲವೂ ರೆಕ್ಕೆಯನ್ನು ಹೊಂದಿ ಹಾರಾಡುತ್ತಾ ತನ್ನ ಬಳಿ ಬರುವುದನ್ನು ಕಂಡು ತುಂಬಾ ಸಂತುಷ್ಟನಾದನು.
ತಥಾ ತಾನಭಿಸಂವೃದ್ಧಾಂದೃಷ್ಟ್ವಾ ಚಾಪ್ನುವತಾಂ ಮುದಮ್ |
ಶಕುನೌ ನಿರ್ಭಯೌ ತತ್ರ ಊಷತುಶ್ಚಾತ್ಮಜೈಃ ಸಹ ॥31॥
ಜಾಜಲಿಯು ತಮ್ಮ ವಿಷಯದಲ್ಲಿ ಪ್ರೀತಿ ಹೊಂದಿದ್ದಾನೆಂದು ಗುಬ್ಬಚ್ಚಿ ದಂಪತಿಗಳು ಅರ್ಥ ಮಾಡಿಕೊಂಡು ಸಂತೋಷವನ್ನು ಹೊಂದಿದವು. ಅವುಗಳು ನಿರ್ಭೀತಿಯಿಂದ ತಮ್ಮ ಮಕ್ಕಳ ಜೊತೆಗೆ ಅವನ ತಲೆಯ ಮೇಲೆ ವಾಸ ಮಾಡತೊಡಗಿದವು.
ಜಾತಪಕ್ಷಾಂಶ್ಚ ಸೋಽಪಶ್ಯದುಡ್ಡೀನಾನ್ ಪುನರಾಗತಾನ್ |
ಸಾಯಂ ಸಾಯಂ ದ್ವಿಜಾನ್ ವಿಪ್ರೋ ನ ಚಾಕಂಪತ ಜಾಜಲಿಃ ॥32॥
ರೆಕ್ಕೆ ಬಲಿತ ಹಕ್ಕಿ ಮರಿಗಳು ಪ್ರಾತಃಕಾಲದಲ್ಲಿ ಆಹಾರಕ್ಕಾಗಿ ಪರಿಭ್ರಮಣವನ್ನು ಮಾಡಿ ಪುನಃ ಸಾಯಂಕಾಲ ತನ್ನ ತಲೆಯ ಮೇಲೆ ಆಗಮಿಸಿ ನಿದ್ರಿಸುವುದನ್ನು ಆ ಬ್ರಾಹ್ಮಣನು ನೋಡಿದನು. ಪ್ರತಿ ದಿನವೂ ಸಂಧ್ಯಾಕಾಲದಲ್ಲಿ ಬಂದು ನಿದ್ರಿಸುವ ಅವುಗಳನ್ನು ಕಂಡು ಜಾಜಲಿಯು ತನ್ನ ದೇಹವನ್ನು ಅಲ್ಲಾಡಿಸಲಿಲ್ಲ.
ಕದಾಚಿತ್ ಪುನರಭ್ಯೇತ್ಯ ಪುನರ್ಗಚ್ಛಂತಿ ಸಂತತಮ್ |
ತ್ಯಕ್ತ್ವಾ ಮಾತೃಪಿತೃಭ್ಯಾಂ ತೇ ನ ಚಾಕಂಪತ ಜಾಜಲಿಃ ॥33॥
ಹಕ್ಕಿ ಮರಿಗಳ ಪುಕ್ಕವು ಬಲಿಯಲು ಗುಬ್ಬಚ್ಚಿ ದಂಪತಿಗಳು ಮರಿಗಳನ್ನು ಬಿಟ್ಟು ಬೇರೆ ಕಡೆ ಹೊರಟು ಹೋದವು. ಹಕ್ಕಿ ಮರಿಗಳಾದರೂ ಅವನ ತಲೆಯಲ್ಲಿಯೇ ಆಹಾರಕ್ಕೋಸ್ಕರ ಸಂಚರಿಸಿ ಪುನಃ ಬಂದು ವಾಸ ಮಾಡುತ್ತಿದ್ದವು. ಅವುಗಳಿಗಾಗಿ ಜಾಜಲಿಯು ತನ್ನ ದೇಹವನ್ನು ಸ್ಪಂದಿಸಲೇ ಇಲ್ಲ.
ಅಥ ತೇ ದಿವಸಂ ಚಾರೀಂ ಗತ್ವಾ ಸಾಯಂ ಪುನರ್ನೃಪ |
ಉಪಾವರ್ತಂತ ತತ್ರೈವ ನಿವಾಸಾರ್ಥಂ ಶಕುಂತಕಾಃ ॥34॥
ಪ್ರಾತಃಕಾಲದಲ್ಲಿ ಆಹಾರಕ್ಕಾಗಿ ಸಂಚರಿಸಿದ ಹಕ್ಕಿಯ ಮರಿಗಳು ಪುನಃ ಸಾಯಂಕಾಲ ಅವನ ತಲೆಯ ಮೇಲೆ ವಾಸ ಮಾಡಲು ಗೂಡಿಗಾಗಿ ಆಗಮಿಸುತ್ತಿದ್ದವು.
ಕದಾಚಿದ್ದಿವಸಾನ್ ಪಂಚ ಸಮುತ್ಪತ್ಯ ವಿಹಂಗಮಾಃ |
ಷಷ್ಠೇಽಹನಿ ಸಮಾಜಗ್ಮುರ್ನ ಚಾಕಂಪತ ಜಾಜಲಿಃ ॥35॥
ಒಂದು ಬಾರಿ ಆ ಹಕ್ಕಿಯ ಮರಿಗಳು ಐದು ದಿವಸಗಳ ಕಾಲ ಬೇರೆ ಕಡೆ ವಿಹಾರ ಮಾಡಿ ಆರನೆಯ ದಿವಸ ಆ ಜಾಜಲಿಯ ತಲೆಯ ಮೇಲಿನ ಗೂಡಿನ ಬಳಿ ಬಂದವು. ಹಾಗಿದ್ದರೂ ಜಾಜಲಿಯು ಅಲ್ಲಿಂದ ಕಂಪಿಸಿರಲಿಲ್ಲ.
ಕ್ರಮೇಣ ಚ ಪುನಃ ಸರ್ವೇ ದಿವಸಾನಿ ಬಹೂನ್ಯಪಿ |
ನೋಪಾವರ್ತಂತ ಶಕುನಾ ಜಾತಪ್ರಾಣಾಃ ಸ್ಮ ತೇ ಯದಾ ॥36॥
ಕದಾಚಿನ್ಮಾಸಮಾತ್ರೇಣ ಸಮುತ್ಪತ್ಯ ವಿಹಂಗಮಾಃ |
ನೈವಾಗಚ್ಛಂಸ್ತತೋ ರಾಜನ್ ಪ್ರಾತಿಷ್ಠತ ಸ ಜಾಜಲಿಃ ॥37॥
ಕ್ರಮೇಣ ಆ ಪಕ್ಷಿಗಳು ಬಹಳ ದಿವಸಗಳ ತನಕ ಆ ಗೂಡಿನ ಕಡೆಗೆ ಹಿಂದಿರುಗಿ ಬರಲೇ ಇಲ್ಲ. ಒಮ್ಮೆ ಆಕಾಶಗಾಮಿಗಳಾದ ಪಕ್ಷಿಗಳು ಹಾರಿ ಹೋಗಿ ಒಂದು ತಿಂಗಳು ಕಾಲ ಹಿಂದಿರುಗಿ ಬರಲಿಲ್ಲ. ಆಗ ಜಾಜಲಿಯು ಆ ಸ್ಥಳವನ್ನು ಬಿಟ್ಟು ಬೇರೆ ಕಡೆ ಹೊರಟನು.
ತತಸ್ತೇಷು ಪ್ರಲೀನೇಷು ಜಾಜಲಿರ್ಜಾತವಿಸ್ಮಯಃ |
ಸಿದ್ಧೋಽಸ್ಮೀತಿ ಮತಿಂ ಚಕ್ರೇ ತತಸ್ತಂ ಮಾನ ಆವಿಶತ್ ॥38॥
ಬಳಿಕ ಅವನು ತನ್ನಲ್ಲಿರುವ ಸ್ಥಿರತೆಗೆ ತಾನೇ ಆಶ್ಚರ್ಯ ಪಡುತ್ತಾ, ನಾನು ಕೃತಾರ್ಥನಾದೆನು. ನನ್ನ ತಪಸ್ಸು ಸಿದ್ಧಿಸಿತು ಎಂಬ ಅಹಂಕಾರವು ಅವನನ್ನು ಪ್ರವೇಶಿಸಿತು.
ಸ ತಥಾ ನಿರ್ಗತಾಂದಷ್ಟ್ವಾ ಶಕುಂತಾನ್ನಿಯತವ್ರತಃ |
ಸಂಭಾವಿತಾತ್ಮಾ ಸಂಭಾವ್ಯ ಭೃಶಂ ಪ್ರೀತಸ್ತದಾಭವನ್ ॥39॥
ಆ ಕಾಡುಹಕ್ಕಿಗಳು ತನ್ನ ತಲೆಯಲ್ಲಿ ಆಶ್ರಯವನ್ನು ಪಡೆದು ಸಂತತಿಯನ್ನೂ ಪಡೆದು ಹೋದ ಕಾರಣದಿಂದ ತನ್ನಲ್ಲಿರುವ ಧರ್ಮ ಬುದ್ಧಿಗೆ ತಾನೇ ಸಂತೋಷ ಪಡುತ್ತಿದ್ದನು.
ಸ ನದ್ಯಾಂ ಸಮುಪಸ್ಪೃಶ್ಯ ತರ್ಪಯಿತ್ವಾ ಹುತಾಶನಮ್ |
ಉದಯಂತಮಥಾದಿತ್ಯಮಭ್ಯಗಚ್ಛನ್ಮಹಾತಪಾಃ ॥40॥
ಬಳಿಕ ಅವನು ನದಿಯಲ್ಲಿ ಸ್ನಾನ ಮಾಡಿ, ತರ್ಪಣಗಳನ್ನು ಕೊಟ್ಟು, ಅಗ್ನಿಕಾರ್ಯವನ್ನು ಮಾಡಿ, ಸೂರ್ಯೋದಯವಾಗುತ್ತಿರಲು ಉಪಸ್ಥಾನವನ್ನು ಮಾಡಿದನು.

ಸಂಭಾವ್ಯ ಚಟಕಾನ್ಮೂರ್ಧ್ನಿ ಜಾಜಲಿರ್ಜಪತಾಂ ವರಃ |
ಆಸ್ಫೋಟಯತ್ತದಾಕಾಶೇ ಧರ್ಮಃ ಪ್ರಾಪ್ತೋ ಮಯೇತಿ ವೈ ||41||
ಆ ಪಕ್ಷಿಗಳಿಗೆ ತನ್ನ ತಲೆಯಲ್ಲಿ ಆಶ್ರಯವನ್ನು ನೀಡಿದುದಕ್ಕಾಗಿ ಅವನು ತನ್ನ ತೋಳನ್ನು ತಟ್ಟಿಕೊಳ್ಳುತ್ತಾ ನಾನೇ ಧಾರ್ಮಿಕಶ್ರೇಷ್ಠನು, ಧರ್ಮವು ನನಗೆ ಒದಗಿದೆ ಎಂದು ಗಟ್ಟಿಯಾಗಿ ಹೇಳಿದನು.
ಅಥಾಂತರಿಕ್ಷೇ ವಾಗಾಸೀತ್ತಾಂ ಸ ಶುಶ್ರಾವ ಜಾಜಲಿಃ |
ಧರ್ಮೇಣ ನ ಸಮಸ್ತ್ವಂ ವೈ ತುಲಾಧಾರಸ್ಯ ಜಾಜಲೇ ||42||
ಕೂಡಲೇ ಆಕಾಶದಲ್ಲಿ ಅಂತರಿಕ್ಷವಾಣಿಯೊಂದು ಅವನ ಕಿವಿಗೆ ಕೇಳಿಸಿತು. ಜಾಜಲಿಯೇ, ನೀನು ಧರ್ಮದಿಂದ ತುಲಾಧಾರನೆಂಬ ವೈಶ್ಯನಿಗೆ ಸಮಾನನಾಗಿರುವುದಿಲ್ಲ. ಅಹಂಕಾರ ಹೊಂದಬೇಡ.
ವಾರಾಣಸ್ಯಾಂ ಮಹಾಪ್ರಾಜ್ಞಸ್ತುಲಾಧಾರಃ ಪ್ರತಿಷ್ಠಿತಃ |
ಸೋಽಪ್ಯೇವಂ ನಾರ್ಹತೇ ವಕ್ತುಂ ಯಥಾ ತ್ವಂ ಭಾಷಸೇ ದ್ವಿಜ ||43||
ವಾರಣಾಸಿಯಲ್ಲಿ ಮಹಾಪ್ರಾಜ್ಞನಾದ ತುಲಾಧಾರನು ವಾಸ ಮಾಡಿಕೊಂಡಿದ್ದಾನೆ. ನೀನು ಹೇಗೆ ಅಹಂಕಾರದ ಮಾತುಗಳನ್ನು ಆಡುತ್ತಿರುವೆಯೋ ಅಂತಹ ಮಾತುಗಳನ್ನು ವೈಶ್ಯನಾದ ತುಲಾಧಾರನು ಹೇಳುತ್ತಿಲ್ಲ.
ಸೋಽಮರ್ಷವಶಮಾಪನ್ನಸ್ತುಲಾಧಾರದಿದೃಕ್ಷಯಾ |
ಪೃಥಿವೀಮಚರದ್ರಾಜನ್ಯತ್ರಸಾಯಂಗಹೋ ಮುನಿಃ ||44||
ಈ ರೀತಿಯಾದ ಮಾತನ್ನು ಕೇಳಿ ಸಹಿಸಿಕೊಳ್ಳದೆ ಕೂಡಲೇ ತುಲಾಧಾರನನ್ನು ನೋಡಬೇಕೆಂಬ ಕಾತುರತೆಯಿಂದ ಮೌನವ್ರತವನ್ನು ಧರಿಸಿ ಬೆಳಗಿನ ಜಾವದಲ್ಲಿ ಕಾಶಿ ಪಟ್ಟಣದ ಕಡೆ ಹೊರಟನು.
ಕಾಲೇನ ಮಹತಾಗಚ್ಛತ್ಸ ತು ವಾರಾಣಸೀಂ ಪುರೀಮ್ |
ವಿಕ್ರೀಣಂತಂ ಚ ಪಣ್ಯಾನಿ ತುಲಾಧಾರಂ ದದರ್ಶ ಸಃ ||45||
ತುಂಬಾ ದಿವಸಗಳ ಕಾಲ ಸಂಚರಿಸುತ್ತಾ ಕಾಶಿಪಟ್ಟಣವನ್ನು ಸೇರಿಕೊಂಡನು. ಅಲ್ಲಿ ತುಲಾಧಾರನು ತನ್ನ ಅಂಗಡಿಯಲ್ಲಿ ಮಾರಾಟ ಮಾಡುತ್ತಿರುವ ದೃಶ್ಯವನ್ನು ಕಂಡನು.
ಸೋಽಪಿ ದೃಷ್ಟ್ವೈವ ತಂ ವಿಪ್ರಮಾಯಾಂತಂ ಭಾಂಡಜೀವನಃ |
ಸಮುತ್ಥಾಯ ಸುಸಂಹೃಷ್ಟಃ ಸ್ವಾಗತೇನಾಭ್ಯಪೂಜಯತ್ ||46||
ವೈಶ್ಯನು ಹಣವನ್ನು ಬಡ್ಡಿಗೆ ಕೊಟ್ಟು ಬದುಕುವವನಾಗಿದ್ದನು. ಆ ಬ್ರಾಹ್ಮಣನನ್ನು ಕಂಡ ಕೂಡಲೇ ಆ ವರ್ತಕನಾದ ತುಲಾಧಾರನು ಎದ್ದು ನಿಂತು ಅತ್ಯಂತ ಸಂತೋಷದಿಂದ ಅವನನ್ನು ಸ್ವಾಗತಿಸಿ ಪೂಜಿಸಿದನು.
ತುಲಾಧಾರಃ
ಆಯಾನೇವಾಸಿ ವಿದಿತೋ ಮಮ ಬ್ರಹ್ಮನ್ನ ಸಂಶಯಃ |
ಬ್ರವೀಮಿ ಯತ್ತು ವಚನಂ ತಚ್ಛೃಣುಷ್ವ ದ್ವಿಜೋತ್ತಮ ||47||
ದ್ವಿಜೋತ್ತಮನೇ, ನೀನು ಬರುವ ಸಮಾಚಾರವನ್ನು ನಾನು ಮೊದಲೇ ಬಲ್ಲವನಾಗಿದ್ದೆ. ನಾನು ಹೇಳುವ ಮಾತುಗಳನ್ನು ನೀನು ಕೇಳಿಸಿಕೊ.
ಸಾಗರಾನೂಪಮಾಶ್ರಿತ್ಯ ತಪಸ್ತಪ್ತಂ ತ್ವಯಾ ಮಹತ್ |
ನ ಚ ಧರ್ಮಸ್ಯ ಸಂಜ್ಞಾಂ ತ್ವಂ ಪುರಾ ವೇತ್ಥ ಕಥಂಚನ ||48||
ನೀನು ಸಮುದ್ರದ ತೀರದಲ್ಲಿ ಮಹಾತಪಸ್ಸನ್ನು ಮಾಡುತ್ತಿದ್ದುದನ್ನು ನಾನು ತಿಳಿದವನಾಗಿದ್ದೇನೆ. ನೀನು ಹಿಂದೆ ಆ ಧರ್ಮವನ್ನು ಮಾಡುತ್ತಿದ್ದೇನೆ ಎಂಬ ಸ್ಮರಣೆಯನ್ನು ಹೊಂದಿರಲಿಲ್ಲ.
ತತಃ ಸಿದ್ಧಸ್ಯ ತಪಸಾ ತವ ವಿಪ್ರಾ ಶಕುಂತಕಾಃ |
ಕ್ಷಿಪ್ರಾಂ ಶಿರಸ್ಯಜಾಯಂತ ತೇ ಚ ಸಂಭಾವಿತಾಸ್ತ್ವಯಾ ||49||
ತಪಸ್ಸಿನಲ್ಲಿ ನೀನು ಸಿದ್ಧಿ ಹೊಂದಿದ ಬಳಿಕ ನಿನ್ನ ತಲೆಯ ಮೇಲೆ ಕೆಲವು ಹಕ್ಕಿಗಳು ಗೂಡನ್ನು ಕಟ್ಟಿ ಮೊಟ್ಟೆಯನ್ನಿಟ್ಟವು. ನೀನು ಅವುಗಳನ್ನು ಧರ್ಮಬುದ್ಧಿಯಿಂದ ಚೆನ್ನಾಗಿಯೇ ರಕ್ಷಿಸಿದೆ.
ಜಾತಪಕ್ಷಾ ಯದಾ ತೇ ಚ ಗತಾಶ್ಚಾರೀಮಿತಸ್ತತಃ |
ಮನ್ಯಮಾನಸ್ತತೋ ಧರ್ಮಂ ಚಟಕಪ್ರಭವಂ ದ್ವಿಜ |
ಖೇ ವಾಚಂ ತ್ವಮಥಾಶ್ರೌಷೀರ್ಮಾಂ ಪ್ರತಿ ದ್ವಿಜಸತ್ತಮ ||50||
ಅವುಗಳಿಗೆ ರೆಕ್ಕೆ ಬಂದು ಸಂಚಾರಕ್ಕೆ ಹೊರಟು ಹೋದ ಬಳಿಕ ಅವುಗಳಿಗೆ ಆಶ್ರಯದಾತ ನಾನು ಎಂದೂ, ನಾನೇ ಮಹಾಧಾರ್ಮಿಕನೆಂದೂ ಅಹಂಕಾರ ಪಟ್ಟೆ. ಅದೇ ಪ್ರಸಂಗದಲ್ಲಿ ನಿನಗೆ ಆಕಾಶವಾಣಿಯೊಂದು ಕೇಳಿಸಿತು.
ಅಮರ್ಷವಶಮಾಪನ್ನಸ್ತತಃ ಪ್ರಾಪ್ತೋ ಭವಾನಿಹ |
ಕರವಾಣಿ ಪ್ರಿಯಂ ಕಿಂ ತೇ ತದ್ ಬ್ರೂಹಿ ದ್ವಿಜಸತ್ತಮ ||51||
ಆ ಆಕಾಶವಾಣಿಯನ್ನು ಸಹಿಸಲಾಗದೆ ನೀನು ಇಲ್ಲಿಗೆ ಬಂದಿರುವಿ. ನಿನಗೆ ಈ ಹಿತವಾದ ಯಾವ ಕಾರ್ಯವನ್ನು ನಾನು ಮಾಡಲಿ? ಬ್ರಾಹ್ಮಣೋತ್ತಮನೇ, ಅದನ್ನು ತಿಳಿಸು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ತುಲಾಧಾರಜಾಜಲಿಸಂವಾದೋ ನಾಮ ಷಣ್ಣವತಿತಮೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ತೊಂಬತ್ತೇಳನೆಯ ಅಧ್ಯಾಯ
ಜಾಜಲಿ ತುಲಾಧಾರರ ಧರ್ಮಸಂವಾದ.
ಭೀಷ್ಮ
ಇತ್ಯುಕ್ತಃ ಸ ತದಾ ತೇನ ತುಲಾಧಾರೇಣ ಧೀಮತಾ |
ಪ್ರೋವಾಚ ವಚನಂ ಧೀಮಾಂಜಾಜಲಿರ್ಜಪತಾಂ ವರಃ ॥1॥
ಧರ್ಮರಾಜನೇ, ಜ್ಞಾನಿಯಾದ ತುಲಾಧಾರನು ಜಾಜಲಿಯನ್ನು ಕುರಿತು ಹೀಗೆ ಹೇಳಿದ ಬಳಿಕ ಜಪಶೀಲರಲ್ಲಿ ಶ್ರೇಷ್ಠರಾದ, ಧೀಮಂತನಾದ ಜಾಜಲಿಯು ತುಲಾಧಾರನನ್ನು ಕುರಿತು ಹೀಗೆ ಹೇಳಿದನು.
ವಿಕ್ರೀಣಾನಃ ಸರ್ವರಸಾನ್ ಸರ್ವಗಂಧಾಂಶ್ಚ ವಾಣಿಜ |
ವನಸ್ಪತೀನೋಷಧೀಶ್ಚ ತೇಷಾಂ ಮೂಲಫಲಾನಿ ಚ ॥2॥
ವೈಶ್ಯಕುಲೋತ್ಪನ್ನನೇ, ನೀನು ಎಲ್ಲ ವಿಧವಾದ ರಸಗಳನ್ನು, ಗಂಧಗಳನ್ನು, ಓಷಧಿಗಳನ್ನು, ವನಸ್ಪತಿಗಳನ್ನು, ಕಂದಮೂಲಫಲಗಳನ್ನು ಮಾರಾಟ ಮಾಡುತ್ತಿರುವಿ.
ಅಧ್ಯಗಾ ನೈಷ್ಠಿಕೀಂ ಬುದ್ಧಿಂ ಕುತಸ್ತ್ವಾಮಿದಮಾಗತಮ್ |
ಏತದಾಚಕ್ಷ್ವ ಮೇ ಸರ್ವಂ ನಿಖಿಲೇನ ಮಹಾಮತೇ ॥3॥
ಹೀಗಿದ್ದರೂ ಧರ್ಮದಲ್ಲಿಯೇ ದೃಢವಾದ ಬುದ್ಧಿಯುಳ್ಳವನಾಗಿರುವಿ. ಈ ಜ್ಞಾನ ಎಲ್ಲಿಂದ ನಿನಗೆ ಒದಗಿತು? ಈ ವಿಷಯದಲ್ಲಿ ಎಲ್ಲವನ್ನೂ ಸಮಗ್ರವಾಗಿ ನನಗೆ ತಿಳಿಸು.
ಏವಮುಕ್ತಸ್ತುಲಾಧಾರೋ ಬ್ರಾಹ್ಮಣೇನ ಯಶಸ್ವಿನಾ |
ಉವಾಚ ಧರ್ಮಸೂಕ್ಷ್ಮಾಣಿ ವೈಶ್ಯೋ ಧರ್ಮಾರ್ಥತತ್ತ್ವವಿತ್ ॥4॥
ಜಾಜಲಿಂ ಕಷ್ಟತಪಸಂ ಜ್ಞಾನತೃಪ್ತಸ್ತದಾ ನೃಪ ॥4॥
ಯುಧಿಷ್ಠಿರನೇ, ಕೀರ್ತಿಸಂಪನ್ನನಾದ ಬ್ರಾಹ್ಮಣನು ಹೀಗೆ ಹೇಳಿದ ಬಳಿಕ ತುಲಾಧಾರನು ಧರ್ಮಾರ್ಥ ತತ್ತ್ವವನ್ನು ಅರಿತು ಧರ್ಮಸೂಕ್ಷ್ಮಗಳಾದ ಮಾತುಗಳನ್ನು ಹೇಳಿದನು. ಕಷ್ಟದಿಂದ ತಪಸ್ಸನ್ನಾಚರಿಸಿದ ಜಾಜಲಿಯನ್ನು ಕುರಿತು ಜ್ಞಾನತೃಪ್ತನಾದ ತುಲಾಧಾರನು ಹೀಗೆ ಹೇಳಿದನು.
ವೇದಾಹಂ ಜಾಜಲೇ ಧರ್ಮಂ ಸರಹಸ್ಯಂ ಸನಾತನಮ್ |
ಸರ್ವಭೂತಹಿತಂ ಮೈತ್ರಂ ಪುರಾಣಂ ಯಂ ಜನಾ ವಿದುಃ ॥5॥
ಜಾಜಲಿಯೇ, ಸರ್ವಪ್ರಾಣಿಗಳಿಗೂ ಹಿತಕರವಾದ, ಎಲ್ಲರೊಡನೆಯೂ ಮೈತ್ರೀ ಭಾವವನ್ನುಂಟು ಮಾಡುವ ಯಾವ ಧರ್ಮವನ್ನು ಜನರು ಪ್ರಾಚೀನವೆಂದು ತಿಳಿದಿದ್ದರೋ, ಅಂತಹ ಸನಾತನವಾದ ಧರ್ಮವನ್ನು, ಅದರಲ್ಲಿ ಅಡಕವಾದ ಸೂಕ್ಷ್ಮರಹಸ್ಯಗಳನ್ನು ನಾನು ತಿಳಿದಿರುತ್ತೇನೆ.
ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ |
ಯಾ ವೃತ್ತಿಃ ಸ ಪರೋ ಧರ್ಮಸ್ತೇನ ಜೀವಾಮಿ ಜಾಜಲೇ ॥6॥
ಜಾಜಲಿಯೇ, ಯಾವ ರೀತಿ ಜೀವನ ನಿರ್ವಹಣೆಯಿಂದ ಯಾವ ಪ್ರಾಣಿಗಳಿಗೂ ದ್ರೋಹವಾಗುವುದಿಲ್ಲವೋ ಅಥವಾ ಅತ್ಯಂತ ಕನಿಷ್ಟ ಪ್ರಮಾಣದ ದ್ರೋಹ ನಡೆಯುವುದೋ ಅಂತಹ ಜೀವನ ವೃತ್ತಿಯನ್ನು ಅನುಸರಿಸುವುದೇ ಶ್ರೇಷ್ಠವಾದ ಧರ್ಮ. ಅಂತಹ ಜೀವನ ವೃತ್ತಿಯನ್ನು ಆಶ್ರಯಿಸಿ ನಾನು ಜೀವಿಸುತ್ತಿದ್ದೇನೆ.
ಪರಿಚ್ಛಿನ್ನೈಃ ಕಾಷ್ಠತೃಣೈರ್ಮಯೇದಂ ಶರಣಂ ಕೃತಮ್ |
ಅಲಕ್ತಂ ಪದ್ಮಕಂ ತುಂಗಂ ಗಂಧಾಂಶ್ಚೋಚ್ಚಾವಚಾಂಸ್ತಥಾ ॥7॥
ರಸಾಂಶ್ಚ ತಾಂಸ್ತಾನ್ ವಿಪ್ರರ್ಷೇ ಮದ್ಯವರ್ಜಾನಹಂ ಬಹೂನ್ |
ಕ್ರೀತ್ವಾ ವೈ ಪ್ರತಿವಿಕ್ರೀಣೇ ಪರಹಸ್ತಾದಮಾಯಯಾ ॥8॥
ಯಾರೋ ತುಂಡರಿಸಿ ಒಗೆದ ಕಾಷ್ಠ-ತೃಣಗಳಿಂದ, ಹುಲ್ಲುಗಳಿಂದಲೂ ನಾನು ಈ ಗುಡಿಸಿಲನ್ನು ಕಟ್ಟಿಕೊಂಡಿರುತ್ತೇನೆ. ಅರಗು, ಪದ್ಮಕ, ಹೊನ್ನೆಮರದ ತೊಗಟೆ, ನಾನಾ ವಿಧವಾದ ಗಂಧಗಳು, ಬೇರೆ ವಿಧವಾದ ರಸಗಳು ಇವುಗಳನ್ನು ನಾನು ಕ್ರಯಕ್ಕೆ ತೆಗೆದುಕೊಂಡು, ಮದ್ಯವನ್ನು ಮಾರಾಟ ಮಾಡದೆ ಮತ್ತೊಬ್ಬರಿಗೆ ಯಾವುದೇ ಕುಟಿಲತೆ, ಮೋಸ, ವಂಚನೆಗಳಿಲ್ಲದೆ ಅವರಿಗೆ ಮಾರಾಟ ಮಾಡಿ, ಅದರಿಂದ ಬಂದ ಲಾಭಾಂಶದಿಂದ ಜೀವನ ನಡೆಸುತ್ತಿದ್ದೇನೆ.
ಸರ್ವೇಷಾಂ ಯಃ ಸುಹೃನ್ನಿತ್ಯಂ ಸರ್ವೇಷಾಂ ಚ ಹಿತೇ ರತಃ |
ಕರ್ಮಣಾ ಮನಸಾ ವಾಚಾ ಸ ಧರ್ಮಂ ವೇದ ಜಾಜಲೇ ॥9॥
ಜಾಜಲಿಯೇ, ಯಾವ ವ್ಯಕ್ತಿಯು ಮಾತು, ಮನಸ್ಸು, ಕೃತಿಗಳಿಂದ ಸಮಸ್ತ ಪ್ರಾಣಿಗಳಿಗೂ ಇಷ್ಟನಾಗುತ್ತಾನೋ, ಎಲ್ಲ ಪ್ರಾಣಿಗಳ ಹಿತದಲ್ಲಿಯೂ ಆಸಕ್ತನಾಗಿರುತ್ತಾನೋ ಅವನು ಧರ್ಮದ ಸ್ವರೂಪವನ್ನು ತಿಳಿದಿರುತ್ತಾನೆ.
ನಾಹಂ ಪರೇಷಾಂ ಕರ್ಮಾಣಿ ಪ್ರಶಂಸಾಮಿ ಶಪಾಮಿ ವಾ |
ಆಕಾಶಸ್ಯೇವ ವಿಪ್ರರ್ಷೇ ಪಶ್ಯಲ್ಲೋಕಸ್ಯ ಚಿತ್ರತಾಮ್ ॥10॥
ನಾನು ಮತ್ತೊಬ್ಬರ ಕರ್ಮಗಳನ್ನು ಅತಿಯಾಗಿ ಪ್ರಶಂಸಿಸಲು ಹೋಗುವುದಿಲ್ಲ, ಶಪಿಸಲೂ ಹೋಗುವುದಿಲ್ಲ. ಲೋಕದಲ್ಲಿರುವ ವೈಚಿತ್ರ್ಯಗಳನ್ನು ನೋಡುತ್ತಾ ಆಕಾಶದಂತೆ ಅಸಂಗನಾಗಿರುತ್ತೇನೆ.
ನಾನುರುದ್ಧ್ಯೇ ವಿರುದ್ಧ್ಯೇ ವಾ ನ ದ್ವೇಷ್ಮಿ ನ ಚ ಕಾಮಯೇ |
ಸಮೋಽಸ್ಮಿ ಸರ್ವಭೂತೇಷು ಪಶ್ಯ ಮೇ ಜಾಜಲೇ ವ್ರತಮ್ ॥11॥
ನಾನು ಒಬ್ಬನನ್ನು ಅತಿಯಾಗಿ ತೃಪ್ತಿಪಡಿಸಲು ಹೋಗುವುದಿಲ್ಲ. ಅವನಿಗೆ ವಿರೋಧ ಮಾಡಲು ಹೋಗುವುದಿಲ್ಲ. ದ್ವೇಷವನ್ನು

ಮಾಡೆನು, ಪ್ರೀತಿಸಲೂ ಹೋಗೆನು. ಸಮಸ್ತ ಪ್ರಾಣಿಗಳ ಅಂತರ್ಯಾಮಿಯಾಗಿ ಭಗವಂತನಿದ್ದಾನೆ ಎಂದು ಅವನನ್ನೇ ನೋಡುತ್ತಿದ್ದೇನೆ. ಜಾಜಲಿಯೇ, ಇದೇ ನನ್ನ ವ್ರತವಾಗಿದೆ.
ಇಷ್ಟಾನಿಷ್ಟವಿಮುಕ್ತಸ್ಯ ಪ್ರೀತಿರಾಗಬಹಿಷ್ಕೃತಃ |
ತುಲಾ ಮೇ ಸರ್ವಭೂತೇಷು ಸಮಾ ತಿಷ್ಠತಿ ಜಾಜಲೇ ॥12॥
ಇಷ್ಟಾನಿಷ್ಟಗಳಿಂದ ವಿಮುಕ್ತವಾಗಿರುವ, ಪ್ರೀತಿ-ರಾಗಗಳಿಂದ ದೂರವಾಗಿರುವ ನನ್ನ ತಕ್ಕಡಿಯು ಸಮಸ್ತ ಪ್ರಾಣಿಗಳ ವಿಷಯದಲ್ಲಿಯೂ ಒಂದೇ ನೀತಿಯನ್ನು ತೋರಿಸುತ್ತಿದೆ.
ಇತಿ ಮಾಂ ತ್ವಂ ವಿಜಾನೀಹಿ ಸರ್ವಲೋಕಸ್ಯ ಜಾಜಲೇ |
ಸಮಂ ಮತಿಮತಾಂ ಶ್ರೇಷ್ಠ ಸಮಲೋಷ್ಟಾಶ್ಮಕಾಂಚನಮ್ ॥13॥
ಜಾಜಲಿಯೇ, ಈ ರೀತಿಯಾಗಿ ಧರ್ಮಶೀಲನಾದವನು ನಾನು ಎಂಬುದನ್ನು ನೀನು ತಿಳಿದುಕೊ. ಸಮಸ್ತ ಜಗತ್ತಿನಲ್ಲಿ ಭಗವಂತನೇ ನಿಯಾಮಕನಾಗಿದ್ದಾನೆಂದು ಭಾವಿಸುತ್ತಾ ಮಣ್ಣಿನ ಹೆಂಟೆ, ಕಲ್ಲು, ಕಾಂಚನಗಳನ್ನು ಸಮಾನವಾಗಿ ನೋಡು.
ಯಥಾಂಧಬಧಿರೋನ್ಮತ್ತಾ ಉಚ್ಛ್ವಾಸಪರಮಾಃ ಸದಾ |
ದೇವೈರಪಿಹಿತದ್ವಾರಾಃ ಸೋಪಮಾ ಪಶ್ಯತೋ ಮಮ ॥14॥
ದೇವತೆಗಳಿಂದ ಮುಚ್ಚಲ್ಪಟ್ಟ ನೇತ್ರಾದಿ ಇಂದ್ರಿಯದ್ವಾರವುಳ್ಳ ಅನೇಕ ಮನುಷ್ಯರು ಕುರುಡರಾಗಿಯೂ, ಕಿವುಡರಾಗಿಯೂ, ಹುಚ್ಚರಾಗಿಯೂ, ಕೇವಲ ಉಸಿರಾಟ ಉಳ್ಳವರಾಗಿಯೂ ಕಾಣಿಸುತ್ತಾರೆ. ಅವರಂತೆ ನಾನೂ ಇದ್ದೇನೆ ಎಂದು ಉಪಮಾನವನ್ನು ನನಗೆ ನೀನು ನೀಡಬಹುದು.
ಯಥಾ ವೃದ್ಧಾತುರಕೃಶಾ ನಿಃಸ್ಪೃಹಾ ವಿಷಯಾನ್ ಪ್ರತಿ |
ತಥಾರ್ಥಕಾಮಭೋಗೇಷು ಮಮಾಪಿ ವಿಗತಾ ಸ್ಪೃಹಾ ॥15॥
ಹೇಗೆ ವೃದ್ಧರಿಗೆ, ರೋಗಿಗಳಿಗೆ, ದುರ್ಬಲರಿಗೆ ವಿಷಯ ಭೋಗಗಳಲ್ಲಿ ಆಸಕ್ತಿಯೇ ಇರುವುದಿಲ್ಲವೋ ಅದರಂತೆ ನನಗೂ ಅರ್ಥ-ಕಾಮಗಳಲ್ಲಿ ಭೋಗಾಸಕ್ತಿಯು ಹೊರಟು ಹೋಗಿದೆ.
ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ |
ಯದಾ ನೇಚ್ಛತಿ ನ ದ್ವೇಷ್ಟಿ ತದಾ ಸಿದ್ಧ್ಯತಿ ವೈ ದ್ವಿಜಃ ॥16॥
ಯಾವಾಗ ಪುರುಷನು ಬೇರೆಯವರಿಂದ ಹೆದರುವುದಿಲ್ಲವೋ, ಬೇರೆಯವರನ್ನು ಹೆದರಿಸುವುದಿಲ್ಲವೋ ಯಾವುದನ್ನೂ ಇಚ್ಛಿಸುವುದಿಲ್ಲವೋ, ಯಾವುದನ್ನೂ ದ್ವೇಷಿಸುವುದಿಲ್ಲವೋ ಆಗ ಅವನು ಸಿದ್ಧಿಯನ್ನು ಹೊಂದುತ್ತಾನೆ.
ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥17॥
ಯಾವ ವ್ಯಕ್ತಿಯು ಮಾತು, ಕೃತಿ, ಮನಸ್ಸುಗಳಿಂದ ಮತ್ತೊಬ್ಬರ ಬಗ್ಗೆ ಕೆಡುಕನ್ನು ಚಿಂತಿಸುವುದಿಲ್ಲವೋ ಅವನು ಗುಣಪರಿಪೂರ್ಣನಾದ ಪರಮಾತ್ಮನನ್ನು ಹೊಂದುತ್ತಾನೆ.
ನ ಭೂತೋ ನ ಭವಿಷ್ಯಶ್ಚ ನ ಚ ಧರ್ಮೋಽಸ್ತಿ ಕಶ್ಚನ |
ಯೋಽಭಯಃ ಸರ್ವಭೂತಾನಾಂ ಸ ಪ್ರಾಪ್ನೋತ್ಯಭಯಂ ಪದಮ್ ॥
ಯಸ್ಮಾದುದ್ವಿಜತೇ ಲೋಕಃ ಸರ್ವೋ ಮೃತ್ಯುಮುಖಾದಿವ |
ವಾಕ್ಕ್ರೂರಾದ್ ದಂಡಪಾರುಷ್ಯಾತ್ ಸ ಪ್ರಾಪ್ನೋತಿ ಮಹದ್ಭಯಮ್ ॥
ಯಾವನು ಹಿಂದಿನ, ಮುಂದಿನ ಪಾಪಗಳಿಂದ ಲಿಪ್ತನಾಗಿರುವುದಿಲ್ಲವೋ, ಸಮಸ್ತ ಭೂತಗಳಿಗೂ ಅಭಯವನ್ನು ನೀಡುತ್ತಾನೋ ಅವನು ಭಯರಹಿತವಾದ ಸ್ಥಾನವನ್ನೇ ಹೊಂದುತ್ತಾನೆ. ಯಾರ ವಿಷಯದಲ್ಲಿ ಮೃತ್ಯುವನ್ನು ಕಂಡಂತೆ ಲೋಕವೆಲ್ಲವೂ ಭಯ ಹೊಂದುತ್ತದೋ, ಯಾರು ಕಠಿಣವಾದ ಮಾತುಗಳನ್ನೇ ಆಡುತ್ತಾನೋ, ಕಠಿಣವಾದ ಶಿಕ್ಷೆಗಳನ್ನು ವಿಧಿಸುತ್ತಾನೋ ಅವನು ಮಹಾಭಯವನ್ನೇ ಹೊಂದುತ್ತಾನೆ.
ಯಥಾವದ್ ವರ್ತಮಾನಾನಾಂ ವೃದ್ಧಾನಾಂ ಪುತ್ರಪೌತ್ರಿಣಾಮ್ |
ಅನುವರ್ತಾಮಹೇ ವೃತ್ತಮಹಿಂಸ್ರಾಣಾಂ ಮಹಾತ್ಮನಾಮ್ ॥20॥
ಪುತ್ರ, ಪೌತ್ರರಿಂದ ಕೂಡಿರುವ, ಶಾಸ್ತ್ರೋಕ್ತ ಆಚಾರ-ವಿಚಾರಗಳನ್ನು ಇಟ್ಟುಕೊಂಡಿರುವ, ಯಾರಿಗೂ ಹಿಂಸೆ ಮಾಡದ ಸ್ವಭಾವವಿರುವ ಹಿರಿಯರಾದ ವೃದ್ಧರ ವೃತ್ತಿಗಳನ್ನೇ ನಾನು ಅನುಸರಿಸಿ ನಡೆಯುತ್ತಿದ್ದೇನೆ.
ಪುನಷ್ಟಃ ಶಾಶ್ವತೋ ಧರ್ಮಃ ಸದಾಚಾರೇಣ ಮೋಹಿತಃ |
ತೇನ ವೈದ್ಯಸ್ತಪಸ್ವೀ ವಾ ಬಲವಾನ್ ವಾ ವಿಮೋಹ್ಯತೇ ॥21॥
ಸರಿಯಾದ ಆಚರನೆಯಿಲ್ಲದೆ ಮೋಹಕ್ಕೆ ತುತ್ತಾದ ವ್ಯಕ್ತಿಗಳಿಂದ ಸನಾತನವಾದ ಧರ್ಮವು ನಾಶ ಹೊಂದುತ್ತಿದೆ. ಆದ್ದರಿಂದಲೇ ವಿದ್ವಾಂಸರಾದವರು, ತಪಸ್ವಿಗಳು, ಕಾಮ-ಕ್ರೋಧಗಳನ್ನು ಜಯಿಸಿ ಮನೋಬಲವನ್ನು ಸಾಧಿಸಿದವರು ಮೋಹವಶರಾಗುತ್ತಾರೆ.
ಆಚಾರಾಜ್ಜಾಜಲೇ ಪ್ರಾಜ್ಞಃ ಕ್ಷಿಪ್ರಾಂ ಧರ್ಮಮವಾಪ್ನುಯಾತ್ |
ಏವಂ ಯಃ ಸಾಧುಭಿರ್ದಾಂತಶ್ಚರೇದದ್ರೋಹಚೇತಸಾ ॥22॥
ಜಾಜಲಿಯೇ, ಯಾವ ಪುರುಷನು ಮನಸ್ಸಿನಲ್ಲಿಯೂ ಮತ್ತೊಬ್ಬರಿಗೆ ದ್ರೋಹವನ್ನು ಎಣಿಸದೆ ಸಾಧುಪುರುಷರಿಂದ ಆಚರಿಸಲ್ಪಡುವ ಸದಾಚಾರವನ್ನೇ ಅನುಷ್ಠಾನ ಮಾಡುತ್ತಾನೋ ಅಂತಹ ಜ್ಞಾನಿಯು ವೇದೋಕ್ತವಾದ ಸದಾಚಾರವನ್ನು ಪಾಲಿಸುತ್ತಾ ವೇದ, ಧರ್ಮದ ರಹಸ್ಯಗಳನ್ನು ತಿಳಿದುಕೊಳ್ಳುತ್ತಾನೆ.
ನದ್ಯಾಂ ಯಥಾ ಚೇಹ ಕಾಷ್ಠಮುಹ್ಯಮಾನಂ ಯದೃಚ್ಛಯಾ |
ಯದೃಚ್ಛಯೈವ ಕಾಷ್ಠೇನ ಸಂಧಿಂ ಗಚ್ಛೇತ ಕೇನಚಿತ್ ॥23॥

ತತ್ರಾಪರಾಣಿ ದಾರೂಣಿ ಸಂಸೃಜ್ಯಂತೇ ತತಸ್ತತಃ |
ತೃಣಕಾಷ್ಠಕರೀಷಾಣಿ ಕದಾಚಿನ್ನಸಮೀಕ್ಷಯಾ |
ಏವಮೇವಾಯಮಾಚಾರಃ ಪ್ರಾದುರ್ಭೂತೋ ಯತಸ್ತತಃ ॥24॥
ನದಿಯ ಪ್ರವಾಹದಲ್ಲಿ ತಾನಾಗಿಯೇ ತೇಲಿ ಬರುವ ಕಟ್ಟಿಗೆಯೊಂದು ಇನ್ನೊಂದು ತಾನಾಗಿಯೇ ತೇಲಿ ಬರುವ ಕಟ್ಟಿಗೆಯ ಜೊತೆಗೆ ಸೇರಿಕೊಳ್ಳುತ್ತದೋ, ಆ ಎರಡು ಕಟ್ಟಿಗೆಗಳು ತೇಲಿ ಹೋಗುವಾಗ ಅದರಂತೆ ಹಲವಾರು ಕಟ್ಟಿಗೆಗಳು ನೀರಿನ ಪ್ರವಾಹದಲ್ಲಿ ಕೊಚ್ಚಿಕೊಂಡು ಬರುತ್ತಾ ಮೊದಲಿನ ಕಟ್ಟಿಗೆಯ ಜೊತೆಗೆ ಸಂಬಂಧವನ್ನು ಹೊಂದುತ್ತವೋ, ಬಳಿಕ ಅವುಗಳ ಜೊತೆ ಹುಲ್ಲು, ಕಾಷ್ಠ, ಬೆರಣಿಯ ಚೂರು ಇವೆಲ್ಲವೂ ಸೇರಿಕೊಳ್ಳುತ್ತವೋ, ಇವೆಲ್ಲವೂ ಒಟ್ಟಾಗಿದ್ದು ಆಕಸ್ಮಿಕವೇ ವಿನಾ ಆ ಯಾವ ಸಂಬಂಧವನ್ನು ಹೊಂದಿದ ಪದಾರ್ಥಗಳಿಗೂ ನಿಜವಾದ ಸಂಬಂಧವು ಇರುವುದಿಲ್ಲ. ಇದರಂತೆ ಈ ಸಂಸಾರದಲ್ಲಿಯೂ ಸಂಯೋಗ, ವಿಯೋಗಗಳು ನಡೆದುಕೊಂಡು ಬರುತ್ತಿವೆ.
ಯಸ್ಮಾನ್ನೋದ್ವಿಜತೇ ಭೂತಂ ಜಾತು ಕಿಂಚಿತ್ ಕಥಂಚನ |
ಅಭಯಂ ಸರ್ವಭೂತೇಭ್ಯಃ ಸ ಪ್ರಾಪ್ನೋತಿ ಸದಾ ಮುನೇ ॥25॥
ಯಾವನಿಂದ ಯಾವುದೇ ಪ್ರಾಣಿಗಳು ಯಾವುದೇ ಕಾರಣದಿಂದ ಉದ್ವೇಗಕ್ಕೆ ತುತ್ತಾಗುವುದಿಲ್ಲವೋ ಅವನು ಎಲ್ಲಾ ಪ್ರಾಣಿಗಳಿಂದಲೂ ಅಭಯವನ್ನು ಹೊಂದುತ್ತಾನೆ.
ಯಸ್ಮಾದುದ್ವಿಜತೇ ವಿದ್ವನ್ ಸರ್ವಲೋಕೋ ವೃಕಾದಿವ |
ಕ್ರೋಶತಸ್ತೀರಮಾಸಾದ್ಯ ಯಥಾ ಸರ್ವೇ ಜಲೇಚರಾಃ ॥26॥
ನದಿಯ ತೀರಕ್ಕೆ ಬಂದು ಕೂಗಿಕೊಳ್ಳುವ ತೋಳಕ್ಕೆ ನದಿಯಲ್ಲಿರುವ ಜಲಚರ ಪ್ರಾಣಿಗಳು ಹೇಗೆ ಭಯವನ್ನು ಹೊಂದುತ್ತವೋ ಅದರಂತೆ ಕಠೋರ ಸ್ವಭಾವದವನ ಮಾತುಗಳಿಂದ ಜಗತ್ತೆಲ್ಲವೂ ಉದ್ವಿಗ್ನವಾಗುತ್ತದೆ.
ಸಹಾಯವಾನ್ ದ್ರವ್ಯವಾನ್ ಯಃ ಸುಭಗೋಽನ್ಯೋಽಪರಸ್ತಥಾ |
ತತಸ್ತಾನೇವ ಕವಯಃ ಶಾಸ್ತ್ರೇಷು ಪ್ರವದಂತ್ಯುತ |
ಕೀರ್ತ್ಯರ್ಥಮಲ್ಪಹೃಲ್ಲೇಖಾಃ ಪಟವಃ ಕೃತ್ಸ್ನನಿರ್ಣಯಾಃ ॥27॥
ಸಹಾಯ ಸ್ವಭಾವವುಳ್ಳವನು, ದ್ರವ್ಯವಂತನಾದವನು, ಸಚ್ಚಾರಿತ್ರ್ಯ ಸಂಪನ್ನನಾದವನು, ಇನ್ನೂ ಬೇರೆ ಬೇರೆ ಗುಣಗಳುಳ್ಳಂತಹ ವ್ಯಕ್ತಿಯು, ಅಭಯ ದಾನ ಮಾಡಲು ಸಮರ್ಥರಾದ ಅವರನ್ನೇ ವಿದ್ವಾಂಸರು ಶಾಸ್ತ್ರಜ್ಞರಲ್ಲಿ ಶ್ರೇಷ್ಠರೆಂದು ಹೇಳುತ್ತಾರೆ. ಆದರೆ ಕೆಲವರು ಕ್ಷಣಿಕವಾದ ಆಸೆಗಳಿಗೆ ತುತ್ತಾಗಿ, ಕೀರ್ತಿ ಕಾಮುಕರಾಗಿ ಅಭಯದಾನ ವ್ರತವನ್ನು ಮಾಡುತ್ತಾರೆ. ಜ್ಞಾನಿಗಳಾದರೂ ಭಗವಂತನ ಪ್ರಾಪ್ತಿಗಾಗಿ ಈ ವ್ರತವನ್ನು ಆಚರಿಸುತ್ತಾರೆ.
ತಪೋಭಿರ್ಯಜ್ಞದಾನೈಶ್ಚ ವಾಕ್ಯೈಃ ಪ್ರಜ್ಞಾಶ್ರಿತೈಸ್ತಥಾ |
ಪ್ರಾಪ್ನೋತ್ಯಭಯದಾನಸ್ಯ ಯದ್ಯತ್ಫಲಮಿಹಾಶ್ನುತೇ ॥28॥
ಈ ಜಗತ್ತಿನಲ್ಲಿ ಯಜ್ಞ, ತಪಸ್ಸು, ದಾನ, ಉಪದೇಶಗಳಿಂದ ಯಾವ ಫಲಗಳನ್ನು ಮನುಷ್ಯನು ಹೊಂದಬಲ್ಲನೋ ಆ ಎಲ್ಲ ಫಲಗಳನ್ನು ಅಭಯದಾನದಿಂದಲೇ ಪಡೆದುಕೊಳ್ಳಬಹುದು.
ಲೋಕೇ ಯಃ ಸರ್ವಭೂತೇಭ್ಯೋ ದದಾತ್ಯಭಯದಕ್ಷಿಣಾಮ್ |
ಸ ಸರ್ವಯಜ್ಞೈರೀಜಾನಃ ಪ್ರಾಪ್ನೋತ್ಯಭಯದಕ್ಷಿಣಾಮ್ |
ನ ಭೂತಾನಾಮಹಿಂಸಾಯಾ ಜ್ಯಾಯಾನ್ ಧರ್ಮೋಽಸ್ತಿ ಕಶ್ಚನ ॥29॥
ಲೋಕದಲ್ಲಿ ಎಲ್ಲರಿಗೂ ಅಭಯವೆಂಬ ದಕ್ಷಿಣೆಯನ್ನು ಯಾವನು ನೀಡುತ್ತಾನೋ ಅವನು ಸಮಸ್ತ ಯಜ್ಞಗಳನ್ನು ಆಚರಿಸಿದವನಾಗುತ್ತಾನೆ. ಅವನು ಎಲ್ಲರಿಂದಲೂ ಅಭಯ ರೂಪವಾದ ದಕ್ಷಿಣೆಯನ್ನು ಹೊಂದುತ್ತಾನೆ. ಅಹಿಂಸಾ ವ್ರತಕ್ಕಿಂತ ಶ್ರೇಷ್ಠವಾದ ಧರ್ಮವೇ ಜಗತ್ತಿನಲ್ಲಿ ಇರುವುದಿಲ್ಲ.
ಯಸ್ಮಾನ್ನೋದ್ವಿಜತೇ ಭೂತಂ ಜಾತು ಕಿಂಚಿತ್ ಕಥಂಚನ |
ಸೋಽಭಯಂ ಸರ್ವಭೂತೇಭ್ಯಃ ಸಂಪ್ರಾಪ್ನೋತಿ ಮಹಾಮುನೇ ॥30॥
ಯಾವ ವ್ಯಕ್ತಿಯಿಂದ ಯಾವ ಪ್ರಾಣಿಯು ಯಾವ ಕಾಲದಲ್ಲಿಯೂ ಎಂದಿಗೂ ಉದ್ವೇಗಕ್ಕೆ ತುತ್ತಾಗುವುದಿಲ್ಲವೋ ಅವನು ಅಭಯವನ್ನು ಹೊಂದುತ್ತಾನೆ.
ಯಸ್ಮಾದುದ್ವಿಜತೇ ಲೋಕಃ ಸರ್ಪಾದ್ ವೇಶ್ಮಗತಾದಿವ |
ನ ಸ ಧರ್ಮಮವಾಪ್ನೋತಿ ಇಹ ಲೋಕೇ ಪರತ್ರ ಚ ॥31॥
ಯಾವನಿಂದ ಜನರು ಸರ್ಪವನ್ನು ನೋಡಿದಂತೆ ಭಯಗೊಳ್ಳುವುದೋ ಅವನು ಇಹಪರಲೋಕಗಳಲ್ಲಿ ಯಾವ ರೀತಿಯಾದ ಧರ್ಮಫಲವನ್ನೂ ಹೊಂದುವುದಿಲ್ಲ.
ಸರ್ವಭೂತಾತ್ಮಭೂತಸ್ಯ ಸಮ್ಯಗ್ ಭೂತಾನಿ ಪಶ್ಯತಃ |
ದೇವಾಪಿ ಮಾರ್ಗೇ ಮುಹ್ಯಂತಿ ಅಪದಸ್ಯ ಪದೈಷಿಣಃ ॥32॥
ಸಕಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯನ್ನೇ ಕಾಣುವ, ವಿರಕ್ತನ ಮಾರ್ಗವನ್ನು ಅನುಸರಿಸುವ ಸ್ವಭಾವವುಳ್ಳ ವ್ಯಕ್ತಿಯ ವಿಷಯದಲ್ಲಿ ದೇವತೆಗಳು ಆಶ್ಚರ್ಯವನ್ನು ಹೊಂದುತ್ತಾರೆ.
ದಾನಂ ಭೂತಾಭಯಸ್ಯಾಹುಃ ಸರ್ವದಾನೇಭ್ಯ ಉತ್ತಮಮ್ |
ಬ್ರವೀಮಿ ತೇ ಸತ್ಯಮಿದಂ ಶ್ರದ್ಧಧಸ್ವ ಚ ಜಾಜಲೇ ॥33॥
ಪ್ರಾಣಿಗಳಿಗೆ ಅಭಯದಾನ ಮಾಡುವುದೇ ಉತ್ತಮ ದಾನ ಎನ್ನುತ್ತಾರೆ. ಜಾಜಲಿಯೇ, ಈ ಮಾತು ಸತ್ಯವೆಂದು ಹೇಳುತ್ತಿದ್ದೇನೆ. ನನ್ನ ಮಾತಿನಲ್ಲಿ ಶ್ರದ್ಧೆ ಇಡು.

ಸ ಏವ ಸುಭಗೋ ಭೂತ್ವಾ ಪುನರ್ಭವತಿ ದುರ್ಭಗಃ |
ವ್ಯಾಪತ್ತಿಂ ಕರ್ಮಣಾಂ ದೃಷ್ಟ್ವಾ ಜುಗುಪ್ಸಂತಿ ಜನಾಃ ಸದಾ ॥34॥
ಯಾರು ಕಾಮನೆಯಿಂದ ಧರ್ಮಗಳನ್ನು ಆಚರಿಸುತ್ತಾರೋ ಅವರು ಸುಖವನ್ನು ಹೊಂದುತ್ತಾರೆ. ಪುಣ್ಯದ ಮೊತ್ತವು ಬರಿದಾದ ಬಳಿಕ ಪುನಃ ದುರ್ಭಾಗ್ಯರೇ ಆಗುತ್ತಾರೆ. ಈ ಕಾಮ್ಯಕರ್ಮ ಫಲವು ಅನಿಷ್ಟವಾದುದು ಎಂದು ತಿಳಿದು ಜ್ಞಾನಿಗಳು ಆ ಕಾಮ್ಯ ಕರ್ಮಾನುಷ್ಠಾನದಲ್ಲಿ ಜುಗುಪ್ಸೆಯನ್ನು ಹೊಂದುತ್ತಾರೆ.
ಅಕಾರಣೋ ಹಿ ನೇಹಾಸ್ತಿ ಧರ್ಮಃ ಸೂಕ್ಷ್ಮೋಽಪಿ ಜಾಜಲೇ |
ಭೂತಭವ್ಯಾರ್ಥಮೇವೇಹ ಧರ್ಮಪ್ರವಚನಂ ಕೃತಮ್ ॥35॥
ಜಾಜಲಿಯೇ, ಕಾರಣನಾದ ಭಗವಂತನಿಲ್ಲದೆ ಯಾವುದೇ ಧರ್ಮ ಸೂಕ್ಷ್ಮಗಳು ನೆಲೆಸಲು ಸಾಧ್ಯವಿಲ್ಲ. ಸಮಸ್ತ ಪ್ರಾಣಿಗಳಿಗೆ ಹಿತಕರವಾದ ಧರ್ಮವನ್ನೇ ನಾನು ನಿನಗೆ ಬೋಧಿಸಿದ್ದೇನೆ.
ಸೂಕ್ಷ್ಮತ್ವಾನ್ನ ಸ ವಿಜ್ಞಾತುಂ ಶಕ್ಯತೇ ಬಹುನಿಹ್ನವಃ |
ಉಪಲಭ್ಯಾಂತರಾ ಚಾನ್ಯಾನಾಚಾರಾನವಬುಧ್ಯತೇ ॥36॥
ಧರ್ಮವು ಬಹಳ ಸೂಕ್ಷ್ಮವಾಗಿರುವುದರಿಂದ ಅದನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಅದರ ನೈಜ ರೂಪವನ್ನು ಮುಚ್ಚಿಡುವ ಅನೇಕ ಮಾರ್ಗಗಳೇ ಇವೆ. ಸತ್ಪುರುಷರ ಸಹವಾಸ ಮಾಡಿ, ಅವರ ಆಚಾರ-ವ್ಯವಹಾರಗಳನ್ನು ಅನುಸರಿಸುವ ಮನುಷ್ಯನು ಧರ್ಮದ ರಹಸ್ಯವನ್ನು ತಿಳಿದಾನು.
ಯೇ ಚ ಛಿಂದಂತಿ ವೃಷಣಾನ್ಯೇ ಚ ಭಿಂದಂತಿ ನಸ್ತಕಾನ್ |
ವಹಂತಿ ಮಹತೋ ಭಾರಾನ್ ಬಧ್ನಂತಿ ದಮಯಂತಿ ಚ ॥37॥
ಕೆಲವು ಜನರು ಹೋರಿಗಳ ಬೀಜಗಳನ್ನು ಒಡೆಯುತ್ತಾರೆ. ಮೂಗಿನ ಹೊಳ್ಳೆಗಳನ್ನು ಒಡೆದು ಮೂಗು ದಾರವನ್ನು ಹಾಕುತ್ತಾರೆ. ಅವುಗಳ ಹೆಗಲಿಗೆ ನೊಗಗಳನ್ನು ಹಾಕಿ ಗಾಡಿಗಳನ್ನು ಕಟ್ಟಿ ದಂಡಿಸುತ್ತಾರೆ.
ಹತ್ವಾ ಸತಕತ್ವನಿ ಖಾದಂತಿ ತಾನ್ಕಥಂ ನ ವಿಗರ್ಹಸೇ |
ಮಾನುಷಾ ಮಾನುಷಾನೇವ ದಾಸಭೋಗೇನ ಭುಂಜತೇ ॥38॥
ಅನೇಕ ಪ್ರಾಣಿಗಳನ್ನು ಕೊಂದು ಅವುಗಳನ್ನು ತಿನ್ನುತ್ತಾರೆ. ಕೆಲವು ಮನುಷ್ಯರು ಮನುಷ್ಯರನ್ನೇ ಗುಲಾಮರನ್ನಾಗಿ ಮಾಡಿಕೊಂಡು ಅವರ ಬದುಕನ್ನೇ ತಿನ್ನುತ್ತಾರೆ. ಅಂತಹ ನಿಂದ್ಯರನ್ನು ನೀನೇಕೆ ನಿಂದಿಸುತ್ತಿಲ್ಲ?
ವಧಬಂಧವಿರೋಧೇನ ಕಾರಯಂತಿ ದಿವಾನಿಶಮ್ |
ಆತ್ಮನಾ ಚಾಪಿ ಜಾನಾಸಿ ಯದ್ದುಃಖಂ ವಧತಾಡನೇ॥39॥
ಜನರು ಹಿಂಸೆ, ಬಂಧನಗಳಿಂದ ದುಃಖವಾಗುತ್ತದೆ ಎಂದು ತಿಳಿದೂ ಕೂಡ ಇತರರನ್ನು ಹಿಂಸೆ, ಬಂಧನಗಳಲ್ಲಿಟ್ಟು ಹಗಲು-ರಾತ್ರಿ ದುಡಿಸಿಕೊಳ್ಳುತ್ತಾರೆ. ಅವರನ್ನು ನೀನೇಕೆ ನಿಂದಿಸುತ್ತಿಲ್ಲ?
ಪಂಚೇಂದ್ರಿಯೇಷು ಭೂತೇಷು ಸರ್ವಂ ವಸತಿ ದೈವತಮ್ |
ಆದಿತ್ಯಶ್ಚಂದ್ರಮಾ ವಾಯುರ್ಬ್ರಹ್ಮ ಪ್ರಾಣಃ ಕ್ರತುರ್ಯಮಃ ॥40॥
ಪಂಚೇಂದ್ರಿಯಗಳಿಂದ ಕೂಡಿದ ಸಮಸ್ತ ಪ್ರಾಣಿಗಳಲ್ಲಿಯೂ ಸೂರ್ಯ, ಚಂದ್ರ, ವಾಯು, ಬ್ರಹ್ಮ, ಪ್ರಾಣ, ಯಜ್ಞ, ಯಮ ಎಲ್ಲರೂ ವಾಸ ಮಾಡುತ್ತಾರೆ.
ತಾನಿ ಜೀವಾನಿ ವಿಕ್ರೀಯ ಕಾ ಮೃತೇಷು ವಿಚಾರಣಾ |
ಕಾ ತೈಲೇ ಕಾ ಘೃತೇ ಬ್ರಹ್ಮನ್ ಮಧುನ್ಯಪ್ಸ್ವೌಷಧೇಷು ವಾ ॥41॥
ಅಂತಹ ದೇವತೆಗಳು ವಾಸ ಮಾಡುವ ಶರೀರವನ್ನು ಯಾವಾತನು ಮಾರಾಟ ಮಾಡಿ ಜೀವಿಸುತ್ತಾನೋ ಅವನಿಗೆ ಪಾಪವೇ ಸಂಭವಿಸುತ್ತದೆ. ಹೀಗಿರಲು ಮೃತ ಪ್ರಾಣಿಗಳನ್ನು ಮಾರಿದವನಿಗೆ ದೋಷವನ್ನು ಏನೆಂದು ಹೇಳಲಿ? ಎಣ್ಣೆ, ತುಪ್ಪ, ಜೇನುತುಪ್ಪ, ಓಷಧಿಗಳು ಇವುಗಳನ್ನು ಮಾರಿದವನಿಗೆ ಯಾವ ಹಾನಿಯೂ ಆಗದು.
ಅದಂಶಮಶಕೇ ದೇಶೇ ಸುಖಂ ಸಂವರ್ಧಿತಾನ್ ಪಶೂನ್ |
ತಾಂಶ್ಚ ಮಾತುಃ ಪ್ರಿಯಾಂಜನನ್ನಾಕ್ರಮ್ಯ ಬಹುಧಾ ನರಾಃ |
ಬಹುದಂಶಕುಶಾಂದೇಶಾನ್ನಯಂತಿ ಬಹುಕರ್ದಮಾನ್ ॥42॥
ಸೊಳ್ಳೆಗಳು, ಕಾಡು ನೊಣಗಳು ಇಲ್ಲದಿರುವ ದೇಶದಲ್ಲಿ ಸುಖವಾಗಿ ಬೆಳೆದ ಹಸುವಿನ ಕರುಗಳನ್ನು ಅವುಗಳು ತಾಯಿಗೆ ಪ್ರಿಯವಾದುದೆಂದು ತಿಳಿದಿದ್ದರೂ ತಾಯಿಯನ್ನು ಬಿಟ್ಟು ಬರಲು ಇಷ್ಟಪಡದಿದ್ದರೂ ಕ್ರೂರಿಗಳಾದ ಜನರು ಅವುಗಳನ್ನು ಸೆಳೆದುಕೊಂಡು ಎಳೆಯುತ್ತಾ ಕಾಡುನೊಣ, ಸೊಳ್ಳೆ, ಕೆಸರುಗಳಿಂದ ಕೂಡಿದ ದೇಶಕ್ಕೆ ಎಳೆದೊಯ್ಯುತ್ತಾರೆ.
ವಾಹಸಂಪೀಡಿತಾ ಧುರ್ಯಾಃ ಸೀದಂತ್ಯವಿಧಿನಾಪರೇ |
ನ ಮನ್ಯೇ ಭ್ರೂಣಹತ್ಯಾಪಿ ವಿಶಿಷ್ಟಾ ತೇನ ಕರ್ಮಣಾ ॥43॥
ಇಷ್ಟೇ ಅಲ್ಲದೆ ನೀತಿಗೆಟ್ಟ ಅವರು ಎಷ್ಟು ಭಾರ ಹೊರಿಸಬೇಕು ಎಂಬ ನಿಯಮವಿಲ್ಲದೆ, ಗಾಡಿಗಳಿಗೆ ಅಥವಾ ನೇಗಿಲುಗಳಿಗೆ ಅವುಗಳನ್ನು ಸಂಯೋಜಿಸಿ ಅವುಗಳನ್ನು ಪೀಡಿಸುತ್ತಾರೆ. ಅತಿಯಾದ ಭಾರವನ್ನು ಹೊರಿಸುವುದರಿಂದ ಪೀಡಿತವಾದ ವೃಷಭಗಳು ಬಹಳ ಬೇಗ ವಿನಾಶವನ್ನು ಹೊಂದುತ್ತವೆ. ಭ್ರೂಣಹತ್ಯೆಯು ಹೋರಿಗಳನ್ನು ಪೀಡಿಸುವ ಪಾಪಕರ್ಮಕ್ಕಿಂತಲೂ ಅಧಿಕವಾದ ಪಾಪ ಎನಿಸುವುದಿಲ್ಲ.
ಕೃಷಿಂ ಸಾಧ್ವಿತಿ ಮನ್ಯಂತೇ ಸಾ ಚ ವೃತ್ತಿಃ ಸುದಾರುಣಾ |
ಭೂಮಿಂ ಭೂಮಿಶಯಾಂಶ್ಚೈವ ಹಂತಿ ಕಾಷ್ಠಮಯೋಮುಖಮ್ |
ತಥೈವಾನಡುಹೋ ಯುಕ್ತಾನ್ ಸಮವೇಕ್ಷಸ್ವ ಜಾಜಲೇ ॥44॥

ಕೆಲವರು ಕೃಷಿಯನ್ನು ಒಳ್ಳೆಯದೆಂದು ಭಾವಿಸುತ್ತಾರೆ. ಆದರೆ ಆ ಕೃಷಿ ವೃತ್ತಿಯು ಅತ್ಯಂತ ಕ್ರೂರವಾದುದೇ ಆಗಿದೆ. ಕಬ್ಬಿಣದ ಗುಳವನ್ನು ಅಗ್ರಭಾಗದಲ್ಲಿ ಹಾಕಿ ನೇಗಿಲಿನಿಂದ ಭೂಮಿಯನ್ನು ಪೀಡಿಸುವಾಗ ಆ ನೇಗಿಲು ಅನೇಕ ಹುಳು-ಹುಪ್ಪಟೆಗಳನ್ನು ಕೊಲ್ಲುತ್ತದೆ. ಆ ನೇಗಿಲಿನಿಂದ ಸೆಳೆಯುವ ಎತ್ತುಗಳೂ ಹಿಂಸೆಗೆ ತುತ್ತಾಗುತ್ತವೆ. ಇವೆಲ್ಲವನ್ನೂ ಜಾಜಲಿಯೇ, ನೀನೇ ವಿಚಾರ ಮಾಡು.
ಅಘ್ನ್ಯಾ ಇತಿ ಗವಾಂ ನಾಮ ಕ ಏನಾನ್ ಹಂತುಮರ್ಹತಿ |
ಮಹಚ್ಚಕಾರಾಕುಶಲಂ ಪೃಷಧ್ರೋ ಗಾಲಭನ್ನಿವ ॥45॥
ಗೋವುಗಳು ಎಂದಿಗೂ ಹಿಂಸೆಗೆ ಪಾತ್ರವಾದವುಗಳಲ್ಲ. ಗೋವುಗಳಿಗೆ ಅಘ್ನ್ಯಾಃ ಎಂದೇ ಹೆಸರು. ಕೊಲ್ಲಬಾರದು ಎಂದೇ ಆ ನಾಮವು ಸೂಚಿಸುತ್ತಿದ್ದಾಗ ಅಂತಹ ಗೋವುಗಳನ್ನು ಕೊಲ್ಲಲು ಯಾರು ಇಚ್ಛಿಸುತ್ತಾರೆ? ಯಾರು ಹಸುಗಳನ್ನಾಗಲಿ, ಎತ್ತುಗಳನ್ನಾಗಲಿ ಕೊಲ್ಲುತ್ತಾರೋ ಅವರು ಪೃಷಧ್ರ ಎಂಬ ಜ್ಞಾನಿಯು ಗೋವನ್ನು ಹಿಂಸಿಸಿ ದುಃಖಿತನಾದಂತೆ ಮಹಾಪಾಪವನ್ನೇ ಹೊಂದುತ್ತಾರೆ.
ಋಷಯೋ ಯತಯೋ ಹ್ಯೇತನ್ನಹುಷೇ ಪ್ರತ್ಯವೇದಯನ್ |
ಗಾಂ ಮಾತರಂ ಚಾಪ್ಯವಧೀರ್ವೃಷಭಂ ಚ ಪ್ರಜಾಪತಿಮ್ |
ಅಕಾರ್ಯಂ ನಹುಷಾಕಾರ್ಷೀರ್ಲಪ್ಸ್ಯಾಮಸ್ತ್ವತ್ಕೃತೇ ಭಯಮ್ ॥46॥
ಜಿತೇಂದ್ರಿಯರಾದ ಋಷಿಗಳು ನಹುಷನಿಗೂ ಈ ಸಮಾಚಾರವನ್ನು ತಿಳಿಸಿದ್ದಾರೆ. ನಹುಷನೇ, ನೀನು ತಾಯಿಯಾದ ಗೋವನ್ನು, ಪ್ರಜಾಪತಿಯಾದ ಎತ್ತನ್ನು ಹೊಂದಿರುವೆ. ಇದರಿಂದ ನೀನು ಮಾಡಬಾರದ ಪಾಪಕರ್ಮವನ್ನು ಮಾಡಿರುವೆ. ನಿನ್ನ ಈ ಜುಗುಪ್ಸಿತವಾದ ಕರ್ಮದಿಂದ ನಾವೆಲ್ಲರೂ ದುಃಖಿತರಾಗಿದ್ದೇವೆ.
ಶತಂ ಚೈಕಂ ಚ ರೋಗಾಣಾಂ ಸರ್ವಭೂತೇಷ್ವಪಾತಯನ್ |
ಋಷಯಸ್ತೇ ಮಹಾಭಾಗಾಃ ಪ್ರಜಾಸ್ವೇವ ಹಿ ಜಾಜಲೇ |
ಭ್ರೂಣಹಂ ನಹುಷಂ ತ್ವಾಹುರ್ನ ತೇ ಹೋಷ್ಯಾಮಹೇ ಹವಿಃ ॥47॥
ಇಂತಹ ಅಕಾರ್ಯವನ್ನು ಮಾಡಿರುವ ನಹುಷನೇ ನಿನ್ನಿಂದ ನಾವು ಭಯವನ್ನೇ ಹೊಂದುತ್ತೇವೆ, ಧರ್ಮವನ್ನು ಹೊಂದಲಾರೆವು. ನಹುಷನು ಮಾಡಿದ ಪಾಪವನ್ನು ಋಷಿಗಳು ನೂರಾವೊಂದು ರೋಗಗಳನ್ನಾಗಿ ಪರಿವರ್ತಿಸಿ ಎಲ್ಲ ಪ್ರಾಣಿಗಳ ಮೇಲೆ ಅದನ್ನು ಹಾಕಿಬಿಟ್ಟರು. ನಹುಷನೇ, ನೀನು ಭ್ರೂಣಹತ್ಯೆಯನ್ನು ಮಾಡಿದವನು ಎಂದು ನಿಂದಿಸುತ್ತಾ ನಿನ್ನ ಹೋಮಕ್ಕೆ ನಾವು ಹೋತ್ರರಾಗಿ ಬಂದು ನಾವು ಅಗ್ನಿಗೆ ಆಹುತಿಯನ್ನು ನೀಡೆವು ಎಂದು ಪ್ರತಿಭಟಿಸಿದರು.
ಇತ್ಯುಕತ್ವ ತೇ ಮಹಾತ್ಮಾನಃ ಸರ್ವೇ ತತತತ್ವರ್ಥದರ್ಶಿನಃ |
ಋಷಯೋ ಯತಯಃ ಶಾಂತಾಸ್ತರಸಾ ಪ್ರತ್ಯವೇದಯನ್ ॥48॥
ತತತತ್ವರ್ಥದರ್ಶಿಗಳಾದ, ಮಹಾನುಭಾವರಾದ ಆ ಎಲ್ಲ ಋಷಿಗಳು ಹೀಗೆ ಹೇಳುತ್ತಾ ನಹುಷನು ಪಾಪಕಾರ್ಯವನ್ನು ಮನಃಪೂರ್ವಕವಾಗಿ ಮಾಡಿಲ್ಲ ಎಂದು ಕೂಡಲೇ ತಿಳಿದು ಶಾಂತರಾದರು.
ಈದೃಶಾನಶಿವಾನ್ಘೋರಾನಾಚಾರಾನಿಹ ಜಾಜಲೇ |
ಕೇವಲಾಚರಿತತ್ವಾತ್ತು ನಿಪುಣಾನ್ನಾವಬುದ್ಧ್ಯಸೇ ॥49॥
ಜಾಜಲಿಯೇ, ಈ ರೀತಿಯಾದ ಅನೇಕ ಅಮಂಗಳಕರ, ಭಯಂಕರ ಆಚಾರಗಳು ನಡೆಯುತ್ತಿದ್ದರೂ ನೀನು ಅದನ್ನು ನೋಡುತ್ತಿದ್ದರೂ ಇವೆಲ್ಲ ಹಿಂದಿನಿಂದ ನಡೆದು ಬಂದಿವೆ ಎಂಬ ಕಾರಣದಿಂದ ನೋಡುತ್ತಾ, ಅವುಗಳ ದೌಷ್ಟ್ಯವನ್ನು ತಿಳಿಯದವನಾಗಿದ್ದಿ.
ಕಾರಣಾದ್ಧರ್ಮಮನ್ವಿಚ್ಛೇನ್ನ ಲೋಕಚರಿತಂ ಚರೇತ್ |
ಯೋ ಹನ್ಯಾದ್ಯಶ್ಚ ಮಾಂ ಸ್ತೌತಿ ತತ್ರಾಪಿ ಶೃಣು ಜಾಜಲೇ ॥50॥
ಧರ್ಮಕ್ಕೂ ಕಾರಣ ಏನೆಂಬುದನ್ನು, ಅದರ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಲೋಕವು ಮಾಡುವ ಆಚರಣೆಗಳನ್ನು ವಿಚಾರ ಮಾಡದೆ ಅನುಷ್ಠಾನಕ್ಕೆ ತರಬಾರದು. ಜಾಜಲಿಯೇ, ನನ್ನ ವಿಷಯವನ್ನೇ ಹೇಳುತ್ತೇನೆ. ನನ್ನನ್ನು ಹಿಂಸಿಸಿದವರು, ಪ್ರಶಂಸಿಸಿದವರು ಅವರಿಬ್ಬರೂ ನನ್ನ ದೃಷ್ಟಿಯಲ್ಲಿ ಸಮಾನರೇ ಆಗಿರುತ್ತಾರೆ.
ಸಮೌ ತಾವಪಿ ಮೇ ಸ್ಯಾತಾಂ ನ ಹಿ ಮೇ ಸ್ತಃ ಪ್ರಿಯಾಪ್ರಿಯೇ |
ಏತದೀದೃಶಕಂ ಧರ್ಮಂ ಪ್ರಶಂಸಂತಿ ಮನೀಷಿಣಃ ॥51॥
ನಾನು ಹಿಂಸಕನನ್ನು ಅಪ್ರಿಯನೆಂದು, ಪ್ರಶಂಸೆ ಮಾಡಿದವನನ್ನು ಪ್ರಿಯನೆಂದು ಭಾವಿಸುವುದಿಲ್ಲ. ವಿದ್ವಾಂಸರು ಈ ರೀತಿಯಾದ ಸಮತ್ವವುಳ್ಳ ಧರ್ಮವನ್ನೇ ಪ್ರಶಂಸೆ ಮಾಡುತ್ತಾರೆ.
ಉಪಪತ್ತ್ಯಾ ಹಿ ಸಂಪನ್ನೋ ಯತಿಭಿಶ್ಚೈವ ಸೇವ್ಯತೇ |
ಸತತಂ ಧರ್ಮಶೀಲೈಶ್ಚ ನೈಪುಣ್ಯೇನೋಪಲಕ್ಷಿತಃ ॥52॥
ವಿವೇಕದಿಂದ ನಿರ್ಣಯವಾದ, ಸಮತ್ವದಿಂದ ಕೂಡಿದ ಧರ್ಮವು ಯತಿಗಳಿಂದಲೂ, ಧರ್ಮಶೀಲರಿಂದಲೂ ಯಾವಾಗಲೂ ಸೇವಿಸಲು ಅರ್ಹವಾಗಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆಂಟನೆಯ ಅಧ್ಯಾಯ
ಜಾಜಲಿಗೆ ತುಲಾಧಾರನ ಉಪದೇಶ.
ಜಾಜಲಿಃ
ಯಥಾ ಪ್ರವರ್ತಿತೋ ಧರ್ಮಸ್ತುಲಾಂ ಧಾರಯತಾ ತ್ವಯಾ |

ಸ್ವರ್ಗದ್ವಾರಂ ಚ ವೃತ್ತಿಂ ಚ ಭೂತಾನಾಮವರೋತ್ಸ್ಯತೇ ॥1॥
ಮುನಿಶ್ರೇಷ್ಠನೇ, ತಕ್ಕಡಿಯನ್ನು ಧರಿಸಿರುವ ನೀನು ಪ್ರಾಣಿಗಳಿಗೆ ಸ್ವರ್ಗದ್ವಾರವನ್ನು, ಜೀವನ ವೃತ್ತಿಯನ್ನು ಪ್ರತಿರೋಧಿಸುವಂತಹ ಧರ್ಮವನ್ನೇ ಪ್ರಾರಂಭಿಸಿರುವೆ.
ಕೃಷ್ಯಾ ಹ್ಯನ್ನಂ ಪ್ರಭವತಿ ತತಸ್ತ್ವಮಪಿ ಜೀವಸಿ |
ಪಶುಭಿಶ್ಚೌಷಧೀಭಿಶ್ಚ ಮರ್ತ್ಯಾ ಜೀವಂತಿ ವಾಣಿಜ ॥2॥
ನೀನು ಕೃಷಿಯನ್ನು ನಿಂದಿಸುತ್ತಿರುವೆಯಲ್ಲವೆ? ಆದರೆ ಕೃಷಿಯಿಂದಲೇ ಪ್ರಾಣಿಗಳಿಗೆಲ್ಲ ಅನ್ನದ ಉತ್ಪತ್ತಿಯಾಗುತ್ತಿದೆ. ನೀನೂ ಆ ಅನ್ನದಿಂದ ಜೀವಿಸಿರುವೆ. ಗೋವುಗಳಿಂದಲೂ, ಕೃಷಿಯಿಂದಲೂ ಮನುಷ್ಯನಿಗೆ ಜೀವನವು ನಡೆಯುತ್ತದೆ.
ಯತೋ ಯಜ್ಞಃ ಪ್ರಭವತಿ ನಾಸ್ತಿಕ್ಯಮಪಿ ಜಲ್ಪಸಿ |
ನ ಹಿ ವರ್ತೇದಯಂ ಲೋಕೋ ವಾರ್ತಾಮುತ್ಸೃಜ್ಯ ಕೇವಲಮ್ ॥3॥
ಯಾಗಾದಿ ಕರ್ಮಗಳಿಗೂ ಗೋವು, ಧಾನ್ಯಗಳು ಮುಖ್ಯವಾಗಿವೆ. ನೀನು ನಾಸ್ತಿಕ್ಯವಾದವನ್ನು ಖಂಡಿಸುತ್ತಿರುವೆ. ಕೃಷಿಯನ್ನೇ ತ್ಯಜಿಸಿದರೆ ಜಗತ್ತು ಬದುಕುವುದು ಹೇಗೆ?
ತುಲಾಧಾರಃ
ವಕ್ಷ್ಯಾಮಿ ಜಾಜಲೇ ವೃತ್ತಿಂ ನಾಸ್ಮಿ ಬ್ರಾಹ್ಮಣ ನಾಸ್ತಿಕಃ |
ನ ಚ ಯಜ್ಞಂ ವಿನಿಂದಾಮಿ ಯಜ್ಞವಿತ್ತು ಸುದುರ್ಲಭಃ ॥4॥
ಜಾಜಲಿ ಬ್ರಾಹ್ಮಣನೇ, ನಾನು ನಾಸ್ತಿಕನಲ್ಲ. ಧಾರ್ಮಿಕ ಜೀವನದ ಪದ್ಧತಿಯನ್ನೇ ಹೇಳುತ್ತಿದ್ದೇನೆ. ನಾನು ಯಾಗವನ್ನು ನಿಂದಿಸುವುದೂ ಇಲ್ಲ. ಯಜ್ಞದ ಮರ್ಮವನ್ನು ಸರಿಯಾಗಿ ತಿಳಿದವನು ಲೋಕದಲ್ಲಿ ಅತ್ಯಂತ ದುರ್ಲಭನು.
ನಮೋ ಬ್ರಾಹ್ಮಣಯಜ್ಞಾಯ ಯೇ ಚ ಯಜ್ಞವಿದೋ ಜನಾಃ |
ಸ್ವಯಜ್ಞಂ ಬ್ರಾಹ್ಮಣಾ ಹಿತ್ವಾ ಕ್ಷಾತ್ರಂ ಯಜ್ಞಮಿಹಾಸ್ಥಿತಾಃ ॥5॥
ಯಜ್ಞಕ್ಕೆ ನನ್ನ ನಮಸ್ಕಾರವಿರಲಿ. ಯಜ್ಞವೇತ್ತೃಗಳಿಗೂ ನನ್ನ ಪ್ರಣಾಮವು. ಆದರೆ ಬ್ರಾಹ್ಮಣರು ತಮ್ಮ ಯಜ್ಞವನ್ನು ಬಿಟ್ಟು ಕ್ಷತ್ರಿಯರ ಯಜ್ಞವನ್ನು ಅನುಷ್ಠಾನ ಮಾಡುತ್ತಿದ್ದಾರೆ.
ಲುಬ್ಧೈರ್ವಿತ್ತಪರೈರ್ಬ್ರಹ್ಮನ್ನಾಸ್ತಿಕೈಃ ಸಂಪ್ರವರ್ತಿತಮ್ |
ವೇದವಾದಾನವಿಜ್ಞಾಯ ಸತ್ಯಾಭಾಸಮಿವಾನೃತಮ್ ॥6॥
ಇದಂ ದೇಯಮಿದಂ ದೇಯಮಿತಿ ನಾಂತಂ ಚಿಕೀರ್ಷತಿ |
ಅತಃ ಸ್ತೈನ್ಯಂ ಪ್ರಭವತಿ ವಿಕರ್ಮಾಣಿ ಚ ಜಾಜಲೇ |
ತದೇವ ಸುಕೃತಂ ಹವ್ಯಂ ಯೇನ ತುಷ್ಯಂತಿ ದೇವತಾಃ ॥7॥
ನಾಸ್ತಿಕರು ಕೆಲವರು ಲೋಭದಿಂದ, ಹಣದ ಆಸೆಯಿಂದ ವೇದವಾದಗಳ ಅರ್ಥವನ್ನು ಸರಿಯಾಗಿ ತಿಳಿಯದೆ, ವಂಚನೆಗಾಗಿ ಸತ್ಯಾಭಾಸವನ್ನು ಹೊಂದಿರುವ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಾ, ಯಜ್ಞದಲ್ಲಿ ಇದನ್ನು ದಾನ ಮಾಡಬೇಕು. ಕರ್ಮಸಿದ್ಧಿಗಾಗಿ ಇದನ್ನು ಕೊಡಬೇಕು, ಇದು ಪ್ರಶಸ್ತವು. ಹೀಗೆ ದಾನಾದಿ ಕರ್ಮಗಳಿಗೆ ಪ್ರೇರಣೆಯನ್ನು ನೀಡುತ್ತಿದ್ದಾರೆ. ಇದರಿಂದ ಸುಲಿಗೆ, ಕಳ್ಳತನ, ದುಷ್ಕೃತ್ಯಗಳೇ ನಡೆಯುತ್ತಿವೆ. ದೇವತೆಗಳು ತೃಪ್ತಿಯನ್ನು ಹೊಂದುವುದನ್ನು ಹವ್ಯ ಎಂದು, ಪುಣ್ಯ ಎಂದು ಕರೆಯುತ್ತಾರೆ. ಇವರ ವ್ಯಾಪಾರಗಳಲ್ಲಿ ಇದು ಕಾಣಿಸುತ್ತಿಲ್ಲ.
ನಮಸ್ಕಾರೇಣ ಹವಿಷಾ ಸ್ವಾಧ್ಯಾಯೈರೌಷಧೈಸ್ತಥಾ |
ಪೂಜಾ ಸ್ಯಾದ್ದೇವತಾನಾಂ ಹಿ ಯಥಾ ಶಾಸ್ತ್ರನಿದರ್ಶನಮ್ ॥8॥
ನಮಸ್ಕಾರ, ಹವಿಸ್ಸಮರ್ಪಣೆ, ಅಧ್ಯಯನ, ಅಧ್ಯಾಪನ, ಅನ್ನ ಇವುಗಳಿಂದಲೇ ದೇವತೆಗಳನ್ನು ಪೂಜೆ ಮಾಡಲು ಸಾಧ್ಯವಿದೆ ಎಂದು ಶಾಸ್ತ್ರದಲ್ಲಿ ನಿರ್ದೇಶನವಿದೆ.
ಇಷ್ಟಾಪೂರ್ತಾದಸಾಧೂನಾಂ ವಿಷಮಾ ಜಾಯತೇ ಪ್ರಜಾ |
ಲುಬ್ಧೇಭ್ಯೋ ಜಾಯತೇ ಲುಬ್ಧಃ ಸಮೇಭ್ಯೋ ಜಾಯತೇ ಸಮಃ ॥9॥
ಕೇವಲ ಸ್ವರ್ಗಕಾಮನೆಯಿಂದಲೋ, ಕೀರ್ತಿಯ ಅಪೇಕ್ಷೆಯಿಂದಲೋ ಪ್ರವೃತ್ತಿ ಕರ್ಮನಿರತರಾಗಿರುವ ಅಸಜ್ಜನರಿಂದ, ಅವರ ಸ್ವಭಾವಕ್ಕನುಗುಣವಾದ ಸಂತಾನವೇ ಹುಟ್ಟುತ್ತದೆ. ಲೋಭಿಯಾದವನಿಗೆ ಲೋಭಿಯಾದ ಮಗನೇ ಹುಟ್ಟುತ್ತಾನೆ.
ಸಮದರ್ಶಿಯಾದವನಿಗೆ ಸಮದರ್ಶಿಯಾದ ಮಕ್ಕಳೇ ಹುಟ್ಟುತ್ತಾರೆ.
ಯಜಮಾನಸ್ತಥಾತ್ಮಾನಮೃತ್ವಿಜಶ್ಚ ತಥಾ ಪ್ರಜಾಃ |
ಯಜ್ಞಾತ್ ಪ್ರಜಾ ಪ್ರಭವತಿ ನಭಸೋಽಂಭ ಇವಾಮಲಮ್ ॥10॥
ಯಾವ ರೀತಿಯಾಗಿ ಯಜಮಾನನು ವಿಷ್ಣುಪ್ರೀತಿಗೋಸ್ಕರವೇ ಕರ್ಮವನ್ನು ಮಾಡುತ್ತಾನೋ ಅದೇ ರೀತಿ ಋತ್ವಿಜರು ನಡೆದುಕೊಳ್ಳುತ್ತಾರೆ. ಆ ಯಜಮಾನನಾದ ರಾಜನಿಗೆ ತಕ್ಕಂತೆ ಪ್ರಜೆಗಳೂ ಇರುತ್ತಾರೆ. ಈ ಯೋಗ್ಯವಾದ ಯಜ್ಞದಿಂದ ಆಕಾಶದಿಂದ ನಿರ್ಮಲವಾದ ಮಳೆಯು ಬೀಳುವಂತೆ ಶುದ್ಧವಾದ ಸಂತಾನೋತ್ಪತ್ತಿಯಾಗುತ್ತದೆ.
ಅಗ್ನೌ ಪ್ರಾಸ್ತಾಹುತಿರ್ಬ್ರಹ್ಮನ್ನಾದಿತ್ಯಮುಪತಿಷ್ಠತಿ |
ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥11॥
ವಿಪ್ರಶ್ರೇಷ್ಠನೇ, ಮಂತ್ರಪೂರ್ವಕವಾಗಿ ನೀಡುವ ಹೋಮದ್ರವ್ಯವು ಸೂರ್ಯನನ್ನು ತಲುಪುತ್ತದೆ. ಸೂರ್ಯನಿಂದ ಮಳೆ, ಮಳೆಯಿಂದ ಅನ್ನ, ಅನ್ನದಿಂದ ಪ್ರಜೆಗಳು ಹೀಗೆ ಜೀವನವು ಚಲಿಸುತ್ತದೆ.
ತಸ್ಮಾತ್ ಸ್ವನುಷ್ಠಿತಾತ್ ಪೂರ್ವೇ ಸರ್ವಾನ್ಕಾಮಾಂಶ್ಚ ಲೇಭಿರೇ |
ಅಕೃಷ್ಟಪಚ್ಯಾ ಪೃಥಿವೀ ಆಶೀರ್ಭಿರ್ವೀರುಧೋಽಭವನ್ |

ನ ತೇ ಯಜ್ಞೇಷ್ವಾತ್ಮಸು ವಾ ಫಲಂ ಪಶ್ಯಂತಿ ಕಿಂಚನ ॥12॥
ಹಿಂದಿನ ಜ್ಞಾನಿಗಳು ಧರ್ಮನಿಶ್ಚಯವುಳ್ಳವರಾಗಿ ಶ್ರದ್ಧೆಯಿಂದ ಯಜ್ಞಗಳನ್ನು ಅನುಷ್ಠಾನ ಮಾಡುತ್ತಿದ್ದರು. ಅದರಿಂದಲೇ ಎಲ್ಲ ವಿಧವಾದ ಕಾಮನೆಗಳನ್ನು ಹೊಂದುತ್ತಿದ್ದರು. ಕೃಷಿಮಾಡಿದಾಗ ಭೂಮಿ ಸಮೃದ್ಧಿಯನ್ನು ನೀಡುತ್ತಿತ್ತು. ಸತ್ಸಂಕಲ್ಪಗಳಿಂದಲೇ ಫಲ-ಪುಷ್ಪಗಳನ್ನು ಕೊಡುವ ಬಳ್ಳಿಗಳು ಬೆಳೆಯುತ್ತಿದ್ದವು. ಯಜ್ಞದಲ್ಲಿ ಯಾವ ಫಲವನ್ನೂ ಅವರು ನಿರೀಕ್ಷಿಸುತ್ತಿರಲಿಲ್ಲ.
ಶಂಕಮಾನಾಃ ಫಲಂ ಯಜ್ಞೇ ಯೇ ಯಜೇರನ್ಕಥಂಚನ |
ಜಾಯಂತೇಽಸಾಧವೋ ಧೂರ್ತಾ ಲುಬ್ಧಾ ವಿತ್ತಪ್ರಯೋಜನಾಃ ॥13॥
ಯಜ್ಞದಿಂದ ಫಲವು ಸಿಗುತ್ತದೋ, ಇಲ್ಲವೋ ಎಂದು ಸಂದೇಹದಿಂದ ಯಾರು ಯಜ್ಞವನ್ನು ಮಾಡುತ್ತಾರೋ ಅವರು ಅಸತ್ಪುರುಷರು, ಧೂರ್ತರು, ಲೋಭಿಗಳು, ಹಣವೇ ಮುಖ್ಯವಾದ ಪ್ರಯೋಜನವಾಗಿ ಉಳ್ಳವರು.
ಸ ಸ್ಮ ಪಾಪಕೃತಾಂ ಲೋಕಾನ್ ಗಚ್ಛೇದಶುಭಕರ್ಮಣಾ |
ಪ್ರಮಾಣಮಪ್ರಮಾಣೇನ ಯಃ ಕುರ್ಯಾದಶುಭಂ ನರಃ |
ಪಾಪಾತ್ಮಾ ಸೋಽಕೃತಪ್ರಜ್ಞಃ ಸದೈವೇಹ ದ್ವಿಜೋತ್ತಮ ॥14॥
ಬ್ರಾಹ್ಮಣಶ್ರೇಷ್ಠನೇ, ಪ್ರಾಮಾಣಿಕವಾದ ವೇದವನ್ನು ತನ್ನ ಅಪ್ರಮಾಣವಾದ ಕುತರ್ಕದಿಂದ ಅಮಂಗಳವೆಂದು ಯಾವನು ಹೇಳುತ್ತಾನೋ ಅವನ ವೃತ್ತಿಯು ಶುದ್ಧವಾದುದಲ್ಲ. ಈ ರೀತಿ ವಾದಿಸುವ ವ್ಯಕ್ತಿಯ ಮನಸ್ಸು ಯಾವಾಗಲೂ ಪಾಪ ಕರ್ಮಗಳಲ್ಲಿಯೇ ತೊಡಗಿಸಿಕೊಂಡಿರುತ್ತದೆ. ಅವನು ತನ್ನ ಮನಸ್ಸಿನಲ್ಲಿ ಹುಟ್ಟುವ ಪಾಪ ಪ್ರೇರಣೆಯಿಂದ ಪಾಪಕರ್ಮಗಳನ್ನೇ ಮಾಡುತ್ತಾ ಪಾಪಿಷ್ಠರು ಸಾಗುವ ನರಕಕ್ಕೆ ಸಾಗುತ್ತಾನೆ.
ಕರ್ತವ್ಯಮಿತಿ ಕರ್ತವ್ಯಂ ವೇತ್ತಿ ಯೋ ಬ್ರಾಹ್ಮಣೋಭಯಮ್ |
ಬ್ರಹ್ಮೈವ ವರ್ತತೇ ಲೋಕೇ ನೈತಿ ಕರ್ತವ್ಯತಾಂ ಪುನಃ ॥15॥
ಯಾವನು ವೇದೋಕ್ತ ಕರ್ಮಗಳನ್ನು ಮಾಡಬೇಕೆಂಬ ಭಾವನೆಯಿಂದ ತಿಳಿದು ಆ ವೇದೋಕ್ತ ವಿಧಿಯನ್ನು ನಡೆಸದಿದ್ದರೆ, ಅದಕ್ಕೆ ಅಂಜುತ್ತಾ ಯಜ್ಞಕ್ಕೆ ವಿಷಯವು ಪರಮಾತ್ಮನೇ ಎಂದು ತಿಳಿದು, ಈ ಕರ್ತವ್ಯಗಳಿಗೆ ನಾನು ಕರ್ತೃವಲ್ಲ, ಭಗವಂತನೇ ಕರ್ತಾ ಎಂದು ಹೇಳುತ್ತಾನೋ ಅವನೇ ನಿಜವಾದ ಬ್ರಾಹ್ಮಣನು.
ವಿಗುಣಂ ಚ ಪುನಃ ಕರ್ಮ ಜ್ಯಾಯ ಇತ್ಯನುಶುಶ್ರುಮ |
ಸರ್ವಭೂತೋಪಘಾತಶ್ಚ ಫಲಭಾವೇ ಚ ಸಂಯಮಃ ॥16॥
ಕರ್ಮಗಳಲ್ಲಿ ಲೋಪ-ದೋಷಗಳುಂಟಾದರೆ ಅದು ಫಲ ಕೊಡುವುದಿಲ್ಲ. ಆದರೆ ಭಗವನ್ನಿಷ್ಠೆಯಿಂದ ಮಾಡುವ ಕರ್ಮ ವಿಗುಣವಾಗಿದ್ದರೂ ಶ್ರೇಷ್ಠವೇ ಎನಿಸುತ್ತದೆ. ಗುಣಹೀನವಾದ ಕರ್ಮವು ವಿಪತ್ಕಾರಿಯಾಗಿದೆ ಎಂದು ತಿಳಿದು, ಅದೇ ಕರ್ಮವನ್ನು ನಿಷ್ಕಾಮ ಭಾವದಿಂದ ಮಾಡಿದರೆ ಅದು ಶ್ರೇಷ್ಠ ಕರ್ಮವಾಗುತ್ತದೆ.
ಸತ್ಯಯಜ್ಞಾ ದಮಯಜ್ಞಾ ಅಲುಬ್ಧಾಶ್ಚಾತ್ಮತೃಪ್ತಯಃ |
ಉತ್ಪನ್ನತ್ಯಾಗಿನಃ ಸರ್ವೇ ಜನಾ ಆಸನ್ನಮತ್ಸರಾಃ ॥17॥
ಹಿಂದಿನ ಕಾಲದ ಬ್ರಾಹ್ಮಣರು ಸತ್ಯನಿಷ್ಠರಾಗಿ, ಇಂದ್ರಿಯಸಂಯಮವನ್ನು ಹೊಂದಿ ಯಜ್ಞಗಳನ್ನು ಮಾಡುತ್ತಿದ್ದರು. ಅವರು ಮೋಕ್ಷದ ಲೋಭವಿದ್ದರೂ ಲೌಕಿಕ ಧನದ ಮೋಹ ಹೊಂದುತ್ತಿರಲಿಲ್ಲ. ನಾಳೆಗೆ ಬೇಕೆಂದು ವಸ್ತುವನ್ನು ಸಂಗ್ರಹಿಸದೆ ಸಿಕ್ಕದ್ದನ್ನು ಮತ್ತೊಬ್ಬರಿಗೆ ದಾನ ಮಾಡುತ್ತಿದ್ದರು. ಹಿಂದಿನವರೆಲ್ಲ ಮಾತ್ಸರ್ಯರಹಿತರು ಆಗಿರುತ್ತಿದ್ದರು.
ಕ್ಷೇತ್ರಕ್ಷೇತ್ರಜ್ಞತತ್ತ್ವಜ್ಞಾಃ ಸ್ವಯಜ್ಞಪರಿನಿಷ್ಠಿತಾಃ |
ಬ್ರಾಹ್ಮಂ ವೇದಮಧೀಯಂತಸ್ತೋಷಯಂತ್ಯಮರಾನಪಿ ॥18॥
ಅವರೆಲ್ಲರೂ ಜೀವ-ಪರಮಾತ್ಮರ ಭೇದಜ್ಞಾನವನ್ನು ಹೊಂದಿರುತ್ತಿದ್ದರು. ಆತ್ಮಯಜ್ಞ ಪರಾಯಣರಾಗಿರುತ್ತಿದ್ದರು. ಉಪನಿಷತ್ತು, ವೇದಗಳನ್ನು ಅಧ್ಯಯನ ಮಾಡುತ್ತಾ ಸಂತುಷ್ಟರಾಗಿ ಮತ್ತೊಬ್ಬರಿಗೂ ಸಂತೋಷ ನೀಡುತ್ತಿದ್ದರು.
ಅಖಿಲಂ ದೈವತಂ ಸರ್ವಂ ಬ್ರಹ್ಮ ಬ್ರಾಹ್ಮಣಸಂಶ್ರಿತಮ್ |
ತೃಪ್ಯಂತಿ ತೃಪ್ಯತೋ ದೇವಾಸ್ತೃಪ್ತಾಸ್ತೃಪ್ತಸ್ಯ ಜಾಜಲೇ ॥19॥
ಜಾಬಲಿಯೇ, ಸಮಸ್ತ ದೇವತೆಗಳು, ಸಮಸ್ತ ವೇದಗಳು ಬ್ರಹ್ಮಜ್ಞಾನಿಯನ್ನೇ ಆಶ್ರಯ ಹೊಂದಿವೆ. ಆದ್ದರಿಂದ ಬ್ರಾಹ್ಮಣನು ತೃಪ್ತಿ ಹೊಂದಿದರೆ ದೇವತೆಗಳೂ ಸಂತುಷ್ಟರಾಗುತ್ತಾರೆ, ತೃಪ್ತಿಯನ್ನು ಹೊಂದುತ್ತಾರೆ.
ಯಥಾ ಸರ್ವರಸೈಸ್ತೃಪ್ತೋ ನಾಭಿನಂದತಿ ಕಿಂಚನ |
ತಥಾ ಪ್ರಜ್ಞಾ ನತೃಪ್ತಸ್ಯ ನಿತ್ಯಂ ತೃಪ್ತಿಃ ಸುಖೋದಯಾ ॥20॥
ಎಲ್ಲಾ ರಸಗಳಿಂದಲೂ ತೃಪ್ತನಾದವನು ಯಾವ ರಸವನ್ನೂ ಬಯಸಲು ಹೋಗುವುದಿಲ್ಲ. ಅದರಂತೆ ಜ್ಞಾನತೃಪ್ತನಾದವನು ಬೇರೆ ಯಾವುದರಿಂದಲೂ ತೃಪ್ತಿಯನ್ನು ಅಪೇಕ್ಷಿಸುವುದಿಲ್ಲ. ಜ್ಞಾನತೃಪ್ತಿಯೇ ಶ್ರೇಷ್ಠವಾದ ಸುಖದ ತೃಪ್ತಿ ಎನಿಸಿದೆ.
ಧರ್ಮಾರಾಮಾ ಧರ್ಮಸುಖಾಃ ಕೃತ್ಸ್ನವ್ಯವಸಿತಾಸ್ತಥಾ |
ಅಸ್ತಿ ನಸ್ತತ್ತ್ವತೋ ಭೂಯ ಇತಿ ಪ್ರಜ್ಞಾ ಗವೇಷಿಣಃ ॥21॥
ಧರ್ಮದಲ್ಲಿಯೇ ರತಿಯುಳ್ಳವರಾಗಿ, ಧರ್ಮದಿಂದಲೇ ಸುಖವನ್ನು ಹೊಂದಿದವರಾಗಿ, ಕರ್ತವ್ಯಾಕರ್ತವ್ಯಗಳನ್ನು ನಿಶ್ಚಯ ಮಾಡಿಕೊಂಡು ಕರ್ಮಗಳನ್ನು ಮಾಡುತ್ತಿರುತ್ತಾರೆ. ಆದರೆ ಈ ಎಲ್ಲ ಧರ್ಮಕ್ಕಿಂತಲೂ ಅಧಿಕವಾದ, ವ್ಯಾಪಕವಾದ ಪರಮಾತ್ಮತತ್ತ್ವವಿದೆ ಎಂದು ಪ್ರಾಜ್ಞರಾದವರು ಹೇಳುತ್ತಾರೆ.
ಜ್ಞಾನವಿಜ್ಞಾನಿನಃ ಕೇಚಿತ್ ಪರಂ ಪಾರಂ ತಿತೀರ್ಷವಃ |
ಅತೀವ ತತ್ ಸದಾ ಪುಣ್ಯಂ ಪುಣ್ಯಾಭಿಜನಸಂಹಿತಮ್ ॥22॥
ಜ್ಞಾನ-ವಿಜ್ಞಾನ ಸಂಪನ್ನರಾದ ಕೆಲವರು ಸಂಸಾರ ಸಾಗರವನ್ನು ದಾಟಲು ಬಯಸಿ, ಅತ್ಯಂತ ಪುಣ್ಯಪ್ರದವಾದ, ಪವಿತ್ರವಾದ,

ಪುಣ್ಯಾತ್ಮರಿಂದ ಕೂಡಿರುವ ಬ್ರಹ್ಮಲೋಕವನ್ನು ಹೊಂದುತ್ತಾರೆ.
ಯತ್ರ ಗತ್ವಾ ನ ಶೋಚಂತಿ ನ ಚ್ಯವಂತಿ ವ್ಯಥಂತಿ ಚ |
ತೇ ತು ತದ್ಬ್ರಹ್ಮಣಃ ಸ್ಥಾನಂ ಪ್ರಾಪ್ನುವಂತೀಹ ಸಾತ್ತ್ವಿಕಾಃ ॥23॥
ಅಲ್ಲಿಗೆ ಹೋದ ಬಳಿಕ ಅವರು ದುಃಖವನ್ನು ಹೊಂದುವುದಿಲ್ಲ. ಅವರಿಗೆ ಪದಚ್ಯುತಿ, ವ್ಯಥೆಗಳು ಇರುವುದಿಲ್ಲ. ಅಂತಹ ಸಾತ್ವಿಕರು ಬ್ರಹ್ಮನ ಸ್ಥಾನವೆನಿಸಿದ ವೈಕುಂಠವನ್ನೇ ಸೇರುತ್ತಾರೆ.
ನೈವ ತೇ ಸ್ವರ್ಗಮಿಚ್ಛಂತಿ ನ ಯಜಂತಿ ಯಶೋಧನೈಃ |
ಸತಾಂ ವರ್ತ್ಮಾನುವರ್ತಂತೇ ಯಥಾಬಲಮಹಿಂಸಯಾ ॥24॥
ಅವರು ಸ್ವರ್ಗವನ್ನಾಗಲಿ, ಧನ-ಕೀರ್ತಿಗಳನ್ನಾಗಲಿ ಬಯಸಿ ಯಜ್ಞ ಮಾಡುವುದಿಲ್ಲ. ಹಿಂಸೆ ಇಲ್ಲದೆ ಇರುವ ಸಜ್ಜನರ ಮಾರ್ಗವನ್ನೇ ಅನುಸರಿಸುತ್ತಾ ಯಜ್ಞವನ್ನು ಆಚರಿಸುತ್ತಾರೆ.
ವನಸ್ಪತೀನೋಷಧೀಶ್ಚ ಫಲಮೂಲಂ ಚ ತೇ ವಿದುಃ |
ನ ಚೈತಾನೃತ್ವಿಜೋ ಲುಬ್ಧಾ ಯಾಜಯಂತಿ ಧನಾರ್ಥಿನಃ ॥25॥
ಓಷಧಿಗಳನ್ನು, ಫಲ-ಮೂಲಗಳನ್ನು ಅವರು ಯಜ್ಞದ ಹವಿಸ್ಸೆಂದು ಭಾವಿಸುತ್ತಾ ಅದರಿಂದಲೇ ಜೀವನವನ್ನು ನಿರ್ವಹಿಸುತ್ತಾರೆ. ಧನದ ಅಪೇಕ್ಷೆಯಿಂದ ಲೋಭಿಗಳಾಗಿ ಯಜ್ಞವನ್ನು ಮಾಡಿಸುವುದಿಲ್ಲ.
ಸ್ವಮೇವ ಚಾರ್ಥಂ ಕುರ್ವಾಣಾ ಯಜ್ಞಂ ಚಕ್ರುಃ ಪುನರ್ದ್ವಿಜಾಃ |
ಪರಿನಿಷ್ಠಿತಕರ್ಮಾಣಃ ಪ್ರಜಾನುಗ್ರಹಕಾಮ್ಯಯಾ ॥26॥
ಜ್ಞಾನಮುಖವಾಗಿ ತಾವೇ ಪುರುಷಾರ್ಥವನ್ನು ಸಂಪಾದಿಸಿಕೊಂಡಿರುವ ಬ್ರಾಹ್ಮಣರು ತಮ್ಮನ್ನೇ ಯಜ್ಞದ ಉಪಕರಣವನ್ನಾಗಿ ಭಾವಿಸಿ, ಲೋಕಹಿತಕ್ಕಾಗಿ ಯಜ್ಞವನ್ನು ಮಾಡುತ್ತಾರೆ.
ಪ್ರಾಪಯೇಯುಃ ಪ್ರಜಾಃ ಸ್ವರ್ಗಂ ಸ್ವಧರ್ಮಚರಣೇನ ವೈ |
ಇತಿ ಮೇ ವರ್ತತೇ ಬುದ್ಧಿಃ ಸಮಾ ಸರ್ವತ್ರ ಜಾಜಲೇ ॥27॥
ಸಜ್ಜನರಾದ ಅವರು ತಮ್ಮ ವರ್ಣವಿಹಿತವಾದ ಆಚರಣೆಯಿಂದಲೇ ಮತ್ತೊಬ್ಬರಿಗೂ ಸ್ವರ್ಗವನ್ನು ನೀಡಬಲ್ಲರು. ಇದನ್ನು ಆಲೋಚಿಸುತ್ತಾ ನನ್ನ ಬುದ್ಧಿಯು ಸರ್ವತ್ರ ಸಮಭಾವದಿಂದ ಕೂಡಿದೆ.
ಪ್ರಯುಂಜತೇ ಯಾನಿ ಯಜ್ಞೇ ಸದಾ ಪ್ರಾಜ್ಞಾ ದ್ವಿಜರ್ಷಭ |
ತೇನ ತೇ ದೇವಯಾನೇನ ಪಥಾ ಯಾಂತಿ ಮಹಾಮುನೇ ॥28॥
ಪ್ರಾಜ್ಞರಾದ ಬ್ರಾಹ್ಮಣಶ್ರೇಷ್ಠರು ಪುನರಾವೃತ್ತಿ ರಹಿತವಾದ ಯಜ್ಞಗಳನ್ನು ಮಾಡುತ್ತಾ ದೇವತೆಗಳನ್ನು ಆರಾಧಿಸುತ್ತಾರೋ ಆ ದೇವತೆಗಳ ಅನುಗ್ರಹದಿಂದ ದೇವಯಾನದ ಮೂಲಕ ಊರ್ಧ್ವಲೋಕಗಳಿಗೆ ಪ್ರಯಾಣಿಸುತ್ತಾರೆ.
ಆವೃತ್ತಿಸ್ತತ್ರ ಚೈಕಸ್ಯ ನಾಸ್ತ್ಯಾವೃತ್ತಿರ್ಮನೀಷಿಣಾಮ್ |
ಉಭೌ ತೌ ದೇವಯಾನೇನ ಗಚ್ಛತೋ ಜಾಜಲೇ ಪಥಾ ॥29॥
ಯಾವನು ಕಾಮನೆಗಳಲ್ಲಿ ಆಸಕ್ತನಾಗಿದ್ದಾನೋ ಆ ಮನುಷ್ಯನಿಗೆ ಈ ಪ್ರಪಂಚದಲ್ಲಿ ಹುಟ್ಟು-ಸಾವುಗಳಿವೆ. ಜ್ಞಾನಿಯಾದವನಿಗೆ ಪುನರಾವೃತ್ತಿ ಇಲ್ಲ. ವಾಸ್ತವಿಕವಾಗಿ ಇಬ್ಬರೂ ದೇವಯಾನದ ಮೂಲಕವೇ ಊರ್ಧ್ವಲೋಕಗಳಿಗೆ ಹೋದರೂ ಸಂಕಲ್ಪ ಭೇದದಿಂದ ಒಬ್ಬ ಪುನಃ ಹುಟ್ಟುತ್ತಾನೆ ಮತ್ತೊಬ್ಬ ಹುಟ್ಟುವುದಿಲ್ಲ.
ಸ್ವಯಂ ಚೈಷಾಮನಡುಹೋ ಯುಜ್ಯಂತಿ ಚ ವಹಂತಿ ಚ |
ಸ್ವಯಮುಸ್ರಾಶ್ಚ ದುಹ್ಯಂತೇ ಮನಃಸಂಕಲ್ಪಸಿದ್ಧಿಭಿಃ ॥30॥
ಮಹಾತ್ಮರ ಮನಸ್ಸಿನಲ್ಲಿ ಇಚ್ಛೆಗಳು ಏನಾದರೂ ಉಂಟಾದರೆ ಆ ಸಂಕಲ್ಪದಿಂದಲೇ ಆ ಕಾರ್ಯವು ಸಿದ್ಧಿಸುತ್ತದೆ. ಎತ್ತುಗಳು ಗಾಡಿಯ ನೊಗಕ್ಕೆ ಬಿಗಿದುಕೊಂಡು ತಾವೇ ಗಾಡಿಯನ್ನು ಸೆಳೆದುಕೊಂಡು ಹೋಗುತ್ತವೆ. ಹಸುಗಳು ಕರೆಯದೆಯೇ ಹಾಲನ್ನು ಕೆಚ್ಚಲಿನಿಂದ ಸುರಿಸುತ್ತವೆ. ಇದೆಲ್ಲವೂ ಬ್ರಾಹ್ಮಣರ ಸಂಕಲ್ಪ ಶಕ್ತಿಯಿಂದಲೇ ನಡೆಯುತ್ತದೆ.
ಸ್ವಯಂ ಯೂಪಾನುಪಾದಾಯ ಯಜಂತೇ ಸ್ವಾಪ್ತದಕ್ಷಿಣೈಃ |
ಯಸ್ತಥಾಭಾವಿತಾತ್ಮಾ ಸ್ಯಾತ್ ಸ ಗಾಮಾಲಬ್ಧುಮರ್ಹತಿ ॥31॥
ಜ್ಞಾನಿಗಳ ಸಂಕಲ್ಪ ಸಿದ್ಧಿಯೇ ಬಹಳ ಪ್ರಭಾವಿಯಾದುದು. ಅವರು ಮಾನಸಿಕವಾಗಿ ಸಂಕಲ್ಪಿಸಿಯೇ ಯಜ್ಞಕ್ಕೆ ಸಂಬಂಧಿಸಿದ ಯೂಪವನ್ನು ಸ್ಥಾಪಿಸಿ ಯಥೇಚ್ಛವಾದ ದಕ್ಷಿಣೆಗಳಿಂದ ಕೂಡಿದ ಯಾಗವನ್ನು ಮಾಡುತ್ತಾರೆ. ಅಂತಹ ಪರಿಶುದ್ಧರಾದ ಚೇತನರೇ ಪಶುವಧ ರೂಪವಾದ ಯಾಗವನ್ನು ನಡೆಸಲು ಅರ್ಹರಾಗಿದ್ದಾರೆ. ಹೀಗಿದ್ದರೂ ಅವರು ಪಶುವಧೆಗೆ ಸಮ್ಮತಿಸದೆ ಧ್ಯಾನಾದಿಗಳಿಂದಲೇ ಯಾಗವನ್ನು ಮುಗಿಸುತ್ತಾರೆ.
ಓಷಧೀಭಿಸ್ತಥಾ ಬ್ರಹ್ಮನ್ ಯಜೇರಂಸ್ತೇ ನತಾದೃಶಾಃ |
ಬುದ್ಧಿತ್ಯಾಗಂ ಪುರಸ್ಕೃತ್ಯ ತಾದೃಶಂ ಪ್ರಬ್ರವೀಮಿ ತೇ ॥32॥
ಯೋಗಸಿದ್ಧಿಯನ್ನು ಪಡೆದ ಮಹಾಪುರುಷರು ಅನ್ನಾದಿಗಳ ಮೂಲಕ ಯಜ್ಞವನ್ನು ಮಾಡಬಲ್ಲರು. ಧನಲುಬ್ಧರಾದ ಋತ್ವಿಜರು ಇಂತಹ ಮಾನಸಿಕ ಯಜ್ಞಕ್ಕೆ ಸಿದ್ಧರಿರಲಾರರು. ಕರ್ಮತ್ಯಾಗಿಗಳ ಮಹಿಮೆ ಇಷ್ಟು ಅದ್ಭುತವು. ಆದ್ದರಿಂದ ತ್ಯಾಗಿಗಳ ಧರ್ಮವನ್ನೇ ಮುಖ್ಯವಾಗಿಟ್ಟುಕೊಂಡು ನಾನು ಮಾತನಾಡಿದ್ದೇನೆ.
ನಿರಾಶಿಷಮನಾರಂಭಂ ನಿರ್ನಮಸ್ಕಾರಮಸ್ತುತಿಮ್ |
ಅಕ್ಷೀಣಂ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ ॥33॥
ಯಾವನ ಮನಸ್ಸಿನಲ್ಲಿ ಕಾಮನೆಗಳಿಲ್ಲವೋ, ಫಲದ ಇಚ್ಛೆಯಿಂದ ಕರ್ಮವನ್ನು ಮಾಡುವುದಿಲ್ಲವೋ, ನಮಸ್ಕಾರ ಹೊಗಳಿಕೆಯಿಂದ ದೂರನಾಗಿದ್ದಾನೋ, ಈ ಬಾಹ್ಯ ಉಪಾಧಿಗಳಿಲ್ಲದೇ ಇದ್ದರೂ ಕ್ಷೀಣತೆಯನ್ನು ಹೊಂದುವುದಿಲ್ಲವೋ, ಬಾಹ್ಯ ಕರ್ಮಗಳನ್ನು ಕ್ಷೀಣ

ಮಾಡಿಕೊಂಡಿದ್ದಾನೋ ಅಂತಹ ಬ್ರಾಹ್ಮಣನನ್ನೇ ದೇವತೆಗಳು ಬ್ರಾಹ್ಮಣ ಎನ್ನುತ್ತಾರೆ.
ನಾಶ್ರಾವಯನ್ನ ಚ ಯಜನ್ನ ದದದ್ಬ್ರಾಹ್ಮಣೇಷು ಚ |
ಗ್ರಾಮ್ಯಾಂ ವೃತ್ತಿಂ ಲಿಪ್ಸಮಾನಃ ಕಾಂ ಗತಿಂ ಯಾತಿ ಜಾಜಲೇ |
ಇದಂ ತು ದೈವತಂ ಕೃತ್ವಾ ಯಥಾ ಯಜ್ಞಮವಾಪ್ನುಯಾತ್ ॥34॥
ಅಧ್ಯಯನ-ಅಧ್ಯಾಪನಗಳನ್ನು ಮಾಡದೆ, ಯಜ್ಞ ಮಾಡದೆ, ಬ್ರಾಹ್ಮಣರಿಗೆ ದಾನ ಮಾಡದೆ, ವೇದೋಕ್ತ ವರ್ಣಾಶ್ರಮೋಚಿತ ಕರ್ಮಗಳನ್ನು ಮಾಡದೆ, ಕೇವಲ ಗ್ರಾಮ್ಯ ವೃತ್ತಿಗಳನ್ನೇ ಅಪೇಕ್ಷಿಸುವ ವ್ಯಕ್ತಿಯು ಹೇಗೆ ತಾನೆ ಸದ್ಗತಿಯನ್ನು ಹೊಂದಬಲ್ಲನು? ಜಾಜಲಿಯೇ, ನಿಷ್ಕಾಮ ಭಾವನೆಯಿಂದ ಹರಿಪ್ರೀತ್ಯರ್ಥವಾಗಿ ಮಾಡುವ ಯಜ್ಞ ಕರ್ಮಿಯು ಯಥಾರ್ಥವಾದ ಫಲವನ್ನು ಹೊಂದುತ್ತಾನೆ.
ಜಾಜಲಿಃ
ನ ವೈ ಮುನೀನಾಂ ಶೃಣುಮಃ ಸ್ಮ ತತ್ತ್ವಂ
ಪೃಚ್ಛಾಮಿ ತ್ವಾ ವಾಣಿಜ ಕಷ್ಟಮೇತತ್ |
ಪೂರ್ವೇ ಪೂರ್ವೇ ಚಾಸ್ಯ ನಾವೇಕ್ಷಮಾಣಾ
ನಾತಃ ಪರಂ ತಮೃಷಯಃ ಸ್ಥಾಪಯಂತಿ ॥35॥
ಮುನಿಶ್ರೇಷ್ಠನೇ, ನಾನು ಆತ್ಮಜ್ಞಾನಿಗಳ ಮಾನಸಿಕ ಯಜ್ಞದ ತತ್ತ್ವಗಳನ್ನು ಕೇಳುತ್ತಿಲ್ಲ. ಆ ತತ್ತ್ವಗಳನ್ನು ಗ್ರಹಿಸುವುದು, ಅದರಂತೆ ವರ್ತಿಸುವುದು ಬಹಳ ಕಠಿಣವು. ನೀನು ಹೇಳಿದ ಯೋಗಸಿದ್ಧಾಂತವನ್ನು ಹಿಂದಿನವರು ಅನುಸರಿಸಿದಂತಿಲ್ಲ. ಆದ್ದರಿಂದಲೇ ಮುಂದಿನ ಮಹರ್ಷಿಗಳಿಗೆ ಎಲ್ಲರಿಗೂ ಅವರು ವಿಧಿಸಲಿಲ್ಲ.
ಅಸ್ಮಿನ್ನೇವಾತ್ಮತೀರ್ಥೇ ನ ಪಶವಃ ಪ್ರಾಪ್ನುಯುಃ ಸುಖಮ್ |
ಅಥ ಸ್ವಕರ್ಮಣಾ ಕೇನ ವಾಣಿಜ ಪ್ರಾಪ್ನುಯಾತ್ ಸುಖಮ್ |
ಶಂಸ ಮೇ ತನ್ಮಹಾಪ್ರಾಜ್ಞ ಭೃಶಂ ವೈ ಶ್ರದ್ದಧಾಮಿ ತೇ ॥36॥
ನೀನು ಹೇಳಿದಂತೆ ಪಶುಸಮಾನರಾದ, ಅಜ್ಞಾನಿಗಳಾದ ಮನುಷ್ಯರು ಈ ಪುಣ್ಯ ಭೂಮಿಯಲ್ಲಿ ಹೇಗೆ ತಾನೆ ಆತ್ಮಯಜ್ಞದ ಕಡೆ ಪ್ರವೃತ್ತಿಯನ್ನು ಹೊಂದಿಯಾರು? ಅವರು ತಮ್ಮ ಕರ್ಮಗಳಿಂದ ಹೇಗೆ ತಾನೆ ಸುಖವನ್ನು ಹೊಂದಲು ಸಾಧ್ಯ? ಮಹಾಪ್ರಾಜ್ಞನೇ, ಈ ವಿಷಯವನ್ನು ನನಗೆ ತಿಳಿಸು. ನಿನ್ನ ವಿಷಯದಲ್ಲಿ ನನಗೆ ಶ್ರದ್ಧೆಯುಂಟಾಗಿದೆ.
ತುಲಾಧಾರಃ
ಉತ ಯಜ್ಞಾ ಉತಾಯಜ್ಞಾ ಮಖಂ ನಾರ್ಹಂತಿ ತೇ ಕ್ವಚಿತ್ |
ಆಜ್ಯೇನ ಪಯಸಾ ದಧ್ನಾ ಸತ್ಮೃತ್ಯಾಮಿಕ್ಷಯಾ ತ್ವಚಾ |
ವಾಲೈಃ ಶೃಂಗೇಣ ಪಾದೇನ ಸಂಭವತ್ಯೇವ ಗೌರ್ಮಖಮ್ ॥37॥
ಡಾಂಭಿಕರಾದ ಕೆಲವರು ಮಾಡುವ ಯಜ್ಞವು ಅನೇಕ ದೋಷಗಳಿಂದ ಕೂಡಿರುವುದರಿಂದ ಯಜ್ಞ ಎಂದು ಕರೆಸಿಕೊಳ್ಳುವುದಿಲ್ಲ. ಇವರಿಗೆ ಮಾನಸಿಕ ಯಜ್ಞವನ್ನು ಮಾಡಲು ಅರ್ಹತೆ ಇರುವುದಿಲ್ಲ. ಯಜ್ಞಕ್ಕಾಗಲಿ, ಯಜ್ಞ ಫಲಕ್ಕಾಗಲಿ ಇವರು ಅರ್ಹರಾಗಿರುವುದಿಲ್ಲ. ಶ್ರದ್ಧಾಳುವಾದವನು ಸ್ವಲ್ಪ ಬಿಸಿಯಾದ ಹಾಲಿನಲ್ಲಿ ಮೇಲನ ಮಾಡಿದ ಮೊಸರಿನಿಂದಲೇ ಹವಿರ್ದಾನ ಮಾಡಿ ಯಜ್ಞವನ್ನು ಪೂರ್ಣ ಮಾಡುತ್ತಾನೆ. ಇದರಿಂದಲೇ ಅವನ ಬದುಕು ಪೂರ್ಣತೆಯನ್ನು ಹೊಂದುತ್ತದೆ. ಅಥವಾ ಶ್ರದ್ಧಾಳುವು ಭಗವನ್ನಿಷ್ಠವಾದ ಬುದ್ಧಿಯಿಂದಲೇ ಯಾವ ಬಾಹ್ಯ ಯಜ್ಞವನ್ನೂ ಆಚರಿಸದೆ ಮರಣ ಹೊಂದಿದರೂ ಮೃತನಾದ ಬಳಿಕ ಅವನನ್ನು ಉದ್ದೇಶಿಸಿ ಮಾಡುವ ಗೋಪುಚ್ಛದಿಂದ ಪಿತೃತರ್ಪಣಗಳನ್ನು, ಗೋಶೃಂಗದಿಂದ ದೇವತಾಭಿಷೇಕವನ್ನು, ಗೋ ಪಾದಧೂಳಿಯಿಂದ ಪ್ರೋಕ್ಷಣೆಯನ್ನು ಆ ಗತಿಸಿದ ಜೀವನ ಹೆಸರಿನಲ್ಲಿ ಮಾಡಿದರೂ ಬಳಿಕ ಬ್ರಾಹ್ಮಣರನ್ನು ಪೂಜಿಸಿ ಊಟ ಮಾಡಿಸಿದರೂ ವೈಶ್ಯ ಜಾತಿಯವರಿಗೆ ಯಜ್ಞದ ಸಮಸ್ತ ಫಲವು ಲಭಿಸುತ್ತದೆ.
ಪತ್ನೀಂ ಚಾನೇನ ವಿಧಿನಾ ಪ್ರಕರೋತಿ ನಿಯೋಜಯನ್ |
ಪುರೋಡಾಶೋ ಹಿ ಸರ್ವೇಷಾಂ ಪಶೂನಾಂ ಮೇಧ್ಯ ಉಚ್ಯತೇ ॥38॥
ಹಿಂಸಾ ಯಜ್ಞವನ್ನು ಮಾಡದೆ ಆಜ್ಯಾದಿಗಳ ಮೂಲಕ ಯಜ್ಞವನ್ನು ಮಾಡುವ ವಿಧಿಯಲ್ಲಿ ಶ್ರದ್ಧೆಯೇ ಪತ್ನಿಯು, ಯಾಗವೇ ದೇವತೆಯು. ಹೀಗೆ ಮನಸ್ಸಿನಿಂದ ಭಾವಿಸಿ ಭಗವಂತನನ್ನು ಆರಾಧಿಸಿದಲ್ಲಿ ಯಜ್ಞರೂಪಿಯಾದ ಪರಮಾತ್ಮನನ್ನೇ ಹೊಂದುತ್ತಾನೆ. ಯಜ್ಞಕ್ಕೆ ಪಶುಗಳಿಗಿಂತಲೂ ಶ್ರೇಷ್ಠವಾದುದು ಅಕ್ಕಿಹಿಟ್ಟಿನಿಂದ ಮಾಡಿದ ಪುರೋಡಾಶವೆಂಬ ಹವಿಸ್ಸು ಎಂದು ಹೇಳಲ್ಪಟ್ಟಿದೆ.
ಸರ್ವಾ ನದ್ಯಃ ಸರಸ್ವತ್ಯಃ ಸರ್ವೇ ಪುಣ್ಯಾಃ ಶಿಲೋಚ್ಚಯಾಃ |
ಜಾಜಲೇ ತೀರ್ಥಮಾತ್ಮೈವ ಮಾ ಸ್ಮ ದೇಶಾತಿಥಿರ್ಭವ ॥39॥
ಎಲ್ಲ ನದಿಗಳು ಸರಸ್ವತಿ ನದಿಗಳ ರೂಪಗಳೇ ಆಗಿವೆ. ಎಲ್ಲ ಪರ್ವತಗಳು ಪುಣ್ಯ ಪ್ರದೇಶಗಳೇ ಆಗಿವೆ. ಅದರಂತೆ ಪರಮಾತ್ಮನೇ ಪವಿತ್ರ ತೀರ್ಥನೆನಿಸಿದ್ದಾನೆ. ಆದ್ದರಿಂದ ತೀರ್ಥಯಾತ್ರೆಗಾಗಿ ದೇಶಾಟನೆಯನ್ನು ಮಾಡಬೇಕಾಗಿಲ್ಲ.
ಏತಾನೀದೃಶಕಾಂಧರ್ಮಾನಾಚರನ್ನಿಹ ಜಾಜಲೇ |
ಕಾರಣೈರ್ಧರ್ಮಮನ್ವಿಚ್ಛನ್ನ ಲೋಕಾನಾಪ್ನುತೇ ಶುಭಾನ್ ॥40॥
ಯಾರು ನಾನು ಹೇಳಿದ ಅಹಿಂಸಾ ಪ್ರಧಾನವಾದ ಧರ್ಮವನ್ನು ಆಚರಿಸುತ್ತಾರೋ ಅವರು ಸಾಧಾರಣವಾದ ಅಥವಾ ಸುಲಭವಾದ ಸಲಕರಣೆಗಳನ್ನೇ ಹೊಂದಿ ಶುಭ ಲೋಕಗಳನ್ನು ಪಡೆಯುತ್ತಾರೆ. ದಿ
ಭೀಷ್ಮಃ
ಏತಾನೀದೃಶಕಾಂಧರ್ಮಾಂಸ್ತುಲಾಧಾರಃ ಪ್ರಶಂಸತಿ |
ಉಪಪತ್ತ್ಯಾ ಹಿ ಸಂಪನ್ನಾನ್ನಿತ್ಯಂ ಸದ್ಭಿರ್ನಿಷೇವಿತಾನ್ ॥41॥

ಧರ್ಮರಾಜನೇ, ತುಲಾಧಾರನು ಹೀಗೆ ಯುಕ್ತಿಬದ್ಧವಾದ, ಸಜ್ಜನರಿಂದ ಆದರಿಸಲು ಯೋಗ್ಯವಾದ ಧರ್ಮಗಳನ್ನೆಲ್ಲ, ಸಜ್ಜನರಿಂದ ಆಚರಿಸಲ್ಪಟ್ಟ ಧರ್ಮವನ್ನು ಪ್ರಶಂಸೆ ಮಾಡುತ್ತಿದ್ದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂಬತ್ತನೆಯ ಅಧ್ಯಾಯ
ಜಾಜಲಿಗೆ ಪಕ್ಷಿಯ ಉಪದೇಶ.
ತುಲಾಧಾರಃ
ಸದ್ಭಿರ್ವಾ ಯದಿ ವಾಽಸದ್ಭಿರಯಂ ಪಂಥಾಃ ಸಮಾಶ್ರಿತಃ |
ಪ್ರತ್ಯಕ್ಷಂ ಕ್ರಿಯತಾಂ ಸಾಧು ತತೋ ಜ್ಞಾಸ್ಯಸಿ ತದ್ಯಥಾ ॥1॥
ಜಾಜಲಿಯೇ, ನಾನು ಧರ್ಮಮಾರ್ಗದ ಬಗ್ಗೆ ನಿನಗೆ ತಿಳಿಸಿದ್ದೇನೆ. ನಾನು ಹೇಳಿದ ವಿಷಯದಲ್ಲಿ ಸಜ್ಜನರು ಆಶ್ರಯಿಸಿದ ಧರ್ಮ ಮಾರ್ಗ ಯಾವುದು? ಅಸಜ್ಜನರು ಆಶ್ರಯಿಸಿದ ಅಧರ್ಮ ಯಾವುದು? ಎಂಬುದನ್ನು ನೀನೇ ಚೆನ್ನಾಗಿ ಪರ್ಯಾಲೋಚಿಸು. ಸನ್ಮಾರ್ಗದ ಪ್ರಕಾರವು ಯಾವ ರೀತಿ ಇದೆ ಎಂದು ನಿನಗೆ ತೋರುತ್ತದೋ ಅದಕ್ಕನುಗುಣವಾಗಿ ಉಪಾಯವನ್ನು ಹೇಳುತ್ತೇನೆ. ಬಳಿಕ ನೀನು ಸರಿಯಾದ ಮಾರ್ಗವನ್ನು ತಿಳಿದುಕೊಳ್ಳಬಹುದು.
ಏತೇ ಶಕುಂತಾ ಬಹವಃ ಸಮಂತಾದ್ ವಿಚರಂತಿ ಹಿ |
ತವೋತ್ತಮಾಂಗೇ ಸಂಭೂತಾಃ ಶ್ಯೇನಾಶ್ಚಾನ್ಯಾಶ್ಚ ಜಾತಯಃ ॥2॥
ಅನೇಕ ಗುಬ್ಬಚ್ಚಿಗಳು ಈ ಆಕಾಶದಲ್ಲಿ ಸುತ್ತಲೂ ಹಾರಾಡುತ್ತಿವೆ. ಅನೇಕ ಜಾತಿಯ ಪಕ್ಷಿಗಳಲ್ಲಿ ನಿನ್ನ ತಲೆಯಲ್ಲಿಯೇ ಹುಟ್ಟಿ ಬೆಳೆದ ಪಕ್ಷಿಗಳೂ ಇವೆ. ಬೇರೆ ಜಾತಿಯ ಗಿಡುಗವೇ ಮೊದಲಾದ ಪಕ್ಷಿಗಳೂ ಇವೆ.
ಆಹ್ವಯೈನಾನ್ ಮಹಾಬ್ರಹ್ಮನ್ ವಿಶಮಾನಾಂಸ್ತತಸ್ತತಃ |
ಪಶ್ಯೇಮಾನ್ ಹಸ್ತಪಾದೇಷು ಶ್ಲಿಷ್ಟಾನ್ ದೇಹೇ ಚ ಸರ್ವಶಃ ॥3॥
ಮಹಾಬ್ರಾಹ್ಮಣನೇ, ಅಲ್ಲಲ್ಲಿ ಹೋಗಿ ಸೇರಿಕೊಳ್ಳಲು ಹವಣಿಸುತ್ತಿರುವ ಆ ಪಕ್ಷಿಗಳನ್ನು ನೀನು ಆಹ್ವಾನಿಸು. ಕಾಲುಗಳನ್ನು ದೇಹದಲ್ಲಿ ಅಡಗಿಸಿಕೊಂಡು ಹಾರಾಡುತ್ತಿರುವ ಆ ಪಕ್ಷಿಗಳನ್ನು ನೀನು ನೋಡು.
ಸಂಭಾವಯಂತಿ ಪಿತರಂ ತ್ವಯಾ ಸಂಭಾವಿತಾಃ ಖಗಾಃ |
ಅಸಂಶಯಂ ಪಿತಾ ಚ ತ್ವಂ ಪುತ್ರಾನಾಹ್ವಯ ಜಾಜಲೇ ॥4॥
ನಿನ್ನಿಂದ ರಕ್ಷಿಸಲ್ಪ ಆ ಪಕ್ಷಿಗಳು ನಿನ್ನನ್ನು ತಂದೆ ಎಂದೇ ಭಾವಿಸಿವೆ. ನೀನು ಆ ಪಕ್ಷಿಗಳ ತಂದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಜಾಜಲಿಯೇ, ನಿನ್ನ ಮಕ್ಕಳಾದ ಆ ಪಕ್ಷಿಗಳನ್ನು ಆಹ್ವಾನಿಸು.
ಭೀಷ್ಮಃ
ತತೋ ಜಾಜಲಿನಾ ತೇನ ಸಮಾಹೂತಾಃ ಪತತ್ರಿಣಃ |
ವಾಚಮುಚ್ಚಾರಯನ್ ದಿವ್ಯಾಂ ಧರ್ಮಸ್ಯ ವಚನಾತ್ ಕಿಲ ॥5॥
ಯುಧಿಷ್ಠಿರನೇ, ಬಳಿಕ ಜಾಜಲಿಯು ಆ ಪಕ್ಷಿಗಳನ್ನು ಆಹ್ವಾನಿಸಿದನು. ಆ ಹಕ್ಕಿಗಳೆಲ್ಲವೂ ಧರ್ಮಶಾಸ್ತ್ರಗಳಿಂದ ಸಿದ್ಧವಾದ ಮಾತುಗಳನ್ನು ಉಚ್ಚರಿಸುತ್ತಿದ್ದವು.
ಅಹಿಂಸಾದಿಕೃತಂ ಕರ್ಮ ಇಹ ಚೈವ ಪರತ್ರ ಚ |
ಶ್ರದ್ಧಾಂ ನಿಹಂತಿ ವೈ ಬ್ರಹ್ಮನ್ ಸಾ ಹತಾ ಹಂತಿ ತಂ ನರಮ್ ॥6॥
ತಾನು ಅಹಿಂಸಾದಿ ಕರ್ಮಗಳನ್ನು ಮಾಡಿದ್ದರೂ ಅಹಂಕಾರದಿಂದ ಆ ಕರ್ಮಗಳನ್ನು ಮಾಡಿದಲ್ಲಿ ಅದು ಇಹ-ಪರಲೋಕಗಳಲ್ಲಿನ ಶ್ರದ್ಧೆಯನ್ನು ನಾಶಪಡಿಸುತ್ತದೆ. ತನಗಿಂತ ಉತ್ತಮರಾದವರಲ್ಲಿ ಶ್ರದ್ಧೆಯನ್ನು, ಭಕ್ತಿಯನ್ನು ತೋರಿಸಲು ಅಹಂಕಾರಾದಿಗಳಿಂದ ಮಾಡಿದ ಕರ್ಮವು ಬಿಡುವುದಿಲ್ಲ.
ಶ್ರದ್ಧಾವೃದ್ಧಂ ವಾಙ್ಮನಸೀ ನ ಯಜ್ಞಸ್ತತ್ರಾತುಮರ್ಹತಿ |
ಅತ್ರ ಗಾಥಾ ಬ್ರಹ್ಮಗೀತಾಃ ಕೀರ್ತಯಂತಿ ಪುರಾವಿದಃ ॥7॥
ಶ್ರದ್ಧಾಲೋಪದಿಂದ ಕೆಟ್ಟು ಹೋದ ಕರ್ಮವನ್ನು ಮನಸ್ಸಾಗಲಿ, ವಾಕ್ ಆಗಲಿ ರಕ್ಷಿಸಲಾರವು. ಇದೇ ವಿಷಯವಾಗಿ ಹಿಂದೆ ಹೇಳಿದ ಬ್ರಹ್ಮಗೀತೆಯಿಂದ ಕೆಲವು ಗಾಥೆಗಳನ್ನು ಹೇಳುತ್ತಾರೆ.
ಶುಚೇರಶ್ರದ್ದಧಾನಸ್ಯ ಶ್ರದ್ದಧಾನಸ್ಯ ಚಾಶುಚೇಃ |
ದೇವಾಶ್ಚಿತ್ತಮಮನ್ಯಂತ ಸದೃಶಂ ಯಜ್ಞಕರ್ಮಣಿ ॥8॥
ಶ್ಚುಚಿತ್ವವಿದ್ದು ಶ್ರದ್ಧೆಯಿಲ್ಲದವನ ದ್ರವ್ಯಗಳು, ಶ್ರದ್ಧೆಯಿದ್ದು ಶುಚಿತ್ವವಿಲ್ಲದವನ ದ್ರವ್ಯಗಳು ಇವೆರಡು ಸಮಾನವೆಂದು ದೇವತೆಗಳು ಭಾವಿಸಿದ್ದಾರೆ. ಯಜ್ಞ ಕರ್ಮಗಳಿಗೆ ಈ ಎರಡೂ ಪ್ರತಿಬಂಧಕಗಳೇ.
ಶ್ರೋತ್ರಿಯಸ್ಯ ಕದರ್ಯಸ್ಯ ವದಾನ್ಯಸ್ಯ ಚ ವಾರ್ಧುಷೇಃ |
ಮೀಮಾಂಸಿತ್ವೋಭಯಂ ದೇವಾಃ ಸಮಮನ್ನಮಕಲ್ಪಯನ್ ॥9॥
ಶುದ್ಧನಾದ ಶ್ರೋತ್ರಿಯನ ಲೋಭದಿಂದ ಕೂಡಿದ ಅನ್ನವು, ಬಡ್ಡಿಯಿಂದ ಜೀವಿಸುವ ಉದಾರಿಯ ಅನ್ನವು ಎರಡೂ ಸಮಾನವೆಂದು ದೇವತೆಗಳು ಹೇಳಿದ್ದಾರೆ. ಈ ಎರಡು ಅನ್ನಗಳಲ್ಲಿ ವ್ಯತ್ಯಾಸವಿರುವುದಿಲ್ಲ.
ಪ್ರಜಾಪತಿಸ್ತಾನುವಾಚ ವಿಷಮಂ ಕೃತಮಿತ್ಯುತ |

ಶ್ರದ್ಧಾಪೂತಂ ವದಾನ್ಯಸ್ಯ ಹತಮಶ್ರದ್ಧಯೇತರತ್ |
ಭೋಜ್ಯಮನ್ನಂ ವದಾನ್ಯಸ್ಯ ಕದರ್ಯಸ್ಯ ನ ವಾರ್ಧುಷೇಃ ॥10॥
ಹೀಗೆ ದೇವತೆಗಳು ಹೇಳಿದಾಗ ಪ್ರಜಾಪತಿ ದೇವತೆಗಳ ಅಭಿಪ್ರಾಯವನ್ನು ನಿರಾಕರಿಸುತ್ತಾನೆ. ದೇವತೆಗಳೇ, ನೀವು ವಿಪರೀತವಾಗಿ ತಿಳಿದಿದ್ದೀರಿ ಎಂದು ಬ್ರಹ್ಮನು ಹೇಳಿದನು. ದಾತನ ಅನ್ನಕ್ಕೆ ಶ್ರದ್ಧೆಯಿಂದಲೇ ಶುದ್ಧಿ. ಕೃಪಣನ ಅನ್ನವು ಅಶ್ರದ್ಧೆಯಿಂದಲೇ ಅಶುಚಿ ಎನಿಸುತ್ತದೆ. ಬಡ್ಡಿಯಿಂದ ಜೀವಿಸುವ ಉದಾರಿಯ ಅನ್ನವು ಗ್ರಾಹ್ಯವೇ ಆಗಿದೆ. ಲೋಭಿಯ ಅನ್ನವು ಅಭೋಜ್ಯವಾಗಿದೆ. ಶ್ರದ್ಧೆ ಇಲ್ಲದವನೊಬ್ಬನೇ ದೇವತೆಗಳಿಗೆ ಹವಿಸ್ಸುಗಳನ್ನು ಕೊಡಲು ಅರ್ಹನಾಗಿರುವುದಿಲ್ಲ. ಜಿಪುಣನೂ ಶ್ರದ್ಧೆಯಿಂದಲೇ ಪದಾರ್ಥವನ್ನು ಕೊಟ್ಟರೆ ಆ ಅನ್ನವು ಸ್ವೀಕಾರಾರ್ಹವಾಗಿದೆ. ಶ್ರದ್ಧೆಯೇ ಮುಖ್ಯವಾದುದು. ಶ್ರದ್ಧೆಯಿಂದಲೇ ಪದಾರ್ಥಗಳು ಕಾಲಾಂತರದಲ್ಲಿ ಶುಚಿತ್ವವನ್ನು ಹೊಂದಬಲ್ಲವು.
ಅಶ್ರದ್ದಧಾನ ಏವೈಕೋ ದೇವಾನಾಂ ನಾರ್ಹತೇ ಹವಿಃ |
ತಸ್ಯೈವಾನ್ನಂ ನ ಭೋಕ್ತವ್ಯಮಿತಿ ಧರ್ಮವಿದೋ ವಿದುಃ ॥11॥
ಅಶ್ರದ್ಧೆಯುಳ್ಳ ಪುರುಷನ ಹವಿಸ್ಸನ್ನು ದೇವತೆಗಳು ಸ್ವೀಕರಿಸರು. ಅಂತಹ ಅಶ್ರದ್ಧೆಯುಳ್ಳ ಪುರುಷನ ಅನ್ನವನ್ನೇ ತಿನ್ನಬಾರದೆಂದು ಧರ್ಮಜ್ಞಾನಿಗಳು ಹೇಳುತ್ತಾರೆ.
ಅಶ್ರದ್ಧಾ ಪರಮಂ ಪಾಪಂ ಶ್ರದ್ಧಾ ಪಾಪಪ್ರಮೋಚನೀ |
ಜಹಾತಿ ಪಾಪಂ ಶ್ರದ್ಧಾವಾನ್ ಸರ್ಪೋ ಜೀರ್ಣಾಮಿವ ತ್ವಚಮ್ ॥12॥
ಅಶ್ರದ್ಧೆಯೇ ಕ್ರೂರವಾದ ಪಾತಕವು. ಶ್ರದ್ಧೆಯು ಸರ್ವಪಾಪ ನಿವಾರಕವು. ಸರ್ಪವು ತನ್ನ ಪೊರೆಯನ್ನು ಹೇಗೆ ಕಳಚಿಕೊಳ್ಳುತ್ತದೋ ಹಾಗೆ ಶ್ರದ್ಧಾಳುವು ತನ್ನ ಪಾಪವನ್ನು ಪರಿಹರಿಸಿಕೊಳ್ಳಬಲ್ಲನು.
ಜ್ಯಾಯಸೀ ಯಾ ಪವಿತ್ರಾಣಾಂ ನಿವೃತ್ತಿಃ ಶ್ರದ್ಧಯಾ ಸಹ |
ನಿವೃತ್ತಶೀಲದೋಷೋ ಯಃ ಶ್ರದ್ಧಾವಾನ್ ಪೂತ ಏವ ಸಃ ॥13॥
ಶ್ರದ್ಧೆಯಿಂದ ಕೂಡಿರುವ ನಿವೃತ್ತಿ ಮಾರ್ಗವು ಪವಿತ್ರವಾದ ಮಾರ್ಗಗಳಲ್ಲಿಯೂ ಪವಿತ್ರ ಎನಿಸಿದೆ. ಆಸೆ ಎಂಬ ದೋಷದಿಂದ ನಿವೃತ್ತನಾದ ಶ್ರದ್ಧಾವಂತನು ಪವಿತ್ರಾತ್ಮನೆಂದೇ ನಿರ್ಣಯವು.
ಕಿಂ ತಸ್ಯ ತಪಸಾ ಕಾರ್ಯಂ ಕಿಂ ವೃತ್ತೇನ ಕಿಮಾತ್ಮನಾ |
ಶ್ರದ್ಧಾಮಯೋಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥14॥
ತಪಸ್ಸು, ಶೀಲ, ಮನಸ್ಸಿನ ಸಂಯಮ ಇವುಗಳು ಎಲ್ಲವೂ ಇದ್ದರೂ ಶ್ರದ್ಧೆ ಇಲ್ಲದಿದ್ದಲ್ಲಿ ವ್ಯರ್ಥವು. ಶ್ರದ್ಧೆ ಉಳ್ಳವನಾಗಿದ್ದಲ್ಲಿ ಆ ಶ್ರದ್ಧಾವಂತ ಪುರುಷನು ಆ ಜೀವನ ಸ್ವಭಾವವನ್ನು ತಿಳಿಸುತ್ತದೆ. ಕಾರಣ ಚೇತನನು ಶ್ರದ್ಧಾಸ್ವರೂಪನೇ ಆಗಿದ್ದಾನೆ. ಶ್ರದ್ಧೆ ಇಲ್ಲದೆ ಮಾಡಿದ ತಪಸ್ಸು ಮುಂತಾದವುಗಳೆಲ್ಲವೂ ವ್ಯರ್ಥವೇ ಸರಿ.
ಇತಿ ಧರ್ಮಃ ಸಮಾಖ್ಯಾತಃ ಸದ್ಭಿರ್ಧರ್ಮಾರ್ಥದರ್ಶಿಭಿಃ |
ವಯಂ ಜಿಜ್ಞಾಸಮಾನಾಸ್ತತ್ರ ಸಂಪ್ರಾಪ್ತಾ ಧರ್ಮದರ್ಶನಾತ್ ॥15॥
ಹೀಗೆ ಸತ್ಪುರುಷರು ಧರ್ಮವನ್ನು ವ್ಯಾಖ್ಯಾನಿಸಿದ್ದಾರೆ. ನಾವೂ ಈ ಧರ್ಮದ ವಿಷಯದಲ್ಲಿ ಜಿಜ್ಞಾಸೆ ಮಾಡುತ್ತಿದ್ದಾಗ, ಶ್ರದ್ಧೆಯ ಸಂಬಂಧವಾದ ಈ ಧರ್ಮವನ್ನು ಧರ್ಮದರ್ಶನವುಳ್ಳ ಮುನಿಯಿಂದ ತಿಳಿದುಕೊಂಡಿದ್ದೇವೆ.
ಶ್ರದ್ಧಾಂ ಕುರು ಮಹಾಪ್ರಾಜ್ಞ ತತಃ ಪ್ರಾಪ್ಸ್ಯಸಿ ಯತ್ ಪರಮ್ |
ಕಸ್ಮಿನ್ನೇವಾನುತೀರ್ಥೇನ ಪಶವಃ ಪ್ರಾಪ್ನುಯುಃ ಸುಖಮ್ |
ಪತ್ನೀವ್ರತೇನ ವಿಧಿನಾ ಪ್ರಕರೋತಿ ನಿಯೋಜನಮ್ ॥16॥
ಶ್ರದ್ಧಾವಾನ್ ಶ್ರದ್ದಧಾನಶ್ಚ ಧರ್ಮಾಂಶ್ಚೈವೇಹ ವಾಣಿಜ |
ಸ್ವವರ್ತ್ಮನಿ ಸ್ಥಿತಶ್ಚೈವ ಗರೀಯಾನೇಷ ಜಾಜಲೇ ॥17॥
ಜಾಜಲಿಯೇ, ನೀನು ಶ್ರದ್ಧಾವಂತನಾಗು. ದೊಡ್ಡವರಲ್ಲಿ, ಪೂಜ್ಯವಾದ ವಿಷಯಗಳಲ್ಲಿ ಶ್ರದ್ಧೆಯನ್ನು ಹೊಂದು. ಆ ಶ್ರದ್ಧೆಯಿಂದಲೇ ಭಗವಂತನನ್ನು ಹೊಂದುತ್ತಿ. ಯಾವ ಆಶ್ರಮದಲ್ಲಿ ಅನುಕೂಲ ಶಾಸ್ತ್ರದಿಂದ ಪತ್ನಿವ್ರತ ವಿಧಿಯಿಂದಲೂ ಸ್ವಯಂ ಶ್ರದ್ಧೆಯುಳ್ಳವನಾಗಿ, ಧರ್ಮದಲ್ಲಿಯೂ ಶ್ರದ್ಧೆಯುಳ್ಳವನಾಗಿ ಸುಖವನ್ನು, ಪಶು ಸಮೃದ್ಧಿಯನ್ನು ಹೇಗೆ ಹೊಂದುತ್ತಾರೆ ಎಂದರೆ ಜಾಜಲಿಯೇ, ಶ್ರದ್ಧಾವಂತನು ಶ್ರದ್ಧೆಯನ್ನೇ ನಿಷ್ಠೆಯಿಂದ ಧರಿಸಿದವನು ಆಗಿರುತ್ತಾನೆ. ಶ್ರದ್ಧೆ, ಧರ್ಮಗಳು ಒಂದಕ್ಕೊಂದು ಪೂರಕವಾಗಿವೆ. ಯಾವನು ಶ್ರದ್ಧಾಪೂರ್ವಕನಾಗಿ ಸ್ವಧರ್ಮದಲ್ಲಿ ನಿರತನಾಗಿರುತ್ತಾನೋ ಅವನು ಎಲ್ಲರಿಗಿಂತ ಶ್ರೇಷ್ಠನೆನಿಸುತ್ತಾನೆ.
ಏವಂ ಬಹುಮತಾರ್ಥಂ ಚ ತುಲಾಧಾರೇಣ ಭಾಷಿತಮ್ |
ಸಮ್ಯಕ್ಚೈವಮುಪಾಲಬ್ಧೋ ಧರ್ಮಶ್ಚೋಕ್ತಃ ಸನಾತನಃ ॥18॥
ಹೀಗೆ ಬಹುವಿಧವಾದ ಅರ್ಥಗಳಿಂದ ತುಂಬಿದ, ತುಲಾಧಾರನಿಂದ ಹೇಳಲ್ಪಟ್ಟ ಮಾತುಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡ ಜಾಜಲಿಯು ಆ ಧರ್ಮವನ್ನು ಸ್ವೀಕರಿಸಿದನು. ಇಂತಹ ಸನಾತನವಾದ ಧರ್ಮವು ತುಲಾಧಾರನಿಂದ ಹೇಳಲ್ಪಟ್ಟಿತು.
ತಸ್ಯ ವಿಖ್ಯಾತವೀರ್ಯಸ್ಯ ಶ್ರುತ್ವಾ ವಾಕ್ಯಾನಿ ಸ ದ್ವಿಜಃ |
ತುಲಾಧಾರಸ್ಯ ಕೌಂತೇಯ ಶಾಂತಿಮೇವಾನ್ವಪದ್ಯತ ॥19॥
ಆ ಬ್ರಾಹ್ಮಣನು ವಿಖ್ಯಾತನಾದ, ಪ್ರಭಾವಶಾಲಿಯಾದ ತುಲಾಧಾರನ ಮಾತುಗಳನ್ನು ಕೇಳಿಸಿಕೊಂಡು ತನ್ನ ಮನಸ್ಸಿನಲ್ಲಿ ಶಾಂತಿಯನ್ನೇ ಹೊಂದಿದನು.
ತತೋಽಚಿರೇಣ ಕಾಲೇನ ತುಲಾಧಾರಃ ಸ ಏವ ಚ |
ದಿವಂ ಗತ್ವಾ ಮಹಾಪ್ರಾಜ್ಞೌ ವಿಹರೇತಾಂ ಯಥಾಸುಖಮ್ |
ಸ್ವಂ ಸ್ವಂ ಸ್ಥಾನಮುಪಾಗಮ್ಯ ಸ್ವಕರ್ಮಫಲನಿರ್ಜಿತಮ್ ॥20॥

ಬಳಿಕ ತುಲಾಧಾರನು ಸ್ವಲ್ಪ ಸಮಯದಲ್ಲಿಯೇ ಸ್ವರ್ಗಕ್ಕೆ ಹೋದನು. ಅದೇ ಸ್ಥಳವನ್ನು ಜಾಜಲಿಯೂ ಹೊಂದಿದನು. ಇಬ್ಬರೂ ಮಹಾಪ್ರಾಜ್ಞರಾಗಿ ಸುಖವನ್ನು ಹೊಂದಿದರು. ತಮ್ಮ ತಮ್ಮ ಕರ್ಮಫಲದಿಂದ ಸಂಪಾದಿಸಲ್ಪಟ್ಟ ತಮ್ಮ ತಮ್ಮ ಸ್ಥಾನವನ್ನು ಹೊಂದಿ ಸುಖವನ್ನು ಪಡೆದರು.
ಸಮಾನಾಂ ಶ್ರದ್ದಧಾನಾನಾಂ ಸಂಯತಾನಾಂ ಸುಚೇತಸಾಮ್ |
ಕುರ್ವತಾಂ ಯಜ್ಞ ಇತ್ಯೇವ ನ ಯಜ್ಞೋ ಜಾತು ನೇಷ್ಯತೇ ॥21॥
ಯಾರಿಗೆ ಲಾಭಾಲಾಭಗಳು ಸಮಾನವಾಗಿದೆಯೋ, ಯಾರು ಶ್ರದ್ಧಾಳುಗಳಾಗಿದ್ದರೋ, ಜಿತೇಂದ್ರಿಯರಾಗಿದ್ದಾರೋ, ಶುದ್ಧಚಿತ್ತರಾಗಿದ್ದಾರೋ, ಯಾಗವನ್ನು ಕೀರ್ತಿಯ ಆಸೆಯಿಲ್ಲದ ಕರ್ತವ್ಯ ಎಂಬ ದೃಷ್ಟಿಯಿಂದ ಮಾಡುತ್ತಾರೋ, ಶ್ರದ್ಧೆಯ ಕಾರಣದಿಂದಲೇ ಮಾಡಿದ ಯಜ್ಞವು ಎಂದೂ ನಿಷ್ಫಲವಾಗುವುದಿಲ್ಲ.
ಶ್ರದ್ಧಾ ವೈ ಸಾತ್ತಿತ್ವಕೀ ದೇವೀ ಸೂರ್ಯಸ್ಯ ದುಹಿತಾ ನೃಪ |
ಸಾವಿತ್ರೀ ಪ್ರಸವಿತ್ರೀ ಚ ಜೀವವಿಶ್ವಾಸಿನೀ ತಥಾ ॥22॥
ಶ್ರದ್ಧೆಯು ಸಾತ್ತಿತ್ವಕಿ ಎನಿಸಿದ್ದಾಳೆ. ಸೂರ್ಯನ ಮಗಳಾಗಿದ್ದಾಳೆ. ಸಾವಿತ್ರೀ, ಪ್ರಸವಿತ್ರೀ, ಜೀವವಿಶ್ವಾಸಿನಿ ಎಂದು ಶ್ರದ್ಧೆಯನ್ನು ಕರೆಯುತ್ತಾರೆ.
ವಾಗ್ವೃದ್ಧಂ ತ್ರಾಯತೇ ಶ್ರದ್ಧಾ ಮನೋವೃದ್ಧಂ ಚ ಭಾರತ |
ಯಥೌಪಮ್ಯೋಪದೇಶೇನ ಕಿಂ ಭೂಯಃ ಶ್ರೋತುಮಿಚ್ಛಸಿ ॥23॥
ಮಾತಿನ ಉಚ್ಚಾರಣೆಯಲ್ಲಿ ತಪ್ಪಾದದ್ದನ್ನು, ವಿದ್ಯೆಯಲ್ಲಿ ತಪ್ಪಾದದ್ದನ್ನು, ಮನಸ್ಸಿನಲ್ಲಿ ತಪ್ಪಾದದ್ದನ್ನು ಶ್ರದ್ಧೆಯು ಸರಿ ಮಾಡುತ್ತದೆ. ಈ ಎಲ್ಲ ದೋಷಗಳನ್ನು ಪರಿಹರಿಸುವುದು ಭಗವದ್ಭಕ್ತಿ ಎಂಬ ಶ್ರದ್ಧೆಯೇ ಆಗಿದೆ. ಧರ್ಮರಾಜನೇ, ನಿನಗೆ ತುಲಾಧಾರನು ಮಾಡಿದ ಉಪದೇಶವನ್ನು ದೃಷ್ಟಾಂತ ರೂಪವಾಗಿ ಹೇಳಿದ್ದೇನೆ. ನಿನ್ನ ಪ್ರಶ್ನೆಗಳಿಗೆ ಉತ್ತರಿಸಿದ್ದೇನೆ. ಪುನಃ ನನ್ನಿಂದ ಬೇರೆ ಯಾವ ವಿಷಯವನ್ನು ಕೇಳಲು ಬಯಸುತ್ತಿ?
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ತೊಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
॥ ತುಲಾಧಾರಜಾಜಲಿ ಸಂವಾದಃ ಸಮಾಪ್ತಃ ॥
* * * * *
ನೂರನೆಯ ಅಧ್ಯಾಯ
ವಿಚಖ್ನು ರಾಜನಿಂದ ಅಹಿಂಸಾಧರ್ಮದ ಪ್ರಶಂಸೆ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪ್ರಜಾನಾಮನುಕಂಪಾರ್ಥಂ ಗೀತಂ ರಾಜ್ಞಾ ವಿಚಖ್ನುನಾ ॥1॥
ಯುಧಿಷ್ಠಿರನೇ, ಪ್ರಾಣಿದಯಾಪರನಾಗಿರಬೇಕು ಎಂಬ ವಿಷಯದಲ್ಲಿ ವಿಚಖ್ನು ರಾಜನು ಪ್ರಜೆಗಳ ಮೇಲಿನ ಅನುಕಂಪದಿಂದ ಹೇಳಿದ, ಪುರಾತನ ಇತಿಹಾಸ ರೂಪವಾದ ಗೀತೆಯನ್ನು ವಿದ್ವಾಂಸರು ಉದಾಹರಿಸುತ್ತಾರೆ. ಅದನ್ನೇ ನಿನಗೆ ಹೇಳುತ್ತೇನೆ.
ಛಿನ್ನಸ್ಥೂಣಂ ವೃಷಂ ದೃಷ್ಟ್ವಾ ವಿರಾವಂ ಚ ಗವಾಂ ಭೃಶಮ್ |
ಗೋಗ್ರಹೇ ಯಜ್ಞವಾಟಸ್ಯ ಪ್ರೇಕ್ಷಮಾಣಃ ಸ ಪಾರ್ಥಿವಃ ॥2॥
ಸ್ವಸ್ತಿ ಗೋಭ್ಯೋಽಸ್ತು ಲೋಕೇಷು ತತೋ ನಿರ್ವಚನಂ ಕೃತಮ್ |
ಹಿಂಸಾಯಾಂ ಹಿ ಪ್ರವೃತ್ತಾಯಾಮಾಶೀರೇಷಾನುಕಲ್ಪಿತಾ ॥3॥
ಗವಾಲಂಬನ ಯಜ್ಞದ ಸಮಯದಲ್ಲಿ ಕತ್ತರಿಸಲ್ಪಟ್ಟ ಶೃಂಗಗಳುಳ್ಳ ಹೋರಿಯನ್ನು ನೋಡಿ, ಎಲ್ಲ ಯಜ್ಞಶಾಲೆಯಲ್ಲಿದ್ದ ಹಸುಗಳು ಜೋರಾಗಿ ವಿಲಪಿಸುತ್ತಿದ್ದುದನ್ನು ವಿಚಖ್ನು ಎಂಬ ರಾಜನು ಒಮ್ಮೆ ನೋಡಿದನು. ಆ ಯಜ್ಞವಾಟದಲ್ಲಿ ಗೋವುಗಳೆಲ್ಲವೂ ಕಿರುಚುತ್ತಿದ್ದುದನ್ನು ನೋಡಿದ ರಾಜನು ಲೋಕದಲ್ಲಿರುವ ಗೋವುಗಳಿಗೆಲ್ಲ ಮಂಗಳವಾಗಲಿ ಎಂದು ಕೂಗಿ ಹೇಳಿದನು. ಈ ವಿಚಖ್ನು ಎಂಬ ರಾಜನ ಮಾತು ಹಿಂಸೆಯಲ್ಲಿ ಪ್ರವೃತ್ತಿಯನ್ನು ಹೊಂದುವವರಿಗೆಲ್ಲ ಮಾರ್ಗದರ್ಶನ ಮಾಡುವ ಮಾತಾಗಿ ಪ್ರಸಿದ್ಧಿ ಹೊಂದಿತು.
ಅವ್ಯವಸ್ಥಿತಮರ್ಯಾದೈರ್ವಿಮೂಢೈರ್ನಾಸ್ತಿಕೈರ್ನರೈಃ |
ಸಂಶಯಾತ್ಮಭಿರವ್ಯಕ್ತೈರ್ಹಿಂಸಾ ಸಮನುಕೀರ್ತಿತಾ ॥4॥
ಯಾರು ಧರ್ಮಮರ್ಯಾದೆಯನ್ನು ಮೀರಿ ಹೋಗುತ್ತಾರೋ ಅಂತಹ ಮೂರ್ಖರು, ನಾಸ್ತಿಕರು, ಸಂಶಯದಿಂದ ಕೂಡಿದ ಮನಸ್ಸುಳ್ಳವರು, ಅಪ್ರಸಿದ್ಧರು ಅಂತಹವರು ಮಾತ್ರವೇ ಹಿಂಸೆಯನ್ನು ಸಮರ್ಥಿಸುತ್ತಾರೆ.
ಸರ್ವಕರ್ಮಸ್ವಹಿಂಸಾ ಹಿ ಧರ್ಮಾತ್ಮಾ ಮನುರಬ್ರವೀತ್ |
ಕಾಮರಾಗಾದ್ ವಿಹಿಂಸಂತಿ ಬಹಿರ್ವೇದ್ಯಾಂ ಪಶೂನ್ನರಾಃ ॥5॥
ಧರ್ಮಾತ್ಮನಾದ ಮನುವು ಎಲ್ಲ ಕರ್ಮಗಳಲ್ಲಿಯೂ ಅಹಿಂಸೆಯನ್ನೇ ಪ್ರತಿಪಾದಿಸಿದ್ದಾನೆ. ಮನುಷ್ಯರು ಕಾಮರಾಗಗಳಿಗೆ ತುತ್ತಾಗಿ, ತಮ್ಮ ಆಸೆಗಳನ್ನು ಪೂರೈಸಿಕೊಳ್ಳಲು ಯಜ್ಞದ ಬಹಿರ್ವೇದಿಗಳಲ್ಲಿ ಪಶುಗಳನ್ನು ಹಿಂಸಿಸುತ್ತಾರೆ.
ತಸ್ಮಾತ್ ಪ್ರಮಾಣತಃ ಕಾರ್ಯೋ ಧರ್ಮಃ ಸೂಕ್ಷ್ಮೋ ವಿಜಾನತಾ |
ಅಹಿಂಸೈವ ಹಿ ಸರ್ವೇಭ್ಯೋ ಧರ್ಮೇಭ್ಯೋ ಜ್ಯಾಯಸೀ ಮತಾ ॥6॥
ಆದ್ದರಿಂದ ವೈದಿಕ ಪ್ರಮಾಣಗಳಿಂದ ಧರ್ಮಸೂಕ್ಷ್ಮವನ್ನು ಚೆನ್ನಾಗಿ ತಿಳಿದು ನಿರ್ಣಯಿಸಬೇಕು. ಸಮಸ್ತ ಧರ್ಮಗಳಿಗಿಂತಲೂ

ಶ್ರೇಷ್ಠವಾದುದು ಅಹಿಂಸಾ ಧರ್ಮವೇ ಎಂಬುದು ನಿರ್ಣಯವಾಗಿದೆ.
ಉಪೋಷ್ಯ ಸಂಶ್ರಿತೋ ಭೂತ್ವಾ ಹಿತ್ವಾ ವೇದಕೃತಾಂ ಶುಚಿಃ |
ಆಚಾರ ಇತ್ಯನಾಚಾರಾಃ ಕೃಪಣಾಃ ಫಲಹೇತವಃ ॥7॥
ಕೆಲವರು ಉಪವಾಸದಲ್ಲಿ ನಿಯಮ, ವ್ರತಾನುಷ್ಠಾನಗಳಿಂದ ಇದ್ದು, ವೇದದಲ್ಲಿ ಹೇಳಿದ ಸೂಕ್ಷ್ಮಾರ್ಥವನ್ನು ತೊರೆದು, ಶುಚಿಯಾದ ಆಚಾರವೇ ಇದೆ ಎಂದು ತಿಳಿದು ಅನಾಚಾರಿಗಳಾಗಿ, ಕಾಮ್ಯಫಲಗಳನ್ನು ಬಯಸುವವರಾಗಿ ಕೃಪಣ ಬುದ್ಧಿಯಿಂದ ಪ್ರವರ್ತಿಸುತ್ತಾರೆ.
ಯದಿ ಛಿಂದಂತಿ ವೃಕ್ಷಾಂಶ್ಚ ಯೂಪಾಂಶ್ಚೋದ್ದಿಶ್ಯ ಮಾನವಾಃ |
ವೃಥಾ ಮಾಂಸಾನಿ ಖಾದಂತಿ ನೈಷ ಧರ್ಮಃ ಪ್ರಶಂಸ್ಯತೇ ॥8॥
ಮನುಷ್ಯರು ಹೆಸರಿಗೆ ಯಜ್ಞದ ಯೂಪ ಎಂದು ಹೇಳಿಕೊಂಡು ವೃಕ್ಷಗಳನ್ನು ಯಜ್ಞದ ಯೂಪಕ್ಕಾಗಿ ಎಂದು ಹೇಳುತ್ತಾ ತುಂಡರಿಸುತ್ತಾರೆ. ವ್ಯರ್ಥವಾಗಿ ಪಶುವಧೆಗಳನ್ನು ಮಾಡಿ ಮಾಂಸವನ್ನು ತಿನ್ನುತ್ತಾರೆ. ಈ ಧರ್ಮವು ಯಾವತ್ತೂ ಪ್ರಶಸ್ತವಾದುದಲ್ಲ.
ಮಾಂಸಂ ಮಧು ಸುರಾ ಮತ್ಸ್ಯಾ ಆಸವಂ ಕೃಸರೋದನಮ್ |
ಧೂರ್ತೈಃ ಪ್ರವರ್ತಿತಂ ಹ್ಯೇತನ್ನೈತದ್ವೇದೇಷು ಕಲ್ಪಿತಮ್ ॥9॥
ಮಾಂಸ, ಮಧು, ಸುರೆ, ಮೀನು, ಮದ್ಯ, ಎಳ್ಳನ್ನ, (ಸೂಪ, ತಿಲ, ಹೆಸರುಬೇಳೆ ಮೊದಲಾದವುಗಳಿಂದ ಕೂಡಿದ ಅನ್ನಕ್ಕೆ ಕೃಸರೋದನ ಎಂದು ಹೆಸರು). ಇಂತಹ ಪದಾರ್ಥಗಳಿಂದ ಧೂರ್ತರಾದವರು ಯಜ್ಞದ ಸಂಬಾರಗಳೆಂದು ಸಿದ್ಧತೆಗಳನ್ನು ಮಾಡಿಕೊಂಡು ಬಳಿಕ ಅದನ್ನು ಸೇವಿಸುತ್ತಾರೆ. ಆದರೆ ವೇದಗಳಲ್ಲಿ ಇವುಗಳನ್ನು ವಿಧಿಸಿರುವುದಿಲ್ಲ. ಇದು ಅವರ ಕಲ್ಪನೆ ಮಾತ್ರವಾಗಿದೆ.
ಕಾಮಾನ್ಮೋಹಾಚ್ಚ ಲೋಭಾಚ್ಚ ಲೌಲ್ಯಮೇತತ್ ಪ್ರವರ್ತಿತಮ್ |
ವಿಷ್ಣುಮೇವಾಭಿಜಾನಂತಿ ಸರ್ವಯಜ್ಞೇಷು ಬ್ರಾಹ್ಮಣಾಃ |
ಪಾಯಸೈಃ ಸುಮನೋಭಿಶ್ಚ ತಸ್ಯಾಪಿ ಯಜನಂ ಸ್ಮೃತಮ್ ॥10॥
ಧೂರ್ತರಾದವರು ಕಾಮ, ಮೋಹ, ಲೋಭ, ಚಾಪಲ್ಯಗಳಿಗೆ ಸಿಲುಕಿ ಇಂತಹ ನಿಷಿದ್ಧವಾದ ಪದಾರ್ಥಗಳನ್ನು ಸೇವಿಸುತ್ತಾರೆ. ಬ್ರಾಹ್ಮಣರು ಎಲ್ಲ ಯಜ್ಞಗಳಲ್ಲಿಯೂ ವಿಷ್ಣುವನ್ನೇ ಪರದೈವವೆಂದು ಆರಾಧಿಸುತ್ತಾರೆ. ಪಾಯಸಗಳಿಂದಲೂ, ಮನೋಹರವಾದ ಪುಷ್ಪಗಳಿಂದಲೂ ಭಗವಂತನನ್ನು ಪೂಜಿಸಬೇಕು ಎಂದು ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿದೆ.
ಯಜ್ಞಯಾಶ್ಚೈವ ಯೇ ವೃಕ್ಷಾ ವೇದೇಷು ಪರಿಕಲ್ಪಿತಾಃ |
ಯಚ್ಚಾಪಿ ಕಿಂಚಿತ್ ಕರ್ತವ್ಯಮನ್ಯಚ್ಚೋಕ್ಷೈಃ ಸುಸಂಸ್ಕೃತಮ್ |
ಮಹಾಸತ್ತ್ವೈಃ ಶುದ್ಧಭಾವೈಃ ಸರ್ವಂ ದೇವಾರ್ಹಮೇವ ತತ್ ॥11॥
ಯಜ್ಞಕ್ಕೆ ಸಂಬಂಧಿಸಿದ, ವೇದವಿಹಿತವಾದ ಯಾವ ವೃಕ್ಷಗಳು ಇದ್ದಾವೆಯೋ ಅವುಗಳನ್ನು ಯಜ್ಞಕಾರ್ಯದಲ್ಲಿ ಉಪಯೋಗಿಸಬೇಕು. ಅದರ ಜೊತೆಗೆ ಬೇರೆ ಏನನ್ನೂ ಹೋಮದ್ರವ್ಯವನ್ನಾಗಿ ಉಪಯೋಗಿಸುವುದಿದ್ದಲ್ಲಿಯೂ ಭೂರ್ಭುವಃ ಸ್ವಃ ಎಂಬ ಮಂತ್ರದಿಂದ ಪ್ರೋಕ್ಷಿಸಿ, ಆ ವಸ್ತುವನ್ನು ಪವಿತ್ರವನ್ನಾಗಿ ಮಾಡಿಕೊಂಡು, ಸಾತ್ವಿಕನಾದ ವ್ಯಕ್ತಿಯು ಶುದ್ಧವಾದ ಭಾವದಿಂದ ಎಲ್ಲವೂ ದೇವರ ಪೂಜೆಗೆ ಯೋಗ್ಯವಾದುದೆಂದು ಸಮರ್ಪಿಸಬೇಕು.
ಯುಧಿಷ್ಠಿರಃ
ಶರೀರಮಾಪದಶ್ಚಾಪಿ ವಿವದಂತಿ ಅಹಿಂಸತಃ |
ಕಥಂ ಯಾತ್ರಾ ಶರೀರಸ್ಯ ನಿರಾರಂಭಸ್ಯ ಸೇತ್ಸ್ಯತಿ ॥12॥
ಪಿತಾಮಹನೇ, ಹಿಂಸೆ ಮಾಡದಿರುವ ಪುರುಷನ ಶರೀರವನ್ನು ಆಪತ್ತುಗಳು, ಪರಸ್ಪರ ವಿವಾದ ಮಾಡುತ್ತವೆ. ಆಪತ್ತುಗಳಿಗೆ ಬರಬೇಡಿರಿ ಎಂದು ಶರೀರವು ಹೇಳುತ್ತದೆ. ಕ್ಷುಧಾದಿ ಆಪತ್ತುಗಳು ಬರುತ್ತೇವೆಂದು ಹೇಳುತ್ತವೆ. ಪ್ರವೃತ್ತಿಯೇ ಇಲ್ಲದೆ ಶರೀರ ಯಾತ್ರೆಯು ಸಿದ್ಧಿಸುವುದು ಹೇಗೆ? ಶರೀರವು ಮುಂದುವರೆಯ- ಬೇಕಾದರೆ ಅದಕ್ಕೆ ಬೇಕಾದ ಆಹಾರಕ್ಕೆ ಒಂದು ವೃತ್ತಿಯನ್ನು ಕಲ್ಪಿಸಿಕೊಳ್ಳಲೇಬೇಕಲ್ಲವೆ?
ಭೀಷ್ಮಃ
ಯಥಾ ಶರೀರಂ ನ ಗ್ಲಾಯೇನ್ನೇಯಾನ್ಮೃತ್ಯುವಶಂ ಯಥಾ |
ತಥಾ ಕರ್ಮಸು ವರ್ತೇತ ಸಮರ್ಥೋ ಧರ್ಮಮಾಚರೇತ್ ॥13॥
ಧರ್ಮಪುತ್ರನೇ, ಶರೀರವನ್ನು ಪೀಡಿಸದೆ ಅಧರ್ಮವನ್ನು ಮಾಡಿ ಮೃತ್ಯುವಿಗೂ ಈಡಾಗದೆ ಇರುವಂತೆ ಯೋಗ್ಯವಾದ ಕರ್ಮಗಳನ್ನು ಆಚರಿಸಬೇಕು. ಯೋಗ್ಯವಾದ ಧರ್ಮವನ್ನು ಆಚರಿಸುವವನೇ ಸಮರ್ಥನು ಎನಿಸುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ವಿಚಖ್ನುಗೀತಾಸು ಶತತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂದನೆಯ ಅಧ್ಯಾಯ
ಭೀಷ್ಮರಿಂದ ಯುಧಿಷ್ಠಿರನಿಗೆ ಚಿರಕಾರಿ ಉಪಾಖ್ಯಾನ ವರ್ಣನೆ.
ಯುಧಿಷ್ಠಿರಃ
ಕಥಂ ಕಾರ್ಯಂ ಪರೀಕ್ಷೇತ ಶೀಘ್ರಂ ವಾಥ ಚಿರೇಣ ವಾ |
ಸರ್ವಥಾ ಕಾರ್ಯದುರ್ಗೇऽಸ್ಮಿನ್ ಭವಾನ್ನಃ ಪರಮೋ ಗುರುಃ ॥1॥
ಪಿತಾಮಹನೇ, ಯಾವುದಾದರೊಂದು ಕಾರ್ಯವನ್ನು ಮಾಡಲೇಬೇಕು ಎಂದು ಇಕ್ಕಟ್ಟಿಗೆ ಸಿಲುಕಿದಾಗ ಆ ಕಾರ್ಯವನ್ನು ಹೇಗೆ ಪರೀಕ್ಷಿಸಬೇಕು? ಶೀಘ್ರವಾಗಿ ಆ ಕಾರ್ಯವನ್ನು ಮಾಡಬೇಕೊ? ವಿಳಂಬ ಮಾಡಬೇಕೊ? ಎಂಬುದನ್ನು ತಿಳಿಸು. ನೀನೇ ನಮಗೆ

ಪರಮಗುರುವಾಗಿರುವಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಚಿರಕಾರೇಸ್ತು ಯತ್ ಪೂರ್ವಂ ವೃತ್ತಮಾಂಗಿರಸೇ ಕುಲೇ ॥2॥
ಕುಮಾರನೇ, ಇದೇ ವಿಷಯದಲ್ಲಿ ಆಂಗಿರಸ ಕುಲದಲ್ಲಿ ಹುಟ್ಟಿದ ಚಿರಕಾರಿ ಎಂಬುವವನ ಉಪಾಖ್ಯಾನವನ್ನು ಪ್ರಾಚೀನರು ಉಪದೇಶಿಸುತ್ತಾರೆ, ಕೇಳು.
ಚಿರಕಾರಿಕ ಭದ್ರಂ ತೇ ಭದ್ರಂ ತೇ ಚಿರಕಾರಿಕ |
ಚಿರಕಾರೀ ಹಿ ಮೇಧಾವೀ ನಾಪರಾಧ್ಯತಿ ಕರ್ಮಸು ॥3॥
ಚಿರಕಾರಿಯೇ, ನಿನಗೆ ಮಂಗಳವಾಗಲಿ. ಚಿರಕಾರಿಯೇ, ನಿನಗೆ ಶುಭವಾಗಲಿ. ಚಿರಕಾರಿಯು ತುಂಬಾ ಜಾಣನು. ಅವನು ಯಾವ ಕಾರ್ಯಗಳಲ್ಲಿಯೂ ಅಪರಾಧವನ್ನು ಎಸಗುವುದಿಲ್ಲ.
ಚಿರಕಾರೀ ಮಹಾಪ್ರಾಜ್ಞೋ ಗೌತಮಸ್ಯಾಭವತ್ ಸುತಃ |
ಚಿರಂ ಹಿ ಸರ್ವಕಾರ್ಯಾಣಿ ಸಮೇಕ್ಷ್ಯಾವಾನ್ ಪ್ರಪದ್ಯತೇ ॥4॥
ಚಿರಕಾರಿಯು ಗೌತಮರ ಮಹಾಜಾಣನಾದ ಮಗನಾಗಿದ್ದನು. ಎಲ್ಲಾ ಕಾರ್ಯಗಳನ್ನು ಕಾರ್ಯದ ಪರಿಣಾಮಗಳನ್ನು ವಿಮರ್ಶಿಸಿದ ಬಳಿಕವೇ, ಬಹಳ ಸಮಯದ ಬಳಿಕ ಯೋಗ್ಯವಾದ ಕರ್ಮಗಳನ್ನು ಮಾಡುತ್ತಿದ್ದನು.
ಚಿರಂ ಸಂಚಿಂತಯನ್ನರ್ಥಾಂಶ್ಚಿರಂ ಜಾಗ್ರಚ್ಚಿರಂ ಸ್ವಪನ್ |
ಚಿರಕಾರ್ಯಾಭಿಸಂಪತ್ತೇಶ್ಚಿರಕಾರೀ ತಥೋಚ್ಯತೇ ॥5॥
ಅವನು ಯಾವುದೇ ವಿಷಯವನ್ನಾಗಲಿ ಬಹಳ ಕಾಲ ವಿಚಾರ ಮಾಡುತ್ತಿದ್ದನು. ಬಹಳ ಕಾಲ ಎಚ್ಚರವಾಗಿರುತ್ತಿದ್ದನು. ಮಲಗಿದನೆಂದರೆ ಬಹಳ ಕಾಲವೇ ನಿದ್ರಿಸುತ್ತಿದ್ದನು. ಎಲ್ಲಾ ಕಾರ್ಯಗಳನ್ನು ನಿಧಾನವಾಗಿಯೇ ಪೂರ್ಣಗೊಳಿಸುವ ಕಾರಣದಿಂದ ಎಲ್ಲರೂ ಅವನನ್ನು ಚಿರಕಾರಿ ಎಂದೇ ಕರೆಯುತ್ತಿದ್ದರು.
ಅಲಸಗ್ರಹಣಂ ಪ್ರಾಪ್ತೋ ದುರ್ಮೇಧಾವೀ ತಥೋಚ್ಯತೇ |
ಬುದ್ಧಿಲಾಘವಯುಕ್ತೇನ ಜನೇನಾದೀರ್ಘದರ್ಶಿನಾ ॥6॥
ಅಲ್ಪಬುದ್ಧಿಯುಳ್ಳವರು, ಮುಂದಾಗುವುದನ್ನು ಯೋಚಿಸಲು ಸಾಮರ್ಥ್ಯ ಇಲ್ಲದಿರುವ ಅಜ್ಞಜನರು ಚಿರಕಾರಿಯನ್ನು ದಡ್ಡನೆಂದು, ದುರ್ಬುದ್ಧಿಯವನೆಂದು ವಿಚಾರ ಮಾಡದೆ ಹೇಳುತ್ತಿದ್ದರು.
ವ್ಯಭಿಚಾರೇ ತು ಕಸ್ಮಿಂಶ್ಚಿದ್ ವ್ಯತಿಕ್ರಮ್ಯಾಪರಾನ್ ಸುತಾನ್ |
ಪಿತ್ರೋಕ್ತಃ ಕುಪಿತೇನಾಥ ಜಹೀಮಾಂ ಜನನೀಮಿತಿ ॥7॥
ಒಂದು ಬಾರಿ ಅವನ ತಾಯಿಯಾದ ಅಹಲ್ಯೆಯ ಮೇಲೆ ವ್ಯಭಿಚಾರದ ದೋಷವು ಆರೋಪಿತವಾಯಿತು. ಆಗ ಚಿರಕಾರಿಯ ತಂದೆಯಾದ ಗೌತಮನು ಪತ್ನಿಯ ಮೇಲೆ ಕೋಪಗೊಂಡು, ಇತರ ಮಕ್ಕಳನ್ನು ಬಿಟ್ಟು ಚಿರಕಾರಿಯನ್ನು ಮಾತ್ರ ಕರೆದು ಮಗನೇ, ಈಗಲೇ ನಿನ್ನ ತಾಯಿಯನ್ನು ಕೊಂದುಬಿಡು ಎಂದು ಹೇಳಿದನು.
ವ್ಯಾಖ್ಯಾನ ವಿಶೇಷ ಇಂದ್ರನು ಬಂದು ಅಹಲ್ಯೆಯ ಸಂಗ ಮಾಡಲು ಗೌತಮರು ಅಹಲ್ಯೆಗೆ ಶಿಲೆಯಾಗು ಎಂದು ಶಾಪಕೊಟ್ಟ ಕಥೆಯನ್ನು ನಾವು ಕೇಳಿದ್ದೇವೆ. ಆದರೆ ಗೌತಮರು ಮಗನನ್ನು ಕರೆದು ತಾಯಿಯ ತಲೆಯನ್ನು ತುಂಡರಿಸು ಎಂದು ಹೇಳಿದ ಕಥೆಯು ಮಹಾಭಾರತದಲ್ಲಿದೆ. ಇದಕ್ಕೆ ವಾದಿರಾಜ ಗುರುಸಾರ್ವಭೌಮರು ಹೀಗೆ ನಿರ್ಣಯವನ್ನು ಕೊಡುತ್ತಾರೆ. ಒಂದು ಬಾರಿ ಇಂದ್ರನು ಆಗಮಿಸಿದಾಗ ಗೌತಮರು ಮಗನನ್ನು ಕರೆದು ತಾಯಿಯ ಶಿರಚ್ಛೇದನ ಮಾಡಲು ಹೇಳಿದರು. ಮತ್ತೊಂದು ಬಾರಿ ಇಂದ್ರನು ಆಗಮಿಸಿ ಅಹಲ್ಯೆಯನ್ನು ಸ್ಪರ್ಶಿಸಿದಾಗ ಅವಳಿಗೆ ಶಿಲೆಯಾಗು ಎಂದು ಶಾಪವನ್ನು ಕೊಟ್ಟರು. ಹೀಗೆ ಎರಡು ಕಥೆಯನ್ನು ಪ್ರಮಾಣವೆಂದು ಎರಡು ಬಾರಿ ನಡೆದ ಕಥೆಗಳೆಂದು ತಿಳಿಯಬೇಕು ಎಂದು ನಿರ್ಣಯಿಸಿದ್ದಾರೆ.
ಸ ತಥೇತಿ ಚಿರೇಣೋಕತತ್ವ ಸ್ವಭಾವಾಚ್ಚಿರಕಾರಿಕಃ |
ವಿಮೃಶ್ಯ ಚಿರಕಾರಿತ್ವಾಚ್ಚಿಂತಯಾಮಾಸ ವೈ ಚಿರಮ್ ॥8॥
ತಂದೆಯು ಹೀಗೆ ಹೇಳಿದ ಕೂಡಲೇ ಚಿರಕಾರಿಯು ತುಂಬಾ ಹೊತ್ತು ವಿಮರ್ಶೆ ಮಾಡಿ, ಸ್ವಾಭಾವಿಕವಾಗಿ ನಿಧಾನಕ್ಕೆ ಕಾರ್ಯವನ್ನು ಮಾಡುವವನಾದ್ದರಿಂದ ಹಾಗೆಯೇ ಆಗಲಿ ಎಂದನು. ಬಳಿಕ ಚಿರಕಾರಿಯಾದ ಕಾರ್ಯದಿಂದಲೇ ತುಂಬಾ ಸಮಯ ತಂದೆಯ ಮಾತನ್ನು ವಿಮರ್ಶಿಸತೊಡಗಿದನು.
ಪಿತುರಾಜ್ಞಾಂ ಕಥಂ ಕುರ್ಯಾಂ ನ ಹನ್ಯಾಂ ಮಾತರಂ ಕಥಮ್ |
ಕಥಂ ಧರ್ಮಚ್ಛಲೇ ನಾಸ್ಮಿನ್ನಿಮಜ್ಜೇಯಮಸಾಧುವತ್ ॥9॥
ಅವನ ಆಲೋಚನೆಯು ಹೀಗಿತ್ತು. ವಿಧಿಯೇ, ನಾನು ಹೇಗೆ ತಾನೇ ತಾಯಿಯನ್ನು ಕೊಲ್ಲಲಿ? ತಂದೆಯ ಆಜ್ಞೆಯನ್ನು ಹೇಗೆ ನಡೆಸಲಿ? ಇಂತಹ ಧರ್ಮಸಂಕಟದಲ್ಲಿ ಅಸಜ್ಜನನಂತೆ ನಾನು ಮುಳುಗಿ ಹೋಗಿದ್ದೇನೆ. ಮೇಲೆ ಏಳುವ ಬಗೆ ಹೇಗೆ?
ಪಿತುರಾಜ್ಞಾ ಪರೋ ಧರ್ಮಃ ಸ್ವಧರ್ಮೋ ಮಾತೃರಕ್ಷಣಮ್ |
ಅಸ್ವತಂತ್ರಂ ಚ ಪುತ್ರತ್ವಂ ಕಿಂ ನು ಮಾಂ ನಾತ್ರ ಪೀಡಯೇತ್ ॥10॥
ತಂದೆಯ ಆಜ್ಞೆಯನ್ನು ರಕ್ಷಿಸುವುದು ಪರಮಧರ್ಮವಾಗಿದೆ. ತಾಯಿಯನ್ನು ರಕ್ಷಿಸುವುದು ಸ್ವಧರ್ಮವಾಗಿದೆ. ಹೀಗಿದ್ದಾಗ ಅಸ್ವತಂತ್ರನಾದ ಮಗನಾಗಿ ನಾನು ಏನು ಮಾಡಲಿ? ಅಧರ್ಮವು ನನ್ನನ್ನು ಪೀಡಿಸದಿರುವಂತೆ ಹೇಗೆ ವರ್ತಿಸಲಿ?
ಸ್ತ್ರಿಯಂ ಹತ್ವಾ ಮಾತರಂ ಚ ಕೋ ಹಿ ಜಾತು ಸುಖೀ ಭವೇತ್ |
ಪಿತರಂ ಚಾಪ್ಯವಜ್ಞಾಯ ಕಃ ಪ್ರತಿಷ್ಠಾಮವಾಪ್ನುಯಾತ್ ॥11॥
ಸ್ತ್ರೀಯನ್ನು ಕೊಂದು, ಅದರಲ್ಲಿಯೂ ತಾಯಿಯನ್ನು ಸಂಹಾರ ಮಾಡಿ ಯಾವನು ತಾನೇ ಯಾವಾಗಲೂ ಸುಖಿಯಾಗಿರಬಲ್ಲ?

ತಂದೆಯ ಆಜ್ಞೆಯನ್ನು ತಿರಸ್ಕರಿಸಿ ಯಾವನು ತಾನೇ ಲೋಕದಲ್ಲಿ ಸ್ಥಿರವಾದ ಪ್ರತಿಷ್ಠೆಯನ್ನು ಹೊಂದಬಲ್ಲ?
ಅನವಜ್ಞಾ ಪಿತುರ್ಯುಕ್ತಾ ಧಾರಣಂ ಮಾತೃರಕ್ಷಣಮ್ |
ಯುಕ್ತಕ್ಷಮಾವುಭಾವೇತೌ ನಾತಿವರ್ತೇತಮಾಂ ಕಥಮ್ ॥12॥
ತಂದೆಯ ಆಜ್ಞೆಯನ್ನು ತಿರಸ್ಕರಿಸದೆ ಇರುವುದೇ ಶ್ರೇಷ್ಠವಾದುದು. ಅದರಂತೆ ತಾಯಿಯನ್ನು ರಕ್ಷಿಸುವುದು ಕರ್ತವ್ಯದಲ್ಲಿ ಸೇರಿದೆ. ಈ ಎರಡೂ ಪಕ್ಷಗಳು ಯುಕ್ತವೂ, ಉಚಿತವೂ ಆಗಿವೆ. ಈ ಎರಡನ್ನು ನನ್ನಿಂದ ವರ್ತಿಸಲು ಹೇಗೆ ಸಾಧ್ಯವಾದೀತು?
ಪಿತಾ ಹ್ಯಾತ್ಮಾನಮಾಧತ್ತೇ ಜಾಯಾಯಾಂ ಜಜ್ಞ್ಯಾಮಿತಿ |
ಶೀಲಚಾರಿತ್ರಗೋತ್ರಸ್ಯ ಧಾರಣಾರ್ಥಂ ಕುಲಸ್ಯ ಚ ॥13॥
ತಂದೆಯಾದವನು ಪತ್ನಿಯ ಗರ್ಭದಲ್ಲಿ ತನ್ನನ್ನೇ ರೇತಸ್ಸಿನ ಮೂಲಕ ನಿಕ್ಷೇಪವನ್ನು ಮಾಡುತ್ತಾನೆ. ತನ್ನ ಶೀಲ, ಸದಾಚಾರ, ಗೋತ್ರ, ಕುಲ ಇವುಗಳನ್ನು ಧರಿಸುವುದು ಈ ಗರ್ಭಾಧಾನದ ವಿಧಿಯ ಉದ್ದೇಶವಾಗಿದೆ.
ಸೋಽಹಮಾತ್ಮಾ ಸ್ವಯಂ ಪಿತ್ರಾ ಪುತ್ರತ್ವೇ ಪ್ರಕೃತಃ ಪುನಃ |
ವಿಜ್ಞಾನಂ ಮೇ ಯಥಾ ನ ಸ್ಯಾದ್ ಬುಬುಧೇ ಚಾತ್ಮಸಂಭವಮ್ ॥14॥
ಈ ಕಾರಣದಿಂದ ನಾನು ಸ್ವಯಂ ತಂದೆಯಿಂದಲೇ ಪುತ್ರತ್ವವನ್ನು ಹೊಂದಿರುತ್ತೇನೆ. ಈ ವಿರುದ್ಧವಾದ ಜ್ಞಾನದ ಗೊಂದಲಗಳು ನನಗೆ ಉಂಟಾಗದಿರುವಂತೆ ಹೇಗೆ ತಿಳಿಯಲಿ? ತಂದೆಯಿಂದಲೇ ಜನ್ಮವನ್ನು ಪಡೆದ ನಾನು ಹೇಗೆ ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಲಿ?
ಜಾತಕರ್ಮಣಿ ಯತ್ ಪ್ರಾಹ ಪಿತಾ ಯಚ್ಚೋಪಕರ್ಮಣಿ |
ಪರ್ಯಾಪ್ತಃ ಸ ದೃಢೀಕಾರಃ ಪಿತುರ್ಗೌರವನಿಶ್ಚಯೇ ॥15॥
ಜಾತಕರ್ಮದ ಸಮಯದಲ್ಲಿ, ಉಪನಯನದ ಸಮಯದಲ್ಲಿ ತಂದೆಯು `ಆತ್ಮಾ ವೈ ಪುತ್ರನಾಮಾಸಿ' `ಆಚಾರ್ಯ ದೇವೋಭವ' ಮುಂತಾದ ಆದೇಶಗಳನ್ನು ಮಾಡುತ್ತಾನೆ. ಇಂತಹ ಅವನ ಉಪದೇಶ ವಾಕ್ಯಗಳೇ ತಂದೆಯಲ್ಲಿ ಗೌರವವನ್ನು ನಿಶ್ಚಯ ಮಾಡಲು ಬೇಕಾದ ಪ್ರಮಾಣಗಳಾಗಿವೆ.
ಗುರುರಗ್ರ್ಯಃ ಪರೋ ಧರ್ಮಃ ಪೋಷಣಾಧ್ಯಯನಾದ್ವಿತಃ |
ಪಿತಾ ಯದಾಹ ಧರ್ಮಃ ಸ ವೇದೇಷ್ವಪಿ ಸುನಿಶ್ಚಿತಃ ॥16॥
ತಂದೆಯು ಮಗನನ್ನು ಪೋಷಿಸಿ ಅಧ್ಯಯನಾದಿಗಳನ್ನು ಮಾಡಿಸುವುದರಿಂದ ಅವನು ಉತ್ತಮನು ಎಂಬುದು ಪರಮಧರ್ಮವೇ ಆಗಿದೆ. ವೇದಗಳಲ್ಲಿ ನಿಶ್ಚಯ ಜ್ಞಾನವನ್ನು ಹೊಂದಿದ ತಂದೆಯು ಏನು ಹೇಳುತ್ತಾನೋ ಅದೇ ಮಗನ ಪಾಲಿಗೆ ಧರ್ಮವೆನಿಸಿದೆ.
ಪ್ರೀತಿಮಾತ್ರಂ ಪಿತುಃ ಪುತ್ರಃ ಸರ್ವಂ ಪುತ್ರಸ್ಯ ವೈ ಪಿತಾ |
ಶರೀರಾದೀನಿ ದೇಯಾನಿ ಪಿತಾ ತ್ವೇಕಃ ಪ್ರಯಚ್ಛತಿ ॥17॥
ತಂದೆಗೆ ಮಗನೇ ಪ್ರೀತಿಪಾತ್ರನಾಗಿರುತ್ತಾನೆ. ಅದರಂತೆ ಮಗನಿಗೆ ತಂದೆಯೇ ಸರ್ವಸ್ವವೂ ಆಗಿರುತ್ತಾನೆ. ತಂದೆಯಾದವನು ಮಾತ್ರ ಮಗನಿಗೆ ಶರೀರವೇ ಮೊದಲಾದ ಕೊಡಬಹುದಾದ ವಸ್ತುಗಳನ್ನು ಕೊಡುತ್ತಾನೆ. ಬೇರೆ ಯಾರಿಗೂ ಇವನಂತೆ ಕೊಡಲು ಶಕ್ಯವಿಲ್ಲ ಎಂದು ಭಾವ.
ತಸ್ಮಾತ್ ಪಿತುರ್ವಚಃ ಕಾರ್ಯಂ ನ ವಿಚಾರ್ಯಂ ಕಥಂಚನ |
ಪಾತಕಾನ್ಯಪಿ ಪೂಯಂತೇ ಪಿತುರ್ವಚನಕಾರಿಣಃ ॥18॥
ಆ ಕಾರಣದಿಂದ ತಂದೆಯ ಆಜ್ಞೆಯನ್ನು ನೆರವೇರಿಸಬೇಕು. ಇದರಲ್ಲಿ ಯಾವ ಸಂಶಯವೂ ಇಲ್ಲ. ತಂದೆಯ ವಚನವನ್ನು ಪರಿಪಾಲಿಸುವವರಿಗೆ ಅನೇಕ ಪಾತಕಗಳು ಪರಿಹಾರವಾಗುತ್ತವೆ.
ಭೋಗೇ ಭಾಗ್ಯೇ ಪ್ರಸವನೇ ಸರ್ವಲೋಕನಿದರ್ಶನೇ |
ಭರ್ತ್ರಾ ಚೈವ ಸಮಾಯೋಗೇ ಸೀಮಂತೋನ್ನಯನೇ ತಥಾ ॥19॥
ಮಗನಿಗೆ ಬೇಕಾದ ಭೋಗ್ಯವಸ್ತುಗಳನ್ನು ಒದಗಿಸುವುದರಲ್ಲಿ, ಯಾಗದಲ್ಲಿಯೂ, ಲೋಕವ್ಯವಹಾರದಲ್ಲಿಯೂ, ಗರ್ಭಾಧಾನ ಮೊದಲಾದ ಸಂಸ್ಕಾರಗಳಲ್ಲಿಯೂ ತಂದೆಯೇ ಮುಖ್ಯಧರ್ಮಸ್ಥಾನದಲ್ಲಿದ್ದಾನೆ.
ಪಿತಾ ಸ್ವರ್ಗಃ ಪಿತಾ ಧರ್ಮಃ ಪಿತಾ ಪರಮಕಂ ತಪಃ |
ಪಿತರಿ ಪ್ರೀತಿಮಾಪನ್ನೇ ಸರ್ವಾಃ ಪ್ರೀಯಂತಿ ದೇವತಾಃ ॥20॥
ತಂದೆಯೇ ಸ್ವರ್ಗ ಎನಿಸಿದ್ದಾನೆ. ತಂದೆಯೇ ಧರ್ಮವೆನಿಸಿದ್ದಾನೆ. ತಂದೆಯೇ ತಪಸ್ಸು ಎನಿಸಿದ್ದಾನೆ. ತಂದೆಯು ಪ್ರೀತನಾದರೆ ಸಮಸ್ತ ದೇವತೆಗಳು ಪ್ರೀತರಾಗುತ್ತಾರೆ.
ಆಶಿಷಸ್ತಾ ಭಜಂತ್ಯೇನಂ ಪುರುಷಂ ಪ್ರಾಹ ಯಾಃ ಪಿತಾ |
ನಿಷ್ಕೃತಿಃ ಸರ್ವಪಾಪಾನಾಂ ಪಿತಾ ಯದಭಿನಂದತಿ॥21॥
ತಂದೆಯ ಆಶೀರ್ವಾದವೆಲ್ಲ ಮಗನಲ್ಲಿ ಪೂರ್ಣವಾಗಿದ್ದರೆ ಅವುಗಳು ನಿಯಮೇನ ಫಲಿಸುತ್ತವೆ. ಸಮಸ್ತ ಪಾಪಗಳಿಗೆ ಪ್ರಾಯಶ್ಚಿತ್ತವು ತಂದೆಯ ಸಂತೋಷವೇ ಆಗಿದೆ. ತಂದೆಯು ಅಭಿನಂದಿಸಿದರೆ ಸಮಸ್ತ ಪಾಪಗಳು ಪರಿಹಾರವಾಗುತ್ತವೆ.
ಮುಚ್ಯತೇ ಬಂಧನಾತ್ ಪುಷ್ಪಂ ಫಲಂ ವೃಂತಾತ್ ಪ್ರಮುಚ್ಯತೇ |
ಕ್ಲಿಶ್ಯನ್ನಪಿ ಸುತಸ್ನೇಹೈಃ ಪಿತಾ ಸ್ನೇಹಂ ನ ಮುಂಚತಿ ॥22॥
ಮರದಿಂದ ಹೂವುಗಳು ಕಳಚಿ ಬೀಳುತ್ತವೆ. ತೊಟ್ಟಿನಿಂದ ಹಣ್ಣುಗಳು ಉದುರಿ ಹೋಗುತ್ತವೆ. ಆದರೆ ತಂದೆಯು ಎಷ್ಟೇ ಕ್ಲೇಶಪಟ್ಟರೂ ಮಗನಲ್ಲಿರುವ ಪ್ರೇಮವನ್ನು ಅವನೆಂದಿಗೂ ಬಿಡಲಾರನು.
ಏತದ್ ವಿಚಿಂತಿತಂ ತಾವತ್ ಪುತ್ರಸ್ಯ ಪಿತೃಗೌರವಮ್ |
ಪಿತಾ ಹ್ಯಲ್ಪತರಂ ಸ್ಥಾನಂ ಚಿಂತಯಿಷ್ಯಾಮಿ ಮಾತರಮ್ ॥23॥
ತಂದೆಯಲ್ಲಿ ಮಗನು ಗೌರವವನ್ನು ತೋರಿಸಬೇಕು ಎನ್ನಲು ಇವುಗಳೇ ಯಥೇಷ್ಟವಾದ ಪ್ರಮಾಣಗಳಾಗಿವೆ. ತಂದೆಯು ಮಗನಿಗೆ

ಸಾಧಾರಣವಾದ ಅಲ್ಪ ಸ್ಥಾನವನ್ನು ಹೊಂದಿದವನಲ್ಲ. ಇದನ್ನು ನಾನು ಯೋಚಿಸಬೇಕಾಗಿದೆ.
ಯೋ ಹ್ಯಯಂ ಮಯಿ ಸಂಘಾತೋ ಮರ್ತ್ಯತ್ವೇ ಪಾಂಚಭೌತಿಕಃ |
ಅಸ್ಯ ಮೇ ಜನನೀ ಹೇತುಃ ಪಾವಕಸ್ಯ ಯಥಾರಣಿಃ |
ಮಾತಾ ದೇಹಾರಣಿಃ ಪುಂಸಾಂ ಸರ್ವಸ್ಯಾರ್ತಸ್ಯ ನಿರ್ವೃತಿಃ ॥24॥
ಇನ್ನು ತಾಯಿಯ ಬಗ್ಗೆ ಹೇಳುವುದಾದರೆ ನಾನು ಮನುಷ್ಯನಾಗಿ ಹುಟ್ಟುವಾಗ, ಪಂಚಭೂತ ವಿಕಾರವಾದ ಈ ದೇಹವನ್ನು ತಾಳುವಾಗ ಈ ತಾಯಿಯೇ ಕಾರಣಳಾಗಿದ್ದಾಳೆ. ಬೆಂಕಿಯ ಉತ್ಪತ್ತಿಗೆ ಅರಣಿಯು ಹೇಗೆ ಪ್ರಧಾನ ಪಾತ್ರವನ್ನು ವಹಿಸುತ್ತದೋ ಅದರಂತೆ ನನ್ನ ಉತ್ಪತ್ತಿಗೆ ಈ ತಾಯಿಯ ದೇಹವೇ ಅರಣಿಯಂತಾಗಿದೆ. ದುಃಖಾರ್ಥರಾದ ಪುರುಷರಿಗೆ ತಾಯಿಯೇ ದುಃಖದ ಪರಿಹಾರಕಳೆನಿಸಿದ್ದಾಳೆ.
ನ ಚ ಶೋಚತಿ ನಾಪ್ಯೇನಂ ಸ್ಥಾವಿರ್ಯಮಪಕರ್ಷತಿ |
ಶ್ರಿಯಾ ಹೀನೋಽಪಿ ಯೋ ಗೇಹೇ ಅಂಬೇತಿ ಪ್ರತಿಪದ್ಯತೇ ॥25॥
ತಾಯಿಯು ಇರುವಾಗ ಯಾವಾಗಲೂ ಯಾವುದಕ್ಕೂ ಶೋಕಪಡುವುದಿಲ್ಲ. ಸಿರಿತನವಾಗಲಿ, ಶೋಕವಾಗಲಿ, ಚಿಂತೆಯಾಗಲಿ ಇಲ್ಲದೆ ಇರುವುದರಿಂದ ವೃದ್ಧಾಪ್ಯವು ಅವನನ್ನು ಆಕ್ರಮಿಸುವುದಿಲ್ಲ.
ಪುತ್ರಪೌತ್ರಸಮಾಕೀರ್ಣೋ ಜನನೀಂ ಯಃ ಸಮಾಶ್ರಿತಃ |
ಅಪಿ ವರ್ಷಶತಸ್ಯಾಂತೇ ಸ ದ್ವಿಹಾಯನವಚ್ಚರೇತ್ ॥26॥
ಅವನು ಸಂಪತ್ತಿನಿಂದ ಹೀನನಾಗಿದ್ದರೂ ಮನೆಗೆ ಆಗಮಿಸಿ ಅಮ್ಮಾ ಎಂದು ಕೂಗುತ್ತಾ ಪ್ರವೇಶಿಸಿದ ಕೂಡಲೇ ಅವನ ದುಃಖವೆಲ್ಲವೂ ಪರಿಹಾರವಾಗುತ್ತದೆ. ಒಬ್ಬ ಮನುಷ್ಯನಿಗೆ ಮಕ್ಕಳು, ಮೊಮ್ಮಕಳು ಈ ಪರಿವಾರವೇ ಮನೆ ತುಂಬಿರಬಹುದು. ನೂರು ವರ್ಷ ಆಯುಷ್ಯವೂ ತುಂಬಿರಬಹುದು. ಆದರೆ ಅವನು ತನ್ನ ತಾಯಿಯನ್ನು ಆಶ್ರಯಿಸಿದಾಗ ಎರಡು ವರ್ಷದ ಮಗುವಿನಂತೆ ವರ್ತಿಸುತ್ತಾನೆ.
ಸಮರ್ಥಂ ವಾ ಸಮರ್ಥಂ ವಾ ಕೃಶಂ ವಾಪ್ಯಕೃಶಂ ತಥಾ |
ರಕ್ಷತ್ಯೇವ ಸುತಂ ಮಾತಾ ನಾನ್ಯಃ ಪೋಷ್ಟಾ ವಿಧಾನತಃ ॥27॥
ತಾಯಿಯ ಪಾಲಿಗೆ ಮಗನು ಸಮರ್ಥನೇ ಆಗಿರಲಿ, ಅಸಮರ್ಥನೇ ಆಗಿರಲಿ, ಕೃಶನಾಗಿರಲಿ, ಸ್ಥೂಲನೇ ಆಗಿರಲಿ, ತಾಯಿಯು ಯಾವುದೇ ರೀತಿಯ ತಾರತಮ್ಯವನ್ನೂ ಮಾಡದೆ ವಿಹಿತವಾದ ರೀತಿಯಲ್ಲಿ ಮಕ್ಕಳನ್ನು ಪೋಷಿಸುತ್ತಾಳೆ. ತಾಯಿಯಂತೆ ಪೋಷಿಸುವವರು ಬೇರೆ ಯಾರೂ ಇರಲು ಸಾಧ್ಯವಿಲ್ಲ.
ತದಾ ಸ ವೃದ್ಧೋ ಭವತಿ ಯದಾ ಭವತಿ ದುಃಖಿತಃ |
ತದಾ ಶೂನ್ಯಂ ಜಗತ್ತಸ್ಯ ಯದಾ ಮಾತ್ರಾ ವಿಯುಜ್ಯತೇ ॥28॥
ಯಾವಾಗ ಪುರುಷನು ತಾಯಿಯಿಂದ ಅಗಲುತ್ತಾನೋ ಆಗ ಅವನು ವೃದ್ಧನೆನಿಸುತ್ತಾನೆ. ಆಗ ದುಃಖಿತನೆನಿಸುತ್ತಾನೆ. ಆಗಲೇ ಜಗತ್ತೆಲ್ಲವೂ ಅವನ ಪಾಲಿಗೆ ಶೂನ್ಯವೆನಿಸುತ್ತದೆ.
ನಾಸ್ತಿ ಮಾತೃಸಮಾ ಛಾಯಾ ನಾಸ್ತಿ ಮಾತೃಸಮಾ ಗತಿಃ |
ನಾಸ್ತಿ ಮಾತೃಸಮಂ ತ್ರಾಣಂ ನಾಸ್ತಿ ಮಾತೃಸಮಾ ಪ್ರಪಾ ॥29॥
ಜಗತ್ತಿನಲ್ಲಿ ತಾಯಿಯ ನೆರಳಿಗಿಂತ ಶ್ರೇಷ್ಠವಾದ ನೆರಳು ಬೇರೆ ಯಾವುದೂ ಇರುವುದಿಲ್ಲ. ತಾಯಿಗೆ ಸಮಾನವಾದ ಗತಿಯು, ಆಶ್ರಯವು ಬೇರೆ ಯಾವುದೂ ಇರುವುದಿಲ್ಲ. ತಾಯಿಗೆ ಸಮಾನವಾದ ರಕ್ಷಣೆ ಬೇರೆ ಯಾವುದೂ ಇರುವುದಿಲ್ಲ. ತಾಯಿಗೆ ಸಮಾನವಾದ ಪ್ರೀತಿ ಪಾತ್ರರು ಯಾರೂ ಇರುವುದಿಲ್ಲ.
ಕುಕ್ಷಿಸಂಧಾರಣಾದ್ಧಾತ್ರೀ ಜನನಾಜ್ಜನನೀ ಸ್ಮೃತಾ |
ಅಂಗಾನಾಂ ವರ್ಧನಾದಂಬಾ ವೀರಸೂತ್ವೇನ ವೀರಸೂಃ ॥30॥
ಶಿಶೋಃ ಶುಶ್ರೂಷಣಾಚ್ಛುಶ್ರೂರ್ಮಾತಾ ದೇಹಮನಂತರಮ್ |
ಚೇತನಾವಾನ್ನರೋ ಹನ್ಯಾದ್ಯಸ್ಯ ನಾಸುಷಿರಂ ಶಿರಃ ॥31॥
ತಾಯಿಯು ಮಗನನ್ನು ತನ್ನ ಗರ್ಭದಲ್ಲಿ ಧರಿಸುವುದರಿಂದ ಧಾತ್ರೀ ಎಂದು, ಹಡೆಯುವುದರಿಂದ ಜನನೀ ಎಂದು, ಅಂಗಾಂಗಗಳನ್ನು ವೃದ್ಧಿಗೊಳಿಸುವುದರಿಂದ ಅಂಬೆ ಎಂದೂ, ವೀರನಾದ ಮಗನನ್ನು ಪಡೆಯುವುದರಿಂದ ವೀರಸೂ ಎಂದೂ, ಮಗುವನ್ನು ಶುಶ್ರೂಷೆ ಮಾಡುವುದರಿಂದ ಶುಶ್ರೂ ಎಂದು - ಹೀಗೆ ತಾಯಿಯು ಮಗನಿಗೆ ಎರಡನೆಯ ದೇಹವೇ ಆಗಿದ್ದಾಳೆ. ಯಾರ ತಲೆಯು ವಿಚಾರಶೂನ್ಯ ಆಗಿದೆಯೋ ಅವನು, ಯಾರ ತಲೆಯು ಸಾವಿರ ಹೋಳಾಗಿದೆಯೋ ಅವನು ತಾಯಿಯನ್ನು ಕೊಂದಾನು. ಸರಿಯಾದ ತಲೆ ಇದ್ದವನು, ವಿಚಾರಶೀಲನಾದವನು ಎಂದಿಗೂ ಮಾತೃಹತ್ಯೆಯನ್ನು ಎಸಗನು.
ದಂಪತ್ಯೋಃ ಪ್ರಾಣಸಂಶ್ಲೇಷೇ ಯೋಽಭಿಸಂಧಿಃ ಕೃತಃ ಕಿಲ |
ತಂ ಮಾತಾ ವಾ ಪಿತಾ ವೇದ ಭೂತಾರ್ಥೋ ಮಾತರಿ ಸ್ಥಿತಃ ॥32॥
ದಂಪತಿಗಳ ಸಂಯೋಗ ಕಾಲದಲ್ಲಿ ಒಳ್ಳೆಯ ಮಗನು ಹುಟ್ಟಲಿ ಎಂಬ ಅಪೇಕ್ಷೆಯು ತಂದೆ-ತಾಯಿ ಇಬ್ಬರಿಗೂ ಸಮಾನವೇ ಆಗಿರುತ್ತದೆ. ಮಗನ ಬಗ್ಗೆ ಅನೇಕ ಆಶಯಗಳು ಇಬ್ಬರಲ್ಲಿದ್ದರೂ ಯಥಾರ್ಥವಾಗಿ ಸಮಸ್ತ ವಿಧವಾದ ಅಭಿಲಾಷೆಗಳು ತಾಯಿಯ ಹೃದಯದಲ್ಲಿಯೇ ವಿಶೇಷವಾಗಿ ತುಂಬಿಕೊಂಡಿರುತ್ತವೆ.
ಮಾತಾ ಜಾನಾತಿ ಯದ್ ಗೋತ್ರಂ ಮಾತಾ ಜಾನಾತಿ ಯಸ್ಯ ಸಃ |
ಮಾತುರ್ಭರಣಮಾತ್ರೇಣ ಪ್ರೀತಿಃ ಸ್ನೇಹಃ ಪಿತುಃ ಪ್ರಜಾಃ ॥33॥
ತಾಯಿಯಾದವಳು ಮಗನ ಗೋತ್ರವು ಯಾವುದೆಂಬುದನ್ನು ತಿಳಿದಿರುತ್ತಾಳೆ. ತನ್ನ ಹೊಟ್ಟೆಯಲ್ಲಿ ಹುಟ್ಟಿರುವವನು, ಯಾವ ಪುರುಷನಿಗೆ ಸಂಬಂಧಿಸಿದವನೆಂದು ತಿಳಿದಿರುತ್ತಾಳೆ. ಆ ಶಿಶುವನ್ನು ನವಮಾಸ ಪರ್ಯಂತ ಭರಣ ಮಾಡುವುದರಿಂದಲೇ ತಾಯಿಗೆ ಪ್ರೀತಿ-ಸ್ನೇಹಗಳು ಉಂಟಾಗುತ್ತವೆ. ಸಂತಾನವು ತಂದೆಯ ಅಧೀನಕ್ಕೆ ಒಳಪಟ್ಟಿರುತ್ತದೆ.

ಪಾಣಿಬಂಧಂ ಸ್ವಯಂ ಕೃತ್ವಾ ಸಹಧರ್ಮಮುಪೇತ್ಯ ಚ |
ಯದಿ ಯಾಪ್ಯಂತಿ ಪುರುಷಾಃ ಸ್ತ್ರಿಯೋ ನಾರ್ಹಂತಿ ಯಾಪ್ಯತಾಮ್ ॥
ಪುರುಷನು ಕನ್ಯೆಯ ಪಾಣಿಗ್ರಹಣವನ್ನು ತಾನೇ ಮಾಡಿ, ಸಹಧರ್ಮಚಾರಿಣಿ- ಯನ್ನಾಗಿ ಅವಳನ್ನು ಸ್ವೀಕರಿಸಿ, ಶಾಸ್ತ್ರವಿಧಿಗೆ ಅನುಗುಣವಾಗಿ ಸಂನ್ಯಾಸಧರ್ಮವನ್ನು ಅನುಸರಿಸಿ, ಪತ್ನಿಯನ್ನೂ ಪರಿತ್ಯಜಿಸಿ ಹೊರಟು ಹೋಗುತ್ತಾನೆ. ಆದರೆ ಇಂತಹ ಸಂನ್ಯಾಸಧರ್ಮವು ಸ್ತ್ರೀಯರಿಗೆ ವಿಧಿಸಲ್ಪಟ್ಟಿರುವುದಿಲ್ಲ.
ಭರಣಾದ್ಧಿ ಸ್ತ್ರಿಯೋ ಭರ್ತಾ ಪಾತ್ಯಾಚ್ಚೈವ ಸ್ತ್ರಿಯಾಃ ಪತಿಃ |
ಗುಣಸ್ಯಾಸ್ಯ ನಿವೃತ್ತೌ ತು ನ ಭರ್ತಾ ನ ಪತಿಃ ಪತಿಃ ॥35॥
ಪತ್ನಿಯ ಭರಣ-ಪೋಷಣಾದಿಗಳನ್ನು ಮಾಡುವುದರಿಂದಲೇ ಪುರುಷನು ಭರ್ತಾ ಎನಿಸಿದ್ದಾನೆ. ಪಾಲನೆ ಮಾಡುವುದರಿಂದಲೇ ಪತಿ ಎಂದು ಕರೆಸಿಕೊಳ್ಳುತ್ತಾನೆ. ಈ ಎರಡೂ ಗುಣಗಳು ಪುರುಷನಲ್ಲಿ ಇಲ್ಲದಿದ್ದಲ್ಲಿ ಅವನು ಭರ್ತಾ, ಪತಿ ಎಂಬ ನಾಮಗಳಿಗೆ ಪಾತ್ರನಾಗುವುದಿಲ್ಲ.
ಏವಂ ಸ್ತ್ರೀ ನಾಪರಾಧ್ನೋತಿ ನರ ಏವಾಪರಾಧ್ಯತಿ |
ವ್ಯುಚ್ಚರಂಶ್ಚ ಮಹಾದೋಷಂ ನರ ಏವಾಪರಾಧ್ಯತಿ ॥36॥
ಸ್ತ್ರೀಯು ಬಹುತೇಕ ಅಪರಾಧಗಳನ್ನು ಮಾಡುವುದಿಲ್ಲ. ಪುರುಷನೇ ಅಪರಾಧ ಮಾಡುತ್ತಾನೆ. ಸ್ತ್ರೀಯನ್ನು ಉಲ್ಲಂಘಿಸಿ ಹೊರಟ ಮಹಾದೋಷವನ್ನು, ಅಪರಾಧವನ್ನು ಪುರುಷನೇ ಹೊಂದುತ್ತಾನೆ.
ಸ್ತ್ರಿಯಾ ಹಿ ಪರಮೋ ಭರ್ತಾ ದೈವತಂ ಪರಮಂ ಸ್ಮೃತಮ್ |
ತಸ್ಯಾತ್ಮನಾ ತು ಸದೃಶಮಾತ್ಮಾನಂ ಪರಮಂ ದದೌ |
ಸರ್ವಕಾರ್ಯಾಪರಾಧ್ಯತ್ವಾನ್ನಾಪರಾಧ್ಯಂತಿ ಚಾಂಗನಾಃ ॥37॥
ಹೆಣ್ಣಿಗೆ ಪತಿಯೇ ಪರಮಶ್ರೇಷ್ಠನಾದವನು. ಸ್ತ್ರೀಗೆ ಎಲ್ಲಾ ದೇವತೆಗಳಿಗಿಂತಲೂ ಪತಿಯೇ ಪರಮೋತ್ಕೃಷ್ಟನಾದ ದೇವತೆ ಎಂದು ಹೇಳಲ್ಪಟ್ಟಿದೆ. ತನ್ನ ಪತಿಯ ಶರೀರಕ್ಕೆ ಅನುಗುಣವಾದ ಶರೀರವನ್ನು, ವೇಷಭೂಷಣಗಳನ್ನು ಧರಿಸಿ ಆಗಮಿಸಿದ ಇಂದ್ರನನ್ನು ನೋಡಿ, ತನ್ನ ಶ್ರೇಷ್ಠವಾದ ಶರೀರವನ್ನು ಅವನಿಗೆ ಅರ್ಪಿಸಿದಳು. ಸಮಸ್ತ ಕಾರ್ಯಗಳಲ್ಲಿಯೂ ಸ್ತ್ರೀಯರು ಪರಾಧೀನರಾದುದರಿಂದ ಅವರೆಂದಿಗೂ ಅಪರಾಧಿಗಳಾಗುವುದಿಲ್ಲ.
ಯಶ್ಚನೋಕ್ತೋಽಥ ನಿರ್ದೇಶಃ ಸ್ತ್ರಿಯಾ ಮೈಥುನವೃತ್ತಯೇ |
ತಸ್ಯ ಸ್ಮಾರಯತೋ ವ್ಯಕ್ತಮಧರ್ಮೋ ನಾತ್ರ ಸಂಶಯಃ ॥38॥
ಸ್ತ್ರೀಯರಿಗೆ ಋತುಕಾಲಕ್ಕಿಂತ ಅತಿರಿಕ್ತವಾದ ಕಾಲದಲ್ಲಿ ಮೈಥುನ ವ್ಯಾಪಾರವು ಹೇಳಲ್ಪಟ್ಟಿರುವುದಿಲ್ಲ. ಬೇರೆ ಸಮಯದಲ್ಲಿ ಮೈಥುನ ಭಾವವನ್ನು ಸ್ಮರಿಸುವ ಪುರುಷನಿಗೆ ಅಧರ್ಮ ಉಂಟಾಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯಾವನ್ನಾರೀಂ ಮಾತರಂ ಚ ಗೌರವೇ ಚಾಧಿಕೇ ಸ್ಥಿತಾಮ್ |
ಅವಧ್ಯಾಂ ತು ವಿಜಾನೀಯುಃ ಪಶವೋಽಪ್ಯವಿಚಕ್ಷಣಾಃ ॥39॥
ಗೌರವದ ಸ್ಥಾನದಲ್ಲಿ ತಾಯಿಯನ್ನು, ನಾರಿಯನ್ನು ಯಾರು ಅವಧ್ಯಳು ಎಂಬುದಾಗಿ ತಿಳಿದುಕೊಳ್ಳುವುದಿಲ್ಲವೋ ಅವರು ಪಶುತುಲ್ಯರು, ದಡ್ಡರು.
ದೇವತಾನಾಂ ಸಮಾವಾಯಮೇಕಸ್ಥಂ ಪಿತರಂ ವಿದುಃ |
ಮರ್ತ್ಯಾನಾಂ ದೇವತಾನಾಂ ಚ ಸ್ನೇಹಾದಭ್ಯೇತಿ ಮಾತರಮ್ ॥40॥
ತಂದೆಯ ವಿಷಯವನ್ನು ನೋಡಿದಾಗ ಮಗನು ತಂದೆಯನ್ನು ಅನೇಕ ದೇವತೆಗಳ ಸಮುದಾಯವೆಂದೇ ಭಾವಿಸಬೇಕು.
ಮನುಷ್ಯರಲ್ಲಿಯೂ, ದೇವತೆಗಳಲ್ಲಿಯೂ ಇರುವ ಭಾವವನ್ನು ಮಗನು ತಾಯಿಯಲ್ಲಿ ಹೆಚ್ಚಾಗಿಯೇ ತೋರಿಸಬೇಕು.
ಏವಂ ವಿಮೃಶತಸ್ತಸ್ಯ ಚಿರಕಾರಿತಯಾ ಬಹು |
ದೀರ್ಘಃ ಕಾಲೋ ವ್ಯತಿಕ್ರಾಂತಸ್ತತಸ್ತಸ್ಯಾಗಮತ್ ಪಿತಾ ॥41॥
ಈ ರೀತಿಯಾಗಿ ವಿಚಾರ ಮಾಡುತ್ತಿರುವ ಆ ಚಿರಕಾರಿಗೆ, ಈಗ ಏನು ಮಾಡುವುದು? ಎಂದು ಚಿಂತಿಸುತ್ತಲೇ ದೀರ್ಘಕಾಲವು ಕಳೆದು ಹೋಯಿತು. ಇಷ್ಟರಲ್ಲಿ ಕಾಡಿಗೆ ಹೋದ ಗೌತಮರು ಹಿಂದಿರುಗಿ ಬಂದರು.
ಮೇಧಾತಿಥಿರ್ಮಹಾಪ್ರಾಜ್ಞೋ ಗೌತಮಸ್ತಪಸಿ ಸ್ಥಿತಃ |
ವಿಮೃಶ್ಯ ತೇನ ಕಾಲೇನ ಪತ್ನ್ಯಾಃ ಸಂಸ್ಥಾವ್ಯತಿಕ್ರಮಮ್ ॥42॥
ಅವನಾದರೂ ಮೇಧಾತಿಥಿ ಗೌತಮನು ಮಹಾಪ್ರಾಜ್ಞನು. ತಾನು ತಪಸ್ಸಿನಲ್ಲಿ ಕುಳಿತು ಎಲ್ಲವನ್ನೂ ವಿಮರ್ಶೆ ಮಾಡಿ, ತನ್ನ ಪತ್ನಿಯನ್ನು ಸಂಹರಿಸುವುದು ಯೋಗ್ಯವಾದುದಲ್ಲ ಎಂದು ನಿಶ್ಚಯಿಸಿದ್ದನು.
ಸೋಽಬ್ರವೀದ್ ಭೃಶಸಂತಪ್ತೋ ಭೃಶಮಶ್ರೂಣಿ ವರ್ತಯನ್ |
ಶ್ರುತಧೈರ್ಯಪ್ರಸಾದೇನ ಪಶ್ಚಾತ್ತಾಪಮುಪಾಗತಃ ॥43॥
ಅತ್ಯಂತ ಪಶ್ಚಾತ್ತಾಪದಿಂದ ಸಂತಾಪಗೊಂಡ ಗೌತಮನು ದುಃಖದಿಂದ ಕಣ್ಣೀರನ್ನು ಸುರಿಸುತ್ತಾ, ವೇದಾಧ್ಯಯನದ ಮೂಲಕ ಧೈರ್ಯವನ್ನು ಹೊಂದಿದ ಕಾರಣದಿಂದ ಚಿಂತೆ, ದುಃಖವನ್ನು ದಾಟಿದ ಬಳಿಕ ಸ್ಥೈರಿಸಿಕೊಂಡು ಹೀಗೆ ಹೇಳಿದನು.
ಆಶ್ರಮಂ ಮಮ ಸಂಪ್ರಾಪ್ತಸ್ತ್ರಿಲೋಕೇಶಃ ಪುರಂದರಃ |
ಅತಿಥಿವ್ರತಮಾಸ್ಥಾಯ ಬ್ರಾಹ್ಮಣಂ ರೂಪಮಾಸ್ಥಿತಃ ॥44॥
ಮೂರುಲೋಕದ ಒಡೆಯನಾದ ಪುರಂದರನು ನನ್ನ ಆಶ್ರಮಕ್ಕೆ ಆಗಮಿಸಿದನು. ಅತಿಥಿ ವ್ರತವನ್ನು ಆಶ್ರಯಿಸಿ ಬ್ರಾಹ್ಮಣ ರೂಪವನ್ನು ಹೊಂದಿದನು.
ಸಮಯಾ ಸಾಂತ್ವಿತೋ ವಾಗ್ಭಿಃ ಸ್ವಾಗತೇನಾಭಿಪೂಜಿತಃ |

ಅರ್ಘ್ಯಂ ಪಾದ್ಯಂ ಚ ನ್ಯಾಯೇನ ತಯಾಭಿಪ್ರತಿಪಾದಿತಃ ॥45॥
ಅವನನ್ನು ಯೋಗ್ಯವಾದ ಮಾತುಗಳಿಂದ ಸಾಂತ್ವನಗೊಳಿಸಿ, ಸ್ವಾಗತವನ್ನು ನೀಡಿ ಪೂಜಿಸಿದೆನು. ಬ್ರಾಹ್ಮಣ ವೇಷದಲ್ಲಿರುವ ಅವನಿಗೆ ಅರ್ಘ್ಯ-ಪಾದ್ಯಗಳನ್ನು ನ್ಯಾಯದ ರೀತಿಯಲ್ಲಿಯೇ ಇತ್ತು ಸತ್ಕರಿಸಿದೆನು.
ಪರವಾನಸ್ಮಿ ಚೇತ್ಯುಕ್ತಃ ಪ್ರಣಯಿಷ್ಯತಿ ತೇನ ಚ |
ಅತ್ರ ಚಾಕುಶಲೇ ಜಾತೇ ಸ್ತ್ರಿಯೋ ನಾಸ್ತಿ ವ್ಯತಿಕ್ರಮಃ ॥46॥
ಏವಂ ನ ಸ್ತ್ರೀ ನ ಚೈವಾಹಂ ನಾಧ್ವಗಸ್ತ್ರಿದಶೇಶ್ವರಃ |
ಅಪರಾದ್ಧ್ಯತಿ ಧರ್ಮಸ್ಯ ಪ್ರಮಾದಸ್ತ್ವಪರಾಧ್ಯತಿ ॥47॥
ಉಪಚಾರದಿಂದ ಇಂದ್ರನು ಪ್ರಸನ್ನನಾಗುತ್ತಾನೆಂದು ನಾನು ನಿನ್ನ ಅಧೀನನಾಗಿರುತ್ತೇನೆ ಎಂದು ಹೇಳಿದೆನು. ಈ ಇಂದ್ರನ ಅಭಿಪ್ರಾಯವನ್ನು ತಿಳಿಯುವುದರಲ್ಲಿ ಮಂದಳಾದ ನನ್ನ ಪತ್ನಿಯು ಅವನ ಪ್ರದರ್ಶನಕ್ಕೆ ತುತ್ತಾದಳು. ಇಲ್ಲಿ ನನ್ನ ಪತ್ನಿಯ ಅಪರಾಧವೇನೂ ಇರುವುದಿಲ್ಲ. ಈ ಸಂದರ್ಭದಲ್ಲಿ ನನ್ನ ಪತ್ನಿಯು ಅಪರಾಧಿನಿಯಲ್ಲ. ನಾನೂ ಅಪರಾಧಿಯಲ್ಲ. ಬ್ರಾಹ್ಮಣ ವೇಷದಲ್ಲಿ ಆಗಮಿಸಿದ ದೇವತೆಗಳ ಈಶ್ವರನಾದ ಇಂದ್ರನೂ ಅಪರಾಧಿಯಲ್ಲ. ನಾನು ಧರ್ಮದ ವಿಷಯದಲ್ಲಿ ಪ್ರಮಾದ ಮಾಡಿ ಆಡಿದ ಆಕೆಯನ್ನು ಕೊಲ್ಲು ಎಂಬ ಮಾತೇ ಅಪರಾಧವಾಗಿದೆ.
ವ್ಯಾಖ್ಯಾನ ವಿಶೇಷ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಪ್ರದರ್ಶನಾತ್ ಎಂಬ ಶಬ್ದಕ್ಕೆ ಗುರುರಾಜರು `ಬಲಾತ್ಕಾರೇಣ ರಮಣಾತ್ ಅನೇನ ಅಹಲ್ಯಾಃ ನಾಪರಾಧ್ಯೋಽಸ್ತೀತಿ ಸೂಚಿತಮ್' ಎಂದು ಹೇಳಿದ್ದಾರೆ. ಇಂದ್ರನೇ ರಮಣ ಮಾಡಿದ್ದಾನಾದ್ದರಿಂದ ಅಹಲ್ಯೆಯ ಅಪರಾಧವು ಇಲ್ಲ. ಭಗವತ್ಸಂಕಲ್ಪಕ್ಕನುಗುಣವಾಗಿ ಇಂದ್ರನು ಆಗಮಿಸಿದ್ದಾನಾದ್ದರಿಂದ ಇಂದ್ರನ ಅಪರಾಧವೂ ಇಲ್ಲ ಎಂಬ ಈ ಗೌತಮರ ನಿರ್ಣಯವು ಶಾಸ್ತ್ರೀಯವಾದುದು.
ಈರ್ಷ್ಯಾಜಂ ವ್ಯಸನಂ ಪ್ರಾಹುಸ್ತೇನ ಚೈವೋರ್ಧ್ವರೇತಸಃ |
ಈರ್ಷ್ಯಯಾ ತ್ವಹಮಾಕ್ಷಿಪ್ತೋ ಮಗ್ನೋ ದುಷ್ಕೃತಸಾಗರೇ ॥48॥
ಊರ್ಧ್ವರೇತಸ್ಕರಾದ ಋಷಿಗಳು ಪ್ರಮಾದವನ್ನು ಈರ್ಷ್ಯೆಯಿಂದ ಹುಟ್ಟಿದ ವ್ಯಸನವೆನ್ನುತ್ತಾರೆ. ಈರ್ಷ್ಯೆಯ ಕಾರಣದಿಂದಲೇ ನಾನು ಪಾಪಸಾಗರದಲ್ಲಿ ಎಸೆಯಲ್ಪಟ್ಟವನಾಗಿ ಮುಳುಗಿ ಹೋದೆನು.
ಹತ್ವಾ ಸಾಧ್ವೀಂ ಚ ನಾರೀಂ ಚ ವ್ಯಸನಿತ್ವಾಚ್ಚ ಶಾಸಿತಾಮ್ |
ಭರ್ತೃವ್ಯತ್ವೇನ ಭಾರ್ಯಾಂ ಚ ಕೋ ನು ಮಾಂ ತಾರಯಿಷ್ಯತಿ ॥49॥
ಸಾಧ್ವಿಯಾದ ನಾರಿಯನ್ನು, ವ್ಯಸನಿಯಾದ ಇಂದ್ರನಿಂದ ಬಲಾತ್ಕಾರಕ್ಕೆ ತುತ್ತಾಗಿರುವ ಈಕೆಯನ್ನು ಭರಿಸಬೇಕಾದದ್ದು, ಪೋಷಿಸಬೇಕಾದದ್ದು ನನ್ನ ಕರ್ತವ್ಯವಾಗಿದೆ. ಒಂದು ವೇಳೆ ಈಕೆಯನ್ನು ಕೊಂದ ಬಳಿಕ ಯಾರು ನನ್ನನ್ನು ಸ್ತ್ರೀ ಹತ್ಯಾ ಪಾಪದಿಂದ ದಾಟಿಸುತ್ತಾರೆ?
ಅಂತರೇಣ ಮಯಾಜ್ಞಪ್ತಶ್ಚಿರಕಾರೀ ಹ್ಯುದಾರಧೀಃ |
ಯದ್ಯದ್ಯ ಚಿರಕಾರೀ ಸ್ಯಾತ್ಸ ಮಾಂ ತ್ರಾಯೇತ ಪಾತಕಾತ್ ॥50॥
ಉದಾರವಾದ ಬುದ್ಧಿಯುಳ್ಳ ಚಿರಕಾರಿಗೆ ತಾಯಿಯನ್ನೇ ಕೊಲ್ಲು ಎಂದು ನಾನು ಆಜ್ಞಾಪಿಸಿದೆನು. ಅವನು ತನ್ನ ಹೆಸರಿಗೆ ತಕ್ಕಂತೆ ತನ್ನ ಕಾರ್ಯದಲ್ಲಿ ವಿಳಂಬ ಮಾಡಿದ್ದಲ್ಲಿ ಅವನೇ ನನ್ನನ್ನು ಮಹಾಪಾತಕದಿಂದ ದಾಟಿಸಿಯಾನು!
ಚಿರಕಾರಿಕ ಭದ್ರಂ ತೇ ಭದ್ರಂ ತೇ ಚಿರಕಾರಿಕ |
ಯದ್ಯದ್ಯ ಚಿರಕಾರೀ ತ್ವಂ ತತೋಽಸಿ ಚಿರಕಾರಿಕಃ ॥51॥
ಚಿರಕಾರಿಯೇ ನಿನಗೆ ಮಂಗಳವಾಗಲಿ. ವಿಳಂಬಿಯೇ, ನಿನಗೆ ಕಲ್ಯಾಣವಾಗಲಿ. ನೀನು ನಿನ್ನ ಹೆಸರಿಗನುಗುಣವಾಗಿ ಕಾರ್ಯದಲ್ಲಿ ವಿಳಂಬವನ್ನು ಮಾಡಿದ್ದಲ್ಲಿ ನೀನು ನಿಜವಾಗಿಯೂ ಚಿರಕಾರಿ ಎಂದು ಪ್ರಸಿದ್ಧನಾಗುತ್ತಿ.
ತ್ರಾಹಿ ಮಾಂ ಮಾತರಂ ಚೈವ ತಪೋ ಯಚ್ಚಾರ್ಜಿತಂ ಮಯಾ |
ಆತ್ಮಾನಂ ಪಾತಕೇಭ್ಯಶ್ಚ ಭವಾದ್ಯ ಚಿರಕಾರಿಕಃ ॥52॥
ಮಗನೇ, ನೀನು ನಿಧಾನಕ್ಕೆ ಕಾರ್ಯತತ್ಪರನಾಗು. ನನ್ನನ್ನು, ನಿನ್ನ ತಾಯಿಯನ್ನು ರಕ್ಷಿಸು. ನನ್ನಿಂದ ಗಳಿಸಲ್ಪಟ್ಟ ತಪಸ್ಸನ್ನು ರಕ್ಷಿಸು. ನನ್ನನ್ನು ಸ್ತ್ರೀಹತ್ಯಾದಿ ಪಾಪಗಳಿಂದ ರಕ್ಷಿಸು.
ಸಹಜಂ ಚಿರಕಾರಿತ್ವಂ ಚಿರಪ್ರಾಜ್ಞತಯಾ ತವ |
ಸಫಲಂ ತತ್ತವಾದ್ಯಾಸ್ತು ಭವಾದ್ಯ ಚಿರಕಾರಿಕಃ ॥53॥
ನೀನು ಅತ್ಯಂತ ಜಾಣನಾಗಿರುವುದರಿಂದ ಚಿರಕಾರಿತ್ವ ಎಂಬ ಹೆಸರು ನಿನಗೆ ಸಹಜವಾದ ಗುಣವಾಗಿದೆ. ನಿನ್ನ ಚಿರಕಾರಿತ್ವವು ಸಾರ್ಥಕ್ಯ ಹೊಂದಲಿ. ನೀನು ನಿನ್ನ ಕಾರ್ಯದಲ್ಲಿ ವಿಳಂಬ ಮಾಡು.
ಚಿರಮಾಶಂಸಿತೋ ಮಾತ್ರಾ ಚಿರಂ ಗರ್ಭೇಣ ಧಾರಿತಃ |
ಸಫಲಂ ಚಿರಕಾರಿತ್ವಂ ಕುರು ತ್ವಂ ಚಿರಕಾರಿಕ ॥54॥
ಬಹಳ ಕಾಲದಿಂದ ನಿನ್ನ ತಾಯಿಯು ನಿನ್ನನ್ನು ಗರ್ಭದಲ್ಲಿ ಧರಿಸಿ ಸಲಹಿದ್ದಾಳೆ. ಅವಳು ಚಿರಕಾಲ ಗರ್ಭದಲ್ಲಿ ಧರಿಸಿದ್ದರಿಂದಲೇ ನೀನು ಬಹಳ ಕಾಲವನ್ನು ಕ್ರಿಯೆಗಳಲ್ಲಿ ತೆಗೆದುಕೊಳ್ಳುತ್ತಿ. ಆ ತಾಯಿಯು ಬಹಳ ಕಾಲ ಧರಿಸಿದ ಕಾರಣದಿಂದ ಆ ಹೆಸರನ್ನು ಸಫಲವನ್ನಾಗಿಸು.
ಚಿರಾಯತೇ ಚ ಸಂತಾಪಾಚ್ಚಿರಂ ಸ್ವಪಿತಿ ವಾರಿತಃ |
ಆವಯೋಶ್ಚಿರಸಂತಾಪಾದವೇಕ್ಷ್ಯ ಚಿರಕಾರಿಕ ॥55॥
ನನ್ನ ಪ್ರಿಯಪುತ್ರನಾದ ಚಿರಕಾರಿಯು ದುಃಖವು ಸನ್ನಿಹಿತವಾಗಿದ್ದರೂ ವಿಳಂಬ ಕಾರ್ಯಸ್ವಭಾವವನ್ನು ಬಿಡನು. ನಮ್ಮಿರ್ವರಿಗೆ ಚಿರಕಾಲ ಒದಗುವ ಸಂತಾಪವನ್ನು ಗಮನಿಸಿಯಾದರೂ ಚಿರಕಾರಿಯು ವಿಳಂಬ ಕಾರ್ಯವನ್ನು ಮಾಡಿದವನಾಗಲಿ.

ಏವಂ ಸ ದುಃಖಿತೋ ರಾಜನ್ಮಹರ್ಷಿರ್ಗೌತಮಸ್ತದಾ |
ಚಿರಕಾರಿಂ ದದರ್ಶಾಥ ಪುತ್ರಂ ಸ್ಥಿತಮಥಾಂತಿಕೇ ॥56॥
ಈ ರೀತಿಯಾಗಿ ಗೌತಮಋಷಿಯು ಬಹಳ ದುಃಖಿತನಾಗಿ, ತನ್ನ ಸಮೀಪದಲ್ಲಿಯೇ ಇದ್ದ ಚಿರಕಾರಿಯನ್ನು ನೋಡಿದನು.
ಚಿರಕಾರೀ ತು ಪಿತರಂ ದೃಷ್ಟ್ವಾ ಪರಮದುಃಖಿತಃ |
ಶಸ್ತ್ರಂ ತ್ಯಕ್ತ್ವಾ ತತೋ ಮೂರ್ಧ್ನಾ ಪ್ರಸಾದಾಯೋಪಚಕ್ರಮೇ ॥57॥
ಚಿರಕಾರಿಯಾದರೂ ತಂದೆಯನ್ನು ಕಂಡೊಡನೆ ಪರಮ ದುಃಖಿತನಾಗಿ ಕತ್ತಿಯನ್ನು ತೊರೆದು ತಂದೆಯ ಪಾದಗಳ ಮೇಲೆ ತಲೆಯನ್ನಿಟ್ಟು ತಂದೆಯನ್ನು ಪ್ರಸನ್ನಗೊಳಿಸಲು ಪ್ರಾರಂಭಿಸಿದನು.
ಗೌತಮಸ್ತು ಸುತಂ ದೃಷ್ಟ್ವಾ ಶಿರಸಾ ಪತಿತಂ ಭುವಿ |
ಪತ್ನೀಂ ಚೈವ ನಿರಾಕಾರಾಂ ಪರಾಮಭ್ಯಗಮನ್ಮುದಮ್ ॥58॥
ತನ್ನ ಪಾದದಲ್ಲಿ ಬಿದ್ದಿರುವ ಮಗನನ್ನು ಮತ್ತು ತನ್ನ ಪಾದದಲ್ಲಿಯೇ ಶುದ್ಧ ಭಾವನೆಯಿಂದ ಬಿದ್ದಿರುವ ಪತ್ನಿಯನ್ನು ಕಂಡ ಗೌತಮರು ಅತ್ಯಂತ ಶ್ರೇಷ್ಠವಾದ ಸಂತೋಷವನ್ನು ಹೊಂದಿದರು.
ನ ಹಿ ಸಾ ತೇನ ಸಂಭೇದಂ ಪತ್ನೀ ನೀತಾ ಮಹಾತ್ಮನಾ |
ವಿಜನೇ ಚಾಶ್ರಮಸ್ಥೇನ ಪುತ್ರಶ್ಚಾಪಿ ಸಮಾಹಿತಃ ॥59॥
ನಿರ್ಜನವಾದ ಆಶ್ರಮದಲ್ಲಿ ವಾಸ ಮಾಡುತ್ತಿದ್ದ ಗೌತಮರು ಧರ್ಮದಲ್ಲಿಯೇ ಏಕಾಗ್ರ ಮನಸ್ಸನ್ನು ಹೊಂದಿದ ಮಗನಾದ ಚಿರಕಾರಿಯನ್ನಾಗಲಿ, ಪತ್ನಿಯನ್ನಾಗಲಿ ಎಂದೂ ಬಿಟ್ಟು ಹೋಗಲಿಲ್ಲ.
ಹನ್ಯಾತ್ತ್ವನಪವಾದೇನ ಶಸ್ತ್ರಪಾಣೌ ಸುತೇ ಸ್ಥಿತೇ |
ವಿನೀತಂ ಪ್ರಶ್ರಯಿತ್ವಾ ಚ ವಿವಾಸೇ ಚಾತ್ಮಕರ್ಮಸು ॥60॥
ಗೌತಮರು ಮೊದಲು ನಿನ್ನ ತಾಯಿಯನ್ನು ಕೊಲ್ಲು ಎಂದು ಆಜ್ಞೆಯನ್ನು ಮಾಡಿದ ಕೂಡಲೇ ಅವನು ಶಸ್ತ್ರಪಾಣಿಯಾಗಿ ನಿಂತನು. ಅವನು ಗೌತಮರ ವಿಷಯದಲ್ಲಿ ವಿನೀತನೂ ಆಗಿದ್ದನು. ಈಗ ಗೌತಮನು ಅವನನ್ನು ತಾಯಿಯ ವಿಷಯದಲ್ಲಿ ಪ್ರಶ್ನಿಸಿ, ಸಮ್ಮತಿಸಿ ತನ್ನ ಕೆಲಸಗಳಲ್ಲಿ ಬಹುಕಾಲ ವಿಚಾರವನ್ನು ಮಾಡಿ ಇರುತ್ತಿ ಎಂದು ಹೇಳಿದನು.
ಬುದ್ಧಿಶ್ಚಾಸೀತ್ ಸುತಂ ದೃಷ್ಟ್ವಾ ಪಿತುಶ್ಚರಣಯೋರ್ನತಮ್ |
ಶಸ್ತ್ರಗ್ರಹಣಚಾಪಲ್ಯಂ ಸಂವೃಣೋತಿ ಭಯಾದಿತಿ ॥61॥
ಶಸ್ತ್ರವನ್ನು ತ್ಯಾಗ ಮಾಡಿ ತನ್ನ ಕಾಲಿನ ಮೇಲೆ ಬಿದ್ದಿರುವುದನ್ನು ಕಂಡ ಗೌತಮನು, ತನ್ನಲ್ಲಿ ಭಯದಿಂದಾಗಿ ತನ್ನ ಶಸ್ತ್ರಗ್ರಹಣ ಚಪಲತೆಯನ್ನು ಮುಚ್ಚಿಡುತ್ತಿದ್ದಾನೆಂದು ಅವನ ಬುದ್ಧಿಗೆ ತೋರಿತು.
ತತಃ ಪಿತ್ರಾ ಚಿರಂ ಸ್ತುತ್ವಾ ಚಿರಂ ಚಾಘ್ರಾಯ ಮೂರ್ಧನಿ |
ಚಿರಂ ದೋರ್ಭ್ಯಾಂ ಪರಿಷ್ವಜ್ಯ ಚಿರಂ ಜೀವೇತ್ಯುದಾಹೃತಃ ॥62॥
ಬಳಿಕ ಗೌತಮನು ತನ್ನ ಎರಡೂ ಕೈಗಳಿಂದ ಅವನನ್ನು ಮೇಲಕ್ಕೆತ್ತಿ ಆಲಿಂಗಿಸಿದನು. ಅವನನ್ನು ಅನೇಕ ಕಾಲ ಪ್ರಶಂಸಿಸಿದನು. ಪ್ರೀತಿಯಿಂದ ಅವನ ತಲೆಯನ್ನು ಮತ್ತೂ ಮತ್ತೂ ಆಘ್ರಾಣಿಸಿದನು.
ಏವಂ ಸ ಗೌತಮಃ ಪುತ್ರಂ ಪ್ರೀತಿಹರ್ಷಸಮನ್ವಿತಃ |
ಅಭಿನಂದ್ಯ ಮಹಾಪ್ರಾಜ್ಞ ಇದಂ ವಚನಮಬ್ರವೀತ್ ॥63॥
ಈ ರೀತಿಯಾಗಿ ಗೌತಮನು ಪ್ರೀತಿ-ಹರ್ಷಗಳಿಂದ ಕೂಡಿಕೊಂಡು ಮಗನನ್ನು ಅಭಿನಂದಿಸಿ ಈ ರೀತಿಯಾದ ಮಾತುಗಳನ್ನು ಹೇಳಿದನು.

ಚಿರಕಾರಿಕ ಭದ್ರಂ ತೇ ಚಿರಕಾರೀ ಚಿರಂ ಭವ |
ಚಿರಾಯಯತಿ ತೇ ಸೌಮ್ಯ ಚಿರಮಸ್ಮಿ ನ ದುಃಖಿತಃ ॥64॥
ತುಂಬಾ ಕಾಲದ ಬಳಿಕ ಕೆಲಸವನ್ನು ಮಾಡುವ ಚಿರಕಾರಿಯೇ, ನಿನಗೆ ಮಂಗಳವಾಗಲಿ. ನೀನು ಚಿರಂಜೀವಿಯಾಗು. ನಿನ್ನ ಕಾರ್ಯವು ಹೀಗೇ ಚಿರಕಾಲ ವಿಳಂಬವಾಗುತ್ತಿದ್ದರೆ ನಾನೂ ಚಿರಕಾಲದ ತನಕ ದುಃಖಕ್ಕೆ ಈಡಾಗುವುದಿಲ್ಲ ಎಂದನು.
ಗಾಥಾಶ್ಚಾಪ್ಯಬ್ರುವೀದ್ ವಿದ್ವಾನ್ ಗೌತಮೋ ಮುನಿಸತ್ತಮಃ |
ಚಿರಕಾರಿಷು ಧೀರೇಷು ಗುಣೋದ್ದೇಶಸಮಾಶ್ರಯಾತ್ ॥65॥
ಹೀಗೆ ಹೇಳುತ್ತಾ ಋಷಿಶ್ರೇಷ್ಠನು ಅವನ ಚಿರಕಾರಿತ್ವವನ್ನು ಪ್ರಶಂಸಿಸಿ, ಕೆಲವು ಗಾದೆಗಳನ್ನು ಹೇಳಿದನು. ಚಿರಕಾರಿಯ ಗುಣೋದ್ದೇಶಗಳನ್ನು ಅನುಸರಿಸಿ ಕೆಲವು ಶ್ಲೋಕಗಳನ್ನು ಹೇಳಿದನು.
ಚಿರೇಣ ಮಿತ್ರಂ ಬಧ್ನೀಯಾಚ್ಚಿರೇಣ ಚ ಕೃತಂ ತ್ಯಜೇತ್ |
ಚಿರೇಣ ಹಿ ಕೃತಂ ಮಿತ್ರಂ ಚಿರಂ ಧಾರಣಮರ್ಹತಿ ॥66॥
ಬಹಳ ಕಾಲದ ತನಕ ಚೆನ್ನಾಗಿ ಆಲೋಚಿಸಿ ಒಬ್ಬ ಮಿತ್ರನ ಸಂಬಂಧವನ್ನು ಬೆಳೆಸಬೇಕು. ಮೈತ್ರಿಯನ್ನು ಹೊಂದಿದ ಬಳಿಕ ಬೇಗ ಮೈತ್ರಿಯನ್ನು ಕಳೆದುಕೊಳ್ಳಬಾರದು. ಅನಿವಾರ್ಯವಾದರೂ ಬಹಳ ಕಾಲ ಯೋಚಿಸಿ ನಂತರ ಮಿತ್ರತ್ವವನ್ನು ತ್ಯಜಿಸಬೇಕು. ಮಿತ್ರತ್ವವು ಹೆಚ್ಚು ಕಾಲ ಧರಿಸಲು ಯೋಗ್ಯವಾಗಿರುತ್ತದೆ.
ರಾಗೇ ದರ್ಪೇ ಚ ಮಾನೇ ಚ ದ್ರೋಹೇ ಪಾಪೇ ಚ ಕರ್ಮಣಿ |
ಅಪ್ರಿಯೇ ಚೈವ ಕರ್ತವ್ಯೇ ಚಿರಕಾರೀ ಪ್ರಶಂಸ್ಯತೇ ॥67॥
ರಾಗ, ದರ್ಪ, ಅಭಿಮಾನ, ದ್ರೋಹ, ಪಾಪಕರ್ಮ, ಅಪ್ರಿಯಕಾರ್ಯ - ಈ ವಿಷಯದಲ್ಲಿ ಯಾವನು ತಡ ಮಾಡುತ್ತಾನೋ ಅವನು ಪ್ರಶಂಸಾಪಾತ್ರನಾಗುತ್ತಾನೆ.
ಬಂಧೂನಾಂ ಸುಹೃದಾಂ ಚೈವ ಭೃತ್ಯಾನಾಂ ಸ್ತ್ರೀಜನಸ್ಯ ಚ |

ಅವ್ಯಕ್ತೇಷ್ವಪರಾಧೇಷು ಚಿರಕಾರೀ ಪ್ರಶಂಸ್ಯತೇ ॥68॥
ಬಂಧುಗಳು, ಸ್ನೇಹಿತರು, ಸೇವಕರು, ಸ್ತ್ರೀಯರು ಇವರು ತಿಳಿಯದಂತೆ ಅಪರಾಧಗಳನ್ನು ಮಾಡಿದಾಗ ಅದಕ್ಕೆ ಶಿಕ್ಷೆಯನ್ನು ವಿಧಿಸುವಾಗ ಚಿರಕಾರಿಯು ದೃಷ್ಟಾಂತವಾಗುತ್ತಾನೆ.
ಏವಂ ಸ ಗೌತಮಸ್ತಸ್ಯ ಪ್ರೀತಃ ಪುತ್ರಸ್ಯ ಭಾರತ |
ಕರ್ಮಣಾ ತೇನ ಕೌರವ್ಯ ಚಿರಕಾರಿತಯಾ ತಯಾ ॥69॥
ಏವಂ ಸರ್ವೇಷು ಕಾರ್ಯೇಷು ವಿಮೃಶ್ಯ ಪುರುಷಸ್ತತಃ |
ಚಿರೇಣ ನಿಶ್ಚಯಂ ಕೃತ್ವಾ ಚಿರಂ ನ ಪರಿತಪ್ಯತೇ ॥70॥
ಹೀಗೆ ಗೌತಮನು ಮಗನು ವಿಚಾರ ಮಾಡಿ ನಿಧಾನಕ್ಕೆ ಕಾರ್ಯಗಳನ್ನು ಮಾಡುವ ಸ್ವಭಾವವನ್ನು ಹೊಂದಿರುವ ಗುಣವನ್ನು ಕಂಡು ಬಹಳ ಪ್ರಸನ್ನನಾದನು. ಈ ರೀತಿ ಬಹಳ ಕಾಲ ವಿಚಾರ ಮಾಡಿ ಕಾರ್ಯ ಮಾಡುವ ಪುರುಷನು ಪಶ್ಚಾತ್ತಾಪ ಪಡುವ ಪ್ರಸಂಗವು ಒದಗುವುದಿಲ್ಲ.
ಚಿರಂ ಧಾರಯತೇ ರೋಷಂ ಚಿರಂ ಕರ್ಮ ನಿಯಚ್ಛತಿ |
ಪಶ್ಚಾತ್ತಾಪಕರಂ ಕರ್ಮ ನ ಕಿಂಚಿದುಪಪದ್ಯತೇ ॥71॥
ಯಾವನು ತುಂಬಾ ಕಾಲದ ತನಕ ಕೋಪವನ್ನು ಹೊರಹಾಕುವುದಿಲ್ಲವೋ, ರೋಷವನ್ನು ಬಹಳ ಕಾಲ ತಡೆದು ನಿಲ್ಲಿಸುತ್ತಾನೋ ಅವನು ಮಾಡುವ ಯಾವ ಕಾರ್ಯಗಳಿಗೂ ಪಶ್ಚಾತ್ತಾಪ ಪಡುವ ಅವಶ್ಯಕತೆ ಇರುವುದಿಲ್ಲ.
ಚಿರಂ ವೃದ್ಧಾನುಪಾಸೀತ ಚಿರಮನ್ವಾಸ್ಯ ಪೂಜಯೇತ್ |
ಚಿರಂ ಧರ್ಮಾನ್ನಿಷೇವೇತ ಕುರ್ಯಾಚ್ಚಾನ್ವೇಷಣಂ ಚಿರಮ್ ॥72॥
ಬಹಳ ಕಾಲದ ತನಕ ವೃದ್ಧರ ಸೇವೆಯನ್ನು ಮಾಡಿರಿ. ಬಹಳ ಕಾಲದ ತನಕ ವೃದ್ಧರನ್ನು ಅನುಸರಿಸಿ ಅವರನ್ನು ಪೂಜಿಸಿ. ಬಹಳ ಕಾಲ ಧರ್ಮವನ್ನು ಸೇವಿಸಿ. ಬಹಳ ಕಾಲ ಧರ್ಮದ ಅನ್ವೇಷಣೆಯನ್ನು ಮಾಡಿ.
ಚಿರಮನ್ವಾಸ್ಯ ವಿದುಷಶ್ಚಿರಂ ಶಿಷ್ಟಾನ್ನಿಷೇವ್ಯ ಚ |
ಚಿರಂ ವಿನೀಯ ಚಾತ್ಮಾನಂ ಚಿರಂ ಯಾತ್ಯನವಜ್ಞತಾಮ್ ॥73॥
ಬಹಳ ಕಾಲ ವಿದ್ವಾಂಸರ ಜೊತೆಯಲ್ಲಿ ವಾಸಿಸುತ್ತಾ, ಶಿಷ್ಟರನ್ನು ಸೇವಿಸುತ್ತಾ, ಮನೋನಿಗ್ರಹವನ್ನು ಸಂಪಾದಿಸುವವನು ತುಂಬಾ ಕಾಲ ಆದರವನ್ನು ಹೊಂದುತ್ತಾನೆ. ಎಲ್ಲರಿಂದಲೂ ಸನ್ಮಾನಕ್ಕೆ ಪಾತ್ರನಾಗುತ್ತಾನೆ.
ಬ್ರುವತಶ್ಚ ಪರಸ್ಯಾಪಿ ವಾಕ್ಯಂ ಧರ್ಮೋಪಸಂಹಿತಮ್ |
ಚಿರಂ ಪೃಚ್ಛೇಚ್ಚಿರಂ ಬ್ರೂಯಾಚ್ಚಿರಂ ನ ಪರಿಭೂಯತೇ ॥74॥
ಧರ್ಮಕ್ಕೆ ಸಂಬಂಧಿಸಿದ ಮಾತುಗಳನ್ನು ಹೇಳುವವನು ಧರ್ಮಸಂಬಂಧ ಪ್ರಶ್ನೆಗಳನ್ನು ಕೇಳಿದರೆ ಧರ್ಮೋಪದೇಶಕನು ಯೋಚಿಸಿ ಕಾಲಿಕವಾಗಿ ಉತ್ತರಿಸಬೇಕು. ಹೀಗೆ ಮಾಡುವುದರಿಂದ ಉಪದೇಶಕನಿಗಾಗಲಿ, ಪೃಚ್ಛಕನಿಗಾಗಲಿ ಪರಿತಾಪ ಉಂಟಾಗುವುದಿಲ್ಲ.
ಉಪಾಸ್ಯ ಬಹುಲಾಸ್ತಸ್ಮಿನ್ನಾಶ್ರಮೇ ಸುಮಹಾತಪಾಃ |
ಸಮಾಃ ಸ್ವರ್ಗಂ ಗತೋ ವಿಪ್ರಾಃ ಪುತ್ರೇಣ ಸಹಿತಸ್ತದಾ ॥75॥
ಈ ಪ್ರಕರಣದ ಬಳಿಕ ತಪಸ್ವಿಯಾದ, ಬ್ರಹ್ಮರ್ಷಿಯಾದ ಗೌತಮನು ಆ ಆಶ್ರಮದಲ್ಲಿಯೇ ಬಹುವರ್ಷ ವಾಸವಾಗಿದ್ದು, ಕೊನೆಗೆ ಪುತ್ರನ ಜೊತೆಗೆ ಸ್ವರ್ಗ ಸೇರಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚಿರಕಾರಿಕೋಪಾಖ್ಯಾನೇ ಏಕಾಧಿಕಶತತಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಒಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎರಡನೆಯ ಅಧ್ಯಾಯ
ಪ್ರಜೆಗಳನ್ನು ಹಿಂಸಿಸದೆ ರಾಜ್ಯ ನಿರ್ವಹಿಸುವ ಕ್ರಮವನ್ನು ತಿಳಿಸಲು ದ್ಯುಮತ್ಸೇನ, ಸತ್ಯವಂತರಿಗೆ ನಡೆದ ಸಂವಾದವನ್ನು ಪ್ರಸ್ತಾಪಿಸಿದುದು.
ಯುಧಿಷ್ಠಿರಃ
ಕಥಂ ರಾಜಾ ಪ್ರಜಾ ರಕ್ಷೇನ್ನ ಚ ಕಿಂಚಿತ್ ಪ್ರತಾಪಯೇತ್ |
ಪೃಚ್ಛಾಮಿ ತ್ವಾಂ ಸತಾಂ ಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ॥1॥
ಪಿತಾಮಹನೇ, ರಾಜನಾದವನು ಪ್ರಜಾರಕ್ಷಕನಾಗಿದ್ದಾಗ ಪ್ರಜೆಗಳನ್ನು ಹಿಂಸಿಸಬಾರದು. ಯಾವ ಜೀವರನ್ನೂ ಹಿಂಸಿಸದೆ ಹೇಗೆ ಪ್ರಜಾ ಪರಿಪಾಲನೆ ಮಾಡಬೇಕು ಎಂಬುದನ್ನು ನನಗೆ ತಿಳಿಸು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ದ್ಯುಮತ್ಸೇನಸ್ಯ ಸಂವಾದಂ ರಾಜ್ಞಾ ಸತ್ಯವತಾ ಸಹ ॥2॥
ಧರ್ಮಪುತ್ರನೇ, ಈ ವಿಷಯದಲ್ಲಿ ದ್ಯುಮತ್ಸೇನನಿಗೂ, ಸತ್ಯವಂತನಿಗೂ ನಡೆದ ಸಂವಾದ ರೂಪವಾದ ಇತಿಹಾಸ ಒಂದನ್ನು ಉದಾಹರಿಸುತ್ತಾರೆ.
ಅವ್ಯಾಹೃತಂ ವ್ಯಾಜಹಾರ ಸತ್ಯವಾನಿತಿ ನಃ ಶ್ರುತಮ್ |
ವಧಾಯ ನೀಯಮಾನೇಷು ಪಿತುರೇವಾನುಶಾಸನಾತ್ ॥3॥
ಒಮ್ಮೆ ಸತ್ಯವಂತನು ತನ್ನ ತಂದೆಯಾದ ದ್ಯುಮತ್ಸೇನನ ಆದೇಶದಂತೆ ಕೆಲವು ಕೊಲೆಗಾರರನ್ನು ವಧಿಸಲು ಕರೆದುಕೊಂಡು

ಹೋಗುತ್ತಿರುವಾಗ ಆಡಿದ ಮಾತು.
ಅಧರ್ಮತಾಂ ಯಾತಿ ಧರ್ಮೋ ಯಾತ್ಯಧರ್ಮಶ್ಚ ಧರ್ಮತಾಮ್ |
ವಧೋ ನಾಮ ಭವೇದ್ಧರ್ಮೋ ನೈತದ್ಭವಿತುಮರ್ಹತಿ ॥4॥
ಲೋಕದಲ್ಲಿ ಕೆಲವು ಬಾರಿ ಧರ್ಮವು ಅಧರ್ಮವಾಗುತ್ತದೆ. ಅಧರ್ಮವು ಧರ್ಮವಾಗುತ್ತದೆ. ಆದರೆ ಇಂತಹ ವಧ ಕಾರ್ಯವು ಧರ್ಮವೆಂದು ಎಂದಿಗೂ ಹೇಳಲು ಸಾಧ್ಯವಾಗುವುದಿಲ್ಲ ಎಂದು ಹೇಳಿದನಂತೆ.
ದ್ಯುಮತ್ಸೇನಃ
ಅಥ ಚೇದವಧೋ ಧರ್ಮೋ ಧರ್ಮಃ ಕೋ ಜಾತುಚಿದ್ಭವೇತ್ |
ದಸ್ಯವಶ್ಚೇನ್ನ ಹನ್ಯೇರನ್ ಸತ್ಯವನ್ ಸಂಕರೋ ಭವೇತ್ ॥5॥
ಮಗನು ಹೀಗೆ ಹೇಳಿದಾಗ ಮಗನನ್ನು ಕುರಿತು ದ್ಯುಮತ್ಸೇನನು ಕುಮಾರನೇ, ಇಂತಹ ವಧಾರ್ಹರನ್ನು ಕೊಲ್ಲದಿರುವುದು ಧರ್ಮವಾಗುವ ಪಕ್ಷದಲ್ಲಿ ಈ ಧರ್ಮಕ್ಕೆ ಎಲ್ಲಿ ಸ್ಥಾನ ಲಭಿಸುತ್ತದೆ? ಕಳ್ಳರನ್ನು, ಕೊಲೆಗಾರರನ್ನು ಕೊಲ್ಲದೆ ಬಿಟ್ಟರೆ ಅದು ಅಧರ್ಮವಾಗುವುದರಿಂದ ಧರ್ಮಾಧರ್ಮ ಸಾಂಕರ್ಯ ಉಂಟಾಗುತ್ತದೆ.
ಮಮೇದಮಿತಿ ನಾಸ್ಯೈತತ್ ಪ್ರವರ್ತೇತ ಕಲೌ ಯುಗೇ |
ಲೋಕಯಾತ್ರಾ ನ ಚೈವ ಸ್ಯಾದಥ ಚೇದ್ ವೇತ್ಥ ಶಂಸ ನಃ ॥6॥
ಕಲಿಯುಗ ಪ್ರಾರಂಭವಾದ ಬಳಿಕ ಇದು ನನ್ನದು, ಇದು ಅವನದ್ದಲ್ಲ ಎಂದು ಹೇಳಿಕೊಂಡು, ಎಲ್ಲರ ಮುಂದೆಯೇ ಪರದ್ರವ್ಯವನ್ನು ಅಪಹರಿಸಿ ಹೋಗುತ್ತಾರೆ. ಇಂತಹ ತಲೆ ಒಡುಕರನ್ನು ಸಂಹರಿಸದಿದ್ದರೆ ಲೋಕವ್ಯವಹಾರವೇ ನಾಶವಾದೀತು! ಇಂತಹ ವಧಾರ್ಹರನ್ನು ವಧೆ ಮಾಡದೆ, ಲೋಕವನ್ನು ಸನ್ಮಾರ್ಗದಲ್ಲಿ ಕೊಂಡೊಯ್ಯುವುದು ಹೇಗೆ? ನೀನೇ ಹೇಳು.
ಸತ್ಯವಾನ್
ಸರ್ವ ಏವ ತ್ರಯೋ ವರ್ಣಾಃ ಕಾರ್ಯಾ ಬ್ರಾಹ್ಮಣಬಂಧನಾಃ |
ಧರ್ಮಪಾಶನಿಬದ್ಧಾನಾಮಲ್ಪೋ ವ್ಯಪಚರಿಷ್ಯತಿ ॥7॥
ತಂದೆಯೇ, ಕ್ಷತ್ರಿಯ, ವೈಶ್ಯ, ಶೂದ್ರ - ಮೂರು ವರ್ಣದವರನ್ನು ಬ್ರಾಹ್ಮಣರ ಅಧೀನರನ್ನಾಗಿ ಮಾಡಬೇಕು. ಧರ್ಮಪಾಶ ನಿಬದ್ಧರಾದವರ ಮಧ್ಯದಲ್ಲಿ ಯಾವ ಲೋಪವೂ ಇಲ್ಲದಂತೆ ಆ ಕಳ್ಳರು ಧರ್ಮಾಚರಣೆಯನ್ನು ಮಾಡುತ್ತಾರೆ. ಬ್ರಾಹ್ಮಣರ ಉಪದೇಶದಿಂದ ಧರ್ಮಬುದ್ಧಿಯುಳ್ಳವರಾಗುತ್ತಾರೆ ಎಂದು ಭಾವ.
ಯೋ ಯಸ್ತೇಷಾಮಪಚರೇತ್ತಮಾಚಕ್ಷೀತ ವೈ ದ್ವಿಜಃ |
ಅಯಂ ಮೇ ನ ಶೃಣೋತೀತಿ ತಸ್ಮಿನ್ರಾಜಾ ಪ್ರಧಾರಯೇತ್ ॥8॥
ಒಂದು ವೇಳೆ ಬ್ರಾಹ್ಮಣನ ಒಡನಾಡಿಯಾಗಿದ್ದರೂ ಅವನು ಅಪಚಾರವನ್ನು ಮಾಡಿದರೆ ಬ್ರಾಹ್ಮಣನು, ಈ ವ್ಯಕ್ತಿಯು ನನ್ನ ಮಾತನ್ನು ಕೇಳುತ್ತಿಲ್ಲ ಎಂದು ರಾಜನ ಬಳಿ ಹೇಳಬೇಕು. ಬ್ರಾಹ್ಮಣನ ಮಾತಿನಂತೆ ಆ ಅಪರಾಧಿಗೆ ರಾಜನು ಶಿಕ್ಷೆಯನ್ನು ನೀಡಬೇಕು.
ತತತತ್ವಭೇದೇನ ಯಚ್ಛಾಸ್ತ್ರಂ ತತ್ ಕಾರ್ಯಂ ನಾನ್ಯಥಾ ವಧಃ |
ಅಸಮೀಕ್ಷ್ಯೈವ ಕರ್ಮಾಣಿ ನೀತಿಶಾಸ್ತ್ರಂ ಯಥಾವಿಧಿ ॥9॥
ಶಿಕ್ಷೆಯನ್ನು ವಿಧಿಸುವಾಗಲೂ ಪ್ರಾಣಾಪಾಯವಾಗದಂತೆ ಶಿಕ್ಷೆಯನ್ನು ವಿಧಿಸಬೇಕು. ನೀತಿ ಶಾಸ್ತ್ರ ಅರಿಯದೆ ಅಪರಾಧಗಳ ಪೂರ್ವಾಪರವನ್ನು ಪರಿಶೀಲಿಸದೆ ಶಿಕ್ಷೆಯನ್ನು ವಿಧಿಸಬಾರದು.
ದಸ್ಯೂನ್ ಹಿನಸ್ತಿ ವೈ ರಾಜಾ ಭೂಯಸೋ ವಾಪ್ಯನಾಗಸಃ |
ಭಾರ್ಯಾ ಮಾತಾ ಪಿತಾ ಪುತ್ರೋ ಹನ್ಯತೇ ಪುರುಷೇ ಹತೇ |
ಪರೇಣಾಪಕೃತೇ ರಾಜಾ ತಸ್ಮಾತ್ ಸಮ್ಯಕ್‌ಪ್ರಧಾರಯೇತ್ ॥10॥
ರಾಜನು ಕಳ್ಳರನ್ನು ವಧಿಸುತ್ತಾನೆ. ಅದರಂತೆ ನಿರಪರಾಧಿಗಳನ್ನು ವಧಿಸುತ್ತಾನೆ. ಇದರಿಂದ ಮರಣದಂಡನೆಗೆ ತುತ್ತಾದವನ ಹೆಂಡತಿ, ತಾಯಿ, ತಂದೆ, ಮಗ ಇವರೆಲ್ಲರೂ ಜೀವಿಕೆಯನ್ನು ಕಳೆದುಕೊಂಡು ಮರಣ ಹೊಂದುತ್ತಾರೆ. ಆದ್ದರಿಂದ ಒಬ್ಬನ ಜೊತೆಗೆ ಇಷ್ಟೂ ಮಂದಿಯನ್ನು ಕೊಂದಂತಾಗುತ್ತದೆ. ಆದ್ದರಿಂದ ಮತ್ತೊಬ್ಬರ ಅಪಕಾರಕ್ಕೆ ತುತ್ತಾದ ರಾಜನು ಶಿಕ್ಷೆಗಿಂತ ಮೊದಲೇ ವಿಮರ್ಶೆ ಮಾಡಿ ಶಿಕ್ಷಿಸಬೇಕು.
ಅಸಾಧುಶ್ಚೈವ ಪುರುಷೋ ಲಭತೇ ಶೀಲಮೇಕದಾ |
ಸಾಧೋಶ್ಚಾಪಿ ಹ್ಯಸಾಧುಭ್ಯೋ ಜಾಯತೇ ಶೋಭನಾ ಪ್ರಜಾ ॥11॥
ಕಳ್ಳನಾಗಿದ್ದರೂ ಸಜ್ಜನರ ಸಹವಾಸದಿಂದ ಒಳ್ಳೆಯ ಗುಣವನ್ನು ಹೊಂದಿದರೆ ಅವನನ್ನು ಸಾಧು ಎಂದು ಬಿಡಬೇಕು. ಸಜ್ಜನರ ಸಂಗದಿಂದ ಆ ದುಷ್ಟನಿಗೂ ಸತ್ಸಂತಾನವು ದೊರೆಯುತ್ತದೆ.
ನ ಮೂಲಘಾತಃ ಕರ್ತವ್ಯೋ ನೈಷ ಧರ್ಮಃ ಸನಾತನಃ |
ಅಪಿ ಖಲ್ವವಧೇನೈವ ಪ್ರಾಯಶ್ಚಿತ್ತಂ ವಿಧೀಯತೇ ॥12॥
ಎಂದಿಗೂ ದುಷ್ಟರನ್ನು ತಿದ್ದಲು ಪ್ರಯತ್ನಿಸದೆ ಮರಣದಂಡನೆಯನ್ನು ವಿಧಿಸಿದಲ್ಲಿ ಅವರ ಮೂಲವೇ ನಾಶವಾದಂತಾಗುತ್ತದೆ. ಹೀಗೆ ಮಾಡುವುದು ಸನಾತನ ಧರ್ಮವೆನಿಸುವುದಿಲ್ಲ. ಅವನನ್ನು ಸಂಹಾರ ಮಾಡದೆ ಬೇರೆ ಶಿಕ್ಷೆಗಳನ್ನು ನೀಡಿ ಪ್ರಾಯಶ್ಚಿತ್ತವನ್ನು ಮಾಡಬೇಕು.
ಉದ್ವೇಜನೇನ ಬಂಧೇನ ವಿರೂಪಕರಣೇನ ಚ |
ವಧದಂಡೇನ ತೇ ಕ್ಲೇಶ್ಯಾ ನ ಪುರೋಽಹಿತಸಂಪದಾ ॥13॥
ಅಪರಾಧ ಮಾಡಿದವನಿಗೆ, ಪುನಃ ಇನ್ನೊಂದು ಬಾರಿ ಅಪರಾಧ ಮಾಡಿದಲ್ಲಿ ಸಂಪತ್ತೆಲ್ಲವನ್ನೂ ಅಪಹರಿಸುವುದಾಗಿ ಭಯ ಹುಟ್ಟಿಸಬೇಕು. ಪುನಃ ಅಪರಾಧ ಮಾಡಿದರೆ ಬಂಧನ ಮಾಡಬೇಕು. ಮಗದೊಮ್ಮೆ ಅಪರಾಧ ಮಾಡಿದರೆ ಅಂಗಗಳನ್ನೇ

ವಿಕೃತಗೊಳಿಸಬೇಕು. ಎಂದಿಗೂ ಮರಣ ದಂಡನೆಯನ್ನು ವಿಧಿಸಿ ಬಂಧು-ಮಿತ್ರರಿಗೆ ಕ್ಲೇಶವನ್ನುಂಟು ಮಾಡಬಾರದು.
ಯದಾ ಪುರೋಹಿತಂ ವಾ ತೇ ಪರ್ಯೇಯುಃ ಶರಣೈಷಿಣಃ|
ಕರಿಷ್ಯಾಮಃ ಪುನರ್ಬ್ರಹ್ಮನ್ನ ಪಾಪಮಿತಿ ವಾದಿನಃ ॥14॥
ತದಾ ವಿಸರ್ಗಮರ್ಹಾಃ ಸ್ಯುರಿತೀದಂ ನೃಪಶಾಸನಮ್|
ಬಿಭ್ರದ್ದಂಡಾಜಿನಂ ಮುಂಡೋ ಬ್ರಾಹ್ಮಣೋಽರ್ಹತಿ ವಾಸಸಮ್ ॥15॥
ಬ್ರಾಹ್ಮಣರಲ್ಲಿ ಹೋಗಿ ಶರಣು ಹೊಂದಿದ ಕಳ್ಳರು, ಬ್ರಾಹ್ಮಣನೇ, ನಾವು ಪುನಃ ಪಾಪ ಮಾಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದಲ್ಲಿ ಅವರು ಬಂಧನಾರ್ಹರಲ್ಲ ಎಂದು ಬ್ರಹ್ಮಶಾಸನವೇ ಇದೆ. ದಂಡವನ್ನು ಹಿಡಿದು, ಮೃಗಚರ್ಮವನ್ನು ಹೊದ್ದು, ಮುಂಡನ ಮಾಡಿಕೊಂಡ ಬ್ರಾಹ್ಮಣ ಸಂನ್ಯಾಸಿಯು ಅಪರಾಧ ಮಾಡಿದಲ್ಲಿ ಶಿಕ್ಷಾರ್ಹನಾಗುತ್ತಾನೆ.
ಗರೀಯಾಂಸೋ ಗರೀಯಾಂಸಮಪರಾಧೇ ಪುನಃ ಪುನಃ|
ತಥಾ ವಿಸರ್ಗಮರ್ಹಂತಿ ನ ಯಥಾ ಪ್ರಥಮೇ ತಥಾ॥16॥
ಪುನಃ ಪುನಃ ದೊಡ್ಡ ದೊಡ್ಡ ಅಪರಾಧಗಳನ್ನು ಮಾಡುತ್ತಿದ್ದರೆ ಅವರನ್ನು ಬಿಡುವದು ಯೋಗ್ಯವೆನಿಸುವುದಿಲ್ಲ. ಅವರಿಗೆ ಶಿಕ್ಷೆಯನ್ನು ವಿಧಿಸಬೇಕು. ಮೊದಲನೆಯ ಅಪರಾಧದಲ್ಲಿ ಬಿಟ್ಟಂತೆ ಬಿಡುವುದು ಯೋಗ್ಯವಲ್ಲ.
ದ್ಯುಮತ್ಸೇನಃ
ಯತ್ರ ಯತ್ರೈವ ಶಕ್ಯೇರನ್ ಸಂಯಂತುಂ ಸಮಯೇ ಪ್ರಜಾಃ|
ಸ ತಾವತ್ ಪ್ರೋಚ್ಯತೇ ಧರ್ಮೋ ಯಾವನ್ನ ಪ್ರತಿಲಘ್ಯತೇ ॥17॥
ಮಗನೇ, ಪ್ರಜೆಗಳನ್ನು ಧರ್ಮದ ನಿಯಂತ್ರಣದಲ್ಲಿ ಇಡುವದು ಸಾಧ್ಯವಾಗಲು ಅಲ್ಲಿಯೇ ಅವರನ್ನು ನಿಯಂತ್ರಿಸುವುದು ಧರ್ಮವಾಗಿದೆ. ಧರ್ಮದ ಉಲ್ಲಂಘನೆಯಾಗದಿರುವ ತನಕ ಧರ್ಮವು ಉಳಿದಿರುತ್ತದೆ.
ಅಹನ್ಯಮಾನೇಷು ಪುನಃ ಸರ್ವಮೇವ ಪರಾಭವೇತ್|
ಪೂರ್ವೇ ಪೂರ್ವತರೇ ಚೈವ ಸುಶಾಸ್ಯಾ ಅಭವಂಜನಾಃ ॥18॥
ಧರ್ಮವನ್ನು ಉಲ್ಲಂಘಿಸಿದ ಕಳ್ಳರನ್ನು ಸಂಹರಿಸದಿದ್ದಲ್ಲಿ ರಾಜ್ಯಾಡಳಿತಗಳೆಲ್ಲವೂ ವಿಫಲವಾಗುತ್ತವೆ. ಸತ್ಪುರುಷರಿಗೆ ಹಾನಿಯುಂಟಾಗುತ್ತದೆ. ಹಿಂದಿನ, ಅದಕ್ಕಿಂತಲೂ ಹಿಂದಿನ ಪ್ರಜೆಗಳನ್ನು ಆಳುವುದು ಸುಲಭವಾಗಿತ್ತು.
ಮೃದವಃ ಸತ್ಯಭೂಯಿಷ್ಠಾ ಅಲ್ಪದ್ರೋಹಾಲ್ಪಮನ್ಯವಃ|
ಪುರಾ ಧಿಗ್ದಂಡ ಏವಾಸೀದ್ವಾಗ್ದಂಡಸ್ತದನಂತರಮ್ ॥19॥
ಆ ಪ್ರಾಚೀನ ಪ್ರಜೆಗಳು ಮೃದು ಸ್ವಭಾವದವರು, ಸತ್ಯನಿಷ್ಠರೂ, ಅಲ್ಪದ್ರೋಹಿಗಳು, ಅಕ್ರೋಧರು ಆಗಿದ್ದರು. ಆದ್ದರಿಂದ ನಿನ್ನ ನಡತೆಗೆ ಧಿಕ್ಕಾರ ಎಂಬ ಮಾತೇ ಅವರಿಗೆ ದೊಡ್ಡ ಶಿಕ್ಷೆಯಾಗುತ್ತಿತ್ತು. ಕಾಲವು ಕಳೆದಂತೆ ಧಿಕ್ಕಾರಕ್ಕೆ ಹೆದರುತ್ತಿರಲಿಲ್ಲ.
ಆಸೀದಾದಾನದಂಡೋಽಪಿ ವಧದಂಡೋಽದ್ಯ ವರ್ತತೇ|
ವಧೇನಾಪಿ ನ ಶಕ್ಯಂತೇ ನಿಯಂತುಮಪರೇ ಜನಾಃ ॥20॥
ವಾಗ್ದಂಡದ ಪರಿಣಾಮವು ಕಾಣದಿದ್ದಾಗ ಅಪರಾಧಿಯ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಆದಾನದಂಡವು ಆರಂಭವಾಯಿತು. ಕಾಲಕ್ರಮದಲ್ಲಿ ಅದಕ್ಕೂ ಬಗ್ಗದಿದ್ದಾಗ ಮರಣದಂಡನೆಯೇ ಚಾಲ್ತಿಗೆ ಬಂದಿತು. ಕೆಲವು ದಸ್ಯು (ಕಳ್ಳ) ಗಳನ್ನು ಮರಣದಂಡನೆ ನೀಡದೆ ನಿಯಂತ್ರಿಸಲಾಗುವುದಿಲ್ಲ.
ನೈವ ದಸ್ಯುರ್ಮನುಷ್ಯಾಣಾಂ ನ ದೇವಾನಾಮಿತಿ ಶ್ರುತಿಃ|
ನ ಗಂಧರ್ವಪಿತೃಣಾಂ ಚ ಕಃ ಕಸ್ಯೇಹ ನ ಕಶ್ಚನ ॥21॥
ದರೋಡೆಕೋರನು ಮನುಷ್ಯನಾಗಲಿ, ದೇವತೆಯಾಗಿರಲಿ, ಗಂಧರ್ವ-ಪಿತೃಗಳೇ ಆಗಿರಲಿ, ನಮ್ಮವರಲ್ಲ ಎಂದು ಭಾವಿಸಿ ಶಿಕ್ಷೆಗೆ ಒಳಪಡಿಸಬೇಕು.
ಪಕ್ವಂ ಶ್ಮಶಾನಾದಾದತ್ತೇ ಪಿಶಾಚಾಚ್ಚಾಪಿ ದೈವತಮ್|
ತೇಷು ಯಃ ಸಮಯಂ ಕುರ್ಯಾದಜ್ಞೇಷು ಹತಬುದ್ಧಿಷು ॥22॥
ರಾಜದಂಡದಿಂದ ಹತನಾದ ಕಳ್ಳನು ಪಿಶಾಚಿಯಾದ ಬಳಿಕವೂ ಮರಣ ದಿನದಿಂದ ಆರಂಭಿಸಿ ಹತ್ತನೆಯ ದಿನದಲ್ಲಿ ದೇವತಾ ಸಂಬಂಧಿಯಾದ ಸಂಪತ್ತನ್ನು ಅರ್ಥಾತ್ ಬಲಭಾಗದಲ್ಲಿ ನೀಡಿದ ಯಮನ ದ್ರವ್ಯವನ್ನು, ಉತ್ತರ ಭಾಗದಲ್ಲಿ ನೀಡಿದ ರುದ್ರನ ಪಿಂಡವನ್ನು, ಮಧ್ಯಭಾಗದಲ್ಲಿ ಯಮನ ಪಿಂಡವನ್ನು ಸ್ಮಶಾನದಲ್ಲಿಯೂ ಕದ್ದು ತಿನ್ನುತ್ತಾನೆ. ಅಲ್ಲಿಗೆ ಆಗಮಿಸಿರುವ ಪ್ರಜೆಗಳನ್ನೂ ಪ್ರವೇಶಿಸಿ ಬಾಧಿಸುತ್ತಾನೆ. ಇಂತಹ ಬುದ್ಧಿಶೂನ್ಯರಾದ ದರೋಡೆಕೋರರ ವಿಷಯದಲ್ಲಿ ಯಾರು ತಾನೇ ವಿಶ್ವಾಸವನ್ನಿಡುತ್ತಾರೆ?
ಸತ್ಯವಾನ್
ತಾನ್ನ ಶಕ್ನೋಷಿ ಚೇತ್ ಸಾಧೂನ್ ಪರಿತ್ರಾತುಮಹಿಂಸಯಾ|
ಕಸ್ಯಚಿದ್ಭೂತಭವ್ಯಸ್ಯ ಲಾಭೇನಾಂತಂ ತಥಾ ಕುರು॥23॥
ತಂದೆಯೇ, ನೀನು ದಸ್ಯುಗಳನ್ನು ಸಂಹರಿಸದೆ ಸತ್ಪುರುಷರನ್ನು ರಕ್ಷಿಸಲು ಅಸಮರ್ಥನಾದರೆ, ಹಿಂದೆ-ಮುಂದಿನ ಜಗತ್ತಿನ ರಕ್ಷಣೆಗಾಗಿ ದಸ್ಯುಗಳನ್ನು ಸಂಹರಿಸಿಬಿಡು.
ದ್ಯುಮತ್ಸೇನಃ
ರಾಜಾನೋ ಲೋಕಯಾತ್ರಾರ್ಥಂ ತಪ್ಯಂತೇ ಪರಮಂ ತಪಃ|
ಅಪತ್ರಪಂತಿ ತಾದೃಗ್ಭ್ಯಸ್ತಥಾವೃತ್ತಾ ಭವಂತಿ ಚ ॥24॥
ರಾಜರು ಪ್ರಜೆಗಳ ಜೀವನವು ಸುಖವಾಗಿರಲೆಂದು ತಪಸ್ಸನ್ನಾಚರಿಸುತ್ತಾರೆ. ಪ್ರಜೆಗಳಿಗೆ ದಸ್ಯುಗಳಿಂದ ದುಃಖ ಉಂಟಾದಲ್ಲಿ ಅವರೇ ನಾಚಿಕೆ ಪಡುತ್ತಾರೆ. ಅದಕ್ಕೆ ತಕ್ಕಂತೆ ನಡೆದುಕೊಳ್ಳುತ್ತಾರೆ.

ವಿತ್ರಾಸ್ಯಮಾನಾಃ ಸುಕೃತೋ ನ ಕಾಮಾದ್ ಘ್ನಂತಿ ದುಷ್ಕೃತೀನ್ |
ಸುಕೃತೇನ್ಯೈವ ರಾಜಾನೋ ಭೂಯಿಷ್ಠಂ ಶಾಸತೇ ಪ್ರಜಾಃ ॥25॥
ಶಿಕ್ಷೆಯ ಭಯದಿಂದಲೇ ಪ್ರಜೆಗಳು ಪುಣ್ಯಕರ್ಮಗಳನ್ನು ಮಾಡುತ್ತಾರೆ. ಪ್ರಜೆಗಳನ್ನು ಧರ್ಮನಿಷ್ಠರನ್ನಾಗಿ ಮಾಡುವುದೇ ಶಿಕ್ಷೆಯ ಉದ್ದೇಶವು. ಪ್ರಾಮಾಣಿಕ ರಾಜರು ದಸ್ಯುಗಳನ್ನು ಒಮ್ಮೆಲೆ ಕೊಲ್ಲುವುದಿಲ್ಲ. ಆದಷ್ಟು ಸತ್ಕರ್ಮ, ಸದ್ವ್ಯವಹಾರಗಳಿಂದ ಮುನ್ನಡೆಯುವಂತೆ ಶಾಸನ ಮಾಡುತ್ತಾರೆ.
ಶ್ರೇಯಸಃ ಶ್ರೇಯಸೀಮೇವಂ ವೃತ್ತಿಂ ಲೋಕೋಽನುವರ್ತತೇ |
ಸದೈವ ಹಿ ಗುರೋರ್ವೃತ್ತಮನುವರ್ತಂತಿ ಮಾನವಾಃ ॥26॥
ರಾಜನ ಸತ್ಪ್ರವೃತ್ತಿಗಳೇ ಪ್ರಜೆಗಳಿಗೆ ಮಾರ್ಗದರ್ಶನವು. ಸಹಜವಾಗಿ ಮನುಷ್ಯರು ಉತ್ತಮ ಪುರುಷರ ಆಚರಣೆಗಳನ್ನೇ ಅನುಸರಿಸಿ ನಡೆಯುತ್ತಾರೆ.
ಆತ್ಮಾನಮಸಮಾಧಾಯ ಸಮಾಧಿತ್ಸತಿ ಯಃ ಪರಾನ್ |
ವಿಷಯೇಷ್ವಿಂದ್ರಿಯವಶಂ ಮಾನವಾಃ ಪ್ರಹಸಂತಿ ತಮ್ ॥27॥
ಯಾವ ರಾಜನು ತನ್ನ ಮನಸ್ಸನ್ನೇ ವಿಷಯಗಳಿಂದ ನಿಗ್ರಹಿಸಿಕೊಳ್ಳದೆ, ಇಂದ್ರಿಯಗಳ ಗುಲಾಮನಾಗಿದ್ದು, ಮತ್ತೊಬ್ಬರ ಮನಸ್ಸನ್ನು ನಿಯಂತ್ರಿಸಿಕೊಳ್ಳುವಂತೆ ಸದಾಚಾರಿಗಳಾಗಿರೆಂದು ಉಪದೇಶಿಸುತ್ತಾನೋ ಅವನನ್ನು ನೋಡಿ ಜನರು ಅಪಹಾಸ್ಯ ಮಾಡುತ್ತಾರೆ.
ಯೋ ರಾಜ್ಞೋ ದಂಭಮೋಹೇನ ಕಿಂಚಿತ್ಕುರ್ಯಾದಸಾಂಪ್ರತಮ್ |
ಸರ್ವೋಪಾಯೈರ್ನಿಯಮ್ಯಃ ಸ ತಥಾ ಪಾಪಾನ್ನಿವರ್ತತೇ ॥28॥
ರಾಜನ ವಿಷಯದಲ್ಲಿ ಯಾವ ದಸ್ಯುವು ಜಂಭ, ಮೋಹದಿಂದ ತಪ್ಪಾಗಿ ನಡೆದುಕೊಳ್ಳುತ್ತಾನೋ, ರಾಜನು ಅಂಥವನನ್ನು ಉಪಾಯದಿಂದ ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳಬೇಕು. ಇದರಿಂದ ಅವನು ಪಾಪಕರ್ಮದಿಂದ ನಿವೃತ್ತನಾಗುತ್ತಾನೆ.
ಆತ್ಮೈವಾದೌ ನಿಯಂತವ್ಯೋ ದುಷ್ಕೃತಂ ಸನ್ನಿಯಚ್ಛತಾ |
ದಂಡಯೇಚ್ಚ ಮಹಾದಂಡೈರಪಿ ಬಂಧೂನನಂತರಾನ್ ॥29॥
ದುಷ್ಕೃತ್ಯವನ್ನು ತಡೆಯುವ ಬಯಕೆಯುಳ್ಳ ರಾಜನು ಮೊದಲು ತನ್ನನ್ನು ನಿಯಂತ್ರಿಸಿಕೊಳ್ಳಬೇಕು. ಬಳಿಕ ಅಪರಾಧ ಮಾಡಿದ ತನ್ನ ಬಂಧು-ಜ್ಞಾತಿಗಳಿಗೂ ನಿಷ್ಪಕ್ಷಪಾತಿಯಾಗಿ ಶಿಕ್ಷಿಸಬೇಕು.
ಯತ್ರ ವೈ ಪಾಪಕೃತ್ ಕ್ಲೇಶ್ಯೋ ನ ಮಹದ್ದುಃಖಮರ್ಛತಿ |
ವರ್ಧಂತೇ ತತ್ರ ಪಾಪಾನಿ ಧರ್ಮೋ ಹ್ರಸತಿ ಚ ಧ್ರುವಮ್ |
ಇತಿ ಕಾರುಣ್ಯಶೀಲಸ್ತು ವಿದ್ವಾನ್ ವೈ ಬ್ರಾಹ್ಮಣೋನ್ವಶಾತ್ ॥30॥
ಯಾವ ದೇಶದಲ್ಲಿ ಪಾಪಕರ್ಮಿಗಳು, ನೀಚರು ರಾಜನ ದಂಡನೆಯಿಂದ ದುಃಖವನ್ನು ಅನುಭವಿಸುವುದಿಲ್ಲವೋ ಆ ದೇಶದಲ್ಲಿ ಪಾಪಕರ್ಮಗಳು ಹೆಚ್ಚುತ್ತವೆ, ಧರ್ಮವು ಅಳಿಯುತ್ತದೆ. ಈ ರೀತಿ ಕರುಣಾಶೀಲನಾದ ಬ್ರಾಹ್ಮಣನೊಬ್ಬನು ನನಗೆ ಹೇಳಿದ್ದಾನೆ.
ಇತಿ ಚೈವಾನುಶಿಷ್ಟೋಽಸ್ಮಿ ಪೂರ್ವೈಸ್ತಾತ ಪಿತಾಮಹೈಃ |
ಆಶ್ವಾಸಯದ್ಭಿಃ ಸುಭೃಶಮನುಕ್ರೋಶಾತ್ತಥೈವ ಚ ॥31॥
ಸತ್ಯವಂತನೇ, ಹಿಂದಿನ ಪಿತಾಮಹರು ಕರುಣೆಯಿಂದ ನನ್ನನ್ನು ಸಮಾಧಾನ ಪಡಿಸುತ್ತಾ ಹೀಗೆ ಆದೇಶ ಮಾಡಿದ್ದಾರೆ.
ಏತತ್ ಪ್ರಥಮಕಲ್ಪೇನ ರಾಜಾ ಕೃತಯುಗೇಽಭಜತ್ |
ಪಾದೋನೇನಾಪಿ ಧರ್ಮೇಣ ಗಚ್ಛೇತ್ ತ್ರೇತಾಯುಗೇ ತಥಾ |
ದ್ವಾಪರೇ ತು ದ್ವಿಪಾದೇನ ಪಾದೇನ ತ್ವಪರೇ ಯುಗೇ ॥32॥
ತ್ರೇತಾಯುಗವು ಆರಂಭವಾಗುತ್ತಲೇ ಒಂದು ಪಾದದಿಂದ ಹೀನವಾಗುತ್ತದೆ. ದ್ವಾಪರದಲ್ಲಿ ಧರ್ಮದ ಎರಡು ಪಾದಗಳು ಉಳಿದು ಎರಡು ಪಾದ ನಾಶ ಹೊಂದುತ್ತವೆ. ಕಲಿಯುಗದಲ್ಲಿ ಒಂದೇ ಪಾದ ಧರ್ಮವು ಉಳಿದಿದೆ.
ತಥಾ ಕಲಿಯುಗೇ ಪ್ರಾಪ್ತೇ ರಾಜ್ಞಾಂ ದುಶ್ಚರಿತೇನ ಹ |
ಭವೇತ್ ಕಾಲವಿಶೇಷೇಣ ಕಲಾ ಧರ್ಮಸ್ಯ ಷೋಡಶೀ ॥33॥
ಕಲಿಯುಗವು ಮುಂದುವರೆಯುತ್ತಿದ್ದಂತೆ ರಾಜರ ದುಷ್ಕರ್ಮಗಳ ಫಲದಿಂದ ಕಾಲಿಕವಾಗಿ ಧರ್ಮದ ಹದಿನಾರನೆಯ ಒಂದು ಭಾಗವು ಮಾತ್ರ ಉಳಿಯುತ್ತದೆ.
ಅಥ ಪ್ರಥಮಕಲ್ಪೇನ ಸತ್ಯವನ್ ಸಂಕರೋ ಭವೇತ್ |
ಆಯುಃ ಶಕ್ತಿಂ ಚ ಕಾಲಂ ಚ ನಿರ್ದಿಶ್ಯ ತಪ ಆದಿಶೇತ್ ॥34॥
ಸತ್ಯವಂತನೇ, ಧಿಕ್ಕಾರವೆಂಬ ದಂಡನೆಯಿಂದ ಧರ್ಮಕ್ಕೆ ಸಂಕರ ಉಂಟಾಗುತ್ತದೆ ಎಂದು ತೋರಿದ ಪಕ್ಷದಲ್ಲಿ, ಆಯುಸ್ಸನ್ನು, ಶಕ್ತಿಯನ್ನು, ಕುಲವನ್ನು ಪರಿಶೀಲಿಸಿ ಅವನಿಗೆ ಉಚಿತವಾದ ಶಿಕ್ಷೆಯನ್ನು ನೀಡಬೇಕು.
ಸತ್ಯಾಯ ಹಿ ಯಥಾ ನೇಹ ಜಹ್ಯಾದ್ಧರ್ಮಫಲಂ ಮಹತ್ |
ಭೂತಾನಾಮನುಕಂಪಾರ್ಥಂ ಮನುಃ ಸ್ವಾಯಂಭುವೋಽಬ್ರವೀತ್ ॥
ಧರ್ಮಕ್ಕೆ ಪ್ರಧಾನ ಫಲವು ಸತ್ಯವೆಂಬ ಮೋಕ್ಷಸಾಧನೆಯೇ ಆಗಿದೆ. ಪ್ರಾಣಿಗಳ ಅನುಗ್ರಹಕ್ಕಾಗಿ ಈ ರೀತಿ ಸ್ವಾಯಂಭುವ ಮನುವೇ ಹೇಳಿರುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ದ್ಯುಮತ್ಸೇನಸತ್ಯವತ್ಸಂವಾದೋ ನಾಮ
ದ್ವ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.

* * * * *

नूರ ಮೂರನೆಯ ಅಧ್ಯಾಯ
ಪಶುವಧೆಯನ್ನು ಮಾಡದೆ ಯಜ್ಞ ಮಾಡಬೇಕೆಂಬ ವಿಷಯದಲ್ಲಿ
ಕಪಿಲ ಮತ್ತು ಸ್ಯೂಮರಶ್ಮಿ ಇವರಿಗೆ ನಡೆದ ಸಂವಾದವು.
ಯುಧಿಷ್ಠಿರಃ
ಅವಿರೋಧೇನ ಭೂತಾನಾಂ ತ್ಯಾಗಃ ಷಾಡ್ಗುಣ್ಯಕಾರಕಃ |
ಯಃ ಸ್ಯಾದುಭಯಭಾಗ್ ಧರ್ಮಸ್ತನ್ಮೇ ಬ್ರೂಹಿ ಪಿತಾಮಹ ||1||
ಪಿತಾಮಹನೇ, ಪ್ರಾಣಿಗಳಿಗೆ ಹಿಂಸೆಯಾಗದಂತೆ ರಾಜನಿಗೆ ಇರಬೇಕಾದ ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮ, ಕೀರ್ತಿ, ಶಾಂತಿ ಎಂಬ ಆರು ಗುಣಗಳನ್ನು ಕೊಡುಸುವಂತಹ ಐಹಿಕ, ಆಮುಷ್ಮಿಕ ಫಲಗಳಿಗೆ ಸಾಧನಭೂತವಾದ ಧರ್ಮವು ಯಾವುದು ಎಂದು ನನಗೆ ವಿವರಿಸು.
ಗಾರ್ಹಸ್ಥ್ಯಸ್ಯ ಚ ಧರ್ಮಸ್ಯ ತ್ಯಾಗಧರ್ಮಸ್ಯ ಚೋಭಯೋಃ |
ಅದೂರಸಂಪ್ರಸ್ಥಿತಯೋಃ ಕಿಂ ಸ್ವಿಚ್ಛ್ರೇಯಃ ಪಿತಾಮಹ ||2||
ಪಿತಾಮಹನೇ, ಗೃಹಸ್ಥಧರ್ಮಕ್ಕೂ ಸಂನ್ಯಾಸಧರ್ಮಕ್ಕೂ ಹೆಚ್ಚು ಅಂತರವಿರುವುದಿಲ್ಲ. ಎರಡರ ಉದ್ದೇಶವು ಒಂದೇ ಆಗಿರುವುದರಿಂದ ಈ ಎರಡರಲ್ಲಿ ಯಾವುದು ಶ್ರೇಷ್ಠವಾದುದು?
ಭೀಷ್ಮಃ
ಉಭೌ ಧರ್ಮೌ ಮಹಾಭಾಗಾವುಭೌ ಪರಮದುಶ್ಚರೌ |
ಉಭೌ ಮಹಾಫಲೌ ತಾತ ಸದ್ಭಿರಾಚರಿತಾವುಭೌ ||3||
ಯುಧಿಷ್ಠಿರನೇ, ಗಾರ್ಹಸ್ಥ್ಯಧರ್ಮ, ಯೋಗಧರ್ಮವೆಂಬ ಎರಡು ಧರ್ಮಗಳು ಶ್ರೇಯಸ್ಸನ್ನು ಉಂಟುಮಾಡುವ ಧರ್ಮಗಳೇ ಆಗಿವೆ. ಈ ಎರಡು ಧರ್ಮಗಳನ್ನು ಆಚರಿಸಲು ಬಹಳ ಕಷ್ಟವು. ಎರಡೂ ಧರ್ಮಗಳು ಉತ್ತಮ ಫಲಪ್ರದಗಳು. ಈ ಎರಡೂ ಧರ್ಮಗಳನ್ನು ಸತ್ಪುರುಷರು ನಿಯಮೇನ ಅನುಷ್ಠಾನ ಮಾಡಿರುತ್ತಾರೆ.
ಅತ್ರ ತೇ ವರ್ತಯಿಷ್ಯಾಮಿ ಪ್ರಾಮಾಣ್ಯಮುಭಯೋಸ್ತಯೋಃ |
ಶೃಣುಷ್ವೈಕಮನಾಃ ಪಾರ್ಥ ಛಿನ್ನಧರ್ಮಾರ್ಥಸಂಶಯಮ್ ||4||
ಯುಧಿಷ್ಠಿರನೇ, ಈ ಎರಡು ಧರ್ಮಗಳ ಪ್ರಾಮಾಣ್ಯವನ್ನೇ ನಿನಗೆ ಈಗ ಬೋಧಿಸುತ್ತೇನೆ. ಧರ್ಮಾರ್ಥಗಳ ಸಂಶಯಗಳನ್ನೆಲ್ಲ ಪರಿಹರಿಸಿಕೊಳ್ಳುವಂತೆ ಏಕಾಗ್ರತೆಯಿಂದ ಕೇಳಿಸಿಕೊ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಕಪಿಲಸ್ಯ ಗೋಶ್ಚ ಸಂವಾದಂ ತನ್ನಿಬೋಧ ಯುಧಿಷ್ಠಿರ ||5||
ಇದೇ ವಿಷಯದಲ್ಲಿ ಕಪಿಲಮುನಿಗೂ ಗೋವಿಗೂ ನಡೆದ ಪುರಾತನವಾದ ಇತಿಹಾಸ ರೂಪವಾದ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ. ಅದನ್ನು ವಿವರಿಸುತ್ತೇನೆ, ಕೇಳು.
ಆಮ್ನಾಯಮನುಪಶ್ಯನ್ ಹಿ ಪುರಾಣಂ ಶಾಶ್ವತಂ ಧ್ರುವಮ್ |
ನಹುಷಃ ಪೂರ್ವಮಾಲೇಭೇ ತ್ವಷ್ಟುರ್ಗಾಮಿತಿ ನಃ ಶ್ರುತಮ್ ||6||
ಹಿಂದೆ ನಹುಷರಾಜನು ವೇದಗಳ ಶಾಸನವನ್ನೇ ಪ್ರಾಚೀನವೆಂದೂ, ಸನಾತನವೂ, ನಿಶ್ಚಿತವಾದುದು ಎಂದು, ಅದರ ಗುರಿಯಾದ ಅರ್ಥವನ್ನು ಸರಿಯಾಗಿ ತಿಳಿಯದೆ ತನ್ನ ಮನೆಗೆ ಅತಿಥಿಯಾಗಿ ಬಂದ ಒಂದು ಗೋವನ್ನು ಕೊಲ್ಲುವುದಕ್ಕಾಗಿ ಯತ್ನಿಸುತ್ತಿದ್ದನಂತೆ. ವ್ಯಾಖ್ಯಾನ ವಿಶೇಷ `ತ್ವಾಷ್ಟ್ರಂ ಬಹುರೂಪಂ ಆಲಭೇತ' ಎಂದು ಶ್ರುತಿಯಲ್ಲಿ ಹೇಳಿರುವಂತೆ ತ್ವಷ್ಟ್ರುದೇವತೆಯನ್ನು ಒಲಿಸಿಕೊಳ್ಳಲು ಗವಾಲಂಬನ ಉದ್ಯುಕ್ತನಾದನು ಎಂದು ಕೇಳಿದ್ದೇವೆ.
ತಾಂ ನಿಯುಕ್ತಾಮದೀನಾತ್ಮಾ ಸತ್ತ್ವಸ್ಥಃ ಸಮಯೇ ರತಃ |
ಜ್ಞಾನವಾನ್ನಿಯತಾಹಾರೋ ದದರ್ಶ ಕಪಿಲಸ್ತದಾ ||7||
ಹೀಗೆ ಅವನು ಗೋವನ್ನು ಕೊಲ್ಲಲು ಪ್ರಯತ್ನಿಸುತ್ತಿರುವ ಸಮಯದಲ್ಲಿಯೇ ಸರಿಯಾಗಿ ಸಾತ್ವಿಕನೂ ಶುದ್ಧಮನಸ್ವಿಯೂ, ಜ್ಞಾನಿಯೂ, ಧ್ಯಾನನಿಷ್ಠನೂ, ನಿಯತಾಹಾರಿಯೂ ಆದ ಕಪಿಲಮುನಿಯು ಅಲ್ಲಿಗೆ ಆಗಮಿಸಿ, ನಹುಷನು ಪಶುವಧೆಯನ್ನು ಮಾಡುತ್ತಿರುವ ಸನ್ನಿವೇಶವನ್ನು ನೋಡಿದನು.
ಸ ಬುದ್ಧಿಮುತ್ತಮಾಂ ಪ್ರಾಪ್ತೋ ನೈಷ್ಠಿಕೀಮಕುತೋಭಯಾಮ್ |
ಸ್ವರೇಣ ಶಿಥಿಲೋಽಸತ್ಯಾ ವೇದಾ ಇತ್ಯಬ್ರವೀತ್ ಸಕೃತ್ ||8||
ಆ ಕಪಿಲಮುನಿಯು ಉತ್ತಮ ಜ್ಞಾನಿಯಾಗಿದ್ದನು. ಭಯರಹಿತನಾದವನಾಗಿದ್ದನು. ದೃಢಮನಸ್ಕನಾಗಿದ್ದನು. ಆದರೂ ಅಲ್ಲಿನ ಸ್ಥಿತಿಯನ್ನು ನೋಡಿ ಉಚ್ಚಸ್ವರದಿಂದ ಇದು ಅಧರ್ಮ ಎಂದು ಹೇಳಲು ಭಯಗೊಂಡವನಾಗಿ, ವೇದಗಳಲ್ಲಿ ದವಾಲಂಭನವನ್ನು ವಿಧಿ ಮಾಡಿರುವುದರಿಂದ ಗಟ್ಟಿಯಾಗಿ ಹೇಳಲು ಅಂಜಿಕೊಂಡು, ವೇದಗಳು ಅಸತ್ಯ ಎಂದು ಒಂದು ಬಾರಿ ಆ ಸಭೆಯಲ್ಲಿ ಮೆಲ್ಲನೆ ಹೇಳಿದನು.
ತಾಂ ಗಾಮೃಷಿಃ ಸ್ಯೂಮರಶ್ಮಿಃ ಪ್ರವಿಶ್ಯ ಯತಿಮಬ್ರವೀತ್ |
ಅಂಹೋ ವೇದಾ ಯದಿ ಮತಾ ಧರ್ಮಾಃ ಕೇನಾಪರೇ ಮತಾಃ ||9||
ಇದೇ ಸಮಯದಲ್ಲಿ ಸ್ಯೂಮರಶ್ಮಿ ಎಂಬ ಮಹರ್ಷಿಯು ಆ ಪಶುವಿನೊಳಗೆ ಸೇರಿಕೊಂಡು ಕಪಿಲನನ್ನು ಕುರಿತು, ಕಪಿಲನೇ, ವೇದಗಳೇ ಪಾಪಹೇತುಗಳು ಎನ್ನುವ ಪಕ್ಷದಲ್ಲಿ ಧರ್ಮಗಳು ಹೇಗೆ ತಾನೇ ಆದರಣೀಯಗಳಾಗುತ್ತವೆ?
ತಪಸ್ವಿನೋ ಧೃತಿಮತಃ ಶ್ರುತಿವಿಜ್ಞಾನಚಕ್ಷುಷಃ |

ಸರ್ವಮಾರ್ಷಂ ಹಿ ಮನ್ಯಂತೇ ವ್ಯಾಹೃತಂ ವಿದಿತಾತ್ಮನಃ ॥10॥
ಜ್ಞಾನಿಗಳು, ಜ್ಞಾನಚಕ್ಷುಸ್ಸುಗಳಾದ ಶ್ರುತಿವಿಜ್ಞಾನಿಗಳೂ ಆದ ಮಹರ್ಷಿಗಳು ಸಮಸ್ತ ವೇದಗಳನ್ನು ಸರ್ವಜ್ಞನಾದ ಭಗವಂತನ ವಚನಗಳೆಂದು, ಅವುಗಳನ್ನೇ ಋಷಿಗಳು ತಿಳಿದಿರುತ್ತಾರೆಂದು ಹೇಳುತ್ತಾರೆ.
ತಸ್ಯೈವಂ ಗತತೃಷ್ಣಸ್ಯ ವಿಜ್ವರಸ್ಯ ನಿರಾಶಿಷಃ |
ಕಾ ವಿವಕ್ಷಾಸ್ತಿ ವೇದೇಷು ನಿರಾರಂಭಸ್ಯ ಸರ್ವಶಃ ॥11॥
ಕಪಿಲಮುನಿಯಾದ ನೀನಾದರೂ ಯಾವುದೇ ಫಲಾಪೇಕ್ಷೆ ಇಲ್ಲದವನಾಗಿರುತ್ತಿ. ಇಚ್ಛಾ-ದ್ವೇಷಗಳಿಂದ ದೂರನಾಗಿರುವಿ. ಆಸೆಗಳಿಂದ ವಿದೂರನಾಗಿರುವಿ. ಯಜ್ಞ ಮೊದಲಾದ ಕರ್ಮಗಳಿಂದ ಯತಿರೂಪಿಯಾದ ನೀನು ದೂರನಾಗಿರುವಿ. ಆದ್ದರಿಂದ ವೇದಗಳ ಅಭಿಪ್ರಾಯಕ್ಕೆ ವಿರುದ್ಧವಾಗಿ ವೇದಗಳನ್ನು ನೀನು ನಿಂದಿಸುತ್ತಿರುವಿ.
ಕಪಿಲಃ
ನಾಹಂ ವೇದಾನ್ ವಿನಿಂದಾಮಿ ನ ವಿವಕ್ಷಾಮಿ ಕರ್ಹಿಚಿತ್ |
ಪೃಥಗಾಶ್ರಮಿಣಾಂ ಕರ್ಮಾಣ್ಯೇಕಾರ್ಥಾನೀತಿ ನಃ ಶ್ರುತಮ್ ॥12॥
ನಾನು ವೇದಗಳನ್ನು ನಿಂದಿಸುತ್ತಿಲ್ಲ. ವೇದವಿರುದ್ಧವಾದ ಅಭಿಪ್ರಾಯವನ್ನು ಹೇಳುತ್ತಿಲ್ಲ. ಪ್ರತ್ಯೇಕ, ಪ್ರತ್ಯೇಕವಾದ ಆಶ್ರಮಗಳಿಗೆ ಯಾವ ಯಾವ ಕರ್ಮಗಳಿವೆಯೋ ಪ್ರಯೋಜನಗಳಿವೆಯೋ ಅವೆಲ್ಲವೂ ಒಂದೇ ಉದ್ದೇಶದಿಂದ ಎಂದು ತಿಳಿದಿದ್ದೇನೆ. ಸ್ವರ್ಗವೆಂಬ ಫಲವನ್ನು ಹೊಂದುವುದಕ್ಕಾಗಿಯೇ ಆಶ್ರಮ, ಕರ್ಮ ಎಂಬ ವಿಭಜನೆ ಇರುತ್ತದೆ.
ಗಚ್ಛತ್ಯೇವ ಪರಿತ್ಯಾಗೀ ವಾನಪ್ರಸ್ಥಶ್ಚ ಗಚ್ಛತಿ |
ಗೃಹಸ್ಥೋ ಬ್ರಹ್ಮಚಾರೀ ಚ ಉಭೌ ತಾವಪಿ ಗಚ್ಛತಃ ॥13॥
ಸರ್ವಸಂಗವನ್ನು ತ್ಯಜಿಸಿದ ಸಂನ್ಯಾಸಿಯು ಪರಲೋಕವನ್ನು ಹೊಂದುತ್ತಾನೆ. ವಾನಪ್ರಸ್ಥಾಶ್ರಮಿಯು ಪರಲೋಕಕ್ಕೆ ಹೋಗುತ್ತಾನೆ. ಗೃಹಸ್ಥ-ಬ್ರಹ್ಮಚಾರಿಗಳು ಪರಮ ಪದವಿಗೆ ಸೇರುತ್ತಾರೆ.
ದೇವಯಾನಾ ಹಿ ಪಂಥಾನಶ್ಚತ್ವಾರಃ ಶಾಶ್ವತಾ ಮತಾಃ |
ತೇಷಾಂ ಜ್ಯಾಯಃಕನೀಯಸ್ತ್ವಂ ಫಲೇಷೂಕ್ತಂ ಬಲಾಬಲಮ್ ॥14॥
ನಾಲ್ಕು ಆಶ್ರಮಗಳು ಪರಮಪದ ಪ್ರಾಪ್ತಿಗೆ ದೇವಯಾನ ಎಂಬ ಹೆಸರಿನ ಶಾಶ್ವತವಾದ ನಾಲ್ಕು ಮಾರ್ಗಗಳಾಗಿವೆ. ಅವುಗಳಲ್ಲಿ ಶ್ರೇಷ್ಠತ್ವ, ಕನಿಷ್ಟತ್ವ, ಬಲಾಬಲಗಳು ಆಯಾ ಆಶ್ರಮಗಳ ಫಲಗಳನ್ನು ನಿಮಿತ್ತ ಮಾಡಿಕೊಂಡು ಹೇಳಲ್ಪಡುತ್ತಿವೆ.
ಏವಂ ವಿದಿತ್ವಾ ಸರ್ವಾರ್ಥಾನಾರಭೇದಿತಿ ವೈದಿಕಮ್ |
ನಾರಭೇದಿತಿ ಚಾನ್ಯತ್ರ ನೈಷ್ಠಿಕೀ ಶ್ರೂಯತೇ ಶ್ರುತಿಃ ॥15॥
ಹೀಗೆ ಕರ್ಮಗಳ ಫಲಗಳನ್ನು ತಿಳಿದುಕೊಂಡು, ಸ್ವರ್ಗಾದಿ ಫಲವನ್ನೀಯುವ ಯಜ್ಞಫಲವನ್ನು ಮಾಡಬೇಕು ಎಂದು ವೈದಿಕ ಮತವು. ಇವೇ ವೇದಗಳು ಮತ್ತೊಂದು ಕಡೆ ಕರ್ಮಗಳನ್ನು ಆರಂಭಿಸಲೇ ಬಾರದು ಎಂದು ಹೇಳುತ್ತವೆ.
ಅನಾರಂಭೇ ಹ್ಯದೋಷಃ ಸ್ಯಾದಾರಂಭೇ ದೋಷ ಉತ್ತಮಃ |
ಏವಂ ಸ್ಥಿತಸ್ಯ ಶಾಸ್ತ್ರಸ್ಯ ದುರ್ವಿಜ್ಞೇಯಂ ಬಲಾಬಲಮ್ ॥16॥
ಕರ್ಮವನ್ನು ಮಾಡದಿದ್ದರೆ ದೋಷ ಉಂಟಾಗುವುದಿಲ್ಲ. ಕರ್ಮಾರಂಭವನ್ನು ಮಾಡಿದರೆ ದೋಷವು ಉಂಟಾಗುತ್ತದೆ. ಈ ರೀತಿಯಾಗಿ ಶಾಸ್ತ್ರವು ಇರುವುದರಿಂದ ಶಾಸ್ತ್ರದಲ್ಲಿ ಹೇಳಿದ ಪುಣ್ಯ-ಪಾಪಗಳ ಬಲಾಬಲಗಳನ್ನು ತಿಳಿಯುವುದು ಕಷ್ಟಸಾಧ್ಯವು.
ಯದ್ಯತ್ರ ಕಿಂಚಿತ್ ಪ್ರತ್ಯಕ್ಷಮಹಿಂಸಾಯಾಃ ಪರಂ ಮತಮ್ |
ಋತೇ ತ್ವಾಗಮಶಾಸ್ತ್ರೇಭ್ಯೋ ಬ್ರೂಹಿ ತದ್ ಯದಿ ಪಶ್ಯಸಿ ॥17॥
ಅಹಿಂಸೆಯೇ ಶ್ರೇಷ್ಠವಾದ ಧರ್ಮ. ಅದಕ್ಕಿಂತಲೂ ಶ್ರೇಷ್ಠವಾದ ಯಾವ ಧರ್ಮವೂ ಇರುವುದಿಲ್ಲ. ಒಂದು ವೇಳೆ ಇದ್ದಲ್ಲಿ, ಅದಕ್ಕೆ ಸಂಬಂಧಿಸಿದ ಶ್ರುತಿಗಳು ನಿನಗೆ ಕಂಡುಬಂದಿದ್ದಲ್ಲಿ ಅದನ್ನು ನನಗೆ ತಿಳಿಸು. ಹಾಗೇನಾದರೂ ನಿನಗೆ ಆ ಶ್ರುತಿವಾಕ್ಯಗಳು ಕಂಡುಬಂದಿದ್ದಲ್ಲಿ ನೀನು ಮಾಡಿದ ಕರ್ಮವನ್ನು ತ್ಯಜಿಸಬೇಕಾಗಿರುವುದಿಲ್ಲ.
ಸ್ಯೂಮರಶ್ಮಿಃ
ಸ್ವರ್ಗಕಾಮೋ ಯಜೇತೇತಿ ಸತತಂ ಶ್ರೂಯತೇ ಶ್ರುತಿಃ |
ಫಲಂ ಪ್ರಕಲ್ಪ್ಯ ಪೂರ್ವಂ ಹಿ ತತೋ ಯಜ್ಞಃ ಪ್ರತಾಯತೇ ॥18॥
ಮಹರ್ಷಿಯೇ ಕೇಳು. `ಸ್ವರ್ಗಕಾಮೋ ಯಜೇತ' ಸ್ವರ್ಗವನ್ನು ಉದ್ದೇಶಿಸಿ ಯಾಗ ಮಾಡಬೇಕು ಎಂಬ ಶ್ರುತಿವಾಕ್ಯವನ್ನು ನಾವೆಲ್ಲರೂ ತಿಳಿದಿರುತ್ತೇವೆ. ಹೀಗಿರುವುದರಿಂದ ಮನುಷ್ಯನು ಯಾವುದಾದರೂ ಫಲವನ್ನು ಉದ್ದೇಶಿಸಿಕೊಂಡೇ ನಂತರ ಯಜ್ಞದಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ.
ಅಜಶ್ಚಾಶ್ವಶ್ಚ ಮೇಷಶ್ಚ ಗೌಶ್ಚ ಪಕ್ಷಿಗಣಾಶ್ಚ ಯೇ |
ಗ್ರಾಮ್ಯಾರಣ್ಯಾ ಓಷಧಯಃ ಪ್ರಾಣಸ್ಯಾನ್ನಮಿತಿ ಶ್ರುತಿಃ ॥19॥
ಮೇಕೆ, ಕುದುರೆ, ಕುರಿ, ಪಶು-ಪಕ್ಷಿಗಳು, ಗ್ರಾಮದಲ್ಲಿ ಬೆಳೆಯುವ ಓಷಧಿಗಳು, ಅರಣ್ಯದಲ್ಲಿ ಬೆಳೆಯುವ ಓಷದಿಗಳು, ಧಾನ್ಯಗಳು ಇವೆಲ್ಲ ಪ್ರಾಣಿಗಳಿಗೆ ಅನ್ನ ಎನಿಸುತ್ತವೆ.
ತಥೈವಾನ್ನಂ ಹ್ಯಹರಹಃ ಸಾಯಂ ಪ್ರಾತರ್ನಿರುಪ್ಯತೇ |
ಪಶವಶ್ಚಾಥ ಧಾನ್ಯಂ ಚ ಯಜ್ಞಸ್ಯಾಂಗಮಿತಿ ಶ್ರುತಿಃ ॥20॥
ಏತಾನಿ ಸಹ ಯಜ್ಞೇನ ಪ್ರಜಾಪತಿರಕಲ್ಪಯತ್ |
ತೇನ ಪ್ರಜಾಪತಿರ್ದೇವಾನ್ಯಜ್ಞೇನಾಯಜತ ಪ್ರಭುಃ ॥21॥
ಪ್ರತಿದಿವಸವು ಹಗಲು-ರಾತ್ರಿ ಪ್ರಾಣಿಗಳು ಅನ್ನಕ್ಕಾಗಿಯೇ ಹುಡುಕುತ್ತಿರುತ್ತವೆ. ಪಶುಗಳು ಮತ್ತು ಧಾನ್ಯಗಳು ಎರಡೂ ಯಜ್ಞಕ್ಕೆ

ಅಂಗಗಳೆಂದು ವೇದಗಳು ವಿಧಿಸಿವೆ.ಬ್ರಹ್ಮನು ಇವುಗಳನ್ನು ಯಜ್ಞದ ಜೊತೆಗೆ ಸೃಷ್ಟಿ ಮಾಡಿದ್ದಾನೆ. ಇಷ್ಟೇ ಅಲ್ಲದೆ ಅವುಗಳನ್ನು ದೇವತೆಗಳಿಂದ ತ್ಯಜಿಸುವಂತೆಯೂ ನಿಯಮನ ಮಾಡಿರುತ್ತಾನೆ.
ತೇ ಸ್ಮಾನ್ಯೋನ್ಯಂಚರಾಃ ಸರ್ವೇ ಪ್ರಾಣಿನಃ ಸಪ್ತ ಸಪ್ತ ಚ |
ಯಜ್ಞೇಷೂಪಾಕೃತಂ ವಿಶ್ವಂ ಪ್ರಾಹುರುತ್ತಮಸಂಜ್ಞಿತಮ್ ॥22॥
ಏಳು ಅರಣ್ಯಜಂತುಗಳು, ಏಳು ಗ್ರಾಮಜಂತುಗಳು ಯಜ್ಞಕ್ಕೆ ವಿಹಿತವಾದವುಗಳೆಂದು ವೇದಗಳಲ್ಲಿ ನಿರೂಪಿಸಲ್ಪಟ್ಟಿವೆ. ಇವೆಲ್ಲವೂ ಯಜ್ಞಕ್ಕೆ ಸಾಧನಗಳೇ.
ವ್ಯಾಖ್ಯಾನ ವಿಶೇಷ ಹಸು, ಕುರಿ, ಮನುಷ್ಯ, ಆಡು, ಹೇಸರಗತ್ತೆ, ಕತ್ತೆ - ಇವು ಏಳು ಗ್ರಾಮ್ಯ ಸಾಧು ಜಂತುಗಳು. ಹುಲಿ, ಸಿಂಹ, ಹಂದಿ, ಕಾಡೆಮ್ಮೆ, ಆನೆಗಳು, ಜಿಂಕೆ, ಮುಳ್ಳುಹಂದಿ ಇವು ಏಳು ಅರಣ್ಯಪಶುಗಳೆಂದು ಪ್ರಸಿದ್ಧವಾಗಿವೆ. ದೇವತೆಗಳನ್ನು ಉದ್ದೇಶಿಸಿ ಅಭಿಮಂತ್ರಿತವಾದ ಈ ಪಶುಗಳನ್ನು ಆಲಂಭನ ಮಾಡುವುದರಲ್ಲಿ ಅಪರಾಧವೆನಿಸದು. ವೇದದಲ್ಲಿ ಪಶುವಧೆ ಮಾಡಬಾರದು, ಪಶುವಧೆ ಮಾಡಬೇಕು ಎಂದು ಎರಡು ವಿಧವಾದ ವಚನಗಳು ಪ್ರಾಮಾಣಿಕಗಳೇ ಆಗಿವೆ. ಫಲವನ್ನು ಬಯಸುವವನು ಪಶುವಧೆಯನ್ನು ಮಾಡಬಾರದು. ಫಲಕಾಮನಾ ರಹಿತನಾದ ವ್ಯಕ್ತಿಯು ಪಶುವಧೆಯನ್ನು ಮಾಡಬಹುದು ಎಂದು ಈ ವೇದದ ಅಭಿಪ್ರಾಯವಾಗಿದೆ. ಆದ್ದರಿಂದ ವೇದಗಳನ್ನು ಅಪ್ರಾಮಾಣಿಕವೆಂದು ಶಂಕಿಸಬಾರದು ಎಂದು ತಾತ್ಪರ್ಯ.
ಏತಚ್ಚೈವಾಭ್ಯನುಜ್ಞಾತಂ ಪೂರ್ವೈಃ ಪೂರ್ವತರೈಸ್ತಥಾ |
ಕೋ ಜಾತು ನ ವಿಚಿನ್ವೀತ ವಿದ್ವಾನ್ಸ್ವಾಂ ಶಕ್ತಿಮಾತ್ಮನಃ ॥23॥
ಏಳು ಗ್ರಾಮ್ಯ ಪಶುಗಳನ್ನು, ಏಳು ಆರಣ್ಯಪಶುಗಳನ್ನು ಯಜ್ಞದ ಅಂಗಗಳೆಂದು ಹಿಂದಿನವರು, ಅವರಿಗಿಂತಲೂ ಹಿಂದಿನವರು ಅಂಗೀಕರಿಸಿರುವರು. ಆದ್ದರಿಂದ ತನ್ನ ಶಕ್ತಿಯನ್ನು ಅರಿತ ಯಾವ ಮನುಷ್ಯನಾದರೂ ಒಮ್ಮೆಯಾದರೂ ವಿಹಿತವಾದ ಯಜ್ಞವನ್ನು ಮಾಡದೆ ಇರುವುದಿಲ್ಲ.
ಪಶವಶ್ಚ ಮನುಷ್ಯಾಶ್ಚ ದ್ರುಮಾಶ್ಚೌಷಧಿಭಿಃ ಸಹ |
ಸ್ವರ್ಗಮೇವಾಭಿಕಾಂಕ್ಷಂತೇ ನ ಚ ಸ್ವರ್ಗಸ್ಕೃತೇ ಮಖಮ್ ॥24॥
ಪಶುಗಳು, ಮನುಷ್ಯರು, ಓಷಧಿ-ಲತೆಗಳು, ವೃಕ್ಷಗಳು ಎಲ್ಲರೂ ಸ್ವರ್ಗಾಪೇಕ್ಷಿಗಳೇ ಆಗಿರುತ್ತಾರೆ. ಯಜ್ಞದ ಹೊರತಾಗಿ ಸ್ವರ್ಗವು ಪ್ರಾಪ್ತವಾಗುವುದಿಲ್ಲ.
ಓಷಧ್ಯಃ ಪಶವೋ ವೃಕ್ಷಾ ವೀರುದಾಜ್ಯಂ ಪಯೋ ದಧಿ |
ಹವಿರ್ಭೂಮಿರ್ದಿಶಃ ಶ್ರದ್ಧಾ ಕಾಲಶ್ಚೈತಾನಿ ದ್ವಾದಶ ॥25॥
ಓಷಧಿಗಳು, ಪಶುಗಳು, ವೃಕ್ಷಗಳು, ಬಳ್ಳಿಗಳು, ತುಪ್ಪ, ಹಾಲು, ಮೊಸರು, ಇತರ ಹವಿಸ್ಸುಗಳು, ಭೂಮಿ, ದಿಕ್ಕುಗಳು, ಶ್ರದ್ಧೆ ಮತ್ತು ಕಾಲ - ಈ ಹನ್ನೆರಡು ಯಜ್ಞದ ಅಂಗಗಳೆನಿಸಿವೆ.
ಋಚೋ ಯಜೂಂಷಿ ಸಾಮಾನಿ ಯಜಮಾನಶ್ಚ ಷೋಡಶಃ |
ಅಗ್ನಿರ್ಜ್ಞೇಯೋ ಗೃಹಪತಿಃ ಸ ಸಪ್ತದಶ ಉಚ್ಯತೇ |
ಅಂಗಾನ್ಯೇತಾನಿ ಯಜ್ಞಸ್ಯ ಯಜ್ಞೋ ಮೂಲಮಿತಿ ಶ್ರುತಿಃ ॥26॥
ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಯಜಮಾನ ಇವುಗಳು ಸೇರಿದರೆ ಹದಿನಾರು ಯಜ್ಞಾಂಗಗಳಾಗುತ್ತವೆ. ಗಾರ್ಹಪತ್ಯ ಅಗ್ನಿಯು ಹದಿನೇಳನೆಯ ಯಜ್ಞಾಂಗವಾಗಿದೆ. ಮೇಲೆ ಹೇಳಿದ ಹದಿನೇಳು ವಸ್ತುಗಳು ಯಜ್ಞಾಂಗಗಳು ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿವೆ.
ಆಜ್ಯೇನ ಪಯಸಾ ದಧ್ನಾ ಶಕೃತಾಮಿಕ್ಷಯಾ ತ್ವಚಾ |
ವಾಲೈಃ ಶೃಂಗೇಣ ಪಾದೇನ ಸಂಭವತ್ಯೇವ ಗೌರ್ಮಖಮ್ |
ಏವಂ ಪ್ರತ್ಯೇಕಶಃ ಸರ್ವಂ ಯದ್ಯದಸ್ಯ ವಿಧೀಯತೇ ॥27॥
ತುಪ್ಪ, ಹಾಲು, ಮೊಸರು, ಸೆಗಣಿ, ಚರ್ಮ, ಬಾಲ, ಕೊಂಬು, ಕಾಲು ಇವೆಲ್ಲವನ್ನೂ ಯಜ್ಞಸಾಧನಗಳೇ ಎಂದು ವೇದಗಳು ಹೇಳಿವೆ. ಯಾವ ಯಜ್ಞಕ್ಕೆ ಇವುಗಳು ವಿಹಿತವಾಗಿವೆಯೋ ಆಯಾ ವಸ್ತುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಸಂಗ್ರಹಿಸಲೇಬೇಕು.
ಯಜ್ಞಂ ವಹಂತಿ ಸಂಭೂಯ ಸಹರ್ತ್ವಿಗ್ಭಿಃ ಸದಕ್ಷಿಣೈಃ |
ಸಂಹತ್ಯೈತಾನಿ ಸರ್ವಾಣಿ ಯಜ್ಞಂ ನಿರ್ವರ್ತಯಂತ್ಯುತ ॥28॥
ಯಜ್ಞಾರ್ಥಾನಿ ಹಿ ಸೃಷ್ಟಾನಿ ಯಥಾ ವೈ ಶ್ರೂಯತೇ ಶ್ರುತಿಃ |
ಏವಂ ಪೂರ್ವೇ ಪೂರ್ವತರಾಃ ಪ್ರವೃತ್ತಾಶ್ಚೈವ ಮಾನವಾಃ ॥29॥
ಋತ್ವಿಜರು ಮತ್ತು ದಕ್ಷಿಣಾ ದ್ರವ್ಯಗಳು ಇದ್ದಾಗ ಯಜ್ಞಗಳನ್ನು ನಿರ್ವಹಿಸಬಹುದು. ಅವೆಲ್ಲವನ್ನೂ ಯಜ್ಞಕ್ಕಾಗಿಯೇ ಬ್ರಹ್ಮನು ಸೃಷ್ಟಿಸಿದ್ದಾನೆಂದು ಶ್ರುತಿಗಳು ಹೇಳುತ್ತಿವೆ. ಯಜಮಾನನು ಈ ಎಲ್ಲ ವಸ್ತುಗಳನ್ನು ಸಂಗ್ರಹಿಸಿ ಯಜ್ಞವನ್ನು ಮಾಡುತ್ತಾನೆ. ಈ ಶ್ರುತಿವಾಕ್ಯವನ್ನೇ ಅವಲಂಬಿಸಿ ನಮ್ಮ ಹಿಂದಿನ ಮನುಷ್ಯರೆಲ್ಲರೂ ಯಜ್ಞದಲ್ಲಿ ಯಾವಾಗಲೂ ಪ್ರವೃತ್ತಿಯನ್ನು ಹೊಂದುತ್ತಿದ್ದರು.
ನ ಹಿನಸ್ತಿ ಹ್ಯಾರಭತೇ ನಾಭಿದ್ರುಹ್ಯತಿ ಕಿಂಚನ |
ಯಜ್ಞೋ ಯಷ್ಟವ್ಯ ಇತ್ಯೇವ ಯೋ ಯಜತ್ಯಫಲೇಪ್ಸಯಾ ॥30॥
ಯಾವನು ಯಜ್ಞ ಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿ ಯಾವ ವಿಧವಾದ ಫಲವನ್ನೂ ಬಯಸದೆ ನಿಷ್ಕಾಮನೆಯಿಂದಲೇ ಯಜ್ಞವನ್ನು ಆಚರಿಸುತ್ತಾನೋ ಅವನು ಪಶುಹಿಂಸಕನೆನಿಸುವುದಿಲ್ಲ, ದ್ರೋಹಿ ಎನಿಸುವುದಿಲ್ಲ. ಇವನು ಅಹಂಕಾರ ಪೂರ್ವಕವಾಗಿ ಯಾವ ಕರ್ಮವನ್ನೂ ಮಾಡಲಾರ. ಯಜ್ಞ ಮಾಡಬೇಕು ಎಂಬ ಸದುದ್ದೇಶದಿಂದಲೇ ಕರ್ಮವನ್ನು ಆಚರಿಸುತ್ತಾನೆ.
ಯಜ್ಞಾಂಗಾನ್ಯಪಿ ಚೈತಾನಿ ಯಥೋಕ್ತಾನಿ ನಸಂಶಯಃ |
ವಿಧಿನಾ ವಿಧಿಯುಕ್ತಾನಿ ತಾರಯಂತಿ ಪರಸ್ಪರಮ್ ॥31॥

ಶ್ರುತಿಯಲ್ಲಿ ಕ್ರಮವಾಗಿ ಹೇಳಲ್ಪಟ್ಟಿರುವ ಯಜ್ಞಸಾಮಗ್ರಿಗಳು ವಿಧಿವತ್ತಾಗಿ ಯಜ್ಞದಲ್ಲಿ ವಿನಿಯೋಗಿಸಲ್ಪಟ್ಟಾಗ ಯಜ್ಞ ಮತ್ತು ಯಜ್ಞಾಂಗ ಎರಡೂ ಪರಸ್ಪರ ಒಂದನ್ನು ಮತ್ತೊಂದು ಧಾರಣೆ ಮಾಡಿಕೊಂಡಿರುತ್ತವೆ.
ಆಮ್ನಾಯಮಾರ್ಷಂ ಪಶ್ಯಾಮಿ ಯಸ್ಮಿನ್ ವೇದಾಃ ಪ್ರತಿಷ್ಠಿತಾಃ |
ತಂ ವಿದ್ವಾಂಸೋಽನುಪಶ್ಯಂತಿ ಬ್ರಾಹ್ಮಣಸ್ಯಾನುದರ್ಶನಾತ್ ||32||
ಋಷಿಪ್ರೋಕ್ತವಾದ ವೇದಗಳನ್ನು ನಾನು ಬಲ್ಲವನಾಗಿದ್ದೇನೆ. ಆ ವೇದಗಳಲ್ಲಿಯೇ ಎಲ್ಲವೂ ನಿರೂಪಿಸಲ್ಪಟ್ಟಿದೆ. ಬ್ರಾಹ್ಮಣವಾಕ್ಯಗಳು, ಧರ್ಮಶಾಸ್ತ್ರಗಳು ಇವುಗಳನ್ನು ವಿದ್ವಾಂಸರು ಪರಿಶೀಲಿಸಿ ಅದನ್ನೇ ಪ್ರಾಮಾಣಿಕವೆಂದು ನಂಬಿರುತ್ತಾರೆ.
ಬ್ರಾಹ್ಮಣಪ್ರಭವೋ ಯಜ್ಞೋ ಬ್ರಾಹ್ಮಣಾರ್ಪಣ ಏವ ಚ |
ಅನು ಯಜ್ಞಂ ಜಗತ್ ಸರ್ವಂ ಯಜ್ಞಶ್ಚಾನು ಜಗತ್ ಸದಾ ||33||
ವೇದದ ಬ್ರಾಹ್ಮಣಭಾಗದಿಂದಲೇ ಯಜ್ಞವು ಪ್ರಕಟಗೊಂಡಿದೆ. ಇದು ಬ್ರಹ್ಮನಿಗೇ ಸಮರ್ಪಿಸಲ್ಪಡುತ್ತದೆ. ಜಗತ್ತೆಲ್ಲವೂ ಯಜ್ಞವನ್ನೇ ಅನುಸರಿಸಿದೆ. ಹಾಗೆ ಯಜ್ಞವೂ ಜಗತ್ತನ್ನೇ ಅನುಸರಿಸುತ್ತದೆ. ಹೀಗೆ ಜಗತ್ತು, ಯಜ್ಞ ಎರಡೂ ಪರಸ್ಪರ ಒಂದನ್ನೊಂದು ಅವಲಂಬಿಸಿವೆ.
ಓಮಿತಿ ಬ್ರಹ್ಮಣೋ ಯೋನಿರ್ನಮಃ ಸ್ವಾಹಾ ಸ್ವಧಾ ವಷಟ್ |
ಯಸ್ಯೈತಾನಿ ಪ್ರಯುಜ್ಯಂತೇ ಯಥಾಶಕ್ತಿ ಕೃತಾನ್ಯಪಿ ||34||
ಓಂ ಎಂಬುದು ವೇದದ ಮೂಲವೆನಿಸಿದೆ. ನಮಃ, ಸ್ವಾಹಾ, ಸ್ವಧಾ, ವಷಟ್ ಎಂಬ ಶಬ್ದಗಳು ಯಾವಾತನ ಯಜ್ಞದಲ್ಲಿ ಯಥಾಶಕ್ತಿ ಹೇಳಲ್ಪಡುತ್ತವೆಯೋ ಅವನ ಯಜ್ಞವು ಪೂರ್ಣವಾಗುತ್ತದೆ.
ನ ತಸ್ಯ ತ್ರಿಷು ಲೋಕೇಷು ಪರಲೋಕಭಯಂ ವಿದುಃ |
ಇತಿ ವೇದಾ ವದಂತೀಹ ಸಿದ್ಧಾಶ್ಚ ಪರಮರ್ಷಯಃ ||35||
ಇಂತಹ ಯಜ್ಞವನ್ನು ಮಾಡಿದವನಿಗೆ ಮೂರುಲೋಕದಲ್ಲಿ ಯಾವುದೇ ಪ್ರಾಣಿಗಳಿಂದಾಗಲಿ ಭಯವಿರುವುದಿಲ್ಲ. ಹೀಗೆ ವೇದವೇ ಹೇಳಿದೆ. ಸಿದ್ಧರೂ, ಶ್ರೇಷ್ಠರೂ ಆದ ಋಷಿಗಳು ಇದನ್ನೇ ಹೇಳಿರುತ್ತಾರೆ.
ಋಚೋ ಯಜೂಂಷಿ ಸಾಮಾನಿ ಸ್ತೋಭಾಶ್ಚ ವಿಧಿಚೋದಿತಾಃ |
ಯಸ್ಮಿನ್ನೇತಾನಿ ಸರ್ವಾಣಿ ಬಹಿರೇವ ಸ ವೈ ದ್ವಿಜಃ ||36||
ಋಗ್ವೇದ, ಯಜುರ್ವೇದ, ಸಾಮವೇದ, ಸಾಮಕ್ಕೆ ಸಂಬಂಧಿಸಿದ ಹಾಹೂ ಎಂಬ ಸ್ತೋಭಗಳು ಯಾರಲ್ಲಿ ಇರುತ್ತವೆಯೋ ಅವನೇ ನಿಜವಾದ ಬ್ರಾಹ್ಮಣನು.
ಅಗ್ನ್ಯಾಧೇಯೇ ಯದ್ಭವತಿ ಯಚ್ಚ ಸೋಮೇ ಸುತೇ ದ್ವಿಜ |
ಯಚ್ಚೇತರೈರ್ಮಹಾಯಜ್ಞೈರ್ವೇದ ತದ್ ಭಗವಾನ್ ಸ್ವತಃ ||37||
ಅಗ್ನ್ಯಾಧಾನ, ಸೋಮಯಾಗ ಇವುಗಳನ್ನು ಮಾಡುವುದರಿಂದ ಯಾವ ಫಲವು ಲಭಿಸುತ್ತದೋ, ಇತರ ಯಜ್ಞಗಳಿಂದ ಯಾವ ಫಲವು ಲಭಿಸುತ್ತದೋ ಅದೆಲ್ಲವನ್ನೂ ಪೂಜ್ಯನಾದ ನೀನೇ ತಿಳಿದಿರುತ್ತಿ.
ತಸ್ಮಾದ್ ಬ್ರಹ್ಮನ್ ಯಜೇತ್ಯೈವ ಯಾಜಯೇಚ್ಚಾವಿಚಾರಯನ್ |
ಯಜತಃ ಸ್ವರ್ಗವಿಧಿನಾ ಪ್ರೇತ್ಯ ಸ್ವರ್ಗಫಲಂ ಮಹತ್ ||38||
ಆದ್ದರಿಂದ ಪ್ರತಿಯೊಬ್ಬ ಬ್ರಾಹ್ಮಣನು ಯಾಗವನ್ನು ವಿಧಿಬದ್ಧವಾಗಿ ಮಾಡಲೇಬೇಕು. ಇತರರಿಂದ ಮಾಡಿಸಲೂ ಬೇಕು. ಜ್ಯೋತಿಷ್ಟೋಮಾದಿ ಯಾಗಗಳಿಂದ ಸತ್ತ ಬಳಿಕ ಉತ್ತಮ ಫಲವೆನಿಸಿದ ಸ್ವರ್ಗವು ದೊರೆಯುತ್ತದೆ.
ನಾಯಂ ಲೋಕೋಽಸ್ತ್ಯಯಜ್ಞಾನಾಂ ಪರಶ್ಚೇತಿ ವಿನಿಶ್ಚಯಃ |
ವೇದವಾದವಿದಶ್ಚೈವ ಪ್ರಮಾಣಮುಭಯಂ ತದಾ ||39||
ಯಜ್ಞವನ್ನು ಮಾಡದವನಿಗೆ ಇಹ-ಪರಗಳೆರಡೂ ಇರುವುದಿಲ್ಲ ಎಂಬುದು ನಿಶ್ಚಯವು. ಯಾವನು ವೇದದಲ್ಲಿ ಹೇಳಿರುವ ವಿಷಯಗಳನ್ನು ಚೆನ್ನಾಗಿ ಅರಿತಿರುತ್ತಾನೋ ಅವನು ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳನ್ನು ತಿಳಿದವನಾಗಿರುತ್ತಾನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಗೋ-ಕಪಿಲಸಂವಾದೇ ತ್ರ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂರನೆಯ ಅಧ್ಯಾಯ ಮುಗಿಯಿತು.
* * * * *

## ನೂರ ನಾಲ್ಕನೆಯ ಅಧ್ಯಾಯ

ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳ ವಿಷಯದಲ್ಲಿ ಗೋ-ಕಪಿಲರ ಸಂವಾದ.
ಕಪಿಲಃ
ಏತಾವದನುಪಶ್ಯಂತೋ ಯತಯೋ ಯಾಂತಿ ಮಾರ್ಗಗಾಃ |
ನೈಷಾಂ ಸರ್ವೇಷು ಲೋಕೇಷು ಕಶ್ಚಿದಸ್ತಿ ವ್ಯತಿಕ್ರಮಃ ||1||
ಯತಿಗಳು ಕರ್ಮಫಲಗಳೆಲ್ಲ ನಶ್ವರವೆಂದು, ಅನಿತ್ಯವೆಂದು ತಿಳಿದೇ ಜಿತೇಂದ್ರಿಯರಾಗಿ, ಶಾಂತಿಯನ್ನು ಅವಲಂಬಿಸಿ, ಕೇವಲ ಜ್ಞಾನಮಾರ್ಗದಿಂದ ಪರಬ್ರಹ್ಮನನ್ನು ಹೊಂದುತ್ತಾರೆ. ಅವರಿಗೆ ಯಾವ ಲೋಕದಲ್ಲಿಯೂ, ಯಾವ ತಡೆಯೂ ಇರುವುದಿಲ್ಲ.
ನಿರ್ದ್ವಂದ್ವಾ ನಿರ್ನಮಸ್ಕಾರಾ ನಿರಾಶೀರ್ಬಂಧನಾ ಬುಧಾಃ |
ವಿಮುಕ್ತಾಃ ಸರ್ವಪಾಪೇಭ್ಯಶ್ಚರಂತಿ ಶುಚಯೋಽಮಲಾಃ ||2||
ಅವರು ದ್ವಂದ್ವಗಳಿಂದ ಅತೀತರು, ಮತ್ತೊಬ್ಬರ ನಮಸ್ಕಾರಕ್ಕೆ ಎಂದೂ ಆಸೆಪಡದವರು, ಬಾಹ್ಯಸುಖದ ಅಪೇಕ್ಷಾ ರಹಿತರು, ಬಂಧನವಿಲ್ಲದವರು. ಸಮಸ್ತ ಪಾಪಗಳಿಂದ ಮುಕ್ತರು, ನಿರ್ಮಲರೂ, ಶುಚಿಗಳೂ ಆಗಿ ಸಂಚರಿಸುತ್ತಿರುತ್ತಾರೆ.

ಅಪವರ್ಗೇಽಥ ಸಂತ್ಯಾಗೇ ಬುದ್ಧೌ ಚ ಕೃತನಿಶ್ಚಯಾಃ |
ಬ್ರಹ್ಮಿಷ್ಠಾ ಬ್ರಹ್ಮಭೂತಾಶ್ಚ ಬ್ರಹ್ಮಣ್ಯೇವ ಕೃತಾಲಯಾಃ ॥3॥
ಮೋಕ್ಷವನ್ನು ಸಾಧಿಸುವ ವಿಷಯದಲ್ಲಿಯೂ, ಅದಕ್ಕಾಗಿಯೇ ಸಮಸ್ತವನ್ನೂ ತ್ಯಜಿಸುವ ವಿಷಯದಲ್ಲಿಯೂ ದೃಢವಾದ ನಿಶ್ಚಯವನ್ನು ಹೊಂದಿರುತ್ತಾರೆ. ಯಾವಾಗಲೂ ಬ್ರಹ್ಮೋಪಾಸನನಿರತರಾಗಿ, ಭಗವಂತನಲ್ಲಿಯೇ ನೆಲೆಗೊಂಡ ಮನಸ್ಸುಳ್ಳವರಾಗಿರುತ್ತಾರೆ.
ವಿಶೋಕಾ ನಷ್ಟರಜಸಸ್ತೇಷಾಂ ಲೋಕಾಃ ಸನಾತನಾಃ |
ತೇಷಾಂ ಗತಿಂ ಪರಾಂ ಪ್ರಾಪ್ಯ ಗಾರ್ಹಸ್ಥ್ಯೇ ಕಿಂ ಪ್ರಯೋಜನಮ್ ॥4॥
ಬ್ರಹ್ಮಜ್ಞಾನದಿಂದ ಶೋಕರಹಿತರೂ, ರಜೋಗುಣರಹಿತರೂ ಆಗಿರುವ ಆ ಯತಿಗಳಿಗೆ ಲಭಿಸುವ ಲೋಕಗಳು ಶಾಶ್ವತವಾದವುಗಳು. ಬ್ರಹ್ಮಜ್ಞಾನಿಗಳ ಉತ್ಕೃಷ್ಟ ಗತಿಯನ್ನು ಹೊಂದುವ ಆ ಯತಿಗಳಿಗೆ ಗೃಹಸ್ಥಾಶ್ರಮದಿಂದಾಗಲಿ, ಅದಕ್ಕೆ ಸಂಬಂಧಿಸಿದ ಯಜ್ಞ-ಯಾಗಾದಿಗಳಿಂದಾಗಲಿ ಏನು ಪ್ರಯೋಜನವಿದೆ?
ಸ್ಯೂಮರಶ್ಮಿಃ
ಯದ್ಯೇಷಾ ಪರಮಾ ನಿಷ್ಠಾ ಯದ್ಯೇಷಾ ಪರಮಾ ಗತಿಃ |
ಗೃಹಸ್ಥಾನವ್ಯಪಾಶ್ರಿತ್ಯ ನಾಶ್ರಮೋಽನ್ಯಃ ಪ್ರವರ್ತತೇ ॥5॥
ಮಹರ್ಷಿಯೇ, ನೀನು ಹೇಳಿದುದು ವಾಸ್ತವವೇ ಆಗಿದೆ. ಆದರೆ ಅಂತಹ ತ್ಯಾಗವನ್ನು ಅಭ್ಯಾಸ ಮಾಡಿದವರ ನಿಷ್ಠೆಯೂ ಶ್ರೇಷ್ಠವಾದ ನಿಷ್ಠೆ ಎನಿಸಿದೆ. ಅವರು ಹೊಂದುವ ಗತಿಯು ಪರಮಗತಿಯೇ ಆಗಿದೆ. ಹೀಗಿದ್ದರೂ ಗೃಹಸ್ಥರನ್ನು ಆಶ್ರಯಿಸದೆ ಯಾವ ಆಶ್ರಮಧರ್ಮವೂ ನಡೆಯಲಾರದು.
ಯಥಾ ಮಾತರಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ |
ಏವಂ ಗೃಹಸ್ಥಮಾಶ್ರಿತ್ಯ ವರ್ತಂತ ಇತರೇಽಽಶ್ರಮಾಃ ॥6॥
ಗೃಹಸ್ಥ ಏವ ಯಜತೇ ಗೃಹಸ್ಥಸ್ತಪ್ಯತೇ ತಪಃ |
ಗಾರ್ಹಸ್ಥ್ಯಮಸ್ಯ ಧರ್ಮಸ್ಯ ಮೂಲಂ ಯತ್ಕಿಂಚಿದೇಜತೇ ॥7॥
ಪ್ರಾಣಿಗಳೆಲ್ಲವೂ ತಮ್ಮ ತಾಯಿಯನ್ನು ಆಶ್ರಯಿಸಿ ಹೇಗೆ ಬದುಕುತ್ತವೆಯೋ ಅದರಂತೆ ಎಲ್ಲ ಆಶ್ರಮಗಳು ಗೃಹಸ್ಥಧರ್ಮವನ್ನೇ ಆಶ್ರಯಿಸಿ ಬಂದಿವೆ. ಗೃಹಸ್ಥನೇ ಯಜ್ಞವನ್ನು ಮಾಡುತ್ತಾನೆ. ಗೃಹಸ್ಥನೇ ಕೃಚ್ಛ್ರಾದಿವ್ರತಗಳನ್ನು, ತಪಸ್ಸನ್ನು ಆಚರಿಸುತ್ತಾನೆ. ಯಾರಾದರೂ ಯಾವ ಕರ್ಮವನ್ನು ಮಾಡಿದರೂ ಅದಕ್ಕೆ ಮೂಲಕಾರಣವು ಗೃಹಸ್ಥ ಧರ್ಮವೇ ಆಗಿದೆ.
ಪ್ರಜನಾದ್ವ್ಯಭಿನಿರ್ವೃತ್ತಾಃ ಸರ್ವೇ ಪ್ರಾಣಭೃತೋ ಮುನೇ |
ಪ್ರಜನಂ ಚಾಪ್ಯುತಾನ್ಯತ್ರ ನ ಕಥಂಚನ ವಿದ್ಯತೇ ॥8॥
ಪ್ರಾಣ ಧರಿಸಿರುವ ಸಮಸ್ತ ಜನರು ಸಂತಾನಾದಿ ಪ್ರಾಪ್ತಿಯಿಂದ ಸುಖಾನುಭೋಗವನ್ನು ಹೊಂದುತ್ತಾರೆ. ಆದರೆ ಸಂತಾನದ ಉತ್ಪತ್ತಿಯು ಗೃಹಸ್ಥಾಶ್ರಮದ ಹೊರತಾಗಿ ಬೇರೆ ಯಾವ ಆಶ್ರಮದಿಂದಲೂ ಸಾಧ್ಯವಾಗುವುದಿಲ್ಲ.
ಯಾಸ್ತಾಃ ಸ್ಯುರ್ಬಹಿರೋಷಧ್ಯೋ ಬಹ್ವರಣ್ಯಾಸ್ತಥಾ ದ್ವಿಜ |
ಓಷಧಿಭ್ಯೋ ಬಹಿರ್ಯಸ್ಮಾತ್ ಪ್ರಾಣೀ ಕಶ್ಚಿನ್ನ ವಿದ್ಯತೇ |
ಕಸ್ಯೈಷಾ ವಾಗ್ಭವೇತ್ ಸತ್ಯಾ ಮೋಕ್ಷೋ ನಾಸ್ತಿ ಗೃಹಾದಿತಿ ॥9॥
ಹುಲ್ಲು, ಓಷಧಿ, ಬಯಲಿನಲ್ಲಿ ಪರ್ವತದಲ್ಲಿ ಹುಟ್ಟುವ ಎಲ್ಲ ಗಿಡ-ಬಳ್ಳಿಗಳು ಈ ಎಲ್ಲದಕ್ಕೂ ಮೂಲಾಧಾರವಾದುದು ಗೃಹಸ್ಥ ಧರ್ಮವೇ ಆಗಿದೆ. ಗೃಹಸ್ಥಾಶ್ರಮವನ್ನು ಪರಿಪಾಲಿಸುವುದರಿಂದ ಮೋಕ್ಷವು ಲಭಿಸುವುದಿಲ್ಲ ಎಂದು ಹೇಳುವವರ ಮಾತು ಹೇಗೆ ತಾನೆ ಸತ್ಯವಾದೀತು?
ಅಶ್ರದ್ದಧಾನೈರಪ್ರಾಜ್ಞೈಃ ಸೂಕ್ಷ್ಮದರ್ಶನವರ್ಜಿತೈಃ |
ನಿರಾಶೈರಲಸೈಃ ಶ್ರಾಂತೈಸ್ತಪ್ಯಮಾನೈಃ ಸ್ವಕರ್ಮಭಿಃ |
ಶ್ರಮಸ್ಯೋಪರಮೋ ದೃಷ್ಟಃ ಪ್ರವ್ರಜ್ಯಾ ನಾಮ ಪಂಡಿತೈಃ ॥10॥
ಯಾರು ಶ್ರದ್ಧಾರಹಿತರೋ, ಮೂರ್ಖರೋ, ಸೂಕ್ಷ್ಮದೃಷ್ಟಿಯಿಂದ ವಂಚಿತರೋ, ಅಸ್ಥಿರ ಬುದ್ಧಿಯುಳ್ಳವರೋ, ಅಲಸಿಗಳೋ, ಆರ್ತರೋ, ಅವರು ಹಿಂದೆ ಮಾಡಿದ ದುಷ್ಕರ್ಮಗಳಿಂದ ಪರಿತಪಿಸುತ್ತಿರುವರೋ ಅಂತಹ ಅಜ್ಞಾನಿಗಳಾದ ಮನುಷ್ಯರು ಮಾತ್ರವೇ ಸಂನ್ಯಾಸಾಶ್ರಮವನ್ನು ಆಶ್ರಯಿಸಿ ಗೃಹಸ್ಥಾಶ್ರಮದಲ್ಲಿ ಶಾಂತಿ ಇಲ್ಲ ಎಂದು ತಿಳಿದಿರುತ್ತಾರೆ.
ತ್ರೈಲೋಕ್ಯಸ್ಯೈವ ಹೇತುರ್ಹಿ ಮರ್ಯಾದಾ ಶಾಶ್ವತೀ ಧ್ರುವಾ |
ಬ್ರಾಹ್ಮಣೋ ನಾಮ ಭಗವಾನ್ ಜನ್ಮಪ್ರಭೃತಿ ಪೂಜ್ಯತೇ ॥11॥
ವೇದದಲ್ಲಿ ನಿರ್ಣೀತವಾದ, ಶಾಶ್ವತ ಎನಿಸಿದ ಧರ್ಮಮರ್ಯಾದೆಗಳೇ ಮೂರು ಲೋಕಗಳಲ್ಲೂ ನೆಲೆಗೊಂಡಿವೆ. ಅಂತಹ ವೇದವನ್ನು ಬಲ್ಲ ಬ್ರಾಹ್ಮಣನು ಹುಟ್ಟಿನಿಂದಲೇ ಪೂಜ್ಯನೆನಿಸುತ್ತಾನೆ.
ಪ್ರಾಗ್ಗರ್ಭಾಧಾನಾನ್ಮಂತ್ರಾ ಹಿ ಪ್ರವರ್ತಂತೇ ದ್ವಿಜಾತಿಷು |
ಅವಿಶ್ರಂಭೇಷು ವರ್ತಂತೇ ವಿಶ್ರಂಭೇಷ್ವಪ್ಯಸಂಶಯಮ್ ॥12॥
ದಾಹಃ ಪುನಃ ಸಂಶ್ರಯಣೇ ಸಂಸ್ಥಿತೇ ಪಾತ್ರಭೋಜನಮ್ |
ದಾನಂ ಗವಾಂ ಪಶೂನಾಂ ವಾ ಪಿಂಡಾನಾಂ ಚಾಪ್ಸು ಮಜ್ಜನಮ್ ॥
ಬ್ರಾಹ್ಮಣರಲ್ಲಿ ಗರ್ಭಾಧಾನಕ್ಕೆ ಮೊದಲೇ ವೇದಮಂತ್ರಗಳು ಉಚ್ಚರಿಸಲ್ಪಡುತ್ತವೆ. ಲೌಕಿಕವಾದ, ಪಾರಲೌಕಿಕವಾದ ಎಲ್ಲಾ ಕರ್ಮಗಳಲ್ಲಿಯೂ ವೇದಮಂತ್ರಗಳು ನಿಸ್ಸಂದೇಹವಾಗಿ ಉಚ್ಚರಿಸಲ್ಪಡುತ್ತವೆ. ಸತ್ತಮೇಲೆ ನಡೆಯುವ ದಹನ, ತರ್ಪಣ, ಶ್ರಾದ್ಧಾದಿಗಳು, ಸತ್ತವರಿಗೆ ಸ್ವರ್ಗವನ್ನು ಹೊಂದಿಸುವುದಕ್ಕಾಗಿ ನಡೆಸುವ ಗೋದಾನ, ವೃಷೋತ್ಸರ್ಗ, ಪಿಂಡತ್ಯಾಗ ಈ ಎಲ್ಲಾ ಕರ್ಮಗಳಿಗೂ

ವೇದಮಂತ್ರಗಳು ಅವಶ್ಯವೆನಿಸುತ್ತವೆ.
ಅರ್ಚಿಷ್ಮಂತೋ ಬರ್ಹಿಷದಃ ಕ್ರವ್ಯಾದಾಃ ಪಿತರಃ ಸ್ಮೃತಾಃ |
ಮೃತಸ್ಯಾಪ್ಯನುಮನ್ಯಂತೇ ಮಂತ್ರಾಽಮಂತ್ರಾಶ್ಚ ಕಾರಣಮ್ ॥14॥
ಅರ್ಚಿಷ್ಮಂತರು, ಬರ್ಹಿಷದರು, ಕ್ರವ್ಯಾದರು ಎಂಬ ಪಿತೃದೇವತೆಗಳು ಮೃತನ ಸುಖ-ಶಾಂತಿ ಮತ್ತು ಪ್ರಸನ್ನತೆಗಾಗಿ ಮಂತ್ರಪಠಣಕ್ಕೆ ಅನುಮತಿಯನ್ನು ನೀಡುತ್ತಾರೆ. ಕೆಲವೊಂದು ಕರ್ಮಗಳನ್ನು ಮಂತ್ರಪಠನ ಪೂರ್ವಕವಾಗಿ ಆಚರಿಸಬೇಕು. ಕೆಲವೊಂದು ಕರ್ಮಗಳನ್ನು ಮೌನವಾಗಿ ಮಾಡಬೇಕು. ಕೆಲವೊಂದು ಕರ್ಮಗಳನ್ನು ಸವ್ಯದಿಂದಲೂ, ಕೆಲವೊಂದು ಕರ್ಮಗಳನ್ನು ಅಪಸವ್ಯದಿಂದಲೂ ಮಾಡಬೇಕು. ಇದಕ್ಕೆಲ್ಲ ಮೂಲವಾದುದು ವೇದಗಳೇ ಆಗಿವೆ.
ಏವಂ ಕ್ರೋಶತ್ಸು ವೇದೇಷು ಕುತೋ ಮೋಕ್ಷೋಽಸ್ತಿ ಕಸ್ಯಚಿತ್ |
ಋಣವಂತೋ ಯದಾ ಮರ್ತ್ಯಾಃ ಪಿತೃದೇವದ್ವಿಜಾತಿಷು ॥15॥
ಮನುಷ್ಯನು ದೇವತೆಗಳಿಗೂ, ಪಿತೃ-ಋಷಿಗಳಿಗೂ ಋಣಿಯಾಗಿಯೇ ಹುಟ್ಟುತ್ತಾನೆಂದು ವೇದಗಳು ಕೂಗಿ ಹೇಳುತ್ತಿರುವಾಗ, ಈ ಮೂರು ಋಣಗಳಿಂದ ಮುಕ್ತಿಯಾಗದಿರುವ ಮನುಷ್ಯನು ಮುಕ್ತಿಯನ್ನು ಹೊಂದಲು ಹೇಗೆ ಸಾಧ್ಯ?
ಶ್ರಿಯಾ ವಿಹೀನೈರಲಸೈಃ ಪಂಡಿತೈಶ್ಚಪಲಾಯಿತಮ್ |
ವೇದವಾದಾಪರಿಜ್ಞಾನಂ ಸತ್ಯಾಭಾಸಮಿವಾನೃತಮ್ ॥16॥
ವೇದಗಳಲ್ಲಿ ತೋರುವ ವಾಸ್ತವ ಅರ್ಥಗಳನ್ನು ಬಿಟ್ಟು ವಿಪರೀತಾರ್ಥಗಳನ್ನು ಕಲ್ಪಿಸಿದವರು ಕೆಲವು ಅಯೋಗ್ಯಪಂಡಿತರು. ಕಳ್ಳರಿಂದ ಬ್ರಾಹ್ಮಣ ಹಿಂಸೆಯು ಮಾಡಲ್ಪಡುತ್ತಿರುವಾಗ ಸತ್ಯವನ್ನು ಹೇಳಬೇಕೆಂದು ದೃಷ್ಟಿ ಇಟ್ಟುಕೊಂಡು ಬ್ರಾಹ್ಮಣ ಹಿಂಸೆಗೆ ಪ್ರೋತ್ಸಾಹವನ್ನು ನೀಡುವುದು ಎಷ್ಟು ಅಪರಾಧವೋ ಅದರಂತೆ ವೇದಗಳ ಸರಿಯಾದ ಪರಿಜ್ಞಾನವು ಇಲ್ಲದೆ ಮೇಲ್ನೋಟಕ್ಕೆ ಕಾಣುವ ಅರ್ಥವನ್ನು ಆಧರಿಸಿಕೊಂಡು ಸೋಮಾರಿಗಳಾದ, ದರಿದ್ರರಾದ ಕೆಲವು ಪಂಡಿತರು ವೇದಗಳಿಗೆ ವಿಪರೀತವಾದ ಅರ್ಥಗಳನ್ನು ಹೇಳುತ್ತಾರೆ.
ನ ವೈ ಪಾಪೈರ್ಹ್ರಿಯತೇ ಕೃಷ್ಯತೇ ವಾ
    ಯೋ ಬ್ರಾಹ್ಮಣೋ ಯಜತೇ ವೇದಶಾಸ್ತ್ರೈಃ |
ಊರ್ಧ್ವಂ ಯಜ್ಞಃ ಪಶುಭಿಃ ಸಾರ್ಧಮೇತಿ
    ಸಂತರ್ಪಿತಸ್ತರ್ಪಯತೇ ಚ ಕಾಮ್ಯೈಃ ॥17॥
ಯಾವ ಬ್ರಾಹ್ಮಣನು ವೇದಶಾಸ್ತ್ರಗಳಿಗೆ ಅನುಸಾರವಾಗಿ ಯಜ್ಞಾನುಷ್ಠಾನವನ್ನು ಮಾಡುತ್ತಾನೋ ಅವನು ಪಾಪದಿಂದ ಮುಕ್ತನಾಗುತ್ತಾನೆ. ಆ ಯಜ್ಞದ ಮೂಲಕ ತಾನು ಮಾತ್ರವಲ್ಲದೆ ತಾನು ವಧಿಸಿದ ಜಂತುಗಳನ್ನು ಉದ್ಧರಿಸಿ, ಅವುಗಳ ಜೊತೆ ಸೇರಿ ಉತ್ತಮವಾದ ಪುಣ್ಯಲೋಕಗಳನ್ನು ಹೊಂದುತ್ತಾನೆ.
ನ ವೇದಾನಾಂ ಪರಿಭವಾನ್ನ ಶಾಠ್ಯೇನ ನ ಮಾಯಯಾ |
ಮಹತ್ ಪ್ರಾಪ್ನೋತಿ ಪುರುಷೋ ಬ್ರಾಹ್ಮಣೋ ಬ್ರಹ್ಮ ವಿಂದತಿ ॥18॥
ವೇದಗಳನ್ನು ಅನಾದರಿಸುವುದರಿಂದಾಗಲಿ, ಉದ್ಧಟತನದಿಂದಾಗಲಿ, ಮೋಸದಿಂದಾಗಲಿ ಯಾವ ಮನುಷ್ಯನೂ ಪರಬ್ರಹ್ಮನನ್ನು ಹೊಂದಲು ಸಾಧ್ಯವಾಗುವುದಿಲ್ಲ. ಚೆನ್ನಾಗಿ ವೇದಗಳನ್ನು ಅರಿತು ಸತ್ಕರ್ಮಗಳನ್ನು ಆಚರಿಸುವವನೇ ಪರಬ್ರಹ್ಮನೆಂಬ ವಸ್ತುವನ್ನು ಹೊಂದುತ್ತಾನೆ.
ಕಪಿಲಃ
ದರ್ಶಂ ಚ ಪೌರ್ಣಮಾಸಂ ಚ ಅಗ್ನಿಹೋತ್ರಂ ಚ ಧೀಮತಾಮ್ |
ಚಾತುರ್ಮಾಸ್ಯಾನಿ ಚೈವಾಸಂಸ್ತೇಷು ಯಜ್ಞಃ ಸನಾತನಃ ॥19॥
ಬುದ್ಧಿವಂತನಾದ ಮನುಷ್ಯನಿಗೆ ದರ್ಶ, ಪೌರ್ಣಮಾಸ, ಅಗ್ನಿಹೋತ್ರ, ಚಾತುರ್ಮಾಸ್ಯ, ಇತ್ಯಾದಿ ಕರ್ಮಗಳು ಹೇಳಲ್ಪಟ್ಟಿವೆ. ಏಕೆಂದರೆ ಸನಾತನ ಧರ್ಮಗಳೆಲ್ಲವೂ ಈ ಕರ್ಮಗಳಲ್ಲಿಯೇ ಪ್ರತಿಷ್ಠಿತವಾಗಿವೆ.
ಅನಾರಂಭಾಃ ಸುಧೃತಯಃ ಶುಚಯೋ ಬ್ರಹ್ಮಸಂಶ್ರಿತಾಃ |
ಬ್ರಹ್ಮಣೈವ ಸ್ಮ ತೇ ದೇವಾಂಸ್ತರ್ಪಯಂತ್ಯಮೃತೈಷಿಣಃ ॥20॥
ಯಾರು ತನ್ನ ಹೊಟ್ಟೆ ಹೊರೆಯಲು ಕರ್ಮಗಳನ್ನು ಮಾಡುವುದಿಲ್ಲವೋ, ದೃಢವಾದ ಬುದ್ಧಿಯುಳ್ಳವರಾಗಿದ್ದಾರೋ, ಶುಚಿಗಳು, ಭಗವಂತನನ್ನು ಆಶ್ರಯಿಸಿದವರೂ ಆಗಿದ್ದಾರೋ ಅವರು ಮೋಕ್ಷವನ್ನು ಬಯಸುವ ಅಭಿಪ್ರಾಯದಿಂದ ಭಗವನ್ನಿಷ್ಠವಾದ ಬುದ್ಧಿಯಲ್ಲಿಯೇ ದೇವತೆಗಳಿಗೆ ತರ್ಪಣವನ್ನು ನೀಡುತ್ತಾರೆ.
ವ್ಯಾಖ್ಯಾನ ವಿಶೇಷ ಭಗವನ್ನಿಷ್ಠವಾದ ಬುದ್ಧಿಯುಳ್ಳವರು ದೇವತಾದಿ ಆರಾಧನೆಗಳನ್ನು ಅಂತರ್ಯಾಮಿಯ ಆರಾಧನೆ ಎಂದು, ಭಗವತ್ಪ್ರೀತಿಜನಕವಾಗಿಯೇ ಆಚರಿಸುತ್ತಾರೆ ಎಂದು ಭಾವ.
ಸರ್ವಭೂತಾತ್ಮಭೂತಸ್ಯ ಸರ್ವಭೂತಾನಿ ಪಶ್ಯತಃ |
ದೇವಾಪಿ ಮಾರ್ಗೇ ಮುಹ್ಯಂತಿ ಅಪದಸ್ಯ ಪದೈಷಿಣಃ ॥21॥
ಸಮಸ್ತ ಭೂತಾಂತರ್ಯಾಮಿಯಾದ ಭಗವಂತನನ್ನು, ಸಮಸ್ತ ಭೂತಗಳನ್ನು ತನ್ನೊಳಗೆ ಇರಿಸಿಕೊಂಡಿರುವ ಭಗವಂತನನ್ನು ಯಾರು ನೋಡುತ್ತಿರುತ್ತಾರೋ ಅಂತಹ ಮುಕ್ತಿಯನ್ನು ಬಯಸುವ ಸಾಧಕನ ಮಾರ್ಗಕ್ಕೆ ದೇವತೆಗಳೂ ಅಡ್ಡಿಪಡಿಸಲು ಅಸಮರ್ಥರಾಗುತ್ತಾರೆ.
ಚತುರ್ದ್ವಾರಂ ಪುರುಷಂ ಚತುರ್ಮುಖಂ
    ಚತುರ್ಧಾ ಚೈನಮುಪಯಾತಿ ನಿಂದಾ |
ಬಾಹುಭ್ಯಾಂ ವಾಚ ಉದರಾದುಪಸ್ಥಾ-

ತ್ರೇಷಾಂ ದ್ವಾರಂ ದ್ವಾರಪಾಲೋ ಬುಭೂಷೇತ್ ॥22॥
ಮನುಷ್ಯನಿಗೆ ಕೈ-ಕಾಲುಗಳು, ಮಾತು, ಹೊಟ್ಟೆ, ಉಪಸ್ಥ ಎಂಬ ನಾಲ್ಕು ದ್ವಾರಗಳಿವೆ. ಇವುಗಳನ್ನು ಚೆನ್ನಾಗಿ ರಕ್ಷಿಸಬೇಕು. ಇವುಗಳ ನಿಯಂತ್ರಣವನ್ನು ಸಾಧಿಸಿಕೊಂಡಿರಬೇಕು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದವೆಂಬ ನಾಲ್ಕು ಮುಖಗಳನ್ನು ಹೊಂದಿರುವ ಪರಮಪುರುಷನನ್ನು ನಾಲ್ಕು ದ್ವಾರಗಳ ನಿಗ್ರಹದಿಂದ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ, ಅಷ್ಟಾಂಗ ಯೋಗಗಳಿಂದ ಹೊಂದಬೇಕು.

ನಾಕ್ಷೈರ್ದೀವ್ಯೇನ್ನಾದದೀತಾನ್ಯವಿತ್ತಂ
ನ ವಾಽಯೋನಿಜಸ್ಯ ಸುತಾಂ ಪ್ರಗೃಹ್ಣನ್ ।
ಕ್ರುದ್ಧೋ ನ ಚೈವ ಪ್ರಹರೇತ ಧೀಮಾಂ-
ಸ್ತಥಾಸ್ಯ ತತ್ ಪಾಣಿಪಾದಂ ಸುಗುಪ್ತಮ್ ॥23॥
ಜಾಣನಾದ ವ್ಯಕ್ತಿಯು ಜೂಜಾಟವನ್ನು ಆಡಬಾರದು. ಪರರ ಸ್ವತ್ತನ್ನು ಅಪಹರಿಸಬಾರದು. ನೀಚರ ಅನ್ನವನ್ನು ಸ್ವೀಕರಿಸಬಾರದು. ಕೋಪದಿಂದ ಮತ್ತೊಬ್ಬರನ್ನು ಹಿಂಸಿಸಬಾರದು. ಹೀಗೆ ಇದ್ದಲ್ಲಿ ಅವನ ಕೈ-ಕಾಲುಗಳೆಂಬ ದ್ವಾರವು ಸುರಕ್ಷಿತವಾಗಿರುತ್ತವೆ. ಅಯೋನಿಜ ಮಗಳನ್ನು ಸ್ವೀಕರಿಸಬಾರದು. ಆ ಆಸೆಯ ನಿಮಿತ್ತದಿಂದ ಕೈ-ಕಾಲುಗಳಿಂದ ಹೊಡೆಯಬಾರದು ಎಂದು ಲಕ್ಷಾಲಂಕಾರ.

ನಾಕ್ರೋಶಮರ್ಚ್ಛೇನ್ನ ಮೃಷಾ ವದೇಚ್ಚ
ನ ಪೈಶುನಂ ಜನವಾದಂ ಚ ಕುರ್ಯಾತ್ ।
ಸತ್ಯವ್ರತೋ ಮಿತಭಾಷೋಪ್ರಮತ್ತ-
ಸ್ತಥಾಸ್ಯ ವಾಗ್ದ್ವಾರಮಥೋ ಸುಗುಪ್ತಮ್ ॥24॥
ಯಾರ ಬಳಿಯೂ ಸಿಟ್ಟಿನಿಂದ ನಿಂದಿಸಬಾರದು. ವ್ಯರ್ಥವಾಗಿ ಮಾತನಾಡಬಾರದು. ಚಾಡಿ ಹೇಳಬಾರದು. ವ್ಯರ್ಥವಾದ ಆಪಾದನೆಯನ್ನು ಹೊರಿಸಬಾರದು. ಸತ್ಯನಿಷ್ಠನಾಗಿಯೂ, ಮಿತಭಾಷಿಯೂ, ಜಾಗರೂಕನಾಗಿಯೂ ಇದ್ದರೆ ಮಾತಿನ ದ್ವಾರವನ್ನು ರಕ್ಷಣೆ ಮಾಡಿದಂತಾಗುತ್ತದೆ.

ನಾನಾಶನಃ ಸ್ಯಾನ್ನ ಮಹಾಶನಃ ಸ್ಯಾ-
ದಲೋಲುಪಃ ಸಾಧುಭಿರಾಗತಃ ಸ್ಯಾತ್ ।
ಯಾತ್ರಾರ್ಥಮಾಹಾರಮಿಹಾದದೀತ
ತಥಾಸ್ಯ ಸ್ಯಾಜ್ಜಾಠರೀ ದ್ವಾರಗುಪ್ತಿಃ ॥25॥
ಆಹಾರವನ್ನು ತಿನ್ನದೆಯೂ ಇರಬಾರದು. ಅತಿಯಾಗಿ ತಿನ್ನಲೂ ಬಾರದು. ಭಕ್ಷ್ಯ ಭೋಜ್ಯಗಳ ಲಾಲಲೆವುಳ್ಳವನಾಗಿರಬಾರದು. ಸಜ್ಜನರಿಗೆ ಆತಿಥ್ಯವನ್ನು ನೀಡಬೇಕು. ಜೀವನ ನಿರ್ವಹಣೆಗೆ ಬೇಕಾದಷ್ಟು ಆಹಾರವನ್ನು ಸ್ವೀಕರಿಸಬೇಕು. ಹೀಗೆ ಮಾಡಿದರೆ ಹೊಟ್ಟೆ ಎಂಬ ದ್ವಾರದ ರಕ್ಷಣೆಯಾಗುತ್ತದೆ.

ನ ವೀರಪತ್ನೀಂ ವಿಹರೇತ ನಾರೀಂ
ನ ಚಾಪಿ ನಾರೀಮನೃತಾವಾಹ್ವಯೀತ ।
ಭಾರ್ಯಾವ್ರತಂ ಹ್ಯಾತ್ಮನಿ ಧಾರಯೀತ
ತಥಾಸ್ಯೋಪಸ್ಥದ್ವಾರಗುಪ್ತಿರ್ಭವೇತ ॥26॥
ವೀರನ ಪತ್ನಿಯಾದ ಹೆಂಗಸಿನ ಜೊತೆಗೆ ವಿಹರಿಸಬಾರದು. ತನ್ನ ಪತ್ನಿಯೇ ಆದರೂ ಋತುಸಮಯದಲ್ಲಿ ಅಲ್ಲದೆ ಬೇರೆ ಸಮಯದಲ್ಲಿ ಸಮಾಗಮ ಮಾಡಬಾರದು. ಭಾರ್ಯಾವ್ರತವನ್ನು ಅನುಷ್ಠಾನ ಮಾಡಿಕೊಂಡಿದ್ದಲ್ಲಿ ಉಪಸ್ಥದ ರಕ್ಷಣೆಯಾಗುತ್ತದೆ.

ದ್ವಾರಾಣಿ ಯಸ್ಯ ಸರ್ವಾಣಿ ಸುಗುಪ್ತಾನಿ ಮನೀಷಿಣಃ ।
ಉಪಸ್ಥಮುದರಂ ಬಾಹೂ ವಾಕ್ಚತುರ್ಥೀ ಸ ವೈ ದ್ವಿಜಃ ॥27॥
ಬುದ್ಧಿವಂತನಾದ ಯಾವ ಮನುಷ್ಯನು ಉಪಸ್ಥ, ಉದರ, ಕೈ-ಕಾಲು, ಮಾತು ಈ ನಾಲ್ಕು ದ್ವಾರಗಳನ್ನು ಚೆನ್ನಾಗಿ ರಕ್ಷಿಸಿರುತ್ತಾನೋ ಅವನೇ ನಿಜವಾದ ಬ್ರಾಹ್ಮಣನು.

ಮೋಘಾನ್ಯಗುಪ್ತದ್ವಾರಸ್ಯ ಸರ್ವಾಣ್ಯೇವ ಭವಂತ್ಯುತ ।
ಕಿಂ ತಸ್ಯ ತಪಸಾ ಕಾರ್ಯಂ ಕಿಂ ಯಜ್ಞೇನ ಕಿಮಾತ್ಮನಾ ॥28॥
ಈ ನಾಲ್ಕು ದ್ವಾರಗಳನ್ನು ರಕ್ಷಿಸಿಕೊಳ್ಳದೆ ಇರುವವನ ಸಮಸ್ತ ಶುಭಕರ್ಮಗಳು ವ್ಯರ್ಥವಾಗುತ್ತವೆ. ಫಲಪ್ರದವಾಗುವುದಿಲ್ಲ. ಕೈ-ಕಾಲು, ಹೊಟ್ಟೆ, ಉಪಸ್ಥ ಈ ನಾಲ್ಕರ ಹತೋಟಿಯನ್ನು ಇಟ್ಟುಕೊಳ್ಳದ ಮನುಷ್ಯನಿಗೆ ತಪಸ್ಸು, ಯಜ್ಞ, ಆತ್ಮಚಿಂತನ ಇವುಗಳಿಂದ ಯಾವ ಪ್ರಯೋಜನವೂ ಉಂಟಾಗದು. ಅವುಗಳನ್ನು ಆಚರಿಸಿದರೂ ಏನು ಪ್ರಯೋಜನ?

ಅನುತ್ತರೀಯವಸನಮನುಪಸ್ತೀರ್ಣಶಾಯಿನಮ್ ।
ಬಾಹೂಪಧಾನಂ ಶಾಮ್ಯಂತಂ ತಂ ದೇವಾ ಬ್ರಾಹ್ಮಣಂ ವಿದುಃ ॥29॥
ಹೊದೆಯಲು ಉತ್ತರೀಯವನ್ನು ಬಯಸದೆ ಕೇವಲ ನೆಲದ ಮೇಲೆ ತನ್ನ ತೋಳನ್ನೇ ದಿಂಬಾಗಿ ಮಾಡಿಕೊಂಡು, ಯಾವನು ಶಾಂತಚಿತ್ತನಾಗಿ ಜೀವನವನ್ನು ನಿರ್ವಹಿಸುತ್ತಿರುತ್ತಾನೋ ದೇವತೆಗಳು ಅವನನ್ನೇ ಬ್ರಾಹ್ಮಣನೆಂದು ಭಾವಿಸುತ್ತಾರೆ.

ದ್ವಂದ್ವಾರಾಮೇಷು ಸರ್ವೇಷು ಯ ಏಕೋ ರಮತೇ ಮುನಿಃ ।
ಪರೇಷಾಮನನುಧ್ಯಾಯಂಸ್ತಂ ದೇವಾ ಬ್ರಾಹ್ಮಣಂ ವಿದುಃ ॥30॥
ಶೀತೋಷ್ಣ-ಸುಖ-ದುಃಖಾದಿ ದ್ವಂದ್ವಗಳು ಇದ್ದಾಗಲೂ ಯಾವಾತನು ಮುನಿಯಾಗಿ ಏಕಾಕಿಯಾಗಿ ವಿಹರಿಸುತ್ತಾನೋ, ಪತಿ-ಪತ್ನಿಯರಂತೆ ಸುಖಾನುಭವವನ್ನು ತನ್ನಲ್ಲೇ ಅನುಭವಿಸುತ್ತಾನೋ, ಇತರರ ಸುಖ-ದುಃಖಗಳಿಗೆ ಮನಸ್ಸನ್ನು ನೀಡನೋ ಇಂತಹ ಶಾಂತಾತ್ಮನನ್ನೇ ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.

ಯೇನ ಸರ್ವಮಿದಂ ಬುದ್ಧಂ ಪ್ರಕೃತಿರ್ವಿಕೃತಿಶ್ಚ ಯಾ |
ಗತಿಜ್ಞಃ ಸರ್ವಭೂತಾನಾಂ ತಂ ದೇವಾ ಬ್ರಾಹ್ಮಣಂ ವಿದುಃ ||31||
ಯಾವಾತನು ಪ್ರಕೃತಿಯನ್ನು, ಪ್ರಕೃತಿಯ ವಿಕಾರಗಳನ್ನು, ಸಮಸ್ತ ಭೂತಗಳ ಗತಿಯನ್ನು ತಿಳಿಯುತ್ತಾನೋ ಅವನನ್ನೇ ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ಅಭಯಂ ಸರ್ವಭೂತೇಭ್ಯಃ ಸರ್ವೇಷಾಮಭಯಂ ಯತಃ |
ಸರ್ವಭೂತಾತ್ಮಭೂತೋ ಯಸ್ತಂ ದೇವಾ ಬ್ರಾಹ್ಮಣಂ ವಿದುಃ ||32||
ಯಾವನಿಗೆ ಇತರ ಭೂತಗಳಿಂದ ಭಯವಿಲ್ಲವೋ, ಯಾವನಿಂದ ಇತರ ಭೂತಗಳಿಗೂ ಭಯವಿಲ್ಲವೋ ಸಮಸ್ತ ಭೂತಗಳಿಗೂ ಆತ್ಮಭೂತನಾದ ಅವನನ್ನೇ ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.
ನಾಂತರೇಣಾನುಜಾನಂತಿ ವೇದಾನಾಂ ಯತ್ಕ್ರಿಯಾಫಲಮ್ |
ಅನುಜ್ಞಾಯ ಚ ತತ್ ಸರ್ವಮನ್ಯದ್ರೋಚಯತೇಽಫಲಮ್ ||33||
ಆದರೆ ಮೂರ್ಖರಾದವರು ಯಜ್ಞ-ದಾನಗಳಿಂದ ದೊರೆಯುವ ಸ್ವರ್ಗಾದಿ ಫಲಗಳನ್ನು ಬಿಟ್ಟು ಬೇರೆ ಯಾವುದನ್ನೂ ತಿಳಿದಿರುವುದಿಲ್ಲ. ಮೋಕ್ಷ, ಭಗವಂತನ ಸಾಕ್ಷಾತ್ಕಾರ, ಭಗವಂತನ ಪ್ರಾಪ್ತಿ ಇವುಗಳಲ್ಲಿ ತಿಳಿವಳಿಕೆ ಇಲ್ಲದೆ ಸ್ವರ್ಗಫಲದಲ್ಲಿಯೇ ಅಪೇಕ್ಷೆ ಉಳ್ಳವರಾಗಿರುತ್ತಾರೆ. ದಾನ-ಯಜ್ಞ-ಕ್ರಿಯಾಫಲಗಳಲ್ಲಿಯೇ ಆಸಕ್ತಿ ಉಳ್ಳವರಾಗಿರುತ್ತಾರೆ.
ಸ್ವಕರ್ಮಭಿಃ ಸಂಶ್ರಿತಾನಾಂ ತಪೋ ಘೋರತ್ವಮಾಗತಮ್ |
ತಂ ಸದಾಚಾರಮಾಶ್ಚರ್ಯಂ ಪುರಾಣಂ ಶಾಶ್ವತಂ ಧ್ರುವಮ್ ||34||
ಯಾರು ಶಾಶ್ವತವಾದ, ನಿಶ್ಚಿತವಾದ, ಪುರಾಣವೆನಿಸಿದ ಸದಾಚಾರವನ್ನು ಆಶ್ರಯಿಸಿಕೊಂಡು, ವಿಹಿತವಾದ ಕರ್ಮಗಳನ್ನು ಆಚರಿಸಿ, ಶ್ರೇಷ್ಠವಾದ ತಪಸ್ಸನ್ನು ಹೊಂದಿರುತ್ತಾರೋ ಅವರು ಸಂಸಾರವನ್ನು ಪರಿಹರಿಸಿಕೊಳ್ಳುತ್ತಾರೆ.
ಅಶಕ್ನುವದ್ಭಿಶ್ಚರಿತುಂ ಕಿಂಸ್ವಿದ್ಧರ್ಮೇಷು ಸೂಚಿತಮ್ |
ಅನಾಪದ್ಧರ್ಮ ಆಚಾರೋ ಹ್ಯಪ್ರಮಾದೋ ಧ್ರುವಾಣಿ ಚ ||35||
ಪ್ರವೃತ್ತಿ ಮಾರ್ಗದಲ್ಲಿ ರತರಾದ ಮನುಷ್ಯರು ಧರ್ಮವನ್ನು ಆಚರಿಸಲು ಅಸಮರ್ಥರಾಗಿರುತ್ತಾರೆ. ವೇದವಿಹಿತವಾದ ಸತ್ಕರ್ಮಗಳನ್ನು ಅನುಷ್ಠಾನ ಮಾಡಲು ಅಸಮರ್ಥರಾಗಿರುತ್ತಾರೆ. ಆಚಾರವು ಯಾವುದೇ ದೋಷರಹಿತವಾಗಿರುವಂತಹದು. ಪ್ರಮಾದರಹಿತವಾದುದು, ಪರಾಭವ ಹೊಂದದಿರುವುದು ಆಚಾರವೆನಿಸಿದೆ.
ಫಲವಂತಿ ಚ ಕರ್ಮಾಣಿ ವ್ಯುಷ್ಟಿಮಂತಿ ಧ್ರುವಾಣಿ ಚ |
ವಿಗುಣಾನಿ ಚ ಪಶ್ಯಂತಿ ತಥಾನೈಕಾಂತಿಕಾನಿ ಚ ||35||
ಯೋಗಶಾಸ್ತ್ರದಲ್ಲಿ ಹೇಳಿದ ಕರ್ಮಗಳು ಶ್ರೇಷ್ಠವಾದ, ಶಾಶ್ವತವಾದ ಫಲಗಳನ್ನು ನೀಡುತ್ತವೆ. ಸಾಧಕನನ್ನು ಉನ್ನತಿಗೆ ಕೊಂಡೊಯ್ಯುತ್ತವೆ. ಇದನ್ನರಿಯದ ಜನರು ಯೋಗಮಾರ್ಗವು ಗುಣರಹಿತವೆಂದೂ ನಿಯತಫಲಪ್ರದವಲ್ಲವೆಂದೂ ಭಾವಿಸುತ್ತಾರೆ.
ಗುಣಾಶ್ಚಾತ್ರ ಸುದುರ್ಜ್ಞೇಯಾ ಜ್ಞಾತಾಶ್ಚಾಪಿ ಸುದುಷ್ಕರಾಃ |
ಅನುಷ್ಠಿತಾಶ್ಚಾಂತವಂತ ಇತಿ ತ್ವಮನುಪಶ್ಯಸಿ ||36||
ಯಜ್ಞಗಳ ಗುಣಗಳು ತಿಳಿಯಲು ಸಾಧ್ಯವಾದವುಗಳು. ಒಂದು ವೇಳೆ ವಿಧಿ- ವಿಧಾನಗಳನ್ನು ತಿಳಿದರೋ, ಯಜ್ಞಾನುಷ್ಠಾನವು ದುಷ್ಕರವಾದುದು. ದುಷ್ಕರವಾದುದನ್ನು ಅನುಷ್ಠಾನ ಮಾಡಿದರೂ ಅವುಗಳು ಶಾಶ್ವತಫಲಪ್ರದವಾದುದವಲ್ಲ. ಇವುಗಳನ್ನು ನೀನೂ ತಿಳಿದಿರುತ್ತಿ.
ಸ್ಯೂಮರಶ್ಮಿಃ
ಯಥಾ ಚ ವೇದಪ್ರಾಮಾಣ್ಯಂ ತ್ಯಾಗಶ್ಚ ಸಫಲೋ ಯಥಾ |
ತೌ ಪಂಥಾನಾವುಭೌ ವ್ಯಕ್ತೌ ಭಗವಂಸ್ತದ್ಬ್ರವೀಹಿ ಮೇ ||37||
ಪೂಜ್ಯರೇ, ಕರ್ಮವನ್ನು ಮಾಡು, ಕರ್ಮವನ್ನು ಬಿಡು ಎಂಬ ವಿರುದ್ಧವಾದ ಮಾತುಗಳು ವೇದದಲ್ಲಿವೆ. ಇದರಿಂದ ವೇದವು ಹೇಗೆ ಪ್ರಮಾಣವಾಗುತ್ತದೆ? ನಿಷ್ಕಾಮ ಕರ್ಮ ಮಾಡಬೇಕು ಎಂಬ ಅಭಿಪ್ರಾಯವಿದ್ದರೆ ಫಲವನ್ನು ಹೊಂದುವುದು ಹೇಗೆ? ವೇದಪ್ರಾಮಾಣ್ಯವೂ ಸಿದ್ಧವಾಗಬೇಕು, ನಾವು ಮಾಡುವ ತ್ಯಾಗವೂ ಫಲಪ್ರದವಾಗಬೇಕು. ಇವೆರಡನ್ನೂ ಸಮನ್ವಯ ಮಾಡಿಕೊಳ್ಳುವ ಬಗೆ ಹೇಗೆ?
ಕಪಿಲಃ
ಪ್ರತ್ಯಕ್ಷಮಿಹ ಪಶ್ಯಂತಿ ಭವಂತಃ ಸತ್ಪಥೇ ಸ್ಥಿತಾಃ |
ಪ್ರತ್ಯಕ್ಷಂ ತು ಕಿಮತ್ರಾಸ್ತಿ ಯದ್ಭವಂತ ಉಪಾಸತೇ ||38||
ಸ್ಯೂಮರಶ್ಮಿಯೇ, ಸನ್ಮಾರ್ಗದಲ್ಲಿರುವ ನೀವು ಯೋಗಮಾರ್ಗದ ಫಲವನ್ನು ಪ್ರತ್ಯಕ್ಷವಾಗಿಯೇ ಕಾಣಬಹುದು. ಕರ್ಮಮಾರ್ಗದಲ್ಲಿ ಯಜ್ಞಾನುಷ್ಠಾನವನ್ನು ಮಾಡುವವರಿಗೆ ಪ್ರತ್ಯಕ್ಷ ಫಲವು ಕಾಣಿಸದು.
ಸ್ಯೂಮರಶ್ಮಿಃ
ಸ್ಯೂಮರಶ್ಮಿರಹಂ ಬ್ರಹ್ಮನ್ ಜಿಜ್ಞಾಸಾರ್ಥಮಿಹಾಗತಃ |
ಶ್ರೇಯಸ್ಕಾಮಃ ಪ್ರತ್ಯವೋಚಮಾರ್ಜವಾನ್ನ ವಿವಕ್ಷಯಾ |
ಇಮಂ ಚ ಸಂಶಯಂ ಘೋರಂ ಭಗವಾನ್ ಪ್ರಬ್ರವೀತು ಮೇ ||39||
ಪ್ರತ್ಯಕ್ಷಮಿಹ ಪಶ್ಯಂತೋ ಭವಂತಃ ಸತ್ಪಥೇ ಸ್ಥಿತಾಃ |
ಕಿಮತ್ರ ಪ್ರತ್ಯಕ್ಷತಮಂ ಭವಂತೋ ಯದುಪಾಸತೇ |
ಅನ್ಯತ್ರ ತರ್ಕಶಾಸ್ತ್ರೇಭ್ಯ ಆಗಮಾಚ್ಚ ಯಥಾಗಮಮ್ ||40||

ಸ್ಯೂಮರಶ್ಮಿ ಬ್ರಾಹ್ಮಣೋತ್ತಮರೇ, ನಾನು ಸ್ಯೂಮರಶ್ಮಿ ಎಂಬ ಹೆಸರಿನ ಬ್ರಾಹ್ಮಣನು. ಜ್ಞಾನದ ವಿಷಯವಾಗಿ ತಿಳಿಯಬೇಕೆಂದೇ ಇಲ್ಲಿ ಆಗಮಿಸಿ ಹಸುವಿನಲ್ಲಿ ಸೇರಿರುತ್ತೇನೆ. ಶ್ರೇಯಸ್ಸನ್ನು ಬಯಸಿದ ನಾನು ಋಜುಬುದ್ಧಿಯಿಂದ ತಮ್ಮ ಬಳಿ ಮಾತನಾಡುತ್ತಿರುತ್ತೇನೆ. ಚರ್ಚಿಸಲು ನನಗೆ ಇಚ್ಛೆ ಇರುವುದಿಲ್ಲ. ನನ್ನ ಮನಸ್ಸಿನ ಭಯಾನಕ ಸಂಶಯಕ್ಕೆ ನೀವು ಸಮಾಧಾನವನ್ನು ಹೇಳಿ.
ಆಗಮೋ ವೇದವಾದಸ್ತು ತರ್ಕಶಾಸ್ತ್ರಾಣಿ ಚಾಗಮಃ |
ಯಥಾಗಮಮುಪಾಸೀತ ಆಗಮಸ್ತತ್ರ ಸಿದ್ಧ್ಯತಿ |
ಸಿದ್ಧಿಃ ಪ್ರತ್ಯಕ್ಷರೂಪಾ ಚ ದೃಶ್ಯತ್ಯಾಗಮನಿಶ್ಚಯಾತ್ ॥41॥
ಬ್ರಹ್ಮಪ್ರಾಪ್ತಿಗೆ ಕಾರಣವಾದ ಯೋಗಮಾರ್ಗದಲ್ಲಿ ವರ್ತಿಸುವವರು ಅದರ ಫಲವನ್ನು ಪ್ರತ್ಯಕ್ಷವಾಗಿಯೇ ತಿಳಿದಿರುತ್ತಾರೆ ಎಂದು ನೀನು ಹೇಳಿರುತ್ತಿ. ನೀವು ಅನುಸರಿಸುವ ಯೋಗ ಯಾವುದು? ನಿಮಗೆ ಪ್ರತ್ಯಕ್ಷವಾಗಿ ಕಾಣುವ ಫಲ ಎಂತಹದ್ದು? ನಾನಾದರೂ ಕೇವಲ ತರ್ಕಶಾಸ್ತ್ರಗಳನ್ನಲ್ಲದೆ ಅವುಗಳ ಆಗಮಗಳನ್ನು, ಅವುಗಳ ಅರ್ಥವನ್ನು ಅಧ್ಯಯನ ಮಾಡಿದ್ದೇನೆ. ಆಗಮಾರ್ಥಗಳನ್ನು ತಿಳಿದುಕೊಂಡಿರುತ್ತೇನೆ.
ನೌರ್ನಾವೀವ ನಿಬದ್ಧಾ ಹಿ ಸ್ರೋತಸಾ ಸನಿಬಂಧನಾ |
ಹ್ರಿಯಮಾಣಾ ಕಥಂ ವಿಪ್ರಾ ಕುಬುದ್ಧೀಂಸ್ತಾರಯಿಷ್ಯತಿ |
ಏತದ್ಬ್ರವೀತು ಭಗವಾನುಪಪನ್ನೋಽಸ್ಮ್ಯಧೀಹಿ ಭೋಃ ॥42॥
ಒಂದು ದೋಣಿಯು ಪ್ರವಾಹದಿಂದ ಹೊಡೆದುಕೊಂಡು ಹೋಗುವ ಇನ್ನೊಂದು ದೋಣಿಯ ಹಿಂದೆ ಕಟ್ಟಲ್ಪಟ್ಟಾಗ ಆ ದೋಣಿಯೂ ಪ್ರವಾಹದಲ್ಲಿ ಕೊಚ್ಚಿಹೋಗುವ ದೋಣಿಯ ಜೊತೆಗೆ ಸೆಳೆಯಲ್ಪಡುತ್ತದೆಯೇ ಹೊರತು ಉದ್ದಿಷ್ಟ ಸ್ಥಳವನ್ನು ಸೇರಲಾಗದು. ಅದರಂತೆ ಕುತ್ಸಿತ ಬುದ್ಧಿ ಎಂಬ ಪ್ರವಾಹದಿಂದ ಆಗಮ ನಿಶ್ಚಯ ನಾವೆಯು ಸೆಳೆಯಲ್ಪಡುವಾಗ ಕಾರ್ಯಸಿದ್ಧಿಯು ಹೇಗೆ ತಾನೆ ಸಾಧ್ಯವಾಗುತ್ತದೆ. ದುರ್ಬುದ್ಧಿಯುಳ್ಳವರನ್ನು ದಾಟಿಸಲು ದಡ ಸೇರಿಸಲು ಉಪಾಯವೇನು? ಸರ್ವಜ್ಞನಾದ ನೀನು ಇದರ ನಿಶ್ಚಯವನ್ನು ತಿಳಿಸಬೇಕು. ನನಗೆ ಉಪದೇಶಿಸಬೇಕು.
ನೈವ ತ್ಯಾಗೀ ನ ಸಂತುಷ್ಟೋ ನಾಶೋಕೋ ನ ನಿರಾಮಯಃ |
ನ ನಿರ್ವಿವಿತ್ಸೋ ನಾವೃತ್ತೋ ನಾಪವೃತ್ತೋಽಸ್ತಿ ಕಶ್ಚನ ॥43॥
ಜಗತ್ತಿನಲ್ಲಿ ಸಂಪೂರ್ಣ ತ್ಯಾಗಿಯೂ ಇಲ್ಲ, ಸಂಪೂರ್ಣ ಸಂತೋಷಿಯೂ ಇಲ್ಲ. ಶೋಕವಿಲ್ಲದವನೂ ಇಲ್ಲ, ರೋಗವಿಲ್ಲದವನೂ ಇಲ್ಲ. ತಿಳಿಯಬೇಕೆಂಬ ಶ್ರದ್ಧೆ ಇಲ್ಲದವನೂ ಇಲ್ಲ, ತನಗಾಗಿ ಕಾರ್ಯ ನಡೆಸುವ ಅಪೇಕ್ಷೆಗಳನ್ನು ಸಂಪೂರ್ಣ ಬಿಟ್ಟವನೂ ಇಲ್ಲ.
ಭವಂತೋಽಪಿ ಚ ಹೃಷ್ಯಂತಿ ಶೋಚಂತಿ ಚ ಯಥಾ ವಯಮ್ |
ಇಂದ್ರಿಯಾರ್ಥಾಶ್ಚ ಭವತಾಂ ಸಮಾನಾಃ ಸರ್ವಜಂತುಷು ॥44॥
ಏವಂ ಚತುರ್ಣಾಂ ವರ್ಣಾನಾಮಾಶ್ರಮಾಣಾಂ ಪ್ರವೃತ್ತಿಷು |
ಏಕಮಾಲಂಬಮಾನಾನಾಂ ನಿರ್ಣಯೇ ಕಿಂ ನಿರಾಮಯಮ್ ॥45॥
ನಿನ್ನಂತಹ ಮಹಾತ್ಮರು ನಮ್ಮಂತೆಯೇ ಹರ್ಷ-ಶೋಕಗಳನ್ನು ಹೊಂದುತ್ತಲೇ ಇದ್ದಾರೆ. ಸಮಸ್ತ ಜಂತುಗಳಿಗೂ ಇರುವಂತೆ ಇಂದ್ರಿಯ ವ್ಯಾಪಾರಗಳು, ಅದನ್ನು ಅನುಭವಿಸುವ ವಿಷಯಗಳು ಇವೆ. ಆದ್ದರಿಂದ ನಾಲ್ಕು ವರ್ಣಗಳಲ್ಲಿಯಾಗಲಿ, ನಾಲ್ಕು ಆಶ್ರಮಗಳಲ್ಲಿ ಆಗಲಿ, ಉತ್ತಮ ಪದವನ್ನು ಹೊಂದತಕ್ಕವರಿಗೆ ಕೊನೆಯಲ್ಲಿ ಎಂದೂ ನಾಶವಿಲ್ಲದ ಸುಖರೂಪವಾದ ಸ್ಥಾನವು ಯಾವುದು? ಅದನ್ನು ತಿಳಿಸಿರಿ.
ಕಪಿಲಃ
ಯದ್ಯದಾಚರತೇ ಶಾಸ್ತ್ರಮಥ ಸರ್ವಪ್ರವೃತ್ತಿಷು |
ಯಸ್ಯ ಯತ್ರ ಹ್ಯನುಷ್ಠಾನಂ ತತ್ರ ತತ್ರ ನಿರಾಮಯಮ್ ॥46॥
ಅನೇಕ ವಿಧವಾದ ಕಾರ್ಯಗಳಲ್ಲಿ ಶಾಸ್ತ್ರವು ಯಾವುದನ್ನು ವಿಧಾನ ಮಾಡುತ್ತದೆಯೋ, ಯೋಗವೆಂದು ಹೇಳುತ್ತದೆಯೋ ಅಂತಹ ಕಾರ್ಯವನ್ನು ಅನುಷ್ಠಾನ ಮಾಡಿದಾಗ ಅದು ನಿರುಪದ್ರವವೂ, ಅಕ್ಷಯ ಸುಖದಾಯಕವೂ ಆಗುತ್ತದೆ.
ಸರ್ವಂ ಪಾವಯತೇ ಜ್ಞಾನಂ ಯೋ ಜ್ಞಾನಂ ಹ್ಯನುವರ್ತತೇ |
ಜ್ಞಾನಾದಪೇತ್ಯ ಯಾ ವೃತ್ತಿಃ ಸಾ ವಿನಾಶಯತಿ ಪ್ರಜಾಃ ॥47॥
ಜ್ಞಾನವು ಎಲ್ಲವನ್ನೂ ಪವಿತ್ರೀಕರಿಸುತ್ತದೆ. ಯಾವಾತನು ಜ್ಞಾನವನ್ನೇ ಅನುಸರಿಸುತ್ತಾನೋ ಆ ಜ್ಞಾನದಿಂದಲೇ ಅವನು ಎಲ್ಲವನ್ನೂ ಹೊಂದುತ್ತಾನೆ. ಜ್ಞಾನವನ್ನು ಬಿಟ್ಟು ಜಡವಾದ ಕರ್ಮವನ್ನು ಆಶ್ರಯಿಸಿದವನು ಜನನ-ಮರಣಗಳೆಂಬ ಪ್ರವಾಹದಲ್ಲಿ ಸಿಲುಕಿ ನಾಶವನ್ನು ಹೊಂದುತ್ತಾನೆ.
ಭವಂತೋ ಜ್ಞಾನಿನೋ ನಿತ್ಯಂ ಸರ್ವತಶ್ಚ ನಿರಾಗಮಾಃ |
ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ॥48॥
ನೀವೆಲ್ಲರೂ ಜ್ಞಾನಿಗಳೇ ಆಗಿರುತ್ತೀರಿ. ಇದು ಸ್ಪಷ್ಟವು. ಎಲ್ಲ ವಿಧವಾದ ಉಪದ್ರವಗಳಿಂದಲೂ ದೂರವಿರುವಿರಿ. ಆದರೆ ನಿಮಗೆ ಎಂದಿಗಾದರೂ ಜೀವ- ಬ್ರಹ್ಮರ ಐಕ್ಯವೆಂಬ ಭಾವವು ಉಂಟಾಗಿರುವುದೆ? ಇಂತಹ ಭಾವನೆ ಉಂಟಾಗಲು ಸಾಧ್ಯವಿರುವುದೇ? ಯೋಚಿಸಿರಿ. ಇದು ದಡ್ಡರ ಮಾತು.
ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ |
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ ॥49॥
ಸ್ವರೂಪತಃ ಜೀವ-ಪರಮಾತ್ಮರು ಭಿನ್ನರಾಗಿದ್ದಾರೆ. ಮಹಾಪರಿಮಾಣವುಳ್ಳ ಪರಮಾತ್ಮನು ಅನುಪರಿಮಾಣವುಳ್ಳ ಜೀವನಿಗಿಂತ ಭಿನ್ನನಾಗಿದ್ದಾನೆ. ಪರಮಾತ್ವ ಎಂಬ ಜಾತಿಯು ಆತ್ಮತ್ವ ಜಾತಿಯು ಭಿನ್ನವಾದವುಗಳು. ದ್ವಾಸುಪರ್ಣಾ ಎಂಬ ಶ್ರುತಿಯಲ್ಲಿ ಜೀವ-ಪರಮಾತ್ಮರಿಗೆ ಭೇದವನ್ನೇ ಹೇಳಿರುತ್ತಾರೆ. ಪರಮಾತ್ಮನಾದರೂ ಸಮಸ್ತ ಪುರುಷಾರ್ಥಗಳಿಂದ ಪೂರ್ಣನಾಗಿರುತ್ತಾನೆ.

ಜೀವನಾದರೂ ಪುರುಷಾರ್ಥಗಳನ್ನು ಬಯಸುವವನಾಗಿದ್ದಾನೆ. ಆದ್ದರಿಂದ ಪರಮಾತ್ಮನೇ ನಾನು ಎಂಬ ಭಾವನೆಯು ಎಷ್ಟು ಪ್ರಾಮಾಣಿಕವು? ಯುಕ್ತಿ ಸಂಬಂಧ ವಿರುದ್ಧವಾದುದರಿಂದ ಜೀವ-ಪರಮಾತ್ಮರಿಗೆ ಹೇಗೆ ಐಕ್ಯವನ್ನು ಹೇಳಲು ಸಾಧ್ಯ? ಆದ್ದರಿಂದ ಈ ಜೀವ-ಪರಮಾತ್ಮರಿಗೆ ಐಕಾತ್ಮ್ಯ ವಾದವು ಅಪ್ರಾಮಾಣಿಕವಾದುದೆಂಬುದೇ ನನ್ನ ಅಭಿಪ್ರಾಯ.

ಶಾಸ್ತ್ರಂ ಹ್ಯಬುದ್ಧ್ವಾ ತತ್ತ್ವೇನ ಕೇಚಿದ್ವಾದಬಲಾ ಜನಾಃ |
ಕಾಮದ್ವೇಷಾಭಿಭೂತತ್ವಾದಹಂಕಾರವಶಂ ಗತಾಃ ॥50॥

ಕೆಲವು ಜನರು ಶಾಸ್ತ್ರವನ್ನು ಯಥಾರ್ಥವಾಗಿ ತಿಳಿಯದೆ, ವಿತಂಡವಾದದ ಬಲದಿಂದ, ರಾಗ-ದ್ವೇಷದಿಂದ ಕೂಡಿದವರಾಗಿ ಅಹಂಕಾರಕ್ಕೆ ಅಧೀನರಾಗಿರುತ್ತಾರೆ.

ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ |
ಬ್ರಹ್ಮಸ್ತೇನಾ ನಿರಾರಂಭಾ ಅಪಕ್ವಮತಯೋಽಶಿವಾಃ ॥51॥

ಶಾಸ್ತ್ರಗಳ ಯಥಾರ್ಥವನ್ನು ಅರಿಯದೆ, ಶಾಸ್ತ್ರಗಳ ವಾಕ್ಯವನ್ನು ಸ್ವಲ್ಪ ಸ್ವಲ್ಪ ಕದ್ದು ತಮ್ಮ ಮತವೇ ಹೆಚ್ಚೆಂದು ಪ್ರತಿಪಾದಿಸುವ ಪರಬ್ರಹ್ಮನ ಗುಣಗಳನ್ನೇ ಕದಿಯುವ ಕಳ್ಳರು ಕ್ಷಮ-ದಮಾದಿ ಸಾಧನಗಳನ್ನು ಅನುಷ್ಠಾನ ಮಾಡದೆ ಡಂಭ, ಮೋಹಗಳಿಗೆ ವಶರಾಗುತ್ತಾರೆ.

ವೈಗುಣ್ಯಮೇವ ಪಶ್ಯಂತಿ ನ ಗುಣಾನನುಯುಂಜತೇ |
ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಮ್ ॥52॥

ಅವರು ಶಮ-ದಮಾದಿ ಗುಣಗಳನ್ನೇ ನಿಷ್ಫಲವೆನ್ನುತ್ತಾರೆ. ಜ್ಞಾನೈಶ್ವರ್ಯಾದಿ ಗುಣಗಳನ್ನು ಚಿಂತಿಸುವುದಿಲ್ಲ. ತಮೋಗುಣವೇ ತುಂಬಿರುವ ಅಂತಹ ಮನುಷ್ಯರಿಗೆ ಅಂಧಂತಮಸ್ಸೇ ನಿತ್ಯವೂ ಆಶ್ರಯತಾಣವಾಗಿದೆ.

ಯೋ ಯಥಾಪ್ರಕೃತಿರ್ಜಂತುಃ ಪ್ರಕೃತೇಃ ಸ್ಯಾದ್ವಶಾನುಗಃ |
ತಸ್ಯ ದ್ವೇಷಶ್ಚ ಕಾಮಶ್ಚ ಕ್ರೋಧೋ ದಂಭೋಽನೃತಂ ಮದಃ |
ನಿತ್ಯಮೇವಾಭಿವರ್ತಂತೇ ಗುಣಾಃ ಪ್ರಕೃತಿಸಂಭವಾಃ॥53॥

ಯಾವ ಮನುಷ್ಯನಲ್ಲಿ ಯಾವ ವಿಧವಾದ ಸ್ವಭಾವವಿದೆಯೋ ಅವನು ಅದಕ್ಕನುಗುಣವಾಗಿ ವರ್ತಿಸುತ್ತಾನೆ. ತಾಮಸಶರೀರಿಗೆ, ತಮೋಗುಣಕ್ಕೆ ಅಧೀನನಾಗಿರುವವನಿಗೆ ಅದರಿಂದ ಜನ್ಯವಾದ ದ್ವೇಷ, ಕಾಮ, ಕ್ರೋಧ, ಡಂಭ, ಸುಳ್ಳು, ಮದ ಮುಂತಾದ ದುರ್ಗುಣಗಳು ಸ್ವರೂಪದಲ್ಲಿಯೇ ಇರುತ್ತವೆ.

ಏತದ್ ಬುದ್ಧ್ವಾನುಪಶ್ಯಂತಃ ಸಂತ್ಯಜೇಯುಃ ಶುಭಾಶುಭಮ್ |
ಪರಾಂ ಗತಿಮಭೀಪ್ಸಂತೋ ಯತಯಃ ಸಂಯಮೇ ರತಾಃ ॥54॥

ಇದನ್ನು ಅರ್ಥೈಸಿಕೊಂಡಿರುವ ಜ್ಞಾನಿಗಳು ಕರ್ಮಗಳಲ್ಲಿರುವ ಶುಭಾಶುಭಗಳನ್ನು ಪ್ರತ್ಯಕ್ಷವಾಗಿ ಕಾಣುತ್ತಾ, ಪ್ರತಿಬಂಧಕವೆನಿಸಿದ ಪುಣ್ಯ-ಪಾಪ ಕರ್ಮಗಳನ್ನು ಪರಿತ್ಯಜಿಸುತ್ತಾ ಭಗವನ್ನಿಷ್ಠರಾಗಿ ಇರುತ್ತಾರೆ.

ಸ್ಯೂಮರಶ್ಮಿಃ

ಸರ್ವಮೇತನ್ಮಯಾ ಬ್ರಹ್ಮನ್ ಶಾಸ್ತ್ರತಃ ಪರಿಕೀರ್ತಿತಮ್ |
ನ ಹ್ಯವಿಜ್ಞಾಯ ಶಾಸ್ತ್ರಾರ್ಥಂ ಪ್ರವರ್ತಂತೇ ಪ್ರವೃತ್ತಯಃ ॥55॥

ಬ್ರಾಹ್ಮಣೋತ್ತಮನೇ, ಯಜ್ಞಾನುಷ್ಠಾನದ ವಿಷಯವಾಗಿ ಎಲ್ಲವನ್ನೂ ಶಾಸ್ತ್ರದಲ್ಲಿ ತಿಳಿಸಿದಂತೆ ಹೇಳಿದ್ದೇನೆ. ಶಾಸ್ತ್ರದ ಅರ್ಥವನ್ನು ಚೆನ್ನಾಗಿ ತಿಳಿದುಕೊಳ್ಳದೆ ಯಾವುದೇ ಕಾರ್ಯವು ಪ್ರವೃತ್ತಿಯನ್ನು ಹೊಂದವು.

ಯಃ ಕಶ್ಚಿನ್ನ್ಯಾಯ್ಯ ಆಚಾರಃ ಸರ್ವಂ ಶಾಸ್ತ್ರಮಿತಿ ಶ್ರುತಿಃ |
ಯದನ್ಯಾಯ್ಯಮಶಾಸ್ತ್ರಂ ತದಿತ್ಯೇಷಾ ಶ್ರೂಯತೇ ಶ್ರುತಿಃ ॥56॥

ಪ್ರಾಮಾಣಿಕವಾದ ಸದಾಚಾರವು ಯಾವುದಿದೆಯೋ ಆ ಆಚಾರವನ್ನೇ ಶಾಸ್ತ್ರವು ಎಂದು ವೇದವೇ ಒಪ್ಪಿದೆ. ಯುಕ್ತಿಬದ್ಧವಲ್ಲದ ಆಚಾರವು ಯಾವುದಿದೆಯೋ ಅದು ಅಶಾಸ್ತ್ರೀಯವೆಂದು ಶ್ರುತಿಯೇ ಸಾರಿದೆ.

ನ ಪ್ರವೃತ್ತಿರ್ಋತೇ ಶಾಸ್ತ್ರಾತ್ ಕಾಚಿದಸ್ತೀತಿ ನಿಶ್ಚಯಃ |
ಯದನ್ಯದ್ ವೇದವಾದೇಭ್ಯಸ್ತದಶಾಸ್ತ್ರಮಿತಿ ಶ್ರುತಿಃ ॥57॥

ಶಾಸ್ತ್ರವನ್ನು ಬಿಟ್ಟು ಯಾವುದೇ ವಿಧವಾದ ಪ್ರವೃತ್ತಿಯು ಕೂಡುವುದಿಲ್ಲ ಎಂಬುದು ನಿಶ್ಚಯ. ವೇದವಚನಕ್ಕೆ ವಿರುದ್ಧವಾಗಿ ಯಾವುದಿದೆಯೋ ಅದು ಅಶಾಸ್ತ್ರ ಎಂದು ಶ್ರುತಿಯೇ ನಿರೂಪಿಸಿದೆ.

ಶಾಸ್ತ್ರಾದಪೇತಂ ಪಶ್ಯಂತಿ ಬಹವೋ ವ್ಯಕ್ತಮಾನಿನಃ |
ಶಾಸ್ತ್ರದೋಷಾನ್ನ ಪಶ್ಯಂತಿ ಇಹ ಚಾಮುತ್ರ ಚಾಪರೇ |
ಅವಿಜ್ಞಾನಹತಪ್ರಜ್ಞಾ ಹೀನಪ್ರಜ್ಞಾಸ್ತಮೋವೃತಾಃ ॥58॥

ಪ್ರತ್ಯಕ್ಷ ಫಲವನ್ನೇ ಬಯಸುವ ಅನೇಕರು ಕಣ್ಣಿಗೆ ಕಾಣದೆ ಇರುವ ಫಲವನ್ನು, ಯಜ್ಞಾದಿಗಳನ್ನು ಒಪ್ಪುವುದಿಲ್ಲ. ಶಾಸ್ತ್ರದಲ್ಲಿ ಹೇಳಿರುವ ದೋಷಗಳನ್ನು ಅವರು ಗಮನಿಸುವುದಿಲ್ಲ. ಆದ್ದರಿಂದ ಅವರೆಲ್ಲರೂ ನಮ್ಮಂತೆ ದುಃಖಕ್ಕೆ ಒಳಗಾಗುತ್ತಾರೆ. ಎಲ್ಲ ಜಂತುಗಳಿಗಿರುವ ಇಂದ್ರಿಯಗಳು, ಇಂದ್ರಿಯಾರ್ಥಗಳು ನಿಮಗೂ ಇರುತ್ತವೆ. ಆದರೆ ನಿಮಗಿರುವ ಬ್ರಹ್ಮಜ್ಞಾನದಿಂದಲೂ ಎಲ್ಲರಲ್ಲಿರುವ ಅಜ್ಞಾನವನ್ನು ತಾರತಮ್ಯದಿಂದ ಹೇಳಬಹುದು. ಶಾಸ್ತ್ರದಲ್ಲಿ ದೋಷವನ್ನು ನೋಡುವವರು ವಿಜ್ಞಾನವಿಲ್ಲದೆ ಇರುವ ಮೂರ್ಖರು, ಹೀನಪ್ರಜ್ಞರು, ಅಜ್ಞಾನದಿಂದಲೇ ಆವೃತರೂ ಆಗಿರುತ್ತಾರೆ.

ಶಕ್ಯಂ ತ್ವೇಕೇನ ಮುಕ್ತೇನ ಕೃತಕೃತ್ಯೇನ ಸರ್ವಶಃ |
ಪಿಂಡಮಾತ್ರಂ ವ್ಯಪಾಶ್ರಿತ್ಯ ಚರಿತುಂ ಸರ್ವತೋದಿಶಮ್ |
ವೇದವಾದಂ ವ್ಯಪಾಶ್ರಿತ್ಯ ಮೋಕ್ಷೋಸ್ತೀತಿ ಪ್ರಭಾಷಿತುಮ್ ॥59॥

ಏಕಾಕಿಯಾಗಿರುವ, ಯೋಗಯುಕ್ತನಾದ, ಕೃತಕೃತ್ಯನಾದ, ಜಿತೇಂದ್ರಿಯನಾದ, ಪ್ರಾಣದಾನಕ್ಕೆ ಬೇಕಾಗಿರುವಷ್ಟು ಮಾತ್ರ ಆಹಾರವನ್ನು ಅವಲಂಬಿಸಿಕೊಂಡು ಬಾಹ್ಯ ಕರ್ಮಗಳನ್ನು ಪ್ರತಿಪಾದಿಸುವ, ಶಾಸ್ತ್ರಗಳನ್ನು ತ್ಯಜಿಸಿ ಸಮಸ್ತ ಲೋಕಗಳನ್ನೂ ಬಯಸುತ್ತಿರುವ ನಿನಗೆ ಮೋಕ್ಷವೆಂಬುದು ಇದೆ ಎಂದು ಹೇಳಲು ಸಾಧ್ಯವಿದೆ.
ಇದಂ ತು ದುಷ್ಕರಂ ಕರ್ಮ ಕುಟುಂಬಮಭಿಸಂಶ್ರಿತಮ್ |
ದಾನಮಧ್ಯಯನಂ ಯಜ್ಞಃ ಪ್ರಜಾಸಂತಾನಮಾರ್ಜವಮ್ ॥60॥
ಗೃಹಸ್ಥಾಶ್ರಮಕ್ಕೆ ಅನುಸಾರವಾಗಿ ಕುಟುಂಬದ ಭರಣ-ಪೋಷಣಾದಿ ಕಾರ್ಯಗಳು, ದಾನ, ಅಧ್ಯಯನ, ಸ್ವಾಧ್ಯಾಯ, ಯಜ್ಞ, ಸಂತಾನೋತ್ಪತ್ತಿ, ಸರಳತೆ ಇವೆಲ್ಲವೂ ಮನುಷ್ಯನಿಗೆ ಆಚರಿಸಲು ಅತ್ಯಂತ ದುಷ್ಕರವಾದವುಗಳು.
ಯದ್ಯೇತದೇವಂ ಕೃತ್ವಾಪಿ ನ ವಿಮೋಕ್ಷೋಽಸ್ತಿ ಕಸ್ಯಚಿತ್ |
ಧಿಕ್ಕರ್ತಾರಂ ಚ ಕಾರ್ಯಂ ಚ ಶ್ರಮಶ್ಚಾಯಂ ನಿರರ್ಥಕಃ ॥61॥
ಕಷ್ಟಪಟ್ಟು ವೇದವಿಹಿತವಾದ ಕರ್ಮಗಳನ್ನು ಮಾಡಿದರೂ ಒಬ್ಬನಿಗೆ ಮೋಕ್ಷವೇ ಇಲ್ಲವೆನ್ನುವುದಾದರೆ ಅಂತಹ ಕರ್ಮವನ್ನೇ ಮಾಡಬಾರದು. ಕಾಮ್ಯಕರ್ಮವನ್ನು ಮಾಡಿದಾಗ ಮೋಕ್ಷ ಉಂಟಾಗುವುದಿಲ್ಲ. ಕುಟುಂಬಭರಣಕ್ಕೋಸ್ಕರ ವೇದ ಪ್ರವಚನವನ್ನು ಮಾಡುವವರಿಗೆ ಮೋಕ್ಷ ಇರುವುದಿಲ್ಲ. ಆದ್ದರಿಂದ ವೇದವಿಹಿತವಾದ ಕರ್ಮಗಳು ಸ್ವಾರ್ಥಕ್ಕೆ ಉಪಯೋಗವಾದಲ್ಲಿ ಅದರ ಉಚ್ಛಿಷ್ಟವಾದ ಫಲವನ್ನು ಹೊಂದಲು ಸಾಧ್ಯವಾಗುವುದಿಲ್ಲ.
ನಾಸ್ತಿಕ್ಯಮನಯಾ ಚ ಸ್ಯಾದ್ ವೇದಾನಾಂ ಪೃಷ್ಠತಃಕ್ರಿಯಾ |
ಏತಸ್ಯಾನಂತ್ಯಮಿಚ್ಛಾಮಿ ಭಗವನ್ ಶ್ರೋತುಮಂಜಸಾ ॥62॥
ಕ್ರಿಯೆಗಳನ್ನೇ ವಿಸ್ತಾರ ಮಾಡುವ ಈ ವೇದಗಳಿಂದ ವೇದಗಳಲ್ಲಿಯೇ ಅಪನಂಬಿಕೆಯು ಜನರಿಗೆ ಉಂಟಾಗುತ್ತದೆ. ಆದ್ದರಿಂದ ಪೂಜ್ಯನೇ, ಈ ವೇದಗಳ ಮೂಲಕ ಹೊಂದಬಹುದಾದ ಅನಂತವಾದ ಫಲವೇನೆಂಬುದನ್ನು ತಿಳಿಯಲು ನಾನು ಬಯಸುತ್ತೇನೆ.
ತಥ್ಯಂ ವದಸ್ವ ಮೇ ಬ್ರಹ್ಮನ್ನುಪಸನ್ನೋಽಸ್ಮ್ಯಧೀಹಿ ಭೋಃ |
ಯಥಾ ತೇ ವಿದಿತೋ ಮೋಕ್ಷಸ್ತಥೇಚ್ಛಾಮ್ಯುಪಶಿಕ್ಷಿತುಮ್ ॥63॥
ಬ್ರಾಹ್ಮಣೋತ್ತಮನೇ, ನನಗೆ ಯಥಾರ್ಥವನ್ನೇ ಬೋಧಿಸು. ನಾನು ನಿನಗೆ ಶಿಷ್ಯನಾಗಿದ್ದೇನೆ. ಮೋಕ್ಷವೆಂಬುದು ನಿನಗೆ ಹೇಗೆ ತಿಳಿದಿರುತ್ತದೋ ಅದರಂತೆ ನಾನು ಮೋಕ್ಷದ ವಿಷಯವನ್ನು ನಿನ್ನಿಂದ ತಿಳಿಯಲು ಬಯಸಿದ್ದೇನೆ. ನನಗೆ ಉಪದೇಶಿಸು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಗೋಕಪಿಲಸಂವಾದೋ ನಾಮ ಚತುರಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐದನೆಯ ಅಧ್ಯಾಯ
ಸ್ಯೂಮರಶ್ಮಿ-ಕಪಿಲರ ಸಂವಾದ.
ಕಪಿಲಃ
ವೇದಾಃ ಪ್ರಮಾಣಂ ಲೋಕಾನಾಂ ನ ವೇದಾಃ ಪೃಷ್ಠತಃ ಕೃತಾಃ |
ದ್ವೇ ಬ್ರಹ್ಮಣೀ ವೇದಿತವ್ಯೇ ಶಬ್ದಬ್ರಹ್ಮ ಪರಂ ಚ ಯತ್ |
ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ ॥1॥
ಸಮಸ್ತಲೋಕಗಳಿಗೂ ವೇದಗಳೇ ಪ್ರಮಾಣವಾದವುಗಳು. ವೇದಗಳನ್ನು ಯಾರೂ ತಿರಸ್ಕರಿಸಿಲ್ಲ. ಆದರೆ ಬ್ರಹ್ಮ ಎಂದು ಕರೆಸಿಕೊಳ್ಳುವ ಎರಡನ್ನೂ ತಿಳಿದುಕೊಳ್ಳಬೇಕು. ಒಂದು ಶಬ್ದಬ್ರಹ್ಮವೆನಿಸಿದ ವೇದಗಳು, ಮತ್ತೊಂದು ಪರಬ್ರಹ್ಮನೆನಿಸಿದ ಭಗವಂತ. ಯಾರು ಶಬ್ದಬ್ರಹ್ಮನಲ್ಲಿ ನಿಷ್ಣಾತರಾಗಿದ್ದಾರೋ ಅವರು ಪರಬ್ರಹ್ಮನನ್ನು ಹೊಂದುತ್ತಾರೆ.
ಶರೀರಮೇತತ್ ಕುರುತೇ ಯದ್ ವೇದೇ ಕುರುತೇ ತನುಮ್ |
ಕೃತಶುದ್ಧಶರೀರೋ ಹಿ ಪಾತ್ರಂ ಭವತಿ ಬ್ರಾಹ್ಮಣಃ ॥2॥
ವೇದೋಕ್ತವಾದ ವಿಧಿಗಳಿಂದ ತಂದೆಯು ಶರೀರದ ಜನ್ಮಕ್ಕೆ ಕಾರಣನಾಗುತ್ತಾನೆ. ಗರ್ಭಾಧಾನ ಮೊದಲಾದ ಸಂಸ್ಕಾರಗಳು ವೇದೋಕ್ತ ವಿಧಿಯಿಂದಲೇ ನಡೆಯಲ್ಪಡುತ್ತವೆ. ಈ ಸಂಸ್ಕಾರದಿಂದ ಪರಿಶುದ್ಧವಾದ ಶರೀರವು ಬ್ರಹ್ಮಜ್ಞಾನಕ್ಕೆ ಯೋಗ್ಯವಾಗುತ್ತದೆ.
ಆನಂತ್ಯಮನುಯುಂಕ್ತೇ ಯಃ ಕರ್ಮಣಾ ತದ್ ಬ್ರವೀಮಿ ತೇ |
ನಿರಾಗಮಮನೈತಿಹ್ಯಮ್ ಅತ್ಯಕ್ಷಂ ಲೋಕಸಾಕ್ಷಿಕಮ್ ॥3॥
ಸ್ಯೂಮರಶ್ಮಿಯೇ, ಕರ್ಮಗಳಿಂದಲೂ ಅನಂತ ಫಲವೆನಿಸಿದ ಮೋಕ್ಷವನ್ನು ಹೇಗೆ ಹೊಂದಬಹುದು ಎಂಬುದನ್ನು ನಿನಗೆ ಹೇಳುತ್ತೇನೆ. ಯಾವ ವ್ಯಕ್ತಿಯು ಪ್ರವೃತ್ತಿ ಕರ್ಮವನ್ನು ಬೋಧಿಸುವ ವೇದಗಳಲ್ಲಿ ಆಸಕ್ತಿಯನ್ನು ತೊರೆದಿರುತ್ತಾನೋ, ಇಂತಹ ಕರ್ಮದಿಂದ ಇಂತಹ ಫಲವನ್ನು ಹೊಂದಬಹುದು ಎಂಬುದರಲ್ಲಿಯೂ ಆಸಕ್ತಿಯನ್ನು ತೊರೆದಿರುತ್ತಾನೋ, ಲೋಕ ಸಿದ್ಧವಾದ ಫಲಗಳನ್ನು ಬಯಸಲು ಹೋಗುವುದಿಲ್ಲವೋ ಇಂತಹ ನಿಷ್ಕಾಮ ಕರ್ಮಿಯು ಮೋಕ್ಷವೆಂಬ ಫಲವನ್ನು ಹೊಂದುತ್ತಾನೆ.
ಧರ್ಮ ಇತ್ಯೇವ ಯೇ ಯಜ್ಞಾನ್ ವಿತನ್ವಂತಿ ನಿರಾಶಿಷಃ |
ಉತ್ಪನ್ನತ್ಯಾಗಿನೋಽಲುಬ್ಧಾಃ ಕೃಪಾಸೂಯಾವಿವರ್ಜಿತಾಃ |
ಧನಾನಾಮೇಷ ವೈ ಪಂಥಾಸ್ತೀರ್ಥೇಷು ಪ್ರತಿಪಾದನಮ್ ॥4॥
ಇದು ಧರ್ಮ ಎಂಬ ಭಾವನೆಯಿಂದ ಯಾರು ಯಜ್ಞಗಳನ್ನು ಕಾಮನೆಯನ್ನು ತೊರೆದು ಮಾಡುತ್ತಾರೋ, ಸ್ವಭಾವತಃ ತ್ಯಾಗಿಗಳಾಗಿರುವರೋ, ಲೋಭ, ಕೃಪಣತೆ, ಅಸೂಯೆಯನ್ನು ತ್ಯಜಿಸಿದ್ದಾರೋ, ಲಭಿಸಿದ ಧನವನ್ನು ತೀರ್ಥಕ್ಷೇತ್ರ ಸೇವನೆಯಲ್ಲಿ, ದಾನ-ತ್ಯಾಗಗಳಲ್ಲಿ ಸಮರ್ಪಿಸುತ್ತಾರೋ,

ಅನಾಶ್ರಿತಾಃ ಪಾಪಕೃತ್ಯಾಃ ಕದಾಚಿತ್ ಕರ್ಮಯೋನಿತಃ |
ಮನಃಸಂಕಲ್ಪಸಂಸಿದ್ಧಾ ವಿಶುದ್ಧಜ್ಞಾನನಿಶ್ಚಯಾಃ ॥5॥
ಯಾವುದೇ ಪಾಪಕರ್ಮವನ್ನು ಎಸಗುವುದಿಲ್ಲವೋ, ಕರ್ಮದಿಂದ ಪ್ರಾಪ್ತವಾದ ಜನ್ಮವನ್ನು ತಾಳಿದ್ದರೂ ಮನಸ್ಸಿನ ಸಂಕಲ್ಪವನ್ನು ಸಿದ್ಧಿಸುವುದರಲ್ಲಿ ಏಕಾಗ್ರತೆ ಉಳ್ಳವರೋ, ವಿಶುದ್ಧವಾದ ಭಗವದ್ಜ್ಞಾನದಲ್ಲಿ ನಿಶ್ಚಯವುಳ್ಳವರಾಗಿರುವರೋ,
ಅಕ್ರುಧ್ಯಂತೋಽನಸೂಯಂತೋ ನಿರಹಂಕಾರಮತ್ಸರಾಃ |
ಜ್ಞಾನನಿಷ್ಠಾಸ್ತ್ರಿಯುಕ್ತಾಶ್ಚ ಸರ್ವಭೂತಹಿತೇ ರತಾಃ ॥6॥
ಯಾರ ಮೇಲೂ ಕೋಪಿಸಿಕೊಳ್ಳದೆ, ಯಾರ ವಿಷಯದಲ್ಲಿಯೂ ದೋಷವೆಣಿಸದೆ, ನಿರಹಂಕಾರಿಗಳಾಗಿ, ಮಾತ್ಸರ್ಯವಿಲ್ಲದವರಾಗಿ, ಪರಬ್ರಹ್ಮನ ಜ್ಞಾನದಲ್ಲಿಯೇ ನಿಷ್ಠರಾಗಿ, ಮೂರು ವೇದಗಳ ಅಧ್ಯಯನದಲ್ಲಿಯೇ ಆಸಕ್ತರಾಗಿ, ಸಮಸ್ತ ಭೂತಗಳ ಹಿತದಲ್ಲಿಯೇ ರತರಾಗಿರುತ್ತಾರೆ.
ಆಸನ್ ಗೃಹಸ್ಥಾ ಭೂಯಿಷ್ಠಮವ್ಯುತ್ಕ್ರಾಂತಾಃ ಸ್ವಕರ್ಮಸು |
ರಾಜಾನಶ್ಚ ತಥಾ ಯುಕ್ತಾ ಬ್ರಾಹ್ಮಣಾಶ್ಚ ಯಥಾವಿಧಿ ॥7॥
ಹಿಂದಿನ ಕಾಲದಲ್ಲಿ ಗೃಹಸ್ಥರಾದ ಅನೇಕ ಬ್ರಾಹ್ಮಣರು ಮತ್ತು ರಾಜರು ಗೃಹಸ್ಥಾಶ್ರಮೋಚಿತವಾದ ವೈದಿಕ ಧರ್ಮವನ್ನು ತ್ಯಾಗ ಮಾಡದೆ, ವೇದೋಕ್ತವಾದ ವಿಧಿಯಿಂದ, ನಿಷ್ಕಾಮಭಾವದಿಂದ ಕರ್ಮಗಳನ್ನು ಮಾಡುತ್ತಿದ್ದರು.
ಸಮಾ ಹ್ಯಾರ್ಜವಸಂಪನ್ನಾಃ ಸಂತುಷ್ಟಾ ಜ್ಞಾನನಿಶ್ಚಯಾಃ |
ಪ್ರತ್ಯಕ್ಷಧರ್ಮಾಃ ಶುಚಯಃ ಶ್ರದ್ಧಧಾನಾಃ ಪರಾವರೇ ॥8॥
ಸಮಸ್ತ ಪ್ರಾಣಿಗಳಲ್ಲಿಯೂ ಸಮಾನ ದೃಷ್ಟಿಯುಳ್ಳವರಾಗಿ, ಸರಳತೆಯಿಂದ ಕೂಡಿದವರಾಗಿ, ಸರ್ವದಾ ಸಂತುಷ್ಟಚಿತ್ತರಾಗಿ, ಭಗವದ್ಜ್ಞಾನದಲ್ಲಿ ನಿಶ್ಚಯ ಉಳ್ಳವರಾಗಿ, ಚಿತ್ತಶುದ್ಧಿಯನ್ನುಂಟು ಮಾಡುವ ಧರ್ಮವನ್ನು ಅನುಷ್ಠಾನ ಮಾಡುವವರಾಗಿ, ಪರಿಶುದ್ಧರಾಗಿ, ಸರ್ವೋತ್ತಮನಾದ ಪರಬ್ರಹ್ಮನಲ್ಲಿಯೂ, ಜಗತ್ತಿನಲ್ಲಿಯೂ ಶ್ರದ್ಧೆಯುಳ್ಳವರಾಗಿ,
ಪುರಸ್ತಾದ್ಭಾವಿತಾತ್ಮಾನೋ ಯಥಾವಚ್ಚರಿತವ್ರತಾಃ |
ಚರಂತಿ ಧರ್ಮಂ ಕೃಚ್ಛ್ರೇಽಪಿ ದುರ್ಗೇ ಚೈವಾಧಿಸಂಹತಾಃ ॥9॥
ನಿಯಮಗಳನ್ನು ವಿಧಿಬದ್ಧವಾಗಿ ಮನಃಪೂರ್ವಕವಾಗಿ ಆಚರಿಸುತ್ತಾ, ಕಷ್ಟದ ಸಮಯದಲ್ಲಿಯೂ ಧರ್ಮಾಚರಣೆಯನ್ನು ಮಾಡುತ್ತಾ, ದುರ್ಗಮವಾದ ಸ್ಥಳದಲ್ಲಿಯೂ ಧರ್ಮವನ್ನು ಬಿಡದೆ ಒಟ್ಟಾಗಿ ಧರ್ಮವನ್ನು ಆಚರಿಸುತ್ತಿದ್ದರು.
ಸಂಹತ್ಯ ಧರ್ಮಂ ಚರತಾಂ ಪುರಾಸೀತ್ ಸುಖಮೇವ ತತ್ |
ತೇಷಾಂ ನಾಸೀದ್ ವಿಧಾತವ್ಯಂ ಪ್ರಾಯಶ್ಚಿತ್ತಂ ಕದಾಚನ ॥10॥
ಪರಸ್ಪರವಾಗಿ ಸೇರಿಕೊಂಡು ಧರ್ಮಾಚರಣೆಯನ್ನು ಮಾಡುತ್ತಿದ್ದರಿಂದ ಅವರಿಗೆ ಸುಖವೇ ಉಂಟಾಗುತ್ತಿತ್ತು. ಸಂಘಟನೆಯಿಂದ ವಿಚಾರ ಮಾಡಿ ಕರ್ಮಗಳನ್ನು ಮಾಡುತ್ತಿದ್ದ ಅವರ ಕರ್ಮಗಳಲ್ಲಿ ಲೋಪವು ಉಂಟಾಗುತ್ತಿರಲಿಲ್ಲ. ಮಂತ್ರಲೋಪ, ಕ್ರಿಯಾಲೋಪಗಳಿಗಾಗಿ ಯಾವಾಗಲೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಅವಶ್ಯಕತೆಯೂ ಇರಲಿಲ್ಲ.
ಸತ್ಯಂ ಹಿ ಧರ್ಮಮಾಸ್ಥಾಯ ದುರಾಧರ್ಷತಮಾ ಮತಾಃ |
ನ ಮಾತ್ರಾಮನುರುಧ್ಯಂತೇ ನ ಧರ್ಮಚ್ಛಲಮಂತತಃ ॥11॥
ಸತ್ಯವಾದ ಧರ್ಮವನ್ನು ಅನುಸರಿಸಿ ಹೋಗುವ ಅವರನ್ನು ಯಾರಿಂದಲೂ ಮೀರಿ ಹೋಗಲಾಗುತ್ತಿರಲಿಲ್ಲ. ಧರ್ಮದಿಂದ ಪ್ರಭುತ್ವವನ್ನು ಸಂಪಾದಿಸಿಕೊಂಡಿರುತ್ತಿದ್ದರು. ಪ್ರಾಪಂಚಿಕವಾದ ರೂಪ-ರಸಾದಿಗಳಲ್ಲಿ ಅನುರಕ್ತರಾಗುತ್ತಿರಲಿಲ್ಲ. ಎಂದಿಗೂ ಮೋಸದ ಧರ್ಮಾಚರಣೆಯನ್ನು ಮಾಡುತ್ತಿರಲಿಲ್ಲ.
ಯ ಏವ ಪ್ರಥಮಃ ಕಲ್ಪಸ್ತಮೇವಾಭ್ಯಾಚರನ್ ಸಹ |
ಅಸ್ಯಾಂ ಸ್ಥಿತೌ ಸ್ಥಿತಾನಾಂ ಹಿ ಪ್ರಾಯಶ್ಚಿತ್ತಂ ನ ವಿದ್ಯತೇ |
ದುರ್ಬಲಾತ್ಮನ ಉತ್ಪನ್ನಂ ಪ್ರಾಯಶ್ಚಿತ್ತಮಿತಿ ಶ್ರುತಿಃ ॥12॥
ಯಾವುದು ಶ್ರೇಷ್ಠವಾದ ಧರ್ಮವೋ, ನಿಯತವಾದ ಧರ್ಮವೋ ಅದನ್ನೇ ಸಂಘಟನೆಯಿಂದ ಆಚರಿಸುತ್ತಿದ್ದರು. ಆದ್ದರಿಂದಲೇ ಮಂತ್ರಲೋಪ, ಕ್ರಿಯಾಲೋಪಗಳ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗಿರಲಿಲ್ಲ. ಯಾರು ಪರಸ್ಪರ ವಿಧಿ ನಿಷೇಧಗಳನ್ನು ಅರಿತು, ಸಹಕಾರದಿಂದ ಕರ್ಮವನ್ನು ಮಾಡುತ್ತಾರೋ ಅವರಿಗೆ ಪ್ರಾಯಶ್ಚಿತ್ತವು ಬೇಕಾಗುವುದಿಲ್ಲ. ಪ್ರಾಯಶ್ಚಿತ್ತವೆಂಬುದು ದುರ್ಬಲವಾದ ಮನಸ್ಸುಳ್ಳವರಿಗೆ, ಶರೀರವುಳ್ಳವರಿಗೆ ಮಾತ್ರ ಹುಟ್ಟಿಕೊಂಡಿರುತ್ತದೆ ಎಂದು ಶ್ರುತಿಯು ಹೇಳುತ್ತದೆ.
ಯತ ಏವಂವಿಧಾ ವಿಪ್ರಾಃ ಪುರಾಣಾ ಯಜ್ಞವಾಹನಾಃ |
ತ್ರೈವಿದ್ಯವೃದ್ಧಾಃ ಶುಚಯೋ ವೃತ್ತವಂತೋ ಯಶಸ್ವಿನಃ |
ಯಜಂತೋಽಹರಹರ್ಯಜ್ಞೈರ್ನಿರಾಶೀರ್ಬಂಧನಾ ಬುಧಾಃ ॥13॥
ಹೀಗೆ ಅನೇಕ ಬ್ರಾಹ್ಮಣರು ನಿಷ್ಕಾಮನೆಯಿಂದ ಹಿಂದೆ ಯಜ್ಞಗಳನ್ನು ಮಾಡುತ್ತಿದ್ದರು. ಮೂರು ವೇದಗಳಲ್ಲಿಯೇ ವಿಶೇಷವಾದ ಪಾಂಡಿತ್ಯವನ್ನು ಹೊಂದಿದ್ದರು. ಅತ್ಯಂತ ಶುಚಿಗಳೂ, ಶೀಲವಂತರೂ, ಯಶಸ್ವಿಗಳೂ ಆಗಿದ್ದರು. ಅಂತಹ ವಿದ್ವಾಂಸರು ಯಜ್ಞದ ಮೂಲಕ ವೇದೋಕ್ತವಾದ ಕರ್ಮಗಳನ್ನು ಸಂಪ್ರದಾಯಬದ್ಧವಾಗಿ ಆಚರಿಸುತ್ತಿದ್ದರು.
ತೇಷಾಂ ಯಜ್ಞಾಶ್ಚ ವೇದಾಶ್ಚ ಕರ್ಮಾಣಿ ಚ ಯಥಾಗಮಮ್ |
ಆಗಮಾಶ್ಚ ಯಥಾಕಾಲಂ ಸಂಕಲ್ಪಾಶ್ಚ ಯಥಾವ್ರತಮ್ ॥14॥
ಕಾಲಕ್ಕೆ ಅನುಗುಣವಾಗಿ ವೇದಗಳ ಜ್ಞಾನವನ್ನು ಹೊಂದುತ್ತಿದ್ದರು. ನಿಯಮ, ವ್ರತಗಳಿಗೆ ಅನುಗುಣವಾಗಿ ಸತ್ಸಂಕಲ್ಪಗಳನ್ನು ಹೊಂದುತ್ತಿದ್ದರು.
ಅಪೇತಕಾಮಕ್ರೋಧಾನಾಂ ಪ್ರಕೃತ್ಯಾ ಸಂಶಿತಾತ್ಮನಾಮ್ |

ಋಜೂನಾಂ ಶಮನಿತ್ಯಾನಾಂ ಸ್ಥಿತಾನಾಂ ಸ್ವೇಷು ಕರ್ಮಸು |
ಸರ್ವಮಾನಂತ್ಯಮೇವಾಸೀದಿತಿ ನಃ ಶಾಶ್ವತೀ ಶ್ರುತಿಃ ||15||
ಕಾಮ-ಕ್ರೋಧಗಳಿಂದ ಮುಕ್ತರಾಗಿರುವ, ಸಹಜವಾಗಿಯೇ ಪರಿಶುದ್ಧ ಸ್ವಭಾವ ಉಳ್ಳವರಾದ, ಋಜುಸ್ವಭಾವದವರಾದ, ಭಗವನ್ನಿಷ್ಠವಾದ ಬುದ್ಧಿಯುಳ್ಳವರಾದ, ತಮ್ಮ ತಮ್ಮ ವಿಹಿತವಾದ ಧರ್ಮಗಳಲ್ಲಿ ಆಸಕ್ತರಾದ ವ್ಯಕ್ತಿಗಳಿಂದ ಮಾಡಲ್ಪಡುವ ಕರ್ಮಗಳು ಮೋಕ್ಷಕ್ಕೆ ಕಾರಣವಾಗುತ್ತವೆ ಎಂಬುದೇ ಶಾಸ್ತ್ರಗಳ ಅಭಿಪ್ರಾಯವಾಗಿದೆ.
ತೇಷಾಮದೀನಸತ್ತ್ವಾನಾಂ ದುಶ್ಚರಾಚಾರಕರ್ಮಣಾಮ್ |
ಸ್ವಕರ್ಮಭಿಃ ಸಂವೃತಾನಾಂ ತಪೋ ಘೋರತ್ವಮಾಗತಮ್ ||16||
ಹೀಗೆ ಉದಾರಚಿತ್ತರಾಗಿರುವ, ಇತರರಿಂದ ಮಾಡಲು ಅಸಾಧ್ಯವಾದ ಸದಾಚಾರಗಳನ್ನು ಆಚರಿಸುತ್ತಿದ್ದ, ತಮ್ಮ ಸತ್ಕರ್ಮಗಳಿಂದಲೇ ಸಮೃದ್ಧಿಯನ್ನು ಹೊಂದುತ್ತಿದ್ದ ನಿಷ್ಕಾಮಿ ಕರ್ಮಗಳ ತಪಸ್ಸು ತೀಕ್ಷ್ಣತೆಯನ್ನು ಹೊಂದಿತು.
ತಂ ಸದಾಚಾರಮಾಶ್ಚರ್ಯಂ ಪುರಾಣಂ ಶಾಶ್ವತಂ ಧ್ರುವಮ್ |
ಅಶಕ್ನುವದ್ಭಿಶ್ಚರಿತುಂ ಕಿಂಚಿದ್ಧರ್ಮೇಷು ಸೂಚಿತಮ್ ||17||
ಆಶ್ಚರ್ಯಕರವಾದ, ಸನಾತನವಾದ, ಶಾಶ್ವತವಾದ, ಅಂತಹ ಸದಾಚಾರವನ್ನು ಪರಿಪಾಲಿಸಲು ಅಶಕ್ತರಾದವರಿಂದ ಸ್ವಲ್ಪವಾದರೂ ಧರ್ಮವನ್ನು ಅನುಷ್ಠಾನ ಮಾಡಬೇಕೆಂದು ಸೂಚಿಸಲ್ಪಟ್ಟಿತು. ಸಮಸ್ತ ಧರ್ಮಗಳನ್ನು ಆಚರಿಸಲು ಸಾಮರ್ಥ್ಯ ಇಲ್ಲದಿದ್ದಲ್ಲಿ ಯಥಾಶಕ್ತಿಯಾದರೂ ಧರ್ಮಾನುಷ್ಠಾನ ಮಾಡಬೇಕೆಂದು ಸೂಚಿಸಲ್ಪಟ್ಟಿತು ಎಂದು ಭಾವ.
ನಿರಾಪದ್ಧರ್ಮ ಆಚಾರಸ್ತ್ವಪ್ರಮಾದೋಽಪರಾಭವಃ |
ಸರ್ವವರ್ಣೇಷು ಯತ್ತೇಷು ನಾಸೀತ್ ಕಶ್ಚಿದ್ ವ್ಯತಿಕ್ರಮಃ ||18||
ವೇದೋಕ್ತವಾದ ಆಚಾರಗಳು ಆಪದ್ಧರ್ಮರಹಿತವಾಗಿದ್ದವು. ಕರ್ಮಗಳಲ್ಲಿ ತಪ್ಪುಗಳು ನಡೆಯುತ್ತಿರಲಿಲ್ಲ. ಕರ್ಮಗಳಿಂದ ಪರಾಭವವೂ ಉಂಟಾಗುತ್ತಿರಲಿಲ್ಲ. ಸಮಸ್ತ ವರ್ಣಗಳಲ್ಲಿಯೂ ಆಯಾ ಧರ್ಮಕಾರ್ಯಗಳು ನಡೆಯುತ್ತಿದ್ದರಿಂದ ಯಾವ ವಿಧವಾದ ವ್ಯತಿಕ್ರಮವೂ ಉಂಟಾಗುತ್ತಿರಲಿಲ್ಲ.
ಧರ್ಮಮೇಕಂ ಚತುಷ್ಪಾದಮಾಶ್ರಿತಾಸ್ತೇ ನರರ್ಷಭಾಃ |
ತಂ ಸಂತೋ ವಿಧಿವತ್ ಪ್ರಾಪ್ಯ ಗಚ್ಛಂತಿ ಪರಮಾಂ ಗತಿಮ್ ||19||
ನಾಲ್ಕು ಪಾದಗಳಿಂದ ಕೂಡಿದ ಒಂದು ಧರ್ಮವನ್ನೇ ಸಮಸ್ತ ಸತ್ಪುರುಷರು ಆಶ್ರಯಿಸಿರುತ್ತಾರೆ. ಆ ಧರ್ಮವನ್ನು ವಿಧಿಬದ್ಧವಾಗಿ ಹೊಂದಿ ಪರಮಗತಿಯನ್ನು ಸೇರುತ್ತಾರೆ.
ಗೃಹೇಭ್ಯ ಏವ ನಿಷ್ಕ್ರಮ್ಯ ವನಮನ್ಯೇ ಸಮಾಶ್ರಿತಾಃ |
ಗೃಹಮೇವಾಭಿಸಂಶ್ರಿತ್ಯ ತತೋಽನ್ಯೇ ಬ್ರಹ್ಮಚಾರಿಣಃ ||20||
ಕೆಲವರು ಮನೆಯನ್ನು ತೊರೆದು ಸಂನ್ಯಾಸಿಗಳಾಗಿ, ಕೆಲವರು ವಾನಪ್ರಸ್ಥರಾಗಿ, ಇನ್ನು ಕೆಲವರು ಗೃಹಸ್ಥಾಶ್ರಮದಲ್ಲೇ ಇದ್ದುಕೊಂಡು ಮತ್ತು ಕೆಲವರು ಬ್ರಹ್ಮಚಾರಿಗಳಾಗಿಯೇ ಇದ್ದುಕೊಂಡು ಈ ಧರ್ಮವನ್ನು ಪರಿಪಾಲಿಸುತ್ತಾರೆ.
ವ್ಯಸ್ತಮೇಕಂ ಚತುರ್ಧಾ ತು ಬ್ರಾಹ್ಮಣಾ ಆಶ್ರಮಂ ವಿದುಃ |
ಸರ್ವೇ ಸರ್ವತ್ರ ತಿಷ್ಠಂತೋ ಗಚ್ಛಂತಿ ಪರಮಾಂ ಗತಿಮ್ ||21||
ಮೊದಲು ಒಂದೇ ಆಶ್ರಮವು ವ್ಯಕ್ತವಾಗಿದ್ದು ಬಳಿಕ ನಾಲ್ಕು ಪ್ರಕಾರವಾಗಿ ವಿಂಗಡಿಸಲ್ಪಟ್ಟಿತೆಂದು ಬ್ರಾಹ್ಮಣರೆಲ್ಲರೂ ತಿಳಿದಿರುತ್ತಾರೆ. ಎಲ್ಲರೂ ಅವರಿಗೆ ವಿಹಿತವಾದ ಧರ್ಮಗಳನ್ನು ಅನುಷ್ಠಾನ ಮಾಡಿದಲ್ಲಿ ಪರಮಗತಿಯನ್ನು ಹೊಂದುತ್ತಾರೆ.
ಅತ ಏವಂವಿಧಾ ಪ್ರಾಹುಃ ಪುರಾಣಾ ಧರ್ಮಚಾರಿಣಃ |
ತ ಏತೇ ದಿವಿ ದೃಶ್ಯಂತೇ ಜ್ಯೋತಿರ್ಭೂತಾ ದ್ವಿಜಾತಯಃ ||22||
ಈ ರೀತಿಯಾಗಿ ಪ್ರಾಚೀನರಾದ ಧರ್ಮಾನುಷ್ಠಾನ ಮಾಡುವ ಬ್ರಾಹ್ಮಣರು ಜ್ಯೋತಿರೂಪರಾಗಿ ಆಕಾಶದಲ್ಲಿ ಪ್ರಕಾಶಿಸುತ್ತಿದ್ದಾರೆ. ಈ ದೃಶ್ಯವು ಇಂದಿಗೂ ಕಾಣುತ್ತದೆ.
ನಕ್ಷತ್ರಾಣೀವ ಧಿಷ್ಣ್ಯೇಷು ಬಹವಸ್ತಾರಕಾಗಣಾಃ |
ಆನಂತ್ಯಮುಪಸಂಪ್ರಾಪ್ತಾಃ ಸಂತೋಷಾದಿತಿ ವೈದಿಕಮ್ ||23||
ಅನೇಕ ಸಂಖ್ಯಾತವಾದ ನಕ್ಷತ್ರಗಳು, ಅವುಗಳ ಸ್ಥಾನದಲ್ಲಿ ಅಶ್ವಿನಿ ಮೊದಲಾದ ನಕ್ಷತ್ರಗಳಾಗಿ ಕಾಣಿಸಿಕೊಳ್ಳುವಂತೆ ಬ್ರಾಹ್ಮಣರು ಸತ್ಕರ್ಮಾಚರಣೆಯಿಂದ ಸಂತೋಷದಿಂದ ಪರಮಪದವಿಯನ್ನು ಹೊಂದಿ ಬೆಳಗುತ್ತಿದ್ದಾರೆ ಎಂಬುದು ವೈದಿಕ ಸಿದ್ಧಾಂತವಾಗಿದೆ.
ಯದ್ಯಾಗಚ್ಛಂತಿ ಸಂಸಾರಂ ಪುನರ್ಯೋನಿಷು ತಾದೃಶಾಃ |
ನ ಲಿಪ್ಯಂತೇ ಪಾಪಕೃತ್ಯೈಃ ಕದಾಚಿತ್ ಕರ್ಮಯೋನಿತಃ ||24||
ಒಂದು ವೇಳೆ ಜ್ಯೋತಿರ್ಭೂತರಾದ ಆ ಸಾಧಕರು ಪುನಃ ಸಂಸಾರವನ್ನು ಪ್ರವೇಶಿಸಿದರೂ ಎಂದಿಗೂ ಕರ್ಮಯೋನಿಯಲ್ಲಿ ಹುಟ್ಟಿದ ಪರಿಣಾಮದಿಂದ ಆಯಾ ಪಾಪಕೃತ್ಯಗಳಿಂದ ಲಿಪ್ತರಾಗುವುದಿಲ್ಲ.
ಏವಂ ಯುಕ್ತೋ ಬ್ರಾಹ್ಮಣಃ ಸ್ಯಾದನ್ಯೋ ಬ್ರಾಹ್ಮಣಕೋ ಭವೇತ್ |
ಕರ್ಮೈವ ಪುರುಷಸ್ಯಾಹ ಶುಭಂ ವಾ ಯದಿ ವಾಶುಭಮ್ ||25||
ಈ ರೀತಿಯಾಗಿ ಸದ್ಧರ್ಮಶೀಲನಾದ, ಯೋಗಯುಕ್ತನಾದ ಬ್ರಹ್ಮಚಾರಿಯು ಉತ್ತಮ ಬ್ರಾಹ್ಮಣನಾಗುತ್ತಾನೆ. ಹಾಗಿಲ್ಲದವನು ಹೆಸರಿಗೆ ಮಾತ್ರ ಬ್ರಾಹ್ಮಣನು. ಕುತ್ಸಿತ ಬ್ರಾಹ್ಮಣನಾಗುತ್ತಾನೆ. ಶುಭವಾಗಲಿ, ಅಶುಭವಾಗಲಿ ಮನುಷ್ಯನಿಗೆ ಕರ್ಮದಿಂದಲೇ ಸಿದ್ಧವಾಗುತ್ತದೆ.
ಏವಂ ಪಕ್ವಕಷಾಯಾಣಾಮಾನಂತ್ಯೇನ ಶ್ರುತೇನ ಚ |
ಸರ್ವಮಾನಂತ್ಯಮೇವಾಸೀದೇವಂ ನಃ ಶಾಶ್ವತೀ ಶ್ರುತಿಃ ||26||
ತೇಷಾಮಪೇತತೃಷ್ಣಾನಾಂ ನಿರ್ಣಿಕ್ತಾನಾಂ ಶುಭಾತ್ಮನಾಮ್ |

ಚತುರ್ಥ ಔಪನಿಷದೋ ಧರ್ಮಃ ಸಾಧಾರಣಃ ಸ್ಮೃತಃ ॥27॥
ಯಾರು ರಾಗ-ದ್ವೇಷಗಳ ಕಹಿಯನ್ನು ದಾಟಿರುತ್ತಾರೋ, ಆಸೆಗಳನ್ನು ತೊರೆದಿರುತ್ತಾರೋ, ತೊಳೆದುಕೊಂಡ ಪಾಪವುಳ್ಳವರಾಗಿರುತ್ತಾರೋ, ಶುದ್ಧಾತ್ಮರಾಗಿರುತ್ತಾರೋ ತತ್ತ್ವಜ್ಞಾನಿಗಳಾದ ಅವರಿಗೆ ಅನಂತವಾದ ಸುಖವೇ ದೊರೆಯುತ್ತದೆ. ಭಗವಂತನ ಅನುಗ್ರಹದಿಂದ ನಿತ್ಯ ಸುಖವನ್ನು ಹೊಂದುತ್ತಾರೆ. ಇಂತಹ ಮಾತನ್ನು ನಾವು ಸರ್ವಕಾಲದಲ್ಲಿಯೂ ಕೇಳುತ್ತಲೇ ಇರುತ್ತೇವೆ. ನಾಲ್ಕನೆಯ ಸಂನ್ಯಾಸಾಶ್ರಮಕ್ಕೆ ಸಂಬಂಧಿಸಿದಂತೆ ಇರುವ ಉಪನಿಷತ್ ಧರ್ಮವು ನಾಲ್ಕು ಆಶ್ರಮಗಳಿಗೂ ಸಾಧಾರಣವಾದುದು.

ಸ ಸಿದ್ಧೈಃ ಸಾಧ್ಯತೇ ನಿತ್ಯಂ ಬ್ರಾಹ್ಮಣೈರ್ನಿಯತಾತ್ಮಭಿಃ |
ಸಂತೋಷಮೂಲಸ್ತ್ಯಾಗಾತ್ಮಾ ಜ್ಞಾನಾಧಿಷ್ಠಾನಮುಚ್ಯತೇ ॥28॥
ಅಪವರ್ಗಗತಿರ್ನಿತ್ಯೋ ಯತಿಧರ್ಮಃ ಸನಾತನಃ |
ಸಾಧಾರಣಃ ಕೇವಲೋ ವಾ ಯಥಾಬಲಮುಪಾಸ್ಯತೇ ॥29॥
ಉಪನಿಷದ್ಧರ್ಮಗಳನ್ನು ಸಿದ್ಧಪುರುಷರಾದ ಬ್ರಾಹ್ಮಣರು ನಿತ್ಯವೂ ಜಿತೇಂದ್ರಿಯರಾಗಿ ಅನುಷ್ಠಾನ ಮಾಡುತ್ತಾರೆ. ಸನಾತನವಾದ ಯತಿಧರ್ಮವು ಸಂತೋಷವೇ ಮೂಲವಾಗಿ ಉಳ್ಳದ್ದು. ತ್ಯಾಗವು ಅದರ ಸ್ವರೂಪವು. ಜ್ಞಾನವು ಅದರ ಅನುಷ್ಠಾನವು. ನಿತ್ಯವೂ ಅಪವರ್ಗವೆಂಬ ಗತಿಯುಳ್ಳದ್ದು. ಸರ್ವಸಾಧಾರಣವಾದ ಇತರ ಆಶ್ರಮಗಳಲ್ಲಿಯೇ ಇರಲಿ, ಸಂನ್ಯಾಸಾಶ್ರಮದಲ್ಲಿಯೇ ಇರಲಿ, ಅವನಲ್ಲಿರುವ ವೈರಾಗ್ಯಬಲಕ್ಕೆ ಅನುಸಾರವಾಗಿ ಧರ್ಮವನ್ನು ಪುರುಷನು ಉಪಾಸನೆ ಮಾಡಬಲ್ಲನು.

ಗಚ್ಛತೋ ಗಚ್ಛತಃ ಕ್ಷೇಮಂ ದುರ್ಬಲೋಽತ್ರಾವಸೀದತಿ |
ಬ್ರಹ್ಮಣಃ ಪದಮನ್ವಿಚ್ಛನ್ ಸಂಸಾರಾನ್ಮುಚ್ಯತೇ ಶುಚಿಃ ॥30॥
ಈ ಧರ್ಮವನ್ನು ಅನುಷ್ಠಾನ ಮಾಡುತ್ತಾ ಮಾಡುತ್ತಾ ಸಾಗುತ್ತಿರುವವನು ಕ್ಷೇಮವನ್ನು ಹೊಂದುತ್ತಾನೆ. ಧರ್ಮಾನುಷ್ಠಾನವನ್ನು ಆಚರಿಸಲು ದುರ್ಬಲನಾದವನು ದುಃಖವನ್ನು ಹೊಂದುತ್ತಾನೆ. ಗುಣಪರಿಪೂರ್ಣನಾದ ಭಗವಂತನ ಸ್ಥಾನವನ್ನು ಬಯಸುವವನು ಧರ್ಮವನ್ನು ಆಚರಿಸುತ್ತಾ ಇದ್ದಲ್ಲಿ ಶುಚಿಯಾದ ಆ ವ್ಯಕ್ತಿಯು ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಸ್ಯೂಮರಶ್ಮಿಃ

ಯೇ ಭುಂಜತೇ ಯೇ ದದತೇ ಯಜಂತೇಧೀಯತೇ ಚ ಯೇ |
ಮಾತ್ರಾಭಿರ್ಧರ್ಮಲಬ್ಧಾಭಿರ್ಯೇ ವಾ ತ್ಯಾಗಂ ಸಮಾಶ್ರಿತಾಃ ॥31॥
ಏತೇಷಾಂ ಪ್ರೇತ್ಯಭಾವೇ ತು ಕತಮಃ ಸ್ವರ್ಗಜಿತ್ತಮಃ |
ಏತದಾಚಕ್ಷ್ವ ಮೇ ಬ್ರಹ್ಮನ್ಯಥಾತಥ್ಯೇನ ಪೃಚ್ಛತಃ ॥32॥
ಬ್ರಹ್ಮಸ್ವರೂಪನೇ, ಯಾರು ತಮಗೆ ದೊರೆಯುವ ಐಶ್ವರ್ಯದಿಂದ ಭೋಗಗಳನ್ನು ಅನುಭವಿಸುತ್ತಾರೋ, ದಾನ ಮಾಡುತ್ತಾರೋ, ಯಜ್ಞ ಮಾಡುತ್ತಾರೋ, ಅಧ್ಯಯನ ಮಾಡುತ್ತಾರೋ, ತ್ಯಾಗವನ್ನೇ ಆಶ್ರಯಿಸುತ್ತಾರೋ ಇವರಲ್ಲಿ ಮರಣಾನಂತರ ಯಾರು ಸ್ವರ್ಗವನ್ನು ಜಯಿಸಿದವರಲ್ಲಿ ಶ್ರೇಷ್ಠರೆನಿಸಿಕೊಳ್ಳುತ್ತಾರೆ? ಪ್ರಶ್ನಿಸುತ್ತಿರುವ ನನಗೆ ಯಥಾರ್ಥವಾಗಿ ಇದನ್ನು ಬೋಧಿಸು.

ಕಪಿಲಃ

ಪರಿಗ್ರಹಾಃ ಶುಭಾಃ ಸರ್ವೇ ಗುಣತೋಽಭ್ಯುದಯಾಶ್ಚ ಯೇ |
ನ ತು ತ್ಯಾಗಸುಖಂ ಪ್ರಾಪ್ತಾ ಏತತ್ತ್ವಮಪಿ ಪಶ್ಯಸಿ ॥33॥
ಎಲ್ಲಾ ಪರಿಗ್ರಹಗಳಿಂದ ಕೂಡಿ ಗೃಹಸ್ಥವೃತ್ತಿಯಲ್ಲಿ ಇರುವವನೂ ಕೂಡ ಸಮಸ್ತ ಅಭ್ಯುದಯಗಳನ್ನು ಹೊಂದುತ್ತಾನಾದರೂ ಸಂನ್ಯಾಸದಿಂದ ಉಂಟಾಗುವ ಸುಖವನ್ನು ಹೊಂದಲಾರನು. ಇದನ್ನು ನೀನು ತಿಳಿಯಬಹುದು.

ಸ್ಯೂಮರಶ್ಮಿಃ

ಭವಂತೋ ಜ್ಞಾನನಿಷ್ಠಾ ವೈ ಗೃಹಸ್ಥಾಃ ಕರ್ಮನಿಶ್ಚಯಾಃ |
ಆಶ್ರಮಾಣಾಂ ಚ ಸರ್ವೇಷಾಂ ನಿಷ್ಠಾಯಾಮೈಕ್ಯಮುಚ್ಯತೇ ॥34॥
ಏಕತ್ವೇ ಚ ಪೃಥಕ್ತ್ವೇ ಚ ವಿಶೇಷೋ ನಾನ್ಯ ಉಚ್ಯತೇ |
ತದ್ಯಥಾವದ್ಯಥಾನ್ಯಾಯಂ ಭಗವಾನ್ ಪ್ರಬ್ರವೀತು ಮೇ ॥35॥
ನೀವು ಮುಕ್ತಿಗಾಗಿ ಜ್ಞಾನವನ್ನೇ ಉಪಾಯವಾಗಿ ಆಶ್ರಯಿಸಿದವರು. ಗೃಹಸ್ಥರೂ ಆಗಿರುತ್ತೀರಿ. ಕರ್ಮಗಳಲ್ಲಿ ನಿಮಗೆ ನಂಬಿಕೆಯಿದೆ. ಎಲ್ಲಾ ಆಶ್ರಮಗಳಿಗೂ ಸಮಾನವಾಗಿ ಮೋಕ್ಷವೇ ಕೊನೆಯ ಫಲವೆಂದು ಹೇಳುತ್ತಿದ್ದೀರಿ. ಹೀಗೆ ಫಲದಲ್ಲಿ ಏಕತ್ವವಿದೆ. ಆಚರಣೆಗಳಲ್ಲಿ ಭಿನ್ನತೆಗಳಿವೆ. ಅದರ ನಿಜವಾದ ಪರಸ್ಪರ ಭೇದವೇನೆಂಬುದನ್ನು ತಿಳಿಯದವನಾಗಿದ್ದೇನೆ. ಅದರ ವಾಸ್ತವಾಂಶವನ್ನು ತಿಳಿಸಬೇಕು.

ಕಪಿಲಃ

ಶರೀರಪಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾ ಗತಿಃ |
ಪಕ್ವೇ ಕಷಾಯೇ ವಮನ್ಯೈ ರಸಜ್ಞಾನೇನ ತಿಷ್ಠತಿ ॥36॥
ಕರ್ಮಗಳು ಶರೀರವನ್ನು ಶುದ್ಧಿ ಮಾಡುತ್ತವೆ. ಜ್ಞಾನವೆಂಬುದೇ ಉತ್ತಮವಾದ ಗತಿ. ಅರ್ಥಾತ್ ಮೋಕ್ಷಸಾಧನವೆನಿಸಿದೆ. ಮನಸ್ಸು ಕಲ್ಮಶವನ್ನು ಪರಿಹರಿಸಿಕೊಂಡು ಪಕ್ವವಾದಾಗ ಜ್ಞಾನವು ಉಂಟಾಗುತ್ತದೆ.

ವ್ಯಾಖ್ಯಾನ ವಿಶೇಷ ಕರ್ಮದ ಕಷಾಯವು ನೀಗುತ್ತಿರಲು `ರಸಜ್ಞಾನೇನ ತಿಷ್ಠತಿ' ಎಂದರೆ ರಸನೆನಿಸಿದ ಭಗವಂತನಲ್ಲಿ ಬುದ್ಧಿಯು ನೆಲೆಗೊಳ್ಳುತ್ತದೆ ಎಂದು ವ್ಯಾಖ್ಯಾನಿಸಬಹುದು.

ಆನೃಶಂಸ್ಯಂ ಕ್ಷಮಾ ಶಾಂತಿರಹಿಂಸಾ ಸತ್ಯಮಾರ್ಜವಮ್ |
ಅದ್ರೋಹೋ ನಾಭಿಮಾನಶ್ಚ ಹ್ರೀಸ್ತಿತಿಕ್ಷಾ ಶಮಸ್ತಥಾ ॥37॥
ಪಂಥಾನೋ ಬ್ರಹ್ಮಣಸ್ತ್ವೇತೇ ಏತೈಃ ಪ್ರಾಪ್ನೋತಿ ಯತ್ ಪರಮ್ |

ತದ್ ವಿದ್ವಾನನುಬುದ್ಧ್ಯೇತ ಮನಸಾ ಕರ್ಮನಿಶ್ಚಯಮ್ ॥38॥
ದಯೆ, ಕ್ಷಮೆ, ಶಾಂತಿ, ಅಹಿಂಸೆ, ಸತ್ಯನಿಷ್ಠೆ, ಸರಳತೆ, ಅದ್ರೋಹ, ಅಭಿಮಾನಶೂನ್ಯತೆ, ಲಜ್ಜೆ, ಸಹನೆ, ಶಮ, ಇವುಗಳು ಪರಬ್ರಹ್ಮನ ಪ್ರಾಪ್ತಿಗೆ ಮಾರ್ಗಗಳಾಗಿವೆ. ಇವುಗಳ ಆಚರಣೆಯಿಂದ ಮನುಷ್ಯನು ಭಗವಂತನ ಪಾದವನ್ನು ಹೊಂದುತ್ತಾನೆ. ಕರ್ಮಾನುಷ್ಠಾನಗಳ ಪರಿಣಾಮವಾಗಿ ಈ ಗುಣಗಳು ತನ್ನಲ್ಲಿ ಮೈಗೂಡಿವೆಯೇ ಎಂಬುದನ್ನು ವಿದ್ವಾಂಸನು ಮನಸ್ಸಿನಿಂದ ನಿಶ್ಚಯ ಮಾಡಿಕೊಳ್ಳಬೇಕು.
ಯಾಂ ವಿಪ್ರಾಃ ಸರ್ವತಃ ಶಾಂತಾ ವಿಶುದ್ಧಾ ಜ್ಞಾನನಿಶ್ಚಯಾಃ |
ಗತಿಂ ಗಚ್ಛಂತಿ ಸಂತುಷ್ಟಾಸ್ತಾಮಾಹುಃ ಪರಮಾಂ ಗತಿಮ್ ॥39॥
ಸಮಸ್ತ ಪ್ರಕಾರದಿಂದಲೂ ಶಾಂತರಾಗಿ, ಶುದ್ಧರಾಗಿ, ಜ್ಞಾನನಿಷ್ಠರಾಗಿ ಇರುವ ವಿಪ್ರರು ಯಾವ ಗತಿಯನ್ನು ಹೊಂದುತ್ತಾರೋ ಅದನ್ನೇ ಪರಮಗತಿ ಎನ್ನುತ್ತಾರೆ.
ವೇದಾಂಶ್ಚ ವೇದಿತವ್ಯಂ ಚ ವಿದಿತ್ವಾ ಚ ಯಥಾಸ್ಥಿತಿ |
ಏವಂ ವೇದವಿದಿತ್ಯಾಹುರತೋನ್ಯೋ ವಾತರೇಟಕಃ ॥40॥
ವೇದಗಳನ್ನು, ವೇದಗಳಿಂದ ತಿಳಿಯುವ ಪರಬ್ರಹ್ಮ ವಸ್ತುವನ್ನು ಯಾವನು ಯಥಾರ್ಥವಾಗಿ ತಿಳಿದಿರುತ್ತಾನೋ ಅವನನ್ನು ವೇದವಿದನೆಂದು ಹೇಳುತ್ತಾರೆ. ಬ್ರಹ್ಮನನ್ನು ತಿಳಿಯದೆ ಇರುವ ವ್ಯಕ್ತಿಯು ತಿದಿಯಂತೆ ಕೇವಲ ಉಸಿರಾಟ ಮಾಡುವ ವ್ಯಕ್ತಿ ಎನಿಸಿದ್ದಾನೆ.

ಸರ್ವಂ ವಿದುರ್ವೇದವಿದೋ ವೇದೇ ಸರ್ವಂ ಪ್ರತಿಷ್ಠಿತಮ್ |
ವೇದೇ ಹಿ ನಿಷ್ಠಾ ಸರ್ವಸ್ಯ ಯದ್ಯದಸ್ತಿ ಚ ನಾಸ್ತಿ ಚ ॥41॥
ವೇದವನ್ನು ತಿಳಿದವರು ಎಲ್ಲವನ್ನೂ ತಿಳಿದಿರುತ್ತಾರೆ. ಕಾರಣ ವೇದದಲ್ಲಿಯೇ ಎಲ್ಲವೂ ಪ್ರತಿಷ್ಠಿತವಾಗಿದೆ. ವ್ಯಕ್ತಾವ್ಯಕ್ತ ಸಮಸ್ತವೂ ವೇದದಲ್ಲಿಯೇ ನಿರೂಪಿತವಾಗಿವೆ.
ಏಷೈವ ನಿಷ್ಠಾ ಸರ್ವಸ್ಯ ಯದ್ಯದಸ್ತಿ ಚ ನಾಸ್ತಿ ಚ |
ಏತದಂತಂ ಚ ಮಧ್ಯಂ ಚ ಸಚ್ಚಾಸಚ್ಚ ವಿಜಾನತಃ ॥42॥
ಯಾವ ವಸ್ತುವು ಸರ್ವಕಾಲದಲ್ಲಿಯೂ ಅಬಾಧಿತವಾಗಿ ಇದೆ, ಯಾವುದು ಇಲ್ಲ ಎಂಬುದನ್ನು ಪ್ರತಿಪಾದಿಸುವುದೇ ವೇದಗಳ ನಿಷ್ಠೆಯಾಗಿದೆ. ಜ್ಞಾನಿಗಳು ವೇದ ಪ್ರತಿಪಾದ್ಯನಾದ ಭಗವಂತನೇ ಜಗತ್ತಿನ ಆದಿ-ಮಧ್ಯಾಂತನೆಂದು ತಿಳಿದಿರುತ್ತಾರೆ.
ಸಮಸ್ತತ್ಯಾಗ ಇತ್ಯೇವ ಶಮ ಇತ್ಯೇವ ನಿಷ್ಠಿತಃ |
ಸಂತೋಷ ಇತ್ಯತ್ರ ಶುಭಮಪವರ್ಗೇ ಪ್ರತಿಷ್ಠಿತಮ್ ॥43॥
ಎಲ್ಲವನ್ನೂ ತ್ಯಜಿಸಿ ಭಗವಂತನಲ್ಲಿ ಬುದ್ಧಿಯನ್ನು ಹೊಂದುವುದೇ ಶಮ ಎನಿಸಿದೆ. ಶುಭ-ಸಂತೋಷ ಎಂಬುದು ಮೋಕ್ಷದಲ್ಲಿ ಪ್ರತಿಷ್ಠಿತವಾಗಿದೆ.
ಋತಂ ಸತ್ಯಂ ವಿದಿತಂ ವೇದಿತವ್ಯಂ
ಸರ್ವಸ್ಯಾತ್ಮಾ ಜಂಗಮಂ ಸ್ಥಾವರಂ ಚ |
ಸರ್ವಂ ಸುಖಂ ಯಚ್ಛಿವಮುತ್ತಮಂ ಚ
ಬ್ರಹ್ಮಾವ್ಯಕ್ತಂ ಪ್ರಭವಶ್ಚಾವ್ಯಯಶ್ಚ ॥44॥
ಪರಬ್ರಹ್ಮವಸ್ತುವು ಋತ, ಸತ್ಯ ಎನಿಸಿದೆ. ತಿಳಿಯಲು ಯೋಗ್ಯವಾಗಿದೆ, ತಿಳಿಯಲ್ಪಟ್ಟದ್ದೂ ಆಗಿದೆ. ಸಮಸ್ತ ಪ್ರಾಣಿಗಳಿಗೂ ಅಂತರ್ಯಾಮಿಯಾಗಿದೆ. ಸ್ಥಾವರ- ಜಂಗಮಗಳಲ್ಲಿ ನಿಯಾಮಕವಾಗಿದೆ. ಸಂಪೂರ್ಣ ಸುಖಸ್ವರೂಪವೂ ಎಲ್ಲರ ಉತ್ಪತ್ತಿಗೂ ಕಾರಣಭೂತವಾಗಿದೆ. ಅವಿನಾಶಿಯೂ ಆಗಿದೆ.
ತೇಜಃ ಕ್ಷಮಾ ಶಾಂತಿರನಾಮಯಂ ಶುಭಂ
ತಥಾವಿಧಂ ವ್ಯೋಮ ಸನಾತನಂ ಧ್ರುವಮ್ |
ಏತೈಃ ಶಬ್ದೈರ್ಗಮ್ಯತೇ ಬುದ್ಧಿನೇತ್ರೈ-
ಸ್ತಸ್ಮೈ ನಮೋ ಬ್ರಹ್ಮಣೇ ಬ್ರಾಹ್ಮಣಾಯ ॥45॥
ಆಕಾಶದಂತೆ ನಿಸ್ಸಂಗನಾಗಿರುವ, ಸನಾತನನಾದ, ಶಾಶ್ವತನಾದ ಪರಬ್ರಹ್ಮನನ್ನು ತೇಜಸ್ಸು, ಕ್ಷಮೆ, ಶಾಂತಿ, ಆರೋಗ್ಯ, ಶುಭಕಾಮನೆ ಇವೆಲ್ಲದರ ಮೂಲಕವಾಗಿ ಜ್ಞಾನದಲ್ಲೇ ಬುದ್ಧಿಯುಳ್ಳ ಪುರುಷರು ಹೊಂದುತ್ತಾರೆ. ಅಂತಹ ಪರಬ್ರಹ್ಮ ವಸ್ತುವಿಗೆ, ಆ ಪರಬ್ರಹ್ಮ ವಸ್ತುವನ್ನು ಕಂಡುಕೊಂಡ ಬ್ರಾಹ್ಮಣರಿಗೆ ನಮಸ್ಕಾರವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.

॥ ಗೋಕಾಪಿಲೇಯಂ ಸಮಾಪ್ತಮ್ ॥
* * * * *
ನೂರ ಆರನೆಯ ಅಧ್ಯಾಯ
ಧರ್ಮಾರ್ಥಕಾಮಗಳಲ್ಲಿ ಧರ್ಮವೇ ಶ್ರೇಷ್ಠವೆಂದು ನಿರೂಪಿಸಲು ಭೀಷ್ಮರು ಯುಧಿಷ್ಠಿರನಿಗೆ ಕುಂಡಧಾರನೆಂಬ ಬ್ರಾಹ್ಮಣನ ಕಥೆಯನ್ನು ನಿರೂಪಿಸಿದುದು.
ಯುಧಿಷ್ಠಿರಃ
ಧರ್ಮಮರ್ಥಂ ಚ ಕಾಮಂ ಚ ವೇದಾಃ ಶಂಸಂತಿ ಭಾರತ |

ಕಸ್ಯ ಲಾಭೋ ವಿಶಿಷ್ಟೋಽತ್ರ ತನ್ಮೇ ಬ್ರೂಹಿ ಪಿತಾಮಹ ॥1॥
ಭಾರತನೇ, ಪಿತಾಮಹನೇ, ಧರ್ಮಾರ್ಥ ಕಾಮಗಳನ್ನು ವೇದಗಳು ಪ್ರಶಂಸಿಸುತ್ತಿವೆ. ಈ ಮೂರರಲ್ಲಿ ಯಾವುದನ್ನು ಹೊಂದುವುದು ಶ್ರೇಷ್ಠವಾದುದು? ನನಗೆ ಇದನ್ನು ತಿಳಿಸು.
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಇತಿಹಾಸಂ ಪುರಾತನಮ್ |
ಕುಂಡಧಾರೇಣ ಯತ್ ಪ್ರೀತ್ಯಾ ಭಕ್ತಾಯೋಪಕೃತಂ ಪುರಾ ॥2॥
ಈ ವಿಷಯದಲ್ಲಿ ಕುಂಡಧಾರ ಎಂಬ ವ್ಯಕ್ತಿಯು ತನ್ನ ಭಕ್ತನಿಗೆ ಹಿಂದೆ ಮಾಡಿದ ಉಪಕಾರವನ್ನು ನಿರ್ದೇಶಿಸುವ ಇತಿಹಾಸವೊಂದಿದೆ. ಇದನ್ನೇ ನಿನಗೆ ತಿಳಿಸುತ್ತೇನೆ.
ಅಧನೋ ಬ್ರಾಹ್ಮಣಃ ಕಶ್ಚಿತ್ ಕಾಮಾದ್ಧರ್ಮಮವೈಕ್ಷತ |
ಯಜ್ಞಾರ್ಥಂ ಸ ತತೋಽರ್ಥಾರ್ಥೀ ತಪೋತಪ್ಯತ ದಾರುಣಮ್ ॥3॥
ಹಿಂದೆ ದರಿದ್ರನಾದ ಬ್ರಾಹ್ಮಣನೊಬ್ಬನು ಅರ್ಥ-ಕಾಮಗಳಲ್ಲಿಯೇ ಆಸಕ್ತನಾಗಿದ್ದನು. ಅದಕ್ಕಾಗಿ ಯಜ್ಞಾದಿ ಕರ್ಮಗಳನ್ನು ಮಾಡುವುದಕ್ಕೂ, ಅದಕ್ಕಾಗಿ ಹಣವನ್ನು ಸಂಪಾದಿಸುವುದಕ್ಕೂ ತಪಸ್ಸನ್ನು ಮಾಡುತ್ತಿದ್ದನು.
ಸ ನಿಶ್ಚಯಮಥೋ ಕೃತ್ವಾ ಪೂಜಯಾಮಾಸ ದೇವತಾಃ |
ಭಕ್ತ್ಯಾ ನ ಚೈವಾಧ್ಯಗಚ್ಛದ್ಧನಂ ಸಂಪೂಜ್ಯ ದೇವತಾಃ ॥4॥
ಯಜ್ಞಾರ್ಥವಾಗಿ ಹಣವನ್ನು ಸಂಪಾದಿಸಬೇಕೆಂದು ನಿಶ್ಚಯಿಸಿದ ಆ ಬ್ರಾಹ್ಮಣನು ಭಕ್ತಿಯಿಂದ ದೇವತೆಯನ್ನು ಪೂಜಿಸಿದನು. ಆದರೆ ಭಕ್ತಿಯಿಂದ ದೇವತೆಯನ್ನು ಪೂಜಿಸಿದರೂ ತಾನು ಅಪೇಕ್ಷಿಸಿದ ಧನವನ್ನು ಹೊಂದಲಿಲ್ಲ.
ತತಶ್ಚಿಂತಾಂ ಪುನಃ ಪ್ರಾಪ್ತಃ ಕತಮದ್ ದೈವತಂ ನು ತತ್ |
ಯನ್ಮೇ ದ್ರುತಂ ಪ್ರಸೀದೇತ ಮಾನುಷೈರಜಡೀಕೃತಮ್ ॥5॥
ಬಳಿಕ ತನ್ನೊಳಗೆ ತಾನು ಚಿಂತಾಕುಲನಾಗಿ `ಅಯ್ಯೋ! ನಾನು ಇನ್ನು ಯಾವ ದೇವತೆಯನ್ನು ತಾನೇ ಪೂಜಿಸಲಿ? ಇದುವರೆಗೆ ಮನುಷ್ಯರಿಂದ ಪೀಡಿಸಲ್ಪಡದೆ ಇರುವ ನನ್ನಲ್ಲಿ ಬೇಗ ಪ್ರಸನ್ನವಾಗುವ ದೇವತೆ ಯಾರು? ಯಾರು ನನ್ನಲ್ಲಿ ಬೇಗ ಪ್ರಸನ್ನರಾಗುತ್ತಾರೆ?' ಎಂದು ಯೋಚಿಸುತ್ತಿದ್ದನು.
ಅಥ ಸೌಮ್ಯೇನ ವಪುಷಾ ದೇವಾನುಚರಮಂತಿಕೇ |
ಪ್ರತ್ಯಪಶ್ಯಜ್ಜಲಧರಂ ಕುಂಡಧಾರಮವಸ್ಥಿತಮ್ ॥6॥
ಹೀಗೆ ಅವನು ಯೋಚಿಸುತ್ತಿರುವಾಗಲೇ ಅವನ ಸಮೀಪದಲ್ಲಿ ದೇವತೆಗಳ ಅನುಚರನಾದ ಕುಂಡಧಾರನೆಂಬ ಮೇಘಪುರುಷನು ಕಾಣಿಸಿದನು.
ವ್ಯಾಖ್ಯಾನ ವಿಶೇಷ ಕುಂಡಧಾರನು ಮೇಘಾಭಿಮಾನಿಯಾದ ಕುಬೇರನ ಅನುಚರನಾದ ಯಕ್ಷ ಅಥವಾ ಗಂಧರ್ವನೆಂದು ತಿಳಿಯಬೇಕು.
ದೃಷ್ಟ್ವೈವ ತಂ ಮಹಾತ್ಮಾನಂ ತಸ್ಯ ಭಕ್ತಿರಜಾಯತ |
ಅಯಂ ಮೇ ದಾಸ್ಯತಿ ಶ್ರೇಯೋ ವಪುರೇತದ್ಧಿ ತಾದೃಶಮ್ ॥7॥
ಆ ಮಹಾತ್ಮನಾದ, ಮಹಾಬಾಹುವಾದ ಮೇಘಪುರುಷನನ್ನು ಕಂಡ ಕೂಡಲೇ ಬ್ರಾಹ್ಮಣನಿಗೆ ಅವನಲ್ಲಿ ಭಕ್ತಿ ಹುಟ್ಟಿತು. ಇವನ ಶರೀರವನ್ನು ನೋಡಿದರೆ ಇವನು ನನಗೆ ಶ್ರೇಯಸ್ಸನ್ನು ಕೈಗೂಡಿಸಿಕೊಡುತ್ತಾನೆಂದು ತೋರುತ್ತಿದೆ ಎಂದು ಮನಸ್ಸಿನಲ್ಲಿ ಭಾವಿಸಿದನು.
ಸನ್ನಿಕೃಷ್ಟಶ್ಚ ದೇವಸ್ಯ ನ ಚಾನ್ಯೈರ್ಮಾನುಷೈರ್ವೃತಃ |
ಏಷ ಮೇ ದಾಸ್ಯತಿ ಧನಂ ಪ್ರಭೂತಂ ಶೀಘ್ರಮೇವ ಚ ॥8॥
ಇವನು ದೇವತೆಗಳ ಗುಂಪಿನವನೆಂದು ಕಾಣಿಸುತ್ತಿದೆ. ಇದುವರೆಗೆ ಮನುಷ್ಯರು ಯಾರೂ ಇವನನ್ನು ವರದಿಂದ ಪೀಡಿಸಿದಂತೆ ತೋರುವುದಿಲ್ಲ. ಇವನು ಶೀಘ್ರದಲ್ಲಿಯೇ ನನಗೆ ಅಪಾರವಾದ ಧನವನ್ನು ನೀಡಬಹುದು ಎಂದು ಭಾವಿಸಿದನು.
ತತೋ ಧೂಪೈಶ್ಚ ಗಂಧೈಶ್ಚ ಮಾಲ್ಯೈರುಚ್ಚಾವಚೈರಪಿ |
ಬಲಿಭಿರ್ವಿವಿಧೈಶ್ಚಾಪಿ ಪೂಜಯಾಮಾಸ ತಂ ದ್ವಿಜಃ ॥9॥
ಕೂಡಲೇ ಗಂಧ-ಧೂಪಾದಿಗಳನ್ನು, ನಾನಾ ವಿಧವಾದ ಬಲಿಗಳನ್ನು, ಮಾಲಾದಿಳನ್ನು ಅರ್ಪಿಸಿ ಅವನನ್ನು ಆ ಬ್ರಾಹ್ಮಣನು ಚೆನ್ನಾಗಿ ಪೂಜಿಸಿದನು.
ತತಃ ಸ್ವಲ್ಪೇನ ಕಾಲೇನ ತುಷ್ಟೋ ಜಲಧರಸ್ತದಾ |
ತಸ್ಯೋಪಕಾರೇ ನಿಯತಾಮಿಮಾಂ ವಾಚಮುವಾಚ ಹ ॥10॥
ಈ ಬ್ರಾಹ್ಮಣನ ಪೂಜೆಗೆ ಸ್ವಲ್ಪವೇ ಸಮಯದಲ್ಲಿ ಕುಂಡಧಾರನು ಸಂತುಷ್ಟನಾಗಿ ತನ್ನಲ್ಲಿ ತಾನು - `ಇವನಿಗೆ ನಾನು ಪ್ರತ್ಯುಪಕಾರವನ್ನು ಮಾಡಲೇಬೇಕು' ಎಂಬ ಭಾವನೆಯಿಂದ ಈ ಮಾತುಗಳನ್ನು ಬ್ರಾಹ್ಮಣನನ್ನು ಕುರಿತು ಹೇಳಿದನು.
ಬ್ರಹ್ಮಘ್ನೇ ಚ ಸುರಾಪೇ ಚ ಚೋರೇ ಭಗ್ನವ್ರತೇ ತಥಾ |
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥11॥
ಬ್ರಹ್ಮಹತ್ಯೆಯನ್ನು ಮಾಡಿದವನಿಗೆ, ಸುರಾಪಾನವನ್ನು ಮಾಡಿದವನಿಗೆ, ಕಳ್ಳತನ ಮಾಡಿದವನಿಗೆ, ವ್ರತಭಂಗವನ್ನು ಮಾಡಿದವನಿಗೆ ಸತ್ಪುರುಷರು ಪ್ರಾಯಶ್ಚಿತ್ತವನ್ನು ಹೇಳುತ್ತಾರೆ. ಆದರೆ ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ.
ವ್ಯಾಖ್ಯಾನ ವಿಶೇಷ ಬ್ರಾಹ್ಮಣನೇ, ನೀನು ಮಾಡಿದ ಪೂಜೆಗೆ ನಾನು ಸ್ವಲ್ಪ ಉಪಕಾರವನ್ನು ಮಾಡಿದರೆ ನಾನು ಕೃತಘ್ನನೇ ಆಗುತ್ತೇನೆ. ಆದ್ದರಿಂದ ನಿನಗೆ ಮೋಕ್ಷವೆಂಬ ಮಹೋಪಕಾರವನ್ನು ಮಾಡುವ ಪ್ರಯತ್ನವನ್ನೇ ಮಾಡುತ್ತೇನೆ ಎಂದು ಭಾವ.
ಆಶಾಯಾಸ್ತನಯೋಽಧರ್ಮಃ ಕ್ರೋಧೋಽಸೂಯಾಸುತಃ ಸ್ಮೃತಃ |

ಪುತ್ರೋ ಲೋಭೋ ನಿಕೃತ್ಯಾಸ್ತು ಕೃತಘ್ನೋ ನಾರ್ಹತಿ ಪ್ರಜಾಮ್ ॥12॥
ಆಸೆಯೆಂಬ ಸ್ತ್ರೀಯಿಂದ ಹುಟ್ಟಿದ ಮಗನೇ ಅಧರ್ಮ. ಅಸೂಯೆಯೆಂಬ ಸ್ತ್ರೀಯಿಂದ ಹುಟ್ಟಿದ ಮಗನೇ ಕ್ರೋಧನು. ಶಾಠ್ಯದಿಂದ ಹುಟ್ಟಿದ ಮಗನೇ ಲೋಭಿಯು. ಆದರೆ ಕೃತಘ್ನನು ಸಂತಾನವನ್ನು ಪಡೆಯಲು ಅರ್ಹನೇ ಆಗಿರುವುದಿಲ್ಲ.
ತತಃ ಸ ಬ್ರಾಹ್ಮಣಃ ಸ್ವಪ್ನೇ ಕುಂಡಧಾರಸ್ಯ ತೇಜಸಾ |
ಅಪಶ್ಯತ್ ಸರ್ವಭೂತಾನಿ ಕುಶೇಷು ಶಯಿತಸ್ತದಾ ॥13॥
ಅನಂತರ ಕುಂಡಧಾರನು ತನ್ನ ತೇಜಸ್ಸಿನ ಪ್ರಭಾವದಿಂದ ಬ್ರಾಹ್ಮಣನನ್ನು ದರ್ಭೆಗಳ ಮೇಲೆ ಮಲಗುವಂತೆ ಮಾಡಿದನು. ನಂತರ ಮಲಗಿದ ಬ್ರಾಹ್ಮಣನು ತನ್ನ ಸ್ವಪ್ನದಲ್ಲಿ ಸಕಲ ಪ್ರಾಣಿಗಳನ್ನು ಕಂಡನು.
ಶಮೇನ ತಪಸಾ ಚೈವ ಭಕ್ತ್ಯಾ ಚ ನಿರುಪಸ್ಕೃತಃ |
ಶುದ್ಧಾತ್ಮಾ ಬ್ರಾಹ್ಮಣೋ ರಾತ್ರೌ ನಿದರ್ಶನಮಪಶ್ಯತ ॥14॥
ಶಮ, ದಮ, ತಪಸ್ಸು, ಭಕ್ತಿ ಇವುಗಳಿಂದ ಸಂಪನ್ನನಾಗಿದ್ದ, ಭೋಗಾದಿಗಳಿಂದ ರಹಿತನಾಗಿದ್ದ, ಶುದ್ಧಾತ್ಮನಾದ ಬ್ರಾಹ್ಮಣನು ಆ ರಾತ್ರಿಯಲ್ಲಿ ಕುಂಡಧಾರನು ಹೇಳಿದ ಮಾತಿಗೆ ನಿದರ್ಶನವಾದ ಒಂದು ದೃಶ್ಯವನ್ನು ನೋಡಿದನು.
ಮಣಿಭದ್ರಂ ಸ ತತ್ರಸ್ಥಂ ದೇವತಾನಾಂ ಮಹಾದ್ಯುತಿಮ್ |
ಅಪಶ್ಯತ ಮಹಾತ್ಮಾನಂ ವ್ಯಾದಿಶಂತಂ ಯುಧಿಷ್ಠಿರ ॥15॥
ಮಹಾತ್ಮನಾದ ಮಣಿಭದ್ರನು ಸ್ವಪ್ನದಲ್ಲಿ ಗೋಚರನಾಗಿದ್ದು, ಬೇಡುವವರ ಪ್ರಾರ್ಥನೆಗಳನ್ನು ದೇವತೆಗಳಿಗೆ ಸಲ್ಲಿಸುತ್ತಿರುವ ದೃಶ್ಯವನ್ನು, ದೇವತೆಗಳು ಯಾಚಕರಿಗೆ ಅನುಗ್ರಹಿಸುವ ಫಲಗಳನ್ನು, ಯಾಚಕರಿಗೆ ಸಮರ್ಪಿಸುತ್ತಿದ್ದುದನ್ನು ಬ್ರಾಹ್ಮಣನು ಕನಸಿನಲ್ಲಿ ಕಂಡನು.
ತತ್ರ ದೇವಾಃ ಪ್ರಯಚ್ಛಂತಿ ರಾಜ್ಯಾನಿ ಚ ಧನಾನಿ ಚ |
ಶುಭೈಃ ಕರ್ಮಭಿರಾರಬ್ಧಾಃ ಪ್ರಚ್ಛಿದಂತ್ಯಶುಭೇಷು ಚ ॥16॥
ಆ ಸ್ವಪ್ನದಲ್ಲಿ ದೇವತೆಗಳು ಯಾಚಕರಿಗೆ ರಾಜ್ಯಗಳನ್ನೂ, ಧನಗಳನ್ನೂ, ಅವರ ಕರ್ಮಫಲಕ್ಕನುಗುಣವಾಗಿ ನೀಡುತ್ತಿದ್ದರು. ಯಾಚಕರು ತಮ್ಮ ಅಶುಭಕರ್ಮಗಳ ಫಲಗಳನ್ನು ಅನುಭವಿಸಲು ಬಂದಾಗ ಆ ದೇವತೆಗಳು ತಾವು ನೀಡಿದ ರಾಜ್ಯ-ಧನಾದಿಗಳನ್ನು ಕಸಿದುಕೊಳ್ಳುತ್ತಿದ್ದರು.
ಪಶ್ಯತಾಮಥ ಯಕ್ಷಾಣಾಂ ಕುಂಡಧಾರೋ ಮಹಾದ್ಯುತಿಃ |
ನಿಷ್ಪತ್ಯ ಪತಿತೋ ಭೂಮೌ ದೇವಾನಾಂ ಭರತರ್ಷಭ ॥17॥
ಈ ರೀತಿಯಾಗಿ ಯಕ್ಷರೆಲ್ಲರೂ ನೋಡುತ್ತಿರುವಂತೆ ಮಹಾಕಾಂತಿಯುಕ್ತನಾದ ಕುಂಡಧಾರನು ದೇವತೆಗಳ ಮುಂದೆ ಭೂಮಿಯ ಮೇಲೆ ಬಿದ್ದನು.
ತತಸ್ತು ದೇವವಚನಾನ್ಮಣಿಭದ್ರೋ ಮಹಾಯಶಾಃ |
ಉವಾಚ ಪತಿತಂ ಭೂಮೌ ಕುಂಡಧಾರ ಕಿಮಿಷ್ಯತೇ ॥18॥
ಬಳಿಕ ದೇವತೆಗಳ ಮಾತಿನಂತೆ ಮಹಾತ್ಮನಾದ ಮಣಿಭದ್ರನು ಕುಂಡಧಾರನನ್ನು ಕುರಿತು ಭೂಮಿಯ ಮೇಲೆ ಬಿದ್ದಿರುವ ನನ್ನನ್ನು ಏನು ಅಪೇಕ್ಷಿಸುತ್ತಿದ್ದಿ? ಎಂದು ಕೇಳಿದನು.
ಕುಂಡಧಾರಃ
ಯದಿ ಪ್ರಸನ್ನಾ ದೇವಾ ಮೇ ಭಕ್ತೋಽಯಂ ಬ್ರಾಹ್ಮಣೋ ಮಮ |
ಅಸ್ಯಾನುಗ್ರಹಮಿಚ್ಛಾಮಿ ಕೃತಂ ಕಿಂಚಿತ್ ಸುಖೋದಯಮ್ ॥19॥
ದೇವತೆಗಳೇ ನೀವು ನನ್ನ ವಿಷಯದಲ್ಲಿ ಪ್ರಸನ್ನರಾಗಿದ್ದರೆ ನನ್ನ ಎದುರಿನಲ್ಲಿರುವ ಈ ಬ್ರಾಹ್ಮಣನು ನನ್ನ ಭಕ್ತನಾಗಿದ್ದಾನೆ. ಈ ಬ್ರಾಹ್ಮಣನಿಗೆ ಭವಿಷ್ಯದಲ್ಲಿ ಸುಖವಾಗುವಂತೆ ಅನುಗ್ರಹಿಸಬೇಕೆಂಬುದು ನನ್ನ ಪ್ರಾರ್ಥನೆಯಾಗಿದೆ.
ಭೀಷ್ಮಃ
ತತಸ್ತಂ ಮಣಿಭದ್ರಸ್ತು ಪುನರ್ವಚನಮಬ್ರವೀತ್ |
ದೇವಾನಾಮೇವ ವಚನಾತ್ಕುಂಡಧಾರಂ ಮಹಾದ್ಯುತಿಮ್ ॥20॥
ಯುಧಿಷ್ಠಿರನೇ, ಬಳಿಕ ದೇವತೆಗಳ ಮಾತಿನಂತೆಯೇ ಮಣಿಭದ್ರನು ಮಹಾಕಾಂತಿಸಂಪನ್ನನಾದ ಕುಂಡಧಾರನನ್ನು ಕುರಿತು ಹೀಗೆ ಹೇಳಿದನು.
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಕೃತಕಾರ್ಯಃ ಸುಖೀ ಭವ |
ಯಾವದ್ಧನಂ ಪ್ರಾರ್ಥಯತೇ ಬ್ರಾಹ್ಮಣೋಽಯಂ ಸಖಾ ತವ |
ದೇವಾನಾಂ ಶಾಸನಾತ್ತಾವದಸಂಖ್ಯೇಯಂ ದದಾಮ್ಯಹಮ್ ॥21॥
ಕುಂಡಧಾರನೇ, ಏಳು ಎದ್ದೇಳು. ನಿನಗೆ ಮಂಗಳವಾಗಲಿ. ಕೃತಾರ್ಥನಾಗು. ಸುಖಿಯಾಗಿರು. ಈ ಬ್ರಾಹ್ಮಣನು ಎಷ್ಟು ಹಣವನ್ನು ಅಪೇಕ್ಷಿಸುತ್ತಾನೋ ಅವನಿಗೆ ಈ ಹಣವನ್ನು ಕೊಟ್ಟುಬಿಡು. ನಿನ್ನ ಸಖನಾದ ಬ್ರಾಹ್ಮಣನು ಎಷ್ಟು ಧನವನ್ನು ಪ್ರಾರ್ಥಿಸುತ್ತಾನೋ ಅಸಂಖ್ಯಾತವಾದ ಅಷ್ಟೂ ಧನವನ್ನು ದೇವತೆಗಳ ಆಜ್ಞೆಯಂತೆ ನಾನೇ ಕೊಡುತ್ತೇನೆ.
ವಿಚಾರ್ಯ ಕುಂಡಧಾರಸ್ತು ಮಾನುಷ್ಯಂ ಚಲಮಧ್ರುವಮ್ |
ತಪಸೇ ಮತಿಮಾಧತ್ತ ಬ್ರಾಹ್ಮಣಸ್ಯ ಯಶಸ್ವಿನಃ ॥22॥
ಮಣಿಭದ್ರನು ಹೀಗೆ ಹೇಳಿದ ಬಳಿಕ ಕುಂಡಧಾರನು ಬ್ರಾಹ್ಮಣನಿಗೆ ಧನವನ್ನು ಕೊಡುವ ವಿಷಯದಲ್ಲಿ ಯೋಚಿಸಿದನು. ಮನುಷ್ಯರ ಜೀವನವು ಚಂಚಲವೂ, ಅಶಾಶ್ವತವೂ ಆಗಿದೆ. ಬ್ರಾಹ್ಮಣನ ತಪಸ್ಸನ್ನು ಹೆಚ್ಚಿಸುವ ನಿಶ್ಚಯದಿಂದ ಮಣಿಭದ್ರನನ್ನು ಕುರಿತು ಕುಂಡಧಾರನು ಹೇಳಿದನು.

ಕುಂಡಧಾರಃ
ನಾಹಂ ಧನಾನಿ ಯಾಚಾಮಿ ಬ್ರಾಹ್ಮಣಾಯ ಧನಪ್ರದ |
ಅನ್ಯಮೇವಾಹಮಿಚ್ಛಾಮಿ ಭಕ್ತಾಯಾನುಗ್ರಹಂ ಕೃತಮ್ ॥23॥
ಧನಪ್ರದನೇ, ಈ ಬ್ರಾಹ್ಮಣನಿಗಾಗಿ ನಾನು ಹಣವನ್ನು ಯಾಚಿಸುವುದಿಲ್ಲ. ನಿನ್ನಿಂದ ಬೇರೆಯಾದ ಅನುಗ್ರಹವನ್ನೇ ನಾನು ಬಯಸುತ್ತಿದ್ದೇನೆ.
ಪೃಥಿವೀಂ ರತ್ನಪೂರ್ಣಾಂ ವಾ ಮಹದ್ವಾ ಧನಸಂಚಯಮ್ |
ಭಕ್ತಾಯ ನಾಹಮಿಚ್ಛಾಮಿ ಭವೇದೇಷ ತು ಧಾರ್ಮಿಕಃ ॥24॥
ಧರ್ಮೇಽಸ್ಯ ರಮತಾಂ ಬುದ್ಧಿರ್ಧರ್ಮಂ ಚೈವೋಪಜೀವತು |
ಧರ್ಮಪ್ರಧಾನೋ ಭವತು ಮಮೈಷೋಽನುಗ್ರಹೋ ಮತಃ ॥25॥
ರತ್ನಪೂರ್ಣವಾದ ಭೂಮಿಯನ್ನಾಗಲಿ, ಮಹತ್ತರವಾದ ಧನದ ಮೊತ್ತವನ್ನಾಗಲಿ, ಈ ಭಕ್ತನ ವಿಷಯದಲ್ಲಿ ನಾನು ಬಯಸುವುದಿಲ್ಲ. ಈ ಭಕ್ತನಾದರೂ ಪರಮ ಧಾರ್ಮಿಕನಾಗಿದ್ದಾನೆ. ಧರ್ಮವನ್ನೇ ಆಶ್ರಯಿಸಿ ಇವನು ಜೀವಿಸುವಂತಾಗಲಿ. ಇವನ ಧರ್ಮದ ಬುದ್ಧಿಯು ನಿಶ್ಚಿತವಾಗಿರಲಿ. ಧರ್ಮಪ್ರದಾನ ಜೀವನವುಳ್ಳವನು ನನ್ನ ಭಕ್ತನಾಗಲಿ ಎಂಬುದು ನನ್ನ ಅಭಿಮತವಾಗಿದೆ ಎಂದನು.
ಮಣಿಭದ್ರಃ
ಯದಾ ಧರ್ಮಫಲಂ ರಾಜ್ಯಂ ಸುಖಾನಿ ವಿವಿಧಾನಿ ಚ |
ಫಲಾನ್ಯೇವಾಯಮಶ್ನಾತು ಕಾಯಕ್ಲೇಶವಿವರ್ಜಿತಃ ॥26॥
ಕುಂಡಧಾರನೇ, ರಾಜ್ಯವು, ಬಗೆಬಗೆಯಾದ ಸುಖಗಳು ಎಲ್ಲವೂ ಧರ್ಮದ ಫಲದಿಂದ ದೊರೆಯುತ್ತವೆ. ಆದ್ದರಿಂದ ಬ್ರಾಹ್ಮಣನು ಕಾಯಕ್ಲೇಶಗಳಿಂದ ರಹಿತನಾಗಿ ಧರ್ಮದ ಫಲವನ್ನು ಅನುಭವಿಸುವಂತಾಗಲಿ.
ಭೀಷ್ಮಃ
ತತಸ್ತದೇವ ಬಹುಶಃ ಕುಂಡಧಾರೋ ಮಹಾಯಶಾಃ |
ಅಭ್ಯಾಸಮಕರೋದ್ಧರ್ಮೇ ತತಸ್ತುಷ್ಟಾಸ್ಯ ದೇವತಾಃ ॥27॥
ಯುಧಿಷ್ಠಿರನೇ, ಮಣಿಭದ್ರನು ಹೀಗೆ ಹೇಳಿದ ಬಳಿಕವೂ ಮಹಾಕೀರ್ತಿ ಸಂಪನ್ನನಾದ ಕುಂಡಧಾರನು ತನ್ನ ಭಕ್ತನಾದ ಬ್ರಾಹ್ಮಣನಿಗೆ ಧರ್ಮಬುದ್ಧಿಯೇ ಮತ್ತೆ ಮತ್ತೆ ಹುಟ್ಟುವಂತೆ ಬಾರಿ ಬಾರಿಗೂ ಒತ್ತಾಯ ಪೂರ್ವಕವಾಗಿ ಪ್ರಾರ್ಥಿಸಿದನು. ಅದರಿಂದ ದೇವತೆಗಳು ಸುಪ್ರೀತರಾದರು.
ಮಣಿಭದ್ರಃ
ಪ್ರೀತಾಸ್ತೇ ದೇವತಾಃ ಸರ್ವಾ ದ್ವಿಜಸ್ಯಾಸ್ಯ ತಥೈವ ಚ |
ಭವಿಷ್ಯತ್ಯೇಷ ಧರ್ಮಾತ್ಮಾ ಧರ್ಮೇ ಚಾಧಾಸ್ಯತೇ ಮತಿಃ ॥28॥
ಕುಂಡಧಾರನೇ, ದೇವತೆಗಳು ನಿನ್ನ ಹಾಗೂ ಬ್ರಾಹ್ಮಣನ ವಿಷಯದಲ್ಲಿ ಪ್ರೀತರಾಗಿದ್ದಾರೆ. ದೇವತೆಗಳ ಅನುಗ್ರಹದಿಂದ ನಿನ್ನ ಭಕ್ತನೆನಿಸಿದ ಈ ಬ್ರಾಹ್ಮಣನು ಧರ್ಮಬುದ್ಧಿಯುಳ್ಳವನಾಗುತ್ತಾನೆ. ಇವನ ಬುದ್ಧಿಯು ಧರ್ಮದಲ್ಲಿಯೇ ಯಾವಾಗಲೂ ಸ್ಥಿರವಾಗಿರುತ್ತದೆ.
ಭೀಷ್ಮಃ
ತತಃ ಪ್ರೀತೋ ಜಲಧರಃ ಕೃತಕಾರ್ಯೋ ಯುಧಿಷ್ಠಿರ |
ಈಪ್ಸಿತಂ ಮನಸೋ ಲಬ್ಧ್ವಾ ವರಮನ್ಯೈಃ ಸುದುರ್ಲಭಮ್ ॥29॥
ಮಣಿಭದ್ರನ ಮಾತನ್ನು ಕೇಳಿ ಕೃತಕಾರ್ಯನಾದ ಕುಂಡಧಾರನು ಇತರರಿಂದ ಪಡೆಯಲು ಅಸಾಧ್ಯವಾದ, ಮನಸ್ಸಿಗೆ ಇಷ್ಟವಾದ ವರವನ್ನು ಪಡೆದು ಪರಮ ಪ್ರೀತನಾದನು.
ತತೋಽಪಶ್ಯತ ಚೀರಾಣಿ ಸೂಕ್ಷ್ಮಾಣಿ ದ್ವಿಜಸತ್ತಮಃ |
ಪಾರ್ಶ್ವತೋಭ್ಯಾಗತೋ ನ್ಯಸ್ತಾನ್ಯಥ ನಿರ್ವೇದಮಾಗತಃ ॥30॥
ನಂತರ ಬ್ರಾಹ್ಮಣನು ಸ್ವಪ್ನದಿಂದ ಎದ್ದ ಬಳಿಕ ವೈರಾಗ್ಯವನ್ನು ಹುಟ್ಟಿಸಲು ದೇವತೆಗಳು ಇಟ್ಟಿರುವಂತಹ ಹರಿದ, ಮಲಿನ ವಸ್ತ್ರಗಳನ್ನು ತನ್ನ ಬದಿಯಲ್ಲಿ ಕಂಡನು. ಒಡನೆಯೇ ಅವನಿಗೆ ದುಃಖವೂ, ವೈರಾಗ್ಯವೂ ಉಂಟಾಯಿತು.
ಬ್ರಾಹ್ಮಣಃ
ಅಯಂ ನ ಸುಕೃತಂ ವೇತ್ತಿ ಕೋ ನ್ವನ್ಯೋ ವೇತ್ಸ್ಯತೇ ಕೃತಮ್ |
ಗಚ್ಛಾಮಿ ವನಮೇವಾಹಂ ವರಂ ಧರ್ಮೇಣ ಜೀವಿತುಮ್ ॥31॥
ನನ್ನ ಪುಣ್ಯಮಯವಾದ ತಪಸ್ಸಿನ ಉದ್ದೇಶವನ್ನು ಕುಂಡಧಾರನೇ ತಿಳಿಯದ ಬಳಿಕ ಬೇರೆ ಯಾರು ತಾನೇ ತಿಳಿದುಕೊಳ್ಳಲು ಸಾಧ್ಯ? ಆದ್ದರಿಂದ ನಾನು ಅರಣ್ಯಕ್ಕೆ ಹೋಗುತ್ತೇನೆ. ಅರಣ್ಯದಲ್ಲಿದ್ದು ಧರ್ಮದಿಂದ ಜೀವನವನ್ನು ನಿರ್ವಹಿಸುತ್ತೇನೆ.
ವ್ಯಾಖ್ಯಾನ ವಿಶೇಷ ವಾಸ್ತವಿಕವಾಗಿ ಸ್ವಪ್ನದಲ್ಲಿ ವೈರಾಗ್ಯವನ್ನು ಹುಟ್ಟಿಸಲು ಕುಂಡಧಾರನು ಬ್ರಾಹ್ಮಣನಿಗೆ ದೊಡ್ಡ ಉಪಕಾರವನ್ನೇ ಮಾಡಿದ್ದಾನೆಂದು ಬ್ರಾಹ್ಮಣನು ತಿಳಿದುಕೊಂಡಿದ್ದಾನೆ. ಹಾಗಿದ್ದರೂ ಮಣಿಭದ್ರನು ಕೊಡುತ್ತಿರುವ ಹಣವನ್ನು ನಿರಾಕರಿಸುತ್ತಾ ಧರ್ಮದ ಫಲವನ್ನೇ ಕುಂಡಧಾರನು ಕೇಳಿದ್ದರಿಂದ ತಾತ್ಕಾಲಿಕವಾದ ದುಃಖವನ್ನು ಹೊಂದಿದ ಬ್ರಾಹ್ಮಣನು ಕುಂಡಧಾರನು ನನ್ನ ಸುಖವನ್ನು ಬಯಸುತ್ತಿಲ್ಲ ಎಂದು ಹೇಳಿದ್ದನ್ನು ತಿಳಿಯಬೇಕು. ಕುಂಡಧಾರನಿಗೆ ಬ್ರಾಹ್ಮಣನಿಂದ ಪ್ರೀತಿಯೇ ಹುಟ್ಟಿದೆ ಎಂದು ತಿಳಿಯಬೇಕು.
ಭೀಷ್ಮಃ
ನಿರ್ವೇದಾದ್ ದೇವತಾನಾಂ ಚ ಪ್ರಸಾದಾತ್ ಸ ದ್ವಿಜೋತ್ತಮಃ |

ವನಂ ಪ್ರವಿಶ್ಯ ಸುಮಹತ್ತಪ ಆರಬ್ಧವಾಂಸ್ತದಾ ॥32॥
ದೇವತಾತಿಥಿಶೇಷೇಣ ಫಲಮೂಲಾಶನೋ ದ್ವಿಜಃ |
ಧರ್ಮೇ ಚಾಪಿ ಮಹಾರಾಜ ರತಿರಸ್ಯಾಭ್ಯಜಾಯತ ॥33॥
ಬ್ರಾಹ್ಮಣನು ವೈರಾಗ್ಯದಿಂದಲೇ, ದೇವತೆಗಳ ಅನುಗ್ರಹದಿಂದಲೂ ಅತ್ಯಂತ ಕಠಿಣವಾದ ತಪಸ್ಸನ್ನು ಆರಂಭಿಸಿದನು. ದೇವತೆಗಳಿಗೂ, ಅತಿಥಿಗಳಿಗೂ ಅರ್ಪಿಸಿದ ತರುವಾಯ ಉಳಿದ ಕಂದಮೂಲಫಲಗಳನ್ನು ಆಹಾರವಾಗಿ ಸ್ವೀಕರಿಸುತ್ತಿದ್ದನು. ಇದರಿಂದ ಧರ್ಮದ ವಿಷಯದಲ್ಲಿ ಬ್ರಾಹ್ಮಣನಿಗೆ ದೃಢವಾದ ಬುದ್ಧಿಯುಂಟಾಯಿತು.
ತ್ಯಕತ್ವ ಮೂಲಫಲಂ ಸರ್ವಂ ಪರ್ಣಾಹಾರೋಽಭವದ್ ದ್ವಿಜಃ |
ಪರ್ಣಂ ತ್ಯಕತ್ವ ಜಲಾಹಾರಸ್ತದಾಸೀದ್ ದ್ವಿಜಸತ್ತಮಃ ॥34॥
ಸ್ವಲ್ಪ ದಿನದ ಬಳಿಕ ಬ್ರಾಹ್ಮಣನು ಗೆಡ್ಡೆ-ಗೆಣಸುಗಳನ್ನು, ಹಣ್ಣುಗಳನ್ನು ತ್ಯಜಿಸಿ ತರಗೆಲೆಗಳನ್ನೇ ಆಹಾರವಾಗಿ ಸ್ವೀಕರಿಸುತ್ತಿದ್ದನು. ಬಳಿಕ ಅದನ್ನೂ ತ್ಯಜಿಸಿ ನೀರನ್ನು ಮಾತ್ರ ಸ್ವೀಕರಿಸುತ್ತಿದ್ದನು.
ವಾಯುಭಕ್ಷಸ್ತತಃ ಪಶ್ಚಾದ್ ಬಹೂನ್ ವರ್ಷಗಣಾನಭೂತ್ |
ನ ಚಾಸ್ಯ ಕ್ಷೀಯತೇ ಪ್ರಾಣಸ್ತದದ್ಭುತಮಿವಾಭವತ್ ॥35॥
ಸ್ವಲ್ಪ ಸಮಯದ ಬಳಿಕ ನೀರನ್ನೂ ತ್ಯಜಿಸಿ ವಾಯುಭಕ್ಷನಾಗಿಯೇ ಅನೇಕ ವರ್ಷಗಳನ್ನು ಉಗ್ರವಾದ ತಪಸ್ಸಿನಲ್ಲಿ ಕಳೆದನು. ಆದರೂ ಅವನ ಪ್ರಾಣವು ಕ್ಷೀಣಿಸಲಿಲ್ಲ. ಎಲ್ಲರಿಗೂ ಇವನ ತಪಸ್ಸಿನ ಕ್ರಮವು ಅದ್ಭುತವೆನಿಸಿತು.
ಧರ್ಮೇ ಚ ಶ್ರದ್ದಧಾನಸ್ಯ ತಪಸ್ಯುಗ್ರೇ ಚ ವರ್ತತಃ |
ಕಾಲೇನ ಮಹತಾ ತಸ್ಯ ದಿವ್ಯಾ ದೃಷ್ಟಿರಜಾಯತ ॥36॥
ಧರ್ಮದಲ್ಲಿಯೇ ಶ್ರದ್ಧೆಯನ್ನು ಹೊಂದಿರುವ, ಉಗ್ರವಾದ ತಪಸ್ಸನ್ನಾಚರಿಸುತ್ತಿರುವ ಬ್ರಾಹ್ಮಣನಿಗೆ ಬಹಳ ಕಾಲದ ತರುವಾಯ ದಿವ್ಯದೃಷ್ಟಿಯುಂಟಾಯಿತು.
ತಸ್ಯ ಬುದ್ಧಿಃ ಪ್ರಾದುರಾಸೀದ್ ಯದಿ ದದ್ಯಾಂ ಮಹದ್ಧನಮ್ |
ತುಷ್ಟಃ ಕಸ್ಮೈಚಿದೇವಾಹಂ ನ ಮಿಥ್ಯಾ ವಾಗ್ ಭವೇನ್ಮಮ ॥37॥
ಆಗ ಅವನ ಬುದ್ಧಿಯಲ್ಲಿ ಈ ವಿಚಾರವು ಹೊಳೆಯಿತು. ಸಂತುಷ್ಟನಾಗಿ ನಾನು ಯಾರಿಗಾದರೂ ಹಣವನ್ನು ಕೊಡುತ್ತೇನೆಂದು ಹೇಳಿದರೆ ಆ ನನ್ನ ಮಾತು ಸುಳ್ಳಾಗಲಾರದು.
ತತಃ ಪ್ರಹಷ್ಟವದನೋ ಭೂಯ ಆರಬ್ಧವಾಂಸ್ತಪಃ |
ಭೂಯಶ್ಚಾಚಿಂತಯತ್ ಸಿದ್ಧೋ ಯತ್ ಪರಂ ಸೋಽಭ್ಯಪದ್ಯತ ॥38॥
ಈ ರೀತಿಯಾದ ಸಿದ್ಧಿಯು ತನ್ನಲ್ಲುಂಟಾಗಿದೆ ಎಂದು ಅರ್ಥೈಸಿಕೊಂಡ ಬ್ರಾಹ್ಮಣನು ಪುನಃ ತಪಸ್ಸನ್ನು ಆರಂಭಿಸಿದನು. ಸಿದ್ಧಗಣದಲ್ಲಿರುವ ಕುಂಡಧಾರನು ಪರಮ ಪುರುಷಾರ್ಥವೆನಿಸಿದ ಮೋಕ್ಷದ ಸಿದ್ಧಿಗಾಗಿ ತನಗೆ ಮಾಡಿದ ಅನುಗ್ರಹವನ್ನು ಮನಸ್ಸಿನಲ್ಲಿ ಚಿಂತಿಸಿದನು.
ಯದಿ ದದ್ಯಾಮಹಂ ರಾಜ್ಯಂ ತುಷ್ಟೋ ವೈ ಯಸ್ಯ ಕಸ್ಯಚಿತ್ |
ಸ ಭವೇದಚಿರಾದ್ರಾಜಾ ನ ಮಿಥ್ಯಾ ವಾಗ್ಭವೇನ್ಮಮ ॥39॥
ನಾನು ಮನಸ್ಸಿನಲ್ಲಿ ಸಂತುಷ್ಟನಾಗಿ ಯಾರಿಗಾದರೂ ರಾಜ್ಯವನ್ನು ಅನುಗ್ರಹಿಸಿದರೆ ಅವನು ಕೂಡಲೇ ರಾಜನಾಗುತ್ತಾನೆ. ನನ್ನ ಮಾತು ಸುಳ್ಳಾಗುವುದಿಲ್ಲ.
ವ್ಯಾಖ್ಯಾನ ವಿಶೇಷ ನನ್ನ ಪ್ರಾರ್ಥನಾ ರೂಪವಾದ ಮಾತು ದೇವತೆಗಳಿಗೆ ತಲುಪುತ್ತದೆ. ನನ್ನ ಮಾತನ್ನು ದೇವತೆಗಳು ಸಫಲಗೊಳಿಸುತ್ತಾರೆ. ಫಲ ಲಭಿಸುವುದರಿಂದ ನನ್ನ ಮಾತು ವ್ಯರ್ಥವಾಗುವುದಿಲ್ಲ. ರಾಜ್ಯಾಧಿ ಲಾಭವು ದೊರೆತರೂ ಮಹಾಫಲವೆನಿಸಿದ ಮೋಕ್ಷವು ಯಾರಿಗೂ ದೊರೆಯುವುದಿಲ್ಲ ಎಂದು ತಾತ್ಪರ್ಯ. ಅದಕ್ಕಾಗಿ ಇನ್ನೂ ಪ್ರಯತ್ನ ಮಾಡಬೇಕು ಎಂಬುದು ಬ್ರಾಹ್ಮಣನ ಅಭಿಪ್ರಾಯವು.
ತಸ್ಯ ಸಾಕ್ಷಾತ್ ಕುಂಡಧಾರೋ ದರ್ಶಯಾಮಾಸ ಭಾರತ |
ಬ್ರಾಹ್ಮಣಸ್ಯ ತಪೋಯೋಗಾತ್ ಸೌಹೃದೇನಾಭಿಚೋದಿತಃ ॥40॥
ಹೀಗೆ ತಪಸ್ಸನ್ನು ಬ್ರಾಹ್ಮಣನು ಮುಂದುವರೆಸುತ್ತಿರುವಾಗ ಬ್ರಾಹ್ಮಣನ ಸೌಹಾರ್ದದಿಂದಲೂ ಪ್ರೇರಿತನಾದ ಕುಂಡಧಾರನು ಬ್ರಾಹ್ಮಣನಿಗೆ ಸಾಕ್ಷಾತ್ತಾಗಿ ಕಾಣಿಸಿಕೊಂಡನು.
ಸಮಾಗಮ್ಯ ಸ ತೇನಾಥ ಪೂಜಾಂ ಚಕ್ರೇ ಯಥಾವಿಧಿ |
ಬ್ರಾಹ್ಮಣಃ ಕುಂಡಧಾರಸ್ಯ ವಿಸ್ಮಿತಶ್ಚಾಭವನ್ನೃಪ ॥41॥
ಕುಂಡಧಾರನನ್ನು ನೋಡಿ ಬ್ರಾಹ್ಮಣನು ಆಶ್ಚರ್ಯಚಕಿತನಾಗಿ ಅವನನ್ನು ಯಥಾ ವಿಧಿಯಾಗಿ ಪೂಜಿಸಿದನು.
ತತೋಽಬ್ರವೀತ್ಕುಂಡಧಾರೋ ದಿವ್ಯಂ ತೇ ಚಕ್ಷುರುತ್ತಮಮ್ |
ಪಶ್ಯ ರಾಜ್ಞಾಂ ಗತಿಂ ವಿಪ್ರಾ ಲೋಕಾಂಶ್ಚಾವೇಕ್ಷ ಚಕ್ಷುಷಾ ॥42॥
ಬಳಿಕ ಕುಂಡಧಾರನು ಬ್ರಾಹ್ಮಣನಿಗೆ ಹೀಗೆ ಹೇಳಿದನು: ಬ್ರಾಹ್ಮಣೋತ್ತಮನೇ, ನಿನಗೆ ತಪಸ್ಸಿನ ಪ್ರಭಾವದಿಂದ ಶ್ರೇಷ್ಠವಾದ ದಿವ್ಯದೃಷ್ಟಿಯು ದೊರಕಿರುತ್ತದೆ. ಈ ದೃಷ್ಟಿಯಿಂದ ಹಿಂದಿನ ರಾಜರು ಯಾವ ಗತಿಯನ್ನು ಹೊಂದಿದ್ದಾರೆ, ಯಾವ ಲೋಕಗಳಿಗೆ ಹೋಗಿರುತ್ತಾರೆ ಎಂಬುದನ್ನು ನೀನು ನೋಡು.
ತತೋ ರಾಜ್ಞಾಂ ಸಹಸ್ರಾಣಿ ಮಗ್ನಾನಿ ನಿರಯೇ ತದಾ |
ದೂರಾದಪಶ್ಯದ್ ವಿಪ್ರಾಃ ಸ ದಿವ್ಯಯುಕ್ತೇನ ಚಕ್ಷುಷಾ ॥43॥
ನಂತರ ಕುಂಡಧಾರನ ಮಾತಿನಂತೆ ಬ್ರಾಹ್ಮಣನು ತನ್ನ ದಿವ್ಯದೃಷ್ಟಿಯಿಂದ ಸಹಸ್ರಾರು ರಾಜರು ನರಕದಲ್ಲಿ ಬಿದ್ದಿರುವ ದೃಶ್ಯವನ್ನು

ದೂರದಿಂದಲೇ ನೋಡಿದನು. ಬಳಿಕ ಕುಂಡಧಾರನು ಬ್ರಾಹ್ಮಣನಿಗೆ ಹೇಳಿದನು.
ಕುಂಡಧಾರಃ
ಮಾಂ ಪೂಜಯಿತ್ವಾ ಭಾವೇನ ಯದಿ ತ್ವಂ ದುಃಖಮಾಪ್ನುಯಾಃ |
ಕೃತಂ ಮಯಾ ಭವೇತ್ ಕಿಂ ತೇ ಕಶ್ಚ ತೇಽನುಗ್ರಹೋ ಭವೇತ್ ॥44॥
ಬ್ರಾಹ್ಮಣನೇ, ನೀನು ಭಕ್ತಿಯಿಂದ ನನ್ನನ್ನು ಪೂಜಿಸಿದ ಬಳಿಕವೂ ನಾನು ಮಾಡಿದ ಅನುಗ್ರಹದಿಂದ ನೀನು ದುಃಖಕ್ಕೇ ತುತ್ತಾಗುತ್ತಿ ಎಂದಾದರೆ ನಾನು ನಿನಗೆ ಏನು ಅನುಗ್ರಹ ಮಾಡಿದಂತಾಯಿತು?
ಪಶ್ಯ ಪಶ್ಯ ಚ ಭೂಯಸ್ತ್ವಂ ಕಾಮಾನಿಚ್ಛೇತ್ ಕಥಂ ನರಃ |
ಸ್ವರ್ಗದ್ವಾರಂ ಹಿ ಸಂರುದ್ಧಂ ಮಾನುಷೇಷು ವಿಶೇಷತಃ ॥45॥
ಪುನಃ ಪುನಃ ರಾಜರಿಗೆ ಒದಗಿರುವ ಅವಸ್ಥೆಯನ್ನು ನೀನು ನೋಡು. ಅವರ ದುರವಸ್ಥೆಯನ್ನು ನೋಡಿದ ಮನುಷ್ಯನು ಪ್ರಪಂಚದ ಕಾಮನೆಗಳನ್ನು ಹೇಗೆ ತಾನೆ ಬಯಸುತ್ತಾನೆ? ಯಾವಾತನು ಧನವನ್ನೂ, ಕಾಮನೆಗಳನ್ನು ಅಪೇಕ್ಷಿಸುತ್ತಾನೋ ಅಂತಹ ಮನುಷ್ಯನಿಗೆ ಸ್ವರ್ಗದ ಬಾಗಿಲುಗಳು ಮುಚ್ಚಿಕೊಳ್ಳುತ್ತವೆ.
ಭೀಷ್ಮಃ
ತತೋಽಪಶ್ಯತ್ ಸ ಕಾಮಂ ಚ ಕ್ರೋಧಂ ಲೋಭಂ ಭಯಂ ಮದಮ್|
ನಿದ್ರಾಂ ತಂದ್ರೀಂ ತಥಾಲಸ್ಯಮಾವೃತ್ಯ ಪುರುಷಾನ್ ಸ್ಥಿತಾನ್ ॥46॥
ಯುಧಿಷ್ಠಿರನೇ, ಕುಂಡಧಾರನು ಹೇಳಿದ ಬಳಿಕ ಬ್ರಾಹ್ಮಣನು ತನ್ನ ದಿವ್ಯದೃಷ್ಟಿಯಿಂದ ಭೋಗಿಗಳಾದ ಮನುಷ್ಯರನ್ನು ಕಾಮ, ಕ್ರೋಧ, ಲೋಭ, ಭಯ, ಮದ, ನಿದ್ರೆ, ತೂಕಡಿಕೆ, ಆಲಸ್ಯ ಇವೇ ಮೊದಲಾದ ಶತ್ರುಗಳು ಆಕ್ರಮಿಸಿಕೊಂಡಿರುವ ದೃಶ್ಯವನ್ನು ನೋಡಿದನು.
ಕುಂಡಧಾರಃ
ಏತೈರ್ಲೋಕಾಃ ಸುಸಂರುದ್ಧಾ ದೇವಾನಾಂ ಮಾನುಷಾದ್ ಭಯಮ್ |
ತಥೈವ ದೇವವಚನಾದ್ ವಿಘ್ನಂ ಕುರ್ವಂತಿ ಸರ್ವಶಃ ॥47॥
ಬ್ರಾಹ್ಮಣೋತ್ತಮನೇ, ಈ ಸಮಸ್ತ ಜಗತ್ತೆಲ್ಲವೂ ನೀನು ನೋಡುತ್ತಿರುವ ಕಾಮ-ಕ್ರೋಧಗಳಿಂದ ಬಂಧಿತವಾಗಿದೆ. ದೇವತೆಗಳಿಗೆ ಯಾವಾಗಲೂ ಮನುಷ್ಯಜನ್ಮದಿಂದ ಭಯವಿದೆ. ಆದ್ದರಿಂದ ದೇವತೆಗಳ ವಚನದಂತೆ ದೇವದೂತರು ಮನುಷ್ಯರಿಗೆ ಕಾಮ-ಕ್ರೋಧಗಳನ್ನು ನೀಡಿ ತಪಸ್ಸಿಗೆ ವಿಘ್ನವನ್ನುಂಟು ಮಾಡುತ್ತಾರೆ.
ನ ದೇವೈರನನುಜ್ಞಾತಃ ಕಶ್ಚಿದ್ ಭವತಿ ಧಾರ್ಮಿಕಃ |
ಏಷ ಶಕ್ತೋಽಸಿ ತಪಸಾ ರಾಜ್ಯಂ ದಾತುಂ ಧನಾನಿ ಚ ॥48॥
ದೇವತೆಗಳ ಅನುಜ್ಞೆಯನ್ನು ಪಡೆದುಕೊಳ್ಳದೆ ಯಾವನೇ ಆದರೂ ನಿರ್ವಿಘ್ನವಾಗಿ ಧರ್ಮಕಾರ್ಯವನ್ನು ಮಾಡಲಾರನು. ಧಾರ್ಮಿಕನಾಗಲಾರನು. ನಿನಗೆ ದೇವತೆಗಳ ಅಪ್ಪಣೆ ಸಿಕ್ಕಿದೆ. ನಿನ್ನ ಧರ್ಮಕಾರ್ಯವು, ತಪಸ್ಸು ಸಿದ್ಧಿಸಿದೆ. ಆದ್ದರಿಂದ ನೀನು ಬೇರೆ ಯಾಚಕರಿಗೆ ರಾಜ್ಯವನ್ನೂ, ಧನವನ್ನೂ ಕೊಡಲು ಸಮರ್ಥನಾಗಿರುವಿ.
ಭೀಷ್ಮಃ
ತತಃ ಪಪಾತ ಶಿರಸಾ ಬ್ರಾಹ್ಮಣಸ್ತೋಯಧಾರಿಣೇ |
ಉವಾಚ ಚೈನಂ ಧರ್ಮಾತ್ಮಾ ಮಹಾನ್ ಮೇಽನುಗ್ರಹಃ ಕೃತಃ ॥49॥
ಯುಧಿಷ್ಠಿರನೇ, ಕುಂಡಧಾರನು ಹೀಗೆ ಹೇಳಿದ ಬಳಿಕ ಧರ್ಮಾತ್ಮನಾದ ಬ್ರಾಹ್ಮಣನು ಕುಂಡಧಾರನಿಗೆ ತಲೆಬಾಗಿ ಸಾಷ್ಟಾಂಗ ನಮಸ್ಕರಿಸಿ ವಿನಯಪೂರ್ವಕವಾಗಿ ಹೀಗೆ ಹೇಳಿದನು.
ಕಾಮಲೋಭಾನುಬಂಧೇನ ಪುರಾ ತೇ ಯದಸೂಯಿತಮ್ |
ಮಯಾ ಸ್ನೇಹಮವಿಜ್ಞಾಯ ತತ್ರ ಮೇ ಕ್ಷಂತುಮರ್ಹಸಿ ॥50॥
ಕುಂಡಧಾರನೇ, ನೀನು ನನ್ನ ಮೇಲಿನ ಸ್ನೇಹಭಾವದಿಂದ ಅನುಗ್ರಹವನ್ನೇ ಮಾಡಿರುವೆ. ಇದನ್ನು ತಿಳಿಯದೆ ಕಾಮ-ಲೋಭಗಳಿಂದ ನಾನು ನನ್ನ ಧನಾಗಮವನ್ನು ತಪ್ಪಿಸಿದ ವ್ಯಕ್ತಿಯು ನೀನೆಂದು ತಿಳಿದು ನಿನಗೆ ದ್ವೇಷವನ್ನೇ ಬಗೆದಿದ್ದೇನೆ. ಇದಕ್ಕಾಗಿ ನನ್ನನ್ನು ಕ್ಷಮಿಸಲು ಅರ್ಹನಾಗಿರುವಿ.
ಕ್ಷಾಂತಮೇವ ಮಯೇತ್ಯುಕತ್ವ ಕುಂಡಧಾರೋ ದ್ವಿಜರ್ಷಭಮ್ |
ಸಂಪರಿಷ್ವಜ್ಯ ಬಾಹುಭ್ಯಾಂ ತತ್ರೈವಾಂತರಧೀಯತ ॥51॥
ಕುಂಡಧಾರನು ಬ್ರಾಹ್ಮಣನನ್ನು ಕುರಿತು- `ನಾನು ಹಿಂದೆಯೇ ಅದನ್ನು ಕ್ಷಮಿಸಿದ್ದೇನೆ' ಎಂದು ಹೇಳಿ ಬ್ರಾಹ್ಮಣನನ್ನು ಆಲಿಂಗಿಸಿ ಸಂತೈಸಿ, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ತತಃ ಸರ್ವಾನಿಮಾಲ್ಲೋಕಾನ್ ಬ್ರಾಹ್ಮಣೋಽನುಚಚಾರ ಹ |
ಕುಂಡಧಾರಪ್ರಸಾದೇನ ತಪಸಾ ಯೋಜಿತಃ ಪುರಾ ॥52॥
ವಿಹಾಯಸಾ ಚ ಗಮನಂ ತಥಾ ಸಂಕಲ್ಪಿತಾರ್ಥತಾ |
ಧರ್ಮಾಚ್ಛಕ್ತ್ಯಾ ತಥಾ ಯೋಗಾದ್ಯಾ ಚೈವ ಪರಮಾ ಗತಿಃ ॥53॥
ಅನಂತರ ಕುಂಡಧಾರನ ಅನುಗ್ರಹದಿಂದ ತಪಸ್ಸಿದ್ಧಿಯನ್ನು ಪಡೆದ ಬ್ರಾಹ್ಮಣನು ಎಲ್ಲ ಲೋಕಗಳಲ್ಲಿಯೂ ಸಂಚರಿಸಿದನು. ತಪಸ್ಸಿನ ಸಿದ್ಧಿಯಿಂದ ಬ್ರಾಹ್ಮಣನಿಗೆ ಆಕಾಶಗಮನ ಸಾಮರ್ಥ್ಯ, ಸಂಕಲ್ಪಮಾತ್ರದಿಂದಲೇ ಇಷ್ಟಾರ್ಥಗಳನ್ನು ಪಡೆದುಕೊಳ್ಳುವ ಶಕ್ತಿಯೂ, ಧರ್ಮಶಕ್ತಿ, ಯೋಗಶಕ್ತಿಯಿಂದ ಎಲ್ಲವನ್ನೂ ಪಡೆಯುವ ಪರಮಗತಿ ಹೀಗೆ ಎಲ್ಲವೂ ಸಾಧ್ಯವಾಯಿತು.
ದೇವತಾ ಬ್ರಾಹ್ಮಣಾಃ ಸಂತೋ ಯಕ್ಷಾ ಮಾನುಷಚಾರಣಾಃ |
ಧಾರ್ಮಿಕಾನ್ ಪೂಜಯಂತೀಹ ನ ಧನಾಢ್ಯಾನ್ನ ಕಾಮಿನಃ ॥54॥

ದೇವತೆಗಳು, ಬ್ರಾಹ್ಮಣರು, ಸತ್ಪುರುಷರು, ಯಕ್ಷರು, ಮನುಷ್ಯರು, ಚಾರಣರು ಇವರೆಲ್ಲರೂ ಜಗತ್ತಿನಲ್ಲಿ ಧಾರ್ಮಿಕರನ್ನು ಪೂಜಿಸುತ್ತಾರೆ. ಧನಿಕರನ್ನಾಗಲೀ, ಕಾಮೋಪಭೋಗಿಗಳನ್ನಾಗಲೀ ಪೂಜಿಸುವುದಿಲ್ಲ.

ಸುಪ್ರಸನ್ನಾ ಹಿ ತೇ ದೇವಾ ಯತ್ತೇ ಧರ್ಮೇ ರತಾ ಮತಿಃ |
ಧನೇ ಸುಖಕಲಾ ಕಾಚಿದ್ಧರ್ಮೇ ತು ಪರಮಂ ಸುಖಮ್ ॥55॥

ಯುಧಿಷ್ಠಿರನೇ, ನಿನ್ನ ಬುದ್ಧಿಯು ನಿತ್ಯವೂ ಧರ್ಮರತವಾಗಿರುವುದರಿಂದ ದೇವತೆಗಳು ನಿನ್ನಲ್ಲಿ ಪ್ರಸನ್ನರಾಗಿದ್ದಾರೆ. ಧನದಲ್ಲಿ ಸುಖವೆಂಬುದು ಸ್ವಲ್ಪ ಮಾತ್ರವು. ಧರ್ಮಾಚರಣೆಯಲ್ಲಿ ಪರಮಸುಖವೇ ಅಡಕವಾಗಿದೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಕುಂಡಧಾರಾಖ್ಯಾನೇ ಷಡಧಿಕಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು.

* * * * *

## ನೂರ ಏಳನೆಯ ಅಧ್ಯಾಯ

ಹಿಂಸೆಗೆ ಕಾರಣವಾದ ಯಜ್ಞವು ಪ್ರಶಸ್ತವಾದುದಲ್ಲ ಎಂದು ನಾರದರು ಉಂಛವೃತ್ತಿ ಬ್ರಾಹ್ಮಣನ ಕಥೆಯನ್ನು ದೃಷ್ಟಾಂತವನ್ನಾಗಿ ನೀಡಿ ಹೇಳಿದುದು.

ಯುಧಿಷ್ಠಿರಃ

ಬಹೂನಾಂ ಯಜ್ಞತಪಸಾಮೇಕಾರ್ಥಾನಾಂ ಪಿತಾಮಹ |
ಧರ್ಮಾರ್ಥಂ ನ ಸುಖಾರ್ಥಾರ್ಥಂ ಕಥಂ ಯಜ್ಞಃ ಸಮಾಹಿತಃ ॥1॥

ಪಿತಾಮಹನೇ, ಯಜ್ಞಗಳು ಲೋಕದಲ್ಲಿ ಅನೇಕವಿಧವಾಗಿವೆ. ತಪಸ್ಸುಗಳೂ ಅನೇಕ ವಿಧವಾಗಿವೆ. ಆದರೆ ಅವುಗಳೆಲ್ಲವುದರ ಉದ್ದೇಶ ಭಗವತ್ಪ್ರೀತಿಯೇ ಆಗಿದೆ. ಅಂತಹ ವಿವಿಧ ಯಜ್ಞಗಳಲ್ಲಿ ಸ್ವರ್ಗಕ್ಕೂ, ಧನಕ್ಕೂ ಕಾರಣವಾಗದೆ ಧರ್ಮಕ್ಕೆ ಮಾತ್ರ ನಿರ್ಣಯಿಸಲ್ಪಟ್ಟ ಯಜ್ಞವು ಯಾವುದು?

ಭೀಷ್ಮಃ

ಅತ್ರ ತೇ ವರ್ತಯಿಷ್ಯಾಮಿ ನಾರದೇನಾನುಕೀರ್ತಿತಮ್ |
ಉಂಛವೃತ್ತೇಃ ಪುರಾವೃತ್ತಂ ಯಜ್ಞಾರ್ಥೇ ಬ್ರಾಹ್ಮಣಸ್ಯ ಹ ॥2॥

ಯುಧಿಷ್ಠಿರನೇ, ಹಿಂದಿನ ಕಾಲದಲ್ಲಿ ಉಂಛವೃತ್ತಿಯಿಂದ ಜೀವನವನ್ನು ನಿರ್ವಹಿಸುತ್ತಿದ್ದ ಒಬ್ಬ ಬ್ರಾಹ್ಮಣನು ಮಾಡಿದ ಯಜ್ಞದ ಬಗ್ಗೆ ನಾರದರು ನನ್ನ ಬಳಿ ಹೇಳಿದ ಒಂದು ಪ್ರಾಚೀನವಾದ ಇತಿಹಾಸವನ್ನು ಹೇಳುತ್ತೇನೆ, ಕೇಳು.

ರಾಷ್ಟ್ರೇ ಧರ್ಮೋತ್ತರೇ ಶ್ರೇಷ್ಠೇ ವಿದರ್ಭೇಷ್ವಭವದ್ ದ್ವಿಜಃ |
ಉಂಛವೃತ್ತಿರ್ಋಷಿಃ ಕಶ್ಚಿದ್ ಯಜ್ಞೇ ಯಜ್ಞಂ ಸಮಾದಧೇ ॥3॥

ಧರ್ಮವೇ ಪ್ರಧಾನವಾಗಿದ್ದ ವಿದರ್ಭದೇಶದಲ್ಲಿ ಉಂಛವೃತ್ತಿಯಿಂದ ಜೀವನವನ್ನು ನಿರ್ವಹಿಸುತ್ತಿದ್ದ ಬ್ರಹ್ಮರ್ಷಿಯೊಬ್ಬನು ಇದ್ದನು. ಅವನು ಒಂದು ಯಜ್ಞವನ್ನು ಮಾಡಲು ಸಂಕಲ್ಪಿಸಿದನು.

ಶ್ಯಾಮಾಕಮಶನಂ ತತ್ರ ಸೂರ್ಯಪತ್ರೀ ಸುವರ್ಚಲಾ |
ತಿಕ್ತಂ ಚ ವಿರಸಂ ಶಾಕಂ ತಪಸಾ ಸ್ವಾದುತಾಂ ಗತಮ್ ॥4॥

ಅವನು ವಾಸಿಸುತ್ತಿದ್ದ ಸ್ಥಳದಲ್ಲಿ ಸಾಮೆಯ ಅಕ್ಕಿಯನ್ನೇ ತಿನ್ನಬೇಕಾಗಿತ್ತು. ಅರ್ಕಪತ್ರಿ ಅಥವಾ ಸುವರ್ಚಲಾ ಎಂಬ ಹೆಸರುಳ್ಳ ಕಾಡಿನಲ್ಲಿ ಬೆಳೆಯುವ ಶಾಕ ಲತೆಯನ್ನೇ ಉಪಯೋಗಿಸುತ್ತಿದ್ದನು. ಕಹಿಯಾದ ಮತ್ತು ರಸವಿಲ್ಲದ ಕಾಯಿಪಲ್ಯಗಳು ಸಿಕ್ಕುತ್ತಿದ್ದವು. ಆದರೆ ಆ ಬ್ರಾಹ್ಮಣನ ತಪಃಪ್ರಭಾವದಿಂದ ಸಾಧುವಲ್ಲದ ಆ ಪದಾರ್ಥಗಳೇ ರುಚಿಯಾಗಿರುತ್ತಿದ್ದವು.

ಉಪಗಮ್ಯ ವನೇ ಪೃಥ್ವೀಂ ಸರ್ವಭೂತವಿಹಿಂಸಯಾ |
ಅಪಿ ಮೂಲಫಲೈರಿಜ್ಯೋ ಯಜ್ಞಃ ಸ್ವರ್ಗ್ಯಃ ಪರಂತಪ ॥5॥

ಧರ್ಮಪುತ್ರನೇ, ಕಾಡಿಗೆ ಹೋಗಿ ಯಾವ ಭೂತಗಳಿಗೂ ಹಿಂಸೆ ಇಲ್ಲದಂತೆ ವಾನಪ್ರಸ್ಥಾಶ್ರಮಿಯಾಗಿದ್ದುಕೊಂಡು, ಫಲ-ಮೂಲಗಳಿಂದಲೇ ಯಜ್ಞವನ್ನು ನಡೆಸಿದರೂ ಆ ಯಜ್ಞವು ಸ್ವರ್ಗಫಲವನ್ನು ನೀಡುತ್ತದೆ.

ತಸ್ಯ ಭಾರ್ಯಾ ವ್ರತಕೃಶಾ ಶುಚಿಃ ಪುಷ್ಕರಚಾರಿಣೀ |
ಯಜ್ಞಪತ್ನೀತ್ವಮಾನೀತಾ ಸತ್ಯೇನಾನುವಿಧೀಯತೇ |
ಸಾ ತು ಶಾಪಪರಿತ್ರಸ್ತಾ ನ ಸ್ವಭಾವಾನುವರ್ತಿನೀ ॥6॥

ಸತ್ಯನೆಂಬ ಹೆಸರುಳ್ಳ ಬ್ರಾಹ್ಮಣನು ಪುಷ್ಕರಚಾರಿಣಿ ಎಂಬ ತನ್ನ ಪತ್ನಿಯ ಜೊತೆಗೆ ಸೇರಿ ಶಾಕ ಯಜ್ಞವನ್ನೇ ಮಾಡತೊಡಗಿದನು. ಇದು ವಿಧ್ಯುಕ್ತವಲ್ಲವೆಂದು ತಿಳಿದಿದ್ದರೂ ಅವನ ಪತ್ನಿಯು ಪತಿಯನ್ನೇ ಅನುಸರಿಸುತ್ತಾ ಯಜ್ಞಕಾರ್ಯಕ್ಕಾಗಿ ತಾನು ಪತಿಯೊಡನೆ ಇರಬೇಕಾಗಿದುದ್ದರಿಂದ ಶಾಪಭೀತಿಯಿಂದಲೂ ಅವನ ಇಷ್ಟಕ್ಕನುಸಾರವಾಗಿ ಹೋಗುತ್ತಿದ್ದಳು.

ಮಯೂರಜೀರ್ಣಪರ್ಣಾನಾಂ ವಸ್ತ್ರಂ ತಸ್ಯಾಶ್ಚ ಪರ್ಣಿನಾಮ್ |
ಅಕಾಮಾಯಾಃ ಕೃತಂ ತತ್ರ ಯಜ್ಞಹೋತ್ರಾನುಮಾರ್ಗತಃ ॥7॥
ಶುಕಸ್ಯ ಪುನರಾಜಾತಿರವಧ್ಯಾನಾದಧರ್ಮವತ್ |
ತಸ್ಮಿನ್ ವನೇ ಸಮೀಪಸ್ಥೋ ಮೃಗೋಽಭೂತ್ ಸಹಚಾರಿಕಃ |
ವಚೋಭಿರಬ್ರವೀತ್ ಸತ್ಯಂ ತ್ವಯಾ ದುಷ್ಕೃತಕಂ ಕೃತಮ್ ॥8॥

ಅವಳು ನವಿಲಿನಿಂದ ಜೀರ್ಣವಾಗಿ ಉದುರಿದ ನವಿಲಿನ ಗರಿಗಳನ್ನೇ ತೆಗೆದುಕೊಂಡು ಬಟ್ಟೆಯನ್ನು ಮಾಡಿಕೊಂಡು ಅದನ್ನೇ ಧರಿಸುತ್ತಿದ್ದಳು. ಯಜ್ಞವನ್ನಾಗಲಿ, ಯಜ್ಞದ ಫಲವನ್ನಾಗಲಿ ಇಚ್ಛಿಸದ ಪುಷ್ಕರಚಾರಿಣಿಯು ಹೋತೃವಿನ ಆಜ್ಞೆಯಂತೆ

ಯಜ್ಞಕಾರ್ಯವನ್ನು ನಿರ್ವಹಿಸುತ್ತಿದ್ದಳು. ಗಂಡದ ಯಜ್ಞದ ಬಗ್ಗೆ ಸಮಾಧಾನವಿಲ್ಲದ ಪತ್ನಿಯು ಹೋಮ ನಡೆಯುವ ಪ್ರಸಂಗದಲ್ಲಿಯೇ ಪಕ್ಷಿಕುಲಕ್ಕೆ ಸೇರಿದ ಒಂದು ಹಕ್ಕಿಯನ್ನು ಯಜ್ಞಕ್ಕಾಗಿ ವಧಿಸಿದಳು. ಈ ಅಧರ್ಮದ ವಧೆಯನ್ನು ಕಂಡ ಆ ಪಕ್ಷಿ ಕುಲದ ಜೊತೆಗೆ ಸಂಚರಿಸುವ ಒಂದು ಜಿಂಕೆಯು ಆ ಆಶ್ರಮದ ಸಮೀಪದಲ್ಲೇ ವಾಸ ಮಾಡುತ್ತಿತ್ತು. ಇವರು ಮಾಡಿದ ಅಧರ್ಮದ ಕ್ರಿಯೆಯನ್ನು ಕಂಡು ಯಜ್ಞ ಮಂಟಪದ ಸಮೀಪಕ್ಕೆ ಬಂದು ಸತ್ಯನೆಂಬ ಬ್ರಾಹ್ಮಣನನ್ನು ಕುರಿತು ನೀನು ಅಸತ್ಕರ್ಮವನ್ನು ಮಾಡುತ್ತಿರುವಿ ಎಂದು ಹೇಳಿತು.

ಯದಿ ಮಂತ್ರಾಂಗಹೀನೋಽಯಂ ಯಜ್ಞೋ ಭವತಿ ವೈಕೃತಃ |
ಮಾಂ ಭೋಃ ಪ್ರಕ್ಷಿಪ ಹೋತ್ರೇ ತ್ವಂ ಗಚ್ಛ ಸ್ವರ್ಗಮತಂದ್ರಿತಃ ॥9॥

ಬ್ರಾಹ್ಮಣನೇ, ಈ ಯಜ್ಞವೇನಾದರೂ ಅಂಗಹೀನ, ಮಂತ್ರಹೀನವಾದರೆ ಯಜಮಾನನಿಗೆ ಅದು ದುಷ್ಕರ್ಮವಾಗಿ ಪರಿಣಾಮವಾಗಿ ಹೊಂದುತ್ತದೆ. ಆದ್ದರಿಂದ ನನ್ನನ್ನೇ ಹೊತೃವಿಗೆ ಒಪ್ಪಿಸಿ ಈ ಯಜ್ಞದಲ್ಲಿ ಸಮರ್ಪಿಸಿ ನಿಷ್ಕಳಂಕನಾಗಿ ಸ್ವರ್ಗಕ್ಕೆ ಹೋಗು.

ತತಸ್ತು ಯಜ್ಞೇ ಸಾವಿತ್ರೀ ಸಾಕ್ಷಾತ್ತಂ ಸನ್ನ್ಯಮಂತ್ರಯತ್ |
ನಿಮಂತ್ರಯಂತೀ ಪ್ರತ್ಯುಕ್ತಾ ನ ಹನ್ಯಾಂ ಸಹವಾಸಿನಮ್ ॥10॥

ಜಿಂಕೆಯು ಹೀಗೆ ಹೇಳಿದ ಬಳಿಕ ಆ ಯಜ್ಞವೇದಿಕೆಯಲ್ಲಿ ಸಾಕ್ಷಾತ್ ಸಾವಿತ್ರಿಯೇ ಕಾಣಿಸಿಕೊಂಡು ಸತ್ಯನಿಗೆ ಮೃಗವು ಹೇಳಿದಂತೆ ಮಾಡಲು ಸಲಹೆಯನ್ನು ನೀಡಿದಳು. ಆದರೆ ಬ್ರಾಹ್ಮಣನು ನನ್ನ ಆಶ್ರಮದಲ್ಲೇ ವಾಸಿಸುವ ಈ ಜಿಂಕೆಯನ್ನು ನಾನು ಕೊಲ್ಲುವುದಿಲ್ಲ ಎಂದು ಉತ್ತರಿಸಿದನು.

ಏವಮುಕ್ತಾ ನಿವೃತ್ತಾ ಸಾ ಪ್ರವಿಷ್ಟಾ ಯಜ್ಞಪಾವಕಮ್ |
ಕಿಂ ನು ದುಶ್ಚರಿತಂ ಯಜ್ಞೇ ದಿದೃಕ್ಷುಃ ಸಾ ರಸಾತಲಮ್ ॥11॥

ಹೀಗೆ ಹೇಳಿದ ಬಳಿಕ ಸಾವಿತ್ರಿಯು ಹಿಂದಿರುಗಿ ಯಜ್ಞಾಗ್ನಿಯನ್ನು ಪ್ರವೇಶಿಸಿದಳು. ಪಶುವಿಲ್ಲದ ಯಜ್ಞದಲ್ಲಿ ನಡೆಯಬಹುದಾದ ನ್ಯೂನತೆಯನ್ನು ನೋಡಲು ಇಚ್ಛಿಸಿ ಆಗಮಿಸಿದ ಸಾವಿತ್ರಿಯು ರಸಾತಲಕ್ಕೆ ಹೊರಟು ಹೋದಳು.

ಸಾ ತು ಬದ್ಧಾಂಜಲಿಃ ಸತ್ಯಮಯಾಚದ್ಧರಿಣಂ ಪುನಃ |
ಸತ್ಯೇನ ಸಂಪರಿಷ್ವಜ್ಯ ಸಂದಿಷ್ಟೋ ಗಮ್ಯತಾಮಿತಿ ॥12॥

ಜಿಂಕೆಯು ಸಾವಿತ್ರಿಯ ಎದುರಿನಲ್ಲಿ ಕೈಮುಗಿದು ನಿಂತಿರುವ ಸತ್ಯನೆಂಬ ಋಷಿಯನ್ನು ಕುರಿತು, ತನ್ನನ್ನು ಯಜ್ಞದ ಪಶುವನ್ನಾಗಿ ಉಪಯೋಗಿಸಿಕೊಳ್ಳುವಂತೆ ಪುನಃ ಪುನಃ ಪ್ರಾರ್ಥಿಸಿದನು. ಸತ್ಯನಾದರೂ ಜಿಂಕೆಯನ್ನು ತಬ್ಬಿಕೊಂಡು ಪ್ರೀತಿಯಿಂದ ನೀನು ಇಲ್ಲಿಂದ ಹೊರಟು ಹೋಗು ಎಂದು ಹೇಳಿದನು.

ತತಃ ಸ ಹರಿಣೋ ಗತ್ವಾ ಪದಾನ್ಯಷ್ಟೌ ನ್ಯವರ್ತತ |
ಸಾಧು ಹಿಂಸಯ ಮಾಂ ಸತ್ಯ ಹತೋ ಯಾಸ್ಯಾಮಿ ಸದ್ಗತಿಮ್ ॥13॥

ಸತ್ಯನ ಮಾತಿಗನುಗುಣವಾಗಿ ಎಂಟು ಹೆಜ್ಜೆಯನ್ನು ಮುಂದಿಟ್ಟ ಜಿಂಕೆಯು ಪುನಃ ತಿರುಗಿ ಬಂದು ವಿಧಿಪೂರ್ವಕವಾಗಿ ನನ್ನನ್ನು ಹಿಂಸಿಸು. ಯಜ್ಞಪಶುವಾಗಿ ಮರಣವನ್ನು ಹೊಂದುವ ನಾನು ಸದ್ಗತಿಯನ್ನು ಹೊಂದುತ್ತೇನೆ ಎಂದು ಹೇಳಿತು.

ಪಶ್ಯ ಹ್ಯಪ್ಸರಸೋ ದಿವ್ಯಾ ಮಯಾ ದತ್ತೇನ ಚಕ್ಷುಷಾ |
ವಿಮಾನಾನಿ ವಿಚಿತ್ರಾಣಿ ಗಂಧರ್ವಾಣಾಂ ಮಹಾತ್ಮನಾಮ್ ॥14॥

ಸತ್ಯ ಋಷಿಯೇ, ನಿನಗೆ ದಿವ್ಯದೃಷ್ಟಿಯನ್ನು ನೀಡುತ್ತೇನೆ. ಆಕಾಶದ ಕಡೆ ನೋಡು. ದಿವ್ಯರೂಪದ ಅಪ್ಸರೆಯರು, ಮಹಾತ್ಮರಾದ ಗಂಧರ್ವರು, ಅವರ ವಿಚಿತ್ರವಾದ ವಿಮಾನಗಳು ಆಕಾಶದಲ್ಲಿ ನಿನಗೆ ಕಾಣಿಸುತ್ತವೆ.

ತತಃ ಸುರುಚಿರಂ ದೃಷ್ಟ್ವಾ ಸ್ಪೃಹಾಲಗ್ನೇನ ಚಕ್ಷುಷಾ |
ಮೃಗಮಾಲೋಕ್ಯ ಹಿಂಸಾಯಾಂ ಸ್ವರ್ಗವಾಸಂ ಸಮರ್ಥಯತ್ ॥15॥

ಜಿಂಕೆಯು ಹೀಗೆ ಹೇಳಿದ ಬಳಿಕ ಆ ಮೃಗವು ನೀಡಿದ ದಿವ್ಯದೃಷ್ಟಿಯಿಂದ ಸತ್ಯ ಋಷಿಯು ಆಕಾಶದ ಕಡೆ ನೋಡಿದನು. ಆಸೆಯಿಂದ ಕೂಡಿದ ಕಣ್ಣುಗಳಿಂದ ಸುಂದರವಾದ ಸ್ವರ್ಗವಾಸದ ದೃಶ್ಯವನ್ನು ನೋಡುತ್ತಾ ಮೃಗಹಿಂಸೆಯಿಂದ ಸ್ವರ್ಗ ಸುಖವಿದೆ ಎಂದು ನಿಶ್ಚಯಿಸಿಕೊಂಡನು.

ಸ ತು ಧರ್ಮೋ ಮೃಗೋ ಭೂತ್ವಾ ಬಹುವರ್ಷೋಷಿತೋ ವನೇ |
ತಸ್ಯ ನಿಷ್ಕೃತಿಮಾಧತ್ತ ನ ಹ್ಯಸೌ ಯಜ್ಞಸಂವಿಧಿಃ ॥16॥

ಯಮಧರ್ಮನು ಜಿಂಕೆಯಾಗಿ ಅನೇಕ ವರ್ಷಗಳಿಂದ ಆ ಕಾಡಿನಲ್ಲಿ ವಾಸ ಮಾಡುತ್ತಿದ್ದನು. ಅವನು ಆ ಜಿಂಕೆಯ ರೂಪವನ್ನು ಕಳೆದುಕೊಂಡು ನಿಜರೂಪವನ್ನು ಹೊಂದಿದನು. ಸತ್ಯನು ಮಾಡುವ ಯಜ್ಞದ ವಿಧಿಯು ಸಮೀಚೀನವಾಗಿರುವುದಿಲ್ಲ. ಅವಿಧಿಯಿಂದ ಮಾಡಿದ ಯಜ್ಞವು ಪುಣ್ಯಹ್ರಾಸಕ್ಕೆ ಕಾರಣವಾಗಿದೆ. ಇವನು ಮಂತ್ರವೇ ಇಲ್ಲದೆ ಪತ್ನಿಯನ್ನು ಕೂಡಿಕೊಂಡು ಒಂದು ಪಕ್ಷಿಹೋಮವನ್ನು ಮಾಡಿದ್ದಾನೆ. ಹಿಂಸೆಯಲ್ಲಿ ಇವನ ಮನಸ್ಸು ಲಗ್ನವಾಗಿದೆ. ಇವನ ಯಜ್ಞವು ಸಾಧುವಾದದಲ್ಲ ಎಂದು ಜಿಂಕೆಯ ರೂಪದ ಯಮಧರ್ಮನು ಭಾವಿಸಿದನು.

ತಸ್ಯ ತೇನ ತು ಭಾವೇನ ಮೃಗಹಿಂಸಾತ್ಮನಸ್ತದಾ |
ತಪೋ ಮಹತ್ ಸಮುಚ್ಛಿನ್ನಂ ತಸ್ಮಾದ್ಧಿಂಸಾ ನ ಯಜ್ಞಿಯಾ ॥17॥

ಸತ್ಯ ಋಷಿಯು ಮೃಗಹಿಂಸೆಯು ಅಧರ್ಮ ಎಂಬ ಬುದ್ಧಿಯಿಂದ ತನ್ನ ಶ್ರೇಷ್ಠವಾದ ತಪಸ್ಸನ್ನು ಕಳೆದುಕೊಂಡನು. ಆದ್ದರಿಂದ ಯಾಜ್ಞಿಯ ಹಿಂಸಾ ಎನ್ನುವುದು ಧರ್ಮಸಾಧನವೇ ಆಗಿದೆ. ಧರ್ಮಸಾಧನವಾದ ಹಿಂಸೆಯನ್ನು ಹಿಂಸೆ ಎಂದು ತಿಳಿಯಬಾರದು. ಹಾಗೆ ತಿಳಿದ ಕಾರಣ ಸತ್ಯಋಷಿಯ ತಪಸ್ಸು ಕ್ಷಯ ಹೊಂದಿತು.

ತತಸ್ತಂ ಭಗವಾನ್ ಧರ್ಮೋ ಯಜ್ಞಂ ಯಾಜಯತ ಸ್ವಯಮ್ |
ಸಮಾಧಾನಂ ಚ ಭಾರ್ಯಾಯಾ ಲೇಭೇ ಸ ತಪಸಾ ಪರಮ್ ॥18॥

ಬಳಿಕ ಮೃಗರೂಪಿಯಾದ ಯಮಧರ್ಮನೇ ಪ್ರತ್ಯಕ್ಷನಾಗಿ ನಿಂತು ಸತ್ಯನಿಂದ ಯಾಜ್ಞೀಯ ಪಶು ಆಲಂಬನವನ್ನು ಮಾಡಿಸಿ ಯಜ್ಞವನ್ನು ಮಾಡಿಸಿದನು. ಸತ್ಯನು ತಪಶ್ಚರ್ಯದಿಂದಲೇ ಹೆಚ್ಚಿನ ಸಮಾಧಾನವನ್ನು ಪಡೆದನು. ಅವನ ಪತ್ನಿಯಾದ ಪುಷ್ಕರಚಾರಿಣಿಯು ಸಮಾಧಾನವನ್ನು ಹೊಂದಿದಳು.
ಅಹಿಂಸಾ ಸಕಲೋ ಧರ್ಮೋ ಹಿಂಸಾ ಯಜ್ಞೇ ಸಮಾಹಿತಾ |
ಸತ್ಯಂ ತೇಽಹಂ ಪ್ರವಕ್ಷ್ಯಾಮಿ ಯೋ ಧರ್ಮಃ ಸತ್ಯವಾದಿನಾಮ್ ॥19॥
ಅಹಿಂಸೆಯು ಎಲ್ಲರಿಗೂ ಸಂಬಂಧಿಸಿದ ಧರ್ಮವಾಗಿದೆ. ಆದರೆ ಯಜ್ಞದಲ್ಲಿ ಹಿಂಸೆಯು ಧರ್ಮವೇ ಆಗಿದೆ. ನಿನಗೆ ಸತ್ಯವಾದಿಗಳ ಧರ್ಮವು ಯಾವುದೋ ಅದನ್ನೇ ಸತ್ಯವಾಗಿ ಹೇಳಿದ್ದೇನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ
ಅವಿಧಿಕೃತಯಜ್ಞನಿಂದಾ ನಾಮ
ಸಪ್ತಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಟನೆಯ ಅಧ್ಯಾಯ
ಭೀಷ್ಮರು ಧರ್ಮಜನಿಗೆ ಧರ್ಮಾಚರಣೆಯ ಮಹತ್ವವನ್ನು ಬೋಧಿಸಿದುದು.
ಯುಧಿಷ್ಠಿರಃ
ಕಥಂ ಭವತಿ ಪಾಪಾತ್ಮಾ ಕಥಂ ಧರ್ಮಂ ಕರೋತಿ ವಾ |
ಕೇನ ನಿರ್ವೇದಮಾದತ್ತೇ ಮೋಕ್ಷಂ ವಾ ಕೇನ ಗಚ್ಛತಿ ॥1॥
ಪಿತಾಮಹನೇ, ಮನುಷ್ಯನು ಪಾಪಿಷ್ಠನಾಗುವುದು ಹೇಗೆ? ಅವನ ಬುದ್ಧಿಯು ಧರ್ಮದಲ್ಲಿ ಪ್ರವೃತ್ತಿಯನ್ನು ಹೊಂದುವುದು ಹೇಗೆ? ಅವನಿಗೆ ವೈರಾಗ್ಯಕ್ಕೆ ಯಾವುದು ಕಾರಣ? ಮೋಕ್ಷಕ್ಕೆ ಹೇಗೆ ಹೋಗುತ್ತಾನೆ? ಇವುಗಳಿಗೆ ಉತ್ತರಿಸು.
ಭೀಷ್ಮಃ
ವಿದಿತಾಃ ಸರ್ವಧರ್ಮಾಸ್ತೇ ಸ್ಥಿತ್ಯರ್ಥಮನುಪೃಚ್ಛಸಿ |
ಶೃಣು ಮೋಕ್ಷಂ ಸನಿರ್ವೇದಂ ಪಾಪಂ ಧರ್ಮಂ ಚ ಮೂಲತಃ ॥2॥
ಕುಮಾರನೇ, ನಿನಗೆ ತಿಳಿಯದ ಧರ್ಮದ ನಿರ್ಣಯವಿಲ್ಲ. ಆದರೂ ನಿನ್ನ ಮನಸ್ಸಿನ ನಿಶ್ಚಯವನ್ನು ದೃಢೀಕರಿಸಿಕೊಳ್ಳಲು ನನ್ನನ್ನು ಕೇಳುತ್ತಿರುವಿ. ನೀನು ಕೇಳಿದ ನಾಲ್ಕು ವಿಷಯಗಳನ್ನು ವಿಸ್ತರಿಸುತ್ತೇನೆ, ಕೇಳು.
ವಿಜ್ಞಾನಾರ್ಥಂ ಹಿ ಪಂಚಾನಾಮಿಚ್ಛಾ ಪೂರ್ವಂ ಪ್ರವರ್ತತೇ |
ಪ್ರಾಪ್ಯ ತಾನ್ ಜಾಯತೇ ಕಾಮೋ ದ್ವೇಷೋ ವಾ ಭರತರ್ಷಭ ॥3॥
ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದರಲ್ಲಿ ಯಾವುದು ಇಂದ್ರಿಯ ಗೋಚರವಾದರೂ ಕೂಡಲೇ ಆಸೆಯು ಅದರ ಬೆನ್ನಿನ ಹಿಂದೆ ಓಡುತ್ತದೆ. ಆಸೆ ಉಂಟಾದ ಮೇಲೆ ಅದರಲ್ಲಿ ಕಾಮವೋ ಅಥವಾ ದ್ವೇಷವೋ ಹುಟ್ಟುತ್ತದೆ.
ತತಸ್ತದರ್ಥಂ ಯತತೇ ಕರ್ಮ ಚಾರಭತೇ ಪುನಃ |
ಇಷ್ಟಾನಾಂ ರೂಪಗಂಧಾನಾಮಭ್ಯಾಸಂ ಚ ಚಿಕೀರ್ಷತಿ ॥4॥
ಅದರ ಮೇಲೆ ಹುಟ್ಟಿದ ಇಚ್ಛಾ-ದ್ವೇಷಗಳನ್ನು ತೀರಿಸಿಕೊಳ್ಳಲು ಮನುಷ್ಯನು ಕಷ್ಟದಿಂದ ಕರ್ಮಗಳನ್ನು ಆಚರಿಸುತ್ತಾನೆ. ರೂಪ-ರಸ-ಗಂಧಗಳನ್ನು ಅನುಭವಿಸಬೇಕೆಂದು ತವಕ ಪಡುತ್ತಾನೆ.
ತತೋ ರಾಗಃ ಪ್ರಭವತಿ ದ್ವೇಷಶ್ಚ ತದನಂತರಮ್ |
ತತೋ ಲೋಭಃ ಪ್ರಭವತಿ ಮೋಹಶ್ಚ ತದನಂತರಮ್ ॥5॥
ಇದರಿಂದ ರಾಗವು ಉತ್ಪನ್ನವಾಗುತ್ತದೆ. ನಂತರ ಕ್ರಮವಾಗಿ ದ್ವೇಷ, ಮೋಹ, ಲೋಭ ಒಂದರ ಬಳಿಕ ಒಂದು ತಲೆದೋರುತ್ತವೆ.
ಲೋಭಮೋಹಾಭಿಭೂತಸ್ಯ ರಾಗದ್ವೇಷಾನ್ವಿತಸ್ಯ ಚ |
ನ ಧರ್ಮೇ ಜಾಯತೇ ಬುದ್ಧಿರ್ವ್ಯಾಜಾದ್ ಧರ್ಮಂ ಕರೋತಿ ಚ ॥6॥
ಈ ದುರ್ಗುಣಗಳಿಗೆ ವಶನಾದವನ ಬುದ್ಧಿಯು ಧರ್ಮದಲ್ಲಿ ಪ್ರವೃತ್ತಿಯನ್ನು ಹೊಂದದು. ಲೋಭ-ಮೋಹ-ರಾಗ-ದ್ವೇಷಗಳಿಂದ ಕೂಡಿದವನು ಧರ್ಮಶೀಲನಾಗಲಾರನು.
ವ್ಯಾಜೇನ ಚರತೋ ಧರ್ಮಮರ್ಥವ್ಯಾಜೋಽಪಿ ರೋಚತೇ |
ವ್ಯಾಜೇನ ಸಿದ್ಧ್ಯಮಾನೇಷು ಧನೇಷು ಕುರುನಂದನ ॥7॥
ತತ್ರೈವ ಕುರುತೇ ಬುದ್ಧಿಂ ತತಃ ಪಾಪಂ ಚಿಕೀರ್ಷತಿ |
ಸುಹೃದ್ಭಿರ್ವಾರ್ಯಮಾಣೋಽಪಿ ಪಂಡಿತೈಶ್ಚಾಪಿ ಭಾರತ ॥8॥
ಇಂತಹ ಬುದ್ಧಿಯಿಂದ ಕೂಡಿದವರು ಧರ್ಮಾಚರಣೆಯನ್ನು ಮಾಡಿದರೂ ಒಂದು ನೆಪವನ್ನಿಟ್ಟುಕೊಂಡೇ ಮಾಡುತ್ತಾರೆ. ಹೀಗೆ ಒಂದು ನಿಮಿತ್ತದಿಂದ ಧರ್ಮಾರ್ಥಗಳನ್ನು ಬಯಸುವವನ ಬುದ್ಧಿಯು ಪಾಪಕರ್ಮದಲ್ಲೇ ಆಸಕ್ತಿಯನ್ನು ಹೊಂದಿ ಪಾಪವನ್ನೇ ಮಾಡಿಸುತ್ತದೆ. ವಿದ್ವಾಂಸರು, ಸ್ನೇಹಿತರು ಬೇಡವೆಂದು ತಡೆದರೂ ಅವನು ಕೇಳುವುದಿಲ್ಲ.
ಉತ್ತರಂ ನ್ಯಾಯಸಂಬದ್ಧಂ ಬ್ರುವೀತಿತಿ ವಿಚೋದಿತಃ |
ಅಧರ್ಮಸ್ತ್ರಿವಿಧಸ್ತಸ್ಯ ವರ್ಧತೇ ರಾಗಮೋಹಜಃ ॥9॥
ಯಾರಾದರೂ ಇಂತಹ ದುಷ್ಕರ್ಮವನ್ನು ಮಾಡಬೇಡ ಎಂದು ಹೇಳಿದರೆ ಮೇಲ್ನೋಟಕ್ಕೆ ನ್ಯಾಯವೆಂದು ತೋರುವಂಥ ಕುತರ್ಕನ್ಯಾಯಗಳಿಂದ ಕೂಡಿದ ಮಾತುಗಳನ್ನು ತನ್ನ ಶಾಸ್ತ್ರಕ್ಕೆ ಅನುಕೂಲವಾಗುವಂತೆ ಹೇಳಿ ಬಾಯಿ ಮುಚ್ಚಿಸುತ್ತಾನೆ. ಅವನ

ಪಾಪ ಪ್ರವೃತ್ತಿಯು ರಾಗ-ಮೋಹಗಳಿಂದ ಮೂರು ಮಾರ್ಗಗಳಿಂದ ವೃದ್ಧಿಯನ್ನು ಹೊಂದುತ್ತಲೇ ಇರುತ್ತದೆ.
ಪಾಪಂ ಚಿಂತಯತೇ ಚೈವ ಪ್ರಬ್ರವೀತಿ ಕರೋತಿ ಚ |
ತಸ್ಯಾಧರ್ಮಪ್ರವೃತ್ತಸ್ಯ ದೋಷಾನ್ ಪಶ್ಯಂತಿ ಸಾಧವಃ ॥10॥
ಅವನ ಮನಸ್ಸು ಪಾಪವನ್ನೇ ಚಿಂತಿಸುತ್ತಿರುತ್ತದೆ. ಬಾಯಿಂದಲೂ ಪಾಪವನ್ನೇ ಆಡುತ್ತಾನೆ. ಕಾರ್ಯದಿಂದಲೂ ಪಾಪವನ್ನೇ ನಡೆಸುತ್ತಾನೆ. ಸಾಧುಗಳು ಅಂತಹವನ ದೋಷಗಳನ್ನು ಕಂಡುಕೊಂಡು ದೂರವಾಗುತ್ತಾರೆ.
ಏಕಶೀಲಾಶ್ಚ ಮಿತ್ರತ್ವಂ ಭಜಂತೇ ಪಾಪಕರ್ಮಿಣಃ |
ಸ ನೇಹ ಸುಖಮಾಪ್ನೋತಿ ಕುತ ಏವ ಪರತ್ರ ವೈ ॥11॥
ಅವನಿಗೆ ಸಮಾನಶೀಲರಾದ ಪಾಪಕರ್ಮಿಗಳು ಕೆಲವರು ಅವನ ಜೊತೆಗೆ ಮಿತ್ರತ್ವವನ್ನು ಹೊಂದಿ, ಅವನನ್ನು ಅದೇ ಮಾರ್ಗದಲ್ಲಿ ಪ್ರಚೋದಿಸುತ್ತಾರೆ. ಅವನಿಗೆ ಇಹಲೋಕದಲ್ಲೇ ಸುಖ ಸಿಗದು. ಇನ್ನು ಪರಲೋಕದಲ್ಲಿ ಸುಖವೆಲ್ಲಿಯದು?
ಏವಂ ಭವತಿ ಪಾಪಾತ್ಮಾ ಧರ್ಮಾತ್ಮಾನಂ ತು ಮೇ ಶೃಣು |
ಯಥಾ ಕುಶಲಧರ್ಮಾ ಸ ಕುಶಲಂ ಪ್ರತಿಪದ್ಯತೇ ॥12॥
ಈ ರೀತಿಯಾಗಿ ಪಾಪಾತ್ಮನ ಮಾರ್ಗವನ್ನು ತಿಳಿಸಿದ್ದೇನೆ. ಧರ್ಮಾತ್ಮನ ರೀತಿಯನ್ನು ತಿಳಿಸುತ್ತೇನೆ, ಕೇಳು. ಮತ್ತೊಬ್ಬರ ಕುಶಲವನ್ನು ಚಿಂತಿಸುವ ಧರ್ಮಾತ್ಮನು ತಾನೂ ಕ್ಷೇಮವನ್ನು ಹೊಂದುತ್ತಾನೆ.
ಯ ಏತಾನ್ ಪ್ರಜ್ಞಯಾ ದೋಷಾನ್ ಪೂರ್ವಮೇವಾನುಪಶ್ಯತಿ |
ಕುಶಲಃ ಸುಖದುಃಖಾನಾಂ ಸಾಧೂಂಶ್ಚಾಪ್ಯುಪಸೇವತೇ ॥13॥
ತಸ್ಯ ಸಾಧುಸಮಾಚಾರಾದಭ್ಯಾಸಾಚ್ಚೈವ ವರ್ಧತೇ |
ಪ್ರಜ್ಞಾ ಧರ್ಮೇ ಚ ರಮತೇ ಧರ್ಮಂ ಚೈವೋಪಜೀವತಿ ॥14॥
ಯಾವನು ತನ್ನ ಜಾಣತನದಿಂದ ಹಿಂದೆ ಹೇಳಿದ ದೋಷಗಳನ್ನು ಮೊದಲೇ ತಿಳಿದುಕೊಳ್ಳುತ್ತಾನೋ ಅವನು ಸುಖ-ದುಃಖಗಳನ್ನು ವಿಮರ್ಶಿಸಿದುದರಿಂದ, ಸಾಧುಗಳನ್ನು ಸೇವಿಸುವುದರಿಂದಲೂ ಧರ್ಮವು ಅಭಿವೃದ್ಧಿಯನ್ನು ಹೊಂದುತ್ತದೆ. ಅವನ ಬುದ್ಧಿಯು ಧರ್ಮದಲ್ಲಿಯೇ ನಿರತವಾಗಿರುತ್ತದೆ. ಧರ್ಮವನ್ನೇ ನಂಬಿ ಜೀವನವನ್ನು ನಡೆಸುತ್ತಾನೆ.
ಸೋಽಥ ಧರ್ಮಾದವಾಪ್ತೇಷು ಧನೇಷು ಕುರುತೇ ಮನಃ |
ತಸ್ಯೈವ ಸಿಂಚತೇ ಮೂಲಂ ಗುಣಾನ್ ಪಶ್ಯತಿ ಯತ್ರ ವೈ ॥15॥
ಅವನು ಧನವನ್ನು ಬಯಸಿದರೂ ಧರ್ಮಮಾರ್ಗದಿಂದ ಬರುವ ಧನವನ್ನೇ ಬಯಸುತ್ತಾನೆ. ಎಲ್ಲಿ ಗುಣಗಳು ಕಾಣುತ್ತವೋ ಆ ಗುಣಗಳನ್ನು ಧರ್ಮದ ಬುದ್ಧಿಯಿಂದ ಮತ್ತಷ್ಟು ಅಭಿವೃದ್ಧಿ ಪಡಿಸಿಕೊಳ್ಳುತ್ತಾನೆ.
ಧರ್ಮಾತ್ಮಾ ಭವತಿ ಹ್ಯೇವಂ ಮಿತ್ರಂ ಚ ಲಭತೇ ಶುಭಮ್ |
ಸ ಮಿತ್ರಧನಲಾಭಾತ್ತು ಪ್ರೇತ್ಯ ಚೇಹ ಚ ನಂದತಿ ॥16॥
ಧರ್ಮಾತ್ಮನಾದವನು ಒಳ್ಳೆಯ ಮಿತ್ರರನ್ನೇ ಹೊಂದುತ್ತಾನೆ. ಒಳ್ಳೆಯ ಮಿತ್ರರನ್ನು ಧರ್ಮಾರ್ಜಿತವಾದ ಧನವನ್ನು, ಸತ್ಸಂತಾನವನ್ನು ಪಡೆಯುವುದರಿಂದ ಇಹ- ಪರಲೋಕಗಳಲ್ಲಿಯೂ ಆನಂದವನ್ನು ಪಡೆಯುತ್ತಾನೆ.
ಶಬ್ದೇ ಸ್ಪರ್ಶೇ ತಥಾ ರೂಪೇ ರಸೇ ಗಂಧೇ ಚ ಭಾರತ |
ಪ್ರಭುತ್ವಂ ಲಭತೇ ಜಂತುರ್ಧರ್ಮಸ್ಯೈತತ್ಫಲಂ ವಿದುಃ ॥17॥
ಹಿಂದೆ ತಿಳಿಸಿದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಲ್ಲಿ ಯಾವನು ಪ್ರಭುತ್ವವನ್ನು ಸಂಪಾದಿಸಿಕೊಂಡಿರುತ್ತಾನೋ ಅವನು ಧರ್ಮದ ಫಲವನ್ನು ಹೊಂದಿದ್ದಾನೆ ಎಂಬುದೇ ನಿಶ್ಚಯವು.
ಸ ಧರ್ಮಸ್ಯ ಫಲಂ ಲಬ್ಧ್ವಾ ನ ತೃಪ್ಯತಿ ಯುಧಿಷ್ಠಿರ |
ಅತೃಪ್ಯಮಾಣೋ ನಿರ್ವೇದಮಾದತ್ತೇ ಜ್ಞಾನಚಕ್ಷುಷಾ ॥18॥
ಅವನು ಧರ್ಮದ ಫಲವನ್ನು ಹೊಂದಿ ಶಬ್ದಾದಿ ವಿಷಯಗಳನ್ನು ಹೊಂದಿದರೂ ಅದಕ್ಕೆ ಮನಸೋಲುವುದಿಲ್ಲ. ಧರ್ಮದಿಂದ ತನಗುಂಟಾದ ಫಲಕ್ಕೆ ತೃಪ್ತಿಗೊಳ್ಳದೆ ಜ್ಞಾನದೃಷ್ಟಿಯಿಂದ ವೈರಾಗ್ಯವನ್ನೇ ಅನುಸರಿಸುತ್ತಾನೆ.
ಪ್ರಜ್ಞಾಚಕ್ಷುರ್ಯದಾ ಕಾಮೇ ದೋಷಮೇವಾನುಪಶ್ಯತಿ |
ವಿರಜ್ಯತೇ ತದಾ ಕಾಮಾನ್ನ ಚ ಧರ್ಮಂ ವಿಮುಂಚತಿ ॥19॥
ರಸ-ಗಂಧಾದಿಗಳಲ್ಲಿ ತೃಪ್ತಿಯನ್ನು ಹೊಂದದೆ ಅದರಲ್ಲಿ ದೋಷಗಳನ್ನೇ ಕಾಣುತ್ತಾ ಶಬ್ದಾದಿಗಳಲ್ಲಿ ವಿರಕ್ತನಾದುದರಿಂದ ಅವನು ಕಾಮನೆಗಳಿಂದಲೂ ಮುಕ್ತನಾಗುತ್ತಾನೆ. ಅವನು ಧರ್ಮಮಾರ್ಗದಿಂದ ವಂಚಿತನಾಗುವುದಿಲ್ಲ.
ಸರ್ವತ್ಯಾಗೇ ಚ ಯತತೇ ದೃಷ್ಟ್ವಾ ಲೋಕಂ ಕ್ಷಯಾತ್ಮಕಮ್ |
ತತೋ ಮೋಕ್ಷಾಯ ಯತತೇ ನಾನುಪಾಯಾದುಪಾಯತಃ ॥20॥
ಲೋಕವೆಲ್ಲವೂ ನಶಿಸುವ ಸ್ವಭಾವವುಳ್ಳದ್ದು ಎಂದು ತಿಳಿದ ಆ ಜ್ಞಾನಿಯು ಎಲ್ಲವನ್ನೂ ಬಿಡುವುದರಲ್ಲಿಯೇ ಪ್ರಯತ್ನವನ್ನು ಮಾಡುತ್ತಾನೆ. ಅವನು ಮೋಕ್ಷಕ್ಕೆ ಯಾವುದು ಪ್ರತಿಬಂಧಕವೋ, ಉಪಾಯವಲ್ಲವೋ ಅದೆಲ್ಲವನ್ನೂ ಬಿಟ್ಟು ಮೋಕ್ಷೋಪಾಯವನ್ನು ಮಾತ್ರ ಹೊಂದಲು ಪ್ರಯತ್ನಿಸುತ್ತಾನೆ.
ಶನೈರ್ನಿರ್ವೇದಮಾದತ್ತೇ ಪಾಪಂ ಕರ್ಮ ಜಹಾತಿ ಚ |
ಧರ್ಮಾತ್ಮಾ ಚೈವ ಭವತಿ ಮೋಕ್ಷಂ ಚ ಲಭತೇ ಪರಮ್ ॥21॥
ಕ್ರಮವಾಗಿ ಮೊದಲು ಪಾಪಗಳನ್ನು ದೂರ ಮಾಡಿಕೊಂಡು ವಿರಕ್ತಿಯನ್ನು ಆಶ್ರಯಿಸಿ ಬಳಿಕ ಮೋಕ್ಷವನ್ನು ಹೊಂದುತ್ತಾನೆ.
ಏತತ್ತೇ ಕಥಿತಂ ತಾತ ಯನ್ಮಾಂ ತ್ವಂ ಪರಿಪೃಚ್ಛಸಿ |
ಪಾಪಂ ಧರ್ಮಂ ತಥಾ ಮೋಕ್ಷಂ ನಿರ್ವೇದಂ ಚೈವ ಭಾರತ ॥22॥

ಕುಮಾರನೇ, ನೀನು ಬಯಸಿದಂತೆ ಪಾಪವನ್ನು, ಧರ್ಮವನ್ನು, ವೈರಾಗ್ಯವನ್ನು, ಮೋಕ್ಷವನ್ನು ಹೊಂದುವ ಮಾರ್ಗಗಳನ್ನು ನಿನಗೆ ವಿವರಿಸಿದ್ದೇನೆ.
ತಸ್ಮಾದ್ಧರ್ಮೇ ಪ್ರವರ್ತೇಥಾಃ ಸರ್ವಾವಸ್ಥಂ ಯುಧಿಷ್ಠಿರ |
ಧರ್ಮೇ ಸ್ಥಿತಾನಾಂ ಕೌಂತೇಯ ಸಿದ್ಧಿರ್ಭವತಿ ಶಾಶ್ವತೀ ॥23॥
ಆದ್ದರಿಂದ ನೀನು ಸರ್ವಾವಸ್ಥೆಗಳಲ್ಲಿಯೂ ಪ್ರವೃತ್ತಿಯನ್ನು ಹೊಂದು. ಧರ್ಮ ಮಾರ್ಗದಲ್ಲಿ ನಡೆಯುವವರಿಗೆ ಶಾಶ್ವತವಾದ ಸಿದ್ಧಿಯು ಉಂಟಾಗುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂಬತ್ತನೆಯ ಅಧ್ಯಾಯ
ಮೋಕ್ಷೋಪಾಯಗಳನ್ನು ಧರ್ಮರಾಜನಿಗೆ ಭೀಷ್ಮರು ಉಪದೇಶಿಸಿದುದು.
ಯುಧಿಷ್ಠಿರಃ
ಮೋಕ್ಷಃ ಪಿತಾಮಹೇನೋಕ್ತ ನಾನುಪಾಯಾದುಪಾಯತಃ |
ತಮುಪಾಯಂ ಯಥಾನ್ಯಾಯಂ ಶ್ರೋತುಮಿಚ್ಛಾಮಿ ಭಾರತ ॥1॥
ಪಿತಾಮಹನೇ, ನೀನು ಮೋಕ್ಷೋಪಾಯಗಳನ್ನು ಉಪದೇಶಿಸಿರುತ್ತಿ. ಯಾವ ಉಪಾಯದಿಂದ ಮೋಕ್ಷಕ್ಕಾಗಿ ಪ್ರಯತ್ನವನ್ನು ಮಾಡುತ್ತಾನೆ? ಯಾವ ಉಪಾಯದಿಂದ ಪ್ರಾಮಾಣಿಕನು ಮೋಕ್ಷಕ್ಕೆ ಹೋಗುತ್ತಾನೆ ಎನ್ನುವುದನ್ನು ನಾನು ನಿನ್ನಿಂದ ಕೇಳಲು ಬಯಸುತ್ತೇನೆ.
ಭೀಷ್ಮಃ
ತ್ವಯ್ಯೇವೈತನ್ಮಹಾಪ್ರಾಜ್ಞ ಯುಕ್ತಂ ನಿಪುಣದರ್ಶನಮ್ |
ಯದುಪಾಯೇನ ಸರ್ವಾರ್ಥಾನ್ನಿತ್ಯಂ ಮೃಗಯಸೇಽನಘ ॥2॥
ಧರ್ಮಪುತ್ರನೇ, ನೀನು ಯಾವಾಗಲೂ ಉಪಾಯದಿಂದ ಸಮಸ್ತ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿಕೊಳ್ಳುವವನು. ಆದ್ದರಿಂದ ಇಂತಹ ಪ್ರಶ್ನೆಯು ನಿನ್ನಂಥವರಿಗೆ ಯೋಗ್ಯವೇ ಆಗಿದೆ.
ಕರಣೇ ಘಟಸ್ಯ ಯಾ ಬುದ್ಧಿರ್ಘಟೋತ್ಪತ್ತೌ ನ ಸಾನಘ |
ಏವಂ ಧರ್ಮಾಭ್ಯುಪಾಯೇಷು ನಾನ್ಯದ್ಧರ್ಮೇಷು ಕಾರಣಮ್ ॥3॥
ಯಾವ ವ್ಯಕ್ತಿಗೆ ಒಂದು ಮಡಿಕೆಯನ್ನು ಮಾಡುವ ಉದ್ದೇಶದಲ್ಲಿ ಯಾವ ಬುದ್ಧಿ ಇದೆಯೋ ಅರ್ಥಾತ್ ಮಡಿಕೆಯನ್ನು ಮಾಡಲು ದಂಡ, ಚಕ್ರ, ಮೃತ್ಪಿಂಡಗಳನ್ನು ಸಂಪಾದಿಸಲು ಯಾವ ಬುದ್ಧಿಯಿದೆಯೋ ಆ ಬುದ್ಧಿಯು ಘಟೋತ್ಪತ್ತಿಯಾದ ನಂತರ ಇರುವುದಿಲ್ಲ. ಘಟ ಹುಟ್ಟಿದ ಮೇಲೆ ಮತ್ತೆ ಆ ಘಟವನ್ನು ನಿರ್ಮಿಸಲು ಪ್ರಯತ್ನಿಸುವುದಿಲ್ಲ. ಹೊರತು ಇನ್ನೊಂದು ಘಟವನ್ನು ನಿರ್ಮಾಣ ಮಾಡಲು ಪ್ರಯತ್ನಿಸುತ್ತಾನೆ, ಪ್ರವೃತ್ತಿಯನ್ನು ಹೊಂದುತ್ತಾನೆ. ಇದರಂತೆ ಧರ್ಮಸಾಧನೆಗಳಲ್ಲಿ ಪ್ರಯತ್ನವನ್ನು ಮಾಡಬೇಕು. ಒಂದು ಧರ್ಮವನ್ನು ಸಿದ್ಧಿಸಿಕೊಂಡ ಬಳಿಕ ಇನ್ನೊಂದು ಧರ್ಮಕ್ಕೆ ಪ್ರಯತ್ನವನ್ನು ಮಾಡಬೇಕು.
ಪೂರ್ವೇ ಸಮುದ್ರೇ ಯಃ ಪಂಥಾ ನ ಸ ಗಚ್ಛತಿ ಪಶ್ಚಿಮಮ್ |
ಏಕಃ ಪಂಥಾ ಹಿ ಮೋಕ್ಷಸ್ಯ ತನ್ಮೇ ವಿಸ್ತರತಃ ಶೃಣು ॥4॥
ಪೂರ್ವಸಮುದ್ರಕ್ಕೆ ಹೋಗುವ ದಾರಿಯು ಪಶ್ಚಿಮ ಸಮುದ್ರಕ್ಕೆ ಮನುಷ್ಯನನ್ನು ಎಂದೂ ಕರೆದೊಯ್ಯದು. ಅದರಂತೆ ಮೋಕ್ಷಕ್ಕೆ ಸಾಗುವ ಮಾರ್ಗವು ಒಂದೇ ಇದೆ. ಅದನ್ನು ವಿಸ್ತಾರವಾಗಿ ಹೇಳುತ್ತೇನೆ, ಕೇಳು.
ಕ್ಷಮಯಾ ಕ್ರೋಧಮುಚ್ಛಿಂದ್ಯಾತ್ ಕಾಮಂ ಸಂಕಲ್ಪವರ್ಜನಾತ್ |
ಸತ್ತ್ವಸಂಸೇವನಾದ್ಧೀರೋ ನಿದ್ರಾಮುಚ್ಛೇತ್ತುಮರ್ಹತಿ ॥5॥
ಧೀರನು ಕ್ಷಮೆಯಿಂದ ಕೋಪವನ್ನು, ಸಂಕಲ್ಪವನ್ನು ಬಿಡುವುದರಿಂದ ಕಾಮವನ್ನು, ಸತ್ವಗುಣದ ಅಭ್ಯಾಸದಿಂದ ನಿದ್ರೆಯನ್ನು ಜಯಿಸಬೇಕು.
ಅಪ್ರಮಾದಾದ್ ಭಯಂ ರಕ್ಷೇಚ್ಛ್ವಾಸಂ ಕ್ಷೇತ್ರಜ್ಞಶೀಲನಾತ್ |
ಇಚ್ಛಾಂ ದ್ವೇಷಂ ಚ ಕಾಮಂ ಚ ಧೈರ್ಯೇಣ ವಿನಿವರ್ತಯೇತ್ ॥6॥
ಎಚ್ಚರದಿಂದ ಭಯವನ್ನು ಪರಿಹರಿಸಿಕೊಳ್ಳಬೇಕು. ಪರಮಾತ್ಮನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿಕೊಳ್ಳುವುದರಿಂದ ಶ್ವಾಸವನ್ನು ನಿಯಂತ್ರಿಸಿಕೊಳ್ಳಬೇಕು. ಅಸಂಪ್ರಜ್ಞಾತ ಸಮಾಧಿಯಿಂದ ಶ್ವಾಸೋಚ್ಛಾಸವನ್ನು ಗೆಲ್ಲಬೇಕು ಎಂದು ಭಾವ. ಇಚ್ಛಾ-ದ್ವೇಷಗಳನ್ನು ಧೈರ್ಯವೆಂಬ ಗುಣದಿಂದ ನಿಗ್ರಹಿಸಬೇಕು.
ಭ್ರಮಂ ಪ್ರಮೋಹಮಾವರ್ತಮಭ್ಯಾಸಾದ್ ವಿನಿವರ್ತಯೇತ್ |
ನಿದ್ರಾಂ ಚಾಪ್ರತಿಭಾಂ ಚೈವ ಜ್ಞಾನಾಭ್ಯಾಸೇನ ತತ್ತ್ವವಿತ್ ॥7॥
ತತ್ತ್ವಜ್ಞಾನದಿಂದ ಭ್ರಮೆ, ಮೋಹ, ಸಂದೇಹಗಳನ್ನು ಪರಿಹರಿಸಿಕೊಳ್ಳಬೇಕು. ಜ್ಞಾನಾಭ್ಯಾಸದಿಂದ ನಿದ್ರೆಯನ್ನು, ಅಪ್ರತಿಭೆಯನ್ನು ದೂರೀಕರಿಸಬೇಕು.
ಉಪದ್ರವಾಂಸ್ತಥಾ ರೋಗಾನ್ ಹಿತಜೀರ್ಣಮಿತಾಶನಾತ್ |
ಲೋಭಂ ಮೋಹಂ ಚ ಸಂತೋಷಾದ್ ವಿಷಯಾಂಸ್ತತ್ತ್ವದರ್ಶನಾತ್ ॥
ರೋಗಾದಿ ಉಪದ್ರವಗಳನ್ನು ಹಿತವಾದ ಆಹಾರ ಸೇವನೆಯಿಂದ ಹಿತವಾಗಿ ಜೀರ್ಣವಾಗುವ ಪದಾರ್ಥಗಳ ಸೇವನೆಯಿಂದ ಗೆಲ್ಲಬೇಕು.

ಲೋಭ- ಮೋಹಗಳನ್ನು ಸಂತೋಷದಿಂದಲೂ, ವಿಷಯ ಪದಾರ್ಥಗಳನ್ನು ತತ್ತ್ವದರ್ಶನದಿಂದಲೂ ಗೆಲ್ಲಬೇಕು.
ಅನುಕ್ರೋಶಾದಧರ್ಮಂ ಚ ಜಯೇದ್ಧರ್ಮಮುಪೇಕ್ಷಯಾ |
ಆಯತ್ಯಾ ಚ ಜಯೇದಾಶಾಮರ್ಥಂ ಸಂಗವಿವರ್ಜನಾತ್ ॥9॥
ಕರುಣೆಯಿಂದ ಅಧರ್ಮವನ್ನು ಜಯಿಸಬೇಕು. ಫಲಾಪೇಕ್ಷೆಯನ್ನು ತೊರೆದು ಧರ್ಮವನ್ನು ಜಯಿಸಬೇಕು. ಅಪ್ರಯತ್ನವಾಗಿ ಆಸೆಯನ್ನು ಗೆಲ್ಲಬೇಕು. ಸಂಗವನ್ನು ಬಿಡುವುದರಿಂದ ಅರ್ಥದ ತೃಷ್ಣೆಯನ್ನು ಗೆಲ್ಲಬೇಕು.
ಅನಿತ್ಯತ್ವೇನ ಚ ಸ್ನೇಹಂ ಕ್ಷುಧಂ ಯೋಗೇನ ಪಂಡಿತಃ |
ಕಾರುಣ್ಯೇನಾತ್ಮನೋ ಮಾನಂ ತೃಷ್ಣಾಂ ಚ ಪರಿತೋಷತಃ ॥10॥
ಅನಿತ್ಯವೆಂದು ತಿಳಿಯುವುದರಿಂದ ಸ್ನೇಹವನ್ನೂ, ಯೋಗಬಲದಿಂದ ಹಸಿವನ್ನೂ, ಕಾರುಣ್ಯದಿಂದ ಅಹಂಕಾರವನ್ನೂ, ನಿತ್ಯ ತೃಪ್ತಿಯಿಂದ ಅಭಿಲಾಷೆಯನ್ನು ಪರಿಹರಿಸಿಕೊಳ್ಳಬೇಕು.
ಉತ್ಥಾನೇನ ಜಯೇತ್ತಂದ್ರೀಂ ವಿತರ್ಕಂ ನಿಶ್ಚಯಾಜ್ಜಯೇತ್ |
ಮೌನೇನ ಬಹುಭಾಷ್ಯಂ ಚ ಶೌರ್ಯೇಣ ಚ ಭಯಂ ಜಯೇತ್ ॥11॥
ಚಟುವಟಿಕೆಯ ಉತ್ಥಾನದಿಂದ ಸೋಮಾರಿತನವನ್ನೂ, ನಿಶ್ಚಯಜ್ಞಾನದಿಂದ ವಿತರ್ಕವನ್ನೂ, ಮೌನದಿಂದ ವಾಚಾಳಿತನವನ್ನೂ, ಶೌರ್ಯದಿಂದ ಭಯವನ್ನು ಜಯಿಸಬೇಕು.
ಯಚ್ಛೇದ್ ವಾಙ್ಮನಸೀ ಬುದ್ಧ್ಯಾ ತಾಂ ಯಚ್ಛೇಜ್ಜ್ಞಾನಚಕ್ಷುಷಾ |
ಜ್ಞಾನಮಾತ್ಮಾ ಮಹಾನ್ ಯಚ್ಛೇತ್ತಂ ಯಚ್ಛೇತ್ ಜ್ಞಾನ ಆತ್ಮನಿ॥12॥
ಬುದ್ಧಿಯಿಂದ ಮಾತು-ಮನಸ್ಸನ್ನು ನಿಯಂತ್ರಿಸಬೇಕು. ಬುದ್ಧಿಯನ್ನು ಜ್ಞಾನ ದೃಷ್ಟಿಯಿಂದ ನಿಯಂತ್ರಿಸಿಕೊಳ್ಳಬೇಕು. ಚತುರ್ಮುಖ ಬ್ರಹ್ಮನು ಭಗವದ್ಜ್ಞಾನವನ್ನು ನೀಡುತ್ತಾನೆಂದು ಚಿಂತಿಸಬೇಕು. ಆ ಚತುರ್ಮುಖ ಬ್ರಹ್ಮನು ಜ್ಞಾನಸ್ವರೂಪಿಯಾದ ಪರಮಾತ್ಮನ ಅಧೀನನೆಂದು ಚಿಂತಿಸಬೇಕು.
ತದೇತದುಪಶಾಂತೇನ ಬೋದ್ಧವ್ಯಂ ಶುಚಿಕರ್ಮಣಾ |
ಯೋಗದೋಷಾನ್ ಸಮುಚ್ಛಿದ್ಯ ಪಂಚ ಯಾನ್ ಕವಯೋ ವಿದುಃ ॥
ಕಾಮಂ ಕ್ರೋಧಂ ಚ ಲೋಭಂ ಚ ಭಯಂ ಸ್ವಪ್ನಂ ಚ ಪಂಚಮಮ್ |
ಪರಿತ್ಯಜ್ಯ ನಿಷೇವೇತ ತಥೇಮಾನ್ ಯೋಗಸಾಧನಾನ್ ॥14॥
ಶಾಂತನಾದವನು ಪರಮಾತ್ಮನ ಜಯವೆಂಬ ಕೊನೆಯ ಸ್ಥಿತಿಯನ್ನು ಸತ್ಕರ್ಮದಿಂದಲೇ ಹೊಂದುತ್ತಾನೆ. ವಿದ್ವಾಂಸರು ಹೇಳಿರುವ ಯೋಗಸಾಧನೆಯನ್ನು ಕಾಮ-ಕ್ರೋಧ-ಲೋಭ-ಭಯ-ಸ್ವಪ್ನಗಳೆಂಬ ಐದು ದೋಷಗಳನ್ನು ಅಡಗಿಸುವುದೇ ಪರಬ್ರಹ್ಮನಲ್ಲಿ ಉಪಾಯವೆನಿಸಿದೆ. ಆ ದೋಷಗಳನ್ನು ಯೋಗಸಾಧನದಲ್ಲಿ ನಿರತನಾದವನು ತ್ಯಜಿಸಬೇಕು.
ಧ್ಯಾನಮಧ್ಯಯನಂ ದಾನಂ ಸತ್ಯಂ ಹ್ರೀರಾರ್ಜವಂ ಕ್ಷಮಾ |
ಶೌಚಮಾಹಾರತಃ ಶುದ್ಧಿರಿಂದ್ರಿಯಾಣಾಂ ಚ ಸಂಯಮಃ ॥15॥
ಏತೈರ್ವಿವರ್ಧತೇ ತೇಜಃ ಪಾಪ್ಮಾನಮಪಹಂತಿ ಚ |
ಸಿದ್ಧ್ಯಂತಿ ಚಾಸ್ಯ ಸಂಕಲ್ಪಾ ವಿಜ್ಞಾನಂ ಚ ಪ್ರವರ್ತತೇ ॥16॥
ಧ್ಯಾನ, ಅಧ್ಯಯನ, ದಾನ, ಸತ್ಯ, ಲಜ್ಜೆ, ಆರ್ಜವ, ಕ್ಷಮೆ, ಶೌಚ, ಆಹಾರ ಶುದ್ಧಿ, ಇಂದ್ರಿಯಗಳ ನಿಗ್ರಹ- ಇವುಗಳಿಂದ ಮನುಷ್ಯರಲ್ಲಿ ತೇಜಸ್ಸು ಅಭಿವೃದ್ಧಿಯನ್ನು ಹೊಂದುತ್ತದೆ. ಇವುಗಳು ಪಾಪವನ್ನೂ ಪರಿಹರಿಸುತ್ತವೆ. ಇವುಗಳಿಂದ ಮನುಷ್ಯನ ಸಂಕಲ್ಪಗಳೆಲ್ಲ ಸಿದ್ಧಿಸುತ್ತವೆ. ಭಗವದ್ಜ್ಞಾನವೂ ಅಭಿವೃದ್ಧಿಯನ್ನು ಹೊಂದುತ್ತದೆ.
ಧೂತಪಾಪಃ ಸ ತೇಜಸ್ವೀ ಲಘ್ವಾಹಾರೋ ಜಿತೇಂದ್ರಿಯಃ |
ಕಾಮಕ್ರೋಧೌ ವಶೇ ಕೃತ್ವಾ ನಿನೀಷೇದ್ ಬ್ರಹ್ಮಣಃ ಪದಮ್ ॥17॥
ಯಾವನು ಪಾಪಗಳನ್ನೆಲ್ಲ ಪರಿಹರಿಸಿಕೊಂಡು, ತೇಜಸ್ಸನ್ನು ಮಿತಿಗೊಳಿಸಿ, ಮಿತಾಹಾರದಿಂದ, ಇಂದ್ರಿಯನಿಗ್ರಹದಿಂದ ಕಾಮ-ಕ್ರೋಧಗಳನ್ನು ದೂರೀಕರಿಸಿದ್ದಾನೋ ಅವನಿಗೆ ಭಗವಂತನಲ್ಲಿ ದೃಢವಾದ ಬುದ್ಧಿಯು ಉಂಟಾಗುತ್ತದೆ.
ಅಮೂಢತ್ವಮಸಂಗತ್ವಂ ಕಾಮಕ್ರೋಧವಿವರ್ಜನಮ್ |
ಅದೈನ್ಯಮನುದೀರ್ಣತ್ವಮನುದ್ವೇಗೋ ವ್ಯವಸ್ಥಿತಿಃ॥18॥
ಧರ್ಮಪುತ್ರನೇ, ಮೂರ್ಖತನ ಇಲ್ಲದಿರುವಿಕೆ, ದುಷ್ಟಸಂಗವಿಲ್ಲದಿರುವಿಕೆ, ಕಾಮ- ಕ್ರೋಧಗಳ ರಾಹಿತ್ಯ, ದೈನ್ಯವಿಲ್ಲದಿರುವಿಕೆ, ಗರ್ವವಿಲ್ಲದಿರುವಿಕೆ, ಉದ್ವೇಗ ಇಲ್ಲದಿರುವಿಕೆ, ನಿಶ್ಚಿಂತತೆ ಇವೆಲ್ಲವನ್ನೂ ಸಾಧಿಸಬೇಕು.
ಏಷ ಮಾರ್ಗೋ ಹಿ ಮೋಕ್ಷಸ್ಯ ಪ್ರಸನ್ನೋ ವಿಮಲಃ ಶುಚಿಃ |
ತಥಾ ವಾಕ್ಕಾಯಮನಸಾಂ ನಿಯಮಃ ಕಾಮತೋನ್ಯಥಾ ॥19॥
ಇವೇ ಮೋಕ್ಷಕ್ಕೆ ಮಾರ್ಗಗಳು. ಈ ಮಾರ್ಗವು ಶುದ್ಧವಾದುದು, ಪವಿತ್ರವಾದುದು. ಮನೋ-ವಾಕ್-ಕಾಯಗಳನ್ನು ಕಾಮನೆಗಳ ಕಡೆ ಹರಿಬಿಡದೆ ಸನ್ಮಾರ್ಗದ ಕಡೆ ನಡೆಸುವುದೇ ಮೋಕ್ಷಕ್ಕೆ ಪ್ರಧಾನವೆನಿಸಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ನವಾಧಿಕಶತತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹತ್ತನೆಯ ಅಧ್ಯಾಯ
ಭೂತಗಳ ಉತ್ಪತ್ತಿ ಮತ್ತು ವಿನಾಶಗಳ ಬಗ್ಗೆ ಅಸಿತದೇವಲನಿಗೂ ನಾರದರಿಗೂ ನಡೆದ ಸಂವಾದವನ್ನು ಭೀಷ್ಮರು ಯುಧಿಷ್ಠಿರನಿಗೆ

ತಿಳಿಸಿದುದು.
ಭೀಷ್ಮಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ನಾರದಸ್ಯ ಚ ಸಂವಾದಂ ದೇವಲಸ್ಯಾಸಿತಸ್ಯ ಚ ||1||
ಧರ್ಮಪುತ್ರನೇ, ಭೂತಗಳ ಹುಟ್ಟು-ಸಾವುಗಳ ವಿಷಯದಲ್ಲಿ ಅಸಿತದೇವಲನಿಗೂ, ನಾರದರಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ಪ್ರಾಚೀನರು ಹೇಳುತ್ತಾರೆ.
ಆಸೀನಂ ದೇವಲಂ ವೃದ್ಧಂ ಬುದ್ಧ್ವಾ ಬುದ್ಧಿಮತಾಂ ವರಃ |
ನಾರದಃ ಪರಿಪಪ್ರಚ್ಛ ಭೂತಾನಾಂ ಪ್ರಭವಾಪ್ಯಯಮ್ ||2||
ಒಮ್ಮೆ ವೃದ್ಧನಾದ ಅಸಿತದೇವಲನ ಬಳಿ ನಾರದರು ಸಾಗಿ, ಅವನು ಸುಖವಾಗಿ ಕುಳಿತಾಗ ಭೂತಗಳ ಉತ್ಪತ್ತಿ ನಾಶಗಳ ಬಗ್ಗೆ ಪ್ರಶ್ನೆ ಮಾಡಿದರು.
ಕುತಃ ಸೃಷ್ಟಮಿದಂ ವಿಶ್ವಂ ಬ್ರಹ್ಮಂ ಸ್ಥಾವರಜಂಗಮಮ್ |
ಪ್ರಲಯೇ ಚ ಕಮಭ್ಯೇತಿ ತದ್ಭವಾನ್ ಪ್ರಬ್ರವೀತು ಮೇ ||3||
ಮುನೀಂದ್ರನೇ, ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚವು ಯಾರ ದೆಸೆಯಿಂದ ಹುಟ್ಟನ್ನು ಪಡೆದಿದೆ? ಯಾರನ್ನು ಕುರಿತು ಲಯವನ್ನು ಹೊಂದುತ್ತದೆ? ಇದನ್ನು ನನಗೆ ತಿಳಿಸಬೇಕು ಎಂದು ಕೇಳಿದನು.
ಅಸಿತಃ
ಯೇಭ್ಯಃ ಸೃಜತಿ ಭೂತಾನಿ ಕಾಲೋ ಭಾವಪ್ರಚೋದಿತಃ |
ಮಹಾಭೂತಾನಿ ಪಂಚೇತಿ ತಾನ್ಯಾಹುರ್ಭೂತಚಿಂತಕಾಃ ||4||
ಕಾಲವು ಪ್ರಾಣಿಗಳ ಕರ್ಮಕ್ಕನುಗುಣವಾಗಿ ಪರಿಗಣನೆಯನ್ನು ಮಾಡಿ ಯಾವುದರ ಮೂಲಕ ಭೂತಗಳನ್ನು ಸೃಷ್ಟಿಸುತ್ತದೋ ಅವುಗಳನ್ನೇ ಪಂಚ ಮಹಾಭೂತಗಳೆಂದು ಭೂತಚಿಂತಕರು ಹೇಳುತ್ತಾರೆ.
ತೇಭ್ಯಃ ಸೃಜತಿ ಭೂತಾನಿ ಕಾಲ ಆತ್ಮಪ್ರಚೋದಿತಃ |
ಏತೇಭ್ಯೋ ಯತ್ ಪರಂ ಬ್ರೂಯುರಸದ್ಬ್ರೂಯುರಸಂಶಯಮ್ ||5||
ಆ ಪಂಚ ಮಹಾಭೂತಗಳು ಪರಮಾತ್ಮನಿಂದ ಪ್ರೇರಿತವಾಗಿಯೇ ಸಮಸ್ತ ಭೂತಗಳನ್ನು ಸೃಷ್ಟಿಸುತ್ತವೆ. ಆದ್ದರಿಂದ ಪರಮಾತ್ಮ, ಪಂಚಭೂತ, ಕಾಲ ಇವುಗಳಿಗಿಂತ ಬೇರೆಯಾದ ಅಜ್ಞಾನವು ಜಗತ್ತಿಗೆ ಕಾರಣ ಎಂದು ಯಾರು ಹೇಳುತ್ತಾರೋ ಅವರು ನಿಶ್ಚಿತವಾಗಿಯೂ ಸುಳ್ಳನ್ನೇ ಹೇಳುತ್ತಾರೆ.
ವಿದ್ಧಿ ನಾರದ ಪಂಚೈತಾನ್ ಶಾಶ್ವತಾನಚಲಾನ್ ಧ್ರುವಾನ್ |
ಮಹತಸ್ತೇಜಸೋ ರಾಶೀನ್ ಕಾಲಷಷ್ಠಾನ್ ಸ್ವಭಾವತಃ ||6||
ನಾರದನೇ, ಈ ಪಂಚಮಹಾಭೂತಗಳನ್ನು ಶಾಶ್ವತವೆಂದೂ, ನಿಶ್ಚಯವೆಂದೂ, ಅಚಲವೆಂದೂ ತಿಳಿದುಕೊ. ಮಹತ್ತತ್ತ್ವದಿಂದ ಉಂಟಾದವು ಈ ತೇಜೋರಾಶಿಗಳು. ಈ ಐದರೊಡನೆ ಸ್ವಾಭಾವಿಕವಾಗಿ ಸೇರಿದುದು ಆರನೆಯದ್ದಾದ ಕಾಲವೆಂದು ತಿಳಿ.
ಆಪಶ್ಚೈವಾಂತರಿಕ್ಷಂ ಚ ಪೃಥಿವೀ ವಾಯುಪಾವಕೌ |
ಅಸಿದ್ಧಿಃ ಪರಮೇತೇಭ್ಯೋ ಭೂತೇಭ್ಯೋ ಮುಕ್ತಸಂಶಯಮ್ ||7||
ಪೃಥಿವಿ, ಅಪ್, ತೇಜಸ್ಸು, ವಾಯು, ಆಕಾಶಗಳೆಂದು ಈ ಪಂಚಭೂತಗಳಿಗೆ ಹೆಸರು. ಈ ಐದಕ್ಕಿಂತಲೂ ಬೇರೆಯಾಗಿರುವುದನ್ನು ಯಾವ ಪ್ರಮಾಣದಿಂದಲೂ ನಿರ್ಧರಿಸಲಾಗದು. ಬೇರೆಯಾದ ತತ್ತ್ವವೂ ಇರುವುದಿಲ್ಲ. ಇದರಲ್ಲಿ ಯಾವ ಸಂದೇಹವೂ ಇಲ್ಲ.
ನೋಪಪತ್ತ್ಯಾ ನ ವಾ ಯುಕ್ತ್ಯಾ ತ್ವಸದ್‌ಬ್ರೂಯಾದಸಂಶಯಮ್ |
ವೇತ್ಥ ತಾನಭಿನಿರ್ವೃತ್ತಾನ್ ಷಡೇತೇ ಯೇಸ್ಯ ರಾಶಯಃ ||8||
ಯಾವುದೇ ಯುಕ್ತಿಯಿಂದಲಾಗಲಿ, ಪ್ರಮಾಣದಿಂದಲಾಗಲಿ, ಕಾಲದಿಂದ ಸಹಿತವಾದ ಪಂಚಭೂತಗಳಿಗಿಂತ ಬೇರೆಯಾದ ತತ್ತ್ವವನ್ನು ಹೇಳಲು ಸಾಧ್ಯವಾಗದು. ಜಗತ್ತಿಗೆ ಈ ಆರೇ ಕಾರಣರಾಶಿ ಎಂದು ಕರೆಸಿಕೊಂಡಿವೆ. ಆದ್ದರಿಂದ ಜಗತ್ತೆಲ್ಲವೂ ಈ ಆರನ್ನೇ ವ್ಯಾಪಿಸಿಕೊಂಡಿವೆ ಎಂದು ತಿಳಿ.
ಪಂಚೈವ ತಾನಿ ಕಾಲಶ್ಚ ಭಾವಾಭಾವೌ ಚ ಕೇವಲೌ |
ಅಷ್ಟೌ ಭೂತಾನಿ ಭೂತಾನಾಂ ಶಾಶ್ವತಾನಿ ಭವಾಪ್ಯಯೌ ||9||
ಪಂಚಭೂತಗಳು, ಕಾಲ, ಭಾವಾತ್ಮಕ ಪ್ರಪಂಚ, ಸುಕೃತ-ದುಷ್ಕೃತವೆಂಬ ಕರ್ಮ, ಪ್ರಾಗಭಾವ ಎಂಬ ಅಭಾವ - ಈ ಎಂಟು ಜೀವರ ಹುಟ್ಟು-ನಾಶಗಳಿಗೆ ಕಾರಣವಾಗಿವೆ.
ಅಭಾವಭವಿತಾ ಏವ ತೇಭ್ಯಶ್ಚ ಪ್ರಭವಂತ್ಯಪಿ |
ವಿನಷ್ಟೋಽಪಿ ಚ ತಾನ್ಯೇವ ಜಂತುರ್ಭವತಿ ಪಂಚಧಾ ||10||
ಜಗತ್ತಿನ ಸಮಸ್ತ ಪದಾರ್ಥಗಳು ನಾಶದಿಂದ ಸಹಿತವಾಗಿಯೇ ಉತ್ಪತ್ತಿಯನ್ನು ಹೊಂದುತ್ತವೆ. ನಾಶವನ್ನು ಹೊಂದಿದ ಪ್ರಾಣಿಯ ದೇಹವು ಪುನಃ ಐದು ಭಾಗಗಳಾಗಿ ಆಯಾ ಭೂತಗಳಲ್ಲೇ ವಿಲೀನವಾಗುತ್ತದೆ.
ತಸ್ಯ ಭೂಮಿಮಯೋ ದೇಹಃ ಶ್ರೋತ್ರಮಾಕಾಶಸಂಭವಮ್ |
ಸೂರ್ಯಶ್ಚಕ್ಷುರಸುರ್ವಾಯುರದ್ಭ್ಯಸ್ತು ಖಲು ಶೋಣಿತಮ್ ||11||
ಪ್ರಾಣಿಯ ದೇಹವು ಪೃಥಿವೀಭೂತವಾಗಿರುತ್ತದೆ. ಪ್ರಾಣಿಯ ದೇಹವು ನಾಶವಾದ ಬಳಿಕ ಆ ಪಾರ್ಥಿವ ಭಾಗವು ಭೂಮಿಯಲ್ಲಿ ಲಯವನ್ನು ಹೊಂದುತ್ತದೆ. ಕಿವಿಗಳು ಆಕಾಶಭೂತದಿಂದ ಹುಟ್ಟಿರುತ್ತವೆ. ಸತ್ತ ಬಳಿಕ ಆಕಾಶದಲ್ಲಿಯೇ ಲಯವನ್ನು ಹೊಂದುತ್ತವೆ. ಕಣ್ಣುಗಳು ತೇಜೋಮಯನಾದ ಸೂರ್ಯನಿಂದ ಹುಟ್ಟಿರುತ್ತವೆ. ಬಳಿಕ ತೇಜಸ್ಸಿನಲ್ಲಿಯೇ ಲಯವನ್ನು ಹೊಂದುತ್ತವೆ. ಪ್ರಾಣವು

ವಾಯುವಿನಿಂದ, ರಕ್ತವು ನೀರಿನಿಂದ ಹುಟ್ಟನ್ನು ಪಡೆದು, ನಾಶವಾದ ಬಳಿಕ ವಾಯು-ನೀರಿನಲ್ಲೇ ಸೇರಿ ಹೋಗುತ್ತವೆ.
ಚಕ್ಷುಷೀ ನಾಸಿಕಾಕರ್ಣೌ ತ್ವಗ್ಜಿಹ್ವೇತಿ ಚ ಪಂಚಮೀ |
ಇಂದ್ರಿಯಾಣೀಂದ್ರಿಯಾರ್ಥಾನಾಂ ಜ್ಞಾನಾನಿ ಕವಯೋ ವಿದುಃ ||12||
ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ - ಈ ಐದಕ್ಕೆ ಜ್ಞಾನೇಂದ್ರಿಯಗಳೆಂದು, ವಿಷಯಗಳನ್ನು ಗ್ರಹಿಸುವ ಇಂದ್ರಿಯಗಳೆಂದು ಜ್ಞಾನಿಗಳು ಹೇಳುತ್ತಾರೆ. ಇವುಗಳನ್ನೇ ಜ್ಞಾನಕರಣಗಳು ಎಂದು ಜ್ಞಾನಿಗಳು ಹೇಳುತ್ತಾರೆ.
ದರ್ಶನಂ ಶ್ರವಣಂ ಘ್ರಾಣಂ ಸ್ಪರ್ಶನಂ ರಸನಂ ತಥಾ |
ಉಪಪತ್ತ್ಯಾ ಗುಣಾನ್ ವಿದ್ಧಿ ಪಂಚ ಪಂಚಸು ಪಂಚಧಾ ||13||
ಹೊರಗಿನ ಪದಾರ್ಥಗಳನ್ನು ನೋಡುವುದು, ಕೇಳುವುದು, ವಾಸನೆ ನೋಡುವುದು, ಸ್ಪರ್ಶಿಸುವುದು, ರುಚಿ ನೋಡುವುದು - ಇವುಗಳು ಕ್ರಮವಾಗಿ ಕಣ್ಣು, ಕಿವಿ, ಮೂಗು, ತ್ವಗಿಂದ್ರಿಯ, ನಾಲಿಗೆ - ಈ ಇಂದ್ರಿಯಗಳ ವ್ಯಾಪಾರಗಳಾಗಿವೆ. ಐದು ಇಂದ್ರಿಯಗಳಲ್ಲಿ, ಐದು ವಿಧವಾದ ವಿಷಯಗಳಲ್ಲಿ ಐದು ವ್ಯಾಪಾರಗಳು ನಡೆಯುತ್ತವೆ.
ರೂಪಂ ಗಂಧೋ ರಸಃ ಸ್ಪರ್ಶಃ ಶಬ್ದಶ್ಚೈವಾಥ ತದ್ಗುಣಾಃ |
ಇಂದ್ರಿಯೈರುಪಲಭ್ಯಂತೇ ಪಂಚಧಾ ಪಂಚ ಪಂಚಭಿಃ ||14||
ಪಂಚ ಜ್ಞಾನೇಂದ್ರಿಯಗಳ ಮೂಲಕ ರೂಪ, ಗಂಧ, ರಸ, ಸ್ಪರ್ಶ, ಶಬ್ದ - ಎಂಬ ಪಂಚಗುಣಗಳು ದರ್ಶನ, ಘ್ರಾಣನ, ಆಸ್ವಾದನ, ಸ್ಪರ್ಶನ, ಶ್ರವಣ ಎಂದು ಪ್ರಕಟವಾಗುತ್ತವೆ.
ರೂಪಂ ಗಂಧಂ ರಸಂ ಸ್ಪರ್ಶಂ ಶಬ್ದಂ ಚೈತಾಂಸ್ತು ತದ್ಗುಣಾನ್ |
ಇಂದ್ರಿಯಾಣಿ ನ ಬುದ್ಧ್ಯಂತೇ ಕ್ಷೇತ್ರಜ್ಞಸ್ತೈಸ್ತು ಬುದ್ಧ್ಯತೇ ||15||
ರೂಪ, ಗಂಧ, ರಸ, ಸ್ಪರ್ಶ, ಶಬ್ದಗಳೆಂಬ ಈ ಐದು ಇಂದ್ರಿಯಗುಣಗಳನ್ನು ಇಂದ್ರಿಯಗಳು ತಾವೇ ತಿಳಿಯಲಾರವು. ಈ ಇಂದ್ರಿಯಗಳ ಮೂಲಕ ಕ್ಷೇತ್ರಜ್ಞನಾದ ಭಗವಂತನ ಪ್ರೇರಣೆಯಂತೆ ಜೀವಾತ್ಮನು ಈ ಇಂದ್ರಿಯಗಳಿಂದ ಪ್ರಕಟವಾಗುವ ಶಬ್ದಾದಿಗಳನ್ನು ತಿಳಿಯುತ್ತಾನೆ.
ಚಿತ್ತಮಿಂದ್ರಿಯಸಂಘಾತಾತ್ ಪರಂ ತಸ್ಮಾತ್ ಪರಂ ಮನಃ |
ಮನಸಸ್ತು ಪರಾ ಬುದ್ಧಿಃ ಕ್ಷೇತ್ರಜ್ಞೋ ಬುದ್ಧಿತಃ ಪರಃ ||16||
ಶರೀರ ಮತ್ತು ಇಂದ್ರಿಯಗಳ ಸಮುದಾಯಗಳಿಗಿಂತಲೂ ಚಿತ್ತವು ಶ್ರೇಷ್ಠವು. ಚಿತ್ತಕ್ಕಿಂತಲೂ ಮನಸ್ಸು, ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಕ್ಷೇತ್ರಜ್ಞನು ಶ್ರೇಷ್ಠನು.
ಪೂರ್ವಂ ಚೇತಯತೇ ಜಂತುರಿಂದ್ರಿಯೈರ್ವಿಷಯಾನ್ ಪೃಥಕ್ |
ವಿಚಾರ್ಯ ಮನಸಾ ಪಶ್ಚಾದಥ ಬುದ್ಧ್ಯಾ ವ್ಯವಸ್ಯತಿ |
ಇಂದ್ರಿಯೈರುಪಲಬ್ಧಾರ್ಥಾನ್ ಸರ್ವಾನ್ಯಸ್ತ್ವಧ್ಯವಸ್ಯತಿ ||17||
ಜೀವನು ಇಂದ್ರಿಯಗಳ ಮೂಲಕ ವಿಷಯಗಳನ್ನು ಪೃಥಕ್ ಆಗಿ ಗ್ರಹಿಸುತ್ತಾನೆ. ಇಂದ್ರಿಯಗಳ ಮೂಲಕ ಜೀವನಿಗೆ ವಿಷಯಗಳನ್ನು ತಂದುಕೊಡುವ ಕೆಲಸವು ಚಿತ್ತದ ಕೆಲಸವಾಗಿರುತ್ತದೆ. ಮನಸ್ಸು ಇಂದ್ರಿಯಾರ್ಥಗಳ ವಿಷಯದಲ್ಲಿ ವಿಚಾರ ಮಾಡುತ್ತದೆ. ಬುದ್ಧಿ ನಿರ್ಣಯವನ್ನು ಮಾಡುತ್ತದೆ.
ಚಿತ್ತಮಿಂದ್ರಿಯಸಂಘಾತಂ ಮನೋ ಬುದ್ಧಿಂ ತಥಾಷ್ಟಮೀಮ್ |
ಅಷ್ಟೌ ಜ್ಞಾನೇಂದ್ರಿಯಾಣ್ಯಾಹುರೇತಾನ್ಯಧ್ಯಾತ್ಮಚಿಂತಕಾಃ ||18||
ತ್ವಕ್, ಚಕ್ಷುಸ್ಸು, ಘ್ರಾಣ, ಕರ್ಣ, ಜಿಹ್ವೆ ಎಂಬ ಜ್ಞಾನೇಂದ್ರಿಯಗಳನ್ನು, ಚಿತ್ತ, ಮನಸ್ಸು, ಬುದ್ಧಿ - ಈ ಎಂಟನ್ನು ಜ್ಞಾನಿಗಳು ಜ್ಞಾನೇಂದ್ರಿಯಗಳೆಂದೇ ಹೇಳುತ್ತಾರೆ.
ಪಾಣಿಪಾದಂ ಚ ಪಾಯುಶ್ಚ ಮೇಹನಂ ಪಂಚಮಂ ಮುಖಮ್ |
ಇತಿ ಸಂಶಬ್ದ್ಯಮಾನಾನಿ ಶೃಣು ಕರ್ಮೇಂದ್ರಿಯಾಣ್ಯಪಿ ||19||
ಕೈಗಳು, ಕಾಲುಗಳು, ಗುದ, ಉಪಸ್ಥ, ಮುಖ- ಈ ಐದನ್ನು ಕರ್ಮೇಂದ್ರಿಯಗಳೆಂದು ಹೇಳುತ್ತಾರೆ. ಇವುಗಳ ವಿವರಣೆಯನ್ನು ಹೇಳುತ್ತೇನೆ, ಕೇಳು.
ಜಲ್ಪನಾಭ್ಯವಹಾರಾರ್ಥಂ ಮುಖಮಿಂದ್ರಿಯಮುಚ್ಯತೇ |
ಗಮನೇಂದ್ರಿಯಂ ತಥಾ ಪಾದೌ ಕರ್ಮಣಃ ಕರಣೇ ಕರೌ ||20||
ಮಾತನಾಡಲು, ತಿನ್ನಲು ಉಪಯೋಗಿಸುವ ಮುಖವು ಕರ್ಮೇಂದ್ರಿಯ ಎನಿಸುತ್ತದೆ. ನಡೆಯಲು ಉಪಯೋಗಿಸುವ ಕಾಲು ಗಮನೇಂದ್ರಿಯ ಎನಿಸುತ್ತದೆ. ಕಾರ್ಯ ಮಾಡುವ ಕೈಗಳು ಕರಣೇಂದ್ರಿಯವೆನಿಸುತ್ತದೆ.
ಪಾಯೂಪಸ್ಥೌ ವಿಸರ್ಗಾರ್ಥಮಿಂದ್ರಿಯೇ ತುಲ್ಯಕರ್ಮಣೀ |
ವಿಸರ್ಗೇ ಚ ಪುರೀಷಸ್ಯ ವಿಸರ್ಗೇ ಚಾಭಿಕಾಮಿಕೇ ||21||
ಪಾಯು, ಉಪಸ್ಥಗಳು ಮಲ-ಮೂತ್ರಗಳನ್ನು ವಿಸರ್ಜಿಸುವ ಇಂದ್ರಿಯಗಳೆನಿಸಿವೆ. ಎರಡು ಇಂದ್ರಿಯಗಳು ತ್ಯಜಿಸುವುದರಿಂದ ಸಮಾನವಾಗಿವೆ. ಗುದವು ಮಲವನ್ನು ವಿಸರ್ಜಿಸಿದರೆ, ಜನನೇಂದ್ರಿಯವು ಮೂತ್ರದ ಜೊತೆ ಮೈಥುನ ಸಮಯದಲ್ಲಿ ವೀರ್ಯವನ್ನು ವಿಸರ್ಜಿಸುತ್ತದೆ.
ಬಲಂ ಷಷ್ಠಂ ಷಡೇತಾನಿ ವಾಚಾ ಸಮ್ಯಗ್ಯಥಾಗಮಮ್ |
ಜ್ಞಾನಚೇಷ್ಟೇಂದ್ರಿಯಗುಣಾಃ ಸರ್ವೇ ಸಂಶಬ್ದಿತಾ ಮಯಾ ||22||
ಇಂದ್ರಿಯಾಣಾಂ ಸ್ವಕರ್ಮಭ್ಯಃ ಶ್ರಮಾದುಪರಮೋ ಯದಾ |
ಭವತೀಂದ್ರಿಯಸನ್ನ್ಯಾಸಾದಥ ಸ್ವಪಿತಿ ವೈ ನರಃ ||23||

ಈ ಕರ್ಮೇಂದ್ರಿಯಗಳಲ್ಲದೆ ಪ್ರಾಣಸಮುದಾಯವೇ ಆರನೆಯ ಕರ್ಮೇಂದ್ರಿಯವೆನಿಸಿದೆ. ನನ್ನ ಮಾತಿನ ಮೂಲಕ ನಿನಗೆ ಎಲ್ಲ ವಿಧವಾದ ಇಂದ್ರಿಯಗಳನ್ನು, ಅವುಗಳ ಜ್ಞಾನ, ಕರ್ಮ, ಗುಣಗಳನ್ನು ವಿವರಿಸಿದ್ದೇನೆ. ತಮ್ಮ ತಮ್ಮ ಕಾರ್ಯಗಳನ್ನು ಇಂದ್ರಿಯಗಳು ಮಾಡುತ್ತಾ ಶ್ರಮವನ್ನು ಹೊಂದಿ ಯಾವಾಗ ಶಾಂತವಾಗುತ್ತವೋ ಆಗ ಜೀವಾತ್ಮನು ಇಂದ್ರಿಯಗಳನ್ನು ಬಿಟ್ಟು ನಿದ್ರಾವಶನಾಗುತ್ತಾನೆ.
ಇಂದ್ರಿಯಾಣಾಂ ವ್ಯುಪರಮೇ ಮನೋಽನುಪರತಂ ಯದಿ |
ಸೇವತೇ ವಿಷಯಾನೇವ ತದ್ ವಿದ್ಯಾತ್ ಸ್ವಪ್ನದರ್ಶನಮ್ ॥24॥
ಇಂದ್ರಿಯಗಳು ಉಪಶಮನ ಹೊಂದಿದಾಗಲೂ ಮನಸ್ಸು ಉಪಶಮನಗೊಳ್ಳದಿದ್ದರೆ ಸ್ವಪ್ನಾವಸ್ಥೆಯಲ್ಲಿ ಮನಸ್ಸು ವಿಷಯಗಳನ್ನು ಸೇವಿಸುತ್ತಲೇ ಇರುತ್ತದೆ. ಇದನ್ನೇ ಸ್ವಪ್ನ ದರ್ಶನ ಎನ್ನುತ್ತಾರೆ.
ಸಾತ್ತ್ವಿಕಾಶ್ಚೈವ ಯೇ ಭಾವಾಸ್ತಥಾ ರಾಜಸತಾಮಸಾಃ |
ಕರ್ಮಯುಕ್ತಾನ್ ಪ್ರಶಂಸಂತಿ ಸಾತ್ತ್ವಿಕಾನಿತರಾಂಸ್ತಥಾ ॥25॥
ಜಾಗೃತರಾಗಿರುವಾಗ ಸಾತ್ವಿಕ, ರಾಜಸ, ತಾಮಸ ಎಂಬ ಭಾವನೆಗಳಿಂದ ಕೂಡಿದ ಮನುಷ್ಯರು ಸಾತ್ವಿಕ, ರಾಜಸ, ತಾಮಸ ಎಂಬ ಭಾವನೆಗಳನ್ನೇ ಅವರ ಗುಣಗಳಿಗೆ ಅನುಗುಣವಾಗಿ ಕನಸ್ಸಿನಲ್ಲಿಯೂ ಪ್ರಶಂಸಿಸುತ್ತಾರೆ.
ಆನಂದಃ ಕರ್ಮಣಾಂ ಸಿದ್ಧಿಃ ಪ್ರತಿಪತ್ತಿಃ ಪರಾ ಗತಿಃ |
ಸಾತ್ತ್ವಿಕಸ್ಯ ನಿಮಿತ್ತಾನಿ ಭಾವಾನ್ ಸಂಶ್ರಯತೇ ಸ್ಮೃತಿಃ ॥26॥
ಆನಂದ, ಕಾರ್ಯಸಿದ್ಧಿ, ಕರ್ತವ್ಯಜ್ಞಾನ, ಉತ್ತಮ ಗತಿ - ಈ ನಾಲ್ಕು ಸತ್ತ್ವಗುಣದ ಭಾವಗಳು. ಈ ಭಾವಗಳು ಸಾತ್ವಿಕ ಸ್ವಭಾವಕ್ಕನುಗುಣವಾಗಿ ಉತ್ಪನ್ನವಾಗುತ್ತವೆ.
ಜಂತುಷ್ವೇಕತಮೇಷ್ವೇವಂ ಭಾವಾ ಯೇ ವಿಧಿಮಾಸ್ಥಿತಾಃ |
ಭಾವಯೋರೀಪ್ಸಿತಂ ನಿತ್ಯಂ ಪ್ರತ್ಯಕ್ಷಗಮನಂ ದ್ವಯೋಃ ॥27॥
ಸಮಸ್ತ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವ, ನಿತ್ಯವೂ ಹೊಂದಲು ಯೋಗ್ಯನಾಗಿರುವ, ಅತ್ಯಂತ ಭಿನ್ನನಾಗಿರುವ ಪರಮಾತ್ಮನನ್ನು ಯಾರು ನಿರಂತರವೂ ಚಿಂತಿಸುತ್ತಾರೋ ಅವರು ಐಹಿಕ, ಪಾರತ್ರಿಕ ಎನಿಸಿದ ಪ್ರತ್ಯಕ್ಷ ಸುಖಗಳನ್ನು ಅನುಭವಿಸುತ್ತಾರೆ.
ಇಂದ್ರಿಯಾಣಿ ಚ ಭಾವಾಶ್ಚ ಗುಣಾಃ ಸಪ್ತದಶ ಸ್ಮೃತಾಃ |
ತೇಷಾಮಷ್ಟಾದಶೋ ದೇಹೀ ಯಃ ಶರೀರೇ ಸ ಶಾಶ್ವತಃ ॥28॥
ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಮನಸ್ಸು, ಪಂಚಗುಣಗಳು, ಆ ಗುಣಗಳ ಜ್ಞಾನ - ಹೀಗೆ ಹದಿನೇಳು ಗುಣಗಳು ಜೀವರನ್ನು ಆಶ್ರಯಿಸಿರುತ್ತವೆ.
ಅಥ ವಾ ಸಶರೀರಾಸ್ತೇ ಗುಣಾಃ ಸರ್ವೇ ಶರೀರಿಣಾಮ್ |
ಸಂಶ್ರಿತಾಸ್ತದ್ವಿಯೋಗೇ ಹಿ ಸಶರೀರಾ ನ ಸಂತಿ ತೇ ॥29॥
ಶರೀರವನ್ನು ಧರಿಸಿದ ಜೀವನನ್ನು ಆಶ್ರಯಿಸಿಕೊಂಡು ಆ ಗುಣಗಳು ಇರುತ್ತವೆ. ಶರೀರವು ವಿಯೋಗವಾದಲ್ಲಿ ಶರೀರವೂ ನಾಶವಾಗುತ್ತದೆ, ಆ ಗುಣಗಳೂ ನಾಶವಾಗುತ್ತವೆ.
ಅಥ ವಾ ಸನ್ನಿಪಾತೋಽಯಂ ಶರೀರಂ ಪಾಂಚಭೌತಿಕಮ್ |
ಏಕಂ ಚ ದಶ ಚಾಷ್ಟೌ ಚ ಗುಣಾಃ ಸಹ ಶರೀರಿಣಾಮ್ |
ವಷ್ಮ್ರಣಾ ಸಹ ವಿಂಶೋ ವಾ ಸಂಘಾತಃ ಪಾಂಚಭೌತಿಕಃ ॥30॥
ಅಥವಾ ತತ್ತ್ವಗಳ ಸಮುದಾಯವು ಪಾಂಚಭೌತಿಕವಾದ ಶರೀರವಾಗಿದೆ. ಮನಸ್ಸು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಬುದ್ಧಿ, ಅಹಂಕಾರ, ಚಿತ್ತ ಎಂಬುದಾಗಿ ಜೀವರ ಅಪ್ರಧಾನಭೂತವಾದ ಗುಣಗಳು ದೇಹದ ಜೊತೆಗೆ ಸೇರಿದಾಗ ಇಪ್ಪತ್ತು ತತ್ತ್ವಗಳಾಗುತ್ತವೆ.
ಮಹಾನ್ ಸಂಧಾರಯತ್ಯೇತಚ್ಛರೀರಂ ವಾಯುನಾ ಸಹ |
ತಸ್ಯಾಸ್ಯ ಭಾವಯುಕ್ತಸ್ಯ ನಿಮಿತ್ತಂ ದೇಹಭೇದನೇ ॥31॥
ಮಹಾಪುರುಷನಾದ ನಾರಾಯಣನು ಚೇಷ್ಟೆಯಿಂದ ಕೂಡಿದ ಜೀವರಿಗೆ ಈ ಶರೀರವನ್ನು ಪ್ರಾಣವಾಯುವಿನ ಮೂಲಕ ಸಂಯೋಜಿಸುತ್ತಾನೆ. ಈ ದೇಹವನ್ನು ನೀಡಲು, ನಾಶಪಡಿಸಲು ನಿಮಿತ್ತನಾದವನು ಮಹಾಪುರುಷನಾದ ನಾರಾಯಣನೇ ಆಗಿದ್ದಾನೆ.
ಯಥೈವೋತ್ಪದ್ಯತೇ ಕಿಂಚಿತ್ ಪಂಚತ್ವಂ ಗಚ್ಛತೇ ತಥಾ |
ಪುಣ್ಯಪಾಪವಿನಾಶಾಂತೇ ಪುಣ್ಯಪಾಪಸಮೀರಿತಮ್ |
ದೇಹಂ ವಿಶತಿ ಕಾಲೇನ ತತೋಽಯಂ ಕರ್ಮಸಂಭವಮ್ ॥32॥
ಹಿತ್ವಾ ಹಿತ್ವಾ ಹ್ಯಯಂ ಪ್ರೈತಿ ದೇಹಾದ್ ದೇಹಂ ಕೃತಾಶ್ರಯಃ |
ಕಾಲಸಂಚೋದಿತಃ ಕ್ಷೇತ್ರೀ ವಿಶೀರ್ಣಾದ್ವಾ ಗೃಹಾದ್ ಗೃಹಮ್ ॥33॥
ಜೀವನು ಹೇಗೆ ಉತ್ಪತ್ತಿಯನ್ನು ಹೊಂದುತ್ತಾನೋ, ಹಾಗೆ ಸಾವನ್ನೂ ಹೊಂದುತ್ತಾನೆ. ಹಿಂದಿನ ದೇಹಕ್ಕೆ ಕಾರಣವಾದ ಪುಣ್ಯಾಪಾಪಗಳು ನಾಶವಾದ ಬಳಿಕ ಮುಂದಿನ ದೇಹಕ್ಕೆ ಕಾರಣವಾದ ಪುಣ್ಯ-ಪಾಪಗಳು ಜೀವನನ್ನು ದೇಹಕ್ಕೆ ಪ್ರವೇಶ ಮಾಡುವಂತೆ ಮಾಡುತ್ತದೆ. ಹೀಗೆ ಕರ್ಮದ ಸಂಬಂಧದಿಂದ ಕಾಲಿಕವಾಗಿ ಜೀವನು ದೇಹವನ್ನು ಪ್ರವೇಶಿಸುತ್ತಾನೆ. ಯಾವ ರೀತಿಯಲ್ಲಿ ಒಂದು ಮನೆಯಲ್ಲಿ ವಾಸ ಮಾಡುವ ಮನುಷ್ಯನು ಮನೆ ಶಿಥಿಲವಾದ ಬಳಿಕ ಬೇರೆ ಮನೆಯನ್ನು ಆಶ್ರಯಿಸುತ್ತಾನೋ, ಇದೇ ರೀತಿ ಕಾಲಪ್ರೇರಿತನಾದ ಜೀವನು ಶಿಥಿಲವಾದ ಒಂದು ಶರೀರವನ್ನು ಬಿಟ್ಟು ಕರ್ಮಾನುಸಾರವಾಗಿ ನಿರ್ಮಿತವಾದ ಮತ್ತೊಂದು ಶರೀರವನ್ನು ಆಶ್ರಯಿಸುತ್ತಾನೆ.
ತತ್ರ ನೈವಾನುತಪ್ಯಂತೇ ಪ್ರಾಜ್ಞಾ ನಿಶ್ಚಿತನಿಶ್ಚಯಾಃ |
ಕೃಪಣಾಸ್ತ್ವನುತಪ್ಯಂತೇ ಜನಾಃ ಸಂಬಂಧಿಮಾನಿನಃ ॥34॥

ವಿದ್ವಾಂಸರಾದವರು ಆತ್ಮನು ಶರೀರದಿಂದ ಅತ್ಯಂತ ಭಿನ್ನನಾಗಿದ್ದಾನೆ. ಅಸಂಗನೂ, ಅವಿನಾಶನೂ ಆಗಿದ್ದಾನೆ ಎಂದು ನಿಶ್ಚಯವನ್ನು ಹೊಂದಿರುವುದರಿಂದ ದೇಹಪತನಕ್ಕೆ ದುಃಖಿಗಳಾಗುವುದಿಲ್ಲ. ದೇಹಾತ್ಮ ಐಕ್ಯಚಿಂತನೆಯನ್ನು ಹೊಂದಿದ ಅಜ್ಞಾನಿಗಳು ಮರಣವನ್ನು ನೆನೆದು ದುಃಖಿಸುತ್ತಾರೆ.
ನ ಹ್ಯಯಂ ಕಸ್ಯಚಿತ್ ಕಶ್ಚಿನ್ನಾಸ್ಯ ಕಶ್ಚನ ವಿದ್ಯತೇ |
ಭವತ್ಯೇಕೋ ಹ್ಯಯಂ ನಿತ್ಯಂ ಶರೀರೇ ಸುಖದುಃಖಭಾಕ್ ॥35॥
ಜೀವನು ಯಾರಿಗೂ ಸಂಬಂಧಿಸಿದವನಲ್ಲ. ಅವನಿಗೆ ಯಾವ ಸಂಬಂಧವೂ ಇರುವುದಿಲ್ಲ. ಜೀವನು ನಿತ್ಯವೂ ಏಕಾಕಿಯಾಗಿರುವನು. ಆದರೂ ಶರೀರದಲ್ಲಿ ವಾಸಿಸುವ ಜೀವನು ಶರೀರವನ್ನು ತನ್ನದೆಂದು ಭ್ರಮಿಸಿಕೊಂಡಿರುವುದರಿಂದ ಕರ್ಮಾನುಗುಣವಾಗಿ ಸುಖ-ದುಃಖಗಳನ್ನು ಹೊಂದುತ್ತಾನೆ.
ನೈವ ಸಂಜಯತೇ ಜಂತುರ್ನ ಚ ಜಾತು ವಿಪದ್ಯತೇ |
ಯಾತಿ ದೇಹಮಯಂ ಭುಕತ್ತ್ವ ಕದಾಚಿತ್ ಪರಮಾಂ ಗತಿಮ್ ॥36॥
ಜೀವನು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಯಾವಾಗ ಈ ದೇಹಾಭಿಮಾನವನ್ನು ಬಿಡುತ್ತಾನೋ ಆಗ ಪರಮಗತಿಯನ್ನು ಹೊಂದುತ್ತಾನೆ.
ಪುಣ್ಯಪಾಪಮಯಂ ದೇಹಂ ಕ್ಷಪಯನ್ ಕರ್ಮಸಂಚಯಾತ್ |
ಕ್ಷೀಣದೇಹಃ ಪುನರ್ದೇಹೀ ಬ್ರಹ್ಮತ್ವಮುಪಗಚ್ಛತಿ ॥37॥
ಪುಣ್ಯ-ಪಾಪದಿಂದ ಪ್ರಾಪ್ತವಾಗುವ ದೇಹವನ್ನು ಜೀವನು ಕರ್ಮಗಳನ್ನು ಅನುಭವಿಸುತ್ತಾ ಕಳೆದುಕೊಳ್ಳುತ್ತಾನೆ. ಶರೀರವು ನಾಶವಾದ ಬಳಿಕ ಜೀವನು ತನ್ನ ಸ್ವರೂಪಕ್ಕೆ ಯೋಗ್ಯವಾದ ಪೂರ್ಣಸುಖವನ್ನು ಹೊಂದುತ್ತಾನೆ.
ಪುಣ್ಯಪಾಪಕ್ಷಯಾರ್ಥಂ ಚ ಸಾಂಖ್ಯಂ ಜ್ಞಾನಂ ವಿಧೀಯತೇ |
ತತ್ಕ್ಷಯೇ ಹ್ಯಸ್ಯ ಪಶ್ಯಂತಿ ಬ್ರಹ್ಮಭಾವೇ ಪರಾಂ ಗತಿಮ್ ॥38॥
ಈ ಪುಣ್ಯ-ಪಾಪಗಳ ಕ್ಷಯಕ್ಕೋಸ್ಕರ ಭಗವಂತನ ಯಥಾರ್ಥಜ್ಞಾನವು ವಿಧಿಸಲ್ಪಟ್ಟಿದೆ. ಈ ಪುಣ್ಯ-ಪಾಪಗಳ ಸಂಬಂಧವು ನಾಶವಾದ ಬಳಿಕ ಪರಬ್ರಹ್ಮನಿಗೆ ಸಂಬಂಧಿಸಿದ ತತ್ತ್ವಜ್ಞಾನವು ಉದಯವಾಗುತ್ತದೆ. ಬಳಿಕ ಪರಬ್ರಹ್ಮನನ್ನು ಕಂಡು ಮೋಕ್ಷವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೊಂದನೆಯ ಅಧ್ಯಾಯ
ಆಸೆಯನ್ನು ತೊರೆಯುವುದೇ ಸುಖಸಾಧನ ಎಂಬುದಕ್ಕೆ ಜನಕ-ಮಾಂಡವ್ಯರ ಸಂವಾದವನ್ನು ಭೀಷ್ಮರು ಯುಧಿಷ್ಠಿರನಿಗೆ ತಿಳಿಸಿದುದು.
ಯುಧಿಷ್ಠಿರಃ
ಭ್ರಾತರಃ ಪಿತರಃ ಪುತ್ರಾ ಜ್ಞಾತಯಃ ಸುಹೃದಸ್ತಥಾ |
ಅರ್ಥಹೇತೋರ್ಹತಾಃ ಕ್ರೂರೈರಸ್ಮಾಭಿಃ ಪಾಪಬುದ್ಧಿಭಿಃ ॥1॥
ಪಿತಾಮಹನೇ, ಕ್ರೂರಿಗಳಾದ ನಾವು ಧನದ ಆಸೆಯಿಂದ ಪಾಪ ಬುದ್ಧಿಯುಳ್ಳವರಾಗಿ ಸಹೋದರರು, ಪಿತೃಗಳು, ಮಕ್ಕಳು, ಜ್ಞಾನಿಗಳು, ಸ್ನೇಹಿತರು ಎಂದು ಯಾರನ್ನೂ ಗಮನಿಸದೆ ಎಲ್ಲರನ್ನೂ ಯುದ್ಧದಲ್ಲಿ ಕೊಂದಿದ್ದೇವೆ.
ಯೇಯಮರ್ಥೋದ್ಭವಾ ತೃಷ್ಣಾ ಕಥಮೇತಾಂ ಪಿತಾಮಹ |
ನಿವರ್ತಯೇಮ ಪಾಪಂ ಹಿ ತೃಷ್ಣಯಾ ಕಾರಿತಾ ವಯಮ್ ॥2॥
ಈ ಅರ್ಥದಿಂದ ಹುಟ್ಟುವಂತಹ ತೃಷ್ಣೆಯು ಮನುಷ್ಯನನ್ನು ಆಕ್ರಮಿಸಿದೆ. ಇದನ್ನು ತ್ಯಜಿಸುವ ಉಪಾಯವೇನು? ಈ ತೃಷ್ಣೆಯಿಂದಲೇ ನಾವು ಅನೇಕ ತಪ್ಪುಗಳನ್ನು ಮಾಡಿದ್ದೇವೆ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ವಿದೇಹರಾಜೇನ ಮಾಂಡವ್ಯಾಯಾನುಪೃಚ್ಛತೇ ॥3॥
ಧರ್ಮಪುತ್ರನೇ, ಇದೇ ವಿಷಯದಲ್ಲಿ ವಿದೇಹದ ರಾಜನಿಗೂ ಮಾಂಡವ್ಯನಿಗೂ ನಡೆದ ಸಂವಾದ ರೂಪವಾದ ಇತಿಹಾಸವೊಂದನ್ನು ಹೇಳುತ್ತಾರೆ. ಹಿಂದೆ ಒಮ್ಮೆ ಮಾಂಡವ್ಯನು ಇದೇ ವಿಷಯವಾಗಿ ಪ್ರಶ್ನಿಸಿದಾಗ ವಿದೇಹ ರಾಜನು ಹೇಳಿದ ಗೀತೆಯು ಹೀಗಿದೆ.
ಸುಸುಖಂ ಬತ ಜೀವಾಮಿ ಯಸ್ಯ ಮೇ ನಾಸ್ತಿ ಕಿಂಚನ |
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ ॥4॥
ನಾನು ಸುಖವಾಗಿ ಜೀವಿಸುತ್ತಿದ್ದೇನೆ. ಆದರೆ ನನಗೆ ಸಂಬಂಧಿಸಿದ ಸ್ವತ್ತು ಯಾವುದೂ ಈ ಜನಕಪುರಿಯಲ್ಲಿ ಇರುವುದಿಲ್ಲ. ಮಿಥಿಲೆಯೆಲ್ಲವೂ ಪೂರ್ಣವಾಗಿ ಸುಟ್ಟು ಹೋದರೂ ನನ್ನದೇನೂ ಸುಟ್ಟು ಹೋಗುವುದಿಲ್ಲ.
ಅರ್ಥಾಃ ಖಲು ಸಮೃದ್ಧಾ ಹಿ ಬಾಢಂ ದುಃಖಂ ವಿಜಾನತಾಮ್ |
ಅಸಮೃದ್ಧಾಸ್ತ್ವಪಿ ಸದಾ ಮೋಹಯಂತ್ಯವಿಚಕ್ಷಣಾನ್ ॥5॥
ಸಂಪತ್ತು ಸಮೃದ್ಧವಾಗಿದ್ದಷ್ಟು ಹೆಚ್ಚು ದುಃಖವನ್ನುಂಟು ಮಾಡುತ್ತದೆ. ಅಲ್ಪ ಧನವಾದರೂ ಅದು ಅಜ್ಞರನ್ನು ಮೋಹಕ್ಕೆ ಗುರಿ ಮಾಡುತ್ತದೆ.

ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ ಸುಖಮ್ |
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥6॥
ಈ ಲೋಕದ ಎಲ್ಲ ಕಾಮಸುಖಗಳಾಗಲಿ, ಅದಕ್ಕೂ ಮೇಲಾದ ದೇವಲೋಕದ ಸುಖವಾಗಲಿ ತೃಷ್ಣೆಯನ್ನು ಬಿಡುವುದರಿಂದ ಉಂಟಾಗುವ ಅಪಾರ ಸುಖಕ್ಕೆ ಕಲಾಮಾತ್ರವೂ ಸಾಟಿಯಾಗಲಾರದು.
ಯಥೈವ ಶೃಂಗಂ ಗೋಃ ಕಾಲೇ ವರ್ಧಮಾನಸ್ಯ ವರ್ಧತೇ |
ತಥೈವ ತೃಷ್ಣಾ ವಿತ್ತೇನ ವರ್ಧಮಾನೇನ ವರ್ಧತೇ ॥7॥
ಬೆಳೆಯುವ ಗೋವತ್ಸದ ಕೊಂಬು ಆ ಕರುವು ಬೆಳೆಯುತ್ತಿದ್ದಂತೆ ಹೇಗೆ ವೃದ್ಧಿಯನ್ನು ಹೊಂದುತ್ತದೋ, ಇದರಂತೆ ಮನುಷ್ಯನಿಗೆ ಧನವು ಹೆಚ್ಚಿದಂತೆಲ್ಲ ಅದರ ತೃಷ್ಣೆಯು ಹೆಚ್ಚುತ್ತಲೇ ಇರುತ್ತದೆ.
ಕಿಂಚಿದೇವ ಮಮತ್ವೇನ ಯದಾ ಭವತಿ ಕಲ್ಪಿತಮ್ |
ತದೇವ ಪರಿತಾಪಾಯ ನಾಶೇ ಸಂಪದ್ಯತೇ ಪುನಃ ॥8॥
ನನ್ನದು ಎಂಬ ಅಭಿಮಾನಕ್ಕೆ ಅರ್ಹವಾದ ಅಲ್ಪ ಸ್ವತ್ತು ಕೈಬಿಟ್ಟು ಹೋದಾಗ ಅಪಾರ ದುಃಖವನ್ನು ಉಂಟುಮಾಡುತ್ತದೆ.
ನ ಕಾಮಾನನುರುದ್ಧ್ಯೇತ ದುಃಖಂ ಕಾಮೇಷು ವೈ ರತಿಃ |
ಪ್ರಾಪ್ಯಾರ್ಥಮುಪಯುಂಜೀತ ಧರ್ಮೇ ಕಾಮಂ ವಿವರ್ಜಯೇತ್ ॥9॥
ಆದ್ದರಿಂದ ಯಾವುದರಲ್ಲಿಯೂ ನನ್ನದೆಂಬ ಮೋಹವನ್ನು ಇಟ್ಟುಕೊಳ್ಳಲೇ ಬಾರದು. ವಿಷಯದಲ್ಲಿ ಆಸಕ್ತರಾದಾಗ ದುಃಖವುಂಟಾಗುತ್ತದೆ. ಆದ್ದರಿಂದ ಅರ್ಥವು ದೊರೆತಾಗ ಅದರಿಂದ ಧರ್ಮಕಾರ್ಯವನ್ನೇ ಹೆಚ್ಚು ಆಚರಿಸಬೇಕು.
ವಿದ್ವಾನ್ ಸರ್ವೇಷು ಭೂತೇಷು ಆತ್ಮನಾ ಸೋಪಮೋ ಭವೇತ್ |
ಕೃತಕೃತ್ಯೋ ವಿಶುದ್ಧಾತ್ಮಾ ಸರ್ವಂ ತ್ಯಜತಿ ವೈ ಸಹ ॥10॥
ವಿದ್ವಾಂಸನಾದವನು ತನ್ನಲ್ಲಿ ಹೇಗೋ ಹಾಗೆ ಇತರ ಪ್ರಾಣಿಗಳಲ್ಲಿಯೂ ಪ್ರೀತಿಯಿಂದಲೇ ವರ್ತಿಸಬೇಕು. ಅದರಿಂದಲೇ ಅವನು ಕೃತಕೃತ್ಯನಾಗಿ, ಶುದ್ಧಚಿತ್ತನಾಗಿ ಸಮಸ್ತವಾದ ಕಾಮನೆಗಳನ್ನು ತ್ಯಾಗ ಮಾಡುತ್ತಾನೆ.
ಉಭೇ ಸತ್ಯಾನೃತೇ ತ್ಯಕ್ತ್ವಾ ಶೋಕಾನಂದೌ ಪ್ರಿಯಾಪ್ರಿಯೇ |
ಭಯಾಭಯೇ ಚ ಸಂತ್ಯಜ್ಯ ಸಂಪ್ರಶಾಂತೋ ನಿರಾಮಯಃ ॥11॥
ಅವನೇ ಸತ್ಯ-ಅನೃತಗಳನ್ನು, ಶೋಕ-ಆನಂದಗಳನ್ನು, ಪ್ರಿಯ-ಅಪ್ರಿಯಗಳನ್ನು, ಭಯ- ನಿರ್ಭಯಗಳನ್ನು ತ್ಯಜಿಸಿದವನಾಗಿ, ಪ್ರಶಾಂತನಾಗಿ ನಿರ್ವಿಕಾರನಾಗುತ್ತಾನೆ.
ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ |
ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥
ದುರ್ಬುದ್ಧಿಯವರಿಂದ ಯಾವುದನ್ನು ಬಿಡಲು ಸಾಧ್ಯವಿಲ್ಲವೋ, ಶರೀರವು ಶಿಥಿಲವಾಗುತ್ತಿದ್ದರೂ ಯಾವುದು ಜೀರ್ಣವಾಗುವುದಿಲ್ಲವೋ, ಯಾವುದು ಪ್ರಾಣಾಂತಿಕವಾದ ರೋಗವೆನಿಸಿದೆಯೋ ಅಂತಹ ತೃಷ್ಣೆಯನ್ನು ತ್ಯಜಿಸಿದವನಿಗೆ ಸುಖವುಂಟಾಗುತ್ತದೆ.
ಚಾರಿತ್ರಮಾತ್ಮನಃ ಪಶ್ಯಂಶ್ಚಂದ್ರಶುದ್ಧಮನಾಮಯಮ್ |
ಧರ್ಮಾತ್ಮಾ ಲಭತೇ ಕೀರ್ತಿಂ ಪ್ರೇತ್ಯ ಚೇಹ ಯಥಾಸುಖಮ್ ॥13॥
ನಿಷ್ಕಳಂಕನಾದ ಚಂದ್ರನಂತೆ ಪರಿಶುದ್ಧನಾಗಿ ತನ್ನ ಚಾರಿತ್ರ್ಯವನ್ನು ಕಾಪಾಡಿಕೊಳ್ಳುತ್ತಾ ಇರುವ ಧರ್ಮಾತ್ಮನು ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ ಉತ್ತಮವಾದ ಸುಖವನ್ನೂ ಹೊಂದುತ್ತಾನೆ.
ರಾಜ್ಞಸ್ತದ್ವಚನಂ ಶ್ರುತ್ವಾ ಪ್ರೀತಿಮಾನಭವದ್ ದ್ವಿಜಃ |
ಪೂಜಯಿತ್ವಾ ಚ ತದ್ವಾಕ್ಯಂ ಮಾಂಡವ್ಯೋ ಮೋಕ್ಷಮಾಶ್ರಿತಃ ॥14॥
ಯುಧಿಷ್ಠಿರನೇ, ವಿದೇಹ ರಾಜನು ಹೇಳಿದ ಈ ಮಾತನ್ನು ಕೇಳಿ ಮಾಂಡವ್ಯ ಮಹರ್ಷಿಯು ಪ್ರೀತನಾದನು. ರಾಜನ ಮಾತನ್ನು ಪ್ರಶಂಸೆ ಮಾಡುತ್ತಾ ಮಾಂಡವ್ಯನು ಮೋಕ್ಷ ಮಾರ್ಗವನ್ನು ಆಶ್ರಯಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕಾದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೆರಡನೆಯ ಅಧ್ಯಾಯ
ಆಯಿತ ಮುನಿಯು ಹೇಳಿದ ಸಂನ್ಯಾಸಧರ್ಮ.
ಯುಧಿಷ್ಠಿರಃ
ಕಿಂಶೀಲಃ ಕಿಂಸಮಾಚಾರಃ ಕಿಂವಿದ್ಯಃ ಕಿಂಪರಾಯಣಃ |
ಪ್ರಾಪ್ನೋತಿ ಬ್ರಹ್ಮಣಃ ಸ್ಥಾನಂ ಯತ್ ಪರಂ ಪ್ರಕೃತೇರ್ಧ್ರುವಮ್ ॥1॥
ಪಿತಾಮಹನೇ, ಲೋಕದಲ್ಲಿ ಎಂತಹ ಸ್ವಭಾವವುಳ್ಳವರು, ಯಾವ ರೀತಿಯಾದ ಆಚಾರಶೀಲರು ಎಂತಹ ವಿದ್ಯೆಯಿಂದ, ಯಾವ ಆಶ್ರಮದಿಂದ ಪ್ರಕೃತಿಗಿಂತಲೂ ಶ್ರೇಷ್ಠವಾದ ಶಾಶ್ವತವೆನಿಸಿದ ಪರಬ್ರಹ್ಮನ ಸ್ಥಾನವನ್ನು ಹೊಂದುತ್ತಾರೆ?
ಭೀಷ್ಮಃ
ಮೋಕ್ಷಧರ್ಮೇಷು ನಿರತೋ ಲಘ್ವಾಹಾರೋ ಜಿತೇಂದ್ರಿಯಃ |
ಪ್ರಾಪ್ನೋತಿ ಪರಮಂ ಸ್ಥಾನಂ ಯತ್ ಪರಂ ಪ್ರಕೃತೇರ್ಧ್ರುವಮ್ ॥2॥

ಕುಮಾರನೇ, ಪರಬ್ರಹ್ಮನ ಪದವಿಯನ್ನು ಹೊಂದುವವರು ಮೋಕ್ಷ ಧರ್ಮದಲ್ಲೇ ನಿರತರಾಗಿರುತ್ತಾರೆ. ಮಿತಾಹಾರಿಗಳು, ಜಿತೇಂದ್ರಿಯರು ಆಗಿರುತ್ತಾರೆ. ಇಂತಹವರು ಆ ಉತ್ತಮ ಸ್ಥಾನವನ್ನು ಹೊಂದುತ್ತಾರೆ.

ಸ್ವಗೃಹಾದಭಿನಿಃಸೃತ್ಯ ಲಾಭಾಲಾಭೇ ಸಮೋ ಮುನಿಃ |
ಸಮುಪೋಢೇಷು ಕಾಮೇಷು ನಿರಪೇಕ್ಷಃ ಪರಿವ್ರಜೇತ್ ||3||

ಮೋಕ್ಷವನ್ನು ಬಯಸುವವನು ಲಾಭ-ನಷ್ಟಗಳನ್ನು ಸಮಾನವಾಗಿ ಕಂಡು, ಕಾಮೋಪಭೋಗಗಳು ಪ್ರಾಪ್ತವಾಗಿದ್ದರೂ ಅವುಗಳನ್ನು ಅಪೇಕ್ಷಿಸದೆ, ಮುನಿವೃತ್ತಿಯನ್ನೇ ಆಶ್ರಯಿಸಿ ಮನೆಯಿಂದ ಹೊರಟು ಹೋಗಬೇಕು.

ನ ಚಕ್ಷುಷಾ ನ ಮನಸಾ ನ ವಾಚಾ ದೂಷಯೇದಪಿ |
ನ ಪ್ರತ್ಯಕ್ಷಂ ಪರೋಕ್ಷಂ ವಾ ದೂಷಣಂ ವ್ಯಾಹರೇತ್ ಕ್ವಚಿತ್ ||4||

ಕಣ್ಣಿನಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಇತರರನ್ನು ದೂಷಿಸಬಾರದು. ಯಾವ ಭೂತಗಳಿಗೂ ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ ನಿಂದಿಸದೆ ಮೈತ್ರಿಯಿಂದಲೇ ವರ್ತಿಸಬೇಕು.

ನ ಹಿಂಸ್ಯಾತ್ ಸರ್ವಭೂತಾನಿ ಮೈತ್ರಾಯಣಗತಿಶ್ಚರೇತ್ |
ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್ ||5||

ಯಾವುದೇ ಪ್ರಾಣಿಗಳನ್ನು ಹಿಂಸಿಸಬಾರದು. ಯಾರನ್ನೂ ಪೀಡಿಸಬಾರದು. ಎಲ್ಲರಲ್ಲಿಯೂ ಮೈತ್ರೀಭಾವದಿಂದಲೇ ವರ್ತಿಸಬೇಕು. ನಶ್ವರವಾದ ಜೀವನವನ್ನು ಹೊಂದಿರುವ ವ್ಯಕ್ತಿಯು ಯಾರ ಬಳಿಯೂ ದ್ವೇಷವನ್ನು ಕಟ್ಟಿಕೊಳ್ಳಬಾರದು.

ಅತಿವಾದಾಂಸ್ತಿತಿಕ್ಷೇತ ನಾಭಿಮನ್ಯೇತ್ ಕಥಂಚನ |
ಕ್ರೋಧ್ಯಮಾನಃ ಪ್ರಿಯಂ ಬ್ರೂಯಾದಾಕ್ರುಷ್ಟಃ ಕುಶಲಂ ವದೇತ್ ||6||

ಯಾರಾದರೂ ತನ್ನ ವಿಷಯದಲ್ಲಿ ಅಪ್ರಿಯವಾದ, ನಿಂದನಾರೂಪವಾದ ಮಾತುಗಳನ್ನು ಆಡಿದರೆ ಅದನ್ನು ಸಹಿಸಿಕೊಳ್ಳಬೇಕು. ಎಂದಿಗೂ ಅಹಂಕಾರ ಪಡಬಾರದು. ಯಾರಾದರೂ ಕೋಪಗೊಂಡರೆ ಪ್ರಿಯಮಾತುಗಳನ್ನೇ ಆಡಬೇಕು. ನಿಂದಿಸಿದಾಗಲೂ ಪ್ರತಿಯಾಗಿ ನಿಂದಿಸದೆ ನಿಂದಿಸಿದವನ ವಿಷಯದಲ್ಲಿ ಕುಶಲವಾದ ಮಾತುಗಳನ್ನೇ ಆಡಬೇಕು.

ಪ್ರದಕ್ಷಿಣಂ ಪ್ರಸವ್ಯಂ ಚ ಗ್ರಾಮಮಧ್ಯೇ ನ ಚಾಚರೇತ್ |
ಭೈಕ್ಷಚರ್ಯಾಮನಾಪನ್ನೋ ನ ಗಚ್ಛೇತ್ ಪೂರ್ವಕೇತಿತಃ ||7||

ಗ್ರಾಮದ ನಡುವೆ ಎಡಬದಿಯಿಂದಾಗಲಿ, ಬಲಬದಿಯಿಂದಾಗಲಿ ಸಂಚರಿಸಬಾರದು. ಮತ್ತೊಬ್ಬರಿಗೆ ಅನನುಕೂಲವಾಗುವಂತೆ ವರ್ತಿಸಬಾರದು. ಭಿಕ್ಷೆಗೆ ಹೋದರೂ ಎಲ್ಲ ಮನೆಗಳಿಗೂ ಹೋಗಿ ಭಿಕ್ಷೆಯನ್ನು ಬೇಡಬಾರದು. ತಿಳಿದ ಮನೆಗೆ ಹೋಗಿ ಊಟ ಮಾಡಬಾರದು.

ಅವಕೀರ್ಣಃ ಸುಗುಪ್ತಶ್ಚ ನ ವಾಚಾ ಹ್ಯಪ್ರಿಯಂ ವದೇತ್ |
ಮೃದುಃ ಸ್ಯಾದಪ್ರತಿಕ್ರೂರೋ ವಿಸ್ರಬ್ಧಃ ಸ್ಯಾದರೋಷಣಃ ||8||

ಅವಧೂತನಾಗಿರಬೇಕು. ತನ್ನನ್ನು ಅವಮಾನಿಸಿದರೂ ಮೃದುಧೋರಣೆಯನ್ನೇ ತಾಳಬೇಕು. ಮಾತಿನಿಂದ ಅಪ್ರಿಯವಾದುದನ್ನು ಹೇಳಬಾರದು. ಯಾರ ವಿಷಯದಲ್ಲಿಯೂ ಕ್ರೌರ್ಯವನ್ನು ತೋರಬಾರದು. ನಿಶ್ಚಿಂತನೂ, ವಿಶ್ವಾಸಿಯೂ ಆಗಿರಬೇಕು. ತನ್ನ ಬಗ್ಗೆ ಪ್ರಶಂಸೆಯ ಮಾತುಗಳನ್ನಾಡಬಾರದು.

ವಿಧೂಮೇ ನ್ಯಸ್ತಮುಸಲೇ ವ್ಯಂಗಾರೇ ಭುಕ್ತವಜ್ಜನೇ |
ಅತೀತೇ ಪಾತ್ರಸಂಚಿರೇ ಭಿಕ್ಷಾಂ ಲಿಪ್ಸೇತ ವೈ ಮುನಿಃ ||9||

ಸಂನ್ಯಾಸಿಯು ಭಿಕ್ಷೆಗೆ ಹೋಗುವಾಗ ಹೊಗೆ ಇಲ್ಲದ, ಭತ್ತ ಕುಟ್ಟುವ ಶಬ್ದ ಇಲ್ಲದ, ಒಲೆಯ ಬೆಂಕಿಯೂ ಆರಿಹೋಗಿರುವ, ಮನೆಯ ಜನರೆಲ್ಲರೂ ಊಟವನ್ನು ಮುಗಿಸಿಕೊಂಡು ಪಾತ್ರೆಗಳ ಶಬ್ದವು ನಿಂತ ಬಳಿಕ ಅಂತಹ ಗೃಹವನ್ನು, ವಿಚಾರ ಮಾಡಿ ಅಲ್ಲಿಗೆ ಹೋಗಿ ಭಿಕ್ಷೆಯನ್ನು ಯಾಚಿಸಬೇಕು.

ಅನುಯಾತ್ರಿಕಮರ್ಥಸ್ಯ ಮಾತ್ರಾಲಾಭೇಷ್ವನಾದೃತಃ |
ಅಲಾಭೇ ನ ವಿಹನ್ಯೇತ ಲಾಭಶ್ಚೈನಂ ನ ಹರ್ಷಯೇತ್ ||10||

ತನ್ನ ಜೀವನವು ನಿರ್ವಹಣೆಯಾಗುವಷ್ಟು ಮಾತ್ರ ಅನ್ನವನ್ನು ಭಿಕ್ಷಾರೂಪದಲ್ಲಿ ಹೊಂದಲು ಯತ್ನಿಸಬೇಕು. ಅತಿಯಾದ ಅನ್ನದಲ್ಲಿ ಆದರವನ್ನು ಹೊಂದಬಾರದು. ಒಂದು ವೇಳೆ ಅನ್ನ ಸಿಕ್ಕದೆ ಇದ್ದರೂ ಅದರಿಂದ ಮನಸ್ಸಿನಲ್ಲಿ ಅತೃಪ್ತಿಯನ್ನು ಹೊಂದಬಾರದು. ಸಿಕ್ಕಿದಾಗ ಅತಿಯಾದ ಸಂತೋಷವನ್ನೂ ಹೊಂದಬಾರದು.

ಲಾಭಂ ಸಾಧಾರಣಂ ನೇಚ್ಛೇನ್ನ ಭುಂಜೀತಾಭಿಪೂಜಿತಃ |
ಅಭಿಪೂಜಿತಲಾಭಂ ಹಿ ಜುಗುಪ್ಸೇತೈವ ತಾದೃಶಃ ||11||

ಲೌಕಿಕ ಲಾಭಗಳನ್ನು ಬಯಸಬಾರದು. ಆದರ-ಗೌರವಗಳಿರುವ ಕಡೆ ಊಟ ಮಾಡಬಾರದು. ಮುಕ್ತಿಯನ್ನು ಬಯಸುವ ವ್ಯಕ್ತಿಯು ಆದರ, ಸತ್ಕಾರ, ಲೌಕಿಕ ಲಾಭಗಳಲ್ಲಿ ಜುಗುಪ್ಸೆಯನ್ನೇ ಹೊಂದಬೇಕು.

ನ ಚಾನ್ನದೋಷಾನ್ನಿಂದೇತ ನ ಗುಣಾನಭಿಪೂಜಯೇತ್ |
ಶಯ್ಯಾಸನೇ ವಿವಿಕ್ತೇ ಚ ನಿತ್ಯಮೇವಾಭಿಪೂಜಯೇತ್ ||12||

ಸಂನ್ಯಾಸಿಯಾದವನು ಅನ್ನದಲ್ಲಿರುವ ದೋಷಗಳನ್ನು ನೋಡಿ ನಿಂದಿಸಬಾರದು. ಗುಣಗಳನ್ನು ನೋಡಿ ಪ್ರಶಂಸೆಯನ್ನೂ ಮಾಡಬಾರದು. ಏಕಾಂತಸ್ಥಳದಲ್ಲಿಯೇ ಕುಳಿತುಕೊಳ್ಳುವುದನ್ನು, ಮಲಗುವುದನ್ನು ಆದರಿಸಬೇಕು.

ಶೂನ್ಯಾಗಾರಂ ವೃಕ್ಷಮೂಲಮರಣ್ಯಮಥ ವಾ ಗುಹಾಮ್ |
ಅಜ್ಞಾತಚರ್ಯಾಂ ಗತ್ವಾನ್ಯಾಂ ತತೋನ್ಯತ್ರೈವ ಸಂವಿಶೇತ್ ||13||

ಜನರಿಲ್ಲದ ಹಾಳು ಮನೆಯಲ್ಲಾಗಲಿ, ವೃಕ್ಷದ ಬುಡದಲ್ಲಾಗಲಿ, ಅರಣ್ಯದಲ್ಲಾಗಲಿ, ಪರ್ವತದ ಗುಹೆಯಲ್ಲಾಗಲಿ ಅಥವಾ ಗುಪ್ತ

ಸ್ಥಳದಲ್ಲೇ ಆಗಲಿ, ಮುಮುಕ್ಷುವು ಅಜ್ಞಾತವಾಗಿರುತ್ತಾ ಅಧ್ಯಾತ್ಮಚಿಂತನೆಯಲ್ಲಿ ಮಗ್ನನಾಗಿರಬೇಕು.
ಅನುರೋಧವಿರೋಧಾಭ್ಯಾಂ ಸಮಃ ಸ್ಯಾದಚಲೋ ಧ್ರುವಃ |
ಸುಕೃತಂ ದುಷ್ಕೃತಂ ಚೋಭೇ ನಾನುರುದ್ಧ್ಯೇತ ಕರ್ಮಣಿ ||14||
ಜನರ ಪ್ರೀತಿ-ವಿರೋಧಗಳನ್ನು ಸಮವಾಗಿ ಕಾಣುತ್ತಾ ಅಚಲನಾಗಿ, ಸ್ಥಿರಚಿತ್ತನಾಗಿ, ಸುಕೃತ-ದುಷ್ಕೃತಗಳನ್ನು ಚಿಂತಿಸದೆ ಭಗವತ್ಪ್ರೀತಿ ಎಂಬ ಕಾರಣದಿಂದ ಕರ್ಮಗಳನ್ನು ಆಚರಿಸಬೇಕು.
ವಾಚೋ ವೇಗಂ ಮನಸಃ ಕ್ರೋಧವೇಗಂ
ವಿವಿತ್ಸಾವೇಗಮುದರೋಪಸ್ಥವೇಗಮ್ |
ಏತಾನ್ ವೇಗಾನ್ ವಿನಯೇದ್ವೈ ತಪಸ್ವೀ
ನಿಂದಾ ಚಾಸ್ಯ ಹೃದಯಂ ನೋಪಹನ್ಯಾತ್ ||15||
ಸಂನ್ಯಾಸಿಯಾದವನು ಮಾತು, ಮನಸ್ಸು, ಕ್ರೋಧ, ಹಿಂಸೆ, ಹೊಟ್ಟೆ, ಉಪಸ್ಥ ಇವುಗಳ ವೇಗವನ್ನು ಸಹಿಸಿಕೊಳ್ಳಬೇಕು. ಅರ್ಥಾತ್ ಇವುಗಳನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕು. ಇತರರು ಮಾಡುವ ನಿಂದನೆಗಳಿಂದ ವಿಕಾರಕ್ಕೆ ತುತ್ತಾಗಬಾರದು.
ಮಧ್ಯಸ್ಥ ಏವ ತಿಷ್ಠೇತ ಪ್ರಶಂಸಾನಿಂದಯೋಃ ಸಮಃ |
ಏತತ್ ಪವಿತ್ರಂ ಪರಮಂ ಪರಿವ್ರಾಜಕ ಆಶ್ರಮೇ ||16||
ಪ್ರಶಂಸೆ ಮತ್ತು ನಿಂದನೆಗಳನ್ನು ಸಮಾನವಾಗಿ ಸ್ವೀಕರಿಸಬೇಕು. ಸಂನ್ಯಾಸಾಶ್ರಮದಲ್ಲಿ ಇಂತಹ ಆಚರಣೆಯು ಪವಿತ್ರವೆಂದು ಹೇಳಲ್ಪಟ್ಟಿದೆ.
ಮಹಾತ್ಮಾ ಸುವ್ರತೋ ದಾಂತಃ ಸರ್ವತ್ರೈವಾನಪಾಶ್ರಿತಃ |
ಅಪೂರ್ವಚಾರಕಃ ಸೌಮ್ಯೋ ಅನಿಕೇತಃ ಸಮಾಹಿತಃ ||17||
ಮಹಾತ್ಮನಾದ, ವ್ರತನಿಷ್ಠನಾದ, ಇಂದ್ರಿಯನಿಗ್ರಹವುಳ್ಳ, ಎಲ್ಲೆಡೆಯೂ ಅಸಂಗನಾಗಿರುವ ವ್ಯಕ್ತಿಯು ತನಗೆ ಪರಿಚಿತವಿರುವ ಸ್ಥಾನಗಳಲ್ಲಿ ಸಂಚರಿಸಬಾರದು. ಸೌಮ್ಯನೂ, ಆಶ್ರಯವಿಲ್ಲದೆ ಇರುವವನೂ ಆಗಿದ್ದು, ಪರಮಾತ್ಮನಲ್ಲಿಯೇ ಏಕಾಗ್ರತೆಯನ್ನು ಸಂಪಾದಿಸಿಕೊಳ್ಳಬೇಕು.
ವಾನಪ್ರಸ್ಥಗೃಹಸ್ಥಾಭ್ಯಾಂ ನ ಸಂಸೃಜ್ಯೇತ ಕರ್ಹಿಚಿತ್ |
ಅಜ್ಞಾತಲಿಪ್ಸಾಂ ಲಿಪ್ಸೇತ ನ ಚೈನಂ ಹರ್ಷ ಆವಿಶೇತ್ ||18||
ವಾನಪ್ರಸ್ಥಾಶ್ರಮಿಗಳೊಡನೆ ಅಥವಾ ಗೃಹಸ್ಥಾಶ್ರಮಿಗಳೊಡನೆ ಸಂಬಂಧವನ್ನು ಇಟ್ಟುಕೊಳ್ಳಬಾರದು. ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸದೆ ಯಾವ ಪದಾರ್ಥವು ದೊರೆಯುವುದೋ ಅದನ್ನೇ ಸ್ವೀಕರಿಸಲು ಇಚ್ಛೆ ಹೊಂದಬೇಕು. ತನಗೆ ಬೇಕಾದ ಪದಾರ್ಥವು ದೊರಕಿದರೂ ಸಂತೋಷ ಪಡಬಾರದು.
ವಿಜಾನತಾಂ ಮೋಕ್ಷ ಏಷ ಶ್ರಮಃ ಸ್ಯಾದವಿಜಾನತಾಮ್ |
ಮೋಕ್ಷಯಾನಮಿದಂ ಕೃತ್ಸ್ನಂ ವಿದುಷಾಂ ಹಾರಿತೋಽಬ್ರವೀತ್ ||19||
ಸಂನ್ಯಾಸಾಶ್ರಮವು ಜ್ಞಾನಿಗಳಿಗೆ ಮೋಕ್ಷರೂಪವಾಗಿದೆ. ಅಜ್ಞಾನಿಗಳಿಗೆ ಶ್ರಮಸಾಧ್ಯವಾಗಿದೆ. ಹೀಗೆ ಹಾರಿತಮುನಿಯು ಅಜ್ಞಾನಿಗಳ ದೃಷ್ಟಿಯಿಂದ ಮೋಕ್ಷ ಮಾರ್ಗವನ್ನು ಉಪದೇಶಿಸಿದ್ದಾನೆ.
ಅಭಯಂ ಸರ್ವಭೂತೇಭ್ಯೋ ದತ್ತ್ವಾ ಯಃ ಪ್ರವ್ರಜೇದ್ ಗೃಹಾತ್ |
ಲೋಕಾಸ್ತೇಜೋಮಯಾಸ್ತಸ್ಯ ತಥಾನಂತ್ಯಾಯ ಕಲ್ಪತೇ ||20||
ಯಾವ ಪ್ರಾಣಿಗಳನ್ನೂ ಹಿಂಸಿಸುವುದಿಲ್ಲ ಎಂದು ಅಭಯದಾನ ಮಾಡಿ ಯಾವ ವ್ಯಕ್ತಿಯು ಮನೆಯನ್ನು ಬಿಟ್ಟು ಹೊರಡುತ್ತಾನೋ ಅವನಿಗೆ ತೇಜೋಮಯವಾದ ಲೋಕಗಳು ಲಭಿಸುತ್ತವೆ. ಅವನು ಅನಂತವಾದ ಪರಮಪದವನ್ನು ಹೊಂದಲು ಸಮರ್ಥನಾಗುತ್ತಾನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಾದಶಾಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *

ನೂರ ಹದಿಮೂರನೆಯ ಅಧ್ಯಾಯ
ಬ್ರಹ್ಮಪ್ರಾಪ್ತಿಗೆ ಉಪಾಯ. ಶುಕ್ರ-ವೃತ್ರರ ಸಂವಾದ.
ಯುಧಿಷ್ಠಿರಃ
ಧನ್ಯಾ ಧನ್ಯಾ ಇತಿ ಜನಾಃ ಸರ್ವೇಽಸ್ಮಾನ್ ಪ್ರವದಂತ್ಯುತ |
ನ ದುಃಖಿತತರಃ ಕಶ್ಚಿತ್ ಪುಮಾನಸ್ಮಾಭಿರಸ್ತಿ ಹ ||1||
ಜನರೆಲ್ಲರೂ ನಮ್ಮನ್ನು ಕುರಿತು ಧನ್ಯರೂ, ಧನ್ಯರೂ ಎಂದು ಹೇಳುತ್ತಾರೆ. ಆದರೆ ಕುಂತಿಮಕ್ಕಳಾದ ನಮಗಿಂತ ದುಃಖಿತರಾದವರು ಪ್ರಪಂಚದಲ್ಲಿ ಯಾರೂ ಇರುವುದಿಲ್ಲ.
ಲೋಕಸಂಭಾವಿತೈರ್ದುಃಖಂ ಯತ್ ಪ್ರಾಪ್ತಂ ಕುರುಸತ್ತಮ |
ಪ್ರಾಪ್ಯ ಜಾತಿಂ ಮನುಷ್ಯೇಷು ದೇವೈರಪಿ ಪಿತಾಮಹ ||2||
ದೇವತೆಗಳ ಮೂಲಕ ಮಾನವ ಲೋಕದಲ್ಲಿ ಹುಟ್ಟನ್ನು ಪಡೆದ, ಸಮಸ್ತ ಪ್ರಜೆಗಳಿಂದ ಸನ್ಮಾನಿತರಾದ ನಮಗೆ ಇಂತಹ ಮಹತ್ತರವಾದ ದುಃಖವು ಒದಗಿದೆ.
ಕದಾ ವಯಂ ಕರಿಷ್ಯಾಮಃ ಸಂನ್ಯಾಸಂ ದುಃಖಸಂಜ್ಞಕಮ್ |
ದುಃಖಮೇತಚ್ಛರೀರಾಣಾಂ ಧಾರಣಂ ಕುರುಸತ್ತಮ ||3||

ಸಂಸಾರಿಗಳಿಗೆ ದುಷ್ಕರವಾದ ಆಶ್ರಮವೆನಿಸಿದ ಸಂನ್ಯಾಸಾಶ್ರಮವನ್ನು ನಾವು ಯಾವಾಗ ಅವಲಂಬಿಸುತ್ತೇವೆ? ಈ ಶರೀರವನ್ನು ಧಾರಣೆ ಮಾಡಿಕೊಂಡಿರುವುದು ನಮಗೆ ತುಂಬಾ ದುಃಖವೆನಿಸಿದೆ.

ವಿಮುಕ್ತಾಃ ಸಪ್ತದಶಭಿರ್ಹೇತುಭೂತೈಶ್ಚ ಪಂಚಭಿಃ |
ಇಂದ್ರಿಯಾರ್ಥೈರ್ಗುಣೈಶ್ಚೈವ ಅಷ್ಟಭಿಃ ಪ್ರಪಿತಾಮಹ ||4||
ನ ಗಚ್ಛಂತಿ ಪುನರ್ಭಾವಂ ಮುನಯಃ ಸಂಶಿತವ್ರತಾಃ |
ಕದಾ ವಯಂ ಭವಿಷ್ಯಾಮೋ ರಾಜ್ಯಂ ಹಿತ್ವಾ ಪರಂತಪ ||5||

ಪಿತಾಮಹನೇ, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು, ಬುದ್ಧಿ, ಪಂಚಮಹಾಭೂತಗಳು - ಹೀಗೆ ಹದಿನೇಳು ತತ್ತ್ವಗಳಿಂದಲೂ, ಐದು ಇಂದ್ರಿಯಾರ್ಥಗಳೆನಿಸಿದ ರೂಪಾದಿ ಗುಣಗಳಿಂದಲೂ, ಧನಮದ, ಕುಲಮದ, ವಿದ್ಯಾಮದ, ಯೌವನ ಮದ, ಪ್ರಭುತ್ವ ಮದ, ಪರಿಜನ ಮದ, ಧರ್ಮ ಮದ, ದಾನ ಮದ ಎಂಬ ಅಷ್ಟ ಮದಗಳಿಂದಲೂ ವಿಮುಕ್ತರಾದ ಮುನಿಗಳು ಕಠೋರ ವ್ರತನಿಷ್ಠರಾದುದರಿಂದಲೇ ಪುನಃ ಜನ್ಮವನ್ನು ಹೊಂದುವುದಿಲ್ಲ. ನಾವು ರಾಜ್ಯವನ್ನು ತ್ಯಜಿಸಿ ಅಂತಹ ಶ್ರೇಷ್ಠವಾದ ಸ್ಥಿತಿಯನ್ನು ಯಾವಾಗ ಹೊಂದುತ್ತೇವೆ?

ಭೀಷ್ಮಃ

ನಾಸ್ತ್ಯನಂತಂ ಮಹಾರಾಜ ಸರ್ವಂ ಸಂಖ್ಯಾನಗೋಚರಮ್ |
ಪುನರ್ಭಾವೋಽಪಿ ಸಂಖ್ಯಾತೋ ನಾಸ್ತಿ ಕಿಂಚಿದಿಹಾಚಲಮ್ ||6||

ಮಹಾರಾಜನೇ, ದುಃಖವು ಅನಂತವಾದುದಲ್ಲ. ಜಗತ್ತಿನ ಎಲ್ಲ ವಸ್ತುಗಳು ಅಳತೆಯ ಪರಿಮಿತಿಯಿಂದ ಕೂಡಿದವುಗಳಾಗಿವೆ. ಇದರಂತೆ ಪುನರ್ಜನ್ಮಗಳಿಗೂ ಇಷ್ಟೆಂಬ ಲೆಕ್ಕವಿದೆ. ಲೋಕದಲ್ಲಿ ಸ್ಥಿರವಾದುದು ಯಾವುದೂ ಇಲ್ಲ.

ನ ಚಾಪಿ ಗಮ್ಯತೇ ರಾಜನ್ನೈಷ ದೋಷಃ ಪ್ರಸಂಗತಃ |
ಉದ್ಯೋಗಾದೇವ ಧರ್ಮಜ್ಞಾ ಕಾಲೇನೈವ ಗಮಿಷ್ಯಥ ||7||

ರಾಜನೇ, ನೀನು ಸಂಪತ್ತನ್ನು ದೋಷವೆಂದು ತಿಳಿದಿರುವಿ. ಇದು ಪ್ರಾಪಂಚಿಕ ವಿಷಯದಲ್ಲಿ ಆಸಕ್ತಿಯನ್ನು ಹುಟ್ಟಿಸುತ್ತದೆ. ಮೋಕ್ಷ ಮಾರ್ಗಕ್ಕೆ ಪ್ರತಿಬಂಧವಾಗಿದೆ ಎಂದು ತಿಳಿಯುವುದು ಸರಿಯಲ್ಲ. ಕಾರಣ, ಧರ್ಮಜ್ಞರಾದ ನೀವೆಲ್ಲರೂ ಕ್ಷಮ-ದಮಾದಿ ಮೋಕ್ಷ ಸಾಧನವನ್ನು ಸೇವಿಸುವುದರಿಂದಲೇ ಮುಕ್ತಿಯನ್ನು ಹೊಂದುತ್ತೀರಿ.

ನೇಶೋಽಯಂ ಸತತಂ ದೇಹೀ ನೃಪತೇ ಪುಣ್ಯಪಾಪಯೋಃ |
ತತ ಏವ ಸಮುತ್ಥೇನ ತಮಸಾ ರುದ್ಧ್ಯತೇಽಪಿ ಚ ||8||

ಮಹಾರಾಜನೇ, ಪುಣ್ಯ-ಪಾಪಗಳಿಗೆ ಜೀವನು ನಿಯಾಮಕನಾಗಿರುವುದಿಲ್ಲ. ಪುಣ್ಯ-ಪಾಪಗಳ ಸಂಬಂಧದಿಂದ ಅಜ್ಞಾನವಶನಾಗಿ ಕರ್ತವ್ಯಗಳಿಂದ ತಡೆಯಲ್ಪಡುತ್ತಾನೆ.

ಯಥಾಂಜನಮಯೋ ವಾಯುಃ ಪುನರ್ಮಾನಃಶಿಲಂ ರಜಃ |
ಅನುಪ್ರವಿಶ್ಯ ತದ್ವರ್ಣೋ ದೃಶ್ಯತೇ ರಂಜಯನ್ ದಿಶಃ ||9||
ತಥಾ ಕರ್ಮಫಲೈರ್ದೇಹೀ ರಂಜಿತಸ್ತಮಸಾವೃತಃ |
ವಿವರ್ಣೋ ವರ್ಣಮಾಶ್ರಿತ್ಯ ದೇಹೇಷು ಪರಿವರ್ತತೇ ||10||

ಹೊಗೆಯಿಂದ ಆವೃತವಾಗಿ ಕಾಡಿಗೆಯಂತೆ ಕಾಣುವ ಗಾಳಿಯು ರಕ್ತಧಾತು ಶಿಲೆಗೆ ಸಂಬಂಧಿಸಿದ ಧೂಳಿನ ಜೊತೆಗೆ ಬೆರೆತು ದಿಕ್ಕುಗಳನ್ನು ಕೆಂಪಾಗಿ ಮಾಡುವಂತೆ ಸ್ವಭಾವತಃ ನಿತ್ಯಶುದ್ಧನಾದ ಜೀವನು ಅಜ್ಞಾನಾವೃತನಾಗಿ, ಕರ್ಮಫಲದಿಂದ ಭಿನ್ನ ಭಿನ್ನವಾದ ದೇಹಗಳನ್ನು ಪಡೆಯುತ್ತಾ, ಜಾತಿಗಳನ್ನು ಸ್ವೀಕರಿಸುತ್ತಾ ಸಂಚರಿಸುತ್ತಾನೆ.

ಜ್ಞಾನೇನ ಹಿ ಯದಾ ಜಂತುರಜ್ಞಾನಪ್ರಭವಂ ತಮಃ |
ವ್ಯಪೋಹತಿ ತದಾ ಬ್ರಹ್ಮ ಪ್ರಕಾಶೇತ ಸನಾತನಮ್ ||11||

ಜೀವನು ಯಾವಾಗ ಬ್ರಹ್ಮಜ್ಞಾನದ ಮೂಲಕ ಅಜ್ಞಾನವನ್ನು ಪರಿಹರಿಸಿಕೊಳ್ಳುತ್ತಾನೋ ಆಗ ಸನಾತನವಾದ ಪರಬ್ರಹ್ಮನು ಅವನ ಹೃದಯದಲ್ಲಿಯೇ ಬೆಳಗುತ್ತಾನೆ.

ಅಯತ್ನಸಾಧ್ಯಂ ಮುನಯೋ ವದಂತಿ
ಯೇ ಚಾಪಿ ಮುಕ್ತಾಸ್ತ ಉಪಾಸಿತವ್ಯಾಃ |
ತ್ವಯಾ ಚ ಲೋಕೇನ ಚ ಸಾಮರೇಣ
ತಸ್ಮಾನ್ನ ಶಾಮ್ಯಂತಿ ಮಹರ್ಷಿಸಂಘಾಃ ||12||

ಬಾಹ್ಯ ಪ್ರಯತ್ನಗಳಿಂದ ಪರಬ್ರಹ್ಮನನ್ನು ಹೊಂದಲಾಗದು. ಉಪಾಸನೆಯಿಂದಲೇ ಹೊಂದಬೇಕು. ಆದ್ದರಿಂದ ಮಹರ್ಷಿಗಳು ಬ್ರಹ್ಮವಿದ್ಯೆಯನ್ನು ಎಂದಿಗೂ ಬಿಟ್ಟಿರಲಾರರು.

ಅಸ್ಮಿನ್ನರ್ಥೇ ಪುರಾ ಗೀತಂ ಶೃಣುಷ್ವೈಕಮನಾ ನೃಪ |
ಯಥಾ ದೈತ್ಯೇನ ವೃತ್ರೇಣ ಭ್ರಷ್ಟೈಶ್ವರ್ಯೇಣ ಚೇಷ್ಟಿತಮ್ ||13||

ಈ ಹಿಂದೆ ಇದೇ ವಿಷಯದಲ್ಲಿ ದೈತ್ಯರಾಜನಾದ ವೃತ್ರಾಸುರನು ಹಾಡಿದ ಗೀತೆಗಳನ್ನು ಹೀಗೆ ಉದಾಹರಿಸುತ್ತಾರೆ. ಐಶ್ವರ್ಯ ಭ್ರಷ್ಟನಾದಾಗ ಅವನು ಹೇಳಿದ ಗೀತೆಯನ್ನು ಕೇಳು.

ನಿರ್ಜಿತೇನಾಸಹಾಯೇನ ಹೃತರಾಜ್ಯೇನ ಭಾರತ |
ಅಶೋಚತಾ ಶತ್ರುಮಧ್ಯೇ ಬುದ್ಧಿಮಾಸ್ಥಾಯ ಕೇವಲಾಮ್ ||14||

ದೇವತೆಗಳಿಂದ ಸೋಲನ್ನುಂಡ ವೃತ್ರಾಸುರನು ಅಸಹಾಯಕನಾದನು. ರಾಜ್ಯವೂ ಕೈತಪ್ಪಿತು. ಆ ಸಮಯದಲ್ಲಿಯೂ ಶತ್ರುಗಳ ನಡುವೆ ಬ್ರಹ್ಮಬುದ್ಧಿಯನ್ನು ಹೊಂದಿ, ಧೈರ್ಯವನ್ನು ತಾಳಿ ಶಾಂತನಾಗಿದ್ದನು.

ಭ್ರಷ್ಟೈಶ್ವರ್ಯಂ ಪುರಾ ವೃತ್ರಮುಶನಾ ವಾಕ್ಯಮಬ್ರವೀತ್ |
ಕಚ್ಚಿತ್ ಪರಾಜಿತಸ್ಯಾದ್ಯ ನ ವ್ಯಥಾ ತೇಽಸ್ತಿ ದಾನವ ॥15॥
ದುಃಖಕ್ಕೀಡಾಗದೆ, ಐಶ್ವರ್ಯಭ್ರಷ್ಟನಾಗಿರುವ ವೃತ್ರನನ್ನು ಕಂಡು ಶುಕ್ರಾಚಾರ್ಯರು ಹೀಗೆ ಹೇಳಿದರು: ದಾನವೇಂದ್ರನೇ, ನೀನು ಸೋಲನ್ನು ಉಂಡಿರುವಾಗಲೂ ವ್ಯಥೆಗೆ ತುತ್ತಾಗಿರುವುದಿಲ್ಲ. ಇದು ಹೇಗೆ?
ವೃತ್ರಃ
ಸತ್ಯೇನ ತಪಸಾ ಚೈವ ವಿದಿತ್ವಾ ಸಂಕ್ಷಯಂ ಹ್ಯಹಮ್ |
ನ ಶೋಚಾಮಿ ನ ಹೃಷ್ಯಾಮಿ ಭೂತಾನಾಮಾಗತಿಂ ಗತಿಮ್ ॥16॥
ಆಚಾರ್ಯರೇ, ನಾನು ತಪಸ್ಸಿನಿಂದಲೂ, ಸತ್ಯದಿಂದಲೂ ಭೂತಗಳ ಹುಟ್ಟು-ಸಾವುಗಳನ್ನು ಚೆನ್ನಾಗಿ ಬಲ್ಲವನಾಗಿದ್ದೇನೆ. ಆದ್ದರಿಂದ ಜೀವರ ಹುಟ್ಟು- ಸಾವುಗಳಿಂದ ಶೋಕವನ್ನಾಗಲಿ, ಸುಖವನ್ನಾಗಲಿ ಹೊಂದಲಾರೆನು.
ಕಾಲಸಂಚೋದಿತಾ ಜೀವಾ ಮಜ್ಜಂತಿ ನರಕೇಽವಶಾಃ |
ಪರಿದೃಷ್ಟಾನಿ ಸರ್ವಾಣಿ ದಿವ್ಯಾನ್ಯಾಹುರ್ಮನೀಷಿಣಃ ॥17॥
ಕಾಲನಿಂದ ಪ್ರೇರಿತರಾದ ಪಾಪ ಮಾಡಿದ ಜೀವರು ತಮ್ಮ ಪಾಪದ ಫಲದಿಂದಲೇ ಸೆಳೆಯಲ್ಪಟ್ಟು ಅಸ್ವತಂತ್ರರಾಗಿ ನರಕದಲ್ಲಿ ಮುಳುಗುತ್ತಾರೆ. ಪುಣ್ಯಕರ್ಮಿಗಳು ಪುಣ್ಯ ಕರ್ಮದಿಂದ ಸ್ವರ್ಗಸುಖವನ್ನು ಅನುಭವಿಸುತ್ತಾರೆ ಎಂದು ವಿದ್ವಾಂಸರು ಹೇಳುತ್ತಾರೆ.
ಕ್ಷಪಯಿತ್ವಾ ತು ತಂ ಕಾಲಂ ಗಣಿತಂ ಕಾಲಚೋದಿತಾಃ |
ಸಾವಶೇಷೇಣ ಕಾಲೇನ ಸಂಭವಂತಿ ಪುನಃ ಪುನಃ ॥18॥
ಅವರವರು ಮಾಡಿದ ಪುಣ್ಯ-ಪಾಪಗಳ ಸಂಬಂಧದಿಂದ ನರಕದಲ್ಲಿಯೋ, ಸ್ವರ್ಗದಲ್ಲಿಯೋ ಸ್ವಲ್ಪ ಕಾಲವಿದ್ದು ಪುನಃ ಕರ್ಮಶೇಷದಿಂದ ಭೂಮಿಯಲ್ಲಿ ಜನ್ಮವನ್ನು ತಾಳುತ್ತಾರೆ.
ತಿರ್ಯಗ್ಯೋನಿಸಹಸ್ರಾಣಿ ಗತ್ವಾ ನರಕಮೇವ ಚ |
ನಿರ್ಗಚ್ಛಂತ್ಯವಶಾ ಜೀವಾಃ ಕಾಲಬಂಧನಬಂಧನಾಃ ॥19॥
ಕಾಮನ ಬಂಧನಗಳಿಂದ ಸಿಲುಕಿದವರಾಗಿ ಅಸ್ವತಂತ್ರರಾಗಿ ಸಾವಿರಾರು ಪ್ರಾಣಿಗಳು, ಪಕ್ಷಿಗಳು, ಕ್ರಿಮಿಗಳು, ಜಲಚರ ಮೊದಲಾದ ಯೋನಿಗಳಲ್ಲಿ ಹುಟ್ಟಿ ನರಕಕ್ಕೆ ಹೋಗಿ, ಪುನಃ ಅಲ್ಲಿಂದ ಪ್ರಕೃತಿ ಬಂಧನಕ್ಕೆ ತುತ್ತಾಗುತ್ತಾರೆ.
ಏವಂ ಸಂಸರಮಾಣಾನಿ ಜೀವಾನ್ಯಹಮದೃಷ್ಟವಾನ್ |
ಯಥಾ ಕರ್ಮ ತಥಾ ಲಾಭ ಇತಿ ಶಾಸ್ತ್ರನಿದರ್ಶನಮ್ ॥20॥
ಹೀಗೆ ಜನನ-ಮರಣ ಚಕ್ರದಲ್ಲಿ ನಿರಂತರ ತಿರುಗುತ್ತಿರುವ ಜೀವರನ್ನು ನಾನು ನೋಡುತ್ತಲೇ ಇದ್ದೇನೆ. ಕರ್ಮಕ್ಕೆ ತಕ್ಕಂತೆ ಫಲಲಾಭವು ಎಂಬುದು ಶಾಸ್ತ್ರಗಳ ಸಿದ್ಧಾಂತವಾಗಿದೆ.
ತಿರ್ಯಗ್ಗಚ್ಛಂತಿ ನರಕಂ ಮಾನುಷ್ಯಂ ದೈವಮೇವ ಚ |
ಸುಖದುಃಖೇ ಪ್ರಿಯದ್ವೇಷ್ಯೇ ಚರಿತ್ವಾ ಪೂರ್ವಮೇವ ಚ ॥21॥
ಜೀವರು ಸುಖ-ದುಃಖಗಳನ್ನು, ಇಷ್ಟಾನಿಷ್ಟಗಳನ್ನು ಅನುಭವಿಸಿ, ಆ ಜನ್ಮದಲ್ಲಿ ಮಾಡಿದ ಕರ್ಮಕ್ಕನುಗುಣವಾಗಿ ನರಕವನ್ನು ಹೊಂದುತ್ತಾರೆ. ಪ್ರಾಣಿಯೋನಿಗಳಲ್ಲಿ ಹುಟ್ಟುತ್ತಾರೆ. ಮನುಷ್ಯಯೋನಿಯಲ್ಲಿಯೂ, ದೇವಯೋನಿಯಲ್ಲಿಯೂ ಜನ್ಮ ತಾಳುತ್ತಾರೆ. ಇವೆಲ್ಲವೂ ಕರ್ಮಫಲವು.
ಕೃತಾಂತವಿಧಿಸಂಯುಕ್ತಂ ಸರ್ವಲೋಕಃ ಪ್ರಪದ್ಯತೇ |
ಗತಂ ಗಚ್ಛಂತಿ ಚಾಧ್ವಾನಂ ಸರ್ವಭೂತಾನಿ ಸರ್ವದಾ ॥22॥
ಸಮಸ್ತ ಜಗತ್ತು ಸೃಷ್ಟಿಕರ್ತನ ವಶವು. ಅವನ ಅಧೀನವಾಗಿ ಸುಖ-ದುಃಖಗಳು. ಎಲ್ಲ ಪ್ರಾಣಿಗಳು ಎಲ್ಲಾ ಕಾಲದಲ್ಲಿಯೂ ಎಲ್ಲರೂ ಸಂಚರಿಸುವ ದಾರಿಯನ್ನೇ ಹಿಡಿದು ಹೋಗುತ್ತಿವೆ.
ಭೀಷ್ಮಃ
ಕಾಲಸಂಖ್ಯಾನಸಂಖ್ಯಾತಂ ಸೃಷ್ಟಿಸ್ಥಿತಿಪರಾಯಣಮ್ |
ತಂ ಭಾಷಮಾಣಂ ಭಗವಾನುಶನಾ ಪ್ರತ್ಯಭಾಷತ |
ಭೀಮಾನ್ ದುಷ್ಟಪ್ರಲಾಪಾಂಸ್ತ್ವಂ ತಾತ ಕಸ್ಮಾತ್ ಪ್ರಭಾಷಸೇ ॥23॥
ಹೀಗೆ ಸೃಷ್ಟಿ-ಸ್ಥಿತಿಗಳ ಕ್ರಮವನ್ನೂ, ಕಾಲದ ಪ್ರವೃತ್ತಿಯನ್ನೂ ಕುರಿತು ಮಾತನಾಡುತ್ತಿರುವ ವೃತ್ರಾಸುರನನ್ನು ನೋಡಿ ಶುಕ್ರಾಚಾರ್ಯರು-ವೃತ್ರನೇ, ಇದೇನು ನೀನು ಅಸಂಬದ್ಧವಾದ ಮಾತುಗಳನ್ನೇ ಆಡುತ್ತಿರುವೆ ಎಂದು ಕೇಳಿದನು.
ವೃತ್ರಃ
ಪ್ರತ್ಯಕ್ಷಮೇತದ್ಭವತಸ್ತಥಾನ್ಯೇಷಾಂ ಮನೀಷಿಣಾಮ್ |
ಮಯಾ ಯಜ್ಜಯಲುಬ್ಧೇನ ಪುರಾ ತಪ್ತಂ ಮಹತ್ತಪಃ ॥24॥
ಆಚಾರ್ಯರೇ, ನಾನು ಹೇಳಿದ್ದು ಎಂದಿಗೂ ಅಸಂಬದ್ಧವಲ್ಲ. ನಾನು ಜಯಕ್ಕಾಗಿ ಆಸೆಪಟ್ಟವನಲ್ಲ. ಅದಕ್ಕಾಗಿಯೂ ತಪಸ್ಸುಗಳನ್ನು ಆಚರಿಸಿದವನಲ್ಲ. ಈ ವಿಷಯವು ನಿನಗೂ, ಬೇರೆಯವರಿಗೂ ತಿಳಿದ ಸಂಗತಿಯೇ ಆಗಿದೆ.
ಗಂಧಾನಾದಾಯ ಭೂತಾನಾಂ ರಸಾಂಶ್ಚ ವಿವಿಧಾನಪಿ |
ಅವರ್ಧಂ ತ್ರೀನ್ ಸಮಾಕ್ರಮ್ಯ ಲೋಕಾನ್ ವೈ ಸ್ವೇನ ತೇಜಸಾ ॥25॥
ಹಿಂದೆ ನಾನು ಸಮಸ್ತ ಪ್ರಾಣಿಗಳೂ ಅನುಭವಿಸುತ್ತಿದ್ದ ಬಗೆ ಬಗೆಯ ರಸ- ಗಂಧಗಳನ್ನು ಬಲಾತ್ಕಾರದಿಂದ ಕಿತ್ತು ಅನುಭವಿಸುತ್ತಿದ್ದೆನು. ನನ್ನ ಪರಾಕ್ರಮದಿಂದ ಲೋಕಗಳನ್ನೆಲ್ಲ ಆಕ್ರಮಿಸಿದ್ದೆನು.
ಜ್ವಾಲಾಮಾಲಾಪರಿಕ್ಷಿಪ್ತೋ ವೈಹಾಯಸಚರಸ್ತಥಾ |

ಅಜೇಯಃ ಸರ್ವಭೂತಾನಾಮಾಸಂ ನಿತ್ಯಮಪೇತಭೀಃ ॥26॥
ದಿವ್ಯಜ್ಯೋತಿಯಿಂದ ಬೆಳಗುತ್ತಿದ್ದ ವಿಮಾನದಲ್ಲಿ ಕುಳಿತು, ಆಕಾಶ ಮಾರ್ಗದಲ್ಲಿ ವಿಹರಿಸುತ್ತಿದ್ದೆನು. ಯಾರಿಂದಲೂ ಜಯಿಸದವನಾಗಿ, ಭಯವಿಲ್ಲದವನಾಗಿ ಎಲ್ಲ ಕಾಲದಲ್ಲಿಯೂ ಉಲ್ಲಾಸದಿಂದ, ಉತ್ಸಾಹದಿಂದ ಇರುತ್ತಿದ್ದೆನು.
ಐಶ್ವರ್ಯಂ ತಪಸಾ ಪ್ರಾಪ್ತಂ ಭ್ರಷ್ಟಂ ತಚ್ಚ ಸ್ವಕರ್ಮಭಿಃ |
ಧೃತಿಮಾಸ್ಥಾಯ ಭಗವನ್ನ ಶೋಚಾಮಿ ತತಸ್ತ್ವಹಮ್ ॥27॥
ತಪಸ್ಸಿನಿಂದ ದೊಡ್ಡ ಐಶ್ವರ್ಯವನ್ನು ಗಳಿಸಿದೆನು. ಆದರೆ ನನ್ನ ಕರ್ಮದಿಂದ ಅವೆಲ್ಲವನ್ನೂ ಕಳೆದುಕೊಂಡಿದ್ದೇನೆ. ಇದಕ್ಕಾಗಿ ದುಃಖಿಸಬೇಕಾದ ಕಾರಣವೇನಿದೆ? ನಾನು ಧೈರ್ಯವನ್ನು ಅವಲಂಬಿಸಿದ್ದೇನೆ. ಇಂತಹ ಸ್ಥಿತಿಗೆ ನಾನು ದುಃಖಿಸುವುದಿಲ್ಲ.
ಯುಯುತ್ಸತಾ ಮಹೇಂದ್ರೇಣ ಪುರಾ ಸಾರ್ಧಂ ಮಹಾತ್ಮನಾ |
ತತೋ ಮೇ ಭಗವಾಂದೃಷ್ಟೋ ಹರಿರ್ನಾರಾಯಣಃ ಪ್ರಭುಃ ॥28॥
ಹಿಂದೆ ಮಹಾತ್ಮನಾದ ಇಂದ್ರನ ಜೊತೆ ಯುದ್ಧಕ್ಕೆ ಸಿದ್ಧನಾಗಿ ನಿಂತಾಗ ಲೋಕೇಶ್ವರನೂ, ಸನಾತನನೂ, ಭಗವಂತನೂ ಆದ ವಿಷ್ಣುವನ್ನು ನೋಡುವ ಭಾಗ್ಯವು ನನಗೆ ಲಭಿಸಿತು. ಹರಿನಾರಾಯಣನನ್ನು ನಾನು ಕಂಡೆನು.
ವೈಕುಂಠಃ ಪುರುಷೋ ವಿಷ್ಣುಃ ಶುಕ್ಲೋಽನಂತಃ ಸನಾತನಃ |
ಮುಂಜಕೇಶೋ ಹರಿಶ್ಮಶ್ರುಃ ಸರ್ವಭೂತಪಿತಾಮಹಃ ॥29॥
ನೂನಂ ತು ತಸ್ಯ ತಪಸಃ ಸಾವಶೇಷಂ ಮಮಾಸ್ತಿ ವೈ |
ಯದಹಂ ಪ್ರಷ್ಟುಮಿಚ್ಛಾಮಿ ಭವಂತಂ ಕರ್ಮಣಃ ಫಲಮ್ ॥30॥
ವೈಕುಂಠ, ಪುರುಷ, ವಿಷ್ಣು, ಶುಕ್ಲ, ಅನಂತ, ಸನಾತನ, ಮುಂಜಕೇಶ, ಹರಿಶ್ಮಶ್ರು, ಸರ್ವಭೂತಪಿತಾಮಹ ಮುಂತಾದ ನಾಮಗಳಿಂದ ಕರೆಸಿಕೊಳ್ಳುವ ನಾರಾಯಣನ ಪ್ರತ್ಯಕ್ಷ ದರ್ಶನವು ಲಭಿಸಿತು. ನನ್ನ ತಪಸ್ಸು ಫಲಿಸಿತೆಂದು ನಾನು ಭಾವಿಸಿದೆ. ಆ ಪುಣ್ಯಶೇಷವು ಇನ್ನೂ ಸ್ವಲ್ಪ ಉಳಿದಿರುವುದರಿಂದಲೇ ನಿನ್ನಲ್ಲಿ ಕರ್ಮಫಲಗಳನ್ನು ತಿಳಿಯಲು ಬಯಸುತ್ತಿದ್ದೇನೆ.
ಐಶ್ವರ್ಯಂ ವೈ ಮಹದ್ ಬ್ರಹ್ಮನ್ ಕಸ್ಮಿನ್ ವರ್ಣೇ ಪ್ರತಿಷ್ಠಿತಮ್ |
ನಿವರ್ತತೇ ಚಾಪಿ ಪುನಃ ಕಥಮೈಶ್ವರ್ಯಮುತ್ತಮಮ್ ॥31॥
ಬ್ರಾಹ್ಮಣನೇ, ಮಹತ್ತಾದ ಐಶ್ವರ್ಯವು ಯಾವ ವರ್ಣದವರಲ್ಲಿ ಸ್ಥಿತಿ ಹೊಂದಿದೆ? ಆ ಐಶ್ವರ್ಯವು ಬಿಟ್ಟು ಹೋಗಲು ಕಾರಣವೇನು?
ಕಸ್ಮಾದ್ ಭೂತಾನಿ ಜೀವಂತಿ ಪ್ರವರ್ತಂತೇಽಥ ವಾ ಪುನಃ |
ಕಿಂ ವಾ ಫಲಂ ಪರಂ ಪ್ರಾಪ್ಯ ಜೀವಸ್ತಿಷ್ಠತಿ ಶಾಶ್ವತಃ ॥32॥
ಯಾರ ದೆಸೆಯಿಂದ ಜೀವರೆಲ್ಲರೂ ಬದುಕುತ್ತಾರೆ? ಯಾರ ದೆಸೆಯಿಂದ ಜೀವರಲ್ಲರೂ ಪ್ರವೃತ್ತಿಯನ್ನು ಹೊಂದುತ್ತಾರೆ? ಯಾವ ಫಲವನ್ನು ಹೊಂದಿದ ಜೀವನು ಶಾಶ್ವತವಾದ ತನ್ನ ಸ್ವರೂಪವನ್ನು ಹೊಂದುತ್ತಾನೆ?
ಕೇನ ವಾ ಕರ್ಮಣಾ ಶಕ್ಯಮಥ ಜ್ಞಾನೇನ ಕೇನ ವಾ |
ಬ್ರಹ್ಮರ್ಷೇ ತತ್ಫಲಂ ಪ್ರಾಪ್ತುಂ ತನ್ಮೇ ವ್ಯಾಖ್ಯಾತುಮರ್ಹಸಿ ॥33॥
ಯಾವ ಕರ್ಮದಿಂದ ಅಥವಾ ಯಾವ ಜ್ಞಾನದಿಂದ ನಿತ್ಯಫಲವು ದೊರೆಯುತ್ತದೆ? ಬ್ರಹ್ಮರ್ಷಿಯೇ, ಆ ಫಲವನ್ನು ಹೊಂದುವ ಬಯಕೆಯುಳ್ಳ ನನಗೆ ಇವೆಲ್ಲವನ್ನೂ ವಿಸ್ತರಿಸಿ ಹೇಳು.
ಇತೀದಮುಕ್ತಃ ಸ ಮುನಿಸ್ತದಾನೀಂ
ಪ್ರತ್ಯಾಹ ಯತ್ತಚ್ಛೃಣು ರಾಜಸಿಂಹ |
ಮಯೋಚ್ಯಮಾನಂ ಪುರುಷರ್ಷಭ ತ್ವ-
ಮನನ್ಯಚಿತ್ತಃ ಸಹ ಸೋದರೀಯೈಃ ॥34॥
ಧರ್ಮಪುತ್ರನೇ, ಅದಕ್ಕೆ ಮಹರ್ಷಿಯು ಹೇಳಿದ ಉತ್ತರವನ್ನೇ ನಿನಗೆ ಹೇಳುತ್ತೇನೆ. ನೀನು ನಿನ್ನ ಸಹೋದರರೊಡನೆ ಸಾವಧಾನವಾಗಿ ಅದನ್ನು ಕೇಳಬೇಕು ಎಂದು ಭೀಷ್ಮರು ಹೇಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಯೋದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಹದಿನಾಲ್ಕನೆಯ ಅಧ್ಯಾಯ

ಯುಧಿಷ್ಠಿರನ ಸಂಶಯವನ್ನು ಪರಿಹರಿಸಲು ಭೀಷ್ಮರು ವೃತ್ರಾಸುರನಿಗೆ ಸನತ್ಕುಮಾರರು ಮಾಡಿದ ಉಪದೇಶವನ್ನು ತಿಳಿಸಿದುದು.
ಉಶನಾಃ
ನಮಸ್ತಸ್ಮೈ ಭಗವತೇ ದೇವಾಯ ಪ್ರಭವಿಷ್ಣವೇ |
ಯಸ್ಯ ಪೃಥ್ವೀತಲಂ ತಾತ ಸಾಕಾಶಂ ಬಾಹುಗೋಚರಮ್ ॥1॥
ಈ ಭೂಮಂಡಲವು ಆಕಾಶ ಸಹಿತವಾಗಿ ಯಾವ ಶ್ರೀಹರಿಯ ಪರಾಕ್ರಮದಿಂದ ನೆಲೆಗೊಂಡಿದೆಯೋ ಸರ್ವಸಮರ್ಥನಾದ, ಷಡ್ಗುಣೈಶ್ವರ್ಯ ಸಂಪನ್ನನಾದ ಅಂತಹ ವಿಷ್ಣುವಿಗೆ ನಮಸ್ಕರಿಸುತ್ತೇನೆ.
ಮೂರ್ಧಾ ಯಸ್ಯ ತ್ವನಂತಂ ಚ ಸ್ಥಾನಂ ದಾನವಸತ್ತಮ |
ತಸ್ಯಾಹಂ ತೇ ಪ್ರವಕ್ಷ್ಯಾಮಿ ವಿಷ್ಣೋರ್ಮಾಹಾತ್ಮ್ಯಮುತ್ತಮಮ್ ॥2॥
ದಾನವಶ್ರೇಷ್ಠನೇ, ಯಾವ ಶ್ರೀಹರಿಯ ಶಿರಸ್ಸು ಅನಂತವೆನಿಸಿದೆಯೋ ಅಂತಹ ಮಹಾವಿಷ್ಣುವಿನ ಶ್ರೇಷ್ಠವಾದ ಮಾಹಾತ್ಮ್ಯವನ್ನು ಹೇಳುತ್ತೇನೆ.

ಭೀಷ್ಮಃ
ತಯೋಃ ಸಂವದತೋರೇವಮಾಜಗಾಮ ಮಹಾಮುನಿಃ |
ಸನತ್ಕುಮಾರೋ ಧರ್ಮಾತ್ಮಾ ಸಂಶಯಚ್ಛೇದನಾಯ ವೈ ॥3॥
ಯುಧಿಷ್ಠಿರನೇ, ವೃತ್ರ, ಶುಕ್ರರು ಇಬ್ಬರು ಹೀಗೆ ಸಂವಾದ ನಡೆಸುತ್ತಿರುವಾಗ ಅವರ ಸಂಶಯವನ್ನು ಪರಿಹರಿಸಲು ಧರ್ಮಾತ್ಮನಾದ, ಪೂಜ್ಯನಾದ ಸನತ್ಕುಮಾರನು ಅಲ್ಲಿಗೆ ಆಗಮಿಸಿದನು.
ಸ ಪೂಜಿತೋಸುರೇಂದ್ರೇಣ ಮುನಿನೋಶನಸಾ ತಥಾ |
ನಿಷಸಾದಾಸನೇ ರಾಜನ್ಮಹಾರ್ಹೇ ಮುನಿಪುಂಗವಃ ॥4॥
ಅಸುರೇಂದ್ರನಾದ ವೃತ್ರಾಸುರನಿಂದ ಮತ್ತು ಶುಕ್ರಾಚಾರ್ಯನಿಂದ ಪೂಜಿತನಾದ, ಶ್ರೇಷ್ಠ ಮುನಿ ಎನಿಸಿದ ಸನತ್ಕುಮಾರನು ಆಸನದಲ್ಲಿ ಉಪವಿಷ್ಟನಾದನು.
ತಮಾಸೀನಂ ಮಹಾಪ್ರಾಜ್ಞಮುಶನಾ ವಾಕ್ಯಮಬ್ರವೀತ್ |
ಬ್ರೂಹ್ಯಸ್ಮೈ ದಾನವೇಂದ್ರಾಯ ವಿಷ್ಣೋರ್ಮಾಹಾತ್ಮ್ಯಮುತ್ತಮಮ್ ॥5॥
ಮಹಾಪ್ರಾಜ್ಞನಾದ ಸನತ್ಕುಮಾರನು ಕುಳಿತುಕೊಂಡ ಬಳಿಕ ಶುಕ್ರಾಚಾರ್ಯರು ಪ್ರಶ್ನಿಸಿದರು: ಸನತ್ಕುಮಾರನೇ, ವೃತ್ರಾಸುರನಿಗೆ ವಿಷ್ಣುವಿನ ಶ್ರೇಷ್ಠವಾದ ಮಾಹಾತ್ಮ್ಯವನ್ನು ತಿಳಿಸು.
ಸನತ್ಕುಮಾರಸ್ತು ತತಃ ಶ್ರುತ್ವಾ ಪ್ರಾಹ ವಚೋಽರ್ಥವತ್ |
ವಿಷ್ಣೋರ್ಮಾಹಾತ್ಮ್ಯಸಂಯುಕ್ತಂ ದಾನವೇಂದ್ರಾಯ ಧೀಮತೇ ॥6॥
ಶುಕ್ರಾಚಾರ್ಯರ ಮಾತನ್ನು ಕೇಳಿಸಿಕೊಂಡ ಸನತ್ಕುಮಾರರು ಜಾಣನಾದ ವೃತ್ರನಿಗೆ ವಿಷ್ಣುವಿನ ಮಹಿಮೆಯನ್ನು ತಿಳಿಸುವ, ಅರ್ಥಯುಕ್ತವಾದ ಮಾತುಗಳನ್ನು ಹೇಳಲು ಆರಂಭಿಸಿದರು.
ಶೃಣು ಸರ್ವಮಿದಂ ದೈತ್ಯ ವಿಷ್ಣೋರ್ಮಾಹಾತ್ಮ್ಯಮುತ್ತಮಮ್ |
ವಿಷ್ಣೌ ಜಗತ್ಸ್ಥಿತಂ ಸರ್ವಮಿತಿ ವಿದ್ಧಿ ಪರಂತಪ ॥7॥
ದೈತ್ಯೇಶ್ವರನೇ, ಪರಂತಪನೇ, ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವಿನ ಸಮಗ್ರವಾದ, ಶ್ರೇಷ್ಠವಾದ ಮಹಿಮೆಯನ್ನು ಕೇಳು. ಜಗತ್ತೆಲ್ಲವೂ ವಿಷ್ಣುವಿನಲ್ಲಿಯೇ ಪ್ರತಿಷ್ಠಿತವಾಗಿದೆ ಎಂದು ತಿಳಿದುಕೊ.
ಸೃಜತ್ಯೇಷ ಮಹಾಬಾಹೋ ಭೂತಗ್ರಾಮಂ ಚರಾಚರಮ್ |
ಏಷ ಚಾಕ್ಷಿಪತೇ ಕಾಲೇ ಕಾಲೇ ವಿಸೃಜತೇ ಪುನಃ |
ಅಸ್ಮಿನ್ ಗಚ್ಛಂತಿ ವಿಲಯಮಸ್ಮಾಚ್ಚ ಪ್ರಭವಂತ್ಯುತ ॥8॥
ಮಹಾಬಾಹುವೇ, ಚರಾಚರ ಪ್ರಾಣಿಪ್ರಪಂಚವನ್ನು ಭಗವಂತನೇ ಸೃಷ್ಟಿಸುತ್ತಾನೆ. ಕಾಲವು ಪ್ರಾಪ್ತವಾದಾಗ ಅವನೇ ಸಂಹರಿಸುತ್ತಾನೆ. ಪುನಃ ಅವನೇ ಸೃಷ್ಟಿಯನ್ನು ಮಾಡುತ್ತಾನೆ. ಸಮಗ್ರ ಪ್ರಾಣಿ ಪ್ರಪಂಚವು ವಿಷ್ಣುವಿನಲ್ಲೇ ಲಯವನ್ನು ಹೊಂದಿ ಪುನಃ ಅವನಿಂದಲೇ ಪ್ರಾದುರ್ಭೂತವಾಗುತ್ತದೆ.
ನೈಷ ದಾನವತಾ ಶಕ್ಯಸ್ತಪಸಾ ನೈವ ಚೇಜ್ಯಯಾ |
ಸಂಪ್ರಾಪ್ತುಮಿಂದ್ರಿಯಾಣಾಂ ತು ಸಂಯಮೇನೈವ ಶಕ್ಯತೇ ॥9॥
ಭಗವಂತನನ್ನು ಶಾಸ್ತ್ರಜ್ಞಾನದಿಂದಲಾಗಲಿ, ತಪಸ್ಸಿನಿಂದಲಾಗಲಿ, ಯಜ್ಞ- ಕರ್ಮಗಳಿಂದಲಾಗಲಿ ಹೊಂದಲಾಗದು. ಜಿತೇಂದ್ರಿಯನಾಗಿ ಇದ್ದ ವ್ಯಕ್ತಿಯು ಅವನನ್ನು ಹೊಂದಬಹುದು.
ಬಾಹ್ಯೇ ಚಾಭ್ಯಂತರೇ ಚೈವ ಕರ್ಮಣಾ ಮನಸಿ ಸ್ಥಿತಃ |
ನಿರ್ಮಲೀಕುರುತೇ ಬುದ್ಧ್ಯಾ ಸೋಽಮುತ್ರಾನಂತ್ಯಮಶ್ನುತೇ ॥10॥
ಯಾವನು ಬಾಹ್ಯಾಭ್ಯಂತರ ಶುದ್ಧಿಯನ್ನು ಹೊಂದಿರುತ್ತಾನೋ, ಬುದ್ಧಿಯಿಂದ ದೈಹಿಕವಾಗಿ ಮೃತ್-ಜಲಗಳಿಂದ ಶುದ್ಧಿಯನ್ನು ಮಾಡಿಕೊಂಡು, ಮಾನಸಿಕವಾಗಿ ಧ್ಯಾನದಿಂದ ಶುದ್ಧಿಯನ್ನು ಮಾಡಿಕೊಂಡಿರುತ್ತಾನೋ ಅವನು ಮಹತ್ತರವಾದ ಮೋಕ್ಷವನ್ನು ಹೊಂದುತ್ತಾನೆ.
ಯಥಾ ಹಿರಣ್ಯಕರ್ತಾ ವೈ ರೂಪ್ಯಮಗ್ನೌ ವಿಶೋಧಯೇತ್ |
ಬಹುಶೋಽತಿಪ್ರಯತ್ನೇನ ಮಹತಾತ್ಮಕೃತೇನ ಹ ॥11॥
ಯಾವ ರೀತಿ ಅಕ್ಕಸಾಲಿಗನು ಬೆಳ್ಳಿಯನ್ನು ಬೆಂಕಿಯಲ್ಲಿ ಹಾಕಿ ಪ್ರಯತ್ನ ಪೂರ್ವಕವಾಗಿ ಅದನ್ನು ಶುದ್ಧಿಗೊಳಿಸುತ್ತಾನೋ ಅದರಂತೆ ನೂರಾರು ಜನ್ಮಗಳ ನಂತರ ಮನಸ್ಸನ್ನು ಸಾತ್ವಿಕ ಜೀವರಿಂದ ಮುಕ್ತಿಗೊಳಿಸುತ್ತಾನೆ.
ತದ್ವಜ್ಜಾತಿಶತೈರ್ಜೀವಃ ಶುದ್ಧ್ಯತೇಽಲ್ಪೇನ ಕರ್ಮಣಾ |
ಯತ್ನೇನ ಮಹತಾ ಚೈವಾಪ್ಯೇಕಜಾತೌ ವಿಶುದ್ಧ್ಯತೇ ॥12॥
ಆದರೆ ಯಜ್ಞ, ಶಮ, ದಮಗಳ ಮೂಲಕ ಮಹಾಪ್ರಯತ್ನವನ್ನು ಸಾಧಿಸಿದಲ್ಲಿ ಒಂದೇ ಜನ್ಮದಲ್ಲಿಯೇ ಶುದ್ಧಿಯನ್ನು ಹೊಂದಬಲ್ಲನು.
ಲೀಲಯಾಲ್ಪಂ ಯಥಾ ಗಾತ್ರಾತ್ ಪ್ರಮಜ್ಯಾದಾತ್ಮನೋ ರಜಃ |
ಬಹು ಯತ್ನೇನ ಮಹತಾ ದೋಷನಿರ್ಹರಣಂ ತಥಾ ॥13॥
ಮನುಷ್ಯನು ಶರೀರದಲ್ಲಿ ಸೇರಿಕೊಂಡಿರುವ ಧೂಳನ್ನು ಹೇಗೆ ಕೊಡವಿಕೊಂಡು ಪರಿಹರಿಸಿಕೊಳ್ಳುತ್ತಾನೋ ಅದರಂತೆ ಹೃದಯದಲ್ಲಿ ಅಡಕವಾಗಿರುವ ರಾಗ-ದ್ವೇಷಗಳನ್ನು ಮಹಾಪ್ರಯತ್ನದಿಂದ ಪರಿಹರಿಸಿಕೊಳ್ಳಬಹುದು.
ಯಥಾ ಚಾಲ್ಪೇನ ಮಾಲ್ಯೇನ ವಾಸಿತಂ ತಿಲಸರ್ಷಪಮ್ |
ನ ಮುಂಚತಿ ಸ್ವಕಂ ಗಂಧಂ ತದ್ವತ್ ಸೂಕ್ಷ್ಮಸ್ಯ ದರ್ಶನಮ್ ॥14॥
ಸಣ್ಣ ಹೂವಿನ ಮಾಲೆಯನ್ನು ಎಳ್ಳು ಅಥವಾ ಸಾಸಿವೆಯ ಎಣ್ಣೆಯಲ್ಲಿ ಮುಳುಗಿಸಿಟ್ಟಾಗ ಎಳ್ಳು-ಸಾಸಿವೆಗಳು ತಮ್ಮ ಗಂಧವನ್ನು ಹೇಗೆ

ಆ ಮಾಲೆಯ ಪರಿಮಳವಿದ್ದಾಗಲೂ ಬಿಟ್ಟುಕೊಡುವುದಿಲ್ಲವೋ ಅದರಂತೆ ಅನೇಕ ಜನ್ಮಗಳಿಂದ ಬಂದ ಕಾಮಕ್ರೋಧಾದಿ ವಾಸನೆಗಳು ಬಹುಪ್ರಯತ್ನವಿಲ್ಲದೆ ಸ್ವಲ್ಪ ಪ್ರಯತ್ನದಿಂದ ಜೀವರನ್ನು ಬಿಟ್ಟು ಹೋಗುವುದಿಲ್ಲ.
ತದೇವ ಬಹುಭಿರ್ಮಾಲ್ಯೈರ್ವಾಸ್ಯಮಾನಂ ಪುನಃ ಪುನಃ |
ವಿಮುಂಚತಿ ಸ್ವಕಂ ಗಂಧಂ ಮಾಲ್ಯಗಂಧೇऽವತಿಷ್ಠತಿ ॥15॥
ಏವಂ ಜಾತಿಶತೈರ್ಯುಕ್ತೋ ಗುಣೈರೇವ ಪ್ರಸಂಗಿಷು |
ಬುದ್ಧ್ಯಾ ನಿವರ್ತತೇ ದೋಷೋ ಯತ್ನೇನಾಭ್ಯಾಸಜೇನ ವೈ ॥16॥
ಆದರೆ ಅದೇ ಎಳ್ಳಿನ ಅಥವಾ ಸಾಸಿವೆ ಎಣ್ಣೆಯಲ್ಲಿ ಹತ್ತಾರು ಪರಿಮಳ ಭರಿತವಾದ ಮಾಲೆಯನ್ನು ನೆನೆಸಿಟ್ಟರೆ ಆ ಹೆಚ್ಚಾದ ಹೂವಿನ ಪರಿಮಳದಿಂದ ಎಣ್ಣೆಯ ಸ್ವಾಭಾವಿಕವಾದ ವಾಸನೆಯನ್ನು ಪುಷ್ಪದ ಗಂಧವೇ ಎಣ್ಣೆಯಲ್ಲಿಯೂ ತೋರುತ್ತದೋ ಅದರಂತೆ ನೂರಾರು ಜನ್ಮಗಳ ಸತ್ತ್ವ-ರಜೋಗುಣಗಳ ಸಂಸ್ಕಾರದಿಂದ ಉಂಟಾದ ಕಾಮ-ಕ್ರೋಧಾದಿಗಳೆಂಬ ವಾಸನೆಯು ನಿರಂತರ ಜೀವನು ಮಾಡುವ ಸಜ್ಜನರ ಸಹವಾಸ, ಭಗವಂತನ ಗುಣಗಳ ಚಿಂತನೆ ಮುಂತಾದ ಮಹಾಪ್ರಯತ್ನಗಳಿಂದ ಪರಿಹರಿಸಿಕೊಳ್ಳಬಲ್ಲನು.
ಕರ್ಮಣಾ ಸ್ವೇನ ರಕ್ತಾನಿ ವಿರಕ್ತಾನಿ ಚ ದಾನವ |
ಯಥಾ ಕರ್ಮವಿಶೇಷಾಂಶ್ಚ ಪ್ರಾಪ್ನುವಂತಿ ತಥಾ ಶೃಣು ॥17॥
ಧನುಪುತ್ರನೇ, ಬಾಹ್ಯಕರ್ಮಗಳಲ್ಲಿಯೇ ಆಸಕ್ತರಾದ ಜೀವರು ಮತ್ತು ಕರ್ಮದಲ್ಲಿ ಆಸಕ್ತಿಯನ್ನು ಹೊಂದದ ಜೀವರು ರಾಗ-ದ್ವೇಷಗಳಿಗೂ, ವೈರಾಗ್ಯಕ್ಕೂ ಕಾರಣವಾದ ಬೇರೆ ಬೇರೆ ಕರ್ಮಗಳನ್ನು ಹೇಗೆ ಹೊಂದುತ್ತಾರೆ ಎಂಬುದನ್ನು ಹೇಳುತ್ತೇನೆ, ಕೇಳು.
ಯಥಾ ಚ ಸಂಪ್ರವರ್ತಂತೇ ಯಸ್ಮಿಂಸ್ತಿಷ್ಠಂತಿ ವಾ ವಿಭೋ |
ತತ್ತೇಽನುಪೂರ್ವ್ಯಾ ವ್ಯಾಖ್ಯಾಸ್ಯೇ ತದಿಹೈಕಮನಾಃ ಶೃಣು ॥18॥
ಪ್ರಾಣಿಗಳು ಕರ್ಮದಲ್ಲಿ ಹೇಗೆ ಪ್ರವೃತ್ತಿಯನ್ನು ಹೊಂದುತ್ತಾರೆ, ಅದರಿಂದ ಅವರ ಸ್ಥಿತಿಯು ಹೇಗೆ ಮುಂದುವರೆಯುತ್ತದೆ, ಯಾವ ಅವಸ್ಥೆಯಲ್ಲಿ ಕರ್ಮದ ನಿವೃತ್ತಿ ಉಂಟಾಗುತ್ತದೆ ಎಲ್ಲವನ್ನೂ ಕ್ರಮವಾಗಿ ತಿಳಿಸುತ್ತೇನೆ, ಏಕಾಗ್ರತೆಯಿಂದ ಕೇಳಿಸಿಕೊ.
ಅನಾದಿನಿಧನಃ ಶ್ರೀಮಾನ್ ಹರಿರ್ನಾರಾಯಣಃ ಪ್ರಭುಃ |
ಸ ವೈ ಸೃಜತಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥19॥
ಶ್ರೀಮಾನ್ ಸರ್ವಸಮರ್ಥನಾದ ಹರಿನಾರಾಯಣನು ಆದ್ಯಂತರಹಿತನು. ಅವನೇ ಚರಾಚರ ಪ್ರಾಣಿಗಳನ್ನು ಸೃಷ್ಟಿಸುತ್ತಾನೆ.
ಏಷ ಸರ್ವೇಷು ಭೂತೇಷು ಕ್ಷರಶ್ಚಾಕ್ಷರ ಏವ ಚ |
ಏಕಾದಶವಿಕಾರಾತ್ಮಾ ಜಗತ್ ಪಿಬತಿ ರಶ್ಮಿಭಿಃ ॥20॥
ಈ ನಾರಾಯಣನೇ ಸಮಸ್ತ ಕ್ಷರಾಕ್ಷರಪ್ರಾಣಿಗಳಿಗೆ ನಿಯಾಮಕನಾಗಿ, ಅಂತರ್ಯಾಮಿಯಾಗಿ ಇದ್ದಾನೆ. ಹನ್ನೊಂದು ವಿಕಾರಗಳನ್ನು ಹೊಂದಿರುವ ಜಗತ್ತನ್ನು ಸೂರ್ಯನಾರಾಯಣನು ತನ್ನ ರಶ್ಮಿಗಳಿಂದಲೇ ವ್ಯಾಪಿಸಿಕೊಂಡಿದ್ದಾನೆ. ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಮನಸ್ಸು - ಇವೇ ಜೀವನ ಕರ್ಮವಿಕಾರಗಳೆನಿಸಿವೆ.
ಪಾದೌ ತಸ್ಯ ಮಹೀಂ ವಿದ್ಧಿ ಮೂರ್ಧಾನಂ ದಿವಮೇವ ಚ |
ಬಾಹವಸ್ತು ದಿಶೋ ದೈತ್ಯ ಶ್ರೋತ್ರಮಾಕಾಶಮೇವ ಚ ॥21॥
ತಸ್ಯ ತೇಜೋಮಯಃ ಸೂರ್ಯೋ ಮನಶ್ಚಂದ್ರಮಸಿ ಸ್ಥಿತಮ್ |
ಬುದ್ಧಿರ್ಜ್ಞಾನಗತಾ ನಿತ್ಯಂ ರಸಸ್ತ್ವಪ್ಸು ಪ್ರವರ್ತತೇ ॥22॥
ವಿಷ್ಣುವಿನ ಎರಡು ಪಾದಗಳೇ ಪೃಥಿವಿ ಲೋಕವು. ಸ್ವರ್ಗಲೋಕವು ಅವನ ತಲೆ ಎನಿಸಿದೆ. ನಾಲ್ಕು ದಿಕ್ಕುಗಳು ಅವನ ನಾಲ್ಕು ತೋಳುಗಳೆನಿಸಿವೆ. ಆಕಾಶವೇ ಅವನ ಕಿವಿ. ತೇಜೋಮಯನಾದ ಸೂರ್ಯನೇ ಅವನ ಚಕ್ಷುಸ್ಸು. ಚಂದ್ರನೇ ಅವನ ಮನಸ್ಸು. ಅವನ ಬುದ್ಧಿಯು ಮಹತ್ತತ್ತ್ವವೆನಿಸಿದೆ. ರಸವು ನೀರಿನಲ್ಲಿ ಪ್ರತಿಷ್ಠಿತವಾಗಿದೆ. ನೀರು ವಿಷ್ಣುವಿನ ರಸನೇಂದ್ರಿಯವೆನಿಸಿದೆ.
ಭ್ರುವೋರನಂತರಾಸ್ತಸ್ಯ ಗ್ರಹಾ ದಾನವಸತ್ತಮ |
ನಕ್ಷತ್ರಚಕ್ರಂ ನೇತ್ರಾಭ್ಯಾಂ ಪಾದಯೋರ್ಭೂಶ್ಚ ದಾನವ ॥23॥
ಸಮಸ್ತ ಗ್ರಹಗಳು ವಿಷ್ಣುವಿನ ಎರಡು ಹುಬ್ಬುಗಳ ನಡುವೆ ಇವೆ. ಅವನ ಕಣ್ಣಿನಿಂದ ನಕ್ಷತ್ರ ಮಂಡಲವು ಸೃಷ್ಟಿಗೊಂಡಿದೆ. ಈ ಭೂಮಂಡಲವು ಅವನ ಪಾದದಲ್ಲಿ ಪ್ರತಿಷ್ಠಿತವಾಗಿದೆ.
ರಜಸ್ತಮಶ್ಚ ಸತ್ತ್ವಂ ಚ ವಿದ್ಧಿ ನಾರಾಯಣಾತ್ಮಕಮ್ |
ಸೋऽऽಶ್ರಮಾಣಾಂ ಮುಖಂ ತಾತ ಕರ್ಮಣಸ್ತತ್ಫಲಂ ವಿದುಃ ॥24॥
ಸತ್ತ್ವ-ರಜಸ್-ತಮೋಗುಣಗಳು ನಾರಾಯಣನಿಂದ ವ್ಯಾಪಿಸಲ್ಪಟ್ಟಿವೆ. ಎಲ್ಲ ಆಶ್ರಮಗಳ ಫಲಗಳನ್ನು ನೀಡುವವನು ಅವನೇ ಆಗಿದ್ದಾನೆ. ಸತ್ಕರ್ಮಗಳಿಗೆ ಫಲವನ್ನು ನೀಡುವವನು ಅವನೇ ಎಂದು ವಿದ್ವಾಂಸರು ಹೇಳುತ್ತಾರೆ.
ಅಕರ್ಮಣಃ ಫಲಂ ಚೈವ ಸ ಏವ ಪರಮವ್ಯಯಃ |
ಛಂದಾಂಸಿ ತಸ್ಯ ರೋಮಾಣಿ ಅಕ್ಷರಂ ಚ ಸರಸ್ವತೀ ॥25॥
ನಿಷ್ಕಾಮ ಕರ್ಮಕ್ಕೂ ಫಲವನ್ನು ನೀಡುವವನು ಅವಿನಾಶಿಯಾದ ಶ್ರೀಹರಿಯೇ ಆಗಿದ್ದಾನೆ. ಅವನ ರೋಮಕೋಟಿಗಳು ವೇದಮಂತ್ರವೆನಿಸಿದೆ. ಪ್ರಣವ ಮಂತ್ರವು ಅವನ ವಾಣಿಯಾಗಿದೆ.
ಬಹ್ವಾಶ್ರಯೋ ಬಹುಮುಖೋ ಧರ್ಮೋ ಹೃದಿ ಸಮಾಶ್ರಿತಃ |
ಸ ಬ್ರಹ್ಮಪರಮೋ ಧರ್ಮಸ್ತಪಶ್ಚ ಸದಸಚ್ಚ ಸಃ ॥26॥
ಅನೇಕರಿಗೆ ಆಶ್ರಯದಾತನಾದ, ಬಹುಮುಖನಾದ ಭಗವಂತನು ಎಲ್ಲರ ಹೃದಯದಲ್ಲಿ ವಾಸವಾಗಿದ್ದಾನೆ. ಆ ಗುಣಪರಿಪೂರ್ಣನಾದ ಬ್ರಹ್ಮನೇ ಸರ್ವೋತ್ತಮನು. ತಪಸ್ಸು, ಕಾರ್ಯ-ಕಾರಣರೂಪ, ಧರ್ಮ ಎಂಬ ಹೆಸರಿನಿಂದ ಅಂತರ್ಯಾಮಿಯಾಗಿದ್ದಾನೆ.
ಶ್ರುತಿಶಾಸ್ತ್ರಗ್ರಹೋಪೇತಃ ಷೋಡಶರ್ತ್ವಿಕ್ಕ್ರತುಶ್ಚ ಸಃ |

ಪಿತಾಮಹಶ್ಚ ವಿಷ್ಣುಶ್ಚ ಸೋಽಶ್ವಿನೌ ಸ ಪುರಂದರಃ ॥27॥
ಮಿತ್ರಶ್ಚ ವರುಣಶ್ಚೈವ ಯಮೋಽಥ ಧನದಸ್ತಥಾ |
ತೇ ಪೃಥಗ್ದರ್ಶನಾಸ್ತಸ್ಯ ಸಂವಿದಂತಿ ತಥೈಕತಾಮ್ |
ಏಕಸ್ಯ ವಿದ್ಧಿ ದೇವಸ್ಯ ಸರ್ವಂ ಜಗದಿದಂ ವಶೇ ॥28॥
ವೇದ-ಶಾಸ್ತ್ರ, ಸೋಮಪಾತ್ರೆಯಿಂದ ಸಹಿತನಾದ, ಹದಿನಾರು ಋತ್ವಿಜರಿಂದ ಕೂಡಿದ ಯಜ್ಞವು ನಾರಾಯಣನೇ ಆಗಿದ್ದಾನೆ. ಚತುರ್ಮುಖ ಬ್ರಹ್ಮನು, ವಿಷ್ಣುವು, ಅಶ್ವಿನಿ ಕುಮಾರರು, ಇಂದ್ರ, ಮಿತ್ರ, ವರುಣ, ಯಮ, ಕುಬೇರ ಇವರೆಲ್ಲರ ಅಂತರ್ಯಾಮಿಯು ನಾರಾಯಣನೇ ಆಗಿದ್ದಾನೆ. ದೇವತೆಗಳೆಲ್ಲರೂ ವಿಷ್ಣುವಿನ ಈ ಎಲ್ಲ ನಾಮಗಳನ್ನೇ ತಾವು ಅವನಿಂದ ಪಡೆದು ಧರಿಸಿರುತ್ತಾರೆ. ಈ ದೇವತೆಗಳಿಗೂ, ಭಗವಂತನಿಗೂ ಭೇದವೇ ಇದೆ. ಒಟ್ಟಿನಲ್ಲಿ ಸರ್ವೋತ್ತಮನಾದ ನಾರಾಯಣನ ಅಧೀನವಾಗಿ ಈ ಸಮಗ್ರ ಜಗತ್ತು ಇದೆ ಎಂಬುದನ್ನು ತಿಳಿದುಕೊ.
ವ್ಯಾಖ್ಯಾನ ವಿಶೇಷ ಬ್ರಹ್ಮಾ, ಬ್ರಾಹ್ಮಣಾಚ್ಛಂ ಸಿ ಆಗ್ನೀಧ, ಪೋತಾ ಹೋತಾ ಮೈತ್ರಾವರುಣ, ಆಚ್ಛಾವಾಕ, ಗ್ರಾವಸ್ತೋತಾ, ಅಧ್ವರ್ಯು, ಪ್ರತಿಪ್ರಸ್ಥಾತಾ, ನೇಷ್ಟ, ಉನ್ನೇತಾ, ಉದ್ಗಾತಾ, ಪ್ರಸ್ತೋತಾ, ಪ್ರತಿಹರ್ತಾ, ಸುಬ್ರಹ್ಮಣ್ಯ- ಎಂಬ ಹದಿನಾರು ಋತ್ವಿಕ್ ನಾಲ್ಕು ನಾಲ್ಕರಂತೆ ನಾಲ್ಕು ವೇದಗಳಿಗೆ ಸಂಬಂಧಿಸಿದವರಾಗಿದ್ದಾರೆ.
ನಾನಾಭೂತಸ್ಯ ದೈತ್ಯೇಂದ್ರ ತಸ್ಯೈಕತ್ವಂ ವದತ್ಯಯಮ್ |
ಜಂತುಃ ಪಶ್ಯತಿ ಜ್ಞಾನೇನ ತತಃ ಸತ್ತ್ವಂ ಪ್ರಕಾಶತೇ ॥29॥
ದೈತ್ಯೇಂದ್ರನೇ, ಅನೇಕ ಜೀವರಲ್ಲಿ ಅಂತರ್ಯಾಮಿಯಾಗಿರುವಂತಹ ಪರಮಾತ್ಮನಲ್ಲಿ ಭೇದ ಇರುವುದಿಲ್ಲ. ಸ್ಥಾನಭೇದದಿಂದ ಪರಮಾತ್ಮನಲ್ಲಿ ಭೇದವನ್ನು ಚಿಂತಿಸಬಾರದು. ಮನುಷ್ಯನು ಭಗವದ್‌ಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುತ್ತಾನೆ.
ಸಂಹಾರವಿಕ್ಷೇಪಸಹಸ್ರಕೋಟೀ
ಸ್ತಿಷ್ಠಂತಿ ಜೀವಾಃ ಪ್ರಚರಂತಿ ಚಾನ್ಯೇ |
ಪ್ರಜಾವಿಸರ್ಗಸ್ಯ ಚ ಪಾರಿಮಾಣ್ಯಂ
ವಾಪೀಸಹಸ್ರಾಣಿ ಬಹೂನಿ ದೈತ್ಯ ॥30॥
ಭಗವಂತನ ದೆಸೆಯಿಂದ ಸಾವಿರಾರು ಕೋಟಿ ಮರಣಗಳನ್ನು ಹೊಂದಿ, ದೇವರ ಉದರವನ್ನು ಹೊಕ್ಕು, ಪುನಃ ಸೃಷ್ಟಿಯನ್ನು ಹೊಂದಿರುವ ಅನೇಕ ಜೀವರು ಇನ್ನೂ ಸಂಸಾರದಲ್ಲೇ ಇದ್ದಾರೆ. ಇನ್ನು ಕೆಲವು ಜೀವರು ಶ್ರೇಷ್ಠವಾದ ಜೀವನವನ್ನು ಆಚರಿಸುತ್ತಿದ್ದಾರೆ. ಹೀಗೆ ಅನಂತಕೋಟಿ ಜೀವರು ಪರಮಾತ್ಮನಿಂದ ಸೃಷ್ಟಿಯನ್ನು ಪಡೆದು, ಅವನ ಉದರವನ್ನು ಪ್ರವೇಶಿಸಿ, ಭಿನ್ನಭಿನ್ನ ಕರ್ಮಗಳನ್ನು ಆಚರಿಸುತ್ತಲೇ ಇದ್ದಾರೆ. ಅನೇಕ ಸಾವಿರಾರು ಬಾವಿಗಳಲ್ಲಿ ತುಂಬಿರುವ ಅಪರಿಮಿತವಾದ ಜಲದ ಕಣಗಳು ಎಷ್ಟಿವೆಯೋ ಹಾಗೆ ಪರಮಾಣು ಪ್ರದೇಶದಲ್ಲಿಯೂ ಅನಂತ ಜೀವರಾಶಿಗಳು ನೆಲೆಗೊಂಡಿರುತ್ತವೆ. ಈ ಎಲ್ಲ ಭಿನ್ನ ಭಿನ್ನ ಜೀವರಿಗೂ ಭಗವಂತನೇ ನಿಯಾಮಕನಾಗಿರುತ್ತಾನೆ.
ವಾಪ್ಯಃ ಪುನರ್ಯೋಜನವಿಸ್ತೃತಾಸ್ತಾಃ
ಕ್ರೋಶಂ ಚ ಗಂಭೀರತಯಾವಗಾಢಾಃ |
ಆಯಾಮತಃ ಪಂಚಶತಾಶ್ಚ ಸರ್ವಾಃ
ಪ್ರತ್ಯೇಕಶೋ ಯೋಜನತಃ ಪ್ರವೃದ್ಧಾಃ ॥31॥
ವಾಪ್ಯಾ ಜಲಂ ಕ್ಷಿಪ್ಯತಿ ವಾಲಕೋಟ್ಯಾ
ತ್ವಹ್ನಾ ಸಕೃಚ್ಚಾಪ್ಯಥ ನ ದ್ವಿತೀಯಮ್ |
ತಾಸಾಂ ಕ್ಷಯೇ ವಿದ್ಧಿ ಕೃತಂ ವಿಸರ್ಗಂ
ಸಂಹಾರಮೇಕಂ ಚ ತಥಾ ಪ್ರಜಾನಾಮ್ ॥32॥
ಪ್ರತಿಯೊಂದು ಬಾವಿಯೂ ಐದುನೂರು ಯೋಜನಗಳಷ್ಟು ಉದ್ದವೂ, ಐದು ನೂರು ಯೋಜನಗಳಷ್ಟು ಅಗಲವೂ ಇವೆ. ಒಂದೊಂದು ಕ್ರೋಶದಷ್ಟು ಆಳವಾಗಿವೆ. ಅಂತಹ ಸಹಸ್ರಾರು ನೀರಿನಿಂದ ತುಂಬಿದ ಬಾವಿಗಳಲ್ಲಿ ತುಂಬಿರುವ ನೀರಿನ ಕಣಗಳು ಅನಂತಾನಂತ ಎಂದು ಊಹಿಸಬಹುದು. ಇದರಂತೆ ಅನಂತಾನಂತ ಜೀವ- ರಾಶಿಗಳಿಂದ ತುಂಬಿದ ಈ ಸಂಸಾರವೆಂಬ ಬಾವಿಯಲ್ಲಿ ಶಿಂಶುಮಾರ ನಾಮಕನಾದ ಭಗವಂತನು ತನ್ನ ಬಾಲದ ತುದಿಯಿಂದ ನೀರನ್ನು ಸೆಳೆಯುವಂತೆ ಜೀವರಾಶಿಗಳನ್ನು ಸೆಳೆದುಕೊಂಡು, ಜ್ಯೋತಿಶ್ಚಕ್ರದಲ್ಲಿ ನಿಂತು ಪುನಃ ಪುನಃ ಸೃಷ್ಟಿಯನ್ನು ಮಾಡುತ್ತಲೇ ಇರುತ್ತಾನೆ. ಒಂದು ಬಾರಿ ಪ್ರಳಯವಾದಾಗ ಒಂದು ಸೃಷ್ಟಿಯು ಮುಗಿದಿದೆ ಎಂದು ಅರ್ಥ. ಪುನಃ ಇನ್ನೊಂದು ಸೃಷ್ಟಿಯನ್ನು ಮಾಡುತ್ತಾನೆ. ಹೀಗೆ ಸಹಸ್ರಾರು ಬಾವಿಗಳಲ್ಲಿ ತುಂಬಿದ ನೀರಿನ ಕಣಗಳು ಹೇಗೆ ಬರಿದಾಗುವುದಿಲ್ಲವೋ ಅದರಂತೆ ಈ ಸಂಸಾರ ಸಮುದ್ರದಲ್ಲಿ ತುಂಬಿದ ಜೀವರಾಶಿಗಳೂ ಬರಿದಾಗುವುದಿಲ್ಲ. ಶಿಂಶುಮಾರನು ಅನಂತ ಕಾಲದಲ್ಲಿಯೂ ಈ ಜೀವರಾಶಿಗಳ ಸೃಷ್ಟಿ-ಲಯಗಳನ್ನು ಮಾಡುತ್ತಲೇ ಇರುತ್ತಾನೆ.
ಷಡ್‌ಜೀವವರ್ಣಾಃ ಪರಮಂ ಪ್ರಮಾಣಂ
ಕೃಷ್ಣೋ ಧೂಮ್ರೋ ನೀಲಮಥಾಸ್ಯ ಮಧ್ಯಮ್ |
ರಕ್ತಂ ಪುನಃ ಸಹ್ಯತರಂ ಸುಖಂ ತು
ಹಾರಿದ್ರವರ್ಣಂ ಸುಸುಖಂ ಚ ಶುಕ್ಲಮ್ ॥33॥
ಜೀವರಲ್ಲಿ ಸ್ವಲ್ಪ ತಾಮಸ ಜೀವರು, ಅತಿತಾಮಸ ಜೀವರು, ಸ್ವಲ್ಪ ರಾಜಸ ಜೀವರು, ಅತಿ ರಾಜಸ ಜೀವರು, ಸ್ವಲ್ಪ ಸಾತ್ವಿಕ ಜೀವರು, ಅತಿ ಸಾತ್ವಿಕ ಜೀವರು ಎಂದು ಆರು ವಿಭಾಗಗಳಿವೆ. ಈ ಜೀವರ ಪ್ರಾಕೃತ ದೇಹದ ಬಣ್ಣಗಳು ಕಪ್ಪು, ಬೂದು, ನೀಲಿ ಬಣ್ಣ. ಈ ಮೂರು ವರ್ಣಗಳು ತಮೋಗುಣ ಪ್ರಚುರವಾದವುಗಳು. ಆದ್ದರಿಂದ ತಾಮಸ ಜೀವರು ದುಃಖದಾಯಕವಾದ ಈ ಮೂರು ವರ್ಣಗಳನ್ನು ಪ್ರತಿನಿಧಿಸುತ್ತಾರೆ. ತಮೋಗುಣ ಪ್ರಚುರರಾದುದರಿಂದ ಬಹುದುಃಖವನ್ನು ಅನುಭವಿಸುತ್ತಾರೆ. ಮಧ್ಯಮ ಜೀವರೆನಿಸಿದ ರಾಜಸರ

ಕೆಂಪು-ಹಳದಿ-ಬಿಳಿ ಬಣ್ಣಗಳು ಸುಖ-ದುಃಖಗಳನ್ನು ಸೂಚಿಸುವ ಮಧ್ಯಮ ಜೀವರ ಬಣ್ಣಗಳೆನಿಸಿವೆ.
ಪರಂ ತು ಶುಕ್ಲಂ ವಿಮಲಂ ವಿಶೋಕಂ
ಗತಕ್ಲಮಂ ಸಿದ್ಧ್ಯತಿ ದಾನವೇಂದ್ರ |
ಗತ್ವಾ ತು ಯೋನಿಪ್ರಭವಾನಿ ದೈತ್ಯ
ಸಹಸ್ರಶಃ ಸಿದ್ಧಿಮುಪೈತಿ ಜೀವಃ ॥34॥
ಸತ್ತ್ವಗುಣ ಪ್ರಚುರವಾದ ಬಿಳಿ ಬಣ್ಣವು ಸುಖವನ್ನೇ ಸೂಚಿಸುತ್ತದೆ. ಇದು ನಿರ್ಮಲವಾದುದು, ಶೋಕರಹಿತವಾದುದು. ಪ್ರವೃತ್ತಿ ಮಾರ್ಗದ ದುಃಖಗಳು ಇಲ್ಲದಿರುವ ಕಾರಣ ಮೋಕ್ಷ ಸಿದ್ಧಿಕಾರಕವೂ ಆಗಿದೆ. ಜೀವನು ಸಹಸ್ರಾರು ಯೋನಿಗಳಲ್ಲಿ ಹುಟ್ಟಿದ ಬಳಿಕ ಮನುಷ್ಯ ಯೋನಿಯಲ್ಲಿ ಹುಟ್ಟಿ ಈ ಶುಕ್ಲವರ್ಣದ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ.
ಗತಿಂ ಚ ಯನ್ ದರ್ಶನಮಾಹ ದೇವೋ
ಗತ್ವಾ ಶುಭಂ ದರ್ಶನಮೇವ ಚಾಹ |
ಗತಿಃ ಪುನರ್ವರ್ಣಕೃತಾ ಪ್ರಜಾನಾಂ
ವರ್ಣಸ್ತಥಾ ಕಾಲಕೃತೋಽಸುರೇಂದ್ರ ॥35॥
ಮೋಕ್ಷದ ಗತಿಯನ್ನು ಹೊಂದುವ ಸಾತ್ವಿಕ ಜೀವನು ಸಜ್ಜನರ ದರ್ಶನವನ್ನು ಈ ಸಂಸಾರದಲ್ಲಿ ಹೊಂದುತ್ತಾನೆ. ವೈಷ್ಣವ ಸಿದ್ಧಾಂತವನ್ನು ಅಧ್ಯಯನ ಮಾಡುತ್ತಾನೆ. ಶುಕ್ಲ ವರ್ಣದ ಪ್ರಭಾವದಿಂದಾಗಿ ಕಾಲಿಕವಾಗಿ ಪರಮ ಗತಿಯನ್ನೇ ಹೊಂದುತ್ತಾನೆ. ಈ ಎಲ್ಲ ಸ್ಥಿತಿಗಳು ಸಾಧನೆಗನುಗುಣವಾಗಿ ಒದಗಿ ಬರುತ್ತವೆ.
ಶತಂ ಸಹಸ್ರಾಣಿ ಚತುರ್ದಶೇಹ
ಪರಾ ಗತಿರ್ಜೀವಗುಣಸ್ಯ ದೈತ್ಯ |
ಆರೋಹಣಂ ತತ್ಕೃತಮೇವ ವಿದ್ಧಿ
ಸ್ಥಾನಂ ತಥಾ ನಿಃಸರಣಂ ಚ ತೇಷಾಮ್ ॥36॥
ಮನುಷ್ಯರಿಗೆ ನೂರು ವರ್ಷ ಆಯುಷ್ಯದ ಗತಿಯು. ಋಷಿಗಳಿಗೆ ಸಾವಿರ ವರ್ಷಗಳು. ಗೋವು ಮೊದಲಾದವುಗಳಿಗೆ ಹದಿನಾಲ್ಕು ವರ್ಷದ ಆಯುಷ್ಯ ಗತಿಯು. ಈ ರೀತಿಯಾಗಿ ಆಯುಷ್ಯದ ಸ್ಥಿತಿಯನ್ನು ಪಡೆದು ಪುನಃ ಆಯಾ ಜೀವರು ಮರಣವನ್ನು ಹೊಂದುತ್ತಾರೆ.

ಕೃಷ್ಣಸ್ಯ ವರ್ಣಸ್ಯ ಗತಿರ್ನಿಕೃಷ್ಟಾ
ಸ ಮಜ್ಜತೇ ನರಕೇ ಪಚ್ಯಮಾನಃ |
ಸ್ಥಾನಂ ತಥಾ ದುರ್ಗತಿಭಿಸ್ತು ತಸ್ಯ
ಪ್ರಜಾವಿಸರ್ಗಾನ್ ಸುಬಹೂನ್ ವದಂತಿ ॥37॥
ಕೃಷ್ಣ ವರ್ಣದವರ ಗತಿಯು ಅಧಮವಾದುದು. ಕೃಷ್ಣವರ್ಣವು ನರಕವನ್ನು ಹೊಂದಿಸುತ್ತದೆ. ನಿಷಿದ್ಧ ಕೆಲಸಗಳಲ್ಲಿ ಆಸಕ್ತಿಯನ್ನುಂಟು ಮಾಡುತ್ತದೆ. ಇವರು ದುಷ್ಕರ್ಮದ ಫಲವಾಗಿ ನರಕದ ಬೆಂಕಿಯಲ್ಲಿ ಬೇಯುತ್ತಾರೆ. ದುರ್ಗತಿಯನ್ನೇ ಹೊಂದುತ್ತಾರೆ. ಅನೇಕ ಯೋನಿಗಳಲ್ಲಿ ಹುಟ್ಟನ್ನು ಪಡೆದು ದುಃಖಿತರಾಗುತ್ತಾರೆ.
ಶತಂ ಸಹಸ್ರಾಣಿ ತತಶ್ಚರಿತ್ವಾ
ಪ್ರಾಪ್ನೋತಿ ವರ್ಣಂ ಹರಿತಂ ತು ಪಶ್ಚಾತ್ |
ಸ ಚೈವ ತಸ್ಮಿನ್ನಿವಸತ್ಯನೀಶೋ
ಯುಗಕ್ಷಯೇ ತಮಸಾ ಸಂವೃತಾತ್ಮಾ ॥38॥
ಲಕ್ಷ ವರ್ಷಗಳ ತನಕ ನರಕದಲ್ಲಿಯೇ ಬಳಲಿ, ಬಳಿಕ ಧೂಮ್ರವರ್ಣವನ್ನು ಹೊಂದಿ, ಪಶು-ಪಕ್ಷಿಗಳೇ ಮೊದಲಾದ ತಿರ್ಯಕ್‌ಜಂತುಗಳ ಯೋನಿಗಳಲ್ಲಿ ಹುಟ್ಟನ್ನು ಪಡೆಯುತ್ತಾರೆ. ಅಲ್ಲಿಯೂ ಅಸ್ವತಂತ್ರರಾಗಿದ್ದು, ಅನೇಕ ದುಃಖಗಳನ್ನು ಅನುಭವಿಸಿ, ಕಾಲಿಕವಾಗಿ ಅಂಧಂತಮಸ್ಸನ್ನೇ ಹೊಂದುತ್ತಾರೆ.
ಸ ವೈ ಯದಾ ಸತ್ತ್ವಗುಣೇನ ಯುಕ್ತ-
ಸ್ತಮೋ ವ್ಯಪೋಹನ್ ಘಟತೇ ಸ್ವಬುದ್ಧ್ಯಾ |
ಸ ಲೋಹಿತಂ ವರ್ಣಮುಪೈತಿ ನೀಲೋ
ಮನುಷ್ಯಲೋಕೇ ಪರಿವರ್ತತೇ ಚ ॥39॥
ಜೀವನು ಸತ್ತ್ವಗುಣದಿಂದ ಕೂಡಿದಾಗ ಜ್ಞಾನದಿಂದ ತಮೋಗುಣವನ್ನು ಪರಿಹರಿಸಿಕೊಂಡು, ನೀಲವರ್ಣವನ್ನು ಬಿಟ್ಟು ರಕ್ತವರ್ಣವನ್ನು ಹೊಂದುತ್ತಾನೆ. ಇಂತಹ ಜೀವನು ಮನುಷ್ಯಲೋಕದಲ್ಲಿ ಸಂಚರಿಸುತ್ತಾನೆ.
ಸ ತತ್ರ ಸಂಹಾರವಿಸರ್ಗಮೇವ
ಸ್ವಕರ್ಮಜೈರ್ಬಂಧನೈಃ ಕ್ಲಿಶ್ಯಮಾನಃ |
ತತಃ ಸ ಹಾರಿದ್ರಮುಪೈತಿ ವರ್ಣಂ
ಸಂಹಾರವಿಕ್ಷೇಪಶತೇ ವ್ಯತೀತೇ ॥40॥
ಆ ಸಂಸಾರದಲ್ಲಿ ಜೀವನು ಹುಟ್ಟು-ಸಾವುಗಳನ್ನು, ತನ್ನ ಕರ್ಮಗಳಿಗನುಸಾರವಾಗಿ ಕ್ಲೇಶಗಳನ್ನು ಅನುಭವಿಸುತ್ತಾ ಸ್ವಲ್ಪ ಸಮಯದ ಬಳಿಕ ಹಳದಿ ಬಣ್ಣವನ್ನು ಹೊಂದಿ ನೂರಾರು ಕಲ್ಪಗಳನ್ನು ಕಳೆದು, ದೇವತಾಪುಣ್ಯವು ಕ್ಷಯಿಸಿದ ಬಳಿಕ ಮನುಷ್ಯ ಯೋನಿಯಲ್ಲಿ ಹುಟ್ಟುತ್ತಾನೆ.
ಹಾರಿದ್ರವರ್ಣಸ್ತು ಪ್ರಜಾವಿಸರ್ಗಾನ್

ಸಹಸ್ರಶಸ್ತಿಷ್ಠತಿ ಸಂಚರನ್ವೈ |
ಅವಿಪ್ರಮುಕ್ತೋ ನಿರಯೇ ಚ ದೈತ್ಯ
ತತಃ ಸಹಸ್ರಾಣಿ ದಶಾಪರಾಣಿ ॥41॥
ಹಳದಿ ಬಣ್ಣವನ್ನು ಹೊಂದಿದ ಮಧ್ಯಮ ಜೀವನು ಸಾವಿರಾರು ಕಲ್ಪಕಾಲದವರೆಗೆ ಬಳಲಿದರೂ ವಿಷಯ ಸಂಬಂಧದಿಂದ ಮುಕ್ತನಾಗದೆ ಸಂಸಾರದಲ್ಲಿ ಅನೇಕ ಸಹಸ್ರ ಯೋನಿಗಳಲ್ಲಿ ಹುಟ್ಟನ್ನು ಪಡೆಯುತ್ತಾನೆ.
ಗತೀಃ ಸಹಸ್ರಾಣಿ ಚ ಪಂಚ ತಸ್ಯ
ಚತ್ವಾರಿ ಸಂವರ್ತಕೃತಾನಿ ಚೈವ |
ವಿಮುಕ್ತಮೇನಂ ನಿರಯಾಚ್ಚ ವಿದ್ಧಿ
ಸರ್ವೇಷು ಚಾನ್ಯೇಷು ಚ ಸಂಭವೇಷು ॥42॥
ಅತ್ಯಂತ ಪಾಪವನ್ನು ಮಾಡಿದ ಜೀವನು ಮಹಾಪ್ರಳಯದ ಕಾಲ ನಾಲ್ಕು ಕಲ್ಪ ಪರಿಮಿತ ವರ್ಷಗಳ ಕಾಲ ತನ್ನ ಯೋಗ್ಯತಾನುಸಾರವಾಗಿ ದುಃಖವನ್ನು ಅನುಭವಿಸುತ್ತಾ ನರಕದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಮನುಷ್ಯಯೋನಿಯನ್ನು ಬಿಟ್ಟು ಎಲ್ಲ ಯೋನಿಗಳು ಸುಖ-ದುಃಖಗಳಿಗೆ ಅರ್ಹವಾದ ಯೋನಿಗಳೇ ಆಗಿವೆ.
ವ್ಯಾಖ್ಯಾನ ವಿಶೇಷ ಮೂರು ವಿಧ ಜೀವರಾಶಿಗಳ ವರ್ಣನೆಯನ್ನು ಸನತ್ಕುಮಾರರು ಇಲ್ಲಿ ಮಾಡಿರುತ್ತಾರೆ. ಹಿಂದೆ ಹೇಳಿದಂತೆ ಆಯಾ ಬಣ್ಣಗಳು ಆಯಾ ಜೀವರ ಅರ್ಹತೆಯನ್ನು ಸೂಚಿಸುತ್ತವೆ. ತಮೋಯೋಗ್ಯ ಜೀವರಿಗೆ ಕಪ್ಪು, ಮಧ್ಯಮ ಜೀವರಿಗೆ ಕೆಂಪು, ಮುಕ್ತಿ ಯೋಗ್ಯ ಜೀವರಿಗೆ ಬಿಳಿ ಎಂಬ ಬಣ್ಣಗಳನ್ನು ನಿರ್ದೇಶಿಸಿದ್ದಾರೆ. ನರಕಗಳ ದುಃಖದ ಕಾಲವು ಸಾವಿರ ಎಂಬ ಸಂಖ್ಯೆಯಲ್ಲಿ ವರ್ಣಿಸಿದ್ದಾರೆ. ಅವರವರ ಪಾಪಕರ್ಮಕ್ಕೆ ಅನುಗುಣವಾಗಿ ವರ್ಷಗಳ ಸಂಖ್ಯೆಯು ವ್ಯತ್ಯಾಸವನ್ನು ಹೊಂದುತ್ತದೆ. ಅಧಿಕ ಪಾಪಕರ್ಮವನ್ನು ಮಾಡಿದವರು ಅಧಿಕ ವರ್ಷ ಸಂಖ್ಯೆಯ ಕಾಲ ನರಕವಾಸಿಗಳಾಗಿರುತ್ತಾರೆ. ಕಡಿಮೆ ಪಾಪ ಮಾಡಿದವರು ಕಡಿಮೆ ವರ್ಷ ಸಂಖ್ಯೆಯ ಕಾಲ ನರಕವಾಸಿಗಳಾಗಿರುತ್ತಾರೆ. ಆದ್ದರಿಂದ ಇಲ್ಲಿ ಹೇಳಿದ ವರ್ಷದ ಸಂಖ್ಯೆಗೂ ಅಧಿಕ ವರ್ಷ ಸಂಖ್ಯೆ ನರಕವಾಸಕ್ಕೂ ಅವಕಾಶವಿದೆ, ಇಲ್ಲಿ ಹೇಳಿದ ಸಂಖ್ಯೆಗಿಂತಲೂ ಹೆಚ್ಚಿನ ಅವಧಿಯ ನರಕವಾಸಕ್ಕೂ ಅವಕಾಶವಿದೆ ಎಂದು ತಿಳಿಯಬೇಕು ಎಂಬುದಾಗಿ ವಾದಿರಾಜ ಗುರುಸಾರ್ವಭೌಮರು ಲಕ್ಷಾಲಂಕಾರದಲ್ಲಿ ತಿಳಿಸಿರುತ್ತಾರೆ. ಶೃಂಗಗ್ರಾಹಕ ಪ್ರಮಾಣದಂತೆ ಈ ವಿಷಯವು ಇಲ್ಲಿ ನಿರೂಪಿಸಲ್ಪಟ್ಟಿದೆ ಎಂದು ತಿಳಿಯಬೇಕು ಎಂಬುದು ಗುರುರಾಜರ ಅಭಿಪ್ರಾಯ.
ಸ ದೇವಲೋಕೇ ವಿಹರತ್ಯಭೀಕ್ಷ್ಣಂ
ತತಶ್ಚ್ಯುತೋ ಮಾನುಷತಾಮುಪೈತಿ |
ಸಂಹಾರವಿಕ್ಷೇಪಶತಾನಿ ಚಾಷ್ಟೌ
ಮರ್ತ್ಯೇಷು ತಿಷ್ಠನ್ನಮೃತತ್ವಮೇತಿ ॥43॥
ಜೀವನು ದೇವಲೋಕದಲ್ಲಿ ವಿಹರಿಸಿದ ಬಳಿಕ ಪುಣ್ಯಕ್ಷಯವಾದ ಕೂಡಲೇ ಸ್ವರ್ಗದಿಂದ ಚ್ಯುತನಾಗಿ ಮನುಷ್ಯಯೋನಿಯಲ್ಲಿ ಹುಟ್ಟುತ್ತಾನೆ. ಮನುಷ್ಯಲೋಕದಲ್ಲಿ ಎಂಟುನೂರು ಕಲ್ಪದ ತನಕ ಹುಟ್ಟು-ಸಾವುಗಳ ಪರಿಭ್ರಮಣದಲ್ಲಿ ಸಿಲುಕಿ, ಅಷ್ಟರಲ್ಲಿ ಶುಭಕರ್ಮಫಲವನ್ನು ಸಂಗ್ರಹಿಸಿಕೊಂಡು, ಸಾತ್ವಿಕನಾದಲ್ಲಿ ಅಮೃತತ್ವವನ್ನು ಹೊಂದುತ್ತಾನೆ.
ಸೋಽಸ್ಮಾದಥ ಭ್ರಶ್ಯತಿ ಕಾಲಯೋಗಾತ್
ಕೃಷ್ಣೇ ತಲೇ ತಿಷ್ಠತಿ ಸರ್ವಕಷ್ಟೇ |
ಯಥಾ ತ್ವಯಂ ಸಿದ್ಧ್ಯತಿ ಜೀವಲೋಕ-
ಸ್ತತ್ತೇಽಭಿಧಾಸ್ಯಾಮ್ಯಸುರಪ್ರವೀರ ॥44॥
ಅಯೋಗ್ಯ ಜೀವನು ಕಾಲಯೋಗದಿಂದ ಈ ಮನುಷ್ಯಯೋನಿಯಿಂದಲೂ ಅಧಃಪತನವನ್ನು ಹೊಂದುತ್ತಾನೆ. ಅತ್ಯಂತ ಕಷ್ಟಕರವೆನಿಸಿದ ಅಂಧಂತಮಸ್ಸಿನಲ್ಲಿ ನೂಕಲ್ಪಡುತ್ತಾನೆ. ಇನ್ನು ಸಿದ್ಧಿಯನ್ನು ಹೊಂದುವ ಜೀವನ ಅರ್ಹತೆಗಳು ಯಾವುವು ಎನ್ನುವುದರ ಬಗ್ಗೆ ಅಸುರಪ್ರವೀರನೇ ನಾನು ತಿಳಿಸುತ್ತೇನೆ, ಕೇಳು.
ದೈವ್ಯಾನಿ ಸ ವ್ಯೂಹಶತಾನಿ ಸಪ್ತ
ರಕ್ತೋ ಹರಿದ್ರೋಽಥ ತಥೈವ ಶುಕ್ಲಃ |
ಸಂಶ್ರಿತ್ಯ ಸಂಧಾವತಿ ಶುಕ್ಲಮೇತ-
ಮಷ್ಟಾವರಾನರ್ಚ್ಯತಮಾನ್ ಸ ಲೋಕಾನ್ ॥45॥
ಅಷ್ಟೌ ಚ ಷಷ್ಟಿಂ ಚ ಶತಾನಿ ಯಾನಿ
ತೃಷ್ಣಾವಿರುದ್ಧಾನಿ ಮಹಾದ್ಯುತೀನಾಮ್ |
ಶುಕ್ಲಸ್ಯ ವರ್ಣಸ್ಯ ಪರಾ ಗತಿರ್ಯಾ
ತ್ರೀಣ್ಯೇವ ರುದ್ಧಾನಿ ಮಹಾನುಭಾವ ॥46॥
ಸಾತ್ವಿಕ ಜೀವನು ನೂರು ವ್ಯೂಹ ವರ್ಷಗಳ ಕಾಲ ಅಥವಾ ಏಳು ನೂರು ವರ್ಷಗಳ ಕಾಲ ಶುಕ್ಲ ವರ್ಣವನ್ನು ಆಶ್ರಯಿಸಿ, ಮಹಾಕಾಂತಿಯಿಂದ ಕೂಡಿದ ದೇವತೆಗಳ ಲೋಕಗಳನ್ನು ಎಂಟಕ್ಕಿಂತ ಕಡಿಮೆ ಎನಿಸಿದ ಸಪ್ತರ್ಷಿ ಲೋಕಗಳನ್ನು ಅಥವಾ ಸಪ್ತ ಪಿತೃಲೋಕಗಳನ್ನು ಅಥವಾ ಅಷ್ಟ ವಸುಲೋಕಗಳನ್ನು ಒಂದು ಕಡಿಮೆಯಾದ, ಐವತ್ತು ಮರುದ್ದೇವತೆಗಳ ಲೋಕವನ್ನು ಅರ್ಥಾತ್ ನಲವತ್ತೊಂಬತ್ತು ಮರುದ್ಗಣಗಳಿರುವ ಲೋಕಗಳನ್ನು, ಏಕಾದಶ ರುದ್ರರ ಲೋಕಗಳನ್ನು, ಶತಗಣಸ್ವರೆನಿಸಿದ ದೇವತೆಗಳ ಲೋಕಗಳನ್ನು ಅಂತ್ಯಕಾಲದಲ್ಲಿ ಮನಸ್ಸಿನಲ್ಲಿ ಯಾವುದನ್ನು ಧ್ಯಾನಿಸುತ್ತಾನೋ ಅಂತಹ ಲೋಕಗಳನ್ನು ಸಾತ್ವಿಕನಾದ ಜೀವನು ಹೊಂದುತ್ತಾನೆ. ಆ ಲೋಕಗಳಾದರೂ ತೃಷ್ಣೆಗೆ ವಿರುದ್ಧವಾದವುಗಳಲ್ಲ. ಆಕಾಂಕ್ಷೆಗಳನ್ನು ನೀಡುವಂತಹ ಸಕಲ ಸ್ವರ್ಗಫಲಗಳು ಎನಿಸಿವೆ. ಶುಕ್ಲವರ್ಣದ ಗತಿಯು ಮೂರು ಗುಣಗಳನ್ನು ವಿರೋಧಿಸುವುದರಿಂದ ದೊರೆಯುತ್ತದೆ.

ಸಂಹಾರವಿಕ್ಷೇಪಮನಿಷ್ಟಮೇಕಂ
ಚತ್ವಾರಿ ಚಾನ್ಯಾನಿ ವಸತ್ಯನೀಶಃ |
ಷಷ್ಠಸ್ಯ ವರ್ಣಸ್ಯ ಪರಾ ಗತಿರ್ಯಾ
ಸಿದ್ಧಾ ವಿಶುದ್ಧಸ್ಯ ಗತಕ್ಲಮಸ್ಯ ॥47॥
ಮಧ್ಯಮ ಜೀವನು ನಿತ್ಯಸಂಸಾರದಲ್ಲಿ ಇರುವಿಕೆ, ಸೃಷ್ಟಿ, ಲಿಂಗದೇಹ, ಅವಿದ್ಯಾ, ಪರಮಮೋಕ್ಷಾಭಾವ ಎಂಬ ಐದು ಅನಿಷ್ಟಗಳನ್ನು ಯಾವಾಗಲೂ ಅನುಭವಿಸುತ್ತಾನೆ. ಉತ್ತಮನೆನಿಸಿದ ಜೀವನು ಆರನೆಯ ವರ್ಣವೆನಿಸಿದ ಶುಕ್ಲ ವರ್ಣದ ಜೀವನು ಋಷ್ಯಾದಿಗಳು ಹೊಂದುವಂಥ ಶ್ರೇಷ್ಠವಾದ ಆಯಾಸವಿಲ್ಲದ ಲೋಕವನ್ನು ಹೊಂದುತ್ತಾನೆ.
ಸಪ್ತೋತ್ತರಂ ತೇಷು ವಸತ್ಯನೀಶಃ
ಸಂಹಾರವಿಕ್ಷೇಪಶತಂ ಸಶೇಷಮ್ |
ತಸ್ಮಾದುಪಾವೃತ್ಯ ಮನುಷ್ಯಲೋಕೇ
ತತೋ ಮಹಾನ್ ಮಾನುಷತಾಮುಪೈತಿ ॥48॥
ಚೆನ್ನಾಗಿ ಯೋಗಸಾಧನೆ ಮಾಡಲು ಅಸಮರ್ಥನಾಗಿರುವ, ಯೋಗ ಭ್ರಷ್ಟನಾಗಿರುವ ಶುಕ್ಲವರ್ಣದವನು ನೂರುಕಲ್ಪದವರೆಗೆ ಪಾತಾಳಾದಿ ಏಳು ಲೋಕಗಳಿಗಿಂತ ಉತ್ತಮ ಲೋಕದಲ್ಲಿ ವಾಸ ಮಾಡುತ್ತಾ, ಪುನಃ ಕರ್ಮಸಂಸ್ಕಾರವನ್ನು ಹೊಂದಿ ಮಹಾಸಂಪನ್ನನಾಗಿ ಮನುಷ್ಯಶರೀರವನ್ನು ಪಡೆದು ಭೂಲೋಕದಲ್ಲಿ ಜನ್ಮ ತಾಳುತ್ತಾನೆ.
ತಸ್ಮಾದುಪಾವೃತ್ಯ ತತಃ ಕ್ರಮೇಣ
ಸೋಽಗ್ರೇ ಸ್ಮ ಸಂತಿಷ್ಠತಿ ಭೂತಸರ್ಗಮ್ |
ಸ ಸಪ್ತಕೃತ್ವಶ್ಚ ಪರೈತಿ ಲೋಕಾನ್
ಸಂಹಾರವಿಕ್ಷೇಪಕೃತಪ್ರವಾಸಃ ॥49॥
ನಂತರ ಮನುಷ್ಯಯೋನಿಯಿಂದ ಬಿಡುಗಡೆಯನ್ನು ಹೊಂದಿ, ಮುಂದಿನ ದೇವಾದಿ ಯೋನಿಗಳಲ್ಲಿ ಪುನಃ ಹುಟ್ಟುತ್ತಾ, ಅನೇಕ ಬಾರಿ ಹುಟ್ಟನ್ನು ಪಡೆದ ಬಳಿಕ ಹುಟ್ಟು-ಸಾವುಗಳ ಚಕ್ರದಿಂದ ಆಯಾಸವನ್ನು ಪರಿಹರಿಸಿಕೊಳ್ಳುವ ಉತ್ತಮ ಲೋಕವನ್ನು ಹೊಂದುತ್ತಾನೆ.
ಸಪ್ತೈವ ಸಂಹಾರಮುಪಪ್ಲವಾನಿ
ಸಂಭಾವ್ಯ ಸಂತಿಷ್ಠತಿ ಸಿದ್ಧಲೋಕೇ |
ತತೋಽವ್ಯಯಂ ಸ್ಥಾನಮನಂತಮೇತಿ
ದೇವಸ್ಯ ವಿಷ್ಣೋರಥ ಬ್ರಹ್ಮಣಶ್ಚ |
ಶೇಷಸ್ಯ ಚೈವಾಥ ನರಸ್ಯ ಚೈವ
ದೇವಸ್ಯ ವಿಷ್ಣೋಃ ಪರಮಸ್ಯ ಚೈವ ॥50॥
ಜನ್ಮ, ಕಾಮ-ಕ್ರೋಧಾದಿ ಆರು ವೈರಿಗಳು ಹೀಗೆ ಏಳರ ಬಗ್ಗೆ ಎಚ್ಚರವನ್ನು ಹೊಂದಿ ಸಿದ್ಧಲೋಕವನ್ನು ಹೊಂದುತ್ತಾನೆ. ನಂತರ ನಾಶರಹಿತವಾದ ವಿಷ್ಣುವಿನ ಸ್ವರ್ಗದಲ್ಲಿರುವ ವಾಮನ ರೂಪವನ್ನು ಹೊಂದುತ್ತಾನೆ ಅಥವಾ ಋಷಿ ಎನಿಸಿದ ನರ-ನಾರಾಯಣರ ಪಾದವನ್ನು ಸೇರುತ್ತಾನೆ.
ಸಂಹಾರಕಾಲೇ ಪರಿದಗ್ಧಕಾಯಾ
ಬ್ರಹ್ಮಾಣಮಾಯಾಂತಿ ಸದಾ ಪ್ರಜಾ ಹಿ |
ಚೇಷ್ಟಾತ್ಮನೋ ದೇವಗಣಾಶ್ಚ ಸರ್ವೇ
ಯೇ ಬ್ರಹ್ಮಲೋಕಾದಮರಾಃ ಸ್ಮ ತೇಽಪಿ ॥51॥
ಜೀವರು ಪ್ರಳಯಕಾಲದಲ್ಲಿ ಲಿಂಗದೇಹವನ್ನು ಭಗವಂತನ ಅನುಗ್ರಹದಿಂದ ಪರಿಹರಿಸಿಕೊಂಡು ಪರಬ್ರಹ್ಮನನ್ನೇ ಹೊಂದುತ್ತಾರೆ. ಸಮಸ್ತ ತತತತ್ವಭಿಮಾನಿ ದೇವತೆಗಳು ಪ್ರಳಯ ಕಾಲದಲ್ಲಿ ಆ ಶ್ರೀಹರಿಯನ್ನೇ ಹೊಂದುತ್ತಾರೆ.
ಪ್ರಜಾವಿಸರ್ಗೇ ತು ಸಶೇಷಕಾಲಾಃ
ಸ್ಥಾನಾನಿ ಸ್ವಾನ್ಯೇವ ಸರಂತಿ ಜೀವಾಃ |
ನಿಃಶೇಷಾಣಾಂ ತತ್ ಪದಂ ಯಾಂತಿ ಚಾಂತೇ
ಸರ್ವೇ ದೇವಾ ಯೇ ಸದೃಶಾ ಮನುಷ್ಯಾಃ ॥52॥
ಸಂಸಾರವನ್ನು ಅನುಭವಿಸುವ ಕಾಲವನ್ನು ಉಳಿಸಿಕೊಂಡಿರುವ ಎಲ್ಲ ಜೀವರು ಬ್ರಹ್ಮನ ಪರಾಂತಕಾಲವೆನಿಸಿದ ಮಹಾಪ್ರಳಯ ಕಾಲದಲ್ಲಿ ಪರಬ್ರಹ್ಮನನ್ನೇ ಸೇರುತ್ತಾರೆ. ಉತ್ತಮ ಜೀವರು ಅಪರೋಕ್ಷಜ್ಞಾನವನ್ನು ಪಡೆದು ಭಗವಂತನ ಉದರವನ್ನು ಪ್ರವೇಶಿಸುವುದರಿಂದ ದೇವತೆಗಳಿಗೆ ಸದೃಶರಾಗಿರುತ್ತಾರೆ. ದೇವಾನುದೇವತೆಗಳು, ಮನುಷ್ಯೋತ್ತಮರು ಭಗವಂತನ ಪಾದವನ್ನೇ ಹೊಂದುತ್ತಾರೆ.
ಯೇ ತು ಚ್ಯುತಾಃ ಸಿದ್ಧಲೋಕಾತ್ ಕ್ರಮೇಣ
ತೇಷಾಂ ಗತಿಂ ಯಾಂತಿ ತಥಾನುಪೂರ್ವ್ಯಾ |
ಜೀವಾಃ ಪರೇ ತದ್ ಬಲವೇಷರೂಪಾ
ವಿಧಿಂ ಸ್ವಕಂ ಯಾಂತಿ ವಿಪರ್ಯಯೇಣ ॥53॥
ಕರ್ಮಫಲವು ಮುಗಿದ ಬಳಿಕ ಸಿದ್ಧಲೋಕದಿಂದ ಚ್ಯುತರಾಗಿ ಮರ್ತ್ಯಲೋಕದಲ್ಲಿ ಹುಟ್ಟುವ ಯೋಗಿಗಳ ಸ್ಥಾನವನ್ನು, ಬಲವನ್ನು, ತೇಜಸ್ಸನ್ನು ಇತರ ಜೀವರು ಹೊಂದುತ್ತಾರೆ. ಹೀಗೆ ಜೀವರು ಫಲಾನುಭವದ ವ್ಯತ್ಯಾಸದಿಂದ ತಮ್ಮ ತಮ್ಮ ಅದೃಷ್ಟ ಸ್ಥಾನಗಳನ್ನು ಹೊಂದುತ್ತಾರೆ.

ಸ ಯಾವದೇವಾಸ್ತಿ ಸಶೇಷಭುಕ್ತಿಃ
ಪ್ರಜಾಶ್ಚ ದಿವ್ಯಾಶ್ಚ ತಥೈವ ಶುಕ್ಲೇ |
ತಾವತ್ತದಾ ತೇಷು ವಿಶುದ್ಧಭಾವಃ
ಸಂಯಮ್ಯ ಪಂಚೇಂದ್ರಿಯರೂಪಮೇತತ್ ॥54॥
ಸಾತ್ವಿಕ ಜೀವನು ಪಂಚೇಂದ್ರಿಯಗಳನ್ನು ನಿಯಮಿಸಿಕೊಂಡು, ಪ್ರಾರಬ್ಧಕರ್ಮ ಮುಗಿಯುವ ತನಕವೂ ಶುದ್ಧವಾದ ಕುಲದಲ್ಲಿ ಯೋಗ್ಯ ಪ್ರಜಾಸಂತಾನಗಳನ್ನು ನೀಡುತ್ತಾ ಭಗವತ್ಪ್ರಜ್ಞೆಯಲ್ಲೇ ದೃಢಪಡಿಸಿಕೊಂಡು ಕರ್ತವ್ಯಗಳನ್ನು ಮಾಡುತ್ತಿರಬೇಕು.
ಶುದ್ಧಾಂ ಗತಿಂ ತಾಂ ಪರಮಾಂ ಪರೈತಿ
ಶುದ್ಧೇನ ನಿತ್ಯಂ ಮನಸಾ ವಿಚಿನ್ವನ್ |
ತತೋಽವ್ಯಯಂ ಸ್ಥಾನಮುಪೈತಿ ಬ್ರಹ್ಮ
ದುಷ್ಪ್ರಾಪಮಭ್ಯೇತಿ ಸ ಶಾಶ್ವತಂ ವೈ |
ಇತ್ಯೇತದಾಖ್ಯಾತಮಹೀನಸತ್ತ್ವ
ನಾರಾಯಣಸ್ಯೇಹ ಬಲಂ ಮಯಾ ತೇ ॥55॥
ಯಾವ ಸಾಧಕನು ನಿರಂತರ ಶುದ್ಧ ಮನಸ್ಸಿನಿಂದ ವಿಶುದ್ಧವಾದ ಭಗವತ್ತತ್ತ್ವವನ್ನು ಅನುಸಂಧಾನ ಮಾಡುತ್ತಿರುವನೋ ಅಂತಹ ಸಾಧಕನು ನಿಶ್ಚಿತವಾಗಿಯೂ ಪರಮ ಗತಿಯನ್ನು ಹೊಂದುತ್ತಾನೆ. ಯಾರಿಂದಲೂ ಸುಲಭವಾಗಿ ಹೊಂದಲಾರದ ಶಾಶ್ವತವಾದ ಸ್ಥಾನವನ್ನು ಹೊಂದುತ್ತಾನೆ. ಈ ರೀತಿಯಾಗಿ ನಾರಾಯಣನ ಬಲವನ್ನು, ಪ್ರಭಾವವನ್ನು ಮಹಾಸತ್ವನಾದ ವೃತ್ರದೈತ್ಯನೇ, ನಿನಗೆ ತಿಳಿಸಿದ್ದೇನೆ.
ವೃತ್ರಃ
ಏವಂ ಗತೇ ಮೇ ನ ವಿಷಾದೋಽಸ್ತಿ ಕಶ್ಚಿತ್
ಸಮ್ಯಕ್ಚ ಪಶ್ಯಾಮಿ ವಚಸ್ತವೈತತ್ |
ಶ್ರುತ್ವಾ ಚ ತೇ ವಾಚಮದೀನಸತ್ತ್ವ
ವಿಕಲ್ಮಷೋಽಸ್ಮ್ಯದ್ಯ ತಥಾ ವಿಪಾಪ್ಮಾ ॥56॥
ಸನತ್ಕುಮಾರನೇ, ಈ ಭಗವತ್ತತ್ತ್ವವಿಚಾರವು ಹೀಗಿರುವುದಾದಲ್ಲಿ ನನಗೆ ಉಂಟಾಗಿರುವ ದುಃಸ್ಥಿತಿಯಿಂದ ಸ್ವಲ್ಪವೂ ದುಃಖಿಸುವುದಿಲ್ಲ. ನೀನು ಹೇಳಿದ ಮಾತುಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುತ್ತೇನೆ. ಈ ಮಾತುಗಳ ಸತ್ಯತೆಯನ್ನು ಮನನ ಮಾಡಿದ್ದೇನೆ. ನಿನ್ನ ಮಾತುಗಳನ್ನು ಕೇಳಿಸಿಕೊಂಡು ಪಾಪರಹಿತನೂ, ಕಲ್ಮಶ ರಹಿತನೂ ಆಗಿದ್ದೇನೆ.
ಪ್ರವೃತ್ತಮೇತದ್ ಭಗವನ್ ಮಹರ್ಷೇ
ಮಹಾದ್ಯುತೇಶ್ಚಕ್ರಮನಂತವೀರ್ಯಮ್ |
ವಿಷ್ಣೋರನಂತಸ್ಯ ಸನಾತನಂ ತತ್
ಸ್ಥಾನಂ ಸರ್ಗಾ ಯತ್ರ ಸರ್ವೇ ಪ್ರವೃತ್ತಾಃ |
ಸ ವೈ ಮಹಾತ್ಮಾ ಪುರುಷೋತ್ತಮೋ ವೈ
ತಸ್ಮಿನ್ ಜಗತ್ ಸರ್ವಮಿದಂ ಪ್ರತಿಷ್ಠಿತಮ್ ॥57॥
ಮಹರ್ಷಿಯೇ, ಮಹಾಸತ್ತ್ವಸಂಪನ್ನನಾದ, ಅನಂತನಾದ, ವ್ಯಾಪ್ತನಾದ ಭಗವಂತನ ಅಮಿತ ಶಕ್ತಿಯಿಂದ ಕೂಡಿರುವ ಈ ಜಗಚ್ಚಕ್ರವು ನಿರಂತರ ಪರಿಭ್ರಮಣ ಹೊಂದುತ್ತಿದೆ. ಸಮಸ್ತ ಜಗತ್ತು ಯಾರಿಂದ ಹುಟ್ಟನ್ನು ಪಡೆಯುತ್ತದೋ ಅದು ಮಹಾವಿಷ್ಣುವಿನ ಅನುಗ್ರಹವನ್ನೇ ಹೊಂದಿದೆ. ಮಹಾವಿಷ್ಣುವೇ ಪುರುಷೋತ್ತಮನು. ಅವನಲ್ಲಿಯೇ ಸಮಗ್ರ ಜಗತ್ತು ಪ್ರತಿಷ್ಠಿತವಾಗಿವೆ.
ಭೀಷ್ಮಃ
ಏವಮುಕತ್ವ ಸ ಕೌಂತೇಯ ವೃತ್ರಃ ಪ್ರಾಣಾನವಾಸೃಜತ್ |
ಯೋಜಯಿತ್ವಾ ತಥಾತ್ಮಾನಂ ಪರಂ ಸ್ಥಾನಮವಾಪ್ತವಾನ್ ॥58॥
ಭೀಷ್ಮ ಯುಧಿಷ್ಠಿರನೇ, ವೃತ್ರಾಸುರನು ಹೀಗೆ ಹೇಳಿ ಪ್ರಾಣಗಳನ್ನು ತೊರೆದನು. ಆ ಸಮಯದಲ್ಲಿ ತನ್ನ ಮನಸ್ಸಿನಲ್ಲಿ ಪರಮಾತ್ಮನನ್ನೇ ಧ್ಯಾನಿಸುತ್ತಾ ಪರಂಧಾಮವನ್ನು ಹೊಂದಿದನು.
ಯುಧಿಷ್ಠಿರಃ
ಅಯಂ ಸ ಭಗವಾನ್ ದೇವಃ ಪಿತಾಮಹ ಜನಾರ್ದನಃ |
ಸನತ್ಕುಮಾರೋ ವೃತ್ರಾಯ ಯತ್ತದಾಖ್ಯಾತವಾನ್ ಪುರಾ ॥59॥
ಯುಧಿಷ್ಠಿರ ಪಿತಾಮಹನೇ, ಮಹಾತ್ಮನಾದ ಸನತ್ಕುಮಾರನು ವೃತ್ರಾಸುರನಿಗೆ ಯಾವ ಸ್ವರೂಪವನ್ನು ವರ್ಣಿಸಿ ಹೇಳಿದನೋ ಆ ವಿಷ್ಣುವೇ ಜನಾರ್ದನನೆನಿಸಿದ ಕೃಷ್ಣನಲ್ಲವೆ!
ಭೀಷ್ಮಃ
ಮೂಲಸ್ಥಾಯೀ ಸ ಭಗವಾನ್ ಸ್ವೇನಾನಂತೇನ ತೇಜಸಾ |
ತತ್ಸ್ಥಃ ಸೃಜತಿ ತಾನ್ ಭಾವಾನ್ನಾನಾರೂಪಾನ್ ಮಹಾತಪಾಃ ॥60॥
ಭೀಷ್ಮ ಮೂಲರೂಪಿಯಾದ ಭಗವಾನ್ ನಾರಾಯಣನು ತನ್ನ ಅನಂತವಾದ ತೇಜಸ್ಸಿನಿಂದ ಅನಂತ ರೂಪಗಳನ್ನು ತಾಳಿ ಆ ಮೂಲರೂಪದಿಂದಲೇ ಸಮಸ್ತ ಪದಾರ್ಥ ರೂಪಗಳನ್ನು ಸೃಷ್ಟಿಸುತ್ತಾನೆ.
ತುರೀಯಾಂಶೇನ ತಸ್ಯೇಮಂ ವಿದ್ಧಿ ಕೇಶವಮಚ್ಯುತಮ್ |
ತುರೀಯಾಂಶೇನ ಬ್ರಹ್ಮಾಣಂ ತ್ರೀನ್ ಭಾವಯತ್ಯೇಷ ಬುದ್ಧಿಮಾನ್ ॥

ತನ್ನ ನಾಲ್ಕನೆಯ ಅಂಶದಿಂದ ಹುಟ್ಟಿದ ಗುಣಪರಿಪೂರ್ಣನಾದ ಪರಬ್ರಹ್ಮನೇ ಕೃಷ್ಣನು, ಕೇಶವನು, ಅಚ್ಯುತನು. ಬುದ್ಧಿವಂತನಾದವನು ಕೃಷ್ಣನನ್ನೇ ಶ್ರೀಮನ್ನಾರಾಯಣನೆಂದು ತಿಳಿಯಬೇಕು. ಈ ಭಗವಂತನೇ ಮೂರು ಲೋಕಗಳನ್ನು ಸೃಷ್ಟಿಸುತ್ತಾನೆ.

ಅರ್ವಾಕ್ಸ್ಥಿತಸ್ತು ಯಃ ಸ್ಥಾಯೀ ಕಲ್ಪಾಂತೇ ಪರಿವರ್ತತೇ |
ಸ ಶೇತೇ ಭಗವಾನಪ್ಸು ಯೋಽಸಾವತಿಬಲಃ ಪ್ರಭುಃ |
ತಾನ್ ವಿಧಾತಾ ಪ್ರಸನ್ನಾತ್ಮಾ ಲೋಕಾಂಶ್ಚರತಿ ಶಾಶ್ವತಾನ್ ॥62॥

ಈ ಜಗತ್ತೆಲ್ಲವೂ ಕಲ್ಪಾಂತದಲ್ಲಿ ಪುನಃ ಅವನಲ್ಲಿ ಲಯ ಹೊಂದುತ್ತದೆ. ಆ ಸಮಯದಲ್ಲಿ ಮೂಲಪುರುಷನಾದ ಭಗವಂತನು ಜಲಶಾಯಿಯಾಗಿದ್ದು ಮುಂದಿನ ಸೃಷ್ಟಿಗೆ ತಾನೇ ಬೀಜರೂಪಿಯಾಗಿರುತ್ತಾನೆ. ಪ್ರಸನ್ನಾತ್ಮನಾದ ಆ ಭಗವಂತನೇ ಸಮಸ್ತ ಲೋಕಗಳನ್ನು ವ್ಯಾಪಿಸಿರುತ್ತಾನೆ.

ಸರ್ವಾಣ್ಯಶೂನ್ಯಾನಿ ಕರೋತ್ಯನಂತಃ
ಸನಾತನಃ ಸಂಚರತೇ ಚ ಲೋಕಾನ್ |
ಸ ಚಾನಿರುದ್ಧಃ ಸೃಜತೇ ಮಹಾತ್ಮಾ
ತತ್ಸ್ಥಂ ಜಗತ್ ಸರ್ವಮಿದಂ ವಿಚಿತ್ರಮ್ ॥63॥

ಆ ಭಗವಂತನು ಸಮಸ್ತ ಪ್ರಪಂಚವನ್ನು ಲಯಗೊಳಿಸುತ್ತಾನೆ. ಲೀಲಾ ಶರೀರಗಳನ್ನು ಧರಿಸಿದ ಸನಾತನನಾದ ಭಗವಂತನು ಎಲ್ಲ ಲೋಕಗಳಲ್ಲಿ ಸಂಚರಿಸುತ್ತಾನೆ. ಅವನ ಗತಿಯನ್ನು ಯಾರಿಂದಲೂ ತಡೆಯಲಾಗದು. ಅವನೇ ಜಗತ್ತಿನ ಸೃಷ್ಟಿಕರ್ತ. ವಿಚಿತ್ರವಾದ ಜಗತ್ತೆಲ್ಲವೂ ಅವನಿಂದಲೇ ಪ್ರತಿಷ್ಠಿತವಾಗಿದೆ.

ಯುಧಿಷ್ಠಿರಃ

ವೃತ್ರೇಣ ಪರಮಾರ್ಥಜ್ಞ ದೃಷ್ಟಾ ಮನ್ಯೇಽಽತ್ಮನೋ ಗತಿಃ |
ಶುಭಾ ತಸ್ಮಾತ್ಸ ಸುಖಿತೋ ನ ಶೋಚತಿ ಪಿತಾಮಹ ॥64॥

ಯುಧಿಷ್ಠಿರ ಪಿತಾಮಹನೇ, ವೃತ್ರಾಸುರನು ಪರಮಾತ್ಮನ ಯಥಾರ್ಥ ಸ್ವರೂಪವನ್ನು ಕಂಡುಕೊಂಡನು. ಆದ್ದರಿಂದಲೇ ಅವನು ಪರಮಸುಖಿಯಾದನು. ತನಗೆ ಬಂದ ಪರಾಭವಕ್ಕೆ ದುಃಖಿಸಲಿಲ್ಲ. ಹೀಗೆಂದು ನಾನು ಚಿಂತಿಸುತ್ತೇನೆ.

ಶುಕ್ಲಃ ಶುಕ್ಲಾಭಿಜಾತೀಯಃ ಸಾಧ್ಯೋ ನಾವರ್ತತೇಽನಘ |
ತಿರ್ಯಗ್ಗತೇಶ್ಚ ನಿರ್ಮುಕ್ತೋ ನಿರಯಾಚ್ಚ ಪಿತಾಮಹ ॥65॥

ಪಿತಾಮಹನೇ, ವೃತ್ರಾಸುರನು ಶುದ್ಧ ಕುಲದಲ್ಲಿ ಹುಟ್ಟಿದವನು. ಸ್ವಭಾವದಿಂದಲೂ ಪರಿಶುದ್ಧನು. ಸಾಧ್ಯ ಎಂಬ ದೇವತೆಯು. ಅವನು ಪಶು-ಪಕ್ಷಿಗಳ ಯೋನಿಯಿಂದಲೂ ನರಕದಿಂದಲೂ ಮುಕ್ತನಾಗಿ ಪುನಃ ಈ ಪ್ರಪಂಚಕ್ಕೆ ಆಗಮಿಸಲಿಲ್ಲ.

ಹಾರಿದ್ರವರ್ಣೇ ರಕ್ತೇ ವಾ ವರ್ತಮಾನಸ್ತು ಪಾರ್ಥಿವ |
ತಿರ್ಯಗೇವಾನುಪಶ್ಯೇತ ಕರ್ಮಭಿಸ್ತಾಮಸೈರ್ವೃತಃ ॥66॥

ಹಳದಿಬಣ್ಣದವನು, ರಕ್ತ ವರ್ಣದವನು ಕೆಲವು ಬಾರಿ ತಾಮಸವಾದ ಕರ್ಮಗಳಿಂದ ಆವೃತನಾಗಿ ತಿರ್ಯಗ್ಯೋನಿಗಳನ್ನು ಕಾಣಬೇಕಾಗುತ್ತದೆ. ಅರ್ಥಾತ್ ರಾಜಸರು ಪ್ರಾಣಿಗಳಾಗಿ ಹುಟ್ಟಬೇಕಾಗುತ್ತದೆ.

ವಯಂ ತು ಭೃಶಮಾಪನ್ನಾ ರಕ್ತಾಃ ಕಷ್ಟಮುಖೇಽಸುಖೇ |
ಕಾಂ ಗತಿಂ ಪ್ರತಿಪತ್ಸ್ಯಾಮೋ ನೀಲಾಂ ಕೃಷ್ಣಾಧಮಾಮಥ ॥67॥

ನಾವಾದರೂ ತುಂಬಾ ಅಪತ್ತಿಗೆ ತುತ್ತಾಗಿದ್ದೇವೆ. ಸುಖಕ್ಕಿಂತ ಅಧಿಕವಾದ ದುಃಖದಲ್ಲೇ ಮಗ್ನರಾಗಿದ್ದೇವೆ. ಇಂತಹ ನಾವು ನೀಲವರ್ಣದ ಮನುಷ್ಯ ಯೋನಿಯಲ್ಲಿ ಹುಟ್ಟುತ್ತೇವೋ, ಕೃಷ್ಣವರ್ಣದ ಅಧಮ ಯೋನಿಗಳಲ್ಲೇ ಹುಟ್ಟುತ್ತೇವೋ ತಿಳಿಯದಾಗಿದೆ.

ಭೀಷ್ಮಃ

ಶುದ್ಧಾಭಿಜನಸಂಪನ್ನಾಃ ಪಾಂಡವಾಃ ಸಂಶಿತವ್ರತಾಃ |
ವಿಹೃತ್ಯ ದೇವಲೋಕೇಷು ಪುನರ್ಮಾನುಷ್ಯಮೇಷ್ಯಥ ॥68॥

ಭೀಷ್ಮ ಯುಧಿಷ್ಠಿರನೇ, ಪಾಂಡುಸುತರಾದ ನೀವು ವಿಶುದ್ಧವಾದ ಕುಲದಲ್ಲಿ ಹುಟ್ಟಿದ್ದೀರಿ. ಕಠೋರ ವ್ರತನಿಷ್ಠರಾಗಿದ್ದೀರಿ. ಆದ್ದರಿಂದ ಅವಸಾನದ ಬಳಿಕ ದೇವಲೋಕದಲ್ಲಿ ವಿಹರಿಸಿ, ಪುನಃ ಉತ್ತಮ ಮನುಷ್ಯಜನ್ಮವನ್ನೇ ತಾಳುತ್ತೀರಿ.

ಪ್ರಜಾವಿಸರ್ಗಂ ಚ ಸುಖೇನ ಕಾಲೇ
ಪ್ರತ್ಯೇತ್ಯ ದೇವೇಷು ಸುಖಾನಿ ಭುಕ್ತ್ವಾ |
ಸುಖೇನ ಸಂಯಾಸ್ಯಥ ಸಿದ್ಧಸಂಖ್ಯಾಂ
ಮಾ ವೋ ಭಯಂ ಭೂದ್ ವಿಮಲಾಃ ಸ್ಥ ಸರ್ವೇ ॥69॥

ನೀವು ಸ್ವಲ್ಪ ಕಾಲದ ಬಳಿಕ ಸುಖವಾಗಿ ಮನುಷ್ಯಲೋಕದಲ್ಲಿ ವಾಸ ಮಾಡಿದ್ದು ಬಳಿಕ ದೇವಲೋಕಕ್ಕೆ ಹೋಗಿ ಬಹುಬಗೆಯಾದ ಸುಖವನ್ನು ಅನುಭವಿಸುತ್ತೀರಿ. ಪುನಃ ಸುಖದಿಂದಲೇ ಸಿದ್ಧಿಯನ್ನು ಹೊಂದಿ ಸಿದ್ಧರೆಂದೇ ಕರೆಸಿಕೊಳ್ಳುತ್ತೀರಿ. ದುರ್ಗತಿ ಲಭಿಸುವುದೆಂದು ಆತಂಕಪಡಬೇಕಾಗಿಲ್ಲ. ನಿರ್ಮಲ ನಿಷ್ಪಾಪರಾಗಿದ್ದೀರಿ. ಆದ್ದರಿಂದ ನಿಮಗೆಂದೂ ದುರ್ಗತಿಯು ಒದಗದು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುರ್ದಶಾಧಿಕಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹದಿನಾಲ್ಕನೆಯ
ಅಧ್ಯಾಯ ಮುಗಿಯಿತು.

॥ ವೃತ್ರಗೀತಾ ಸಮಾಪ್ತಾ ॥

* * * * *

ನೂರ ಹದಿನೈದನೆಯ ಅಧ್ಯಾಯ

ಇಂದ್ರ-ವೃತ್ರರ ಯುದ್ಧದ ವರ್ಣನೆ.

ಯುಧಿಷ್ಠಿರಃ

ಅಹೋ ಧರ್ಮಿಷ್ಠತಾ ತಾತ ವೃತ್ರಸ್ಯಾಮಿತತೇಜಸಃ |
ಯಸ್ಯ ವಿಜ್ಞಾನಮತುಲಂ ವಿಷ್ಣೋರ್ಭಕ್ತಿಶ್ಚ ತಾದೃಶೀ ॥1॥

ಯುಧಿಷ್ಠಿರ ಪಿತಾಮಹನೇ, ವೃತ್ರಾಸುರನ ಧರ್ಮಾಸಕ್ತಿಯು ಆಶ್ಚರ್ಯಕರವಾದುದು. ಅವನಲ್ಲಿರುವ ಬ್ರಹ್ಮಜ್ಞಾನವು, ದೃಢವಾದ ವಿಷ್ಣುಭಕ್ತಿಯು, ನಿಷ್ಠೆಯು ಅಸದೃಶವಾದುದು.

ದುರ್ವಿಜ್ಞೇಯಮಿದಂ ತಾತ ವಿಷ್ಣೋರಮಿತತೇಜಸಃ |
ಕಥಂ ವಾ ರಾಜಶಾರ್ದೂಲ ಪದಂ ತಜ್ಜ್ಞಾತವಾನಸೌ ॥2॥

ಅಮಿತವಾದ ತೇಜಸ್ಸುಳ್ಳ ವಿಷ್ಣುವಿನ ಮಹಿಮೆಯನ್ನು ತಿಳಿಯುವುದೇ ಮಹಾಕಷ್ಟಕರವಾದುದು. ಹೀಗಿರುವಾಗ ದೈತ್ಯನಾದ ವೃತ್ರಾಸುರನು ಆ ವಿಷ್ಣುವಿನ ಮಹಿಮೆಯನ್ನು ಹೇಗೆ ತಿಳಿದನು?

ಭವತಾ ಕಥಿತಂ ಹ್ಯೇತಚ್ಛ್ರದ್ದಧೇ ಚಾಹಮಚ್ಯುತ |
ಭೂಯಸ್ತು ಮೇ ಸಮುತ್ಪನ್ನಾ ಬುದ್ಧಿರವ್ಯಕ್ತದರ್ಶನಾತ್ ॥3॥

ವೃತ್ರಾಸುರನ ಅದ್ಭುತ ಕಾರ್ಯವನ್ನೆಲ್ಲ ನೀನು ತಿಳಿಸಿರುವಿ. ಅದನ್ನೂ ನಾನು ವಿಶ್ವಾಸದಿಂದ ತಿಳಿದುಕೊಂಡಿದ್ದೇನೆ. ಆದರೆ ನೀನು ಹೇಳಿದ ವಿಷಯದಲ್ಲಿ ನನಗೆ ಒಂದು ಸಂದೇಹ ಉಂಟಾಗಿದೆ.

ಕಥಂ ವಿನಿಹತೋ ವೃತ್ರಃ ಶಕ್ರೇಣ ಭರತರ್ಷಭ |
ಧರ್ಮಿಷ್ಠೋ ವಿಷ್ಣುಭಕ್ತಶ್ಚ ತತ್ತ್ವಜ್ಞಶ್ಚ ಪದಾನ್ವಯೇ ॥4॥

ಮಹಾತ್ಮನಾದ ವೃತ್ರಾಸುರನನ್ನು ಇಂದ್ರನು ಏಕೆ ಕೊಂದನು? ವೃತ್ರಾಸುರನು ಧಾರ್ಮಿಕನಾಗಿಯೂ, ವಿಷ್ಣುಭಕ್ತನಾಗಿಯೂ, ತತ್ತ್ವಜ್ಞನೂ ಆದ ಬಳಿಕ ಇಂದ್ರನು ಕೊಲ್ಲುವುದು ಎಷ್ಟು ಉಚಿತ?

ಏತನ್ಮೇ ಸಂಶಯಂ ಬ್ರೂಹಿ ಪೃಚ್ಛತೋ ಭರತರ್ಷಭ |
ವೃತ್ರಸ್ತು ರಾಜಶಾರ್ದೂಲ ಯಥಾ ಶಕ್ರೇಣ ನಿರ್ಜಿತಃ ॥5॥

ನನ್ನ ಈ ಸಂಶಯವನ್ನು ನೀನು ಪರಿಹರಿಸಬೇಕು. ಇಂದ್ರ-ವೃತ್ರರಿಗೆ ನಡೆದ ಯುದ್ಧದ ವಿಷಯವನ್ನು ತಿಳಿಯಬೇಕೆಂದು ನನಗೆ ಕುತೂಹಲವುಂಟಾಗಿದೆ.

ಯಥಾ ಚೈವಾಭವದ್ ಯುದ್ಧಂ ತಚ್ಚಾಚಕ್ಷ್ವ ಪಿತಾಮಹ |
ವಿಸ್ತರೇಣ ಮಹಾಬಾಹೋ ಪರಂ ಕೌತೂಹಲಂ ಹಿ ಮೇ ॥6॥

ಅವರೀರ್ವರಿಗೆ ಯುದ್ಧವು ಹೇಗೆ ನಡೆಯಿತು ಎಂಬುದನ್ನು ತಾತನೇ, ನನಗೆ ತಿಳಿಸು. ಈ ವಿಷಯದಲ್ಲಿ ನನಗೆ ಬಹಳವಾದ ಕುತೂಹಲವುಂಟಾಗಿದೆ. ಮಹಾಬಾಹುವೇ, ಕಥೆಯನ್ನು ವಿಸ್ತರಿಸು.

ಭೀಷ್ಮಃ

ರಥೇನೇಂದ್ರಃ ಪ್ರಯಾತೋ ವೈ ಸಾರ್ಧಂ ಸುರಗಣೈಃ ಪುರಾ |
ದದರ್ಶಾಥಾಗ್ರತೋ ವೃತ್ರಂ ವಿಷ್ಠಿತಂ ಪರ್ವತೋಪಮಮ್ ॥7॥

ಭೀಷ್ಮ ಧರ್ಮಪುತ್ರನೇ, ಇಂದ್ರನು ತನ್ನ ಸೇನೆಯೊಂದಿಗೆ ಸೇರಿಕೊಂಡು, ರಥವನ್ನೇರಿ ವೃತ್ರಾಸುರನ ಮೇಲೆ ಯುದ್ಧಕ್ಕೆ ಹೋದಾಗ ಇಂದ್ರನು ಪರ್ವತದಂತೆ ಎತ್ತರವುಳ್ಳಂತಹ ವೃತ್ರಾಸುರನನ್ನು ತನ್ನ ಎದುರಿನಲ್ಲಿ ಕಂಡನು.

ಯೋಜನಾನಾಂ ಶತಾನ್ಯೂರ್ಧ್ವಂ ಪಂಚೋಚ್ಛ್ರಿತಮರಿಂದಮ |
ಶತಾನಿ ವಿಸ್ತರೇಣಾಥ ತ್ರೀಣ್ಯೇವಾಭ್ಯಧಿಕಾನಿ ತು ॥8॥

ವೃತ್ರಾಸುರನಾದರೂ ಐದುನೂರು ಯೋಜನಗಳ ಎತ್ತರ, ಮುನ್ನೂರು ಯೋಜನಗಳ ವಿಸ್ತಾರವಾಗಿ ಬೆಳೆದು ನಿಂತಿದ್ದನು.

ತತ್ ಪ್ರೇಕ್ಷ್ಯ ತಾದೃಶಂ ರೂಪಂ ತ್ರೈಲೋಕ್ಯೇನಾಪಿ ದುರ್ಜಯಮ್ |
ವೃತ್ರಸ್ಯ ದೇವಾಃ ಸಂತ್ರಸ್ತಾ ನ ಶಾಂತಿಮುಪಲೇಭಿರೇ ॥9॥

ಇಂತಹ ಪರ್ವತಾಕಾರದ ದೈತ್ಯನನ್ನು ಕಂಡ ಕೂಡಲೇ ದೇವತಾ ಸೈನ್ಯವೆಲ್ಲವೂ ಮೂರು ಲೋಕದಿಂದಲೂ ಇವನನ್ನು ಜಯಿಸಲಾರೆವೆಂದು ತಿಳಿದು ಭಯದಿಂದ ನಡುಗಿ ಹೋಯಿತು. ಶಾಂತಿಯನ್ನು ಕಳೆದುಕೊಂಡಿತು.

ಶಕ್ರಸ್ಯ ತು ತದಾ ರಾಜನ್ನೂರುಸ್ತಂಭೋ ವ್ಯಜಾಯತ |
ಭಯಾದ್ವೃತ್ರಸ್ಯ ಸಹಸಾ ದೃಷ್ಟ್ವಾ ತದ್ರೂಪಮುತ್ತಮಮ್ ॥10॥

ಇಂದ್ರನಿಗೂ ಆ ವೃತ್ರಾಸುರನ ರೂಪವನ್ನು ಕಂಡು ಭಯದಿಂದ ಅವನ ತೊಡೆಗಳೆರಡು ಮರಗಟ್ಟಿದವು. ಹಾಗಿದ್ದರೂ ದೇವಸೈನ್ಯವನ್ನು ಹಿಡಿದು ಧೈರ್ಯದಿಂದ ಯುದ್ಧಕ್ಕೆ ಮುಂದಾದನು.

ತತೋ ನಾದಃ ಸಮಭವದ್ ವಾದಿತ್ರಾಣಾಂ ಚ ನಿಸ್ವನಃ |
ದೇವಾಸುರಾಣಾಂ ಸರ್ವೇಷಾಂ ತಸ್ಮಿನ್ ಯುದ್ಧ ಉಪಸ್ಥಿತೇ ॥11॥

ರಣವಾದ್ಯಗಳು ಮೊಳಗಿದವು. ಯುದ್ಧದ ಗದ್ದಲವು ಹೆಚ್ಚಾಯಿತು. ಇಂದ್ರನು ಅಸುರರ ಜೊತೆಗೆ ಯುದ್ಧಕ್ಕಾಗಿ ನಿಲ್ಲಲು ಗದ್ದಲವು ಮುಗಿಲು ಮುಟ್ಟಿತ್ತು.

ಅಥ ವೃತ್ರಸ್ಯ ಕೌರವ್ಯ ದೃಷ್ಟ್ವಾ ಶಕ್ರಮುಪಸ್ಥಿತಮ್ |

ನ ಸಂಭ್ರಮೋ ನ ಭೀಃ ಕಾಚಿದಾಸ್ಥಾ ವಾ ಸಮಜಾಯತ ॥12॥
ಇಂದ್ರನು ಮಹತ್ತಾದ ಸೈನ್ಯವನ್ನು ಹೊಂದಿ ಬಂದಿರುವ ದೃಶ್ಯವನ್ನು ಕಂಡು ವೃತ್ರನಿಗೆ ಭಯವಾಗಲಿ, ಕಳವಳವಾಗಲಿ, ಯುದ್ಧ ಮಾಡಬೇಕೆಂಬ ಆತುರವಾಗಲಿ ಉಂಟಾಗಲಿಲ್ಲ, ಅಲಕ್ಷಿಸಿದನು.
ತತಃ ಸಮಭವದ್ ಯುದ್ಧಂ ತ್ರೈಲೋಕ್ಯಸ್ಯ ಭಯಂಕರಮ್ |
ಶಕ್ರಸ್ಯ ಚ ಸುರೇಂದ್ರಸ್ಯ ವೃತ್ರಸ್ಯ ಚ ಮಹಾತ್ಮನಃ ॥13॥
ಅವರೀರ್ವರಿಗೂ ಭಯಂಕರವಾದ ಯುದ್ಧವು ಉಂಟಾಯಿತು. ತ್ರಿಲೋಕ ಭಯಂಕರವೆನಿಸಿದ ಯುದ್ಧವು ವೃತ್ರ-ಇಂದ್ರರ ನಡುವೆ ಉಂಟಾಯಿತು.
ಅಸಿಭಿಃ ಪಟ್ಟಿಶೈಃ ಶೂಲೈಃ ಶಕ್ತಿತೋಮರಮುದ್ಗರೈಃ |
ಶಿಲಾಭಿರ್ವಿವಿಧಾಭಿಶ್ಚ ಕಾರ್ಮುಕೈಶ್ಚ ಮಹಾಸ್ವನೈಃ ॥14॥
ಅಸುರರು ಕತ್ತಿ, ಪಟ್ಟಸ, ಶೂಲ, ಶಕ್ತಿ, ತೋಮರ, ಮುದ್ಗರ ಮುಂತಾದ ಆಯುಧಗಳನ್ನೂ, ಕಲ್ಲುಗಳನ್ನೂ, ಬಾಣಗಳನ್ನೂ ಶಬ್ದ ಮಾಡುತ್ತಾ ದೇವಸೈನ್ಯದ ಮೇಲೆ ಎಸೆದರು.
ಅಸ್ತ್ರೈಶ್ಚ ವಿವಿಧೈರ್ದಿವ್ಯೈಃ ಪಾವಕೋಲ್ಕಾಭಿರೇವ ಚ |
ದೇವಾಸುರೈಸ್ತತಃ ಸೈನ್ಯೈಃ ಸರ್ವಮಾಸೀತ್ ಸಮಾಕುಲಮ್ ॥15॥
ನಾನಾ ವಿಧವಾದ ದಿವ್ಯವಾದ ಅಸ್ತ್ರಗಳಿಂದ, ಬೆಂಕಿಯನ್ನುಗುಳುವ ಬಾಣಗಳಿಂದ ದೇವಾಸುರರ ಸೈನ್ಯದಲ್ಲಿ ಭಯಂಕರವಾದ ಯುದ್ಧವು ಏರ್ಪಟ್ಟಿತು.
ಪಿತಾಮಹಪುರೋಗಾಶ್ಚ ಸರ್ವೇ ದೇವಗಣಾಸ್ತಥಾ |
ಋಷಯಶ್ಚ ಮಹಾಭಾಗಾಸ್ತದ್ಯುದ್ಧಂ ದ್ರಷ್ಟುಮಾಗಮನ್ ॥16॥
ಬ್ರಹ್ಮಾದಿ ದೇವತೆಗಳು, ದೇವರ್ಷಿಗಳು ವಿಮಾನದಲ್ಲಿ ಕುಳಿತು ಯುದ್ಧವನ್ನು ನೋಡಲು ಆಗಮಿಸಿದರು.
ವಿಮಾನಾಗ್ರೈ ರ್ಯ್ಯೆರ್ಮಹಾರಾಜ ಸಿದ್ಧಾಶ್ಚ ಭರತರ್ಷಭ |
ಗಂಧರ್ವಾಶ್ಚ ವಿಮಾನಾಗ್ರೈ ರ್ಯ್ಯೆರಪ್ಸರೋಭಿಃ ಸಮಾಗಮನ್ ॥17॥
ಇದರಂತೆ ಶ್ರೇಷ್ಠವಾದ ವಿಮಾನಗಳಲ್ಲಿ ಸಿದ್ಧರು, ಗಂಧರ್ವರು ಅಪ್ಸರೆಯರಿಂದ ಸಹಿತರಾಗಿ ಯುದ್ಧವನ್ನು ನೋಡಲು ಕುತೂಹಲದಿಂದ ಆಗಮಿಸಿದರು.
ತತೋಽಂತರಿಕ್ಷಮಾವೃತ್ಯ ವೃತ್ರೋ ಧರ್ಮಭೃತಾಂ ವರಃ |
ಅಶ್ಮವರ್ಷೇಣ ದೇವೇಂದ್ರಂ ಪರ್ವತಾತ್ ಸಮವಾಕಿರತ್ ॥18॥
ಬಳಿಕ ವೃತ್ರನು ಅಂತರಿಕ್ಷವನ್ನು ಆವರಿಸಿ ಇಂದ್ರನ ಸುತ್ತಲು ಕಲ್ಲಿನ ಮಳೆಯನ್ನು ಸುರಿಸಿ ಇಂದ್ರನನ್ನು ಮುಚ್ಚಿದನು.
ತತೋ ದೇವಗಣಾಃ ಕ್ರುದ್ಧಾಃ ಸರ್ವತಃ ಶಸ್ತ್ರವೃಷ್ಟಿಭಿಃ |
ಅಶ್ಮವರ್ಷಮಪೋಹಂತ ವೃತ್ರಪ್ರೇರಿತಮಾಹವೇ ॥19॥
ದೇವತಾಸಮುದಾಯವು ಸಿಟ್ಟಾಗಿ ಅನೇಕ ಶಸ್ತ್ರದ ಮಳೆಗಳನ್ನು ಸುರಿಸಿ, ಅವನು ಸುರಿಸಿದ ಕಲ್ಲಿನ ಮಳೆಯ ರಾಶಿಯನ್ನು ಮುರಿದು ಕೆಡವಿದರು.
ವೃತ್ರಶ್ಚ ಕುರುಶಾರ್ದೂಲ ಮಹಾಮಾಯೋ ಮಹಾಬಲಃ |
ಮೋಹಯಾಮಾಸ ದೇವೇಂದ್ರಂ ಮಾಯಾಯುದ್ಧೇನ ಸರ್ವತಃ ॥20॥
ಬಳಿಕ ಮಾಯಾವಿಯಾದ ವೃತ್ರನು ಮಾಯಾಯುದ್ಧವನ್ನು ಆರಂಭಿಸಿದನು. ಇದರಿಂದ ದೇವೇಂದ್ರನು ದಿಗ್ಭ್ರಮೆ ಹೊಂದಿದನು.
ತಸ್ಯ ವೃತ್ರಾರ್ದಿತಸ್ಯಾಥ ಮೋಹ ಆಸೀಚ್ಛತಕ್ರತೋಃ |
ರಥಂತರೇಣ ತಂ ತತ್ರ ವಸಿಷ್ಠಃ ಸಮಬೋಧಯತ್ ॥21॥
ಕೂಡಲೇ ವಸಿಷ್ಠನು ಸಾಮಮಂತ್ರಗಳಿಂದ ದಿಗ್ಭ್ರಾಂತನಾಗಿ ಮೂರ್ಛೆಗೊಂಡಿರುವ ಇಂದ್ರನನ್ನು ಎಚ್ಚರಗೊಳಿಸಿ ಯುದ್ಧಕ್ಕೆ ಪ್ರೋತ್ಸಾಹವನ್ನು ನೀಡಿದನು.
ವ್ಯಾಖ್ಯಾನ ವಿಶೇಷ ರಥಂತರ ಎಂಬ ಸಾಮಮಂತ್ರವು ಮೂರ್ಛೆಯಿಂದ ಎಚ್ಚರಗೊಳಿಸುವ ಮಂತ್ರವೆನಿಸಿದೆ.
ವಸಿಷ್ಠಃ
ದೇವಶ್ರೇಷ್ಠೋಽಸಿ ದೇವೇಂದ್ರ ಸುರಾರಿವಿನಿಬರ್ಹಣ |
ತ್ರೈಲೋಕ್ಯಬಲಸಂಯುಕ್ತಃ ಕಸ್ಮಾಚ್ಛಕ್ರ ವಿಷೀದಸಿ ॥22॥
ವಸಿಷ್ಠ ಮಹೇಂದ್ರನೇ, ನೀನು ದೇವತೆಗಳಿಗೆಲ್ಲ ನಾಯಕನಾಗಿರುವಿ. ದೈತ್ಯರನ್ನು, ರಾಕ್ಷಸರನ್ನು ಸಂಹರಿಸಲು ನೀನೊಬ್ಬನೇ ಸಮರ್ಥನು. ಮೂರುಲೋಕದ ಸಮಸ್ತರ ಶೌರ್ಯವು ನಿನ್ನಲ್ಲಿ ನೆಲೆಗೊಂಡಿದೆ. ನೀನೇಕೆ ದುಃಖ ಪಡುತ್ತಿದ್ದಿ?
ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಶ್ಚೈವ ಜಗತ್ಪ್ರಭುಃ |
ಸೋಮಶ್ಚ ಭಗವಾನ್ದೇವಃ ಸರ್ವೇ ಚ ಪರಮರ್ಷಯಃ ॥23॥
ಅಲ್ಲಿ ನೋಡು, ಬ್ರಹ್ಮ-ವಿಷ್ಣು-ಶಿವ-ಪೂಜ್ಯನಾದ ಸೋಮ, ಮಹರ್ಷಿಗಳು, ದೇವತೆಗಳು ಎಲ್ಲರೂ ನಿನ್ನ ಹಿತಚಿಂತಕರಾಗಿದ್ದಾರೆ.
ಮಾ ಕಾರ್ಷೀಃ ಕಶ್ಮಲಂ ಶಕ್ರ ಕಶ್ಚಿದೇವೇತರೋ ಯಥಾ |
ಆರ್ಯಾಂ ಯುದ್ಧೇ ಮತಿಂ ಕೃತ್ವಾ ಜಹಿ ಶತ್ರುಂ ಸುರೇಶ್ವರ ॥24॥
ಹೃದಯದಲ್ಲಿ ದುಃಖದ ಕಶ್ಮಲವನ್ನು ಹೊಂದಬೇಡ. ಮನುಷ್ಯರಂತೆ ಎದೆಗುಂದುವುದು ನಿನಗೆ ತರವಲ್ಲ. ಧೀರನಾಗಿ ನಿಂತು ಯುದ್ಧದಲ್ಲಿ ಶತ್ರುವನ್ನು ನಿಗ್ರಹಿಸು.
ಏಷ ಲೋಕಗುರುಸ್ತ್ರ್ಯಕ್ಷಃ ಸರ್ವಲೋಕನಮಸ್ಕೃತಃ |

ನಿರೀಕ್ಷತೇ ತ್ವಾಂ ಭಗವಾಂಸ್ತ್ಯಜ ಮೋಹಂ ಸುರೇಶ್ವರ ॥25॥
ಅಲ್ಲಿ ನೋಡು. ಲೋಕಗುರುವಾದ ತ್ರಿನೇತ್ರನು ನಿನ್ನನ್ನು ಕರುಣಾದೃಷ್ಟಿಯಿಂದ ನೋಡುತ್ತಿದ್ದಾನೆ. ಸರ್ವಲೋಕ ನಮಸ್ಕೃತನಾದ ಅವನನ್ನು ಕಂಡು, ಮೋಹವನ್ನು ತ್ಯಜಿಸಿ ನೀನು ಯುದ್ಧವನ್ನು ಮಾಡುವುದನ್ನು ನಿನ್ನ ಗುರುವು ನಿರೀಕ್ಷಿಸುತ್ತಿದ್ದಾನೆ.
ಏತೇ ಬ್ರಹ್ಮರ್ಷಯಶ್ಚೈವ ಬೃಹಸ್ಪತಿಪುರೋಗಮಾಃ |
ಸ್ತವೇನ ಶಕ್ರ ದಿವ್ಯೇನ ಸ್ತುವಂತಿ ತ್ವಾಂ ಜಯಾಯ ವೈ ॥26॥
ಬೃಹಸ್ಪತಿಯೇ ಮೊದಲಾದ ಬ್ರಹ್ಮರ್ಷಿಗಳು ನಿನಗೆ ಜಯವನ್ನು ಬಯಸಿ ಸ್ತೋತ್ರ ಮಾಡುತ್ತಿದ್ದಾರೆ ಎಂದು ವಸಿಷ್ಠರು ಹೇಳಿದರು.
ಭೀಷ್ಮಃ
ಏವಂ ಸಂಬೋಧ್ಯಮಾನಸ್ಯ ವಸಿಷ್ಠೇನ ಮಹಾತ್ಮನಾ |
ಅತೀವ ವಾಸವಸ್ಯಾಸೀದ್ ಬಲಮುತ್ತಮತೇಜಸಃ ॥27॥
ಭೀಷ್ಮ ಈ ರೀತಿಯಾಗಿ ಮಹಾತ್ಮರಾದ ವಸಿಷ್ಠರು ಇಂದ್ರನನ್ನು ಸಂಬೋಧಿಸಿ ಪ್ರೋತ್ಸಾಹಿಸಿದಾಗ ಇಂದ್ರನಿಗೆ ಹೊಸ ವೀರ್ಯ-ಉತ್ಸಾಹಗಳು ಉಂಟಾದಂತಾದವು.
ತತೋ ಬುದ್ಧಿಮುಪಾಗಮ್ಯ ಭಗವಾನ್ ಪಾಕಶಾಸನಃ |
ಯೋಗೇನ ಮಹತಾ ಯುಕ್ತಸ್ತಾಂ ಮಾಯಾಂ ವ್ಯಪಕರ್ಷತ ॥28॥
ಕೂಡಲೇ ತನ್ನ ಬುದ್ಧಿಯೋಗವನ್ನಾಶ್ರಯಿಸಿ, ಜಾಣತನದಿಂದ, ಶ್ರೇಷ್ಠವಾದ ಉಪಾಯದಿಂದ ವೃತ್ರಾಸುರನ ಮಾಯೆಯನ್ನು ಪರಿಹರಿಸಿದನು.
ತತೋಽಂಗಿರಃಸುತಃ ಶ್ರೀಮಾಂಸ್ತೇ ಚೈವ ಪರಮರ್ಷಯಃ |
ದೃಷ್ಟ್ವಾ ವೃತ್ರಸ್ಯ ವಿಕ್ರಾಂತಮುಪಗಮ್ಯ ಮಹೇಶ್ವರಮ್ |
ಊಚುರ್ವೃತ್ರವಿನಾಶಾರ್ಥಂ ಲೋಕಾನಾಂ ಹಿತಕಾಮ್ಯಯಾ ॥29॥
ಈ ಮಧ್ಯೆ ಬೃಹಸ್ಪತಿಯು ಮತ್ತು ಕೆಲವು ಮಹರ್ಷಿಗಳು ರುದ್ರನ ಬಳಿಗೆ ಹೋಗಿ ಲೋಕಹಿತಕ್ಕಾಗಿ ಈಗಲೇ ವೃತ್ರನನ್ನು ಸಂಹರಿಸಬೇಕೆಂದು ಪ್ರಾರ್ಥಿಸಿದರು.
ತತೋ ಭಗವತಸ್ತೇಜೋ ಜ್ವರೋ ಭೂತ್ವಾ ಜಗತ್ಪತೇಃ |
ಸಮಾವಿಶನ್ ಮಹಾರೌದ್ರಂ ವೃತ್ರಂ ದೈತ್ಯವರಂ ತದಾ ॥30॥
ಕೂಡಲೇ ಪೂಜ್ಯನಾದ ರುದ್ರದೇವರ ತೇಜಸ್ಸು ಜ್ವರದ ರೂಪವನ್ನು ತಾಳಿ ವೃತ್ರನ ದೇಹದಲ್ಲಿ ಪ್ರವೇಶ ಹೊಂದಿತು.
ವಿಷ್ಣುಶ್ಚ ಭಗವಾನ್ ದೇವಃ ಸರ್ವಲೋಕಾಭಿಪೂಜಿತಃ |
ಐಂದ್ರಂ ಸಮಾವಿಶದ್ ವಜ್ರಂ ಲೋಕಸಂರಕ್ಷಣೇ ರತಃ ॥31॥
ಇದೇ ಪ್ರಸಂಗದಲ್ಲಿ ವಿಷ್ಣುವು ಲೋಕದ ಹಿತದ ದೃಷ್ಟಿಯಿಂದ ಇಂದ್ರನ ವಜ್ರಾಯುಧದಲ್ಲಿ ತಾನೇ ಪ್ರವೇಶವನ್ನು ಹೊಂದಿದನು.
ತತೋ ಬೃಹಸ್ಪತಿರ್ಧೀಮಾನುಪಾಗಮ್ಯ ಶತಕ್ರತುಮ್ |
ವಸಿಷ್ಠಶ್ಚ ಮಹಾತೇಜಾಃ ಸರ್ವೇ ಚ ಪರಮರ್ಷಯಃ ॥32॥
ನಂತರ ಬೃಹಸ್ಪತಿಯು, ವಸಿಷ್ಠನು, ಇತರ ಮಹರ್ಷಿಗಳು ಇಂದ್ರನ ಬಳಿ ಬಂದು ಒಂದೇ ಅಭಿಪ್ರಾಯದಿಂದ ಹೀಗೆ ಹೇಳಿದರು.
ತೇ ಸಮಾಸಾದ್ಯ ವರದಂ ವಾಸವಂ ಲೋಕಪೂಜಿತಮ್ |
ಊಚುರೇಕಾಗ್ರಮನಸೋ ಜಹಿ ವೃತ್ರಮಿತಿ ಪ್ರಭೋ ॥33॥
ಲೋಕಪೂಜಿತನಾದ, ವರದನಾದ ವಾಸವನ ಬಳಿ ಅವರೆಲ್ಲರೂ ಬಂದು ಇಂದ್ರನೇ, ವೃತ್ರಾಸುರನನ್ನು ಕೊಲ್ಲು ಎಂದು ಹೇಳಿದರು.
ಮಹೇಶ್ವರಃ
ಏಷ ವೃತ್ರೋ ಮಹಾನ್ ಶಕ್ರ ಬಲೇನ ಮಹತಾ ವೃತಃ |
ವಿಶ್ವಾತ್ಮಾ ಸರ್ವಗಶ್ಚೈವ ಬಹುಮಾಯಶ್ಚ ವಿಶ್ರುತಃ ॥34॥
ಮಹೇಶ್ವರ ಇಂದ್ರನೇ, ಮಹಾಪ್ರಬಲನಾದ ವೃತ್ರಾಸುರನು ಮಹತ್ತರವಾದ ಸೇನಾಬಲದಿಂದ ಕೂಡಿದ್ದಾನೆ. ಅಲ್ಲದೆ ಅವನು ಕಾಮರೂಪಿಯಾಗಿದ್ದಾನೆ. ಕಾಮಚಾರಿಯಾಗಿದ್ದಾನೆ. ಅನೇಕ ಮಾಯೆಗಳನ್ನು ಬಲ್ಲವನಾಗಿದ್ದಾನೆ.
ತದೇನಮಸುರಶ್ರೇಷ್ಠಂ ತ್ರೈಲೋಕ್ಯೇನಾಪಿ ದುರ್ಜಯಮ್ |
ಜಹಿ ತ್ವಂ ಯೋಗಮಾಸ್ಥಾಯ ಮಾವಮಂಸ್ಥಾಃ ಸುರೇಶ್ವರ ॥35॥
ಮೂರುಲೋಕಗಳೂ ಒಟ್ಟಾದರೂ ಅವನನ್ನು ಮಣಿಸಲು ಸಾಧ್ಯವಿಲ್ಲ. ಆದ್ದರಿಂದ ಇನ್ನು ತಡಮಾಡದೆ, ಅಲಕ್ಷಿಸದೆ, ಯೋಗಶಕ್ತಿಯನ್ನಾಶ್ರಯಿಸಿ ಅವನನ್ನು ಸದೆಬಡಿ.
ಅನೇನ ಹಿ ತಪಸ್ತಪ್ತಂ ಬಲಾರ್ಥಮಮರಾಧಿಪ |
ಷಷ್ಟಿಂ ವರ್ಷಸಹಸ್ರಾಣಿ ಬ್ರಹ್ಮಾ ಚಾಸ್ಮೈ ವರಂ ದದೌ ॥36॥
ದೇವೇಂದ್ರನೇ, ಇವನು ಮಹಾಬಲವನ್ನು ಪಡೆಯಲು ಅರವತ್ತು ಸಾವಿರ ವರ್ಷಗಳ ತನಕ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿರುವನು. ಬ್ರಹ್ಮನಾದರೂ ಅವನಿಗೆ ಮಹತ್ತರವಾದ ಯೋಗಬಲದ ಶಕ್ತಿ, ವರಗಳನ್ನು ನೀಡಿರುತ್ತಾನೆ.
ಮಹತ್ತ್ವಂ ಯೋಗಿನಾಂ ಚೈವ ಮಹಾಮಾಯತ್ವಮೇವ ಚ |
ಮಹಾಬಲತ್ವಂ ಚ ತಥಾ ತೇಜಶ್ಚಾಗ್ರ್ಯಂ ಸುರೇಶ್ವರ ॥37॥
ಇಂದ್ರನೇ, ಮಹಾಯೋಗ ಸಾಮರ್ಥ್ಯವನ್ನೂ, ಮಹಾಮಾಯಾ ಸಾಮರ್ಥ್ಯವನ್ನೂ, ಮಹಾಬಲವನ್ನೂ ಅವನು ಹೊಂದಿರುತ್ತಾನೆ.
ಏತದ್ವೈ ಮಾಮಕಂ ತೇಜಃ ಸಮಾವಿಶತಿ ವಾಸವ |
ವೃತ್ರಮೇನಂ ತ್ವಮಪ್ಯೇವಂ ಜಹಿ ವಜ್ರೇಣ ದಾನವಮ್ ॥38॥

ಆದರೂ ಇಂದ್ರನೇ, ನನ್ನ ತೇಜಸ್ಸು ನಿನ್ನಲ್ಲಿ ಪ್ರವೇಶ ಹೊಂದಿದೆ. ದಾನವನಾದ ವೃತ್ರಾಸುರನನ್ನು ವಜ್ರಾಯುಧದಿಂದ ಕೊಂದು ಹಾಕು.
ಶಕ್ರಃ
ಭಗವಂಸ್ತ್ವತ್ಪ್ರಸಾದೇನ ದಿತಿಜಂ ಸುದುರಾಸದಮ್ |
ವಜ್ರೇಣ ನಿಹನಿಷ್ಯಾಮಿ ಪಶ್ಯತಸ್ತೇ ಸುರರ್ಷಭ ॥39॥
ಶಕ್ರ ಪೂಜ್ಯನೇ, ನಿನ್ನ ಅನುಗ್ರಹದಿಂದ ಯಾರಿಂದಲೂ ಗೆಲ್ಲಲಾಗದ ದೈತ್ಯನನ್ನು ಎಲ್ಲರೂ ನೋಡುತ್ತಿರುವಂತೆ ವಜ್ರಾಯುಧದಿಂದ ಕೊಂದು ಹಾಕುತ್ತೇನೆ.
ಭೀಷ್ಮಃ
ಆವಿಶ್ಯಮಾನೇ ದೈತ್ಯೇ ತು ಜ್ವರೇಣಾಥ ಮಹಾಸುರೇ |
ದೇವತಾನಾಮೃಷೀಣಾಂ ಚ ಹರ್ಷಾನ್ನಾದೋ ಮಹಾನಭೂತ್ ॥40॥
ಭೀಷ್ಮ ಇದೇ ಸಮಯಕ್ಕೆ ಸರಿಯಾಗಿ ರುದ್ರದೇವನಿಂದ ಪ್ರೇರಿತವಾದ ಜ್ವರವು ವೃತ್ರನನ್ನು ಬಂದು ಹಿಡಿಯಿತು. ಇದನ್ನು ತಿಳಿದ ದೇವತೆಗಳು, ಋಷಿಗಳು ಸಂತೋಷದಿಂದ ದೊಡ್ಡ ನಾದವನ್ನು ಮಾಡಿದರು.
ತತೋ ದುಂದುಭಯಶ್ಚೈವ ಶಂಖಾಶ್ಚ ಸುಮಹಾಸ್ವನಾಃ |
ಮುರಜಾ ಡಿಂಡಿಮಾಶ್ಚೈವ ಪ್ರಾವಾದ್ಯಂತ ಸಹಸ್ರಶಃ ॥41॥
ಅನೇಕ ಕಡೆಗಳಿಂದ ಶಂಖ-ದುಂದುಭಿ-ಮುರಜ-ಡಿಂಡಿಮಾದಿ ನಾದಗಳು ಸಾವಿರ ಸಂಖ್ಯೆಯಲ್ಲಿ ಮೊಳಗುತ್ತಿದ್ದವು.
ಅಸುರಾಣಾಂ ತು ಸರ್ವೇಷಾಂ ಸ್ಮೃತಿಲೋಪೋಽಭವನ್ಮಹಾನ್ |
ಪ್ರಜ್ಞಾ ನಾಶಶ್ಚ ಬಲವಾನ್ ಕ್ಷಣೇನ ಸಮಪದ್ಯತ ॥42॥
ಎಲ್ಲಾ ದೈತ್ಯರಿಗೂ ಇದರಿಂದ ನೆಲೆ ತಪ್ಪಿದಂತಾಯಿತು. ವೃತ್ರನ ಮಾಯೆ ಎಲ್ಲವೂ ಅಡಗಿಹೋಗಲು ಆರಂಭಿಸಿತು. ಕೂಡಲೇ ಅವನ ಪ್ರಜ್ಞಾನಾಶವು ದೊಡ್ಡ ಪ್ರಮಾಣದಲ್ಲಿ ಉಂಟಾಯಿತು.
ತಮಾವಿಷ್ಟಮಥೋ ಜ್ಞಾತ್ವಾ ಋಷಯೋ ದೇವತಾಸ್ತಥಾ |
ಸ್ತುವಂತಃ ಶಕ್ರಮೀಶಾನಂ ತಥಾ ಪ್ರಾಚೋದಯನ್ನಪಿ ॥43॥
ದೇವತೆಗಳು, ಋಷಿಗಳೆಲ್ಲರೂ ವೃತ್ರಾಸುರನಲ್ಲಿ ರುದ್ರಜ್ವರವು ಪ್ರವೇಶ ಮಾಡಿದೆ ಎಂಬುದನ್ನು ತಿಳಿದು ಇಂದ್ರನನ್ನು ಹುರಿದುಂಬಿಸುತ್ತಾ, ವೃತ್ರವಧೆಗಾಗಿ ಪ್ರಚೋದಿಸುತ್ತಿದ್ದರು.
ರಥಸ್ಥಸ್ಯ ಹಿ ಶಕ್ರಸ್ಯ ಯುದ್ಧಕಾಲೇ ಮಹಾತ್ಮನಃ |
ಋಷಿಭಿಃ ಸ್ತೂಯಮಾನಸ್ಯ ರೂಪಮಾಸೀತ್ ಸುದುರ್ದೃಶಮ್ ॥44॥
ಯುದ್ಧಕಾಲದಲ್ಲಿ ಮಹಾತ್ಮನಾದ, ರಥದಲ್ಲಿ ಕುಳಿತಿರುವ ಇಂದ್ರನ ರೂಪವು ಭಯಂಕರವೂ, ಋಷಿಗಳಿಂದ ಸ್ತೋತ್ರ ಮಾಡಲು ಯೋಗ್ಯವೂ ಆದುದಾಗಿತ್ತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾರನೆಯ ಅಧ್ಯಾಯ
ವೃತ್ರಾಸುರನ ವಧೆ. ಬ್ರಹ್ಮಹತ್ಯಾ ವಿಭಾಗ.
ಭೀಷ್ಮಃ
ವೃತ್ರಸ್ಯ ತು ಮಹಾರಾಜ ಜ್ವರಾವಿಷ್ಟಸ್ಯ ಸರ್ವಶಃ |
ಅಭವನ್ಯಾನಿ ಲಿಂಗಾನಿ ಶರೀರೇ ತಾನಿ ಮೇ ಶೃಣು ॥1॥
ಭೀಷ್ಮ ಮಹಾರಾಜನೇ, ಜ್ವರಾವಿಷ್ಟನಾದ ವೃತ್ರಾಸುರನ ಶರೀರದಲ್ಲಿ ಯಾವ ಚಿಹ್ನೆಗಳು ಉಂಟಾದವೆಂಬುದನ್ನು ಹೇಳುತ್ತೇನೆ, ಅದನ್ನು ಕೇಳು.
ಜ್ವಲಿತಾಸ್ಯೋಽಭವದ್ಘೋರೋ ವೈವರ್ಣ್ಯಂ ಚಾಗಮತ್ ಪರಮ್ |
ಗಾತ್ರಕಂಪಶ್ಚ ಸುಮಹಾನ್ ಶ್ವಾಸಶ್ಚಾಪ್ಯಭವನ್ಮಹಾನ್ |
ರೋಮಹರ್ಷಶ್ಚ ತೀವ್ರೋಽಭೂನ್ನಿಃಶ್ವಾಸಶ್ಚ ಮಹಾನ್ನೃಪ ॥2॥
ಜ್ವರದಿಂದಾಗಿ ವೃತ್ರನ ಮುಖವು ಸುಡಲಾರಂಭಿಸಿತು. ಘೋರರೂಪದಿಂದ ಅವನ ದೇಹದ ಬಣ್ಣವೇ ವಿಕಾರ ಹೊಂದಲು ಆರಂಭಿಸಿತು. ಶರೀರವು ನಡುಗತೊಡಗಿತು. ಶ್ವಾಸೋಚ್ಛ್ವಾಸಗಳು ವೇಗವಾಗಿ ಆಡತೊಡಗಿದವು. ಭಯಂಕರವಾಗಿ ರೋಮಗಳೆಲ್ಲವೂ ನಿಮಿರಿ ನಿಲ್ಲುತ್ತಿದ್ದವು. ತೀವ್ರವಾದ ನಿಃಶ್ವಾಸವನ್ನು ಬಿಡುತ್ತಿದ್ದನು.
ಶಿವಾ ಚಾಶಿವಸಂಕಾಶಾ ತಸ್ಯ ವಕ್ತ್ರಾತ್ ಸುದಾರುಣಾ |
ನಿಷ್ಪಪಾತ ಮಹಾಘೋರಾ ಸ್ಮೃತಿಃ ಸಾ ತಸ್ಯ ಭಾರತ |
ಉಲ್ಕಾಶ್ಚ ಜ್ವಲಿತಾಸ್ತಸ್ಯ ದೀಪ್ತಾಃ ಪಾರ್ಶ್ವೇ ಪ್ರಪೇದಿರೇ ॥3॥
ವೃತ್ರಾಸುರನ ಮುಖದಿಂದ ಅತ್ಯಂತ ಭಯಂಕರವಾದ, ಮಂಗಳ-ಅಮಂಗಳಕರ ರೂಪವಾದ ಶಬ್ದಗಳು ಹೊರಬರುತ್ತಿದ್ದವು. ಅವನ ಮುಖದಿಂದ ಭಯಂಕರವಾದ ಶಬ್ದವು ಹೊರಹೊಮ್ಮುತ್ತಿತ್ತು. ಅವನ ಎರಡೂ ಪಾರ್ಶ್ವಗಳಲ್ಲಿ ಜ್ವಲಿಸುವಂಥ ಪ್ರಕಾಶಮಾನವಾದ ಉಲ್ಕೆಗಳು ಬೀಳತೊಡಗಿದವು.

ಗೃಧ್ರಕಂಕವಡಾಶ್ಚೈವ ವಾಚೋಮುಂಚನ್ ಸುದಾರುಣಾಃ |
ವೃತ್ರಸ್ಯೋಪರಿ ಸಂಹೃಷ್ಟಾಶ್ಚಕ್ರವತ್ ಪರಿಬಭ್ರಮುಃ ॥4॥
ರಣಹದ್ದುಗಳು, ಕಾಗೆಗಳು, ಬಕಪಕ್ಷಿಗಳು ಮೊದಲಾದ ಹಕ್ಕಿಗಳು ಭಯಂಕರವಾಗಿ ಕರ್ಕಶವಾಗಿ ಕೂಗುತ್ತಿದ್ದವು. ವೃತ್ರಾಸುರನ ಮೇಲ್ಭಾಗದಲ್ಲಿ ಚಕ್ರದಂತೆ ಆ ಭಯಂಕರ ಹಕ್ಕಿಗಳೆಲ್ಲ ಸುತ್ತಲಾರಂಭಿಸಿದವು.
ತತಸ್ತಂ ರಥಮಾಸ್ಥಾಯ ದೇವಾಪ್ಯಾಯಿತಮಾಹವೇ |
ವಜ್ರೋದ್ಯತಕರಃ ಶಕ್ರಸ್ತಂ ದೈತ್ಯಂ ಪ್ರತ್ಯವೈಕ್ಷತ ॥5॥
ಬಳಿಕ ಇಂದ್ರನು ದೇವತೆಗಳಿಂದ ಅಭಿನಂದಿಸಲ್ಪಟ್ಟು ರಣಾಂಗಣದಲ್ಲಿ ರಥದಲ್ಲಿ ಕುಳಿತು, ವಜ್ರಾಯುಧವನ್ನು ಹಿಡಿದು ವೃತ್ರಾಸುರನ ಕಡೆ ನುಗ್ಗಿದನು.
ಅಮಾನುಷಮಥೋ ನಾದಂ ಸ ಮುಮೋಚ ಮಹಾಸುರಃ |
ವ್ಯಜೃಂಭತ ಚ ರಾಜೇಂದ್ರ ತೀವ್ರಜ್ವರಸಮನ್ವಿತಃ |
ಅಥಾಸ್ಯ ಜೃಂಭತಃ ಶಕ್ರಸ್ತತೋ ವಜ್ರಮವಾಸೃಜತ್ ॥6॥
ಬಳಿಕ ಮಹಾಸುರನಾದ ವೃತ್ರನು ಮನುಷ್ಯರಿಂದ ಊಹಿಸಲು ಅಸಾಧ್ಯವಾದ ಶಬ್ದವನ್ನು ಮಾಡಿದನು. ಅವನಲ್ಲಿ ಪ್ರವೇಶಿಸಿದ ತೀವ್ರವಾದ ಜ್ವರವು ಗರಿಗೆದರಿತು. ಇದರಿಂದ ಪುನಃ ಪುನಃ ಆಕಳಿಸುತ್ತಿದ್ದನು. ಹೀಗೆ ಆಕಳಿಸುತ್ತಿದ್ದ ವೃತ್ರಾಸುರನ ಮೇಲೆ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದನು.
ಸ ವಜ್ರಃ ಸುಮಹಾತೇಜಾಃ ಕಾಲಾಗ್ನಿಸದೃಶೋಪಮಃ |
ಕ್ಷಿಪ್ರಮೇವ ಮಹಾಕಾಯಂ ವೃತ್ರಂ ದೈತ್ಯಮಪಾತಯತ್ ॥7॥
ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧವು ಮಹಾತೇಜಸ್ಸಿನಿಂದ, ಕೂಡಿಕೊಂಡು ಕಾಲಾಗ್ನಿಗೆ ಸಮಾನವಾಗಿ ಬೆಳಗುತ್ತಿತ್ತು. ಒಡನೆಯೇ ಇಂದ್ರನಿಂದ ಬಿಡಲ್ಪಟ್ಟ ವಜ್ರಾಯುಧವು ದೈತ್ಯನಾದ ವೃತ್ರಾಸುರನನ್ನು ಕೆಳಕ್ಕೆ ಕೆಡವಿತು.
ತತೋ ನಾದಃ ಸಮಭವತ್ ಪುನರೇವ ಸಮಂತತಃ |
ವೃತ್ರಂ ವಿನಿಹತಂ ದೃಷ್ಟ್ವಾ ದೇವಾನಾಂ ಭರತರ್ಷಭ ॥8॥
ವೃತ್ರಾಸುರನು ಹತನಾಗಿ ಬೀಳುತ್ತಿರುವುದನ್ನು ಕಂಡ ದೇವತೆಗಳು ನಾಲ್ಕು ದಿಕ್ಕುಗಳನ್ನು ತುಂಬುವಂತೆ ಸಿಂಹನಾದವನ್ನು ಮಾಡುತ್ತಿದ್ದರು.
ವೃತ್ರಂ ತು ಹತ್ವಾ ಭಗವಾಂದಾನವಾರಿರ್ಮಹಾಯಶಾಃ |
ವಜ್ರೇಣ ವಿಷ್ಣುಯುಕ್ತೇನ ದಿವಮೇವ ಸಮಾವಿಶತ್ ॥9॥
ದಾನವಶತ್ರುವಾದ, ಯಶೋವಂತನಾದ ಇಂದ್ರನು ವಿಷ್ಣುವಿನ ತೇಜಸ್ಸಿನಿಂದ ಆವಿಷ್ಟವಾಗಿದ್ದ ವಜ್ರಾಯುಧದಿಂದ ವೃತ್ರನನ್ನು ಸಂಹರಿಸಿ ದೇವಲೋಕವನ್ನು ಪ್ರವೇಶಿಸಿದನು.
ಅಥ ವೃತ್ರಸ್ಯ ಕೌರವ್ಯ ಶರೀರಾದಭಿನಿಃಸೃತಾ |
ಬ್ರಹ್ಮಹತ್ಯಾ ಮಹಾಘೋರಾ ರೌದ್ರಾ ಲೋಕಭಯಾವಹಾ ॥10॥
ನಂತರ ವೃತ್ರಾಸುರನ ಮೃತ ಶರೀರದಿಂದ ಜಗತ್ತೆಲ್ಲವೂ ಭಯ ಹೊಂದುವಂತೆ ಮಹಾಘೋರವಾದ, ಕ್ರೂರವಾದ ಪಾಪರೂಪದ ಬ್ರಹ್ಮಹತ್ಯೆಯು ಪ್ರಕಟಗೊಂಡಿತು.
ಕರಾಲದಶನಾ ಭೀಮಾ ವಿಕೃತಾ ಕೃಷ್ಣಪಿಂಗಲಾ |
ಪ್ರಕೀರ್ಣಮೂರ್ಧಜಾ ಚೈವ ಘೋರನೇತ್ರಾ ಚ ಭಾರತ ॥11॥
ಭಯಂಕರ ವಿಕಾರವಾದ ಹಲ್ಲುಗಳಿಂದ ಕೂಡಿರುವ, ಕಪ್ಪಾಗಿಯೂ, ಕಂದು ಮಿಶ್ರಿತ ಹಳದಿಯಾಗಿಯೂ, ಭಯಂಕರವಾಗಿಯೂ ಇರುವ ಆಕಾರವುಳ್ಳ, ಕೆದರಿಕೊಂಡಿರುವ ತಲೆಕೂದಲುಗಳುಳ್ಳ, ಘೋರವಾದ ಕಣ್ಣುಗಳಿಂದ ಕೂಡಿದ ಬ್ರಹ್ಮಹತ್ಯೆಯು ಪ್ರಕಟವಾಯಿತು.
ಕಪಾಲಮಾಲಿನೀ ಚೈವ ಕೃಶಾ ಚ ಭರತರ್ಷಭ |
ರುಧಿರಾದ್ರಾ ಚ ಧರ್ಮಜ್ಞ ಚೀರವಸ್ತ್ರನಿವಾಸಿನೀ ॥12॥
ಆ ಬ್ರಹ್ಮಹತ್ಯೆಯು ಕಪಾಲಗಳ ಮಾಲೆಯನ್ನು ಕುತ್ತಿಗೆಗೆ ಧರಿಸಿತ್ತು, ಕೃಶವಾಗಿ ಕಾಣುತ್ತಿತ್ತು, ರಕ್ತದಿಂದ ಒದ್ದೆಯಾಗಿತ್ತು, ಹರಿದ ನಾರು ಬಟ್ಟೆಗಳನ್ನು ಧರಿಸಿತ್ತು.
ಸಾಭಿನಿಷ್ಕ್ರಮ್ಯ ರಾಜೇಂದ್ರ ತಾದೃಗ್ರೂಪಾ ಭಯಾವಹಾ |
ವಜ್ರಿಣಂ ಮೃಗಯಾಮಾಸ ತದಾ ಭರತಸತ್ತಮ ॥13॥
ಅಂತಹ ಭಯಂಕರ ರೂಪವನ್ನು ತಾಳಿದ ಬ್ರಹ್ಮಹತ್ಯೆಯು ವೃತ್ರಾಸುರನ ಶರೀರದಿಂದ ಹೊರಟು ದೇವೇಂದ್ರನನ್ನು ಹುಡುಕಲಾರಂಭಿಸಿತು.
ಕಸ್ಯಚಿತ್ತ್ವಥ ಕಾಲಸ್ಯ ವೃತ್ರಹಾ ಕುರುನಂದನ |
ಸ್ವರ್ಗಾಯಾಭಿಮುಖಃ ಪ್ರಾಯಾಲ್ಲೋಕಾನಾಂ ಹಿತಕಾಮ್ಯಯಾ ॥14॥
ಆ ಸಮಯದಲ್ಲಿ ವೃತ್ರಹಂತಕನಾದ ಇಂದ್ರನು ಲೋಕಗಳ ಹಿತಕ್ಕಾಗಿ ಸ್ವರ್ಗಕ್ಕೆ ಅಭಿಮುಖನಾಗಿ ಹೋಗುತ್ತಿದ್ದನು.
ಬಿಸಾನ್ನಿಃಸರಮಾಣಂ ತು ದೃಷ್ಟ್ವಾ ಶಕ್ರಂ ಮಹೌಜಸಮ್ |
ಕಂಠೇ ಜಗ್ರಾಹ ದೇವೇಂದ್ರಂ ಸುಲಗ್ನಾ ಚಾಭವತ್ತದಾ ॥15॥
ಹೀಗೆ ಸ್ವರ್ಗಾಭಿಮುಖವಾಗಿ ಹೋಗುತ್ತಿರುವ, ಮಹಾತೇಜಸ್ವಿಯಾದ ಇಂದ್ರನನ್ನು ಕಂಡ ಬ್ರಹ್ಮಹತ್ಯೆಯು ಅವನನ್ನು ಹಿಡಿದು ಮರುಕ್ಷಣದಲ್ಲಿಯೇ ಅವನ ಒಳಗಡೆ ಸೇರಿಕೊಂಡಿತು.

ಸ ಹಿ ತಸ್ಮಿನ್ ಸಮುತ್ಪನ್ನೇ ಬ್ರಹ್ಮಹತ್ಯಾಕೃತೇ ಭಯೇ |
ನಲಿನ್ಯಾಂ ಬಿಸಮಧ್ಯಸ್ಥೋ ಬಭೂವಾಬ್ದಗಣಾನ್ ಬಹೂನ್ ॥16॥
ಇಂದ್ರನಿಗೆ ಈ ಬ್ರಹ್ಮಹತ್ಯೆಯಿಂದ ಭಯವುಂಟಾಗಲು ಇಂದ್ರನು ಕಮಲದ ನಾಳದಲ್ಲಿ ಸೇರಿಕೊಂಡು ಅಲ್ಲಿಯೇ ಅನೇಕ ವರ್ಷಗಳ ಕಾಲ ತಪಸ್ಸನ್ನು ಮಾಡಲು ಆರಂಭಿಸಿದನು.
ವ್ಯಾಖ್ಯಾನ ವಿಶೇಷ ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ವೃತ್ರಹತ್ಯೆಯಿಂದ ಇಂದ್ರನಿಗೆ ಕೀರ್ತಿಯೇ ಅಧಿಕವಾಯಿತು. ಬ್ರಹ್ಮಹತ್ಯೆಯು ಬರಲಿಲ್ಲ. ಮಹಾಭಾರತದ ಈ ವಚನಕ್ಕೆ ಇಂದ್ರನ ಪ್ರಾರಬ್ಧ ಸೂಚನೆ ಎಂದು ಭಾವಿಸಬೇಕೇ ವಿನಾ ಬ್ರಹ್ಮಹತ್ಯೆ ಬಂದಿದೆ ಎಂದು ಚಿಂತಿಸಬಾರದು ಎಂದು ಹೇಳಿದ್ದಾರೆ.
ಅನುಸೃತ್ಯ ತು ಯತ್ನಾತ್ಸ ತಯಾ ವೈ ಬ್ರಹ್ಮಹತ್ಯಯಾ |
ತದಾ ಗೃಹೀತಃ ಕೌರವ್ಯ ನಿಶ್ಚೇಷ್ಟಃ ಸಮಪದ್ಯತ ॥17॥
ಇಂದ್ರನು ತನ್ನನ್ನೇ ಅನುಸರಿಸಿಕೊಂಡು ಬರುತ್ತಿದ್ದ ಬ್ರಹ್ಮಹತ್ಯೆಯಿಂದ ಆಕ್ರಮಿಸಲ್ಪಟ್ಟು ಕ್ಷಣಮಾತ್ರದಲ್ಲಿಯೇ ನಿಶ್ಚೇಷ್ಟನಾದನು, ತೇಜಸ್ಸನ್ನು ಕಳೆದುಕೊಂಡನು.
ತಸ್ಯಾ ವ್ಯಪೋಹನೇ ಶಕ್ರಃ ಪರಂ ಯತ್ನಂ ಚಕಾರ ಹ |
ನ ಚಾಶಕತ್ತಾಂ ದೇವೇಂದ್ರೋ ಬ್ರಹ್ಮಹತ್ಯಾಂ ವ್ಯಪೋಹಿತುಮ್ ॥18॥
ಈ ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳಲು ಮಹಾಪ್ರಯತ್ನವನ್ನು ಮಾಡಲು ಆರಂಭಿಸಿದನು. ಆದರೆ ಎಷ್ಟೇ ಪ್ರಯತ್ನಿಸಿದರೂ ತನ್ನಲ್ಲಿ ಸೇರಿಕೊಂಡಿರುವ ಬ್ರಹ್ಮಹತ್ಯೆಯನ್ನು ಪರಿಹರಿಸಿಕೊಳ್ಳಲು ಇಂದ್ರನಿಂದ ಸಾಧ್ಯವಾಗಲಿಲ್ಲ.
ಗೃಹೀತ ಏವ ತು ತಯಾ ದೇವೇಂದ್ರೋ ಭರತರ್ಷಭ |
ಪಿತಾಮಹಮುಪಾಗಮ್ಯ ಶಿರಸಾ ಪ್ರತ್ಯಪೂಜಯತ್ ॥19॥
ಬ್ರಹ್ಮಹತ್ಯೆಯಿಂದ ಗೃಹೀತನಾದ ಇಂದ್ರನು ಹಾಗೇ ಬ್ರಹ್ಮನ ಬಳಿ ಹೋಗಿ ನಮಸ್ಕರಿಸಿ ಪೂಜಿಸಿದನು.
ಜ್ಞಾತ್ವಾ ಗೃಹೀತಂ ಶಕ್ರಂ ತು ದ್ವಿಜಪ್ರವರಹತ್ಯಯಾ |
ಬ್ರಹ್ಮಾ ಸಂಚಿಂತಯಾಮಾಸ ತದಾ ಭರತಸತ್ತಮ ॥20॥
ಚತುರ್ಮುಖ ಬ್ರಹ್ಮನಾದರೂ ಬ್ರಹ್ಮಜ್ಞಾನಿಯಾದ ವೃತ್ರಾಸುರನನ್ನು ಇಂದ್ರನು ಕೊಂದಿರುವ ಕಾರಣ ಬ್ರಹ್ಮಹತ್ಯೆಯು ಇವನನ್ನು ಹಿಡಿದುಕೊಂಡಿದೆ ಎಂದು ಆ ಪ್ರಸಂಗದಲ್ಲಿ ಅದರ ಮೋಚನೆಗೆ ಯೋಚಿಸಿದನು.
ತಾಮುವಾಚ ಮಹಾಬಾಹೋ ಬ್ರಹ್ಮಹತ್ಯಾಂ ಪಿತಾಮಹಃ |
ಸ್ವರೇಣ ಮಧುರೇಣಾಥ ಸಾಂತ್ವಯನ್ನಿವ ಭಾರತ ॥21॥
ಸ್ವಲ್ಪ ಕಾಲದ ಬಳಿಕ ಪಿತಾಮಹನು ಮಧುರವಾದ ಮಾತಿನಿಂದ ಬ್ರಹ್ಮಹತ್ಯೆಯನ್ನು ಸಮಾಧಾನಗೊಳಿಸುತ್ತಾ ಹೀಗೆ ಹೇಳಿದನು.
ಮುಚ್ಯತಾಂ ತ್ರಿದಶೇಂದ್ರೋಽಯಂ ಮತ್ಪ್ರಿಯಂ ಕುರು ಭಾಮಿನಿ |
ಬ್ರೂಹಿ ಕಿಂ ತೇ ಕರೋಮ್ಯದ್ಯ ಕಾಮಂ ಕಂ ತ್ವಮಿಹೇಚ್ಛಸಿ ॥22॥
ಭಾಮಿನಿಯೇ, ತ್ರಿಲೋಕಾಧಿಪತಿಯಾದ ಇಂದ್ರನನ್ನು ಬಿಟ್ಟು ಬಿಡು. ನನಗೆ ಇಷ್ಟವಾದ ಕಾರ್ಯವನ್ನು ನೀನು ಮಾಡು. ಇದಕ್ಕೆ ಪ್ರತಿಯಾಗಿ ನಿನಗೆ ಯಾವ ಕಾರ್ಯವನ್ನು ಮಾಡಿಕೊಡಲಿ? ಹೇಳು. ನಿನ್ನ ಇಚ್ಛೆಯನ್ನು ಪೂರೈಸುತ್ತೇನೆ ಎಂದು ಹೇಳಿದನು.
ಬ್ರಹ್ಮಹತ್ಯಾ
ತ್ರಿಲೋಕಪೂಜಿತೇ ದೇವೇ ಪ್ರೀತೇ ತ್ರೈಲೋಕ್ಯಕರ್ತರಿ |
ಕೃತಮೇವೇಹ ಮನ್ಯೇಽಹಂ ನಿವಾಸಂ ತು ವಿಧತ್ಸ್ವ ಮೇ ॥23॥
ಬ್ರಹ್ಮಹತ್ಯಾ ಬ್ರಹ್ಮದೇವನೇ, ಮೂರುಲೋಕದ ಜನರಿಂದಲೂ ಪೂಜಿಸಲ್ಪಡುವ, ಮೂರು ಲೋಕಗಳನ್ನೂ ಸೃಷ್ಟಿಸಿರುವ ನೀನು ನನ್ನ ವಿಷಯದಲ್ಲಿ ಪ್ರೀತನಾಗಿ ಇಷ್ಟಾರ್ಥಗಳನ್ನು ಕೊಡುತ್ತೇನೆ ಎಂದು ಹೇಳಿದ ಬಳಿಕ ನನ್ನ ಬಯಕೆಗಳೆಲ್ಲವೂ ಪೂರ್ಣವಾಗಿವೆ ಎಂದೇ ನಂಬುತ್ತೇನೆ. ನನಗೆ ವಾಸಸ್ಥಾನ ಉಂಟುಮಾಡು.
ತ್ವಯಾ ಕೃತೇಯಂ ಮರ್ಯಾದಾ ಲೋಕಸಂರಕ್ಷಣಾರ್ಥಿನಾ |
ಸ್ಥಾಪನಾ ವೈ ಸುಮಹತೀ ತ್ವಯಾ ದೇವ ಪ್ರವರ್ತಿತಾ ॥24॥
ಬ್ರಹ್ಮನೇ, ಸಮಸ್ತ ಜಗತ್ತಿನ ರಕ್ಷಣೆಗಾಗಿ ಲೋಕದ ಮರ್ಯಾದೆಯನ್ನು ಸ್ಥಾಪಿಸಿರುವಿ. ಅಂತಹ ನೀನು ಧರ್ಮವನ್ನು ಆಚರಣೆಗೆ ತಂದಿರುವಿ.
ಪ್ರೀತೇ ತು ತ್ವಯಿ ಧರ್ಮಜ್ಞ ಸರ್ವಲೋಕೇಶ್ವರೇ ಪ್ರಭೋ |
ಶಕ್ರಾದಪಗಮಿಷ್ಯಾಮಿ ನಿವಾಸಂ ತು ವಿಧತ್ಸ್ವ ಮೇ ॥25॥
ನನ್ನ ವಿಷಯದಲ್ಲಿ ನೀನು ಪ್ರೀತಿ ಹೊಂದಿರುವುದೇ ಆಗಿದ್ದಲ್ಲಿ ನಾನು ಇಂದ್ರನನ್ನೂ ಬಿಟ್ಟು ಹೊರಡುತ್ತೇನೆ. ಆದರೆ ನನಗೆ ವಾಸಿಸಲು ಸ್ಥಾನವನ್ನು ಕಲ್ಪಿಸಿಕೊಡು.
ಭೀಷ್ಮಃ
ತಥೇತಿ ತಾಂ ಪ್ರಾಹ ತದಾ ಬ್ರಹ್ಮಹತ್ಯಾಂ ಪಿತಾಮಹಃ |
ಉಪಾಯತಃ ಸ ಶಕ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತ ॥26॥
ಭೀಷ್ಮ ಯುಧಿಷ್ಠಿರನೇ, ಬ್ರಹ್ಮಹತ್ಯೆಯ ಮಾತನ್ನು ಕೇಳಿಸಿಕೊಂಡ ಚತುರ್ಮುಖನು ಆಗಲಿ, ನಿನಗೆ ಸ್ಥಾನವನ್ನು ಕಲ್ಪಿಸಿಕೊಡುತ್ತೇನೆ ಎಂದು ಹೇಳಿ ಉಪಾಯದಿಂದ ಇಂದ್ರನಲ್ಲಿ ಹೊಕ್ಕಿರುವ ಬ್ರಹ್ಮಹತ್ಯೆಯನ್ನು ಹೊರ ಕಳುಹಿಸಿದನು.
ತತಃ ಸ್ವಯಂಭುವಾ ಧ್ಯಾತಸ್ತತ್ರ ವಹ್ನಿರ್ಮಹಾತ್ಮನಾ |
ಬ್ರಹ್ಮಾಣಮುಪಸಂಗಮ್ಯ ತತೋ ವಚನಮಬ್ರವೀತ್ ॥27॥

ಬಳಿಕ ಬ್ರಹ್ಮನು ಅಲ್ಲಿಯೇ ಅಗ್ನಿಯನ್ನು ಧ್ಯಾನಿಸಿದನು. ಕೂಡಲೇ ಅಗ್ನಿಯು ಬ್ರಹ್ಮನ ಬಳಿ ಬಂದು ಹೀಗೆ ಹೇಳಿದನು.
ಪ್ರಾಪ್ತೋಽಸ್ಮಿ ಭಗವನ್ ದೇವ ತ್ವತ್ಸಕಾಶಮರಿಂದಮ |
ಯತ್ ಕರ್ತವ್ಯಂ ಮಯಾ ದೇವ ತದ್ಭವಾನ್ವಕ್ತುಮರ್ಹತಿ ||28||
ಭಗವನ್, ಇಗೋ ನಾನು ಆಗಮಿಸಿದ್ದೇನೆ. ನಾನು ಮಾಡಬೇಕಾದ ಕಾರ್ಯವೇನೆಂಬುದನ್ನು ಕೃಪೆಯಿಂದ ತಿಳಿಸು.
ಬ್ರಹ್ಮಾ
ಬಹುಧಾ ವಿಭಜಿಷ್ಯಾಮಿ ಬ್ರಹ್ಮಹತ್ಯಾಮಿಮಾಮಹಮ್ |
ಶಕ್ರಸ್ಯಾದ್ಯ ವಿಮೋಕ್ಷಾರ್ಥಂ ಚತುರ್ಭಾಗಂ ಪ್ರತೀಚ್ಛ ಮೇ ||29||
ಬ್ರಹ್ಮಾ ಅಗ್ನಿದೇವನೇ, ನಾನು ಇಂದ್ರನನ್ನು ಬ್ರಹ್ಮಹತ್ಯೆಯಿಂದ ಮುಕ್ತನಾಗಿಸಲು ಬ್ರಹ್ಮಹತ್ಯೆಯನ್ನು ನಾಲ್ಕು ಭಾಗಗಳನ್ನಾಗಿ ಮಾಡಲು ಇಚ್ಛಿಸುತ್ತೇನೆ. ಇದರಲ್ಲಿ ಒಂದು ಭಾಗವನ್ನು ನೀನು ಸ್ವೀಕರಿಸು.
ಅಗ್ನಿಃ
ಮಮ ಮೋಕ್ಷಸ್ಯ ಕೋಽಂತೋ ವೈ ಬ್ರಹ್ಮನ್ ಧ್ಯಾಯಸ್ವ ವೈ ಪ್ರಭೋ |
ಏತದಿಚ್ಛಾಮಿ ವಿಜ್ಞಾತುಂ ತತ್ತ್ವತೋ ಲೋಕಪೂಜಿತ ||30||
ಅಗ್ನಿ ಲೋಕಪೂಜಿತನಾದ ಪ್ರಭುವೇ, ಬ್ರಹ್ಮನ್, ನಿನ್ನ ಆಜ್ಞೆಯನ್ನು ಮಾನ್ಯ ಮಾಡುತ್ತೇನೆ. ಆದರೆ ಈ ಬ್ರಹ್ಮಹತ್ಯಾ ದೋಷದಿಂದ ನಾನು ಹೇಗೆ ಪಾರಾಗಬೇಕು? ಇದನ್ನು ತಿಳಿಯಲು ಬಯಸುತ್ತೇನೆ.
ಬ್ರಹ್ಮಾ
ಯಸ್ತ್ವಾಂ ಜ್ವಲಂತಮಾಸಾದ್ಯ ಸ್ವಯಂ ವೈ ಮಾನವಃ ಕ್ವಚಿತ್ |
ಬೀಜೌಷಧಿರಸೈರ್ವಹ್ನೇ ನ ಯಕ್ಷ್ಯತಿ ತಮೋವೃತಃ ||31||
ತಮೇಷಾ ಯಾಸ್ಯತಿ ಕ್ಷಿಪ್ರಾಂ ತತ್ರೈವ ಚ ನಿವತ್ಸ್ಯತಿ |
ಬ್ರಹ್ಮಹತ್ಯಾ ಹವ್ಯವಾಹ ವ್ಯೇತು ತೇ ಮಾನಸೋ ಜ್ವರಃ ||32||
ಬ್ರಹ್ಮಾ ಅಗ್ನಿದೇವನೇ, ಯಾವ ಮನುಷ್ಯನು ಪ್ರಜ್ವಲಿಸುತ್ತಿರುವ ನಿನ್ನ ಹತ್ತಿರ ಬಂದಾಗ ಅಜ್ಞಾನದಿಂದ ಕೂಡಿದವನಾಗಿ ಬೀಜ, ಒಷಧಿ, ರಸಗಳಿಂದ ಹೋಮವನ್ನು ಮಾಡುವುದಿಲ್ಲವೋ ಅವನಿಗೆ ನಿನ್ನಲ್ಲಿರುವ ಬ್ರಹ್ಮಹತ್ಯೆಯು ಹೋಗಿ ಸೇರಿಕೊಳ್ಳಲಿ. ನನ್ನ ಆಶ್ವಾಸನೆಯಿಂದ ನಿನ್ನ ಮನಸ್ಸಿನ ಆತಂಕವು ಪರಿಹಾರವಾಗಲಿ.
ಭೀಷ್ಮಃ
ಇತ್ಯುಕ್ತಃ ಪ್ರತಿಜಗ್ರಾಹ ತದ್ವಚೋ ಹವ್ಯಕವ್ಯಭುಕ್ |
ಪಿತಾಮಹಸ್ಯ ಭಗವಾಂಸ್ತಥಾ ಚ ತದಭೂತ್ ಪ್ರಭೋ ||33||
ಭೀಷ್ಮ ಯುಧಿಷ್ಠಿರನೇ, ಬ್ರಹ್ಮನು ಹೀಗೆ ಹೇಳಿದ ಬಳಿಕ ಹವ್ಯ-ಕವ್ಯಗಳನ್ನು ಸ್ವೀಕರಿಸುವ ಅಗ್ನಿದೇವನು ಚತುರ್ಮುಖನ ಮಾತನ್ನು ಸ್ವೀಕರಿಸಿದನು. ಕೂಡಲೇ ಬ್ರಹ್ಮಹತ್ಯೆಯ ನಾಲ್ಕನೆಯ ಒಂದು ಭಾಗವು ಅಗ್ನಿಯಲ್ಲಿ ಸೇರಿಕೊಂಡಿತು.
ತತೋ ವೃಕ್ಷೌಷಧಿತೃಣಂ ಸಮಾಹೂಯ ಪಿತಾಮಹಃ |
ಇಮಮರ್ಥಂ ಮಹಾರಾಜ ವಕ್ತುಂ ಸಮುಪಚಕ್ರಮೇ ||34||
ಬಳಿಕ ಚತುರ್ಮುಖನು ವೃಕ್ಷ, ತೃಣ, ಒಷಧಿಗಳ ದೇವತೆಗಳನ್ನು ಆಹ್ವಾನಿಸಿ ಬ್ರಹ್ಮಹತ್ಯೆಯನ್ನು ಸ್ವೀಕರಿಸುವಂತೆ ಅವರಿಗೆ ಆದೇಶಿಸಿದನು.
ತತೋ ವೃಕ್ಷೌಷಧಿತೃಣಂ ತಥೈವೋಕ್ತಂ ಯಥಾತಥಮ್ |
ವ್ಯಥಿತಂ ವಹ್ನಿವದ್ರಾಜನ್ ಬ್ರಹ್ಮಾಣಮಿದಮಬ್ರವೀತ್ ||35||
ಬ್ರಹ್ಮನು ವೃಕ್ಷ, ಒಷಧಿ, ತೃಣಗಳಿಗೆ ಅಗ್ನಿದೇವನಿಗೆ ತಿಳಿಸಿದಂತೆಯೇ ಹೇಳಿದಾಗ ಅಗ್ನಿದೇವನಂತೆಯೇ ವೃಕ್ಷ-ಒಷಧಿ-ತೃಣಗಳು ತಮ್ಮಲ್ಲಿ ಸೇರಿದ ಬ್ರಹ್ಮಹತ್ಯೆಯನ್ನು ಪರಿಹರಿಸಿಕೊಳ್ಳಲು ಉಪಾಯವೇನೆಂದು ಕೇಳಿದರು.
ಅಸ್ಮಾಕಂ ಬ್ರಹ್ಮಹತ್ಯಾತೋ ಕೋಽಂತೋ ಲೋಕಪಿತಾಮಹ |
ಸ್ವಭಾವನಿಹತಾನಸ್ಮಾನ್ನ ಪುನರ್ಹಂತುಮರ್ಹಸಿ ||36||
ಪಿತಾಮಹನೇ, ಬ್ರಹ್ಮಹತ್ಯಾ ದೋಷದಿಂದ ನಾವು ಮುಕ್ತರಾಗುವ ಬಗೆ ಹೇಗೆ? ನಾವು ಈಗಾಗಲೇ ದೈವದಿಂದ ಚ್ಯುತರಾಗಿ ಸ್ಥಾವರಯೋನಿಗಳಲ್ಲಿ ಹುಟ್ಟಿದ್ದೇವು. ಪುನಃ ನಮ್ಮಲ್ಲಿ ಬ್ರಹ್ಮಹತ್ಯೆಯನ್ನು ಸೇರಿಸುವುದು ಉಚಿತವೆನಿಸುವುದಿಲ್ಲ.
ವಯಮಗ್ನಿಂ ತಥಾ ಶೀತಂ ವರ್ಷಂ ಚ ಪವನೇರಿತಮ್ |
ಸಹಾಮಃ ಸತತಂ ದೇವ ತಥಾ ಛೇದನಭೇದನಮ್ ||37||
ತ್ರಿಲೋಕೇಶನೇ, ದೇವದೇವನೇ, ಅಗ್ನಿ, ವಾಯು, ಶೀತ, ಮಳೆ, ಛೇದನ, ಭೇದನ ಹೀಗೆ ಅನೇಕ ವಿಧವಾದ ಉಪದ್ರವಗಳನ್ನು ಸಹಿಸಿಕೊಂಡೇ ಬದುಕುತ್ತಿದ್ದೇವೆ.
ಬ್ರಹ್ಮಹತ್ಯಾಮಿಮಾಮದ್ಯ ಭವತಃ ಶಾಸನಾದ್ವಯಮ್ |
ಗ್ರಹೀಷ್ಯಾಮಸ್ತ್ರಿಲೋಕೇಶ ಮೋಕ್ಷಂ ಚಿಂತಯತಾಂ ಭವಾನ್ ||38||
ನಿನ್ನ ಆದೇಶದಂತೆ ಬ್ರಹ್ಮಹತ್ಯೆಯ ನಾಲ್ಕನೆಯ ಒಂದಂಶವನ್ನು ಸ್ವೀಕರಿಸುತ್ತೇವೆ. ಆದರೆ ಇದರ ಮೋಕ್ಷವು ಹೇಗೆ ಎಂಬುದನ್ನು ಯೋಚಿಸಿ ತಿಳಿಸು.
ಬ್ರಹ್ಮಾ
ಪರ್ವಕಾಲೇ ತು ಸಂಪ್ರಾಪ್ತೇ ಯೋ ವೈ ಛೇದನಭೇದನಮ್ |
ಕರಿಷ್ಯತಿ ನರೋ ಮೋಹಾತ್ತಮೇಷಾನುಗಮಿಷ್ಯತಿ ||39||

ಬ್ರಹ್ಮಾ ಸಂಕ್ರಾಂತಿ, ಗ್ರಹಣ, ಹುಣ್ಣಿಮೆ, ಅಮಾವಾಸ್ಯೆ ಮೊದಲಾದ ಪರ್ವ ಕಾಲಗಳಲ್ಲಿ ಯಾವ ಮನುಷ್ಯರು ಮೋಹಗೊಂಡು, ಅಜ್ಞಾನದಿಂದ ನಿಮ್ಮನ್ನು ಕತ್ತರಿಸುತ್ತಾರೋ, ಮುರಿದು ಹಾಕುತ್ತಾರೋ ಅವರಲ್ಲಿ ನಿಮ್ಮಲ್ಲಿರುವ ಬ್ರಹ್ಮಹತ್ಯಾ ದೋಷವು ಬಂದು ಸೇರಿಕೊಳ್ಳಲಿ. ನಿಮ್ಮಿಂದ ಆ ಬ್ರಹ್ಮಹತ್ಯೆಯು ದೂರಹೋಗಲಿ.
ಭೀಷ್ಮಃ
ತತೋ ವೃಕ್ಷೌಷಧಿತೃಣಮೇವಮುಕ್ತಂ ಮಹಾತ್ಮನಾ |
ಬ್ರಹ್ಮಾಣಮಭಿಸಂಪೂಜ್ಯ ಜಗಾಮಾಶು ಯಥಾಗತಮ್ ॥40॥
ಭೀಷ್ಮ ಕುಮಾರನೇ, ಪೂಜ್ಯನಾದ ಚತುರ್ಮುಖನು ಹೀಗೆ ಹೇಳಿದ ಬಳಿಕ ವೃಕ್ಷ-ಒಷಧಿ-ತೃಣದೇವತೆಗಳು ಬ್ರಹ್ಮನ ಆದೇಶವನ್ನು ಒಪ್ಪಿ, ಬ್ರಹ್ಮನನ್ನು ಪೂಜಿಸಿ ಎಲ್ಲಿಂದ ಬಂದಿದ್ದರೋ ಅಲ್ಲಿಗೆ ತೆರಳಿದರು.
ಆಹೂಯಾಪ್ಸರಸೋ ದೇವಸ್ತತೋ ಲೋಕಪಿತಾಮಹಃ |
ವಾಚಾ ಮಧುರಯಾ ಪ್ರಾಹ ಸಾಂತ್ವಯನ್ನಿವ ಭಾರತ ॥41॥
ಬಳಿಕ ಲೋಕಪಿತಾಮಹನಾದ, ದೇವದೇವನಾದ ಬ್ರಹ್ಮನು ಅಪ್ಸರೆಯರನ್ನು ಆಹ್ವಾನಿಸಿ ಮಧುರವಾದ ಮಾತುಗಳಿಂದ ಅವರನ್ನು ಸಂತೈಸುತ್ತಾ ಹೀಗೆ ಹೇಳಿದನು.
ಇಯಮಿಂದ್ರಾದನುಪ್ರಾಪ್ತಾ ಬ್ರಹ್ಮಹತ್ಯಾ ವರಾಂಗನಾಃ |
ಚತುರ್ಥಮಸ್ಯಾ ಭಾಗಂ ಹಿ ಮಯೋಕ್ತಾಃ ಸಂಪ್ರತೀಚ್ಛತ ॥42॥
ವರಾಂಗನೆಯರೇ, ಬ್ರಹ್ಮಹತ್ಯಾ ಪಾಪವು ಇಂದ್ರನಿಂದ ಬಂದಿದೆ. ನನ್ನ ಆಜ್ಞೆಯಂತೆ ನೀವೂ ಇದರಲ್ಲಿ ನಾಲ್ಕನೆಯ ಒಂದಂಶವನ್ನು ಸ್ವೀಕರಿಸಿರಿ.
ಅಪ್ಸರಸಃ
ಗ್ರಹಣೇ ಕೃತಬುದ್ಧೀನಾಂ ದೇವೇಶ ತವ ಶಾಸನಾತ್ |
ಮೋಕ್ಷಂ ಸಮಯತೋಽಸ್ಮಾಕಂ ಚಿಂತಯಸ್ವ ಪಿತಾಮಹ ॥43॥
ಅಪ್ಸರೆಯರು ದೇವೇಶನೇ, ನಿನ್ನ ಆಜ್ಞೆಯಂತೆ ನಾವು ಬ್ರಹ್ಮಹತ್ಯೆಯ ನಾಲ್ಕನೆಯ ಒಂದಂಶವನ್ನು ಸ್ವೀಕರಿಸಲು ತಯಾರಾಗಿದ್ದೇವೆ. ಆದರೆ ಇದರಿಂದ ನಮ್ಮ ಮುಕ್ತಿಯು ಯಾವಾಗ ಎಂಬುದನ್ನು ಯೋಚಿಸಿ ತಿಳಿಸಿರಿ.
ಬ್ರಹ್ಮಾ
ರಜಸ್ವಲಾಸು ನಾರೀಷು ಯೋ ವೈ ಮೈಥುನಮಾಚರೇತ್ |
ತಮೇಷಾ ಯಾಸ್ಯತಿ ಕ್ಷಿಪ್ರಾಂ ವ್ಯೇತು ವೋ ಮಾನಸೋ ಜ್ವರಃ ॥44॥
ಬ್ರಹ್ಮಾ ಯಾವ ಮನುಷ್ಯನು ಸ್ತ್ರೀಯರು ರಜಸ್ವಲೆಯರಾದಾಗ ಅವರಲ್ಲಿ ಸಮಾಗಮ ಮಾಡುತ್ತಾನೋ ಅಂತಹ ಮನುಷ್ಯನಲ್ಲಿ ನಿಮ್ಮಲ್ಲಿರುವ ಬ್ರಹ್ಮಹತ್ಯೆಯ ಅಂಶವು ಸೇರಿಕೊಳ್ಳಲಿ. ನಿಮ್ಮ ಮನಸ್ಸಿನಲ್ಲಿರುವ ಆತಂಕವು ದೂರವಾಗಲಿ.
ಭೀಷ್ಮಃ
ತಥೇತಿ ಹೃಷ್ಟಮನಸ ಉಕತ್ವಥಾಪ್ಸರಸಾಂ ಗಣಾಃ |
ಸ್ವಾನಿ ಸ್ಥಾನಾನಿ ಸಂಪ್ರಾಪ್ಯ ರೇಮಿರೇ ಭರತರ್ಷಭ ॥45॥
ಭೀಷ್ಮ ಯುಧಿಷ್ಠಿರನೇ, ಬ್ರಹ್ಮನ ಮಾತನ್ನು ಕೇಳಿ ಸಂತುಷ್ಟರಾದ ಅಪ್ಸರಾ ಸ್ತ್ರೀಯರು ಬ್ರಹ್ಮನಲ್ಲಿ ಹಾಗೆಯೇ ಆಗಲಿ ಎಂದು ಹೇಳಿ ತಮ್ಮ ಸ್ಥಾನಕ್ಕೆ ವಿಹರಿಸಲು ತೆರಳಿದರು.
ತತಸ್ತ್ರಿಲೋಕಕೃದ್ ದೇವಃ ಪುನರೇವ ಮಹಾತಪಾಃ |
ಆಪಃ ಸಂಚಿಂತಯಾಮಾಸ ಧ್ಯಾತಾಸ್ತಾಶ್ಚಾಪ್ಯಥಾಗಮನ್ ॥46॥
ಪುನಃ ಮೂರುಲೋಕಗಳ ಸೃಷ್ಟಿಕರ್ತನಾದ, ಮಹಾತಪಸ್ವಿಯಾದ, ದೇವದೇವನಾದ ಪ್ರಜಾಪತಿಯು ನೀರಿನ ಅಭಿಮಾನಿದೇವತೆಗಳನ್ನೂ ಕುರಿತು ಯೋಚಿಸಿದನು. ಅವನ ಸ್ಮರಣೆಗೆ ಅನುಗುಣವಾಗಿ ನೀರಿನ ಅಭಿಮಾನಿ ದೇವತೆಗಳು ಆಗಮಿಸಿದರು.
ತಾಸ್ತು ಸರ್ವಾಃ ಸಮಾಗಮ್ಯ ಬ್ರಹ್ಮಾಣಮಮಿತೌಜಸಮ್ |
ಇದಮೂಚುರ್ವಚೋ ರಾಜನ್ ಪ್ರಣಿಪತ್ಯ ಪಿತಾಮಹಮ್ ॥47॥
ಆ ದೇವತೆಗಳೆಲ್ಲರೂ ಬಂದು ಅಮಿರಿತಪರಾಕ್ರಮಿಯಾದ ಬ್ರಹ್ಮನಿಗೆ ಸಾಷ್ಟಾಂಗ ನಮಿಸಿ ಹೀಗೆ ಹೇಳಿದರು.
ಇಮಾಃ ಸ್ಮ ದೇವ ಸಂಪ್ರಾಪ್ತಾಸ್ತ್ವತ್ಸಕಾಶಮರಿಂದಮ |
ಶಾಸನಾತ್ತವ ದೇವೇಶ ಸಮಾಜ್ಞಾಪಯ ನೋ ವಿಭೋ ॥48॥
ಲೋಕೇಶನೇ, ಅರಿಂದಮನೇ, ನಿನ್ನ ಆದೇಶದಂತೆ ಜಲಾಭಿಮಾನಿಗಳಾದ ನಾವೆಲ್ಲರೂ ನಿನ್ನ ಸನಿಹಕ್ಕೆ ಬಂದಿರುತ್ತೇವೆ. ನಿನ್ನ ಪ್ರೀತಿಗಾಗಿ ನಿನ್ನ ಆದೇಶದಂತೆ ಏನು ಮಾಡಬೇಕೆಂಬುದನ್ನು ಆಜ್ಞಾಪಿಸು.
ಬ್ರಹ್ಮಾ
ಇಯಂ ವೃತ್ರಾದನುಪ್ರಾಪ್ತಾ ಪುರುಹೂತಂ ಮಹಾಭಯಾ |
ಬ್ರಹ್ಮಹತ್ಯಾ ಚತುರ್ಥಾಂಶಮಸ್ಯಾ ಯೂಯಂ ಪ್ರತೀಚ್ಛತ ॥49॥
ಬ್ರಹ್ಮಾ ದೇವತೆಗಳೇ, ವೃತ್ರಾಸುರನನ್ನು ಸಂಹರಿಸಿದ ಭಯಂಕರವಾದ ಬ್ರಹ್ಮಹತ್ಯೆಯು ಇಂದ್ರನನ್ನು ಸೇರಿದೆ. ಆದರೆ ಅದು ಇಂದ್ರನಿಂದ ಈಗ ಹೊರ ಬಂದಿದೆ. ಬ್ರಹ್ಮಹತ್ಯೆಯ ನಾಲ್ಕನೆಯ ಒಂದಂಶವನ್ನು ನೀವೂ ಸ್ವೀಕರಿಸಿರಿ.
ಆಪಃ
ಏವಂ ಭವತು ಲೋಕೇಶ ಯಥಾ ವದಸಿ ನಃ ಪ್ರಭೋ |

ಮೋಕ್ಷಂ ಸಮಯತೋಽಸ್ಮಾಕಂ ಸಂಚಿಂತಯಿತುಮರ್ಹಸಿ ॥50॥
ನೀರಿನ ಅಭಿಮಾನಿಗಳು ದೇವೇಶನೇ, ನೀನು ಹೇಳಿದಂತೆಯೇ ನಾವು ಒಪ್ಪಿಕೊಳ್ಳುತ್ತೇವೆ. ಆದರೆ ಈ ಬ್ರಹ್ಮಹತ್ಯೆಯಿಂದ ಯಾವಾಗ ಮುಕ್ತರಾಗುತ್ತೇವೆ? ಇದನ್ನು ಯೋಚಿಸಿ ಹೇಳು.
ತ್ವಂ ಹಿ ದೇವೇಶ ಸರ್ವಸ್ಯ ಜಗತಃ ಪರಮೋ ಗುರುಃ।
ಕೋಽನ್ಯಃ ಪ್ರಸಾದೋ ಹಿ ಭವೇದ್ಯಃ ಕೃಚ್ಛ್ರಾನ್ನಃ ಸಮುದ್ಧರೇತ್ ॥51॥
ಭಗವಂತನೇ, ನೀನೇ ಜಗತ್ತಿಗೆ ಆಶ್ರಯನಾಗಿರುವಿ. ಕಷ್ಟದಿಂದ ಎಲ್ಲರನ್ನು ಉದ್ಧರಿಸುವ ನಿನ್ನ ಅನುಗ್ರಹವನ್ನು ನಾವು ಯಾವಾಗಲೂ ಬಯಸುತ್ತೇವೆ.
ಬ್ರಹ್ಮಾ
ಅಲ್ಪಾ ಇತಿ ಮತಿಂ ಕೃತ್ವಾ ಯೋ ನರೋ ಬುದ್ಧಿಮೋಹಿತಃ।
ಶ್ಲೇಷ್ಮಮೂತ್ರಪುರೀಷಾಣಿ ಯುಷ್ಮಾಸು ಪ್ರತಿಮೋಕ್ಷ್ಯತಿ ॥52॥
ತಮೇಷಾ ಯಾಸ್ಯತಿ ಕ್ಷಿಪ್ರಾಂ ತತ್ರೈವ ಚ ನಿವತ್ಸ್ಯತಿ।
ತಥಾ ವೋ ಭವಿತಾ ಮೋಕ್ಷ ಇತಿ ಸತ್ಯಂ ಬ್ರವೀಮಿ ವಃ ॥53॥
ಬ್ರಹ್ಮಾ ಯಾವ ಮನುಷ್ಯರು ಮೋಹದ ಬುದ್ಧಿಯಿಂದ ನಿಮ್ಮನ್ನು ಅಲ್ಪರೆಂದು, ಏನೂ ಮಾಡಲು ಆಗದೆಂದು ತಿಳಿದು ನಿಮ್ಮಲ್ಲಿ ಶ್ಲೇಷ್ಮ, ಮೂತ್ರವನ್ನು ವಿಸರ್ಜಿಸುತ್ತಾರೋ ಅಂತಹವರಿಗೆ ನಿಮ್ಮಲ್ಲಿರುವ ಬ್ರಹ್ಮಹತ್ಯೆಯು ಸೇರಿಕೊಳ್ಳಲಿ. ಅಂದು ನೀವು ಬ್ರಹ್ಮಹತ್ಯೆಯಿಂದ ಬಿಡುಗಡೆಯನ್ನು ಹೊಂದುತ್ತೀರಿ. ನಾನು ಸತ್ಯವಾಗಿ ಈ ಮಾತುಗಳನ್ನು ಹೇಳುತ್ತಿದ್ದೇನೆ.
ಭೀಷ್ಮ
ತತೋ ವಿಮುಚ್ಯ ದೇವೇಂದ್ರಂ ಬ್ರಹ್ಮಹತ್ಯಾ ಯುಧಿಷ್ಠಿರ।
ಯಥಾನಿಸೃಷ್ಟಂ ತಂ ದೇಶಮಗಚ್ಛದ್ದೇವಶಾಸನಾತ್ ॥54॥
ಭೀಷ್ಮ ಯುಧಿಷ್ಠಿರನೇ, ಬ್ರಹ್ಮಹತ್ಯೆಯು ದೇವರಾಜನಾದ ಇಂದ್ರನನ್ನು ಬಿಟ್ಟು ಬ್ರಹ್ಮನ ಆಜ್ಞೆಯಂತೆ ಅಗ್ನಿಯಲ್ಲಿ, ವೃಕ್ಷ-ಒಷಧಿ-ತೃಣಗಳಲ್ಲಿ, ಅಪ್ಸರೆಯರಲ್ಲಿ, ನೀರಿನಲ್ಲಿ ನಾಲ್ಕು ವಿಭಾಗವಾಗಿ ಸೇರಿಕೊಂಡಿತು.
ಏವಂ ಶಕ್ರೇಣ ಸಂಪ್ರಾಪ್ತಾ ಬ್ರಹ್ಮಹತ್ಯಾ ಜನಾಧಿಪ।
ಪಿತಾಮಹಮನುಜ್ಞಾಪ್ಯ ಸೋಽಶ್ವಮೇಧಮಕಲ್ಪಯತ್ ॥55॥
ಹೀಗೆ ವೃತ್ರ ವಧೆಯಿಂದ ಇಂದ್ರನಿಗೆ ಬ್ರಹ್ಮಹತ್ಯಾ ಪಾಪವು ಒದಗಿತು. ಇಂದ್ರನು ಬ್ರಹ್ಮನ ಅಪ್ಪಣೆಯನ್ನು ಸ್ವೀಕರಿಸಿ ಅಶ್ವಮೇಧ ಯಾಗವನ್ನು ಮಾಡಿದನು.
ಶ್ರೂಯತೇ ಹಿ ಮಹಾರಾಜ ಸಂಪ್ರಾಪ್ತಾ ವಾಸವೇನ ವೈ।
ಬ್ರಹ್ಮಹತ್ಯಾ ತತಃ ಶುದ್ಧಿಂ ಹಯಮೇಧೇನ ಲಬ್ಧವಾನ್ ॥56॥
ಪ್ರಾಜ್ಞನೇ, ಇಂದ್ರನಿಗೆ ವೃತ್ರಹತ್ಯೆಯ ಪಾಪವು ಪ್ರಾಪ್ತವಾಯಿತೆಂದು, ಅಶ್ವಮೇಧ ಯಾಗ ಮಾಡಿ ಶುದ್ಧಿಯನ್ನು ಹೊಂದಿದನೆಂದು ನಾವು ಕೇಳಿದ್ದೇವೆ.
ಸಮವಾಪ್ಯ ಶ್ರಿಯಂ ದೇವೋ ಹತ್ವಾರೀಂಶ್ಚ ಸಹಸ್ರಶಃ।
ಪ್ರಹರ್ಷಮತುಲಂ ಲೇಭೇ ವಾಸವಃ ಪೃಥಿವೀಪತೇ ॥57॥
ಇಂದ್ರನು ಸಾವಿರಾರು ಸಂಖ್ಯೆಯ ಶತ್ರುಗಳನ್ನು ಸಂಹಾರ ಮಾಡಿ, ಭ್ರಷ್ಟವಾದ ರಾಜ್ಯಲಕ್ಷ್ಮಿಯನ್ನು ಪುನಃ ಪಡೆದು ತುಲನೆಯಿಲ್ಲದ ಆನಂದವನ್ನು ಹೊಂದಿದನು.
ವೃತ್ರಸ್ಯ ರುಧಿರಾಚ್ಚೈವ ಖುಖುಂಡಾಃ ಪಾರ್ಥ ಜಜ್ಞಿರೇ।
ದ್ವಿಜಾತಿಭಿರಭಕ್ಷ್ಯಾಸ್ತೇ ದೀಕ್ಷಿತೈಶ್ಚ ತಪೋಧನೈಃ ॥58॥
ವೃತ್ರಾಸುರನ ರಕ್ತದಿಂದ ತಲೆಯಲ್ಲಿ ಕುಚ್ಚುಗಳಿರುವ ನವಿಲುಗಳೇ ಮೊದಲಾದ ಅನೇಕ ಜಾತಿಯ ಪಕ್ಷಿಗಳು ಹುಟ್ಟಿದವು. ಆದ್ದರಿಂದ ದ್ವಿಜರಿಂದ, ಯಜ್ಞ ದೀಕ್ಷಿತರಿಂದ, ತಪಸ್ವಿಗಳಿಂದ ಆ ಪಕ್ಷಿಗಳು ಅಭಕ್ಷ್ಯ ಎಂದು ಹೇಳಲ್ಪಟ್ಟಿವೆ.
ಸರ್ವಾವಸ್ಥಂ ತ್ವಮಪ್ಯೇಷಾಂ ದ್ವಿಜಾತೀನಾಂ ಪ್ರಿಯಂ ಕುರು।
ಇಮೇ ಹಿ ಭೂತಲೇ ದೇವಾಃ ಪ್ರಥಿತಾಃ ಕುರುನಂದನ ॥59॥
ಕುರುನಂದನನೇ, ನೀನು ಬ್ರಾಹ್ಮಣರಿಗೆ ಎಲ್ಲ ಅವಸ್ಥೆಗಳಲ್ಲಿಯೂ ಸಂತೋಷವನ್ನು ಉಂಟುಮಾಡು. ಭೂಲೋಕದಲ್ಲಿ ಬ್ರಾಹ್ಮಣರೇ ದೇವತೆಗಳೆಂದು ಪ್ರಸಿದ್ಧರಾಗಿರುತ್ತಾರೆ.
ಏವಂ ಶಕ್ರೇಣ ಕೌರವ್ಯ ಬುದ್ಧಿಸೌಕ್ಷ್ಮ್ಯಾನ್ಮಹಾಸುರಃ।
ಉಪಾಯಪೂರ್ವಂ ನಿಹತೋ ವೃತ್ರೋಽಥಾಮಿತತೇಜಸಾ ॥60॥
ಹೀಗೆ ಅಮಿತ ತೇಜಸ್ವಿಯಾದ ಇಂದ್ರನು ಸೂಕ್ಷ್ಮ ಬುದ್ಧಿಯನ್ನು ಆಶ್ರಯಿಸಿ ಉಪಾಯದಿಂದ ಮಹಾ ಅಸುರನಾದ ವೃತ್ರನನ್ನು ಸಂಹಾರ ಮಾಡಿದನು.
ಏವಂ ತ್ವಮಪಿ ಕೌರವ್ಯ ಪೃಥಿವ್ಯಾಮಪರಾಜಿತಃ।
ಭವಿಷ್ಯಸಿ ಯಥಾ ದೇವಃ ಶತಕ್ರತುರಮಿತ್ರಹಾ ॥61॥
ಅವನು ಹೇಗೆ ಉಪಾಯದಿಂದ ಶತ್ರುಗಳನ್ನು ಗೆದ್ದನೋ ಅದೇ ರೀತಿ ನೀನೂ ಕೂಡ ಭೂಮಂಡಲದಲ್ಲಿ ಯಾರಿಂದಲೂ ಸೋಲುಣ್ಣದವನಾಗುತ್ತಿ.
ಯೇ ತು ಶಕ್ರಕಥಾಂ ದಿವ್ಯಾಮಿಮಾಂ ಪರ್ವಸು ಪರ್ವಸು।
ವಿಪ್ರಮಧ್ಯೇ ಪಠಿಷ್ಯಂತಿ ನ ತೇ ಪ್ರಾಪ್ಸ್ಯಂತಿ ಕಿಲ್ಬಿಷಮ್ ॥62॥

ಪರ್ವ ಪರ್ವಗಳಲ್ಲಿಯೂ ಯಾರು ಈ ಶಕ್ರನ ದಿವ್ಯವಾದ ಕಥೆಯನ್ನು ಬ್ರಾಹ್ಮಣರ ಮಧ್ಯದಲ್ಲಿ ಕೇಳುತ್ತಾರೋ ಅವರು ಯಾವಾಗಲೂ ಪಾಪಗಳನ್ನು ಹೊಂದುವುದಿಲ್ಲ.
ಇತ್ಯೇತದ್ ವೃತ್ರಮಾಶ್ರಿತ್ಯ ಶಕ್ರಸ್ಯಾತ್ಯದ್ಭುತಂ ಮಹತ್ |
ಕಥಿತಂ ಕರ್ಮ ತೇ ತಾತ ಕಿಂ ಭೂಯಃ ಶ್ರೋತುಮಿಚ್ಛಸಿ ||63||
ಧರ್ಮಜನೇ, ನಿನಗೆ ವೃತ್ರಾಸುರನ ಕಥೆಯ ಪ್ರಸಂಗದಲ್ಲಿ ಅದ್ಭುತವಾದ ಇಂದ್ರನ ಕಾರ್ಯದ ಚರಿತ್ರೆಯನ್ನು ಹೇಳಿದ್ದೇನೆ. ನೀನು ನನ್ನಿಂದ ಇನ್ನೇನು ಕೇಳಲು ಬಯಸಿರುವೆ?
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷೋಡಶಾಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೇಳನೆಯ ಅಧ್ಯಾಯ
ರುದ್ರನಿಂದ ದಕ್ಷಯಜ್ಞದ ಧ್ವಂಸ. ಶಿವನ ಕ್ರೋಧದಿಂದ ಜ್ವರದ ಉತ್ಪತ್ತಿ.
ಜ್ವರದ ವಿವಿಧ ರೂಪಗಳು.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಅಸ್ತಿ ವೃತ್ರವಧಾದೇವ ವಿವಕ್ಷಾ ಮಮ ಜಾಯತೇ ||1||
ಯುಧಿಷ್ಠಿರ ಮಹಾಪ್ರಾಜ್ಞನಾದ, ಸರ್ವಶಾಸ್ತ್ರವಿಶಾರದನಾದ ಪಿತಾಮಹನೇ, ವೃತ್ರಾಸುರನ ವಧೆಯ ಪ್ರಸಂಗವನ್ನು ಕೇಳುವಾಗ ಅನೇಕ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಬಯಕೆ ಉಂಟಾಗಿದೆ.
ಜ್ವರೇಣ ಮೋಹಿತೋ ವೃತ್ರಃ ಕಥಿತಸ್ತೇ ಜನಾಧಿಪ |
ನಿಹತೋ ವಾಸವೇನೇಹ ವಜ್ರೇಣೇತಿ ಮಮಾನಘ ||2||
ರುದ್ರನ ಜ್ವರದಿಂದ ವೃತ್ರಾಸುರನು ಮೋಹಿತನಾದ ಎಂದು ನೀನು ತಿಳಿಸಿರುವೆ. ವಾಸವನು ವಜ್ರಾಯುಧದಿಂದ ಅವನನ್ನು ಸಂಹರಿಸಿದನೆಂದು ನನಗೆ ಹೇಳಿರುವೆ.
ಕಥಮೇಷ ಮಹಾಪ್ರಾಜ್ಞ ಜ್ವರಃ ಪ್ರಾದುರಭೂತ್ ಕುತಃ |
ಜ್ವರೋತ್ಪತ್ತಿಂ ನಿಪುಣತಃ ಶ್ರೋತುಮಿಚ್ಛಾಮ್ಯಹಂ ಪ್ರಭೋ ||3||
ಮಹಾಪ್ರಾಜ್ಞನೇ, ವೃತ್ರನನ್ನೂ ಮೋಹಗೊಳಿಸುವ ಆ ಜ್ವರವು ಹೇಗೆ ಹುಟ್ಟಿತು? ಎಲ್ಲಿಂದ ಹುಟ್ಟಿತು? ಜ್ಞಾನಿಯಾದ ನಿನ್ನಿಂದ ಈ ವಿಷಯವನ್ನು ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಶೃಣು ರಾಜನ್ ಜ್ವರಸ್ಯೇಹ ಸಂಭವಂ ಲೋಕವಿಶ್ರುತಮ್ |
ವಿಸ್ತರಂ ಚಾಸ್ಯ ವಕ್ಷ್ಯಾಮಿ ಯಾದೃಶಂ ಚೈವ ಭಾರತ ||4||
ಭೀಷ್ಮ ಯುಧಿಷ್ಠಿರನೇ, ಲೋಕಪ್ರಸಿದ್ಧವಾದ ಜ್ವರದ ಉತ್ಪತ್ತಿಯ ಕಥೆಯನ್ನು ಕೇಳು. ಈ ಪ್ರಸಂಗವು ಹೇಗೆ ನಡೆಯಿತೋ ಅದನ್ನು ವಿಸ್ತಾರವಾಗಿ ಹಾಗೆ ಹೇಳುತ್ತೇನೆ.
ಪುರಾ ಮೇರೋರ್ಮಹಾರಾಜ ಶೃಂಗಂ ತ್ರೈಲೋಕ್ಯವಿಶ್ರುತಮ್ |
ಜ್ಯೋತಿಷ್ಕಂ ನಾಮ ಸಾವಿತ್ರಂ ಸರ್ವರತ್ನವಿಭೂಷಿತಮ್ |
ಅಪ್ರಮೇಯಮನಾಧೃಷ್ಯಂ ಸರ್ವಲೋಕೇಷು ಭಾರತ ||5||
ಹಿಂದೆ ಮೂರುಲೋಕಗಳನ್ನು ಪ್ರಸಿದ್ಧನಾದ, ಸೂರ್ಯನಿಗೆ ಸಂಬಂಧಿಸಿದ ಸಮಸ್ತ ರತ್ನಗಳಿಂದ ಅಲಂಕೃತವಾಗಿದ್ದ, ಅಪ್ರಮೇಯವಾದ, ಸರ್ವಲೋಕದವರಿಗೂ ಅಗಮ್ಯವಾದ ಜ್ಯೋತಿಷ್ಕ ಎಂಬ ಮೇರುಪರ್ವತದ ಶಿಖರವಿತ್ತು.
ತತ್ರ ದೇವೋ ಗಿರಿತಟೇ ಹೇಮಧಾತುವಿಭೂಷಿತೇ |
ಪರ್ಯಂಕ ಇವ ವಿಭ್ರಾಜನ್ನುಪವಿಷ್ಟೋ ಬಭೂವ ಹ ||6||
ಬಂಗಾರದ ಧಾತುಗಳಿಂದ ಅಲಂಕೃತವಾದ ಆ ಗಿರಿತಟದಲ್ಲಿ ದೇವದೇವನಾದ ಪರಶಿವನು ಪರ್ಯಂಕದಲ್ಲಿ ಕುಳಿತಿರುವಂತೆಯೇ ವಿರಾಜಿಸುತ್ತಿದ್ದನು.
ಶೈಲರಾಜಸುತಾ ಚಾಸ್ಯ ನಿತ್ಯಂ ಪಾರ್ಶ್ವೇ ಸ್ಥಿತಾ ಬಭೌ |
ತಥಾ ದೇವಾ ಮಹಾತ್ಮಾನೋ ವಸವಶ್ಚ ಮಹೌಜಸಃ ||7||
ಹಿಮವದ್ ಪರ್ವತನ ಮಗಳಾದ ಪಾರ್ವತಿಯು ಪರಶಿವನ ಎಡಬದಿಯಲ್ಲಿ ಕುಳಿತು ಶೋಭಿಸುತ್ತಿದ್ದಳು. ಅದರಂತೆ ಮಹಾತ್ಮರಾದ ಅನೇಕ ದೇವತೆಗಳು, ತೇಜಸ್ವಿಗಳಾದ ವಸುಗಳು ಅವನ ಬಳಿ ನೆಲೆಸಿದ್ದರು.
ತಥೈವ ಚ ಮಹಾತ್ಮಾನಾವಶ್ವಿನೌ ಭಿಷಜಾಂ ವರೌ |
ತಥಾ ವೈಶ್ರವಣೋ ರಾಜಾ ಗುಹ್ಯಕೈರಭಿಸಂವೃತಃ ||8||
ಯಕ್ಷಾಣಾಮಧಿಪಃ ಶ್ರೀಮಾನ್ ಕೈಲಾಸನಿಲಯಃ ಪ್ರಭುಃ |
ಅಂಗಿರಃಪ್ರಮುಖಾಶ್ಚೈವ ತಥಾ ದೇವರ್ಷಯೋಽಪರೇ ||9||
ವಿಶ್ವಾವಸುಶ್ಚ ಗಂಧರ್ವಸ್ತಥಾ ನಾರದಪರ್ವತೌ |
ಅಪ್ಸರೋಗಣಸಂಘಾಶ್ಚ ಸಮಾಜಗ್ಮುರನೇಕಶಃ ||10||

ಹಾಗೆಯೇ ವೈದ್ಯಶ್ರೇಷ್ಠರಾದ, ಮಹಾತ್ಮರಾದ ಅಶ್ವಿನಿದೇವತೆಗಳು, ಅದರಂತೆ ಯಕ್ಷೇಶ್ವರನಾದ ಪ್ರಭುವಾದ, ಶ್ರೀಮಂತನಾದ, ಗುಹ್ಯಕರಿಂದ ಅಲಂಕೃತನಾದ ಕೈಲಾಸವಾಸಿಯಾದ ಕುಬೇರನು, ಅಂಗಿರಸನೇ ಮೊದಲಾದ ದೇವರ್ಷಿಗಳು, ಗಂಧರ್ವರಾಜನಾದ ವಿಶ್ವಾವಸು, ನಾರದ ಮತ್ತು ಪರ್ವತರು, ಅಪ್ಸರೆಯರ ಸಮುದಾಯಗಳು ಇವರೆಲ್ಲರೂ ಆ ಪರ್ವತದ ತಪ್ಪಲಿಗೆ ಆಗಮಿಸಿದರು.
ವವೌ ಶಿವಃ ಸುಖೋ ವಾಯುರ್ನಾನಾಗಂಧವಹಃ ಶುಚಿಃ |
ಸರ್ವರ್ತುಕುಸುಮೋಪೇತಾಃ ಪುಷ್ಪವಂತೋ ಮಹಾದ್ರುಮಾಃ ॥11॥
ಆ ಪರಿಸರದಲ್ಲಿ ಸುಮಂತವನ್ನು ಹೊತ್ತಿರುವ ಪವಿತ್ರವಾದ, ಸುಖದಾಯಕವಾದ, ಮಂಗಳಮಯವಾದ ವಾಯುವು ಮೆಲ್ಲನೆ ಬೀಸುತ್ತಿತ್ತು. ಎಲ್ಲ ಋತುಗಳ ಕುಸುಮಗಳನ್ನು ಧರಿಸಿದ ಮಹಾದ್ರುಮಗಳು ಕಂಗೊಳಿಸುತ್ತಿದ್ದವು.
ತಥಾ ವಿದ್ಯಾಧರಾಶ್ಚೈವ ಸಿದ್ಧಾಶ್ಚೈವ ತಪೋಧನಾಃ |
ಮಹಾದೇವಂ ಪಶುಪತಿಂ ಪರ್ಯುಪಾಸಂತ ಭಾರತ ॥12॥
ವಿದ್ಯಾಧರರು, ತಪೋಧನರಾದ ಸಿದ್ಧರು ಪಶುಪತಿಯಾದ ಮಹಾರುದ್ರನನ್ನು ಸೇವಿಸುತ್ತಿದ್ದರು.
ಭೂತಾನಿ ಚ ಮಹಾರಾಜ ನಾನಾರೂಪಧರಾಣ್ಯಥ |
ರಾಕ್ಷಸಾಶ್ಚ ಮಹಾರೌದ್ರಾಃ ಪಿಶಾಚಾಶ್ಚ ಮಹಾಬಲಾಃ ॥13॥
ಬಹುರೂಪಧರಾ ಹೃಷ್ಟಾ ನಾನಾಪ್ರಹರಣೋದ್ಯತಾಃ |
ದೇವಸ್ಯಾನುಚರಾಸ್ತತ್ರ ತಸ್ಥಿರೇ ಚಾನಲೋಪಮಾಃ ॥14॥
ಮಹಾದೇವನ ಕಿಂಕರರಾದ, ಅಗ್ನಿಗೆ ಸಮವಾಗಿ ಹೋಗಿರುವ, ಅನೇಕ ರೂಪಗಳನ್ನು ಧರಿಸಿರುವ ಭೂತಗಳು, ರಾಕ್ಷಸರು, ಪಿಶಾಚಿಗಳು ಅನೇಕ ಆಯುಧಗಳನ್ನೆತ್ತಿಕೊಂಡು ಪರಮತುಷ್ಟರಾಗಿ ಮಹಾದೇವನ ಸಮೀಪದಲ್ಲಿ ಕಂಗೊಳಿಸುವ ಬೆಂಕಿಯಂತೆ ರುದ್ರನಿಗೆ ಅನುಚರರಾಗಿ ನಿಂತಿದ್ದರು.
ನಂದೀ ಚ ಭಗವಾಂಸ್ತತ್ರ ದೇವಸ್ಯಾನುಮತೇ ಸ್ಥಿತಃ |
ಪ್ರಗೃಹ್ಯ ಜ್ವಲಿತಂ ಶೂಲಂ ದೀಪ್ಯಮಾನಂ ಸ್ವತೇಜಸಾ ॥15॥
ರುದ್ರನ ಅನುಮತಿಯಂತೆ ಪೂಜ್ಯನಾದ ನಂದಿಯು ಪ್ರಜ್ವಲಿಸುವ ದೇದೀಪ್ಯಮಾನವಾದ ಶೂಲವನ್ನು ಧರಿಸಿ ತನ್ನ ತೇಜಸ್ಸಿನಿಂದ ಮಹಾರುದ್ರನ ಬಳಿ ನಿಂತಿದ್ದನು.
ಗಂಗಾ ಚ ಸರಿತಾಂ ಶ್ರೇಷ್ಠಾ ಸರ್ವತೀರ್ಥಜಲೋದ್ಭವಾ |
ಪರ್ಯುಪಾಸತ ತಂ ದೇವಂ ರೂಪಿಣೀ ಕುರುನಂದನ ॥16॥
ತೀರ್ಥಗಳಲ್ಲಿಯೇ ಶ್ರೇಷ್ಠಳೆನಿಸಿದ, ಸರ್ವತೀರ್ಥಗಳಲ್ಲಿ ಉದ್ಭವಳಾಗುವ ಗಂಗಾದೇವಿಯು ದಿವ್ಯರೂಪವನ್ನು ಧರಿಸಿ ಮಹರುದ್ರನನ್ನು ಉಪಾಸನೆ ಮಾಡುತ್ತಿದ್ದಳು.
ಏವಂ ಸ ಭಗವಾಂಸ್ತತ್ರ ಪೂಜ್ಯಮಾನಃ ಸುರರ್ಷಿಭಿಃ |
ದೇವೈಶ್ಚ ಸುಮಹಾಭಾಗೈರ್ಮಹಾದೇವೋ ವ್ಯತಿಷ್ಠತ ॥17॥
ಹೀಗೆ ದೇವರ್ಷಿಗಳಿಂದಲೂ, ದೇವತೆಗಳಿಂದಲೂ ಪೂಜೆಗೊಳ್ಳುತ್ತಿರುವ ಮಹಾತೇಜಸ್ವಿಯಾದ ಭಗವಾನ್ ಮಹರುದ್ರನು ಜ್ಯೋತಿಶ್ರವೆಂಬ ಮೇರುಪರ್ವತದ ಶಿಖರದ ತಪ್ಪಲಿನಲ್ಲಿ ವಿರಾಜಿಸುತ್ತಿದ್ದನು.
ಕಸ್ಯಚಿತ್ತ್ವಥ ಕಾಲಸ್ಯ ದಕ್ಷೋ ನಾಮ ಪ್ರಜಾಪತಿಃ |
ಪೂರ್ವೋಕ್ತೇನ ವಿಧಾನೇನ ಯಕ್ಷ್ಯಮಾಣೋಽನ್ವಪದ್ಯತ ॥18॥
ಸ್ವಲ್ಪ ಕಾಲದ ಬಳಿಕ ದಕ್ಷ ಎಂಬ ಪ್ರಜಾಪತಿಯು ಶಾಸ್ತ್ರೀಯ ವಿಧಾನದಂತೆ ಯಜ್ಞವನ್ನು ಮಾಡಲು ಸಂಕಲ್ಪಿಸಿ ಅದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದನು.
ತತಸ್ತಸ್ಯ ಮಖಂ ದೇವಾಃ ಸರ್ವೇ ಶಕ್ರಪುರೋಗಮಾಃ |
ಗಮನಾಯ ಸಮಾಗಮ್ಯ ಬುದ್ಧಿಮಾಪೇದಿರೇ ತದಾ ॥19॥
ಅದೇ ಸಮಯದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಪರಸ್ಪರ ಯೋಚನೆ ಮಾಡಿ ದಕ್ಷ ಪ್ರಜಾಪತಿಯ ಯಜ್ಞಕ್ಕೆ ಹೋಗಲು ನಿಶ್ಚಯಿಸಿದರು.
ತೇ ವಿಮಾನೈರ್ಮಹಾತ್ಮಾನೋ ಜ್ವಲಿತೈರ್ಜ್ವಲನಪ್ರಭಾಃ |
ದೇವಸ್ಯಾನುಮತೇಽಗಚ್ಛನ್ ಗಂಗಾದ್ವಾರಮಿತಿ ಶ್ರುತಿಃ ॥20॥
ಆ ಮಹಾತ್ಮರಾದ ಇಂದ್ರಾದಿ ದೇವತೆಗಳು ರುದ್ರನ ಅನುಮತಿಯನ್ನು ಪಡೆದು, ಅಗ್ನಿಸೂರ್ಯನ ಪ್ರಭೆಯಂತೆ ಹೊಳೆಯುವ ವಿಮಾನಗಳ ಮೂಲಕ ಗಂಗಾದ್ವಾರಕ್ಕೆ ಅರ್ಥಾತ್ ಹರಿದ್ವಾರಕ್ಕೆ ಆಗಮಿಸಿದರು.
ಪ್ರಸ್ಥಿತಾ ದೇವತಾ ದೃಷ್ಟ್ವಾ ಶೈಲರಾಜಸುತಾ ತದಾ |
ಉವಾಚ ವಚನಂ ಸಾಧ್ವೀ ದೇವಂ ಪಶುಪತಿಂ ಪತಿಮ್ ॥21॥
ದೇವತೆಗಳೆಲ್ಲರೂ ದಕ್ಷ ಯಜ್ಞಕ್ಕೆ ಹೊರಟಿದ್ದನ್ನು ಕಂಡ ಸಾಧ್ವಿಯಾದ, ಶೈಲರಾಜನ ಸುತೆಯಾದ ಸತಿ ದೇವಿಯು ಪಶುಪತಿಯನ್ನು ಕುರಿತು ಹೀಗೆ ಹೇಳಿದಳು.
ಭಗವನ್ ಕ್ವ ನು ಯಾಂತ್ಯೇತೇ ದೇವಾಃ ಶಕ್ರಪುರೋಗಮಾಃ |
ಬ್ರೂಹಿ ತತ್ತ್ವೇನ ತತ್ತ್ವಜ್ಞ ಸಂಶಯೋ ಮೇ ಮಹಾನಯಮ್ ॥22॥
ಪೂಜ್ಯನೇ, ಇಂದ್ರಾದಿ ದೇವತೆಗಳೆಲ್ಲ ಎಲ್ಲಿಗೆ ಹೋಗುತ್ತಿದ್ದಾರೆ? ತತ್ತ್ವಜ್ಞನೇ, ಯಥಾರ್ಥವಾಗಿ ಈ ವಿಷಯವನ್ನು ಹೇಳು. ನನ್ನ ಮನಸ್ಸಿನಲ್ಲಿ ದೊಡ್ಡ ಸಂಶಯ ಉಂಟಾಗಿದೆ.
ಮಹೇಶ್ವರಃ

ದಕ್ಷೋ ನಾಮ ಮಹಾಭಾಗೇ ಪ್ರಜಾನಾಂ ಪತಿರುತ್ತಮಃ |
ಹಯಮೇಧೇನ ಯಜತೇ ತತ್ರ ಯಾಂತಿ ದಿವೌಕಸಃ ॥23॥
ಮಹೇಶ್ವರ ಮಹಾಭಾಗಳೇ, ಪ್ರಜಾಪತಿ ಶ್ರೇಷ್ಠನಾದ ದಕ್ಷ ಪ್ರಜಾಪತಿಯು ಅಶ್ವಮೇಧ ಯಜ್ಞವನ್ನು ಮಾಡುತ್ತಿದ್ದಾನೆ. ದೇವತೆಗಳೆಲ್ಲರೂ ಅಲ್ಲಿಗೆ ತೆರಳುತ್ತಿದ್ದಾರೆ.
ಉಮಾಃ
ಯಜ್ಞಮೇತಂ ಮಹಾಭಾಗ ಕಿಮರ್ಥಂ ನಾಭಿಗಚ್ಛಸಿ |
ಕೇನ ವಾ ಪ್ರತಿಷೇಧೇನ ಗಮನಂ ತೇ ನ ವಿದ್ಯತೇ ॥24॥
ಉಮಾ ಮಹಾದೇವನೇ, ದಕ್ಷ ಪ್ರಜಾಪತಿಯ ಯಾಗಕ್ಕೆ ನೀನೇಕೆ ಹೋಗುವುದಿಲ್ಲ? ಯಾವ ತಡೆಯಾದ ಕಾರಣದಿಂದ ನೀನು ಅಲ್ಲಿಗೆ ಹೋಗದಂತಾಗಿದೆ?
ಮಹೇಶ್ವರಃ
ಸುರೈರೇವ ಮಹಾಭಾಗೇ ಸರ್ವಮೇತದನುಷ್ಠಿತಮ್ |
ಯಜ್ಞೇಷು ಸರ್ವೇಷು ಮಮ ನ ಭಾಗ ಉಪಕಲ್ಪಿತಃ ॥25॥
ಮಹೇಶ್ವರ ಭಾಗ್ಯಶಾಲಿನಿಯೇ, ಆ ಯಜ್ಞದಲ್ಲಿ ನನಗೆ ಹವಿರ್ಭಾವವು ಇರುವುದಿಲ್ಲ. ಈ ಪದ್ಧತಿಯನ್ನು ದೇವತೆಗಳೇ ಹಿಂದೆ ಅನುಷ್ಠಾನಕ್ಕೆ ತಂದಿದ್ದಾರೆ.
ಪೂರ್ವೋಪಾಯೋಪಪನ್ನೇನ ಮಾರ್ಗೇಣ ವರವರ್ಣಿನಿ |
ನ ಮೇ ಸುರಾಃ ಪ್ರಯಚ್ಛಂತಿ ಭಾಗಂ ಯಜ್ಞಸ್ಯ ಧರ್ಮತಃ ॥26॥
ಹಿಂದೆಯೇ ನಿರ್ಣಯವಾದ ನಿಯಮಕ್ಕೆ ಅನುಗುಣವಾಗಿ ಧರ್ಮಾನುಸಾರವಾಗಿ ದೇವತೆಗಳು ಯಜ್ಞದಲ್ಲಿ ನನಗೆ ಹವಿರ್ಭಾಗವನ್ನು ನೀಡುವುದಿಲ್ಲ.
ಉಮಾಃ
ಭಗವನ್ ಸರ್ವಭೂತೇಷು ಪ್ರಭಾವಾಭ್ಯಧಿಕೋ ಗುಣೈಃ |
ಅಜೇಯಶ್ಚಾಪ್ರಧೃಷ್ಯಶ್ಚ ತೇಜಸಾ ಯಶಸಾ ಶ್ರಿಯಾ ॥27॥
ಉಮಾ ಭಗವನ್, ನೀನು ವಿಶ್ವದಲ್ಲೇ ಸಮಸ್ತ ಪ್ರಾಣಿಗಳಲ್ಲಿ ಎಲ್ಲರಿಗಿಂತ ಶ್ರೇಷ್ಠನಾಗಿರುವಿ, ಗುಣದಲ್ಲಿ ಅಧಿಕನಾಗಿರುವಿ, ಅಜೇಯನಾಗಿರುವಿ, ಯಾರಿಂದಲೂ ಬಲಾತ್ಕರಿಸಲು ಅಸಾಧ್ಯನಾಗಿರುವಿ. ತೇಜಸ್ಸು, ಯಶಸ್ಸು, ಸಂಪತ್ತಿನಿಂದ ಕೂಡಿರುವಿ.
ಅನೇನ ತೇ ಮಹಾಭಾಗ ಪ್ರತಿಷೇಧೇನ ಭಾಗತಃ |
ಅತೀವ ದುಃಖಮುತ್ಪನ್ನಂ ವೇಪಥುಶ್ಚ ಮಮಾನಘ ॥28॥
ಇಂತಹ ಮಹಾಭಾಗ್ಯವಂತನಾದ ನಿನಗೆ ಹವಿರ್ದಾನದ ನಿಷೇಧವು ಯಾವ ಕಾರಣದಿಂದ ಉಂಟಾಯಿತು? ನನ್ನ ಶರೀರವು ಕಂಪಿಸುತ್ತಿದೆ. ಅನಘನೇ, ನನಗೆ ಬಹಳ ದುಃಖವಾಗುತ್ತಿದೆ.
ಭೀಷ್ಮಃ
ಏವಮುಕತತ್ವ ತು ಸಾ ದೇವೀ ದೇವಂ ಪಶುಪತಿಂ ಪತಿಮ್ |
ತೂಷ್ಣೀಂಭೂತಾಭವದ್ ರಾಜನ್ ದಹ್ಯಮಾನೇನ ಚೇತಸಾ ॥29॥
ಭೀಷ್ಮ ಯುಧಿಷ್ಠಿರನೇ, ಪತಿಯಾದ ಪಶುಪತಿಯು ಸತಿಯ ಬಳಿ ನಿಶ್ಚಿತ ಮತಿಯಿಂದ ಹೀಗೆ ಹೇಳುತ್ತಿರಲು ದಹಿಸುತ್ತಿರುವ ಹೃದಯದಿಂದ ಕೂಡಿದ ಪಾರ್ವತಿ ದೇವಿಯು ಮೌನವನ್ನು ಹೊಂದಿದಳು.
ಅಥ ದೇವ್ಯಾ ಮತಂ ಜ್ಞಾತ್ವಾ ಹೃದ್ಗತಂ ಯಚ್ಚಿಕೀರ್ಷಿತಮ್ |
ಸ ಸಮಾಜ್ಞಾಪಯಾಮಾಸ ತಿಷ್ಠ ತ್ವಮಿತಿ ನಂದಿನಮ್ ॥30॥
ಪಾರ್ವತಿ ದೇವಿಯ ಮನೋಭಿಪ್ರಾಯವನ್ನು ಅರಿತ, ಮುಂದೆ ಅವಳು ಮಾಡುವ ಕಾರ್ಯವೇನೆಂದು ತಿಳಿದ ಮಹಾದೇವನು ಅಲ್ಲಿಯೇ ನಿಂತಿರುವಂತೆ ನಂದಿಗೆ ಆಜ್ಞಾಪಿಸಿದನು.
ತತೋ ಯೋಗಬಲಂ ಕೃತ್ವಾ ಸರ್ವಯೋಗೇಶ್ವರೇಶ್ವರಃ |
ತಂ ಯಜ್ಞಂ ಸುಮಹಾತೇಜಾ ಭೀಮೈರನುಚರೈಸ್ತದಾ |
ಸಹಸಾ ಘಾತಯಾಮಾಸ ದೇವದೇವಃ ಪಿನಾಕಧೃಕ್ ॥31॥
ಬಳಿಕ ಸಮಸ್ತ ಯೋಗೇಶ್ವರರಿಗೂ ಒಡೆಯನಾದ, ದೇವದೇವನಾದ, ಪಿನಾಕ ಪಾಣಿಯಾದ ಮಹಾದೇವನು ಯೋಗಬಲದಿಂದ ಭಯಂಕರರಾದ ತನ್ನ ಅನುಚರರ ಜೊತೆಗೆ ತೆರಳಿ ದಕ್ಷನು ಮಾಡುತ್ತಿದ್ದ ಆ ಅಶ್ವಮೇಧಯಾಗವನ್ನು ನಾಶಗೊಳಿಸಿದನು.
ಕೇಚಿನ್ನಾದಾನಮುಂಚಂತ ಕೇಚಿದ್ಧಾಸಾಂಶ್ಚ ಚಕ್ರಿರೇ |
ರುಧಿರೇಣಾಪರೇ ರಾಜಂಸ್ತತ್ರಾಗ್ನಿಂ ಸಮವಾಕಿರನ್ ॥32॥
ರುದ್ರನ ಅನುಚರರಲ್ಲಿ ಕೆಲವು ಅನುಚರರು ಯಜ್ಞವೇದಿಕೆಯ ಬಳಿ ನಿಂತು ಭಯಂಕರ ಸಿಂಹನಾದಗಳನ್ನು ಮಾಡುತ್ತಿದ್ದರು. ಕೆಲವರು ಅಟ್ಟಹಾಸದಿಂದ ನಗುತ್ತಿದ್ದರು. ಕೆಲವರು ಅಗ್ನಿದೇವನಲ್ಲಿ ರಕ್ತದ ಮಳೆಯನ್ನು ಸುರಿಸಿದರು.
ಕೇಚಿದ್ ಯೂಪಾನ್ ಸಮುತ್ಪಾಟ್ಯ ಬಭ್ರಮುರ್ವಿಕೃತಾನನಾಃ |
ಆಸ್ಯೈರನ್ಯೇ ಚಾಗ್ರಸಂತ ತಥೈವ ಪರಿಚಾರಕಾನ್ ॥33॥
ಕೆಲವರು ಯಜ್ಞದ ಯೂಪಗಳನ್ನು (ಬಲಿಗಂಬ) ಕಿತ್ತುಹಾಕಿದರು. ಯಜ್ಞಮಂಟಪದ ಸುತ್ತಲೂ ಘೋರವಾದ ಆಕಾರದಿಂದ ತಿರುಗುತ್ತಿದ್ದರು. ಕೆಲವು ಪಿಶಾಚಿಗಳು ಯಜ್ಞದ ಪರಿಚಾರಕರನ್ನು ಬಾಯಿಂದ ನುಂಗಿ ಹಾಕುತ್ತಿದ್ದರು.
ತತಃ ಸ ಯಜ್ಞೋ ನೃಪತೇ ವಧ್ಯಮಾನಃ ಸಮಂತತಃ |

ಆಸ್ಥಾಯ ಮೃಗರೂಪಂ ವೈ ಖಮೇವಾಭ್ಯಪತತ್ತದಾ ॥34॥
ಈ ಆ ಯಜ್ಞವು ಎಲ್ಲ ದಿಕ್ಕುಗಳಲ್ಲಿಯೂ ಎಲ್ಲಾ ಪ್ರಕಾರಗಳಿಂದಲೂ ನಾಶವಾಗುತ್ತಿರಲು ಭಯಗೊಂಡ ಯಜ್ಞ ಪುರುಷನು ಜಿಂಕೆಯ ರೂಪವನ್ನು ತಾಳಿ ಆಕಾಶದ ಕಡೆ ಓಡಿಹೋದನು.
ತಂ ತು ಯಜ್ಞಂ ತಥಾರೂಪಂ ಗಚ್ಛಂತಮುಪಲಭ್ಯ ಸಃ |
ಧನುರಾದಾಯ ಬಾಣಂ ಚ ತದಾನ್ವಸರತ ಪ್ರಭುಃ ॥35॥
ಯಜ್ಞ ಪುರುಷನು ಮೃಗರೂಪವನ್ನು ತಾಳಿ ಓಡಿಹೋಗುತ್ತಿರುವುದನ್ನು ನೋಡಿದ ಮಹರುದ್ರನು ಧನುಸ್ಸಿಗೆ ಬಾಣವನ್ನು ಸೇರಿಸಿ ಮೃಗವನ್ನೇ ಅನುಸರಿಸಿ ಓಡಿದನು.
ತತಸ್ತಸ್ಯ ಸುರೇಶಸ್ಯ ಕ್ರೋಧಾದಮಿತತೇಜಸಃ |
ಲಲಾಟಾತ್ ಪ್ರಸ್ರುತೋ ಘೋರಃ ಸ್ವೇದಬಿಂದುರ್ಬಭೂವ ಹ ॥36॥
ಮಹರುದ್ರನು ಮೃಗವನ್ನು ಅಟ್ಟಿಸಿಕೊಂಡು ಹೋಗಲು ಕೋಪದಿಂದ ಸಾಗುತ್ತಿರುವ ಮಹರುದ್ರನ ಹಣೆಯಿಂದ ಭಯಂಕರವಾದ ಬೆವರಿನ ಬಿಂದು ಒಂದು ಹೊರಚಿಮ್ಮಿತು.
ತಸ್ಮಿನ್ ಪತಿತಮಾತ್ರೇ ತು ಸ್ವೇದಬಿಂದೌ ತಥಾ ಭುವಿ |
ಪ್ರಾದುರ್ಬಭೂವ ಸುಮಹಾನಗ್ನಿಃ ಕಾಲಾನಲೋಪಮಃ ॥37॥
ಆ ಬೆವರಿನ ಹನಿಯು ಭೂಮಿಯಲ್ಲಿ ಬಿದ್ದ ಕೂಡಲೇ ಕಾಲಾಗ್ನಿಸದೃಶವಾದ, ಭಯಂಕರವಾದ ಅಗ್ನಿಯು ಹುಟ್ಟಿಕೊಂಡಿತು.
ತತ್ರ ಚಾಜಾಯತ ತದಾ ಪುರುಷಃ ಪುರುಷರ್ಷಭ |
ಹ್ರಸ್ವೋಽತಿಮಾತ್ರರಕ್ತಾಕ್ಷೋ ಹರಿಶ್ಮಶ್ರುರ್ವಿಭೀಷಣಃ ॥38॥
ಆ ಅಗ್ನಿಯಿಂದ ಅತ್ಯಂತ ಕುಳ್ಳಗಿರುವ, ಕೆಂಪಾದ ಕಣ್ಣುಗಳಿರುವ, ಕಂದು ಬಣ್ಣದ ದಾಡಿ ಮೀಸೆಗಳನ್ನು ಹೊಂದಿರುವ ಮಹಾಭಯಂಕರ ಪುರುಷನು ಹುಟ್ಟಿಕೊಂಡನು.
ಊರ್ಧ್ವಕೇಶೋಽತಿಲೋಮಾಂಗಃ ಶ್ಯೇನೋಲೂಕಸ್ತಥೈವ ಚ |
ಕರಾಲಃ ಕೃಷ್ಣವರ್ಣಶ್ಚ ರಕ್ತವಾಸಾಸ್ತಥೈವ ಚ ॥39॥
ಆ ಪುರುಷನ ತಲೆ ಕೂದಲುಗಳು ಮೇಲ್ಮುಖವಾಗಿ ನಿಮಿರಿ ನಿಂತಿದ್ದವು. ಅಂಗಾಂಗಗಳೆಲ್ಲವೂ ಗಿಡುಗ-ಗೂಬೆಗಳಿಗಿರುವ ದಟ್ಟವಾದ ಕೂದಲಿನಂತೆ ಮುಚ್ಚಿ ಹೋಗಿದ್ದವು. ಶರೀರವು ವಿಕಾರವಾಗಿತ್ತು. ಕಪ್ಪು ಬಣ್ಣದವನಾಗಿದ್ದನು, ಕೆಂಪು ವಸ್ತ್ರವನ್ನು ಧರಿಸಿದ್ದನು.
ತಂ ಯಜ್ಞಂ ಸ ಮಹಾಸತ್ತ್ವೋಽದಹತ್ ಕಕ್ಷಮಿವಾನಲಃ |
ದೇವಾಶ್ಚಾಪ್ಯದ್ರವನ್ ಸರ್ವೇ ತತೋ ಭೀತಾ ದಿಶೋ ದಶ ॥40॥
ಮಹಾಸತ್ವನಾದ ಆ ಪುರುಷನು ಬೆಂಕಿಯು ಹೇಗೆ ಹುಲ್ಲಿನ ಮೆದೆಯನ್ನು ಸುಟ್ಟು ಹಾಕುತ್ತದೋ ಅದರಂತೆ ದಕ್ಷನ ಯಜ್ಞವನ್ನು ಪೂರ್ಣವಾಗಿ ಭಸ್ಮ ಮಾಡಿದನು. ಆ ಪ್ರಸಂಗದಲ್ಲಿ ಯಜ್ಞಮಂಟಪದಲ್ಲಿ ಸಂಚರಿಸುತ್ತಿರುವ ದೇವತೆಗಳು, ಋಷಿಗಳು ದಿಕ್ಕು ತೋರದೆ ಓಡಿ ಹೋದರು.
ತೇನ ತಸ್ಮಿನ್ ವಿಚರತಾ ಪುರುಷೇಣ ವಿಶಾಂ ಪತೇ |
ಪೃಥಿವೀ ವ್ಯಚಲದ್ರಾಜನ್ನತೀವ ಭರತರ್ಷಭ ॥41॥
ಆ ರುದ್ರನಿಂದ ಉತ್ಪನ್ನನಾದ ಪುರುಷನು ಅಲ್ಲಿಯೇ ಸಂಚರಿಸುವಾಗ ಭೂಮಿಯೇ ಬಹಳವಾಗಿ ಕಂಪಿಸಿತು.
ಹಾಹಾಭೂತೇ ಪ್ರವತ್ತೇ ತು ನಾದೇ ಲೋಕಭಯಂಕರೇ |
ಪಿತಾಮಹೋ ಮಹಾದೇವಂ ದರ್ಶಯನ್ ಪ್ರತ್ಯಭಾಷತ ॥42॥
ಪ್ರಪಂಚವೆಲ್ಲವೂ ಹಾಹಾಕಾರದಿಂದ ಭಯಗೊಂಡಿರುವುದನ್ನು ಕಂಡು ಪ್ರಭುವಾದ ಚತುರ್ಮುಖ ಬ್ರಹ್ಮನು ಮಹದೇವನನ್ನು ಕಂಡು ಅವನಿಗೆ ಹೀಗೆ ಹೇಳಿದನು.
ಭವತೋಽಪಿ ಸುರಾಃ ಸರ್ವೇ ಭಾಗಂ ದಾಸ್ಯಂತಿ ವೈ ಪ್ರಭೋ |
ಕ್ರಿಯತಾಂ ಪ್ರತಿಸಂಹಾರಃ ಸರ್ವದೇವೇಶ್ವರ ತ್ವಯಾ ॥43॥
ಸರ್ವದೇವೇಶ್ವರನೇ, ಪ್ರಭುವೇ, ಎಲ್ಲ ದೇವತೆಗಳು ನಿನಗೂ ಯಜ್ಞದಲ್ಲಿ ಹವಿರ್ಭಾಗವನ್ನು ನೀಡುತ್ತಾರೆ. ನೀನು ಕ್ರೋಧರೂಪನಾದ ಅಗ್ನಿಯನ್ನು ಶಾಂತಗೊಳಿಸು.
ಇಮಾ ಹಿ ದೇವತಾಃ ಸರ್ವಾ ಋಷಯಶ್ಚ ಪರಂತಪ |
ತವ ಕ್ರೋಧಾನ್ಮಹಾದೇವ ನ ಶಾಂತಿಮುಪಲೇಭಿರೇ ॥44॥
ಈ ದೇವತೆಗಳು, ಋಷಿಗಳು ನಿನ್ನ ಕ್ರೋಧದಿಂದ ಶಾಂತಿಯನ್ನು ಕಳೆದುಕೊಂಡಿದ್ದಾರೆ. ಮಹದೇವನೇ, ಪರಂತಪನೇ, ಶೋಕವನ್ನು ತ್ಯಜಿಸು.
ಯಶ್ಚೈಷ ಪುರುಷೋ ಜಾತಃ ಸ್ವೇದಾತ್ತೇ ವಿಬುಧೋತ್ತಮ |
ಜ್ವರೋ ನಾಮ್ನೈಷ ಧರ್ಮಜ್ಞ ಲೋಕೇಷು ಪ್ರಚರಿಷ್ಯತಿ ॥45॥
ವಿಬುಧಶ್ರೇಷ್ಠನೇ, ನಿನ್ನ ದೇಹದ ಬೆವರಿನಿಂದ ಹುಟ್ಟಿರುವ ಪುರುಷನು ಜ್ವರ ಎಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದುತ್ತಾನೆ.
ಏಕೀಭೂತಸ್ಯ ನ ಹ್ಯಸ್ಯ ಧಾರಣೇ ತೇಜಸಃ ಪ್ರಭೋ |
ಸಮರ್ಥಾ ಸಕಲಾ ಪೃಥ್ವೀ ಬಹುಧಾ ಸೃಜ್ಯತಾಮಯಮ್ ॥46॥
ನಿನ್ನ ತೇಜೋರೂಪನಾದ ಜ್ವರಪುರುಷನು ಎಲ್ಲಿಯವರೆಗೆ ಒಂದೇ ರೂಪದಲ್ಲಿರುತ್ತಾನೋ ಅಲ್ಲಿಯ ತನಕ ಸಮಗ್ರ ಜಗತ್ತಿನಿಂದಲೂ ಜ್ವರ ಪುರುಷನನ್ನು ಧರಿಸಲು ಸಾಧ್ಯವಿಲ್ಲ. ಆದ್ದರಿಂದ ಈ ಜ್ವರವನ್ನು ಅನೇಕ ಪ್ರಕಾರವಾಗಿ ವಿಭಾಗ ಮಾಡು.

ಇತ್ಯುಕ್ತೋ ಬ್ರಹ್ಮಣಾ ದೇವೋ ಭಾಗೇ ಚಾಪಿ ಪ್ರಕಲ್ಪಿತೇ |
ಭಗವಂತಂ ತಥೇತ್ಯಾಹ ಬ್ರಹ್ಮಾಣಮಮಿತೌಜಸಮ್ ॥47॥
ಬ್ರಹ್ಮನು ಹೀಗೆ ಹೇಳಿದ ಬಳಿಕ ಮಹರುದ್ರನು ಯಜ್ಞದಲ್ಲಿ ಹವಿರ್ಭಾವವು ದೊರೆಯುತ್ತದೆಂದು ತಿಳಿದು ತೇಜಸ್ವಿಯಾದ ಚತುರ್ಮುಖನೊಡನೆ ಸಂಧಾನ ಮಾಡಿಕೊಂಡು ಹಾಗೆಯೇ ಆಗಲೆಂದನು.
ಪರಾಂ ಚ ಪ್ರೀತಿಮಗಮದುತ್ಸ್ಮಯಂಶ್ಚ ಪಿನಾಕಧೃಕ್ |
ಅವಾಪ ಚ ತದಾ ಭಾಗಂ ಯಥೋಕ್ತಂ ಬ್ರಹ್ಮಣಾ ಭವಃ ॥48॥
ಚತುರ್ಮುಖನ ಮಾತಿನಂತೆ ಪಿನಾಕಪಾಣಿಯಾದ ಮಹರುದ್ರನು ಅತ್ಯಂತ ಪ್ರಸನ್ನನಾಗಿ ಮಂದಹಾಸವನ್ನು ಬೀರಿದನು. ಬ್ರಹ್ಮನು ಹೇಳಿದಂತೆ ಯಜ್ಞದಲ್ಲಿ ಹವಿರ್ಭಾಗವನ್ನು ಪಡೆದುಕೊಂಡನು.
ಜ್ವರಂ ಚ ಸರ್ವಧರ್ಮಜ್ಞೋ ಬಹುಧಾ ವ್ಯಸೃಜತ್ತದಾ |
ಶಾಂತ್ಯರ್ಥಂ ಸರ್ವಭೂತಾನಾಂ ಶೃಣು ತಚ್ಚಾಪಿ ಪುತ್ರಕ ॥49॥
ಎಲ್ಲ ಧರ್ಮಗಳನ್ನು ತಿಳಿದಿರುವ ಮಹರುದ್ರನು ಬ್ರಹ್ಮನ ಆದೇಶದಂತೆ ಎಲ್ಲ ಪ್ರಾಣಿಗಳ ಶಾಂತಿಗಾಗಿ ಜ್ವರವನ್ನು ಅನೇಕ ಪ್ರಕಾರವಾಗಿ ವಿಂಗಡಿಸಿದನು. ಯಾವ ಯಾವ ರೂಪದಲ್ಲಿ ಜ್ವರವನ್ನು ಮಹದೇವನು ವಿಂಗಡಿಸಿದ್ದಾನೆಂದು ಹೇಳುತ್ತೇನೆ, ಕೇಳು.
ಶೀರ್ಷಾಭಿತಾಪೋ ನಾಗಾನಾಂ ಪರ್ವತಾನಾಂ ಶಿಲಾಜತು |
ಅಪಾಂ ತು ನೀಲಿಕಾಂ ವಿದ್ಯಾನ್ನಿರ್ಮೋಕಂ ಭುಜಗೇಷು ಚ ॥50॥
ಅನೇಕರ ತಲೆಯಲ್ಲಿರುವ ತಾಪ ಅಥವಾ ಪೀಡೆ ಏನಿದೆಯೋ ಅರ್ಥಾತ್ ತಲೆನೋವು ಶಿವನು ಇಟ್ಟಿರುವ ಜ್ವರವೆನಿಸಿದೆ. ಪರ್ವತದಲ್ಲಿ ಇರುವಂತಹ ಲಾಕ್ಷ (ಅರಗು) ಎಂಬ ರಸವು ಜ್ವರದ ವಿಭಾಗವಾಗಿದೆ. ನೀರಿನಲ್ಲಿ ಬೆಳೆಯುವ ಕರಿಯ ಲಕ್ಕಿ ಗಿಡವೇ ನೀರಿನ ಜ್ವರವಾಗಿದೆ. ಸರ್ಪಗಳಲ್ಲಿ ಪೊರೆಯು ಜ್ವರರೂಪವಾಗಿದೆ.
ಕ್ಷೌರಕಂ ಸೌರಭೇಯೀಣಾಮೂಷರಂ ಪೃಥಿವೀತಲೇ |
ಪಶೂನಾಮಪಿ ಧರ್ಮಜ್ಞ ದೃಷ್ಟಿಪ್ರತ್ಯವರೋಧನಮ್ ॥51॥
ನಾಯಿಗಳಲ್ಲಿ ಗರಗಸದಂತಿರುವ ಜಿಹ್ವಾಕ್ರೌರ್ಯವೇ ರುದ್ರನ ಜ್ವರವೆನಿಸಿದೆ. ಚೋರುಮಣ್ಣಿನ ಪ್ರದೇಶವೇ ಪೃಥಿವಿಯ ಜ್ವರವೆನಿಸಿದೆ. ದೃಷ್ಟಿ ಶಕ್ತಿಯು ನಾಶವಾಗುವುದೇ ಪ್ರಾಣಿಗಳಿಗೆ ಜ್ವರವೆನಿಸಿದೆ.
ರಂಧ್ರೋದ್ಭವಶ್ಚ ಮತ್ಸ್ಯಾನಾಂ ಶಿಖೋದ್ಭೇದಶ್ಚ ಬರ್ಹಿಣಾಮ್ |
ನೇತ್ರರೋಗಃ ಕೋಕಿಲಾನಾಂ ಜ್ವರಃ ಪ್ರೋಕ್ತೋ ಮಹಾತ್ಮನಾ ॥52॥
ಮೀನುಗಳಿಗೆ ಮೂಗಿನಲ್ಲಿ ರಂಧ್ರವು ಉಂಟಾಗುವುದೇ ಜ್ವರವೆನಿಸಿದೆ. ನವಿಲುಗಳಿಗೆ ತಲೆಯ ಮೇಲೆ ಹೊರಬಂದಿರುವ ಶಿಖೆಯೇ ಜ್ವರವೆನಿಸಿದೆ. ಕೋಕಿಲೆಗೆ ನೇತ್ರರೋಗವೇ ಜ್ವರವಾಗಿರುತ್ತದೆ. ಮಹಾತ್ಮನಾದ ಶಿವನು ಈ ರೀತಿ ಜ್ವರವಿರುವ ಪ್ರದೇಶಗಳನ್ನು ಹೇಳಿದನು.

ಅವೀನಾಂ ಪಿತ್ತಭೇದಶ್ಚ ಸರ್ವೇಷಾಮಿತಿ ನಃ ಶ್ರುತಮ್ |
ಶುಕಾನಾಮಪಿ ಸರ್ವೇಷಾಂ ಹಿಕ್ಕಿಕಾ ಪ್ರೋಚ್ಯತೇ ಜ್ವರಃ ॥53॥
ಕುರಿಗಳಿಗೆ ಪಿತ್ತದ ಉಲ್ಬಣವೇ ಜ್ವರವೆಂದು ಕೇಳಿದ್ದೇವೆ. ಗಿಳಿಗಳಿಗೆ ಕ್ಷಣ ಕ್ಷಣದಲ್ಲಿಯೂ ಮಲವನ್ನು ತ್ಯಜಿಸುವುದೇ ಜ್ವರವೆನಿಸಿದೆ.
ಶಾರ್ದೂಲೇಷ್ವಥ ಧರ್ಮಜ್ಞ ಶ್ರಮೋ ಜ್ವರ ಇಹೋಚ್ಯತೇ |
ಮಾನುಷೇಷು ತು ಧರ್ಮಜ್ಞ ಜ್ವರೋ ನಾಮ್ಯೈಷ ವಿಶ್ರುತಃ |
ಮರಣೇ ಜನ್ಮನಿ ತಥಾ ಮಧ್ಯೇ ಚಾವಿಶತೇ ನರಮ್ ॥54॥
ಬಳಲುವಿಕೆಯೇ ಹುಲಿಗಳಿಗೆ ಜ್ವರವೆನಿಸಿದೆ. ಮನುಷ್ಯರಲ್ಲಿ ಜ್ವರ ಎಂಬ ರೋಗವೇ ಪ್ರಸಿದ್ಧವಾಗಿದೆ. ಮನುಷ್ಯರಿಗೆ ಮರಣದಲ್ಲಿ, ಹುಟ್ಟಿನಲ್ಲಿ ಈ ಜ್ವರವು ಪ್ರವೇಶ ಮಾಡುತ್ತದೆ.
ಏತನ್ಮಾಹೇಶ್ವರಂ ತೇಜೋ ಜ್ವರೋ ನಾಮ ಸುದಾರುಣಃ |
ನಮಸ್ಯಶ್ಚೈವ ಮಾನ್ಯಶ್ಚ ಸರ್ವಪ್ರಾಣಿಭಿರೀಶ್ವರಃ ॥55॥
ಮಹೇಶ್ವರನ ತೇಜೋರೂಪವಾದ ಜ್ವರವು ಅತ್ಯಂತ ಭಯಂಕರವಾದುದು. ಜ್ವರವು ಎಲ್ಲ ಪ್ರಾಣಿಗಳಿಗೂ ಮಾನ್ಯವೂ, ವಂದನೀಯವೂ ಆಗಿದೆ.
ಅನೇನ ಹಿ ಸಮಾವಿಷ್ಟೋ ವೃತ್ರೋ ಧರ್ಮಭೃತಾಂ ವರಃ |
ವ್ಯಜೃಂಭತ ತತಃ ಶಕ್ರಸ್ತಸ್ಮೈ ವಜ್ರಮವಾಸೃಜತ್ ॥56॥
ವೃತ್ರನು ಈ ಎಲ್ಲದರಿಂದ ಕೂಡಿದ ಜ್ವರದಿಂದಲೇ ಸಮಾಕ್ರಾಂತನಾದನು. ಈ ಜ್ವರ ಬಂದಿರುವ ಕಾರಣದಿಂದಲೇ ವೃತ್ರನು ಆಕಳಿಸುತ್ತಿದ್ದನು. ಅದೇ ಸಮಯದಲ್ಲಿ ಇಂದ್ರನು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು.
ಪ್ರವಿಶ್ಯ ವಜ್ರೋ ವೃತ್ರಂ ತು ದಾರಯಾಮಾಸ ಭಾರತ |
ದಾರಿತಶ್ಚ ಸ ವಜ್ರೇಣ ಮಹಾಯೋಗೀ ಮಹಾಸುರಃ |
ಜಗಾಮ ಪರಮಂ ಸ್ಥಾನಂ ವಿಷ್ಣೋರಮಿತತೇಜಸಃ ॥57॥
ಆಕಳಿಸುತ್ತಿದ್ದ ವೃತ್ರನ ಬಾಯಿಯ ಮೂಲಕ ಇಂದ್ರನ ವಜ್ರಾಯುಧವು ಒಳಹೊಕ್ಕು ವೃತ್ರನನ್ನು ಸೀಳಿತು. ವಜ್ರಾಯುಧದಿಂದ ಸೀಳಲ್ಪಟ್ಟ ಮಹಾಯೋಗಿಯಾದ ಅಸುರನು ತೇಜಸ್ವಿಯಾದ ವಿಷ್ಣುವಿನ ಶ್ರೇಷ್ಠವಾದ ಸ್ಥಾನವನ್ನು ಹೊಂದಿದನು.
ವಿಷ್ಣುಭಕ್ತ್ಯಾ ಹಿ ತೇನೇದಂ ಜಗದ್ವ್ಯಾಪ್ತಮಭೂತ್ ಪುರಾ |
ತಸ್ಮಾಚ್ಚ ನಿಹತೋ ಯುದ್ಧೇ ವಿಷ್ಣೋಃ ಸ್ಥಾನಮವಾಪ್ತವಾನ್ ॥58॥
ವಿಷ್ಣುಭಕ್ತಿಯ ಪ್ರಭಾವದಿಂದ ವೃತ್ರಾಸುರನ ಮೂಲಕ ಜಗತ್ತು ವ್ಯಾಪ್ತವಾಯಿತು. ವಿಷ್ಣುವಿನ ತೇಜಸ್ಸಿನಿಂದ ಕೂಡಿದ

ವಜ್ರಾಯುಧದಿಂದ ಯುದ್ಧದಲ್ಲಿ ಅಸುನೀಗಿದ ಅಸುರನು ವಿಷ್ಣುವಿನ ಸ್ಥಾನವನ್ನೇ ಹೊಂದಿದನು.
ಇತ್ಯೇಷ ವೃತ್ರಮಾಶ್ರಿತ್ಯ ಜ್ವರಸ್ಯ ಮಹತೋ ಮಯಾ |
ವಿಸ್ತರಃ ಕಥಿತಃ ಪುತ್ರ ಕಿಮನ್ಯತ್ ಪ್ರಬ್ರವೀಮಿ ತೇ ॥59॥
ಹೀಗೆ ವೃತ್ರಾಸುರನ ವಧೆಯ ಪ್ರಸಂಗದಲ್ಲಿ ವೃತ್ರನ ಮಹಾಜ್ವರವು ಹುಟ್ಟಿದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದ್ದೇನೆ. ನಿನಗೆ ಬೇರೆ ಯಾವ ವಿಷಯವನ್ನು ಹೇಳಲಿ?
ಇಮಾಂ ಜ್ವರೋತ್ಪತ್ತಿಮದೀನಮಾನಸಃ
ಪಠೇತ್ ಸದಾ ಯಃ ಸುಸಮಾಹಿತೋ ನರಃ |
ವಿಮುಕ್ತರೋಗಃ ಸ ಸುಖೀ ಮುದಾ ಯುತೋ
ಲಭೇತ ಕಾಮಾನ್ ಸ ಯಥಾಮನೀಷಿತಾನ್ ॥60॥
ಯಾವಾತನು ಉದಾರ ಹೃದಯದಿಂದ, ಏಕಾಗ್ರತೆಯಿಂದ ಜ್ವರದ ಉತ್ಪತ್ತಿಗೆ ಸಂಬಂಧಿಸಿದ ಈ ಉಪಾಖ್ಯಾನವನ್ನು ಎಲ್ಲ ಕಾಲಗಳಲ್ಲಿಯೂ ಓದುತ್ತಾನೋ ಅವನು ರೋಗಗಳಿಂದ ವಿಮುಕ್ತನಾಗಿ, ಸುಖಿಯಾಗಿ, ಸಂತೋಷಯುಕ್ತನಾಗಿ ಮನಸ್ಸಿನಲ್ಲಿ ಬಯಸಿದ ಕಾಮನೆಗಳನ್ನೆಲ್ಲ ಪಡೆದುಕೊಳ್ಳುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೆಂಟನೆಯ ಅಧ್ಯಾಯ
ಶಿವನ ಪ್ರೇರಣೆಯಂತೆ ವೀರಭದ್ರನು ದಕ್ಷಯಾಗವನ್ನು ನಾಶಪಡಿಸಿದುದು.
ದಕ್ಷನು ಮಾಡಿದ ಸ್ತೋತ್ರದಿಂದ ರುದ್ರನು ಸುಪ್ರೀತನಾಗಿ ಅವನಿಗೆ ವರವನ್ನು ಕೊಟ್ಟಿದುದು. ಶಿವಸ್ತೋತ್ರದ ಮಹಿಮೆ.
ಜನಮೇಜಯಃ
ಪ್ರಾಚೇತಸಸ್ಯ ದಕ್ಷಸ್ಯ ಕಥಂ ವೈವಸ್ವತೇಂತರೇ |
ವಿನಾಶಮಗಮದ್ ಬ್ರಹ್ಮನ್ ಹಯಮೇಧಃ ಪ್ರಜಾಪತೇಃ |
ಕಥಂ ಸ ಚಾಭವದ್ ಬ್ರಹ್ಮನ್ ಹಯಮೇಧಃ ಪ್ರಜಾಪತೇಃ ॥1॥
ಜನಮೇಜಯ ವೈಶಂಪಾಯನರೇ, ವೈವಸ್ವತ ಮನ್ವಂತರದಲ್ಲಿ ಪ್ರಚೇತಸ್ಸಿನ ಕುಲದಲ್ಲಿ ಹುಟ್ಟಿದ ದಕ್ಷ ಪ್ರಜಾಪತಿಯು ಮಾಡಿದ ಅಶ್ವಮೇಧ ಯಾಗವು ಹೇಗೆ ನಾಶವನ್ನು ಹೊಂದಿತು?
ದೇವ್ಯಾ ಮನ್ಯುಕೃತಂ ಮತ್ವಾ ಕ್ರುದ್ಧಃ ಸರ್ವಾತ್ಮಕಃ ಪ್ರಭುಃ |
ಪ್ರಸಾದಾತ್ ತಸ್ಯ ದಕ್ಷೇಣ ಸ ಯಜ್ಞಃ ಸಂಧಿತಃ ಕಥಮ್ |
ಏತದ್ ವೇದಿತುಮಿಚ್ಛೇಯಂ ತನ್ಮೇ ಬ್ರೂಹಿ ಯಥಾತಥಮ್ ॥2॥
ಅಶ್ವಮೇಧ ಯಾಗವನ್ನು ದಕ್ಷನು ಹೇಗೆ ನಡೆಸಿದನು? ಸರ್ವಾತ್ಮಕನಾದ ಪ್ರಭುವಾದ ಪರಶಿವನು ತನ್ನ ಪತ್ನಿಯ ದುಃಖವನ್ನು ನೋಡಿಯೇ ಅಲ್ಲವೆ ಸಿಟ್ಟುಗೊಂಡು ಆ ಕಾರ್ಯವನ್ನು ಮಾಡಿದನು! ಯಜ್ಞವು ನಾಶವಾದ ಬಳಿಕ ಪುನಃ ರುದ್ರ ಪ್ರಸಾದದಿಂದ ಯಜ್ಞವು ಹೇಗೆ ಸಂಪನ್ನವಾಯಿತು? ಇದನ್ನು ಕೇಳುವ ಇಚ್ಛೆಯಿಂದ ಕೂಡಿದ್ದೇನೆ. ವಿಷದವಾಗಿ ಉತ್ತರಿಸಿರಿ.
ವೈಶಂಪಾಯನಃ
ಪುರಾ ಹಿಮವತಃ ಪೃಷ್ಠೇ ದಕ್ಷೋ ವೈ ಯಜ್ಞಮಾಹರತ್ |
ಗಂಗಾದ್ವಾರೇ ಶುಭೇ ದೇಶೇ ಋಷಿಸಿದ್ಧನಿಷೇವಿತೇ ॥3॥
ವೈಶಂಪಾಯನ ಜನಮೇಜಯನೇ, ಹಿಂದೆ ಹಿಮವದ್ ಪರ್ವತದ ತಪ್ಪಲಿನಲ್ಲಿ ಋಷಿಗಳಿಂದಲೂ, ಸಿದ್ಧರಿಂದಲೂ ಸೇವಿಸಲ್ಪಡುವ ಗಂಗಾದ್ವಾರವೆಂಬ ಮಂಗಳಮಯವಾದ ಪ್ರದೇಶದಲ್ಲಿ ದಕ್ಷಪ್ರಜಾಪತಿಯು ಅಶ್ವಮೇಧ ಯಜ್ಞವನ್ನು ಮಾಡಲು ಆರಂಭಿಸಿದನು.
ಗಂಧರ್ವಾಪ್ಸರಸಾಕೀರ್ಣೇ ನಾನಾದ್ರುಮಲತಾವೃತೇ |
ಋಷಿಸ್ಯೆಂಂಃ ಪರಿವೃತಂ ದಕ್ಷಂ ಧರ್ಮಭೃತಾಂ ವರಮ್ ॥4॥
ಪೃಥಿವ್ಯಾಮಂತರಿಕ್ಷೇ ಚ ಯೇ ಚ ಸ್ವರ್ಲೋಕವಾಸಿನಃ |
ಸರ್ವೇ ಪ್ರಾಂಜಲಯೋ ಭೂತ್ವಾ ಉಪತಸ್ಥುಃ ಪ್ರಜಾಪತಿಮ್ ॥5॥
ಗಂಧರ್ವ, ಅಪ್ಸರೆಯರಿಂದ ಕೂಡಿರುವ, ಅನೇಕ ವಿಧವಾದ ಮರಗಳಿಂದಲೂ ಬಳ್ಳಿಗಳಿಂದಲೂ ವ್ಯಾಪಿಸಿರುವ ಆ ಪ್ರದೇಶದಲ್ಲಿ ಋಷಿಗಳ ಸಮೂಹದಿಂದ ಕೂಡಿಕೊಂಡಿರುವ, ಧರ್ಮಾತ್ಮರಲ್ಲಿಯೇ ಶ್ರೇಷ್ಠನಾದ ದಕ್ಷಪ್ರಜಾಪತಿಯನ್ನು ಪೃಥಿವಿ, ಅಂತರಿಕ್ಷ, ಸ್ವರ್ಗಲೋಕ- ಹೀಗೆ ಎಲ್ಲ ಕಡೆ ವಾಸಿಸುತ್ತಿರುವ ಜನರೆಲ್ಲರೂ ಕೈಮುಗಿದುಕೊಂಡು ಬಂದು ಚೆನ್ನಾಗಿ ಸೇವಿಸುತ್ತಿದ್ದರು.
ದೇವದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ |
ಹಾಹಾ ಹೂಹೂಶ್ಚ ಗಂಧರ್ವೌ ತುಂಬುರುರ್ನಾರದಸ್ತಥಾ ॥6॥
ವಿಶ್ವಾವಸುರ್ವಿಶ್ವಸೇನೋ ಗಂಧರ್ವಾಪ್ಸರಸಸ್ತಥಾ |
ಆದಿತ್ಯಾ ವಸವೋ ರುದ್ರಾಃ ಸಾಧ್ಯಾಃ ಸಹ ಮರುದ್ಗಣೈಃ ॥7॥
ದೇವ-ದಾನವ-ಗಂಧರ್ವರು, ಪಿಶಾಚರು, ಸರ್ಪಗಳು, ರಾಕ್ಷಸರು, ಹಾಹಾ ಹೂಹೂ ಎಂಬ ಗಂಧರ್ವರು, ತುಂಬುರು-ನಾರದರು, ವಿಶ್ವಾವಸು, ವಿಶ್ವಸೇನ, ಗಂಧರ್ವ-ಅಪ್ಸರೆಯರು, ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ಮರುದ್ಗಣಗಳ ಸಹಿತರಾಗಿ ಅವನ ಯಜ್ಞವನ್ನು ಸೇವಿಸಲು ಬಂದರು.

ಇಂದ್ರೇಣ ಸಹಿತಾಃ ಸರ್ವೇ ಆಗತಾ ಯಜ್ಞಭಾಗಿನಃ |
ಊಷ್ಮಪಾಃ ಸೋಮಪಾಶ್ಚೈವ ಧೂಮಪಾ ಆಜ್ಯಪಾಸ್ತಥಾ ॥8॥
ಋಷಯಃ ಪಿತರಶ್ಚೈವ ಆಗತಾ ಬ್ರಹ್ಮಣಾ ಸಹ |
ಏತೇ ಚಾನ್ಯೇ ಚ ಬಹವೋ ಭೂತಗ್ರಾಮಾಶ್ಚತುರ್ವಿಧಾಃ ॥9॥
ಜರಾಯುಜಾಂಡಜಾಶ್ಚೈವ ಸಹಸಾ ಸ್ವೇದಜೋದ್ಭಿಜ್ಜೈಃ |
ಆಹೂತಾ ಮಂತ್ರಿತಾಃ ಸರ್ವೇ ದೇವಾಶ್ಚ ಸಹ ಪತ್ನಿಭಿಃ ॥10॥
ವಿರಾಜಂತೇ ವಿಮಾನಸ್ಥಾ ದೀಪ್ಯಮಾನಾ ಇವಾಗ್ನಯಃ |
ತಾನ್ ದೃಷ್ಟ್ವಾ ಮನ್ಯುನಾವಿಷ್ಟೋ ದಧೀಚಿರ್ವಾಕ್ಯಮಬ್ರವೀತ್ ॥11॥
ದೇವತೆಗಳು ಇಂದ್ರನ ಜೊತೆಗೆ ಸೇರಿಕೊಂಡು ದಕ್ಷಪ್ರಜಾಪತಿಯ ಯಜ್ಞಮಂಟಪಕ್ಕೆ ಆಗಮಿಸಿದರು. ಊಷ್ಮಪರು, ಸೋಮಪರು, ಧೂಮಪರು, ಆಜ್ಯಪರು, ಋಷಿಗಳು, ಪಿತೃಗಳು ಚತುರ್ಮುಖನ ಜೊತೆಗೆ ಸೇರಿ ಎಲ್ಲರೂ ಆಗಮಿಸಿದರು. ಇವರಲ್ಲದೆ ನಾಲ್ಕು ವಿಧವಾದ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜಗಳೆಂಬ ಪ್ರಾಣಿಗಳು ಆಗಮಿಸಿದವು. ಆಹ್ವಾನಿತರಾದ ದೇವತೆಗಳೆಲ್ಲರೂ ತಮ್ಮ ಪತ್ನಿಯರಿಂದ ಕೂಡಿಕೊಂಡು ವಿಮಾನದಲ್ಲಿ ಕುಳಿತು, ಪ್ರಜ್ವಲಿಸುತ್ತಿರುವ ಬೆಂಕಿಗೆ ಸಮಾನರಾಗಿ ಬೆಳಗುತ್ತಿದ್ದರು. ಅವರೆಲ್ಲರನ್ನೂ ಕಂಡು ಅವನ ಸಮೂಹದಲ್ಲಿ ರುದ್ರನನ್ನು ಮಾತ್ರ ಕಾಣದೆ ಸಿಟ್ಟುಗೊಂಡಿರುವ ದಧೀಚಿ ಮಹರ್ಷಿಯು ಯಜ್ಞಮಂಟಪದಲ್ಲಿ ಹೀಗೆ ಹೇಳಿದರು.
ನಾಯಂ ಯಜ್ಞೋ ನ ವಾ ಧರ್ಮೋ ಯತ್ರ ರುದ್ರೋ ನ ಇಜ್ಯತೇ |
ವಧಬಂಧಂ ಪ್ರಪನ್ನಾ ವೈ ಕಿಂನು ಕಾಲಸ್ಯ ಪರ್ಯಯಃ ॥12॥
ಸಜ್ಜನರೇ, ಯಾವ ಯಜ್ಞದಲ್ಲಿ ಮಹರುದ್ರನ ಆರಾಧನೆಯಿಲ್ಲವೋ ಅದು ಯಜ್ಞವಲ್ಲ. ನಾವು ಮಾಡುವ ಧರ್ಮವೂ ಅಲ್ಲ. ರುದ್ರನ ಚಿಂತನೆಯಿಲ್ಲದ ಧರ್ಮವು ಧರ್ಮವೂ ಅಲ್ಲ. ಇಂತಹ ಅಧರ್ಮಯುಕ್ತವಾದ ಯಜ್ಞವನ್ನು ನಿಯೋಜಿಸಿರುವ ವ್ಯಕ್ತಿಯು ವಧಬಂಧನವೆಂಬ ದುರ್ದಶೆಗೆ ತುತ್ತಾಗುತ್ತಾನೆ. ಈಶ್ವರನನ್ನು ಆಹ್ವಾನಿಸದೆ ಯಜ್ಞವನ್ನು ಆರಂಭಿಸುವುದು ಕಾಲದ ವೈಪರೀತ್ಯವೇ ಎನಿಸಿದೆ.
ಕಿಂನು ಮೋಹಾನ್ನ ಪಶ್ಯಂತಿ ವಿನಾಶಂ ಪರ್ಯುಪಸ್ಥಿತಮ್ |
ಉಪಸ್ಥಿತಂ ಭಯಂ ಘೋರಂ ನ ಬುಧ್ಯಂತಿ ಮಹಾಧ್ವರೇ ॥13॥
ಈ ನ್ಯೂನತೆಯನ್ನು ಮೋಹವಶರಾದುದರಿಂದ ನೀವ್ಯಾರೂ ನೋಡುತ್ತಿಲ್ಲ. ಎದುರಾಗುತ್ತಿರುವ ವಿನಾಶದ ಬಗ್ಗೆ ಎಚ್ಚರವಿಲ್ಲದೆ ಇದ್ದೀರಿ. ಈ ಅಧ್ವರದಲ್ಲಿ ಉಂಟಾಗುವ ಘೋರವಾದ ಭಯವನ್ನು ನೀವ್ಯಾರೂ ತಿಳಿಯುತ್ತಿಲ್ಲ.
ಇತ್ಯುಕ್ತ್ವಾ ಸ ಮಹಾಯೋಗೀ ಪಶ್ಯತಿ ಧ್ಯಾನಚಕ್ಷುಷಾ |
ಸ ಪಶ್ಯತಿ ಮಹಾದೇವಂ ದೇವೀಂ ಚ ವರದಾಂ ಶುಭಾಮ್ ॥14॥
ನಾರದಂ ಚ ಮಹಾತ್ಮಾನಂ ತಸ್ಯಾ ದೇವ್ಯಾಃ ಸಮೀಪತಃ |
ಸಂತೋಷಂ ಪರಮಂ ಲೇಭೇ ಇತಿ ನಿಶ್ಚಿತ್ಯ ಯೋಗವಿತ್ ॥15॥
ಜನಮೇಜಯನೇ, ಮಹಾಯೋಗಿಯಾದ ದಧೀಚಿಯು ಧ್ಯಾನದ ಕಣ್ಣಿನಿಂದ ಎಲ್ಲವನ್ನೂ ನೋಡಿದನು. ಜ್ಞಾನದ ಕಣ್ಣಿನಿಂದಲೇ ಮಹರುದ್ರನನ್ನು, ವರಪ್ರದಳಾದ ಮಂಗಳಸ್ವರೂಪಳಾದ ಪಾರ್ವತೀದೇವಿಯನ್ನೂ, ಮಹಾತ್ಮರಾದ ನಾರದರು ಪಾರ್ವತಿಯ ಸಮೀಪದಲ್ಲಿ ಇರುವುದನ್ನು ನೋಡಿದನು. ಆ ದರ್ಶನದಿಂದ ಅತ್ಯಂತ ಸಂತೋಷವನ್ನು ದಧೀಚಿಯು ಹೊಂದಿದನು. ಯೋಗಜ್ಞನಾದ ದಧೀಚಿಯು ಮುಂದೆ ನಡೆಯುವ ಘಟನೆಗಳನ್ನು ನಿಶ್ಚಯಿಸಿಕೊಂಡಿದ್ದನು.
ಏಕಮಂತ್ರಾಸ್ತು ತೇ ಸರ್ವೇ ಯೇನೇಶೋ ನ ನಿಮಂತ್ರಿತಃ |
ತಸ್ಮಾದ್ ದೇಶಾದಪಕ್ರಮ್ಯ ದಧೀಚಿರ್ವಾಕ್ಯಮಬ್ರವೀತ್ ॥16॥
ಈಶ್ವರನನ್ನು ಯಜ್ಞಕ್ಕೆ ಆಹ್ವಾನ ಮಾಡದೆ ಇರುವುದರಲ್ಲಿ ದೇವತೆಗಳ ಅಭಿಪ್ರಾಯವೆಲ್ಲವೂ ಒಂದೇ ಆಗಿತ್ತು. ಆದ್ದರಿಂದಲೇ ದಕ್ಷಪ್ರಜಾಪತಿಯು ಈಶ್ವರನನ್ನು ಆಹ್ವಾನಿಸಿರಲಿಲ್ಲ. ಇದನ್ನು ಅರಿತ ದಧೀಚಿ ಮಹರ್ಷಿಯು ಆ ಯಜ್ಞಶಾಲೆಯಿಂದ ದೂರಕ್ಕೆ ಹೋಗಿ ಈ ಮಾತನ್ನು ಹೇಳಿದನು.
ಅಪೂಜ್ಯಪೂಜನಾಚ್ಚೈವ ಪೂಜ್ಯಾನಾಂ ಚಾಪ್ಯಪೂಜನಾತ್ |
ನೃಘಾತಕಸಮಂ ಪಾಪಂ ಶಶ್ವತ್ ಪ್ರಾಪ್ನೋತಿ ಮಾನವಃ ॥17॥
ಪೂಜೆಗೆ ಅರ್ಹರಲ್ಲದವರನ್ನು ಪೂಜಿಸುವುದು, ಪೂಜೆಗೆ ಯೋಗ್ಯರಾದವರನ್ನು ಪೂಜಿಸದಿರುವುದು- ಇದರಿಂದ ಮನುಷ್ಯನು ನರಹತ್ಯೆಯನ್ನು ಮಾಡಿದಾಗ ಹೊಂದಬಹುದಾದ ಪಾಪವನ್ನು ನಿಶ್ಚಿತವಾಗಿ ಹೊಂದುತ್ತಾನೆ.
ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ |
ದೇವತಾನಾಮೃಷೀಣಾಂ ಚ ಮಧ್ಯೇ ಸತ್ಯಂ ಬ್ರವೀಮ್ಯಹಮ್ ॥18॥
ಹಿಂದೆ ಎಂದೂ ನಾನು ಸುಳ್ಳು ಹೇಳಿದವನಲ್ಲ. ಮುಂದೆ ಸುಳ್ಳನ್ನು ಹೇಳುವುದೂ ಇಲ್ಲ. ದೇವರ್ಷಿಗಳ ಮಧ್ಯದಲ್ಲಿ ಸತ್ಯವಾದ ಮಾತನ್ನೇ ಹೇಳುತ್ತಿದ್ದೇನೆ.
ಆಗತಂ ಪಶುಭರ್ತಾರಂ ಸ್ರಷ್ಟಾರಂ ಜಗತಃ ಪತಿಮ್ |
ಅಧ್ವರೇ ಹ್ಯಗ್ರಭೋಕ್ತಾರಂ ಸರ್ವೇಷಾಂ ಪಶ್ಯತ ಪ್ರಭುಮ್ ॥19॥
ಜಗತ್ತಿನ ಸೃಷ್ಟಿಕರ್ತನಾದ, ಎಲ್ಲ ಜೀವರಿಗೂ ರಕ್ಷಕನಾದ, ಸ್ವಾಮಿಯಾದ, ಸರ್ವರಿಗೂ ಪ್ರಭುವಾದ ಈಶ್ವರನು ಇಲ್ಲಿಗೆ ಬರುವಂತೆ ಆಹ್ವಾನಿಸಿರಿ. ಈ ಎಲ್ಲ ದೇವತೆಗಳಿಗಿಂತ ಮೊದಲು ಅವನು ಹವಿಸ್ಸನ್ನು ಸ್ವೀಕರಿಸುವುದು ನಿಮಗೆ ಕ್ಷೇಮವಾಗಿದೆ.
ವ್ಯಾಖ್ಯಾನ ವಿಶೇಷ ದಧೀಚಿಗಳು ಅಗ್ರಪೂಜೆಗೆ ಅರ್ಹ ಎಂದು, ಜಗತ್ತಿಗೆ ಸೃಷ್ಟಿಕರ್ತ ಎಂದು ಹೇಳಿದ್ದಾರೆ. `ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಎಂಬ ವಿಷ್ಣು ಸರ್ವೋತ್ತಮತ್ವಕ್ಕೆ ಈ ವಚನವು ವಿರುದ್ಧವೆನಿಸಿದರೂ ಅಂತರ್ಯಾಮಿಯನ್ನು

ವಿವಕ್ಷಿಸಿದಾಗ ಸರಿಯೇ ಆಗುತ್ತದೆ. `ಬ್ರಹ್ಮಣಿ ಬ್ರಹ್ಮರೂಪೋಸೌ ಶಿವೇ ಶಿವೇ ಸ್ಥಿತಃ' ಎಂಬ ಪ್ರಮಾಣದಂತೆ ರುದ್ರನಲ್ಲಿ ವಿಷ್ಣುವು ಶಿವ ಎಂಬ ನಾಮದಿಂದ ಇದ್ದಾನೆ. ಅಂತರ್ಯಾಮಿಯ ಆರಾಧನೆಯೇ ದಧೀಚಿಗೆ ಮುಖ್ಯವೆನಿಸಿದೆ. ನಾರಾಯಣವರ್ಮದ ಸಿದ್ಧಿಯನ್ನು ಪಡೆದು, ದೇವತೆಗಳಿಗೆಲ್ಲ ಹಿತವನ್ನು ಬಯಸಿದ ದಧೀಚಿಮಹರ್ಷಿಯ ಅಂತರ್ಯಾಮಿಯ ಸ್ಮರಣೆಯನ್ನು ಅಲ್ಲಗಳೆಯುವಂತಿಲ್ಲ.

ದಕ್ಷಃ

ಸಂತಿ ನೋ ಬಹವೋ ರುದ್ರಾಃ ಶೂಲಹಸ್ತಾಃ ಕಪರ್ದಿನಃ | ಏಕಾದಶಸ್ಥಾನಗತಾ ನಾಹಂ ವೇದ್ಮಿ ಮಹೇಶ್ವರಮ್ ॥20॥

ದಕ್ಷ ನಮ್ಮ ಬಳಿ ಶೂಲವನ್ನು ಧರಿಸಿರುವ, ಜಟೆಯನ್ನು ಧರಿಸಿರುವ ಅನೇಕ ರುದ್ರರು ಇದ್ದಾರೆ. ಹನ್ನೊಂದು ಸಂಖ್ಯೆಯಲ್ಲಿ ಇದ್ದಾರೆ. ಇವರನ್ನು ಬಿಟ್ಟು ಮಹೇಶ್ವರನಾದ ರುದ್ರನು ಯಾರು ಎಂದು ನನಗೆ ತಿಳಿಯದು.

ದಧೀಚಿಃ

ಸರ್ವೇಷಾಮೇವ ಮಂತ್ರೋಽಯಂ ಯೇನಾಸೌ ನ ನಿಮಂತ್ರಿತಃ |
ಯಥಾಽಹಂ ಶಂಕರಾದೂರ್ಧ್ವಂ ನಾನ್ಯಂ ಪಶ್ಯಾಮಿ ದೈವತಮ್ |
ತಥಾ ದಕ್ಷಸ್ಯ ವಿಪುಲೋ ಯಜ್ಞೋಽಯಂ ನ ಭವಿಷ್ಯತಿ ॥21॥

ದಧೀಚಿ ಮಹೇಶ್ವರನನ್ನು ಆಮಂತ್ರಣ ಮಾಡದಿರುವದು ಇಲ್ಲಿ ನೆರೆದಿರುವ ಎಲ್ಲ ವ್ಯಕ್ತಿಗಳ ಏಕಾಭಿಪ್ರಾಯವಾಗಿದೆ. ಆದ್ದರಿಂದಲೇ ಅವನನ್ನು ಆಹ್ವಾನಿಸಿಲ್ಲ. ಶಂಕರನಿಗಿಂತ ಬೇರೆ ಉತ್ತಮನಾದ ದೇವತೆಯನ್ನು ನಾನು ಕಂಡಿರುವುದಿಲ್ಲ. ಆದ್ದರಿಂದ ದಕ್ಷನ ವೈಭವ ಪೂರ್ಣವಾದ ಈ ಯಜ್ಞವು ಪೂರ್ಣತೆಯನ್ನು ಹೊಂದುವುದಿಲ್ಲ.

ದಕ್ಷಃ

ಏತನ್ಮಖೇಶಾಯ ಸುವರ್ಣಪಾತ್ರೇ
ಹವಿಃ ಸಮಸ್ತಂ ವಿಧಿಮಂತ್ರಪೂತಮ್ |
ವಿಷ್ಣೋರ್ನಯಾಮ್ಯಪ್ರತಿಮಸ್ಯ ಭಾಗಂ
ಪ್ರಭುರ್ವಿಭುಶ್ಚಾಹವನೀಯ ಏಷಃ ॥22॥

ದಕ್ಷ ಮಹರ್ಷಿಯೇ, ವಿಧಿಬದ್ಧವಾಗಿ ಮಂತ್ರದಿಂದ ಶುದ್ಧಗೊಳಿಸಿರುವ ಎಲ್ಲ ವಿಧವಾದ ಹವಿಷ್ಯವನ್ನು ಬಂಗಾರದ ಭಾಜನದಲ್ಲಿ ಯಜ್ಞೇಶನಾದ ವಿಷ್ಣುವಿಗಾಗಿ ಮೀಸಲಾಗಿ ಇಟ್ಟಿದ್ದೇನೆ. ಅಪ್ರತಿಮನಾದ ವಿಷ್ಣುವಿಗೆ ಈ ಹವಿಸ್ಸಿನ ಭಾಗವನ್ನು ಸಮರ್ಪಿಸುತ್ತೇನೆ. ಮಹಾವಿಷ್ಣುವೇ ಪ್ರಭುವು ಆಗಿದ್ದಾನೆ, ವಿಭುವು ಆಗಿದ್ದಾನೆ. ಆಹವನೀಯಾಗ್ನಿಯೂ ಆಗಿದ್ದಾನೆ.

ದೇವೀ

ಕಿಂ ನಾಮ ದಾನಂ ನಿಯಮಂ ತಪೋ ವಾ
ಕುರ್ಯಾಮಹಂ ಯೇನ ಪತಿರ್ಮಮಾದ್ಯ |
ಲಭೇತ ಭಾಗಂ ಚ ತಥೈವ ಸರ್ವಂ
ಪ್ರಭುರ್ವಿಭುಶ್ಚಾಹವನೀಯ ಏಷಃ |
ಲಭೇತ ಭಾಗಂ ಭಗವಾನಚಿಂತ್ಯೋ
ಹ್ಯರ್ಧಂ ತಥಾ ಭಾಗಮಥೋ ತೃತೀಯಮ್ ॥23॥

ಪಾರ್ವತೀದೇವಿ ನನ್ನ ಪತಿಯಾದ ಮಹಾದೇವನು ಯಜ್ಞದ ಹವಿಸ್ಸಿನಲ್ಲಿ ಅರ್ಧ ಭಾಗವನ್ನಾಗಲಿ ಅಥವಾ ಮೂರನೆಯ ಒಂದಂಶವನ್ನಾಗಲಿ ಪಡೆಯುವಂತಾಗಲು ನಾನು ಯಾವ ದಾನವನ್ನು ಮಾಡಲಿ? ಯಾವ ನಿಯಮವನ್ನು ಪರಿಪಾಲಿಸಲಿ? ಯಾವ ತಪಸ್ಸನ್ನು ಮಾಡಲಿ? ಪ್ರಭುವೂ, ವಿಭುವೂ, ಆಹವನೀಯಾಗ್ನಿಯೂ ಆಗಿರುವ ರುದ್ರನಿಗೆ ಈ ಆಹುತಿಗಳು ದೊರೆಯುವುದು ಹೇಗೆ?

ಏವಂ ಬ್ರುವಾಣಾಂ ಭಗವಾನ್ ಸ್ವಪತ್ನೀಂ
ಪ್ರಹೃಷ್ಟರೂಪಃ ಕ್ಷುಭಿತಾಮುವಾಚ |
ನ ವೇತ್ಸಿ ಮಾಂ ದೇವಿ ಕೃಶೋದರಾಂಗಿ
ಕಿಂ ನಾಮ ಯುಕ್ತಂ ವಚನಂ ಮಖೇಶೇ ॥24॥

ದುಃಖದಿಂದ ಕ್ಷೋಭೆಗೊಂಡು ಈ ರೀತಿಯಾಗಿ ಹೇಳುತ್ತಿರುವ ಪಾರ್ವತಿಯನ್ನು ಕುರಿತು ಪೂಜ್ಯನಾದ ಮಹೇಶ್ವರನು ಸಂತೋಷದಿಂದ ಹೀಗೆ ಹೇಳಿದನು: ಕೃಶವಾದ ಉದರವೆಂಬ ಅವಯವವುಳ್ಳವಳೇ, ನಾನು ಯಾರು ಎಂಬುದನ್ನು ನೀನು ಅರಿತಿಲ್ಲ. ಯಜ್ಞೇಶನಾದ ನನ್ನ ವಿಷಯದಲ್ಲಿ ಈ ರೀತಿ ನೀನು ಹೇಳುವುದು ಉಚಿತವಲ್ಲ.

ಅಹಂ ವಿಜಾನಾಮಿ ವಿಶಾಲನೇತ್ರೇ
ಧ್ಯಾನೇನ ಹೀನಾ ನ ವಿದಂತ್ಯಸಂತಃ |
ತವಾದ್ಯ ಮೋಹೇನ ಚ ಸೇಂದ್ರದೇವಾ
ಲೋಕಾಸ್ತ್ರಯಃ ಸರ್ವತ ಏವ ಮೂಢಾಃ ॥25॥

ವಿಶಾಲನೇತ್ರಳೇ, ಈ ದೇವತೆಗಳ ಅಭಿಪ್ರಾಯವೆಲ್ಲವನ್ನೂ ನಾನು ತಿಳಿದಿದ್ದೇನೆ. ಧ್ಯಾನಹೀನರಾದ ಮೂರ್ಖನು ನನ್ನನ್ನು ತಿಳಿದವರಾಗಿಲ್ಲ. ನಿನ್ನ ಈ ರೀತಿಯ ಪತಿ ಮೋಹದಿಂದ ಇಂದ್ರಾದಿ ದೇವತೆಗಳು, ಪ್ರಜೆಗಳು ಎಲ್ಲರೂ ಏನು ಮಾಡಬೇಕೆಂದು ತಿಳಿಯದೆ ಮೂಢರಾಗಿರುತ್ತಾರೆ.

ಮಾಮಧ್ವರೇ ಶಂಸಿತಾರಃ ಸ್ತುವಂತಿ
ರಥಂತರಂ ಸಾಮಗಾಶ್ಚೋಪಗಾಂತಿ |
ಮಾಂ ಬ್ರಾಹ್ಮಣಾ ಬ್ರಹ್ಮವಿದೋ ಯಜಂತೇ
ಮಮಾಧ್ವರ್ಯವಃ ಕಲ್ಪಯಂತೇ ಚ ಭಾಗಮ್ ॥26॥

ಯಜ್ಞದಲ್ಲಿ ಹೋತೃಗಳು ನನ್ನನ್ನು ಋಗ್ಮಂತ್ರದಿಂದ ಸ್ತೋತ್ರ ಮಾಡುತ್ತಾರೆ. ಸಾಮವೇದಿಗಳು ರಥಂತರ ಸಾಮದ ಮೂಲಕ ನನ್ನ ಮಹಿಮೆಯನ್ನು ಗಾನ ಮಾಡುತ್ತಾರೆ. ವೇದಜ್ಞರಾದ ಬ್ರಾಹ್ಮಣರು ನನ್ನನ್ನೇ ಉದ್ದೇಶಿಸಿ ಯಜ್ಞ ಮಾಡುತ್ತಾರೆ. ಅಧ್ವರ್ಯುಗಳು ನನಗಾಗಿ ಆಹುತಿಯನ್ನು ನೀಡುತ್ತಾರೆ.
ದೇವೀ
ಸುಪ್ರಾಕೃತೋಽಪಿ ಪುರುಷಃ ಸರ್ವಃ ಸ್ತ್ರೀಜನಸಂಸದಿ |
ಸ್ತೌತಿ ಗರ್ವಾಯತೇ ಚಾಪಿ ಸ್ವಮಾತ್ಮಾನಂ ನ ಸಂಶಯಃ ॥27॥
ದೇವೀ ಪತಿದೇವನೇ, ಸಾಮಾನ್ಯ ವ್ಯಕ್ತಿಯಾದರೂ ಹೆಂಗಸರಿರುವ ಸಭೆಯಲ್ಲಿ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆ. ತನಗಿರುವ ಗರ್ವವನ್ನು ತೋರಿಸುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಶ್ರೀಭಗವಾನ್
ನಾತ್ಮಾನಂ ಸ್ತೌಮಿ ದೇವೇಶಿ ಪಶ್ಯ ಮೇ ತನುಮಧ್ಯಮೇ |
ಯಂ ಸ್ರಕ್ಷ್ಯಾಮಿ ವರಾರೋಹೇ ಯಾಗಾರ್ಥೇ ವರವರ್ಣಿನಿ ॥28॥
ಶ್ರೀಭಗವಾನ್ ಪರಮೇಶ್ವರಿಯೇ, ನಾನು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಿಲ್ಲ. ಕೃಶನಡುವುಳ್ಳವಳೇ, ವರವರ್ಣಿನಿಯೇ, ನಿನ್ನ ದುಃಖಕ್ಕೆ ಕಾರಣವಾಗುವ, ದಕ್ಷ ಯಜ್ಞ ವಿನಾಶಕನಾದ ಅತುಲ ಪರಾಕ್ರಮಿಯನ್ನು ಸೃಷ್ಟಿಸುತ್ತೇನೆ, ನೋಡು.
ಇತ್ಯುಕ್ತ್ವಾ ಭಗವಾನ್ ಪತ್ನೀಮುಮಾಂ ಪ್ರಾಣೈರಪಿ ಪ್ರಿಯಾಮ್ |
ಸೋಽಸೃಜದ್ ಭಗವಾನ್ ವಕ್ತ್ರಾದ್ ಭೂತಂ ಘೋರಂ ಪ್ರಹರ್ಷಣಮ್ ॥
ಮಹರುದ್ರನು ಈ ರೀತಿಯಾಗಿ ಪಾರ್ವತಿಯನ್ನು ಕುರಿತು ಹೇಳಿ ಬಳಿಕ ತನ್ನ ಮುಖದಿಂದ ಅಟ್ಟಹಾಸವನ್ನು ಮಾಡುತ್ತಿರುವ, ಘೋರ ರೂಪಿಯಾದ ಪುರುಷನನ್ನು ಸೃಷ್ಟಿಸಿದನು.
ತಮುವಾಚಾಕ್ಷಿಪ ಮಖಂ ದಕ್ಷಸ್ಯೇತಿ ಮಹೇಶ್ವರಃ |
ತತೋ ವಕ್ತ್ರಾದ್ ವಿಮುಕ್ತೇನ ಸಿಂಹೇನೈಕೇನ ಲೀಲಯಾ ॥30॥
ದೇವ್ಯಾ ಮನ್ಯುವ್ಯಪೋಹಾರ್ಥಂ ಹತೋ ದಕ್ಷಸ್ಯ ವೈ ಕ್ರತುಃ |
ಮನ್ಯುನಾ ಚ ಮಹಾಭೀಮಾ ಮಹಾಕಾಳೀ ಮಹೇಶ್ವರೀ ॥31॥
ಹುಟ್ಟಿದ ಕೂಡಲೇ ವಿನೀತನಾಗಿ ನಿಂತಿರುವ ವೀರಭದ್ರನಿಗೆ ಮಹರುದ್ರನು ದಕ್ಷ ಯಜ್ಞವನ್ನು ಧ್ವಂಸಗೊಳಿಸುವಂತೆ ಆದೇಶಿಸಿದನು. ಆಗ ಸಿಂಹದಂತೆ ಕ್ರೂರವಾದ ಆ ಭೂತವು ಪಾರ್ವತಿಯ ಕೋಪವನ್ನು ಶಾಂತಗೊಳಿಸಲು ದಕ್ಷನ ಯಾಗವನ್ನೆಲ್ಲ ಧ್ವಂಸ ಮಾಡತೊಡಗಿತು. ಅದೇ ಸಮಯದಲ್ಲಿ ಪಾರ್ವತಿಯ ಕೋಪದಿಂದ ಮಹಾ ಭಯಂಕರ ಸ್ವರೂಪವುಳ್ಳ ಮಹಾಕಾಳಿ ಅಥವಾ ಭದ್ರಕಾಳಿ ಎಂಬ ಶಕ್ತಿಯೊಂದು ಉತ್ಪನ್ನವಾಯಿತು.
ಆತ್ಮನಃ ಕರ್ಮಸಾಕ್ಷಿತ್ವೇ ತೇನ ಸಾರ್ಧಂ ಸಹಾನುಗಾ |
ದೇವಸ್ಯಾನುಮತಂ ಮತ್ವಾ ಪ್ರಣಮ್ಯ ಶಿರಸಾ ತತಃ ॥32॥
ಆತ್ಮನಃ ಸದೃಶಃ ಶೌರ್ಯಾದ್ ಬಲರೂಪಸಮನ್ವಿತಃ |
ಸ ಏವ ಭಗವಾನ್ ಕ್ರೋಧಃ ಪ್ರತಿರೂಪಸಮನ್ವಿತಃ ॥33॥
ಅನಂತಬಲವೀರ್ಯಶ್ಚ ಅನಂತಬಲಪೌರುಷಃ |
ವೀರಭದ್ರ ಇತಿ ಖ್ಯಾತೋ ದೇವ್ಯಾ ಮನ್ಯುಪ್ರಮಾರ್ಜಕಃ ॥34॥
ಸೋಽಸೃಜದ್ ರೋಮಕೂಪೇಭ್ಯೋ ರೌಮ್ಯಾನ್ನಾಮ ಗಣೇಶ್ವರಾನ್ |
ರುದ್ರತುಲ್ಯಾ ಗಣಾ ರೌದ್ರಾ ರುದ್ರವೀರ್ಯಪರಾಕ್ರಮಾಃ ॥35॥
ತನ್ನಂತೆ ರೂಪವುಳ್ಳ ವೀರಭದ್ರನ ಅರ್ಥಾತ್ ಈಶ್ವರನ ಕರ್ಮಕ್ಕೆ ಸಾಕ್ಷಿಯಾಗಿ ಭದ್ರಕಾಳಿ ರೂಪಳಾದ ತಾನೂ ಅವಳನ್ನು ಹಿಂಬಾಲಿಸಿದಳು. ಶೌರ್ಯದಲ್ಲಿ ರುದ್ರನಿಗೆ ಸಮಾನನೂ, ಅವನಂತೆಯೇ ಬಲ-ರೂಪವುಳ್ಳವನೂ, ಅವನ ಪ್ರತಿಬಿಂಬರೂಪನೂ, ಎಣೆಯಿಲ್ಲದ ಬಲ-ಪೌರುಷ ಉಳ್ಳವನೂ, ವೀರಭದ್ರನೆಂದು ಖ್ಯಾತನಾದವನೂ, ರುದ್ರನ ಕೋಪರೂಪನೂ ಆದ ವೀರಭದ್ರನು ಪಾರ್ವತಿದೇವಿಯ ದುಃಖವನ್ನು ಪರಿಹರಿಸಲು ರುದ್ರನ ಅಭಿಪ್ರಾಯವನ್ನು ತಿಳಿದು, ರುದ್ರನಿಗೆ ತಲೆಬಾಗಿ ನಮಸ್ಕರಿಸಿ ತನ್ನ ರೋಮಕೂಪಗಳಿಂದ ಅನೇಕ ಗಣಗಳನ್ನು ಸೃಷ್ಟಿಸಿದನು. ಆ ಗಣಗಳೆಲ್ಲವೂ ಆಕಾರದಲ್ಲಿ, ಬಲ-ಪರಾಕ್ರಮದಲ್ಲಿ ರುದ್ರನಿಗೆ ಸಮಾನವಾಗಿದ್ದವು.
ವ್ಯಾಖ್ಯಾನ ವಿಶೇಷ ಶ್ರೀಮದಾಚಾರ್ಯರು ವೀರಭದ್ರನನ್ನು ರುದ್ರದೇವರ ಅವತಾರವೆಂದೇ ಚತುರ್ಥಸ್ಕಂದದ ತಾತ್ಪರ್ಯನಿರ್ಣಯದಲ್ಲಿ ಹೇಳಿರುತ್ತಾರೆ. ಇದರಂತೆ ಭದ್ರಕಾಳಿಯನ್ನು ಪಾರ್ವತಿಯ ಅವತಾರವೆಂದೇ ಚಿಂತಿಸಬೇಕು. ದುಷ್ಟ ಸಂಹಾರಕ ರೂಪಗಳೆಂದು ಚಿಂತಿಸಬೇಕು.
ತೇ ನಿಪೇತುಸ್ತತಸ್ತೂರ್ಣಂ ದಕ್ಷಯಜ್ಞವಿಹಿಂಸಯಾ |
ಭೀಮರೂಪಾ ಮಹಾಕಾಯಾಃ ಶತಶೋಽಥ ಸಹಸ್ರಶಃ ॥36॥
ಆ ಗಣಗಳೆಲ್ಲವೂ ಮಹಾವೇಗದಿಂದ ನೂರಾರು, ಸಾವಿರಾರು ಸಂಖ್ಯೆಯಲ್ಲಿ ದಕ್ಷನ ಯಜ್ಞವನ್ನು ನಾಶಮಾಡಲು ಮೇಲೆ ಬಿದ್ದು ಹೊಡೆಯಲಾರಂಭಿಸಿದವು. ಮಹಾದೇಹದಿಂದಲೂ ಭಯಂಕರ ರೂಪದಿಂದಲೂ ಕೂಡಿದ್ದವು.
ತತಃ ಕಿಲಕಿಲಾಶಬ್ದೈರಾಕಾಶಂ ಪೂರಯಂತಿ ಚ |
ತೇನ ಶಬ್ದೇನ ಮಹತಾ ತ್ರಸ್ತಾಸ್ತತ್ರ ದಿವೌಕಸಃ ॥37॥
ಆ ಯಜ್ಞಶಾಲೆಯಲ್ಲಿ ಆಕಾಶವೆಲ್ಲ ತುಂಬುವಂತೆ ಭಯಾನಕವಾದ ಕಿಲಕಿಲ ಧ್ವನಿಯಿಂದ ಗರ್ಜಿಸುತ್ತಿದ್ದವು. ಆ ಶಬ್ದವನ್ನು ಕೇಳಿ ದೇವತೆಗಳೆಲ್ಲರೂ ಹೆದರಿದರು.

ಪರ್ವತಾಶ್ಚ ವ್ಯಶೀರ್ಯಂತ ಚಕಂಪೇ ಚ ವಸುಂಧರಾ |
ಮಾರುತಾಶ್ಚೈವ ಘೂರ್ಣಂತೇ ಚುಕ್ಷುಭೇ ವರುಣಾಲಯಃ ॥38॥
ಪರ್ವತಗಳು ಭೇದಿಸಿದವು, ಭೂಮಿಯು ನಡುಗಿತು, ಗಾಳಿಯಲ್ಲಿ ಸುಳಿ ಎದ್ದಿತು, ಸಮುದ್ರವು ಕಲಕಿ ಹೋಯಿತು.
ಅಗ್ನಯೋ ನೈವ ದೀಪ್ಯಂತೇ ನೈವ ದೀಪ್ಯತಿ ಭಾಸ್ಕರಃ |
ಗ್ರಹಾ ಚೈವ ಪ್ರಕಾಶಂತೇ ನಕ್ಷತ್ರಾಣಿ ನ ಚಂದ್ರಮಾಃ ॥39॥
ಇದರಿಂದ ಅಗ್ನಿಗಳು ಶಾಂತವಾದವು, ಸೂರ್ಯನು ಪ್ರಕಾಶಹೀನನಾದನು, ಗ್ರಹ- ನಕ್ಷತ್ರ-ಚಂದ್ರ ಎಲ್ಲರೂ ಕಾಂತಿಹೀನರಾದರು.
ಋಷಯೋ ನ ಪ್ರಕಾಶಂತೇ ನ ದೇವಾ ನ ಚ ಮಾನುಷಾಃ |
ಏವಂ ತು ತಿಮಿರೀಭೂತೇ ನಿರ್ದಹಂತ್ಯಪಮಾನಿತಾಃ ॥40॥
ಋಷಿಗಳು, ದೇವತೆಗಳು, ಮನುಷ್ಯರು ಯಾರೂ ಕಣ್ಣಿಗೆ ಕಾಣದಂತೆ ಎಲ್ಲೆಡೆಯೂ ಕತ್ತಲು ಆವರಿಸಿತು. ಇಂತಹ ಭಯಾನಕ ಕತ್ತಲೆಯಲ್ಲಿಯೇ ರುದ್ರಗಣಗಳು ಮಹಾಗರ್ವದಿಂದ ಎಲ್ಲವನ್ನೂ ಸುಡುತ್ತಾ ಬಂದವು.
ಪ್ರಹರಂತ್ಯಪರೇ ಘೋರಾ ಯೂಪಾನುತ್ಪಾಟಯಂತಿ ಚ |
ಪ್ರಮರ್ದಂತಿ ತಥಾ ಚಾನ್ಯೇ ವಿಮರ್ದಂತಿ ತಥಾಽಪರೇ ॥41॥
ಗಣದಲ್ಲಿ ಕೆಲವರು ಕಂಡವರನ್ನು ಹಿಡಿದು ಹೊಡೆಯುತ್ತಿದ್ದರು. ಕೆಲವರು ಯೂಪ ಸ್ತಂಭಗಳನ್ನು ಕಿತ್ತೊಗೆದರು. ಸಿಕ್ಕಿದವರನ್ನು ಬಡಿದು ತಿಕ್ಕಿದರು, ಗುದ್ದಿದರು.
ಆಧಾವಂತಿ ಪ್ರಧಾವಂತಿ ವಾಯುವೇಗಾ ಮನೋಜವಾಃ |
ಚೂರ್ಣ್ಯಂತೇ ಯಜ್ಞಪಾತ್ರಾಣಿ ದಿವ್ಯಾನ್ಯಾಭರಣಾನಿ ಚ ॥42॥
ಅನೇಕರು ಮನೋವೇಗ, ವಾಯುವೇಗದಿಂದ ಅತ್ತಿತ್ತ ಓಡಾಡುತ್ತಾ ಯಜ್ಞ ಪಾತ್ರೆಗಳನ್ನು ಕುಟ್ಟಿ ಪುಡಿ ಮಾಡಿದರು. ದಿವ್ಯಾಭರಣಗಳನ್ನೆಲ್ಲ ಕಿತ್ತೊಗೆದರು.
ವಿಶೀರ್ಯಮಾಣಾ ದೃಶ್ಯಂತೇ ತಾರಾ ಇವ ನಭಸ್ತಳೇ | ದಿವ್ಯಾನ್ನಪಾನಭಕ್ಷ್ಯಾಣಾಂ ರಾಶಯಃ ಪರ್ವತೋಪಮಾಃ ॥43॥
ಅವರು ಕಿತ್ತೆಸೆದ ಆಭರಣಗಳು ಆಕಾಶದಲ್ಲಿನ ನಕ್ಷತ್ರಗಳಂತೆ ಕಾಣುತ್ತಿದ್ದವು. ದೇವಯೋಗ್ಯವಾದ ಅನ್ನ, ಪಾಯಸ, ಭಕ್ಷ್ಯಗಳೆಲ್ಲ ಪರ್ವತಗಳಂತೆ ರಾಶಿ-ರಾಶಿಯಾಗಿ ಚೆಲ್ಲಿ ಹೋಗಿದ್ದವು.
ಕ್ಷೀರನದ್ಯೋಽಥ ದೃಶ್ಯಂತೇ ಘೃತಪಾಯಸಕರ್ದಮಾಃ |
ದಧಿಮಂಡೋದಕಾ ದಿವ್ಯಾಃ ಖಂಡಶರ್ಕರವಾಲುಕಾಃ ॥44॥
ತುಪ್ಪದ ಪಾಯಸದ ಕೆಸರುಗಳಿಂದಲೂ, ಹಾಲಿನ ನದಿಗಳಿಂದಲೂ, ಮೊಸರು ಬೆಣ್ಣೆಗಳೆಂಬ ಸಮುದಾಯದಿಂದಲೂ, ಕಲ್ಲು ಸಕ್ಕರೆ ಎಂಬ ಮರಳಿನಿಂದಲೂ ಆ ಯಜ್ಞವಾಟವು ತುಂಬಿಹೋಗಿತ್ತು.
ಷಡ್ರಸಾ ನಿವಹಂತ್ಯೇತಾ ಗುಡಕುಲ್ಯಾ ಮನೋರಮಾಃ |
ಉಚ್ಚಾವಚಾನಿ ಮಾಂಸಾನಿ ಭಕ್ಷ್ಯಾಣಿ ವಿವಿಧಾನಿ ಚ ॥45॥
ಆರು ರಸಗಳ ಪ್ರವಾಹಗಳು, ಬೆಲ್ಲದ ನೀರಿನ ಕಾಲುವೆಗಳು ಮನೋಹರವಾಗಿ ಕಾಣುತ್ತಿದ್ದವು. ಅಲ್ಲಲ್ಲಿ ತಾರತಮ್ಯದಿಂದ ಕೂಡಿದ ಮಾಂಸಗಳು, ಬಗೆ ಬಗೆಯ ಭಕ್ಷ್ಯಗಳು ಕಾಣುತ್ತಿದ್ದವು.
ಪಾನಕಾನಿ ಚ ದಿವ್ಯಾನಿ ಲೇಹ್ಯಚೋಷ್ಯಾಣಿ ಯಾನಿ ಚ |
ಭುಂಜತೇ ವಿವಿಧೈರ್ವಕ್ತ್ರೈರ್ವಿಲುಂಪಂತ್ಯಾಕ್ಷಿಪಂತಿ ಚ ॥46॥
ಶ್ರೇಷ್ಠವಾದ ಪಾನಕಗಳು, ಲೇಹ್ಯ, ಚೋಷ್ಯ ಮುಂತಾದ ಪದಾರ್ಥಗಳು ಇವುಗಳನ್ನೆಲ್ಲ ಬೇರೆ ಬೇರೆ ಮುಖಗಳಿಂದ ಕೂಡಿದ ಭೂತಗಣಗಳು ನೆಕ್ಕುತ್ತಿದ್ದವು. ಸವಿದು ಕುಡಿಯುತ್ತಾ ಬಿಸಾಡುತ್ತಿದ್ದವು.
ರುದ್ರಕೋಪಾನ್ಮಹಾಕಾಯಾಃ ಕಾಲಾಗ್ನಿಸದೃಶೋಪಮಾಃ |
ಕ್ಷೋಭಯನ್ ಸುರಸೈನ್ಯಾನಿ ಭೀಷಯಂತಃ ಸಮಂತತಃ ॥47॥
ರುದ್ರನ ಕೋಪದಿಂದ ಹುಟ್ಟಿರುವಂತಹ ಮಹತ್ತಾದ ಶರೀರವುಳ್ಳ, ಪ್ರಳಯ ಕಾಲಾಗ್ನಿಗೆ ಸಮಾನರಾದ ಗಣಾಧಿಪತಿಗಳು ಅಲ್ಲಲ್ಲಿ ಯಜ್ಞಕ್ಕಾಗಿ ಸೇರಿದ ದೇವ ಸೈನ್ಯಗಳನ್ನೆಲ್ಲ ಹೆದರಿಸಿ ಓಡಿಸಿದರು.
ಕ್ರೀಡಂತಿ ವಿವಿಧಾಕಾರಾಶ್ಚಿಕ್ಷಿಪುಃ ಸುರಯೋಷಿತಃ |
ರುದ್ರಕ್ರೋಧಾತ್ ಪ್ರಯತ್ನೇನ ಸರ್ವದೇವೈಃ ಸುರಕ್ಷಿತಮ್ ॥48॥
ಭಯ ಹುಟ್ಟುವ ರೀತಿಯಲ್ಲಿ ಆಟದಂತೆ ದುಷ್ಕರ್ಮಗಳನ್ನು ಎಸಗುತ್ತಿರುವ ಭೂತಗಣಗಳು ದೇವಸ್ತ್ರೀಯರನ್ನು ಹಿಡಿದು ಎಸೆದಾಡುತ್ತಿದ್ದರು. ದೇವತೆಗಳಿಂದ ರಕ್ಷಿಸಲ್ಪಟ್ಟ ಆ ಯಜ್ಞವು ವೀರಭದ್ರನಿಂದ ಪ್ರಯತ್ನ ಪೂರ್ವಕವಾಗಿ ನಾಶ ಮಾಡಲ್ಪಟ್ಟಿತು.
ತಂ ಯಜ್ಞಮದಹಚ್ಚೀಘ್ರಂ ರುದ್ರಕರ್ಮಾ ಸಮಂತತಃ |
ಚಕಾರ ಭೈರವಂ ನಾದಂ ಸರ್ವಭೂತಭಯಂಕರಮ್ ॥49॥
ಭಯಂಕರ ವ್ಯಾಪಾರವುಳ್ಳ ವೀರಭದ್ರನು ಆ ಯಜ್ಞವನ್ನು ಎಲ್ಲ ರೀತಿಯಿಂದಲೂ ನಾಶಗೊಳಿಸಿದನು. ಸರ್ವಭೂತಗಳಿಗೆ ಭಯವನ್ನು ಹುಟ್ಟಿಸುವ ಭೈರವ ನಾದವನ್ನೂ ಮಾಡಿದನು.
ಛಿತ್ತ್ವಾ ಶಿರೋ ವೈ ಯಜ್ಞಸ್ಯ ನನಾದ ಚ ಮುಮೋದ ಚ |
ತತೋ ಬ್ರಹ್ಮಾದಯೋ ದೇವಾ ದಕ್ಷಶ್ಚೈವ ಪ್ರಜಾಪತಿಃ ॥50॥
ವೀರಭದ್ರನು ಯಜ್ಞದ ಶಿರಸ್ಸನ್ನು ಕಡಿದು ನಾದ ಮಾಡಿದನು. ಸಂತೋಷಗೊಂಡನು. ಬಳಿಕ ಬ್ರಹ್ಮಾದಿ ದೇವತೆಗಳು, ದಕ್ಷಪ್ರಜಾಪತಿಯು ಪ್ರಾಂಜಲಿ ಬದ್ಧರಾಗಿ ನೀನ್ಯಾರೆಂದು ಹೇಳು ಎಂದು ಕೇಳಿದರು.
ವೀರಭದ್ರಃ

ಊಚುಃ ಪ್ರಾಂಜಲಯಃ ಸರ್ವೇ ಕಥ್ಯತಾಂ ಕೋ ಭವಾನಿತಿ |
ನಾಹಂ ರುದ್ರೋ ನ ವಾ ದೇವೀ ನೈವ ಭೋಕ್ತುಮಿಹಾಗತಃ ॥51॥
ದೇವ್ಯಾ ಮನ್ಯುಕೃತಂ ಮತ್ವಾ ಕ್ರುದ್ಧಃ ಸರ್ವಾತ್ಮಕಃ ಪ್ರಭುಃ |
ದ್ರಷ್ಟುಂ ವಾ ನೈವ ವಿಪ್ರೇಂದ್ರಾನ್ನೈವ ಕೌತೂಹಲೇನ ವಾ ॥52॥
ನಾನು ರುದ್ರನೂ ಅಲ್ಲ, ದೇವಿಯಾದ ಪಾರ್ವತಿಯೂ ಅಲ್ಲ. ಇಲ್ಲಿಗೆ ಊಟಕ್ಕೆ ಬಂದವನೂ ಅಲ್ಲ. ದೇವಿಯಾದ ಪಾರ್ವತಿಗೆ ನೀವೆಲ್ಲರು ಉಂಟುಮಾಡಿದ ದುಃಖಕ್ಕೆ ಕಾರಣನಾದ, ಸರ್ವಾತ್ಮಕನಾದ, ಪ್ರಭುವಾದ ರುದ್ರನು ಕೋಪಗೊಂಡು ಸೃಷ್ಟಿಸಿದ ವ್ಯಕ್ತಿಯು ನಾನು. ಈ ಯಜ್ಞವನ್ನು ಕುತೂಹಲದಿಂದ ನೋಡಲೂ ಬಂದವನಲ್ಲ ಎಂದು ವಿಪ್ರೇಂದ್ರರೇ, ನೀವೆಲ್ಲರೂ ತಿಳಿಯಿರಿ.
ತವ ಯಜ್ಞವಿಘಾತಾರ್ಥಂ ಸಂಪ್ರಾಪ್ತಂ ವಿದ್ಧಿ ಮಾಮಿಹ |
ವೀರಭದ್ರ ಇತಿ ಖ್ಯಾತೋ ರುದ್ರಕೋಪಾದ್ ವಿನಿಃಸೃತಃ ॥53॥
ಈ ಯಜ್ಞವನ್ನು ನಾಶಮಾಡುವುದಕ್ಕಾಗಿಯೇ ನಾನು ಬಂದವನೆಂದು ತಿಳಿಯಿರಿ. ರುದ್ರಕೋಪದಿಂದ ಸೃಷ್ಟಿಸಲ್ಪಟ್ಟ ವೀರಭದ್ರ ಎಂಬ ಖ್ಯಾತಿಯುಳ್ಳವನು ನಾನು.
ಭದ್ರಕಾಳೀತಿ ವಿಖ್ಯಾತಾ ದೇವ್ಯಾಃ ಕೋಪಾದ್ ವಿನಿಃಸೃತಾ |
ಪ್ರೇಷಿತೌ ದೇವದೇವೇನ ಯಜ್ಞಾಂತಿಕಮಿಹಾಗತೌ ॥54॥
ದೇವಿಯ ಕೋಪದಿಂದ ಹುಟ್ಟಿ ನನ್ನನ್ನು ಹಿಂಬಾಲಿಸುತ್ತಿರುವ ಈ ಸ್ತ್ರೀಗೆ ಭದ್ರಕಾಳಿ ಎಂದು ಹೆಸರು. ದೇವದೇವನಾದ ಶಿವನಿಂದ ಪ್ರೇರಿತರಾಗಿ ಯಜ್ಞವನ್ನು ಧ್ವಂಸ ಮಾಡುವ ಕಾರಣದಿಂದ ನಾವಿಲ್ಲಿಗೆ ಬಂದಿರುತ್ತೇವೆ.
ಶರಣಂ ಗಚ್ಛ ವಿಪ್ರೇಂದ್ರ ದೇವದೇವಮುಮಾಪತಿಮ್ |
ವರಂ ಕ್ರೋಧೋಽಪಿ ದೇವಸ್ಯ ವರದಾನಂ ನ ಚಾನ್ಯತಃ ॥55॥
ವಿಪ್ರೇಂದ್ರನೇ, ಈಗಲಾದರೂ ನಮ್ಮ ಪ್ರಭುವಾದ ರುದ್ರನಲ್ಲಿ ಶರಣಾಗತನಾಗಿ ಪ್ರಾರ್ಥಿಸು. ಇತರ ದೇವತೆಗಳಿಂದ ಪಡೆಯುವ ವರಗಳಿಗಿಂತಲೂ ಮಹಾದೇವನ ಕೋಪವೇ ಪ್ರಬಲವೆಂದು ತಿಳಿ ಎಂದನು.
ವೀರಭದ್ರವಚಃ ಶ್ರುತ್ವಾ ದಕ್ಷೋ ಧರ್ಮಭೃತಾಂ ವರಃ |
ತೋಷಯಾಮಾಸ ಸ್ತೋತ್ರೇಣ ಪ್ರಣಿಪತ್ಯ ಮಹೇಶ್ವರಮ್ ॥56॥
ಧರ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ದಕ್ಷಪ್ರಜಾಪತಿಯು ವೀರಭದ್ರನ ಮಾತನ್ನು ಕೇಳಿಸಿಕೊಂಡು ಮಹೇಶ್ವರನನ್ನು ನಮಸ್ಕರಿಸಿ ಸ್ತೋತ್ರದಿಂದ ಸಂತೋಷಗೊಳಿಸಿದನು.
ಪ್ರಪದ್ಯೇ ದೇವಮೀಶಾನಂ ಶಾಶ್ವತಂ ಧ್ರುವಮವ್ಯಯಮ್ |
ಮಹಾದೇವಂ ಮಹಾತ್ಮಾನಂ ವಿಶ್ವಸ್ಯ ಜಗತಃ ಪತಿಮ್ ॥57॥
ದೇವದೇವನೂ, ಶಾಶ್ವತನೂ, ಧ್ಯೇಯನೂ, ಅವ್ಯಯನೂ, ಮಹಾತ್ಮನೂ, ಸರ್ವಲೋಕಕ್ಕೆ ಒಡೆಯನೂ ಆದ ಪರಮಶಿವನೇ ನನಗೆ ರಕ್ಷಕನು. ಅವನನ್ನೇ ನಾನು ಮೊರೆಹೋಗುತ್ತೇನೆ.
ದಕ್ಷಪ್ರಜಾಪತೇರ್ಯಜ್ಞೇ ದ್ರವ್ಯೈಸ್ತೈಃ ಸುಸಮಾಹಿತೈಃ |
ಆಹೂತಾ ದೇವತಾಃ ಸರ್ವಾ ಋಷಯಶ್ಚ ತಪೋಧನಾಃ ॥58॥
ಜನಮೇಜಯನೇ, ದಕ್ಷನು ಆರಂಭಿಸಿದ ಯಜ್ಞಕ್ಕೆ ಆಗಮಿಸಿದ ದೇವತೆಗಳು, ಮಹರ್ಷಿಗಳು ಎಲ್ಲರೂ ಕರೆಯಲ್ಪಟ್ಟರು. ಸಮಸ್ತ ದ್ರವ್ಯಗಳು ಯಜ್ಞಕ್ಕಾಗಿ ಸಿದ್ಧವಾಗಿದ್ದವು.
ದೇವೋ ನಾಹೂಯತೇ ತತ್ರ ವಿಶ್ವಕರ್ಮಾ ಮಹೇಶ್ವರಃ |
ತತ್ರ ಕ್ರುದ್ಧಾ ಮಹಾದೇವೀ ಗಣಾಂಸ್ತತ್ರ ವ್ಯಸರ್ಜಯತ್ ॥59॥
ಮಹೇಶ್ವರನೊಬ್ಬನನ್ನು ಕರೆದಿರಲಿಲ್ಲ. ವಿಶ್ವಕರ್ಮನಾದ ಮಹೇಶ್ವರನನ್ನು ಕರೆದಿಲ್ಲವೆಂಬ ಕಾರಣದಿಂದ ಕ್ರುದ್ಧಳಾದ ಮಹಾದೇವಿಯು ಯಜ್ಞನಾಶಕ್ಕಾಗಿ ಗಣಗಳನ್ನು ಪ್ರೇರಿಸಿದಳು.
ಪ್ರದೀಪ್ತೇ ಯಜ್ಞವಾಟೇ ತು ವಿದ್ರುತೇಷು ದ್ವಿಜಾತಿಷು |
ತಾರಾಗಣಮನುಪ್ರಾಪ್ತೇ ರೌದ್ರೇ ದೀಪ್ತೇ ಮಹಾತ್ಮನಿ ॥60॥
ಯಜ್ಞಶಾಲೆಯು ಅವರಿಂದ ಸುಟ್ಟುಹೋಗಲು, ಯಜ್ಞದಲ್ಲಿ ಸಂಬಂಧಿಸಿದ ಬ್ರಾಹ್ಮಣರೆಲ್ಲ ಭಯದಿಂದ ಓಡುತ್ತಿರಲು ವೀರಭದ್ರನು ಭಯಂಕರ ರೂಪದಿಂದ ನಕ್ಷತ್ರ ಮಂಡಲದ ತನಕ ಬೆಳೆದು ನಿಂತನು.
ಶೂಲನಿರ್ಭಿನ್ನಹೃದಯೈಃ ಕೂಜದ್ಭಿಃ ಪರಿಚಾರಕೈಃ | ನಿಖಾತೋತ್ಪಾಟಿತೈರ್ಯೂಪೈರಪವಿದ್ಧೈರಿತಸ್ತತಃ ॥61॥
ರುದ್ರಗಣಗಳು ಅಲ್ಲಿಯ ಪರಿಚಾರಕರನ್ನು ಶೂಲದಿಂದ ತಿವಿಯುತ್ತಿದ್ದವು. ಭಯಂಕರ ಧ್ವನಿಗಳಿಂದ ಕೂಗುತ್ತಿದ್ದವು. ಕೆಲವರು ಯೂಪಗಳನ್ನು ಕಿತ್ತು ಮುರಿದು ಎಸೆದಾಡುತ್ತಿದ್ದರು.
ಉತ್ಪತದ್ಭಿಃ ಪತದ್ಭಿಶ್ಚ ಗೃಧ್ರೈರಾಮಿಷಗೃದ್ಧಿಭಿಃ |
ಪಕ್ಷವಾತವಿನಿರ್ಧೂತೈಃ ಶಿವಾಶತನಿನಾದಿತೈಃ ॥62॥
ಅಲ್ಲಿ ಸತ್ತವರ ಮಾಂಸದ ಆಸೆಗೆ ಹದ್ದುಗಳು ಕೆಳಕ್ಕೂ ಮೇಲಕ್ಕೂ ಹಾರಾಡುತ್ತಿದ್ದವು. ರಣಹದ್ದುಗಳ ರೆಕ್ಕೆಯ ಗಾಳಿಗೆ ಹೆದರಿದ ನೂರಾರು ನರಿಗಳು ಊಳಿಡುತ್ತಿದ್ದವು.
ಯಕ್ಷಗಂಧರ್ವಸ್ಯರಿಂಶ್ಚ ಪಿಶಾಚೋರಗರಾಕ್ಷಸೈಃ |
ಪ್ರಾಣಾಪಾನೌ ಸಂನಿರುಧ್ಯ ವಕ್ರಸ್ಥಾನೇನ ಯತ್ನತಃ ॥63॥
ಯಕ್ಷರು, ಗಂಧರ್ವರು, ಪಿಶಾಚರು, ರಾಕ್ಷಸರು, ಉರಗಗಳು ಇವರೆಲ್ಲರೂ ಅಲ್ಲಲ್ಲಿ ಸಂಭ್ರಮದಿಂದ ಓಡಾಡುತ್ತಿದ್ದರು. ಇವರಿಗೆ ಹಾನಿಯಾಗಬಾರದೆಂದು ತನ್ನ ಪ್ರಾಣಾಪಾನ ವಾಯುಗಳನ್ನು ವೀರಭದ್ರನು ಯತ್ನದಿಂದ ನಿಗ್ರಹಿಸಿದನು.

ವಿಚಾರ್ಯ ಸರ್ವತೋ ದೃಷ್ಟಿಂ ಬಹುದೃಷ್ಟಿರಮಿತ್ರಜಿತ್ |
ಸಹಸಾ ದೇವದೇವೇಶೋ ಹ್ಯಗ್ನಿಕುಂಡಾತ್ ಸಮುತ್ಥಿತಃ ॥64॥
ಎಲ್ಲೆಡೆಯೂ ದೃಷ್ಟಿಯನ್ನು ಪಸರಿಸಿ, ಅಗ್ನಿಕುಂಡದ ಮಧ್ಯಭಾಗದಿಂದ ದೇವದೇವೇಶನಾದ, ಶತ್ರುಗಳಿಂದ ಗೆಲ್ಲಲು ಅಸಾಧ್ಯನಾದ ಮಹರುದ್ರನು ಕೂಡಲೇ ಮೇಲೆದ್ದನು.
ಬಿಭ್ರತ್ ಸೂರ್ಯಸಹಸ್ರಸ್ಯ ತೇಜಃ ಸಂವರ್ತಕೋಪಮಃ |
ಸ್ಮಿತಂ ಕೃತ್ವಾಽಬ್ರವೀದ್ ವಾಕ್ಯಂ ಬ್ರೂಹಿ ಕಿಂ ಕರವಾಣಿ ತೇ ॥65॥
ಸಹಸ್ರ ಸೂರ್ಯರ ತೇಜಸ್ಸಿನಂತೆ ಕೂಡಿರುವ, ಯಮನಂತೆ ಭಯಂಕರನಾದ ಮಹರುದ್ರನು ದಕ್ಷನನ್ನು ನೋಡಿ ಮಂದಹಾಸವನ್ನು ಬೀರಿ, ನಾನು ಏನು ಮಾಡಲಿ? ನನ್ನಿಂದೇನಾಗಬೇಕು? ಹೇಳು ಎಂದು ಕೇಳಿದನು.
ಶ್ರಾವಿತೇ ಚ ಮಖಾಧ್ಯಾಯೇ ದೇವಾನಾಂ ಗುರುಣಾ ತತಃ |
ತಮುವಾಚಾಂಜಲಿಂ ಕೃತ್ವಾ ದಕ್ಷೋ ದೇವಂ ಪ್ರಜಾಪತಿಃ ॥66॥
ಈ ಸಮಯದಲ್ಲಿ ದೇವಗುರುವಾದ ಬೃಹಸ್ಪತಿಯು ಹೇಳಿದ ಯಾಗ-ಅಧ್ಯಾಯದ ಕ್ರಮದಂತೆ ದಕ್ಷ ಪ್ರಜಾಪತಿಯು ವೇದವಚನಗಳಿಂದ ಮಹರುದ್ರನನ್ನು ಪ್ರಾಂಜಲಿಯಾಗಿ ಸ್ತುತಿಸಿದನು.
ಭೀತಶಂಕಿತವಿತ್ರಸ್ತಃ ಸಬಾಷ್ಪವದನೇಕ್ಷಣಃ |
ಯದಿ ಪ್ರಸನ್ನೋ ಭಗವಾನ್ ಯದಿ ಚಾಹಂ ಭವತ್ಪ್ರಿಯಃ ॥67॥
ಯದಿ ವಾಽಹಮನುಗ್ರಾಹ್ಯೋ ಯದಿ ವಾ ವರದೋ ಮಮ |
ಯದ್ದಗ್ಧಂ ಭಕ್ಷಿತಂ ಪೀತಮಶಿತಂ ಯಚ್ಚ ನಾಶಿತಮ್ ॥68॥
ಚೂರ್ಣೀಕೃತಾಪವಿದ್ಧಂ ಚ ಯಜ್ಞಸಂಭಾರಮೀದೃಶಮ್ |
ದೀರ್ಘಕಾಲೇನ ಮಹತಾ ಪ್ರಯತ್ನೇನ ಸುಸಂಚಿತಮ್ |
ತನ್ನ ಮಿಥ್ಯಾ ಭವೇನ್ಮಹ್ಯಂ ವರಮೇತಮಹಂ ವೃಣೇ ॥69॥
ಆ ಸಮಯದಲ್ಲಿ ಹೆದರಿದ್ದನು, ಶಂಕಿತನಾಗಿದ್ದನು, ನಡುಗುತ್ತಿದ್ದನು, ಕಣ್ಣಿನಿಂದ ನೀರನ್ನು ಸುರಿಸುತ್ತಿದ್ದನು. ಮಹರುದ್ರನೇ, ನಾನು ಒಂದು ವೇಳೆ ಭಗವಂತನಿಗೆ ಪ್ರಿಯನಾಗಿದ್ದಲ್ಲಿ, ಪೂಜ್ಯನಾದ ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿದ್ದಲ್ಲಿ, ನಿನ್ನಿಂದ ಅನುಗ್ರಹವನ್ನು ಹೊಂದಲು ನಾನು ಅರ್ಹತೆಯನ್ನು ಪಡೆದಿದ್ದಲ್ಲಿ, ನೀನು ವರದನಾಗಿದ್ದಲ್ಲಿ, ಯಾವ ಯಜ್ಞವನ್ನು ನೀನು ಸುಟ್ಟಿದ್ದೀಯೋ, ತಿಂದು-ಕುಡಿದು- ನುಂಗಿ ನಾಶಪಡಿಸಿದ, ಪುಡಿಮಾಡಲ್ಪಟ್ಟ ಸಮಸ್ತ ಯಜ್ಞ ಸಾಮಗ್ರಿಗಳು ಯಜ್ಞಕ್ಕೆ ಉಪಯೋಗಕ್ಕೆ ಬರಬೇಕು. ಬಹಳ ಕಾಲದ ಮಹಾಪ್ರಯತ್ನದಿಂದ ಈ ಯಜ್ಞ ಸಾಮಗ್ರಿಗಳನ್ನು ಸಂಗ್ರಹಿಸಿರುತ್ತೇನೆ. ಆ ಪದಾರ್ಥಗಳು ಭಗವತ್ಪ್ರೀತಿಗೆ ಸಮರ್ಪಿತವಾಗಿಲ್ಲ, ಆ ಪದಾರ್ಥಗಳು ವ್ಯರ್ಥವಾಗದಂತೆ ನಿನ್ನಿಂದ ವರವನ್ನು ಬಯಸುತ್ತೇನೆ.
ತಥಾಽಸ್ತ್ವಿತ್ಯಾಹ ಭಗವಾನ್ ಭಗನೇತ್ರಹರೋ ಹರಃ |
ಧರ್ಮಾಧ್ಯಕ್ಷೋ ವಿರೂಪಾಕ್ಷಸ್ತ್ರ್ಯಕ್ಷೋ ದೇವಃ ಪ್ರಜಾಪತಿಃ ॥70॥
ಹೀಗೆ ಹೇಳಿದ ಕೂಡಲೇ ಭಗನ ಕಣ್ಣುಗಳನ್ನು ಕೆರಳಿಸಿದ ರುದ್ರನು ತಾಳ್ಮೆಯನ್ನು ವಹಿಸಿ ಹಾಗೆಯೇ ಆಗಲಿ ಎಂದನು.
ಧರ್ಮಾಧ್ಯಕ್ಷನೂ, ವಿರೂಪಾಕ್ಷನೂ, ತ್ರ್ಯಕ್ಷನೂ, ಪ್ರಜಾಪತಿಯೂ ಆದ ಮಹಾದೇವನು ದಕ್ಷನಿಗೆ ವರವನ್ನು ಕೊಟ್ಟನು.
ಜಾನುಭ್ಯಾಮವನೀಂ ಗತ್ವಾ ದಕ್ಷೋ ಲಬ್ಧ್ವಾ ಭವಾದ್ ವರಮ್ | ನಾಮ್ನಾಮಷ್ಟಸಹಸ್ರೇಣ ಸ್ತುತವಾನ್ ವೃಷಭಧ್ವಜಮ್ ॥71॥
ಇದರಿಂದ ಸಂತುಷ್ಟನಾದ ದಕ್ಷನು ಭೂಮಿಯಲ್ಲಿ ಮಹರುದ್ರನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಸಾವಿರದೆಂಟು ನಾಮಗಳಿಂದ ವೃಷಭಧ್ವಜನಾದ ಮಹರುದ್ರನನ್ನು ಸ್ತುತಿಸಿದನು.
ಯುಧಿಷ್ಠಿರಃ
ಯೈರ್ನಾಮಧೇಯೈಃ ಸ್ತುತವಾನ್ ದಕ್ಷೋ ದೇವಂ ಪ್ರಜಾಪತಿಃ |
ವಕ್ತುಮರ್ಹಸಿ ಮೇ ತಾತ ಶ್ರೋತುಂ ಶ್ರದ್ಧಾ ಮಮಾನಘ ॥72॥
ಯುಧಿಷ್ಠಿರ ಪಿತಾಮಹನೇ, ದಕ್ಷನು ಯಾವ ಯಾವ ನಾಮಗಳಿಂದ ಈಶ್ವರನನ್ನು ಸ್ತುತಿಸಿದನು? ಅದನ್ನು ಕೇಳಬೇಕೆಂದು ನನಗೆ ಕುತೂಹಲವಿದೆ. ಅದೆಲ್ಲವನ್ನೂ ಶ್ರದ್ಧೆಯುಳ್ಳ ನನಗೆ ಹೇಳಲು ಯೋಗ್ಯನಾಗಿರುವಿ.
ಭೀಷ್ಮಃ
ಶ್ರೂಯತಾಂ ದೇವದೇವಸ್ಯ ನಾಮಾನ್ಯದ್ಭುತಕರ್ಮಣಃ|
ಗೂಢವ್ರತಸ್ಯ ಗುಹ್ಯಾನಿ ಪ್ರಕಾಶಾನಿ ಚ ಭಾರತ ॥73॥
ಭೀಷ್ಮ ಯುಧಿಷ್ಠಿರನೇ, ಅದ್ಭುತಕರ್ಮಿಯೂ, ಗೂಢವಾದ ವ್ರತವುಳ್ಳವನೂ ಆದ ಪರಮೇಶ್ವರನ ರಹಸ್ಯವೂ, ಪ್ರಕಾಶಕವೂ ಆದ ನಾಮಗಳನ್ನು ಹೇಳುತ್ತೇನೆ, ಕೇಳು.
ನಮಸ್ತೇ ದೇವದೇವೇಶ ದೇವಾರಿಬಲಸೂದನ |
ದೇವೇಂದ್ರಬಲವಿಷ್ಟಂಭ ದೇವದಾನವಪೂಜಿತ ॥74॥
ದೇವದೇವನೇ ನಿನಗೆ ನಮಸ್ಕಾರವು. ದೇವಶತ್ರುಗಳ ಸೈನ್ಯವನ್ನು ನಾಶ ಮಾಡತಕ್ಕವನೇ, ದೇವ-ದಾನವರಿಂದ ಪೂಜಿತನಾಗಿ ದೇವೇಂದ್ರನ ಬಲವನ್ನು ತಡೆಗಟ್ಟಿದ ಮಹರುದ್ರನೇ ನಿನಗೆ ನಮಸ್ಕಾರವು.
ಸಹಸ್ರಾಕ್ಷ ವಿರೂಪಾಕ್ಷ ತ್ರ್ಯಕ್ಷ ಯಕ್ಷಾಧಿಪಪ್ರಿಯ |
ಸರ್ವತಃ ಪಾಣಿಪಾದಾಂತ ಸರ್ವತೋಕ್ಷಿಶಿರೋಮುಖ ॥75॥
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠಸಿ |

ಶಂಕುಕರ್ಣ ಮಹಾಕರ್ಣ ಕುಂಭಕರ್ಣಾರ್ಣವಾಲಯ ॥76॥
ಗಜೇಂದ್ರಕರ್ಣ ಗೋಕರ್ಣ ಪಾಣಿಕರ್ಣ ನಮೋಸ್ತು ತೇ |
ಶತೋದರ ಶತಾವರ್ತ ಶತಜಿಹ್ವ ನಮೋಸ್ತು ತೇ ॥77॥
ಸಹಸ್ರಾಕ್ಷನೇ, ವಿರೂಪಾಕ್ಷನೇ, ತ್ರ್ಯಕ್ಷನೇ, ಯಕ್ಷಾಧಿಪತಿಯಾದ ಕುಬೇರನಿಗೆ ಪ್ರಿಯನಾದವನೇ ನಿನಗೆ ನಮಸ್ಕಾರವು. ಎಲ್ಲ ಕಡೆಯೂ ವ್ಯಾಪಿಸಿದ ಕೈಗಳುಳ್ಳವನೇ, ವ್ಯಾಪ್ತವಾದ ಕಣ್ಣು-ತಲೆ-ಪಾದವುಳ್ಳವನೇ, ಎಲ್ಲೆಡೆಯೂ ವ್ಯಾಪ್ತವಾದ ಕಿವಿಗಳುಳ್ಳವನೇ, ಎಲ್ಲವನ್ನೂ ಆವರಿಸಿರುವೆ. ಶಂಕುಕರ್ಣನೇ, ಮಹಾಕರ್ಣನೇ, ಕುಂಭಕರ್ಣನೇ, ಸಮುದ್ರವೇ ಮನೆಯಾಗಿ ಉಳ್ಳವನೇ, ಗಜೇಂದ್ರಕರ್ಣನೇ, ಗೋಕರ್ಣನೇ, ಪಾಣಿಕರ್ಣನೇ ನಿನಗೆ ನಮಸ್ಕಾರವು. ನೂರು ಹೊಟ್ಟೆಯುಳ್ಳವನೇ, ನೂರು ನಾಭಿ ಉಳ್ಳವನೇ, ನೂರು ನಾಲಿಗೆಯುಳ್ಳವನೇ ನಿನಗೆ ನಮಸ್ಕಾರವು.
ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ |
ಬ್ರಹ್ಮಾಣಂ ತ್ವಾ ಶತಕ್ರತುಮೂರ್ಧ್ವಂ ಖಮಿವ ಮೇನಿರೇ ॥78॥
ಗಾಯತ್ರಿಮಂತ್ರವನ್ನು ಜಪಮಾಡುವ ವ್ಯಕ್ತಿಗಳು ನಿನ್ನ ಮಹಿಮೆಯನ್ನು ಗಾನ ಮಾಡುತ್ತಾರೆ. ಸೂರ್ಯೋಪಾಸಕರು ಸೂರ್ಯಸದೃಶನಾದ ನಿನ್ನನ್ನು ಆರಾಧಿಸುತ್ತಾರೆ. ಖುಷಿಗಳು ನಿನ್ನನ್ನೇ ಬ್ರಹ್ಮನೆಂದೂ, ಶತಕ್ರತುವೆಂದು ತಿಳಿಯುತ್ತಾರೆ. ಆಕಾಶದಂತೆ ಅಸಂಗನೆಂದು ನಿನ್ನನ್ನು ತಿಳಿಯುತ್ತಾರೆ.
ಮೂರ್ತೌ ಹಿ ತೇ ಮಹಾಮೂರ್ತೇ ಸಮುದ್ರಾಂಬರಸನ್ನಿಭ |
ಸರ್ವಾ ವೈ ದೇವತಾ ಹ್ಯಸ್ಮಿನ್ ಗಾವೋ ಗೋಷ್ಠ ಇವಾಸತೇ ॥79॥
ನಿನ್ನ ಮೂರ್ತಿಯಲ್ಲಿ ಮಹಾಮೂರ್ತಿಯು ಅಡಕವಾಗಿದೆ. ಸಮುದ್ರ-ಆಕಾಶಗಳಿಗೆ ಸಮಾನನಾದವನು, ಸಮಸ್ತ ದೇವತೆಗಳು ಗೋಶಾಲೆಯಲ್ಲಿ ಗೋವುಗಳು ನಿವಾಸ ಮಾಡುವಂತೆ ನಿನ್ನಲ್ಲಿ ನಿವಾಸ ಮಾಡುತ್ತಿದ್ದಾರೆ.
ಭವಚ್ಛರೀರೇ ಪಶ್ಯಾಮಿ ಸೋಮಮಗ್ನಿಂ ಜಲೇಶ್ವರಮ್ |
ಆದಿತ್ಯಮಥ ವೈ ವಿಷ್ಣುಂ ಬ್ರಹ್ಮಾಣಂ ಚ ಬೃಹಸ್ಪತಿಮ್ ॥80॥
ನಿನ್ನ ಶರೀರದಲ್ಲಿ ಸೋಮನನ್ನು (ಚಂದ್ರ), ಅಗ್ನಿಯನ್ನು, ವರುಣನನ್ನು, ಸೂರ್ಯನನ್ನು, ವಿಷ್ಣುವನ್ನು, ದೇವಗುರುವಾದ ಬೃಹಸ್ಪತಿಯನ್ನು ಕಾಣುತ್ತಿದ್ದೇನೆ.
ಭಗವಾನ್ ಕಾರಣಂ ಕಾರ್ಯಂ ಕ್ರಿಯಾ ಕರಣಮೇವ ಚ |
ಅಸತಶ್ಚ ಸತಶ್ಚೈವ ತಥೈವ ಪ್ರಭವಾಪ್ಯಯೌ ॥81॥
ನೀನು ಕಾರಣ, ಕಾರ್ಯ, ಕ್ರಿಯಾ, ಕರಣ, ಪೂಜ್ಯ ಎಲ್ಲವೂ ಆಗಿರುವಿ. ಮೂರ್ತಾಮೂರ್ತ ಪ್ರಪಂಚದ ಉತ್ಪತ್ತಿಗೂ, ಲಯಕ್ಕೂ ನೀನೇ ಕಾರಣನಾಗಿರುವಿ.
ನಮೋ ಭವಾಯ ಶರ್ವಾಯ ರುದ್ರಾಯ ವರದಾಯ ಚ |
ಪಶೂನಾಂ ಪತಯೇ ನಿತ್ಯಂ ನಮೋಸ್ತ್ವಂಧಕಘಾತಿನೇ ॥82॥
ಎಲ್ಲರ ಉತ್ಪತ್ತಿಗೂ ಕಾರಣನಾದ, ಸಂಹಾರಕ್ಕೆ ಕಾರಣನಾದ, ಭಕ್ತರ ಪಾಪವನ್ನು ಪರಿಹರಿಸುವ, ಭಕ್ತವರದನಾದ, ಪಶುಪತಿಯಾದ, ಅಂಧಕಾಸುರನನ್ನು ಸಂಹಾರ ಮಾಡಿದ ನಿನಗೆ ನಮಸ್ಕಾರವು.
ತ್ರಿಜಟಾಯ ತ್ರಿಶೀರ್ಷಾಯ ತ್ರಿಶೂಲವರಪಾಣಿನೇ |
ತ್ರ್ಯಂಬಕಾಯ ತ್ರಿನೇತ್ರಾಯ ತ್ರಿಪುರಘ್ನಾಯ ವೈ ನಮಃ ॥83॥
ಮೂರು ಜಟೆಗಳುಳ್ಳವನೇ, ಮೂರು ಶಿರಸ್ಸು ಧರಿಸಿದವನೇ, ತ್ರಿಶೂಲಧಾರಿಯೇ, ತ್ರ್ಯಂಬಕನೇ, ತ್ರಿನೇತ್ರನೇ, ತ್ರಿಪುರಾಸುರನನ್ನು ಹಾನಿಗೈದವನೇ ನಿನಗೆ ನಮಸ್ಕಾರವು.
ನಮಶ್ಚಂಡಾಯ ಕುಂಡಾಯ ಅಂಡಾಯಾಂಡಧರಾಯ ಚ |
ದಂಡಿನೇ ಸಮಕರ್ಣಾಯ ದಂಡಿಮುಂಡಾಯ ವೈ ನಮಃ ॥84॥
ದುಷ್ಟರ ವಿಷಯದಲ್ಲಿ ಕೋಪಗೊಳ್ಳುವ, ಕುಂಡಾಯ= ಸಂಪೂರ್ಣ ಜಗತ್ತನ್ನು ಉದರದಲ್ಲಿ ಧರಿಸಿರುವ, ಅಂಡಾಯ= ಬ್ರಹ್ಮಾಂಡದಂತೆ ರೂಪವುಳ್ಳ, ಬ್ರಹ್ಮಾಂಡಧಾರಿಯಾದ, ದುಷ್ಟರನ್ನು ಶಿಕ್ಷಿಸುವ, ಎಲ್ಲವನ್ನು ವಿಮರ್ಶಿಸಿ ತಿಳಿಸಿಕೊಳ್ಳುವ, ದಂಡವನ್ನು ಧರಿಸಿರುವ ನಿನಗೆ ನಮಸ್ಕಾರವು.
ನಮೋರ್ಧ್ವದಂಷ್ಟ್ರಕೇಶಾಯ ಶುಕ್ಲಾಯಾವತತಾಯ ಚ |
ವಿಲೋಹಿತಾಯ ಧೂಮ್ರಾಯ ನೀಲಗ್ರೀವಾಯ ವೈ ನಮಃ ॥85॥
ಊರ್ಧ್ವಮುಖವಾದ ಹಲ್ಲುಗಳು, ಕೇಶಗಳು ಇವುಗಳಿಂದ ಕೂಡಿರುವ ಶುದ್ಧನಾದ, ವ್ಯಾಪ್ತನಾದ, ರಜೋಗುಣದಿಂದ, ತಮೋಗುಣದಿಂದ ದೂರನಾಗಿರುವ ನೀಲಗ್ರೀವನೇ ನಿನಗೆ ನಮಸ್ಕಾರವು.
ನಮೋಸ್ತ್ವಪ್ರತಿರೂಪಾಯ ವಿರೂಪಾಯ ಶಿವಾಯ ಚ |
ಸೂರ್ಯಾಯ ಸೂರ್ಯಮಾಲಾಯ ಸೂರ್ಯಧ್ವಜಪತಾಕಿನೇ ॥86॥
ಅಸದೃಶವಾದ ರೂಪವುಳ್ಳ, ವಿವಿಧ ರೂಪಗಳನ್ನು ಧರಿಸಿರುವ ಮಂಗಳನಾದ ಸೂರ್ಯನು, ಸೂರ್ಯಮಂಡಲ ಶೋಭಿತನೂ, ಸೂರ್ಯಧ್ವಜನೂ, ಪತಾಕಿಯೂ ಆಗಿರುವ ನಿನಗೆ ನಮಸ್ಕಾರವು.
ನಮಃ ಪ್ರಮಥನಾಥಾಯ ವೃಷಸ್ಕಂಧಾಯ ಧನ್ವಿನೇ |
ಶತ್ರುಂದಮಾಯ ದಂಡಾಯ ಪರ್ಣಚೀರಪಟಾಯ ಚ ॥87॥
ಪ್ರಮಥಗಣಗಳಿಗೆ ನಾಥನಾದ, ಎತ್ತಿನ ಹೆಗಲುಗಳಿಗೆ ಸಮಾನವಾದ ಹೆಗಲನ್ನು ಹೊಂದಿರುವ, ಪಿನಾಕ ಧನುಸ್ಸನ್ನು ಧರಿಸಿರುವ, ಶತ್ರುಹಂತಕನಾದ, ದಂಡಧಾರಿಯಾದ, ಭೂರ್ಜಪತ್ರ ಮತ್ತು ನಾರುಮಡಿಯ ಬಟ್ಟೆಯನ್ನು ಧರಿಸಿರುವ ನಿನಗೆ ನಮಸ್ಕಾರವು.

ನಮೋ ಹಿರಣ್ಯಗರ್ಭಾಯ ಹಿರಣ್ಯಕವಚಾಯ ಚ |
ಹಿರಣ್ಯಕೃತಚೂಡಾಯ ಹಿರಣ್ಯಪತಯೇ ನಮಃ ॥88॥
ಹಿರಣ್ಯಗರ್ಭನೇ, ಹಿರಣ್ಯಕವಚನೇ, ಹಿರಣ್ಯದಿಂದ ಮಾಡಲ್ಪಟ್ಟ ಮುಕುಟ ಉಳ್ಳವನೇ, ಹಿರಣ್ಯಪತಿಯೇ ನಿನಗೆ ನಮಸ್ಕಾರ.
ನಮಃ ಸ್ತುತಾಯ ಸ್ತುತ್ಯಾಯ ಸ್ತೂಯಮಾನಾಯ ವೈ ನಮಃ |
ಸರ್ವಾಯ ಸರ್ವಭಕ್ಷಾಯ ಸರ್ವಭೂತಾಂತರಾತ್ಮನೇ ॥89॥
ಸ್ತುತಿ ಮಾಡಲ್ಪಟ್ಟ, ಸ್ತುತಿಗೆ ಯೋಗ್ಯನಾದ, ಸ್ತುತಿ ಮಾಡಲ್ಪಡುತ್ತಿರುವ, ಸರ್ವ ಸ್ವರೂಪನಾದ, ಸರ್ವಭಕ್ಷಕನಾದ,
ಸರ್ವಭೂತಾಂತರಾತ್ಮನಾದ ನಿನಗೆ ನಮಸ್ಕಾರ.
ನಮೋ ಹೋತ್ರೇಽಥ ಮಂತ್ರಾಯ ಶುಕ್ಲಧ್ವಜಪತಾಕಿನೇ |
ನಮೋ ನಾಭಾಯ ನಾಭ್ಯಾಯ ನಮಃ ಕಟಕಟಾಯ ಚ ॥90॥
ಹೋತೃಸ್ವರೂಪನಾದ, ಮಂತ್ರಸ್ವರೂಪನಾದ, ಶುಕ್ಲಧ್ವಜ ಪತಾಕೆ ಉಳ್ಳವನಾದ, ನಾಭಿಯಲ್ಲಿ ಜಗತ್ತನ್ನು ಧರಿಸಿರುವ,
ನಾಭಿಸ್ಥಾನೀಯನಾದ, ಕಟಕಟ ಎಂಬ ರೂಪದಿಂದ ಕಂಗೊಳಿಸುವ ನಿನಗೆ ನಮೋನಮಃ.
ನಮೋಸ್ತು ಕೃಶನಾಸಾಯ ಕೃಶಾಂಗಾಯ ಕೃಶಾಯ ಚ |
ಸಂಹೃಷ್ಟಾಯ ವಿಹೃಷ್ಟಾಯ ನಮಃ ಕಿಲಕಿಲಾಯ ಚ ॥91॥
ತೆಳ್ಳಗಿರುವ ಮೂಗುಳ್ಳ, ಕೃಶಾಂಗನಾದ, ಕೃಶವಾದ ದೇಹವನ್ನು ಹೊಂದಿರುವ, ಹರ್ಷೋಲ್ಲಾಸಗಳಿಂದ ಕೂಡಿರುವ, ವಿಶೇಷವಾಗಿ
ಸುಖಿಯಾದ, ಕಿಲಕಿಲನೆ ನಗುವಿನಿಂದ ಕೂಡಿರುವ ನಿನಗೆ ನಮಸ್ಕಾರ.
ನಮೋಸ್ತು ಶಯಮಾನಾಯ ಶಯಿತಾಯೋತ್ಥಿತಾಯ ಚ |
ಸ್ಥಿತಾಯ ಧಾವಮಾನಾಯ ಮುಂಡಾಯ ಜಟಿಲಾಯ ಚ ॥92॥
ಸರ್ವಪ್ರಾಣಿಗಳ ಹೃದಯಗುಹೆಯಲ್ಲಿ ವಾಸಿಸುವ, ಯೋಗನಿದ್ರೆಯಿಂದ ಎಚ್ಚೆತ್ತಿರುವ, ಎಲ್ಲ ಜೀವರನ್ನು ಮಲಗಿಸುವ, ಎಬ್ಬಿಸುವ,
ಎಲ್ಲೆಡೆಯೂ ಇರುವ, ಓಡುತ್ತಿರುವ, ಸಂನ್ಯಾಸಿಯು ಜಟಾಧಾರಿಯೂ ಆದ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ ಮಹರುದ್ರದೇವರು ಕಾಲನಿಯಾಮಕರಾಗಿ ಎಲ್ಲ ಜೀವರನ್ನು ಕಾಲಕ್ಕನುಗುಣವಾಗಿ ಮಲಗಿಸುತ್ತಾರೆ,
ಎಬ್ಬಿಸುತ್ತಾರೆ. ತ್ರಿಕಾಲದಲ್ಲಿಯೂ ಸಂಚರಿಸುತ್ತಾ ಜೀವರಿಗೆ ಯೋಗ್ಯವಾದ ಜ್ಞಾನ-ಅಜ್ಞಾನವನ್ನು ಕೊಡುವ ವ್ಯಕ್ತಿತ್ವ
ಮಹರುದ್ರದೇವರದ್ದು ಎಂಬ ಅಭಿಪ್ರಾಯದಲ್ಲಿ ಶಯಿತಾಯ ಶಯಮಾನಾಯ ಎನ್ನುವ ನಾಮಗಳನ್ನು ಹೇಳಲಾಗಿದೆ.
ನಮೋ ನರ್ತನಶೀಲಾಯ ಮುಖವಾದಿತ್ರವಾದಿನೇ |
ನಾದ್ಯೋಪಹಾರಲುಬ್ಧಾಯ ಗೀತವಾದಿತ್ರಶಾಲಿನೇ ॥93॥
ತಾಂಡವ ನೃತ್ಯಶೀಲನಾದ, ಬಾಯಿಯಲ್ಲಿ ನುಡಿಸುವ ವಾದ್ಯಗಳನ್ನು ನುಡಿಸುವುದರಲ್ಲಿ ಕುಶಲನಾದ, ನದಿಯಲ್ಲಿ ಹುಟ್ಟಿದ ಕಮಲ
ಪುಷ್ಪಗಳನ್ನು ಸ್ವೀಕರಿಸುವುದರಲ್ಲಿ ಉತ್ಸುಕನಾಗಿರುವ, ಗಾನ-ವಾದನ ಕಲೆಗಳಲ್ಲಿ ತತ್ಪರನಾಗಿರುವ ನಿನಗೆ ನಮಸ್ಕಾರ.
ನಮೋ ಜ್ಯೇಷ್ಠಾಯ ಶ್ರೇಷ್ಠಾಯ ಬಲಪ್ರಮಥನಾಯ ಚ |
ಕಾಲನಾಥಾಯ ಕಲ್ಯಾಯ ಕ್ಷಯಾಯೋಪಕ್ಷಯಾಯ ಚ ॥94॥
ಎಲ್ಲರಿಗೂ ಜ್ಯೇಷ್ಠನಾದ, ಶ್ರೇಷ್ಠನಾದ, ಬಲ ಎಂಬ ರಾಕ್ಷಸನನ್ನು ಸಂಹರಿಸಿದವನಾದ, ಕಾಲಸ್ವಾಮಿಯಾದ,
ಮಹಾಪ್ರಳಯ-ಅವಾಂತರ ಪ್ರಳಯಗಳಿಗೆ ನಿಯಾಮಕನಾದ, ಸಮರ್ಥನಾದ ನಿನಗೆ ನಮಸ್ಕಾರ.
ಭೀಮದುಂದುಭಿಹಾಸಾಯ ಭೀಮವ್ರತಧರಾಯ ಚ |
ಉಗ್ರಾಯ ಚ ನಮೋ ನಿತ್ಯಂ ನಮೋಸ್ತು ದಶಬಾಹವೇ ॥95॥
ಭಯಂಕರವಾದ ದುಂದುಭಿಯ ನಾದದಂತೆ ಅಟ್ಟಹಾಸವುಳ್ಳವನೇ, ಭಯಂಕರವಾದ ರಥವನ್ನು ಧರಿಸುವ ಶಕ್ತಿಯುಳ್ಳವನೇ, ಉಗ್ರನೇ,
ದಶಭುಜನೇ ನಿನಗೆ ನಿತ್ಯವೂ ನಮೋನಮಃ.
ನಮಃ ಕಪಾಲಹಸ್ತಾಯ ಚಿತಿಭಸ್ಮಪ್ರಿಯಾಯ ಚ |
ವಿಭೀಷಣಾಯ ಭೀಷ್ಮಾಯ ಭೀಮವ್ರತಧರಾಯ ಚ ॥96॥
ಕೈಯಲ್ಲಿ ಕಪಾಲವನ್ನು ಧರಿಸಿರುವ, ಚಿತಾಭಸ್ಮಪ್ರಿಯನಾದ, ಎಲ್ಲರಿಗೂ ಭಯವನ್ನುಂಟು ಮಾಡುವವನಾದ, ನಿರ್ಭಯನಾದ,
ಭಯಂಕರ ವ್ರತಧಾರಿಯಾದ ಭೀಷ್ಮನೇ ನಿನಗೆ ನಮಸ್ಕಾರ.
ನಮೋ ವಿಕೃತವಕ್ತ್ರಾಯ ಖಜಿಹ್ವಾಯ ಚ ದಂಷ್ಟ್ರಿಣೇ |
ಪಕ್ವಾಮಮಾಂಸಲುಬ್ಧಾಯ ತುಂಬೀವೀಣಾಪ್ರಿಯಾಯ ಚ ॥97॥
ವಿಕಾರವಾದ ಮುಖವುಳ್ಳವನೇ, ಖಡ್ಗಕ್ಕೆ ಸಮಾನವಾದ ನಾಲಿಗೆಯುಳ್ಳವನೇ, ಪಕ್ವವಾದ ಅಪಕ್ವವಾದ ಮಾಂಸವನ್ನು ಬಯಸುವವನೇ,
ಸೋರೆ ಬುರುಡೆಯ ನಾದನವನ್ನು, ವೀಣಾವಾದನವನ್ನು ಕೇಳುವುದರಲ್ಲಿ ಆಸಕ್ತನೇ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ ವೈಕಾರಿಕ, ತೈಜಸ, ತಾಮಸ ಅಹಂಕಾರಗಳಿಗೆ ನಿಯಾಮಕನಾದ ರುದ್ರದೇವನಿಗೆ ಸತ್ತ್ವರೂಪ, ರಜೋರೂಪ,
ತಮೋರೂಪಗಳು ಇವೆ. ಆಯಾ ಜೀವರಿಗೆ ಯೋಗ್ಯವಾದ ರೂಪಗಳನ್ನು ಧರಿಸುವ ವಿಚಿತ್ರವಾದ ವ್ಯಕ್ತಿತ್ವ ಮಹರುದ್ರನದ್ದು. ಈ ಎಲ್ಲ
ರೂಪಗಳನ್ನು ಮೇಲನ ಮಾಡಿ ದಕ್ಷ ಪ್ರಜಾಪತಿಯು ಸ್ತುತಿಸುತ್ತಿದ್ದಾನೆಂದು ತಿಳಿಯಬೇಕು.
ನಮೋ ವೃಷಾಯ ವೃಷ್ಯಾಯ ಗೋವೃಷಾಯ ವೃಷಾಯ ಚ |
ಕಟಂಕಟಾಯ ದಂಡಾಯ ನಮಃ ಪಚಪಚಾಯ ಚ ॥98॥
ಧರ್ಮಶ್ರೇಷ್ಠನೇ, ಧರ್ಮವನ್ನು ವೃದ್ಧಿಗೊಳಿಸುವವನೇ, ಎತ್ತಿನ ರೂಪದಲ್ಲಿರುವ ನಂದಿಯ ಅಂತರ್ಯಾಮಿಯಾಗಿರುವ, ಕಾಲವೆಂಬ
ಅಗ್ನಿಯಲ್ಲಿ ದಹಿಸಲು ಸಮರ್ಥನಾದ, ದಂಡಧಾರಿಯಾದ, ಶಾಸಕನಾದ, ಗತಿಶೀಲನಾದ ನಿನಗೆ ನಮಸ್ಕಾರ.
ನಮಃ ಸರ್ವವರಿಷ್ಠಾಯ ವರಾಯ ವರದಾಯ ಚ |

ವರಮಾಲ್ಯಗಂಧವಸತ್ರಯ ವರಾತಿವರದೇ ನಮಃ ॥99॥
ಎಲ್ಲರಿಗಿಂತಲೂ ಶ್ರೇಷ್ಠನಾದ, ವರನೆನಿಸಿದ, ವರದನಾದ, ಉತ್ತಮವಾದ ಮಾಲ್ಯ ಗಂಧ-ವಸ್ತ್ರಗಳನ್ನು ಧರಿಸಿದ, ಕೇಳಿದ ವರಕ್ಕಿಂತ ಅತಿಶಯವಾದ ವರವನ್ನು ನೀಡುವ ನಿನಗೆ ನಮಸ್ಕಾರ.
ನಮೋ ರಕ್ತವಿರಕ್ತಾಯ ಭಾವನಾಯಾಕ್ಷಮಾಲಿನೇ |
ಸಂಭಿನ್ನಾಯ ವಿಭಿನ್ನಾಯ ಚ್ಛಾಯಾಯಾತಪನಾಯ ಚ ॥100॥
ಆಸಕ್ತನೂ, ವಿರಕ್ತನೂ ಆದ, ಭಕ್ತಿಯಿಂದ ಕೂಡಿರುವ, ಅಕ್ಷಮಾಲೆಯನ್ನು ಧರಿಸಿರುವ, ಜಗತ್ತಿನಲ್ಲಿ ಮೇಲ್ಮೆ ಹೊಂದಿರುವ, ಅದಕ್ಕಿಂತ ವಿಲಕ್ಷಣನಾಗಿರುವ, ನೆರಳು-ಬಿಸಿಲುಗಳ ತಾಪನವನ್ನು ಉಂಟುಮಾಡುವ, ಸುಖ-ದುಃಖದಾಯಕನಾದ ನಿನಗೆ ನಮಸ್ಕಾರವು.
ರುದ್ರದೇವರು  ಪದ್ಮಾಕ್ಷ ಮಾಲೆಯನ್ನು, ತುಳಸಿ ಮಣಿಯನ್ನು ಧರಿಸಿರುತ್ತಾರೆ.
ವ್ಯಾಖ್ಯಾನ ವಿಶೇಷ ಪದ್ಮಾಕ್ಷ ತುಳಸೀಮಾಲಾ ವಿದ್ಯೋತಿತ ಶಿರೋಧರಂ (ಸರಸಭಾರತಿ ವಿಲಾಸ).
ಅಘೋರಘೋರರೂಪಾಯ ಘೋರಘೋರತರಾಯ ಚ |
ನಮಃ ಶಿವಾಯ ಶಾಂತಾಯ ನಮಃ ಶಾಂತತಮಾಯ ಚ ॥101॥
ಶಾಂತ ಸ್ವರೂಪನೂ, ಘೋರರೂಪನೂ, ಭಯಂಕರನೂ, ಅತ್ಯಂತ ಭಯಂಕರನೂ, ಮಂಗಳನೂ, ಅತ್ಯಂತ ಶಾಂತಮೂರ್ತಿಯೂ ಆದ ನಿನಗೆ ನಮಸ್ಕಾರ.
ಏಕಪಾದ್ ಬಹುನೇತ್ರಾಯ ಏಕಶೀರ್ಷ್ಣೇ ನಮೋಸ್ತು ತೇ |
ರುದ್ರಾಯ ಕ್ಷುದ್ರಲುಬ್ಧಾಯ ಸಂವಿಭಾಗಪ್ರಿಯಾಯ ಚ ॥102॥
ಏಕಪಾದನಾದ, ಬಹುನೇತ್ರನಾದ, ಏಕಶೀರ್ಷ್ಣನಾದ ರುದ್ರನೇ, ಭಕ್ತರು ಕೊಡುವ ಅಲ್ಪ ಪದಾರ್ಥವನ್ನು ಸ್ವೀಕರಿಸುವ, ಆ ಕರ್ಮಗಳಿಗೆ ಅನುಗುಣವಾಗಿ ಫಲವನ್ನು ವಿಭಾಗ ಮಾಡಲು ಆಸಕ್ತಿಯುಳ್ಳ ನಿನಗೆ ನಮಸ್ಕರಿಸುತ್ತೇನೆ.
ಪಂಚಾಲಾಯ ಸಿತಾಂಗಾಯ ನಮಃ ಶಮಶಮಾಯ ಚ |
ನಮಶ್ಚಂಡಿಕಘಂಟಾಯ ಘಂಟಾಯಾಘಂಟಘಂಟಿನೇ ॥103॥
ಪಂಚಾಲನೆನಿಸಿದ ವಿಶ್ವಕರ್ಮನಲ್ಲಿ ಅಂತರ್ಯಾಮಿಯಾಗಿರುವ, ಬಿಳಿಯಾದ ದೇಹದಿಂದ ಕೂಡಿರುವ, ಅತ್ಯಂತ ಭಗವನ್ನಿಷ್ಠನಾಗಿರುವ, ಭಯವನ್ನುಂಟು ಮಾಡುವ ಘಂಟೆಯನ್ನು ಧರಿಸಿರುವ, ಘಂಟಾಸುರನಾದ, ಅಘಂಟಘಂಟಿ ಎನಿಸಿದ ನಿನಗೆ ನಮಸ್ಕಾರ.
ಸಹಸ್ರಾಧ್ಮಾತಘಂಟಾಯ ಘಂಟಾಮಾಲಾಪ್ರಿಯಾಯ ಚ |
ಪ್ರಾಣಘಂಟಾಯ ಗಂಧಾಯ ನಮಃ ಕಲಕಲಾಯ ಚ ॥104॥
ಸಾವಿರಾರು ಜೀವರ ಅಧ್ಯಾತ್ಮವೆಂಬ ಘಂಟೆಗೆ ಜ್ಞಾನಪ್ರದನಾಗಿ ನಿಯಾಮಕನಾಗಿರುವ, ಘಂಟಾಮಾಲಾಪ್ರಿಯನಾಗಿರುವ, ಪ್ರಾಣಾದಿ ಶಬ್ದಗಳ ಘಂಟೆಯನ್ನು ಧರಿಸಿರುವ, ಶ್ರೇಷ್ಠವಾದ ಗಂಧವುಳ್ಳ, ಕೋಲಾಹಲ ರೂಪಿಯಾದ ನಿನಗೆ ನಮಸ್ಕಾರ.
ಹೂಂಹೂಂಹೂಂಕಾರಪಾರಾಯ ಹೂಂಹೂಂಕಾರಪ್ರಿಯಾಯ ಚ |
ನಮಃ ಶಮಶಮೇ ನಿತ್ಯಂ ಗಿರಿವೃಕ್ಷಾಲಯಾಯ ಚ ॥105॥
ಹೂಂಹೂಂ ಎಂಬ ಹೂಂಕಾರಕ್ಕೆ ದಡದಂತಿರುವ, ಹೂಂಹೂಂಕಾರರಿಗೆ ಪ್ರಿಯನಾದ (ತರ್ಜನ ಮಾಡುವವರಲ್ಲಿ ರುದ್ರದೇವರು ಹೂಂಕಾರದಿಂದ ಇದ್ದಾರೆ), ನಿತ್ಯವೂ ಶಾಂತರಾಗಿರಿ, ಶಾಂತರಾಗಿರಿ ಎಂದು ಹೇಳುವ, ಪರ್ವತ-ಮರ ಮೊದಲಾದವುಗಳೇ ಮನೆಯಾಗಿ ಉಳ್ಳ ನಿನಗೆ ನಮಸ್ಕಾರ.
ಗರ್ಭಮಾಂಸಸೃಗಾಲಾಯ ತಾರಕಾಯ ತರಾಯ ಚ |
ನಮೋ ಯಜ್ಞಾಯ ಯಜಿನೇ ಹುತಾಯ ಪ್ರಹುತಾಯ ಚ ॥106॥
ವಪೆಯಲ್ಲಿ ಆಸಕ್ತನಾಗಿರುವ, ಎಲ್ಲರನ್ನೂ ಸಂಸಾರ ಸಮುದ್ರದಿಂದ ಜ್ಞಾನಪ್ರದಾನದಿಂದ ದಾಟಿಸುವ, ಸ್ವಯಂ ದಾಟಿರುವ, ಯಜ್ಞರೂಪನೂ, ಯಜ್ಞ ಮಾಡಿಸುವವನೂ, ಹೋಮಿಸುವ ದ್ರವ್ಯನೂ, ಹೋಮಿಸುವವನೂ ಆದ ನಿನಗೆ ನಮಸ್ಕಾರ.
ಯಜ್ಞವಾಹಾಯ ದಾಂತಾಯ ತಪ್ಯಾಯಾತಪನಾಯ ಚ |
ನಮಸ್ತಟಾಯ ತಟ್ಯಾಯ ತಟಾನಾಂ ಪತಯೇ ನಮಃ ॥107॥
ಯಜ್ಞದ ನಿರ್ವಾಹಕನಾಗಿರುವ, ಜಿತೇಂದ್ರಿಯನಾಗಿರುವ, ಸ್ವಯಂ ಜಪಾದಿಗಳಿಂದ ತಪನ ಹೊಂದಿರುವ, ಅಯೋಗ್ಯರನ್ನು ತಪನಗೊಳಿಸುವ, ನದಿಗಳ ದಡರೂಪದಲ್ಲಿರುವ, ದಡವನ್ನು ಹೊಂದಿಸುವವನಾದ, ತಟಿಗಳಿಗೂ ಪತಿ ಎನಿಸಿದ ಪಶುಪತಿಯೇ ನಿನಗೆ ನಮಸ್ಕಾರ.
ಅನ್ನದಾಯಾನ್ನಪತಯೇ ನಮಸ್ತ್ವನ್ನಭುಜೇ ತಥಾ |
ನಮಃ ಸಹಸ್ರಶೀರ್ಷಾಯ ಸಹಸ್ರಚರಣಾಯ ಚ ॥108॥
ಅನ್ನವನ್ನು ನೀಡುವವನಾದ, ಅನ್ನಪತಿಯಾದ, ಅನ್ನಭೋಕ್ತೃನಾದ, ಸಾವಿರ ತಲೆಗಳಿಂದ ಮತ್ತು ಸಾವಿರ ಕಾಲುಗಳಿಂದ ಕೂಡಿರುವ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ ಇಲ್ಲಿ ಸಹಸ್ರ ಶಬ್ದಕ್ಕೆ ಅನಂತ ಎಂದು ಅರ್ಥ. ಅನಂತ ಜೀವರ ಶಿರಃಪಾಣಿಗಳಿಗೆ ಮನೋನಿಯಾಮಕರಾದ ರುದ್ರದೇವರು ನಿಯಾಮಕರಾಗಿರುವುದರಿಂದ ಈ ರೀತಿಯಾಗಿ ಸ್ತುತಿಸಿರುತ್ತಾನೆ.
ಸಹಸ್ರೋದ್ಯತಶೂಲಾಯ ಸಹಸ್ರನಯನಾಯ ಚ |
ನಮೋ ಬಾಲಾರ್ಕವರ್ಣಾಯ ಬಾಲರೂಪಧರಾಯ ಚ ॥109॥
ಸಾವಿರಾರು ಶೂಲಗಳನ್ನು ಎತ್ತಿಹಿಡಿದಿರುವ, ಸಾವಿರಾರು ಕಣ್ಣುಗಳಿಂದ ಕೂಡಿರುವ, ಉದಿಸುವ ಸೂರ್ಯನಂತೆ ತಿಳಿಯಾದ ಬಣ್ಣದಿಂದ ಕೂಡಿರುವ, ಬಾಲಕ ರೂಪವನ್ನು ಧರಿಸಿರುವ ನಿನಗೆ ನಮಸ್ಕಾರ.

ಬಾಲಾನುಚರಗೋಪ್ತಾಯ ಬಾಲಕ್ರೀಡನಕಾಯ ಚ |
ನಮೋ ವೃದ್ಧಾಯ ಲುಬ್ಧಾಯ ಕ್ಷುಬ್ಧಾಯ ಕ್ಷೋಭಣಾಯ ಚ ॥110॥
ಬಾಲಕರ ಅನುಚರರನ್ನು ರಕ್ಷಿಸುವ, ಬಾಲಕರೊಡನೆ ಆಟವಾಡುವ, ಎಲ್ಲರಿಗಿಂತಲೂ ವೃದ್ಧನಾಗಿರುವ, ಭಕ್ತಿ-ಪ್ರೀತಿಗಳನ್ನು ಬಯಸುವ, ದುಷ್ಕರ ಪಾಪ ಕಾರ್ಯವನ್ನು ನೋಡಿ ಕ್ಷೋಭೆಗೊಳ್ಳುವ, ದುರಾಚಾರಿಗಳನ್ನು ಕ್ಷೋಭೆಗೊಳಿಸುವ ನಿನಗೆ ನಮಸ್ಕಾರ.
ತರಂಗಾಂಕಿತಕೇಶಾಯ ಮುಂಜಕೇಶಾಯ ವೈ ನಮಃ |
ನಮಃ ಷಟ್‌ಕರ್ಮತುಷ್ಟಾಯ ತ್ರಿಕರ್ಮನಿರತಾಯ ಚ ॥111॥
ಗಂಗೆಯ ತರಂಗಗಳಂತೆ ಚಿಹ್ನೆಯನ್ನು ಹೊಂದಿರುವ, ಕೇಶರಾಶಿಯನ್ನು ಹೊಂದಿರುವ, ಮುಂಜ ಎನ್ನುವ ಹುಲ್ಲಿಗೆ ಸಮಾನವಾದ ಕೇಶವನ್ನು ಹೊಂದಿರುವ, ಯಜನ-ಯಾಜನ-ಅಧ್ಯಯನ-ಅಧ್ಯಾಪನ-ದಾನ-ಪ್ರತಿಗ್ರಹ ಎಂಬ ಷಟ್ಕರ್ಮಗಳಿಂದ ಸಂತುಷ್ಟನಾಗುವ, ಮಾತು-ಮನಸ್ಸು-ಕೃತಿಗಳಲ್ಲಿ ಭಗವನ್ನಿಷ್ಠವಾದ ಕರ್ಮಗಳನ್ನು ಮಾಡಲು ಆಸಕ್ತನಾಗಿರುವ ನಿನಗೆ ನಮಸ್ಕಾರ.
ವರ್ಣಾಶ್ರಮಾಣಾಂ ವಿಧಿವತ್ ಪೃಥಕ್ಕರ್ಮನಿವರ್ತಿನೇ |
ನಮೋ ಘುಷ್ಯಾಯ ಘೋಷಾಯ ನಮಃ ಕಲಕಲಾಯ ಚ ॥112॥
ವರ್ಣ ಮತ್ತು ಆಶ್ರಮಗಳ ಕರ್ಮಗಳನ್ನು ವಿಧಿವತ್ತಾಗಿ ವಿಭಾಗಿಸುವ, ಜಪಿಸುವ ಮಂತ್ರರೂಪನಾದ, ಘೋಷರೂಪನಾದ, ಕೋಲಾಹಲ ಶಬ್ದಗಳಿಗೆ ನಿಯಾಮಕನಾದ ನಿನಗೆ ನಮಸ್ಕಾರ.
ಶ್ವೇತಪಿಂಗಲನೇತ್ರಾಯ ಕೃಷ್ಣರಕ್ತೇಕ್ಷಣಾಯ ಚ |
ಪ್ರಾಣಭಗ್ನಾಯ ದಂಡಾಯ ಸ್ಫೋಟನಾಯ ಕೃಶಾಯ ಚ ॥113॥
ಶ್ವೇತ ಮತ್ತು ಪಿಂಗಲ ಕಣ್ಣುಗಳಿಂದ ಕೂಡಿರುವ, ಅತ್ಯಂತ ಕೆಂಪಾದ ಕಣ್ಣುಗಳಿಂದ ಕೂಡಿರುವ, ಪ್ರಾಣವಾಯುವನ್ನು ಜಯಿಸಿರುವ, ಆಯುಧ ರೂಪನಾದ, ಸಂಹಾರಕನಾದ, ಕೃಶಕಾಯನಾದ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ ಶ್ವೇತ-ಪಿಂಗಲ-ರಕ್ತ-ಕೃಷ್ಣ ಎಂಬ ರೂಪಗಳ ಕಣ್ಣನ್ನು ಇಲ್ಲಿ ವರ್ಣಿಸಿದ್ದಾರೆ. ವಾದಿರಾಜರು ಸರಸಭಾರತಿ ವಿಲಾಸದಲ್ಲಿ- `ತ್ರಿನೇತ್ರ ಪಂಕ್ತ್ಯಾ ಲಸಿತಂ ಪಂಚವಕ್ತ್ರಂ ಶುಚಿಸ್ಮಿತಮ್| ಪೀತಶ್ವೇತಾರುಣಹರಿತ್ ಶ್ಯಾಮಾನನ ಸರೋರುಹಮ್' ಎಂದು ಇದೇ ರೂಪಗಳನ್ನು ಬಣ್ಣಿಸಿರುತ್ತಾರೆ.
ಧರ್ಮಕಾಮಾರ್ಥಮೋಕ್ಷಾಣಾಂ ಕಥನೀಯಕಥಾಯ ಚ |
ಸಾಂಖ್ಯಾಯ ಸಾಂಖ್ಯಮುಖ್ಯಾಯ ಸಾಂಖ್ಯಯೋಗಪ್ರವರ್ತಿನೇ ॥114॥
ಭಕ್ತರಿಗೆ ಚತುರ್ವಿಧ ಪುರುಷಾರ್ಥಗಳನ್ನು ದಯಪಾಲಿಸುವ ವಿಷಯದಲ್ಲಿ ಪ್ರಸಿದ್ಧವಾದ ಕೀರ್ತಿಯನ್ನು ಹೊಂದಿರುವ, ಸಾಂಖ್ಯನಾದ, ಯಥಾರ್ಥಜ್ಞಾನಕ್ಕೆ ನಿಯಾಮಕನಾದ, ಸಾಂಖ್ಯ ಎನಿಸಿದ ಭಗವತ್ತತ್ತ್ವ ಯೋಗಕ್ಕೆ ಪ್ರವರ್ತಕನಾದ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ `ಸಾಂಖ್ಯಂ ಯಥಾರ್ಥವಿಜ್ಞಾನಂ'
ನಮೋ ರಥ್ಯವಿರಥ್ಯಾಯ ಚತುಷ್ಪಥರಥಾಯ ಚ |
ಕೃಷ್ಣಾಜಿನೋತ್ತರೀಯಾಯ ವ್ಯಾಲಯಜ್ಞೋಪವೀತಿನೇ ॥115॥
ರಥದಲ್ಲಿ ಸಂಚರಿಸುವ, ರಥವಿಲ್ಲದೆಯೂ ಸಂಚರಿಸುವ, ಜಲ-ಅಗ್ನಿ-ವಾಯು- ಆಕಾಶವೆಂಬ ನಾಲ್ಕು ಮಾರ್ಗದಲ್ಲಿಯೂ ಸಂಚರಿಸುವ ರಥವುಳ್ಳ, ಕೃಷ್ಣಾಜಿನವನ್ನೇ ಉತ್ತರೀಯವಾಗಿ ಧರಿಸಿರುವ, ಸರ್ಪವನ್ನೇ ಯಜ್ಞೋಪವೀತವನ್ನಾಗಿ ಧರಿಸಿರುವ ನಿನಗೆ ನಮಸ್ಕಾರ.
ಈಶಾನವಜ್ರಸಂಘಾತಹರಿಕೇಶ ನಮೋಸ್ತು ತೇ |
ತ್ರ್ಯಂಬಕಾಂಬಿಕನಾಥಾಯ ವ್ಯಕ್ತಾವ್ಯಕ್ತ ನಮೋಸ್ತು ತೇ ॥116॥
ಈಶಾನಮೂರ್ತಿಯೇ, ವಜ್ರ ಸಮಾನ ಶರೀರವುಳ್ಳವನೇ, ಹರಿಕೇಶನೇ ನಿನಗೆ ನಮಸ್ಕಾರ. ತ್ರ್ಯಂಬಕನೇ, ಅಂಬಿಕಾನಾಥನೇ, ವ್ಯಕ್ತಾವ್ಯಕ್ತ ಸ್ವರೂಪನೇ ನಿನಗೆ ನಮಸ್ಕಾರ.
ಕಾಮ ಕಾಮದ ಕಾಮಘ್ನ ತೃಪ್ತಾತೃಪ್ತವಿಚಾರಿಣೇ |
ಸರ್ವ ಸರ್ವದ ಸರ್ವಘ್ನ ಸಂಧ್ಯಾರಾಗ ನಮೋಸ್ತು ತೇ ॥117॥
ಕಾಮರೂಪನೇ, ಕಾಮ ನೀಡುವವನೇ, ಕಾಮಜ್ಞನೇ, ತೃಪ್ತರನ್ನು ಅತೃಪ್ತರನ್ನು ವಿಮರ್ಶಿಸುವವನೇ, ಯಾವಾಗಲೂ ಎಲ್ಲವನ್ನೂ ನೀಡುವವನೇ, ಎಲ್ಲರನ್ನೂ ಸಂಹರಿಸುವವನೇ, ಸಂಧ್ಯಾರಾಗದಂತೆ ಕಾಂತಿಯುಳ್ಳವನೇ ನಿನಗೆ ನಮಸ್ಕಾರ.
ಮಹಾಬಲ ಮಹಾಬಾಹೋ ಮಹಾಸತ್ವ ಮಹಾದ್ಯುತೇ |
ಮಹಾಮೇಘಚಯಪ್ರಖ್ಯ ಮಹಾಕಾಲ ನಮೋಸ್ತು ತೇ |
ಸ್ಥೂಲಜೀರ್ಣಾಂಗಜಟಿನೇ ವಲ್ಕಲಾಜಿನಧಾರಿಣೇ ॥118॥
ಮಹಾಬಲನೇ, ಮಹಾಬಾಹುವೇ, ಮಹಾಸತ್ವನೇ, ಮಹಾದ್ಯುತಿಯೇ, ಮಹಾ ಮೇಘಕ್ಕೆ ಸಮನಾದ ಕಾಂತಿಯುಳ್ಳವನೇ, ಮಹಾಕಾಲನೇ ನಿನಗೆ ನಮಸ್ಕಾರ. ಸ್ಥೂಲ ಸ್ವರೂಪನೇ, ಜೀರ್ಣವಾದ ಅಂಗವುಳ್ಳವನೇ, ಜಟಾಧಾರಿಯೇ, ನಾರುಮಡಿಯನ್ನು ಮೃಗಚರ್ಮವನ್ನು ಧರಿಸಿದವನೇ ನಿನಗೆ ನಮಸ್ಕಾರ.
ದೀಪ್ತಸೂರ್ಯಾಗ್ನಿಜಟಿನೇ ವಲ್ಕಲಾಜಿನವಾಸಸೇ |
ಸಹಸ್ರಸೂರ್ಯಪ್ರತಿಮ ತಪೋನಿತ್ಯ ನಮೋಸ್ತು ತೇ ॥119॥
ಸೂರ್ಯಾಗ್ನಿಗಳ ಪ್ರಭೆಗೆ ಸಮಾನವಾದ ಜಟೆಯನ್ನು ಧರಿಸಿರುವವನೇ, ನಾರು ಮಡಿಯನ್ನು ಗಜಚರ್ಮವನ್ನು ವಸ್ತ್ರವನ್ನಾಗಿ ಧರಿಸಿರುವವನೇ, ಸಹಸ್ರಸೂರ್ಯರಿಗೆ ಸದೃಶವಾದ ಕಾಂತಿಯಿಂದ ಬೆಳಗುವವನೇ, ನಿತ್ಯವೂ ತಪೋನಿರತನೇ ನಿನಗೆ ನಮಸ್ಕಾರ.
ಉನ್ಮಾದನಶತಾವರ್ತ ಗಂಗಾತೋಯಾರ್ದ್ರಮೂರ್ಧಜ |
ಚಂದ್ರಾವರ್ತ ಯುಗಾವರ್ತ ಮೇಘಾವರ್ತ ನಮೋಸ್ತು ತೇ ॥120॥

ಜಗತ್ತನ್ನು ಮೋಹಗೊಳಿಸುವ ನೂರಾರು ಸುಳಿಯುಳ್ಳವನೇ, ಗಂಗೆಯ ನೀರಿನಿಂದ ತೊಯ್ದ ಕೂದಲಿನಿಂದ ಕೂಡಿದವನೇ, ಚಂದ್ರನ ಕ್ಷಯ-ವೃದ್ಧಿಗಳಿಗೆ ಕಾರಣನಾದವನೇ, ಮೇಘಗಳ ಪ್ರವರ್ತಕನೇ (ಮೇಘವೆಂಬ ಸುಳಿಯುಳ್ಳವನೇ) ನಿನಗೆ ನಮಸ್ಕಾರ.
ತ್ವಮನ್ನಮತ್ತಾ ಭೋಕ್ತಾ ಚ ಅನ್ನದೋಽನ್ನಭುಗೇವ ಚ |
ಅನ್ನಸ್ರಷ್ಟಾ ಚ ಪಕ್ತಾ ಚ ಪಕ್ವಭುಕ್ಪವನೋಽನಲಃ ॥121॥
ನೀನು ಅನ್ನಸ್ವರೂಪನೂ, ಅನ್ನಭೋಕ್ತೃವೂ, ಅನ್ನದಾತೃವೂ, ಅನ್ನರಕ್ಷಕನೂ, ಅನ್ನಸೃಷ್ಟೃವೂ, ಅನ್ನವನ್ನು ಬೇಯಿಸುವವನು, ಪಕ್ವವಾದ ಅನ್ನವನ್ನು ತಿನ್ನುವವನು, ಜಠರಾಗ್ನಿ ಸ್ವರೂಪನೂ ಆಗಿರುವೆ. ನಿನಗೆ ನಮಸ್ಕಾರ.
ಜರಾಯುಜಾಂಡಜಾಶ್ಚೈವ ಸ್ವೇದಜಾಶ್ಚ ತಥೋದ್ಭಿಜಾಃ |
ತ್ವಮೇವ ದೇವದೇವೇಶ ಭೂತಗ್ರಾಮಶ್ಚತುರ್ವಿಧಃ ॥122॥
ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ ಎಂಬ ನಾಲ್ಕು ಪ್ರಕಾರ ಪ್ರಾಣಿಗಳಿಗೆ ನಿಯಾಮಕನಾಗಿರುವ ದೇವದೇವೇಶನೇ, ನಿನಗೆ ನಮಸ್ಕಾರ.
ಚರಾಚರಸ್ಯ ಸ್ರಷ್ಟಾ ತ್ವಂ ಪ್ರತಿಹರ್ತಾ ತಥೈವ ಚ |
ತ್ವಾಮಾಹುರ್ಬ್ರಹ್ಮವಿದುಷೋ ಬ್ರಹ್ಮ ಬ್ರಹ್ಮವಿದಾಂವರ ॥123॥
ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನೇ, ಚರಾಚರ ಜಗತ್ತನ್ನು ಸೃಷ್ಟಿ ಮಾಡುವವನು ಸಂಹಾರ ಮಾಡುವವನು ಆಗಿರುವಿ. ಬ್ರಹ್ಮಜ್ಞಾನಿಗಳು ನಿನ್ನನ್ನು ಬ್ರಹ್ಮ ಎನ್ನುತ್ತಾರೆ.
ಮನಸಃ ಪರಮಾ ಯೋನಿಃ ಖಂ ವಾಯುರ್ಜ್ಯೋತಿಷಾಂ ನಿಧಿಃ |
ಋಕ್ಸಾಮಾನಿ ತಥೋಂಕಾರಮಾಹುಸ್ತ್ವಾಂ ಬ್ರಹ್ಮವಾದಿನಃ ॥124॥
ಬ್ರಹ್ಮವಿದರಾದ ವಿದ್ವಾಂಸರು ಮನಸ್ಸಿಗೆ ನೀನೇ ಕಾರಣನೆಂದು, ಆಕಾಶ ವಾಯುಗಳ ನಿಯಾಮಕನೆಂದೂ, ಜ್ಯೋತಿಸ್ವರೂಪನೆಂದೂ, ಋಕ್ಸಾಮ ವೇದಗಳ ಓಂಕಾರಗಳ ಅರ್ಥವನ್ನು ಉಪದೇಶಿಸುವವನೆಂದು ಬ್ರಹ್ಮವಾದಿಗಳು ಹೇಳುತ್ತಾರೆ.
ಹಾಯಿಹಾಯಿ ಹುವಾಹಾಯಿ ಹಾವುಹಾಯಿ ತಥಾಽಸಕೃತ್ |
ಗಾಯಂತಿ ತ್ವಾಂ ಸುರಶ್ರೇಷ್ಠ ಸಾಮಗಾ ಬ್ರಹ್ಮವಾದಿನಃ ॥125॥
ಸಾಮಗಾನವನ್ನು ಮಾಡುವ ವೇದಾಧ್ಯಾಯಿಗಳು ಹಾಯಿಹಾಯಿ ಹುವಾಹಾಯಿ ಹಾವುಹಾಯಿ ಎಂದು ನಿನ್ನ ಮಹಿಮೆಯನ್ನೇ ಅನೇಕ ಬಾರಿ ಸಾಮಗಾನವನ್ನು ಮಾಡುತ್ತಾರೆ.
ಯಜುರ್ಮಯೋ ಋಙ್ಮಯಶ್ಚ ತ್ವಮಾಹುತಿಮಯಸ್ತಥಾ |
ಪಠ್ಯಸೇ ಸ್ತುತಿಭಿಶ್ಚೈವ ವೇದೋಪನಿಷದಾಂ ಗಣೈಃ ॥126॥
ನೀನು ಯಜುರ್ವೇದ, ಋಗ್ವೇದಗಳಿಗೆ ನಿಯಾಮಕನಾಗಿರುವಿ. ನಿನ್ನನ್ನು ಆಹುತಿಮಯನೆಂದು ಹೇಳುತ್ತಾರೆ. ವೇದ-ಉಪನಿಷತ್ತು-ಮಂತ್ರಗಳ ಮೂಲಕ ನಿನ್ನ ಮಹಿಮೆಯನ್ನು ಸ್ತುತಿಸುತ್ತಾರೆ.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವರ್ಣಾವರಾಶ್ಚ ಯೇ |
ತ್ವಮೇವ ಮೇಘಸಂಘಾಶ್ಚ ವಿದ್ಯುತ್‌ಸ್ತನಿತಗರ್ಜಿತಃ ॥127॥
ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ವರ್ಣಬಾಹ್ಯರೂ ಎಲ್ಲರೂ ನಿನ್ನನ್ನೇ ಅಂತರ್ಯಾಮಿಯಾಗಿ ಹೊಂದಿರುತ್ತಾರೆ. ಮೇಘಗಳ ಸಮೂಹ, ಮಿಂಚು, ಗುಡುಗು, ಸಿಡಿಲು ಇವೆಲ್ಲವೂ ನೀನೇ ಆಗಿರುತ್ತಿ.
ವ್ಯಾಖ್ಯಾನ ವಿಶೇಷ `ಮಹರುದ್ರನು ಮನೋನಿಯಾಮಕನಾಗಿರುವುದರಿಂದ ಅದಕ್ಕಿಂತಲೂ ಅವರವಾದ ಪಂಚಭೂತಗಳಿಗೂ ನಿಯಾಮಕನಾಗಿದ್ದಾನೆ. ಹಾಗಾಗಿ ಪಂಚಭೂತಗಳ ಅಂತರ್ಯಾಮಿಯಾಗಿಯೂ, ಪಂಚಭೂತಗಳ ಅಭಿಮಾನಿ ದೇವತೆಗಳಿಗೆ ನಿಯಾಮಕನಾಗಿಯೂ ಇರುವುದರಿಂದ ಪ್ರಧಾನ ನಿಯಾಮಕತ್ವವನ್ನು ಚಿಂತಿಸಿ ಅವೇ ವಸ್ತುಗಳೇ ರುದ್ರನೆಂದು ಇಲ್ಲಿ ಹೇಳಲಾಗಿದೆ. ಅಂತರ್ಯಾಮಿ ಎಂದು ವಿವಕ್ಷಿಸಿಕೊಂಡು ಹೇಳಬೇಕು. ಮುಖ್ಯನಿಯಾಮಕನು ಭಗವಂತನೇ ಆಗಿದ್ದಾನೆಂದು ಮರೆಯಬಾರದು.
ಸಂವತ್ಸರಸ್ತ್ವಮೃತವೋ ಮಾಸೋ ಮಾಸಾರ್ಧಮೇವ ಚ |
ಯುಗಂ ನಿಮೇಷಾಃ ಕಾಷ್ಠಾಸ್ತ್ವಂ ನಕ್ಷತ್ರಾಣಿ ಗ್ರಹಾಃ ಕಲಾಃ ॥128॥
ಸಂವತ್ಸರ, ಋತು, ಮಾಸ, ಪಕ್ಷ, ಯುಗ, ನಿಮೇಷ, ಕಾಷ್ಠ, ನಕ್ಷತ್ರ, ಗ್ರಹ, ಕಲಾ- ಇವೆಲ್ಲವೂ ನೀನೇ ಆಗಿರುವಿ.
ವೃಕ್ಷಾಣಾಂ ಕಕುದೋಽಸಿ ತ್ವಂ ಗಿರೀಣಾಂ ಶಿಖರಾಣಿ ಚ |
ವ್ಯಾಘ್ರೋ ಮೃಗಾಣಾಂ ಪತತಾಂ ತಾರ್ಕ್ಷ್ಯೋಽನಂತಶ್ಚ ಭೋಗಿನಾಮ್ ॥
ವೃಕ್ಷಗಳಲ್ಲಿ ಶ್ರೇಷ್ಠವಾದ ಅಶ್ವತ್ಥವೃಕ್ಷನು ನೀನೇ. ಶಿಖರಗಳಲ್ಲಿ ಶ್ರೇಷ್ಠನು ನೀನೇ, ಮೃಗಗಳಲ್ಲಿ ವ್ಯಾಘ್ರ, ಪಕ್ಷಿಗಳಲ್ಲಿ ಗರುಡ, ಸರ್ಪಗಳಲ್ಲಿ ಅನಂತನಾಗಿರುವಿ.
ಕ್ಷೀರೋದೋ ಹ್ಯುದಧೀನಾಂ ಚ ಯಂತ್ರಾಣಾಂ ಧನುರೇವ ಚ |
ವಜ್ರಃ ಪ್ರಹರಣಾನಾಂ ಚ ವ್ರತಾನಾಂ ಸತ್ಯಮೇವ ಚ ॥130॥
ಸಮುದ್ರಗಳಲ್ಲಿ ಕ್ಷೀರಸಮುದ್ರನಾಗಿರುವಿ. ಯಂತ್ರಗಳಲ್ಲಿ ಧನುಸ್ಸಾಗಿರುವಿ. ಪ್ರಹರಿಸುವ ಆಯುಧಗಳಲ್ಲಿ ವಜ್ರಾಯುಧನಾಗಿರುವಿ. ವ್ರತಗಳಲ್ಲಿ ಸತ್ಯವ್ರತನಾಗಿರುವಿ.
ತ್ವಮೇವ ದ್ವೇಷ ಇಚ್ಛಾ ಚ ರಾಗೋ ಮೋಹಃ ಕ್ಷಮಾಕ್ಷಮೇ |
ವ್ಯವಸಾಯೋ ಧೃತಿರ್ಲೋಭಃ ಕಾಮಕ್ರೋಧೌ ಜಯಾಜಯೌ ॥131॥
ಇಚ್ಛಾ, ದ್ವೇಷ, ರಾಗ, ಮೋಹ, ಕ್ಷಮ, ಅಕ್ಷಮ, ವ್ಯವಸಾಯ, ಧೃತಿ, ಕಾಮ, ಕ್ರೋಧ, ಲೋಭ, ಜಯ, ಪರಾಜಯ ಇವೆಲ್ಲವೂ ನೀನೇ ಆಗಿರುವಿ.
ತ್ವಂ ಗದೀ ತ್ವಂ ಶರೀ ಚಾಪೀ ಖಟ್ವಾಂಗೀ ಝುರ್ಝುರೀ ತಥಾ |

ಛೇತ್ತಾ ಭೇತ್ತಾ ಪ್ರಹರ್ತಾ ತ್ವಂ ನೇತಾ ಮಂತಾ ಪಿತಾ ಮತಃ ॥132॥
ಗದೆಯುಳ್ಳವನು, ಬಾಣವುಳ್ಳವನು, ಧನುಸ್ಸುಳ್ಳವನು, ತ್ರಿಶೂಲವುಳ್ಳವನು, ಝುರ್ಝುರ ಎಂಬ ಹೆಸರಿನ ಅಸ್ತ್ರವುಳ್ಳವನು,
ಛೇದಕ-ಭೇದಕ-ಪ್ರಹಾರಕ-ಸತ್ವದಾಯಕ ಎಲ್ಲವೂ ನೀನಾಗಿರುವಿ. ಶುಭವನ್ನು ಮನನ ಮಾಡುವವನು, ತಂದೆಯೂ ನೀನೇ ಆಗಿರುವಿ.
ದಶಲಕ್ಷಣಸಂಯುಕ್ತೋ ಧರ್ಮೋऽರ್ಥಃ ಕಾಮ ಏವ ಚ |
ಗಂಗಾ ಸಮುದ್ರಾಃ ಸರಿತಃ ಪಲ್ವಲಾನಿ ಸಂರಾಸಿ ಚ ॥133॥
ಹತ್ತು ಲಕ್ಷಣದಿಂದ ಕೂಡಿರುವ ಧರ್ಮ-ಅರ್ಥ-ಕಾಮ ಇವುಗಳು ನೀನೇ ಆಗಿರುವಿ. ಗಂಗೆ, ಸಮುದ್ರ, ನದಿಗಳು, ಸಣ್ಣ ಕೊಳಗಳು
ಎಲ್ಲವೂ ನೀನೇ ಆಗಿರುವಿ.
ಲತಾ ವಲ್ಲ್ಯಸ್ತೃಣೌಷಧ್ಯಃ ಪಶವೋ ಮೃಗಪಕ್ಷಿಣಃ |
ದ್ರವ್ಯಕರ್ಮಸಮಾರಂಭಃ ಕಾಲಃ ಪುಷ್ಪಫಲಪ್ರದಃ ॥134॥
ಲತೆಗಳು, ಬಳ್ಳಿಗಳು, ತೃಣ, ಓಷಧಿ, ಪಶು, ಮೃಗ, ಪಕ್ಷಿ, ದ್ರವ್ಯಯುಕ್ತವಾದ ಕರ್ಮಾರಂಭಗಳು, ಪುಷ್ಪ-ಫಲಗಳನ್ನು ಕೊಡುವ ಕಾಲ-
ಎಲ್ಲವೂ ನೀನೇ ಆಗಿರುವಿ.
ಆದಿಶ್ಚಾಂತಶ್ಚ ದೇವಾನಾಂ ಗಾಯತ್ರ್ಯೋಂಕಾರ ಏವ ಚ |
ಹರಿತೋ ರೋಹಿತೋ ನೀಲಃ ಕೃಷ್ಣೋ ರಕ್ತಸ್ತಥಾऽರುಣಃ |
ಕದ್ರುಶ್ಚ ಕಪಿಲಶ್ಚೈವ ಕಪೋತೋ ಮೇಚಕಸ್ತಥಾ ॥135॥
ದೇವತೆಗಳಿಗೆ ಆದಿಯೂ ಅಂತ್ಯನೂ ನೀನೇ. ಗಾಯತ್ರಿ-ಓಂಕಾರವೂ ನೀನೇ.
ಹರಿತ-ರೋಹಿತ-ನೀಲ-ಕೃಷ್ಣ-ರಕ್ತ-ಅರುಣ-ಕದ್ರು-ಕಪಿಲ-ಕಪೋತ-ಮೇಚಕ ಎಂಬ ಹತ್ತು ಬಣ್ಣದವನು ನೀನೇ ಆಗಿರುವಿ.
ಅವರ್ಣಶ್ಚ ಸುವರ್ಣಶ್ಚ ವರ್ಣಕಾರೋ ಘನೋಪಮಃ |
ಸುವರ್ಣನಾಮಾ ಚ ತಥಾ ಸುವರ್ಣಪ್ರಿಯ ಏವ ಚ ॥136॥
ದುಷ್ಟವರ್ಣರಹಿತನು, ಒಳ್ಳೆಯ ವರ್ಣ ಸಹಿತನು, ವರ್ಣಗಳನ್ನು ಸೃಷ್ಟಿಸುವವನು, ಮೇಘಕ್ಕೆ ಸಮಾನನಾಗಿರುವವನು,
ಸುವರ್ಣನಾಮಕನು, ಸುವರ್ಣಪ್ರಿಯನು ನೀನೇ ಆಗಿರುವಿ.
ತ್ವಮಿಂದ್ರಶ್ಚ ಯಮಶ್ಚೈವ ವರುಣೋ ಧನದೋऽನಲಃ |
ಉಪಪ್ಲವಶ್ಚಿತ್ರಭಾನುಃ ಸ್ವರ್ಭಾನುರ್ಭಾನುರೇವ ಚ ॥137॥
ನೀನು ಇಂದ್ರ, ಯಮ, ವರುಣ, ಅಗ್ನಿ, ಕುಬೇರ, ಚಂದ್ರ, ಗ್ರಹಣಗಳು, ರಾಹು, ಭಾನು ಎಲ್ಲರ ಅಂತರ್ಯಾಮಿಯಾಗಿರುವಿ.
ಹೋತ್ರಂ ಹೋತಾ ಚ ಹೋಮ್ಯಂ ಚ ಹುತಂ ಚೈವ ತಥಾ ಪ್ರಭುಃ |
ತ್ರಿಸೌಪರ್ಣಂ ತಥಾ ಬ್ರಹ್ಮ ಯಜುಷಾಂ ಶತರುದ್ರಿಯಮ್ ॥138॥
ಹೋತ್ರ, ಹೋತಾ, ಹೋಮಮಾಡುವ ಪದಾರ್ಥ, ಹವನ ಕ್ರಿಯೆ ಇವುಗಳಿಗೆ ಫಲಪ್ರದನು, ಪ್ರಭುವು ನೀನೇ ಆಗಿರುವಿ. ಯಜುರ್ವೇದದ
ತ್ರಿಸುಪರ್ಣದ ಶತರುದ್ರೀಯ ಪ್ರಕರಣದಲ್ಲಿ ಇರುವ ವೈದಿಕ ನಾಮಗಳು ನಿನ್ನಲ್ಲಿ ಬಳಕೆಯಾಗಿವೆ.
ಪವಿತ್ರಂ ಚ ಪವಿತ್ರಾಣಾಂ ಮಂಗಲಾನಾಂ ಚ ಮಂಗಲಮ್ |
ಗಿರಿಕೋ ಹಿಂಡುಕೋ ವೃಕ್ಷೋ ಜೀವಃ ಪುದ್ಗಲ ಏವ ಚ ॥139॥
ಪವಿತ್ರಗಳಲ್ಲಿ ಪವಿತ್ರನು, ಮಂಗಳಗಳಲ್ಲಿ ಮಂಗಳನು, ಗಿರಿಕನು, ಹಿಂಡುಕನು, ವೃಕ್ಷನು, ಜೀವನು, ಪುದ್ಗಲನು ನೀನೇ ಆಗಿರುವಿ.
ವ್ಯಾಖ್ಯಾನ ವಿಶೇಷ ಗಿರಿಕ, ಹಿಂಡುಕ, ವೃಕ್ಷ, ಜೀವ, ಪುದ್ಗಲ- ಇವೆಲ್ಲವೂ ಆಯಾ ಪ್ರಾಣಿ ಸಸ್ಯ ಪ್ರಪಂಚದ ಮೂಲ ಉತ್ಪತ್ತಿಗೆ
ಕಾರಣವಾದ ಶಬ್ದಗಳು ಎಂದು ತಿಳಿಯಬೇಕು.
ಪ್ರಾಣಃ ಸತ್ತ್ವಂ ರಜಶ್ಚೈವ ತಮಶ್ಚಾಪ್ರಮದಸ್ತಥಾ |
ಪ್ರಾಣೋಪಾನಃ ಸಮಾನಶ್ಚ ಉದಾನೋ ವ್ಯಾನ ಏವ ಚ ॥140॥
ಜೀವ, ಶರೀರ, ಪ್ರಾಣ, ಸತ್ತ್ವ, ರಜಸ್ಸು, ತಮಸ್ಸು, ಅಪ್ರಮಾದ, ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಲ್ಲವೂ ನೀನೇ ಆಗಿರುವಿ.
ಉನ್ಮೇಷಶ್ಚ ನಿಮೇಷಶ್ಚ ಕ್ಷುತಂ ಜೃಂಭಿತಮೇವ ಚ |
ಲೋಹಿತಾಂತರ್ಗತಾ ದೃಷ್ಟಿರ್ಮಹಾವಕೊತ್ರೀ ಮಹೋದರಃ ॥141॥
ಉನ್ಮೇಷ, ನಿಮೇಷ, ಸೀನುವುದು, ಆಕಳಿಸುವುದು, ಎಲ್ಲ ಚೇಷ್ಟೆಗಳಿಗೂ ನೀನೇ ನಿಯಾಮಕ. ನಿನ್ನ ಅಗ್ನಿರೂಪವಾದ ಕೆಂಪಾದ
ದೃಷ್ಟಿಯು ಅಂತರ್ಮುಖ ಹೊಂದಿದೆ. ಮಹಾಮುಖನೂ, ಮಹೋದರನೂ ಆಗಿರುವಿ.
ಸೂಚೀರೋಮಾ ಹರಿಶ್ಮಶ್ರುರೂರ್ಧ್ವಕೇಶಶ್ಚಲಾಚಲಃ |
ಗೀತವಾದಿತ್ರತತ್ತ್ವಜ್ಞೋ ಗೀತವಾದನಕಪ್ರಿಯಃ ॥142॥
ಸೂಜಿಯಂತಹ ಕೂದಲುಳ್ಳವನು, ಕಂದುಬಣ್ಣದ ಮೀಸೆ-ದಾಡಿಯುಳ್ಳವನು, ಊರ್ಧ್ವಕೇಶನು, ಚರಾಚರನು, ಗೀತವಾದ್ಯಗಳ
ತತ್ತ್ವಜ್ಞನೂ, ಗೀತವಾದನ ಪ್ರಿಯನೂ ಆಗಿರುವ ನಿನಗೆ ನಮಸ್ಕಾರ.
ಮತ್ಸ್ಯೋ ಜಲಚರೋ ಜಾಲ್ಯೋऽಕಲಃ ಕೇಲಿಕಲಃ ಕಲಿಃ|
ಅಕಾಲಶ್ಚಾತಿಕಾಲಶ್ಚ ದುಷ್ಕಾಲಃ ಕಾಲ ಏವ ಚ ॥143॥
ಮತ್ಸ್ಯನು, ಜಲಚರನು, ಮೊಸಳೆ ರೂಪನು, ಅವಯವಗಳಿಲ್ಲದೆ ಇರುವವನು, ಆಟದ ಕಲೆಯಲ್ಲಿ ನಿಷ್ಣಾತನು, ಕಲಹರೂಪನು,
ಅಕಾಲನು, ಅತಿಕಾಲನು, ದುಷ್ಕಾಲನು, ಕಾಲನು ಆಗಿರುವಿ.
ಮೃತ್ಯುಃ ಕ್ಷುರಶ್ಚ ಕೃತ್ಯಶ್ಚ ಪಕ್ಷೋऽಪಕ್ಷಕ್ಷಯಂಕರಃ |
ಮೇಘಕಾಲೋ ಮಹಾದಂಷ್ಟ್ರಃ ಸಂವರ್ತಕಬಲಾಹಕಃ ॥144॥
ಮೃತ್ಯುವೂ ಆಗಿರುವಿ, ಶಸ್ತ್ರವೂ ಆಗಿರುವಿ, ಕೃತ್ಯನಾಗಿರುವಿ, ಸತ್ಪುರುಷರನ್ನು ರಕ್ಷಿಸುವವನಾಗಿರುವಿ, ಶತ್ರುಪಕ್ಷದವರಿಗೆ

ಕಂಟಕನಾಗಿರುವಿ. ಮೇಘವರ್ಣದಂತಹ ಕಾಲನಾಗಿರುವಿ, ಮಹಾದಂಷ್ಟ್ರನಾದ ನಿನಗೆ ನಮಸ್ಕಾರವು.
ಘಂಟೋಘಂಟೋ ಘಟೀ ಘಂಟೀ ಚರುಚೇಲೀ ಮಿಲೀಮಿಲೀ |
ಬ್ರಹ್ಮಕಾಯಿಕಮಗ್ನೀನಾಂ ದಂಡೀ ಮುಂಡಸ್ತ್ರಿದಂಡಧೃಕ್ ॥145॥
ಘಂಟ ಎಂದರೆ ಪ್ರಕಾಶ ಎಂದು ಅರ್ಥ ಪ್ರಕಾಶನು, ಅಪ್ರಕಾಶನು, ಸಂಘಟಕನು, ಘಂಟೆಯುಳ್ಳವನು, ಜೀವರೊಡನೆ ಕ್ರೀಡಿಸುವವನು, ಮಿಲೀಮಿಲೀ= ಅತ್ಯಂತ ಅಣು ಎಂದರ್ಥ. ಬ್ರಹ್ಮಾಗ್ನಿ ಸ್ವರೂಪನು, ದಂಡಧಾರಿಯು, ತ್ರಿದಂಡಿಯೂ, ಸಂನ್ಯಾಸಿಯೂ ಆದ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ `ಓಂ ರುದ್ರ ಚಿಲೀಚಿಲಿ ಮಿಲೀಮಿಲೀ ಓಂ ಸ್ವಾಹಾ' ಎಂಬ ಹದಿನೆಂಟು ಅಕ್ಷರಾತ್ಮಕವಾದ ರುದ್ರಮಂತ್ರವು ಇದೆ. ಅದರ ಸೂಚನೆಯನ್ನು ಇಲ್ಲಿ ಮಾಡಲಾಗಿದೆ ಎಂದು ನೀಲಕಂಠ ವ್ಯಾಖ್ಯಾನ.
ಚತುರ್ಯುಗಶ್ಚತುರ್ವೇದಶ್ಚಾತುರ್ಹೋತ್ರಪ್ರವರ್ತಕಃ |
ಚಾತುರಾಶ್ರಮ್ಯವೇತಾ ಚ ಚಾತುರ್ವರ್ಣ್ಯಕರಶ್ಚ ಯಃ ॥146॥
ಚತುರ್ಯುಗಗಳು ನಿನ್ನ ಸ್ವರೂಪಗಳೇ, ಚತುರ್ವೇದಗಳು ನಿನ್ನ ಸ್ವರೂಪವೇ. ನಾಲ್ಕು ವೇದಗಳ ಹೋತ್ರಗಳ ಪ್ರವರ್ತಕನಾಗಿರುವಿ. ನಾಲ್ಕು ಆಶ್ರಮದವರಿಗೆ ನಿಯಾಮಕನೂ, ಚಾತುರ್ವರ್ಣ್ಯ ಸೃಷ್ಟಿಕರ್ತನು ನೀನೇ ಆಗಿರುವಿ. ನಿನಗೆ ನಮಸ್ಕಾರ.
ಸದಾ ಚಾಕ್ಷಪ್ರಿಯೋ ಧೂರ್ತೋ ಗಣಾಧ್ಯಕ್ಷೋ ಗಣಾಧಿಪಃ |
ರಕ್ತಮಾಲ್ಯಾಂಬರಧರೋ ಗಿರಿಶೋ ಗಿರಿಕಪ್ರಿಯಃ ॥147॥
ಪಗಡೆಯಾಟದಲ್ಲಿ ಪ್ರಿಯನಾದ, ಧೂರ್ತರಿಗೂ ನಿಯಾಮಕನಾದ, ಗಣಾಧ್ಯಕ್ಷನಾದ, ಗಣಾಧಿಪತಿಯಾದ, ಕೆಂಪಾದ ಮಾಲೆಯನ್ನು ಧರಿಸಿರುವ, ದ್ಯೂತಪ್ರಿಯನಾದ, ಗಿರೀಶನಾದ ನಿನಗೆ ನಮಸ್ಕಾರ.
ಶಿಲ್ಪಿಕಃ ಶಿಲ್ಪಿನಾಂ ಶ್ರೇಷ್ಠಃ ಸರ್ವಶಿಲ್ಪಪ್ರವರ್ತಕಃ |
ಭಗನೇತ್ರಾಂಕುಶಶ್ಚಂಡಃ ಪೂಷ್ಣೋ ದಂತವಿನಾಶನಃ ॥148॥
ಶಿಲ್ಪಿಯಾದ, ಶಿಲ್ಪಿಶ್ರೇಷ್ಠನಾದ, ಸಕಲ ವಿಧ ಶಿಲ್ಪಕಲೆಗಳಿಗೂ ಪ್ರವರ್ತಕನಾದ, ಭಗದೇವತೆಯ ನೇತ್ರವನ್ನು ಕಿತ್ತುವುದರಲ್ಲಿ ಅಂಕುಶಪ್ರಾಯನಾದ (ಪೂಷ, ಭಗ ಎಂಬ ಋತ್ವಿಜರ ಹಲ್ಲು-ಕಣ್ಣುಗಳನ್ನು ಕಿತ್ತಿದ ವೀರಭದ್ರನ ರೂಪವನ್ನು ಇಲ್ಲಿ ಸ್ಮರಿಸಲಾಗಿದೆ), ಪೂಷದೇವತೆಯ ಹಲ್ಲುಗಳ ವಿನಾಶಕನಾದ ನಿನಗೆ ನಮಸ್ಕಾರ.
ಸ್ವಾಹಾಸ್ವಧಾವಷಟ್ಕಾರೋ ನಮಸ್ಕಾರೋ ನಮೋ ನಮಃ |
ಗೂಢವ್ರತೋ ಗುಹ್ಯತಪಾಸ್ತಾರಕಸ್ತಾರಕಾಮಯಃ ॥149॥
ಸ್ವಾಹಾ, ಸ್ವಧಾ, ವಷಟ್ಕಾರ ರೂಪನಾದ ನಿನಗೆ ನಮಸ್ಕಾರ. ಗೂಢವ್ರತನಾದ, ಗುಹ್ಯ ತಪಸ್ವಿಯಾದ, ತಾರಕಮಯನಾದ ನಿನಗೆ ನಮಸ್ಕಾರ. ನಕ್ಷತ್ರಗಳಿಗೆ ನಿಯಾಮಕನಾದ ನಿನಗೆ ನಮಸ್ಕಾರ.
ಧಾತಾ ವಿಧಾತಾ ಸಂಧಾತಾ ವಿಧಾತಾ ಧಾರಣೋ ಧರಃ |
ಬ್ರಹ್ಮಾ ತಪಶ್ಚ ಸತ್ಯಂ ಚ ಬ್ರಹ್ಮಚರ್ಯಮಥಾರ್ಜವಮ್ ॥150॥
ಧರಿಸುವವನು, ಸೃಷ್ಟಿಸುವವನು, ಜೋಡಿಸುವವನು, ಅದೃಷ್ಟರೂಪನು, ಆಶ್ರಯಭೂತನು, ಶುದ್ಧಾತ್ಮನೂ ಆದ ನಿನಗೆ ನಮಸ್ಕಾರ. ಬ್ರಹ್ಮ, ತಪಸ್ಸು, ಸತ್ಯ, ಬ್ರಹ್ಮಚರ್ಯ, ಋಜುತ್ವ (ಸರಳತೆ) ಎಲ್ಲವೂ ನೀನೇ ಆಗಿರುವಿ.
ಭೂತಾತ್ಮಾ ಭೂತಕೃದ್ ಭೂತೋ ಭೂತಭವ್ಯಭವೋದ್ಭವಃ |
ಭೂರ್ಭುವಃ ಸ್ವರಿತಶ್ಚೈವ ಧ್ರುವೋ ದಾಂತೋ ಮಹೇಶ್ವರಃ ॥151॥
ಭೂತಾತ್ಮನೂ, ಭೂತಗಳನ್ನು ಸೃಷ್ಟಿಸುವವನು, ಭೂತನು, ಭೂತ-ಭವಿಷ್ಯತ್- ವರ್ತಮಾನಗಳಿಗೆ ನಿಯಾಮಕನು, ಭೂಲೋಕ, ಭುರ್ವಲೋಕ, ಸ್ವರ್ಗಲೋಕಗಳಿಗೆ ನಿಯಾಮಕನು, ಧ್ರುವನು, ಜಿತೇಂದ್ರಿಯನು, ಮಹೇಶ್ವರನೂ ಆಗಿರುವಿ.
ದೀಕ್ಷಿತೋऽದೀಕ್ಷಿತಃ ಕ್ಷಾಂತೋ ದುರ್ದಾಂತೋऽದಾಂತನಾಶನಃ |
ಚಂದ್ರಾವರ್ತಯುಗಾವರ್ತಃ ಸಂವರ್ತಃ ಸಂಪ್ರವರ್ತಕಃ ॥152॥
ಯಜ್ಞದೀಕ್ಷಿತನೂ ಅದೀಕ್ಷಿತನೂ, ಕ್ಷಮಾವಂತನು ದುರ್ದಾಂತನು, ಅದಾಂತರನ್ನು ನಾಶಗೊಳಿಸುವವನು, ಚಂದ್ರನ ವೃದ್ಧಿ-ಕ್ಷಯಗಳಿಗೆ ಕಾರಣನಾದವನು, ಯುಗಗಳಿಗೆ ಪ್ರವರ್ತಕನು, ಜಗತ್ತನ್ನು ಸೃಷ್ಟಿಸುವವನು ಆದ ನಿನಗೆ ನಮಸ್ಕಾರಗಳು.
ಕಾಮೋ ಬಿಂದುರಣುಃ ಸ್ಥೂಲಃ ಕರ್ಣಿಕಾರಸ್ರಜಪ್ರಿಯಃ |
ನಂದೀಮುಖೋ ಭೀಮಮುಖಃ ಸುಮುಖೋ ದುರ್ಮುಖೋऽಮುಖಃ ॥
ಚತುರ್ಮುಖೋ ಬಹುಮುಖೋ ರಣೇಷ್ವಗ್ನಿಮುಖಸ್ತಥಾ |
ಹಿರಣ್ಯಗರ್ಭಃ ಶಕುನಿರ್ಮಹೋರಗಪತಿರ್ವಿರಾಟ್ ॥154॥
ನೀನು ಕಾಮನು, ಬಿಂದುವು, ಅಣುವು, ಸ್ಥೂಲ, ಕರ್ಣಿಕಾರ ಮಾಲಾಪ್ರಿಯ, ನಂದಿಮುಖನು, ಭೀಮಮುಖನು, ಸುಮುಖನು, ದುರ್ಮುಖನು, ಅಮುಖನು, ಚತುರ್ಮುಖನು, ಬಹುಮುಖನು, ಯುದ್ಧದಲ್ಲಿ ಅಗ್ನಿಮುಖನು, ಹಿರಣ್ಯಗರ್ಭನು, ಪಕ್ಷಿಸ್ವರೂಪನು, ಮಹಾಸರ್ಪಗಳ ಸ್ವಾಮಿಯು, ವಿರಾಟ್‌ಸ್ವರೂಪನು ಆದಂತಹ ನಿನಗೆ ನಮಸ್ಕಾರ.
ಅಧರ್ಮಹಾ ಮಹಾಪಾರ್ಶ್ವಶ್ಚಂಡಧಾರೋ ಗಣಾಧಿಪಃ |
ಗೋನರ್ದೋ ಗೋಪ್ರತಾರಶ್ಚ ಗೋವೃಷೇಶ್ವರವಾಹನಃ ॥155॥
ಅಧರ್ಮವಿನಾಶಕನು, ಮಹಾಪಾರ್ಶ್ವನು, ಚಂಡಧಾರನು, ಗಣಾಧಿಪನು, ಗೋನರ್ದ= ಸಾರಸಪಕ್ಷಿಯಂತರ್ಯಾಮಿಯು, ಗೋಪ್ರತಾರ= ಗೋವುಗಳ ಆಪತ್ತನ್ನು ಪರಿಹರಿಸುವವನು, ನಂದಿಯನ್ನೇ ವಾಹನವನ್ನಾಗಿ ಹೊಂದಿರುವವನು.
ತ್ರೈಲೋಕ್ಯಗೋಪ್ತಾ ಗೋವಿಂದೋ ಗೋಮಾರ್ಗೋಮಾರ್ಗ ಏವ ಚ |
ಶ್ರೇಷ್ಠಃ ಸ್ಥಿರಶ್ಚ ಸ್ಥಾಣುಶ್ಚ ನಿಷ್ಕಂಪಃ ಕಂಪ ಏವ ಚ ॥156॥

ಮೂರು ಲೋಕಗಳನ್ನು ರಕ್ಷಿಸುವವನು, ಗೋವುಗಳನ್ನು ರಕ್ಷಿಸುವವನು, ಗೋ ಮಾರ್ಗನು, ವೇದಮಾರ್ಗನು, ಅಮಾರ್ಗನು, ದುರ್ಮಾರ್ಗದಲ್ಲಿ ಸಾಗದೆ ಇರುವವನು, ಶ್ರೇಷ್ಠನು, ಸ್ಥಾಣುವು, ಸ್ಥಿರನು, ಹೆದರದವನು, ಹೆದರಿಸುವವನು ನೀನೇ ಆಗಿರುವಿ.

ದುರ್ವಾರಣೋ ದುರ್ವಿಷಹೋ ದುಃಸಹೋ ದುರತಿಕ್ರಮಃ |
ದುರ್ಧರ್ಷೋ ದುಷ್ಪ್ರಕಂಪಶ್ಚ ದುರ್ವಿಷೋ ದುರ್ಜಯೋ ಜಯಃ ॥

ತಡೆಯಲು ಅಸಾಧ್ಯನು, ಸಹಿಸಲು ಅಸಾಧ್ಯವಾದ ವೇಗವುಳ್ಳವನು, ದುಸ್ಸಹನು, ಅತಿಕ್ರಮಿಸಲು ಅಸಾಧ್ಯನು, ಬಲಾತ್ಕರಿಸಲು ಅಸಾಧ್ಯನು, ಅಲ್ಲಾಡಿಸಲು ಅಸಾಧ್ಯನು, ದುರ್ವಿಷನು, ದುರ್ಜಯನು, ಜಯನು ಆದ ನಿನಗೆ ನಮಸ್ಕಾರ.

ಶಶಃ ಶಶಾಂಕಃ ಶಮನಃ ಶೀತೋಷ್ಣಕ್ಷುಜ್ಜರಾಧಿಕೃತ್ |
ಆಧಯೋ ವ್ಯಾಧಯಶ್ಚೈವ ವ್ಯಾಧಿಹಾ ವ್ಯಾಧಿರೇವ ಚ ॥158॥

ಶೀಘ್ರಗಾಮಿಯು, ಚಂದ್ರನಿಯಾಮಕನು, ಶಮಬುದ್ಧಿಯುಳ್ಳವನು, ಶೀತ-ಉಷ್ಣ- ಹಸಿವು-ಜ್ವರ-ಮಾನಸಿಕ ಚಿಂತೆ ಇವುಗಳನ್ನು ಉಂಟುಮಾಡುವವನು, ವ್ಯಾಧಿಗಳನ್ನು ಆಧಿಗಳನ್ನು ಪರಿಹರಿಸುವವನಾದ್ದರಿಂದ ವ್ಯಾಧಿ ಎನಿಸಿದ್ದಾನೆ.

ವ್ಯಾಖ್ಯಾನ ವಿಶೇಷ ವಿಘ್ನಗಳನ್ನು ಕೊಡುವವನು ಪರಿಹರಿಸುವವನು ಆದ್ದರಿಂದ ವಿನೇಶ ಎಂದು ಹೇಗೆ ಕರೆಸಿಕೊಳ್ಳುತ್ತಾನೋ ಹಾಗೆ ವ್ಯಾಧಿಗಳನ್ನು ಕೊಡುವವನು, ಪರಿಹರಿಸುವವನು ಆದ್ದರಿಂದ ವ್ಯಾಧಿ ಎಂದು ಕರೆಸಿಕೊಳ್ಳುತ್ತಾನೆ. ವ್ಯಾಧಿ ನಿಯಾಮಕ ಎಂಬರ್ಥದಲ್ಲಿ ವ್ಯಾಧಿ ಎಂದು ಹೇಳಲಾಗಿದೆ. ಅನೇಕ ನಾಮಗಳು ಈ ರೀತಿಯಲ್ಲೇ ಹೇಳಲ್ಪಟ್ಟಿರುತ್ತವೆ.

ಮಮ ಯಜ್ಞಮೃಗವ್ಯಾಧೋ ವ್ಯಾಧೀನಾಮಾಗಮೋ ಗಮಃ |
ಶಿಖಂಡೀ ಪುಂಡರೀಕಾಕ್ಷಃ ಪುಂಡರೀಕವನಾಲಯಃ ॥159॥

ನನ್ನ ಯಜ್ಞವೆಂಬ ಜಿಂಕೆಗೆ ವ್ಯಾಧನಾಗಿರುವವನೇ, ವ್ಯಾಧಿಗಳನ್ನು ಭರಿಸುವವನು ಹೋಗಲಾಡಿಸುವವನು ಆಗಿರುವವನೇ, ನವಿಲುಗರಿಯನ್ನು ಧರಿಸಿರುವುದರಿಂದ ಶಿಖಂಡೀ ಎಂದು ಕರೆಯಲ್ಪಡುವವನೇ, ಪುಂಡರೀಕಾಕ್ಷನೇ, ಪುಂಡರೀಕ ವನವೇ ಮನೆಯಾಗಿ ಉಳ್ಳವನೇ ನಿನಗೆ ನಮಸ್ಕಾರ.

ದಂಡಧಾರಸ್ತ್ರ್ಯಂಬಕಶ್ಚ ಉಗ್ರದಂಡೋಽಂಡನಾಶನಃ |
ವಿಷಾಗ್ನಿಪಾಃ ಸುರಶ್ರೇಷ್ಠಃ ಸೋಮಪಾಸ್ತ್ವಂ ಮರುತ್ಪತಿಃ ॥160॥

ದಂಡಧಾರನೆಂದು ಕರೆಯಲ್ಪಡುವವನೇ, ತ್ರ್ಯಂಬಕನೇ, ಉಗ್ರದಂಡನೇ, ಬ್ರಹ್ಮಾಂಡ ನಾಶಕನೇ, ವಿಷವನ್ನು ಅಗ್ನಿಯನ್ನು ಪಾನ ಮಾಡುವವನೇ, ಸುರಶ್ರೇಷ್ಠನೇ, ಸೋಮರಸವನ್ನು ಪಾನ ಮಾಡುವವನೇ, ಮರುದ್ಗಣ ಸ್ವಾಮಿಯೇ ನಿನಗೆ ನಮಸ್ಕಾರ.

ಅಮೃತಪಾಸ್ತ್ವಂ ಜಗನ್ನಾಥ ದೇವದೇವ ಗಣೇಶ್ವರಃ |
ವಿಷಾಗ್ನಿಪಾ ಮೃತ್ಯುಪಾಶ್ಚ ಕ್ಷೀರಪಾಃ ಸೋಮಪಾಸ್ತಥಾ |
ಮಧುಶ್ಚ್ಯುತಾನಾಮಗ್ರಪಾಸ್ತ್ವಂ ತ್ವಮೇವ ತುಷಿತಾದ್ಯಪಾಃ ॥161॥

ನೀನು ದೇವದೇವನೇ, ಗಣೇಶ್ವರನೇ, ಅಮೃತವನ್ನು ಪಾನ ಮಾಡುವವನು. ಜಲವನ್ನು ಪಾನ ಮಾಡುವವನು, ಮೃತ್ಯುವಿನಿಂದ ರಕ್ಷಿಸುವವನು, ಪಯಃ ಪಾನಿಯು, ಸೋಮಪಾನಿಯು, ಸುಖಭ್ರಷ್ಟರಾದವರಿಗೆ ಪ್ರಧಾನ ರಕ್ಷಕನು, ತುಷಿತರೆಂಬ ದೇವತೆಗಳಿಗೆ ಕಾರಣನು, ವೇದರಕ್ಷಕನು ಆಗಿರುವಿ.

ಹಿರಣ್ಯರೇತಾಃ ಪುರುಷಸ್ತ್ವಮೇವ
ತ್ವಂ ಸ್ತ್ರೀ ಪುಮಾಂಸ್ತ್ವಂ ಚ ನಪುಂಸಕಂ ಚ |
ಬಾಲೋ ಯುವಾ ಸ್ಥವಿರೋ ಜೀರ್ಣದಂಷ್ಟ್ರಸ್ತ್ವಂ
ನಾಗೇಂದ್ರ ಶಕ್ರಸ್ತ್ವಂ ವಿಶ್ವಕೃದ್ ವಿಶ್ವಕರ್ತಾ ॥162॥

ಹಿರಣ್ಯ ರೇತಸ್ಸುಳ್ಳ ಪುರುಷನು ನೀನೇ ಆಗಿರುವಿ. ಸ್ತ್ರೀಯು, ಪುಮಾನ್, ನಪುಂಸಕನು, ಬಾಲಕನು, ಮಧುಕನು, ಜೀರ್ಣದಂಷ್ಟ್ರನು, ನಾಗೇಂದ್ರನು, ಶಕ್ರನು, ವಿಶ್ವಕೃದ್, ವಿಶ್ವಕರ್ತ ಎಲ್ಲವೂ ನೀನೇ ಆಗಿರುವಿ.

ವಿಶ್ವಕೃದ್ ವಿಶ್ವಕೃತಾಂ ವರೇಣ್ಯಸ್ತ್ವಂ ವಿಶ್ವಬಾಹೋ
ವಿಶ್ವರೂಪಸ್ತೇಜಸ್ವೀ ವಿಶ್ವತೋಮುಖಃ |
ಚಂದ್ರಾದಿತ್ಯೌ ಚಕ್ಷುಷೀ ತೇ ಹೃದಯಂ ಚ ಪಿತಾಮಹಃ ॥163॥

ನೀನು ವಿಶ್ವಕೃದ್, ವಿಶ್ವವನ್ನು ನಿರ್ಮಿಸುವವರಲ್ಲಿ ಶ್ರೇಷ್ಠನು, ವಿಶ್ವಬಾಹುವು, ವಿಶ್ವರೂಪಿಯು, ತೇಜಸ್ವಿಯು, ವಿಶ್ವತೋಮುಖನು ಆಗಿರುವಿ. ಚಂದ್ರಾದಿತ್ಯರು ನಿನ್ನ ಕಣ್ಣುಗಳು, ಚತುರ್ಮುಖನು ನಿನ್ನ ಹೃದಯವು.

ಮಹೋದಧಿಃ ಸರಸ್ವತೀ ವಾಗ್ಬಲಮನಲೋಽ-
ನಿಲಃ ಅಹೋರಾತ್ರಂ ನಿಮೇಷೋನ್ಮೇಷಕರ್ಮಾ ॥164॥

ಮಹೋದಧಿಯು ನೀನೇ. ಸರಸ್ವತಿಯು ನಿನ್ನ ವಾಣಿಯಾಗಿದ್ದಾಳೆ. ಅಗ್ನಿ- ವಾಯುಗಳು ನಿನ್ನ ಬಲವಾಗಿದ್ದಾರೆ. ನಿನ್ನ ಕಣ್ಣಿನ ಮುಚ್ಚುವಿಕೆ ತೆರೆಯುವಿಕೆಯೇ ಅಹೋರಾತ್ರಗಳೆನಿಸಿವೆ.

ನ ಬ್ರಹ್ಮಾ ನ ಚ ಗೋವಿಂದಃ ಪೌರಾಣಾ ಋಷಯೋ ನ ತೇ |
ಮಾಹಾತ್ಮ್ಯಂ ವೇದಿತುಂ ಶಕ್ತಾ ಯಾಥಾತಥ್ಯೇನ ತೇ ಶಿವ ॥165॥

ಚತುರ್ಮುಖ ಬ್ರಹ್ಮನಾಗಲಿ, ಗೋವಿಂದನೇ ಆಗಲಿ, ಪುರಾಣವನ್ನು ತಿಳಿದಿರುವ ಋಷಿಗಳೇ ಆಗಿರಲಿ, ಶಿವನೇ ಯಥಾರ್ಥವಾಗಿ ನಿನ್ನ ಮಹಿಮೆಯನ್ನು ತಿಳಿಯಲು ಅವರು ಶಕ್ತರಾಗುವುದಿಲ್ಲ.

ವ್ಯಾಖ್ಯಾನ ವಿಶೇಷ ಇದನ್ನು ಮೋಹಕವೆಂದು ಚಿಂತಿಸಬೇಕು. ಬ್ರಹ್ಮ-ರುದ್ರರಿಗೆ ನಿಯಾಮಕನಾದ ಗೋವಿಂದನು ಶಿವನ ಮಹಿಮೆಯನ್ನು ತಿಳಿಯುವುದಿಲ್ಲ ಎಂಬುದು ಹೊಂದಾಣಿಕೆಯಾಗುವುದಿಲ್ಲ. ಅಥವಾ ಭಗವಂತನ ಗುಣಗಳು ಭಗವಂತನಿಗೇ ಹೇಗೆ ಅಪಾರವೋ, ಹೇಗೆ ಅನಂತವೋ ಅದರಂತೆ ರುದ್ರಾಂತರ್ಯಾಮಿಯಾದ ಶಿವನೆಂಬ ಭಗವಂತನ ಗುಣಗಳು ಅಪಾರವಾದುದರಿಂದ

ಹೇಳಲಾಗುವುದಿಲ್ಲ ಎಂದೂ ತಾತ್ಪರ್ಯ.
ಯಾ ಮೂರ್ತಯಃ ಸುಸೂಕ್ಷ್ಮಾಸ್ತೇ ನ ಮಹ್ಯಂ ಯಾಂತಿ ದರ್ಶನಮ್ |
ತ್ರಾಹಿ ಮಾಂ ಸತತಂ ರಕ್ಷ ಪಿತಾ ಪುತ್ರಮಿವೌರಸಮ್ ॥166॥
ನಿನ್ನ ಅತ್ಯಂತ ಸೂಕ್ಷ್ಮವಾದ ಯಾವ ಮೂರ್ತಿಗಳಿವೆಯೋ ಅದು ನಮಗೆ ಗೋಚರವಾಗುವುದಿಲ್ಲ. ಪರಮೇಶ್ವರನೇ ನನ್ನನ್ನು ಕಾಪಾಡು. ತಂದೆಯಾದವನು ಔರಸ ಪುತ್ರನನ್ನು ರಕ್ಷಿಸುವಂತೆ ನನ್ನನ್ನು ರಕ್ಷಿಸು.
ರಕ್ಷ ಮಾಂ ರಕ್ಷಣೀಯೋಽಹಂ ತವಾನಘ ನಮೋಽಸ್ತು ತೇ |
ಭಕ್ತಾನುಕಂಪೀ ಭಗವಾನ್ ಭಕ್ತಶ್ಚಾಹಂ ಸದಾ ತ್ವಯಿ ॥167॥
ಅನಘನೇ, ನಿನ್ನಿಂದ ರಕ್ಷಿಸಲು ನಾನು ಯೋಗ್ಯನಾಗಿದ್ದೇನೆ. ಆದ್ದರಿಂದ ರಕ್ಷಿಸು. ನಿನ್ನನ್ನು ನಮಸ್ಕರಿಸುತ್ತೇನೆ. ನೀನು ಭಕ್ತಾನುಕಂಪಿಯಾದ ಪೂಜ್ಯನು. ನಾನು ನಿನ್ನಲ್ಲಿ ಭಕ್ತಿಯಿಂದ ನಮಸ್ಕರಿಸುತ್ತೇನೆ.
ಯಃ ಸಹಸ್ರಾಣ್ಯನೇಕಾಪಿ ಪುಂಸಾಮಾವೃತ್ಯ ದುರ್ದೃಶಃ |
ತಿಷ್ಠತ್ಯೇಕಃ ಸಮುದ್ರಾಂತೇ ಸ ಮೇ ಗೋಪ್ತಾಽಸ್ತು ನಿತ್ಯಶಃ ॥168॥
ಯಾರು ಸಹಸ್ರಾರು ಮನುಜರ ಮೇಲೆ ಮಾಯಾಜಾಲವನ್ನು ಬೀಸಿ ಮಾಯಾ ಮೋಹಿತರಿಂದ ನೋಡಲು ಅಸಾಧ್ಯನಾಗಿದ್ದಾನೋ ಅಂತಹ ಸಮುದ್ರದ ದಡದಲ್ಲಿ ಪ್ರಕಾಶಮಾನನಾಗಿರುವ ಪರಮೇಶ್ವರನು ನಿತ್ಯವೂ ನನ್ನನ್ನು ರಕ್ಷಿಸಲಿ.
ಯಂ ವಿನಿದ್ರಾ ಜಿತಶ್ವಾಸಾಃ ಸತ್ವಸ್ಥಾಃ ಸಂಯತೇಂದ್ರಿಯಾಃ |
ಜ್ಯೋತಿಃ ಪಶ್ಯಂತಿ ಯುಂಜಾನಾಸ್ತಸ್ಮೈ ಯೋಗಾತ್ಮನೇ ನಮಃ ॥169॥
ನಿದ್ರೆಯನ್ನು ಗೆದ್ದಿರುವ ಯೋಗಿಗಳು ಪ್ರಾಣಗಳನ್ನು ಜಯಿಸಿ, ಸತ್ವಗುಣದಲ್ಲಿಯೇ ನೆಲೆನಿಂತು, ಪರಮಾತ್ಮನಲ್ಲಿ ಮನಸ್ಸನ್ನು ಲಯಗೊಳಿಸಿ, ರುದ್ರಾಂತರ್ಯಾಮಿಯಾದ ಯಾವ ಪರಮಾತ್ಮನನ್ನು ನೋಡುತ್ತಾರೋ ಅಂತಹ ಭಗವಂತನೇ ನಿನಗೆ ನಮಸ್ಕಾರ.
ವ್ಯಾಖ್ಯಾನ ವಿಶೇಷ ಯಾವ ವ್ಯಕ್ತಿಯನ್ನು ಸ್ತುತಿಸಿದರೂ ಅವರು ಸಂತುಷ್ಟರಾಗಲು ಸ್ವತಂತ್ರರಾಗಿರುವುದಿಲ್ಲ. ಭಗವಂತನೊಬ್ಬನೇ ಸ್ವತಂತ್ರನಾಗಿರುತ್ತಾನೆ. ಹಾಗಾಗಿ ಅಂತರ್ಯಾಮಿಯಾದ ಭಗವಂತನನ್ನು ಸಂತೋಷಗೊಳಿಸಿದರೆ ಆ ವ್ಯಕ್ತಿಯು ನಮ್ಮ ವಿಷಯದಲ್ಲಿ ಸಂತುಷ್ಟನಾಗುತ್ತಾನೆ. ಆದ್ದರಿಂದ ಇಲ್ಲಿ ದಕ್ಷಪ್ರಜಾಪತಿಯು ರುದ್ರಾಂತರ್ಯಾಮಿಯಾದ ಭಗವಂತನನ್ನೇ ಸ್ತುತಿಸುವ ಮೂಲಕ ರುದ್ರನ ಸಂತೋಷಕ್ಕೆ ಪಾತ್ರನಾಗಿದ್ದಾನೆ ಎಂದು ತಿಳಿಯಬೇಕು.
ಜಟಿನೇ ದಂಡಿನೇ ನಿತ್ಯಂ ಲಂಬೋದರಶರೀರಿಣೇ |
ಕಮಂಡಲುನಿಷಂಗಾಯ ತಸ್ಮೈ ಬ್ರಹ್ಮಾತ್ಮನೇ ನಮಃ ॥170॥
ಯಾವ ಮಹರುದ್ರನು ಜಟೆಯನ್ನು, ದಂಡವನ್ನು ಯಾವಾಗಲೂ ಧರಿಸಿರುವನೋ, ಯಾವನ ಉದರ-ಶರೀರಗಳು ವಿಶಾಲವಾಗಿರುವವೋ, ಕಮಂಡಲು ಬತ್ತಳಿಕೆಯಂತಿರುವುದೋ, ಶುದ್ಧ ಸ್ವರೂಪಿಯಾಗಿದ್ದಾನೋ ಅಂತಹ ಪರಮೇಶ್ವರನಿಗೆ ನಮಸ್ಕಾರ.
ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಂಗಸಂಧಿಷು |
ಕುಕ್ಷೌ ಸಮುದ್ರಾಶ್ಚತ್ವಾರಸ್ತಸ್ಮೈ ತೋಯಾತ್ಮನೇ ನಮಃ ॥171॥
ಯಾವ ರುದ್ರನ ಕೇಶಗಳಲ್ಲಿ ಮೇಘಗಳು ಸಂಚರಿಸುತ್ತವೋ, ಅಂಗಾಂಗಗಳ ಸನ್ನಿಧಿಯಲ್ಲಿ ನದಿಗಳು ಹರಿಯುತ್ತವೋ, ಹೊಟ್ಟೆಯಲ್ಲಿ ನಾಲ್ಕು ಸಮುದ್ರಗಳಿವೆಯೋ ಅಂತಹ ತೋಯಾತ್ಮಕನಾದ ಶಂಕರನಿಗೆ ನಮಸ್ಕಾರವು.
ವ್ಯಾಖ್ಯಾನ ವಿಶೇಷ ಭಗವಂತನ ಪಾದದ ಧೂಳನ್ನು ಧರಿಸಬೇಕೆಂದು ಮಹರುದ್ರನು ಆಕಾಶಮಂಡಲದಲ್ಲಿ ತನ್ನ ಜಟೆಯನ್ನು ಚೆಲ್ಲಿರುತ್ತಾನೆ. ವ್ಯೋಮಕೇಶನಾಗಿರುವುದರಿಂದ ಮೇಘಗಳು ಅವನ ಶಿಖೆಯಲ್ಲಿ ಸಂಚರಿಸುತ್ತವೆ ಎಂದು ತಿಳಿಯಬೇಕು. ವಾರಣ-ಅಸಿ ಎಂಬ ಬಿಂದುಮಾಧವನ ಪಾದೋದ್ಭವೆಯಾದ ಗಂಗೆಯಲ್ಲಿ ಕಾಶಿ ಕ್ಷೇತ್ರದಲ್ಲಿ ಮುಳುಗಿರುವುದರಿಂದ ಅಂಗಾಂಗಗಳಲ್ಲಿ ಗಂಗಾನದಿ ಇದೆ ಎಂದು ತಿಳಿಯಬೇಕು. ಊರ್ಧ್ವರೇತಸ್ಕನಾಗಿ `ದಶಕಲ್ಪ ತಪಶ್ಚೀರ್ಣಂ ರುದ್ರೇಣ ಲವಣಾಂಭಸಿ' ಎಂಬ ಪ್ರಮಾಣದ ಆಧಾರದಂತೆ ಹತ್ತು ಕಲ್ಪಗಳ ಕಾಲ ಸಮುದ್ರದ ಒಳಗಡೆ ನಿಂತು ತಪಸ್ಸನ್ನು ಆಚರಿಸುವುದರಿಂದ ಸಮುದ್ರಗಳು ಅವನ ಹೊಟ್ಟೆಯಲ್ಲಿವೆ ಎಂದು ಚಿಂತಿಸಲಾಗಿದೆ.
ಸಂಭಕ್ಷ್ಯ ಸರ್ವಭೂತಾನಿ ಯುಗಾಂತೇ ಪರ್ಯುಪಸ್ಥಿತೇ |
ಯಃ ಶೇತೇ ಜಲಮಧ್ಯಸ್ಥಸ್ತಂ ಪ್ರಪದ್ಯೇಽಂಬುಶಾಯಿನಮ್ ॥172॥
ಯುಗಾಂತವು ಸನ್ನಿಹಿತವಾದಾಗ ಎಲ್ಲ ಪ್ರಾಣಿಗಳನ್ನು ಸಂಹರಿಸಿ ಜಲದ ಮಧ್ಯದಲ್ಲಿ ಪವಡಿಸುತ್ತಾನೋ ಅಂತಹ ಜಲಶಾಯಿಯಾದ ಈಶ್ವರನನ್ನು ನಮಸ್ಕರಿಸುತ್ತೇನೆ.
ವ್ಯಾಖ್ಯಾನ ವಿಶೇಷ ಸಂಹಾರಕನು ಭಗವಂತನೇ ಆಗಿದ್ದಾನೆ. ಶಿವನಲ್ಲಿ ನಿಂತು ವಟಪತ್ರಶಾಯಿಯಾದವನು ಶ್ರೀಹರಿಯೇ ಆಗಿದ್ದಾನೆ. ಈ ಅಂತರ್ಯಾಮಿ ರೂಪವನ್ನೇ ಇಲ್ಲಿಯೂ ಸ್ತುತಿಸಲಾಗಿದೆ.
ಪ್ರವಿಶ್ಯ ವದನಂ ರಾಹೋರ್ಯಃ ಸೋಮಂ ಪಿಬತೇ ನಿಶಿ |
ಗ್ರಸತ್ಯರ್ಕಂ ಚ ಸ್ವರ್ಭಾನುರ್ಭೂತ್ವಾ ಮಾಂ ಸೋಽಭಿರಕ್ಷತು ॥173॥
ಯಾವನು ರಾತ್ರಿಯಲ್ಲಿ ರಾಹುವಿನ ಮುಖವನ್ನು ಪ್ರವೇಶಿಸಿ ಚಂದ್ರನಲ್ಲಿರುವ ಅಮೃತವನ್ನು ಪಾನ ಮಾಡುತ್ತಾನೋ, ರಾಹುವಿನ ಅಂತರ್ಯಾಮಿಯಾಗಿ ಸೂರ್ಯನನ್ನು ನುಂಗುತ್ತಾನೋ ಅಂತಹ ಪರಮೇಶ್ವರನು ನನ್ನನ್ನು ರಕ್ಷಿಸಲಿ.
ಯೇ ಚಾನುಪತಿತಾ ಗರ್ಭಾ ಯಥಾ ಭಾಗಾನುಪಾಸತೇ |
ನಮಸ್ತೇಭ್ಯಃ ಸ್ವಧಾ ಸ್ವಾಹಾ ಪ್ರಾಪ್ನುವಂತು ಮುದಂ ತು ತೇ ॥174॥
ದೇವತೆಗಳು, ಪಿತೃಗಳು ಬಾಲಕರಂತೆ ಯಜ್ಞದಲ್ಲಿ ಯಾರ ಅನುಗ್ರಹದಿಂದ ಹವಿರ್ಭಾಗಗಳನ್ನು ಸ್ವೀಕರಿಸುತ್ತಾರೋ ಅಂತಹ ಸ್ವಾಹಾ, ಸ್ವಧಾಕಾರ ಮೂಲಕ ಹವಿಸ್ಸನ್ನು ಹೊಂದುವ ವ್ಯಕ್ತಿಗಳಿಗೆ ಹವಿಷ್ಯ ಪದಾರ್ಥಗಳು ದೊರೆತು ಸಂತೋಷಗೊಳ್ಳಲಿ.

ಯೇಽಂಗುಷ್ಠಮಾತ್ರಾಃ ಪುರುಷಾ ದೇಹಸ್ಥಾಃ ಸರ್ವದೇಹಿನಾಮ್ |
ರಕ್ಷಂತು ತೇ ಹಿ ಮಾಂ ನಿತ್ಯಂ ನಿತ್ಯಂ ಚಾಪ್ಯಾಯಯಂತು ಮಾಮ್ ||
ಸರ್ವಪ್ರಾಣಿಗಳ ದೇಹದಲ್ಲಿ ಅಂಗುಷ್ಠ ಪ್ರಮಾಣದ ಯಾವ ಪುರುಷರಿದ್ದಾರೋ ಅವರು ನಿತ್ಯವೂ ನನ್ನನ್ನು ರಕ್ಷಿಸಲಿ, ವೃದ್ಧಿಗೊಳಿಸಲಿ.

ಯೇನ ರೋದಂತಿ ದೇಹಸ್ಥಾ ದೇಹಿನೋ ರೋದಯಂತಿ ಚ |
ಹರ್ಷಯಂತಿ ನ ಹೃಷ್ಯಂತಿ ನಮಸ್ತೇಭ್ಯೋಽಸ್ತು ನಿತ್ಯಶಃ ||176||
ಯಾರು ದೇಹದಲ್ಲಿದ್ದು ರೋದನ ಮಾಡದೆ ಮತ್ತೊಬ್ಬರನ್ನು ರೋದಿಸುವಂತೆ ಮಾಡುತ್ತಾರೋ, ತಾವು ಸಂತೋಷಗೊಳ್ಳದೆ ಮತ್ತೊಬ್ಬರನ್ನು ಸಂತೋಷ ಪಡಿಸುತ್ತಾರೋ ಅಂತಹ ರುದ್ರರೂಪಗಳಿಗೆ ನಮಸ್ಕಾರ.
ಯೇ ನದೀಷು ಸಮುದ್ರೇಷು ಪರ್ವತೇಷು ಗುಹಾಸು ಚ |
ವೃಕ್ಷಮೂಲೇಷು ಗೋಷ್ಠೇಷು ಕಾಂತಾರೇ ಗಹನೇಷು ಚ ||177||
ಚತುಷ್ಪಥೇಷು ರಥ್ಯಾಸು ಚತ್ವರೇಷು ತಟೇಷು ಚ |
ಹಸ್ತ್ಯಶ್ವರಥಶಾಲಾಸು ಜೀರ್ಣೋದ್ಯಾನಾಲಯೇಷು ಚ ||178||
ಯೇಷು ಪಂಚಸು ಭೂತೇಷು ದಿಶಾಸು ವಿದಿಶಾಸು ಚ |
ಚಂದ್ರಾರ್ಕಯೋರ್ಮಧ್ಯಗತಾ ಯೇ ಚ ಚಂದ್ರಾರ್ಕರಶ್ಮಿಷು ||179||
ರಸಾತಲಗತಾ ಯೇ ಚ ಯೇ ಚ ತಸ್ಮೈ ಪರಂ ಗತಾಃ |
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋಽಸ್ತು ನಿತ್ಯಶಃ ||180||
ನದಿಗಳು, ಸಮುದ್ರಗಳು, ಪರ್ವತಗಳು, ಗುಹೆಗಳು, ವೃಕ್ಷಮೂಲಗಳು, ಗೋಶಾಲೆಗಳು, ದುರ್ಗಮ ಮಾರ್ಗಗಳು, ಅರಣ್ಯಗಳು, ನಾಲ್ಕು ಬೀದಿ ಸೇರುವ ಚೌಕ ಮೂಲೆಗಳು, ಬೀದಿಗಳು, ಮನೆ ಮುಂಭಾಗದ ಅಂಗಳಗಳು, ತೀರಗಳು, ಗಜಶಾಲೆ, ಅಶ್ವಶಾಲೆ, ರಥಶಾಲೆ, ಪುರಾತನ ತೋಟ, ಜೀರ್ಣವಾದ ಗೃಹ, ಪಂಚಭೂತ, ದಿಕ್ಕು, ಉಪದಿಕ್ಕು, ಸೂರ್ಯ-ಚಂದ್ರರ ಮಧ್ಯದಲ್ಲಿರುವ ಪದಾರ್ಥಗಳು, ಸೂರ್ಯ-ಚಂದ್ರರ ಕಿರಣಗಳು, ರಸಾತಲ ಮತ್ತು ಆಚೆಯ ಪ್ರದೇಶಗಳು, ಇವುಗಳಲ್ಲಿರುವ ದೇವತೆಗಳು, ಈ ರೀತಿ ಎಲ್ಲ ಕಡೆ ವ್ಯಾಪಿಸಿರುವ, ಇವುಗಳ ಅಂತರ್ಯಾಮಿಯಾದ ರುದ್ರರೂಪಗಳಿಗೆ ನಮಸ್ಕರಿಸುತ್ತೇನೆ. ಪ್ರತಿದಿನವೂ ಅವರೆಲ್ಲರನ್ನೂ ನಮಸ್ಕರಿಸುತ್ತೇನೆ.
ಯೇಷಾಂ ನ ವಿದ್ಯತೇ ಸಂಖ್ಯಾ ಪ್ರಮಾಣಂ ರೂಪಮೇವ ಚ |
ಅಸಂಖ್ಯೇಯಗುಣಾ ರುದ್ರಾ ನಮಸ್ತೇಭ್ಯೋಽಸ್ತು ನಿತ್ಯಶಃ ||181||
ಯಾರ ಸಂಖ್ಯೆ, ಪ್ರಮಾಣ, ರೂಪಗಳಿಗೆ ಕೊನೆಯೇ ಇಲ್ಲವೋ, ಯಾರ ಗುಣಗಳನ್ನು ಎಣಿಸಲಾಗುವುದಿಲ್ಲವೋ ಅಂತಹ ರುದ್ರರಿಗೆ ನಿತ್ಯವೂ ನಮಸ್ಕಾರವಿರಲಿ.
ಸರ್ವಭೂತಕರೋ ಯಸ್ಮಾತ್ ಸರ್ವಭೂತಪತಿರ್ಹರಃ |
ಸರ್ವಭೂತಾಂತರಾತ್ಮಾ ಚ ತೇನ ತ್ವಂ ನ ನಿಮಂತ್ರಿತಃ ||182||
ಮಹದೇವನೇ, ನೀನು ಎಲ್ಲ ಪ್ರಾಣಿಗಳಿಗೂ ಜನ್ಮದಾತೃವು, ಎಲ್ಲ ಪ್ರಾಣಿಗಳ ಪಾಲಕನು, ಸಂಹಾರಕನು, ಅಂತರಾತ್ಮನು. ಆದುದರಿಂದಲೇ ನಿನಗೆ ಪ್ರತ್ಯೇಕವಾಗಿ ಆಮಂತ್ರಣ ಕೊಡಲಿಲ್ಲ.
ವ್ಯಾಖ್ಯಾನ ವಿಶೇಷ ಇಷ್ಟೆಲ್ಲ ಚೇತನರು ಯಜ್ಞಕ್ಕೆ ಆಗಮಿಸಿರುವಾಗ ಅಂತರ್ಯಾಮಿಯಾದ ನೀನೂ ಬಂದಿರುವಿ ಎಂದು ಪ್ರತ್ಯೇಕವಾಗಿ ನಿನ್ನನ್ನು ಕರೆದರೆ ಅಂತರ್ಯಾಮಿ ಚಿಂತನೆಯಿಲ್ಲವೆಂಬ ಅಪಾರ್ಥವು ಬರುತ್ತದೆಂದು ನಿನ್ನನ್ನು ಕರೆಯಲಿಲ್ಲ ಎನ್ನುತ್ತಾನೆ. ಈ ದಕ್ಷ ಪ್ರಜಾಪತಿಯ ಅನುಸಂಧಾನವು ಬಹಳ ಪೌಲ್ಯಭರಿತವಾಗಿವೆ. ಸಮಸ್ತ ದೇವತೆಯನ್ನು ಅಂತರ್ಯಾಮಿ ಪೂಜೆಯಿಂದಲೇ ಆಹ್ವಾನಿಸಿರುತ್ತಾನೆ. ಹಿಂದೆ ತಾತ್ಕಾಲಿಕವಾಗಿ ರುದ್ರನಿಗೆ ಆಹ್ವಾನ ನೀಡದೆ ಅಪರಾಧ ಮಾಡಿದ್ದರೂ ದಕ್ಷಪ್ರಜಾಪತಿಯು ಅಂತರ್ಯಾಮಿ ಚಿಂತನೆಯಿಂದಲೇ ಸತ್ಕರ್ಮವನ್ನು ಆಚರಿಸುತ್ತಿದ್ದಾನೆ ಎನ್ನಲು ಈ ಮಾತು ಸ್ಪಷ್ಟ ದೃಷ್ಟಾಂತವಾಗಿದೆ.
ತ್ವಮೇವ ಹೀಜ್ಯಸೇ ಯಸ್ಮಾದ್ ಯಜ್ಞೈರ್ವಿವಿಧದಕ್ಷಿಣೈಃ |
ತ್ವಮೇವ ಕರ್ತಾ ಸರ್ವಸ್ಯ ತೇನ ತ್ವಂ ನ ನಿಮಂತ್ರಿತಃ ||183||
ಅನೇಕ ದಕ್ಷಿಣೆಗಳಿಂದ ಕೂಡಿಕೊಂಡು ನಿನ್ನನ್ನು ಉದ್ದೇಶವಾಗಿಯೇ ಎಲ್ಲರೂ ಯಾಗ ಮಾಡುತ್ತಾರೆ. ನೀನೇ ಯಾಗದ ಯಜಮಾನನು. ಆದ್ದರಿಂದ ನಿನ್ನನ್ನು ಪ್ರತ್ಯೇಕವಾಗಿ ಆಹ್ವಾನಿಸಲಿಲ್ಲ.
ಅಥವಾ ಮಾಯಯಾ ದೇವ ಸೂಕ್ಷ್ಮಯಾ ತವ ಮೋಹಿತಃ |
ಏತಸ್ಮಾತ್ ಕಾರಣಾದ್ ವಾಽಪಿ ತೇನ ತ್ವಂ ನ ನಿಮಂತ್ರಿತಃ ||184||
ಅಥವಾ ನಿನ್ನ ಮಾಯೆಯಿಂದ ಮೋಹಿತನಾದ ನಾನು ಅಸ್ವತಂತ್ರನಾದುದರಿಂದ ನಿನ್ನನ್ನು ಆಹ್ವಾನಿಸಲಿಲ್ಲ.
ಪ್ರಸೀದ ಮಮ ಭದ್ರಂ ತೇ ಭವ ಭಾವಗತಸ್ಯ ಮೇ |
ತ್ವಯಿ ಮೇ ಹೃದಯಂ ದೇವ ತ್ವಯಿ ಬುದ್ಧಿರ್ಮನಸ್ತ್ವಯಿ ||185||
ಪರಮೇಶ್ವರನೇ, ಮಂಗಳವಾಗಲಿ. ಭಕ್ತಿಯಿಂದ ನಿನ್ನನ್ನು ಶರಣು ಹೊಂದಿದ್ದೇನೆ. ನನ್ನಲ್ಲಿ ನೀನು ಪ್ರಸನ್ನನಾಗು. ನನ್ನ ಮಾತು, ಮನಸ್ಸು, ಕೃತಿ, ಬುದ್ಧಿ ಎಲ್ಲವೂ ನಿನಗೆ ಅರ್ಪಿತವಾಗಿವೆ.
ಸ್ತುತ್ವೈವಂ ಸ ಮಹಾದೇವಂ ವಿರರಾಮ ಪ್ರಜಾಪತಿಃ |
ಭಗವಾನಪಿ ಸುಪ್ರೀತಃ ಪುನರ್ದಕ್ಷಮಭಾಷತ ||186||
ಹೀಗೆ ದಕ್ಷಪ್ರಜಾಪತಿಯು ಮಹರುದ್ರನನ್ನು ಬಗೆ ಬಗೆಯಾಗಿ ಸ್ತುತಿಸಿ ವಿರಮಿಸಿದನು. ಶಂಕರನು ಸುಪ್ರೀತನಾಗಿ ದಕ್ಷನಿಗೆ ಹೀಗೆ

ಹೇಳಿದನು.
ಪರಿತುಷ್ಟೋಽಸ್ಮಿ ತೇ ದಕ್ಷ ಸ್ತವೇನಾನೇನ ಸುವ್ರತ |
ಬಹುನಾತ್ರ ಕಿಮುಕ್ತೇನ ಮತ್ಸಮೀಪೇ ಭವಿಷ್ಯಸಿ ॥187॥
ದಕ್ಷನೇ ನೀನು ಮಾಡಿದ ಸ್ತೋತ್ರದಿಂದ ನಾನು ಸುಪ್ರೀತನಾಗಿದ್ದೇನೆ. ಹೆಚ್ಚೇನು ಹೇಳಲಿ? ನೀನು ನನ್ನ ಮುಂಭಾಗದಲ್ಲೇ ಯಾವಾಗಲೂ ಇರುವಿ.
ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ |
ಪ್ರಜಾಪತೇ ಮತ್ಪ್ರಸಾದಾತ್ ಫಲಭಾಗೀ ಭವಿಷ್ಯಸಿ ॥188॥
ಪ್ರಜಾಪತಿಯೇ, ನನ್ನ ಅನುಗ್ರಹದಿಂದ ಸಾವಿರ ಅಶ್ವಮೇಧಯಾಗಗಳ, ನೂರು ವಾಜಪೇಯ ಯಜ್ಞಗಳ ಫಲಕ್ಕೆ ನೀನು ಭಾಗಿಯಾಗಿರುವೆ.
ಅಥೈನಮಬ್ರವೀದ್ ವಾಕ್ಯಂ ಲೋಕಸ್ಯಾಧಿಪತಿರ್ಭವಃ |
ಆಶ್ವಾಸನಕರಂ ವಾಕ್ಯಂ ವಾಕ್ಯವಿದ್ ವಾಕ್ಯಸಮ್ಮಿತಮ್ ॥189॥
ಹೀಗೆ ಹೇಳಿದ ಬಳಿಕ ವಾಕ್ಯ ಕೋವಿದನಾದ, ಲೋಕನಾಥನಾದ ಭಗವಾನ್ ಶಿವನು ಪುನಃ ದಕ್ಷನಿಗೆ ವಿಶ್ವಾಸ ಹುಟ್ಟುವಂತೆ ಯುಕ್ತಿಯುಕ್ತವಾದ ಸಮಂಜಸ ಮಾತುಗಳನ್ನು ಹೇಳಿದನು.
ದಕ್ಷ ದಕ್ಷ ನ ಕರ್ತವ್ಯೋ ಮನ್ಯುರ್ವಿಘ್ನಮಿಮಂ ಪ್ರತಿ |
ಅಹಂ ಯಜ್ಞಹರಸ್ತುಭ್ಯಂ ದೃಷ್ಟಮೇತತ್ ಪುರಾತನಮ್ ॥190॥
ದಕ್ಷನೇ, ನಿನ್ನ ಯಜ್ಞಕ್ಕೆ ವಿಘ್ನವುಂಟಾಯಿತೆಂದು ನೀನು ದುಃಖಿಸಬೇಕಿಲ್ಲ. ಹಿಂದಿನ ಕಲ್ಪದಲ್ಲಿ ನೀನು ಮಾಡಿದ ಯಜ್ಞವನ್ನು ನಾನೇ ಧ್ವಂಸಗೊಳಿಸಿದ್ದೆ. ಇಂದಿನ ಘಟನೆಯು ಹಿಂದಿನಂತೆಯೇ ನಡೆದಿದೆ.
ಭೂಯಶ್ಚ ತೇ ವರಂ ದದ್ಮಿ ತಂ ತ್ವಂ ಗೃಹ್ಣೀಷ್ವ ಸುವ್ರತ |
ಪ್ರಸನ್ನವದನೋ ಭೂತ್ವಾ ತದಿಹೈಕಮನಾಃ ಶೃಣು ॥191॥
ವ್ರತನಿಷ್ಠನೇ, ನಾನು ನಿನಗೆ ಪುನಃ ವರವನ್ನು ನೀಡುತ್ತೇನೆ. ನಾನು ನೀಡಲಿರುವ ವರವನ್ನು ಸ್ವೀಕರಿಸು. ಯಾವ ವರವನ್ನು ಕೊಡುತ್ತೇನೆಂದು ಕೇಳಿಸಿಕೊ.
ವೇದಾತ್ ಷಡಂಗಾದುದ್ಧೃತ್ಯ ಸಾಂಖ್ಯಯೋಗಾಚ್ಚ ಯುಕ್ತಿತಃ |
ತಪಃ ಸುತಪ್ತಂ ವಿಪುಲಂ ದುಶ್ಚರಂ ದೇವದಾನವೈಃ ॥192॥
ಹಿಂದೆ ಷಡಂಗದಿಂದ ಕೂಡಿದ ವೇದಗಳು, ಸಾಂಖ್ಯಯೋಗ, ತರ್ಕ ಇವುಗಳನ್ನು ಆಶ್ರಯಿಸಿ ಮಹಾತಪಸ್ಸನ್ನು ಯಾರು ಆಚರಿಸುತ್ತಿದ್ದರೋ ಅಂತಹ ತಪಸ್ಸನ್ನು ಬಹು ದೀರ್ಘಕಾಲ ದೇವ-ದಾನವರು ಶ್ರದ್ಧೆಯಿಂದ ಆಚರಿಸಿದರು. ಅದಕ್ಕಿಂತಲೂ ಶ್ರೇಷ್ಠವಾದ ತಪಸ್ಸನ್ನು ನಿನಗೆ ತಿಳಿಸುತ್ತೇನೆ.
ಅಪೂರ್ವಂ ಸರ್ವತೋಭದ್ರಂ ಸರ್ವತೋಮುಖಮವ್ಯಯಮ್ |
ಅಬ್ದೈರ್ದಶಾಹಸಂಯುಕ್ತಂ ಗೂಢಮಪ್ರಾಜ್ಞನಿಂದಿತಮ್ ॥193॥
ವರ್ಣಾಶ್ರಮಕೃತೈರ್ಧರ್ಮೈರ್ವಿಪರೀತಂ ಕ್ವಚಿತ್ ಸಮಮ್ | ಗತಾಂತೈರಧ್ಯವಸಿತಮತ್ಯಾಶ್ರಮಮಿದಂ ವ್ರತಮ್ ॥194॥
ಹಿಂದೆ ಪಾಶುಪತವೆಂಬ ಶುಭಕರವಾದ ವ್ರತವನ್ನು ಆಚರಿಸಿದೆ. ಇದು ಅಪೂರ್ವವಾದ ವ್ರತವು. ಎಲ್ಲ ರೀತಿಯಿಂದಲೂ ಮಂಗಳಕರವಾದುದು. ಮೋಕ್ಷ ಸಾಧಕರಿಗೆ ಅವಿನಾಶಿಯಾದುದು. ಅನೇಕ ವರ್ಷಗಳ ಪ್ರಯತ್ನದಿಂದ ಸಾಧಿಸಲ್ಪಡುವ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಯಮಗಳಿಂದ ಕೂಡಿದ ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಭಕ್ತಿ ಎಂಬ ನಿಯಮಗಳಿಂದ ಕೂಡಿದ ಪ್ರಾಜ್ಞರಲ್ಲದ ಮೂಢರಿಂದ ನಿಂದಿಸಲ್ಪಡುವ, ಪ್ರಾಜ್ಞರಿಂದ ನಿಂದಿಸಲು ಅರ್ಹವಲ್ಲದ, ವರ್ಣಾಶ್ರಮ ಧರ್ಮಗಳಿಂದ ವಿಪರೀತವೆನಿಸಿದರೂ ಸರಿಯಾಗಿರುವ, ಅಧ್ಯಾತ್ಮ ಸಾಧಕರಿಂದ ಶುಭವಾದ ಪಾಶುಪತವೆಂಬ ಧರ್ಮವು ನನ್ನಿಂದ ಹೇಳಲ್ಪಟ್ಟಿದೆ. ಅದರ ಅನುಷ್ಠಾನದಿಂದ ವಿಪುಲವಾದ ಫಲವು ದೊರೆಯುತ್ತದೆ.
ಮಯಾ ಪಾಶುಪತಂ ದಕ್ಷ ಶುಭಮುತ್ಪಾದಿತಂ ಪುರಾ |
ತಸ್ಯ ಚೀರ್ಣಸ್ಯ ತತ್ಸಮ್ಯಕ್ಫಲಂ ಭವತಿ ಪುಷ್ಕಲಮ್ ॥195॥
ಅಂತಹ ಪಾಶುಪತ ವ್ರತದಲ್ಲಿ ಯಾವ ಫಲವು ಹೇಳಲ್ಪಟ್ಟಿದೆಯೋ ಅಂತಹ ಪುಷ್ಕಲವಾದ ಫಲವು ನಿನಗೆ ಉಂಟಾಗಲಿ.
ತಚ್ಚಾಸ್ತು ತೇ ಮಹಾಭಾಗ ತ್ಯಜ್ಯತಾಂ ಮಾನಸೋ ಜ್ವರಃ |
ಏವಮುಕ್ತ್ವಾ ಮಹಾದೇವಃ ಸಪತ್ನೀಕಃ ಸಹಾನುಗಃ |
ಅದರ್ಶನಮನುಪ್ರಾಪ್ತೋ ದಕ್ಷಸ್ಯಾಮಿತವಿಕ್ರಮಃ ॥196॥
ಮಹಾಭಾಗನೇ, ನಿನ್ನ ಮಾನಸಿಕವಾದ ಚಿಂತೆಯನ್ನು ಬಿಟ್ಟುಬಿಡು. ಈ ರೀತಿಯಾಗಿ ಅಮಿತ ಪರಾಕ್ರಮಿಯಾದ ಮಹಾದೇವನು ದಕ್ಷನಿಗೆ ತಿಳಿಸಿ, ಪತ್ನಿಯಾದ ಪಾರ್ವತಿಯ ಜೊತೆಗೆ, ಅನುಚರರ ಜೊತೆಗೆ ಅದೃಶ್ಯನಾದನು.
ದಕ್ಷಪ್ರೋಕ್ತಂ ಸ್ತವಮಿಮಂ ಕೀರ್ತಯೇದ್ ಯಃ ಶೃಣೋತಿ ವಾ |
ನಾಶುಭಂ ಪ್ರಾಪ್ನುಯಾತ್ ಕಿಂಚಿದ್ ದೀರ್ಘಮಾಯುರವಾಪ್ನುಯಾತ್ ॥
ದಕ್ಷನು ಹೇಳಿದ ಈ ಸ್ತೋತ್ರವನ್ನು ಯಾವನು ಅನುದಿನವೂ ಪಠಿಸುತ್ತಾನೋ, ಕೇಳುತ್ತಾನೋ ಅವನು ಎಂದಿಗೂ ಸ್ವಲ್ಪ ಪ್ರಮಾಣದ ಅಮಂಗಳವನ್ನು ಹೊಂದುವುದಿಲ್ಲ, ದೀರ್ಘಾಯುಷ್ಯವನ್ನು ಹೊಂದುತ್ತಾನೆ.
ಯಥಾ ಸರ್ವೇಷು ದೇವೇಷು ವರಿಷ್ಠೋ ಭಗವಾನ್ ಶಿವಃ |
ತಥಾ ಸ್ತವೋ ವರಿಷ್ಠೋಽಯಂ ಸ್ತವಾನಾಂ ಬ್ರಹ್ಮಸಮ್ಮಿತಃ ॥198॥
ಹೇಗೆ ಸಮಸ್ತ ವೇದಗಳಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ಶಿವನು ಶ್ರೇಷ್ಠನೋ ಅದೇ ರೀತಿ ಈ ಸ್ತೋತ್ರವು ಎಲ್ಲ ಸ್ತೋತ್ರಗಳಿಗಿಂತಲೂ

ಶ್ರೇಷ್ಠವಾದುದು, ವೇದಕ್ಕೆ ಸಮಾನವಾದುದು.
ವ್ಯಾಖ್ಯಾನ ವಿಶೇಷ ಸ್ತೋತ್ರದ ಆರಂಭದಿಂದಲೇ ವೇದವು ಹೇಳಲ್ಪಟ್ಟಿದೆ. `ಗಾಯಂತಿ ಗಾಯತ್ರಿಣೋ ಅರ್ಚಂತ್ಯರ್ಕಮರ್ಕಿಣಃ' ಮುಂತಾಗಿ ಹೇಳಲ್ಪಟ್ಟಿದೆ. ಆದ್ದರಿಂದ ವೇದದ ವ್ಯಾಖ್ಯಾನವೇ ಈ ಸ್ತುತಿ ಎನಿಸಿದೆ. ಶಿವನಲ್ಲಿರುವ ಭಗವಂತನ ಅಂತರ್ಯಾಮಿ ರೂಪವನ್ನೇ ಈ ಸ್ತೋತ್ರವು ಸ್ತುತಿಸುವುದರಿಂದ ದೇವರನ್ನೇ ಸ್ತುತಿಸಿದ ಫಲಕ್ಕೆ ಭಾಗಿಯಾಗುತ್ತಾನೆ ಎಂದು ಅರ್ಥ.
ಯಶೋರಾಜ್ಯಸುಖೈಶ್ವರ್ಯಕಾಮಾರ್ಥಧನಕಾಂಕ್ಷಿಭಿಃ |
ಶ್ರೋತವ್ಯೋ ಭಕ್ತಿಮಾಸ್ಥಾಯ ವಿದ್ಯಾಕಾಮೈಶ್ಚ ಯತ್ನತಃ ॥199॥
ಯಶಸ್ಸು, ರಾಜ್ಯ, ಸುಖ, ಐಶ್ವರ್ಯ, ಕಾಮ, ಅರ್ಥ, ಧನ, ವಿದ್ಯೆ ಇವುಗಳನ್ನು ಬಯಸುವವರು ಭಕ್ತಿಯಿಂದ ಈ ಸ್ತೋತ್ರವನ್ನು ಪ್ರಯತ್ನ ಪೂರ್ವಕವಾಗಿ ಕೇಳಿಸಿಕೊಳ್ಳಬೇಕು.
ವ್ಯಾಧಿತೋ ದುಃಖಿತೋ ದೀನಶ್ಚೋರಗ್ರಸ್ತೋ ಭಯಾರ್ದಿತಃ | ರಾಜಕಾರ್ಯಾಭಿಯುಕ್ತೋ ವಾ ಮುಚ್ಯತೇ ಮಹತೋ ಭಯಾತ್ ॥
ರೋಗಗ್ರಸ್ತನಾದವನು, ದುಃಖಿತನು, ಭೀತನೂ, ಚೋರಗ್ರಸ್ತನು, ಭಯ ಪೀಡಿತನು, ರಾಜಕಾರ್ಯದಲ್ಲಿ ನಿಯುಕ್ತನಾದವನು ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿದಲ್ಲಿ, ಕೇಳಿದಲ್ಲಿ ಮಹಾಭಯದಿಂದ ವಿಮುಕ್ತನಾಗುತ್ತಾನೆ.
ಅನೇನೈವ ತು ದೇಹೇನ ಗಣಾನಾಂ ಸಮತಾಂ ವ್ರಜೇತ್ |
ತೇಜಸಾ ಯಶಸಾ ಚೈವ ಯುಕ್ತೋ ಭವತಿ ನಿರ್ಮಲಃ ॥201॥
ಇದೇ ದೇಹದಲ್ಲಿಯೇ ಶಿವಗಣಗಳಿಗೆ ಸಮಾನನಾಗುತ್ತಾನೆ. ತೇಜಸ್ಸಿನಿಂದ, ಯಶಸ್ಸಿನಿಂದ ಯುಕ್ತನಾಗಿ ನಿರ್ಮಲನಾಗುತ್ತಾನೆ.
ನ ರಾಕ್ಷಸಾಃ ಪಿಶಾಚಾ ವಾ ನ ಭೂತಾ ನ ವಿನಾಯಕಾಃ |
ವಿಘ್ನಂ ಕುರ್ಯುರ್ಗೃಹೇ ತಸ್ಯ ಯತ್ರಾಯಂ ಪಠ್ಯತೇ ಸ್ತವಃ ॥202॥
ಯಾವನು ಈ ಸ್ತೋತ್ರವನ್ನು ಮನೆಯಲ್ಲಿ ಪಠಿಸುತ್ತಾನೋ ಅವನ ಕಾರ್ಯದಲ್ಲಿ ರಾಕ್ಷಸರು, ಪಿಶಾಚಿಗಳು, ಭೂತಗಳು, ವಿನಾಯಕರು ವಿಘ್ನವನ್ನುಂಟು ಮಾಡರು.
ಶೃಣುಯಾಚ್ಚೈವ ಯಾ ನಾರೀ ತದ್ಭಕ್ತಾ ಬ್ರಹ್ಮಚಾರಿಣೀ |
ಪಿತೃಪಕ್ಷೇ ಮಾತೃಪಕ್ಷೇ ಪೂಜ್ಯಾ ಭವತಿ ದೇವವತ್ ॥203॥
ಸ್ತ್ರೀಯು ಭಗವಾನ್ ಶಂಕರನಲ್ಲಿ ಭಕ್ತಿಯಿಂದ ಬ್ರಹ್ಮಚಾರಿಣಿಯಾಗಿ ಸ್ತೋತ್ರವನ್ನು ಕೇಳುವ ಅವಳು ತಂದೆಯ ಕಡೆಯವರಿಗೂ, ಪತಿಯ ಸಂಬಂಧಿಗಳಿಗೂ ದೇವತೆಯಂತೆ ಆದರಣೀಯಳಾಗುತ್ತಾಳೆ.
ಶೃಣುಯಾದ್ ಯಃ ಸ್ತವಂ ಕೃತ್ಸ್ನಂ ಕೀರ್ತಯೇದ್ ವಾ ಸಮಾಹಿತಃ |
ತಸ್ಯ ಸರ್ವಾಣಿ ಕರ್ಮಾಣಿ ಸಿದ್ಧಿಂ ಗಚ್ಛಂತ್ಯಭೀಕ್ಷ್ಣಶಃ ॥204॥
ಯಾರು ಏಕಾಗ್ರಚಿತ್ತರಾಗಿ ಈ ಸ್ತೋತ್ರವನ್ನು ಸಮಗ್ರವಾಗಿ ಪಠಿಸುತ್ತಾರೋ, ಹೇಳುತ್ತಾರೋ ಅವರ ಎಲ್ಲ ಕಾರ್ಯಗಳು ಸಿದ್ಧಿಸುತ್ತಲೇ ಇರುತ್ತವೆ.
ಮನಸಾ ಚಿಂತಿತಂ ಯಚ್ಚ ಯಚ್ಚ ವಾಚಾಽನುಕೀರ್ತಿತಮ್ |
ಸರ್ವಂ ಸಂಪದ್ಯತೇ ತಸ್ಯ ಸ್ತವಸ್ಯಾಸ್ಯಾನುಕೀರ್ತನಾಮ್ ॥205॥
ಯಾರು ಈ ಸ್ತೋತ್ರವನ್ನು ನಿರಂತರ ಪಠನ ಮಾಡುತ್ತಾರೋ ಅಂತಹ ವ್ಯಕ್ತಿಗೆ ಮನಸ್ಸಿನಲ್ಲಿ ಚಿಂತಿಸಿದ, ಮಾತಿನಿಂದ ಹೇಳಿದ ಎಲ್ಲ ಕಾರ್ಯಗಳು ಸಿದ್ಧಿಸುತ್ತವೆ.
ದೇವಸ್ಯ ಚ ಗುಹಸ್ಯಾಪಿ ದೇವ್ಯಾ ನಂದೀಶ್ವರಸ್ಯ ಚ |
ಬಲಿಂ ಸುವಿಹಿತಂ ಕೃತ್ವಾ ದಮೇನ ನಿಯಮೇನ ಚ ॥206॥
ತತಸ್ತು ಯುಕ್ತೋ ಗೃಹ್ಣೀಯಾನ್ನಾಮಾನ್ಯಾಶು ಯಥಾಕ್ರಮಮ್ |
ಈಪ್ಸಿತಾಲ್ಲಭತೇ ಸೋರ್ಥಾನ್ ಭೋಗಾನ್ ಕಾಮಾಂಶ್ಚ ಮಾನವಃ ॥
ಯಾವನು ಇಂದ್ರಿಯನಿಗ್ರಹದಿಂದ ಯಮನಿಯಮಗಳನ್ನು ಪಾಲಿಸಿ ಮಹಾದೇವ, ಕಾರ್ತಿಕೇಯ, ಪಾರ್ವತಿದೇವಿ, ನಂದೀಶ್ವರ ಇವರನ್ನು ವಿಧಿಪೂರ್ವಕವಾಗಿ ಅಂತರ್ಯಾಮಿಭಾವದಿಂದ ಪೂಜಿಸುತ್ತಾನೋ, ಈ ಸ್ತೋತ್ರದಲ್ಲಿ ಹೇಳಿದ ನಾಮಗಳನ್ನು ಮನಸ್ಸಿನಲ್ಲಿ ಗ್ರಹಿಸಿ ಪಾರಾಯಣ ಮಾಡುತ್ತಾನೋ ಅವನು ಹಿಂದೆ ಹೇಳಿದ ಮನೋವಾಂಛಿತಗಳನ್ನು, ಸುಖಭೋಗಗಳನ್ನು, ಕಾಮನೆಗಳನ್ನು ಹೊಂದುತ್ತಾನೆ.
ಮೃತಶ್ಚ ಸ್ವರ್ಗಮಾಪ್ನೋತಿ ತಿರ್ಯಕ್ಷು ಚ ನ ಜಾಯತೇ |
ಇತ್ಯಾಹ ಭಗವಾನ್ ವ್ಯಾಸಃ ಪರಾಶರಸುತಃ ಪ್ರಭುಃ ॥208॥
ಮರಣವನ್ನು ಹೊಂದಿದ ಬಳಿಕ ಸ್ವರ್ಗವನ್ನು ಹೊಂದುತ್ತಾನೆ. ಪಶು-ಪಕ್ಷಿಗಳೇ ಮೊದಲಾದ ಯೋನಿಗಳಲ್ಲಿ ಜನ್ಮವನ್ನು ತಾಳುವುದಿಲ್ಲ. ಸಮರ್ಥರಾದ ಪರಾಶರರ ಮಕ್ಕಳಾದ ವ್ಯಾಸರೇ ಈ ಕ್ರಮದಲ್ಲಿ ಬೋಧಿಸಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *

ನೂರ ಹತ್ತೊಂಬತ್ತನೆಯ ಅಧ್ಯಾಯ
ಯುಧಿಷ್ಠಿರನಿಗೆ ಭೀಷ್ಮರು, ಜ್ಞಾನವೇ ದುಃಖ ನೀಗಲು ಮಾರ್ಗವೆಂದು ತಿಳಿಸಲು ಸಮಂಗನಿಗೂ ನಾರದರಿಗೂ ನಡೆದ ಸಂವಾದವನ್ನು ನಿರೂಪಿಸಿದುದು.
ಯುಧಿಷ್ಠಿರಃ

ಶೋಕಾದ್ ದುಃಖಾಚ್ಚ ಮೃತ್ಯೋಶ್ಚ ತ್ರಸ್ಯಂತಿ ಪ್ರಾಣಿನಃ ಸದಾ |
ಉಭಯಂ ಮೇ ಯಥಾ ನ ಸ್ಯಾತ್ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಪಿತಾಮಹನೇ, ಲೋಕದಲ್ಲಿ ಪ್ರಾಣಿಗಳು ಯಾವಾಗಲೂ ಕಷ್ಟಕ್ಕೂ ದುಃಖಕ್ಕೂ, ಮರಣಕ್ಕೂ ಹೆದರುತ್ತಲೇ ಇರುತ್ತಾರೆ. ದುಃಖ-ಮೃತ್ಯುಗಳ ಭಯ ಉಂಟಾಗದಿರಲು ಏನು ಮಾಡಬೇಕೆಂದು ನನಗೆ ತಿಳಿಸು.
ಭೀಷ್ಮಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ನಾರದಸ್ಯ ಚ ಸಂವಾದಂ ಸಮಂಗಸ್ಯ ಚ ಭಾರತ ||2||
ಭೀಷ್ಮ ಕುಮಾರನೇ, ಇದೇ ವಿಷಯದಲ್ಲಿ ಹಿಂದೆ ನಾರದರಿಗೂ ಸಮಂಗನಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ನಿರೂಪಿಸುತ್ತಾರೆ. ಅದನ್ನು ಹೇಳುತ್ತೇನೆ, ಕೇಳು.
ನಾರದಃ
ಉರಸೇವ ಪ್ರಣಮಸೇ ಬಾಹುಭ್ಯಾಂ ತರಸೀವ ಚ |
ಸಂಪ್ರಹಷ್ಟಮನಾ ನಿತ್ಯಂ ವಿಶೋಕ ಇವ ಲಕ್ಷ್ಯಸೇ ||3||
ನಾರದ ಒಮ್ಮೆ ನಾರದರು ಸಮಂಗನನ್ನು ಕಂಡು ಪ್ರಶ್ನಿಸಿದರು: ಪೂಜ್ಯರೇ, ಎಲ್ಲರೂ ತಮ್ಮ ತಲೆಯನ್ನು ಬಗ್ಗಿಸಿ ನಮಸ್ಕಾರ ಮಾಡುತ್ತಾರೆ. ನೀನು ನಿನ್ನ ಎದೆಯನ್ನು ನೆಲಕ್ಕೆ ಮುಟ್ಟಿಸುತ್ತಾ ದೀರ್ಘ ದಂಡ ನಮಸ್ಕಾರ ಮಾಡುತ್ತಿರುವಿ. ಯಾರ ಸಹಾಯವೂ ಇಲ್ಲದೆ ತೋಳುಗಳಿಂದಲೇ ಭವಸಾಗರವನ್ನು ಈಜಿಕೊಂಡು ದಾಟುವಂತೆ ಕಾಣುತ್ತಿರುವಿ. ಸಂತೋಷದ ಮನಸ್ಸಿನಿಂದ ದುಃಖವೇ ಇಲ್ಲದಿರುವವನಂತೆ ಕಾಣಿಸುತ್ತಿರುವಿ.
ಉದ್ವೇಗಂ ನೇಹ ತೇ ಕಿಂಚಿತ್ ಸುಸೂಕ್ಷ್ಮಮಪಿ ಲಕ್ಷಯೇ |
ನಿತ್ಯತೃಪ್ತ ಇವ ಸ್ವಸ್ಥೋ ಬಾಲವಚ್ಚ ವಿಚೇಷ್ಟಸೇ ||4||
ನಿನ್ನ ಮನಸ್ಸಿನಲ್ಲಿ ಸ್ವಲ್ಪವಾದ ಉದ್ವೇಗವನ್ನು ನಾನು ಸೂಕ್ಷ್ಮವಾಗಿ ಗಮನಿಸಿದರೂ ಕಾಣುತ್ತಿಲ್ಲ. ನಿತ್ಯತೃಪ್ತನಂತೆ ಸ್ವಸ್ಥನಾಗಿರುವಿ. ಬಾಲಕನಂತೆ ಸಂತೋಷವಾಗಿರುವಿ. ಇದು ಹೇಗೆ ಸಾಧ್ಯ?
ಸಮಂಗಃ
ಭೂತಂ ಭವ್ಯಂ ಭವಿಷ್ಯಚ್ಚ ಸರ್ವಂ ಸತ್ತ್ವೇಷು ಮಾನದ |
ತೇಷಾಂ ತತ್ತತ್ತ್ವಾನಿ ಜಾನಾಮಿ ತತೋ ನ ವಿಮನಾ ಹ್ಯಹಮ್ ||5||
ಸಮಂಗ ನಾನು ಭೂತ-ಭವಿಷ್ಯತ್-ವರ್ತಮಾನಗಳ ಸ್ವರೂಪವನ್ನೂ, ಅವುಗಳ ಯಥಾರ್ಥವನ್ನು ತಿಳಿದಿರುತ್ತೇನೆ. ಇದರಿಂದಲೇ ನನ್ನ ಮನಸ್ಸಿನಲ್ಲಿ ಯಾವಾಗಲೂ ಉದ್ವೇಗವು ಉಂಟಾಗುವುದಿಲ್ಲ.
ಉಪಕ್ರಮಾನಹಂ ವೇದ ಪುನರೇವ ಫಲೋದಯಾನ್ |
ಲೋಕೇ ಫಲಾನಿ ಚಿತ್ರಾಣಿ ತತೋ ನ ವಿಮನಾ ಹ್ಯಹಮ್ ||6||
ನಾನು ಕರ್ಮಗಳ ಆರಂಭಗಳನ್ನು, ಅವುಗಳ ಫಲದ ಉದಯಕಾಲವನ್ನು ತಿಳಿದಿದ್ದೇನೆ. ಈ ಲೋಕದಲ್ಲಿ ಬಗೆ ಬಗೆಯ ವಿಚಿತ್ರಕರ್ಮಗಳು ಒದಗಿ ಬರುತ್ತವೆ ಎಂದು ತಿಳಿದಿದ್ದೇನೆ. ಈ ಕಾರಣದಿಂದಲೇ ಖಿನ್ನ ಮನಸ್ಕನಾಗಿಲ್ಲ.
ಅಗಾಧಾಶ್ಚಾಪ್ರತಿಷ್ಠಾಶ್ಚ ಗತಿಮಂತಶ್ಚ ನಾರದ |
ಅಂಧಾ ಜಡಾಶ್ಚ ಜೀವಂತಿ ಪಶ್ಯಾಸ್ಮಾನಪಿ ಜೀವತಃ ||7||
ನಾರದರೇ, ಜೀವನದ ಆಳ-ಅಗಲವನ್ನು ಕಾಣದ ಮೂರ್ಖರು, ಅದನ್ನು ಕಂಡಿರುವ ಜ್ಞಾನಿಗಳು, ಗಮನಶಕ್ತಿಯುಳ್ಳ ಜಂಗಮ ಪ್ರಾಣಿಗಳು, ಕುರುಡರು, ಜಡರು ಎಲ್ಲರೂ ಇಲ್ಲಿ ಜೀವಿಸುತ್ತಿದ್ದಾರೆ. ನಾವೂ ಇಲ್ಲಿ ಜೀವಿಸುತ್ತಿದ್ದೇವೆ.
ವಿಹಿತೇನೈವ ಜೀವಂತಿ ಅರೋಗಾಂಗಾ ದಿವೌಕಸಃ |
ಬಲವಂತೋಽಬಲಾಶ್ಚೈವ ತದ್ವದಸ್ಮಾನ್ ಸಭಾಜಯ ||8||
ರೋಗ ಇಲ್ಲದ ಶರೀರವುಳ್ಳ ದೇವತೆಗಳು, ಬಲಿಷ್ಠರು, ದುರ್ಬಲರು ಎಲ್ಲರೂ ಅವರವರ ಪ್ರಾರಬ್ಧ ಕರ್ಮಕ್ಕನುಗುಣವಾಗಿ ಜೀವಿಸುತ್ತಾರೆ. ಅವರವರ ಕರ್ಮ ಗತಿಗಳಿಗೆ ಅನುಗುಣವಾಗಿ ಹೇಗೆ ಎಲ್ಲರೂ ಜೀವಿಸುತ್ತಾರೋ ಅದರಂತೆ ನನ್ನನ್ನು ಭಾವಿಸು.
ಸಹಸ್ರಿಣಶ್ಚ ಜೀವಂತಿ ಜೀವಂತಿ ಶತಿನಸ್ತಥಾ |
ಶಾಕೇನ ಚಾನ್ಯೇ ಜೀವಂತಿ ಪಶ್ಯಾಸ್ಮಾನಪಿ ಜೀವತಃ ||9||
ನಾರದರೇ, ನೂರಿದ್ದವರು ಬದುಕುತ್ತಾರೆ, ಸಾವಿರವಿದ್ದವರೂ ಬದುಕುತ್ತಾರೆ. ಕೇವಲ ಶಾಕಗಳಿಂದಲೂ ಬದುಕುತ್ತಾರೆ. ಇದರಂತೆ ನಾವೂ ಹೀಗೆ ಬದುಕುತ್ತಿದ್ದೇವೆ ಎಂಬುದನ್ನು ನೋಡು.
ಯದಾ ನ ಶೋಚೇಮಹಿ ಕಿಂ ನು
ನ ಸ್ಯಾದ್ಧರ್ಮೇಣ ವಾ ನಾರದ ಕರ್ಮಣಾ ವಾ |
ಕೃತಾಂತವಶ್ಯಾನಿ ಯದಾ ಸುಖಾನಿ
ದುಃಖಾನಿ ವಾ ಯನ್ನ ವಿಧರ್ಷಯಂತಿ ||10||
ನಾರದರೇ, ನಾವು ದುಃಖಕ್ಕೆ ವಶರಾಗದಿದ್ದಲ್ಲಿ ನಮಗೆ ಧರ್ಮದಿಂದಲಾಗಲಿ, ಕರ್ಮದಿಂದಲಾಗಲಿ ಆಗಬೇಕಾದುದೇನು? ಸುಖ-ದುಃಖಗಳೆರಡು ಅಂತಹ ಸ್ವಭಾವವುಳ್ಳವುಗಳೇ ಆಗಿವೆ. ಅವೆರಡು ಕಾಲಾಧೀನವಾಗಿರುವಾಗ ಅವುಗಳ ವಿಷಯದಲ್ಲಿ ಕ್ಷಣಭಂಗುರದ ರಹಸ್ಯವನ್ನು ಅರಿತ ಬಳಿಕ ಜ್ಞಾನಿಯಾದವನು ದುಃಖಭಾಗಿಯಾಗಲಾರ.
ಯಸ್ಮೈ ಪ್ರಜ್ಞಾ ಂ ಕಥಯಂತೇ ಮನುಷ್ಯಾಃ
ಪ್ರಜ್ಞಾ ಮೂಲೋ ಹೀಂದ್ರಿಯಾಣಾಂ ಪ್ರಸಾದಃ |

ಮುಹ್ಯಂತಿ ಶೋಚಂತಿ ಯದೇಂದ್ರಿಯಾಣಿ
ಪ್ರಜ್ಞಾ ಲಾಭೋ ನಾಸ್ತಿ ಮೂಢೇಂದ್ರಿಯಸ್ಯ ॥11॥
ಪ್ರಾಜ್ಞರಾದ ಮನುಷ್ಯರು ಯಾವುದನ್ನು ಪ್ರಜ್ಞೆ ಎಂದು ಹೇಳುತ್ತಾರೋ ಆ ಪ್ರಜ್ಞೆಯೇ ಇಂದ್ರಿಯಗಳ ಪ್ರಸನ್ನತೆಗೆ ಮೂಲಕಾರಣವಾಗಿದೆ. ಪ್ರಜ್ಞೆಯಿಂದಲೇ ಶೋಕ, ಮೋಹಗಳನ್ನು ಕಳೆದುಕೊಂಡು ಇಂದ್ರಿಯಸುಖವನ್ನು ಹೊಂದುತ್ತಾನೆ. ಪ್ರಜ್ಞೆ ಇಲ್ಲದ ಪಕ್ಷದಲ್ಲಿ ಇಂದ್ರಿಯಗಳು ಮೋಹಕ್ಕೆ ತುತ್ತಾಗಿ ದುಃಖಿಸುತ್ತವೆ. ಮೂರ್ಖನಿಗೆ ಪ್ರಜ್ಞಾಲಾಭವು ಆಗುವುದಿಲ್ಲ.
ಮೂಢಸ್ಯ ದರ್ಪಃ ಸ ಪುನರ್ಮೋಹ ಏವ
ಮೂಢಸ್ಯ ನಾಯಂ ನ ಪರೋಽಸ್ತಿ ಲೋಕಃ |
ನ ಹ್ಯೇವ ದುಃಖಾನಿ ಸದಾ ಭವಂತಿ
ಸುಖಸ್ಯ ವಾ ನಿತ್ಯಶೋ ಲಾಭ ಏವ ॥12॥
ಮೂರ್ಖನಾದ ಮನುಷ್ಯನಿಗೆ ದರ್ಪವೂ, ಅದರಿಂದ ಮೋಹವೂ ಉಂಟಾಗುತ್ತದೆ. ಅವನಿಗೆ ಈ ಲೋಕದಲ್ಲಿ ಸುಖವಿಲ್ಲ, ಪರಲೋಕದಲ್ಲಿಯೂ ಸುಖವಿಲ್ಲ. ನಿರಂತರ ಯಾವ ಪುರುಷನಿಗೂ ದುಃಖವಾಗಲಿ, ಸುಖವಾಗಲಿ ಇರುವುದಿಲ್ಲ.
ಭಾವಾತ್ಮಕಂ ಸಂಪರಿವರ್ತಮಾನಂ
ನ ಮಾದೃಶಃ ಸಂಜ್ವರಂ ಜಾತು ಕುರ್ಯಾತ್ |
ಇಷ್ಟಾನ್ ಭೋಗಾನ್ನಾನುರುದ್ಧ್ಯೇತ್ ಸುಖಂ ವಾ
ನ ಚಿಂತಯೇದ್ ದುಃಖಮಭ್ಯಾಗತಂ ವಾ ॥13॥
ಸಂಸಾರವೆಂಬುದು ಕ್ಷಣಕ್ಷಣಕ್ಕೂ ಪರಿವರ್ತನೆಯನ್ನು ಹೊಂದುತ್ತಿರುತ್ತದೆ. ಇದನ್ನು ಕಾಣುತ್ತಿರುವ ನನ್ನಂತಹ ಮನುಷ್ಯನು ಸುಖ-ದುಃಖದ ವಿಷಯದಲ್ಲಿ ಎಂದಿಗೂ ದುಃಖ ಪಡುವುದಿಲ್ಲ. ಇಷ್ಟಭೋಗಗಳನ್ನಾಗಲಿ, ಸುಖವನ್ನಾಗಲಿ ಅನುಸರಿಸಿಕೊಂಡು ಹೋಗುವುದಿಲ್ಲ. ದುಃಖ ಬಂದರೂ ಚಿಂತಿಸುವುದಿಲ್ಲ.
ಸಮಾಹಿತೋ ನ ಸ್ಪೃಹಯೇತ್ ಪರೇಷಾಂ
ನಾನಾಗತಂ ನಾಭಿನಂದೇತ ಲಾಭಮ್ |
ನ ಚಾಪಿ ಹೃಷ್ಯೇದ್ ವಿಪುಲೇಽರ್ಥಲಾಭೇ
ತಥಾರ್ಥನಾಶೇ ಚ ನ ವೈ ವಿಷೀದೇತ್ ॥14॥
ಮನೋನಿಗ್ರಹಿಯು ಇತರರ ಸ್ವತ್ತಿಗೆ ಆಸೆಪಡಬಾರದು. ಮುಂದೆ ಒದಗುವಂತಹ ಅರ್ಥಲಾಭಕ್ಕಾಗಿ ಸಂತಸ ಪಡಬಾರದು. ಸಂಪತ್ತಿನ ಲಾಭದಿಂದ ಸುಖ, ನಷ್ಟದಿಂದ ವಿಷಾದ, ಎರಡನ್ನೂ ಹೊಂದಬಾರದು.
ನ ಬಾಂಧವಾ ನ ಚ ವಿತ್ತಂ ನ ಕೌಲೀ
ನ ಚ ಶ್ರುತಂ ನ ಚ ಮಂತ್ರಾ ನ ವೀರ್ಯಮ್ |
ದುಃಖಾತ್ ತ್ರಾತುಂ ಸರ್ವ ಏವೋತ್ಸಹಂತೇ
ಪರತ್ರ ಶೀಲೇ ನ ತು ಯಾಂತಿ ಶಾಂತಿಮ್ ॥15॥
ಬಂಧು-ಬಾಂಧವರು, ಉತ್ತಮ ಕುಲ, ಶಾಸ್ತ್ರಾಧ್ಯಯನ, ಮಂತ್ರ, ಪರಾಕ್ರಮ ಇವುಗಳು ಒಟ್ಟಾದರೂ ಮನುಷ್ಯನನ್ನು ದುಃಖದಿಂದ ಪಾರು ಮಾಡಲು ಸಮರ್ಥವಾಗುವುದಿಲ್ಲ. ಸಚ್ಚಾರಿತ್ರ್ಯದಿಂದ ಮನುಷ್ಯನು ದುಃಖವನ್ನು ಜಯಿಸಿ ಪರಲೋಕದಲ್ಲೂ ಸುಖವನ್ನು ಹೊಂದುತ್ತಾನೆ.
ನಾಸ್ತಿ ಬುದ್ಧಿರಯುಕ್ತಸ್ಯ ನಾಯೋಗಾದ್ ವಿದ್ಯತೇ ಸುಖಮ್ |
ಧೃತಿಶ್ಚ ದುಃಖತ್ಯಾಗಶ್ಚಾಪ್ಯುಭಯಂ ನಃ ಸುಖೋದಯಮ್ ॥16॥
ಯಾವನ ಬುದ್ಧಿಯು ಯೋಗೋಪಾಯವನ್ನು ಹೊಂದಿರುವುದಿಲ್ಲವೋ ಅವನಿಗೆ ಸುಖ-ದುಃಖಗಳಲ್ಲಿ ಸಮತ್ವ ಬುದ್ಧಿಯು ಉಂಟಾಗುವುದಿಲ್ಲ. ಜ್ಞಾನಯೋಗವಿಲ್ಲದೆ ಸುಖವಿಲ್ಲ. ಧೈರ್ಯ-ದುಃಖತ್ಯಾಗ ಈ ಎರಡು ಶಾಶ್ವತ ಸುಖಕ್ಕೆ ಕಾರಣವಾಗುತ್ತವೆ.
ಪ್ರಿಯಂ ಹಿ ಹರ್ಷಜನನಂ ಹರ್ಷ ಉತ್ಸೇಕವರ್ಧನಃ |
ಉತ್ಸೇಕೋ ನರಕಾಯೈವ ತಸ್ಮಾತ್ತಂ ಸಂತ್ಯಜಾಮ್ಯಹಮ್ ॥17॥
ಪ್ರಿಯವಸ್ತುವಿನ ಲಾಭದಿಂದ ಸುಖ ಉಂಟಾಗುತ್ತದೆ. ಅದರಿಂದ ಅಭಿಮಾನ, ಅಭಿಮಾನದಿಂದ ನರಕ. ಇದನ್ನು ಅರಿತು ಇವೆಲ್ಲವನ್ನೂ ಪರಿತ್ಯಜಿಸಿದ್ದೇನೆ.
ಏತಾನ್ ಶೋಕಭಯೋತ್ಸೇಕಾನ್ಮೋಹನಾನ್ ಸುಖದುಃಖಯೋಃ |
ಪಶ್ಯಾಮಿ ಸಾಕ್ಷಿವಲ್ಲೋಕೇ ದೇಹಸ್ಯಾಸ್ಯ ವಿಚೇಷ್ಟನಾತ್ ॥18॥
ಶೋಕ, ಭಯ, ಅಭಿಮಾನಗಳು ಜೀವರನ್ನು ಸುಖ-ದುಃಖಗಳಲ್ಲಿ ಬಂಧಿಸಿ ಮೋಹಗೊಳಿಸುತ್ತವೆ. ಆದ್ದರಿಂದ ದೇಹದ ಚೇಷ್ಟೆ ಇರುವ ತನಕ ಈ ಪ್ರಪಂಚದ ವ್ಯಾಪಾರಗಳನ್ನು ಸಾಕ್ಷಿಯಾಗಿ ನೋಡುತ್ತಿರುತ್ತೇನೆ.
ಅರ್ಥಕಾಮೌ ಪರಿತ್ಯಜ್ಯ ವಿಶೋಕೋ ವಿಗತಜ್ವರಃ |
ತೃಷ್ಣಾಮೋಹೌ ತು ಸಂತ್ಯಜ್ಯ ಚರಾಮಿ ಪೃಥಿವೀಮಿಮಾಮ್ ॥19॥
ಅರ್ಥ-ಕಾಮಗಳನ್ನು ತ್ಯಜಿಸಿ, ಅತಿಯಾದ ಆಸೆ-ಮೋಹಗಳನ್ನು ಬಿಟ್ಟು, ಶೋಕ ಸಂತಾಪಗಳಿಂದ ಮುಕ್ತನಾಗಿ ಜಗತ್ತಿನಲ್ಲಿ ಸಂಚರಿಸುತ್ತೇನೆ.
ನ ಮೃತ್ಯುತೋ ನ ಚಾಧರ್ಮಾನ್ನ ಲೋಭಾನ್ನ ಕುತಶ್ಚನ |
ಪೀತಾಮೃತಸ್ಯೇವಾತ್ಯಂತಮಿಹ ಚಾಮುತ್ರ ವಾ ಭಯಮ್ ॥20॥
ಹೇಗೆ ಅಮೃತ ಕುಡಿದವನಿಗೆ ಮರಣ ಭಯವಿಲ್ಲವೋ ಅದರಂತೆ ನಾನು ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ,

ಮೃತ್ಯುವಿಗಾಗಲೀ, ಲೋಕಗಳಿಗಾಗಲೀ, ಅಧರ್ಮಕ್ಕಾಗಲೀ ಎಂದೂ ಭಯಪಡುವುದಿಲ್ಲ.
ಏತದ್ಬ್ರಹ್ಮನ್ ವಿಜಾನಾಮಿ ಮಹತ್ಕೃತ್ವಾ ತಪೋಽವ್ಯಯಮ್ |
ತೇನ ನಾರದ ಸಂಪ್ರಾಪ್ತೋ ನ ಮಾಂ ಶೋಕಃ ಪ್ರಬಾಧತೇ ॥21॥
ಬ್ರಾಹ್ಮಣೋತ್ತಮರೇ, ಅಕ್ಷಯವಾದ ತಪಸ್ಸನ್ನು ಮಾಡಿ ಈ ಮಹಾಜ್ಞಾನವನ್ನು ಸಂಪಾದಿಸಿರುತ್ತೇನೆ. ಅದರಿಂದ ಶೋಕವು ಒದಗಿದರೂ ಅದು ನನ್ನನ್ನು ಬಾಧಿಸದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತನೆಯ ಅಧ್ಯಾಯ
ನಾರದ-ಗಾಲವರ ಸಂವಾದ.
ಯುಧಿಷ್ಠಿರಃ
ಅತತ್ತ್ವಜ್ಞಸ್ಯ ಶಾಸ್ತ್ರಾಣಾಂ ಸತತಂ ಸಂಶಯಾತ್ಮನಃ |
ಅಕೃತವ್ಯವಸಾಯಸ್ಯ ಶ್ರೇಯೋ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ಶಾಸ್ತ್ರಾರ್ಥವನ್ನು ಅರಿಯದವನಿಗೆ, ಎಲ್ಲಡೆಯೂ ಸಂಶಯಬುದ್ಧಿಯುಳ್ಳವನಿಗೆ, ಪರಲೋಕ ಸಾಧನೆಗಾಗಿ ಪ್ರಯತ್ನವನ್ನೇ ಮಾಡದವನಿಗೆ ಶ್ರೇಯಸ್ಸು ಹೇಗೆ ಉಂಟಾಗುತ್ತದೆ? ತಿಳಿಸು.
ಭೀಷ್ಮಃ
ಗುರುಪೂಜಾ ಚ ಸತತಂ ವೃದ್ಧಾನಾಂ ಪರ್ಯುಪಾಸನಮ್ |
ಶ್ರವಣಂ ಚೈವ ವಿದ್ಯಾನಾಂ ಕೂಟಸ್ಥಂ ಶ್ರೇಯ ಉಚ್ಯತೇ ॥2॥
ಭೀಷ್ಮ ಯುಧಿಷ್ಠಿರನೇ, ಯಾವಾಗಲೂ ಹಿರಿಯರ ಪೂಜೆ, ವೃದ್ಧರ ಸೇವೆ, ಶಾಸ್ತ್ರ ಶ್ರವಣ - ಮೂರು ಶ್ರೇಯಸ್ಸಿಗೆ ಪರಮ ಸಾಧನವೆಂದು ಹೇಳಲ್ಪಟ್ಟಿದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗಾಲವಸ್ಯ ಚ ಸಂವಾದಂ ದೇವರ್ಷೇರ್ನಾರದಸ್ಯ ಚ ॥3॥
ಈ ವಿಷಯದಲ್ಲಿ ದೇವರ್ಷಿಗಳಾದ ನಾರದರಿಗೂ ಗಾಲವರಿಗೂ ನಡೆದ ಪುರಾತನವಾದ ಇತಿಹಾಸ ರೂಪ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ವೀತಮೋಹಕ್ಲಮಂ ವಿಪ್ರಂ ಜ್ಞಾನತೃಪ್ತಂ ಜಿತೇಂದ್ರಿಯಮ್ |
ಶ್ರೇಯಸ್ಕಾಮಂ ಜಿತಾತ್ಮಾನಂ ನಾರದಂ ಗಾಲವೋಽಬ್ರವೀತ್ ॥4॥
ಒಮ್ಮೆ ಜಿತೇಂದ್ರಿಯರಾದ, ಶ್ರೇಯಸ್ಕಾಮರಾದ ಗಾಲವರು ದೇವತಾ ವರ್ಚಸ್ಸಿನಿಂದ ಬೆಳಗುತ್ತಿರುವ, ಮೋಹದ ಆಯಾಸವನ್ನು ಗೆದ್ದಿರುವ, ಜ್ಞಾನತೃಪ್ತರಾದ, ಜಿತೇಂದ್ರಿಯರಾದ ನಾರದರನ್ನು ಕಂಡು ಹೀಗೆ ಹೇಳಿದರು.
ಯೈಃ ಕೈಶ್ಚಿತ್ ಸಮ್ಮತೋ ಲೋಕೇ ಗುಣೈಸ್ತು ಪುರುಷೋ ನೃಷು |
ಭವತ್ಯನಪಗಾನ್ ಸರ್ವಾಂಸ್ತಾನ್ ಗುಣಾಲ್ಲಕ್ಷಯಾಮ್ಯಹಮ್ ॥5॥
ಮುನಿಶ್ರೇಷ್ಠರೇ, ಒಬ್ಬ ಮನುಷ್ಯನು ಪ್ರಪಂಚದಲ್ಲಿ ಯಾವ ಗುಣಗಳಿಂದ ಸನ್ಮಾನವನ್ನು ಹೊಂದುತ್ತಾನೋ ಅಂತಹ ಗುಣಗಳೆಲ್ಲವೂ ನಿಮ್ಮಲ್ಲಿ ಸ್ಥಿರವಾಗಿರುವುದನ್ನು ನಾನು ನೋಡುತ್ತಿದ್ದೇನೆ.
ಭವಾನೇವಂವಿಧೋಸ್ಮಾಕಂ ಸಂಶಯಂ ಛೇತ್ತುಮರ್ಹತಿ |
ಅಮೂಢಶ್ಚಿರಮೂಢಾನಾಂ ಲೋಕತತ್ತ್ವಮಜಾನತಾಮ್ ॥6॥
ಇಂತಹ ಗುಣಪೂರ್ಣರಾದ, ಜ್ಞಾನಿಗಳಾದ ನೀವು, ಸರಿಯಾಗಿ ತತ್ತತ್ವಾರ್ಥವನ್ನು ಅರಿಯದ, ಬಹಳ ಕಾಲದಿಂದ ಮೂರ್ಖರಾಗಿರುವ, ಲೋಕತತ್ತ್ವವನ್ನು ಅರಿಯದಿರುವ ನಮ್ಮಂತಹವರ ಸಂಶಯವನ್ನು ಪರಿಹರಿಸಲು ಸಮರ್ಥರಾಗಿರುವಿರಿ.
ಜ್ಞಾನೇ ಹ್ಯೇವಂ ಪ್ರವೃತ್ತಿಃ ಸ್ಯಾತ್ ಕಾರ್ಯಾಕಾರ್ಯೇ ವಿಜಾನತಃ |
ಯತ್ ಕಾರ್ಯಂ ನ ವ್ಯವಸ್ಯಾಮಸ್ತದ್ಭವಾನ್ ವಕ್ತುಮರ್ಹತಿ ॥7॥
ನಾರದರೇ, ಶಾಸ್ತ್ರಗಳಲ್ಲಿ ಅನೇಕ ವಿಧವಾದ ಮಾಡಬೇಕಾದ ಕರ್ಮಗಳು ನಿರೂಪಿಸಲ್ಪಟ್ಟಿವೆ. ಆದರೆ ಆ ಕರ್ಮಗಳಲ್ಲಿ ಈ ಕರ್ಮವನ್ನು ಮಾಡಿದರೆ ಜ್ಞಾನ ಮಾರ್ಗದಲ್ಲಿ ಪ್ರವೃತ್ತಿ ಉಂಟಾಗುತ್ತದೆ ಎಂಬುದನ್ನು ನಿಶ್ಚಯಿಸಲು ನಮಗೆ ಸಾಧ್ಯವಾಗುತ್ತಿಲ್ಲ. ಆದ್ದರಿಂದ ಯಾವ ಕಾರ್ಯದಿಂದ ಜ್ಞಾನಮಾರ್ಗವನ್ನು ಅವಲಂಬಿಸಲು ಸಾಧ್ಯವಾಗುತ್ತದೆ ಎಂಬುದನ್ನು, ಯಾವ ಕಾರ್ಯವನ್ನು ಮಾಡಬಾರದೆಂಬುದನ್ನು ನೀವೇ ನಿರ್ಣಯಿಸಿರಿ.
ಭಗವನ್ನಾಶ್ರಮಾಃ ಸರ್ವೇ ಪೃಥಗಾಚಾರದರ್ಶಿನಃ |
ಇದಂ ಶ್ರೇಯ ಇದಂ ಶ್ರೇಯ ಇತಿ ನಾನಾಪ್ರಧಾವಿತಾಃ ॥8॥
ಪೂಜ್ಯರೇ, ಎಲ್ಲ ಆಶ್ರಮಗಳು ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ ಬೇರೆ ಸದಾಚಾರಗಳನ್ನೇ ಸೂಚಿಸುತ್ತಿವೆ. ಇದು ಶ್ರೇಯಸ್ಸು, ಇದು ಶ್ರೇಯಸ್ಸು ಎಂಬುದಾಗಿ ಅನೇಕ ಪ್ರಕಾರವಾಗಿ ಕವಲೊಡೆದಿವೆ.
ತಾಂಸ್ತು ವಿಪ್ರಸ್ಥಿತಾಂದಷ್ಟ್ವಾ ಶಾಸ್ತ್ರೈಃ ಶಾಸ್ತ್ರಾಭಿನಂದಿನಃ |
ಸ್ವಶಾಸ್ತ್ರೈಃ ಪರಿತುಷ್ಟಾಂಶ್ಚ ಶ್ರೇಯೋ ನೋಪಲಭಾಮಹೇ ॥9॥
ಶಾಸ್ತ್ರದಿಂದ ಪ್ರಚೋದಿತರಾದ ಅನೇಕರು ಅನೇಕ ಮಾರ್ಗಗಳನ್ನು ಹಿಡಿದು ತಾವು ಅನುಸರಿಸುವ ಮಾರ್ಗವೇ

ಶ್ರೇಯೋಮಾರ್ಗವೆಂದು ಪ್ರಶಂಸಿಸುತ್ತಾರೆ. ಇನ್ನೊಬ್ಬರಿಗೂ ಅದರಲ್ಲಿಯೇ ಪ್ರಚೋದನೆ ಮಾಡಿ ತೃಪ್ತರಾಗುತ್ತಾರೆ. ಆದರೆ ಶ್ರೇಯಸ್ಸಿನ ಮಾರ್ಗ ಇದು ಎಂಬುದನ್ನು ನಾವು ನಿಶ್ಚಿತವಾಗಿ ತಿಳಿಯುತ್ತಿಲ್ಲ.
ಶಾಸ್ತ್ರಂ ಯದಿ ಭವೇದೇಕಂ ವ್ಯಕ್ತಂ ಶ್ರೇಯೋ ಭವೇತ್ ತದಾ |
ಶಾಸ್ತ್ರೈಶ್ಚ ಬಹುಭಿರ್ಭೂಯಃ ಶ್ರೇಯೋ ಗುಹ್ಯಂ ಪ್ರವೇಶಿತಮ್ ॥10॥
ಶಾಸ್ತ್ರವು ಒಂದೇ ಆಗಿದ್ದಲ್ಲಿ ಶ್ರೇಯಸ್ಸಿನ ಉಪಾಯವು ಒಂದೇ ಆಗಬೇಕಲ್ಲವೇ? ಶಾಸ್ತ್ರಗಳು ಬಹಳವಾಗಿದ್ದು ಶ್ರೇಯಸ್ಸಾಧನೆಯ ಮಾರ್ಗವು ರಹಸ್ಯವಾಗಿಯೇ ಮುಚ್ಚಿಡಲ್ಪಟ್ಟಿದೆ.
ಏತಸ್ಮಾತ್ ಕಾರಣಾಚ್ಛ್ರೇಯಃ ಕಲಿಲಂ ಪ್ರತಿಭಾತಿ ಮಾಮ್ |
ಬ್ರವೀತು ಭಗವಾಂಸ್ತನ್ಮೇ ಉಪಸನ್ನೋಽನುಶಾಧಿ ಭೋಃ ॥11॥
ಶಾಸ್ತ್ರಗಳಲ್ಲಿಯೇ ಸಾತ್ವಿಕ, ರಾಜಸ, ತಾಮಸ ಭೇದಗಳಿಂದ, ಷಡ್ದರ್ಶನ ಭೇದಗಳಿಂದ ಬಹುತ್ವ ಇರುವುದರಿಂದಲೇ ಶ್ರೇಯಸ್ಸಿನ ಮಾರ್ಗವು ಮುಚ್ಚಿ ಹೋಗಿದೆ ಎಂದು ನನಗೆ ತೋರುತ್ತಿದೆ. ಆದ್ದರಿಂದ ನಾನು ನಿಮ್ಮ ಶಿಷ್ಯನಾಗಿದ್ದೇನೆ. ಪೂಜ್ಯರಾದ ನೀವು ಶ್ರೇಯೋಮಾರ್ಗವನ್ನು ನನಗೆ ಉಪದೇಶಿಸಿ.
ನಾರದಃ
ಆಶ್ರಮಾಸ್ತಾತ ಚತ್ವಾರೋ ಯಥಾಸಂಕಲ್ಪಿತಾಃ ಪೃಥಕ್ |
ತಾನ್ ಸರ್ವಾನನುಪಶ್ಯ ತ್ವಂ ಸಮಾಶ್ರಿತ್ಯೈವ ಗಾಲವ ॥12॥
ನಾರದ ಗಾಲವರೇ, ನಾಲ್ಕು ಆಶ್ರಮಗಳಿವೆ. ಅದಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾದ ಧರ್ಮದ ವ್ಯವಸ್ಥೆಯೂ ಇದೆ. ನೀನು ಜ್ಞಾನವನ್ನು ಆಶ್ರಯಿಸಿ ಆಶ್ರಮ ತತ್ತ್ವಗಳನ್ನು ಚೆನ್ನಾಗಿ ಪರಿಶೀಲಿಸು.
ತೇಷಾಂ ತೇಷಾಂ ತಥಾ ಹಿ ತ್ವಮಾಶ್ರಮಾಣಾಂ ತತಸ್ತತಃ |
ನಾನಾರೂಪಗುಣೋದ್ದೇಶಂ ಪಶ್ಯ ವಿಪ್ರಸ್ಥಿತಂ ಪೃಥಕ್ |
ನಯಂತಿ ಚೈವ ತೇ ಸಮ್ಯಗಭಿಪ್ರೇತಮಸಂಶಯಮ್ ॥13॥
ವಿಪ್ರಶ್ರೇಷ್ಠನೇ, ಯಾವ ಯಾವ ಆಶ್ರಮಗಳಿಗೆ ಗುಣವೆನಿಸಿದ ಯಾವ ಯಾವ ಧರ್ಮಗಳು ಹೇಳಿವೆಯೋ ಆ ಎಲ್ಲ ಧರ್ಮಗಳಿಗೂ ಪ್ರತ್ಯೇಕವಾದ ಅಸ್ತಿತ್ವವಿದೆ. ಇದನ್ನು ನೀನು ಅರ್ಥೈಸಿಕೊ. ಚೆನ್ನಾಗಿ ವಿಮರ್ಶಿಸಿದಾಗ ಆ ಧರ್ಮಗಳೇ ನಿನ್ನನ್ನು ಉನ್ನತಿಗೆ ಕರೆದುಕೊಂಡು ಹೋಗುತ್ತವೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಋಜು ಪಶ್ಯಂಸ್ತಥಾ ಸಮ್ಯಗಾಶ್ರಮಾಣಾಂ ಪರಾಂ ಗತಿಮ್ |
ಯತ್ತು ನಿಃಶ್ರೇಯಸಂ ಸಮ್ಯಕ್ ತಚ್ಚೈವಾಸಂಶಯಾತ್ಮಕಮ್ ॥14॥
ಆಶ್ರಮಗಳ ಶ್ರೇಷ್ಠವಾದ ಗತಿಯನ್ನು ಸರಿಯಾದ ಮಾರ್ಗದಲ್ಲಿ ಕಂಡವನಿಗೆ ಕಲ್ಯಾಣಕರವಾದ ಶ್ರೇಯಸ್ಸಿನ ಸಾಧನಾಮಾರ್ಗವು ನಿಶ್ಚಿತವಾಗಿಯೂ ದೊರೆಯುತ್ತದೆ.
ಅನುಗ್ರಹಂ ಚ ಮಿತ್ರಾಣಾಮಮಿತ್ರಾಣಾಂ ಚ ನಿಗ್ರಹಮ್ |
ಸಂಗ್ರಹಂ ಚ ತ್ರಿವರ್ಗಸ್ಯ ಶ್ರೇಯ ಆಹುರ್ಮನೀಷಿಣಃ ॥15॥
ಮಿತ್ರರಾದವರಿಗೆ ಉಪಕರಿಸುವುದು, ಶತ್ರುಗಳನ್ನು ನಿಗ್ರಹಿಸುವುದು, ಧರ್ಮ ಅರ್ಥ-ಕಾಮಗಳನ್ನು ಸಂಗ್ರಹಿಸುವುದು ಶ್ರೇಯೋಮಾರ್ಗಗಳೆಂದು ಜ್ಞಾನಿಗಳು ಹೇಳುತ್ತಾರೆ.
ನಿವೃತ್ತಿಃ ಕರ್ಮಣಃ ಪಾಪಾತ್ ಸತತಂ ಪುಣ್ಯಶೀಲತಾ |
ಸದ್ಭಿಶ್ಚ ಸಮುದಾಚಾರಃ ಶ್ರೇಯ ಏತದಸಂಶಯಮ್ ॥16॥
ಪಾಪಕರ್ಮದಿಂದ ದೂರವಿರಬೇಕು, ಪುಣ್ಯಕರ್ಮಗಳನ್ನು ಆಚರಿಸುತ್ತಿರಬೇಕು, ಸಜ್ಜನರ ಸಹವಾಸವಿರಬೇಕು, ಸದಾಚಾರಿಗಳಾಗಿರಬೇಕು- ಇವೆಲ್ಲವೂ ಶ್ರೇಯೋ ಮಾರ್ಗಗಳೆಂಬುದೇ ನಿಶ್ಚಯವು.
ಮಾರ್ದವಂ ಸರ್ವಭೂತೇಷು ವ್ಯವಹಾರೇಷು ಚಾರ್ಜವಮ್ |
ವಾಕ್ಚೈವ ಮಧುರಾ ಪ್ರೋಕ್ತಾ ಶ್ರೇಯ ಏತದಸಂಶಯಮ್ ॥17॥
ಎಲ್ಲ ಜೀವರೊಡನೆ ಮೃದುತ್ವದಿಂದ ವ್ಯವಹರಿಸಬೇಕು, ವ್ಯವಹಾರದಲ್ಲಿ ಸರಳತೆ, ಮಾತಿನಲ್ಲಿ ಮಧುರತೆ - ಇವುಗಳೇ ಶ್ರೇಯಸ್ಸಾಧನ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.
ದೇವತಾಭ್ಯಃ ಪಿತೃಭ್ಯಶ್ಚ ಸಂವಿಭಾಗೋಽತಿಥಿಷ್ವಪಿ |
ಅಸಂತ್ಯಾಗಶ್ಚ ಭೃತ್ಯಾನಾಂ ಶ್ರೇಯ ಏತದಸಂಶಯಮ್ ॥18॥
ದೇವತೆಗಳಿಗೆ, ಪಿತೃಗಳಿಗೆ, ಅತಿಥಿಗಳಿಗೆ ಸಲ್ಲಿಸಬೇಕಾದ ಬಲಿ-ತರ್ಪಣ- ಭೋಜನಗಳನ್ನು ಕಾಲ ಕಾಲಕ್ಕೆ ಸಲ್ಲಿಸಬೇಕು, ಭೃತ್ಯರನ್ನು ಪೋಷಿಸಬೇಕು. ಹೀಗೆ ಮಾಡುವುದೇ ಶ್ರೇಯಸ್ಸಿಗೆ ಸಾಧನವಾಗುತ್ತದೆ.
ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಮ್ |
ಯದ್ಭೂತಹಿತಮತ್ಯಂತಮೇತತ್ ಸತ್ಯಂ ಬ್ರವೀಮ್ಯಹಮ್ ॥19॥
ಸತ್ಯವನ್ನು ಹೇಳುವುದು ಶ್ರೇಯಸ್ಕರವಾದುದು, ಆದರೆ ಸತ್ಯವೇನೆಂದು ತಿಳಿಯುವುದು ಬಹಳ ಕಷ್ಟವಾದುದು. ಎಲ್ಲ ಪ್ರಾಣಿಗಳಿಗೆ ಯಾವುದು ಅತ್ಯಂತ ಹಿತವೋ ಅದನ್ನೇ ಸತ್ಯವೆಂದು ಹೇಳುತ್ತೇನೆ.
ಅಹಂಕಾರಸ್ಯ ಚ ತ್ಯಾಗಃ ಪ್ರಣಯಸ್ಯ ಚ ನಿಗ್ರಹಃ |
ಸಂತೋಷಶ್ಚೈಕಚರ್ಯಾ ಚ ಕೂಟಸ್ಥಂ ಶ್ರೇಯ ಉಚ್ಯತೇ ॥20॥
ಅಹಂಕಾರವನ್ನು ತ್ಯಜಿಸುವುದು, ತಪ್ಪುಗಳನ್ನು ಮಾಡದಂತೆ ಮನಸ್ಸನ್ನು ನಿಗ್ರಹಿಸುವುದು, ಸಂತೋಷದಿಂದ ವರ್ತಿಸುವುದು, ಏಕಾಂತ ಸ್ಥಳದಲ್ಲಿ ಹರಿಧ್ಯಾನ ರತನಾಗಿರುವುದು- ಇವು ನಿಶ್ಚಿತವಾದ ಶ್ರೇಯೋಮಾರ್ಗಗಳು ಎಂದು ಹೇಳಲ್ಪಟ್ಟಿವೆ.

ಧರ್ಮೇಣ ವೇದಾಧ್ಯಯನಂ ವೇದಾಂಗಾನಾಂ ತಥೈವ ಚ |
ವಿದ್ಯಾರ್ಥಾನಾಂ ಚ ಜಿಜ್ಞಾಸಾ ಶ್ರೇಯ ಏತದಸಂಶಯಮ್ ॥21॥
ಧರ್ಮದಿಂದ ವೇದಾಧ್ಯಯನ ಮಾಡಿ, ವೇದಾಂತಗಳನ್ನು ಓದಿಕೊಂಡು, ಭಗವದ್ ಜ್ಞಾನದ ವಿಷಯದಲ್ಲಿ ಜಿಜ್ಞಾಸೆಯನ್ನು ಮಾಡುವುದು ಶ್ರೇಯಸ್ಸಾಧನವು. ಇದರಲ್ಲಿ ಸಂಶಯವಿಲ್ಲ.
ಶಬ್ದರೂಪರಸಸ್ಪರ್ಶಾನ್ ಸಹ ಗಂಧೇನ ಕೇವಲಾನ್ |
ನಾತ್ಯರ್ಥಮುಪಸೇವೇತ ಶ್ರೇಯಸೋಽರ್ಥೀ ಪರಂತಪ ॥22॥
ಶಬ್ದ-ರೂಪ-ರಸ-ಸ್ಪರ್ಶ-ಗಂಧಗಳನ್ನು ಶ್ರೇಯಸ್ಸನ್ನು ಬಯಸುವವನು ಅತಿಯಾಗಿ ಸೇವಿಸಬಾರದು.
ನಕ್ತಂಚರ್ಯಾ ದಿವಾಸ್ವಪ್ನಮಾಲಸ್ಯಂ ಪೈಶುನಂ ಮದಮ್ |
ಅತಿಯೋಗಮಯೋಗಂ ಚ ಶ್ರೇಯಸೋಽರ್ಥೀ ಪರಿತ್ಯಜೇತ್ ॥23॥
ರಾತ್ರಿ ಸಂಚಾರ, ಹಗಲು ನಿದ್ರೆ, ಸೋಮಾರಿತನ, ಚಾಡಿಕೋರತನ, ಮಾದಕ ಪದಾರ್ಥ ಸೇವನೆ, ಅಧಿಕ ಆಹಾರ ಸೇವನೆ, ನಿರಾಹಾರಿತ್ವ ಇವುಗಳನ್ನು ಶ್ರೇಯಸ್ಸನ್ನು ಬಯಸುವವನು ಬಿಡಬೇಕು.
ಕರ್ಮೋತ್ಕರ್ಷಂ ನ ಮಾರ್ಗೇತ ಪರೇಷಾಂ ಪರಿನಿಂದಯಾ |
ಸ್ವಗುಣೈರೇವ ಮಾರ್ಗೇತ ವಿಪ್ರಕರ್ಷಂ ಪೃಥಗ್ಜನಾತ್ ॥24॥
ಇನ್ನೊಬ್ಬರನ್ನು ನಿಂದಿಸುವುದರಿಂದ ತನ್ನ ಕರ್ಮದಲ್ಲಿ ಸಿದ್ಧಿಯನ್ನು ಹೊಂದುತ್ತೇನೆಂದು ತಿಳಿಯಬಾರದು. ಗುಣದಿಂದಲೇ ಉತ್ಕೃಷ್ಟತೆಯನ್ನು ಹೊಂದಬೇಕು. ಸಾಧಾರಣ ಮನುಷ್ಯರಿಗಿಂತಲೂ ಶ್ರೇಷ್ಠತೆಯು ಗುಣದಿಂದಲೇ ಎಂಬುದು ನಿರ್ಣಯವಾಗಿದೆ.
ನಿರ್ಗುಣಾಸ್ತ್ವೇವ ಭೂಯಿಷ್ಠಮಾತ್ಮಸಂಭಾವಿನೋ ನರಾಃ |
ದೋಷೈರನ್ಯಾನ್ ಗುಣವತಃ ಕ್ಷಿಪಂತ್ಯಾತ್ಮಗುಣಕ್ಷಯಾತ್ ॥25॥
ಗುಣ ಇಲ್ಲದವರು ತಮ್ಮನ್ನು ಪ್ರಶಂಸಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಗುಣವಂತರನ್ನು ದೋಷಾರೋಪಣೆ ಮಾಡಿ ತಿರಸ್ಕರಿಸುತ್ತಾರೆ. ಇದಕ್ಕೆ ಕಾರಣ ತನ್ನಲ್ಲಿರುವ ಗುಣಗಳ ಕೊರತೆ.
ಅನೂಚ್ಯಮಾನಾಶ್ಚ ಪುನಸ್ತೇ ಮನ್ಯಂತೇ ಮಹಾಜನಾತ್ |
ಗುಣವತ್ತರಮಾತ್ಮಾನಂ ಸ್ವೇನ ಮಾನೇನ ದರ್ಪಿತಾಃ ॥26॥
ಅಬ್ರುವನ್ ಕಸ್ಯಚಿನ್ನಿಂದಾಮಾತ್ಮಪೂಜಾಮವರ್ಣಯನ್ |
ವಿಪಶ್ಚಿದ್ ಗುಣಸಂಪನ್ನಃ ಪ್ರಾಪ್ನೋತ್ಯೇವ ಮಹದ್ ಯಶಃ ॥27॥
ಎಲ್ಲರೂ ಅನುಕೂಲವಾದ ಮಾತುಗಳನ್ನು ಹೇಳುತ್ತಿರಲು, ಪ್ರಶಂಸೆ ಮಾಡುತ್ತಿರಲು ತಮ್ಮನ್ನು ಅಧಿಕರೆಂದೇ ಭಾವಿಸುತ್ತಾರೆ. ಮಾನದಿಂದ ದರ್ಪಿತರಾದ ಅವರು ಗುಣವಂತರಿಗಿಂತಲೂ ಶ್ರೇಷ್ಠರೆಂದು ಭಾವಿಸಿಕೊಳ್ಳುತ್ತಾರೆ. ಆದರೆ ಯಾರ ನಿಂದನೆಯನ್ನೂ ಮಾಡದೆ, ಆತ್ಮ ಪ್ರಶಂಸೆಯನ್ನೂ ಮಾಡಿಕೊಳ್ಳದೆ ಉತ್ತಮ ಗುಣವನ್ನು ಸಂಪಾದನೆ ಮಾಡುವುದರಲ್ಲೇ ಆಸಕ್ತನಾಗಿರುತ್ತಾನೋ ಅಂತಹ ವಿದ್ವಾಂಸನು ವಿಪುಲವಾದ ಕೀರ್ತಿಯನ್ನು ನಿಶ್ಚಿತವಾಗಿಯೂ ಹೊಂದುತ್ತಾನೆ.
ಅಬ್ರುವನ್ ವಾತಿ ಸುರಭಿರ್ಗಂಧಃ ಸುಮನಸಾಂ ಶುಚಿಃ |
ತಥೈವಾವ್ಯಾಹರನ್ ಭಾತಿ ವಿಮಲೋ ಭಾನುರಂಬರೇ ॥28॥
ಮನೋಹರವಾದ, ಪವಿತ್ರವಾದ, ಸುಗಂಧಭರಿತವಾದ ಹೂಗಳು ಯಾವ ಮಾತನ್ನೂ ಆಡದೆ ತಮ್ಮ ಪರಿಮಳದಿಂದಲೇ ಖ್ಯಾತಿಯನ್ನು ಹೊಂದಿವೆ. ನಿರ್ಮಲನಾದ ಸೂರ್ಯನು ಪ್ರಶಂಸೆಯನ್ನು ಮಾಡಿಕೊಳ್ಳದೆ ನಿರಂತರ ಆಕಾಶದಲ್ಲಿ ಬೆಳಗುತ್ತಿರುತ್ತಾನೆ.
ಏವಮಾದೀನಿ ಚಾನ್ಯಾನಿ ಪರಿತ್ಯಕ್ತಾನಿ ಮೇಧಯಾ |
ಜ್ವಲಂತಿ ಯಶಸಾ ಲೋಕೇ ಯಾನಿ ನ ವ್ಯಾಹರಂತಿ ಚ ॥29॥
ಇನ್ನು ಬುದ್ಧಿ ಇಲ್ಲದ ಅನೇಕ ವಸ್ತುಗಳು ಏನೂ ಮಾತನಾಡದೆ ಕೀರ್ತಿಯಿಂದ ಪ್ರಜ್ವಲಿಸುತ್ತಿವೆ. ತಮ್ಮಲ್ಲಿರುವ ಗುಣಗಳನ್ನು ಎಂದಿಗೂ ಹೇಳಿಕೊಳ್ಳುವುದಿಲ್ಲ.
ನ ಲೋಕೇ ದೀಪ್ಯತೇ ಮೂರ್ಖಃ ಕೇವಲಾತ್ಮಪ್ರಶಂಸಯಾ |
ಅಪಿ ಚಾಪಿಹಿತಃ ಶ್ವಭ್ರೇ ಕೃತವಿದ್ಯಃ ಪ್ರಕಾಶತೇ ॥30॥
ಮೂರ್ಖನು ಕೇವಲ ತನ್ನ ಆತ್ಮಪ್ರಶಂಸೆಯನ್ನು ಎಷ್ಟು ಮಾಡಿಕೊಂಡರೂ ಲೋಕದಲ್ಲಿ ಪ್ರಕಾಶಮಾನನಾಗುವುದಿಲ್ಲ. ವಿದ್ವಾಂಸನು ಗುಹೆಯಲ್ಲಿ ಮುಚ್ಚಿಟ್ಟಿದ್ದರೂ ಲೋಕವಿಖ್ಯಾತನಾಗುತ್ತಾನೆ.
ಅಸದುಚ್ಚೈರಪಿ ಪ್ರೋಕ್ತಃ ಶಬ್ದಃ ಸಮುಪಶಾಮ್ಯತಿ |
ದೀಪ್ಯತೇ ತ್ವೇವ ಲೋಕೇಷು ಶನೈರಪಿ ಸುಭಾಷಿತಮ್ ॥31॥
ಅಯೋಗ್ಯನು ಎಷ್ಟು ಗಟ್ಟಿಯಾಗಿ ಶಬ್ದಗಳನ್ನು ಹೇಳಿದರೂ ಅದು ನಿರರ್ಥಕವಾಗಿರುತ್ತದೆ. ಒಳ್ಳೆಯ ಮಾತನ್ನು ಮೆಲ್ಲನೆ ಹೇಳಿದರೂ ಎಲ್ಲರಿಂದಲೂ ಅದು ಆದರಿಸಲ್ಪಡುತ್ತದೆ.
ಮೂಢಾನಾಮವಲಿಪ್ತಾನಾಮಸಾರಂ ಭಾಷಿತಂ ಬಹು |
ದರ್ಶಯತ್ಯಂತರಾತ್ಮಾನಂ ದಿವಾ ರೂಪಮಿವಾಂಶುಮಾನ್ ॥32॥
ಮೂರ್ಖರಾದ, ದೋಷಗಳಿಂದ ಕೂಡಿರುವ ಅನೇಕರು ಆಡುವ ಅಸಾರವಾದ ಮಾತುಗಳು ಸೂರ್ಯನು ತನ್ನ ಮಣಿಯ ಮೂಲಕ ಧಾತು ಶಕ್ತಿಯನ್ನು ಪ್ರಕಟ ಪಡಿಸುವಂತೆ ಅವರ ಮನೋಧರ್ಮವನ್ನು ಪ್ರಕಟಪಡಿಸುತ್ತವೆ.
ಏತಸ್ಮಾತ್ ಕಾರಣಾತ್ ಪ್ರಜ್ಞಾ ಂ ಮೃಗಯಂತೇ ಪೃಥಗ್ವಿಧಾಮ್ |
ಪ್ರಜ್ಞಾ ಲಾಭೋ ಹಿ ಭೂತಾನಾಮುತ್ತಮಃ ಪ್ರತಿಭಾತಿ ಮಾಮ್ ॥33॥
ಈ ಕಾರಣದಿಂದ ಶ್ರೇಯಸ್ಸನ್ನು ಬಯಸುವ ಸಜ್ಜನರು ಅನೇಕ ಶಾಸ್ತ್ರಗಳ ಅಧ್ಯಯನದಿಂದ ಬಗೆಬಗೆಯ ಜ್ಞಾನಮಾರ್ಗಗಳನ್ನು

ಅನ್ವೇಷಣೆ ಮಾಡುತ್ತಾರೆ. ಪ್ರಾಣಿಗಳಿಗೆ ಪ್ರಜ್ಞಾಲಾಭವು ಶ್ರೇಷ್ಠವಾದ ಲಾಭವೆಂದು ನನಗನಿಸುತ್ತದೆ.
ನಾಪೃಷ್ಟಃ ಕಸ್ಯಚಿದ್ಬ್ರೂಯಾನ್ನ ಚಾನ್ಯಾಯೇನ ಪೃಚ್ಛತಃ |
ಜ್ಞಾನವಾನಪಿ ಮೇಧಾವೀ ಜಡವಲ್ಲೋಕಮಾಚರೇತ್ ॥34॥
ಪ್ರಾಜ್ಞನಾದವನು ಪ್ರಶ್ನೆ ಮಾಡದೆ ಯಾರಿಗೂ ಉಪದೇಶಿಸಬಾರದು. ಅಧರ್ಮದ ರೀತಿಯಲ್ಲಿ ಅಪಹಾಸ್ಯಕ್ಕೆ ಪ್ರಶ್ನಿಸಿದರೂ ಉತ್ತರ ಕೊಡಬಾರದು. ಜ್ಞಾನಿಯಂತೆ ಸುಮ್ಮನೆ ಕುಳಿತುಕೊಳ್ಳಬೇಕು.
ತತೋ ವಾಸಂ ಪರೀಕ್ಷೇತ ಧರ್ಮನಿತ್ಯೇಷು ಸಾಧುಷು |
ಮನುಷ್ಯೇಷು ವದಾನ್ಯೇಷು ಸ್ವಧರ್ಮನಿರತೇಷು ಚ ॥35॥
ಮನುಷ್ಯನು ಯಾವಾಗಲೂ ಧರ್ಮನಿಷ್ಠರಾದ ಸಜ್ಜನರಲ್ಲಿ, ಸ್ವಧರ್ಮ ನಿರತರಾದ ಸತ್ಪುರುಷರ ಸಹವಾಸ ಹೊಂದುವ ಇಚ್ಛೆಯುಳ್ಳವನಾಗಿರಬೇಕು.
ಚತುರ್ಣಾಂ ಯತ್ರ ವರ್ಣಾನಾಂ ಧರ್ಮವ್ಯತಿಕರೋ ಭವೇತ್ |
ನ ತತ್ರ ವಾಸಂ ಕುರ್ವೀತ ಶ್ರೇಯೋರ್ಥೀ ವೈ ಕಥಂಚನ ॥36॥
ಶ್ರೇಯಸ್ಸನ್ನು ಬಯಸುವವನು ನಾಲ್ಕು ವರ್ಣದವರಲ್ಲಿ ಧರ್ಮಸಾಂಕರ್ಯ- ವಾಗುವ ಸ್ಥಳದಲ್ಲಿ ಯಾವುದೇ ಕಾರಣದಿಂದ ವಾಸ ಮಾಡಬಾರದು.
ನಿರಾರಂಭೋಽಪ್ಯಯಮಿಹ ಯಥಾಲಬ್ಧೋಪಜೀವನಃ |
ಪುಣ್ಯಂ ಪುಣ್ಯೇಷು ವಿಮಲಂ ಪಾಪಂ ಪಾಪೇಷು ಚಾಪ್ನುಯಾತ್ ॥37॥
ಎಂದಿಗೂ ಕಾಮ್ಯಕರ್ಮಗಳನ್ನು ಮಾಡಲು ಹೋಗಬಾರದು. ಸಿಕ್ಕಿದ್ದರಲ್ಲಿ ತೃಪ್ತರಾಗಿರಬೇಕು. ಪುಣ್ಯಪುರುಷರ ಸಂಗ ಮಾಡುತ್ತಿದ್ದರೆ ಪುಣ್ಯವನ್ನೇ ಹೊಂದುತ್ತಾರೆ. ಪಾಪಿಷ್ಠರ ಜೊತೆ ಸಂಗ ಮಾಡಿದರೆ ಪಾಪವನ್ನೇ ಹೊಂದುತ್ತಾರೆ.
ಅಪಾಮಗ್ನೇಸ್ತಥೇನ್ದೋಶ್ಚ ಸ್ಪರ್ಶಂ ವೇದಯತೇ ಯಥಾ |
ತಥಾ ಪಶ್ಯಾಮಹೇ ಸ್ಪರ್ಶಮುಭಯೋಃ ಪಾಪಪುಣ್ಯಯೋಃ ॥38॥
ಹೇಗೆ ನೀರಿನಲ್ಲಿ ಮುಳುಗಿದಾಗ ಶೈತ್ಯವು, ಅಗ್ನಿಯಲ್ಲಿ ಮುಟ್ಟಿದಾಗ ಔಷ್ಣ್ಯವು, ಚಂದ್ರನ ಕಿರಣಗಳಿಂದ ಸುಖಾನುಭವವು ಉಂಟಾಗುತ್ತದೋ - ಈ ರೀತಿ ಪುಣ್ಯವಂತರ ಸಂಸರ್ಗದಿಂದ ಪುಣ್ಯ, ಪಾಪಿಷ್ಠರ ಸಂಸರ್ಗದಿಂದ ಪಾಪವು ಪ್ರತ್ಯಕ್ಷದಿಂದಲೇ ಸಿದ್ಧವಾಗುತ್ತದೆ.
ಅಪಶ್ಯಂತೋನವಿಷಯಂ ಭುಂಜತೇ ವಿಘಸಾಶಿನಃ |
ಭುಂಜಾನಂ ಚಾನ್ನವಿಷಯಾನ್ ವಿಷಯಂ ವಿದ್ಧಿ ಕರ್ಮಣಾಮ್ ॥39॥
ಅನ್ನವನ್ನು ಭುಂಜಿಸುವ ಸಾಧಕರು ಯಜ್ಞಶೇಷವೆಂದು ನಿರ್ಲಿಪ್ತವಾಗಿಯೇ ಸೇವಿಸುತ್ತಾರೆ. ತಮಗಾಗಿ ತಿನ್ನುವಂತಹ ವಿಷಯ ಲೋಲುಪರು ಅವರು ಕರ್ಮಗಳಿಗೆ ಗುರಿಯಾಗುತ್ತಾರೆ. ಸಾಧಕರಾದವರು ವಿಷಯ ವಿರೋಧಿ ಅರ್ಥಾತ್ ಕೆಟ್ಟ ವಿಷಯಗಳನ್ನು ಎಂದಿಗೂ ಸ್ವೀಕರಿಸರು.
ಯತ್ರಾಗಮಯಮಾನಾನಾಮಸತ್ಕಾರೇಣ ಪೃಚ್ಛತಾಮ್ |
ಪ್ರಬ್ರೂಯಾದ್ ಬ್ರಹ್ಮಣೋ ಧರ್ಮಂ ತ್ಯಜೇತ್ತಂ ದೇಶಮಾತ್ಮವಾನ್ ॥
ಯಾವ ಸ್ಥಳದಲ್ಲಿ ಜ್ಞಾನಿಗೆ ಮಹತ್ವವನ್ನು ನೀಡುವುದಿಲ್ಲವೋ, ಸತ್ಕರಿಸದೆ ಧರ್ಮದ ಪ್ರಶ್ನೆಗಳನ್ನು ಮಾಡುತ್ತಾರೋ ಬುದ್ಧಿವಂತನಾದ ಬ್ರಾಹ್ಮಣನು ಅಂತಹ ದೇಶವನ್ನು ಕೂಡಲೇ ಪರಿತ್ಯಜಿಸಬೇಕು.
ಶಿಷ್ಯೋಪಾಧ್ಯಾಯಿಕಾ ವೃತ್ತಿರ್ಯತ್ರ ಸ್ಯಾತ್ ಸುಸಮಾಹಿತಾ |
ಯಥಾವಚ್ಛಾಸ್ತ್ರಸಂಪನ್ನಾ ಕಸ್ತಂ ದೇಶಂ ಪರಿತ್ಯಜೇತ್ ॥41॥
ಎಲ್ಲಿ ಗುರು-ಶಿಷ್ಯರ ವ್ಯವಹಾರವು ಸರಿಯಾಗಿ ವ್ಯವಸ್ಥಿತವಾಗಿ ನಡೆಯುತ್ತಿರುತ್ತದೋ, ಶಾಸ್ತ್ರ ಸಮ್ಮತವಾಗಿರುತ್ತದೋ ಅಂತಹ ಸ್ಥಳವನ್ನು ಯಾವನು ತಾನೆ ಬಿಡುತ್ತಾನೆ?
ಆಕಾಶಸ್ಥಾ ಧ್ರುವಂ ಯತ್ರ ದೋಷಂ ಬ್ರೂಯುರ್ವಿಪಶ್ಚಿತಾಮ್ |
ಆತ್ಮಪೂಜಾಭಿಕಾಮಾ ವೈ ಕೋ ವಸೇತ್ತತ್ರ ಪಂಡಿತಃ ॥42॥
ಎಲ್ಲಿ ಜನರು ಯಾವ ಆಧಾರವೂ ಇಲ್ಲದೆ ವಿದ್ವಾಂಸರ ಮೇಲೆ ದೋಷಾರೋಪಣೆಯನ್ನು ಮಾಡುತ್ತಾರೋ ಅಂತಹ ದೇಶದಲ್ಲಿ ಆತ್ಮಗೌರವವನ್ನು ಹೊಂದಲು ಬಯಸುವ ಯಾವ ಪಂಡಿತನು ತಾನೇ ವಾಸ ಮಾಡುತ್ತಾನೆ?
ಯತ್ರ ಸಂಲೋಡಿತಾ ಲುಬ್ಧೈಃ ಪ್ರಾಯಶೋ ಧರ್ಮಸೇತವಃ |
ಪ್ರದೀಪ್ತಮಿವ ಶೈಲಾಂತಂ ಕಸ್ತಂ ದೇಶಂ ನ ಸಂತ್ಯಜೇತ್ ॥43॥
ಯಾವ ದೇಶದಲ್ಲಿ ಜಿಪುಣರಾದ ವ್ಯಕ್ತಿಗಳು ಪ್ರಾಯಶಃ ಧರ್ಮದ ಕಟ್ಟು ಪಾಡನ್ನೆಲ್ಲ ನಾಶಮಾಡಿರುತ್ತಾರೋ ಅಂತಹ ದೇಶವನ್ನು ಉಟ್ಟಿರುವ ವಸ್ತ್ರಕ್ಕೆ ಬೆಂಕಿ ಬಿದ್ದಾಗ ಕಿತ್ತು ಬಿಸುಡುವಂತೆ ಪರಿತ್ಯಜಿಸದೆ ಇರಬಾರದು, ಬಿಟ್ಟು ಹೋಗಬೇಕು.
ಯತ್ರ ಧರ್ಮಮನಾಶಂಕಾಶ್ಚರೇಯುರ್ವೀತಮತ್ಸರಾಃ |
ಚರೇತ್ತತ್ರ ವಸೇಚ್ಚೈವ ಪುಣ್ಯಶೀಲೇಷು ಸಾಧುಷು ॥44॥
ಯಾವ ಪ್ರದೇಶದಲ್ಲಿ ಜನರು ಮಾತ್ಸರ್ಯರಹಿತರಾಗಿ, ಸಂಶಯ ರಹಿತರಾಗಿ ಧರ್ಮವನ್ನು ಆಚರಿಸುತ್ತಿರುತ್ತಾರೋ ಅಂತಹ ಪುಣ್ಯಶೀಲರಾದ ಸಜ್ಜನರಿರುವ ಸ್ಥಳದಲ್ಲಿ ಅವಶ್ಯವಾಗಿ ವಾಸ ಮಾಡಿಕೊಂಡಿರಬೇಕು.
ಧರ್ಮಮರ್ಥನಿಮಿತ್ತಂ ತು ಚರೇಯುರ್ಯತ್ರ ಮಾನವಾಃ |
ನ ತಾನನುವಸೇಜ್ಜಾತು ತೇ ಹಿ ಪಾಪಕೃತೋ ಜನಾಃ ॥45॥
ಎಲ್ಲಿ ಜನರು ಹಣಕ್ಕಾಗಿ ಧರ್ಮಾಚರಣೆಯನ್ನು ಮಾಡುತ್ತಾರೋ ಅಂತಹ ವ್ಯಕ್ತಿಗಳ ಸಮೀಪದಲ್ಲಿ ಯಾವುದೇ ಕಾರಣದಿಂದ ವಾಸ

ಮಾಡಬಾರದು. ಕಾರಣ ಹಣಕ್ಕಾಗಿ ಧರ್ಮವನ್ನು ಮಾಡುವವರು ಪಾಪಕರ್ಮಿಗಳೇ ಆಗಿರುತ್ತಾರೆ.
ಕರ್ಮಣಾ ಯತ್ರ ಪಾಪೇನ ವರ್ತಂತೇ ಜೀವಿತೇಪ್ಸವಃ |
ವ್ಯವಧಾವೇತ್ತತಸ್ತೂರ್ಣಂ ಸಸರ್ಪಾಚ್ಛರಣಾದಿವ ॥46॥
ಯಾವ ಸ್ಥಳದಲ್ಲಿ ಜೀವನಕ್ಕಾಗಿ ಪಾಪಕರ್ಮವನ್ನೇ ಮಾಡುತ್ತಿರುತ್ತಾರೋ ಅಂತಹ ಸ್ಥಳದಿಂದ ಹಾವು ಹೊಕ್ಕಿರುವ ಮನೆಯನ್ನು ಬಿಟ್ಟು ಹೋಗುವಂತೆ ಬೇಗ ದೂರ ಸರಿಯಬೇಕು.
ಯೇನ ಖಡ್ಗಂ ಸಮಾರೂಢಂ ಕರ್ಮಣಾನುಶಯೀ ಭವೇತ್ |
ಆದಿತಸ್ತನ್ನ ಕರ್ತವ್ಯಮಿಚ್ಛತಾ ಭವಮಾತ್ಮನಃ ॥47॥
ಯಾರಿಗೆ ಖಡ್ಗದಂತೆ ಇರುವ ವೈರವು ಮನಸ್ಸಿನಲ್ಲಿ ಮತ್ತೊಬ್ಬರ ಬಗ್ಗೆ ಇದೆಯೋ ಅಂತಹ ಗೂಢವಾದ ವೈರವನ್ನಿಟ್ಟುಕೊಂಡು ಸತ್ಕರ್ಮವನ್ನು ಮಾಡಲು ಬಯಸಬಾರದು. ಹೃದಯದಲ್ಲಿ ವೈರ ತುಂಬಿ ಕರ್ಮವನ್ನು ಮಾಡುವವನು ಸಂಸಾರದ ದುಃಖವನ್ನು ಪರಿಹರಿಸಿಕೊಳ್ಳನು.
ಯತ್ರ ರಾಜಾ ಚ ರಾಜ್ಞಶ್ಚ ಪುರುಷಾಃ ಪ್ರತ್ಯನಂತರಾಃ |
ಕುಟುಂಬಿನಾಮಗ್ರಭುಜಸ್ತ್ಯಜೇತ್ತದ್ರಾಷ್ಟ್ರಮಾತ್ಮವಾನ್ ॥48॥
ಯಾವ ದೇಶದಲ್ಲಿ ರಾಜನು, ರಾಜಪುರುಷರು, ಕುಟುಂಬದ ಜನರು ಹೀಗೆ ವ್ಯತ್ಯಾಸವನ್ನು ನೋಡುವುದಿಲ್ಲವೋ, ಕಷ್ಟದಿಂದ ಜೀವನ ನಿರ್ವಹಿಸುವ ಸಂಸಾರಿಗಳು ಊಟ ಮಾಡುವುದಕ್ಕಿಂತ ಮೊದಲೇ ರಾಜನು ಸ್ವಾರ್ಥಿಯಾಗಿ ಊಟ ಮಾಡುತ್ತಾನೋ ಅಂತಹ ರಾಷ್ಟ್ರವನ್ನು ಧರ್ಮಜ್ಞನು ತ್ಯಜಿಸಬೇಕು.
ಶ್ರೋತ್ರಿಯಾಸ್ತ್ವಗ್ರಭೋಕ್ತಾರೋ ಧರ್ಮನಿತ್ಯಾಃ ಸನಾತನಾಃ |
ಯಾಜನಾಧ್ಯಾಪನೇ ಯುಕ್ತಾ ಯತ್ರ ತದ್ ರಾಷ್ಟ್ರಮಾವಸೇತ್ ॥49॥
ಯಾವ ದೇಶದಲ್ಲಿ ಶ್ರೋತ್ರಿಯರು, ಧರ್ಮಾನುಷ್ಠಾನ ಮಾಡುವವರು, ಯಜನ- ಅಧ್ಯಾಪನದಲ್ಲಿ ನಿರತರಾಗಿರುವವರು ಎಲ್ಲರಿಗಿಂತಲೂ ಮೊದಲು ಊಟ ಮಾಡುತ್ತಾರೋ ಅಂತಹ ದೇಶದಲ್ಲಿ ಅವಶ್ಯವಾಗಿ ವಾಸ ಮಾಡಬೇಕು.
ಸ್ವಾಹಾಸ್ವಧಾವಷಟ್ಕಾರಾ ಯತ್ರ ಸಮ್ಯಗನುಷ್ಠಿತಾಃ |
ಅಜಸ್ರಂ ಚೈವ ವರ್ತಂತೇ ವಸೇತ್ತತ್ರಾವಿಚಾರಯನ್ ॥50॥
ಯಾವ ದೇಶದಲ್ಲಿ ಸ್ವಾಹಾ, ಸ್ವಧಾ, ವಷಟ್ ಎಂಬ ಯಜ್ಞಕರ್ಮಗಳು ಚೆನ್ನಾಗಿ ನಡೆಯುತ್ತಿರುತ್ತವೆಯೋ ಅಂತಹ ದೇಶದಲ್ಲಿ ವಿಚಾರ ಮಾಡದೆ ವಾಸ ಮಾಡಬೇಕು.
ಅಶುಚೀನ್ ಯತ್ರ ಪಶ್ಯೇತ ಬ್ರಾಹ್ಮಣಾನ್ ವೃತ್ತಿಕರ್ಶಿತಾನ್ |
ತ್ಯಜೇತ್ತದ್ರಾಷ್ಟ್ರಮಾಸನ್ನಮುಪಸೃಷ್ಟಮಿವಾಮಿಷಮ್ ॥51॥
ಯಾವ ದೇಶದಲ್ಲಿ ಬ್ರಾಹ್ಮಣರು ಬದುಕಿಗಾಗಿ ಕಷ್ಟಪಡುತ್ತಾ ಅವ್ಯವಸ್ಥೆಯ ಜೀವನದಲ್ಲಿ ಇರುವುದನ್ನು ನೋಡುತ್ತಾರೋ ಆ ದೇಶವನ್ನು ವಿಷಯುಕ್ತವಾದ ಪದಾರ್ಥವನ್ನು ತ್ಯಜಿಸುವಂತೆ ಬಿಟ್ಟು ಹೋಗಬೇಕು.
ಪ್ರೀಯಮಾಣಾ ನರಾ ಯತ್ರ ಪ್ರಯಚ್ಛೇಯುರಯಾಚಿತಾಃ |
ಸ್ವಸ್ಥಚಿತ್ತೋ ವಸೇತ್ತತ್ರ ಕೃತಕೃತ್ಯ ಇವಾತ್ಮವಾನ್ ॥52॥
ಯಾವ ದೇಶದಲ್ಲಿ ಪ್ರಸನ್ನ ಮನಸ್ಕರಾದ ಮನುಷ್ಯರು ಬೇಡದಿದ್ದರೂ ಸಜ್ಜನರನ್ನು ಕರೆದು, ಆದರದಿಂದ ಅನ್ನವನ್ನು ನೀಡುತ್ತಾರೋ ಅಂತಹ ದೇಶದಲ್ಲಿ ಜಿತೇಂದ್ರಿಯನಾದ ಸಾಧಕನು ಕೃತಕೃತ್ಯನೆಂದು ಭಾವಿಸಿ ಸ್ವಸ್ಥಚಿತ್ತನಾಗಿ ವಾಸಿಸಬೇಕು.
ದಂಡೋ ಯತ್ರಾವಿನೀತೇಷು ಸತ್ಕಾರಶ್ಚ ಕೃತಾತ್ಮಸು |
ಚರೇತ್ತತ್ರ ವಸೇಚ್ಚೈವ ಪುಣ್ಯಶೀಲೇಷು ಸಾಧುಷು ॥53॥
ಯಾವ ದೇಶದಲ್ಲಿ ಉದ್ಧಟರು ಶಿಕ್ಷಿಸಲ್ಪಡುತ್ತಾರೋ, ಸಜ್ಜನರು ಸತ್ಕಾರ ಹೊಂದುತ್ತಾರೋ ಅಂತಹ ದೇಶದಲ್ಲಿ ಸಜ್ಜನರ ಮಧ್ಯದಲ್ಲಿ ಸಂಚರಿಸುತ್ತಾ ವಾಸಿಸಬೇಕು.
ಉಪಸೃಷ್ಟೇಷ್ವದಾಂತೇಷು ದುರಾಚಾರೇಷ್ವಸಾಧುಷು |
ಅವಿನೀತೇಷು ಲುಬ್ಧೇಷು ಸುಮಹದ್ದಂಡಧಾರಣಮ್ ॥54॥
ಯಾರು ಜಿತೇಂದ್ರಿಯರಾದ ಸಜ್ಜನರ ವಿಷಯದಲ್ಲಿ ಕೋಪ ಹೊಂದುತ್ತಾರೋ, ಸಜ್ಜನರ ವಿಷಯದಲ್ಲಿ ಧೂರ್ತರಾಗಿ ವರ್ತಿಸುತ್ತಾರೋ, ಉದ್ಧಟರಾಗಿರುತ್ತಾರೋ, ಲೋಭವನ್ನು ತೋರುತ್ತಾರೋ ಅಂತಹವರಿಗೆ ಕಠಿಣವಾದ ಶಿಕ್ಷೆಯನ್ನು ವಿಧಿಸಬೇಕು.
ಯತ್ರ ರಾಜಾ ಧರ್ಮನಿತ್ಯೋ ರಾಜ್ಯಂ ವೈ ಪರ್ಯುಪಾಸಿತಾ |
ಅಪಾಸ್ಯ ಕಾಮಾನ್ಕಾಮೇಶೋ ವಸೇತ್ತತ್ರಾವಿಚಾರಯನ್ ॥55॥
ಯಾವ ದೇಶದಲ್ಲಿ ರಾಜನು ಧರ್ಮಪರಾಯಣನಾಗಿರುತ್ತಾನೋ, ಧರ್ಮಾನುಸಾರವಾಗಿ ರಾಜ್ಯವನ್ನು ಪರಿಪಾಲಿಸುತ್ತಾನೋ, ಸಮಸ್ತ ಕಾಮನೆಗಳನ್ನು ಹೊಂದಿದ್ದರೂ ವಿಷಯ ಭೋಗದಿಂದ ವಿರಕ್ತನಾಗಿರುತ್ತಾನೋ ಅಂತಹ ದೇಶದಲ್ಲಿ ವಿಚಾರ ಮಾಡದೆ ವಾಸಿಸಬೇಕು.
ತಥಾಶೀಲಾ ಹಿ ರಾಜಾನಃ ಸರ್ವಾನ್ ವಿಷಯವಾಸಿನಃ |
ಶ್ರೇಯಸಾ ಯೋಜಯಂತ್ಯಾಶು ಶ್ರೇಯಸಿ ಪ್ರತ್ಯುಪಸ್ಥಿತೇ ॥56॥
ರಾಜನ ಶೀಲ-ಸ್ವಭಾವಗಳಂತೆ ಪ್ರಜೆಗಳ ಶೀಲ-ಸ್ವಭಾವಗಳಿರುತ್ತವೆ. ರಾಜನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುವುದರಲ್ಲಿ ತಾನು ಶ್ರೇಯಸ್ಸಿಗೆ ಭಾಗಿಯಾಗುವ ಜೊತೆಗೆ ಪ್ರಜೆಗಳನ್ನೂ ಶ್ರೇಯೋಭಾಗಿಗಳನ್ನಾಗಿಸುತ್ತಾನೆ.
ಪೃಚ್ಛತಸ್ತೇ ಮಯಾ ತಾತ ಶ್ರೇಯ ಏತದುದಾಹೃತಮ್ |
ನ ಹಿ ಶಕ್ಯಂ ಪ್ರಧಾನೇನ ಶ್ರೇಯಃ ಸಂಖ್ಯಾತುಮಾತ್ಮನಃ ॥57॥
ಗಾಲವನೇ, ನಿನ್ನ ಪ್ರಶ್ನೆಗನುಸಾರವಾಗಿ ಶ್ರೇಯೋಮಾರ್ಗವನ್ನು ಹೇಳಿರುತ್ತೇನೆ. ತನ್ನ ಶ್ರೇಯಸ್ಸನ್ನೇ ಮುಖ್ಯವಾಗಿಟ್ಟುಕೊಂಡು

ಎಲ್ಲವನ್ನು ವರ್ಣಿಸಲು ಸಾಧ್ಯವಾಗುವುದಿಲ್ಲ. ಶ್ರೇಯೋಮಾರ್ಗಗಳು ಅಸಂಖ್ಯವಾಗಿವೆ.
ಏವಂ ಪ್ರವರ್ತಮಾನಸ್ಯ ವೃತ್ತಿಂ ಪ್ರಣಿಹಿತಾತ್ಮನಃ |
ತಪಸ್ಯೈವೇಹ ಬಹುಲಂ ಶ್ರೇಯೋ ವ್ಯಕ್ತಂ ಭವಿಷ್ಯತಿ ||58||
ಹೀಗೆ ವಿಹಿತವೃತ್ತಿಯಿಂದ ಜೀವನ ನಡೆಸುತ್ತಾ, ಭೂತಹಿತ ಚಿಂತಕನಾಗಿರುವ ಮನುಷ್ಯನಿಗೆ ತಪೋನುಷ್ಠಾನದಿಂದ ಶ್ರೇಷ್ಠವಾದ ಶ್ರೇಯಸ್ಸು ಪ್ರತ್ಯಕ್ಷವಾಗಿಯೇ ದೊರೆಯುತ್ತದೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ವಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂದನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ಮೋಕ್ಷದ ವಿಷಯದ ಬಗ್ಗೆ ಅರಿಷ್ಟನೇಮಿ
ಹಾಗೂ ಸಗರನಿಗೆ ನಡೆದ ಸಂವಾದವನ್ನು ಉಪದೇಶಿಸಿದುದು.
ಯುಧಿಷ್ಠಿರಃ
ಕಥಂ ನು ಮುಕ್ತಃ ಪೃಥಿವೀಂ ಚರೇದಸ್ಮದ್ವಿಧೋ ನೃಪಃ |
ನಿತ್ಯಂ ಕೈಶ್ಚ ಗುಣೈರ್ಯುಕ್ತಃ ಸಂಗಪಾಶಾದ್ ವಿಮುಚ್ಯತೇ ||1||
ಪಿತಾಮಹನೇ, ನನ್ನಂತಹ ರಾಜನು ವಿಷಯಸಂಬಂಧವನ್ನು ತ್ಯಜಿಸಿ ಹೇಗೆ ಭೂಮಿಯಲ್ಲಿ ಸಂಚರಿಸಬೇಕು? ಯಾವ ಗುಣದಿಂದ ಕೂಡಿದಲ್ಲಿ ಈ ಸಂಗ ಪಾಶದಿಂದ ನಿತ್ಯವೂ ಮುಕ್ತನಾಗುತ್ತಾನೆ?
ಭೀಷ್ಮಃ
ಅತ್ರ ತೇ ವರ್ಣಯಿಷ್ಯಾಮಿ ಇತಿಹಾಸಂ ಪುರಾತನಮ್ |
ಅರಿಷ್ಟನೇಮಿನಾ ಪ್ರೋಕ್ತಂ ಸಗರಾಯಾನುಪೃಚ್ಛತೇ ||2||
ಭೀಷ್ಮ ಯುಧಿಷ್ಠಿರನೇ, ನೀನು ಕೇಳಿದ ವಿಷಯದಲ್ಲಿ ಸಗರನಿಗೆ ಗರುಡನು ಹೇಳಿದ ಪುರಾತನವಾದ, ಇತಿಹಾಸ ರೂಪವಾದ ಉತ್ತರವನ್ನು ಹೇಳುತ್ತೇನೆ.
ವ್ಯಾಖ್ಯಾನ ವಿಶೇಷ `ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿವಾಹುವೇಮ' ಎಂಬ ವೇದಮಂತ್ರದಲ್ಲಿ ಅರಿಷ್ಟನೇಮಿ ಎಂಬ ಶಬ್ದವು ಗರುಡನಿಗೆ ಬಳಕೆಯಾಗಿದೆ. ಈ ಪ್ರಮಾಣಾನುಸಾರವಾಗಿ ಅರಿಷ್ಟನೇಮಿ ಎಂದರೆ ಗರುಡ ಎಂದು ಅರ್ಥೈಸಿಕೊಳ್ಳಬೇಕು - ಲಕ್ಷ್ಮಾಲಂಕಾರ.
ಸಗರಃ
ಕಿಂ ಶ್ರೇಯಃ ಪರಮಂ ಬ್ರಹ್ಮನ್ಕೃತ್ವೇಹ ಸುಖಮಶ್ನುತೇ |
ಕಥಂ ನ ಶೋಚೇನ್ನ ಕ್ಷುಭ್ಯೇದೇತದಿಚ್ಛಾಮಿ ವೇದಿತುಮ್ ||3||
ಸಗರ ಬ್ರಾಹ್ಮಣಶ್ರೇಷ್ಠನೇ, ಯಾವುದು ಶ್ರೇಯೋಮಾರ್ಗವು? ಯಾವ ಕರ್ಮದಿಂದ ಮಾನವನು ಸುಖ ಹೊಂದುತ್ತಾನೆ? ಮನುಷ್ಯನು ದುಃಖ ಹೊಂದದಿರಲು ಹೇಗೆ ಸಾಧ್ಯವಾಗುತ್ತದೆ? ಇದನ್ನು ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಏವಮುಕ್ತಸ್ತದಾ ತಾರ್ಕ್ಷ್ಯಃ ಸರ್ವಶಾಸ್ತ್ರವಿಶಾರದಃ |
ವಿಬುದ್ಧ್ಯ ಸಂಪದಂ ಚಾಗ್ರ್ಯಾಂ ಸದ್ವಾಕ್ಯಮಿದಮಬ್ರವೀತ್ ||4||
ಭೀಷ್ಮ ಈ ರೀತಿಯಾಗಿ ಸಗರ ಚಕ್ರವರ್ತಿಯಿಂದ ಪ್ರಶ್ನಿಸಲ್ಪಟ್ಟ ಸರ್ವಜ್ಞನಾದ ಗರುಡನು ಉತ್ಕೃಷ್ಟವಾದ ದೈವೀಸಂಪತ್ತನ್ನು ಸಗರನು ಹೊಂದಿದ್ದಾನೆಂದು ತಿಳಿದು ಈ ಮಾತನ್ನು ಹೇಳಿದನು.
ಸುಖಂ ಮೋಕ್ಷಸುಖಂ ಲೋಕೇ ನ ಚ ಲೋಕೋಽವಗಚ್ಛತಿ |
ಪ್ರಸಕ್ತಃ ಪುತ್ರಪಶುಷು ಧನಧಾನ್ಯಸಮಾಕುಲಃ ||5||
ಸಗರನೇ, ಲೋಕದಲ್ಲಿ ಮೋಕ್ಷಸುಖವೇ ಸುಖವು. ಧನ-ಧಾನ್ಯ ಸಂಗ್ರಹದಲ್ಲಿ ಮಗ್ನನಾಗಿರುವ, ಪಶು-ಪುತ್ರರಲ್ಲಿ ಆಸಕ್ತನಾದ ಮೂರ್ಖನಿಗೆ ಯಥಾರ್ಥಜ್ಞಾನವು ದೊರೆಯದು.
ಸಕ್ತಬುದ್ಧಿರಶಾಂತಾತ್ಮಾ ನ ಸ ಶಕ್ಯಶ್ಚಿಕಿತ್ಸಿತುಮ್ |
ಸ್ನೇಹಪಾಶಸಿತೋ ಮೂಢೋ ನ ಸ ಮೋಕ್ಷಾಯ ಕಲ್ಪತೇ ||6||
ಯಾವನು ವಿಷಯದಲ್ಲಿ ಆಸಕ್ತವಾದ ಬುದ್ಧಿಯುಳ್ಳವನೋ, ಅಶಾಂತಾತ್ಮನೋ ಅವನಿಗೆ ಚಿಕಿತ್ಸೆಯನ್ನು ನೀಡಲು ಆಗುವುದಿಲ್ಲ. ಸ್ನೇಹಪಾಶದಿಂದ ಬಂಧಿತನಾದವನು ಮೋಕ್ಷವನ್ನು ಹೊಂದಲಾಗುವುದಿಲ್ಲ.
ಸ್ನೇಹಜಾನಿಹ ತೇ ಪಾಶಾನ್ ವಕ್ಷ್ಯಾಮಿ ಶೃಣು ತಾನ್ ಮಮ |
ಸಕರ್ಣಕೇನ ಶಿರಸಾ ಶಕ್ಯಾಃ ಶ್ರೋತುಂ ವಿಜಾನತಾ ||7||
ಸಗರನೇ, ಸ್ನೇಹದಿಂದ ಹುಟ್ಟುವ ಪಾಶಗಳ್ಯಾವುವೆಂದು ಹೇಳುತ್ತೇನೆ, ಕೇಳಿಸಿಕೊ. ಬುದ್ಧಿವಂತನು ಕಿವಿಗೊಟ್ಟು ನನ್ನ ಮಾತುಗಳನ್ನು ಕೇಳಲು ಸಮರ್ಥನಾಗುತ್ತಾನೆ.
ಸಂಭಾವ್ಯ ಪುತ್ರಾನ್ ಕಾಲೇನ ಯೌವನಸ್ಥಾನ್ನಿವೇಶ್ಯ ಚ |
ಸಮರ್ಥಾನ್ ಜೀವನೇ ಜ್ಞಾತ್ವಾ ಮುಕ್ತಶ್ಚರ ಯಥಾಸುಖಮ್ ||8||
ಕಾಲಾನುಸಾರವಾಗಿ ಮಕ್ಕಳನ್ನು ಪಡೆದುಕೊಂಡು ಅವರು ಯುವಕರಾದ ಕೂಡಲೇ ವಿವಾಹ ಮಾಡಿ ಸ್ವತಂತ್ರವಾಗಿ ಜೀವಿಸುತ್ತಾರೆ

ಎಂದು ತಿಳಿದ ಕೂಡಲೇ ಸ್ನೇಹ ಪಾಶದಿಂದ ಮುಕ್ತನಾಗಿ ತೀರ್ಥಕ್ಷೇತ್ರ ಭೂಮಿಯಲ್ಲಿ ಸಂಚರಿಸು.
ಭಾರ್ಯಾಂ ಪುತ್ರವತೀಂ ವೃದ್ಧಾಂ ಲಾಲಿತಾಂ ಪುತ್ರವತ್ಸಲಾಮ್ |
ಜ್ಞಾತ್ವಾ ಪ್ರಜಹಿ ಕಾಲೇ ತ್ವಂ ಪರಾರ್ಥಮನುದೃಶ್ಯ ಚ ॥9॥
ಪುತ್ರವತಿಯಾದ, ವೃದ್ಧೆಯಾದ, ಪುತ್ರರಿಂದ ಚೆನ್ನಾಗಿ ಪೋಷಿಸಲ್ಪಡುವ ನಿನ್ನ ಹೆಂಡತಿಯು ಮಕ್ಕಳಲ್ಲಿ ಪ್ರೀತಿಯುಳ್ಳವಳಾಗಿದ್ದಾಳೆ ಎಂಬುದನ್ನು ಅರಿತು, ಮೋಕ್ಷವನ್ನೇ ಪುರುಷಾರ್ಥವೆಂದು ಅರಿತ ನೀನು ಯೋಗ್ಯಸಮಯದಲ್ಲಿ ಅವಳನ್ನು ಪರಿತ್ಯಜಿಸು.
ಸಾಪತ್ಯೋ ನಿರಪತ್ಯೋ ವಾ ಮುಕ್ತಶ್ಚರ ಯಥಾಸುಖಮ್ |
ಇಂದ್ರಿಯೈರಿಂದ್ರಿಯಾರ್ಥಾಂಸ್ತ್ವಮನುಭೂಯ ಯಥಾವಿಧಿ ॥10॥
ಪುತ್ರವಂತನಾಗಿರು, ಅಪುತ್ರವಂತನಾಗಿರು, ಹೇಗಿದ್ದರೂ ಯೋಗ್ಯ ಸಮಯದಲ್ಲಿ ಸಂಸಾರಬಂಧನದಿಂದ ಮುಕ್ತನಾಗಿ ಸುಖದಿಂದ ಭೂಮಿಯಲ್ಲಿ ಸಂಚರಿಸು.
ಕೃತಕೌತೂಹಲಸ್ತೇಷು ಮುಕ್ತಶ್ಚರ ಯಥಾಸುಖಮ್ |
ಉಪಪತ್ತ್ಯೋಪಲಬ್ಧೇಷು ಲಾಭೇಷು ಚ ಸಮೋ ಭವ ॥11॥
ವಿಷಯ ಪದಾರ್ಥದಲ್ಲಿ ಕುತೂಹಲವನ್ನು ತಾಳಿ, ಸುಖ ಅನುಭವಿಸಬೇಕೆಂಬ ಆಸೆಯನ್ನು ತೊರೆದು ಮುಕ್ತನಾಗಿ ಸುಖದಿಂದ ಸಂಚರಿಸು. ದೈವೇಚ್ಛೆಯಿಂದ ಲಭಿಸಿದ ಪದಾರ್ಥದ ವಿಷಯದಲ್ಲಿ ಲಾಭ-ನಷ್ಟಗಳಲ್ಲಿಯೂ ಸಮನಾಗಿರು.
ಏಷ ತಾವತ್ ಸಮಾಸೇನ ತವ ಸಂಕೀರ್ತಿತೋ ಮಯಾ |
ಮೋಕ್ಷಾರ್ಥೋ ವಿಸ್ತರೇಣಾಪಿ ಭೂಯೋ ವಕ್ಷ್ಯಾಮಿ ತಚ್ಛೃಣು ॥12॥
ಮೋಕ್ಷದ ವಿಷಯದಲ್ಲಿ ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ. ಇದೇ ವಿಷಯದಲ್ಲಿ ವಿಸ್ತಾರವಾಗಿ ಹೇಳುತ್ತೇನೆ, ಅದನ್ನು ಕೇಳು.
ಮುಕ್ತಾ ವೀತಭಯಾ ಲೋಕೇ ಚರಂತಿ ಸುಖಿನೋ ನರಾಃ |
ಸಕ್ತಭಾವಾ ವಿನಶ್ಯಂತಿ ನರಾಸ್ತತ್ರ ನ ಸಂಶಯಃ ॥13॥
ಸಂಸಾರಬಂಧನದಿಂದ ಮುಕ್ತರಾದ ಪುರುಷರು ಸುಖಿಗಳಾಗಿರುತ್ತಾರೆ. ಭಯಮುಕ್ತರಾಗಿ ಜಗತ್ತಿನಲ್ಲಿ ಸಂಚರಿಸುತ್ತಾರೆ. ವಿಷಯಗಳಲ್ಲಿ ಆಸಕ್ತಿ ಹೊಂದಿದವರು ನಾಶವನ್ನು ಹೊಂದುತ್ತಾರೆ.
ಆಹಾರಸಂಚಯಾಶ್ಚೈವ ತಥಾ ಕೀಟಪಿಪೀಲಿಕಾಃ |
ಅಸಕ್ತಾಃ ಸುಖಿನೋ ಲೋಕೇ ಸಕ್ತಾಶ್ಚೈವ ವಿನಾಶಿನಃ ॥14॥
ಆಹಾರವನ್ನು ಸಂಗ್ರಹಿಸುತ್ತಿರುವ ಕ್ರಿಮಿ-ಕೀಟಗಳು ನಾಶವನ್ನು ಹೊಂದುವಂತೆ ವಿಷಯಾಸಕ್ತರು ನಾಶ ಹೊಂದುತ್ತಾರೆ. ವಿಷಯದಿಂದ ಮುಕ್ತರಾದವರು ಸುಖಿಗಳಾಗಿರುತ್ತಾರೆ.
ಸ್ವಜನೇ ನ ಚ ತೇ ಚಿಂತಾ ಕರ್ತವ್ಯಾ ಮೋಕ್ಷಬುದ್ಧಿನಾ |
ಇಮೇ ಮಯಾ ವಿನಾಭೂತಾ ಭವಿಷ್ಯಂತಿ ಕಥಂ ತ್ವಿತಿ ॥15॥
ಮೋಕ್ಷ ಬಯಕೆಯುಳ್ಳ ನೀನು ನಾನಿಲ್ಲದೆ ಇವರು ಹೇಗೆ ಬದುಕುತ್ತಾರೆ ಎಂದು ಬಂಧುಜನರ ವಿಷಯದಲ್ಲಿ ಚಿಂತಿಸಲು ಹೋಗಬೇಡ.
ಸ್ವಯಮುತ್ಪದ್ಯತೇ ಜಂತುಃ ಸ್ವಯಮೇವ ವಿವರ್ಧತೇ |
ಸುಖದುಃಖೇ ತಥಾ ಮೃತ್ಯುಂ ಸ್ವಯಮೇವಾಧಿಗಚ್ಛತಿ ॥16॥
ಜೀವನು ಯಾರ ಅನುಗ್ರಹವೂ ಇಲ್ಲದೆ ಹುಟ್ಟುತ್ತಾನೆ. ಈ ಬಂಧುಜನರ ನೆರವಿಲ್ಲದೆಯೂ ಮೃತ್ಯುವನ್ನು ಹೊಂದುತ್ತಾನೆ. ಅದರಂತೆಯೇ ಮರಣವು ತಾನಾಗಿ ಒದಗಿ ಬರುತ್ತದೆ.
ಭೋಜನಾಚ್ಛಾದನೇ ಚೈವ ಮಾತ್ರಾ ಪಿತ್ರಾ ಚ ಸಂಗ್ರಹಮ್ |
ಸ್ವಕೃತೇನಾಧಿಗಚ್ಛಂತಿ ಲೋಕೇ ನಾಸ್ತ್ಯಕೃತಂ ಪುರಾ ॥17॥
ಮನುಷ್ಯನು ತನ್ನ ಹಿಂದಿನ ಪುಣ್ಯ ಫಲಕ್ಕನುಗುಣವಾಗಿ ಊಟ, ವಸ್ತ್ರ, ತಂದೆ, ತಾಯಿ, ಐಶ್ವರ್ಯಗಳನ್ನು ಹೊಂದುತ್ತಾನೆ. ಪೂರ್ವಜನ್ಮದ ಫಲವಿಲ್ಲದೆ ಯಾವ ಪದಾರ್ಥವೂ ದೊರೆಯುವುದಿಲ್ಲ.
ಧಾತ್ರಾ ವಿಹಿತಭಕ್ಷ್ಯಾಣಿ ಸರ್ವಭೂತಾನಿ ಮೇದಿನೀಮ್ |
ಲೋಕೇ ವಿಪರಿಧಾವಂತಿ ರಕ್ಷಿತಾನಿ ಸ್ವಕರ್ಮಭಿಃ ॥18॥
ತಾವು ಮಾಡಿದ ಕರ್ಮದ ಫಲದಿಂದಲೇ ಆಯಾ ಕಾಲಕ್ಕೆ ಬ್ರಹ್ಮನು ಸಂಕಲ್ಪಿಸಿದ ಆಹಾರವನ್ನು ಭೂಮಿಯಲ್ಲಿ ತಿನ್ನುತ್ತಾ ಸಂಚರಿಸುತ್ತಾರೆ. ತಮ್ಮ ಕರ್ಮಕ್ಕನುಗುಣವಾಗಿ ರಕ್ಷಣೆ ಹೊಂದಿರುತ್ತಾರೆ.
ಸ್ವಯಂ ಮೃತ್ಪಿಂಡಭೂತಸ್ಯ ಪರತಂತ್ರಸ್ಯ ಸರ್ವದಾ |
ಕೋ ಹೇತುಃ ಸ್ವಜನಂ ಪೋಷ್ಟುಂ ರಕ್ಷಿತುಂ ವಾ ದೃಢಾತ್ಮನಃ ॥19॥
ಪ್ರತಿಯೊಬ್ಬ ಮನುಷ್ಯನು ಜಡವಾದ ಶರೀರವನ್ನು ಪಡೆದು ಮೃತ್ಪಿಂಡದಂತೆ ಯಾವಾಗಲೂ ಅಸ್ವತಂತ್ರನೇ ಆಗಿರುತ್ತಾನೆ. ಅಂತಹವನು ಮಡದಿ, ಮಕ್ಕಳನ್ನು ರಕ್ಷಿಸಲು ಹೇಗೆ ಸಮರ್ಥನಾದಾನು? ತಾನೇ ಅಸ್ವತಂತ್ರನಾಗಿರಲು ಇನ್ನೊಬ್ಬರನ್ನು ಹೇಗೆ ರಕ್ಷಿಸಿಯಾನು?
ಸ್ವಜನಂ ಹಿ ಯದಾ ಮೃತ್ಯುರ್ಹಂತ್ಯೇವ ತವ ಪಶ್ಯತಃ |
ಕೃತೇಽಪಿ ಯತ್ನೇ ಮಹತಿ ತತ್ರ ಬೋದ್ಧವ್ಯಮಾತ್ಮನಾ ॥20॥
ನೀನು ಯಾರನ್ನು ಪ್ರೀತಿಯಿಂದ ಪಾಲಿಸಿ, ಪೋಷಿಸುತ್ತೀಯೋ ಆ ಸ್ವಜನರು ನೀನು ನೋಡುತ್ತಿದ್ದಂತೆ ಮೃತ್ಯುವಶರಾಗುತ್ತಾರೆ. ನಿನ್ನ ಪ್ರಯತ್ನದಿಂದ ಪ್ರೀತಿಯ ಬಂಧುಗಳನ್ನು ಮೃತ್ಯು ಮುಖದಿಂದ ಬಿಡಿಸಲಾಗದು. ಇದನ್ನು ವಿಚಾರ ಮಾಡಿ ನಿನ್ನ ಸಾಮರ್ಥ್ಯವನ್ನರಿತು ನಡೆ.
ಜೀವಂತಮಪಿ ಚೈವೈನಂ ಭರಣೇ ರಕ್ಷಣೇ ತಥಾ |

ಅಸಮಾಪ್ತೇ ಪರಿತ್ಯಜ್ಯ ಪಶ್ಚಾದಪಿ ಮರಿಷ್ಯಸಿ ॥21॥
ಕೆಲವೊಮ್ಮೆ ಬಂಧುಜನರು ಬದುಕಿರುವಾಗಲೇ ಅವರನ್ನು ರಕ್ಷಿಸಬೇಕಾದ ನೀನೇ ಮರಣವನ್ನು ಹೊಂದುತ್ತಿ. (ನೀನು ಮೃತನಾದರೂ ಅವರ ಬದುಕು ನಡೆಯುತ್ತದೆ ಎಂದು ತಾತ್ಪರ್ಯ).
ಯದಾ ಮೃತಶ್ಚ ಸ್ವಜನಂ ನ ಜ್ಞಾಸ್ಯಸಿ ಕಥಂಚನ |
ಸುಖಿತಂ ದುಃಖಿತಂ ವಾಪಿ ನನು ಬೋದ್ಧವ್ಯಮಾತ್ಮನಾ ॥22॥
ಒಂದು ವೇಳೆ ಅತ್ಯಂತ ಪ್ರೀತಿಪಾತ್ರರಾದ ಬಂಧುಜನರೇ ಮರಣ ಹೊಂದಿದಲ್ಲಿ ಅವನು ಸತ್ತ ಬಳಿಕ ಸುಖಿಯಾಗಿದ್ದಾನೋ, ದುಃಖಿಯಾಗಿದ್ದಾನೋ ಎಂದು ನಿನಗೆ ತಿಳಿಯುವುದಿಲ್ಲ. ಹೀಗಿರುವಾಗ ಅವನಿಗೂ ನಿನಗೂ ಇರುವ ಸಂಬಂಧವೇಷ್ಟು ಎಂದು ಏಕೆ ಯೋಚಿಸುವುದಿಲ್ಲ?
ಮೃತೇ ವಾ ತ್ವಯಿ ಜೀವೇ ವಾ ಯದಿ ಭೋಕ್ಷ್ಯತಿ ವೈ ಜನಃ |
ಸ್ವಕೃತಂ ನನು ಬುದ್ಧ್ವೈವಂ ಕರ್ತವ್ಯಂ ಹಿತಮಾತ್ಮನಃ ॥23॥
ನೀನು ಜೀವಂತನಾಗಿರು, ಮೃತನಾಗಿರು. ನಿನ್ನ ಬಂಧುಜನರು ತಾವು ಮಾಡಿದ ಕರ್ಮಫಲವನ್ನು ಅನುಭವಿಸಿಯೇ ತೀರುತ್ತಾರೆ. ಆದ್ದರಿಂದ ಅವರ ರಕ್ಷಕನು ನಾನು ಎಂಬ ಅಭಿಮಾನ ಬೇಡ. ಅಭಿಮಾನವನ್ನು ತೊಡೆದು ನಿನ್ನ ಹಿತಸಾಧನೆಯಲ್ಲಿ ತೊಡಗುವುದು ಕರ್ತವ್ಯವಾಗಿದೆ.
ಏವಂ ವಿಜಾನಲ್ಲೋಕೇಽಸ್ಮಿನ್ ಕಃ ಕಸ್ಯೇತ್ಯಭಿನಿಶ್ಚಿತಃ |
ಮೋಕ್ಷೇ ನಿವೇಶಯ ಮನೋ ಭೂಯಶ್ಚಾಪ್ಯುಪಧಾರಯ ॥24॥
ಹೀಗೆ ಈ ವಿಷಯವನ್ನು ಚೆನ್ನಾಗಿ ಮಥಿಸಿ ತಿಳಿದುಕೊಂಡ ವ್ಯಕ್ತಿ ನಾನು ಯಾರು, ಯಾರಿಗೆ ಸಂಬಂಧಿಸಿದವನು ಎಂಬ ನಿಶ್ಚಯ ಜ್ಞಾನವನ್ನು ಹೊಂದಬೇಕು. ಕರ್ಮಾನುಸಾರವಾಗಿ ಯಾರಿಗೂ ಸಂಬಂಧ ಇಲ್ಲದ ಜೀವರು ಎಲ್ಲಿಯೋ ಹುಟ್ಟಿ ಎಲ್ಲಿಯೋ ಮರಣ ಹೊಂದುತ್ತಾರೆ ಎಂದು ನಿಶ್ಚಯಿಸಿಕೊಂಡು, ಮೋಕ್ಷ ಮಾರ್ಗದಲ್ಲಿ ಸಾಗಬೇಕು. ನಾನು ಹೇಳಿದ ವಿಚಾರವನ್ನು ಮನನ ಮಾಡುತ್ತಲೇ ಇರು.
ಕ್ಷುತ್ಪಿಪಾಸಾದಯೋ ಭಾವಾ ಜಿತಾ ಯಸ್ಯೇಹ ದೇಹಿನಃ |
ಕ್ರೋಧೋ ಲೋಭಸ್ತಥಾ ಮೋಹಃ ಸತ್ತ್ವವಾನ್ ಮುಕ್ತ ಏವ ಸಃ ॥25॥
ಹಸಿವು, ಬಾಯಾರಿಕೆ, ಕ್ರೋಧ, ಲೋಭ, ಮೋಹ ಇವುಗಳನ್ನು ಯಾವನು ಜಯಿಸಿದ್ದಾನೋ ಅಂತಹ ಸತ್ತ್ವಸಂಪನ್ನನಾದ ಮನುಷ್ಯನು ಮುಕ್ತನಾದಂತೆಯೇ ಸರಿ.
ದ್ಯೂತೇ ಪಾನೇ ತಥಾ ಸ್ತ್ರೀಷು ಮೃಗಯಾಯಾಂ ಚ ಯೋ ನರಃ |
ನ ಪ್ರಮಾದ್ಯತಿ ಸಮ್ಮೋಹಾತ್ ಸತತಂ ಮುಕ್ತ ಏವ ಸಃ ॥26॥
ಯಾವನು ಮೋಹದಿಂದ ಜೂಜು, ಪರಸ್ತ್ರೀ ಸಂಗ, ಬೇಟೆ - ಈ ಚಟಗಳಲ್ಲಿ ಆಸಕ್ತನಾಗಿ ಎಚ್ಚರ ತಪ್ಪುವುದಿಲ್ಲವೋ ಅವನು ಮುಕ್ತನಾದಂತೆ ಸರಿ.
ದಿವಸೇ ದಿವಸೇ ನಾಮ ರಾತ್ರೌ ರಾತ್ರೌ ಸದಾ ಸದಾ |
ಭೋಕ್ತವ್ಯಮಿತಿ ಯಃ ಖಿನ್ನೋ ದೋಷಬುದ್ಧಿಃ ಸ ಉಚ್ಯತೇ ॥27॥
ಯಾವನು ಹಗಲಾದರೆ ರಾತ್ರಿಯಾದರೆ ಭೋಜನಾದಿ ವಿಷಯಸುಖಕ್ಕಾಗಿ ಯೋಚಿಸುವನೋ ಅವನನ್ನು ದೋಷ ಬುದ್ಧಿಯವನೆಂದು ಹೇಳುತ್ತಾರೆ.
ಆತ್ಮಭಾವಂ ತಥಾ ಸ್ತ್ರೀಷು ಮುಕ್ತಮೇವ ಪುನಃ ಪುನಃ |
ಯಃ ಪಶ್ಯತಿ ಸದಾ ಯುಕ್ತೋ ಯಥಾವನ್ಮುಕ್ತ ಏವ ಸಃ ॥28॥
ಯೋಗಯುಕ್ತನಾದವನು, ಸ್ತ್ರೀಯರಲ್ಲಿ ಅತಿಯಾದ ಸಂಗ ಇಲ್ಲದವನು ತಾನು ಎಂದು ಯಾವಾಗ ಮನಗಾಣುತ್ತಾನೋ ಅವನು ಮುಕ್ತನಾದಂತೆಯೇ ಸರಿ.
ಸಂಭವಂ ಚ ವಿನಾಶಂ ಚ ಭೂತಾನಾಂ ಚೇಷ್ಟಿತಂ ತಥಾ |
ಯಸ್ತತ್ತ್ವತೋ ವಿಜಾನಾತಿ ಲೋಕೇಽಸ್ಮಿನ್ ಮುಕ್ತ ಏವ ಸಃ ॥29॥
ಯಾವನು ಲೋಕದಲ್ಲಿನ ಸಮಸ್ತ ಜೀವರ ಹುಟ್ಟು-ಸಾವುಗಳನ್ನು, ಅವುಗಳ ಕ್ಷಣಿಕವಾದ ಜೀವನ ವ್ಯಾಪಾರವನ್ನು ಯಥಾರ್ಥವಾಗಿ ತಿಳಿದಿರುತ್ತಾನೋ ಅವನು ಮುಕ್ತನಾದಂತೆ ಸರಿ.
ಪ್ರಸ್ಥಂ ವಾಹಸಹಸ್ರೇಷು ವಸಾತ್ರರ್ಧಂ ಚೈವ ಕೋಟಿಷು |
ಪ್ರಾಸಾದೇ ಮಂಚಕಸ್ಥಾನಂ ಯಃ ಪಶ್ಯತಿ ಸ ಮುಚ್ಯತೇ ॥30॥
ಯಾವಾತನು ಧಾನ್ಯವನ್ನು ಹೊತ್ತಿರುವ ವಾಹನಗಳಿಂದ ಜಾರಿ ಬಿದ್ದ ಮುಷ್ಟಿ ಧಾನ್ಯವೇ ತನ್ನ ಬದುಕಿಗೆ ಸಾಕು ಎಂದು ಯೋಚಿಸುತ್ತಾನೋ, ಹರಿದ ನೂರಾರು ವಸ್ತ್ರಗಳನ್ನು ಕಂಡು ತನ್ನ ಮಾನ ಸಂರಕ್ಷಣೆಗೆ ತುಂಡು ಬಟ್ಟೆ ಸಾಕೆಂದು ಯೋಚಿಸುತ್ತಾನೋ, ದೇವತಾಗೋಪುರಾದಿಗಳನ್ನು ಕಂಡವನು ತಾನು ಮಲಗಲು ದೇವಸ್ಥಾನದ ಜಗುಲಿಯು ಸಾಕು ಎಂದು ಯೋಚಿಸುತ್ತಾನೋ ಅವನು ಮುಕ್ತನಾದಂತೆ ಸರಿ.
ಮೃತ್ಯುನಾಭ್ಯಾಹತಂ ಲೋಕಂ ವ್ಯಾಧಿಭಿಶ್ಚೋಪಪೀಡಿತಮ್ |
ಅವೃತ್ತಿಕರ್ಶಿತಂ ಚೈವ ಯಃ ಪಶ್ಯತಿ ಸ ಮುಚ್ಯತೇ ॥31॥
ಯಃ ಪಶ್ಯತಿ ಸುಖೀ ತುಷ್ಟೋ ನ ಪಶ್ಯತಿ ವಿಹನ್ಯತೇ |
ಯಶ್ಚಾಪ್ಯಲ್ಪೇನ ಸಂತುಷ್ಟೋ ಲೋಕೇಽಸ್ಮಿನ್ ಮುಕ್ತ ಏವ ಸಃ ॥32॥
ಯಾವನು ಲೋಕವು ಮೃತ್ಯುವಿನಿಂದ ಅಪ್ಪಳಿಸಲ್ಪಟ್ಟಿದೆ ಎಂಬುದನ್ನು, ಆಧಿ-ವ್ಯಾಧಿಗಳಿಂದ ಬಾಧಿತವಾಗಿದೆ ಎಂಬುದನ್ನು,

ವೃತ್ತಿಯಿಲ್ಲದೆ ಕೃಶವಾಗಿದೆ ಎಂಬುದನ್ನು ಸ್ಪಷ್ಟವಾಗಿ ಕಾಣುತ್ತಾನೋ ಅವನು ಬಂಧನದಿಂದ ಮುಕ್ತನಾಗುತ್ತಾನೆ. ಯಾವನು ತಾನು ಸಂತುಷ್ಟನಲ್ಲವೆಂದು ತಿಳಿಯುವುದಿಲ್ಲವೋ ಅವನು ದುಃಖಕ್ಕೆ ಭಾಗಿಯಾಗುವುದಿಲ್ಲ.
ಅಗ್ನೀಷೋಮಾವಿದಂ ಸರ್ವಮಿತಿ ಯಶ್ಚಾನುಪಶ್ಯತಿ |
ನ ಚ ಸಂಸ್ಪೃಶ್ಯತೇ ಭಾವೈರದ್ಭುತೈರ್ಮುಕ್ತ ಏವ ಸಃ ॥33॥
ಅಗ್ನೀಷೋಮರಿಗೆ ಹೇಗೆ ಯಾವುದರಲ್ಲಿಯೂ ಆಸಕ್ತಿ ಇಲ್ಲವೋ ಅವರ ಮಾರ್ಗವನ್ನೇ ಅನುಸರಿಸಿ ಯಾವನು ನಿರ್ಲಿಪ್ತನಾಗಿರುತ್ತಾನೋ, ಯಾವುದೇ ಅದ್ಭುತವಾದ ಪದಾರ್ಥಗಳ ಮೋಹಕ್ಕೆ ತುತ್ತಾಗುವುದಿಲ್ಲವೋ ಅವನು ಮುಕ್ತನಾದಂತೆಯೇ ಸರಿ.
ಪರ್ಯಂಕಶಯ್ಯಾ ಭೂಮಿಶ್ಚ ಸಮಾನೇ ಯಸ್ಯ ದೇಹಿನಃ |
ಶಾಲಯಶ್ಚ ಕದನ್ನಂ ಚ ಯಸ್ಯ ಸ್ಯಾನ್ಮುಕ್ತ ಏವ ಸಃ ॥34॥
ಯಾವ ಮನುಷ್ಯನಿಗೆ ಮೆತ್ತನೆಯ ಹಾಸಿಗೆಯು ಭೂಮಿಗೆ ಸಮಾನವೋ, ಶಾಲ್ಯನ್ನವೂ ಹಳಸಿದ ಅನ್ನಕ್ಕೆ ಸಮಾನವೋ ಅವನು ಮುಕ್ತನಾದಂತೆಯೇ ಸರಿ.
ಕ್ಷೌಮಂ ಚ ಕುಶಚೀರಂ ಚ ಕೌಶೇಯಂ ವಲ್ಕಲಾನಿ ಚ |
ಅವಿಕಂ ಚರ್ಮ ಚ ಸಮಂ ಯಸ್ಯ ಸ್ಯಾನ್ಮುಕ್ತ ಏವ ಸಃ ॥35॥
ಯಾವನಿಗೆ ಸುವರ್ಣ ಝರಿಯಿಂದ ಕೂಡಿರುವ ಪಟ್ಟೆ ವಸ್ತ್ರವು ದರ್ಭೆವಸ್ತ್ರಕ್ಕೆ ಸಮಾನವೋ, ರೇಷ್ಮೆವಸ್ತ್ರವು ನಾರುಮಡಿಯ ಸಮಾನವೋ, ಉಣ್ಣೆಬಟ್ಟೆಯು ಮೃಗಚರ್ಮಕ್ಕೆ ಸಮಾನವೋ ಅವನು ಮುಕ್ತನಾದಂತೆಯೇ ಸರಿ.
ಪಂಚಭೂತಸಮುದ್ಭೂತಂ ಲೋಕಂ ಯಶ್ಚಾನುಪಶ್ಯತಿ |
ತಥಾ ಚ ವರ್ತತೇ ದೃಷ್ಟ್ವಾ ಲೋಕೇಽಸ್ಮಿನ್ ಮುಕ್ತ ಏವ ಸಃ ॥36॥
ಯಾವನು ಲೋಕವನ್ನೆಲ್ಲ ಪಂಚಭೂತಗಳಿಂದ ಹುಟ್ಟಿದೆ ಎಂದು ತಿಳಿದು, ಎಲ್ಲ ಪ್ರಾಣಿಗಳು ಹುಟ್ಟು-ನಾಶವುಳ್ಳವುಗಳು ಎಂದು ಸಮವಾಗಿ ಕಾಣುತ್ತಾನೋ ಅವನು ಮುಕ್ತನಾದಂತೆಯೇ ಸರಿ.
ಸುಖದುಃಖೇ ಸಮೇ ಯಸ್ಯ ಲಾಭಾಲಾಭೌ ಜಯಾಜಯೌ |
ಇಚ್ಛಾದ್ವೇಷೌ ಭಯೋದ್ವೇಗೌ ಸರ್ವಥಾ ಮುಕ್ತ ಏವ ಸಃ ॥37॥
ಯಾರಿಗೆ ಸುಖ-ದುಃಖಗಳು, ಲಾಭ-ನಷ್ಟಗಳು, ಜಯ-ಪರಾಜಯಗಳು ಸಮಾನವೋ, ಇಚ್ಛೆ-ದ್ವೇಷ-ಭಯ-ಉದ್ವೇಗಗಳು ನಾಶ ಹೊಂದಿವೆಯೋ ಅವನು ಮುಕ್ತನಾದಂತೆ ಸರಿ.
ರಕ್ತಮೂತ್ರಪುರೀಷಾಣಾಂ ದೋಷಾಣಾಂ ಸಂಚಯಂ ತಥಾ |
ಶರೀರಂ ದೋಷಬಹುಲಂ ದೃಷ್ಟ್ವಾ ಚೇದಂ ವಿಮುಚ್ಯತೇ ॥38॥
ಈ ಶರೀರವು ರಕ್ತ, ಮೂತ್ರ, ಅಮೇಧ್ಯ ಇವುಗಳ ಆವಾಸಸ್ಥಾನವಾಗಿದೆ. ವಾತ- ಪಿತ್ತ-ಕಫಗಳೆಂಬ ದೋಷಗಳಿಂದ ಕೂಡಿದೆ. ಇನ್ನೂ ಅನೇಕ ದೋಷಗಳಿಂದ ಕೂಡಿದ ಶರೀರವನ್ನು ಯಾವನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾನೋ ಅವನು ಮುಕ್ತನಾಗುತ್ತಾನೆ.
ವಲೀಪಲಿತಸಂಯೋಗಂ ಕಾರ್ಶ್ಯಂ ವೈವರ್ಣ್ಯಮೇವ ಚ |
ಕುಬ್ಜಭಾವಂ ಚ ಜರಯಾ ಯಃ ಪಶ್ಯತಿ ಸ ಮುಚ್ಯತೇ ॥39॥
ಮುಪ್ಪು ಆವರಿಸಿದ ಕೂಡಲೇ ಚರ್ಮವು ಸುಕ್ಕುಗಟ್ಟುತ್ತದೆ, ತಲೆಕೂದಲು ನರೆಯುತ್ತದೆ, ದೇಹವು ಕೃಶವಾಗುತ್ತದೆ, ಸೊರಗುತ್ತದೆ. ಈ ರೀತಿಯಾದ ವಿಕಾರಗಳನ್ನು ಮನಗಂಡವನು ದೇಹಾಭಿಮಾನವನ್ನು ತೊರೆದು ಮುಕ್ತನಾಗುತ್ತಾನೆ.
ಪುಂಸೊಅತ್ವೋಪಘಾತಂ ಕಾಲೇನ ದರ್ಶನೋಪರಮಂ ತಥಾ |
ಬಾಧಿರ್ಯಂ ಪ್ರಾಣಮಂದತ್ವಂ ಯಃ ಪಶ್ಯತಿ ಸ ಮುಚ್ಯತೇ ॥40॥
ವೃದ್ಧಾಪ್ಯದಲ್ಲಿ ಪುಂಸ್ತ್ವವು ನಾಶವಾಗುತ್ತದೆ, ದೃಷ್ಟಿಯು ಮಂದವಾಗುತ್ತದೆ, ಕಿವಿ ಕೇಳದು, ಪ್ರಾಣಶಕ್ತಿಯು ಕ್ಷೀಣಿಸುತ್ತದೆ. ಇದನ್ನು ಮೊದಲೇ ಮನಗಂಡವನು ಮುಕ್ತನಾಗುತ್ತಾನೆ.
ಗತಾನೃಷೀಂಸ್ತಥಾ ದೇವಾನಸುರಾಂಶ್ಚ ತಥಾ ಗತಾನ್ |
ಲೋಕಾದಸ್ಮಾತ್ ಪರಂ ಲೋಕಂ ಯಃ ಪಶ್ಯತಿ ಸ ಮುಚ್ಯತೇ ॥41॥
ಹಿಂದೆ ಆಗಿಹೋದ ಋಷಿಗಳನ್ನು, ದೇವತೆಗಳನ್ನು, ಅಸುರರನ್ನು ನೋಡುತ್ತಾ ಹುಟ್ಟಿದವನಿಗೆ ಮರಣವು ಜೊತೆಯಲ್ಲಿದೆ ಎಂಬುದನ್ನು ಯಾವನು ಸೂಕ್ಷ್ಮ ಬುದ್ಧಿಯಿಂದ ಕಂಡುಕೊಳ್ಳುತ್ತಾನೋ ಅವನು ಮುಕ್ತನಾಗುತ್ತಾನೆ.
ಪ್ರಭಾವೈರನ್ವಿತಾಸ್ತೈಸ್ತೈಃ ಪಾರ್ಥಿವೇಂದ್ರಾಃ ಸಹಸ್ರಶಃ |
ಯೇ ಗತಾಃ ಪೃಥಿವೀಂ ತ್ಯಕತ್ವ ಇತಿ ಜ್ಞಾತ್ವಾ ವಿಮುಚ್ಯತೇ ॥42॥
ಆಯಾ ಪ್ರಭಾವಗಳಿಂದ ಕೂಡಿರುವ ಸಾವಿರಾರು ರಾಜರು ಕಾಲವು ಸನ್ನಿಹಿತವಾದೊಡನೆ ಈ ಭೂಮಿಯನ್ನು ತೊರೆದು ಹೋಗಿದ್ದಾರೆ. ಯಾರೂ ಈ ಭೂಮಿಯಲ್ಲಿ ಶಾಶ್ವತರಲ್ಲ ಎಂದು ತಿಳಿದವನು ಮುಕ್ತನಾಗುತ್ತಾನೆ.
ಅರ್ಥಾಂಶ್ಚ ದುರ್ಲಭಾಲ್ಲೋಕೇ ಕ್ಲೇಶಾಂಶ್ಚ ಸುಲಭಾಂಸ್ತಥಾ |
ದುಃಖಂ ಚೈವ ಕುಟುಂಬಾರ್ಥೇ ಯಃ ಪಶ್ಯತಿ ಸ ಮುಚ್ಯತೇ ॥43॥
ಅರ್ಥಪ್ರಾಪ್ತಿಯು ಈ ಲೋಕದಲ್ಲಿ ದುರ್ಲಭವಾದುದು. ದುಃಖಗಳು ಸುಲಭವಾದವು. ಕೌಟುಂಬಿಕವಾದ ದುಃಖಗಳು ನಿರಂತರವಾಗಿ ಒದಗಿ ಬರುತ್ತವೆ ಎಂಬುದನ್ನು ಯಾವನು ಮೊದಲೇ ಮನಗಾಣುತ್ತಾನೋ ಅವನು ಮುಕ್ತನಾಗುತ್ತಾನೆ.
ಅಪತ್ಯಾನಾಂ ಚ ವೈಗುಣ್ಯಂ ಜನಂ ವಿಗುಣಮೇವ ಚ |
ಪಶ್ಯನ್ ಭೂಯಿಷ್ಠಶೋ ಲೋಕೇ ಕೋ ಮೋಕ್ಷಂ ನಾಭಿಪೂಜಯೇತ್ ॥
ಮಕ್ಕಳಲ್ಲಿರುವ ಗುಣಗಳ ಕೊರತೆ, ಬಂಧುಗಳಲ್ಲಿರುವ ವಿಪರೀತ ಗುಣಗಳು ಇದನ್ನು ಅಧಿಕವಾಗಿ ಜಗತ್ತಿನಲ್ಲಿ ನೋಡುತ್ತಿದ್ದರೆ

ಯಾವನು ತಾನೇ ಮೋಕ್ಷವನ್ನು ಬಯಸುವುದಿಲ್ಲ?
ಶಾಸ್ತ್ರಾಲ್ಲೋಕಾಚ್ಚ ಯೋ ಬುದ್ಧ್ವಾ ಸರ್ವಂ ಪಶ್ಯತಿ ಮಾನವಃ |
ಅಸಾರಮಿವ ಮಾನುಷ್ಯಂ ಸರ್ವಥಾ ಮುಕ್ತ ಏವ ಸಃ ॥45॥
ಯಾವನು ಶಾಸ್ತ್ರಾಧ್ಯಯನ, ಲೋಕಾನುಭವಗಳಿಂದ ಜ್ಞಾನವನ್ನು ಪಡೆದು, ಜೀವನವು ನಿಸ್ಸಾರವೆಂದು ಅರಿತುಕೊಳ್ಳುತ್ತಾನೋ ಅವನು ಮುಕ್ತನಾದಂತೆ ಸರಿ.
ಏತಚ್ಛ್ರುತ್ವಾ ಮಮ ವಚೋ ಭವಾಂಶ್ಚರತು ಮುಕ್ತವತ್ |
ಗಾರ್ಹಸ್ಥ್ಯೇ ಯದಿ ತೇ ಮೋಕ್ಷೇ ಕೃತಾ ಬುದ್ಧಿರವಿಕ್ಲವಾ ॥46॥
ಸಗರನೇ, ನನ್ನ ಮಾತನ್ನು ಕೇಳಿದ ಬಳಿಕ ನಿನ್ನ ಬುದ್ಧಿಯ ಕಳವಳವನ್ನು ಪರಿಹರಿಸಿಕೊಂಡು ಗೃಹಸ್ಥಾಶ್ರಮದಲ್ಲೇ ಆಗಲಿ, ಸಂನ್ಯಾಸದಲ್ಲೇ ಆಗಲಿ ಇದ್ದುಕೊಂಡು ಮುಕ್ತನಂತೆ ವ್ಯವಹರಿಸು.
ತತ್ತಸ್ಯ ವಚನಂ ಶ್ರುತ್ವಾ ಸಮ್ಯಕ್ಸ ಪೃಥಿವೀಪತಿಃ |
ಮೋಕ್ಷಜ್ಞೈಶ್ಚ ಗುಣೈರ್ಯುಕ್ತಃ ಪಾಲಯಾಮಾಸ ಚ ಪ್ರಜಾಃ ॥47॥
ಸಗರನು ಗರುಡನ ಉಪದೇಶವನ್ನು ಶ್ರದ್ಧೆಯಿಂದ ಕೇಳಿಸಿಕೊಂಡು, ಮೋಕ್ಷಕ್ಕೆ ಅನುಕೂಲವಾದ ಗುಣಗಳನ್ನು ಪಡೆದುಕೊಂಡು ಪ್ರಜೆಗಳನ್ನು ಪಾಲಿಸುತ್ತಿದ್ದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.

॥ ಸಗರಾರಿಷ್ಟನೇಮಿಸಂವಾದಃ ಸಮಾಪ್ತಃ ॥
* * * * *
ನೂರ ಇಪ್ಪತ್ತೆರಡನೆಯ ಅಧ್ಯಾಯ
ಭೃಗುವಿನ ಮಗನಾದ ಉಷನಸನ ಚರಿತ್ರೆ.
ಯುಧಿಷ್ಠಿರಃ
ತಿಷ್ಠತೇ ಮೇ ಸದಾ ತಾತ ಕೌತೂಹಲಮಿದಂ ಹೃದಿ |
ತದಹಂ ಶ್ರೋತುಮಿಚ್ಛಾಮಿ ತ್ವತ್ತಃ ಕುರುಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ನನ್ನ ಮನಸ್ಸಿನಲ್ಲಿ ಬಹಳ ಕಾಲದಿಂದ ಕುತೂಹಲ ಒಂದು ಉಳಿದಿದೆ. ನಿನ್ನಿಂದ ಸಮಾಧಾನವನ್ನು ಕೇಳಬಯಸುತ್ತೇನೆ.
ಕಥಂ ದೇವರ್ಷಿರುಶನಾ ಸದಾ ಕಾವ್ಯೋ ಮಹಾಮತಿಃ |
ಅಸುರಾಣಾಂ ಪ್ರಿಯಕರಃ ಸುರಾಣಾಮಪ್ರಿಯೇ ರತಃ ॥2॥
ಮಹಾಮತಿಯಾದ ಶುಕ್ರಾಚಾರ್ಯನು ದೇವರ್ಷಿಯು, ಉಷನಸನು ಅನಿಸಿದ ಅಸುರರಿಗೆ ಪ್ರಿಯನೂ, ಸುರರಿಗೆ ಅಪ್ರಿಯನು ಹೇಗಾದನು.

ವರ್ಧಯಾಮಾಸ ತೇಜಶ್ಚ ಕಿಮರ್ಥಮಮಿತೌಜಸಾಮ್ |
ನಿತ್ಯಂ ವೈರನಿಬದ್ಧಾಶ್ಚ ದಾನವಾಃ ಸುರಸತ್ತಮೈಃ ॥3॥
ಶುಕ್ರಾಚಾರ್ಯನು ದೇವತೆಗಳಿಗೆ ತೊಂದರೆಯಾಗುವ ರೀತಿಯಲ್ಲಿ ಅಸುರರನ್ನು ಏಕೆ ಬೆಳೆಸಿದನು? ದಾನವರು ದೇವತೆಗಳ ಜೊತೆಗೆ ನಿತ್ಯವೂ ವೈರದ ಸಂಬಂಧವನ್ನು ಉಳ್ಳವರು. ಇವರನ್ನು ಏಕೆ ಬೆಳೆಸಿದನು?
ಕಥಂ ಚಾಪ್ಯುಶನಾ ಪ್ರಾಪ ಶುಕ್ರತ್ವಮಮರದ್ಯುತಿಃ |
ಋದ್ಧಿಂ ಚ ಸ ಕಥಂ ಪ್ರಾಪ್ತಃ ಸರ್ವಮೇತದ್ ಬ್ರವೀಹಿ ಮೇ ॥4॥
ದೇವತೆಗಳಂತೆ ತೇಜಸ್ವಿಯಾದ ಉಶನಸನು ಶುಕ್ರ ಎಂಬ ಹೆಸರನ್ನು ಹೇಗೆ ಪಡೆದುಕೊಂಡನು? ವೃದ್ಧಿಯನ್ನು ಹೇಗೆ ಹೊಂದಿದನು? ಇವೆಲ್ಲವನ್ನೂ ನನಗೆ ಹೇಳಿ.
ನ ಯಾತಿ ಚ ಸ ತೇಜಸ್ವೀ ಮಧ್ಯೇನ ನಭಸಃ ಕಥಮ್ |
ಏತದಿಚ್ಛಾಮಿ ವಿಜ್ಞಾತುಂ ನಿಖಿಲೇನ ಪಿತಾಮಹ ॥5॥
ಪಿತಾಮಹನೇ, ಉಶನಸನು ಮಹಾತೇಜಸ್ವಿಯಾಗಿದ್ದರೂ ಆಕಾಶದ ಮಧ್ಯಭಾಗದಲ್ಲಿ ಪ್ರಯಾಣ ಮಾಡುವುದಿಲ್ಲವೇಕೆ? ಉಶನಸನ ಚರಿತ್ರೆಯನ್ನು ಸಮಗ್ರವಾಗಿ ಕೇಳಬೇಕೆಂಬ ಬಯಕೆ ಉಂಟಾಗಿದೆ.
ಭೀಷ್ಮಃ
ಶೃಣು ರಾಜನ್ನವಹಿತಃ ಸರ್ವಮೇತದ್ಯಥಾತಥಮ್ |
ಯಥಾಮತಿ ಯಥಾ ಚೈತಚ್ಛ್ರುತಪೂರ್ವಂ ಮಯಾನಘ ॥6॥
ಭೀಷ್ಮ ದೋಷದೂರನೇ, ರಾಜನೇ, ಈ ಹಿಂದೆ ಉಶನಸನ ವಿಷಯವಾಗಿ ನಾನೂ ಸ್ವಲ್ಪ ಕೇಳಿಸಿಕೊಂಡು ಗ್ರಹಿಸಿಕೊಂಡಿದ್ದೇನೆ. ನನಗೆ ತಿಳಿದಷ್ಟು ವಿಷಯಗಳನ್ನು ನಿನಗೆ ತಿಳಿಸುತ್ತೇನೆ.
ಏಷ ಭಾರ್ಗವದಾಯಾದೋ ಮುನಿಃ ಸತ್ಯೋ ದೃಢವ್ರತಃ |
ಅಸುರಾಣಾಂ ಪ್ರಿಯಕರೋ ನಿಮಿತ್ತೇ ಕರುಣಾತ್ಮಕೇ ॥7॥
ಭೃಗುವಿನ ಮಗನಾದ, ಋಷಿಶ್ರೇಷ್ಠನಾದ, ಸರ್ವಮಾನ್ಯನಾದ, ದೃಢವಾದ ವ್ರತವುಳ್ಳ ಉಶನಸನು ಒಂದು ಪ್ರಬಲವಾದ ಕಾರಣದಿಂದ

ದೇವತೆಗಳಿಗೆ ವಿರೋಧಿ ಎನಿಸಿದನು.
ಇಂದ್ರೋಽಥ ಧನದೋ ರಾಜಾ ಯಕ್ಷರಕ್ಷೋಧಿಪಃ ಸ ಚ |
ಪ್ರಭವಿಷ್ಣುಶ್ಚ ಕೋಶಸ್ಯ ಜಗತಶ್ಚ ತಥಾ ಪ್ರಭುಃ ॥8॥
ಯಕ್ಷ-ರಾಕ್ಷಸರಿಗೆ ರಾಜನಾದ, ಐಶ್ವರ್ಯವಂತನಾದ ಕುಬೇರನು ಜಗತ್ತಿನ ಸಂಪತ್ತಿಗೆ ಅಧ್ಯಕ್ಷನಾಗಿದ್ದನು. ಅವನಲ್ಲಿ ಒಡೆತನವಿತ್ತು.
ತಸ್ಯಾತ್ಮಾನಮಥಾವಿಶ್ಯ ಯೋಗಸಿದ್ಧೋ ಮಹಾಮುನಿಃ |
ರುದ್ಧ್ವಾ ಧನಪತಿಂ ದೇವಂ ಯೋಗೇನ ಹೃತವಾನ್ವಸು ॥9॥
ಮಹಾಮುನಿಯಾದ ಉಶನಸನು ತನ್ನ ಯೋಗಬಲದಿಂದ ಕುಬೇರನಲ್ಲಿ ಪ್ರವೇಶ ಮಾಡಿ, ಧನಪತಿಯನ್ನು ತಡೆದು ಅವನಲ್ಲಿರುವ ಸಂಪತ್ತೆಲ್ಲವನ್ನೂ ಅಪಹರಿಸಿದನು.
ಹೃತೇ ಧನೇ ತತಃ ಶರ್ಮ ನ ಲೇಭೇ ಧನದಸ್ತಥಾ |
ಆಪನ್ನಮನ್ಯುಃ ಸಂವಿಗ್ನಃ ಸೋಽಭ್ಯಗಾತ್ ಸುರಸತ್ತಮಮ್ ॥10॥
ಕುಬೇರನು ಉಶನಸನು ತನ್ನ ಸಂಪತ್ತೆಲ್ಲವನ್ನೂ ಅಪಹರಿಸಲು ಸಮಾಧಾನವನ್ನು ಹೊಂದಲಿಲ್ಲ. ಸಿಟ್ಟಿನಿಂದ ಕೂಡಿಕೊಂಡ ಕುಬೇರನು ಮಹಾದೇವನನ್ನು ಶರಣು ಹೊಂದಿದನು.
ನಿವೇದಯಾಮಾಸ ತದಾ ಶಿವಾಯಾಮಿತತೇಜಸೇ |
ದೇವಶ್ರೇಷ್ಠಾಯ ರುದ್ರಾಯ ಸೌಮ್ಯಾಯ ಬಹುರೂಪಿಣೇ ॥11॥
ಅಮಿತ ತೇಜಸ್ವಿಯಾದ ಶಿವನ ಬಳಿ ತನ್ನ ಗೋಳನ್ನು ಹೇಳಿಕೊಂಡನು. ಬಹುರೂಪಿಯಾದ, ಸೌಮ್ಯನಾದ, ದೇವಶ್ರೇಷ್ಠನಾದ ರುದ್ರನಿಗೆ ತನ್ನ ಕಷ್ಟವನ್ನು ತಿಳಿಸಿದನು.
ಕುಬೇರಃ
ಯೋಗಾತ್ಮಕೇನೋಶನಸಾ ರುದ್ಧ್ವಾ ಮಮ ಹೃತಂ ವಸು |
ಯೋಗೇನಾತ್ಮಗತಿಂ ಕೃತ್ವಾ ನಿಃಸೃತಶ್ಚ ಮಹಾತಪಾಃ ॥12॥
ಕುಬೇರ ಪ್ರಭುವೇ, ಯೋಗಬಲದಿಂದ ಉಶನಸನು ನನ್ನಲ್ಲಿ ಪ್ರವೇಶಿಸಿ ನನ್ನನ್ನು ತಡೆದು ಐಶ್ವರ್ಯವನ್ನೆಲ್ಲ ಅಪಹರಿಸಿದ್ದಾನೆ. ಯೋಗಬಲದಿಂದ ಅಪಹರಿಸಿಕೊಂಡು ನನ್ನನ್ನು ಬಿಟ್ಟು ಹೋಗಿದ್ದಾನೆ.
ಭೀಷ್ಮಃ
ಏತಚ್ಛ್ರುತ್ವಾ ತತಃ ಕ್ರುದ್ಧೋ ಮಹಾಯೋಗೀ ಮಹೇಶ್ವರಃ |
ಸಂರಕ್ತನಯನೋ ರಾಜನ್ ಶೂಲಮಾದಾಯ ತಸ್ಥಿವಾನ್ ॥13॥
ಭೀಷ್ಮ ಮಹಾರುದ್ರನು ಕುಬೇರನ ಈ ಮಾತನ್ನು ಕೇಳಿದ ಕೂಡಲೇ ಅತ್ಯಂತ ಕ್ರುದ್ಧನಾಗಿ, ಕೆಂಗಣ್ಣಿನಿಂದ ಕೂಡಿದವನಾಗಿ ತ್ರಿಶೂಲವನ್ನು ಹಿಡಿದು ನಿಂತನು.
ಕ್ವಾಸೌ ಕ್ವಾಸಾವಿತಿ ಪ್ರಾಹ ಗೃಹೀತ್ವಾ ಪರಮಾಯುಧಮ್ |
ಉಶನಾ ದೂರತಸ್ತಸ್ಯ ಬಭೌ ಜ್ಞಾತ್ವಾ ಚಿಕೀರ್ಷಿತಮ್ ॥14॥
ಶ್ರೇಷ್ಠವಾದ ಆಯುಧವನ್ನು ಹಿಡಿದು ಅವನು ಎಲ್ಲಿ? ಅವನು ಎಲ್ಲಿ? ಎಂದು ಗರ್ಜಿಸಿದನು. ಮಹಾದೇವನು ಏನು ಮಾಡಲು ಬಯಸಿದ್ದಾನೆ ಎಂಬುದನ್ನು ಯೋಗದೃಷ್ಟಿಯಿಂದಲೇ ತಿಳಿದುಕೊಂಡು ಉಶನಸನು ದೂರದಲ್ಲಿ ನಿಂತನು.
ಸ ಮಹಾಯೋಗಿನೋ ಬುದ್ಧ್ವಾ ತಂ ರೋಷಂ ವೈ ಮಹಾತ್ಮನಃ |
ಗತಿಮಾಗಮನಂ ವೇತ್ತಿ ಸ್ಥಾನಂ ವೇತ್ತಿ ತತಃ ಪ್ರಭುಃ ॥15॥
ಮಹಾಯೋಗಿಯಾದ, ಮಹಾತ್ಮನಾದ ರುದ್ರನ ಸಿಟ್ಟನ್ನು ತಿಳಿದ ಉಶನಸನು ದೂರಕ್ಕೆ ಹೊರಟು ಹೋದನು. ಯೋಗಸಿದ್ಧನಾದ ಆತನು ಯೋಗದಿಂದ ಹೋಗುವುದನ್ನು, ಬರುವುದನ್ನು, ನಿಲ್ಲುವುದನ್ನು ತಿಳಿದುಕೊಳ್ಳುತ್ತಿದ್ದನು.
ಸಂಚಿಂತ್ಯೋಗ್ರೇಣ ತಪಸಾ ಮಹಾತ್ಮಾನಂ ಮಹೇಶ್ವರಮ್ |
ಉಶನಾ ಯೋಗಸಿದ್ಧಾತ್ಮಾ ಶೂಲಾಗ್ರೇ ಪ್ರತ್ಯದೃಶ್ಯತ ॥16॥
ಯೋಗಸಿದ್ಧಿಯನ್ನು ಹೊಂದಿದ ಭಾರ್ಗವನು ತನ್ನ ತಪಸ್ಸಿನಿಂದ ಪರಶಿವನನ್ನು ಧ್ಯಾನಿಸಿ ತ್ರಿಶೂಲದ ತುದಿಯಲ್ಲಿಯೇ ಕಾಣಿಸಿಕೊಂಡನು.
ವಿಜ್ಞಾತರೂಪಃ ಸ ತದಾ ತಪಃಸಿದ್ಧೇನ ಧನ್ವಿನಾ |
ಜ್ಞಾತ್ವಾ ಶೂಲಂ ಚ ದೇವೇಶಃ ಪಾಣಿನಾ ಸಮನಾಮಯತ್ ॥17॥
ಧನುಸ್ಸನ್ನು ಧರಿಸಿದ ದೇವೇಶನು ಉಶನಸನು ತಪಸ್ಸಿದ್ಧನಾಗಿದ್ದಾನೆಂದು ತಿಳಿದುಕೊಂಡನು. ತನ್ನ ಶೂಲದ ಮೇಲೆಯೇ ಕುಳಿತುಕೊಂಡದ್ದನ್ನು ತಿಳಿದ ಶಿವನು ಧನುಸ್ಸಿದ್ದ ಕೈಯಿಂದ ಶೂಲವನ್ನು ಬಗ್ಗಿಸಿದನು.
ಆನತೇನಾಥ ಶೂಲೇನ ಪಾಣಿನಾಮಿತತೇಜಸಾ |
ಪಿನಾಕಮಿತಿ ಚೋವಾಚ ಶೂಲಮುಗ್ರಾಯುಧಃ ಪ್ರಭುಃ ॥18॥
ರುದ್ರನಿಂದ ಬಗ್ಗಿಸಲ್ಪಟ್ಟ ಅಮಿತ ತೇಜಸ್ವಿಯಾದ ಶೂಲವು ಶಿವನ ಕೈಯಲ್ಲಿ ಧನುಸ್ಸಿನ ರೂಪವನ್ನು ತಾಳಿತು. ಶಿವನು, ಶೂಲವು ಧನುಸ್ಸಿನಂತೆ ಬಗ್ಗಿದ ಕಾರಣದಿಂದ ಶೂಲವನ್ನು ಪಿನಾಕವೆಂದು ಕರೆದನು. ಅದು ಪಿನಾಕ ಧನುಸ್ಸೆಂದು ಖ್ಯಾತವಾಯಿತು.
ಪಾಣಿಮಧ್ಯಗತಂ ದೃಷ್ಟ್ವಾ ಭಾರ್ಗವಂ ತಮುಮಾಪತಿಃ |
ಆಸ್ಯಂ ವಿವೃತ್ಯ ಕಕುದೀ ಪಾಣಿಂ ಸಂಪ್ರಾಕ್ಷಿಪಚ್ಛನೈಃ ॥19॥
ತ್ರಿಶೂಲವನ್ನು ಬಗ್ಗಿಸುತ್ತಿರುವಂತೆ ಉಶನಸನು ರುದ್ರನ ಅಂಗೈಯಲ್ಲಿ ಸಿಕ್ಕಿದನು. ದೇವಾಧಿಪತಿಯಾದ ಪಶುಪತಿಯು ಭಾರ್ಗವನು ತನ್ನ ಕೈಯಲ್ಲಿರುವುದನ್ನು ಕಂಡು ಬಾಯನ್ನು ತೆರೆದು ಕೈಯಲ್ಲಿರುವ ಭಾರ್ಗವನನ್ನು ಬಾಯಿಗೆ ಹಾಕಿಕೊಂಡನು.

ಸ ತು ಪ್ರವಿಷ್ಟ ಉಶನಾ ಕೋಷ್ಠಂ ಮಾಹೇಶ್ವರಂ ಪ್ರಭುಃ |
ವ್ಯಚರಚ್ಚಾಪಿ ತತ್ರಾಸೌ ಮಹಾತ್ಮಾ ಭೃಗುನಂದನಃ ||20||
ಮಹೇಶ್ವರನ ಬಾಯಿಯ ಮೂಲಕ ಹೊಟ್ಟೆಯನ್ನು ಪ್ರವೇಶಿಸಿದ ಪ್ರಭುವಾದ, ಮಹಾತ್ಮನಾದ ಭೃಗುನಂದನನು ಅಲ್ಲಿಯೂ ಸಂಚರಿಸ ತೊಡಗಿದನು.
ಯುಧಿಷ್ಠಿರಃ
ಕಿಮರ್ಥಂ ವ್ಯಚರದ್ರಾಜನ್ನುಶನಾ ತಸ್ಯ ಧೀಮತಃ |
ಜಠರೇ ದೇವದೇವಸ್ಯ ಕಿಂ ಚಾಕಾರ್ಷೀನ್ಮಹಾದ್ಯುತಿಃ||21||
ಯುಧಿಷ್ಠಿರ ಪಿತಾಮಹನೇ, ದೇವದೇವನಾದ ಉಮಾಪತಿಯ ಜಠರದಲ್ಲಿ ತೇಜಸ್ವಿಯಾದ ಉಶನಸನು ಏಕೆ ಸಂಚರಿಸಿದನು? ಅಲ್ಲಿ ಅವನು ಏನು ಮಾಡಿದನು?
ಭೀಷ್ಮಃ
ಪುರಾ ಸೋಽಂತರ್ಜಲಗತಃ ಸ್ಥಾಣುಭೂತೋ ಮಹಾವ್ರತಃ |
ವರ್ಷಾಣಾಮಭವದ್ ರಾಜನ್ ಪ್ರಯುತಾನ್ಯರ್ಬುದಾನಿ ಚ ||22||
ಭೀಷ್ಮ ನರೇಶ್ವರನೇ, ಬಳಿಕ ಮಹಾವ್ರತನಾದ ಮಹಾದೇವನು ನೀರಿನ ಮಧ್ಯದಲ್ಲಿ ಪ್ರವೇಶಿಸಿ, ಮೋಟು ಮರದಂತೆ ಲಕ್ಷಕೋಟಿ ವರ್ಷಗಳ ತನಕ ತಪಸ್ಸನ್ನು ಮಾಡುತ್ತಿದ್ದನು.
ಉದತಿಷ್ಠತ್ತಪಸ್ತಪ್ತ್ವಾ ದುಶ್ಚರಂ ಸ ಮಹಾಹ್ರದಾತ್ |
ತತೋ ದೇವಾತಿದೇವಸ್ತಂ ಬ್ರಹ್ಮಾ ಸಮುಪಸರ್ಪತ ||23||
ದುಶ್ಚರವಾದ ತಪಸ್ಸನ್ನು ಮುಗಿಸಿದ ಬಳಿಕ ಮಹಾದೇವನು ಸರಸ್ಸಿನಿಂದ ಹೊರಬಂದಾಗ, ದೇವದೇವನಾದ ಬ್ರಹ್ಮನು ಶಿವನ ಬಳಿಗೆ ಹೋದನು.
ತಪೋವೃದ್ಧಿಮಪೃಚ್ಛಚ್ಚ ಕುಶಲಂ ಚೈನಮವ್ಯಯಮ್ |
ತಪಃ ಸುಚೀರ್ಣಮಿತಿ ಚ ಪ್ರೋವಾಚ ವೃಷಭಧ್ವಜಃ ||24||
ಚತುರ್ಮುಖ ಬ್ರಹ್ಮನು ಶಿವನ ತಪೋವೃದ್ಧಿಗೆ ಸಂಬಂಧಿಸಿದ ಕುಶಲ ಪ್ರಶ್ನೆಯನ್ನು ಕೇಳಿದನು. ವೃಷಭಧ್ವಜನು ತಪಸ್ಸು ಚೆನ್ನಾಗಿ ಅನುಷ್ಠಾನಿಸಲ್ಪಟ್ಟಿದೆ ಎಂದನು.
ತತ್ಸಂಯೋಗೇನ ವೃದ್ಧಿಂ ಚಾಪ್ಯಪಶ್ಯತ್ ಸ ತು ಶಂಕರಃ |
ಮಹಾಮತಿರಚಿಂತ್ಯಾತ್ಮಾ ಸತ್ಯಧರ್ಮರತಃ ಸದಾ ||25||
ಬಳಿಕ ಮಹಾಮತಿಯಾದ, ಅಚಿಂತ್ಯರೂಪನಾದ, ಸತ್ಯಧರ್ಮರತನಾದ ಶಂಕರನು ತಾನು ನೀರಿನಲ್ಲಿ ನಿಂತು ತಪಸ್ಸು ಮಾಡುತ್ತಿದ್ದಾಗ ತನ್ನ ಉದರದಲ್ಲಿಯೇ ಸಂಪರ್ಕವನ್ನು ಹೊಂದಿರುವ ಕಾರಣ ಉಶನಸನು ತಪಸ್ಸಿನಿಂದ ವೃದ್ಧಿಯನ್ನು ಹೊಂದಿರುವುದನ್ನು ಅಂತರ್ದೃಷ್ಟಿಯಿಂದಲೇ ಕಂಡುಕೊಂಡನು.
ಸ ತೇನಾಢ್ಯೋ ಮಹಾಯೋಗೀ ತಪಸಾ ಚ ಧನೇನ ಚ |
ವ್ಯರಾಜತ ಮಹಾರಾಜ ತ್ರಿಷು ಲೋಕೇಷು ವೀರ್ಯವಾನ್ ||26||
ಅದೇ ಕಾರಣದಿಂದ ಮಹಾಯೋಗಿಯಾದ ಉಶನಸನು ತಪಸ್ಸಿನಿಂದ ಮೂರು ಲೋಕದಲ್ಲಿ ವೀರ್ಯವಂತನಾಗಿ ಕಂಗೊಳಿಸಿದನು.
ತತಃ ಪಿನಾಕೀ ಯೋಗಾತ್ಮಾ ಧ್ಯಾನಯೋಗಂ ಸಮಾವಿಶತ್ |
ಉಶನಾ ತು ಸಮುದ್ವಿಗ್ನೋ ನಿಲಿಲ್ಯೇ ಜಠರೇ ತತಃ ||27||
ಬಳಿಕ ಯೋಗಾತ್ಮನಾದ ಪಿನಾಕಿಯು ಧ್ಯಾನಯೋಗವನ್ನು ಪ್ರವೇಶಿಸಿದನು. ಉಶನಸನಾದರೂ ಕಳವಳಗೊಂಡವನಾಗಿ ಶಿವನ ಹೊಟ್ಟೆಯಲ್ಲಿಯೇ ಉಳಿದುಕೊಂಡನು.
ತುಷ್ಟಾವ ಚ ಮಹಾಯೋಗೀ ದೇವಂ ತತ್ರಸ್ಥ ಏವ ಚ |
ನಿಃಸಾರಂ ಕಾಂಕ್ಷಮಾಣಸ್ತು ತೇಜಸಾ ಪ್ರತ್ಯಹನ್ಯತ ||28||
ಮಹಾಯೋಗಿಯಾದ ಉಶನಸನು ಅಲ್ಲಿಯೇ ಇದ್ದು ಸದಾಶಿವನನ್ನು ಸಂತೋಷಗೊಳಿಸಿದನು. ಶಿವನ ಹೊಟ್ಟೆಯಿಂದ ಹೊರಬರುವ ಮಾರ್ಗವನ್ನು ಅನ್ವೇಷಿಸುತ್ತಿದ್ದನು. ಮಹಾದೇವನು ತನ್ನ ತೇಜಸ್ಸಿನಿಂದ ಹೊರಹೋಗಲು ಬಯಸುವ ಅವನನ್ನು ತಡೆಯುತ್ತಿದ್ದನು.
ಉಶನಾ ತು ತದೋವಾಚ ಜಠರಸ್ಥೋ ಮಹಾಮುನಿಃ |
ಪ್ರಸಾದಂ ಮೇ ಕುರುಷ್ವೇತಿ ಪುನಃ ಪುನರರಿಂದಮ ||29||
ಮಹಾಮುನಿಯಾದ ಉಶನಸನು ಜಠರದಲ್ಲಿದ್ದುಕೊಂಡೇ ಮಹಾದೇವನನ್ನು ಕುರಿತು- `ಮಹಾದೇವನೇ, ನನ್ನನ್ನು ಅನುಗ್ರಹಿಸು' ಎಂದು ಪುನಃ ಪುನಃ ಪ್ರಾರ್ಥಿಸುತ್ತಿದ್ದನು.
ತಮುವಾಚ ಮಹಾದೇವೋ ಗಚ್ಛ ಶಿಶ್ನೇನ ಮೋಕ್ಷಣಮ್ |
ಇತಿ ಸ್ರೋತಾಂಸಿ ಸರ್ವಾಣಿ ರುದ್ಧ್ವಾ ತ್ರಿದಶಪುಂಗವಃ ||30||
ಉಶನಸನನ್ನು ಕುರಿತು, ಮಹಾದೇವನು ನನ್ನ ಜನನಮಾರ್ಗದಿಂದಲೇ ಬಿಡುಗಡೆಯನ್ನು ಹೊಂದುವಿ. ಆದ್ದರಿಂದ ಆ ಮಾರ್ಗದಿಂದಲೇ ಹೊರಕ್ಕೆ ಹೋಗು ಎಂದು ಹೇಳುತ್ತಾ ಉಳಿದ ಮಾರ್ಗಗಳನ್ನು ತಡೆಹಿಡಿದನು.
ಅಪಶ್ಯಮಾನಃ ಸ ದ್ವಾರಂ ಸರ್ವತಃಪಿಹಿತೋ ಮುನಿಃ |
ಪರ್ಯಕ್ರಾಮದ್ ದಹ್ಯಮಾನ ಇತಶ್ಚೇತಶ್ಚ ತೇಜಸಾ ||31||
ಮಹಾರುದ್ರನ ಎಲ್ಲ ದ್ವಾರಗಳು ಮುಚ್ಚಿರುವುದನ್ನು ಕಂಡ ಮುನಿಯು ಅವನ ತೇಜಸ್ಸಿನಿಂದ ದಹಿಸಲ್ಪಡುತ್ತಾ, ಚಡಪಡಿಸುತ್ತಾ, ಶಂಕರನ ಹೊಟ್ಟೆಯಲ್ಲಿಯೇ ಅತ್ತಿಂದಿತ್ತ ಸಂಚರಿಸುತ್ತಿದ್ದನು.

ಸ ವಿನಿಷ್ಕ್ರಮ್ಯ ಶಿಶ್ನೇನ ಶುಕ್ರತ್ವಮಭಿಪೇದಿವಾನ್ |
ಕಾರ್ಯೇಣ ತೇನ ನಭಸೋ ನಾಗಚ್ಛತ ಚ ಮಧ್ಯತಃ ||32||
ಕೊನೆಗೆ ಸದಾಶಿವನ ಜನನೇಂದ್ರಿಯದಿಂದ ವೀರ್ಯರೂಪದಿಂದ ಹೊರಬಂದು ಶುಕ್ರ ಎಂಬ ಅನ್ವರ್ಥನಾಮವನ್ನೇ ಪಡೆದುಕೊಂಡನು. ಈ ಕಾರಣದಿಂದಲೇ ಉಶನಸನು ಆಕಾಶದ ಮಧ್ಯಭಾಗದಲ್ಲಿ ಸಂಚರಿಸಲು ಅವಕಾಶವನ್ನು ಹೊಂದಲಿಲ್ಲ.
ನಿಷ್ಕ್ರಾಂತಮಥ ತಂ ದೃಷ್ಟ್ವಾ ಜ್ವಲಂತಮಿವ ತೇಜಸಾ |
ಭವೋ ರೋಷಸಮಾವಿಷ್ಟಃ ಶೂಲೋದ್ಯತಕರಃ ಸ್ಥಿತಃ ||33||
ತನ್ನಿಂದ ಹೊರಬಂದ ಉಶನಸನು ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವುದನ್ನು ಕಂಡು ಮಹರುದ್ರನು ಸಿಟ್ಟುಗೊಂಡವನಾಗಿ, ಶೂಲಪಾಣಿಯಾಗಿ ಕೈಯನ್ನು ಮೇಲೆತ್ತಿ ನಿಂತುಕೊಂಡನು.
ನ್ಯವಾರಯತ ತಂ ದೇವೀ ಕ್ರುದ್ಧಂ ಪಶುಪತಿಂ ಪತಿಮ್ |
ಪುತ್ರತ್ವಮಗಮದ್ದೇವ್ಯಾ ವಾರಿತೇ ಶಂಕರೇ ಚ ಸಃ ||34||
ಈ ಸಮಯದಲ್ಲಿ ಪಾರ್ವತಿಯು ಸಿಟ್ಟಾಗಿರುವ ತನ್ನ ಪತಿಯನ್ನು ತಡೆಹಿಡಿದಳು. ಆದ್ದರಿಂದಲೇ ಶುಕ್ರನು ಪಾರ್ವತಿಗೆ ಪುತ್ರನಂತಾದನು.
ದೇವೀ
ಹಿಂಸನೀಯಸ್ತ್ವಯಾ ನೈಷ ಮಮ ಪುತ್ರತ್ವಮಾಗತಃ |
ನ ಹಿ ದೇವೋದರಾತ್ ಕಶ್ಚಿನ್ನಿಃಸೃತೋ ನಾಶಮರ್ಹತಿ ||35||
ದೇವಿ ಪತಿದೇವನೇ, ಉಶನಸನು ನಿನ್ನ ಮಗನಂತಾಗಿದ್ದಾನೆ. ಅವನನ್ನು ಸಂಹರಿಸಬಾರದು. ನಿನ್ನ ಹೊಟ್ಟೆಯಿಂದ ಹೊರಬಂದವನು ಯಾವಾತನೇ ಆಗಿದ್ದರೂ ಅವನು ವಿನಾಶವನ್ನು ಹೊಂದಬಾರದು.
ಭೀಷ್ಮ
ತತಃ ಪ್ರೀತೋಽಭವದ್ದೇವ್ಯಾಃ ಪ್ರಹಸಂಶ್ಚೇದಮಬ್ರವೀತ್ |
ಗಚ್ಛತ್ವೇಷ ಯಥಾಕಾಮಮಿತಿ ರಾಜನ್ ಪುನಃ ಪುನಃ ||36||
ಭೀಷ್ಮ ದೇವಿಯ ಮಾತಿನಿಂದ ಪ್ರಸನ್ನನಾದ ಶಿವನು ನಗುತ್ತಾ, ಇವನು ತನ್ನ ಇಚ್ಛೆ ಬಂದ ಕಡೆ ಹೊರಟು ಹೋಗಲಿ ಎಂದು ಹೇಳಿದನು.
ತತಃ ಪ್ರಣಮ್ಯ ವರದಂ ದೇವಂ ದೇವೀಮುಮಾಂ ತಥಾ |
ಉಶನಾ ಪ್ರಾಪ ತದ್ಧೀಮಾನ್ ಗತಿಮಿಷ್ಟಾಂ ಮಹಾಮುನಿಃ ||37||
ವರದನಾದ ರುದ್ರನಿಗೂ, ಪಾರ್ವತಿಗೂ ಪುನಃ ಪುನಃ ಶುಕ್ರನು ನಮಿಸಿ ತನಗೆ ಇಷ್ಟವಾದ ಸ್ಥಾನವನ್ನು ಹೊಂದಿದನು.
ಏತತ್ತೇ ಕಥಿತಂ ತಾತ ಭಾರ್ಗವಸ್ಯ ಮಹಾತ್ಮನಃ |
ಚರಿತಂ ಭರತಶ್ರೇಷ್ಠ ಯನ್ಮಾಂ ತ್ವಂ ಪರಿಪೃಚ್ಛಸಿ ||38||
ಯುಧಿಷ್ಠಿರನೇ, ಉಶನಸನ ಬಗ್ಗೆ ಕೇಳಿದ ಪ್ರಶ್ನೆಗೆ ಆ ಭಾರ್ಗವನ ಚರಿತ್ರೆಯನ್ನು ವಿಸ್ತಾರವಾಗಿ ನಿನಗೆ ಹೇಳಿದ್ದೇನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಾವಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ಮೂರನೆಯ ಅಧ್ಯಾಯ
ಧರ್ಮರಾಜನಿಗೆ ಭೀಷ್ಮರು ಪರಾಶರಗೀತೆಯನ್ನು ಉಪದೇಶಿಸಿದುದು.
ಯುಧಿಷ್ಠಿರಃ
ಅತಃ ಪರಂ ಮಹಾಬಾಹೋ ಯಚ್ಛ್ರೇಯಸ್ತದ್ ವದಸ್ವ ಮೇ |
ನ ತೃಪ್ಯಾಮ್ಯಮೃತಸ್ಯೇವ ವಚಸಸ್ತೇ ಪಿತಾಮಹ ||1||
ಯುಧಿಷ್ಠಿರ ಮಹಾಬಾಹುವೇ, ಪಿತಾಮಹನೇ, ನನ್ನ ಶ್ರೇಯಸ್ಸಿಗೆ ಯೋಗ್ಯವಾದ ಉಪಾಯ ಯಾವುದೋ ಅದನ್ನು ಹೇಳು. ನಿನ್ನ ಅಮೃತ ಸಮಾನವಾದ ಮಾತನ್ನು ಕೇಳುತ್ತಿದ್ದಂತೆ ಇನ್ನೂ ಕೇಳಬೇಕೆಂಬ ತವಕವು ನನ್ನಲ್ಲುಂಟಾಗಿದೆ. ನನಗೆ ತೃಪ್ತಿ ಇಲ್ಲ.
ಕಿಂ ಕರ್ಮ ಪುರುಷಃ ಕೃತ್ವಾ ಶುಭಂ ಪುರುಷಸತ್ತಮ |
ಶ್ರೇಯಃ ಪರಮವಾಪ್ನೋತಿ ಪ್ರೇತ್ಯ ಚೇಹ ಚ ತದ್ವದ ||2||
ಪುರುಷಸತ್ತಮನೇ, ಯಾವ ಶುಭಕರ್ಮವನ್ನು ಮಾಡಿದ ಪುರುಷನು ಇಹ-ಪರ ಲೋಕಗಳಲ್ಲಿ ಶ್ರೇಯಸ್ಸನ್ನು ಹೊಂದುತ್ತಾನೆ? ಈ ವಿಷಯವನ್ನು ಹೇಳುವ ಕೃಪೆತೋರು.
ಭೀಷ್ಮ
ಅತ್ರ ತೇ ವರ್ತಯಿಷ್ಯಾಮಿ ಯಥಾ ಪೂರ್ವಂ ಮಹಾಯಶಾಃ |
ಪರಾಶರಂ ಮಹಾತ್ಮಾನಂ ಪಪ್ರಚ್ಛ ಜನಕೋ ನೃಪಃ ||3||
ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಹಿಂದೆ ಮಹಾಯಶೋವಂತನಾದ ಜನಕರಾಜನು ಯಾವ ರೀತಿಯಲ್ಲಿ ಮಹಾತ್ಮರಾದ ಪರಾಶರರನ್ನು ಪ್ರಶ್ನಿಸಿದನೋ ಅದನ್ನು ಹೇಳುತ್ತೇನೆ.
ಕಿಂ ಶ್ರೇಯಃ ಸರ್ವಭೂತಾನಾಮಸ್ಮಿಲ್ಲೋಕೇ ಪರತ್ರ ಚ |
ಯದ್ ಭವೇತ್ ಪ್ರತಿಪತ್ತವ್ಯಂ ತದ್ ಭವಾನ್ ಪ್ರಬ್ರವೀತು ಮೇ ||4||

ಪೂಜ್ಯರೇ, ಇಹ-ಪರಲೋಕದಲ್ಲಿ ಸಕಲ ಪ್ರಾಣಿಗಳಿಗೆ ಶ್ರೇಯೋಮಾರ್ಗವು ಯಾವುದು? ಯಾವ ಮಾರ್ಗ ಹೊಂದಲು ಯೋಗ್ಯವು? ಈ ವಿಷಯವನ್ನು ಕರುಣೆಯಿಂದ ತಿಳಿಸಿರಿ.
ತತಃ ಸ ತಪಸಾ ಯುಕ್ತಃ ಸರ್ವಧರ್ಮವಿಧಾನವಿತ್ |
ನೃಪಾಯಾನುಗ್ರಹಮನಾ ಮುನಿರ್ವಾಕ್ಯಮಥಾಬ್ರವೀತ್ ॥5॥
ಯುಧಿಷ್ಠಿರನೇ, ಹೀಗೆ ಪ್ರಶ್ನಿಸಲ್ಪಟ್ಟ ಜನಕನಿಗೆ, ಸಮಸ್ತ ಧರ್ಮಗಳ ವಿಧಾನವನ್ನು ತಿಳಿದಿದ್ದ, ತಪಸ್ಸಿನಿಂದ ಕೂಡಿರುವ ಪರಾಶರರು ರಾಜನನ್ನು ಅನುಗ್ರಹಿಸಲು ಹೀಗೆ ಹೇಳಿದರು.
ಧರ್ಮ ಏವ ಕೃತಃ ಶ್ರೇಯಾನಿಹ ಲೋಕೇ ಪರತ್ರ ಚ |
ತಸ್ಮಾದ್ಧಿ ಪರಮಂ ನಾಸ್ತಿ ಯಥಾ ಪ್ರಾಹುರ್ಮನೀಷಿಣಃ ॥6॥
ಜನಕನೇ, ಧರ್ಮಾನುಷ್ಠಾನವನ್ನು ಮಾಡುವುದರಿಂದಲೇ ಇಹ-ಪರಲೋಕಗಳಲ್ಲಿ ಶ್ರೇಯಸ್ಸಾಗುತ್ತದೆ. ಶ್ರೇಯಸ್ಸಾಧನಕ್ಕೆ ಧರ್ಮಾಚರಣೆಗಿಂತ ಉತ್ತಮವಾದ ಮಾರ್ಗವಿಲ್ಲ ಎಂದು ಜ್ಞಾನಿಗಳು ಹೇಳುತ್ತಾರೆ.
ಪ್ರತಿಪದ್ಯ ನರೋ ಧರ್ಮಂ ಸ್ವರ್ಗಲೋಕೇ ಮಹೀಯತೇ |
ಧರ್ಮಾತ್ಮಕಃ ಕರ್ಮವಿಧಿರ್ದೇಹಿನಾಂ ನೃಪಸತ್ತಮ |
ತಸ್ಮಿನ್ನಾಶ್ರಮಿಣಃ ಸಂತಃ ಸ್ವಕರ್ಮಾಣೀಹ ಕುರ್ವತೇ ॥7॥
ಪುರುಷನು ಧರ್ಮವನ್ನು ಆಶ್ರಯಿಸಿ ಸ್ವರ್ಗಲೋಕದಲ್ಲಿಯೂ ಮಾನಿತನಾಗುತ್ತಾನೆ. ವೇದಗಳಲ್ಲಿ ಯಾವ ಧರ್ಮ-ಕರ್ಮಗಳು ಹೇಳಲ್ಪಟ್ಟಿವೆಯೋ ಅವುಗಳೇ ಧರ್ಮದ ಲಕ್ಷಣವೆನಿಸಿವೆ. ಎಲ್ಲ ಆಶ್ರಮಿಗಳು ವೇದೋಕ್ತ ಕರ್ಮವಿಧಿಗಳನ್ನೇ ಅನುಷ್ಠಾನ ಮಾಡುತ್ತಾರೆ.
ಚತುರ್ವಿಧಾ ಹಿ ಲೋಕಸ್ಯ ಯಾತ್ರಾ ತಾತ ವಿಧೀಯತೇ |
ಮರ್ತ್ಯಾ ಯತ್ರಾವತಿಷ್ಠಂತೇ ಸಾ ಚ ಕಾಮಾತ್ ಪ್ರವರ್ತತೇ ॥8॥
ಈ ಜಗತ್ತಿನಲ್ಲಿ ಬದುಕಿನ ವಿಧಾನವು ನಾಲ್ಕು ರೀತಿಯಲ್ಲಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಜೀವಿಕೆಯ ಕ್ರಮಗಳನ್ನು ಬೇರೆ ಬೇರೆ ರೀತಿ ಹೇಳಿದ್ದಾರೆ. ಇವೆಲ್ಲವೂ ದೈವೇಚ್ಛೆಯಿಂದಲೇ ಒದಗುವಂತಹವು.
ಸುಕೃತಾಸುಕೃತಂ ಕರ್ಮ ನಿಷೇವ್ಯ ವಿವಿಧೈಃ ಕ್ರಮೈಃ |
ದಶಾರ್ಧಪ್ರವಿಭಕ್ತಾನಾಂ ಭೂತಾನಾಂ ಬಹುಧಾ ಗತಿಃ ॥9॥
ಪುಣ್ಯ-ಪಾಪಗಳಿಂದ ಕೂಡಿದ ಕರ್ಮಗಳನ್ನು ನಾನಾ ವಿಧ ಕ್ರಮದಿಂದ ಅನುಷ್ಠಾನ ಮಾಡಿದ ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು ಮತ್ತು ಮನುಷ್ಯರಿಗೆ ಅನೇಕ ವಿಧವಾದ ಗತಿಗಳುಂಟಾಗುತ್ತವೆ.
ಸೌವರ್ಣಂ ರಾಜತಂ ವಾಪಿ ಯಥಾ ಭಾಂಡಂ ನಿಷಿಚ್ಯತೇ |
ತಥಾ ನಿಷಿಚ್ಯತೇ ಜಂತುಃ ಪೂರ್ವಕರ್ಮವಶಾನುಗಃ ॥10॥
ಬಂಗಾರದ ಪಾತ್ರೆಯನ್ನಾಗಲಿ, ಬೆಳ್ಳಿಯ ಪಾತ್ರೆಯನ್ನಾಗಲಿ ಅಗ್ನಿಯಲ್ಲಿ ಕರಗಿಸಿ ಪುನಃ ಅದನ್ನು ನೀರಿನಲ್ಲಿ ಮುಳುಗಿಸುತ್ತಾರೆ. ಅದರಂತೆ ಜೀವನು ತನ್ನ ಕರ್ಮವಶದಿಂದ ಈ ಸಂಸಾರದಲ್ಲಿ ಮುಳುಗಿಸಲ್ಪಡುತ್ತಾನೆ.
ನಾಬೀಜಾಜ್ಜಾಯತೇ ಕಿಂಚಿನ್ನಾಕೃತ್ವಾ ಸುಖಮೇಧತೇ |
ಸುಕೃತೀ ವಿಂದತಿ ಸುಖಂ ಪ್ರಾಪ್ಯ ದೇಹಕ್ಷಯಂ ನರಃ ॥11॥
ಬೀಜವಿಲ್ಲದೆ ಅಂಕುರ ಮೊಳೆಯುವುದಿಲ್ಲ. ಅದರಂತೆ ಪುಣ್ಯಕರ್ಮವಿಲ್ಲದೆ ಮನುಷ್ಯನು ಸುಖವನ್ನು ಹೊಂದಲಾರ. ದೇಹಕ್ಷಯವಾದ ಬಳಿಕ ಸುಕೃತದಿಂದಲೇ ಪುಣ್ಯಲೋಕದ ಸುಖವನ್ನು ಮನುಷ್ಯನು ಹೊಂದುತ್ತಾನೆ.
ದೈವಂ ತಾತ ನ ಪಶ್ಯಾಮಿ ನಾಸ್ತಿ ದೈವಸ್ಯ ಸಾಧನಮ್ |
ಸ್ವಭಾವತೋ ಹಿ ಸಂಸಿದ್ಧಾ ದೇವಗಂಧರ್ವದಾನವಾಃ ॥12॥
ಜನಕರಾಜನೇ, ಈ ವಿಷಯದಲ್ಲಿ ಸ್ವಭಾವವನ್ನು ಅತಿಕ್ರಮಿಸಿ ದೈವವು ಫಲದಾಯಕವೆಂಬುದನ್ನು ನಾನು ತಿಳಿದಿರುವುದಿಲ್ಲ. ದೈವವು ಸ್ವಭಾವವನ್ನು ಅವಲಂಬಿಸಿಕೊಂಡೇ ಅನುಗ್ರಹಿಸುತ್ತದೆ. ದೇವ-ಗಂಧರ್ವ-ದಾನವರೆಲ್ಲರೂ ಸ್ವಭಾವದಿಂದಲೇ ಸಿದ್ಧಿಯನ್ನು ಹೊಂದಿದವರು.
ಪ್ರೇತ್ಯ ಜಾತಿಕೃತಂ ಕರ್ಮ ನ ಸ್ಮರಂತಿ ಸದಾ ಜನಾಃ |
ತೇ ವೈ ತಸ್ಯ ಫಲಪ್ರಾಪ್ತೌ ಕರ್ಮ ಚಾಪಿ ಚತುರ್ವಿಧಮ್ ॥13॥
ಜನರು ಯಾವಾಗಲೂ ಸತ್ತ ಬಳಿಕ ಜಾತಿಯಿಂದ ಮಾಡಲ್ಪಟ್ಟ ಕರ್ಮವನ್ನು ಸ್ಮರಿಸರು. ಪುಣ್ಯ-ಪಾಪ ರೂಪ ಫಲಪ್ರಾಪ್ತಿಗೆ ಕರ್ಮವೇ ಕಾರಣ. ಕರ್ಮವಾದರೂ ನಾಲ್ಕು ವಿಧವಾದುದು. ಮಾತು-ಮನಸ್ಸು-ಕಣ್ಣು-ಕರ್ಮ ಇವುಗಳಿಂದ ನಡೆಯುವ ಕರ್ಮವು ನಾಲ್ಕು ವಿಧ.
ಲೋಕಯಾತ್ರಾಶ್ರಯಶ್ಚೈವ ಶಬ್ದೋ ವೇದಾಶ್ರಯಃ ಕೃತಃ |
ಶಾಂತ್ಯರ್ಥಂ ಮನಸಸ್ತಾತ ನೈತದ್ವೃದ್ಧಾನುಶಾಸನಮ್ ॥14॥
ವೇದಗಳೆಲ್ಲವೂ ಬದುಕಿಗಾಗಿ ಹೇಳಲ್ಪಟ್ಟಿವೆ. ಮನಸ್ಸಿನ ಶಾಂತಿಗಾಗಿ ಈ ವೇದಗಳು ಎಂಬ ಮಾತೇನಿದೆಯೋ ಇದು ಪ್ರಾಚೀನ ವೃದ್ಧರ ಮಾತುಗಳಾಗಿರುವುದಿಲ್ಲ. ನಾಸ್ತಿಕರ ವಾದವಾಗಿದೆ ಎಂದು ಭಾವ.
ಚಕ್ಷುಷಾ ಮನಸಾ ವಾಚಾ ಕರ್ಮಣಾ ಚ ಚತುರ್ವಿಧಮ್ |
ಕುರುತೇ ಯಾದೃಶಂ ಕರ್ಮ ತಾದೃಶಂ ಪ್ರತಿಪದ್ಯತೇ ॥15॥
ಕಣ್ಣಿನಿಂದ, ಮನಸ್ಸಿನಿಂದ, ಮಾತಿನಿಂದ, ಕ್ರಿಯೆಗಳಿಂದ ಮನುಷ್ಯನು ಯಾವ ರೀತಿಯಾದ ಕರ್ಮವನ್ನು ಮಾಡುತ್ತಾನೋ ಅದಕ್ಕೆ ತಕ್ಕಂತೆ ಫಲವನ್ನು ಹೊಂದುತ್ತಾನೆ.
ನಿರಂತರಂ ಚ ಮಿಶ್ರಂ ಚ ಫಲತೇ ಕರ್ಮ ಪಾರ್ಥಿವ |

ಕಲ್ಯಾಣಂ ಯದಿ ವಾ ಪಾಪಂ ನ ತು ನಾಶೋಽಸ್ಯ ವಿದ್ಯತೇ ॥16॥
ಮನುಷ್ಯನು ಯಾವಾಗಲೂ ಸುಖ-ದುಃಖಗಳನ್ನು, ಅದಕ್ಕೆ ಸಂಬಂಧಪಟ್ಟ ಕರ್ಮಗಳನ್ನು ಹೊಂದುತ್ತಾನೆ. ಪುಣ್ಯವಾಗಲಿ, ಪಾಪಫಲವಾಗಲಿ ಅನುಭವಿಸದೆ ಅದು ನಾಶ ಹೊಂದದು.
ಕದಾಚಿತ್ ಸುಕೃತಂ ತಾತ ಕೂಟಸ್ಥಮಿವ ತಿಷ್ಠತಿ |
ಮಜ್ಜಮಾನಸ್ಯ ಸಂಸಾರೇ ಯಾವದ್ ದುಃಖಾದ್ ವಿಮುಚ್ಯತೇ ॥17॥
ಕೆಲವೊಮ್ಮೆ ಸಂಸಾರದಲ್ಲಿ ಮನುಷ್ಯನ ಸುಕೃತವು ನಿರ್ವಿಕಾರವಾಗಿರುತ್ತದೆ. ಯಾವಾಗ ಸಂಸಾರದಲ್ಲಿ ಮುಳುಗಿದವನ ದುಃಖವು ಬಿಡುಗಡೆಯಾಗುತ್ತದೋ ಆಗ ಪುಣ್ಯವು ಫಲಪ್ರದವಾಗುತ್ತದೆ.
ತತೋ ದುಃಖಕ್ಷಯಂ ಕೃತ್ವಾ ಸುಕೃತಂ ಕರ್ಮ ಸೇವತೇ |
ಸುಕೃತಕ್ಷಯಾದ್ ದುಷ್ಕೃತಂ ಚ ತದ್ ವಿದ್ಧಿ ಮನುಜಾಧಿಪ ॥18॥
ಬಳಿಕ ದುಃಖದ ನಾಶವನ್ನು ಹೊಂದಿ ಸುಕೃತ ಕರ್ಮವನ್ನು ಸೇವಿಸುತ್ತಾನೆ. ಸುಕೃತ ನಾಶವಾದ ಬಳಿಕ ದುಷ್ಕೃತವನ್ನು, ದುಷ್ಕೃತ ಜನ್ಯ ಕರ್ಮಫಲವನ್ನು ಅನುಭವಿಸುತ್ತಾನೆ ಎಂದು ತಿಳಿ.
ದಮಃ ಕ್ಷಮಾ ಧೃತಿಸ್ತೇಜಃ ಸಂತೋಷಃ ಸತ್ಯವಾದಿತಾ |
ಹ್ರೀರಹಿಂಸಾವ್ಯಸನಿತಾ ದಾಕ್ಷ್ಯಂ ಚೇತಿ ಸುಖಾವಹಾಃ ॥19॥
ಇಂದ್ರಿಯನಿಗ್ರಹ, ಕ್ಷಮೆ, ಧೈರ್ಯ, ತೇಜಸ್ಸು, ಸಂತೋಷ, ಸತ್ಯಮಾತು, ಲಜ್ಜೆ, ಅಹಿಂಸೆ, ದುರ್ವ್ಯಸನದ, ಅಭಾವ, ದಕ್ಷತೆ ಇವೆಲ್ಲವೂ ಸುಖವನ್ನು ಒದಗಿಸುತ್ತವೆ.
ದುಷ್ಕೃತೇ ಸುಕೃತೇ ವಾಪಿ ನ ಜಂತುರಯತೋ ಭವೇತ್ |
ನಿತ್ಯಂ ಮನಃಸಮಾಧಾನೇ ಪ್ರಯತೇತ ವಿಚಕ್ಷಣಃ ॥20॥
ಜೀವನ ಪರ್ಯಂತ ಪುಣ್ಯ-ಪಾಪಗಳಲ್ಲಿಯೇ ಆಸಕ್ತನಾಗಿರದೆ ತನ್ನ ಮನಸ್ಸನ್ನು ಭಗವಂತನ ಧ್ಯಾನದಲ್ಲಿ ತೊಡಗಿಸಲು ಪ್ರಯತ್ನಿಸಬೇಕು.
ನಾಯಂ ಪರಸ್ಯ ಸುಕೃತಂ ದುಷ್ಕೃತಂ ವಾಪಿ ಸೇವತೇ |
ಕರೋತಿ ಯಾದೃಶಂ ಕರ್ಮ ತಾದೃಶಂ ಪ್ರತಿಪದ್ಯತೇ ॥21॥
ಮನುಷ್ಯನು ಇತರರು ಮಾಡಿದ ದುಷ್ಕರ್ಮ-ಸತ್ಕರ್ಮದ ಫಲಗಳನ್ನು ಅನುಭವಿಸುವುದಿಲ್ಲ. ಎಂತಹ ಕರ್ಮಗಳನ್ನು ಮಾಡಿರುತ್ತಾನೋ ಆ ಕರ್ಮಕ್ಕನುಗುಣವಾದ ಫಲಗಳನ್ನು ಹೊಂದುತ್ತಾನೆ.
ಸುಖದುಃಖೇ ಸಮಾಧಾಯ ಪುಮಾನನ್ಯೇನ ಗಚ್ಛತಿ |
ಅನ್ಯೇನೈವ ಜನಃ ಸರ್ವಃ ಸಂಗತೋ ಯಶ್ಚ ಪಾರ್ಥಿವ ॥22॥
ವಿವೇಕಿಯಾದ ಪುರುಷನು ಸುಖ-ದುಃಖ ನೀಡುವ ಪುಣ್ಯ-ಪಾಪಗಳೆರಡನ್ನೂ ತೊರೆದು ಮೋಕ್ಷ ಮಾರ್ಗದಿಂದ ಸಾಗಿದವನಾಗಿ ಸದ್ಗತಿಯನ್ನು ಹೊಂದುತ್ತಾನೆ.
ಪರೇಷಾಂ ಯದಸೂಯೇತ ನ ತತ್ಕುರ್ಯಾತ್ಸ್ವಯಂ ನರಃ |
ಯೋ ಹ್ಯಸೂಯುಸ್ತಥಾಯುಕ್ತಃ ಸೋಪಹಾಸಂ ನಿಯಚ್ಛತಿ ॥23॥
ದುಷ್ಕರ್ಮ ಮಾಡುತ್ತಾನೆಂದು ಪರರನ್ನು ನಿಂದಿಸುವ ಪುರುಷನು ಆ ದುಷ್ಕರ್ಮಗಳನ್ನು ಮಾಡಬಾರದು. ಯಾವಾತನು ಇನ್ನೊಬ್ಬರನ್ನು ನಿಂದಿಸಿ ಆ ದುಷ್ಕರ್ಮವನ್ನು ಎಸಗುತ್ತಾನೋ ಅವನು ಅಪಹಾಸ್ಯಕ್ಕೆ ತುತ್ತಾಗುತ್ತಾನೆ.
ಭೀರೂ ರಾಜನ್ಯೋ ಬ್ರಾಹ್ಮಣಃ ಸರ್ವಭಕ್ಷ್ಯೋ
ವೈಶ್ಯೋಽನೀಹಾರಾನ್ಹೀನವರ್ಣೋಽಲಸಶ್ಚ |
ವಿದ್ವಾಂಶ್ಚಾಶೀಲೋ ವೃತ್ತಹೀನಃ ಕುಲೀನಃ
ಸತ್ಯಾದ್ ಭ್ರಷ್ಟೋ ಬ್ರಾಹ್ಮಣಃ ಸ್ತ್ರೀ ಚ ದುಷ್ಟಾ ॥24॥
ಹೇಡಿಯಾದ ಕ್ಷತ್ರಿಯನು ಎಲ್ಲವನ್ನೂ, ವಿಚಾರ ಮಾಡದೆ ತಿನ್ನುವ ಬ್ರಾಹ್ಮಣನು, ಕ್ರಯ-ವಿಕ್ರಯಗಳಲ್ಲಿ ಇನ್ನೊಬ್ಬರ ದ್ರವ್ಯವನ್ನು ಅಪಹರಿಸುವ ವೈಶ್ಯನು, ಸೇವೆಯನ್ನು ಮಾಡಲು ಆಲಸಿಯಾದ ಶೂದ್ರನು, ಸಚ್ಚಾರಿತ್ರ್ಯವಿಲ್ಲದ ವಿದ್ವಾಂಸನು, ಚಾರಿತ್ರವಿಲ್ಲದ ಕುಲೀನನು, ಸತ್ಯಭ್ರಷ್ಟನಾದ ಬ್ರಾಹ್ಮಣನು, ವಿಷಯಾಸಕ್ತಳಾದ ದುಷ್ಟಳಾದ ಸ್ತ್ರೀಯು,
ರಾಗೀ ಯುಕ್ತಃ ಪಚಮಾನೋಽಽತ್ಮಹೇತೋ-
ರ್ಮೂರ್ಖೋ ವಕ್ತಾ ನೃಪಹೀನಂ ಚ ರಾಷ್ಟ್ರಮ್ |
ಏತೇ ಸರ್ವೇ ಶೋಚ್ಯತಾಂ ಯಾಂತಿ ರಾಜನ್
ಯಶ್ಚಾಯುಕ್ತಃ ಸ್ನೇಹಹೀನಃ ಪ್ರಜಾಸು ॥25॥
ವಿಷಯಾಸಕ್ತನಾದ ಯೋಗಿಯು, ತನ್ನೊಬ್ಬನಿಗಾಗಿ ಅಡುಗೆ ಮಾಡಿಕೊಳ್ಳುವ ಗೃಹಸ್ಥನು, ಮೂರ್ಖನಾದ ವಾಗ್ಮಿಯು, ರಾಜರಹಿತವಾದ ರಾಷ್ಟ್ರವು, ಸ್ನೇಹವಿಲ್ಲದ ಅಜಿತೇಂದ್ರಿಯನಾದ ರಾಜನು- ಇವರೆಲ್ಲರೂ ಕೊನೆಯಲ್ಲಿ ಶೋಚನೀಯರಾಗುತ್ತಾರೆ. ದುಃಖಕ್ಕೆ ಭಾಜನರಾಗುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಯೋವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ನಾಲ್ಕನೆಯ ಅಧ್ಯಾಯ

ಪರಾಶರ ಗೀತೆ. ಶ್ರೇಯಸ್ಸಾಧನ ವಿಚಾರ.
ಪರಾಶರಃ
ಮನೋರಥರಥಂ ಪ್ರಾಪ್ಯ ಇಂದ್ರಿಯಾರ್ಥಹಯಂ ನರಃ |
ರಶ್ಮಿಭಿರ್ಜ್ಞಾನಸಂಭೂತೈರ್ಯೋ ಗಚ್ಛತಿ ಸ ಬುದ್ಧಿಮಾನ್ ॥1॥
ಪರಾಶರ ಜನಕನೇ, ಮನೋರಥವೆಂಬ ರಥವನ್ನು ಹೊಂದಿ, ಆ ರಥಕ್ಕೆ ಇಂದ್ರಿಯಗಳೆಂಬ ಕುದುರೆಗಳನ್ನು ಕಟ್ಟಿ, ಆ ಕುದುರೆಗಳಿಗೆ ಜ್ಞಾನವೆಂಬ ಹಗ್ಗಗಳನ್ನು ಬಿಗಿದು, ಅದನ್ನು ನಡೆಸಿಕೊಂಡು ಹೋಗುವ ಮನುಷ್ಯನೇ ಬುದ್ಧಿವಂತನು.
ಸೇವಾಶ್ರಿತೇನ ಮನಸಾ ವೃತ್ತಿಹೀನಸ್ಯ ಶಸ್ಯತೇ |
ದ್ವಿಜಾತಿಹಸ್ತಾನ್ನಿರ್ವೃತ್ತಾ ನ ತು ತುಲ್ಯಾತ್ ಪರಸ್ಪರಮ್ ॥2॥
ಜೀವನಕ್ಕಿಲ್ಲದೆ ಬೇರೆಯವರ ಸೇವೆಯನ್ನು ಮಾಡಿ ಬದುಕಲು ಮನಸ್ಸುಳ್ಳ ವ್ಯಕ್ತಿಯು ಉತ್ತಮ ಜಾತಿಯ ಬ್ರಾಹ್ಮಣನ ಕೈಯಿಂದ ದೊರೆಯುವ ವೃತ್ತಿಯನ್ನು ಶ್ರೇಷ್ಠವೆಂದು ಅವಲಂಬಿಸಬೇಕು. ಇದನ್ನು ಬಿಟ್ಟು ತನಗೆ ಸಮಾನರಾದವರಲ್ಲಿ ಪರಸ್ಪರ ಸೇವೆ ಮಾಡುವುದು ಪ್ರಶಸ್ತವಾದುದಲ್ಲ.
ಆಯುರ್ನಸುಲಭಂ ಲಬ್ಧ್ವಾ ನಾವಕರ್ಷೇದ್ ವಿಶಾಂ ಪತೇ |
ಉತ್ಕರ್ಷಾರ್ಥಂ ಪ್ರಯತತೇ ನರಃ ಪುಣ್ಯೇನ ಕರ್ಮಣಾ ॥3॥
ದುರ್ಲಭವಾದ ಮನುಷ್ಯ ಜನ್ಮವನ್ನು, ಆಯುಷ್ಯವನ್ನು ಪಡೆದವನು ಇಂದ್ರಿಯ ಲೋಲುಪನಾಗಿ ಆಯುಷ್ಯವನ್ನು ವ್ಯರ್ಥವಾಗಿ ಕಳೆದುಕೊಳ್ಳಬಾರದು. ಪುಣ್ಯ ಕರ್ಮಗಳಿಂದ ಉತ್ಕರ್ಷವನ್ನು ಹೊಂದಲು ಪ್ರಯತ್ನಿಸಬೇಕು.
ವರ್ಣೇಭ್ಯೋಽಪಿ ಪರಿಭ್ರಷ್ಟಃ ಸ ವೈ ಸಮ್ಮಾನಮರ್ಹತಿ |
ನ ತು ಯಃ ಸತ್ಕ್ರಿಯಾಂ ಪ್ರಾಪ್ಯ ರಾಜಸಂ ಕರ್ಮ ಸೇವತೇ ॥4॥
ಉತ್ತಮ ವರ್ಣದಲ್ಲಿ ಹುಟ್ಟಿದವನು ವರ್ಣಕ್ಕೆ ಅತಿರಿಕ್ತವಾದ ಕರ್ಮವನ್ನು ಆಚರಿಸಿ ಭ್ರಷ್ಟನಾದಲ್ಲಿ ಸಮ್ಮಾನಕ್ಕೆ ಯೋಗ್ಯನಾಗುವುದಿಲ್ಲ. ಆದ್ದರಿಂದ ಸತ್ಕರ್ಮವನ್ನು ನಡೆಸುವ ಅರ್ಹತೆಯನ್ನು ಹೊಂದಿದವನು ರಾಜಸ ಕರ್ಮಗಳನ್ನು ಎಂದಿಗೂ ಸೇವಿಸಬಾರದು.
ವರ್ಣೋತ್ಕರ್ಷಮವಾಪ್ನೋತಿ ನರಃ ಪುಣ್ಯೇನ ಕರ್ಮಣಾ |
ದುರ್ಲಭಂ ತಮಲಬ್ಧಾ ಹಿ ಹನ್ಯಾತ್ ಪಾಪೇನ ಕರ್ಮಣಾ ॥5॥
ಮನುಷ್ಯನು ಪುಣ್ಯಕರ್ಮಗಳಿಂದ ಶ್ರೇಷ್ಠವಾದ ವರ್ಣದಲ್ಲಿ ಹುಟ್ಟುತ್ತಾನೆ. ಅಂತಹ ದುರ್ಲಭವಾದ ವರ್ಣವು ಲಭಿಸಿದಾಗಲೂ ಪಾಪಕರ್ಮ ನಿರತನಾದರೆ ಅವನು ಪಾಪದಿಂದಲೇ ತನ್ನನ್ನು ಕೊಂದುಕೊಳ್ಳುತ್ತಾನೆ.
ಅಜ್ಞಾನಾದ್ಧಿ ಕೃತಂ ಪಾಪಂ ತಪಸೈವಾಭಿನಿರ್ಣುದೇತ್ |
ಪಾಪಂ ಹಿ ಕರ್ಮ ಫಲತಿ ಪಾಪಮೇವ ಸ್ವಯಂ ಕೃತಮ್ |
ತಸ್ಮಾತ್ ಪಾಪಂ ನ ಸೇವೇತ ಕರ್ಮ ದುಃಖಫಲೋದಯಮ್ ॥6॥
ಅಜ್ಞಾನದಿಂದ ನಡೆಸಿದ ಪಾಪಗಳನ್ನು ತಪಸ್ಸಿನಿಂದ ಪರಿಹರಿಸಿಕೊಳ್ಳಬೇಕು. ತಿಳಿದು ತಿಳಿದು ಪಾಪವನ್ನು ಎಸಗಿದರೆ ಮಹಾದುಃಖವನ್ನು ಆ ಪಾಪಕರ್ಮವು ತಂದೊಡ್ಡುತ್ತದೆ. ಬುದ್ಧಿಪೂರ್ವಕವಾಗಿ ಅಂತಹ ಪಾಪಕರ್ಮಗಳನ್ನು ಮಾಡದೆ, ದುಃಖವನ್ನು ಹೊಂದದೆ ಇರಬೇಕು.
ಪಾಪಾನುಬಂಧಂ ಯತ್ ಕರ್ಮ ಯದ್ಯಪಿ ಸ್ಯಾನ್ಮಹಾಫಲಮ್ |
ನ ತತ್ ಸೇವೇತ ಮೇಧಾವೀ ಶುಚಿಃ ಕುಸಲಿಲಂ ಯಥಾ ॥7॥
ಪಾಪದ ಸಂಬಂಧವುಳ್ಳ ಕಾರ್ಯವು ಎಷ್ಟೇ ದೊಡ್ಡ ಫಲವನ್ನು ಕೊಡಲು ಸಮರ್ಥವಾಗಿದ್ದರೂ ಮೇಧಾವಿಯಾದವನು ಅಂತಹ ಪಾಪಕರ್ಮವನ್ನು ಮಾಡಲು ಹೋಗಬಾರದು. ಶುಚಿಯಾದ ಬ್ರಾಹ್ಮಣನು ಚಂಡಾಲನನ್ನು ಸೇವಿಸಿದಂತಾಗುತ್ತದೆ. ಪರಿಶುದ್ಧ ವ್ಯಕ್ತಿಯ ಕಲ್ಮಷ ನೀರನ್ನು ಸೇವಿಸಿದಂತೆ ಆಗುತ್ತದೆ.
ಕಿಂ ಕಷ್ಟಮನುಪಶ್ಯಾಮಿ ಫಲಂ ಪಾಪಸ್ಯ ಕರ್ಮಣಃ |
ಪ್ರತ್ಯಾಪನ್ನಸ್ಯ ಹಿ ಸತೋ ನಾತ್ಮಾ ತಾವದ್ ವಿರೋಚತೇ ॥8॥
ಪಾಪಕರ್ಮಕ್ಕೆ ಒಳ್ಳೆಯ ಫಲವನ್ನು ನೋಡೆನು, ಹೊರತು ಕಷ್ಟಫಲಗಳನ್ನೇ ನೋಡುತ್ತಿದ್ದೇನೆ. ಜ್ಞಾನಿಯಾದವನು ಪಾಪಕರ್ಮಗಳನ್ನು ಮಾಡಿದರೆ ಅವನ ಮನಸ್ಸಿಗೆ ಯಾವುದೂ ಹೊಳೆಯುವುದೇ ಇಲ್ಲ.
ಪ್ರತ್ಯಾಪತ್ತಿಶ್ಚ ಯಸ್ಯೇಹ ಬಾಲಿಶಸ್ಯ ನ ಜಾಯತೇ |
ತಸ್ಯಾಪಿ ಸುಮಹಾಂಸ್ತಾಪಃ ಪ್ರಸ್ಥಿತಸ್ಯೋಪಜಾಯತೇ ॥9॥
ಈ ಜಗತ್ತಿನಲ್ಲಿ ಯಾವನಿಗೆ ವೈರಾಗ್ಯವು ಉಂಟಾಗುವುದಿಲ್ಲವೋ ಅವನು ಮೂರ್ಖನೆನಿಸುತ್ತಾನೆ, ಬಾಲಿಶನೆನಿಸುತ್ತಾನೆ. ಅವನು ಪರಲೋಕಕ್ಕೆ ಹೋದರೂ ಅವನ ಪಾಲಿಗೆ ಮಹಾಸಂತಾಪವೇ ಉಂಟಾಗುತ್ತದೆ.
ವಿರಕ್ತಂ ಶೋಧ್ಯತೇ ವಸ್ತ್ರಂ ನ ತು ಕೃಷ್ಣೋಪಸಂಹಿತಮ್ |
ಪ್ರಯತ್ನೇನ ಮನುಷ್ಯೇಂದ್ರ ಪಾಪಮೇವಂ ನಿಬೋಧ ಮೇ ॥10॥
ಬಟ್ಟೆಗೆ ಧೂಳು ಅಂಟಿದ್ದರೆ ನೀರು ಆ ಧೂಳನ್ನು ತೊಳೆಯುತ್ತದೆ. ಆದರೆ ಕಪ್ಪು ಬಟ್ಟೆಯನ್ನು ನೀರಿನಿಂದ ಬಿಳಿ ಮಾಡಲಾಗುವುದಿಲ್ಲ. ಮನುಷ್ಯೇಂದ್ರನೇ, ಇದರಂತೆ ಪಾಪ ಕರ್ಮನಿರತರನ್ನು ಯಾವ ಪ್ರಯತ್ನದಿಂದಲೂ ಶುದ್ಧರನ್ನಾಗಿ ಮಾಡಲಾಗದು.
ಸ್ವಯಂ ಕೃತ್ವಾ ತು ಯಃ ಪಾಪಂ ಶುಭಮೇವಾನುತಿಷ್ಠತಿ |
ಪ್ರಾಯಶ್ಚಿತ್ತಂ ನರಃ ಕರ್ತುಮುಭಯಂ ಸೋಽಶ್ನುತೇ ಪೃಥಕ್ ॥11॥
ಯಾವಾತನು ತಿಳಿದು ತಿಳಿದು ಪಾಪವನ್ನು ಮಾಡಿ ಬಳಿಕ ಪಾಪಕರ್ಮಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಉದ್ದೇಶದಿಂದ

ಪುಣ್ಯಕರ್ಮವನ್ನು ಮಾಡಿಕೊಳ್ಳುತ್ತಾನೋ ಅವನು ಆ ಶುಭಕರ್ಮದಿಂದ ಪಾಪವನ್ನು ತೊಳೆದುಕೊಳ್ಳಲಾರ. ಪ್ರತ್ಯೇಕವಾಗಿ ಎರಡೂ ಕರ್ಮದ ಫಲವನ್ನು ಅನುಭವಿಸುತ್ತಾನೆ.

ಅಜ್ಞಾನಾತ್ತು ಕೃತಾಂ ಹಿಂಸಾಮಹಿಂಸಾ ವ್ಯಪಕರ್ಷತಿ |
ಬ್ರಾಹ್ಮಣಾಃ ಶಾಸ್ತ್ರನಿರ್ದೇಶಾದಿತ್ಯಾಹುರ್ಬ್ರಹ್ಮವಾದಿನಃ ॥12॥

ಅಜ್ಞಾನದಿಂದ ಮಾಡಿದ ಹಿಂಸೆಯಿಂದ ಅನುಭವಿಸಿದ ಪಾಪವನ್ನು ಅಹಿಂಸಾ ವ್ರತವು ಪರಿಹರಿಸುತ್ತದೆಂದು ಶಾಸ್ತ್ರದ ಆಧಾರದಲ್ಲಿ ಬ್ರಾಹ್ಮಣರು ಹೇಳಿರುತ್ತಾರೆ.

ತಥಾ ಕಾಮಕೃತಾ ಚಾಸ್ಯ ವಿಹಿಂಸೈವಾಪಕರ್ಷತಿ |
ಇತ್ಯಾಹುರ್ಧರ್ಮಶಾಸ್ತ್ರಜ್ಞಾ ಬ್ರಾಹ್ಮಣಾ ವೇದಪಾರಗಾಃ ॥13॥

ಆದರೆ ಉದ್ದೇಶಪೂರ್ವಕವಾಗಿ ಮಾಡಿದ ಪಾಪಕರ್ಮವು ಅಹಿಂಸಾ ವ್ರತವನ್ನೇ ತೊಡೆದುಹಾಕುತ್ತದೆ. ಹೀಗೆ ವೇದಪಾರಂಗತರಾದ, ಧರ್ಮಶಾಸ್ತ್ರಜ್ಞರಾದ ಬ್ರಾಹ್ಮಣರು ಹೇಳಿರುತ್ತಾರೆ.

ಅಹಂ ತು ತಾವತ್ ಪಶ್ಯಾಮಿ ಕರ್ಮ ಯದ್ವರ್ತತೇ ಕೃತಮ್ |
ಗುಣಯುಕ್ತಂ ಪ್ರಕಾಶಂ ಚ ಪಾಪೇನಾನುಪಸಂಹಿತಮ್ ॥14॥

ನಾನಾದರೂ ಈ ಪಾಪ-ಪುಣ್ಯಗಳ ವಿಷಯವನ್ನು ಸ್ಪಷ್ಟವಾಗಿ ಕಾಣುತ್ತಿದ್ದೇನೆ. ಮಾಡಿದ ಕರ್ಮವು ಪಾಪದಿಂದ ಕೂಡಿರಲಿ, ಪುಣ್ಯದಿಂದ ಕೂಡಿರಲಿ, ಬಹಿರಂಗವಾಗಿ ಮಾಡಿರಲಿ, ಅಂತರಂಗದಲ್ಲಿ ಮಾಡಿರಲಿ, ತಿಳಿದು ಮಾಡಿರಲಿ, ತಿಳಿಯದೆ ಮಾಡಿರಲಿ, ಅದಕ್ಕೆ ಅರ್ಹವಾದ ಫಲವನ್ನು ಕೊಟ್ಟೇ ತೀರುತ್ತದೆ.

ಯಥಾ ಸೂಕ್ಷ್ಮಾಣಿ ಕರ್ಮಾಣಿ ಫಲಂತೀಹ ಯಥಾತಥಮ್ |
ಬುದ್ಧಿಯುಕ್ತಾನಿ ತಾನೀಹ ಕೃತಾನಿ ಮನಸಾ ಸಹ ॥15॥

ಧರ್ಮಜ್ಞನೇ, ಬುದ್ಧಿಯಿಂದ ಸೂಕ್ಷ್ಮವಾಗಿ ವಿಚಾರ ಮಾಡಲಾಗಿ ಮನಃಪೂರ್ವಕವಾಗಿ ಮಾಡಿದ ಸ್ಥೂಲ ಅಥವಾ ಸೂಕ್ಷ್ಮ ಕರ್ಮಗಳಿಗೆ ಯೋಗ್ಯವಾದ ಫಲವು ಸಿಕ್ಕೇ ತೀರುತ್ತದೆ.

ಭವತ್ಯಲ್ಪಫಲಂ ಕರ್ಮ ಸೇವಿತಂ ನಿತ್ಯಮುಲ್ಬಣಮ್ |
ಅಬುದ್ಧಿಪೂರ್ವಂ ಧರ್ಮಜ್ಞ ಕೃತಮುಗ್ರೇಣ ಕರ್ಮಣಾ ॥16॥

ಹಿಂಸೆ ಮೊದಲಾದ ಉಗ್ರಕರ್ಮಗಳನ್ನು ತಿಳಿಯದೆ ಮಾಡುತ್ತಿದ್ದರೂ ಅದಕ್ಕೆ ಭಯಂಕರವಾದ ಪಾಪ ಫಲವು ದೊರಕಿಯೇ ತೀರುತ್ತದೆ. ಆದರೆ ಬುದ್ಧಿ ಪೂರ್ವಕವಾಗಿ ಮಾಡಿದ ಕರ್ಮಕ್ಕಿಂತ ತಿಳಿಯದೇ ಮಾಡಿದ ಕರ್ಮಕ್ಕೆ ಸ್ವಲ್ಪ ಫಲವು. ಇವುಗಳಲ್ಲಿ ಈ ವ್ಯತ್ಯಾಸವನ್ನು ಹೇಳಬಹುದು.

ಕೃತಾನಿ ಯಾನಿ ಕರ್ಮಾಣಿ ದೈವತೈರ್ಮುನಿಭಿಸ್ತಥಾ |
ನಾಚರೇತ್ತಾನಿ ಧರ್ಮಾತ್ಮಾ ಶ್ರುತ್ವಾ ಚಾಪಿ ನ ಕುತ್ಸಯೇತ್ ॥17॥

ದೇವತೆಗಳಿಂದಾಗಲಿ, ಮುನಿಗಳಿಂದಾಗಲಿ ನಿಷಿದ್ಧ ಕರ್ಮವು ಮಾಡಲ್ಪಟ್ಟರೆ ಧರ್ಮವನ್ನು ತಿಳಿದ ಪುರುಷನು ತಾನೂ ಅವರನ್ನನುಸರಿಸಿ ಅಂತಹ ಕರ್ಮಗಳನ್ನು ಮಾಡಲು ಹೋಗಬಾರದು. ದೇವ-ಮುನಿಗಳು ಮಾಡಿದ್ದಾರೆಂದು ಕೇಳಿದಾಗ ಅವರನ್ನು ನಿಂದಿಸಬಾರದು.

ಸಂಚಿಂತ್ಯ ಮನಸಾ ರಾಜನ್ ವಿದಿತ್ವಾ ಶಕ್ತಿಮಾತ್ಮನಃ |
ಕರೋತಿ ಯಃ ಶುಭಂ ಕರ್ಮ ಸ ವೈ ಭದ್ರಾಣಿ ಪಶ್ಯತಿ ॥18॥

ಮಾನವನು ಮನಸ್ಸಿನಿಂದ ಸರಿಯಾಗಿ ವಿಮರ್ಶೆ ಮಾಡಿ, ನನಗೆ ಈ ಕರ್ಮ ಮಾಡಲು ಸಾಧ್ಯವಿದೆ ಎಂದು ತಿಳಿದು ಶುಭಕರ್ಮವನ್ನು ಮಾಡುತ್ತಾನೋ ಅವನು ಶುಭಫಲವನ್ನೇ ಹೊಂದುತ್ತಾನೆ.

ನವೇ ಕಪಾಲೇ ಸಲಿಲಂ ಸಂನ್ಯಸ್ತಂ ಹೀಯತೇ ಯಥಾ |
ನವೇತರೇ ತಥಾಭಾವಂ ಪ್ರಾಪ್ನೋತಿ ಸುಖಭಾವಿತಮ್ ॥19॥

ಬೆಂಕಿಯಲ್ಲಿ ಸುಡದೇ ಇರುವ ಮಡಿಕೆಯಲ್ಲಿಟ್ಟ ನೀರು ಬೇಗ ಹೇಗೆ ನಾಶವನ್ನು ಹೊಂದುತ್ತದೋ, ಬೆಂದಿರುವ ಕಪಾಲದಲ್ಲಿಟ್ಟ ನೀರು ಸ್ಥಿರವಾಗಿ ನಿಲ್ಲುತ್ತದೋ ಹೀಗೆ ಅಪಕ್ವ ಮನಸ್ಸಿನಿಂದ ಮಾಡಿದ ಕರ್ಮವು ಕಷ್ಟಕ್ಕೂ, ಪಕ್ವ ಮನಸ್ಸಿನಿಂದ ಮಾಡಿದ ಕರ್ಮವು ಸುಖಕ್ಕೂ ಕಾರಣವಾಗುತ್ತದೆ.

ಸತೋಯೇಽನ್ಯತ್ತು ಯತ್ತೋಯಂ ತಸ್ಮಿನ್ನೇವ ಪ್ರಸಿಚ್ಯತೇ |
ವೃದ್ಧೇ ವೃದ್ಧಿಮವಾಪ್ನೋತಿ ಸಲಿಲೇ ಸಲಿಲಂ ಯಥಾ ॥20॥

ಸರಿಯಾಗಿ ನೀರು ನಿಂತಿರುವ ಮಡಿಕೆಯಲ್ಲಿ ಮತ್ತಷ್ಟು ನೀರನ್ನು ಹಾಕಿದರೆ ಪೂರ್ಣತೆಯನ್ನೇ ಹೊಂದುತ್ತದೆ. ನೀರಿಗೆ ನೀರು ಬೆರೆತಾಗ ಹೇಗೆ ಪೂರ್ಣತೆಯನ್ನು ಹೊಂದುತ್ತದೋ ಹಾಗೆ ಪುಣ್ಯಕರ್ಮಗಳನ್ನು ನಿರಂತರ ಮಾಡುತ್ತಾ ವೃದ್ಧಿಯನ್ನು ಹೊಂದುತ್ತಾನೆ.

ಏವಂ ಕರ್ಮಾಣಿ ಯಾನೀಹ ಬುದ್ಧಿಯುಕ್ತಾನಿ ಭೂಪತೇ |
ನಸಮಾನೀಹ ಹೀನಾನಿ ತಾನಿ ಪುಣ್ಯತಮಾನ್ಯಪಿ ॥21॥

ಹೀಗೆ ಪುಣ್ಯಕರ್ಮಗಳನ್ನು ಬುದ್ಧಿಯುಕ್ತವಾಗಿ ಮಾಡುತ್ತಿರಬೇಕು. ಪುಣ್ಯಕರ್ಮಗಳು ಎಂದಿಗೂ ನಾಶವನ್ನು ಹೊಂದದೆ ಮತ್ತೂ ಅಧಿಕ ಪುಣ್ಯವಾಗಿ ಅಭಿವೃದ್ಧವಾಗುತ್ತವೆ.

ರಾಜ್ಞಾ ಜೇತವ್ಯಾಃ ಸಾಯುಧಾಶ್ಚೋನ್ನತಾಶ್ಚ
ಸಮ್ಯಕ್ಕರ್ತವ್ಯಂ ಪಾಲನಂ ಚ ಪ್ರಜಾನಾಮ್ |
ಅಗ್ನಿಶ್ಚೇಯೋ ಬಹುಭಿಶ್ಚಾಪಿ ಯಜ್ಞೈ-
ರಂತೇ ಮಧ್ಯೇ ವಾ ವನಮಾಶ್ರಿತ್ಯ ಸ್ಥೇಯಮ್ ॥22॥

ರಾಜನಾದವನು ಬೆಳೆಯುವಂತಹ ಶತ್ರುಗಳನ್ನು ಸಾಮ, ದಾನಾದಿ ಉಪಾಯಗಳಿಂದ ಜಯಿಸಬೇಕು. ನ್ಯಾಯಮಾರ್ಗದಲ್ಲಿ ಪ್ರಜಾ ಪರಿಪಾಲನೆಯನ್ನು ಮಾಡಬೇಕು. ಅನೇಕ ಯಜ್ಞಗಳಿಂದ ಅಗ್ನಿದೇವನನ್ನು ತೃಪ್ತಿಪಡಿಸಬೇಕು. ವೈರಾಗ್ಯ ಹುಟ್ಟಿದ ಬಳಿಕ ಮಧ್ಯವಯಸ್ಸಿನಲ್ಲಿಯೋ, ಕೊನೆಯಲ್ಲಿಯೋ ಅರಣ್ಯದಲ್ಲಿ ವಾಸ ಮಾಡಬೇಕು.

ದಮಾನ್ವಿತಃ ಪುರುಷೋ ಧರ್ಮಶೀಲೋ
ಭೂತಾನಿ ಚಾತ್ಮಾನಮಿವಾನುಪಶ್ಯೇತ್ |
ಗರೀಯಸಃ ಪೂಜಯೇದಾತ್ಮಶಕ್ತ್ಯಾ
ಸತ್ಯೇನ ಶೀಲೇನ ಸುಖಂ ನರೇಂದ್ರ ॥23॥

ಮನುಷ್ಯನು ಜಿತೇಂದ್ರಿಯನಾಗಿ, ಧರ್ಮಶೀಲನಾಗಿ ಸಮಸ್ತ ಪ್ರಾಣಿಗಳನ್ನು ತನ್ನಂತೆ ಕಾಣಬೇಕು. ವಿದ್ಯೆ, ತಪಸ್ಸುಗಳಿಂದ ಉತ್ತಮರಾದ ಗುರುಜನರನ್ನು ಶಕ್ತಿ ಇದ್ದಷ್ಟು ಸಮ್ಮಾನಿಸಬೇಕು. ಸತ್ಯಭಾಷಣ, ಒಳ್ಳೆಯ ನಡತೆಗಳಿಂದ ಸುಖವು ಉಂಟಾಗುತ್ತದೆ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುರ್ವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *

ನೂರ ಇಪ್ಪತ್ತೈದನೆಯ ಅಧ್ಯಾಯ

ಪರಾಶರ ಗೀತಾ.

ಪರಾಶರಃ

ಕಃ ಕಸ್ಯ ಚೋಪಕುರುತೇ ಕಶ್ಚ ಕಸ್ಮೈ ಪ್ರಯಚ್ಛತಿ |
ಪ್ರಾಣೀ ಕರೋತ್ಯಯಂ ಕರ್ಮ ಸರ್ವಮಾತ್ಮಾರ್ಥಮಾತ್ಮನಾ ॥1॥

ಪರಾಶರ ಜನಕರಾಜನೇ, ಯಾರು ಯಾರಿಗೆ ಉಪಕಾರ ಮಾಡುತ್ತಾರೆ? ಯಾರು ಯಾರಿಗೆ ಏನನ್ನು ಕೊಡುತ್ತಾರೆ? ಈ ರೀತಿಯಾದ ಮಾತುಗಳಿಗೆ ಅರ್ಥವೇ ಇರುವುದಿಲ್ಲ. ಪ್ರತಿಯೊಬ್ಬ ಮನುಷ್ಯನೂ ಸ್ವಾರ್ಥಕ್ಕಾಗಿಯೇ ಎಲ್ಲವನ್ನೂ ಮಾಡುತ್ತಾನೆಂದು ತಿಳಿ. ಮನುಷ್ಯನಿಗೆ ಪರೋಪಕಾರ, ದಾನ-ಧರ್ಮಗಳನ್ನು ಮಾಡುವುದರಲ್ಲಿ ತನ್ನ ಸ್ವಪ್ರಯೋಜನವೇ ಅಧಿಕವಾಗಿದೆ ಎಂದು ಭಾವ.

ಗೌರವೇಣ ಪರಿತ್ಯಕ್ತಂ ನಿಃಸ್ನೇಹಂ ಪರಿವರ್ಜಯೇತ್ |
ಸೋದರ್ಯಂ ಭ್ರಾತರಮಪಿ ಕಿಮುತಾನ್ಯಂ ಪೃಥಗ್ಜನಮ್ ॥2॥

ಒಬ್ಬ ಮನುಷ್ಯನು ಇನ್ನೊಬ್ಬನು ತನ್ನನ್ನು ಪ್ರೀತಿಸುವ ತನಕ ಅವನನ್ನು ಆದರಿಸುತ್ತಾನೆ. ಹೆತ್ತ ತಂದೆ-ತಾಯಿಗಳಾಗಲಿ, ಒಡಹುಟ್ಟಿದ ಸಹೋದರರೇ ಆಗಲಿ, ಅವರು ತನ್ನಲ್ಲಿ ಪ್ರೀತಿಯನ್ನು ತೋರಿಸುವ ತನಕ ಆದರಿಸುತ್ತಾರೆ. ಹೀಗಿರಲು ಮನುಷ್ಯ ಸಂಬಂಧದಲ್ಲಿ ಹೇಳುವುದೇನು? ಪ್ರೀತಿಯು ಕಡಿಮೆಯಾದರೆ ಆದರವೂ ಕಡಿಮೆಯಾಗುತ್ತದೆ.

ವಿಶಿಷ್ಟಸ್ಯ ವಿಶಿಷ್ಟಾಚ್ಚ ತುಲ್ಯೌ ದಾನಪ್ರತಿಗ್ರಹೌ |
ತಯೋಃ ಪುಣ್ಯತರಂ ದಾನಂ ತದ್ದ್ವಿಜಸ್ಯ ಪ್ರಯಚ್ಛತಃ ॥3॥

ಉತ್ತಮನಿಗೆ ದಾನ ಮಾಡುವುದು, ಉತ್ತಮರಿಂದ ದಾನವನ್ನು ಸ್ವೀಕರಿಸುವುದು ಸಮಾನವಾಗಿಯೇ ಇದೆ. ಹೀಗಿದ್ದರೂ ದಾನ-ಪ್ರತಿಗ್ರಹಗಳಲ್ಲಿ ದಾನವು ಶ್ರೇಷ್ಠವೆನಿಸುತ್ತದೆ.

ನ್ಯಾಯಾಗತಂ ಧನಂ ವರ್ಣ್ಯೈರ್ನ್ಯಾಯೇನೈವ ವಿವರ್ಧಿತಮ್ |
ಸಂರಕ್ಷ್ಯಂ ಯತ್ನಮಾಸ್ಥಾಯ ಧರ್ಮಾರ್ಥಮಿತಿ ನಿಶ್ಚಯಃ ॥4॥

ನ್ಯಾಯದಿಂದ ಸಂಪಾದಿಸಿದ ಧನವನ್ನು ನ್ಯಾಯದಿಂದ ವೃದ್ಧಿಗೊಳಿಸಿ ಧರ್ಮಕಾರ್ಯಕ್ಕಾಗಿ ಆ ಧನವನ್ನು ರಕ್ಷಣೆ ಮಾಡಬೇಕು. ಧನಕ್ಕೆ ಧರ್ಮ ಕಾರ್ಯದಲ್ಲಿ ವಿನಿಯೋಗವೇ ಮುಖ್ಯವೆನಿಸಿದೆ.

ನ ಧರ್ಮಾರ್ಥೀ ನೃಶಂಸೇನ ಕರ್ಮಣಾ ಧನಮರ್ಜಯೇತ್ |
ಶಕ್ತಿತಃ ಸರ್ವಕಾರ್ಯಾಣಿ ಕುರ್ಯಾನ್ನರ್ದ್ಧಿಮನುಸ್ಮರೇತ್ ॥5॥

ಧರ್ಮವನ್ನು ಬಯಸುವವನು ನಿಂದ್ಯವಾದ ವೃತ್ತಿಯನ್ನು ಆಶ್ರಯಿಸಿ ಹಣವನ್ನು ಸಂಪಾದಿಸಬಾರದು. ಧನ ಸಂಪಾದನೆಯನ್ನೇ ಪ್ರಧಾನವಾಗಿಟ್ಟುಕೊಳ್ಳದೆ ಎಲ್ಲ ರೀತಿಯಾದ ಸತ್ಕರ್ಮಗಳನ್ನು ಶಕ್ತಿಗನುಗುಣವಾಗಿ ನಡೆಸುತ್ತಿರಬೇಕು. ಹಣ ಸಂಪಾದನೆಯಲ್ಲಿಯೇ ಯಾವಾಗಲೂ ಗೀಳಿರಬಾರದು.

ಅಪೋ ಹಿ ಪ್ರಯತಃ ಶೀತಾಸ್ತಾಪಿತಾ ಜ್ವಲನೇನ ವಾ |
ಶಕ್ತಿತೋಽತಿಥಯೇ ದತ್ವಾ ಕ್ಷುಧಾರ್ತಾಯಾಶ್ನುತೇ ಫಲಮ್ ॥6॥

ಹಸಿವೆಯಿಂದ ಕಂಗೆಟ್ಟ ಅತಿಥಿಗೆ ತಂಪುನೀರನ್ನು, ಬಿಸಿನೀರನ್ನು ವಿನೀತನಾಗಿ ತನ್ನ ಶಕ್ತಿಗನುಗುಣವಾಗಿ ಶುದ್ಧಭಾವದಿಂದ ನೀಡುವವನು ಉತ್ತಮವಾದ ಫಲವನ್ನು ಹೊಂದುತ್ತಾನೆ.

ರಂತಿದೇವೇನ ಲೋಕೇಷ್ಟಾ ಸಿದ್ಧಿಃ ಪ್ರಾಪ್ತಾ ಮಹಾತ್ಮನಾ |
ಫಲಪತ್ರೈರಥೋ ಮೂಲೈರ್ಮುನೀನರ್ಚಿತವಾನಸೌ ॥7॥

ಮಹಾತ್ಮನಾದ ರಂತಿದೇವನು ಹಣ್ಣುಗಳಿಂದ, ಗೆಡ್ಡೆ-ಗೆಣಸುಗಳಿಂದ, ಪತ್ರೆಗಳಿಂದ ಋಷಿಜನರನ್ನು ಸತ್ಕರಿಸುತ್ತಿದ್ದನು. ಇದರಿಂದಲೇ ಮಹಾತ್ಮರಾದ ರಂತಿದೇವನಿಗೆ ಪ್ರಪಂಚದಲ್ಲಿ ತಾನು ಇಷ್ಟ ಪಡುವ ಎಲ್ಲ ಇಷ್ಟಾರ್ಥಗಳ ಸಿದ್ಧಿಯು ಉಂಟಾಯಿತು.

ತೈರೇವ ಫಲಪತ್ರೈಶ್ಚ ಸ ಮಾಠರಮತೋಷಯತ್ |
ತಸ್ಮಾಲ್ಲೇಭೇ ಪರಂ ಸ್ಥಾನಂ ಶೈಬ್ಯೋಽಪಿ ಪೃಥಿವೀಪತಿಃ ॥8॥

ಭೂಪಾಲನೆನಿಸಿದ ಶೈಬ್ಯನು ಇದೇ ಫಲ-ಮೂಲ-ಪತ್ರಗಳಿಂದ ಮಾಠರ ಎಂಬ ಋಷಿಯನ್ನು ಸಂತೋಷಗೊಳಿಸಿ ಅದಕ್ಕಾಗಿ ಉತ್ತಮ

ಫಲವನ್ನು ಹೊಂದಿದನು.
ದೇವತಾತಿಥಿಭೃತ್ಯೇಭ್ಯಃ ಪಿತೃಭ್ಯೋಽಥಾತ್ಮನಸ್ತಥಾ |
ಋಣವಾಂಜಯತೇ ಮರ್ತ್ಯಸ್ತಸ್ಮಾದನೃಣತಾಂ ವ್ರಜೇತ್ ॥9॥
ಮನುಷ್ಯನು ಹುಟ್ಟನ್ನು ಪಡೆಯುವಾಗ ದೇವ, ಅತಿಥಿ, ಭೃತ್ಯ, ಪಿತೃ ಮತ್ತು ತನ್ನದ್ದೇ ಆದ ಈ ಋಣಗಳನ್ನು ಹೊತ್ತು ಹುಟ್ಟುತ್ತಾನೆ. ತನ್ನ ಜೀವಿತದಲ್ಲಿ ಈ ಎಲ್ಲ ಋಣಗಳನ್ನು ವಿಧಿಬದ್ಧವಾಗಿ ಪೂರೈಸಿಕೊಂಡು ಋಣಮುಕ್ತನಾಗಬೇಕು.
ಸ್ವಾಧ್ಯಾಯೇನ ಮಹರ್ಷಿಭ್ಯೋ ದೇವೇಭ್ಯೋ ಯಜ್ಞಕರ್ಮಣಾ |
ಪಿತೃಭ್ಯಃ ಶ್ರಾದ್ಧದಾನೇನ ನೃಣಾಮಭ್ಯರ್ಚನೇನ ಚ ॥10॥
ವೇದ-ಶಾಸ್ತ್ರಗಳ ಅಧ್ಯಯನದಿಂದ ಋಷಿಗಳ ಋಣವನ್ನೂ, ಯಜ್ಞ ಕರ್ಮದಿಂದ ದೇವತಾ ಋಣವನ್ನೂ, ಶ್ರಾದ್ಧದಾನದಿಂದ ಪಿತೃ ಋಣವನ್ನೂ, ಸ್ವಾಗತ-ಸತ್ಕಾರ- ಸೇವನೆಗಳಿಂದ ಮನುಷ್ಯ ಋಣವನ್ನು ಪರಿಹರಿಸಿಕೊಳ್ಳಬೇಕು.
ವಾಚಃ ಶೇಷಾವಹಾರ್ಯೇಣ ಪಾಲನೇನಾತ್ಮನೋಽಪಿ ಚ |
ಯಥಾವದ್‌ಭೃತ್ಯವರ್ಗಸ್ಯ ಚಿಕೀರ್ಷೇದ್ಧರ್ಮಮಾದಿತಃ ॥11॥
ಇದರಂತೆ ವೇದಗಳ ಅಧ್ಯಯನ, ಮನನದಿಂದಲೂ, ಯಜ್ಞಶೇಷವನ್ನು ಭುಂಜಿಸುವುದರಿಂದಲೂ, ತನ್ನನ್ನು ರಕ್ಷಿಸಿಕೊಳ್ಳುವುದರಿಂದಲೂ ಆತ್ಮ ಋಣದಿಂದ ಮನುಷ್ಯನು ಬಿಡುಗಡೆಯನ್ನು ಹೊಂದುತ್ತಾನೆ. ರಕ್ಷಣೆಗೆ ಅರ್ಹರಾದ ಹೆಂಡತಿ-ಮಕ್ಕಳ ಪಾಲನೆ ಪೋಷಣೆಗಳನ್ನು ಮಾಡಿ ರಕ್ಷಿಸುವುದರಿಂದ ಭೃತ್ಯಋಣದಿಂದಲೂ ಮುಕ್ತನಾಗುತ್ತಾನೆ.
ಪ್ರಯತ್ನೇನ ಚ ಸಂಸಿದ್ಧಾ ಧನೈರಪಿ ವಿವರ್ಜಿತಾಃ |
ಸಮ್ಯಗ್ಘುತ್ವಾ ಹುತವಹಂ ಮುನಯಃ ಸಿದ್ಧಿಮಾಗತಾಃ ॥12॥
ಐಶ್ವರ್ಯದಿಂದ ರಹಿತರಾದ ತಪಸ್ವಿ ಜನರು ತಮ್ಮ ಉತ್ತಮ ಪ್ರಯತ್ನದಿಂದ ಸಿದ್ಧಿಯನ್ನು ಹೊಂದುತ್ತಾರೆ. ತಪಸ್ವಿ ಜನರು ವಿಧಿಬದ್ಧವಾಗಿ ಅಗ್ನಿಹೋತ್ರವನ್ನು ಶ್ರದ್ಧೆಯಿಂದ ಆಶ್ರಯಿಸಿ ಸಿದ್ಧಿಯನ್ನು ಹೊಂದುತ್ತಾರೆ.
ವಿಶ್ವಾಮಿತ್ರಸ್ಯ ಪುತ್ರತ್ವಮೃಚೀಕತನಯೋಽಗಮತ್ |
ಋಗ್ಭಿಃ ಸ್ತುತ್ವಾ ಮಹಾಭಾಗೋ ದೇವಾನ್ ವೈ ಯಜ್ಞಭಾಗಿನಃ ॥13॥
ಮಹಾಬಾಹುವೇ, ಋಚೀಕರ ಮಗನಾದ ಶುನಶ್ಶೇಪನು ದೇವತೆಗಳನ್ನು ಒಂದು ಯಜ್ಞದಲ್ಲಿ ವೇದಮಂತ್ರಗಳಿಂದ ಸ್ತೋತ್ರ ಮಾಡಿ ವಿಶ್ವಾಮಿತ್ರನ ಮಗನೇ ಆದನು.
ಗತಃ ಶುಕ್ರತ್ವಮುಶನಾ ದೇವದೇವಪ್ರಸಾದನಾತ್ |
ದೇವೀಂ ಸ್ತುತ್ವಾ ತು ಗಗನೇ ಮೋದತೇ ತೇಜಸಾ ವೃತಃ ॥14॥
ಉಶನಸ್ ಎಂಬ ಋಷಿಯು ದೇವದೇವನಾದ ಮಹಾರುದ್ರನ ಅನುಗ್ರಹವನ್ನು ಬಯಸಿ ಶುಕ್ರತ್ವವನ್ನು ಪಡೆದು, ಶುಕ್ರನೆಂಬ ಹೆಸರಿನಿಂದಲೇ ಪ್ರಸಿದ್ಧನಾದನು. ಪಾರ್ವತಿಯ ಅನುಗ್ರಹದಿಂದ ಆಕಾಶದಲ್ಲಿ ಗ್ರಹಸ್ಥಾನವನ್ನು ಪಡೆದು ಕೀರ್ತಿಯಿಂದ ಶುಚಿಯಾಗಿದ್ದಾನೆ.
ಅಸಿತೋ ದೇವಲಶ್ಚೈವ ತಥಾ ನಾರದಪರ್ವತೌ |
ಕಕ್ಷೀವಾಂಜಮದಗ್ನ್ಯಶ್ಚ ರಾಮಸ್ತಾಂಡ್ಯಸ್ತಥಾಂಶುಮಾನ್ ॥15॥
ವಸಿಷ್ಠೋ ಜಮದಗ್ನಿಶ್ಚ ವಿಶ್ವಾಮಿತ್ರೋಽತ್ರಿರೇವ ಚ |
ಭರದ್ವಾಜೋ ಹರಿಶ್ಮಶ್ರುಃ ಕುಂಡಧಾರಃ ಶ್ರುತಶ್ರವಾಃ ॥16॥
ಏತೇ ಮಹರ್ಷಯಃ ಸ್ತುತ್ವಾ ವಿಷ್ಣುಮೃಗ್ಭಿಃ ಸಮಾಹಿತಾಃ |
ಲೇಭಿರೇ ತಪಸಾ ಸಿದ್ಧಿಂ ಪ್ರಸಾದಾತ್ತಸ್ಯ ಧೀಮತಃ ॥17॥
ಅಸಿತ, ದೇವಲ, ನಾರದ, ಪರ್ವತ, ಕಕ್ಷೀವಾನ್, ಜಮದಗ್ನಿಯ ಮಗನಾದ ಪರಶುರಾಮ, ಜಿತೇಂದ್ರಿಯನಾದ ತಾಂಡ್ಯ, ಅಂಶುಮಾನ್, ವಸಿಷ್ಠ, ಜಮದಗ್ನಿ, ವಿಶ್ವಾಮಿತ್ರ, ಅತ್ರಿ, ಭರದ್ವಾಜ, ಹರಿಶ್ಮಶ್ರು, ಕುಂಡಧಾರ, ಶ್ರುತಶ್ರವಸ್ - ಈ ಎಲ್ಲ ಋಷಿಗಳು ಏಕಾಗ್ರತೆಯಿಂದ, ವೇದಮಂತ್ರಗಳಿಂದ ಭಗವಂತನಾದ ಶ್ರೀಹರಿಯನ್ನು ಸ್ತೋತ್ರ ಮಾಡಿ, ಮಹಾನುಭಾವನಾದ ಶ್ರೀಹರಿಯ ಕರುಣೆಗೆ ಪಾತ್ರರಾಗಿ ಸಿದ್ಧಿಯನ್ನು ಹೊಂದಿರುವರು.
ಅನರ್ಹಾಶ್ಚಾರ್ಹತಾಂ ಪ್ರಾಪ್ತಾಃ ಸಂತಃ ಸ್ತುತ್ವಾ ತಮೇವ ಹ |
ನ ತು ವೃದ್ಧಿಮಿಹಾನ್ವಿಚ್ಛೇತ್ ಕರ್ಮ ಕೃತ್ವಾ ಜುಗುಪ್ಸಿತಮ್ ॥18॥
ಗೌರವಿಸಲು ಯೋಗ್ಯರಾದ ಉತ್ತಮ ಪುರುಷರು ಶ್ರೀಹರಿಯನ್ನೇ ವಿಶೇಷವಾಗಿ ಸ್ತೋತ್ರ ಮಾಡಿ ಸಂತರೂ, ಪೂಜನೀಯರೂ ಆಗಿದ್ದಾರೆ. ಜುಗುಪ್ಸಿತವಾದ ಪಾಪ ಕರ್ಮಗಳನ್ನು ಮಾಡಿ ಯಾರೂ ಉನ್ನತಿಯನ್ನು ಹೊಂದಲು ಬಯಸಬಾರದು.
ಯೇಽರ್ಥಾ ಧರ್ಮೇಣ ತೇ ಸತ್ಯಾ ಯೇಽಧರ್ಮೇಣ ಧಿಗಸ್ತು ತಾನ್ |
ಧರ್ಮಂ ವೈ ಶಾಶ್ವತಂ ಲೋಕೇ ನ ಜಹ್ಯಾದ್ಧನಕಾಂಕ್ಷಯಾ ॥19॥
ಧರ್ಮಮಾರ್ಗದಿಂದ ದೊರೆಯುವ ಸಂಪತ್ತೇ ನಿಜವಾದ ಸಂಪತ್ತು. ಅಧರ್ಮದಿಂದ ದೊರೆಯುವ ಸಂಪತ್ತಿಗೆ ಧಿಕ್ಕಾರವು. ಧರ್ಮವೇ ಶಾಶ್ವತವಾದುದು. ಆದ್ದರಿಂದ ಧನವನ್ನು ಬಯಸುವ ವ್ಯಕ್ತಿಯು ಧರ್ಮವನ್ನು ತ್ಯಜಿಸಿ ಧನ ಸಂಗ್ರಹಿಸಬಾರದು.
ಆಹಿತಾಗ್ನಿರ್ಹಿ ಧರ್ಮಾತ್ಮಾ ಯಃ ಸ ಪುಣ್ಯಕೃದುತ್ತಮಃ |
ವೇದಾ ಹಿ ಸರ್ವೇ ರಾಜೇಂದ್ರ ಸ್ಥಿತಾಸ್ತ್ರಿಷ್ವಗ್ನಿಷು ಪ್ರಭೋ ॥20॥
ಯಾರು ಪ್ರತಿದಿನವೂ ಅಗ್ನಿಹೋತ್ರವನ್ನು ಮಾಡುತ್ತಾರೋ ಅವರೇ ಧರ್ಮಾತ್ಮರು. ಪುಣ್ಯಕರ್ಮಗಳಲ್ಲಿ ಶ್ರೇಷ್ಠರಾದವರು. ಸಂಪೂರ್ಣ ವೇದಗಳು ಆಹಿತಾಗ್ನಿಯು ಆರಾಧನೆ ಮಾಡುವ ದಕ್ಷಿಣಾಗ್ನಿ, ಗಾರ್ಹಪತ್ಯ, ಆವಹನೀಯ ಎಂಬ ಮೂರು ಅಗ್ನಿಗಳಲ್ಲಿಯೇ ಪ್ರತಿಷ್ಠಿತವಾಗಿವೆ.

ಸ ಚಾಪ್ಯಗ್ನ್ಯಾಹಿತೋ ವಿಪ್ರಾಃ ಕ್ರಿಯಾ ಯಸ್ಯ ನ ಹೀಯತೇ |
ಶ್ರೇಯೋ ಹ್ಯನಾಹಿತಾಗ್ನಿತ್ವಮಗ್ನಿಹೋತ್ರಂ ನ ನಿಷ್ಕ್ರಿಯಮ್ ॥21॥
ಯಾರು ಸತ್ಕರ್ಮ-ಸದಾಚಾರಗಳಿಂದ ವಿಮುಖರಾಗುವುದಿಲ್ಲವೋ ಅವರೇ ಅಗ್ನಿಹೋತ್ರಿಗಳಾಗಲು ಅರ್ಹರಾಗುತ್ತಾರೆ. ಸದಾಚಾರದಿಂದ ಸತ್ಕರ್ಮಶೀಲನಾದವನು ಅಗ್ನಿಹೋತ್ರಿಯಾಗದಿದ್ದರೂ ಶ್ರೇಯೋಭಾಗಿಯಾಗುತ್ತಾನೆ. ಸದಾಚಾರ, ಸತ್ಕರ್ಮ ಹೀನನಾದವನು ಅಗ್ನಿಹೋತ್ರಿಯಾದರೂ ಕರ್ಮವು ನಿಷ್ಫಲವಾಗುತ್ತದೆ.
ಅಗ್ನಿರಾತ್ಮಾ ಚ ಮಾತಾ ಚ ಪಿತಾ ಜನಯಿತಾ ತಥಾ |
ಗುರುಶ್ಚ ನರಶಾರ್ದೂಲ ಪರಿಚರ್ಯಾ ಯಥಾತಥಮ್ ॥22॥
ಪುರುಷಸಿಂಹನೇ, ಅಗ್ನಿ, ಪರಮಾತ್ಮ, ತಾಯಿ, ಜನ್ಮದಾತೃವಾದ ತಂದೆ, ಗುರು ಇವೆಲ್ಲರನ್ನೂ ಯಥಾಯೋಗ್ಯವಾಗಿ ಸತ್ಕರಿಸಬೇಕು.
ಮಾನಂ ತ್ಯಕ್ತ್ವಾ ಯೋ ನರೋ ವೃದ್ಧಸೇವೀ
ವಿದ್ವಾನ್ ಕ್ಲೀಬಃ ಪಶ್ಯತಿ ಪ್ರೀತಿಯೋಗಾತ್ |
ದಾಕ್ಷ್ಯೇಣ ಹೀನೋ ಧರ್ಮಯುಕ್ತೋ ನದಾಂತೋ
ಲೋಕೇಽಸ್ಮಿನ್ ವೈ ಪೂಜ್ಯತೇ ಸದ್ಭಿರಾರ್ಯಃ ॥23॥
ಯಾವನು ಆತ್ಮಾಭಿಮಾನವನ್ನು ಬಿಟ್ಟು ವೃದ್ಧರ ಸೇವೆಯಲ್ಲಿ ರತನಾಗಿರುತ್ತಾನೋ, ವಿದ್ಯಾವಂತನಾಗಿಯೂ, ಕಾಮಭೋಗ ಆಸಕ್ತಿಯನ್ನು ತೊರೆದು ಎಲ್ಲರಲ್ಲಿಯೂ ಪ್ರೀತಿಯನ್ನು ಹೊಂದಿದವನಾಗಿರುತ್ತಾನೋ, ತನ್ನ ಸಾಮರ್ಥ್ಯವನ್ನು ತೋರಿಸಿಕೊಳ್ಳದೆ ಧರ್ಮದಲ್ಲಿ ಆಸಕ್ತನಾಗಿರುತ್ತಾನೋ, ಅಜಿತೇಂದ್ರಿಯನಾಗಿರುವುದಿಲ್ಲವೋ ಅಂತಹ ಪೂಜ್ಯನು ಲೋಕದಲ್ಲಿ ಸತ್ಪುರುಷರಿಂದ ಪೂಜಿಸಲು ಅರ್ಹತೆಯನ್ನು ಹೊಂದಿರುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತಾರನೆಯ ಅಧ್ಯಾಯ
ಪರಾಶರ ಗೀತಾ. ಶೂದ್ರನಿಗೆ ಸೇವಾ ವೃತ್ತಿಯೇ ಪ್ರಧಾನವು ಎನ್ನಲು ಸತ್ಸಂಗದ ಮಹಿಮೆಯನ್ನು, ವರ್ಣಾಶ್ರಮದ ಮಹಿಮೆಯನ್ನು, ವರ್ಣಾಶ್ರಮದ ಧರ್ಮಪಾಲನೆಯ ಮಹತ್ವವನ್ನು ತಿಳಿಸಿದುದು.
ಪರಾಶರಃ
ವೃತ್ತಿಃ ಸಕಾಶಾದ್ ವರ್ಣೇಭ್ಯೋ ನಿತ್ಯಂ ಹೀನಸ್ಯ ಶೋಭನಾ |
ಪ್ರೀತ್ಯೋಪನೀತಾ ನಿರ್ದಿಷ್ಟಾ ಧರ್ಮಿಷ್ಠಾನ್ ಕುರುತೇ ಸದಾ ॥1॥
ಪರಾಶರ ಜನಕನೇ, ಶೂದ್ರನು ಮೂರು ವರ್ಣದವರ ಸೇವೆಯಲ್ಲಿ ದರಿದ್ರನಾದ ಬ್ರಾಹ್ಮಣನನ್ನು ಸೇವಿಸುವುದು ತುಂಬಾ ಶ್ರೇಷ್ಠವಾದ ಧರ್ಮವೆನಿಸಿದೆ. ಬ್ರಾಹ್ಮಣರನ್ನು ಸೇವಾವೃತ್ತಿಯಿಂದ, ಪ್ರೀತಿಪೂರ್ವಕವಾಗಿ ಪಾಲಿಸಿದರೆ ಆ ಸೇವೆಯ ಧರ್ಮವೇ ಅವರನ್ನು ಧರ್ಮಿಷ್ಠರನ್ನಾಗಿ ಮಾಡುತ್ತದೆ.
ವೃತ್ತಿಶ್ಚೇನ್ನಾಸ್ತಿ ಶೂದ್ರಸ್ಯ ಪಿತೃಪೈತಾಮಹೀ ಧ್ರುವಾ |
ನ ವೃತ್ತಿಂ ಪರತೋ ಮಾರ್ಗೇಚ್ಛುಶ್ರೂಷಾಂ ತು ಪ್ರಯೋಜಯೇತ್ ॥2॥
ಶೂದ್ರನಾದವನಿಗೆ ತಂದೆ, ತಾತ ಇವರ ಕಾಲದಿಂದ ನಿರ್ದಿಷ್ಟವಾದ ಒಂದು ವೃತ್ತಿ ನಿಶ್ಚಿತವಾಗದಿದ್ದಲ್ಲಿ ಅವನು ಬೇರೆ ಯಾವ ವೃತ್ತಿಯನ್ನೂ ಆಶ್ರಯಿಸಬಾರದು. ಮೂರು ವರ್ಣದವರ ಸೇವೆಯನ್ನು, ವಿಶೇಷವಾಗಿ ಬ್ರಾಹ್ಮಣರ ಸೇವೆಯನ್ನು ಮಾಡಿ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು.
ಸದ್ಭಿಸ್ತು ಸಹ ಸಂಸರ್ಗಃ ಶೋಭತೇ ಧರ್ಮದರ್ಶಿಭಿಃ |
ನಿತ್ಯಂ ಸರ್ವಾಸ್ವವಸ್ಥಾಸು ನಾಸದ್ಭಿರಿತಿ ಮೇ ಮತಿಃ ॥3॥
ಸಜ್ಜನರ ಸಹವಾಸವೇ ಶೂದ್ರನಿಗೆ ಶುಭದಾಯಕವಾದ ವೃತ್ತಿ ಎನಿಸಿದೆ. ಯಾವುದೇ ಕಷ್ಟದ ಸ್ಥಿತಿಯಲ್ಲಿಯೂ ಶೂದ್ರನಾದವನು ಅಸಜ್ಜನರ ಸಂಗವನ್ನು ಮಾಡಲೇ ಬಾರದೆಂಬುದು ನನ್ನ ಅಭಿಪ್ರಾಯವಾಗಿದೆ.
ಯಥೋದಯಗಿರೌ ದ್ರವ್ಯಂ ಸನ್ನಿಕರ್ಷೇಣ ದೀಪ್ಯತೇ |
ತಥಾ ಸತ್ಸನ್ನಿಕರ್ಷೇಣ ಹೀನವರ್ಣೋಽಪಿ ದೀಪ್ಯತೇ ॥4॥
ಯಾವ ರೀತಿಯಾಗಿ ಉದಯ ಪರ್ವತದಲ್ಲಿರುವ ಸ್ಫಟಿಕವೇ ಮೊದಲಾದ ದ್ರವ್ಯವು ಸೂರ್ಯಾದಿ ಸನ್ನಿಕರ್ಷದಿಂದ ವಿಶೇಷವಾಗಿ ಶೋಭೆಯನ್ನು ಹೊಂದುವುದೋ ಅದೇ ರೀತಿ ಸತ್ಪುರುಷರ ಸನ್ನಿಧಾನದಲ್ಲಿರುವುದರಿಂದ ಹೀನವರ್ಣದವನು ಸದ್ಗುಣಗಳಿಂದ ಶೋಭಿಸುತ್ತಾನೆ.
ಯಾದೃಶೇನ ಹಿ ವರ್ಣೇನ ಭಾವ್ಯತೇ ಶುಕ್ಲಮಂಬರಮ್ |
ತಾದೃಶಂ ಕುರುತೇ ರೂಪಮೇತದೇವಮವೈಹಿ ಮೇ ॥5॥
ಬಿಳಿಯಾದ ಬಟ್ಟೆಗೆ ಯಾವ ಬಣ್ಣವನ್ನು ಹಾಕಿದರೂ ಹೊಂದಿಕೆ ಮಾಡಿಕೊಳ್ಳುವಂತೆ ಸತ್ಪುರುಷರ ಸಹವಾಸವನ್ನು ಮಾಡಿದರೆ ಸದ್ಗುಣವನ್ನೇ ಹೊಂದುತ್ತಾನೆ. ದುಷ್ಟರ ಸಹವಾಸವನ್ನು ಮಾಡಿದರೆ ದುರ್ಗುಣಿಯಾಗುತ್ತಾನೆ. ಬಿಳಿಯಾದ ಬಟ್ಟೆಯಂತೆ ಶೂದ್ರನ ಸ್ಥಿತಿ ಎಂದು ಭಾವ.
ತಸ್ಮಾದ್ ಗುಣೇಷು ರಜ್ಯೇಥಾ ಮಾ ದೋಷೇಷು ಕದಾಚನ |
ಅನಿತ್ಯಮಿಹ ಮರ್ತ್ಯಾನಾಂ ಜೀವಿತಂ ಹಿ ಚಲಾಚಲಮ್ ॥6॥

ಆದ್ದರಿಂದ ಸದ್ಗುಣಗಳಲ್ಲಿ ಅಥವಾ ಸದ್ಗುಣವುಳ್ಳವರಲ್ಲಿ ಪ್ರೀತಿಯನ್ನು ಹೊಂದಬೇಕು. ದುಷ್ಟರಲ್ಲಿ ಅಥವಾ ದೋಷಗಳಲ್ಲಿ ಅನುರಾಗವನ್ನು ಹೊಂದಬಾರದು. ಶರೀರವು ಚಂಚಲವಾಗಿದೆ. ಆತ್ಮನೊಬ್ಬನೇ ನಿತ್ಯನಾಗಿದ್ದಾನೆ. ಆತ್ಮನಿಗೆ ಬೇಕಾದ ಗುಣಗಳನ್ನು ಹೊಂದಬೇಕು.

ಸುಖೇ ವಾ ಯದಿ ವಾ ದುಃಖೇ ವರ್ತಮಾನೋ ವಿಚಕ್ಷಣಃ |
ಯಶ್ಚಿನೋತಿ ಶುಭಾನ್ಯೇವ ಸ ಭದ್ರಾಣೀಹ ಪಶ್ಯತಿ ||7||

ವಿದ್ವಾಂಸನು ಸುಖದಲ್ಲಿರಲಿ, ದುಃಖದಲ್ಲಿರಲಿ, ಶುಭಕರ್ಮಗಳನ್ನೇ ಅನುಷ್ಠಾನ ಮಾಡುತ್ತಿದ್ದರೆ ಅವನು ನಿಜವಾದ ಶಾಸ್ತ್ರಜ್ಞನಾಗುತ್ತಾನೆ.

ಧರ್ಮಾದಪೇತಂ ಯತ್ ಕರ್ಮ ಯದ್ಯಪಿ ಸ್ಯಾನ್ಮಹಾಫಲಮ್ |
ನ ತತ್ ಸೇವೇತ ಮೇಧಾವೀ ನ ತದ್ಧಿತಮಿಹೋಚ್ಯತೇ ||8||

ಧರ್ಮಕ್ಕಿಂತ ವಿರುದ್ಧವಾದ, ಮಹಾಫಲಪ್ರದವಾದ ಕರ್ಮವನ್ನು ಒಮ್ಮೆಯೂ ಮೇಧಾವಿಯಾದವನು ಆಚರಿಸಲು ಹೋಗಬಾರದು. ಧರ್ಮಕ್ಕೆ ವಿರುದ್ಧವಾದ ಮಹಾಫಲಪ್ರದವಾದ ಕರ್ಮವನ್ನು ಮಾಡುವುದು ಹಿತವಾದುದಲ್ಲ ಎಂಬುದೇ ಸಜ್ಜನರ ಅಭಿಪ್ರಾಯ.

ಯೋ ಹತ್ವಾ ಗೋಸಹಸ್ರಾಣಿ ನೃಪೋ ದದ್ಯಾದರಕ್ಷಿತಾ |
ಸ ಶಬ್ದಮಾತ್ರಫಲಭಾಗ್ರಾಜಾ ಭವತಿ ತಸ್ಕರಃ ||9||

ಯಾವನು ಪ್ರಜೆಗಳನ್ನು ಪೀಡಿಸುತ್ತಾ ಸಾವಿರ ಗೋವುಗಳನ್ನು ಬೇರೆಯವರಿಗೆ ದಾನ ಮಾಡುತ್ತಾನೋ ಹೀಗೆ ಪ್ರಜೆಗಳನ್ನು ರಕ್ಷಿಸದೆ ಮಾಡಿದ ದಾನವು ಯಾವ ಫಲವನ್ನೂ ನೀಡುವುದಿಲ್ಲ. ಆ ರಾಜನು ಕಳ್ಳನೆಂದೇ ಕರೆಸಿಕೊಳ್ಳುತ್ತಾನೆ.

ಸ್ವಯಂಭೂರಸೃಜಚ್ಚಾಗ್ರೇ ಧಾತಾರಂ ಲೋಕಪೂಜಿತಮ್ |
ಧಾತಾಸೃಜತ್ ಪುತ್ರಮೇಕಂ ಪ್ರಜಾನಾಂ ಧಾರಣೇ ರತಮ್ ||10||

ಶ್ರೀಮನ್ನಾರಾಯಣನು ಮೊದಲು ಪರ್ಜನ್ಯ ಅಥವಾ ಧರ್ಮ ಎಂಬ ಮಗನನ್ನು ಸೃಷ್ಟಿ ಮಾಡಿದನು. ಸಕಲ ಲೋಕಗಳನ್ನು ಧರಿಸುವುದರಲ್ಲಿ ಸಾಮರ್ಥ್ಯವುಳ್ಳಂತಹ ಮಕ್ಕಳು ಇವರಾದರು.

ತಮರ್ಚಯಿತ್ವಾ ವೈಶ್ಯಸ್ತು ಕುರ್ಯಾದತ್ಯರ್ಥಮೃದ್ಧಿಮತ್ |
ರಕ್ಷಿತವ್ಯಂ ತು ರಾಜನ್ಯೈರುಪಯೋಜ್ಯಂ ದ್ವಿಜಾತಿಭಿಃ ||11||

ವೈಶ್ಯರು ಪರ್ಜನ್ಯನನ್ನು ಆರಾಧನೆ ಮಾಡಿ ಕೃಷಿ ಹಾಗು ಪಶುಪಾಲನೆ ಧರ್ಮಗಳಿಂದ ಐಶ್ವರ್ಯಸಮೃದ್ಧಿಯನ್ನು ಹೊಂದಬೇಕು. ರಾಜರು ಅವರಲ್ಲಿರುವ ಐಶ್ವರ್ಯವನ್ನು ರಕ್ಷಿಸಬೇಕು.

ಅಜಿಹ್ಮೈರಶಠಕ್ರೋಧೈರ್ಹವ್ಯಕವ್ಯಪ್ರಯೋಕ್ತೃಭಿಃ |
ಶೂದ್ರೈರ್ನಿರ್ಮಾರ್ಜನಂ ಕಾರ್ಯಮೇವಂ ಧರ್ಮೋ ನ ನಶ್ಯತಿ ||12||

ಪ್ರಾಮಾಣಿಕರಾದ, ಶಠರಲ್ಲದಿರುವ, ಕ್ರೋಧವನ್ನು ತ್ಯಾಗ ಮಾಡಿರುವ, ಹವ್ಯ- ಕವ್ಯಗಳನ್ನು ಮಾಡಿಸುವ ಬ್ರಾಹ್ಮಣರು ವೈಶ್ಯರ ಐಶ್ವರ್ಯಗಳನ್ನು ಯಜ್ಞಗಳಿಗೆ ಲೋಕ ಹಿತಕ್ಕಾಗಿ ವಿನಿಯೋಗಿಸಬೇಕು. ಆ ಯಜ್ಞದಲ್ಲಿ ಪೂರ್ವವೇದಿಕೆಗಳನ್ನು ಅರ್ಥಾತ್ ಯಜ್ಞಮಂಟಪ ಮೊದಲಾದವುಗಳನ್ನು ಶೂದ್ರರು ಶುದ್ಧಿಗೊಳಿಸಬೇಕು. ಹೀಗೆ ಮಾಡುವುದರಿಂದ ಧರ್ಮವು ನಾಶ ಹೊಂದುವುದಿಲ್ಲ.

ಅಪ್ರಣಷ್ಟೇ ತತೋ ಧರ್ಮೇ ಭವಂತಿ ಸುಖಿತಾಃ ಪ್ರಜಾಃ |
ಸುಖೇನ ತಾಸಾಂ ರಾಜೇಂದ್ರ ಮೋದಂತೇ ದಿವಿ ದೇವತಾಃ ||13||

ಧರ್ಮವು ಸ್ಥಿರವಾಗಿ ನಿಂತು ಪರಿಪಾಲಿಸಲ್ಪಡುತ್ತಿದ್ದಲ್ಲಿ ಪ್ರಜೆಗಳೂ ಸುಖದಿಂದ ವಾಸಿಸುತ್ತಾರೆ. ಪ್ರಜೆಗಳು ಸುಖವಾಗಿದ್ದಲ್ಲಿ ಸ್ವರ್ಗದಲ್ಲಿರುವ ದೇವತೆಗಳು ಆನಂದ ಹೊಂದುತ್ತಾರೆ.

ತಸ್ಮಾದ್ ಯೋ ರಕ್ಷತಿ ನೃಪಃ ಸ ಧರ್ಮೇಣಾಭಿಪೂಜ್ಯತೇ |
ಅಧೀತೇ ಚಾಪಿ ಯೋ ವಿಪ್ರೋ ವೈಶ್ಯೋ ಯಶ್ಚಾರ್ಜನೇ ರತಃ ||14||

ಆದ್ದರಿಂದ ಯಾವ ರಾಜನು ಧರ್ಮದಿಂದ ಪ್ರಜೆಗಳನ್ನು ರಕ್ಷಿಸುತ್ತಿದ್ದಾನೋ ಅವನು ಧರ್ಮದ ಕಾರಣದಿಂದ ಲೋಕದಲ್ಲಿ ಪೂಜ್ಯನಾಗುತ್ತಾನೆ. ಇದರಂತೆ ಧರ್ಮ ಮಾರ್ಗವನ್ನು ಅನುಸರಿಸಿ ವೇದಾಧ್ಯಯನವನ್ನು ಮಾಡುವ ಬ್ರಾಹ್ಮಣ, ಧರ್ಮಾನುಸಾರವಾಗಿ ಧನ ಸಂಪಾದಿಸುವ ವೈಶ್ಯ ಇವರೂ ಪೂಜ್ಯರೇ ಆಗುತ್ತಾರೆ.

ಯಶ್ಚ ಶುಶ್ರೂಷತೇ ಶೂದ್ರಃ ಸತತಂ ನಿಯತೇಂದ್ರಿಯಃ |
ಅತೋऽನ್ಯಥಾ ಮನುಷ್ಯೇಂದ್ರ ಸ್ವಧರ್ಮಾತ್ ಪರಿಹೀಯತೇ ||15||

ಯಾವ ಶೂದ್ರನು ಜಿತೇಂದ್ರಿಯನಾಗಿದ್ದು ಬ್ರಾಹ್ಮಣರ ಸೇವೆಯಲ್ಲಿ ನಿರತನಾಗಿರುತ್ತಾನೋ, ಹೀಗೆ ತಮ್ಮ ಧರ್ಮದಲ್ಲಿ ಆಸಕ್ತರಾಗಿರುವ ವ್ಯಕ್ತಿಗಳು ಸಮ್ಮಾನಿತರಾಗುತ್ತಾರೆ. ತಮ್ಮ ಧರ್ಮಕ್ಕೆ ವಿರುದ್ಧವಾಗಿ ನಡೆದುಕೊಂಡಲ್ಲಿ ಪ್ರಜೆಗಳೆಲ್ಲ ತಮ್ಮ ತಮ್ಮ ಧರ್ಮಗಳಿಂದ ಭ್ರಷ್ಟರಾಗುತ್ತಾರೆ.

ಪ್ರಾಣಸಂತಾಪನಿರ್ದಿಷ್ಟಾಃ ಕಾಕಿಣ್ಯೋऽಪಿ ಮಹಾಫಲಾಃ |
ನ್ಯಾಯೇನೋಪಾರ್ಜಿತಾ ದತ್ತಾಃ ಕಿಮುತಾನ್ಯಾಃ ಸಹಸ್ರಶಃ ||16||

ಒಬ್ಬ ವ್ಯಕ್ತಿಗೆ ಪ್ರಾಣ ಹೋಗುವ ಪ್ರಸಂಗದಲ್ಲಿ ನೀಡುವ ಕವಡೆ ಕಾಸಿನ ಕ್ಷುದ್ರ ಧಾನ್ಯ ಕಣಗಳು ಮಹಾಫಲವಾಗುತ್ತವೆ, ಎಂದು ಧರ್ಮವು. ಹೀಗಿರಲು ನ್ಯಾಯದಿಂದ ಸಂಪಾದನೆ ಮಾಡಿ ಸಾವಿರ ಸಂಖ್ಯೆಯಲ್ಲಿ ದಾನ ಮಾಡಿದ ದ್ರವ್ಯವು ಅನಂತ ಫಲದಾಯಕ ಎಂದು ಹೇಳಬೇಕೇನು?

ಸತ್ಕೃತ್ಯ ತು ದ್ವಿಜಾತಿಭ್ಯೋ ಯೋ ದದಾತಿ ನರಾಧಿಪ |
ಯಾದೃಶಂ ತಾದೃಶಂ ನಿತ್ಯಮಶ್ನಾತಿ ಫಲಮೂರ್ಜಿತಮ್ ||17||

ಯಾವ ರಾಜನು ಬ್ರಾಹ್ಮಣರನ್ನು ಆದರಿಸಿ, ಅವರಿಗೆ ಎಷ್ಟೆಷ್ಟು ದಾನವನ್ನು ಮಾಡುತ್ತಾನೋ ಅದಕ್ಕನುಗುಣವಾಗಿ ಉತ್ತಮ

ಫಲಗಳನ್ನು ಅವನು ಯಾವತ್ತಿಗೂ ಹೊಂದುತ್ತಾನೆ.
ಅಭಿಗಮ್ಯ ದತ್ತಂ ತುಷ್ಟ್ಯಾ ಯದ್ದನ್ಯಮಾಹುರಭಿಷ್ಟುತಮ್ |
ಯಾಚಿತೇನ ತು ಯದ್ದತ್ತಂ ತದಾಹುರ್ಮಧ್ಯಮಂ ಬುಧಾಃ ॥18॥
ಸತ್ಪಾತ್ರನಾದ ಬ್ರಾಹ್ಮಣನ ಬಳಿ ರಾಜನು ತಾನಾಗಿ ಹೋಗಿ ಅವನನ್ನು ಸತ್ಕರಿಸಿ, ಸಂತೋಷಪಡಿಸಿ, ಯಾವ ದಾನವನ್ನು ಮಾಡುತ್ತಾನೋ ಆ ದಾನವನ್ನು ಪ್ರಶಂಸಾರ್ಹವಾದ ದಾನ ಎನ್ನುತ್ತಾರೆ. ಒಬ್ಬನು ಕೇಳುವ ಬಳಿಕ ನೀಡುವ ದಾನಕ್ಕೆ ಮಧ್ಯಮ ಶ್ರೇಣಿಯ ದಾನವೆಂದು ವಿದ್ವಾಂಸರು ಹೇಳುತ್ತಾರೆ.
ಅವಜ್ಞಯಾ ದೀಯತೇ ಯತ್ತಥೈವಾಶ್ರದ್ಧಯಾಪಿ ಚ |
ತದಾಹುರಧಮಂ ದಾನಂ ಮುನಯಃ ಸತ್ಯವಾದಿನಃ ॥19॥
ಅನಾದರಣೆಯಿಂದ, ಅಶ್ರದ್ಧೆಯಿಂದ ಮಾಡುವ ದಾನವನ್ನು ಸತ್ಯವಾದಿ ಮುನಿಗಳು ಅಧರ್ಮಶ್ರೇಣಿಯ ದಾನ ಎಂದು ಹೇಳುತ್ತಾರೆ.
ಅತಿಕ್ರಾಮೇನ್ಮಜ್ಜಮಾನೋ ವಿವಿಧೇನ ನರಃ ಸದಾ |
ತಥಾ ಪ್ರಯತ್ನಂ ಕುರ್ವೀತ ಯಥಾ ಮುಚ್ಯೇತ ಸಂಶ್ರಯಾತ್ ॥20॥
ಯಾವ ರೀತಿಯಾಗಿ ನಾನಾ ದುಃಖಗಳಲ್ಲಿ ಮುಳುಗಿದ ವ್ಯಕ್ತಿಯು ಆ ಕಷ್ಟಗಳಿಂದ ಬಿಡುಗಡೆಯನ್ನು ಹೊಂದಲು ಅನೇಕ ವಿಧವಾಗಿ ಪ್ರಯತ್ನಗಳನ್ನು ಮಾಡಿ, ದುಃಖದಿಂದ ಹೊರಗೆ ಬರುತ್ತಾನೋ ಈ ರೀತಿಯಾಗಿ ಅನಾದಿ ಕಾಲದಿಂದ ಅಂಟಿ ಕೊಂಡಿರುವ ಭವ ಸಮುದ್ರವೆಂಬ ದುಃಖದಿಂದ ಮೇಲೇಳಲು ಮನುಷ್ಯನು ನಿರಂತರವೂ ಪ್ರಯತ್ನಶೀಲನಾಗಿರಬೇಕು.
ದಮೇನ ಶೋಭತೇ ವಿಪ್ರಾಃ ಕ್ಷತ್ರಿಯೋ ವಿಜಯೇನ ತು |
ಧನೇನ ವೈಶ್ಯಃ ಶೂದ್ರಸ್ತು ನಿತ್ಯಂ ದಾಕ್ಷ್ಯೇಣ ಶೋಭತೇ ॥21॥
ಇಂದ್ರಿಯನಿಗ್ರಹದಿಂದ ಬ್ರಾಹ್ಮಣನು ಶೋಭಿಸುತ್ತಾನೆ. ಯುದ್ಧದಲ್ಲಿ ಜಯ ಸಂಪಾದನೆಯಿಂದ ಕ್ಷತ್ರಿಯನು ಶೋಭೆ ಹೊಂದುತ್ತಾನೆ. ಸಂಪತ್ತಿನ ಸಂಗ್ರಹದಿಂದ ವೈಶ್ಯನೂ, ಸೇವಾ ಕುಶಲತೆಯಿಂದ ಶೂದ್ರರು ಶೋಭೆಯನ್ನು ಹೊಂದುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಟ್‌ವಿಂಶೋತ್ತರಶತತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೇಳನೆಯ ಅಧ್ಯಾಯ
ಪರಾಶರರ ಉಪದೇಶ ಮುಂದುವರೆದುದು.
ಪರಾಶರಃ
ಪ್ರತಿಗ್ರಹಾಗತಾ ವಿಪ್ರೇ ಕ್ಷತ್ರಿಯೇ ಶಸ್ತ್ರನಿರ್ಜಿತಾಃ |
ವೈಶ್ಯೇ ನ್ಯಾಯಾರ್ಜಿತಾಶ್ಚೈವ ಶೂದ್ರೇ ಶುಶ್ರೂಷಯಾರ್ಜಿತಾಃ |
ಸ್ವಲ್ಪಾಪ್ಯರ್ಥಾಃ ಪ್ರಶಂಸ್ಯಂತೇ ಧರ್ಮಸ್ಯಾರ್ಥೇ ಮಹಾಫಲಾಃ ॥1॥
ಜನಕರಾಜನೇ, ಬ್ರಾಹ್ಮಣನಲ್ಲಿ ಪ್ರತಿಗ್ರಹದಿಂದ ಸಂಗ್ರಹಿಸಿದ ಐಶ್ವರ್ಯವು, ಕ್ಷತ್ರಿಯನಲ್ಲಿ ಶಸ್ತ್ರದಿಂದ ಗೆದ್ದು ಸಂಗ್ರಹಿಸಿದ ಐಶ್ವರ್ಯವು, ವೈಶ್ಯನಲ್ಲಿ ನ್ಯಾಯದಿಂದ ಆರ್ಜಿತವಾದ ಐಶ್ವರ್ಯವು, ಶೂದ್ರನಲ್ಲಿ ಶುಶ್ರೂಷೆಯಿಂದ ಸಂಗ್ರಹಿಸಿದ ಐಶ್ವರ್ಯವು ಸ್ವಲ್ಪವೇ ಆದರೂ ಪ್ರಶಂಸನೀಯವಾಗಿರುತ್ತದೆ. ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸಿದ್ದಲ್ಲಿ ಮಹಾಫಲಪ್ರದವಾಗಿರುತ್ತದೆ.
ನಿತ್ಯಂ ತ್ರಯಾಣಾಂ ವರ್ಣಾನಾಂ ಶೂದ್ರಃ ಶುಶ್ರೂಷುರುಚ್ಯತೇ |
ಕ್ಷತ್ರಧರ್ಮಾ ವೈಶ್ಯಧರ್ಮಾ ನಾವೃತ್ತಿಃ ಪತತಿ ದ್ವಿಜಃ |
ಶೂದ್ರಕರ್ಮಾ ಯದಾ ತು ಸ್ಯಾತ್ತದಾ ಪತತಿ ವೈ ದ್ವಿಜಃ ॥2॥
ಶೂದ್ರನು ಮೂರು ವರ್ಣದವರನ್ನು ನಿತ್ಯ ಸೇವೆ ಮಾಡುವುದರಿಂದ ಶೂದ್ರನೆಂದು ಕರೆಸಿಕೊಳ್ಳಲ್ಪಡುತ್ತಾನೆ. ಒಂದು ವೇಳೆ ಬ್ರಾಹ್ಮಣನು ತನ್ನ ಧರ್ಮದಲ್ಲಿ ಬದುಕನ್ನು ಕಟ್ಟಿಕೊಳ್ಳಲಾಗದಿದ್ದಲ್ಲಿ ಕ್ಷತ್ರಿಯಧರ್ಮವನ್ನಾಗಲಿ, ವೈಶ್ಯ ಧರ್ಮವನ್ನಾಗಲಿ ಅವಲಂಬಿಸಿದಲ್ಲಿ ಅವನು ಪತಿತನಾಗುವುದಿಲ್ಲ. ಆದರೆ ಬ್ರಾಹ್ಮಣನು ಜೀವಿಕೆಗಾಗಿ ಶೂದ್ರಧರ್ಮವನ್ನು ಅರ್ಥಾತ್ ಹೀನಧರ್ಮದವರ ಸೇವೆಯನ್ನು ಯಾವಾಗ ಮಾಡುತ್ತಾನೋ ಆಗ ಪತಿತನಾಗುತ್ತಾನೆ.
ವಾಣಿಜ್ಯಂ ಪಾಶುಪಾಲ್ಯಂ ಚ ತಥಾ ಶಿಲ್ಪೋಪಜೀವನಮ್ |
ಶೂದ್ರಸ್ಯಾಪಿ ವಿಧೀಯಂತೇ ಯದಾ ವೃತ್ತಿರ್ನ ಜಾಯತೇ ॥3॥
ಶೂದ್ರನಾದವನಿಗೆ ಸೇವಾ ವೃತ್ತಿಯಿಂದ ಜೀವನ ನಡೆಸಲು ಸಾಧ್ಯವಾಗದಿದ್ದಲ್ಲಿ ವ್ಯಾಪಾರವನ್ನಾಗಲಿ, ಪಶುಪಾಲನೆಯನ್ನಾಗಲಿ, ಶಿಲ್ಪಕಲೆಗಳಿಂದ ಜೀವನವನ್ನು ನಡೆಸಬಹುದೆಂದು ಶಾಸ್ತ್ರಗಳು ವಿಧಿಸುತ್ತವೆ.
ರಂಗಾವತರಣಂ ಚೈವ ತಥಾ ರೂಪೋಪಜೀವನಮ್ |
ಮದ್ಯಮಾಂಸೋಪಜೀವ್ಯಂ ಚ ವಿಕ್ರಯೋ ಲೋಹಚರ್ಮಣೋಃ ॥4॥
ಅಪೂರ್ವಿಣಾ ನ ಕರ್ತವ್ಯಂ ಕರ್ಮ ಲೋಕೇ ವಿಗರ್ಹಿತಮ್ |
ಕೃತಪೂರ್ವಿಣಸ್ತು ತ್ಯಜತೋ ಮಹಾಂಧರ್ಮ ಇತಿ ಶ್ರುತಿಃ ॥5॥
ವೇಷವನ್ನು ಧರಿಸಿ ರಂಗಮಂಟಪದಲ್ಲಿ ನರ್ತಿಸುವುದು, ವಸ್ತ್ರ ಸಮುದಾಯಗಳಿಂದ ರಂಗ ವೇದಿಕೆಯನ್ನು ಸಜ್ಜುಗೊಳಿಸುವುದು, ಮದ್ಯ-ಮಾಂಸಗಳಿಂದ ಜೀವನವನ್ನು ನಡೆಸುವುದು, ಲೋಹ ಮತ್ತು ಚರ್ಮಗಳನ್ನು ಕ್ರಯ-ವಿಕ್ರಯ ಮಾಡುವುದು ಇಂತಹ ಕರ್ಮಗಳು ಹಿಂದಿನಿಂದ ಯಾರೂ ಮಾಡಿಲ್ಲದಿದ್ದರೆ, ಅವನು ಹಿಂದೆ ಈ ಕರ್ಮವನ್ನು ಮಾಡದಿದ್ದಲ್ಲಿ ಹೊಸದಾಗಿ ಈ ಕರ್ಮದಲ್ಲಿ ಆಸಕ್ತನಾಗಬಾರದು. ಇವುಗಳು ನಿಂದನೀಯವಾದವು ಎನಿಸಿವೆ. ಒಂದು ವೇಳೆ ಈ ವೃತ್ತಿಗಳು ಹಿಂದಿನಿಂದ ನಡೆದು ಬಂದಿದ್ದರೂ

ಅವುಗಳನ್ನು ತಾನು ತ್ಯಜಿಸಿದರೆ ಮಹಾಧರ್ಮವೇ ಆಗುತ್ತದೆ ಎಂದು ಶ್ರುತಿಗಳು ಹೇಳುತ್ತವೆ.
ಸಂಸಿದ್ಧಃ ಪುರುಷೋ ಲೋಕೇ ಯದಾಚರತಿ ಪಾಪಕಮ್ |
ಮದೇನಾಭಿಪ್ಲುತಮನಾಸ್ತಚ್ಚ ನಗ್ರಾಹ್ಯಮುಚ್ಯತೇ ॥6॥
ಲೋಕ ಪ್ರಸಿದ್ಧನಾದ ಒಬ್ಬ ಪುರುಷನು ಮದದಿಂದಲೂ, ಲೋಭದ ಮನಸ್ಸಿನಿಂದಲೂ ಪಾಪಕರ್ಮವನ್ನು ಮಾಡಿದರೆ ಆ ಪಾಪಕರ್ಮವನ್ನು ಇತರರು ಅನುಷ್ಠಾನ ಮಾಡಬಾರದೆಂದು ಶಾಸ್ತ್ರವು ಹೇಳುತ್ತದೆ.
ಶ್ರೂಯಂತೇ ಹಿ ಪುರಾಣೇ ವೈ ಪ್ರಜಾ ಧಿಗ್ದಂಡಶಾಸನಾಃ |
ದಾಂತಾ ಧರ್ಮಪ್ರಧಾನಾಶ್ಚ ನ್ಯಾಯಧರ್ಮಾನುವರ್ತಕಾಃ ॥7॥
ಧರ್ಮ ಏವ ಸದಾ ನೃಣಾಮಿಹ ರಾಜನ್ ಪ್ರಶಂಸ್ಯತೇ |
ಧರ್ಮವೃದ್ಧಾ ಗುಣಾನೇವ ಸೇವಂತೇ ಹಿ ನರಾ ಭುವಿ ॥8॥
ಹಿಂದಿನ ಕಾಲದಲ್ಲಿ ಪ್ರಜೆಗಳಲ್ಲಿ ಧಿಕ್ಕಾರ ದಂಡದಿಂದ ಶಾಸನವನ್ನು ಮಾಡುತ್ತಿದ್ದರು. ಜಿತೇಂದ್ರಿಯರೂ, ಧರ್ಮಪ್ರಧಾನರೂ, ನ್ಯಾಯೋಚಿತವಾದ ಆಚರಣೆಗಳನ್ನು ಅನುಸರಿಸುವವರೂ ಆಗಿದ್ದರು. ಲೋಕಗಳಲ್ಲಿ ಮನುಷ್ಯರಿಗೆ ಎಲ್ಲಾ ಕಾಲದಲ್ಲಿಯೂ ಧರ್ಮಮಾರ್ಗವೇ ಪ್ರಶಸ್ತವಾದುದು. ಧರ್ಮವೃದ್ಧರಾದ ಮಾನವರು ಯಾವಾಗಲೂ ಈ ಲೋಕದಲ್ಲಿ ಸದ್ಗುಣಗಳನ್ನೇ ಆಶ್ರಯಿಸಿರುತ್ತಾರೆ.
ತಂ ಧರ್ಮಮಸುರಾಸ್ತಾತ ನಾಮೃಷ್ಯಂತ ಜನಾಧಿಪ |
ವಿವರ್ಧಮಾನಾಃ ಕ್ರಮಶಸ್ತತ್ರ ತೇಽನ್ವಾವಿಶನ್ ಪ್ರಜಾಃ ॥9॥
ರಾಜನ್, ಅಂತಹ ಧರ್ಮವನ್ನು ಅಸುರರು ಸಹಿಸಲಿಲ್ಲ. ಅಧರ್ಮಿಗಳಾದ ಅಸುರರು ಕ್ರಮವಾಗಿ ವೃದ್ಧಿಯನ್ನು ಹೊಂದಿ ಪ್ರಜೆಗಳ ಶರೀರದಲ್ಲೇ ಸೇರಿಕೊಂಡರು.
ತೇಷಾಂ ದರ್ಪಃ ಸಮಭವತ್ ಪ್ರಜಾನಾಂ ಧರ್ಮನಾಶನಃ |
ದರ್ಪಾತ್ಮನಾಂ ತತಃ ಕ್ರೋಧಃ ಪುನಸ್ತೇಷಾಮಜಾಯತ ॥10॥
ಬಳಿಕ ಪ್ರಜೆಗಳಲ್ಲಿಯೂ ಧರ್ಮವನ್ನು ನಾಶ ಮಾಡುವ ದರ್ಪವು ಉತ್ಪನ್ನವಾಯಿತು. ಅಸುರರ ಹುಟ್ಟಿನಿಂದಾಗಿ ಪ್ರಜೆಗಳಲ್ಲಿ ದರ್ಪ ಉಂಟಾದ ಬಳಿಕ ದರ್ಪಾತ್ಮರಾದ ಅವರಲ್ಲಿ ಕ್ರೋಧವು ಹುಟ್ಟಿತು.
ತತಃ ಕ್ರೋಧಾಭಿಭೂತಾನಾಂ ವೃತ್ತಂ ಲಜ್ಜಾಸಮನ್ವಿತಮ್ |
ಹ್ರೀಶ್ಚೈವಾಪ್ಯನಶದ್ ರಾಜಂಸ್ತತೋ ಮೋಹೋ ವ್ಯಜಾಯತ ॥11॥
ಪ್ರಜೆಗಳು ಕೋಪದಿಂದ ತಮ್ಮ ಸ್ವರೂಪವನ್ನು ಮುಚ್ಚಿಕೊಂಡ ಬಳಿಕ ಲಜ್ಜೆಯಿಂದ ಕೂಡಿದ ಸದಾಚಾರವು ಲುಪ್ತವಾಯಿತು. ಆದ್ದರಿಂದಲೇ ಆಸುರಿಗುಣದಿಂದ ಕೂಡಿದ ಆ ವ್ಯಕ್ತಿಗಳಿಗೆ ಧರ್ಮವನ್ನು ಮಾಡುವುದರಲ್ಲಿ ಸಂಕೋಚವೂ ನಾಶವಾಯಿತು. ಬಳಿಕ ಪ್ರಜೆಗಳಲ್ಲಿ ಮೋಹದ ಉತ್ಪತ್ತಿಯು ಆಯಿತು.
ತತೋ ಮೋಹಪರೀತಾಸ್ತೇ ನಾಪಶ್ಯಂತ ಯಥಾ ಪುರಾ |
ಪರಸ್ಪರಾವಮರ್ದೇನ ವರ್ತಯಂತಿ ಯಥಾಸುಖಮ್ ॥12॥
ಮೋಹವಶರಾದ ಅವರೆಲ್ಲರೂ ಮೊದಲಿನ ವಿವೇಕವನ್ನು ಹೊಂದಿದವರು ಆಗಿರಲಿಲ್ಲ. ಆದ್ದರಿಂದ ಒಬ್ಬರು ಮತ್ತೊಬ್ಬರನ್ನು ದ್ವೇಷಿಸುವ ಸ್ವಭಾವದವರಾಗಿ ಮತ್ತೊಬ್ಬರನ್ನು ಸಂಹರಿಸುವುದರಲ್ಲಿಯೂ, ತಮ್ಮ ಸ್ವಾರ್ಥಕ್ಕಾಗಿ ಸುಖಗಳನ್ನು ಹೊಂದುವುದರಲ್ಲಿಯೂ ಆಸಕ್ತರಾದರು.
ತಾಃ ಪ್ರಾಪ್ಯ ತು ಸ ಧಿಗ್ದಂಡೋ ನಕಾರಣಮತೋಽಭವತ್ |
ತತೋಽಭ್ಯಗಚ್ಛನ್ ದೇವಾಂಶ್ಚ ಬ್ರಾಹ್ಮಣಾಂಶ್ಚಾವಮನ್ಯ ಹ ॥13॥
ಆ ಪ್ರಜೆಗಳನ್ನು ಕುರಿತು ಧಿಕ್ಕಾರವೆಂಬ ರಾಜರ ದಂಡವು ಸನ್ಮಾರ್ಗದಲ್ಲಿ ಕರೆತರಲು ಸಮರ್ಥವಾಗಲಿಲ್ಲ. ಕಾರಣವಿಲ್ಲದೆ ಪ್ರಜೆಗಳು ದೇವ-ಬ್ರಾಹ್ಮಣರನ್ನು ಅಪಮಾನಗೊಳಿಸುತ್ತಾ ಸ್ವಚ್ಛಂದದಿಂದ ವರ್ತಿಸತೊಡಗಿದರು.
ಏತಸ್ಮಿನ್ನೇವ ಕಾಲೇ ತು ದೇವಾ ದೇವವರಂ ಶಿವಮ್ |
ಅಗಚ್ಛನ್ ಶರಣಂ ವೀರಂ ಬಹುರೂಪಂ ಗಣಾಧಿಪಮ್ ॥14॥
ತೇನ ಸ್ಮ ತೇ ಗಗನಗಾಃ ಸಪುರಾಃ ಪಾತಿತಾಃ ಕ್ಷಿತೌ |
ತಿಸ್ರೋಽಪ್ಯೇಕೇನ ಬಾಣೇನ ದೇವಾಪ್ಯಾಯಿತತೇಜಸಾ ॥15॥
ಇಂತಹ ದುಃಸ್ಥಿತಿಯು ಒದಗಿಬಂದ ಆ ಸಮಯದಲ್ಲಿ ದೇವತೆಗಳು ದೇವಶ್ರೇಷ್ಠನಾದ, ಬಹುರೂಪನಾದ, ಅಧಿಕಗುಣನಾದ, ಧೀರನಾದ ಶಿವನನ್ನು ಶರಣು ಹೊಂದಿದರು. ದೇವತೆಗಳ ಮೂಲಕ ವೃದ್ಧಿಯನ್ನು ಹೊಂದಿರುವ ಶಿವನು ತೇಜಸ್ಸಿನಿಂದ ಕೂಡಿದ ಒಂದೇ ಬಾಣದಿಂದ ಮೂರು ನಗರಗಳಿಂದ ಕೂಡಿರುವಂತಹ ಆಕಾಶದಲ್ಲಿರುವ ಅಸುರರನ್ನೆಲ್ಲ ಸಂಹರಿಸಿ ನೆಲದ ಮೇಲೆ ಕೆಡವಿದನು.
ತೇಷಾಮಧಿಪತಿಸ್ತ್ವಾಸೀದ್ ಭೀಮೋ ಭೀಮಪರಾಕ್ರಮಃ |
ದೇವತಾನಾಂ ಭಯಕರಃ ಸ ಹತಃ ಶೂಲಪಾಣಿನಾ ॥16॥
ಆ ಅಸುರರ ಅಧಿಪತಿಯಾದ ದರ್ಪನು ದೇವತೆಗಳಿಗೆಲ್ಲ ಭಯವನ್ನು ಹುಟ್ಟಿಸುತ್ತಿದ್ದನು. ಭಯಂಕರನಾಗಿದ್ದನು. ಇಂತಹ ಭಯಂಕರನಾದ ದರ್ಪನನ್ನು ಶೂಲಪಾಣಿಯಾದ ಶಿವನು ಕೊಂದನು.
ತಸ್ಮಿನ್ ಹತೇಽಥ ಸ್ವಂ ಭಾವಂ ಪ್ರತ್ಯಪದ್ಯಂತ ಮಾನವಾಃ |
ಪ್ರಾವರ್ತಂತ ಚ ವೇದಾ ವೈ ಶಾಸ್ತ್ರಾಣಿ ಚ ಯಥಾ ಪುರಾ ॥17॥
ದರ್ಪನು ಹತನಾದ ಬಳಿಕ ಪ್ರಜೆಗಳು ತಮ್ಮ ಪೂರ್ವ ಸ್ವಭಾವವನ್ನು ಹೊಂದಿದರು. ಹಿಂದಿನಂತೆ ವೇದ-ಶಾಸ್ತ್ರಗಳ ಜ್ಞಾನವನ್ನು ಹೊಂದಿದರು.

ತತೋಽಭ್ಯಷಿಂಚನ್ ರಾಜ್ಯೇನ ದೇವಾನಾಂ ದಿವಿ ವಾಸವಮ್ |
ಸಪ್ತರ್ಷಯಶ್ಚಾನ್ವಯುಂಜನ್ನರಾಣಾಂ ದಂಡಧಾರಣೇ ॥18॥
ಬಳಿಕ ಸಪ್ತರ್ಷಿಗಳ ಸ್ವರ್ಗಲೋಕದಲ್ಲಿ ಇಂದ್ರನನ್ನು ದೇವತೆಗಳ ರಾಜನೆಂದು ಪಟ್ಟಾಭಿಷೇಕ ಮಾಡಿದರು. ಭೂಲೋಕದಲ್ಲಿ ಪ್ರಜೆಗಳ ಶಾಸನವನ್ನು ತಾವೇ ಮಾಡಲಾರಂಭಿಸಿದರು.
ಸಪ್ತರ್ಷೀಣಾಮಥೋರ್ಧ್ವಂ ಚ ವಿಪೃಥುರ್ನಾಮ ಪಾರ್ಥಿವಃ |
ರಾಜಾನಃ ಕ್ಷತ್ರಿಯಾಶ್ಚೈವ ಮಂಡಲೇಷು ಪೃಥಕ್‌ಪೃಥಕ್ ॥19॥
ಸಪ್ತರ್ಷಿಗಳು ಭೂಮಿಯನ್ನು ಆಳುತ್ತಿರುವ ಪ್ರಸಂಗದಲ್ಲಿ ವಿಪೃಥು ಎಂಬ ರಾಜನು ಭೂಮಿಯಿಂದ ಹಿಡಿದು ಊರ್ಧ್ವಲೋಕದ ತನಕ ತಾನೇ ರಾಜನಾದನು. ಆ ಸಮಯದಲ್ಲಿ ಬೇರೆ ಬೇರೆ ಸ್ಥಾನಗಳಿಗೆ ಅನೇಕ ಕ್ಷತ್ರಿಯರು ರಾಜರಾದರು.
ಮಹಾಕುಲೇಷು ಯೇ ಜಾತಾ ವೃತ್ತಾಃ ಪೂರ್ವತರಾಶ್ಚ ಯೇ |
ತೇಷಾಮಥಾಸುರೋ ಭಾವೋ ಹೃದಯಾನ್ನಾಪಸರ್ಪತಿ ॥20॥
ಆ ಸಮಯದಲ್ಲಿ ಒಳ್ಳೆಯ ಕುಲದಲ್ಲಿ ಹುಟ್ಟಿದ ಅನೇಕ ರಾಜರಿದ್ದರು. ಹಿಂದಿನ ಕಾಲದ ಸಂಪ್ರದಾಯವನ್ನು ಅನುಷ್ಠಾನ ಮಾಡುವ ವೃದ್ಧ ಪುರುಷರೂ ಇದ್ದರು. ಹೀಗಿದ್ದರೂ ಅವರ ಹೃದಯದಿಂದ ಆಸುರೀ ಗುಣವೆಂಬ ದರ್ಪವು ಸಂಪೂರ್ಣ ತೊಲಗಿರಲಿಲ್ಲ.
ತಸ್ಮಾತ್ತೇನೈವ ಭಾವೇನ ಸಾನುಷಂಗೇನ ಪಾರ್ಥಿವಾಃ |
ಆಸುರಾಣ್ಯೇವ ಕರ್ಮಾಣಿ ನ್ಯಷೇವನ್ ಭೀಮವಿಕ್ರಮಾಃ ॥21॥
ಆದ್ದರಿಂದ ಭಯಂಕರ ಪರಾಕ್ರಮಿಗಳಾದ ಆ ರಾಜರು ಹೃದಯದಲ್ಲಿ ತುಂಬಿದ ಅಸುರ ಭಾವದಲ್ಲಿಯೇ ಅನೇಕ ಆಸುರೀ ಕರ್ಮಗಳನ್ನು ಆಚರಿಸುತ್ತಿದ್ದರು.
ಪ್ರತ್ಯತಿಷ್ಠಂಶ್ಚ ತೇಷ್ವೇವ ತಾನ್ಯೇವ ಸ್ಥಾಪಯಂತಿ ಚ |
ಭಜಂತೇ ತಾನಿ ಚಾದ್ಯಾಪಿ ಯೇ ಬಾಲಿಶತಮಾ ನರಾಃ ॥22॥
ಈಗಲೂ ಅಂತಹ ಅಸುರಗುಣವನ್ನು ಹೊಂದಿರುವ ಮೂರ್ಖರಾದ ಜನರು ಈ ಭೂಮಿಯಲ್ಲಿ ನೆಲೆಸಿದ್ದಾರೆ. ತಮ್ಮ ಬುದ್ಧಿಯನ್ನು ಮತ್ತೊಬ್ಬರಲ್ಲಿ ಸ್ಥಾಪನೆಗೊಳಿಸುತ್ತಿದ್ದಾರೆ. ಎಲ್ಲರೂ ಈಗಲೂ ಸರ್ವಪ್ರಕಾರದಿಂದ ಬಾಲಿಶವಾದ ಅಸುರ ಭಾವವನ್ನೇ ಸೇವಿಸುತ್ತಿದ್ದಾರೆ.
ತಸ್ಮಾದಹಂ ಬ್ರವೀಮಿ ತ್ವಾಂ ರಾಜನ್ ಸಂಚಿಂತ್ಯ ಶಾಸ್ತ್ರತಃ |
ಸಂಸಿದ್ಧಾಧಿಗಮಂ ಕುರ್ಯಾತ್ ಕರ್ಮ ಹಿಂಸಾತ್ಮಕಂ ತ್ಯಜೇತ್ ॥23॥
ಮಹಾರಾಜನೇ, ಆದ್ದರಿಂದ ನಾನು ಶಾಸ್ತ್ರದ ಮರ್ಯಾದೆಯನ್ನು ಯೋಚಿಸಿ ನಿನಗೆ ಹೇಳುತ್ತಿದ್ದೇನೆ. ಮನುಷ್ಯನು ಸಿದ್ಧಿಯನ್ನುಂಟು ಮಾಡುವ ಕರ್ಮವನ್ನೇ ಮಾಡಬೇಕು. ಹಿಂಸಾತ್ಮಕವಾದ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಬೇಕು.
ನ ಸಂಕರೇಣ ದ್ರವಿಣಂ ವಿಚಿನ್ವೀತ ವಿಚಕ್ಷಣಃ |
ಧರ್ಮಾರ್ಥಂ ನ್ಯಾಯಮುತ್ಸೃಜ್ಯ ನ ತತ್ ಕಲ್ಯಾಣಮುಚ್ಯತೇ ॥24॥
ಧರ್ಮನಿರತನಾದ ಮನುಷ್ಯನು ನ್ಯಾಯಮಾರ್ಗವನ್ನು ಬಿಟ್ಟು, ಪಾಪ ಸೇರಿದ ಮಾರ್ಗದಲ್ಲಿ ಧನವನ್ನು ಸಂಗ್ರಹಿಸಬಾರದು. ಹಾಗೆ ಸಂಪಾದಿಸಿದ ಧನವು ಕಲ್ಯಾಣಕರವಾದುದೆಂದು ತಿಳಿದವರು ಹೇಳುವುದಿಲ್ಲ.
ಸ ತ್ವಮೇವಂವಿಧೋ ದಾಂತಃ ಕ್ಷತ್ರಿಯಃ ಪ್ರಿಯಬಾಂಧವಃ |
ಪ್ರಜಾ ಭೃತ್ಯಾಂಶ್ಚ ಪುತ್ರಾಂಶ್ಚ ಸ್ವಧರ್ಮೇಣಾನುಪಾಲಯ ॥25॥
ಜನಕನೇ, ನೀನೂ ನ್ಯಾಯಮಾರ್ಗದಲ್ಲಿ ಧನವನ್ನು ಸಂಗ್ರಹಿಸುತ್ತಾ, ಜಿತೇಂದ್ರಿಯನಾದ ಕ್ಷತ್ರಿಯನಾಗಿ ಬಾಂಧವಪ್ರಿಯನಾಗಿ ಪ್ರಜೆಗಳನ್ನೂ, ಭೃತ್ಯರನ್ನೂ, ನಿನ್ನ ಮಕ್ಕಳನ್ನೂ ಧರ್ಮದಿಂದ ರಕ್ಷಿಸು.
ಇಷ್ಟಾನಿಷ್ಟಸಮಾಯೋಗೋ ವೈರಂ ಸೌಹಾರ್ದಮೇವ ಚ |
ಅಥ ಜಾತಿಸಹಸ್ರಾಣಿ ಬಹೂನಿ ಪರಿವರ್ತತೇ ॥26॥
ಇಷ್ಟ-ಅನಿಷ್ಟಗಳ ಹೊಂದುವಿಕೆ, ವೈರ-ಪ್ರೀತಿ ಇವೆಲ್ಲವನ್ನೂ ಅನುಭವಕ್ಕೆ ತಂದುಕೊಂಡು ಪ್ರತಿಯೊಂದು ಜೀವವು ಅನೇಕ ಜನ್ಮಗಳನ್ನು ಕಳೆದಿವೆ. ಸಂಸಾರದಲ್ಲಿ ಸುತ್ತುತ್ತಿದ್ದಾರೆ.
ತಸ್ಮಾದ್ ಗುಣೇಷು ರಜ್ಯೇಥಾ ಮಾ ದೋಷೇಷು ಕದಾಚನ |
ನಿರ್ಗುಣೋಽಪಿ ಹಿ ದುರ್ಬುದ್ಧಿರಾತ್ಮನಃ ಸೋಽತಿರುಚ್ಯತೇ ॥27॥
ಆದ್ದರಿಂದ ನಿನಗೆ ಸದ್ಗುಣಗಳಲ್ಲಿಯೇ ಆಸಕ್ತಿಯುಂಟಾಗಲಿ. ದುರ್ಗುಣಗಳಲ್ಲಿ ಅನುರಾಗ ಹುಟ್ಟುವುದು ಬೇಡ. ಯಾವನು ದುರ್ಬುದ್ಧಿಯವನಾಗಿದ್ದಾನೋ ಅವನು ಪರಮಾತ್ಮನಿಗಿಂತ ದೊಡ್ಡವನೆಂದು ಮೂರ್ಖತನದಲ್ಲಿ ಮಾತನಾಡುತ್ತಾನೆ.
ಮಾನುಷೇಷು ಮಹಾರಾಜ ಧರ್ಮಾಧರ್ಮೌ ಪ್ರವರ್ತತಃ |
ನ ತಥಾನ್ಯೇಷು ಭೂತೇಷು ಮನುಷ್ಯರಹಿತೇಷ್ವಿಹ ॥28॥
ಮಹಾರಾಜನೇ, ಧರ್ಮಾಧರ್ಮಗಳು ಮನುಷ್ಯರಲ್ಲಿ ಮಾತ್ರ ಹೊಂದಲು ಸಾಧ್ಯ. ಮನುಷ್ಯರಿಗಿಂತ ಭಿನ್ನರಾದ ಪ್ರಾಣಿಗಳಲ್ಲಿ ಧರ್ಮಾಧರ್ಮಗಳನ್ನು ನೋಡಲಾಗದು.
ಧರ್ಮಶೀಲೋ ನರೋ ವಿದ್ವಾನೀಹಕೋಽನೀಹಕೋಽಪಿ ವಾ |
ಆತ್ಮಭೂತಃ ಸದಾ ಲೋಕೇ ಚರೇದ್ ಭೂತಾನ್ಯಹಿಂಸಯನ್ ॥29॥
ಧರ್ಮಶೀಲನಾದ ವಿದ್ವಾಂಸನು ಪ್ರಾಪಂಚಿಕ ಸುಖದ ಅಪೇಕ್ಷೆಯುಳ್ಳವನಾಗಿರಲಿ, ಅಪೇಕ್ಷೆಯನ್ನು ತೊರೆದಿರಲಿ, ಪ್ರಪಂಚದ ಎಲ್ಲಾ ಪ್ರಾಣಿಗಳಲ್ಲೂ ಪರಮಾತ್ಮನಿದ್ದಾನೆಂದು ಕಾಣುತ್ತಾ ಯಾರನ್ನೂ ಹಿಂಸಿಸದೆ ಜೀವನವನ್ನು ನಡೆಸಬೇಕು.
ಯದಾ ವ್ಯಪೇತಹೃಲ್ಲೇಖಂ ಮನೋ ಭವತಿ ತಸ್ಯ ವೈ |

ನಾನೃತಂ ಚೈವ ಭವತಿ ತದಾ ಕಲ್ಯಾಣಮೃಚ್ಛತಿ ॥30॥
ಯಾವಾಗ ಮನುಷ್ಯನ ಮನಸ್ಸು ಕಾಮನೆಗಳಿಂದ, ಪೂರ್ವಜನ್ಮದ ಸಂಸ್ಕಾರಗಳಿಂದ ರಹಿತವಾಗುತ್ತದೋ, ಮಿಥ್ಯಾಜ್ಞಾನದಿಂದ, ಅಹಂಕಾರದಿಂದ ದೂರವಾಗುತ್ತಾನೋ, ಅನಾದಿ ಅಜ್ಞಾನ ಕಾಮ ಕರ್ಮದಿಂದ ಮುಕ್ತನಾದ ಅವನು ಪರಮ ಕಲ್ಯಾಣವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೆಂಟನೆಯ ಅಧ್ಯಾಯ
ಪರಾಶರ ಗೀತಾ ಮುಂದುವರೆದುದು.
ಪರಾಶರಃ
ಏಷ ಧರ್ಮವಿಧಿಸ್ತಾತ ಗೃಹಸ್ಥಸ್ಯ ಪ್ರಕೀರ್ತಿತಃ |
ತಪೋವಿಧಿಂ ತು ವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥1॥
ಪರಾಶರ ಜನಕನೇ, ಗೃಹಸ್ಥನಿಗೆ ಸಂಬಂಧಿಸಿದ ವಿಧಿ-ನಿಯಮಗಳನ್ನು ನಾನು ನಿನ್ನ ಮುಂದೆ ಹೇಳಿರುತ್ತೇನೆ. ಇನ್ನು ಮುಂದೆ ತಪಸ್ಸಿನ ವಿಧಿ-ನಿಯಮಗಳ ಬಗ್ಗೆ ತಿಳಿಸುತ್ತೇನೆ, ಕೇಳು.
ಪ್ರಾಯೇಣ ಹಿ ಗೃಹಸ್ಥಸ್ಯ ಮಮತ್ವಂ ನಾಮ ಜಾಯತೇ |
ಸಂಗಾಗತಂ ನರಶ್ರೇಷ್ಠ ಭಾವೈಸ್ತಾಮಸರಾಜಸೈಃ ॥2॥
ಪ್ರಾಯಃ ಗೃಹಸ್ಥನಿಗೆ ರಾಜಸ-ತಾಮಸ ಭಾವಗಳ ಸಂಬಂಧದಿಂದ ವಸ್ತುಗಳಲ್ಲಿ ಮತ್ತು ಕ್ರಿಯೆಗಳಲ್ಲಿ ಮಮತೆಯುಂಟಾಗುತ್ತದೆ.
ಗೃಹಾಣ್ಯಾಶ್ರಿತ್ಯ ಗಾವಶ್ಚ ಕ್ಷೇತ್ರಾಣಿ ಚ ಧನಾನಿ ಚ |
ದಾರಾಃ ಪುತ್ರಾಶ್ಚ ಭೃತ್ಯಾಶ್ಚ ಭವಂತೀಹ ನರಸ್ಯ ವೈ ॥3॥
ಗೃಹಸ್ಥಾಶ್ರಮವನ್ನು ಆಶ್ರಯಿಸಿರುವ ಪುರುಷನನ್ನು ಹಸು, ತೋಟ, ಧನ, ಕನಕ, ಪತ್ನಿ, ಪುತ್ರರು, ಭೃತ್ಯರು- ಹೀಗೆ ಎಲ್ಲರೂ ಆಶ್ರಯವನ್ನು ಹೊಂದಿರುತ್ತಾರೆ.
ಏವಂ ತಸ್ಯ ಪ್ರವತ್ತಸ್ಯ ನಿತ್ಯಮೇವಾನುಪಶ್ಯತಃ |
ರಾಗದ್ವೇಷೌ ವಿವರ್ಧೇತೇ ಹ್ಯನಿತ್ಯತ್ವಮಪಶ್ಯತಃ ॥4॥
ಇವುಗಳಲ್ಲಿಯೇ ಆಸಕ್ತನಾದ ಗೃಹಸ್ಥನಿಗೆ ಪ್ರತಿದಿನವೂ ತನಗೆ ಸಂಬಂಧಿಸಿದ ವ್ಯಕ್ತಿ ಮತ್ತು ವಸ್ತುಗಳ ಯೋಗಕ್ಷೇಮದಲ್ಲಿಯೇ ಕಾಲವು ಸಾಗುವುದರಿಂದ ವಸ್ತುಗಳ ಅನಿತ್ಯತ್ವವನ್ನು ಕಾಣದೆ ಅವುಗಳ ಬಗ್ಗೆ ಅವನ ಮನಸ್ಸಿನಲ್ಲಿ ರಾಗ-ದ್ವೇಷಗಳು ವೃದ್ಧಿ ಹೊಂದುತ್ತಿರುತ್ತವೆ.

ರಾಗದ್ವೇಷಾಭಿಭೂತಂ ಚ ನರಂ ದ್ರವ್ಯವಶಾನುಗಮ್ |
ಮೋಹಜಾತಾ ರತಿರ್ನಾಮ ಸಮುಪೈತಿ ನರಾಧಿಪ ॥5॥
ರಾಜನೇ, ಮನುಷ್ಯನು ಯಾವಾಗ ರಾಗ-ದ್ವೇಷಗಳಿಗೆ ವಶನಾಗಿ, ಧನದಲ್ಲಿ ಆಸಕ್ತನಾಗುವನೋ ಆಗ ಮೋಹದಿಂದಾಗಿ ಹುಟ್ಟಿದ ಅನುರಾಗ ಎಂಬ ಕನ್ಯೆಯು ಅವನ ಬಳಿಯೇ ಬರುತ್ತಾಳೆ.
ಕೃತಾರ್ಥೋ ಭೋಗತೋ ಭೂತ್ವಾ ಸ ವೈ ರತಿಪರಾಯಣಃ |
ಲಾಭಂ ಗ್ರಾಮ್ಯಸುಖಾದನ್ಯಂ ರತಿತೋ ನಾನುಪಶ್ಯತಿ ॥6॥
ಬಾಹ್ಯ ಸುಖದಲ್ಲಿಯೇ ಆಸಕ್ತರಾದ ಜನರೆಲ್ಲರೂ ಭೋಗಸುಖಗಳಲ್ಲಿಯೇ ಪೂರ್ಣತೆಯನ್ನು ಹೊಂದಿದವರೆಂದು ಭಾವಿಸಿ, ಯಾವ ಸುಖಗಳನ್ನು ಗ್ರಾಮ್ಯ ಸುಖವೆಂದು ವಿದ್ವಾಂಸರು ತ್ಯಜಿಸಿದ್ದಾರೋ ಅಂತಹ ಸುಖವನ್ನು ತೊರೆದು ಅದಕ್ಕಿಂತ ಉತ್ತಮವಾದ ಲಾಭವಿದೆ ಎಂಬುದನ್ನು ತಮ್ಮ ಜೀವನದಲ್ಲಿ ನೋಡಲಾರರು.
ತತೋ ಲೋಭಾಭಿಭೂತಾತ್ಮಾ ಸಂಗಾದ್ವರ್ಧಯತೇ ಜನಮ್ |
ಪುಷ್ಟ್ಯರ್ಥಂ ಚೇಹ ದೇಹಸ್ಯ ಜನಸ್ಯಾರ್ಥಂ ಚಿಕೀರ್ಷತಿ ॥7॥
ಲೋಭದಿಂದಲೇ ತಿರಸ್ಕೃತವಾದ ತನ್ನ ಸ್ವರೂಪವುಳ್ಳ ಮನುಷ್ಯನು ವಿಷಯ ಸುಖಗಳಲ್ಲಿಯೇ ಆಸಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾನೆ. ನಂತರ ತನ್ನ ಬಂಧುವರ್ಗದ ಪಾಲನೆ-ಪೋಷಣೆಗಳಿಗಾಗಿ ಅಧಿಕವಾದ ಧನವನ್ನು ಸಂಗ್ರಹಿಸಲು ಬಯಸುತ್ತಾನೆ.
ಸ ಜಾನನ್ನಪಿ ಚಾಕಾರ್ಯಮರ್ಥಾರ್ಥಂ ಸೇವತೇ ನರಃ |
ಬಾಲಸ್ನೇಹಪರೀತಾತ್ಮಾ ತತ್ಕ್ಷಯಾಚ್ಚಾನುತಪ್ಯತೇ ॥8॥
ತಾನು ಮಾಡುತ್ತಿರುವ ಕಾರ್ಯವು ಯೋಗ್ಯವಾದುದಲ್ಲ ಎಂದು ತಿಳಿದಿದ್ದರೂ ಧನಕ್ಕಾಗಿ ಪುನಃ ಅಕಾರ್ಯವನ್ನು ಮಾಡುತ್ತಾನೆ. ಮಕ್ಕಳ ಪ್ರೀತಿಯಲ್ಲಿ ಆಸಕ್ತನಾದ ಆತನು ಆ ಪ್ರೀತಿಯು ನಷ್ಟವಾದಾಗ ದುಃಖಕ್ಕೆ ಭಾಗಿಯಾಗುತ್ತಾನೆ.
ತತೋ ಮಾನೇನ ಸಂಪನ್ನೋ ರಕ್ಷನ್ನಾತ್ಮಪರಾಜಯಮ್ |
ಕರೋತಿ ಯೇನ ಭೋಗೀ ಸ್ಯಾಮಿತಿ ತಸ್ಮಾದ್ ವಿನಶ್ಯತಿ ॥9॥
ಅಧಿಕವಾದ ಅಭಿಮಾನದಲ್ಲಿ ಕೂಡಿರುವ ಜೀವನು ತನ್ನ ಪರಾಜಯವನ್ನು ರಕ್ಷಿಸಿಕೊಳ್ಳಲು ನಾನು ಸಮಸ್ತ ಸುಖಭೋಗಗಳನ್ನು ಹೊಂದಬೇಕು ಎಂದು ಚಿಂತಿಸುತ್ತಾ ಆಕಾಂಕ್ಷೆಗಳು ಪೂರ್ಣವಾಗದಿರುವಾಗಲೇ ಮರಣವನ್ನಪ್ಪುತ್ತಾನೆ.
ತಪೋ ಹಿ ಬುದ್ಧಿಯುಕ್ತಾನಾಂ ಶಾಶ್ವತಂ ಬ್ರಹ್ಮದರ್ಶನಮ್ |
ಅನ್ವಿಚ್ಛತಾಂ ಶುಭಂ ಕರ್ಮ ನರಾಣಾಂ ತ್ಯಜತಾಂ ಸುಖಮ್ ॥10॥

ರಾಜನೇ, ಸಮತ್ವ ಬುದ್ಧಿಯಿಂದ ಕೂಡಿರುವ ಪುರುಷರಿಗೆ ಬ್ರಹ್ಮದರ್ಶನವೆಂಬ ತಪಸ್ಸೇ ಶಾಶ್ವತವಾದುದು. ಯಾರು ಅನಿತ್ಯವಾದ ಪ್ರಾಪಂಚಿಕ ಸುಖವನ್ನು ತ್ಯಜಿಸುತ್ತಾರೋ ಅವರಿಗೆ ಶಾಶ್ವತವಾದ ಸುಖವು ದೊರೆಯುತ್ತದೆ. ಶುಭಕರ್ಮವನ್ನು ಬಯಸುವವರು ನಶ್ವರ ಸುಖವನ್ನು ತ್ಯಜಿಸಬೇಕು.

ಸ್ನೇಹಾಯತನನಾಶಾಚ್ಚ ಧನನಾಶಾಚ್ಚ ಪಾರ್ಥಿವ |
ಆಧಿವ್ಯಾಧಿಪ್ರತಾಪಾಚ್ಚ ನಿರ್ವೇದಮುಪಗಚ್ಛತಿ ॥11॥

ರಾಜನೇ, ಸಂಸಾರಜೀವರು ತಮ್ಮ ಸ್ನೇಹ-ಪ್ರೀತಿಗಳಿಗೆ ಆಧಾರವೆನಿಸಿದ ಹೆಂಡತಿ- ಮಕ್ಕಳ, ಸಂಪತ್ತಿನ ನಾಶದಿಂದಾಗಿ, ಆಧಿ-ವ್ಯಾಧಿಗಳ ಸಮಾಗಮದಿಂದಾಗಿ ವೈರಾಗ್ಯವನ್ನು ತಾಳುತ್ತಾರೆ.

ನಿರ್ವೇದಾದಾತ್ಮಸಂಬೋಧಃ ಸಂಬೋಧಾಚ್ಛಾಸ್ತ್ರದರ್ಶನಮ್ |
ಶಾಸ್ತ್ರಾರ್ಥದರ್ಶನಾದ್ರಾಜಂಸ್ತಪ ಏವಾನುಪಶ್ಯತಿ ॥12॥

ವೈರಾಗ್ಯಲಾಭದಿಂದ ಮನುಷ್ಯನಿಗೆ ಪರಮಾತ್ಮ ತತ್ತ್ವದಲ್ಲಿ ಜಿಜ್ಞಾಸೆ ಉಂಟಾಗಿ, ಶಾಸ್ತ್ರಾಧ್ಯಯನದಲ್ಲೂ ಆಸಕ್ತಿಯುಂಟಾಗುತ್ತದೆ. ಶಾಸ್ತ್ರಗಳ ಅಧ್ಯಯನದಿಂದ ಶ್ರೇಯಸ್ಸಿಗೆ ಮುಖ್ಯಸಾಧನವಾದುದು ತಪಸ್ಸು ಎಂಬ ಯಥಾರ್ಥ ಜ್ಞಾನವು ಉಂಟಾಗುತ್ತದೆ.

ದುರ್ಲಭೋ ಹಿ ಮನುಷ್ಯೇಂದ್ರ ನರಃ ಪ್ರತ್ಯವಮರ್ಶವಾನ್ |
ಯೋ ವೈ ಪ್ರಿಯಸುಖೇ ಕ್ಷೀಣೇ ತಪಃ ಕರ್ತುಂ ವ್ಯವಸ್ಯತಿ ॥13॥

ರಾಜನೇ, ಪ್ರಪಂಚದಲ್ಲಿ ಪ್ರಿಯರೆನಿಸಿದ ಹೆಂಡತಿ-ಮಕ್ಕಳು-ಸಂಬಂಧಿಗಳು ಅವರ ಸಂಬಂಧದಿಂದ ಲಭಿಸುತ್ತಿದ್ದ ಸುಖವು ಕ್ಷೀಣಿಸಿದ ಬಳಿಕವಾದರೂ ಭಗವಂತನ ಪ್ರಜ್ಞೆಯನ್ನು ಹೊಂದಬೇಕು, ಜಗತ್ತೆಲ್ಲವೂ ಅಸಾರವಾದುದು, ಭಗವಂತನೇ ಸಾರನು ಎಂದು ತಿಳಿದು ತಪಸ್ಸನ್ನು ಮಾಡಲು ನಿಶ್ಚಯಿಸುವ ಮನುಷ್ಯನು ದುರ್ಲಭನೇ ಆಗಿದ್ದಾನೆ.

ತಪಃ ಸರ್ವಗತಂ ತಾತ ಹೀನಸ್ಯಾಪಿ ವಿಧೀಯತೇ |
ಜಿತೇಂದ್ರಿಯಸ್ಯ ದಾಂತಸ್ಯ ಸ್ವರ್ಗಮಾರ್ಗಪ್ರದೇಶಕಮ್ ॥14॥

ತಪಸ್ಸನ್ನು ಮಾಡಲು ಎಲ್ಲರಿಗೂ ಅಧಿಕಾರವಿದೆ. ಮನೋನಿಗ್ರಹವನ್ನು ಸಂಪಾದಿಸಿಕೊಂಡ ಅಧಮವ್ಯಕ್ತಿಯು ತಪಸ್ಸನ್ನು ಮಾಡಬಹುದು. ಸ್ವರ್ಗಮಾರ್ಗಕ್ಕೆ ಕರೆದುಕೊಂಡು ಹೋಗುವ ಸಾಮರ್ಥ್ಯ ತಪಸ್ಸಿಗಿದೆ.

ಪ್ರಜಾಪತಿಃ ಪ್ರಜಾಃ ಪೂರ್ವಮಸೃಜತ್ತಪಸಾ ವಿಭುಃ |
ಕ್ವಚಿತ್ಕ್ವಚಿದ್ವ್ರತಪರೋ ವ್ರತಾನ್ಯಾಸ್ಥಾಯ ಪಾರ್ಥಿವ ॥15॥

ಹಿಂದೆ ವಿಭು ಎನಿಸಿದ ಪ್ರಜಾಪತಿಯು ಭಗವಂತನಲ್ಲಿಯೇ ಆಸಕ್ತನಾಗಿ ವ್ರತಾನುಷ್ಠಾನಗಳನ್ನು ಆಚರಿಸುತ್ತಾ ತಪಶ್ಚರ್ಯದಿಂದಲೇ ಪ್ರಜೆಗಳನ್ನೆಲ್ಲ ಸೃಷ್ಟಿಸಿದನು.

ಆದಿತ್ಯಾ ವಸವೋ ರುದ್ರಾಸ್ತಥೈವಾಗ್ನ್ಯಶ್ವಿಮಾರುತಾಃ |
ವಿಶ್ವೇದೇವಾಸ್ತಥಾ ಸಾಧ್ಯಾಃ ಪಿತರೋಽಥ ಮರುದ್ಗಣಾಃ ॥16॥
ಯಕ್ಷರಾಕ್ಷಸಗಂಧರ್ವಾಃ ಸಿದ್ಧಾಶ್ಚಾನ್ಯೇ ದಿವೌಕಸಃ |
ಸಂಸಿದ್ಧಾಸ್ತಪಸಾ ತಾತ ಯೇ ಚಾನ್ಯೇ ಸ್ವರ್ಗವಾಸಿನಃ ॥17॥

ಆದಿತ್ಯರು, ವಸುಗಳು, ರುದ್ರರು, ಅಗ್ನಿ, ಅಶ್ವಿನಿದೇವತೆಗಳು, ವಾಯುಗಳು, ವಿಶ್ವೇದೇವತೆಗಳು, ಸಾಧ್ಯರು, ಪಿತೃಗಳು, ಮರುದ್ಗಣಗಳು, ಯಕ್ಷರು, ರಾಕ್ಷಸರು, ಗಂಧರ್ವರು, ಸಿದ್ಧರು, ಸ್ವರ್ಗವಾಸಿಗಳಾದ ಇತರ ದೇವತೆಗಳು ಇವರೆಲ್ಲರೂ ತಪಸ್ಸಿನಿಂದಲೇ ಸಿದ್ಧಿಯನ್ನು ಹೊಂದಿರುತ್ತಾರೆ.

ಯೇ ಚಾದೌ ಬ್ರಹ್ಮಣಾ ಸೃಷ್ಟಾ ಬ್ರಾಹ್ಮಣಾಸ್ತಪಸಾ ಪುರಾ |
ತೇ ಭಾವಯಂತಃ ಪೃಥಿವೀಂ ವಿಚರಂತಿ ದಿವಂ ತಥಾ ॥18॥

ಚತುರ್ಮುಖ ಬ್ರಹ್ಮನು ತನ್ನ ತಪಸ್ಸಿನಿಂದ ಮರೀಚಿ ಮೊದಲಾದ ಯಾವ ಬ್ರಾಹ್ಮಣರನ್ನು ಸೃಷ್ಟಿ ಮಾಡಿದನೋ ಅವರೆಲ್ಲರೂ ತಪಸ್ಸಿನಿಂದಲೇ ಪೃಥಿವಿ, ಸ್ವರ್ಗಗಳನ್ನು ಪವಿತ್ರಗೊಳಿಸುತ್ತಾ ಸಂಚರಿಸುತ್ತಿದ್ದಾರೆ.

ಮರ್ತ್ಯಲೋಕೇ ಚ ರಾಜಾನೋ ಯೇ ಚಾನ್ಯೇ ಗೃಹಮೇಧಿನಃ |
ಮಹಾಕುಲೇಷು ದೃಶ್ಯಂತೇ ತತ್ ಸರ್ವಂ ತಪಸಃ ಫಲಮ್ ॥19॥

ಮನುಷ್ಯಲೋಕದಲ್ಲಿ ಮಹಾಕುಲಗಳಲ್ಲಿ ಹುಟ್ಟಿರುವ ಯಾವ ರಾಜರಿದ್ದಾರೋ, ಯಾವ ಗೃಹಸ್ಥರಿದ್ದಾರೋ ಅವರು ಮಹಾಕುಲಗಳಲ್ಲಿ ಹುಟ್ಟಲು ಹಿಂದಿನ ಜನ್ಮದಲ್ಲಿ ಮಾಡಿದ ತಪಸ್ಸಿನ ಫಲವೇ ಕಾರಣವಾಗಿದೆ.

ಕೌಶಿಕಾನಿ ಚ ವಸತ್ರಾಣಿ ಶುಭಾನ್ಯಾಭರಣಾನಿ ಚ |
ವಾಹನಾಸನಯಾನಾನಿ ಸರ್ವಂ ತತ್ತಪಸಃ ಫಲಮ್ ॥20॥

ರೇಷ್ಮೆ ವಸ್ತ್ರಗಳು, ಸುಂದರವಾದ ರತ್ನಾಭರಣಗಳು, ವಾಹನಗಳು, ಉತ್ತಮ ಪಾನೀಯಗಳು ಇವೆಲ್ಲವೂ ತಪಸ್ಸಿನ ಫಲದಿಂದ ಲಭಿಸುವವುಗಳಾಗಿವೆ.

ಮನೋನುಕೂಲಾಃ ಪ್ರಮದಾ ರೂಪವತ್ಯಃ ಸಹಸ್ರಶಃ |
ವಾಸಃ ಪ್ರಾಸಾದಪೃಷ್ಠೇ ಚ ತತ್ ಸರ್ವಂ ತಪಸಃ ಫಲಮ್ ॥21॥

ಮನಸ್ಸಿಗೆ ಅನುಕೂಲವಾಗಿ ನಡೆಯುವ, ರೂಪವತಿಯರಾದ ಸಾವಿರಾರು ಯುವತಿಯರನ್ನು ಹೊಂದುವುದು, ವಿಸ್ತಾರವಾದ ಮಹಡಿಯಿಂದ ಕೂಡಿದ ಮನೆಗಳಲ್ಲಿ ವಾಸಿಸುವುದು ಇವೆಲ್ಲವೂ ತಪಸ್ಸಿನಿಂದ ಲಭಿಸುವ ಫಲಗಳೆನಿಸಿವೆ.

ಶಯನಾನಿ ಚ ಮುಖ್ಯಾನಿ ಭೋಜ್ಯಾನಿ ವಿವಿಧಾನಿ ಚ |
ಅಭಿಪ್ರೇತಾನಿ ಸರ್ವಾಣಿ ಭವಂತಿ ಕೃತಕರ್ಮಣಾಮ್ ॥22॥

ಶುಭಕರ್ಮವನ್ನು ಆಚರಿಸಿದ ವ್ಯಕ್ತಿಗಳಿಗೆ ಉತ್ತಮ ಹಾಸಿಗೆ, ವಿವಿಧ ಭೋಜ್ಯ ಪದಾರ್ಥ, ಮನಸ್ಸಿಗೆ ಬಯಸಿದ ಪದಾರ್ಥಗಳೆಲ್ಲವೂ

ದೊರೆಯುತ್ತವೆ.
ನಾಪ್ರಾಪ್ಯಂ ತಪಸಾ ಕಿಂಚಿತ್ ತ್ರೈಲೋಕ್ಯೇಽಸ್ಮಿನ್ ಪರಂತಪ |
ಉಪಭೋಗಪರಿತ್ಯಾಗಃ ಫಲಾನ್ಯಕೃತಕರ್ಮಣಾಮ್ ||23||
ಶ್ರೇಷ್ಠ ತಪಸ್ವೀ ಪುರುಷನೇ, ತ್ರಿಲೋಕದಲ್ಲಿಯೂ ತಪಸ್ಸಿನಿಂದ ಲಭಿಸದ ಪದಾರ್ಥ ಯಾವುದೂ ಇರುವುದಿಲ್ಲ. ತಪಸ್ಸನ್ನು ಆಚರಿಸದವರಿಗೆ ಹಿಂದೆ ಹೇಳಿದ ಸುಖ ಭೋಗಗಳು ದೂರವಾಗುತ್ತವೆ.
ಸುಖಿತೋ ದುಃಖಿತೋ ವಾಪಿ ನರೋ ಲೋಭಂ ಪರಿತ್ಯಜೇತ್ |
ಅವೇಕ್ಷ್ಯ ಮನಸಾ ಶಾಸ್ತ್ರಂ ಬುದ್ಧ್ಯಾ ಚ ನೃಪಸತ್ತಮ ||24||
ರಾಜಶ್ರೇಷ್ಠನೇ, ಮನುಷ್ಯನು ಸುಖ-ದುಃಖಗಳಲ್ಲಿದ್ದಾಗಲೂ ಲೋಭವೆಂಬ ದುರ್ಗುಣವನ್ನು ತ್ಯಜಿಸಬೇಕು. ಮನಸ್ಸು-ಬುದ್ಧಿಗಳಿಂದ ಶಾಸ್ತ್ರವನ್ನು ಚೆನ್ನಾಗಿ ಪರಿಶೀಲಿಸಿ ಈ ದುರ್ಗುಣವನ್ನು ತ್ಯಜಿಸಬೇಕು.
ಅಸಂತೋಷೋಽಸುಖಾಯೈವ ಲೋಭಾದಿಂದ್ರಿಯವಿಭ್ರಮಃ |
ತತೋಽಸ್ಯ ನಶ್ಯತಿ ಪ್ರಜ್ಞಾ ವಿದ್ಯೇವಾಭ್ಯಾಸವರ್ಜಿತಾ ||25||
ದುಃಖಕ್ಕೆ ಕಾರಣವಾದುದು ಅತೃಪ್ತಿಯು. ಲೋಭದಿಂದ ಮನಸ್ಸು ಮತ್ತು ಇಂದ್ರಿಯಗಳಲ್ಲಿ ಚಂಚಲತೆಯು ಏರ್ಪಡುತ್ತದೆ. ಮನಸ್ಸಿನ ಚಾಂಚಲ್ಯದಿಂದ ಶಾಸ್ತ್ರಗಳನ್ನು ಏಕಾಗ್ರತೆಯಿಂದ ಅಭ್ಯಾಸ ಮಾಡದಿರುವ ಫಲವಾಗಿ ವಿದ್ಯೆಯು ನಾಶ ಹೊಂದುತ್ತದೆ. ಇದರಿಂದ ಮನುಷ್ಯನು ಪ್ರಜ್ಞಾಹೀನನಾಗುತ್ತಾನೆ.
ನಷ್ಟಪ್ರಜ್ಞೋ ಯದಾ ಭವತಿ ತದಾ ನ್ಯಾಯಂ ನ ಪಶ್ಯತಿ |
ತಸ್ಮಾತ್ ಸುಖಕ್ಷಯೇ ಪ್ರಾಪ್ತೇ ಪುಮಾನುಗ್ರಂ ತಪಶ್ಚರೇತ್ ||26||
ಮನುಷ್ಯನು ಯಥಾರ್ಥ ಜ್ಞಾನವನ್ನು ಕಳೆದುಕೊಂಡರೆ ಕರ್ತವ್ಯಾಕರ್ತವ್ಯಗಳನ್ನು ಸರಿಯಾಗಿ ತಿಳಿಯನು. ಇದರಿಂದ ಸುಖವು ನಾಶವಾಗಿ ದುಃಖವೇ ಆಗಮಿಸುತ್ತಿರಲು ಪುರುಷನು ಪುನಃ ಉಗ್ರವಾದ ತಪಸ್ಸನ್ನು ಆಚರಿಸಬೇಕು.
ಯದಿಷ್ಟಂ ತತ್ ಸುಖಂ ಪ್ರಾಹುರ್ದ್ವೇಷ್ಯಂ ದುಃಖಮಿಹೋಚ್ಯತೇ |
ಕೃತಾಕೃತಸ್ಯ ತಪಸಃ ಫಲಂ ಪಶ್ಯಸ್ವ ಯಾದೃಶಮ್ ||27||
ಮನಸ್ಸಿಗೆ ಇಷ್ಟವಾದುದೇ ಸುಖವು. ಪ್ರತಿಕೂಲವಾದುದು ದುಃಖವು. ಪುಣ್ಯ ಪಾಪಗಳಿಗೆ ತಪಸ್ಸೇ ಮುಖ್ಯಫಲವಾದುದೆಂದು ತಿಳಿದುಕೊ.

ನಿತ್ಯಂ ಭದ್ರಾಣಿ ಪಶ್ಯಂತಿ ವಿಷಯಾಂಶ್ಚೋಪಭುಂಜತೇ |
ಪ್ರಾಕಾಶ್ಯಂ ಚೈವ ಗಚ್ಛಂತಿ ಕೃತ್ವಾ ನಿಷ್ಕಲ್ಮಷಂ ತಪಃ ||28||
ಯಾವ ಮನುಷ್ಯನು ದೋಷರಹಿತವಾದ ತಪಸ್ಸನ್ನಾಚರಿಸುತ್ತಾನೋ ಅವನು ನಿತ್ಯವೂ ಮಂಗಳ ಬದುಕನ್ನೇ ಕಾಣುತ್ತಾನೆ. ಅನಿಷಿದ್ಧವಾದ ವಿಷಯಭೋಗಗಳನ್ನು ಅನುಭವಿಸುತ್ತಾನೆ. ಪ್ರಪಂಚದಲ್ಲಿ ಕೀರ್ತಿಯನ್ನೂ ಸಂಪಾದಿಸುತ್ತಾನೆ.
ಅಪ್ರಿಯಾಣ್ಯವಮಾನಾಂಶ್ಚ ದುಃಖಂ ಬಹುವಿಧಾತ್ಮಕಮ್ |
ಫಲಾರ್ಥೀ ಸತ್ಪಥತ್ಯಕ್ತಃ ಪ್ರಾಪ್ನೋತಿ ವಿಷಯಾತ್ಮಕಮ್ ||29||
ಯಾವನು ನಿಷ್ಕಲ್ಮಶವಾದ ತಪಸ್ಸನ್ನಾಚರಿಸುವುದಿಲ್ಲವೋ ಅವನು ಅಪ್ರಿಯವಾದ ಫಲಗಳನ್ನೂ, ಅವಮಾನಗಳನ್ನೂ, ಅನೇಕ ವಿಧವಾದ ದುಃಖಗಳನ್ನೂ ಅನುಭವಿಸುತ್ತಾನೆ. ಲೌಕಿಕ ಫಲಗಳನ್ನೇ ಬಯಸುತ್ತಾ ಸನ್ಮಾರ್ಗದಿಂದ ದೂರವಿರುವ ಅವನು ಕೇವಲ ವಿಷಯಸುಖವನ್ನು ಮಾತ್ರ ಹೊಂದಿ ದುಃಖಕ್ಕೆ ಭಾಗಿಯಾಗುತ್ತಾನೆ.
ಧರ್ಮೇ ತಪಸಿ ದಾನೇ ಚ ವಿಚಿಕಿತ್ಸಾಸ್ಯ ಜಾಯತೇ |
ಸ ಕೃತ್ವಾ ಪಾಪಕಾನ್ಯೇವ ನಿರಯಂ ಪ್ರತಿಪದ್ಯತೇ ||30||
ಇಂತಹ ವ್ಯಕ್ತಿಗೆ ಧರ್ಮ, ತಪಸ್ಸು, ದಾನಗಳಲ್ಲಿ ಸಂಶಯವುಂಟಾಗುತ್ತದೆ. ಇದರಿಂದ ಧರ್ಮದಿಂದ ವಿಮುಖನಾದ ಅವನು ಅನೇಕ ಪಾಪಗಳನ್ನು ಮಾಡುತ್ತಾ ನರಕವನ್ನೇ ಹೊಂದುತ್ತಾನೆ.
ಸುಖೇ ತು ವರ್ತಮಾನೋ ವೈ ದುಃಖೇ ವಾಪಿ ನರೋತ್ತಮ |
ಸ್ವವೃತ್ತಾದ್ಯೋ ನ ಚಲತಿ ಶಾಸ್ತ್ರಚಕ್ಷುಃ ಸ ಮಾನವಃ ||31||
ನರೋತ್ತಮನೇ, ಸುಖದಲ್ಲೇ ಇರಲಿ, ಕಷ್ಟದಲ್ಲಿಯೇ ಇರಲಿ, ತನ್ನ ವಿಹಿತವಾದ ವೃತ್ತಿಯಿಂದ ಯಾವ ವ್ಯಕ್ತಿಯು ವಿಚಲಿತನಾಗುವುದಿಲ್ಲವೋ ಅವನೇ ನಿಜವಾದ ಶಾಸ್ತ್ರಚಕ್ಷುಸ್ಸು ಉಳ್ಳವನು.
ಇಷುಪ್ರಪಾತಮಾತ್ರಂ ಹಿ ಸ್ಪರ್ಶಯೋಗೇ ರತಿಃ ಸ್ಮೃತಾ |
ರಸನೇ ದರ್ಶನೇ ಘ್ರಾಣೇ ಶ್ರವಣೇ ಚ ವಿಶಾಂ ಪತೇ ||32||
ಧನುಸ್ಸಿನಿಂದ ಹೊರಟ ಬಾಣವು ಎಲ್ಲಿಯ ತನಕ ಆಕಾಶದಲ್ಲಿ ಸಾಗುತ್ತಿರುತ್ತದೋ ಅಷ್ಟು ಅಲ್ಪಕಾಲ ಮಾತ್ರ ವಿಷಯ ಸುಖವನ್ನು ಹೊಂದುವ ಜೀವನು ಸ್ಪರ್ಶೇಂದ್ರಿಯ, ನಾಲಿಗೆ, ಕಣ್ಣು, ಮೂಗು, ಕಿವಿಗಳ ಮೂಲಕ ಸುಖಗಳನ್ನು ಅನುಭವಿಸುತ್ತಾನೆ. ಸುಂದರ ಸ್ತ್ರೀ ದೇಹವನ್ನು ಮುಟ್ಟುತ್ತೇನೆ, ರುಚಿಯಾದ ರಸವನ್ನು ಆಸ್ವಾದಿಸುತ್ತೇನೆ, ಈ ಸುಂದರವಾದ ಚಿತ್ರವನ್ನು ನೋಡುತ್ತೇನೆ, ಈ ಪರಿಮಳವನ್ನು ಆಘ್ರಾಣಿಸುತ್ತೇನೆ, ಈ ಶಬ್ದವನ್ನು ಕೇಳಿಸಿಕೊಳ್ಳುತ್ತೇನೆ ಎಂಬ ಆಸೆಯು ಹುಟ್ಟುತ್ತದೆ. ಆದರೆ ಆಕಾಶದಲ್ಲಿ ಸಾಗುವ ಬಾಣವು ಎಷ್ಟು ವೇಗವಾಗಿ ಅಧಃಪತನವನ್ನು ಹೊಂದುತ್ತದೋ ಅದರಂತೆ ವಿಷಯಸುಖಗಳು ಅಷ್ಟೇ ಕ್ಷಣಿಕವಾದವುಗಳು ಎಂದು ಭಾವ.
ತತೋಽಸ್ಯ ಜಾಯತೇ ತೀವ್ರಾ ವೇದನಾ ತತ್ಕ್ಷಯಾತ್ ಪುನಃ |
ಬುಧಾ ಯೇನ ಪ್ರಶಂಸಂತಿ ಮೋಕ್ಷಂ ಸುಖಮನುತ್ತಮಮ್ ||33||
ವಿಷಯ ಸುಖವು ತಪ್ಪಿದ ಕೂಡಲೇ ಪುನಃ ಆ ಸುಖವನ್ನು ಪಡೆದುಕೊಳ್ಳುವುದರಲ್ಲಿ ಮನಸ್ಸು ತೀವ್ರವಾದ ವೇದನೆಯನ್ನು

ಹೊಂದುತ್ತದೆ. ಪುನಃ ಅದರಲ್ಲಿ ಪ್ರಯತ್ನವನ್ನು ಪಟ್ಟು ಅದನ್ನು ಪಡೆದರೂ ಅದರಿಂದ ಮನಸ್ಸು ತೃಪ್ತಿಯನ್ನು ಹೊಂದುವುದಿಲ್ಲ. ಈ ಸುಖದ ಅಪೇಕ್ಷೆಯು ವೃದ್ಧಿಸುತ್ತದೆ. ಸುಖವೂ ಕ್ಷಯಿಸುತ್ತದೆ. ಈ ಕಾರಣದಿಂದಲೇ ಜ್ಞಾನಿಗಳಾದವರು ವಿಷಯ ಸುಖವನ್ನು ನಿಂದಿಸಿ ಅನುತ್ತಮವಾದ ಮೋಕ್ಷ ಸುಖವನ್ನೇ ಪ್ರಶಂಸಿಸುತ್ತಾರೆ.
ತಪಃಫಲಾರ್ಥಂ ಚರತಿ ಭವಂತಿ ಜ್ಯಾಯಸೋ ಗುಣಾಃ |
ಧರ್ಮವೃತ್ತ್ಯಾ ಚ ಸತತಂ ಕಾಮಾರ್ಥಾಭ್ಯಾಂ ನ ಹೀಯತೇ ॥34॥
ಯಾವ ಮನುಷ್ಯನು ತಪಸ್ಸಿನ ಫಲಕ್ಕಾಗಿ ಆಸಕ್ತಿಯನ್ನು ಹೊಂದುತ್ತಾನೋ ಅಂತಹ ಉತ್ತಮ ಪುರುಷನಿಗೆ ವೈರಾಗ್ಯಾದಿ ಗುಣಗಳು ಉಂಟಾಗುತ್ತವೆ. ಅವನು ಧರ್ಮಮಾರ್ಗದಲ್ಲಿಯೇ ಸಾಗುವುದರಿಂದ ಯಾವಾಗಲೂ ಧರ್ಮ-ಅರ್ಥಗಳಿಂದ ಅವನು ಹಾನಿಯನ್ನು ಹೊಂದುವುದಿಲ್ಲ.
ಅಪ್ರಯತ್ನಾಗತಾಃ ಸೇವ್ಯಾ ಗೃಹಸ್ಥೈರ್ವಿಷಯಾಃ ಸದಾ |
ಪ್ರಯತ್ನೇನೋಪಗಮ್ಯಶ್ಚ ಸ್ವಧರ್ಮ ಇತಿ ಮೇ ಮತಿಃ ॥35॥
ಆದ್ದರಿಂದ ಗೃಹಸ್ಥಾನದವನು ಮಹಾಪ್ರಯತ್ನವಿಲ್ಲದೆ ತಾನಾಗಿ ಒದಗಿ ಬಂದ ವಿಷಯಗಳನ್ನು ಅನುಭವಿಸಬೇಕು. ಪ್ರಯತ್ನ ಪೂರ್ವಕವಾಗಿ ತನ್ನ ಧರ್ಮವನ್ನು ಅನುಷ್ಠಾನ ಮಾಡಬೇಕು ಎಂಬುದು ಇದೇ ಸ್ವಧರ್ಮ ಎಂದು ನನ್ನ ಬುದ್ಧಿಯು.
ಮಾನಿನಾಂ ಕುಲಜಾತಾನಾಂ ನಿತ್ಯಂ ಶಾಸ್ತ್ರಾರ್ಥಚಕ್ಷುಷಾಮ್ |
ಧರ್ಮಕ್ರಿಯಾವಿಯುಕ್ತಾನಾಮಸತ್ಯಂ ಸಂವೃತಾತ್ಮನಾಮ್ ॥36॥
ಕ್ರಿಯಮಾಣಂ ಯದಾ ಕರ್ಮ ನಾಶಂ ಗಚ್ಛತಿ ಮಾನುಷಮ್ |
ತೇಷಾಂ ನಾನ್ಯದೃತೇ ಲೋಕೇ ತಪಸಃ ಕರ್ಮ ವಿದ್ಯತೇ ॥37॥
ಉತ್ತಮ ಕುಲದಲ್ಲಿ ಹುಟ್ಟಿ ಮಾನವಂತರಾಗಿರುವ, ಶಾಸ್ತ್ರಾರ್ಥಗಳನ್ನು ಚೆನ್ನಾಗಿ ತಿಳಿದಿರುವ, ಅಶಕ್ತಿಯಿಂದ ಧರ್ಮ-ಸತ್ಕರ್ಮಗಳಿಂದ ವಿಯುಕ್ತರಾಗಿರುವ, ವಶ ಮಾಡಿಕೊಂಡಿರುವ ಮನಸ್ಸುಳ್ಳ, ಅರ್ಥಾತ್ ಮಾನುಷ ಕರ್ಮವೆನಿಸಿದ ಪುತ್ರ-ಮಿತ್ರ- ಕಳತ್ರ ಪೋಷಣಾದಿ ಕರ್ಮಗಳೆಲ್ಲವೂ ಕ್ಷಣಿಕವಾದವುಗಳು ಎಂಬುದನ್ನು ತಿಳಿದಿರುವ ವಿದ್ವಾಂಸರ ಕೊರತೆ ಇರುವುದರಿಂದ ವ್ಯಕ್ತಿಗಳು ತಪಸ್ಸಿನಿಂದ ವಿಮುಖರಾಗಿರುತ್ತಾರೆ. ತಪಸ್ಸಿಗಿಂತಲೂ ಶ್ರೇಷ್ಠವಾದ ಕರ್ಮವು ಇಲ್ಲ ಎಂದು ನಿಶ್ಚಯವನ್ನು ಪಡೆದ ಬಳಿಕ ಸತ್ಕರ್ಮದಲ್ಲಿ ಆಸಕ್ತಿಯು ಉಂಟಾಗುತ್ತದೆ.
ಸರ್ವಾತ್ಮನಾ ತು ಕುರ್ವೀತ ಗೃಹಸ್ಥಃ ಕರ್ಮನಿಶ್ಚಯಮ್ |
ದಾಕ್ಷ್ಯೇಣ ಹವ್ಯಕವ್ಯಾರ್ಥಂ ಸ್ವಧರ್ಮಂ ವಿಚರೇನ್ನೃಪ ॥38॥
ರಾಜನೇ, ಗೃಹಸ್ಥನು ಎಲ್ಲ ವಿಧದಿಂದಲೂ ತನ್ನ ಕರ್ತವ್ಯಗಳನ್ನು ನಿಶ್ಚಯಿಸಿ, ಸ್ವಧರ್ಮವನ್ನು ಪಾಲಿಸುತ್ತಾ ಜಾಣತನದಿಂದ ಯಜ್ಞಗಳನ್ನು, ಶ್ರಾದ್ಧಾದಿ ಕರ್ಮಗಳನ್ನು ಸ್ವಧರ್ಮವೆಂದು ಮಾಡುತ್ತಿರಬೇಕು.
ಯಥಾ ನದೀನದಾಃ ಸರ್ವೇ ಸಾಗರೇ ಯಾಂತಿ ಸಂಸ್ಥಿತಿಮ್ |
ಏವಮಾಶ್ರಮಿಣಃ ಸರ್ವೇ ಗೃಹಸ್ಥೇ ಯಾಂತಿ ಸಂಸ್ಥಿತಿಮ್ ॥39॥
ಹೇಗೆ ನದಿಗಳು, ನದಗಳು ಸಾಗರವನ್ನೇ ಆಶ್ರಯಿಸುತ್ತವೋ ಅದರಂತೆ ಎಲ್ಲ ಆಶ್ರಮಿಗಳು ಗೃಹಸ್ಥನಲ್ಲಿಯೇ ಆಶ್ರಯವನ್ನು ಹೊಂದುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಾವಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ
ಪರಾಶರ ಗೀತಾ.
ಜನಕಃ
ವರ್ಣೋ ವಿಶೇಷವರ್ಣಾನಾಂ ಮಹರ್ಷೇ ಕೇನ ಜಾಯತೇ |
ಏತದಿಚ್ಛಾಮ್ಯಹಂ ಶ್ರೋತುಂ ತದ್ ಬ್ರೂಹಿ ವದತಾಂ ವರ ॥1॥
ಜನಕ ಪ್ರವಚನ ಮಾಡುವವರಲ್ಲಿ ಅಗ್ರಗಣ್ಯನಾದವನೇ, ಪರಾಶರ ಮುನಿಯೇ, ವಿಶೇಷ ವರ್ಣ ಎನಿಸಿದ ಬ್ರಾಹ್ಮಣರಿಂದ ಮತ್ತೊಂದು ವರ್ಣವು ಹೇಗೆ ಹುಟ್ಟುತ್ತದೆ? ಇದನ್ನು ತಿಳಿಯಲು ಬಯಸುತ್ತೇನೆ.
ಯದೇತಜ್ಜಾಯತೇಽಪತ್ಯಂ ಸ ಏವಾಯಮಿತಿ ಶ್ರುತಿಃ |
ಕಥಂ ಬ್ರಾಹ್ಮಣತೋ ಜಾತೋ ವಿಶೇಷಗ್ರಹಣಂ ಗತಃ ॥2॥
ಮನುಷ್ಯನಿಂದ ಯಾವ ಸಂತತಿಯು ಹುಟ್ಟುತ್ತದೆಯೋ ಆ ಸಂತಾನವೇ ಮಗನ ಸ್ವರೂಪವೆಂದು ಶ್ರುತಿಯು ಹೇಳುತ್ತಿದೆ. ಬ್ರಾಹ್ಮಣನಿಂದ ಹುಟ್ಟಿದ ಮಗನು ಬ್ರಾಹ್ಮಣನೇ ಆಗಬೇಕು. ಕ್ಷತ್ರಿಯನು ಕ್ಷತ್ರಿ ಎಂಬ ಜಾತಿಯನ್ನು ಹೇಗೆ ಪಡೆಯುತ್ತಾನೆ?
ಪರಾಶರಃ
ಏವಮೇತನ್ಮಹಾರಾಜ ಯೇನ ಜಾತಃ ಸ ಏವ ಸಃ |
ತಪಸಸ್ತ್ವಪಕರ್ಷೇಣ ಜಾತಿಗ್ರಹಣತಾಂ ಗತಃ ॥3॥
ಪರಾಶರ ಮಹಾರಾಜನೇ, ನೀನು ಹೇಳಿದಂತೆ ಯಾವನು ಯಾವನಿಂದ ಹುಟ್ಟುತ್ತಾನೋ ಅವನು ಅವನೇ ಆಗುತ್ತಾನೆ. ಆದರೆ ತಪಸ್ಸಿನ ನ್ಯೂನತೆಯ ಕಾರಣದಿಂದ ಬ್ರಾಹ್ಮಣನಿಂದ ಕ್ಷತ್ರಿಯ ಜಾತಿಯ ವ್ಯಕ್ತಿಯು ಹುಟ್ಟುತ್ತಾನೆ.
ಸುಕ್ಷೇತ್ರಾಚ್ಚ ಸುಬೀಜಾಚ್ಚ ಪುಣ್ಯೋ ಭವತಿ ಸಂಭವಃ |

ಅತೋಽನ್ಯತರತೋ ಹೀನಾದವರೋ ನಾಮ ಜಾಯತೇ ॥4॥
ಕ್ಷೇತ್ರವು ಉತ್ತಮವಾಗಿದ್ದು, ಉತ್ತಮ ಬೀಜವಾಗಿದ್ದಲ್ಲಿ ಹುಟ್ಟುವ ಚೇತನವು ಪುಣ್ಯ ಪುರುಷನಾಗಿರುತ್ತಾನೆ. ಕ್ಷೇತ್ರ-ಬೀಜಗಳೆರಡರಲ್ಲಿ ಒಂದು ಹೀನವಾಗಿದ್ದರೂ ಅಧಮ ಸಂತಾನವು ಹುಟ್ಟುತ್ತದೆ.
ವಕ್ತತ್ರದ್ ಭುಜಾಭ್ಯಾಮೂರುಭ್ಯಾಂ ಪದ್ಭ್ಯಾಂ ಚೈವಾಥ ಜಜ್ಞಿರೇ |
ಸೃಜತಃ ಪ್ರಜಾಪತೇರ್ಲೋಕಾನಿತಿ ಧರ್ಮವಿದೋ ವಿದುಃ ॥5॥
ಪ್ರಜಾಪತಿ ಬ್ರಹ್ಮನು ಮನುಷ್ಯ ಜಗತ್ತನ್ನು ಸೃಷ್ಟಿ ಮಾಡುವ ಸಂದರ್ಭದಲ್ಲಿ ಮುಖ, ಬಾಹು, ತೊಡೆ, ಪಾದಗಳಿಂದ ಮನುಷ್ಯರನ್ನು ಸೃಷ್ಟಿಸಿದನೆಂದು ಧರ್ಮಜ್ಞಾನಿಗಳು ಹೇಳುತ್ತಾರೆ.
ಮುಖಜಾ ಬ್ರಾಹ್ಮಣಾಸ್ತಾತ ಬಾಹುಜಾಃ ಕ್ಷತ್ರಬಂಧವಃ |
ಊರುಜಾ ಧನಿನೋ ರಾಜನ್ ಪಾದಜಾಃ ಪರಿಚಾರಕಾಃ ॥6॥
ಚತುರ್ಮುಖ ಬ್ರಹ್ಮನ ಮುಖದಿಂದ ಹುಟ್ಟಿದವರು ಬ್ರಾಹ್ಮಣರು, ತೋಳಿನಿಂದ ಹುಟ್ಟಿದವರು ಕ್ಷತ್ರಿಯರು, ತೊಡೆಯಿಂದ ಹುಟ್ಟಿದವರು ಧನಿಗಳಾದ ವೈಶ್ಯರು, ಪಾದಗಳಿಂದ ಹುಟ್ಟಿದವರು ಪರಿಚಾರಕರಾದ ಶೂದ್ರರು.
ಚತುರ್ಣಾಮೇವ ವರ್ಣಾನಾಮಾಗಮಃ ಪುರುಷರ್ಷಭ |
ಅತೋಽನ್ಯೇ ತ್ವತಿರಿಕ್ತಾ ಯೇ ತೇ ವೈ ಸಂಕರಜಾಃ ಸ್ಮೃತಾಃ ॥7॥
ಚತುರ್ಮುಖ ಬ್ರಹ್ಮನ ನಾಲ್ಕು ಅಂಗಗಳಿಂದ ನಾಲ್ಕು ವರ್ಣದವರು ಮಾತ್ರ ಹುಟ್ಟಿದ್ದಾರೆ. ಈ ನಾಲ್ಕು ವರ್ಣದವರಿಗಿಂತ ಯಾರು ಅತಿರಿಕ್ತರಾಗಿದ್ದಾರೋ ಅವರೆಲ್ಲ ಸಾಂಕರ್ಯದಿಂದ ಹುಟ್ಟಿದವರು ಎಂದು ಹೇಳಲ್ಪಟ್ಟಿದೆ.
ಕ್ಷತ್ರಜಾತಿರಥಾಂಬಷ್ಠಾ ಉಗ್ರಾ ವೈದೇಹಕಾಸ್ತಥಾ |
ಶ್ವಪಾಕಾಃ ಪುಲ್ಕಸಾಃ ಸ್ತೇನಾ ನಿಷಾದಾಃ ಸೂತಮಾಗಧಾಃ ॥8॥
ಆಯೋಗಾಃ ಕರಣಾ ವ್ರಾತ್ಯಾಶ್ಚಂಡಾಲಾಶ್ಚ ನರಾಧಿಪ |
ಏತೇ ಚತುರ್ಭ್ಯೋ ವರ್ಣೇಭ್ಯೋ ಜಾಯಂತೇ ವೈ ಪರಸ್ಪರಮ್ ॥9॥
ರಾಜನೇ, ಕ್ಷತ್ರಿಯ, ಅತಿರಥ, ಅಂಬಷ್ಠ, ಉಗ್ರ, ವೈದೇಹ, ಶ್ವಪಾಕ, ಪುಲ್ಕಸ, ಸ್ತೇನ, ನಿಷಾದ, ಸೂತ, ಮಾಗಧ, ಆಯೋಗ, ಕರಣ, ವ್ರಾತ್ಯ, ಚಂಡಾಲ ಇವರೆಲ್ಲರೂ ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲಿ ಅನುಲೋಮ, ವಿಲೋಮ ವರ್ಣಗಳ ಸ್ತ್ರೀ ಪುರುಷರ ಸಂಯೋಗದಿಂದ ಹುಟ್ಟಿದವರು.
ಜನಕಃ
ಬ್ರಹ್ಮಣೈಕೇನ ಜಾತಾನಾಂ ನಾನಾತ್ವಂ ಗೋತ್ರತಃ ಕಥಮ್ |
ಬಹೂನೀಹ ಹಿ ಲೋಕೇ ವೈ ಗೋತ್ರಾಣಿ ಮುನಿಸತ್ತಮ ॥10॥
ಜನಕ ಚತುರ್ಮುಖ ಬ್ರಹ್ಮನಿಂದಲೇ ಹುಟ್ಟನ್ನು ಪಡೆದ ಇವರು ಗೋತ್ರಗಳಿಂದ ಬೇರೆ ಬೇರೆ ಹೇಗಾದರು? ಅನೇಕ ಗೋತ್ರಗಳು ಈ ಲೋಕದಲ್ಲಿ ಹೇಗೆ ಉಂಟಾದವು ಎಂಬುದನ್ನು ತಿಳಿಸಿ.
ಯತ್ರ ತತ್ರ ಕಥಂ ಜಾತಾಃ ಸ್ವಯೋನಿಂ ಮುನಯೋ ಗತಾಃ |
ಶೂದ್ರಯೋನೌ ಸಮುತ್ಪನ್ನಾ ವಿಯೋನೌ ಚ ತಥಾಪರೇ ॥11॥
ಮುನಿಗಳು ಎಲ್ಲೆಲ್ಲಿ, ಹೇಗೆ ಜನ್ಮವನ್ನು ತಾಳಿದ್ದಾರೆ? ಶೂದ್ರಯೋನಿಯಲ್ಲಿ ಉತ್ಪನ್ನರಾದವರು ಯಾರು? ವಿಪರೀತವಾದ ಯೋನಿಗಳಲ್ಲಿ ಉತ್ಪತ್ತಿಯನ್ನು ಪಡೆದ ವ್ಯಕ್ತಿಗಳು ಯಾರು ಎಂಬುದನ್ನು ತಿಳಿಸಿ.
ಪರಾಶರಃ
ರಾಜನ್ನೈತದ್ ಭವೇದ್ ಗ್ರಾಹ್ಯಮಪಕೃಷ್ಟೇನ ಜನ್ಮನಾ |
ಮಹಾತ್ಮನಾಂ ಸಮುತ್ಪತ್ತಿಸ್ತಪಸಾ ಭಾವಿತಾತ್ಮನಾಮ್ ॥12॥
ಪರಾಶರ ಮಹಾರಾಜನೇ, ತಪಸ್ಸಿನಿಂದ ಪವಿತ್ರಾತ್ಮರಾಗಿರುವ ಮಹಾತ್ಮರ ಜನ್ಮವು ನಿಕೃಷ್ಟವಾದ ಕ್ಷೇತ್ರದಲ್ಲಿ ಆಗಿದ್ದರೂ ಆ ಜನ್ಮವು ಗ್ರಾಹ್ಯವೇ ಆಗಿದೆ.
ಉತ್ಪಾದ್ಯ ಪುತ್ರಾನ್ಮುನಯೋ ನೃಪತೇ ಯತ್ರ ತತ್ರ ಹ |
ಸ್ವೇನೈವ ತಪಸಾ ತೇಷಾಮೃಷಿತ್ವಂ ವಿದಧುಃ ಪುನಃ ॥13॥
ಯೋಗ್ಯತೆಯನ್ನು ಸಂಪಾದಿಸಿಕೊಂಡು ಹುಟ್ಟನ್ನು ಪಡೆದಿರುವ ಮುನಿಗಳು ಎಲ್ಲೆಲ್ಲಿ ತಮ್ಮ ಸಂತಾನವನ್ನು ಪಡೆದುಕೊಂಡರೋ ತಮ್ಮ ತಪಸ್ಸಿನ ಪ್ರಭಾವದಿಂದ ತಮ್ಮ ಮಕ್ಕಳಿಗೆ ಋಷಿತ್ವವನ್ನೂ ಕೂಡ ಸಾಧಿಸಿಕೊಟ್ಟರು.
ಪಿತಾಮಹಶ್ಚ ಮೇ ಪೂರ್ವಮೃಶ್ಯಶೃಂಗಶ್ಚ ಕಾಶ್ಯಪಃ |
ವಟಸ್ತಾಂಡ್ಯಃ ಕೃಪಶ್ಚೈವ ಕಕ್ಷೀವಾನ್ ಕಮಠಾದಯಃ ॥14॥
ಯವಕ್ರೀತಶ್ಚ ನೃಪತೇ ದ್ರೋಣಶ್ಚ ವದತಾಂ ವರಃ |
ಆಯುರ್ಮತಂಗೋ ದತ್ತಶ್ಚ ದ್ರುಪದೋ ಮತ್ಸ್ಯ ಏವ ಚ ॥15॥
ಏತೇ ಸ್ವಾಂ ಪ್ರಕೃತಿಂ ಪ್ರಾಪ್ತಾ ವೈದೇಹ ತಪಸೋಽಽಶ್ರಯಾತ್ |
ಪ್ರತಿಷ್ಠಿತಾ ವೇದವಿದೋ ದಮೇ ತಪಸಿ ಚೈವ ಹಿ ॥16॥
ಜನಕನೇ, ನನ್ನ ಪಿತಾಮಹನಾದ ವಸಿಷ್ಠ, ಕಶ್ಯಪ ಗೋತ್ರಜನಾದ ಋಷ್ಯಶೃಂಗ, ವಟ, ತಾಂಡ್ಯ, ಕೃಪ, ಕಕ್ಷೀವಾನ್, ಕಮಠನೇ ಮೊದಲಾದವರು, ಯವಕ್ರೀತ, ವಾಗ್ಮಿಗಳಲ್ಲಿ ಶ್ರೇಷ್ಠನಾದ ದ್ರೋಣ, ಆಯು, ಮತಂಗ, ದತ್ತ, ದ್ರುಪದ, ಇವರಂತೆ ಮತ್ಸ್ಯ, ಇವರೆಲ್ಲರೂ ತಪಸ್ಸನ್ನು ಆಶ್ರಯಿಸಿ ಶ್ರೇಷ್ಠವಾದ ಪ್ರಕೃತಿಯನ್ನು ಅರ್ಥಾತ್ ಸ್ವಭಾವವನ್ನು ಹೊಂದಿದ್ದಾರೆ. ಇಂದ್ರಿಯಗಳ ಸಂಯಮ, ತಪಸ್ಸು ಇವುಗಳಿಂದ ವೇದ ವಿದ್ವಾಂಸರಾಗಿ ಉತ್ತಮ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಮೂಲಗೋತ್ರಾಣಿ ಚತ್ವಾರಿ ಸಮುತ್ಪನ್ನಾನಿ ಪಾರ್ಥಿವ |
ಅಂಗಿರಾಃ ಕಶ್ಯಪಶ್ಚೈವ ವಸಿಷ್ಠೋ ಭೃಗುರೇವ ಚ ॥17॥
ಜನಕರಾಜನೇ, ಆರಂಭದಲ್ಲಿ ಮೂಲಗೋತ್ರಗಳೆಂದು ನಾಲ್ಕು ಉತ್ಪತ್ತಿಯನ್ನು ಹೊಂದಿರುತ್ತವೆ. ಅಂಗಿರಸ, ಕಶ್ಯಪ, ವಸಿಷ್ಠ, ಭೃಗು ಎಂದು ನಾಲ್ಕು ಮೂಲ ಗೋತ್ರಗಳು.
ಕರ್ಮತೋಽನ್ಯಾನಿ ಗೋತ್ರಾಣಿ ಸಮುತ್ಪನ್ನಾನಿ ಪಾರ್ಥಿವ |
ನಾಮಧೇಯಾನಿ ತಪಸಾ ತಾನಿ ಚ ಗ್ರಹಣಂ ಸತಾಮ್ ॥18॥
ಉಳಿದ ಗೋತ್ರಗಳೆಲ್ಲವೂ ಕರ್ಮಕ್ಕನುಗುಣವಾಗಿ ಉತ್ಪತ್ತಿಯನ್ನು ಪಡೆದ ಗೋತ್ರಗಳೆಂದು ತಿಳಿಯಬೇಕು. ಆ ಗೋತ್ರಗಳ ಹೆಸರುಗಳು ಗೋತ್ರಗಳ ಪ್ರವರ್ತಕರಾದ ಋಷಿಗಳ ಹೆಸರಿನ ಕಾರಣದಿಂದ ಅಂಗೀಕರಿಸಲ್ಪಟ್ಟವು.
ಜನಕಃ
ವಿಶೇಷಧರ್ಮಾನ್ ವರ್ಣಾನಾಂ ಪ್ರಬ್ರೂಹಿ ಭಗವನ್ಮಮ |
ತಥಾ ಸಾಮಾನ್ಯಧರ್ಮಾಂಶ್ಚ ಸರ್ವತ್ರ ಕುಶಲೋ ಹ್ಯಸಿ ॥19॥
ಜನಕ ಪೂಜ್ಯರೇ, ನೀವು ಪ್ರತಿಯೊಂದು ವರ್ಣದಲ್ಲಿರುವ ವಿಶೇಷ ಧರ್ಮಗಳನ್ನು, ಸಾಮಾನ್ಯ ಧರ್ಮಗಳನ್ನು ತಿಳಿಸಿಕೊಡಿರಿ. ನೀವು ಎಲ್ಲಾ ವಿಷಯದಲ್ಲಿಯೂ ಜ್ಞಾನಿಗಳಾಗಿರುತ್ತೀರಿ.
ಪರಾಶರಃ
ಪ್ರತಿಗ್ರಹೋ ಯಾಜನಂ ಚ ತಥೈವಾಧ್ಯಾಪನಂ ನೃಪ |
ವಿಶೇಷಧರ್ಮೋ ವಿಪ್ರಾಣಾಂ ರಕ್ಷಾ ಕ್ಷತ್ರಸ್ಯ ಶೋಭನಾ ॥20॥
ಪರಾಶರ ಜನಕನೇ, ದಾನ ಸ್ವೀಕರಿಸುವುದು, ಯಜ್ಞ ಮಾಡಿಸುವುದು, ವೇದ ಶಾಸ್ತ್ರಗಳನ್ನು ಪಾಠ ಹೇಳುವುದು ಇವುಗಳು ಬ್ರಾಹ್ಮಣರಿಗೆ ವಿಶೇಷ ಧರ್ಮಗಳಾಗಿವೆ. ಪ್ರಜೆಗಳನ್ನು ರಕ್ಷಿಸುವುದು ರಾಜರ ವಿಶೇಷ ಧರ್ಮವೆನಿಸಿದೆ.
ಕೃಷಿಶ್ಚ ಪಾಶುಪಾಲ್ಯಂ ಚ ವಾಣಿಜ್ಯಂ ಚ ವಿಶಾಮಪಿ |
ದ್ವಿಜಾನಾಂ ಪರಿಚರ್ಯಾ ಚ ಶೂದ್ರಕರ್ಮ ನರಾಧಿಪ ॥21॥
ಕೃಷಿ, ಪಶುಪಾಲನೆ, ವ್ಯಾಪಾರ ಇವುಗಳು ವೈಶ್ಯರ ವಿಶೇಷ ಧರ್ಮಗಳಾಗಿವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು ಸೇವಿಸುವುದು ಶೂದ್ರರ ವಿಶೇಷ ಧರ್ಮವೆನಿಸಿದೆ.
ವಿಶೇಷಧರ್ಮಾ ನೃಪತೇ ವರ್ಣಾನಾಂ ಪರಿಕೀರ್ತಿತಾಃ |
ಧರ್ಮಾನ್ ಸಾಧಾರಣಾಂಸ್ತಾತ ವಿಸ್ತರೇಣ ಶೃಣುಷ್ವ ಮೇ ॥22॥
ರಾಜನೇ, ಪ್ರತಿಯೊಂದು ವರ್ಣದವರ ವಿಶೇಷ ಧರ್ಮಗಳನ್ನು ತಿಳಿಸಿದ್ದೇನೆ. ನಾಲ್ಕು ವರ್ಣದವರಿಗೂ ಇರುವ ಸಾಧಾರಣ ಧರ್ಮಗಳನ್ನು ವಿಸ್ತಾರವಾಗಿ ಹೇಳುತ್ತೇನೆ, ಕೇಳು.
ಆನೃಶಂಸ್ಯಮಹಿಂಸಾ ಚಾಪ್ರಮಾದಃ ಸಂವಿಭಾಗಿತಾ |
ಶ್ರಾದ್ಧಕರ್ಮಾತಿಥೇಯಂ ಚ ಸತ್ಯಮಕ್ರೋಧ ಏವ ಚ ॥23॥
ಸ್ವೇಷು ದಾರೇಷು ಸಂತೋಷಃ ಶೌಚಂ ನಿತ್ಯಾನಸೂಯತಾ |
ಆತ್ಮಜ್ಞಾನಂ ತಿತಿಕ್ಷಾ ಚ ಧರ್ಮಾಃ ಸಾಧಾರಣಾ ನೃಪ ॥24॥
ದಯಾ ಬುದ್ಧಿ, ಅಹಿಂಸೆ, ಪ್ರಮಾದರಾಹಿತ್ಯ, ಐಶ್ವರ್ಯವನ್ನು ಯಥಾ ಯೋಗ್ಯವಾಗಿ ವಿಭಾಗ ಮಾಡಿಕೊಡುವುದು, ಶ್ರಾದ್ಧ ಕರ್ಮ, ಅತಿಥಿ ಸತ್ಕಾರ, ಸತ್ಯ, ಅಕ್ರೋಧ, ತಮ್ಮ ಪತ್ನಿಯರಲ್ಲಿಯೇ ಸಂತೋಷವನ್ನು ಹೊಂದಿರುವುದು, ಪಾವಿತ್ರ್ಯ, ಇತರರಲ್ಲಿ ದ್ವೇಷ ಮಾಡದಿರುವುದು, ಪರಮಾತ್ಮನ ಜ್ಞಾನ, ಸಹನೆ- ಈ ಎಲ್ಲಾ ಧರ್ಮಗಳು ಎಲ್ಲರಲ್ಲಿಯೂ ಇರಬೇಕಾದ ಸಾಧಾರಣ ಧರ್ಮಗಳು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತ್ರಯೋ ವರ್ಣಾ ದ್ವಿಜಾತಯಃ |
ಅತ್ರ ತೇಷಾಮಧೀಕಾರೋ ಧರ್ಮೇಷು ದ್ವಿಪದಾಂ ವರ ॥25॥
ರಾಜಶ್ರೇಷ್ಠನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಯವರನ್ನು ದ್ವಿಜಾತಿಗಳು ಎನ್ನುತ್ತಾರೆ. ಈ ಹಿಂದೆ ಹೇಳಿದ ಗುಣಗಳಲ್ಲಿ ಈ ಜಾತಿಯವರೇ ಮುಖ್ಯ ಅಧಿಕಾರಿಗಳಾಗಿರುತ್ತಾರೆ.
ವಿಕರ್ಮಾವಸ್ಥಿತಾ ವರ್ಣಾಃ ಪತಂತಿ ನೃಪತೇ ತ್ರಯಃ |
ಉನ್ನಮಂತಿ ಯಥಾಸಂತಮಾಶ್ರಿತ್ಯೇಹ ಸ್ವಕರ್ಮಸು ॥26॥
ರಾಜನೇ, ಮೂರು ವರ್ಣದವರೂ ಹಿಂದೆ ಹೇಳಿದ ಧರ್ಮಗಳಿಗೆ ವಿರುದ್ಧವಾಗಿ ಕರ್ಮಗಳನ್ನು ಮಾಡಿದರೆ ಪಾತಿತ್ಯವನ್ನು ಹೊಂದುತ್ತಾರೆ. ಶಾಸ್ತ್ರೋಕ್ತ ವಿಧಿಯಲ್ಲಿಯೇ ಧರ್ಮನಿಷ್ಠರಾಗಿದ್ದಲ್ಲಿ ಉನ್ನತಿಯನ್ನು ಹೊಂದುತ್ತಾರೆ.
ನ ಚಾಪಿ ಶೂದ್ರಃ ಪತತೀತಿ ನಿಶ್ಚಯೋ
ನ ಚಾಪಿ ಸಂಸ್ಕಾರಮಿಹಾರ್ಹತೀತಿ ವಾ |
ಶ್ರುತಿಪ್ರವೃತ್ತಂ ನ ಚ ಧರ್ಮಮಾಪ್ನುತೇ
ನ ಚಾಸ್ಯ ಧರ್ಮೇ ಪ್ರತಿಷೇಧನಂ ಕೃತಮ್ ॥27॥
ಶೂದ್ರನಾದವನು ಗರ್ಭಾಧಾನದಿಂದ ಯಾವ ಸಂಸ್ಕಾರಗಳನ್ನು ಹೊಂದದಿದ್ದಲ್ಲಿಯೂ ಪಾತಿತ್ಯವನ್ನು ಹೊಂದುವುದಿಲ್ಲ, ಇದು ನಿಶ್ಚಯ. ಶ್ರುತ್ಯುಕ್ತವಾದ ಯಾವುದೇ ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡುವ ಅಧಿಕಾರವು ಶೂದ್ರನಿಗೆ ಇರುವುದಿಲ್ಲ. ಈ ಶೂದ್ರನಿಗೆ ಯೋಗ್ಯ ಬ್ರಾಹ್ಮಣ ಸೇವಾ ರೂಪ ಧರ್ಮದಲ್ಲಿ ಯಾವುದೇ ನಿಷೇಧವು ಇರುವುದಿಲ್ಲ. (ಇದೇ ಶೂದ್ರನಿಗೆ ಮುಖ್ಯವಾದ ಧರ್ಮ ಎನಿಸುತ್ತದೆ ಎಂದು ಭಾವ).
ವೈದೇಹಕಂ ಶೂದ್ರಮುದಾಹರಂತಿ

ದ್ವಿಜಾ ಮಹಾರಾಜ ಶ್ರುತೋಪಪನ್ನಾಃ |
ಅಹಂ ಹಿ ಪಶ್ಯಾಮಿ ನರೇಂದ್ರ ದೇವಂ
ವಿಶ್ವಸ್ಯ ವಿಷ್ಣುಂ ಜಗತಃ ಪ್ರಧಾನಮ್ ॥28॥
ವಿದೇಹರಾಜನೇ, ಬ್ರಾಹ್ಮಣ ಸ್ತ್ರೀಯಲ್ಲಿ ವೈಶ್ಯ ಪುರುಷರಲ್ಲಿ ಹುಟ್ಟಿದ ಮಗನನ್ನು ಶೂದ್ರನೆಂದು ಹೇಳುತ್ತಾರೆ. ನರೇಂದ್ರನೇ, ನಾನು ಸಮಸ್ತ ಜಗತ್ತಿಗೆ ಪ್ರಧಾನ ಪುರುಷನಾಗಿ ವಿಷ್ಣುವನ್ನೇ ನೋಡುತ್ತೇನೆ. ಬ್ರಾಹ್ಮಣ-ಕ್ಷತ್ರಿಯರೆಲ್ಲರಿಗೂ ನಿಯಾಮಕನಾದವನು ಮಹಾವಿಷ್ಣುವೇ ಆಗಿದ್ದಾನೆ.
ಸತಾಂ ವೃತ್ತಮನುಷ್ಠಾಯ ನಿಹೀನಾ ಉಜ್ಜಿಹೀರ್ಷವಃ |
ಮಂತ್ರವರ್ಜಂ ನ ದುಷ್ಯಂತಿ ಕುರ್ವಾಣಾಃ ಪೌಷ್ಟಿಕೀಃ ಕ್ರಿಯಾಃ ॥29॥
ಆತ್ಮೋದ್ಧಾರವನ್ನು ಬಯಸುವ ಶೂದ್ರರು ಸಜ್ಜನರು ಅನುಷ್ಠಾನ ಮಾಡುವ ಸದಾಚಾರಗಳನ್ನು ತಾವೂ ಪರಿಪಾಲಿಸುತ್ತಾ ಮಂತ್ರಗಳಿಲ್ಲದೆ ಇರುವ ತಮ್ಮ ಉನ್ನತಿಗೆ ಕಾರಣವಾದ ಕರ್ಮಗಳನ್ನು ಆಚರಿಸಬೇಕು. ಹೀಗೆ ಕರ್ಮಗಳನ್ನು ಮಾಡುವುದರಿಂದ ಶೂದ್ರರೂ ಮಹತ್ವವನ್ನು ಹೊಂದುತ್ತಾರೆ.
ಯಥಾ ಯಥಾ ಹಿ ಸದ್ವೃತ್ತಮಾಲಂಬಂತೀತರೇ ಜನಾಃ |
ತಥಾ ತಥಾ ಸುಖಂ ಪ್ರಾಪ್ಯ ಪ್ರೇತ್ಯ ಚೇಹ ಚ ಶೇರತೇ ॥30॥
ಬೇರೆ ಜಾತಿಯವರು ಯಾವ ಯಾವ ಸದಾಚಾರಗಳನ್ನು ಆಚರಿಸುತ್ತಾರೋ ಅದಕ್ಕನುಗುಣವಾದ, ತನಗೆ ಯೋಗ್ಯವಾದ ಸದಾಚಾರಗಳನ್ನು ಶೂದ್ರನು ಆಚರಿಸಿದಲ್ಲಿ ಇಹಲೋಕದಲ್ಲಿ ಆನಂದವನ್ನು ಅನುಭವಿಸುತ್ತಾನೆ.
ಜನಕಃ
ಕಿಂ ಕರ್ಮ ದೂಷಯತ್ಯೇನಮಥ ಜಾತಿರ್ಮಹಾಮುನೇ |
ಸಂದೇಹೋ ಮೇ ಸಮುತ್ಪನ್ನಸ್ತನ್ಮೇ ವ್ಯಾಖ್ಯಾತುಮರ್ಹಸಿ ॥31॥
ಜನಕ ಮಹಾಮುನಿಯೇ, ಒಬ್ಬ ಮನುಷ್ಯನನ್ನು ದೂಷಿತ ಎಂದು ಹೇಳುವುದು ಕರ್ಮಪ್ರಯುಕ್ತವೋ ಅಥವಾ ಜಾತಿಯಿಂದಲೋ? ಈ ಸಂದೇಹವು ನನಗೆ ಉಂಟಾಗಿದೆ. ಈ ವಿಷಯವನ್ನು ವಿಷದಪಡಿಸಿರಿ.
ಪರಾಶರಃ
ಅಸಂಶಯಂ ಮಹಾರಾಜ ಉಭಯಂ ದೋಷಕಾರಕಮ್ |
ಕರ್ಮ ಚೈವ ಹಿ ಜಾತಿಶ್ಚ ವಿಶೇಷಂ ತು ನಿಶಾಮಯ ॥32॥
ಪರಾಶರ ಮಹಾರಾಜನೇ, ಮನುಷ್ಯನನ್ನು ದೂಷಿತ ಎಂದು ಕರೆಯಲು ಕರ್ಮ, ಜಾತಿ ಎರಡೂ ಕಾರಣಗಳಾಗಿವೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಇವುಗಳಲ್ಲಿರುವಂತಹ ವಿಶೇಷವನ್ನು ತಿಳಿದುಕೊ.
ಜಾತ್ಯಾ ಚ ಕರ್ಮಣಾ ಚೈವ ದುಷ್ಟಂ ಕರ್ಮ ನಿಷೇವತೇ |
ಜಾತ್ಯಾ ದುಷ್ಟಶ್ಚ ಯಃ ಪಾಪಂ ನ ಕರೋತಿ ಸ ಪೂರುಷಃ ॥33॥
ಜಾತಿಯಿಂದಲೂ ಕರ್ಮದಿಂದಲೂ ಉತ್ತಮತ್ವವನ್ನು ಸಂಪಾದಿಸಿಕೊಂಡಿರುವ, ದುಷ್ಟಕರ್ಮ ಮಾಡದಿರುವ ವ್ಯಕ್ತಿಯನ್ನು ಉತ್ತಮ ಪುರುಷನೆನ್ನುತ್ತಾರೆ. ಹಾಗೆ ಜಾತಿಯಿಂದ ದುಷ್ಟನಾಗಿದ್ದರೂ ಪಾಪಕರ್ಮಗಳನ್ನು ಮಾಡದಿದ್ದಲ್ಲಿ ಅವನನ್ನೂ ಉತ್ತಮ ಪುರುಷನೆಂದೇ ಕರೆಯುತ್ತಾರೆ.
ಜಾತ್ಯಾ ಪ್ರಧಾನಂ ಪುರುಷಂ ಕುರ್ವಾಣಂ ಕರ್ಮ ಧಿಕ್ಕೃತಮ್ |
ಕರ್ಮ ತದ್ ದೂಷಯತ್ಯೇನಂ ತಸ್ಮಾತ್ ಕರ್ಮ ನ ಶೋಭನಮ್ ॥
ಜಾತಿಯಿಂದ ಶ್ರೇಷ್ಠತ್ವವನ್ನು ಪಡೆದಿದ್ದರೂ ನಿಂದಿತ ಕರ್ಮದಲ್ಲಿ ಆಸಕ್ತನಾಗಿದ್ದರೆ ಉತ್ತಮ ಜಾತಿಯನ್ನು ಹೊಂದಿದ ಆ ವ್ಯಕ್ತಿಯನ್ನು ದುಷ್ಕರ್ಮಗಳು ಪತಿತನನ್ನಾಗಿ ಮಾಡುತ್ತವೆ. ಆದ್ದರಿಂದ ದೂಷಿತವಾದ ಕರ್ಮಗಳನ್ನು ಆಚರಿಸುವುದು ಎಂದೂ ಮಂಗಳಕರವಾದುದಲ್ಲ.
ಜನಕಃ
ಕಾನಿ ಕರ್ಮಾಣಿ ಧರ್ಮ್ಯಾಣಿ ಲೋಕೇಽಸ್ಮಿನ್ ದ್ವಿಜಸತ್ತಮ |
ನ ಹಿಂಸಂತೀಹ ಭೂತಾನಿ ಕ್ರಿಯಮಾಣಾನಿ ಸರ್ವದಾ ॥35॥
ಜನಕ ಬ್ರಾಹ್ಮಣಶ್ರೇಷ್ಠರೇ, ಸಮಸ್ತ ಕಾಲಗಳಲ್ಲಿಯೂ ಆಚರಿಸಲು ಯೋಗ್ಯವಾದ, ಧರ್ಮಯುಕ್ತವಾದ ಕರ್ಮಗಳು ಯಾವುವು? ಯಾವ ಪ್ರಾಣಿಗಳಿಗೂ ಹಿಂಸೆಯಾಗದಿರುವಂತೆ ಯಾವ ಧರ್ಮಕಾರ್ಯಗಳನ್ನು ಯಾವಾಗಲೂ ಆಚರಿಸಬೇಕು?
ಪರಾಶರಃ
ಶೃಣು ಮೇಽತ್ರ ಮಹಾರಾಜ ಯನ್ಮಾಂ ತ್ವಂ ಪರಿಪೃಚ್ಛಸಿ |
ಯಾನಿ ಕರ್ಮಾಣ್ಯಹಿಂಸ್ರಾಣಿ ನರಂ ತ್ರಾಯಂತಿ ಸರ್ವದಾ ॥36॥
ಪರಾಶರ ಮಹಾರಾಜನೇ, ನೀನು ಯಾವ ಧರ್ಮಕಾರ್ಯಗಳ ವಿಷಯದಲ್ಲಿ ಪ್ರಶ್ನೆ ಮಾಡಿರುತ್ತೀಯೋ ಅದನ್ನು ಹೇಳುತ್ತೇನೆ. ಯಾವ ಕರ್ಮಗಳು ಅಹಿಂಸಾ ಕರ್ಮಗಳಾಗಿವೆ, ರಕ್ಷಕ ಕರ್ಮಗಳ್ಯಾವುವು ಎಂಬುದನ್ನು ಕ್ರಮವಾಗಿ ತಿಳಿಸುತ್ತೇನೆ.
ಸಂನ್ಯಸ್ಯಾಗ್ನೀನುಪಾಸೀನಾಃ ಪಶ್ಯಂತಿ ವಿಗತಜ್ವರಾಃ |
ನೈಃಶ್ರೇಯಸಂ ಧರ್ಮಪಥಂ ಸಮಾರುಹ್ಯ ಯಥಾಕ್ರಮಮ್ ॥37॥
ಪ್ರಶ್ರಿತಾ ವಿನಯೋಪೇತಾ ದಮನಿತ್ಯಾಃ ಸುಸಂಶಿತಾಃ |
ಪ್ರಯಾಂತಿ ಸ್ಥಾನಮಜರಂ ಸರ್ವಕರ್ಮವಿವರ್ಜಿತಾಃ ॥38॥
ಯಾರು ಅಗ್ನಿಯನ್ನು ಆತ್ಮಾರೋಪಣೆ ಮಾಡಿಕೊಂಡು ಸಂನ್ಯಾಸದೀಕ್ಷೆಯನ್ನು ಸ್ವೀಕರಿಸಿ ಜಗತ್ತೆಲ್ಲವನ್ನೂ ಸ್ವಿತಪ್ರಜ್ಞರಾಗಿ

ಕಾಣುತ್ತಾರೋ, ಎಲ್ಲ ವಿಧವಾದ ಚಿಂತೆಯಿಂದ ರಹಿತರಾಗಿ ಶಾಸ್ತ್ರವಿಹಿತವಾದ ಇಂದ್ರಿಯನಿಗ್ರಹ ಮೊದಲಾದ ಗುಣಗಳಿಂದ ಮುಕ್ತಿ ಯೋಗ್ಯವಾದ ಕರ್ಮಗಳನ್ನು ಮಾಡುತ್ತಿರುತ್ತಾರೋ ಅವರು ಸರ್ವಕರ್ಮಗಳಿಂದಲೂ ಬಂಧಿತರಾಗದೆ ಎಂದೂ ನಾಶವಿಲ್ಲದೆ ಇರುವ ನಿತ್ಯವಾದ ಸ್ಥಾನವನ್ನು ಹೊಂದುತ್ತಾರೆ.

ಸರ್ವೇ ವರ್ಣಾ ಧರ್ಮಕಾರ್ಯಾಣಿ ಸಮ್ಯಕ್
ಕೃತ್ವಾ ರಾಜನ್ ಸತ್ಯವಾಕ್ಯಾನಿ ಚೋಕತ್ವ |
ತ್ಯಕತ್ವ ಧರ್ಮಂ ದಾರುಣಂ ಜೀವಲೋಕೇ
ಯಾಂತಿ ಸ್ವರ್ಗಂ ನಾತ್ರ ಕಾರ್ಯೋ ವಿಚಾರಃ ॥39॥

ಜನಕರಾಜನೇ, ಈ ಜಗತ್ತಿನಲ್ಲಿ ಸಮಸ್ತ ವರ್ಣದವರೂ ಭಯಾನಕ ಪಾಪ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಿ ಸ್ವವರ್ಣೋಚಿತವಾದ ಧರ್ಮ ಕಾರ್ಯಗಳನ್ನು ಮಾಡುತ್ತಾ ಸತ್ಯನಿಷ್ಠರಾಗಿದ್ದರೆ ಅವರು ಸತ್ತ ಬಳಿಕ ಸ್ವರ್ಗವನ್ನೇ ಸೇರುತ್ತಾರೆ. ಇದರಲ್ಲಿ ವಿಚಾರ ಮಾಡುವ ಅಂಶವು ಇರುವುದಿಲ್ಲ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಾವಿಂಶೋತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ನೂರ ಮೂವತ್ತನೆಯ ಅಧ್ಯಾಯ

ಪರಾಶರ ಗೀತಾ.

ಪರಾಶರಃ

ಪಿತಾ ಸಖಾಯೋ ಗುರವಃ ಸ್ತ್ರಿಯಶ್ಚ
ನ ನಿರ್ಗುಣಾ ನಾಮ ಭವಂತಿ ಲೋಕೇ |
ಅನನ್ಯಭಕ್ತಾಃ ಪ್ರಿಯವಾದಿನಶ್ಚ
ಹಿತಾಶ್ಚ ವಶ್ಯಾಶ್ಚ ತಥೈವ ರಾಜನ್ ॥1॥

ಪರಾಶರ ಜನಕರಾಜನೇ, ಯಾರು ಗುಣಗಳಿಂದ ಹೀನರಾಗಿರುತ್ತಾರೋ ಅವರ ಪಾಲಿಗೆ ತಂದೆ, ಸ್ನೇಹಿತರು, ಗುರುಗಳು, ಸ್ತ್ರೀಯರು ಯಾರೂ ಹಿತಚಿಂತಕರಾಗಿರುವುದಿಲ್ಲ. ಯಾರು ಇವರ ವಿಷಯದಲ್ಲಿ ಸನ್ನಡತೆಯುಳ್ಳವರಾಗಿ, ಪ್ರಿಯವಾದ ಮಾತುಗಳನ್ನಾಡುವವರಾಗಿ ಭಗವಂತನಲ್ಲಿ ಅನನ್ಯ ಭಕ್ತಿಯುಳ್ಳವರಾಗಿರುತ್ತಾರೋ ಅವರಿಗೆ ತಂದೆ, ಸ್ನೇಹಿತ, ಗುರುಗಳು, ಸ್ತ್ರೀಯರು ಎಲ್ಲರೂ ಅಧೀನರಾಗಿಯೂ ಹಿತಕಾರಿಗಳಾಗಿಯೂ ಇರುತ್ತಾರೆ.

ಪಿತಾ ಪರಂ ದೈವತಂ ಮಾನವಾನಾಂ
ಮಾತುರ್ವಿಶಿಷ್ಟಂ ಪಿತರಂ ವದಂತಿ |
ಜ್ಞಾನಸ್ಯ ಲಾಭಂ ಪರಮಂ ವದಂತಿ
ಜಿತೇಂದ್ರಿಯಾರ್ಥಾಃ ಪರಮಾಪ್ನುವಂತಿ ॥2॥

ಮಾನವರಿಗೆಲ್ಲ ತಂದೆಯೇ ಪರದೈವತೆ ಎನಿಸಿದ್ದಾನೆ. ತಾಯಿಗಿಂತಲೂ ಅಧಿಕವಾದ ಮಹತ್ವವುಳ್ಳವನು ತಂದೆಯು. ಕಾರಣ ತತ್ತ್ವಜ್ಞಾನವನ್ನು ನೀಡುವ ಅರ್ಹತೆಯುಳ್ಳವನು ತಂದೆಯಾಗಿರುತ್ತಾನೆ. ನಿಜವಾದ ಲಾಭವು ಜ್ಞಾನಲಾಭವೇ ಎನಿಸಿದೆ. ಈ ಜ್ಞಾನಲಾಭದಿಂದ ಜಿತೇಂದ್ರಿಯರಾಗಿ ಪದಾರ್ಥಗಳನ್ನು ಅಧೀನ ಪಡಿಸಿಕೊಂಡು ಸರ್ವೋತ್ತಮನಾದ ಭಗವಂತನನ್ನೇ ಹೊಂದುತ್ತಾರೆ.

ರಣಾಜಿರೇ ಯತ್ರ ಶರಾಗ್ನಿಸಂಸ್ತರೇ
ನೃಪಾತ್ಮಜೋ ಘಾತಮವಾಪ್ಯ ದಹ್ಯತೇ |
ಪ್ರಯಾತಿ ಲೋಕಾನಮರೈಃ ಸುದುರ್ಲಭಾನ್
ನಿಷೇವತೇ ಸ್ವರ್ಗಫಲಂ ಯಥಾಸುಖಮ್ ॥3॥

ರಣರಂಗದಲ್ಲಿ ಘಾಸಿಗೊಂಡು ಬಾಣರೂಪವಾದ ಚಿತಾಗ್ನಿಯಲ್ಲಿ ದಗ್ಧನಾಗುವ ಕ್ಷತ್ರಿಯನ ಮಗನು ದೇವತೆಗಳಿಂದಲೂ ಹೊಂದಲು ದುಸ್ಸಾಧ್ಯವಾದ ಪುಣ್ಯ ಲೋಕಗಳಿಗೆ ಹೋಗುತ್ತಾನೆ. ಆ ಸ್ವರ್ಗದಲ್ಲಿ ಇರುವ ಸುಖ ಫಲಗಳನ್ನು ಸಂತೋಷದಿಂದ ಅನುಭವಿಸುತ್ತಾನೆ.

ಶ್ರಾಂತಂ ಭೀತಂ ಭ್ರಷ್ಟಶಸ್ತ್ರಂ ರುದಂತಂ
ಪರಾಙ್ಮುಖಂ ಪರಿಬರ್ಹೈಶ್ಚ ಹೀನಮ್ |
ಅನುದ್ಯತಂ ರೋಗಿಣಂ ಯಾಚಮಾನಂ
ನ ವೈ ಹಿಂಸ್ಯಾದ್ ಬಾಲವೃದ್ಧೌ ಚ ರಾಜನ್ ॥4॥

ಯಾರು ತುಂಬಾ ಬಳಲಿದ್ದಾರೋ, ಹೆದರಿದ್ದಾರೋ, ಶಸತ್ರಸ್ತ್ರಗಳನ್ನು ಕಳೆದುಕೊಂಡಿದ್ದಾರೋ, ರೋದಿಸುತ್ತಿದ್ದಾರೋ, ಯುದ್ಧಭೂಮಿಯಿಂದ ಹಿಮ್ಮೆಟ್ಟಿ ಓಡುತ್ತಿದ್ದಾರೋ, ಯುದ್ಧ ಸಾಮಗ್ರಿಗಳಿಂದ ಮತ್ತು ಸೇವಕರಿಂದ ಹೀನರಾಗಿದ್ದಾರೋ, ಯುದ್ಧ ಪ್ರಯತ್ನದಲ್ಲಿ ನಿರತರಾಗಿರುವುದಿಲ್ಲವೋ, ರೋಗಿಗಳಾಗಿದ್ದಾರೋ, ಪ್ರಾಣ ಭಿಕ್ಷೆಯನ್ನು ಬೇಡುತ್ತಿದ್ದಾರೋ ಅಥವಾ ಬಾಲಕ ಹಾಗೂ ವೃದ್ಧರಾಗಿದ್ದಾರೋ ಇವರನ್ನು ರಾಜನೇ, ಎಂದಿಗೂ ಹಿಂಸಿಸಬಾರದು.

ಪರಿಬರ್ಹೈಃ ಸುಸಂಪನ್ನಮುದ್ಯತಂ ತುಲ್ಯತಾಂ ಗತಮ್ |
ಅತಿಕ್ರಮೇತ ನೃಪತಿಃ ಸಂಗ್ರಾಮೇ ಕ್ಷತ್ರಿಯಾತ್ಮಜಮ್ ॥5॥

ಯುದ್ಧದ ಸಾಮಗ್ರಿಗಳು, ಸೇವಕರು, ಅನುಚರರಿಂದ ಕೂಡಿರುವ, ಯುದ್ಧ ಮಾಡಲು ಸಿದ್ಧರಾಗಿರುವ, ತನಗೆ ಸಮಾನರಾಗಿರುವ ಕ್ಷತ್ರಿಯ

ಪುತ್ರನನ್ನೇ ರಾಜನಾದವನು ಎದುರಿಸಬೇಕು.
ತುಲ್ಯಾದಿಹ ವಧಃ ಶ್ರೇಯಾನ್ ವಿಶಿಷ್ಟಾಚ್ಚೇತಿ ನಿಶ್ಚಯಃ |
ನಿಹೀನಾತ್ ಕಾತರಾಚ್ಚೈವ ನೃಪಾಣಾಂ ಗರ್ಹಿತೋ ವಧಃ ॥6॥
ತನಗೆ ಸಮಾನನಾದ ವ್ಯಕ್ತಿಯಿಂದ ಅಥವಾ ತನಗಿಂತಲೂ ಬಲಿಷ್ಠನಾದವನಿಂದ ಯಾವನು ಸಾವನ್ನಪ್ಪುತ್ತಾನೋ ಅವನಿಗೆ ಶ್ರೇಯಸ್ಸು ದೊರೆಯುತ್ತದೆ. ತನಗಿಂತ ಹೀನನಾದವನಿಂದ, ಹೇಡಿಯಿಂದ, ಕೃಪಣನಿಂದ ವಧ್ಯನಾದವನು ನಿಂದ್ಯನಾಗುತ್ತಾನೆ.
ಪಾಪಾತ್ ಪಾಪಸಮಾಚಾರಾನ್ನಿಹೀನಾಚ್ಚ ನರಾಧಿಪ |
ಪಾಪ ಏವ ವಧಃ ಪ್ರೋಕ್ತೋ ನರಕಾಯೇತಿ ನಿಶ್ಚಯಃ ॥7॥
ಪಾಪಿಷ್ಠರಿಂದಲೂ, ಪಾಪಾಚಾರಗಳಿಂದ ಕೂಡಿದವರಿಂದಲೂ, ನೀಚ ಪುರುಷನಿಂದಲೂ ವಧೆಗೀಡಾಗುವವನು ಪಾಪಕ್ಕೇ ತುತ್ತಾಗುತ್ತಾನೆ. ಅಂತಹವರಿಂದ ಮರಣವನ್ನು ಹೊಂದುವವರು ನರಕಕ್ಕೇ ಹೋಗುತ್ತಾರೆಂಬುದು ನಿಶ್ಚಯವು.
ನ ಕಶ್ಚಿತ್ ತ್ರಾತಿ ವೈ ರಾಜನ್ ದಿಷ್ಟಾಂತವಶಮಾಗತಮ್ |
ಸಾವಶೇಷಾಯುಷಂ ಚಾಪಿ ಕಶ್ಚಿದೇವಾಪಕರ್ಷತಿ ॥8॥
ಜನಕರಾಜನೇ, ಮೃತ್ಯುವಿಗೆ ವಶರಾಗಿರುವ ಮನುಷ್ಯನನ್ನು ಯಾರೇ ಆದರೂ ಉದ್ಧರಿಸಲು ಸಾಧ್ಯವಿಲ್ಲ. ಅದರಂತೆ ಆಯುಷ್ಯದ ಶೇಷವು ಇನ್ನೂ ಉಳಿದಿರುವವರನ್ನು ಯಾರಿಂದಲೂ ಸಂಹರಿಸಲೂ ಸಾಧ್ಯವಿಲ್ಲ.
ಸ್ನಿಗ್ಧೈಶ್ಚ ಕ್ರಿಯಮಾಣಾನಿ ಕರ್ಮಾಣೀಹ ನಿವರ್ತಯೇತ್ |
ಹಿಂಸಾತ್ಮಕಾನಿ ಕರ್ಮಾಣಿ ನಾಯುರಿಚ್ಛೇತ್ ಪರಾಯುಷಾ ॥9॥
ತನ್ನ ಪ್ರೀತಿಪಾತ್ರರಾದ ಜನರೇ ಹಿಂಸಾಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆ ಅವರನ್ನು ಆ ಕಾರ್ಯಗಳಿಂದ ತಡೆಯಬೇಕು. ಇನ್ನೊಬ್ಬರ ಆಯುಷ್ಯವನ್ನು ನಾಶಪಡಿಸಿ ತಾನು ಬದುಕಲು ಎಂದೂ ಇಚ್ಛಿಸಬಾರದು.
ಗೃಹಸ್ಥಾನಾಂ ತು ಸರ್ವೇಷಾಂ ವಿನಾಶಮಭಿಕಾಂಕ್ಷತಾಮ್ |
ನಿಧನಂ ಶೋಭನಂ ತಾತ ಪುಳಿನೇಷು ಕ್ರಿಯಾವತಾಮ್ ॥10॥
ನಿತ್ಯ ಕರ್ಮಗಳನ್ನು ಮಾಡಲು ಸಾಮರ್ಥ್ಯವಿಲ್ಲದೆ ಮರಣವನ್ನು ಬಯಸುವಂತಹ ಗೃಹಸ್ಥರಿಗೆ ನದಿತೀರಗಳಲ್ಲಿ ಹೋಗಿ ಶುಭಕರ್ಮಗಳನ್ನು ಆಚರಿಸುತ್ತಿರುವಾಗಲೇ ಮರಣವನ್ನು ಹೊಂದುವುದು ಶ್ರೇಯಸ್ಕರವಾದುದು.
ಆಯುಷಿ ಕ್ಷಯಮಾಪನ್ನೇ ಪಂಚತ್ವಮುಪಗಚ್ಛತಿ |
ನಾಕಾರಣಾತ್ತದ್ಭವತಿ ಕಾರಣೈರುಪಪಾದಿತಮ್ ॥11॥
ಆಯುಷ್ಯವು ಮುಗಿದ ಕೂಡಲೇ ಮನುಷ್ಯನು ಮರಣವನ್ನು ಹೊಂದುತ್ತಾನೆ. ಕೆಲವೊಮ್ಮೆ ಯಾವ ಕಾರಣವೂ ಇಲ್ಲದೆಯೇ ಮರಣವು ಸಂಭವಿಸುವಂತೆ ರೋಗಾದಿ ಕಾರಣದಿಂದಲೂ ಮರಣವು ಸಂಭವಿಸುತ್ತದೆ.
ತಥಾ ಶರೀರಂ ಭವತಿ ದೇಹಾದ್ಯೇನೋಪಪಾದಿತಮ್ |
ಅಧ್ವಾನಂ ಗತಕಶ್ಚಾಯಂ ಪ್ರಾಪ್ತಶ್ಚಾಯಂ ಗೃಹಾದ್ ಗೃಹಮ್ ॥12॥
ಮನುಷ್ಯನಿಂದ ಪ್ರಯತ್ನ ಪೂರ್ವಕವಾಗಿಯೇ ಶರೀರದ ತ್ಯಾಗವು ಮಾಡಿಕೊಂಡಲ್ಲಿ ಅವನು ಕರ್ಮಕ್ಕೆ ಅನುಗುಣವಾದ ಗತಿಯನ್ನು ಹೊಂದದೆ ಇನ್ನೊಂದು ದೇಹವನ್ನು ಮಧ್ಯದಲ್ಲಿಯೇ ಹೊಂದುತ್ತಾನೆ. ಸರಿಯಾದ ಸದ್ಗತಿಯನ್ನು ಪಡೆಯದೆ ಮತ್ತೊಬ್ಬರ ದೇಹವನ್ನು ಪ್ರವೇಶಿಸುತ್ತಾನೆ ಎಂದು ಭಾವ. ಮತ್ತೊಂದು ದೇಹದಿಂದ ಇನ್ನೊಂದು ದೇಹಕ್ಕೆ ಹೋಗುತ್ತಿರುತ್ತಾನೆ.
ದ್ವಿತೀಯಂ ಕಾರಣಂ ತತ್ರ ನಾನ್ಯತ್ ಕಿಂಚನ ವಿದ್ಯತೇ |
ತದ್ದೇಹಂ ದೇಹಿನಾಂ ಯುಕ್ತಂ ಮೋಕ್ಷಭೂತೇಷು ವರ್ತತೇ ॥13॥
ಬೇರೆ ದೇಹವನ್ನು ಹೊಂದಲು ದೇಹವನ್ನು ತ್ಯಾಗ ಮಾಡಿಕೊಂಡಿರುವ ದೋಷವೇ ಕಾರಣವಾಗಿದೆ. ಬೇರೆ ಯಾವ ಕಾರಣವೂ ಇರುವುದಿಲ್ಲ. ಆಯುಸ್ಸಿನ ಶೇಷವನ್ನು ಹೊಂದುವಂತಹ ಹೊಸ ದೇಹವು ಭೂತಗಳಿಗೂ ಪಿಶಾಚಿಗಳಿಗೂ ಸಂಬಂಧಿಸಿರುವಂತಹದ್ದು.
ಸಿರಾಸ್ನಾಯ್ವಸ್ಥಿಸಂಘಾತಂ ಬೀಭತ್ಸಾಮೇಧ್ಯಸಂಕುಲಮ್ |
ಭೂತಾನಾಮಿಂದ್ರಿಯಾಣಾಂ ಚ ಗುಣಾನಾಂ ಚ ಸಮಾಗಮಮ್ ॥14॥
ನಮ್ಮ ಶರೀರವನ್ನು ಅಧ್ಯಾತ್ಮ ಚಿಂತಕರಾದ ವಿದ್ವಾಂಸರು ಅಸ್ಥಿ-ಮಾಂಸ-ನರ ಇವುಗಳ ಸಂಘಾತವೆಂದು, ಜುಗುಪ್ಸೆಗೆ ಕಾರಣವಾದ ಅಶುದ್ಧ ಪದಾರ್ಥಗಳ ಮಿಶ್ರಣವೆಂದು, ಪಂಚಭೂತಗಳ, ಇಂದ್ರಿಯಗಳ ಮತ್ತು ಸತ್ವಾದಿಗಳ ಸಮುದಾಯವೆಂದು ಹೇಳುತ್ತಾರೆ.
ತ್ವಗಂತಂ ದೇಹಮಿತ್ಯಾಹುರ್ವಿದ್ವಾಂಸೋಽಧ್ಯಾತ್ಮಚಿಂತಕಾಃ |
ಗುಣೈರಪಿ ಪರಿಕ್ಷೀಣಂ ಶರೀರಂ ಮರ್ತ್ಯತಾಂ ಗತಮ್ ॥15॥
ಈ ಎಲ್ಲದರ ಮೇಲೆ ಚರ್ಮಗಳ ಹೊದಿಕೆಯಿಂದ ಈ ಶರೀರವು ಮುಚ್ಚಲ್ಪಟ್ಟಿದೆ ಎಂದು ಹೇಳುತ್ತಾರೆ. ವಾಸ್ತವಿಕವಾಗಿ ಯಾವ ಗುಣಗಳಾಗಲಿ, ಸೌಂದರ್ಯವಾಗಲಿ ಇಲ್ಲದಿರುವಂತೆ ಜೋಡಣೆಯನ್ನು ಹೊಂದಿರುವಂತಹ ಶರೀರವು ಪೂರ್ವಜನ್ಮದ ಪರಿಪಾಕದಿಂದ ಮನುಷ್ಯಜನ್ಮವನ್ನು ಹೊಂದಿರುತ್ತದೆ.
ಶರೀರಿಣಾ ಪರಿತ್ಯಕ್ತಂ ನಿಶ್ಚೇಷ್ಟಂ ಗತಚೇತನಮ್ |
ಭೂತೈಃ ಪ್ರಕೃತಿಮಾಪನ್ನೈಸ್ತತೋ ಭೂಮೌ ನಿಮಜ್ಜತಿ ॥16॥
ಜೀವನು ಆ ಶರೀರವನ್ನು ತೊರೆದಾಗ ಅದು ಚೈತನ್ಯವಿಲ್ಲದೆ ನಿಶ್ಚೇಷ್ಟಿತವಾಗಿರುತ್ತದೆ. ಪಂಚಭೂತಗಳು ತಮ್ಮ ಮೂಲ ಕಾರಣಗಳಲ್ಲಿ ಲಯ ಹೊಂದಿದಾಗ ದೇಹವೂ ಭೂಮಿಯಲ್ಲಿ ಮಣ್ಣಾಗಿ ಹೋಗುತ್ತದೆ.
ಭಾವಿತಂ ಕರ್ಮಯೋಗೇನ ಜಾಯತೇ ತತ್ರ ತತ್ರ ಹ |
ಇದಂ ಶರೀರಂ ವೈದೇಹ ಮ್ರಿಯತೇ ಯತ್ರ ತತ್ರ ಹ |
ತತ್ಸ್ವಭಾವೋಽಪರೋ ದೃಷ್ಟೋ ವಿಸರ್ಗಃ ಕರ್ಮಣಸ್ತಥಾ ॥17॥

ನ ಜಾಯತೇ ತು ನೃಪತೇ ಕಂಚಿತ್ ಕಾಲಮಯಂ ಪುನಃ |
ಪರಿಭ್ರಮತಿ ಭೂತಾತ್ಮಾ ದ್ಯಾಮಿವಾಂಬುಧರೋ ಮಹಾನ್ ॥18॥
ಈ ಶರೀರವು ಯಾವ ಯಾವ ಸ್ಥಿತಿಯಲ್ಲಿ ಮರಣವನ್ನು ಹೊಂದುತ್ತದೋ ಆಯಾ ಕರ್ಮಕ್ಕೆ ಅನುಗುಣವಾದ ದೇಹದ ಜೊತೆಗೆ ಪುನಃ ಹುಟ್ಟನ್ನು ಹೊಂದುತ್ತದೆ. ಆ ದೇಹದಲ್ಲಿ ತಾನು ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳ ಫಲವನ್ನು ಅನುಭವಿಸುತ್ತದೆ. ಜೀವನು ತನ್ನ ಹಿಂದಿನ ದೇಹವನ್ನು ಬಿಟ್ಟ ಕೂಡಲೇ ಇನ್ನೊಂದು ದೇಹದಿಂದ ಉತ್ಪತ್ತಿಯನ್ನು ಹೊಂದುವುದಿಲ್ಲ. ಸ್ವಲ್ಪ ಕಾಲದ ತನಕ ಆಕಾಶದಲ್ಲಿ ಸಂಚರಿಸುತ್ತಿರುವ ಮೇಘದ ಜಲದಂತೆ ಸುತ್ತುತ್ತಿರುತ್ತಾನೆ.
ಸ ಪುನರ್ಜಾಯತೇ ರಾಜನ್ ಪ್ರಾಪ್ಯೇಹಾಯತನಂ ನೃಪ |
ಮನಸಃ ಪರಮೋ ಹ್ಯಾತ್ಮಾ ಇಂದ್ರಿಯೇಭ್ಯಃ ಪರಂ ಮನಃ ॥19॥
ಪುನಃ ಒಂದು ಸ್ಥಾನವನ್ನು ಆಶ್ರಯಿಸಿ ಆ ಜೀವನು ಜನ್ಮ ಹೊಂದುತ್ತಾನೆ. ಆತ್ಮವು ಮನಸ್ಸಿಗಿಂತ ಮಿಗಿಲಾದುದು. ಮನಸ್ಸು ಇಂದ್ರಿಯಗಳಿಗಿಂತಲೂ ಮಿಗಿಲಾದುದು.
ದ್ವಿವಿಧಾನಾಂ ಚ ಭೂತಾನಾಂ ಜಂಗಮಾಃ ಪರಮಾ ನೃಪ |
ಜಂಗಮಾನಾಮಪಿ ತಥಾ ದ್ವಿಪದಾಃ ಪರಮಾ ಮತಾಃ |
ದ್ವಿಪದಾನಾಮಪಿ ತಥಾ ದ್ವಿಜಾ ವೈ ಪರಮಾಃ ಸ್ಮೃತಾಃ ॥20॥
ಜಗತ್ತಿನಲ್ಲಿರುವ ಸ್ಥಾವರ-ಜಂಗಮ ಪ್ರಾಣಿಗಳಲ್ಲಿ ಸ್ಥಾವರಗಳು, ವೃಕ್ಷವೇ ಮೊದಲಾದ ಪ್ರಾಣಿಗಳಿಗಿಂತಲೂ ಚಲಿಸುವ ಪ್ರಾಣಿಗಳು ಶ್ರೇಷ್ಠವಾದವುಗಳು. ಅವುಗಳಲ್ಲಿಯೂ ಎರಡು ಕಾಲುಗಳಿರುವ ಪ್ರಾಣಿಗಳು ಶ್ರೇಷ್ಠವೆಂದು ಹೇಳುತ್ತಾರೆ. ಎರಡು ಕಾಲುಗಳಿರುವ ಮನುಷ್ಯರಲ್ಲಿಯೂ ದ್ವಿಜರು ಶ್ರೇಷ್ಠರೆಂಬುದು ಪ್ರಸಿದ್ಧವಾದುದು.
ದ್ವಿಜಾನಾಮಪಿ ರಾಜೇಂದ್ರ ಪ್ರಜ್ಞಾವಂತಃ ಪರಾ ಮತಾಃ |
ಪ್ರಾಜ್ಞಾನಾಮಾತ್ಮಸಂಬುದ್ಧಾಃ ಸಂಬುದ್ಧಾನಾಮಮಾನಿನಃ ॥21॥
ರಾಜನೇ, ಆ ದ್ವಿಜರಲ್ಲಿಯೂ ಪ್ರಜ್ಞಾವಂತರು ಶ್ರೇಷ್ಠರು. ಪ್ರಜ್ಞಾವಂತರಲ್ಲಿಯೂ ಆತ್ಮಜ್ಞಾನಿಗಳು ಶ್ರೇಷ್ಠರು. ಆತ್ಮಜ್ಞಾನಿಗಳಲ್ಲಿಯೂ ನಿರಂಹಕಾರಿಗಳು ಪರಮಶ್ರೇಷ್ಠರು.
ಜಾತಮನ್ವೇತಿ ಮರಣಂ ನೃಣಾಮಿತಿ ವಿನಿಶ್ಚಯಃ |
ಅಂತವಂತಿ ಹಿ ಕರ್ಮಾಣಿ ಸೇವಂತೇ ಗುಣತಃ ಪ್ರಜಾಃ ॥22॥
ಮನುಷ್ಯನಾಗಿ ಹುಟ್ಟಿದ ಕೂಡಲೇ ಮರಣವು ಅವನನ್ನು ಹಿಂಬಾಲಿಸುತ್ತದೆ ಎಂಬುದು ದೃಢವಾದ ನಿಶ್ಚಯವು. ಸಮಸ್ತ ಪ್ರಜೆಗಳು ಸತ್ತ್ವಾದಿಗುಣಗಳಿಂದ ಪ್ರೇರಿತರಾಗಿ ಅಶಾಶ್ವತವಾದ ಫಲಗಳನ್ನು ನೀಡುವ ಕರ್ಮಗಳನ್ನು ಆಚರಿಸುತ್ತಿರುತ್ತಾರೆ.
ಆಪನ್ನೇ ತೂತ್ತರಾಂ ಕಾಷ್ಠಾಂ ಸೂರ್ಯೇ ಯೋ ನಿಧನಂ ವ್ರಜೇತ್ |
ನಕ್ಷತ್ರೇ ಚ ಮುಹೂರ್ತೇ ಚ ಪುಣ್ಯೇ ರಾಜನ್ ಸ ಪುಣ್ಯಕೃತ್ ॥23॥
ಅಯೋಜಯಿತ್ವಾ ಕ್ಲೇಶೇನ ಜನಂ ಪ್ಲಾವ್ಯ ಚ ದುಷ್ಕೃತಮ್ |
ಮೃತ್ಯುನಾ ಪ್ರಾಕೃತೇನೇಹ ಕರ್ಮ ಕೃತ್ವಾತ್ಮಶಕ್ತಿತಃ ॥24॥
ಸೂರ್ಯನು ಉತ್ತರ ದಿಕ್ಕಿನ ಕಡೆ ತಿರುಗಿದ ಬಳಿಕ ಉತ್ತರಾಯಣದಲ್ಲಿ ಉತ್ತಮ ನಕ್ಷತ್ರದಲ್ಲಿ, ಉತ್ತಮ ಮುಹೂರ್ತದಲ್ಲಿ ಮರಣವನ್ನಪ್ಪುವವನು ಪುಣ್ಯಾತ್ಮನೆನಿಸಿದ್ದಾನೆ. ಯಾರಿಗೂ ಕಷ್ಟವನ್ನು ನೀಡದೆ ಪ್ರಾಯಶ್ಚಿತ್ತಗಳ ಮೂಲಕ ತನ್ನ ಪಾಪಗಳನ್ನು ಪರಿಹರಿಸಿಕೊಂಡು, ಪುಣ್ಯಕರ್ಮಗಳನ್ನಾಚರಿಸಿ, ಪೂರ್ವಕರ್ಮ ಸ್ವಭಾವಕ್ಕನುಗುಣವಾಗಿ ಯಾವನು ಮರಣವನ್ನಪ್ಪುತ್ತಾನೋ ಅವನ್ನು ಪುಣ್ಯಪುರುಷನೆಂದು ತಿಳಿಯಬೇಕು.
ವಿಷಮುದ್‌ಬಂಧನಂ ದಾಹೋ ದಸ್ಯುಹಸ್ತಾತ್ ತಥಾ ವಧಃ |
ದಂಷ್ಟ್ರಿಭ್ಯಶ್ಚ ಪಶುಭ್ಯಶ್ಚ ಪ್ರಾಕೃತೋ ವಧ ಉಚ್ಯತೇ ॥25॥
ವಿಷವನ್ನು ಸ್ವೀಕರಿಸಿ ಪ್ರಾಣ ಬಿಡುವುದು, ನೇಣುಹಾಕಿಕೊಂಡು ಸಾಯುವುದು, ಬೆಂಕಿಯಲ್ಲಿ ಬಿದ್ದು ಸಾಯುವುದು, ದರೋಡೆಕೋರರಿಂದ ಮರಣವನ್ನಪ್ಪುವುದು, ಕೋರೆ ಹಲ್ಲುಗಳನ್ನು ಹೊಂದಿರುವ ಹುಲಿ-ಸಿಂಹ ಇತ್ಯಾದಿ ದುಷ್ಟ ಪ್ರಾಣಿಗಳಿಂದ ಪ್ರಾಣ ಬಿಡುವುದು ಇವೆಲ್ಲವನ್ನು ಅಧಮ ಮರಣವೆನ್ನುತ್ತಾರೆ.
ನ ಚೈಭಿಃ ಪುಣ್ಯಕರ್ಮಾಣೋ ಯುಜ್ಯಂತೇ ನಾಭಿಸಂಧಿಜೈಃ |
ಏವಂವಿಧೈಶ್ಚ ಬಹುಭಿರಪರೈಃ ಪ್ರಾಕೃತೈರಪಿ ॥26॥
ಪುಣ್ಯಕರ್ಮವನ್ನು ಹೊಂದಿರುವ ಮನುಷ್ಯರು ಈ ವಿಧವಾದ ಉಪಾಯಗಳಿಂದಲೂ, ಇದೇ ವಿಧವಾದ ಅನೇಕ ಅಧಮ ಉಪಾಯಗಳಿಂದಲೂ ಪ್ರಾಣವನ್ನು ತ್ಯಜಿಸಲು ಇಚ್ಛಿಸುವುದಿಲ್ಲ.
ಊರ್ಧ್ವಂ ಹಿತ್ವಾ ಪ್ರತಿಷ್ಠಂತೇ ಪ್ರಾಣಾಃ ಪುಣ್ಯಕೃತಾಂ ನೃಪ |
ಮಧ್ಯತೋ ಮಧ್ಯಪುಣ್ಯಾನಾಮಧೋ ದುಷ್ಕೃತಕರ್ಮಣಾಮ್ ॥27॥
ಪುಣ್ಯಾತ್ಮರಾದ ಪುರುಷರ ಪ್ರಾಣವು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಹೋಗುತ್ತದೆ. ಪುಣ್ಯ-ಪಾಪಗಳನ್ನು ಸಮಾನವಾಗಿ ಆಚರಿಸಿರುವ ವ್ಯಕ್ತಿಗಳ ಪ್ರಾಣವು ಕಣ್ಣು, ಮುಖ, ಮೂಗು, ಕಿವಿಗಳ ಮೂಲಕ ಹೋಗುತ್ತದೆ. ಕೆಟ್ಟ ಕರ್ಮಗಳನ್ನೇ ಮಾಡಿರುವ ಪಾಪಿಷ್ಠರ ಪ್ರಾಣವು ಗುದ-ಉಪಸ್ಥಗಳ ದ್ವಾರಾ ಹೊರಹೋಗುತ್ತದೆ.
ಏಕಃ ಶತ್ರುರ್ನ ದ್ವಿತೀಯೋಽಸ್ತಿ ಶತ್ರು-
ರಜ್ಞಾನತುಲ್ಯಃ ಪುರುಷಸ್ಯ ರಾಜನ್ |
ಯೇನಾವೃತಃ ಕುರುತೇ ಸಂಪ್ರಯುಕ್ತೋ
ಘೋರಾಣಿ ಕರ್ಮಾಣಿ ಸುದಾರುಣಾನಿ ॥28॥

ಜನಕರಾಜನೇ, ಮನುಷ್ಯರಿಗೆ ತುಂಬಾ ಪ್ರಬಲವಾದ ಶತ್ರು ಅಜ್ಞಾನವೇ ಆಗಿದೆ. ಅಜ್ಞಾನಕ್ಕೆ ಸಮಾನವಾದ ಎರಡನೆಯ ಶತ್ರುವೇ ಮನುಷ್ಯನಿಗಿರುವುದಿಲ್ಲ. ಅಜ್ಞಾನದಿಂದ ಆವರಿಸಲ್ಪಟ್ಟ, ಅಜ್ಞಾನದ ಪ್ರೇರಣೆಗೆ ತುತ್ತಾದ ಮನುಷ್ಯನು ಅತ್ಯಂತ ಭಯಂಕರವಾದ ಕರ್ಮಗಳನ್ನು ಆಚರಿಸುತ್ತಾನೆ.

ಪ್ರಬೋಧನಾರ್ಥಂ ಶ್ರುತಿಧರ್ಮಯುಕ್ತಂ
ವೃದ್ಧಾನುಪಾಸ್ಯಂ ಚ ಭವೇತ ಯಸ್ಯ |
ಪ್ರಯತ್ನಸಾಧ್ಯೋ ಹಿ ಸ ರಾಜಪುತ್ರ
ಪ್ರಜ್ಞಾ ಶರೇಣೋನ್ಮಥಿತಃ ಪರೈತಿ ॥29॥

ರಾಜಪುತ್ರನೇ, ಶ್ರುತಿಧರ್ಮಗಳಿಂದ ಕೂಡಿರುವಂತಹ ವೃದ್ಧರನ್ನು ತತ್ತ್ವಜ್ಞಾನಕ್ಕೋಸ್ಕರ ಸೇವಿಸಬೇಕು. ಯಾರು ಜ್ಞಾನದ ದೃಷ್ಟಿಯಿಂದ ಉತ್ತಮರನ್ನು ಸೇವಿಸುತ್ತಾರೋ ಮಹಾಪ್ರಯತ್ನದಿಂದ ಅವರಿಗೆ ಸಂಬಂಧಿಸಿದ ಅಜ್ಞಾನವನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗುತ್ತದೆ. ಪ್ರಜ್ಞೆ ಎಂಬ ಬಾಣದಿಂದ ಪೀಡಿತವಾಗಿರುವ ಅಜ್ಞಾನವು ದೂರ ಸರಿಯುತ್ತದೆ.

ಅಧೀತ್ಯ ವೇದಾಂಸ್ತಪಸಾ ಬ್ರಹ್ಮಚಾರೀ
ಯಜ್ಞಾನ್ ಶಕ್ತ್ಯಾ ಸನ್ನಿಸೃಜ್ಯೇಹ ಪಂಚ |
ವನಂ ಗಚ್ಛೇತ್ ಪುರುಷೋ ಧರ್ಮಕಾಮಃ
ಶ್ರೇಯಶ್ಚಿತ್ವಾ ಸ್ಥಾಪಯಿತ್ವಾ ಸ್ವವಂಶಮ್ ॥30॥

ಬ್ರಹ್ಮಚಾರಿ ವಟುವು ವೇದಗಳನ್ನು ಅಧ್ಯಯನ ಮಾಡಿ, ತನ್ನ ಶಕ್ತಿಗೆ ಅನುಗುಣವಾಗಿ ಯಜ್ಞಕರ್ಮಗಳನ್ನು ಗೃಹಸ್ಥಾಶ್ರಮಿಯಾಗಿ ಆಚರಿಸಬೇಕು. ವಂಶವೃದ್ಧಿಗಾಗಿ ಸಂತಾನವನ್ನು ಹೊಂದಬೇಕು. ಬಳಿಕ ಜಿತೇಂದ್ರಿಯನಾಗಿ ಮೋಕ್ಷೋದ್ದೇಶದಿಂದ ವನಕ್ಕೆ ತೆರಳಬೇಕು.

ಉಪಭೋಗೈರಪಿ ತ್ಯಕ್ತಂ ನಾತ್ಮಾನಮವಸಾದಯೇತ್ |
ಚಂಡಾಲತ್ವೇಽಪಿ ಮಾನುಷ್ಯಂ ಸರ್ವಥಾ ತಾತ ದುರ್ಲಭಮ್ ॥31॥

ಮನುಷ್ಯನು ಸಕಲ ಭೋಗಗಳನ್ನೆಲ್ಲ ತ್ಯಜಿಸಿದರೂ ತನ್ನ ದೇಹವನ್ನು ಬಹಳವಾಗಿ ಶಿಕ್ಷಿಸಬಾರದು. ಎಲ್ಲ ಜನ್ಮಗಳಲ್ಲಿ ಮನುಷ್ಯ ದೇಹವೆಂಬುದು ಚಂಡಾಲ ಜನ್ಮವಾಗಿದ್ದರೂ ಶ್ರೇಷ್ಠವೆಂದೇ ಪರಿಗಣಿತವಾಗಿದೆ.

ಇಯಂ ಹಿ ಯೋನಿಃ ಪ್ರಥಮಾ ಯಾಂ ಪ್ರಾಪ್ಯ ಜಗತೀಪತೇ |
ಆತ್ಮಾ ವೈ ಶಕ್ಯತೇ ತ್ರಾತುಂ ಕರ್ಮಭಿಃ ಶುಭಲಕ್ಷಣೈಃ ॥32॥

ಮನುಷ್ಯಯೋನಿಯು ಅತ್ಯಂತ ಶ್ರೇಷ್ಠವಾದುದು. ಇಂತಹ ಮನುಷ್ಯ ಯೋನಿಯನ್ನು ಪಡೆದು ಶುಭಲಕ್ಷಣಗಳಿಂದ ಕೂಡಿದ ಕರ್ಮಗಳಿಂದ ಆತ್ಮೋದ್ಧಾರವನ್ನು ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಕಥಂ ನ ವಿಪ್ರಣಶ್ಯೇಮ ಯೋನಿತೋಽಸ್ಯಾ ಇತಿ ಪ್ರಭೋ |
ಕುರ್ವಂತಿ ಧರ್ಮಂ ಮನುಜಾಃ ಶ್ರುತಿಪ್ರಾಮಾಣ್ಯದರ್ಶನಾತ್ ॥33॥

ರಾಜನೇ, ಮನುಷ್ಯಯೋನಿಯಿಂದ ಭ್ರಷ್ಟರಾಗಿ ಅಧಮ ಯೋನಿಗಳನ್ನು ಪಡೆಯದಿರಲು ಹೇಗೆ ಸಾಧ್ಯವಾಗುತ್ತದೆ? ಎಂದು ಯೋಚಿಸಿ ಮನುಷ್ಯರು ಶ್ರುತಿ ಪ್ರಾಮಾಣ್ಯದ ಪರಿಶೀಲನೆಯಿಂದ ಧರ್ಮಕಾರ್ಯಗಳನ್ನು ಮಾಡುತ್ತಿರುತ್ತಾರೆ.

ಯೋ ದುರ್ಲಭತರಂ ಪ್ರಾಪ್ಯ ಮಾನುಷ್ಯಮಿಹ ವೈ ನರಃ |
ಧರ್ಮಾವಮಂತಾ ಕಾಮಾತ್ಮಾ ಭವೇತ್ಸ ಖಲು ವಂಚ್ಯತೇ ॥34॥

ಯಾವನು ಪ್ರಾರಬ್ಧಕರ್ಮಕ್ಕನುಸಾರವಾಗಿ ಅತ್ಯಂತ ದುರ್ಲಭವಾದ ಮನುಷ್ಯ ಶರೀರವನ್ನು ಪಡೆದಿದ್ದರೂ ಇತರರನ್ನು ದ್ವೇಷಿಸುತ್ತಾ, ಧರ್ಮವನ್ನು ನಿಂದಿಸುತ್ತಾ ಕಾಮಾಭಿಹೋತನಾಗಿರುತ್ತಾನೋ ಅಂತಹ ಮನುಷ್ಯನು ಮುಂದಿನ ಜನ್ಮದಲ್ಲಿ ಮನುಷ್ಯ ಜನ್ಮದಿಂದ ವಂಚಿತನಾಗುತ್ತಾನೆ.

ಯಸ್ತು ಪ್ರೀತಿಪುರೋಗೇಣ ಚಕ್ಷುಷಾ ತಾತ ಪಶ್ಯತಿ |
ದೀಪೋಪಮಾನಿ ಭೂತಾನಿ ಯಾವದರ್ಚಿರ್ನ ನಶ್ಯತಿ ॥35॥

ಯಾವನು ಪ್ರೀತಿಪುರಸ್ಸರವಾದ ದೃಷ್ಟಿಯಿಂದ ಸಮಸ್ತ ಪ್ರಾಣಿಗಳನ್ನು ದೀಪವನ್ನು ರಕ್ಷಿಸುವಂತೆ ಪ್ರೀತಿಯಿಂದ ನೋಡುತ್ತಾನೋ, ವಿಷಯ ಪದಾರ್ಥಗಳ ಕಡೆ ಅತಿಯಾದ ಆಸೆಯನ್ನು ಹೊಂದುವುದಿಲ್ಲವೋ ಅವನು ಪರಲೋಕದಲ್ಲಿಯೂ ಸಮ್ಮಾನಿತನಾಗುತ್ತಾನೆ.

ಸಾನ್ತ್ವೇನಾನುಪ್ರದಾನೇನ ಪ್ರಿಯವಾದೇನ ಚಾಪ್ಯುತ |
ಸಮದುಃಖಸುಖೋ ಭೂತ್ವಾ ಸ ಪರತ್ರ ಮಹೀಯತೇ ॥36॥

ಕಷ್ಟದಲ್ಲಿರುವ ವ್ಯಕ್ತಿಗಳನ್ನು ಸಂತೈಸುವುದರಿಂದ, ಅತಿಥಿಗಳಿಗೆ ಊಟ ಹಾಕುವುದರಿಂದ, ಎಲ್ಲರ ಜೊತೆಗೆ ಪ್ರಿಯವಾದ ಮಾತುಗಳನ್ನಾಡುವುದರಿಂದ, ಸುಖ- ದುಃಖಗಳನ್ನು ಸಮಾನವಾಗಿ ಕಾಣುವುದರಿಂದ ಮನುಷ್ಯನು ಪರಲೋಕದಲ್ಲಿ ಸಮ್ಮಾನಿತನಾಗುತ್ತಾನೆ.

ದಾನಂ ತ್ಯಾಗಃ ಶೋಭನಾ ಮೂರ್ತಿರದ್ಭ್ಯೋ
ಭೂಯಃ ಪ್ಲಾವ್ಯಂ ತಪಸಾ ವೈ ಶರೀರಮ್ |
ಸರಸ್ವತೀನೈಮಿಷಪುಷ್ಕರೇಷು
ಯೇ ಚಾಪ್ಯನ್ಯೇ ಪುಣ್ಯದೇಶಾಃ ಪೃಥಿವ್ಯಾಮ್ ॥37॥

ದಾನ ಮಾಡುವುದು, ವಿಷಯ ಭೋಗಗಳನ್ನು ತ್ಯಜಿಸುವುದು ಶ್ರೇಯಸ್ಕರವಾದುದು. ಪುಣ್ಯತೀರ್ಥಗಳಿಂದ ಈ ಶರೀರವನ್ನು ಪವಿತ್ರೀಕರಿಸಿ- ಕೊಳ್ಳಬೇಕು. ತಪಸ್ಸಿನಿಂದ ಈ ಶರೀರವನ್ನು ಕೃಶಗೊಳಿಸಿಕೊಳ್ಳಬೇಕು. ಸರಸ್ವತೀ ನದಿ, ನೈಮಿಷಾರಣ್ಯ, ಪುಷ್ಕರ ಕ್ಷೇತ್ರ, ಪೃಥಿವಿಯಲ್ಲಿರುವ ಇನ್ನೂ ಪುಣ್ಯಕ್ಷೇತ್ರಗಳಲ್ಲಿ ಸ್ನಾನವನ್ನಾಚರಿಸಬೇಕು.

ಗೃಹೇಷು ಯೇಷಾಮಸವಃ ಪತಂತಿ
ತೇಷಾಮಥೋ ನಿರ್ಹರಣಂ ಪ್ರಶಸ್ತಮ್ |
ಯಾನೇನ ವೈ ಪ್ರಾಪಣಂ ಚ ಶ್ಮಶಾನೇ
ಶೌಚೇನ ನೂನಂ ವಿಧಿನಾ ಚೈವ ದಾಹಃ ॥38॥
ಯಾರು ಮನೆಯಲ್ಲಿ ಪ್ರಾಣವನ್ನು ಬಿಡುತ್ತಾರೋ ಅವರನ್ನು ಶೀಘ್ರವಾಗಿ ಮನೆಯಿಂದ ಹೊರಗೆ ಇಡುವುದು ಪ್ರಶಸ್ತವಾದುದು. ವಾಹನದಲ್ಲಿ ಸತ್ತ ವ್ಯಕ್ತಿಯನ್ನು ಸ್ಮಶಾನಕ್ಕೆ ಸಾಗಿಸಬೇಕು. ಪರಿಶುದ್ಧ ಹೃದಯದಿಂದ ಶಾಸ್ತ್ರವಿಧಿಗನುಗುಣವಾಗಿ ಸತ್ತವರಿಗೆ ದಹನ ಸಂಸ್ಕಾರವನ್ನು ಮಾಡುವುದು ಮುಖ್ಯ ಕರ್ತವ್ಯವೆನಿಸಿದೆ.
ಇಷ್ಟಿಃ ಪುಷ್ಟಿರ್ಯಜನಂ ಯಾಜನಂ ಚ
ದಾನಂ ಪುಣ್ಯಾನಾಂ ಕರ್ಮಣಾಂ ಚ ಪ್ರಯೋಗಃ |
ಶಕ್ತ್ಯಾ ಪಿತ್ರ್ಯಂ ಯಚ್ಚ ಕಿಂಚಿತ್ ಪ್ರಶಂಸ್ತಂ
ಸರ್ವಾಣ್ಯಾತ್ಮಾರ್ಥೇ ಮಾನವೋ ಯಃ ಕರೋತಿ ॥39॥
ಮನುಷ್ಯನು ತನ್ನ ಶಕ್ತಿಗನುಗುಣವಾಗಿ ಯಾಗಗಳನ್ನು, ಶಾಂತಿಕರ್ಮಗಳನ್ನು, ಯಜನ-ಯಾಜನ, ದಾನ, ಪುಣ್ಯಾಚರಣೆ, ಯಥಾಶಕ್ತಿ ಶ್ರಾದ್ಧ-ತರ್ಪಣಾದಿಗಳನ್ನು ಪ್ರಶಸ್ತವಾದ ಇನ್ನೂ ಅನೇಕ ಕರ್ಮಗಳನ್ನು ಮಾಡಬೇಕು. ಈ ಎಲ್ಲ ಕರ್ಮಗಳನ್ನು ಮನುಷ್ಯನು ಆತ್ಮೋದ್ಧಾರಕ್ಕಾಗಿಯೇ ಮಾಡಿಕೊಳ್ಳುತ್ತಾನೆ.
ಧರ್ಮಶಾಸ್ತ್ರಾಣಿ ವೇದಾಶ್ಚ ಷಡಂಗಾನಿ ನರಾಧಿಪ |
ಶ್ರೇಯಸೋಽರ್ಥೇ ವಿಧೀಯಂತೇ ನರಸ್ಯಾಕ್ಲಿಷ್ಟಕರ್ಮಣಃ ॥40॥
ಧರ್ಮಶಾಸ್ತ್ರಗಳು, ಷಡಂಗಯುಕ್ತವಾದ ವೇದಗಳು ಇವೆಲ್ಲವೂ ಕ್ಲೇಶವಿಲ್ಲದೆ ಕರ್ಮಗಳನ್ನು ಮಾಡುವ ಮನುಷ್ಯನ ಶ್ರೇಯಸ್ಸಿಗಾಗಿಯೇ ವಿಹಿತವಾಗಿವೆ.
ಭೀಷ್ಮಃ
ಏತದ್ ವೈ ಸರ್ವಮಾಖ್ಯಾತಂ ಮುನಿನಾ ಸುಮಹಾತ್ಮನಾ |
ವಿದೇಹರಾಜಾಯ ಪುರಾ ಶ್ರೇಯಸೋರ್ಥೇ ನರಾಧಿಪ ॥41॥
ಭೀಷ್ಮ ಮಹಾತ್ಮರಾದ ಪರಾಶರರು ಈ ಎಲ್ಲ ವಿಷಯಗಳನ್ನು ವಿದೇಹರಾಜನಾದ ಜನಕರಾಜನ ಶ್ರೇಯಸ್ಸನ್ನುದ್ದೇಶಿಸಿ ಉಪದೇಶಿಸಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೊಂದನೆಯ ಅಧ್ಯಾಯ
ಜನಕನ ಅನೇಕ ಪ್ರಶ್ನೆಗಳಿಗೆ ಪರಾಶರರು ಉಪದೇಶಿಸುತ್ತಾ
ಉಪದೇಶವನ್ನು ಉಪಸಂಹರಿಸಿದುದು.
ಭೀಷ್ಮಃ
ಪುನರೇವ ತು ಪಪ್ರಚ್ಛ ಜನಕೋ ಮಿಥಿಲಾಧಿಪಃ |
ಪರಾಶರಂ ಮಹಾತ್ಮಾನಂ ಧರ್ಮೇ ಪರಮನಿಶ್ಚಯಮ್ ॥1॥
ಭೀಷ್ಮ ಯುಧಿಷ್ಠಿರನೇ, ನಗರದ ರಾಜನಾದ ಜನಕನು ಧರ್ಮದ ನಿಶ್ಚಯ ಜ್ಞಾನವನ್ನು ಹೊಂದಿದ್ದ, ಮಹಾತ್ಮರಾದ ಪರಾಶರ ಮುನಿಗಳನ್ನು ಕುರಿತು ಪುನಃ ಪ್ರಶ್ನಿಸಿದನು.
ಕಿಂ ಶ್ರೇಯಃ ಕಾ ಗತಿರ್ಬ್ರಹ್ಮನ್ ಕಿಂ ಕೃತಂ ನ ವಿನಶ್ಯತಿ |
ಕ್ವ ಗತೋ ನ ನಿವರ್ತೇತ ತನ್ಮೇ ಬ್ರೂಹಿ ಮಹಾಮುನೇ ॥2॥
ಮಹಾಮತಿಗಳೇ, ಬ್ರಾಹ್ಮಣಶ್ರೇಷ್ಠರೇ, ಶ್ರೇಯಸ್ಸಿಗೆ ಸಾಧನೆ ಯಾವುದು? ಉತ್ತಮವಾದ ಗತಿ ಯಾವುದು? ಯಾವ ವಿಧ ಕರ್ಮವು ನಾಶವನ್ನು ಹೊಂದುವುದಿಲ್ಲ? ಎಲ್ಲಿಗೆ ಹೋದ ಜೀವರು ಪುನಃ ಸಂಸಾರಕ್ಕೆ ಮರಳಿ ಬರುವುದಿಲ್ಲ? ಈ ವಿಷಯಗಳನ್ನು ನನಗೆ ತಿಳಿಸಿರಿ.

ಪರಾಶರಃ
ಅಸಂಗಃ ಶ್ರೇಯಸೋ ಮೂಲಂ ಜ್ಞಾನಂ ಜ್ಞಾನಗತಿಃ ಪರಾ |
ಚೀರ್ಣಂ ತಪೋ ನ ಪ್ರಣಶ್ಯೇದ್ವಾಪಃ ಕ್ಷೇತ್ರೇ ನ ನಶ್ಯತಿ ॥3॥
ಪರಾಶರ ರಾಜನೇ, ವಿಷಯ ಪದಾರ್ಥಗಳ ಅಸಂಗವೇ ಶ್ರೇಯಸ್ಸಿಗೆ ಮೂಲ ಸಾಧನವಾಗಿದೆ. ಭಗವಂತನ ವಿಷಯಕವಾದ ಜ್ಞಾನದ ಪ್ರವೃತ್ತಿಯೇ ನಿಜವಾದ ಜ್ಞಾನವೆನಿಸಿದೆ. ಶ್ರದ್ಧೆಯಿಂದ ಮಾಡಲ್ಪಟ್ಟ ತಪಸ್ಸು ಎಂದೂ ನಾಶವನ್ನು ಹೊಂದುವುದಿಲ್ಲ. ಉತ್ತಮ ಕ್ಷೇತ್ರದಲ್ಲಿ ಬಿತ್ತಿದ ಬೀಜವು ವ್ಯರ್ಥವಾಗುವುದಿಲ್ಲ.
ಛಿತ್ತ್ವಾಧರ್ಮಮಯಂ ಪಾಶಂ ಯದಾ ಧರ್ಮೇಽಭಿರಜ್ಯತೇ |
ದತ್ತ್ವಾಽಭಯಂಕೃತಂ ದಾನಂ ತದಾ ಸಿದ್ಧಿಮವಾಪ್ನುಯಾತ್ ॥4॥
ಜೀವನು ಅಧರ್ಮವೆಂಬ ಹಗ್ಗವನ್ನು ಕತ್ತರಿಸಿ, ಧರ್ಮದಲ್ಲಿಯೇ ಅನುರಕ್ತನಾಗಿರುತ್ತಾನೋ, ಸಮಸ್ತ ಪ್ರಾಣಿಗಳಿಗೂ ಅಭಯವೆಂಬ ದಾನವನ್ನು ಮಾಡಿರುತ್ತಾನೋ ಅವನು ಸಿದ್ಧಿಯನ್ನು ಹೊಂದುತ್ತಾನೆ.

ಯೋ ದದಾತಿ ಸಹಸ್ರಾಣಿ ಗವಾಮಶ್ವಶತಾನಿ ಚ |
ಅಭಯಂ ಸರ್ವಭೂತೇಭ್ಯಸ್ತದ್ದಾನಮತಿವರ್ತತೇ ॥5॥
ಯಾವನು ಸಾವಿರಾರು ಹಸುಗಳನ್ನು, ನೂರಾರು ಕುದುರೆಗಳನ್ನು ದಾನ ಮಾಡುತ್ತಾನೋ, ಮತ್ತೊಬ್ಬನು ಸಮಸ್ತ ಭೂತಗಳಿಗೆ ಅಭಯವನ್ನು ದಾನ ಮಾಡುತ್ತಾನೋ, ಅಭಯವನ್ನು ದಾನ ಮಾಡಿದ ವ್ಯಕ್ತಿಯು ಸಹಸ್ರ ಗೋವುಗಳು, ನೂರು ಕುದುರೆಗಳು ಇವುಗಳನ್ನು ದಾನ ಮಾಡಿದ ವ್ಯಕ್ತಿಗಿಂತಲೂ ಶ್ರೇಷ್ಠನೆನಿಸುತ್ತಾನೆ.
ವಸನ್ ವಿಷಯಮಧ್ಯೇಽಪಿ ನ ವಸತ್ಯೇವ ಬುದ್ಧಿಮಾನ್ |
ಸಂವಸತ್ಯೇವ ದುರ್ಬುದ್ಧಿರಸತ್ಸು ವಿಷಯೇಷ್ವಪಿ ॥6॥
ವಿಷಯ ಸುಖಗಳ ಮಧ್ಯದಲ್ಲಿಯೇ ಇದ್ದರೂ ಬುದ್ಧಿವಂತನಾದವನು ಅವುಗಳ ಸಂಬಂಧವನ್ನು ಹೊಂದದೆ ನಿಸ್ಸಂಗನಾಗಿರುತ್ತಾನೆ. ದುರ್ಬುದ್ಧಿಯಾದವನು ವಿಷಯಗಳ ಮಧ್ಯದಲ್ಲಿ ಇಲ್ಲದಿದ್ದರೂ ಅವುಗಳನ್ನೇ ನೆನೆಯುತ್ತಾ, ಅವುಗಳ ಮಧ್ಯದಲ್ಲೇ ಬದುಕನ್ನು ಕಟ್ಟಿಕೊಂಡವನಂತೆ ಇರುತ್ತಾನೆ.
ನಾಧರ್ಮಃ ಶ್ಲಿಷ್ಯತೇ ಪ್ರಾಜ್ಞಮಾಪಃ ಪುಷ್ಕರಪರ್ಣವತ್ |
ಅಪ್ರಾಜ್ಞಮಧಿಕಂ ಪಾಪಂ ಶ್ಲಿಷ್ಯತೇ ಜತುಕಾಷ್ಠವತ್ ॥7॥
ಹೇಗೆ ಕಮಲದ ಎಲೆಗೆ ನೀರು ಅಂಟಿಕೊಳ್ಳುವುದಿಲ್ಲವೋ ಅದರಂತೆ ಪಾಪವು ಪ್ರಾಜ್ಞನನ್ನು ಲೇಪಿಸುವುದಿಲ್ಲ. ಮುಳ್ಳಿನ ಅಗಸೆ ಗಿಡವು ಬಟ್ಟೆಯನ್ನು ಬಿಗಿಯಾಗಿ ಹಿಡಿದು ಹರಿಯುವಂತೆ ಪಾಪಿಷ್ಠರಾದ ಮೂರ್ಖರನ್ನು ಅಧರ್ಮವು ಹಿಡಿದು ಅನರ್ಥಕ್ಕೆ ದೂಡುತ್ತದೆ.
ನಾಧರ್ಮಃ ಕಾರಣಾಪೇಕ್ಷೀ ಕರ್ತಾರಮಭಿಮುಂಚತಿ |
ಕರ್ತಾ ಖಲು ಯಥಾಕಾಲಂ ತತ್ ಸರ್ವಮಭಿಪದ್ಯತೇ |
ನ ಭಿದ್ಯಂತೇ ಕೃತಾತ್ಮಾನ ಆತ್ಮಪ್ರತ್ಯಯದರ್ಶಿನಃ ॥8॥
ಅಧರ್ಮವು ಅಧರ್ಮವನ್ನಾಚರಿಸುವ ವ್ಯಕ್ತಿಗಳಿಗೆ ಅಧರ್ಮದ ಫಲವನ್ನು ನೀಡಲು ಕಾಲವನ್ನು ನಿರೀಕ್ಷಿಸುತ್ತಲೇ ಇರುತ್ತದೆ. ಆದ್ದರಿಂದ ಅಧರ್ಮ ಪ್ರೇರಣೆಗನುಗುಣವಾಗಿ ಕಾರ್ಯನಿರತರಾದ ವ್ಯಕ್ತಿಗಳನ್ನು ಅಧರ್ಮವು ಬಿಟ್ಟು ಹೋಗುವುದಿಲ್ಲ. ಯಾವನು ಅಧರ್ಮ ಕಾರ್ಯವನ್ನು ಮಾಡುತ್ತಾನೋ ಅವನು ಅದರ ಫಲವನ್ನು ಕಾಲಿಕವಾಗಿ ನಿಶ್ಚಿತವಾಗಿಯೂ ಅನುಭವಿಸುತ್ತಾನೆ. ಪವಿತ್ರವಾದ ಅಂತಃಕರಣವುಳ್ಳ ಜ್ಞಾನಿಗಳು ಈ ಶುಭಾಶುಭ ಫಲಗಳಿಂದ ವಿಚಲಿತರಾಗುವುದಿಲ್ಲ. ಭಗವಂತನ ದರ್ಶನದಲ್ಲಿಯೇ ಏಕಾಗ್ರತೆಯುಳ್ಳವರಾಗಿರುತ್ತಾರೆ.
ಬುದ್ಧಿಕರ್ಮೇಂದ್ರಿಯಾಣಾಂ ಹಿ ಪ್ರಮತ್ತೋ ಯೋ ನ ಬುದ್ಧ್ಯತೇ |
ಶುಭಾಶುಭೇಷು ಸಕ್ತಾತ್ಮಾ ಪ್ರಾಪ್ನೋತಿ ಸುಮಹದ್ಭಯಮ್ ॥9॥
ಯಾವಾತನು ಎಚ್ಚರವಿಲ್ಲದೆ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳ ಮೂಲಕ ಆಗುವ ಪಾಪಗಳಿಗೆ ಗಮನವನ್ನು ಕೊಡದೆ, ಶುಭಾಶುಭಗಳಲ್ಲೇ ಆಸಕ್ತರಾಗಿರುತ್ತಾನೋ ಅವನು ಮಹಾಭಯವನ್ನು ಹೊಂದುತ್ತಾನೆ.
ವೀತರಾಗೋ ಜಿತಕ್ರೋಧಃ ಸಮ್ಯಗ್ಭವತಿ ಯಃ ಸದಾ |
ವಿಷಯೇ ವರ್ತಮಾನೋಽಪಿ ನ ಸ ಪಾಪೇನ ಯುಜ್ಯತೇ ॥10॥
ಯಾವನು ವಿಷಯಗಳಿಂದ ದೂರನಾಗಿ, ಕ್ರೋಧವನ್ನು ಗೆದ್ದು, ಯಾವಾಗಲೂ ಸದಾಚಾರ ಸಂಪನ್ನನಾಗಿರುತ್ತಾನೋ ಅವನು ವಿಷಯ ಸುಖಗಳ ಮಧ್ಯದಲ್ಲಿಯೇ ಇದ್ದರೂ ಪಾಪದಿಂದ ಲಿಪ್ತನಾಗುವುದಿಲ್ಲ.
ಮರ್ಯಾದಾಯಾಂ ಧರ್ಮಸೇತುರ್ನಿಬದ್ಧೋ ನೈವ ಸೀದತಿ |
ಪುಷ್ಟಸ್ರೋತ ಇವಾಯತ್ತಃ ಸ್ಫೀತೋ ಭವತಿ ಸಂಚಯಃ ॥11॥
ನದಿಯ ನಡುವೆ ಕ್ರಮಬದ್ಧವಾಗಿ ಕಟ್ಟಿದ ಸೇತುವೆಯು ಯಾವ ಕಾರಣದಿಂದಲೂ ನಾಶ ಹೊಂದದು. ಅಂತಹ ಅಣೆಕಟ್ಟು ನೀರಿನಿಂದ ಸಮೃದ್ಧವಾಗಿರುತ್ತದೆ. ಇದರಂತೆ ಶಿಷ್ಟಾಚಾರದ ಮೂಲಕ ಬದುಕನ್ನು ಧರ್ಮದ ಸೇತುವೆಯಿಂದ ಕಟ್ಟಿಕೊಂಡ ಪುರುಷನು ಎಂದೂ ನಾಶ ಹೊಂದುವುದಿಲ್ಲ. ಅಣೆಕಟ್ಟಿನಲ್ಲಿ ನೀರು ಅಭಿವೃದ್ಧಿಯನ್ನು ಹೊಂದುವಂತೆ ಧರ್ಮವೆಂಬ ಅಣೆಕಟ್ಟಿನ ಸಹಾಯದಿಂದ ಹೆಜ್ಜೆ ಹೆಜ್ಜೆಗೂ ಪುಣ್ಯವು ವೃದ್ಧಿಸುತ್ತಲೇ ಇರುತ್ತದೆ.
ಯಥಾ ಭಾನುಗತಂ ತೇಜೋ ಮಣಿಃ ಶುದ್ಧಃ ಸಮಾಧಿನಾ |
ಆದತ್ತೇ ರಾಜಶಾರ್ದೂಲ ತಥಾ ಯೋಗಃ ಪ್ರವರ್ತತೇ ॥12॥
ಹೇಗೆ ಶುದ್ಧವಾದ ಸೂರ್ಯಕಾಂತಮಣಿಯು ಸೂರ್ಯನ ತೇಜಸ್ಸನ್ನು ಗ್ರಹಿಸುತ್ತದೋ ಹಾಗೆ ಸಾಧಕನು ಯೋಗಶಕ್ತಿಯಿಂದ ಧ್ಯಾನದ ಮೂಲಕ ಪರಬ್ರಹ್ಮನನ್ನು ಹೃದಯದಲ್ಲಿ ಗ್ರಹಿಸುತ್ತಾನೆ.
ಯಥಾ ತಿಲಾನಾಮಿಹ ಪುಷ್ಪಸಂಶ್ರಯಾತ್
ಪೃಥಕ್ ಪೃಥಗ್ ಯಾತಿ ಗುಣೋಽಪಿಸಾಮ್ಯತಾಮ್ |
ತಥಾ ನರಾಣಾಂ ಭುವಿ ಭಾವಿತಾತ್ಮನಾಂ
ಯಥಾಶ್ರಯಂ ಸತ್ತ್ವಗುಣಃ ಪ್ರವರ್ತತೇ ॥13॥
ಹೇಗೆ ಎಣ್ಣೆಯು ಅನೇಕ ವಿಧ ಪರಿಮಳ ಪುಷ್ಪಗಳ ಸಂಯೋಗದಿಂದ ಬೇರೆ ಬೇರೆ ರೀತಿಯಾದ ಪರಿಮಳವನ್ನು ಹೊಂದುತ್ತದೋ ಅದರಂತೆ ಪರಿಶುದ್ಧರಾದ ಜೀವರು ತಮ್ಮ ಮನಸ್ಸಿನಲ್ಲಿ ಉತ್ತಮವಾದ ಭಗವಂತನ ಗುಣಗಳನ್ನು ಬೇರೆ ಬೇರೆ ಕ್ರಮದಿಂದ ಅನುಸಂಧಾನ ಮಾಡುತ್ತಾ ಸತ್ತ್ವಗುಣದ ಅಭಿವೃದ್ಧಿಯನ್ನು ಹೊಂದುತ್ತಿರುತ್ತಾರೆ.
ಜಹಾತಿ ದಾರಾನಿಹತೇ ನ ಸಂಪದಃ
ಸದಶ್ವಯಾನಂ ವಿವಿಧಾಶ್ಚ ಯಾಃ ಕ್ರಿಯಾಃ |
ತ್ರಿವಿಷ್ಟಪೇ ಜಾತಮತಿರ್ಯದಾ ನರ-

ಸ್ತದಾಸ್ಯ ಬುದ್ಧಿರ್ವಿಷಯೇಷು ಭಿದ್ಯತೇ ॥14॥
ಯಾವಾಗ ಮನುಷ್ಯನು ಸದ್ವಸ್ತಿಯನ್ನು ಹೊಂದುವುದರಲ್ಲಿ ಆಸಕ್ತಿಯನ್ನು ವಹಿಸುತ್ತಾನೋ ಆಗ ಅವನು ಹೆಂಡತಿಯನ್ನು, ಬಗೆ ಬಗೆಯಾದ ಸಂಪತ್ತನ್ನು, ಧನವನ್ನು, ಪದವಿಯನ್ನು, ವಾಹನಗಳನ್ನು, ಹಲವು ಬಗೆಯ ಫಲಪ್ರದವಾದ ಕರ್ಮಗಳನ್ನು ದೂರೀಕರಿಸುತ್ತಾನೆ.
ಪ್ರಸಕ್ತಬುದ್ಧಿರ್ವಿಷಯೇಷು ಯೋ ನರೋ
ಯೋ ಬುದ್ಧ್ಯತೇ ಹ್ಯಾತ್ಮಹಿತಂ ಕದಾಚನ |
ಸ ಸರ್ವಭಾವಾನುಗತೇನ ಚೇತಸಾ
ನೃಪಾಮಿಷೇಣೇವ ಝಷೋ ವಿಕೃಷ್ಯತೇ ॥15॥
ಮಹಾರಾಜನೇ, ವಿಷಯ ಸುಖಗಳಲ್ಲಿಯೇ ಆಸಕ್ತನಾದ ಮನುಷ್ಯನು ತನಗೆ ಹಿತವಾಗುವ ಕರ್ಮ ಯಾವುದೆಂಬುದನ್ನು ಪ್ರಯತ್ನಪೂರ್ವಕವಾಗಿಯೂ ತಿಳಿದುಕೊಳ್ಳುವುದಿಲ್ಲ. ನೀರಿನಲ್ಲಿ ಸಂಚರಿಸುವ ಮೀನು ಗಾಳದಲ್ಲಿರುವ ಮಾಂಸದ ಪ್ರಲೋಭನೆಗೆ ತುತ್ತಾಗಿ ದುಃಖಕ್ಕೆ ಈಡಾಗುವಂತೆ ವಿಷಯಸುಖಗಳನ್ನೇ ಅನುಭವಿಸಿಕೊಂಡು ಹೋಗುವ ಬುದ್ಧಿಯುಳ್ಳವನು ವಿಷಯಗಳಿಂದ ಆಸಕ್ತನಾಗಿ ಅಪಾರ ದುಃಖಕ್ಕೆ ಭಾಗಿಯಾಗುತ್ತಾನೆ.
ಸಂಘಾತವಾನ್ ಮರ್ತ್ಯಲೋಕಃ ಪರಸ್ಪರಮಪಾಶ್ರಿತಃ |
ಕದಲೀಗರ್ಭನಿಃಸಾರೋ ನೌರಿವಾಪ್ಸು ನಿಮಜ್ಜತಿ ॥16॥
ಯಾವನು ಜೀವನದಲ್ಲಿ ಸ್ತ್ರೀ, ಪುತ್ರ, ಮಿತ್ರ ಮೊದಲಾದ ಸಮುದಾಯವನ್ನು ಹೊಂದಿರುತ್ತಾನೋ, ಅನ್ಯೋನ್ಯವಾಗಿ ಅವರ ಸಂಬಂಧವನ್ನೇ ಹೊಂದಿ- ಕೊಂಡಿರುತ್ತಾನೋ ಅವನ ಈ ಸಂಸಾರವು ಬಾಳೆಯ ಕಂದಿನ ಮಧ್ಯಭಾಗದಲ್ಲಿರುವ ದಿಂಡಿನಂತೆ ನಿಸ್ಸಾರವಾಗಿದೆ. ಪ್ರವಾಹದಲ್ಲಿ ಸಿಕ್ಕಿಬಿದ್ದಿರುವ ನೌಕೆಯಂತೆ ಕಾಲಕ್ರಮದಲ್ಲಿ ಬದುಕೇ ಮುಳುಗಿ ಹೋಗುತ್ತದೆ.
ನ ಧರ್ಮಕಾಲಃ ಪುರುಷಸ್ಯ ನಿಶ್ಚಿತೋ
ನ ಚಾಪಿ ಮೃತ್ಯುಃ ಪುರುಷಂ ಪ್ರತೀಕ್ಷತೇ |
ಕ್ರಿಯಾ ಹಿ ಧರ್ಮಸ್ಯ ಸದೈವ ಶೋಭನಾ
ಯದಾ ನರೋ ಮೃತ್ಯುಮುಖೇಽಭಿವರ್ತತೇ ॥17॥
ಧರ್ಮಕಾರ್ಯವ್ನನ್ನು ಇಂತಹ ಕಾಲದಲ್ಲಿಯೇ ಮಾಡಬೇಕೆಂದು ಯಾರೂ ನಿಶ್ಚಯಿಸಿರುವುದಿಲ್ಲ. ಮನುಷ್ಯನು ಧರ್ಮವನ್ನು ಆಚರಿಸಲೆಂದು ಮೃತ್ಯುವೂ ನಿರೀಕ್ಷಿಸುತ್ತಾ ಕುಳಿತುಕೊಳ್ಳುವುದಿಲ್ಲ. ಮನುಷ್ಯನು ಯಾವಾಗಲೂ ಮೃತ್ಯುಮುಖನಾಗಿಯೇ ಇರುತ್ತಾನೆ. ಆದ್ದರಿಂದ ಸದಾಕಾಲವೂ ಧರ್ಮಕಾರ್ಯವನ್ನು ಮಾಡುತ್ತಿರುವುದೇ ಶ್ರೇಯಸ್ಕರವಾದುದು.
ಯಥಾಂಧಃ ಸ್ವಗೃಹೇ ಯುಕ್ತೋ ಹ್ಯಭ್ಯಾಸಾದೇವ ಗಚ್ಛತಿ |
ತಥಾ ಯುಕ್ತೇನ ಮನಸಾ ಪ್ರಾಜ್ಞೋ ಗಚ್ಛತಿ ತಾಂ ಗತಿಮ್ ॥18॥
ಹೇಗೆ ಕುರುಡನಾದವನು ಅಭ್ಯಾಸ ಬಲದಿಂದ ತನ್ನ ಮನೆಯಲ್ಲಿ ನಿರಾತಂಕವಾಗಿ ತಿರುಗಾಡುತ್ತಾನೋ ಅದೇ ರೀತಿ ಪ್ರಾಜ್ಞನಾದವನು ಯೋಗಯುಕ್ತವಾದ ಮನಸ್ಸಿನಿಂದ ಕೂಡಿದವನಾಗಿ ಈ ಲೋಕದಲ್ಲಿ ಸಂಚರಿಸುತ್ತಾ ಪರಮಗತಿಯನ್ನು ಹೊಂದುತ್ತಾನೆ.
ಮರಣಂ ಜನ್ಮನಿ ಪ್ರೋಕ್ತಂ ಜನ್ಮ ವೈ ಮರಣಾಶ್ರಿತಮ್ |
ಅವಿದ್ವಾನ್ ಮೋಕ್ಷಧರ್ಮೇಷು ಬದ್ಧೋ ಭ್ರಮತಿ ಚಕ್ರವತ್ ॥19॥
ಹುಟ್ಟಿನಲ್ಲಿ ಮರಣವು ಸೇರಿಕೊಂಡಿರುತ್ತದೆ ಎಂದು ಹೇಳುತ್ತಾರೆ. ಹುಟ್ಟು ಮರಣವನ್ನಾಶ್ರಯಿಸಿದೆ. ಮೋಕ್ಷಧರ್ಮಗಳನ್ನು ತಿಳಿಯದೆ ಇರುವ ವ್ಯಕ್ತಿಯು ಜನನ ಮರಣಗಳ ಚಕ್ರದಲ್ಲಿ ಸಿಕ್ಕಿಕೊಂಡು ಸುತ್ತುತ್ತಿರುತ್ತಾನೆ. ಆದರೆ ಮೋಕ್ಷಧರ್ಮವನ್ನು ತಿಳಿದ, ಜ್ಞಾನಮಾರ್ಗವನ್ನು ಆಶ್ರಯಿಸಿರುವ ವ್ಯಕ್ತಿಗೆ ಇಹ-ಪರಗಳಲ್ಲಿ ಸುಖವು ನಿಶ್ಚಿತವು.
ಯಥಾ ಮೃಣಾಲೋಽನುಗತಮಾಶು ಮುಂಚತಿ ಕರ್ದಮಮ್ |
ತಥಾತ್ಮಾ ಪುರುಷಸ್ಯೇಹ ಮನಸಾ ಪರಿಮುಚ್ಯತೇ |
ಮನಃ ಪ್ರಣಯತೇಽಽತ್ಮಾನಂ ಸ ಏನಮಭಿಯುಂಜತಿ ॥20॥
ಹೇಗೆ ಕೆಸರಿನಲ್ಲಿ ಇರುವ ಕಮಲ ಪುಷ್ಪವನ್ನು ದಂಟಿನ ಸಹಿತವಾಗಿ ನೀರಿನಿಂದ ಹೊರಗೆ ತೆಗೆದಾಗ ತಾವರೆಯ ದಂಟು ಕೆಸರನ್ನು ಬಿಟ್ಟು ಬರುತ್ತದೋ ಅದೇ ರೀತಿ ಆತ್ಮನು ಕಲುಷಿತವಾದ ಮನಸ್ಸನ್ನು ಬಿಟ್ಟುಬಿಡುತ್ತಾನೆ. ಮನಸ್ಸೇ ಮೊದಲು ಆತ್ಮವನ್ನು ಸೆಳೆಯುತ್ತದೆ. ಆತ್ಮವು ಮನಸ್ಸಿನೊಡನೆ ಸೇರಿಕೊಳ್ಳುತ್ತದೆ. ಆತ್ಮವು ಯೋಗದಲ್ಲಿ ಸಿದ್ಧಿಯನ್ನು, ಪರಮಾತ್ಮನನ್ನು ಏಕಾಗ್ರತೆಯಿಂದ ನೋಡುತ್ತದೆ.
ಪರಾರ್ಥೇ ವರ್ತಮಾನಸ್ತು ಸ್ವಕಾರ್ಯಂ ಯೋಽಭಿಮನ್ಯತೇ |
ಇಂದ್ರಿಯಾರ್ಥೇಷು ಸಕ್ತಃ ಸನ್ ಸ್ವಕಾರ್ಯಾತ್ ಪರಿಹೀಯತೇ ॥21॥
ಇಂದ್ರಿಯವಶನಾದ ಜೀವನು ಪರಮಾತ್ಮನಿಗೆ ಸಂಬಂಧಿಸದ ಕಾರ್ಯಗಳಲ್ಲಿ ಆಸಕ್ತನಾಗಿರುತ್ತಾನೋ, ತನಗೆ ಸಂಬಂಧಿಸದ ಕಾರ್ಯಗಳನ್ನು ತನ್ನ ಕಾರ್ಯಗಳೆಂದು ಭಾವಿಸುತ್ತಾನೋ ಅವನು ತಾನು ಮಾಡಬೇಕಾದ ನಿಜವಾದ ಕರ್ಮದಿಂದ ವಂಚಿತನಾಗಿರುತ್ತಾನೆ, ತಿರಸ್ಕೃತನಾಗಿರುತ್ತಾನೆ.
ಅಧಸ್ತಿರ್ಯಗ್ಗತಿಂ ಚೈವ ಸ್ವರ್ಗೇ ಚೈವ ಪರಾಂ ಗತಿಮ್ |
ಪ್ರಾಪ್ನೋತಿ ಸ್ವಕೃತೈರಾತ್ಮಾ ಪ್ರಾಜ್ಞಸ್ಯೇಹೇತರಸ್ಯ ಚ ॥22॥
ಪ್ರಾಜ್ಞನಾದ ಆತ್ಮನು ತಾನು ಮಾಡಿದ ಪುಣ್ಯಕರ್ಮಗಳಿಂದ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. ದಡ್ಡನಾದ ಚೇತನನು ತಾನು ಮಾಡಿದ ಪಾಪಕರ್ಮಗಳಿಂದ ಅಧೋಗತಿಯನ್ನು, ಪಶುಪಕ್ಷ್ಯಾದಿ ತಿರ್ಯಗ್ಯೋನಿಯನ್ನು ಹೊಂದುತ್ತಾನೆ.
ಮೃನ್ಮಯೇ ಭಾಜನೇ ಪಕ್ವೇ ಯಥಾ ವೈ ನ್ಯಸ್ಯತೇ ದ್ರವಃ |

ತಥಾ ಶರೀರಂ ತಪಸಾ ತಪ್ತಂ ವಿಷಯಮಶ್ನುತೇ ॥23॥
ಚೆನ್ನಾಗಿ ಸುಡದಿರುವ ಮಣ್ಣಿನ ಮಡಿಕೆಯಲ್ಲಿ ಇಟ್ಟ ನೀರು ಮಣ್ಣಿನ ಜೊತೆಗೇ ಇಂಗಿ ಹೋಗುತ್ತದೆ. ಚೆನ್ನಾಗಿ ಬೆಂದ ಮಣ್ಣಿನ ಮಡಿಕೆಯಲ್ಲಿ ಹಾಕಿದ ನೀರು ದೃಢವಾಗಿ, ಸ್ಥಿರವಾಗಿ ಇರುತ್ತದೆ. ಇದರಂತೆ ತಪಸ್ಸಿನಿಂದ ಬಳಲಿದ ಶರೀರವು ವಿಷಯ ಪದಾರ್ಥಗಳನ್ನು ತಡೆಗಟ್ಟಿ ಧರ್ಮದ ಫಲವನ್ನು ಉಳಿಸುತ್ತದೆ. ಯಾರ ಶರೀರವು ತಪಸ್ಸಿನ ಬಲದಿಂದ ಪಕ್ವಗೊಂಡಿಲ್ಲವೋ ಆ ಶರೀರದಲ್ಲಿ ವಿಷಯ ಪದಾರ್ಥಗಳ ಜೊತೆಗೆ ಆತ್ಮನಿಗೆ ಅಧಃಪತನ ಉಂಟಾಗುತ್ತದೆ.
ವಿಷಯಾನಶ್ನುತೇ ಯಸ್ತು ನ ಸ ಭೋಕ್ಷ್ಯತ್ಯಸಂಶಯಮ್ |
ಯಸ್ತು ಭೋಗಾಂಸ್ತ್ಯಜೇದಾತ್ಮಾ ಸ ವೈ ಭೋಕ್ತುಂ ವ್ಯವಸ್ಯತಿ ॥24॥
ಯಾವ ಜೀವನು ವಿಷಯ ಸುಖಗಳನ್ನೇ ಅನುಭವಿಸುತ್ತಾನೋ ಅವನು ತನ್ನ ರಕ್ಷಣೆಯನ್ನು ಮಾಡಿಕೊಳ್ಳಲು ಅಸಮರ್ಥನಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಯಾವ ಜೀವನು ಭೋಗಗಳನ್ನು ಅನುಭವಿಸುವುದಿಲ್ಲವೋ ಅವನು ಆತ್ಮ ರಕ್ಷಣೆಯನ್ನು ಮಾಡಿಕೊಳ್ಳಲು ಸಮರ್ಥನಾಗುತ್ತಾನೆ. ವಿಷಯಸುಖಗಳನ್ನು ಬಯಸುವ ವ್ಯಕ್ತಿಗೆ ಪರಲೋಕದ ಭೋಗಗಳು ನಾಶವಾಗುತ್ತದೆ ಎಂದು ಭಾವ.
ನೀಹಾರೇಣ ಹಿ ಸಂವೀತಃ ಶಿಶ್ನೋದರಪರಾಯಣಃ |
ಜಾತ್ಯಂಧ ಇವ ಪಂಥಾನಮಾವೃತಾತ್ಮಾ ನ ಬುದ್ಧ್ಯತೇ ॥25॥
ಮಂಜಿನಂತಿರುವ ಮಾಯೆಯಿಂದ ಆವೃತನಾದ ಜೀವನು ಶಿಶ್ನೋದರ ಪರಾಯಣನಾಗಿ ಹುಟ್ಟು ಕುರುಡನಂತೆ ಸನ್ಮಾರ್ಗದಿಂದ ಭ್ರಷ್ಟನಾಗುತ್ತಾನೆ. ವಿಷಯ ಪದಾರ್ಥಗಳಿಂದ ಆವರಿಸಲ್ಪಟ್ಟ ಚಕ್ಷುಸ್ಸುಳ್ಳ ಆ ಜೀವನು ತನ್ನ ಶ್ರೇಯೋಮಾರ್ಗವನ್ನು ಎಂದೂ ತಿಳಿಯುವುದಿಲ್ಲ.
ವಣಿಗ್ ಯಥಾ ಸಮುದ್ರಾದ್ ವೈ ಯಥಾರ್ಥಂ ಲಭತೇ ಧನಮ್ |
ತಥಾ ಮರ್ತ್ಯಾರ್ಣವೇ ಜಂತೋಃ ಕರ್ಮವಿಜ್ಞಾನತೋ ಗತಿಃ ॥26॥
ಹೇಗೆ ವೈಶ್ಯನೊಬ್ಬನು ಸಮುದ್ರ ಪ್ರಯಾಣವನ್ನು ಮಾಡಿ ಹೊರದೇಶಕ್ಕೆ ಹೋಗಿ ತಾನು ವಿನಿಯೋಗ ಮಾಡಿರುವ ಮೂಲಧನಕ್ಕಿಂತ ಅಧಿಕ ಲಾಭವನ್ನು ಸಂಪಾದಿಸಿಕೊಂಡು ಹಿಂದಿರುಗುತ್ತಾನೋ, ಇದೇ ರೀತಿ ಸಂಸಾರವೆಂಬ ಸಾಗರದಲ್ಲಿ ವ್ಯಾಪಾರಕ್ಕಾಗಿ ಆಗಮಿಸಿರುವ ಜೀವನಿಗೆ ಅವನು ವಿನಿಯೋಗಿಸಿದ ಕರ್ಮ ಜ್ಞಾನಗಳಿಗೆ ಅನುಗುಣವಾದ ಲಾಭವು ನಿಶ್ಚಿತವಾಗಿಯೂ ದೊರೆಯುತ್ತದೆ. ಉತ್ತಮ ಕರ್ಮಗಳನ್ನು ಅನುಷ್ಠಾನ ಮಾಡಿದಲ್ಲಿ ಉತ್ತಮ ಫಲಗಳನ್ನು, ಅಧಮ ಕರ್ಮಗಳನ್ನು ಆಚರಿಸಿದಲ್ಲಿ ಅಧಮ ಫಲವನ್ನು ಹೊಂದುತ್ತಾನೆ.
ಅಹೋರಾತ್ರಮಯೇ ಲೋಕೇ ಜರಾರೂಪೇಣ ಸಂಚರನ್ |
ಮೃತ್ಯುರ್ಗ್ರಸತಿ ಭೂತಾನಿ ಪವನಂ ಪನ್ನಗೋ ಯಥಾ ॥27॥
ಹಗಲು ಮತ್ತು ರಾತ್ರಿಗಳಂತಿರುವ ಈ ಲೋಕದಲ್ಲಿ ಮುಪ್ಪೆಂಬ ರೂಪವನ್ನು ಧರಿಸಿ ಸಂಚರಿಸುತ್ತಿರುವ ಮೃತ್ಯುವು ಸರ್ಪವು ಗಾಳಿಯನ್ನು ನುಂಗುವಂತೆ ಸಮಸ್ತ ಪ್ರಾಣಿಗಳನ್ನು ನುಂಗಿ ಹಾಕುತ್ತದೆ.
ಸ್ವಯಂ ಕೃತಾನಿ ಕರ್ಮಾಣಿ ಜಾತೋ ಜಂತುಃ ಪ್ರಪದ್ಯತೇ |
ನಾಕೃತಂ ಲಭತೇ ಕಶ್ಚಿತ್ ಕಿಂಚಿದತ್ರ ಪ್ರಿಯಾಪ್ರಿಯಮ್ ॥28॥
ಈ ಲೋಕದಲ್ಲಿ ಜೀವನು ಜನ್ಮವನ್ನು ತಾಳಿ ತಾನೇ ಮಾಡಿದ ಕರ್ಮ ಫಲಗಳನ್ನು ಅನುಭವಿಸುತ್ತಾನೆ. ತಾನು ಪುಣ್ಯ-ಪಾಪಗಳನ್ನು ಆಚರಿಸದೆ ಪ್ರಿಯಾಪ್ರಿಯಗಳನ್ನು ಹೊಂದಲು ಸಾಧ್ಯವಿಲ್ಲ.
ಶಯಾನಂ ಯಾಂತಮಾಸೀನಂ ಪ್ರವತ್ತಂ ವಿಷಯೇಷು ಚ |
ಶುಭಾಶುಭಾನಿ ಕರ್ಮಾಣಿ ಪ್ರಪದ್ಯಂತೇ ನರಂ ಸದಾ ॥29॥
ಮಲಗಿರುವ, ಸಂಚರಿಸುತ್ತಿರುವ, ಕುಳಿತಿರುವ ವ್ಯಕ್ತಿಯನ್ನು ಶುಭಾಶುಭ ಕರ್ಮಗಳು ಅನುಸರಿಸಿ ಹೋಗುತ್ತಲೇ ಇರುತ್ತವೆ.
ನ ಹ್ಯನ್ಯತೀರಮಾಸಾದ್ಯ ಪುನಸ್ತರ್ತುಂ ವ್ಯವಸ್ಯತಿ |
ದುರ್ಲಭೋ ದೃಶ್ಯತೇ ಹ್ಯಸ್ಯ ವಿನಿಪಾತೋ ಮಹಾರ್ಣವೇ ॥30॥
ಕಷ್ಟ ಪ್ರದೇಶದಿಂದ ಸಮುದ್ರವನ್ನು ದಾಟಿ ಸುಖವಾದ ದೇಶಕ್ಕೆ ಹೋದ ಮನುಷ್ಯನು ಪುನಃ ಆ ಕಷ್ಟಪ್ರದೇಶಕ್ಕೆ ಬರಲು ಬಯಸುವುದಿಲ್ಲ. ಅದರಂತೆ ಸಂಸಾರವೆಂಬ ಕಷ್ಟ ಸಮುದ್ರವನ್ನು ದಾಟಿರುವವನು ಪುನಃ ಅದೇ ಸಂಸಾರಕ್ಕೆ ಬಂದು ದುಃಖಕ್ಕೆ ಭಾಜನನಾಗುವುದಿಲ್ಲ.
ಯಥಾ ಭಾರಾವಸಕ್ತಾ ಹಿ ನೌರ್ಮಹಾಂಭಸಿ ತಂತುನಾ |
ತಥಾ ಮನೋಽಭಿಯೋಗಾದ್ವೈ ಶರೀರಂ ಪ್ರತಿಕರ್ಷತಿ ॥31॥
ಹೇಗೆ ದೊಡ್ಡ ಸಮುದ್ರದಲ್ಲಿರುವ ನೌಕೆಯು ಹಗ್ಗದಿಂದ ಎಳೆಯಲ್ಪಟ್ಟು ನಾವಿಕನ ಭಾವನೆಗೆ ಅನುಗುಣವಾಗಿ ಪ್ರಯಾಣ ಮಾಡುತ್ತದೋ ಅದೇ ರೀತಿ ಜೀವನು ಶರೀರವೆಂಬ ನೌಕೆಯನ್ನು ತನ್ನ ಮನಸ್ಸಿಗೆ ಅನುಗುಣವಾಗಿ ನಡೆಸುತ್ತಿರುತ್ತಾನೆ.
ಯಥಾ ಸಮುದ್ರಮಭಿತಃ ಸಂಸ್ಯೂತಾಃ ಸರಿತೋಽಪರಾಃ |
ತಥಾದ್ಯಾ ಪ್ರಕೃತಿರ್ಯೋಗಾದಭಿಸಂಸ್ಯೂಯತೇ ಸದಾ ॥32॥
ಹೇಗೆ ನದಿಗಳು ಎಲ್ಲ ಭಾಗಗಳಿಂದಲೂ ಹರಿದುಬಂದು ಸಮುದ್ರವನ್ನೇ ಸೇರುತ್ತವೋ ಅದೇ ರೀತಿ ಎಲ್ಲ ಭೂತಗಳು ಮೂಲ ಪ್ರಕೃತಿಗಿಂತ ಭಿನ್ನವಾದ ಶರೀರ ರೂಪ ಪ್ರಕೃತಿಯನ್ನೇ ಸೇರುತ್ತವೆ.
ಸ್ನೇಹಪಾಶೈರ್ಬಹುವಿಧೈರಾಸಕ್ತಮನಸೋ ನರಾಃ |
ಪ್ರಕೃತಿಸ್ಥಾ ವಿಷೀದಂತಿ ಜಲೇ ಸೈಕತವೇಶ್ಮವತ್ ॥33॥
ನಾನಾ ವಿಧವಾದ ಸ್ನೇಹಪಾಶಗಳಿಂದ ಬಂಧಿಸಲ್ಪಟ್ಟಿರುವ ಮನಸ್ಸುಳ್ಳ ಪ್ರಾಕೃತ ಪುರುಷರು ನೀರಿನಲ್ಲಿ ಕಟ್ಟಿದ ಮರಳಿನ ಮನೆಯಂತೆ

ವಿನಾಶವನ್ನು ಹೊಂದುತ್ತಾರೆ.
ಶರೀರಗೃಹಸಂಸ್ಥಸ್ಯ ಶೌಚತೀರ್ಥಸ್ಯ ದೇಹಿನಃ |
ಬುದ್ಧಿಮಾರ್ಗಪ್ರಯಾಂತಸ್ಯ ಸುಖಂ ತ್ವಿಹ ಪರತ್ರ ಚ ॥34॥
ಶೌಚ-ತೀರ್ಥ ಕ್ಷೇತ್ರದಂತಿರುವ, ಶರೀರವೆಂಬ ಮನೆಯನ್ನು ಹೊಂದಿರುವ, ಜ್ಞಾನ ಮಾರ್ಗದಲ್ಲಿಯೇ ಸಾಗುವ ಪುರುಷನಿಗೆ ಈ ಲೋಕದಲ್ಲಿಯೂ ಸುಖವಿದೆ, ಪರಲೋಕದಲ್ಲಿಯೂ ಸುಖವಿದೆ.
ವಿಸ್ತರಾಃ ಕ್ಲೇಶಸಂಯುಕ್ತಾಃ ಸಂಕ್ಷೇಪಾಸ್ತು ಸುಖಾವಹಾಃ |
ಪರಾರ್ಥಂ ವಿಸ್ತರಾಃ ಸರ್ವೇ ತ್ಯಾಗಮಾತ್ಮಹಿತಂ ವಿದುಃ ॥35॥
ಜಗತ್ತಿನ ಅನೇಕ ಲೌಕಿಕ ವ್ಯಾಪಾರಗಳು ಕ್ಲೇಶದಿಂದ ಕೂಡಿವೆ. ಲೌಕಿಕ ವ್ಯಾಪಾರಗಳಿಂದ ಮುಕ್ತರಾಗುವುದೇ ಸುಖಕ್ಕೆ ಕಾರಣವು. ಆತ್ಮಹಿತವನ್ನು ತಿಳಿದ ಜ್ಞಾನಿಗಳು ಭಗವಂತನಿಗೋಸ್ಕರ ಮಾಡುವ ನೂರಾರು ಕ್ರಿಯೆಗಳೇ ಶ್ರೇಯಸ್ಕರವೆಂದು ತಿಳಿದಿದ್ದಾರೆ.
ಸಂಕಲ್ಪಜೋ ಮಿತ್ರವರ್ಗೋ ಜ್ಞಾತಯಃ ಕಾರಣಾತ್ಮಕಾಃ |
ಭಾರ್ಯಾ ದಾಸಾಶ್ಚ ಪುತ್ರಾಶ್ಚ ಸ್ವಮರ್ಥಮನುಯುಂಜತೇ ॥36॥
ಯಾವುದಾದರೊಂದು ಮನೋಭಿಲಾಷೆಯನ್ನು ಪೂರೈಸಿಕೊಳ್ಳಲು ಮಿತ್ರವರ್ಗವು ಸೃಷ್ಟಿಯಾಗುತ್ತದೆ. ಜ್ಞಾತಿಗಳು ಯಾವುದೋ ಕಾರಣದಿಂದ ಬಂಧುತ್ವವನ್ನು ಅವಲಂಬಿಸಿರುತ್ತಾರೆ. ಭಾರ್ಯೆ, ಪುತ್ರ, ಸೇವಕರು ಎಲ್ಲರೂ ಸ್ವಾರ್ಥಕ್ಕಾಗಿಯೇ ದೃಷ್ಟಿ ಇಟ್ಟಿರುತ್ತಾರೆ.
ನ ಮಾತಾ ನ ಪಿತಾ ಕಿಂಚಿತ್ ಕಸ್ಯಚಿತ್ ಪ್ರತಿಪದ್ಯತೇ |
ದಾನಪಥ್ಯೋದನೋ ಜಂತುಃ ಸ್ವಕರ್ಮಫಲಮಶ್ನುತೇ ॥37॥
ತಂದೆಯೇ ಆಗಲಿ, ತಾಯಿಯೇ ಆಗಲಿ, ಪರಲೋಕದ ಸಾಧನೆಗೆ ಸಹಾಯರಾಗರು. ಮನುಷ್ಯನು ಯಾವಾಗಲೂ ದಾನವನ್ನೂ, ತ್ಯಾಗವನ್ನೂ ಮಾಡುತ್ತಾ ಪರಲೋಕದ ಬುತ್ತಿಯನ್ನು ಪಡೆದುಕೊಳ್ಳಬೇಕು. ಪ್ರತಿಯೊಬ್ಬ ಮನುಷ್ಯನು ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭವಿಸುತ್ತಾನೆ.
ಮಾತಾ ಪುತ್ರಃ ಪಿತಾ ಭ್ರಾತಾ ಭಾರ್ಯಾ ಮಿತ್ರಜನಸ್ತಥಾ |
ಅಷ್ಟಾಪದಪದಸ್ಥಾನೇ ತ್ವಕ್ಷಮುದ್ರೇವ ನ್ಯಸ್ಯತೇ ॥38॥
ತಾಯಿ, ಮಗ, ತಂದೆ, ಸಹೋದರ, ಪತ್ನಿ, ಮಿತ್ರಜನರು-ಚಿನ್ನದ ಸಂಪುಷ್ಪದ ಮೇಲೆ ರಕ್ಷಣೆಯ ದೃಷ್ಟಿಯಿಂದ ಒತ್ತಿರುವ ಅರಗಿನ ಮುದ್ರೆಯಂತೆ ಇರುತ್ತಾರೆ.
ಸರ್ವಾಣಿ ಕರ್ಮಾಣಿ ಪುರಾ ಕೃತಾನಿ
ಶುಭಾಶುಭಾನ್ಯಾತ್ಮನೋ ಯಾಂತಿ ಜಂತೋಃ |
ಉಪಸ್ಥಿತಂ ಕರ್ಮಫಲಂ ವಿದಿತ್ವಾ
ಬುದ್ಧಿಂ ತಥಾ ಚೋದಯತೇಽಂತರಾತ್ಮಾ ॥39॥
ಹಿಂದಿನ ಜನ್ಮದಲ್ಲಿ ಮಾಡಿರುವ ಜೀವನ ಶುಭಾಶುಭ ಫಲಗಳು ಪ್ರಾಣಿಯನ್ನೇ ಅನುಸರಿಸಿ ಬರುತ್ತವೆ. ತನಗೆ ಒದಗಿ ಬರುವ ಸುಖವನ್ನು, ಕಷ್ಟವನ್ನು ಕರ್ಮದ ಫಲವೆಂದು ತಿಳಿದಿರುವ ಜೀವನು ಪರಮಾತ್ಮನ ಕಡೆ ತನ್ನ ಬುದ್ಧಿಯನ್ನು ಪ್ರಚೋದಿಸುತ್ತಾನೆ.
ವ್ಯವಸಾಯಂ ಸಮಾಶ್ರಿತ್ಯ ಸಹಾಯಾನ್ಯೋಽಧಿಗಚ್ಛತಿ |
ನ ತಸ್ಯ ಕಶ್ಚಿದಾರಂಭಃ ಕದಾಚಿದವಸೀದತಿ ॥40॥
ಯಾವನು ಪ್ರಯತ್ನಪೂರ್ವಕವಾಗಿ ತನ್ನ ಕ್ರಿಯೆಗಳಿಗನುಗುಣವಾದ ಸಹಾಯವನ್ನು ಮತ್ತೊಬ್ಬರಿಂದ ಹೊಂದುತ್ತಾನೋ ಅವನು ಆರಂಭಿಸುವ ಯಾವುದೇ ಕಾರ್ಯವು ಯಾವಾಗಲೂ ವಿನಾಶವನ್ನು ಹೊಂದದು.
ಅದ್ವೈಧಮನಸಂ ಯುಕ್ತಂ ಶೂರಂ ಧೀರಂ ವಿಪಶ್ಚಿತಮ್ |
ನ ಶ್ರೀಃ ಸಂತ್ಯಜತೇ ನಿತ್ಯಮಾದಿತ್ಯಮಿವ ರಶ್ಮಯಃ ॥41॥
ಸಂಶಯವಿಲ್ಲದೆ ಇರುವಂತಹ ಮನಸ್ಸುಳ್ಳ ಶೂರನನ್ನೂ, ಧೀರನನ್ನೂ, ಜ್ಞಾನಿಯನ್ನೂ ಎಂದಿಗೂ ಸಂಪತ್ತು ತ್ಯಜಿಸುವುದಿಲ್ಲ. ಸೂರ್ಯನನ್ನು ರಶ್ಮಿಗಳು ಹೇಗೆ ಬಿಡವೋ ಅದರಂತೆ.
ಆಸ್ತಿಕ್ಯವ್ಯವಸಾಯಾಭ್ಯಾಮುಪಾಯಾದ್ ವಿಸ್ಮಯಾದ್ಧಿಯಾ |
ಯಮಾರಭತ್ಯನಿಂದ್ಯಾತ್ಮಾ ನ ಸೋಽರ್ಥಃ ಪರಿಸೀದತಿ ॥42॥
ದೋಷರಹಿತವಾದ ಮನಸ್ಸುಳ್ಳ ಮನುಷ್ಯನು ಆಸ್ತಿಕ್ಯ ಬುದ್ಧಿಯಿಂದ, ಸತ್ಕರ್ಮ ಪ್ರಯತ್ನದಿಂದ, ಯೋಗೋಪಾಯದಿಂದ, ಗರ್ವರಾಹಿತ್ಯದಿಂದ, ಉತ್ತಮ ಬುದ್ಧಿಯಿಂದ ಕೂಡಿದವನಾಗಿ ಕಾರ್ಯಗಳನ್ನು ಪ್ರಾರಂಭಿಸುತ್ತಾನೋ ಆ ಕಾರ್ಯಗಳು ಎಂದಿಗೂ ನಿಷ್ಫಲಗಳಾಗುವುದಿಲ್ಲ.
ಸರ್ವಃ ಸ್ವಾನಿ ಶುಭಾಶುಭಾನಿ ನಿಯತಂ ಕರ್ಮಾಣಿ ಜಂತುಃ ಸ್ವಯಂ
ಗರ್ಭಾತ್ ಸಂಪ್ರತಿಪದ್ಯತೇ ತದುಭಯಂ ಯತ್ತೇನ ಪೂರ್ವಂ ಕೃತಮ್ |
ಮೃತ್ಯುಶ್ಚಾಪರಿಹಾರವಾನ್ ಸಮಗತಿಃ ಕಾಲೇನ ವಿಚ್ಛೇದಿತಾ |
ದಾರೋಃಚೂರ್ಣಮಿವಾಶ್ಮಸಾರವಿಹಿತಂ ಕರ್ಮಾಂತಿಕಂ ಪ್ರಾಪಯೇತ್ ॥
ಎಲ್ಲ ಪ್ರಾಣಿಗಳು ಪೂರ್ವಜನ್ಮದಲ್ಲಿ ತಾವು ಮಾಡಿದ ಶುಭಾಶುಭ ಕರ್ಮಗಳ ಫಲಗಳನ್ನು ತಾಯಿಯ ಗರ್ಭವನ್ನು ಪ್ರವೇಶಿಸಿದ ಬಳಿಕ ನಿಯಮೇನ ಪಡೆದುಕೊಂಡು ಅನುಭವಿಸುತ್ತಾರೆ. ಮರವನ್ನು ಕುಯ್ಯುವಾಗ ಗರಗಸದಿಂದ ಉದುರುವ ಮರದ ಹೊಟ್ಟನ್ನು ಗಾಳಿಯು ಯಾವ ರೀತಿಯಲ್ಲಿ ಹಾರಿಸಿಕೊಂಡು ಹೋಗುತ್ತದೋ, ಅದೇ ರೀತಿ ಜಿಗಣಿಯ ದ್ವಿಮುಖಾಕಾರದಂತೆ ಮರದಲ್ಲಿ ಮಾಡಲ್ಪಟ್ಟ ಫಲಕದಲ್ಲಿ ಕಬ್ಬಿಣದಿಂದ ಜೋಡಿಸಿದ ಯಂತ್ರಕ್ಕೆ ಮತ್ಸ್ಯಗಳು ಹೇಗೆ ವಶವಾಗುತ್ತವೋ ಅದರಂತೆ ಮನುಷ್ಯನನ್ನು ಕರ್ಮದ ಜೊತೆಗೆ ಕಾಲವು ಸೇರಿಸುತ್ತದೆ.

ಸ್ವರೂಪತಾಮಾತ್ಮಕೃತಂ ಚ ವಿಸ್ತರಂ
ಕುಲಾನ್ವಯಂ ದ್ರವ್ಯಸಮೃದ್ಧಿಸಂಚಯಮ್ |
ನರೋ ಹಿ ಸರ್ವೋ ಲಭತೇ ಯಥಾಕೃತಂ
ಶುಭಾಶುಭೇನಾತ್ಮಕೃತೇನ ಕರ್ಮಣಾ ॥44॥
ಎಲ್ಲ ಜನರು ತಾವು ಮಾಡಿದ ಶುಭಾಶುಭ ಕರ್ಮದ ಫಲವಾಗಿಯೇ ತನ್ನ ಯೋಗ್ಯತೆಗನುಗುಣವಾಗಿ ಭಾಗ್ಯವಿಸ್ತಾರಗಳನ್ನು, ದಾರಿದ್ರ್ಯಗಳನ್ನು, ಸತ್ಕುಲ ಸಂಬಂಧವನ್ನು, ದುಷ್ಕುಲ ಸಂಬಂಧವನ್ನು, ದ್ರವ್ಯ ಸಮೃದ್ಧಿಯನ್ನು, ದಾರಿದ್ರ್ಯವನ್ನು ಹೊಂದುತ್ತಾರೆ.
ಭೀಷ್ಮ:
ಇತ್ಯುಕ್ತೋ ಜನಕೋ ರಾಜನ್ಯಥಾತಥ್ಯಂ ಮನೀಷಿಣಾ |
ಶ್ರುತ್ವಾ ಧರ್ಮವಿದಾಂ ಶ್ರೇಷ್ಠಃ ಪರಾಂ ಮುದಮವಾಪ ಹ ॥45॥
ಭೀಷ್ಮ ಯುಧಿಷ್ಠಿರನೇ, ಜ್ಞಾನಿಯಾದ ಪರಾಶರ ಮುನಿಯು ಜನಕನಿಗೆ ಯಥಾರ್ಥವಾದ ವಿಷಯಗಳನ್ನು ಹೀಗೆ ಹೇಳಿದ ಬಳಿಕ ಉತ್ತಮೋತ್ತಮವಾದ ಪ್ರವಚನವನ್ನು ಕೇಳಿಸಿಕೊಂಡ, ಧರ್ಮಾತ್ಮರಲ್ಲಿಯೇ ಶ್ರೇಷ್ಠನಾದ ಜನಕನು ಅತ್ಯಂತ ಸಂತೋಷವನ್ನು ಹೊಂದಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.

॥ ಪರಾಶರಗೀತಾ ಸಮಾಪ್ತಾ ॥
* * * * *
ನೂರ ಮೂವತ್ತೆರಡನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನನ್ನು ಕುರಿತು ಮೋಕ್ಷ ಸಾಧನವನ್ನು ತಿಳಿಸುವ ಹಂಸಗೀತೆಯನ್ನು ಉಪದೇಶಿಸಿದುದು.
ಯುಧಿಷ್ಠಿರಃ
ಸತ್ಯಂ ಕ್ಷಮಾಂ ದಮಂ ಪ್ರಜ್ಞಾ ಂ ಪ್ರಶಂಸಂತಿ ಪಿತಾಮಹ |
ವಿದ್ವಾಂಸೋ ಮನುಜಾ ಲೋಕೇ ಕಥಮೇತನ್ಮತಂ ತವ ॥1॥
ಯುಧಿಷ್ಠಿರ ಪಿತಾಮಹನೇ, ಲೋಕದಲ್ಲಿ ವಿದ್ವಾಂಸರು ಸತ್ಯ, ಇಂದ್ರಿಯನಿಗ್ರಹ, ಕ್ಷಮೆ, ಪ್ರಜ್ಞೆ ಇವುಗಳನ್ನು ಬಹಳವಾಗಿ ಪ್ರಶಂಸಿಸುತ್ತಾರೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?
ಭೀಷ್ಮ:
ಅತ್ರ ತೇ ವರ್ತಯಿಷ್ಯೇಽಹಮಿತಿಹಾಸಂ ಪುರಾತನಮ್ |
ಸಾಧ್ಯಾನಾಮಿಹ ಸಂವಾದಂ ಹಂಸಸ್ಯ ಚ ಯುಧಿಷ್ಠಿರ ॥2॥
ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಸಾಧ್ಯರಿಗೂ ಮತ್ತು ಹಂಸ ಪಕ್ಷಿಗಳಿಗೂ ನಡೆದ ಪುರಾತನ ಇತಿಹಾಸ ರೂಪವಾದ ಸಂವಾದವನ್ನು ಹೇಳುತ್ತೇನೆ.
ಹಂಸೋ ಭೂತ್ವಾಥ ಸೌವರ್ಣಸ್ತ್ವಜೋ ನಿತ್ಯಃ ಪ್ರಜಾಪತಿಃ |
ಸ ವೈ ಪರ್ಯೇತಿ ಲೋಕಾಂಸ್ತ್ರೀನಥ ಸಾಧ್ಯಾನುಪಾಗಮತ್ ॥3॥
ಒಂದು ಕಾಲದಲ್ಲಿ ಬ್ರಹ್ಮನು ಸುವರ್ಣ ಹಂಸರೂಪವನ್ನು ಧರಿಸಿ ಪ್ರತಿದಿನವೂ ಲೋಕಸಂಚಾರವನ್ನು ಮಾಡುವ ಪದ್ಧತಿಯನ್ನು ಇಟ್ಟುಕೊಂಡಿದ್ದನು. ಹೀಗೆ ಸಂಚರಿಸುತ್ತಾ ಒಂದು ಬಾರಿ ಸಾಧ್ಯರ ಬಳಿಗೆ ಹೋದನು. ಸಾಧ್ಯರು ಹಂಸಪಕ್ಷಿಯನ್ನು ಪ್ರಶ್ನಿಸಿದರು.
ಸಾಧ್ಯಾಃ
ಶಕುನೇ ವಯಂ ಸ್ಮ ದೇವಾ ವೈ ಸಾಧ್ಯಾಸತ್ವಮನುಯುಜ್ಮಹೇ |
ಪೃಚ್ಛಾಮಸತ್ವಂ ಮೋಕ್ಷಧರ್ಮಂ ಭವಾಂಶ್ಚ ಕಿಲ ಮೋಕ್ಷವಿತ್ ॥4॥
ಸಾಧ್ಯರು ನಾವು ಸಾಧ್ಯರೆಂಬ ದೇವತೆಗಳು. ನಾವು ನಿನ್ನಲ್ಲಿ ಒಂದು ವಿಷಯವನ್ನು ಕೇಳಬೇಕಾಗಿದೆ. ಕಾರಣ ನೀನು ಮೋಕ್ಷಧರ್ಮವನ್ನು ಚೆನ್ನಾಗಿ ಅರಿತವನು.
ಶ್ರುತೋಽಸಿ ನಃ ಪಂಡಿತೋ ಧೀರವಾದೀ
ಸಾಧುಶಬ್ದಃ ಪತತೇ ತೇ ಪತತ್ರಿನ್ |
ಕಿಂ ಮನ್ಯಸೇ ಶ್ರೇಷ್ಠತಮಂ ದ್ವಿಜ ತ್ವಂ
ಕಸ್ಮಿನ್ಮನಸ್ತೇ ರಮತೇ ಮಹಾತ್ಮನ್ ॥5॥
ಎಲೈ ಪಂಡಿತಧೀರನೇ, ಹಂಸಪಕ್ಷಿಯೇ, ನೀನು ಉತ್ತಮ ವಾದಿಯಾಗಿರುವಿ. ನೀನು ಹಾರುತ್ತಿರುವಾಗ ಉತ್ತಮವಾದ ವೈದಿಕ ಶಬ್ದಗಳೇ ಕೇಳಿಬರುತ್ತವೆ. ಹಂಸಪಕ್ಷಿಯೇ, ನೀನು ಯಾವುದನ್ನು ಸಮಸ್ತ ವಸ್ತುಗಳಿಗಿಂತ ಶ್ರೇಷ್ಠವಾದುದು ಎಂದು ಹೇಳುತ್ತಿ? ನಿನ್ನ ಮನಸ್ಸು ಯಾವುದರಲ್ಲಿ ಸಂತೋಷವನ್ನು ಹೊಂದಿದೆ?
ತನ್ನಃ ಕಾರ್ಯಂ ಪಕ್ಷಿವರ ಪ್ರಶಾಧಿ ಯತ್
ಕಾರ್ಯಾಣಾಂ ಮನ್ಯಸೇ ಶ್ರೇಷ್ಠಮೇಕಮ್ |
ಯತ್ಕೃತ್ವಾ ವೈ ಪುರುಷಃ ಸರ್ವಬಂಧೈ-
ರ್ವಿಮುಚ್ಯತೇ ವಿಹಗೇಂದ್ರೇಹ ಶೀಘ್ರಮ್ ॥6॥

ವಿಹಗೇಂದ್ರನೇ, ಯಾವ ಒಂದು ಕಾರ್ಯವನ್ನು ನೀನು ಸಮಸ್ತ ಕಾರ್ಯಗಳಿಗಿಂತಲೂ ಶ್ರೇಷ್ಠವಾದುದು ಎಂದು ಭಾವಿಸುತ್ತೀಯೋ, ಯಾವ ಕಾರ್ಯವನ್ನು ಮಾಡಿದ ಪುರುಷನು ಸರ್ವಬಂಧನದಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ ಎಂದು ಹೇಳುತ್ತೀಯೋ ಅಂತಹ ಕಾರ್ಯವನ್ನು ಮಾಡಲು ನಮಗೆ ತಿಳಿಸು.
ಹಂಸಃ
ಇದಂ ಕಾರ್ಯಮಮೃತಾಶಾಃ ಶೃಣೋಮಿ
ತಪೋ ದಮಃ ಸತ್ಯಮಾತ್ಮಾಭಿಗುಪ್ತಿಃ |
ಗ್ರಂಥೀನ್ ವಿಮುಚ್ಯ ಹೃದಯಸ್ಯ ಸರ್ವಾನ್
ಪ್ರಿಯಾಪ್ರಿಯೇ ಸ್ವಂ ವಶಮಾನಯೀತ ||7||
ಹಂಸ ಅಮೃತವನ್ನು ಪಾನ ಮಾಡುವ ದೇವತೆಗಳೇ, ತಪಸ್ಸು, ದಮ, ಸತ್ಯ, ಆತ್ಮನಿಗ್ರಹ ಎಂಬ ಇವುಗಳೇ ಮನುಷ್ಯರು ಅನುಸರಿಸಲು ಯೋಗ್ಯವಾದ ಗುಣಗಳೆಂದು ಕೇಳಿದ್ದೇನೆ. ಮನುಷ್ಯನು ತನ್ನ ಹೃದಯದಲ್ಲಿರುವ ಅಧ್ಯಾತ್ಮ ಪ್ರತಿಬಂಧಕಗಳೆನಿಸಿದ ರಾಗ-ದ್ವೇಷಗಳನ್ನು ತೊಡೆದುಹಾಕಿ, ಪ್ರಿಯಾಪ್ರಿಯಗಳೆರಡನ್ನೂ ತನ್ನ ವಶಕ್ಕೆ ತೆಗೆದುಕೊಳ್ಳಬೇಕು. ಪ್ರಿಯದಿಂದ ಸಂತಸ, ಅಪ್ರಿಯದಿಂದ ದುಃಖ ಈ ಎರಡಕ್ಕೂ ತುತ್ತಾಗಬಾರದು.
ನಾರುಂತುದಃ ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ |
ಯಯಾಸ್ಯ ವಾಚಾ ಪರ ಉದ್ವಿಜೇತ
ನ ತಾಂ ವದೇದ್ ರುಶತೀಂ ಪಾಪಲೋಕ್ಯಾಮ್ ||8||
ಯಾರ ವಿಷಯದಲ್ಲಿಯೂ ಮಾತಿನಿಂದಾಗಲಿ, ಕೃತಿಯಿಂದಾಗಲಿ ಅವರಿಗೆ ದುಃಖವನ್ನುಂಟು ಮಾಡುವ ಕಾರ್ಯವನ್ನು ಮಾಡಬಾರದು. ನಿಷ್ಠುರ ಮಾತುಗಳನ್ನು ವರ್ಜಿಸಬೇಕು. ಅಧಮ ಮನುಷ್ಯನಿಂದ ಶಾಸ್ತ್ರವಿದ್ಯೆಯವನ್ನು ಉಪದೇಶ ಪಡೆಯಬಾರದು. ಮತ್ತೊಬ್ಬರನ್ನು ನೋಯಿಸುವ, ನರಕಕ್ಕೆ ಕಾರಣವಾಗುವಂತಹ ಅಮಂಗಳ ಮಾತುಗಳನ್ನು ಎಂದಿಗೂ ಆಡಬಾರದು.
ವಾಕ್ಸಾಯಕಾ ವದನಾನ್ನಿಷ್ಪತಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ |
ಪರಸ್ಯ ನಾಮರ್ಮಸು ತೇ ಪತಂತಿ
ತಾನ್ ಪಂಡಿತೋ ನಾವಸೃಜೇತ್ ಪರೇಷು ||9||
ಮಾತೆಂಬುದು ಬಾಯಿಂದ ಹೊರಡುವಂತಹ ತೀವ್ರ ಬಾಣವೆಂದೇ ತಿಳಿಯಿರಿ. ಕಠೋರವಾದ ವಾಗ್ಬಾಣಗಳು ಯಾವನಿಗೆ ತಾಗಿರುತ್ತವೋ ಅವನು ಹಗಲು-ರಾತ್ರಿ ದುಃಖಿಸುತ್ತಿರುತ್ತಾನೆ. ಕಾರಣ ಮರ್ಮಸ್ಥಾನವನ್ನೇ ಘಾಸಿಪಡಿಸುವಂತಹ ಶಕ್ತಿ ವಾಗ್ಬಾಣಗಳಿಗಿದೆ. ಆದ್ದರಿಂದ ವಿದ್ವಾಂಸನಾದವನು ಅಂತಹ ಕಠಿಣವಾದ ವಾಗ್ಬಾಣಗಳನ್ನು ಇತರರ ಮೇಲೆ ಪ್ರಯೋಗಿಸಬಾರದು.
ಪರಶ್ಚೇದೇನಮತಿವಾದಬಾಣೈ-
ರ್ಭೃಶಂ ವಿಧ್ಯೇಚ್ಛಮ ಏವೇಹ ಕಾರ್ಯಃ |
ಸಂರೋಷ್ಯಮಾಣಃ ಪ್ರತಿಮೃಷ್ಯತೇ ಯಃ
ಸ ಆದತ್ತೇ ಸುಕೃತಂ ವೈ ಪರಸ್ಯ ||10||
ಬೇರೆಯವರು ವಿದ್ವಾಂಸನನ್ನು ನಿಂದಾರೂಪವಾದ ವಾಗ್ಬಾಣಗಳಿಂದ ಬಲವಾಗಿ ಪ್ರಹರಿಸಿದರೆ ವಿದ್ವಾಂಸನು ಪ್ರತಿಯಾಗಿ ಅವನನ್ನು ವಾಗ್ಬಾಣದಿಂದ ಪ್ರಹರಿಸದೆ ಶಾಂತನಾಗಿಯೇ ಇರಬೇಕು. ಯಾವನು ತನ್ನ ಮೇಲೆ ಕೋಪಗೊಂಡರೂ ಪ್ರಸನ್ನನಾಗಿಯೇ ಇರುತ್ತಾನೋ ಅವನು ಕೋಪದಲ್ಲಿರುವ ಪುಣ್ಯವನ್ನು ತನ್ನ ವಶಕ್ಕೆ ಪಡೆದುಕೊಳ್ಳುತ್ತಾನೆ.
ಕ್ಷೇಪಾಭಿಮಾನಾದಭಿಷಂಗವ್ಯಲೀಕಂ
ನಿಗೃಹ್ಣಾತಿ ಜ್ವಲಿತಂ ಯಶ್ಚ ಮನ್ಯುಮ್ |
ಅದುಷ್ಟಚೇತಾ ಮುದಿತೋಽನಸೂಯುಃ
ಸ ಆದತ್ತೇ ಸುಕೃತಂ ವೈ ಪರೇಷಾಮ್ ||11||
ನಿರ್ದೋಷಿಯು, ಹೊಟ್ಟೆಕಿಚ್ಚಿನಿಂದ ದೂರನಾದವನು, ಸಂತೋಷ ಮನಸ್ಕನೂ ಆದ ವ್ಯಕ್ತಿಯು ತನ್ನನ್ನು ಪ್ರಚೋದಿಸುವ, ತನಗೆ ನಿಜವಾದ ಶತ್ರುವಾದ ಕೋಪವೆಂಬ ಅಗ್ನಿಜ್ವಾಲೆಯನ್ನು ತನ್ನಲ್ಲಿಯೇ ತನ್ನ ಪ್ರಯತ್ನದಿಂದ ಶಾಂತಗೊಳಿಸುತ್ತಾನೋ ಅವನು ತನ್ನ ವಿರೋಧಿಗಳ ಪುಣ್ಯಗಳೆಲ್ಲವನ್ನೂ ಸೆಳೆದುಕೊಳ್ಳಲು ಸಮರ್ಥನಾಗುತ್ತಾನೆ.
ಆಕ್ರುಶ್ಯಮಾನೋ ನ ವದಾಮಿ ಕಿಂಚಿತ್
ಕ್ಷಮಾಮ್ಯಹಂ ತಾಡ್ಯಮಾನಶ್ಚ ನಿತ್ಯಮ್ |
ಶ್ರೇಷ್ಠಂ ಹ್ಯೇತತ್ ಕ್ಷಮಮಪ್ಯಾಹುರಾರ್ಯಾಃ
ಸತ್ಯಂ ತಥೈವಾರ್ಜವಮಾನೃಶಂಸ್ಯಮ್ ||12||
ಸಾಧ್ಯರೇ, ನನ್ನನ್ನು ನೋಡಿರಿ. ಮತ್ತೊಬ್ಬ ವ್ಯಕ್ತಿಯು ನನ್ನನ್ನು ನಿಂದಿಸುತ್ತಿದ್ದರೂ ಅವರಿಗೆ ನಾನು ಪ್ರತಿಯಾಗಿ ಎದುರು ಮಾತನ್ನು ಆಡುವುದಿಲ್ಲ. ಇತರರು ನನ್ನನ್ನು ಹೊಡೆಯುತ್ತಿದ್ದರೂ ನಾನು ಸಹಿಸಿಕೊಳ್ಳುತ್ತೇನೆ. ಇಂತಹ ಕ್ಷಮಾಗುಣವೇ ಬಹಳ ಶ್ರೇಷ್ಠವಾದ ಗುಣವೆಂದು ಪೂಜ್ಯರು ಹೇಳುತ್ತಾರೆ. ಕ್ಷಮೆ, ಸತ್ಯ, ಋಜುತ್ವ, ಅಕ್ರೌರ್ಯ ಈ ಗುಣಗಳನ್ನೇ ಶ್ರೇಷ್ಠವಾದ ಗುಣಗಳೆಂದು ಹೇಳುತ್ತಾರೆ.
ವೇದಸ್ಯೋಪನಿಷತ್ ಸತ್ಯಂ ಸತ್ಯಸ್ಯೋಪನಿಷದ್ ದಮಃ |
ದಮಸ್ಯೋಪನಿಷನ್ಮೋಕ್ಷ ಏತತ್ ಸರ್ವಾನುಶಾಸನಮ್ ||13||
ವೇದಗಳ ರಹಸ್ಯ ತತ್ತ್ವವು ಸತ್ಯನಿಷ್ಠೆಯೇ ಆಗಿದೆ. ಸತ್ಯನಿಷ್ಠೆಯ ರಹಸ್ಯವು ಇಂದ್ರಿಯನಿಗ್ರಹವೇ ಆಗಿದೆ. ಇಂದ್ರಿಯನಿಗ್ರಹದ

ರಹಸ್ಯಫಲವು ಮೋಕ್ಷವೇ ಆಗಿದೆ. ಸಮಸ್ತ ಶಾಸ್ತ್ರಗಳ ಸಾರಭೂತವಾದ ಇತಿಹಾಸವೇ ಇದು.

ವಾಚೋ ವೇಗಂ ಮನಸಃ ಕ್ರೋಧವೇಗಂ
ವಿವಿತ್ಸಾವೇಗಮುದರೋಪಸ್ಥವೇಗಮ್ |
ಏತಾನ್ ವೇಗಾನ್ ಯೋ ವಿಷಹತ್ಯುದೀರ್ಣಾಂ-
ಸ್ತಂ ಮನ್ಯೇಽಹಂ ಬ್ರಾಹ್ಮಣಂ ವೈ ಮುನಿಂ ಚ ॥14॥

ಯಾವನು ಮಾತಿನ ವೇಗವನ್ನು, ಮನಸ್ಸಿನಲ್ಲುಂಟಾಗುವ ಕೋಪದ ವೇಗವನ್ನು, ಅಯೋಗ್ಯ ವಸ್ತುಗಳಲ್ಲಿ ಹುಟ್ಟುವ ತೀವ್ರ ಆಕಾಂಕ್ಷೆಯನ್ನು, ಹಸಿವು-ಬಾಯಾರಿಕೆ- ಕಾಮಾಭಿಲಾಷೆ ಇವುಗಳನ್ನೆಲ್ಲ ತನ್ನ ಶಕ್ತಿಯಿಂದ ಅಡಗಿಸಲು ಸಮರ್ಥನಾಗಿದ್ದಾನೋ ಅವನನ್ನೇ ಬ್ರಾಹ್ಮಣನೆಂದೂ, ಮುನಿ ಎಂದೂ ಭಾವಿಸುತ್ತೇನೆ.

ಅಕ್ರೋಧನಃ ಕ್ರುದ್ಧ್ಯತಾಂ ವೈ ವಿಶಿಷ್ಟ-
ಸ್ತಥಾ ತಿತಿಕ್ಷುರತಿತಿಕ್ಷೋರ್ವಿಶಿಷ್ಟಃ |
ಅಮಾನುಷಾನ್ಮಾನುಷೋ ವೈ ವಿಶಿಷ್ಟ-
ಸ್ತಥಾಜ್ಞಾನಾಜ್ಞಾನವಾನ್ ವೈ ಪ್ರಧಾನಃ ॥15॥

ಕೋಪಶೀಲರಿಗಿಂತಲೂ ಕೋಪ ಇಲ್ಲದೆ ಇರುವವನು ಮೇಲೆನಿಸುತ್ತಾನೆ. ವಿರಕ್ತಿ ಇಲ್ಲದವನಿಗಿಂತಲೂ ವಿರಕ್ತಿ ಉಳ್ಳವನು ಶ್ರೇಷ್ಠನೆನಿಸುತ್ತಾನೆ. ಮನುಷ್ಯನಿಲ್ಲದೆ ಇರುವ ಅಶ್ವಾದಿಗಳಿಗಿಂತಲೂ ಮನುಷ್ಯಗುಣವುಳ್ಳವನು ಶ್ರೇಷ್ಠನೆನಿಸುತ್ತಾನೆ. ಇದರಂತೆ ಜ್ಞಾನಹೀನನಿಗಿಂತಲೂ ಜ್ಞಾನಿಯು ಶ್ರೇಷ್ಠನೆನಿಸುತ್ತಾನೆ.

ಆಕ್ರುಶ್ಯಮಾನೋ ನಕ್ರೋಶೇನ್ಮನ್ಯುರೇವ ತಿತಿಕ್ಷತಃ |
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿಂದತಿ ॥16॥

ಒಬ್ಬನು ನಿಂದಿಸುತ್ತಿದ್ದರೂ ಅದಕ್ಕೆ ಬದಲಾಗಿ ನಿಂದಿಸುವ ವ್ಯಕ್ತಿಯನ್ನು ಯಾವನು ನಿಂದಿಸುವುದಿಲ್ಲವೋ ಅಂತಹ ಕ್ಷಮಾಗುಣ ಉಳ್ಳಂತಹ ವ್ಯಕ್ತಿಗಳಲ್ಲಿ ತಡೆಯಲ್ಪಟ್ಟ ಕೋಪಾಗ್ನಿಯೇ ನಿಂದಿಸುವ ವ್ಯಕ್ತಿಯನ್ನು ತೃಣದಂತೆ ದಹಿಸಿಬಿಡುತ್ತದೆ. ಇಷ್ಟೇ ಅಲ್ಲದೆ, ನಿಂದಿಸುವವನಲ್ಲಿರುವ ಸುಕೃತವನ್ನು ಕ್ಷಮಾಶೀಲನಾದ ವ್ಯಕ್ತಿಯು ಪಡೆದುಕೊಳ್ಳುತ್ತಾನೆ.

ಯೋ ನಾತ್ಯುಕ್ತಃ ಪ್ರಾಹ ರೂಕ್ಷಂ ಪ್ರಿಯಂ ವಾ
ಯೋ ವಾ ಹತೋ ನ ಪ್ರತಿಹಂತಿ ಧೈರ್ಯಾತ್ |
ಪಾಪಂ ಚ ಯೋ ನೇಚ್ಛತಿ ತಸ್ಯ ಹಂತು-
ಸ್ತಸ್ಮೈ ದೇವಾಃ ಸ್ಪೃಹಯಂತೇ ಸದೈವ ॥17॥

ಯಾವನು ಬೇರೆ ವ್ಯಕ್ತಿಯು ನಿಂದಿಸುತ್ತಿದ್ದರೂ, ಸ್ತುತಿಸುತ್ತಿದ್ದರೂ ಕಠಿಣವಾದ ಮಾತುಗಳನ್ನಾಗಲಿ, ಪ್ರಿಯವಾದ ಮಾತುಗಳನ್ನಾಗಲಿ ಆಡುವುದಿಲ್ಲವೋ, ಬೇರೆಯವನು ಹೊಡೆಯುತ್ತಿದ್ದರೂ ಮನಸ್ಥೈರ್ಯವನ್ನು ಹೊಂದಿ ಅವನನ್ನು ಪ್ರತಿಯಾಗಿ ಹೊಡೆಯಲು ಹೋಗುವುದಿಲ್ಲವೋ, ಹೊಡೆಯುವ ವ್ಯಕ್ತಿಗೆ ಕೇಡನ್ನು ಬಯಸುವುದಿಲ್ಲವೋ ಅಂತಹ ಮಹಾತ್ಮನನ್ನು ನೋಡಲು ದೇವತೆಗಳೂ ಸದಾಕಾಲದಲ್ಲಿ ಆಸೆ ಪಡುತ್ತಾರೆ.

ಪಾಪೀಯಸಃ ಕ್ಷಮೇತೈವ ಶ್ರೇಯಸಃ ಸದೃಶಸ್ಯ ಚ |
ವಿಮಾನಿತೋ ಹತೋಽಽಕ್ರುಷ್ಟ ಏವಂ ಸಿದ್ಧಿಂ ಗಮಿಷ್ಯತಿ ॥18॥

ತನ್ನ ವಿಷಯದಲ್ಲಿ ಅಪರಾಧವನ್ನು ಮಾಡುವ, ತನಗಿಂತ ಅಧಮನಾದ ವ್ಯಕ್ತಿಯಾಗಿದ್ದರೂ, ತನಗಿಂತ ಉತ್ತಮನಾಗಿದ್ದರೂ, ತನಗೆ ಸಮಾನನಾದ ವ್ಯಕ್ತಿಯಾಗಿದ್ದರೂ ಅಂತಹ ವ್ಯಕ್ತಿಗಳಿಂದ ಅಪಮಾನಿಸಲ್ಪಟ್ಟರೆ, ಹೊಡೆಯಲ್ಪಟ್ಟರೆ ಅವರನ್ನು ಕ್ಷಮಿಸಬೇಕು. ಯಾವ ವಿಧವಾದ ಪ್ರತೀಕಾರವನ್ನು ಮಾಡಹೋಗಬಾರದು. ಕ್ಷಮಾಗುಣವನ್ನೇ ಆಶ್ರಯಿಸಿರುವ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ. ವ್ಯಾಖ್ಯಾನ ವಿಶೇಷ `ಕ್ಷಮಾ ಸರ್ವತ್ರ ಧರ್ಮೋ ನ ಪಾಪಹೇತುಶ್ಚ ದುರ್ಜನೇ' ಭಗವಂತನ ದ್ವೇಷಿಗಳಲ್ಲಿ ಕ್ಷಮಾಗುಣವು ಪ್ರಶಸ್ತವಾದುದೇನಲ್ಲ. ತನ್ನ ವೈಯಕ್ತಿಕ ದ್ವೇಷ- ನಿಂದನೆಗಳಿಗೆ ಸಂಬಂಧಪಟ್ಟಂತೆ ಈ ಕ್ಷಮಾಗುಣದ ಬಗ್ಗೆ ವೇದವ್ಯಾಸದೇವರು ವರ್ಣಿಸಿರುತ್ತಾರೆ. ಯಾರು ಭಗವಂತನನ್ನೇ ದ್ವೇಷಿಸುತ್ತಾರೋ ಅಂತಹವರ ಬಗ್ಗೆ ಕ್ಷಮಾ ಗುಣ ಎನ್ನುವುದು ಉಚಿತವಾದುದು ಎಂದೇ ಶ್ರೀಮದಾಚಾರ್ಯರ ಅಭಿಪ್ರಾಯವಾಗಿದೆ.

ಸದಾಹಮಾರ್ಯಾನ್ನಿಭೃತೋಽಪ್ಯುಪಾಸೇ
ನ ಮೇ ವಿವಿತ್ಸಾ ನ ಚ ಮೇಽಸ್ತಿ ರೋಷಃ |
ನ ಚಾಪ್ಯಹಂ ಲಿಪ್ಸಮಾನಃ ಪರ್ಯೈಮಿ
ನ ಚೈವ ಕಿಂಚಿದ್ ವಿಷಮೇಣ ಯಾಮಿ ॥19॥

ಸಾಧ್ಯದೇವತೆಗಳೇ, ನಾನು ಎಲ್ಲವನ್ನೂ ಪಡೆದು ಕೃತಾರ್ಥನಾಗಿದ್ದರೂ ಪೂಜ್ಯರನ್ನು ಸೇವಿಸಲು ಬಯಸುತ್ತೇನೆ. ನನಗೆ ವಿಷಯದ ಅಭಿಲಾಷೆಗಳಾಗಲಿ, ರೋಷವಾಗಲಿ, ಉತ್ಸಾಹದಿಂದ ಕಾರ್ಯವನ್ನು ಮಾಡವು. ಅವುಗಳ ವಿಷಯದಲ್ಲಿ ಉತ್ಸಾಹವನ್ನು ಹೊಂದುವುದಿಲ್ಲ. ಯಾವುದನ್ನಾದರೂ ಪಡೆದುಕೊಳ್ಳಬೇಕೆಂಬ ಲೋಭದಿಂದ ಅಧರ್ಮ ಮಾರ್ಗವನ್ನು ಅನುಸರಿಸಿ ನಡೆಯುವುದಿಲ್ಲ. ವಿಷಯಾಪೇಕ್ಷೆಯನ್ನು ಬಯಸಿ ಎಂದೂ ಪ್ರವೃತ್ತಿಯನ್ನು ಮಾಡೆನು.

ನಾಹಂ ಶಪ್ತಃ ಪ್ರತಿಶಪಾಮಿ ಕಿಂಚಿದ್-
ದಮಂ ದ್ವಾರಂ ಹ್ಯಮೃತಸ್ಯೇಹ ವೇದ್ಮಿ |
ಗುಹ್ಯಂ ಬ್ರಹ್ಮ ತದಿದಂ ವೋ ಬ್ರವೀಮಿ
ನ ಮಾನುಷಾಚ್ಛ್ರೇಷ್ಠತರಂ ಹಿ ಕಿಂಚಿತ್ ॥20॥

ನನ್ನನ್ನು ಯಾರಾದರೂ ಶಪಿಸಿದಲ್ಲಿ ಪ್ರತಿಯಾಗಿ ನಾನು ಶಾಪ ಕೊಡುವುದಿಲ್ಲ. ಇಂದ್ರಿಯಗಳ ನಿಗ್ರಹವು ಮೋಕ್ಷದ್ವಾರವೆಂದು

ಅರಿತಿದ್ದೇನೆ. ಈ ಪ್ರಸಂಗದಲ್ಲಿ ಒಂದು ರಹಸ್ಯವನ್ನು ವಿವರಿಸುತ್ತೇನೆ, ಕೇಳಿರಿ. ಮನುಷ್ಯನ ಯೋನಿಗಿಂತಲೂ ಅಧಿಕವಾದ ಯೋನಿಯು ಮತ್ತೊಂದಿರುವುದಿಲ್ಲ.
ವಿಮುಚ್ಯಮಾನಃ ಪಾಪೇಭ್ಯೋ ಧನೇಭ್ಯ ಇವ ಚಂದ್ರಮಾಃ |
ವಿರಜಾಃ ಕಾಲಮಾಕಾಂಕ್ಷನ್ ಧೀರೋ ಧೈರ್ಯೇಣ ಸಿದ್ಧ್ಯತಿ ॥21॥
ಮನುಷ್ಯನಾಗಿ ಹುಟ್ಟಿದವನು ಮೋಡಗಳಿಂದ ಬಿಡಲ್ಪಟ್ಟ ಚಂದ್ರನಂತೆ ಪಾಪಗಳಿಂದಲೂ ಧನಾದಿಗಳಿಂದಲೂ ಮುಕ್ತನಾಗಿ ಧೈರ್ಯದಿಂದ ಕಾಲವನ್ನು ಪ್ರತೀಕ್ಷಿಸುತ್ತಿದ್ದರೆ ಸಿದ್ಧಿಯನ್ನು ಹೊಂದುತ್ತಾನೆ.
ಯಃ ಸರ್ವೇಷಾಂ ಭವತಿ ಹ್ಯರ್ಚನೀಯ
ಉತ್ಸೇಚನೇ ಸ್ತಂಭ ಇವಾಭಿಜಾತಃ |
ಯಸ್ಮೈ ವಾಚಂ ಸುಪ್ರಶಂಸ್ತಾಂ ವದಂತಿ
ಸ ವೈ ದೇವಾನ್ ಗಚ್ಛತಿ ಸಂಯತಾತ್ಮಾ ॥22॥
ಯಾವನು ತನ್ನಲ್ಲಿ ಗರ್ವಪಡುವ ಗುಣಗಳು ಇದ್ದಾಗಲೂ ಕಂಬದಂತೆ ನಿಶ್ಚಲನಾಗಿ ಎಲ್ಲರಿಗೂ ಪೂಜ್ಯನೆನಿಸಿರುತ್ತಾನೋ, ಯಾವನನ್ನು ಕುರಿತು ಎಲ್ಲರೂ ಒಳ್ಳೆಯ ಮಾತುಗಳನ್ನೇ ಹೇಳುತ್ತಾರೋ ಅಂತಹ ವ್ಯಕ್ತಿಯು ದೇವತೆಗಳ ಸಾಮೀಪ್ಯವನ್ನು ಹೊಂದುತ್ತಾನೆ.
ನ ತಥಾ ವಕ್ತುಮಿಚ್ಛಂತಿ ಕಲ್ಯಾಣಾನ್ ಪುರುಷೇ ಗುಣಾನ್ |
ಯಥೈಷಾಂ ವಕ್ತುಮಿಚ್ಛಂತಿ ನೈರ್ಗುಣ್ಯಮನುಯುಂಜಕಾಃ ॥23॥
ಯಾರು ಇತರರ ಕುರಿತಾಗಿ ಅವರ ದುರ್ಗುಣಗಳನ್ನು ಹೇಳಲು ಬಯಸುತ್ತಿರುತ್ತಾರೋ ಅಂತಹ ವ್ಯಕ್ತಿಗಳು ಅವರಲ್ಲಿರುವ ಕಲ್ಯಾಣಗುಣಗಳನ್ನು ಹೇಳಲು ಎಂದೂ ಇಚ್ಛಿಸಲ್ಪಡುವುದಿಲ್ಲ.
ಯಸ್ಯ ವಾಙ್ಮನಸೀ ಗುಪ್ತೇ ಸಮ್ಯಕ್ಪ್ರಣಿಹಿತೇ ಸದಾ |
ವೇದಾಸ್ತಪಶ್ಚ ತ್ಯಾಗಶ್ಚ ಸ ಇದಂ ಸರ್ವಮಾಪ್ನುಯಾತ್ ॥24॥
ಯಾವ ವ್ಯಕ್ತಿಯ ಮಾತು, ಮನಸ್ಸು ಸದಾ ರಹಸ್ಯವಾಗಿ ಪರಮಾತ್ಮನಲ್ಲಿಯೇ ಆಸಕ್ತವಾಗಿರುತ್ತದೋ ಅಂತಹ ವ್ಯಕ್ತಿಯು ವೇದಾಧ್ಯಯನ, ತಪಸ್ಸು, ತ್ಯಾಗ ಇವುಗಳ ಫಲವನ್ನು ಪಡೆದುಕೊಳ್ಳುತ್ತಾನೆ.
ಆಕ್ರೋಶನಾವಮಾನಾಭ್ಯಾಮಬುಧಾದ್ ವರ್ಧತೇ ಬುಧಃ |
ತಸ್ಮಾನ್ನ ವರ್ಧಯೇದನ್ಯಂ ನ ಚಾತ್ಮಾನಂ ವಿಹಿಂಸಯೇತ್ ॥25॥
ವಿದ್ವಾಂಸನು ಅಜ್ಞಾನಿಗಳಿಗೆ ಬೋಧಿಸುವಾಗ ನಿಂದಿಸದೆ, ಅವಮಾನ ಮಾಡದೆ ಬೋಧಿಸಬೇಕು. ಅಜ್ಞಾನಿಗಳ ಎದುರಿನಲ್ಲಿ ಮತ್ತೊಬ್ಬರ ಆಧಿಕ್ಯವನ್ನು ವರ್ಣಿಸಬಾರದು. ಬೇರೆಯವರ ಆಧಿಕ್ಯವನ್ನು ಹೇಳಲು ಹೋದರೆ ಅದರಿಂದ ಕೆರಳಿದ ಅವರು ಹಿಂಸೆಗೆ ಮುಂದಾಗಬಹುದು. ಆದ್ದರಿಂದ ಅಂತಹ ವ್ಯಕ್ತಿಗಳ ಬಳಿ ಜಾಗೃತನಾಗಿರಬೇಕು ಎಂದು ಭಾವ.
ಅಮೃತಸ್ಯೇವ ಸನ್ತೃಪ್ಯೇದವಮಾನಸ್ಯ ವೈ ದ್ವಿಜಃ |
ಸುಖಂ ಹ್ಯವಮತಃ ಶೇತೇ ಯೋಽವಮಂತಾ ಸ ನಶ್ಯತಿ ॥26॥
ದುಷ್ಟರೇನಾದರೂ ಅಪಮಾನವನ್ನು ಮಾಡಿದರೆ ಅಪಮಾನಕ್ಕೆ ತುತ್ತಾದ ವಿದ್ವಾಂಸನು ಅಮೃತವನ್ನು ಪಾನ ಮಾಡಿದವನಂತೆ ಸಂತುಷ್ಟನಾಗಿರಬೇಕು. ಕಾರಣ ಅಪಮಾನಕ್ಕೆ ತುತ್ತಾದ ಪುರುಷನು ಸುಖವಾಗಿ ನಿದ್ರಿಸುತ್ತಾನೆ. ಆದರೆ ಅವಮಾನ ಮಾಡಿದ ವ್ಯಕ್ತಿಯು ವಿನಾಶಕ್ಕೆ ತುತ್ತಾಗುತ್ತಾನೆ.
ಯತ್ಕ್ರೋಧನೋ ಯಜತೇ ಯದ್ ದದಾತಿ
ಯದ್ವಾ ತಪಸ್ತಪ್ಯತಿ ಯಜ್ಜುಹೋತಿ |
ವೈವಸ್ವತಸ್ತದ್ಧರತೇಽಸ್ಯ ಸರ್ವಂ
ಮೋಘಃ ಶ್ರಮೋ ಭವತಿ ಕ್ರೋಧನಸ್ಯ ॥27॥
ಕ್ರುದ್ಧನಾದ ಮನುಷ್ಯನು ಮಾಡಿದ ಯಜ್ಞ, ದಾನ, ತಪಸ್ಸು, ಹೋಮ - ಈ ಎಲ್ಲ ಸತ್ಕರ್ಮಗಳ ಫಲವನ್ನು ಯಮರಾಜನು ಅಪಹರಿಸುತ್ತಾನೆ. ಆದ್ದರಿಂದ ಕ್ರುದ್ಧನಾಗಿ ಮಾಡಿದ ಸತ್ಕರ್ಮಗಳ ಫಲವೆಲ್ಲವೂ, ಶ್ರಮವೆಲ್ಲವೂ ವ್ಯರ್ಥವಾದಂತೆಯೇ ಸರಿ.
ಚತ್ವಾರಿ ಯಸ್ಯ ದ್ವಾರಾಣಿ ಸುಗುಪ್ತಾನ್ಯಮರೋತ್ತಮಾಃ |
ಉಪಸ್ಥಮುದರಂ ಹಸ್ತೌ ವಾಕ್ಚತುರ್ಥೀ ಸ ಧರ್ಮವಿತ್ ॥28॥
ದೇವೋತ್ತಮರೇ, ಯಾವ ಪುರುಷನ ಉಪಸ್ಥ, ಉದರ, ಕೈಗಳು, ಮಾತು - ಈ ನಾಲ್ಕು ದ್ವಾರಗಳು ಸುರಕ್ಷಿತವಾಗಿರುವವೋ ಅವನೇ ಧರ್ಮಜ್ಞನೆಂದು ತಿಳಿಯಿರಿ.
ಸತ್ಯಂ ದಮಂ ಹ್ಯಾರ್ಜವಮಾನೃಶಂಸ್ಯಂ
ಧೃತಿಂ ತಿತಿಕ್ಷಾಮಭಿಸೇವಮಾನಃ |
ಸ್ವಾಧ್ಯಾಯನಿತ್ಯೋಽಸ್ಪೃಹಯನ್ ಪರೇಷಾ-
ಮೇಕಾಂತಶೀಲ್ಯೂರ್ಧ್ವಗತಿರ್ಭವೇತ್ ಸಃ ॥29॥
ಯಾವ ಮನುಷ್ಯನು ಸತ್ಯ, ಇಂದ್ರಿಯನಿಗ್ರಹ, ಆರ್ಜವ, ದಯಾ, ಧೈರ್ಯ, ಕ್ಷಮಾ ಎಂಬ ಶ್ರೇಷ್ಠ ಗುಣಗಳನ್ನು ಅಧಿಕವಾಗಿ ಹೊಂದಿರುತ್ತಾನೋ, ವೇದಾಧ್ಯಯನ ನಿರತನಾಗಿರುತ್ತಾನೋ, ಮತ್ತೊಬ್ಬರ ದ್ರವ್ಯಗಳಿಗೆ ಆಸೆ ಪಡುವುದಿಲ್ಲವೋ, ಏಕಾಂತದಲ್ಲಿ ಇರುವ ಸ್ವಭಾವವುಳ್ಳವನೋ ಅಂತಹವನು ಮೋಕ್ಷವನ್ನು ಹೊಂದುತ್ತಾನೆ.
ಸರ್ವಾನೇತಾನನುಚರನ್ ವತ್ಸವಚ್ಚತುರಃ ಸ್ತನಾನ್ |
ನ ಪಾವನತಮಂ ಕಿಂಚಿತ್ ಸತ್ಯಾದಧ್ಯಗಮಂ ಕ್ವಚಿತ್ ॥30॥

ಹೇಗೆ ಹಸುವಿನ ಬಳಿ ಹೋಗಿರುವ ಕರುವು ನಾಲ್ಕು ಮೊಲೆಗಳಲ್ಲಿರುವ ಹಾಲನ್ನು ಕುಡಿಯುತ್ತದೋ ಇದರಂತೆ ಮೇಲೆ ಹೇಳಿದ ಸದ್ಗುಣಗಳನ್ನು ಯಾವತ್ತೂ ಆಚರಣೆಯಲ್ಲಿಟ್ಟುಕೊಳ್ಳಬೇಕು. ನಾನು ಇಷ್ಟರತನಕ ಸತ್ಯಕ್ಕಿಂತಲೂ ಶ್ರೇಷ್ಠವಾದ ಬೇರೆ ಯಾವ ವಸ್ತುವನ್ನು ಯಾರಿಂದಲೂ ಪಡೆದುಕೊಂಡಿರುವುದಿಲ್ಲ.

ಆಚಕ್ಷೇಽಹಂ ಮನುಷ್ಯೇಭ್ಯೋ ದೇವೇಭ್ಯಃ ಪ್ರತಿಸಂಚರನ್ |
ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ ॥31॥

ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತಾ ದೇವತೆಗಳಿಗೆ, ಮನುಷ್ಯರಿಗೆ ಸತ್ಯವು ಸ್ವರ್ಗದ ಸೋಪಾನವೆಂದೂ, ಸಮುದ್ರವನ್ನು ದಾಟುವ ನೌಕೆಯಂತೆ ಸಾಧನವೆಂದು ಹೇಳುತ್ತಲೇ ಇದ್ದೇನೆ.

ಯಾದೃಶೈಃ ಸನ್ನಿವಸತಿ ಯಾದೃಶಾಂಶ್ಚೋಪಸೇವತೇ |
ಯಾದೃಗಿಚ್ಛೇಚ್ಚ ಭವಿತುಂ ತಾದೃಗ್ ಭವತಿ ಪೂರುಷಃ ॥32॥

ಮನುಷ್ಯನು ಎಂತಹ ಮನುಷ್ಯರ ಜೊತೆ ವಾಸ ಮಾಡುತ್ತಾನೋ, ಎಂತಹ ಪುರುಷರ ಸೇವೆಯನ್ನು ಮಾಡುತ್ತಾನೋ, ಯಾವ ರೀತಿ ಇರಬೇಕೆಂದು ಬಯಸುತ್ತಾನೋ ಹಾಗೆಯೇ ಆಗುತ್ತಾನೆ.

ಯದಿ ಸಂತಂ ಸೇವತೇ ಯದ್ಯಸಂತಂ
ತಪಸ್ವಿನಂ ಯದಿ ವಾ ಸ್ತೇನಮೇವ |
ವಾಸೋ ಯಥಾ ರಂಗವಶಂ ಪ್ರಯಾತಿ
ತಥಾ ಸ ತೇಷಾಂ ವಶಮಭ್ಯುಪೈತಿ ॥33॥

ಬೆಳ್ಳಗಿರುವ ಬಟ್ಟೆಗೆ ಯಾವ ಬಣ್ಣವನ್ನು ಹಾಕುತ್ತೇವೋ ಆ ಬಣ್ಣದ ರೂಪದಲ್ಲಿ ವಸ್ತ್ರವು ಪರಿವರ್ತನೆಯನ್ನು ಹೊಂದುತ್ತದೆ. ಅದರಂತೆ ಮನುಷ್ಯನು ಸತ್ಪುರುಷರ ಸೇವೆಯಿಂದ ಸಜ್ಜನನೂ, ಅಸತ್ಪುರುಷರ ಸಹವಾಸದಿಂದ ಅಸಜ್ಜನನೂ ಆಗುತ್ತಾನೆ. ತಪಸ್ವಿ ಜನರ ಸೇವೆಯಿಂದ ತಪಸ್ವಿಯಾದರೆ, ಕಳ್ಳನ ಸಂಗದಿಂದ ಕಾಲಾನುಗುಣವಾಗಿ ಕಳ್ಳನೇ ಆಗುತ್ತಾನೆ.

ಸದಾ ದೇವಾಃ ಸಾಧುಭಿಃ ಸಂವದಂತೇ
ನ ಮಾನುಷಂ ವಿಷಯಂ ಯಾಂತಿ ದ್ರಷ್ಟುಮ್ |
ನೇಂದುಃ ಸಮಃ ಸ್ಯಾದಸಮೋ ಹಿ ವಾಯು-
ರುಚ್ಚಾವಚಂ ವಿಷಯಂ ಯಃ ಸ ವೇದ ॥34॥

ದೇವತೆಗಳು ಯಾವಾಗಲೂ ಸತ್ಪುರುಷರ ಸಂಗವನ್ನು ಮಾಡುತ್ತಾ ಅವರ ಜೊತೆ ವಾಸ ಮಾಡುತ್ತಾರೆ. ಆದ್ದರಿಂದ ಮನುಷ್ಯಯೋನಿಗೆ ಸಂಬಂಧಿಸಿದ ಕ್ಷಣಿಕ ಸುಖಗಳನ್ನು ನೋಡಿಯೂ ಅಂಧರಂತಿರುತ್ತಾರೆ, ಕೇಳಿಯೂ ಕಿವುಡರಂತೆ ಇರುತ್ತಾರೆ. ಆದ್ದರಿಂದ ವಿಷಯ ಸುಖಗಳು ಕ್ಷಣಿಕವಾದವುಗಳು, ತಾತ್ಕಾಲಿಕವಾದವುಗಳು ಎಂದು ಯಾವನು ತಿಳಿದಿರುತ್ತಾನೋ ಅಂತಹ ವ್ಯಕ್ತಿಗೆ ಚಂದ್ರನೂ ಸಮಾನನಾಗಿರುವುದಿಲ್ಲ, ವಾಯುವೂ ಸಮಾನನಾಗಿರುವುದಿಲ್ಲ.

ಅದುಷ್ಟಂ ವರ್ತಮಾನೇ ತು ಹೃದಯಾಂತರಪೂರುಷೇ |
ತೇನೈವ ದೇವಾಃ ಪ್ರೀಯಂತೇ ಸತಾಂ ಮಾರ್ಗಸ್ಥಿತೇನ ವೈ ॥35॥

ಹೃದಯದಲ್ಲಿರುವ ಜೀವಾತ್ಮನು ರಾಗ-ದ್ವೇಷರಹಿತನಾದಾಗ, ಸತ್ಪುರುಷರ ಸನ್ಮಾರ್ಗವನ್ನೇ ಆಶ್ರಯಿಸಿದಾಗ ಅಂತಹ ಆ ಸನ್ಮಾರ್ಗದಲ್ಲಿರುವ ವ್ಯಕ್ತಿಯನ್ನು ಕಂಡೇ ದೇವತೆಗಳು ಪ್ರಸನ್ನರಾಗುತ್ತಾರೆ.

ಶಿಶ್ನೋದರೇ ಯೇಽಭಿರತಾಃ ಸದೈವ
ಸ್ತೇನಾ ನರಾ ವಾಕ್ಪರುಷಾಶ್ಚ ನಿತ್ಯಮ್ |
ಅಪೇತದೋಷಾನಿತಿ ತಾನ್ ವಿದಿತ್ವಾ
ದೂರಾದ್ ದೇವಾಃ ಸಂಪರಿವರ್ಜಯಂತಿ ॥36॥

ಉಪಸ್ಥ, ಉದರಗಳ ಪೂರಣಗಳಿಗಾಗಿಯೇ ಆಸಕ್ತರಾಗಿರುತ್ತಾರೋ, ಕಳ್ಳರಾಗಿ ಕಠೋರ ಮಾತುಗಳನ್ನಾಡುತ್ತಿರುತ್ತಾರೋ ಅಂತಹ ಮನುಷ್ಯರು ಪ್ರಾಯಶ್ಚಿತ್ತದಿಂದ ದೋಷಗಳನ್ನು ಪರಿಹರಿಸಿಕೊಂಡಿದ್ದೇವೆ ಎಂದು ತಿಳಿದಿದ್ದರೂ ದೇವತೆಗಳು ಅವರನ್ನು ದೂರದಿಂದಲೇ ತ್ಯಜಿಸುತ್ತಾರೆ.

ನ ವೈ ದೇವಾ ಹೀನಸತ್ತ್ವೇನ ತೋಷ್ಯಾಃ
ಸರ್ವಾಶಿನಾ ದುಷ್ಕೃತಕರ್ಮಣಾ ವಾ |
ಸತ್ಯವ್ರತಾ ಯೇ ತು ನರಾಃ ಕೃತಜ್ಞಾ
ಧರ್ಮೇ ರತಾಸ್ತೈಃ ಸಹ ಸಂಭಜಂತೇ ॥37॥

ಸಾತ್ವಿಕ ಗುಣವಿಲ್ಲದೆ ಮಾಡುವ ಸತ್ಕರ್ಮಗಳಾಗಲಿ, ಭಕ್ಷ್ಯಾಭಕ್ಷ್ಯ ವಿವೇಚನೆ ಇಲ್ಲದೆ ತಿನ್ನುವ ಸ್ವಭಾವವುಳ್ಳ ವ್ಯಕ್ತಿಗಳು ಮಾಡುವ ಕರ್ಮದಿಂದಾಗಲಿ, ಪಾಪಿಷ್ಠನು ಮಾಡುವ ಕರ್ಮದಿಂದಾಗಲಿ ದೇವತೆಗಳು ಪ್ರಸನ್ನರಾಗರು. ಯಾರು ಸತ್ಯನಿಷ್ಠರೋ, ಮಾಡಿದ ಉಪಕಾರವನ್ನು ಸ್ಮರಿಸುವವರೋ, ಧರ್ಮನಿಷ್ಠರೋ ಅವರೊಡನೆ ದೇವತೆಗಳು ಸಂಬಂಧವನ್ನು ಇಟ್ಟುಕೊಂಡಿರುತ್ತಾರೆ.

ಅವ್ಯಾಹೃತಂ ವ್ಯಾಹೃತಾಚ್ಛ್ರೇಯ ಆಹುಃ
ಸತ್ಯಂ ವದೇದ್ ವ್ಯಾಹೃತಂ ತದ್ ದ್ವಿತೀಯಮ್ |
ಧರ್ಮಂ ವದೇದ್ ವ್ಯಾಹೃತಂ ತತ್ತೃತೀಯಂ
ಪ್ರಿಯಂ ವದೇದ್ ವ್ಯಾಹೃತಂ ತಚ್ಚತುರ್ಥಮ್ ॥38॥

ವ್ಯರ್ಥವಾದ ಮಾತನಾಡುವುದಕ್ಕಿಂತ ಮಾತನಾಡದಿರುವುದು ಗುಣವೆಂದು ವಿದ್ವಾಂಸರ ಅಭಿಪ್ರಾಯ. ಇದು ಮಾತಿನ ಮೊದಲನೆಯ ನಿಯಮ. ಮಾತನ್ನಾಡುವ ಪ್ರಸಂಗ ಬಂದಾಗಲೂ ಸತ್ಯವಾದ ಮಾತುಗಳನ್ನೇ ಹೇಳಬೇಕು, ಇದು ಎರಡನೆಯ ನಿಯಮ. ಸತ್ಯವಾದ

ಮಾತಾಗಿದ್ದರೂ ಪ್ರಿಯವಾದುದ್ದನ್ನೇ ಹೇಳಬೇಕು ಎಂಬುದು ಮೂರನೆಯ ನಿಯಮ. ಸತ್ಯವೂ, ಪ್ರಿಯವೂ, ಧರ್ಮಸಮ್ಮತವಾದ ಮಾತನ್ನೇ ಆಡಬೇಕೆಂಬುದು ಮಾತಿನ ನಾಲ್ಕನೆಯ ನಿಯಮವೆನಿಸಿದೆ.
ಸಾಧ್ಯಾಃ
ಕೇನಾಯಮಾವೃತೋ ಲೋಕಃ ಕೇನ ವಾ ನ ಪ್ರಕಾಶತೇ |
ಕೇನ ತ್ಯಜತಿ ಮಿತ್ರಾಣಿ ಕೇನ ಸ್ವರ್ಗಂ ನ ಗಚ್ಛತಿ ॥39॥
ಸಾಧ್ಯರು ಹಂಸಪಕ್ಷಿಯೇ, ಈ ಲೋಕವು ಯಾವುದರಿಂದ ಆವೃತವಾಗಿದೆ? ಯಾವ ಕಾರಣದಿಂದ ಈ ಲೋಕವು ಪ್ರಕಾಶಮಾನವಾಗುತ್ತಿಲ್ಲ? ಮನುಷ್ಯನು ಯಾವ ಕಾರಣದಿಂದ ಮಿತ್ರರನ್ನು ತ್ಯಜಿಸುತ್ತಾನೆ? ಯಾವ ದೋಷದಿಂದ ಮನುಷ್ಯನು ಸ್ವರ್ಗಕ್ಕೆ ಹೋಗುವುದಿಲ್ಲ?
ಹಂಸಃ
ಅಜ್ಞಾನೇನಾವೃತೋ ಲೋಕೋ ಮಾತ್ಸರ್ಯಾನ್ನ ಪ್ರಕಾಶತೇ |
ಲೋಭಾತ್ತ್ಯಜತಿ ಮಿತ್ರಾಣಿ ಸಂಗಾತ್ ಸ್ವರ್ಗಂ ನ ಗಚ್ಛತಿ ॥40॥
ಹಂಸ ಪ್ರಪಂಚವು ಅಜ್ಞಾನದಿಂದ ಆವೃತವಾಗಿದೆ. ಅಸೂಯೆಯ ಕಾರಣದಿಂದ ಜನರು ಪ್ರಕಾಶಿಸುತ್ತಿಲ್ಲ. ಲೋಭದಿಂದ ಮಿತ್ರರನ್ನು ತ್ಯಜಿಸುತ್ತಾರೆ. ಪುತ್ರ-ಮಿತ್ರ ಮುಂತಾದವರಲ್ಲಿ ಇರುವ ಅತಿಯಾದ ರಾಗವು ಸ್ವರ್ಗಕ್ಕೆ ಪ್ರತಿಬಂಧವೆನಿಸಿದೆ.
ಸಾಧ್ಯಾಃ
ಕಃ ಸ್ವಿದೇಕೋ ರಮತೇ ಬ್ರಾಹ್ಮಣಾನಾಂ
ಕಃ ಸ್ವಿದೇಕೋ ಬಹುಭಿರ್ಜೋಷಮಾಸ್ತೇ |
ಕಃ ಸ್ವಿದೇಕೋ ಬಲವಾನ್ ದುರ್ಬಲೋಽಪಿ
ಕಃ ಸ್ವಿದೇಷಾಂ ಕಲಹಂ ನಾನ್ವವೈತಿ ॥41॥
ಸಾಧ್ಯರು ಬ್ರಾಹ್ಮಣರಲ್ಲಿ ಸುಖಿಯಾದ ಒಬ್ಬ ಪುರುಷನು ಯಾರು? ಅನೇಕರ ಜೊತೆ ಇದ್ದರೂ ಮೌನಿಯಾಗಿರುವ ಒಬ್ಬ ಮನುಜನು ಯಾರು? ದುರ್ಬಲನಾಗಿದ್ದರೂ ಬಲಿಷ್ಠನಾಗಿರುವ ವ್ಯಕ್ತಿಯು ಯಾರು? ಯಾರೊಡನೆಯೂ ಜಗಳವಾಡದೆ ಇರುವ ಆ ವ್ಯಕ್ತಿ ಯಾರು?
ಹಂಸಃ
ಪ್ರಾಜ್ಞ ಏಕೋ ರಮತೇ ಬ್ರಾಹ್ಮಣಾನಾಂ
ಪ್ರಾಜ್ಞ ಏಕೋ ಬಹುಭಿರ್ಜೋಷಮಾಸ್ತೇ |
ಪ್ರಾಜ್ಞ ಏಕೋ ಬಲವಾನ್ ದುರ್ಬಲೋಽಪಿ
ಪ್ರಾಜ್ಞ ಏಷಾಂ ಕಲಹಂ ನಾನ್ವವೈತಿ ॥42॥
ಹಂಸ ಬ್ರಹ್ಮಜ್ಞಾನಿಯಾದವನು ಬ್ರಾಹ್ಮಣರಲ್ಲಿ ಒಬ್ಬನೇ ಸುಖಪುರುಷನು. ಅನೇಕರ ಜೊತೆ ಇದ್ದರೂ ಪ್ರಾಜ್ಞನಾದ ವ್ಯಕ್ತಿಯು ಮೌನಿ ಎನಿಸುತ್ತಾನೆ. ಪ್ರಾಜ್ಞನು ದೈಹಿಕವಾಗಿ ದುರ್ಬಲನಾಗಿದ್ದರೂ ಬಲಿಷ್ಠನೆನಿಸುತ್ತಾನೆ. ಪ್ರಾಜ್ಞನಾದವನು ಯಾರ ಬಳಿಯೂ ಕದನಕ್ಕೆ ನಿಲ್ಲನು.
ಸಾಧ್ಯಾಃ
ಕಿಂ ಬ್ರಾಹ್ಮಣಾನಾಂ ದೇವತ್ವಂ ಕಿಂ ಚ ಸಾಧುತ್ವಮುಚ್ಯತೇ |
ಅಸಾಧುತ್ವಂ ಚ ಕಿಂ ತೇಷಾಂ ಕಿಮೇಷಾಂ ಮಾನುಷಂ ಮತಮ್ ॥43॥
ಸಾಧ್ಯರು ಬ್ರಾಹ್ಮಣರಲ್ಲಿರುವ ದೈವತ್ವವು ಯಾವುದು? ಸಾಧುತ್ವವು ಯಾವುದು? ಅಸಾಧುತ್ವವು ಯಾವುದು? ಮನುಷ್ಯತ್ವವು ಯಾವುದು?
ಹಂಸಃ
ಸ್ವಾಧ್ಯಾಯ ಏಷಾಂ ದೇವತ್ವಂ ವ್ರತಂ ಸಾಧುತ್ವಮುಚ್ಯತೇ |
ಅಸಾಧುತ್ವಂ ಪರೀವಾದೋ ಮೃತ್ಯುರ್ಮಾನುಷಮುಚ್ಯತೇ ॥44॥
ಹಂಸ ಸಾಧ್ಯಾಯ, ಅಧ್ಯಯನವೇ ದೇವತ್ವವೆನಿಸಿದೆ. ವ್ರತಪರಿಪಾಲನೆಯೇ ಸಾಧುತ್ವವು. ಚಾಡಿ ಮಾತುಗಳನ್ನು ಆಡುವುದೇ ಅಸಾಧುತ್ವವು. ಮರಣ ಧರ್ಮವೇ ಮನುಷ್ಯತ್ವವು.
ಭೀಷ್ಮಃ
ಸಂವಾದ ಇತ್ಯಯಂ ಶ್ರೇಷ್ಠಃ ಸಾಧ್ಯಾನಾಂ ಪರಿಕೀರ್ತಿತಃ |
ಕ್ಷೇತ್ರಂ ವೈ ಕರ್ಮಣಾಂ ಯೋನಿಃ ಸದ್ಭಾವಃ ಸತ್ಯಮುಚ್ಯತೇ ॥45॥
ಭೀಷ್ಮ ಯುಧಿಷ್ಠಿರನೇ, ಸಾಧ್ಯರಿಗೂ ಹಂಸಕ್ಕೂ ನಡೆದ ಸಂವಾದವನ್ನು ವಿಧಿ ಬದ್ಧವಾಗಿ ಹೇಳಿದ್ದೇನೆ. ಎಲ್ಲ ಕರ್ಮಗಳಿಗೂ ಈ ಶರೀರವೇ ಮೂಲಕಾರಣವಾಗಿದೆ. ಸದ್ಭಾವವನ್ನೇ ಸತ್ಯವೆಂದು ಸಜ್ಜನರು ಹೇಳುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಹಂಸಗೀತಾ ನಾಮ
ದ್ವಾತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ಮೂರನೆಯ ಅಧ್ಯಾಯ
ಭೀಷ್ಮರು ಯುಧಿಷ್ಠಿರನಿಗೆ ಯೋಗಶಾಸ್ತ್ರವನ್ನು ಉಪದೇಶಿಸಿದುದು.

ಯುಧಿಷ್ಠಿರಃ
ಸಾಂಖ್ಯೇ ಯೋಗೇ ಚ ಮೇ ತಾತ ವಿಶೇಷಂ ವಕ್ತುಮರ್ಹಸಿ |
ತವ ಸರ್ವಜ್ಞ ಸರ್ವಂ ಹಿ ವಿದಿತಂ ಕುರುಸತ್ತಮ ||1||
ಯುಧಿಷ್ಠಿರ ಧರ್ಮಜ್ಞನೇ, ಪಿತಾಮಹನೇ, ಸಾಂಖ್ಯ ಮತ್ತು ಯೋಗಗಳಲ್ಲಿ ಒಂದಕ್ಕೊಂದಕ್ಕೆ ಇರುವ ವಿಶೇಷ ಗುಣಗಳನ್ನು ಕೃಪೆಯಿಂದ ತಿಳಿಸು. ಕುರುಸತ್ತಮನೇ, ನಿನಗೆ ಎಲ್ಲ ವಿಷಯಗಳು ತಿಳಿದಿರುತ್ತವೆ. ಸರ್ವಜ್ಞನಾಗಿರುವಿ.
ಭೀಷ್ಮಃ
ಸಾಂಖ್ಯಾಃ ಸಾಂಖ್ಯಂ ಪ್ರಶಂಸಂತಿ ಯೋಗಾ ಯೋಗಂ ದ್ವಿಜಾತಯಃ |
ವದಂತಿ ಕಾರಣಂ ಶ್ರೇಷ್ಠಂ ಭಾವನಾದ್ ಭಾವನಾಯ ವೈ ||2||
ಭೀಷ್ಮ ಯುಧಿಷ್ಠಿರನೇ, ಸಾಂಖ್ಯರು ಸಾಂಖ್ಯವನ್ನೇ ಶ್ರೇಷ್ಠವೆಂದು ಹೇಳಿದರೆ, ಯೋಗಜ್ಞರಾದ ಬ್ರಾಹ್ಮಣರು ಯೋಗಮಾರ್ಗವನ್ನೇ ಶ್ರೇಷ್ಠವೆಂದು ಹೇಳುತ್ತಾರೆ. ಸಾಂಖ್ಯರು, ಯೋಗಿಗಳು ತಮ್ಮ ತಮ್ಮ ಪಕ್ಷಗಳ ಶ್ರೇಷ್ಠತೆಯನ್ನು ಪ್ರತಿಪಾದಿಸಲು ಉತ್ತಮವಾದ ಯುಕ್ತಿಗಳನ್ನೇ ಹೇಳುತ್ತಾರೆ.
ಅನೀಶ್ವರಃ ಕಥಂ ಮುಚ್ಯೇದಿತ್ಯೇವಂ ಶತ್ರುಕರ್ಶನ |
ವದಂತಿ ಕಾರಣೈಃ ಶ್ರೈಷ್ಠ್ಯಂ ಯೋಗಾಃ ಸಮ್ಯಙ್ಮನೀಷಿಣಃ ||3||
ಶತ್ರುಕರ್ಶನನೇ, ಜ್ಞಾನಾದಿ ಸಾಮರ್ಥ್ಯರಹಿತನಾದ ವ್ಯಕ್ತಿಯು ಹೇಗೆ ಮೋಕ್ಷವನ್ನು ಹೊಂದಲು ಸಾಧ್ಯ? ಎಂಬ ಶ್ರೇಷ್ಠವಾದ ಕಾರಣಗಳನ್ನು ಯೋಗಧ್ಯಾನ ನಿರತರಾಗಿರುವ, ಪರಲೋಕ ಸಾಧನವನ್ನು ಹೇಳುವ ಸಾಧಕರು ಪ್ರಶ್ನಿಸುತ್ತಾರೆ.
ವದಂತಿ ಕಾರಣಂ ಚೇದಂ ಸಾಂಖ್ಯಾಃ ಸಮ್ಯಗ್ದ್ವಿಜಾತಯಃ |
ವಿಜ್ಞಾಯೇಹ ಗತೀಃ ಸರ್ವಾ ವಿರಕ್ತೋ ವಿಷಯೇಷು ಯಃ ||4||
ಊರ್ಧ್ವಂ ಸ ದೇಹಾತ್ ಸುವ್ಯಕ್ತಂ ವಿಮುಚ್ಯೇದಿತಿ ನಾನ್ಯಥಾ |
ಏತದಾಹುರ್ಮಹಾಪ್ರಾಜ್ಞಾಃ ಸಾಂಖ್ಯಂ ವೈ ಮೋಕ್ಷದರ್ಶನಮ್ ||5||
ಸಾಂಖ್ಯಮತವನ್ನು ತಿಳಿದಿರುವ ಜ್ಞಾನಿಗಳಾದ ಬ್ರಾಹ್ಮಣರು ತಮ್ಮ ಮತವನ್ನು ಯುಕ್ತಿ ಯುಕ್ತವಾದ ಜ್ಞಾನದಿಂದಲೇ ಪ್ರತಿಪಾದಿಸುತ್ತಾರೆ. ಯಾವಾತನು ಊರ್ಧ್ವ, ಮಧ್ಯ, ಅಧಮ ಎಂಬ ಗತಿಗಳ ಸ್ವರೂಪವನ್ನು ತಿಳಿದಿದ್ದಾನೋ, ವಿಷಯಗಳಿಂದ ವಿರಕ್ತನಾಗಿದ್ದಾನೋ ದೇಹತ್ಯಾಗದ ಬಳಿಕ ಮುಕ್ತಿಯನ್ನು ಹೊಂದುತ್ತಾನೆ ಎಂಬುದಾಗಿ ಸಾಂಖ್ಯ, ಯೋಗಜ್ಞರು ಮೋಕ್ಷಪ್ರಾಪ್ತಿಯ ವಿಷಯವನ್ನು ಹೇಳುತ್ತಾರೆ.
ಸ್ವಪಕ್ಷೇ ಕಾರಣಂ ಗ್ರಾಹ್ಯಂ ಸಮರ್ಥಂ ವಚನಂ ಹಿತಮ್ |
ಶಿಷ್ಟಾನಾಂ ಹಿ ಮತಂ ಗ್ರಾಹ್ಯಂ ತ್ವದ್ವಿಧೈಃ ಶಿಷ್ಟಸಮ್ಮತೈಃ ||6||
ಆಯಾ ಪಕ್ಷದವರಿಗೆ ತಮ್ಮ ತಮ್ಮ ಪಕ್ಷದ ವಿದ್ವಾಂಸರು ಹೇಳುವ ಯುಕ್ತಿಯುಕ್ತ ಕಾರಣಗಳೇ ಗ್ರಾಹ್ಯವೆನಿಸುತ್ತವೆ. ಶಿಷ್ಟ ಸಮ್ಮತರಾದ ನಿನ್ನಂತಹ ಜ್ಞಾನಿಗಳು ಎಲ್ಲಾ ಶಿಷ್ಟರಿಗೂ ಸಮ್ಮತವಾದ ಅಭಿಪ್ರಾಯವನ್ನೇ ಸ್ವೀಕರಿಸುವುದು ಯೋಗ್ಯವು.
ಪ್ರತ್ಯಕ್ಷಹೇತವೋ ಯೋಗಾಃ ಸಾಂಖ್ಯಾಃ ಶಾಸ್ತ್ರವಿನಿಶ್ಚಯಾಃ |
ಉಭೇ ಚೈತೇ ಮತೇ ತತ್ತ್ವೇ ಮಮ ತಾತ ಯುಧಿಷ್ಠಿರ ||7||
ಉಭೇ ಚೈತೇ ಮತೇ ಜ್ಞಾನೇ ನೃಪತೇ ಶಿಷ್ಟಸಮ್ಮತೇ |
ಅನುಷ್ಠಿತೇ ಯಥಾಶಾಸ್ತ್ರಂ ನಯೇತಾಂ ಪರಮಾಂ ಗತಿಮ್ ||8||
ಯೋಗಜ್ಞಾನಿಗಳು ಪ್ರತ್ಯಕ್ಷ ಕಾರಣಗಳಿಂದ ವಸ್ತುವನ್ನು ಪ್ರತಿಪಾದಿಸಿದರೆ ಪರಮಾತ್ಮನ ಯಥಾರ್ಥ ಜ್ಞಾನ ನಿಶ್ಚಯವನ್ನು ಹೊಂದಿರುವ ಸಾಂಖ್ಯರು ಶಾಸ್ತ್ರ ಪ್ರಮಾಣದಲ್ಲಿಯೇ ನಿಶ್ಚಯವನ್ನು ಹೊಂದಿದವರಾಗಿರುತ್ತಾರೆ. ಈ ಎರಡು ಮತಗಳು ಯೋಗ್ಯವಾದ ಮತಗಳೇ ಎಂಬುದು ನನ್ನ ಅಭಿಪ್ರಾಯ. ನರೇಶ್ವರನೇ, ಈ ಎರಡೂ ಮತಗಳು ಶಿಷ್ಟರಿಗೆ ಸಮ್ಮತವಾಗಿವೆ. ಶಾಸ್ತ್ರಾನುಸಾರವಾಗಿ ಅನುಷ್ಠಾನ ಮಾಡಿದರೆ ಸಾಂಖ್ಯ, ಯೋಗ ಮತಗಳು ಮನುಷ್ಯನನ್ನು ಉತ್ತಮ ಸ್ಥಾನಕ್ಕೆ ಕರೆದೊಯ್ಯುತ್ತವೆ.
ತುಲ್ಯಂ ಶೌಚಂ ತಯೋರ್ಯುಕ್ತಂ ದಯಾ ಭೂತೇಷು ಚಾನಘ |
ವ್ರತಾನಾಂ ಧಾರಣಂ ತುಲ್ಯಂ ದರ್ಶನಂ ನ ಸಮಂ ತಯೋಃ ||9||
ಅಂತಃಶುದ್ಧಿ, ಬಹಿಶ್ಶುದ್ಧಿಗಳು, ತಪಸ್ಸು, ಭೂತದಯಾ, ಅಹಿಂಸಾ, ಸತ್ಯ, ಅಸ್ತೇಯ, ವ್ರತಪಾಲನ ಈ ಎಲ್ಲ ನಿಯಮಗಳು ಉಭಯ ಮತಗಳಲ್ಲಿ ಸಾಧಾರಣವಾಗಿವೆ. ಆದರೆ ತತ್ತ್ವದ ಫಲದಲ್ಲಿ ಸ್ವಲ್ಪ ವ್ಯತ್ಯಾಸವಿದೆ.
ಯುಧಿಷ್ಠಿರಃ
ಯದಿ ತುಲ್ಯಂ ವ್ರತಂ ಶೌಚಂ ದಯಾ ಚಾತ್ರ ಪಿತಾಮಹ |
ತುಲ್ಯಂ ನ ದರ್ಶನಂ ಕಸ್ಮಾತ್ ತನ್ಮೇ ಬ್ರೂಹಿ ಪಿತಾಮಹ ||10||
ಯುಧಿಷ್ಠಿರ ಅಹಿಂಸೆ, ಸತ್ಯ, ಅಸ್ತೇಯ, ವ್ರತ, ಶೌಚ, ಪ್ರಾಣಿದಯಾ ಎರಡು ಮತದವರಿಗೂ ಸಮಾನವಾಗಿದ್ದರೂ ಫಲದಲ್ಲಿ ವ್ಯತ್ಯಾಸವು ಏಕೆ ಉಂಟಾಯಿತು? ಪಿತಾಮಹನೇ, ಇದನ್ನು ತಿಳಿಸು.
ಭೀಷ್ಮಃ
ರಾಗಂ ಮೋಹಂ ತಥಾ ಸ್ನೇಹಂ ಕಾಮಂ ಕ್ರೋಧಂ ಚ ಕೇವಲಮ್ |
ಯೋಗಾಚ್ಛಿತ್ತ್ವಾದಿತೋ ದೋಷಾನ್ ಪಂಚೈತಾನ್ ಪ್ರಾಪ್ನುವಂತಿ ತತ್ ||
ಭೀಷ್ಮ ಯೋಗಿಯು ಕೇವಲ ಯೋಗಬಲದಿಂದ ರಾಗ, ಮೋಹ, ಸ್ನೇಹ, ಕಾಮ, ಕ್ರೋಧ - ಈ ಎಲ್ಲ ದೋಷಗಳನ್ನು ಕಡಿದು ಹಾಕಿಕೊಂಡು ಪರಮ ಪದವಿಯನ್ನು ಸೇರುತ್ತಾನೆ.
ಯಥಾ ಚಾನಿಮಿಷಾಃ ಸ್ಥೂಲಾ ಜಾಲಂ ಛಿತ್ತ್ವಾ ಪುನರ್ಜಲಮ್ |

ಪ್ರಾಪ್ನುವಂತಿ ತಥಾ ಯೋಗಾಸ್ತತ್ಪದಂ ವೀತಕಲ್ಮಷಾಃ ॥12॥
ಯಾವ ರೀತಿ ದೊಡ್ಡ ಮೀನುಗಳು ತಮ್ಮನ್ನು ಬಂಧಿಸಿರುವ ಬಲೆಯನ್ನೂ ಕತ್ತರಿಸಿ ಪುನಃ ನೀರಿಗೆ ಸೇರುತ್ತವೆಯೋ ಅದರಂತೆ ಯೋಗಿಗಳು ತಮ್ಮ ಯೋಗಾನುಷ್ಠಾನದಿಂದ ಸಾಂಸಾರಿಕ ಕ್ಲೇಶಗಳನ್ನು ಬಿಡಿಸಿಕೊಂಡು, ಪಾಪರಹಿತರಾಗಿ ಪರಮಪದವನ್ನು ಹೊಂದುತ್ತಾರೆ.
ತಥೈವ ವಾಗುರಾಂ ಛಿತ್ತ್ವಾ ಬಲವಂತೋ ಯಥಾ ಮೃಗಾಃ|
ಪ್ರಾಪ್ನುಯುರ್ವಿಮಲಂ ಮಾರ್ಗಂ ವಿಮುಕ್ತಾಃ ಸರ್ವಬಂಧನೈಃ ॥13॥
ಲೋಭಜಾನಿ ತಥಾ ರಾಜನ್ ಬಂಧನಾನಿ ಬಲಾನ್ವಿತಾಃ|
ಛಿತ್ತ್ವಾ ಯೋಗಾಃ ಪರಂ ಮಾರ್ಗಂ ಗಚ್ಛಂತಿ ವಿಮಲಾಃ ಶಿವಮ್ ॥
ಯಾವ ರೀತಿಯಾಗಿ ಬಲಿಷ್ಠವಾದ ಮೃಗಗಳು ತಮ್ಮನ್ನು ಬಂಧನ ಮಾಡಲು ಕಟ್ಟಿರುವ ಬಲೆಗಳನ್ನೇ ಕಡಿದು, ಸಕಲ ವಿಧವಾದ ಬಂಧನದಿಂದ ಮುಕ್ತವಾಗಿ ಸುಖ ಮಾರ್ಗವನ್ನು ಅನುಸರಿಸಿ ಹೋಗುತ್ತವೆಯೋ ಅದೇ ರೀತಿ ಯೋಗಬಲದಿಂದ ಭವಬಂಧನವನ್ನು ಪರಿಹರಿಸಿಕೊಂಡ ಯೋಗಿಯು ಮಂಗಳಕರವಾದ, ಶ್ರೇಷ್ಠವಾದ ಮಾರ್ಗವನ್ನೇ ಅನುಸರಿಸಿ ಹೋಗುತ್ತಾನೆ.
ಅಬಲಾಶ್ಚ ಮೃಗಾ ರಾಜನ್ವಾಗುರಾಸು ತಥಾಪರೇ|
ವಿನಶ್ಯಂತಿ ನ ಸಂದೇಹಸ್ತದ್ವದ್ಯೋಗಬಲಾದೃತೇ ॥15॥
ಹೇಗೆ ದುರ್ಬಲವಾದ ಮೃಗಗಳು ಬಲೆಯಲ್ಲಿ ಸಿಕ್ಕಿಕೊಂಡು ಸಂದೇಹವಿಲ್ಲದೆ ವಿನಾಶ ಹೊಂದುತ್ತವೆಯೋ, ಇದೇ ರೀತಿ ಯೋಗಬಲವಿಲ್ಲದ ವ್ಯಕ್ತಿಯು ಸಂಸಾರ ಬಂಧನದಿಂದ ತಪ್ಪಿಸಿಕೊಳ್ಳಲಾಗದೆ ವಿನಾಶ ಹೊಂದುತ್ತಾನೆ.
ಬಲಹೀನಾಶ್ಚ ಕೌಂತೇಯ ಯಥಾ ಜಾಲಗತಾ ಝಷಾಃ|
ಅಂತಂ ಗಚ್ಛಂತಿ ರಾಜೇಂದ್ರ ತಥಾ ಯೋಗಾಃ ಸುದುರ್ಬಲಾಃ ॥16॥
ಯಾವ ರೀತಿಯಾಗಿ ಬಲೆಯಲ್ಲಿ ಸಿಕ್ಕಿರುವ ಮೀನುಗಳು ಸಂಶಯವಿಲ್ಲದೆ ಬಲೆಯಿಂದ ಬಿಡಿಸಿಕೊಳ್ಳಲಾಗದೆ ಮರಣವನ್ನಪ್ಪುತ್ತವೆಯೋ ಅದರಂತೆ ಯೋಗಬಲದಿಂದ ಅತ್ಯಂತ ದೂರನಾದ ಮನುಷ್ಯನಿಗೂ ಈ ಬಂಧನದ ದುಃಖಗಳು ಒದಗಿ ಬರುತ್ತವೆ.
ಯಥಾ ಚ ಶಕುನಾಃ ಸೂಕ್ಷ್ಮಂ ಪ್ರಾಪ್ಯ ಜಾಲಮರಿಂದಮ|
ತತ್ರ ಸಕ್ತಾ ವಿಪದ್ಯಂತೇ ಮುಚ್ಯಂತೇ ಚ ಬಲಾನ್ವಿತಾಃ ॥17॥
ಹೇಗೆ ಸೂಕ್ಷ್ಮವಾದ ಬಲೆಯಲ್ಲಿ ಸಿಕ್ಕಿ ಬಿದ್ದಿರುವ ದುರ್ಬಲವಾದ ಹಕ್ಕಿಗಳು ಬೇಡನ ಕೈಗೆ ಸಿಕ್ಕಿ ವಿನಾಶ ಹೊಂದುತ್ತವೆಯೋ ಅದೇ ರೀತಿ ಯೋಗಬಲವಿಲ್ಲದ ವ್ಯಕ್ತಿಗಳು ಕರ್ಮಪಾಶದಿಂದ ಬಿಗಿಯಲ್ಪಟ್ಟು ನಾಶ ಹೊಂದುತ್ತಾರೆ.
ಕರ್ಮಜೈರ್ಬಂಧನೈರ್ಬದ್ಧಾಸ್ತದ್ವದ್ ಯೋಗಾಃ ಪರಂತಪ|
ಅಬಲಾ ವೈ ವಿನಶ್ಯಂತಿ ಮುಚ್ಯಂತೇ ಚ ಬಲಾನ್ವಿತಾಃ ॥18॥
ಬಲಿಷ್ಠವಾದ ಹಕ್ಕಿಗಳು ಬಂಧನವನ್ನು ಬಿಡಿಸಿಕೊಂಡು ಸಾಗುವಂತೆ ಯೋಗ ಬಲವನ್ನು ಹೊಂದಿರುವ ಸತ್ಪುರುಷರು ಕರ್ಮಬಂಧನವನ್ನು ಬಿಡಿಸಿಕೊಂಡು ಮುಕ್ತರಾಗುತ್ತಾರೆ.
ಅಲ್ಪಕಶ್ಚ ಯಥಾ ರಾಜನ್ ವಹ್ನಿಃ ಶಾಮ್ಯತಿ ದುರ್ಬಲಃ|
ಆಕ್ರಾಂತ ಇಂಧನೈಃ ಸ್ಥೂಲೈಸ್ತದ್ವದ್ಯೋಗೋಽಬಲಃ ಪ್ರಭೋ ॥19॥
ರಾಜನೇ, ಯಾವ ರೀತಿ ಅಣುಪ್ರಮಾಣದಲ್ಲಿರುವ ಬೆಂಕಿಯು ದಪ್ಪ ದಪ್ಪ ಕಟ್ಟಿಗೆಗಳಿಂದ ಆಕ್ರಾಂತವಾದಾಗ ಬಲಹೀನವಾಗಿ ನಂದಿಹೋಗುತ್ತದೋ ಅದರಂತೆ ಅಲ್ಪ ಯೋಗಬಲದವರಿಗೆ ಮಹಾವಿಷಯ ಪದಾರ್ಥಗಳು ಆವೃತವಾದಾಗ ಆ ಭಾರವನ್ನು ಸಹಿಸದೆ ಅವರು ವಿನಾಶವನ್ನೇ ಹೊಂದುತ್ತಾರೆ.
ಸ ಏವ ಚ ಯದಾ ರಾಜನ್ ವಹ್ನಿರ್ಜಾತಬಲಃ ಪುನಃ|
ಸಮೀರಣಯುತಃ ಕೃತ್ಸ್ನಾಂ ದಹೇತ್ ಕ್ಷಿಪ್ರಾಂ ಮಹೀಮಪಿ ॥20॥
ಅದೇ ಅಲ್ಪವಾದ ಬೆಂಕಿಯು ಗಾಳಿಯ ಸಹಾಯವನ್ನು ಹೊಂದಿದಾಗ ವೃದ್ಧಿಗೊಂಡು ಬಲಿಷ್ಠವಾದರೆ ಅಖಂಡವಾದ ಭೂಮಿಯನ್ನೇ ದಹಿಸಲು ಸಾಮರ್ಥ್ಯವನ್ನು ಹೊಂದುತ್ತದೆ.
ತದ್ವಜ್ಜಾತಬಲೋ ಯೋಗೀ ದೀಪ್ತತೇಜಾ ಮಹಾಬಲಃ|
ಅಂತಕಾಲ ಇವಾದಿತ್ಯಃ ಕೃತ್ಸ್ನಂ ಸಂಶೋಷಯೇಜ್ಜಗತ್ ॥21॥
ಇದರಂತೆ ಯೋಗಾಭ್ಯಾಸದಿಂದ ಬಲಿಷ್ಠನಾದ ಯೋಗಿಯು ತನ್ನ ಅಧಿಕವಾದ ಬಲದಿಂದ ತೇಜಸ್ಸನ್ನು ಪಡೆದು, ಪ್ರಳಯಕಾಲದ ಸೂರ್ಯನು ಸಮಸ್ತ ಜಗತ್ತನ್ನು ದಹಿಸುವಂತೆ ತನ್ನಲ್ಲಿ ಅಡಕವಾದ ರಾಗಾದಿ ದೋಷಗಳನ್ನು ನಾಶಗೊಳಿಸುತ್ತಾನೆ.
ದುರ್ಬಲಶ್ಚ ಯಥಾ ರಾಜನ್ ಸ್ರೋತಸಾ ಹ್ರಿಯತೇ ನರಃ|
ಬಲಹೀನಸ್ತಥಾ ಯೋಗೋ ವಿಷಯೈರ್ಹ್ರಿಯತೇಽವಶಃ ॥22॥
ದುರ್ಬಲನಾದ ವ್ಯಕ್ತಿಯನ್ನು ನದಿಯ ಪ್ರವಾಹವು ನದಿಯನ್ನು ದಾಟುವ ಸಮಯದಲ್ಲಿ ಹೇಗೆ ಸೆಳೆಯುತ್ತದೋ ಅದೇ ರೀತಿ ಇಂದ್ರಿಯಾಧೀನನಾಗಿ ವಿಷಯಗಳಿಂದ ಆಸಕ್ತನಾದ ವ್ಯಕ್ತಿಯನ್ನು ವಿಷಯಗಳೆಂಬ ಸುಳಿಯು ಭರದಿಂದ ಸೆಳೆಯುತ್ತದೆ.
ತದೇವ ಚ ಯಥಾ ಸ್ರೋತೋ ವಿಷ್ಟಂಭಯತಿ ವಾರಣಃ|
ತದ್ವದ್ ಯೋಗಬಲಂ ಲಬ್ಧ್ವಾ ವ್ಯೂಹತೇ ವಿಷಯಾನ್ ಬಹೂನ್ ॥
ಪ್ರವಾಹದ ನಡುವೆ ಸಿಕ್ಕಿರುವ ಆನೆಯು ಆ ಪ್ರವಾಹದಿಂದ ನೀರಿಗೆ ಹೇಗೆ ವಿಚಲಿತವಾಗುವುದಿಲ್ಲವೋ ಅದರಂತೆ ಯೋಗಬಲವನ್ನು ಹೊಂದಿದ ವ್ಯಕ್ತಿಯು ವಿಷಯ ಪದಾರ್ಥಗಳು ತನಗೆ ತಡೆಯಾಗಿವೆ ಎಂದು ಅದನ್ನು ತರ್ಕದಿಂದ ವಿಮರ್ಶಿಸಿ ತನ್ನ ಯೋಗಮಾರ್ಗಕ್ಕೆ ತಡೆಯಾಗದಂತೆ ಮಾಡುತ್ತಾನೆ.
ವಿಶಂತಿ ಚಾವಶಾಃ ಪಾರ್ಥ ಯೋಗಾ ಯೋಗಬಲಾನ್ವಿತಾಃ|

ಪ್ರಜಾಪತೀನೃಷೀನ್ ದೇವಾನ್ ಮಹಾಭೂತಾನಿ ಚೇಶ್ವರಾಃ ॥24॥
ಭಗವಂತನಲ್ಲಿಯೇ ಆಸಕ್ತ ಮನಸ್ಕರಾದ ಯೋಗಿಗಳು ಯೋಗಬಲದಿಂದ ಕೂಡಿದವರಾಗಿ ಮೃತ್ಯುವಶರಾಗದೆ ಪ್ರಜಾಪತಿಗಳನ್ನು, ಋಷಿಗಳನ್ನು, ದೇವತೆಗಳನ್ನು ಪಂಚ ಮಹಾಭೂತಗಳನ್ನು ಯೋಗಸಾಮರ್ಥ್ಯದಿಂದ ಪ್ರವೇಶಿಸುತ್ತಾರೆ.
ನ ಯಮೋ ನಾಂತಕಃ ಕ್ರುದ್ಧೋ ನ ಮೃತ್ಯುರ್ಭೀಮವಿಕ್ರಮಃ ।
ಈಶತೇ ನೃಪತೇ ಸರ್ವೇ ಯೋಗಸ್ಯಾಮಿತತೇಜಸಃ ॥25॥
ಮಹಾರಾಜನೇ, ಕ್ರುದ್ಧನಾದ ಯಮನಾಗಲಿ, ಪರಾಕ್ರಮಿಯಾದ ಮೃತ್ಯುವಾಗಲಿ ತೇಜಸ್ವಿಯಾದ ಯೋಗಿಯ ಮೇಲೆ ತಮ್ಮ ಸಾಮರ್ಥ್ಯವನ್ನು ತೋರಿಸಲು ಸಮರ್ಥರಾಗರು.
ಆತ್ಮನಾಂ ಚ ಸಹಸ್ರಾಣಿ ಬಹೂನಿ ಭರತರ್ಷಭ ।
ಯೋಗಃ ಕುರ್ಯಾದ್ ಬಲಂ ಪ್ರಾಪ್ಯ ತೈಶ್ಚ ಸರ್ವೈರ್ಮಹೀಂ ಚರೇತ್ ॥
ಯೋಗಿಯು ತನ್ನ ಯೋಗಸಾಮರ್ಥ್ಯದಿಂದ ಅನೇಕ ಶರೀರಗಳನ್ನು ಪಡೆದುಕೊಳ್ಳಬಲ್ಲನು. ಅದರಂತೆ ಯೋಗಿಗಳೊಡನೆ ಪೃಥಿವಿಯಲ್ಲಿ ಸಂಚರಿಸಬಲ್ಲನು.
ಪ್ರಾಪ್ನುಯಾದ್ ವಿಷಯಾಂಶ್ಚೈವ ಪುನಶ್ಚೋಗ್ರಂ ತಪಶ್ಚರೇತ್ ।
ಸಂಕ್ಷಿಪೇಚ್ಚ ಪುನಃ ಪಾರ್ಥ ಸೂರ್ಯಸ್ತೇಜೋಗುಣಾನಿವ ॥27॥
ಯೋಗಬಲದಿಂದ ಸಂಪನ್ನನಾದ ಯೋಗಿಯು ಸಹಸ್ರಾರು ದೇಹಗಳನ್ನು ಪಡೆದು ವಿಷಯ ಸುಖಗಳನ್ನು ಅನುಭವಿಸಬಲ್ಲನು. ಪುನಃ ಉಗ್ರವಾದ ತಪಸ್ಸನ್ನು ಆಚರಿಸಬಲ್ಲನು. ಸಾಯಂಕಾಲದಲ್ಲಿ ಕಂತುವ (ಮುಳುಗುವ) ಸೂರ್ಯನು ತನ್ನ ಕಿರಣಗಳನ್ನು ಸೆಳೆದುಕೊಂಡು ಪುನಃ ಉದಯಮಾನದ ಸಮಯದಲ್ಲಿ ಕಿರಣಗಳನ್ನು ಜಗತ್ತಿಗೆ ಸೂಸುವಂತೆ ಯೋಗಿಯಾದವನು ತನ್ನ ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿರುತ್ತಾನೆ. ಬೇಕಾದಂತೆ ಇಂದ್ರಿಯಸುಖವನ್ನು ಪಡೆಯುವ ಸಾಮರ್ಥ್ಯವನ್ನು ಹೊಂದಿರುತ್ತಾನೆ ಎಂದು ಭಾವ.
ಬಲಸ್ಥಸ್ಯ ಹಿ ಯೋಗಸ್ಯ ಬಂಧನೇಶಸ್ಯ ಪಾರ್ಥಿವ ।
ವಿಮೋಕ್ಷೇ ಪ್ರಭವಿಷ್ಣುತ್ವಮುಪಪನ್ನಮಸಂಶಯಮ್ ॥28॥
ಮಹಾಬಲಿಷ್ಠನಾದ ಯೋಗಿಯು ವಿಷಯ ಪದಾರ್ಥಗಳನ್ನು ನಿಗ್ರಹಿಸಲು ಸಾಮರ್ಥ್ಯವನ್ನು ಹೊಂದಿರುವುದರಿಂದ ಮೋಕ್ಷವನ್ನು ಹೊಂದುತ್ತಾನೆ ಎಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಬಲಾನಿ ಯೋಗೇ ಪ್ರೋಕ್ತಾನಿ ಮಯೈತಾನಿ ವಿಶಾಂ ಪತೇ ।
ನಿದರ್ಶನಾರ್ಥಂ ಸೂಕ್ಷ್ಮಾಣಿ ವಕ್ಷ್ಯಾಮಿ ಚ ಪುನಸ್ತವ ॥29॥
ಪ್ರಜಾಪಾಲಕನೇ, ಯೋಗದಿಂದ ಪಡೆಯಬಹುದಾದ ಬಲದ ವಿಷಯದಲ್ಲಿ ದೃಷ್ಟಾಂತವಾಗಿ ಕೆಲವು ಸೂಕ್ಷ್ಮ ತತ್ತ್ವವನ್ನು ಹೇಳುತ್ತೇನೆ, ಕೇಳು.
ಆತ್ಮನಶ್ಚ ಸಮಾಧಾನೇ ಧಾರಣಾಂ ಪ್ರತಿ ಚಾಭಿಭೋ ।
ನಿದರ್ಶನಾನಿ ಸೂಕ್ಷ್ಮಾಣಿ ಶೃಣು ಮೇ ಭರತರ್ಷಭ ॥30॥
ಭರತಶ್ರೇಷ್ಠನೇ, ಆತ್ಮನ ನಿಗ್ರಹದಲ್ಲಿ, ಧಾರಣೆಯ ವಿಷಯದಲ್ಲಿ ಸೂಕ್ಷ್ಮವಾದ ನಿದರ್ಶನಗಳಿವೆ. ಅವುಗಳನ್ನು ಕೇಳು.
ಅಪ್ರಮತ್ತೋ ಯಥಾ ಧನ್ವೀ ಲಕ್ಷ್ಯಂ ಹಂತಿ ಸಮಾಹಿತಃ ।
ಯುಕ್ತಃ ಸಮ್ಯಕ್ತಥಾ ಯೋಗೀ ಮೋಕ್ಷಂ ಪ್ರಾಪ್ನೋತ್ಯಸಂಶಯಮ್ ॥31॥
ಪ್ರಮತ್ತನಾಗದಿರುವ ಬಿಲ್ಲುಗಾರನು ಏಕಾಗ್ರತೆಯಿಂದ ಲಕ್ಷ್ಯವನ್ನು ಭೇದಿಸುವಂತೆ ಪರಮಾತ್ಮನ ಧ್ಯಾನದಲ್ಲಿಯೇ ಏಕಾಗ್ರತೆಯನ್ನು ಹೊಂದಿರುವ ಯೋಗಿಯು ಸಂಶಯವಿಲ್ಲದೆ ಮೋಕ್ಷವನ್ನು ಹೊಂದುತ್ತಾನೆ.
ಸ್ನೇಹಪೂರ್ಣೇ ಯಥಾ ಪಾತ್ರೇ ಮನ ಆಧಾಯ ನಿಶ್ಚಲಮ್ ।
ಪುರುಷೋ ಯತ್ರ ಆರೋಹೇತ್ ಸೋಪಾನಂ ಯುಕ್ತಮಾನಸಃ ॥32॥
ಯುಕ್ತಸ್ತ್ವ ತಥಾಯಮಾತ್ಮಾನಂ ಯೋಗಃ ಪಾರ್ಥಿವ ನಿಶ್ಚಲಮ್ ।
ಕರೋತ್ಯಮಲಮಾತ್ಮಾನಂ ಭಾಸ್ಕರೋಪಮದರ್ಶನಮ್ ॥33॥
ತಲೆಯ ಮೇಲೆ ಎಣ್ಣೆಯ ಪಾತ್ರೆಯನ್ನು ಹೊತ್ತುಕೊಂಡು ಸಾಗುವ ವ್ಯಕ್ತಿಯು ತನ್ನ ಮನಸ್ಸನ್ನು ಪಾತ್ರೆಯಲ್ಲಿರುವ ಎಣ್ಣೆಯು ಚೆಲ್ಲದಂತೆ ಏಕಾಗ್ರತೆಯಿಂದ ಹೇಗೆ ನಿಶ್ಚಂಚಲಗೊಳಿಸಿ ಮೆಟ್ಟಿಲುಗಳನ್ನು ಹತ್ತಿ ಮೇಲಕ್ಕೆ ಸಾಗುತ್ತಾನೋ, ಇದರಂತೆ ಯೋಗಿಯು ಯೋಗದಿಂದ ಕೂಡಿದ ಮನಸ್ಸಿನಿಂದ ಯುಕ್ತನಾಗಿ ತನ್ನ ಮನಸ್ಸನ್ನು ಪರಮಾತ್ಮನಲ್ಲಿ ಕೇಂದ್ರೀಕರಿಸಿ ಅವನನ್ನೇ ಪಡೆಯಲು ಸಾಗುತ್ತಾನೆ. ಸ್ಥಿರವೂ, ಸೂರ್ಯನ ತೇಜಸ್ಸಿಗೆ ಸಮಾನವೂ ಆದ ಪ್ರಕಾಶದಿಂದ ಕೂಡಿರುವಂತಹ ಪರಬ್ರಹ್ಮನನ್ನೇ ಏಕಾಗ್ರತೆಯಿಂದ ನೋಡುತ್ತಾನೆ.
ಯಥಾ ಚ ನಾವಂ ಕೌಂತೇಯ ಕರ್ಣಧಾರಃ ಸಮಾಹಿತಃ ।
ಮಹಾರ್ಣವಗತಾಂ ಶೀಘ್ರಂ ನಯೇತ್ ಪಾರ್ಥಿವ ಪತ್ತನಮ್ ॥34॥
ತದ್ವದಾತ್ಮಸಮಾಧಾನಂ ಯುಕ್ತಸ್ತ್ವ ಯೋಗೇನ ತತ್ತ್ವವಿತ್ ।
ದುರ್ಗಮಂ ಸ್ಥಾನಮಾಪ್ನೋತಿ ಹಿತ್ವಾ ದೇಹಮಿಮಂ ನೃಪ ॥35॥
ಕುಂತೀಪುತ್ರನೇ, ಸಮುದ್ರಕ್ಕೆ ಹಡಗನ್ನು ತೆಗೆದುಕೊಂಡು ಹೋಗಿರುವ ನಾವಿಕನು ಜಾಗ್ರತೆಯಿಂದ ಶೀಘ್ರವಾಗಿ ಆ ನೌಕೆಯನ್ನು ಹೇಗೆ ನಿರ್ದಿಷ್ಟವಾದ ಸ್ಥಳಕ್ಕೆ ಕೊಂಡೊಯ್ಯುತ್ತಾನೋ, ಅದರಂತೆ ತತ್ತ್ವಜ್ಞಾನಿಯಾದ ಯೋಗಿಯು ಯೋಗದ ಮೂಲಕ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ, ಯೋಗಾಭ್ಯಾಸದಿಂದ ದೇಹವನ್ನು ತ್ಯಜಿಸಿ ಯಾರಿಂದಲೂ ಹೋಗಲಾಗದ ಪರಮಪದವನ್ನು ಹೊಂದುತ್ತಾನೆ.

ಸಾರಥಿಶ್ಚ ಯಥಾ ಯುಕತತ್ವ ಸದಶ್ವಾನ್ ಸುಸಮಾಹಿತಃ |
ದೇಶಮಿಷ್ಟಂ ನಯತ್ಯಾಶು ಧನ್ವಿನಂ ಪುರುಷರ್ಷಭ ॥36॥
ತಥೈವ ನೃಪತೇ ಯೋಗೀ ಧಾರಣಾಸು ಸಮಾಹಿತಃ |
ಪ್ರಾಪ್ನೋತ್ಯಾಶು ಪರಂ ಸ್ಥಾನಂ ಲಕ್ಷಂ ಮುಕ್ತ ಇವಾಶುಗಃ ॥37॥
ಹೇಗೆ ಏಕಾಗ್ರ ಮನಸ್ಸನ್ನು ಸಾಧಿಸಿಕೊಂಡಿರುವ ಸಾರಥಿಯು ಒಳ್ಳೆಯ ಕುದುರೆಗಳನ್ನು ರಥಕ್ಕೆ ಜೋಡಿಸಿ ಧನುರ್ಧಾರಿಯಾದ ರಥಿಕನನ್ನು ಅವನು ಬಯಸಿದ ಜಾಗಕ್ಕೆ ಕರೆದೊಯ್ಯುತ್ತಾನೋ ಅದರಂತೆ ಮೂಲಾಧಾರ, ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ದಿ ಮೊದಲಾದ ಧಾರಣಗಳಲ್ಲಿ ಏಕಾಗ್ರತೆಯನ್ನು ಸಂಪಾದಿಸಿಕೊಂಡಿರುವ ಯೋಗಿಯು ತನ್ನ ಮನಸ್ಸು ತನಗೆ ಇಷ್ಟವಾದ ಪರಬ್ರಹ್ಮನ ಕಡೆ ಸಾಗುವಂತೆ ಮಾಡುತ್ತಾನೆ. ಧನುರ್ಮುಕ್ತವಾದ ಬಾಣವು ಶೀಘ್ರವಾಗಿ ಗುರಿಯನ್ನು ಮುಟ್ಟುವಂತೆ ವೇಗವಾಗಿ ಪರಮಪದವನ್ನು ಹೊಂದುತ್ತಾನೆ.
ಆವೇಶ್ಯಾತ್ಮನಿ ಚಾತ್ಮಾನಂ ಯೋಗೀ ತಿಷ್ಠತಿ ಯೋಽಚಲಃ |
ಪಾಪಂ ಹಂತೇವ ಮೀನಾನಾಂ ಪದಮಾಪ್ನೋತಿ ಸೋಽಜರಮ್ ॥38॥
ಯಾವ ಯೋಗಿಯು ಸಮಾಧಿಯ ಮೂಲಕ ಪರಮಾತ್ಮನನ್ನು ಹೃದಯದಲ್ಲಿ ನೆಲೆಗೊಳಿಸಿ ಅಚಲನಾಗಿರುತ್ತಾನೋ ಅವನು ತನ್ನ ಪಾಪವನ್ನು ತೊಡೆದುಕೊಂಡು ಪವಿತ್ರಾತ್ಮನಿಗೆ ಲಭಿಸುವ, ನಾಶ ಹೊಂದದೇ ಇರುವ ಮೋಕ್ಷವನ್ನು ಹೊಂದುತ್ತಾನೆ.
ನಾಭ್ಯಾಂ ಕಂಠೇ ಚ ಶೀರ್ಷೇ ಚ ಹೃದಿ ವಕ್ಷಸಿ ಪಾರ್ಶ್ವಯೋಃ |
ದರ್ಶನೇ ಸ್ಪರ್ಶನೇ ಚಾಪಿ ಘ್ರಾಣೇ ಚಾಮಿತವಿಕ್ರಮ ॥39॥
ಸ್ಥಾನೇಷ್ವೇತೇಷು ಯೋ ಯೋಗೀ ಮಹಾವ್ರತಸಮಾಹಿತಃ |
ಆತ್ಮನಾ ಸೂಕ್ಷ್ಮಮಾತ್ಮಾನಂ ಯುಂಕ್ತೇ ಸಮ್ಯಗ್ ವಿಶಾಂ ಪತೇ ॥40॥
ಸ ಶೀಘ್ರಮಮಲಪ್ರಜ್ಞಃ ಕರ್ಮ ದಗ್ಧ್ವಾ ಶುಭಾಶುಭಮ್ |
ಉತ್ತಮಂ ಯೋಗಮಾಸ್ಥಾಯ ಯದೀಚ್ಛತಿ ವಿಮುಚ್ಯತೇ ॥41॥
ಪರಾಕ್ರಮಿಯೇ, ಯೋಗಾಭ್ಯಾಸವೆಂಬ ರಥದಲ್ಲಿ ಏಕಾಗ್ರತೆಯಿಂದ ಇರುವ ಯೋಗಿಯು ಹೊಕ್ಕಳು, ಕುತ್ತಿಗೆ, ತಲೆ, ಹೃದಯ, ವಕ್ಷಸ್‌ಸ್ಥಲ, ತನ್ನ ಎರಡು ಪಾರ್ಶ್ವಗಳು, ಕಣ್ಣು, ಕಿವಿ, ಮೂಗು - ಈ ಸ್ಥಾನಗಳಲ್ಲಿ ಧಾರಣೆಯ ಮೂಲಕ ತನ್ನ ಮನಸ್ಸನ್ನು ಪರಮಾತ್ಮನಲ್ಲಿಯೇ ನೆಲೆಗೊಳಿಸುತ್ತಾನೆ. ಅಂತಹ ವ್ಯಕ್ತಿಯು ತಾನು ಬಯಸಿದಲ್ಲಿ ಪರ್ವತದಂತಿರುವ ಶುಭಾಶುಭ ಕರ್ಮಗಳನ್ನು ಯೋಗದಿಂದಲೇ ಭಸ್ಮ ಮಾಡಿ, ಆ ಉತ್ತಮವಾದ ಯೋಗದಿಂದಲೇ ಮುಕ್ತಿಯನ್ನು ಹೊಂದಬಲ್ಲನು.
ಯುಧಿಷ್ಠಿರಃ
ಆಹಾರಾನ್ ಕೀದೃಶಾನ್ ಕೃತ್ವಾ ಕಾನಿ ಜಿತ್ವಾ ಚ ಭಾರತ |
ಯೋಗೀ ಬಲಮವಾಪ್ನೋತಿ ತದ್ಭವಾನ್ ವಕ್ತುಮರ್ಹತಿ ॥42॥
ಯುಧಿಷ್ಠಿರ ಭಾರತನೇ, ಯೋಗಿಯಾದವನು ಯಾವ ರೀತಿಯಾದ ಆಹಾರವನ್ನು ಸ್ವೀಕರಿಸಿ, ಯಾವುಗಳನ್ನು ಜಯಿಸಿ ಅಸಾಧಾರಣವಾದ ಬಲವನ್ನು ಹೊಂದುತ್ತಾನೆ? ಈ ವಿಷಯವನ್ನು ಕೃಪೆತೋರಿ ತಿಳಿಸಿ.
ಭೀಷ್ಮಃ
ಕಣಾನಾಂ ಭಕ್ಷಣೇ ಯುಕ್ತಃ ಪಿಣ್ಯಾಕಸ್ಯ ಚ ಭಕ್ಷಣೇ |
ಸ್ನೇಹಾನಾಂ ವರ್ಜನೇ ಯುಕ್ತೋ ಯೋಗೀ ಬಲಮವಾಪ್ನುಯಾತ್ ॥
ಭೀಷ್ಮ ಯಾರು ಧಾನ್ಯಗಳ ನುಚ್ಚನ್ನು, ಎಳ್ಳು ಮೊದಲಾದ ಎಣ್ಣೆಯ ಕಾಳುಗಳನ್ನು ಅಧಿಕವಾಗಿ ಉಪಯೋಗಿಸುತ್ತಾ ಜಿಡ್ಡಿನ ಪದಾರ್ಥಗಳಲ್ಲಿ ವಿರಕ್ತನಾಗಿರುತ್ತಾನೋ ಅಂತಹ ಯೋಗಿಯು ಬಲಿಷ್ಠನಾಗಿರುತ್ತಾನೆ.
ಭುಂಜಾನೋ ಯಾವಕಂ ರೂಕ್ಷಂ ದೀರ್ಘಕಾಲಮರಿಂದಮ |
ಏಕಾರಾಮೋ ವಿಶುದ್ಧಾತ್ಮಾ ಯೋಗೀ ಬಲಮವಾಪ್ನುಯಾತ್ ॥44॥
ಬಹಳ ಕಾಲದ ತನಕ ಒಂದೇ ಬಾರಿ ಜವೆ ಗೋಧಿಯ ಗಂಜಿಯನ್ನು ಸ್ವೀಕರಿಸುವ ಯೋಗಿಯು ಶುದ್ಧಚಿತ್ತನೂ, ಬಲಿಷ್ಠನೂ ಆಗಿರುತ್ತಾನೆ.
ಪಕ್ಷಾನ್ ಮಾಸಾನೃತೂಂಶ್ಚಿತ್ರಾನ್ ಸಂಚರಂಶ್ಚ ಗುಹಾಸ್ತಥಾ |
ಅಪಃ ಪೀತ್ವಾ ಪಯೋಮಿಶ್ರಾ ಯೋಗೀ ಬಲಮವಾಪ್ನುಯಾತ್ ॥45॥
ಯೋಗಿಯು ಹದಿನೈದು ದಿನಗಳ ತನಕ ಹಾಲಿನಿಂದ ಮಿಶ್ರವಾದ ನೀರನ್ನು ಪಾನ ಮಾಡಬೇಕು. ಕ್ರಮವಾಗಿ ಒಂದು ತಿಂಗಳ ತನಕ ಹೀಗೆ ಅಭ್ಯಾಸ ಮಾಡಿಕೊಂಡು ಹೋಗಬೇಕು. ಅಭ್ಯಾಸವಾದ ಬಳಿಕ ಅನೇಕ ಮಾಸಗಳಲ್ಲಿಯೂ ಹೀಗೆ ಆಹಾರವನ್ನು ಸ್ವೀಕರಿಸುವ ಅಭ್ಯಾಸವನ್ನು ಮಾಡಿಕೊಂಡು, ಅನೇಕ ಸಂವತ್ಸರಗಳ ತನಕ ಹಾಲು ಮಿಶ್ರವಾದ ನೀರನ್ನೇ ಆಹಾರವನ್ನಾಗಿ ಮಾಡಿಕೊಂಡಾಗ ಯೋಗಬಲವನ್ನು ಹೊಂದುತ್ತಾನೆ.
ಅಖಂಡಮಪಿ ವಾ ಮಾಸಂ ಸತತಂ ಮನುಜೇಶ್ವರ |
ಉಪೋಷ್ಯ ಸಮ್ಯಕ್ ಶುದ್ಧಾತ್ಮಾ ಯೋಗೀ ಬಲಮವಾಪ್ನುಯಾತ್ ॥46॥
ಯಾವನು ಜೀವನಪೂರ್ತಿ ಮಾಂಸವನ್ನು ಸ್ವೀಕರಿಸದೆ ಪರಿಶುದ್ಧಾತ್ಮನಾಗಿರುತ್ತಾನೋ ಅಂತಹ ಯೋಗಿಯು ಯೋಗಬಲವನ್ನು ಹೊಂದುತ್ತಾನೆ.
ಕಾಮಂ ಜಿತ್ವಾ ತಥಾ ಕ್ರೋಧಂ ಶೀತೋಷ್ಣೇ ವರ್ಷಮೇವ ಚ |
ಭಯಂ ನಿದ್ರಾಂ ತಥಾ ಶ್ವಾಸಂ ಪೌರುಷಂ ವಿಷಯಾಂಸ್ತಥಾ ॥47॥
ಸ್ವರತಿಂ ದುರ್ಜಯಾಂ ಚೈವ ಘೋರಾಂ ತೃಷ್ಣಾಂ ಚ ಪಾರ್ಥಿವ |

ಸ್ಪರ್ಶಾನ್ ಸರ್ವಾಂಸ್ತಥಾ ತಂದ್ರೀಂ ದುರ್ಜಯಾಂ ನೃಪಸತ್ತಮ ॥48॥
ದೀಪಯಂತಿ ಮಹಾತ್ಮಾನಃ ಸೂಕ್ಷ್ಮಮಾತ್ಮಾನಮಾತ್ಮನಾ ।
ವೀತರಾಗಾ ಮಹಾಪ್ರಾಜ್ಞಾ ಧ್ಯಾನಾಧ್ಯಯನಸಂಪದಾ ॥49॥
ನರಶ್ರೇಷ್ಠನೇ, ಕಾಮ, ಕ್ರೋಧ, ಶೀತ, ಉಷ್ಣ, ಮಳೆ, ಭಯ, ಶೋಕ, ಶ್ವಾಸ, ಮನುಷ್ಯನಿಗೆ ಪ್ರಿಯವೆನಿಸಿದ ವಿಷಯಗಳು, ಜಯಿಸಲು ಅಸಾಧ್ಯವಾದ ಬಂಧು ಮೋಹ, ಘೋರವಾದ ತೃಷ್ಣೆ, ಸ್ಪರ್ಶ, ನಿದ್ರೆ, ಯಾರಿಂದಲೂ ಜಯಿಸಲಾಗದ ಆಲಸ್ಯ ಇವುಗಳನ್ನು ಯಾವನು ಜಯಿಸಿರುತ್ತಾನೋ ಅಂತಹ ಮಹಾತ್ಮನಾದ ಯೋಗಿಯು ಬಲಿಷ್ಠನಾಗಿರುತ್ತಾನೆ. ಧ್ಯಾನ, ಅಧ್ಯಯನ, ಇವುಗಳಿಂದ ಸೂಕ್ಷ್ಮ ಬುದ್ಧಿಯಿಂದ ಪರಮಾತ್ಮನನ್ನು ಕಾಣುತ್ತಾ ಜ್ಞಾನಿಯಾಗಿ, ರಾಗಮುಕ್ತನಾಗಿ, ಧ್ಯಾನ-ಅಧ್ಯಯನ ಸಂಪತ್ತುಗಳಿಂದ ಪರಮಾತ್ಮನನ್ನು ಬೆಳಗುತ್ತಾನೆ. ಮತ್ತೊಬ್ಬರಿಗೂ ತೋರಿಸಲು ಸಮರ್ಥನಾಗುತ್ತಾನೆ.
ದುರ್ಗಸ್ತ್ವೇಷ ಮತಃ ಪಂಥಾ ಬ್ರಾಹ್ಮಣಾನಾಂ ವಿಪಶ್ಚಿತಾಮ್ ।
ನ ಕಶ್ಚಿದ್ ವ್ರಜತಿ ಹ್ಯಸ್ಮಿನ್ ಕ್ಷೇಮೇಣ ಭರತರ್ಷಭ ॥50॥
ಭರತಶ್ರೇಷ್ಠನೇ, ಯೋಗಮಾರ್ಗವು ಅತ್ಯಂತ ಕಠಿಣವಾದುದು ಎಂಬುದು ವಿಪಶ್ಚಿತರ ಅಭಿಪ್ರಾಯವು. ಕೆಲವು ವ್ಯಕ್ತಿಗಳು ಮಾತ್ರವೇ ಈ ಮಾರ್ಗದಲ್ಲಿ (ಜ್ಞಾನಿಗಳ) ಕ್ಷೇಮದಿಂದ ಮುಂದುವರೆಯಬಲ್ಲರು.
ಯಥಾ ಕಶ್ಚಿದ್ವನಂ ಘೋರಂ ಬಹುಸರ್ಪಸರೀಸೃಪಮ್ ।
ಶ್ವಭ್ರವತ್ತೋಯಹೀನಂ ಚ ದುರ್ಗಮಂ ಬಹುಕಂಟಕಮ್ ॥51॥
ಅಭಕ್ತಮಟವೀಪ್ರಾಯಂ ದಾವದಗ್ಧಮಹೀರುಹಮ್ ।
ಪಂಥಾನಂ ತಸ್ಕರಾಕೀರ್ಣಂ ಕ್ಷೇಮೇಣಾಭಿಪತೇದ್ಯುವಾ ॥52॥
ಯೋಗಮಾರ್ಗಂ ತಥಾಸಾದ್ಯ ಯಃ ಕಶ್ಚಿದ್ ಭಜತೇ ದ್ವಿಜಃ ।
ಕ್ಷೇಮೇಣೋಪರಮೇನ್ಮಾರ್ಗಾದ್ ಬಹುದೋಷೋ ಹಿ ಸ ಸ್ಮೃತಃ ॥53॥
ಒಬ್ಬ ವ್ಯಕ್ತಿಯು ವಿಷಜಂತುಗಳಿಂದ ಕೂಡಿರುವ, ಗುಹೆಗಳಿಂದ ಕೂಡಿರುವ, ನೀರೇ ಇಲ್ಲದ, ದುರ್ಗಮವಾದ, ಮುಳ್ಳು ಕೊಂಪೆಗಳಿಂದ ಆವೃತವಾಗಿರುವ, ಆಹಾರವಿಲ್ಲದಿರುವ, ಕಾಡ್ಗಿಚ್ಚಿನಿಂದ ಸುಟ್ಟುಹೋದ ವನದಿಂದ ಕೂಡಿರುವ, ಕಳ್ಳರಿಂದ ತುಂಬಿರುವ ಅರಣ್ಯದಲ್ಲಿ ಸಂಚರಿಸಬೇಕೆಂದರೆ ತುಂಬಾ ಧೀರನೇ ಆಗಿರಬೇಕು. ಧೀರ ಪುರುಷನು ಮಾತ್ರ ನಿರ್ಭೀತಿಯಿಂದ ಕ್ಷೇಮವಾಗಿ ಸಾಗಬಲ್ಲನು. ಇದರಂತೆ ಯೋಗಮಾರ್ಗವನ್ನು ಆಶ್ರಯಿಸಿದ ಕೆಲವೇ ದ್ವಿಜರು ಆ ಮಾರ್ಗದ ಮೂಲಕ ಕ್ಷೇಮದಿಂದ ಪರಮಪದವಿಯನ್ನು ಹೊಂದುತ್ತಾರೆ. ಯೋಗಮಾರ್ಗವು ಕಠಿಣ ಅಭ್ಯಾಸದಿಂದ ಕೂಡಿರುವುದರಿಂದ ಆ ಮಾರ್ಗದಲ್ಲಿ ಸಾಗುವುದು ಕಷ್ಟಸಾಧ್ಯವು.
ಸುಸ್ಥೇಯಂ ಕ್ಷುರಧಾರಾಸು ನಿಶಿತಾಸು ಮಹೀಪತೇ ।
ಧಾರಣಾಸು ತು ಯೋಗಸ್ಯ ದುಃಸ್ಥೇಯಮಕೃತಾತ್ಮಭಿಃ ॥54॥
ಮಹಾರಾಜನೇ, ಚೂಪಾದ ಕತ್ತಿಯ ಅಲುಗಿನ ಮೇಲಾದರೂ ಕ್ಷಣಕಾಲ ಸುಖವಾಗಿ ನಿಲ್ಲಬಹುದು, ಆದರೆ ಜಿತೇಂದ್ರಿಯರಲ್ಲದವರಿಗೆ ಯೋಗಕ್ಕೆ ಸಂಬಂಧಿಸಿದ ಧಾರಣೆಗಳಲ್ಲಿ ಏಕಾಗ್ರತೆಯಿಂದ ಕ್ಷಣಕಾಲವೂ ಮನಸ್ಸನ್ನು ನಿಲ್ಲಿಸುವುದು ಕಠಿಣವೇ ಸರಿ.
ವಿಪನ್ನಾ ಧಾರಣಾಸ್ತಾತ ನಯಂತಿ ನಶುಭಾಂ ಗತಿಮ್ ।
ನೇತೃಹೀನಾ ಯಥಾ ನಾವಃ ಪುರುಷಾನರ್ಣವೇ ನೃಪ ॥55॥
ನಾವಿಕನಿಲ್ಲದ ನೌಕೆಯು ಸಮುದ್ರದಲ್ಲಿ ಸಾಗುವಾಗ ಮನುಷ್ಯರನ್ನು ಹೇಗೆ ದಡ ಮುಟ್ಟಿಸದೋ ಅದೇ ರೀತಿ ಸಿದ್ಧಿ ಹೊಂದದಿರುವ ಧಾರಣೆಗಳು ಸಾಧಕನನ್ನು ಶುಭಗತಿಗೆ ಕೊಂಡೊಯ್ಯವು.
ಯಸ್ತು ತಿಷ್ಠತಿ ಕೌಂತೇಯ ಧಾರಣಾಸು ಯಥಾವಿಧಿ ।
ಮರಣಂ ಜನ್ಮ ದುಃಖಂ ಚ ಸುಖಂ ಚ ಸ ವಿಮುಂಚತಿ ॥56॥
ಕುಂತೀಸುತನೇ, ಧಾರಣೆಗಳಲ್ಲಿ ಯಾವನು ಮನಸ್ಸನ್ನು ಸ್ಥಿರಗೊಳಿಸುವನೋ ಅಂತಹ ವ್ಯಕ್ತಿಯು ಮರಣ, ಜನ್ಮಗಳ ದುಃಖವನ್ನು ಪರಿಹರಿಸಿಕೊಂಡು ತಾತ್ಕಾಲಿಕವಾದ ಸಾಂಸಾರಿಕ ಸುಖಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.
ನಾನಾಶಾಸ್ತ್ರೇಷು ನಿಷ್ಪನ್ನಂ ಯೋಗೇಷ್ವಿದಮುದಾಹೃತಮ್ ।
ಪರಂ ಯೋಗಂ ತು ಯತ್ಕೃತ್ಸ್ನಂ ನಿಶ್ಚಿತಂ ತದ್ ದ್ವಿಜಾತಿಷು ॥57॥
ಯುಧಿಷ್ಠಿರನೇ, ನಾನಾ ಶಾಸ್ತ್ರಗಳಲ್ಲಿ ಸಿದ್ಧಾಂತವೆಂದು ಹೇಳಿರುವ ಯೋಗಶಾಸ್ತ್ರಗಳ ರಹಸ್ಯವನ್ನು ನಿನಗೆ ಹೇಳಿದ್ದೇನೆ. ಯೋಗಸಾಧನೆಗೆ ಯಾವ ಯಾವ ಕರ್ತವ್ಯವಿದೆಯೋ ಅವೆಲ್ಲವೂ ಜ್ಞಾನಿಗಳಿಂದ ನಿಶ್ಚಯಿಸಲ್ಪಟ್ಟಿದೆ.
ಪರಂ ಮಹದ್ ಬ್ರಹ್ಮ ಮಹನ್ಮಹಾತ್ಮನ್
ಬ್ರಹ್ಮಾಣಮೀಶಂ ವರದಂ ಚ ವಿಷ್ಣುಮ್ ।
ಭವಂ ಚ ಧರ್ಮಂ ಚ ಷಡಾನನಂ ಚ
ಷಡ್‌ಬ್ರಹ್ಮಪುತ್ರಾಂಶ್ಚ ಮಹಾನುಭಾವಾನ್ ॥58॥
ಮಹಾತ್ಮನಾದ ಯುಧಿಷ್ಠಿರನೇ, ಯೋಗಕೌಶಲದಿಂದ ಕೂಡಿರುವ ಶ್ರೇಷ್ಠವಾದ ಯೋಗವೆಂದರೆ ವೇದಗಳೇ ಆಗಿವೆ. ಯೋಗವು ವೇದಗಳ ಸಾರವಾದುದರಿಂದ ಯೋಗವನ್ನೂ ವೇದವೆಂದೇ ಹೇಳುತ್ತಾರೆ. ಇಂತಹ ಯೋಗಸಿದ್ಧಿಯನ್ನು ಪಡೆದ ಮಹಾತ್ಮನಾದ ಪುರುಷನು ಇಚ್ಛಿಸಿದಲ್ಲಿ ಕೂಡಲೇ ಮುಕ್ತನಾಗಿ ಪರಬ್ರಹ್ಮನನ್ನು, ವರದನಾದ ವಿಷ್ಣುವನ್ನು, ಈಶ್ವರನನ್ನು, ಯಮಧರ್ಮನನ್ನು, ಷಣ್ಮುಖನನ್ನು, ಬ್ರಹ್ಮನ ಮಾನಸ ಪುತ್ರರಾದ ಸನಕಾದಿಗಳನ್ನು ಹೊಂದಬಲ್ಲನು.
ತಮಶ್ಚ ಕಷ್ಟಂ ಸುಮಹದ್ರಜಶ್ಚ
ಸತ್ತ್ವಂ ಚ ಶುದ್ಧಂ ಪ್ರಕೃತಿಂ ಪರಾಂ ಚ ।
ಸಿದ್ಧಿಂ ಚ ದೇವೀಂ ವರುಣಸ್ಯ ಪತ್ನೀಂ

ತೇಜಶ್ಚ ಕೃತ್ಸ್ನಂ ಸುಮಹಚ್ಚ ಧೈರ್ಯಮ್ ॥59॥
ತಾರಾಧಿಪಂ ವೈ ವಿಮಲಂ ಸತಾರಂ
ವಿಶ್ವಾಂಶ್ಚ ದೇವಾನುರಗಾನ್ ಪಿತೄಂಶ್ಚ |
ಶೈಲಾಂಶ್ಚ ಕೃತ್ಸ್ನಾನುದಧೀಂಶ್ಚ ಘೋರಾ-
ನ್ನದೀಶ್ಚ ಸರ್ವಾಃ ಸವನಾಂಘನಾಂಶ್ಚ ॥60॥
ನಾಗಾನ್ನಗಾನ್ ಯಕ್ಷಗಣಾನ್ ದಿಶಶ್ಚ
ಗಂಧರ್ವಸಂಘಾನ್ ಪುರುಷಾನ್ ಸ್ತ್ರಿಯಶ್ಚ |
ಪರಸ್ಪರಂ ಪ್ರಾಪ್ಯ ಮಹಾನ್ಮಹಾತ್ಮಾ
ವಿಶೇತ ಯೋಗೀ ನಚಿರಾದ್ ವಿಮುಕ್ತಃ ॥61॥
ಕಷ್ಟವಾದ ತಮೋಭಾವವನ್ನಾಗಲಿ, ರಜೋಭಾವವನ್ನಾಗಲಿ, ಸತ್ತ್ವಭಾವವನ್ನಾಗಲಿ, ಶುದ್ಧವಾದ ಪ್ರಕೃತಿಯನ್ನಾಗಲಿ, ಸಿದ್ಧಿಯನ್ನಾಗಲಿ, ವರುಣನ ಪತ್ನಿಯನ್ನಾಗಲಿ, ಸಂಪೂರ್ಣವಾದ ತೇಜಸ್ಸನ್ನಾಗಲಿ, ಶ್ರೇಷ್ಠವಾದ ಧೈರ್ಯವನ್ನಾಗಲಿ, ತಾರಾಧಿಪತಿಯಾದ ಚಂದ್ರನನ್ನಾಗಲಿ, ವಿಶ್ವೇದೇವತೆಗಳನ್ನಾಗಲಿ, ಸರ್ಪಗಳನ್ನಾಗಲಿ, ಪಿತೃಗಳನ್ನಾಗಲಿ, ಸಮಸ್ತವಾದ ಪರ್ವತಗಳನ್ನಾಗಲಿ, ಭಯಂಕರವಾದ ಸಮುದ್ರಗಳನ್ನಾಗಲಿ, ಅಖಿಲವಾದ ನದಿಗಳನ್ನಾಗಲಿ, ವನಗಳನ್ನಾಗಲಿ, ಮೇಘಗಳನ್ನಾಗಲಿ, ನಾಗಗಳನ್ನಾಗಲಿ, ವೃಕ್ಷಗಳನ್ನಾಗಲಿ, ದಿಕ್ಕುಗಳನ್ನಾಗಲಿ, ಗಂಧರ್ವ ಗುಣಗಳನ್ನಾಗಲಿ, ಸಮಸ್ತ ಸ್ತ್ರೀ-ಪುರುಷರನ್ನಾಗಲಿ ಸಂಧಿಸಿ ಅವರವರಂತೆ ಸ್ಥಾನವನ್ನು ಹೊಂದಲು ಸಮರ್ಥನಾಗುತ್ತಾನೆ.
ವ್ಯಾಖ್ಯಾನ ವಿಶೇಷ ಸರ್ವೋತ್ತಮನಾದ ಭಗವಂತನನ್ನು ಯೋಗಕೌಶಲದಿಂದ ಹೊಂದಿದ ಮಹಾತ್ಮನಾದ ಯೋಗಿಯು ಶೀಘ್ರವಾಗಿ ಬಂಧನದಿಂದ ಬಿಡುಗಡೆಯನ್ನು ಹೊಂದಿದವನಾಗಿ ಈ ಎಲ್ಲ ಸ್ಥಾನಗಳಲ್ಲಿಯೂ ಮನಬಂದಂತೆ ವಿಹರಿಸಲು ಸಾಮರ್ಥ್ಯವನ್ನು ಹೊಂದುತ್ತಾನೆ ಎಂದು ಅಭಿಪ್ರಾಯ.
ಕಥಾ ಚ ಯೇಯಂ ನೃಪತೇ ಪ್ರಸಕ್ತಾ
ದೇವೇ ಮಹಾವೀರ್ಯಮತೌ ಶುಭೇಯಮ್ |
ಯೋಗಾನ್ ಸ ಸರ್ವಾನಭಿಭೂಯ ಮರ್ತ್ಯಾ-
ನ್ನಾರಾಯಣಾತ್ಮಾ ಕುರುತೇ ಮಹಾತ್ಮಾ ॥62॥
ಬಲದಿಂದಲೂ, ಬುದ್ಧಿಯಿಂದಲೂ ಸಂಪನ್ನವಾದ ಪರಮಾತ್ಮನಿಗೆ ಸಂಬಂಧಿಸಿದ ಕಲ್ಯಾಣಕರವಾದ ಕಥೆಯನ್ನು ನಾನು ಪ್ರಾಸಂಗಿಕವಾಗಿ ನಿನಗೆ ಬೋಧಿಸಿದ್ದೇನೆ. ಯೋಗಸಿದ್ಧಿಯನ್ನು ಪಡೆದ ಮಹಾತ್ಮನು ಜಗತ್ತಿಗೆ ವಿಲಕ್ಷಣನಾಗಿ ನಿಂತು ನಾರಾಯಣನಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸಿಕೊಂಡು ಭಗವಂತನಂತೆ ಅವನ ಸಂಕಲ್ಪಕ್ಕನುಗುಣವಾಗಿ ಸತ್ಕರ್ಮಗಳನ್ನು ನಡೆಸಲು ಸಾಮರ್ಥ್ಯವನ್ನು ಹೊಂದುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಯೋಗವಿಧಿರ್ನಾಮ ತ್ರಯಸ್ತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ನಾಲ್ಕನೆಯ ಅಧ್ಯಾಯ
ಯುಧಿಷ್ಠಿರನನ್ನು ಕುರಿತು ಯೋಗದ ಮಹತ್ವ ಮತ್ತು ಫಲವನ್ನು ನಿರೂಪಿಸಿದುದು.
ಯುಧಿಷ್ಠಿರಃ
ಸಮ್ಯಕ್ತ್ವಯಾಯಂ ನೃಪತೇ ವರ್ಣಿತಃ ಶಿಷ್ಟಸಮ್ಮತಃ |
ಯೋಗಮಾರ್ಗೋ ಯಥಾನ್ಯಾಯಂ ಶಿಷ್ಯಾಯೇಹ ಹಿತೈಷಿಣಾ ॥1॥
ಯುಧಿಷ್ಠಿರ ತನ್ನ ಹಿತವನ್ನು ಚಿಂತಿಸುವ ನೀನು ನಮ್ಮ ಶಿಷ್ಯನಾದ ನನಗೆ ಜ್ಞಾನಿಗಳಿಗೆ ಸಮ್ಮತವಾದ ಯೋಗಮಾರ್ಗವನ್ನು ಯಥಾನ್ಯಾಯವಾಗಿ ವಿವರಿಸು.
ಸಾಂಖ್ಯೇ ತ್ವಿದಾನೀಂ ಕಾತ್ಸ್ನ್ಯೇನ ವಿಧಿಂ ಪ್ರಬ್ರೂಹಿ ಪೃಚ್ಛತೇ |
ತ್ರಿಷು ಲೋಕೇಷು ಯಜ್ಜ್ಞಾನಂ ಸರ್ವಂ ತದ್ ವಿದಿತಂ ಹಿ ತೇ ॥2॥
ನಾನೀಗ ಸಾಂಖ್ಯಶಾಸ್ತ್ರಕ್ಕೆ ಸಂಬಂಧಿಸಿದ ಉಗ್ರವಾದ ನಿಯಮಗಳ ಬಗ್ಗೆ ಪ್ರಶ್ನಿಸುತ್ತಿದ್ದೇನೆ. ಕೃಪೆತೋರಿ ಅದನ್ನು ತಿಳಿಸು. ಮೂರುಲೋಕಗಳಲ್ಲಿರುವ ಸಮಸ್ತ ಜ್ಞಾನಗಳ ಬಗ್ಗೆ ಬಲ್ಲವನು ನೀನು.
ಭೀಷ್ಮಃ
ಶೃಣು ಮೇ ತ್ವಮಿದಂ ಶುದ್ಧಂ ಸಾಂಖ್ಯಾನಾಂ ವಿದಿತಾತ್ಮನಾಮ್ |
ವಿಹಿತಂ ಯತಿಭಿರ್ಬುದ್ಧೈಃ ಕಪಿಲಾದಿಭಿರೀಶ್ವರೈಃ ॥3॥
ಭೀಷ್ಮ ಯುಧಿಷ್ಠಿರನೇ, ಭಗವತ್ತತ್ತ್ವವನ್ನು ತಿಳಿದಿರುವ ಸಾಂಖ್ಯರ ಸೂಕ್ಷ್ಮವಾದ ವಿಷಯವನ್ನು ಕೇಳಿಸಿಕೊ. ಈಶ್ವರನಾದ ಕಪಿಲನೇ ಮೊದಲಾದ ಎಲ್ಲರಿಂದಲೂ ಈ ಸಾಂಖ್ಯ ಶಾಸ್ತ್ರವು ಹೇಳಲ್ಪಟ್ಟಿದೆ.
ಯಸ್ಮಿನ್ನ ವಿಭ್ರಮಾಃ ಕೇಚಿದ್ ದೃಶ್ಯಂತೇ ಮನುಜರ್ಷಭ |
ಗುಣಾಶ್ಚ ಯಸ್ಮಿನ್ ಬಹವೋ ದೋಷಹಾನಿಶ್ಚ ಕೇವಲಾ ॥4॥
ಈ ಸಾಂಖ್ಯಶಾಸ್ತ್ರದಲ್ಲಿ ಯಾವುದೇ ದೋಷಗಳು ಇರುವುದಿಲ್ಲ. ಗುಣಗಳಂತು ಬಹಳವಾಗಿವೆ. ದೋಷರಹಿತವಾಗಿವೆ.
ವ್ಯಾಖ್ಯಾನ ವಿಶೇಷ ಭಗವತ್ತತ್ತ್ವವನ್ನು ಯಥಾರ್ಥವಾಗಿ ತಿಳಿಸುವ ಶಾಸ್ತ್ರವೇ ಸಾಂಖ್ಯಶಾಸ್ತ್ರವೆನಿಸಿದೆ.

ಜ್ಞಾನೇನ ಪರಿಸಂಖ್ಯಾಯ ಸದೋಷಾನ್ ವಿಷಯಾನ್ನೃಪ |
ಮಾನುಷಾನ್ ದುರ್ಜಯಾನ್ ಕೃತ್ಸ್ನಾನ್ ಪೈಶಾಚಾನ್ ವಿಷಯಾಂಸ್ತಥಾ ||
ಜ್ಞಾನಿಗಳು ತಮ್ಮ ಜ್ಞಾನದ ಮೂಲಕ ಚೆನ್ನಾಗಿ ವಿಮರ್ಶೆ ಮಾಡಿ, ವಿಷಯಗಳೆಲ್ಲವೂ ದೋಷಯುಕ್ತವಾಗಿವೆ ಎಂಬುದನ್ನು ತಮ್ಮ ಜ್ಞಾನದಿಂದ ಚಿಂತಿಸಿ, ಮನುಷ್ಯರಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ತಿಳಿದುಕೊಂಡು, ಆ ರಾಗಾದಿ ವಿಷಯಗಳು ಸಾಮಾನ್ಯರಿಂದ ಗೆಲ್ಲಲು ಸಾಧ್ಯವಿಲ್ಲವೆಂದು ತಿಳಿದು, ಅದರಂತೆ ಪಿಶಾಚರಿಗೆ ಸಂಬಂಧಿಸಿದ ವಿಷಯಗಳನ್ನು ದುರ್ಜಯಗಳೆಂದೇ ತಿಳಿದಿರುತ್ತಾರೆ.
ರಾಕ್ಷಸಾನ್ ವಿಷಯಾನ್ ಜ್ಞಾತ್ವಾ ಯಕ್ಷಾಣಾಂ ವಿಷಯಾಂಸ್ತಥಾ |
ವಿಷಯಾನೌರಗಾನ್ ಜ್ಞಾತ್ವಾ ಗಾಂಧರ್ವವಿಷಯಾಂಸ್ತಥಾ ||6||
ಪಿತೄಣಾಂ ವಿಷಯಾನ್ ಜ್ಞಾತ್ವಾ ತಿರ್ಯಕ್ಷು ಚರತಾಂ ನೃಪ |
ಸುಪರ್ಣವಿಷಯಾನ್ ಜ್ಞಾತ್ವಾ ಮರುತಾಂ ವಿಷಯಾಂಸ್ತಥಾ ||7||
ರಾಜರ್ಷಿವಿಷಯಾನ್ ಜ್ಞಾತ್ವಾ ಬ್ರಹ್ಮರ್ಷಿವಿಷಯಾಂಸ್ತಥಾ |
ಆಸುರಾನ್ ವಿಷಯಾನ್ ಜ್ಞಾತ್ವಾ ವೈಶ್ವದೇವಾಂಸ್ತಥೈವ ಚ ||8||
ದೇವರ್ಷಿವಿಷಯಾನ್ ಜ್ಞಾತ್ವಾ ಯೋಗಾನಾಮಪಿ ಚೇಶ್ವರಾನ್ |
ವಿಷಯಾಂಶ್ಚ ಪ್ರಜೇಶಾನಾಂ ಬ್ರಹ್ಮಣೋ ವಿಷಯಾಂಸ್ತಥಾ ||9||
ಜ್ಞಾನಿಗಳು ಯಕ್ಷರಿಗೆ ಸಂಬಂಧಿಸಿದ ವಿಷಯಗಳನ್ನು, ಉರಗಗಳಿಗೆ ಸಂಬಂಧಿಸಿದ ವಿಷಯಗಳನ್ನು ತಿಳಿದಿರುತ್ತಾರೆ. ಗಂಧರ್ವರಿಗೆ ಸಂಬಂಧಿಸಿದ ವಿಷಯಗಳನ್ನು, ಪಿತೃಗಳಿಗೆ, ತಿರ್ಯಗ್ಯೋನಿಗಳಿಗೆ, ಗರುಡ ಪಕ್ಷಿಗಳಿಗೆ, ಮರುತ್ತುಗಳಿಗೆ, ರಾಜರ್ಷಿಗಳಿಗೆ, ಬ್ರಹ್ಮರ್ಷಿಗಳಿಗೆ, ಅಸುರರಿಗೆ, ವಿಶ್ವೇದೇವತೆಗಳಿಗೆ, ದೇವರ್ಷಿಗಳಿಗೆ, ಯೋಗಿಗಳಿಗೆ, ಪ್ರಜಾಪತಿಗಳಿಗೆ, ಬ್ರಹ್ಮನಿಗೆ, ಯಾವ ಯಾವ ವಿಷಯಗಳಲ್ಲಿ ಅಭಿಲಾಷೆ ಇದೆ ಎಂಬುದನ್ನು ತಿಳಿದುಕೊಂಡಿರುತ್ತಾರೆ.
ಆಯುಷಶ್ಚ ಪರಂ ಕಾಲಂ ಲೋಕೇ ವಿಜ್ಞಾಯ ತತ್ತ್ವತಃ |
ಸುಖಸ್ಯ ಚ ಪರಂ ತತ್ತ್ವಂ ವಿಜ್ಞಾಯ ವದತಾಂ ವರ ||10||
ಲೋಕದಲ್ಲಿ ಮನುಷ್ಯನಿಗೆ ಅಧಿಕವಾದ ಆಯುಷ್ಯ ಕಾಲವು ಎಷ್ಟೆಂಬುದನ್ನು ಯಥಾವತ್ತಾಗಿ ತಿಳಿದಿರುತ್ತಾರೆ. ಐಹಿಕ, ಆಮುಸ್ಮಿಕ, ಆಧ್ಯಾತ್ಮಿಕ ಸುಖಗಳ ತತ್ತ್ವಗಳನ್ನು ಚೆನ್ನಾಗಿ ತಿಳಿದಿರುತ್ತಾರೆ.
ಪ್ರಾಪ್ತೇ ಕಾಲೇ ಚ ಯದ್ದುಃಖಂ ಪತತಾಂ ವಿಷಯೈಷಿಣಾಮ್ |
ತಿರ್ಯಕ್ಷು ಪತತಾಂ ದುಃಖಂ ಪತತಾಂ ನರಕೇ ಚ ಯತ್ ||11||
ವಿಷಯಗಳನ್ನು ಬಯಸುವಂತಹ ವ್ಯಕ್ತಿಗಳಿಗೆ ಎಂತೆಂತಹ ದುಃಖವು ಸಂಭವಿಸುತ್ತದೆ ಎಂಬುದನ್ನು ತಿಳಿದುಕೊಂಡಿರುತ್ತಾರೆ. ಯಾವ ಪಾಪದಿಂದ ಪ್ರಾಣಿ ಯೋನಿಗಳಲ್ಲಿ ಜನ್ಮ ತಾಳುತ್ತಾರೆ? ಆ ಜನ್ಮದಲ್ಲಿರುವ ದುಃಖಗಳೇನು? ನರಕಕ್ಕೆ ಹೋಗುವವರ ದುಃಖವೇನು ಎಂಬುದನ್ನು ತಿಳಿದುಕೊಂಡಿರುತ್ತಾರೆ.
ಸ್ವರ್ಗಸ್ಯ ಚ ಗುಣಾನ್ ಕೃತ್ಸ್ನಾನ್ ದೋಷಾನ್ ಸರ್ವಾಂಶ್ಚ ಭಾರತ |
ವೇದವಾದೇ ಚ ಯೇ ದೋಷಾ ಗುಣಾ ಯೇ ಚಾಪಿ ವೈದಿಕಾಃ ||12||
ಸ್ವರ್ಗದಲ್ಲಿರುವ ಗುಣಗಳ ಬಗ್ಗೆ, ದೋಷಗಳ ಬಗ್ಗೆ ಸಮಗ್ರವಾದ ಮಾಹಿತಿಯನ್ನು ಹೊಂದಿರುತ್ತಾರೆ. ವೇದಗಳಲ್ಲಿನ ವೈದಿಕ ಕರ್ಮಗಳಲ್ಲಿರುವ ಗುಣ- ದೋಷಗಳನ್ನು ತಿಳಿದಿರುತ್ತಾರೆ.
ಜ್ಞಾನಯೋಗೇ ಚ ಯೇ ದೋಷಾ ಗುಣಾ ಯೋಗೇ ಚ ಯೇ ನೃಪ |
ಸಾಂಖ್ಯಜ್ಞಾನೇ ಚ ಯೇ ದೋಷಾಸ್ತಥೈವ ಚ ಗುಣಾ ನೃಪ ||13||
ಜ್ಞಾನಯೋಗದಲ್ಲಿ ಯಾವ ಗುಣ-ದೋಷಗಳಿವೆ ಎಂಬುದನ್ನು ಅರ್ಥ ಮಾಡಿಕೊಂಡಿರುತ್ತಾರೆ. ಇದರಂತೆ ಸಾಂಖ್ಯಜ್ಞಾನದಲ್ಲಿರುವ ಗುಣಗಳೇನು, ದೋಷಗಳೇನು ಎಂಬುದನ್ನು ತಿಳಿದುಕೊಂಡಿರುತ್ತಾರೆ.
ಸತ್ತ್ವಂ ದಶಗುಣಂ ಜ್ಞಾತ್ವಾ ರಜೋ ನವಗುಣಂ ತಥಾ |
ತಮಶ್ಚಾಷ್ಟಗುಣಂ ಜ್ಞಾತ್ವಾ ಬುದ್ಧಿಂ ಸಪ್ತಗುಣಾಂ ತಥಾ ||14||
ಅದರಂತೆ ಸತ್ತ್ವಗುಣದಲ್ಲಿರುವ ಹತ್ತು ಗುಣಗಳಲ್ಲಿ ಅಸಾಧಾರಣ ಗುಣವೆನಿಸಿದ ತತ್ತ್ವಜ್ಞಾನವು, ಆ ತತ್ತ್ವಜ್ಞಾನಕ್ಕೆ ಸಹಕಾರಿಯಾದ ಶಮ, ದಮ, ವಿಷಯ ಪದಾರ್ಥಗಳಿಂದ ಉಪಹತಿ, ದ್ವಂದ್ವ ಸಹಿಷ್ಣುತೆ, ಚಿತ್ತ ಸಮಾಧಾನ, ಗುರೂಪಸತ್ತಿ, ಶ್ರವಣ, ಮನನ, ಧ್ಯಾನ ಹೀಗೆ ಹತ್ತು ಗುಣಗಳ ಬಗ್ಗೆ ಸರಿಯಾದ ಜ್ಞಾನವನ್ನು ಹೊಂದಿರುತ್ತಾರೆ. ಜ್ಞಾನವೆಂಬ ಅಂಗಕ್ಕೆ ಅಂಗೀಭೂತವಾದ ಗುಣಗಳು ಶಮ-ದಮಾದಿಗಳು. ಇದರಂತೆ ರಜೋಗುಣದ ಅಸಾಧಾರಣ ಗುಣವು ಸಂಶಯವೆನಿಸಿದೆ. ಸಂಶಯಕ್ಕೆ ಉಪಯುಕ್ತವಾದ ಅಂಗವೆನಿಸಿದ ಗುಣಗಳು ಕೆಲವೊಮ್ಮೆ ಸಜ್ಜನರ ಸಹವಾಸ, ಕೆಲವೊಮ್ಮೆ ದುಷ್ಟರ ಸಹವಾಸ, ಕೆಲವೊಮ್ಮೆ ಸಚ್ಛಾಸ್ತ್ರ ಶ್ರವಣ, ಯಾವಾಗಲೋ ಒಮ್ಮೆ ದುಶ್ಶಾಸ್ತ್ರ ಶ್ರವಣ, ವಿಷಯ ಪದಾರ್ಥಗಳಲ್ಲಿ ಅಭಿಲಾಷೆ, ಧನದಲ್ಲಿ ಅತಿಯಾದ ಆಸಕ್ತಿ, ದಾರಾಪತ್ಯಾದಿಗಳಲ್ಲಿ ಲೋಲುಪತೆ - ಹೀಗೆ ಅಂಗಾಂಗಿ ಭಾವಗಳಿಂದ ಕೂಡಿದ ರಜೋಗುಣದ ಒಂಬತ್ತು ಗುಣಗಳನ್ನು ತಿಳಿದವರಾಗಿರುತ್ತಾರೆ. ಇದರಂತೆ ತಮೋಗುಣದ ಅಸಾಧಾರಣವಾದ ಗುಣವು ಮಿಥ್ಯಾಜ್ಞಾನವೆನಿಸಿದೆ. ಈ ಅಸಾಧಾರಣ ಗುಣವೆಂಬ ಅಂಗಿಗೆ ಅಂಗಭೂತವಾದ ಗುಣಗಳು ಏಳು. ವಿಷ್ಣುದ್ವೇಷ, ಅಸಜ್ಜನರ ಸೇವನೆ, ದುಶ್ಶಾಸ್ತ್ರ ಶ್ರವಣ, ಕ್ರೋಧ, ಪ್ರಮಾದ, ನಿದ್ರಾ, ಆಲಸ್ಯ ಎಂಬುದಾಗಿ. ಹೀಗೆ ಅಂಗಾಂಗಿಗಳಿಂದ ಕೂಡಿದ ತಮೋಗುಣದ ಎಂಟು ಗುಣಗಳನ್ನು ಜ್ಞಾನಿಗಳು ಅರ್ಥಮಾಡಿಕೊಂಡಿರುತ್ತಾರೆ. ಇದರಂತೆ ಬುದ್ಧಿಯ ಅಸಾಧಾರಣ ಗುಣವು ನಿಶ್ಚಯ ಜ್ಞಾನವು. ಅಸಾಧಾರಣ ಗುಣವೆನಿಸಿದ ನಿಶ್ಚಯ ಜ್ಞಾನವೆಂಬ ಅಂಗಿಗೆ ಅಂಗಭೂತವಾದ ಆರು ಇಂದ್ರಿಯಗಳಿಂದ ಹುಟ್ಟುವಂತಹ ಆರು ವಿಧವಾದ ಜ್ಞಾನವು ಸಾಧಾರಣ ಗುಣವೆನಿಸಿದೆ. ವಾಸ್ತವಿಕವಾಗಿ ಜ್ಞಾನವು ಮನಸ್ಸಿಗೆ ಸಂಬಂಧಿಸಿದುದೇ ಆಗಿದ್ದರೂ ಮನಸ್ಸು ವಿಷಯಗಳನ್ನು ಪರೀಕ್ಷಿಸಿ ನಿರ್ಣಯಿಸಲು ಅಸಮರ್ಥವಾದುದ- ರಿಂದ ಪರೀಕ್ಷಕವಾದ ಬುದ್ಧಿಯು ಆ

ಮನಸ್ಸಿನಲ್ಲಿರುವ ವಿಷಯಗಳನ್ನು ತಾನು ಗ್ರಹಿಸುತ್ತದೆ. ಆದ್ದರಿಂದ ಇಲ್ಲಿ ಏಳು ಗುಣಗಳೆಂದು ಹೇಳಲಾಗಿದೆ. ಒಟ್ಟು ಬುದ್ಧಿಯೂ ಸೇರಿ ಎಂಟು ಗುಣಗಳಾಗುತ್ತವೆ.

ಷಡ್ಗುಣಂ ಚ ನಭೋ ಜ್ಞಾತ್ವಾ ಮನಃ ಪಂಚಗುಣಂ ತಥಾ |
ಬುದ್ಧಿಂ ಚತುರ್ಗುಣಾಂ ಜ್ಞಾತ್ವಾ ತಮಶ್ಚ ತ್ರಿಗುಣಂ ಮಹತ್ ॥15॥

ಮನಸ್ಸಿನ ಅಸಾಧಾರಣ ಗುಣವು ಸ್ಮರಣೆ ಎನಿಸಿದೆ. ಪಂಚೇಂದ್ರಿಯಗಳಿಂದ ಹುಟ್ಟುವಂತಹ ಐದು ವಿಧವಾದ ಜ್ಞಾನವು ಸಾಧಾರಣ ಗುಣವೆನಿಸಿದೆ. ಪ್ರಳಯ ಕಾಲದಲ್ಲಿಯೂ ಮನಸ್ಸು ಶ್ರೋತ್ರಾದಿ ಇಂದ್ರಿಯಗಳಿಂದ ನಿವೃತ್ತಿಯನ್ನು ಹೊಂದುತ್ತದೆ. ಅವುಗಳಿಂದ ಹುಟ್ಟುವ ಜ್ಞಾನವು ನಿಂತು ಹೋಗುತ್ತದೆ. ಆದ್ದರಿಂದಲೇ ಬಾಹ್ಯ ವಿಷಯಗಳ ಅನುಸಂಧಾನವು ಮನಸ್ಸಿಗೆ ಇರುವುದಿಲ್ಲ. ತನ್ನಿಂದಲೇ ಹುಟ್ಟಿದ ಶ್ರುತಿಯ ಉಪರಮ, ತನ್ನಿಂದಲೇ ಆರಂಭವಾದ ಅವಯವಗಳ ಅಪಚಯ - ಹೀಗೆ ಐದು ಗುಣಗಳಿಂದ ಸಹಿತವಾಗಿ ಮನಸ್ಸೂ ಸೇರಿದಲ್ಲಿ ಆರು ಗುಣಗಳು ಮನಸ್ಸಿಗೆ ಸಂಬಂಧಿಸಿದವು ಎಂದು ಜ್ಞಾನಿಗಳು ತಿಳಿದಿರುತ್ತಾರೆ. ಬುದ್ಧಿಯು ಬಾಹ್ಯಜ್ಞಾನವನ್ನು ಅನುಸಂಧಾನ ಮಾಡುವ ಸ್ವಭಾವವುಳ್ಳದ್ದು. ಮನಸ್ಸಿನ ಜ್ಞಾನವನ್ನು ಅನುಸಂಧಾನ ಮಾಡುವ ಸ್ವಭಾವವುಳ್ಳದ್ದು. ಬುದ್ಧಿಯು ತನ್ನಲ್ಲಿ ಹುಟ್ಟುವ ಕ್ರಿಯೆಗಳನ್ನು ನಿಯಂತ್ರಿಸುವಂತಹದ್ದು. ಬುದ್ಧಿಯನ್ನು ಬೆಳೆಸುವ, ಅವಯವಗಳನ್ನು ನಾಶಗೊಳಿಸುವಂತಹ ಸ್ವಭಾವವುಳ್ಳದ್ದು ಎಂದು ನಾಲ್ಕು ಬುದ್ಧಿಯ ಗುಣವೆನಿಸಿವೆ. ತಮೋಗುಣಕ್ಕೆ ಸಂಬಂಧಿಸಿದ ಮಹತ್ವಪೂರ್ಣವಾದ ಮೂರು ಗುಣಗಳಿವೆ. ಬಾಹ್ಯ ಪದಾರ್ಥಗಳ ಜ್ಞಾನಕ್ಕೆ ಪ್ರತಿಬಂಧಕವನ್ನೊಡ್ಡದೆ ಬಾಹ್ಯ ಮಿಥ್ಯಾ ಜ್ಞಾನವನ್ನು ಹುಟ್ಟಿಸದೆ ತನ್ನ ಶಕ್ತಿಯನ್ನು ಕಳೆದುಕೊಳ್ಳುವಂತಹದ್ದು ಎಂಬುದಾಗಿ ತಮೋಗುಣದ ಮೂರು ಗುಣಗಳು.

ದ್ವಿಗುಣಂ ಚ ರಜೋ ಜ್ಞಾತ್ವಾ ಸತ್ತ್ವಮೇಕಗುಣಂ ಪುನಃ |
ಮಾರ್ಗಂ ವಿಜ್ಞಾಯ ತತ್ತ್ವೇನ ಪ್ರಲಯೇ ಪ್ರೇಕ್ಷಣಂ ತಥಾ ॥16॥

ರಜೋಗುಣಕ್ಕೆ ಸಂಬಂಧಿಸಿದ ಎರಡು ಗುಣಗಳನ್ನು ತಿಳಿದಿರುತ್ತಾರೆ. ತನ್ನಲ್ಲೇ ಹುಟ್ಟುವ ಸಂಶಯವನ್ನು ಸ್ವೀಕರಿಸದಿರುವುದು, ತನ್ನ ಶಕ್ತಿಯನ್ನು ಕಳೆದುಕೊಳ್ಳುವುದು ಎಂಬುದು ರಜೋಗುಣದ ಎರಡು ಗುಣಗಳು. ಸತ್ತ್ವಗುಣಕ್ಕೆ ಸಂಬಂಧಿಸಿದ ಒಂದು ಗುಣವನ್ನು ಅರಿತಿರುತ್ತಾರೆ. ಎಲ್ಲ ಕಾಲದ ಶಕ್ತಿಯನ್ನು ಹ್ರಾಸಗೊಳಿಸುವುದು ಎಂಬುದೇ ಸತ್ತ್ವಗುಣದ ಹ್ರಾಸವು ಎಂಬುದನ್ನು ಬಲ್ಲವರಾಗಿರುತ್ತಾರೆ. ಪ್ರಳಯ ಕಾಲದಲ್ಲಿಯೂ ಮುಖ್ಯಪ್ರಾಣನ ಮನಸ್ಸಿನಲ್ಲಿ ತತ್ತ್ವಜ್ಞಾನವು ಸ್ಥಿರವಾಗಿ ಪ್ರಕಾಶಮಾನವಾಗಿರುವುದರಿಂದ ಸತ್ತ್ವಗುಣವು ಬಾಹ್ಯವಾಗಿರುವ ಸಾರ್ವತ್ರಿಕ ಜ್ಞಾನವನ್ನು ನಾಶಪಡಿಸಿದರೂ ತನ್ನ ಮೂಲಭೂತವಾದ ಗುಣದ ಕ್ಷಯವನ್ನು ಹೊಂದಿರುವುದಿಲ್ಲ. ಸರ್ವಥಾ ಶಕ್ತಿ, ಹ್ರಾಸವೆಂಬುದು ಸತ್ತ್ವಗುಣಕ್ಕೆ ಇರುವುದಿಲ್ಲ. ಆದ್ದರಿಂದಲೇ ಇದನ್ನು ವ್ಯಾಸರು ಏಕಗುಣ ಎಂದು ಹೇಳಿದ್ದಾರೆ. ಪ್ರಳಯಕಾಲದಲ್ಲಿ ಜಗತ್ತೇ ನಾಶವಾಗುವುದರಿಂದ ಆ ಗುಣಗಳ ಮೂಲವೂ, ಸ್ವರೂಪವೂ ಹಾನಿಯಾಗುತ್ತದೆ. ಆ ಗುಣಗಳಿವೆ ಎಂದು ಹೇಳಲು ಕಾರಣವು ಬೇಕಾಗಿಲ್ಲ. ಆದ್ದರಿಂದ ರಜೋಗುಣಗಳು, ತಮೋಗುಣಗಳು ನಾಶವನ್ನು ಹೊಂದುತ್ತವೆ ಎಂದು ಪ್ರತ್ಯೇಕವಾಗಿ ಹೇಳಲು ಹೋಗಲಿಲ್ಲ. ಸತ್ತ್ವಗುಣವೊಂದು ಸ್ಥಿರವಾಗಿರುತ್ತದೆ. ಆದ್ದರಿಂದ ಇದನ್ನು ತಿಳಿಸಿದ್ದಾರೆ. ಮನಸ್ಸು, ಬುದ್ಧಿಗಳಿಗೆ ಮೂಲಕಾರಣವಾದ ಅಪಚಯವು ಉಂಟಾಗುವುದರಿಂದ ರಜಸ್ಸು, ತಮಸ್ಸುಗಳಿಗೆ ನಾಶವಾಗುತ್ತದೆ ಎಂದು ತಿಳಿಸಿದಂತಾಗಿದೆ. ಆದ್ದರಿಂದ ಪುನಃ ತಮಸ್ಸು, ರಜಸ್ಸುಗಳ ಮೂಲಸ್ವರೂಪವು ಹಾನಿಯಾಗುತ್ತದೆ ಎಂದು ಪ್ರತ್ಯೇಕವಾಗಿ ಹೇಳಲಿಲ್ಲ ಎಂದು ತಿಳಿಯಬೇಕು.

ಜ್ಞಾನವಿಜ್ಞಾನಸಂಪನ್ನಾಃ ಕಾರಣೈರ್ಭಾವಿತಾಃ ಶುಭೈಃ |
ಪ್ರಾಪ್ನುವಂತಿ ಶುಭಂ ಮೋಕ್ಷಂ ಸೂಕ್ಷ್ಮಾ ಇವ ನಭಃ ಪರಮ್ ॥17॥

ಯಾವ ಜ್ಞಾನಿಗಳು ಜ್ಞಾನ-ವಿಜ್ಞಾನಗಳಿಂದ ಸಂಪನ್ನರಾಗಿದ್ದಾರೋ ಅದಕ್ಕೆ ಸಂಬಂಧಿಸಿದ ಶುಭವಾದ ಹೇತುಗಳಿಂದ ಯುಕ್ತರಾಗಿರುತ್ತಾರೋ ಅಂತಹ ಸಜ್ಜನರು ಪರಮ ಮಂಗಳವಾದ ಮೋಕ್ಷವನ್ನು ಸೂಕ್ಷ್ಮವಾದ ತ್ರಸರೇಣುಗಳು ಅಥವಾ ಸೂಕ್ಷ್ಮವಾದ ವಾಯುವು ಆಕಾಶವನ್ನು ನಿತ್ಯ ಹೊಂದಿರುವಂತೆ ಮೋಕ್ಷವನ್ನು ನಿತ್ಯವೂ ಹೊಂದುತ್ತಾರೆ.

ರೂಪೇಣ ದೃಷ್ಟಿಂ ಸಂಯುಕ್ತಾಂ ಘ್ರಾಣಂ ಗಂಧಗುಣೇನ ಚ |
ಶಬ್ದೇ ಸಕ್ತಂ ತಥಾ ಶ್ರೋತ್ರಂ ಜಿಹ್ವಾಂ ರಸಗುಣೇಷು ಚ ॥18॥

ಸಾಂಖ್ಯಯೋಗಿಗಳು ಕಣ್ಣುಗಳು ರೂಪಗುಣದಿಂದ ಕೂಡಿದೆ ಎಂದು, ಮೂಗು ಗಂಧಗುಣದಿಂದ, ಕಿವಿಯು ಶಬ್ದ ಗುಣದಿಂದ, ನಾಲಿಗೆಯು ರಸಗುಣದಿಂದ ಕೂಡಿದೆ ಎಂದು ತಿಳಿದಿರುತ್ತಾರೆ.

ತನುಂ ಸ್ಪರ್ಶೇ ತಥಾ ಸಕ್ತಾಂ ವಾಯುಂ ನಭಸಿ ಚಾಶ್ರಿತಮ್ |
ಮೋಹಂ ತಮಸಿ ಸಂಸಕ್ತಂ ಲೋಭಮರ್ಥೇಷು ಸಂಶ್ರಿತಮ್ ॥19॥

ಶರೀರವು ಸ್ಪರ್ಶಗುಣದಿಂದ ಕೂಡಿದೆ ಎಂದು, ವಾಯುವು ಆಕಾಶವನ್ನು ಆಶ್ರಯಿಸಿದೆ ಎಂದು, ಮೋಹವು ತಮೋಗುಣವನ್ನು ಹೊಂದಿದೆ ಎಂದು, ಲೋಭವು ಇಂದ್ರಿಯಾರ್ಥಗಳಿಗೆ ಸೇರಿದ ಎಂದು ಸಾಂಖ್ಯರು ತಿಳಿದಿರುತ್ತಾರೆ.

ವಿಷ್ಣುಂ ಕ್ರಾಂತೇ ಬಲೇ ಶಕ್ರಂ ಕೋಷ್ಠೇ ಸಕ್ತಂ ತಥಾನಲಮ್ |
ಅಪ್ಸು ದೇವೀಂ ತಥಾ ಸಕ್ತಾಮಪಸ್ತೇಜಸಿ ಚಾಶ್ರಿತಾಃ ॥20॥

ಜೀವರ ಪಾದಗಳಲ್ಲಿ ವಿಷ್ಣುವೇ ಇದ್ದಾನೆಂದು, ಬಲದಲ್ಲಿ ಇಂದ್ರನನ್ನು, ಹೊಟ್ಟೆಯಲ್ಲಿ ಅಗ್ನಿಯನ್ನು, ನೀರಿನಲ್ಲಿ ಭೂದೇವಿಯನ್ನು, ನೀರು ತೇಜಸ್ಸಿನಲ್ಲಿ ಸೇರಿದೆ ಎಂಬುದನ್ನು ಸಾಂಖ್ಯ ಯೋಗಿಗಳು ತಿಳಿದಿರುತ್ತಾರೆ.

ತೇಜೋ ವಾಯೌ ತು ಸಂಸಕ್ತಂ ವಾಯುಂ ನಭಸಿ ಚಾಶ್ರಿತಮ್ |
ನಭೋ ಮಹತಿ ಸಂಯುಕ್ತಂ ಮಹದ್ ಬುದ್ಧೌ ಚ ಸಂಶ್ರಿತಮ್ ॥21॥

ತೇಜಸ್ಸು ವಾಯುವಿನಲ್ಲಿ ಸೇರಿದೆ ಎಂಬುದನ್ನು, ವಾಯುವು ಆಕಾಶವನ್ನು ಆಶ್ರಯಿಸಿದೆ, ಆಕಾಶವು ಮಹತ್ತತ್ತ್ವವನ್ನು ಆಶ್ರಯಿಸಿದೆ, ಮಹತ್ತತ್ತ್ವವು ಬುದ್ಧಿಯ ಅಧಿಷ್ಠಾನವನ್ನು ಹೊಂದಿದೆ ಎಂಬುದಾಗಿ ಸಾಂಖ್ಯರು ತಿಳಿದಿರುತ್ತಾರೆ.

ಬುದ್ಧಿಂ ತಮಸಿ ಸಂಸಕ್ತಾಂ ತಮೋ ರಜಸಿ ಚಾಶ್ರಿತಮ್ |

ರಜಃ ಸತ್ತ್ವೇ ತಥಾ ಸಕ್ತಂ ಸತ್ತ್ವಂ ಸಕ್ತಂ ತಥಾತ್ಮನಿ ॥22॥
ಬುದ್ಧಿಯು ತಮೋಗುಣದಲ್ಲಿ ಸೇರಿದೆ ಎಂಬುದನ್ನು, ತಮಸ್ಸು ರಜಸ್ಸಿನಲ್ಲಿ, ರಜಸ್ಸು ಸತ್ತ್ವದಲ್ಲಿ, ಸತ್ತ್ವವು ಜೀವಾತ್ಮನಲ್ಲಿ ಸೇರಿದೆ ಎಂಬುದನ್ನು ತಿಳಿದಿರುತ್ತಾರೆ.
ಸಕ್ತಮಾತ್ಮಾನಮೀಶೇ ಚ ದೇವೇ ನಾರಾಯಣೇ ತಥಾ |
ದೇವಂ ಮೋಕ್ಷೇ ಚ ಸಂಸಕ್ತಂ ಮೋಕ್ಷಂ ಸಕ್ತಂ ತು ನ ಕ್ವಚಿತ್ ॥23॥
ಜೀವಾತ್ಮನು ಈಶನಾದ ನಾರಾಯಣನನ್ನು ಆಶ್ರಯಿಸಿದ್ದಾನೆ ಎಂಬುದನ್ನು, ನಾರಾಯಣನು ಮೋಕ್ಷದಲ್ಲಿ ಇದ್ದಾನೆ ಎಂಬುದನ್ನು, ಮೋಕ್ಷವು ಯಾರೊಂದಿಗೂ ಇಲ್ಲವೆಂಬುದನ್ನು, ನಾಶವಿಲ್ಲದೆ ಇರುವುದು, ಯಾರನ್ನೂ ಆಶ್ರಯಿಸದೆ ಇರುವುದು ಎಂಬುದನ್ನು ಸಾಂಖ್ಯರು ತಿಳಿದಿರುತ್ತಾರೆ.
ಜ್ಞಾತ್ವಾ ಸತ್ತ್ವಯುತಂ ದೇಹಂ ವೃತಂ ಷೋಡಶಭಿರ್ಗುಣೈಃ |
ಸ್ವಭಾವಂ ಚೇತನಾಂ ಚೈವ ಜ್ಞಾತ್ವಾ ವೈ ದೇಹಮಾಶ್ರಿತೇ ॥24॥
ಸತ್ತ್ವಗುಣಗಳಿಂದ ಕೂಡಿದ ದೇಹವನ್ನು ದಶೇಂದ್ರಿಯಗಳು, ಮನಸ್ಸು, ಪಂಚ ಪ್ರಾಣಗಳು - ಹೀಗೆ ಹದಿನಾರು ಕಲೆಗಳಿಂದ ಕೂಡಿದ ದೇಹವನ್ನು ಸಾಂಖ್ಯ ಯೋಗಿಗಳು ತಿಳಿದಿರುತ್ತಾರೆ. ಸ್ವಭಾವ ಮತ್ತು ಚೇತನಗಳು ದೇಹವನ್ನು ಆಶ್ರಯಿಸಿಕೊಂಡಿವೆ ಎಂಬುದನ್ನು ತಿಳಿದಿರುತ್ತಾರೆ.
ಮಧ್ಯಸ್ಥಮೇಕಮಾತ್ಮಾನಂ ಪಾಪಂ ಯಸ್ಮಿನ್ನ ವಿದ್ಯತೇ |
ದ್ವಿತೀಯಂ ಕರ್ಮ ವಿಜ್ಞಾಯ ನೃಪತೇ ವಿಷಯೈಷಿಣಾಮ್ ॥25॥
ಪಾಪರಹಿತನಾದ ಜೀವಾತ್ಮನು ಹೃದಯ ಕಮಲದ ಮಧ್ಯದಲ್ಲಿ ಇದ್ದಾನೆಂದು, ವಿಷಯ ಸುಖಗಳನ್ನು ಇಷ್ಟಪಡುವ ಮನುಷ್ಯನ ಯಾವ ಕರ್ಮವಿದೆಯೋ ಆ ಕರ್ಮವು ಆತ್ಮನಿಗಿಂತ ಅತಿರಿಕ್ತವಾಗಿದೆ ಎಂಬುದನ್ನು ಸಾಂಖ್ಯಯೋಗಿಗಳು ತಿಳಿದಿರುತ್ತಾರೆ.
ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ಸರ್ವಾನಾತ್ಮನಿ ಸಂಶ್ರಿತಾನ್ |
ಪ್ರಾಣಾಪಾನೌ ಸಮಾನಂ ಚ ವ್ಯಾನೋದಾನೌ ಚ ತತ್ತ್ವತಃ ॥26॥
ಇಂದ್ರಿಯಗಳು, ಇಂದ್ರಿಯಾರ್ಥಗಳು - ಈ ಎಲ್ಲವೂ ಭಗವಂತನನ್ನೇ ಆಶ್ರಯಿಸಿವೆ ಎಂಬುದನ್ನು, ಪ್ರಾಣ, ಅಪಾನ, ಸಮಾನ, ವ್ಯಾನ, ಉದಾನ ಎಂಬ ಐದು ಪ್ರಾಣಗಳನ್ನು ಸಾಂಖ್ಯಯೋಗಿಯು ತಿಳಿದಿರುತ್ತಾನೆ.
ಅವಾಕ್ಚೈವಾನಿಲಂ ಜ್ಞಾತ್ವಾ ಪ್ರವಹಂ ಚಾನಿಲಂ ಪುನಃ |
ಸಪ್ತ ವಾತಾಂಸ್ತಥಾ ಶೇಷಾನ್ ಸಪ್ತಧಾ ವಿಧಿವತ್ ಪುನಃ ॥27॥
ಅಧೋಮುಖವಾಗಿ ಸಂಚರಿಸುವ ವಾಯುವನ್ನು, ಊರ್ಧ್ವಮುಖವಾಗಿ ಹರಿಯುವ ಏಳನೆಯ ಪ್ರವಹ ಎಂಬ ವಾಯುವನ್ನು ಯಥಾರ್ಥವಾಗಿ ತಿಳಿದಿರುತ್ತಾರೆ. ಹೀಗೆ ಏಳು ವಾಯುಗಳನ್ನು ತಿಳಿದ ಬಳಿಕ ಪುನಃ ಅವುಗಳಲ್ಲಿರುವ ಏಳೇಳು ಪ್ರಭೇದವನ್ನು ವಿಧಿವತ್ತಾಗಿ ತಿಳಿದಿರುತ್ತಾರೆ. ಒಟ್ಟಿನಲ್ಲಿ ವಾಯುವಿನ ನಲವತ್ತೊಂಬತ್ತು ದೇಹದಲ್ಲಿರುವ ಪ್ರಭೇದಗಳನ್ನು ಸಾಂಖ್ಯರು ತಿಳಿದಿರುತ್ತಾರೆ.
ಪ್ರಜಾಪತೀನೃಷೀಂಶ್ಚೈವ ಮಾರ್ಗಾಂಶ್ಚ ಸುಬಹೂನ್ ವರಾನ್ |
ಸಪ್ತರ್ಷೀಂಶ್ಚ ಬಹೂನ್ ಜ್ಞಾತ್ವಾ ರಾಜರ್ಷೀಂಶ್ಚ ಪರಂತಪ ॥28॥
ಅದರಂತೆ ಈ ಸಾಂಖ್ಯ ಯೋಗಿಗಳು ಅನೇಕ ಪ್ರಜಾಪತಿಗಳನ್ನು, ಅನೇಕ ಋಷಿಗಳನ್ನು, ಅವರ ಬಳಿ ಸಾಗಬೇಕಾದ ಶ್ರೇಷ್ಠವಾದ ಅನೇಕ ಮಾರ್ಗಗಳನ್ನು ಕಂಡುಕೊಂಡಿದ್ದಾರೆ.
ಸುರರ್ಷೀನ್ಮಹತಶ್ಚಾನ್ಯಾನ್ಮಹರ್ಷೀನ್ ಸೂರ್ಯಸನ್ನಿಭಾನ್ |
ಐಶ್ವರ್ಯಾಚ್ಚ್ಯಾವಿತಾನ್ ಜ್ಞಾತ್ವಾ ಕಾಲೇನ ಮಹತಾ ನೃಪ ॥29॥
ಸಪ್ತರ್ಷಿಗಳನ್ನು, ಬಹುಸಂಖ್ಯಾತರಾದ ರಾಜರ್ಷಿಗಳನ್ನು, ದೇವರ್ಷಿಗಳನ್ನು, ಸೂರ್ಯ ಪ್ರಕಾಶ ಸದೃಶರಾದ ಬ್ರಹ್ಮರ್ಷಿಗಳನ್ನು ಸಾಂಖ್ಯಯೋಗಿಗಳು ತಿಳಿದಿರುತ್ತಾರೆ. ಅಂತಹ ಶ್ರೇಷ್ಠವಾದ ಲೋಕಗಳಿಗೆ ಹೋದವರೆಲ್ಲರೂ ಬಹಳ ಕಾಲದ ಬಳಿಕ ಅಲ್ಲಿನ ಸಂಪತ್ತಿನಿಂದ ಭ್ರಷ್ಟರಾದುದನ್ನು ನೋಡಿರುತ್ತಾರೆ.
ಮಹತಾಂ ಭೂತಸಂಘಾನಾಂ ಶ್ರುತ್ವಾ ನಾಶಂ ಚ ಪಾರ್ಥಿವ |
ಗತಿಂ ಚಾಪ್ಯಶುಭಾಂ ಜ್ಞಾತ್ವಾ ನೃಪತೇ ಪಾಪಕರ್ಮಣಾಮ್ ॥30॥
ಈ ದೊಡ್ಡ ದೊಡ್ಡ ಪ್ರಾಣಿ ಸಮೂಹವು ಒಂದು ಬಾರಿ ಸಂಪೂರ್ಣವಾಗಿ ನಾಶವಾಗುತ್ತದೆ ಎಂಬುದನ್ನು ತಿಳಿದಿರುತ್ತಾರೆ. ಪಾಪಕರ್ಮಿಗಳು ಹೊಂದುವ ದುರ್ಗತಿಯನ್ನು ಅವರು ತಿಳಿದಿರುತ್ತಾರೆ.
ವೈತರಣ್ಯಾಂ ಚ ಯದ್ದುಃಖಂ ಪತಿತಾನಾಂ ಯಮಕ್ಷಯೇ |
ಯೋನೀಷು ಚ ವಿಚಿತ್ರಾಸು ಸಂಸಾರಾನಶುಭಾಂಸ್ತಥಾ ॥31॥
ವೈತರಣಿ ನದಿಯಲ್ಲಿ ಬಿದ್ದಾಗ ಅವರು ಅನುಭವಿಸುವ ದುಃಖವನ್ನು, ಯಮಲೋಕದಲ್ಲಿ ಅನುಭವಿಸುವ ಚಿತ್ರವಿಚಿತ್ರವಾದ ಶಿಕ್ಷೆಗಳನ್ನು, ವಿಚಿತ್ರ ಯೋನಿಗಳಲ್ಲಿ ಜನ್ಮವನ್ನು ಪಡೆದು ಅಶುಭವಾದ ಸಂಸಾರವನ್ನು ಹೇಗೆ ಅನುಭವಿಸುತ್ತಾರೆ ಎಂಬುದನ್ನು ಸಾಂಖ್ಯಯೋಗಿಗಳು ತಿಳಿದಿರುತ್ತಾರೆ.
ಜಠರೇ ಚಾಶುಭೇ ವಾಸಂ ಶೋಣಿತೋದಕಭಾಜನೇ |
ಶ್ಲೇಷ್ಮಮೂತ್ರಪುರೀಷೇ ಚ ತೀವ್ರಗಂಧಸಮನ್ವಿತೇ ॥32॥
ಶುಕ್ರಶೋಣಿತಸಂಘಾತೇ ಮಜ್ಜಾಸ್ನಾಯುಪರಿಗ್ರಹೇ |
ಸಿರಾಶತಸಮಾಕೀರ್ಣೇ ನವದ್ವಾರೇ ಪುರೇಽಶುಚೌ ॥33॥
ವಿಜ್ಞಾಯಾಹಿತಮಾತ್ಮಾನಂ ಯೋಗಾಂಶ್ಚ ವಿವಿಧಾನ್ನೃಪ |
ತಾಮಸಾನಾಂ ಚ ಜಂತೂನಾಂ ರಮಣೀಯಾವೃತಾತ್ಮನಾಮ್ ॥34॥

ಸಾತಿತ್ವಕಾನಾಂ ಚ ಜನ್ತೂನಾಂ ಕುತ್ಸಿತಂ ಭರತರ್ಷಭ |
ಗರ್ಹಿತಂ ಮಹತಾಮರ್ಥೇ ಸಾಂಖ್ಯಾನಾಂ ವಿದಿತಾತ್ಮನಾಮ್ ॥35॥
ಜೀವನು ಕಫ, ಮೂತ್ರ, ಮಲಗಳಿಂದ ಕೂಡಿದ, ತೀಕ್ಷ್ಣವಾದ ವಾಸನೆಯಿಂದ ಕೂಡಿರುವ, ರೇತಸ್ಸು-ರಕ್ತಗಳ ಸಮಾವೇಶವಿರುವ, ಮಜ್ಜೆ-ಸ್ನಾಯುಗಳ ಸಂಬಂಧವಿರುವ, ನೂರಾರು ನರಗಳಿಂದ ವ್ಯಾಪಕವಾಗಿರುವ, ಒಂಬತ್ತು ಬಾಗಿಲುಳ್ಳ, ಅಶುಚಿಯಾದ ಶರೀರವೆಂಬ ಪಟ್ಟಣದಲ್ಲಿ ವಾಸಿಸುವ ರೀತಿಯನ್ನು, ರಕ್ತ-ಮೂತ್ರಗಳ ಪಾತ್ರೆಯಂತಿರುವ ಅಪವಿತ್ರವಾದ ಗರ್ಭಚೀಲದಲ್ಲಿ ವಾಸ ಮಾಡಬೇಕಾದ ಸ್ಥಿತಿಯನ್ನು ಸಾಂಖ್ಯ ಯೋಗಿಗಳು ತಿಳಿದಿದ್ದು, ಜೀವನಿಗೆ ಅತ್ಯಂತ ಹಿತಚಿಂತಕನಾದ ಪರಮಾತ್ಮನನ್ನು, ಅವನನ್ನು ತಿಳಿಯಲು ಇರುವ ನಾನಾ ಪ್ರಕಾರವಾದ ಉಪಾಯಗಳನ್ನು ಸಾಂಖ್ಯಯೋಗಿಗಳು ಚೆನ್ನಾಗಿ ತಿಳಿದಿರುತ್ತಾರೆ. ಆತ್ಮಜ್ಞಾನಿಗಳಾದ ಸಾಂಖ್ಯಯೋಗಿಗಳು ತಾಮಸ-ರಾಜಸ- ಸಾತ್ವಿಕ ಜೀವರ ಮೋಕ್ಷವಿರೋಧಿಯಾದ, ಕುತ್ಸಿತವಾದ ಯಾವ ಯಾವ ವ್ಯವಹಾರಗಳಿವೆಯೋ ಅವೆಲ್ಲವನ್ನೂ ತಿಳಿದಿರುತ್ತಾರೆ.
ಉಪಪ್ಲವಾಂಸ್ತಥಾ ಘೋರಾನ್ ಶಶಿನಸ್ತೇಜಸಸ್ತಥಾ |
ತಾರಾಣಾಂ ಪತನಂ ದೃಷ್ಟ್ವಾ ನಕ್ಷತ್ರಾಣಾಂ ಚ ಪರ್ಯಯಮ್ ॥36॥
ಘೋರವಾದ ಉತ್ಪಾತಗಳು, ಚಂದ್ರಗ್ರಹಣ, ಸೂರ್ಯಗ್ರಹಣ, ನಕ್ಷತ್ರ ಪತನ, ನಕ್ಷತ್ರಗಳ ವಕ್ರಗತಿ ಇವುಗಳನ್ನು ಚೆನ್ನಾಗಿ ತಿಳಿದಿರುತ್ತಾರೆ.
ದ್ವಂದ್ವಾನಾಂ ವಿಪ್ರಯೋಗಂ ಚ ವಿಜ್ಞಾಯ ಕೃಪಣಂ ನೃಪ |
ಅನ್ಯೋನ್ಯಭಕ್ಷಣಂ ದೃಷ್ಟ್ವಾ ಭೂತಾನಾಮಪಿ ಚಾಶುಭಮ್ ॥37॥
ಪರಸ್ಪರ ಸಂಬಂಧವನ್ನು ಹೊಂದಿದ ಮನುಷ್ಯ ಜೀವರ ವಿಯೋಗಗಳನ್ನು, ಇವುಗಳಿಂದ ಹೊಂದುವ ಕಷ್ಟಗಳನ್ನು ಸಾಂಖ್ಯಯೋಗಿಗಳು ತಿಳಿದಿರುತ್ತಾರೆ. ಪ್ರಪಂಚದಲ್ಲಿ ಒಂದು ಪ್ರಾಣಿ ಮತ್ತೊಂದು ಪ್ರಾಣಿಯನ್ನು ಹೇಗೆ ತಿನ್ನುತ್ತದೆ ಎಂಬ ಅಶುಭ ಅವಸ್ಥೆಯನ್ನು ತಿಳಿದಿರುತ್ತಾರೆ.
ಬಾಲ್ಯೇ ಮೋಹಂ ಚ ವಿಜ್ಞಾಯ ಕ್ಷಯಂ ದೇಹಸ್ಯ ಚಾಶುಭಮ್ |
ರಾಗೇ ಮೋಹೇ ಚ ಸಂಪ್ರಾಪ್ತೇ ಕ್ವಚಿತ್ ಸತ್ತ್ವಂ ಸಮಾಶ್ರಿತಮ್ ॥
ಮನುಷ್ಯರು ಬಾಲ್ಯದಲ್ಲಿ ಮೋಹವನ್ನು ಹೊಂದುತ್ತಾರೆ ಎಂಬುದನ್ನು ತಿಳಿದು, ವೃದ್ಧಾವಸ್ಥೆಯಲ್ಲಿ ಅಶುಭವಾದ ದೇಹದ ಕ್ಷಯವನ್ನು ಗಮನಿಸುತ್ತಾ, ರಾಗ- ಮೋಹಗಳೆರಡು ಒದಗಿ ಬರುತ್ತಿರಲು ಕೆಲವರು ಸತ್ತ್ವಗುಣವನ್ನು ಆಶ್ರಯಿಸುತ್ತಾರೆ ಎಂಬುದನ್ನು ತಿಳಿದಿರುತ್ತಾರೆ.
ಸಹಸ್ರೇಷು ನರಃ ಕಶ್ಚಿನ್ಮೋಕ್ಷಬುದ್ಧಿಂ ಸಮಾಶ್ರಿತಃ |
ದುರ್ಲಭತ್ವಂ ಚ ಮೋಕ್ಷಸ್ಯ ವಿಜ್ಞಾಯ ಶ್ರುತಿಪೂರ್ವಕಮ್ ॥39॥
ಸಾವಿರ ಜನರಲ್ಲಿ ಒಬ್ಬ ಮನುಷ್ಯನು ಮೋಕ್ಷದ ಬುದ್ಧಿಯನ್ನು ಹೊಂದಿರುತ್ತಾನೆ. ದುರ್ಲಭವಾದ ಮೋಕ್ಷವನ್ನು ಶ್ರುತಿ ಪೂರ್ವಕವಾಗಿ ಚೆನ್ನಾಗಿ ತಿಳಿದು ಈ ಜನ ಸಮುದಾಯದಲ್ಲಿ ಒಬ್ಬನು ಪ್ರಯತ್ನಿಸುತ್ತಾನೆ ಎಂಬುದನ್ನು ತಿಳಿದಿರುತ್ತಾರೆ.
ಬಹುಮಾನಮಲಬ್ಧೇಷು ಲಬ್ಧೇ ಮಧ್ಯಸ್ಥತಾಂ ಪುನಃ |
ವಿಷಯಾಣಾಂ ಚ ದೌರಾತ್ಮ್ಯಂ ವಿಜ್ಞಾಯ ನೃಪತೇ ಪುನಃ ॥40॥
ರಾಜನೇ, ಮೋಕ್ಷವು ದುರ್ಲಭವಾದುದು ಎಂಬುದನ್ನು ತಿಳಿದು, ದುರ್ಲಭವಾದ ಮೋಕ್ಷದ ವಿಷಯದಲ್ಲಿಯೇ ಆಸಕ್ತಿಯನ್ನು ಹೊಂದಿರುತ್ತಾರೆ. ವಿಷಯಗಳಲ್ಲಿರುವಂತಹ ದೌಷ್ಟ್ಯವನ್ನು ಪುನಃ ಪುನಃ ತಿಳಿದಿರುತ್ತಾರೆ.
ಗತಾಸೂನಾಂ ಚ ಕೌಂತೇಯ ದೇಹಾನ್ ದೃಷ್ಟ್ವಾ ತಥಾಶುಭಾನ್ |
ವಾಸಂ ಕುಲೇಷು ಜನ್ತೂನಾಂ ದುಃಖಂ ವಿಜ್ಞಾಯ ಭಾರತ ॥41॥
ಪ್ರಾಣವನ್ನು ಬಿಟ್ಟವರ ದೇಹಗಳನ್ನು ಗಮನಿಸಿ ಅವುಗಳನ್ನು ಅಶುಭವೆಂದು ತಿಳಿದಿರುತ್ತಾರೆ. ಮನುಷ್ಯಕುಲದ ವಾಸವೇ ದುಃಖದಾಯಕ ಎಂಬುದನ್ನು ಸಾಂಖ್ಯರು ತಿಳಿದುಕೊಂಡಿರುತ್ತಾರೆ.
ಬ್ರಹ್ಮಘ್ನಾನಾಂ ಗತಿಂ ಜ್ಞಾತ್ವಾ ಪತಿತಾನಾಂ ಸುದಾರುಣಾಮ್ |
ಸುರಾಪಾನೇ ಚ ಸಕ್ತಾನಾಂ ಬ್ರಾಹ್ಮಣಾನಾಂ ದುರಾತ್ಮನಾಮ್ |
ಗುರುದಾರಪ್ರಸಕ್ತಾನಾಂ ಗತಿಂ ವಿಜ್ಞಾಯ ಚಾಶುಭಾಮ್ ॥42॥
ಬ್ರಹ್ಮಹತ್ಯೆಯನ್ನು ಮಾಡಿ ಪತಿತರಿಗಾಗುವವರ ಭಯಂಕರ ಶಿಕ್ಷೆಗಳನ್ನು, ಸುರಾಪಾನದಲ್ಲಿ ಆಸಕ್ತರಾದವರಿಗೆ, ದುರಾತ್ಮರಾದ ಬ್ರಾಹ್ಮಣರಿಗೆ ಆಗುವ ಶಿಕ್ಷೆಗಳನ್ನು, ಗುರುಪತ್ನಿಯ ಗಮನದಿಂದಾಗುವ ಅಶುಭ ಗತಿಗಳನ್ನು ಚೆನ್ನಾಗಿ ತಿಳಿದವರಾಗಿರುತ್ತಾರೆ.
ಜನನೀಷು ಚ ವರ್ತಂತೇ ಯೇ ನ ಸಮ್ಯಗ್ಯುಧಿಷ್ಠಿರ |
ಸದೇವಕೇಷು ಲೋಕೇಷು ಯೇ ನ ವರ್ತಂತಿ ಮಾನವಾಃ ॥43॥
ತೇನ ಜ್ಞಾನೇನ ವಿಜ್ಞಾಯ ಗತಿಂ ಚಾಶುಭಕರ್ಮಣಾಮ್ |
ತಿರ್ಯಗ್ಯೋನಿಗತಾನಾಂ ಚ ವಿಜ್ಞಾಯ ಗತಯಃ ಪೃಥಕ್ ॥44॥
ಯುಧಿಷ್ಠಿರನೇ, ಯಾರು ತಮ್ಮ ತಂದೆ-ತಾಯಂದಿರ ವಿಷಯದಲ್ಲಿ ಸರಿಯಾಗಿ ವರ್ತಿಸುವುದಿಲ್ಲವೋ, ದೇವತೆಗಳ ವಿಷಯದಲ್ಲಿ ಯಾರು ಸರಿಯಾಗಿ ನಡೆದು ಕೊಳ್ಳುವುದಿಲ್ಲವೋ, ಲೋಕದ ಜನರ ವಿಷಯದಲ್ಲಿ ಯಾರು ಸರಿಯಾಗಿ ವರ್ತಿಸುವುದಿಲ್ಲವೋ ಅಂತಹ ಪಾಪಕರ್ಮಿಗಳಿಗೆ ಆಗುವ ದುರ್ಗತಿಗಳನ್ನು, ಪಶು- ಪಕ್ಷಿಗಳ ತಿರ್ಯಗ್ಯೋನಿಗಳ ವಿಭಿನ್ನ ದುಃಖಗಳನ್ನು, ಗತಿಗಳನ್ನು ಅರಿತ ಸಾಂಖ್ಯ ಯೋಗಿಗಳು ಮೋಕ್ಷ ಮಾರ್ಗವನ್ನೇ ಅವಲಂಬಿಸುತ್ತಾರೆ.
ವೇದವಾದಾಂಸ್ತಥಾ ಚಿತ್ರಾನೃತೂನಾಂ ಪರ್ಯಯಾಂಸ್ತಥಾ |
ಕ್ಷಯಂ ಸಂವತ್ಸರಾಣಾಂ ಚ ಮಾಸಾನಾಂ ಪ್ರಕ್ಷಯಂ ತಥಾ ॥45॥
ವೇದವಾದಗಳನ್ನು, ಬಗೆ ಬಗೆಯಾದ ಋತುಗಳನ್ನು, ಪರಿವರ್ತನೆಯನ್ನು, ಅವುಗಳ ನಾಶಗಳನ್ನು, ಸಂವತ್ಸರಗಳನ್ನು, ಮಾಸಗಳನ್ನು, ಅವುಗಳ ನಾಶಗಳನ್ನು ತಿಳಿದವರಾಗಿರುತ್ತಾರೆ.

ಪಕ್ಷಕ್ಷಯಂ ತಥಾ ದೃಷ್ಟ್ವಾ ದಿವಸಾನಾಂ ಚ ಸಂಕ್ಷಯಮ್ |
ಕ್ಷಯಂ ವೃದ್ಧಿಂ ಚ ಚಂದ್ರಸ್ಯ ದೃಷ್ಟ್ವಾ ಪ್ರತ್ಯಕ್ಷತಸ್ತಥಾ ॥46॥
ಪಕ್ಷಗಳ ಕ್ಷಯವನ್ನು ವೃದ್ಧಿಯನ್ನು, ದಿವಸಗಳ ಕ್ಷಯವನ್ನು ವೃದ್ಧಿಯನ್ನು, ಚಂದ್ರನ ವೃದ್ಧಿ-ಕ್ಷಯಗಳನ್ನು ಪ್ರತ್ಯಕ್ಷವಾಗಿ ನೋಡುತ್ತಿರುತ್ತಾರೆ.
ವೃದ್ಧಿಂ ದೃಷ್ಟ್ವಾ ಸಮುದ್ರಾಣಾಂ ಕ್ಷಯಂ ತೇಷಾಂ ತಥಾ ಪುನಃ |
ಕ್ಷಯಂ ಧನಾನಾಂ ಚ ತಥಾ ಪುನರ್ವೃದ್ಧಿಂ ತಥೈವ ಚ ॥47॥
ಸಮುದ್ರಗಳಲ್ಲಾಗುವ ಏರುಪೇರುಗಳನ್ನು, ಐಶ್ವರ್ಯದಲ್ಲಿ ಉಂಟಾಗುವ ವೃದ್ಧಿ- ಕ್ಷಯಗಳನ್ನು ಪ್ರತ್ಯಕ್ಷವಾಗಿ ನೋಡಿ ಇವುಗಳು ಅಸ್ಥಿರವೆಂದು ನಿಶ್ಚಯ ಮಾಡಿಕೊಳ್ಳುತ್ತಾರೆ.
ಸಂಯೋಗಾನಾಂ ಕ್ಷಯಂ ದೃಷ್ಟ್ವಾ ಯುಗಾನಾಂ ಚ ವಿಶೇಷತಃ |
ಕ್ಷಯಂ ಚ ದೃಷ್ಟ್ವಾ ಶೈಲಾನಾಂ ಕ್ಷಯಂ ಚ ಸರಿತಾಂ ತಥಾ ॥48॥
ವರ್ಣಾನಾಂ ಚ ಕ್ಷಯಂ ದೃಷ್ಟ್ವಾ ಕ್ಷಯಾಂತಂ ಚ ಪುನಃ ಪುನಃ |
ಜರಾಮೃತ್ಯುಂ ತಥಾ ಜನ್ಮ ದೃಷ್ಟ್ವಾ ದುಃಖಾನಿ ಚೈವ ಹ ॥49॥
ಬಂಧು-ಮಿತ್ರರ ಸಂಯೋಗವು, ಯುಗಗಳ ಕ್ಷಯವು, ಪರ್ವತಗಳ ಕ್ಷಯವು, ನದಿಗಳ ಕ್ಷಯ, ವರ್ಣಗಳ ಕ್ಷಯ, ಮುಪ್ಪು-ಮೃತ್ಯು-ಜನ್ಮಗಳು ಎಲ್ಲ ಜೀವರಿಗೂ ದುಃಖದಾಯಕ ಎಂಬುದನ್ನು, ಎಲ್ಲವೂ ನಾಶ ಹೊಂದುತ್ತದೆ ಎಂಬುದನ್ನು ಪುನಃ ಪುನಃ ನೋಡುತ್ತಾ ಶಾಶ್ವತವಾದ ಸನಾತನವಾದ ಮೋಕ್ಷಮಾರ್ಗವನ್ನೇ ಅವಲಂಬಿಸುತ್ತಾರೆ.
ದೇಹದೋಷಾಂಸ್ತಥಾ ಜ್ಞಾತ್ವಾ ತೇಷಾಂ ದುಃಖಂ ಚ ತತ್ತ್ವತಃ |
ದೇಹವಿಕ್ಲವತಾಂ ಚೈವ ಸಮ್ಯಗ್ ವಿಜ್ಞಾಯ ಭಾರತ॥50॥
ಮನುಷ್ಯ ದೇಹದಲ್ಲಿರುವ ದೋಷಗಳನ್ನು, ಅನುಭವಿಸ ಬೇಕಾದ ದುಃಖಗಳನ್ನು, ಶರೀರದ ವ್ಯಾಕುಲತೆಯನ್ನು ಚೆನ್ನಾಗಿ ತಿಳಿದು ಸಾಂಖ್ಯರು ದೇಹಾಭಿಮಾನವನ್ನೇ ತೊರೆಯುತ್ತಾರೆ.
ಆತ್ಮದೋಷಾಂಶ್ಚ ವಿಜ್ಞಾಯ ಸರ್ವಾನಾತ್ಮನಿ ಸಂಶ್ರಿತಾನ್ |
ಸ್ವದೇಹಾದುತ್ಥಿತಾನ್ ಗಂಧಾಂಸ್ತಥಾ ವಿಜ್ಞಾಯ ಚಾಶುಭಾನ್ ॥ 51॥
ಜೀವನಲ್ಲಿರುವ ದೋಷಗಳನ್ನು, ಎಲ್ಲ ಜೀವರು ಪರಮಾತ್ಮನನ್ನು ಆಶ್ರಯಿಸಿದ್ದಾರೆಂಬುದನ್ನು, ತನ್ನ ದೇಹದಲ್ಲಿ ಉತ್ಪನ್ನವಾಗುವ ದುರ್ಗಂಧಗಳನ್ನು, ಅಶುಭವಾದ ಚೇಷ್ಟೆಗಳನ್ನು ಚೆನ್ನಾಗಿ ತಿಳಿದು ವಿರಕ್ತರಾಗಿರುತ್ತಾರೆ.
ಯುಧಿಷ್ಠಿರಃ
ಕಾನ್ ಸ್ವಗಾತ್ರೋದ್ಭವಾನ್ ದೋಷಾನ್ ಪಶ್ಯಸ್ಯಮಿತವಿಕ್ರಮ |
ಏತನ್ಮೇ ಸಂಶಯಂ ಕೃತ್ಸ್ನಂ ವಕ್ತುಮರ್ಹಸಿ ತತ್ತ್ವತಃ ॥52॥
ಯುಧಿಷ್ಠಿರ ಅಮಿತ ಪರಾಕ್ರಮಿಯಾದ ಭೀಷ್ಮನೇ, ಶರೀರದಲ್ಲಿ ಯಾವ ವಿಧವಾದ ದೋಷಗಳು ಹುಟ್ಟುತ್ತವೆ ಎಂಬುದನ್ನು ನೀನು ಗಮನಿಸಿರುತ್ತಿ. ನನಗೆ ಈ ವಿಷಯದಲ್ಲಿ ಸಂಶಯವಿದೆ. ಸಮಗ್ರವಾಗಿ, ಯಥಾರ್ಥವಾಗಿ ಈ ವಿಷಯವನ್ನು ತಿಳಿಸು.
ಭೀಷ್ಮಃ
ಪಂಚ ದೋಷಾನ್ ಪ್ರಭೋ ದೇಹೇ ಪ್ರವದಂತಿ ಮನೀಷಿಣಃ |
ಮಾರ್ಗಜ್ಞಾಃ ಕಾಪಿಲಾಃ ಸಾಂಖ್ಯಾಃ ಶೃಣು ತಾನರಿಸೂದನ ॥53॥
ಭೀಷ್ಮ ರಾಜನೇ, ವಿದ್ವಾಂಸರಾದ ಮೋಕ್ಷಜ್ಞರು, ಕಪಿಲದೇವನೇ ಮೊದಲಾದ ಸಾಂಖ್ಯಯೋಗಿಗಳು ದೇಹದಲ್ಲಿ ಐದು ವಿಧವಾದ ದೋಷಗಳನ್ನು ಹೇಳುತ್ತಾರೆ. ಅದನ್ನು ವಿವರಿಸುತ್ತೇನೆ, ಅರಿಸೂದನನೇ ಕೇಳು.
ಕಾಮಕ್ರೋಧೌ ಭಯಂ ನಿದ್ರಾ ಪಂಚಮಃ ಶ್ವಾಸ ಉಚ್ಯತೇ |
ಏತೇ ದೋಷಾಃ ಶರೀರೇಷು ದೃಶ್ಯಂತೇ ಸರ್ವದೇಹಿನಾಮ್ ॥54॥
ಛಿಂದಂತಿ ಕ್ಷಮಯಾ ಕ್ರೋಧಂ ಕಾಮಂ ಸಂಕಲ್ಪವರ್ಜನಾತ್ |
ಸತ್ತ್ವಸಂಶೀಲನಾನ್ನಿದ್ರಾಮಪ್ರಮಾದಾದ್ಭಯಂ ತಥಾ |
ಛಿಂದಂತಿ ಪಂಚಮಂ ಶ್ವಾಸಂ ಲಘ್ವಾಹಾರತಯಾ ನೃಪ ॥55॥
ಕಾಮ, ಕ್ರೋಧ, ಭಯ, ನಿದ್ರಾ, ಶ್ವಾಸ - ಈ ಐದು ಶಾರೀರಿಕ ದೋಷಗಳೆಂದು ಹೇಳಲ್ಪಟ್ಟಿವೆ. ಈ ಐದು ದೋಷಗಳು ಎಲ್ಲ ಶರೀರಗಳಲ್ಲಿಯೂ ಕಂಡು ಬರುತ್ತವೆ. ಯಥಾರ್ಥ ಜ್ಞಾನವನ್ನು ಹೊಂದಿದ ವಿದ್ವಾಂಸರು ಕ್ಷಮೆಯಿಂದ ಕ್ರೋಧವನ್ನು, ಸಂಕಲ್ಪ ತ್ಯಾಗದಿಂದ ಕಾಮವನ್ನು, ಸತ್ತ್ವಗುಣದಿಂದ ನಿದ್ರೆಯನ್ನು, ಜಾಗರೂಕತೆಯಿಂದ ಭಯವನ್ನು, ಅಲ್ಪಾಹಾರ ಸೇವನೆಯಿಂದ ಶ್ವಾಸದೋಷವನ್ನು ಪರಿಹರಿಸಿಕೊಳ್ಳುತ್ತಾರೆ.
ಗುಣಾಂಗುಣಶತೈರ್ಜ್ಞಾತ್ವಾ ದೋಷಾಂದೋಷಶತೈರಪಿ |
ಹೇತೂನ್ ಹೇತುಶತೈಶ್ಚಿತ್ರೈಶ್ಚಿತ್ರಾನ್ ವಿಜ್ಞಾಯ ತತ್ತ್ವತಃ ॥56॥
ಭರತಸುತನೇ, ಮಹಾರಾಜನೇ, ಯಥಾರ್ಥ ಜ್ಞಾನವನ್ನು ಹೊಂದಿದ ಪಕ್ವ ಯೋಗಿಗಳು ತಮ್ಮ ಯೋಗಶಕ್ತಿಯಿಂದ ನೂರು ವಿಧವಾದ ಗುಣಗಳನ್ನು, ನೂರು ಪ್ರಕಾರ ದೋಷಗಳನ್ನು, ನೂರು ಪ್ರಕಾರ ವಿಚಿತ್ರ ಕಾರಣಗಳಿಂದ ಅದಕ್ಕೆ ಸಂಬಂಧಿಸಿದ ಕಾರಣವನ್ನು ಯಥಾರ್ಥವಾಗಿ ತಿಳಿದಿರುತ್ತಾರೆ.
ಅಪಾಂ ಫೇನೋಪಮಂ ಲೋಕಂ ವಿಷ್ಣೋರ್ಮಾಯಾಶತೈಃ ಕೃತಮ್ |
ಚಿತ್ತಭಿತ್ತಿಪ್ರತೀಕಾಶಂ ನಲಸಾರಮನರ್ಥಕಮ್ ॥57॥
ಈ ಜಗತ್ತೆಲ್ಲವೂ ನೀರಿನ ಮೇಲಿನ ಗುಳ್ಳೆಯಂತೆ ನಶ್ವರವಾದುದು. ಮಹಾವಿಷ್ಣುವಿನ ಸೃಷ್ಟಿ-ರಚನಾ ಕೌಶಲದಿಂದ ಈ ಜಗತ್ತು ರಚನೆ

ಹೊಂದಿರುವುದು. ಗೋಡೆಯ ಮೇಲೆ ಬರೆದ ಚಿತ್ರವಿಚಿತ್ರವಾದ ಚಿತ್ರಗಳಂತೆ ಬಹುಸುಂದರವಾಗಿ ಜಗತ್ತು ಕಾಣಿಸುತ್ತಿದೆ. ಬಾಹ್ಯವಾಗಿ ಸುಂದರವಾಗಿ ಕಾಣುವ ಎಲೆಗರಿಕೆಯಂತೆ ಅಥವಾ ಬಿದುರಿನಂತೆ ಬಹಳ ಸುಂದರವಾಗಿ ಈ ಜಗತ್ತು ಕಾಣಿಸುತ್ತಿದೆ.
ವ್ಯಾಖ್ಯಾನ ವಿಶೇಷ ವಿಷ್ಣುವಿನ ಮಾಯೆಯಿಂದ ಈ ಜಗತ್ತು ಸೃಷ್ಟಿಯಾಗಿದೆ ಎಂಬುದಕ್ಕೆ ಕೆಲವರು ಜಗತ್ತೆಲ್ಲ ಕಾಲ್ಪನಿಕ ಎಂದು ಅಪಾರ್ಥ ಮಾಡಿಕೊಂಡಿದ್ದಾರೆ. ಆದರೆ ಚಿತ್ತಭಿತ್ತಿಪ್ರತೀಕಾಶಂ ಎಂದು ಗೋಡೆಯ ಮೇಲೆ ಬರೆದ ಚಿತ್ರದಂತೆ ರಮಣೀಯವಾಗಿದೆ ಎಂಬ ಮುಂದಿನ ಮಾತಿನಿಂದ ಮಾಯಾ ಶಬ್ದಕ್ಕೆ `ಮಾಙ್ ಮಾನೇ' ಎಂಬ ಧಾತುವಿನ ಹಿನ್ನೆಲೆಯಲ್ಲಿ ರಚನಾ ಕೌಶಲ ಎಂಬ ಅರ್ಥವನ್ನು ಸ್ವೀಕರಿಸಬೇಕು. ಎಷ್ಟು ಜಗತ್ತು ಸುಂದರವಾಗಿದೆ ಎಂಬುದು ಒಳಗಡೆ ಈ ಜಗತ್ತು ನಿಸ್ಸಾರವಾದುದೇ. ನಾಳೆಯ ದಿನ ಕ್ಷಯವನ್ನು ಹೊಂದುವ ಸ್ವಭಾವ ಉಳ್ಳದ್ದೆ ಎಂಬುದನ್ನು ಯಥಾರ್ಥ ಜ್ಞಾನಿಗಳು ಅರಿತಿರುತ್ತಾರೆ ಎಂದು ಭಾವ.
ತಮಃ ಶ್ವಭ್ರನಿಭಂ ದೃಷ್ಟ್ವಾ ವರ್ಷಬುದ್ಬುದಸನ್ನಿಭಮ್ |
ನಾಶಪ್ರಾಯಂ ಸುಖಾದ್ಧೀನಂ ನಾಶೋತ್ತರಮಭಾವಗಮ್ |
ರಜಸ್ತಮಸಿ ಸಮ್ಮಗ್ನಂ ಪಂಕೇ ದ್ವಿಪಮಿವಾವಶಮ್ ||58||
ಈ ಜಗತ್ತು ಅಜ್ಞಾನದಿಂದ ತುಂಬಿರುವ ಗುಹೆಯಂತಿದೆ. ಮಳೆಗಾಲದ ನೀರಿನ ಗುಳ್ಳೆಯಂತೆ ನಶ್ವರವಾದುದು. ಸುಖದಿಂದ ರಹಿತವಾಗಿದೆ. ಅಸ್ವತಂತ್ರವಾದುದು. ಕೊನೆಗೊಂದು ದಿನ ನಾಶ ಹೊಂದುವ ಸ್ವಭಾವವುಳ್ಳದ್ದು. ಕೆಸರಿನಲ್ಲಿ ಹುದುಗಿ ಹೋದ ಅಸ್ವತಂತ್ರ ಆನೆಯಂತೆ ಜಗತ್ತೆಲ್ಲವೂ ರಜೋಗುಣ, ತಮೋಗುಣವೆಂಬ ಕೆಸರಿನಲ್ಲಿ ಮುಳುಗಿಹೋಗಿದೆ ಎಂಬುದನ್ನು ಸಾಂಖ್ಯಯೋಗಿಗಳು ಅರಿತಿರುತ್ತಾರೆ.
ಸಾಂಖ್ಯಾ ರಾಜನ್ ಮಹಾಪ್ರಾಜ್ಞಾಸ್ತ್ಯಕತ್ವಾ ದೇಹಂ ಪ್ರಜಾಕೃತಮ್ |
ಜ್ಞಾನಜ್ಞೇಯೇನ ಸಾಂಖ್ಯೇನ ವ್ಯಾಪಿನಾ ಮಹತಾ ನೃಪ ||59||
ರಾಜಸಾನಶುಭಾನ್ ಗಂಧಾಂಸ್ತಾಮಸಾಂಶ್ಚ ತಥಾವಿಧಾನ್ |
ಪುಣ್ಯಾಂಶ್ಚ ಸಾತಿತ್ವಕಾನ್ ಗಂಧಾನ್ ಸ್ಪರ್ಶಜಾನ್ ದೇಹಸಂಶ್ರಿತಾನ್ |
ಛಿತತ್ವಶು ಜ್ಞಾನಶಸ್ತ್ರೇಣ ತಪೋದಂಡೇನ ಭಾರತ ||60||
ಸಾಂಖ್ಯಯೋಗದಿಂದ ಯಥಾರ್ಥ ಜ್ಞಾನ ಹೊಂದಿರುವ, ಮಹಾಬುದ್ಧಿವಂತರಾದ ಜ್ಞಾನಿಗಳು ಮನುಷ್ಯರಿಂದ ನಿರ್ಮಿತವಾದ ಪ್ರಾಕೃತ ದೇಹವನ್ನು ತ್ಯಜಿಸಿ ತತ್ತ್ವಜ್ಞಾನದಿಂದ ತಿಳಿಯಲು ಯೋಗ್ಯವಾದ ಜಗತ್ತನ್ನು ವ್ಯಾಪಿಸಿರುವ ಭಗವಂತನನ್ನು ಯಥಾರ್ಥ ಜ್ಞಾನದಿಂದ ಅರಿತು ರಾಜಸಗಳಾದ ಅಶುಭ ಗಂಧಗಳನ್ನು, ತಾಮಸಗಳೆನಿಸಿದ ಅಶುಭ ಗಂಧಗಳನ್ನು, ಪ್ರತಿಬಂಧಕಗಳೆನಿಸಿದ ಸಾತ್ವಿಕ ಪುಣ್ಯ ಗಂಧಗಳನ್ನು, ದೇಹವನ್ನಾಶ್ರಯಿಸಿರುವ ಸ್ಪರ್ಶವೇ ಮೊದಲಾದ ವಿಷಯಗಳನ್ನು ಜ್ಞಾನವೆಂಬ ಶಸ್ತ್ರದಿಂದ ಕೂಡಲೇ ನಾಶಗೊಳಿಸಿ ತಪೋದಂಡವನ್ನು ಧರಿಸಿ ಭಗವನ್ನಿಷ್ಠರಾಗಿರುತ್ತಾರೆ.
ತತೋ ದುಃಖೋದಕಂ ಘೋರಂ ಚಿಂತಾಶೋಕಮಹಾಹ್ರದಮ್ |
ವ್ಯಾಧಿಮೃತ್ಯುಮಹಾಗ್ರಾಹಂ ಮಹಾಭಯಮಹೋರಗಮ್ ||61||
ಜ್ಞಾನಯೋಗಿಗಳು ಜ್ಞಾನವೆಂಬ ದೋಣಿಯನ್ನು ಆಶ್ರಯಿಸಿ ಸಂಸಾರವೆಂಬ ಘೋರ ಸಮುದ್ರವನ್ನು ದಾಟಿ ಭಗವಂತನನ್ನು ಸೇರುತ್ತಾರೆ. ಸಾಂಸಾರಿಕ ದುಃಖಗಳೇ ಸಂಸಾರ ಸಮುದ್ರದ ನೀರು. ಚಿಂತಾ, ಶೋಕಗಳೇ ದೊಡ್ಡ ದೊಡ್ಡ ಮಡುಗಳು. ವ್ಯಾಧಿ-ಮೃತ್ಯುಗಳೇ ದೊಡ್ಡ ಮೊಸಳೆಗಳು. ಮಹಾಭಯವೆಂಬುದೇ ಮಹಾಸರ್ಪವು.
ತಮಃಕೂರ್ಮಂ ರಜೋಮೀನಂ ಪ್ರಜ್ಞಯಾ ಸಂತರಂತ್ಯುತ |
ಸ್ನೇಹಪಂಕಂ ಜರಾದುರ್ಗಂ ಸ್ಪರ್ಶದ್ವೀಪಮರಿಂದಮ ||62||
ಶತ್ರುನಿಗ್ರಹಿಯೇ, ತಮೋಗುಣವು ಈ ಸಂಸಾರ ಸಮುದ್ರದ ಆಮೆ ಎನಿಸಿದೆ. ರಜೋಗುಣವು ಮೀನುಗಳು. ಇಂತಹ ಘೋರವಾದ ಸಂಸಾರದಲ್ಲಿ ಸ್ನೇಹವೆಂಬುದು ಕೆಸರಿನಂತಿದೆ. ಸ್ಪರ್ಶವೇ ದ್ವೀಪದಂತಿದೆ.
ಕರ್ಮಾಗಾಧಂ ಸತ್ಯತೀರಂ ಸ್ಥಿತವ್ರತಮಿದಂ ನೃಪ |
ಹಿಂಸಾಶೀಘ್ರಮಹಾವೇಗಂ ನಾನಾರಸಮಹಾಕರಮ್ ||63||
ಸಮುದ್ರದ ಆಳದಂತೆ ಕರ್ಮದ ಗತಿಯು. ಸತ್ಯವು ಈ ಸಮುದ್ರದ ತೀರದಂತಿದೆ. ವ್ರತ-ನಿಯಮಗಳೇ ಸಮುದ್ರದಲ್ಲಿರುವ ಸ್ಥಿರತೆ. ಹಿಂಸೆ ಎಂಬುದೇ ಶೀಘ್ರವಾದ ಮಹಾವೇಗವು. ಈ ಸಮುದ್ರವು ನಾನಾ ವಿಷಯ ರಸಗಳಿಂದ ತುಂಬಿ ಹೋಗಿದೆ.
ನಾನಾಪ್ರೀತಿಮಹಾರತ್ನಂ ದುಃಖಜ್ವರಸಮೀರಣಮ್ |
ಶೋಕತೃಷ್ಣಾಮಹಾವರ್ತಂ ತೀಕ್ಷ್ಣವ್ಯಾಧಿಮಹಾಗಜಮ್ ||64||
ಅನೇಕ ಮುಖ ಪ್ರೀತಿಗಳೇ ಸಂಸಾರ ಸಮುದ್ರದ ರತ್ನಗಳು. ಅನೇಕ ಮುಖವಾದ ದುಃಖ-ಸಂತಾಪಗಳೇ ಸಂಸಾರ ಸಾಗರದ ಮೇಲೆ ಬೀಸುವ ಗಾಳಿಯು. ಶೋಕ- ತೃಷ್ಣೆಗಳು ಸುಳಿಗಳು. ವ್ಯಾಧಿಗಳು ದೊಡ್ಡ ತಿಮಿಂಗಿಲಗಳು.
ಅಸ್ಥಿಸಂಘಾತಸಂಘಾಟಂ ಶ್ಲೇಷ್ಮಫೇನಮರಿಂದಮ |
ದಾನಮುಕ್ತಾಕರಂ ಭೀಮಂ ಶೋಣಿತಹ್ರದವಿದ್ರುಮಮ್ ||65||
ಮೂಳೆ ಸಮೂಹವೆಂಬ ತಳಭಾಗವು. ಶ್ಲೇಷ್ಮ ಎಂಬುದೇ ದೊಡ್ಡ ನೊರೆಯ ಸಮುದ್ರವು. ಇಲ್ಲಿ ಸತ್ಕರ್ಮಗಳಲ್ಲಿ ಮಾಡುವ ದಾನವೇ ಸಾಗರದ ಮುತ್ತಿನ ರಾಶಿಯು. ರಕ್ತ ಸರೋವರವೇ ಹವಳದ ರಾಶಿಯು.
ಹಸಿತೋತ್ಕ್ರುಷ್ಟನಿರ್ಘೋಷಂ ನಾನಾಜ್ಞಾನಸುದುಸ್ತರಮ್ |
ರೋದನಾಶ್ರುಮಲಕ್ಷಾರಂ ಸಂಗತ್ಯಾಗಪರಾಯಣಮ್ ||66||
ಅಟ್ಟಹಾಸಗಳೇ ಸಂಸಾರದ ಭೋರ್ಗರೆತ. ಅನೇಕ ಮುಖ ಅಜ್ಞಾನವೇ ಸಾಗರವನ್ನು ದಾಟಲು ಪ್ರತಿಬಂಧಕಗಳು. ಪ್ರಾಣಿಗಳ ರೋದನವೇ ಮಲಿನವಾದ ಉಪ್ಪು ನೀರು. ವಿಷಯಾಸಕ್ತಿ ತ್ಯಾಗವೇ ಸಾಗರದ ಭಯವನ್ನು ಪರಿಹರಿಸಿಕೊಳ್ಳಲು ಯೋಗ್ಯತಾಣ.
ಪುನರಾಜನ್ಮಲೋಕೌಘಂ ಪುತ್ರಬಾಂಧವಪತ್ತನಮ್ |

ಅಹಿಂಸಾಸತ್ಯಮರ್ಯಾದಂ ಪ್ರಾಣತ್ಯಾಗಮಹೋರ್ಮಿಣಮ್ ॥67॥
ಪುತ್ರ-ಭಾರ್ಯಾದಿಗಳು ಸಂಸಾರದಲ್ಲಿ ಜಿಗಣೆ. ಮಿತ್ರರು-ಬಂಧುಗಳು ಸಾಗರದ ತೀರದಲ್ಲಿರುವ ಪಟ್ಟಣ, ಅಹಿಂಸೆ-ಸತ್ಯಗಳೇ ಮೇರೆಯಂತಿದೆ. ಪ್ರಾಣತ್ಯಾಗವೇ ಸಂಸಾರ ಸಮುದ್ರದ ಅಲೆಯಂತಿದೆ.
ವೇದಾಂತಗಮನದ್ವೀಪಂ ಸರ್ವಭೂತದಯೋದಧಿಮ್ |
ಮೋಕ್ಷದುಷ್ಪ್ರಾಪವಿಷಯಂ ವಡವಾಮುಖಸಾಗರಮ್ ॥68॥
ವೇದಾಂತ ಜ್ಞಾನವೇ ಸಾಗರದ ಮಧ್ಯದ ಆಶ್ರಯದ್ವೀಪವು. ಪ್ರಾಣಿಗಳಲ್ಲಿರುವ ದಯಾ ಭಾಗವು ಜಲರಾಶಿಯು. ಮೋಕ್ಷವೆಂಬುದು ದುರ್ಲಭವಾದ ವಿಷಯವು. ನಾನಾ ಸಂತಾಪಗಳು ಸಮುದ್ರದ ವಡವಾನಲವು.
ತರಂತಿ ಮುನಯಃ ಸಿದ್ಧಾ ಜ್ಞಾನಯೋಗೇನ ಭಾರತ |
ತೀರ್ತ್ವಾ ಚ ದುಸ್ತರಂ ಜನ್ಮ ವಿಶಂತಿ ವಿಮಲಂ ನಭಃ ॥69॥
ಇಂತಹ ಭವಸಾಗರವನ್ನು ಸಿದ್ಧರಾದ ಮುನಿಗಳು ಜ್ಞಾನವೆಂಬ ದೋಣಿಯನ್ನು ಆಶ್ರಯಿಸಿ ದಾಟುತ್ತಾರೆ. ದುಸ್ತರವಾದ ಸಮುದ್ರವನ್ನು ದಾಟಿ ನಿರ್ಮಲವಾದ ಆಕಾಶದಂತೆ ಅಸಂಗನಾದ ಭಗವಂತನನ್ನು ಹೊಂದುತ್ತಾರೆ.
ತತಸ್ತಾನ್ ಸುಕೃತೀನ್ ಸಾಂಖ್ಯಾನ್ ಸೂರ್ಯೋ ವಹತಿ ರಶ್ಮಿಭಿಃ |
ಪದ್ಮತಂತುವದಾವಿಶ್ಯ ಪ್ರವಹನ್ ವಿಷಯಾನ್ನೃಪ ॥70॥
ಬಳಿಕ ಇಂತಹ ಯಥಾರ್ಥ ಜ್ಞಾನವನ್ನು ಹೊಂದಿದ ಪುಣ್ಯಪುರುಷರನ್ನು ಸೂರ್ಯನು ತಾವರೆ ದಂಟಿನ ನೂಲಿನಂತಿರುವ ತನ್ನ ಕಿರಣಗಳಿಂದ ಪ್ರವೇಶಿಸಿ, ಅವರನ್ನು ಎಲ್ಲಿಗೆ ಹೊಂದಿಸಬೇಕೋ ಅಂತಹ ಅವರವರಿಗೆ ಊರ್ಧ್ವಲೋಕಗಳಿಗೆ ಕೊಂಡೊಯ್ಯುತ್ತಾನೆ.
ತತ್ರ ತಾನ್ ಪ್ರವಹೋ ವಾಯುಃ ಪ್ರತಿಗೃಹ್ಣಾತಿ ಭಾರತ |
ವೀತರಾಗಾನ್ ಯತೀನ್ ಸಿದ್ಧಾನ್ ವೀರ್ಯಯುಕ್ತಾಂಸ್ತಪೋಧನಾನ್ ॥
ಸೂಕ್ಷ್ಮಃ ಶೀತಃ ಸುಗಂಧೀ ಚ ಸುಖಸ್ಪರ್ಶಶ್ಚ ಭಾರತ |
ಸಪ್ತಾನಾಂ ಮರುತಾಂ ಶ್ರೇಷ್ಠೋ ಲೋಕಾನ್ ಗಚ್ಛತಿ ಯಃ ಶುಭಾನ್ |
ಸ ತಾನ್ ವಹತಿ ಕೌಂತೇಯ ನಭಸಃ ಪರಮಾಂ ಗತಿಮ್ ॥72॥
ಬಳಿಕ ರಾಗಾದಿ ದೋಷಗಳಿಂದ ಮುಕ್ತರಾದ, ವಿರಕ್ತರಾದ, ತಪಸ್ಸಿನಿಂದ ಸಿದ್ಧಿಯನ್ನು ಹೊಂದಿದ ಆ ಯತಿಗಳನ್ನು ಅಲ್ಲಿ ಮೃದುವಾಗಿಯೂ, ತಂಪಾಗಿಯೂ, ಸುಗಂಧ ಸ್ಪರ್ಶವುಳ್ಳದ್ದಾಗಿಯೂ ಇರುವ, ಸಪ್ತ ಮರುತ್ತುಗಳಲ್ಲಿ ಶ್ರೇಷ್ಠವಾದ ಪ್ರವಹವೆಂಬ ವಾಯುವು ಪರಮಗತಿಯ ಕಡೆ ಸಾಗಿಸುತ್ತಾನೆ.
ನಭೋ ವಹತಿ ಲೋಕೇಶ ರಜಸಃ ಪರಮಾಂ ಗತಿಮ್ |
ರಜೋ ವಹತಿ ರಾಜೇಂದ್ರ ಸತ್ತ್ವಸ್ಯ ಪರಮಾಂ ಗತಿಮ್ ॥73॥
ಆಕಾಶಾಭಿಮಾನಿ ದೇವತೆಯು ತೇಜೋಮಯವಾದ ವಿದ್ಯುದಭಿಮಾನಿ ದೇವತೆಯ ಕಡೆ ಯೋಗಿಯನ್ನು ಕರೆದೊಯ್ಯುತ್ತದೆ. ರಜೋಗುಣವು ಸತ್ತ್ವಗುಣದ ಕಡೆಗೆ ಕರೆದೊಯ್ಯುತ್ತದೆ.
ಸತ್ತ್ವಂ ವಹತಿ ಶುದ್ಧಾತ್ಮಾ ಪರಂ ನಾರಾಯಣಂ ಪ್ರಭುಮ್ |
ಪ್ರಭುರ್ವಹತಿ ಶುದ್ಧಾತ್ಮಾ ಪರಮಾತ್ಮಾನಮಾತ್ಮನಾ ॥74॥
ಶುದ್ಧಾತ್ಮನೇ, ಸತ್ತತತ್ವಭಿಮಾನಿಯು ಸಾಂಖ್ಯಯೋಗಿಯನ್ನು ಶ್ರೇಷ್ಠವಾದ ಶ್ರೀಮನ್ನಾರಾಯಣನ ಬಳಿಗೆ ಕೊಂಡೊಯ್ಯುತ್ತಾನೆ. ಶುದ್ಧಾತ್ಮನಾದ ಶ್ರೀಮನ್ನಾರಾಯಣನು ಸಾಂಖ್ಯಯೋಗಿಗಳನ್ನು ತಾನೇ ಆದ ಪರಮಾತ್ಮನ ಬಳಿಗೆ ಕೊಂಡೊಯ್ಯುತ್ತಾನೆ.
ಪರಮಾತ್ಮಾನಮಾಸಾದ್ಯ ತದ್ಭೂತಾ ಯತಯೋಮಲಾಃ |
ಅಮೃತತ್ವಾಯ ಕಲ್ಪಂತೇ ನ ನಿವರ್ತಂತಿ ಚಾಭಿಭೋ |
ಪರಮಾ ಸಾ ಗತಿಃ ಪಾರ್ಥ ನಿರ್ದ್ವಂದ್ವಾನಾಂ ಮಹಾತ್ಮನಾಮ್ ॥75॥
ಪರಮಾತ್ಮನನ್ನು ಹೊಂದಿರುವ ಯೋಗಿಗಳು ಪರಮಾತ್ಮನೆಂಬ ನಾರಾಯಣನಲ್ಲಿ ಸೇರಿದವರಾಗಿ ಅಮೃತತ್ವವನ್ನು ಹೊಂದುತ್ತಾರೆ. ಎಂದಿಗೂ ಈ ಸಂಸಾರದ ಕಡೆಗೆ ತಿರುಗಿ ಬರುವುದಿಲ್ಲ. ಪಾರ್ಥನೇ, ದ್ವಂದ್ವ ದುಃಖರಹಿತರಾದ ಆ ಮಹಾತ್ಮರಿಗೆ ದೊರಕುವ ಆ ಗತಿಯೇ ಪರಮಗತಿ ಎನಿಸಿದೆ.
ಯುಧಿಷ್ಠಿರಃ
ಸ್ಥಾನಮುತ್ತಮಮಾಸಾದ್ಯ ಭಗವಂತಂ ಸ್ಥಿರವ್ರತಾಃ |
ಆಜನ್ಮಮರಣಂ ವಾ ತೇ ಸ್ಮರಂತ್ಯುತ ನ ವಾನಘ ॥76॥
ಯದತ್ರ ತಥ್ಯಂ ತನ್ಮೇ ತ್ವಂ ಯಥಾವದ್ವಕ್ತುಮರ್ಹಸಿ |
ತ್ವದೃತೇ ಮಾನವಂ ನಾನ್ಯಂ ಪ್ರಾಪ್ತುಮರ್ಹಾಮಿ ಕೌರವ ॥77॥
ಯುಧಿಷ್ಠಿರ ಪಾಪರಹಿತನೇ, ಪಿತಾಮಹನೇ, ಸ್ಥಿರತೆಯಿಂದ ಶ್ರೇಷ್ಠವಾದ ವ್ರತಗಳನ್ನು ಪರಿಪಾಲಿಸುವ ಯಥಾರ್ಥ ಜ್ಞಾನಿಗಳಾದ ಯೋಗಿಗಳು ಪರಮಾತ್ಮನನ್ನು ಅವನ ಸ್ಥಾನವಾದ ಮೋಕ್ಷವನ್ನು ಹೊಂದಿದ ಬಳಿಕ ಹುಟ್ಟಿನಿಂದ ಸಾಯುವ ತನಕ ಮಾಡಿರುವ ಕರ್ಮಗಳನ್ನು ಸ್ಮರಿಸುತ್ತಾರೋ ಅಥವಾ ಇಲ್ಲವೋ? ಇದರ ಬಗ್ಗೆ ಯಥಾರ್ಥವಾಗಿ ತಿಳಿಸು. ಈ ವಿಷಯದಲ್ಲಿ ಯಾವುದು ಯಥಾರ್ಥವಾಗಿದೆಯೋ ಅದನ್ನು ತಿಳಿಸು. ನಿನ್ನ ಹೊರತಾಗಿ ನಾನು ಬೇರೆ ಯಾರನ್ನೂ ಹೀಗೆ ಪ್ರಶ್ನಿಸೆನು.
ವ್ಯಾಖ್ಯಾನ ವಿಶೇಷ ಧರ್ಮರಾಜನು ಕರ್ಮಗಳನ್ನು ಸ್ಮರಿಸುತ್ತಾರೋ ಇಲ್ಲವೋ ಎಂದು ಪ್ರಶ್ನಿಸುತ್ತಾನೆ. ಸ್ಮರಿಸುತ್ತಾರೆ ಎಂಬುದೇ ಉತ್ತರವು. ಗುರುಗಳಿಗೆ ಅನುಕೂಲನಾದ ಶಿಷ್ಯನಂತೆ ಇಂದ್ರಿಯಗಳೆಲ್ಲವೂ ಮುಕ್ತಾತ್ಮನಿಗೆ ವಶವಾಗಿರುತ್ತವೆ. ಇಂದ್ರಿಯಗಳಿಂದ ಮುಕ್ತನಾಗಿರುವುದರಿಂದ ಹಿಂದಿನದ್ದನ್ನು ನೆನಪಿಸಿಕೊಂಡರೂ ತಜ್ಜನ್ಯ ದುಃಖಗಳು ಆ ವ್ಯಕ್ತಿಗೆ ಉಂಟಾಗುವುದಿಲ್ಲ. ಸುಖವೇ ಉಂಟಾಗುತ್ತದೆ. ಇದರಿಂದ ಧರ್ಮರಾಜನ ಹೃದಯದಲ್ಲಿರುವ ಶಂಕೆಯು ಪರಿಹಾರವಾಯಿತು ಎಂದು ತಾತ್ಪರ್ಯ. ಧರ್ಮರಾಜನಿಗೆ

ತಾನು ಮಾಡಿದ ಕರ್ಮದ ಬಗ್ಗೆ ದುಃಖ ಉಂಟಾಗಿದೆ. ಇದರ ಬಗ್ಗೆ ಸರಿಯಾದ ಯಥಾರ್ಥ ಜ್ಞಾನವನ್ನು ಭೀಷ್ಮರು ಉಪದೇಶಿಸಿರುವುದರಿಂದ ಇದನ್ನು ಯಥಾರ್ಥವಾಗಿ ತಿಳಿದ ಧರ್ಮರಾಜನ ಹೃದಯದಲ್ಲಡಕವಾದ ಸಂಶಯವು ಪರಿಹಾರವಾಯಿತು. ಇದರ ಮೂಲಕ ದುಃಖವು ಪರಿಹಾರವಾಯಿತು ಎಂದೇ ನಿಶ್ಚಯವು.
ಮೋಕ್ಷದೋಷೋ ಮಹಾನೇಷ ಪ್ರಾಪ್ಯ ಸಿದ್ಧಿಂ ಗತಾನೃಷೀನ್ |
ಯದಿ ತತ್ರೈವ ವಿಜ್ಞಾನೇ ವರ್ತಂತೇ ಯತಯಃ ಪರೇ ॥78॥
ಪ್ರವೃತ್ತಿಲಕ್ಷಣಂ ಧರ್ಮಂ ಪಶ್ಯಾಮಿ ಪರಮಂ ನೃಪ |
ಮಗ್ನಸ್ಯ ಹಿ ಪರೇ ಜ್ಞಾನೇ ಕಿಂ ನು ದುಃಖತರಂ ಭವೇತ್ ॥79॥
ಮೋಕ್ಷಶಾಸ್ತ್ರವನ್ನು ಕಂಡಾಗ ಈ ವಿಷಯದಲ್ಲಿ ನನಗೆ ಸಂದೇಹವು ಕಾಣಿಸುತ್ತಿದೆ. ಕೆಲವು ಶಾಸ್ತ್ರಜ್ಞರು ಮುಕ್ತದೆಶೆಯಲ್ಲೂ ಹಿಂದಿನ ಸ್ಮರಣೆ ಏನೂ ಇರುವುದಿಲ್ಲ ಎನ್ನುತ್ತಾರೆ. ಕೆಲವರು ಸ್ಮರಣೆ ಇದೆ ಎಂದು ಹೇಳುತ್ತಾರೆ. ಹಿಂದಿನ ಸ್ಮರಣೆ ಇರುವ ಪಕ್ಷದಲ್ಲಿ ಪ್ರವೃತ್ತಿ ಧರ್ಮವೇ ಶ್ರೇಷ್ಠವೆಂದು ನನಗೆ ಕಾಣಿಸುತ್ತದೆ. ಮುಕ್ತದೆಶೆಯಲ್ಲಿ ಹಿಂದಿನ ಸ್ಮರಣೆಯೇ ಇಲ್ಲವೆಂದಾದಲ್ಲಿ ಪೂರ್ಣಜ್ಞಾನವು ನಾಶವಾಗುತ್ತದೆ ಎಂದು ಹೇಳಿದಂತಾಯಿತು. ಸುಷುಪ್ತಿಯಲ್ಲಿರುವಂತೆ ಅಜ್ಞಾನಕ್ಕೆ ಜೀವನು ವಶನಾಗಿರುತ್ತಾನೆ ಎಂದು ಹೇಳಿದಂತಾಯಿತು. ಈ ಸುಷುಪ್ತಿಗಿಂತಲೂ ಮೋಕ್ಷವು ದುರವಸ್ಥೆಯಿಂದ ಕೂಡಿದೆ ಎಂದು ಹೇಳಿದಂತಾಗುತ್ತದೆ. ಕಾರಣ, ಸುಷುಪ್ತಿಕಾಲದಲ್ಲಿ ಮಾತ್ರ ಜ್ಞಾನವು ನಾಶವಾಗಿರುತ್ತದೆ ಹೊರತು ಪುನಃ ಎಚ್ಚರದಲ್ಲಿ ಆ ಜ್ಞಾನವು ಲಭಿಸುತ್ತದೆ. ಆದರೆ ಮುಕ್ತಿಯಲ್ಲಿ ಸರ್ವಾತ್ಮನಾ ಜ್ಞಾನಲೋಪವಾಗಿರುವುದರಿಂದ ಸ್ಮರಣೆಗೆ ಬಾರದಿದ್ದಲ್ಲಿ ದುಃಖವೇ ಅಧಿಕವಾಗುತ್ತದೆಯಲ್ಲ ಎಂದು ಯುಧಿಷ್ಠಿರನು ಪ್ರಶ್ನಿಸುತ್ತಾನೆ.
ಭೀಷ್ಮಃ
ಯಥಾನ್ಯಾಯಂ ತ್ವಯಾ ತಾತ ಪ್ರಶ್ನಃ ಪೃಷ್ಟಃ ಸುಸಂಕಟಃ |
ಬುದ್ಧಾನಾಮಪಿ ಸಮ್ಮೋಹಃ ಪ್ರಶ್ನೇಽಸ್ಮಿನ್ ಭರತರ್ಷಭ |
ಅತ್ರಾಪಿ ತತ್ತ್ವಂ ಪರಮಂ ಶೃಣು ಸಮ್ಯಙ್ಮಯೇರಿತಮ್ ॥80॥
ಭೀಷ್ಮ ಭರತರ್ಷಭನೇ, ನಿನ್ನ ಪ್ರಶ್ನೆಗೆ ಸಮಾಧಾನವನ್ನು ಹೇಳುವುದು ಕಷ್ಟವಾದರೂ ಈ ಪ್ರಶ್ನೆಯು ಯೋಗ್ಯವೇ ಆಗಿದೆ. ಈ ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುವ ವಿಷಯದಲ್ಲಿ ವಿದ್ವಾಂಸರು ಗೊಂದಲಕ್ಕೀಡಾಗುತ್ತಾರೆ. ಆದರೂ ನಿನಗೆ ತಿಳಿಯುವಂತೆ ಅದರ ತತ್ತ್ವವನ್ನು ಹೇಳುತ್ತೇನೆ. ಇದೇ ವಿಷಯದಲ್ಲಿ ನಾನು ಹೇಳುವುದನ್ನು ಕೇಳಿಸಿಕೊ.
ಬುದ್ಧಿಶ್ಚ ಪರಮಾ ಯತ್ರ ಕಾಪಿಲಾನಾಂ ಮಹಾತ್ಮನಾಮ್ |
ಇಂದ್ರಿಯಾಣ್ಯಪಿ ಬುದ್ಧ್ಯಂತೇ ಸ್ವದೇಹಂ ದೇಹಿನೋ ನೃಪ |
ಕಾರಣಾನ್ಯಾತ್ಮನಸ್ತಾನಿ ಸೂಕ್ಷ್ಮಃ ಪಶ್ಯತಿ ತೈಸ್ತು ಸಃ ॥81॥
ಆತ್ಮನಾ ವಿಪ್ರಹೀಣಾನಿ ಕಾಷ್ಠಕುಡ್ಯಸಮಾನಿ ತು |
ವಿನಶ್ಯಂತಿ ನ ಸಂದೇಹಃ ಫೇನಾ ಇವ ಮಹಾರ್ಣವೇ ॥82॥
ಮಹಾತ್ಮರಾದ ಕಪಿಲರು ತಮ್ಮ ಶ್ರೇಷ್ಠವಾದ ಬುದ್ಧಿಯನ್ನು ಈ ವಿಷಯದಲ್ಲಿ ಉಪಯೋಗಿಸಿದ್ದಾರೆ. ಪ್ರಾಣಿಗಳ ದೇಹದಲ್ಲಿ ಜ್ಞಾನೇಂದ್ರಿಯಗಳು ತಮ್ಮ ತಮ್ಮ ವ್ಯಾಪಾರದಿಂದ ವಿಷಯಗಳನ್ನು ಗ್ರಹಿಸುತ್ತವೆ. ಆದ್ದರಿಂದ ಆತ್ಮನಿಗೆ ಈ ಜ್ಞಾನೇಂದ್ರಿಯಗಳು ಕರ್ಣವೆನಿಸಿದೆ. ಆತ್ಮನು ಈ ಇಂದ್ರಿಯಗಳ ಮೂಲಕವೇ ಎಲ್ಲವನ್ನೂ ಗ್ರಹಿಸುತ್ತಾನೆ. ಅವು ಆತ್ಮನ ಸಂಬಂಧವನ್ನು ಬಿಟ್ಟ ಕೂಡಲೇ ಕಟ್ಟಿಗೆಗೂ, ಗೋಡೆಗೂ, ಸಮುದ್ರದ ನೊರೆಗೂ ಸಮಾನವಾಗಿ ತಮ್ಮ ವ್ಯಾಪಾರಗಳನ್ನೆಲ್ಲ ಕಳೆದುಕೊಂಡು ನಶಿಸಿ ಹೋಗುತ್ತವೆ.
ಇಂದ್ರಿಯೈಃ ಸಹ ಸುಪ್ತಸ್ಯ ದೇಹಿನಃ ಶತ್ರುತಾಪನ |
ಸೂಕ್ಷ್ಮಶ್ಚರತಿ ಸರ್ವತ್ರ ನಭಸೀವ ಸಮೀರಣಃ ॥83॥
ಸ ಪಶ್ಯತಿ ಯಥಾನ್ಯಾಯಂ ಸ್ಪರ್ಶಾನ್ ಸ್ಪೃಶತಿ ಚಾಭಿಭೋ |
ಬುಧ್ಯಮಾನೋ ಯಥಾಪೂರ್ವಮಖಿಲೇನೇಹ ಭಾರತ ॥84॥
ಇಂದ್ರಿಯಾಣೀಹ ಸರ್ವಾಣಿ ಸ್ವೇ ಸ್ವೇ ಸ್ಥಾನೇ ಯಥಾವಿಧಿ |
ಅನೀಶತ್ವಾತ್ ಪ್ರಲೀಯಂತೇ ಸರ್ಪಾ ಹತವಿಷಾ ಇವ ॥85॥
ಇಂದ್ರಿಯಾಣಾಂ ತು ಸರ್ವೇಷಾಂ ಸ್ವಸ್ಥಾನೇಷ್ವೇವ ಸರ್ವಶಃ |
ಆಕ್ರಮ್ಯ ಗತಯಃ ಸೂಕ್ಷ್ಮಾಶ್ಚರತ್ಯಾತ್ಮಾ ನ ಸಂಶಯಃ ॥86॥
ಮನುಷ್ಯನು ತನ್ನ ಇಂದ್ರಿಯಗಳ ಜೊತೆಗೆ ನಿದ್ರೆ ಮಾಡುವಾಗ ಸೂಕ್ಷ್ಮವಾದ ಆತ್ಮನು ಆಕಾಶದಲ್ಲಿನ ವಾಯುವಿನಂತೆ ಸಂಚರಿಸುತ್ತಿರುತ್ತಾನೆ. ಸ್ಪರ್ಶವನ್ನು ಅನುಭವಿಸುತ್ತಾನೆ. ಸುಷುಪ್ತಿಯಲ್ಲಿ ಸಮಸ್ತ ಇಂದ್ರಿಯಗಳು ವಿಷರಹಿತವಾದ ಸರ್ಪಗಳಂತೆ ಶಕ್ತಿಹೀನಗಳಾಗಿ ತಮ್ಮ ತಮ್ಮ ಮೂಲಸ್ಥಾನಗಳಲ್ಲಿ ಅಡಗಿರುತ್ತವೆ. ಅಂತಹ ಸಮಯದಲ್ಲಿ ಆತ್ಮನು ಇಂದ್ರಿಯಗಳು ಲಯ ಹೊಂದಿದ ಆ ಸ್ಥಾನಗಳಿಗೆ ಹೋಗಿ ಅವುಗಳ ವ್ಯಾಪಾರಗಳಿಗೆ ಸಹಕರಿಸುತ್ತಾನೆ.
ಸತ್ತ್ವಸ್ಯ ಚ ಗುಣಾನ್ ಕೃತ್ಸ್ನಾನ್ ರಜಸಶ್ಚ ಗುಣಾನ್ ಪುನಃ |
ಗುಣಾಂಶ್ಚ ತಮಸಃ ಸರ್ವಾನ್ ಗುಣಾನ್ ಬುದ್ಧೇಶ್ಚ ಭಾರತ ॥87॥
ಗುಣಾಂಶ್ಚ ಮನಸಸ್ತದ್ವನ್ನಭಸಶ್ಚ ಗುಣಾಂಸ್ತಥಾ |
ಗುಣಾನ್ವಾಯೋಶ್ಚ ಧರ್ಮಾತ್ಮಂಸ್ತೇಜಸಶ್ಚ ಗುಣಾನ್ ಪುನಃ ॥88॥
ಅಪಾಂ ಗುಣಾಂಸ್ತಥಾ ಪಾರ್ಥ ಪಾರ್ಥಿವಾಂಶ್ಚ ಗುಣಾನಪಿ |
ಸರ್ವಾತ್ಮನಾ ಗುಣೈರ್ವ್ಯಾಪ್ಯ ಕ್ಷೇತ್ರಜ್ಞಃ ಸ ಯುಧಿಷ್ಠಿರ ॥89॥
ಆತ್ಮಾ ಚ ಯಾತಿ ಕ್ಷೇತ್ರಜ್ಞಂ ಕರ್ಮಣೀ ಚ ಶುಭಾಶುಭೇ |

ಶಿಷ್ಯಾ ಇವ ಮಹಾತ್ಮಾನಮಿಂದ್ರಿಯಾಣಿ ಚ ತಂ ವಿಭೋ ॥90॥
ಯುಧಿಷ್ಠಿರನೇ, ಪರಮಾತ್ಮನು ಸತ್ತ್ವಗುಣಗಳನ್ನು, ಸಮಗ್ರವಾದ ರಜೋಗುಣಗಳನ್ನು, ತಮೋಗುಣಗಳನ್ನು, ಬುದ್ಧಿಯ ಗುಣಗಳನ್ನು, ಆಕಾಶದ ಗುಣಗಳನ್ನು, ವಾಯುವಿನ ಗುಣಗಳನ್ನು, ತೇಜಸ್ಸಿನ ಗುಣಗಳನ್ನು, ನೀರಿನ ಗುಣಗಳನ್ನು, ಭೂಮಿಯ ಗುಣಗಳನ್ನು ತನ್ನ ಗುಣಗಳಿಂದ ವ್ಯಾಪಿಸಿ, ಜೀವರನ್ನು ಶುಭಾಶುಭ ಕರ್ಮಗಳಲ್ಲಿ ನಿಯೋಜಿಸಿ, ಇಂದ್ರಿಯಗಳನ್ನು ಪ್ರೇರಿಸಿ ನಿಯಮಿಸುತ್ತಾನೆ. ಜೀವನಾದರೂ ಗುರುವನ್ನು ಶಿಷ್ಯನು ಅನುಸರಿಸುವಂತೆ ಪರಮಾತ್ಮನನ್ನು ಅನುಸರಿಸುತ್ತಾನೆ.
ಪ್ರಕೃತಿಂ ಚಾಪ್ಯತಿಕ್ರಮ್ಯ ಗಚ್ಛತ್ಯಾತ್ಮಾನಮವ್ಯಯಮ್ |
ಪರಂ ನಾರಾಯಣಾತ್ಮಾನಂ ನಿರ್ದ್ವಂದ್ವಂ ಪ್ರಕೃತೇಃ ಪರಮ್ ॥91॥
ವಿಮುಕ್ತಃ ಪುಣ್ಯಪಾಪೇಭ್ಯಃ ಪ್ರವಿಷ್ಟಸ್ತಮನಾಮಯಮ್ |
ಪರಮಾತ್ಮಾನಮಗುಣಂ ನ ನಿವರ್ತತಿ ಭಾರತ ॥92॥
ಜೀವನು ಅನಾದಿಕಾಲದ ಪ್ರಕೃತಿಯನ್ನು ಅತಿಕ್ರಮಿಸಿ ನಾಶರಹಿತನಾದ ಪರಮಾತ್ಮನನ್ನು ಹೊಂದುತ್ತಾನೆ. ಪ್ರಕೃತಿಗುಣವನ್ನು ಮೀರಿನಿಂತಿರುವ, ನಿರ್ದ್ವಂದ್ವನಾದ, ಸರ್ವೋತ್ತಮನಾದ, ಸರ್ವಾಂತರ್ಯಾಮಿಯಾದ ನಾರಾಯಣನನ್ನು ಜೀವನು ಹೊಂದಿದ ಬಳಿಕ ಸಮಸ್ತ ಪುಣ್ಯಪಾಪಗಳಿಂದಲೂ ಬಿಡುಗಡೆ ಹೊಂದಿದವನಾಗಿ, ದೋಷದೂರನಾಗಿ, ಭಗವಂತನನ್ನು ಸೇರಿದವನಾಗಿ ಪರಮಾತ್ಮನ ಅಧೀನವಾಗಿ ಇರುವ ಜೀವನು ಎಂದಿಗೂ ಪ್ರಾಕೃತಿಕ ಗುಣಗಳ ಜೊತೆಗೆ ಹಿಂದಿರುಗಿ ಬರುವುದಿಲ್ಲ.
ಶಿಷ್ಟಂ ತತ್ರ ಮನಃ ಕರ್ಮಾಣೀಂದ್ರಿಯಾಣಿ ಚ ಭಾರತ |
ಅಸೂಯಾಂತಿ ಯಥಾಕಾಲಂ ಗುರೋಃ ಸಂದೇಶಕಾರಿಣಃ ॥93॥
ಪರಮಾತ್ಮನನ್ನು ಸೇರಿದ ಬಳಿಕ ಜೀವಾತ್ಮನಲ್ಲಿ ಉಳಿದಿರುವ ಚಿನ್ಮಾತ್ರವಾದ ಸ್ವರೂಪಭೂತವಾದ ಮನಸ್ಸು ಮಾತ್ರ. ಆ ಸ್ವರೂಪಭೂತವಾದ ಮನಸ್ಸು ಜೀವನಲ್ಲೇ ಅಡಕವಾದ ಸ್ವರೂಪಭೂತವಾದ ಕರ್ಮೇಂದ್ರಿಯಗಳನ್ನು, ಸ್ವರೂಪಭೂತವಾದ ಜ್ಞಾನೇಂದ್ರಿಯಗಳನ್ನು ಬೇಕಾದಂತೆ ಪ್ರೇರಣೆ ಮಾಡಿ ಬಳಸಿಕೊಳ್ಳುತ್ತದೆ. ಆ ಜೀವಾತ್ಮನಿಗೆ ಅನುಕೂಲವಾಗುವಂತೆ ಅವನ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು ವ್ಯಾಪಾರವನ್ನು ಮಾಡುತ್ತವೆ. ಅವನೆಂದಿಗೂ ದುಃಖಕ್ಕೆ ತುತ್ತಾಗುವುದಿಲ್ಲ. ಆದ್ದರಿಂದ ತನ್ನ ಯೋಗ್ಯತೆಗನುಗುಣವಾಗಿ ಪರಮಾತ್ಮನಂತೆ ಸುಖಿಯಾಗಿ ಇರುತ್ತಾನೆ. ಅವನಲ್ಲಿ ಯಾವ ದೋಷಗಳೂ ಇರುವುದಿಲ್ಲ. ಗುರುವಿನ ಆದೇಶವನ್ನು ಪಾಲನೆ ಮಾಡುವ ಶಿಷ್ಯನಂತೆ ಆ ಯೋಗಿಯ ಆದೇಶಕ್ಕನುಗುಣವಾಗಿ ಸ್ವರೂಪಭೂತವಾದ ಮನಸ್ಸು, ಇಂದ್ರಿಯಗಳು ನಡೆದುಕೊಳ್ಳುತ್ತವೆ. ಆದ್ದರಿಂದ ದುಃಖಕ್ಕೆ ಯಾವ ಕಾರಣವೂ ಇಲ್ಲ ಎಂದು ಭಾವ.
ಶಕ್ಯಂ ಚಾಲ್ಪೇನ ಕಾಲೇನ ಶಾಂತಿಂ ಪ್ರಾಪ್ತುಂ ಗುಣಾರ್ಥಿನಾ |
ಏವಂ ಯುಕ್ತೇನ ಕೌಂತೇಯ ಯುಕ್ತಜ್ಞಾನೇನ ಮೋಕ್ಷಿಣಾ ॥94॥
ಈ ರೀತಿಯಾಗಿ ಹೇಳಿದ ಸಾಂಖ್ಯಯೋಗದ ಭಾವದಿಂದ ಕೂಡಿದ, ಮೋಕ್ಷಕ್ಕೆ ಅಧಿಕಾರಿಯಾದ, ಆಧ್ಯಾತ್ಮಿಕ ಉನ್ನತಿಯನ್ನು ಹೊಂದಲು ಬಯಕೆಯುಳ್ಳ ಮನುಷ್ಯನು ಸ್ವಲ್ಪ ಕಾಲದಲ್ಲಿಯೇ ಶಾಂತಿಯನ್ನು ಪಡೆಯುವ ಸಾಧ್ಯತೆ ಇದೆ.
ಸಾಂಖ್ಯಾ ರಾಜನ್ಮಹಾಪ್ರಾಜ್ಞಾ ಗಚ್ಛಂತಿ ಪರಮಾಂ ಗತಿಮ್ |
ಜ್ಞಾನೇನಾನೇನ ಕೌಂತೇಯ ತುಲ್ಯಂ ಜ್ಞಾನಂ ನ ವಿದ್ಯತೇ ॥95॥
ಕುಂತೀಸುತನೇ, ಮಹಾಜ್ಞಾನಿಗಳಾದ ಸಾಂಖ್ಯಯೋಗಿಗಳು ಇಂತಹ ಜ್ಞಾನದಿಂದ ಪರಮಗತಿಯನ್ನು ಹೊಂದುತ್ತಾರೆ. ಈ ಜ್ಞಾನಕ್ಕೆ ಸಮಾನವಾದ ಜ್ಞಾನವು ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ.
ಅತ್ರ ತೇ ಸಂಶಯೋ ಮಾ ಭೂಜ್ಜ್ಞಾನಂ ಸಾಂಖ್ಯಂ ಪರಂ ಮತಮ್ |
ಅಕ್ಷರಂ ಧ್ರುವಮವ್ಯಕ್ತಂ ಪೂರ್ವಂ ಬ್ರಹ್ಮ ಸನಾತನಮ್ ॥96॥
ಈ ಯಥಾರ್ಥ ಜ್ಞಾನದ ವಿಷಯದಲ್ಲಿ, ಇದರ ಉತ್ಕೃಷ್ಟತೆಯ ಬಗ್ಗೆ ನಿನಗೆ ಯಾವ ಸಂಶಯವೂ ಉಳಿಯದಿರಲಿ. ಈ ಶಾಸ್ತ್ರದಲ್ಲಿ ಎಂದೂ ನಾಶವಾಗದ, ಸ್ಥಿರವಾದ, ಸನಾತನನಾದ ಪರಬ್ರಹ್ಮನು ಪ್ರತಿಪಾದಿತನಾಗಿದ್ದಾನೆ.
ಅನಾದಿಮಧ್ಯನಿಧನಂ ನಿರ್ದ್ವಂದ್ವಂ ಕರ್ತೃ ಶಾಶ್ವತಮ್ |
ಕೂಟಸ್ಥಂ ಚೈವ ನಿತ್ಯಂ ಚ ಯದ್ವದಂತಿ ಶಮಾತ್ಮಕಾಃ ॥97॥
ಆ ಪರಬ್ರಹ್ಮನು ಆದಿ-ಮಧ್ಯಾಂತಗಳಿಂದ ದೂರನಾಗಿದ್ದಾನೆ. ವಿರುದ್ಧ ಗುಣಗಳಿಂದ, ದ್ವಂದ್ವಗಳಿಂದ ರಹಿತನಾಗಿದ್ದಾನೆ. ಜಗತ್ತಿನ ಉತ್ಪತ್ತಿಗೆ ಕಾರಣನಾಗಿದ್ದಾನೆ. ಶಾಶ್ವತನಾಗಿದ್ದಾನೆ. ಇವನನ್ನು ಜ್ಞಾನಿಗಳು ಕೂಟಸ್ಥನೆಂದು, ನಿತ್ಯನೆಂದು ಕರೆಯುತ್ತಾರೆ.
ಯತಃ ಸರ್ವಾಃ ಪ್ರವರ್ತಂತೇ ಸರ್ಗಪ್ರಲಯವಿಕ್ರಿಯಾಃ |
ಯಚ್ಚ ಶಂಸಂತಿ ಶಾಸ್ತ್ರೇಷು ವದಂತಿ ಪರಮರ್ಷಯಃ ॥98॥
ಪರಮಾತ್ಮನ ದೆಸೆಯಿಂದಲೇ ಈ ಜಗತ್ತಿನ ಸೃಷ್ಟಿ-ಪ್ರಳಯ ಮೊದಲಾದ ವಿಕಾರಗಳು ಉಂಟಾಗುತ್ತವೆಯೋ ಅಂತಹ ಪರಬ್ರಹ್ಮನನ್ನೇ ಶಾಸ್ತ್ರಗಳಲ್ಲಿ ಸ್ತುತಿಸಿದ್ದಾರೆ. ಶ್ರೇಷ್ಠರಾದ ಋಷಿಗಳೂ ಇವನ ವಿಷಯದಲ್ಲಿಯೇ ನಿರಂತರ ಮಾತನಾಡುತ್ತಾರೆ.
ಸರ್ವೇ ವಿಪ್ರಾಶ್ಚ ದೇವಾಶ್ಚ ತಥಾಗಮವಿದೋ ಜನಾಃ |
ಬ್ರಹ್ಮಣ್ಯಂ ಪರಮಂ ದೇವಮನಂತಂ ಪರತೋಽಚ್ಯುತಮ್ ॥99॥
ಪ್ರಾರ್ಥಯಂತಶ್ಚ ತಂ ವಿಪ್ರಾ ವದಂತಿ ಗುಣಬುದ್ಧಯಃ |
ಸಮ್ಯಗ್ಯುಕ್ತಾಸ್ತಥಾ ಯೋಗಾಃ ಸಾಂಖ್ಯಾಶ್ಚಾಮಿತದರ್ಶನಾಃ ॥100॥
ಸಮಸ್ತ ವಿಪ್ರವೃಂದವು, ದೇವತೆಗಳು, ಕ್ಷಮೆ ಹೊಂದಿರುವ ಸಜ್ಜನರು, ಯೋಗ ಸಿದ್ಧಿಯನ್ನು ಪಡೆದವರು, ಅಪಾರ ಯೋಗವುಳ್ಳ ಸಾಂಖ್ಯಯೋಗಿಗಳು ಬ್ರಾಹ್ಮಣ ಪ್ರಿಯನಾದ, ಸರ್ವೋತ್ತಮನಾದ, ಅಚ್ಯುತನಾದ, ಪರಮದೇವನಾದ ಭಗವಂತನನ್ನು ಪ್ರಾರ್ಥಿಸುತ್ತಾ ಅವನ ಗುಣಗಳನ್ನೇ ಕೀರ್ತನೆ ಮಾಡುತ್ತಾರೆ.
ಅಮೂರ್ತೇಸ್ತಸ್ಯ ಕೌಂತೇಯ ಸಾಂಖ್ಯಂ ಮೂರ್ತಿರಿತಿ ಶ್ರುತಿಃ |

ಅಭಿಜ್ಞಾನಾನಿ ತಸ್ಯಾಹುರ್ಮತಂ ಹಿ ಭರತರ್ಷಭ ॥101॥
ಪ್ರಾಕೃತ ಮೂರ್ತಿರಹಿತನಾದ ಭಗವಂತನಿಗೆ ಯಥಾರ್ಥ ಜ್ಞಾನವೇ ಕರಚರಣಾದಿ ಆಕಾರವುಳ್ಳ ಶರೀರವಾಗಿದೆ. ಪರಬ್ರಹ್ಮನನ್ನು ಚೆನ್ನಾಗಿ ತಿಳಿಸಿಕೊಡುವಂತಹ ಶಾಸ್ತ್ರವೇ ಸಾಂಖ್ಯಶಾಸ್ತ್ರವೆನಿಸಿದೆ.
ದ್ವಿವಿಧಾನೀಹ ಭೂತಾನಿ ಪೃಥಿವ್ಯಾಂ ಪೃಥಿವೀಪತೇ |
ಜಂಗಮಾಗಮಸಂಜ್ಞಾನಿ ಜಂಗಮಂ ತು ವಿಶಿಷ್ಯತೇ ॥102॥
ಪೃಥಿವೀಪತಿಯೇ, ಜಗತ್ತಿನಲ್ಲಿ ಜಂಗಮ-ಸ್ಥಾವರ ಎಂಬ ಎರಡು ವಿಧ ಪ್ರಾಣಿಗಳಿವೆ. ಎರಡು ಬಗೆಯ ಪ್ರಾಣಿಗಳಲ್ಲಿ ಸ್ಥಿರವಾದ ಗಿಡ-ಮರಗಳಿಗಿಂತಲೂ ಚಲಿಸುವ ಪ್ರಾಣಿಗಳು ಶ್ರೇಷ್ಠವಾದವುಗಳು.
ಜ್ಞಾನಂ ಮಹದ್ ಯದ್ಧಿ ಮಹತ್ಸು ರಾಜನ್
ವೇದೇಷು ಸಾಂಖ್ಯೇಷು ತಥೈವ ಯೋಗೇ |
ಯಚ್ಚಾಪಿ ದೃಷ್ಟಂ ವಿವಿಧಂ ಪುರಾಣಂ
ಸಾಂಖ್ಯಾಗತಂ ತನ್ನಿಖಿಲಂ ನರೇಂದ್ರ ॥103॥
ಮಹಾರಾಜನೇ, ಮಹಾತ್ಮರಾದ ಬ್ರಹ್ಮಜ್ಞಾನಿಗಳಲ್ಲಿ, ವೇದಗಳಲ್ಲಿ, ಸಾಂಖ್ಯ ದರ್ಶನಗಳಲ್ಲಿ, ಯೋಗಶಾಸ್ತ್ರಗಳಲ್ಲಿ, ಪುರಾಣಗಳಲ್ಲಿ, ನಾನಾ ಪ್ರಕಾರಗಳಾದ ಭಗವದ್ವಿಷಯಕ ಜ್ಞಾನಗಳು ಏನು ಕಂಡುಬಂದಿವೆಯೋ ಅವೆಲ್ಲವೂ ಸಾಂಖ್ಯ ಯೋಗದಿಂದಲೇ ಬಂದವುಗಳೆಂದು ತಿಳಿ.
ಯಚ್ಚೇತಿಹಾಸೇಷು ಮಹತ್ಸು ದೃಷ್ಟಂ
ಯಚ್ಚಾರ್ಥಶಾಸ್ತ್ರೇ ನೃಪ ಶಿಷ್ಟಜುಷ್ಟೇ |
ಜ್ಞಾನಂ ಚ ಲೋಕೇ ಯದಿಹಾಸ್ತಿ ಕಿಂಚಿತ್
ಸಾಂಖ್ಯಾಗತಂ ತಚ್ಚ ಮಹನ್ಮಹಾತ್ಮನ್ ॥104॥
ಮಹಾತ್ಮನೇ, ಅತಿಶಯವಾದ ಇತಿಹಾಸಗಳಲ್ಲಿ, ಸತ್ಪುರುಷರಿಂದ ಸೇವಿಸಲ್ಪಡುತ್ತಿರುವ ಅರ್ಥ-ಶಾಸ್ತ್ರಗಳಲ್ಲಿ ಯಾವ ಜ್ಞಾನವು ಕಂಡುಬರುವುದೋ ಅದೂ ಸಾಂಖ್ಯಯೋಗದಿಂದಲೇ. ಪ್ರಪಂಚದಲ್ಲಿ ಉತ್ಕೃಷ್ಟ ಜ್ಞಾನವೆಂಬುದು ಯಾವುದಿದೆಯೋ ಅದೂ ಸಾಂಖ್ಯಶಾಸ್ತ್ರದಿಂದಲೇ ಬಂದಿರುವುದಾಗಿದೆ.
ಶಮಶ್ಚ ದೃಷ್ಟಃ ಪರಮಂ ಬಲಂ ಚ
ಜ್ಞಾನಂ ಚ ಸೂಕ್ಷ್ಮಂ ಚ ಯಥಾವದುಕ್ತಮ್ |
ತಪಾಂಸಿ ಸೂಕ್ಷ್ಮಾಣಿ ಸುಖಾನಿ ಚೈವ
ಸಾಂಖ್ಯೇ ಯಥಾವದ್ ವಿಹಿತಾನಿ ರಾಜನ್ ॥105॥
ಸಾಂಖ್ಯಯೋಗದಲ್ಲಿ ಶಮದ ವಿಷಯವಾಗಿ ಹೇಳಲ್ಪಟ್ಟಿದೆ. ಶ್ರೇಷ್ಠವಾದ ಬಲ ಎಂಬುದು ಯಾವುದು? ಅದನ್ನು ಹೇಗೆ ಸಂಪಾದಿಸಿಕೊಳ್ಳಬೇಕು? ಸೂಕ್ಷ್ಮ ಜ್ಞಾನವು ಯಾವುದು? ತಪಸ್ಸೆಂದರೆ ಯಾವುದು? ಅದರಿಂದ ಲಭಿಸುವ ಸುಖಗಳ್ಯಾವುವು? ಇವೆಲ್ಲವೂ ವಿಷದವಾಗಿ ತಿಳಿಸಲ್ಪಟ್ಟಿವೆ.
ವಿಪರ್ಯಯೇ ತಸ್ಯ ಹಿ ಪಾರ್ಥ ದೇವಾನ್
ಗಚ್ಛಂತಿ ಸಾಂಖ್ಯಾಃ ಸತತಂ ಸುಖೇನ |
ತಾಂಶ್ಚಾನುಸಂಚಿರ್ಯ ತತಃ ಕೃತಾರ್ಥಾಃ
ಪತಂತಿ ವಿಪ್ರೇಷು ಯತೇಷು ಭೂಯಃ ॥106॥
ಮೋಕ್ಷಕ್ಕಿಂತ ವಿಪರೀತವಾದ ಪ್ರವೃತ್ತಿ ಕರ್ಮದಲ್ಲಿ ಕೆಲವೊಮ್ಮೆ ಆಸಕ್ತರಾದರೂ ಸಾಂಖ್ಯತತ್ತ್ವವನ್ನು ಆಶ್ರಯಿಸಿ ದೇವತೆಗಳು ಸಾಧನ ಮಾರ್ಗವನ್ನು ಅವಲಂಬಿಸುತ್ತಾರೆ. ಪ್ರವೃತ್ತಿ ಕರ್ಮದಲ್ಲಿ ಸಂಚರಿಸಿ ಕೃತಾರ್ಥರಾದ ವ್ಯಕ್ತಿಗಳು ಪುನಃ ಜಿತೇಂದ್ರಿಯರಾದ ಬ್ರಾಹ್ಮಣ ಯೋನಿಯಲ್ಲಿ ಜನ್ಮವನ್ನು ತಾಳುತ್ತಾರೆ.
ಹಿತ್ವಾ ಚ ದೇಹಂ ಪ್ರವಿಶಂತಿ ಮೋಕ್ಷಂ
ದಿವೌಕಸೋ ದ್ಯಾಮಿವ ಪಾರ್ಥ ಸಾಂಖ್ಯಾಃ |
ತತೋಽಧಿಕಂ ತೇಽಭಿರತಾ ಮಹಾರ್ಹೇ
ಸಾಂಖ್ಯೇ ದ್ವಿಜಾಃ ಪಾರ್ಥಿವ ಶಿಷ್ಟಜುಷ್ಟೇ ॥107॥
ಕೌಂತೇಯನೇ, ಆಯಾ ದೇಹಗಳಲ್ಲಿ ಸಾಧನೆಯನ್ನು ಮಾಡಿಕೊಂಡು, ಆ ದೇಹವನ್ನು ತ್ಯಜಿಸಿ ದೇವತೆಗಳು ಸ್ವರ್ಗವನ್ನು ಸೇರುವಂತೆ ಸಾಂಖ್ಯಯೋಗಿಗಳು ಮೋಕ್ಷಕ್ಕೆ ಸಾಗುತ್ತಾರೆ. ಆದ್ದರಿಂದ ಶಿಷ್ಟ ಪುರುಷರಿಂದ ಸೇವಿಸಲ್ಪಡುವ, ಪೂಜೆಗೆ ಅರ್ಹವಾದ ಸಾಂಖ್ಯಶಾಸ್ತ್ರದ ವಿಷಯದಲ್ಲಿ ಎಲ್ಲ ದ್ವಿಜರು ಹೆಚ್ಚಿನ ಆಸಕ್ತಿಯುಳ್ಳವರಾಗಿರುತ್ತಾರೆ.
ತೇಷಾಂ ಗತಿರ್ಯದ್ ಗಮನಂ ಹಿ ದೃಷ್ಟಂ
ನಾವಾಗ್ಗತಿಃ ಪಾಪಕೃತಾಂ ನಿವಾಸಃ |
ನ ಚಾಬುಧಾನಾಮಪಿ ತೇ ದ್ವಿಜಾತಯೋ
ಯೇ ಜ್ಞಾನಮೇತನ್ನೃಪತೇಽನುರಕ್ತಾಃ ॥108॥
ಸಾಂಖ್ಯಶಾಸ್ತ್ರದಲ್ಲಿ ಯಾರು ಆಸಕ್ತರಾಗಿರುತ್ತಾರೋ ಅಂತಹ ವ್ಯಕ್ತಿಗಳು ಮರಣೋನ್ಮುಖರಾದ ಬಳಿಕ ತಿರ್ಯಗ್ಯೋನಿಗಳಲ್ಲಿ ಹುಟ್ಟುವುದಿಲ್ಲ. ನರಕಕ್ಕೂ ಹೋಗುವುದಿಲ್ಲ. ಪಾಪಿಗಳ ಮಧ್ಯೆ, ದಡ್ಡರ ಮಧ್ಯೆ ಜನ್ಮವನ್ನು ತಾಳುವುದಿಲ್ಲ. ಉತ್ತಮವಾದ ಮೋಕ್ಷಗಮನವನ್ನೇ ಹೊಂದಿದವರಾಗಿರುತ್ತಾರೆ.
ಸಾಂಖ್ಯಂ ವಿಶಾಲಂ ಪರಮಂ ಪುರಾಣಂ

ಮಹಾರ್ಣವಂ ವಿಮಲಮುದಾರಕಾಂತಮ್ |
ಕೃತ್ಸ್ನಂ ಚ ಸಾಂಖ್ಯಂ ನೃಪತೇ ಮಹಾತ್ಮಾ
ನಾರಾಯಣೋ ಧಾರಯತೇಽಪ್ರಮೇಯಮ್ ॥109॥
ಸಾಂಖ್ಯಯೋಗವು ವಿಶಾಲವಾದುದು, ಪ್ರಾಚೀನವಾದುದು. ಮಹಾಸಾಗರದಂತೆ ಅಗಾಧವೂ, ನಿರ್ಮಲವೂ, ಉದಾರಭಾವದಿಂದ ಪೂರ್ಣವೂ, ಸುಂದರವೂ ಆಗಿದೆ. ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನನು ಅಪ್ರಮೇಯವಾದ ಈ ಸಮಗ್ರ ಸಾಂಖ್ಯತತ್ತ್ವವನ್ನು ಧರಿಸಿರುತ್ತಾನೆ.
ಏತನ್ಮಯೋಕ್ತಂ ನರದೇವ ತತ್ತ್ವಂ
ನಾರಾಯಣೋ ವಿಶ್ವಮಿದಂ ಪುರಾಣಮ್ |
ಸ ಸರ್ಗಕಾಲೇ ಚ ಕರೋತಿ ಸರ್ಗಂ
ಸಂಹಾರಕಾಲೇ ಚ ತದತ್ತಿ ಭೂಯಃ ॥110॥
ನರದೇವನೇ, ಇಂತಹ ಶ್ರೇಷ್ಠವಾದ ಸಾಂಖ್ಯತತ್ತ್ವವನ್ನು ನಿನಗೆ ಉಪದೇಶಿಸಿದ್ದೇನೆ. ಪುರಾತನವಾದ ಜಗತ್ತು ನಾರಾಯಣನಿಂದ ಸೃಷ್ಟವಾಗಿದೆ. ಆ ಸೃಷ್ಟಿಯ ಸಮಯದಲ್ಲಿ ಜಗತ್ತನ್ನು ಸೃಷ್ಟಿಸಿ ಪುನಃ ಸಂಹಾರ ಕಾಲದಲ್ಲಿ ತನ್ನಲ್ಲೇ ಲಯಗೊಳಿಸುತ್ತಾನೆ. ಈ ಜಗತ್ತಿನ ಅಂತರ್ಯಾಮಿಯಾದ ನಾರಾಯಣನು ಸಮಗ್ರವಾದ ಜಗತ್ತನ್ನು ತನ್ನಲ್ಲೇ ಲಯ ಮಾಡಿಕೊಂಡು ವಿಶಾಲವಾದ ಪ್ರಳಯ ಕಾಲದ ಸಮುದ್ರದಲ್ಲಿ ಪವಡಿಸುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಸ್ತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೈದನೆಯ ಅಧ್ಯಾಯ
ವಸಿಷ್ಠ ಕರಾಲ ಜನಕರ ಸಂವಾದ. ಕ್ಷರ-ಅಕ್ಷರ ತತ್ತ್ವಗಳ ನಿರೂಪಣೆ ಮತ್ತು
ಅವುಗಳ ಜ್ಞಾನದಿಂದ ಸಿಗುವ ಫಲ.
ಯುಧಿಷ್ಠಿರಃ
ಕಿಂ ತದಕ್ಷರಮಿತ್ಯುಕ್ತಂ ಯಸ್ಮಾನ್ನಾವರ್ತತೇ ಪುನಃ |
ಕಿಂ ಚ ತತ್ಕ್ಷರಮಿತ್ಯುಕ್ತಂ ಯಸ್ಮಾದಾವರ್ತತೇ ಪುನಃ ॥1॥
ಯುಧಿಷ್ಠಿರ ಪಿತಾಮಹನೇ, ಯಾವುದನ್ನು ಹೊಂದಿದ ಬಳಿಕ ಪುನಃ ಮರಳಿ ಈ ಸಂಸಾರಕ್ಕೆ ಬರುವುದಿಲ್ಲವೋ ಅಂತಹ ಅಕ್ಷರ ಪುರುಷನ ಲಕ್ಷಣವೇನು? ಯಾವುದನ್ನು ಹೊಂದುವುದರಿಂದ ಪುನಃ ಈ ಸಂಸಾರ ಸ್ಥಿತಿಯನ್ನು ಹೊಂದುತ್ತಾನೋ ಅಂತಹ ಕ್ಷರ ವಸ್ತುವಿನ ಲಕ್ಷಣವಾದರೂ ಏನು?
ಅಕ್ಷರಕ್ಷರಯೋರ್ವ್ಯಕ್ತಿಮಿಚ್ಛಾಮ್ಯರಿನಿಷೂದನ |
ಉಪಲಬ್ಧುಂ ಮಹಾಬಾಹೋ ತತ್ತ್ವೇನ ಕುರುನಂದನ ॥2॥
ಶತ್ರುಗಳನ್ನು ಸದೆಬಡಿದವನೇ, ಮಹಾಬಾಹುವೇ, ಕುರುಶ್ರೇಷ್ಠನೇ, ಕ್ಷರ ಮತ್ತು ಅಕ್ಷರ ಪುರುಷರ ಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಳ್ಳುವ ದೃಷ್ಟಿಯಿಂದ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ.
ತ್ವಂ ಹಿ ಜ್ಞಾನನಿಧಿರ್ವಿಪ್ರೈರುಚ್ಯಸೇ ವೇದಪಾರಗೈಃ |
ಋಷಿಭಿಶ್ಚ ಮಹಾಭಾಗೈರ್ಯತಿಭಿಶ್ಚ ಮಹಾತ್ಮಭಿಃ ॥3॥
ವೇದಾಂತವನ್ನು ತಿಳಿದ, ಮಹಾಭಾಗ್ಯಶಾಲಿಗಳಾದ ಋಷಿಗಳು, ಮಹಾತ್ಮರಾದ ಯತಿಗಳು ನಿನ್ನನ್ನೇ ಜ್ಞಾನನಿಧಿ ಎಂದು ಹೇಳುತ್ತಾರೆ.
ಶೇಷಮಲ್ಪಂ ದಿನಾನಾಂ ತೇ ದಕ್ಷಿಣಾಯನಭಾಸ್ಕರೇ |
ಆವೃತ್ತೇ ಭಗವತ್ಯರ್ಕೇ ಗಂತಾಸಿ ಪರಮಾಂ ಗತಿಮ್ ॥4॥
ಸೂರ್ಯನು ಈಗ ದಕ್ಷಿಣಾಯನದಲ್ಲಿ ಇರುತ್ತಾನೆ. ನಿನ್ನ ಆಯುಷ್ಯದ ಕೆಲವೇ ದಿವಸಗಳು ಉಳಿದುಕೊಂಡಿರುತ್ತವೆ. ಪೂಜ್ಯನಾದ ಸೂರ್ಯನು ಉತ್ತರಾಯಣಕ್ಕೆ ಬಂದ ಕೂಡಲೇ ನೀನು ಪರಮಗತಿಯನ್ನು ಹೊಂದಲಿರುವಿ.
ತ್ವಯಿ ಪ್ರತಿಗತೇ ಶ್ರೇಯಃ ಕುತಃ ಶ್ರೋಷ್ಯಾಮಹೇ ವಯಮ್ |
ಕುರುವಂಶಪ್ರದೀಪಸ್ತ್ವಂ ಜ್ಞಾನದ್ರವ್ಯೇಣ ದೀಪ್ಯಸೇ ॥5॥
ನೀನು ಉತ್ತಮ ಸ್ಥಾನವನ್ನು ಸೇರಿದ ಬಳಿಕ ನಮ್ಮ ಬದುಕಿಗೆ ಬೇಕಾದ ಶ್ರೇಯಸ್ಸಿನ ಬಗ್ಗೆ ನಾವು ಯಾರಿಂದ ಕೇಳೋಣ? ಕುರುವಂಶವನ್ನು ಬೆಳಗಿದ ನೀನು ಜ್ಞಾನದ ಬೆಳಕಿನಿಂದ ಬೆಳಗುತ್ತಿರುವೆ.
ತದೇತಚ್ಛ್ರೋತುಮಿಚ್ಛಾಮಿ ತ್ವತ್ತಃ ಕುರುಕುಲೋದ್ವಹ |
ನ ತೃಪ್ಯಾಮೀಹ ರಾಜೇಂದ್ರ ಶೃಣ್ವನ್ನಮೃತಮೀದೃಶಮ್ ॥6॥
ಕುರುಕುಲಶ್ರೇಷ್ಠನೇ, ರಾಜೇಂದ್ರನೇ, ಆದ್ದರಿಂದ ನಿನ್ನ ಮೂಲಕ ಈ ಸಮಸ್ತ ವಿಷಯವನ್ನು ತಿಳಿಯಬಯಸಿರುವೆ. ನಿನ್ನಿಂದ ಅಮೃತಮಯವಾದ ಪ್ರವಚನವನ್ನು ಕೇಳುತ್ತಿರುವುದರಿಂದ ತೃಪ್ತಿ ಎಂಬುದಿಲ್ಲ. ಮತ್ತೂ ಕೇಳಬೇಕೆಂದಿರುವ ನನಗೆ ಕ್ಷರಾಕ್ಷರಗಳ ಬಗ್ಗೆ ವಿವರಿಸು.
ಭೀಷ್ಮಃ
ಅತ್ರ ತೇ ವರ್ತಯಿಷ್ಯೇಽಹಮಿತಿಹಾಸಂ ಪುರಾತನಮ್ |
ವಸಿಷ್ಠಸ್ಯ ಚ ಸಂವಾದಂ ಕರಾಲಜನಕಸ್ಯ ಚ ॥7॥

ಭೀಷ್ಮ ಯುಧಿಷ್ಠಿರನೇ, ಇದೇ ವಿಷಯದಲ್ಲಿ ನಾನು ನಿನಗೆ ಹಿಂದೆ ನಡೆದ ವಸಿಷ್ಠ ಮತ್ತು ಕರಾಲಜನಕನ ಪುರಾತನವಾದ, ಇತಿಹಾಸರೂಪವಾದ ಸಂವಾದವನ್ನು ತಿಳಿಸುತ್ತೇನೆ.
ವಸಿಷ್ಠಂ ಶ್ರೇಷ್ಠಮಾಸೀನಮೃಷೀಣಾಂ ಭಾಸ್ಕರದ್ಯುತಿಮ್ |
ಪಪ್ರಚ್ಛ ಜನಕೋ ರಾಜಾ ಜ್ಞಾನಂ ನೈಃಶ್ರೇಯಸಂ ಪರಮ್ ॥8॥
ಹಿಂದೊಮ್ಮೆ ಕರಾಲಜನಕನು ಶ್ರೇಷ್ಠ ಋಷಿಗಳಾದ, ಸೂರ್ಯಸಮಾನ ತೇಜಸ್ವಿಯಾದ, ಸುಖವಾಗಿ ಕುಳಿತಿದ್ದ ವಸಿಷ್ಠರನ್ನು ಸಮೀಪಿಸಿ ಆತ್ಯಂತಿಕ ಸುಖಕ್ಕೆ ಕಾರಣವಾದ ಜ್ಞಾನ ಯಾವುದೆಂಬುದನ್ನು ಪ್ರಶ್ನಿಸಿದನು.
ಪರಮಧ್ಯಾತ್ಮಕುಶಲಮಧ್ಯಾತ್ಮಗತಿನಿಶ್ಚಯಮ್ |
ಮೈತ್ರಾವರುಣಿಮಾಸೀನಮಭಿವಾದ್ಯ ಕೃತಾಂಜಲಿಃ ॥9॥
ಅಧ್ಯಾತ್ಮ ವಿದ್ಯೆಯಲ್ಲಿ ಜ್ಞಾನಿಗಳಾದ, ಅಧ್ಯಾತ್ಮ ಮಾರ್ಗದಲ್ಲಿ ನಿಶ್ಚಯವಾದ ಜ್ಞಾನವನ್ನು ಹೊಂದಿರುವ ಮಿತ್ರಾವರುಣರ ಮಕ್ಕಳಾದ ವಸಿಷ್ಠರ ಬಳಿ ಹೋಗಿ ಮಹರ್ಷಿಗಳನ್ನು ನಮಸ್ಕರಿಸಿದನು.
ಸ್ವಕ್ಷರಂ ಪ್ರಶ್ರಿತಂ ವಾಕ್ಯಂ ಮಧುರಂ ಚಾಪ್ಯನುಲ್ಬಣಮ್ |
ಪಪ್ರಚ್ಛರ್ಷಿವರಂ ರಾಜಾ ಕರಾಲಜನಕಃ ಪುರಾ ॥10॥
ಕೈಮುಗಿದು ಒಳ್ಳೆಯ ಅಕ್ಷರ ಸಂಪತ್ತಿನಿಂದ ಕೂಡಿದ, ಜ್ಞೇಯ ಪೂರ್ಣವಾದ, ಮಧುರವಾದ, ಕರ್ಕಶವಲ್ಲದ ಮಾತುಗಳಿಂದ ಕರಾಲಜನಕನು ಕಶ್ಯಪರನ್ನು ಹೀಗೆ ಪ್ರಶ್ನಿಸಿದನು.
ಭಗವನ್ ಶ್ರೋತುಮಿಚ್ಛಾಮಿ ಪರಂ ಬ್ರಹ್ಮ ಸನಾತನಮ್ |
ಯಸ್ಮಾನ್ನ ಪುನರಾವೃತ್ತಿಮಾಪ್ನುವಂತಿ ಮನೀಷಿಣಃ ॥11॥
ಪೂಜ್ಯರೇ, ಯಾವ ಸ್ಥಾನದಿಂದ ಮನುಷ್ಯರು ಪುನಃ ಈ ಸಂಸಾರಕ್ಕೆ ಮರಳಿ ಬರುವುದಿಲ್ಲವೋ ಅಂತಹ ಸನಾತನನಾದ ಪರಬ್ರಹ್ಮನ ಬಗ್ಗೆ ನಿಮ್ಮ ಬಳಿ ಕೇಳಲು ಬಯಸುತ್ತೇನೆ.
ಯಚ್ಚ ತತ್ಕರಮಿತ್ಯುಕ್ತಂ ಯತ್ರೇದಂ ಕ್ಷರತೇ ಜಗತ್ |
ಯಚ್ಚಾಕ್ಷರಮಿತಿ ಪ್ರೋಕ್ತಂ ಶಿವಂ ಕ್ಷೇಮ್ಯಮನಾಮಯಮ್ ॥12॥
ಯಾವುದು ಕ್ಷರವೆಂದು ಹೇಳಲ್ಪಡುತ್ತದೆ? ಜಗತ್ತೆಲ್ಲವೂ ಯಾವ ವಸ್ತುವಿನಲ್ಲಿ ನಾಶವನ್ನು ಹೊಂದುತ್ತದೆ? ಯಾವುದು ಮಂಗಳಕರವಾಗಿಯೂ, ಕ್ಷೇಮಕರವಾಗಿಯೂ, ಯಾವುದೇ ದೋಷಗಳಿಲ್ಲದೆ ಇರುವ ಅಕ್ಷರವೆಂದು ಹೇಳಲ್ಪಟ್ಟಿದೆ? ಈ ವಿಷಯವನ್ನು ನಿಮ್ಮಿಂದ ತಿಳಿಯಬಯಸುತ್ತೇನೆ.
ವಸಿಷ್ಠಃ
ಶ್ರೂಯತಾಂ ಪೃಥಿವೀಪಾಲ ಕ್ಷರತೀದಂ ಯಥಾ ಜಗತ್ |
ಯನ್ನ ಕ್ಷರತಿ ಪೂರ್ವೇಣ ಯಾವತ್ ಕಾಲೇನ ಚಾಪ್ಯಥ ॥13॥
ವಸಿಷ್ಠರು ಭೂಪಾಲನೇ, ಈ ಜಗತ್ತೆಲ್ಲವೂ ಹೇಗೆ ವಿಕಾರವನ್ನು ಹೊಂದುತ್ತದೆ ಎಂಬ ವಿಷಯವನ್ನು, ಯಾವುದು ವಿಕಾರ ಹೊಂದುವುದಿಲ್ಲ ಎಂಬ ವಿಷಯವನ್ನು ಹೇಳುತ್ತೇನೆ, ಕೇಳು.
ಯುಗಂ ದ್ವಾದಶಸಾಹಸ್ರಂ ಕಲ್ಪಂ ವಿದ್ಧಿ ಚತುರ್ಯುಗಮ್ |
ದಶಕಲ್ಪಶತಾವೃತ್ತಂ ತದಹರ್ಬ್ರಹ್ಮಮುಚ್ಯತೇ |
ರಾತ್ರಿಶ್ಚೈತಾವತೀ ರಾಜನ್ ಯಸ್ಯಾಂತೇ ಪ್ರತಿಬುದ್ಧ್ಯತೇ ॥14॥
ದೇವತೆಗಳ ಲೆಕ್ಕದ ಪ್ರಕಾರ ಹನ್ನೆರಡು ಸಾವಿರ ವರ್ಷಗಳಿಗೆ ಒಂದು ಚತುರ್ಯುಗವಾಗುತ್ತದೆ. ಇದನ್ನು ಕಲ್ಪವೆಂದು ಅಥವಾ ಮಹಾಯುಗವೆಂದು ಕರೆಯುತ್ತಾರೆ. ಇಂತಹ ಒಂದು ಸಾವಿರ ಕಲ್ಪಗಳು ಅಥವಾ ಮಹಾಯುಗವು ಬ್ರಹ್ಮನಿಗೆ ಒಂದು ದಿವಸವಾಗುತ್ತದೆ. ಬ್ರಹ್ಮನ ರಾತ್ರಿಯು ಒಂದು ಸಾವಿರ ಕಲ್ಪ ಪರಿಮಾಣವುಳ್ಳದ್ದೇ ಆಗಿದೆ. ಇಂತಹ ಒಂದು ಹಗಲು-ರಾತ್ರಿಯು ಕಳೆದ ಬಳಿಕ ಬ್ರಹ್ಮನು ಸೃಷ್ಟಿಗಾಗಿ ಎಚ್ಚರಗೊಳ್ಳುತ್ತಾನೆ.
ಸೃಜತ್ಯನಂತಕರ್ಮಾಣಂ ಮಹಾಂತಂ ಭೂತಮಗ್ರಜಮ್ |
ಮೂರ್ತಿಮಂತಮಮೂರ್ತಾತ್ಮಾ ವಿಶ್ವಂ ಶಂಭುಃ ಸ್ವಯಂಭುವಮ್ |
ಅಣಿಮಾ ಲಘಿಮಾ ಪ್ರಾಪ್ತಿರೀಶಾನಂ ಜ್ಯೋತಿರವ್ಯಯಮ್ ॥15॥
ಶಂಭು ಎನಿಸಿದ ನಾರಾಯಣನು ಅನಂತ ಕರ್ಮಗಳಿಂದ ಕೂಡಿದ, ಅನಂತ ಮೂರ್ತಿಗಳಿಂದ ಕೂಡಿರುವ, ಮಹಾಭೂತನಾದ, ಎಲ್ಲರಿಗೂ ಹಿರಿಯನಾದ, ಮೂರ್ತಸ್ವರೂಪನಾದ, ವಿಶ್ವರೂಪನಾದ, ಸ್ವಯಂಭು ಎನಿಸಿದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸುತ್ತಾನೆ. ಈ ಸ್ವಯಂಭು ಎನಿಸಿದ ಚತುರ್ಮುಖ ಬ್ರಹ್ಮನಾದರೂ ಅಣಿಮಾ, ಲಘಿಮಾ, ಪ್ರಾಪ್ತಿ, ಈಶಾನ, ಜ್ಯೋತಿ, ಅವ್ಯಯ ಇವೇ ಮೊದಲಾದ ಸಿದ್ಧಿಗಳನ್ನು ಪಡೆದಿರುತ್ತಾನೆ.
ಸರ್ವತಃಪಾಣಿಪಾದಾಂತಂ ಸರ್ವತೋಕ್ಷಿಶಿರೋಮುಖಮ್ |
ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥16॥
ಎಲ್ಲ ಕಡೆಯಲ್ಲೂ ವ್ಯಾಪ್ತವಾದ ಕೈ-ಕಾಲುಗಳಿಂದಲೂ, ಕಣ್ಣು-ಶಿರಸ್ಸುಗಳಿಂದಲೂ, ಮುಖಗಳಿಂದಲೂ ಕೂಡಿರುವ, ಎಲ್ಲ ಕಡೆಯಲ್ಲಿಯೂ ಕಿವಿಗಳನ್ನು ಹೊಂದಿರುವ ಪರಮಾತ್ಮನು ಎಲ್ಲವನ್ನೂ ಆವರಿಸಿ ನಿಂತಿರುತ್ತಾನೆ.
ಹಿರಣ್ಯಗರ್ಭೋ ಭಗವಾನೇಷ ಬುದ್ಧಿರಿತಿ ಸ್ಮೃತಃ |
ಮಹಾನಿತಿ ಚ ಯೋಗೇಷು ವಿರಿಂಚ ಇತಿ ಚಾಪ್ಯಜಃ ॥17॥
ಷಡ್ಗುಣಪೂರ್ಣನಾದ ಹಿರಣ್ಯಗರ್ಭನು ಬುದ್ಧಿ ಎಂದು ಹೇಳಲ್ಪಡುತ್ತಾನೆ. ಯೋಗಶಾಸ್ತ್ರದಲ್ಲಿ ಇವನನ್ನೇ ವಿರಿಂಚಿ, ಮಹತ್, ಅಜ ಎಂದು ಕರೆಯುತ್ತಾರೆ.

ಸಾಂಖ್ಯೇ ಚ ಪಠ್ಯತೇ ಶಾಸ್ತ್ರೇ ನಾಮಭಿರ್ಬಹುಧಾತ್ಮಕಃ |
ವಿಚಿತ್ರರೂಪೋ ವಿಶ್ವಾತ್ಮಾ ಏಕಾಕ್ಷರ ಇತಿ ಸ್ಮೃತಃ ॥18॥
ಸಾಂಖ್ಯಶಾಸ್ತ್ರದಲ್ಲಿಯೂ ಅನೇಕ ನಾಮಗಳಿಂದ ಇವನ ವರ್ಣನೆಯು ಇದೆ. ವಿಚಿತ್ರರೂಪ, ವಿಶ್ವಾತ್ಮ, ಏಕಾಕ್ಷರ ಎಂದು ಕರೆಯಲ್ಪಡುತ್ತಾನೆ.
ವೃತಂ ನೈಕಾತ್ಮಕಂ ಯೇನ ಕೃತ್ಸ್ನಂ ತ್ರೈಲೋಕ್ಯಮಾತ್ಮನಾ |
ತಥೈವ ಬಹುರೂಪತ್ವಾದ್ ವಿಶ್ವರೂಪ ಇತಿ ಸ್ಮೃತಃ ॥19॥
ಈ ಹಿರಣ್ಯಗರ್ಭನು ನಾನಾ ರೂಪವಾದ ಜಗತ್ತನ್ನು ಸೃಷ್ಟಿಸಿ, ಆ ಜಗತ್ತಿನಲ್ಲಿ ವ್ಯಾಪಿಸಿರುವುದರಿಂದ ವಿಶ್ವರೂಪನೆಂದು ಕರೆಯಲ್ಪಡುತ್ತಾನೆ.
ಏಷ ವೈ ವಿಕ್ರಿಯಾಪನ್ನಃ ಸೃಜತ್ಯಾತ್ಮಾನಮಾತ್ಮನಾ |
ಅಹಂಕಾರಂ ಮಹಾತೇಜಾಃ ಪ್ರಜಾಪತಿಮಹಂಕೃತಮ್ ॥20॥
ಮಹಾತೇಜಸ್ವಿಯಾದ, ಪೂಜ್ಯನಾದ ಹಿರಣ್ಯಗರ್ಭನು ವಿಕಾರವನ್ನು ಹೊಂದಿ ಅಹಂಕಾರವೆಂಬ ತತ್ತ್ವವನ್ನು,ಅದರ ಅಭಿಮಾನಿಯಾದ ಪ್ರಜಾಪತಿಯನ್ನು ತನ್ನ ಮೂಲಕ ಸೃಷ್ಟಿಸಿರುತ್ತಾನೆ.
ಅವ್ಯಕ್ತಾದ್ ವ್ಯಕ್ತಮುತ್ಪನ್ನಂ ವಿದ್ಯಾಸರ್ಗಂ ವದಂತಿ ತಮ್ |
ಮಹಾಂತಂ ಚಾಪ್ಯಹಂಕಾರಮವಿದ್ಯಾಸರ್ಗಮೇವ ಚ ॥21॥
ಅವ್ಯಕ್ತ ತತ್ತ್ವದಿಂದ ವ್ಯಕ್ತವೆನಿಸಿದ ಮಹತ್ತತ್ತ್ವವು ಸೃಷ್ಟಿ ಹೊಂದಿದೆ. ಮಹತ್ತತ್ತ್ವ, ಅಹಂಕಾರ ತತ್ತ್ವಗಳಿಗೆ ಗುರುವಾಗಿರುವುದರಿಂದ ಅವ್ಯಕ್ತ ತತ್ತ್ವವನ್ನು ವಿದ್ಯಾ ಸ್ವರ್ಗವೆನ್ನುತ್ತಾರೆ. ಮಹತ್ತತ್ತ್ವ, ಅಹಂಕಾರತತ್ತ್ವಗಳಿಗೆ ಅವಿದ್ಯಾ ಸ್ವರ್ಗ ಎಂದು ಹೆಸರು.
ಅಪರಶ್ಚ ಪರಶ್ಚೈವ ಸಮುತ್ಪನ್ನೌ ತಥೈಕತಃ |
ವಿದ್ಯಾವಿದ್ಯೇತಿ ವಿಖ್ಯಾತೇ ಶ್ರುತಿಶಾಸ್ತ್ರಾರ್ಥಚಿಂತಕೈಃ ॥22॥
ಅಪರ ಎನಿಸಿದ ಅಹಂಕಾರ ತತತ್ತ್ವಭಿಮಾನಿಯಾದ ರುದ್ರನು, ಪರ ಎನಿಸಿದ ಚತುರ್ಮುಖ ಬ್ರಹ್ಮನು ಒಬ್ಬನೇ ನಾರಾಯಣನಿಂದ ಉತ್ಪತ್ತಿಯನ್ನು ಹೊಂದಿರುತ್ತಾರೆ. ಚತುರ್ಮುಖ ಬ್ರಹ್ಮನು ಬ್ರಹ್ಮ ಎಂಬ ಭಗವಂತನ ರೂಪವನ್ನು ತನ್ನ ಹೃದಯದಲ್ಲಿ ಇರಿಸಿಕೊಂಡು ಜಗತ್ತನ್ನು ಸೃಷ್ಟಿಸುತ್ತಾನೆ ಎಂಬುದನ್ನು ಸೂಚಿಸಲು ಏಕತಃ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ ಎಂದು ಭಾವ. ಶ್ರುತಿ ಮತ್ತು ಶಾಸ್ತ್ರಗಳ ಅರ್ಥವನ್ನು ವಿಚಾರ ಮಾಡುವ ವಿದ್ವಾಂಸರು ವಿದ್ಯೆ, ಅವಿದ್ಯೆ ಎಂಬ ಪದಗಳಿಂದ ಇವುಗಳನ್ನು ಕರೆದಿರುತ್ತಾರೆ.
ಭೂತಸರ್ಗಮಹಂಕಾರಾತ್ತೃತೀಯಂ ವಿದ್ಧಿ ಪಾರ್ಥಿವ |
ಅಹಂಕಾರೇಷು ಸರ್ವೇಷು ಚತುರ್ಥಂ ವಿದ್ಧಿ ವೈಕೃತಮ್ ॥23॥
ಅಹಂಕಾರದಿಂದ ಯಾವ ಭೂತ ಸೂಕ್ಷ್ಮಗಳ ಸೃಷ್ಟಿಯಾಗಿದೆಯೋ ಅದನ್ನು ಮೂರನೆಯ ಸೃಷ್ಟಿ ಎಂದು ರಾಜನೇ, ತಿಳಿದುಕೊ. ವೈಕಾರಿಕ, ತೈಜಸ, ತಾಮಸ ಎಂಬ ಅಹಂಕಾರಗಳಲ್ಲಿ ವೈಕಾರಿಕ ತೈಜಸಗಳಿಂದ ಸೃಷ್ಟಿಯನ್ನು ಪಡೆದಿರುವ ವಸ್ತುವನ್ನು ನಾಲ್ಕನೆಯದ್ದಾದ ವೈಕೃತ ಸೃಷ್ಟಿ ಎಂದು ತಿಳಿದುಕೊ.
ವಾಯುರ್ಜ್ಯೋತಿರಥಾಕಾಶಮಾಪೋಽಥ ಪೃಥಿವೀ ತಥಾ |
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ ॥24॥
ಆಕಾಶ, ವಾಯು, ತೇಜಸ್ಸು, ಪೃಥಿವಿ, ನೀರು - ಈ ಐದು ಮಹಾ- ಭೂತಗಳೆನಿಸಿವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಈ ಐದು ಭೂತಗಳಿಂದ ಹುಟ್ಟಿರುವ ವಿಷಯಗಳು.
ಏವಂ ಯುಗಪದುತ್ಪನ್ನಂ ದಶವರ್ಗಮಸಂಶಯಮ್ |
ಪಂಚಮಂ ವಿದ್ಧಿ ರಾಜೇಂದ್ರ ಭೌತಿಕಂ ಸರ್ಗಮರ್ಥವತ್ ॥25॥
ಈ ಹತ್ತು ಪದಾರ್ಥಗಳ ಉತ್ಪತ್ತಿಯು ಒಂದೇ ಕಾಲದಲ್ಲಿ ಉಂಟಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ರಾಜೇಂದ್ರನೇ, ಓಷಧಿ, ವನಸ್ಪತ್ಯಾದಿಗಳನ್ನು ಐದನೆಯ ಸೃಷ್ಟಿ ಎನ್ನುತ್ತಾರೆ. ಈ ಸೃಷ್ಟಿಯು ಪ್ರಾಣಿಗಳಿಗೆ ಅನೇಕ ಪ್ರಯೋಜನಗಳಿಂದ ಕೂಡಿರುತ್ತದೆ.
ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ಘ್ರಾಣಮೇವ ಚ ಪಂಚಮಮ್ |
ವಾಕ್ಚ ಹಸ್ತೌ ಚ ಪಾದೌ ಚ ಪಾಯುರ್ಮೇಢ್ರಂ ತಥೈವ ಚ ॥26॥
ಬುದ್ಧೀಂದ್ರಿಯಾಣಿ ಚೈತಾನಿ ತಥಾ ಕರ್ಮೇಂದ್ರಿಯಾಣಿ ಚ |
ಸಂಭೂತಾನೀಹ ಯುಗಪನ್ಮನಸಾ ಸಹ ಪಾರ್ಥಿವ ॥27॥
ಕಿವಿಗಳು, ಚರ್ಮ, ಕಣ್ಣುಗಳು, ನಾಲಿಗೆ, ಮೂಗು ಇವುಗಳು ಜ್ಞಾನೇಂದ್ರಿಯಗಳು. ವಾಕ್, ಪಾಣಿ, ಪಾದ, ಗುದ, ಉಪಸ್ಥ ಇವು ಕರ್ಮೇಂದ್ರಿಯಗಳು. ಮನಸ್ಸಿನಿಂದ ಕೂಡಿದ ಈ ಹತ್ತು ಇಂದ್ರಿಯಗಳು ಏಕಕಾಲದಲ್ಲಿಯೇ ಸೃಷ್ಟಿಗೊಂಡಿರುತ್ತವೆ.
ಏಷಾ ತತ್ತ್ವಚತುರ್ವಿಂಶತ್ ಸರ್ವಾಕೃತಿಷು ವರ್ತತೇ |
ಯಾಂ ಜ್ಞಾತ್ವಾ ನಾಭಿಶೋಚಂತಿ ಬ್ರಾಹ್ಮಣಾಸ್ತತ್ತ್ವದರ್ಶಿನಃ ॥28॥
ಏತದ್ದೇಹಂ ಸಮಾಖ್ಯಾತಂ ತ್ರೈಲೋಕ್ಯೇ ಸರ್ವದೇಹಿಷು |
ವೇದಿತವ್ಯಂ ನರಶ್ರೇಷ್ಠ ಸದೇವನರದಾನವೇ ॥29॥
ಈ ಹಿಂದೆ ಹೇಳಿದ ಇಪ್ಪತ್ನಾಲ್ಕು ತತ್ತ್ವಗಳು ಎಲ್ಲ ಪ್ರಾಣಿಗಳ ಶರೀರದಲ್ಲಿಯೂ ನೆಲೆಗೊಂಡಿರುತ್ತವೆ. ಮಹತ್ತತ್ತ್ವ, ಅಹಂಕಾರತತ್ತ್ವ, ಮನಸ್ಸು, ಬುದ್ಧಿ ಇವುಗಳಿಂದ ಸಹಿತವಾದ ಪಂಚಭೂತಗಳು, ಪಂಚತನ್ಮಾತ್ರಗಳು, ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಎಂಬ ಇಪ್ಪತ್ನಾಲ್ಕು ತತ್ತ್ವಗಳನ್ನು ತಿಳಿದುಕೊಂಡ ತತ್ತ್ವಜ್ಞಾನಿಗಳು ಯಾವುದೇ ಕಾರಣದಿಂದ ದುಃಖಿತರಾಗುವುದಿಲ್ಲ.

ಸಯಕ್ಷಭೂತಗಂಧರ್ವೇ ಸಕಿನ್ನರಮಹೋರಗೇ |
ಸಚಾರಣಪಿಶಾಚೇ ವೈ ಸದೇವರ್ಷಿನಿಶಾಚರೇ ॥30॥
ಸದಂಶಕೀಟಮಶಕೇ ಸಪೂತಿಕೃಮಿಮೂಷಕೇ |
ಶುನಿ ಶ್ವಪಾಕೇ ವೈಣೇಯೇ ಸಚಂಡಾಲೇ ಸಪುಲ್ಕಸೇ ॥31॥
ಹಸ್ತ್ಯಶ್ವಖರಶಾರ್ದೂಲೇ ಸವೃಕ್ಷೇ ಗವಿ ಚೈವ ಹ |
ಯಚ್ಚ ಮೂರ್ತಿಮಯಂ ಕಿಂಚಿತ್ ಸರ್ವತ್ರೈತನ್ನಿದರ್ಶನಮ್ ॥32॥
ಈ ಜಗತ್ತಿನಲ್ಲಿ ಎಷ್ಟು ಜೀವರು ಪಾಂಚಭೌತಿಕ ಶರೀರವನ್ನು ಹೊಂದಿರುತ್ತಾರೋ ಅವರೆಲ್ಲರ ದೇಹವು ಇಪ್ಪತ್ನಾಲ್ಕು ತತ್ತ್ವಗಳ ಶರೀರದಿಂದಲೇ ಕೂಡಿದೆ ಎಂಬುದನ್ನು ತಿಳಿದುಕೊ. ದೇವತೆಗಳು, ಮನುಷ್ಯರು, ದಾನವರು, ಯಕ್ಷರು, ಭೂತಗಳು, ಗಂಧರ್ವರು, ಕಿನ್ನರರು, ಮಹಾ ಉರಗಗಳು, ಚಾರಣರು, ದೇವರ್ಷಿಗಳು, ನಿಶಾಚರರು, ಕಾಡು ನೊಣಗಳು, ಕೀಟಗಳು, ಸೊಳ್ಳೆಗಳು, ದುರ್ಗಂಧದಿಂದ ಕೂಡಿದ ಕ್ರಿಮಿಗಳು, ಇಲಿಗಳು, ನಾಯಿ-ಶ್ವಪಾಕರು, ಜಿಂಕೆ, ಚಂಡಾಲ, ಮ್ಲೇಚ್ಛ, ಆನೆ, ಕುದುರೆ, ಕತ್ತೆ, ಸಿಂಹ, ವೃಕ್ಷ, ಹಸು - ಇವೇ ಮೊದಲಾದ ಯಾವ ಯಾವ ಶರೀರವನ್ನು ಹೊಂದಿರುವ ಪ್ರಾಣಿಗಳು ಇವೆಯೋ ಅವೆಲ್ಲದರಲ್ಲೂ ಈ ಇಪ್ಪತ್ನಾಲ್ಕು ತತ್ತ್ವಗಳನ್ನು ಕಾಣಬಹುದು.
ಜಲೇ ಭುವಿ ತಥಾಕಾಶೇ ನಾನ್ಯತ್ರೇತಿ ವಿನಿಶ್ಚಯಃ |
ಸ್ಥಾನಂ ದೇಹವತಾಮಸ್ತಿ ಇತ್ಯೇವಮನುಶುಶ್ರುಮ ॥33॥
ನೀರು, ಪೃಥಿವಿ, ಆಕಾಶಗಳಲ್ಲಿ ಮಾತ್ರವೇ ದೇಹವನ್ನು ಧರಿಸಿರುವ ಪ್ರಾಣಿಗಳ ವಾಸವಿದೆ. ಬೇರೆ ಎಲ್ಲಿಯೂ ಇಲ್ಲ ಎಂಬುದು ನಿಶ್ಚಿತವಾಗಿದೆ. ಈ ವಿಷಯವನ್ನು ವಿದ್ವಾಂಸರಿಂದ ನಾನು ತಿಳಿದಿದ್ದೇನೆ.
ಕೃತ್ಸ್ನಮೇತಾವತಸ್ತಾತ ಕ್ಷರತೇ ವ್ಯಕ್ತಸಂಜ್ಞಕಮ್ |
ಅಹನ್ಯಹನಿ ಭೂತಾತ್ಮಾ ತತಃ ಕ್ಷರ ಇತಿ ಸ್ಮೃತಃ ॥34॥
ಸಂಪೂರ್ಣವಾದ ಈ ಜಗತ್ತು ವ್ಯಕ್ತ ಎಂಬ ಹೆಸರನ್ನು ಪಡೆದುಕೊಂಡಿದೆ. ಪ್ರತಿನಿತ್ಯವೂ ಪಂಚಭೂತಾತ್ಮಕವಾದ ಈ ಜಗತ್ತು ವಿಕಾರವನ್ನು ಹೊಂದುತ್ತಲೇ ಇದೆ. ಆದ್ದರಿಂದಲೇ ಈ ಜಗತ್ತಿಗೆ ಕ್ಷರ ಎಂದು ಹೆಸರು.
ಏತದಕ್ಷರಮಿತ್ಯುಕ್ತಂ ಕ್ಷರತೀದಂ ಯಥಾ ಜಗತ್ |
ಜಗನ್ಮೋಹಾತ್ಮಕಂ ಪ್ರಾಹುರವ್ಯಕ್ತಂ ವ್ಯಕ್ತಸಂಜ್ಞಕಮ್ ॥35॥
ಈ ಕ್ಷರ ಎನಿಸಿದ ಜಗತ್ತಿಗಿಂತ ವಿಲಕ್ಷಣವಾದುದು ಅಕ್ಷರ ಎನಿಸುತ್ತದೆ. ಈ ಅವ್ಯಕ್ತವಾದ ಅಕ್ಷರ ತತ್ತ್ವದಿಂದಲೇ ಈ ಮೋಹಾತ್ಮಕವಾದ ವ್ಯಕ್ತ ಎಂಬ ಹೆಸರಿನ ಜಗತ್ತು ಹುಟ್ಟುಕೊಂಡಿದೆ.
ಮಹಾಂಶ್ಚೈವಾಗ್ರಜೋ ನಿತ್ಯಮೇತತ್ ಕ್ಷರನಿದರ್ಶನಮ್ |
ಕಥಿತಂ ತೇ ಮಹಾರಾಜ ಯಸ್ಮಾನ್ನಾವರ್ತತೇ ಪುನಃ ॥36॥
ಇಪ್ಪತ್ನಾಲ್ಕು ತತ್ತ್ವಗಳ ಈ ಕ್ಷರ ಎನಿಸಿದ ಜಗತ್ತಿನಲ್ಲಿ ಮೊದಲು ಮಹತ್ತತ್ತ್ವವು ಸೃಷ್ಟಿಯಾಯಿತು. ಇದೇ ಕ್ಷರ ಎನ್ನುವುದರ ಪರಿಚಯವು. ಮಹಾರಾಜನೇ, ಕ್ಷರಾಕ್ಷರಗಳ ವಿಷಯದಲ್ಲಿ ನೀನು ಪ್ರಶ್ನಿಸಿದಂತೆ ಉತ್ತರಿಸಿರುತ್ತೇನೆ.
ಪಂಚವಿಂಶತಿಮೋ ವಿಷ್ಣುರ್ನಿಸ್ತತ್ತ್ವಸ್ತತ್ತ್ವಸಂಜ್ಞಕಃ |
ತತ್ತ್ವಸಂಶ್ರಯಣಾದೇತತ್ ತತ್ತ್ವಮಾಹುರ್ಮನೀಷಿಣಃ ॥37॥
ಹಿಂದೆ ಹೇಳಿದ ಇಪ್ಪತ್ನಾಲ್ಕು ತತ್ತ್ವಗಳನ್ನೂ ಮೀರಿದ ಮಹಾವಿಷ್ಣುವು ಇಪ್ಪತ್ತೈದನೆಯ ತತ್ತ್ವವೆಂದು ಹೇಳಲ್ಪಟ್ಟಿದ್ದಾನೆ. ಮಹಾವಿಷ್ಣುವು ತತ್ತ್ವಗಳಿಗಿಂತ ವಿಲಕ್ಷಣನಾಗಿದ್ದರೂ ಆ ತತ್ತ್ವಗಳಿಗೆ ಆಶ್ರಯವನ್ನು ನೀಡಿರುವುದರಿಂದ ಅವನನ್ನೂ ತತ್ತ್ವವೆಂದೇ ಹೇಳುತ್ತಾರೆ.
ಯದಮೂರ್ತ್ಯಸೃಜದ್ವ್ಯಕ್ತಂ ತತ್ತನ್ಮೂರ್ತ್ಯಧಿತಿಷ್ಠತಿ |
ಚತುರ್ವಿಂಶತಿಮೋ ವ್ಯಕ್ತೋ ಹ್ಯಮೂರ್ತಃ ಪಂಚವಿಂಶಕಃ ॥38॥
ಇಪ್ಪತ್ನಾಲ್ಕನೆಯ ತತ್ತ್ವವು ಪ್ರಕೃತಿ ತತ್ತ್ವವು. ಇಪ್ಪತ್ತೈದನೆಯ ತತ್ತ್ವವು ಅಮೂರ್ತನೆನಿಸಿದ ಪರಮಾತ್ಮನು. ಅವನು ಎಲ್ಲರ ಶರೀರದಲ್ಲಿಯೂ ಅಂತರ್ಯಾಮಿಯಾಗಿ ನೆಲೆಸಿರುತ್ತಾನೆ.
ಸ ಏವ ಹೃದಿ ಸರ್ವಾಸು ಮೂರ್ತಿಷ್ವಾತಿಷ್ಠತೇಽಽತ್ಮವಾನ್ |
ಚೇತಯಂಶ್ಚೇತನೋ ನಿತ್ಯಃ ಸರ್ವಮೂರ್ತಿರಮೂರ್ತಿಮಾನ್ ॥39॥
ನಿತ್ಯನಾದ, ಎಲ್ಲ ರೀತಿಯಾದ ರೂಪವನ್ನು ತಾಳಿದ, ಪ್ರಾಕೃತ ಮೂರ್ತಿ ರಹಿತನಾದ, ಎಲ್ಲರಿಗೂ ಅಂತರ್ಯಾಮಿಯಾದ ಚೇತನನೇ ಸಮಸ್ತ ದೇಹಧಾರಿಗಳ ಹೃದಯದಲ್ಲಿಯೂ ನೆಲೆ ನಿಂತಿರುತ್ತಾನೆ.
ಸರ್ಗಪ್ರಲಯಧರ್ಮಿಣ್ಯಾ ಅಸರ್ಗಪ್ರಳಯಾತ್ಮಕಃ |
ಗೋಚರೇ ವರ್ತತೇ ನಿತ್ಯಂ ನಿರ್ಗುಣೋ ಗುಣಸಂಜ್ಞಕಃ ॥40॥
ಸೃಷ್ಟಿ-ಸ್ಥಿತಿ-ಲಯಗಳನ್ನು ಹೊಂದುವ ಸ್ವಭಾವವುಳ್ಳ ಜೀವರಲ್ಲಿ ಸೃಷ್ಟಿ- ಸ್ಥಿತಿ- ಲಯಗಳನ್ನು ಹೊಂದದೆ ಇರುವಂತಹ ಪರಮಾತ್ಮನು ನಿತ್ಯವೂ ಪ್ರಾಕೃತ ಗುಣರಹಿತನಾಗಿ, ಗುಣವಂತನಾಗಿ ಗೋಚರನಾಗಿರುತ್ತಾನೆ.
ಏವಮೇಷ ಮಹಾನಾತ್ಮಾ ಸರ್ಗಪ್ರಲಯಕೋವಿದಃ |
ವಿಕುರ್ವಾಣಃ ಪ್ರಕೃತಿಮಾನಭಿಮನ್ಯತ್ಯಬುದ್ಧಿಮಾನ್ ॥41॥
ಪ್ರಕೃತಿಯ ಗುಣಗಳನ್ನು ಹೊಂದಿರುವ ಜೀವನು ಹಾಲಿನ ಜೊತೆಗೆ ಬೆರೆತ ನೀರಿನಂತೆ ಒಂದೇ ದೇಹದಲ್ಲಿ ಪರಮಾತ್ಮನ ಸಂಗವನ್ನು ಹೊಂದಿರುವುದರಿಂದ ನಾನು ಬೇರೆಯಲ್ಲ, ಪರಮಾತ್ಮನು ಬೇರೆಯಲ್ಲ, ಗುಣಾತೀತನಾದ ಪರಮಾತ್ಮನೇ ನಾನು ಎಂದು ತಿಳಿಯುತ್ತಾ,
ತಮಃಸತ್ತ್ವರಜೋಯುಕ್ತಸ್ತಾಸು ತಾಸ್ವಿಹ ಯೋನಿಷು |

ಲೀಯತೇಽಪ್ರತಿಬುದ್ಧತ್ವಾದಬುದ್ಧಜನಸೇವನಾತ್ ॥42॥
ಪ್ರಕೃತಿಯ ಸಂಪರ್ಕದಿಂದ ಜೀವನು ಸತ್ತ್ವಗುಣ, ರಜೋಗುಣ, ತಮೋಗುಣವನ್ನು ಹೊಂದುತ್ತಾನೆ. ಅಜ್ಞಾನಿಗಳ ಸಂಗದಲ್ಲಿ ಇರುವುದರಿಂದ ಭಗವತ್ ಸ್ವರೂಪವನ್ನು ಸರಿಯಾಗಿ ತಿಳಿಯದೆ ಅನೇಕ ಯೋನಿಗಳಲ್ಲಿ ಬಳಲುತ್ತಾನೆ. ಯಥಾರ್ಥ ವಿಷಯಕ್ಕೆ ವಿರುದ್ಧವಾಗಿ ಮಾತನಾಡುತ್ತಾನೆ ಎಂದು ಭಾವ.
ಸಹವಾಸೋ ಸಾತ್ ನಿವಾಸಾತ್ಮಾ ನಾನ್ಯೋಽಹಮಿತಿ ಮನ್ಯತೇ |
ಯೋಽಹಂ ಸೋಽಹಮಿತಿ ಹ್ಯುಕ್ತತ್ವ ಗುಣಾನನು ನಿವರ್ತತೇ ॥43॥
ದುಷ್ಕರ ಸಹವಾಸ, ಪ್ರಕೃತಿಯ ಸಹವಾಸದಿಂದ ತನ್ನ ತನವನ್ನು ಕಳೆದುಕೊಂಡ ಚೇತನನು ನಾನು ಬೇರೆಯಲ್ಲ, ಪರಮಾತ್ಮನು ಬೇರೆಯಲ್ಲ ಎಂದು ತಿಳಿಯುತ್ತಾನೆ. ನಾನೇ ಪರಮಾತ್ಮನೆಂದು ಹೇಳುತ್ತಾ ಗುಣಗಳ ಬಂಧನದಲ್ಲಿಯೇ ಸುತ್ತುತ್ತಾನೆ.
ತಮಸಾ ತಾಮಸಾನ್ ಭಾವಾನ್ ವಿವಿಧಾನ್ ಪ್ರತಿಪದ್ಯತೇ |
ರಜಸಾ ರಾಜಸಾಂಶ್ಚೈವ ಸಾತಿತ್ವಕಾನ್ ಸತ್ತ್ವಸಂಶ್ರಯಾತ್ ॥44॥
ತಮೋಗುಣದಿಂದ ತಾಮಸ ಭಾವನೆಗಳನ್ನು ಅನೇಕ ರೀತಿಯಾಗಿ ಹೊಂದುತ್ತಿರುತ್ತಾನೆ. ರಜೋಗುಣದಿಂದ ರಾಜಸ ಭಾವಗಳನ್ನು, ಸತ್ತ್ವಗುಣದಿಂದ ಸಾತ್ವಿಕ ಭಾವನೆಗಳನ್ನು ಹೊಂದುತ್ತಿರುತ್ತಾನೆ.
ಶುಕ್ಲಲೋಹಿತಕೃಷ್ಣಾನಿ ರೂಪಾಣ್ಯೇತಾನಿ ತ್ರೀಣಿ ತು |
ಸರ್ವಾಣ್ಯೇತಾನಿ ರೂಪಾಣಿ ಜಾನೀಹಿ ಪ್ರಾಕೃತಾನಿ ವೈ ॥45॥
ಸತ್ತ್ವಗುಣವು ಬಿಳಿ ಬಣ್ಣವನ್ನು, ರಜೋಗುಣವು ಕೆಂಪು ಬಣ್ಣವನ್ನು, ತಮೋಗುಣವು ಕಪ್ಪು ಬಣ್ಣವನ್ನು ಸೂಚಿಸುತ್ತದೆ. ಪ್ರಕೃತಿಯಲ್ಲಿ ಯಾವ ರೂಪಗಳು ಪ್ರಕಟವಾಗುತ್ತವೋ ಅವುಗಳೆಲ್ಲ ಈ ಮೂರು ಬಣ್ಣಗಳಲ್ಲಿಯೇ ಸೇರಿಕೊಂಡಿರುತ್ತವೆ.
ತಾಮಸಾ ನಿರಯಂ ಯಾಂತಿ ರಾಜಸಾ ಮಾನುಷಾಂಸ್ತಥಾ |
ಸಾತಿತ್ವಕಾ ದೇವಲೋಕಾಯ ಗಚ್ಛಂತಿ ಸುಖಭಾಗಿನಃ ॥46॥
ತಮೋಗುಣದಿಂದ ನರಕವನ್ನು ಹೊಂದುತ್ತಾನೆ. ರಜೋಗುಣದಿಂದ ಮನುಷ್ಯ ಲೋಕದಲ್ಲಿರುತ್ತಾನೆ. ಸತ್ತ್ವಗುಣವನ್ನಾಶ್ರಯಿಸಿದ ಪುರುಷನು ಸುಖಭಾಗಿಯಾಗಿ ದೇವಲೋಕಕ್ಕೆ ಹೋಗುತ್ತಾನೆ.
ನಿಷ್ಕೈವಲ್ಯೇನ ಪಾಪೇನ ತಿರ್ಯಗ್ಯೋನಿಮವಾಪ್ನುಯಾತ್ |
ಪುಣ್ಯಪಾಪೇನ ಮಾನುಷ್ಯಂ ಪುಣ್ಯೇನೈಕೇನ ದೇವತಾಃ ॥47॥
ಸಂಪೂರ್ಣವಾಗಿ ಪಾಪಕರ್ಮಗಳನ್ನೇ ಆಚರಿಸುವುದರಿಂದ ಚೇತನನು ತಿರ್ಯಗ್ಯೋನಿಗಳಲ್ಲಿ ಹುಟ್ಟುತ್ತಾನೆ.
ಪುಣ್ಯ-ಪಾಪಗಳೆರಡನ್ನೂ ಮಾಡಿದವನು ಮನುಷ್ಯನಾಗಿ ಹುಟ್ಟುತ್ತಾನೆ. ಕೇವಲ ಪುಣ್ಯವನ್ನೇ ಮಾಡಿದವನು ದೇವಯೋನಿಯಲ್ಲಿ ಹುಟ್ಟುತ್ತಾನೆ.
ಏವಮವ್ಯಕ್ತವಿಷಯಂ ಕ್ಷರಮಾಹುರ್ಮನೀಷಿಣಃ |
ಪಂಚವಿಂಶತಿಗೋ ಯೋಽಯಂ ಜ್ಞಾನಾದೇವ ಪ್ರವರ್ತತೇ ॥48॥
ಹೀಗೆ ವಿದ್ವಾಂಸರು ಪ್ರಕೃತಿಯಿಂದ ಹುಟ್ಟಿದ ವಸ್ತುಗಳಿಗೆ ಕ್ಷರವೆಂದು ಹೇಳುತ್ತಾರೆ. ಇಪ್ಪತ್ತೈದನೆಯ ತತ್ತ್ವವು ಯಾವುದಿದೆಯೋ ಅವನೇ ಅಕ್ಷರನು. ಅವನ ಜ್ಞಾನವು ಶಾಸ್ತ್ರಜ್ಞಾನದಿಂದಲೇ ಹುಟ್ಟುತ್ತದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತಾರನೆಯ ಅಧ್ಯಾಯ
ವಸಿಷ್ಠ ಮತ್ತು ಕರಾಳ ಜನಕರ ಸಂವಾದ.
ವಸಿಷ್ಠಃ
ಏವಮಪ್ರತಿಬುದ್ಧತ್ವಾದಬುದ್ಧಮನುವರ್ತತೇ |
ದೇಹಾದ್ದೇಹಸಹಸ್ರಾಣಿ ತಥಾ ಸಮಭಿಪದ್ಯತೇ ॥1॥
ವಸಿಷ್ಠ ಜನಕರಾಜನೇ, ಚೇತನನು ತನ್ನ ನಿಜಸ್ವರೂಪವನ್ನು ತಿಳಿಯದಿರುವ ಕಾರಣದಿಂದ ಅಜ್ಞಾನವನ್ನು ಆಶ್ರಯಿಸಿರುತ್ತಾನೆ. ಆದ್ದರಿಂದಲೇ ಒಂದು ದೇಹದಲ್ಲಿ ಕರ್ಮವನ್ನು ಆಚರಿಸಿ ಅದರ ನಿಮಿತ್ತದಿಂದ ಸಹಸ್ರಾರು ಶರೀರಗಳನ್ನು ಅಜ್ಞಾನದ ಮೂಲಕ ಹೊಂದುತ್ತಲೇ ಇರುತ್ತಾನೆ.
ತಿರ್ಯಗ್ಯೋನಿಸಹಸ್ರೇಷು ಕದಾಚಿದ್ದೇವತಾಸ್ವಪಿ |
ಉಪಪದ್ಯತಿ ಸಂಯೋಗಾದ್ ಗುಣೈಃ ಸಹ ಗುಣಕ್ಷಯಾತ್ ॥2॥
ತ್ರಿಗುಣಗಳ ಸಂಬಂಧವನ್ನು ಹೊಂದಿದ ಚೇತನನು ಸಾವಿರಾರು ತಿರ್ಯಗ್ಯೋನಿಗಳಲ್ಲಿ ಜನ್ಮ ತಾಳುತ್ತಾನೆ. ಕೆಲವೊಮ್ಮೆ ಆ ಗುಣಗಳ ಸಂಬಂಧದಿಂದ ದೇವತಾ ಯೋನಿಗಳಲ್ಲೂ ಹುಟ್ಟುತ್ತಾನೆ.
ಮಾನುಷತ್ವಾದ್ ದಿವಂ ಯಾತಿ ದಿವೋ ಮಾನುಷ್ಯಮೇವ ಚ |
ಮಾನುಷ್ಯಾನ್ನಿರಯಸ್ಥಾನಮಾನಂತ್ಯಂ ಪ್ರತಿಪದ್ಯತೇ ॥3॥
ಚೇತನನು ಮನುಷ್ಯ ಜನ್ಮದಿಂದ ದೇವಲೋಕಕ್ಕೂ, ದೇವಲೋಕದಿಂದ ಪುನಃ ಮನುಷ್ಯ ಜನ್ಮಕ್ಕೂ ಸಂಚರಿಸುತ್ತಾನೆ. ಮನುಷ್ಯ ಜನ್ಮದಿಂದ ಕೊನೆಯಿಲ್ಲದ ನರಕವನ್ನೂ ಹೊಂದುತ್ತಾನೆ.
ಕೋಶಕಾರೋ ಯಥಾತ್ಮಾನಂ ಕೀಟಃ ಸಮನುರುಂಧತಿ |

ಸೂತ್ರತಂತುಗುಣೈರ್ನಿತ್ಯಂ ತಥಾಯಮಗುಣೋ ಗುಣೈಃ ॥4॥
ರೇಷ್ಮೆ ಹುಳುವು ತನ್ನಿಂದಲೇ ಹುಟ್ಟಿದ ನೂಲಿನಿಂದ ತನ್ನನ್ನು ಸುತ್ತಲೂ ಸುತ್ತಿಕೊಂಡು ಆ ಗೂಡಿನಲ್ಲಿಯೇ ಸಿಕ್ಕಿಬೀಳುವಂತೆ ತ್ರಿಗುಣಗಳ ಸಂಬಂಧವಿಲ್ಲದ ಚೇತನನು ತ್ರಿಗುಣಗಳಿಂದ ಆವೃತನಾಗಿ ಅದರಿಂದಲೇ ಬಂಧಿತನಾಗಿರುತ್ತಾನೆ.
ದ್ವಂದ್ವಮೇತಿ ಚ ನಿರ್ದ್ವಂದ್ವಸ್ತಾಸು ತಾಸ್ವಿಹ ಯೋನಿಷು |
ಶೀರ್ಷರೋಗೇಽಕ್ಷಿರೋಗೇ ಚ ದಂತಶೂಲೇ ಗಲಗ್ರಹೇ ॥5॥
ಸಹಜವಾಗಿ ಜೀವನಿಗೆ ಸುಖ-ದುಃಖಾದಿ ದ್ವಂದ್ವ ಗುಣಗಳಿಲ್ಲದಿದ್ದರೂ ದ್ವಂದ್ವಗಳಿಗೆ ತನ್ನನ್ನು ತಾನೇ ಗುರಿ ಮಾಡಿಕೊಳ್ಳುತ್ತಾನೆ. ರೋಗಗಳ ಸಂಬಂಧ ಇಲ್ಲದಿದ್ದರೂ ತಲೆ, ಕಣ್ಣು, ಹಲ್ಲು, ಗಂಟಲು ಮುಂತಾದ ರೋಗಳಿಗೆ ತುತ್ತಾಗುತ್ತಾನೆ.
ಜಲೋದರೇಽರ್ಶಸಾಂ ರೋಗೇ ಜ್ವರಗಂಡವಿಷೂಚಿಕೇ |
ಶ್ವಿತ್ರೇ ಕುಷ್ಠೇಽಗ್ನಿದಾಹೇ ಚ ಸಿಧ್ಮಾಪಸ್ಮಾರಯೋರಪಿ ॥6॥
ಜಲೋದರ, ದಾಹಜ್ವರ, ಜಲಗಂಡ, ವಿಶೂಚಿ, ಕುಷ್ಠ, ಬಿಳಿ ಕುಷ್ಠ, ಅಗ್ನಿದಾಹ, ಸಿಬ್ಬು, ಅಪಸ್ಮಾರ ಮುಂತಾದ ಹಲವು ರೋಗಗಳಿಗೆ ತಾನು ಗುರಿಯಾದಂತೆ ಕಷ್ಟಗಳನ್ನು ಅನುಭವಿಸುತ್ತಾನೆ.
ಯಾನಿ ಚಾನ್ಯಾನಿ ದ್ವಂದ್ವಾನಿ ಪ್ರಾಕೃತಾನಿ ಶರೀರಿಷು |
ಉತ್ಪದ್ಯಂತೇ ವಿಚಿತ್ರಾಣಿ ತಾನ್ಯೇಷೋಪ್ಯಭಿಮನ್ಯತೇ |
ಅಭಿಮನ್ಯತ್ಯಭೀಮಾನಾತ್ತಥೈವ ಸುಕೃತಾನ್ಯಪಿ ॥7॥
ಅಜ್ಞಾನದಿಂದಲೇ ಜೀವನು ತಾನು ಪಡೆದ ಆಯಾ ಜನ್ಮಗಳಿಗೆ ಅನುಗುಣವಾಗಿ ತಿರ್ಯಗ್ ಎಂದು, ದೇವತೆ ಎಂದು, ಇತರ ಜಂತು ಎಂದು ತನ್ನನ್ನು ತಿಳಿದುಕೊಂಡು ಪಾಪದ ಫಲವಾಗಿ ದುಃಖವನ್ನು, ಸುಕೃತ ಫಲವಾಗಿ ಸುಖವನ್ನು ಅನುಭವಿಸುತ್ತಿರುತ್ತಾನೆ.
ಏಕವಾಸಾಶ್ಚ ದುರ್ವಾಸಾಃ ಶಾಯೀ ನಿತ್ಯಮಧಸ್ತಥಾ |
ಮಂಡೂಕಶಾಯೀ ಚ ತಥಾ ವೀರಾಸನಗತಸ್ತಥಾ ॥8॥
ಸಾವಿರಾರು ತಿರ್ಯಗ್ಯೋನಿಗಳಲ್ಲಿ ಹುಟ್ಟನ್ನು ಪಡೆದ ಚೇತನನು ಪಶುವೇ ತಾನೆಂಬ ಅಜ್ಞಾನವನ್ನು ಕಟ್ಟಿಕೊಂಡು, ತನಗೆ ಒದಗುವ ಬೇರೆ ಬೇರೆ ಶರೀರಗಳ ದೇಹಾಭಿಮಾನಕ್ಕೆ ತುತ್ತಾಗಿ ಈಗ ನಾನು ಬಿಳಿ ವಸ್ತ್ರವನ್ನು ಉಟ್ಟಿರುತ್ತೇನೆ. ಈಗ ಮಲಿನ ವಸ್ತ್ರವನ್ನು ಧರಿಸಿರುತ್ತೇನೆ. ಈಗ ನಾನು ಸುಪ್ಪತ್ತಿಗೆ ಇಲ್ಲದೆ ಕೇವಲ ನೆಲದಲ್ಲಿ ಮಲಗಿದ್ದೇನೆ. ಈಗ ಕಪ್ಪೆಯಂತೆ ಕೈ-ಕಾಲುಗಳನ್ನು ಉಡುಗಿಸಿಕೊಂಡು ಮಲಗಿದ್ದೇನೆ. ಈಗ ವೀರಾಸನದಲ್ಲಿ ಕುಳಿತಿದ್ದೇನೆ.
ಚೀರಧಾರಣಮಾಕಾಶೇ ಶಯನಂ ಸ್ಥಾನಮೇವ ಚ |
ಇಷ್ಟಕಾಪ್ರಸ್ತರೇ ಚೈವ ಕಂಟಕಪ್ರಸ್ತರೇ ತಥಾ ॥9॥
ಈಗ ನಾರುಬಟ್ಟೆಯನ್ನು ಧರಿಸಿದ್ದೇನೆ. ಈಗ ಬಯಲಿನಲ್ಲಿ ಮಲಗಿದ್ದೇನೆ. ಈಗ ನಿಂತಿದ್ದೇನೆ. ಈಗ ನಿಂತಿರುವೆ. ಈಗ ಇಟ್ಟಿಗೆಗಳಿಂದಲೂ, ಕಲ್ಲುಗಳಿಂದಲೂ ಕಟ್ಟಿದ ಉಪ್ಪರಿಗೆ ಮನೆಯಲ್ಲಿದ್ದೇನೆ. ಈಗ ಮುಳ್ಳು ಮುಳ್ಳಾದ ಕಲ್ಲುಗಳ ಮೇಲೆ ಮಲಗಿದ್ದೇನೆ.
ಭಸ್ಮಪ್ರಸ್ತರಶಾಯೀ ಚ ಭೂಮಿಶಯ್ಯಾನುಲೇಪನಃ |
ವೀರಸ್ಥಾನಾಂಬುಪಂಕೇ ಚ ಶಯನಂ ಫಲಕೇಷು ಚ ॥10॥
ವಿವಿಧಾಸು ಚ ಶಯ್ಯಾಸು ಫಲಗೃದ್ಧ್ಯಾನ್ವಿತೋಽಫಲಃ |
ಮುಂಜಮೇಖಲನಗ್ನತ್ವಂ ಕ್ಷೌಮಕೃಷ್ಣಾಜಿನಾನಿ ಚ ॥11॥
ಶಾಣೀವಾಲಪರೀಧಾನೋ ವ್ಯಾಘ್ರಚರ್ಮಪರಿಚ್ಛದಃ |
ಸಿಂಹಚರ್ಮಪರೀಧಾನಃ ಪಟ್ಟವಾಸಾಸ್ತಥೈವ ಚ ॥12॥
ಕೀಟಕಾವಸನಶ್ಚೈವ ಚೀರವಾಸಾಸ್ತಥೈವ ಚ |
ವಸತ್ರಾಣಿ ಚಾನ್ಯಾನಿ ಬಹೂನ್ಯಭಿಮನ್ಯತ್ಯಬುದ್ಧಿಮಾನ್ ॥13॥
ಈಗ ಬೂದಿಯ ಮೇಲೆ ಮಲಗಿರುತ್ತೇನೆ. ಈಗ ಹಾಸಿಗೆಯ ಮೇಲೆ ಮಲಗಿರುತ್ತೇನೆ. ಈಗ ಮಣ್ಣಿನ ಮೇಲೆ ಮಲಗಿರುತ್ತೇನೆ. ಈಗ ಕೆಸರಿನಲ್ಲಿದ್ದೇನೆ. ಈಗ ಹಲಗೆಯ ಮೇಲೆ ಮಲಗಿದ್ದೇನೆ ಎಂದು ತನ್ನ ನಿಜಸ್ಥಿತಿಯನ್ನು ತಿಳಿಯದೆ, ಮೇಲೆ ಹೇಳಿದ ತನ್ನ ಭಾವಗಳನ್ನು ತನ್ನಲ್ಲಿ ಆರೋಪಿಸಿಕೊಂಡು ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡುತ್ತಾ, ಮೌಂಜಿಯ ಉಡಿದಾರವನ್ನು ಧರಿಸಿ, ಕೌಪೀನವನ್ನು ಧರಿಸಿರುತ್ತಾನೆ. ಕೆಲವೊಮ್ಮೆ ನಗ್ನನಾಗಿಯೂ ಇರುತ್ತಾನೆ. ಕೆಲವೊಮ್ಮೆ ಪಟ್ಟೆ ಮಡಿಯನ್ನು ಧರಿಸಿರುತ್ತಾನೆ. ಕೆಲವೊಮ್ಮೆ ಕೃಷ್ಣಾಜಿನವನ್ನು, ಕೆಲವೊಮ್ಮೆ ಸೊಬಗಿನ ನಾರನ್ನು, ಒಮ್ಮೆ ಹುಲಿಯ ಚರ್ಮವನ್ನು ಕಟ್ಟಿದಂತೆ ಒಮ್ಮೆ ಮರದ ಪಟ್ಟೆಯನ್ನಾಗಲಿ, ಮುಳ್ಳಿನ ವಸ್ತ್ರವನ್ನಾಗಲಿ ಉಟ್ಟಂತೆ ಇನ್ನೊಮ್ಮೆ ಹತ್ತಿಯ ಬಟ್ಟೆಯನ್ನು, ಇನ್ನೊಮ್ಮೆ ಬೇರೆ ವಿಧವಾದ ಬಟ್ಟೆಯನ್ನು ತಾನು ಧರಿಸಿರುವಂತೆ ಅಜ್ಞಾನಿಯಾದ ಜೀವನು ತಿಳಿದಿರುತ್ತಾನೆ. ಎಲ್ಲವೂ ಅಭಿಮಾನದ ನಿಮಿತ್ತದಿಂದ ತನ್ನದೇ ಎಂದು ತಿಳಿದಿರುತ್ತಾನೆ. ಇದಕ್ಕೆ ಅಜ್ಞಾನವೇ ಕಾರಣವಾಗಿರುತ್ತದೆ.
ಭೋಜನಾನಿ ವಿಚಿತ್ರಾಣಿ ರತ್ನಾನಿ ವಿವಿಧಾನಿ ಚ |
ಏಕವಸತ್ರಂತರಾಶಿತ್ವಮೇಕಕಾಲಿಕಭೋಜನಮ್ ॥14॥
ಚತುರ್ಥಾಷ್ಟಮಕಾಲಶ್ಚ ಷಷ್ಠಕಾಲಿಕ ಏವ ಚ |
ಷಡ್ರಾತ್ರಭೋಜನಶ್ಚೈವ ತಥೈವಾಷ್ಟಾಹಭೋಜನಃ ॥15॥
ಸಪ್ತರಾತ್ರದಶಾಹಾರೋ ದ್ವಾದಶಾಹಾರ ಏವ ಚ |
ಮಾಸೋಪವಾಸೀ ಮೂಲಾಶೀ ಫಲಾಹಾರಸ್ತಥೈವ ಚ ॥16॥
ತಾನು ಪಡೆದ ಜನ್ಮಕ್ಕೆ ಅನುಗುಣವಾಗಿ ವಿಚಿತ್ರವಾದ ಭೋಜನಗಳನ್ನು ಸ್ವೀಕರಿಸುತ್ತಾನೆ. ನಾನಾ ವಿಧವಾದ ರತ್ನಗಳನ್ನು ಧರಿಸುತ್ತಾನೆ. ಒಂದು ರಾತ್ರಿ ಅನಂತರದಲ್ಲಿ ಭೋಜನ ಮಾಡುತ್ತಾನೆ. ದಿನಕ್ಕೊಮ್ಮೆ ಭೋಜನ ಮಾಡುತ್ತಾನೆ. ದಿನದ ನಾಲ್ಕನೆಯ, ಆರನೆಯ,

ಎಂಟನೆಯ ಮುಹೂರ್ತಗಳಲ್ಲಿ ಊಟ ಮಾಡುತ್ತಾನೆ. ಆರು ರಾತ್ರಿ ಕಳೆದ ನಂತರ ಭೋಜನ ಮಾಡುತ್ತಾನೆ. ಆರು ದಿವಸಗಳ ಬಳಿಕ, ಎಂಟು ದಿವಸಗಳ ಬಳಿಕ, ಹತ್ತು ದಿವಸಗಳ ಬಳಿಕ, ಹನ್ನೆರಡು ದಿವಸಗಳ ಬಳಿಕ ಭೋಜನವನ್ನು ಮಾಡುವ ನಿಯಮಗಳನ್ನು ಹಾಕಿಕೊಳ್ಳುತ್ತಾನೆ. ಒಂದು ತಿಂಗಳು ಉಪವಾಸವಿದ್ದು ಅನಂತರ ಕಂದ-ಮೂಲಗಳನ್ನೇ ತಿನ್ನುತ್ತಾನೆ. ಹಣ್ಣುಗಳನ್ನು ಸೇವಿಸುತ್ತಾನೆ.
ವಾಯುಭಕ್ಷೋಽಂಬುಪಿಣ್ಯಾಕಗೋಮಯಾದನ ಏವ ಚ |
ಗೋಮೂತ್ರಭೋಜನಶ್ಚೈವ ಶಾಕಪುಷ್ಪಾದ ಏವ ಚ ॥17॥
ಶೈವಾಲಭೋಜನಶ್ಚೈವ ತಥಾಚಾಮೇನ ವರ್ತಯನ್ |
ವರ್ತಯನ್ ಶೀರ್ಣಪರ್ಣೈಶ್ಚ ಪ್ರಕೀರ್ಣಫಲಭೋಜನಃ ॥18॥
ಗಾಳಿಯನ್ನೇ ಆಹಾರವನ್ನಾಗಿ ಸ್ವೀಕರಿಸುತ್ತಾನೆ. ನೀರನ್ನು ಸೇವಿಸುತ್ತಾನೆ. ಹಿಂಡಿಯನ್ನು ಸ್ವೀಕರಿಸುತ್ತಾನೆ. ಮೊಸರನ್ನವನ್ನು ಆಹಾರವನ್ನಾಗಿ ಸೇವಿಸುತ್ತಾನೆ. ಪಂಚಗವ್ಯಗಳನ್ನು ಸೇವಿಸುತ್ತಾನೆ. ಕಾಯಿಪಲ್ಯಗಳನ್ನು, ಹೂಗಳನ್ನೇ ತಿಂದು ಜೀವನವನ್ನು ನಿರ್ವಹಿಸುತ್ತಾನೆ. ಪಾಚಿಯನ್ನು ತಿನ್ನುತ್ತಾನೆ, ಅನ್ನದ ಗಂಜಿಯನ್ನೇ ಕುಡಿಯುತ್ತಾನೆ. ತರಗೆಲೆಗಳಿಂದಲೇ ಜೀವಿಸುತ್ತಾನೆ. ವೃಕ್ಷದಿಂದ ಬಿದ್ದ ಹಣ್ಣುಗಳಿಂದಲೇ ಜೀವಿಸುತ್ತಾನೆ.
ವ್ಯಾಖ್ಯಾನ ವಿಶೇಷ ಇಲ್ಲಿ ವ್ಯಾಸರು ಒಂದು ಜನ್ಮಕ್ಕೆ ಸಂಬಂಧಪಟ್ಟ ಆಹಾರದ ಕ್ರಮವನ್ನು ತಿಳಿಸಿರುವುದಿಲ್ಲ. ಅನೇಕ ಜನ್ಮಗಳಲ್ಲಿ ಕ್ರಿಮಿ ಕೀಟಗಳಾಗಿ, ಪಶು- ಪಕ್ಷಿಗಳಾಗಿ ಅನೇಕ ವಿಧದ ಜೀವ ಜಂತುಗಳಾಗಿ ಅವರು ಸ್ವೀಕರಿಸುವ ಎಲ್ಲ ಆಹಾರದ ವಿವರಣೆಯನ್ನು ನೀಡಿರುತ್ತಾರೆ ಎಂದು ತಿಳಿಯಬೇಕು.
ವಿವಿಧಾನಿ ಚ ಕೃಚ್ಛ್ರಾಣಿ ಸೇವತೇ ಸುಖಕಾಂಕ್ಷಯಾ |
ಚಾಂದ್ರಾಯಣಾನಿ ವಿಧಿವಲ್ಲಿಂಗಾನಿ ವಿವಿಧಾನಿ ಚ ॥19॥
ಜೀವನು ಸುಖವನ್ನು ಬಯಸಿಕೊಂಡು ನಾನಾ ವಿಧವಾದ ಕೃಚ್ಛ್ರವ್ರತವನ್ನು ಸೇವಿಸುತ್ತಾನೆ. ಚಾಂದ್ರಾಯಣ ವ್ರತವನ್ನು ವಿಧಿವತ್ತಾಗಿ ಆಚರಿಸುತ್ತಾನೆ. ನಾನಾ ವಿಧವಾದ ಧಾರ್ಮಿಕ ಚಿಹ್ನೆಗಳನ್ನು ಧರಿಸುತ್ತಾನೆ.
ಚಾತುರಾಶ್ರಮ್ಯಪಂಥಾನಮಾಶ್ರಯತ್ಯಾಶ್ರಮಾನಪಿ |
ಉಪಾಸೀನಶ್ಚ ಪಾಷಂಡಾನ್ ಗುಹಾಃ ಶೈಲಾಂಸ್ತಥೈವ ಚ ॥20॥
ನಾಲ್ಕು ವಿಧವಾದ ಆಶ್ರಮ ಧರ್ಮಗಳನ್ನು ಆಶ್ರಯಿಸಿರುತ್ತಾನೆ. ಆಶ್ರಮ ಧರ್ಮಕ್ಕೆ ವಿರುದ್ಧವಾದ ಧರ್ಮಗಳನ್ನೂ ಅನುಸರಿಸುತ್ತಾನೆ. ಪಾಶುಪತವೇ ಮೊದಲಾದ ಪಾಷಂಡ ಧರ್ಮಗಳನ್ನು ಆಶ್ರಯಿಸಿರುತ್ತಾನೆ. ಗುಹೆಗಳಲ್ಲಿ, ಶಿಲೆಗಳಲ್ಲಿ, ಪ್ರದೇಶಗಳಲ್ಲಿ ವಾಸಿಸುತ್ತಾನೆ.
ವಿವಿಕ್ತಾಶ್ಚ ಶಿಲಾಛಾಯಾಸ್ತಥಾ ಪ್ರಸ್ರವಣಾನಿ ಚ |
ವಿವಿಧಾನಿ ಚ ಜಪ್ಯಾನಿ ವಿವಿಧಾನಿ ವ್ರತಾನಿ ಚ ॥21॥
ನಿಯಮಾನ್ ಸುವಿಚಿತ್ರಾಂಶ್ಚ ವಿವಿಧಾನಿ ತಪಾಂಸಿ ಚ |
ಯಜ್ಞಾಂಶ್ಚ ವಿವಿಧಾಕಾರಾನ್ ವಿಧೀಂಶ್ಚ ವಿವಿಧಾಂಸ್ತಥಾ ॥22॥
ಏಕಾಂತದ ಬಂಡೆಯ ನೆರಳುಗಳಲ್ಲಿ, ಹರಿಯುವ ನೀರುಗಳಲ್ಲಿ, ವಿವಿಧ ದೇವಾಲಯಗಳಲ್ಲಿ, ಸರಸ್ಸುಗಳಲ್ಲಿ ನಾನಾ ವಿಧವಾದ ವ್ರತಗಳನ್ನಾಚರಿಸುತ್ತಾ, ಅತ್ಯಂತ ವಿಚಿತ್ರವಾದ ನಿಯಮಗಳನ್ನು ವಿಧಿಸಿಕೊಂಡು, ವಿವಿಧವಾದ ತಪಸ್ಸುಗಳನ್ನಾಚರಿಸುತ್ತಾ, ನಾನಾ ಬಗೆಯ ಯಜ್ಞಗಳನ್ನು, ವಿಧವಿಧವಾದ ವಿಧಿಗಳನ್ನು ಆಚರಿಸುತ್ತಿರುತ್ತಾನೆ.
ವಣಿಕ್ಪಥಂ ದ್ವಿಜಕ್ಷತ್ರಂ ವೈಶ್ಯಶೂದ್ರಂ ತಥೈವ ಚ |
ದಾನಂ ಚ ವಿವಿಧಾಕಾರಂ ದೀನಾಂಧಕೃಪಣೇಷ್ವಪಿ ॥23॥
ಚೇತನನು ವ್ಯಾಪಾರ ಮಾಡುತ್ತಾನೆ. ದ್ವಿಜನಾಗಿ ಬ್ರಾಹ್ಮಣಕರ್ಮವನ್ನು ಮಾಡುತ್ತಾನೆ. ಕ್ಷತ್ರಿಯನಾಗಿ ಕ್ಷಾತ್ರಧರ್ಮವನ್ನೂ, ವೈಶ್ಯನಾಗಿ ವೈಶ್ಯಕರ್ಮವನ್ನೂ, ಶೂದ್ರನಾಗಿ ಶೂದ್ರ ಕರ್ಮವನ್ನೂ ಮಾಡುತ್ತಾನೆ. ದೀನರಿಗೂ, ಅಂಧರಿಗೂ, ಕೃಪಣರಿಗೂ ಬಗೆಬಗೆಯಾದ ದಾನಗಳನ್ನು ಮಾಡುತ್ತಾನೆ.
ಅಭಿಮನ್ಯತ್ಯಸಂಬೋಧಾತ್ತಥೈವ ತ್ರಿವಿಧಾನ್ ಗುಣಾನ್ |
ಸತ್ತ್ವಂ ರಜಸ್ತಮಶ್ಚೈವ ಧರ್ಮಾರ್ಥೌ ಕಾಮ ಏವ ಚ |
ಪ್ರಕೃತ್ಯಾತ್ಮಾನಮೇವಾತ್ಮಾ ಏವಂ ಪ್ರವಿಭಜತ್ಯುತ ॥24॥
ಹೀಗೆ ಚೇತನನು ದಾನ ಮಾಡಿ, ಅಜ್ಞಾನವಶದಿಂದ ತಾನು ದಾನ ಮಾಡಿರುವುದಾಗಿ ಅಭಿಮಾನವನ್ನು ಹೊಂದುತ್ತಾನೆ. ಇದರಂತೆ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳನ್ನು, ಅವುಗಳಿಗೆ ಸಂಬಂಧಿಸಿದ ಧರ್ಮಾರ್ಥ ಕಾಮಗಳನ್ನು ಚೇತನನು ತನ್ನದ್ದೆಂದೇ ಭಾವಿಸುತ್ತಾನೆ. ಪ್ರಕೃತಿಯ ಮೂಲಕವಾಗಿ ತನ್ನನ್ನೇ ಅನೇಕ ಪ್ರಕಾರವಾಗಿ ಹೀಗೆ ವಿಭಾಗಿಸಿಕೊಳ್ಳುತ್ತಾನೆ.
ಸ್ವಧಾಕಾರವಷಟ್ಕಾರೌ ಸ್ವಾಹಾಕಾರನಮಸ್ಕ್ರಿಯಾಃ |
ಯಾಜನಾಧ್ಯಾಪನಂ ದಾನಂ ತಥೈವಾಹುಃ ಪ್ರತಿಗ್ರಹಮ್ |
ಯಜನಾಧ್ಯಯನೇ ಚೈವ ಯಚ್ಚಾನ್ಯದಪಿ ಕಿಂಚನ ॥25॥
ಸ್ವಧಾ, ವಷಟ್, ಸ್ವಾಹಾ, ನಮಸ್ಕಾರ ಮುಂತಾದ ಸತ್ಕರ್ಮಗಳಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಯಜ್ಞ ಮಾಡುತ್ತಾನೆ, ಮಾಡಿಸುತ್ತಾನೆ. ತಾನು ವೇದಾಧ್ಯಯನವನ್ನು ಮಾಡಿ ಮತ್ತೊಬ್ಬರಿಗೂ ಬೋಧಿಸುತ್ತಾನೆ. ದಾನ ಮಾಡಿ ಪ್ರತಿಗ್ರಹಿಸುತ್ತಾನೆ. ಹೀಗೆ ಇತರ ಅನೇಕ ಕರ್ಮಗಳನ್ನು ಜೀವನು ಮಾಡುತ್ತಿರುತ್ತಾನೆ.
ಜನ್ಮಮೃತ್ಯುವಿವಾದೇ ಚ ತಥಾ ವಿಶಸನೇಽಪಿ ಚ |
ಶುಭಾಶುಭಮಯಂ ಸರ್ವಮೇತದಾಹುಃ ಕ್ರಿಯಾಪಥಮ್ ॥26॥
ಹುಟ್ಟು, ಸಾವುಗಳನ್ನು ಪಡೆಯುತ್ತಾನೆ. ವಿವಾದ ಮಾಡುತ್ತಾನೆ. ಯುದ್ಧದಲ್ಲಿ ತೊಡಗುತ್ತಾನೆ. ಪ್ರಕೃತಿ ಸಂಬಂಧವಾದ ಈ ಜೀವನ ವ್ಯವಹಾರಗಳೆಲ್ಲವೂ ಶುಭಾಶುಭವಾದವುಗಳೆಂದು, ಕರ್ಮ ಮಾರ್ಗಕ್ಕೆ ಸೇರಿದವೆಂದು ವಿದ್ವಾಂಸರು ಹೇಳುತ್ತಾರೆ.

ಪ್ರಕೃತಿಃ ಕುರುತೇ ದೇವೀ ಮಹಾಪ್ರಲಯಮೇವ ಚ |
ದಿವಸಾಂತೇ ಗುಣಾನೇತಾನಭ್ಯೇತ್ಯೈಕೋಽವತಿಷ್ಠತಿ ||27||
ರಶ್ಮಿಜಾಲಮಿವಾದಿತ್ಯಸ್ತತ್ಕಾಲೇನ ನಿಯಚ್ಛತಿ |
ಏವಮೇಷೋಽಸಕೃತ್ ಸರ್ವಂ ಕ್ರೀಡಾರ್ಥಮಭಿಮನ್ಯತೇ ||28||
ಮೂಲಪ್ರಕೃತಿಯು ಜಗತ್ತಿನ ಸೃಷ್ಟಿ-ಪ್ರಳಯಗಳನ್ನು ಮಾಡುತ್ತಿರುತ್ತಾಳೆ. ಸೂರ್ಯನು ಪ್ರಾತಃಕಾಲವಾಗುತ್ತಾ ಕಿರಣಗಳನ್ನು ಎಲ್ಲೆಡೆಯೂ ವ್ಯಾಪಿಸುವಂತೆ ಮಾಡಿ ಸಾಯಂಕಾಲವಾಗುತ್ತಲೇ ಆ ಕಿರಣಗಳನ್ನು ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾಳೆ. ಇದರಂತೆ ಸತ್ತ್ವ, ರಜಸ್, ತಮಸ್ ಎಂಬ ಮೂರು ಗುಣಗಳನ್ನು ಜಗತ್ತಿನಾದ್ಯಂತ ವ್ಯಾಪಿಸಿ ಕಲ್ಪದ ಕೊನೆಯಲ್ಲಿ ಆ ಮೂರುಗುಣಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತದೆ. ಹೀಗೆ ಪ್ರಕೃತಿಯಿಂದ ಕೂಡಿರುವ ಚೇತನನು ಅನೇಕ ಬಾರಿ ಪ್ರಕೃತಿಯಿಂದ ನಿರ್ಮಿತವಾದ ರೂಪ-ರಸಾದಿ ಗುಣಗಳನ್ನು ಕ್ರೀಡೆಗಾಗಿಯೆಂದು ಅಭಿಮಾನದಿಂದಲೇ ಅನುಭವಿಸುತ್ತಿರುತ್ತಾನೆ.
ಆತ್ಮರೂಪಗುಣಾನೇತಾನ್ ವಿವಿಧಾನ್ ಹೃದಯಪ್ರಿಯಾನ್ |
ಏವಮೇವ ವಿಕುರ್ವಾಣಃ ಸರ್ಗಪ್ರಲಯಕರ್ಮಣೀ ||29||
ಹೀಗೆ ತ್ರಿಗುಣಗಳ ಅಧಿಪತಿ ತಾನೆಂದು, ತನಗಿಷ್ಟವಾದ ಅನೇಕ ವಿಧವಾದ ಪ್ರಕೃತಿಯ ಗುಣಗಳಲ್ಲೇ ವಿಕಾರವನ್ನು ಹೊಂದುತ್ತಾ ಜೀವನು ಉತ್ಪತ್ತಿ, ನಾಶಗಳಿಗೆ ಆಶ್ರಯವಾದ ಕರ್ಮವನ್ನು ಅನುಭವಿಸುತ್ತಲೇ ಇರುತ್ತಾನೆ.
ಕ್ರಿಯಾಕ್ರಿಯಾ ಪಥೇ ರಕ್ತಸ್ತ್ರಿಗುಣಸ್ತ್ರಿಗುಣಾತಿಗಃ |
ಕ್ರಿಯಾಕ್ರಿಯಾಪಥೋಪೇತಸ್ತಥಾ ತದಿತಿ ಮನ್ಯತೇ ||30||
ಆತ್ಮನು ಸ್ವತಃ ತ್ರಿಗುಣಗಳನ್ನು ಮೀರಿದವನಾಗಿದ್ದರೂ ಕರ್ಮ ಮಾರ್ಗದಲ್ಲಿ ಸಿಕ್ಕಿ ಬಿದ್ದು, ತ್ರಿಗುಣಗಳ ವಿಕಾರವನ್ನು ಹೊಂದುತ್ತಾ, ಸೃಷ್ಟಿ-ಪ್ರಳಯಗಳೇ ಧರ್ಮವುಳ್ಳವನಾಗಿ ಆ ಪ್ರಕೃತಿಯನ್ನು ತನ್ನದ್ದೆಂದೇ ಭಾವಿಸಿಕೊಂಡಿರುತ್ತಾನೆ.
ಏವಂ ದ್ವಂದ್ವಾನ್ಯಥೈತಾನಿ ವರ್ತಂತೇ ಮಮ ನಿತ್ಯಶಃ |
ಮಮೈವೈತಾನಿ ಜಾಯಂತೇ ಬಾಧಂತೇ ತಾನಿ ಮಾಮಿತಿ ||31||
ನಿಸ್ತರ್ತವ್ಯಾನ್ಯಥೈತಾನಿ ಸರ್ವಾಣೀತಿ ನರಾಧಿಪ |
ಮನ್ಯತೇಽಯಂ ಹ್ಯಬುದ್ಧಿತ್ವಾತ್ತಥೈವ ಸುಕೃತಾನ್ಯಪಿ ||32||
ಭೋಕ್ತವ್ಯಾನಿ ಮಯೈತಾನಿ ದೇವಲೋಕಗತೇನ ವೈ |
ಇಹೈವ ಚೈನಂ ಭೋಕ್ಷ್ಯಾಮಿ ಶುಭಾಶುಭಫಲೋದಯಮ್ ||33||
ಹೀಗೆ ಪ್ರಕೃತಿಯ ಸಂಸರ್ಗದಿಂದ ಸುಖ-ದುಃಖಾದಿ ದ್ವಂದ್ವಗಳು ಅನುದಿನವೂ ಬಂದು ಹೋಗುತ್ತಲೇ ಇರುತ್ತವೆ. ಚೇತನನು ಅಜ್ಞಾನದಿಂದ ಈ ದುಃಖಗಳು ನನ್ನ ಸಂಬಂಧವಾಗಿಯೇ ಹುಟ್ಟಿವೆ, ನನ್ನನ್ನೇ ಬಾಧಿಸುತ್ತಿವೆ, ಇವುಗಳನ್ನು ನಾನೇ ಪರಿಹರಿಸಿಕೊಳ್ಳಬೇಕು ಎಂದು ಚಿಂತಿಸುತ್ತಾ ದುಃಖವನ್ನು ಅನುಭವಿಸುತ್ತಾನೆ. ಅಜ್ಞಾನದಿಂದಲೇ ಸುಕೃತದಲ್ಲಿಯೂ ಹೀಗೆ ಭಾವಿಸುತ್ತಾನೆ. ಪೂರ್ವಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮಗಳನ್ನು ಅನುಭವಿಸುತ್ತಿದ್ದೇನೆ. ಈ ಜನ್ಮದಲ್ಲಿ ಮಾಡಿದ ಅನೇಕ ಪುಣ್ಯಕಾರ್ಯಗಳಿಂದ ದೇವಲೋಕಕ್ಕೆ ಹೋದ ಬಳಿಕ ಅಲ್ಲಿಯ ಪುಣ್ಯಫಲಗಳನ್ನು ಅನುಭವಿಸುತ್ತೇನೆ. ಇಲ್ಲಿಯೂ ಶುಭಾಶುಭ ಕರ್ಮಗಳನ್ನು ಅನುಭವಿಸುತ್ತೇನೆ ಎಂದು ಜೀವನು ತನಗೆ ಸಂಬಂಧ ಇಲ್ಲದಿರುವ, ಸುಖ-ದುಃಖಗಳ ಸಂಬಂಧವನ್ನು ಅಜ್ಞಾನದಿಂದ ತಿಳಿದು ಪರಿಭ್ರಮಣವನ್ನು ಹೊಂದುತ್ತಿರುತ್ತಾನೆ.
ಸುಖಮೇವ ಚ ಕರ್ತವ್ಯಂ ಸಕೃತ್ ಕೃತ್ವಾ ಸುಖಂ ಮಮ |
ಯಾವದಂತಂ ಚ ಮೇ ಸೌಖ್ಯಂ ಜಾತ್ಯಾಂ ಜಾತ್ಯಾಂ ಭವಿಷ್ಯತಿ ||34||
ನಾನು ಸುಖಕ್ಕೆ ಸಾಧನವಾದ ಪುಣ್ಯಕರ್ಮವನ್ನೇ ಮಾಡಬೇಕು. ಪುಣ್ಯಕರ್ಮವನ್ನು ಒಮ್ಮೆ ಆಚರಿಸಿದರೂ ನಿತ್ಯವೂ ಸುಖವುಂಟಾಗುತ್ತದೆ. ಜನ್ಮಾಂತರದಲ್ಲಿಯೂ ಸುಖ ಉಂಟಾಗುತ್ತದೆ ಎಂದು ಭಾವಿಸುತ್ತಾನೆ.
ಭವಿಷ್ಯತಿ ಚ ಮೇ ದುಃಖಂ ಕೃತೇನೇಹಾಪ್ಯನಂತಕಮ್ |
ಮಹದ್ದುಃಖಂ ಹಿ ಮಾನುಷ್ಯಂ ನಿರಯೇ ಚಾಪಿ ಮಜ್ಜನಮ್ ||35||
ನಾನು ಈ ಜನ್ಮದಲ್ಲಿ ದುಷ್ಕಕಾರ್ಯವನ್ನೆಸಗಿದರೆ ಮಹಾದುಃಖವನ್ನೇ ಅನುಭವಿಸಬೇಕಾಗುತ್ತದೆ. ಮನುಷ್ಯ ಜನ್ಮವು ಮಹಾದುಃಖದಿಂದ ಕೂಡಿದ್ದಾಗಿದೆ. ಇಷ್ಟು ಮಾತ್ರವಲ್ಲದೆ ಕೆಟ್ಟ ಕೆಲಸಗಳನ್ನು ಮಾಡಿದರೆ ನರಕದಲ್ಲಿಯೂ ಬೀಳಬೇಕಾಗುತ್ತದೆ ಎಂದು ಚೇತನನು ಭಾವಿಸುತ್ತಿರುತ್ತಾನೆ.
ನಿರಯಾಚ್ಚಾಪಿ ಮಾನುಷ್ಯಂ ಕಾಲೇನೈಷ್ಯಾಮ್ಯಹಂ ಪುನಃ |
ಮನುಷ್ಯತ್ವಾಚ್ಚ ದೇವತ್ವಂ ದೇವತ್ವಾತ್ ಪೌರುಷಂ ಪುನಃ |
ಮನುಷ್ಯತ್ವಾಚ್ಚ ನಿರಯಂ ಪರ್ಯಾಯೇಣೋಪಗಚ್ಛತಿ ||36||
ಪಾಪಕರ್ಮದ ಫಲದಿಂದ ನರಕದಲ್ಲಿ ಬಹಳ ಕಾಲ ಇದ್ದು, ಅಲ್ಲಿಂದ ಬಿಡುಗಡೆ ಹೊಂದಿದ ಬಳಿಕ ಮನುಷ್ಯ ಜನ್ಮವನ್ನು ಪಡೆದುಕೊಳ್ಳುತ್ತೇನೆ. ಮನುಷ್ಯ ಜನ್ಮದಲ್ಲಿ ಸುಕೃತವನ್ನು ಮಾಡಿ ದೇವತ್ವವನ್ನು ಹೊಂದುತ್ತೇನೆ. ಪುನಃ ಪುಣ್ಯವು ತೀರಿದ ಬಳಿಕ ಮನುಷ್ಯನಾಗಿಯೂ ಹುಟ್ಟುತ್ತೇನೆ ಎಂದು ಮನುಷ್ಯನು ಭಾವಿಸುತ್ತಾನೆ. ಚೇತನನು ಪರಿಹಾರವಾಗಿ ನರಕಕ್ಕೂ, ಮನುಷ್ಯ ಲೋಕಕ್ಕೂ, ದೇವಲೋಕಕ್ಕೂ ಹೋಗುತ್ತಿರುತ್ತಾನೆ.
ಯ ಏವಂ ವೇತ್ತಿ ವೈ ನಿತ್ಯಂ ನಿರಾತ್ಮಾತ್ಮಗುಣೈರ್ವೃತಃ |
ತೇನ ದೇವಮನುಷ್ಯೇಷು ನಿರಯೇ ಚೋಪಪದ್ಯತೇ ||37||
ಮಮತ್ವೇನಾವೃತೋ ನಿತ್ಯಂ ತತ್ರೈವ ಪರಿವರ್ತತೇ |
ಸರ್ಗಕೋಟಿಸಹಸ್ರಾಣಿ ಮರಣಾಂತಾಸು ಮೂರ್ತಿಷು ||38||

ಪ್ರಕೃತಿಯ ಗುಣಗಳಿಂದ ಸಿಲುಕಿದ ಜೀವನು ತನಗೊಬ್ಬ ನಿಯಾಮಕನಿಲ್ಲವೆಂದು ತಿಳಿದುಕೊಂಡು ದೇವ-ಮನುಷ್ಯಜನ್ಮಗಳನ್ನು ಪರಮಾತ್ಮನಿಂದಲೇ ಹೊಂದುತ್ತಿರುತ್ತಾನೆ. ನಾನು, ನನ್ನದು ಎಂಬ ಮಮತ್ವದಿಂದ ಆವೃತನಾದ ಚೇತನನು ಸಾವಿರ ಕೋಟಿ ಸೃಷ್ಟಿಕಾಲ ಪರ್ಯಂತವಾಗಿ ಮರಣ ಧರ್ಮವುಳ್ಳ ಶರೀರದಲ್ಲಿಯೇ ಸುತ್ತುತ್ತಿರುತ್ತಾನೆ.

ಯ ಏವಂ ಕುರುತೇ ಕರ್ಮ ಶುಭಾಶುಭಫಲಾತ್ಮಕಮ್ |
ಸ ಏವ ಫಲಮಶ್ನಾತಿ ತ್ರಿಷು ಲೋಕೇಷು ಮೂರ್ತಿಮಾನ್ ॥39॥

ಯಾವಾತನು ಶುಭಾಶುಭ ಫಲಗಳನ್ನು ನೀಡುವ ಕರ್ಮಗಳನ್ನು ಆಚರಿಸುತ್ತಾನೋ, ಮೂರು ಲೋಕಗಳಲ್ಲಿಯೂ ಅಂತಹ ವ್ಯಕ್ತಿಯು ಆ ಕರ್ಮಗಳ ಫಲವನ್ನು ಅವನೇ ಅನುಭವಿಸುತ್ತಾನೆ.

ಪ್ರಕೃತಿಃ ಕುರುತೇ ಕರ್ಮ ಶುಭಾಶುಭಫಲಾತ್ಮಕಮ್ |
ಪ್ರಕೃತಿಸ್ತು ತದಶ್ನಾತಿ ತ್ರಿಷು ಲೋಕೇಷು ಕಾಮಗಾ ॥40॥

ಜೀವರಿಗೆ ಅಂಟಿದ ಸ್ವಭಾವವು ಶುಭಾಶುಭ ಫಲಗಳನ್ನು, ಶುಭಾಶುಭ ಕರ್ಮಗಳಿಗೆ ಅನುಗುಣವಾಗಿ ನೀಡುತ್ತದೆ. ಪ್ರಕೃತಿಯು ಜೀವನಿಗೆ ಆ ಫಲಗಳನ್ನು ತಿನ್ನಿಸುತ್ತದೆ. ಮೂರು ಲೋಕಗಳಲ್ಲಿಯೂ ಈ ವ್ಯವಸ್ಥೆಯು ಪ್ರಕೃತಿಯಿಂದಲೇ ಸ್ವಚ್ಛಂದವಾಗಿ ನಡೆಯುತ್ತಿದೆ.

ತಿರ್ಯಗ್ಯೋನೌ ಮನುಷ್ಯತ್ವೇ ದೇವಲೋಕೇ ತಥೈವ ಚ |
ತ್ರೀಣಿ ಸ್ಥಾನಾನಿ ಚೈತಾನಿ ಜಾನೀಯಾತ್ ಪ್ರಾಕೃತಾನಿ ಹ ॥41॥

ತಿರ್ಯಗ್ಯೋನಿ, ಮನುಷ್ಯಯೋನಿ, ದೇವಲೋಕದಲ್ಲಿರುವ ದೇವಯೋನಿ - ಈ ಮೂರು ಕರ್ಮಫಲಗಳನ್ನು ಅನುಭವಿಸುವ ಸ್ಥಾನಗಳಾಗಿವೆ. ಇವುಗಳನ್ನು ಪ್ರಕೃತಿಗೆ ಸಂಬಂಧಿಸಿದವೆಂದು ತಿಳಿಯಬೇಕು.

ಅಲಿಂಗಾಂ ಪ್ರಕೃತಿಂ ಚಾಹುರ್ಲಿಂಗೈರನುಮಿಮೀಮಹೇ |
ತಥೈವ ಪೌರುಷಂ ಲಿಂಗಮನುಮಾನಾದ್ಧಿ ಪಶ್ಯತಿ ॥42॥

ಪ್ರಕೃತಿಯು ಇಂದ್ರಿಯಗಳಿಗೆ ಗೋಚರವಾಗುವುದಿಲ್ಲವಾದ್ದರಿಂದ ಕಣ್ಣಿಗೆ ಕಾಣುವ ಯಾವ ಚಿಹ್ನೆಗಳೂ ಇದರಲ್ಲಿ ಇರುವುದಿಲ್ಲ. ಮಹದಾದಿ ಕಾರ್ಯಗಳಿಂದ ಪ್ರಕೃತಿ ಇದೆ ಎಂದು ಊಹಿಸುತ್ತೇವೆ. ಇದೇ ರೀತಿ ಜೀವನಿಗೆ ಸಂಬಂಧಿಸಿದ ಅಸ್ವಾತಂತ್ರ್ಯ ಮೊದಲಾದ ಚಿಹ್ನೆಗಳಿಂದ, ದುಃಖಾದಿ ಲಿಂಗಗಳಿಂದ ಜೀವನ ಅವಸ್ಥೆಯನ್ನು ತಿಳಿಯುತ್ತೇವೆ.

ಸ ಲಿಂಗಾಂತರಮಾಸಾದ್ಯ ಪ್ರಾಕೃತಂ ಲಿಂಗಮವ್ರಣಮ್ |
ವ್ರಣದ್ವಾರಾಣ್ಯಧಿಷ್ಠಾಯ ಕರ್ಮಾಣ್ಯಾತ್ಮನಿ ಮನ್ಯತೇ ॥43॥

ಜೀವನು ದುಃಖದ ಚಿಹ್ನೆಗಿಂತ ಬೇರೆಯಾಗಿರುವ ಪ್ರಾಕೃತವಾದ ಮತ್ತೊಂದು ದೇಹವನ್ನು ಹೊಂದಿ, ಶರೀರದಲ್ಲಿರುವ ದೋಷದ ದ್ವಾರಗಳಾದ ಇಂದ್ರಿಯಗಳನ್ನು ಆಶ್ರಯಿಸಿ, ಪ್ರಕೃತಿಗೆ ಸಂಬಂಧಿಸಿದ ಇಂದ್ರಿಯಗಳ ಮೂಲಕ ನಡೆಯುವ ಕರ್ಮಗಳೆಲ್ಲವನ್ನು ತನ್ನದ್ದೇ ಎಂದು ಭಾವಿಸಿಕೊಳ್ಳುತ್ತಾನೆ.

ಶ್ರೋತ್ರಾದೀನಿ ತು ಸರ್ವಾಣಿ ಪಂಚ ಕರ್ಮೇಂದ್ರಿಯಾಣಿ ಚ |
ವಾಗಾದೀನಿ ಪ್ರವರ್ತಂತೇ ಗುಣೇಷ್ವೇವ ಗುಣೈಃ ಸಹ |
ಅಹಮೇತಾನಿ ವೈ ಕುರ್ವನ್ಮಮೈತಾನೀಂದ್ರಿಯಾಣಿ ಚ ॥44॥
ನಿರಿಂದ್ರಿಯೋಭಿಮನ್ಯೇತ ವ್ರಣವಾನಸ್ಮಿ ನಿರ್ವ್ರಣಃ |
ಅಲಿಂಗೋ ಲಿಂಗಮಾತ್ಮಾನಮಕಾಲಃ ಕಾಲಮಾತ್ಮನಃ ॥45॥

ಕಿವಿಯೇ ಮೊದಲಾದ ಪಂಚಜ್ಞಾನೇಂದ್ರಿಯಗಳು, ವಾಕ್ ಮೊದಲಾದ ಕರ್ಮೇಂದ್ರಿಯಗಳು ತಮ್ಮ ತಮ್ಮ ಗುಣಗಳ ಜೊತೆಗೆ ಪಾಂಚಭೌತಿಕವಾದ ಶರೀರದಲ್ಲಿಯೇ ನೆಲೆಸಿರುತ್ತವೆ. ಚೇತನನು ಪ್ರಕೃತಿಗೆ ಸಂಬಂಧಿಸಿದ ಇಂದ್ರಿಯಗಳಿಂದ ರಹಿತನಾಗಿದ್ದರೂ ನಾನೇ ಈ ಎಲ್ಲ ಕಾರ್ಯಗಳನ್ನು ಮಾಡುತ್ತಿದ್ದೇನೆ ಎಂದು ಭಾವಿಸುತ್ತಾನೆ. ಯಾವುದೇ ದೋಷಗಳಿಂದ ಕೂಡದವನಾಗಿದ್ದರೂ ದೋಷಿ ಎಂದು ಭಾವಿಸುತ್ತಾನೆ. ಶರೀರ ಧರ್ಮ ಇಲ್ಲದವನಾಗಿದ್ದರೂ ಪ್ರಾಕೃತ ಶರೀರವುಳ್ಳವನೆಂದು ಭಾವಿಸಿಕೊಳ್ಳುತ್ತಾನೆ. ಮರಣ ಧರ್ಮವಿಲ್ಲದವನಾಗಿದ್ದರೂ ಮರಣ ಧರ್ಮವುಳ್ಳವನೆಂದು ಭಾವಿಸಿಕೊಳ್ಳುತ್ತಾನೆ.

ಅಸತ್ತ್ವಂ ಸತ್ತ್ವಮಾತ್ಮಾನಮತತ್ತ್ವಂ ತತ್ತ್ವಮಾತ್ಮನಃ |
ಅಮೃತ್ಯುರ್ಮೃತ್ಯುಮಾತ್ಮಾನಮಚರಶ್ಚರಮಾತ್ಮನಃ ॥46॥

ತನ್ನಲ್ಲಿ ಸಾಮರ್ಥ್ಯವಿಲ್ಲದಿದ್ದರೂ ಸಾಮರ್ಥ್ಯವುಳ್ಳವನೆಂದೂ, ಸತ್ತ್ವಗುಣವಂತನೆಂದಾಗಲಿ ಭಾವಿಸುತ್ತಾನೆ. ಯಥಾರ್ಥ ಜ್ಞಾನವಿಲ್ಲದಿದ್ದರೂ ತತ್ತ್ವಜ್ಞಾನಿಯನ್ನಾಗಿ ತಿಳಿದುಕೊಳ್ಳುತ್ತಾನೆ. ಮೃತ್ಯುರಹಿತನಾಗಿದ್ದರೂ ಮೃತ್ಯುಗ್ರಸ್ಥನೆಂದೂ, ಅಚಲನಾಗಿದ್ದರೂ ಸಂಚರಿಸತಕ್ಕವನೆಂದೂ ತಿಳಿದುಕೊಳ್ಳುತ್ತಾನೆ.

ಅಕ್ಷೇತ್ರಃ ಕ್ಷೇತ್ರಮಾತ್ಮಾನಮಸರ್ಗಃ ಸರ್ಗಮಾತ್ಮನಃ |
ಅತಮಾಸ್ತಮ ಆತ್ಮಾನಮಗತಿರ್ಗತಿಮಾತ್ಮನಃ ॥47॥

ಪಾಂಚಭೌತಿಕ ಶರೀರದಿಂದ ಭಿನ್ನನಾಗಿದ್ದರೂ ತಾನೇ ಶರೀರನೆಂದೂ, ಜನ್ಮ- ಸ್ಥಿತಿಯಿಂದ ದೂರನಾಗಿದ್ದರೂ ಉತ್ಪತ್ತಿ ಉಳ್ಳವನೆಂದೂ, ತನ್ನಲ್ಲಿ ಯಾವುದೇ ಕೇಡುಗಳಿಲ್ಲದಿದ್ದರೂ ಕೇಡುಗಳುಳ್ಳವನೆಂದೂ, ಗಮನಶೀಲನಲ್ಲದಿದ್ದರೂ ಗಮನಶೀಲನೆಂದೂ ಭಾವಿಸಿಕೊಳ್ಳುತ್ತಾನೆ.

ಅಭವೋ ಭವಮಾತ್ಮಾನಮಭಯೋ ಭಯಮಾತ್ಮನಃ |
ಅಕ್ಷರಃ ಕ್ಷರಮಾತ್ಮಾನಮಬುದ್ಧಿಸ್ತ್ವಭಿಮನ್ಯತೇ ॥48॥

ಸಂಸಾರಿ ಅಲ್ಲದಿದ್ದರೂ ಸಂಸಾರಿ ಎಂದೂ, ಭಯರಹಿತನಾಗಿದ್ದರೂ ಭೀತನಾಗಿರುವೆನೆಂದೂ, ಅವಿನಾಶಿಯಾಗಿದ್ದರೂ ನಾಶವುಳ್ಳವನೆಂದೂ, ಜ್ಞಾನ ರಹಿತನಾದುದರಿಂದ ಅಭಿಮಾನದಿಂದ ಹೀಗೆ ಜೀವನು ತಿಳಿದಿರುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರ್ಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ

ವಸಿಷ್ಠಕರಾಲಜನಕಸಂವಾದೇ ಷಟ್‌ತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೇಳನೆಯ ಅಧ್ಯಾಯ
ವಸಿಷ್ಠ-ಜನಕರ ಸಂವಾದ.
ವಸಿಷ್ಠಃ
ಏವಮಪ್ರತಿಬುದ್ಧತ್ವಾದಬುದ್ಧಜನಸೇವನಾತ್ ।
ಸರ್ಗಕೋಟಿಸಹಸ್ರಾಣಿ ಪತನಾಂತಾನಿ ಗಚ್ಛತಿ ॥1॥
ವಸಿಷ್ಠ ಹೀಗೆ ಜೀವನು ಅಜ್ಞಾನದಿಂದ, ಅಜ್ಞಾನಿಗಳ ಸಹವಾಸದಿಂದ ಪತನವನ್ನು ಹೊಂದುತ್ತಲೇ ಇರುತ್ತಾನೆ. ಸಾವಿರ ಕೋಟಿ ಜನ್ಮಗಳನ್ನು ತಾಳುತ್ತಲೇ ಇರುತ್ತಾನೆ.
ಧಾಮ್ನಾ ಧಾಮಸಹಸ್ರಾಣಿ ಮರಣಾಂತಾನಿ ಗಚ್ಛತಿ ।
ತಿರ್ಯಗ್ಯೋನೌ ಮನುಷ್ಯತ್ವೇ ದೇವಲೋಕೇ ತಥೈವ ಚ ॥2॥
ಒಂದೊಂದು ಸ್ಥಾನದಿಂದ ಸಾವಿರಾರು ಸ್ಥಾನಗಳಿಗೆ ಹೋಗುತ್ತಾ ಜನನ ಮರಣಗಳನ್ನು ಹೊಂದುತ್ತಲೇ ಇರುತ್ತಾನೆ.
ಚಂದ್ರಮಾ ಇವ ಭೂತಾನಾಂ ಪುನಸ್ತತ್ರ ಸಹಸ್ರಶಃ ।
ಲೀಯತೇಽಪ್ರತಿಬುದ್ಧತ್ವಾದೇವಮೇಷ ಹ್ಯಬುದ್ಧಿಮಾನ್ ॥3॥
ಜೀವನು ಅಜ್ಞಾನಿಯಾದುದರಿಂದ, ಪಂಚದಶ ಕಲೆಗಳು ತನಗೆ ಸಂಬಂಧಿಸಿದವುಗಳಲ್ಲ ಎಂಬುದನ್ನು ತಿಳಿಯದೆ ಉಳಿದ ಹದಿನಾರನೆಯ ಕಲೆಯಿಂದ ಕೂಡಿರುವ ಚಂದ್ರನು ಪುನಃ ಆ ಒಂದೇ ಕಲೆಯಿಂದ ಪ್ರತಿದಿನವೂ ಅಭಿವೃದ್ಧಿಯನ್ನು ಹೊಂದುತ್ತಾ ಹದಿನೈದು ಕಲೆಗಳಿಂದ ಸಹಿತನಾಗಿ ಪೂರ್ಣಮಂಡಲದಲ್ಲಿ ಕಾಣಿಸಿಕೊಳ್ಳುತ್ತಾ ಪುನಃ ಒಂದೊಂದೇ ಕಲೆಗಳಿಂದ ಹೀನನಾಗಿ ಅಮಾವಾಸ್ಯೆಯ ದಿವಸ ಒಂದೇ ಕಲೆಯಿಂದ ಕೂಡಿದವನಾಗಿ ಪುನಃ ಅಭಿವೃದ್ಧಿಯನ್ನು ಹೇಗೆ ಹೊಂದುತ್ತಾನೋ, ತನ್ನಲ್ಲಿರುವ ಈ ವೃದ್ಧಿ- ಹ್ರಾಸಗಳನ್ನು ಹೇಗೆ ಅರಿಯುವುದಿಲ್ಲವೋ, ಈ ರೀತಿ ಚಂದ್ರನಂತೆಯೇ ಪರಮಾತ್ಮ ಜ್ಞಾನದಿಂದ ರಹಿತನಾದ ಜೀವನು ಏಕಾದಶೇಂದ್ರಿಯಗಳಿಂದ ಸಹಿತವಾದ, ಪಂಚಭೂತಗಳಿಂದ ಕೂಡಿರುವ, ಷೋಡಶ ಕಲೆಗಳಿಂದ ದೂರನಾದರೂ ಜೀವನು ಪುನಃ ಹುಟ್ಟನ್ನು ಪಡೆದು ಅವುಗಳಿಂದ ಸಮೃದ್ಧಿಯನ್ನು ಹೊಂದಿ, ಪುನಃ ಮರಣವನ್ನು ಹೊಂದುತ್ತಾ, ಹೀಗೆ ಸಾವಿರಾರು ಬಾರಿ ಉತ್ಪತ್ತಿ-ಲಯಗಳನ್ನು ಹೊಂದುತ್ತಲೇ ಇರುತ್ತಾನೆ. ಹಿಂದೆ ಈ ವಿಚಾರವನ್ನೇ `ಧಾಮ್ನಾ ಧಾಮಸಹಸ್ರಾಣಿ' ಎಂದು ತಿಳಿಸಿರುತ್ತಾರೆ.
ಕಲಾಃ ಪಂಚದಶಾ ಯೋನಿಸ್ತದ್ಧಾಮ ಇತಿ ಪಠ್ಯತೇ ।
ನಿತ್ಯಮೇತದ್ ವಿಜಾನೀಹಿ ಸೋಮಃ ಷೋಡಶಮೀ ಕಲಾ ॥4॥
ಚಂದ್ರಮಂಡಲವು ಹದಿನೈದು ಕಲೆಗಳಿಂದ ಕೂಡಿದೆ ಎಂಬುದಾಗಿ ಶಾಸ್ತ್ರಗಳಲ್ಲಿ ತಿಳಿಸಲಾಗಿದೆ. ಚಂದ್ರನಿಂದ ಸಹಿತವಾದಾಗ ಹದಿನಾರು ಕಲೆಗಳಿಂದ ಯುಕ್ತವಾದುದು ಚಂದ್ರಮಂಡಲ ಎಂಬುದನ್ನು ತಿಳಿದುಕೊ.
ಕಲಾಯಾಂ ಜಾಯತೇಽಜಸ್ರಂ ಪುನಃ ಪುನರಬುದ್ಧಿಮಾನ್ ।
ಧಾಮ ತಸ್ಯೋಪಯುಂಜಂತಿ ಭೂಯ ಏವ ತು ಜಾಯತೇ ॥5॥
ಚಂದ್ರನಲ್ಲಿ ಮೂಲಭೂತವಾಗಿರುವ ಕಲೆಯು ಒಂದೇ ಆಗಿದ್ದರೂ ಸೇರಿಕೊಂಡಂತಹ ಕಲೆಗಳನ್ನೆಲ್ಲ ತನ್ನದ್ದೇ ಎಂದು ಭಾವಿಸಿಕೊಳ್ಳುತ್ತಾನೆ. ಆದರೆ ಆಯಾ ಕಲೆಗಳಿಗೆ ಅಭಿಮಾನಿಗಳಾದ ದೇವತೆಗಳು ಚಂದ್ರನಲ್ಲಿ ವೃದ್ಧಿಯನ್ನು ಪಡೆದು ಪುನಃ ತಮ್ಮ ಕಲೆಗಳನ್ನು ತಾವೂ ಉಪಭೋಗಿಸುತ್ತವೆ. ಉಪಭೋಗಿಸಿದಾಗ ಚಂದ್ರನು ಒಂದೇ ಕಲೆಯಿಂದ ಕೂಡಿರುತ್ತಾನೆ. ಪುನಃ ಆಯಾ ದೇವತೆಗಳು ಇವನಲ್ಲಿ ಸೇರಿದಾಗ ಹುಟ್ಟನ್ನು, ಅಭಿವೃದ್ಧಿಯನ್ನೂ ಹೊಂದುತ್ತಾನೆ.
ಷೋಡಶೀ ತು ಕಲಾ ಸೂಕ್ಷ್ಮಾ ಸ ಸೋಮ ಉಪಧಾರ್ಯತಾಮ್ ।
ನ ತೂಪಯುಜ್ಯತೇ ದೇವೈರ್ದೇವಾನುಪಯುನಕ್ತಿ ಸಾ ॥6॥
ಚಂದ್ರನಲ್ಲಿ ಕಾಣುವ ಹದಿನಾರು ಕಲೆಗಳನ್ನು ದೇವತೆಗಳು ಕೃಷ್ಣಪಕ್ಷದಲ್ಲಿ ಸ್ವೀಕರಿಸಿದಾಗ ಚಂದ್ರನು ಒಂದೇ ಕಲೆಯಿಂದ ಕೂಡಿಕೊಳ್ಳುತ್ತಾನೆ. ಪುನಃ ದೇವತೆಗಳು ಶುಕ್ಲ ಪಕ್ಷದಲ್ಲಿ ಆ ಚಂದ್ರನ ಜೊತೆಗೆ ತಮ್ಮ ಕಲೆಗಳಿಂದ ಸೇರಿಕೊಂಡಾಗ ಚಂದ್ರನು ನಾನು ಪೂರ್ಣನೆಂದು ಭಾವಿಸುತ್ತಾನೆ. ವಸ್ತುತಃ ಹದಿನಾರನೆಯ ಕಲೆ ಎನಿಸಿದ ಸೂಕ್ಷ್ಮ ಕಲೆ ಏನಿದೆಯೋ ಅದು ಮಾತ್ರ ಚಂದ್ರನೆಂದು ನೀನೂ ತಿಳಿದುಕೊ.
ಏತಾನ್ನ ಕ್ಷಪಯಿತ್ವಾ ಹಿ ಜಾಯತೇ ನೃಪಸತ್ತಮ ।
ಸಾ ಹ್ಯಸ್ಯ ಪ್ರಕೃತಿರ್ದೃಷ್ಟಾ ತತ್ಕ್ಷಯಾನ್ಮೋಕ್ಷ ಉಚ್ಯತೇ ॥7॥
ಈ ಕಲೆಯನ್ನು ವಿನಾಶಗೊಳಿಸದೆ ಇರುವುದರಿಂದಲೇ ಚಂದ್ರನು ಪುನಃ ಪುನಃ ಹುಟ್ಟುತ್ತಿರುತ್ತಾನೆ. ಈ ಕಲೆಯೇ ಪ್ರಕೃತಿ ಎನಿಸಿದೆ. ಅದರ ಕ್ಷಯದಿಂದ ಮೋಕ್ಷವು ಹೇಳಲ್ಪಟ್ಟಿದೆ.
ತದೇವಂ ಷೋಡಶಕಲಂ ದೇಹಮವ್ಯಕ್ತಸಂಜ್ಞಕಮ್ ।
ಮಮಾಯಮಿತಿ ಮನ್ವಾನಸ್ತತ್ರೈವ ಪರಿವರ್ತತೇ ॥8॥
ಈ ಚಂದ್ರನಂತೆಯೇ ಷೋಡಶ ಕಲೆಗಳಿಂದ ಕೂಡಿರುವ ಜೀವನು ಅವ್ಯಕ್ತ ಎಂಬ ಹೆಸರಿನ ದೇಹವನ್ನು ಹೊಂದಿರುತ್ತಾನೆ. ಪಂಚಭೂತಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು ಇವುಗಳನ್ನು ತನ್ನದ್ದೆಂದು ಭಾವಿಸಿರುತ್ತಾನೆ. ಆದ್ದರಿಂದಲೇ ಈ ಸಂಸಾರದಲ್ಲಿಯೇ ಸುತ್ತುತ್ತಿರುತ್ತಾನೆ.
ಪಂಚವಿಂಶಸ್ತಥೈವಾತ್ಮಾ ತಸ್ಯೈವಾ ಪ್ರತಿಬೋಧನಾತ್ ।
ವಿಮಲಸ್ಯ ವಿಶುದ್ಧಸ್ಯ ಶುದ್ಧಾನಿಲನಿಷೇವಣಾತ್ ॥9॥

ಅಶುದ್ಧ ಏವ ಶುದ್ಧಾತ್ಮಾ ತಾದೃಗ್ಭವತಿ ಪಾರ್ಥಿವ |
ಅಬುದ್ಧಸೇವನಾಚ್ಚಾಪಿ ಬುದ್ಧೋಽಪ್ಯಬುಧತಾಂ ವ್ರಜೇತ್ ॥10॥
ಇಪ್ಪತ್ತೈದನೆಯ ತತ್ತ್ವವು ಪರಮಾತ್ಮನೇ ಆಗಿದ್ದಾನೆ. ಅಂತಹ ಪರಮಾತ್ಮನು ಜೀವರ ಶರೀರದಲ್ಲಿಯೇ ಇದ್ದಾನೆ. ಅಂತಹ ಪರಮಾತ್ಮನನ್ನು ತಿಳಿಯದೆ ಇರುವ ಕಾರಣದಿಂದ ಪ್ರಕೃತಿ ಬಂಧನದಲ್ಲಿ ಸಿಲುಕಿದ್ದಾನೆ. ವಿಮಲನೂ, ವಿಶುದ್ಧನೂ ಆದ ಜೀವನು ಶುದ್ಧವಾದ ಆಹಾರವನ್ನು ಸ್ವೀಕರಿಸುವುದರಿಂದ ಅಶುದ್ಧನಾಗಿದ್ದರೂ ಪರಮಾತ್ಮನ ಅನುಗ್ರಹದಿಂದ ಶುದ್ಧಾತ್ಮನಾಗುತ್ತಾನೆ. ಅಜ್ಞಾನಿಗಳ ಸಂಗದಿಂದ ಜ್ಞಾನಿಯಾಗಿದ್ದರೂ ಅಜ್ಞಾನಿಯಾಗುತ್ತಾನೆ.
ತಥೈವಾಪ್ರತಿಬುದ್ಧೋಽಪಿ ಜ್ಞೇಯೋ ನೃಪತಿಸತ್ತಮ |
ಪ್ರಕೃತೇಸ್ತ್ರಿಗುಣಾಯಾಸ್ತು ಸೇವನಾತ್ ಪ್ರಾಕೃತೋ ಭವೇತ್ ॥11॥
ಅವಿವೇಕಿಯಾಗಿದ್ದರೂ ವಿವೇಕಿಗಳ ಸಹವಾಸದಿಂದ ವಿವೇಕಿಯಾಗುತ್ತಾನೆ. ತ್ರಿಗುಣಾತ್ಮಕವಾದ ಪ್ರಕೃತಿಯ ಸಂಬಂಧದಿಂದ ಜೀವನು ಪ್ರಾಕೃತನಂತೆ ಆಗಿರುತ್ತಾನೆ.
ಕರಾಲಜನಕಃ
ಅಕ್ಷರಕ್ಷರಯೋರೇಷ ದ್ವಯೋಃ ಸಂಬಂಧ ಇಷ್ಯತೇ |
ಸ್ತ್ರೀಪುಂಸೋರ್ವಾಪಿ ಭಗವನ್ ಸಂಬಂಧಸ್ತದ್ವದುಚ್ಯತೇ ॥12॥
ಕರಾಲಜನಕ ವಸಿಷ್ಠರೇ, ಅಕ್ಷರನಾದ ಜೀವನಿಗೆ ಕ್ಷರವೆನಿಸಿದ ಪ್ರಕೃತಿಗೂ ಈ ರೀತಿಯಾದ ಸಂಬಂಧವು ಅಂಗೀಕರಿಸಲ್ಪಟ್ಟಿದೆ. ಸ್ತ್ರೀ-ಪುರುಷರಿಗಿರುವ ಸಂಬಂಧದಂತೆ ಈ ಜೀವ ಮತ್ತು ಪ್ರಕೃತಿಗಳಿಗೆ ಸಂಬಂಧವಿದೆ.
ಋತೇ ನ ಪುರುಷೇಣೇಹ ಸ್ತ್ರೀ ಗರ್ಭಂ ಧಾರಯತ್ಯುತ |
ಋತೇ ಸ್ತ್ರಿಯಂ ನ ಪುರುಷೋ ರೂಪಂ ನಿರ್ವರ್ತಯೇತ್ತಥಾ ॥13॥
ಸ್ತ್ರೀಯು ಜಗತ್ತಿನಲ್ಲಿ ಪುರುಷನ ಸಂಬಂಧವಿಲ್ಲದೆ ಗರ್ಭವನ್ನು ಧರಿಸಳು. ಇದರಂತೆ ಸ್ತ್ರೀ ಇಲ್ಲದಿದ್ದರೆ ಪುರುಷನು ಮತ್ತೊಂದು ಶರೀರವನ್ನು ಸೃಷ್ಟಿಸಲಾರ.
ಅನ್ಯೋನ್ಯಸ್ಯಾಭಿಸಂಬಂಧಾದನ್ಯೋನ್ಯಗುಣಸಂಶ್ರಯಾತ್ |
ರೂಪಂ ನಿರ್ವರ್ತಯತ್ಯೇತದೇವಂ ಸರ್ವಾಸು ಯೋನಿಷು ॥14॥
ದಂಪತಿಗಳ ಪರಸ್ಪರ ಸಂಬಂಧದಿಂದ, ಪರಸ್ಪರ ಗುಣಗಳ ಆಶ್ರಯದಿಂದ ಮಕ್ಕಳನ್ನು ಪಡೆಯಲು ಸಾಧ್ಯವಾಗುತ್ತದೆ. ಸಮಸ್ತ ತಿರ್ಯಗ್, ಮನುಷ್ಯ, ದೇವತಾ ಯೋನಿಗಳಲ್ಲಿಯೂ ಇದೇ ರೀತಿಯಾದ ಸಂಬಂಧಗಳಿವೆ.
ರತ್ಯರ್ಥಮಭಿಸಂರೋಧಾದನ್ಯೋನ್ಯಗುಣಸಂಶ್ರಯಾತ್ |
ಋತೌ ನಿರ್ವರ್ತತೇ ರೂಪಂ ತದ್ ವಕ್ಷ್ಯಾಮಿ ನಿದರ್ಶನಮ್ ॥15॥
ಯೇ ಗುಣಾಃ ಪುರುಷಸ್ಯೇಹ ಯೇ ಚ ಮಾತೃಗುಣಾಸ್ತಥಾ |
ಅಸ್ಥಿ ಸ್ನಾಯು ಚ ಮಜ್ಜಾ ಚ ಜಾನೀಮಃ ಪಿತೃತೋ ದ್ವಿಜ ॥16॥
ಸುಖಕ್ಕಾಗಿಯೇ ಸ್ತ್ರೀಯೊಡನೆ ಪುರುಷನ ಸಂಬಂಧವಾದಾಗ ಇಬ್ಬರ ಗುಣಗಳ ಮೇಲಣದಿಂದ ಪುತ್ರೋತ್ಪತ್ತಿಯಾಗುತ್ತದೆ. ಪುರುಷನ ಯಾವ ಗುಣಗಳಿಂದ ತಾಯಿಯ ಯಾವ ಗುಣಗಳು ಸೇರಿ ಪ್ರಜೋತ್ಪತ್ತಿಯಾಗುತ್ತದೆ ಎಂಬುದನ್ನು ದೃಷ್ಟಾಂತ ಪೂರ್ವಕವಾಗಿ ಹೇಳುತ್ತೇನೆ. ಮೂಳೆ, ನರ, ಮಜ್ಜೆ ಇವುಗಳು ತಂದೆಯ ಗುಣಗಳೆಂದು ನಾವು ತಿಳಿದಿರುತ್ತೇವೆ.
ತ್ವಗ್ಮಾಂಸಂ ಶೋಣಿತಂ ಚೈವ ಮಾತೃಜಾನ್ಯಪಿ ಶುಶ್ರುಮ |
ಏವಮೇತದ್ದ್ವಿಜಶ್ರೇಷ್ಠ ವೇದಶಾಸ್ತ್ರೇಷು ಪಠ್ಯತೇ ॥17॥
ಚರ್ಮ, ಮಾಂಸ, ರಕ್ತಗಳು ತಾಯಿಯಿಂದ ಬಂದ ಗುಣಗಳೆಂದು ತಿಳಿದಿದ್ದೇವೆ. ಈ ವಿಷಯ ವೇದಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಹೇಳಲ್ಪಟ್ಟಿದೆ.
ಪ್ರಮಾಣಂ ಯಚ್ಚ ವೇದೋಕ್ತಂ ಶಾಸೋತ್ರೋಕ್ತಂ ಯಚ್ಚ ಪಠ್ಯತೇ |
ವೇದಶಾಸ್ತ್ರಪ್ರಮಾಣಂ ಚ ಪ್ರಮಾಣಂ ತತ್ ಸನಾತನಮ್ ॥18॥
ಏವಮೇವಾಭಿಸಂಬದ್ಧೌ ನಿತ್ಯಂ ಪ್ರಕೃತಿಪೂರುಷೌ |
ಪಶ್ಯಾಮಿ ಭಗವಂಸ್ತಸ್ಮಾನ್ಮೋಕ್ಷಧರ್ಮೋ ನ ವಿದ್ಯತೇ ॥19॥
ವೇದೋಕ್ತವಾದ ಯಾವ ಪ್ರಮಾಣವಿದೆಯೋ, ಶಾಸೋತ್ರೋಕ್ತ ಪ್ರಮಾಣವನ್ನು ಯಾವ ಪಂಡಿತರು ಹೇಳುತ್ತಾರೋ ಅವೆರಡೂ ಸನಾತನವಾದ ಪ್ರಮಾಣಗಳೇ ಆಗಿವೆ. ಹೀಗೆ ಪರಸ್ಪರ ಗುಣಗಳ ಆಶ್ರಯದಿಂದ ಪ್ರಕೃತಿ-ಪುರುಷರು ಪರಸ್ಪರವಾಗಿ ಸೃಷ್ಟಿ ಕಾರ್ಯವನ್ನು ಮಾಡುತ್ತಾರೆ. ಪ್ರಕೃತಿ-ಪುರುಷರಿಗೆ ನಿತ್ಯ ಸಂಬಂಧವು ಇದ್ದೇ ಇದೆ. ಈ ರೀತಿ ಇದ್ದಾಗ ಮೋಕ್ಷವೆಂಬುದು ಹೇಗೆ ಸಾಧ್ಯ? ಆದ್ದರಿಂದ ಮೋಕ್ಷವೇ ಇಲ್ಲ ಎಂದು ಭಾವಿಸುತ್ತೇನೆ.
ಅಥ ವಾನಂತರಕೃತಂ ಕಿಂಚಿದೇವ ನಿದರ್ಶನಮ್ |
ತನ್ಮಮಾಚಕ್ಷ್ವ ತತ್ತ್ವೇನ ಪ್ರತ್ಯಕ್ಷೋ ಹ್ಯಸಿ ಸರ್ವಥಾ ॥20॥
ಪ್ರಕೃತಿ ಸಂಬಂಧವಿದ್ದರೂ ಪುರುಷನಿಗೆ ಮೋಕ್ಷವಾಗಿದೆ ಎಂಬುದಕ್ಕೆ ನಿಮ್ಮ ಬಳಿ ದೃಷ್ಟಾಂತವೇನಾದರೂ ಇದ್ದರೆ ಯಥಾರ್ಥವಾಗಿ ನನಗೆ ತಿಳಿಸಿರಿ. ತಮಗೆ ಎಲ್ಲ ವಿಷಯಗಳು ಪ್ರತ್ಯಕ್ಷವಾಗಿಯೇ ಕಾಣಿಸುತ್ತವೆ.
ಮೋಕ್ಷಕಾಮಾ ವಯಂ ಚಾಪಿ ಕಾಂಕ್ಷಾಮೋ ಯದನಾಮಯಮ್ |
ಅದೇಹಮಜರಂ ದಿವ್ಯಮತೀಂದ್ರಿಯಮನೀಶ್ವರಮ್ ॥21॥
ನಮಗೂ ಮೋಕ್ಷದ ಬಯಕೆ ಇದೆ. ನಿರ್ವಿಕಾರನಾದ, ಯಾವುದೇ ರೋಗ- ರುಜಿನಗಳಿಲ್ಲದ, ಪ್ರಾಕೃತದೇಹವಿಲ್ಲದ, ಅಜರನಾದ, ದಿವ್ಯನಾದ, ಪ್ರಾಕೃತ ಇಂದ್ರಿಯರಹಿತನಾದ, ಈಶ್ವರನಿಗಿಂತ ಭಿನ್ನನಾದ ಮುಕ್ತಜೀವನ ಬಗ್ಗೆ ತಿಳಿಯುವ ಬಯಕೆ ನನಗಿರುತ್ತದೆ.

ವಸಿಷ್ಠಃ
ಯದೇತದುಕ್ತಂ ಭವತಾ ವೇದಶಾಸ್ತ್ರನಿದರ್ಶನಮ್ |
ಏವಮೇತದ್ಯಥಾ ಚೈತನ್ನ ಗೃಹ್ಣಾತಿ ತಥಾ ಭವಾನ್ ||22||
ವಸಿಷ್ಠ ಜನಕರಾಜನೇ, ವೇದಶಾಸ್ತ್ರಗಳ ದೃಷ್ಟಾಂತವನ್ನು ಕೊಟ್ಟು ಯಾವ ಪ್ರಕೃತಿ ಪುರುಷರ ನಿತ್ಯ ಸಂಬಂಧವನ್ನು ನೀನು ತಿಳಿಸಿದೆಯೋ ಆ ವಿಚಾರವು ನಾನು ಹೇಳಿದ ಪ್ರಮೇಯಗಳಂತೆ ಯಥಾರ್ಥವಾಗಿದೆ. ನೀನು ತಿಳಿದಂತೆ ಯಥಾರ್ಥವಾಗಿರುವುದಿಲ್ಲ.
ವ್ಯಾಖ್ಯಾನ ವಿಶೇಷ ಈ ಪ್ರಕೃತಿ-ಪುರುಷರ ಬಗ್ಗೆ ಮುಂದೆ ನಾನು ಹೇಳುವಂತೆ ನೀನು ತಿಳಿದುಕೊಳ್ಳಬೇಕು. `ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ | ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮಾ' ಎಂಬ ಗೀತಾವಚನದಂತೆ ಮೂರು ಪುರುಷರು ಎಂದು ತಿಳಿದಾಗ ಅಕ್ಷರಪದವಾಚ್ಯಳಾದ ನಿತ್ಯಮುಕ್ತಳಾದ ಮಹಾಲಕ್ಷ್ಮಿಯು, ಕ್ಷರಾಕ್ಷರ ಅತೀತನಾದ ನಾರಾಯಣನು, ಕ್ಷರ ಪುರುಷರೆನಿಸಿದ ಜೀವರು ಎಂದು ಹೀಗೆ ಗ್ರಹಿಸಬೇಕು. ಇಬ್ಬರು ಪುರುಷರು ಎಂದು ವಿವಕ್ಷೆ ಇಟ್ಟುಕೊಂಡಲ್ಲಿ `ಕ್ಷರಃ ಸರ್ವಾಣಿ ಭೂತಾನಿ' ಎಂಬ ವಚನದಂತೆ ಕ್ಷರನೆನಿಸಿದ ಜೀವ, ಅಕ್ಷರನಾದ ನಾರಾಯಣ ಎಂದು ತಿಳಿಯಬೇಕು. ಇದಕ್ಕೆ ಪೂರಕವಾಗಿ `ಅಕ್ಷರಮಂಬರಾಂತಧೃತೇಃ' ಎಂಬ ವ್ಯಾಸರ ಸೂತ್ರದ ಪ್ರಮಾಣವೂ ಇದೆ. ಜೀವನು ಅಕ್ಷರ ಪುರುಷನೆಂದು ಯಾವ ಶಾಸ್ತ್ರವೂ ಹೇಳಲಿಲ್ಲ. ನೀನು ಜೀವನನ್ನು ಅಕ್ಷರ ಪುರುಷನೆಂದು ತಿಳಿದುಕೊಂಡಿರುವುದರಿಂದ ಈ ಶಾಸ್ತ್ರ ರಹಸ್ಯವನ್ನು ತಿಳಿಯಲಾಗುತ್ತಿಲ್ಲ ಎಂದು ವಸಿಷ್ಠರು ಜನಕನನ್ನು ಕುರಿತು ಬೋಧಿಸಿದ್ದಾರೆ ಎಂದು ತಿಳಿಯಬೇಕು.
ಧಾರ್ಯತೇ ಹಿ ತ್ವಯಾ ಗ್ರಂಥ ಉಭಯೋರ್ವೇದಶಾಸ್ತ್ರಯೋಃ |
ನ ತು ಗ್ರಂಥಸ್ಯ ತತ್ತ್ವಜ್ಞೋ ಯಥಾವತ್ತ್ವಂ ನರೇಶ್ವರ ||23||
ವೇದ,ಶಾಸ್ತ್ರಗಳಿಗೆ ಸಂಬಂಧಿಸಿದ ಎಲ್ಲ ಗ್ರಂಥಗಳನ್ನು ನೀನು ಬುದ್ಧಿಯಲ್ಲಿ ಧರಿಸಿರುವಿ. ಆದರೆ ಆ ಗ್ರಂಥಗಳಲ್ಲಿನ ಯಥಾವತ್ತಾದ ತತ್ತ್ವಗಳನ್ನು ನರೇಶ್ವರನೇ, ನೀನು ಅರ್ಥ ಮಾಡಿಕೊಂಡಿರುವುದಿಲ್ಲ.
ಯೋ ಹಿ ವೇದೇ ಚ ಶಾಸ್ತ್ರೇ ಚ ಗ್ರಂಥಧಾರಣತತ್ಪರಃ |
ನ ಚ ಗ್ರಂಥಾರ್ಥತತ್ತ್ವಜ್ಞಸ್ತಸ್ಯ ತದ್ಧಾರಣಂ ವೃಥಾ ||24||
ಯಾವಾತನು ವೇದ-ಶಾಸ್ತ್ರಗಳನ್ನು, ವೇದ-ಶಾಸ್ತ್ರ ಗ್ರಂಥಗಳನ್ನು ಧಾರಣೆ ಮಾಡುವುದರಲ್ಲಿ ಆಸಕ್ತನಾಗಿರುತ್ತಾನೋ, ಅದರ ಯಥಾರ್ಥ ತತ್ತ್ವಗಳನ್ನು ತಿಳಿದುಕೊಂಡಿರುವುದಿಲ್ಲವೋ ಅಂತಹ ವ್ಯಕ್ತಿಗೆ ಆ ವೇದ-ಶಾಸ್ತ್ರಗಳ ಧಾರಣೆಯು ವ್ಯರ್ಥವೇ ಸರಿ.
ಭಾರಂ ಸ ವಹತೇ ತಸ್ಯ ಗ್ರಂಥಸ್ಯಾರ್ಥಂ ನ ವೇತ್ತಿ ಯಃ |
ಯಸ್ತು ಗ್ರಂಥಾರ್ಥತತ್ತ್ವಜ್ಞೋ ನಾಸ್ಯ ಗ್ರಂಥಾಗಮೋ ವೃಥಾ ||25||
ಯಾವನು ಗ್ರಂಥದ ಅಭಿಪ್ರಾಯವನ್ನು ತಿಳಿಯದೆ ಕೇವಲ ಗ್ರಂಥದ ಶ್ಲೋಕಗಳನ್ನು ಬಾಯಿಪಾಠ ಮಾಡಿರುತ್ತಾನೋ ಅವನು ಗ್ರಂಥದ ಭಾರವನ್ನು ಹೊತ್ತಿದ್ದಾನೆ ಎಂದು ಅರ್ಥ. ಇದರಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಗ್ರಂಥಾರ್ಥವನ್ನು ಹೃದ್ಗತ ಮಾಡಿಕೊಂಡಲ್ಲಿ ಗ್ರಂಥಾಧ್ಯಯನವು ವ್ಯರ್ಥವಾಗದು.
ಗ್ರಂಥಸ್ಯಾರ್ಥಂ ಚ ಪೃಷ್ಟಃ ಸಂಸ್ತಾದೃಶೋ ವಕ್ತುಮರ್ಹತಿ |
ಯಥಾ ತತತ್ತ್ವಾಭಿಗಮನಾದರ್ಥಂ ತಸ್ಯ ಸ ವಿಂದತಿ ||26||
ಗ್ರಂಥಾರ್ಥವನ್ನು ತಿಳಿದ ವಿದ್ವಾಂಸನು, ಪ್ರಶ್ನಿಸಿದಲ್ಲಿ ಸರಿಯಾದ ತತ್ತ್ವವನ್ನು ತಿಳಿಸಲು ಸಮರ್ಥನಾಗುತ್ತಾನೆ. ಕಾರಣ ಆ ಗ್ರಂಥದ ಅರ್ಥವನ್ನು ಅವನು ಸರಿಯಾಗಿ ತಿಳಿದಿರುತ್ತಾನೆ.
ಯಸ್ತು ಸಂಸತ್ಸು ಕಥಯೇದ್ಗ್ರಂಥಾರ್ಥಂ ಸ್ಥೂಲಬುದ್ಧಿಮಾನ್ |
ಸ ಕಥಂ ಮಂದವಿಜ್ಞಾನೋ ಗ್ರಂಥಂ ವಕ್ಷ್ಯತಿ ನಿರ್ಣಯಾತ್ ||27||
ಯಾವನು ಸ್ಥೂಲವಾದ ಬುದ್ಧಿಯುಳ್ಳವನೋ ಅವನು ವಿದ್ವಾಂಸರ ಸಭೆಯಲ್ಲಿ ಗ್ರಂಥಾರ್ಥವನ್ನು ಹೇಳಲು ಅಸಮರ್ಥನು. ಅಲ್ಪಜ್ಞನಾದ ಅವನು ತನಗೆ ತಿಳಿಯದ ಗ್ರಂಥದ ನಿರ್ಣಯವನ್ನು ಹೇಗೆ ತಾನೆ ಹೇಳಿಯಾನು?
ನಿರ್ಣಯಂ ಚಾಪಿ ಛಿದ್ರಾತ್ಮಾ ನ ತಂ ವಕ್ಷ್ಯತಿ ತತ್ತ್ವತಃ |
ಸೋಪಹಾಸಾತ್ಮತಾಮೇತಿ ಯಸ್ಮಾಚ್ಚೈವಾತ್ಮವಾನಪಿ ||28||
ಯಾವನು ಬುದ್ಧಿಯು ಶಾಸ್ತ್ರಜ್ಞಾನದಿಂದ ರಹಿತವಾಗಿರುತ್ತದೋ ಅವನು ಯಥಾರ್ಥವಾಗಿ ಶಾಸ್ತ್ರಾರ್ಥವನ್ನು ತಿಳಿಸಲಾರನು. ಬುದ್ಧಿವಂತನಾಗಿದ್ದರೂ ಶಾಸ್ತ್ರಜ್ಞಾನ ಇಲ್ಲದವನು ಶಾಸ್ತ್ರದ ನಿರ್ಣಯವನ್ನು ಹೇಳಲು ಹೊರಟರೆ ಅಪಹಾಸ್ಯಕ್ಕೆ ತುತ್ತಾಗುತ್ತಾನೆ.
ತಸ್ಮಾತ್ತ್ವಂ ಶೃಣು ರಾಜೇಂದ್ರ ಯಥೈತದನುದೃಶ್ಯತೇ |
ಯಾಥಾತಥ್ಯೇನ ಸಾಂಖ್ಯೇಷು ಯೋಗೇಷು ಚ ಮಹಾತ್ಮಸು ||29||
ರಾಜೇಂದ್ರನೇ, ಆದ್ದರಿಂದ ಸಾಂಖ್ಯಯೋಗಗಳನ್ನು ತಿಳಿದಿರುವ ಜ್ಞಾನಿಗಳಲ್ಲಿ ಮೋಕ್ಷಕ್ಕೆ ಸಂಬಂಧಿಸಿದ ಅಭಿಪ್ರಾಯ ಏನಿರುತ್ತದೆ ಎಂಬುದನ್ನು ಯಥಾವತ್ತಾಗಿ ತಿಳಿಸುತ್ತೇನೆ, ಕೇಳು.
ಯದೇವ ಯೋಗಾಃ ಪಶ್ಯಂತಿ ಸಾಂಖ್ಯೈಸ್ತದನುಗಮ್ಯತೇ |
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಬುದ್ಧಿಮಾನ್ ||30||
ಯೋಗಮಾರ್ಗವನ್ನು ಆಶ್ರಯಿಸಿದವರು ಯಾವ ಪರಬ್ರಹ್ಮನನ್ನು ಕಾಣುತ್ತಾರೋ, ಸಾಂಖ್ಯಯೋಗಿಗಳು ಅದನ್ನೇ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಫಲದ ದೃಷ್ಟಿಯಿಂದ ಯೋಗ, ಸಾಂಖ್ಯ ಎರಡೂ ಮಾರ್ಗಗಳನ್ನು ಒಂದೇ ಅಭಿಪ್ರಾಯವುಳ್ಳವುಗಳೆಂದು ಯಾವನು ತಿಳಿದಿರುತ್ತಾನೋ ಅವನೇ ಜಾಣನು.
ತ್ವಙ್ಮಾಂಸಂ ರುಧಿರಂ ಮೇದಃ ಪಿತ್ತಂ ಮಜ್ಜಾಸ್ಥಿ ಸ್ನಾಯು ಚ |
ಏತದೈಂದ್ರಿಯಕಂ ತಾತ ಯದ್ಭವಾನಿದಮಾಹ ವೈ ||31||
ಶರೀರದಲ್ಲಿರುವ ಚರ್ಮ, ಮಾಂಸ, ರಕ್ತ, ಮೇಧಸ್ಸು, ಪಿತ್ತ, ಮಜ್ಜೆ, ಸ್ನಾಯು ಇವುಗಳಲ್ಲಿ ಶುಕ್ಲಶೋಣಿತಗಳು ಬಿಳಿ ರಕ್ತ

ಎನಿಸಿರುವುದರಿಂದ ಇಂದ್ರಿಯ ಸಂಬಂಧಿಯಾದ ಪ್ರಮೇಯವೆನಿಸಿವೆ. ಪ್ರತಿಯೊಬ್ಬರೂ ಕಣ್ಣಿನಿಂದ ಇಂತಹ ದೇಹವನ್ನು ನೋಡಬಹುದಾಗಿದೆ. ಇದರಲ್ಲಿ ಯಾವ ಅಪೂರ್ವತೆಯೂ ಇರುವುದಿಲ್ಲ.

ದ್ರವ್ಯಾದ್ ದ್ರವ್ಯಸ್ಯ ನಿಷ್ಪತ್ತಿರಿಂದ್ರಿಯಾದಿಂದ್ರಿಯಂ ತಥಾ |
ದೇಹಾದ್ ದೇಹಮವಾಪ್ನೋತಿ ಬೀಜಾದ್ ಬೀಜಂ ತಥೈವ ಚ ॥32॥

ಹೇಗೆ ಬೀಜದಿಂದ ಬೀಜವು ಉತ್ಪತ್ತಿಯನ್ನು ಹೊಂದುತ್ತದೋ, ದ್ರವ್ಯದಿಂದ ದ್ರವ್ಯದ ಉತ್ಪತ್ತಿಯು ಆಗುತ್ತದೋ ಇದರಂತೆ ಇಂದ್ರಿಯಗಳಿಂದ ಇಂದ್ರಿಯಗಳ ಉತ್ಪತ್ತಿ, ದೇಹದಿಂದ ದೇಹದ ಉತ್ಪತ್ತಿಯು ಆಗುತ್ತದೆ.

ನಿರಿಂದ್ರಿಯಸ್ಯ ಬೀಜಸ್ಯ ನಿರ್ದ್ರವ್ಯಸ್ಯಾಸ್ಯ ದೇಹಿನಃ |
ಕಥಂ ಗುಣಾ ಭವಿಷ್ಯಂತಿ ನಿರ್ಗುಣತ್ವಾನ್ಮಹಾತ್ಮನಃ ॥33॥

ಪ್ರಾಕೃತ ಇಂದ್ರಿಯ ರಹಿತನಾದ, ಸಮಸ್ತ ಜಗತ್ತಿಗೆ ನಿಮಿತ್ತ ಕಾರಣನಾದ, ಪ್ರಕೃತಿ ಎಂಬ ದ್ರವ್ಯ ಸಂಬಂಧದಿಂದ ರಹಿತನಾದ, ಜ್ಞಾನಾನಂದಮಯ ಶರೀರವುಳ್ಳ, ಅಕ್ಷರ ಪದ ವಾಚ್ಯವುಳ್ಳ ಪರಮಾತ್ಮನಿಗೆ, ಸತ್ವಾದಿ ಗುಣರಹಿತನಾದುದರಿಂದ ಶ್ವೇತ ಶುಕ್ಲತ್ವ, ವಿಕಾರಿತ್ವ ಮೊದಲಾದ ಗುಣಗಳು ಹೇಗೆ ಬರಲು ಸಾಧ್ಯ? ಆದ್ದರಿಂದ ನೀನು ಹೇಳಿದ ಎಲ್ಲ ವಿಷಯಗಳು ಅಜ್ಞಾನದಿಂದ ವಿಜೃಂಭಿತವಾಗಿವೆ ಎಂದು ಅಭಿಪ್ರಾಯ.

ಗುಣಾ ಗುಣೇಷು ಜಾಯಂತೇ ತತ್ರೈವ ನಿವಿಶಂತಿ ಚ |
ಏವಂ ಗುಣಾಃ ಪ್ರಕೃತಿತೋ ಜಾಯಂತೇ ಚ ನ ಸಂತಿ ಚ ॥34॥

ಪ್ರಕೃತಿಯಲ್ಲಿರುವ ಶ್ವೇತ, ರಕ್ತ, ಕೃಷ್ಣ ಎಂಬ ಗುಣಗಳು ಪ್ರಕೃತಿಯ ಕಾರ್ಯವಾದ ದೇಹಗಳಲ್ಲಿ ಕಾಣುತ್ತವೆ. ಪ್ರಳಯ ಕಾಲದಲ್ಲಿ ಅಲ್ಲಿಯೇ ಲಯವನ್ನು ಹೊಂದುತ್ತವೆ. ಇದೇ ರೀತಿಯಾಗಿ ಪ್ರಾಕೃತ ಗುಣಗಳು ಪ್ರಕೃತಿಯಿಂದಲೇ ಹುಟ್ಟುತ್ತವೆ ಹೊರತು ಅಕ್ಷರ ಪುರುಷನಾದ ಪರಮಾತ್ಮನಲ್ಲಿ ಆ ಗುಣಗಳಿರುವುದಿಲ್ಲ ಎಂದು ಭಾವ.

ತ್ವಙ್ಮಾಂಸಂ ರುಧಿರಂ ಮೇದಃ ಪಿತ್ತಂ ಮಜ್ಜಾಸ್ಥಿ ಸ್ನಾಯು ಚ |
ಅಷ್ಟೌ ತಾನ್ಯಥ ಶುಕ್ಲೇನ ಜಾನೀಹಿ ಪ್ರಾಕೃತಾನಿ ವೈ ॥35॥

ಚರ್ಮ, ಮಾಂಸ, ರಕ್ತ, ಮೇಧಸ್ಸು, ಪಿತ್ತ, ಮಜ್ಜೆ, ಮೂಳೆ, ನರ ಎಂಬ ಎಂಟು ಪದಾರ್ಥಗಳು ವೀರ್ಯದಿಂದ, ರಕ್ತದಿಂದ ಉತ್ಪನ್ನವಾಗುತ್ತವೆ. ಆದ್ದರಿಂದ ಇವೆಲ್ಲವೂ ಪ್ರಕೃತಿಗೆ ಸಂಬಂಧಿಸಿದವುಗಳು ಎಂದು ತಿಳಿದುಕೊ.

ಪುಮಾಂಶ್ಚೈವಾಪುಮಾಂಶ್ಚೈವ ತ್ರೈಲಿಂಗ್ಯಂ ಪ್ರಾಕೃತಂ ಸ್ಮೃತಮ್ |
ನೈವಾಪುಮಾನ್ ಪುಮಾಂಶ್ಚೈವ ಸ ಲಿಂಗೀತ್ಯಭಿಧೀಯತೇ ॥36॥

ಗುಣತ್ರಯಗಳ ಸಂಬಂಧವನ್ನು ಹೊಂದಿದ ಜೀವನನ್ನಾಗಲಿ ಅಥವಾ ದೇಹವನ್ನಾಗಲಿ ಪ್ರಾಕೃತ ಎಂದು ಕರೆಯಬಹುದು. ಆದರೆ ಜೀವ ವ್ಯತಿರಿಕ್ತನಾದ, ಗುಣತ್ರಯಗಳಿಂದ ಅತೀತನಾದ, ಪರಮಪುರುಷನಾದ ನಾರಾಯಣನನ್ನು ಎಂದೂ ಗುಣತ್ರಯ ಸಂಬಂಧ ಉಳ್ಳವನು ಎಂದು ಹೇಳಲಾಗುವುದಿಲ್ಲ.

ಅಲಿಂಗಾ ಪ್ರಕೃತಿರ್ಲಿಂಗೈರುಪಲಭ್ಯತಿ ಸಾತ್ಮಜೈಃ |
ಯಥಾ ಪುಷ್ಪಫಲೈರ್ನಿತ್ಯಮೃತವೋ ಮೂರ್ತಯಸ್ತಥಾ ॥37॥

ಕಣ್ಣಿಗೆ ಕಾಣುವ ಚಿಹ್ನೆಗಳಿಂದ ರಹಿತವಾದ ಮೂಲಪ್ರಕೃತಿಯು ಅದೃಶ್ಯಮಾನವಾದ ಕಾರಣ ಆ ಮೂಲಪ್ರಕೃತಿಯಿಂದ ಹುಟ್ಟಿದ ಮಹದಾದಿ ಕಾರ್ಯಗಳಿಂದ ಅದನ್ನು ಅನುಮಾನ ಮಾಡಿ ತಿಳಿದುಕೊಳ್ಳಬಹುದು. ಪರಸ್ಪರ ವೈಲಕ್ಷಣವನ್ನು ಹೊಂದಿರುವ ಗಿಡ-ಮರಗಳಲ್ಲಿ ಅವುಗಳ ಪುಷ್ಪ-ಫಲಗಳ ಅಭಿವ್ಯಕ್ತಿಯಿಂದ ಆಯಾ ಋತುಗಳಲ್ಲಿ ಮರಗಳ ಭೇದವನ್ನು ತಿಳಿಯುವಂತೆ ಮಹದಾದಿ ಕಾರ್ಯಗಳಿಂದ ಮೂಲಪ್ರಕೃತಿಯನ್ನು ತಿಳಿಯಬಹುದು.

ಏವಮಪ್ಯನುಮಾನೇನ ಹ್ಯಲಿಂಗಮುಪಲಭ್ಯತೇ |
ಪಂಚವಿಂಶತಿಮಸ್ತಾತ ಲಿಂಗೇಷು ನಿಯತಾತ್ಮಕಃ ॥38॥

ಇದೇ ರೀತಿ ಕಾರ್ಯತ್ವ, ಅನುಮಾನದಿಂದ ಕಣ್ಣಿಗೆ ಕಾಣದೆ ಇರುವ ಚಿಹ್ನೆಗಳು ಇಲ್ಲದಿದ್ದರೂ ಪ್ರಕೃತಿಯಂತೆ ಪರಮಾತ್ಮನನ್ನು ಅನುಮಾನದ ಮೂಲಕ ತಿಳಿಯಬಹುದು. ಭಗವಂತನು ಸ್ವಾತಂತ್ರ್ಯಾದಿ ಚಿಹ್ನೆಯುಳ್ಳವನು, ನಿಯತ ಸ್ವರೂಪಿಯು. ಆದ್ದರಿಂದಲೇ ಕಣ್ಣಿಗೆ ಕಾಣುವ ಯಾವ ಚಿಹ್ನೆಯೂ ಈ ಪರಬ್ರಹ್ಮನಲ್ಲಿ ತೋರುವುದಿಲ್ಲ. ಇಂತಹ ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನು ಎಲ್ಲ ಶರೀರಗಳಲ್ಲಿಯೂ ನಿಯತನಾಗಿ ಇದ್ದಾನೆ.

ಅನಾದಿನಿಧನೋನಂತಃ ಸರ್ವದರ್ಶೀ ನಿರಾಮಯಃ |
ಕೇವಲಂ ತ್ವಭಿಮಾನಿತ್ವಾದ್ ಗುಣೇಷ್ವಗುಣ ಉಚ್ಯತೇ ॥39॥

ಅನಾದಿ ಕಾಲದಿಂದ ಹುಟ್ಟು-ಸಾವುಗಳಿಲ್ಲದವನು, ಅನಂತನು, ಸರ್ವದರ್ಶಿಯು, ನಿರಾಮಯನು, ಸ್ವರೂಪಭೂತವಾದ ಸರ್ವಜ್ಞತ್ವಾದಿ ಗುಣಗಳಿಂದ ಕೂಡಿದವನು. ಮಾಯಾದಿ ಉಪಾಧಿಗಳಿಲ್ಲದೆ ಸಮಸ್ತ ಜೀವರಿಗೆ ಅಭಿಮಾನಿಯಾಗಿರುವುದರಿಂದ ಅಗುಣ ಎಂದು ಕರೆಸಿಕೊಳ್ಳುತ್ತಾನೆ. ಅನಂತ ಗುಣಸ್ವರೂಪನಾಗಿರುವುದರಿಂದ ಭಗವಂತನು ಅಗುಣ ಎಂದು ಕರೆಸಿಕೊಳ್ಳುತ್ತಾನೆ.

ಗುಣಾ ಗುಣವತಃ ಸಂತಿ ನಿರ್ಗುಣಸ್ಯ ಕುತೋ ಗುಣಾಃ |
ತಸ್ಮಾದೇವಂ ವಿಜಾನಂತಿ ಯೇ ಜನಾ ಗುಣದರ್ಶಿನಃ॥40॥

ಗುಣಗಳಿಗೆ ಆಶ್ರಯನಾದ ಒಬ್ಬ ಗುಣಿಯು ಇರಬೇಕು. ಭಗವಂತನು ವಿಶೇಷ ಶಕ್ತಿಯಿಂದ ಗುಣಿಯೂ ಆಗುತ್ತಾನೆ, ಗುಣವೂ ಆಗುತ್ತಾನೆ. ಸರ್ವಥಾ ಭಗವಂತನು ಗುಣರಹಿತನೆಂದರೆ ಜ್ಞಾನಾನಂದಾದಿ ಗುಣಗಳನ್ನಾದರೂ ಯಾವ ಪ್ರಮಾಣದಿಂದ ಹೇಳಬೇಕು? ಆದ್ದರಿಂದ ಭಗವಂತನ ಗುಣಗಳನ್ನು ಚೆನ್ನಾಗಿ ವಿಮರ್ಶಿಸುವ ಸಜ್ಜನರು ಪ್ರಾಕೃತ ಗುಣರಹಿತನೆಂದೇ ಹೇಳುತ್ತಾರೆ ವಿನಾ ಸರ್ವಾತ್ಮನಾ ಗುಣರಹಿತನೆಂದು ಹೇಳುವುದಿಲ್ಲ. ಪ್ರಕೃತಿಯ ಗುಣದಿಂದ ನಿತ್ಯವೂ ದೂರನಾದವನು ಎಂದೇ ಹೇಳುತ್ತಾರೆ.

ಯದಾ ತ್ವೇಷ ಗುಣಾನೇತಾನ್ ಪ್ರಾಕೃತಾನಭಿಮನ್ಯತೇ |

ತದಾ ಸ ಗುಣಹಾನ್ಯೈನಂ ಪರಂ ಸಮನುಪಶ್ಯತಿ ॥41॥
ಯಾವ ಭಗವಂತನ ದೆಸೆಯಿಂದ ಜೀವನು ಪ್ರಾಕೃತವಾದ ಗುಣಗಳನ್ನೇ ತನ್ನ ಗುಣಗಳೆಂದು ಅಭಿಮಾನ ಹೊಂದಿರುತ್ತಾನೋ ಅಂತಹ ಭಗವಂತನ ಅನುಗ್ರಹದಿಂದ ವಿವೇಕವನ್ನು ಪಡೆದುಕೊಂಡ ಜೀವನು ಪರಮಾತ್ಮನು ಪ್ರಾಕೃತ ಗುಣರಹಿತನೆಂದು ತಿಳಿದಾಗ, ತನ್ನಲ್ಲಿರುವ ಗುಣಗಳು ತಾತ್ಕಾಲಿಕವೆಂದು ಅರ್ಥ ಮಾಡಿಕೊಂಡು ಪರಮಾತ್ಮನು ತನಗಿಂತ ಭಿನ್ನನಾಗಿದ್ದಾನೆ, ಅತ್ಯಂತ ಉತ್ತಮನಾಗಿದ್ದಾನೆ ಎಂಬುದನ್ನು ತಿಳಿಯುತ್ತಾನೆ. ತಾನು ಬದ್ಧನು, ಪರಮಾತ್ಮನು ಬಂಧರಹಿತನು. ಆದ್ದರಿಂದ ಜೀವ- ಪರಮಾತ್ಮನಿಗೆ ಭೇದವೇ ಇದೆ ಎಂಬುದನ್ನು ತಿಳಿಯುತ್ತಾನೆ. ನಿತ್ಯವೂ ಬಂಧರಹಿತನಾದ ವಿಷ್ಣುವು ತನಗಿಂತ ಉತ್ತಮನು ಎಂಬ ಯಥಾರ್ಥ ಜ್ಞಾನವು ಜೀವನಿಗೆ ಉಂಟಾಗುತ್ತದೆ. (ಪರಮಾತ್ಮನ ಅನುಗ್ರಹದಿಂದ ಈ ರೀತಿಯಾದ ಗುಣವನ್ನು ಹೊಂದುತ್ತಾನೆ ಎಂದು ಭಾವ).
ಯತ್ತದ್ ಬುದ್ಧೇಃ ಪರಂ ಪ್ರಾಹುಃ ಸಾಂಖ್ಯಾ ಯೋಗಾಶ್ಚ ಸರ್ವಶಃ |
ಬುದ್ಧ್ಯಮಾನಂ ಮಹಾಪ್ರಾಜ್ಞಮಬುದ್ಧಪರಿವರ್ಜನಾತ್ ॥42॥
ಅಪ್ರಬುದ್ಧಮಥಾವ್ಯಕ್ತಂ ಅಗುಣಂ ಪ್ರಾಹುರೀಶ್ವರಮ್ |
ನಿರ್ಗುಣಂ ಚೇಶ್ವರಂ ನಿತ್ಯಮಧಿಷ್ಠಾತಾರಮೇವ ಚ ॥43॥
ಸಾಂಖ್ಯಯೋಗಿಗಳು ಪರಬ್ರಹ್ಮ ವಸ್ತುವನ್ನು ಬುದ್ಧಿತತ್ತ್ವವನ್ನೂ ಮೀರಿದ ವಸ್ತುವೆಂದು ಹೇಳುತ್ತಾರೆ. ಅಂತಹ ಅಜ್ಞಾನದ ಪರಿತ್ಯಾಗದಿಂದ ತಿಳಿಯಲ್ಪಡುವ, ಮಹಾಪ್ರಾಜ್ಞನಾದ ಜ್ಞಾನದಿಂದ ತಿಳಿಯಲ್ಪಡುವ, ಸಾಕಲ್ಯೇನ ತಿಳಿಯಲು ಶಕ್ಯವಿಲ್ಲದ, ಅವ್ಯಕ್ತ ಸ್ವಭಾವದವನಾದ, ಸತ್ವಾದಿ ಗುಣರಹಿತನಾದ ಭಗವಂತನನ್ನು ಈಶ್ವರನೆಂದು ಹೇಳುತ್ತಾರೆ. ಸಮಸ್ತ ಜೀವರ ಅಂತರ್ಯಾಮಿಯಾಗಿ ನಿತ್ಯವೂ ನೆಲೆನಿಂತಿದ್ದಾನೆ ಎಂದು ಹೇಳುತ್ತಾರೆ.
ಪ್ರಕೃತೇಶ್ಚ ಗುಣಾನಾಂ ಚ ಪಂಚವಿಂಶತಿಕಂ ಬುಧಾಃ |
ಸಾಂಖ್ಯಯೋಗೇ ಚ ಕುಶಲಾ ಬುದ್ಧ್ಯಂತೇ ಪರಮೈಷಿಣಃ ॥44॥
ಪ್ರಕೃತಿಯ ಗುಣವಾದ ಇಪ್ಪತ್ನಾಲ್ಕು ತತ್ತ್ವಗಳನ್ನು ಮೀರಿದ ಇಪ್ಪತ್ತೈದನೆಯ ತತ್ತ್ವವೆಂದು ಭಗವಂತನನ್ನು ಹೇಳುತ್ತಾರೆ. ಸಾಂಖ್ಯಯೋಗದಲ್ಲಿ ಕುಶಲರಾದ, ಪರತತ್ತ್ವವನ್ನು ತಿಳಿಯಲು ಬಯಸಿದ ವಿದ್ವಾಂಸರು ಹೀಗೆ ತಿಳಿದಿರುತ್ತಾರೆ.
ಯದಾ ಪ್ರಬುದ್ಧಾಸ್ತ್ವವ್ಯಕ್ತಮವಸ್ಥಾಜನ್ಮಭೀರವಃ |
ಬುದ್ಧ್ಯಮಾನಂ ಪ್ರಬುದ್ಧ್ಯಂತಿ ಗಮಯಂತಿ ಸಮಂ ತದಾ ॥45॥
ಯಾವಾಗ ಬಾಲ್ಯ-ಯೌವನಾದಿ ಅವಸ್ಥಾ ವಿಷಯದಲ್ಲಿ ಭಯಗೊಂಡ ವಿವೇಕಿಗಳು ತಿಳಿಯಲು ಯೋಗ್ಯನಾದ ಪರಬ್ರಹ್ಮನನ್ನು ಯೋಗ್ಯವಾದ ಕಾಲದಲ್ಲಿ ತಿಳಿಯುತ್ತಾರೋ ಆಗ ಅಂತಹ ಪರಬ್ರಹ್ಮನನ್ನೇ ಹೊಂದುತ್ತಾರೆ.
ಏತನ್ನಿದರ್ಶನಂ ಸಮ್ಯಗಸಮ್ಯಗನುದರ್ಶನಮ್ |
ಬುದ್ಧ್ಯಮಾನಾಪ್ರಬುದ್ಧಾಭ್ಯಾಂ ಪೃಥಕ್ಪೃಥಗರಿಂದಮ ॥46॥
ಅರಿಂದಮನೇ, ಸಾಂಖ್ಯಯೋಗದ ಜ್ಞಾನವು ಯುಕ್ತಿಯುಕ್ತವಾಗಿರುವುದರಿಂದ ಉತ್ತಮವಾಗಿದೆ. ಇದಕ್ಕೆ ವಿಪರೀತವಾದ ಅಜ್ಞಾನಿಗಳ ಯಾವ ಜ್ಞಾನವಿದೆಯೋ ಅದು ಯುಕ್ತಿಯುಕ್ತವಾದುದಲ್ಲ. ಸಾಂಖ್ಯಯೋಗ ಜ್ಞಾನಯೋಗಕ್ಕಿಂತ ಬೇರೆಯಾಗಿದೆ.
ಪರಸ್ಪರೇಣೈತದುಕ್ತಂ ಕ್ಷರಾಕ್ಷರನಿದರ್ಶನಮ್ |
ಏಕತ್ವಮಕ್ಷರಂ ಪ್ರಾಹುರ್ನಾನಾತ್ವಂ ಕ್ಷರಮುಚ್ಯತೇ ॥47॥
ಕ್ಷರಾಕ್ಷರರ ನಿದರ್ಶನವು ಹೀಗೆ ಪರಸ್ಪರ ಸಂಬಂಧದಿಂದ ಕೂಡಿದೆ ಎಂಬುದಾಗಿ ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಯಾವಾಗಲೂ ಒಂದೇ ರೀತಿಯಾಗಿರುವ ವಸ್ತುವನ್ನೇ ಅಕ್ಷರವೆಂದು ಹೇಳುತ್ತಾರೆ. ನಾನಾ ಯೋನಿಗಳಲ್ಲಿ ಉತ್ಪತ್ತಿಯನ್ನು ಪಡೆಯುವ ತತ್ತ್ವವನ್ನೇ ಕ್ಷರ ಎಂದು ಹೇಳುತ್ತಾರೆ.
ಪಂಚವಿಂಶತಿನಿಷ್ಠೋಽಯಂ ಯದಾ ಸಮ್ಯಕ್ ಪ್ರವರ್ತತೇ |
ಏಕತ್ವಂ ದರ್ಶನಂ ಚಾಸ್ಯ ನಾನಾತ್ವಂ ಚಾಪ್ಯದರ್ಶನಮ್ ॥48॥
ಯಾವಾಗ ಮನುಷ್ಯನು ಕ್ಷರಾಕ್ಷರ ಸ್ವಭಾವವೆಲ್ಲವೂ ಇಪ್ಪತ್ತೈದನೆಯ ತತ್ತ್ವವಾದ ಪರಬ್ರಹ್ಮನನ್ನು ಅವಲಂಬಿಸಿಕೊಂಡಿದೆ ಎಂದು ಇಪ್ಪತ್ತೈದನೆಯ ತತ್ತ್ವವನ್ನೇ ಚೆನ್ನಾಗಿ ತಿಳಿದುಕೊಳ್ಳಲು ಪ್ರಯತ್ನಿಸುತ್ತಾನೋ ಅವನು ಅಧ್ಯಾತ್ಮ ಮಾರ್ಗದಲ್ಲಿ ಅಭಿವೃದ್ಧಿಯನ್ನು ಹೊಂದುತ್ತಾನೆ. ಏಕಪ್ರಕಾರವಾದ ಭಗವಂತನ ಜ್ಞಾನವೇ ನಿಜವಾದ ಜ್ಞಾನವು. ಭಿನ್ನ ಭಿನ್ನರಾದ ಜೀವರ ಜ್ಞಾನವೇ ನಶ್ವರ ಜ್ಞಾನವು.
ತತ್ತ್ವನಿಸ್ತತ್ತ್ವಯೋರೇತತ್ ಪೃಥಗೇವ ನಿದರ್ಶನಮ್ |
ಪಂಚವಿಂಶತಿಸರ್ಗಂ ತು ತತ್ತ್ವಮಾಹುರ್ಮನೀಷಿಣಃ ॥49॥
ಯಥಾರ್ಥ ಜ್ಞಾನ, ಪರಿತಾರ್ಥಜ್ಞಾನಗಳಿಗೆ ಪ್ರತ್ಯೇಕವಾಗಿ ನಿದರ್ಶನವನ್ನು ಈ ರೀತಿಯಾಗಿ ನೀಡಲಾಗಿದೆ. ಇಪ್ಪತ್ತೈದು ತತ್ತ್ವಗಳ ಸೃಷ್ಟಿಯನ್ನೇ ಜ್ಞಾನಿಗಳು ತತ್ತ್ವ ಎಂದು ಹೇಳುತ್ತಾರೆ. ತತತತ್ವಭಿಮಾನಿಗಳಿಂದ ಕೂಡಿದ ತತ್ತ್ವವೇ ತತ್ತ್ವ. ಈ ತತ್ತ್ವಗಳ ಸಮುದಾಯವನ್ನು ನಾರಾಯಣನೇ ಸೃಷ್ಟಿಸಿದ್ದಾನೆ ಎಂದು ತಿಳಿಯುತ್ತಾರೆ.
ನಿಸ್ತತ್ತ್ವಂ ಪಂಚವಿಂಶಸ್ಯ ಪರಮಾಹುರ್ನಿದರ್ಶನಮ್ |
ಸರ್ಗಸ್ಯ ವರ್ಗಮಾಧಾರಂ ತತ್ತ್ವಂ ತತತತ್ವತ್ ಸನಾತನಾನ್ ॥50॥
ಜೀವನಿಗೆ ಅಸ್ವಾಭಾವಿಕವಾದ ತತ್ತ್ವಗಳ್ಯಾವವು, ಇಪ್ಪತ್ತೈದನೆಯ ತತ್ತ್ವ ಯಾವುದು ಎಂಬುದನ್ನು ತಿಳಿಸಿದ್ದೇವೆ. ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನೇ ಶ್ರೇಷ್ಠವಾದ ತತ್ತ್ವವು. ಸೃಷ್ಟಿಗೆ ಪಂಚಭೂತಗಳೇ ಆಧಾರವಾಗಿವೆ. ಹೀಗೆ ತತ್ತ್ವಗಳ ವಿಮರ್ಶೆಯಿಂದ ಸನಾತನವಾದ ಬ್ರಹ್ಮತತ್ತ್ವವು ನಿರೂಪಿಸಲ್ಪಟ್ಟಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.

* * * * *
మహాభారత
మోక్షధర్మపర్వ
నూర మూవత్తెంటనెయ అధ్యాయ
కరాలజనక-వసిష్ఠ సంవాద
కరాలజనకః
నానాత్వైకత్వమిత్యుక్తం త్వయైతదృషిసత్తమ |
పశ్యామి చాభిసందిగ్ధమేతయోర్వై నిదర్శనమ్ ॥1॥
కరాలజనక మహర్షిగళే, క్షర పురుషనల్లి అనేక భేదగళివె ఎందు అక్షర పురుషనాదవను భగవంతనొబ్బనే ఎందు హేళిద్దీరి. నీడిరువ దృష్టాంతగళల్లి ననగె సందేహవుంటాగిదె.
తథాప్రబుద్ధబుద్ధాభ్యాం బుధ్యమానస్య చానఘ |
స్థూలబుద్ధ్యా న పశ్యామి తత్త్వమేతన్న సంశయః ॥2॥
అజ్ఞానిగళు, జ్ఞానిగళు కాణువ దృష్టికోనగళు ఏనెంబుదన్ను స్థూలబుద్ధియాదవనాద నాను తిళిదిరువుదిల్ల. ఈ విషయదల్లి ననగె అజ్ఞానవిదె.
అక్షరక్షరయోరుక్తం త్వయా యదపి కారణమ్ |
తదప్యస్థిరబుద్ధిత్వాత్ ప్రనష్టమివ మేఽనఘ ॥3॥
అనఘరే, నీవు క్షర అక్షర వస్తుగళ స్వరూపవన్ను తిళిసలు అనేక విధవాద దృష్టాంతగళన్ను హేళిద్దీరి. నన్న బుద్ధియు అస్థిరవాగిరువుదరింద తావు హేళిరువ మాతుగళు స్మరణెయింద నష్టవాదంతె తోరుత్తిదె.
తదేతచ్ఛ్రోతుమిచ్ఛామి నానాత్వైకత్వదర్శనమ్ |
బుద్ధమప్రతిబుద్ధం చ బుధ్యమానం చ తత్త్వతః ॥4॥
ఆద్దరింద నాను నానాత్వ, ఏకత్వగళ విషయదల్లి పునః తిళియలు బయసిద్దేనె. జ్ఞాని-అజ్ఞానిగళ విషయదల్లి, జ్ఞేయ విషయదల్లియూ యథార్థవాగి తిళియబేకెందిద్దేనె.
విద్యావిద్యే చ భగవన్నక్షరం క్షరమేవ చ |
సాంఖ్యం యోగం చ కార్త్స్న్యేన పృథక్చైవాపృథక్చ హ ॥5॥
పూజ్యరే, విద్యె-అవిద్యె, క్షర-అక్షర, సాంఖ్య-యోగ ఇవుగళ విషయగళన్ను ప్రత్యేక ప్రత్యేకవాగి పూర్ణవాగి తిళియబేకెందిద్దేనె.
వసిష్ఠః
హంత తే సంప్రవక్ష్యామి యదేతదనుపృచ్ఛసి |
యోగకృత్యం మహారాజ పృథగేవ శృణుష్వ మే ॥6॥
వసిష్ఠరు మహారాజనే, నీను యావ ప్రశ్నెగళన్ను కేళిద్దీయో అవెల్లదక్కూ సమంజసవాద ఉత్తరవన్ను హేళుత్తేనె. మొదలు యోగద విషయవన్ను కేళిసికొ.
యోగకృత్యం తు యోగానాం ధ్యానమేవ పరం బలమ్ |
తచ్చాపి ద్వివిధం ధ్యానమాహుర్వేదవిదో జనాః ॥7॥
యోగిగళ ప్రధానవాద కర్తవ్యవు ధ్యానవెనిసిదె. ధ్యానవే పరమ బలవాగిదె. ధ్యానవన్ను వేదవిదరు ఎరడు రీతియాగి తిళిసుత్తారె.
ఏకాగ్రతా చ మనసః ప్రాణాయామస్తథైవ చ |
ప్రాణాయామస్తు సగుణో నిర్గుణో మనసస్తథా ॥8॥
మనస్సిన ఏకాగ్రతె మొదలనెయద్దాదరె ప్రాణాయామవు ఎరడనెయద్దాగిదె. ప్రాణాయామవాదరూ రేచక, పూరక, కుంభక ఎంబ గుణగళింద కూడిద్దాగిదె. మనస్సిగె సంబంధపట్ట ఏకాగ్రతెయ ధ్యానదల్లి పరమాత్మను ప్రాకృత గుణరహిత ఎందు చింతిసబేకు.
మూత్రోత్సర్గే పురీషే చ భోజనే చ నరాధిప |
త్రికాలం నాభియుంజీత శేషం యుంజీత తత్పరః ॥9॥
జనకరాజనే, మలత్యాగ, మూత్రోత్సర్జనె, భోజన ఈ మూరు కాలగళల్లి యోగాభ్యాసవన్ను మాడబారదు.ఉళిద కాలగళల్లి యోగాభ్యాస రతనాగిరబేకు.
ఇంద్రియాణీంద్రియార్థేభ్యో నివర్త్య మనసా మునిః |
దశద్వాదశభిర్వాపి చతుర్వింశాత్ పరం తతః ॥10॥
ఇంద్రియగళన్ను విషయ సుఖగళింద హిందిరుగిసి పరిశుద్ధవాద మనస్సినింద ఇప్పత్తెరడు అథవా ఇప్పత్నాల్కు తత్త్వగళింద ఆచెయిరువ భగవంతనన్ను ధ్యానిసబేకు.
వ్యాఖ్యాన విశేష నెత్తియింద కాలిన తనక హదినెంటు స్థానగళల్లి ప్రాణవాయువన్ను క్రమవాగి ఒందరింద ఒందక్కె సేరిసువుదరొడనె ధ్యాన, ధారణ, సమాధి, ప్రకృతి-పురుష వివేచనె ఎల్ల సేరి ఇప్పత్తెరడు వివేచనెగళాగుత్తవె.

ತಂ ಚೋದನಾಭಿರ್ಮತಿಮಾನಾತ್ಮಾನಂ ಚೋದಯೇದಥ |
ತಿಷ್ಠಂತಮಜರಂ ತಂ ತು ಯತ್ತದುಕ್ತಂ ಮನೀಷಿಭಿಃ ॥11॥
ಇಪ್ಪತ್ತೆರಡುವಿಧವಾದ ಪ್ರೇರಣೆಗಳಿಂದ ಪರಮಾತ್ಮನನ್ನು ತಿಳಿಯಲು ಜೀವಾತ್ಮನನ್ನು ಪ್ರಚೋದಿಸಬೇಕು. ಧ್ಯಾನಿಗಳು ಅಜರನಾದ ಭಗವಂತನು ನಮ್ಮ ಅಂತರ್ಯಾಮಿಯಾಗಿದ್ದಾನೆ ಎಂದು ಹೇಳಿರುತ್ತಾರೆ.
ತೈಶ್ಚಾತ್ಮಾ ಸತತಂ ಜ್ಞೇಯ ಇತ್ಯೇವಮನುಶುಶ್ರುಮ |
ದ್ರವ್ಯಂ ಹ್ಯಹೀನಮನಸೋ ನಾನ್ಯಥೇತಿ ವಿನಿಶ್ಚಯಃ ॥12॥
ನಿಯತೇಂದ್ರಿಯರಾದ ವ್ಯಕ್ತಿಗಳು ಯಾವಾಗಲೂ ಆ ಭಗವಂತನನ್ನು ಚಿಂತಿಸಬೇಕು ಎಂದು ಕೇಳಿದ್ದೇವೆ. ವಿಷಯಪದಾರ್ಥಗಳಿಂದ ದೂರವಾದ ಮನಸ್ಸು ಭಗವಂತನನ್ನು ಧ್ಯಾನಿಸುತ್ತದೆ ಇಲ್ಲವಾದಲ್ಲಿ ಇಲ್ಲ ಎಂಬುದು ನಿಶ್ಚಯವು.
ವಿಮುಕ್ತಃ ಸರ್ವಸಂಗೇಭ್ಯೋ ಲಘ್ವಾಹಾರೋ ಜಿತೇಂದ್ರಿಯಃ |
ಪೂರ್ವರಾತ್ರೇ ಪರೇ ಚೈವ ಧಾರಯೇತ ಮನೋಽಽತ್ಮನಿ ॥13॥
ಎಲ್ಲ ವಿಧವಾದ ಬಾಹ್ಯ ಆಸಕ್ತಿಗಳಿಂದ ದೂರನಾಗಿ, ಮಿತಾಹಾರಿಉಯಾದ, ಜಿತೇಂದ್ರಿಯನಾದ ಯೋಗಿಯು ರಾತ್ರಿಯ ಮೊದಲನೆಯ ಯಾಮದಲ್ಲಾಗಲಿ, ರಾತ್ರಿಯ ಕೊನೆಯ ಯಾಮದಲ್ಲಾಗಲಿ ಮನಸ್ಸನ್ನು ಪರಮಾತ್ಮನಲ್ಲಿ ಏಕಾಗ್ರತೆಗೊಳಿಸಿಕೊಳ್ಳಬೇಕು.
ಸ್ಥಿರೀಕೃತ್ಯೇಂದ್ರಿಯಗ್ರಾಮಂ ಮನಸಾ ಮಿಥಿಲೇಶ್ವರ |
ಮನೋ ಬುದ್ಧ್ಯಾ ಸ್ಥಿರಂ ಕೃತ್ವಾ ಪಾಷಾಣ ಇವ ನಿಶ್ಚಲಃ ॥14॥
ಸ್ಥಾಣುವಚ್ಚಾಪ್ಯಕಂಪಃ ಸ್ಯಾದ್ ಗಿರಿವಚ್ಚಾಪಿ ನಿಶ್ಚಲಃ |
ಬುಧಾ ವಿಧಿವಿಧಾನಜ್ಞಾಸ್ತದಾ ಯುಕ್ತಂ ಪ್ರಚಕ್ಷತೇ ॥15॥
ಮಿಥಿಲೇಶ್ವರನೇ, ಯಾವಾಗ ಯೋಗಿಯು ಮನಸ್ಸಿನಿಂದ ಇಂದ್ರಿಯ ಸಮುದಾಯಗಳನ್ನು ನಿಶ್ಚಂಚಲಗೊಳಿಸಿ ಬುದ್ಧಿಯಿಂದ ಮನಸ್ಸನ್ನು ಏಕಾಗ್ರಗೊಳಿಸಿ ಕಲ್ಲಿನಂತೆ ನಿಶ್ಚಂಚಲನಾಗಿ, ಮೋಟು ಮರದಂತೆ ಕಂಪನವಿಲ್ಲದವನಾಗಿ, ಪರ್ವತದಂತೆ ನಿಶ್ಚಲನಾಗಿರುತ್ತಾನೋ ಅವನನ್ನು ಆಗ ಬುದ್ಧಿಯಿಂದ ಯೋಗಶಾಸ್ತ್ರದ ವಿಧಿವಿಧಾನಗಳನ್ನು ತಿಳಿದ ಜ್ಞಾನಿಗಳು ಯೋಗಯುಕ್ತನೆಂದು ಹೇಳುತ್ತಾರೆ.
ನ ಶೃಣೋತಿ ನ ಚಾಘ್ರಾತಿ ನ ರಸ್ಯತಿ ನ ಪಶ್ಯತಿ |
ನ ಚ ಸ್ಪರ್ಶಂ ವಿಜಾನಾತಿ ನ ಸಂಕಲ್ಪಯತೇ ಮನಃ ॥16॥
ನ ಚಾಭಿಮನ್ಯತೇ ಕಿಂಚಿನ್ನ ಚ ಬುದ್ಧ್ಯತಿ ಕಾಷ್ಠವತ್ |
ತದಾ ಪ್ರಕೃತಿಮಾಪನ್ನಂ ಯುಕ್ತಮಾಹುರ್ಮನೀಷಿಣಃ ॥17॥
ಬಾಹ್ಯವಾಗಿ ಶಬ್ದವು ಉಂಟಾಗುತ್ತಿದ್ದರೂ ಯೋಗಾರೂಢನಾದವನಿಗೆ ಆ ಶಬ್ದವು ಯಾವಾಗ ಕೇಳಿಸುವುದಿಲ್ಲವೋ, ವಾಸನೆ ಬರುತ್ತಿದ್ದರೂ ಆಘ್ರಾಣಿಸುವುದಿಲ್ಲವೋ, ನಾಲಿಗೆಯ ಮೇಲೆ ಭಕ್ಷ್ಯವನ್ನಿಟ್ಟಿದ್ದರೂ ರುಚಿಯನ್ನು ತಿಳಿಯುವುದಿಲ್ಲವೋ, ಮುಟ್ಟಿದರೂ ಸ್ಪರ್ಶದ ಅರಿವಾಗುವುದಿಲ್ಲವೋ, ಮನಸ್ಸಿಗೆ ಬಾಹ್ಯಸಂಕಲ್ಪಗಳ ಯೋಚನೆ ಇರುವುದಿಲ್ಲವೋ, ಯಾವುದರ ಬಗ್ಗೆಯೂ ಅಭಿಮಾನವನ್ನು ಹೊಂದುವುದಿಲ್ಲವೋ, ಬುದ್ಧಿಯು ಕಟ್ಟಿಗೆಯಂತೆ ಬಾಹ್ಯವಿಷಯದಲ್ಲಿ ಜಡವಾಗಿರುತ್ತದೋ ಇಂತಹ ಸ್ವಭಾವವನ್ನು ಹೊಂದಿದ ವ್ಯಕ್ತಿಯನ್ನು ಯೋಗಯುಕ್ತನೆಂದು ಜ್ಞಾನಿಗಳು ಹೇಳುತ್ತಾರೆ.
ನಿವಾತೇ ಚ ಯಥಾ ದೀಪ್ಯಂದೀಪಸ್ತದ್ವತ್ಸ ದೃಶ್ಯತೇ |
ನಿರಿಂಗಶ್ಚಾಚಲಶ್ಚೋರ್ಧ್ವಂ ನ ತಿರ್ಯಗ್ಗತಿಮಾಪ್ನುಯಾತ್ ॥18॥
ಗಾಳಿ ಇಲ್ಲದಿರುವ ಸ್ಥಳದಲ್ಲಿ ದೀಪವು ಚಲಿಸದಂತೆ ಪ್ರಕಾಶ ಹೇಗೆ ನೀಡುತ್ತದೋ, ಇದರಂತೆ ಸಾಧಕನು ನಿಶ್ಚಂಚಲನಾಗಿರುತ್ತಾನೆ. ಯಾವುದೇ ಆಕಾಂಕ್ಷೆಗಳಿಲ್ಲದೆ ಅಚಲವಾಗಿರುವ ಬುದ್ಧಿಯಿಂದ ಭಗವಂತನನ್ನೇ ಯೋಚಿಸುವ ವ್ಯಕ್ತಿಯು ತಿರ್ಯಗ್ಯೋನಿಗಳಲ್ಲಿ ಹುಟ್ಟುವುದಿಲ್ಲ.
ತದಾ ತಮನುಪಶ್ಯೇತ ಯಸ್ಮಿನ್ ದೃಷ್ಟೇ ತು ಕಥ್ಯತೇ |
ಹೃದಯಸ್ಥೋಽಂತರಾತ್ಮೇತಿ ಜ್ಞೇಯೋ ಜ್ಞಸ್ತಾತ ಮದ್ವಿಧೈಃ ॥19॥
ಅಂತಹ ಯೋಗದಲ್ಲಿ ಭಗವಂತನನ್ನು ಆ ಯೋಗಿಯು ಕಂಡಾನು. ಆ ಭಗವಂತನನ್ನು ಕಂಡಾಗ ಅವನನ್ನು ಜ್ಞಾನಿ ಎಂದು ಕರೆಯುತ್ತಾರೆ. ಜ್ಞೇಯನಾದ, ಹೃದಯಸ್ಥನಾದ ಅಂತರಾತ್ಮನು ತಿಳಿಯಲ್ಪಟ್ಟನು ಎಂದು ನಮ್ಮಂಥವರು ಹೇಳುತ್ತಾರೆ.
ವಿಧೂಮ ಇವ ಸಪ್ತಾರ್ಚಿರಾದಿತ್ಯ ಇವ ರಶ್ಮಿಮಾನ್ |
ವೈದ್ಯುತೋಽಗ್ನಿರಿವಾಕಾಶೇ ದೃಶ್ಯತೇಽಽತ್ಮಾ ತಥಾತ್ಮನಿ ॥20॥
ಹೊಗೆ ಇಲ್ಲದಿರುವ ಅಗ್ನಿಯಂತೆ, ಕಿರಣಗಳಿಂದ ಕೂಡಿದ ಸೂರ್ಯನಂತೆ, ಆಕಾಶದಲ್ಲಿ ಉಂಟಾದ ಮಿಂಚಿನಂತೆ ಯೋಗಿಯ ಹೃದಯದಲ್ಲಿ ಪರಮಾತ್ಮನು ಕಾಣಿಸಿಕೊಳ್ಳುತ್ತಾನೆ.
ಯಂ ಪಶ್ಯಂತಿ ಮಹಾತ್ಮಾನೋ ಧೃತಿಮಂತೋ ಮನೀಷಿಣಃ |
ಬ್ರಾಹ್ಮಣಾ ಬ್ರಹ್ಮಯೋನಿಷ್ಠಾ ಹ್ಯಯೋನಿಮಮೃತಾತ್ಮಕಮ್ ॥21॥
ನಿರ್ಧಾರವಾದ ಬುದ್ಧಿಯಿಂದ ಕೂಡಿದ ವಿದ್ವಾಂಸರು, ಬ್ರಹ್ಮಬೋಧಕ ಶಾಸ್ತ್ರದಲ್ಲಿ ನಿಷ್ಠರಾದ ಬ್ರಾಹ್ಮಣರು ಅಜನ್ಮನೆನಿಸಿದ ಅಮೃತಸ್ವರೂಪನಾದ ಬ್ರಹ್ಮನನ್ನು ಬುದ್ಧಿಯ ಧೃತಿಯಿಂದ ಹೃದಯ ಗುಹೆಯಲ್ಲಿ ಕಂಡುಕೊಳ್ಳುತ್ತಾರೆ.
ತದೇವಾಹುರಣುಭ್ಯೋಽಣು ತನ್ಮಹದ್ಭ್ಯೋ ಮಹತ್ತರಮ್ |
ತದಂತಃ ಸರ್ವಭೂತೇಷು ಧ್ರುವಂ ತಿಷ್ಠನ್ನ ದೃಶ್ಯತೇ ॥22॥
ಆತ್ಮದರ್ಶಿಗಳಾದ ಜ್ಞಾನಿಗಳು ಬ್ರಾಹ್ಮಣರನ್ನು ಅಣುವಿಗಿಂತಲೂ ಅಣುವೆಂದು, ಮಹತ್ತಿಗಿಂತಲೂ ಮಹತ್ತೆಂದು, ಸಮಸ್ತ ಪ್ರಾಣಿಗಳ ಅಂತರ್ಯಾಮಿ ಎಂದು, ಅದೃಶ್ಯನೆಂದು, ಶಾಶ್ವತನೆಂದು ತಿಳಿದಿರುತ್ತಾರೆ.

ಬುದ್ಧಿದ್ರವ್ಯೇಣ ದೃಶ್ಯೇತ ಮನೋದೀಪೇನ ಲೋಕಕೃತ್ |
ಮಹತಸ್ತಮಸಸ್ತಾತ ಪಾರೇ ತಿಷ್ಠನ್ನತಾಮಸಃ ॥23॥
ಬುದ್ಧಿ ಎಂಬ ತುಪ್ಪದಿಂದ, ಮನಸ್ಸೆಂಬ ದೀಪದಿಂದ, ಲೋಕಕರ್ತೃವಾದ ಪರಮಾತ್ಮನನ್ನು ಹೃದಯಾಕಾಶದಲ್ಲಿ ಕಂಡುಕೊಳ್ಳಬೇಕು. ಮಹಾಂಧಕಾರದಿಂದ ಆಚೆ ಇರುವ, ತಮೋಗುಣದಿಂದ ರಹಿತನಾದವನೆಂದು ಪರಮಾತ್ಮನನ್ನು ತಿಳಿಯಬೇಕು.
ಸ ತಮೋನುದ ಇತ್ಯುಕ್ತಸ್ತತ್ತ್ವಜ್ಞೈರ್ವೇದಪಾರಗೈಃ |
ವಿಮಲೋ ವಿತಮಸ್ಕಶ್ಚ ನಿರ್ಲಿಂಗೋ ಲಿಂಗಸಂಜ್ಞಿತಃ ॥24॥
ಈ ರೀತಿಯಾಗಿ ಪರಮಾತ್ಮನನ್ನು ಅರಿತವನನ್ನು ವೇದಪಾರಂಗತರು ತತ್ತ್ವಜ್ಞನೆಂದು ಮತ್ತೊಬ್ಬರ ಅಜ್ಞಾನವನ್ನು ಪರಿಹರಿಸುವವನೆಂದು ಹೇಳುತ್ತಾರೆ. ವಿಮಲನೂ, ಅಜ್ಞಾನವಿಲ್ಲದವನೂ, ಯಾವುದೇ ಬಾಹ್ಯಲಿಂಗವಿಲ್ಲದೇ ಇದ್ದವನೂ ಆದ್ದರಿಂದಲೇ ಲಿಂಗ ಎಂದು ಕರೆಸಿಕೊಳ್ಳುವವನು ಆಗಿದ್ದಾನೆ.
ಯೋಗಮೇತದ್ಧಿ ಯೋಗಾನಾಂ ಮನ್ಯೇ ಯೋಗಸ್ಯ ಲಕ್ಷಣಮ್ |
ಏವಂ ಪಶ್ಯನ್ ಪ್ರಪಶ್ಯಂತಿ ಆತ್ಮಾನಮಜರಂ ಪರಮ್ ॥25॥
ಯೋಗಗಳ ಮಧ್ಯದಲ್ಲಿ ಭಗವಂತನನ್ನು ಕಾಣುವುದೇ ನಿಜವಾದ ಯೋಗದ ಲಕ್ಷಣವು. ಜರಾರಹಿತವಾದ ಪರಬ್ರಹ್ಮನೆಂಬ ಪರಮಾತ್ಮನನ್ನು ನೋಡಬೇಕಾದ ವಸ್ತುವೆಂದು ಯೋಗಿಗಳು ನೋಡುತ್ತಾರೆ.
ಯೋಗದರ್ಶನಮೇತಾವದುಕ್ತಂ ತೇ ತತ್ತ್ವತೋ ಮಯಾ |
ಸಾಂಖ್ಯಜ್ಞಾನಂ ಪ್ರವಕ್ಷ್ಯಾಮಿ ಪರಿಸಂಖ್ಯಾನಿದರ್ಶನಮ್ ॥26॥
ಜನಕರಾಜನೇ, ಇಷ್ಟರತನಕ ನಿನಗೆ ಯೋಗದರ್ಶನವನ್ನು ಯಥಾರ್ಥವಾಗಿ ತಿಳಿಸಿರುತ್ತೇನೆ. ಇನ್ನು ಮುಂದೆ ನಿಯಮ ಪೂರ್ವಕವಾಗಿ ವಿಧಿಸಲ್ಪಡುವ ದೃಷ್ಟಾಂತದಿಂದ ತತ್ತ್ವಪರಿಗಣನೆ ಇರುವ ಸಾಂಖ್ಯಜ್ಞಾನವನ್ನು ತಿಳಿಸಿಕೊಡುತ್ತೇನೆ.
ಅವ್ಯಕ್ತಮಾಹುಃ ಪ್ರಕೃತಿಂ ಪರಾಂ ಪ್ರಕೃತಿವಾದಿನಃ |
ತಸ್ಮಾನ್ಮಹತ್ ಸಮುತ್ಪನ್ನಂ ದ್ವಿತೀಯಂ ರಾಜಸತ್ತಮ ॥27॥
ರಾಜನೇ, ಪ್ರಕೃತಿಯ ವಿಷಯದಲ್ಲಿ ತಿಳಿವಳಿಕೆಯುಳ್ಳ ವಿದ್ವಾಂಸರು ಮೂಲ ಪ್ರಕೃತಿಯನ್ನು ಅವ್ಯಕ್ತವೆಂದು ಹೇಳುತ್ತಾರೆ. ಆ ಅವ್ಯಕ್ತತತ್ತ್ವದಿಂದಲೇ ಎರಡನೆಯದ್ದಾದ ಮಹತ್ತತ್ತ್ವವು ಉತ್ಪತ್ತಿಯನ್ನು ಹೊಂದಿರುತ್ತದೆ.
ಅಹಂಕಾರಸ್ತು ಮಹತಸ್ತೃತೀಯಮಿತಿ ನಃ ಶ್ರುತಮ್ |
ಪಂಚ ಭೂತಾನ್ಯಹಂಕಾರಾದಾಹುಃ ಸಾಂಖ್ಯಾನುದರ್ಶಿನಃ ॥28॥
ಆ ಮಹತ್ತತ್ತ್ವದ ದೆಸೆಯಿಂದ ಮೂರನೆಯದ್ದಾದ ಅಹಂಕಾರತತ್ತ್ವವು ಉತ್ಪನ್ನವಾಗಿದೆ ಎಂದು ನಾವು ತಿಳಿದಿರುತ್ತೇವೆ. ಅಹಂಕಾರದಿಂದ ಪಂಚಭೂತಗಳು ಹುಟ್ಟಿದವೆಂದು ಸಾಂಖ್ಯಯೋಗಿಗಳು ತಿಳಿದಿರುತ್ತಾರೆ.
ಏತಾಃ ಪ್ರಕೃತಯಸ್ತ್ವಷ್ಟೌ ವಿಕಾರಾಶ್ಚಾಪಿ ಷೋಡಶ |
ಪಂಚ ಚೈವ ವಿಶೇಷಾ ವೈ ತಥಾ ಪಂಚೇಂದ್ರಿಯಾಣಿ ಚ ॥29॥
ಹೀಗೆ ಪ್ರಕೃತಿ ಎನಿಸಿದ ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚಭೂತಗಳೆಂಬ ಎಂಟು ವಿಕಾರವೆನಿಸಿದ ಪಂಚತನ್ಮಾತ್ರಗಳು, ಏಕಾದಶೇಂದ್ರಿಯಗಳು ಎಂಬ ಹದಿನಾರು, ಇವುಗಳ ಮಧ್ಯದಲ್ಲಿ ಪಂಚತನ್ಮಾತ್ರಗಳು ವಿಶೇಷವಾಗಿ ಪರಿಗಣಿಸಲ್ಪಡುತ್ತವೆ. ಇದರಂತೆ ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳು ವಿಶೇಷವಾಗಿ ಪರಿಗಣಿಸಲ್ಪಡುತ್ತವೆ. ಪಂಚತನ್ಮಾತ್ರಗಳಲ್ಲಿ ದ್ರವಣಗಳನ್ನು ಹೊಂದುವುದರಿಂದ ಇಂದ್ರಿಯಗಳಿಗೆ ಇಂದ್ರಿಯ ಎಂದು ಹೆಸರು.
ಏತಾವದೇವ ತತ್ತತ್ವಾನಾಂ ಸಾಂಖ್ಯಮಾಹುರ್ಮನೀಷಿಣಃ |
ಸಾಂಖ್ಯೇ ವಿಧಿವಿಧಾನಜ್ಞಾ ನಿತ್ಯಂ ಸಾಂಖ್ಯಪಥೇ ರತಾಃ ॥30॥
ಸಾಂಖ್ಯಶಾಸ್ತ್ರದ ವಿಧಿ-ವಿಧಾನಗಳನ್ನು ತಿಳಿದಿರುವ, ಯಾವಾಗಲೂ ಸಾಂಖ್ಯ ಮಾರ್ಗದ ಅನುಷ್ಠಾನದಲ್ಲಿಯೇ ನಿರತರಾಗಿರುವ ವಿದ್ವಾಂಸರು ಇಪ್ಪತ್ನಾಲ್ಕು ತತ್ತ್ವಗಳನ್ನೇ ಸಾಂಖ್ಯತತ್ತ್ವಕ್ಕೆ ಸಮ್ಮತವಾದ ತತ್ತ್ವಗಳೆಂದು ಹೇಳುತ್ತಾರೆ.
ಯಸ್ಮಾದ್ಯದಭಿಜಾಯೇತ ತತ್ತತ್ರೈವ ಪ್ರಲೀಯತೇ |
ಲೀಯಂತೇ ಪ್ರತಿಲೋಮಾನಿ ಸೃಜ್ಯಂತೇ ಚಾಂತರಾತ್ಮನಾ ॥31॥
ಯಾವ ತತ್ತ್ವದಿಂದ ಯಾವ ತತ್ತ್ವವು ಹುಟ್ಟುತ್ತದೋ ಆ ಹುಟ್ಟಿದ ತತ್ತ್ವವು ತನ್ನಜನಕ ಎನಿಸಿದ ತತ್ತ್ವದಲ್ಲಿಯೇ ಲಯವನ್ನು ಹೊಂದುತ್ತದೆ. ಆ ಅನುಲೋಮಕ್ರಮದಿಂದ ಉತ್ಪನ್ನವಾದ ತತ್ತ್ವಗಳು ವಿಲೋಮ ಕ್ರಮದಿಂದ ಲಯವನ್ನು ಹೊಂದುತ್ತವೆ. ಈ ಎಲ್ಲ ತತ್ತ್ವಗಳು ಪರಮಾತ್ಮನಿಂದಲೇ ಸೃಷ್ಟಿಸಲ್ಪಟ್ಟಿವೆ.
ಅನುಲೋಮೇನ ಜಾಯಂತೇ ಲೀಯಂತೇ ಪ್ರತಿಲೋಮತಃ |
ಗುಣಾ ಗುಣೇಷು ಸತತಂ ಸಾಗರಸ್ಯೋರ್ಮಯೋ ಯಥಾ ॥32॥
ಸಮುದ್ರದಲ್ಲಿ ಹುಟ್ಟಿದ ಅಲೆಗಳು ಹೇಗೆ ಸಮುದ್ರದಲ್ಲೇ ಲಯವನ್ನು ಹೊಂದುತ್ತವೋ ಅದರಂತೆ ಅನುಲೋಮ ಕ್ರಮದಲ್ಲಿ ಹುಟ್ಟಿದ ತತ್ತ್ವಗಳು ವಿಲೋಮ ಕ್ರಮದಲ್ಲಿ ಕಾರಣಭೂತವಾದ ತತ್ತ್ವದಲ್ಲಿ ಲಯವನ್ನು ಹೊಂದುತ್ತವೆ.
ಸರ್ಗಪ್ರಲಯ ಏತಾವಾನ್ ಪ್ರಕೃತೇರ್ನೃಪಸತ್ತಮ |
ಏಕತ್ವಂ ಪ್ರಲಯೇ ಚಾಸ್ಯ ಬಹುತ್ವಂ ಚ ಯದಾಸೃಜತ್ |
ಏವಮೇವ ಚ ರಾಜೇಂದ್ರ ವಿಜ್ಞೇಯಂ ಜ್ಞೇಯಚಿಂತಕೈಃ ॥33॥
ನೃಪಶ್ರೇಷ್ಠನೇ, ಅವ್ಯಕ್ತ ತತ್ತ್ವವೆನಿಸಿದ ಪ್ರಕೃತಿಯ ಸೃಷ್ಟಿ ಮತ್ತು ಪ್ರಳಯ ಹೀಗೆ ನಿರೂಪಿತವಾಗಿದೆ. ಪ್ರಳಯ ಕಾಲದಲ್ಲಿ ಪ್ರಕೃತಿಗೆ ಏಕತ್ವವಿರುತ್ತದೆ, ಸೃಷ್ಟಿಕಾಲದಲ್ಲಿ ಬಹುತ್ವ ಉಂಟಾಗುತ್ತದೆ. ಹೀಗೆ ಜ್ಞಾನಕೋವಿದರು ಪ್ರಕೃತಿಯ ನಾನಾತ್ವವನ್ನು ತಿಳಿಯಬೇಕು.
ಅಧಿಷ್ಠಾತಾರಮವ್ಯಕ್ತಮಸ್ಯಾಪ್ಯೇತನ್ನಿದರ್ಶನಮ್ |

ಏಕತ್ವಂ ಚ ಬಹುತ್ವಂ ಚ ಪ್ರಕೃತೇರನು ತತ್ತ್ವವಿತ್ |
ಏಕತ್ವಂ ಪ್ರಲಯೇ ಚಾಸ್ಯ ಬಹುತ್ವಂ ಚ ಪ್ರವರ್ತನಾತ್ ॥34॥
ಎಲ್ಲರಿಗೂ ಆಧಾರನಾದವನು ಭಗವಂತನೇ ಆಗಿದ್ದಾನೆ. ಅವನು ಅವ್ಯಕ್ತ ಸ್ವಭಾವದವನಾಗಿದ್ದಾನೆ. ಈ ಪರಮಾತ್ಮನ ಗುಣಗಳಿಗೆ ನಿದರ್ಶನ ಅವ್ಯಕ್ತತತ್ತ್ವವಾಗಿದೆ. ಅವ್ಯಕ್ತತತ್ತ್ವವೇ ಸಕಲ ಜಗತ್ತಿಗೆ ಕಾರಣ ಹೇಗೋ ಹಾಗೆ ನಾರಾಯಣನು ಸಮಸ್ತ ಜಗತ್ತಿಗೆ ಮೂಲಕಾರಣನಾಗಿದ್ದಾನೆ. ಮೂಲಪ್ರಕೃತಿಯು ಅಸ್ವತಂತ್ರವಾಗಿ ಜಗತ್ತಿಗೆ ಕಾರಣವಾಗಿದ್ದರೆ ಭಗವಂತನು ಸ್ವತಂತ್ರನಾಗಿ ಜಗತ್ತಿಗೆ ಕಾರಣನಾಗಿದ್ದಾನೆ ಎಂದು ಭಾವ. ಹೀಗೆ ಪ್ರಳಯಕಾಲದಲ್ಲಿ ಏಕತ್ವವನ್ನು, ಸೃಷ್ಟಿಕಾಲದಲ್ಲಿ ಅನೇಕತ್ವವು ಪ್ರಕೃತಿ ತತ್ತ್ವದಲ್ಲಿ ಇದೆ ಎಂದು ತಿಳಿದವನು ಏಕತ್ವ, ಬಹುತ್ವಗಳನ್ನು ಸರಿಯಾಗಿ ತಿಳಿದಿರಬೇಕು.
ಬಹುಧಾತ್ಮಾ ಪ್ರಕುರ್ವೀತ ಪ್ರಕೃತಿಂ ಪ್ರಸವಾತ್ಮಿಕಾಮ್ |
ತಚ್ಚ ಕ್ಷೇತ್ರಂ ಮಹಾನಾತ್ಮಾ ಪಂಚವಿಂಶೋಽಧಿತಿಷ್ಠತಿ ॥35॥
ಪ್ರಸವ ಗುಣವುಳ್ಳ ಪ್ರಕೃತಿಯನ್ನು ಪರಮಾತ್ಮನೇ ಅನೇಕ ರೂಪವುಳ್ಳದ್ದಾಗಿ ಮಾಡುತ್ತಾನೆ. ಹೀಗೆ ಪ್ರಕೃತಿಯನ್ನು ಕ್ಷೇತ್ರವನ್ನಾಗಿ ಮಾಡಿಕೊಂಡು ಸ್ವಯಂ ಭಗವಂತನು ಇಪ್ಪತ್ತೈದನೆಯ ತತ್ತ್ವವಾಗಿ, ಇಪ್ಪತ್ನಾಲ್ಕು ತತ್ತ್ವಗಳಿಗೆ ಅಧಿಷ್ಠಾತೃವಾಗಿ ಇರುತ್ತಾನೆ.
ಅಧಿಷ್ಠಾತೇತಿ ರಾಜೇಂದ್ರ ಪ್ರೋಚ್ಯತೇ ಯತಿಸತ್ತಮೈಃ |
ಅಧಿಷ್ಠಾನಾದಧಿಷ್ಠಾತಾ ಕ್ಷೇತ್ರಾಣಾಮಿತಿ ನಃ ಶ್ರುತಮ್ ॥36॥
ಯತಿಗಳು ಭಗವಂತನನ್ನು ಅಧಿಷ್ಠಾತೃ ಎಂದು ಕರೆಯುತ್ತಾರೆ. ಆಯಾ ಅಧಿಷ್ಠಾನಗಳಲ್ಲಿ ಕುಳಿತು ಕ್ಷೇತ್ರಗಳನ್ನು ನಿಯಂತ್ರಿಸುವ ಶಕ್ತಿಯನ್ನು ಹೊಂದಿರುವುದರಿಂದಲೇ ಭಗವಂತನು ಅಧಿಷ್ಠಾತೃ ಎನಿಸಿದ್ದಾನೆ.
ಕ್ಷೇತ್ರಂ ಜಾನಾತಿ ಚಾವ್ಯಕ್ತಂ ಕ್ಷೇತ್ರಜ್ಞ ಇತಿ ಚೋಚ್ಯತೇ |
ಅವ್ಯಕ್ತಿಕೇ ಪುರೇ ಶೇತೇ ಪುರುಷಶ್ಚೇತಿ ಕಥ್ಯತೇ ॥37॥
ಅವ್ಯಕ್ತ ಎಂಬ ಕ್ಷೇತ್ರವನ್ನು ಭಗವಂತನು ತಿಳಿದಿರುವುದರಿಂದ ಕ್ಷೇತ್ರಜ್ಞ ಎಂದು ಕರೆಸಿಕೊಳ್ಳುತ್ತಾನೆ. ಪ್ರಕೃತಿಗೆ ಸಂಬಂಧಿಸಿದ ಶರೀರದಲ್ಲಿ ಅವ್ಯಕ್ತನಾಗಿ ಅಂತರ್ಯಾಮಿ ಆಗಿರುವುದರಿಂದ ಭಗವಂತನು ಪುರುಷ ಎಂದು ಕರೆಸಿಕೊಳ್ಳುತ್ತಾನೆ.
ಅನ್ಯದೇವ ಚ ಕ್ಷೇತ್ರಂ ಸ್ಯಾದನ್ಯಃ ಕ್ಷೇತ್ರಜ್ಞ ಉಚ್ಯತೇ |
ಕ್ಷೇತ್ರಮವ್ಯಕ್ತಮಿತ್ಯುಕ್ತಂ ಜ್ಞಾತಾ ವೈ ಪಂಚವಿಂಶಕಃ ॥38॥
ಆದ್ದರಿಂದ ಕ್ಷೇತ್ರವೇ ಬೇರೆ, ಕ್ಷೇತ್ರಜ್ಞನೇ ಬೇರೆ. ಕ್ಷೇತ್ರವೆಂದರೆ ಅವ್ಯಕ್ತವು, ಅವ್ಯಕ್ತ ಪ್ರಕೃತಿಯನ್ನು ತಿಳಿಯುವ ಭಗವಂತನು ಇಪ್ಪತ್ತೈದನೆಯ ತತ್ತ್ವವೆನಿಸಿದ ಕ್ಷೇತ್ರಜ್ಞನಾಗಿರುತ್ತಾನೆ.
ಅನ್ಯದೇವ ಚ ಜ್ಞಾನಂ ಸ್ಯಾದನ್ಯಜ್ಜ್ಞೇಯಂ ತದುಚ್ಯತೇ |
ಜ್ಞಾನಮವ್ಯಕ್ತಮಿತ್ಯುಕ್ತಂ ಜ್ಞೇಯೋ ವೈ ಪಂಚವಿಂಶಕಃ ॥39॥
ಜ್ಞಾನವನ್ನು ಅನ್ಯವಸ್ತು ಎನ್ನುತ್ತಾರೆ. ಜ್ಞೇಯವನ್ನು ಜ್ಞಾನದಿಂದ ಭಿನ್ನವೆನ್ನುತ್ತಾರೆ. ಬುದ್ಧಿಯನ್ನು ಅವ್ಯಕ್ತವೆಂದೂ, ಇವುಗಳನ್ನು ತಿಳಿಯುವ ಭಗವಂತನನ್ನು ಇಪ್ಪತ್ತೈದನೆಯ ತತ್ತ್ವವಾದ ಪರಮಾತ್ಮನೆಂದು ಹೇಳುತ್ತಾರೆ.
ಅವ್ಯಕ್ತಂ ಕ್ಷೇತ್ರಮಿತ್ಯುಕ್ತಂ ತಥಾ ಸತ್ತ್ವಂ ತಥೇಶ್ವರಮ್ |
ಅನೀಶ್ವರಮತತ್ತ್ವಂ ಚ ತತ್ತ್ವಂ ತತ್ಪಂಚವಿಂಶಕಮ್ ॥40॥
ಅವ್ಯಕ್ತವನ್ನು ಕ್ಷೇತ್ರವೆಂದು ಹೇಳುತ್ತಾರೆ. ಪ್ರಕೃತಿ ತತ್ತ್ವವನ್ನು ಸ್ವರ್ಗ-ಪ್ರಲಯದಲ್ಲಿ ನಿಯಮನ ಮಾಡುವ ಸಾಮರ್ಥ್ಯವಿರುವ ಭಗವಂತನನ್ನು ಸತ್ವ ಎನ್ನುತ್ತಾರೆ. ಈಶ್ವರನಿಗಿಂತ ಭಿನ್ನನಾದ ಜೀವನನ್ನು ಅನೀಶ್ವರನೆಂದೂ, ಪ್ರಾಕೃತದೇಹದಲ್ಲಿ ಅಭಿಮಾನ ಹೊಂದಿರುವುದರಿಂದ ತತ್ತ್ವಜ್ಞಾನ ರಹಿತನಾದ ಜೀವನನ್ನು ಅತತ್ತ್ವನೆಂದೂ, ಅಸಾರವಾದ ಪ್ರಾಕೃತ ಪದಾರ್ಥಗಳಲ್ಲಿ ಎಂದಿಗೂ ಸಾರಬುದ್ಧಿಯನ್ನು ಹೊಂದದಿರುವುದರಿಂದ ತತ್ತ್ವಜ್ಞಾನದಿಂದ ತುಂಬಿರುವ ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಬ್ರಹ್ಮನನ್ನು ತತ್ತ್ವವೆಂದು ಜ್ಞಾನಿಗಳು ಹೇಳುತ್ತಾರೆ.
ಸಾಂಖ್ಯದರ್ಶನಮೇತಾವತ್ ಪರಿಸಂಖ್ಯಾನದರ್ಶನಮ್ |
ಸಾಂಖ್ಯಂ ಪ್ರಕುರುತೇ ಚೈವ ಪ್ರಕೃತಿಂ ಚ ಪ್ರಚಕ್ಷತೇ ॥41॥
ಜನಕರಾಜನೇ, ಸಾಂಖ್ಯಯೋಗಿಗಳು ತತ್ತ್ವಗಳ ಸಂಖ್ಯೆಯನ್ನು ಹೀಗೆ ಎಣಿಕೆ ಮಾಡುತ್ತಾ ಇದನ್ನೇ ಸಾಂಖ್ಯವೆಂದು ಹೇಳುತ್ತಾರೆ. ಇದನ್ನೇ ಜಗತ್ತಿಗೆ ಕಾರಣವೆಂದು ಹೇಳುತ್ತಾರೆ.
ತತಶತ್ವನಿ ಚ ಚತುರ್ವಿಂಶತ್ ಪರಿಸಂಖ್ಯಾಯ ತತ್ತ್ವತಃ |
ಸಾಂಖ್ಯಾಃ ಸಹ ಪ್ರಕೃತ್ಯಾ ತು ನಿಸ್ತತ್ತ್ವಃ ಪಂಚವಿಂಶಕಃ ॥42॥
ಸಾಂಖ್ಯವಿದ್ವಾಂಸರು ಪ್ರಕೃತಿಯಿಂದ ಕೂಡಿದ ಇಪ್ಪತ್ನಾಲ್ಕು ತತ್ತ್ವಗಳನ್ನು ಎಣಿಕೆ ಮಾಡಿ, ಇಪ್ಪತ್ತೈದನೆಯ ತತ್ತ್ವವೆನಿಸಿದ ಭಗವಂತನನ್ನು ಇವರಂತೆ ಪ್ರಾಕೃತಿಕ ಗುಣನಲ್ಲದವನಾದ್ದರಿಂದ ಭಿನ್ನನೆಂದೂ, ತತ್ತ್ವವಲ್ಲವೆಂದೂ ಹೇಳುತ್ತಾರೆ. ಇಲ್ಲಿ ನಿಸ್ತತ್ತ್ವನೆಂದರೆ ಚತುರ್ವಿಂಶತಿತತ್ತ್ವಗಳಲ್ಲಿ ಅಭಿಮಾನರಹಿತ ಎಂದು ಅರ್ಥ. ತತ್ತ್ವವೇ ಅಲ್ಲ ಎಂದು ಅರ್ಥವಲ್ಲ.
ಪಂಚವಿಂಶೋಽಪ್ರಬುದ್ಧಾತ್ಮಾ ಬುದ್ಧ್ಯಮಾನ ಇತಿ ಸ್ಮೃತಃ |
ಯದಾ ತು ಬುದ್ಧ್ಯತೇಽಽತ್ಮಾನಂ ತದಾ ಭವತಿ ಕೇವಲಃ ॥43॥
ಅಪ್ರಬುದ್ಧನೆನಿಸಿದ ಜೀವನು ಇಪ್ಪತ್ತೈದನೆಯ ತತ್ತ್ವವೆನಿಸಿದ ಭಗವಂತನನ್ನು ತಿಳಿದಾಗ ಪ್ರಬುದ್ಧನೆನಿಸುತ್ತಾನೆ. ಯಾವಾಗ ಪರಮಾತ್ಮನನ್ನು ಜೀವಾತ್ಮನು ತಿಳಿಯುತ್ತಾನೋ ಆಗ ಮೋಕ್ಷವನ್ನು ಹೊಂದುತ್ತಾನೆ.
ಸಮ್ಯಗ್ದರ್ಶನಮೇತಾವದ್ ಭಾಷಿತಂ ತವ ತತ್ತ್ವತಃ |
ಏವಮೇತದ್ ವಿಜಾನಂತಃ ಸಾಮ್ಯತಾಂ ಪ್ರತಿಯಾಂತ್ಯುತ ॥44॥
ಹೀಗೆ ವಸ್ತುವು ಹೇಗಿದೆಯೋ ಅದೇ ರೀತಿಯಾಗಿ ಜ್ಞಾನವನ್ನು ಹೊಂದುವುದಕ್ಕೆ ಸಾಂಖ್ಯತತ್ತ್ವ ಎಂದು ಹೇಳುತ್ತಾರೆ. ಈ ತತ್ತ್ವವನ್ನು

ತಿಳಿದವರೆಲ್ಲ ಆ ತತ್ತ್ವದ ಭಾವದ ಸಾಮ್ಯವನ್ನು ಹೊಂದಿದವರು, ಯಥಾರ್ಥ ಜ್ಞಾನಿಗಳು ಎಂದು ಹೇಳಲಾಗುತ್ತದೆ.
ಸಮ್ಯಗ್ ನಿದರ್ಶನಂ ನಾಮ ಪ್ರತ್ಯಕ್ಷಂ ಪ್ರಕೃತೇಸ್ತಥಾ |
ಗುಣತತತ್ತ್ವನ್ಯಥೈತಾನಿ ನಿರ್ಗುಣೋಽನ್ಯಸ್ತಥಾ ಭವೇತ್ ॥45॥
ನಾನು ನಿನಗೆ ಸಾಂಖ್ಯದರ್ಶನವನ್ನು ಯಥಾರ್ಥವಾಗಿ ಹೇಳಿರುತ್ತೇನೆ. ಪ್ರಕೃತಿ ಪುರುಷರ ಪ್ರತ್ಯಕ್ಷ ದರ್ಶನವೇ ಸಮ್ಯಗ್ದರ್ಶನವಾಗಿದೆ. ಪ್ರಕೃತಿ ಸಹಿತವಾದ ಮಹದಾದಿ ತತ್ತ್ವಗಳೇ ತ್ರಿಗುಣಾತ್ಮಕ ತತ್ತ್ವಗಳೆನಿಸಿವೆ. ಈ ಗುಣಗಳಿಂದ ರಹಿತನಾದ ಭಗವಂತನು ಭಿನ್ನನಾಗಿದ್ದಾನೆ.
ನ ತ್ವೇವಂ ವರ್ತಮಾನಾನಾಮಾವೃತ್ತಿರ್ವಿದ್ಯತೇ ಪುನಃ |
ವಿದ್ಯತೇಽಕ್ಷರಭಾವತ್ವೇ ಸ ಪರಾತ್ಪರಮವ್ಯಯಮ್ ॥46॥
ಪಶ್ಯೇರನ್ನೇಕಮತಯೋ ನ ಸಮ್ಯಕ್ತೇಷು ದರ್ಶನಮ್ |
ತೇಽವ್ಯಕ್ತಂ ಪ್ರತಿಪದ್ಯಂತೇ ಪುನಃ ಪುನರರಿಂದಮ ॥47॥
ಈ ಕ್ರಮದಲ್ಲಿ ಸಾಂಖ್ಯದರ್ಶನಕ್ಕೆ ಅನುಗುಣವಾಗಿ ಜ್ಞಾನವನ್ನು ಪಡೆದುಕೊಂಡವನು ಪ್ರಕೃತಿಗೆ ಪುನಃ ಬರಬೇಕಾಗಿರುವುದಿಲ್ಲ. ಜನನ-ಮರಣಗಳಿಂದ ಮುಕ್ತನಾಗುತ್ತಾನೆ. ಯಾರಿಗೆ ಅಕ್ಷರನಾದ ಪರಮಾತ್ಮನಲ್ಲಿ ಭಕ್ತಿಯು ದೃಢವಾಗಿದೆಯೋ ಅಂತಹ ಪರಮಾತ್ಮಜ್ಞಾನಿಯು ಪರಾತ್ಪರನಾದ ಅವ್ಯಯನಾದ, ಪರಮಾತ್ಮನನ್ನೇ ಹೊಂದುತ್ತಾನೆ. ಯಾರು ಕ್ಷರಾಕ್ಷರನೆನಿಸಿದ ಜೀವ-ಪರಮಾತ್ಮರಿಗೆ ಐಕ್ಯವನ್ನೇ ತಿಳಿಯುತ್ತಾರೋ ಅವರಿಗೆ ಸರಿಯಾದ ಜ್ಞಾನವು ಇಲ್ಲವೆಂದು ಅರ್ಥ. ಯಾರು ಈ ಮಿಥ್ಯಾಜ್ಞಾನವನ್ನು ಹೊಂದಿರುತ್ತಾರೋ ಅವರು ಅವ್ಯಕ್ತ ಎನಿಸಿದ ಪ್ರಕೃತಿ ತತ್ತ್ವವನ್ನು ಪುನಃ ಪುನಃ ಹೊಂದುತ್ತಲೇ ಇರುತ್ತಾರೆ. ಜನನ ಮರಣಗಳಿಗೆ ತುತ್ತಾಗುತ್ತಾರೆ.
ಸರ್ವಮೇತದ್ ವಿಜಾನಂತೋ ನ ಸರ್ವಸ್ಯ ಪ್ರಬೋಧನಾತ್ |
ವ್ಯಕ್ತಭೂತಾ ಭವಿಷ್ಯಂತಿ ವ್ಯಕ್ತಸ್ಯ ವಶವರ್ತಿನಃ ॥48॥
ಪ್ರಪಂಚದಲ್ಲಿರುವ ಪ್ರಕೃತಿಗೆ ಸಂಬಂಧಿಸಿದ ಎಲ್ಲವನ್ನೂ ತಿಳಿದು, ಇದಕ್ಕಿಂತ ಭಿನ್ನನಾದ ಪರಮಾತ್ಮನನ್ನು ತಿಳಿಯದಿದ್ದಲ್ಲಿ ಅವರು ಪ್ರಾಕೃತದೇಹದಿಂದ ಪುನಃ ಪುನಃ ಹುಟ್ಟುತ್ತಲೇ ಇರುತ್ತಾರೆ.
ವ್ಯಾಖ್ಯಾನ ವಿಶೇಷ ಸರ್ವಶಾಸ್ತ್ರಗಳನ್ನು ವಿಮರ್ಶಿಸಿ ಪ್ರಕೃತಿ ಮೊದಲಾದ ತತ್ತ್ವಗಳ ಸೃಷ್ಟಿ, ಅವುಗಳ ಪ್ರಳಯದ ಪ್ರಕಾರಗಳನ್ನೂ, ಮಹದಾದಿ-ಅಹಂಕಾರಾದಿ ತತ್ತ್ವಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳ ತಾರತಮ್ಯವನ್ನೂ, ಕ್ಷರ-ಅಕ್ಷರ ಪದಗಳಿಂದ ಹೇಳಿದ ಜೀವ-ಪರಮಾತ್ಮರ ತತ್ತ್ವವಿವೇಕವನ್ನೂ, ಮಿಥ್ಯಾಜ್ಞಾನದ ವಿಭಾಗವನ್ನೂ, ಇದಕ್ಕಿಂತಲೂ ಹೆಚ್ಚಾಗಿ ಬ್ರಹ್ಮಮೀಮಾಂಸಾದಿ ಸಕಲ ತತ್ತ್ವಗಳಲ್ಲಿಯೂ ವಿಚಾರ ಮಾಡುವ ಸಾಂಖ್ಯಯೋಗವನ್ನೂ, ಸಮಸ್ತ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು, ಮನಸ್ಸನ್ನು ಏಕಾಗ್ರಗೊಳಿಸಿ, ಯಥಾರ್ಥಜ್ಞಾನದಿಂದ ತನಗೆ ಯೋಗ್ಯವಾದ ಭಗವಂತನ ಗುಣಗಳನ್ನು ಮನಸ್ಸಿನಲ್ಲಿ ನಿರಂತರ ಧ್ಯಾನಿಸುವ, ಭಗವದ್ವಿಷಯಕ ಕರ್ಮ ಕುಶಲನಾದವನೇ ಯೋಗಿಯು ಎಂದು ಕರೆಯಲ್ಪಡುತ್ತಾನೆ ಎಂಬುದಾಗಿ ಈ ಸಮಗ್ರ ಅಧ್ಯಾಯದಲ್ಲಿ ವಸಿಷ್ಠರು ನಿರೂಪಿಸಿರುತ್ತಾರೆ.
ಸರ್ವಮವ್ಯಕ್ತಮಿತ್ಯುಕ್ತಮಸರ್ವಃ ಪಂಚವಿಂಶಕಃ |
ಯ ಏನಮಭಿಜಾನಂತಿ ನ ಭಯಂ ತೇಷು ವಿದ್ಯತೇ ॥49॥
ಇಪ್ಪತ್ನಾಲ್ಕು ತತ್ತ್ವಗಳು ಅವ್ಯಕ್ತ ಪ್ರಕೃತಿಗೆ ಸಂಬಂಧಿಸಿದವು. ಇವುಗಳಿಗೆ ಸೇರದೆ ಇರುವ ಇಪ್ಪತ್ತೈದನೆಯ ತತ್ತ್ವವೆನಿಸಿದ ಭಗವಂತನು ಪರಮ ಚೇತನನು. ಯಾರು ಈ ಭಗವಂತನನ್ನು ತಿಳಿದುಕೊಳ್ಳುತ್ತಾರೋ ಅವರಿಗೆ ಹುಟ್ಟು-ಸಾವುಗಳ ಭಯವು ಇರುವುದಿಲ್ಲ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೊಂಬತ್ತನೆಯ ಅಧ್ಯಾಯ
ವಸಿಷ್ಠ-ಜನಕರ ಸಂವಾದ
ವಸಿಷ್ಠಃ
ಸಾಂಖ್ಯದರ್ಶನಮೇತಾವದುಕ್ತಂ ತೇ ನೃಪಸತ್ತಮ |
ವಿದ್ಯಾವಿದ್ಯೇ ತ್ವಿದಾನೀಂ ಮೇ ತ್ವಂ ನಿಬೋಧಾನುಪೂರ್ವಶಃ ॥1॥
ವಸಿಷ್ಠ ನೃಪಶ್ರೇಷ್ಠನೇ, ಇಲ್ಲಿಯ ತನಕ ಸಾಂಖ್ಯದರ್ಶನದ ವಿಷಯಗಳನ್ನು ಹೇಳಿರುತ್ತೇನೆ. ವಿದ್ಯೆ-ಅವಿದ್ಯೆಗಳ ಸ್ವರೂಪವನ್ನು ನಿನಗೆ ಕ್ರಮವಾಗಿ ತಿಳಿಸುತ್ತೇನೆ.
ಅವಿದ್ಯಾಮಾಹುರವ್ಯಕ್ತಂ ಸರ್ಗಪ್ರಲಯಧರ್ಮಿ ವೈ |
ಸರ್ಗಪ್ರಲಯನಿರ್ಮುಕ್ತಂ ವಿದ್ಯಾಂ ವೈ ಪಂಚವಿಂಶಕಮ್ ॥2॥
ಜಡವಾಗಿರುವುದರಿಂದ ಅಯೋಗ್ಯವಾಗಿರುವ ಅವ್ಯಕ್ತ ತತ್ತ್ವವನ್ನು ಅವಿದ್ಯೆ ಎಂದು ಹೇಳುತ್ತಾರೆ. ಸಕಲ ವಿಷಯಕ ಜ್ಞಾನರೂಪನಾದುದರಿಂದ ಪರಮಾತ್ಮನು ವಿದ್ಯಾಮಯನೆನಿಸಿದ್ದಾನೆ. ಜೀವನು ಚೇತನನಾಗಿದ್ದರೂ ಪ್ರಾಕೃತ ಅವಿದ್ಯೆಯಿಂದ ಅಂಧನಾಗಿರುವುದರಿಂದ ಅವಿದ್ಯೆ ಎಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ `ಯೋ ಅವಿದ್ಯಾ ಅಂಧಃ ಸ ತು ನಿತ್ಯಬದ್ಧಃ | ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಎಂದು ಭಾಗವತದಲ್ಲಿ ಭಗವಂತನೇ ಅವಿದ್ಯೆಯಿಂದ ಅಂಧನಾದ ಜೀವನು ನಿತ್ಯಬದ್ಧನು, ವಿದ್ಯಾಮಯನೆನಿಸಿದ ಭಗವಂತನು ನಿತ್ಯಮುಕ್ತನು ಎಂದು ಹೇಳಿರುತ್ತಾನೆ. ಹಿಂದೆ ಹೇಳಿದಂತೆ ಭಗವಂತನು ಏಕತ್ವವನ್ನು, ಬಹುತ್ವವನ್ನು ಹೊಂದುತ್ತಾನೆ. ಮೂಲರೂಪದಿಂದ ಪ್ರಕೃತಿಯಲ್ಲಿ ಏಕನಾಗಿಯೂ, ಸೃಷ್ಟಿಯನ್ನು ಹೊಂದಿರುವ

ಮಹತ್ತತತ್ತ್ವದಿಗಳಲ್ಲಿ ಬಹುರೂಪನಾಗಿಯೂ ಭಗವಂತ ಪ್ರವೇಶಿಸಿ ವ್ಯಾಪಾರಗಳನ್ನು ಮಾಡುತ್ತಿರುತ್ತಾನೆ. ಆವಾಗಲೂ ಭಗವಂತನು ಜ್ಞಾನಿಯಾಗಿಯೇ ಇರುತ್ತಾನೆ. ಜೀವನಂತೆ ಎಂದಿಗೂ ಅಂಧನಾಗಿರುವುದಿಲ್ಲ ಎಂದು ಭಾವ. ಇಂತಹ ಭಗವಂತನು ಸೃಷ್ಟಿ-ಪ್ರಳಯಗಳಿಂದ ಮುಕ್ತನಾಗಿದ್ದಾನೆ. ಇಪ್ಪತ್ತೈದನೆಯ ತತ್ತ್ವವೆನಿಸಿದ್ದಾನೆ. ಇವನನ್ನೇ ವಿದ್ಯೆ ಎಂದು ಹೇಳುತ್ತಾರೆ.

ಪರಸ್ಪರಮವಿದ್ಯಾಂ ವೈ ತನ್ನಿಬೋಧಾನುಪೂರ್ವಶಃ |
ಯಥೋಕ್ತಮೃಷಿಭಿಸ್ತಾತ ಸಾಂಖ್ಯಸ್ಯಾಸ್ಯ ನಿದರ್ಶನಮ್ ॥3॥

ವಿದ್ಯೆ-ಅವಿದ್ಯೆಗಳ ಸಂಬಂಧಗಳನ್ನು ನೀನು ಕ್ರಮವಾಗಿ ತಿಳಿದುಕೊ. ಯಾವ ರೀತಿಯಲ್ಲಿ ಋಷಿಗಳು ಸಾಂಖ್ಯಯೋಗದಲ್ಲಿ ನಿದರ್ಶನವನ್ನು ನೀಡಿರುತ್ತಾರೋ ಹಾಗೆ ತಿಳಿಸುತ್ತೇನೆ.

ಕರ್ಮೇಂದ್ರಿಯಾಣಾಂ ಸರ್ವೇಷಾಂ ವಿದ್ಯಾ ಬುದ್ಧೀಂದ್ರಿಯಂ ಸ್ಮೃತಮ್|
ಬುದ್ಧೀಂದ್ರಿಯಾಣಾಂ ಚ ತಥಾ ವಿಶೇಷಾ ಇತಿ ನಃ ಶ್ರುತಮ್ ॥4॥

ಸಮಸ್ತವಾದ ಕರ್ಮೇಂದ್ರಿಯಗಳಿಗೆ ಜ್ಞಾನೇಂದ್ರಿಯವು ವಿದ್ಯಾ ಸಾಧನವಾಗಿರುವುದರಿಂದ ವಿದ್ಯೆ ಎನಿಸಿದೆ. ಜ್ಞಾನೇಂದ್ರಿಯಗಳಲ್ಲಿಯೂ ದೇಹಾರಂಭಕಗಳಾದ ಪಂಚಭೂತಗಳು ವಿಶೇಷವೆಂದು ನಾವು ತಿಳಿದಿದ್ದೇವೆ.

ವಿಶೇಷಾಣಾಂ ಮನಸ್ತೇಷಾಂ ವಿದ್ಯಾಮಾಹುರ್ಮನೀಷಿಣಃ |
ಮನಸಃ ಪಂಚಭೂತಾನಿ ವಿದ್ಯಾ ಇತ್ಯಭಿಚಕ್ಷತೇ ॥5॥

ಸ್ಥೂಲ ಪಂಚಭೂತಗಳ ವಿದ್ಯೆಯು ಮನಸ್ಸೆಂದು ಜ್ಞಾನಿಗಳು ಹೇಳುತ್ತಾರೆ. ಪಂಚಭೂತಗಳು ವಿದ್ಯಾಹೇತುಗಳಾಗಿರುವುದರಿಂದ ವಿದ್ಯೆ ಎನಿಸಿವೆ. ಎಲ್ಲರಿಗೂ `ಅಹಂ ಜಾನಾಮಿ' ಎಂಬ ಅನುಭವವು ಇರುತ್ತದೆ.

ಅಹಂಕಾರಸ್ತು ಭೂತಾನಾಂ ಪಂಚಾನಾಂ ನಾತ್ರ ಸಂಶಯಃ |
ಅಹಂಕಾರಸ್ಯ ಚ ತಥಾ ಬುದ್ಧಿರ್ವಿದ್ಯಾ ನರೇಶ್ವರ ॥6॥

ನರೇಶ್ವರನೇ, ಸೂಕ್ಷ್ಮವಾದ ಪಂಚಭೂತಗಳಿಗೆ ಅಹಂಕಾರವೇ ವಿದ್ಯೆಯ ಸ್ಥಾನದಲ್ಲಿದೆ. ಈ ವಿಷಯದಲ್ಲಿ ಸಂಶಯವಿಲ್ಲ. ಅಹಂಕಾರಕ್ಕೆ ಬುದ್ಧಿಯೇ ವಿದ್ಯೆಯು.

ಬುದ್ಧೇಃ ಪ್ರಕೃತಿರವ್ಯಕ್ತಂ ತತತತ್ತ್ವನಾಂ ಪರಮೇಶ್ವರಮ್ |
ವಿದ್ಯಾ ಜ್ಞೇಯಾ ನರಶ್ರೇಷ್ಠ ವಿಧಿಶ್ಚ ಪರಮಃ ಸ್ಮೃತಃ ॥7॥
ಅವ್ಯಕ್ತಸ್ಯ ಪರಂ ಪ್ರಾಹುರ್ವಿದ್ಯಾಂ ವೈ ಪಂಚವಿಂಶಕಮ್ |
ಸರ್ವಸ್ಯ ಸರ್ವಮಿತ್ಯುಕ್ತಂ ಜ್ಞೇಯಂ ಜ್ಞಾನಸ್ಯ ಪಾರ್ಥಿವ ॥8॥

ಅವ್ಯಕ್ತನೆಂಬ ಹೆಸರಿನ ಮೂಲಪ್ರಕೃತಿಯು ಬುದ್ಧಿಯೇ ಮೊದಲಾದ ಪ್ರಕೃತಿಗಳಿಗೂ ತತ್ತ್ವವೆನಿಸಿದೆ. ಈ ವಿದ್ಯೆಯನ್ನು ಅವಶ್ಯವಾಗಿ ತಿಳಿಯಬೇಕು. ಇದರ ವಿಧಿಯು ಶ್ರೇಷ್ಠವಾದುದೆಂದು ಹೇಳುತ್ತಾರೆ. ಇಪ್ಪತ್ತೈದನೆಯ ತತ್ತ್ವವೆನಿಸಿದ, ಪರಮಚೇತನನಾದ ಭಗವಂತನು ಅವ್ಯಕ್ತ ಪ್ರಕೃತಿಯ ಪರಮವಿದ್ಯೆ ಎನಿಸಿದ್ದಾನೆ. ಈ ಭಗವಂತನೇ ಸಂಪೂರ್ಣ ಜ್ಞಾನರೂಪದ ಜ್ಞೇಯನಾಗಿದ್ದಾನೆ. ಈಶ್ವರಕ್ಕೆ ಸರ್ವ ಎಂದು ಹೆಸರು.

ಜ್ಞಾನಮವ್ಯಕ್ತಮಿತ್ಯುಕ್ತಂ ಜ್ಞೇಯಂ ವೈ ಪಂಚವಿಂಶಕಮ್ |
ತಥೈವ ಜ್ಞಾನಮವ್ಯಕ್ತಂ ವಿಜ್ಞಾತಾ ಪಂಚವಿಂಶಕಃ ॥9॥

ಪ್ರಾಕೃತ ಮನೋವೃತ್ತಿ ರೂಪವಾದ ಜ್ಞಾನವನ್ನು ಅವ್ಯಕ್ತ ಎಂದು ಹೇಳುತ್ತಾರೆ. ಇಪ್ಪತ್ತೈದನೆಯ ತತ್ತ್ವವೆನಿಸಿದ ಭಗವಂತನೇ ಜ್ಞೇಯ ಎನಿಸಿದ್ದಾನೆ. ಅದರಂತೆ ಅವ್ಯಕ್ತ ಜ್ಞಾನವನ್ನು ಚೆನ್ನಾಗಿ ಹೊಂದುವವನು ಇಪ್ಪತ್ತೈದನೆಯ ತತ್ತ್ವವೆನಿಸಿದ ಭಗವಂತನೇ ಆಗಿದ್ದಾನೆ.

ವಿದ್ಯಾವಿದ್ಯಾರ್ಥತತ್ತ್ವೇನ ಮಯೋಕ್ತಂ ತೇ ವಿಶೇಷತಃ |
ಅಕ್ಷರಂ ಚ ಕ್ಷರಂ ಚೈವ ಯದುಕ್ತಂ ತನ್ನಿಬೋಧ ಮೇ ॥10॥

ಮಹಾರಾಜನೇ, ನಾನು ವಿದ್ಯಾ ಸಹಿತವಾದ ವಿದ್ಯೆಯನ್ನು ಯಥಾವತ್ತಾಗಿ ಹೇಳಿದ್ದೇನೆ. ಈಗ ಅಕ್ಷರ ಮತ್ತು ಕ್ಷರಗಳೆಂಬ ತತ್ತ್ವಗಳ ಬಗ್ಗೆ ಹೇಳುತ್ತೇನೆ,ಕೇಳು.

ಉಭಾವೇತೌ ಕ್ಷರಾವುಕ್ತಾವುಭಾವೇತೌ ಚ ನಕ್ಷರೌ |
ಕಾರಣಂ ತು ಪ್ರವಕ್ಷ್ಯಾಮಿ ಯಥಾ ಖ್ಯಾತೌ ತು ತತ್ತ್ವತಃ ॥11॥

ಇವರಿಬ್ಬರ (ಕ್ಷರ-ಅಕ್ಷರ) ಬಗ್ಗೆ ನನಗೆ ತಿಳಿದಿರುವಷ್ಟು ಕಾರಣಗಳನ್ನು ಯಥಾರ್ಥವಾಗಿ ತಿಳಿಸುತ್ತೇನೆ.

ಅನಾದಿನಿಧನಾವೇತಾವುಭಾವೇವೇಶ್ವರೌ ಮತೌ |
ತತ್ತ್ವಸಂಜ್ಞಾವುಭಾವೇತೌ ಪ್ರೋಚ್ಯೇತೇ ಜ್ಞಾನಚಿಂತಕೈಃ ॥12॥

ಈ ಜೀವ-ಪರಮಾತ್ಮರು ಆದ್ಯಂತಗಳಿಲ್ಲದವರು. ಆದ್ದರಿಂದಲೇ ಈಶ್ವರ  ಎನಿಸಿದ್ದಾರೆ. ಸ್ವತಂತ್ರ-ಅಸ್ವತಂತ್ರ ಎಂದು ಎರಡು ತತ್ತ್ವಗಳಾಗಿರುವುದರಿಂದ ಇಬ್ಬರಿಗೂ ತತ್ತ್ವ ಎಂಬ ಹೆಸರು ಜ್ಞಾನಚಿಂತಕರಿಂದ ಹೇಳಲ್ಪಟ್ಟಿದೆ.

ಸರ್ಗಪ್ರಲಯಧರ್ಮಿತ್ವಾದವ್ಯಕ್ತಂ ಪ್ರಾಹುರಕ್ಷರಮ್ |
ತದೇತದ್ ಗುಣಸರ್ಗಾಯ ವಿಕುರ್ವಾಣಂ ಪುನಃ ಪುನಃ ॥13॥

ಮಹದಾದಿ ತತ್ತ್ವಗಳಿಂದ ಹುಟ್ಟುವ ಸೃಷ್ಟಿ-ಸಂಹಾರಗಳಲ್ಲಿ ಭೂತಳದಂತೆ ಧರ್ಮತ್ವವು ಇರುವುದರಿಂದ ಪ್ರಕೃತಿಯನ್ನು ಅಕ್ಷರವೆಂದು ಹೇಳುತ್ತಾರೆ. ಮಹದಾದಿ ತತ್ತ್ವಗಳ ಸೃಷ್ಟಿಗಾಗಿ ಪುನಃ ಪುನಃ ಪ್ರಕೃತಿಯು ವಿಕಾರವನ್ನು ಹೊಂದುವುದರಿಂದ ಅದನ್ನು ಕ್ಷರವೆಂದು ಹೇಳುತ್ತಾರೆ.

ಗುಣಾನಾಂ ಮಹದಾದೀನಾಮುತ್ಪದ್ಯತಿ ಪರಸ್ಪರಮ್ |
ಅಧಿಷ್ಠಾನಾತ್ ಕ್ಷೇತ್ರಮಾಹುರೇತತ್ತತ್ತ್ವಂಚವಿಂಶಕಮ್ ॥14॥

ಮಹದಾದಿಗುಣಗಳ ಉತ್ಪತ್ತಿಯು ಪ್ರಕೃತಿ ಮತ್ತು ಪುರುಷರ ಪರಸ್ಪರ ಸಂಯೋಗದಿಂದ ಉಂಟಾಗುವುದರಿಂದ ಪ್ರಕೃತಿಯು

ಪುರುಷನಿಗೂ, ಪುರುಷನು ಪ್ರಕೃತಿಗೂ ಆಶ್ರಯವಾಗಿರುವುದರಿಂದ ಇಪ್ಪತ್ತೈದನೆಯ ತತ್ತ್ವವನ್ನು ಕ್ಷೇತ್ರವೆಂದು ಹೇಳುತ್ತಾರೆ.
ಯದಾ ತು ಗುಣಜಾಲಂ ತದವ್ಯಕ್ತಾತ್ಮನಿ ಸಂಕ್ಷಿಪೇತ್ |
ತದಾ ಸಹ ಗುಣೈಸ್ತೈಸ್ತು ಪಂಚವಿಂಶೋಽಪಿ ಲೀಯತೇ ॥15॥
ಯಾವಾಗ ಯೋಗಿಯು ಮಹದಾದಿ ಗುಣಗಳಿಂದ ಕೂಡಿದ ಅವ್ಯಕ್ತ ಪ್ರಕೃತಿಯನ್ನು ಪರಮಾತ್ಮನಲ್ಲಿ ಲಯಗೊಳಿಸುತ್ತಾನೋ ಆಗ ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನು ಮಹದಾದಿ ಪ್ರೇರಕವಾದ ತನ್ನ ಅನಂತರೂಪವನ್ನು ತನ್ನ ಮೂಲರೂಪದಲ್ಲಿ ಲಯಗೊಳಿಸುತ್ತಾನೆ.
ಗುಣಾ ಗುಣೇಷು ಲೀಯಂತೇ ತದೈಕಾ ಪ್ರಕೃತಿರ್ಭವೇತ್ |
ಕ್ಷೇತ್ರಜ್ಞೋಽಪಿ ಯದಾ ತಾತ ತತ್ಕ್ಷೇತ್ರೇ ಸಂಪ್ರಲೀಯತೇ ॥16॥
ಗುಣಗಳೆಲ್ಲವೂ ಕಾರಣಭೂತವಾದ ಗುಣಗಳಲ್ಲಿ ಲಯಹೊಂದಿದಾಗ ಕೇವಲ ಪ್ರಕೃತಿಮಾತ್ರವೇ ಉಳಿದುಕೊಂಡಿರುತ್ತದೆ. ಭಗವಂತನು ಉಪಚಯವನ್ನು ಹೊಂದಿರುವ ಪ್ರಕೃತಿಗಿಂತ ಹೊರಗೆ ಆಗಮಿಸುತ್ತಾನೆ.
ತದಾ ಕ್ಷರತ್ವಂ ಪ್ರಕೃತಿರ್ಗಚ್ಛತೇ ಗುಣಸಂಜ್ಞಿತಾ |
ನಿರ್ಗುಣತ್ವಂ ಚ ವೈದೇಹ ಗುಣೇಷ್ವಪ್ರತಿವರ್ತನಾತ್ ॥17॥
ಆಗ ಮೂಲಪ್ರಕೃತಿಯಲ್ಲಿ ಉಪಚಾರಿಕ ಶಕ್ತಿಯು ನಾಶವಾಗಿರುವುದರಿಂದ ಅದು ಕ್ಷರಣವನ್ನು ಹೊಂದುತ್ತದೆ. ಆದ್ದರಿಂದಲೇ ಮೂಲಪ್ರಕೃತಿಯು ಕ್ಷರವೆನಿಸಿದೆ. ಸತ್ತ್ವ, ರಜಸ್, ತಮೋಗುಣಗಳಲ್ಲಿ ಪ್ರವೃತ್ತಿಯನ್ನು ಹೊಂದದಿರುವುದರಿಂದ ನಿರ್ಗುಣತ್ವವನ್ನು ಹೊಂದುತ್ತದೆ.
ಏವಮೇವ ಚ ಕ್ಷೇತ್ರಜ್ಞಃ ಕ್ಷೇತ್ರಜ್ಞಾನಪರಿಕ್ಷಯೇ |
ಪ್ರಕೃತ್ಯಾ ನಿರ್ಗುಣಸ್ತ್ವೇಷ ಇತ್ಯೇವಮನುಶುಶ್ರುಮ ॥18॥
ಇದೇ ರೀತಿ ಕ್ಷೇತ್ರಜ್ಞನು ಕ್ಷೇತ್ರಜ್ಞಾನದಿಂದ ದೂರನಾದಾಗ, ಪ್ರಕೃತಿಗುಣಗಳಿಂದ ರಹಿತನಾದಾಗ ನಿರ್ಗುಣ ಎಂದೇ ಕರೆಯುತ್ತೇವೆ. ಹೊರತು ಸ್ವತಃ ಗುಣರಹಿತನಾದುದರಿಂದ ಅಲ್ಲ.
ಕ್ಷರೋ ಭವತ್ಯೇಷ ಯದಾ ತದಾ ಗುಣವತೀಮಥ |
ಪ್ರಕೃತಿಂ ತ್ವಭಿಜಾನಾತಿ ನಿರ್ಗುಣತ್ವಂ ತಥಾತ್ಮನಃ ॥19॥
ಯಾವಾಗ ಚೇತನನು ಕ್ಷರನಾಗುತ್ತಾನೋ ಆಗ ಪ್ರಕೃತಿಯ ಗುಣವನ್ನು ಕಳೆದುಕೊಂಡು ಅವನೂ ನಿರ್ಗುಣನೆನಿಸುತ್ತಾನೆ.
ತದಾ ವಿಶುದ್ಧೋ ಭವತಿ ಪ್ರಕೃತೇಃ ಪರಿವರ್ಜನಾತ್ |
ಅನ್ಯೋಽಹಮನ್ಯೇಯಮಿತಿ ಯದಾ ಬುಧ್ಯತಿ ಬುದ್ಧಿಮಾನ್ ॥20॥
ಪ್ರಳಯಕಾಲದಲ್ಲಿ ಯಾವ ಕಾರಣದಿಂದಲೂ ಜಡದ ಸಂಬಂಧವು ಜೀವನಿಗೆ ಇಲ್ಲದಿರುವ ಕಾರಣ ಜೀವನು ವಿಶುದ್ಧನೆನಿಸುತ್ತಾನೆ. ಪರಮಾತ್ಮನು ಬೇರೆ, ನಾನು ಬೇರೆ ಎಂಬ ಜ್ಞಾನವನ್ನು ಹೊಂದಿರುವುದರಿಂದ ಬುದ್ಧಿವಂತನೂ ಆಗುತ್ತಾನೆ.
ತದೈಷೋಽನ್ಯತ್ವತಾಮೇತಿ ನ ಚ ಮಿಶ್ರತ್ವಮಾವ್ರಜೇತ್ |
ಪ್ರಕೃತ್ಯಾ ಚೈವ ರಾಜೇಂದ್ರ ನಮಿಶ್ರೋಽನ್ಯಶ್ಚ ದೃಶ್ಯತೇ ॥21॥
ಎಂದಿಗೂ ಜೀವನು ಪರಮಾತ್ಮನಿಂದ ಭಿನ್ನನೇ ಆಗಿರುತ್ತಾನೆ ಹೊರತು ಎಂದಿಗೂ ಪರಮಾತ್ಮನ ಜೊತೆಗೆ ಮೇಲನವನ್ನು ಹೊಂದುವುದಿಲ್ಲ. ಪ್ರಕೃತಿಯೊಂದಿಗೂ ಮೇಲನ ಹೊಂದದೆ ಪ್ರಕೃತಿಗಿಂತಲೂ ವಿಲಕ್ಷಣನಾಗಿಯೇ ಜೀವನು ಇರುತ್ತಾನೆ.
ಯದಾ ತು ಗುಣಜಾಲಂ ತತ್ ಪ್ರಾಕೃತಂ ವಿಜುಗುಪ್ಸತೇ |
ಪಶ್ಯತೇ ಚಾಪರಂ ಪಶ್ಯನ್ ತದಾ ಪಶ್ಯನ್ನ ಸಂಜ್ವರೇತ್ ॥22॥
ಯಾವಾಗ ಜೀವನು ಪ್ರಕೃತಿ ಸಂಬಂಧವಾದ ಗುಣಗಳ ಸಮೂಹವನ್ನು ಪ್ರಾಕೃತವೆಂದು ಭಾವಿಸಿ, ಜುಗುಪ್ಸೆಯನ್ನು ತಾಳುತ್ತಾನೋ, ಜೀವನಿಗಿಂತ ಭಿನ್ನನಾದ ಸರ್ವಜ್ಞನಾದ ನಾರಾಯಣನನ್ನು ನೋಡುತ್ತಾನೋ ಆಗ ಜೀವನ ಆಯಾಸವನ್ನು ಕಂಡ ಭಗವಂತನು ಕರುಣೆಯಿಂದ ತುಂಬಿದ ಕಣ್ಣುಗಳಿಂದ ಜೀವನನ್ನು ನೋಡುತ್ತಾನೆ. ಬಳಿಕ ಆ ಜೀವನು ಎಂದಿಗೂ ಪ್ರಕೃತಿಯ ಸಂಬಂಧವನ್ನು ಹೊಂದುವುದಿಲ್ಲ. ನಿತ್ಯಮುಕ್ತನಾಗುತ್ತಾನೆ.
ಕಿಂ ಮಯಾ ಕೃತಮೇತಾವದ್ಯೋಽಹಂ ಕಾಲಮಿಮಂ ಜನಮ್ |
ಯಥಾ ಮತ್ಸ್ಯೋದಕೇ ಜಾಲಮನುವರ್ತಿತವಾನಿಹ |
ಮತ್ಸ್ಯೋ ಜಾಲಂ ಹ್ಯವಿಜ್ಞಾನಾದನುವರ್ತಿತವಾಂಸ್ತಥಾ ॥23॥
ಪರಮಾತ್ಮನ ಜ್ಞಾನವನ್ನು ಹೊಂದಿದ ಬಳಿಕ ಚೇತನನು ಹೀಗೆ ಯೋಚಿಸುತ್ತಾನೆ: ನಾನು ಇಲ್ಲಿಯ ತನಕ ಎಂತಹ ತಪ್ಪನ್ನು ಮಾಡಿದೆ. ಅಜ್ಞಾನದಿಂದ ಮೀನು ತಾನಾಗಿಯೇ ಹೋಗಿ ಬಲೆಯಲ್ಲಿ ಸಿಕ್ಕಿಬೀಳುವಂತೆ ನಾನು ಈ ಪ್ರಕೃತಿ ಸಂಬಂಧದಲ್ಲಿ ಅಜ್ಞಾನಿಯಾಗಿ ವರ್ತಿಸಿದೆನು ಎಂದು ಪಶ್ಚಾತ್ತಾಪ ಪಡುತ್ತಾನೆ.
ಅಹಮೇವ ಹಿ ಸಮ್ಮೋಹಾದನ್ಯಂ ಮನ್ಯೇಜನಾಜನಮ್ |
ಮತ್ಸ್ಯೋ ಯಥೋದಕಜ್ಞಾನಾದನುವರ್ತಿತವಾನಿಹ ॥24॥
ಯಾವ ರೀತಿ ಒಂದು ಮೀನು ಸಮೃದ್ಧವಾಗಿ ನೀರಿರುವ ಒಂದು ಕಡೆ ಹೋಗಬೇಕೆಂದು ಬೇರೆ ಜಲಾಶಯಕ್ಕೆ ಹೋಗಲು ಬಯಸುತ್ತದೋ ನಾನು ಇದೇ ರೀತಿ ಬಂಧು ಜನರನ್ನು, ಧನ-ಕನಕಾದಿಗಳನ್ನು, ಚೇತನರನ್ನು ನೋಡುತ್ತಾ, ಆ ಪರಮಾತ್ಮನನ್ನು ನಾನೇ ಎಂದು ಭಾವಿಸಿ, ತಪ್ಪಾಗಿ ತಿಳಿದು ದೇಹದಿಂದ ದೇಹಕ್ಕೆ ಚಲಿಸುತ್ತಾ ದುಃಖಕ್ಕೆ ಈಡಾದೆನು.
ಮತ್ಸ್ಯೋಽನ್ಯತ್ವಂ ಯಥಾಜ್ಞಾನಾದುದಕಾನ್ನಾಭಿಮನ್ಯತೇ |
ಆತ್ಮಾನಂ ತದ್ವದಜ್ಞಾನಾದನ್ಯತ್ವಂ ಚೈವ ವೇದ್ಮ್ಯಹಮ್ ॥25॥
ಮೀನು ಅಜ್ಞಾನದ ಕಾರಣದಿಂದ ತನಗಿಂತ ಭಿನ್ನವಾಗಿರುವ ನೀರನ್ನು ಹೇಗೆ ತಿಳಿದುಕೊಂಡಿಲ್ಲವೋ ಅದೇ ರೀತಿ ನಾನು ನನಗೆ

ಆಶ್ರಯನಾದ ಪರಮಾತ್ಮನಿಗಿಂತ ಭಿನ್ನನೆಂದು ತಿಳಿಯದಾದೆನು.
ಮಮಾಸ್ತು ಧಿಗಬುದ್ಧಸ್ಯ ಯೋಽಹಂ ಮಗ್ನಿಮಮಂ ಪುನಃ |
ಅನುವರ್ತಿತವಾ ಮೋಹಾದನ್ಯಮನ್ಯಂ ಜನಾಜ್ಜನಮ್ ॥26॥
ನನ್ನ ಮೂರ್ಖತನಕ್ಕೆ ಧಿಕ್ಕಾರವಿರಲಿ. ಸಂಸಾರ ಸಾಗರದಲ್ಲಿ ಮುಳುಗಿದ್ದ ನಾನು ಮೋಹವಶನಾಗಿ ಒಂದು ದೇಹದಿಂದ ಇನ್ನೊಂದು ದೇಹವನ್ನು ಅನುಸರಿಸುತ್ತಲೇ ದುಃಖಕ್ಕೆ ತುತ್ತಾಗಿದ್ದೆನು.
ಅಯಂ ಮಮ ಭವೇದ್ ಬಂಧುರನೇನ ಸಹ ಮೋಕ್ಷಣಮ್ |
ಸಾಮ್ಯಮೇಕತ್ವಮಾಯಾತೋ ಯಾದೃಶಸ್ತಾದೃಶಸ್ತ್ವಹಮ್ ॥27॥
ಈ ಜಗತ್ತಿನಲ್ಲಿ ನನಗೆ ಪರಮಾತ್ಮನೇ ಬಂಧುವಾಗಿದ್ದಾನೆ. ಅವನ ಸಂಗವೇ ಉಚಿತವಾದುದು. ಅವನ ಪಾದಗಳ ಸನಿಹವನ್ನು ಹೊಂದಿ ಅವನಂತೆ ಆಗುತ್ತೇನೆ. ಅವನು ಹೇಗಿದ್ದಾನೋ ಅವನಂತೆ ನಾನು ಇದ್ದೇನೆ.
ತುಲ್ಯತಾಮಿಹ ಪಶ್ಯಾಮಿ ಸದೃಶೋಽಹಮನೇನ ವೈ |
ಅಯಂ ಹಿ ವಿಮಲೋ ವ್ಯಕ್ತಮಹಮೀದೃಶಕಸ್ತಥಾ ॥28॥
ನಾನು ಪರಮಾತ್ಮನಂತೆ ಇರುವುದನ್ನು, ಅವನ ಪ್ರತಿಬಿಂಬನೆಂಬುದನ್ನು ಕಾಣುತ್ತಿದ್ದೇನೆ. ಅವನಿಗೆ ಸದೃಶನಾದವನು, ಪರಮಾತ್ಮನು ಅತ್ಯಂತ ಪರಿಶುದ್ಧನು ಎಂಬುದನ್ನು ಸ್ಪಷ್ಟವಾಗಿ ಕಾಣುತ್ತಿದ್ದೇನೆ. ನಾನೂ ಅವನ ಅನುಗ್ರಹದಿಂದ ಪರಿಶುದ್ಧನೇ ಆಗಿರುತ್ತೇನೆ.
ಯೋಽಹಮಜ್ಞಾನಸಮ್ಮೋಹಾದಜ್ಞಯಾ ಸಂಪ್ರವತ್ತವಾನ್ |
ಸಸಂಗಯಾಹಂ ನಿಃಸಂಗಃ ಸ್ಥಿತಃ ಕಾಲಮಿಮಂ ತ್ವಹಮ್ ॥29॥
ನಾನು ಸ್ವಾಭಾವಿಕವಾಗಿ ತ್ರಿಗುಣಗಳ ಸಂಬಂಧದಿಂದ ದೂರನಾಗಿದ್ದರೂ ಪ್ರಕೃತಿಯ ಸಂಬಂಧದಿಂದ ಇಷ್ಟರ ತನಕ ಜಡವಾದ ಪ್ರಕೃತಿಯ ಜೊತೆಗೇ ಇದ್ದುಬಿಟ್ಟೆನು.
ಅನಯಾಹಂ ವಶೀಭೂತಃ ಕಾಲಮೇತಂ ನ ಬುದ್ಧವಾನ್ |
ಉಚ್ಚಮಧ್ಯಮನೀಚಾನಾಂ ತಾಮಹಂ ಕಥಮಾವಸೇ ॥30॥
ಈ ಪ್ರಕೃತಿಯಿಂದ ವಶನಾಗಿ ನನ್ನ ಕಾಲವೆಲ್ಲವೂ ವ್ಯರ್ಥವಾಗಿ ಕಳೆದು ಹೋಯಿತು. ಇದನ್ನು ತಿಳಿಯದಾದೆನು. ಪ್ರಕೃತಿಯು ಉತ್ತಮ, ಮಧ್ಯಮ, ನೀಚರಲ್ಲಿ ಯಾವ ತಾರತಮ್ಯವೂ ಇಲ್ಲದೆ ಸೇರಿಕೊಂಡಿದ್ದಾಳೆ. ಅಂತಹ ಪ್ರಕೃತಿಯ ಜೊತೆಗೆ ಇನ್ನು ಮುಂದೆ ನಾನು ಹೇಗೆ ವಾಸಮಾಡಲಿ?
ಸಮಾನಯಾನಯಾ ಚೇಹ ಸಹವಾಸಮಹಂ ಕಥಮ್ |
ಗಚ್ಛಾಮ್ಯಬುದ್ಧಭಾವತ್ವಾದೇಷೇದಾನೀಂ ಸ್ಥಿರೋ ಭವೇತ್ ॥31॥
ಅಜ್ಞಾನದ ಕಾರಣದಿಂದ ಈ ಪ್ರಕೃತಿಯ ಸಂಗದಲ್ಲಿದ್ದೆನು. ಇನ್ನು ಮುಂದೆ ಭಗವದ ಜ್ಞಾನವನ್ನು ಪಡೆದಿರುವ ನಾನು ಬಂಧಕವಾದ ಈ ಪ್ರಕೃತಿಯ ಸಂಬಂಧವನ್ನು ಹೇಗೆ ತಾನೆ ಮಾಡಲಿ? ಪರಮಾತ್ಮನ ಜ್ಞಾನದಲ್ಲಿ ಸ್ಥಿರವಾದ ಬುದ್ಧಿ ಇರುವುದರಿಂದ ನಾನು ಇನ್ನೆಂದಿಗೂ ಪ್ರಕೃತಿಯ ಸಂಬಂಧವನ್ನು ಹೊಂದೆನು. ಸ್ಥಿರವಾಗಿ ಇರುತ್ತೇನೆ.
ಸಹವಾಸಂ ನ ಯಾಸ್ಯಾಮಿ ಕಾಲಮೇತದ್ಧಿ ವಂಚನಾತ್ |
ವಂಚಿತೋಽಸ್ಮ್ಯನಯಾ ಯದ್ಧಿ ನಿರ್ವಿಕಾರೋ ವಿಕಾರಯಾ ॥32॥
ನಾನು ನಿರ್ವಿಕಾರನಾದ ಸಚ್ಚಿದಾನಂದನಾಗಿದ್ದರೂ ಪ್ರಕೃತಿಯ ಸಂಬಂಧದಿಂದ ವಂಚಿಸಲ್ಪಟ್ಟು ವಿಕಾರವನ್ನು ಹೊಂದುತ್ತಿದ್ದೆನು. ಇನ್ನು ಮುಂದೆ ಈ ಪ್ರಕೃತಿಯ ಸಹವಾಸವನ್ನು ಎಂದಿಗೂ ನಾನು ಮಾಡುವುದಿಲ್ಲ. ಅವಳ ವಂಚನೆಗೆ ನಾನು ತುತ್ತಾಗುವುದಿಲ್ಲ.
ನ ಚಾಯಮಪರಾಧೋಽಸ್ಯಾ ಅಪರಾಧೋ ಹ್ಯಯಂ ಮಮ |
ಯೋಽಹಮತ್ರಾಭವಂ ಸಕ್ತಃ ಪರಾಙ್ಮುಖಮುಪಸ್ಥಿತಃ ॥33॥
ನಿರ್ವಿಕಾರನಾದ ನಾನು ಪ್ರಕೃತಿಯ ಜೊತೆಗೆ ಸೇರಿ ವಿಕಾರವನ್ನು ಹೊಂದಿದುದಕ್ಕೆ ಇವಳ ಅಪರಾಧವು ಇರುವುದಿಲ್ಲ. ನಾನೇ ಅಪರಾಧಿಯು. ಅಂತರ್ಯಾಮಿಯಾದ ಪರಮಾತ್ಮನನ್ನು ಅರಿಯದೆ ಇವಳಲ್ಲಿ ಆಸಕ್ತವಾಗಿದ್ದುದೇ ಅಪರಾಧವಾಗಿದೆ.
ತತೋಽಸ್ಮಿ ಬಹುರೂಪಾಸು ಸ್ಥಿತೋ ಮೂರ್ತಿಷ್ವಮೂರ್ತಿಮಾನ್ |
ಅಮೂರ್ತಶ್ಚಾಪಿ ಮೂರ್ತಾತ್ಮಾ ಮಮತ್ವೇನ ಪ್ರಧರ್ಷಿತಃ ॥34॥
ನಾನು ಒಬ್ಬನೇ ಆಗಿದ್ದರೂ ಪ್ರಾಕೃತಿಕವಾದ ಅನೇಕ ರೂಪಗಳನ್ನು, ದೇಹಗಳನ್ನು ಧರಿಸಿ, ದೇಹದಿಂದ ರಹಿತನಾಗಿದ್ದರೂ ಮಮಕಾರದಿಂದ ಆಕ್ರಾಂತನಾಗಿ ದೇಹವೇ ನಾನೆಂಬ ಮಮಕಾರದಿಂದ ತುಳಿಯಲ್ಪಟ್ಟೆನು.
ಪ್ರಕೃತೇರನಯತ್ವೇನ ತಾಸು ತಾಸ್ವಿಹ ಯೋನಿಷು |
ನಿರ್ಮಮಸ್ಯ ಮಮತ್ವೇನ ಕಿಂ ಕೃತಂ ತಾಸು ತಾಸು ಚ |
ಯೋನೀಷು ವರ್ತಮಾನೇನ ನಷ್ಟಸಂಜ್ಞೇನ ಚೇತಸಾ ॥35॥
ಆ ಪ್ರಕೃತಿಯ ಸಂಬಂಧದಿಂದ ನಾನಾ ಶರೀರಗಳ ಯೋನಿಗಳಲ್ಲಿ ಬಳಲುತ್ತಾ, ನಿರ್ಮಮನಾದ ನಾನು ಮಮಕಾರವನ್ನು ಹೊಂದಿ, ಆಯಾ ಯೋನಿಗಳಲ್ಲಿ ಮಾಡಿದ ಸಾಧನೆಯಾದರೂ ಯಾವುದೆಂಬುದನ್ನು ಅರಿಯದವನಾಗಿದ್ದೇನೆ. ಆಯಾ ಯೋನಿಗಳಲ್ಲಿ ತೊಳಲಾಡಿದ ನಾನು ತತ್ತ್ವ ಜ್ಞಾನದಿಂದ ವಂಚಿತನಾಗಿದ್ದೆನು ಎಂಬುದಂತು ಸತ್ಯ ಸಂಗತಿಯು.
ನ ಮಮಾತ್ರಾನಯಾ ಕಾರ್ಯಮಹಂಕಾರಕೃತಾತ್ಮಯಾ |
ಆತ್ಮಾನಂ ಬಹುಧಾ ಕೃತ್ವಾ ಯೇಯಂ ಭೂಯೋ ಯುನಕ್ತಿ ಮಾಮ್ |
ಇದಾನೀಮೇಷ ಬುದ್ಧೋಽಸ್ಮಿ ನಿರ್ಮಮೋ ನಿರಹಂಕೃತಃ ॥36॥
ನಾನು ನನ್ನ ತನವನ್ನು ಅರಿತಿದ್ದೇನೆ. ಆದ್ದರಿಂದ ಈ ಪ್ರಕೃತಿಯ ಕಾರ್ಯವಾದ ಅಹಂಕಾರದಿಂದ ಮಾಡಲ್ಪಟ್ಟ ಆಕಾರದಿಂದ ನನಗೆ ಯಾವ ಪ್ರಯೋಜನವೂ ಆಗಬೇಕಾಗಿಲ್ಲ. ಪ್ರಕೃತಿಯು ಮನಮೋಹಕವಾದ ಬಹುರೂಪವನ್ನು ತಾಳಿ ನನ್ನನ್ನು ತನ್ನೊಡನೆ

ಸೇರಿಸಿಕೊಂಡು ಬಿಡುತ್ತಾಳೆ. ಆದರೆ ನಾನು ಈಗ ಜ್ಞಾನ ಸಂಪನ್ನನಾಗಿದ್ದೇನೆ. ಮಮಕಾರವನ್ನು ತೊರೆದಿದ್ದೇನೆ. ಅಹಂಕಾರದಿಂದ ರಹಿತನಾಗಿದ್ದೇನೆ.
ಮಮತ್ವಮನಯಾ ನಿತ್ಯಮಹಂಕಾರಕೃತಾತ್ಮಕಮ್ |
ಅಪೇತ್ಯಾಹಮಿಮಾಂ ಹಿತ್ವಾ ಸಂಶ್ರಯಿಷ್ಯೇ ನಿರಾಮಯಮ್ ॥37॥
ಈ ಅಹಂಕಾರ-ಮಮಕಾರಗಳು ಪ್ರಕೃತಿಯಿಂದಲೇ ನನಗೆ ಉಂಟಾದವು. ನಾನು ಈಗ ಮಮತ್ವವನ್ನು ತ್ಯಜಿಸಿ ಪ್ರಕೃತಿಯ ಆಶ್ರಯವನ್ನೂ ತೊರೆದು ನಿರಾಮಯನಾದ ಪರಮಾತ್ಮನನ್ನೇ ಚೆನ್ನಾಗಿ ಆಶ್ರಯಿಸುತ್ತೇನೆ.
ಅನೇನ ಸಾಮ್ಯಂ ಯಾಸ್ಯಾಮಿ ನಾನಯಾಹಮಚೇತಸಾ |
ಕ್ಷಮಂ ಮಮ ಸಹಾನೇನ ನೈಕತ್ವಮನಯಾ ಸಹ |
ಏವಂ ಪರಮಸಂಬೋಧಾತ್ ಪಂಚವಿಂಶೋಽನುಬುದ್ಧವಾನ್ ॥38॥
ನಾನು ಪರಮಾತ್ಮನಂತೆ ಸಾದೃಶ್ಯವನ್ನು ಹೊಂದುತ್ತೇನೆ. ಜಡಪ್ರಕೃತಿಯ ಸಾಮ್ಯವನ್ನು ಎಂದಿಗೂ ಹೊಂದುವುದಿಲ್ಲ. ಹೀಗೆ ಇಪ್ಪತ್ತೈದನೆಯ ತತ್ತ್ವವಾದ ಪರಮಾತ್ಮನನ್ನು ಚೆನ್ನಾಗಿ ತಿಳಿದುಕೊಂಡು ಪರಮಾತ್ಮನ ಜ್ಞಾನದಿಂದಲೇ ಅವನ ಮಹತ್ವವನ್ನು ತಿಳಿದಿರುತ್ತೇನೆ.
ಅಕ್ಷರತ್ವಂ ನಿಯಚ್ಛೇತ ತ್ಯಕ್ತತ್ವಾಽಕ್ಷರಮನಾಮಯಮ್ |
ಅವ್ಯಕ್ತಂ ವ್ಯಕ್ತಧರ್ಮಾಣಂ ಸಗುಣಂ ನಿರ್ಗುಣಂ ತಥಾ |
ನಿರ್ಗುಣಂ ಪರಮಂ ದೃಷ್ಟ್ವಾ ತಾದೃಗ್ಭವತಿ ಮೈಥಿಲ ॥39॥
ಅನಾದಿ-ಅನಂತ ಕಾಲಗಳಿಂದ ಜನನ-ಮರಣವೆಂಬ ರೋಗರಹಿತನಾದ, ಪರಮ ಅಕ್ಷರಸ್ವರೂಪನಾದ ನಾರಾಯಣನನ್ನು ಬಿಟ್ಟು ಅರ್ಥಾತ್ ಅವನಿಂದ ಮೋಕ್ಷವನ್ನು ಹೊಂದುವುದನ್ನು ಬಿಟ್ಟು ಮೋಕ್ಷವನ್ನು ಬಯಸಬಹುದು. ಭಗವಂತನು ಸ್ವಭಾವತಃ ಅಜ್ಞೇಯನಾಗಿದ್ದಾನೆ. ಆದ್ದರಿಂದಲೇ ಅವ್ಯಕ್ತನೆನಿಸಿದ್ದಾನೆ. ಸ್ವಾತಂತ್ರ್ಯಾದಿ, ಸರ್ವಜ್ಞಾದಿ ಧರ್ಮಗಳನ್ನು ಹೊಂದಿರುವುದರಿಂದ ವ್ಯಕ್ತ ಧರ್ಮಿ ಎನಿಸಿದ್ದಾನೆ. ಎಲ್ಲ ಗುಣಗಳಿಂದಲೂ ಪೂರ್ಣನಾಗಿದ್ದಾನೆ. ಅನಾದ್ಯನಂತ ಕಾಲದಿಂದ ಗುಣತ್ರಯ ರಹಿತನಾದ ನಾರಾಯಣನನ್ನು ನೋಡಿ, ಅವನ ಅನುಗ್ರಹದಿಂದ ನನಗೆ ಬಂಧಕವಾದ ಪ್ರಕೃತಿಗುಣಗಳಿಂದ ಮುಕ್ತನಾಗಿ, ಆ ಭಗವಂತನಂತೆ ಸಾಮ್ಯವನ್ನು ಹೊಂದುತ್ತೇನೆ. ಪ್ರಾಕೃತಿಕ ಗುಣಗಳಿಂದ ದೂರನಾಗಿರುವುದರಿಂದ ನಾನು ಭಗವಂತನಂತೆ ಆಗುತ್ತೇನೆ. ಹೊರತು ಭಗವಂತನೇ ಆಗುತ್ತೇನೆ ಎಂದು ಅರ್ಥವಲ್ಲ. ನಾರಾಯಣನು ಅನಾದ್ಯನಂತ ಕಾಲದಿಂದ ಪ್ರಕೃತಿಗುಣಗಳಿಂದ ಮುಕ್ತನಾಗಿದ್ದಾನೆ. ಜೀವನು ಯಾವುದೋ ಒಂದು ಸಮಯದಲ್ಲಿ ಪ್ರಕೃತಿಯ ಗುಣರಾಹಿತ್ಯವನ್ನು ಹೊಂದುವುದರಿಂದ ಅವನಂತೆ ಸರ್ವಸಾಮ್ಯವನ್ನಾಗಲಿ, ಅವನಂತೆ ಸರ್ವಾತ್ಮನಾ ಪ್ರಾಕೃತಗುಣರಾಹಿತ್ಯವನ್ನಾಗಲಿ ಹೊಂದಲು ಸಾಧ್ಯವಿಲ್ಲ. ಅಂತಹ ಗುಣತ್ರಯರಹಿತನಾದ ಪರಮಾತ್ಮನ ದರ್ಶನವನ್ನು ಮಾಡಿದ ಜೀವನು ಭಗವಂತನಂತೆ ಯತ್ಕಿಂಚಿತ್ ಸಾಮ್ಯವನ್ನು ಹೊಂದುತ್ತಾನೆ ಎಂದು ಭಾವ.
ವ್ಯಾಖ್ಯಾನ ವಿಶೇಷ ನಲವತ್ತೈದನೆಯ ಶ್ಲೋಕದಲ್ಲಿ `ಪಂಚವಿಂಶಾತ್ ಪರಂ ತತ್ತ್ವಮ್' ಎಂದು ಹೇಳಿದ್ದಾರೆ. ಚತುರ್ವಿಂಶತಿ ತತ್ತ್ವಗಳು ಜಡತತ್ತ್ವಗಳು, ಆದುದರಿಂದ ಅಧಮ ತತ್ತ್ವಗಳು ಎನಿಸಿವೆ. ಇಪ್ಪತ್ನಾಲ್ಕು ತತ್ತ್ವಗಳ ಒಳಗೆ ತತತತ್ವಭಿಮಾನಿ ದೇವತೆಗಳು ಅವರಲ್ಲಿ ಇಪ್ಪತ್ನಾಲ್ಕು ಭಗವಂತನ ರೂಪಗಳು ನಿಯಾಮಕವಾಗಿವೆ. ಜೀವರಿಗೆ ಇಪ್ಪತ್ನಾಲ್ಕು ತತ್ತ್ವಗಳು ಜನನ-ಮರಣಾದಿ ದುಃಖವನ್ನು ನೀಡುವುದರಿಂದ ನೀಚತತ್ತ್ವವೆನಿಸಿವೆ. ಇಪ್ಪತ್ನಾಲ್ಕನೆಯ ತತ್ತ್ವವೆನಿಸಿದ ಲಕ್ಷ್ಮೀದೇವಿಯಾದರೂ ಭಗವಂತನ ಅನುಗ್ರಹದಿಂದ ಪ್ರಕೃತಿ ತತ್ತ್ವಕ್ಕೆ ಅಭಿಮಾನಿಯಾಗಿ ಪ್ರಕೃತಿ ಪದದಿಂದ ಸೂಚಿತವಾದ ಸ್ತ್ರೀತ್ವವನ್ನು ಹೊಂದಿರುವುದರಿಂದ ಭಗವಂತನ ದೆಸೆಯಿಂದ ಅಧಮಳಾಗಿಯೇ ಇದ್ದಾಳೆ. ಭಗವಂತನು ಇಪ್ಪತ್ತೈದನೆಯ ತತ್ತ್ವ ಎನಿಸಿದ್ದಾನೆ. ಆದ್ದರಿಂದ ಇಪ್ಪತ್ತೈದನೆಯ ತತ್ತ್ವಕ್ಕಿಂತ ಉತ್ತಮವಾದ ತತ್ತ್ವವನ್ನು ನಾನು ನೋಡಿಲ್ಲ ಎಂದು ` `ಪಂಚವಿಶಾತ್ ಪರಂ ತತ್ತ್ವಂ ನ ಪಶ್ಯಾಮಿ ನರಾಧಿಪ' ಎಂದು ಹೇಳಿದ್ದಾರೆ.
ಅಕ್ಷರಕ್ಷರಯೋರೇತದುಕ್ತಂ ತವ ನಿದರ್ಶನಮ್ |
ಮಯೇಹ ಜ್ಞಾನಸಂಪನ್ನಂ ಯಥಾಶ್ರುತಿನಿದರ್ಶನಾತ್ ॥40॥
ಶ್ರುತಿಗಳಲ್ಲಿರುವ ದೃಷ್ಟಾಂತಕ್ಕನುಗುಣವಾಗಿ ಕ್ಷರ-ಅಕ್ಷರಗಳ ವಿವೇಕ ಜ್ಞಾನವನ್ನು ನಿನಗೆ ನಿದರ್ಶನ ಪೂರ್ವಕವಾಗಿ ತಿಳಿಸಿರುತ್ತೇನೆ.
ನಿಃಸಂದಿಗ್ಧಂ ಚ ಸೂಕ್ಷ್ಮಂ ಚ ವಿಬುದ್ಧಂ ವಿಮಲಂ ತಥಾ |
ಪ್ರವಕ್ಷ್ಯಾಮಿ ತು ತೇ ಭೂಯಸ್ತನ್ನಿಬೋಧ ಯಥಾಶ್ರುತಮ್ ॥41॥
ನಾನು ಶ್ರುತಿಗೆ ಅನುಗುಣವಾಗಿ ಸಂದೇಹರಹಿತವಾದ, ಸೂಕ್ಷ್ಮವಾದ, ಅತ್ಯಂತ ನಿರ್ಮಲವಾದ, ವಿಶಿಷ್ಟವಾದ ಜ್ಞಾನವನ್ನು ನಿನಗೆ ಹೇಳುತ್ತೇನೆ, ಕೇಳು.
ಸಾಂಖ್ಯಯೋಗೌ ಮಯಾ ಪ್ರೋಕ್ತೌ ಶಾಸ್ತ್ರದ್ವಯನಿದರ್ಶನಾತ್ |
ಯದೇವ ಶಾಸ್ತ್ರಂ ಸಾಂಖ್ಯೋಕ್ತಂ ಯೋಗದರ್ಶನಮೇವ ತತ್ ॥42॥
ನಾನು ಸಾಂಖ್ಯ ಮತ್ತು ಯೋಗ ಎರಡೂ ಶಾಸ್ತ್ರಗಳ ನಿದರ್ಶನಸಹಿತವಾಗಿ ಸಾರವನ್ನು ತಿಳಿಸಿರುತ್ತೇನೆ. ಆದರೆ ಸಾಂಖ್ಯೋಕ್ತ ಶಾಸ್ತ್ರವು ಯಾವುದಿದೆಯೋ ಅದೇ ಯೋಗಶಾಸ್ತ್ರವಾಗಿದೆ.
ವ್ಯಾಖ್ಯಾನ ವಿಶೇಷ- `ಏಕಂ ಸಾಂಖ್ಯಂ ಚ ಯೋಗಂ ಚ ಯಃಪಶ್ಯತಿ ಸ ಪಶ್ಯತಿ' ಎಂಬ ಗೀತೆಯ ವಚನವು ಈ ಮಾತಿಗೆ ಪೂರಕವಾಗಿದೆ.
ಪ್ರಬೋಧನಕರಂ ಜ್ಞಾನಂ ಸಾಂಖ್ಯಾನಾಮವನೀಪತೇ |
ವಿಸ್ಪಷ್ಟಂ ಪ್ರೋಚ್ಯತೇ ತತ್ರ ಶಿಷ್ಯಾಣಾಂ ಹಿತಕಾಮ್ಯಯಾ ॥43॥
ಸಾಂಖ್ಯಯೋಗಿಗಳ ಜ್ಞಾನವು ಭಗವಂತನ ಜ್ಞಾನವನ್ನು ಚೆನ್ನಾಗಿ ಹುಟ್ಟಿಸುತ್ತದೆ. ಶಿಷ್ಯರಿಗೆ ಹಿತವಾಗಬೇಕೆಂಬ ಕಾರಣದಿಂದ ಸಾಂಖ್ಯಶಾಸ್ತ್ರದಲ್ಲಿ ಸ್ಪಷ್ಟವಾಗಿ ಭಗವತ್ತತ್ತ್ವವು ನಿರೂಪಿಸಲ್ಪಟ್ಟಿದೆ.
ಬೃಹಚ್ಚೈವ ಹಿ ತಚ್ಛಾಸ್ತ್ರಮಿತ್ಯಾಹುಃ ಕುಶಲಾ ಜನಾಃ |

ಅಸ್ಮಿಂಶ್ಚ ಶಾಸ್ತ್ರೇ ಯೋಗಾನಾಂ ಪುನರ್ವೇದೈಃ ಪುರಃಸರಃ ||44||
ವಿದ್ವಾಂಸರಾದ ಪುರುಷರು ಸಾಂಖ್ಯಶಾಸ್ತ್ರವನ್ನು ಮಹಾಶಾಸ್ತ್ರವೆಂದು ಕರೆಯುತ್ತಾರೆ. ಸಾಂಖ್ಯಶಾಸ್ತ್ರಗಳಲ್ಲಿ ಯೋಗಶಾಸ್ತ್ರಗಳ ಜ್ಞಾನವು ಅಡಕವಾಗಿದೆ. ವೇದದ ಜ್ಞಾನವೂ ಅಡಕವಾಗಿದೆ.
ಪಂಚವಿಂಶಾತ್ ಪರಂ ತತ್ತ್ವಂ ನ ಪಶ್ಯಾಮಿ ನರಾಧಿಪ |
ಸಾಂಖ್ಯಾನಾಂ ತು ಪರಂ ತತ್ರ ಯಥಾವದನುವರ್ಣಿತಮ್ ||45||
ಮಹಾರಾಜನೇ, ಸಾಂಖ್ಯಶಾಸ್ತ್ರದಲ್ಲಿ ಇಪ್ಪತ್ತೈದನೆಯ ತತ್ವಕ್ಕಿಂತಲೂ ಅಧಿಕವಾದ ಯಾವ ತತ್ತ್ವವೂ ಹೇಳಲ್ಪಟ್ಟಿಲ್ಲ. ಇಂತಹ ಸಾಂಖ್ಯರ ಭಗವತ್ತತ್ತ್ವ ಪ್ರಧಾನವೆನಿಸಿದ ತತ್ತ್ವವನ್ನು ಯಥಾವತ್ತಾಗಿ ತಿಳಿಸಿದ್ದೇನೆ.
ಬುದ್ಧಮಪ್ರತಿಬುದ್ಧಂ ಚ ಬುದ್ಧ್ಯಮಾನಂ ಚ ತತ್ತ್ವತಃ |
ಬುದ್ಧ್ಯಮಾನಂ ಚ ಬುದ್ಧಂ ಚ ಪ್ರಾಹುರ್ಯೋಗನಿದರ್ಶನಮ್ ||46||
ಚೇತನ, ಜಡ ಇವುಗಳ ಬಗ್ಗೆ ಅಜ್ಞಾನಿಗಳಿಂದ ತಪ್ಪಾಗಿ ತಿಳಿದ ಪ್ರಬುದ್ಧರಿಂದ ಯಥಾರ್ಥವಾಗಿ ತಿಳಿದ ಪರಮಾತ್ಮತತ್ತ್ವದ ಬಗ್ಗೆ ಶಾಸ್ತ್ರವು ಹೇಗೆ ವಿವೇಚನೆ ಮಾಡಿ ಹೇಳಿದೆಯೋ ಅಂತಹ ಯೋಗಕ್ಕೆ ನಿದರ್ಶನವು ಸಾಂಖ್ಯತತ್ತ್ವವೇ ಆಗಿದೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಚತ್ವಾರಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

ನೂರ ನಲವತ್ತನೆಯ ಅಧ್ಯಾಯ
ವಸಿಷ್ಠ-ಜನಕರ ಸಂವಾದವು ಮುಂದುವರೆದುದು.
ವಸಿಷ್ಠಃ
ಅಪ್ರಬುದ್ಧಮಥಾವ್ಯಕ್ತಮಿಮಂ ಗುಣವಿಧಿಂ ಶೃಣು |
ಗುಣಾಂಧಾರಯತೇ ಹ್ಯೇಷಾ ಸೃಜತ್ಯಾಕ್ಷಿಪತೇ ತಥಾ ||1||
ವಸಿಷ್ಠ ರಾಜನೇ, ಜ್ಞಾನರಹಿತವಾದ ಜಡಪ್ರಕೃತಿಯನ್ನು, ಅದರ ಗುಣ-ವಿಧಿಗಳನ್ನು ಹೇಳುತ್ತೇನೆ. ಜಡಪ್ರಕೃತಿಯು ಗುಣಗಳನ್ನು ಸೃಷ್ಟಿಸುತ್ತದೆ, ಪೋಷಿಸುತ್ತದೆ, ನಾಶ ಮಾಡುತ್ತದೆ.
ಅಜಸ್ರಂ ತ್ವಿಹ ಕ್ರೀಡಾರ್ಥಂ ವಿಕುರ್ವಂತೀ ನರಾಧಿಪ |
ಆತ್ಮಾನಂ ಬಹುಧಾ ಕೃತ್ವಾ ತಾನ್ಯೇವ ಚ ವಿಚಕ್ಷತೇ ||2||
ಆ ಜಡಪ್ರಕೃತಿಯು ಯಾವಾಗಲೂ ಕ್ರೀಡಾರ್ಥವಾಗಿ ತನ್ನನ್ನು ಅನೇಕ ರೀತಿಯಲ್ಲಿ ವಿಕಾರಗೊಳಿಸಿಕೊಂಡು ಇರುತ್ತದೆ. ತಾನು ಹೊಂದಿದ ಅನೇಕ ವಿಕಾರಗಳನ್ನೆಲ್ಲ ತಾನೆಂದೇ ತಿಳಿದುಕೊಂಡಿರುತ್ತದೆ.
ಏತದೇವಂ ವಿಕುರ್ವಾಣಾಂ ಬುದ್ಧ್ಯಮಾನೋ ನ ಬುದ್ಧ್ಯತೇ |
ಅವ್ಯಕ್ತಬೋಧನಾಚ್ಚೈವ ಬುದ್ಧ್ಯಮಾನಂ ವದಂತ್ಯಪಿ ||3||
ವಾಸ್ತವಿಕವಾಗಿ ಜ್ಞಾನಸಂಪನ್ನನಾದ ಜೀವನು ಈ ಜಡಪ್ರಕೃತಿಯ ಸಂಸರ್ಗದಿಂದ ವಿಕಾರವನ್ನು ಹೊಂದುತ್ತಲೇ ಇರುವ ತನ್ನನ್ನು ತಿಳಿದುಕೊಂಡಿರುವುದಿಲ್ಲ. ಪ್ರಕೃತಿಯ ಸಂಬಂಧವಾದ ಅನುಮಿತಿ ರೂಪ ಜ್ಞಾನವನ್ನು ಹೊಂದಿರುವ ಕಾರಣದಿಂದ ತಿಳಿಯಲ್ಪಡತಕ್ಕವನು ಎಂದು ವಿದ್ವಾಂಸರು ಹೇಳುತ್ತಾರೆ.
ನ ತ್ವೇವ ಬುದ್ಧ್ಯತೇವ್ಯಕ್ತಂ ಸಗುಣಂ ವಾಥ ನಿರ್ಗುಣಮ್ |
ಕದಾಚಿತ್ತ್ವೇವ ಖಲ್ವೇತದಾಹುರಪ್ರತಿಬುದ್ಧಕಮ್ ||4||
ಈ ಪ್ರಕೃತಿಯು ಗುಣದಿಂದ ಕೂಡಿರಲಿ, ಇಲ್ಲದಿರಲಿ, ಇದನ್ನು ಜೀವನು ಎಂದಿಗೂ ತಿಳಿಯುವುದಿಲ್ಲ. ಒಂದು ವೇಳೆ ತಿಳಿದರೂ ಅವ್ಯಕ್ತವನ್ನು ಅಸ್ಪಷ್ಟವಾಗಿ ತಿಳಿದಿರುತ್ತಾನೆ. ಅದರ ಪೂರ್ಣ ಅರಿವು ಅವನಿಗೆ ಇರುವುದಿಲ್ಲ. ಪ್ರಕೃತಿಯ ಕೊನೆಯನ್ನು ತಿಳಿದಿರುವುದಿಲ್ಲ.
ಬುದ್ಧ್ಯತೇ ಯದಿ ವಾವ್ಯಕ್ತಮೇತದ್ವೈ ಪಂಚವಿಂಶಕಮ್ |
ಬುದ್ಧ್ಯಮಾನೋ ಭವತ್ಯೇಷ ಸಂಗಾತ್ಮಕ ಇತಿ ಶ್ರುತಿಃ ||5||
ಒಂದು ವೇಳೆ ಇಪ್ಪತ್ತೈದನೆಯ ತತ್ತ್ವವಾದ ಭಗವಂತನನ್ನು ತಿಳಿದಲ್ಲಿ ಅವ್ಯಕ್ತ ತತ್ತ್ವವನ್ನು ಜೀವನು ತಿಳಿದಂತಾಗುತ್ತದೆ. ಭಗವಂತನಿಗೆ ಎಲ್ಲದರ ಸಂಬಂಧವು ಇರುವುದರಿಂದ ಅವನನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ.
ಅನೇನಾಪ್ರತಿಬುದ್ಧೇತಿ ವದಂತ್ಯವ್ಯಕ್ತಮಚ್ಯುತಮ್ |
ಅವ್ಯಕ್ತಬೋಧನಾಚ್ಚಾಪಿ ಬುದ್ಧ್ಯಮಾನಂ ವದಂತ್ಯುತ ||6||
ಅವ್ಯಕ್ತವೂ, ಅಚ್ಯುತವೂ, ಅನಂತವೂ ಆದ ಕಾರಣದಿಂದ ಅವ್ಯಕ್ತವನ್ನು ಜೀವನು ಅರಿಯಲಾರ ಎಂದು ಹೇಳುತ್ತಾರೆ. ಭಗವಂತನನ್ನು ಅರಿತಿರುವ ಕಾರಣದಿಂದ, ಅವನ ಸಂಬಂಧವು ಪ್ರಕೃತಿಗೆ ಇರುವ ಕಾರಣದಿಂದ ಅವ್ಯಕ್ತತತ್ತ್ವವನ್ನು ಅರಿತವನು ಎಂದೂ ಹೇಳುತ್ತಾರೆ.
ಪಂಚವಿಂಶಂ ಮಹಾತ್ಮಾನಂ ನ ಚಾಸಾವಪಿ ಬುದ್ಧ್ಯತೇ |
ಷಟ್‌ವಿಂಶಂ ವಿಮಲಂ ಬುದ್ಧಮಪ್ರಮೇಯಂ ಸನಾತನಮ್ ||7||
ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನನ್ನು ಈ ಜೀವಾತ್ಮನು ಸ್ಪಷ್ಟವಾಗಿಯೂ ಅರಿಯುವುದಿಲ್ಲ. ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನೇ ಇಪ್ಪತ್ತಾರನೆಯ ವಿಮಲವಾದ, ಸನಾತನವಾದ, ಅಪ್ರಮೇಯವಾದ ತತ್ತ್ವ ಎಂದು ಕರೆಸಿಕೊಳ್ಳುತ್ತಾನೆ.
ವ್ಯಾಖ್ಯಾನ ವಿಶೇಷ `ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿಯಲ್ಲಿ ಭಗವಂತನು ತಾನು ಸೃಷ್ಟಿಮಾಡಿದ ಇಪ್ಪತ್ನಾಲ್ಕು ತತ್ತ್ವಗಳಲ್ಲಿ ಅಂತರ್ಯಾಮಿಯಾಗಿ ಪ್ರವೇಶಿಸಿದನು. ಇಪ್ಪತ್ನಾಲ್ಕು ತತ್ತ್ವಗಳಿಗೂ ಆಶ್ರಯವನ್ನು ನೀಡಿರುವುದರಿಂದ ಭಗವಂತನು

ಇಪ್ಪತ್ನಾಲ್ಕು ತತ್ತ್ವನು ಎಂದು ಜ್ಞಾನಿಗಳಿಂದ ತಿಳಿಯಲ್ಪಡುತ್ತಾನೆ. ಅಥವಾ ನಾರಾಯಣನು ಸ್ವಯಂ ತಾನೊಬ್ಬನೇ ನಿರಂತರವೂ ಅನಾದಿ, ಅನಂತ ಕಾಲಗಳಿಂದ ಇಪ್ಪತ್ನಾಲ್ಕು ತತ್ತ್ವಗಳನ್ನು ಸ್ವತಂತ್ರವಾಗಿ ಸೃಷ್ಟಿಸುತ್ತಿದ್ದಾನೆ. ತನ್ನದೇ ಬಿಂಬರೂಪಗಳಾದ ಇಪ್ಪತ್ನಾಲ್ಕು ತತ್ತ್ವಗಳ ಮೇಲೆ ತಾನೇ ಇರುವುದರಿಂದ ಇಪ್ಪತ್ತೈದನೆಯ ತತ್ತ್ವವೆಂದು ಜ್ಞಾನಿಗಳಿಂದ ಕರೆಸಿಕೊಳ್ಳುತ್ತಾನೆ. ಅಥವಾ ಭಗವಂತನು ವ್ಯಾಪ್ತನೂ, ಅಪ್ರಮೇಯನೂ, ಜಗತ್ತಿನ ಸೃಷ್ಟಿ-ನಿಯಮನ-ಸಂಹಾರಗಳನ್ನು ಮಾಡುತ್ತಿದ್ದರೂ ಅವುಗಳಲ್ಲಿ ತಾನು ಸಿಲುಕಿಕೊಳ್ಳದೆ ಏಕಪ್ರಕಾರ ವಿಮಲನೂ, ಶುದ್ಧಜ್ಞಾನರೂಪಿಯೂ ಆಗಿರುವ ನಾರಾಯಣ ಸ್ವರೂಪವು ಇಪ್ಪತ್ತೈದನೆಯ ತನ್ನದ್ದೇ ಆದ ರೂಪಕ್ಕಿಂತಲೂ ಉತ್ತಮವಾದುದು ಯಾವುದು ಎಂದು ವಿಚಾರ ಮಾಡಿದಾಗ ಇಪ್ಪತ್ತಾರನೆಯ ತತ್ತ್ವವಾಗಿ ಜ್ಞಾನಿಗಳಿಂದ ಅವನೇ ತೋರುತ್ತಾನೆ. `ಷಡ್‌ವಿಂಶಕೋ ಮಹಾವಿಷ್ಣುಃ' ಎಂಬ ಪ್ರಮಾಣದಂತೆ ಕೆಲವು ಕಡೆ ಪುರಾಣಗಳಲ್ಲಿ ಇಪ್ಪತ್ನಾಲ್ಕು ಇಪ್ಪತ್ತೈದು, ಇಪ್ಪತ್ತಾರು ಈ ಎಲ್ಲ ಸಂಖ್ಯೆಗಳಿಂದ ವಾಚ್ಯನಾದವನು ಭಗವಂತನೇ ಎಂದು ಹೇಳುತ್ತಾರೆ. ಈ ವಿಷಯವನ್ನು ಸ್ಪಷ್ಟ ಪಡಿಸಲು, ಏಕವಾಕ್ಯತ್ವವನ್ನು ಬೋಧಿಸಲು ಇಲ್ಲಿ `ಷಡ್‌ವಿಂಶಂ ವಿಮಲಂ ಬುದ್ಧಂ' ಎಂದು ಹೇಳಲಾಗಿದೆ. ಇದನ್ನೇ ಮುಂದೆ ವಿವರಿಸುತ್ತಾರೆ.

ಸತತಂ ಪಂಚವಿಂಶಂ ಚ ಚತುರ್ವಿಂಶಂ ಚ ಬುದ್ಧ್ಯತೇ |
ದೃಶ್ಯಾದೃಶ್ಯೇ ಹ್ಯನುಗತಮುಭಾವೇವ ಮಹಾದ್ಯುತೀ ॥8॥

ಜ್ಞಾನಿಗಳು ಈ ಭಗವಂತನನ್ನು ಚತುರ್ವಿಂಶ ಎಂದು, ಪಂಚವಿಂಶನೆಂದು ಹೇಳುತ್ತಾರೆ. ಇಪ್ಪತ್ನಾಲ್ಕು ತತ್ತ್ವಗಳಲ್ಲಿ ಭಗವಂತನು ವ್ಯಕ್ತರೂಪದಿಂದಲೂ, ಇಪ್ಪತ್ತೈದನೆಯ ತತ್ತ್ವದಲ್ಲಿ ಅವ್ಯಕ್ತನಾಗಿಯೂ ನೆಲೆಸಿರುತ್ತಾನೆ.

ಅವ್ಯಕ್ತಂ ನ ತು ತದ್ ಬ್ರಹ್ಮ ಬುದ್ಧ್ಯತೇ ತಾತ ಕೇವಲಮ್ |
ಕೇವಲಂ ಪಂಚವಿಂಶಂ ಚ ಚತುರ್ವಿಂಶಂ ನ ಪಶ್ಯತಿ ॥9॥

ಜೀವನು ಎಂದಿಗೂ ಅವ್ಯಕ್ತಸ್ವಭಾವನಾದ, ಗುಣಪರಿಪೂರ್ಣನಾದ ಬ್ರಹ್ಮನನ್ನು ತಿಳಿದಿರುವುದಿಲ್ಲ. ಪಂಚವಿಂಶನು, ಚತುರ್ವಿಂಶನು ಆದ ಭಗವಂತನನ್ನು ಸಾಕಲ್ಯೇನ ತಿಳಿಯಲು ಅಸಮರ್ಥನಾಗಿದ್ದಾನೆ.

ಬುದ್ಧ್ಯಮಾನೋ ಯದಾತ್ಮಾನಮನ್ಯೋಽಹಮಿತಿ ಮನ್ಯತೇ |
ತದಾ ಪ್ರಕೃತಿಮಾನೇಷ ಭವತ್ಯವ್ಯಕ್ತಲೋಚನಃ ॥10॥

ಜ್ಞಾನವನ್ನು ಹೊಂದಲು ಅರ್ಹನಾದ ಜೀವನು ಪರಮಾತ್ಮನು ಬೇರೆ, ನಾನು ಬೇರೆ ಎಂದು ಯಾವಾಗ ತಿಳಿಯುತ್ತಾನೋ ಆಗ ಅವ್ಯಕ್ತತತ್ತ್ವದಲ್ಲಿಯೂ ದೃಷ್ಟಿಯುಳ್ಳವನು ಈ ಜೀವನಾಗುತ್ತಾನೆ.

ಬುದ್ಧ್ಯತೇ ಚ ಪರಾಂ ಬುದ್ಧಿಂ ವಿಶುದ್ಧಾಮಮಲಾಂ ಯದಾ |
ಷಡ್‌ವಿಂಶೋ ರಾಜಶಾರ್ದೂಲ ತದಾ ಬುದ್ಧತ್ವಮಾವ್ರಜೇತ್ ॥11॥

ಯಾವ ವಿಶುದ್ಧವಾದ, ನಿರ್ಮಲವಾದ, ಸರ್ವೋತ್ಕೃಷ್ಟವಾದ ಬುದ್ಧಿಯನ್ನು ಹೊಂದುತ್ತಾನೋ ಆಗ ಪ್ರಕೃತಿ ತತ್ತ್ವಕ್ಕಿಂತ ಅತ್ಯಂತ ದೂರನಾದ ಭಗವಂತನ ಬಗ್ಗೆಯೂ ಜೀವನು ಜ್ಞಾನವನ್ನು ಹೊಂದುತ್ತಾನೆ.

ತತಸ್ತ್ಯಜತಿ ಸೋಽವ್ಯಕ್ತಂ ಸರ್ಗಪ್ರಲಯಧರ್ಮಿಣಮ್ |
ನಿರ್ಗುಣಃ ಪ್ರಕೃತಿಂ ವೇದ ಗುಣಯುಕ್ತಾಮಚೇತನಾಮ್ ॥12॥
ತತಃ ಕೇವಲಧರ್ಮಾಸೌ ಭವತ್ಯವ್ಯಕ್ತದರ್ಶನಾತ್ |
ಕೇವಲೇನ ಸಮಾಗಮ್ಯ ವಿಮುಕ್ತೋಽಽತ್ಮಾನಮಾಪ್ನುಯಾತ್ ॥13॥

ಬಳಿಕ ಜೀವನು ಹುಟ್ಟು-ಸಾವುಗಳಿಗೆ ಕಾರಣವಾದ ಅವ್ಯಕ್ತ ಪ್ರಕೃತಿಯನ್ನು ಸಂಪೂರ್ಣವಾಗಿ ತ್ಯಜಿಸುತ್ತಾನೆ. ಪ್ರಾಕೃತ ಗುಣರಹಿತನಾದ ಜೀವನು ತ್ರಿಗುಣಗಳಿಂದ ಕೂಡಿದ ಜಡಪ್ರಕೃತಿಯನ್ನು ಯಾವಾಗ ಅರಿಯುತ್ತಾನೋ ಆಗ ಕೇವಲ ಧರ್ಮಿ ಎನಿಸಿದ ಜೀವನು ವಿಮುಕ್ತನಾಗಿ ಪರಮಾತ್ಮನನ್ನು ಹೊಂದುತ್ತಾನೆ. ಅವ್ಯಕ್ತ ತತ್ತ್ವವನ್ನು ಚೆನ್ನಾಗಿ ಅರಿತಿರುವ ಕಾರಣದಿಂದ ಮುಕ್ತನಾಗುತ್ತಾನೆ.

ಏತದ್ ವೈ ತತ್ತ್ವಮಿತ್ಯಾಹುರ್ನಿಸ್ತತ್ತ್ವಮಜರಾಮರಮ್ |
ತತ್ತ್ವಸಂಶ್ರಯಣಾದೇತತ್ ತತ್ತ್ವವನ್ನ ಚ ಮಾನದ |
ಪಂಚವಿಂಶತಿತತ್ತ್ವಾನಿ ಪ್ರವದಂತಿ ಮನೀಷಿಣಃ ॥14॥

ಇಪ್ಪತ್ನಾಲ್ಕು ತತ್ತ್ವಗಳಿಂದ ಅತಿರಿಕ್ತವಾದ ಇಪ್ಪತ್ತೈದನೆಯ ತತ್ತ್ವವನ್ನೇ ಜ್ಞಾನಿಗಳು ತತ್ತ್ವ ಎಂದು ಹೇಳುತ್ತಾರೆ. ಅಜರಾಮರವಾದ ಈ ಬ್ರಹ್ಮತತ್ತ್ವವನ್ನು ಆಶ್ರಯಿಸುವುದೇ ನಿಜವಾದ ತತ್ತ್ವ. ಭಗವತ್ತತ್ತ್ವವು ಜೀವತತ್ತ್ವದಂತೆ ಆಗಲಿ, ಜಡತತ್ತ್ವದಂತೆ ಆಗಲಿ ಪೂಜ್ಯನೇ ಇರುವುದಿಲ್ಲ. ಹೀಗೆ ಜ್ಞಾನಿಗಳಾದವರು ಇಪ್ಪತ್ತೈದು ತತ್ತ್ವಗಳನ್ನು ತಿಳಿಸಿರುತ್ತಾರೆ.

ನ ಚೈಷ ತತ್ತ್ವವಾಂಸ್ತಾತ ನಿಸ್ತತ್ತ್ವಸ್ತ್ವೇಷ ಬುದ್ಧಿಮಾನ್ |
ಏಷ ಮುಂಚತಿ ತತ್ತ್ವಂ ಹಿ ಕ್ಷಿಪ್ರಾಂ ಬುದ್ಧಸ್ಯ ಲಕ್ಷಣಮ್ ॥15॥

ಜೀವನು ಇಪ್ಪತ್ನಾಲ್ಕು ತತ್ತ್ವಗಳನ್ನು ತಿಳಿದಾಗ ಬುದ್ಧಿವಂತನಾಗುವುದಿಲ್ಲ. ಇಪ್ಪತ್ನಾಲ್ಕು ತತ್ತ್ವಗಳನ್ನು ನಿಯಮಿಸುವ ಇಪ್ಪತ್ತೈದನೆಯ ತತ್ತ್ವವಾದ ಭಗವಂತನನ್ನು ತಿಳಿದಾಗ ಬುದ್ಧಿವಂತನಾಗುತ್ತಾನೆ. ಭಗವಂತನ ಈ ಜ್ಞಾನದಿಂದ ಇಪ್ಪತ್ನಾಲ್ಕು ತತ್ತ್ವಗಳ ಪ್ರಕೃತಿಯ ಸಂಬಂಧವನ್ನು ಪರಮಾತ್ಮನು ಯಾವಾಗಲೂ ಬಿಟ್ಟಿರುತ್ತಾನೆ. ಅಸಂಗವಾಗಿ ನಿಂತು ಇಪ್ಪತ್ನಾಲ್ಕು ತತ್ತ್ವವನ್ನು ನಿಯಮಿಸುತ್ತಾನೆ ಎಂದು ಭಾವ.

ಷಡ್‌ವಿಂಶೋಽಹಮಿತಿ ಪ್ರಾಜ್ಞೋ ಗೃಹ್ಯಮಾಣೋಽಜರಾಮರಃ |
ಕೇವಲೇನ ಬಲೇನೈವ ಸಮತಾಂ ಯಾತ್ಯಸಂಶಯಮ್ ॥16॥

ಭಗವಂತನು ತನ್ನ ಸಾಕ್ಷಿಯಿಂದ ಇನ್ನೊಬ್ಬರ ಪ್ರಸಾದವನ್ನು ಅವಲಂಬಿಸದೆ ಇಪ್ಪತ್ತಾರನೆಯದ್ದಾದ ತನ್ನ ಸ್ವರೂಪವನ್ನು ಯಾವಾಗಲೂ ಒಂದೇ ರೀತಿಯಲ್ಲಿ ತಿಳಿದಿರುತ್ತಾನೆ. ಯಾರ ಅನುಗ್ರಹವೂ ಇಲ್ಲದೆ ತನ್ನಿಂದಲೇ ತಾನು ಸಮತ್ವವನ್ನು ಹೊಂದಿರುವವನು ಭಗವಂತನೊಬ್ಬನೇ.

ಷಡ್ವಿಂಶೇನ ಪ್ರಬುದ್ಧೇನ ಬುಧ್ಯಮಾನೋಽಪ್ಯಬುದ್ಧಿಮಾನ್ |
ಏತನ್ನಾನಾತ್ವಮಿತ್ಯುಕ್ತಂ ಸಾಂಖ್ಯಶ್ರುತಿನಿದರ್ಶನಾತ್ ॥17॥
ಇಪ್ಪತ್ತಾರನೆಯ ತತ್ತ್ವವೆನಿಸಿದ ಭಗವಂತನನ್ನು ಜೀವಾತ್ಮನು ಶ್ರವಣಾದಿ ಜನ್ಯ ಭಗವತ್ಪ್ರಸಾದದ ಬಳಿಕ, ಚೆನ್ನಾಗಿ ತಿಳಿದ ಬಳಿಕ ಅಪರೋಕ್ಷ ಜ್ಞಾನಿಯಾಗುತ್ತಾನೆ. ಹೀಗೆ ಸಾಂಖ್ಯಶ್ರುತಿ ನಿದರ್ಶನದಿಂದ ಈ ನಾನಾತ್ವವು ವರ್ಣಿಸಲ್ಪಟ್ಟಿದೆ
ಚೇತನೇನ ಸಮೇತಸ್ಯ ಪಂಚವಿಂಶತಿಕಸ್ಯ ಚ |
ಏಕತ್ವಂ ವೈ ಭವತ್ಯಸ್ಯ ಯದಾ ಬುದ್ಧ್ಯಾ ನ ಬುಧ್ಯತೇ ॥18॥
ಬುಧ್ಯಮಾನೋಽಪ್ರಬುದ್ಧೇನ ಸಮತಾಂ ಯಾತಿ ಮೈಥಿಲ |
ಸಂಗಧರ್ಮಾ ಭವತ್ಯೇಷ ನಿಃಸಂಗಾತ್ಮಾ ನರಾಧಿಪ ॥19॥
ಯಾವಾಗ ಈ ಜೀವನು ಶಾಸ್ತ್ರಾರ್ಥಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳನೋ ಆಗ ಒಂದೇ ಜೀವನ ಶರೀರದಲ್ಲಿ ಪರಮಾತ್ಮನು ಸನ್ನಿಹಿತನಾಗಿರುವುದರಿಂದ ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನು ಜೀವಾತ್ಮನೇ ಆಗಿದ್ದಾನೆ ಎಂದು ತಿಳಿದುಕೊಳ್ಳುತ್ತಾನೆ. ಸರಿಯಾಗಿ ಭಗವತ್ತತ್ತ್ವವನ್ನು ಜೀವತತ್ತ್ವವನ್ನು ತಿಳಿಯದೆ, ಅದ್ವೈತ ಜ್ಞಾನವನ್ನು ಹೊಂದಿದ ವ್ಯಕ್ತಿಯಿಂದ ಪ್ರವಚನ ಕೇಳಿಸಿಕೊಂಡ ಇನ್ನೊಬ್ಬನೂ ಅವನಂತೆ ಅದ್ವೈತ ಜ್ಞಾನಿಯಾಗುತ್ತಾನೆ. ಹೀಗೆ ಅಂಧಪರಂಪರೆಯಿಂದ ದುರ್ಮತದ ಪ್ರವೃತ್ತಿಯು ಉಂಟಾಗುತ್ತದೆ. ಜೀವಾತ್ಮರಿಗೂ, ಪರಮಾತ್ಮರಿಗೂ ಎಂದಿಗೂ ಐಕ್ಯ ಸಲ್ಲದು. ರಾಜನೇ, ಅಜ್ಞಾನದಿಂದಾಗಿ ಹೀಗೆ ಅಂಧ ಪರಂಪರೆಯನ್ನು ಸೃಷ್ಟಿಸುತ್ತಾರೆ. ಐಕ್ಯಕ್ಕೆ ಸಾಂಖ್ಯಶಾಸ್ತ್ರವು ಮೂಲವಾಗಿರುವುದಿಲ್ಲ ಎಂದು ವಸಿಷ್ಠರ ಅಭಿಪ್ರಾಯವಾಗಿದೆ.
ನಿಃಸಂಗಾತ್ಮಾನಮಾಸಾದ್ಯ ಷಡ್ವಿಂಶಕಮಜಂ ವಿದುಃ |
ವಿಭುಸ್ತ್ಯಜತಿ ಚಾವ್ಯಕ್ತಂ ಯದಾ ತ್ವೇತದ್ ವಿಬುಧ್ಯತೇ |
ಚತುರ್ವಿಂಶಮಗಾಧಂ ಚ ಷಡ್ವಿಂಶಸ್ಯ ಪ್ರಬೋಧನಾತ್ ॥20॥
ಯಾವಾಗ ಇಪ್ಪತ್ತಾರನೆಯ ತತ್ತ್ವನೆನಿಸಿದ ಭಗವಂತನನ್ನು ಆಶ್ರಯಿಸಿಕೊಂಡು ಸಾಂಖ್ಯಶಾಸ್ತ್ರವನ್ನು ಜೀವನು ಅರ್ಥಮಾಡಿಕೊಳ್ಳುತ್ತಾನೋ ಆ ಇಪ್ಪತ್ತಾರನೆಯ ತತ್ತ್ವವನ್ನು ತಿಳಿದ ಕಾರಣದಿಂದ ಅಪರೋಕ್ಷ ಜ್ಞಾನದ ಸಾಮರ್ಥ್ಯವನ್ನು ಹೊಂದಿದ ಜೀವನು ಪ್ರಕೃತಿ ಮೂಲವಾದ ನಾನೇ ಬ್ರಹ್ಮನೆಂಬ ಅಹಂಕಾರವನ್ನು ಅಥವಾ ಇಪ್ಪತ್ನಾಲ್ಕು ತತ್ತತ್ತ್ವಾತ್ಮಕವಾದ ದೇಹವನ್ನು ತ್ಯಜಿಸುತ್ತಾನೆ ಎಂದು ಜ್ಞಾನಿಗಳು ತಿಳಿಸುತ್ತಾರೆ.
ಏಷ ಹ್ಯಪ್ರತಿಬುದ್ಧಶ್ಚ ಬುಧ್ಯಮಾನಶ್ಚ ತೇಽನಘ |
ಪ್ರೋಕ್ತೋ ಬುದ್ಧಶ್ಚ ತತ್ತ್ವೇನ ಯಥಾಶ್ರುತಿನಿದರ್ಶನಾತ್ |
ನಾನಾತ್ವೈಕತ್ವಮೇತಾವದ್ ದ್ರಷ್ಟವ್ಯಂ ಶಾಸ್ತ್ರದೃಷ್ಟಿಭಿಃ ॥21॥
ಈ ರೀತಿಯಾಗಿ ಅಜ್ಞಾನಿಗಳಿಂದ ತಿಳಿಯಲಾಗದ, ಸುಜ್ಞಾನಿಗಳಿಂದ ತಿಳಿಯಲಾಗುವ ನಾರಾಯಣನೆಂಬ ತತ್ತ್ವವನ್ನು ಶ್ರುತಿಗಳ ನಿದರ್ಶನದಿಂದ ನಾನು ಯಥಾರ್ಥವಾಗಿ ತಿಳಿಸಿರುತ್ತೇನೆ. ಜೀವ-ಪರಮಾತ್ಮರಿಗೆ ಅಲ್ಲಲ್ಲಿ ಭೇದವನ್ನು ಹೇಳುತ್ತಾರೆ, ಐಕ್ಯವನ್ನೂ ಹೇಳುತ್ತಾರೆ. ಯಾಕೆ ಹೇಳುತ್ತಾರೆ ಎಂಬುದಕ್ಕೆ ಸರಿಯಾದ ನಿದರ್ಶನಗಳನ್ನು ತೋರಿಸಿ ನಿನಗೆ ತಿಳಿಸಿರುತ್ತೇನೆ. ಶಾಸ್ತ್ರದಲ್ಲಿ ದೃಷ್ಟಿಯುಳ್ಳವರು ಯಾವುದನ್ನು ನೋಡಿದ್ದರೋ ಅಂತಹ ಭೇದಜ್ಞಾನವನ್ನೇ ನೀನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. (ಅಸಮ್ಮತದಲ್ಲಿ ಸ್ಥಾಪಿತವಾದ ಅಭೇದವನ್ನಾಗಲಿ, ಭೇದಾಭೇದಗಳನ್ನಾಗಲಿ ತಿಳಿಯಬಾರದು ಎಂದು ಭಾವ).
ಮಶಕೋದುಂಬರೇ ಯದ್ವದನ್ಯತ್ವಂ ತದ್ವದೇತಯೋಃ |
ಮತ್ಸ್ಯೋಽಂಭಸಿ ಯಥಾ ತದ್ವದನ್ಯತ್ವಮುಪಲಭ್ಯತೇ ॥22॥
ಅತ್ತಿಯ ಹಣ್ಣಿನಲ್ಲಿರುವ ಹುಳುವಿಗೂ, ಅತ್ತಿಯ ಹಣ್ಣಿಗೂ ಇರುವ ಆಧಾರ- ಆಧೇಯ ಭಾವದಂತೆ ಜೀವ-ಪರಮಾತ್ಮರಲ್ಲಿರುವ ಆಧಾರ-ಆಧೇಯ ಭಾವದಿಂದ ಭಿನ್ನತ್ವವನ್ನು ತಿಳಿಯಬೇಕು. ನೀರಿಗೂ ಮತ್ಸ್ಯಕ್ಕೂ ಇರುವ ಭೇದವನ್ನು ಜೀವ- ಪರಮಾತ್ಮರಲ್ಲಿ ತಿಳಿಯಬೇಕು.
ಏವಮೇವಾವಗಂತವ್ಯಂ ನಾನಾತ್ವೈಕತ್ವಮೇತಯೋಃ |
ಏತದ್ ವಿಮೋಕ್ಷ ಇತ್ಯುಕ್ತಮವ್ಯಕ್ತಜ್ಞಾನಸಂಹಿತಮ್ ॥23॥
ಜೀವರಲ್ಲಿರುವ ನಾನಾತ್ವವನ್ನು, ಪರಮಾತ್ಮನಲ್ಲಿರುವ ಏಕತ್ವವನ್ನು ಈ ದೃಷ್ಟಾಂತದಿಂದ ತಿಳಿದುಕೊಳ್ಳಬೇಕು. ಈ ಅವ್ಯಕ್ತ ಜ್ಞಾನಸಂಹಿತೆಯನ್ನು ಸರಿಯಾಗಿ ತಿಳಿದಾಗಲೇ ಜೀವನು ಮುಕ್ತಿಯನ್ನು ಹೊಂದುತ್ತಾನೆ.
ವ್ಯಾಖ್ಯಾನ ವಿಶೇಷ ಅತ್ತಿ ಹಣ್ಣಿನಲ್ಲಿರುವ ನುಸಿಗಳಿಗೂ ಅತ್ತಿಯ ಹಣ್ಣಿಗೂ, ನೀರಿನಲ್ಲಿರುವ ಮತ್ಸ್ಯಕ್ಕೂ ನೀರಿಗೂ ಆಧಾರ-ಆಧೇಯ ಭಾವದಿಂದ ಭೇದವು ನಿರ್ಣಯವಾಗಿದೆ. ಮಶಕ-ಮತ್ಸ್ಯಗಳಂತೆ ಜೀವರಲ್ಲಿ ನಾನಾತ್ವವಿದೆ. ಔದುಂಬರ-ಜಲದಂತೆ ಆಧಾರಭೂತನಾದ ಬ್ರಹ್ಮನಲ್ಲಿ ಏಕತ್ವವನ್ನು, ಸ್ವಗತಭೇದವರ್ಜಿತತತ್ವವನ್ನು ತಿಳಿದುಕೊಳ್ಳಬೇಕು. ಭೇದಾಭೇದ ಜ್ಞಾನವನ್ನು ನಿರಾಕರಿಸಲು ಹೀಗೆ ವ್ಯಾಸರು ತಿಳಿಸಿರುತ್ತಾರೆ. ಬುದ್ಧಿವಂತನು ಮಶಕ-ಔದುಂಬರಗಳಿಗೆ, ಜಲ-ಮತ್ಸ್ಯಗಳಿಗೆ ಭೇದಾಭೇದಗಳನ್ನು ಹೇಳುವುದಿಲ್ಲವಷ್ಟೆ?
ಜೀವ-ಪರಮಾತ್ಮರಿಗೆ ಅತ್ಯಂತ ಭೇದವೇ ಇದೆ ಎಂದು ಸಮರ್ಥನೆ ಮಾಡಿದಾಗಲೂ ಭೇದಾಭೇದವೆಂಬ ವಾದವು ನಿರಾಕೃತವಾಗುತ್ತಿರಲು ಪ್ರತ್ಯೇಕವಾಗಿ ನಿರಾಕರಿಸಲು ಕಾರಣ `ಏಕಮೇವಾದ್ವಿತೀಯಂ ಬ್ರಹ್ಮ' ಮೊದಲಾದ ಶ್ರುತಿಗಳನ್ನು ಪರರು ತಪ್ಪಾಗಿ ವ್ಯಾಖ್ಯಾನ ಮಾಡಿದ್ದರಿಂದ ಈ ಶ್ರುತಿಯು ಪರಬ್ರಹ್ಮನಲ್ಲಿ ಸಾವಕಾಶವಾಗಿದೆ ಎಂದು ಪರಮತವನ್ನು ನಿಷೇಧಿಸಲು ನಾನಾತ್ವ, ಏಕತ್ವಗಳನ್ನು ಹೇಳಿದ್ದಾರೆ. `ನಾನಾತ್ವಂ ಏಕತ್ವಂ' ಎಂದು ದ್ವಂದ್ವ ಸಮಾಸವನ್ನು ಮಾಡಿ ಪುನಃ ಅದನ್ನೂ ಏಕೀಭಾವ ಮಾಡಿದರೆ `ನಾನಾತ್ವೈಕತ್ವಂ' ಎಂಬ ಶಬ್ದನಿಷ್ಪತ್ತಿಯು ಸಾಧುವಾಗಿಯೇ ಇರುತ್ತದೆ ಎಂದು ತಿಳಿಯಬೇಕು. ಈ ರೀತಿಯಾದ ಸಮಾಸವನ್ನು ವ್ಯಾಸರು ಮಾಡಲು ಕಾರಣ ಬ್ರಹ್ಮಧರ್ಮಿಕ ಏಕತ್ವವು ಹೇಗೆ ಪಾರಮಾರ್ಥಿಕವೋ ಹಾಗೆ ಜೀವ-ಬ್ರಹ್ಮ ಭೇದವೂ ಪಾರಮಾರ್ಥಿಕವೇ ಎಂದು ತಿಳಿಸಲು ದ್ವಂದ್ವ ಸಮಾಸವನ್ನು ಏಕೀಭಾವಗೊಳಿಸಿದ್ದಾರೆ. ಆದ್ದರಿಂದ ಜೀವ-ಬ್ರಹ್ಮರ ತತ್ತ್ವವನ್ನು ಅವಲಂಬಿಸಿ ತಮ್ಮ ಮತವನ್ನು ಸ್ಥಾಪನೆ ಮಾಡುತ್ತಾ ಪರಮತವನ್ನು ದೂಷಿಸಿದ ಮುನಿಶ್ರೇಷ್ಠರಾದ ವಸಿಷ್ಠರು ಸಕಲ ಜ್ಞಾನಿಗಳಲ್ಲಿ ಶ್ರೇಷ್ಠರೆನಿಸಿದ್ದಾರೆ.

ಪಂಚವಿಂಶತಿಕಸ್ಯಾಸ್ಯ ಯೋಽಯಂ ದೇಹೇಷು ವರ್ತತೇ |
ಏಷ ಮೋಕ್ಷಯಿತವ್ಯೇತಿ ಪ್ರಾಹುರವ್ಯಕ್ತಗೋಚರಾತ್ ॥24॥
ಯಾವ ಜೀವನು ದೇಹಗಳಲ್ಲಿ ಇದ್ದಾನೋ ಇವನನ್ನು `ಅವ್ಯಕ್ತಗೋಚರಾತ್' ಎಂದರೆ ಸಂಸಾರಾದಿ ವಿಷಯಗಳಿಂದ ಬಿಡುಗಡೆಗೊಳಿಸಬೇಕು. ಇವನ ಬಿಡುಗಡೆಗೆ ಇಪ್ಪತ್ತೈದನೆಯ ತತ್ತ್ವವೆನಿಸಿದ ನಾರಾಯಣನ ದಯವೇ ಕಾರಣ ಎಂದು ಜ್ಞಾನಿಗಳು ಹೇಳಿರುತ್ತಾರೆ.
ಪೀಠಿಕೆ ಹಿಂದೆ ಮುಕ್ತಜೀವರಿಗೆ ಪರಮಾತ್ಮನ ಗುಣದ ಜೊತೆಗೆ ಇರುವ ಸಾಮ್ಯವು ತುಂಬಾ ಅಲ್ಪವಾದುದು ಎಂದು ಹೇಳಿದ್ದರು. ಈಗ ಆ ರೀತಿಯಾದ ಅಲ್ಪಗುಣಸಾಮ್ಯವನ್ನು ಭಗವಂತನ ಕೆಲವೇ ಗುಣದ ಜೊತೆಗೆ ಹೇಳಬೇಕೇ ವಿನಾ ಎಲ್ಲಾ ಗುಣಗಳಿಂದ ಹೇಳಲಾಗದು ಎಂದು ತಿಳಿಸಲು ಮುಂದಿನ ಶ್ಲೋಕವು ಹೊರಟಿದೆ.
ಸೋಽಯಮೇವಂ ವಿಮುಚ್ಯೇತ ನಾನ್ಯಥೇತಿ ವಿನಿಶ್ಚಯಃ |
ಪರೇಣ ಪರಧರ್ಮಾ ಚ ಭವತ್ಯೇಷ ಸಮೇತ್ಯ ವೈ ॥25॥
ಭಗವಂತನನ್ನು ಚೆನ್ನಾಗಿ ಅರಿತ ಜೀವನು ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಭಗವತ್ಪ್ರಜ್ಞೆ ಇಲ್ಲದಿದ್ದಲ್ಲಿ ಮುಕ್ತಿಯನ್ನು ಹೊಂದುವುದಿಲ್ಲ. ಇದು ನಿಶ್ಚಯವು. ಭಗವಂತನ ಅನುಗ್ರಹದಿಂದ ಭಗವಂತನಂತೆ ಕೆಲವು ಗುಣಗಳನ್ನು ಭಗವಂತನನ್ನು ಹೊಂದಿ ಭಗವಂತನಿಂದ ಜೀವಾತ್ಮನು ಪಡೆಯುತ್ತಾನೆ.
ವ್ಯಾಖ್ಯಾನ ವಿಶೇಷ `ಪರೇಣ ಪರಧರ್ಮಾ ಚ' ಎಂದರೆ ಪರೇಣ= ಸಂಸಾರಿಗಳಿಗಿಂತ ಭಿನ್ನನಾದ ನಾರಾಯಣನಿಂದ ಕೂಡಿರುವ ಸ್ವಯಂ ಜೀವನು, ಸಂಸಾರಿಗಳಿಗಿಂತ ಭಿನ್ನಧರ್ಮವುಳ್ಳವನಾಗುತ್ತಾನೆ ಎಂದು ಅರ್ಥ.
ವಿಶುದ್ಧಧರ್ಮಾ ಶುದ್ಧೇನ ಬುದ್ಧೇನ ಚ ಸ ಬುದ್ಧಿಮಾನ್ |
ವಿಮುಕ್ತಧರ್ಮಾ ಮುಕ್ತೇನ ಸಮೇತ್ಯ ಪುರುಷರ್ಷಭ॥26॥
ಸಂಸಾರವೆಂಬ ಮಲ ಇಲ್ಲದಿರುವ ಪರಮಾತ್ಮನ ಸಂಗದಿಂದ ಜೀವಾತ್ಮನು ಸಂಸಾರ ಮಲರಾಹಿತ್ಯವನ್ನು ಹೊಂದುತ್ತಾನೆ. ಸರ್ವಜ್ಞನಾದ ಭಗವಂತನ ಸಂಗದಿಂದ ಜೀವಾತ್ಮನು ತನ್ನ ಯೋಗ್ಯತೆಗನುಗುಣವಾದ ಪ್ರಜ್ಞೆಯನ್ನು ಹೊಂದುತ್ತಾನೆ. ಪುಣ್ಯವೆಂಬ ಧರ್ಮದಿಂದ ನಿತ್ಯಮುಕ್ತನಾದ ಭಗವಂತನಿಂದ ಜೀವಾತ್ಮನು ಮುಕ್ತಪುಣ್ಯನಾಗುತ್ತಾನೆ.
ವಿಯೋಗಧರ್ಮಣಾ ಚೈವ ವಿಯೋಗಾತ್ಮಾ ಭವತ್ಯಪಿ |
ವಿಮೋಕ್ಷಿಣಾ ವಿಮೋಕ್ಷಶ್ಚ ಸಮೇತ್ಯೇಹ ತಥಾ ಭವೇತ್ ॥27॥
ಪಾಪವಿಯೋಗವೆಂಬ ಧರ್ಮವುಳ್ಳ ಭಗವಂತನ ಸಂಗದಿಂದ ಜೀವನು ಪಾಪ ವಿಯೋಗ ಸ್ವಭಾವದವನಾಗುತ್ತಾನೆ. `ಪುಣ್ಯ-ಪಾಪೇ ವಿದೋಯ' ಎಂಬ ಶ್ರುತಿಯು ಈ ವಚನಕ್ಕೆ ಸಹಕಾರಿಯಾಗಿದೆ. ಜನನ-ಮರಣ-ದುಃಖಾದಿ ಸಾಂಸಾರಿಕ ಧರ್ಮದಿಂದ ನಿತ್ಯಮುಕ್ತನಾಗಿರುವ ಪರಮಾತ್ಮನ ಸಂಗದಿಂದ ಜೀವಾತ್ಮನು ಸ್ವರೂಪ ಭೂತವಾದ ಸುಖ-ಜ್ಞಾನಾತ್ಮಕವಾದ ನಿರ್ಮಲ ದೇಹವನ್ನು ಹೊಂದುತ್ತಾನೆ.
ಶುಚಿಕರ್ಮಾ ಶುಚಿಶ್ಚೈವ ಭವತ್ಯಮಿತದೀಪ್ತಿಮಾನ್ |
ವಿಮಲಾತ್ಮಾ ಚ ಭವತಿ ಸಮೇತ್ಯ ವಿಮಲಾತ್ಮನಾ ॥28॥
ಶುಚಿಯಾದ ಭಗವಂತನ ಸಂಗದಿಂದ ನಿರ್ಮಲ ಕರ್ಮವುಳ್ಳವನಾಗುತ್ತಾನೆ. ವಿಮಲಾತ್ಮನಾದ ಭಗವಂತನ ಸಂಗದಿಂದ ಜೀವಾತ್ಮನೂ ವಿಮಲಾತ್ಮನಾಗುತ್ತಾನೆ. ಅಮಿತ ಕಾಂತಿಯುಳ್ಳವನಾಗುತ್ತಾನೆ.
ಕೇವಲಾತ್ಮಾ ತಥಾ ಚೈವ ಕೇವಲೇನ ಸಮೇತ್ಯ ವೈ |
ಸ್ವತಂತ್ರಶ್ಚ ಸ್ವತಂತ್ರೇಣ ಸ್ವತಂತ್ರತ್ವಮವಾಪ್ನುತೇ ॥29॥
ಜಡದ ಮೇಲನವನ್ನು ಹೊಂದದೆ ಸ್ವತಂತ್ರನಾಗಿರುವ ಕಾರಣದಿಂದ ಕೇವಲ ಎನಿಸಿದ ಪರಮಾತ್ಮನ ಸಂಗದಿಂದ ಜೀವನು ಜಡದ ಸಂಬಂಧವನ್ನು ತೊರೆದುಕೊಂಡು ತನಗಿಂತ ಅಧಮರಾದ ಜೀವರಿಗೆ ನಿಯಾಮಕತ್ವ ಎಂಬ ಸ್ವಾತಂತ್ರ್ಯವನ್ನು ಹೊಂದುತ್ತಾನೆ. ಹೀಗೆ ಪರತ್ವ, ಶುದ್ಧತ್ವ, ಮುಕ್ತತ್ವ, ವಿಯೋಗತ್ವ, ವಿಮೋಕ್ಷತ್ವ, ಶುಚಿತ್ವ, ವಿಮಲತ್ವ, ಕೇವಲತ್ವ, ಸ್ವಾತಂತ್ರ್ಯ ಎಂಬ ಒಂಬತ್ತು ಗುಣಗಳ ಜೊತೆಗೆ ಜೀವನು ಸಾದೃಶ್ಯವನ್ನು ಹೊಂದುತ್ತಾನೆ ಹೊರತು ಸರ್ವೋತ್ತಮತ್ವ, ಸರ್ವಕರ್ತೃತ್ವ, ಸರ್ವಜ್ಞತ್ವ, ಲಕ್ಷ್ಮೀನಾರಾಯಣತ್ವಾದಿ ಗುಣಗಳ ಜೊತೆಗೆ ಎಂದಿಗೂ ಸಾಮ್ಯವನ್ನಾಗಲಿ, ಸಾದೃಶ್ಯವನ್ನಾಗಲಿ ಜೀವನು ಹೊಂದಲು ಅರ್ಹನಾಗುವುದಿಲ್ಲ ಎಂದು ಅಭಿಪ್ರಾಯ.
ಏತಾವದೇತತ್ ಕಥಿತಂ ಮಯಾ ತೇ
ತಥ್ಯಂ ಮಹಾರಾಜ ಯಥಾರ್ಥತತ್ತ್ವಮ್ |
ಅಮತ್ಸರತ್ವಂ ಪ್ರತಿಗೃಹ್ಯ ಚಾರ್ಥಂ
ಸನಾತನಂ ಬ್ರಹ್ಮ ವಿಶುದ್ಧಮಾದ್ಯಮ್॥30॥
ಮಹಾರಾಜನೇ, ಈರ್ಶೆ-ಅಸೂಯೆಗಳಿಂದ ದೂರವಾದ ಭಾವವನ್ನು ಆಶ್ರಯಿಸಿ ನಿನಗೆ ಇದರಿಂದ ಪ್ರಯೋಜನವಾಗುತ್ತದೆಂದು ತಿಳಿದು ಸನಾತನನಾದ, ವಿಶುದ್ಧನಾದ ಬ್ರಹ್ಮತತ್ವದ ಬಗ್ಗೆ ಪ್ರೇಮಪೂರ್ವಕವಾಗಿ ಬೋಧಿಸಿರುತ್ತೇನೆ.
ನ ವೇದನಿಷ್ಠಸ್ಯ ಜನಸ್ಯ ರಾಜನ್
ಪ್ರದೇಯಮೇತತ್ ಪರಮಂ ತ್ವಯಾ ಭವೇತ್ |
ವಿವಿತ್ಸಮಾನಾಯ ವಿಬೋಧಕಾರಕಂ
ಪ್ರಬೋಧಹೇತೋಃ ಪ್ರಣತಸ್ಯ ಶಾಸನಮ್ ॥31॥
ಯಾವ ಮನುಷ್ಯನಿಗೆ ವೇದಗಳಲ್ಲಿ ಆಸಕ್ತಿ ಇಲ್ಲವೋ ಅಂತಹ ವ್ಯಕ್ತಿಗೆ ಈ ಶ್ರೇಷ್ಠವಾದ ಬ್ರಹ್ಮಜ್ಞಾನವನ್ನು ಉಪದೇಶಿಸಬಾರದು. ವಿಶೇಷವೆನಿಸಿದ ಈ ಬ್ರಹ್ಮಜ್ಞಾನದ ವಿಷಯವನ್ನು ಯಾರು ಹೆಚ್ಚು ತಿಳಿಯಬೇಕೆಂಬ ಆಸೆಯುಳ್ಳವ- ರಾಗಿರುತ್ತಾರೋ, ಜ್ಞಾನಕ್ಕಾಗಿ ಶರಣಾಗತರಾಗಿ ಬರುತ್ತಾರೋ ಅಂತಹವರಿಗೆ ಮಾತ್ರವೇ ಇದನ್ನು ಉಪದೇಶಿಸಬೇಕು.

ನ ದೇಯಮೇತಚ್ಚ ತಥಾನೃತಾತ್ಮನೇ
ಶಠಾಯ ಕ್ಲೀಬಾಯ ನ ಜಿಹ್ಮಬುದ್ಧಯೇ |
ನ ಪಂಡಿತಜ್ಞಾನಪರೋಪತಾಪಿನೇ
ದೇಯಂ ತ್ವಯೇದಂ ವಿನಿಬೋಧ ಯಾದೃಶೇ ॥32॥
ಸುಳ್ಳು ಹೇಳುವವನಿಗೆ, ಮೂರ್ಖನಿಗೆ, ನೀಚನಿಗೆ, ಕಪಟಿಗೆ, ತಾನೇ ಪಂಡಿತನೆಂದು ಭಾವಿಸುವವನಿಗೆ, ಪಾಂಡಿತ್ಯದ ಮೂಲಕ ಇನ್ನೊಬ್ಬರಿಗೆ ಪರಿತಾಪವನ್ನುಂಟು ಮಾಡುವವನಿಗೆ ಈ ವಿದ್ಯೆಯನ್ನು ಉಪದೇಶಿಸಲೇಬಾರದು. ಯಾರಿಗೆ ಉಪದೇಶಿಸಬೇಕೆಂದು ಹೇಳುತ್ತೇನೆ, ಕೇಳು.
ಶ್ರದ್ಧಾನ್ವಿತಾಯಾಥ ಗುಣಾನ್ವಿತಾಯ
ಪರಾಪವಾದಾದ್ ವಿರತಾಯ ನಿತ್ಯಮ್ |
ವಿಶುದ್ಧಯೋಗಾಯ ಬುಧಾಯ ಚೈವ
ಕ್ರಿಯಾವತೇಽಥ ಕ್ಷಮಿಣೇ ಹಿತಾಯ ॥33॥
ಶ್ರದ್ಧೆಯಿಂದ ಕೂಡಿದವನಿಗೆ, ಗುಣವಂತನಿಗೆ, ಪರನಿಂದನೆಯಿಂದ ದೂರನಾದವನಿಗೆ, ವಿಶುದ್ಧನಾದ ಯೋಗಿಗೆ, ವಿದ್ವಾಂಸನಿಗೆ, ಸತ್ಕರ್ಮಶೀಲನಿಗೆ, ಕ್ಷಮಾಶೀಲನಿಗೆ, ಸರ್ವರಿಗೂ ಹಿತವನ್ನು ಬಯಸುವವನಿಗೆ;
ವಿವಿಕ್ತಶೀಲಾಯ ವಿಧಿಪ್ರಿಯಾಯ
ವಿವಾದಹೀನಾಯ ಬಹುಶ್ರುತಾಯ |
ವಿಜಾನತೇ ಚೈವ ನ ಚಾಹಿತಕ್ಷಮೇ
ದಮೇ ಚ ಶಕ್ತಾಯ ಶಮೇ ಚ ದೇಹಿನಾಮ್ ॥34॥
ಏಕಾಂತಸ್ಥಳವನ್ನು ಅಪೇಕ್ಷಿಸುವವನಿಗೆ, ಶಾಸ್ತ್ರ ವಿಧಿಗಳನ್ನು ಆದರಿಸುವವನಿಗೆ, ವಿವಾದಗಳಲ್ಲಿ ತೊಡಗಿಸಿಕೊಳ್ಳದವನಿಗೆ, ಅನೇಕ ಶಾಸ್ತ್ರಗಳನ್ನು ತಿಳಿದವನಿಗೆ, ತಿಳಿವಳಿಕೆ ಉಳ್ಳವನಿಗೆ, ಯಾರಿಗೂ ಅಹಿತವನ್ನು ಮಾಡದಿರುವವನಿಗೆ, ಇಂದ್ರಿಯಗಳನ್ನು ಸ್ವಾಧೀನ ಪಡಿಸಿಕೊಂಡವನಿಗೆ, ಮನಸ್ಸನ್ನು ನಿಗ್ರಹಿಸಲು ಸಮರ್ಥನಾದವನಿಗೆ ಈ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು.
ಏತೈರ್ಗುಣೈರ್ಹೀನತಮೇ ನ ದೇಯಮೇತತ್
ಪರಂ ಬ್ರಹ್ಮ ವಿಶುದ್ಧಮಾಹುಃ |
ನ ಶ್ರೇಯಸಾ ಯೋಕ್ಷ್ಯತಿ ತಾದೃಶೇ
ಕೃತಂ ಧರ್ಮಪ್ರವಕ್ತಾರಮಪಾತ್ರದಾನಾತ್ ॥35॥
ಯಾವನು ಈ ಗುಣಗಳಿಂದ ಹೀನನಾಗಿರುತ್ತಾನೋ ಅವನಿಗೆ ಇದನ್ನು ಉಪದೇಶಿಸಬಾರದು. ಬ್ರಹ್ಮಜ್ಞಾನವನ್ನು ವಿಶುದ್ಧಜ್ಞಾನ ಎನ್ನುತ್ತಾರೆ. ಗುಣಹೀನರಿಗೆ ಉಪದೇಶಿಸಿದರೆ ಮಂಗಳವಾಗುವುದಿಲ್ಲ. ಅಪಾತ್ರರಿಗೆ ಬ್ರಹ್ಮವಿದ್ಯೆಯನ್ನು ದಾನ ಮಾಡುವುದರಿಂದ ಧರ್ಮೋಪದೇಶಕರಿಗೂ ಶ್ರೇಯಸ್ಸಾಗದು.
ಪೃಥ್ವೀಮಿಮಾಂ ಯದ್ಯಪಿ ರತ್ನಪೂರ್ಣಾಂ
ದದ್ಯಾನ್ನದೇಯಂ ತ್ವಿದಮವ್ರತಾಯ |
ಜಿತೇಂದ್ರಿಯಾಯೈತದಸಂಶಯಂ ತೇ
ಭವೇತ್ ಪ್ರದೇಯಂ ಪರಮಂ ನರೇಂದ್ರ ॥36॥
ಯಾವನು ವ್ರತ-ನಿಯಮಗಳನ್ನು ಅನುಷ್ಠಾನ ಮಾಡದೆ ರತ್ನಪೂರ್ವಕವಾದ ಭೂಮಂಡಲವನ್ನೇ ದಾನ ಮಾಡಲು ಬಂದರೂ ಅವನಿಗೆ ಈ ವಿದ್ಯೆಯನ್ನು ಉಪದೇಶಿಸಬಾರದು. ಜಿತೇಂದ್ರಿಯನಾದವನಿಗೆ ಈ ವಿದ್ಯೆಯನ್ನು ಉಪದೇಶಿಸಬೇಕು. ಈ ವಿಷಯದಲ್ಲಿ ನಿನಗೆ ಸಂಶಯವು ಬೇಡ.
ಕರಾಲ ಮಾ ತೇ ಭಯಮಸ್ತು ಕಿಂ ಚಿ-
ದೇತಚ್ಛ್ರುತಂ ಬ್ರಹ್ಮ ಪರಂ ತ್ವಯಾದ್ಯ |
ಯಥಾವದುಕ್ತಂ ಪರಮಂ ಪವಿತ್ರಂ
ನಿಃಶೋಕಮತ್ಯಂತಮನಾದಿಮಧ್ಯಮ್ ॥37॥
ಕರಾಲಜನಕನೇ, ನೀನು ನನ್ನಿಂದ ಪರಬ್ರಹ್ಮನಿಗೆ ಸಂಬಂಧಿಸಿದ ತತ್ತ್ವಜ್ಞಾನವನ್ನು ಹೊಂದಿರುವೆ. ಇದರಿಂದ ನಿನ್ನ ಮನದ ದುಗುಡವೆಲ್ಲವೂ ದೂರವಾಗಲಿ. ನಾನು ಹೇಳಿದಂತೆ ಪರಬ್ರಹ್ಮವಸ್ತುವು ಪರಮ ಪವಿತ್ರವಾದುದು, ಶೋಕರಹಿತವಾದುದು, ಆದಿ-ಮಧ್ಯಾಂತ ಶೂನ್ಯವಾದುದು.
ಅಗಾಧಜನ್ಮಾಮರಣಂ ಚ ರಾಜನ್
ನಿರಾಮಯಂ ವೀತಭಯಂ ಶಿವಂ ಚ |
ಸಮೀಕ್ಷ್ಯ ಮೋಹಂ ತ್ಯಜ ಚಾದ್ಯ ಸರ್ವಂ
ಜ್ಞಾನಸ್ಯ ತತ್ತತ್ತ್ವಾರ್ಥಮಿದಂ ವಿದಿತ್ವಾ ॥38॥
ಅಗಾಧವೆನಿಸಿದ ಜನ್ಮ-ಮರಣಗಳಿಂದ ದೂರವಾದುದು, ರೋಗಗಳಿಂದ ರಹಿತವಾದುದು, ಭಯರಹಿತವಾದುದು, ಕಲ್ಯಾಣಪ್ರದವಾದುದು. ಇಂತಹ ಪರಬ್ರಹ್ಮವಸ್ತುವನ್ನು ಹೃದಯದಲ್ಲಿ ಧರಿಸಿ, ಯಥಾರ್ಥವಾಗಿ ತಿಳಿದುಕೊಂಡು ಮೋಹವನ್ನು ತ್ಯಜಿಸು.
ಅವಾಪ್ತಮೇತದ್ಧಿ ಪುರಾ ಸನಾತನಾದ್
ಹಿರಣ್ಯಗರ್ಭಾದ್ ಗದತೋ ನರಾಧಿಪ |

ಪ್ರಸಾದ್ಯ ಯತ್ನೇನ ತಮುಗ್ರತೇಜಸಂ
ಸನಾತನಂ ಬ್ರಹ್ಮ ಯಥಾದ್ಯ ವೈ ತ್ವಯಾ ॥39॥
ನರಾಧಿಪನೇ, ಯಾವ ರೀತಿ ನೀನು ನನ್ನಿಂದ ಈ ಸನಾತನ ಬ್ರಹ್ಮನ ಜ್ಞಾನವನ್ನು ಪಡೆದುಕೊಂಡೆಯೋ ಈ ರೀತಿ ನಾನು ಮಹಾತೇಜಸ್ವಿಯಾದ ಚತುರ್ಮುಖ ಬ್ರಹ್ಮನನ್ನು ಪ್ರಯತ್ನದಿಂದ ಪ್ರಸನ್ನಗೊಳಿಸಿ ಈ ಬ್ರಹ್ಮಜ್ಞಾನವನ್ನು ಪಡೆದುಕೊಂಡಿರುತ್ತೇನೆ.
ಪೃಷ್ಟಸ್ತ್ವಯಾ ಚಾಸ್ಮಿ ಯಥಾ ನರೇಂದ್ರ
ತಥಾ ಮಯೇದಂ ತ್ವಯಿ ಚೋಕ್ತಮದ್ಯ |
ತಥಾವಾಪ್ತಂ ಬ್ರಹ್ಮಣೋ ಮೇ ನರೇಂದ್ರ
ಮಹಜ್ಜ್ಞಾನಂ ಮೋಕ್ಷವಿದಾಂ ಪುರಾಣಮ್ ॥40॥
ನೀನು ಸಾಂಖ್ಯಯೋಗಗಳ ವಿಷಯವಾಗಿ ಪ್ರಶ್ನಿಸಿದಂತೆ ನಾನೂ ಚತುರ್ಮುಖ ಬ್ರಹ್ಮನನ್ನು ಪ್ರಶ್ನಿಸಿದೆನು. ನಾನು ನಿನಗೆ ಜ್ಞಾನೋಪದೇಶವನ್ನು ಮಾಡಿದಂತೆ ಹಿರಣ್ಯಗರ್ಭನು ನನಗೆ, ಮೋಕ್ಷಜ್ಞಾನಿಗಳಿಗೆ ಆಶ್ರಯವಾದ ಈ ಸಾಂಖ್ಯಜ್ಞಾನವನ್ನು ಉಪದೇಶಿಸಿದನು. ಅವನಿಂದ ಈ ಯಥಾರ್ಥ ಜ್ಞಾನವನ್ನು ಪಡೆದುಕೊಂಡಿರುತ್ತೇನೆ.
ಭೀಷ್ಮಃ
ಏತದುಕ್ತಂ ಪರಂ ಬ್ರಹ್ಮ ಯಸ್ಮಾನ್ನಾವರ್ತತೇ ಪುನಃ |
ಪಂಚವಿಂಶೋ ಮಹಾರಾಜ ಪರಮರ್ಷಿನಿದರ್ಶನಾತ್ ॥41॥
ಭೀಷ್ಮ ಯುಧಿಷ್ಠಿರನೇ, ಮಹರ್ಷಿಗಳಾದ ವಸಿಷ್ಠರು ಕರಾಲಜನಕನಿಗೆ ಉಪದೇಶಿಸಿದಂತೆ ಇಪ್ಪತ್ತೈದನೆಯ ತತ್ತ್ವವೆನಿಸಿದ ಬ್ರಹ್ಮತತ್ತ್ವವನ್ನು ನಿನಗೆ ಬೋಧಿಸಿದ್ದೇನೆ.
ಪುನರಾವೃತ್ತಿಮಾಪ್ನೋತಿ ಪರಂ ಜ್ಞಾನಮವಾಪ್ಯ ಚ |
ನಾವಬುಧ್ಯತಿ ತತ್ತ್ವೇನ ಬುಧ್ಯಮಾನೋಽಜರಾಮರಃ ॥42॥
ಈ ಪರಬ್ರಹ್ಮನ ಜ್ಞಾನವನ್ನು ಹೊಂದಿದವನು ಸಂಸಾರಕ್ಕೆ ಮರಳಿ ಬರುವುದಿಲ್ಲ. ಇಂತಹ ಪರಬ್ರಹ್ಮನ ಜ್ಞಾನವನ್ನು ಜ್ಞಾನಿಗಳು ಉಪದೇಶಿಸಿದಾಗಲೂ ಯಾವನು ಸರಿಯಾಗಿ ಅರ್ಥ ಮಾಡಿಕೊಳ್ಳುವುದಿಲ್ಲವೋ ಅವನು ಈ ಸಂಸಾರವನ್ನು ಕುರಿತು ಪುನಃ ಪುನಃ ಆಗಮಿಸುತ್ತಾನೆ.
ಏತನ್ನಿಃಶ್ರೇಯಸಕರಂ ಜ್ಞಾನಾನಾಂ ತೇ ಪರಂ ಮಯಾ |
ಕಥಿತಂ ತತ್ತ್ವತಸ್ತಾತ ಶ್ರುತ್ವಾ ದೇವರ್ಷಿತೋ ನೃಪ ॥43॥
ಯಾವಾತನು ಗುರುವಿನಿಂದ ಈ ಮಹಾಜ್ಞಾನವನ್ನು ಪಡೆದು, ಭಗವತ್ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾನೋ ಅವನು ಹುಟ್ಟು-ಸಾವುಗಳಿಂದ ಮುಕ್ತನಾಗುತ್ತಾನೆ. ಹೀಗೆ ಪರಮಶ್ರೇಯಸ್ಕರವಾದ ಬ್ರಹ್ಮಜ್ಞಾನವನ್ನು ನಾರದರಿಂದ ನಾನು ತಿಳಿದಿರುತ್ತೇನೆ. ನಾನು ತಿಳಿದಿರುವುದನ್ನೇ ನಿನಗೆ ಯಥಾವತ್ತಾಗಿ ಹೇಳಿದ್ದೇನೆ.
ಹಿರಣ್ಯಗರ್ಭಾದೃಷಿಣಾ ವಸಿಷ್ಠೇನ ಮಹಾತ್ಮನಾ |
ವಸಿಷ್ಠಾದೃಷಿಶಾರ್ದೂಲಾನ್ನಾರದೋಽವಾಪ್ತವಾನಿದಮ್ ॥44॥
ನಾರದಾದ್ ವಿದಿತಂ ಮಹ್ಯಮೇತದ್ ಬ್ರಹ್ಮ ಸನಾತನಮ್ |
ಮಾ ಶುಚಃ ಕೌರವೇಂದ್ರ ತ್ವಂ ಶ್ರುತ್ವೈತತ್ ಪರಮಂ ಪದಮ್ ॥45॥
ಮಹಾತ್ಮರಾದ ವಸಿಷ್ಠರು ಹಿರಣ್ಯಗರ್ಭನಿಂದ ಈ ಜ್ಞಾನವನ್ನು ಪಡೆದುಕೊಂಡರು. ಮಹರ್ಷಿಗಳಾದ ವಸಿಷ್ಠರಿಂದ ನಾರದರು ಪಡೆದುಕೊಂಡರು. ನಾರದರಿಂದ ಸನಾತನ ಬ್ರಹ್ಮಜ್ಞಾನವು ನನಗೆ ದೊರೆಯಿತು. ಈ ಬ್ರಹ್ಮಜ್ಞಾನವನ್ನು ಕೇಳಿದ ಬಳಿಕವೂ ನೀನು ದುಃಖಿಸಲು ಅವಕಾಶವಿರುವುದಿಲ್ಲ. ಪರಮಪದವನ್ನು ಸಾಧಿಸಿಕೊಡುವ ಸಾಮರ್ಥ್ಯವು ಈ ಬ್ರಹ್ಮಜ್ಞಾನಕ್ಕೆ ಇರುತ್ತದೆ.
ಯೇನ ಕ್ಷರಾಕ್ಷರೇ ವಿತ್ತೇ ನ ಭಯಂ ತಸ್ಯ ವಿದ್ಯತೇ |
ವಿದ್ಯತೇ ತು ಭಯಂ ತಸ್ಯ ಯೋ ನೈತದ್ ವೇತ್ತಿ ಪಾರ್ಥಿವ ॥46॥
ಕ್ಷರ ಮತ್ತು ಅಕ್ಷರಗಳ ತತ್ತ್ವವನ್ನು ಯಾವನು ತಿಳಿದಿರುತ್ತಾನೋ ಅವನಿಗೆ ಭಯವೆಂಬುದು ಇರುವುದಿಲ್ಲ. ಯಾವನು ಈ ತತ್ತ್ವಗಳನ್ನು ತಿಳಿದಿಲ್ಲವೋ ಅವನಿಗೆ ಭಯವು ತಪ್ಪಿದ್ದಲ್ಲ.
ಅವಿಜ್ಞಾನಾಚ್ಚ ಮೂಢಾತ್ಮಾ ಪುನಃ ಪುನರುಪದ್ರವನ್ |
ಪ್ರೇತ್ಯ ಜಾತಿಸಹಸ್ರಾಣಿ ಮರಣಾಂತಾನ್ಯುಪಾಶ್ನುತೇ ॥47॥
ಇಂತಹ ಶ್ರೇಷ್ಠವಾದ ತತ್ತ್ವವನ್ನು ಮೂಢಾತ್ಮನು ತಿಳಿಯದೆ ಪುನಃ ಪುನಃ ಈ ಸಂಸಾರದ ಉಪದ್ರವಗಳಲ್ಲಿ ಸಿಕ್ಕುತ್ತಲೇ ಇರುತ್ತಾನೆ. ಮರಣಕ್ಕೆ ಕಾರಣವಾದ ಸಾವಿರಾರು ಜನ್ಮಗಳನ್ನು ಪಡೆಯುತ್ತಾ ಕಷ್ಟಗಳನ್ನು ಅನುಭವಿಸುತ್ತಿರುತ್ತಾನೆ.
ದೇವಲೋಕಂ ತಥಾ ತಿರ್ಯಙ್ಮಾನುಷ್ಯಮಪಿ ಚಾಶ್ನುತೇ |
ಯದಿ ಶುಧ್ಯತಿ ಕಾಲೇನ ತಸ್ಮಾದಜ್ಞಾನಸಾಗರಾತ್ ॥48॥
ದೇವಯೋನಿಗಳಲ್ಲಿ, ತಿರ್ಯಗ್ಯೋನಿಗಳಲ್ಲಿ, ಮನುಷ್ಯಯೋನಿಗಳಲ್ಲಿ ಪುನಃ ಪುನಃ ಹುಟ್ಟುತ್ತಲೇ ಇರುತ್ತಾನೆ. ಕಾಲಿಕವಾಗಿ ಈ ಪರಮಾತ್ಮನ ಜ್ಞಾನದಿಂದ ಶುದ್ಧನಾದರೆ ಅಜ್ಞಾನವೆಂಬ ಸಂಸಾರ ಸಾಗರದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಅಜ್ಞಾನಸಾಗರೋ ಘೋರೋ ಹ್ಯವ್ಯಕ್ತೋಽಗಾಧ ಉಚ್ಯತೇ |
ಅಹನ್ಯಹನಿ ಮಜ್ಜಂತಿ ಯತ್ರ ಭೂತಾನಿ ಭಾರತ ॥49॥
ಅಜ್ಞಾನವೆಂಬ ಸಾಗರವು ಘೋರವೂ, ಅವ್ಯಕ್ತವೂ, ಅಗಾಧವೂ ಆಗಿದೆ. ಈ ಅಜ್ಞಾನ ಸಾಗರದಲ್ಲಿ ಪ್ರತಿದಿನವೂ ಪ್ರಾಣಿಗಳು ಮುಳುಗುತ್ತಲೇ ಇವೆ.
ಯಸ್ಮಾದಗಾಧಾದವ್ಯಕ್ತಾದುತ್ತೀರ್ಣಸ್ತ್ವಂ ಸನಾತನಾತ್ |

ತಸ್ಮಾತ್ತ್ವಂ ವಿರಜಾಶ್ಚೈವ ವಿತಮಸ್ಕಶ್ಚ ಪಾರ್ಥಿವ ॥50॥
ಸನಾತನವಾದ, ಅಗಾಧವಾದ, ಅವ್ಯಕ್ತವಾದ ಅಜ್ಞಾನ ಸಾಗರದಿಂದ ನೀನು ಉತ್ತೀರ್ಣನಾಗಿರುವಿ. ಆದ್ದರಿಂದಲೇ ರಜೋಗುಣ, ತಮೋಗುಣಗಳಿಂದ ರಹಿತನೂ ಆಗಿರುವಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೊಂದನೆಯ ಅಧ್ಯಾಯ
ಜನಕ ವಂಶೀಯನಾದ ವಸುಮಂತನಿಗೆ ಭಾರ್ಗವಮುನಿ
ಮಾಡಿದ ಧರ್ಮೋಪದೇಶ.
ಭೀಷ್ಮಃ
ಮೃಗಯಾಂ ವಿಚರನ್ ಕಶ್ಚಿದ್ ವಿಜನೇ ಜನಕಾತ್ಮಜಃ |
ವನೇ ದದರ್ಶ ವಿಪ್ರೇಂದ್ರಮೃಷಿಂ ವಂಶಧರಂ ಭೃಗೋಃ ॥1॥
ಭೀಷ್ಮ ಯುಧಿಷ್ಠಿರನೇ, ಹಿಂದೊಂದು ಬಾರಿ ಜನಕ ವಂಶೀಯನಾದ ಒಬ್ಬ ರಾಜಕುಮಾರನು ಬೇಟೆಗಾಗಿ ನಿರ್ಜನವಾದ ಅರಣ್ಯದಲ್ಲಿ ಸಂಚರಿಸುತ್ತಾ ಭೃಗು ವಂಶೋತ್ಪನ್ನನಾದ ಒಬ್ಬ ಶ್ರೇಷ್ಠ ಬ್ರಾಹ್ಮಣನನ್ನು ನೋಡಿದನು.
ತಮಾಸೀನಮುಪಾಸೀನಃ ಪ್ರಣಮ್ಯ ಶಿರಸಾ ಮುನಿಮ್ |
ಪಶ್ಚಾದನುಮತಸ್ತೇನ ಪಪ್ರಚ್ಛ ವಸುಮಾನಿದಮ್ ॥2॥
ಋಷಿಯ ಬಳಿ ಸಾಗಿದ ವಸುಮಂತನು ಆಸನದಲ್ಲಿ ಕುಳಿತಿರುವ ಮುನಿಗೆ ಶಿರಬಾಗಿ ನಮಸ್ಕರಿಸಿ ಅವನ ಅನುಮತಿಯನ್ನು ಪಡೆದು ಹೀಗೆ ಪ್ರಶ್ನಿಸಿದನು.
ಭಗವನ್ ಕಿಮಿದಂ ಶ್ರೇಯಃ ಪ್ರೇತ್ಯ ವಾಪೀಹ ವಾ ಭವೇತ್ |
ಪುರುಷಸ್ಯಾಧ್ರುವೇ ದೇಹೇ ಕಾಮಸ್ಯ ವಶವರ್ತಿನಃ ॥3॥
ಪೂಜ್ಯರೇ, ಕ್ಷಣಿಕವಾದ ಈ ಶರೀರದಲ್ಲಿ ಕಾಮವಶನಾದ ಈ ಮನುಷ್ಯನಿಗೆ ಇಹ-ಪರಲೋಕಗಳಲ್ಲಿ ಯಾವುದರಿಂದ ಶ್ರೇಯಸ್ಸಾಗುತ್ತದೆ?
ಸತ್ಕೃತ್ಯ ಪರಿಪೃಷ್ಟಃ ಸನ್ ಸುಮಹಾತ್ಮಾ ಮಹಾತಪಾಃ |
ನಿಜಗಾದ ತತಸ್ತಸ್ಮೈ ಶ್ರೇಯಸ್ಕರಮಿದಂ ವಚಃ ॥4॥
ವಸುಮಂತನು ಮುನಿಯನ್ನು ಸತ್ಕರಿಸಿ ಹೀಗೆ ಪ್ರಶ್ನಿಸಿದ ಬಳಿಕ ಸಂತುಷ್ಟನಾದ, ತಪಸ್ವಿಯಾದ, ಮಹಾತ್ಮನಾದ, ಆ ಮುನಿಯು ವಸುಮಂತನಿಗೆ ಶ್ರೇಯಸ್ಕರವಾದ ಈ ಮಾತುಗಳನ್ನು ಆಡಿದನು.
ಮನಸೋಽಪ್ರತಿಕೂಲಾನಿ ಪ್ರೇತ್ಯ ಚೇಹ ಚ ವಾಂಛಸಿ |
ಭೂತಾನಾಂ ಪ್ರತಿಕೂಲೇಭ್ಯೋ ನಿವರ್ತಸ್ವ ಯತೇಂದ್ರಿಯಃ ॥5॥
ರಾಜನೇ, ನೀನು ಇಹ-ಪರಲೋಕಗಳಲ್ಲಿ ನಿನ್ನ ಮನೋಭಿಲಾಷೆಗೆ ತಕ್ಕಂತೆ ಪದಾರ್ಥಗಳನ್ನು ಪಡೆಯುವ ಆಸೆಯುಳ್ಳವನಾಗಿದ್ದಲ್ಲಿ ಇಂದ್ರಿಯಗಳನ್ನು ನಿಯಂತ್ರಿಸಿಕೊಂಡು, ಪ್ರಾಣಿಗಳಿಗೆ ಪ್ರತಿಕೂಲವಾಗುವ ಕರ್ಮಗಳಿಂದ ನಿವೃತ್ತನಾಗು.
ಧರ್ಮಃ ಸತಾಂ ಹಿತಃ ಪುಂಸಾಂ ಧರ್ಮಶ್ಚೈವಾಶ್ರಯಃ ಸತಾಮ್ |
ಧರ್ಮಾಲ್ಲೋಕಾಸ್ತ್ರಯಸ್ತಾತ ಪ್ರವೃತ್ತಾಃ ಸಚರಾಚರಾಃ ॥6॥
ಸತ್ಪುರುಷರಿಗೆ ಹಿತವನ್ನುಂಟು ಮಾಡುವುದು ಧರ್ಮವೇ ಆಗಿದೆ. ಧರ್ಮವೇ ಸಜ್ಜನರಿಗೆ ಆಶ್ರಯವು. ಚರಾಚರ ಪ್ರಾಣಿಗಳಿಂದ ಕೂಡಿದ ಸಮಸ್ತ ಜಗತ್ತು ಧರ್ಮದಿಂದಲೇ ನಡೆಯುತ್ತಿದೆ.
ಸ್ವಾದುಕಾಮುಕ ಕಾಮಾನಾಂ ವೈತೃಷ್ಣ್ಯಂ ಕಿಂ ನ ಗಚ್ಛಸಿ |
ಮಧು ಪಶ್ಯಸಿ ದುರ್ಬುದ್ಧೇ ಪ್ರಪಾತಂ ನಾನುಪಶ್ಯಸಿ ॥7॥
ರುಚಿಕರ ವಾದ ಭೋಗಗಳನ್ನು ಬಯಸುವವನೇ, ದುರ್ಬುದ್ಧಿಯುಳ್ಳವನೇ, ನಿನ್ನ ಕಾಮ ಪಿಪಾಸೆಯು ಇನ್ನೂ ಏಕೆ ಶಾಂತವಾಗಿಲ್ಲ? ನೀನು ವೃಕ್ಷದ ಮೇಲಿರುವ ಜೇನಿನ ತುಪ್ಪವನ್ನು ಮಾತ್ರವೇ ನೋಡುತ್ತಿರುವೆ. ಕೆಳಗಿರುವ ಪ್ರಪಾತವನ್ನು ನೋಡುತ್ತಿಲ್ಲ.
ಯಥಾ ಜ್ಞಾನೇ ಪರಿಚಯಃ ಕರ್ತವ್ಯಸ್ತತ್ಫಲಾರ್ಥಿನಾ |
ತಥಾ ಧರ್ಮೇ ಪರಿಚಯಃ ಕರ್ತವ್ಯಸ್ತತ್ಫಲಾರ್ಥಿನಾ ॥8॥
ಜ್ಞಾನದ ಫಲವನ್ನು ಬಯಸುವವನಿಗೆ ಜ್ಞಾನದ ಪರಿಚಯವು ಆವಶ್ಯಕ. ಇದರಂತೆ ಧರ್ಮದ ಫಲವನ್ನು ಬಯಸುವವನಿಗೆ ಧರ್ಮದ ಪರಿಚಯವು ಕರ್ತವ್ಯವೆನಿಸಿದೆ.
ಅಸತಾ ಧರ್ಮಕಾಮೇನ ವಿಶುದ್ಧಂ ಕರ್ಮ ದುಷ್ಕರಮ್ |
ಸತಾ ತು ಧರ್ಮಕಾಮೇನ ಸುಕರಂ ಕರ್ಮ ದುಷ್ಕರಮ್ ॥9॥
ದುಷ್ಟನು ಧರ್ಮಾಪೇಕ್ಷೆಯುಳ್ಳವನಾಗಿದ್ದರೂ ವಿಶುದ್ಧವಾದ ಕರ್ಮಾಚರಣೆಯು ಅವನಿಂದ ಮಾಡಲಾಗದು. ಧರ್ಮವನ್ನು ಬಯಸುವ ಸಜ್ಜನನು ಕಠಿಣವಾದ ಸತ್ಕರ್ಮಗಳನ್ನು ಸುಲಭವಾಗಿಯೇ ಆಚರಿಸುತ್ತಾನೆ.
ವನೇ ಗ್ರಾಮ್ಯಸುಖಾಚಾರೋ ಯಥಾ ಗ್ರಾಮ್ಯಸ್ತಥೈವ ಸಃ |
ಗ್ರಾಮೇ ವನಸುಖಾಚಾರೋ ಯಥಾ ವನಚರಸ್ತಥಾ ॥10॥
ಅರಣ್ಯದಲ್ಲಿದ್ದರೂ ಗ್ರಾಮ್ಯಸುಖಗಳನ್ನು ಉಪಭೋಗಿಸಬೇಕೆಂಬ ಬಯಕೆಯುಳ್ಳವನಾಗಿದ್ದರೆ ಅವನು ಗ್ರಾಮವಾಸಿಯೇ ಸರಿ. ಗ್ರಾಮವಾಸಿಯಾಗಿದ್ದರೂ ವನವಾಸಿಗಳಂತೆ ಆಚರಣಶೀಲನಾಗಿದ್ದಲ್ಲಿ ಅವನು ವನವಾಸಿಯೇ ಸರಿ.

ಮನೋವಾಕ್ಕರ್ಮಕೇ ಧರ್ಮೇ ಕುರು ಶ್ರದ್ಧಾಂ ಸಮಾಹಿತಃ |
ನಿವೃತ್ತೌ ವಾ ಪ್ರವತ್ತೌ ವಾ ಸಂಪ್ರಧಾರ್ಯ ಗುಣಾಗುಣಾನ್ ॥11॥
ನೀನು ಏಕಾಗ್ರತೆಯಿಂದ ಮನಸ್ಸು, ಮಾತು, ಕೃತಿಗಳ ಮೂಲಕ ಧರ್ಮದಲ್ಲಿ ಶ್ರದ್ಧೆಯನ್ನು ಇಡು. ಪ್ರವೃತ್ತಿ-ನಿವೃತ್ತಿ ಕರ್ಮಗಳಲ್ಲಿರುವ ಗುಣ-ದೋಷಗಳನ್ನು ಚೆನ್ನಾಗಿ ಪರಿಶೀಲಿಸು.
ನಿತ್ಯಂ ಚ ಬಹು ದಾತವ್ಯಂ ಸಾಧುಭ್ಯಶ್ಚಾನಸೂಯತಾ |
ಪ್ರಾರ್ಥಿತಂ ವ್ರತಶೌಚಾಭ್ಯಾಂ ಸತ್ಕೃತಂ ದೇಶಕಾಲಯೋಃ ॥12॥
ಪ್ರತಿದಿನವೂ ವ್ರತ-ಶೌಚಾಚಾರಗಳನ್ನು ಪರಿಪಾಲಿಸುತ್ತಾ, ಉತ್ತಮವಾದ ದೇಶ- ಕಾಲಗಳಲ್ಲಿ ಸಜ್ಜನರು ಬಯಸಿದ ಬಯಕೆಗಳನ್ನು ಅಸೂಯಾರಹಿತನಾಗಿ ನೀಡುತ್ತಿರಬೇಕು.
ಶುಭೇನ ವಿಧಿನಾ ಲಬ್ಧಮರ್ಹಾಯ ಪ್ರತಿಪಾದಯೇತ್ |
ಕ್ರೋಧಮುತ್ಸೃಜ್ಯ ದತ್ತತ್ವ ಚ ನಾನುತಪ್ಯೇನ್ನ ಕೀರ್ತಯೇತ್ ॥13॥
ಸತ್ಕರ್ಮದಿಂದ ಲಭಿಸಿದ ಧನವನ್ನು ಸತ್ಪಾತ್ರರಿಗೆ ದಾನ ಮಾಡಬೇಕು. ಕ್ರೋಧವನ್ನು ತ್ಯಜಿಸಿ ದಾನ ಮಾಡಬೇಕು. ದಾನಮಾಡಿದ ಬಳಿಕ ಪಶ್ಚಾತ್ತಾಪ ಪಡಬಾರದು. ದಾನ ಮಾಡಿದ್ದನ್ನೂ ಹೇಳಿಕೊಳ್ಳಲೂ ಬಾರದು.
ಅನೃಶಂಸಃ ಶುಚಿರ್ದಾಂತಃ ಸತ್ಯವಾಗಾರ್ಜವೇ ಸ್ಥಿತಃ |
ಯೋನಿಕರ್ಮವಿಶುದ್ಧಶ್ಚ ಪಾತ್ರಂ ಸ್ಯಾದ್ ವೇದವಿದ್ ದ್ವಿಜಃ ॥14॥
ದಯಾಳುವೂ, ಪವಿತ್ರನೂ, ಜಿತೇಂದ್ರಿಯನೂ, ಸತ್ಯನಿಷ್ಠನೂ, ಸರಳನೂ, ಜನ್ಮದಿಂದ, ಕರ್ಮದಿಂದ ಪರಿಶುದ್ಧನಾದವನೂ, ವೇದಜ್ಞನೂ ಆದ ಬ್ರಾಹ್ಮಣನು ದಾನಕ್ಕೆ ಯೋಗ್ಯನಾಗಿರುತ್ತಾನೆ.
ಸತ್ಕೃತಾ ಚೈಕಪತ್ನೀ ಚ ಜಾತ್ಯಾ ಯೋನಿರಿಹೇಷ್ಯತೇ |
ಋಗ್ಯಜುಃಸಾಮಗೋ ವಿದ್ವಾನ್ ಷಟ್ಕರ್ಮಾ ಪಾತ್ರಮುಚ್ಯತೇ ॥15॥
ಸತ್ಪುರುಷರಿಂದ ಸತ್ಕೃತಳಾದ, ಏಕಪತ್ನಿಯಾದ ಪತಿವ್ರತೆಯಾದ ಸ್ತ್ರೀಯು ಪುತ್ರೋತ್ಪತ್ತಿಗೆ ಒಳ್ಳೆಯ ಸ್ಥಾನಳು ಎಂದು ಹೇಳುತ್ತಾರೆ. ಅಂಥವಳಿಂದ ಜನ್ಮವನ್ನು ಪಡೆದವಳು ಶುದ್ಧಿಯನ್ನು ಹೊಂದಿರುತ್ತಾನೆ. ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಮತ್ತು ಬ್ರಾಹ್ಮಣರಿಗೆ ವಿಹಿತವಾದ ಷಟ್ಕರ್ಮಗಳಲ್ಲಿ ನಿರತನಾದ ಬ್ರಾಹ್ಮಣನು ದಾನಕ್ಕೆ ಅರ್ಹನೆಂದು ಶಾಸ್ತ್ರ ಸಾರಿದೆ.
ಸ ಏವ ಧರ್ಮಃ ಸೋಽಧರ್ಮಸ್ತಂ ತಂ ಪ್ರತಿನರಂ ಭವೇತ್ |
ಪಾತ್ರಕರ್ಮವಿಶೇಷೇಣ ದೇಶಕಾಲಾವವೇಕ್ಷ್ಯ ಚ ॥16॥
ದೇಶ-ಕಾಲ-ಪಾತ್ರ-ಕರ್ಮವಿಶೇಷ ಇವುಗಳನ್ನು ವಿಚಾರ ಮಾಡಿದಾಗ ಒಂದೇ ಧರ್ಮವೇ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಧರ್ಮವೂ ಆಗುತ್ತದೆ, ಅಧರ್ಮವೂ ಆಗುತ್ತದೆ. ಯೋಗ್ಯನಲ್ಲಿ ಮಾಡಿದಾಗ ಧರ್ಮವೂ, ಅಯೋಗ್ಯನಲ್ಲಿ ಆಚರಿಸಿದಾಗ ಅಧರ್ಮವೂ ಆಗುತ್ತದೆ.
ಲೀಲಯಾಲ್ಪಂ ಯಥಾ ಗಾತ್ರಾತ್ ಪ್ರಮಜ್ಯಾದ್ ರಜಸಃ ಪುಮಾನ್ |
ಬಹುಯತ್ನೇನ ಮಹತಾ ಪಾಪನಿರ್ಹರಣಂ ತಥಾ ॥17॥
ಮನುಷ್ಯನು ಮೈಮೇಲೆ ಕುಳಿತಿರುವ ಧೂಳನ್ನು ಅನಾಯಾಸದಿಂದ ಕೊಡವಿಕೊಳ್ಳುತ್ತಾನೆ. ಆದರೆ ಕೆಸರಂಟಿಕೊಂಡಾಗ ಸ್ನಾನದಿಂದಲೇ ಅದನ್ನು ತೊಳೆದುಕೊಳ್ಳಬೇಕಾಗುತ್ತದೆ. ಇದರಂತೆ ಸ್ವಲ್ಪ ಪಾಪವು ಅಲ್ಪ ಪ್ರಯತ್ನದಿಂದ ಪರಿಹಾರವಾಗಬಹುದು. ಬಲಿಷ್ಠವಾದ ಪಾಪಗಳಿದ್ದರೆ ಪ್ರಾಯಶ್ಚಿತ್ತವೇ ಪಾಪಕ್ಕೆ ಪರಿಹಾರವೆನಿಸಿದೆ.
ವಿರಕ್ತಸ್ಯ ಯಥಾ ಸಮ್ಯಗ್ ಘೃತಂ ಭವತಿ ಭೇಷಜಮ್ |
ತಥಾ ನಿರ್ಹೃತದೋಷಸ್ಯ ಪ್ರೇತ್ಯಧರ್ಮಃ ಸುಖಾವಹಃ ॥18॥
ಅನ್ನದಲ್ಲಿ ಆಸಕ್ತಿಯನ್ನು ಹೊಂದದವನಿಗೆ ತುಪ್ಪವೇ ಹೇಗೆ ಔಷಧಿಆಗಿರುತ್ತದೆಯೋ ಹಾಗೆ ಸಮಸ್ತ ದೋಷಗಳಿಂದ ವಿಮುಕ್ತನಾದವನಿಗೆ ಧರ್ಮವೇ ಪರಲೋಕದಲ್ಲಿ ಸುಖವನ್ನುಂಟು ಮಾಡುತ್ತದೆ.
ಮಾನಸಂ ಸರ್ವಭೂತೇಷು ವರ್ತತೇ ವೈ ಶುಭಾಶುಭೇ |
ಅಶುಭೇಭ್ಯಃ ಸಮಾಕ್ಷಿಪ್ಯ ಶುಭೇಷ್ವೇವಾವತಾರಯೇತ್ ॥19॥
ಸಮಸ್ತ ಪ್ರಾಣಿಗಳ ಮನಸ್ಸಿನಲ್ಲಿಯೂ ಒಳ್ಳೆಯ ಮತ್ತು ಕೆಟ್ಟ ವಿಚಾರಗಳು ಇದ್ದೇ ಇರುತ್ತವೆ. ವಿವೇಕಿಯಾದವನು ಕೆಟ್ಟ ವಿಚಾರಗಳನ್ನು ಮನಸ್ಸಿನಿಂದ ಹೊಡೆದೋಡಿಸಿ ಸದ್ವಿಚಾರಗಳಲ್ಲಿಯೇ ಆಸಕ್ತನಾಗಿರಬೇಕು.
ಸರ್ವಂ ಸರ್ವೇಣ ಸರ್ವತ್ರ ಕ್ರಿಯಮಾಣಂ ಚ ಪೂಜಯ |
ಸ್ವಧರ್ಮೇ ಯತ್ರ ರಾಗಸ್ತೇ ಕಾಮಂ ಧರ್ಮೋ ವಿಧೀಯತಾಮ್ ॥20॥
ಎಲ್ಲ ವರ್ಣೀಯರಿಂದ ಆಶ್ರಮಧರ್ಮಗಳಿಗನುಗುಣವಾಗಿ ಮಾಡುವ ಧರ್ಮಗಳನ್ನು, ಆಚಾರಗಳನ್ನು ನೀನು ಗೌರವಿಸು. ನಿನ್ನ ಧರ್ಮದಲ್ಲಿ ನಿನಗೆ ಆಸಕ್ತಿ ಉಂಟಾಗಲಿ. ಯಥೇಷ್ಟವಾಗಿ ಸ್ವಧರ್ಮಗಳನ್ನು ಆಚರಿಸುವವನಾಗು.
ಅಧೃತಾತ್ಮನ್ ಧೃತೌ ತಿಷ್ಠ ದುರ್ಬುದ್ಧೇ ಬುದ್ಧಿಮಾನ್ ಭವ |
ಅಪ್ರಶಾಂತ ಪ್ರಶಾಮ್ಯ ತ್ವಮಪ್ರಾಜ್ಞ ಪ್ರಾಜ್ಞವಚ್ಚರ ॥21॥
ಅಧೀರನಾದ ವಸುಮಂತನೇ, ಧೈರ್ಯವನ್ನು ಆಶ್ರಯಿಸು. ದುರ್ಬುದ್ಧಿಯೇ, ಬುದ್ಧಿವಂತನಾಗು. ಅಶಾಂತನೇ, ಶಾಂತಿಯನ್ನು ಹೊಂದು. ನೀನು ಮೂರ್ಖನಂತೆ ವ್ಯವಹರಿಸುತ್ತಿರುವಿ. ಮುಂದೆ ಪ್ರಾಜ್ಞನಂತೆ ವ್ಯವಹರಿಸು.
ತೇಜಸಾ ಶಕ್ಯತೇ ಪ್ರಾಪ್ತುಮುಪಾಯಸಹಚಾರಿಣಾ |
ಇಹ ಚ ಪ್ರೇತ್ಯ ಚ ಶ್ರೇಯಸ್ತಸ್ಯ ಮೂಲಂ ಧೃತಿಃ ಪರಾ ॥22॥
ರಾಜರ್ಷಿರಧೃತಿಃ ಸ್ವರ್ಗಾತ್ ಪತಿತೋ ಹಿ ಮಹಾಭಿಷಃ |
ಯಯಾತಿಃ ಕ್ಷೀಣಪುಣ್ಯಶ್ಚ ಧೃತ್ಯಾ ಲೋಕಾನವಾಪ್ತವಾನ್ ॥23॥

ಸತ್ಪುರುಷರ ಸಂಗವನ್ನು ಮಾಡುವ ವ್ಯಕ್ತಿ ಇಹ-ಪರಲೋಕಗಳಲ್ಲಿ ಶ್ರೇಯಸ್ಸನ್ನು ಹೊಂದುವ ಉಪಾಯವನ್ನು ಧೈರ್ಯದಿಂದ ಹೊಂದುತ್ತಾನೆ. ಧೈರ್ಯವೇ ಶ್ರೇಯಸ್ಸಿಗೆ ಮೂಲಸಾಧನವಾಗಿದೆ. ರಾಜರ್ಷಿಯಾದ ಮಹಾಭಿಷಕ್ ಎಂಬ ರಾಜನು ಅಧೈರ್ಯದಿಂದಲೇ ಸ್ವರ್ಗದಿಂದ ಚ್ಯುತನಾದನು. ಯಯಾತಿಯು ಪುಣ್ಯವನ್ನು ನಾಶಪಡಿಸಿಕೊಂಡು ಸ್ವರ್ಗದಿಂದ ಬೀಳುವಾಗಲೂ ಧೈರ್ಯವನ್ನು ಆಶ್ರಯಿಸಿ ಪುನಃ ಉತ್ತಮ ಲೋಕವನ್ನು ಹೊಂದಿದನು.

ತಪಸ್ವಿನಾಂ ಧರ್ಮವತಾಂ ವಿದುಷಾಂ ಚೋಪಸೇವನಾತ್ |
ಪ್ರಾಪ್ಸ್ಯಸೇ ವಿಪುಲಾಂ ಬುದ್ಧಿಂ ತಥಾ ಶ್ರೇಯೋಽಭಿಪತ್ಸ್ಯಸೇ ॥24॥

ವಸುಮಂತನೇ, ವಿದ್ವಾಂಸರಾದ, ಧರ್ಮವಿದರಾದ ತಪಸ್ವಿಗಳನ್ನು ಸೇವಿಸುವುದರಿಂದ ವಿಶಾಲವಾದ ಬುದ್ಧಿಯನ್ನು ಹೊಂದುತ್ತಿ. ಹಾಗೆ ಶ್ರೇಯಸ್ಸನ್ನು ಪಡೆದುಕೊಳ್ಳುತ್ತಿ.

ಭೀಷ್ಮಃ

ಸ ತು ಸ್ವಭಾವಸಂಪನ್ನಸ್ತಚ್ಛ್ರುತ್ವಾ ಮುನಿಭಾಷಿತಮ್ |
ವಿನಿವರ್ತ್ಯ ಮನಃ ಕಾಮಾದ್ಧರ್ಮೇ ಬುದ್ಧಿಂ ಚಕಾರ ಹ ॥25॥

ಭೀಷ್ಮ ಯುಧಿಷ್ಠಿರನೇ, ಉತ್ತಮ ಸ್ವಭಾವದಿಂದ ಕೂಡಿದ್ದ ವಸುಮಂತನು ಭಾರ್ಗವ ಮುನಿಯ ಮಾತುಗಳನ್ನು ಕೇಳಿಸಿಕೊಂಡು, ಕಾಮೋಪಭೋಗಗಳಿಂದ ವಿರಕ್ತನಾಗಿ ಧರ್ಮದಲ್ಲಿಯೇ ಸ್ಥಿರವಾದ ಬುದ್ಧಿಯನ್ನು ಹೊಂದಿದನು.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕಚತ್ವಾರಿಂಶೋತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.

* * * * *

ನೂರ ನಲವತ್ತೆರಡನೆಯ ಅಧ್ಯಾಯ

ಯಾಜ್ಞವಲ್ಕ್ಯರು ಜನಕರಾಜನಿಗೆ ಉಪದೇಶಿಸಿದುದು.

ಯುಧಿಷ್ಠಿರಃ

ಧರ್ಮಾಧರ್ಮವಿಮುಕ್ತಂ ಯದ್ ವಿಮುಕ್ತಂ ಸರ್ವಸಂಶ್ರಯಾತ್ |
ಜನ್ಮಮೃತ್ಯುವಿಮುಕ್ತಂ ಚ ವಿಮುಕ್ತಂ ಪುಣ್ಯಪಾಪಯೋಃ ॥1॥
ಯಚ್ಛಿವಂ ನಿತ್ಯಮಭಯಂ ನಿತ್ಯಂ ಚಾಕ್ಷರಮವ್ಯಯಮ್ |
ಶುಚಿ ನಿತ್ಯಮನಾಯಾಸಂ ತದ್ ಭವಾನ್ ವಕ್ತುಮರ್ಹತಿ ॥2॥

ಯುಧಿಷ್ಠಿರ ಪಿತಾಮಹನೇ, ಯಾವುದು ಧರ್ಮಾಧರ್ಮಗಳಿಂದ ವಿಮುಕ್ತವಾಗಿದೆಯೋ, ಸಕಲ ವಿಧವಾದ ಆಶ್ರಯಗಳಿಂದಲೂ ದೂರವಾಗಿದೆಯೋ, ಪುಣ್ಯ-ಪಾಪಗಳಿಂದ, ಹುಟ್ಟು-ಸಾವುಗಳಿಂದ ಬಿಡುಗಡೆಯನ್ನು ಹೊಂದಿದೆಯೋ, ಕಲ್ಯಾಣಮಯವೂ, ನಿರ್ಭಯವೂ, ಅಕ್ಷರವೂ, ನಿತ್ಯವೂ, ಪವಿತ್ರವೂ, ಕ್ಲೇಶರಹಿತವೂ ಆಗಿದೆಯೋ ಅಂತಹ ಪರತತ್ತ್ವವನ್ನು ಉಪದೇಶಿಸು.

ಭೀಷ್ಮಃ

ಅತ್ರ ತೇ ವರ್ತಯಿಷ್ಯೇಽಹಮಿತಿಹಾಸಂ ಪುರಾತನಮ್ |
ಯಾಜ್ಞವಲ್ಕ್ಯಸ್ಯ ಸಂವಾದಂ ಜನಕಸ್ಯ ಚ ಭಾರತ ॥3॥

ಭೀಷ್ಮ ಯುಧಿಷ್ಠಿರನೆ, ಈ ವಿಷಯದಲ್ಲಿ ಜನಕ ಮತ್ತು ಯಾಜ್ಞವಲ್ಕ್ಯರಿಗೆ ನಡೆದ ಸಂವಾದ ರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತೇನೆ.

ಯಾಜ್ಞವಲ್ಕ್ಯಮೃಷಿಶ್ರೇಷ್ಠಂ ದೈವರಾತಿರ್ಮಹಾಯಶಾಃ |
ಪಪ್ರಚ್ಛ ಜನಕೋ ರಾಜಾ ಪ್ರಶ್ನಂ ಪ್ರಶ್ನಂವಿದಾಂ ವರಃ ॥4॥

ಮಹಾಯಶೋವಂತನಾದ, ದೇವರಾತರ ಮಗನಾದ ಜನಕನು ರಹಸ್ಯಗಳನ್ನು ತಿಳಿದವರಲ್ಲಿ ಶ್ರೇಷ್ಠರಾದ ಯಾಜ್ಞವಲ್ಕ್ಯರಲ್ಲಿ ಪ್ರಶ್ನಿಸಿದನು.

ಕತೀಂದ್ರಿಯಾಣಿ ವಿಪ್ರರ್ಷೇ ಕತಿ ಪ್ರಕೃತಯಃ ಸ್ಮೃತಾಃ |
ಕಿಮವ್ಯಕ್ತಂ ಪರಂ ಬ್ರಹ್ಮ ತಸ್ಮಾಚ್ಚ ಪರತಸ್ತು ಕಿಮ್ ॥5॥

ವಿಪ್ರಶ್ರೇಷ್ಠರೇ, ಇಂದ್ರಿಯಗಳು ಎಷ್ಟು? ಪ್ರಕೃತಿಯಲ್ಲಿ ಎಷ್ಟು ಭೇದಗಳಿವೆ? ಅವ್ಯಕ್ತವೆನಿಸಿದ ಪರಬ್ರಹ್ಮನ ಸ್ವರೂಪವೇನು? ಅವನಿಗಿಂತ ಮಿಗಿಲಾದುದು ಯಾವುದು?

ಪ್ರಭವಂ ಚಾಪ್ಯಯಂ ಚೈವ ಕಾಲಸಂಖ್ಯಾಂ ತಥೈವ ಚ |
ವಕ್ತುಮರ್ಹಸಿ ವಿಪ್ರೇಂದ್ರ ತ್ವದನುಗ್ರಹಕಾಂಕ್ಷಿಣಃ ॥6॥

ಸೃಷ್ಟಿ ಮತ್ತು ಪ್ರಳಯಗಳ ಸ್ವರೂಪವೇನು? ಕಾಲದ ಗಣನೆಯು ಎಷ್ಟು? ನಿಮ್ಮ ಅನುಗ್ರಹವನ್ನು ಅಪೇಕ್ಷಿಸುವ ನನಗೆ ಇವೆಲ್ಲವನ್ನೂ ತಿಳಿಸಿರಿ.

ಅಜ್ಞಾನಾತ್ ಪರಿಪೃಚ್ಛಾಮಿ ತ್ವಂ ಹಿ ಜ್ಞಾನಮಯೋ ನಿಧಿಃ |
ತದಹಂ ಶ್ರೋತುಮಿಚ್ಛಾಮಿ ಸರ್ವಮೇತದಸಂಶಯಮ್ ॥7॥

ನನ್ನಲ್ಲಿ ಅಜ್ಞಾನ ಇರುವುದರಿಂದ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ನೀವು ಜ್ಞಾನ ಸ್ವರೂಪರಾಗಿದ್ದೀರಿ. ಈ ವಿಷಯಗಳನ್ನು ಸಂಶಯವಿಲ್ಲದಂತೆ ನಿಮ್ಮಿಂದ ತಿಳಿಯಬಯಸುತ್ತೇನೆ.

ಯಾಜ್ಞವಲ್ಕ್ಯಃ

ಶ್ರೂಯತಾಮವನೀಪಾಲ ಯದೇತದನುಪೃಚ್ಛಸಿ |

ಯೋಗಾನಾಂ ಪರಮಂ ಜ್ಞಾನಂ ಸಾಂಖ್ಯಾನಾಂ ಚ ವಿಶೇಷತಃ ॥8॥
ಯಾಜ್ಞವಲ್ಕ್ಯ ಜನಕರಾಜನೇ, ನೀನು ಕೇಳಿದ ಪ್ರಶ್ನೆಗಳು ವಿಶೇಷವಾಗಿ ಸಾಂಖ್ಯಯೋಗದ ಪರಮಜ್ಞಾನವೆನಿಸಿವೆ.
ನ ತವಾವಿದಿತಂ ಕಿಂಚಿನ್ಮಾಂ ತು ಜಿಜ್ಞಾಸತೇ ಭವಾನ್ |
ಪೃಷ್ಟೇನ ಚಾಪಿ ವಕ್ತವ್ಯಮೇಷ ಧರ್ಮಃ ಸನಾತನಃ ॥9॥
ನೀನು ತಿಳಿಯದ ವಿಷಯಗಳೇ ಇಲ್ಲ. ಆದರೂ ನನ್ನಿಂದ ತಿಳಿಯಬೇಕೆಂದು ಬಯಸುತ್ತಿರುವಿ. ಶ್ರದ್ಧೆಯಿಂದ ಯಾರು ಪ್ರಶ್ನಿಸಿದರೂ ಯೋಗ್ಯ ಉತ್ತರವನ್ನು ಹೇಳಬೇಕೆಂಬುದು ಸನಾತನ ಧರ್ಮವಾಗಿದೆ.
ಅಷ್ಟೌ ಪ್ರಕೃತಯಃ ಪ್ರೋಕ್ತಾ ವಿಕಾರಾಶ್ಚಾಪಿ ಷೋಡಶ |
ಅಥ ಸಪ್ತ ತು ವ್ಯಕ್ತಾನಿ ಪ್ರಾಹುರಧ್ಯಾತ್ಮಚಿಂತಕಾಃ ॥10॥
ಪ್ರಕೃತಿಯು ಎಂಟು. ವಿಕಾರಗಳು ಹದಿನಾರು. ಇವುಗಳಲ್ಲಿ ಏಳು ಸ್ಪಷ್ಟವಾಗಿ ಗೋಚರವಾಗುತ್ತವೆ ಎಂದು ಅಧ್ಯಾತ್ಮ ಚಿಂತಕರು ಹೇಳುತ್ತಾರೆ.
ಅವ್ಯಕ್ತಂ ಚ ಮಹಾಂಶ್ಚೈವ ತಥಾಹಂಕಾರ ಏವ ಚ |
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ ॥11॥
ಏತಾಃ ಪ್ರಕೃತಯಸ್ತ್ವಷ್ಟೌ ವಿಕಾರಾನಪಿ ಮೇ ಶೃಣು |
ಶ್ರೋತ್ರಂ ತ್ವಕ್ಚೈವ ಚಕ್ಷುಶ್ಚ ಜಿಹ್ವಾ ಘ್ರಾಣಂ ಚ ಪಂಚಮಮ್ ॥12॥
ಶಬ್ದಸ್ಪರ್ಶೌ ಚ ರೂಪಂ ಚ ರಸೋ ಗಂಧಸ್ತಥೈವ ಚ |
ವಾಕ್ಚ ಹಸ್ತೌ ಚ ಪಾದೌ ಚ ಪಾಯುರ್ಮೇಢ್ರಂ ತಥೈವ ಚ ॥13॥
ಅವ್ಯಕ್ತ, ಮಹತ್ತತ್ತ್ವ, ಅಹಂಕಾರತತ್ತ್ವ, ಪೃಥಿವಿ, ವಾಯು, ಆಕಾಶ, ಜಲ, ಜ್ಯೋತಿ - ಹೀಗೆ ಪ್ರಕೃತಿಗಳು ಎಂಟು. ಇವುಗಳ ವಿಕಾರವನ್ನು ಹೇಳುತ್ತೇನೆ, ಕೇಳು. ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವಾ, ಘ್ರಾಣ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ.
ಏತೇ ವಿಶೇಷಾ ರಾಜೇಂದ್ರ ಮಹಾಭೂತೇಷು ಪಂಚಸು |
ಬುದ್ಧೀಂದ್ರಿಯಾಣ್ಯಥೈತಾನಿ ಸವಿಶೇಷಾಣಿ ಮೈಥಿಲ ॥14॥
ವಾಕ್-ಪಾಣಿಗಳೇ ಮೊದಲಾದ ಐದು ಕರ್ಮೇಂದ್ರಿಯಗಳು, ಶಬ್ದ-ಸ್ಪರ್ಶ ಮೊದಲಾದ ಇಂದ್ರಿಯಾರ್ಥಗಳು ವಿಶೇಷವೆಂದು ಕರೆಯಲ್ಪಡುತ್ತವೆ. ಐದು ಜ್ಞಾನೇಂದ್ರಿಯಗಳನ್ನು ಸವಿಶೇಷಗಳೆಂದು ಹೇಳುತ್ತಾರೆ.
ಮನಃ ಷೋಡಶಕಂ ಪ್ರಾಹುರಧ್ಯಾತ್ಮಗತಿಚಿಂತಕಾಃ |
ತ್ವಂ ಚೈವಾನ್ಯೇ ಚ ವಿದ್ವಾಂಸಸ್ತತ್ತ್ವಬುದ್ಧಿವಿಶಾರದಾಃ ॥15॥
ಅಧ್ಯಾತ್ಮ ಗತಿಯನ್ನು ಚಿಂತಿಸುವ, ತತ್ತ್ವಬುದ್ಧಿ ವಿಶಾರದರಾದ ವಿದ್ವಾಂಸರು ಮನಸ್ಸನ್ನು ಹದಿನಾರನೆಯ ವಿಕಾರ ಎನ್ನುತ್ತಾರೆ. ನೀನೂ ಹೀಗೆ ಹೇಳುತ್ತಿ.
ಅವ್ಯಕ್ತಾಚ್ಚ ಮಹಾನಾತ್ಮಾ ಸಮುತ್ಪದ್ಯತಿ ಪಾರ್ಥಿವ |
ಪ್ರಥಮಂ ಸರ್ಗಮಿತ್ಯೇತದಾಹುಃ ಪ್ರಾಧಾನಿಕಂ ಬುಧಾಃ ॥16॥
ಅವ್ಯಕ್ತವೆನಿಸಿದ ಮೂಲಪ್ರಕೃತಿಯಿಂದ ಮಹತ್ತತ್ತ್ವವು ಉತ್ಪನ್ನವಾಗುತ್ತದೆ. ವಿದ್ವಾಂಸರು ಇದನ್ನು ಮೊದಲನೆಯ ಸೃಷ್ಟಿ ಎಂದೂ, ಪ್ರಧಾನವೆಂದೂ ಹೇಳುತ್ತಾರೆ.
ಮಹತಶ್ಚಾಪ್ಯಹಂಕಾರ ಉತ್ಪದ್ಯತಿ ನರಾಧಿಪ |
ದ್ವಿತೀಯಂ ಸರ್ಗಮಿತ್ಯಾಹುರೇತದ್ ಬುದ್ಧ್ಯಾತ್ಮಕಂ ಸ್ಮೃತಮ್ ॥17॥
ಮಹತ್ತತ್ತ್ವದಿಂದ ಅಹಂಕಾರತತ್ತ್ವವು ಸೃಷ್ಟಿ ಹೊಂದುತ್ತದೆ. ಇದನ್ನು ಎರಡನೆಯ ಸೃಷ್ಟಿ ಎಂದು ಹೇಳುತ್ತಾರೆ. ಬುದ್ಧಿ ತತ್ತ್ವ ನಿಯಾಮಕವೇ ಅಹಂಕಾರತತ್ತ್ವವೆನಿಸಿದೆ.
ಅಹಂಕಾರಾಚ್ಚ ಸಂಭೂತಂ ಮನೋ ಭೂತಗುಣಾತ್ಮಕಮ್ |
ತೃತೀಯಃ ಸರ್ಗ ಇತ್ಯೇಷ ಆಹಂಕಾರಿಕ ಉಚ್ಯತೇ ॥18॥
ಪಂಚಭೂತಗಳ ಸ್ವರೂಪವೆನಿಸಿದ ಮನಸ್ಸು ಅಹಂಕಾರತತ್ತ್ವದಿಂದ ಹುಟ್ಟಿದೆ. ಇದು ಮೂರನೆಯ ಸೃಷ್ಟಿ. ಇದಕ್ಕೆ ಅಹಂಕಾರಿಕ ಎಂದು ಹೆಸರು.
ಮನಸಸ್ತು ಸಮುದ್ಭೂತಾ ಮಹಾಭೂತಾ ನರಾಧಿಪ |
ಚತುರ್ಥಂ ಸರ್ಗಮಿತ್ಯೇತನ್ಮಾನಸಂ ಪರಿಚಕ್ಷತೇ ॥19॥
ಮನಸ್ಸಿನಿಂದ ಸೂಕ್ಷ್ಮ ಪಂಚಭೂತಗಳು ಸೃಷ್ಟಿಗೊಂಡಿವೆ. ಮಾನಸ ಎಂದು ಕರೆಯುವ ಇದನ್ನು ನಾಲ್ಕನೆಯ ಸೃಷ್ಟಿ ಎನ್ನುತ್ತಾರೆ.
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ |
ಪಂಚಮಂ ಸರ್ಗಮಿತ್ಯಾಹುರ್ಭೌತಿಕಂ ಭೂತಚಿಂತಕಾಃ ॥20॥
ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ವಿಷಯಗಳು ಸೂಕ್ಷ್ಮ ಪಂಚಭೂತಗಳಿಂದ ಹುಟ್ಟಿವೆ. ಇದನ್ನು ಐದನೆಯ ಸೃಷ್ಟಿ ಎನ್ನುತ್ತಾರೆ. ಭೂತಚಿಂತಕರು ಇದನ್ನು ಭೌತಿಕ ಸೃಷ್ಟಿ ಎನ್ನುತ್ತಾರೆ.
ಶ್ರೋತ್ರಂ ತ್ವಕ್ ಚೈವ ಚಕ್ಷುಶ್ಚ ಜಿಹ್ವಾ ಘ್ರಾಣಂ ಚ ಪಂಚಮಮ್ |
ಸರ್ಗಂ ತು ಷಷ್ಠಮಿತ್ಯಾಹುರ್ಬಹುಚಿಂತಾತ್ಮಕಂ ಸ್ಮೃತಮ್ ॥21॥
ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವಾ, ಘ್ರಾಣ ಎಂಬ ಐದು ಜ್ಞಾನೇಂದ್ರಿಯಗಳ ಸೃಷ್ಟಿಯನ್ನು ಆರನೆಯ ಸೃಷ್ಟಿ ಎಂದು, ಬಹುಚಿಂತಾತ್ಮಕ ಎಂದು ವಿದ್ವಾಂಸರು ಹೇಳುತ್ತಾರೆ.

ಅಧಃಸ್ರೋತೇಂದ್ರಿಯಗ್ರಾಮಮ್ ಉತ್ಪದ್ಯತಿ ನರಾಧಿಪ |
ಸಪ್ತಮಂ ಸರ್ಗಮಿತ್ಯಾಹುರೇತದೈಂದ್ರಿಯಕಂ ಸ್ಮೃತಮ್ ॥22॥
ಕೆಳಗೆ ಸೋರುವಿಕೆಯನ್ನು ಹೊಂದುವ ಇಂದ್ರಿಯಗಳು ಅರ್ಥಾತ್ ಪಾಯು- ಉಪಸ್ಥಗಳು ಏಳನೆಯ ಸೃಷ್ಟಿ ಎನಿಸಿವೆ. ಇವುಗಳನ್ನು ಐಂದ್ರಿಕ ಸೃಷ್ಟಿ ಎಂದು ಕರೆಯುತ್ತಾರೆ.
ಊರ್ಧ್ವಂ ಚಾಧಸ್ತಥಾ ತಿರ್ಯಗುತ್ಪದ್ಯತಿ ನರಾಧಿಪ |
ಅಷ್ಟಮಂ ಸರ್ಗಮಿತ್ಯಾಹುರೇತದಾರ್ಜವಕಂ ಬುಧಾಃ ॥23॥
ಮೇಲೆ, ಕೆಳಗೆ, ಅಡ್ಡವಾಗಿ ಸಂಚರಿಸುವ ಸಾಮರ್ಥ್ಯವುಳ್ಳ ಪಾಣಿಯನ್ನು ಎಂಟನೆಯ ಸೃಷ್ಟಿ ಎಂದು ಕರೆಯುತ್ತಾರೆ. ಕೈಗಳಿಂದ ತಲೆಯಿಂದ ಕಾಲಿನ ತನಕ ತುರಿಸಿಕೊಳ್ಳುವ ಸಾಮರ್ಥ್ಯವಿರುವುದರಿಂದ ಹೀಗೆ ಕರೆಯಲಾಗಿದೆ. ಇದನ್ನು ಆರ್ಜವಕ ಎಂಬ ಹೆಸರಿನಿಂದ ಕರೆದಿದ್ದಾರೆ.
ತಿರ್ಯಕ್ಸ್ರೋತಸ್ತ್ವಧಃಸ್ರೋತ ಉತ್ಪದ್ಯತಿ ನರಾಧಿಪ |
ನವಮಂ ಸರ್ಗಮಿತ್ಯಾಹುರೇತದಾರ್ಜವಕಂ ಬುಧಾಃ ॥24॥
ಅಡ್ಡ ಮತ್ತು ಕೆಳಭಾಗದಲ್ಲಿ ಸ್ರವಣವನ್ನು ಹೊಂದುವ ವಾಗಿಂದ್ರಿಯವನ್ನು ಒಂಬತ್ತನೆಯ ಸೃಷ್ಟಿ ಎಂದು ಹೇಳುತ್ತಾರೆ. ಬಾಯಲ್ಲಿನ ಲಾಲಾ ಜಲವು ಬಾಯೊಳಗೆ ಎರಡು ತುಟಿಗಳ ದ್ವಾರ ಅಡ್ಡವಾಗಿಯೂ, ಕೆಳಗೂ ಸ್ರವಣ ಹೊಂದುತ್ತದೆ. ಮಕ್ಕಳಲ್ಲಿ ಈ ವಾಗಿಂದ್ರಿಯ ವ್ಯಾಪಾರವು ಕೊನೆಯದಾಗಿ ಕಾಣುವುದರಿಂದ ನವಮ ಎಂದು ಹೇಳಿದ್ದಾರೆ. ಕರ್ಮೇಂದ್ರಿಯಗಳ ಸೃಷ್ಟಿಯನ್ನು ವ್ಯುತ್ಕ್ರಮದಲ್ಲಿ ಹೇಳಿದ್ದಾರೆ ಎಂದು ತಿಳಿಯಬೇಕು. ಈ ವಾಗಿಂದ್ರಿಯಕ್ಕೆ ಆರ್ಜವಕ ಎಂದೇ ಹೆಸರನ್ನು ಜ್ಞಾನಿಗಳು ಹೇಳುತ್ತಾರೆ.
ಏತಾನಿ ನವ ಸರ್ಗಾಣಿ ತತ್ತತ್ತ್ವನಿ ಚ ನರಾಧಿಪ |
ಚತುರ್ವಿಂಶತಿರುಕ್ತಾನಿ ಯಥಾಶ್ರುತಿ ನಿದರ್ಶನಾತ್ ॥25॥
ಶ್ರುತಿಗೆ ಅನುಗುಣವಾಗಿ ಹೇಳಿರುವ ಒಂಬತ್ತು ಸೃಷ್ಟಿಗಳು ಇಪ್ಪತ್ನಾಲ್ಕು ತತ್ತ್ವಗಳೂ ಆಗಿವೆ.
ಅತ ಊರ್ಧ್ವಂ ಮಹಾರಾಜ ಗುಣಸ್ಯೈತಸ್ಯ ತತ್ತ್ವತಃ |
ಮಹಾತ್ಮಭಿರನುಪ್ರೋಕ್ತಾಂ ಕಾಲಸಂಖ್ಯಾಂ ನಿಬೋಧ ಮೇ ॥26॥
ಮಹಾರಾಜನೇ, ಇನ್ನು ಮುಂದೆ ಮಹಾತ್ಮರಾದ ಪುರುಷರು ಹೇಳಿರುವ ಗುಣಯುಕ್ತವಾದ ಈ ಸೃಷ್ಟಿಯ ಕಾಲಪರಿಗ್ರಹಣೆಯನ್ನು ಹೇಳುತ್ತೇನೆ. ಏಕಾಗ್ರತೆಯಿಂದ ಕೇಳು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಿಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ಮೂರನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯರ ಸಂವಾದ
ಯಾಜ್ಞವಲ್ಕ್ಯಃ
ಅವ್ಯಕ್ತಸ್ಯ ನರಶ್ರೇಷ್ಠ ಕಾಲಸಂಖ್ಯಾಂ ನಿಬೋಧ ಮೇ |
ಪಂಚ ಕಲ್ಪಸಹಸ್ರಾಣಿ ದ್ವಿಗುಣಾನ್ಯಹರುಚ್ಯತೇ ॥1॥
ಯಾಜ್ಞವಲ್ಕ್ಯ ನರಶ್ರೇಷ್ಠನೇ, ನಾನು ಹೇಳಲಿರುವ ಅವ್ಯಕ್ತತತ್ತ್ವದ ಕಾಲದ ಪರಿಮಿತಿಯನ್ನು ಕೇಳು. ಹತ್ತುಸಾವಿರ ಕಲ್ಪಗಳು ಒಂದು ಹಗಲೆನಿಸುತ್ತವೆ.
ರಾತ್ರಿರೇತಾವತೀ ಚಾಸ್ಯ ಪ್ರತಿಬುದ್ಧೋ ನರಾಧಿಪ |
ಸೃಜತ್ಯೋಷಧಿಮೇವಾಗ್ರೇ ಜೀವನಂ ಸರ್ವದೇಹಿನಾಮ್ ॥2॥
ಅವ್ಯಕ್ತದ ರಾತ್ರಿಯು ಇಷ್ಟೇ ಪ್ರಮಾಣವುಳ್ಳದ್ದಾಗಿದೆ. ಅವ್ಯಕ್ತ ಪುರುಷನು ಎಚ್ಚರಗೊಂಡ ಕೂಡಲೇ ಮೊದಲು ಸಕಲ ಪ್ರಾಣಿಗಳಿಗೆ ಜೀವಾಧಾರವಾದ ಓಷಧಿಗಳನ್ನು ಸೃಷ್ಟಿಸುತ್ತಾನೆ.
ತತೋ ಬ್ರಹ್ಮಾಣಮಸೃಜದ್ಧೈರಣ್ಯಾಂಡಸಮುದ್ಭವಮ್ |
ಸಾ ಮೂರ್ತಿಃ ಸರ್ವಭೂತಾನಾಮಿತ್ಯೇವಮನುಶುಶ್ರುಮ ॥3॥
ಬಳಿಕ ಸುವರ್ಣಮಯವಾದ ಅಂಡದಿಂದ ಬ್ರಹ್ಮನನ್ನು ಸೃಷ್ಟಿಸುತ್ತಾನೆ. ಇವನೇ ಎಲ್ಲ ಪ್ರಾಣಿಗಳ ಶರೀರವೆಂದು ನಾನು ಕೇಳಿದ್ದೇನೆ.
ಸಂವತ್ಸರಮುಷಿತ್ವಾಂಡೇ ನಿಷ್ಕ್ರಮ್ಯ ಚ ಮಹಾಮುನಿಃ |
ಸಂದಧೇರ್ಧಂ ಮಹೀಂ ಕೃತ್ಸ್ನಾಂ ದಿವಮರ್ಧಂ ಪ್ರಜಾಪತಿಃ ॥4॥
ಮಹಾಮುನಿಯಾದ ಚತುರ್ಮುಖ ಬ್ರಹ್ಮನು ಒಂದು ವರ್ಷ ಪರ್ಯಂತ ಅಂಡದಲ್ಲಿ ವಾಸವಾಗಿದ್ದು, ಬಳಿಕ ಅದರಿಂದ ಹೊರಬಂದು ಆ ಅಂಡದ ಅರ್ಧ ಭಾಗವನ್ನು ಭೂಮಿಯನ್ನಾಗಿಯೂ ಉಳಿದ ಅರ್ಧಭಾಗವನ್ನು ಸ್ವರ್ಗವನ್ನಾಗಿಯೂ ಭಾಗಿಸಿದನೆಂದು ಹೇಳುತ್ತಾರೆ.

ದ್ಯಾವಾಪೃಥಿವ್ಯೋರಿತ್ಯೇಷ ರಾಜನ್ ವೇದೇಷು ಪಠ್ಯತೇ |
ತಯೋಃ ಶಕಲಯೋರ್ಮಧ್ಯಮಾಕಾಶಮಕರೋತ್ ಪ್ರಭುಃ ॥5॥
ತನ್ನ ವಿಶ್ವರೂಪದಲ್ಲಿ ದ್ಯಾವಾಪೃಥಿವಿಗಳನ್ನು ಉರುಟಾದ ಜಘನ ಪ್ರದೇಶಗಳನ್ನಾಗಿ ತೋರಿಸುತ್ತಾನೆ ಎಂದು ವೇದಗಳಲ್ಲಿ ಹೇಳಿರುತ್ತಾರೆ. ಸರ್ವಸಮರ್ಥನಾದ ಭಗವಂತನು ಈ ಎರಡು ತುಂಡುಗಳ ಮಧ್ಯದಲ್ಲಿ ಆಕಾಶವನ್ನು ಸೃಷ್ಟಿಸಿದನು.
ಏತಸ್ಯಾಪಿ ಚ ಸಂಖ್ಯಾನಂ ವೇದವೇದಾಂಗಪಾರಗೈಃ |

ದಶ ಕಲ್ಪಸಹಸ್ರಾಣಿ ಪಾದೋನಾನ್ಯಹರುಚ್ಯತೇ |
ರಾತ್ರಿಮೇತಾವತೀಂ ಚಾಸ್ಯ ಪ್ರಾಹುರಧ್ಯಾತ್ಮಚಿಂತಕಾಃ ॥6॥
ವೇದವೇದಾಂಗ ಪಾರಂಗತರಾದ ವಿದ್ವಾಂಸರು ಬ್ರಹ್ಮನ ಕಾಲಪ್ರಮಾಣವು ಎಷ್ಟೆಂಬುದನ್ನು ವಿಚಾರ ಮಾಡಿ ಹೇಳಿದ್ದಾರೆ. ಬ್ರಹ್ಮಾಂಡಸ್ಥಿತನಾದ, ಚತುರ್ದಶ ಭುವನಗಳನ್ನು ಸೃಷ್ಟಿಸುವ ಚತುರ್ಮುಖ ಬ್ರಹ್ಮನ ಕಾಲವು ಹತ್ತು ಸಾವಿರ ವರ್ಷಗಳಿಗೆ ಒಂದು ಪಾದ ಊನವಾಗುತ್ತದೆ ಎಂದು ಹೇಳಿದ್ದಾರೆ. ಎರಡೂವರೆ ಸಾವಿರ ಕಡಿಮೆಯಾದುದು ಅರ್ಥಾತ್ ದಶಾವರಣೋಪೇತ ಬ್ರಹ್ಮಾಂಡ ಸೃಷ್ಟಿಯಲ್ಲಿ ಕಾಲು ಪಾದ ಕಾಲವು ಕಳೆದುಹೋಗುತ್ತದೆ ಎಂದು ಭಾವ. ಏಳು ಸಾವಿರದ ಐದು ನೂರು ಕಲ್ಪಗಳು ವಿಶ್ವರೂಪಿಯಾದ ಬ್ರಹ್ಮನಿಗೆ ಒಂದು ಹಗಲಾಗುತ್ತದೆ. ಇಷ್ಟೇ ಸಂಖ್ಯೆಯುಳ್ಳದ್ದು ಬ್ರಹ್ಮನ ರಾತ್ರಿಯು ಎಂದು ಹೇಳುತ್ತಾರೆ.
ಸೃಜತ್ಯಹಂಕಾರಮೃಷಿರ್ಭೂತಂ ದಿವ್ಯಾತ್ಮಕಂ ತಥಾ |
ಚತುರಶ್ಚಾಪರಾನ್ ಪುತ್ರಾನ್ ದೇಹಾತ್ ಪೂರ್ವಂ ಮಹಾನೃಷಿಃ |
ತೇ ವೈ ಪಿತೃಭ್ಯಃ ಪಿತರಃ ಶ್ರೂಯಂತೇ ರಾಜಸತ್ತಮ ॥7॥
ಈ ವಿಶ್ವರೂಪಿಯಾದ ಬ್ರಹ್ಮನು ದ್ಯಾವಾ-ಪೃಥಿಗಳನ್ನು ಅವುಗಳ ಮಧ್ಯದಲ್ಲಿ ಆಕಾಶವನ್ನು ಸೃಷ್ಟಿಸಿದ ಬಳಿಕ ಅಹಂಕಾರವೆಂಬ ದಿವ್ಯವಾದ ಭೂತವನ್ನು ಸೃಷ್ಟಿಸಿದನು. ರಾಜಸತ್ತಮನೇ, ಮಹಾನೃಷಿ ಎನಿಸಿದ ಬ್ರಹ್ಮನು ಭೌತಿಕವಾದ ದೇಹವನ್ನು ಸೃಷ್ಟಿಸುವ ಮೊದಲೇ ಬುದ್ಧಿ, ಅಹಂಕಾರ, ಮನಸ್ಸು, ಚಿತ್ತ ಎಂಬ ನಾಲ್ಕು ಮಕ್ಕಳನ್ನು ಪಡೆದುಕೊಂಡನು. ಈ ನಾಲ್ಕು ಮಕ್ಕಳು ಪಂಚಮಹಾಭೂತಗಳೆಂಬ ಪಿತೃಗಳಿಗೂ ಪಿತೃಗಳು ಎಂದು ಹೇಳಲ್ಪಟ್ಟಿದ್ದಾರೆ.
ದೇವಾಃ ಪಿತೄಣಾಂ ಚ ಸುತಾ ದೇವೈರ್ಲೋಕಾಃ ಸಮಾವೃತಾಃ |
ಚರಾಚರಾ ನರಶ್ರೇಷ್ಠ ಇತ್ಯೇವಮನುಶುಶ್ರುಮ ॥8॥
ನರಶ್ರೇಷ್ಠನೇ, ಶ್ರೋತ್ರೇಂದ್ರಿಯವೇ ಮೊದಲಾದ ಇಂದ್ರಿಯಗಳಿಂದ ಪಂಚ ಮಹಾಭೂತಗಳಿಗೆ ಮಕ್ಕಳೆಂದು ಕೇಳಿದ್ದೇವೆ. ಎಲ್ಲ ಇಂದ್ರಿಯಗಳು ಪಂಚ ಮಹಾಭೂತಗಳು ಉತ್ಪನ್ನವಾಗಿವೆ. ಇಂದ್ರಿಯಗಳಿಂದಲೇ ಚರಾಚರಾತ್ಮಕವಾದ ಸರ್ವಪ್ರಪಂಚವು ಆವೃತವಾಗಿದೆ.
ಪರಮೇಷ್ಠೀ ತ್ವಹಂಕಾರೋಽಸೃಜದ್ ಭೂತಾನಿ ಪಂಚಧಾ |
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ ॥9॥
ಅಹಂಕಾರತತ್ತ್ವವು ಪೃಥಿವಿ, ವಾಯು, ಆಕಾಶ, ಜಲ, ತೇಜಸ್ಸುಗಳೆಂಬ ಪಂಚ ಭೂತಗಳನ್ನು ಸೃಷ್ಟಿಸಿದೆ.
ಏತಸ್ಯಾಪಿ ನಿಶಾಮಾಹುಸ್ತೃತೀಯಮಿಹ ಕುರ್ವತಃ |
ಪಂಚ ಕಲ್ಪಸಹಸ್ರಾಣಿ ತಾವದೇವಾಹರುಚ್ಯತೇ ॥10॥
ಈ ಅಹಂಕಾರತತ್ತ್ವದ ಕಾಲಪರಿಮಾಣವನ್ನು ಐದು ಸಾವಿರ ಕಲ್ಪವೆಂದು ವಿದ್ವಾಂಸರು ಹೇಳಿದ್ದಾರೆ. ಅಷ್ಟೇ ಪರಿಮಾಣದ ಹಗಲು ಸೇರಿಕೊಂಡಾಗ ಅಹಂಕಾರದ ಒಂದು ದಿನವಾಗುತ್ತದೆ.
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ |
ಏತೇ ವಿಶೇಷಾ ರಾಜೇಂದ್ರ ಮಹಾಭೂತೇಷು ಪಂಚಸು |
ಯೈರಾವಿಷ್ಟಾನಿ ಭೂತಾನಿ ಅಹನ್ಯಹನಿ ಪಾರ್ಥಿವ ॥11॥
ಅನ್ಯೋನ್ಯಂ ಸ್ಪೃಹಯಂತ್ಯೇತೇ ಅನ್ಯೋನ್ಯಸ್ಯ ಹಿತೇ ರತಾಃ |
ಅನ್ಯೋನ್ಯಮಭಿಮನ್ಯಂತೇ ಅನ್ಯೋನ್ಯಸ್ಪರ್ಧಿನಸ್ತಥಾ ॥12॥
ತೇ ವಧ್ಯಮಾನಾ ಅನ್ಯೋನ್ಯಂ ಗುಣೈರ್ಹಾರಿಭಿರವ್ಯಯಾಃ |
ಇಹೈವ ಪರಿವರ್ತಂತೇ ತಿರ್ಯಗ್ಯೋನಿಪ್ರವೇಶಿನಃ ॥13॥
ಆಕಾಶ, ವಾಯು, ಅಗ್ನಿ, ಜಲ, ಭೂಮಿಗಳೆಂಬ ಪಂಚಭೂತಗಳಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಶೇಷ ಗುಣಗಳು ಉತ್ಪನ್ನವಾಗಿವೆ. ಸಮಸ್ತ ಪ್ರಾಣಿಗಳು ಮನೋಹರವಾದ, ಸರ್ವಕಾಲದಲ್ಲಿಯೂ ಇರುವ ಶಬ್ದಸ್ಪರ್ಶಾದಿ ವಿಷಯಗಳಿಂದ ಒಬ್ಬರು ಮತ್ತೊಬ್ಬರ ಹಿತಚಿಂತಕರಾಗಿರುತ್ತಾರೆ. ಒಬ್ಬರು ಇನ್ನೊಬ್ಬರನ್ನು ಪ್ರೀತಿಸುತ್ತಾರೆ, ಸ್ಪರ್ಧಿಸುತ್ತಾರೆ, ಅತಿಕ್ರಮಿಸುತ್ತಾರೆ, ಪರಸ್ಪರ ಬಡಿದಾಡುತ್ತಾರೆ, ಕೊಂದು ಹಾಕುತ್ತಾರೆ. ಹೀಗೆ ವಿಷಯಾಸಕ್ತಿಗಳಾದ ಪ್ರಾಣಿಗಳು ಪಶು-ಪಕ್ಷಿಗಳೇ ಮೊದಲಾದ ತಿರ್ಯಗ್ಯೋನಿಗಳಲ್ಲಿ ಪ್ರವೇಶಿಸಿ ಪ್ರಪಂಚದಲ್ಲಿ ಸುತ್ತುತ್ತಿದ್ದಾರೆ.
ತ್ರೀಣಿ ಕಲ್ಪಸಹಸ್ರಾಣಿ ಏತೇಷಾಮಹರುಚ್ಯತೇ |
ರಾತ್ರಿರೇತಾವತೀ ಚೈವ ಮನಸಶ್ಚ ನರಾಧಿಪ ॥14॥
ಮೂರು ಸಾವಿರ ಕಲ್ಪಗಳು ಈ ಶಬ್ದಾದಿ ವಿಷಯಗಳಿಗೆ ಒಂದು ಹಗಲಾಗುತ್ತದೆ. ಅಷ್ಟೇ ಪರಿಮಾಣದ ಕಲ್ಪಗಳು ಒಂದು ರಾತ್ರಿಯಾಗುತ್ತದೆ. ಮನಸ್ಸಿಗೆ ಇದೇ ಕಾಲದ ಗಣನೆಯನ್ನು ಹೇಳಿದ್ದಾರೆ.
ಮನಶ್ಚರತಿ ರಾಜೇಂದ್ರ ಚರಿತಂ ಸರ್ವಮಿಂದ್ರಿಯೈಃ |
ನ ಚೇಂದ್ರಿಯಾಣಿ ಪಶ್ಯಂತಿ ಮನ ಏವಾತ್ರ ಪಶ್ಯತಿ ॥15॥
ಸಮಸ್ತ ಇಂದ್ರಿಯಗಳ ಮೂಲಕ ಮನಸ್ಸು ಎಲ್ಲ ವಿಷಯಗಳ ಬಳಿ ಸಂಚರಿಸುತ್ತದೆ. ಯಾವ ವಿಷಯಗಳನ್ನೂ ಇಂದ್ರಿಯಗಳು ನೋಡಲಾರವು, ಮನಸ್ಸೇ ನೋಡುತ್ತದೆ.
ಚಕ್ಷುಃ ಪಶ್ಯತಿ ರೂಪಾಣಿ ಮನಸಾ ತು ನ ಚಕ್ಷುಷಾ |
ಮನಸಿ ವ್ಯಾಕುಲೇ ಚಕ್ಷುಃ ಪಶ್ಯನ್ನಪಿ ನ ಪಶ್ಯತಿ |
ತಥೇಂದ್ರಿಯಾಣಿ ಸರ್ವಾಣಿ ಪಶ್ಯಂತೀತ್ಯಭಿಚಕ್ಷತೇ ॥16॥
ಕಣ್ಣು ರೂಪವನ್ನು ನೋಡಿದರೂ ಮನಸ್ಸಿನ ಮೂಲಕವೇ ನೋಡುತ್ತದೆ. ಸ್ವತಂತ್ರವಾಗಿ ಕಣ್ಣು ರೂಪವನ್ನು ನೋಡದು. ಮನಸ್ಸು

ಚಂಚಲವಾದಾಗ ಚಕ್ಷುರಿಂದ್ರಿಯವು ನೋಡುತ್ತಿದ್ದರೂ ನೋಡುವುದಿಲ್ಲ ಎಂದೇ ಭಾವ. ಇದೇ ರೀತಿ ಎಲ್ಲ ಇಂದ್ರಿಯಗಳು ಮನಸ್ಸಿನ ಮೂಲಕವೇ ಎಂದು ಜ್ಞಾನಿಗಳು ಹೇಳುತ್ತಾರೆ.
ಮನಸ್ಯುಪರತೇ ರಾಜನ್ನಿಂದ್ರಿಯೋಪರಮೋ ಭವೇತ್ |
ನ ಚೇಂದ್ರಿಯವ್ಯುಪರಮೇ ಮನಸ್ಯುಪರಮೋ ಭವೇತ್ |
ಏವಂ ಮನಃಪ್ರಧಾನಾನಿ ಇಂದ್ರಿಯಾಣಿ ವಿಭಾವಯೇತ್ ॥17॥
ಮನಸ್ಸೊಂದು ವಿಶ್ರಾಂತಿಯನ್ನು ಹೊಂದಲು ಎಲ್ಲ ಇಂದ್ರಿಯಗಳು ವಿಶ್ರಾಂತಿಯನ್ನು ಹೊಂದುತ್ತವೆ. ಆದರೆ ಇಂದ್ರಿಯಗಳು ವಿಶ್ರಾಂತಿಯನ್ನು ಹೊಂದಿದ್ದರೂ ಮನಸ್ಸು ವಿಶ್ರಾಂತಿಯನ್ನು ಹೊಂದಬೇಕೆಂಬ ನಿಯಮವಿಲ್ಲ. ಇದೇ ರೀತಿ ಸಮಸ್ತ ಇಂದ್ರಿಯಗಳು ಮನಸ್ಸಿನ ಮೂಲಕವೇ ಗ್ರಹಿಸುತ್ತವೆ ಎಂದು ತಿಳಿಯಬೇಕು. ಮನಸ್ಸೇ ಪ್ರಧಾನವಾಗಿ ಉಳ್ಳ ಇಂದ್ರಿಯಗಳು ಎಂದು ತಿಳಿಯಬೇಕು.
ಇಂದ್ರಿಯಾಣಾಂ ಹಿ ಸರ್ವೇಷಾಮೀಶ್ವರಂ ಮನ ಉಚ್ಯತೇ |
ಏತದ್ ವಿಶಂತಿ ಭೂತಾನಿ ಸರ್ವಾಣೀಹ ಮಹಾಯಶಾಃ ॥18॥
ಮಹಾಯಶೋವಂತನೇ, ಮನಸ್ಸನ್ನು ಎಲ್ಲ ಇಂದ್ರಿಯಗಳಿಗೂ ಒಡೆಯನೆಂದು ಹೇಳುತ್ತಾರೆ. ಜಗತ್ತಿನಲ್ಲಿ ಸಮಸ್ತ ಪ್ರಾಣಿಗಳು ಮನಸ್ಸನ್ನೇ ಆಶ್ರಯಿಸಿರುತ್ತವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ನಾಲ್ಕನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯರ ಸಂವಾದ
ಯಾಜ್ಞವಲ್ಕ್ಯಃ
ತತಶತ್ವನಾಂ ಸರ್ಗಸಂಖ್ಯಾ ಚ ಕಾಲಸಂಖ್ಯಾ ತಥೈವ ಚ |
ಮಯಾ ಪ್ರೋಕ್ತಾನುಪೂರ್ವ್ಯೇಣ ಸಂಹಾರಮಪಿ ಮೇ ಶೃಣು ॥1॥
ಯಾಜ್ಞವಲ್ಕ್ಯ ಜನಕರಾಜನೇ, ನಾನು ಇಲ್ಲಿಯ ತನಕ ತತ್ತ್ವಗಳ ಹೆಸರುಗಳನ್ನು, ಕಾಲದ ಸಂಖ್ಯೆಯನ್ನು ನಿನಗೆ ತಿಳಿಸಿರುತ್ತೇನೆ. ಇನ್ನು ಮುಂದೆ ಸೃಷ್ಟಿಯ ಸಂಹಾರದ ವಿಷಯವನ್ನು ತಿಳಿಸುತ್ತೇನೆ, ಕೇಳು.
ಯಥಾ ಸಂಹರತೇ ಜನ್ತೂನ್ ಸಸರ್ಜ ಚ ಪುನಃ ಪುನಃ |
ಅನಾದಿನಿಧನೋ ಬ್ರಹ್ಮಾ ನಿತ್ಯಶ್ಚಾಕ್ಷರ ಏವ ಚ ॥2॥
ಅನಾದಿನಿಧನನಾದ, ನಿತ್ಯನಾದ, ಅಕ್ಷರನಾದ ಬ್ರಹ್ಮನು ಹೇಗೆ ಜಂತುಗಳನ್ನು ಸಂಹರಿಸುತ್ತಾನೋ ಹಾಗೆ ಪುನಃ ಸೃಷ್ಟಿಯನ್ನು ಮಾಡುತ್ತಿರುತ್ತಾನೆ.
ಅಹಃಕ್ಷಯಮಥೋ ಬುದ್ಧ್ವಾ ನಿಶಿ ಸ್ವಪ್ನಮನಾಸ್ತಥಾ |
ಚೋದಯಾಮಾಸ ಭಗವಾನವ್ಯಕ್ತೋಹಂಕೃತಂ ನರಮ್ ॥3॥
ಸೃಷ್ಟಿಗೆ ಮೂಲಕಾರಣನಾದ ಬ್ರಹ್ಮನು ಹಗಲು ಕಳೆಯಿತೆಂದು, ರಾತ್ರಿಯಲ್ಲಿ ಮಲಗಬೇಕೆಂದು ಅವ್ಯಕ್ತತತ್ತ್ವ ನಿಯಾಮಕನಾದ ಭಗವಂತನು ಅಹಂಕಾರಾಭಿಮಾನಿ ಆದ ರುದ್ರನನ್ನು ಪ್ರಚೋದಿಸುತ್ತಾನೆ.
ತತಃ ಶತಸಹಸ್ರಾಂಶುರವ್ಯಕ್ತೇನಾಭಿಚೋದಿತಃ |
ಕೃತ್ವಾ ದ್ವಾದಶಧಾತ್ಮಾನಮಾದಿತ್ಯೋ ಜ್ವಲದಗ್ನಿವತ್ ॥4॥
ಬಳಿಕ ಅವ್ಯಕ್ತನಿಂದ ಚೋದಿತನಾದ, ಸಹಸ್ರಾರು ಕಿರಣಗಳುಳ್ಳ ಸೂರ್ಯನು ತನ್ನನ್ನು ಹನ್ನೆರಡು ರೂಪಗಳನ್ನಾಗಿ ವಿಭಾಗಿಸಿಕೊಂಡು ಅಗ್ನಿಯಂತೆ ಪ್ರಜ್ವಲಿಸುತ್ತಾನೆ.
ಚತುರ್ವಿಧಂ ಪ್ರಜಾಜಾಲಂ ನಿರ್ದಹತ್ಯಾಶು ತೇಜಸಾ |
ಜರಾಯ್ವಂಡಸ್ವೇದಜಾತಮುದ್ಭಿಜ್ಜಂ ಚ ನರಾಧಿಪ ॥5॥
ಹನ್ನೆರಡು ರೂಪಗಳಿಂದ ಪ್ರಜ್ವಲಿಸುವ ಸೂರ್ಯನು ತನ್ನ ಪ್ರಖರವಾದ ತೇಜಸ್ಸಿನಿಂದ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜಗಳೆಂಬ ನಾಲ್ಕು ಪ್ರಕಾರದ ಪ್ರಾಣಿಗಳನ್ನು ಭಸ್ಮ ಮಾಡುತ್ತಾನೆ.
ಏತದುನ್ಮೇಷಮಾತ್ರೇಣ ವಿನಿಷ್ಟಂ ಸ್ಥಾಣುಜಂಗಮಮ್ |
ಕೂರ್ಮಪೃಷ್ಠಸಮಾ ಭೂಮಿರ್ಭವತ್ಯಥ ಸಮಂತತಃ ॥6॥
ಕಣ್ಣಿನ ರೆಪ್ಪೆಯನ್ನು ಮಿಟುಕಿಸುವುದರೊಳಗೆ ಸ್ಥಾವರ-ಜಂಗಮಗಳೆಲ್ಲ ನಾಶ ಹೊಂದುತ್ತವೆ. ಭೂಮಿಯ ಸುತ್ತಲು ಆಮೆಯ ಬೆನ್ನಿನಂತೆ ಕಾಣಿಸುತ್ತದೆ.
ಜಗದ್ದಗ್ಧ್ವಾಮಿತಬಲಃ ಕೇವಲಂ ಜಗತೀಂ ತತಃ |
ಅಂಭಸಾ ಬಲಿನಾ ಕ್ಷಿಪ್ರಮಾಪೂರ್ಯತ ಸಮಂತತಃ ॥7॥
ಅಮಿತಬಲನಾದ ಭಗವಂತನು ಚರಾಚರಗಳಿಂದ ಕೂಡಿದ ಜಗತ್ತೆಲ್ಲವನ್ನೂ ಭಸ್ಮ ಮಾಡಿ ಏಕಾಕಿಯಾಗಿ ಉಳಿದ ಭೂಮಿಯನ್ನು ಪ್ರಬಲವಾದ ನೀರಿನ ಪ್ರವಾಹದಿಂದ ಬಹಳ ಬೇಗ ತುಂಬುತ್ತಾನೆ.
ತತಃ ಕಾಲಾಗ್ನಿಮಾಸಾದ್ಯ ತದಂಭೋ ಯಾತಿ ಸಂಕ್ಷಯಮ್ |
ವಿನಷ್ಟೇಽಂಭಸಿ ರಾಜೇಂದ್ರ ಜಾಜ್ವಲೀತ್ಯನಲೋ ಮಹಾನ್ ॥8॥
ಕಾಲಾಗ್ನಿಯ ಜ್ವಾಲೆಯಿಂದ ಅಪಾರವಾದ ಜಲರಾಶಿಯು ಇಂಗಿಹೋಗುತ್ತದೆ. ನೀರು ನಷ್ಟವಾಗಿ ಹೋದಬಳಿಕ ಭಯಂಕರವಾದ

ಬೆಂಕಿಯು ಉಗ್ರರೂಪವನ್ನು ತಾಳಿ ಎಲ್ಲೆಡೆಯೂ ಝುಗಮಗಿಸುತ್ತದೆ.
ತಮಪ್ರಮೇಯೋಽತಿಬಲಂ ಜ್ವಲಮಾನಂ ವಿಭಾವಸುಮ್ |
ಊಷ್ಮಾಣಂ ಸರ್ವಭೂತಾನಾಂ ಸಪ್ತಾರ್ಚಿಷಮಥಾಂಜಸಾ ॥9॥
ಭಕ್ಷಯಾಮಾಸ ಬಲವಾನ್ ವಾಯುರಷ್ಟಾತ್ಮಕೋ ಬಲೀ |
ವಿಚರನ್ನಮಿತಪ್ರಾಣಸ್ತಿರ್ಯಗೂರ್ಧ್ವಮಧಸ್ತಥಾ ॥10॥
ಏಳು ವಿಧದ ಜ್ವಾಲೆಗಳಿಂದ ಕೂಡಿರುವ, ಎಲ್ಲ ಪ್ರಾಣಿಗಳನ್ನು ದಹಿಸುವಂತಹ ಮಹಾಬಲನಾದ ಅಗ್ನಿಯು, ಮಹಾಬಲಿಷ್ಠನಾದ ಭಗವಾನ್ ವಾಯುವು ತನ್ನ ಎಂಟು ವಿಧವಾದ ರೂಪವನ್ನು ಧರಿಸಿ ಮೇಲೆ, ಕೆಳಗೆ, ಅಡ್ಡಲಾಗಿ ರಭಸದಿಂದ ಬೀಸುತ್ತಾ ಭಕ್ಷಿಸುತ್ತಾನೆ.
ತಮಪ್ರತಿಬಲಂ ಭೀಮಮಾಕಾಶಂ ಗ್ರಸತೇಽಽತ್ಮನಾ |
ಆಕಾಶಮಪ್ಯತಿನದನ್ಮನೋ ಗ್ರಸತಿ ಚಾರಿಕಮ್ ॥11॥
ಬಳಿಕ ಆಕಾಶವು ಅತ್ಯಂತ ಬಲಿಷ್ಠವಾದ, ಭಯಂಕರವಾದ ವಾಯುವನ್ನು ಭಕ್ಷಿಸುತ್ತದೆ. ಜೋರಾಗಿ ಶಬ್ದವನ್ನು ಮಾಡುವ ಆಕಾಶವನ್ನು ಅದಕ್ಕಿಂತಲೂ ಅಧಿಕ ಶಕ್ತಿಯನ್ನು ಹೊಂದಿದ ಮನಸ್ಸು ನುಂಗುತ್ತದೆ.
ಮನೋ ಗ್ರಸತಿ ಸರ್ವಾತ್ಮಾ ಸೋಽಹಂಕಾರಃ ಪ್ರಜಾಪತಿಃ |
ಅಹಂಕಾರಂ ಮಹಾನಾತ್ಮಾ ಭೂತಭವ್ಯಭವಿಷ್ಯವಿತ್ ॥12॥
ಭೂತ, ಭವಿಷ್ಯಗಳನ್ನು ತಿಳಿದಿರುವ ಮಹತ್ತತ್ತ್ವವು ಅಹಂಕಾರತತ್ತ್ವವನ್ನು ನುಂಗುತ್ತದೆ. ಆ ಅಹಂಕಾರನಾಮಕ ಪ್ರಜಾಪತಿಯು ಮನಸ್ಸನ್ನು ನುಂಗುತ್ತದೆ.
ತಮಪ್ಯನುಪಮಾತ್ಮಾನಂ ವಿಶ್ವಶಂಭುಃ ಪ್ರಜಾಪತಿಃ |
ಅಣಿಮಾ ಲಘಿಮಾ ಪ್ರಾಪ್ತಿರೀಶಾನೋ ಜ್ಯೋತಿರವ್ಯಯಃ ॥13॥
`ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್' ಎಂದು ಶ್ರುತಿಯು ತಿಳಿಸಿದಂತೆ ವಿಶ್ವಶಂಭು ಎನಿಸಿದ ಪ್ರಜಾಪತಿಯಾದ ನಾರಾಯಣನು ಆ ಮಹತತ್ತ್ವವನ್ನು ನುಂಗುತ್ತಾನೆ. ನಾರಾಯಣನಾದರೂ ಅಣಿಮಾ, ಲಘಿಮಾ, ಪ್ರಾಪ್ತಿ, ಈಶಾನ, ಜ್ಯೋತಿ, ಅವ್ಯಯ ಎನಿಸಿದ್ದಾನೆ.
ಸರ್ವತಃಪಾಣಿಪಾದಾಂತಃ ಸರ್ವತೋಕ್ಷಿಶಿರೋಮುಖಃ |
ಸರ್ವತಃಶ್ರುತಿಮಾಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥14॥
ಹೃದಯಂ ಸರ್ವಭೂತಾನಾಂ ಪರ್ವಣೋಽಂಗುಷ್ಠಮಾತ್ರಕಃ |
ಅನುಗ್ರಸತ್ಯನಂತಂ ಹಿ ಮಹಾತ್ಮಾ ವಿಶ್ವಮೀಶ್ವರಃ ॥15॥
ಎಲ್ಲೆಡೆಯೂ ಯಾವನಿಗೆ ಕೈ-ಕಾಲುಗಳಿವೆಯೋ, ಎಲ್ಲೆಡೆಯೂ ಯಾರಿಗೆ ಕಣ್ಣುಗಳು, ಶಿರಸ್ಸುಗಳು, ಮುಖಗಳಿವೆಯೋ, ಎಲ್ಲೆಡೆಯೂ ಕಿವಿಗಳಿವೆಯೋ, ಯಾವನು ಸಮಸ್ತ ಲೋಕವನ್ನು ಆವರಿಸಿಕೊಂಡು ನಿಂತಿದ್ದಾನೋ, ಎಲ್ಲ ಪ್ರಾಣಿಗಳ ಹೃದಯದಲ್ಲಿ ಅಂಗುಷ್ಠದಷ್ಟು ಆಕಾರವನ್ನು ಹೊಂದಿ ಅಂತರ್ಯಾಮಿಯಾಗಿದ್ದಾನೋ ಅಂತಹ ಭಗವಂತನು ಮಹತ್ತತ್ತ್ವದಲ್ಲಿ ಅಡಕವಾದ ಸಮಗ್ರ ಜಗತ್ತನ್ನು ನುಂಗಿಬಿಡುತ್ತಾನೆ.
ತತಃ ಸಮಭವತ್ ಸರ್ವಮಕ್ಷಯಾವ್ಯಯಮವ್ರಣಮ್ |
ಭೂತಭವ್ಯಮನುಷ್ಯಾಣಾಂ ಸ್ರಷ್ಟಾರಮನಘಂ ತಥಾ ॥16॥
ಜಗತ್ತೆಲ್ಲವೂ ಅಕ್ಷಯನಾದ, ಅವ್ಯಯನಾದ, ಅವ್ರಣನಾದ ಪರಮಾತ್ಮನಲ್ಲಿಯೇ ಲಯವನ್ನು ಹೊಂದುತ್ತದೆ.
ಭೂತ-ಭವ್ಯ-ಭವಿಷ್ಯತ್ತುಗಳ ಸೃಷ್ಟಿಕರ್ತೃವಾದ ನಿರ್ದುಷ್ಟನಾದ ಬ್ರಹ್ಮನ ಸೃಷ್ಟಿಯು ಇವನಿಂದಲೇ ಉಂಟಾಗುತ್ತದೆ.
ಏಷೋಽಪ್ಯಯಸ್ತೇ ರಾಜೇಂದ್ರ ಯಥಾವತ್ ಪರಿಭಾಷಿತಃ |
ಅಧ್ಯಾತ್ಮಮಧಿಭೂತಂ ಚ ಅಧಿದೈವಂ ಚ ಶ್ರೂಯತಾಮ್ ॥17॥
ರಾಜೇಂದ್ರನೇ, ಭಗವಂತನು ನಡೆಸುವ ಸಂಹಾರ ಕ್ರಮವನ್ನು ಯಥಾವತ್ತಾಗಿ ಹೇಳಿರುತ್ತೇನೆ. ಮುಂದೆ ಅಧ್ಯಾತ್ಮ, ಅಧಿಭೂತ, ಅಧಿದೈವಗಳ ವಿಷಯವನ್ನು ಕೇಳಿಸಿಕೊ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಶ್ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೈದನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯ ಸಂವಾದ
ಯಾಜ್ಞವಲ್ಕ್ಯಃ
ಪಾದಾವಧ್ಯಾತ್ಮಮಿತ್ಯಾಹುರ್ಬ್ರಹ್ಮಣಾಸ್ತತ್ತ್ವದರ್ಶಿನಃ |
ಗಂತವ್ಯಮಧಿಭೂತಂ ಚ ವಿಷ್ಣುಸ್ತತ್ರಾಧಿದೈವತಮ್ ॥1॥
ಯಾಜ್ಞವಲ್ಕ್ಯ ಜನಕರಾಜನೇ, ಎರಡು ಪಾದಗಳನ್ನು ತತ್ತ್ವವನ್ನು ತಿಳಿದ ಬ್ರಾಹ್ಮಣರು ಅಧ್ಯಾತ್ಮವೆನ್ನುತ್ತಾರೆ. ಹೋಗಬೇಕಾದ ಸ್ಥಾನವು ಅಧಿಭೂತವೆಂದು, ವಿಷ್ಣುವು ಅಧಿದೈವತವೆಂದು ಕರೆಸಿಕೊಳ್ಳುತ್ತಾನೆ.
ಪಾಯುರಧ್ಯಾತ್ಮಮಿತ್ಯಾಹುರ್ಯಥಾತತ್ತ್ವಾರ್ಥದರ್ಶಿನಃ |
ವಿಸರ್ಗಮಧಿಭೂತಂ ಚ ಮಿತ್ರಸ್ತತ್ರಾಧಿದೈವತಮ್ ॥2॥
ಯಥಾವತ್ತಾಗಿ ತತ್ತ್ವಾರ್ಥಗಳನ್ನು ನೋಡುವ ಅಧ್ಯಾತ್ಮವಿದರು ಪಾಯುವನ್ನು ಅಧ್ಯಾತ್ಮವೆನ್ನುತ್ತಾರೆ. ಪೃಥಿವಿಯ

ಅನ್ನವಿಕಾರಾತ್ಮಕವಾದ ಮಲತ್ಯಾಗವನ್ನು ಅಧಿಭೂತ ಎನ್ನುತ್ತಾರೆ. ಪಾಯುವಿಗೆ ಮಿತ್ರನು ಅಧಿದೈವತೆ ಎನಿಸಿದ್ದಾನೆ.
ಉಪಸ್ಥೋಽಧ್ಯಾತ್ಮಮಿತ್ಯಾಹುರ್ಯಥಾಯೋಗನಿದರ್ಶನಮ್ |
ಅಧಿಭೂತಂ ತಥಾನಂದೋ ದೈವತಂ ಚ ಪ್ರಜಾಪತಿಃ ॥3॥
ಯೋಗಮತವನ್ನು ತಿಳಿದಿರುವ ವಿದ್ವಾಂಸರು ಜನನೇಂದ್ರಿಯವನ್ನು ಅಧ್ಯಾತ್ಮ ಎನ್ನುತ್ತಾರೆ. ಆನಂದವೆನಿಸಿದ ರೇತಸ್ಸು ಅಧಿಭೂತ ಎನಿಸಿದೆ. ಇದಕ್ಕೆ ಪ್ರಜಾಪತಿಯು ಅಧಿದೇವತೆಯಾಗಿದ್ದಾನೆ.
ಹಸ್ತಾವಧ್ಯಾತ್ಮಮಿತ್ಯಾಹುರ್ಯಥಾಸಾಂಖ್ಯನಿದರ್ಶನಮ್ |
ಕರ್ತವ್ಯಮಧಿಭೂತಂ ತು ಇಂದ್ರಸ್ತತ್ರಾಧಿದೈವತಮ್ ॥4॥
ಸಾಂಖ್ಯದರ್ಶಿಗಳು ಕೈಗಳನ್ನು ಅಧ್ಯಾತ್ಮ ಎನ್ನುತ್ತಾರೆ. ಕರ್ತವ್ಯವನ್ನು ಅಧಿಭೂತ ಎನ್ನುತ್ತಾರೆ. ಈ ಕೈಗಳಿಗೆ ಇಂದ್ರನು ಅಧಿದೇವತೆಯಾಗಿದ್ದಾನೆ.
ವಾಗಧ್ಯಾತ್ಮಮಿತಿ ಪ್ರಾಹುರ್ಯಥಾಶ್ರುತಿನಿದರ್ಶನಮ್ |
ವಕ್ತವ್ಯಮಧಿಭೂತಂ ತು ವಹ್ನಿಸ್ತತ್ರಾಧಿದೈವತಮ್ ॥5॥
ವೇದಾರ್ಥಜ್ಞರಾದ ಪಂಡಿತರು ಮಾತನ್ನು ಅಧ್ಯಾತ್ಮವೆನ್ನುತ್ತಾರೆ. ಹೇಳಬೇಕಾದ ಶಬ್ದವನ್ನು ಅಧಿಭೂತ ಎನ್ನುತ್ತಾರೆ. ಅಗ್ನಿಯು ಈ ವಾಗಿಂದ್ರಿಯಕ್ಕೆ ಅಧಿದೇವತೆ ಆಗಿದ್ದಾನೆ.
ಚಕ್ಷುರಧ್ಯಾತ್ಮಮಿತ್ಯಾಹುರ್ಯಥಾಶ್ರುತಿನಿದರ್ಶನಮ್ |
ರೂಪಮತ್ರಾಧಿಭೂತಂ ತು ಸೂರ್ಯಸ್ತತ್ರಾಧಿದೈವತಮ್ ॥6॥
ವೇದದ ನಿದರ್ಶನವನ್ನು ಹೇಳುವ ಜ್ಞಾನಿಗಳು ಕಣ್ಣನ್ನು ಅಧ್ಯಾತ್ಮವೆನ್ನುತ್ತಾರೆ. ರೂಪವನ್ನು ಅಧಿಭೂತ ಎನ್ನುತ್ತಾರೆ. ಕಣ್ಣಿಗೆ ಸೂರ್ಯನು ಅಧಿದೇವತೆಯಾಗಿದ್ದಾನೆ.
ಶ್ರೋತ್ರಮಧ್ಯಾತ್ಮಮಿತ್ಯಾಹುರ್ಯಥಾಶ್ರುತಿನಿದರ್ಶನಮ್ |
ಶಬ್ದಸ್ತತ್ರಾಧಿಭೂತಂ ತು ದಿಶಸ್ತತ್ರಾಧಿದೈವತಮ್ ॥7॥
ವೇದ ಸಿದ್ಧಾಂತಜ್ಞರು ಕಿವಿಯನ್ನು ಅಧ್ಯಾತ್ಮವೆನ್ನುತ್ತಾರೆ. ಶಬ್ದವನ್ನು ಅಧಿಭೂತ ಎನ್ನುತ್ತಾರೆ. ದಿಗಭಿಮಾನಿಗಳೇ ಶ್ರೋತ್ರೇಂದ್ರಿಯಕ್ಕೆ ಅಧಿದೇವತೆಗಳಾಗಿದ್ದಾರೆ.
ಜಿಹ್ವಾಮಧ್ಯಾತ್ಮಮಿತ್ಯಾಹುರ್ಯಥಾತತ್ತ್ವನಿದರ್ಶನಮ್ |
ರಸ ಏವಾಧಿಭೂತಂ ತು ಆಪಸ್ತತ್ರಾಧಿದೈವತಮ್ ॥8॥
ವೇದನಿದರ್ಶನವನ್ನು ಹೇಳುವ ವಿದ್ವಾಂಸರು ಜಿಹ್ವೆಯನ್ನು ಅಧ್ಯಾತ್ಮವೆನ್ನುತ್ತಾರೆ. ರಸವನ್ನು ಅಧಿಭೂತವೆಂದೂ, ಅಪ್ ಅಭಿಮಾನಿಯಾದ ವರುಣನನ್ನು ಜಿಹ್ವೆಗೆ ಅಧಿದೇವತೆ ಎಂದು ಹೇಳುತ್ತಾರೆ.
ಘ್ರಾಣಮಧ್ಯಾತ್ಮಮಿತ್ಯಾಹುರ್ಯಥಾಶ್ರುತಿನಿದರ್ಶನಮ್ |
ಗಂಧ ಏವಾಧಿಭೂತಂ ತು ಪೃಥಿವೀ ಚಾಧಿದೈವತಮ್ ॥9॥
ವೇದದೃಷ್ಟಾಂತವನ್ನು ಹೇಳುವ ವಿದ್ವಾಂಸರು ಘ್ರಾಣೇಂದ್ರಿಯವನ್ನು ಅಧ್ಯಾತ್ಮವೆಂದು, ಗಂಧವನ್ನು ಅಧಿಭೂತವೆಂದು, ಪೃಥಿವಿಗೆ ಅಭಿಮಾನಿನಿಯಾದ ಪಾರ್ವತಿಯನ್ನು ಅಧಿದೇವತೆ ಎಂದು ಹೇಳುತ್ತಾರೆ.
ತ್ವಗಧ್ಯಾತ್ಮಮಿತಿ ಪ್ರಾಹುಸ್ತತ್ತ್ವಬುದ್ಧಿವಿಶಾರದಾಃ |
ಸ್ಪರ್ಶ ಏವಾಧಿಭೂತಂ ತು ಪವನಶ್ಚಾಧಿದೈವತಮ್ ॥10॥
ತತ್ತ್ವಜ್ಞರಾದ ಜ್ಞಾನಿಗಳು ಚರ್ಮವನ್ನು ಅಧ್ಯಾತ್ಮವೆಂದು, ಸ್ಪರ್ಶವನ್ನು ಅಧಿಭೂತ ಎಂದು, ಅಹಂಕಾರಿಕ ವಾಯುವನ್ನು ಅಧಿದೇವತೆ ಎಂದು ಹೇಳುತ್ತಾರೆ.
ಮನೋಽಧ್ಯಾತ್ಮಮಿತಿ ಪ್ರಾಹುರ್ಯಥಾಶ್ರುತಿನಿದರ್ಶನಮ್ |
ಮಂತವ್ಯಮಧಿಭೂತಂ ತು ಚಂದ್ರಮಾಶ್ಚಾಧಿದೈವತಮ್ ॥11॥
ಶಾಸ್ತ್ರಜ್ಞರಾದ ವಿದ್ವಾಂಸರು ಮನಸ್ಸನ್ನು ಅಧ್ಯಾತ್ಮವೆಂದು, ಮನನ ಮಾಡಬೇಕಾದ ವಿಷಯವನ್ನು ಅಧಿಭೂತವೆಂದು, ಮನಸ್ಸಿಗೆ ಅಭಿಮಾನಿಯಾದ ಚಂದ್ರನನ್ನು ಅಧಿದೇವತೆ ಎಂದು ಹೇಳುತ್ತಾರೆ.
ಅಹಂಕಾರಿಕಮಧ್ಯಾತ್ಮಮಾಹುಸ್ತತ್ತ್ವನಿದರ್ಶನಮ್ |
ಅಭಿಮಾನ್ಯಧಿಭೂತಂ ತು ಭವಸ್ತತ್ರಾಧಿದೈವತಮ್ ॥12॥
ತತ್ತ್ವನಿದರ್ಶನವನ್ನು ಹೇಳುವ ವಿದ್ವಾಂಸರು ಅಹಂಕಾರವನ್ನೇ ಅಧ್ಯಾತ್ಮವೆಂದು, ಅಭಿಮಾನಕ್ಕೆ ವಿಷಯವಾದ ಧನ-ಕನಕಾದಿಗಳನ್ನು ಅಧಿಭೂತವೆಂದು, ರುದ್ರದೇವನನ್ನು ಈ ಅಹಂಕಾರತತ್ತ್ವಕ್ಕೆ ಅಧಿದೇವತೆ ಎಂದು ಹೇಳುತ್ತಾರೆ.
ಬುದ್ಧಿರಧ್ಯಾತ್ಮಮಿತ್ಯಾಹುರ್ಯಥಾವೇದನಿದರ್ಶನಮ್ |
ಬೋದ್ಧವ್ಯಮಧಿಭೂತಂ ತು ಕ್ಷೇತ್ರಜ್ಞೋಽತ್ರಾಧಿದೈವತಮ್ ॥13॥
ಪರತತ್ತ್ವವನ್ನು ಯಥಾರ್ಥವಾಗಿ ಬಲ್ಲವರು ಬುದ್ಧಿಯನ್ನು ಅಧ್ಯಾತ್ಮವೆಂದು, ತಿಳಿಯಬೇಕಾದುದನ್ನು ಅಧಿಭೂತವೆಂದು, ಕ್ಷೇತ್ರಜ್ಞನಾದ ಚತುರ್ಮುಖ ಬ್ರಹ್ಮನನ್ನು ಅಧಿದೇವತೆ ಎಂದು ಹೇಳುತ್ತಾರೆ.
ಏಷಾ ತೇ ವ್ಯಕ್ತತೋ ರಾಜನ್ ವಿಭೂತಿರನುವರ್ಣಿತಾ |
ಆದೌ ಮಧ್ಯೇ ತಥಾ ಚಾಂತೇ ಯಥಾತತ್ತ್ವೇನ ತತ್ತ್ವವಿತ್ ॥ 14॥
ತತ್ತ್ವವಿದನೇ, ನಿನಗೆ ಇಷ್ಟು ಹೊತ್ತು ಸೃಷ್ಟಿ-ಸ್ಥಿತಿ-ಲಯಗಳಲ್ಲಿ ಪ್ರಕಾಶವನ್ನು ಹೊಂದುವ ಗುಣಗಳನ್ನು, ವಿಭೂತಿಗಳನ್ನು ಯಥಾರ್ಥವಾಗಿ ತಿಳಿಸಿದ್ದೇನೆ.
ಪ್ರಕೃತಿರ್ಗುಣಾನ್ ವಿಕುರುತೇ ಸ್ವಚ್ಛಂದೇನಾತ್ಮಕಾಮ್ಯಯಾ |

ಕ್ರೀಡಾರ್ಥಂ ತು ಮಹಾರಾಜ ಶತಶೋಥ ಸಹಸ್ರಶಃ ॥15॥
ಪ್ರಕೃತಿಯು ತನಗೆ ಮನಬಂದಂತೆ ಸ್ವಚ್ಛಂದವಾಗಿ ವಿಹರಿಸಲು ತನ್ನ ಇಚ್ಛೆಯಿಂದಲೇ ತನ್ನ ಗುಣಗಳಾದ ಸತ್ತ್ವ-ರಜಸ್-ತಮೋಗುಣಗಳನ್ನು ಅನಂತ ಸಂಖ್ಯೆಯಲ್ಲಿ ಸೃಷ್ಟಿಸುತ್ತದೆ.
ಯಥಾ ದೀಪಸಹಸ್ರಾಣಿ ದೀಪಾನ್ಮರ್ತ್ಯಾಃ ಪ್ರಕುರ್ವತೇ |
ಪ್ರಕೃತಿಸ್ತಥಾ ವಿಕುರುತೇ ಪುರುಷಸ್ಯ ಗುಣಾನ್ ಬಹೂನ್ ॥16॥
ಯಾವ ರೀತಿ ಒಂದು ದೀಪದಿಂದ ಸಾವಿರಾರು ದೀಪಗಳನ್ನು ಮನುಷ್ಯನು ಬೆಳಗುತ್ತಾನೋ ಇದರಂತೆ ಪ್ರಕೃತಿಯೂ ಪುರುಷನ ದೃಷ್ಟಿಯಿಂದ ಒಂದು ಗುಣದಿಂದ ಅನೇಕ ಗುಣಗಳನ್ನು ಸೃಷ್ಟಿಸುತ್ತದೆ.
ಸತ್ತ್ವಮಾನಂದ ಉದ್ರೇಕಃ ಪ್ರೀತಿಃ ಪ್ರಾಕಾಶ್ಯಮೇವ ಚ |
ಸುಖಂ ಶುದ್ಧಿತ್ವಮಾರೋಗ್ಯಂ ಸಂತೋಷಃ ಶ್ರದ್ದಧಾನತಾ ॥17॥
ಅಕಾರ್ಪಣ್ಯಮಸಂರಂಭಃ ಕ್ಷಮಾ ಧೃತಿರಹಿಂಸತಾ |
ಸಮತಾ ಸತ್ಯಮಾನೃಣ್ಯಂ ಮಾರ್ದವಂ ಹ್ರೀರಚಾಪಲಮ್ ॥18॥
ಶೌಚಮಾರ್ಜವಮಾಚಾರಮಲೌಲ್ಯಂ ಹೃದ್ಯಸಂಭ್ರಮಃ |
ಇಷ್ಟಾನಿಷ್ಟವಿಯೋಗಾನಾಂ ಕೃತಾನಾಮವಿಕತ್ಥನಮ್ ॥19॥
ದಾನೇನ ಚಾನುಗ್ರಹಣಮಸ್ಪೃಹಾರ್ಥೇ ಪರಾರ್ಥತಾ |
ಸರ್ವಭೂತದಯಾ ಚೈವ ಸತ್ತ್ವಸ್ಯೈತೇ ಗುಣಾಃ ಸ್ಮೃತಾಃ ॥20॥
ಅಂತಃಸತ್ತ್ವ, ಆನಂದ, ಪ್ರೀತಿ, ಉತ್ಕರ್ಷ, ಜ್ಞಾನಶಕ್ತಿ, ಸುಖ, ಶುದ್ಧಿ, ಆರೋಗ್ಯ, ಸಂತೋಷ, ಶ್ರದ್ಧೆ, ಅಕಾರ್ಪಣ್ಯ, ದೀನನಾಗಿ ಇಲ್ಲದಿರುವುದು, ಕ್ರೋಧವಿಲ್ಲದಿರುವಿಕೆ, ಕ್ಷಮೆ, ಧೈರ್ಯ, ಅಹಿಂಸೆ, ಸಮತೆ, ಸತ್ಯ, ಯಾರ ಋಣವನ್ನು ಹೊತ್ತುಕೊಳ್ಳದಿರುವುದು, ಮೃದುತ್ವ, ಲಜ್ಜೆ, ಚಂಚಲತೆ ಹೊಂದದಿರುವಿಕೆ, ಶೌಚ, ಸರಳತೆ, ಸದಾಚಾರ, ವಿಷಯಗಳಲ್ಲಿ ಅಭಿಲಾಷೆ ಇಲ್ಲದಿರುವಿಕೆ, ಇಷ್ಟಪ್ರಾಪ್ತಿಯಾಗಿ ಅನಿಷ್ಟ ನಿವಾರಣೆಯಾದರೂ ಅಥವಾ ಇಷ್ಟವು ವಿಯೋಗವಾಗಿ ಅನಿಷ್ಟಪ್ರಾಪ್ತಿಯಾದರೂ ಸಮತ್ವವನ್ನು ಮನಸ್ಸಿನಲ್ಲಿ ಕಾಪಾಡಿಕೊಳ್ಳುವಿಕೆ, ಸತ್ಕರ್ಮವನ್ನು ಕೀರ್ತನ ಮಾಡದಿರುವಿಕೆ, ದಾನ ಮಾಡಿ ಪರಮಾತ್ಮನ ಪ್ರೀತಿಯನ್ನು ಬಯಸುವಿಕೆ, ಇತರರ ವಸ್ತುಗಳಲ್ಲಿ ನಿಸ್ಪೃಹತೆ, ಪರೋಪಕಾರ ಬುದ್ಧಿ, ಸಮಸ್ತ ಪ್ರಾಣಿಗಳಲ್ಲಿ ದಯೆ - ಇವೆಲ್ಲವೂ ಸತ್ತ್ವದ ಗುಣಗಳೆಂದು ಹೇಳಲ್ಪಟ್ಟಿವೆ.
ರಜೋಗುಣಾನಾಂ ಸಂಘಾತೋ ರೂಪಮೈಶ್ವರ್ಯವಿಗ್ರಹೇ |
ಅತ್ಯಾಶಿತ್ವಮಕಾರುಣ್ಯಂ ಸುಖದುಃಖೋಪಸೇವನಮ್ ॥21॥
ಪರಾಪವಾದೇಷು ರತಿರ್ವಿವಾದಾನಾಂ ಚ ಸೇವನಮ್ |
ಅಹಂಕಾರಸ್ತ್ವಸತ್ಕಾರಶ್ಚಿಂತಾ ವೈರೋಪಸೇವನಮ್ ॥22॥
ಪರಿತಾಪೋಽಪಹರಣಂ ಹ್ರೀನಾಶೋಽನಾರ್ಜವಂ ತಥಾ |
ಭೇದಃ ಪರುಷತಾ ಚೈವ ಕಾಮಕ್ರೋಧೌ ಮದಸ್ತಥಾ |
ದರ್ಪೋ ದ್ವೇಷೋಽತಿವಾದಶ್ಚ ಏತೇ ಪ್ರೋಕ್ತಾ ರಜೋಗುಣಾಃ ॥23॥
ರೂಪ, ಐಶ್ವರ್ಯ, ಕಲಹ, ಲೋಭ, ನಿಷ್ಕರುಣೆ, ಸುಖ-ದುಃಖಗಳ ಸೇವನೆ, ಮತ್ತೊಬ್ಬರನ್ನು ಆಪಾದಿತರನ್ನಾಗಿ ಮಾಡುವವರಲ್ಲಿ ಆಸಕ್ತಿ, ವಾದ-ವಿವಾದಗಳಲ್ಲಿ ಅಭಿರುಚಿ, ಅಹಂಕಾರ, ಪೂಜ್ಯರಲ್ಲಿ ಅಸತ್ಕಾರ, ಚಿಂತೆ, ವೈರಭಾವ, ಸಂತಾಪ, ಪರವಿತ್ತಾಪಹಾರ, ನಿರ್ಲಜ್ಜೆ, ಕುಟಿಲತೆ, ಭೇದ ಬುದ್ಧಿ, ಕ್ರೌರ್ಯ, ಕಾಮ, ಕ್ರೋಧ, ಮದ, ದರ್ಪ, ದ್ವೇಷ, ಅಧಿಕ ಮಾತು - ಇವೆಲ್ಲವೂ ರಜೋಗುಣಗಳೆಂದು ಹೇಳಲ್ಪಟ್ಟಿವೆ.
ತಾಮಸಾನಾಂ ತು ಸಂಘಾತಂ ಪ್ರವಕ್ಷ್ಯಾಮ್ಯುಪಧಾರ್ಯತಾಮ್ |
ಮೋಹೋಽಪ್ರಕಾಶಸ್ತಾಮಿಸ್ರಮಂಧತಾಮಿಸ್ರಸಂಜ್ಞಿತಮ್ ॥24॥
ಮುಂದೆ ತಮಸ್ಸಿನ ಗುಣಗಳನ್ನು ಹೇಳುತ್ತೇನೆ, ಆಸಕ್ತಿಯಿಂದ ಕೇಳು. ಮೋಹ, ಅಪ್ರಕಾಶ, ತಾಮಿಸ್ರ, ಅಂಧತಾಮಿಸ್ರ ಎಂಬವು ಸಾಕ್ಷಾತ್ ಮೂಲ ತಮಸ್ಸಿನ ರೂಪಾಂತರಗಳು.
ವ್ಯಾಖ್ಯಾನ ವಿಶೇಷ ಇಲ್ಲಿ ಮೋಹವೆಂದರೆ ಅಜ್ಞಾನ ಎಂದರ್ಥ.
ಮರಣಂ ಚಾಂಧತಾಮಿಸ್ರಂ ತಾಮಿಸ್ರಂ ಕ್ರೋಧ ಉಚ್ಯತೇ |
ತಮಸೋ ಲಕ್ಷಣಾನೀಹ ಭಕ್ಷಾಣಾಮಭಿರೋಚನಮ್ ॥25॥
ಅಂಧತಾಮಿಸ್ರದ ವಿಕಾರವಾದ ಮರಣ ಇದು ಎಲ್ಲ ರೀತಿಯ ವಿಸ್ಮರಣೆಯನ್ನು ನೀಡುತ್ತದೆ. ಕ್ರೋಧವು ಅವಿವೇಕರೂಪವಾದುದರಿಂದ ತಾಮಿಸ್ರದ ವಿಕಾರವೆನಿಸಿದೆ. ಇವೆಲ್ಲವೂ ತಮಸ್ಸಿನ ಲಕ್ಷಣಗಳು. ತಿನ್ನಬೇಕೆಂಬುದರಲ್ಲಿ ಅತಿಯಾದ ಆಸಕ್ತಿ.
ಭೋಜನಾನಾಮಪರ್ಯಾಪ್ತಿಸ್ತಥಾ ಪೇಯೇಷ್ವತೃಪ್ತತಾ |
ಗಂಧವಾಸೋ ವಿಹಾರೇಷು ಶಯನೇಷ್ವಾಸನೇಷು ಚ ॥26॥
ಎಷ್ಟು ಊಟ ಮಾಡಿದರೂ ತೃಪ್ತಿಯಾಗದಿರುವಿಕೆ. ಎಷ್ಟು ಕುಡಿದರೂ ಅತೃಪ್ತಿ. ದುರ್ಗಂಧವಾದ ಬಟ್ಟೆಗಳನ್ನು ಧರಿಸುವುದು, ಅನುಚಿತವಾದ ವಿಹಾರಗಳಲ್ಲಿ, ಅನುಚಿತವಾಗಿ ಮಲಗುವುದರಲ್ಲಿ, ಯಾವಾಗಲೂ ಸುಮ್ಮನೆ ಕುಳಿತಿರುವುದರಲ್ಲಿ ಹೆಚ್ಚಿನ ಆಸಕ್ತಿ.
ದಿವಾಸ್ವಪ್ನೇ ವಿವಾದೇ ಚ ಪ್ರಮಾದೇಷು ಚ ವೈ ರತಿಃ |
ನೃತ್ಯವಾದಿತ್ರಗೀತಾನಾಮಜ್ಞಾನಾಚ್ಛ್ರದ್ದಧಾನತಾ |
ದ್ವೇಷೋ ಧರ್ಮವಿಶೇಷಾಣಾಮೇತೇ ವೈ ತಾಮಸಾ ಗುಣಾಃ ॥27॥
ಹಗಲು ನಿದ್ದೆ, ವಾದ-ವಿವಾದ, ಪ್ರಮಾದಗಳಲ್ಲಿ ಆಸಕ್ತಿ, ನೃತ್ಯ, ಗೀತ, ವಾದ್ಯ, ಸಂಗೀತಗಳಲ್ಲಿ ಅಜ್ಞಾನದಿಂದ ಅತಿಯಾದ ಶ್ರದ್ಧೆ,

ಧರ್ಮಕಾರ್ಯಗಳಲ್ಲಿ ದ್ವೇಷ - ಇವೆಲ್ಲವೂ ತಾಮಸ ಗುಣ ಎನಿಸಿವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತಾರನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯರ ಸಂವಾದ
ಯಾಜ್ಞವಲ್ಕ್ಯಃ
ಏತೇ ಪ್ರಧಾನಸ್ಯ ಗುಣಾಸ್ತ್ರಯಃ ಪುರುಷಸತ್ತಮ |
ಕೃತ್ಸ್ನಸ್ಯ ಚೈವ ಜಗತಸ್ತಿಷ್ಠಂತ್ಯನಪಗಾಃ ಸದಾ ॥1॥
ಯಾಜ್ಞವಲ್ಕ್ಯ ಜನಕರಾಜನೇ, ಹಿಂದೆ ಹೇಳಿದ ಪ್ರಕೃತಿಯ ಮೂರು ಗುಣಗಳು ಪ್ರಪಂಚದ ಜೊತೆಗೆ ಯಾವಾಗಲೂ ಸಂಬಂಧವನ್ನು ಇಟ್ಟುಕೊಂಡಿರುತ್ತವೆ. ಜಗತ್ತನ್ನು ಬಿಟ್ಟು ಪ್ರಕೃತಿ ಗುಣಗಳು ಇರುವುದಿಲ್ಲ.
ದಶಧಾ ಸಹಸ್ರಧಾ ಚೈವ ತಥಾ ಶತಸಹಸ್ರಧಾ |
ಕೋಟಿಶಶ್ಚ ಕರೋತ್ಯೇಷ ಪ್ರತ್ಯಗಾತ್ಮಾನಮಾತ್ಮನಾ ॥2॥
ಅವ್ಯಕ್ತ ರೂಪನಾದ ಭಗವಂತನು ಪ್ರಕೃತಿಯ ಸ್ವಭಾವದ ಜೊತೆಗೆ ತನ್ನ ಇಚ್ಛೆಯಿಂದ ತನ್ನನ್ನು ಅವತಾರಾದಿ ರೂಪಭೇದದಿಂದ ಅಭಿವ್ಯಕ್ತಿಗೊಳಿಸಿಕೊಳ್ಳುತ್ತಾನೆ. ಸಮಸ್ತ ಪ್ರಕೃತಿಯ ಅಂತರ್ಯಾಮಿಯಾಗಿ ಹತ್ತು, ನೂರು, ಸಾವಿರ, ಹತ್ತುಸಾವಿರ, ಲಕ್ಷ, ಕೋಟಿ - ಈ ರೀತಿಯಾಗಿ ತನ್ನ ರೂಪಗಳನ್ನು ಅಭಿವ್ಯಕ್ತಿಗೊಳಿಸುತ್ತಾನೆ.
ಸಾತಿತ್ವಕಸ್ಯೋತ್ತಮಂ ಸ್ಥಾನಂ ರಾಜಸಸ್ಯೇಹ ಮಧ್ಯಮಮ್ |
ತಾಮಸಸ್ಯಾಧಮಂ ಸ್ಥಾನಂ ಪ್ರಾಹುರಧ್ಯಾತ್ಮಚಿಂತಕಾಃ ॥3॥
ಆತ್ಮತತ್ತ್ವಜ್ಞರು ಸಾತ್ವಿಕರಿಗೆ ಉತ್ತಮಸ್ಥಾನವನ್ನು, ರಜೋಗುಣವುಳ್ಳವರಿಗೆ ಇದೇ ಜನ್ಮದಲ್ಲಿ ಮಧ್ಯಮಸ್ಥಾನವನ್ನು, ತಮೋಗುಣವುಳ್ಳವರಿಗೆ ಅಧೋಗತಿಯನ್ನು ಹೇಳುತ್ತಾರೆ. ಮನುಷ್ಯನು ಪುಣ್ಯಕರ್ಮದಿಂದ ಉತ್ತಮ ಗತಿಯನ್ನು, ಪಾಪ ಕರ್ಮದಿಂದ ಮನುಷ್ಯಗತಿಯನ್ನು, ಕೇವಲ ಪಾಪಕರ್ಮದಿಂದ ಅಧೋಗತಿಯನ್ನು ಹೊಂದುತ್ತಾನೆ.
ಕೇವಲೇನೇಹ ಪುಣ್ಯೇನ ಗತಿಮೂರ್ಧ್ವಾಮವಾಪ್ನುಯಾತ್ |
ಪುಣ್ಯಪಾಪೇನ ಮಾನುಷ್ಯಮಧರ್ಮೇಣಾಪ್ಯಧೋಗತಿಮ್ ॥4॥
ಈ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಲ್ಲಿ ಪರಸ್ಪರ ಮೂರು ಗುಣಗಳ ಮಿಲನವು ಉಂಟಾಗುತ್ತದೆ. ಅರ್ಥಾತ್ ಸತ್ವ-ರಜಸ್ಸುಗಳು, ರಜಸ್ಸು- ತಮಸ್ಸುಗಳು, ತಮಸ್ಸು-ಸತ್ತ್ವಗಳು, ರಜಸ್ಸು-ತಮಸ್ಸುಗಳು ಪರಸ್ಪರ ಮೇಲನವಾಗುತ್ತವೆ.
ವ್ಯಾಖ್ಯಾನ ವಿಶೇಷ ಸಾತ್ವಿಕರಾದ ಇಂದ್ರಾದಿ ದೇವತೆಗಳಲ್ಲಿ ಕೆಲವೊಮ್ಮೆ ರಾಗಾದಿ ದೋಷಗಳಿರುವುದರಿಂದ ಅಲ್ಲಿಯೂ ರಜೋದೋಷವಿದೆ ಎಂಬುದನ್ನು ಅನುಮಾನ ಮಾಡಬಹುದು. ಮನುಷ್ಯಾದಿಗಳಲ್ಲಿ ಕೆಲವೊಮ್ಮೆ ಕ್ರೋಧಗಳು ಕಾಣಿಸುವುದರಿಂದ ರಜೋಗುಣದಲ್ಲಿ ತಮೋಗುಣದ ಮೇಲನವನ್ನು ಅನುಮಾನ ಮಾಡಬಹುದು. ತಾಮಸ ಜೀವರಲ್ಲಿ ಕೆಲವೊಮ್ಮೆ ತಪಸ್ಸು ಮಾಡುವಿಕೆಯು ಕಾಣಿಸುವುದರಿಂದ ತಮೋಗುಣದಲ್ಲಿಯೂ ಸತ್ವಗುಣವು ಇದೆ ಎಂಬುದನ್ನು ಊಹಿಸಬಹುದು. ಸತ್ತ್ವಗುಣದಲ್ಲಿ ತಮೋಗುಣದ ಕಿಂಚಿತ್ ಮಿಲನವೂ ಆಗುತ್ತದೆ ಎಂದು ತಿಳಿಯಬಹುದು. ಇದರಂತೆ ರಜೋಗುಣದಲ್ಲಿಯೂ ಸತ್ತ್ವಗುಣದ ಕಿಂಚಿತ್ ಮಿಲವನ್ನು ಊಹಿಸಬಹುದು. ಇಂದ್ರಾದಿಗಳಲ್ಲಿ ಕೆಲವೊಮ್ಮೆ ಅಸುರಾವೇಷದಿಂದ ವಿಷ್ಣು ವಿರೋಧವು ಕಾಣಿಸುವುದರಿಂದ ಸತ್ತ್ವಗುಣದಲ್ಲಿಯೂ ಕಿಂಚಿತ್ ತಮೋಗುಣದ ಪ್ರವೇಶವನ್ನು ಕಾಣಬಹುದು. ಆದ್ದರಿಂದಲೇ ಸತ್ತ್ವಗುಣದಲ್ಲಿ ತಮೋಗುಣದ ಪ್ರವೇಶವು ಅತ್ಯಂತ ಅಲ್ಪಪ್ರಮಾಣ ಉಳ್ಳದ್ದು. ರಾಜಸರಲ್ಲಿಯೂ ಅಲ್ಪಗುಣವಾದದ್ದೇ. ಸತ್ತ್ವಗುಣವು ರಾಜಸರಲ್ಲಿ ಅಲ್ಪ ಪ್ರಮಾಣದಲ್ಲಿ ಇರುತ್ತದೆ. ತಾಮಸರಲ್ಲಿ ಮತ್ತೂ ಅಲ್ಪಪ್ರಮಾಣದಲ್ಲಿ ಸತ್ತ್ವಗುಣದ ಪ್ರಮಾಣವು ಇರುತ್ತದೆ. ರಜೋಗುಣವು ತಾಮಸರಲ್ಲಿ ಅಲ್ಪಪ್ರಮಾಣದಲ್ಲೇ ಇರುತ್ತದೆ. ಹೀಗೆ ಒಂದೊಂದು ಗುಣಗಳು ಎಲ್ಲ ಗುಣದಲ್ಲಿಯೂ ಸ್ವಲ್ಪ ಪ್ರಮಾಣದಲ್ಲಿ ಮೇಲನವನ್ನು ಹೊಂದಿರುವುದರಿಂದ `ಈಶಾಂ ತ್ರಯಾಣಾಂ ದ್ವಂದ್ವಂ' ಎಂದು ವ್ಯಾಸರು ಹೇಳಿರುತ್ತಾರೆ. ವಾಸ್ತವಿಕವಾಗಿ ಗುಣತ್ರಯಗಳ ಮೇಲನವು ಎಲ್ಲ ಕಡೆಯೂ ಆಗಿದೆ ಎಂದು ತಿಳಿಯಬೇಕು. ಸತ್ತ್ವಗುಣವು ರಜಸ್-ತಮೋಗುಣಗಳಿಂದ ಕಿಂಚಿತ್ ಅವ್ಯಕ್ತವಾಗಿದೆ. ಅಲ್ಪ ರಜಸ್ಸು, ತಮಸ್ಸುಗಳಿಂದ ಕೂಡಿದೆ ಎಂದು ತಿಳಿಯಬೇಕು.
ದ್ವಂದ್ವಮೇಷಾಂ ತ್ರಯಾಣಾಂ ತು ಸನ್ನಿಪಾತಂ ಚ ತತ್ತ್ವತಃ |
ಸತ್ತ್ವಸ್ಯ ರಜಸಶ್ಚೈವ ತಮಸಶ್ಚ ಶೃಣುಷ್ವ ಮೇ ॥5॥
ಹೀಗೆ ಈ ಜೋಡಿಗಳಲ್ಲಿ ತಾತ್ವಿಕ ಮಿಶ್ರಣವು ಕಾಣುತ್ತದೆ. ಸತ್ವ, ರಜೋಗುಣ, ತಮೋಗುಣದ ಮೇಲನವನ್ನು ಹೇಳುವೆನು, ಕೇಳು.
ಸತ್ತ್ವಸ್ಯ ತು ರಜೋ ದೃಷ್ಟಂ ರಜಸಶ್ಚ ತಮಸ್ತಥಾ |
ತಮಸಶ್ಚ ತಥಾ ಸತ್ತ್ವಂ ಸತ್ತ್ವಸ್ಯಾವ್ಯಕ್ತಮೇವ ಚ ॥6॥
ಸತ್ವಗುಣದಲ್ಲಿ ರಜೋಗುಣದ ಮೇಲಿನ, ರಜೋಗುಣದ ಜೊತೆಗೆ ತಮೋಗುಣದ ಮೇಲನ, ಹಾಗೆಯೇ ತಮೋಗುಣದ ಜೊತೆಗೆ ಅವ್ಯಕ್ತವಾಗಿ ಸತ್ವಗುಣವು ಬೆರೆಯುತ್ತದೆ.
ಅವ್ಯಕ್ತಸತ್ತ್ವಸಂಯುಕ್ತೋ ದೇವಲೋಕಮವಾಪ್ನುಯಾತ್ |
ರಜಃಸತ್ತ್ವಸಮಾಯುಕ್ತೋ ಮನುಷ್ಯೇಷೂಪಪದ್ಯತೇ ॥7॥
ಯಾವ ಪುರುಷನಲ್ಲಿ ಅಧಿಕವಾದ ಸತ್ತ್ವಗುಣವು ಇರುತ್ತದೋ ಅವನು ದೇವಲೋಕಕ್ಕೆ ಹೋಗುತ್ತಾನೆ. ರಜ-ಸತ್ತ್ವಮಿಶ್ರಣದಿಂದ ಮನುಷ್ಯನಾಗುತ್ತಾನೆ.

ರಜಸ್ತಮೋಭ್ಯಾಂ ಸಂಯುಕ್ತಸ್ತಿರ್ಯಗ್ಯೋನಿಷು ಜಾಯತೇ |
ರಜಸ್ತಾಮಸಸತ್ತ್ವೈಶ್ಚ ಯುಕ್ತೋ ಮಾನುಷ್ಯಮಾಪ್ನುಯಾತ್ ॥8॥
ರಜಸ್ಸು, ತಮಸ್ಸುಗಳ ಮಿಶ್ರಣವುಳ್ಳವನು ತಿರ್ಯಗ್ಯೋನಿಯಲ್ಲಿ ಹುಟ್ಟುತ್ತಾನೆ. ಸತ್ತ್ವವು ರಾಜಸ-ತಾಮಸ ಗುಣಗಳ ಜೊತೆಗೆ ಸೇರಿದ್ದರೂ ಮನುಷ್ಯ ಜನ್ಮವನ್ನು ತಾಳುತ್ತಾನೆ.
ಪುಣ್ಯಪಾಪವಿಯುಕ್ತಾನಾಂ ಸ್ಥಾನಮಾಹುರ್ಮನೀಷಿಣಾಮ್ |
ಶಾಶ್ವತಂ ಚಾವ್ಯಯಂ ಚೈವ ಅಕ್ಷರಂ ಚಾಭಯಂ ಚ ಯತ್ ॥9॥
ರಾಜೇಂದ್ರನೇ, ಪುಣ್ಯ-ಪಾಪಗಳೆಂಬ ಕರ್ಮಗಳನ್ನೆಲ್ಲ ಪರಿಹರಿಸಿಕೊಂಡವರಿಗೆ ಶಾಶ್ವತವೂ, ನಿರ್ವಿಕಾರವೂ, ಅವ್ಯಯವೂ ಆದ ಮರಣವಿಲ್ಲದೆ ಇರುವಂತಹ ಸ್ಥಾನವು ದೊರಕುತ್ತದೆ ಎಂದು ಹೇಳುತ್ತಾರೆ.
ಜ್ಞಾನಿನಾಂ ಸಂಭವಂ ಶ್ರೇಷ್ಠಂ ಸ್ಥಾನಮವ್ರಣಮಚ್ಯುತಮ್ |
ಅತೀಂದ್ರಿಯಮಬೀಜಂ ಚ ಜನ್ಮಮೃತ್ಯುತಮೋನುದಮ್ ॥10॥
ಇದರಂತೆ ಜ್ಞಾನಿಗಳಿಗೆ ದೊರೆಯುವ ಸ್ಥಾನವು ಎಂದಿಗೂ ಚ್ಯುತಿ ಇಲ್ಲದ ಉತ್ತಮ ಸ್ಥಾನವು. ಆ ಸ್ಥಾನವು ಇಂದ್ರಿಯಗಳಿಗೆ ಗೋಚರಿಸುವುದಿಲ್ಲ. ಕರ್ಮದ ಬೀಜವನ್ನು ಹೊಂದಿರುವುದಿಲ್ಲ. ಚ್ಯುತಿ ಇಲ್ಲದೆ ಇರುವ ಉತ್ತಮ ಸ್ಥಾನವು ಆಗಿರುತ್ತದೆ. ಜನನ-ಮರಣಗಳಿಲ್ಲದೆ ಇರುವಂತಹ, ಅಜ್ಞಾನವನ್ನು ಪರಿಹರಿಸಿಕೊಂಡಿರುವಂತಹ ಸ್ಥಾನವಾಗಿದೆ.
ಅವ್ಯಕ್ತಸ್ಥಃ ಪರಶ್ಚೈವ ಪೃಷ್ಟಸ್ತೇಽಹಂ ನರಾಧಿಪ |
ಸ ಏಷ ಪ್ರಕೃತಿಸ್ಥೋ ಹಿ ತಸ್ಥುರಿತ್ಯಭಿಧೀಯತೇ ॥11॥
ಜನಕನೇ, ನನ್ನನ್ನು ಯಾವ ಅವ್ಯಕ್ತನಾದ ಪರಮಾತ್ಮನ ಬಗ್ಗೆ ಪ್ರಶ್ನೆ ಮಾಡಿದೆಯೋ ಆ ಪರವಸ್ತುವು ಪ್ರಕೃತಿಯಲ್ಲಿದ್ದರೂ ಸ್ವರೂಪತಃ ಅವ್ಯಕ್ತವೆಂದೇ ಜ್ಞಾನಿಗಳು ಹೇಳುತ್ತಾರೆ.
ಅಚೇತನಶ್ಚೈಷ ಮತಃ ಪ್ರಕೃತಿಸ್ಥಶ್ಚ ಪಾರ್ಥಿವ |
ಏತೇನಾಧಿಷ್ಠಿತಶ್ಚಾಯಂ ಸೃಜತೇ ಸಂಹರತ್ಯಪಿ ॥12॥
ಪ್ರಕೃತಿಯು ಅಚೇತನವಾದುದು. ಈ ಅಚೇತನವಾದ ಪ್ರಕೃತಿಯ ಒಳಗೆ ಅಂತರ್ಯಾಮಿಯಾದ ಪರಮಾತ್ಮನು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ನಡೆಸುತ್ತಾನೆ.
ವ್ಯಾಖ್ಯಾನ ವಿಶೇಷ ಇಲ್ಲಿ ಅವ್ಯಕ್ತಸ್ಥಃ ಎಂದರೆ ಪ್ರಕೃತಿಯ ಒಳಗಡೆ ಇರುವ ಜೀವ ಮತ್ತು ಪರಮಾತ್ಮ ಇಬ್ಬರನ್ನು ಸ್ವೀಕರಿಸಬಹುದು. ಅಜ್ಞಾನವು ಅಧಿಕವಾಗಿ ಇರುವುದರಿಂದ, ತತ್ತ್ವಜ್ಞಾನವಿಲ್ಲದಿರುವುದರಿಂದ ಜೀವನು ಅಚೇತನನೆನಿಸಿದ್ದಾನೆ. ಈ ಅವ್ಯಕ್ತ ಎನಿಸಿದ ಪ್ರಕೃತಿ ಒಳಗೆ ಇರುವ ಅಚೇತನನಾದ ಜೀವಾತ್ಮನ ಒಳಗಡೆ ಅಂತರ್ಯಾಮಿಯಾಗಿ ಪರಮಾತ್ಮನು ಇದ್ದಾನೆ. ಅವನ ಅನುಗ್ರಹದಿಂದ ಜೀವಾತ್ಮನು ಮುಕ್ತಿ ಸಾಧನಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಪರಮಾತ್ಮನ ಅನುಗ್ರಹದಿಂದ ಸಂಸಾರವನ್ನು ಸಂಹರಿಸಿಕೊಳ್ಳುತ್ತಾನೆ ಎಂದು ಗುರುರಾಜರು ಲಕ್ಷಾಲಂಕಾರದಲ್ಲಿ ವ್ಯಾಖ್ಯಾನಿಸಿರುತ್ತಾರೆ.
ಜನಕಃ
ಅನಾದಿನಿಧನಾವೇತಾವುಭಾವೇವ ಮಹಾಮುನೇ |
ಅಮೂರ್ತಿಮಂತಾವಚಲಾವಪ್ರಕಂಪ್ಯೌ ಚ ನಿರ್ವ್ರಣೌ ॥13॥
ಜನಕ ಮಹಾಮುನಿಯೇ, ಈ ಪರಮಾತ್ಮ ಜೀವಾತ್ಮರು ಆದ್ಯಂತವಿಲ್ಲದವರು. ನಿರ್ದಿಷ್ಟವಾದ ಶರೀರ ಇಲ್ಲದವರು, ನಿಶ್ಚಲರಾದವರು. ಯಾರಿಂದಲೂ ವಿಕಾರಕ್ಕೆ ಗುರಿಯಾಗದವರು. ಯಾವುದೇ ಭೇದಾದಿಗಳು ಇಲ್ಲದವರು.
ಅಗ್ರಾಹ್ಯಾವೃಷಿಶಾರ್ದೂಲ ಕಥಮೇಕೋ ಹ್ಯಚೇತನಃ |
ಚೇತನಾವಾಂಸ್ತಥಾ ಚೈಕಃ ಕ್ಷೇತ್ರಜ್ಞ ಇತಿ ಭಾಷಿತಃ ॥14॥
ಈ ಇಬ್ಬರು ಅಗ್ರಾಹ್ಯರಾಗಿರುವಾಗ ಒಂದನ್ನು ಅಚೇತನ, ಇನ್ನೊಂದು ಚೇತನ, ಒಬ್ಬನೇ ಕ್ಷೇತ್ರಜ್ಞ ಎಂದು ಹೇಗೆ ಹೇಳಬಹುದು?
ತ್ವಂ ಹಿ ವಿಪ್ರೇಂದ್ರ ಕಾರ್ತ್ಸ್ನ್ಯೇನ ಮೋಕ್ಷಧರ್ಮಮುಪಾಸಸೇ |
ಸಾಕಲ್ಯಂ ಮೋಕ್ಷಧರ್ಮಸ್ಯ ಶ್ರೋತುಮಿಚ್ಛಾಮಿ ತತ್ತ್ವತಃ ॥15॥
ಮಹರ್ಷಿಯೇ, ಮೋಕ್ಷಧರ್ಮಗಳೆಲ್ಲವನ್ನೂ ತಿಳಿದುಕೊಂಡ ನಿನ್ನಿಂದ ನಾನು ಇದರ ಬಗ್ಗೆ ತಿಳಿಯಲು ಅಪೇಕ್ಷೆ ಹೊಂದಿರುತ್ತೇನೆ.
ಅಸ್ತಿತ್ವಂ ಕೇವಲತ್ವಂ ಚ ವಿನಾಭಾವಂ ತಥೈವ ಚ |
ತಥೈವೋತ್ಕ್ರಮಣಸ್ಥಾನಂ ದೇಹಿನೋಽಪಿ ವಿಯುಜ್ಯತಃ ॥16॥
ಆದ್ದರಿಂದ ಆಸ್ತಿಕತ್ವದ ಬಗ್ಗೆ, ಮೋಕ್ಷದ ಬಗ್ಗೆ, ದೇಹೋತ್ಕ್ರಮಣ ರೂಪ ವಿನಾಶದ ಬಗ್ಗೆ, ಜೀವನಿಗೆ ದೇಹವನ್ನು ತ್ಯಜಿಸಿ ಉತ್ಕ್ರಮಣ ಹೊಂದಿದ ಬಳಿಕ ಸಿಗುವ ಸ್ಥಾನದ ಬಗ್ಗೆ ತಿಳಿಸಿರಿ.
ಕಾಲೇನ ಯದ್ಧಿ ಪ್ರಾಪ್ನೋತಿ ಸ್ಥಾನಂ ತದ್ ಬ್ರೂಹಿ ಮೇ ದ್ವಿಜ |
ಸಾಂಖ್ಯಜ್ಞಾನಂ ಚ ತತ್ತ್ವೇನ ಪೃಥಗ್ಯೋಗಂ ತಥೈವ ಚ ॥17॥
ಕಾಲಿಕವಾಗಿ ಯಾವ ಸ್ಥಾನವನ್ನು ಜೀವನು ಹೊಂದುತ್ತಾನೆ ಅದನ್ನು ನನಗೆ ತಿಳಿಸಿರಿ. ಯಥಾರ್ಥವಾಗಿ ಹೊಂದಲು ಯೋಗ್ಯವಾದ ಸಾಂಖ್ಯಜ್ಞಾನದ ಗತಿಯ ಕುರಿತು ನನಗೆ ಅರಿವನ್ನು ಮೂಡಿಸಿರಿ.
ಅರಿಷ್ಟಾನಿ ಚ ತತ್ತ್ವೇನ ವಕ್ತುಮರ್ಹಸಿ ಸತ್ತಮ |
ವಿದಿತಂ ಸರ್ವಮೇತತ್ತೇ ಪಾಣಾವಾಮಲಕಂ ಯಥಾ ॥18॥
ಜೀವನಿಗೆ ಒದಗುವ ಅನಿಷ್ಟಗಳು ಯಾವುದೆಂಬುದನ್ನು ಹೇಳಲು ಅರ್ಹನಾಗಿರುತ್ತಿ. ಈ ಎಲ್ಲ ವಿಚಾರಗಳನ್ನು ಕೈಯಲ್ಲಿರುವ ನೆಲ್ಲೀಕಾಯಿಯಂತೆ ನೀನು ತಿಳಿದು ಕೊಂಡಿರುವಿಯಷ್ಟೆ!
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ಮೋಕ್ಷಧರ್ಮೇ ಷಡ್ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೇಳನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯರ ಸಂವಾದ
ಯಾಜ್ಞವಲ್ಕ್ಯಃ
ನ ಶಕ್ಯೋ ನಿರ್ಗುಣಸ್ತಾತ ಗುಣೀಕರ್ತುಂ ವಿಶಾಂ ಪತೇ |
ಗುಣವಾಂಶ್ಚಾಪ್ಯಗುಣವಾನ್ಯಥಾತತ್ತ್ವಂ ನಿಬೋಧ ಮೇ ॥1॥
ಯಾಜ್ಞವಲ್ಕ್ಯ ಜನಕರಾಜನೇ, ಸತ್ವ-ರಜಸ್-ತಮೋಗುಣಗಳಿಲ್ಲದ ಭಗವಂತನನ್ನು ತ್ರಿಗುಣವಂತನಾದ ಜೀವನನ್ನಾಗಿ ಮಾಡಲು ಸಾಧ್ಯವಿಲ್ಲ. ಜೀವ- ಬ್ರಹ್ಮರಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಗುಣಬದ್ಧನಾಗಿರುವಂತಹ ಜೀವನನ್ನು ಗುಣಗಳ ಸಂಬಂಧ ಇಲ್ಲದೆ ಇರುವ ನಾರಾಯಣನನ್ನಾಗಿ ಮಾಡಲು ಸಾಧ್ಯವಿಲ್ಲ. ಇದನ್ನು ಯಥಾವತ್ತಾಗಿ ಉಪದೇಶಿಸುತ್ತೇನೆ, ತಿಳಿದುಕೊ.
ಗುಣೈರ್ಹಿ ಗುಣವಾನೇವ ನಿರ್ಗುಣಶ್ಚಾಗುಣಸ್ತಥಾ |
ಪ್ರಾಹುರೇವಂ ಮಹಾತ್ಮಾನೋ ಮುನಯಸ್ತತ್ತ್ವದರ್ಶಿನಃ ॥2॥
ತತ್ತ್ವಜ್ಞರು, ಮಹಾತ್ಮರೂ ಆದ ಋಷಿಗಳು ತ್ರಿಗುಣಗಳ ಸಂಬಂಧದಿಂದ ಜೀವನು ಗುಣಿಯಾಗುತ್ತಾನೆ ಎಂದು ಹೇಳುತ್ತಾರೆ. ತ್ರಿಗುಣಗಳ ಸಂಬಂಧವೇ ಇಲ್ಲದೇ ಇರುವಂತಹ ಭಗವಂತನು ಅಗುಣ ಎಂದು ಕರೆಸಿಕೊಳ್ಳುತ್ತಾನೆ.
ಗುಣಸ್ವಭಾವಸ್ತ್ವವ್ಯಕ್ತೋ ಗುಣಾನೇವಾಭಿವರ್ತತೇ |
ಉಪಯುಂಕ್ತೇ ಚ ತಾನೇವ ಸ ಚೈವಾಜ್ಞಃ ಸ್ವಭಾವತಃ ॥3॥
ಸ್ವಾಭಾವಿಕವಾಗಿ ಪ್ರಕೃತಿಯ ಗುಣಗಳಿಂದ ಬದ್ಧನಾಗಿರುವಂತಹ ಜೀವನು ಪರಮಾತ್ಮನಿಂದ ಭಿನ್ನನಾಗಿಯೇ ಇದ್ದು ತ್ರಿಗುಣಗಳ ಸಂಬಂಧದಿಂದ ಸಂಸಾರಕ್ಕೆ ಮರಳುತ್ತಾನೆ. ಈ ಪ್ರಕೃತಿಯ ಗುಣಗಳ ಸಂಬಂಧವನ್ನು ಬಿಡಿಸಿಕೊಳ್ಳಲಾಗದೆ ಅವುಗಳಲ್ಲಿಯೇ ಜೀವಾತ್ಮನು ತೊಳಲುತ್ತಿರುತ್ತಾನೆ.
ಅವ್ಯಕ್ತಸ್ತು ನ ಜಾನೀತೇ ಪುರುಷೋಽಜ್ಞಃ ಸ್ವಭಾವತಃ |
ನ ಮತ್ತಃ ಪರಮೋಽಸ್ತೀತಿ ನಿತ್ಯಮೇವಾಭಿಮನ್ಯತೇ ॥4॥
ಪ್ರಕೃತಿಯ ಕಾರ್ಯಗಳಿಂದ ಬದ್ಧನಾಗಿರುವಂತಹ ಜೀವನು ಸ್ವಾಭಾವಿಕವಾಗಿ ಅಜ್ಞಾನವನ್ನು ಹೊಂದಿದವನಾಗಿ, ನನಗಿಂತ ಸರ್ವೋತ್ತಮನಾಗಿದ್ದಾನೆ ಎಂಬುದನ್ನು ತಿಳಿಯದೆ ತನ್ನಲ್ಲಿಯೇ ಪರಬ್ರಹ್ಮನ ಆರೋಪವನ್ನು ಅಭಿಮಾನವನ್ನು ಹೊಂದಿರುತ್ತಾನೆ.
ಅನೇನ ಕಾರಣೇನೈತದವ್ಯಕ್ತಂ ಸ್ಯಾದಚೇತನಮ್ |
ನಿತ್ಯತ್ವಾದಕ್ಷರತ್ವಾಚ್ಚ ಕ್ಷರಾಣಾಂ ನ ತದನ್ಯಥಾ ॥5॥
ಈ ಕಾರಣದಿಂದ ಜಡವಾದ ತ್ರಿಗುಣಗಳ ಸಂಬಂಧವನ್ನು ಹೊಂದಿರುವಂತಹ ಜೀವನು ಅಚೇತನನೆಂದೇ ಕರೆಸಿಕೊಳ್ಳುತ್ತಾನೆ. ವಸ್ತುತಃ ನಿತ್ಯ ನಾಶರಹಿತನೂ, ನಿತ್ಯನೂ, ದೈಹಿಕವಾಗಿ ನಾಶವುಳ್ಳವನೂ ಆಗಿದ್ದಾನೆ. ಎಂದಿಗೂ ಪರಬ್ರಹ್ಮನು ತನಗಿಂತ ವಿರುದ್ಧವಾದಂತಹ ಜೀವನ ಸ್ವರೂಪವನ್ನು ಹೊಂದುವುದಿಲ್ಲ.
ಯದಾಽಜ್ಞಾನೇನ ಕುರ್ವೀತ ಗುಣಸರ್ಗಂ ಪುನಃ ಪುನಃ |
ಯದಾತ್ಮಾನಂ ನ ಜಾನೀತೇ ತದಾವ್ಯಕ್ತಮಿಹೋಚ್ಯತೇ ॥6॥
ಯಾವ ಕಾರಣದಿಂದ ಅಜ್ಞಾನದಿಂದಾಗಿ ಜೀವನು ಪುನಃ ಪುನಃ ಪ್ರಕೃತಿಗಳ ಸಂಬಂಧವನ್ನು ಹೊಂದುತ್ತಿರುತ್ತಾನೋ, ತನ್ನ ಸ್ವರೂಪವನ್ನು ತಿಳಿಯದೆ ಇದ್ದಾಗ ಈ ಜೀವನನ್ನು ಅವ್ಯಕ್ತ ಎಂದೇ ಹೇಳುತ್ತಾರೆ.
ಕರ್ತೃತ್ವಾಚ್ಚಾಪಿ ತತ್ತ್ವಾನಾಂ ತತ್ತ್ವಧರ್ಮಾತಥೋಚ್ಯತೇ |
ಕರ್ತೃತ್ವಾಚ್ಚೈವ ಯೋನೀನಾಂ ಯೋನಿಧರ್ಮಾ ತಥೋಚ್ಯತೇ ॥7॥
ಭಗವಂತನಾದರೂ ಇಪ್ಪತ್ನಾಲ್ಕು ತತ್ತ್ವಗಳನ್ನು ಸೃಷ್ಟಿಸುವವನಾದ್ದರಿಂದ ತತ್ತ್ವವೆಂಬ ಧರ್ಮವುಳ್ಳವನು ಎಂದು ಕರೆಸಿಕೊಳ್ಳುತ್ತಾನೆ. ಧನಸ್ವಾಮಿಯನ್ನು ಧನಿ ಎಂದು ಕರೆಯುವಂತೆ ತತ್ತ್ವಗಳನ್ನು ನಿರ್ಮಿಸುವುದರಿಂದ ತತ್ತ್ವವಾನ್ ಎಂದು ಭಗವಂತನನ್ನು ಕರೆಯಲಾಗುತ್ತದೆ. ಜೀವನಂತೆ ಪರಮಾತ್ಮನು ಎಂದಿಗೂ ಇಪ್ಪತ್ನಾಲ್ಕು ತತ್ತ್ವಗಳಿಂದ ಬದ್ಧನಾಗಿರುವುದಿಲ್ಲ.
ಕರ್ತೃತ್ವಾತ್ ಪ್ರಕೃತೀನಾಂ ತು ತಥಾ ಪ್ರಕೃತಿಧರ್ಮಿತಾ |
ಕರ್ತೃತ್ವಾಚ್ಚಾಪಿ ಬೀಜಾನಾಂ ಬೀಜಧರ್ಮೀ ತಥೋಚ್ಯತೇ ॥8॥
ಪರಮಾತ್ಮನು ಜೀವನಿಗೆ ಅಚೇತನತ್ವವನ್ನು ಸೃಷ್ಟಿ ಮಾಡುವವನಾಗಿದ್ದಾನೆ. ಪ್ರಕೃತಿಯ ಸಂಬಂಧವನ್ನು ಜೀವನಿಗೆ ನಿರ್ಮಾಣ ಮಾಡುವುದರಿಂದ ಪ್ರಕೃತಿ ಧರ್ಮನೆಂದೂ, ಬೀಜಗಳನ್ನುಂಟು ಮಾಡುವುದರಿಂದ ಬೀಜಧರ್ಮನೆಂದೂ ಭಗವಂತನನ್ನು ಕರೆಯುತ್ತಾರೆ.
ಗುಣಾನಾಂ ಪ್ರಸವತ್ವಾಚ್ಚ ತಥಾ ಪ್ರಸವಧರ್ಮವಾನ್ |
ಕರ್ತೃತ್ವಾತ್ ಪ್ರಲಯಾನಾಂ ಚ ತಥಾ ಪ್ರಲಯಧರ್ಮಿತಾ ॥9॥
ಶ್ರೀಹರಿಯು ಗುಣಗಳ ಉತ್ಪತ್ತಿಗೂ ಗುಣಗಳ ನಾಶಕ್ಕೂ ನಿಯಾಮಕನಾಗಿರುತ್ತಾನೆ. ಕರ್ತೃತ್ವ ಎಂಬ ಧರ್ಮವುಳ್ಳವನೂ, ಪ್ರಳಯವೆಂಬ ಧರ್ಮವುಳ್ಳವನೂ ಆಗಿದ್ದಾನೆ.
ಬೀಜತ್ವಾತ್ ಪ್ರಕೃತಿತ್ವಾಚ್ಚ ಪ್ರಲಯತ್ವಾತ್ತಥೈವ ಚ |
ಉಪೇಕ್ಷಕತ್ವಾದನ್ಯತ್ವಾದಭಿಮಾನಾಚ್ಚ ಕೇವಲಮ್ ॥10॥
ಮನ್ಯಂತೇ ಯತಯಃ ಶುದ್ಧಾ ಅಧ್ಯಾತ್ಮವಿಗತಜ್ವರಾಃ |

ಅನಿತ್ಯಂ ನಿತ್ಯಮವ್ಯಕ್ತಮೇವಮೇತದ್ಧಿ ಶುಶ್ರುಮ ॥11॥
ಜೀವಾತ್ಮನು ಉತ್ಪತ್ತಿ ಎನ್ನುವ ದೋಷವನ್ನು ಹೊಂದಿರುವುದರಿಂದ, ಪ್ರಕೃತಿಯ ಗುಣಗಳಿಂದ ಬದ್ಧನಾಗಿರುವುದರಿಂದ, ಪ್ರಳಯವೆಂಬ ನಾಶದ ಸ್ಥಿತಿಯನ್ನು ಹೊಂದಿರುವುದರಿಂದ, ಸಚ್ಛಾಸ್ತ್ರಗಳನ್ನು ಅಸಡ್ಡೆ ಮಾಡುವುದರಿಂದ, ತನ್ನ ಸ್ವಭಾವಕ್ಕೆ ವಿರುದ್ಧವಾದ ವಿಚಾರವನ್ನು ಹೊಂದಿರುವುದರಿಂದ, ಅನಿತ್ಯವಾದ ದೇಹದಲ್ಲಿ ನಿತ್ಯವೆಂದು ಅಭಿಮಾನವನ್ನು ಹೊಂದಿರುವುದರಿಂದ, ಪ್ರಕೃತಿಬದ್ಧನಾದ ಜೀವನನ್ನು ಅನಾದಿಕಾಲಿಯನಾಗಿದ್ದರೂ ಯತಿಗಳಾದರೂ ಅನಿತ್ಯನೆಂದೇ ಹೇಳುತ್ತಾರೆ. ಅಧ್ಯಾತ್ಮ ಚಿಂತಕರಾದ ಜ್ಞಾನಿಗಳು ಜೀವನನ್ನು ಅವ್ಯಕ್ತನೆಂದು ಹೇಳುತ್ತಾರೆ.
ಅವ್ಯಕ್ತೈಕತ್ವಮಿತ್ಯಾಹುರ್ನಾನಾತ್ವಂ ಪುರುಷೇ ತಥಾ |
ಸರ್ವಭೂತದಯಾವಂತಃ ಕೇವಲಂ ಜ್ಞಾನಮಾಸ್ಥಿತಾಃ ॥12॥
ಜಿತೇಂದ್ರಿಯರಾದ ಜ್ಞಾನಿಗಳು ಪ್ರಕೃತಿಯಲ್ಲಿ ಏಕತ್ವವನ್ನು ಹೇಳುತ್ತಾರೆ. ಪ್ರಕೃತಿಯು ಒಂದೇ ಎಂದು ಹೇಳುತ್ತಾ, ಪ್ರಕೃತಿಯ ಸಂಬಂಧವನ್ನು ಹೊಂದಿರುವಂತಹ ಜೀವರಲ್ಲಿ ನಾನಾತ್ವವನ್ನು, ಅನಂತತ್ವವನ್ನು ಹೇಳುತ್ತಾರೆ. ಜ್ಞಾನಿಗಳಾದವರು ಸಮಸ್ತ ಭೂತಗಳಲ್ಲಿ ದಯೆ ಉಳ್ಳವರು. ಕೇವಲ ಭಗವಂತನ ಧ್ಯಾನದಲ್ಲಿಯೇ ಆಸಕ್ತಿಯನ್ನು ಹೊಂದಿರುತ್ತಾರೆ.
ಅನ್ಯಃ ಸ ಪುರುಷೋಽವ್ಯಕ್ತಾದಧ್ರುವಾತ್ ಧ್ರುವಸಂಜ್ಞಕಃ |
ಯಥಾ ಮುಂಜ ಇಷೀಕಾಯಾಸ್ತಥೈವೈತದ್ಧಿ ಜಾಯತೇ ॥13॥
ಪರಮಪುರುಷನಾಗಿರುವಂತಹ ಪರಮಾತ್ಮನು ಪ್ರಕೃತಿಬಂಧನವನ್ನು ಹೊಂದಿರುವಂತಹ, ಅಧ್ರುವನೆನಿಸಿದ ಜೀವನಿಗಿಂತಲೂ ಭಿನ್ನನೆನಿಸಿದ್ದಾನೆ. ಧ್ರುವನೆನಿಸಿದ ಪರಮಾತ್ಮನು ಅಧ್ರುವನಾದ ಜೀವನಿಗಿಂತಲೂ ಭಿನ್ನನಾಗಿದ್ದಾನೆ. ಪರಬ್ರಹ್ಮನು ಮುಂಜ ಎಂಬ ಹುಲ್ಲಿನಿಂದ ಬೇರ್ಪಡುವ ಇಷೀಕದಂತೆ ಜೀವಾತ್ಮನಿಂದ ಅತ್ಯಂತ ಭಿನ್ನನಾಗಿಯೇ ಇರುತ್ತಾನೆ.
ಅನ್ಯಂ ಚ ಮಶಕಂ ವಿದ್ಯಾದನ್ಯಚ್ಚೋದುಂಬರಂ ತಥಾ |
ನ ಚೋದುಂಬರಸಂಯೋಗೈರ್ಮಶಕಸ್ತತ್ರ ಲಿಪ್ಯತೇ ॥14॥
ಅತ್ತಿಯ ಹಣ್ಣಿನಲ್ಲಿರುವಂತಹ ನುಸಿಗೂ ಅತ್ತಿ ಹಣ್ಣಿಗೂ ಹೇಗೆ ಅತ್ಯಂತ ಭೇದವು ನಿಶ್ಚಿತವಾಗಿದೆಯೋ, ಉದುಂಬರ ಹಣ್ಣಿನ ಸಂಯೋಗವಿದ್ದರೂ ಅದರ ಒಳಗಡೆ ಇರುವಂತಹ ನುಸಿಯು ಅದರ ಸಂಬಂಧವನ್ನು ಹೇಗೆ ಹೊಂದುವುದಿಲ್ಲವೋ ಇದರಂತೆ ಜೀವನಿಗೂ ಪರಮಾತ್ಮನಿಗೂ ಪರಸ್ಪರ ಭೇದವು ನಿರ್ಣಯವಾಗಿದೆ.
ಅನ್ಯ ಏವ ತಥಾ ಮತ್ಸ್ಯಸ್ತಥಾನ್ಯದುದಕಂ ಸ್ಮೃತಮ್ |
ನ ಚೋದಕಸ್ಯ ಸ್ಪರ್ಶೇನ ಮತ್ಸ್ಯೋ ಲಿಪ್ಯತಿ ಸರ್ವಶಃ ॥15॥
ಜಲದಲ್ಲಿ ಸಂಚರಿಸುವಂತಹ ಮತ್ಸ್ಯಕ್ಕೂ, ನೀರಿಗೂ ಹೇಗೆ ಭೇದವಿದೆಯೋ, ನೀರಿನ ಸ್ಪರ್ಶದಿಂದ ಮತ್ಸ್ಯವು ನೀರಿನ ತಾದಾತ್ಮ್ಯವನ್ನು ಎಂದಿಗೂ ಹೇಗೆ ಹೊಂದುವುದಿಲ್ಲವೋ ಅದರಂತೆ ಪರಮಾತ್ಮನಿಗೂ ಜೀವಾತ್ಮನಿಗೂ, ಜಡವಾದ ಪ್ರಪಂಚಕ್ಕೂ ಪರಮಾತ್ಮನಿಗೂ ಭೇದವೇ ನಿರ್ಣಯವಾಗಿದೆ.
ಅನ್ಯೋ ಹ್ಯಗ್ನಿರುಖಾಪ್ಯನ್ಯಾ ನಿತ್ಯಮೇವಮವೈಹಿ ಭೋಃ |
ನ ಚೋಪಲಿಪ್ಯತೇ ಸೋಽಗ್ನಿರುಖಾಸಂಸ್ಪರ್ಶನೇನ ವೈ ॥16॥
ಅಗ್ನಿಗೂ ಲೋಹಗಳಿಗೆ ಕಾಯಿಸುವುದಕ್ಕೆ ಬೇಕಾದ ಕುಮಟಿಗೂ ನಿತ್ಯವೂ ಭೇದವೇ ಇದೆ. ಲೋಹವನ್ನು ಕಾಯಿಸುವ ಸ್ಥಿತಿಗೂ ಅಗ್ನಿಗೂ ಸಂಬಂಧವಿರುವುದಿಲ್ಲ. ಇದರಂತೆ ಜೀವಾತ್ಮನಿಗೂ ಪರಮಾತ್ಮನಿಗೂ ಅಭೇದವು ಇರುವುದಿಲ್ಲ.
ಪುಷ್ಕರಂ ತ್ವನ್ಯದೇವಾತ್ರ ತಥಾನ್ಯದುದಕಂ ಸ್ಮೃತಮ್ |
ನ ಚೋದಕಸ್ಯ ಸ್ಪರ್ಶೇನ ಲಿಪ್ಯತೇ ತತ್ರ ಪುಷ್ಕರಮ್ ॥17॥
ನೀರಿನಲ್ಲಿರುವ ತಾವರೆ ಎಲೆಗೂ ನೀರಿಗೂ ಪರಸ್ಪರ ಭೇದವೇ ಇರುವಂತೆ ತಾವರೆ ಎಲೆಯು ನೀರಿನ ಸಂಬಂಧವನ್ನು ಹೊಂದಿದ್ದರೂ ನಿರ್ಲಿಪ್ತವಾಗಿರುವಂತೆ, ಜೀವಾತ್ಮನ ಶರೀರದಲ್ಲಿ ಜೀವಾತ್ಮ-ಪರಮಾತ್ಮ ಇಬ್ಬರಿದ್ದರೂ ಪರಮಾತ್ಮನಿಗೆ ಜೀವಾತ್ಮನ ಶರೀರಕೃತವಾದ ಲೇಪವು ಇರುವುದಿಲ್ಲ.
ಏತೇಷಾಂ ಸಹ ಸಂವಾಸಂ ನಿವಾಸಂ ಚೈವ ನಿತ್ಯಶಃ |
ಯಥಾ ತಥೈನಂ ಪಶ್ಯಂತಿ ನ ನಿತ್ಯಂ ಪ್ರಾಕೃತಾ ಜನಾಃ ॥18॥
ಈ ಜೀವಾತ್ಮ-ಪರಮಾತ್ಮರ ವಾಸವು ಒಂದೇ ದೇಹದಲ್ಲಿ ಉಂಟಾಗಿದ್ದರೂ ಜೀವಾತ್ಮನು ಪ್ರಕೃತಿಯ ಸಂಬಂಧದಿಂದ ದುಃಖಿತವಾಗಿ ವಾಸಿಸುವಂತೆ ಪರಮಾತ್ಮನು ಎಂದಿಗೂ ದುಃಖದ ಸಂಬಂಧದಿಂದ ಜೀವಾತ್ಮನ ಶರೀರದಲ್ಲಿ ವಾಸಿಸುವುದಿಲ್ಲ. ಪ್ರಕೃತಿಯ ಸಂಬಂಧವನ್ನು ಹೊಂದಿದ ಜೀವಾತ್ಮರು ಪರಮಾತ್ಮನು ಹೇಗೆ ನಿರ್ಲಿಪ್ತನಾಗಿದ್ದಾನೆ ಎಂಬ ವಿಷಯವನ್ನು ತಿಳಿಯುವುದೇ ಇಲ್ಲ.
ಯೇ ತ್ವನ್ಯಥೈವ ಪಶ್ಯಂತಿ ನ ಸಮ್ಯಕ್ತೇಷು ದರ್ಶನಮ್ |
ತೇ ವ್ಯಕ್ತಂ ನಿರಯಂ ಘೋರಂ ಪ್ರವಿಶಂತಿ ಪುನಃ ಪುನಃ ॥19॥
ಯಾರು ಈ ತತ್ತ್ವಕ್ಕೆ ವಿರುದ್ಧವಾಗಿ ಬ್ರಹ್ಮನೇ ಜೀವಾಕಾರದಿಂದ ಲೇಪವನ್ನು ಹೊಂದಿರುತ್ತಾನೆ ಎಂದು ತಿಳಿಯುತ್ತಾರೋ ಅವರಿಗೆ ಸರಿಯಾದ ಶಾಸ್ತ್ರಜ್ಞಾನವು ಉಂಟಾಗಿರುವುದಿಲ್ಲ. ಅವರು ಈ ಅನ್ಯಥಾ ಜ್ಞಾನದಿಂದಾಗಿ ಪುನಃ ಪುನಃ ಘೋರವಾದ ನರಕವನ್ನು ಪ್ರವೇಶಿಸುತ್ತಲೇ ಇರುತ್ತಾರೆ.
ಸಾಂಖ್ಯದರ್ಶನಮೇತತ್ತೇ ಪರಿಸಂಖ್ಯಾತಮುತ್ತಮಮ್ |
ಏವಂ ಹಿ ಪರಿಸಂಖ್ಯಾಯ ಸಾಂಖ್ಯಾಃ ಕೇವಲತಾಂ ಗತಾಃ ॥20॥
ಚೆನ್ನಾಗಿ ವಿಚಾರಿಸಲ್ಪಟ್ಟ ಯಥಾರ್ಥಜ್ಞಾನವನ್ನು ನೀಡುವ ಸಾಂಖ್ಯದರ್ಶನದ ಯೋಗವು ಪರಮಾತ್ಮನ ಸ್ವರೂಪವನ್ನು ಸ್ಪಷ್ಟವಾಗಿ ನಿರೂಪಿಸಿದೆ. ಈ ಸಾಂಖ್ಯ ದರ್ಶನವನ್ನು ಅವಲಂಬಿಸಿ ಯಥಾರ್ಥವಾಗಿ ಭಗವತ್ಪ್ರಜ್ಞೆಯನ್ನು ಹೊಂದಿದ ಜೀವಾತ್ಮರು ಪ್ರಕೃತಿಯ ಸಂಬಂಧವನ್ನು ದೂರೀಕರಿಸಿಕೊಂಡು ಶುದ್ಧರಾಗಿರುತ್ತಾರೆ.

ಯೇ ತ್ವನ್ಯೇ ತತ್ತ್ವಕುಶಲಾಸ್ತೇಷಾಮೇತನ್ನಿದರ್ಶನಮ್ |
ಅತಃ ಪರಂ ಪ್ರವಕ್ಷ್ಯಾಮಿ ಯೋಗಾನಾಮಪಿ ದರ್ಶನಮ್ ||21||
ತತ್ತ್ವಜ್ಞರಾದ ಇತರ ಶಾಸ್ತ್ರಜ್ಞರ ನಿಶ್ಚಯವು ಇದೇ ಆಗಿದೆ. ಯೋಗಿಗಳ ಜ್ಞಾನವು ಯಾವ ಕ್ರಮದಲ್ಲಿ ಇರುತ್ತದೆ ಎಂಬುದನ್ನು ಇನ್ನು ಮುಂದೆ ನಿನಗೆ ತಿಳಿಸುತ್ತೇನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಚತ್ವಾರಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೆಂಟನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯರ ಸಂವಾದ
ಯಾಜ್ಞವಲ್ಕ್ಯಃ
ಸಾಂಖ್ಯಜ್ಞಾನಂ ಮಯಾ ಪ್ರೋಕ್ತಂ ಯೋಗಜ್ಞಾನಂ ನಿಬೋಧ ಮೇ |
ಯಥಾಶ್ರುತಂ ಯಥಾದೃಷ್ಟಂ ತತ್ತ್ವೇನ ನೃಪಸತ್ತಮ ||1||
ಯಾಜ್ಞವಲ್ಕ್ಯ ರಾಜೇಂದ್ರನೇ, ಇಲ್ಲಿಯ ತನಕ ಸಾಂಖ್ಯಯೋಗವನ್ನು ನಿನಗೆ ತಿಳಿಸಿದ್ದೇನೆ. ಜ್ಞಾನಯೋಗವನ್ನು ನಿನಗೆ ತಿಳಿಸುತ್ತೇನೆ, ಕೇಳು. ನಾನು ಹಿಂದೆ ಜ್ಞಾನಿಗಳಿಂದ ಹೇಗೆ ಕೇಳಿದ್ದೇನೋ ಅದೇ ಕ್ರಮದಲ್ಲಿ ನಿನಗೆ ತಿಳಿಸುತ್ತೇನೆ.
ನಾಸ್ತಿ ಸಾಂಖ್ಯಸಮಂ ಜ್ಞಾನಂ ನಾಸ್ತಿ ಯೋಗಸಮಂ ಬಲಮ್ |
ತಾವುಭಾವೇಕಚರ್ಯೌ ತು ಉಭಾವನಿಧನೌ ಸ್ಮೃತೌ ||2||
ಜ್ಞಾನಯೋಗಕ್ಕೆ ಸಮಾನವಾದ ಜ್ಞಾನವು ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ. ಯೋಗಕ್ಕೆ ಸಮಾನವಾದ ಬಲವೂ ಇರುವುದಿಲ್ಲ. ಈ ಸಾಂಖ್ಯತತ್ತ್ವವು ಯೋಗವು, ಯೋಗಶಾಸ್ತ್ರವು ಇವೆರಡು ಒಂದೇ ಮಾರ್ಗವನ್ನು ಅನುಸರಿಸುವವುಗಳಾಗಿವೆ. ಈ ಎರಡು ಮಾರ್ಗಗಳು ಜೀವರಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಹರಿಸಲು ಸಮರ್ಥಗಳಾಗಿವೆ.
ಪೃಥಕ್ಪೃಥಕ್ತು ಪಶ್ಯಂತಿ ಯೇಲ್ಪಬುದ್ಧಿರತಾ ನರಾಃ |
ವಯಂ ತು ರಾಜನ್ ಪಶ್ಯಾಮ ಏಕಮೇವ ತು ನಿಶ್ಚಯಾತ್ ||3||
ಯಾವ ಮನುಷ್ಯರಿಗೆ ಅಲ್ಪವಾದ ಬುದ್ಧಿ ಇದೆಯೋ, ಅಲ್ಪ ಬುದ್ಧಿಯಲ್ಲೇ ಆಸಕ್ತರೋ ಅವರು ಈ ಸಾಂಖ್ಯಶಾಸ್ತ್ರ, ಯೋಗಶಾಸ್ತ್ರಗಳಲ್ಲಿ ಭೇದವನ್ನು ನೋಡುತ್ತಾರೆ. ನಾವಾದರೂ ದೃಢವಾದ ನಿಶ್ಚಯದಿಂದ ಅವೆರಡನ್ನೂ ಒಂದೇ ಎಂದು ತಿಳಿದಿದ್ದೇವೆ.
ಯದೇವ ಯೋಗಾಃ ಪಶ್ಯಂತಿ ತತ್ ಸಾಂಖ್ಯೈರಪಿ ದೃಶ್ಯತೇ |
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ತತ್ತ್ವವಿತ್ ||4||
ಯೋಗಶಾಸ್ತ್ರಜ್ಞರು ನೋಡುವುದನ್ನೇ ಸಾಂಖ್ಯಯೋಗಿಗಳು ನೋಡುತ್ತಾರೆ. ಈ ಎರಡೂ ಶಾಸ್ತ್ರಗಳನ್ನು ಒಂದೇ ಎಂದು ಭಾವಿಸುವವನೇ ನಿಜವಾದ ತತ್ತ್ವಜ್ಞನಾಗಿದ್ದಾನೆ.
ರುದ್ರಪ್ರಧಾನಾನಪರಾನ್ ವಿದ್ಧಿ ಯೋಗಾನ್ ಪರಂತಪ |
ತೇನೈವ ಚಾಥ ದೇಹೇನ ವಿಚರಂತಿ ದಿಶೋ ದಶ ||5||
ಈ ಸಾಂಖ್ಯಶಾಸ್ತ್ರವನ್ನು ಮೊದಲು ಉಪದೇಶಿಸಿದವನು ಮಹಾರುದ್ರ ದೇವನಾಗಿದ್ದಾನೆ. ಬಳಿಕ ಅನೇಕರು ಈ ಸಾಂಖ್ಯಯೋಗವನ್ನು ಅವಲಂಬಿಸಿರುತ್ತಾರೆ. ಈ ಸಾಂಖ್ಯಯೋಗದಿಂದಲೇ ಮನಬಂದಲ್ಲಿ ಸ್ವೇಚ್ಛೆಯಾಗಿ ಸಂಚರಿಸುವ ಸಾಮರ್ಥ್ಯವನ್ನು ಹೊಂದಿರುತ್ತಾರೆ.
ಯಾವದ್ಧಿ ಪ್ರಲಯಸ್ತಾತ ಸೂಕ್ಷ್ಮೇಣಾಷ್ಟಗುಣೇನ ವೈ |
ಯೋಗೇನ ಲೋಕಾನ್ ವಿಚರನ್ ಸುಖಂ ಸನ್ನ್ಯಸ್ಯ ಚಾನಘ ||6||
ಯೋಗಿಗಳು ತಮ್ಮ ಸ್ಥೂಲದೇಹವನ್ನು ಬಿಟ್ಟು ಪ್ರಳಯ ಕಾಲದ ತನಕ ಅಣಿಮಾ, ಲಘಿಮಾದಿ ಎಂಟುಸಿದ್ಧಿಗಳನ್ನು ಹೊಂದಿರುವ ಸೂಕ್ಷ್ಮವಾದ ದೇಹಗಳಿಂದ ಸುಖವಾಗಿ ಲೋಕಗಳಲ್ಲಿ ಸಂಚರಿಸುತ್ತಾರೆ.
ವೇದೇಷು ಚಾಷ್ಟಗುಣಿತಂ ಯೋಗಮಾಹುರ್ಮನೀಷಿಣಃ |
ಸೂಕ್ಷ್ಮೇಣಾಷ್ಟಗುಣೇನೈವ ನೇತರಂ ನೃಪಸತ್ತಮ ||7||
ಧೀಮಂತರಾದ ಯೋಗಿಗಳಿಗೆ ಅಣಿಮಾದಿ ಅಷ್ಟಗುಣಗಳಿವೆ. ವೇದಗಳಲ್ಲಿ ಹೇಳಿದ ಅಷ್ಟಾಂಗ ಯೋಗಗಳನ್ನು ಜ್ಞಾನಿಗಳಾದವರು ತಿಳಿದು ಸೂಕ್ಷ್ಮವಾದ ಈ ಅಣಿಮಾದಿ ಅಷ್ಟಗುಣಗಳನ್ನು ಹೊಂದಿದವರಾಗಿರುತ್ತಾರೆ. ಈ ಶಾಸ್ತ್ರಜ್ಞರನ್ನು ಹೊರತು ಬೇರೆಯವರಿಗೆ ಇವುಗಳನ್ನು ಹೊಂದಲು ಸಾಧ್ಯವಾಗುವುದಿಲ್ಲ.
ದ್ವಿಗುಣಂ ಯೋಗಕೃತ್ಯಂ ತು ಯೋಗಾನಾಂ ಪ್ರಾಹುರುತ್ತಮಮ್ |
ಸಗುಣಂ ನಿರ್ಗುಣಂ ಚೈವ ಯಥಾಶಾಸ್ತ್ರನಿದರ್ಶನಮ್ ||8||
ಯೋಗಿಗಳು ಯೋಗಕಾರ್ಯವನ್ನು ಶಾಸ್ತ್ರೀಯವಾಗಿ ಸಗುಣವೆಂದೂ, ನಿರ್ಗುಣವೆಂದೂ ಹೇಳಿರುತ್ತಾರೆ.
ಧಾರಣಾ ಚೈವ ಮನಸಃ ಪ್ರಾಣಾಯಾಮಶ್ಚ ಪಾರ್ಥಿವ |
ಪ್ರಾಣಾಯಾಮೋ ಹಿ ಸಗುಣೋ ನಿರ್ಗುಣಂ ಧಾರಣಂ ಮನಃ ||9||
ರಾಜೇಂದ್ರನೇ, ಮನಸ್ಸನ್ನು ಮೂಲಾಧಾರಮೊದಲಾದ ಸ್ಥಳಗಳಲ್ಲಿ ಧರಿಸುವುದು, ಪ್ರಾಣಧಾರಣೆ ಮಾಡುವುದು ಈ ರೀತಿಯಾದ ಪ್ರಾಣಾಯಾಮವು ಸಗುಣ ಯೋಗ ಎನಿಸಿದರೆ, ಮನಸ್ಸನ್ನು ಏಕಾಗ್ರತೆಯಿಂದ ನಿಲ್ಲಿಸುವುದು, ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಮನಸ್ಸನ್ನು ತ್ರಿಗುಣಗಳಸಂಬಂಧವನ್ನು ಹೊಂದದಿರುವ ಭಗವಂತನಲ್ಲಿಯೇ ಏಕಾಗ್ರಗೊಳಿಸುವುದು ನಿರ್ಗುಣ ಯೋಗ ಎನಿಸಿದೆ.
ಯತ್ರ ದೃಶ್ಯೇತ ಮುಂಚನ್ ವೈ ಪ್ರಾಣಾನ್ಮೈಥಿಲಸತ್ತಮ |

ವಾತಾಧಿಕ್ಯಂ ಭವತ್ಯೇವ ತಸ್ಮಾದ್ದ್ವಿ ನ ಸಮಾಚರೇತ್ ॥10॥
ಮಿಥಿಲಾಧಿಪನೇ, ಇಂದ್ರಿಯಗಳು ಎಲ್ಲಿ ನೋಡಲು ಬಯಸುತ್ತವೋ ಅಲ್ಲಿಗೆ ಅವುಗಳನ್ನು ಬಿಡುತ್ತಾ ಒಂದು ವಸ್ತುವಿನ ಏಕಾಗ್ರತೆಯನ್ನು ಹೊಂದದಿದ್ದಲ್ಲಿ ಇಂದ್ರಿಯಗಳಿಗೆ ಪರಮಾತ್ಮನೆಂಬ ಒಂದೇ ವಸ್ತುವಿನ ಧ್ಯಾನವನ್ನು ನೀಡದೆ ಪ್ರಾಣಾಯಾಮಾದಿಗಳಲ್ಲಿ ನಿರತನಾದಲ್ಲಿ ವಾತರೋಗವು ಅಧಿಕವಾಗುತ್ತದೆ.ಆದ್ದರಿಂದ ಧ್ಯಾನವಿಲ್ಲದಿರುವ ಪ್ರಾಣಾಯಾಮವನ್ನು ಎಂದಿಗೂ ಆಚರಿಸಬಾರದು.
ನಿಶಾಯಾಃ ಪ್ರಥಮೇ ಯಾಮೇ ಚೋದನಾ ದ್ವಾದಶ ಸ್ಮೃತಾಃ |
ಮಧ್ಯೇ ಸುಪ್ತತ್ವಾ ಪರೇ ಯಾಮೇ ದ್ವಾದಶೈವ ತು ಚೋದನಾಃ ॥11॥
ರಾತ್ರಿಯ ಪ್ರಥಮ ಯಾಮದಲ್ಲಿ ಹನ್ನೆರಡು ಘಟಿಕಾ ಪರ್ಯಂತ ಯೋಗಾಭ್ಯಾಸವನ್ನು ಮಾಡಬೇಕು. ಹನ್ನೆರಡು ಗಂಟೆಯ ತನಕ ಯೋಗಾಭ್ಯಾಸದ ಕಾಲ ಎಂದು ನಿರ್ಧರಿಸಲ್ಪಟ್ಟಿದೆ. ಮಧ್ಯರಾತ್ರಿ ನಿದ್ರೆಯ ಕಾಲವು. ಆ ಸಮಯದಲ್ಲಿ ಯೋಗಾಭ್ಯಾಸವು ಉಚಿತವಾದುದಲ್ಲ. ನಂತರದ ಪ್ರಾತಃಕಾಲದ ಕೊನೆಯ ಯಾಮದಲ್ಲಿ ಹನ್ನೆರಡು ಘಟಿಕಾಪರ್ಯಂತ ಪ್ರಾಣಾಯಾಮವನ್ನು, ಯೋಗಾಭ್ಯಾಸವನ್ನು ನಡೆಸಬೇಕು (ಒಟ್ಟಿನಲ್ಲಿ ಬೆಳಿಗ್ಗೆ ನಾಲ್ಕು ಗಂಟೆಯಿಂದ ರಾತ್ರಿ ಹನ್ನೆರಡು ಗಂಟೆಯ ತನಕ ಭಗವದ್ಧ್ಯಾನವನ್ನು ವಿಧ ವಿಧವಾಗಿ ಆಚರಿಸಲು ಯೋಗ್ಯಕಾಲವೇ ಎನಿಸಿದೆ).
ತದೇವಮುಪಶಾಂತೇನ ದಾಂತೇನೈಕಾಂತಶೀಲಿನಾ |
ಆತ್ಮಾರಾಮೇಣ ಬುದ್ಧೇನ ಯೋಕ್ತವ್ಯೋऽऽತ್ಮಾ ನ ಸಂಶಯಃ ॥12॥
ಹೀಗೆ ಮನಸ್ಸಿನ ಶಾಂತಿಯನ್ನು, ಇಂದ್ರಿಯಜಯವನ್ನು, ಏಕಾಂತಶೀಲವನ್ನು ಸಾಧಿಸುತ್ತಾ, ಆತ್ಮಾರಾಮನಾಗಿ ಜ್ಞಾನಿಯಾದವನಿಗೆ ಮನಸ್ಸು ಪರಮಾತ್ಮನಲ್ಲೇ ಏಕಾಗ್ರತೆಯನ್ನು ಹೊಂದುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಪಂಚಾನಾಮಿಂದ್ರಿಯಾಣಾಂ ತು ದೋಷಾನಾಕ್ಷಿಪ್ಯ ಪಂಚಧಾ |
ಶಬ್ದಂ ಸ್ಪರ್ಶಂ ತಥಾ ರೂಪಂ ರಸಂ ಗಂಧಂ ತಥೈವ ಚ ॥13॥
ಪ್ರತಿಭಾಮಪವರ್ಗಂ ಚ ಪ್ರತಿಸಂಹೃತ್ಯ ಮೈಥಿಲ |
ಇಂದ್ರಿಯಗ್ರಾಮಮಖಿಲಂ ಮನಸ್ಯಭಿನಿವೇಶ್ಯ ಹ ॥14॥
ಜ್ಞಾನಿಗಳಾದವರು ಇಂದ್ರಿಯಗಳ ದೋಷವೆನಿಸಿದ ಶಬ್ದ, ಸ್ಪರ್ಶ,ರೂಪ, ರಸ, ಗಂಧಗಳನ್ನು ನೀಗಿಸಿಕೊಂಡು ಭಗವಂತನ ಜ್ಞಾನವನ್ನು ಮೋಕ್ಷದ ವಿಚಾರವನ್ನು ಮನಸ್ಸಿನಲ್ಲಿ ಸಂಚರಿಸಿಕೊಂಡು ಸಮಸ್ತ ಇಂದ್ರಿಯಗಳನ್ನು ಮನಸ್ಸಿನಲ್ಲಿಯೇ ನೆಲೆಗೊಳಿಸಿಕೊಂಡು ಭಗವಂತನನ್ನು ಚಿಂತಿಸಬೇಕು.
ಮನಸ್ತಥೈವಾಹಂಕಾರೇ ಪ್ರತಿಷ್ಠಾಪ್ಯ ನರಾಧಿಪ |
ಅಹಂಕಾರಂ ತಥಾ ಬುದ್ಧೌ ಬುದ್ಧಿಂ ಚ ಪ್ರಕೃತಾವಪಿ ॥15॥
ಇಂದ್ರಿಯಗಳೆಲ್ಲ ಮನಸ್ಸಿನಲ್ಲಿ ನೆಲೆಗೊಂಡ ಬಳಿಕ ಮನಸ್ತತ್ತ್ವವನ್ನು ಅಹಂಕಾರ ತತ್ತ್ವದಲ್ಲಿ ಪ್ರತಿಷ್ಠಾಪಿಸಿ, ಅಹಂಕಾರತತ್ತ್ವವನ್ನು ಬುದ್ಧಿತತ್ತ್ವದಲ್ಲಿ ನೆಲೆಗೊಳಿಸಿ, ಬುದ್ಧಿತತ್ತ್ವವನ್ನು ಮೂಲಪ್ರಕೃತಿ ಅಭಿಮಾನಿಯಾದ ಲಕ್ಷ್ಮೀತತ್ತ್ವದಲ್ಲಿ ಏಕಾಗ್ರಗೊಳಿಸಿಕೊಳ್ಳಬೇಕು.
ಏವಂ ಹಿ ಪರಿಸಂಖ್ಯಾಯ ತತೋ ಧ್ಯಾಯೇತ ಕೇವಲಮ್ |
ವಿರಜಸ್ಕಮಲಂ ನಿತ್ಯಮನಂತಂ ಶುದ್ಧಮವ್ರಣಮ್ ॥16॥
ಈ ರೀತಿಯಾಗಿ ತತ್ತ್ವಗಳನ್ನು ಸರಿಯಾಗಿ ನಿರ್ವಹಿಸಿಕೊಳ್ಳುತ್ತಾ ಪ್ರಕೃತಿ ಸಂಬಂಧ ದೂರನಾದ ಭಗವಂತನನ್ನು ಆ ಪ್ರಕೃತಿತತ್ತ್ವದಲ್ಲಿ ಧ್ಯಾನ ಮಾಡಬೇಕು. ಭಗವಂತನಾದರೂ ರಜೋದೋಷದಿಂದ ರಹಿತನೂ, ನಿರ್ಮಲನೂ, ನಿತ್ಯನೂ, ಅನಂತನೂ, ಶುದ್ಧನೂ, ದೋಷರಹಿತನೂ ಆಗಿರುತ್ತಾನೆ.
ತಸ್ಥುಷಂ ಪುರುಷಂ ಸತ್ತ್ವಮಭೇದ್ಯಮಜರಾಮರಮ್ |
ಶಾಶ್ವತಂ ಚಾವ್ಯಯಂ ಚೈವ ಈಶಾನಂ ಬ್ರಹ್ಮ ಚಾವ್ಯಯಮ್ ॥17॥
ಸಮಸ್ತ ಜೀವರಿಗೆ ಅಂತರ್ಯಾಮಿಯೂ, ಪೂರ್ಣನೂ, ಅಭೇದ್ಯನೂ, ಜರಾ- ಮರಣ ರಹಿತನೂ, ಶಾಶ್ವತನೂ, ಅವ್ಯಯನೂ, ಸಮಸ್ತ ಜೀವರಿಗೆ ನಿಯಾಮಕನೂ, ಗುಣಪರಿಪೂರ್ಣನೂ ಆಗಿರುತ್ತಾನೆ.
ಯುಕ್ತಸ್ಯ ತು ಮಹಾರಾಜ ಲಕ್ಷಣಾನ್ಯುಪಧಾರಯೇತ್ |
ಲಕ್ಷಣಂ ತು ಪ್ರಸಾದಸ್ಯ ಯಥಾ ತೃಪ್ತಃ ಸುಖಂ ಸ್ವಪೇತ್ ॥18॥
ಈ ಪರಬ್ರಹ್ಮನಲ್ಲಿಯೇ ಮನಸ್ಸನ್ನು ಧರಿಸುವವನಾಗು. ಯೋಗದ ಲಕ್ಷಣಗಳನ್ನು ತಿಳಿದು ಭಗವಂತನನ್ನೇ ಚಿಂತಿಸಬೇಕು. ಯೋಗಯುಕ್ತನಾದ ವ್ಯಕ್ತಿಗೆ ಪ್ರಸನ್ನತೆಯ ಲಕ್ಷಣವೇನೆಂದರೆ ತೃಪ್ತಿಯನ್ನು ಹೊಂದಿದವನಾಗಿ ಸುಖವಾಗಿ ನಿದ್ರಿಸುತ್ತಾನೆ.
ನಿವಾತೇ ತು ಯಥಾ ದೀಪೋ ಜ್ವಲೇತ್ ಸ್ನೇಹಸಮನ್ವಿತಃ |
ನಿಶ್ಚಲೋರ್ಧ್ವಶಿಖಸ್ತದ್ವದ್ಯುಕ್ತಮಾಹುರ್ಮನೀಷಿಣಃ ॥19॥
ಯೋಗಿಯು, ಗಾಳಿ ಇಲ್ಲದ ಸ್ಥಳದಲ್ಲಿ ನಿಶ್ಚಲವಾಗಿ ಉರಿಯುವ ದೀಪಜ್ವಾಲೆಯಂತೆ ಇರುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ.
ಪಾಷಾಣ ಇವ ಮೇಘೋತ್ಥೈರ್ಯಥಾ ಬಿಂದುಭಿರಾಹತಃ |
ನಾಲಂ ಚಾಲಯಿತುಂ ಶಕ್ಯಸ್ತಥಾ ಯುಕ್ತಸ್ಯ ಲಕ್ಷಣಮ್ ॥20॥
ಮೇಘಗಳಿಂದ ಅತ್ಯಂತ ಪ್ರಬಲವಾದ ನೀರಿನ ಧಾರೆಗಳು ಧರೆಗೆ ಉರುಳುತ್ತಿದ್ದರೂ ಆ ನೀರಿನ ಧಾರೆಗಳು ಕಲ್ಲುಬಂಡೆಯನ್ನು ಹೇಗೆ ಕದಲಿಸಲು, ಕರಗಿಸಲು ಹೇಗೆ ಸಮರ್ಥವಾಗುವುದಿಲ್ಲವೋ ಅದರಂತೆ ಯೋಗಿಯ ನಿರಂತರ ಭಗವಂತನ ಪ್ರಜ್ಞೆಯು ಜಗತ್ತಿನ ಬಾಹ್ಯವಿಚಾರ ಧಾರೆಗಳಿಂದ ಅಲುಗಾಡಿಸಲಾಗದು.
ಶಂಖದುಂದುಭಿನಿರ್ಘೋಷೈರ್ವಿವಿಧೈರ್ಗೀತವಾದಿತೈಃ |
ಕ್ರಿಯಮಾಣೈರ್ನ ಕಂಪೇತ ಯುಕ್ತಸ್ಯೈತನ್ನಿದರ್ಶನಮ್ ॥21॥

ಶಂಖದುಂದುಭಿಯ ಘೋಷಗಳಿಗೂ, ಅನೇಕ ರೀತಿಯ ದಾನಗಳಿಗೂ ಮನಸ್ಸು ಕದಡದಿರುವುದೇ ಪಕ್ವ ಯೋಗಿಯ ಲಕ್ಷಣವು.
ತೈಲಪಾತ್ರಂ ಯಥಾ ಪೂರ್ಣಂ ಕರಾಭ್ಯಾಂ ಗೃಹ್ಯ ಪೂರುಷಃ |
ಸೋಪಾನಮಾರುಹೇದ್ಭೀತಸ್ತರ್ಜ್ಯಮಾನೋಽಸಿಪಾಣಿಭಿಃ ॥22॥
ಸಂಯತಾತ್ಮಾ ಭಯಾತ್ ತೇಷಾಂ ನ ಪಾತ್ರಾದ್ ಕಮುತ್ಸೃಜೇತ್ |
ತಥೈವೋತ್ತರಮಾಣಸ್ಯ ಏಕಾಗ್ರಮನಸಸ್ತಥಾ ॥23॥
ಒಬ್ಬನು ಎಣ್ಣೆ ತುಂಬಿದ ಪಾತ್ರೆಯನ್ನು ಕೈಗಳಲ್ಲಿ ಹಿಡಿದುಕೊಂಡು ಅತ್ಯಂತ ಕಡಿದಾದ ಬೆಟ್ಟಗಳನ್ನು ಏರುವಾಗ ಖಡ್ಗಪಾಣಿಗಳಾದ ಶತ್ರುಗಳು ಬಂದು ಅವನನ್ನು ಕೊಲ್ಲುವುದಾಗಿ ಹೆದರಿಸಿದರೂ ಅವರ ಭಯಕ್ಕೆ ಮನಸ್ಸನ್ನು ಕೆಡಿಸಿಕೊಳ್ಳದೆ ಒಂದು ಹನಿ ಎಣ್ಣೆಯೂ ಕೆಳಗೆ ಬೀಳದಂತೆ ತನ್ನ ಗುರಿಯನ್ನು ಹೇಗೆ ಹೊಂದುತ್ತಾನೋ ಅದರಂತೆ ಯೋಗಿಯಾದವನು ಯೋಗದ ಬಲದಿಂದ ಮನಸ್ಸನ್ನು, ಇಂದ್ರಿಯಗಳನ್ನು ಸ್ವಲ್ಪ ಮಾತ್ರವೂ ಕದಡದಂತೆ ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ.
ಸ್ಥಿರತ್ವಾದಿಂದ್ರಿಯಾಣಾಂ ತು ನಿಶ್ಚಲತ್ವಾತ್ತಥೈವ ಚ |
ಏವಂ ಯುಕ್ತಸ್ಯ ತು ಮುನೇರ್ಲಕ್ಷಣಾನ್ಯುಪಧಾರಯೇತ್ ॥24॥
ಇಂದ್ರಿಯಗಳು ಸ್ಥಿರವಾಗಿ ಭಗವಂತನಲ್ಲಿ ನೆಲೆಗೊಂಡಿರುವುದರಿಂದ ವಿಷಯ ಪದಾರ್ಥಗಳ ಕಡೆ ಚಲಿಸದಿರುವುದರಿಂದ ಯೋಗಿಯು ಭಗವಂತನಲ್ಲಿಯೇ ಯುಕ್ತನಾಗಿದ್ದಾನೆ ಎಂದು ಮುನಿಯ ಲಕ್ಷಣವನ್ನು ತಿಳಿದುಕೊಳ್ಳಬಹುದು.
ಸ ಯುಕ್ತಃ ಪಶ್ಯತಿ ಬ್ರಹ್ಮ ಯತ್ತತ್ ಪರಮಮವ್ಯಯಮ್ |
ಮಹತಸ್ತಮಸೋ ಮಧ್ಯೇ ಸ್ಥಿತಂ ಜ್ವಲನಸನ್ನಿಭಮ್ ॥25॥
ಅಂತಹ ಯೋಗಯುಕ್ತನಾದ ಸಾಧಕನು ಸರ್ವೋತ್ತಮನಾದ, ನಾಶರಹಿತನಾದ, ಗುಣಪರಿಪೂರ್ಣನಾದ ಪರಮಾತ್ಮನನ್ನು ನೋಡುತ್ತಾನೆ. ಮಹತ್ತಾದ ಕತ್ತಲೆಯ ನಡುವೆಯೂ ಅಗ್ನಿಗೆ ಸಮಾನವಾಗಿ ಜ್ವಲಿಸುವ ಪರಬ್ರಹ್ಮನನ್ನು ಕಾಣಲು ಸಮರ್ಥನಾಗುತ್ತಾನೆ.

ಏತೇನ ಕೇವಲಂ ಯಾತಿ ತ್ಯಕ್ತ್ವಾ ದೇಹಮಸಾಕ್ಷಿಕಮ್ |
ಕಾಲೇನ ಮಹತಾ ರಾಜನ್ ಶ್ರುತಿರೇಷಾ ಸನಾತನೀ ॥26॥
ಈ ಮಹಾಯೋಗಜ್ಞಾನದ ಬಲದಿಂದ ಹೇಯವಾದ ಪ್ರಾಕೃತಿಕ ದೇಹವನ್ನು ಪರಿಹರಿಸಿಕೊಂಡು, ಕಾಲಕ್ರಮದಲ್ಲಿ ಪರಮಾತ್ಮನ ಸ್ಥಾನವೆನಿಸಿದ ಮೋಕ್ಷವನ್ನೇ ಹೊಂದುತ್ತಾನೆ. ಹೀಗೆ ಸನಾತನವಾದ ವೇದಗಳು ಹೇಳುತ್ತಿವೆ.
ಏತದ್ಧಿ ಯೋಗಂ ಯೋಗಾನಾಂ ಕಿಮನ್ಯದ್ ಯೋಗಲಕ್ಷಣಮ್ |
ವಿಜ್ಞಾಯ ತದ್ಧಿ ಮನ್ಯಂತೇ ಕೃತಕೃತ್ಯಾ ಮನೀಷಿಣಃ ॥27॥
ಇದನ್ನು ಹೊರತುಪಡಿಸಿ ಯೋಗಕ್ಕೆ ಬೇರೆಯ ಲಕ್ಷಣಗಳಿರುವುದಿಲ್ಲ. ಜ್ಞಾನಿಗಳು ಇದನ್ನು ತಿಳಿದು ತಮ್ಮನ್ನು ಕೃತಾರ್ಥರನ್ನಾಗಿ ಭಾವಿಸಿಕೊಳ್ಳುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೊಂಬತ್ತನೆಯ ಅಧ್ಯಾಯ
ಜನಕ-ಯಾಜ್ಞವಲ್ಕ್ಯ ಸಂವಾದ
ಯಾಜ್ಞವಲ್ಕ್ಯಃ
ತಥೈವೋತ್ಕ್ರಮಮಾಣಂ ತು ಶೃಣುಷ್ವಾವಹಿತೋ ನೃಪ |
ಪದ್ಭ್ಯಾಮುತ್ಕ್ರಮಮಾಣಸ್ಯ ವೈಷ್ಣವಂ ಸ್ಥಾನಮುಚ್ಯತೇ ॥1॥
ಯಾಜ್ಞವಲ್ಕ್ಯ ಜನಕರಾಜನೇ, ನಾನು ನಿನಗೆ ಶರೀರದಿಂದ ಉತ್ಕ್ರಮಣವನ್ನು ಹೊಂದುವ ಜೀವಾತ್ಮನ ಸ್ಥಾನಗಳನ್ನು ತಿಳಿಸುತ್ತೇನೆ. ಭಗವಂತನ ಪಾದತಲವನ್ನು ಧ್ಯಾನಿಸುತ್ತಾ ಉತ್ಕ್ರಮಣವನ್ನು ಹೊಂದಿದ ವ್ಯಕ್ತಿಗೆ ವಿಷ್ಣುವಿನ ಸ್ಥಾನವು ದೊರಕುತ್ತದೆ.
ವ್ಯಾಖ್ಯಾನ ವಿಶೇಷ ಭಗವಂತನ ವಿರಾಟ್‌ರೂಪದಲ್ಲಿ ಪಾದತಲವನ್ನು ಚಿಂತಿಸುತ್ತಾ ಜೀವನ ದೇಹದಲ್ಲಿರುವ ಪ್ರಾಣವು ಉತ್ಕ್ರಮಣವನ್ನು ಹೊಂದಿದರೆ ವೈಷ್ಣವ ಸ್ಥಾನವು ದೊರೆಯುತ್ತದೆ. ಈ ರೀತಿಯಾಗಿ ಭಗವಂತನ ಪಾದದ ಚಿಂತನೆಯ ಪ್ರಯತ್ನವನ್ನು ಮಾಡಿದ ಸಾಧಕನಿಗೆ ಧ್ರುವಲೋಕವೇ ಮೊದಲಾದ ವಿಷ್ಣುವಿನ ಸ್ಥಾನವು ಫಲರೂಪವಾಗಿ ದೊರೆಯುತ್ತದೆ. ಯಾವನು ತನ್ನ ಶರೀರದಲ್ಲಿ ಪರಮಾತ್ಮನ ಪಾದದಿಂದ ಆರಂಭಿಸಿ ತಲೆಯ ತನಕ ಇರುವ ಬ್ರಹ್ಮನಾಡಿಯ ಪರ್ಯಂತವಾದ ಭಗವಂತನ ವಿರಾಡ್ರೂಪವನ್ನು ಚಿಂತಿಸುತ್ತಿರುತ್ತಾನೋ ಅವನಿಗೆ ಕ್ರಮವಾಗಿ ಉತ್ತಮವಾದ ಫಲಗಳು ದೊರೆಯುತ್ತವೆ ಎಂದು ತಿಳಿಯಬೇಕು. ಜೀವನು ಉತ್ಕ್ರಮಣವನ್ನು ಹೊಂದುವುದು ಬ್ರಹ್ಮನಾಡಿಯ ಮೂಲಕವೇ ಎಂದು ತಿಳಿದುಕೊಳ್ಳಬೇಕು.
ಜಂಘಾಭ್ಯಾಂ ತು ವಸೂನ್ ದೇವಾನಾಪ್ನುಯಾದಿತಿ ನಃ ಶ್ರುತಮ್ |
ಜಾನುಭ್ಯಾಂ ಚ ಮಹಾಭಾಗಾನ್ ದೇವಾನ್ ಸಾಧ್ಯಾನವಾಪ್ನುಯಾತ್ ॥
ಜೀವನು ತನ್ನ ಶರೀರದಲ್ಲಿ ಭಗವಂತನನ್ನು ಧ್ಯಾನಿಸುತ್ತಾ ಮೊಳಕಾಲುಗಳ ತನಕ ಧ್ಯಾನವನ್ನು ಮಾಡಿ, ಉತ್ಕ್ರಾಂತಿಯನ್ನು ಹೊಂದಿದರೆ ವಸುಗಳೆಂಬ ದೇವತೆಗಳ ಸ್ಥಾನವು ದೊರಕುತ್ತದೆ ಎಂದು ಕೇಳುತ್ತೇವೆ. ಇದರಂತೆ ಮಂಡಿಯ ತನಕ ಧ್ಯಾನವನ್ನು ಮಾಡಿ ಉತ್ಕ್ರಾಂತಿಯನ್ನು ಹೊಂದಿದವನು ಸಾಧ್ಯರನ್ನು ಹೊಂದುತ್ತಾನೆ.
ಪಾಯುನೋತ್ಕ್ರಮಮಾಣಸ್ತು ಮೈತ್ರಂ ಸ್ಥಾನಮವಾಪ್ನುಯಾತ್ |
ಪೃಥಿವೀಂ ಜಘನೇನಾಥ ಊರುಭ್ಯಾಂ ತು ಪ್ರಜಾಪತಿಮ್ ॥3॥

ಪಾಯುವಿನ ತನಕ ಧ್ಯಾನ ಮಾಡಿ ಉತ್ಕ್ರಾಂತಿಯನ್ನು ಹೊಂದಿದವನು ಮಿತ್ರನಾಮಕ ಸೂರ್ಯನ ಸ್ಥಾನವನ್ನು ಹೊಂದುತ್ತಾನೆ. ಭಗವಂತನ ಜಘನದ ತನಕ ತನ್ನ ಶರೀರದಲ್ಲಿ ಧ್ಯಾನಿಸಿದ ಯೋಗಿಯು ಉತ್ಕ್ರಮಣವನ್ನು ಹೊಂದಿದವನಾಗಿ ಪಿತೃಲೋಕವನ್ನು ಹೊಂದುತ್ತಾನೆ.

ಪಾರ್ಶ್ವಾಭ್ಯಾಂ ಮರುತೋ ದೇವಾನ್ನಾಸಾಭ್ಯಾಮಿಂದುಮೇವ ಚ |
ಬಾಹುಭ್ಯಾಮಿಂದ್ರಮಿತ್ಯಾಹುರುರಸಾ ರುದ್ರಮೇವ ಚ ॥4॥

ತೊಡೆಗಳ ತನಕ ಧ್ಯಾನವನ್ನು ಮಾಡಿದ ಯೋಗಿಯು ಉತ್ಕ್ರಮಣವನ್ನು ಹೊಂದಿ ಬ್ರಹ್ಮಲೋಕವನ್ನು ಹೊಂದುತ್ತಾನೆ. ಪಾರ್ಶ್ವಗಳ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದ ಯೋಗಿಯು ಮರುತ್ತುಗಳ ಸ್ಥಾನವನ್ನು ಹೊಂದುತ್ತಾನೆ. ಮೂಗಿನ ರಂಧ್ರಗಳ ತನಕ ಧ್ಯಾನಿಸಿ ಉತ್ಕ್ರಮಣವನ್ನು ಹೊಂದಿದ ವ್ಯಕ್ತಿಯು ಚಂದ್ರನ ಲೋಕವನ್ನು, ತೋಳುಗಳ ತನಕ ಧ್ಯಾನಿಸಿದ ವ್ಯಕ್ತಿಯು ಇಂದ್ರನ ಲೋಕವನ್ನು, ಉರಸ್ಸಿನ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ರುದ್ರನ ಲೋಕವನ್ನು ಹೊಂದುತ್ತಾನೆ.

ಗ್ರೀವಾಯಾಸ್ತ್ವಮೃಷಿಶ್ರೇಷ್ಠಂ ನರಮಾಪ್ನೋತ್ಯನುತ್ತಮಮ್ |
ವಿಶ್ವೇದೇವಾನ್ ಮುಖೇನಾಥ ದಿಶಃ ಶ್ರೋತ್ರೇಣ ಚಾಪ್ನುಯಾತ್ ॥5॥

ಕಂಠದ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ನರನೆಂಬ ಭಗವಂತನ ಸ್ಥಾನವನ್ನು, ಮುಖದ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ವಿಶ್ವೇದೇವತೆಗಳ ಸ್ಥಾನವನ್ನು, ಕಿವಿಯ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ದಿಗ್ದೇವತೆಗಳ ಲೋಕವನ್ನು ಹೊಂದುತ್ತಾನೆ.

ಘ್ರಾಣೇನ ಗಂಧವಹನಂ ನೇತ್ರಾಭ್ಯಾಂ ಸೂರ್ಯಮೇವ ಚ |
ಭ್ರೂಭ್ಯಾಂ ಚೈವಾಶ್ವಿನೌ ದೇವೌ ಲಲಾಟೇನ ಪಿತ್ಯೃನಥ ॥6॥

ಘ್ರಾಣೇಂದ್ರಿಯದ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ವಾಯು ಲೋಕವನ್ನು, ನೇತ್ರದ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ಸೂರ್ಯ ಲೋಕವನ್ನು, ಹುಬ್ಬುಗಳ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ಅಶ್ವಿನೀ ದೇವತೆಗಳ ಲೋಕವನ್ನು, ಹಣೆಯ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ಪಿತೃಗಳ ಲೋಕವನ್ನು ಹೊಂದುತ್ತಾನೆ.

ಬ್ರಹ್ಮಾಣಮಾಪ್ನೋತಿ ವಿಭುಂ ಮೂರ್ಧ್ನಾ ದೇವಾಗ್ರಜಂ ತಥಾ |
ಏತಾನ್ಯುತ್ಕ್ರಮಣಸ್ಥಾನಾನ್ಯುಕ್ತಾನಿ ಮಿಥಿಲೇಶ್ವರ ॥7॥

ತಲೆಯ ತನಕ ಧ್ಯಾನಿಸಿ ಉತ್ಕ್ರಮಣ ಹೊಂದಿದವನು ದೇವಶ್ರೇಷ್ಠನಾದ ಬ್ರಹ್ಮನ ಲೋಕವನ್ನು ಹೊಂದುತ್ತಾನೆ ಎಂದು ಹೇಳುತ್ತಾರೆ. ಮಿಥಿಲಾಧಿಪನೇ, ಹೀಗೆ ಉತ್ಕ್ರಮಣಗಳ ಸ್ಥಾನದಿಂದಾಗುವ ಫಲಭೇದಗಳನ್ನು ನಿನಗೆ ತಿಳಿಸಿರುತ್ತೇನೆ.

ಅರಿಷ್ಟಾನಿ ತು ವಕ್ಷ್ಯಾಮಿ ವಿಹಿತಾನಿ ಮನೀಷಿಭಿಃ |
ಸಂವತ್ಸರವಿಯೋಗಸ್ಯ ಸಂಭವೇಯುಃ ಶರೀರಿಣಃ ॥8॥

ಇನ್ನು ಮನುಷ್ಯರಿಗೆ ತೋರುವಂತಹ ಮರಣಸೂಚಕಗಳಾದ ಅನಿಷ್ಟಗಳನ್ನು ತಿಳಿಸುತ್ತೇನೆ, ಕೇಳು. ಒಂದು ವರ್ಷದ ಒಳಗಡೆ ಮರಣವನ್ನು ಹೊಂದುತ್ತಾರೆ ಎಂದು ಸೂಚಿಸುವ ಅನಿಷ್ಟಗಳ್ಯಾವುವೆಂಬುದನ್ನು ನಿನಗೆ ತಿಳಿಸುತ್ತೇನೆ.

ಯೋಽರುಂಧತೀಂ ನ ಪಶ್ಯೇತ ದೃಷ್ಟಪೂರ್ವಾಂ ಕದಾಚನ |
ತಥೈವ ಧ್ರುವಮಿತ್ಯಾಹುಃ ಪೂರ್ಣೇಂದುಂ ದೀಪಮೇವ ಚ |
ಖಂಡಾಭಾಸಂ ದಕ್ಷಿಣತಸ್ತೇಽಪಿ ಸಂವತ್ಸರಾಯುಷಃ ॥9॥

ಯಾವನು ತಾನು ಮೊದಲು ನೋಡಿದ ಅರುಂಧತೀ ನಕ್ಷತ್ರವನ್ನು, ಧ್ರುವ ನಕ್ಷತ್ರವನ್ನು ಪುನಃ ನೋಡಲು ಸಮರ್ಥನಾಗುವುದಿಲ್ಲವೋ, ಯಾರಿಗೆ ಪೂರ್ಣಚಂದ್ರನಾಗಲಿ, ದೀಪವಾಗಲಿ ನವಿಲಿನ ಗರಿಯಂತೆ ಕಾಣಿಸುತ್ತದೋ, ಕೇವಲ ಎಡಗಣ್ಣಿನಲ್ಲಿ ಮಾತ್ರ ನೋಡುತ್ತಾರೋ ಅವರು ಒಂದುವರ್ಷದ ಒಳಗೆ ಮರಣವನ್ನು ಹೊಂದುತ್ತಾರೆ.

ಪರಚಕ್ಷುಷಿ ಚಾತ್ಮಾನಂ ಯೇ ನ ಪಶ್ಯಂತಿ ಪಾರ್ಥಿವ |
ಆತ್ಮಚ್ಛಾಯಾಕೃತೀಭೂತಂ ತೇಽಪಿ ಸಂವತ್ಸರಾಯುಷಃ ॥10॥

ಮತ್ತೊಬ್ಬರ ಕಣ್ಣಿನಲ್ಲಿ ತನ್ನ ಪ್ರತಿಕೃತಿಯನ್ನು ಯಾವನು ಕಾಣುವುದಿಲ್ಲವೋ ಅವನೂ ಒಂದು ಸಂವತ್ಸರದಲ್ಲಿ ಮರಣವನ್ನು ಹೊಂದುತ್ತಾನೆ.

ಅತಿದ್ಯುತಿರತಿಪ್ರಜ್ಞಾ ಅಪ್ರಜ್ಞಾ ಚಾದ್ಯುತಿಸ್ತಥಾ |
ಪ್ರಕೃತೇರ್ವಿಕ್ರಿಯಾಪತ್ತಿಃ ಷಣ್ಮಾಸಾನ್ಮೃತ್ಯುಲಕ್ಷಣಮ್ ॥11॥

ಅತ್ಯಂತ ಕಾಂತಿಯಾಗಲಿ, ಅತ್ಯಂತ ಪ್ರಜ್ಞೆಯಾಗಲಿ, ಹಾಗೆಯೇ ಕೇವಲ ಶೂನ್ಯ ಪ್ರಜ್ಞೆಯಾಗಲಿ, ಶೂನ್ಯಕಾಂತಿಯಾಗಲಿ ತಮ್ಮ ಸ್ವಭಾವ ಸ್ಥಿತಿಯನ್ನು ಬಿಟ್ಟು ಒಮ್ಮೆಲೆ ವಿಕಾರವನ್ನು ಹೊಂದಿದಾಗ ಅವನಿಗೆ ಆರು ತಿಂಗಳೊಳಗೆ ಮರಣ ಪ್ರಾಪ್ತಿಯಾಗುತ್ತದೆ ಎಂದು ಹೇಳುತ್ತಾರೆ.

ದೈವತಾನ್ಯವಜಾನಾತಿ ಬ್ರಾಹ್ಮಣೈಶ್ಚ ವಿರುದ್ಧ್ಯತೇ |
ಕೃಷ್ಣಶ್ಯಾವಚ್ಛವಿಚ್ಛಾಯಃ ಷಣ್ಮಾಸಾನ್ಮೃತ್ಯುಲಕ್ಷಣಮ್ ॥12॥

ದೇವತೆಗಳನ್ನು ಅವಮಾನಿಸುವುದು, ಬ್ರಾಹ್ಮಣರನ್ನು ದ್ವೇಷಿಸುವುದು, ಕಪ್ಪಾದ ಮೊಲದಂತೆ ಮುಖದ ಕಳೆಯು ಕರಿಹೊಗೆಯಂತೆ ಮಾರ್ಪಾಡಾಗುವುದು ಇವುಗಳೆಲ್ಲವೂ ಆರು ತಿಂಗಳಿನ ಮರಣಕ್ಕೆ ಸೂಚಕಗಳಾಗಿವೆ.

ಶೀರ್ಣನಾಭಿ ಯಥಾ ಚಕ್ರಂ ಛಿದ್ರಂ ಸೋಮಂ ಪ್ರಪಶ್ಯತಿ |
ತಥೈವ ಚ ಸಹಸ್ರಾಂಶುಂ ಸಪ್ತರಾತ್ರೇಣ ಮೃತ್ಯುಭಾಕ್ ॥13॥

ಯಾವಾತನಿಗೆ ಆಕಾಶದಲ್ಲಿರುವ ಸೂರ್ಯಬಿಂಬವಾಗಲಿ, ಚಂದ್ರಬಿಂಬವಾಗಲಿ ಛಿದ್ರ ಸಹಿತವಾಗಿ ತೋರುತ್ತದೋ, ರಥದ ಚಕ್ರದಲ್ಲಿ ನಾಭಿ ಇಲ್ಲದಂತೆ ಕಾಣಿಸುತ್ತದೋ ಅವನು ಏಳು ರಾತ್ರಿಗಳಲ್ಲಿ ಮರಣವನ್ನು ಹೊಂದುತ್ತಾನೆಂದು ಹೇಳುತ್ತಾರೆ.

ಶವಗಂಧಮುಪಾಘ್ರಾತಿ ಸುರಭಿಂ ಪ್ರಾಪ್ಯ ಯೋ ನರಃ |
ದೇವತಾಯತನಸ್ಥಸ್ತು ಷಡ್ರಾತ್ರೇಣ ಸ ಮೃತ್ಯುಭಾಕ್ ||14||
ಯಾವನು ದೇವಾಲಯಕ್ಕೆ ಹೋದಾಗ ಅಲ್ಲಿ ಒಳ್ಳೆಯ ಸುಗಂಧದ ಧೂಪದ ಪರಿಮಳವು ಬರುತ್ತಿದ್ದರೂ ಅವನಿಗೆ ಹೆಣದ ವಾಸನೆಯಂತೆ ಸೌರಭ್ಯವು ತೋರದೆ ದುರ್ಗಂಧವೇ ತೋರುತ್ತದೋ ಅವನು ಆರು ರಾತ್ರಿಗಳಲ್ಲಿ ಮರಣವನ್ನು ಹೊಂದುತ್ತಾನೆ.
ಕರ್ಣನಾಸಾವನಮನಂ ದಂತದೃಷ್ಟಿವಿರಾಗಿತಾ |
ಸಂಜ್ಞಾಲೋಪೋ ನಿರೂಷ್ಮತ್ವಂ ಸದ್ಯೋ ಮೃತ್ಯುನಿದರ್ಶನಮ್ ||15||
ಕಿವಿ-ಮೂಗುಗಳು ಸೊಟ್ಟಾಗುವುದು, ಕಣ್ಣಿನಲ್ಲಿ ಹಲ್ಲಿನಲ್ಲಿ ದ್ರವವಿಲ್ಲದಿರುವುದು, ಬುದ್ಧಿಯು ತಬ್ಬಿಬ್ಬಾಗುವುದು, ದೇಹದ ಉಷ್ಣತೆಯು ನಾಶವಾಗುವುದು - ಇವುಗಳು ಸದ್ಯವೇ ಮರಣವನ್ನು ಹೊಂದುತ್ತಾನೆ ಎಂಬುದರ ಸೂಚನೆಯಾಗಿವೆ.
ಅಕಸ್ಮಾಚ್ಚ ಸ್ರವೇದ್ ಯಸ್ಯ ವಾಮಮಕ್ಷಿ ನರಾಧಿಪ |
ಮೂರ್ಧತಶ್ಚೋತ್ಪತೇದ್ ಧೂಮಃ ಸದ್ಯೋಮೃತ್ಯುನಿದರ್ಶನಮ್ ||16||
ಅಕಸ್ಮಾತ್ತಾಗಿ ಯಾರ ಎಡಗಣ್ಣಿನಿಂದ ನೀರು ಸುರಿಯುತ್ತದೋ, ತಲೆಯ ನಡುನೆತ್ತಿಯಿಂದ ಹೊಗೆ ಮೇಲೆದ್ದಂತೆ ಕಾಣಿಸುತ್ತದೋ ಇವೆರಡೂ ಸದ್ಯದಲ್ಲೇ ಆಗುವ ಮರಣದ ಲಕ್ಷಣಗಳು.
ಏತಾವಂತಿ ತ್ವರಿಷ್ಟಾನಿ ವಿದಿತ್ವಾ ಮಾನವೋಽಽತ್ಮವಾನ್ |
ನಿಶಿ ಚಾಹನಿ ಚಾತ್ಮಾನಂ ಯೋಜಯೇತ್ ಪರಮಾತ್ಮನಿ ||17||
ರಾಜೇಂದ್ರನೇ, ಧೀರನಾದವನು ಈ ಮರಣದ ಲಕ್ಷಣಗಳನ್ನು ತಿಳಿದ ಕೂಡಲೇ ದೇಹವನ್ನು ಬಿಡುವುದಕ್ಕೆ ಸಿದ್ಧನಾಗಿ, ರಾತ್ರಿ-ಹಗಲು ಎನ್ನದೆ ನಿರಂತರ ಪರಮಾತ್ಮನನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು.
ಪ್ರತೀಕ್ಷಮಾಣಸ್ತತ್ಕಾಲಂ ಯತ್ಕಾಲಂ ಪ್ರತಿ ತದ್ಭವೇತ್ |
ಯದ್ಯಸ್ಯ ನೇಷ್ಟಂ ಮರಣಂ ಸ್ಥಾತುಮಿಚ್ಛೇದಿಮಾಂ ಕ್ರಿಯಾಮ್ ||18||
ಯೋಗಿಯಾದವನು ಆ ಮರಣದ ಕಾಲವು ಸನ್ನಿಹಿತವಾಗುತ್ತದೆಂದು ಅರಿತು ಆ ಮರಣಕ್ಕೆ ವಿರುದ್ಧವಾದ ಫಲವನ್ನು ನೀಡುವ ಭಗವಂತನನ್ನು ಹೃದಯದಲ್ಲಿ ಧ್ಯಾನಿಸಬೇಕು. ಯೋಗಿಗೆ ಮರಣವು ಇಷ್ಟವಾಗದಿದ್ದಲ್ಲಿ ನಿರಂತರ ಭಗವಂತನ ಧ್ಯಾನವನ್ನು ಆಚರಿಸಬೇಕು. ಇಂತಹ ನಿರಂತರ ಧ್ಯಾನದಿಂದ ತುಷ್ಟನಾದ ಪರಮಾತ್ಮನು ಮರಣವನ್ನು ಪರಿಹರಿಸಿ ಆಯುಷ್ಯವನ್ನು ಅಭಿವೃದ್ಧಿ ಮಾಡುತ್ತಾನೆ ಎಂದು ಭಾವ.
ಸರ್ವಗಂಧಾನ್ ರಸಾಂಶ್ಚೈವ ಧಾರಯೇತ ಸಮಾಹಿತಃ |
ತಥಾ ಹಿ ಮೃತ್ಯುಂ ಜಯತಿ ತತ್ಪರೇಣಾಂತರಾತ್ಮನಾ ||19||
ಎಲ್ಲ ವಿಧವಾದ ರಸ-ಗಂಧಗಳನ್ನು ತನ್ನ ಸಮಾಧಿಯ ಬಲದಿಂದ ಜಯಿಸಿರಬೇಕು. ಹೀಗೆ ಜಯಿಸಿಕೊಂಡು ಹೃದಯದಲ್ಲಿ ಪರಮಾತ್ಮನನ್ನು ಧ್ಯಾನಿಸುವುದರಿಂದ ಆ ವ್ಯಕ್ತಿಯು ಮರಣವನ್ನು ಜಯಿಸಲು ಸಮರ್ಥನಾಗುತ್ತಾನೆ.
ಸಸಾಂಖ್ಯಧಾರಣಂ ಚೈವ ವಿದಿತ್ವಾ ಮನುಜರ್ಷಭ |
ಜಯೇಚ್ಚ ಮೃತ್ಯುಂ ಯೋಗೇನ ತತ್ಪರೇಣಾಂತರಾತ್ಮನಾ ||20||
ಸಾಂಖ್ಯಯೋಗಶಾಸ್ತ್ರದ ಆಧಾರದಿಂದ ಮನಸ್ಸಿನಲ್ಲಿ ಭಗವಂತನನ್ನು ಧ್ಯಾನಿಸುತ್ತಾ ಸರ್ವೋತ್ತಮನಾದ ಭಗವಂತನ ಅನುಗ್ರಹದಿಂದ, ಯೋಗದ ಬಲದಿಂದ ಮೃತ್ಯುವನ್ನು ಜಯಿಸುವವನಾಗುತ್ತಾನೆ.
ಗಚ್ಛೇತ್ ಪ್ರಾಪ್ಯಾಕ್ಷಯಂ ಕೃತ್ಸ್ನಮಜನ್ಮ ಶಿವಮವ್ಯಯಮ್ |
ಶಾಶ್ವತಂ ಸ್ಥಾನಮಚಲಂ ದುಷ್ಪ್ರಾಪಮಕೃತಾತ್ಮಭಿಃ||21||
ಮೃತ್ಯುವನ್ನು ಜಯಿಸಿದ ಆ ವ್ಯಕ್ತಿಯು ಕೊನೆಗೊಂದು ದಿನ ಅಕ್ಷಯವೂ, ಜನನ- ಮರಣ ರಹಿತವೂ, ಪರಮಮಂಗಳವೂ, ಅವ್ಯಯವೂ, ಶಾಶ್ವತವೂ, ಅಚಲವೂ, ಅಯೋಗ್ಯರಿಂದ ಹೊಂದಲಾಗದಿರುವ ಸ್ಥಾನವನ್ನು ಹೊಂದುತ್ತಾನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಪಂಚಾಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತನೆಯ ಅಧ್ಯಾಯ
ಯಾಜ್ಞವಲ್ಕ್ಯನು ಜನಕನಿಗೆ ಅನೇಕ ತತ್ತ್ವಗಳನ್ನು ಉಪದೇಶಿಸಿದುದು
ಯಾಜ್ಞವಲ್ಕ್ಯಃ
ಅವ್ಯಕ್ತಸ್ಥಂ ಪರಂ ಯತ್ತತ್ ಪೃಷ್ಟಸ್ತೇಽಹಂ ನರಾಧಿಪ |
ಪರಂ ಗುಹ್ಯಮಿಮಂ ಪ್ರಶ್ನಂ ಶೃಣುಷ್ವಾವಹಿತೋ ನೃಪ ||1||
ಯಾಜ್ಞವಲ್ಕ್ಯ ಮಹಾರಾಜನೇ, ಅವ್ಯಕ್ತ ತತ್ತ್ವದಲ್ಲಿ ಅಂತರ್ಯಾಮಿ ಆಗಿರುವ ಸರ್ವೋತ್ತಮವಾದ ವಸ್ತುವಿನ ಬಗ್ಗೆ ನಿನಗೆ ಹೇಳಿರುತ್ತೇನೆ. ಅತ್ಯಂತ ರಹಸ್ಯವಾದ ಇನ್ನೂ ಅನೇಕ ಉತ್ತಮವಾದ ತತ್ತ್ವಗಳನ್ನು ನಿನಗೆ ಹೇಳುತ್ತೇನೆ, ಸಮಾಧಾನದಿಂದ ಕೇಳು.
ಯಥಾರ್ಷೇಣೇಹ ವಿಧಿನಾ ಚರತಾವಮತೇನ ಹ |
ಮಯಾದಿತ್ಯಾದವಾಪ್ತಾನಿ ಯಜೂಂಷಿ ಮಿಥಿಲಾಧಿಪ ||2||
ಹಿಂದೆ ಈ ಲೋಕದಲ್ಲಿ ಋಷಿಗಳಿಗೆ ಯೋಗ್ಯವಾದ ವಿಧಿಗಳನ್ನು ಆಚರಿಸುತ್ತಿದ್ದೆನು. ಒಮ್ಮೆ ನನ್ನ ಗುರುವಿನಿಂದ ಅಪಮಾನಿತನಾದ ನಾನು ಸೂರ್ಯನನ್ನು ಮೆಚ್ಚಿಸಿ ಕೆಲವು ಯಜುರ್ಮಂತ್ರಗಳನ್ನು ಪಡೆದುಕೊಂಡೆನು.
ಮಹತಾ ತಪಸಾ ದೇವಸ್ತಪಿಷ್ಠಃ ಸೇವಿತೋ ಮಯಾ |

ಪ್ರೀತೇನ ಚಾಹಂ ವಿಭುನಾ ಸೂರ್ಯೇಣೋಕ್ತಸ್ತದಾನಘ ॥3॥
ದೊಡ್ಡದಾದ ತಪಸ್ಸಿನಿಂದ ಸೂರ್ಯನನ್ನು ಆರಾಧಿಸಿದೆನು. ಆಗ ಪ್ರಭುವಾದ ಸೂರ್ಯದೇವನು ನನ್ನಲ್ಲಿ ಪ್ರಸನ್ನನಾಗಿ ನನ್ನನ್ನು ಕುರಿತು ಹೀಗೆ ಹೇಳಿದನು.
ವರಂ ವೃಣೀಷ್ವ ವಿಪ್ರರ್ಷೇ ಯದಿಷ್ಟಂ ತೇ ಸುದುರ್ಲಭಮ್ |
ತತ್ತೇ ದಾಸ್ಯಾಮಿ ಪ್ರೀತಾತ್ಮಾ ಮತ್ಪ್ರಸಾದೋ ಹಿ ದುರ್ಲಭಃ ॥4॥
ಬ್ರಹ್ಮರ್ಷಿಯೇ, ನಿನಗೆ ಬೇಕಾದ ವರವನ್ನು ಕೇಳು. ಅದು ಅತ್ಯಂತ ದುರ್ಲಭವಾಗಿದ್ದರೂ ನಾನು ಪ್ರೀತಿಯಿಂದ ನಿನಗೆ ದಯಪಾಲಿಸುತ್ತೇನೆ. ನನ್ನ ಅನುಗ್ರಹವು ಯಾರಿಗೂ ಅಷ್ಟು ಸುಲಭವಾಗಿ ದೊರೆಯುವುದಿಲ್ಲ.
ತತಃ ಪ್ರಣಮ್ಯ ಶಿರಸಾ ಮಯೋಕ್ತಸ್ತಪತಾಂ ವರಃ |
ಯಜೂಂಷಿ ನೋಪಯುಕ್ತಾನಿ ಕ್ಷಿಪ್ರಮಿಚ್ಛಾಮಿ ವೇದಿತುಮ್ ॥5॥
ಈ ರೀತಿಯಾಗಿ ಸೂರ್ಯದೇವನು ಹೇಳಲು ನಾನು ಸೂರ್ಯದೇವನನ್ನು ಶಿರಸಾ ನಮಿಸಿ, `ಪ್ರಭೋ, ಇದುವರೆಗೂ ಯಾರೂ ಉಪಯೋಗಿಸದಿರುವ, ಯಾತಯಾಮ ಎನಿಸದಿರುವ ಯಜುರ್ವೇದದ ಮಂತ್ರಗಳನ್ನು ನಿನ್ನಿಂದ ಬೇಗ ತಿಳಿಯಬೇಕೆಂದು ಬಯಸುತ್ತಿದ್ದೇನೆ' ಎಂದು ಹೇಳಿದೆನು.
ತತೋ ಮಾಂ ಭಗವಾನಾಹ ವಿತರಿಷ್ಯಾಮಿ ತೇ ದ್ವಿಜ |
ಸರಸ್ವತೀಹ ವಾಗ್ಭೂತಾ ಶರೀರಂ ತೇ ಪ್ರವೇಕ್ಷ್ಯತಿ ॥6॥
ಆ ಸಮಯದಲ್ಲಿ ಸೂರ್ಯದೇವನು `ವಿಪ್ರೋತ್ತಮನೇ, ನೀನು ಕೇಳಿದ ಯಜುರ್ವೇದಮಂತ್ರಗಳನ್ನು ನೀಡುತ್ತೇನೆ. ಈಗಾಗಲೇ ವಾಗ್ರೂಪಿಣಿಯಾದ ಸರಸ್ವತಿಯು ನಿನ್ನ ಶರೀರವನ್ನು ಪ್ರವೇಶಿಸುತ್ತಿದ್ದಾಳೆ'.
ತತೋ ಮಾಮಾಹ ಭಗವಾನಾಸ್ಯಂ ಸ್ವಂ ವಿವೃತಂ ಕುರು |
ವಿವೃತಂ ಚ ತತೋ ಮೇಽಽಸ್ಯಂ ಪ್ರವಿಷ್ಟಾ ಚ ಸರಸ್ವತೀ ॥7॥
ಬಳಿಕ ಭಗವಾನ್ ಸೂರ್ಯದೇವನು ನನ್ನನ್ನು ಕುರಿತು, ನೀನು ನಿನ್ನ ಬಾಯನ್ನು ತೆರೆ ಎಂದು ಹೇಳಿದನು. ಅದರಂತೆ ನಾನು ನನ್ನ ಬಾಯನ್ನು ತೆರೆದ ಕೂಡಲೆ ಸರಸ್ವತೀ ದೇವಿಯು ನನ್ನ ಬಾಯಲ್ಲಿ ಪ್ರವೇಶಿಸಿದಳು.
ತತೋ ವಿದಹ್ಯಮಾನೋಹಂ ಪ್ರವಿಷ್ಟೋಽಂಭಸ್ತದಾನಘ |
ಅವಿಜ್ಞಾನಾದಮರ್ಷಾಚ್ಚ ಭಾಸ್ಕರಸ್ಯ ಮಹಾತ್ಮನಃ ॥8॥
ತತೋ ವಿದಹ್ಯಮಾನಂ ಮಾಮುವಾಚ ಭಗವಾನ್ ರವಿಃ |
ಮುಹೂರ್ತಂ ಸಹ್ಯತಾಂ ದಾಹಸ್ತತಃ ಶೀತೀಭವಿಷ್ಯಸಿ ॥9॥
ಕೂಡಲೇ ಆ ಸರಸ್ವತಿಯ ಪ್ರವೇಶದಿಂದ ನನ್ನ ದೇಹವೆಲ್ಲವೂ ಉರಿಯಲು ಆರಂಭಿಸಿತು. ಆ ತಾಪವನ್ನು ತಡೆಯಲಾಗದೆ ನಾನು ನೀರಿನಲ್ಲಿ ಪ್ರವೇಶಿಸಿದೆನು. ನಾನು ಮಹಾತ್ಮನಾದ ಸೂರ್ಯನ ಪ್ರಭಾವವನ್ನು ತಿಳಿಯದೆ ದಡ್ಡತನದಿಂದ ನೀರಿನಲ್ಲಿ ಪ್ರವೇಶಿಸಿರುವುದನ್ನು ನೋಡಿ ಸೂರ್ಯನು `ಬ್ರಾಹ್ಮಣನೇ, ಒಂದು ಮುಹೂರ್ತದ ತನಕ ಆ ತಾಪವನ್ನು ಸಹಿಸಿಕೊ. ಬಳಿಕ ನಿನ್ನ ದೇಹವು ತಾನಾಗಿಯೇ ತಂಪಾಗುತ್ತದೆ' ಎಂದು ಹೇಳಿದನು.
ಶೀತೀಭೂತಂ ಚ ಮಾಂ ದೃಷ್ಟ್ವಾ ಭಗವಾನಾಹ ಭಾಸ್ಕರಃ |
ಪ್ರತಿಷ್ಠಾಸ್ಯತಿ ತೇ ವೇದಃ ಸೋತ್ತರಃ ಸಖಿಲೋ ದ್ವಿಜ ॥10॥
ಅದರಂತೆ ನನ್ನ ದೇಹವು ತಂಪಾಯಿತು. ಬಳಿಕ ಸೂರ್ಯನು ನನ್ನ ಕಂಡು `ವಿಪ್ರಶ್ರೇಷ್ಠನೇ, ನಿನಗೆ ಕೆಲವು ಮಂತ್ರಗಳ ಜೊತೆಗೆ ಉಪನಿಷತ್ತಿನಿಂದ ಸಹಿತವಾದ ವೇದವು ತನ್ನಿಂದ ತಾನೇ ಸ್ಫುರಣೆಯನ್ನು ಹೊಂದುತ್ತದೆ.
ಕೃತ್ಸ್ನಂ ಶತಪಥಂ ಚೈವ ಪ್ರಣೇಷ್ಯಸಿ ದ್ವಿಜರ್ಷಭ |
ತಸ್ಯಾಂತೇ ಚಾಪುನರ್ಭಾವೇ ಬುದ್ಧಿಸ್ತವ ಭವಿಷ್ಯತಿ ॥11॥
ಬಳಿಕ ಸಮಗ್ರವಾದ ಶತಪಥ ಎಂಬ ಬ್ರಾಹ್ಮಣ ಭಾಗವನ್ನು ಪೂರ್ಣವಾಗಿ ನೀನೇ ಜಗತ್ತಿಗೆ ಉಪದೇಶಿಸುತ್ತಿ. ಬಳಿಕ ನಿನ್ನ ಬುದ್ಧಿಯು ಜನ್ಮರಹಿತವಾದ ಮೋಕ್ಷದಲ್ಲಿ ಪ್ರವೃತ್ತಿಯನ್ನು ಹೊಂದುತ್ತದೆ.
ಪ್ರಾಪ್ಸ್ಯಸೇ ಚ ಯದಿಷ್ಟಂ ತತ್ ಸಾಂಖ್ಯಯೋಗೇಪ್ಸಿತಂ ಪದಮ್ |
ಏತಾವದುಕ್ತ್ವಾ ಭಗವಾನಸ್ತಮೇವಾಭ್ಯವರ್ತತ ॥12॥
ಸಾಂಖ್ಯರಿಂದಲೂ ಯೋಗಿಗಳಿಂದಲೂ ಆದರಿಸುವಂತಹ ನೀನು ಬಯಸುವ ಬ್ರಹ್ಮಪದವು ನಿನಗೆ ಲಭಿಸುತ್ತದೆ'. ಈ ರೀತಿಯಾಗಿ ಸೂರ್ಯದೇವನು ಹೇಳಿ ಅಲ್ಲಿಯೇ ಕಣ್ಮರೆಯಾದನು.
ತತೋಽನುವ್ಯಾಹೃತಂ ಶ್ರುತ್ವಾ ಗತೇ ದೇವೇ ವಿಭಾವಸೌ |
ಗೃಹಮಾಗತ್ಯ ಸಂಹೃಷ್ಟೋಽಚಿಂತಯಂ ವೈ ಸರಸ್ವತೀಮ್ ॥13॥
ಸೂರ್ಯನು ಹೊರಟ ಬಳಿಕ ನಾನು ಅವನು ಹೇಳಿದ ಮಾತುಗಳನ್ನೇ ಚಿಂತಿಸುತ್ತಾ ಸಂತೋಷದಿಂದ ನನ್ನ ಮನೆಗೆ ಆಗಮಿಸಿ ಸಾವಿತ್ರಿಯನ್ನು ವಿಶೇಷವಾಗಿ ಧ್ಯಾನಿಸಿದೆನು.
ತತಃ ಪ್ರವತ್ತಾತಿಶುಭಾ ಸ್ವರವ್ಯಂಜನಭೂಷಿತಾ |
ಓಂಕಾರಮಾದಿತಃ ಕೃತ್ವಾ ಮಮ ದೇವೀ ಸರಸ್ವತೀ ॥14॥
ಕೂಡಲೇ ಸ್ವರ-ವ್ಯಂಜನಗಳಿಂದ ಅಲಂಕೃತಳಾದ ಸರಸ್ವತಿಯು ಮೂರ್ತಿಮತ್ತಾಗಿ ಹೊರಗೆ ಬಂದು ನನಗೆ ಕಾಣಿಸಿದಳು.
ತತೋಽಹಮರ್ಘ್ಯಂ ವಿಧಿವತ್ ಸರಸ್ವತ್ಯೈ ನ್ಯವೇದಯಮ್ |
ತಪತಾಂ ಚ ವರಿಷ್ಠಾಯ ನಿಷಣ್ಣಸ್ತತ್ಪರಾಯಣಃ ॥15॥
ನಾನು ಆ ದೇವತೆಗೆ ವಿಧಿಬದ್ಧವಾಗಿ ಅರ್ಘ್ಯಾದಿಗಳನ್ನು ನೀಡಿ ಪೂಜಿಸಿದೆನು. ಮಹಾಪ್ರಯತ್ನದಿಂದ ಸರಸ್ವತಿಯನ್ನೇ ಶರಣು ಹೊಂದಿ

ಚಿಂತಿಸುತ್ತಾ ಒಂದು ಕಡೆಯಲ್ಲಿ ಕುಳಿತುಕೊಂಡೆನು.
ತತಃ ಶತಪಥಂ ಕೃತ್ಸ್ನಂ ಸರಹಸ್ಯಂ ಸಸಂಗ್ರಹಮ್ |
ಚಕ್ರೇ ಸಪರಿಶೇಷಂ ಚ ಹರ್ಷೇಣ ಪರಮೇಣ ಹ ॥16॥
ಬಳಿಕ ಉಪನಿಷತ್ತುಗಳೊಡನೆ ಸಂಗ್ರಹ ವಾಕ್ಯಗಳ ಜೊತೆಗೆ ಪರಿಶಿಷ್ಟ ವಾಕ್ಯಗಳ ಜೊತೆಗೆ ಶತಪಥವೆಂಬ ಮಂತ್ರವು ಪೂರ್ಣವಾಗಿ ನನ್ನ ಬಾಯಿಂದ ಹೊರಹೊಮ್ಮಿತು. ಇದರಿಂದ ಪರಮಸಂತೋಷವು ನನಗೆ ಉಂಟಾಯಿತು.
ಕೃತ್ವಾ ಚಾಧ್ಯಯನಂ ತೇಷಾಂ ಶಿಷ್ಯಾಣಾಂ ಶತಮುತ್ತಮಮ್ |
ವಿಪ್ರಿಯಾರ್ಥಂ ಸಶಿಷ್ಯಸ್ಯ ಮಾತುಲಸ್ಯ ಮಹಾತ್ಮನಃ ॥17॥
ನನ್ನ ಮಾವನಾದ ವೈಶಂಪಾಯನನಿಗೆ ನನ್ನಲ್ಲಿ ವಿಶೇಷವಾಗಿ ಪ್ರೀತಿಯುಂಟಾಗ ಬೇಕೆಂಬ ಭಾವನೆಯಿಂದ ಆ ಶತಪಥ ಬ್ರಾಹ್ಮಣವನ್ನು ನೂರು ಮಂದಿ ಶಿಷ್ಯರಿಗೆ ಅಧ್ಯಯನ ಮಾಡಿಸಿದೆನು.
ತತಃ ಸಶಿಷ್ಯೇಣ ಮಯಾ ಸೂರ್ಯೇಣೇವ ಗಭಸ್ತಿಭಿಃ |
ವ್ಯಾಪ್ತೋ ಯಜ್ಞೋ ಮಹಾರಾಜ ಪಿತುಸ್ತವ ಮಹಾತ್ಮನಃ ॥18॥
ಕಿರಣಗಳಿಂದ ಕೂಡಿದ ಸೂರ್ಯನಂತೆ ನಾನು ಎಲ್ಲ ಶಿಷ್ಯರಿಂದ ಪರಿವೃತನಾಗಿ ಮಹಾತ್ಮನಾದ ನಿನ್ನ ತಂದೆಯ ಯಜ್ಞವನ್ನು ನಡೆಸಿದೆನು.
ಮಿಷತೋ ದೇವಲಸ್ಯಾಪಿ ತತೋಽರ್ಧಂ ಹೃತವಾನಹಮ್ |
ಸ್ವವೇದದಕ್ಷಿಣಾಯಾಥ ವಿಮರ್ದೇ ಮಾತುಲೇನ ಹ ॥19॥
ಆ ಯಜ್ಞದಲ್ಲಿ ವೇದದಕ್ಷಿಣೆಯು ಯಾರಿಗೆ ಸೇರಬೇಕೆಂದು ವಿವಾದವು ಉಂಟಾದಾಗ, ನಾನು ನಮ್ಮ ಮಾವನ ಪಕ್ಷದಲ್ಲಿದ್ದ ದೇವಲನು ನೋಡುತ್ತಿರುವಂತೆ ನನ್ನ ವೇದದಕ್ಷಿಣೆಯ ನಿಮಿತ್ತವಾಗಿ ಅರ್ಧವನ್ನು ನಾನು ಆ ಜನರ ಮಧ್ಯದಲ್ಲಿ ಸ್ವೀಕರಿಸಿದೆನು.
ಸುಮಂತುನಾಥ ಪೈಲೇನ ತಥಾ ಜೈಮಿನಿನಾ ಚ ವೈ |
ಪಿತ್ರಾ ತೇ ಮುನಿಭಿಶ್ಚೈವ ತತೋಹಮನುಮಾನಿತಃ ॥20॥
ಆ ಸಮಯದಲ್ಲಿ ಸುಮಂತು, ಪೈಲ, ಜೈಮಿನಿ, ನಿನ್ನ ತಂದೆ, ಇತರ ಮುನಿಗಳು ನನ್ನ ಅಭಿಪ್ರಾಯವನ್ನು ಅನುಮೋದಿಸಿದರು.
ದಶ ಪಂಚ ಚ ಪ್ರಾಪ್ತಾನಿ ಯಜೂಂಷ್ಯರ್ಕಾನ್ಮಯಾನಘ |
ತಥೈವ ಲೋಮಹರ್ಷಾಚ್ಚ ಪುರಾಣಮವಧಾರಿತಮ್ ॥21॥
ನಾನು ಸೂರ್ಯದೇವನಿಂದ ಹದಿನೈದು ಯಜುಸ್ಸುಗಳನ್ನು, ಸೂತನಾದ ಲೋಮಹರ್ಷನಿಂದ ಅದೇ ವೇದಪ್ರತಿಪಾದಕವಾದ ಪುರಾಣವನ್ನು ತಿಳಿದುಕೊಂಡೆನು.
ಬೀಜಮೇತತ್ ಪುರಸ್ಕೃತ್ಯ ದೇವೀಂ ಚೈವ ಸರಸ್ವತೀಮ್ |
ಸೂರ್ಯಸ್ಯ ಚಾನುಭಾವೇನ ಪ್ರವೃತ್ತೋಽಹಂ ನರಾಧಿಪ ॥22॥
ಹೀಗೆ ಭಗವಾನ್ ಸೂರ್ಯನ ಅನುಗ್ರಹದಿಂದ, ಸರಸ್ವತೀ ದೇವಿಯಿಂದ ಶತಪಥ ಬ್ರಾಹ್ಮಣವನ್ನೇ ಮೂಲವನ್ನಾಗಿ ಮಾಡಿಕೊಂಡು ಹೊಸದಾಗಿ ತತ್ತ್ವವನ್ನು ಪ್ರಚಾರ ಮಾಡಿದೆನು.
ಕರ್ತುಂ ಶತಪಥಂ ವೇದಮಪೂರ್ವಂ ಕಾರಿತಂ ಚ ಮೇ |
ಯಥಾಭಿಲಷಿತಂ ಮಾರ್ಗಂ ತಥಾ ತಚ್ಚೋಪಪಾದಿತಮ್ ॥23॥
ನನಗೆ ಇಷ್ಟವಾದ ಶತಪಥ ಬ್ರಾಹ್ಮಣವನ್ನು ಅಪೂರ್ವವಾಗಿ ಅಧ್ಯಯನ ಮಾಡಿಕೊಂಡು ನನ್ನ ಮನಸ್ಸಿನಲ್ಲಿ ತೋರಿದಂತೆ ಶ್ರೇಷ್ಠವಾದ ಮಾರ್ಗವನ್ನು ಶಿಷ್ಯರಿಗೆ ಬೋಧಿಸಿದೆನು.
ಶಿಷ್ಯಾಣಾಮಖಿಲಂ ಕೃತ್ಸ್ನಮನುಜ್ಞಾತಂ ಸಸಂಗ್ರಹಮ್ |
ಸರ್ವೇ ಚ ಶಿಷ್ಯಾಃ ಶುಚಯೋ ಗತಾಃ ಪರಮಹರ್ಷಿತಾಃ ॥24॥
ಸೂತ್ರವಾಕ್ಯದ ಜೊತೆಗೆ ಶತಪಥ ಬ್ರಾಹ್ಮಣವನ್ನು ಪೂರ್ಣವಾಗಿ ಶಿಷ್ಯರಿಗೆ ಉಪದೇಶಿಸಿದೆನು. ಅವರೆಲ್ಲರೂ ಶುಚಿರ್ಭೂತರಾಗಿ ಸಂತೋಷದಿಂದ ಆ ವೇದಗಳನ್ನು ಪಠಿಸಿದರು.
ಶಾಖಾಃ ಪಂಚದಶೇಮಾಸ್ತು ವಿದ್ಯಾ ಭಾಸ್ಕರದರ್ಶಿತಾಃ |
ಪ್ರತಿಷ್ಠಾಪ್ಯ ಯಥಾಕಾಮಂ ವೇದ್ಯಂ ತದನುಚಿಂತಯಮ್ ॥25॥
ಹೀಗೆ ಹದಿನೈದು ಶಾಖೆಗಳನ್ನು ನನ್ನ ಇಷ್ಟದಂತೆ ಲೋಕದಲ್ಲಿ ನೆಲೆಗೊಳಿಸಿದ ಬಳಿಕ ನಾನು ಅದರ ಅರ್ಥವೇನೆಂದು ತಿಳಿಯಲು ಯೋಚಿಸಿದೆನು.
ಕಿಮತ್ರ ಬ್ರಹ್ಮಣ್ಯಮೃತಂ ಕಿಂ ಚ ವೇದ್ಯಮನುತ್ತಮಮ್ |
ಚಿಂತಯೇ ತತ್ರ ಚಾಗತ್ಯ ಗಂಧರ್ವೋ ಮಾಮಪೃಚ್ಛತ ॥26॥
ಈ ವಿದ್ಯೆಯಲ್ಲಿ ಬ್ರಾಹ್ಮಣರಿಗೆ ಹಿತವೂ, ಸತ್ಯವೂ ಆದ ಅನುತ್ತಮವಾದ ವಿಚಾರಗಳು ಯಾವವು ಎಂದು ಚಿಂತಿಸುತ್ತಿರುವಾಗಲೇ ವೇದಾಂತ ವಿಮರ್ಶಕನಾದ ವಿಶ್ವಾವಸು ಎಂಬ ಗಂಧರ್ವನು ಅಲ್ಲಿಗೆ ಆಗಮಿಸಿದನು.
ವಿಶ್ವಾವಸುಸ್ತತೋ ರಾಜನ್ ವೇದಾಂತಜ್ಞಾನಕೋವಿದಃ |
ಚತುರ್ವಿಂಶತಿಕಾನ್ ಪ್ರಶ್ನಾನ್ ಪೃಷ್ಟ್ವಾ ವೇದಸ್ಯ ಪಾರ್ಥಿವ |
ಪಂಚವಿಂಶತಿಮಂ ಪ್ರಶ್ನಂ ಪಪ್ರಚ್ಛಾನ್ವೀಕ್ಷಿಕೀಂ ತಥಾ ॥27॥
ವಿಶ್ವಾವಸು ಎಂಬ ಗಂಧರ್ವನಾದರೂ ವೇದಾಂತ ಜ್ಞಾನದಲ್ಲಿ ನಿಷ್ಣಾತನಾಗಿದ್ದನು. ಅವನು ನನ್ನನ್ನು ನೋಡಿ ವೇದಕ್ಕೆ ಸಂಬಂಧಿಸಿದ ಇಪ್ಪತ್ನಾಲ್ಕು ಪ್ರಶ್ನೆಗಳನ್ನು ಕೇಳಿದನು. ಬಳಿಕ ಆನ್ವೀಕ್ಷಿಕೀ ಎಂಬ ಇಪ್ಪತ್ತೈದನೆಯ ಪ್ರಶ್ನೆಯನ್ನೂ ಕೇಳಿದನು.
ವಿಶ್ವಾವಿಶ್ವಂ ತಥಾಶ್ವಾಶ್ವಂ ಮಿತ್ರಂ ವರುಣಮೇವ ಚ |

ಜ್ಞಾನಂ ಜ್ಞೇಯಂ ತಥಾಜ್ಞೋ ಜ್ಞಃ ಕಸ್ತಪಾ ಅತಪಾಸ್ತಥಾ |
ಸೂರ್ಯಾದಃ ಸೂರ್ಯ ಇತಿ ಚ ವಿದ್ಯಾವಿದ್ಯೇ ತಥೈವ ಚ ॥28॥
ವೇದ್ಯಾವೇದ್ಯಂ ತಥಾ ರಾಜನ್ನಚಲಂ ಚಲಮೇವ ಚ |
ಅಪೂರ್ವಮಕ್ಷಯಂ ಕ್ಷಯ್ಯಮೇತತ್ ಪ್ರಶ್ನಮನುತ್ತಮಮ್ ॥29॥
ವಿಶ್ವಾವಿಶ್ವಗಳು, ಅಶ್ವಾಶ್ವಗಳು, ಮಿತ್ರ, ವರುಣ, ಜ್ಞಾನ, ಜ್ಞೇಯ, ಅಜ್ಞ, ಪ್ರಾಜ್ಞ, ತಪಸ್ವಿಗಳು, ಅತಪಸ್ವಿಗಳು, ಸೂರ್ಯಾದ, ಸೂರ್ಯ, ವಿದ್ಯೆ, ಅವಿದ್ಯೆ, ವೇದ್ಯ,ಅವೇದ್ಯ, ಚಲ, ಅಚಲ, ಅಪೂರ್ವ, ಅಕ್ಷಯ, ಕ್ಷಯ- ಈ ರೀತಿಯಾದ ವಿಚಾರಗಳಲ್ಲಿ ಅನುತ್ತಮವಾದ ಪ್ರಶ್ನೆಗಳನ್ನು ಮಾಡಿದನು.
ಅಥೋಕ್ತಶ್ಚ ಮಯಾ ರಾಜನ್ ರಾಜಾ ಗಂಧರ್ವಸತ್ತಮಃ |
ಪೃಷ್ಟವಾನನುಪೂರ್ವೇಣ ಪ್ರಶ್ನಮುತ್ತಮಮರ್ಥವತ್ ॥30॥
ಬಳಿಕ ನಾನು ವಿಶ್ವಾವಸುವನ್ನು ನೋಡಿ, `ಎಲೈಗಂಧರ್ವಶ್ರೇಷ್ಠನೇ, ನೀನು ಉತ್ತಮವಾದ, ರಸವತ್ತಾದ ಪ್ರಶ್ನೆಯನ್ನೇ ಕೇಳಿರುವೆ.
ಮುಹೂರ್ತಂ ಮೃಷ್ಯತಾಂ ತಾವದ್ ಯಾವದೇನಂ ವಿಚಿಂತಯೇ |
ಬಾಢಮಿತ್ಯೇವ ಕೃತ್ವಾ ಸ ತೂಷ್ಣೀಂ ಗಂಧರ್ವ ಆಸ್ಥಿತಃ ॥31॥
ಒಂದು ಮುಹೂರ್ತದ ತನಕ ಸಹಿಸಿಕೊಂಡರೆ ನೀನು, ನಾನು ಆಲೋಚಿಸಿ ನೋಡುತ್ತೇನೆ' ಎಂದು ಹೇಳಲು ಆ ಗಂಧರ್ವನು ಹಾಗೆಯೇ ಆಗಲೆಂದು ಮೌನದಲ್ಲಿದ್ದನು.
ತತೋಽನ್ವಚಿಂತಯಮಹಂ ಭೂಯೋ ದೇವೀಂ ಸರಸ್ವತೀಮ್ |
ಮನಸಾ ಸ ಚ ಮೇ ಪ್ರಶ್ನೋ ದಧ್ನೋ ಘೃತಮಿವೋದ್ಧೃತಮ್ ॥32॥
ಬಳಿಕ ನಾನು ಸರಸ್ವತಿಯನ್ನು ಧ್ಯಾನಿಸಿದೆನು. ಕೂಡಲೇ ಮೊಸರಿನಲ್ಲಿ ಬೆಣ್ಣೆಯು ಹೇಗೋ ಹಾಗೆ ನನ್ನ ಮನಸ್ಸಿನಲ್ಲಿ ಆ ಪ್ರಶ್ನೆಗಳಿಗೆಲ್ಲ ಉತ್ತರವು ಸುಲಭವಾಗಿ ತೋರುತ್ತಾ ಬಂದಿತು.
ತತ್ರೋಪನಿಷದಂ ಚೈವ ಪರಿಶೇಷಂ ಚ ಪಾರ್ಥಿವ |
ಮಥ್ನಾಮಿ ಮನಸಾ ತಾತ ದೃಷ್ಟ್ವಾ ಚಾನ್ವೀಕ್ಷಿಕೀಂ ಪರಾಮ್ ॥33॥
ನಾನು ಉಪನಿಷತ್ತನ್ನು ಪರಿಶೇಷವೆಂಬ ಉಳಿದ ವಾಕ್ಯವನ್ನು, ಅದರಲ್ಲಿಯೇ ಮಥನ ಮಾಡಿ, ಅದರ ಸಾರಾರ್ಥವನ್ನು ಪುನಃ ಚಿಂತಿಸಿದೆನು. ಹೀಗೆ ಚಿಂತಿಸುತ್ತಾ ಶ್ರೇಷ್ಠವಾದ ಆನ್ವೀಕ್ಷಿಕೀ ಎಂಬ ವಿದ್ಯೆಯನ್ನು ತಿಳಿದುಕೊಂಡೆನು.
ಚತುರ್ಥೀ ರಾಜಶಾರ್ದೂಲ ವಿದ್ಯೈಷಾ ಸಾಂಪರಾಯಿಕೀ |
ಉದೀರಿತಾ ಮಯಾ ತುಭ್ಯಂ ಪಂಚವಿಂಶೇಽಧಿಧಿಷ್ಠಿತಾ ॥34॥
ಆನ್ವೀಕ್ಷಿಕೀ ಎಂಬ ವಿದ್ಯೆಯು ನಾಲ್ಕನೆಯ ವಿದ್ಯೆ ಎನಿಸಿ ಮೋಕ್ಷಕ್ಕೆ ಸಾಧಕವಾಗಿದೆ. ಅಂತಹ ಶ್ರೇಷ್ಠವಾದ ವಿದ್ಯೆಯನ್ನು ಇಪ್ಪತ್ತೈದನೆಯ ವಿದ್ಯೆಯಲ್ಲಿ ಸೇರಿಸಿಕೊಂಡು ನಿನಗೆ ತಿಳಿಸಿರುತ್ತೇನೆ. ಅರ್ಥಾತ್ ಪರಮಾತ್ಮನಿಗೆ ಸಂಬಂಧಿಸಿದಂತೆ ನಿನಗೆ ಬೋಧಿಸಿರುತ್ತೇನೆ.
ಅಥೋಕ್ತಸ್ತು ಮಯಾ ರಾಜನ್ರಾಜಾ ವಿಶ್ವಾವಸುಸ್ತದಾ |
ಶ್ರೂಯತಾಂ ಯದ್ಭವಾನಸ್ಮಾನ್ ಪ್ರಶ್ನಂ ಸಂಪೃಷ್ಟವಾನಿಹ ॥35॥
ವಿಶ್ವಾವಿಶ್ವೇತಿ ಯದಿದಂ ಗಂಧರ್ವೇಂದ್ರಾನುಪೃಚ್ಛಸಿ |
ವಿಶ್ವಾವ್ಯಕ್ತಂ ಪರಂ ವಿದ್ಯಾದ್ಭೂತಭವ್ಯಭಯಂಕರಮ್ ॥36॥
ಆಗ ನಾನು ವಿಶ್ವಾವಸುವನ್ನು ನೋಡಿ, `ಗಂಧರ್ವರಾಜನೇ, ನೀನು ಕೇಳಿದ ಪ್ರಶ್ನೆಗಳಿಗೆ ನಾನು ಉತ್ತರವನ್ನು ಹೇಳುತ್ತೇನೆ. ನೀನು ಕೇಳಿದ ವಿಶ್ವಾವಿಶ್ವ ಎಂಬುದರಲ್ಲಿ ವಿಶ್ವ ಎಂದರೆ ಸರ್ವೋತ್ತಮನೂ, ಹಿಂದೆಯೂ ಮುಂದೆಯೂ ಸಂಸಾರವೆಂಬ ಭಯಾನಕವಾದ ಶೃಂಖಲೆಗಳನ್ನು ತಂದೊಡ್ಡುವುದು ಆಗಿರುತ್ತದೆ.
ತ್ರಿಗುಣಂ ಗುಣಕರ್ತೃತ್ವಾದವಿಶ್ವೋ ನಿಷ್ಕಲಸ್ತಥಾ |
ವಿಶ್ವೋಽಸ್ತಿ ವೇತಿ ಮಿಥುನಮೇವಮೇವಾನುದೃಶ್ಯತೇ ॥37॥
ಮೂರು ಗುಣಗಳಿಂದ ಕೂಡಿರುವಂತಹದ್ದು ಆಗಿರುವುದೇ ಅವಿಶ್ವ ಎನಿಸಿದೆ, ನಿಶ್ಚಲವೆನಿಸಿದೆ. ವಿಶ್ವವು ಇದೆಯೋ, ಇಲ್ಲವೋ ಎಂಬ ಅಸಂಗತವಾದ ಪ್ರಶ್ನೆಯೇ ಅವಿಶ್ವಸ್ಥ ಎನಿಸಿದೆ.
ಅವ್ಯಕ್ತಂ ಪ್ರಕೃತಿಂ ಪ್ರಾಹುಃ ಪುರುಷೇತಿ ಚ ನಿರ್ಗುಣಮ್ |
ತಥೈವ ಮಿತ್ರಂ ಪುರುಷಂ ವರುಣಂ ಪ್ರಕೃತಿಂ ತಥಾ ॥38॥
ಅವ್ಯಕ್ತವನ್ನು ಪ್ರಕೃತಿ ಎಂದೂ, ನಿರ್ಗುಣನನ್ನು ಪುರುಷನೆಂದೂ ಹೇಳುತ್ತಾರೆ. ಅದರಂತೆ ವರುಣನನ್ನು ಪ್ರಕೃತಿಯೆಂದು, ಮಿತ್ರನನ್ನು ಪುರುಷನೆಂದು ಹೇಳುತ್ತಾರೆ.
ಜ್ಞಾನಂ ತು ಪ್ರಕೃತಿಂ ಪ್ರಾಹುರ್ಜ್ಞೇಯಂ ನಿಷ್ಕಲಮೇವ ಚ |
ಅಜ್ಞಶ್ಚ ಜ್ಞಶ್ಚ ಪುರುಷಸ್ತಸ್ಮಾನ್ನಿಷ್ಕಲ ಉಚ್ಯತೇ ॥39॥
ಜ್ಞಾನವು ಪ್ರಕೃತಿಯು, ಜ್ಞೇಯವು ಪುರುಷನು. ತಿಳಿಯದಿರುವ ಪುರುಷನು ಅಜ್ಞ ಎಂದೇ ಕರೆಸಿಕೊಳ್ಳುತ್ತಾನೆ. ಪುರುಷನು ಪ್ರಕೃತಿಯನ್ನು ಅಜ್ಞವನ್ನಾಗಿ ಮಾಡುತ್ತಾನಾದ್ದರಿಂದ ಪುರುಷನೂ ಅಜ್ಞನೆನಿಸಿದ್ದಾನೆ, ತಿಳಿದವನೂ ಎನಿಸಿದ್ದಾನೆ. ಆದ್ದರಿಂದಲೇ ನಿಷ್ಕಲನೂ ಎನಿಸುತ್ತಾನೆ. ಜ್ಞಾನವು ಪ್ರಕೃತಿ ಎಂದೂ, ಜ್ಞೇಯವು ಪುರುಷನೆಂದು, ಅಜ್ಞವಾದುದು ಅವ್ಯಕ್ತವೆಂದು, ಜ್ಞಾತನಾದವನನ್ನು ಆತ್ಮನೆಂದು ಹೇಳಲಾಗಿದೆ.
ವ್ಯಾಖ್ಯಾನ ವಿಶೇಷ ಪ್ರಕೃತಿ-ಪುರುಷರ ಬಗ್ಗೆ ಇಲ್ಲಿ ಪ್ರಶ್ನೆ ಮಾಡಲಾಗಿದೆ. ಪ್ರಕೃತಿಯು ವ್ಯಾಪಕವಾಗಿರುವಂತಹದ್ದು. ಪುರುಷನು ವಿಶ್ವಕ್ಕಿಂತ ಭಿನ್ನನಾದವನು. ಅವಿದ್ಯಾತ್ಮಕವಾದುದು ಪ್ರಕೃತಿಯು, ವಿದ್ಯಾ ರೂಪನಾದವನು ಪುರುಷನು. ವಾಸ್ತವಿಕವಾಗಿ ಈ

ರೀತಿಯಾದ ಪ್ರಶ್ನೆಗಳು ಹಿಂದೆ ಬಂದಿದ್ದರೂ ಪುರುಷನಲ್ಲಿರುವ ಗುಣವಿಶೇಷಣಗಳನ್ನು ತೋರಿಸಲು ಪುನಃ ಪುನಃ ಪ್ರಶ್ನಿಸಲಾಗಿದೆ ಎಂದು ತಿಳಿಯಬೇಕು.
ಕಸ್ತಪಾ ಅತಪಾಃ ಪ್ರೋಕ್ತಃ ಕೋಽಸೌ ಪುರುಷ ಉಚ್ಯತೇ |
ತಪಾಃ ಪ್ರಕೃತಿರಿತ್ಯಾಹುರತಪಾ ನಿಷ್ಕಲಃ ಸ್ಮೃತಃ ॥40॥
ಯಾವುದನ್ನು ತಪಸ್ಸು ಎನ್ನುತ್ತಾರೆ?ಯಾವುದನ್ನು ತಪಸ್ಸಲ್ಲವೆಂದು ಹೇಳುತ್ತಾರೆ? ಯಾರನ್ನು ಪುರುಷ ಎಂದು ಹೇಳುತ್ತಾರೆ? ಎಂದರೆ ಪ್ರಕೃತಿಯೇ ತಪಸ್ಸೆಂದು ಕರೆಸಿಕೊಳ್ಳುತ್ತದೆ. ನಿಷ್ಕಲನಾದ ಆತ್ಮನು ಅತಪ ಎನಿಸಿಕೊಳ್ಳುತ್ತಾನೆ.
ತಥೈವಾವೇದ್ಯಮವ್ಯಕ್ತಂ ವೇದ್ಯಃ ಪುರುಷ ಉಚ್ಯತೇ |
ಚಲಾಚಲಮಿತಿ ಪ್ರೋಕ್ತಂ ತ್ವಯಾ ತದಪಿ ಮೇ ಶೃಣು ॥41॥
ತಿಳಿಯಲಾಗದೆ ಇರುವುದನ್ನು ಅವ್ಯಕ್ತ ಎನ್ನುತ್ತಾರೆ. ತಿಳಿಯಲಾಗುವವನನ್ನು ಪುರುಷ ಎನ್ನುತ್ತಾರೆ. ಚಲಾಚಲ ಎಂದರೆ ಯಾವುದು ಎಂಬುದನ್ನೂ ಹೇಳುತ್ತೇನೆ, ಕೇಳು.
ಚಲಾಂ ತು ಪ್ರಕೃತಿಂ ಪ್ರಾಹುಃ ಕಾರಣಂ ಕ್ಷೇಪಸರ್ಗಯೋಃ |
ಅಕ್ಷೇಪಸರ್ಗಯೋಃ ಕರ್ತಾ ನಿಶ್ಚಲಃ ಪುರುಷಃ ಸ್ಮೃತಃ ॥42॥
ಚಲಾ ಎಂದರೆ ಸೃಷ್ಟಿ-ಪ್ರಳಯಗಳಿಗೆ ಕಾರಣವಾದ ಪ್ರಕೃತಿ ಎಂದೂ, ಸೃಷ್ಟಿ- ಪ್ರಳಯಗಳಿಗೆ ಕರ್ತೃವಾದ ನಿಶ್ಚಲನಾದ ವ್ಯಕ್ತಿಯು ಪುರುಷನೆಂದು ಹೇಳಲ್ಪಟ್ಟಿದೆ.
ಅಜಾವುಭಾವಪ್ರಜೌ ಚ ಅಕ್ಷಯೌ ಚಾಪ್ಯುಭಾವಪಿ |
ಅಜೌ ನಿತ್ಯಾವುಭೌ ಪ್ರಾಹುರಧ್ಯಾತ್ಮಗತಿನಿಶ್ಚಯಾಃ ॥43॥
ಪ್ರಕೃತಿ-ಪುರುಷ ಎರಡೂ ಅಜ-ಅಕ್ಷಯ-ನಿತ್ಯ ಎಂದು ಅಧ್ಯಾತ್ಮಗತಿಯನ್ನು ನಿಶ್ಚಯಿಸಿರುವ ಪ್ರಾಜ್ಞರು ಹೇಳುತ್ತಾರೆ.
ಅಕ್ಷಯತ್ವಾತ್ ಪ್ರಜನನೇ ಅಜಮತ್ರಾಹುರವ್ಯಯಮ್ |
ಅಕ್ಷಯಂ ಪುರುಷಂ ಪ್ರಾಹುಃ ಕ್ಷಯೋ ಹ್ಯಸ್ಯ ನ ವಿದ್ಯತೇ ॥44॥
ಸೃಷ್ಟಿಯಲ್ಲಿ ಜನನವಿಲ್ಲದುದಕ್ಕೆ ಅಜವೆಂದು, ಅವ್ಯಯವೆಂದು ಹೇಳುತ್ತಾರೆ. ಪುರುಷನನ್ನು ಅಕ್ಷಯನೆಂದು ಹೇಳುತ್ತಾರೆ. ಕ್ಷಯವಿಲ್ಲದೆ ಇರುವ ಕಾರಣದಿಂದ ಪುರುಷನು ಅಕ್ಷಯನೆನಿಸಿದ್ದಾನೆ.
ಗುಣಕ್ಷಯತ್ವಾತ್ ಪ್ರಕೃತಿಃ ಕರ್ತೃತ್ವಾದಕ್ಷಯಂ ಬುಧಾಃ |
ಏಷಾ ತೇಽಽಽನ್ವೀಕ್ಷಿಕೀ ವಿದ್ಯಾ ಚತುರ್ಥೀ ಸಾಂಪರಾಯಿಕೀ ॥45॥
ಗುಣಕ್ಷಯದಿಂದ ಪ್ರಕೃತಿಯನ್ನು ಕ್ಷರವೆಂದು, ಸೃಷ್ಟಿಗೆ ಕರ್ತೃವಾದುದರಿಂದ ಅಕ್ಷಯವೆಂದು ಹೇಳುತ್ತಾರೆ. ಗಂಧರ್ವರಾಜನೇ, ನಾನು ನಿನಗೆ ಮೋಕ್ಷಕ್ಕೆ ಸಾಧನವಾದ ನಾಲ್ಕನೆಯದ್ದಾದ ಜ್ಞಾನವಿದ್ಯೆಯನ್ನು ಹೇಳಿರುತ್ತೇನೆ.
ವಿದ್ಯೋಪೇತಂ ಧನಂ ಕೃತ್ವಾ ಕರ್ಮಣಾ ನಿತ್ಯಕರ್ಮಣಿ |
ಏಕಾಂತದರ್ಶನಾ ವೇದಾಃ ಸರ್ವೇ ವಿಶ್ವಾವಸೋ ಸ್ಮೃತಾಃ ॥46॥
ವೇದವಾದಿಗಳೆಲ್ಲರೂ ಕರ್ಮಮೂಲಕವಾಗಿ ವಿದ್ಯೆಯೊಡನೆ ಅರ್ಥವನ್ನು ಹುಡುಕುತ್ತಾ ಕರ್ಮಗಳನ್ನು ಒಂದೇ ದೃಷ್ಟಿಯುಳ್ಳವರಂತೆ ತಿಳಿಯುತ್ತಾರೆ. ಏಕಾಂತ ದರ್ಶನವುಳ್ಳ ಸಮಸ್ತ ವೇದಗಳು ವಿಶ್ವಾವಸುವಿಗೆ ಸಂಬಂಧಿಸಿದ್ದು ಎಂದು ಹೇಳಿರುತ್ತಾರೆ.
ಜಾಯಂತೇ ಚ ಮ್ರಿಯಂತೇ ಚ ಯಸ್ಮಿನ್ನೇತೇ ಯತಶ್ಚ್ಯುತಾಃ |
ವೇದಾರ್ಥಂ ಯೇ ನ ಜಾನಂತಿ ವೇದ್ಯಂ ಗಂಧರ್ವಸತ್ತಮ ॥47॥
ತಿಳಿಯಬೇಕಾದುದನ್ನು ಯಾರು ತಿಳಿಯುವುದಿಲ್ಲವೋ ಅವರು ಹುಟ್ಟುತ್ತಲೂ ಸಾಯುತ್ತಲೂ ಇರುತ್ತಾರೆ. ತಿಳಿಯಬೇಕಾದ ವೇದಾರ್ಥವನ್ನು ತಿಳಿಯದಿದ್ದಲ್ಲಿ ಜನನ-ಮರಣಗಳ ಚಕ್ರವು ಗಂಧರ್ವರಾಜನೇ, ತಪ್ಪುವುದಿಲ್ಲ.
ಸಾಂಗೋಪಾಂಗಾನಪಿ ಯದಿ ಪಂಚ ವೇದಾನಧೀಯತೇ |
ವೇದವೇದ್ಯಂ ನ ಜಾನೀತೇ ವೇದಭಾರವಹೋ ಹಿ ಸಃ ॥48॥
ಒಬ್ಬನು ಸಾಂಗೋಪಾಂಗವಾದ ಸಮಸ್ತ ವೇದಗಳನ್ನೆಲ್ಲ ಓದಿದ್ದರೂ ಅದರಿಂದ ತಿಳಿಯಬೇಕಾದ ಜ್ಞೇಯವಸ್ತುವನ್ನು ಶ್ರೀಹರಿಯನ್ನು ತಿಳಿಯದಿದ್ದಲ್ಲಿ ಅವನು ಕೇವಲ ವೇದಗಳ ಭಾರವನ್ನು ಹೊತ್ತವನೇ ಸರಿ.
ಯೋ ಘೃತಾರ್ಥೀ ಖರೀಕ್ಷೀರಂ ಮಥೇದ್ ಗಂಧರ್ವಸತ್ತಮ |
ವಿಷ್ಠಾಂ ತತ್ರಾನುಪಶ್ಯೇತ ನ ಮಂಡಂ ನಾಪಿ ವಾ ಘೃತಮ್ ॥49॥
ವಿಶ್ವಾವಸುವೇ, ಒಳ್ಳೆಯ ತುಪ್ಪವನ್ನು ಅಪೇಕ್ಷಿಸುವವನು ಕತ್ತೆಯ ಹಾಲನ್ನು ಕರೆದರೆ ಏನು ಪ್ರಯೋಜನ? ಅದರಿಂದ ಅಶುದ್ಧವಾದ ವಸ್ತುವು ದೊರೆತೀತೇ ವಿನಾ ಬೆಣ್ಣೆಯಾಗಲಿ, ತುಪ್ಪವಾಗಲಿ ದೊರೆಯಲು ಸಾಧ್ಯವಿಲ್ಲ.
ತಥಾ ವೇದ್ಯಮವೇದ್ಯಂ ಚ ವೇದವಿದ್ಯೋ ನ ವಿಂದತಿ |
ಸ ಕೇವಲಂ ಮೂಢಮತಿರ್ಜ್ಞಾನಭಾರವಹಃ ಸ್ಮೃತಃ ॥50॥
ಅದರಂತೆ ಕೇವಲ ವೇದವನ್ನು ಓದಿದವನು ವೇದದ ಭಾರವನ್ನು ಹೊತ್ತವನೇ ಹೊರತು ವೇದ್ಯಾವೇದ್ಯಗಳನ್ನು ತಿಳಿಯಲು ಸಮರ್ಥನಾಗುವುದಿಲ್ಲ.
ದ್ರಷ್ಟವ್ಯೌ ನಿತ್ಯಮೇವೈತೌ ತತ್ಪರೇಣಾಂತರಾತ್ಮನಾ |
ಯಥಾಸ್ಯ ಜನ್ಮನಿಧನೇ ನ ಭವೇತಾಂ ಪುನಃ ಪುನಃ ॥51॥
ಅಜಸ್ರಂ ಜನ್ಮನಿಧನಂ ಚಿಂತಯಿತ್ವಾ ತ್ರಯೀಮಿಮಾಮ್ |
ಪರಿತ್ಯಜ್ಯ ಕ್ಷಯಮಿಹ ಅಕ್ಷಯಂ ಧರ್ಮಮಾಸ್ಥಿತಃ ॥52॥
ಆದ್ದರಿಂದ ತನಗೆ ಜನನ-ಮರಣಗಳು ಒದಗದಂತೆ ವೇದ್ಯ-ಅವೇದ್ಯಗಳನ್ನು ಏಕಾಗ್ರ ಮನಸ್ಸಿನಿಂದ ದೇವರನ್ನೇ ಧ್ಯಾನಿಸುತ್ತಾ

ಚಿಂತಿಸಬೇಕು. ಜನನ-ಮರಣಗಳು ತನ್ನನ್ನು ಬಿಡದೆ ಪುನಃ ಪುನಃ ಹಿಂಬಾಲಿಸುವುದನ್ನು ಯೋಚಿಸಿ, ಮೂರುವೇದಗಳನ್ನು ಅಧ್ಯಯನ ಮಾಡುತ್ತಾ, ಅದರಲ್ಲಿ ಅಶಾಶ್ವತವಾದ ಧರ್ಮಗಳನ್ನು ನಿರಾಕರಿಸಿ ಶಾಶ್ವತವಾದ ಮೋಕ್ಷಧರ್ಮವನ್ನೇ ಆಚರಿಸುತ್ತಿರಬೇಕು.
ಯದಾ ತು ಪಶ್ಯತೇತ್ಯಂತಮಹನ್ಯಹನಿ ಕಾಶ್ಯಪ |
ತದಾ ಸ ಕೇವಲೀಭೂತಃ ಷಡ್ವಂಶಮನುಪಶ್ಯತಿ ॥53॥
ನಿರಂತರವೂ ವೇದ್ಯ-ಅವೇದ್ಯಗಳು ಯಾವುದೆಂದು ಆದರದಿಂದ ತಿಳಿಯುತ್ತಿದ್ದರೆ ಅವನು ಕೇವಲನೆನಿಸಿ ಇಪ್ಪತ್ತಾರನೆಯ ತತ್ತ್ವವೆನಿಸಿದ ಪರಮಾತ್ಮನನ್ನು ಕಾಣಬಲ್ಲನು.
ಅನ್ಯಶ್ಚ ಶಾಶ್ವತೋಽವ್ಯಕ್ತಸ್ತಥಾನ್ಯಃ ಪಂಚವಿಂಶಕಃ |
ತಸ್ಯ ದ್ವಾವನುಪಶ್ಯೇತ ತಮೇಕಮಿತಿ ಸಾಧವಃ ॥54॥
ಅವ್ಯಕ್ತಸ್ವಭಾವನೆನಿಸಿದ, ಇಪ್ಪತ್ತಾರನೆಯ ತತ್ತ್ವವೆನಿಸಿದ ಪರಮಾತ್ಮನಾಗಲಿ, ಇಪ್ಪತ್ನಾಲ್ಕು ತತ್ತ್ವಗಳಿಗಿಂತ ಭಿನ್ನನಾದ ಇಪ್ಪತ್ತೈದನೆಯ ತತ್ತ್ವವೆನಿಸಿದ ಭಗವಂತನ ರೂಪವಾಗಲಿ ಎರಡೂ ಬೇರೆಯಾಗಿರುವುದಿಲ್ಲ. ಇಪ್ಪತ್ತೈದು ಇಪ್ಪತ್ತಾರು ಈ ಎರಡು ಸಂಖ್ಯೆಯಿಂದ ವೇದ್ಯನಾದವನು ಪರಮಾತ್ಮನೇ ಆಗಿರುತ್ತಾನೆ ಎಂದು ಸಾಧುಗಳಾದವರು ಭಗವಂತನ ಅಂತರ್ಯಾಮಿ ರೂಪಗಳಲ್ಲಿಯೂ, ಮೂಲರೂಪಗಳಲ್ಲಿಯೂ ಐಕ್ಯವನ್ನೇ ಚಿಂತಿಸುತ್ತಾರೆ (ಈ ವಿಷಯವು ಹಿಂದೆ ತಿಳಿಸಲ್ಪಟ್ಟಿದೆ).
ವ್ಯಾಖ್ಯಾನ ವಿಶೇಷ ಹಿಂದೆ ವಸಿಷ್ಠರು ಇಪ್ಪತ್ತೈದನೆಯ ತತ್ತ್ವ ಶ್ರೀಹರಿಯೇ ಆಗಿದ್ದಾನೆ ಎಂದು ವಿಸ್ತಾರವಾಗಿ ನಿರೂಪಿಸಿದ್ದಾರೆ. ಷಡ್ವಿಂಶ ಮನುಪಶ್ಯಂತಿ ಎಂಬಲ್ಲಿ ಯಾಜ್ಞವಲ್ಕ್ಯರು ಇಪ್ಪತ್ತಾರನೆಯ ತತ್ತ್ವವು ಭಗವಂತನೆಂದು ತಿಳಿಯಬೇಕೆಂದು ಹೇಳಿದ್ದಾರೆ. ಹೀಗಾಗಿ ವಸಿಷ್ಠರ ಅಭಿಪ್ರಾಯಕ್ಕೂ ಯಾಜ್ಞವಲ್ಕ್ಯರ ಅಭಿಪ್ರಾಯಕ್ಕೂ ವಿರೋಧವು ಉಂಟಾಯಿತು ಎಂದು ಆಶಂಕಿಸಿಕೊಂಡು ಹೇಳುತ್ತಿದ್ದಾರೆ. ಮಹದಾದಿ ಚತುರ್ವಿಂಶತಿ ತತ್ತ್ವಗಳಲ್ಲಿ ಜೀವರನ್ನೂ ಸೇರಿಸಿಕೊಂಡರೆ ಇಪ್ಪತ್ತೈದನೆಯ ತತ್ತ್ವ ಭಗವಂತನೇ ಆಗುತ್ತಾನೆ. ಇದನ್ನು ಹಿಂದೆ ವಸಿಷ್ಠರು ಹೇಳಿರುತ್ತಾರೆ. ಜಡ-ಜೀವ ಎಂದು ವಿಭಾಗಿಸಿಕೊಂಡು ಹೇಳಿದಾಗ ಇಪ್ಪತ್ನಾಲ್ಕನೆಯ ತತ್ತ್ವ ಜಡವಾಗುತ್ತದೆ, ಇಪ್ಪತ್ತೈದನೆಯ ತತ್ತ್ವ ಜೀವನಾಗುತ್ತಾನೆ, ಇಪ್ಪತ್ತಾರನೆಯ ತತ್ತ್ವ ನಾರಾಯಣನಾಗುತ್ತಾನೆ. ಹೀಗಾಗಿ ಇಪ್ಪತ್ತೈದನೆಯ ತತ್ತ್ವ ಜೀವನೂ ಆಗುತ್ತಾನೆ ಎಂಬುದು ಯಾಜ್ಞವಲ್ಕ್ಯರ ಅಭಿಪ್ರಾಯ. ಆದ್ದರಿಂದ ಯಾಜ್ಞವಲ್ಕ್ಯರು ತಮ್ಮ ಅಭಿಪ್ರಾಯವನ್ನು ಹೀಗೆ ತಿಳಿಸಿದ್ದಾರೆ ಎಂದು ತಿಳಿದುಕೊಳ್ಳಬೇಕು. ಶಾಶ್ವತೋಽವ್ಯಕ್ತಃ ಎಂದು ಮೂಲಶ್ಲೋಕದಲ್ಲಿರುವ ಪದಕ್ಕೆ ಪ್ರಕೃತಿಯಲ್ಲಿರುವ ಪ್ರಧಾನ ತತ್ತ್ವ ಎಂದು ಅರ್ಥ. ಆ ಪ್ರಕೃತಿ ಎಂಬಪ್ರಧಾನ ತತ್ತ್ವಕ್ಕಿಂತ ಶ್ರೀಹರಿಯು ಭಿನ್ನನಾಗಿದ್ದಾನೆ ಎಂದು ಚಿಂತಿಸಬೇಕು. ಇದರಂತೆ ಇಪ್ಪತ್ತೈದನೆಯ ತತ್ತ್ವನಾದ ಜೀವನು ಭಗವಂತನಿಗಿಂತ ಭಿನ್ನನೇ ಆಗಿದ್ದಾನೆ. ಆದ್ದರಿಂದ ಜಡ-ಜೀವ ಎಂಬ ಭೇದದಲ್ಲಿ ಜೀವನೇ ಇಪ್ಪತ್ತೈದನೆಯ ತತ್ತ್ವನಾಗುತ್ತಾನೆ. ಜೀವರೆಲ್ಲರೂ ಜಡತತ್ತ್ವಕ್ಕೆ ಅಭಿಮಾನಿಗಳಾಗಿರುವುದರಿಂದ ಜಡದ ಸಮುದಾಯದಲ್ಲೇ ಜೀವನನ್ನು ಸೇರಿಸಿದರೆ ಇಪ್ಪತ್ನಾಲ್ಕನೆಯ ತತ್ತ್ವದಲ್ಲಿ ಜೀವನು ಸೇರಿಕೊಳ್ಳುವುದರಿಂದ ಇಪ್ಪತ್ತೈದನೆಯ ತತ್ತ್ವ ಶ್ರೀಹರಿಯಾಗುತ್ತಾನೆ. ಆದ್ದರಿಂದ ಇಪ್ಪತ್ತೈದನೆಯ ತತ್ತ್ವದಲ್ಲಿ ಜೀವಾತ್ಮನನ್ನೂ ಚಿಂತಿಸಬಹುದು, ಪರಮಾತ್ಮನನ್ನೂ ಚಿಂತಿಸಬಹುದು. ಆದರೆ ಇಪ್ಪತ್ತಾರನೆಯ ತತ್ತ್ವದಲ್ಲಿ ಜೀವಾತ್ಮನನ್ನು ಚಿಂತಿಸುವ ಅವಕಾಶವೇ ಇರುವುದಿಲ್ಲ. ಭಗವಂತನನ್ನೇ ಇಪ್ಪತ್ತಾರನೆಯ ತತ್ತ್ವ ಎಂದು ಜ್ಞಾನಿಗಳು ತಿಳಿದಿರುತ್ತಾರೆ. ಇಪ್ಪತ್ತೈದನೆಯ ತತ್ತ್ವದಲ್ಲಿರುವ ಎರಡು ಅಭಿಪ್ರಾಯಗಳಂತೆ ಇಪ್ಪತ್ತಾರನೆಯ ತತ್ತ್ವದಲ್ಲಿ ಅಭಿಪ್ರಾಯಭೇದಗಳು ಇರುವುದಿಲ್ಲ. ಆದಕಾರಣದಿಂದ ಮುಂದಿನ ಶ್ಲೋಕದಲ್ಲಿ `ಪಂಚವಿಂಶಕಮಚ್ಯುತಮ್ ನಾಭಿಜಾನಂತಿ' ಅಚ್ಯುತನನ್ನೇ ಇಪ್ಪತ್ತೈದನೆಯ ತತ್ತ್ವವೆಂದು ಹೇಳುವುದಿಲ್ಲ. ಕಿಂತು ವಿವಕ್ಷಾಭೇದ್ದಿಂದ ಮುಖ್ಯನಾಗಿ ಭಗವಂತನು ಇಪ್ಪತ್ತೈದನೆಯ ತತ್ತ್ವವೆಂದು, ಅಮುಖ್ಯನಾಗಿ ಜೀವನೂ ಇಪ್ಪತ್ತೈದನೆಯ ತತ್ತ್ವವೆಂದು ಜ್ಞಾನಿಗಳು ಹೇಳುತ್ತಾರೆ ಎಂದು ಅಭಿಪ್ರಾಯ. ಪರಮಾತ್ಮನು ಇಪ್ಪತ್ತೈದನೆಯ ತತ್ತ್ವವಾಗಿ ಹೇಗೆ ಪ್ರಾಧಾನ್ಯವನ್ನು ಹೊಂದುತ್ತಾನೋ, ಈ ರೀತಿಯಾದ ಇಪ್ಪತ್ತೈದನೆಯ ತತ್ತ್ವವೆಂಬ ಮಹತ್ವವು ಜೀವಾತ್ಮನಿಗೆ ಇರುವುದಿಲ್ಲ. ಆದ್ದರಿಂದ ಪ್ರತ್ಯೇಕವಾಗಿ ಪರಮಾತ್ಮನ ಮಹತ್ವವನ್ನು ತಿಳಿಸಲು ಷಡ್ವಿಂಶ ಎಂದು ಹೇಳಿದ್ದಾರೆ. ಇಪ್ಪತ್ತಾರನೆಯ ತತ್ತ್ವ ಭಗವಂತನಾಗಿದ್ದಾನೆ. ಅಪ್ರಧಾನವಾಗಿಯೂ ಇಲ್ಲಿ ಜೀವನನ್ನು ಇಪ್ಪತ್ತಾರನೆಯ ತತ್ತ್ವದಲ್ಲಿ ಅನುಸಂಧಾನ ಮಾಡಲು ಬರುವುದಿಲ್ಲ. ಆದ್ದರಿಂದ ನೀನೂ ಹೀಗೆ ಭಗವಂತನ ಸರ್ವೋತ್ತಮತ್ವವನ್ನು ಹೇಳಲು ಯೋಗ್ಯನಾಗಿರುತ್ತಿ. ಜೀವನ ಇಪ್ಪತ್ತೈದನೆಯ ತತ್ತ್ವದ ಮಹತ್ವವು ಏನೆಂಬುದನ್ನು ಹೇಳಲು ಯೋಗ್ಯನಾಗಿರುತ್ತಿ ಎಂದು ಭಾವ.
ತೇನೈತನ್ನಾಭಿಜಾನಂತಿ ಪಂಚವಿಂಶಕಮಚ್ಯುತಮ್ |
ಜನ್ಮಮೃತ್ಯುಭಯಾದ್ಯೋಗಾಃ ಸಾಂಖ್ಯಾಶ್ಚ ಪರಮೈಷಿಣಃ ॥55॥
ಭಗವಂತನನ್ನು ಇಪ್ಪತ್ತೈದನೆಯ ತತ್ತ್ವವೆಂದೇ ಹೇಳಲು ಬರುವುದಿಲ್ಲ. ಕಿಂತು ವಿವಕ್ಷಾ ಭೇದೇನ ಮುಖ್ಯಾಮುಖ್ಯ ಎಂಬ ರೀತಿಯಲ್ಲಿ ಜೀವ-ಪರಮಾತ್ಮರನ್ನು ಇಪ್ಪತ್ತೈದರಲ್ಲಿ ಹೇಳಲಾಗುತ್ತದೆ. ಸರ್ವೋತ್ತಮನಾದ ಭಗವಂತನಲ್ಲಿ ಜನನ-ಮರಣ ಭಯಾದಿಗಳ ಸಂಬಂಧವನ್ನು ಸಾಂಖ್ಯರು ಹೇಳುವುದಿಲ್ಲ.
ವಿಶ್ವಾವಸುಃ
ಪಂಚವಿಂಶಂ ಯದೇತತ್ತೇ ಪ್ರೋಕ್ತಂ ಬ್ರಾಹ್ಮಣಸತ್ತಮ |
ತಥಾ ತನ್ನ ತಥಾ ವೇತಿ ತದ್ಭವಾನ್ವಕ್ತುಮರ್ಹತಿ ॥56॥
ವಿಶ್ವಾವಸು ಬ್ರಾಹ್ಮಣಶ್ರೇಷ್ಠನೇ, ಇಪ್ಪತ್ತೈದು ಎಂಬುದಾಗಿ ಯಾವ ತತ್ತ್ವವನ್ನು ನೀನು ಹೇಳಿದ್ದೆಯೋ ಅದು ನೀನು ಹೇಳಿದಂತೆ ಸತ್ಯವೋ, ಅಸತ್ಯವೋ ಎಂಬುದಾಗಿ ನೀನೇ ಹೇಳಲು ಅರ್ಹನಾಗಿರುತ್ತಿ.
ಜೈಗೀಷವ್ಯಸ್ಯಾಸಿತಸ್ಯ ದೇವಲಸ್ಯ ಚ ಮೇ ಶ್ರುತಮ್ |
ಪರಾಶರಸ್ಯ ವಿಪ್ರರ್ಷೇರ್ವಾರ್ಷಗಣ್ಯಸ್ಯ ಧೀಮತಃ ॥57॥
ಭಿಕ್ಷೋಃ ಪಂಚಶಿಖಸ್ಯಾಥ ಕಪಿಲಸ್ಯ ಶುಕಸ್ಯ ಚ |
ಗೌತಮಸ್ಯಾರ್ಷ್ಟಿಷೇಣಸ್ಯ ಗರ್ಗಸ್ಯ ಚ ಮಹಾತ್ಮನಃ ॥58॥
ನಾರದಸ್ಯಾಸುರೇಶ್ಚೈವ ಪುಲಸ್ತ್ಯಸ್ಯ ಚ ಧೀಮತಃ |

ಸನತ್ಕುಮಾರಸ್ಯ ತತಃ ಶುಕ್ರಸ್ಯ ಚ ಮಹಾತ್ಮನಃ ॥59॥
ಕಶ್ಯಪಸ್ಯ ಪಿತುಶ್ಚೈವ ಪೂರ್ವಮೇವ ಮಯಾ ಶ್ರುತಮ್ ।
ತದನಂತರಂ ಚ ರುದ್ರಸ್ಯ ವಿಶ್ವರೂಪಸ್ಯ ಧೀಮತಃ ॥60॥
ದೈವತೇಭ್ಯಃ ಪಿತೃಭ್ಯಶ್ಚ ದೈತ್ಯೇಭ್ಯಶ್ಚ ತತಸ್ತತಃ ।
ಪ್ರಾಪ್ತಮೇತನ್ಮಯಾ ಕೃತ್ಸ್ನಂ ವೇದ್ಯಂ ನಿತ್ಯಂ ವದಂತ್ಯುತ ॥61॥
ಜೈಗೀಷವ್ಯನು, ಅಸಿತನು, ದೇವಲನು ಹೇಳಿದ ತತ್ತ್ವವನ್ನು ನಾನು ಮೊದಲೇ ಕೇಳಿದ್ದೇನೆ. ಪರಾಶರನು, ಜ್ಞಾನಿಯಾದ ವಾರ್ಷಗಣ್ಯನು, ಸಂನ್ಯಾಸಿಯಾದ ಪಂಚಶಿಖನು, ಕಪಿಲನು, ಶುಕನು, ಗೌತಮನು, ಆರ್ಷ್ಟಿಷೇಣನು, ಮಹಾತ್ಮನಾದ ಗರ್ಗಮುನಿಯು, ನಾರದನು, ಆಸುರಿಯು, ಪುಲಸ್ತ್ಯನು, ಸನತ್ಕುಮಾರನು, ಶುಕ್ರನು, ನನ್ನ ತಂದೆಯಾದ ಕಶ್ಯಪನು ಇವರೆಲ್ಲರಿಂದ ನಾನು ಈ ತತ್ತ್ವವನ್ನು ಕೇಳಿದ್ದೆನು. ನಂತರ ವಿಶ್ವರೂಪಿಯಾದ ರುದ್ರನು, ದೇವತೆಗಳು, ಪಿತೃಗಳು, ಅಸುರರು ಇವರಿಂದಲೂ ಈ ತತ್ತ್ವವನ್ನು ಕೇಳಿರುವೆನು. ಅವರೂ ಕೂಡ ವೇದ್ಯವಾದ ವಸ್ತುವನ್ನು ನಿತ್ಯವೆಂದೇ ಹೇಳುತ್ತಾರೆ.
ತಸ್ಮಾತ್ತದ್ವೈ ಭವದ್ ಬುದ್ಧ್ಯಾ ಶ್ರೋತುಮಿಚ್ಛಾಮಿ ಬ್ರಾಹ್ಮಣ ।
ಭವಾನ್ ಪ್ರಬರ್ಹಃ ಶಾಸ್ತ್ರಾಣಾಂ ಪ್ರಗಲ್ಭಶ್ಚಾತಿಬುದ್ಧಿಮಾನ್ ॥62॥
ಆದ್ದರಿಂದ ನಿನ್ನ ಮಾತಿನಿಂದಲೂ ನಾನು ಸಂಶಯವನ್ನು ಹೊಂದಿ ಮತ್ತೆ ಕೇಳಬೇಕು ಎಂದು ತವಕಗೊಂಡಿದ್ದೇನೆ. ನೀನು ಅನೇಕ ಶಾಸ್ತ್ರಗಳನ್ನು ತಿಳಿದವನು. ಅತ್ಯಂತ ಬುದ್ಧಿವಂತನು. ಉಪದೇಶ ಮಾಡಲು ಸಮರ್ಥನು.
ನ ತವಾವಿದಿತಂ ಕಿಂಚಿದ್ ಭವಾನ್ ಶ್ರುತಿನಿಧಿಃ ಸ್ಮೃತಃ ।
ಕಥ್ಯತೇ ದೇವಲೋಕೇ ಚ ಪಿತೃಲೋಕೇ ಚ ಬ್ರಾಹ್ಮಣ ॥63॥
ಬ್ರಹ್ಮಲೋಕಗತಾಶ್ಚೈವ ಕಥಯಂತಿ ಮಹರ್ಷಯಃ ।
ಪತಿಶ್ಚ ತಪತಾಂ ಶಶ್ವದಾದಿತ್ಯಸ್ತವ ಭಾಷತೇ ॥64॥
ನೀನು ತಿಳಿಯದಿರುವ ಯಾವ ಸಂಗತಿಯೂ ಇರುವುದಿಲ್ಲ. ನಿನ್ನನ್ನು ಶ್ರುತಿನಿಧಿ ಎಂದು ಹೇಳುತ್ತಾರೆ. ದೇವಲೋಕ, ಪಿತೃಲೋಕ, ಮಹರ್ಷಿಗಳಲ್ಲಿಯೂ ನಿನ್ನನ್ನು ಕೊಂಡಾಡುತ್ತಾರೆ. ತೇಜಸ್ಸಿಗೆ ಅಧಿಪತಿಯಾದ ಸೂರ್ಯದೇವನೇ ನಿನಗೆ ಸಾಕ್ಷಾತ್ತಾಗಿ ತತ್ತ್ವವನ್ನು ಉಪದೇಶಿಸಿರುತ್ತಾನೆ.
ಸಾಂಖ್ಯಜ್ಞಾನಂ ತ್ವಯಾ ಬ್ರಹ್ಮನ್ನವಾಪ್ತಂ ಕೃತ್ಸ್ನಮೇವ ಚ ।
ತಥೈವ ಯೋಗಜ್ಞಾನಂ ಚ ಯಾಜ್ಞವಲ್ಕ್ಯ ವಿಶೇಷತಃ ॥65॥
ಯಾಜ್ಞವಲ್ಕ್ಯನೇ, ಪೂರ್ಣವಾದ ಸಾಂಖ್ಯಜ್ಞಾನವು,ಅದಕ್ಕಿಂತಲೂ ವಿಶೇಷವಾಗಿ ಯೋಗಶಾಸ್ತ್ರ ಜ್ಞಾನವು ನಿನ್ನಲ್ಲಿ ನೆಲೆಗೊಂಡಿರುವುದನ್ನು ತಿಳಿದಿರುತ್ತೇನೆ.
ನಿಃಸಂದಿಗ್ಧಂ ಪ್ರಬುದ್ಧಸ್ತ್ವಂ ಬುಧ್ಯಮಾನಶ್ಚರಾಚರಮ್ ।
ಶ್ರೋತುಮಿಚ್ಛಾಮಿ ತಜ್ಜ್ಞಾನಂ ಘೃತಂ ಮಂಡಮಯಂ ಯಥಾ ॥66॥
ನೀನು ನಿಸ್ಸಂದೇಹವಾದ ನಿಶ್ಚಯಜ್ಞಾನವುಳ್ಳವನು. ತುಂಬಾ ಪ್ರಬುದ್ಧನು. ಚರಾಚರ ಪ್ರಾಣಿಗಳನ್ನೆಲ್ಲ ತಿಳಿಯಬಲ್ಲವನು. ಮೊಸರಿನಿಂದ ಬೆಣ್ಣೆಯನ್ನು ತೆಗೆಯುವಂತೆ ನಿನ್ನ ಜ್ಞಾನದ ಸಾರವನ್ನು ನನಗೆ ಉಪದೇಶಿಸಿ ಅನುಗ್ರಹಿಸು ಎಂದನು.
ಯಾಜ್ಞವಲ್ಕ್ಯಃ
ಕೃತ್ಸ್ನಧಾರಿಣಮೇವ ತ್ವಾಂ ಮನ್ಯೇ ಗಂಧರ್ವಸತ್ತಮ ।
ಜಿಜ್ಞಾಸಸಿ ಚ ಮಾಂ ರಾಜಂಸ್ತನ್ನಿಬೋಧ ಯಥಾಶ್ರುತಮ್ ॥67॥
ಯಾಜ್ಞವಲ್ಕ್ಯ ವಿಶ್ವಾವಸುವೇ, ನೀನೂ ಎಲ್ಲವನ್ನೂ ತಿಳಿದಿರುವಿ ಎಂದು ನಾನು ಬಲ್ಲೆನು. ಆದರೂ ಜಿಜ್ಞಾಸೆಯಿಂದ ಕೇಳುತ್ತಿರುವ ನಿನಗೆ ನಾನು ತಿಳಿದಷ್ಟು ಹೇಳುತ್ತೇನೆ, ಕೇಳಿಸಿಕೊ.
ಅಬುಧ್ಯಮಾನಾಂ ಪ್ರಕೃತಿಂ ಬುಧ್ಯತೇ ಪಂಚವಿಂಶಕಃ ।
ನ ತು ಬುಧ್ಯತಿ ಗಂಧರ್ವ ಪ್ರಕೃತಿಃ ಪಂಚವಿಂಶಕಮ್ ॥68॥
ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವನು ಜಡವಾಗಿರುವ ಪ್ರಕೃತಿಯನ್ನು ತಾನು ತಿಳಿದಿರುತ್ತಾನೆ. ಆದರೆ ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವಾತ್ಮನನ್ನು, ಇಪ್ಪತ್ನಾಲ್ಕನೆಯ ತತ್ತ್ವವಾದ ಜಡಪ್ರಕೃತಿಯು ಜಡವಾದ ಕಾರಣದಿಂದಲೇ ತಿಳಿದಿರುವುದಿಲ್ಲ.
ಅನೇನಾಪ್ರತಿಬೋಧೇನ ಪ್ರಧಾನಂ ಪ್ರವದಂತಿ ತಮ್ ।
ಸಾಂಖ್ಯಯೋಗಾಶ್ಚ ತತ್ತ್ವಜ್ಞಾ ಯಥಾಶ್ರುತಿನಿದರ್ಶನಾತ್ ॥69॥
ಈ ರೀತಿಯಾಗಿ ತಿಳಿಯದಿರುವ ಕಾರಣದಿಂದಲೇ ಜೀವರು ಪ್ರಧಾನ ಪ್ರಕೃತಿ ಎಂದು ಹೇಳುತ್ತಾರೆ. ಶ್ರುತಿಯ ನಿದರ್ಶನಕ್ಕೆ ಅನುಗುಣವಾಗಿ ತತ್ತ್ವಜ್ಞರಾದ ಸಾಂಖ್ಯ ಯೋಗಿಯ ನುಡಿಯು ಈ ರೀತಿಯಾಗಿದೆ.
ಪಶ್ಯಂಸ್ತಥೈವ ಚಾಪಶ್ಯನ್ ಪಶ್ಯತ್ಯನ್ಯಸ್ತಥಾನಘ ।
ಷಡ್ವಂಶಃ ಪಂಚವಿಂಶಂ ಚ ಚತುರ್ವಿಂಶಂ ಚ ಪಶ್ಯತಿ ।
ನ ತು ಪಶ್ಯತಿ ಪಶ್ಯಂಸ್ತು ಯಶ್ಚೈನಮನುಪಶ್ಯತಿ ॥70॥
ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನಿಗಿಂತ ಭಿನ್ನನಾದ ಜೀವಾತ್ಮನು ದೇಹ- ಗೇಹಾದಿಗಳನ್ನೆಲ್ಲ ನೋಡುತ್ತಾ ಪರಮಾತ್ಮನನ್ನು ನೋಡುವುದಿಲ್ಲ. ಆದರೆ ಇಪ್ಪತ್ತಾರನೆಯ ತತ್ತ್ವವೆನಿಸಿದ ಪರಮಾತ್ಮನು ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವನನ್ನು, ಇಪ್ಪತ್ನಾಲ್ಕನೆಯ ತತ್ತ್ವವೆನಿಸಿದ ಜಡತತ್ತ್ವವನ್ನು ನೋಡುತ್ತಾನೆ. ನೋಡುತ್ತಿರುವ ಜೀವಾತ್ಮನನ್ನು ಪರಮಾತ್ಮನು ನೋಡುತ್ತಾನೆ. ಆದರೆ ನೋಡುತ್ತಿರುವ ಪರಮಾತ್ಮನನ್ನು ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವಾತ್ಮನು ನೋಡುವುದಿಲ್ಲ.
ಪಂಚವಿಂಶೋಽಭಿಮನ್ಯೇತ ನಾನ್ಯೋಽಸ್ತಿ ಪರಮೋ ಮಮ ।

ನ ಚತುರ್ವಿಂಶಕೋऽಗ್ರಾಹ್ಯೋ ಮನುಜೈರ್ಜ್ಞಾನದರ್ಶಿಭಿಃ ॥71॥
ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವಾತ್ಮನು ನನಗಿಂತ ಸರ್ವೋತ್ತಮನಾದವನು ಯಾರೂ ಇಲ್ಲ ಎಂದು ಅಭಿಮಾನವನ್ನು ಹೊಂದಿರುತ್ತಾನೆ. ಆದರೆ ಜ್ಞಾನಚಕ್ಷುಸ್ಸುಳ್ಳ ಮನುಷ್ಯರು ಯಾರೂ ಜಡವಾದ ತತ್ತ್ವವೇ ನಾನು ಎಂದು ಇಪ್ಪತ್ನಾಲ್ಕನೆಯ ತತ್ತ್ವದ ಬಗ್ಗೆ ಅಜ್ಞಾನವನ್ನು ಹೊಂದಿರುವುದಿಲ್ಲ.
ಮತ್ಸ್ಯೇವೋದಕಮನ್ವೇತಿ ಪ್ರವರ್ತತಿ ಪ್ರವರ್ತನಾತ್ |
ಯಥೈವ ಬುಧ್ಯತೇ ಮತ್ಸ್ಯಸ್ತಥೈಷೋऽಪ್ಯನುಪಶ್ಯತಿ |
ಸಸ್ನೇಹಃ ಸಹವಾಸಾಚ್ಚ ಸಾಭಿಮಾನಶ್ಚ ನಿತ್ಯಶಃ ॥72॥
ಮೀನು ನೀರನ್ನೇ ಅವಲಂಬಿಸಿಕೊಂಡು ಹೋಗುವಂತೆ ಜೀವನು ಪ್ರಕೃತಿಯನ್ನೇ ಅನುಸರಿಸಿ ಸಾಗುತ್ತಾನೆ. ಮೀನು ನೀರನ್ನು ತಿಳಿಯುವ ಹಾಗೆ ಜೀವನು ಯಾವಾಗಲೂ ತನಗಿರುವ ಸ್ನೇಹ-ಸಹವಾಸಗಳಿಂದ, ಅಭಿಮಾನದಿಂದ ಪ್ರಕೃತಿಯನ್ನು ತನ್ನೊಡನೆ ನಿತ್ಯ ಸಂಬಂಧವನ್ನು ಹೊಂದಿದೆ ಎಂದು ತಿಳಿಯುತ್ತಾನೆ. ಅಜ್ಞಾನಿಯ ತಿಳಿವಳಿಕೆಯು ಈ ರೀತಿಯಾಗಿರುತ್ತದೆ ಎಂದು ಭಾವ.
ಸ ನಿಮಜ್ಜತಿ ಕಾಲಸ್ಯ ಯದೈಕತ್ವಂ ನ ಬುದ್ಧ್ಯತೇ |
ಉನ್ಮಜ್ಜತಿ ಹಿ ಕಾಲಸ್ಯ ಮಮತ್ವೇನಾಭಿಸಂವೃತಃ ॥73॥
ಕಾಲವು ಮುಖ್ಯ ಎಂಬುದನ್ನು ಜೀವಾತ್ಮನು ಎಲ್ಲಿಯತನಕ ತಿಳಿಯುವುದಿಲ್ಲವೋ ಅವನು ಈ ಅಜ್ಞಾನದ ಪ್ರಭಾವದಿಂದ ಕಾಲಾಖ್ಯ ಭಗವಂತನ ಅನುಗ್ರಹವಿಲ್ಲದೆ ಮುಳುಗಿ ಹೋಗುತ್ತಾನೆ. ಮಮಕಾರದಿಂದ ಆವೃತನಾದ ಜೀವನು ಈ ಕಾಲಪ್ರವಾಹದಲ್ಲೇ ಮುಳುಗುವುದು, ಏಳುವುದು ಮಾಡುತ್ತಿರುತ್ತಾನೆ.
ಯದಾ ತು ಮನ್ಯತೇऽನ್ಯೋಹಮನ್ಯ ಏಷ ಇತಿ ದ್ವಿಜಃ |
ತದಾ ಸ ಕೇವಲೀಭೂತಃ ಷಡ್ವಿಂಶಮನುಪಶ್ಯತಿ ॥74॥
ಯಾವಾಗ ಜೀವನು ನಾನು ಬೇರೆ, ನನ್ನಿಂದ ಪರಮಾತ್ಮನು ಅತ್ಯಂತ ಭಿನ್ನನು ಎಂದು ಈ ಭೇದಜ್ಞಾನವನ್ನು ಹೊಂದುತ್ತಾನೋ ಆಗ ಪ್ರಕೃತಿಯ ಗುಣದಿಂದ ದೂರನಾದ ಜೀವಾತ್ಮನು ಇಪ್ಪತ್ತಾರನೆಯ ತತ್ತ್ವವೆನಿಸಿದ ಪರಮಾತ್ಮನನ್ನು ನೋಡುತ್ತಾನೆ.
ಅನ್ಯಶ್ಚ ರಾಜನ್ನವರಸ್ತಥಾನ್ಯಃ ಪಂಚವಿಂಶಕಃ |
ತತ್ಸ್ಥತ್ವಾದನುಪಶ್ಯಂತಿ ಏಕ ಏವೇತಿ ಸಾಧವಃ ॥75॥
ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನಾಗಿದ್ದಾನೆ, ಅಧಮನೂ ಆಗಿದ್ದಾನೆ. ಪರಮಾತ್ಮನು ಆ ಜೀವನ ಅಂತರ್ಯಾಮಿಯಾಗಿದ್ದಾನೆ ಎಂಬುದಾಗಿ ಪರಮಾತ್ಮನ ಸರ್ವೋತ್ತಮತ್ವವನ್ನೇ ಸಜ್ಜನರು ತಿಳಿದಿರುತ್ತಾರೆ.
ತೇನೈತನ್ನಾಭಿನಂದಂತಿ ಪಂಚವಿಂಶಕಮಚ್ಯುತಮ್ |
ಜನ್ಮಮೃತ್ಯುಭಯಾದ್ಭೀತಾ ಯೋಗಾಃ ಸಾಂಖ್ಯಾಶ್ಚ ಕಾಶ್ಯಪ |
ಷಡ್ವಿಂಶಮನುಪಶ್ಯಂತಿ ಶುಚಯಸ್ತತ್ಪರಾಯಣಾಃ ॥76॥
ಆದ್ದರಿಂದಲೇ ಯಾಜ್ಞವಲ್ಕ್ಯನೇ, ಜನ್ಮ-ಮರಣದಿಂದ ಭೀತರಾದ ಯೋಗರು ಮತ್ತು ಸಾಂಖ್ಯರು ಇಪ್ಪತ್ತೈದನೆಯ ತತ್ತ್ವ ಅಚ್ಯುತ ಎಂದು ಹೇಳುವ ಅಭಿಪ್ರಾಯವನ್ನು ಅಭಿನಂದಿಸುವುದಿಲ್ಲ. ಅಲ್ಲಿ ಗೊಂದಲಕ್ಕೆ ಅವಕಾಶವಿದೆ. ಗೊಂದಲಕ್ಕೆ ಅವಕಾಶವಿಲ್ಲದ ಇಪ್ಪತ್ತಾರನೆಯ ತತ್ತ್ವ ಭಗವಂತನು ಎಂಬುದನ್ನೇ ಭಗವಂತನಲ್ಲಿ ದೃಢವಾದ ನಿಶ್ಚಯ ಉಳ್ಳ ಶುದ್ಧಚೇತನರು ಕಂಡುಕೊಂಡಿರುತ್ತಾರೆ.
ಯದಾ ಸ ಕೇವಲೀಭೂತಃ ಷಡ್ವಿಂಶಮನುಪಶ್ಯತಿ |
ತದಾ ಸ ಸರ್ವವಿದ್ ವಿದ್ವಾನ್ನ ಪುನರ್ಜನ್ಮ ವಿಂದತಿ ॥77॥
ಯಾವಾಗ ಜೀವನು ಪ್ರಾಕೃತ ಗುಣರಹಿತನಾಗಿ ಇಪ್ಪತ್ತಾರನೆಯ ತತ್ತ್ವವೆನಿಸಿದ ಭಗವಂತನನ್ನು ಅನುಭೋಗದಿಂದ ಕಂಡುಕೊಳ್ಳುತ್ತಾನೋ ಅವನು ಸರ್ವಜ್ಞನಾಗಿ ಪುನಃ ಜನ್ಮವನ್ನು ಹೊಂದುವುದಿಲ್ಲ.
ಏವಮಪ್ರತಿಬುದ್ಧಶ್ಚ ಬುಧ್ಯಮಾನಶ್ಚ ತೇऽನಘ |
ಬುದ್ಧಶ್ಚೋಕ್ತೋ ಯಥಾತತ್ತ್ವಂ ಮಯಾ ಶ್ರುತಿನಿದರ್ಶನಾತ್ ॥78॥
ನಿರ್ದುಷ್ಟನೇ, ಈ ರೀತಿಯಾಗಿ ನಾನು ಶ್ರುತಿಗಳ ನಿರ್ದೇಶದಂತೆ ತಿಳಿಯದವನ್ಯಾರು, ತಿಳಿಯುವವನ್ಯಾರು, ತಿಳಿದವನ್ಯಾರು ಎಂಬುದನ್ನು ಯಥಾರ್ಥವಾಗಿ ಹೇಳಿರುತ್ತೇನೆ.
ಪಶ್ಯಾಪಶ್ಯಂ ಯೋऽನುಪಶ್ಯೇತ್ಕ್ಷೇಮಂ ತತ್ತ್ವಂ ಚ ಕಾಶ್ಯಪ |
ಕೇವಲಾಕೇವಲಂ ಚಾದ್ಯಂ ಪಂಚವಿಂಶಾತ್ ಪರಂ ಚ ಯತ್ ॥79॥
ಕಶ್ಯಪಸುತನೇ, ಯಾವಾತನು ಭಗವತ್ತತ್ತ್ವವು ಪ್ರಾಕೃತ ಕಣ್ಣಿನಿಂದ ನೋಡಲಾಗದು, ಅಪ್ರಾಕೃತ ಕಣ್ಣಿನಿಂದ ನೋಡಲು ಸಾಧ್ಯವು ಎಂಬುದನ್ನು ಕಾಣುತ್ತಾನೋ ಅಂತಹ ಕ್ಷೇಮಕರವಾದ ತತ್ತ್ವವನ್ನು ಪ್ರಕೃತಿಗುಣದಿಂದ ದೂರವಾದುದೆಂದು, ಮಹತ್ವ ಪೂರ್ಣವಾದುದೆಂದು, ಇಪ್ಪತ್ತೈದನೆಯ ತತ್ತ್ವಕ್ಕಿಂತಲೂ ಶ್ರೇಷ್ಠವಾದುದೆಂದು ಜ್ಞಾನಿಯಾದವನು ತಿಳಿದುಕೊಳ್ಳುತ್ತಾನೆ.
ವಿಶ್ವಾವಸುಃ
ತಥ್ಯಂ ಶುಭಂ ಚೈತದುಕ್ತಂ ತ್ವಯಾ ಭೋಃ
ಸಮ್ಯಕ್ ಕ್ಷೇಮ್ಯಂ ದೇವತಾದ್ಯಂ ಯಥಾವತ್ |
ಸ್ವಸ್ತ್ಯಕ್ಷಯಂ ಭವತಶ್ಚಾಸ್ತು ನಿತ್ಯಂ
ಬುದ್ಧ್ಯಾ ಸದಾ ಬುದ್ಧಿಯುಕ್ತಂ ನಮಸ್ತೇ ॥80॥
ವಿಶ್ವಾವಸು ಯಾಜ್ಞವಲ್ಕ್ಯನೇ, ಯಥಾರ್ಥವಾದ, ಶುಭಕರವಾದ ತತ್ತ್ವವನ್ನು ನೀನು ತಿಳಿಸಿರುತ್ತಿ. ಕ್ಷೇಮವೆನಿಸಿದ, ದೇವತೆಗಳಿಗೆಲ್ಲ ಆದಿಯಾದ ತತ್ತ್ವವನ್ನು ಯಥಾರ್ಥವಾಗಿ ತಿಳಿಸಿರುತ್ತಿ. ಇಂತಹ ತತ್ತ್ವವನ್ನು ತಿಳಿಸಿದ ನಿನಗೆ ನಿತ್ಯವೂ ಮಂಗಳವಾಗಲಿ. ಭಗವಂತನ

ಬುದ್ಧಿಯಿಂದ ಯಾವಾಗಲೂ ಕೂಡಿರುವಂತಹ ನಿನಗೆ ನಮಸ್ಕಾರವು.
ಯಾಜ್ಞವಲ್ಕ್ಯಃ
ಏವಮುಕತತ್ವ ಸಂಪ್ರಯಾತೋ ದಿವಂ ಸ
ವಿಭ್ರಾಜನ್ ವೈ ಶ್ರೀಮತಾ ದರ್ಶನೇನ |
ತುಷ್ಟಶ್ಚ ತುಷ್ಟ್ಯಾ ಪರಯಾಭಿನಂದ್ಯ
ಪ್ರದಕ್ಷಿಣಂ ಮಮ ಕೃತ್ವಾ ಮಹಾತ್ಮಾ ॥81॥
ಯಾಜ್ಞವಲ್ಕ್ಯ ಹೀಗೆ ಶ್ರೇಷ್ಠವಾದ ಬೆಳಕಿನಿಂದ ದರ್ಶನವನ್ನು ನೀಡಿದ ವಿಶ್ವಾವಸು ಎಂಬ ಗಂಧರ್ವನು ನನ್ನ ಮಾತುಗಳಿಂದ ಸಂತೋಷಗೊಂಡು ಅಭಿನಂದಿಸಿ ಮಹಾತ್ಮನಾದ ಅವನು ನನಗೆ ಪ್ರದಕ್ಷಿಣೆಯನ್ನು ಮಾಡಿ ಸ್ವರ್ಗಲೋಕವನ್ನು ಕುರಿತು ಹೊರಟು ಹೋದನು.
ಬ್ರಹ್ಮಾದೀನಾಂ ಖೇಚರಾಣಾಂ ಕ್ಷಿತೌ ಚ
ಯೇ ಚಾಧಸ್ತಾತ್ ಸಂವಸಂತೇ ನರೇಂದ್ರ |
ತತ್ರೈವ ತದ್ದರ್ಶನಂ ದರ್ಶಯನ್ ವೈ
ಸಮ್ಯಕ್ ಕ್ಷೇಮ್ಯಂ ಯೇ ಪಥಂ ಸಂಶ್ರಿತಾ ವೈ ॥82॥
ರಾಜೇಂದ್ರನೇ, ಆದಿತ್ಯನು ಬ್ರಹ್ಮಾದಿ ದೇವತೆಗಳಿಗೂ, ಭೂಮಿಯಲ್ಲಿಯೂ, ಪಾತಾಳದಲ್ಲಿಯೂ ಇರುವವರಿಗೆ ಕ್ಷೇಮಕ್ಕಾಗಿ ಈ ಶಾಸ್ತ್ರವನ್ನು ಹೊರಹೊಮ್ಮಿಸಿದ್ದಾನೆ.
ಸಾಂಖ್ಯಾಃ ಸರ್ವೇ ಸಾಂಖ್ಯಧರ್ಮೇ ರತಾಶ್ಚ
ತದ್ವದ್ಯೋಗಾ ಯೋಗಧರ್ಮೇ ರತಾಶ್ಚ |
ಯೇ ಚಾಪ್ಯನ್ಯೇ ಮೋಕ್ಷಕಾಮಾ ಮನುಷ್ಯಾ-
ಸ್ತೇಷಾಮೇತದ್ದರ್ಶನಂ ಜ್ಞಾನದೃಷ್ಟಮ್ ॥83॥
ಸಾಂಖ್ಯಧರ್ಮದಲ್ಲಿ ನಿರತರಾದ ವ್ಯಕ್ತಿಗಳು, ಎಲ್ಲ ಸಾಂಖ್ಯರು, ಯೋಗ ಧರ್ಮಗಳಲ್ಲಿ ರತರಾದ ಯೋಗಸಿದ್ದರು, ಇನ್ನು ಉಳಿದ ಮೋಕ್ಷವನ್ನು ಬಯಸುವ ಮನುಷ್ಯರು ಎಲ್ಲರಿಗೂ ಈ ಶಾಸ್ತ್ರವು ಅತ್ಯಂತ ಮುಖ್ಯವಾದುದು.
ಜ್ಞಾನಾನ್ಮೋಕ್ಷೋ ಜಾಯತೇ ಪೂರುಷಾಣಾಂ
ನಾಸ್ತ್ಯಜ್ಞಾನಾದೇವಮಾಹುರ್ನರೇಂದ್ರ |
ತಸ್ಮಾಜ್ಜ್ಞಾನಂ ತತ್ತ್ವತೋಽನ್ವೇಷಿತವ್ಯಂ
ಯೇನಾತ್ಮಾನಂ ಮೋಕ್ಷಯೇಜ್ಜನ್ಮಮೃತ್ಯೋಃ ॥84॥
ಜ್ಞಾನದಿಂದಲೇ ಪುರುಷರಿಗೆ ಮೋಕ್ಷವಾಗುತ್ತದೆ. ಎಂದಿಗೂ ಅಜ್ಞಾನದಿಂದ ಮೋಕ್ಷವಾಗುವುದಿಲ್ಲ ಎಂದು ವಿದ್ವಾಂಸರು ನಿಶ್ಚಯಿಸಿರುತ್ತಾರೆ. ಈ ಕಾರಣದಿಂದ ಜ್ಞಾನವನ್ನು ಯಥಾರ್ಥವಾಗಿ ಅನ್ವೇಷಣೆ ಮಾಡಬೇಕು. ಜನನ-ಮರಣಗಳಿಂದ ಬಿಡುಗಡೆಯನ್ನು ಹೊಂದಿಸುವ ಸಾಮರ್ಥ್ಯ ಈ ಜ್ಞಾನಶಕ್ತಿಗೆ ಇರುತ್ತದೆ.
ಪ್ರಾಪ್ಯ ಜ್ಞಾನಂ ಬ್ರಾಹ್ಮಣಾತ್ ಕ್ಷತ್ರಿಯಾದ್ವಾ
ವೈಶ್ಯಾಚ್ಛೂದ್ರಾದಪಿ ನೀಚಾದಭೀಕ್ಷ ್ಣಮ್ |
ಶ್ರದ್ಧಾತವ್ಯಂ ಶ್ರದ್ದಧಾನೇನ ನಿತ್ಯಂ
ನ ಶ್ರದ್ಧಿನಂ ಜನ್ಮಮೃತ್ಯೂ ವಿಶೇತಾಮ್ ॥85॥
ಶ್ರದ್ಧೆಯುಳ್ಳವನು ಈ ಜ್ಞಾನವನ್ನು ಬ್ರಾಹ್ಮಣನಿಂದಲೂ, ಕ್ಷತ್ರಿಯನಿಂದಲೂ, ವೈಶ್ಯನಿಂದಲೂ, ಶೂದ್ರನಿಂದಲೋ ಅಥವಾ ಅದಕ್ಕಿಂತಲೂ ನೀಚನಾದ ವ್ಯಕ್ತಿಯಿಂದ ಪಡೆದರೂ ಅದರಲ್ಲಿ ಪೂರ್ಣಶ್ರದ್ಧೆಯನ್ನು ಇಡಬೇಕು. ಶ್ರದ್ಧೆಯುಳ್ಳವನನ್ನು ಜನನ-ಮರಣಗಳು ಎಂದಿಗೂ ಪೀಡಿಸಲಾರವು.
ಸರ್ವೇ ವರ್ಣಾ ಬ್ರಾಹ್ಮಣಾ ಬ್ರಹ್ಮಜಾಶ್ಚ
ಸರ್ವೇ ನಿತ್ಯಂ ವ್ಯಾಹರಂತೇ ಚ ಬ್ರಹ್ಮ |
ತತ್ತ್ವಂ ಶಾಸ್ತ್ರಂ ಬ್ರಹ್ಮಬುದ್ಧ್ಯಾ ಬ್ರವೀಮಿ
ಸರ್ವಂ ವಿಶ್ವಂ ಬ್ರಹ್ಮ ಚೈತತ್ ಸಮಸ್ತಮ್ ॥86॥
ಚತುರ್ಮುಖಬ್ರಹ್ಮನಿಂದ ಉತ್ಪತ್ತಿಯನ್ನು ಹೊಂದಿರುವ ಎಲ್ಲ ವರ್ಣದವರೂ ಬ್ರಾಹ್ಮಣರೇ. ಎಲ್ಲರೂ ಯಾವಾಗಲೂ ಬ್ರಹ್ಮನನ್ನು ವ್ಯವಹರಿಸಲು ಯೋಗ್ಯರಾದವರೆ. ಯಾವ ತತ್ತ್ವದಿಂದ ಜೀವಾತ್ಮನು ಜನನ-ಮರಣಗಳನ್ನು ತಪ್ಪಿಸಿಕೊಳ್ಳುತ್ತಾನೋ ಅಂತಹ ಬ್ರಹ್ಮಜ್ಞಾನಿಯಿಂದ ಕೂಡಿರುವಂಥ ಶಾಸ್ತ್ರದ ಸಾರವನ್ನೇ ನಿನಗೆ ನಾನು ಹೇಳಿರುತ್ತೇನೆ.
ಬ್ರಹ್ಮಾಸ್ಯತೋ ಬ್ರಾಹ್ಮಣಾಃ ಸಂಪ್ರಸೂತಾ
ಬಾಹುಭ್ಯಾಂ ವೈ ಕ್ಷತ್ರಿಯಾಃ ಸಂಪ್ರಸೂತಾಃ |
ನಾಭ್ಯಾಂ ವೈಶ್ಯಾಃ ಪಾದತಶ್ಚಾಪಿ ಶೂದ್ರಾಃ
ಸರ್ವೇ ವರ್ಣಾ ನಾನ್ಯಥಾ ವೇದಿತವ್ಯಾಃ ॥87॥
ಸಕಲ ಜಗತ್ತು ಭಗವಂತನಿಂದಲೇ ಸೃಷ್ಟಿಯಾಗಿದೆ. ಬ್ರಹ್ಮನ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು, ನಾಭಿಯಿಂದ ವೈಶ್ಯರು ಪಾದಗಳಿಂದ ಶೂದ್ರರು ಜನ್ಮವನ್ನು ಹೊಂದಿರುತ್ತಾರೆ. ಎಲ್ಲ ವರ್ಣಗಳನ್ನೂ ಬ್ರಹ್ಮಜ್ಞಾನಕ್ಕಾಗಿಯೇ ಸೃಷ್ಟಿ ಮಾಡಲಾಗಿದೆ ಎಂಬುದಾಗಿ ತಿಳಿಯಬೇಕೇ ವಿನಾ ಈ ಉದ್ದೇಶಕ್ಕಿಂತ ವ್ಯತಿರಿಕ್ತವಾಗಿ ತಿಳಿಯಬಾರದು.
ಅಜ್ಞಾನತಃ ಕರ್ಮಯೋನಿಂ ಭಜಂತೇ

ತಾಂ ತಾಂ ರಾಜಂಸ್ತೇ ಯಥಾ ಯಾಂತ್ಯಭಾವಮ್ |
ತಥಾ ವರ್ಣಾ ಜ್ಞಾನಹೀನಾಃ ಪತಂತೇ
ಘೋರಾದಜ್ಞಾನಾತ್ ಪ್ರಾಕೃತಂ ಯೋನಿಜಾಲಮ್ ||88||
ಅಜ್ಞಾನದಿಂದಾಗಿ ಅನೇಕ ಕರ್ಮಯೋನಿಗಳಲ್ಲಿ ಹುಟ್ಟನ್ನು ಹೊಂದುತ್ತಾರೆ. ಅಜ್ಞಾನ ನಿಮಿತ್ತದಿಂದಲೇ ಪ್ರಾಕೃತವೆನಿಸಿದ ಅನೇಕ ಜನ್ಮಗಳಲ್ಲಿ ತೊಳಲಾಡುತ್ತಾರೆ. ಬಳಿಕ ಕರ್ಮಾನುಸಾರವಾಗಿ ನೀಚಭಾವವನ್ನೂ ಹೊಂದುತ್ತಾರೆ. ಆದ್ದರಿಂದ ಪ್ರಕೃತಿಯ ಅನೇಕ ಯೋನಿಗಳಲ್ಲಿ ಮುಳುಗಿಸುವ ಘೋರವಾದ ಅಜ್ಞಾನದಿಂದ ನಿವೃತ್ತಿಯನ್ನು ಹೊಂದಬೇಕು.
ತಸ್ಮಾಜ್ಜ್ಞಾನಂ ಸರ್ವತೋ ಮಾರ್ಗಿತವ್ಯಂ
ಸರ್ವತ್ರಸ್ಥಂ ಚೈತದುಕ್ತಂ ಮಯಾ ತೇ |
ತಸ್ಥೌ ಬ್ರಹ್ಮಾ ತಸ್ಥಿವಾಂಶ್ಚಾಪರೋ ಯ-
ಸ್ತಸ್ಮೈ ನಿತ್ಯಂ ಮೋಕ್ಷಮಾಹುರ್ದ್ವಿಜೇಂದ್ರಾಃ ||89||
ಆದ್ದರಿಂದ ಎಲ್ಲ ರೀತಿಯಿಂದಲೂ ಜ್ಞಾನಮಾರ್ಗವನ್ನೇ ಅನ್ವೇಷಣೆ ಮಾಡಬೇಕು. ಎಲ್ಲೆಡೆಯೂ ಅಂತರ್ಯಾಮಿಯಾಗಿರುವ ಪರಮಾತ್ಮನನ್ನೇ ಚಿಂತಿಸಬೇಕು ಎಂಬುದಾಗಿ ಹಿಂದೆ ಹೇಳಿರುತ್ತೇನೆ. ಬ್ರಹ್ಮನು ಎಲ್ಲಕಡೆಯಲ್ಲಿಯೂ ನೆಲೆನಿಂತಿರುತ್ತಾನೆ. ಬ್ರಹ್ಮನಿಗಿಂತ ಭಿನ್ನನಾದ ಜೀವನು ಅವನ ಅನುಗ್ರಹದಿಂದ ನೆಲೆ ಹೊಂದಿರುತ್ತಾನೆ. ಈ ರೀತಿಯಾಗಿ ಯಾವನು ತಿಳಿದಿರುತ್ತಾನೋ ಅವನು ನಿತ್ಯವೂ ಬಿಡುಗಡೆಯನ್ನು ಹೊಂದುತ್ತಾನೆ.
ಯತ್ತೇ ಪೃಷ್ಟಂ ತನ್ಮಯಾ ಚೋಪದಿಷ್ಟಂ
ಯಾಥಾತಥ್ಯಂ ತದ್ ವಿಶೋಕೋ ಭವಸ್ವ |
ರಾಜನ್ ಗಚ್ಛಸ್ವೈತದರ್ಥಸ್ಯ ಪಾರಂ
ಸಮ್ಯಕ್ಪ್ರೋಕ್ತಂ ಸ್ವಸ್ತಿ ತೇಽಸ್ತ್ವತ್ರ ನಿತ್ಯಮ್ ||90||
ರಾಜೇಂದ್ರನೇ, ನೀನು ಕೇಳಿದ ಪ್ರಶ್ನೆಗನುಗುಣವಾಗಿ ಯಥಾರ್ಥವಾಗಿ ನಾನು ಉತ್ತರವನ್ನು ನೀಡಿರುತ್ತೇನೆ. ನೀನು ನಾನು ತಿಳಿಸಿದ ಅರ್ಥವನ್ನು ಅನುಸರಿಸಿದಲ್ಲಿ ಪುರುಷಾರ್ಥದ ಕೊನೆಯನ್ನು ಮುಟ್ಟುತ್ತಿ. ನಿನಗೆ ನಿತ್ಯವೂ ಕ್ಷೇಮವುಂಟಾಗಲಿ.
ಭೀಷ್ಮಃ
ಸ ಏವಮನುಶಾಸ್ತಸ್ತು ಯಾಜ್ಞವಲ್ಕ್ಯೇನ ಧೀಮತಾ |
ಪ್ರೀತಿಮಾನಭವದ್ರಾಜಾ ಮಿಥಿಲಾಧಿಪತಿಸ್ತದಾ ||91||
ಭೀಷ್ಮ ಧರ್ಮರಾಜನೇ, ಮಹಾಜ್ಞಾನಿಯಾದ ಯಾಜ್ಞವಲ್ಕ್ಯನು ಮಿಥಿಲಾಧಿಪತಿಯಾದ ಜನಕನಿಗೆ ಈ ರೀತಿಯಾಗಿ ಉಪದೇಶಿಸಿದ ಬಳಿಕ ಆ ರಾಜನು ಬಹಳ ಸಂತುಷ್ಟನಾದನು.
ಗತೇ ಮುನಿವರೇ ತಸ್ಮಿನ್ ಕೃತೇ ಚಾಪಿ ಪ್ರದಕ್ಷಿಣೇ |
ದೈವರಾತಿರ್ನರಪತಿರಾಸೀನಸ್ತತ್ರ ಮೋಕ್ಷವಿತ್ ||92||
ದೇವರಾತನ ಮಗನೂ, ಮೋಕ್ಷಜ್ಞನೂ ಆದ ಜನಕನು ಆ ಮಹರ್ಷಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದ ಬಳಿಕ ಆ ಮಹರ್ಷಿಯು ಅಲ್ಲಿಂದ ಹೊರಟು ಹೋದನು.
ಗೋಕೋಟಿಂ ಸ್ಪರ್ಶಯಾಮಾಸ ಹಿರಣ್ಯಸ್ಯ ತಥೈವ ಚ |
ರತ್ನಾಂಜಲಿಮಥೈಕಂ ಚ ಬ್ರಾಹ್ಮಣೇಭ್ಯೋ ದದೌ ತದಾ ||93||
ಬಳಿಕ ಜನಕ ಮಹಾರಾಜನು ಒಂದು ಕೋಟಿ ಗೋವುಗಳನ್ನು, ಒಂದು ಕೋಟಿ ಸುವರ್ಣಗಳನ್ನು ಬ್ರಾಹ್ಮಣರಿಗೆ, ಬೊಗಸೆಗಳಿಂದ ರತ್ನಗಳನ್ನು ದಾನ ಮಾಡಿದನು.
ವಿದೇಹರಾಜ್ಯಂ ಚ ತಥಾ ಪ್ರತಿಷ್ಠಾಪ್ಯ ಸುತಸ್ಯ ವೈ |
ಯತಿಧರ್ಮಮುಪಾಸಂಶ್ಚಾಪ್ಯವಸನ್ಮಿಥಿಲಾಧಿಪಃ ||94||
ಬಳಿಕ ವಿದೇಹರಾಜ್ಯದಲ್ಲಿ ತನ್ನ ಮಗನಿಗೆ ಉತ್ತರಾಧಿಕಾರವನ್ನು ಕೊಟ್ಟು ತಾನು ಯತಿಧರ್ಮವನ್ನು ಅವಲಂಬಿಸಿದನು.
ಸಾಂಖ್ಯಜ್ಞಾನಮಧೀಯಾನೋ ಯೋಗಶಾಸ್ತ್ರಂ ಚ ಕೃತ್ಸ್ನಶಃ |
ಧರ್ಮಾಧರ್ಮೌ ಚ ರಾಜೇಂದ್ರ ಪ್ರಾಕೃತಂ ಪರಿಗರ್ಹಯನ್ ||95||
ಅನಂತಮಿತಿ ಕೃತ್ವಾ ಸ ನಿತ್ಯಂ ಕೇವಲಮೇವ ಚ |
ಧರ್ಮಾಧರ್ಮೌ ಪುಣ್ಯಪಾಪೇ ಸತ್ಯಾಸತ್ಯೇ ತಥೈವ ಚ ||96||
ಜನ್ಮಮೃತ್ಯೂ ಚ ರಾಜೇಂದ್ರ ಪ್ರಾಕೃತಂ ತದಚಿಂತಯತ್ |
ಬ್ರಹ್ಮಾವ್ಯಕ್ತಸ್ಯ ಕರ್ಮೇದಮಿತಿ ನಿತ್ಯಂ ನರಾಧಿಪ ||97||
ಆ ಜನಕನು ಸಾಂಖ್ಯಯೋಗಶಾಸ್ತ್ರಗಳನ್ನು ಸಮಗ್ರವಾಗಿ ಅಧ್ಯಯನ ಮಾಡುತ್ತಾ, ಧರ್ಮಾಧರ್ಮಗಳನ್ನು ಸರಿಯಾಗಿ ಚಿಂತಿಸುತ್ತಾ, ಪ್ರಕೃತಿಯ ಸಂಬಂಧವನ್ನು ನಿಂದಿಸುತ್ತಾ ಸರ್ವೋತ್ತಮನಾದ ಭಗವಂತನನ್ನು ಅನಂತನೆಂದೂ, ನಿತ್ಯನೆಂದೂ, ಪ್ರಕೃತಿ ಸಂಬಂಧ ಇಲ್ಲದವನೆಂದೂ,ಧರ್ಮಾಧರ್ಮಗಳಾಗಲಿ, ಪುಣ್ಯ-ಪಾಪಗಳ ಸಂಬಂಧವಾಗಲಿ, ಸತ್ಯಾಸತ್ಯಗಳಾಗಲಿ, ಜನನ-ಮರಣಗಳಾಗಲಿ, ಪ್ರಾಕೃತವಾದ ಯಾವ ವಿಕಾರಗಳೂ ಪರಮಾತ್ಮನಿಗೆ ಇಲ್ಲವೆಂದೂ, ಇವೆಲ್ಲವೂ ಜೀವಾತ್ಮನಿಗೆ ಪ್ರಕೃತಿಯ ಸಂಬಂಧದಿಂದಲೇ ಉಂಟಾಗುತ್ತವೆಂದು ಚಿಂತಿಸಿದನು. ಜೀವನು ಪ್ರಕೃತಿಯ ಸಂಬಂಧದಿಂದ ಕರ್ಮದ ಸಂಬಂಧವನ್ನು ಹೊಂದಿರುತ್ತಾನೆ ಎಂಬುದನ್ನೂ ರಾಜನು ತಿಳಿದುಕೊಂಡನು.
ಪಶ್ಯಂತಿ ಯೋಗಾಃ ಸಾಂಖ್ಯಾಶ್ಚ ಸ್ವಶಾಸ್ತ್ರಕೃತಲಕ್ಷಣಾಃ |
ಇಷ್ಟಾನಿಷ್ಟವಿಯುಕ್ತಂ ಹಿ ತಸ್ಥೌ ಬ್ರಹ್ಮ ಪರಾತ್ ಪರಮ್ |

ನಿತ್ಯಂ ತಮಾಹುರ್ವಿದ್ವಾಂಸಃ ಶುಚಿಸ್ತಸ್ಮಾಚ್ಛುಚಿರ್ಭವ ॥98॥
ತಮ್ಮ ಶಾಸ್ತ್ರಗಳ ಲಕ್ಷಣಗಳನ್ನು ಸಾಂಖ್ಯರು-ಯೋಗರು ಚೆನ್ನಾಗಿ ತಿಳಿದಿರುತ್ತಾರೆ. ಸರ್ವೋತ್ತಮವಾದ ಪರಬ್ರಹ್ಮವೆಂಬ ವಸ್ತುವು ಇಷ್ಟಾನಿಷ್ಟಗಳಿಂದ ದೂರವಾಗಿದೆ ಎಂಬುದನ್ನು ತಿಳಿದಿರುತ್ತಾರೆ. ಅಂತಹ ಭಗವಂತನನ್ನು ನಿತ್ಯವೂ ವಿದ್ವಾಂಸರು ಶುಚಿ ಎಂದು ಹೇಳುತ್ತಾರೆ. ಅಂತಹ ಭಗವಂತನ ಅನುಗ್ರಹದಿಂದಲೇ ನೀನು ಪ್ರಕೃತಿಯ ಸಂಬಂಧದಿಂದ ದೂರವಾಗಿ ಶುಚಿಯಾಗು.
ದೀಯತೇ ಯಚ್ಚ ಲಭತೇ ದತ್ತಂ ಯಚ್ಚಾನುಮನ್ಯತೇ |
ದದಾತಿ ಚ ನರಶ್ರೇಷ್ಠ ಪ್ರತಿಗೃಹ್ಣಾತಿ ಯಚ್ಚ ಹ |
ದದಾತ್ಯವ್ಯಕ್ತಮೇವೈತತ್ ಪ್ರತಿಗೃಹ್ಣಾತಿ ತಚ್ಚ ವೈ ॥99॥
ದಾನ ಮಾಡುವುದು, ಸ್ವೀಕರಿಸುವುದು, ದಾನ ಮಾಡಿದ್ದನ್ನು ಅನುಮೋದಿಸುವುದು, ಸ್ವಯಂ ತಾನೇ ದಾನ ಮಾಡುವುದು, ದಾನವನ್ನು ಸ್ವೀಕರಿಸುವುದು ಇದೆಲ್ಲವೂ ಅವ್ಯಕ್ತದಿಂದ ಉಂಟಾಗುವ ಕಾರ್ಯವೆಂದು, ಸ್ವೀಕರಿಸುವ ಪದಾರ್ಥಗಳಲ್ಲಿ ಜಡವಾದುದನ್ನೇ ಸ್ವೀಕರಿಸುತ್ತಾನೆಂಬುದನ್ನು ತಿಳಿದುಕೊ.
ಆತ್ಮಾ ಹ್ಯೇವಾತ್ಮನೋ ಹ್ಯೇಕಃ ಕೋಽನ್ಯಸ್ತ್ವತ್ತೋಧಿಕೋ ಭವೇತ್ |
ಏವಂ ಮನ್ಯಸ್ವ ಸತತಮನ್ಯಥಾ ಮಾ ವಿಚಿಂತಯ ॥100॥
ಜೀವಾತ್ಮನ ದೆಸೆಗಿಂತ ಮುಖ್ಯನಾದವನು ಪರಮಾತ್ಮನೇ ಆಗಿದ್ದಾನೆ. ಆ ಪರಮಾತ್ಮನಿಗಿಂತ ಅಧಿಕನಾದವನು ಬೇರೆ ಯಾರಿರಲು ಸಾಧ್ಯ? ಈ ರೀತಿಯಾಗಿಯೇ ನಿನ್ನ ಮನಸ್ಸಿನಲ್ಲಿ ಯಾವಾಗಲೂ ಆಲೋಚಿಸು. ಇದಕ್ಕೆ ತಪ್ಪಾಗಿ ಎಂದೂ ಚಿಂತಿಸಬೇಡ.
ಯಸ್ಯಾವ್ಯಕ್ತಂ ನ ವಿದಿತಂ ಸಗುಣಂ ನಿರ್ಗುಣಂ ಪುನಃ |
ತೇನ ತೀರ್ಥಾನಿ ಯಜ್ಞಾಶ್ಚ ಸೇವಿತವ್ಯಾವಿಪಶ್ಚಿತಾ ॥101॥
ಯಾರಿಗೆ ಅವ್ಯಕ್ತವೆನಿಸಿದ ಪ್ರಕೃತಿಯ ಬಗ್ಗೆಯಾಗಲಿ, ಸಗುಣನೆನಿಸಿದ ಜೀವನ ಬಗ್ಗೆಯಾಗಲಿ, ನಿರ್ಗುಣನೆನಿಸಿದ ಪರಮಾತ್ಮನ ಬಗ್ಗೆಯಾಗಲಿ ಸರಿಯಾದ ಜ್ಞಾನ ಉಂಟಾಗುವುದಿಲ್ಲವೋ ಅವನು ತೀರ್ಥಗಳನ್ನು, ಯಜ್ಞಗಳನ್ನು ಅಜ್ಞಾನಿ ಆದುದರಿಂದ ಸೇವಿಸಬೇಕು.
ನ ಸ್ವಾಧ್ಯಾಯೈಸ್ತಪೋಭಿರ್ವಾ ಯಜ್ಞೈರ್ವಾ ಕುರುನಂದನ |
ಲಭತೇಽವ್ಯಕ್ತಸಂಸ್ಥಾನಂ ಜ್ಞಾತ್ವಾವ್ಯಕ್ತಂ ಮಹೀಪತೇ ॥102॥
ಕುರುನಂದನನೇ, ಕೇವಲ ತಪಸ್ಸು, ಅಧ್ಯಯನ, ಯಾಗಗಳಿಂದ ಅವ್ಯಕ್ತದ ಸಂಸ್ಥಾನವು ದೊರೆಯುವುದಿಲ್ಲ. ಅವ್ಯಕ್ತವನ್ನುತಿಳಿದ ಮೇಲೆಯೇ ಜ್ಞಾನಿಯು ಸ್ಥಾನವನ್ನು ಹೊಂದುತ್ತಾನೆ.
ತಥೈವ ಮಹತಃ ಸ್ಥಾನಮಾಹಂಕಾರಿಕಮೇವ ಚ |
ಅಹಂಕಾರಾತ್ ಪರಂ ಚಾಪಿ ಸ್ಥಾನಾನಿ ಸಮವಾಪ್ನುಯಾತ್ ॥103॥
ಇದರಂತೆ ಮಹತ್ತತ್ತ್ವವನ್ನು, ಅದರ ಸ್ಥಾನವನ್ನು, ಅಹಂಕಾರತತ್ತ್ವವನ್ನು, ಅಹಂಕಾರ ತತ್ತ್ವಕ್ಕಿಂತಲೂ ಮೇಲಾದ ಸ್ಥಾನಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಾಗ ಉತ್ತಮ ಸ್ಥಾನಗಳನ್ನು ಹೊಂದುತ್ತಾನೆ.
ಯೇ ತ್ವವ್ಯಕ್ತಾತ್ ಪರಂ ನಿತ್ಯಂ ಜಾನತೇ ಶಾಸ್ತ್ರತತ್ಪರಾಃ |
ಜನ್ಮಮೃತ್ಯುವಿಯುಕ್ತಂ ಚ ವಿಯುಕ್ತಂ ಸದಸಚ್ಚ ಯತ್ ॥104॥
ಯಾರು ಅವ್ಯಕ್ತ ತತ್ತ್ವಕ್ಕಿಂತಲೂ ಭಗವಂತನು ಸರ್ವೋತ್ತಮನೆಂದು ಶಾಸ್ತ್ರದಲ್ಲಿ ಆಸಕ್ತರಾಗಿ ನಿತ್ಯವೂ ತಿಳಿಯುತ್ತಾರೋ ಅವರು ಜನನ-ಮರಣಗಳಿಂದ ದೂರವಾಗುತ್ತಾರೆ. ಮೂರ್ತಾಮೂರ್ತ ಪ್ರಪಂಚದಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ.
ಏತನ್ಮಯಾಪ್ತಂ ಜನಕಾತ್ ಪುರಸ್ತಾತ್
ತೇನಾಪಿ ಚಾಪ್ತಂ ನೃಪ ಯಾಜ್ಞವಲ್ಕ್ಯಾತ್ |
ಜ್ಞಾನಂ ವಿಶಿಷ್ಟಂ ನ ತಥಾ ಹಿ ಯಜ್ಞಾ
ಜ್ಞಾನೇನ ದುರ್ಗಂ ತರತೇ ನ ಯಜ್ಞೈಃ ॥105॥
ಎಲೈ ಧರ್ಮರಾಜನೇ, ಈ ತತ್ತ್ವಜ್ಞಾನವನ್ನು ಹಿಂದೆ ನಾನು ಜನಕನಿಂದ ಕೇಳಿದೆನು. ಆ ಜನಕನಿಗೆ ಯಾಜ್ಞವಲ್ಕ್ಯನಿಂದ ಈ ಜ್ಞಾನವು ಉಪದೇಶಿಸಲ್ಪಟ್ಟಿತು. ಎಲ್ಲದಕ್ಕಿಂತಲೂ ಮಿಗಿಲಾದುದು ಜ್ಞಾನವೇ ಹೊರತು ಯಜ್ಞಾದಿ ಕರ್ಮಗಳಲ್ಲ. ಜ್ಞಾನದಿಂದ ಮನುಷ್ಯನು ಕಷ್ಟಗಳನ್ನು ದಾಟುತ್ತಾನೆ. ಯಾಗಗಳಿಂದ ಕಷ್ಟಗಳನ್ನು ದಾಟಲು ಸಾಧ್ಯವಿಲ್ಲ.
ದುರ್ಗಂ ಜನ್ಮ ನಿಧನಂ ಚಾಪಿ ರಾಜನ್
ನ ಭೂತಿಕಂ ಜ್ಞಾನವಿದೋ ವದಂತಿ |
ಯಜ್ಞೈಸ್ತಪೋಭಿರ್ನಿಯಮೈರ್ವ್ರತೈಶ್ಚ
ದಿವಂ ಸಮಾಸಾದ್ಯ ಪತಂತಿ ಭೂಮೌ ॥106॥
ಜ್ಞಾನಿಗಳಾದವರು ಜನನ-ಮರಣಗಳನ್ನೇ ಕಷ್ಟವಾದವುಗಳೆಂದು ಹೇಳುತ್ತಾರೆ ಹೊರತು ಕಲ್ಲು-ಮಣ್ಣು ಮುಂತಾದವುಗಳಿಂದ ಕಟ್ಟಿದ ಕೋಟೆಯನ್ನು ಕಷ್ಟವೆಂದು ಎಣಿಸುವುದಿಲ್ಲ. ತಪಸ್ಸು, ಯಾಗ, ವ್ರತನಿಯಮಾದಿಗಳಿಂದ ಸ್ವರ್ಗವನ್ನು ಪಡೆದವರಾಗಿದ್ದರೂ ಪುಣ್ಯನಾಶವಾದ ಬಳಿಕ ಪುನಃ ನಿಯಮೇನ ಭೂಮಿಯಲ್ಲಿ ಪತನವನ್ನು ಹೊಂದುತ್ತಾರೆ.
ತಸ್ಮಾದುಪಾಸಸ್ವ ಪರಂ ಮಹಚ್ಛುಚಿ
ಶಿವಂ ವಿಮೋಕ್ಷಂ ವಿಮಲಂ ಪವಿತ್ರಮ್ |
ಕ್ಷೇತ್ರಜ್ಞವಿತ್ ಪಾರ್ಥಿವ ಜ್ಞಾನಯಜ್ಞ-
ಮುಪಾಸ್ಯ ವೈ ತತ್ತ್ವಮೃಷಿರ್ಭವಿಷ್ಯಸಿ ॥107॥
ಆದ್ದರಿಂದ ಶ್ರೇಷ್ಠವಾದ, ಶುದ್ಧವಾದ, ಮಂಗಳಕರವಾದ, ಮೋಕ್ಷ ರೂಪವಾದ ಆ ಪರಬ್ರಹ್ಮವಸ್ತುವನ್ನೇ ವಿಮಲವೂ, ಪವಿತ್ರವೂ

ಎಂದು ತಿಳಿ. ಕ್ಷೇತ್ರಜ್ಞನಾದ ಭಗವಂತನನ್ನು ರಾಜನೇ ಚೆನ್ನಾಗಿ ತಿಳಿದು ಜ್ಞಾನಯಜ್ಞದಿಂದ ಉಪಾಸನೆ ಮಾಡಿ ತತ್ತ್ವಜ್ಞಾನವನ್ನು ಹೊಂದಿರುವ ನೀನು ಋಷಿಯಾಗುತ್ತಿ.
ಉಪನಿಷದಮುಪಾಕರೋತ್ತದಾ ವೈ
ಜನಕನೃಪಸ್ಯ ಪುರಾ ಹಿ ಯಾಜ್ಞವಲ್ಕ್ಯಃ |
ಯದುಪಗಣಿತಶಾಶ್ವತಾವ್ಯಯಂ ತತ್
ಶುಭಮಮೃತತ್ವಮಶೋಕಮೃಚ್ಛತೀತಿ ॥108॥
ಹಿಂದೆ ಯಾಜ್ಞವಲ್ಕ್ಯನು ಜನಕನಿಗೆ ಬ್ರಹ್ಮವಿಷಯಕವಾದ ಈ ಉಪನಿಷತ್ತನ್ನೇ ಉಪದೇಶಿಸಿದ್ದಾನೆ. ಅದರ ಬಲದಿಂದಲೇ ಜನಕನು ಆದ್ಯಂತಗಳಿಲ್ಲದ, ಜ್ಞಾನಿಗಳ ಧ್ಯಾನಕ್ಕೆ ಯೋಗ್ಯನಾದ, ಮೋಕ್ಷದಾಯಕನಾದ, ದುಃಖದಿಂದ ದೂರನಾದ ಪರಬ್ರಹ್ಮನನ್ನು ಹೊಂದಿದನು ಎಂದು ಹೇಳಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೊಂದನೆಯ ಅಧ್ಯಾಯ
ಜನಕನಿಗೂ ಪಂಚಶಿಖನಿಗೂ ನಡೆದ ಆಧ್ಯಾತ್ಮಿಕ ಸಂವಾದ.
ಯುಧಿಷ್ಠಿರಃ
ಐಶ್ವರ್ಯಂ ವಾ ಮಹತ್ ಪ್ರಾಪ್ಯ ಧನಂ ವಾ ಭರತರ್ಷಭ |
ದೀರ್ಘಮಾಯುರವಾಪ್ಯಾಥ ಕಥಂ ಮೃತ್ಯುಮತಿಕ್ರಮೇತ್ ॥1॥
ಯುಧಿಷ್ಠಿರ ಪಿತಾಮಹನೇ, ಅಧಿಕವಾದ ಐಶ್ವರ್ಯವನ್ನು ಹೊಂದಿ ಅಥವಾ ಮಹತ್ತರವಾದ ಧನವನ್ನು ಹೊಂದಿ, ದೀರ್ಘವಾದ ಆಯುಷ್ಯವನ್ನು ಹೊಂದಿ ಮೃತ್ಯುವನ್ನು ದಾಟಬಹುದೆ? ಮೃತ್ಯುವನ್ನು ದಾಟಲು ಉಪಾಯವೇನು?
ತಪಸಾ ವಾ ಸುಮಹತಾ ಕರ್ಮಣಾ ವಾ ಶ್ರುತೇನ ವಾ |
ರಸಾಯನಪ್ರಯೋಗೈರ್ವಾ ಕೈರ್ನೋತಿ ಜರಾಂತಕೌ ॥2॥
ಮಹತ್ವಪೂರ್ಣವಾದ ತಪಸ್ಸಿನಿಂದ ಮೃತ್ಯುವನ್ನು ದಾಟಬಹುದೆ? ಸತ್ಕರ್ಮಗಳ ಅನುಷ್ಠಾನದಿಂದಲೋ ಅಥವಾ ಅಧ್ಯಯನದಿಂದಲೋ ಅಥವಾ ಬೇರೆ ಯಾವುದಾದರೂ ರಸಾಯನ ಸೇವನೆಯಿಂದಲೋ ಜರಾ-ಮರಣಗಳನ್ನು, ಹೀಗೆ ಯಾವ ಉಪಾಯಗಳಿಂದ ದಾಟಬಹುದು ಎಂದು ತಿಳಿಸಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಭಿಕ್ಷೋಃ ಪಂಚಶಿಖಸ್ಯೇಹ ಸಂವಾದಂ ಜನಕಸ್ಯ ಚ ॥3॥
ಭೀಷ್ಮ ಧರ್ಮರಾಜನೇ, ಈ ವಿಷಯದಲ್ಲಿ ಹಿಂದೆ ಪಂಚಶಿಖನಿಗೂ ಜನಕನಿಗೂ ನಡೆದ ಸಂವಾದ ರೂಪವಾದ ಇತಿಹಾಸವನ್ನು ಉದಾಹರಿಸುತ್ತಾರೆ.
ವೈದೇಹೋ ಜನಕೋ ರಾಜಾ ಮಹರ್ಷಿಂ ವೇದವಿತ್ತಮಮ್ |
ಪರ್ಯಪೃಚ್ಛತ್ ಪಂಚಶಿಖಂ ಛಿನ್ನಧರ್ಮಾರ್ಥಸಂಶಯಮ್ ॥4॥
ಒಮ್ಮೆ ವಿದೇಹ ನಗರದ ರಾಜನಾದ ಜನಕನು ವೇದಗಳ ಸಾರಗಳನ್ನೆಲ್ಲ ಬಲ್ಲವನಾಗಿದ್ದನು. ಧರ್ಮಾರ್ಥದ ವಿಚಾರದಲ್ಲಿ ಎಲ್ಲ ಸಂಶಯಗಳನ್ನು ಪರಿಹರಿಸಿಕೊಂಡು ನಿಶ್ಚಯ ಜ್ಞಾನವನ್ನು ಹೊಂದಿರುವ ಪಂಚಶಿಖನೆಂಬ ಮಹರ್ಷಿಯನ್ನು ಕಂಡು ನೀನು ಕೇಳಿದ ಪ್ರಶ್ನೆಗಳನ್ನೇ ಕೇಳಿದನು.
ಕೇನ ವೃತ್ತೇನ ಭಗವನ್ನತಿಕ್ರಾಮೇಜ್ಜರಾಂತಕೌ |
ತಪಸಾ ವಾಥ ಬುದ್ಧ್ಯಾ ವಾ ಕರ್ಮಣಾ ವಾ ಶ್ರುತೇನ ವಾ ॥5॥
ಮನುಷ್ಯನು ತಪಸ್ಸು, ವೇದಾಧ್ಯಯನ, ಯಜ್ಞ-ಯಾಗಾದಿ ಕರ್ಮಗಳು ಇವುಗಳಲ್ಲಿ ಯಾವುದರಿಂದ ಜರಾ-ಮರಣಗಳನ್ನು ಜಯಿಸಬಹುದು?
ಏವಮುಕ್ತಃ ಸ ವೈದೇಹಂ ಪ್ರತ್ಯುವಾಚ ಪರೋಕ್ಷವಿತ್ |
ನಿವೃತ್ತಿರ್ನೈತಯೋರಸ್ತಿ ನಾನಿವೃತ್ತಿಃ ಕಥಂಚನ ॥6॥
ಈ ರೀತಿಯಾಗಿ ಜನಕರಾಜನು ಪ್ರಶ್ನಿಸಿದಾಗ, ಎಲ್ಲವನ್ನೂ ಪ್ರತ್ಯಕ್ಷವಾಗಿ ಕಾಣುವ ಶಕ್ತಿಯುಳ್ಳ ಪಂಚಶಿಖನು ವಿದೇಹರಾಜನನ್ನು ಕುರಿತು ಮಹಾರಾಜನೇ, ಜರಾ- ಮರಣಗಳನ್ನು ದಾಟುವ ಯಾವ ಉಪಾಯಗಳೂ ಇರುವುದಿಲ್ಲ. ಇವುಗಳಿಂದ ನಿವೃತ್ತಿಯೂ ಇರುವುದಿಲ್ಲ.
ನ ಹ್ಯಹಾನಿ ನಿವರ್ತಂತೇ ನ ಮಾಸಾ ನ ಪುನಃ ಕ್ಷಪಾಃ |
ಸೋಽಯಂ ಪ್ರಪದ್ಯತೇಽಧ್ವಾನಂ ಚಿರಾಯ ಧ್ರುವಮಧ್ರುವಃ ॥7॥
ಸರ್ವಭೂತಸಮುಚ್ಛೇದಃ ಸ್ರೋತಸೇವೋಹ್ಯತೇ ಸದಾ |
ಉಹ್ಯಮಾನಂ ನಿಮಜ್ಜಂತಮಪ್ಲವೇ ಕಾಲಸಾಗರೇ |
ಜರಾಮೃತ್ಯುಮಹಾಗ್ರಾಹೇ ನ ಕಶ್ಚಿದಭಿಪದ್ಯತೇ ॥8॥
ಕಳೆದು ಹೋದ ದಿವಸಗಳಾಗಲಿ, ರಾತ್ರಿಗಳಾಗಲಿ, ತಿಂಗಳುಗಳಾಗಲಿ ಹೇಗೆ ಹಿಂದಿರುಗಿ ಬರುವುದಿಲ್ಲವೋ, ಎಲ್ಲ ಪ್ರಾಣಿಗಳನ್ನು ಕಬಳಿಸುತ್ತಾ ತಾನೊಂದೇ ಅನಂತ ಕಾಲದಿಂದ ಒಂದೇ ರೀತಿಯಾಗಿ ನಡೆದು ಹೋಗುವ ಕಾಲವು ಒಂದು ಪ್ರವಾಹದಂತೆ ಇದೆ. ಆ

ಪ್ರವಾಹದಲ್ಲಿ ಎಲ್ಲ ಪ್ರಾಣಿಗಳು ಕೊಚ್ಚಿಕೊಂಡು ಹೋಗುತ್ತಲೇ ಇವೆ. ಪ್ರವಾಹದಿಂದ ಸೆಳೆಯಲ್ಪಡುವ ಪ್ರಾಣಿಗಳನ್ನು ಆಧಾರವಿಲ್ಲದ ಈ ಭಯಂಕರ ಸಮುದ್ರದಲ್ಲಿ ಯಾರೂ ಹಿಡಿದು ನಿಲ್ಲಿಸಲು ಸಮರ್ಥರಾಗುವುದಿಲ್ಲ. ನಿರಂತರವೂ ಜರಾ-ಮರಣಗಳೆಂಬ ಭಯಂಕರವಾದ ಮೊಸಳೆಗಳು ಸಮಸ್ತ ಜೀವರನ್ನು ಕಬಳಿಸಲು ಕಾದು ನಿಂತಿವೆ.
ನೈವಾಸ್ಯ ಭವಿತಾ ಕಶ್ಚಿನ್ನಾಸೌ ಭವತಿ ಕಸ್ಯಚಿತ್ |
ಪಥಿ ಸಂಗತಮೇವೇದಂ ದಾರೈರನ್ಯೈಶ್ಚ ಬಂಧುಭಿಃ |
ನಾಯಮತ್ಯಂತಸಂವಾಸೋ ಲಬ್ಧಪೂರ್ವೋ ಹಿ ಕೇನಚಿತ್ ॥9॥
ಈ ಜೀವನಿಗೆ ಸಂಬಂಧಿಸಿದವನು ಈ ಪ್ರಪಂಚದಲ್ಲಿ ಯಾರೂ ಇರುವುದಿಲ್ಲ. ಯಾವ ಜೀವನಿಗೂ ಒಬ್ಬ ಸಂಬಂಧಿ ಎಂಬುವವನು ಇರುವುದಿಲ್ಲ. ದಾರಿಯಲ್ಲಿ ಪ್ರಯಾಣಿಸುವಾಗ ಅನೇಕರು ಒಟ್ಟಾಗಿ ತೆರಳುವಂತೆ ಈ ಸಂಸಾರದಲ್ಲಿಯೂ ಹೆಂಡತಿ, ಮಕ್ಕಳು ಮೊದಲಾದ ಬಂಧುಗಳ ಸಂಬಂಧವು ಅನೇಕ ಕಡೆಗಳಿಂದ ಪ್ರಯಾಣಿಕರ ಕೂಟದಂತೆ ಬಂದು ಸೇರುತ್ತಾರೆ, ಬೇರೆ ಮಾರ್ಗದಿಂದಲೇ ಹೊರಟು ಹೋಗುತ್ತಾರೆ. ಇವರೊಡನೆ ಹಿಂದೆಯಾಗಲಿ, ಮುಂದೆಯಾಗಲಿ ಆತ್ಯಂತಿಕ ಸಂಬಂಧವು ಇರುವುದಿಲ್ಲ.
ಕ್ಷಿಪ್ಯಂತೇ ತೇನ ತೇನೈವ ನಿಷ್ಟನಂತಃ ಪುನಃ ಪುನಃ |
ಕಾಲೇನ ಜಾತಾ ಜಾತಾ ಹಿ ವಾಯುನೇವಾಭ್ರಸಂಚಯಾಃ ॥10॥
ಇಂತಹ ಪರಿವಾರಗಳ ಜೊತೆಗೆ ಜೀವಾತ್ಮನು ಪುನಃ ಪುನಃ ಸಂಯೋಗ, ವಿಯೋಗಗಳನ್ನು ಹೊಂದುತ್ತಲೇ ಇರುತ್ತಾನೆ. ಹೀಗೆ ಕಾಲಗತಿಯಿಂದ ಒಟ್ಟುಗೂಡಿದ ಪ್ರಾಣಿಗಳು ಮೇಘಗಳು ಬಿರುಗಾಳಿಯಿಂದ ಹೊಡೆತಕ್ಕೆ ತುತ್ತಾದಾಗ ಚದುರಿಸಿ ಹೋಗುವಂತೆ ಯಾವುದೋ ಒಂದು ಕಾರಣವನ್ನು ನೆಪವಾಗಿಸಿಕೊಂಡು ಅಗಲಿ ಹೋಗುತ್ತವೆ.
ಜರಾಮೃತ್ಯೂ ಹಿ ಭೂತಾನಾಂ ಖಾದಿತಾರೌ ವೃಕಾವಿವ |
ಬಲಿನಾಂ ದುರ್ಬಲಾನಾಂ ಚ ಹ್ರಸ್ವಾನಾಂ ಮಹತಾಮಪಿ ॥11॥
ಎಲ್ಲ ಪ್ರಾಣಿಗಳನ್ನು ಜರಾ-ಮೃತ್ಯುಗಳೆಂಬವು ತೋಳಗಳಂತೆ ಹಿಡಿದು ಭಕ್ಷಿಸುತ್ತವೆ. ಬಲಶಾಲಿಗಳೆಂದು, ದುರ್ಬಲರೆಂದು ಅವು ನೋಡುವುದಿಲ್ಲ. ದೊಡ್ಡವರೆಂದ ಸಣ್ಣವರೆಂದು ನೋಡುವುದಿಲ್ಲ. ಎಲ್ಲರನ್ನೂ ಕಬಳಿಸುತ್ತವೆ.
ಏವಂಭೂತೇಷು ಭೂತೇಷು ನಿತ್ಯಭೂತಾಧ್ರುವೇಷು ಚ |
ಕಥಂ ಹೃಷ್ಯೇತ ಜಾತೇಷು ಮೃತೇಷು ಚ ಕಥಂ ಜ್ವರೇತ್ ॥12॥
ಹೀಗೆ ಎಲ್ಲ ಭೂತಗಳಿಗೂ ಅಸ್ಥಿರತೆ ಸ್ಥಿರವಾದುದು. ಇಂತಹ ಭೂತಗಳು ಈ ಲೋಕದಲ್ಲಿ ಹುಟ್ಟಿದಾಗ ಸಂತೋಷಪಡಲು ಏನು ಕಾರಣವಿಲ್ಲವೋ ಸತ್ತಾಗಲೂ ದುಃಖಕ್ಕೆ ಕಾರಣವಿಲ್ಲ.
ಕುತೋಽಹಮಾಗತಃ ಕೋಽಸ್ಮಿ ಕ್ವ ಗಮಿಷ್ಯಾಮಿ ಕಸ್ಯ ವಾ |
ಕಸ್ಮಿನ್ ಸ್ಥಿತಃ ಕ್ವ ಭವಿತಾ ಕಸ್ಮಾತ್ ಕಿಮನುಶೋಚಸಿ ॥13॥
ನಾನು ಯಾರು? ಎಲ್ಲಿಂದ ಬಂದಿದ್ದೇನೆ? ಮುಂದೆ ಎಲ್ಲಿಗೆ ಸಾಗುತ್ತೇನೆ? ಯಾರಿಗೆ ಸಂಬಂಧಿಸಿದವನು? ಈಗ ಎಲ್ಲಿದ್ದೇನೆ? ಮುಂದೆ ಏನಾಗುತ್ತೇನೆ? ಯಾವ ಕಾರಣಕ್ಕಾಗಿ ಇಲ್ಲಿ ಬಂದಿದ್ದೇನೆ? ಎಂಬುದನ್ನು ಕುರಿತು ಯಾಕೆ ಚಿಂತಿಸುತ್ತಿ? ನಾವು ಈ ವಿಷಯದಲ್ಲಿ ಅಸ್ವತಂತ್ರರು.
ದೃಷ್ಟ್ವಾ ಸ್ವರ್ಗಸ್ಯ ನ ಹ್ಯಸ್ತಿ ತಥೈವ ನರಕಸ್ಯ ಚ |
ಆಗಮಾಂಸ್ತ್ವನತಿಕ್ರಮ್ಯ ದದ್ಯಾಚ್ಚೈವ ಯಜೇತ ಚ ॥14॥
ರಾಜೇಂದ್ರನೇ, ಸ್ವರ್ಗವನ್ನಾಗಲಿ, ನರಕವನ್ನಾಗಲಿ ಬದುಕಿನಲ್ಲೇ ಇದ್ದು ನೋಡಿದವರು ಯಾರೂ ಇಲ್ಲ. ಆದ್ದರಿಂದ ವೇದವಿಧಿಗಳನ್ನು ನಂಬಿ, ಅವುಗಳು ತಿಳಿಸಿದಂತೆ ವಿಧಿಗಳನ್ನು ಮೀರದೆ ಯಜ್ಞ-ದಾನಾದಿಗಳನ್ನು ಮಾಡುತ್ತಿರಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೆರಡನೆಯ ಅಧ್ಯಾಯ
ಮುಕ್ತರ ಲಕ್ಷಣಗಳನ್ನು ಕುರಿತು ಸುಲಭೆಗೂ ಜನಕನಿಗೂ ನಡೆದ
ಸಂವಾದವನ್ನು ಭೀಷ್ಮರು ಯುಧಿಷ್ಠಿರನಿಗೆ ತಿಳಿಸಿದುದು.
ಯುಧಿಷ್ಠಿರಃ
ಅಪರಿತ್ಯಜ್ಯ ಗಾರ್ಹಸ್ಥ್ಯಂ ಕುರುರಾಜರ್ಷಿಸತ್ತಮ |
ಕಃ ಪ್ರಾಪ್ತೋ ವಿನಯಂ ಬುದ್ಧ್ಯಾ ಮೋಕ್ಷತತ್ತ್ವಂ ವದಸ್ವ ಮೇ ॥1॥
ಯುಧಿಷ್ಠಿರ ಪಿತಾಮಹನೇ, ಹಿಂದೆ ಯಾವ ರಾಜನಾದರೂ ಗೃಹಸ್ಥನಾಗಿದ್ದು ಕೊಂಡೇ ಸಿದ್ಧಿಯನ್ನು ಪಡೆದಿದ್ದಕ್ಕೆ ನಿದರ್ಶನವಿದೆಯೇ? ಇಂತಹ ಮೋಕ್ಷತತ್ತ್ವದ ಬಗ್ಗೆ ನನಗೆ ತಿಳಿಸಿರಿ.
ಸಂನ್ಯಸ್ಯತೇ ಯಥಾತ್ಮಾಯಂ ಸಂನ್ಯಸ್ತಾತ್ಮಾ ಯಥಾ ಚ ಯಃ |
ಪರಂ ಮೋಕ್ಷಸ್ಯ ಯಚ್ಚಾಪಿ ತನ್ಮೇ ಬ್ರೂಹಿ ಪಿತಾಮಹ ॥2॥
ಸಾಧಕನಾದ ಗೃಹಸ್ಥನು ತನ್ನ ಮನಸ್ಸನ್ನು ಹೇಗೆ ವೈರಾಗ್ಯದಿಂದ ಹದಗೊಳಿಸಿ- ಕೊಳ್ಳುತ್ತಾನೆ? ವಿಷಯವೈರಾಗ್ಯವನ್ನು ಹೊಂದಿದ ಯಾವ ವ್ಯಕ್ತಿಯು ಮೋಕ್ಷ ಮಾರ್ಗದಲ್ಲಿ ಹೇಗೆ ಸಾಗುತ್ತಾನೆ? ಈ ವಿಷಯವನ್ನು ನನಗೆ ತಿಳಿಸಿರಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |

ಜನಕಸ್ಯ ಚ ಸಂವಾದಂ ಸುಲಭಾಯಾಶ್ಚ ಭಾರತ ॥3॥
ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಜನಕನಿಗೂ ಸುಲಭೆಗೂ ನಡೆದ ಪುರಾತನವಾದ ಇತಿಹಾಸವನ್ನು ಶಾಸ್ತ್ರಜ್ಞರು ತಿಳಿಸುತ್ತಾರೆ.
ಸಂನ್ಯಾಸಫಲಿಕಃ ಕಶ್ಚಿದ್ ಬಭೂವ ನೃಪತಿಃ ಪುರಾ |
ಮೈಥಿಲೋ ಜನಕೋ ನಾಮ ಧರ್ಮಧ್ವಜ ಇತಿ ಶ್ರುತಃ ॥4॥
ಸ ವೇದೇ ಮೋಕ್ಷಶಾಸ್ತ್ರೇ ಚ ಸ್ವೇ ಚ ಶಾಸ್ತ್ರೇ ಕೃತಾಗಮಃ |
ಇಂದ್ರಿಯಾಣಿ ಸಮಾಧಾಯ ಶಶಾಸ ವಸುಧಾಮಿಮಾಮ್ ॥5॥
ಹಿಂದೆ ಸಂನ್ಯಾಸ ಧರ್ಮದ ಫಲವನ್ನು ಪಡೆದ ಧರ್ಮಧ್ವಜನೆಂಬ ಒಬ್ಬ ಪ್ರಸಿದ್ಧನಾದ ಜನಕನೆಂಬ ರಾಜನು ಮಿಥಿಲಾನಗರವನ್ನು ಆಳುತ್ತಿದ್ದನು. ಅವನು ವೇದಗಳ ವಿಷಯದಲ್ಲಿ, ಮೋಕ್ಷಶಾಸ್ತ್ರದ ವಿಷಯದಲ್ಲಿ, ತನ್ನ ಕುಲಕರ್ಮವಾದ ರಾಜಧರ್ಮಗಳ ವಿಷಯದಲ್ಲಿಯೂ ಚೆನ್ನಾಗಿ ಜ್ಞಾನವನ್ನು ಹೊಂದಿದ್ದನು. ಎಲ್ಲ ಇಂದ್ರಿಯಗಳನ್ನು ಜಯಿಸಿಕೊಂಡಿದ್ದನು. ಹೀಗಿದ್ದೂ ಸಮಗ್ರ ಈ ಭೂಮಂಡಲವನ್ನು ಸಂರಕ್ಷಿಸುತ್ತಿದ್ದನು.
ತಸ್ಯ ವೇದವಿದಃ ಪ್ರಾಜ್ಞಾಃ ಶ್ರುತ್ವಾ ತಾಂ ಸಾಧುವೃತ್ತತಾಮ್ |
ಲೋಕೇಷು ಸ್ಪೃಹಯಂತ್ಯನ್ಯೇ ಪುರುಷಾಃ ಪುರುಷೇಶ್ವರ ॥6॥
ಅವನಲ್ಲಿರುವ ಸಚ್ಚಾರಿತ್ರ್ಯಗಳನ್ನು ಕೇಳಿಸಿಕೊಂಡ ವೇದಜ್ಞರಾದ ಪ್ರಾಜ್ಞರು ಅವನಲ್ಲಿನ ಪ್ರೀತಿಯಿಂದ ಅವನ ಬಳಿಗೆ ಬಂದು ಸೇರುತ್ತಿದ್ದರು.
ಅಥ ಧರ್ಮಯುಗೇ ತಸ್ಮಿನ್ ಯೋಗಧರ್ಮಮನುಷ್ಠಿತಾ |
ಮಹೀಮನುಚಚಾರೈಕಾ ಸುಲಭಾ ನಾಮ ಭಿಕ್ಷುಕೀ ॥7॥
ಹೀಗಿರುವಾಗ ಧರ್ಮಪ್ರಧಾನವಾದ ಆ ಕಾಲದಲ್ಲಿ ಯೋಗನಿರತಳಾದ ಸುಲಭೆ ಎಂಬ ಸಂನ್ಯಾಸಿನಿಯೊಬ್ಬಳು ಭೂಮಿಯಲ್ಲಿ ಸಂಚಾರ ಮಾಡುತ್ತಿದ್ದಳು.
ತಯಾ ಜಗದಿದಂ ಸರ್ವಮಟಂತ್ಯಾ ಮಿಥಿಲೇಶ್ವರಃ |
ತತ್ರ ತತ್ರ ಶ್ರುತೋ ಮೋಕ್ಷೇ ಕಥ್ಯಮಾನಸ್ತ್ರಿದಂಡಿಭಿಃ ॥8॥
ಹೀಗೆ ಸಂಚರಿಸುತ್ತಿರುವಾಗ ಅವಳಿಗೆ ಅಲ್ಲಲ್ಲಿ ತ್ರಿದಂಡಿಗಳಾದ ಸಂನ್ಯಾಸಿಗಳು ಮಿಥಿಲಾ ನಗರದ ರಾಜರನ್ನು ಕುರಿತು ಹೇಳುತ್ತಿದ್ದ ಪ್ರಶಂಸೆಯ ಮಾತುಗಳು ಕಿವಿಗೆ ಬೀಳುತ್ತಿದ್ದವು.
ಸಾ ಸುಸೂಕ್ಷ್ಮಾಂ ಕಥಾಂ ಶ್ರುತ್ವಾ ತಥ್ಯಂ ನೇತಿ ಸಸಂಶಯಾ |
ದರ್ಶನೇ ಜಾತಸಂಕಲ್ಪಾ ಜನಕಸ್ಯ ಬಭೂವ ಹ ॥9॥
ಜನಕನು ಮೋಕ್ಷಶಾಸ್ತ್ರ ವಿಷಯದಲ್ಲಿ ಜಾಣನಾಗಿದ್ದಾನೆ ಎಂಬ ವಿಷಯವನ್ನು, ಅವನ ಸಚ್ಚಾರಿತ್ರ್ಯವನ್ನು ಕೇಳಿಸಿಕೊಂಡ ಆಕೆಗೆ ಈ ವಿಚಾರಗಳು ಯಥಾರ್ಥವೋ, ಅಲ್ಲವೋ ಎಂಬ ಸಂದೇಹವು ಉಂಟಾಯಿತು. ಆದ್ದರಿಂದ ಜನಕರಾಜನನ್ನು ನೋಡಲೇಬೇಕೆಂಬ ಸಂಕಲ್ಪವು ಅವಳ ಹೃದಯದಲ್ಲಿ ಉದ್ಭವಿಸಿತು.
ತತಃ ಸಾ ವಿಪ್ರಹಾಯಾಥ ಪೂರ್ವರೂಪಂ ಹಿ ಯೋಗತಃ |
ಅಬಿಭ್ರದನವದ್ಯಾಂಗೀ ರೂಪಮನ್ಯದನುತ್ತಮಮ್ ॥10॥
ಕೂಡಲೇ ಆ ಸುಲಭೆಯು ತನ್ನ ಯೋಗಶಕ್ತಿಯಿಂದ ತನ್ನ ಪೂರ್ವರೂಪವಾದ ಸಂನ್ಯಾಸಿ ರೂಪವನ್ನು ಮರೆಮಾಚಿ ಉತ್ತಮವಾದ ಸುಂದರಸ್ತ್ರೀರೂಪವನ್ನು ಧರಿಸಿದಳು.
ಚಕ್ಷುರ್ನಿಮೇಷಮಾತ್ರೇಣ ಲಘ್ವಸ್ತ್ರಗತಿಗಾಮಿನೀ |
ವಿದೇಹಾನಾಂ ಪುರೀಂ ಸುಭ್ರೂರ್ಜಗಾಮ ಕಮಲೇಕ್ಷಣಾ ॥11॥
ಉತ್ತಮವಾದ ಹುಬ್ಬುಗಳಿಂದ ಕೂಡಿದ, ಕಮಲದಳದಂತೆ ವಿಸ್ತಾರವಾದ ಕಣ್ಣುಗಳಿಂದ ಶೋಭಿಸುತ್ತಿರುವ ಸುಲಭೆಯು ಕಣ್ಣಿನ ರೆಪ್ಪೆಯನ್ನು ಮಿಟುಕಿಸುವ ಸಮಯದ ಒಳಗಡೆ ಅತ್ಯಂತ ವೇಗವಾಗಿ ಸಾಗುವ ಬಾಣದಂತೆ ವಿದೇಹರಾಜನ ಪಟ್ಟಣವನ್ನು ಕುರಿತು ಹೋದಳು.
ಸಾ ಪ್ರಾಪ್ಯ ಮಿಥಿಲಾಂ ರಮ್ಯಾಂ ಸಮೃದ್ಧಜನಸಂಕುಲಾಮ್ |
ಭೈಕ್ಷಚರ್ಯಾಪದೇಶೇನ ದದರ್ಶ ಮಿಥಿಲೇಶ್ವರಮ್ ॥12॥
ಆ ಸುಲಭೆಯು ಜನಕರಾಜನ ಪಟ್ಟಣಕ್ಕೆ ಸಾಗಿ, ರಮಣೀಯವಾದ ಜನ ಸಮೃದ್ಧವಾಗಿರುವ ಆ ನಗರದಲ್ಲಿ ಭಿಕ್ಷೆಯನ್ನು ಬೇಡುವ ನೆಪದಿಂದ ಜನಕರಾಜನ ಅರಮನೆಗೆ ಸಾಗಿ ರಾಜನನ್ನು ನೋಡಿದಳು.
ರಾಜಾ ತಸ್ಯಾಃ ಪರಂ ದೃಷ್ಟ್ವಾ ಸೌಕುಮಾರ್ಯಂ ವಪುಸ್ತಥಾ |
ಕೇಯಂ ಕಸ್ಯ ಕುತೋ ವೇತಿ ಬಭೂವಾಗತವಿಸ್ಮಯಃ ॥13॥
ಆ ವಿದೇಹರಾಜನಾದರೂ ಆ ಸುಲಭೆಯ ತೇಜಸ್ಸನ್ನು, ಸೌಂದರ್ಯವನ್ನು, ಅತ್ಯಂತ ಕೋಮಲವಾದ ಶರೀರದ ಮಾಟವನ್ನು ಕಂಡು ಇವಳು ಯಾರು? ಎಲ್ಲಿಂದ ಆಗಮಿಸಿದ್ದಾಳೆ? ಯಾರಿಗೆ ಸಂಬಂಧಿಸಿದವಳು? ಎಂದು ಆಶ್ಚರ್ಯದಿಂದ ಯೋಚಿಸುವವನಾದನು.
ತತೋಽಸ್ಯಾಃ ಸ್ವಾಗತಂ ಕೃತ್ವಾ ವ್ಯಾದಿಶ್ಯ ಚ ವರಾಸನಮ್ |
ಪೂಜಿತಾಂ ಪಾದಶೌಚೇನ ವರಾನ್ನೇನಾಪ್ಯತರ್ಪಯತ್ ॥14॥
ಬಳಿಕ ಆಗಮಿಸಿರುವಂತಹ ಸುಲಭೆಗೆ ಉತ್ತಮವಾದ ಆಸನವನ್ನು ಕಲ್ಪಿಸಿಕೊಟ್ಟನು. ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿದನು. ಉತ್ತಮವಾದ ಅನ್ನವನ್ನು ನೀಡಿ ಸತ್ಕರಿಸಿದನು.
ಅಥ ಭುಕ್ತವತೀ ಪ್ರೀತಾ ರಾಜಾನಂ ಮಂತ್ರಿಭಿರ್ವೃತಮ್ |
ಸರ್ವಭಾಷ್ಯವಿದಾಂ ಮಧ್ಯೇ ಚೋದಯಾಮಾಸ ಭಿಕ್ಷುಕೀ ॥15॥

ಅವಳು ತೃಪ್ತಿಯಿಂದ ಭೋಜನವನ್ನು ಮಾಡಿದ ಬಳಿಕ, ಪ್ರೀತಳಾದ ಅವಳು ಉಂಡಬಳಿಕ ರಾಜನು ಮಂತ್ರಿಗಳ ಜೊತೆಗೆ ಸೇರಿ ಅನೇಕ ಸೂತ್ರಾರ್ಥಗಳನ್ನು ತಿಳಿದ ಪಂಡಿತರ ಮಧ್ಯದಲ್ಲಿ ಆ ಭಿಕ್ಷುಕಿಯನ್ನು ಮಾತನಾಡಿಸಲು ಆರಂಭಿಸಿದನು.
ಸುಲಭಾ ತ್ವಸ್ಯ ಧರ್ಮೇಷು ಮುಕ್ತೋ ನೇತಿ ಸಸಂಶಯಾ |
ಸತ್ತ್ವಂ ಸತ್ತ್ವೇನ ಯೋಗಜ್ಞಾ ಪ್ರವಿವೇಶ ಮಹೀಪತೇ ॥16॥
ಆ ಸುಲಭೆಯಾದರೂ ಯೋಗದ ಮರ್ಮಗಳನ್ನು ಚೆನ್ನಾಗಿ ತಿಳಿದವಳಾದ್ದರಿಂದ ರಾಜನು ಯೋಗಧರ್ಮಗಳಲ್ಲಿ ತನ್ನಂತೆ ಮುಕ್ತನಾಗಿದ್ದಾನೋ, ಇಲ್ಲವೋ ಎಂಬ ಸಂದೇಹವುಳ್ಳವಳಾಗಿ ತನ್ನ ಯೋಗಬಲವನ್ನು ಆಶ್ರಯಿಸಿ ಅವನ ಒಳಗೆ ಪ್ರವೇಶಿಸಿದಳು.
ನೇತ್ರಾಭ್ಯಾಂ ನೇತ್ರಯೋರಸ್ಯ ರಶ್ಮೀನ್ ಸಂಯೋಜ್ಯ ರಶ್ಮಿಭಿಃ |
ಸಾ ಸ್ಮ ಸಂಚೋದಯಿಷ್ಯಂತಂ ಯೋಗಬಂಧೈರ್ಬಬಂಧ ಹ ॥17॥
ತನ್ನ ಕಣ್ಣುಗಳಿಂದ ಜನಕರಾಜನ ಕಣ್ಣುಗಳನ್ನು, ತನ್ನ ಕಣ್ಣಿನ ಕಿರಣಗಳಿಂದ ಜನಕ ರಾಜನ ಕಣ್ಣಿನ ಕಿರಣಗಳನ್ನು ಪ್ರವೇಶಿಸಿದಳು. ಹೀಗೆ ಜನಕರಾಜನನ್ನು ತನ್ನ ಯೋಗದ ಬಲಗಳಿಂದ ಬಂಧಿಸಿಬಿಟ್ಟಳು.
ಜನಕೋಽಪ್ಯುತ್ಸ್ಮಯನ್ರಾಜಾ ಭಾವಮಸ್ಯಾ ವಿಶೇಷಯನ್ |
ಪ್ರತಿಜಗ್ರಾಹ ಭಾವೇನ ಭಾವಮಸ್ಯಾ ನೃಪೋತ್ತಮಃ ॥18॥
ಜನಕರಾಜನು ತನ್ನನ್ನು ಮೂಕನನ್ನಾಗಿ ಮಾಡಬೇಕೆಂಬ ಸುಲಭೆಯ ದುರುದ್ದೇಶವನ್ನು ತಿಳಿದು ನಸುನಗುತ್ತಾ ತಾನೇ ತನ್ನ ಮನಸ್ಸಿನಿಂದ ಅವಳ ಮನಸ್ಸನ್ನು ಬಂಧಿಸಿ ಇಟ್ಟನು.
ತದೇಕಸ್ಮಿನ್ನಧಿಷ್ಠಾನೇ ಸಂವಾದಃ ಶ್ರೂಯತಾಮಯಮ್ |
ಛತ್ರಾದಿಷು ವಿಮುಕ್ತಸ್ಯ ಮುಕ್ತಾಯಾಶ್ಚ ತ್ರಿದಂಡಕೇ ॥19॥
ಆ ಸುಲಭೆಯಾದರೂ ತ್ರಿದಂಡಿಯಾಗಿ ಸಂನ್ಯಾಸದ ಚಿಹ್ನೆಗಳಿಂದ ಮುಕ್ತಳಾಗಿದ್ದಳು. ಜನಕರಾಜನಾದರೂ ತನ್ನ ರಾಜಸೂಚಕವಾದ ಛತ್ರವೇ ಮೊದಲಾದ ಚಿಹ್ನೆಗಳಿಂದ ವಿಮುಕ್ತನಾಗಿದ್ದನು. ಇಂತಹ ಈರ್ವರಿಗೂ ಒಂದೇ ಮನಸ್ಸೆಂಬ ಅಧಿಷ್ಠಾನದಲ್ಲಿ ಸಂವಾದವು ಆರಂಭವಾಯಿತು.
ಭಗವತ್ಯಾಃ ಕ್ವ ಚರ್ಯೇಯಂ ಕೃತಾ ಕ್ವ ಚ ಗಮಿಷ್ಯಸಿ |
ಕಸ್ಯ ಚ ತ್ವಂ ಕುತೋ ವೇತಿ ಪಪ್ರಚ್ಛೈನಾಂ ಮಹೀಪತಿಃ ॥20॥
ಜನಕರಾಜನು ಅವಳನ್ನು ಕುರಿತು- `ಎಲೈ ಪೂಜ್ಯಳೇ, ನೀನು ಈ ಯೋಗಚರ್ಯೆಯನ್ನು ಎಲ್ಲಿಂದ ಅಭ್ಯಾಸ ಮಾಡಿರುವಿ? ಈಗ ಎಲ್ಲಿಗೆ ಹೋಗುತ್ತಿರುವಿ? ಈಗ ಎಲ್ಲಿಂದ ಬಂದಿರುವಿ? ನೀನು ಯಾರಿಗೆ ಸಂಬಂಧಪಟ್ಟವಳು?' ಎಂಬುದಾಗಿ ಪ್ರಶ್ನಿಸಿದನು.
ಶ್ರುತೇ ವಯಸಿ ಜಾತೌ ಚ ಸದ್ಭಾವೋ ನಾಧಿಗಮ್ಯತೇ |
ಏಷ್ವರ್ಥೇಷೂತ್ತರಂ ತಸ್ಮಾತ್ ಪ್ರವೇದ್ಯಂ ಸತ್ಸಮಾಗಮೇ ॥21॥
ನಿನ್ನ ಶಾಸ್ತ್ರದ ವಿಷಯದಲ್ಲಾಗಲಿ, ವಯಸ್ಸಿನಲ್ಲಾಗಲಿ, ಜಾತಿಯ ವಿಷಯದಲ್ಲಾಗಲಿ ನಿನ್ನ ಒಳ್ಳೆತನ ಏನೆಂಬುದು ನನಗೆ ಅರ್ಥವಾಗುತ್ತಿಲ್ಲ. ಆದ್ದರಿಂದ ಈ ವಿಷಯಗಳನ್ನು ಸತ್ಸಮಾಗಮವಾಗುವುದಕ್ಕಿಂತ ಮೊದಲು ನಾನು ತಿಳಿಯಬೇಕಾಗಿದೆ.
ಛತ್ರಾದಿಷು ವಿಶೇಷೇಷು ಮುಕ್ತಂ ಮಾಂ ವಿದ್ಧಿ ಸರ್ವಶಃ |
ಸ ತ್ವಾಂ ಸಮ್ಮಂತುಮಿಚ್ಛಾಮಿ ಮಾನಾರ್ಹಾಸಿ ಮತಾ ಹಿ ಮೇ ॥22॥
ನಾನು ರಾಜನಾಗಿದ್ದರೂ ರಾಜಚಿಹ್ನೆಗಳಾದ ಛತ್ರಾದಿ ವೈಭವಗಳಿಂದ ಎಲ್ಲ ರೀತಿಯಾಗಿಯೂ ಮುಕ್ತನಾಗಿದ್ದೇನೆ ಎಂಬುದನ್ನು ತಿಳಿ. ನೀನು ನನಗೆ ಪೂಜ್ಯಳೆಂದು ತೋರುತ್ತಿರುವುದರಿಂದ ನಿನ್ನ ವಿಷಯವನ್ನು ಕೇಳಲು ಅಪೇಕ್ಷಿಸಿದ್ದೇನೆ. ನನ್ನಿಂದ ನೀನು ಸನ್ಮಾನಕ್ಕೆ ಅರ್ಹಳಾಗಿರುವಿ.
ಯಸ್ಮಾಚ್ಚೈತನ್ಮಯಾ ಪ್ರಾಪ್ತಂ ಜ್ಞಾನಂ ವೈಶೇಷಿಕಂ ಪುರಾ |
ಯಸ್ಯ ನಾನ್ಯಃ ಪ್ರವಕ್ತಾಸ್ತಿ ಮೋಕ್ಷೇ ತಮಪಿ ಮೇ ಶೃಣು ॥23॥
ಭಗವಂತನ ಜ್ಞಾನವು ಯಾರಿಂದ ನನಗೆ ದೊರೆಯಿತು ಎಂದು ನೀನು ನನ್ನನ್ನು ಪ್ರಶ್ನಿಸುತ್ತಿರುವಿ. ನನಗೆ ನೀನು ಮೋಕ್ಷದ ವಿಷಯದಲ್ಲಿ ಯಾರು ಗುರುವಾಗಿದ್ದಾರೆ? ಅವರಿಗಿಂತ ಅತಿಶಯರಾದ ಪ್ರವಚನಪಟುವು ಮತ್ತೊಬ್ಬನು ಇರುವುದಿಲ್ಲ. ಅಂತಹವನು ಯಾರು ಎಂಬುದನ್ನು ಕೇಳು.
ಪಾರಾಶರ್ಯಸಗೋತ್ರಸ್ಯ ವೃದ್ಧಸ್ಯ ಸುಮಹಾತ್ಮನಃ |
ಭಿಕ್ಷೋಃ ಪಂಚಶಿಖಸ್ಯಾಹಂ ಶಿಷ್ಯಃ ಪರಮಸಮ್ಮತಃ ॥24॥
ಪರಮಜ್ಞಾನಿಯಾದ, ಮಹಾನುಭಾವನಾದ, ಸಜ್ಜನರಿಗೆಲ್ಲ ಸಮ್ಮತನಾದ, ಪರಾಶರ ಗೋತ್ರೋದ್ಭವನಾದ ಪಂಚಶಿಖನೆಂಬ ಜ್ಞಾನಿಯಾದ ಸಂನ್ಯಾಸಿಯ ಶಿಷ್ಯನು ನಾನು.
ಸಾಂಖ್ಯಜ್ಞಾನೇ ತಥಾ ಯೋಗೇ ಮಹೀಪಾಲವಿಧೌ ತಥಾ |
ತ್ರಿವಿಧೇ ಮೋಕ್ಷಧರ್ಮೇಽಸ್ಮಿನ್ ಗತಾಧ್ವಾ ಛಿನ್ನಸಂಶಯಃ ॥25॥
ಆ ಪಂಚಶಿಖನಾದರೂ ಸಾಂಖ್ಯಶಾಸ್ತ್ರದಲ್ಲಿ, ಯೋಗಶಾಸ್ತ್ರದಲ್ಲಿ, ರಾಜನೀತಿಗಳೆಂದು ಕರೆಯಲ್ಪಡುವ ವಿಧಿಗಳಲ್ಲಿ ಈ ರೀತಿಯಾದ ಮೂರು ವಿಧವಾದ ಮೋಕ್ಷಧರ್ಮಗಳನ್ನು ಬಹುದೂರದ ತನಕ ಪರಿಶೀಲನೆಯನ್ನು ಮಾಡಿ, ಎಲ್ಲ ಸಂದೇಹಗಳನ್ನು ಪರಿಹರಿಸಿಕೊಂಡಿರುವನು.
ಸ ಯಥಾಶಾಸ್ತ್ರದೃಷ್ಟೇನ ಮಾರ್ಗೇಣೇಹ ಪರಿವ್ರಜನ್ |
ವಾರ್ಷಿಕಾಂಶ್ಚತುರೋ ಮಾಸಾನ್ ಪುರಾ ಮಯಿ ಸುಖೋಷಿತಃ ॥26॥
ಶಾಸ್ತ್ರಾನುಸಾರಿಯಾಗಿ ಕಾಣಿಸುವ ಸನ್ಮಾರ್ಗದಲ್ಲಿ ಪ್ರಯಾಣ ಮಾಡುತ್ತಿರುವ ಅಂತಹ ಪರಿವ್ರಾಜಕನಾದ ಪಂಚಶಿಖನು ಈ ಪಟ್ಟಣಕ್ಕೆ ಆಗಮಿಸಿದ್ದಾಗ ಒಂದು ಚಾತುರ್ಮಾಸ್ಯ ಕಾಲದಲ್ಲಿ ನನ್ನಿಂದ ಚೆನ್ನಾಗಿ ಸೇವಿಸಲ್ಪಟ್ಟನು.

ತೇನಾಹಂ ಸಾಂಖ್ಯಮುಖ್ಯೇನ ಸುದೃಷ್ಟಾರ್ಥೇನ ತತ್ತ್ವತಃ |
ಶ್ರಾವಿತಸ್ತ್ರಿವಿಧಂ ಮೋಕ್ಷಂ ನ ಚ ರಾಜ್ಯಾದ್ ವಿಚಾಲಿತಃ ॥27॥
ಸಾಂಖ್ಯಶಾಸ್ತ್ರದಲ್ಲಿ ಯಥಾರ್ಥಜ್ಞಾನವನ್ನು ಹೊಂದಿರುವ ಆ ಪಂಚಶಿಖನಿಂದ ನಾನು ಮೂರುವಿಧವಾದ ಮೋಕ್ಷಗಳ ಧರ್ಮಗಳನ್ನು ಚೆನ್ನಾಗಿ ತಿಳಿದುಕೊಂಡೆನು. ಆದರೆ ಆ ಪಂಚಶಿಖನು ನನ್ನನ್ನು ರಾಜ್ಯವನ್ನು ಬಿಟ್ಟು ಹೋಗು ಎಂದು ಪ್ರೇರಿಸಲಿಲ್ಲ.
ಸೋಽಹಂ ತಾಮಖಿಲಾಂ ವೃತ್ತಿಂ ತ್ರಿವಿಧಾಂ ಮೋಕ್ಷಸಂಹಿತಾಮ್ |
ಮುಕ್ತರಾಗಶ್ಚರಾಮ್ಯೇಕಃ ಪದೇ ಪರಮಕೇ ಸ್ಥಿತಃ ॥28॥
ನಾನು ಅವನು ಹೇಳಿದಂತೆ ಮೂರುವಿಧವಾದ ಮೋಕ್ಷಮಾರ್ಗವನ್ನು ಬಿಡದೆ ವರ್ತಿಸುತ್ತಿದ್ದೇನೆ. ರಾಗಾದಿಗಳನ್ನೆಲ್ಲ ತ್ಯಜಿಸಿ, ದೃಢವಾದ ಬುದ್ಧಿಯಿಂದ ಅವನ ಉಪದೇಶವನ್ನೇ ನಂಬಿ ನಡೆಯುತ್ತಿದ್ದೇನೆ.
ವೈರಾಗ್ಯಂ ಪುನರೇತಸ್ಯ ಮೋಕ್ಷಸ್ಯ ಪರಮೋ ವಿಧಿಃ |
ಜ್ಞಾನಾದೇವ ಚ ವೈರಾಗ್ಯಂ ಜಾಯತೇ ಯೇನ ಮುಚ್ಯತೇ ॥29॥
ಮೋಕ್ಷಕ್ಕೆ ವೈರಾಗ್ಯವು ಉತ್ತಮ ಸ್ಥಾನವು. ವಿರಕ್ತಿಯು ಜ್ಞಾನದಿಂದಲೇ ಲಭಿಸುತ್ತದೆ. ಆ ಜ್ಞಾನದಿಂದ ಜ್ಞಾನ-ವೈರಾಗ್ಯವು ಉತ್ಪನ್ನವಾಗುತ್ತದೆ. ವೈರಾಗ್ಯದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಜ್ಞಾನೇನ ಕುರುತೇ ಯತ್ನಂ ಯತ್ನೇನ ಪ್ರಾಪ್ಯತೇ ಮಹತ್ |
ಮಹದ್ದ್ವಂದ್ವಪ್ರಮೋಕ್ಷಾಯ ಸಾ ಸಿದ್ಧಿರ್ಯಾ ವಯೋತಿಗಾ ॥30॥
ಜ್ಞಾನದಿಂದ ಭಗದ್ವಿಷಯದಲ್ಲಿ ಪ್ರಯತ್ನವನ್ನು ಮಾಡುತ್ತಾನೆ, ಭಗವದ್ವಿಷಯಕವಾದ ಪ್ರಯತ್ನವೇ ಪರಬ್ರಹ್ಮನ ಬಳಿ ಕರೆದೊಯ್ಯುತ್ತದೆ. ಸುಖ-ದುಃಖಾದಿ ದ್ವಂದ್ವಗಳನ್ನು ನೀಗಿಸಿಕೊಳ್ಳಲು ಭಗವದ್‌ಜ್ಞಾನದ ಸಿದ್ಧಿಯು ಕಾರಣವಾಗುತ್ತದೆ.
ಸೇಯಂ ಪರಮಿಕಾ ಬುದ್ಧಿಃ ಪ್ರಾಪ್ತಾ ನಿರ್ದ್ವಂದ್ವತಾ ಮಯಾ |
ಇಹೈವ ಗತಮೋಹೇನ ಚರತಾ ಮುಕ್ತಸಂಗಿನಾ ॥31॥
ಹೀಗೆ ಯಾವುದೇ ಗೊಂದಲವಿಲ್ಲದೇ ಇರುವ ಪರಮಾತ್ಮವಿಷಯಕವಾದ ಬುದ್ಧಿಯು ನನಗೆ ಆ ಪಂಚಶಿಖನ ಮೂಲಕ ದೊರೆತಿದೆ. ಈ ಭೂಮಿಯಲ್ಲಿ ನಾನು ರಾಜನಾಗಿ ಸಂಚರಿಸುತ್ತಿದ್ದರೂ ಯಾವುದೇ ಅತಿಯಾದ ಸಂಬಂಧಗಳಿಗೂ ಸಿಲುಕಿಕೊಳ್ಳದೆ ಮೋಹವನ್ನು ತ್ಯಜಿಸಿ ಸಂಚರಿಸುತ್ತಿದ್ದೇನೆ.
ಯಥಾ ಕ್ಷೇತ್ರಂ ಮೃದೂಭೂತಮದ್ಭಿರಾಪ್ಲಾವಿತಂ ತಥಾ |
ಜನಯತ್ಯಂಕುರಂ ಕರ್ಮ ನೃಣಾಂ ತದ್ವತ್ ಪುನರ್ಭವಮ್ ॥32॥
ಯಾವ ರೀತಿಯಾಗಿ ನೀರಿನಿಂದ ಚೆನ್ನಾಗಿ ಒದ್ದೆಯಾಗಿರುವ ಭೂಮಿಯು ಸುಲಭವಾಗಿ ಬಿತ್ತಿದ ಬೆಳೆಯನ್ನು ಮೊಳಕೆ ಒಡೆಯುವಂತೆ ಮಾಡುತ್ತದೋ ಇದರಂತೆ ಮನುಷ್ಯನಿಗೆ ಕರ್ಮಬೀಜವೇ ಪುನರ್ಜನ್ಮಕ್ಕೆ ಕಾರಣವಾಗುತ್ತದೆ.
ಯಥಾ ಚೋತ್ತಾಪಿತಂ ಬೀಜಂ ಕಪಾಲೇ ಯತ್ರ ತತ್ರ ವಾ |
ಪ್ರಾಪ್ಯಾಪ್ಯಂಕುರಹೇತುತ್ವಮಬೀಜತ್ವಾನ್ನ ಜಾಯತೇ ॥33॥
ತದ್ವದ್ ಭಗವತಾ ತೇನ ಶಿಖಾಪ್ರೋಕ್ತೇನ ಭಿಕ್ಷುಣಾ |
ಜ್ಞಾನಂ ಕೃತಮಬೀಜಂ ಮೇ ವಿಷಯೇಷು ನ ಜಾಯತೇ ॥34॥
ಮಡಿಕೆಯಲ್ಲಿ ಬಿಸಿ ಮಾಡಿ ಹುರಿದ ಬೀಜವು ಹೆಸರಿಗೆ ಬೀಜವೆನಿಸಿದ್ದರೂ ಅದು ಅಂಕುರೋತ್ಪತ್ತಿಯನ್ನು ಹೊಂದಲು ಸಮರ್ಥವಾಗದು. ಅದರಂತೆ ಪಂಚಶಿಖನೆಂಬ ಪೂಜ್ಯನಾದ ಸಂನ್ಯಾಸಿಯಿಂದ ನನ್ನಲ್ಲಿ ಸ್ಥಾಪಿಸಲ್ಪಟ್ಟ ಜ್ಞಾನವು ಕರ್ಮಬೀಜವನ್ನು ಹುರಿದು ವಿಷಯಗಳಲ್ಲಿ ಪ್ರವೃತ್ತಿಯನ್ನು ಹೊಂದುವಂತೆ ಮಾಡಿದೆ.
ನಾಭಿಷಜ್ಜತಿ ಕಸ್ಮಿಂಶ್ಚಿನ್ನಾನರ್ಥೇ ನ ಪರಿಗ್ರಹೇ |
ನಾಭಿರಜ್ಯತಿ ಚೈತೇಷು ವ್ಯರ್ಥತ್ವಾದ್ರಾಗದೋಷಯೋಃ ॥35॥
ನನ್ನ ಮನಸ್ಸು ಅನಿಷ್ಟ ಹೊಂದಿದಾಗಲೂ, ಇಷ್ಟಪ್ರಾಪ್ತಿಯಾದಾಗಲೂ, ದುಃಖವನ್ನಾಗಲಿ, ಸುಖವನ್ನಾಗಲಿ ಹೊಂದುವುದಿಲ್ಲ. ಈ ಜಗತ್ತಿನಲ್ಲಿರುವ ಎಲ್ಲವೂ ರಾಗ-ದ್ವೇಷಗಳಿಂದ ಕೂಡಿರುವುದರಿಂದ ವ್ಯರ್ಥವಾಗಿವೆ ಎಂದು ಅನಾಸಕ್ತನಾಗಿದ್ದೇನೆ.
ಯಶ್ಚ ಮೇ ದಕ್ಷಿಣಂ ಬಾಹುಂ ಚಂದನೇನ ಸಮುಕ್ಷಯೇತ್ |
ಸವ್ಯಂ ವಾಶ್ಯಾ ಚ ಯಸ್ತಕ್ಷೇತ್ ಸಮಾವೇತಾವುಭೌ ಮಮ ॥36॥
ಒಬ್ಬ ವ್ಯಕ್ತಿಯು ನನ್ನ ಬಲತೋಳಿಗೆ ಒಳ್ಳೆಯ ಚಂದನದ ಲೇಪವನ್ನು ಮಾಡಿ ಉಪಚಾರವನ್ನು ಮಾಡಿ ಅಲಂಕಾರ ಮಾಡಿದ್ದರೂ, ಇನ್ನೊಬ್ಬನು ನನ್ನ ಎಡತೋಳನ್ನು ಬಾಚಿ ಕತ್ತರಿಸಿ ತೆಗೆದಿದ್ದರೂ ನನ್ನ ವಿಷಯದಲ್ಲಿ ಅವರಿಬ್ಬರೂ ಸಮಾನರೇ.
ಸುಖೀ ಸೋಽಹಮವಾಪ್ತಾರ್ಥಃ ಸಮಲೋಷ್ಟಾಶ್ಮಕಾಂಚನಃ |
ಮುಕ್ತಸಂಗಃ ಸ್ಥಿತೋ ರಾಜ್ಯೇ ವಿಶಿಷ್ಟೋಽನ್ಯೈಸ್ತ್ರಿದಂಡಿಭಿಃ ॥37॥
ನಾನು ಯಾವಾಗಲೂ ಕೃತಕೃತ್ಯನಂತೆ ಸುಖಿಯಾಗಿಯೇ ಇರುತ್ತೇನೆ. ಕಲ್ಲು, ಮಣ್ಣು, ಬಂಗಾರ - ಈ ಮೂರನ್ನು ಸಮಾನವಾಗಿ ತಿಳಿದುಕೊಂಡಿರುತ್ತೇನೆ. ನಾನು ಈ ರಾಜ್ಯದಲ್ಲಿದ್ದರೂ ಮುಕ್ತಸಂಗನಾಗಿ ವಾಸ ಮಾಡಿಕೊಂಡಿದ್ದೇನೆ. ಇನ್ನೂ ಅನೇಕ ತ್ರಿದಂಡಿ ಸಂನ್ಯಾಸಿಗಳಿಂದ ಉತ್ತಮವಾದ ಉಪದೇಶವನ್ನು ನಾನು ಹೊಂದಿರುತ್ತೇನೆ.
ಮೋಕ್ಷೇ ಹಿ ತ್ರಿವಿಧಾ ನಿಷ್ಠಾ ದೃಷ್ಟಾ ಪೂರ್ವೈರ್ಮಹರ್ಷಿಭಿಃ |
ಜ್ಞಾನಂ ಲೋಕೋತ್ತರಂ ಯಚ್ಚ ಸರ್ವತ್ಯಾಗಶ್ಚ ಕರ್ಮಣಾಮ್ ॥38॥
ಜ್ಞಾನನಿಷ್ಠಾಂ ವದಂತ್ಯೇಕೇ ಮೋಕ್ಷಶಾಸ್ತ್ರವಿದೋ ಜನಾಃ |
ಕರ್ಮನಿಷ್ಠಾಂ ತಥೈವಾನ್ಯೇ ಯತಯಃ ಸೂಕ್ಷ್ಮದರ್ಶಿನಃ ॥39॥
ಮೋಕ್ಷತತ್ತ್ವಜ್ಞರು ಮೋಕ್ಷದಲ್ಲಿಯೂ ಮೂರು ವಿಧವಾದ ನಿಷ್ಠೆಯನ್ನು ಹೇಳುತ್ತಾರೆ. ಕೆಲವರು ಉತ್ತಮ ಜ್ಞಾನವನ್ನೂ, ಕೆಲವರು

ಸಕಲ ಕರ್ಮಗಳ ತ್ಯಾಗವನ್ನೂ, ಕೆಲವರು ಜ್ಞಾನದ ನಿಷ್ಠೆಯನ್ನು ಹೇಳುತ್ತಾರೆ. ಇನ್ನು ಕೆಲವರು ನೀತಿಜ್ಞರಾದ ಯತಿಗಳು ಕರ್ಮನಿಷ್ಠೆಯನ್ನೇ ಮೋಕ್ಷಕ್ಕೆ ಕಾರಣವೆಂದು ಸೂಕ್ಷ್ಮದರ್ಶಿಗಳಾಗಿ ಹೇಳುತ್ತಾರೆ.

ಪ್ರಹಾಯೋಭಯಮಪ್ಯೇತಜ್ಜ್ಞಾನಂ ಕರ್ಮ ಚ ಕೇವಲಮ್ |
ತೃತೀಯೇಯಂ ಸಮಾಖ್ಯಾತಾ ನಿಷ್ಠಾ ತೇನ ಮಹಾತ್ಮನಾ ॥40॥

ಕೇವಲವಾದ ಕರ್ಮವಾಗಲಿ, ಕೇವಲವಾದ ಜ್ಞಾನವಾಗಲಿ ಮೋಕ್ಷಕ್ಕೆ ಕಾರಣವಾಗದು. ಸರ್ವತ್ಯಾಗರೂಪವಾದ ನಿಷ್ಠೆಯೇ ಮೋಕ್ಷಕ್ಕೆ ಕಾರಣವು ಎಂದು ಮಹಾತ್ಮನಾದ ಪಂಚಶಿಖನು ನನಗೆ ಉಪದೇಶಿಸಿರುತ್ತಾನೆ.

ಯಮೇ ಚ ನಿಯಮೇ ಚೈವ ದ್ವೇಷೇ ಕಾಮೇ ಪರಿಗ್ರಹೇ |
ಮಾನೇ ದಂಭೇ ತಥಾ ಸ್ನೇಹೇ ಸದೃಶಾಸ್ತೇ ಕುಟುಂಬಿಭಿಃ ॥41॥

ಯಮ, ನಿಯಮಾದಿ ಗುಣಗಳಾಗಲಿ, ಕಾಮ-ದ್ವೇಷ-ಪರಿಗ್ರಹ-ಮಾನ-ದಂಭ- ಸ್ನೇಹ ಎನ್ನುವ ದೋಷಗಳಾಗಲೀ ಯತಿಗಳಿಗೂ, ಗೃಹಸ್ಥರಿಗೂ ಸಮಾನವೇ ಆಗಿವೆ.

ತ್ರಿದಂಡಾದಿಷು ಯದ್ಯಸ್ತಿ ಮೋಕ್ಷೋ ಜ್ಞಾನೇನ ಕೇನಚಿತ್ |
ಛತ್ರಾದಿಷು ಕಥಂ ನ ಸ್ಯಾತ್ತುಲ್ಯಹೇತೌ ಪರಿಗ್ರಹೇ ॥42॥
ಯೇನ ಯೇನ ಹಿ ಯಸ್ಯಾರ್ಥಃ ಕಾರಣೇನೇಹ ಕಸ್ಯಚಿತ್ |
ತತ್ತದಾಲಂಬತೇ ದ್ರವ್ಯಂ ಸರ್ವಃ ಸ್ವೇ ಸ್ವೇ ಪರಿಗ್ರಹೇ॥43॥

ತ್ರಿದಂಡವನ್ನು ಧರಿಸಿದವರಿಗೆ ಅವರ ಜ್ಞಾನ ಒಂದರಿಂದಲೇ ಮೋಕ್ಷ ಉಂಟಾಗುವುದಾದರೆ ನನ್ನಂತೆ ಛತ್ರಾದಿಗಳನ್ನು ಹಿಡಿಸಿಕೊಂಡ ರಾಜರಿಗೂ ಮೋಕ್ಷವೇತಕ್ಕೆ ಸಿಗಬಾರದು? ಪರಿಗ್ರಹವೆಂಬುದು ಇಬ್ಬರಿಗೂ ಸಮಾನವಾದ ಕಾರಣವೇ ಆಗಿರುವುದಲ್ಲವೆ? ಆದ್ದರಿಂದ ಈ ಲೋಕದಲ್ಲಿ ಯಾವನಿಗೆ ಯಾವ ಸಾಧನದಿಂದ ಫಲವು ದೊರೆಯುತ್ತದೋ ಅವನು ಆ ಫಲಸಾಧನಕ್ಕಾಗಿ ಅಂತಹ ದ್ರವ್ಯವನ್ನೇ ಅವಲಂಬಿಸುತ್ತಾನೆ. ಲೋಕದಲ್ಲಿರುವ ಸಮಸ್ತ ದ್ರವ್ಯಗಳು ತಮ್ಮ ತಮ್ಮ ಪುರುಷಾರ್ಥವನ್ನು ಪಡೆಯಲು ಪರಿಗ್ರಹವೆಂದೇ ಕರೆಸಿಕೊಳ್ಳುತ್ತದೆ.

ದೋಷದರ್ಶೀ ತು ಗಾರ್ಹಸ್ಥ್ಯೇ ಯೋ ವ್ರಜತ್ಯಾಶ್ರಮಾಂತರಮ್ |
ಉತ್ಸೃಜನ್ ಪರಿಗೃಹ್ಣಂಶ್ಚ ಸೋಽಪಿ ಸಂಗಾನ್ನ ಮುಚ್ಯತೇ ॥44॥

ಯಾವನು ಗೃಹಸ್ಥಧರ್ಮದಲ್ಲಿ ದೋಷಗಳಿವೆ ಎಂದು ಕಂಡುಕೊಂಡು ಬೇರೆ ಆಶ್ರಮವಾದ ಸಂನ್ಯಾಸವನ್ನು ಅವಲಂಬಿಸುತ್ತಾನೋ ಅವನು ಹೆಂಡತಿ, ಮನೆ ಮೊದಲಾದವನ್ನು ತ್ಯಜಿಸಿ ಕಮಂಡಲು, ಕಾಷಾಯಗಳನ್ನು ಸ್ವೀಕರಿಸಿದರೂ ಸಂಗದಿಂದ ಬಿಡುಗಡೆಯನ್ನು ಹೊಂದುವುದಿಲ್ಲ.

ಆಧಿಪತ್ಯೇ ತಥಾ ತುಲ್ಯೇ ನಿಗ್ರಹಾನುಗ್ರಹಾತ್ಮನಿ |
ರಾಜರ್ಷಿಭಿಕ್ಷುಕಾಚಾರ್ಯಾ ಮುಚ್ಯಂತೇ ಕೇನ ಹೇತುನಾ ॥45॥

ಇದರಂತೆ ರಾಜನು ಪ್ರಜೆಗಳ ವಿಷಯದಲ್ಲಿ ನಿಗ್ರಹ, ಅನುಗ್ರಹ ಸಮರ್ಥನು. ರಾಜನಿಗೆ ರಾಜ್ಯವನ್ನು ಅಪಹರಿಸುವುದರಲ್ಲಿ ಆಸಕ್ತಿಯಿದ್ದರೆ, ಸಂನ್ಯಾಸಿಗಳಿಗೆ ಕಮಂಡಲುವನ್ನು ಅಪಹರಿಸುವುದರಲ್ಲಿ ಆಸಕ್ತಿ ಇರುತ್ತದೆ. ರಾಜನಿಗೆ ಧನವನ್ನು ತ್ಯಾಗ ಮಾಡಲು ಆಸಕ್ತಿ ಇದ್ದರೆ, ಭಿಕ್ಷುವಿಗೆ ಕೊಟ್ಟ ಪದಾರ್ಥಗಳನ್ನು ಸ್ವೀಕರಿಸಲು ಆಸಕ್ತಿ ಇರುತ್ತದೆ. ನಿಗ್ರಹ, ಅನುಗ್ರಹ ಸಮರ್ಥರಾಗಿರುವಾಗ ರಾಜ-ಭಿಕ್ಷುಕರು ಯಾವ ಉಪಾಯದಿಂದ ಬಿಡುಗಡೆಯನ್ನು ಹೊಂದುತ್ತಾರೆ?

ಅಥ ಸತ್ಯಾಧಿಪತ್ಯೇಽಪಿ ಜ್ಞಾನೇನೈವೇಹ ಕೇವಲಮ್ |
ಮುಚ್ಯಂತೇ ಕಿಂ ನ ಮುಚ್ಯಂತೇ ಪದೇ ಪರಮಕೇ ಸ್ಥಿತಾಃ ॥46॥

ಕೇವಲ ಜ್ಞಾನದಿಂದಲೇ ಮೋಕ್ಷವೆಂದು ಹೇಳುವ ಪಕ್ಷದಲ್ಲಿ ರಾಜನು ಅಧಿಕಾರ ಸ್ಥಾನದಲ್ಲಿದ್ದರೂ ಜ್ಞಾನಿಯಾದಲ್ಲಿ ಅವನಿಗೆ ಮುಕ್ತಿ ಇಲ್ಲ ಎಂದು ಹೇಳುವುದು ಹೇಗೆ?

ಕಾಷಾಯಧಾರಣಂ ಮೌಂಡ್ಯಂ ತ್ರಿವಿಷ್ಟಬ್ಧಃ ಕಮಂಡಲುಃ |
ಲಿಂಗಾನ್ಯತ್ಯರ್ಥಮೇತಾನಿ ನ ಮೋಕ್ಷಾಯೇತಿ ಮೇ ಮತಿಃ ॥47॥
ಯದಿ ಸತ್ಯಪಿ ಲಿಂಗೇಽಸ್ಮಿಂಚಿಹ್ನಮೇವಾತ್ರ ಕಾರಣಮ್ |
ನಿರ್ಮೋಕ್ಷಾಯೇಹ ದುಃಖಸ್ಯ ಲಿಂಗಮಾತ್ರಂ ನಿರರ್ಥಕಮ್ ॥48॥

ಕಾಷಾಯವನ್ನು ಧರಿಸುವುದು, ಮುಂಡನ ಮಾಡಿಸಿಕೊಳ್ಳುವುದು, ತ್ರಿದಂಡವನ್ನು ಧರಿಸುವುದು, ಕಮಂಡಲುವನ್ನು ಧರಿಸುವುದು ಇವು ಮಾತ್ರವೇ ಮೋಕ್ಷಕ್ಕೆ ಕಾರಣವಾದ ಚಿಹ್ನೆಗಳೆಂದು ನಾನು ಭಾವಿಸುವುದಿಲ್ಲ. ಇವೆಲ್ಲ ಬಹಿರಂಗದ ಚಿಹ್ನೆಗಳು ಮಾತ್ರ. ದುಃಖದಿಂದ ಬಿಡುಗಡೆಯನ್ನು ಹೊಂದಲು ಈ ಚಿಹ್ನೆಗಳು ಯಾವುದೇ ರೀತಿಯಾದ ಉಪಕಾರವನ್ನು ಮಾಡವು.

ವ್ಯಾಖ್ಯಾನ ವಿಶೇಷ ಈ ಲಕ್ಷಣವಿದ್ದರೂ ಇಲ್ಲದಿದ್ದರೂ ದುಃಖನಿವೃತ್ತಿಗೆ ಜ್ಞಾನವೇ ಕಾರಣವಾಗುವ ಪಕ್ಷದಲ್ಲಿ ಈ ಬಾಹ್ಯಲಕ್ಷಣವೆಲ್ಲವೂ ವ್ಯರ್ಥವೇ ಆಗುವುದಿಲ್ಲವೇ ಎಂದು ಭಾವ.

ಅಥ ವಾ ದುಃಖಶೈಥಿಲ್ಯಂ ವೀಕ್ಷ್ಯ ಲಿಂಗೇ ಕೃತಾ ಮತಿಃ |
ಕಿಂ ತದೇವಾರ್ಥಸಾಮಾನ್ಯಂ ಛತ್ರಾದಿಷು ನ ಲಕ್ಷ್ಯತೇ ॥49॥

ಅಥವಾ ದುಃಖವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ನೀನು ಈ ವಿರಕ್ತರ ಚಿಹ್ನೆಗಳನ್ನು ಹೊಂದುವುದರಲ್ಲಿ ಬುದ್ಧಿ ಉಳ್ಳವನಾಗಿದ್ದರೆ ರಾಜತಂತ್ರವೇ ಮೊದಲಾದ ಛತ್ರವನ್ನು ಧರಿಸುವ ರಾಜಲಕ್ಷಣದಲ್ಲಿಯೂ ಒಂದು ಬಗೆಯ ದುಃಖನಿವೃತ್ತಿಯು, ದಾರಿದ್ರ್ಯದಿಂದ ಉಂಟಾಗಬಹುದಾದ ದುಃಖಗಳ ಪರಿಹಾರವು ಇದ್ದೇ ಇರುತ್ತದೆ. ಈ ರೀತಿಯಾಗಿ ಎರಡಕ್ಕೂ ದುಃಖ ನಿವೃತ್ತಿ ರೂಪವಾದ ಫಲಸಾದೃಶ್ಯವು ಇದೆ ಎಂದಾಗಲಿಲ್ಲವೇ?

ಆಕಿಂಚನ್ಯೇ ನ ಮೋಕ್ಷೋಽಸ್ತಿ ಕೈಂಚನ್ಯೇ ನಾಸ್ತಿ ಬಂಧನಮ್ |

ಕೈಂಚನ್ಯೇ ಚೇತರೇ ಚೈವ ಜಂತುರ್ಜ್ಞಾನೇನ ಮುಚ್ಯತೇ ॥50॥
ಮನುಷ್ಯನು ದಾರಿದ್ರ್ಯವನ್ನು ಹೊಂದುವುದರಿಂದಲೇ ಮೋಕ್ಷವು ಲಭಿಸುವುದಿಲ್ಲ. ತನ್ನಲ್ಲಿ ಸಂಪತ್ತು ಇದ್ದ ಮಾತ್ರಕ್ಕೆ ಮೋಕ್ಷವಿಲ್ಲ ಎಂಬ ನಿಯಮವೂ ಇಲ್ಲ. ಸಂಪತ್ತು, ದಾರಿದ್ರ್ಯಗಳು ಮೋಕ್ಷಕ್ಕೆ ಕಾರಣವಾದವುಗಳಲ್ಲ. ಐಶ್ವರ್ಯವಿರಲಿ, ಇಲ್ಲದಿರಲಿ ಜ್ಞಾನದಿಂದಲೇ ಮುಕ್ತಿಯನ್ನು ಹೊಂದುತ್ತಾನೆ.
ತಸ್ಮಾದ್ಧರ್ಮಾರ್ಥಕಾಮೇಷು ತಥಾ ರಾಜ್ಯಪರಿಗ್ರಹೇ |
ಬಂಧನಾಯತನೇಷ್ವೇಷು ವಿದ್ಧ್ಯಬಂಧೇ ಪದೇ ಸ್ಥಿತಮ್ ॥51॥
ಆದ್ದರಿಂದ ಬಂಧನಕ್ಕೆ ಕಾರಣವಾದ ಧರ್ಮಾರ್ಥಕಾಮಗಳಲ್ಲಿ, ರಾಜ್ಯಭಾರದಲ್ಲಿ ನನ್ನನ್ನು ನಾನು ತೊಡಗಿಸಿಕೊಂಡಿದ್ದರೆ, ನನ್ನನ್ನು ಬಂಧರಹಿತನನ್ನಾಗಿ ನೀನು ತಿಳಿಯಬೇಕು.
ರಾಜ್ಯೈಶ್ವರ್ಯಮಯಃ ಪಾಶಃ ಸ್ನೇಹಾಯತನಬಂಧನಃ |
ಮೋಕ್ಷಾಶ್ಮನಿಶಿತೇನೇಹ ಛಿನ್ನಸ್ತ್ಯಾಗಾಸಿನಾ ಮಯಾ ॥52॥
ಈ ಜಗತ್ತಿನಲ್ಲಿ ಐಶ್ವರ್ಯ, ಅಧಿಕಾರ, ಭೋಗ, ಸ್ನೇಹರೂಪವಾದ ಬಾಂಧವ್ಯ ಇವೆಲ್ಲವೂ ಪಾಶದಂತೆ ಬಂಧಿಸಲು ಸಮರ್ಥವಾಗಿದ್ದರೂ ಮೋಕ್ಷವೆಂಬ ತೀಕ್ಷ್ಣವಾದ ಸಾಣೆಯಲ್ಲಿ ತಿಕ್ಕಿತೀಡಿದ ತ್ಯಾಗಶಕ್ತಿಯಿಂದ ಆ ಪಾಶವನ್ನು ನಾನು ಸುಲಭವಾಗಿ ಕತ್ತರಿಸಿಕೊಂಡಿರುತ್ತೇನೆ.
ಸೋಽಹಮೇವಂಗತೋ ಮುಕ್ತೋ ಜಾತಾಸ್ಥಸ್ತ್ವಯಿ ಭಿಕ್ಷುಕಿ |
ಅಯಥಾರ್ಥೋ ಹಿ ತೇ ವರ್ಣೋ ವಕ್ಷ್ಯಾಮಿ ಶೃಣು ತನ್ಮಮ ॥53॥
ಇಂತಹ ಸ್ಥಿತಿಯಲ್ಲಿ ಮುಕ್ತನಾಗಿರುವ ನಾನು ನಿನ್ನ ಸ್ಥಿತಿಯನ್ನು ಕಂಡು ಕನಿಕರ ಹೊಂದಿರುತ್ತೇನೆ. ಭಿಕ್ಷುಕಿಯೇ, ನಿನ್ನ ರೂಪವು ನಿನಗೆ ಅನುಗುಣವಾಗಿಲ್ಲ. ಅದರ ತತ್ತ್ವವನ್ನು ತಿಳಿಸುತ್ತೇನೆ, ಕೇಳು.
ಸೌಕುಮಾರ್ಯಂ ತಥಾ ರೂಪಂ ವಪುರಗ್ರ್ಯಂ ತಥಾ ವಯಃ |
ನಚೈತಾನಿ ಸಮಸ್ತಾನಿ ನಿಯಮಶ್ಚೇತಿ ಸಂಶಯಃ ॥54॥
ಸೌಕುಮಾರ್ಯ, ಸೌಂದರ್ಯ, ವಯಸ್ಸು, ರೂಪ ಇವೆಲ್ಲವೂ ನಿನಗೆ ಸಂಬಂಧಿಸಿದವುಗಳು. ಹಿಂದೆ ಇದ್ದ ವೃದ್ಧಭಿಕ್ಷುಕಿ ವ್ರತನಿಯಮವು ನಿನ್ನಲ್ಲಿ ೀಗ ಇರುವುದಿಲ್ಲ. ಸಂನ್ಯಾಸಿನಿಗೆ ಮಾಯಾರೂಪವು ಅಪ್ರಾಮಾಣಿಕವಾದುದು ಎಂಬ ಕಾರಣದಿಂದ ನಿನ್ನ ವಿಷಯದಲ್ಲಿ ನೀನು ಸಜ್ಜನಳೋ, ಅಸಜ್ಜನಳೋ? ಎಂಬ ಸಂಶಯವು ನನಗೆ ಉಂಟಾಗಿದೆ.
ಯಚ್ಚಾಪ್ಯನನುರೂಪಂ ತೇ ಲಿಂಗಸ್ಯಾಸ್ಯ ವಿಚೇಷ್ಟಿತಮ್ |
ಮುಕ್ತೋಽಯಂ ಸ್ಯಾನ್ನ ವೇತ್ಯಸ್ಮಾದ್ಧರ್ಷಿತೋ ಮತ್ಪರಿಗ್ರಹಃ ॥55॥
ಇಂತಹ ಈ ಭಿಕ್ಷುಕಿಯ ವೇಷದಲ್ಲಿ ನಡೆದ ಈ ವ್ಯಾಪಾರಗಳು ಆ ಸಂನ್ಯಾಸಿನಿಯ ವೇಷಕ್ಕೆ ಯೋಗ್ಯವಾದವುಗಳಲ್ಲ. ನನ್ನನ್ನು ವಿಷಯಸಂಗದಿಂದ ಮುಕ್ತನೋ, ಅಲ್ಲವೋ ಎಂದು ತಿಳಿಯುವ ಭಾವನೆಯಿಂದ ನನ್ನ ಒಳಗೆ ನೀನು ಪ್ರವೇಶಿಸಿಕೊಂಡಿರುವಂತಹ ವ್ಯಾಪಾರವೂ ಯೋಗ್ಯವಾದುದಲ್ಲ.
ನ ಚ ಕಾಮಸಮಾಯುಕ್ತೇ ಮುಕ್ತೇಽಪ್ಯಸ್ತಿ ತ್ರಿದಂಡಕಮ್ |
ನ ರಕ್ಷ್ಯತೇ ತ್ವಯಾ ಚೇದಂ ನ ಮುಕ್ತಸ್ಯಾಸ್ತಿ ಗೋಪನಾ ॥56॥
ಕಾಮಾದಿಗಳಿಂದ ಕೂಡಿದ ವ್ಯಕ್ತಿಯು ತ್ರಿದಂಡಗಳನ್ನು ಧರಿಸಿದ್ದರೂ ಮುಕ್ತಿಗೆ ಆ ತ್ರಿದಂಡಗಳು ಸಹಕಾರಿಯಾಗವು. ತ್ರಿದಂಡದ ಉದ್ದೇಶವನ್ನು ನೀನು ಸರಿಯಾಗಿ ರಕ್ಷಿಸಿಕೊಳ್ಳುತ್ತಿಲ್ಲ. ಮುಕ್ತನಾದ ಚೇತನನು ಎಂದಿಗೂ ತನ್ನನ್ನು ಮುಚ್ಚಿಟ್ಟುಕೊಳ್ಳಲು ಪ್ರಯತ್ನಿಸುವುದಿಲ್ಲ. ನೀನು ನಿನ್ನ ನಿಜರೂಪವನ್ನು ಮುಚ್ಚಿಟ್ಟುಕೊಂಡು ವೇಷಾಂತರದಿಂದ ನನ್ನಲ್ಲಿ ಪ್ರವೇಶಿಸಿರುವುದು ಮುಕ್ತಳಾದ ನಿನಗೆ ಲಕ್ಷಣವೆನಿಸುವುದಿಲ್ಲ.
ಮತ್ಪಕ್ಷಸಂಶ್ರಯಾಚ್ಚಾಯಂ ಶೃಣು ಯಸ್ತೇ ವ್ಯತಿಕ್ರಮಃ |
ಆಶ್ರಯಂತ್ಯಾಃ ಸ್ವಭಾವೇನ ಮಮ ಪೂರ್ವಪರಿಗ್ರಹಮ್ ॥57॥
ನೀನು ನನ್ನ ಶರೀರವನ್ನು ರಹಸ್ಯವಾಗಿ ನಿನ್ನ ನಿಜಸ್ಥಿತಿಯನ್ನು ಉಲ್ಲಂಘಿಸಿ ಪ್ರವೇಶಿಸಿರುವೆ. ನಿನ್ನಲ್ಲಿರುವ ಬುದ್ಧಿಯ ದೋಷದಿಂದ ನನ್ನ ಶರೀರವನ್ನು ಪ್ರವೇಶಿಸಿ ನನ್ನ ದೇಹದಲ್ಲಿ ಕಾಮಾದಿಗಳಿವೆಯೋ ಎಂದು ಪರೀಕ್ಷಿಸುತ್ತಿರುವೆ. ನಾನು ಹಿಂದಿನ ಸ್ಥಿತಿಯಲ್ಲಿ ಅನುರಕ್ತನಾಗಿದ್ದರೂ ಈಗ ಈ ದೇಹದಲ್ಲಿ ವಿರಕ್ತನಾಗಿಯೇ ಇದ್ದೇನೆ.
ಪ್ರವೇಶಸ್ತೇ ಕೃತಃ ಕೇನ ಮಮ ರಾಷ್ಟ್ರೇ ಪುರೇ ತಥಾ |
ಕಸ್ಯ ವಾ ಸನ್ನಿಸರ್ಗಾತ್ತ್ವಂ ಪ್ರವಿಷ್ಟಾ ಹೃದಯಂ ಮಮ ॥58॥
ನೀನು ಯಾವ ಕಾರಣದಿಂದ ನನ್ನ ರಾಜ್ಯದಲ್ಲಿ, ನನ್ನ ಪಟ್ಟಣದಲ್ಲಿ ಪ್ರವೇಶಿಸಿರುವಿ? ನನ್ನ ಸಂಬಂಧದಿಂದ ನೀನು ನನ್ನ ಮನಸ್ಸಿನಲ್ಲಿ ಏಕೆ ಪ್ರವೇಶಿಸಿರುವಿ?
ವರ್ಣಪ್ರವರಮುಖ್ಯಾಸಿ ಬ್ರಾಹ್ಮಣೀ ಕ್ಷತ್ರಿಯೋ ಹ್ಯಹಮ್ |
ನಾವಯೋರೇಕಯೋಗೋಽಸ್ತಿ ಮಾ ಕೃಥಾ ವರ್ಣಸಂಕರಮ್ ॥59॥
ನೀನಾದರೂ ವರ್ಣಗಳಲ್ಲಿ ಶ್ರೇಷ್ಠವೆನಿಸಿದ ಬ್ರಾಹ್ಮಣ ಕುಲದ ಸ್ತ್ರೀಯಾಗಿರುವಿ. ನಾನಾದರೂ ಕ್ಷತ್ರಿಯನಾಗಿರುವೆ. ನಮ್ಮಿಬ್ಬರಿಗೆ ಯಾವ ವಿಧದಲ್ಲಿಯೂ ಸಂಬಂಧ ಇರುವುದಿಲ್ಲ. ಆದ್ದರಿಂದ ನೀನು ವರ್ಣಸಂಕರವನ್ನು ಮಾಡಬಾರದು.
ವರ್ತಸೇ ಮೋಕ್ಷಧರ್ಮೇಷು ಗಾರ್ಹಸ್ಥ್ಯೇ ತ್ವಹಮಾಶ್ರಮೇ |
ಅಯಂ ಚಾಪಿ ಸುಕಷ್ಟಸ್ತೇ ದ್ವಿತೀಯೋಽಽಶ್ರಮಸಂಕರಃ ॥60॥
ನೀನು ಮೋಕ್ಷಧರ್ಮವನ್ನು ಆಶ್ರಯಿಸಿದವಳು. ನಾನು ಗೃಹಸ್ಥಾಶ್ರಮನಾಗಿ ಇರುತ್ತೇನೆ. ಆದ್ದರಿಂದ ನಿನ್ನಿಂದ ಅತ್ಯಂತ ದಾರುಣವಾದ ಆಶ್ರಮಗಳ ಸಾಂಕರ್ಯವು ಮಾಡಲ್ಪಟ್ಟಿದೆ.
ಸಗೋತ್ರಾಂ ವಾಸಗೋತ್ರಾಂ ವಾ ನ ವೇದ ತ್ವಾಂ ನ ವೇತ್ಥ ಮಾಮ್ |

ಸಗೋತ್ರಮಾವಿಶಂತ್ಯಾಸ್ತೇ ತೃತೀಯೋ ಗೋತ್ರಸಂಕರಃ ॥61॥
ಇಷ್ಟೇ ಅಲ್ಲದೆ, ನೀನು ಸಗೋತ್ರಳೋ, ಭಿನ್ನ ಗೋತ್ರಳೋ ಅದನ್ನೂ ನಾನು ಕಾಣದಾಗಿದ್ದೇನೆ. ನೀನು ನನ್ನನ್ನು ತಿಳಿದವಳಲ್ಲ. ಒಂದು ವೇಳೆ ನೀನು ಸಗೋತ್ರಳೇ ಆಗಿದ್ದಲ್ಲಿ ಅದರಿಂದ ನಿನಗೆ ಮೂರನೆಯದ್ದಾದ ಗೋತ್ರಸಾಂಕರ್ಯದ ದೋಷವೂ ಬಂದಂತಾಗುತ್ತದೆ.
ಅಥ ಜೀವತಿ ತೇ ಭರ್ತಾ ಪ್ರೋಷಿತೋಽಪ್ಯಥ ವಾ ಕ್ವಚಿತ್ |
ಅಗಮ್ಯಾ ಪರಭಾರ್ಯೇತಿ ಚತುರ್ಥೋ ಧರ್ಮಸಂಕರಃ ॥62॥
ಇಷ್ಟೇ ಅಲ್ಲದೆ ನಿನ್ನ ಪತಿಯು ಜೀವಿಸಿರುತ್ತಾನೋ ಅಥವಾ ನಿನ್ನನ್ನು ಬಿಟ್ಟು ವಿರಕ್ತನಾಗಿ ಹೋಗಿರುತ್ತಾನೋ ಅದೂ ನನಗೆ ತಿಳಿಯದು. ಪರಸ್ತ್ರೀಯ ಸ್ಪರ್ಶವು ದೋಷಕ್ಕೆ ಕಾರಣವಾದುದರಿಂದ ನೀನು ನನ್ನ ಹೃದಯವನ್ನು ಪ್ರವೇಶಿಸಿದ ಕಾರಣದಿಂದ ನಾಲ್ಕನೆಯದ್ದಾದ ಧರ್ಮಸಾಂಕರ್ಯವೂ ನಿನ್ನಿಂದ ಮಾಡಲ್ಪಟ್ಟಿದೆ.
ಸಾ ತ್ವಮೇತಾನ್ಯಕಾರ್ಯಾಣಿ ಕಾರ್ಯಾಪೇಕ್ಷಾ ವ್ಯವಸ್ಯಸಿ |
ಅವಿಜ್ಞಾನೇನ ವಾ ಯುಕ್ತಾ ಮಿಥ್ಯಾಜ್ಞಾನೇನ ವಾ ಪುನಃ ॥63॥
ಹೀಗಿರುವಾಗ ಯಾವುದನ್ನೂ ತಿಳಿಯಬೇಕು ಎಂಬ ಇಂತಹ ಅಕಾರ್ಯವನ್ನು ನೀನು ಮಾಡಬಹುದೆ? ಒಂದು ವೇಳೆ ನೀನು ಅಜ್ಞಾನದಿಂದಾಗಲಿ, ಮಿಥ್ಯಾಜ್ಞಾನದಿಂದಾಗಲಿ ಇಂತಹ ಅಸತ್ಕರ್ಮವನ್ನು ಮಾಡಿರುತ್ತೀಯೋ?
ಅಥ ವಾಪಿ ಸ್ವತಂತ್ರಾಸಿ ಸ್ವದೋಷೇಣೇಹ ಕೇನಚಿತ್ |
ಯದಿ ಕಿಂಚಿಚ್ಛ್ರುತಂ ತೇಽಸ್ತಿ ಸರ್ವಂ ಕೃತಮನರ್ಥಕಮ್ ॥64॥
ಅಥವಾ ನಿನ್ನಲ್ಲಿ ಯಾವುದಾದರೂ ಇರುವ ನಿನ್ನದ್ದೇ ಆದ ದೋಷದಿಂದಾಗಿ ಸ್ವತಂತ್ರವಾಗಿ ವರ್ತಿಸಿರುತ್ತೀಯಾ? ಹಾಗಿದ್ದಲ್ಲಿ ನೀನು ಅಲ್ಪಸ್ವಲ್ಪ ಶಾಸ್ತ್ರಶ್ರವಣ- ಗಳನ್ನೇನಾದರೂ ಮಾಡಿದ್ದಲ್ಲಿ ಅದೆಲ್ಲವೂ ಈ ನಿನ್ನ ವ್ಯಾಪಾರದಿಂದ ವ್ಯರ್ಥವೇ ಆದಂತಾಗುತ್ತದೆ.
ಇದಮನ್ಯತ್ ಚತುರ್ಥಂ ತೇ ಭಾವಸ್ಪರ್ಶವಿಘಾತಕಮ್ |
ದುಷ್ಟಾಯಾ ಲಕ್ಷ್ಯತೇ ಲಿಂಗಂ ಪ್ರವಕ್ತವ್ಯಂ ಪ್ರಕಾಶಿತಮ್ ॥65॥
ಇಷ್ಟೇ ಅಲ್ಲದೆ ನಾಲ್ಕನೆಯದ್ದಾದ ಇನ್ನೊಂದು ನೀನು ಮಾಡಿದ ಅಪರಾಧ- ನನ್ನ ಮನಸ್ಸಿನ ಜೊತೆಗೆ ಸೇರಿ ಅಪರಾಧವನ್ನು ಮಾಡಿರುವಿ. ನಿನ್ನ ಹೃದಯದಲ್ಲಿರುವಂತಹ ದೋಷಲಿಂಗವನ್ನು ನೀನಾಗಿಯೇ ಪ್ರಕಟಪಡಿಸಿದಂತಾಯಿತು.
ನ ಮಯ್ಯೇವಾಭಿಸಂಧಿಸ್ತೇ ಜಯ್ಯೈಷಿಣ್ಯಾ ಜಯೇ ಕೃತಃ |
ಯೇಯಂ ಮತ್ಪರಿಷತ್ ಕೃತ್ಸ್ನಾ ಜೇತುಮಿಚ್ಛಸಿ ತಾಮಪಿ ॥66॥
ಜಯವನ್ನು ಅಪೇಕ್ಷಿಸಿರುವ ನೀನು ನನ್ನನ್ನು ಜಯಿಸುವ ಪ್ರಯತ್ನದಿಂದ ಆಗಮಿಸಿ ನನ್ನ ಬಳಿ ಇರುವ ವಿದ್ವತ್ ಪರಿಷತ್ತನ್ನೆಲ್ಲ ಜಯಿಸಬೇಕೆಂದು ಇಚ್ಛಿಸುತ್ತಿರುವಿ.
ತಥಾ ಹ್ಯೇವಂ ಪುನಶ್ಚ ತ್ವಂ ದೃಷ್ಟಿಂ ಸ್ವಾಂ ಪ್ರತಿಮುಂಚಸಿ |
ಮತ್ಪಕ್ಷಪ್ರತಿಘಾತಾಯ ಸ್ವಪಕ್ಷೋದ್ಭಾವನಾಯ ಚ ॥67॥
ಇಷ್ಟೇ ಅಲ್ಲದೆ ನಿನ್ನ ಸ್ತ್ರೀ ಸಹಜವಾದ ದೃಷ್ಟಿಯನ್ನು ಜಯದ ಅಪೇಕ್ಷೆಯಿಂದ ನನ್ನ ಪಕ್ಷದವರನ್ನೆಲ್ಲ ಸೋಲಿಸಬೇಕೆಂಬ ಅಭಿಪ್ರಾಯದಿಂದ ಬೀಗುತ್ತಿರುವಿ. ನಿನ್ನ ಪಕ್ಷದ ಜಯದ ಆಕಾಂಕ್ಷೆಯಲ್ಲಿ ಇಂತಹ ತಪ್ಪುಗಳನ್ನು ಮಾಡುತ್ತಿರುವಿ.
ಸಾ ಸ್ವೇನಾಮರ್ಷಜೇನ ತ್ವಮೃದ್ಧಿಮೋಹೇನ ಮೋಹಿತಾ |
ಭೂಯಃ ಸೃಜಸಿ ಯೋಗಾಸ್ತ್ರಂ ವಿಷಾಮೃತಮಿವೈಕಧಾ ॥68॥
ಹೀಗೆ ಅಸೂಯೆಯಿಂದಲೂ, ಯೋಗಸಿದ್ಧಿಯಲ್ಲಿ ನಿನಗಿರುವ ಶ್ರೇಷ್ಠತೆಯ ಮೋಹದಿಂದಲೂ ಮರುಳಾದ ನೀನು ವಿಷವನ್ನು, ಅಮೃತವನ್ನು ಮೇಲನ ಮಾಡಿದಂತೆ ನಿನ್ನ ಬುದ್ಧಿಯನ್ನು ನನ್ನ ಬುದ್ಧಿಯ ಜೊತೆಗೆ ಸೇರಿಸುತ್ತಿರುವಿ.
ಇಚ್ಛತೋರ್ಹಿ ದ್ವಯೋರ್ಲಾಭಃ ಸ್ತ್ರೀಪುಂಸೋರಮೃತೋಪಮಃ |
ಅಲಾಭಶ್ಚಾಪ್ಯರಕ್ತಸ್ಯ ಸೋಽತ್ರ ದೋಷೋ ವಿಷೋಪಮಃ ॥69॥
ಪರಸ್ಪರ ಪ್ರೀತಿಯನ್ನು ಹೊಂದಿರುವ ಸ್ತ್ರೀ-ಪುರುಷರ ಮಿಲನವು ಅಮೃತಕ್ಕೆ ಸಮಾನವು. ಆದರೆ ಸ್ತ್ರೀಯರಿಗೆ ಆಸಕ್ತಿಯುಳ್ಳ ಮನುಷ್ಯನು ದೊರೆಯದಿರುವುದು ವಿಷಕ್ಕೆ ಸಮಾನವು. ನೀನು ವಿಷಕ್ಕೆ ಸಮಾನವಾದ ದೋಷವನ್ನು ಇಲ್ಲಿ ಹೊಂದಿರುತ್ತಿ.
ಮಾ ಸ್ಪ್ರಾಕ್ಷೀಃ ಸಾಧು ಜಾನೀಹಿ ಸ್ವಶಾಸ್ತ್ರಮನುಪಾಲಯ |
ಕೃತೇಯಂ ಹಿ ವಿಜಿಜ್ಞಾಸಾ ಮುಕ್ತೋ ನೇತಿ ತ್ವಯಾ ಮಮ |
ಏತತ್ ಸರ್ವಂ ಪ್ರತಿಚ್ಛನ್ನಂ ಮಯಿ ನಾರ್ಹಸಿ ಗೂಹಿತುಮ್ ॥70॥
ನೀನು ನನ್ನ ಮನಸ್ಸನ್ನು ಮುಟ್ಟಬೇಡ. ಚೆನ್ನಾಗಿ ತಿಳಿದುಕೊ, ನಿನ್ನ ಶಾಸ್ತ್ರವನ್ನು ಸಂರಕ್ಷಿಸು. ನೀನು ಇವನು ಮುಕ್ತನೋ, ಅಲ್ಲವೋ ಎಂದು ನನ್ನ ನಿಜಸ್ಥಿತಿಯನ್ನು ತಿಳಿಯಬೇಕೆಂಬ ಜಿಜ್ಞಾಸೆಯನ್ನು ಈಗ ಮಾಡಿರುತ್ತಿ. ಇಂತಹ ಗೂಢಚಾರದ ಪ್ರಯತ್ನಗಳನ್ನು ನೀನು ನನ್ನಲ್ಲಿ ಎಂದಿಗೂ ಮಾಡಲು ಯೋಗ್ಯಳಾಗಿರುವುದಿಲ್ಲ.
ಸಾ ಯದಿ ತ್ವಂ ಸ್ವಕಾರ್ಯೇಣ ಯದ್ಯನ್ಯಸ್ಯ ಮಹೀಪತೇಃ |
ತತ್ತ್ವಂ ಸತ್ರಪ್ರತಿಚ್ಛನ್ನಾ ಮಯಿ ನಾರ್ಹಸಿ ಗೂಹಿತುಮ್ ॥71॥
ನೀನು ನಿನ್ನ ಪ್ರಯೋಜನಕ್ಕಾಗಲಿ, ಬೇರೊಬ್ಬ ರಾಜನ ಪ್ರಯೋಜನಕ್ಕಾಗಲಿ ವೇಷವನ್ನು ಬದಲಾಯಿಸಿಕೊಂಡು, ನೀನು ನಿನ್ನ ನಿಜಸ್ಥಿತಿಯನ್ನು ಮುಚ್ಚಿಟ್ಟುಕೊಂಡು ನನ್ನಲ್ಲಿ ವ್ಯವಹಾರ ಮಾಡಬಾರದಾಗಿತ್ತು.
ನ ರಾಜಾನಂ ಮೃಷಾ ಗಚ್ಛೇನ್ನ ದ್ವಿಜಾತಿಂ ಕಥಂಚನ |
ನ ಸ್ತ್ರಿಯಂ ಸ್ತ್ರೀಗುಣೋಪೇತಾಂ ಹನ್ಯುರ್ಹ್ಯೇತೇ ಮೃಷಾಗತಾಃ ॥72॥
ಎಂದಿಗೂ ರಾಜರ ವಿಷಯದಲ್ಲಿ ಮೋಸಮಾರ್ಗದಿಂದ ನಡೆಯಬಾರದು. ವಿಶೇಷವಾಗಿ ಬ್ರಾಹ್ಮಣರಲ್ಲಿ ಹಾಗೆ ನಡೆಯಲೇಬಾರದು. ಸತಿಧರ್ಮವುಳ್ಳ ಸ್ತ್ರೀಯರಲ್ಲಿಯೂ ಕಳ್ಳತನದಿಂದ ವರ್ತಿಸಬಾರದು. ಈ ಮೂವರ ವಿಷಯದಲ್ಲಿ ಮಾಡುವ ಕಪಟತನವು

ಕಪಟಿಗಳನ್ನು ನಾಶಮಾಡುತ್ತದೆ.
ರಾಜ್ಞಾಂ ಹಿ ಬಲಮೈಶ್ವರ್ಯಂ ಬ್ರಹ್ಮ ಬ್ರಹ್ಮವಿದಾಂ ಬಲಮ್ |
ರೂಪಯೌವನಸೌಭಾಗ್ಯಂ ಸ್ತ್ರೀಣಾಂ ಬಲಮನುತ್ತಮಮ್ ||73||
ರಾಜರಿಗೆ ಅಧಿಕಾರವೇ ಬಲವು. ಬ್ರಾಹ್ಮಣರಿಗೆ ವೇದವು ಬಲವು. ಸ್ತ್ರೀಯರಿಗೆ ರೂಪ-ಯೌವನ-ಸೌಭಾಗ್ಯಗಳೇ ಶ್ರೇಷ್ಠವಾದ ಬಲವು.
ಅತ ಏತೈರ್ಬಲೈರೇತೇ ಬಲಿನಃ ಸ್ವಾರ್ಥಮಿಚ್ಛತಾ |
ಆರ್ಜವೇನಾಭಿಗಂತವ್ಯಾ ವಿನಾಶಾಯ ಹ್ಯನಾರ್ಜವಮ್ ||74||
ಆದ್ದರಿಂದ ತಮ್ಮ ಶ್ರೇಯಸ್ಸನ್ನು ಬಯಸುವವರು ಈ ಮೂರು ವಿಧವಾದ ಬಲವುಳ್ಳ ಮೂವರನ್ನು ಋಜುಮಾರ್ಗದಿಂದಲೇ ಸಮೀಪಿಸಬೇಕು. ಅವರಲ್ಲಿ ಮಾಡುವ ಕಪಟತನವು ಅನರ್ಥಕ್ಕೆ ಕಾರಣವಾಗುತ್ತದೆ.
ಸಾ ತ್ವಂ ಜಾತಿಂ ಶ್ರುತಂ ವೃತ್ತಂ ಭಾವಂ ಪ್ರಕೃತಿಮಾತ್ಮನಃ |
ಕೃತ್ಯಮಾಗಮನೇ ಚೈವ ವಕ್ತುಮರ್ಹಸಿ ತತ್ತ್ವತಃ ||75||
ಆದ್ದರಿಂದ ನೀನು ಮೊದಲೇ ನಿನ್ನ ಜಾತಿ, ನಿನ್ನ ವಿದ್ಯೆ, ನಿನ್ನ ಆಚಾರ, ನಿನ್ನ ಅಭಿಪ್ರಾಯ, ನಿನ್ನ ನಡತೆ, ನೀನು ಇಲ್ಲಿಗೆ ಬಂದಿರುವ ಉದ್ದೇಶ ಇವುಗಳನ್ನೆಲ್ಲ ಯಥಾರ್ಥವಾಗಿ ನನಗೆ ಹೇಳಲು ಅರ್ಹಳಾಗಿರುತ್ತಿ.
ಇತ್ಯೇತೈರಸುಖೈರ್ವಾಕ್ಯೈರಯುಕ್ತೈರಸಮಂಜಸೈಃ |
ಪ್ರತ್ಯಾದಿಷ್ಟಾ ನರೇಂದ್ರೇಣ ಸುಲಭಾ ನ ವ್ಯಕಂಪತ ||76||
ಧರ್ಮರಾಜನೇ, ಹೀಗೆ ಜನಕನು ಅಹಿತವಾಗಿಯೂ, ಅಯೋಗ್ಯವಾಗಿಯೂ, ತಪ್ಪಾಗಿಯೂ ತೋರುವ ಮಾತುಗಳನ್ನಾಡಿ ಆಕೆಯನ್ನು ನಿರಾಕರಿಸಿದರೂ ಸುಲಭೆಯು ಜನಕನ ಮನಸ್ಸಿನಿಂದ ಕದಲಲಿಲ್ಲ.
ಉಕ್ತವಾಕ್ಯೇ ತು ನೃಪತೌ ಸುಲಭಾ ಚಾರುದರ್ಶನಾ |
ತತಶ್ಚಾರುತರಂ ವಾಕ್ಯಂ ಪ್ರಚಕ್ರಾಮಾಥ ಭಾಷಿತುಮ್ ||77||
ರಾಜನ ಆ ಮಾತುಗಳನ್ನೆಲ್ಲ ಕೇಳಿಸಿಕೊಂಡ ಬಳಿಕ ಸುಲಭೆಯು ಆ ಜನರ ಮುಂದೆ ತನ್ನ ರೂಪಕ್ಕಿಂತಲೂ ಸುಂದರವಾದ ಮಾತುಗಳಿಂದ ರಾಜನ ಜೊತೆ ಮಾತನಾಡಲು ಆರಂಭಿಸಿದಳು.
ನವಭಿರ್ನವಭಿಶ್ಚೈವ ದೋಷೈರ್ವಾಗ್ಬುದ್ಧಿದೂಷಣೈಃ |
ಅಪೇತಮುಪಪನ್ನಾರ್ಥಮಷ್ಟಾದಶಗುಣಾನ್ವಿತಮ್ ||78||
ರಾಜನೇ, ಮಾತು-ಬುದ್ಧಿಗೆ ಸಂಬಂಧಪಟ್ಟ ಹದಿನೆಂಟು ದೋಷಗಳಿವೆ. ದೋಷದಿಂದ ಕೂಡಿರದ ಹದಿನೆಂಟು ಗುಣಗಳೂ ಇವೆ.
ಸೌಕ್ಷ್ಮ್ಯಂ ಸಂಖ್ಯಾ ಕ್ರಮೌ ಚೋಭೌ ನಿರ್ಣಯಃ ಸಪ್ರಯೋಜನಃ |
ಪಂಚೈತಾನ್ಯರ್ಥಜಾತಾನಿ ವಾಕ್ಯಮಿತ್ಯುಚ್ಯತೇ ನೃಪ ||79||
ಸೂಕ್ಷ್ಮವು, ಸಂಖ್ಯವು ಎಂಬ ಎರಡು ಕ್ರಮಗಳು ಎಂದರೆ ದೇವದತ್ತ ಆನಯ ಎಂಬ ವಾಕ್ಯಗಳಲ್ಲಿ ದೇವದತ್ತ ಎಂಬ ಕರ್ತೃಪದವು ಗಾಂ ಎಂಬುದಾಗಿ ಮಧ್ಯದಲ್ಲಿ ಕರ್ಮಪದವು, ಆನಯ ಎಂಬುದಾಗಿ ಕೊನೆಯಲ್ಲಿ ಕ್ರಿಯಾಪದವು. ಹೀಗೆ ಪದಗಳಲ್ಲಿ ಪೂರ್ವತ್ವ, ಅಪರತ್ವ ಕ್ರಮಗಳ ಸಂಬಂಧವು ಸೂಕ್ಷ್ಮವು, ಸಂಖ್ಯೆಯುಸಂಖ್ಯಾ ಎರಡು ಕ್ರಮಗಳು ನಿರ್ಣಯ, ಪ್ರಯೋಜನ ಎಂಬುದಾಗಿ ಐದು ವಿಷಯಗಳಿಂದ ಕೂಡಿದ ಶಬ್ದ ಸರಣಿಯವು ವಾಕ್ಯ ಎನಿಸುತ್ತದೆ.
ಏಷಾಮೇಕೈಕಶೋಽರ್ಥಾನಾಂ ಸೌಕ್ಷ್ಮ್ಯಾದೀನಾಂ ಸುಲಕ್ಷಣಮ್ |
ಶೃಣು ಸಂಸಾರ್ಯಮಾಣಾನಾಂ ಪದಾರ್ಥೈಃ ಪದವಾಕ್ಯತಃ ||80||
ಇವುಗಳಲ್ಲಿಯೂ ಒಂದೊಂದರಲ್ಲಿರುವಂತಹ ಅರ್ಥಗಳಲ್ಲಿ ಸೂಕ್ಷ್ಮ ಮೊದಲಾದವುಗಳ ಯಥಾರ್ಥವಾದ ಲಕ್ಷಣಗಳನ್ನು ನಿನಗೆ ನೆನಪಿಸುತ್ತೇನೆ. ಪದ, ಪದವಾಕ್ಯಗಳ ಕ್ರಮಗಳನ್ನು ನಿನಗೆ ನೆನಪಿಸುತ್ತೇನೆ, ಕೇಳು.
ಜ್ಞಾನಂ ಜ್ಞೇಯೇಷು ಭಿನ್ನೇಷು ಯಥಾಭೇದೇನ ವರ್ತತೇ |
ತತ್ರಾತಿಶಯಿನೀ ಬುದ್ಧಿಸ್ತತ್ ಸೌಕ್ಷ್ಮ್ಯಮಿತಿ ವರ್ತತೇ ||81||
ಬೇರೆ ಬೇರೆ ವಿಷಯಗಳಲ್ಲಿ ಬೇರೆ ಬೇರೆಯಾಗಿ ಪ್ರವೃತ್ತಿಯನ್ನು ಹೊಂದುವ ಭಿನ್ನ ಜ್ಞಾನಗಳಲ್ಲಿ ಬುದ್ಧಿಯನ್ನು ಬಗ್ಗಿಸಿ ಅದನ್ನು ಗ್ರಹಿಸುವುದೇ ಸೂಕ್ಷ್ಮತೆ ಎನಿಸಿದೆ.
ದೋಷಾಣಾಂ ಚ ಗುಣಾನಾಂ ಚ ಪ್ರಮಾಣಂ ಪ್ರವಿಭಾಗಶಃ |
ಕಂಚಿದರ್ಥಮಭಿಪ್ರೇತ್ಯ ಸಾ ಸಂಖ್ಯೇತ್ಯುಪಧಾರ್ಯತಾಮ್ ||82||
ಅದರ ಗುಣ-ದೋಷಗಳನ್ನು ವಿಚಾರ ಮಾಡಿ ನಿಜವಾದ ಅರ್ಥವನ್ನು ತಿಳಿಯುವುದು ಸಂಖ್ಯಾ ಎಂದು ಕರೆಸಿಕೊಳ್ಳುತ್ತದೆ ಎಂಬುದಾಗಿ ತಿಳಿದುಕೊ.
ಇದಂ ಪೂರ್ವಮಿದಂ ಪಶ್ಚಾದ್ವಕ್ತವ್ಯಂ ಯದ್ ವಿವಕ್ಷಿತಮ್ |
ಕ್ರಮಯೋಗಂ ತಮಪ್ಯಾಹುರ್ವಾಕ್ಯಂ ವಾಕ್ಯವಿದೋ ಜನಾಃ ||83||
ಇದನ್ನು ಮೊದಲು ಹೇಳಬೇಕು, ಇದನ್ನು ನಂತರ ಹೇಳಬೇಕು ಎಂಬುದನ್ನು ನಿರ್ಣಯಿಸುವುದೇ ಕ್ರಮವೆಂದು ವಾಕ್ಯಲಕ್ಷಣವನ್ನು ಬಲ್ಲವರು ಹೇಳುತ್ತಾರೆ.
ಧರ್ಮಾರ್ಥಕಾಮಮೋಕ್ಷೇಷು ಪ್ರತಿಜ್ಞಾಯ ವಿಶೇಷತಃ |
ಇದಂ ತದಿತಿ ವಾಕ್ಯಾಂತೇ ಪ್ರೋಚ್ಯತೇ ಸ ವಿನಿರ್ಣಯಃ ||84||
ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಬೇಕಾದುದ್ದನ್ನು ಇಚ್ಛಿಸಿ ಇದೇ ಅದು ಎಂದು ನಿಶ್ಚಯಿಸಿ ಹೇಳುವುದೇ ನಿರ್ಣಯ ಎನಿಸುತ್ತದೆ.
ಇಚ್ಛಾದ್ವೇಷಭವೈರ್ದುಃಖೈಃ ಪ್ರಕರ್ಷೋಽ ಯತ್ರ ಜಾಯತೇ |

ತತ್ರ ಯಾ ನೃಪತೇ ವೃತ್ತಿಸ್ತತ್ಪ್ರಯೋಜನಮಿಷ್ಯತೇ ॥85॥
ಇಚ್ಛಾದ್ವೇಷಗಳಿಂದ ಉಂಟಾಗುವ ದುಃಖಗಳಲ್ಲಿ ಕ್ರಮವಾಗಿ ಇದನ್ನು ನಡೆಸಬೇಕು, ಇದನ್ನು ಬಿಡಬೇಕು ಎಂಬ ಪ್ರವೃತ್ತಿ-ನಿವೃತ್ತಿಗಳೇ ಪ್ರಯೋಜನವೆನಿಸುತ್ತವೆ.
ತಾನ್ಯೇತಾನಿ ಯಥೋಕ್ತಾನಿ ಸೌಕ್ಷ್ಮ್ಯಾದೀನಿ ಜನಾಧಿಪ |
ಏಕಾರ್ಥಸಮವೇತಾನಿ ವಾಕ್ಯಂ ಮಮ ನಿಶಾಮಯ ॥86॥
ರಾಜೇಂದ್ರನೇ, ಒಂದೇ ಅರ್ಥದಲ್ಲಿ ಈ ಬಗೆಯ ಸೂಕ್ಷ್ಮತ್ವಾದಿಗಳೆಲ್ಲ ಸೇರಿದ್ದರೆ ಮಾತ್ರ ವಾಕ್ಯ ಎನಿಸುತ್ತದೆ. ನಾನು ಹೇಳುವ ವಾಕ್ಯಗಳನ್ನು ಕೇಳಿಸಿಕೊ.
ಉಪೇತಾರ್ಥಮಭಿನ್ನಾರ್ಥಂ ನಾಪವೃತ್ತಂ ನ ಚಾಧಿಕಮ್ |
ನಾಲಕ್ಷಣಂ ನ ಚ ಸಂದಿಗ್ಧಂ ವಕ್ಷ್ಯಾಮಿ ಪರಮಂ ತವ ॥87॥
ನನ್ನ ಮಾತಿನಲ್ಲಿ ಉಚಿತವಾದ ಅರ್ಥಗಳಿವೆ, ಅಯೋಗ್ಯವಾದ ಅರ್ಥಗಳಿಲ್ಲ. ಅಧಿಕವಾದ ಮಾತುಗಳೂ ಇಲ್ಲ. ಯುಕ್ತಿಯುಕ್ತವಾದ, ಸಂದೇಹಕ್ಕೆ ಅವಕಾಶವಿಲ್ಲದ, ಕಠಿಣವಲ್ಲದ, ಶ್ರೇಷ್ಠವಾದ ಮಾತುಗಳನ್ನು ನಿನಗೆ ಹೇಳುತ್ತೇನೆ.
ನ ಗುರ್ವಕ್ಷರಸಂಬದ್ಧಂ ಪರಾಙ್ಮುಖಮುಖಂ ನ ಚ |
ನಾನೃತಂ ನ ತ್ರಿವರ್ಗೇಣ ವಿರುದ್ಧಂ ನಾಪ್ಯಸಂಸ್ಕೃತಮ್ ॥88॥
ನನ್ನ ಮಾತುಗಳಲ್ಲಿ ಅತಿಯಾದ, ಅಧಿಕವಾದ ಅಕ್ಷರಗಳಿಂದ ಕೂಡಿದ ವಾಕ್ಯಗಳಿರುವುದಿಲ್ಲ, ಸತ್ಯಕ್ಕೆ ವಿರುದ್ಧವಾದ ಮಾತುಗಳಿರುವುದಿಲ್ಲ. ಅರ್ಥವು ತಿಳಿಯಲಿಕ್ಕಾಗದಿರುವ ಪದಗಳೂ ಇರುವುದಿಲ್ಲ. ಧರ್ಮಾರ್ಥಕಾಮಗಳೆಂಬ ತ್ರಿವರ್ಗಕ್ಕೆ ವಿರುದ್ಧವಾದ ಪದಗಳಿರುವುದಿಲ್ಲ. ವ್ಯಾಕರಣಶಾಸ್ತ್ರಕ್ಕೆ ವಿರುದ್ಧವಾದ ಅಸಂಸ್ಕೃತ ಶಬ್ದಗಳೂ ಇರುವುದಿಲ್ಲ.
ನ ನ್ಯೂನಂ ಕಷ್ಟಶಬ್ದಂ ವಾ ವ್ಯುತ್ಕ್ರಮಾಭಿಹಿತಂ ನ ಚ |
ನ ಶೇಷಂ ನಾನುಕಲ್ಪೇನ ನಿಷ್ಕಾರಣಮಹೇತುಕಮ್ ॥89॥
ನನ್ನ ವಾಕ್ಯದಲ್ಲಿ ನ್ಯೂನತೆ ಇರುವುದಿಲ್ಲ. ಕಷ್ಟಕರ ಶಬ್ದಗಳಿರುವುದಿಲ್ಲ. ಕ್ರಮವನ್ನು ಉಲ್ಲಂಘಿಸಿ ಹೇಳಿದ ಶಬ್ದಗಳಿರುವುದಿಲ್ಲ. ಮಾತಿನಲ್ಲಿ ಅತಿಕ್ರಮವೂ ಇಲ್ಲ. ಕಲ್ಪಿಸಿಕೊಂಡು ಗ್ರಹಿಸಬೇಕಾದ ಅರ್ಥವಿರುವುದಿಲ್ಲ. ಕಾರಣವಿಲ್ಲದ, ಯುಕ್ತಿಯುಕ್ತವಲ್ಲದ ಶಬ್ದ ಪ್ರಯೋಗಗಳೂ ಇರುವುದಿಲ್ಲ.
ಕಾಮಾತ್ ಕ್ರೋಧಾದ್ ಭಯಾಲ್ಲೋಭಾದ್ ದೈನ್ಯಾದಾನಾರ್ಯಕಾತ್ತಥಾ|
ಹ್ರೀತೋನುಕ್ರೋಶತೋ ಮಾನಾನ್ನ ವಕ್ಷ್ಯಾಮಿ ಕಥಂಚನ ॥90॥
ವಕ್ತಾ ಶ್ರೋತಾ ಚ ವಾಕ್ಯಂ ಚ ಯದಾ ತ್ವವಿಕಲಂ ನೃಪ |
ಸ ಮಮೇತಿ ವಿವಕ್ಷಾಯಾಂ ತದಾ ಸೋಽರ್ಥಃ ಪ್ರಕಾಶತೇ ॥91॥
ಕಾಮ-ಕ್ರೋಧ-ಭಯಗಳಿಂದಾಗಲಿ, ಲೋಭ-ದೈನ್ಯಗಳಿಂದಾಗಲಿ, ದೌರ್ಜನ್ಯದಿಂದಾಗಲಿ, ಲಜ್ಜೆಯಿಂದಾಗಲಿ, ಕರುಣೆಯಿಂದಾಗಲಿ, ಹೆಮ್ಮೆಯಿಂದಾಗಲಿ ನಾನು ಮಾತನಾಡುತ್ತಿಲ್ಲ. ನಾನು ಮಾತನಾಡುವ ಉದ್ದೇಶವುಳ್ಳ ಕಾಲದಲ್ಲಿ ಯಾವನು ಮಾತನಾಡುತ್ತಾನೋ, ಅದನ್ನು ಕೇಳಿಸಿಕೊಳ್ಳುತ್ತಾನೋ, ತಪ್ಪಾಗದಂತೆ ತಿರುಗಿ ಹೇಳುತ್ತಾನೋ ಅವನು ಹೇಳುವ ಅರ್ಥವು ನನಗೆ ಸಂಬಂಧಿಸಿದೆ ಎಂದು ತಿಳಿದಾಗ ಮಾತ್ರ ಅದರ ಅರ್ಥವು ಶೋಭೆಯನ್ನು ಹೊಂದುತ್ತದೆ.
ವಕ್ತವ್ಯೇ ತು ಯದಾ ವಕ್ತಾ ಶ್ರೋತಾರಮವಮನ್ಯತೇ |
ಸ್ವಾರ್ಥಮಾಹ ಪರಾರ್ಥಂ ವಾ ತದಾ ವಾಕ್ಯಂ ನ ರೋಹತಿ ॥92॥
ಮಾತನಾಡುವ ವಿಷಯದಲ್ಲಿ ಯಾವಾಗ ವಕ್ತೃವು ಶ್ರೋತೃವನ್ನು ಅವಮಾನಿಸುತ್ತಾನೋ ಆಗ ಅವನ ಮಾತು ಅವನಿಗೆ ಮಾತ್ರ ಶೋಭೆಯನ್ನು ತರಬಹುದೇ ವಿನಾ ಶ್ರೋತೃವಾಗಿ ಕುಳಿತವನಿಗೆ ಅವನ ಮಾತು ಅಂಗೀಕಾರಾರ್ಹ ಆಗುವುದಿಲ್ಲ.
ಅಥ ಯಃ ಸ್ವಾರ್ಥಮುತ್ಸೃಜ್ಯ ಪರಾರ್ಥಂ ಪ್ರಾಹ ಮಾನವಃ |
ವಿಶಂಕಾ ಜಾಯತೇ ತಸ್ಮಿನ್ ವಾಕ್ಯಂ ತದಪಿ ದೋಷವತ್ ॥93॥
ಯಾವ ವ್ಯಕ್ತಿಯು ತನ್ನ ಸ್ವಾರ್ಥವನ್ನು ತೊರೆದು ವಿರಕ್ತನಾದವನಿಗೆ ವಾಣಿಜ್ಯವನ್ನು ಉಪದೇಶ ಮಾಡುತ್ತಾನೋ ಅಂತಹ ವ್ಯಕ್ತಿಯ ವಿಷಯದಲ್ಲಿ ವ್ಯಾಪಾರವನ್ನು ವಿರಕ್ತನಾದವನು ಬೋಧಿಸಿದ್ದರಿಂದ ಸಂಶಯವೇ ಹುಟ್ಟುತ್ತದೆ. ಅಂತಹ ವಾಕ್ಯವೂ ದೋಷವುಳ್ಳದ್ದೇ ಎಂದು ಭಾವಿಸಬೇಕು.
ಯಸ್ತು ವಕ್ತಾ ದ್ವಯೋರರ್ಥಮವಿರುದ್ಧಂ ಪ್ರಭಾಷತೇ |
ಶ್ರೋತುಶ್ಚೈವಾತ್ಮನಶ್ಚೈವ ಸ ವಕ್ತಾ ನೇತರೋ ನೃಪ ॥94॥
ಯಾವ ವಕ್ತೃವು ತನಗೂ ವಂಚನೆಯಿಲ್ಲದೆ, ಮತ್ತೊಬ್ಬನಿಗೂ ವಂಚಿಸದೆ ಪ್ರಯೋಜನದಿಂದ ಕೂಡಿರುವ, ಧರ್ಮವಿರುದ್ಧವಲ್ಲದ ಮಾತುಗಳನ್ನು ಹೇಳುತ್ತಾನೋ ಅಂತಹ ವಕ್ತೃವು ತನಗೂ, ಶ್ರೋತೃವಿಗೂ ಹಿತಚಿಂತಕನೆನಿಸುತ್ತಾನೆ. ಇದಕ್ಕೆ ವಿರುದ್ಧವಾದ ವಕ್ತೃವು ಹಿತಚಿಂತಕನಾಗುವುದಿಲ್ಲ.
ತದರ್ಥವದಿದಂ ವಾಕ್ಯಮುಪೇತಂ ವಾಕ್ಯಸಂಪದಾ |
ಅವಿಕ್ಷಿಪ್ತಮನಾ ರಾಜನ್ನೇಕಾಗ್ರಃ ಶ್ರೋತುಮರ್ಹಸಿ ॥95॥
ಆದ್ದರಿಂದ ರಾಜನೇ, ಅರ್ಥವತ್ತಾಗಿರುವ ವಾಕ್ಯಲಕ್ಷಣದಿಂದ ಪೂರ್ಣವಾದ ನನ್ನ ಮಾತುಗಳನ್ನು ಏಕಾಗ್ರಮನಸ್ಸಿನಿಂದ ಕೇಳಿಸಿಕೊ. ನನ್ನ ಮಾತನ್ನು ಕೇಳಿಸಿಕೊಳ್ಳಲು ನೀನು ಅರ್ಹನಾಗಿರುತ್ತಿ.
ಕಾಸಿ ಕಸ್ಯ ಕುತೋ ವೇತಿ ತ್ವಯಾಹಮಭಿಚೋದಿತಾ |
ತತೋತ್ತರಮಿದಂ ವಾಕ್ಯಂ ರಾಜನ್ನೇಕಮನಾಃ ಶೃಣು ॥96॥
ನೀನು ನನ್ನನ್ನು ನೋಡಿ ನೀನು ಯಾರು? ಯಾರ ಕಡೆಯವಳು? ಎಲ್ಲಿಂದ ಬಂದಿರುವೆ? ಎಂದು ಪ್ರಶ್ನೆ ಮಾಡಿರುವೆ. ಅದನ್ನು ನಿನಗೆ

ಹೇಳುತ್ತೇನೆ, ಏಕಾಗ್ರತೆಯಿಂದ ಕೇಳಿಸಿಕೊ.
ಯಥಾ ಜತು ಚ ಕಾಷ್ಠಂ ಚ ಪಾಂಸವಶ್ಚೋದಬಿಂದುಭಿಃ |
ಸುಶ್ಲಿಷ್ಟಾನಿ ತಥಾ ರಾಜನ್ ಪ್ರಾಣಿನಾಮಿಹ ಸಂಭವಃ ||97||
ಹೇಗೆ ಅರಗು, ಕಟ್ಟಿಗೆ, ಧೂಳಿಗೂ ನೀರಿಗೂ ಸಂಬಂಧಗಳು ಯದೃಚ್ಛೆಯಿಂದ ತಾತ್ಕಾಲಿಕವಾಗಿ ಒದಗಿಬರುತ್ತವೋ ಇದರಂತೆ ಪ್ರಾಣಿಗಳಿಗೆ ಆಗುವ ಪರಸ್ಪರ ಸಂಬಂಧವು ಯಾದೃಚ್ಛಿಕವೇ ಆಗಿದೆ.
ಶಬ್ದಃ ಸ್ಪರ್ಶೋ ರಸೋ ರೂಪಂ ಗಂಧಃ ಪಂಚೇಂದ್ರಿಯಾಣಿ ಚ |
ಪೃಥಗಾತ್ಮಾನಮಾತ್ಮಾನಂ ಸಂಶ್ಲಿಷ್ಟಾ ಜತುಕಾಷ್ಠವತ್ ||98||
ಶಬ್ದ, ಸ್ಪರ್ಶ, ರಸ, ರೂಪ, ಗಂಧ, ಪಂಚಜ್ಞಾನೇಂದ್ರಿಯಗಳು, ಜೀವನ ಪ್ರತ್ಯೇಕವಾಗಿರುವ ಸ್ವರೂಪವನ್ನು, ಜೀವನ ಜೊತೆ ಇವೆಲ್ಲವುಗಳು ಯಾದೃಚ್ಛಿಕವಾಗಿ ಸಂಬಂಧ ಹೊಂದಿರುತ್ತವೆ. ಜತು ಕಾಷ್ಠಗಳು ಯದೃಚ್ಛೆಯಿಂದ ಹೇಗೆ ಒಟ್ಟಾಗಿರುತ್ತವೋ ಅದರಂತೆ.
ನ ಚೈಷಾಂ ಚೋದನಾ ಕಾಚಿದಸ್ತೀತ್ಯೇಷ ವಿನಿಶ್ಚಯಃ |
ಏಕೈಕಸ್ಯೇಹ ವಿಜ್ಞಾನಂ ನಾಸ್ತ್ಯಾತ್ಮನಿ ತಥಾ ಪರೇ ||99||
ಇಂತಹ ಶರೀರದಲ್ಲಿ ಸಂಬಂಧ ಹೊಂದಿರುವ ವಸ್ತುಗಳ ವಿಷಯದಲ್ಲಿ ನೀನು ಯಾಕೆ ನನ್ನ ಶರೀರದಲ್ಲಿ ಸೇರಿರುವಿ ಎಂಬ ಪ್ರಶ್ನೆಯು ಹೇಗೆ ಅಪ್ರಾಮಾಣಿಕವಾದುದೋ, ಯಾರು ಈ ರೀತಿಯಾದ ಪ್ರಶ್ನೆಯನ್ನು ಮಾಡುವರೋ, ತನ್ನಲ್ಲಿ ಸೇರಿರುವ ಅನೇಕ ಪದಾರ್ಥಗಳ ಜ್ಞಾನವು ಆತ್ಮನಿಗೆ ಹೇಗೆ ಇರುವುದಿಲ್ಲವೋ ಅದರಂತೆ ಮತ್ತೊಬ್ಬರ ಸಂಬಂಧವೂ ಆತ್ಮನಲ್ಲಿ ಬಂದಾಗ ಏಕೆ ಎಂದು ಪ್ರಶ್ನಿಸಲು ಯೋಗ್ಯವಾಗುವುದಿಲ್ಲ.
ನ ವೇದ ಚಕ್ಷುಶ್ಚಕ್ಷುಷ್ಟ್ವಂ ಶ್ರೋತ್ರಂ ನಾತ್ಮನಿ ವರ್ತತೇ |
ತಥೈವ ವ್ಯಭಿಚಾರೇಣ ನ ವರ್ತಂತೇ ಪರಸ್ಪರಮ್ |
ಸಂಶ್ಲಿಷ್ಟಾ ನಾಭಿಜಾಯಂತೇ ಯಥಾಪ ಇಹ ಪಾಂಸವಃ ||100||
ಬಾಹ್ಯಾನನ್ಯಾನಪೇಕ್ಷಂತೇ ಗುಣಾಂಸ್ತಾನಪಿ ಮೇ ಶೃಣು |
ರೂಪಂ ಚಕ್ಷುಃ ಪ್ರಕಾಶಶ್ಚ ದರ್ಶನೇ ಹೇತವಸ್ತ್ರಯಃ |
ಯಥೈವಾತ್ರ ತಥಾನ್ಯೇಷು ಜ್ಞಾನಜ್ಞೇಯೇಷು ಹೇತವಃ ||101||
ನಮ್ಮಲ್ಲಿರುವ ಕಣ್ಣು ತನ್ನನ್ನು ನೋಡಿಕೊಳ್ಳಲಾಗದು. ಕಿವಿಯು ತನ್ನನ್ನು ಕೇಳಲಾಗದು. ನೀರು, ಧೂಳು ಒಂದಾಗಿ ಸೇರಿದ್ದರೂ ಒಂದು ಇನ್ನೊಂದನ್ನು ತಿಳಿಯಲಾಗದು. ಹೀಗೆ ಒಂದೊಂದಾಗಿ ಸೇರಿದ್ದರೂ ಒಂದು ಇನ್ನೊಂದನ್ನು ತಿಳಿಯಲಾರವು. ಇವು ಹೊರಗಿನ ವಿಷಯವನ್ನೇ ಅಪೇಕ್ಷಿಸುತ್ತವೆ. ರೂಪ-ನೇತ್ರ-ಪ್ರಕಾಶ ಈ ಮೂರು ಒಟ್ಟಾಗಿ ಇದ್ದರೂ ಅವುಗಳು ಪರಸ್ಪರ ತಮ್ಮನ್ನು ತಿಳಿಯಲಾರವು. ಕೆಲವೊಮ್ಮೆ ಕಿವಿಯು ಕೇಳುತ್ತಿರುವಾಗ ಕಣ್ಣು ನೋಡುವುದಿಲ್ಲ. ಕಣ್ಣು ನೋಡುತ್ತಿರುವಾಗ ಕಿವಿಯು ಕೇಳುವುದಿಲ್ಲ. ಆದರೆ ಕಣ್ಣು ನೋಡುತ್ತಿದೆ, ಕಿವಿಯು ಕೇಳುತ್ತಿದೆ ಎಂಬುದು ಪರಸ್ಪರ ಅವುಗಳಿಗೆ ತಿಳಿದಿರುವುದಿಲ್ಲ. ಇದರಂತೆ ಬೇರೆ ವಿಧವಾದ ಜ್ಞಾನ-ಜ್ಞೇಯಗಳ ವಿಷಯದಲ್ಲಿಯೂ ಕಾರಣಗಳಿವೆ.
ಜ್ಞಾನಜ್ಞೇಯಾಂತರೇ ತಸ್ಮಿನ್ ಮನೋ ನಾಮಾಪರೋ ಗುಣಃ |
ವಿಚಾರಯತಿ ಯೇನಾಯಂ ನಿಶ್ಚಯೇ ಸಾಧ್ವಸಾಧುನೀ ||102||
ಈ ಜ್ಞಾನ-ಜ್ಞೇಯಗಳ ನಡುವೆ ಮನಸ್ಸೆಂಬುದು ಬೇರೆಯಾದ ಗುಣವು. ಈ ಮನಸ್ಸು ಕಂಡ ವಿಷಯದ ಬಗ್ಗೆ ಇದು ಸಾಧುವೋ, ಅಸಾಧುವೋ ಎಂಬುದಾಗಿ ವಿಚಾರ ಮಾಡುತ್ತದೆ.
ದ್ವಾದಶಸ್ತ್ವಪರಸ್ತತ್ರ ಬುದ್ಧಿರ್ನಾಮ ಗುಣಃ ಸ್ಮೃತಃ |
ಯೇನ ಸಂಶಯಪೂರ್ವೇಷು ಬೋದ್ಧವ್ಯೇಷು ವ್ಯವಸ್ಯತಿ ||103||
ಈ ಹನ್ನೊಂದು ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಮನಸ್ಸಿನ ಜೊತೆಗೆ ಹನ್ನೆರಡನೆಯದ್ದಾದ ಬುದ್ಧಿ ಎಂಬ ಗುಣವೂ ಇದೆ. ಮನಸ್ಸಿನಲ್ಲಿ ಉಂಟಾದ ಸಂಶಯವನ್ನು ಪರಿಹರಿಸಿ ತಿಳಿಯಬೇಕಾದ ವಸ್ತುವಿನ ಬಗ್ಗೆ ನಿರ್ಣಯವನ್ನು ತಂದುಕೊಡುವುದೇ ಈ ಬುದ್ಧಿಯು.
ಅಥ ದ್ವಾದಶಕೇ ತಸ್ಮಿನ್ ಸತ್ತ್ವಂ ನಾಮಾಪರೋ ಗುಣಃ |
ಮಹಾಸತ್ತೋಽತ್ವಲ್ಪಸತ್ತೋಽತ್ವ ವಾ ಜಂತುರ್ಯೇನಾನುಮೀಯತೇ ||104||
ಈ ಹನ್ನೆರಡನೆಯದ್ದಾದ ಬುದ್ಧಿಯಲ್ಲಿಯೂ ಸತ್ತ್ವ ಎಂಬ ಮತ್ತೊಂದು ಗುಣವಿದೆ. ಅದರಿಂದಲೇ ಒಬ್ಬನು ಅಧಿಕ ಸತ್ತ್ವನೆಂದೂ, ಮತ್ತೊಬ್ಬನು ಅಲ್ಪಸತ್ತ್ವನೆಂದೂ ಅನುಮಾನದಿಂದ ತಿಳಿಯುತ್ತೇವೆ. ಆದ್ದರಿಂದ ಈ ಸತ್ತ್ವವೆಂಬುದು ಹದಿಮೂರನೆಯ ಗುಣವು.
ಅಹಂಕಾರೇತಿ ಚಾಪ್ಯನ್ಯೋ ಗುಣಸ್ತತ್ರ ಚತುರ್ದಶಃ |
ಮಮಾಯಮಿತಿ ಯೇನಾಯಂ ಮನ್ಯತೇ ನ ಚ ಮನ್ಯತೇ ||105||
ಸತ್ತ್ವಗುಣದಿಂದಲೂ ಮುಂದೆ ಹದಿನಾಲ್ಕನೆಯದ್ದಾದ ಅಹಂಕಾರವೆಂಬ ಗುಣವಿದೆ. ಈ ಗುಣದಿಂದಾಗಿಯೇ ಇವನು ನನ್ನವನು, ಇವನು ನನ್ನವನಲ್ಲ ಎಂಬ ಅಭಿಮಾನವು ಉಂಟಾಗುತ್ತದೆ.
ಅಥ ಪಂಚದಶೋ ರಾಜನ್ ಗುಣಸ್ತತ್ರಾಪರಃ ಸ್ಮೃತಃ |
ಪೃಥಕ್ಕಾಲಸಮೂಹಸ್ಯ ಸಾಮಗ್ರ್ಯಂ ತದಿಹೋಚ್ಯತೇ ||106||
ಬಳಿಕ ಹದಿನೈದನೆಯ ಮತ್ತೊಂದು ಗುಣವಿದೆ. ಆ ಗುಣವು ತಮ್ಮ ತಮ್ಮ ಉದಯಕಾಲದ ಗ್ರಹಾದಿಗಳ ಅನುಕೂಲ, ಪ್ರತಿಕೂಲಾದಿ ಕಾಲಕ್ಕೆ ಸಾಮಗ್ರಿ ಎನಿಸಿದ ಗುಣ.
ಗುಣಸ್ತ್ವೇಕೋಽಪರಸ್ತತ್ರ ಸಂಘಾತ ಇತಿ ಷೋಡಶಃ |
ಆಕೃತಿರ್ವ್ಯಕ್ತಿರಿತ್ಯೇತೌ ಗುಣೌ ಯಸ್ಮಿನ್ ಸಮಾಶ್ರಿತೌ ||107||

ಇದರ ಬಳಿಕ ಯೋನಿಸಂಘಾತ ಎಂಬ ಹದಿನಾರನೆಯ ಗುಣವು ಇದೆ. ಈ ಗುಣವು ಪಶುಪಕ್ಷ್ಯಾದಿ ಆಕಾರದ ಅಭಿವೃದ್ಧಿಗೆ ಕಾರಣವಾದ ಗುಣವು. ಆಕೃತಿ, ವ್ಯಕ್ತಿ ಎಂಬ ಗುಣಗಳಿಗೆ ಯೋನಿಸಂಘಾತ ಎಂಬ ಹದಿನಾರನೆಯ ಗುಣವೇ ಕಾರಣವಾಗಿದೆ. ಆಕೃತಿ, ವ್ಯಕ್ತಿಗಳು ಹದಿನೇಳು, ಹದಿನೆಂಟನೆಯ ಗುಣಗಳೆನಿಸಿವೆ.
ಸುಖದುಃಖೇ ಜರಾಮೃತ್ಯೂ ಲಾಭಾಲಾಭೌ ಪ್ರಿಯಾಪ್ರಿಯೇ |
ಇತಿ ಚೈಕೋನವಿಂಶೋಽಯಂ ದ್ವಂದ್ವಯೋಗ ಇತಿ ಸ್ಮೃತಃ ॥108॥
ಸುಖ-ದುಃಖಗಳು, ಜರಾ-ಮರಣಗಳು, ಲಾಭಾಲಾಭಗಳು, ಪ್ರಿಯಾಪ್ರಿಯಗಳು ಈ ದ್ವಂದ್ವಗಳು ಹತ್ತೊಂಬತ್ತನೆಯ ಗುಣವಾಗಿ ಎಣಿಸಲ್ಪಡುತ್ತವೆ.
ಊರ್ಧ್ವಮೇಕೋನವಿಂಶತ್ಯಾಃ ಕಾಲೋ ನಾಮಾಪರೋ ಗುಣಃ |
ಇತೀಮಂ ವಿದ್ಧಿ ವಿಂಶತ್ಯಾ ಭೂತಾನಾಂ ಪ್ರಭವಾಪ್ಯಯಮ್ ॥109॥
ಹತ್ತೊಂಬತ್ತರ ನಂತರ ಕಾಲವೆಂಬ ಬೇರೆ ಗುಣವು ಇಪ್ಪತ್ತನೆಯ ಗುಣ ಎನಿಸಿದೆ. ಭೂತಗಳ ಜನನ-ಮರಣಗಳೆಲ್ಲ ಈ ಇಪ್ಪತ್ತನೆಯ ಕಾಲವೆಂಬ ಗುಣದಿಂದಲೇ ಆಗುತ್ತವೆ ಎಂದು ತಿಳಿ.
ವಿಂಶಕಶ್ಚೈಷ ಸಂಘಾತೋ ಮಹಾಭೂತಾನಿ ಪಂಚ ಚ |
ಸದಸದ್ಭಾವಯೋಗೌ ಚ ಗುಣಾವನ್ಯೌ ಪ್ರಕಾಶಕೌ ॥110॥
ಇತ್ಯೇವಂ ವಿಂಶತಿಶ್ಚೈವ ಗುಣಾಃ ಸಪ್ತ ಚ ಯೇ ಸ್ಮೃತಾಃ |
ವಿಧಿಃ ಶುಕ್ರಂ ಬಲಂ ಚೇತಿ ತ್ರಯ ಏತೇ ಗುಣಾಃ ಪರೇ ॥111॥
ಏವಂ ವಿಂಶಶ್ಚ ದಶ ಚ ಕಲಾಃ ಸಂಖ್ಯಾನತಃ ಸ್ಮೃತಾಃ |
ಸಮಗ್ರಾ ಯತ್ರ ವರ್ತಂತೇ ತಚ್ಛರೀರಮಿತಿ ಸ್ಮೃತಮ್ ॥112॥
ಈ ಇಪ್ಪತ್ತು ಗುಣಗಳ ಸಮೂಹಗಳು, ಪಂಚಮಹಾಭೂತಗಳು, ಸದ್ಭಾವ, ಅಸದ್ಭಾವ ಎಂಬ ಸಂಬಂಧಗಳು ಬೇರೆ ಗುಣಗಳ ಪ್ರಕಾಶಕವಾದವುಗಳು. ಈ ರೀತಿಯಾಗಿ ಇಪ್ಪತ್ತು ಮತ್ತು ಏಳು ಗುಣಗಳು ಸೇರಿದರೆ ಇಪ್ಪತ್ತೇಳು ಗುಣಗಳಾಗುತ್ತವೆ. ಇದರ ನಂತರ ವಿಧಿ, ಶುಕ್ರ, ಬಲ ಎಂಬ ಮೂರು ಗುಣಗಳು ಇವೆ. ಹೀಗೆ ಇಪ್ಪತ್ತು ಹತ್ತು ಕಲೆಗಳು ಸೇರಿ ಸಂಖ್ಯೆಯಿಂದ ಮೂವತ್ತು ಗುಣಗಳು, ಮೂವತ್ತು ಕಲೆಗಳಿಂದ ಪೂರ್ಣವಾದುದೇ ಶರೀರವೆಂದು ಹೇಳಲ್ಪಟ್ಟಿದೆ.
ಅವ್ಯಕ್ತಂ ಪ್ರಕೃತಿಂ ತ್ವಾಸಾಂ ಕಲಾನಾಂ ಕಶ್ಚಿದಿಚ್ಛತಿ |
ವ್ಯಕ್ತಂ ಚಾಸಾಂ ತಥೈವಾನ್ಯಃ ಸ್ಥೂಲದರ್ಶೀ ಪ್ರಪಶ್ಯತಿ ॥113॥
ಈ ಕಲೆಗಳಿಗೆ ಅವ್ಯಕ್ತವೆನಿಸಿದ ಮೂಲಪ್ರಕೃತಿಯೇ ಕಾರಣವೆಂದು ಕೆಲವರು ಹೇಳುತ್ತಾರೆ. ಸ್ಥೂಲದೃಷ್ಟಿಯಿಂದ ನೋಡುವ ಕೆಲವರು ವ್ಯಕ್ತ ತತ್ತ್ವವೆನಿಸಿದ ಇಪ್ಪತ್ನಾಲ್ಕು ತತ್ತ್ವಗಳೇ ಈ ಕಲೆಗಳಿಗೆ ಕಾರಣವೆಂದು ಹೇಳುತ್ತಾರೆ.
ಅವ್ಯಕ್ತಂ ಯದಿ ವಾ ವ್ಯಕ್ತಂ ದ್ವಯಂ ವಾಥ ಚತುಷ್ಟಯಮ್ |
ಪ್ರಕೃತಿಂ ಸರ್ವಭೂತಾನಾಂ ಪಶ್ಯಂತ್ಯಧ್ಯಾತ್ಮಚಿಂತಕಾಃ ॥114॥
ಕೆಲವರು ಈ ಶರೀರಕ್ಕೆ ಅವ್ಯಕ್ತವೋ, ವ್ಯಕ್ತವೋ ಅಥವಾ ವ್ಯಕ್ತಾವ್ಯಕ್ತವೋ, ಜರಾಯುಜ, ಉದ್ಭಿಜ, ಅಂಡಜ, ಸ್ವೇದಜ ಎಂಬ ನಾಲ್ಕೋ, ಅವ್ಯಕ್ತವಾದ ಪ್ರಕೃತಿ ಸಮಸ್ತ ಭೂತಗಳ ಉತ್ಪತ್ತಿಗೆ ಕಾರಣವಾಗಿದೆ ಎಂದು ಅಧ್ಯಾತ್ಮಚಿಂತಕರು ಹೇಳುತ್ತಾರೆ.
ಸೇಯಂ ಪ್ರಕೃತಿರವ್ಯಕ್ತಾ ಕಲಾಭಿರ್ವ್ಯಕ್ತತಾಂ ಗತಾ |
ಅಹಂ ಚ ತ್ವಂ ಚ ರಾಜೇಂದ್ರ ಯೇ ಚಾಪ್ಯನ್ಯೇ ಶರೀರಿಣಃ ॥115॥
ಈ ಅವ್ಯಕ್ತವಾದ ಪ್ರಕೃತಿಯು ಮೂವತ್ತು ಕಲೆಗಳಿಂದ ಶರೀರರೂಪ ಅಭಿವ್ಯಕ್ತಿಯನ್ನು ಹೊಂದಿದೆ. ರಾಜನೇ, ನಾನು ನೀನು ಇತರ ಪ್ರಾಣಿಗಳು ಈ ಪ್ರಕೃತಿಯ ಕಾರ್ಯವೆಂದೇ ನೀನು ತಿಳಿದುಕೊ.
ಬಿಂದುನ್ಯಾಸಾದಯೋಽವಸ್ಥಾಃ ಶುಕ್ರಶೋಣಿತಸಂಭವಾಃ |
ಯಾಸಾಮೇವ ನಿಪಾತೇನ ಕಲಲಂ ನಾಮ ಜಾಯತೇ ॥116॥
ಗರ್ಭದಲ್ಲಿ ವೀರ್ಯವನ್ನು ಇಡುವುದೇ ಮೊದಲಾದ ಅವಸ್ಥೆಗಳೆಲ್ಲ ಶುಕ್ಲಶೋಣಿತ ಸಂಬಂಧದಿಂದಲೇ ಉಂಟಾದವುಗಳು. ಅವುಗಳ ಮಿಶ್ರಣದಿಂದ ತಾಯಿಯ ಗರ್ಭದಲ್ಲಿ ಕಲಲ ಎಂಬುದು ಉತ್ಪನ್ನವಾಗುತ್ತದೆ.
ಕಲಲಾದ್ಬುದ್ಬುದುತ್ಪತ್ತಿಃ ಪೇಶೀ ಚಾಪ್ಯರ್ಬುದೋದ್ಭವಾ |
ಪೇಶ್ಯಾಸ್ತ್ವಂಗಾಭಿನಿರ್ವೃತ್ತಿರ್ನಖರೋಮಾಣಿ ಚಾಂಗತಃ ॥117॥
ಈ ಕಲಲದಿಂದ ಬುದ್ಬುದವೂ, ಬುದ್ಬುದದಿಂದ ಪೇಶಿಯು, ಪೇಶಿಯಿಂದ ಅವಯವಗಳು, ಅವಯವಗಳಿಂದ ನಖ-ರೋಮಗಳು ಉಂಟಾಗುತ್ತವೆ.
ಸಂಪೂರ್ಣೇ ನವಮೇ ಮಾಸೇ ಜಂತೋರ್ಜಾತಸ್ಯ ಮೈಥಿಲ |
ಜಾಯತೇ ನಾಮರೂಪತ್ವಂ ಸ್ತ್ರೀ ಪುಮಾನ್ ವೇತಿ ಲಿಂಗತಃ ॥118॥
ಒಂಬತ್ತನೆಯ ತಿಂಗಳು ಪೂರ್ಣವಾದ ಬಳಿಕ ಹುಟ್ಟಿದ ಪ್ರಾಣಿಗಳ ಚಿಹ್ನೆಯನ್ನು ನೋಡಿ ಹೆಣ್ಣು-ಗಂಡೆಂದು ವ್ಯವಹಾರ ಮಾಡುತ್ತಾರೆ. ನಂತರ ಅವುಗಳಿಗೆ ನಾಮ, ರೂಪವು ಏರ್ಪಡುತ್ತದೆ.
ಜಾತಮಾತ್ರಂ ತು ತದ್ರೂಪಂ ದೃಷ್ಟ್ವಾ ತಾಮ್ರನಖಾಂಗುಲಿ |
ಕೌಮಾರರೂಪಮಾಪನ್ನಂ ರೂಪತೋ ನೋಪಲಭ್ಯತೇ ॥119॥
ಹುಟ್ಟಿದ ಕೂಡಲೇ ಆ ಉತ್ಪನ್ನ ಶಿಶುವಿನ ರೂಪವನ್ನು ಕಂಡು ಕೆಂಪಾಗಿರುವ ನಖಗಳು ಬೆರಳುಗಳು ಕೌಮಾರರೂಪವನ್ನು ಹೊಂದಿರುವ ಆ ಶಿಶುವನ್ನು ಅರ್ಥಾತ್ ಸ್ಥೂಲಶರೀರವನ್ನು ನೋಡುತ್ತಾರೆ ವಿನಾ ಆ ಜೀವನ ಯೋಗ್ಯತೆಯನ್ನು ಯಾರೂ ನೋಡರು.

ಕೌಮಾರಾದ್ಯೌವನಂ ಚಾಪಿ ಸ್ಥಾವಿರ್ಯಂ ಚಾಪಿ ಯೌವನಾತ್ |
ಅನೇನ ಕ್ರಮಯೋಗೇನ ಪೂರ್ವಂ ಪೂರ್ವಂ ನ ಲಭ್ಯತೇ ॥120॥
ಬಳಿಕ ಕೌಮಾರಾವಸ್ಥೆಯನ್ನು, ಯೌವನಾವಸ್ಥೆಯನ್ನು, ವಾರ್ಧಕ್ಯಾವಸ್ಥೆಯನ್ನು ಕ್ರಮವಾಗಿ ಕಾಣುತ್ತಾ ಹೋಗುತ್ತೇವೆ. ಈ ಕ್ರಮದಿಂದ ಮುಂದಿನ ಅವಸ್ಥೆಯನ್ನು ಹೊಂದುವಾಗ ಹಿಂದಿನ ಅವಸ್ಥೆಯು ಕಾಣಲ್ಪಡುವುದಿಲ್ಲ.
ಕಲಾನಾಂ ಪೃಥಗರ್ಥಾನಾಂ ಪ್ರತಿಭೇದಃ ಕ್ಷಣೇ ಕ್ಷಣೇ |
ವರ್ತತೇ ಸರ್ವಭೂತೇಷು ಸೌಕ್ಷ್ಮ್ಯಾತ್ತು ನ ವಿಭಾವ್ಯತೇ ॥121॥
ಬೇರೆ ಬೇರೆ ರೂಪಾಂತರಗಳಿಂದ ಕಲೆಗಳು ಕ್ಷಣಕ್ಷಣಕ್ಕೆ ವ್ಯತ್ಯಾಸವನ್ನು ಹೊಂದುತ್ತಿರುತ್ತವೆ. ಸಮಸ್ತ ಭೂತಗಳಲ್ಲಿ ಆಗುವ ಈ ವ್ಯತ್ಯಾಸವು ತುಂಬಾ ಸೂಕ್ಷ್ಮವಾಗಿರುವುದರಿಂದ ವಿಭಾಗಿಸಿ ತಿಳಿಯಲಾಗುವುದಿಲ್ಲ.
ನ ಚೈಷಾಮಪ್ಯಯೋ ರಾಜಲ್ಲಕ್ಷ್ಯತೇ ಪ್ರಭವೋ ನ ಚ |
ಅವಸ್ಥಾಯಾಮವಸ್ಥಾಯಾಂ ದೀಪಸ್ಯೇವಾರ್ಚಿಷೋ ಗತಿಃ ॥122॥
ಇವುಗಳ ಉತ್ಪತ್ತಿ-ವಿನಾಶಗಳೂ ತಿಳಿಯುವುದಿಲ್ಲ. ದೀಪ-ಜ್ವಾಲೆಯಲ್ಲಿ ಉಂಟಾಗುವ ಗತಿಯಂತೆ ಒಂದೊಂದು ಅವಸ್ಥೆಯೂ ತಿಳಿಯದಂತೆ ನಡೆದು ಹೋಗುತ್ತದೆ.
ತಸ್ಯಾಪ್ಯೇವಂಪ್ರಭಾವಸ್ಯ ಸದಶ್ವಸ್ಯೇವ ಧಾವತಃ |
ಅಜಸ್ರಂ ಸರ್ವಲೋಕಸ್ಯ ಕಃ ಕುತೋ ವಾ ನ ವಾ ಕುತಃ ॥123॥
ಕಸ್ಯೇದಂ ಕಸ್ಯ ವಾ ನೇದಂ ಕುತೋ ವೇದಂ ನ ವಾ ಕುತಃ |
ಸಂಬಂಧಃ ಕೋಽಸ್ತಿ ಭೂತಾನಾಂ ಸ್ವೈರಪ್ಯವಯವೈರಿಹ ॥124॥
ಸಮಸ್ತ ಜಗತ್ತು ಇದೇ ಸ್ವಭಾವದಿಂದ ಕೂಡಿದೆ. ಈ ಪ್ರಪಂಚವು ಉತ್ತಮ ಆರೋಗ್ಯವಂತ ಕುದುರೆಯ ವೇಗದಂತೆ ಯಾವಾಗಲೂ ಓಡುತ್ತಲೇ ಇದೆ. ಹೀಗಿರುವಾಗ ಯಾವನು ಎಲ್ಲಿಂದ ಬಂದಿದ್ದಾನೆ? ಎಲ್ಲಿಂದ ಬರಲಿಲ್ಲ? ಯಾರಿಗೆ ಸಂಬಂಧಿಸಿದೆ? ಯಾರಿಗೆ ಸಂಬಂಧವಿಲ್ಲ? ಇದು ಎಲ್ಲಿಂದ ಬಂದಿದೆ? ಎಲ್ಲಿಂದ ಬರಲಿಲ್ಲ? ಇದರಲ್ಲಿ ಪ್ರಾಣಿಗಳಿಗೆ ತಮ್ಮ ಅವಯವಗಳ ಜೊತೆಗೆ ಯಾವ ಸಂಬಂಧವಿದೆ? ಈ ರೀತಿಯಾದ ಪ್ರಶ್ನೆಗಳಿಗೆ ಅವಕಾಶವು ಇರುವುದಿಲ್ಲ.
ಯಥಾದಿತ್ಯಾನ್ಮಣೇಶ್ಚೈವ ವೀರುದ್ಭ್ಯಶ್ಚೈವ ಪಾವಕಃ |
ಭವತ್ಯೇವಂ ಸಮುದಯಾತ್ ಕಲಾನಾಮಪಿ ಜಂತವಃ ॥125॥
ಸೂರ್ಯನಿಂದಲೂ, ಸೂರ್ಯಕಾಂತಿಯ ಮಣಿಯಿಂದಲೂ, ಲತೆಗಳಿಂದಲೂ ಲತೆಗಳಿಂದುಂಟಾಗುವ ಬೆಂಕಿಯಿಂದಲೂ ಕಲೆಗಳ ಸಮುದಾಯದಿಂದ ಜಂತುಗಳ ಉತ್ಪತ್ತಿಯು ಆಗುತ್ತಿರುತ್ತದೆ.
ಆತ್ಮನ್ಯೇವಾತ್ಮನಾತ್ಮಾನಂ ಯಥಾ ತ್ವಮನುಪಶ್ಯಸಿ |
ಏವಮೇವಾತ್ಮನಾತ್ಮಾನಮನ್ಯಸ್ಮಿನ್ ಕಿಂ ನ ಪಶ್ಯಸಿ |
ಯದ್ಯಾತ್ಮನಿ ಪರಸ್ಮಿಂಶ್ಚ ಸಮತಾಮಧ್ಯವಸ್ಯಸಿ ॥126॥
ನಿನ್ನ ಮನಸ್ಸಿನಲ್ಲಿ ನಿನ್ನ ಅಂತರ್ಯಾಮಿಯಾದ ಪರಮಾತ್ಮನನ್ನು ಯಾವಾಗಲೂ ನೀನು ಹೇಗೆ ನೋಡುತ್ತಿಯೋ ಅದರಂತೆ ಬೇರೆ ಇರುವ ಆತ್ಮನನ್ನು ಏಕೆ ನೀನು ನೋಡುತ್ತಿಲ್ಲ? ನೀನು ನಿನ್ನಲ್ಲಿಯೂ ಪರರಲ್ಲಿಯೂ ಸಮಾನವಾದ ಬುದ್ಧಿ ಉಳ್ಳವನಾಗಿದ್ದರೆ ಸಮತ್ವವನ್ನೇ ನೋಡಬೇಕಲ್ಲವೆ?
ಅಥ ಮಾಂ ಕಾಸಿ ಕಸ್ಯೇತಿ ಕಿಮರ್ಥಮನುಪೃಚ್ಛಸಿ |
ಇದಂ ಮೇ ಸ್ಯಾದಿದಂ ನೇತಿ ದ್ವಂದ್ವೈರ್ಮುಕ್ತಸ್ಯ ಮೈಥಿಲ |
ಕಾಸಿ ಕಸ್ಯ ಕುತೋ ವೇತಿ ವಚನೇ ಕಿಂ ಪ್ರಯೋಜನಮ್ ॥127॥
ಹೀಗಿದ್ದರೂ ನೀನು ಯಾರು, ಎಲ್ಲಿಯವಳು, ಯಾರಿಗೆ ಸೇರಿದವಳು ಎಂದೇಕೆ ಪ್ರಶ್ನೆಯನ್ನು ಮಾಡುತ್ತಿ? ಇದು ನಮಗೆ ಬೇಕು, ಇದು ನಮಗೆ ಬೇಡ ಎಂಬ ಇಚ್ಛಾ- ದ್ವೇಷಗಳೆಂಬ ದ್ವಂದ್ವವಿಲ್ಲದವನಿಗೆ ಮತ್ತೊಬ್ಬರನ್ನು ನೋಡಿ ನೀನು ಯಾರು, ಎಲ್ಲಿಯವಳು ಎಂಬ ಪ್ರಶ್ನೆಗಳು ಹುಟ್ಟುವುದೇ ಇಲ್ಲ. ಈ ಪ್ರಶ್ನೆಗಳಿಂದ ಅವನಿಗೆ ಆಗುವ ಪ್ರಯೋಜನವಾದರೂ ಏನು?
ರಿಪೌ ಮಿತ್ರೇಽಥ ಮಧ್ಯಸ್ಥೇ ವಿಜಯೇ ಸಂಧಿವಿಗ್ರಹೇ |
ಕೃತವಾನ್ ಯೋ ಮಹೀಪಾಲ ಕಿಂ ತಸ್ಮಿನ್ಮುಕ್ತಲಕ್ಷಣಮ್ ॥128॥
ಶತ್ರುಗಳು, ಉದಾಸೀನರು, ಜಯಾಪಜಯಗಳು, ಸಂಧಿವಿಗ್ರಹಗಳು ಇವುಗಳಲ್ಲಿ ಅದಕ್ಕೆ ತಕ್ಕಂತೆ ಬೇರೆ ಬೇರೆ ಪ್ರವೃತ್ತಿ ಸ್ವಭಾವವುಳ್ಳ ರಾಜರಲ್ಲಿ ಮುಕ್ತರ ಲಕ್ಷಣ ಎಲ್ಲಿರಲು ಸಾಧ್ಯ?
ತ್ರಿವರ್ಗೇ ಸಪ್ತಧಾ ನ್ಯಸ್ತಂ ಯೋ ನ ವೇದೇಹ ಕರ್ಮಸು |
ಸಂಗವಾನ್ ಯಸ್ತ್ರಿವರ್ಗೇ ಚ ಕಿಂ ತಸ್ಮಿನ್ಮುಕ್ತಲಕ್ಷಣಮ್ ॥129॥
ಧರ್ಮ-ಅರ್ಥ-ಕಾಮಗಳೆಂಬ ತ್ರಿವರ್ಗಗಳಲ್ಲಿ ಅಗ್ನಿಷ್ಟೋಮಾದಿ ಏಳು ಕ್ರತುರೂಪವಾದ ಕರ್ಮಗಳು ಅಭಿವ್ಯಕ್ತವಾಗಿವೆ. ಯಾವನು ಏಳು ವಿಧವಾದ ಕರ್ಮಗಳನ್ನು ತಿಳಿಯದೆ ಅವುಗಳಲ್ಲಿ ಸಂಗವನ್ನು ಹೊಂದಿರುತ್ತಾನೋ ಅವನಲ್ಲಿ ಮುಕ್ತಿಯ ಲಕ್ಷಣವು ಎಲ್ಲಿರಲು ಸಾಧ್ಯ?
ಪ್ರಿಯೇ ಚೈವಾಪ್ರಿಯೇ ಚೈವ ದುರ್ಬಲೇ ಬಲವತ್ಯಪಿ |
ಯಸ್ಯ ನಾಸ್ತಿ ಸಮಂ ಚಕ್ಷುಃ ಕಿಂ ತಸ್ಮಿನ್ಮುಕ್ತಲಕ್ಷಣಮ್ ॥130॥
ಯಾವನ ದೃಷ್ಟಿಯಲ್ಲಿ ಪ್ರಿಯನಲ್ಲಿಯೂ ಅಪ್ರಿಯನಲ್ಲಿಯೂ, ಬಲಿಷ್ಠನಲ್ಲಿಯೂ ದುರ್ಬಲನಲ್ಲಿಯೂ ಸಮಾನಭಾವವು ಇರುವುದಿಲ್ಲವೋ ಅವನಲ್ಲಿ ಮುಕ್ತನ ಲಕ್ಷಣವು ಎಲ್ಲಿರಲು ಸಾಧ್ಯ?
ತದಮುಕ್ತಸ್ಯ ತೇ ಮೋಕ್ಷೇ ಯೋಭಿಮಾನೋ ಭವೇನ್ನೃಪ |

ಸುಹೃದ್ಭಿಃ ಸ ನಿವಾರ್ಯಸ್ತೇ ವಿಚಿತ್ರಸ್ಯೇವ ಭೇಷಜೈಃ ॥131॥
ಆದ್ದರಿಂದ ಯೋಗಬಲ ಇಲ್ಲದವನಿಗೆ ಮೋಕ್ಷದಲ್ಲಿ ಇಚ್ಛೆ ಹುಟ್ಟುವುದು ಅಪಥ್ಯವನ್ನಾಚರಿಸುವವನಿಗೆ ಔಷಧಿಯ ಸೇವನೆಯಂತೆ ನಿರರ್ಥಕವಾಗುತ್ತದೆ.
ತಾನಿ ತಾನ್ಯನುಸಂದಶ್ಯ ಸಂಗಸ್ಥಾನಾನ್ಯರಿಂದಮ |
ಆತ್ಮನ್ಯಾತ್ಮನಿ ಸಂಪಶ್ಯೇತ್ ಕಿಮನ್ಯನ್ಮುಕ್ತಲಕ್ಷಣಮ್ ॥132॥
ಇಮಾನ್ಯನ್ಯಾನಿ ಸೂಕ್ಷ್ಮಾಣಿ ಮೋಕ್ಷಮಾಶ್ರಿತ್ಯ ಕಾನಿಚಿತ್ |
ಚತುರಂಗಪ್ರವೃತ್ತಾನಿ ಸಂಗಸ್ಥಾನಾನಿ ಮೇ ಶೃಣು ॥133॥
ಸಂಗಸ್ಥಾನಗಳು ಯಾವುದ್ಯಾವುದೆಂದು ಅಲ್ಲಲ್ಲೇ ಚೆನ್ನಾಗಿ ಬುದ್ಧಿಪೂರ್ವಕವಾಗಿ ಅರ್ಥ ಮಾಡಿಕೊಂಡು ಹೃದಯದಲ್ಲಿ ಪರಮಾತ್ಮನನ್ನು ಕಾಣುವವನಿಗೆ ಇದಕ್ಕಿಂತ ಬೇರೆಯಾದ ಮುಕ್ತಲಕ್ಷಣವು ಯಾವುದಿದೆ? ಮೋಕ್ಷವನ್ನುದ್ದೇಶಿಸಿರುವ ನಿನಗೆ ಪಟ್ಟಣ, ಪಟ್ಟಣದೊಳಗಿರುವ ಮನೆ, ಮನೆಯೊಳಗಿರುವ ಹಾಸಿಗೆ, ಆ ಹಾಸಿಗೆಯಲ್ಲಿರುವ ಪತ್ನಿ, ಅದರ ಅರ್ಧಭಾಗಕ್ಕೆ ಮಾತ್ರ ಅಧಿಕಾರವನ್ನು ಹೊಂದಿರುವ ನೀನು ಈ ರೀತಿಯಾದ ಅನೇಕ ಸೂಕ್ಷ್ಮವಿಚಾರಗಳನ್ನು, ಸಂಗಸ್ಥಾನಗಳನ್ನು ತಿಳಿಸುತ್ತೇನೆ, ಕೇಳು.
ಯ ಇಮಾಂ ಪೃಥಿವೀಂ ಕೃತ್ಸ್ನಾಮೇಕಚ್ಛತ್ರಾಂ ಪ್ರಶಾಸ್ತಿ ಹ |
ಏಕಮೇವ ಸ ವೈ ರಾಜಾ ಪುರಮಧ್ಯಾವಸತ್ಯುತ ॥134॥
ನೀನು ಈ ಸಮಗ್ರವಾದ ಭೂಮಿಗೆ ಏಕಚ್ಛತ್ರಾಧಿಪತಿಯಾಗಿ ಆಡಳಿತವನ್ನು ನಡೆಸುತ್ತಿರುವಿ. ಆಳುವ ಚಕ್ರವರ್ತಿಯಾದ ನಿನಗೆ ವಾಸಿಸುವ ಪಟ್ಟಣವು ಒಂದೇ ಆಗಿದೆ. ಅರ್ಥಾತ್ ಸಮಗ್ರಭೂಮಂಡಲದಲ್ಲಿ ರಾಜನೆಂದು ಕರೆಸಿಕೊಂಡರೂ ನೀನು ವಾಸಮಾಡುವುದು ಒಂದು ಪಟ್ಟಣದಲ್ಲಿ ಮಾತ್ರ.
ತತ್ಪುರೇ ಚೈಕಮೇವಾಸ್ಯ ಗೃಹಂ ಯದಧಿತಿಷ್ಠತಿ |
ಗೃಹೇ ಶಯನಮಪ್ಯೇಕಂ ನಿಶಾಯಾಂ ಯತ್ರ ಲೀಯತೇ ॥135॥
ಆ ಪಟ್ಟಣದಲ್ಲಿಯೂ ನೀನು ವಾಸಮಾಡುವ ಸ್ಥಳವು ಒಂದೇ ಮನೆಯಾಗಿದೆ. ಆ ಮನೆಯಲ್ಲಿಯೂ ಮಲಗುವ ಕೋಣೆ ಒಂದೇ ಆಗಿದೆ. ಕತ್ತಲೆಯ ಆ ಕೋಣೆಯನ್ನು ಹೊಕ್ಕುವಿ.
ಶಯ್ಯಾರ್ಧಂ ತಸ್ಯ ಚಾಪ್ಯತ್ರ ಸ್ತ್ರೀಪೂರ್ವಮಧಿತಿಷ್ಠತಿ |
ತದನೇನ ಪ್ರಸಂಗೇನ ಫಲೇನೈವೇಹ ಯುಜ್ಯತೇ ॥136॥
ಆ ಮಲಗುವ ಕೋಣೆಯಲ್ಲಿಯೂ ಒಂದು ಹಾಸಿಗೆಯನ್ನು ಆಶ್ರಯಿಸುವಿ. ಆ ಹಾಸಿಗೆಯಲ್ಲಿಯೂ ಅರ್ಧಭಾಗವನ್ನು ಹೆಂಡತಿ ಆಕ್ರಮಿಸಿಕೊಂಡಿರುತ್ತಾಳೆ, ಉಳಿದ ಅರ್ಧಭಾಗಕ್ಕೆ ಮಾತ್ರ ನೀನು ಅಧಿಕಾರಿಯಾಗಿರುತ್ತಿ. ಈ ರೀತಿಯಾದ ಪ್ರಸಂಗದಿಂದ ಸ್ವಲ್ಪವೇ ಫಲವನ್ನು ನೀನು ಹೊಂದಿರುತ್ತಿ.
ಏವಮೇವೋಪಭೋಗೇಷು ಭೋಜನಾಚ್ಛಾದನೇಷು ಚ |
ಗುಣೇಷು ಪರಿಮೇಯೇಷು ನಿಗ್ರಹಾನುಗ್ರಹೌ ಪ್ರತಿ ॥137॥
ಇದರಂತೆ ರಾಜನು ಸಂಪತ್ತಿನಲ್ಲಿಯೂ, ವಸ್ತ್ರಭೋಜನಾದಿಗಳಲ್ಲಿಯೂ ತನಗಿರುವ ಪೂರ್ಣಬಾಧ್ಯತೆಯಿಂದ ಅನುಭವಿಸುವ ಫಲವು ಅತ್ಯಲ್ಪವಾದುದೇ. ಶಿಕ್ಷೆ, ರಕ್ಷೆಯ ವಿಷಯದಲ್ಲಿಯೂ ರಾಜನು ಯಾವಾಗಲೂ ತನ್ನ ವಶನಾಗಿರುವುದಿಲ್ಲ.
ಪರತಂತ್ರಃ ಸದಾ ರಾಜಾ ಸ್ವಲ್ಪೇ ಸೋಽಪಿ ಪ್ರಸಜ್ಜತೇ |
ಸಂಧಿವಿಗ್ರಹಯೋಗೇ ಚ ಕುತೋ ರಾಜ್ಞಃ ಸ್ವತಂತ್ರತಾ ॥138॥
ಯಾವಾಗಲೂ ಅಸ್ವತಂತ್ರನಾಗಿರುವ ರಾಜನು ಸ್ವಲ್ಪ ಫಲದಲ್ಲಿಯೇ ತುಂಬಾ ಸಂತೋಷವನ್ನು ಹೊಂದುತ್ತಾನೆ. ಸಂಧಿ-ವಿಗ್ರಹಗಳಲ್ಲಿ ರಾಜನಿಗೆ ಸ್ವಾತಂತ್ರ್ಯ ಇರುವುದಿಲ್ಲ.
ಸ್ತ್ರೀಷು ಕ್ರೀಡಾವಿಹಾರೇಷು ನಿತ್ಯಮಸ್ಯಾಸ್ವತಂತ್ರತಾ |
ಮಂತ್ರೇ ಚಾಮಾತ್ಯಸಮಿತೌ ಕುತ ಏವ ಸ್ವತಂತ್ರತಾ ॥139॥
ರಾಜನು ಸ್ತ್ರೀಯರ ವಿಷಯದಲ್ಲಿ, ಕ್ರೀಡಾವಿಹಾರಗಳಲ್ಲಿ ನಿತ್ಯವೂ ಅಸ್ವತಂತ್ರನಾಗಿರುತ್ತಾನೆ. ಮಂತ್ರಿಗಳೊಡನೆ ಮಂತ್ರಾಲೋಚನೆಯಲ್ಲಿಯೂ ಕೂಡ ಅವರಿಗೆ ಸ್ವಾತಂತ್ರ್ಯ ಇರುವುದಿಲ್ಲ.
ಯದಾ ತ್ವಾಜ್ಞಾಪಯತ್ಯನ್ಯಾಂಸ್ತದಾಸ್ಯೋಕ್ತಾ ಸ್ವತಂತ್ರತಾ |
ಅವಶಃ ಕಾರ್ಯತೇ ತತ್ರ ತಸ್ಮಿಂಸ್ತಸ್ಮಿನ್ ಗುಣೇ ಸ್ಥಿತಃ ॥140॥
ಮತ್ತೊಬ್ಬನಿಗೆ ಆಜ್ಞೆ ಮಾಡುವಾಗ ಮಾತ್ರ ಅವನು ತನಗೆ ಸ್ವಾತಂತ್ರ್ಯವಿದೆ ಎಂದು ತಿಳಿಯಬಹುದು. ಆದರೆ ಒಂದೊಂದು ಕ್ಷಣದಲ್ಲಿಯೂ ಅವನು ಆಯಾ ಗುಣಗಳಿಗೆ ಅಧೀನನಾಗಿ ತನ್ನ ವಶವಿಲ್ಲದೆ ಕಾರ್ಯವನ್ನು ನಡೆಸುತ್ತಿರುತ್ತಾನೆ.
ಸ್ವಪ್ತುಕಾಮೋ ನ ಲಭತೇ ಸ್ವಪ್ತುಂ ಕಾರ್ಯಾರ್ಥಿಭಿರ್ಜನೈಃ |
ಶಯನೇ ಚಾಪ್ಯನುಜ್ಞಾತಃ ಸುಪ್ತ ಉತ್ಥಾಪ್ಯತೇವಶಃ ॥141॥
ಅವನಿಗೆ ನಿದ್ರೆಯಿಂದ ಕಣ್ಣು ಸೆಳೆಯುತ್ತಿರುವಾಗಲೂ ರಾಜಕಾರ್ಯದ ನಿರ್ಬಂಧದಿಂದ ಕೆಲವೊಂದು ಬಾರಿ ಅವನಿಗೆ ನಿದ್ರೆ ಮಾಡಲೂ ಸ್ವಾತಂತ್ರ್ಯ ಇರುವುದಿಲ್ಲ. ಹಾಸಿಗೆಯ ಮೇಲೆ ಮಲಗಿದ್ದರೂ ಬಲಾತ್ಕಾರದಿಂದ ಎಚ್ಚರಗೊಳ್ಳುತ್ತಾನೆ. ಯಾವ ಕಾರ್ಯವನ್ನೂ ಮಾಡಲು ಅವನಿಗೆ ಸ್ವಾತಂತ್ರ್ಯವಿರುವುದಿಲ್ಲ.
ಸ್ನಾಹ್ಯಾಲಭ ಪಿಬ ಪ್ರಾಶ ಜುಹುಧ್ಯಗ್ನೀನ್ ಯಜೇತಿ ಚ |
ವದಸ್ವ ಶೃಣು ಚಾಪೀತಿ ವಿವಶಃ ಕಾರ್ಯತೇ ಪರೈಃ ॥142॥
ಆ ಪ್ರಸಂಗದಲ್ಲಿ ಒಬ್ಬ ದೂತನು ಬಂದು ಏಳು, ಸ್ನಾನ ಮಾಡು, ಭೋಜನಕ್ಕೆ ಬಾ, ಪಾನೀಯವನ್ನು ಸ್ವೀಕರಿಸು, ಹೋಮವನ್ನು ಮಾಡು, ಯಾಗ ಮಾಡು, ಇದನ್ನು ಕೇಳು, ಅದನ್ನು ಕೇಳು ಎಂದು ಇನ್ನೊಬ್ಬರ ವಶನಾಗಿಯೇ ರಾಜನಾದವನು ಕಾರ್ಯವನ್ನು

ಮಾಡುತ್ತಿರುತ್ತಾನೆ.
ಅಭಿಗಮ್ಯಾಭಿಗಮ್ಯೈನಂ ಯಾಚಂತೇ ಸತತಂ ನರಾಃ |
ನ ಚಾಪ್ಯುತ್ಸಹತೇ ದಾತುಂ ವಿತ್ತರಕ್ಷೀ ಮಹಾಜನಾತ್ ||143||
ಇದಲ್ಲದೆ ಆಗಾಗ ಜನರು ಬಂದು ಯಾಚಿಸುತ್ತಾರೆ. ಭಂಡಾರವನ್ನು ವೃದ್ಧಿಗೊಳಿಸಬೇಕೆಂಬ ಅಪೇಕ್ಷೆಯುಳ್ಳ ರಾಜನಿಗೆ ದಾನ ಮಾಡುವುದಕ್ಕೂ ಮನಸ್ಸು ಬರುವುದಿಲ್ಲ.
ದಾನೇ ಕೋಶಕ್ಷಯೋ ಹ್ಯಸ್ಯ ವೈರಂ ಚಾಪ್ಯಪ್ರಯಚ್ಛತಃ |
ಕ್ಷಣೇನಾಸ್ಯೋಪವರ್ತಂತೇ ದೋಷಾ ವೈರಾಗ್ಯಕಾರಕಾಃ ||144||
ಕೈಬಿಟ್ಟು ದಾನ ಮಾಡುತ್ತಿದ್ದರೆ ಬೊಕ್ಕಸವೆಲ್ಲ ಬರಿದಾಗುತ್ತದೆ. ಉದಾರಿಯಾದ ರಾಜನಿಗೆ ಅವನ ಕಡೆಯಲ್ಲಿಯೇ ಇರುವ ವ್ಯಕ್ತಿಗಳಿಂದ ವಿರೋಧವು ಒದಗಿಬರುತ್ತದೆ. ದಾನ ಮಾಡದಿದ್ದಲ್ಲಿ ಇನ್ನೊಂದು ಕ್ರಮದ ವೈರವು ಉತ್ಪತ್ತಿಯಾಗುತ್ತದೆ. ಒಂದೇ ಕ್ಷಣದಲ್ಲಿ ಅವನಿಗೆ ಬೇಸರವನ್ನುಂಟು ಮಾಡುವ ಎಷ್ಟೋ ದೋಷಗಳು ಬಂದು ಒದಗುತ್ತವೆ.
ಪ್ರಾಜ್ಞಾನ್ ಶೂರಾಂಸ್ತಥೈವಾಢ್ಯಾನೇಕಸ್ಥಾನೇऽಪಿ ಶಂಕತೇ |
ಭಯಮಪ್ಯಭಯೇ ರಾಜ್ಞೋ ಯೈಶ್ಚ ನಿತ್ಯಮುಪಾಸ್ಯತೇ ||145||
ತನ್ನ ಸಮೀಪದಲ್ಲೇ ಇದ್ದು ತನ್ನನ್ನು ಸೇವಿಸುತ್ತಿದ್ದರೂ ಪ್ರಾಜ್ಞರು, ಶೂರರು, ವೈದ್ಯರು ಇವರ ವಿಷಯದಲ್ಲಿ ರಾಜನಿಗೆ ಅನುಮಾನವು ಇದ್ದೇ ಇರುತ್ತದೆ. ಭಯ ಕಾರಣವಿಲ್ಲದಿದ್ದಾಲೂ ತನ್ನ ಸೇವಕರ ವಿಷಯದಲ್ಲಿ ಪ್ರತಿಕ್ಷಣವೂ ಭಯವನ್ನು ಅನುಭವಿಸುತ್ತಿರುತ್ತಾನೆ.
ಯದಾ ಚೈತೇ ಪ್ರದುಷ್ಯಂತಿ ರಾಜನ್ಯೇ ಕೀರ್ತಿತಾ ಮಯಾ |
ತದೈವಾಸ್ಯ ಭಯಂ ತೇಭ್ಯೋ ಜಾಯತೇ ಪಶ್ಯ ಯಾದೃಶಮ್ ||146||
ರಾಜನೇ, ಹೀಗಿರುವುದರಿಂದ ಹಿಂದೆ ಹೇಳಿದವರೆಲ್ಲರೂ ರಾಜರ ವಿಷಯದಲ್ಲಿ ಸಂಶಯಕ್ಕೆ ಆಸ್ಪದರಾದವರೇ. ಇವರಿಗೆ ಅವನಿಂದ ಎಷ್ಟು ಭೀತಿ ಇರುತ್ತದೆಂಬುದನ್ನು ಯೋಚಿಸಿ ನೋಡು.
ಸರ್ವಃ ಸ್ವೇ ಸ್ವೇ ಗೃಹೇ ರಾಜಾ ಸರ್ವಃ ಸ್ವೇ ಸ್ವೇ ಗೃಹೇ ಗೃಹೀ |
ನಿಗ್ರಹಾನುಗ್ರಹೌ ಕುರ್ವಂಸ್ತುಲ್ಯೋ ಜನಕ ರಾಜಭಿಃ ||147||
ಪ್ರತಿಯೊಬ್ಬನೂ ತನ್ನ ಮನೆಯಲ್ಲಿ ತಾನು ರಾಜನೇ. ತಮ್ಮ ತಮ್ಮ ಮನೆಯಲ್ಲಿ ಶಿಕ್ಷೆ ಮತ್ತು ರಕ್ಷೆಗಳನ್ನು ಮಾಡುವ ಸ್ವಾತಂತ್ರ್ಯವುಳ್ಳ ಪ್ರತಿಯೊಬ್ಬ ಗೃಹಸ್ಥನೂ ತನಗೆ ತಾನು ಅರಸನಿಗೆ ಸಮಾನನು.
ಪುತ್ರಾ ದಾರಾಸ್ತಥೈವಾತ್ಮಾ ಕೋಶೋ ಮಿತ್ರಾಣಿ ಸಂಚಯಃ |
ಪರೈಃ ಸಾಧಾರಣಾ ಹ್ಯೇತೇ ತೈಸ್ತೈರೇವಾಸ್ಯ ಹೇತುಭಿಃ ||148||
ಹೆಂಡತಿ, ಮಕ್ಕಳು, ಶರೀರ, ಬೊಕ್ಕಸ, ಮಿತ್ರರು, ಇತರ ಸಂಗ್ರಹಗಳು ಎಲ್ಲವೂ ಆಯಾ ಕಾರಣಗಳನ್ನನುಸರಿಸಿ ರಾಜನಿಗೂ ಇತರರಿಗೂ ಸಮಾನವೇ ಆಗಿವೆ.
ಹತೋ ದೇಶಃ ಪುರಂ ದಗ್ಧಂ ಪ್ರಧಾನಃ ಕುಂಜರೋ ಮೃತಃ |
ಲೋಕಸಾಧಾರಣೇಷ್ವೇಷು ಮಿಥ್ಯಾಜ್ಞಾನೇನ ತಪ್ಯತೇ ||149||
ದೇಶವು ಹಾಳಾಗಿಹೋಯಿತು, ಪಟ್ಟಣವು ಉರಿದು ಹೋಯಿತು, ಪಟ್ಟದಾನೆಯು ಸತ್ತುಹೋಯಿತು ಎಂಬ ವಿಚಾರಗಳು ಲೋಕಕ್ಕೆಲ್ಲ ಸರ್ವಸಾಮಾನ್ಯವಾಗಿದ್ದರೂ ರಾಜನು ಅವುಗಳೆಲ್ಲವನ್ನೂ ತನ್ನದು ಎಂದು ಪ್ರತ್ಯೇಕವಾದ ಮಮತೆಯಿಂದ ತನ್ನಲ್ಲಿ ತಾನು ತಿಳಿದುಕೊಂಡು ಮಿಥ್ಯಾಜ್ಞಾನದಿಂದ ಸಂಕಟಕ್ಕೆ ತುತ್ತಾಗುತ್ತಾನೆ.
ಅಮುಕ್ತೋ ಮಾನಸೈರ್ದುಃಖೈರಿಚ್ಛಾದ್ವೇಷಪ್ರಿಯೋದ್ಭವೈಃ |
ಶಿರೋರೋಗಾದಿಭೀ ರೋಗೈಸ್ತಥೈವ ವಿನಿಪಾತಿಭಿಃ ||150||
ಇಚ್ಛೆ, ದ್ವೇಷ, ಪ್ರೀತಿ ಮುಂತಾದವುಗಳಿಂದ ಉಂಟಾದ ಮನಸ್ಸಿನ ದುಃಖಗಳು ರಾಜನನ್ನೂ ಬಿಟ್ಟಿರುವುದಿಲ್ಲ. ತಲೆನೋವು ಮೊದಲಾದ ರೋಗಗಳಿಂದ ಅವನೂ ಪೀಡಿತನಾಗಿರುತ್ತಾನೆ.
ದ್ವಂದ್ವೈಸ್ತೈಸ್ತೈರುಪಹತಃ ಸರ್ವತಃ ಪರಿಶಂಕಿತಃ |
ಬಹುಪ್ರತ್ಯರ್ಥಿಕಂ ರಾಜ್ಯಮುಪಾಸ್ತೇ ಗಣಯನ್ನಿಶಾಃ ||151||
ದುಃಖಕಾರಣಗಳಾದ ದ್ವಂದ್ವಗಳಿಂದ ಸಂಕಟಕ್ಕೆ ತುತ್ತಾಗುತ್ತಾನೆ, ಪ್ರತಿಯೊಂದಕ್ಕೂ ಹೆದರುತ್ತಾನೆ. ಅನೇಕರಿಗೆ ಆಸೆ ಹುಟ್ಟಿಸುವ ರಾಜ್ಯದಲ್ಲಿ ಶತ್ರುಗಳು ಕಣ್ಣಿಟ್ಟು ಕಾದಿರುತ್ತಾರೆ. ಅವರ ಭಯದಿಂದ ನೆಮ್ಮದಿಯೇ ಇಲ್ಲದೆ ರಾತ್ರಿ-ಹಗಲುಗಳನ್ನು ಎಣಿಸುತ್ತಾ ಕಾಲವನ್ನು ಕಳೆಯುತ್ತಾನೆ.
ತದಲ್ಪಸುಖಮತ್ಯರ್ಥಂ ಬಹುದುಃಖಮಸಾರವತ್ |
ಕೋ ರಾಜ್ಯಮಭಿಪದ್ಯೇತ ಪ್ರಾಪ್ಯ ಚೋಪಶಮಂ ಲಭೇತ್ ||152||
ಮಹಾರಾಜನೇ, ರಾಜ್ಯವೆಂಬುದು ಅಲ್ಪಸುಖವುಳ್ಳದ್ದು, ಅಪಾರದುಃಖವುಳ್ಳದ್ದು, ಏನೂ ಸಾರವಿಲ್ಲದ್ದು. ಹುಲ್ಲಿನಲ್ಲಿ ಅಡಗಿದ ಬೆಂಕಿಯಂತೆ ಅಪಾಯಕ್ಕೆ ಕಾರಣವಾಗಿದೆ.
ಮಮೇದಮಿತಿ ಯಚ್ಚೇದಂ ಪುರಂ ರಾಷ್ಟ್ರಂ ಚ ಮನ್ಯಸೇ |
ಬಲಂ ಕೋಶಮಮಾತ್ಯಾಂಶ್ಚ ಕಸ್ಯೈತಾನಿ ನ ವಾ ನೃಪ ||153||
ರಾಜ್ಯ, ಕೋಶ, ನಗರ, ಸೈನ್ಯ, ಮಂತ್ರಿ ಪರಿವಾರಗಳೆಲ್ಲ ನೀನು ನಿನ್ನದ್ದೆಂದು ತಿಳಿದುಕೊಂಡಿರುವಿ. ಇವು ಒಂದೂ ಯಾರದ್ದೂ ಅಲ್ಲ.
ಮಿತ್ರಾಮಾತ್ಯಂ ಪುರಂ ರಾಷ್ಟ್ರಂ ದಂಡಃ ಕೋಶೋ ಮಹೀಪತಿಃ |
ಸಪ್ತಾಂಗಶ್ಚಕ್ರಸಂಘಾತೋ ರಾಜ್ಯಮಿತ್ಯುಚ್ಯತೇ ನೃಪ ||154||
ಮಿತ್ರ, ಅಮಾತ್ಯ, ಪುರ, ರಾಷ್ಟ್ರ, ದಂಡ, ಕೋಶ, ಮಹೀಪತಿ ಎಂಬ ಸಪ್ತಾಂಗಗಳ ಚಕ್ರಗಳ ಸಂಘಾತವೇ ರಾಜ್ಯ ಎಂದು

ಕರೆಸಿಕೊಳ್ಳುತ್ತದೆ.
ಸಪ್ತಾಂಗಸ್ಯಾಸ್ಯ ರಾಜ್ಯಸ್ಯ ತ್ರಿದಂಡಸ್ಯೇವ ತಿಷ್ಠತಃ |
ಅನ್ಯೋನ್ಯಗುಣಯುಕ್ತಸ್ಯ ಕಃ ಕೇನ ಗುಣತೋಧಿಕಃ ||155||
ಹೀಗೆ ಏಳು ಅಂಗಗಳಿಂದ ಕೂಡಿದ ಸಮುದಾಯವೇ ರಾಜ್ಯವೆನಿಸುತ್ತದೆ. ಈ ಸಪ್ತಾಂಗಗಳಿಂದ ಕೂಡಿದ ರಾಜ್ಯವು ಒಂದೇ ಹಗ್ಗದಿಂದ ಬಿಗಿಯಲ್ಪಟ್ಟ ತ್ರಿದಂಡದಂತೆ ಪರಸ್ಪರ ಆಶ್ರಯದಿಂದ ನೆಲೆನಿಂತಿದೆ. ಒಂದರ ಗುಣವನ್ನು ಒಂದು ಆಶ್ರಯಿಸಿದಾಗ ಯಾರಿಗಿಂತ ಯಾರು ಗುಣದಲ್ಲಿ ಹೆಚ್ಚೆಂದು ಹೇಳಲಾಗುತ್ತದೆ?
ತೇಷು ತೇಷು ಹಿ ಕಾಲೇಷು ತತ್ತದಂಗಂ ವಿಶಿಷ್ಯತೇ |
ಯೇನ ಯತ್ ಸಿದ್ಧ್ಯತೇ ಕಾರ್ಯಂ ತತ್ಪ್ರಧಾನ್ಯಾಯ ಕಲ್ಪತೇ ||156||
ಆಯಾ ಕಾಲದಲ್ಲಿ ಆಯಾ ಅಂಗವು ವಿಶಿಷ್ಟವಾಗಿ ತೋರುತ್ತದೆ. ಒಂದರಿಂದ ಒಂದು ಕಾರ್ಯ ಸಾಧನವಾದಾಗ ಅದಕ್ಕೆ ಪ್ರಾಧಾನ್ಯವು ದೊರೆಯುತ್ತದೆ.
ಸಪ್ತಾಂಗಶ್ಚಾಪಿ ಸಂಘಾತಸ್ತ್ರಯಶ್ಚಾನ್ಯೇ ನೃಪೋತ್ತಮ |
ಸಂಭೂಯ ದಶವರ್ಗೋಯಂ ಭುಂಕ್ತೇ ರಾಜ್ಯಂ ಹಿ ರಾಜವತ್ ||
ಸಪ್ತಾಂಗಗಳ ಈ ಸಮುದಾಯವು ಧರ್ಮ, ಅರ್ಥ, ಕಾಮಗಳೆಂಬ ಮೂರು ವರ್ಗವು ಸೇರಿಕೊಂಡು ದಶವರ್ಗವೇ ರಾಜ್ಯವನ್ನು ನಡೆಸುತ್ತಿರುತ್ತದೆ. ಕ್ಷತ್ರಿಯ ಧರ್ಮದಲ್ಲಿ ಉತ್ಸಾಹಿಯಾಗಿರುವ ರಾಜನು ಈ ಹತ್ತು ಭಾಗಗಳಿಂದ ರಾಜನೆಂದು ಸಂತೋಷಪಡುತ್ತಾನೆ.
ಯಶ್ಚ ರಾಜಾ ಮಹೋತ್ಸಾಹಃ ಕ್ಷತ್ರಧರ್ಮರತೋ ಭವೇತ್ |
ಸ ತುಷ್ಯೇದ್ದಶಭಾಗೇನ ತತಸ್ತ್ವನ್ಯೋ ದಶಾವರೈಃ ||158||
ಯಾವನು ರಾಜನಾಗಿದ್ದಾನೋ, ಉತ್ಸಾಹಧರ್ಮದಿಂದ ಕ್ಷತ್ರಧರ್ಮ ರತನಾದ ರಾಜನು ಈ ಹತ್ತು ಭಾಗಗಳಿಂದ ಸಂತೋಷವನ್ನು ಹೊಂದಿದರೆ ಉಳಿದ ವ್ಯಕ್ತಿಯು ಅದಕ್ಕಿಂತ ಕಡಿಮೆಯಾದ ಭಾಗಗಳಿಂದ ಸಂತೋಷವನ್ನು ಹೊಂದುತ್ತಾನೆ.
ನಾಸ್ತ್ಯಸಾಧಾರಣೋ ರಾಜಾ ನಾಸ್ತಿ ರಾಜ್ಯಮರಾಜಕಮ್ |
ರಾಜ್ಯೇಽಸತಿ ಕುತೋ ಧರ್ಮೋ ಧರ್ಮೇಽಸತಿ ಕುತಃ ಪರಮ್ ||
ಆದ್ದರಿಂದ ರಾಜನಿಗೂ, ಗೃಹಸ್ಥನಿಗೂ ಇರುವ ಭೇದವು ಇಷ್ಟೇ. ಆದ್ದರಿಂದ ರಾಜನು ಅಸಾಧಾರಣ ಎಂದು ಕರೆಸಿಕೊಳ್ಳಲು ಯಾವ ಯುಕ್ತಿಯೂ ಇರುವುದಿಲ್ಲ. ರಾಜನಿಲ್ಲದೆ ರಾಜ್ಯವು ಇರುವುದಿಲ್ಲ. ರಾಜ್ಯವಿಲ್ಲದ ಬಳಿಕ ಧರ್ಮಕ್ಕೆ ಸ್ಥಾನವೆಲ್ಲಿ? ಧರ್ಮವೇ ಇಲ್ಲದ ಬಳಿಕ ಪರಲೋಕವಾದರೂ ಹೇಗೆ ದೊರೆಯುತ್ತದೆ?
ಯೋಽಪ್ಯತ್ರ ಪರಮೋ ಧರ್ಮಃ ಪವಿತ್ರಂ ರಾಜರಾಜ್ಯಯೋಃ |
ಪೃಥಿವೀ ದಕ್ಷಿಣಾ ಯಸ್ಯ ಸೋಽಶ್ವಮೇಧೋ ನ ವಿದ್ಯತೇ ||160||
ಈ ಲೋಕದಲ್ಲಿ ರಾಜನನ್ನು, ರಾಜ್ಯವನ್ನು ಪವಿತ್ರಗೊಳಿಸಲು ಭೂಮಿಯನ್ನೇ ದಕ್ಷಿಣೆಯನ್ನಾಗಿ ನೀಡುವ ಅಶ್ವಮೇಧವೆಂಬ ಪರಮಧರ್ಮಕ್ಕೆ ಅವಕಾಶ ಇರುವುದಿಲ್ಲ.
ಸಾಹಮೇತಾನಿ ಕರ್ಮಾಣಿ ರಾಜ್ಯದುಃಖಾನಿ ಮೈಥಿಲ |
ಸಮರ್ಥಾ ಶತಶೋ ವಕ್ತುಮಥ ವಾಪಿ ಸಹಸ್ರಶಃ ||161||
ರಾಜನೇ, ಹೀಗೆ ಅರಸರಿಗೆ ದುಃಖಕ್ಕೆ ಕಾರಣವಾದ ಇಂತಹ ಕಾರ್ಯವನ್ನು ನೂರು ವರ್ಷಕ್ಕಿಂತಲೂ ಅಧಿಕವಾಗಿ ಗುಣಿಸಿ ನಾನು ಹೇಳಬಲ್ಲೆನು.
ಸ್ವದೇಹೇ ನಾಭಿಷಂಗೋ ಮೇ ಕುತಃ ಪರಪರಿಗ್ರಹೇ |
ನ ಮಾಮೇವಂವಿಧಾಂ ಮುಕ್ತಾಮೀದೃಶಂ ವಕ್ತುಮರ್ಹಸಿ ||162||
ನನ್ನ ಶರೀರದಲ್ಲಿಯೇ ನನಗೆ ಸಂಬಂಧವಿಲ್ಲ. ಅನ್ಯರ ಶರೀರದಲ್ಲಿ ಸಂಬಂಧವೆಂದರೇನು? ಹೀಗೆ ವಿರಕ್ತಳಾಗಿ ಯೋಗನಿರತಳಾದ ನನ್ನನ್ನು ಕುರಿತು ನೀನು ಅಂತಹ ಮಾತುಗಳನ್ನು ಏಕೆ ಆಡಿದೆ? ಹೀಗೆ ಆಡಲು ಹೇಗೆ ಅರ್ಹನಾಗುತ್ತಿ?
ನನು ನಾಮ ತ್ವಯಾ ಮೋಕ್ಷಃ ಕೃತ್ಸ್ನಃ ಪಂಚಶಿಖಾಚ್ಛ್ರುತಃ |
ಸೋಪಾಯಃ ಸೋಪನಿಷದಃ ಸೋಪಾಸಂಗಃ ಸನಿಶ್ಚಯಃ ||163||
ನೀನು ಪಂಚಶಿಖ ಮುನಿಯಿಂದ ಉಪಾಯಗಳಿಂದ ಕೂಡಿದ, ರಹಸ್ಯಗಳಿಂದ ಕೂಡಿದ, ಯಮ ಮೊದಲಾದ ಉಪಾಸಾಂಗಗಳ ಜೊತೆ ಕೂಡಿದ ಮೋಕ್ಷಧರ್ಮವನ್ನು ಪೂರ್ಣವಾಗಿ ಕೇಳಿದ್ದೇನೆ ಎಂದು ಹೇಳಿರುವಿ.
ತಸ್ಯ ತೇ ಮುಕ್ತಸಂಗಸ್ಯ ಪಾಶಾನಾಕ್ರಮ್ಯ ತಿಷ್ಠತಃ |
ಛತ್ರಾದಿಷು ವಿಶೇಷೇಷು ಕಥಂ ಸಂಗಃ ಪುನರ್ನೃಪ ||164||
ಹಾಗೆ ಪಂಚಶಿಖನಿಂದ ಕೇಳಿಸಿಕೊಂಡು ಸಂಗಗಳನ್ನೆಲ್ಲ ಬಿಟ್ಟು, ಪಾಶಗಳನ್ನು ಛೇದಿಸಿಕೊಂಡು ಜಯಿಸಿರುವ ನಿನಗೆ ರಾಜಕ್ಷೇತ್ರವೇ ಮೊದಲಾದ ಈ ವಿಶೇಷವಾದ ವಸ್ತುಗಳಲ್ಲಿ ಇನ್ನೂ ಅಭಿಮಾನವೇಕೆ ಹೋಗಲಿಲ್ಲ?
ಶ್ರುತಂ ತೇ ನ ಶ್ರುತಂ ಮನ್ಯೇ ಮಿಥ್ಯಾ ವಾಪಿ ಶ್ರುತಂ ಶ್ರುತಮ್ |
ಅಥ ವಾ ಶ್ರುತಸಂಕಾಶಂ ಶ್ರುತಮನ್ಯಚ್ಛ್ರುತಂ ತ್ವಯಾ ||165||
ಇದನ್ನೆಲ್ಲ ನೋಡಿದರೆ ನಿನ್ನ ಶಾಸ್ತ್ರ ಶ್ರವಣಗಳ್ಯಾವುವು ಶ್ರವಣಗಳೆಂದು ತೋರುತ್ತಿಲ್ಲ. ಅಥವಾ ನೀನು ಕೇವಲ ಡಂಭಕ್ಕಾಗಿ ಶ್ರವಣ ಮಾಡುತ್ತಿರಬೇಕು ಅಥವಾ ಶಾಸ್ತ್ರದಂತೆ ಭಾವಿಸುವ ಅನ್ಯಶಾಸ್ತ್ರಗಳನ್ನು, ತಪ್ಪಾದ ವಿಚಾರಗಳನ್ನು ನೀನು ಕೇಳಿರಬೇಕು.
ಅಥಾಪೀಮಾಸು ಸಂಜ್ಞಾಸು ಲೌಕಿಕೀಷು ಪ್ರತಿಷ್ಠಸಿ |
ಅಭಿಷಂಗಾವರೋಧಾಭ್ಯಾಂ ಬದ್ಧಸ್ತ್ವಂ ಪ್ರಾಕೃತೋ ಮಯಾ ||166||
ಸತ್ತ್ವೇನಾನುಪ್ರವೇಶೋ ಹಿ ಯೋಽಯಂ ತ್ವಯಿ ಕೃತೋ ಮಯಾ |

ಕಿಂ ತವಾಪಕೃತಂ ತತ್ರ ಯದಿ ಮುಕ್ತೋಽಸಿ ಸರ್ವತಃ ॥167॥
ನೀನು ಅವುಗಳನ್ನೆಲ್ಲ ಶ್ರವಣ ಮಾಡಿದ್ದರೂ ಸಾಧಾರಣ ಮನುಷ್ಯನಂತೆ ಇಚ್ಛಾ- ದ್ವೇಷಗಳಿಗೆ ತುತ್ತಾಗಿ, ಈ ಲೌಕಿಕ ವಿಷಯಗಳಲ್ಲಿಯೇ ಪ್ರಾಕೃತ ಮನುಷ್ಯನಂತೆ ವರ್ತಿಸುತ್ತಿರುವಿ. ನಾನು ನಿನ್ನ ಬುದ್ಧಿಯಲ್ಲಿ ಪ್ರವೇಶಿಸಿದೆನೆಂದು ನೀನು ಹೇಳಿರುತ್ತಿ. ಇದರಿಂದ ನಿನಗೆ ಆದ ಅಪಕಾರವಾದರೂ ಏನು? ನೀನು ವಿಷಯಸಂಗದಿಂದ ಮುಕ್ತನಾದ ಬಳಿಕ ನಿನಗೆ ಕೇಡಾಗಲು ಹೇಗೆ ಸಾಧ್ಯ?
ನಿಯಮೋ ಹ್ಯೇಷ ಧರ್ಮೇಷು ಯತೀನಾಂ ಶೂನ್ಯವಾಸಿತಾ |
ಶೂನ್ಯಮಾವಾಸಯಂತ್ಯಾ ಚ ಮಯಾ ಕಿಂ ಕಸ್ಯ ದೂಷಿತಮ್ ॥168॥
ಯತಿಗಳಾದವರಿಗೆ ಯಾರೂ ಇಲ್ಲದಿರುವ ಸ್ಥಳದಲ್ಲಿ ವಾಸಿಸುವುದೇ ಧರ್ಮವು ಎಂಬ ವಿಧಿಯಿದೆ. ಶೂನ್ಯವಾದ ನಿನ್ನ ಹೃದಯದಲ್ಲಿ ನಾನು ಇದ್ದುದರಿಂದ ಯಾರಿಗೆ ಹಾನಿಯಾಗಿದೆ? ಏಕೆ ನನ್ನನ್ನು ದೂಷಿಸಿದೆ?
ನ ಪಾಣಿಭ್ಯಾಂ ನ ಬಾಹುಭ್ಯಾಂ ಪಾದೋರೂಭ್ಯಾಂ ನ ಚಾನಘ |
ನ ಗಾತ್ರಾವಯವೈರನ್ಯೈಃ ಸ್ಪೃಶಾಮಿ ತ್ವಾ ನರಾಧಿಪ ॥169॥
ನಾನಾದರೂ ಕೈಗಳಿಂದಾಗಲಿ, ತೋಳುಗಳಿಂದಾಗಲಿ, ಪಾದಗಳಿಂದಾಗಲಿ, ತೊಡೆಗಳಿಂದಾಗಲಿ, ಇತರ ದೇಹದ ಅವಯವಗಳಿಂದಾಗಲಿ ನಿನ್ನನ್ನು ನಾನು ಸ್ಪರ್ಶಿಸಿದವಳಲ್ಲ.
ಕುಲೇ ಮಹತಿ ಜಾತೇನ ಹ್ರೀಮತಾ ದೀರ್ಘದರ್ಶಿನಾ |
ನೈತತ್ ಸದಸಿ ವಕ್ತವ್ಯಂ ಸದ್ವಾಸದ್ವಾ ಮಿಥಃ ಕೃತಮ್ ॥170॥
ಹೀಗಿರುವಾಗ ಉತ್ತಮ ಕುಲದಲ್ಲಿ ಹುಟ್ಟಿದವನು, ಅಕಾರ್ಯಗಳಿಗೆ ಲಜ್ಜೆ ಪಡುವವನು, ದೀರ್ಘ ಆಲೋಚನೆಗಳುಳ್ಳವನು ಆದ ಯಾವ ಮನುಷ್ಯನು ತಾನೇ ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ರಹಸ್ಯವಾಗಿ ನಡೆದ ವಿಚಾರವನ್ನು ಇಂತಹ ದೊಡ್ಡ ಸಭೆಯಲ್ಲಿ ಹೇಳಬಹುದು? ಒಳಗೆ ನಡೆದ ಈ ರಹಸ್ಯವನ್ನು ಹೊರಗೆ ಏಕೆ ಪ್ರಚಾರ ಮಾಡುತ್ತಿರುವಿ?
ಬ್ರಾಹ್ಮಣಾ ಗುರವಶ್ಚೇಮೇ ತಥಾಮಾತ್ಯಾ ಗುರೂತ್ತಮಾಃ |
ತ್ವಂ ಚಾಥ ಗುರುರಪ್ಯೇಷಾಮೇವಮನ್ಯೋನ್ಯಗೌರವಮ್ ॥171॥
ಇಲ್ಲಿರುವ ಬ್ರಾಹ್ಮಣರಲ್ಲಿ ನಿನಗೆ ಗುರುಗಳು, ಪರಮಗುರುಗಳು ಆದವರು ಇದ್ದಾರೆ. ಇನ್ನೊಂದು ರೀತಿಯಲ್ಲಿ ನೀನು ಶಿಕ್ಷೆ-ರಕ್ಷೆಗಳಿಂದ ಅವರಿಗೆ ಗುರುವೆನಿಸಿದ್ದಿ. ಹೀಗೆ ಒಬ್ಬರಿಗೆ ಒಬ್ಬರು ಒಂದು ವಿಧದಿಂದ ಗುರುತ್ವದ ಅತಿಶಯವನ್ನೇ ಹೊಂದಿರುತ್ತೀರಿ.
ತದೇವಮನುಸಂದೃಶ್ಯ ವಾಚ್ಯಾವಾಚ್ಯಂ ಪರೀಕ್ಷತಾ |
ಸ್ತ್ರೀಪುಂಸೋಃ ಸಮವಾಯೋಽಯಂ ತ್ವಯಾ ವಾಚ್ಯೋ ನ ಸಂಸದಿ ॥
ಇದನ್ನೆಲ್ಲ ತಿಳಿದಿರುವ ನೀನು ಇಂತಹ ಸ್ಥಳದಲ್ಲಿ ಈ ರೀತಿಯಾಗಿ ಮಾತನಾಡಬಹುದೆ? ಇದನ್ನು ಆಡಬಹುದು, ಇದನ್ನು ಆಡಬಾರದು ಎಂಬ ವಿವೇಚನ ಶಕ್ತಿ ಉಳ್ಳವನಾಗಿದ್ದು ಸ್ತ್ರೀ-ಪುರುಷರ ಸೇರುವಿಕೆಯನ್ನು ಕುರಿತು ಸಭೆಯ ಮುಂದೆ ಸ್ಪಷ್ಟವಾದ ಮಾತುಗಳಿಂದ ಹೀಗೆ ಹೇಳಬಹುದೆ? ಎಂದಿಗೂ ಹೇಳಬಾರದು.
ಯಥಾ ಪುಷ್ಕರಪರ್ಣಸ್ಥಂ ಜಲಂ ತತ್ ಪರ್ಣಸಂಸ್ಥಿತಮ್ |
ತಿಷ್ಠತ್ಯಸ್ಪೃಶತೀ ತದ್ವತ್ತ್ವಯಿ ವತ್ಸ್ಯಾಮಿ ಮೈಥಿಲ ॥173॥
ರಾಜನೇ, ನಾನು ನಿನ್ನಲ್ಲಿ ಸೇರಿಕೊಂಡಿರುವುದು ವಸ್ತುಸ್ಥಿತಿಯಾದರೂ ತಾವರೆ ಎಲೆಯಲ್ಲಿ ಸೇರಿದ ನೀರಿನಂತೆ ನಿನ್ನ ಸಂಬಂಧವಿಲ್ಲದಂತೆಯೇ ಸೇರಿದ್ದೇನೆ.
ಯದಿ ವಾಪ್ಯಸ್ಪೃಶಂತ್ಯಾ ಮೇ ಸ್ಪರ್ಶಂ ಜಾನಾಸಿ ಕಂಚನ |
ಜ್ಞಾನಂ ಕೃತಮಬೀಜಂ ತೇ ಕಥಂ ತೇನೇಹ ಭಿಕ್ಷುಣಾ ॥174॥
ಒಂದು ವೇಳೆ ನಿನ್ನನ್ನು ಸ್ಪರ್ಶಿಸದ ನನ್ನ ವಿಷಯದಲ್ಲಿ ಸ್ಪರ್ಶವನ್ನು ನೀನು ತಿಳಿದಿರುವೆಯಾದರೆ ನಿನಗೆ ಆ ಪಂಚಶಿಖನಿಂದ ಲಭಿಸಿದ ಜ್ಞಾನವು ನಿಷ್ಫಲವೇ ಆಗುತ್ತದೆ. ಅದು ಸಂಸಾರ ತಾರಕವು ಎಂದು ನಾನು ತಿಳಿಯುವುದಿಲ್ಲ.
ಸ ಗಾರ್ಹಸ್ಥ್ಯಾಚ್ಚ್ಯುತಶ್ಚ ತ್ವಂ ಮೋಕ್ಷಂ ನಾವಾಪ್ಯ ದುರ್ವಿದಮ್ |
ಉಭಯೋರಂತರಾಲೇ ಚ ವರ್ತಸೇ ಮೋಕ್ಷವಾತಿಕಃ ॥175॥
ಈಗ ನೀನು ಗೃಹಸ್ಥಾಶ್ರಮದಿಂದಲೂ ಭ್ರಷ್ಟನಾಗಿ, ದುರ್ಲಭವಾದ ಮೋಕ್ಷ ಧರ್ಮದಿಂದಲೂ ಭ್ರಷ್ಟನಾಗಿ, ಉಭಯಭ್ರಷ್ಟನಾಗಿ ಕಾಣುತ್ತಿರುವೆ. ಬಾಯಲ್ಲಿ ಮಾತ್ರ ಮೋಕ್ಷದ ವಿಚಾರವನ್ನು ಹೇಳುತ್ತಾ ತ್ರಿಶಂಕುವಿನ ಸ್ಥಿತಿಯಲ್ಲಿ ಅವೆರಡರ ನಡುವೆ ಓಡಾಡುತ್ತಿರುವಿ.
ನ ಹಿ ಮುಕ್ತಸ್ಯ ಮುಕ್ತೇನ ಜ್ಞಸ್ಯೈಕತ್ವಪೃಥಕ್ತ್ವಯೋಃ |
ಭಾವಾಭಾವಸಮಾಯೋಗೇ ಜಾಯತೇ ವರ್ಣಸಂಕರಃ ॥176॥
ಯಾವಾತನು ಒಬ್ಬ ಮುಕ್ತನಲ್ಲಿ ಮತ್ತೊಬ್ಬ ಮುಕ್ತನಲ್ಲಿ ವಿಚಾರದಿಂದ ಸಾಮ್ಯವನ್ನು, ಪರಸ್ಪರ ಭೇದವನ್ನು ಅರಿತಿರುತ್ತಾನೋ ಅವನಿಗೆ ವರ್ಣಸಂಕರದ ಬುದ್ಧಿಯು ಹೇಗೆ ಹುಟ್ಟಲು ಸಾಧ್ಯ? ವಿರುದ್ಧಗುಣವುಳ್ಳವರ ಸಮಾಯೋಗವಾದಲ್ಲಿ ಸಾಂಕರ್ಯವನ್ನು ಹೇಳಬಹುದು.
ವರ್ಣಾಶ್ರಮಪೃಥಕ್ತ್ವೇ ಚ ದೃಷ್ಟಾರ್ಥಸ್ಯಾಪೃಥಕೆತ್ವನಃ |
ನಾನ್ಯದನ್ಯದಿತಿ ಜ್ಞಾತ್ವಾ ನಾನ್ಯದನ್ಯತ್ ಪ್ರವರ್ತತೇ ॥177॥
ಯಾವನು ವರ್ಣಾಶ್ರಮಗಳು ಭಿನ್ನವಾಗಿದ್ದರೂ ಆ ವರ್ಣಾಶ್ರಮಗಳಿಂದ ಕಾಣಲ್ಪಡುವ ವಸ್ತುವಿನಲ್ಲಿ ಅಭೇದವನ್ನೇ ತಿಳಿಯುತ್ತಾನೋ, ನನ್ನ ಸ್ವರೂಪವು ಬೇರೆಯವರ ಸ್ವರೂಪದಂತೆ ಅಲ್ಲ ಎಂದು ಜೀವ-ಜೀವರಲ್ಲಿ ಭೇದವನ್ನೇ ತಿಳಿದಿರುತ್ತಾನೋ ಅವನು ಅಸನ್ಮಾರ್ಗದಲ್ಲಿ ಸಾಗಲು ಸಾಧ್ಯವಿಲ್ಲ.
ಪಾಣೌ ಕುಂಡಂ ತಥಾ ಕುಂಡೇ ಪಯಃ ಪಯಸಿ ಮಕ್ಷಿಕಾಃ |
ಆಶ್ರಿತಾಶ್ರಯಯೋಗೇನ ಪೃಥಕ್ತ್ವೇನಾಶ್ರಯಾ ವಯಮ್ ॥178॥

ಕೈಯಲ್ಲಿ ಪಾತ್ರೆಯು, ಪಾತ್ರೆಯಲ್ಲಿ ಹಾಲು, ಹಾಲಿನಲ್ಲಿ ಸೊಳ್ಳೆಗಳು ಪರಸ್ಪರ ಒಂದನ್ನೊಂದು ಆಶ್ರಯಿಸಿವೆ. ಆಧಾರಾಧೇಯ ಸಂಬಂಧದಿಂದ ಒಂದನ್ನೊಂದು ಆಶ್ರಯಿಸಿದ್ದರೂ ಅವು ಒಂದಕ್ಕೊಂದು ಬೇರೆಯಾಗಿಯೇ ಇರುತ್ತವೆ.
ನ ತು ಕುಂಡೇ ಪಯೋಭಾವಃ ಪಯಶ್ಚಾಪಿ ನ ಮಕ್ಷಿಕಾಃ |
ಸ್ವಯಮೇವಾಶ್ರಯಂತ್ಯೇತೇ ಭಾವಾ ನ ತು ಪರಾಶ್ರಯಮ್ ॥179॥
ಪಾತ್ರೆಯು ಎಂದಿಗೂ ಹಾಲಾಗುವುದಿಲ್ಲ, ಹಾಲು ಎಂದಿಗೂ ನೊಣವಾಗುವುದಿಲ್ಲ. ಆಯಾ ಪದಾರ್ಥಗಳ ತಮ್ಮ ತಮ್ಮ ಸ್ವಭಾವದಲ್ಲಿ ಇವೆಯೇ ಹೊರತು ಮತ್ತೊಂದರ ಸ್ವರೂಪವನ್ನು ಮತ್ತೊಂದು ಹೊಂದುವುದಿಲ್ಲ.
ಪೃಥಕ್ತ್ವಾದಾಶ್ರಮಾಣಾಂ ಚ ವರ್ಣಾನ್ಯತ್ವೇ ತಥೈವ ಚ |
ಪರಸ್ಪರಪೃಥಕ್ತ್ವಚ್ಚ ಕಥಂ ತೇ ವರ್ಣಸಂಕರಃ ॥180॥
ಇದರಂತೆ ಬೇರೆ ಬೇರೆ ಆಶ್ರಮಗಳು, ಬೇರೆ ಬೇರೆ ವರ್ಣಗಳು ಇವೆ. ಅವು ಒಂದಕ್ಕಿಂತ ಮತ್ತೊಂದು ಭಿನ್ನವಾಗಿಯೇ ಇದ್ದಾಗ ಅವುಗಳಿಗೆ ಸಾಂಕರ್ಯವು ಹೇಗೆ ಉಂಟಾಗಲು ಸಾಧ್ಯ?
ನಾಸ್ಮಿ ವರ್ಣೋತ್ತಮಾ ಜಾತ್ಯಾ ನ ವೈಶ್ಯಾ ನಾವರಾ ತಥಾ |
ತವ ರಾಜನ್ ಸವರ್ಣಾಸ್ಮಿ ಶುದ್ಧಯೋನಿರವಿಪ್ಲುತಾ ॥181॥
ನಾನು ಜಾತಿಯಲ್ಲಿ ಶ್ರೇಷ್ಠಳೆಂದು ನೀನು ಹೇಳಿರುವಿ, ಅದು ತಪ್ಪು. ನಾನು ಜಾತಿಯಲ್ಲಿ ನಿನಗೆ ಮೇಲಾದವಳೂ ಅಲ್ಲ, ನಿನಗಿಂತ ಕೀಳಾದವಳೂ ಅಲ್ಲ.
ಪ್ರಧಾನೋ ನಾಮ ರಾಜರ್ಷಿರ್ವ್ಯಕ್ತಂ ತೇ ಶ್ರೋತ್ರಮಾಗತಃ |
ಕುಲೇ ತಸ್ಯ ಸಮುತ್ಪನ್ನಾಂ ಸುಲಭಾಂ ನಾಮ ವಿದ್ಧಿ ಮಾಮ್ ॥182॥
ರಾಜನೇ, ಪ್ರಧಾನವೆಂಬ ರಾಜರ್ಷಿಯ ಹೆಸರು ನಿನ್ನ ಕಿವಿಗೆ ಬಿದ್ದಿರಬಹುದು. ನಾನು ಆ ರಾಜರ್ಷಿಯ ಕುಲದಲ್ಲಿ ಹುಟ್ಟಿದವಳು. ನನಗೆ ಸುಲಭಾ ಎಂದು ಹೆಸರು.
ದ್ರೋಣಶ್ಚ ಶತಶೃಂಗಶ್ಚ ಶಕ್ರದ್ವಾರಶ್ಚ ಪರ್ವತಃ |
ಮಮ ಸತ್ರೇಷು ಪೂರ್ವೇಷಾಂ ಚಿತಾ ಮಘವತಾ ಸಹ ॥183॥
ದ್ರೋಣಗಿರಿ, ಶತಶೃಂಗಗಿರಿ, ಶಕ್ರದ್ವಾರಗಳೆಂಬ ಬೆಟ್ಟಗಳೇ ನನ್ನ ವಂಶದವರಿಂದ ಯಾಗದಲ್ಲಿ ಯೂಪಸ್ತಂಭಗಳಾದವು. ನನ್ನ ಪೂರ್ವಿಕರು ಮಾಡಿದ ಯಜ್ಞದಲ್ಲಿ ಮಘವನ್ ಎಂಬ ಹೆಸರಿನ ಪರ್ವತದಿಂದ ಸಹಿತವಾದ ಈ ಎಲ್ಲ ಬೆಟ್ಟಗಳು ಯಜ್ಞಕ್ಕೆ ಯೂಪಸ್ತಂಭಗಳಂತೆ ಒಟ್ಟಾಗಿದ್ದವು.
ಸಾಹಂ ತಸ್ಮಿನ್ ಕುಲೇ ಜಾತಾ ಭರ್ತರ್ಯಸತಿ ಮದ್ವಿಧೇ |
ವಿನೀತಾ ಮೋಕ್ಷಧರ್ಮೇಷು ಚರಾಮ್ಯೇಕಾ ಮುನಿವ್ರತಮ್ ॥184॥
ಮಿಥಿಲಾಧಿಪತಿಯೇ, ಅಂತಹ ಕುಲದಲ್ಲಿ ಹುಟ್ಟಿದ ನಾನು ಬ್ರಾಹ್ಮಣವೇಷವನ್ನು ತ್ಯಜಿಸಿ ವೇಷಾಂತರದಿಂದ ಬಂದವಳಲ್ಲ. ನನಗೆ ತಕ್ಕ ಪತಿಯು ದೊರೆಯದ ಕಾರಣದಿಂದ ಮೋಕ್ಷಧರ್ಮಕ್ಕೆ ಮಾರುಹೋಗಿ ಏಕಾಕಿನಿಯಾಗಿ ಈ ಮುನಿವ್ರತವನ್ನು ಆಚರಿಸುತ್ತಿದ್ದೇನೆ.
ನಾಸ್ಮಿ ಸತ್ರಪ್ರತಿಚ್ಛನ್ನಾ ನ ಪರಸ್ವಾಭಿಮಾನಿನೀ |
ನ ಧರ್ಮಸಂಕರಕರೀ ಸ್ವಧರ್ಮೇಽಸ್ಮಿ ಧೃತವ್ರತಾ ॥185॥
ಮಿಥಿಲಾಧಿಪತಿಯೇ, ನಾನು ವೇಷಾಂತರವನ್ನು ಧರಿಸಿದವಳಲ್ಲ. ಪರರ ಧನದಲ್ಲಿ ಆಸೆಯುಳ್ಳವಳೂ ಅಲ್ಲ. ಧರ್ಮಸಾಂಕರ್ಯ ಮಾಡಿದವಳೂ ಅಲ್ಲ. ಸ್ವಧರ್ಮದಲ್ಲಿ ದೃಢವಾದ ವ್ರತವನ್ನು ಹೊಂದಿರುತ್ತೇನೆ.
ನಾಸ್ಥಿರಾ ಸ್ವಪ್ರತಿಜ್ಞಾಯಾಂ ನಾಸಮೀಕ್ಷ್ಯಪ್ರವಾದಿನೀ |
ನಾಸಮೀಕ್ಷ್ಯಾಗತಾ ಚಾಹಂ ತ್ವತ್ಸಕಾಶಂ ಜನಾಧಿಪ ॥186॥
ನನ್ನ ಪ್ರತಿಮೆಯು ಅಸ್ಥಿರವಾದುದಲ್ಲ. ನಾನು ವಿಮರ್ಶೆಯಿಲ್ಲದೆ ಮಾತನಾಡುವುದೂ ಇಲ್ಲ. ಈಗ ನಾನು ಇಲ್ಲಿಗೆ ಬಂದಿರುವುದು ವಿವೇಚನೆ ಇಲ್ಲದೆ ನಡೆಸಿದ ಕಾರ್ಯವೂ ಅಲ್ಲ.
ಮೋಕ್ಷೇ ತೇ ಭಾವಿತಾಂ ಬುದ್ಧಿಂ ಶ್ರುತ್ವಾಹಂ ಕುಶಲೈಷಿಣೀ |
ತವ ಮೋಕ್ಷಸ್ಯ ಚಾಪ್ಯಸ್ಯ ಜಿಜ್ಞಾಸಾರ್ಥಮಿಹಾಗತಾ ॥187॥
ನಿನ್ನ ಬುದ್ಧಿಯು ಮೋಕ್ಷದಲ್ಲಿ ನೆಲೆಸಿದೆ ಎಂದು ಕೇಳಿಸಿಕೊಂಡು ನಿನ್ನ ಕ್ಷೇಮವನ್ನು ಉದ್ದೇಶಿಸಿಕೊಂಡೇ ನಾನು ನಿನ್ನನ್ನು ಪರೀಕ್ಷಿಸಬೇಕು ಎಂಬ ಜಿಜ್ಞಾಸೆಯಿಂದ ನಾನು ಇಲ್ಲಿಗೆ ಬಂದಿರುತ್ತೇನೆ.
ನ ವರ್ಗಸ್ಥಾ ಬ್ರವೀಮ್ಯೇತತ್ ಸ್ವಪಕ್ಷಪರಪಕ್ಷಯೋಃ |
ಮುಕ್ತೋ ನ ಮುಚ್ಯತೇ ಯಶ್ಚ ಶಾಂತೋ ಯಶ್ಚ ನ ಶಾಮ್ಯತಿ ॥188॥
ನನ್ನ ಪಕ್ಷ ಇನ್ನೊಬ್ಬರ ಪಕ್ಷ ಎಂಬ ಭೇದವನ್ನು ಅವಲಂಬಿಸಿ ನಾನು ಎಂದಿಗೂ ಮಾತನ್ನಾಡುವುದಿಲ್ಲ. ಸಂಗಗಳನ್ನು ತೊರೆದು ಶಾಂತಿಯನ್ನು ಸ್ಥಿರವಾಗಿ ಧರಿಸಿದವನೇ ಮುಕ್ತನಾಗುತ್ತಾನೆ.
ಯಥಾ ಶೂನ್ಯೇ ಪುರಾಗಾರೇ ಭಿಕ್ಷುರೇಕಾಂ ನಿಶಾಂ ವಸೇತ್ |
ತಥಾ ಹಿ ತ್ವಚ್ಛರೀರೇಸ್ಮಿನ್ನಿಮಾಂ ವತ್ಸ್ಯಾಮಿ ಶರ್ವರೀಮ್ ॥189॥
ಯಾವ ರೀತಿಯಾಗಿ ಸಂನ್ಯಾಸಿಯಾದವನು ಪಟ್ಟಣದಲ್ಲಿ, ಯಾರೂ ಇಲ್ಲದ ಗೃಹದಲ್ಲಿ ಒಂದೇ ರಾತ್ರಿಯಲ್ಲಿ ವಾಸಮಾಡಿದ್ದು ಮರುದಿವಸ ಬಿಟ್ಟು ತೆರಳುವಂತೆ ನಾನು ಜ್ಞಾನಶೂನ್ಯವಾದ ನಿನ್ನ ಶರೀರದಲ್ಲಿ ಒಂದು ರಾತ್ರಿ ನೆಲೆಸಿರುತ್ತೇನೆ.
ಸಾಹಮಾಸನದಾನೇನ ವಾಗಾತಿಥ್ಯೇನ ಚಾರ್ಚಿತಾ |
ಸುಪ್ತಾ ಸುಶರಣಾ ಪ್ರೀತಾ ಶ್ವೋ ಗಮಿಷ್ಯಾಮಿ ಮೈಥಿಲ ॥190॥
ಗೌರವದಿಂದಲೂ, ಪ್ರೀತಿಯಾದ ಮಾತುಗಳಿಂದಲೂ, ಆತಿಥ್ಯದಿಂದಲೂ ನಿನ್ನಿಂದ ಸತ್ಕೃತಳಾದ ನಾನು ನಾಳೆಯೇ ಹೊರಟು

ಹೋಗುತ್ತೇನೆ. ಹೀಗೆ ಸುಲಭೆಯು ಹೇಳಿದಳು.
ಇತ್ಯೇತಾನಿ ಸ ವಾಕ್ಯಾನಿ ಹೇತುಮಂತ್ಯರ್ಥವಂತಿ ಚ |
ಶ್ರುತ್ವಾ ನಾಧಿಜಗೌ ರಾಜಾ ಕಿಂಚಿದನ್ಯದತಃ ಪರಮ್ ॥191॥
ಧರ್ಮರಾಜನೇ, ಹೀಗೆ ಸುಲಭೆಯುಅರ್ಥವತ್ತಾಗಿಯೂ ಯುಕ್ತಿಯುಕ್ತವಾಗಿಯೂ ಮಾತುಗಳನ್ನು ಕೇಳಿದ ಜನಕನು ಮುಂದೆ ಮಾತನಾಡಲಾಗದೆ ಮೌನವಹಿಸಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಿಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ಮೂರನೆಯ ಅಧ್ಯಾಯ
ವೇದವ್ಯಾಸರಿಂದ ಶುಕಮುನಿಗಳಿಗೆ ವೈರಾಗ್ಯದ ಉಪದೇಶ
ಯುಧಿಷ್ಠಿರಃ
ಕಥಂ ನಿರ್ವೇದಮಾಪನ್ನಃ ಶುಕೋ ವೈಯಾಸಕಿಃ ಪುರಾ |
ಏತದಿಚ್ಛಾಮಿ ಕೌರವ್ಯ ಶ್ರೋತುಂ ಕೌತೂಹಲಂ ಹಿ ಮೇ ॥1॥
ಯುಧಿಷ್ಠಿರ ಪಿತಾಮಹನೇ, ಶುಕಮುನಿಯು ಪರಮವಿರಕ್ತನೆಂದು ಕೇಳಿದ್ದೇವೆ. ವ್ಯಾಸಸುತನಾದ ಶುಕಮುನಿಗೆ ಅಂತಹ ವಿರಕ್ತಿಯು ಹೇಗೆ ಬಂದಿತು? ಇದನ್ನು ಕೇಳಬೇಕೆಂಬ ಕುತೂಹಲವು ನನಗೆ ಉಂಟಾಗಿದೆ.
ಭೀಷ್ಮಃ
ಪ್ರಾಕೃತೇನ ಸುವೃತ್ತೇನ ಚರಂತಮಕುತೋಭಯಮ್ |
ಅಧ್ಯಾಪ್ಯ ಕೃತ್ಸ್ನಂ ಸ್ವಾಧ್ಯಾಯಮನ್ವಶಾದ್ವೈ ಪಿತಾ ಸುತಮ್ ॥2॥
ಭೀಷ್ಮ ಯುಧಿಷ್ಠಿರನೇ, ಕೇಳು. ವೇದವ್ಯಾಸದೇವನು ಹಿಂದೆ ಯಾವುದೇ ಭಯವಿಲ್ಲದೆ ತನ್ನ ಮಗನು ಪ್ರಾಕೃತ ಜನರಂತೆ ಉತ್ತಮ ಸತ್ಕರ್ಮಗಳಲ್ಲಿ ವರ್ತಿಸುತ್ತಿದ್ದನ್ನು ಕಂಡು, ಸಮಸ್ತ ವೇದಗಳನ್ನು ಅಧ್ಯಯನ ಮಾಡಿಸಿ, ವೇದಾಧ್ಯಯನವು ಮುಗಿದ ಬಳಿಕ ಹೀಗೆ ಅವನಿಗೆ ವಿಧಿಯನ್ನು ಬೋಧಿಸಿದನು.
ಧರ್ಮಂ ಪುತ್ರ ನಿಷೇವಸ್ವ ಸುತೀಕ್ಷ್ಣೌ ಹಿ ಹಿಮಾತಪೌ |
ಕ್ಷುತ್ಪಿಪಾಸೇ ಚ ವಾಯುಂ ಚ ಜಯ ನಿತ್ಯಂ ಜಿತೇಂದ್ರಿಯಃ ॥3॥
ಮಗನೇ, ನೀನು ಜಿತೇಂದ್ರಿಯನಾಗಿದ್ದು ಧರ್ಮವನ್ನೇ ಅವಲಂಬಿಸು. ತೀವ್ರವಾದ ಹಿಮ-ಬಿಸಿಲುಗಳಲ್ಲಿ, ಹಸಿವು-ಬಾಯಾರಿಕೆಗಳಲ್ಲಿ ಕಂಗಾಲಾಗದೆ ಜಿತೇಂದ್ರಿಯನಾಗಿದ್ದು ಪ್ರಾಣಜಯವನ್ನು ಸಾಧಿಸಿಕೊ.
ಸತ್ಯಮಾರ್ಜವಮಕ್ರೋಧಮನಸೂಯಾಂ ದಮಂ ತಪಃ |
ಅಹಿಂಸಾಂ ಚಾನೃಶಂಸ್ಯಂ ಚ ವಿಧಿವತ್ ಪರಿಪಾಲಯ ॥4॥
ಸತ್ಯ, ಋಜುಸ್ವಭಾವ, ಕ್ರೋಧವಿಲ್ಲದಿರುವಿಕೆ, ಅಸೂಯೆ ಇಲ್ಲದಿರುವಿಕೆ, ದಮ, ತಪಸ್ಸು, ಅಹಿಂಸಾ, ಆನೃಶಂಸ್ಯ (ದಯೆ)- ಈ ಎಲ್ಲ ಗುಣಗಳನ್ನು ಚೆನ್ನಾಗಿ ವಿಧಿವತ್ತಾಗಿ ಪರಿಪಾಲಿಸು.
ಸತ್ಯೇ ತಿಷ್ಠ ರತೋ ಧರ್ಮೇ ಹಿತ್ವಾ ಸರ್ವಮನಾರ್ಜವಮ್ |
ದೇವತಾತಿಥಿಶೇಷೇಣ ಯಾತ್ರಾಂ ಪ್ರಾಣಸ್ಯ ಸಂಶ್ರಯ ॥5॥
ಸತ್ಯದಲ್ಲಿ ನಿಷ್ಠನಾಗಿರು, ಧರ್ಮದಲ್ಲಿ ನಿರತನಾಗು, ಋಜುವಲ್ಲದ ಮಾರ್ಗವನ್ನು ತ್ಯಜಿಸು. ದೇವತೆಗಳಿಗೂ ಅತಿಥಿಗಳಿಗೂ ನೀಡಿ ಉಳಿದ ಪದಾರ್ಥದಲ್ಲಿ ಪ್ರಾಣಧಾರಣೆಯನ್ನು ಮಾಡಿಕೊ.
ಫೇನಪಾತ್ರೋಪಮೇ ದೇಹೇ ಜೀವೇ ಶಕುನಿವತ್ ಸ್ಥಿತೇ |
ಅನಿತ್ಯೇ ಪ್ರಿಯಸಂವಾಸೇ ಕಥಂ ಸ್ವಪಿಷಿ ಪುತ್ರಕ ॥6॥
ಮಗನೇ, ಈ ದೇಹವು ನೀರಿನ ಮೇಲಿನ ಗುಳ್ಳೆಗೆ ಸಮಾನವಾದುದು. ಜೀವವು ಗೂಡಿನಲ್ಲಿರುವ ಪಕ್ಷಿಯಂತೆ ಈ ದೇಹದಲ್ಲಿ ಸೇರಿಕೊಂಡಿದೆ. ಈ ದೇಹಕ್ಕೂ, ಜೀವನಿಗೂ ಯಾವ ಸಂಬಂಧವೂ ಇರುವುದಿಲ್ಲ. ಅನಿತ್ಯವಾದ, ಪ್ರಿಯದಂತೆ ತೋರುವ ಈ ದೇಹದಲ್ಲಿ ಹೇಗೆ ತಾನೆ ಸುಖವನ್ನು ಹೊಂದಲು ಸಾಧ್ಯವಾಗುತ್ತದೆ?
ಅಪ್ರಮತ್ತೇಷು ಜಾಗ್ರತ್ಸು ನಿತ್ಯಯುಕ್ತೇಷು ಶತ್ರುಷು |
ಅಂತರಂ ಲಿಪ್ಸಮಾನೇಷು ಬಾಲಸ್ತ್ವಂ ನಾವಬುಧ್ಯಸೇ ॥7॥
ಶತ್ರುಗಳೆನಿಸಿದ ಅರಿಷಡ್ವರ್ಗಗಳು ನಿನ್ನ ಮೇಲೆ ಎರಗಲು ಯಾವಾಗಲೂ ಎಚ್ಚರದಿಂದ ಸಮಯವನ್ನು ಪ್ರತೀಕ್ಷಿಸುತ್ತಿರುವಾಗ ಬಾಲಕನಾದ ನೀನು ಅದನ್ನು ಅರಿಯುತ್ತಿಲ್ಲ.
ಗಣ್ಯಮಾನೇಷು ವರ್ಷೇಷು ಕ್ಷೀಯಮಾಣೇ ತಥಾಯುಷಿ |
ಜೀವಿತೇ ಶಿಷ್ಯಮಾಣೇ ಚ ಕಿಮುತ್ಥಾಯ ನ ಧಾವಸಿ ॥8॥
ದಿನವೂ ಒಂದಾದ ಮೇಲೆ ಒಂದು ಕಳೆದುಹೋಗುತ್ತಿರುವಂತೆ ವರ್ಷಗಳನ್ನು ಲೆಕ್ಕ ಹಾಕುತ್ತಾ ಕ್ರಮವಾಗಿ ಆಯುಷ್ಯವು ಕ್ಷಯ ಹೊಂದುತ್ತಿರುತ್ತದೆ. ಲೋಕದಲ್ಲಿ ನಿನ್ನ ಜೀವಿತ ಕಾಲವು ಇಷ್ಟೇ ಎಂದು ನಿಯತವಾಗಿ ನಿಶ್ಚಿತವಾಗುತ್ತಿರಲು ಉಳಿದ ಜೀವಿತಾವಧಿಯಲ್ಲಿ ಜಾಗೃತವಾಗಿ ನಿಂತು ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳಲು ಮಾಡಬೇಕಾದ ಕರ್ತವ್ಯಗಳಿಗೆ ಏಕೆ ಸಾಗುತ್ತಿಲ್ಲ? (ಗುರುಗಳ ಹತ್ತಿರ ಹೋಗಿ ಪರಲೋಕದ ವಿಚಾರವನ್ನು ಏಕೆ ಕೇಳುತ್ತಿಲ್ಲ ಎಂದು ಭಾವ).
ಐಹಲೌಕಿಕಮೀಹಂತೇ ಮಾಂಸಶೋಣಿತವರ್ಧನಮ್ |

ಪಾರಲೌಕಿಕಕಾರ್ಯೇಷು ಪ್ರಸುಪ್ತಾ ಭೃಶನಾಸ್ತಿಕಾಃ ||9||
ಲೋಕದಲ್ಲಿ ಈ ಲೋಕಕ್ಕೆ ಸಂಬಂಧವಾದ ಸುಖಗಳನ್ನೇ ಸಾಮಾನ್ಯ ಜೀವರು ಬಯಸುತ್ತಾರೆ. ರಕ್ತ-ಮಾಂಸಗಳನ್ನು ಬೆಳೆಸಲು ಬೇಕಾದ ವಸ್ತುಗಳನ್ನೇ ಬಯಸುತ್ತಾರೆ. ಪರಲೋಕ ಸಾಧಕವಾದ ಕಾರ್ಯಗಳಲ್ಲಿ ಮನಸ್ಸನ್ನಿಡದೆ ನಿದ್ರೆ ಹೊಂದಿರುತ್ತಾರೆ. ಈ ವ್ಯಕ್ತಿಗಳೆಲ್ಲ ಪರಲೋಕದ ವಿಷಯದಲ್ಲಿ ವಿಶ್ವಾಸ ಇಲ್ಲದ ಪರಮ ನಾಸ್ತಿಕರು.
ಧರ್ಮಾಯ ಯೇಽಭ್ಯಸೂಯಂತಿ ಬುದ್ಧಿಮೋಹಾನ್ವಿತಾ ನರಾಃ |
ಅಪಥಾ ಗಚ್ಛತಾಂ ತೇಷಾಮನುಯಾತಾಪಿ ಪೀಡ್ಯತೇ ||10||
ಬುದ್ಧಿಮೋಹಕ್ಕೆ ತುತ್ತಾಗಿರುವ ಮಾನವರು ಧರ್ಮದ ವಿಷಯದಲ್ಲಿ ಅಸೂಯೆಯನ್ನು ಹೊಂದಿರುತ್ತಾರೆ. ತಪ್ಪಾದ ಮಾರ್ಗದಲ್ಲಿ ಹೋಗುವಂತಹ ಅಂತಹ ಜನರನ್ನು ಯಾರು ಹಿಂಬಾಲಿಸುತ್ತಾರೋ ಅವರೂ ಅವರಂತೆ ಕಷ್ಟಕ್ಕೆ ತುತ್ತಾಗುತ್ತಾರೆ.
ಯೇ ತು ತುಷ್ಟಾಃ ಸುನಿಯತಾಃ ಸತ್ಯಾಗಮಪರಾಯಣಾಃ |
ಧರ್ಮ್ಯಂ ಪಂಥಾನಮಾರೂಢಾಸ್ತಾನುಪಾಸ್ಸ್ವ ಚ ಪೃಚ್ಛ ಚ ||11||
ಯಾರು ನಿತ್ಯವೂ ತುಷ್ಟರಾಗಿ, ಶಾಸ್ತ್ರಪರಾಯಣರಾಗಿ, ನಿರ್ದುಷ್ಟವಾದ ವೇದಗಳಲ್ಲೇ ಆಸಕ್ತರಾಗಿರುತ್ತಾರೋ, ಧರ್ಮಮಾರ್ಗವನ್ನೇ ಅವಲಂಬಿಸಿರುತ್ತಾರೋ ಅಂತಹ ಸಜ್ಜನರ ಮಾರ್ಗವನ್ನೇ ನೀನು ಅವಲಂಬಿಸಿ ಅವರಿಂದ ಧರ್ಮಗಳನ್ನು ಕೇಳಿ ತಿಳಿ.
ಉಪಧಾರ್ಯ ಮತಂ ತೇಷಾಂ ವೃದ್ಧಾನಾಂ ಧರ್ಮದರ್ಶಿನಾಮ್ |
ನಿಯಚ್ಛ ಪರಯಾ ಬುದ್ಧ್ಯಾ ಚಿತ್ತಮುತ್ಪಥಗಾಮಿ ವೈ ||12||
ಅಂತಹ ವಿದ್ವಾಂಸರ ಮತವನ್ನು ತಿಳಿದು ಜ್ಞಾನವೃದ್ಧರಾದ, ಧರ್ಮದರ್ಶಿಗಳಾದ ಸಜ್ಜನರ ಮಾರ್ಗವನ್ನು ಅನುಸರಿಸಿ, ಉತ್ತಮವಾದ ಬುದ್ಧಿಯನ್ನು ಹೊಂದಿ, ತಪ್ಪಾದ ಮಾರ್ಗದಲ್ಲಿ ಸಾಗುವ ನಿನ್ನ ಮನಸ್ಸನ್ನು ನಿಗ್ರಹಿಸಿಕೊ.
ಅದ್ಯಕಾಲಿಕಯಾ ಬುದ್ಧ್ಯಾ ದೂರೇ ಶ್ವ ಇತಿ ನಿರ್ಭಯಾಃ |
ಸರ್ವಭಕ್ಷಾ ನ ಪಶ್ಯಂತಿ ಕರ್ಮಭೂಮಿಂ ವಿಚೇತಸಃ ||13||
ತಾತ್ಕಾಲಿಕವಾದ ಸುಖಗಳಿಗಾಗಿ ಬಯಸುವ ಬುದ್ಧಿಯಿಂದ ದೂರದೃಷ್ಟಿ ಇಲ್ಲದೆ, ನಾಳೆಯೇ ಬರುವುದನ್ನು ಬಹುದೂರದಲ್ಲಿದೆ ಎಂದು ತಿಳಿದು ನಿರ್ಭೀತಿಯಿಂದ ಸಾಗುತ್ತಾ, ಭಕ್ಷ್ಯಾಭಕ್ಷ್ಯಗಳ ವಿಚಾರವಿಲ್ಲದೆ ಎಲ್ಲವನ್ನೂ ಸ್ವೀಕರಿಸುತ್ತಾ, ಈ ಭೂಮಿಯನ್ನು ಕೇವಲ ಕರ್ಮಭೂಮಿ ಎಂದು ಬುದ್ಧಿಗೆಟ್ಟವರು ತಿಳಿದಿರುತ್ತಾರೆ.
ಧರ್ಮನಿಃಶ್ರೇಣಿಮಾಸ್ಥಾಯ ಕಿಂಚಿತ್ ಕಿಂಚಿತ್ ಸಮಾರುಹ |
ಕೋಶಕಾರವದಾತ್ಮಾನಂ ವೇಷ್ಟಯನ್ನಾವಬುಧ್ಯಸೇ ||14||
ಮಗನೇ, ನೀನು ಧರ್ಮವೆಂಬ ನಿಚ್ಚಣಿಕೆಯನ್ನು ಅವಲಂಬಿಸಿ ಸ್ವಲ್ಪ-ಸ್ವಲ್ಪವಾಗಿ ಅದನ್ನು ಹೊಂದುವ ಪ್ರಯತ್ನವನ್ನು ಮಾಡು. ರೇಷ್ಮೆಹುಳುವು ತನ್ನನ್ನು ತಾನೇ ನೂಲಿನಿಂದ ಬಂಧಿಸಿಕೊಳ್ಳುವಂತೆ ಪ್ರಕೃತಿಬಂಧನದಿಂದ ಬದ್ಧನಾದ ನೀನು ನಿನ್ನ ಸ್ಥಿತಿಯನ್ನು ಅರಿಯದವನಾಗಿರುವಿ.
ನಾಸ್ತಿಕಂ ಭಿನ್ನಮರ್ಯಾದಂ ಕೂಲಪಾತಮಿವಾಸ್ಥಿರಮ್ |
ವಾಮತಃ ಕುರು ವಿಸ್ರಬ್ಧೋ ನರಂ ವೇಣುಮಿವೋದ್ಧತಮ್ ||15||
ಯಾವುದೇ ವಿಧಿ-ನಿಷೇಧಗಳನ್ನು ಅವಲಂಬಿಸದ ಧರ್ಮವು ದಡವಿಲ್ಲದ ನದಿಯ ಪ್ರವಾಹವು ತೀರಗಳಲ್ಲಿರುವ ಮನೆಗಳನ್ನೆಲ್ಲ ಉರುಳಿಸುವಂತೆ ಧರ್ಮ ಮರ್ಯಾದೆಯನ್ನು ಮೀರಿ, ಆಶಾಪಾಶಗಳಿಂದ ಕೂಡಿರುವ ನಾಸ್ತಿಕಮತವು ಅನ್ಯಾಯವನ್ನೇ ಎಸಗುತ್ತದೆ. ಇದರಿಂದ ಜಾಗೃತನಾಗಿ ಬಿದಿರಿನಿಂದ ಹೊಡೆಯಲ್ಪಟ್ಟ ನರನು ಎಚ್ಚರಗೊಳ್ಳುವಂತೆ ಧರ್ಮಬುದ್ಧಿಯಲ್ಲಿ ಜಾಗೃತನಾಗು. ನಾಸ್ತಿಕ್ಯವನ್ನು ದೂರೀಕರಿಸು.
ಕಾಮಂ ಕ್ರೋಧಂ ಚ ಮೃತ್ಯುಂ ಚ ಪಂಚೇಂದ್ರಿಯಜಲಾಂ ನದೀಮ್ |
ನಾವಂ ಧೃತಿಮಯೀಂ ಕೃತ್ವಾ ಜನ್ಮದುರ್ಗಾಣಿ ಸಂತರ ||16||
ಕಾಮ-ಕ್ರೋಧಗಳೆಂಬ ಮೃತ್ಯುವನ್ನು, ಪಂಚೇಂದ್ರಿಯಗಳೆಂಬ ಮಹತ್ತಾದ ನದಿಯ ಜಲವನ್ನು, ಧೈರ್ಯವೆಂಬ ದೋಣಿಯನ್ನು ಅವಲಂಬಿಸಿಕೊಂಡು, ಜನ್ಮವೆಂಬ ಕಠಿಣವಾದ ಮಾರ್ಗವನ್ನು ದಾಟು.
ಮೃತ್ಯುನಾಭ್ಯಾಹತೇ ಲೋಕೇ ಜರಯಾ ಪರಿಪೀಡಿತೇ |
ಅಮೋಘಾಸು ಪತಂತೀಷು ಧರ್ಮಯಾನೇನ ಸಂತರ ||17||
ಲೋಕವೆಲ್ಲವೂ ಮೃತ್ಯುವಿನಿಂದ, ಜರೆಯಿಂದ ಪೀಡಿತವಾಗಿದೆ. ವ್ಯರ್ಥವಾದ ಇಂತಹ ಅಲೆಗಳು ಅಪ್ಪಳಿಸುತ್ತಿರುವಾಗ ಧರ್ಮವೆಂಬ ದೋಣಿಯನ್ನಾಶ್ರಯಿಸಿ ಈ ಸಂಸಾರವನ್ನು ದಾಟು.
ತಿಷ್ಠಂತಂ ಚ ಶಯಾನಂ ಚ ಮೃತ್ಯುರನ್ವೇಷತೇ ಯದಾ |
ನಿರ್ವೃತ್ತಿಂ ಲಭಸೇ ತಸ್ಮಾದಕಸ್ಮಾನ್ಮೃತ್ಯುನಾಶಿತಃ ||18||
ಮಗನೇ, ಮೃತ್ಯುವೆಂಬುದು ನೀನು ಮಲಗಿದ್ದರೂ ಕುಳಿತಿದ್ದರೂ ನಿಂತಿದ್ದರೂ ಯಾವಾಗಲೂ ಹಿಂಬಾಲಿಸುತ್ತಲೇ ಇರುತ್ತದೆ. ಆದ್ದರಿಂದ ಇಂತಹ ಮೃತ್ಯುವಿನ ಪರಿಹಾರವನ್ನು ನೀನು ಯಾಕೆ ಅಪೇಕ್ಷಿಸುತ್ತಿಲ್ಲ?
ಸಂಚಿನ್ವಾನಕಮೇವೈನಂ ಕಾಮಾನಾಮವಿತೃಪ್ತಕಮ್ |
ವೃಕೀವೋರಣಮಾಸಾದ್ಯ ಮೃತ್ಯುರಾದಾಯ ಗಚ್ಛತಿ ||19||
ಮನುಷ್ಯನು ಕಾಮಗಳಲ್ಲಿ ತೃಪ್ತಿಯನ್ನು ಹೊಂದದೆ ಪುನಃ ಪುನಃ ಅದನ್ನೇ ಬಯಸುತ್ತಾನೆ. ಹೀಗೆ ಕಾಮನೆಗಳನ್ನು ಅನ್ವೇಷಣೆ ಮಾಡುತ್ತಾ ಹೋಗುತ್ತಿರುವಾಗ ಆಹಾರಕ್ಕಾಗಿ ಅಲೆಯುವ ಆಡುಗಳನ್ನು ತೋಳಗಳು ಕಬಳಿಸಿಕೊಂಡು ಹೋಗುವಂತೆ ಮೃತ್ಯುವು ಒಮ್ಮಿಂದೊಮ್ಮೆಲೆ ಮಾನವರನ್ನು ಕಬಳಿಸುತ್ತದೆ.
ಕ್ರಮಶಃ ಸಂಚಿತಶಿಖೋ ಧರ್ಮಬುದ್ಧಿಮಯೋ ಮಹಾನ್ |

ಅಂಧಕಾರೇ ಪ್ರವೇಷ್ಟವ್ಯೇ ದೀಪೋ ಯತ್ನೇನ ಧಾರ್ಯತಾಮ್ ॥20॥
ಸಂಸಾರವೆಂಬ ಅಂಧಕಾರದಲ್ಲಿ ಪ್ರವೇಶಿಸಬೇಕಾದಾಗ ದೀಪವನ್ನು ಪ್ರಯತ್ನ ಪೂರ್ವಕವಾಗಿ ಧರಿಸಲೇಬೇಕು. ಧರ್ಮಬುದ್ಧಿಯೇ ಅಂತಹ ದೀಪವೆನಿಸಿದೆ. ಬೆಳಗುತ್ತಾ ಇರುವ ಜ್ವಾಲೆಯಿಂದ ಕೂಡಿದ ಆ ದಿವ್ಯದೀಪವನ್ನು ಪ್ರಯತ್ನ ಪೂರ್ವಕವಾಗಿ ಬಿಡಿಸಿ ಸಂಸಾರವನ್ನು ದಾಟು.
ಸಂಪತಂದೇಹಜಾಲಾನಿ ಕದಾಚಿದಿಹ ಮಾನುಷೇ |
ಬ್ರಾಹ್ಮಣ್ಯಂ ಲಭತೇ ಜಂತುಸ್ತತ್ಪುತ್ರ ಪರಿಪಾಲಯ ॥21॥
ಜೀವಾತ್ಮನು ಅನೇಕ ಹೀನಜನ್ಮಗಳನ್ನು ಹೊಂದಿದ ಮೇಲೆ ಕಷ್ಟದಿಂದ, ಭಾಗ್ಯವಶದಿಂದ ಒಮ್ಮೆ ಈ ಮನುಷ್ಯಜನ್ಮವನ್ನು ಹೊಂದುತ್ತಾನೆ. ಅದರಲ್ಲಿಯೂ ಅತ್ಯಂತ ಪುಣ್ಯವಿಶೇಷದಿಂದ ಬ್ರಾಹ್ಮಣ ಜನ್ಮವನ್ನು ಹೊಂದುತ್ತಾನೆ. ಅಂತಹ ಬ್ರಾಹ್ಮಣ ಜನ್ಮವನ್ನು ನೀನು ಚೆನ್ನಾಗಿ ಪರಿಪಾಲಿಸಬೇಕು.
ಬ್ರಾಹ್ಮಣಸ್ಯ ಹಿ ದೇಹೋಽಯಂ ನ ಕಾಮಾರ್ಥಾಯ ಜಾಯತೇ |
ಇಹ ಕ್ಲೇಶಾಯ ತಪಸೇ ಪ್ರೇತ್ಯ ತ್ವನುಪಮಂ ಸುಖಮ್ ॥22॥
ಬ್ರಾಹ್ಮಣನ ಶರೀರವು ಅರ್ಥ-ಕಾಮಗಳಿಗಾಗಿ ಎಂದಿಗೂ ಹುಟ್ಟಿರುವುದಿಲ್ಲ. ಬ್ರಾಹ್ಮಣ್ಯವೆಂಬುದು ಯಾವಾಗಲೂ ಕ್ಲೇಶಕ್ಕೆ, ತಪಸ್ಸಿಗಾಗಿಯೇ ನಿರ್ಮಿತವಾಗಿದೆ. ಸತ್ತ ಬಳಿಕ ಆ ಜನ್ಮಕ್ಕೆ ಪರಮಶ್ರೇಷ್ಠವಾದ ಸುಖವು ದೊರೆಯುತ್ತದೆ.
ಬ್ರಾಹ್ಮಣ್ಯಂ ಬಹುಭಿರವಾಪ್ಯತೇ ತಪೋಭಿ-
ಸ್ತಲ್ಲಬ್ಧ್ವಾ ನ ರತಿಪರೇಣ ಹೇಡಿತವ್ಯಮ್ |
ಸ್ವಾಧ್ಯಾಯೇ ತಪಸಿ ದಮೇ ಚ ನಿತ್ಯಯುಕ್ತಃ
ಕ್ಷೇಮಾರ್ಥೀ ಕುಶಲಪರಃ ಸದಾ ಯತಸ್ವ ॥23॥
ಮಗನೇ, ಬ್ರಾಹ್ಮಣ್ಯವು ಅನೇಕ ತಪಸ್ಸುಗಳ ಫಲದಿಂದ ಲಭಿಸುವಂತಹದ್ದು. ಅಂತಹ ಶ್ರೇಷ್ಠವಾದ ಬ್ರಾಹ್ಮಣಶರೀರವನ್ನು ಪಡೆದುಕೊಂಡಿರುವಾಗ ವಿಷಯಾಸಕ್ತಿಗಳಲ್ಲಿ, ಕಾಮಾದಿಗಳಲ್ಲಿ ಆಸಕ್ತನಾಗಿ ವ್ಯರ್ಥ ಮಾಡಿಕೊಳ್ಳಬಾರದು. ತಪಸ್ಸು, ಸ್ವಾಧ್ಯಾಯ, ಇಂದ್ರಿಯನಿಗ್ರಹ ಇವುಗಳಲ್ಲಿಯೇ ನೀನು ಆಸಕ್ತನಾಗಿ, ಜಾಣನಾಗಿ ನಿತ್ಯವೂ ಆತ್ಮನ ಕ್ಷೇಮವನ್ನು ಬಯಸುವವನಾಗಿ ಪ್ರಯತ್ನಿಸುತ್ತಿರು.

ಅವ್ಯಕ್ತಪ್ರಕೃತಿರಯಂ ಕಲಾಶರೀರಃ
ಸೂಕ್ಷ್ಮಾತ್ಮಾ ಕ್ಷಣತ್ರುಟಿಶೋ ನಿಮೇಷರೋಮಾ |
ಋತ್ವಾಸ್ಯಃ ಸಮಬಲಶುಕ್ಲಕೃಷ್ಣನೇತ್ರೋ
ಮಾಸಾಂಗೋ ದ್ರವತಿ ವಯೋಹಯೋ ನರಾಣಾಮ್ ॥24॥
ಮನುಷ್ಯನ ಆಯುಷ್ಯವೆಂಬುದು ವೇಗದಿಂದ ಓಡುತ್ತಿರುವ ಒಂದು ಕುದುರೆಯಂತೆ ತಿಳಿ. ಅದು ಅವ್ಯಕ್ತ ಎಂಬ ಪ್ರಕೃತಿಯನ್ನು ಕಾರಣವಾಗಿಟ್ಟುಕೊಂಡು ಉತ್ಪನ್ನವಾದುದು. ಕಲೆಗಳೆಂಬ ಶರೀರವುಳ್ಳದ್ದು. ಸೂಕ್ಷ್ಮರೂಪವೂ ಉಳ್ಳದ್ದು. ಕ್ಷಣ, ತ್ರುಟಿ, ನಿಮೇಷಗಳೇ ಅದರ ರೋಮಗಳು. ಸಮಾನ ದೃಷ್ಟಿಯುಳ್ಳ ಶುಕ್ಲ-ಕೃಷ್ಣ ಪಕ್ಷಗಳೆರಡು ಕಣ್ಣುಗಳು. ಮಾಸಗಳೇ ಇದರ ಅವಯವಗಳು. ಭಯಂಕರವಾದ ವೇಗವುಳ್ಳ ಇದರ ಆಯುಷ್ಯ ನಿರಂತರವೂ ಓಡುತ್ತಿರುತ್ತದೆ.
ತಂ ದೃಷ್ಟ್ವಾ ಪ್ರಸತಮಜಸ್ರಮುಗ್ರವೇಗಂ
ಗಚ್ಛಂತಂ ಸತತಮಿಹಾವ್ಯಪೇಕ್ಷಮಾಣಮ್ |
ಚಕ್ಷುಸ್ತೇ ಯದಿ ನ ಪರಪ್ರಣೇತೃನೇಯಂ
ಧರ್ಮೇ ತೇ ಭವತು ಮನಃ ಪರಂ ನಿಶಮ್ಯ ॥25॥
ಈ ರೀತಿಯಾಗಿ ಉಗ್ರವಾದ ವೇಗವುಳ್ಳ ಜೀವನವೆಂಬ ಕುದುರೆಯನ್ನು, ಯಾವುದನ್ನು ಅಪೇಕ್ಷಿಸದೆ ಸಾಗುತ್ತಿರುವ ಕುದುರೆಯನ್ನು ಕಾಣುತ್ತಿರುವಿ. ಒಂದು ವೇಳೆ ಕುರುಡನಂತೆ ಮತ್ತೊಬ್ಬರ ಸಹಾಯವನ್ನು ನಿನ್ನ ಕಣ್ಣುಗಳು ಬಯಸುತ್ತಿಲ್ಲವಾದಲ್ಲಿ ನಿನ್ನ ಮನಸ್ಸನ್ನು ಧರ್ಮಮಾರ್ಗದಲ್ಲಿ ಸಾಗುವಂತೆ ಬಾಹ್ಯ ಪದಾರ್ಥಗಳಿಂದ ನಿಯಂತ್ರಿಸಿಕೊಂಡು ಪ್ರೇರಿಸು.
ಯೇಽಮೀ ತು ಪ್ರಚಲಿತಧರ್ಮಕಾಮವೃತ್ತಾಃ
ಕ್ರೋಶಂತಃ ಸತತಮನಿಷ್ಟಸಂಪ್ರಯೋಗಾಃ |
ಕ್ಲಿಶ್ಯಂತೇ ಪರಿಗತವೇದನಾಶರೀರಾ
ಬಹ್ವೀಭಿಃ ಸುಭೃಶಮಧರ್ಮವಾಸನಾಭಿಃ ॥26॥
ಯಾರು ಈ ಲೋಕದಲ್ಲಿ ಧರ್ಮದಿಂದ ವಿಚಲಿತರಾಗಿ, ಸ್ವಚ್ಛಂದವಾಗಿ ನಡೆದುಕೊಳ್ಳುತ್ತಾರೋ, ಬೇರೆಯವರನ್ನು ನಿಂದಿಸುತ್ತಾರೋ, ಯಾವಾಗಲೂ ಅನಿಷ್ಟಕರವಾದ ಅಶುಭಕರ್ಮಗಳಲ್ಲಿಯೇ ಆಸಕ್ತರಾಗಿರುತ್ತಾರೋ ಅವರು ಮರಣದ ಬಳಿಕ ಯಾತನಾಮಯವಾದ ಶರೀರವನ್ನು ಪಡೆದು, ಅನೇಕ ಪಾಪಕರ್ಮಗಳ ಕಾರಣದಿಂದ ಯಮಪುರಿಯಲ್ಲಿ ವಿಧವಿಧವಾದ ದುಃಖಗಳನ್ನು ಅನುಭವಿಸುತ್ತಾರೆ.
ರಾಜಾ ಧರ್ಮಪರಃ ಸದಾ ಶುಭಗೋಪ್ತಾ
ಸಮೀಕ್ಷ್ಯ ಸುಕೃತಿನಾಂ ದಧಾತಿ ಲೋಕಾನ್ |
ಬಹುವಿಧಮಪಿ ಚರತಃ ಪ್ರದಿಶತಿ
ಸುಖಮನುಪಗತಂ ನಿರವದ್ಯಮ್ ॥27॥
ಯಮರಾಜನಾದರೂ ಯಾವಾಗಲೂ ಧರ್ಮಪರನಾಗಿರುವವನು. ಮನುಷ್ಯರು ಆಚರಿಸಿದ ಶುಭಾಶುಭ ಕರ್ಮಗಳನ್ನು ರಕ್ಷಿಸುವವನು. ಪುಣ್ಯವಂತರ ಪುಣ್ಯಗಳನ್ನು ಚೆನ್ನಾಗಿ ವಿಮರ್ಶಿಸಿ ಅದಕ್ಕೆ ಯೋಗ್ಯವಾದ ಲೋಕಗಳನ್ನು ನೀಡುತ್ತಾನೆ. ಅನೇಕ ರೀತಿಯಾದ ಶುಭಕರ್ಮಗಳನ್ನು ಆಚರಿಸುವವರಿಗೆ ಸಾವಿರ ಜನ್ಮಗಳಲ್ಲಿಯೂ ಹೊಂದಲಾಗದಿರುವ ಉತ್ಕೃಷ್ಟ ಸುಖವನ್ನು

ನೀಡುತ್ತಾನೆ.
ಶ್ವಾನೋ ಭೀಷಣಕಾಯೋಮುಖಾನಿ ವಯಾಂಸಿ
ಬಲಗೃಧ್ರುಕುರರಪಕ್ಷಿಶ್ಚ ಸಂಘಾತಮ್ |
ನರಕಕದನರುಧಿರವಾಗುರವಚನ
ಮಿದಮುಪರತಂ ನ ವಿಶಂತಿ ॥28॥
ಇಂತಹ ಯೋಗ್ಯನಾದ ವ್ಯಕ್ತಿಯನ್ನು ಕಬ್ಬಿಣದಂತೆ ಮುಖವುಳ್ಳ ಬಲಿಷ್ಠವಾದ ಹದ್ದುಗಳು, ಕುರರಪಕ್ಷಿಗಳು, ನಾಯಿಗಳು ಹೆದರಿಸುವುದಿಲ್ಲ. ಹಿರಿಯರ ಮಾತನ್ನು ಗೌರವಿಸಲಿಲ್ಲ, ಇವನನ್ನು ಕಟ್ಟಿಹಾಕಿ ಎಂದು ಶಿಕ್ಷೆಯ ಬಗ್ಗೆ ಮಾತನಾಡುವ ನರಕ ಲೋಕಕ್ಕೆ ಸಜ್ಜನರಾದವರು ಪ್ರವೇಶಿಸುವುದಿಲ್ಲ.
ಮರ್ಯಾದಾ ನಿಯತಾಃ ಸ್ವಯಂಭುವಾ ಯ
ಇಹೇಮಾಃ ಪ್ರಭಿನತ್ತಿ ದಶಗುಣಾ ಮನೋನುಗತ್ವಾತ್ |
ನಿವಸತಿ ಭೃಶಮಸುಖಂ ಪಿತೃವಿಷಯ-
ವಿಪಿನಮವಗಾಹ್ಯ ಸ ಪಾಪಃ ॥29॥
ಯಾವ ಮನುಷ್ಯನು ಕಾಮದಿಂದ ತಿರಸ್ಕೃತವಾದ ಮನಸ್ಸಿಗೆ ಅನುಗುಣವಾಗಿ ಸಾಗುತ್ತಾನೋ ಅವನು ಸ್ವಯಂಭುವಿನಿಂದ ವಿಧಿಸಲ್ಪಟ್ಟ ಹತ್ತುಧರ್ಮದ ಮರ್ಯಾದೆಗಳನ್ನು ಉಲ್ಲಂಘಿಸಿದ ಕಾರಣ ಮರಣದ ಬಳಿಕ ಯಮಲೋಕದಲ್ಲಿ ಭಯಂಕರವಾದ ದುಃಖಗಳಿಂದ ಕೂಡಿದ, ಗುರು-ಹಿರಿಯರನ್ನು ಅವಮಾನಿಸಿದ ಕಾರಣದಿಂದ ದೊರೆಯುವ ಕಾಡನ್ನು ಹೊಕ್ಕು ಪಾಪಿಯಾಗಿ ದುಃಖವನ್ನು ಅನುಭವಿಸುತ್ತಾನೆ.
ವ್ಯಾಖ್ಯಾನ ವಿಶೇಷ ಶುಚಿತ್ವ, ಸಂತುಷ್ಟಿ, ತಪಸ್ಸು, ಸ್ವಾಧ್ಯಾಯ, ಈಶ್ವರ ಧ್ಯಾನ, ಅಹಿಂಸೆ, ಸತ್ಯವಚನ, ಅಸ್ತೇಯ, ಬ್ರಹ್ಮಚರ್ಯ, ಅಪ್ರತಿಗ್ರಹ ಎಂಬ ಹತ್ತು ಈ ಧರ್ಮದ ಮರ್ಯಾದೆಗಳು.
ಯೋ ಲುಬ್ಧಃ ಸುಭೃಶಂ ಪ್ರಿಯಾನೃತಶ್ಚ
ಮನುಷ್ಯಃ ಸತತನಿಕೃತಿವಂಚನಾರತಿಃ ಸ್ಯಾತ್ |
ಉಪನಿಧಿಭಿರಸುಖಭೃತಸ್ವಪರಮೋನಿರಯಗೋ
ಭೃಶಮಸುಖಮನುಭವತಿ ದುಷ್ಕೃತಕರ್ಮಾ ॥30॥
ಯಾವ ಮನುಷ್ಯನು ಅತ್ಯಂತ ಲೋಭಿಯೋ, ಸುಳ್ಳು ಹೇಳುವುದರಲ್ಲಿ ಆಸಕ್ತನೋ, ಸದಾ ಮೋಸ-ವಂಚನೆಗಳಲ್ಲೇ ನಿರತನೋ, ಏನಾದರೂ ನೆಪಗಳನ್ನು ಹೇಳಿ ಇನ್ನೊಬ್ಬರಿಗೆ ಕಷ್ಟಗಳನ್ನು ನೀಡುತ್ತಾನೋ, ಇಂತಹ ಪಾಪಕರ್ಮಿಗಳೆಲ್ಲರೂ ಕಠಿಣವಾದ ನರಕದಲ್ಲಿ ತಾವು ಮಾಡಿದ ದುಷ್ಕರ್ಮಕ್ಕೆ ಅನುಗುಣವಾಗಿ ಸಂಕಟಗಳನ್ನು ಅನುಭವಿಸುತ್ತಾರೆ.
ವ್ಯಾಖ್ಯಾನ ವಿಶೇಷ `ಉಪನಿಧಿಭಿರಸುಖಭೃತಮ್' ಎಂದರೆ ದುಃಖದಿಂದ ಗಳಿಸಿದ ದ್ರವ್ಯದಲ್ಲಿ ಅತ್ಯಂತ ಮೋಹವನ್ನು ಹೊಂದುತ್ತಾನೋ ಎಂದು ಅರ್ಥ.
ಉಷ್ಣಾಂ ವೈತರಣೀಂ ಮಹಾನದೀಮವ-
ಗಾಢೋಸಿಪತ್ರವನಭಿನ್ನಗಾತ್ರಃ |
ಪರಶುವನಶಯೋ ನಿಪತಿತೋ
ವಸತಿ ಚ ಮಹಾನಿರಯೇ ಭೃಶಾರ್ತಃ ॥31॥
ಇಷ್ಟು ಮಾತ್ರವಲ್ಲದೆ ಅಂತಹ ಪಾಪಿಯು ಕುದಿಯುತ್ತಿರುವ ವೈತರಣಿ ನದಿಯಲ್ಲಿ ಮುಳುಗುತ್ತಾನೆ. ಕತ್ತಿಗಳೇ ಎಲೆಗಳಾಗಿರುವ ವೃಕ್ಷಗಳಿಂದ ತುಂಬಿರುವ ವನದಲ್ಲಿ ವಾಸಿಸುವುದರಿಂದ ಅವನ ಶರೀರವು ಸೀಳಿ ಹೋಗುತ್ತದೆ. ಅವನು ಕಾಲಕ್ರಮದಲ್ಲಿ ಕೊಡಲಿಯಂತೆ ಎಲೆಯುಳ್ಳ ವೃಕ್ಷಗಳಿಂದ ಕೂಡಿರುವ ಕಾಡಿನಲ್ಲಿ ಬಿದ್ದವನಾಗಿ ನಾನಾ ವಿಧವಾದ ನರಕಗಳಲ್ಲಿ ದುಃಖಿತನಾಗಿ ವಾಸ ಮಾಡುತ್ತಾನೆ.
ಮಹಾಪದಾನಿ ಕತ್ಥಸೇ ನ ಚಾಪ್ಯವೇಕ್ಷಸೇ ಪರಮ್ |
ಚಿರಸ್ಯ ಮೃತ್ಯುಕಾರಿಕಾಮನಾಗತಾಂ ನ ಬುಧ್ಯಸೇ ॥32॥
ಶುಕನೇ, ಬ್ರಹ್ಮಲೋಕವೇ ಮೊದಲಾದ ಮಹತ್ತರವಾದ ಲೋಕಗಳ ವಿಷಯವನ್ನು ಹೇಳುತ್ತೇನೆ. ಆದರೆ ಆ ಎಲ್ಲ ಲೋಕಗಳಿಗಿಂತ ಪರಮಪದ ಎನಿಸಿದ ಲೋಕದ ಬಗ್ಗೆ ನಿನಗೆ ದೃಷ್ಟಿಯಿಲ್ಲದಾಗಿದೆ. ಮುಂದೆ ಬರುವ ಮೃತ್ಯುವಿಗೆ ಕಾರಣವಾದ ವೃದ್ಧಾಪ್ಯವನ್ನು ಈ ಯೌವನದ ಭರದಲ್ಲಿ ನೀನು ತಿಳಿಯುತ್ತಿಲ್ಲ.
ಪ್ರಯಾಸ್ಯತಾಂ ಕಿಮಾಸ್ಯತೇ ಸಮುತ್ಥಿತಂ ಮಹದ್ಭಯಮ್ |
ಅತಿಪ್ರಮಾಥಿ ದಾರುಣಂ ಸುಖಸ್ಯ ಸಂವಿಧೀಯತಾಮ್ ॥33॥
ಮಗನೇ, ನಾನು ಹೇಳುವ ಧರ್ಮಮಾರ್ಗದಲ್ಲಿ ನೀನು ಸಾಗು. ಏಕೆ ಸುಮ್ಮನೆ ಕುಳಿತಿರುವಿ? ಮಹತ್ತರವಾದ ಭಯವು ಪ್ರಾಪ್ತವಾಗಿದೆ. ಅತ್ಯಂತ ಶಿಥಿಲಗೊಳಿಸುವ ದಾರುಣವಾದ ಭಯವು ಎದುರಾದಾಗ ಸುಖಪ್ರಾಪ್ತಿಗಾಗಿ ಪ್ರಯತ್ನವನ್ನು ಮಾಡು.
ಪುರಾ ಮೃತಃ ಪ್ರಣೀಯಸೇ ಯಮಸ್ಯ ಮೃತ್ಯುಶಾಸನಾತ್ |
ತದಂತಿಕಾಯ ದಾರುಣೈಃ ಪ್ರಯತ್ನಮಾರ್ಜವೇ ಕುರು ॥34॥
ಕಾಲಾಂತರದಲ್ಲಿ ನೀನು ಮೃತನಾದರೆ ಧರ್ಮವನ್ನಾಚರಿಸದ ಕಾರಣದಿಂದ ಯಮರಾಜನ ಶಾಸನದಂತೆ ಯಮದೂತರು ಪಾಶದಿಂದ ನಿನ್ನನ್ನು ಬಂಧಿಸಿ ಯಮನ ಬಳಿ ಕರೆದೊಯ್ಯುತ್ತಾರೆ. ಇಂತಹ ಸ್ಥಿತಿ ಬರಬಾರದೆಂದಿದ್ದಲ್ಲಿ ಧರ್ಮಜ್ಞಾನವನ್ನು ಹೊಂದಲು ಪ್ರಯತ್ನಿಸು.
ಪುರಾ ಸಮೂಲಬಾಂಧವಂ ಪ್ರಭುರ್ಹರತ್ಯದುಃಖವಿತ್ |

ತವೇಹ ಜೀವಿತಂ ಯಮೋ ನ ಚಾಸ್ತಿ ತಸ್ಯ ವಾರಕಃ ॥35॥
ಪ್ರಭುವಾದ ಯಮದೇವನು ಇನ್ನೊಬ್ಬರ ದುಃಖಗಳನ್ನು ನೋಡನು. ಸಮೂಲವಾಗಿ ಸಮಸ್ತ ಬಂಧುಗಳ ಜೊತೆ ಎಲ್ಲರ ಪ್ರಾಣವನ್ನು ಅಪಹರಿಸಬಲ್ಲನು. ಹೀಗಿರಲು ನಿನ್ನ ಪ್ರಾಣವು ಅವನಿಗೆ ಯಾವ ಲೆಕ್ಕ? ಆ ಯಮನನ್ನು ತಡೆಯುವವರು ಯಾರೂ ಇಲ್ಲ.
ಪುರಾ ವಿವಾತಿ ಮಾರುತೋ ಯಮಸ್ಯ ಯಃ ಪುರಃಸರಃ |
ಪುರೈಕ ಏವ ನೀಯಸೇ ಕುರುಷ್ವ ಸಾಂಪರಾಯಿಕಮ್ ॥36॥
ಯಮದೇವನು ಬಳಿ ಬರುವುದಕ್ಕಿಂತ ಮೊದಲು ಅದರ ಸೂಚನೆಯಾಗಿ ಕಾಲರೂಪವಾದ ಗಾಳಿಯು ಮೊದಲು ಬೀಸುತ್ತಾ ಬರುತ್ತದೆ. ಅದು ಯಮಲೋಕಕ್ಕೆ ಕರೆದೊಯ್ಯುತ್ತದೆ. ಅದು ಬರುವ ಮುನ್ನ ಪರಲೋಕಕ್ಕೆ ಬೇಕಾದ ಸಾಧನವನ್ನು ಸಂಗ್ರಹಿಸಿಕೊ.
ಪುರಾ ಸಹಿಕ್ವ ಏವ ತೇ ಪ್ರವಾತಿ ಮಾರುತೋಂತಕಃ |
ಪುರಾ ಚ ವಿಭ್ರಮಂತಿ ತೇ ದಿಶೋ ಮಹಾಭಯಾಗಮೇ ॥37॥
ಹಿಂದಿನ ಜನ್ಮದಲ್ಲಿ ಮರಣವನ್ನು ನೀಡಿದ ಯಮದೇವನೇ ವಾಯುವಿನ ರೂಪವಾಗಿ ನಿನ್ನ ಮುಂದೆ ಬರುತ್ತಾನೆ. ಆ ಸಮಯದಲ್ಲಿ ದಿಕ್ಕುಗಳೆಲ್ಲವೂ ತಿರುಗಿದಂತೆ ಮಹಾಭಯವು ಉಂಟಾಗುತ್ತದೆ. ಹಾಗಾಗುವುದಕ್ಕೆ ಮೊದಲು ಪರಮಸುಖ ಸಾಧನವಾದ ಧರ್ಮಾಚರಣೆಗಳನ್ನು ಮಾಡು.
ಸ್ಮೃತಿಶ್ಚ ಸನ್ನಿರುಧ್ಯತೇ ಪುರಾ ತವೇಹ ಪುತ್ರಕ |
ಸಮಾಕುಲಸ್ಯ ಗಚ್ಛತಃ ಸಮಾಧಿಮುತ್ತಮಂ ಕುರು ॥38॥
ಮಗನೇ, ಶರೀರವನ್ನು ತೊರೆದು ಹೋಗುವಾಗ ಕಳವಳಗೊಂಡಿರುವ ನಿನಗೆ ಸ್ಮರಣೆಯು ನಾಶವಾಗುತ್ತದೆ. ಹಾಗಾಗುವುದಕ್ಕಿಂತ ಮೊದಲೇ ಉತ್ತಮವಾದ ಸಮಾಧಿಯೋಗವನ್ನು ಅಭ್ಯಾಸ ಮಾಡು.
ಕೃತಾಕೃತೇ ಶುಭಾಶುಭೇ ಪ್ರಮಾದಕರ್ಮವಿಪ್ಲುತೇ |
ಸ್ಮರನ್ ಪುರಾ ನ ತಪ್ಯಸೇ ನಿಧತ್ಸ್ವ ಕೇವಲಂ ನಿಧಿಮ್ ॥39॥
ಮಾಡಿದ ಕರ್ಮಗಳಿಗೆ ಅನುಸಾರವಾಗಿ ಸುಖ-ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಅಜಾಗರೂಕತೆಯಿಂದ ಕರ್ಮಗಳನ್ನು ಆಚರಿಸಿದಾಗ ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಇದನ್ನು ಸ್ಮರಿಸಿ ಪಶ್ಚಾತ್ತಾಪ ಪಡದಿರುವಂತಾಗಲು ಪರಮ ಸುಖನಿಧಿಯಾದ ಭಗವಂತನನ್ನು ಹೃದಯದಲ್ಲಿ ಭಾವಿಸು.
ಪುರಾ ಜರಾ ಕಲೇವರಂ ವಿಜರ್ಜರೀಕರೋತಿ ತೇ |
ಬಲಾಂಗರೂಪಹಾರಿಣೀ ನಿಧತ್ಸ್ವ ಕೇವಲಂ ನಿಧಿಮ್ ॥40॥
ನಿನ್ನ ಈ ಶರೀರವನ್ನು ಜರೆಯು ಜೀರ್ಣಗೊಳಿಸುತ್ತದೆ. ಅಂಗೋಪಾಂಗಗಳಲ್ಲಿರುವ ಬಲವನ್ನು ಅಪಹರಿಸುತ್ತದೆ. ಹೀಗಾಗುವುದಕ್ಕಿಂತ ಮೊದಲು ಕೇವಲ ನಿಧಿರೂಪನಾದ ಭಗವಂತನನ್ನು ಹೃದಯದಲ್ಲಿ ಧ್ಯಾನಿಸು.
ಪುರಾ ಶರೀರಮಂತಕೋ ಭಿನತ್ತಿ ರೋಗಸಾಯಕೈಃ |
ಪ್ರಸಹ್ಯ ಜೀವಿತಕ್ಷಯೇ ತಪೋ ಮಹತ್ ಸಮಾಚರ ॥41॥
ಮುಂದೆ ಮೃತ್ಯುದೇವನು ಈ ಶರೀರವನ್ನು ರೋಗವೆಂಬ ಬಾಣಗಳಿಂದ ತುಂಡರಿಸುತ್ತಾನೆ. ಇಂತಹ ಜೀವಿತಕ್ಷಯವನ್ನು ನಿಶ್ಚಯಿಸಿಕೊಂಡು ಮಹತ್ತರವಾದ ತಪಸ್ಸನ್ನು ಆಚರಿಸು.
ಪುರಾ ವೃಕಾ ಭಯಂಕರಾ ಮನುಷ್ಯದೇಹಗೋಚರಾಃ |
ಅಭಿದ್ರವಂತಿ ಸರ್ವತೋ ಯತಸ್ವ ಪುಣ್ಯಶೀಲನೇ ॥42॥
ಮನುಷ್ಯದೇಹದಲ್ಲಿ ಆಸೆಯಿಂದ ಕೂಡಿದ ಭಯಂಕರಗಳಾದ, ತೋಳಗಳ ರೂಪದಲ್ಲಿರುವ ಕಾಮ-ಕ್ರೋಧಾದಿಗಳು ಎಲ್ಲ ಕಡೆಯಿಂದಲೂ ನಿನ್ನನ್ನು ಕಬಳಿಸಲು ಓಡಿ ಬರುತ್ತಿವೆ. ಅವುಗಳು ನಿನ್ನ ಬಳಿ ಬರುವ ಮೊದಲೇ ನೀನು ಪುಣ್ಯಶೀಲನಾಗಲು ಪ್ರಯತ್ನಿಸು.
ಪುರಾಂಧಕಾರಮೇಕಕೋಽನುಪಶ್ಯಸಿ ತ್ವರಸ್ವ ವೈ |
ಪುರಾ ಹಿರಣ್ಮಯಾನ್ನಗಾನ್ನಿರೀಕ್ಷಸೇದ್ರಿಮೂರ್ಧನಿ ॥43॥
ನೀನು ಮುಂದೆ ಒಬ್ಬಂಟಿಗನಾಗಿ ಮಹಾ ಅಂಧಕಾರದಲ್ಲಿ ತಿರುಗಬೇಕಾಗುತ್ತದೆ. ಈಗಲೇ ಜಾಗೃತೆಯಾಗಿ ವರ್ತಿಸು. ಪರ್ವತದ ಶಿಖರದಲ್ಲಿ ಸುವರ್ಣಮಯವಾದ ವೃಕ್ಷಗಳನ್ನು ನೋಡುತ್ತಿ. ಇದು ಮರಣಸೂಚಕವಾಗಿದೆ. ಇದನ್ನು ಕಾಣುವ ಮೊದಲೇ ಆತ್ಮೋದ್ಧಾರಕ್ಕಾಗಿ ತಪಸ್ಸನ್ನಾಚರಿಸು.
ಪುರಾ ಕುಸಂಗತಾನಿ ತೇ ಸುಹೃನ್ಮುಖಾಶ್ಚ ಶತ್ರವಃ |
ವಿಚಾಲಯಂತಿ ದರ್ಶನಾದ್ಘಟಸ್ವ ಪುತ್ರ ಯತ್ಪರಮ್ ॥44॥
ನಿನ್ನನ್ನು ಕೆಟ್ಟ ಸಂಗಗಳು, ಮಿತ್ರರಂತಿರುವ ಶತ್ರುಗಳು ದಾರಿ ತಪ್ಪಿಸಿ ಕರ್ತವ್ಯ ಭ್ರಷ್ಟನನ್ನಾಗಿ ಮಾಡುತ್ತಾರೆ. ಆದ್ದರಿಂದ ಹೀಗಾಗುವ ಮೊದಲೇ ನೀನು ಪರಮಪದವನ್ನು ಹೊಂದಲು ಪ್ರಯತ್ನಿಸು.
ಧನಸ್ಯ ಯಸ್ಯ ರಾಜತೋ ಭಯಂ ನ ಚಾಸ್ತಿ ಚೌರತಃ |
ಮೃತಂ ಚ ಯನ್ನ ಮುಂಚತಿ ಸಮರ್ಜಯಸ್ವ ತದ್ಧನಮ್ ॥45॥
ಯಾವ ಧನಕ್ಕೆ ರಾಜನಿಂದ, ಚೋರನಿಂದ ಭಯವಿಲ್ಲವೋ, ಯಾವ ಧನವು ನೀನು ಮೃತನಾದರೂ ನಿನ್ನನ್ನು ಬಿಟ್ಟು ಹೋಗುವುದಿಲ್ಲವೋ ಅಂತಹ ಧರ್ಮವೆಂಬ ಧನವನ್ನು ಸಂಪಾದಿಸು.
ನ ತತ್ರ ಸಂವಿಭಜ್ಯತೇ ಸ್ವಕರ್ಮಭಿಃ ಪರಸ್ಪರಮ್ |
ಯದೇವ ಯಸ್ಯ ಯೌತಕಂ ತದೇವ ತತ್ರ ಸೋಽಶ್ನುತೇ ॥46॥
ಹೇಗೆ ಸಂಪತ್ತನ್ನು ಅನೇಕರು ಕೂಡಿಕೊಂಡು ಸಂಪಾದಿಸಿ ತಮ್ಮ ಪ್ರಯತ್ನದಿಂದ ಸಂಪಾದಿಸಿದ ಧನವನ್ನು ಪರಸ್ಪರ ವಿಭಾಗ

ಮಾಡಿಕೊಳ್ಳುತ್ತಾರೋ ಆ ರೀತಿಯಾಗಿ ನಾವು ಮಾಡಿದ ಕರ್ಮಗಳನ್ನು ಹಂಚಿಕೊಳ್ಳಲು ಆಗುವುದಿಲ್ಲ. ನಾವು ಮಾಡಿದ ಕರ್ಮದ ಫಲವನ್ನು ನಾವು ಮಾತ್ರ ಪರಲೋಕದಲ್ಲಿ ಅನುಭವಿಸಬೇಕಾಗುತ್ತದೆ.
ವ್ಯಾಖ್ಯಾನ ವಿಶೇಷ ವಿಭಾಗದಲ್ಲಿ ಅಳಿಯನಿಗೆ ಮಾವನಿಂದ ಕೊಡಲ್ಪಟ್ಟ ಸಂಪತ್ತು ಯೌತಕ ಎನಿಸಿದೆ. ಅದನ್ನು ಅಳಿಯನು ಮಾತ್ರ ಅನುಭವಿಸುವಂತೆ ನಾವು ಮಾಡಿದ ಕರ್ಮವನ್ನು ಪರಲೋಕದಲ್ಲಿ ನಾವೇ ಅನುಭವಿಸುತ್ತೇವೆ ಎಂದು ತಾತ್ಪರ್ಯ.
ಪರತ್ರ ಯೇನ ಜೀವ್ಯತೇ ತದೇವ ಪುತ್ರ ದೀಯತಾಮ್ |
ಧನಂ ಯದಕ್ಷಯಂ ಧ್ರುವಂ ಸಮರ್ಜಯಸ್ವ ತತ್ ಸ್ವಯಮ್ ॥47॥
ಯಾವುದನ್ನು ದಾನ ಮಾಡಿದರೆ ಪರಲೋಕದಲ್ಲಿ ಸುಖವಾಗಿ ಜೀವಿಸಲು ಸಾಧ್ಯವಾಗುತ್ತದೋ ಅಂತಹ ಉತ್ತಮ ಪದಾರ್ಥಗಳನ್ನೇ ದಾನ ಮಾಡು. ಧರ್ಮರೂಪವಾದ, ಅವಿನಾಶಿಯಾದ, ಶಾಶ್ವತವಾದ ಯಾವ ಧನವಿದೆಯೋ ಅದನ್ನೇ ಸಂಪಾದಿಸು.
ನ ಯಾವದೇವ ಪಚ್ಯತೇ ಮಹಾಜನಸ್ಯ ಯಾವಕಮ್ |
ಅಪಕ್ವ ಏವ ಯಾವಕೇ ಪುರಾ ಪ್ರಣೀಯಸೇ ತ್ವರ ॥48॥
ಮಹಾಜನರಿಗೋಸ್ಕರ ಜವೆಗೋಧಿಯನ್ನು ಬೇಯಿಸುತ್ತಿದ್ದರೆ ಅದು ಪಕ್ವವಾಗುವ ಕಾಲದೊಳಗಾಗಿ ಮನುಷ್ಯನು ಮರಣ ಹೊಂದಬಹುದು. ಆದ್ದರಿಂದ ಅತ್ಯಂತ ಶೀಘ್ರವಾಗಿ ಧರ್ಮವನ್ನಾಚರಿಸು.
ನ ಮಾತೃಪುತ್ರಬಾಂಧವಾ ನ ಸಂಸ್ತುತಃ ಪ್ರಿಯೋ ಜನಃ |
ಅನುವ್ರಜಂತಿ ಸಂಕಟೇ ವ್ರಜಂತಮೇಕಪಾತಿನಮ್ ॥49॥
ಜೀವನು ಯಾವಾಗ ಏಕಾಕಿಯಾಗಿ ಪರಲೋಕದ ಕಡೆ ಪ್ರಯಾಣ ಮಾಡುತ್ತಾನೋ ಅಂತಹ ಸಂಕಟದ ಸಮಯದಲ್ಲಿ ತಾಯಿಯಾಗಲಿ, ಮಕ್ಕಳಾಗಲಿ, ಬಂಧು- ಬಾಂಧವರಾಗಲಿ, ಪ್ರಿಯಜನರಾಗಲಿ, ಆ ಜೀವನನ್ನು ಅನುಸರಿಸಿ ಬರುವುದಿಲ್ಲ.
ಯದೇವ ಕರ್ಮ ಕೇವಲಂ ಸ್ವಯಂ ಕೃತಂ ಶುಭಾಶುಭಮ್ |
ತದೇವ ತಸ್ಯ ಯೌತಕಂ ಭವತ್ಯಮುತ್ರ ಗಚ್ಛತಃ ॥50॥
ಪರಲೋಕಕ್ಕೆ ಹೋಗುವಾಗ ತಾನು ಹಿಂದೆ ಮಾಡಿದ ಯಾವ ಶುಭಾಶುಭ ಕರ್ಮಗಳಿವೆಯೋ ಅವು ಮಾತ್ರವೇ ಜೊತೆಯಲ್ಲಿ ಬರುತ್ತವೆ.
ಹಿರಣ್ಯರತ್ನಸಂಚಯಾಃ ಶುಭಾಶುಭೇನ ಸಂಚಿತಾಃ |
ನ ತಸ್ಯ ದೇಹಸಂಕ್ಷಯೇ ಭವಂತಿ ಕಾರ್ಯಸಾಧಕಾಃ ॥51॥
ಮನುಷ್ಯನು ಕೆಟ್ಟ ಅಥವಾ ಒಳ್ಳೆಯ ಮಾರ್ಗದಿಂದ ಸಂಪಾದಿಸಿದ ಧನ, ಕನಕ, ರತ್ನಸಮುದಾಯಗಳು ದೇಹವು ನಾಶವಾದಾಗ ಅವನ ಹಿತಚಿಂತನೆಗಾಗಿ ಬರುವುದಿಲ್ಲ.
ಪರತ್ರಗಾಮಿಕಸ್ಯ ತೇ ಕೃತಾಕೃತಸ್ಯ ಕರ್ಮಣಃ |
ನ ಸಾಕ್ಷಿರಾತ್ಮನಾ ಸಮೋ ನೃಣಾಮಿಹಾಸ್ತಿ ಕಶ್ಚನ ॥52॥
ಪರಲೋಕಯಾತ್ರೆಯನ್ನು ಮಾಡುವ ಮನುಷ್ಯನಿಗೆ ಇಹಲೋಕದಲ್ಲಿ ಮಾಡಿದ, ಮಾಡದಿರುವ ಕರ್ಮಗಳ ವಿಷಯದಲ್ಲಿ ತನಗೆ ತಾನೇ ಸಾಕ್ಷಿಯಾಗಿದ್ದಾನೆ. ತನ್ನನ್ನು ಬಿಟ್ಟು ಬೇರೆ ಯಾರೂ ಸಾಕ್ಷಿಯಾಗಿರುವುದಿಲ್ಲ.
ಮನುಷ್ಯದೇಹಶೂನ್ಯಕಂ ಭವತ್ಯಮುತ್ರ ಗಚ್ಛತಃ |
ಪ್ರಪಶ್ಯ ಬುದ್ಧಿಚಕ್ಷುಷಾ ಪ್ರದೃಶ್ಯತೇ ಹಿ ಸರ್ವತಃ ॥53॥
ಪರಲೋಕಕ್ಕೆ ಸಾಗುವವನಿಗೆ ಈ ದೇಹವು ಇರುವುದಿಲ್ಲ. ಜೀವನು ಸೂಕ್ಷ್ಮ ಶರೀರವನ್ನು ಪ್ರವೇಶಿಸಿ ಬುದ್ಧಿರೂಪವಾದ ದೃಷ್ಟಿಯಿಂದ ಎಲ್ಲವನ್ನೂ ನೋಡುತ್ತಾನೆ.
ಇಹಾಗ್ನಿಸೂರ್ಯವಾಯವಃ ಶರೀರಮಾಶ್ರಿತಾಸ್ತ್ರಯಃ |
ತ ಏವ ತಸ್ಯ ಸಾಕ್ಷಿಣೋ ಭವಂತಿ ಧರ್ಮದರ್ಶಿನಃ ॥54॥
ಈ ಲೋಕದಲ್ಲಿ ಅಗ್ನಿ, ವಾಯು, ಸೂರ್ಯ - ಈ ಮೂರು ದೇವತೆಗಳು ಮನುಷ್ಯನ ಶರೀರವನ್ನು ಆಶ್ರಯಿಸುತ್ತಾರೆ. ಅವರೇ ಈ ಮನುಷ್ಯರಾಶ್ರಯಿಸುವ ಧರ್ಮಗಳನ್ನು ನೋಡುತ್ತಾರೆ. ಇವರೇ ಪರಲೋಕದಲ್ಲಿ ಮನುಷ್ಯರು ಮಾಡಿದ ಧರ್ಮ- ಕರ್ಮಗಳಿಗೆ ಸಾಕ್ಷಿಯಾಗಿರುತ್ತಾರೆ.
ಯಥಾನಿಶೇಷು ಸರ್ವತಃಸ್ಪೃಶತ್ಸು ಸರ್ವಚಾರಿಷು |
ಪ್ರಕಾಶಗೂಢವೃತ್ತಿಷು ಸ್ವಧರ್ಮಮೇವ ಪಾಲಯ ॥55॥
ಈ ಮೂವರು ದೇವತೆಗಳೇ ಹಗಲು-ರಾತ್ರಿ ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತಾ, ಎಲ್ಲವನ್ನೂ ಸ್ಪರ್ಶಿಸುತ್ತಾ ಎಲ್ಲ ರಹಸ್ಯಗಳನ್ನು ನೋಡುತ್ತಿರುತ್ತಾರೆ. ಇವರಿಗೆ ಒಳ- ಹೊರಗಿನ ರಹಸ್ಯಗಳು ಗೋಚರಿಸುತ್ತವೆ. ಆದ್ದರಿಂದ ಬಾಹ್ಯಾಂತರಗಳಲ್ಲಿ ನಿನ್ನ ಸ್ವಧರ್ಮಗಳನ್ನೇ ಅವರು ನೋಡುತ್ತಿದ್ದಾರೆಂದು ರಕ್ಷಿಸು.
ಅನೇಕಪಾರಿಪಂಥಿಕೇ ವಿರೂಪರೌದ್ರರಕ್ಷಿತೇ |
ಸ್ವಮೇವ ಕರ್ಮ ರಕ್ಷ್ಯತಾಂ ಸ್ವಕರ್ಮ ತತ್ರ ಗಚ್ಛತಿ ॥56॥
ಪರಲೋಕದ ಮಾರ್ಗದಲ್ಲಿ ಅನೇಕ ಶತ್ರುಗಳಿದ್ದಾರೆ. ಭಯಂಕರವಾದ ರೂಪಗಳುಳ್ಳ ಜೀವರಾಶಿಗಳಿಂದ ಆ ಮಾರ್ಗವು ಕೂಡಿದೆ. ಅಂತಹ ಭಯಂಕರ ಮಾರ್ಗದಲ್ಲಿ ನೀನು ಮಾಡಿದ ಕರ್ಮವು ಮಾತ್ರ ನಿನ್ನ ಜೊತೆಯಲ್ಲಿ ಬರುತ್ತದೆ. ಆದ್ದರಿಂದ ನಿನ್ನ ಕರ್ಮಗಳಿಂದ ನಿನ್ನನ್ನು ರಕ್ಷಿಸಿಕೊ.
ನ ತತ್ರ ಸಂವಿಭಜ್ಯತೇ ಸ್ವಕರ್ಮಣಾ ಪರಸ್ಪರಮ್ |
ಯಥಾಕೃತಂ ಸ್ವಕರ್ಮಜಂ ತದೇವ ಭುಜ್ಯತೇ ಫಲಮ್ ॥57॥
ತನ್ನ ಕರ್ಮಕ್ಕನುಗುಣವಾದ ಯಾವ ಫಲವಿದೆಯೋ ಅದನ್ನು ಪರಲೋಕದಲ್ಲಿ ಪರಸ್ಪರ ಧನದಂತೆ ವಿಭಾಗಿಸಿಕೊಳ್ಳಲು, ವಿನಿಮಯ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭವಿಸುತ್ತಾನೆ.

ಯಥಾಪ್ಸರೋಗಣಾಃ ಫಲಂ ಸುಖಂ ಮಹರ್ಷಿಭಿಃ ಸಹ |
ತಥಾಪ್ನುವಂತಿ ಕರ್ಮತೋ ವಿಮಾನಕಾಮಗಾಮಿನಃ ॥58॥
ಯಾವ ರೀತಿ ಅಪ್ಸರೆಯರ ಗುಂಪು ಮಹರ್ಷಿಗಳ ಜೊತೆ ಪುಣ್ಯಫಲ ಸ್ವರೂಪವಾದ ಸುಖವನ್ನು ಅನುಭವಿಸುತ್ತದೋ ಅದೇ ರೀತಿ ಪುಣ್ಯಾತ್ಮರು ವಿಮಾನದಲ್ಲಿ ಕುಳಿತು, ಸ್ವೇಚ್ಛೆಯಿಂದ ಸಂಚರಿಸುತ್ತಾ, ಪುಣ್ಯಕರ್ಮದಿಂದ ಉತ್ಪನ್ನವಾದ ಸುಖವನ್ನು ಹೊಂದುತ್ತಾರೆ.
ಯಥೇಹ ಯತ್ಕೃತಂ ಶುಭಂ ವಿಪಾಪ್ಮಭಿಃ ಕೃತಾತ್ಮಭಿಃ |
ತದಾಪ್ನುವಂತಿ ಮಾನವಾಸ್ತಥಾ ವಿಶುದ್ಧಯೋನಯಃ ॥59॥
ಪಾಪರಹಿತರಾದ ಪರಿಶುದ್ಧ ಹೃದಯದಿಂದ ಕೂಡಿದ ಮನುಷ್ಯರು ಯಾವ ರೀತಿ ಶುಭಕರ್ಮಗಳನ್ನು ಆಚರಿಸುತ್ತಾರೋ ಅದರಂತೆ ಜನ್ಮಾಂತರದಲ್ಲಿ ಉತ್ತಮ ಕುಲದಲ್ಲಿ ಹುಟ್ಟಿ ಶುಭಕರ್ಮಗಳಿಗೆ ಅನುಗುಣವಾದ ಫಲವನ್ನು ಹೊಂದುತ್ತಾರೆ.
ಪ್ರಜಾಪತೇಃ ಸಲೋಕತಾಂ ಬೃಹಸ್ಪತೇಃ ಶತಕ್ರತೋಃ |
ವ್ರಜಂತಿ ತೇ ಪರಾಂ ಗತಿಂ ಗೃಹಸ್ಥಧರ್ಮಸೇತುಭಿಃ ॥60॥
ಗೃಹಸ್ಥರಾದವರು ಪ್ರಾಮಾಣಿಕವಾದ ಗೃಹಸ್ಥ ಧರ್ಮವನ್ನು ಅನುಷ್ಠಾನ ಮಾಡಿ ಸದ್ಗತಿಯನ್ನು ಹೊಂದಿದ ಬಳಿಕ ಪ್ರಜಾಪತಿ, ಬೃಹಸ್ಪತಿ, ಇಂದ್ರನ ಲೋಕಗಳಿಗೆ ತೆರಳುತ್ತಾರೆ.
ಸಹಸ್ರಶೋಽಪ್ಯನೇಕಶಃ ಪ್ರವಕ್ತುಮುತ್ಸಹಾಮಹೇ |
ಅಬುದ್ಧಿಮೋಹನಂ ಪುನಃ ಪ್ರಭುಸ್ತು ತೇ ನ ಪಾವಕಃ ॥61॥
ಮಗನೇ, ಇನ್ನೂ ಅನೇಕ ಬಾರಿ, ಸಾವಿರಾರು ಬಾರಿ ನಿನಗೆ ಈ ವಿಷಯವನ್ನು ಹೇಳುವ ಉತ್ಸಾಹದಲ್ಲಿದ್ದೇನೆ. ನೀನು ನಾನು ಹೇಳಿದ ಧರ್ಮಗಳನ್ನು ಬುದ್ಧಿಯ ಮೋಹಕ್ಕೆ ತುತ್ತಾಗದೆ ಅನುಷ್ಠಾನ ಮಾಡಿದಲ್ಲಿ ನರಕದ ಅಗ್ನಿಯು ನಿನ್ನನ್ನು ದಹಿಸುವುದಿಲ್ಲ.
ಗತಾ ತ್ರಿರಷ್ಟವರ್ಷತಾ ಧ್ರುವೋಽಸಿ ಪಂಚವಿಂಶಕಃ |
ಕುರುಷ್ವ ಧರ್ಮಸಂಚಯಂ ವಯೋ ಹಿ ತೇಽತಿವರ್ತತೇ ॥62॥
ಈಗಾಗಲೇ ನಿನಗೆ ಇಪ್ಪತ್ನಾಲ್ಕು ವರ್ಷಗಳು ಕಳೆದಿವೆ. ಇಪ್ಪತ್ತೈದನೆಯ ವರ್ಷವು ನಿಶ್ಚಯವಾಗಿದೆ. ನಿನ್ನ ವಯಸ್ಸು ಹೀಗೆಯೇ ಕಳೆದುಹೋಗುತ್ತದೆ. ಆದ್ದರಿಂದ ಧರ್ಮವನ್ನು ಸಂಗ್ರಹಿಸು.
ಪುರಾ ಕರೋತಿ ಸೋಽಂತಕಃ ಪ್ರಮಾದಗೋಮುಖಂ ದಮಮ್ |
ಯಥಾಗೃಹೀತಮುತ್ಥಿತಂ ತ್ವರಸ್ವ ಧರ್ಮಪಾಲನೇ ॥63॥
ಯಮನು ಪ್ರಮಾದದಿಂದ ಕೂಡಿದ ಇಂದ್ರಿಯಗಳನ್ನು ಮುಂದಿಟ್ಟುಕೊಂಡು ನಿನ್ನ ಮೇಲೆ ತನ್ನ ಸೇನೆಯ ಆಕ್ರಮಣವನ್ನು ಮಾಡುತ್ತಿದ್ದಾನೆ. ನಿನ್ನನ್ನು ಆಕ್ರಮಿಸುವ ಮೊದಲೇ ಜಾಗೃತನಾಗಿ ಸ್ಥಿರವಾಗಿ ನಿಂತು ಧರ್ಮವನ್ನು ತ್ವರೆಯಿಂದ ಪರಿಪಾಲಿಸು.
ಯದಾ ತ್ವಮೇವ ಪೃಷ್ಠತಸ್ತ್ವಮಗ್ರತೋ ಗಮಿಷ್ಯಸಿ |
ತಥಾ ಗತಿಂ ಗಮಿಷ್ಯತಃ ಕಿಮಾತ್ಮನಾ ಪರೇಣ ವಾ ॥64॥
ಯದೇಕಪಾತಿನಾಂ ಸತಾಂ ಭವತ್ಯಮುತ್ರ ಗಚ್ಛತಾಮ್ |
ಭಯೇಷು ಸಾಂಪರಾಯಿಕಂ ನಿಧತ್ಸ್ವ ತಂ ಮಹಾನಿಧಿಮ್ ॥65॥
ಈ ಸಂಸಾರಕ್ಕೆ ಒಬ್ಬನೇ ಬಂದಿರುವಿ, ಮುಂದೆ ಒಬ್ಬನೇ ಸಾಗುತ್ತಿ. ನಿನ್ನ ಹಿಂದೆ- ಮುಂದೆ ಯಾರೂ ಇರುವುದಿಲ್ಲ. ಇಂತಹ ಭಯವು ಸನ್ನಿಹಿತವಾದಾಗ ಮೋಕ್ಷದಾಯಕವಾದ ಭಗವಂತನನ್ನು ಹೃದಯದಲ್ಲಿ ಧ್ಯಾನಿಸು.
ಸಕೂಲಮೂಲಬಾಂಧವಂ ಪ್ರಭುರ್ಹರತ್ಯಸಂಗವಾನ್ |
ನ ಸಂತಿ ಯಸ್ಯ ವಾರಕಾಃ ಕುರುಷ್ವ ಧರ್ಮಸನ್ನಿಧಿಮ್ ॥66॥
ಸಮರ್ಥವಾದ ಕಾಲವು ಸಂಗದಿಂದ ದೂರವಾಗಿದೆ. ಅದಕ್ಕೆ ಯಾರ ಜೊತೆಯೂ ಸ್ನೇಹವಿಲ್ಲ. ಆದ್ದರಿಂದಲೇ ದಡ ಸಹಿತವಾಗಿ ಸಮಸ್ತ ಬಂಧು-ಬಾಂಧವರನ್ನು ಆ ಕಾಲವು ಸಂಹರಿಸುತ್ತದೆ. ಅದನ್ನು ತಡೆಯುವ ಸಾಮರ್ಥ್ಯವು ಯಾರಿಗೂ ಇಲ್ಲ. ಆ ಕಾಲವನ್ನು ಜಯಿಸುವ ದೃಷ್ಟಿಯಿಂದ ಧರ್ಮವನ್ನು ಸಂಗ್ರಹಿಸು.
ಇದಂ ನಿದರ್ಶನಂ ಮಯಾ ತವೇಹ ಪುತ್ರ ಸಮ್ಮತಮ್ |
ಸ್ವದರ್ಶನಾನುಮಾನತಃ ಪ್ರವರ್ಣಿತಂ ಕುರುಷ್ವ ತತ್ ॥67॥
ಮಗನೇ, ನಾನು ನನ್ನ ಶಾಸ್ತ್ರಜ್ಞಾನದಿಂದಲೂ, ಯುಕ್ತಿಯಿಂದಲೂ ನಿನಗೆ ಯಾವ ಜ್ಞಾನವನ್ನು ಉಪದೇಶಿಸಿದ್ದೇನೋ ಆ ಉಪದೇಶಕ್ಕೆ ಅನುಗುಣವಾಗಿ ನೀನು ಧರ್ಮವನ್ನಾಚರಿಸು.
ದಧಾತಿ ಯಃ ಸ್ವಕರ್ಮಣಾ ಧನಾನಿ ಯಸ್ಯ ಕಸ್ಯಚಿತ್ |
ಅಬುದ್ಧಿಮೋಹಜೈರ್ಗುಣೈಃ ಶತೈಕ ಏವ ಯುಜ್ಯತೇ ॥68॥
ಯಾವ ಪುರುಷನು ತನ್ನ ಸತ್ಕರ್ಮದ ಮೂಲಕ ಪುಣ್ಯವನ್ನು ಸಂಪಾದಿಸುತ್ತಾನೋ, ತಾನು ಸಂಪಾದಿಸಿದ ಕರ್ಮವನ್ನು ನಿಷ್ಕಾಮನೆಯಿಂದ ಸಮರ್ಪಿಸುತ್ತಾನೋ ಅಂತಹ ಪುರುಷನೇ ಮೋಹಕ್ಕೆ ತುತ್ತಾಗದ ಬುದ್ಧಿಯಿಂದ ಉತ್ತಮ ಗುಣಗಳನ್ನು ಹೊಂದುತ್ತಾನೆ.
ಶುಭಂ ಸಮಸ್ತಮಶ್ನುತೇ ಪ್ರಕುರ್ವತಃ ಶುಭಾಃ ಕ್ರಿಯಾಃ |
ತದೇವ ತತ್ರ ದರ್ಶನಂ ಕೃತಜ್ಞಮರ್ಥಸಂಹಿತಮ್ ॥69॥
ಸತ್ಕರ್ಮವನ್ನೇ ಆಚರಿಸುವವನು ಸಮಸ್ತ ಮಂಗಳಕರವಾದ ಮಾರ್ಗವನ್ನೇ ಹೊಂದುತ್ತಾನೆ. ಶುಭಕರ್ಮಗಳನ್ನು ನಡೆಸುವವನು ಅವನು ಹೊಂದುವ ಫಲಗಳೇ ಅವನ ಕರ್ಮಗಳಿಗೆ ಸಾಕ್ಷಿಯಾಗಿವೆ. ತನಗುಂಟಾಗುವ ಪ್ರಯೋಜನಗಳಿಂದ ತನ್ನ ಕರ್ಮಗಳನ್ನು ತಾನೇ ಅರ್ಥ ಮಾಡಿಕೊಳ್ಳುತ್ತಾನೆ.
ನಿಬಂಧನೀ ರಜ್ಜುರೇಷಾ ಯಾ ಗ್ರಾಮೇ ವಸತೋ ರತಿಃ |

ಛಿತ್ತ್ವೈನಾಂ ಸುಕೃತೋ ಯಾಂತಿ ನೈನಾಂ ಛಿಂದಂತಿ ದುಷ್ಕೃತಃ ॥70॥
ಮನುಷ್ಯನು ಗ್ರಾಮದಲ್ಲಿ ವಾಸ ಮಾಡುತ್ತಾ, ಸುಖಭೋಗಗಳಲ್ಲಿ ಯಾವ ಆಸಕ್ತಿಯನ್ನು ಹೊಂದಿರುತ್ತಾನೋ ಆ ಆಸಕ್ತಿಯೇ ಅವನನ್ನು ಬಂಧಿಸಿರುವ ಹಗ್ಗ ಎನಿಸಿದೆ. ಪುಣ್ಯಪುರುಷರು ಈ ಆಸಕ್ತಿ ಎಂಬ ಹಗ್ಗವನ್ನು ಕತ್ತರಿಸಿ ಪುಣ್ಯವನ್ನು ಸಂಪಾದಿಸುತ್ತಾರೆ. ಪಾಪಚೇತನರು ಭೋಗದ ಮೋಹವೆಂಬ ಪಾಶವನ್ನು ಕತ್ತರಿಸಲು ಪ್ರಯತ್ನಿಸುವುದಿಲ್ಲ.

ಕಿಂ ತೇ ಧನೇನ ಕಿಂ ಬಂಧುಭಿಸ್ತೇ
ಕಿಂ ತೇ ಪುತ್ರೈಃ ಪುತ್ರಕ ಯೋ ಮರಿಷ್ಯಸಿ |
ಆತ್ಮಾನಮನ್ವಿಚ್ಛ ಗುಹಾಂ ಪ್ರವಿಷ್ಟಂ
ಪಿತಾಮಹಾಸ್ತೇ ಕ್ವ ಗತಾಶ್ಚ ಸರ್ವೇ ॥71॥
ಮಗನೇ, ಮರಣೋನ್ಮುಖನಾದ ನಿನಗೆ ಧನದಿಂದ, ಬಂಧು, ಸುತರಿಂದ ಏನಾಗಬೇಕಾಗಿದೆ? ಆದ್ದರಿಂದ ಹೃದಯಗುಹೆಯಲ್ಲಿ ಪ್ರವಿಷ್ಟನಾಗಿರುವ ಪರಮಾತ್ಮನನ್ನು ಅನುಸಂಧಾನ ಮಾಡು. ನಿನ್ನ ತಾತ-ಮುತ್ತಾತರೆಲ್ಲ ಎಲ್ಲಿಗೆ ಹೋಗಿದ್ದಾರೆಂದು ನೀನೇ ಯೋಚಿಸು.

ಶ್ವಃಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಮ್ |
ಕೋ ಹಿ ತದ್ವೇದ ಕಸ್ಯಾದ್ಯ ಮೃತ್ಯುಸೇನಾ ನಿವೇಕ್ಷ್ಯತೇ ॥72॥
ನಾಳೆ ಮಾಡಬೇಕಾದ ಕೆಲಸವನ್ನು ಇಂದೇ ಮಾಡು. ಮಧ್ಯಾಹ್ನ ಮಾಡಬೇಕಾದ ಕೆಲಸವನ್ನು ಬೆಳಿಗ್ಗೆಯೇ ಮಾಡು. ಕಾರಣ ಮೃತ್ಯುವು ಅವನ ಕಾರ್ಯವು ಮುಗಿಯಿತೋ ಇಲ್ಲವೋ ಎಂದು ನೋಡುವುದಿಲ್ಲ.

ಅನುಗಮ್ಯ ಶ್ಮಶಾನಾಂತಂ ನಿವರ್ತಂತೀಹ ಬಾಂಧವಾಃ |
ಅಗ್ನೌ ಪ್ರಕ್ಷಿಪ್ಯ ಪುರುಷಂ ಜ್ಞಾತಯಃ ಸುಹೃದಸ್ತಥಾ ॥73॥
ಬಂಧು-ಬಾಂಧವರೆಲ್ಲರೂ ಸತ್ತ ಬಳಿಕ ಸ್ಮಶಾನದ ತನಕ ಆಗಮಿಸಿ, ಮನೆಗೆ ತೆರಳುತ್ತಾರೆ. ಮೃತನನ್ನು ಚಿತೆಯ ಮೇಲಿಟ್ಟು ಬೆಂಕಿಯನ್ನು ಹೊತ್ತಿಸಿ ಮಿತ್ರರು, ಬಂಧು- ಬಾಂಧವರೆಲ್ಲರೂ ತಮ್ಮ ಮನೆಗೆ ತೆರಳುತ್ತಾರೆ.

ನಾಸ್ತಿಕಾನ್ನಿರನುಕ್ರೋಶಾನ್ನರಾನ್ ಪಾಪಮತೌ ಸ್ಥಿತಾನ್ |
ವಾಮತಃ ಕುರು ವಿಶ್ರಬ್ಧಂ ಪರಂ ಪ್ರೇಪ್ಸುರತಂದ್ರಿತಃ ॥74॥
ಪರಮಾತ್ಮನನ್ನು ಹೊಂದಲು ಬಯಸಿರುವ ನೀನು ನಾಸ್ತಿಕರನ್ನೂ, ದಯಾ ಹೀನರನ್ನೂ, ಪಾಪಬುದ್ಧಿಯುಳ್ಳವರನ್ನು ಯಾವ ರೀತಿಯಲ್ಲೂ ಅನುಸರಿಸದೆ, ಉದಾಸೀನ ಮಾಡದೆ ಅವರನ್ನು ಪರಿತ್ಯಜಿಸು.

ಏವಮಭ್ಯಾಹತೇ ಲೋಕೇ ಕಾಲೇನೋಪನಿಪೀಡಿತೇ |
ಸುಮಹದ್ಧೈರ್ಯಮಾಲಂಬ್ಯ ಧರ್ಮಂ ಸರ್ವಾತ್ಮನಾ ಕುರು ॥75॥
ಹೀಗೆ ಲೋಕವು ಕಾಲನಿಂದ ತಡೆಯಲ್ಪಟ್ಟು ಪೀಡಿತವಾಗುತ್ತಿರುವ ನೀನು ಪ್ರಚಂಡವಾದ ಧೈರ್ಯವನ್ನು ಹೊಂದಿ ಎಲ್ಲ ರೀತಿಯಿಂದಲೂ ಧರ್ಮವನ್ನಾಚರಿಸಲು ಪ್ರಯತ್ನಿಸು.

ಅಥೇಮಂ ದರ್ಶನೋಪಾಯಂ ಸಮ್ಯಗ್ಯೋ ವೇತ್ತಿ ಮಾನವಃ |
ಸಮ್ಯಕ್ಸ ಧರ್ಮಂ ಕೃತ್ವೇಹ ಪರತ್ರ ಸುಖಮೇಧತೇ ॥76॥
ಯಾವ ಮನುಷ್ಯನು ಈ ರೀತಿಯಾದ ಭಗವತ್ಸಾಕ್ಷಾತ್ಕಾರದ ಉಪಾಯವನ್ನು ತಿಳಿದಿರುತ್ತಾನೋ, ಅವನು ಈ ಲೋಕದಲ್ಲಿ ಸ್ವಧರ್ಮವನ್ನು ಪರಿಪಾಲಿಸುತ್ತಾ, ಪರಲೋಕದಲ್ಲೂ ಸುಖವನ್ನು ಅನುಭವಿಸುತ್ತಾನೆ.

ನ ದೇಹಭೇದೇ ಮರಣಂ ವಿಜಾನತಾಂ
ನ ಚ ಪ್ರಣಾಶಃ ಸ್ವನುಪಾಲಿತೇ ಪಥಿ |
ಧರ್ಮಂ ಹಿ ಯೋ ವರ್ಧಯತೇ ಸ ಪಂಡಿತೋ
ಯ ಏವ ಧರ್ಮಾಚ್ಚ್ಯವತೇ ಸ ಮುಹ್ಯತಿ ॥77॥
ದೇಹವು ನಾಶವನ್ನು ಹೊಂದಿದರೂ ಆತ್ಮನಿಗೆ ನಾಶವಿಲ್ಲ. ಸಜ್ಜನರ ಮಾರ್ಗದಲ್ಲಿ ಚಲಿಸುವ ವ್ಯಕ್ತಿಗೆ ವಿನಾಶವಿಲ್ಲ ಎಂದು ಯಾವನು ತಿಳಿಯುತ್ತಾನೋ ಅವನೇ ವಿದ್ವಾಂಸನು. ಯಾವನು ಧರ್ಮವನ್ನು ಬೆಳೆಸಲು ಪ್ರಯತ್ನಿಸುತ್ತಾನೋ ಅವನೇ ಪಂಡಿತನು. ಯಾವನು ಧರ್ಮಮಾರ್ಗದಿಂದ ಭ್ರಷ್ಟನಾಗುತ್ತಾನೋ ಅವನು ಮೋಹಕ್ಕೆ ತುತ್ತಾಗುತ್ತಾನೆ.

ಪ್ರಯುಕ್ತಯೋಃ ಕರ್ಮಪಥಿ ಸ್ವಕರ್ಮಣೋಃ
ಫಲಂ ಪ್ರಯೋಕ್ತಾ ಲಭತೇ ಯಥಾವಿಧಿ |
ನಿಹೀನಕರ್ಮಾ ನಿರಯಂ ಪ್ರಪದ್ಯತೇ
ತ್ರಿವಿಷ್ಟಪಂ ಗಚ್ಛತಿ ಧರ್ಮಪಾರಗಃ ॥78॥
ಕರ್ಮಮಾರ್ಗದಲ್ಲಿ ಸಾಗುವವನು ಶುಭಾಶುಭಕರ್ಮಗಳಿಗನುಗುಣವಾಗಿ ಫಲವನ್ನು ಹೊಂದುತ್ತಾನೆ. ನೀಚಕರ್ಮಿಯು ನರಕಕ್ಕೆ, ಧರ್ಮಾಸಕ್ತನು ಸ್ವರ್ಗಕ್ಕೆ ಹೋಗುತ್ತಾನೆ.

ಸೋಪಾನಭೂತಂ ಸ್ವರ್ಗಸ್ಯ ಮಾನುಷ್ಯಂ ಪ್ರಾಪ್ಯ ದುರ್ಲಭಮ್ |
ತಥಾತ್ಮಾನಂ ಸಮಾದಧ್ಯಾದ್ ಭ್ರಶ್ಯೇತ ನ ಪುನರ್ಯಥಾ ॥79॥
ಸ್ವರ್ಗಕ್ಕೆ ಮೆಟ್ಟಿಲಿನಂತಿರುವ ದುರ್ಲಭವಾದ ಮನುಷ್ಯ ದೇಹವನ್ನು ಪಡೆದ ಬಳಿಕ ನೀಚಯೋನಿಗಳಲ್ಲಿ ಸಾಗುವಂತಹ ಭ್ರಷ್ಟ ಧರ್ಮಗಳನ್ನು ತೊರೆದು, ಉತ್ತಮ ಧರ್ಮಗಳಿಂದ ತನ್ನನ್ನು ಉನ್ನತ ಸ್ಥಾನಕ್ಕೆ ಪತನ ಹೊಂದದಂತೆ ಏರಿಸಿಕೊಳ್ಳಬೇಕು.

ಯಸ್ಯ ನೋತ್ಕ್ರಾಮತಿ ಮತಿಃ ಸ್ವರ್ಗಮಾರ್ಗಾನುಸಾರಿಣೀ |
ತಮಾಹುಃ ಪುಣ್ಯಕರ್ಮಾಣಮಶೋಚ್ಯಂ ಮಿತ್ರಬಾಂಧವೈಃ ॥80॥

ಯಾವನ ಬುದ್ಧಿಯು ಸ್ವರ್ಗಮಾರ್ಗಕ್ಕೆ ಅನುಸಾರಿಯಾಗಿ ಇದ್ದು, ಅಧರ್ಮ ಮಾರ್ಗದಲ್ಲಿ ಅತಿಕ್ರಮಿಸಿ ಹೋಗುವುದಿಲ್ಲವೋ ಅವನನ್ನು ಪುಣ್ಯಕರ್ಮಿ ಎಂದು ಜನರು ಹೇಳುತ್ತಾರೆ. ಅವನು ಪುತ್ರ-ಮಿತ್ರ ಬಂಧು-ಬಾಂಧವರ ಶೋಕಕ್ಕೆ ತುತ್ತಾಗುವುದಿಲ್ಲ.
ಯಸ್ಯ ನೋಪಹತಾ ಬುದ್ಧಿರ್ನಿಶ್ಚಯೇಷ್ವವಲಂಬತೇ |
ಸ್ವರ್ಗೇ ಕೃತಾವಕಾಶಸ್ಯ ತಸ್ಯ ನಾಸ್ತಿ ಮಹದ್ಭಯಮ್ ॥81॥
ಯಾರ ಬುದ್ಧಿಯು ದೂಷಿತವಲ್ಲವೋ, ನಿಶ್ಚಿತವಾಗಿದೆಯೋ ಅವರಿಗೆ ಸ್ವರ್ಗದಲ್ಲಿ ಸ್ಥಾನವು ನಿಶ್ಚಯವು. ಭಯಂಕರ ನರಕವು ದೊರೆಯುವುದಿಲ್ಲ.
ತಪೋವನೇಷು ಯೇ ಜಾತಾಸ್ತತ್ರೈವ ನಿಧನಂ ಗತಾಃ |
ತೇಷಾಮಲ್ಪತರೋ ಧರ್ಮಃ ಕಾಮಭೋಗಮಜಾನತಾಮ್ ॥82॥
ತಪೋವನದಲ್ಲಿಯೇ ಹುಟ್ಟಿ ಅಲ್ಲಿಯೇ ಮರಣವನ್ನು ಹೊಂದುವ ವ್ಯಕ್ತಿಗೆ ಲಭಿಸುವ ಧರ್ಮವು ಅತ್ಯಂತ ಅಲ್ಪವು. ಕಾರಣ ಅಲ್ಲಿಯ ವ್ಯಕ್ತಿಗಳಿಗೆ ಕಾಮಭೋಗದ ವಿಷಯವೇ ತಿಳಿದಿರುವುದಿಲ್ಲ.
ಯಸ್ತು ಭೋಗಾನ್ ಪರಿತ್ಯಜ್ಯ ಶರೀರೇಣ ತಪಶ್ಚರೇತ್ |
ನ ತೇನ ಕಿಂಚಿನ್ನ ಪ್ರಾಪ್ತಂ ತನ್ಮೇ ಬಹುಮತಂ ಫಲಮ್ ॥83॥
ಯಾವನು ಭೋಗಗಳನ್ನು ಸಂಪೂರ್ಣವಾಗಿ ತ್ಯಜಿಸಿ, ಅರಣ್ಯಕ್ಕೆ ಸಾಗಿ ಶಾರೀರಿಕ ತಪಸ್ಸನ್ನು ಆಚರಿಸುತ್ತಾನೋ ಅವನಿಗೆ ಅಧಿಕವಾದ ಫಲವು ದೊರೆಯುತ್ತದೆ ಎಂದು ನನ್ನ ಅಭಿಪ್ರಾಯ. ಅವನು ತಪಸ್ಸಿನಿಂದ ಪಡೆಯದ ಪದಾರ್ಥವೇ ಇರುವುದಿಲ್ಲ. ಯಾವುದನ್ನಾದರೂ ತಪಸ್ಸಿನಿಂದಲೇ ಹೊಂದಬಹುದು.
ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ |
ಅನಾಗತಾನ್ಯತೀತಾನಿ ಕಸ್ಯ ತೇ ಕಸ್ಯ ವಾ ವಯಮ್ ॥84॥
ಮನುಷ್ಯರಿಗೆ ಸಾವಿರಾರು ತಂದೆ, ಸಾವಿರಾರು ತಾಯಿ, ಸಾವಿರಾರು ಮಕ್ಕಳು, ಸಾವಿರಾರು ಹೆಂಡಂದಿರು ಹಿಂದೆ ಬಂದಿದ್ದಾರೆ, ಮುಂದೆ ಬರುವವರಿದ್ದಾರೆ. ಈ ಜೀವನು ಯಾರಿಗೆ ಸಂಬಂಧಿಸಿದ್ದಾನೆ? ಅವರೆಲ್ಲರೂ ಯಾರಿಗೆ ಸಂಬಂಧಿಸಿದವರು?
ನ ತೇಷಾಂ ಭವತಾ ಕಾರ್ಯಂ ನ ಕಾರ್ಯಂ ತವ ತೈರಪಿ |
ಸ್ವಕೃತೈಸ್ತಾನಿ ಯಾತಾನಿ ಭವಾಂಶ್ಚೈವ ಗಮಿಷ್ಯತಿ ॥85॥
ಅವರಿಂದ ನನಗೆ ಯಾವ ಕಾರ್ಯವೂ ಆಗಬೇಕಾಗಿಲ್ಲ. ನಿನಗೂ ಆಗಬೇಕಾದದ್ದು ಏನೂ ಇಲ್ಲ. ಪ್ರಾಣಿಗಳು ಅವುಗಳ ಕರ್ಮಕ್ಕನುಸಾರವಾಗಿ ಹೊರಟು ಹೋಗುತ್ತವೆ. ಹಾಗೆ ನೀನೂ ಹೋಗುತ್ತಿ.
ಇಹ ಲೋಕೇ ಹಿ ಧನಿನಾಂ ಪರೋಽಪಿ ಸ್ವಜನಾಯತೇ |
ಸ್ವಜನಸ್ತು ದರಿದ್ರಾಣಾಂ ಜೀವತಾಮೇವ ನಶ್ಯತಿ ॥86॥
ಈ ಲೋಕದಲ್ಲಿ ಧನಿಕನಿಗೆ ಪರಜನರು ಬಂಧುಜನರಂತಿರುತ್ತಾರೆ. ದರಿದ್ರರಿಗೆ ಬಂಧುಜನರು ಬದುಕಿದ್ದಾಗಲೂ ಸತ್ತವರಂತಿರುತ್ತಾರೆ.
ಸಂಚಿನೋತ್ಯಶುಭಂ ಕರ್ಮ ಕಲತ್ರಾಪೇಕ್ಷಯಾ ನರಃ |
ತತಃ ಕ್ಲೇಶಮವಾಪ್ನೋತಿ ಪರತ್ರೇಹ ತಥೈವ ಚ ॥87॥
ಮನುಷ್ಯನು ತನ್ನ ಪತ್ನಿಯೇ ಮೊದಲಾದವರ ರಕ್ಷಣೆಗಾಗಿ ಅಶುಭ ಕರ್ಮವನ್ನು ಆಚರಿಸುತ್ತಾನೆ. ಇದರಿಂದ ಅವನು ಇಹ-ಪರಲೋಕಗಳಲ್ಲಿ ದುಃಖವನ್ನು ಹೊಂದುತ್ತಾನೆ.
ಪಶ್ಯ ತ್ವಂ ಛಿದ್ರಭೂತಂ ಹಿ ಜೀವಲೋಕಂ ಸ್ವಕರ್ಮಣಾ |
ತತ್ಕುರುಷ್ವ ತಥಾ ಪುತ್ರ ಕೃತ್ಸ್ನಂ ಯತ್ ಸಮುದಾಹೃತಮ್ ॥88॥
ಮಗನೇ, ಸಮಗ್ರ ಮನುಷ್ಯ ಪ್ರಪಂಚವು ತಮ್ಮ ಕರ್ಮದಿಂದ ದೋಷವನ್ನು ಹೊಂದುತ್ತಿರುವುದನ್ನು ನೀನೇ ನೋಡು. ಆದ್ದರಿಂದ ಹಿಂದೆ ತಿಳಿಸಿದಂತೆ ಪೂರ್ಣತೆಗೆ ಕಾರಣವಾದ ಸಮಗ್ರ ಧರ್ಮಗಳನ್ನು ಆಚರಿಸು.
ತದೇತತ್ ಸಂಪ್ರದೃಶ್ಯೈವ ಕರ್ಮಭೂಮಿಂ ಪ್ರವಿಶ್ಯ ತಾಮ್ |
ಶುಭಾನ್ಯಾಚರಿತವ್ಯಾನಿ ಪರಲೋಕಮಭೀಪ್ಸತಾ ॥89॥
ಈ ಲೋಕವು ಕರ್ಮಭೂಮಿ ಎನ್ನುವುದನ್ನು ಚೆನ್ನಾಗಿ ತಿಳಿದು ಪರಲೋಕವನ್ನು ಬಯಸುವ ಪುರುಷನು ಶುಭಕರ್ಮಗಳನ್ನೇ ಯಾವಾಗಲೂ ಆಚರಿಸುತ್ತಿರಬೇಕು.
ಮಾಸರ್ತುಸಂಜ್ಞಾಪರಿವರ್ತಕೇನ
ಸೂರ್ಯಾಗ್ನಿನಾ ರಾತ್ರಿದಿವೇಂಧನೇನ |
ಸ್ವಕರ್ಮನಿಷ್ಠಾಫಲಸಾಕ್ಷಿಕೇಣ
ಭೂತಾನಿ ಕಾಲಃ ಪಚತಿ ಪ್ರಸಹ್ಯ ॥90॥
ಕಾಲನೆಂಬ ಪಾಚಕನು ಕರ್ಮಫಲ ಸಾಕ್ಷಿ ಎನಿಸಿದ ಹಗಲು-ರಾತ್ರಿಗಳೆಂಬ ಕಟ್ಟಿಗೆಗಳಿಂದ, ಸೂರ್ಯನೆಂಬ ಅಗ್ನಿಯಿಂದ, ಮಾಸ-ಋತು ಎಂಬ ಹೆಸರಿನ ಹುಟ್ಟಿನಿಂದ ಪ್ರಾಣಿಗಳನ್ನು ಪುನಃ ಪುನಃ ಬಲಾತ್ಕಾರವಾಗಿ ಮೊಗಚುತ್ತಾ ಬೇಯಿಸುತ್ತಾನೆ.
ಧನೇನ ಕಿಂ ಯನ್ನ ದದಾತಿ ನಾಶ್ನುತೇ
ಬಲೇನ ಕಿಂ ಯೇನ ರಿಪೂನ್ನ ಬಾಧತೇ |
ಶ್ರುತೇನ ಕಿಂ ಯೇನ ನ ಧರ್ಮಮಾಚರೇತ್
ಕಿಮಾತ್ಮನಾ ಯೋ ನ ಜಿತೇಂದ್ರಿಯೋ ವಶೀ ॥91॥
ತಾನು ಉಣ್ಣದ, ಪರರಿಗೆ ಇಕ್ಕದ ಧನದಿಂದ ಏನು ಪ್ರಯೋಜನ? ಶತ್ರುಗಳನ್ನು ಸದೆಬಡಿಯದಿರುವ ಬಲದಿಂದ ಏನು ಪ್ರಯೋಜನ? ಆಚರಣೆಯಿಲ್ಲದ ಶಾಸ್ತ್ರ ಶ್ರವಣದಿಂದ ಏನು ಪ್ರಯೋಜನ? ಮನೋನಿಗ್ರಹವಿಲ್ಲದ ಅಜಿತೇಂದ್ರಿಯನಿಗೆ ಈ ತನ್ನದರಿಂದೇನು

ಪ್ರಯೋಜನ?
ಇದಂ ದ್ವೈಪಾಯನವಚೋ ಹಿತಮುಕ್ತಂ ನಿಶಮ್ಯ ತು |
ಶುಕೋ ಗತಃ ಪರಿತ್ಯಜ್ಯ ಪಿತರಂ ಮೋಕ್ಷದೇಶಿಕಮ್ ॥92॥
ಯುಧಿಷ್ಠಿರನೇ, ವ್ಯಾಸರು ಹೇಳಿದ ಹಿತಕರವಾದ ಪ್ರವಚನವನ್ನು ಕೇಳಿ ಶುಕಮುನಿಯು ತಂದೆಯನ್ನು ಪರಿತ್ಯಜಿಸಿ ಮೋಕ್ಷ ತತ್ತ್ವೋಪದೇಶಕನಾದ ಗುರುವನ್ನು ಹುಡುಕಿಕೊಂಡು ಹೊರಟು ಹೋದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ನಾಲ್ಕನೆಯ ಅಧ್ಯಾಯ
ಶುಭಾಶುಭ ಕರ್ಮಗಳ ಫಲವನ್ನು ಅನುಭವಿಸಬೇಕು ಎಂಬುದರ ವಿವರಣೆ
ಯುಧಿಷ್ಠಿರಃ
ಯದ್ಯಸ್ತಿ ದತ್ತಮಿಷ್ಟಂ ವಾ ತಪಸ್ತಪ್ತಂ ತಥೈವ ಚ |
ಗುರೂಣಾಂ ವಾಪಿ ಶುಶ್ರೂಷಾ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ದಾನ, ಯಜ್ಞ, ತಪಸ್ಸು, ಗುರುಸೇವೆ ಇದರಿಂದ ಯಾವ ಫಲವು ದೊರೆಯುತ್ತದೆಯೋ ಅದನ್ನು ನನಗೆ ತಿಳಿಸು.
ಭೀಷ್ಮಃ
ಆತ್ಮನಾಽನರ್ಥಯುಕ್ತೇನ ಪಾಪೇ ನಿವಿಶತೇ ಮನಃ |
ಸ ಕರ್ಮ ಕಲುಷಂ ಕೃತ್ವಾ ಕ್ಲೇಶೇ ಮಹತಿ ಧೀಯತೇ ॥2॥
ಭೀಷ್ಮ ಯುಧಿಷ್ಠಿರನೇ, ಕಾಮ-ಕ್ರೋಧಗಳೆಂಬ ಅನರ್ಥಗುಣಗಳಿಂದ ಕೂಡಿದ, ಬುದ್ಧಿಯಿಂದ ಪ್ರೇರಿತವಾದ ಮನಸ್ಸು ಪಾಪಕರ್ಮದಲ್ಲಿ ಆಸಕ್ತವಾಗುತ್ತದೆ. ಮನುಷ್ಯನು ಅಂತಹ ದೋಷಪೂರ್ಣವಾದ ಕರ್ಮಗಳನ್ನೇ ಆಚರಿಸಿ ಪರಿಣಾಮವಾಗಿ ಮಹಾಕ್ಲೇಶದಲ್ಲಿ ಸಿಕ್ಕಿಕೊಳ್ಳುತ್ತಾನೆ.
ದುರ್ಭಿಕ್ಷಾದೇವ ದುರ್ಭಿಕ್ಷಂ ಕ್ಲೇಶಾತ್ ಕ್ಲೇಶಂ ಭಯಾದ್ ಭಯಮ್ |
ಮೃತೇಭ್ಯಃ ಪ್ರಮೃತಾ ಯಾಂತಿ ದರಿದ್ರಾಃ ಪಾಪಕರ್ಮಿಣಃ ॥3॥
ಪಾಪಕರ್ಮ ಪ್ರಯುಕ್ತವಾಗಿ ದರಿದ್ರರಾದ ಮನುಷ್ಯರು ದುರ್ಭಿಕ್ಷದಿಂದ ಕೂಡಿದ ದೇಶದಿಂದ ಅಂತಹ ದುರ್ಭಿಕ್ಷವುಳ್ಳ ದೇಶಕ್ಕೆ ಹೋಗುತ್ತಾರೆ. ಉತ್ತಮ ಸಮೃದ್ಧಿಯಾದ ದೇಶ ಅವರಿಗೆ ದೊರೆಯುವುದಿಲ್ಲ. ಒಂದು ಭಯವನ್ನು ಹೊಂದಿದ ಬಳಿಕ ಮತ್ತೊಂದು ಭಯ ಅವರನ್ನು ಆಕ್ರಮಿಸುತ್ತದೆ. ಸತ್ತವರಿಗಿಂತಲೂ ಅಧಿಕವಾದ ಸಾವು ಇವರದ್ದು.
ಉತ್ಸವಾದುತ್ಸವಂ ಯಾಂತಿ ಸ್ವರ್ಗಾತ್ ಸ್ವರ್ಗಂ ಸುಖಾತ್ ಸುಖಮ್ |
ಶ್ರದ್ದಧಾನಾಶ್ಚ ದಾಂತಾಶ್ಚ ಧನಸ್ಥಾಃ ಶುಭಕಾರಿಣಃ ॥4॥
ಶ್ರದ್ಧಾಳುಗಳಾದ, ಜಿತೇಂದ್ರಿಯರಾದ ಶುಭಕರ್ಮಗಳನ್ನಾಚರಿಸಿದವರು ಧನಿಕರಾಗಿ ಒಂದು ಸುಖದಿಂದ ಮತ್ತೊಂದು ಸುಖವನ್ನು, ಸ್ವರ್ಗದಿಂದ ಸ್ವರ್ಗವನ್ನು ಹೊಂದುತ್ತಾರೆ. ಉತ್ಸವದಿಂದ ಇನ್ನೊಂದು ಉತ್ಸವವನ್ನು ಆಚರಿಸುತ್ತಾರೆ.
ವ್ಯಾಲಕುಂಜರದುರ್ಗೇಷು ಸರ್ಪಚೋರಭಯೇಷು ಚ |
ಹಸ್ತಾವಾಪೇನ ಗಚ್ಛಂತಿ ನಾಸ್ತಿಕಾಃ ಕಿಮತಃಪರಮ್ ॥5॥
ಯಾರು ಅಸತ್ಕರ್ಮಶೀಲರೋ ಅವರು ಧರ್ಮಭ್ರಷ್ಟರಾದ ಕಾರಣದಿಂದ ರಾಜನಿಂದ ಶಿಕ್ಷಿಸಲ್ಪಟ್ಟು ಬೇಲಿಗಳನ್ನು ತೊಡಿಸಿಕೊಂಡು ಹಾವು, ಕಳ್ಳರ ಭಯದಿಂದ ಕೂಡಿದ, ವಿಷಜಂತುಗಳಿಂದ, ಕಾಡಾನೆಗಳಿಂದ ಕೂಡಿದ ಭಯಂಕರವಾದ ಕಾಡಿನಲ್ಲಿ ಅಲೆಯುತ್ತಾರೆ. ಇವರಿಗೆ ಇದಕ್ಕಿಂತ ಅಧಿಕವಾದ ಶಿಕ್ಷೆ ಯಾವುದಿದೆ?
ಪ್ರಿಯದೇವಾತಿಥೇಯಾಶ್ಚ ವದಾನ್ಯಾಃ ಪ್ರಿಯಸಾಧವಃ |
ಕ್ಷೇಮ್ಯಮಾತ್ಮವತಾ ಮಾರ್ಗಮಾಸ್ಥಿತಾ ಹಸ್ತದಕ್ಷಿಣಾಃ ॥6॥
ಯಾರು ದೇವತೆಗಳಿಗೆ, ಅತಿಥಿಗಳಿಗೆ ಪ್ರಿಯರಾಗಿರುತ್ತಾರೋ, ಉದಾರಿಗಳಾಗಿರುತ್ತಾರೋ ಅಂತಹ ವ್ಯಕ್ತಿಗಳನ್ನು ದೇವತೆಗಳೇ ಕೈಹಿಡಿದು ಸ್ವರ್ಗಕ್ಕೆ ಕರೆದೊಯ್ಯುತ್ತಾರೆ. ಅವರು ಕ್ಷೇಮಕರವಾದ ಮೋಕ್ಷಕ್ಕೆ ಹೋಗುವ ಜ್ಞಾನಿಗಳ ಮಾರ್ಗವನ್ನು ಆಶ್ರಯಿಸಿರುತ್ತಾರೆ. ಅವರು ಸಜ್ಜನರಿಗೆ ಪ್ರಿಯರಾಗಿರುತ್ತಾರೆ.
ಪುಲಾಕಾ ಇವ ಧಾನ್ಯೇಷು ಪುತ್ತ್ಯಂಡಾ ಇವ ಪಕ್ಷಿಷು |
ತದ್ವಿಧಾಸ್ತೇ ಮನುಷ್ಯೇಷು ಯೇಷಾಂ ಧರ್ಮೋ ನ ಕಾರಣಮ್ ॥7॥
ಯಾರಿಗೆ ಜೀವನದಲ್ಲಿ ಧರ್ಮವು ಪರಮೋದ್ದೇಶವಾಗಿಲ್ಲವೋ, ಅವರು ಧಾನ್ಯದಲ್ಲಿ ಜೊಳ್ಳಿನಂತೆ, ಪಕ್ಷಿಗಳಲ್ಲಿ ಕೊಳೆತ ಮೊಟ್ಟೆಯಂತೆ ನಿಷ್ಪ್ರಯೋಜಕರಾಗುತ್ತಾರೆ.
ಸುಶೀಘ್ರಮಪಿ ಧಾವಂತಂ ವಿಧಾನಮನುಧಾವತಿ |
ಶೇತೇ ಸಹ ಶಯಾನೇನ ಯೇನ ಯೇನ ಯಥಾಕೃತಮ್ ॥8॥
ಮನುಷ್ಯನು ಯಾವ ಕರ್ಮವನ್ನಾಚರಿಸುತ್ತಾನೋ ಆ ಕರ್ಮಕ್ಕನುಗುಣವಾಗಿ ಫಲವು ಅವನನ್ನು ಅನುಸರಿಸುತ್ತದೆ. ಅವನು ಮಲಗಿದ್ದರೆ ಮಲಗಿದಲ್ಲೇ ಅನುಸರಿಸುತ್ತದೆ. ಯಾವ ಕರ್ಮವನ್ನು ಹೇಗೆ ಮಾಡಿದ್ದಾನೋ ಹಾಗೆ ಅದರ ಫಲವನ್ನು ಅನುಭವಿಸುತ್ತಾನೆ.

ಪಾಪಂ ತಿಷ್ಠತಿ ತಿಷ್ಠಂತಂ ಧಾವಂತಮನುಧಾವತಿ |
ಕರೋತಿ ಕುರ್ವತಃ ಕರ್ಮ ಚ್ಛಾಯೇವಾನುವಿಧೀಯತೇ ॥9॥
ಕರ್ಮವನ್ನು ಆಚರಿಸಿದವನು ನಿಂತಿದ್ದರೆ ಆ ಕರ್ಮವೂ ಅವನ ಜೊತೆ ನಿಂತಿರುತ್ತದೆ. ಚಲಿಸುತ್ತಿದ್ದರೆ ಜೊತೆಗೆ ಚಲಿಸುತ್ತದೆ. ಮಾಡಿದ ವ್ಯಕ್ತಿಯನ್ನು ಆಯಾ ಕರ್ಮವು ನೆರಳಿನಂತೆ ಜೊತೆಗೆ ಅನುಸರಿಸುತ್ತದೆ.
ಯೇನ ಯೇನ ಯಥಾ ಯದ್ಯತ್ ಪುರಾ ಕರ್ಮ ಸುನಿಶ್ಚಿತಮ್ |
ತತ್ತದೇವ ನರೋ ಭುಂಕ್ತೇ ನಿತ್ಯಂ ವಿಹಿತಮಾತ್ಮನಾ ॥10॥
ಯಾವ ಯಾವ ಮನುಷ್ಯನಿಂದ ಯಾವ ಯಾವ ಕರ್ಮಗಳು ಆಚರಿಸಲ್ಪಟ್ಟಿರುತ್ತವೆಯೋ ಆಯಾ ಮನುಷ್ಯರು ಆಯಾ ಕರ್ಮಗಳಿಗೆ ಅನುಗುಣವಾದ ಫಲಗಳನ್ನೇ ಏಕಾಕಿಯಾಗಿ ಅನುಭವಿಸುತ್ತಾರೆ.
ಸಮಾನಕರ್ಮನಿಕ್ಷೇಪಂ ವಿಧಾನಪರಿರಕ್ಷಣಮ್ |
ಭೂತಗ್ರಾಮಮಿಮಂ ಕಾಲಃ ಸಮಂತಾದಪಕರ್ಷತಿ ॥11॥
ಹಿಂದೆ ಅವನು ಯಾವ ಕರ್ಮವನ್ನು ಮಾಡಿದ್ದಾನೋ ಆ ಕರ್ಮದ ಫಲವನ್ನೇ ಅವನು ಅನುಭವಿಸುತ್ತಾನೆ. ಕಾಲವೆಂಬುದು ಭೂತಸಮುದಾಯವನ್ನು ಅನೇಕ ಕಡೆಯಿಂದ ಕಟ್ಟಿ ಸೆಳೆಯುತ್ತಾ, ಅವರವರ ಕರ್ಮಕ್ಕೆ ಯೋಗ್ಯವಾದ ಜನ್ಮವನ್ನು ತಂದೊಡ್ಡುತ್ತದೆ.
ಅಚೋದ್ಯಮಾನಾನಿ ಯಥಾ ಪುಷ್ಪಾಣಿ ಚ ಫಲಾನಿ ಚ |
ಸ್ವಂ ಕಾಲಂ ನಾತಿವರ್ತಂತೇ ತಥಾ ಕರ್ಮ ಪುರಾಕೃತಮ್ ॥12॥
ಫಲ-ಪುಷ್ಪಗಳು ಯಾರ ಪ್ರೇರಣೆಯೂ ಇಲ್ಲದೆ ಯೋಗ್ಯವಾದ ಕಾಲಕ್ಕೆ ಸರಿಯಾಗಿ ಮರದ ಗಿಡಗಳಿಂದ ಮೂಡಿಬರುವಂತೆ ಹಿಂದೆ ಮಾಡಿದ ಕರ್ಮದ ಫಲಗಳು ಆಯಾ ಕಾಲಕ್ಕೆ ಸರಿಯಾಗಿ ಮನುಷ್ಯರಲ್ಲಿ ಫಲಿಸುತ್ತವೆ.
ಸಮಾನಶ್ಚಾವಮಾನಶ್ಚ ಲಾಭಾಲಾಭೌ ಜಯಾಜಯೌ |
ಪ್ರವೃತ್ತಾ ನ ನಿವರ್ತಂತೇ ನಿಧನಾಂತಾಃ ಪದೇಪದೇ ॥13॥
ಸಮ್ಮಾನ, ಅವಮಾನಗಳು, ಲಾಭ-ನಷ್ಟಗಳು, ಉನ್ನತಿ-ಕ್ಷಯಗಳು ಪೂರ್ವಜನ್ಮದ ಕರ್ಮಾನುಸಾರವಾಗಿ ಹೆಜ್ಜೆ-ಹೆಜ್ಜೆಗಳಿಗೂ ಬರುತ್ತಿರುತ್ತವೆ. ಅವುಗಳನ್ನು ಅನುಭವಿಸಿದ ಬಳಿಕ ಹೊರಟುಹೋಗುತ್ತವೆ.
ಆತ್ಮನಾ ವಿಹಿತಂ ದುಃಖಮಾತ್ಮನಾ ವಿಹಿತಂ ಸುಖಮ್ |
ಗರ್ಭಶಯ್ಯಾಮುಪಾದಾಯ ಭಜತೇ ಪೂರ್ವದೇಹಿಕಮ್ ॥14॥
ತನ್ನ ಕರ್ಮದಿಂದಲೇ ದುಃಖವು ಒದಗಿಬರುತ್ತದೆ. ಸುಖವೂ ತನ್ನ ಕರ್ಮದಿಂದಲೇ ಲಭಿಸುತ್ತದೆ. ತಾಯಿಯ ಗರ್ಭವನ್ನು ಸೇರಿದ ಶಿಶುವು ಹಿಂದಿನ ಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮಗಳ ಫಲಗಳನ್ನು ಹೊಂದಲು ಆರಂಭಿಸುತ್ತದೆ.
ಬಾಲೋ ಯುವಾ ವಾ ವೃದ್ಧಶ್ಚ ಯತ್ಕರೋತಿ ಶುಭಾಶುಭಮ್ |
ತಸ್ಯಾಂತಸ್ಯಾಮವಸ್ಥಾಯಾಂ ಭುಂಕ್ತೇ ಜನ್ಮನಿ ಜನ್ಮನಿ ॥15॥
ಬಾಲಕನಾಗಲಿ, ಯುವಕನಾಗಲಿ, ವೃದ್ಧನಾಗಲಿ ಯಾವ ಅವಸ್ಥೆಗಳಲ್ಲಿ ಯಾವ ರೀತಿಯಾದ ಶುಭಾಶುಭ ಕರ್ಮಗಳನ್ನು ಆಚರಿಸುತ್ತಾನೋ ಅದರ ಫಲವನ್ನು ಅವನು ಜನ್ಮಾಂತರದಲ್ಲಿ ಆಯಾ ಅವಸ್ಥೆಗಳಲ್ಲಿಯೇ ಅನುಭವಿಸುತ್ತಾನೆ.
ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಮ್ |
ತಥಾ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ ॥16॥
ಹೇಗೆ ಸಾವಿರಾರು ಹಸುಗಳು ಒಂದೇ ಕೊಟ್ಟಿಗೆಯಲ್ಲಿದ್ದರೂ ಕರುವು ತನ್ನ ತಾಯಿಯನ್ನೇ ಹುಡುಕಿಕೊಂಡು ಹೋಗಿ, ಅದರ ಜೊತೆಗೇ ಸೇರುತ್ತದೋ ಅದೇ ರೀತಿ ಹಿಂದೆ ಮಾಡಿದ ಕರ್ಮಗಳು ಕರ್ತೃವನ್ನೇ ಅನುಸರಿಸಿ ಹೋಗುತ್ತವೆ. (ಒಬ್ಬನು ಮಾಡಿದ ಕರ್ಮದ ಫಲ ಮತ್ತೊಬ್ಬನಿಗೆ ಸೇರುವುದಿಲ್ಲ).
ಮಲಿನಂ ಹಿ ಯಥಾ ವಸ್ತ್ರಂ ಪಶ್ಚಾಚ್ಛುಧ್ಯತಿ ವಾರಿಣಾ |
ಉಪವಾಸೈಃ ಪ್ರತಪ್ತಾನಾಂ ದೀರ್ಘಂ ಸುಖಮನಂತಕಮ್ ॥17॥
ಮಲಿನ ವಸ್ತ್ರವು ನೀರಿನಲ್ಲಿ ಸ್ವಚ್ಛಗೊಳಿಸಿದ ಬಳಿಕ ಶುಭ್ರವಾಗುವಂತೆ ಮನುಷ್ಯನ ಮನಸ್ಸು ಉಪವಾಸಾದಿ ವ್ರತಗಳಿಂದ ಶುದ್ಧವಾಗುತ್ತದೆ. ಮನಸ್ಸು ಶುದ್ಧವಾದ ಬಳಿಕ ದೀರ್ಘವಾದ ಅನಂತ ಸುಖವು ಸಿಗುತ್ತದೆ.
ದೀರ್ಘಕಾಲೇನ ತಪಸಾ ಸೇವಿತೇನ ತಪೋವನೇ |
ಧರ್ಮನಿರ್ಧೂತಪಾಪಾನಾಂ ಸಂಸಿದ್ಧ್ಯಂತೇ ಮನೋರಥಾಃ ॥18॥
ಧರ್ಮದಿಂದ ಪಾಪವನ್ನು ತೊಳೆದುಕೊಂಡವರಿಗೆ ಬಹಳ ಕಾಲದ ಬಳಿಕ ತಪಸ್ಸಿನ ಫಲವಾಗಿ ಮನೋರಥಗಳು ಸಿದ್ಧಿಸುತ್ತವೆ.
ಶಕುನಾನಾಮಿವಾಕಾಶೇ ಮತ್ಸ್ಯಾನಾಮಿವ ಚೋದಕೇ |
ಪದಂ ಯಥಾ ನ ದೃಶ್ಯೇತ ತಥಾ ಪುಣ್ಯಕೃತಾಂ ಗತಿಃ ॥19॥
ಆಕಾಶದಲ್ಲಿ ಸಂಚರಿಸುವ ಪಕ್ಷಿಗಳ, ನೀರಿನಲ್ಲಿ ಸಂಚರಿಸುವ ಮೀನುಗಳ ಹೆಜ್ಜೆಯ ಗುರುತು ಹೇಗೆ ಕಾಣಿಸುವುದಿಲ್ಲವೋ ಅದರಂತೆ ಪುಣ್ಯಾತ್ಮರಾದ ಜ್ಞಾನಿಗಳ ಮಾರ್ಗವು ಯಾವುದೆಂಬುದು ತಿಳಿಯುವುದಿಲ್ಲ.
ಅಲ್ಪಮನ್ಯೈರುಪಾಲಬ್ಧೈಃ ಕೀರ್ತಿತೈಶ್ಚ ವ್ಯತಿಕ್ರಮೈಃ |
ಪೇಶಲಂ ಚಾನುರೂಪಂ ಚ ಕರ್ತವ್ಯಂ ಹಿತಮಾತ್ಮನಃ ॥20॥
ಅನೇಕ ಕಾರಣಗಳನ್ನು ಹೇಳಿಕೊಂಡು ಪರರನ್ನು ನಿಂದಿಸುವುದನ್ನು ವರ್ಜಿಸಬೇಕು. ಮತ್ತೊಬ್ಬರ ಅಪರಾಧವನ್ನು ಚರ್ಚಿಸಬಾರದು. ಯೋಗ್ಯವು, ಅನುಕೂಲವು, ಹಿತಕರವೂ ಆದ ಕರ್ತವ್ಯಗಳನ್ನು ತನ್ನ ಆತ್ಮೋದ್ಧಾರಕ್ಕಾಗಿ ಆಚರಿಸುತ್ತಿರಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಃಪಂಚಾಶೋತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೈದನೆಯ ಅಧ್ಯಾಯ
ವೇದವ್ಯಾಸರ ತಪಶ್ಚರಣೆ
ಯುಧಿಷ್ಠಿರಃ
ಕಥಂ ವ್ಯಾಸಸ್ಯ ಧರ್ಮಾತ್ಮಾ ಶುಕೋ ಜಜ್ಞೇ ಮಹಾತಪಾಃ |
ಸಿದ್ಧಿಂ ಚ ಪರಮಾಂ ಪ್ರಾಪ್ತಸ್ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಪಿತಾಮಹನೇ, ವ್ಯಾಸರಿಗೆ ಮಹಾತಪಸ್ವಿಯಾದ ಧರ್ಮಾತ್ಮನಾದ ಶುಕನು ಹೇಗೆ ಹುಟ್ಟಿದನು? ಪರಮಸಿದ್ಧಿಯನ್ನು ಶುಕಮುನಿಯು ಹೇಗೆ ಹೊಂದಿದನು? ಈ ವಿಷಯವನ್ನು ತಿಳಿಸಿ.
ಕಸ್ಯಾಂ ಚೋತ್ಪಾದಯಾಮಾಸ ಶುಕಂ ವ್ಯಾಸಸ್ತಪೋಧನಃ |
ನ ಹ್ಯಸ್ಯ ಜನನೀಂ ವಿದ್ಮ ಜನ್ಮ ಚಾಗ್ರ್ಯಂ ಮಹಾತ್ಮನಃ ||2||
ತಪೋಧನರಾದ ವ್ಯಾಸರು ಯಾವ ಸ್ತ್ರೀಯ ಗರ್ಭದಿಂದ ಶುಕನನ್ನು ಪಡೆದರು? ಮಹಾತ್ಮನಾದ ಶುಕನ ತಾಯಿಯು ಯಾರು? ಅವನ ಜನ್ಮವೃತ್ತಾಂತವೇನು ಎಂಬುದು ನಮಗೆ ತಿಳಿದಿರುವುದಿಲ್ಲ.
ಕಥಂ ಚ ಬಾಲಸ್ಯ ಸತಃ ಸೂಕ್ಷ್ಮಜ್ಞಾನೇ ಗತಾ ಮತಿಃ |
ಯಥಾ ನಾನ್ಯಸ್ಯ ಲೋಕೇಽಸ್ಮಿನ್ ದ್ವಿತೀಯಸ್ಯೇಹ ಕಸ್ಯಚಿತ್ ||3||
ಬಾಲ್ಯದಲ್ಲಿಯೇ ಶುಕಮುನಿಗೆ ಹೇಗೆ ಭಗವದ್ವಿಷಯಕವಾದ ಸೂಕ್ಷ್ಮಜ್ಞಾನವು ದೊರೆಯಿತು? ಈ ಪ್ರಪಂಚದಲ್ಲಿ ಶುಕಮುನಿಗೆ ಹೊರತು ಯಾರಿಗೂ ಇಂತಹ ಭಗವದ್ವಿಷಯಕವಾದ ಸೂಕ್ಷ್ಮಜ್ಞಾನವು ಇರುವುದಿಲ್ಲ.
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಮಹಾದ್ಯುತೇ |
ನ ಹಿ ಮೇ ತೃಪ್ತಿರಸ್ತೀಹ ಶೃಣ್ವತೋಽಮೃತಮುತ್ತಮಮ್ ||4||
ಬುದ್ಧಿಸಂಪನ್ನನೇ, ಈ ವಿಷಯದಲ್ಲಿ ವಿಸ್ತಾರವಾಗಿ ಕೇಳಬೇಕೆಂದಿದ್ದೇನೆ. ನಿನ್ನ ಅಮೃತಮಯವಾದ ಮಾತನ್ನು ಕೇಳುತ್ತಿರುವ ನನಗೆ ತೃಪ್ತಿಯುಂಟಾಗುತ್ತಿಲ್ಲ.
ಮಾಹಾತ್ಮ್ಯಮಾತ್ಮಯೋಗಂ ಚ ವಿಜ್ಞಾನಂ ಚ ಶುಕಸ್ಯ ಹ |
ಯಥಾವದಾನುಪೂರ್ವ್ಯೇಣ ತನ್ಮೇ ಬ್ರೂಹಿ ಪಿತಾಮಹ ||5||
ಪಿತಾಮಹನೇ, ಶುಕದೇವರಲ್ಲಿರುವ ಮಹಿಮೆ, ಪರಮಾತ್ಮನ ಯೋಗ, ವಿಜ್ಞಾನ ಇವುಗಳನ್ನು ಕ್ರಮವಾಗಿ ನನಗೆ ತಿಳಿಸು.
ಭೀಷ್ಮಃ
ನ ಹಾಯನೈರ್ನ ಪಲಿತೈರ್ನ ವಿತ್ತೇನ ನ ಬಂಧುಭಿಃ |
ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ||6||
ಭೀಷ್ಮ ವಯಸ್ಸಿನಿಂದ, ಕೂದಲು ಬಿಳಿಯಾಗಿರುವುದರಿಂದ, ಧನದ ಸಂಬಂಧದಿಂದ, ಅಧಿಕ ಬಾಂಧವರಿಂದ ಮನುಷ್ಯನು ಧರ್ಮಾತ್ಮನೆನಿಸುವುದಿಲ್ಲ. ಯಾವನು ಪರಂಪರಾಪ್ರಾಪ್ತವಾದ ಷಡಂಗವೇದವನ್ನು ಅಧ್ಯಯನ ಮಾಡಿರುತ್ತಾನೋ ಅವನೇ ಎಲ್ಲರಿಗಿಂತ ಶ್ರೇಷ್ಠನು. ಋಷಿಗಳು ಹೀಗೆ ಧರ್ಮದ ಮಹತ್ವವನ್ನು ಹೇಳಿರುತ್ತಾರೆ.
ತಪೋಮೂಲಮಿದಂ ಸರ್ವಂ ಯನ್ಮಾಂ ಪೃಚ್ಛಸಿ ಪಾಂಡವ |
ತದಿಂದ್ರಿಯಾಣಿ ಸಂಯಮ್ಯ ತಪೋ ಭವತಿ ನಾನ್ಯಥಾ ||7||
ಶುಕನ ಬಗ್ಗೆ ಏನೆಲ್ಲ ಪ್ರಶ್ನಿಸಿದೆಯೋ ಇದಕ್ಕೆಲ್ಲ ಮೂಲಭೂತವಾದುದು ತಪಸ್ಸು. ಇಂದ್ರಿಯಗಳನ್ನು ನಿಯಂತ್ರಿಸಿಕೊಂಡಿರುವುದೇ ತಪಸ್ಸು. ಇದಕ್ಕಿಂತ ಅಧಿಕವಾದ ತಪಸ್ಸು ಯಾವುದೂ ಇರುವುದಿಲ್ಲ.
ಇಂದ್ರಿಯಾಣಾಂ ಪ್ರಸಂಗೇನ ದೋಷಮೃಚ್ಛತ್ಯಸಂಶಯಮ್ |
ಸನ್ನಿಯಮ್ಯ ತು ತಾನ್ಯೇವ ಸಿದ್ಧಿಂ ಪ್ರಾಪ್ನೋತಿ ಮಾನವಃ ||8||
ಮನುಷ್ಯನ ಇಂದ್ರಿಯಗಳು ಸ್ವಚ್ಛಂದವಾಗಿ ಸಾಗುತ್ತಾ ಪಾಪಕರ್ಮದಲ್ಲೇ ಆಸಕ್ತವಾಗಿರುತ್ತವೆ. ಇದರಲ್ಲಿ ಸಂಶಯವಿಲ್ಲ. ಈ ಇಂದ್ರಿಯಗಳನ್ನು ನಿಗ್ರಹಿಸಿಕೊಂಡಲ್ಲಿ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ.
ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ |
ಯೋಗಸ್ಯ ಕಲಯಾ ತಾತ ನ ತುಲ್ಯಂ ವಿದ್ಯತೇ ಫಲಮ್ ||9||
ಸಾವಿರ ಅಶ್ವಮೇಧ, ನೂರು ವಾಜಪೇಯ ಯಾಗಗಳನ್ನು ಆಚರಿಸುವುದರಿಂದ ಯಾವ ಫಲವು ಲಭಿಸುತ್ತದೋ ಆ ಫಲವು ಯೋಗಸಿದ್ಧಿಯಿಂದ ಲಭಿಸುವ ಹದಿನಾರನೆಯ ಒಂದು ಅಂಶಕ್ಕೂ ಸಾಟಿಯಾಗದು.
ಅತ್ರ ತೇ ವರ್ತಯಿಷ್ಯಾಮಿ ಜನ್ಮಯೋಗಫಲಂ ಯಥಾ |
ಶುಕಸ್ಯಾಗ್ರ್ಯಾಂ ಗತಿಂ ಚೈವ ದುರ್ವಿದಾಮಕೃತಾತ್ಮಭಿಃ ||10||
ಯುಧಿಷ್ಠಿರನೇ, ನಿನಗೆ ಶುಕನ ಜನ್ಮವೃತ್ತಾಂತವನ್ನು, ಅವನು ಹೊಂದಿದ ಯೋಗಸಿದ್ಧಿಯನ್ನು, ಸಾಮಾನ್ಯರು ಹೊಂದಲು ಸಾಧ್ಯವಿಲ್ಲದ ಉತ್ತಮ ಗತಿಯನ್ನು ತಿಳಿಸುತ್ತೇನೆ.
ಮೇರುಶೃಂಗೇ ಕಿಲ ಪುರಾ ಕರ್ಣಿಕಾರವನಾಯುತೇ |
ವಿಜಹಾರ ಮಹಾದೇವೋ ಭೀಮೈರ್ಭೂತಗಣೈರ್ವೃತಃ ||11||
ಹಿಂದೆ ಕರ್ಣಿಕಾರ ಎಂಬ ವನದಿಂದ ಶೋಭಿತವಾದ ಮೇರುಪರ್ವತದ ಶಿಖರದಲ್ಲಿ ಭಗವಂತನಾದ ಶಂಕರನು ಭೂತಗಳಿಂದ ಆವೃತನಾಗಿ ವಿಹರಿಸುತ್ತಿದ್ದನು.

ಶೈಲರಾಜಸುತಾ ಚೈವ ದೇವೀ ತತ್ರಾಭವತ್ ಪುರಾ |
ತತ್ರ ದಿವ್ಯಂ ತಪಸ್ತೇಪೇ ಕೃಷ್ಣದ್ವೈಪಾಯನಃ ಪ್ರಭುಃ ॥12॥
ಶೈಲರಾಜ ಸುತೆಯಾದ ಸತೀದೇವಿಯು ಶಿವನ ಜೊತೆಗೆ ಇದ್ದಳು. ಅದೇ ಸಮಯದಲ್ಲಿ ಕೃಷ್ಣದ್ವೈಪಾಯನರೆನಿಸಿದ ವ್ಯಾಸರು ತಪಸ್ಸನ್ನು ಮಾಡುತ್ತಿದ್ದರು.
ಯೋಗೇನಾತ್ಮಾನಮಾವಿಶ್ಯ ಯೋಗಧರ್ಮಪರಾಯಣಃ |
ಧಾರಯನ್ ಸ ತಪಸ್ತೇಪೇ ಪುತ್ರಾರ್ಥಂ ಕುರುಸತ್ತಮ ॥13॥
ಯೋಗಧರ್ಮಾಸಕ್ತರಾದ ವ್ಯಾಸರು ಯೋಗದ ಮೂಲಕ ತನ್ನ ಮನಸ್ಸಿನಲ್ಲಿ ಧ್ಯಾನಾಸಕ್ತರಾಗಿ ಪುತ್ರನಿಗಾಗಿ ತಪಸ್ಸನ್ನು ಮಾಡಿದರು.
ಅಗ್ನೇರ್ಭೂಮೇರಪಾಂ ವಾಯೋರಂತರಿಕ್ಷಸ್ಯ ಚಾಭಿಭೋ |
ವೀರ್ಯೇಣ ಸಮ್ಮಿತಃ ಪುತ್ರೋ ಮಮ ಭೂಯಾದಿತಿ ಸ್ಮ ಹ ॥14॥
ವ್ಯಾಸರು ತಮಗೆ ಅಗ್ನಿ, ಭೂಮಿ, ಜಲ, ವಾಯು, ಆಕಾಶ ಇವುಗಳ ವೀರ್ಯಕ್ಕೆ ಸಮಾನವಾದ ಮಗನು ಹುಟ್ಟಲಿ ಎಂದು ತಪಸ್ಸನ್ನಾಚರಿಸುತ್ತಿದ್ದರು.
ಸಂಕಲ್ಪೇನಾಥ ಸೋನೇನ ದುಷ್ಪ್ರಾಪೇಣಾಕೃತಾತ್ಮಭಿಃ |
ವರಯಾಮಾಸ ದೇವೇಶಮಾಸ್ಥಿತಸ್ತಪ ಉತ್ತಮಮ್ ॥15॥
ಈ ರೀತಿಯಾದ ಸಂಕಲ್ಪದಿಂದ ಯೋಗದಿಂದ ಉತ್ತಮ ತಪೋನಿರತರಾದ ವ್ಯಾಸರು ಅಜಿತೇಂದ್ರಿಯರಿಂದ ಹೊಂದಲು ದುಸ್ಸಾಧ್ಯವಾದ ವರವನ್ನು ದೇವೇಶನಾದ ಮಹಾದೇವನಿಂದ ಪ್ರಾರ್ಥಿಸಿದರು.
ಅತಿಷ್ಠನ್ ಮಾರುತಾಹಾರಃ ಶತಂ ಕಿಲ ಸಮಾಃ ಪ್ರಭುಃ |
ಆರಾಧಯನ್ಮಹಾದೇವಂ ಬಹುರೂಪಮುಮಾಪತಿಮ್ ॥16॥
ಶಕ್ತಿಶಾಲಿಗಳಾದ ವ್ಯಾಸರು ನೂರುವರ್ಷ ಪರ್ಯಂತ ಗಾಳಿಯನ್ನೇ ಆಹಾರವನ್ನಾಗಿ ಸ್ವೀಕರಿಸಿ, ಅನೇಕ ರೂಪಿಯಾದ, ಉಮಾಪತಿಯಾದ ಮಹಾದೇವನನ್ನು ಆರಾಧಿಸಿದರು.
ತತ್ರ ಬ್ರಹ್ಮರ್ಷಯಶ್ಚೈವ ಸರ್ವೇ ದೇವರ್ಷಯಸ್ತಥಾ |
ಲೋಕಪಾಲಾಶ್ಚ ಲೋಕೇಶಂ ಸಾಧ್ಯಾಶ್ಚ ವಸುಭಿಃ ಸಹ ॥17॥
ಮೇರುಪರ್ವತದ ಶಿಖರದಲ್ಲಿ ಎಲ್ಲ ಬ್ರಹ್ಮರ್ಷಿಗಳು, ದೇವರ್ಷಿಗಳು, ಲೋಕಪಾಲರು, ಸಾಧ್ಯರು, ವಸುಗಳಿಂದ ಕೂಡಿಕೊಂಡಿದ್ದರು.
ಆದಿತ್ಯಾಶ್ಚೈವ ರುದ್ರಾಶ್ಚ ದಿವಾಕರನಿಶಾಕರೌ |
ಮರುತೋ ಮಾರುತಶ್ಚೈವ ಸಾಗರಾಃ ಸರಿತಸ್ತಥಾ ॥18॥
ಅಶ್ವಿನೌ ದೇವಗಂಧರ್ವಾಸ್ತಥಾ ನಾರದಪರ್ವತೌ |
ವಿಶ್ವಾವಸುಶ್ಚ ಗಂಧರ್ವಃ ಸಿದ್ಧಾಶ್ಚಾಪ್ಸರಸಾಂ ಗಣಾಃ ॥19॥
ಆದಿತ್ಯರು, ರುದ್ರರು, ಸೂರ್ಯ-ಚಂದ್ರರು, ಮರುತ್ತುಗಳು, ಮುಖ್ಯಪ್ರಾಣನು, ಸಾಗರಗಳು, ನದಿಗಳು, ಅಶ್ವಿನೀದೇವತೆಗಳು, ದೇವ-ಗಂಧರ್ವರು, ನಾರದರು, ಪರ್ವತರು, ವಿಶ್ವಾವಸು ಎಂಬ ಗಂಧರ್ವರಾಜನು, ಸಿದ್ಧರು, ಅಪ್ಸರಸ್ತ್ರೀ ಗಣವು ಎಲ್ಲವೂ ಸೇರಿತ್ತು.
ತತ್ರ ರುದ್ರೋ ಮಹಾದೇವಃ ಕರ್ಣಿಕಾರಮಯೀಂ ಶುಭಾಮ್ |
ಧಾರಯಾಣಃ ಸ್ರಜಂ ಭಾತಿ ಜ್ಯೋತ್ಸ್ನಾಮಿವ ನಿಶಾಕರಃ ॥20॥
ಅಲ್ಲಿ ಮಹಾದೇವನಾದ ರುದ್ರನು ಮಂಗಳಕರವಾದ, ಕರ್ಣಿಕಾರಪುಷ್ಪಮಯವಾದ ಮಾಲೆಯನ್ನು ಧರಿಸಿ ಬೆಳದಿಂಗಳಿಂದ ಕೂಡಿದ ಚಂದ್ರನಂತೆ ಬೆಳಗುತ್ತಿದ್ದನು.
ತಸ್ಮಿಂದಿವ್ಯೇ ವನೇ ರಮ್ಯೇ ದೇವದೇವರ್ಷಿಸಂಕುಲೇ |
ಆಸ್ಥಿತಃ ಪರಮಂ ಯೋಗಮೃಷಿಃ ಪುತ್ರಾರ್ಥಮುದ್ಯತಃ ॥21॥
ದೇವರ್ಷಿಗಳಿಂದ ಕೂಡಿದ ದಿವ್ಯವಾದ, ರಮಣೀಯವಾದ ವನದಲ್ಲಿ ಶ್ರೇಷ್ಠವಾದ ವನವನ್ನು ಆಶ್ರಯಿಸಿ ಧೀರರಾದ ವ್ಯಾಸರು ಪುತ್ರರನ್ನು ಪಡೆಯಲು ತಪಸ್ಸಿನ ಪ್ರಯತ್ನದಲ್ಲಿದ್ದರು.
ನ ಚಾಸ್ಯ ಹೀಯತೇ ವರ್ಣೋ ನ ಗ್ಲಾನಿರುಪಜಾಯತೇ |
ತ್ರಯಾಣಾಮಪಿ ಲೋಕಾನಾಂ ತದದ್ಭುತಮಿವಾಭವತ್ ॥22॥
ಅಂತಹ ಕಠಿಣ ತಪಸ್ಸನ್ನಾಚರಿಸಿದ ವ್ಯಾಸರ ಪ್ರಾಣಗಳು ಸ್ಥಿರವಾಗಿಯೇ ಇದ್ದವು. ಅವರಿಗೆ ಯಾವುದೇ ಆಯಾಸವೂ ಇರಲಿಲ್ಲ. ಮೂರುಲೋಕಗಳಿಗೂ ಇದು ಆಶ್ಚರ್ಯಕರವಾಗಿ ತೋರುತ್ತಿತ್ತು.
ಜಟಾಶ್ಚ ತೇಜಸಾ ತಸ್ಯ ವೈಶ್ವಾನರಶಿಖೋಪಮಾಃ |
ಪ್ರಜ್ವಲಂತ್ಯಃ ಸ್ಮ ದೃಶ್ಯಂತೇ ಯುಕ್ತಸ್ಯಾಮಿತತೇಜಸಃ ॥23॥
ತೇಜಸ್ವಿಗಳಾದ ವ್ಯಾಸರ ಜಟೆಗಳು ತಪಸ್ಸಿನಿಂದ ಅಗ್ನಿಯಿಂದ ಪ್ರಜ್ವಲಿಸುವಂತೆ ತೋರುತ್ತಿದ್ದವು.
ಮಾರ್ಕಂಡೇಯೋ ಹಿ ಭಗವಾನೇತದಾಖ್ಯಾತವಾನ್ಮಮ |
ಸ ದೇವಚರಿತಾನೀಹ ಕಥಯಾಮಾಸ ಮೇ ಸದಾ ॥24॥
ಪೂಜ್ಯರಾದ ಮಾರ್ಕಂಡೇಯರು ಈ ವಿಷಯವನ್ನು ನನಗೆ ಹೇಳಿರುತ್ತಾರೆ. ಭಗವಂತನ ಈ ಮಹಿಮೆಗಳನ್ನು ಯಾವಾಗಲೂ ನನಗೆ ಕೇಳಿಸುತ್ತಿದ್ದರು.
ತಾ ಏತಾದ್ಯಾಪಿ ಕೃಷ್ಣಸ್ಯ ತಪಸಾ ತೇನ ದೀಪಿತಾಃ |
ಅಗ್ನಿವರ್ಣಾ ಜಟಾಸ್ತಾತ ಪ್ರಕಾಶಂತೇ ಮಹಾತ್ಮನಃ ॥25॥
ಆಗ ತಪಸ್ಸಿನಿಂದ ಬೆಳಗಿದ ವ್ಯಾಸರ ಜಟೆಗಳ ತೇಜಸ್ಸು ಈಗಲೂ ಅಗ್ನಿವರ್ಣದಿಂದಲೇ ಬೆಳಗುತ್ತಿದೆ.

ಏವಂವಿಧೇನ ತಪಸಾ ತಸ್ಯ ಭಕ್ತ್ಯಾ ಚ ಭಾರತ |
ಮಹೇಶ್ವರಃ ಪ್ರಸನ್ನಾತ್ಮಾ ಚಕಾರ ಮನಸಾ ಮತಿಮ್ ॥26॥
ವ್ಯಾಸರ ಇಂತಹ ತಪಸ್ಸಿನಿಂದಲೂ, ಭಕ್ತಿಯಿಂದಲೂ ಪ್ರಸನ್ನನಾದ ಮಹರುದ್ರನು ವ್ಯಾಸರಿಗೆ ಅಭೀಷ್ಟವಾದ ವರವನ್ನು ಕೊಡಲು ಮನಸ್ಸಿನಲ್ಲಿಯೇ ನಿಶ್ಚಯಿಸಿದನು.
ಉವಾಚ ಚೈನಂ ಭಗವಾಂಸ್ತ್ರ್ಯಂಬಕಃ ಪ್ರಹಸನ್ನಿವ |
ಏವಂವಿಧಸ್ತೇ ತನಯೋ ದ್ವೈಪಾಯನ ಭವಿಷ್ಯತಿ ॥27॥
ತ್ರಯಂಬಕನಾದ ಭಗವಾನ್ ಮಹರುದ್ರನು ವ್ಯಾಸರ ಬಳಿ ಬಂದು, ನಗುವ ಮುಖಭಾವದಿಂದ ಕೂಡಿದವನಾಗಿ ಹೀಗೆ ಹೇಳಿದನು:ದ್ವೈಪಾಯನರೇ, ನಿಮಗೆ ನನ್ನಂತಹ ಮಗನೇ ಹುಟ್ಟುತ್ತಾನೆ ಎಂದು.
ಯಥಾ ಹ್ಯಗ್ನಿರ್ಯಥಾ ವಾಯುರ್ಯಥಾ ಭೂಮಿರ್ಯಥಾ ಜಲಮ್ |
ಯಥಾ ಚ ಖಂ ತಥಾ ಶುದ್ಧೋ ಭವಿಷ್ಯತಿ ಸುತೋ ಮಹಾನ್ ॥28॥
ಯಾವ ರೀತಿ ಅಗ್ನಿ, ವಾಯು, ಭೂಮಿ, ಜಲ, ಅಂತರಿಕ್ಷ ಇವುಗಳು ಶುದ್ಧವಾಗಿವೆಯೋ ಅದೇ ರೀತಿ ಪರಿಶುದ್ಧನಾದ ಮಗನು ಹುಟ್ಟುತ್ತಾನೆ ಎಂದನು.
ತದ್ಭಾವಭಾವೀ ತದ್ ಬುದ್ಧಿಸ್ತದಾತ್ಮಾ ತದಪಾಶ್ರಯಃ |
ತೇಜಸಾವೃತ್ಯ ಲೋಕಾಂಸ್ತ್ರೀನ್ ಯಶಃ ಪ್ರಾಪ್ಸ್ಯತಿ ಕೇವಲಮ್ ॥29॥
ನಿನ್ನ ಮಗನು ಯಾವಾಗಲೂ ಭಗವದ್ ಜ್ಞಾನದಲ್ಲೇ ಆಸಕ್ತವಾಗಿರುತ್ತಾನೆ. ಬುದ್ಧಿಯು, ಮನಸ್ಸು ಪರಮಾತ್ಮನಲ್ಲಿಯೇ ವಿಲೀನವಾಗಿರುತ್ತದೆ. ಭಗವಂತನನ್ನೇ ನಿನ್ನ ಮಗನು ಆಶ್ರಯಿಸಿರುತ್ತಾನೆ. ಅವನ ತೇಜಸ್ಸು ಮೂರುಲೋಕದಲ್ಲಿಯೂ ವ್ಯಾಪಿಸಿರುತ್ತದೆ. ಮಹಾಕೀರ್ತಿ ಸಂಪನ್ನನಾಗಿರುತ್ತಾನೆ ಎಂದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಐವತ್ತಾರನೆಯ ಅಧ್ಯಾಯ

### ಶುಕಮುನಿಯ ಜನ್ಮ ಮೊದಲಾದ ವೃತ್ತಾಂತ

ಭೀಷ್ಮಃ
ಸ ಲಬ್ಧ್ವಾ ಪರಮಂ ದೇವಾದ್ವರಂ ಸತ್ಯವತೀಸುತಃ |
ಅರಣೀಂ ತ್ವಥ ಸಂಗೃಹ್ಯ ಮಮಂಥಾಗ್ನಿಚಿಕೀರ್ಷಯಾ ॥1॥
ಭೀಷ್ಮ ಯುಧಿಷ್ಠಿರನೇ, ಸತ್ಯವತೀ ಸುತರಾದ ವ್ಯಾಸರು ಮಹದೇವನಿಂದ ಶ್ರೇಷ್ಠವಾದ ವರವನ್ನು ಪಡೆದು, ಆಶ್ರಮಕ್ಕೆ ಆಗಮಿಸಿ, ಅಗ್ನಿಯನ್ನು ಪಡೆಯುವ ದೃಷ್ಟಿಯಿಂದ ಎರಡು ಅಗ್ನಿಮಂಥನ ದಂಡನಗಳನ್ನು ಹಿಡಿದುಕೊಂಡು ಮಥನ ಮಾಡಲು ಆರಂಭಿಸಿದರು.
ಅಥ ರೂಪಂ ಪರಂ ರಾಜನ್ ಬಭ್ರತೀಂ ಸ್ವೇನ ತೇಜಸಾ |
ಘೃತಾಚೀಂ ನಾಮಾಪ್ಸರಸಮಪಶ್ಯದ್ ಭಗವಾನೃಷಿಃ ॥2॥
ಆ ಸಮಯದಲ್ಲಿ ವ್ಯಾಸರು ಶ್ರೇಷ್ಠವಾದ ತೇಜಸ್ಸಿನಿಂದ ಬೆಳಗುವ, ಪರಮಶ್ರೇಷ್ಠ ರೂಪವನ್ನು ಧರಿಸಿರುವ ಘೃತಾಚಿ ಎಂಬ ಅಪ್ಸರೆಯನ್ನು ನೋಡಿದರು.
ಋಷಿರಪ್ಸರಸಂ ದೃಷ್ಟ್ವಾ ಸಹಸಾ ಕಾಮಮೋಹಿತಃ |
ಅಭವದ್ ಭಗವಾನ್ ವ್ಯಾಸೋ ವನೇ ತಸ್ಮಿನ್ ಯುಧಿಷ್ಠಿರ ॥3॥
ಅದೇ ಸಮಯದಲ್ಲಿ ಆ ಅರಣ್ಯದಲ್ಲಿದ್ದ ವ್ಯಾಸರು ಅಪ್ಸರೆಯನ್ನು ನೋಡಿ ಕೂಡಲೇ ಕಾಮಮೋಹಿತರಾದರು.
ಸಾ ಚ ಕೃತ್ವಾ ತದಾ ವ್ಯಾಸಂ ಕಾಮಸಂವಿಗ್ನಮಾನಸಮ್ |
ಶುಕೀ ಭೂತ್ವಾ ಮಹಾರಾಜ ಘೃತಾಚೀ ಸಮುಪಾಗಮತ್ ॥4॥
ಕಾಮದಿಂದ ವ್ಯಾಕುಲಿತ ಮನಸ್ಕಳಾದ ಘೃತಾಚಿಯು ಗಿಳಿಯ ರೂಪವನ್ನು ಧರಿಸಿ ಮಹರ್ಷಿಗಳ ಸಮೀಪಕ್ಕೆ ಸಾಗಿದಳು.
ಸ ತಾಮಪ್ಸರಸಂ ದೃಷ್ಟ್ವಾ ರೂಪೇಣಾನ್ಯೇನ ಸಂವೃತಾಮ್ |
ಶರೀರಜೇನಾನುಗತಃ ಸರ್ವಗಾತ್ರಾತಿಗೇನ ಹ ॥5॥
ಬೇರೆ ರೂಪವನ್ನು ಧರಿಸಿ ಬಂದ ಅಪ್ಸರೆಯನ್ನು ಕಂಡ ವ್ಯಾಸರ ಅಂಗಾಂಗಗಳಲ್ಲಿ ಪ್ರಚೋದನೆಗಳು ಉಂಟಾದವು.
ಸ ತು ಧೈರ್ಯೇಣ ಮಹತಾ ನಿಗೃಹ್ಣನ್ ಹೃಚ್ಛಯಂ ಮುನಿಃ |
ನ ಶಶಾಕ ನಿಯಂತುಂ ತದ್ ವ್ಯಾಸಃ ಪ್ರವಿಸೃತಂ ಮನಃ |
ಭಾವಿತ್ವಾಚ್ಚೈವ ಭಾವಸ್ಯ ಘೃತಾಚ್ಯಾ ವಪುಷಾ ಹೃತಃ ॥6॥
ವ್ಯಾಸರು ಮಹಾಧೈರ್ಯವನ್ನು ಅವಲಂಬಿಸಿ ಹೃದಯದಲ್ಲಿ ಆಕ್ರಮಿಸಿದ ಕಾಮವನ್ನು ನಿಗ್ರಹಿಸಲು ಯತ್ನಿಸಿದರು. ಆದರೆ ಅಪ್ಸರೆಯ ಕಡೆ ಆಕರ್ಷಿತವಾದ ತಮ್ಮ ಮನಸ್ಸನ್ನು ನಿಯಂತ್ರಿಸಲು ವ್ಯಾಸರಿಗೆ ಸಾಧ್ಯವಾಗಲಿಲ್ಲ.
ಯತ್ನಾನ್ನಿಯಚ್ಛತಸ್ತಸ್ಯ ಮುನೇರಗ್ನಿಚಿಕೀರ್ಷಯಾ |
ಅರಣ್ಯಾಮೇವ ಸಹಸಾ ತಸ್ಯ ಶುಕ್ರಮವಾಪತತ್ ॥7॥
ಪ್ರಯತ್ನದಿಂದ ಕಾಮೋದ್ವೇಗವನ್ನು ನಿಗ್ರಹಿಸುವ ಸಂದರ್ಭದಲ್ಲಿಯೇ ಅಗ್ನಿಗಾಗಿ ಅರಣಿಮಥನ ಮಾಡುತ್ತಿದ್ದ ಅವರ ವೀರ್ಯವು

ಅರಣಿಯಲ್ಲಿ  ಬಿದ್ದಿತು.
ಸೋಽವಿಶಂಕೇನ ಮನಸಾ ತಥೈವ ದ್ವಿಜಸತ್ತಮಃ |
ಅರಣೀಂ ಮಮಂಥ ಬ್ರಹ್ಮರ್ಷಿಸ್ತಸ್ಯಾಂ ಜಜ್ಞೇ ಶುಕೋ ನೃಪ ॥8॥
ವ್ಯಾಸರು ಯಾವ ಶಂಕೆಯೂ ಇಲ್ಲದ ಮನಸ್ಸಿನಿಂದ ಅರಣಿಯನ್ನು ಮಥನ ಮಾಡಿದಾಗ ಅದರ ಮಧ್ಯದಲ್ಲಿಯೇ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ ಶುಕಮುನಿಯು ಜನ್ಮತಾಳಿದನು.
ಶುಕ್ರೇ ನಿರ್ಮಥ್ಯಮಾನೇ ತು ಶುಕೋ ಜಜ್ಞೇ ಮಹಾತಪಾಃ |
ಪರಮರ್ಷಿರ್ಮಹಾಯೋಗೀ ಅರಣೀಗರ್ಭಸಂಭವಃ ॥9॥
ಅರಣಿಯಲ್ಲಿ ವೀರ್ಯವನ್ನು ಮಥಿಸಿದಾಗ ಮಹಾತಪಸ್ವಿಯಾದ ಶುಕನು ಹುಟ್ಟಿದನು. ಆದ್ದರಿಂದಲೇ ಪರಮ ತಪಸ್ವಿಯೂ, ಮಹರ್ಷಿಯೂ, ಮಹಾಯೋಗಿಯೂ, ಅರಣಿಗರ್ಭಸಂಭೂತನೂ ಎಂದು ಕರೆಸಿಕೊಂಡನು.
ಯಥಾಧ್ವರೇ ಸಮಿದ್ಧೋಗ್ನಿರ್ಭಾತಿ ಹವ್ಯಮುಪಾತ್ತವಾನ್ |
ತಥಾರೂಪಃ ಶುಕೋ ಜಜ್ಞೇ ಪ್ರಜ್ವಲನ್ನಿವ ತೇಜಸಾ ॥10॥
ಯಾವ ರೀತಿ ಯಜ್ಞದಲ್ಲಿ ಚೆನ್ನಾಗಿ ಹುತಮಾಡಿದ ಅಗ್ನಿಯು ಹವಿಸ್ಸನ್ನು ಧರಿಸಿ ಪ್ರಜ್ವಲಿಸುತ್ತದೋ ಹಾಗೆ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೋ ಎಂಬಂತೆ ಅಗ್ನಿಗೆ ಸಮಾನರೂಪನಾದ ಶುಕನು  ಹುಟ್ಟಿದನು.
ಬಿಭ್ರತ್ಪಿತುಶ್ಚ ಕೌರವ್ಯ ರೂಪವರ್ಣಮನುತ್ತಮಮ್ |
ಬಭೌ ತದಾ ಭಾವಿತಾತ್ಮಾ ವಿಧೂಮೋಽಗ್ನಿರಿವ ಜ್ವಲನ್ ॥11॥
ತನ್ನ ತಂದೆಯಂತೆ ಶ್ರೇಷ್ಠವಾದ ರೂಪ-ವರ್ಣಗಳನ್ನು ಹೊಂದಿರುವ ಪವಿತ್ರಾತ್ಮನಾದ ಶುಕನು ಧೂಮರಹಿತನಾದ ಯಜ್ಞೇಶ್ವರನಂತೆ ವಿರಾಜಮಾನನಾದನು.
ತಂ ಗಂಗಾ ಸರಿತಾಂ ಶ್ರೇಷ್ಠಾ ಮೇರುಪೃಷ್ಠೇ ಜನೇಶ್ವರ |
ಸ್ವರೂಪಿಣೀ ತದಾಭ್ಯೇತ್ಯ ಸ್ನಾಪಯಾಮಾಸ ವಾರಿಣಾ ॥12॥
ಆ ಸಮಯದಲ್ಲಿ ಹರಿಯುವ ನದಿಗಳಲ್ಲಿ ಶ್ರೇಷ್ಠಳೆನಿಸಿದ ಗಂಗಾದೇವಿಯು ದಿವ್ಯವಾದ ಸ್ತ್ರೀರೂಪವನ್ನು ಧರಿಸಿ ಮೇರುಪರ್ವತಕ್ಕೆ ಆಗಮಿಸಿ ಶುಕನನ್ನು ನೀರಿನಿಂದ ಶುದ್ಧಿಗೊಳಿಸಿದಳು.
ಅಂತರಿಕ್ಷಾಚ್ಚ ಕೌರವ್ಯ ದಂಡಃ ಕೃಷ್ಣಾಜಿನಂ ಚ ಹ |
ಪಪಾತ ಭುವಿ ರಾಜೇಂದ್ರ ಶುಕಸ್ಯಾರ್ಥೇ ಮಹಾತ್ಮನಃ ॥13॥
ಶುಕನಿಗಾಗಿ ಅಂತರಿಕ್ಷದಿಂದ ದಂಡ-ಕೃಷ್ಣಾಜಿನಗಳು ಭೂಮಿಯ ಮೇಲೆ ಬಿದ್ದವು.
ಜೇಗೀಯಂತೇ ಸ್ಮ ಗಂಧರ್ವಾ ನನೃತುಶ್ಚಾಪ್ಸರೋಗಣಾಃ |
ದೇವದುಂದುಭಯಶ್ಚೈವ ಪ್ರಾವಾದ್ಯಂತ ಮಹಾಸ್ವನಾಃ ॥14॥
ಶುಕನ ಜನ್ಮದ ಸಮಯದಲ್ಲಿ ಗಂಧರ್ವರು ಗಾಯನ ಮಾಡುತ್ತಿದ್ದರೆ, ಅಪ್ಸರೆಯರು ನರ್ತನ ಮಾಡುತ್ತಿದ್ದರು. ಉಚ್ಚಸ್ವರದಿಂದ ದೇವದುಂದುಭಿಗಳು ಮೊಳಗಿದವು.
ವಿಶ್ವಾವಸುಶ್ಚ ಗಂಧರ್ವಸ್ತಥಾ ತುಂಬುರುನಾರದೌ |
ಹಾಹಾಹೂಹೂ ಚ ಗಂಧರ್ವೌ ತುಷ್ಟುವುಃ ಶುಕಸಂಭವಮ್ ॥15॥
ಗಂಧರ್ವರಾಜನಾದ ವಿಶ್ವಾವಸು, ತುಂಬುರು-ನಾರದರು, ಹಾಹಾ-ಹೂಹೂ ಎಂಬ ಗಂಧರ್ವರು ಶುಕನ ಜನ್ಮೋತ್ಸವವನ್ನು ಅನೇಕ ವಿಧವಾಗಿ ಸ್ತುತಿಸಿದರು.
ತತ್ರ ಶಕ್ರಪುರೋಗಾಶ್ಚ ಲೋಕಪಾಲಾಃ ಸಮಾಗತಾಃ |
ದೇವಾ ದೇವರ್ಷಯಶ್ಚೈವ ತಥಾ ಬ್ರಹ್ಮರ್ಷಯೋಽಪಿ ಚ ॥16॥
ಶುಕನಿರುವ ಮೇರುಶಿಖರಕ್ಕೆ ಇಂದ್ರನೇ ಮೊದಲಾದ ಲೋಕಪಾಲಕರು, ದೇವತೆಗಳು, ದೇವರ್ಷಿಗಳು ಮತ್ತು ಬ್ರಹ್ಮರ್ಷಿಗಳು ಆಗಮಿಸಿದರು.
ದಿವ್ಯಾನಿ ಸರ್ವಪುಷ್ಪಾಣಿ ಪ್ರವವರ್ಷಾತ್ರ ಮಾರುತಃ |
ಜಂಗಮಂ ಸ್ಥಾವರಂ ಚೈವ ಪ್ರಹೃಷ್ಟಮಭವಜ್ಜಗತ್ ॥17॥
ವಾಯುದೇವನು ದೇವಲೋಕದ  ಎಲ್ಲ ರೀತಿಯಾದ ಪುಷ್ಪಗಳನ್ನು ಶುಕನ ಮೇಲೆ ಮಳೆ ಸುರಿಸಿದನು. ಶುಕನ ಉತ್ಪತ್ತಿಯಿಂದ ಚರಾಚರ ಸಹಿತವಾದ ಸಕಲ ಜಗತ್ತು ಸಂತುಷ್ಟವಾಯಿತು.
ತಂ ಮಹಾತ್ಮಾ ಸ್ವಯಂ ಪ್ರೀತ್ಯಾ ದೇವ್ಯಾ ಸಹ ಮಹಾದ್ಯುತಿಃ |
ಜಾತಮಾತ್ರಂ ಮುನೇಃ ಪುತ್ರಂ ವಿಧಿನೋಪಾನಯತ್ತದಾ ॥18॥
ಮಹಾಕಾಂತಿ ಸಂಪನ್ನನಾದ, ಮಹಾತ್ಮನಾದ ಮಹಾದೇವನು ಪಾರ್ವತಿದೇವಿಯ ಜೊತೆ ಅಲ್ಲಿಗೆ ಆಗಮಿಸಿ, ಹುಟ್ಟಿದ ವ್ಯಾಸಮುನಿಯ ಮಗನಿಗೆ ವಿಧಿಪೂರ್ವಕವಾಗಿ ತಾನೇ ಉಪನಯನ ಸಂಸ್ಕಾರವನ್ನು ಮಾಡಿದನು.
ತಸ್ಯ ದೇವೇಶ್ವರಃ ಶಕ್ರೋ ದಿವ್ಯಮದ್ಭುತದರ್ಶನಮ್ |
ದದೌ ಕಮಂಡಲುಂ ಪ್ರೀತ್ಯಾ ದೇವವಾಸಾಂಸಿ ಚಾಭಿಭೋ ॥19॥
ದೇವೇಶ್ವರನಾದ ಇಂದ್ರನು ಶುಕನಿಗೆ ದಿವ್ಯವಾದ, ಅದ್ಭುತವಾದ ಕಮಂಡಲವನ್ನು, ದೇವೋಚಿತವಾದ ವಸ್ತ್ರಗಳನ್ನು ಪ್ರೀತಿಪೂರ್ವಕವಾಗಿ ನೀಡಿದನು.
ಹಂಸಾಶ್ಚ ಶತಪತ್ರಾಶ್ಚ ಸಾರಸಾಶ್ಚ ಸಹಸ್ರಶಃ |
ಪ್ರದಕ್ಷಿಣಮವರ್ತಂತ ಶುಕಾಶ್ಚಾಷಾಶ್ಚ ಭಾರತ ॥20॥

ಸಾವಿರಾರು ಹಂಸಗಳು, ಸಾರಸಪಕ್ಷಿಗಳು, ಗಿಳಿಗಳು, ಹಕ್ಕಿಗಳು ಶುಕದೇವನಿಗೆ ಪ್ರದಕ್ಷಿಣೆ ಮಾಡಿದವು.
ಆರಣೇಯಸ್ತಥಾ ದಿವ್ಯಂ ಪ್ರಾಪ್ಯ ಜನ್ಮ ಮಹಾದ್ಯುತಿಃ |
ತತ್ರೈವೋವಾಸ ಮೇಧಾವೀ ವ್ರತಚಾರೀ ಸಮಾಹಿತಃ ||21||
ಹೀಗೆ ಅರಣಿಸಂಭೂತನಾದ, ಮಹಾಕಾಂತಿಸಂಪನ್ನನಾದ ಶುಕದೇವನು ದಿವ್ಯಜನ್ಮವನ್ನು ಹೊಂದಿ, ಜಿತೇಂದ್ರಿಯನಾಗಿ, ಬ್ರಹ್ಮಚಾರಿಯಾಗಿ, ಮೇಧಾವಿಯಾಗಿಯೂ ವ್ಯಾಸರ ಆ ಆಶ್ರಮದಲ್ಲಿಯೇ ವಾಸ ಮಾಡಿದನು.
ಉತ್ಪನ್ನಮಾತ್ರಂ ತಂ ವೇದಾಃ ಸರಹಸ್ಯಾಃ ಸಸಂಗ್ರಹಾಃ |
ಉಪತಸ್ಥುರ್ಮಹಾರಾಜ ಯಥಾಸ್ಯ ಪಿತರಂ ತಥಾ ||22||
ಹುಟ್ಟಿದ ಕೂಡಲೇ ಶುಕಮುನಿಯನ್ನು ಎಲ್ಲ ವೇದಗಳು, ಉಪನಿಷತ್ತುಗಳು, ಬ್ರಾಹ್ಮಣಗಳು ವ್ಯಾಸರನ್ನು ಸೇವಿಸಿದಂತೆ ಸೇವಿಸಿದವು.
ಬೃಹಸ್ಪತಿಂ ತು ವವ್ರೇ ಸ ವೇದವೇದಾಂಗಭಾಷ್ಯವಿತ್ |
ಉಪಾಧ್ಯಾಯಂ ಮಹಾರಾಜ ಧರ್ಮಮೇವಾನುಚಿಂತಯನ್ ||23||
ವೇದ-ವೇದಾಂಗ ಭಾಷ್ಯಗಳನ್ನು ತಿಳಿದ ಶುಕಮುನಿಯು ಧರ್ಮವನ್ನೇ ಚಿಂತಿಸುತ್ತಾ ಬೃಹಸ್ಪತಿಯನ್ನು ಉಪಾಧ್ಯಾಯನನ್ನಾಗಿ ಸ್ವೀಕರಿಸಿದನು.
ಸೋಽಧೀತ್ಯ ವೇದಾನಖಿಲಾನ್ ಸರಹಸ್ಯಾನ್ ಸಸಂಗ್ರಹಾನ್ |
ಇತಿಹಾಸಂ ಚ ಕಾರ್ತ್ಸ್ನ್ಯೇನ ರಾಜಶಾಸ್ತ್ರಾಣಿ ಚಾಭಿಭೋ ||24||
ಗುರವೇ ದಕ್ಷಿಣಾಂ ದತ್ತ್ವಾ ಸಮಾವೃತ್ತೋ ಮಹಾಮುನಿಃ |
ಉಗ್ರಂ ತಪಃ ಸಮಾರೇಭೇ ಬ್ರಹ್ಮಚಾರೀ ಸಮಾಹಿತಃ ||25||
ಮಹಾಮುನಿಯಾದ ಶುಕನು ಬೃಹಸ್ಪತಿಯಿಂದ ರಹಸ್ಯವಾದ ಉಪನಿಷತ್ತುಗಳನ್ನು, ಸಮಸ್ತ ವೇದಗಳನ್ನು, ಇತಿಹಾಸ-ಪುರಾಣಗಳನ್ನು, ರಾಜನೀತಿಗಳನ್ನು ಅಧ್ಯಯನ ಮಾಡಿ ಗುರುವಿಗೆ ದಕ್ಷಿಣೆಯನ್ನು ನೀಡಿ, ವೇದಾಧ್ಯಯನ ಸಂಪನ್ನನಾಗಿ ಆಗಮಿಸಿ ಜಿತೇಂದ್ರಿಯನಾಗಿ, ಬ್ರಹ್ಮನಿಷ್ಠನಾಗಿ ಉಗ್ರವಾದ ತಪಸ್ಸನ್ನು ಆಚರಿಸಿದನು.
ದೇವತಾನಾಮೃಷೀಣಾಂ ಚ ಬಾಲ್ಯೇಽಪಿ ಸ ಮಹಾತಪಾಃ |
ಸಮ್ಮಂತ್ರಣೀಯೋ ಮಾನ್ಯಶ್ಚ ಜ್ಞಾನೇನ ತಪಸಾ ತಥಾ ||26||
ಮಹಾತಪಸ್ವಿಯಾದ ಶುಕಮುನಿಯು ಬಾಲ್ಯದಲ್ಲಿಯೇ ದೇವತೆಗಳಿಗೂ, ಋಷಿಗಳಿಗೂ ಮಾನ್ಯನಾಗಿದ್ದನು. ಜ್ಞಾನ-ತಪಸ್ಸುಗಳ ಮಹತ್ವದಿಂದ ಎಲ್ಲರಿಂದಲೂ ಸೇವಿಸಲು ಯೋಗ್ಯನಾಗಿದ್ದನು.
ನ ತ್ವಸ್ಯ ರಮತೇ ಬುದ್ಧಿರಾಶ್ರಮೇಷು ನರಾಧಿಪ |
ತ್ರಿಷು ಗಾರ್ಹಸ್ಥ್ಯಮೂಲೇಷು ಮೋಕ್ಷಧರ್ಮಾನುದರ್ಶಿನಃ ||27||
ಮೋಕ್ಷಧರ್ಮದಲ್ಲಿಯೇ ಆಸಕ್ತಿಯುಳ್ಳ ಶುಕಮುನಿಯ ಬುದ್ಧಿಯು ಗಾರ್ಹಸ್ಥ್ಯವೇ ಮೂಲವಾದ ಗೃಹಸ್ಥ, ವಾನಪ್ರಸ್ಥ, ಸಂನ್ಯಾಸವೆಂಬ ಆಶ್ರಮಗಳಲ್ಲಿ ಆಸಕ್ತವಾಗಿರಲಿಲ್ಲ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಡ್‌ಪಂಚಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೇಳನೆಯ ಅಧ್ಯಾಯ
ವ್ಯಾಸರ ಆದೇಶದಂತೆ ಶುಕಮುನಿಯು ಮಿಥಿಲಾಪಟ್ಟಣಕ್ಕೆ ಆಗಮಿಸಿ,
ಅಲ್ಲಿ ಸತ್ಕಾರವನ್ನು ಹೊಂದಿದುದು.
ಭೀಷ್ಮಃ
ಸ ಮೋಕ್ಷಮನುಚಿಂತ್ಯೈವ ಶುಕಃ ಪಿತರಮಭ್ಯಗಾತ್ |
ಪ್ರಾಹಾಭಿವಾದ್ಯ ಚ ಗುರುಂ ಶ್ರೇಯೋರ್ಥೀ ವಿನಯಾನ್ವಿತಃ ||1||
ಭೀಷ್ಮ ಯುಧಿಷ್ಠಿರನೇ, ಶುಕನು ಮೋಕ್ಷದ ವಿಷಯವನ್ನು ಯೋಚಿಸುತ್ತಾ ವ್ಯಾಸರ ಬಳಿ ಸಾಗಿದನು. ಶ್ರೇಯಸ್ಸನ್ನು ಸಾಧಿಸುವ, ವಿನಯದಿಂದ ಕೂಡಿದ ಶುಕಮುನಿಯು ಗುರುವಾದ ವ್ಯಾಸರಿಗೆ ನಮಸ್ಕರಿಸಿ ಹೀಗೆ ಹೇಳಿದನು.
ಮೋಕ್ಷಧರ್ಮೇಷು ಕುಶಲೋ ಭಗವಾನ್ ಪ್ರಬ್ರವೀತು ಮೇ |
ಯಥಾ ಮೇ ಮನಸಃ ಶಾಂತಿಃ ಪರಮಾ ಸಂಭವೇತ್ ಪ್ರಭೋ ||2||
ಪೂಜ್ಯನೇ, ನೀನು ಮೋಕ್ಷಧರ್ಮದಲ್ಲಿ ಕುಶಲನಾಗಿರುವಿ. ನನ್ನ ಮನಸ್ಸಿಗೆ ಪರಮ ಶಾಂತಿಯನ್ನುಂಟು ಮಾಡುವ ರೀತಿಯಲ್ಲಿ ಆ ಮೋಕ್ಷಧರ್ಮಗಳನ್ನು ಉಪದೇಶಿಸು.
ಶ್ರುತ್ವಾ ಪುತ್ರಸ್ಯ ವಚನಂ ಪರಮರ್ಷಿರುವಾಚ ತಮ್ |
ಅಧೀಷ್ವ ಪುತ್ರ ಮೋಕ್ಷಂ ವೈ ಧರ್ಮಾಂಶ್ಚ ವಿವಿಧಾನಪಿ ||3||
ಮಗನ ಮಾತುಗಳನ್ನು ಕೇಳಿಸಿಕೊಂಡ ಪರಮರ್ಷಿಯು ಶುಕಮುನಿಯನ್ನು ಕುರಿತು ಹೇಳಿದನು: ಮಗನೇ, ವಿವಿಧವಾದ ಮೋಕ್ಷಧರ್ಮಗಳನ್ನು ಅಧ್ಯಯನ ಮಾಡು.
ಪಿತುರ್ನಿಯೋಗಾಜ್ಜಗ್ರಾಹ ಶುಕೋ ಬ್ರಹ್ಮವಿದಾಂ ವರಃ |
ಯೋಗಶಾಸ್ತ್ರಂ ಚ ನಿಖಿಲಂ ಕಾಪಿಲಂ ಚೈವ ಭಾರತ ||4||
ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಶುಕಮುನಿಯು ತಂದೆಯ ಆದೇಶಕ್ಕನುಗುಣವಾಗಿ ಯೋಗಶಾಸ್ತ್ರವನ್ನು, ಸಮಗ್ರವಾದ

ಸಾಂಖ್ಯಶಾಸ್ತ್ರವನ್ನು ತಂದೆಯಿಂದ ಸ್ವೀಕರಿಸಿದನು.
ಸ ತಂ ಬ್ರಾಹ್ಮ್ಯಾ ಶ್ರಿಯಾ ಯುಕ್ತಂ ಬ್ರಹ್ಮತುಲ್ಯಪರಾಕ್ರಮಮ್ |
ಮೇನೇ ಪುತ್ರಂ ಯದಾ ವ್ಯಾಸೋ ಮೋಕ್ಷವಿದ್ಯಾವಿಶಾರದಮ್ ॥5॥
ಈ ಬ್ರಹ್ಮಜ್ಞಾನವೆಂಬ ಸಂಪತ್ತಿನಿಂದ ಬ್ರಹ್ಮಜ್ಞಾನಿಗಳಿಗೆ ಸಮಾನವಾದ ತೇಜಸ್ಸನ್ನು ತನ್ನ ಮಗನು ಹೊಂದಿದ್ದಾನೆಂದು ವ್ಯಾಸರು ತಿಳಿದರು. ಶುಕಮುನಿಯು ಮೋಕ್ಷವಿದ್ಯಾ ವಿಶಾರದನೆಂದು ಭಾವಿಸಿದರು.
ಉವಾಚ ಗಚ್ಛೇತಿ ತದಾ ಜನಕಂ ಮಿಥಿಲೇಶ್ವರಮ್ |
ಸ ತೇ ವಕ್ಷ್ಯತಿ ಮೋಕ್ಷಾರ್ಥಂ ನಿಖಿಲೇನ ವಿಶೇಷತಃ ॥6॥
ಶುಕಮುನಿಯನ್ನು ಕುರಿತು ವ್ಯಾಸರು, ಮಿಥಿಲೇಶ್ವರನಾದ ಜನಕನ ಮನೆಗೆ ನೀನು ಸಾಗು. ಆ ಜನಕಮಹಾರಾಜನು ಮೋಕ್ಷಕ್ಕೆ ಸಂಬಂಧಿಸಿದ ಸಮಗ್ರವಾದ ತತ್ತ್ವಗಳನ್ನು ನಿನಗೆ ಬೋಧಿಸುತ್ತಾನೆ ಎಂದು ಹೇಳಿದರು.
ಪಿತುರ್ನಿಯೋಗಾದಗಮನ್ಮೈಥಿಲಂ ಜನಕಂ ನೃಪಮ್ |
ಪ್ರಷ್ಟುಂ ಧರ್ಮಸ್ಯ ನಿಷ್ಠಾಂ ವೈ ಮೋಕ್ಷಸ್ಯ ಚ ಪರಾಯಣಮ್ ॥7॥
ತಂದೆಯ ಆದೇಶದಂತೆ ಮಿಥಿಲಾ ಪಟ್ಟಣದಲ್ಲಿರುವ ಜನಕರಾಜನನ್ನು ನೋಡಲು ಶುಕಮುನಿಯು ಧರ್ಮದ ಸ್ಥಾನವನ್ನು, ಶ್ರೇಷ್ಠ ಸ್ಥಾನವೆನಿಸಿದ ಮೋಕ್ಷದ ಸ್ಥಿತಿಯನ್ನು ಪ್ರಶ್ನಿಸಲು ತೆರಳಿದನು.
ಉಕ್ತಶ್ಚ ಮಾನುಷೇಣ ತ್ವಂ ಪಥಾ ಗಚ್ಛೇತ್ಯವಿಸ್ಮಿತಃ |
ನ ಪ್ರಭಾವೇಣ ಗಂತವ್ಯಮಂತರಿಕ್ಷಚರೇಣ ವೈ ॥8॥
ಶುಕಮುನಿಯೇ, ನೀನು ಮಿಥಿಲಾಪಟ್ಟಣಕ್ಕೆ ಸಾಗುವಾಗ ಅಹಂಕಾರ ರಹಿತನಾಗಿ, ಮನುಷ್ಯರು ಸಂಚರಿಸುವ ದಾರಿಯನ್ನೇ ಅವಲಂಬಿಸಿ ಹೋಗು. ಯೋಗಪ್ರಭಾವವನ್ನು ಆಶ್ರಯಿಸಿ, ಅಂತರಿಕ್ಷದ ಮೂಲಕ ಅಲ್ಲಿಗೆ ಚಲಿಸಬೇಡ ಎಂದು ಹೇಳಿದರು.
ಆರ್ಜವೇಣೈವ ಗಂತವ್ಯಂ ನ ಸುಖಾನ್ವೇಷಿಣಾ ಪಥಾ |
ನಾನ್ವೇಷ್ಟವ್ಯಾ ವಿಶೇಷಾಸ್ತು ವಿಶೇಷಾ ಹಿ ಪ್ರಸಂಗಿನಃ ॥9॥
ಋಜುಸ್ವಭಾವದಿಂದಲೇ ನೀನು ಅಲ್ಲಿಗೆ ಸಾಗಬೇಕು. ಸುಖವನ್ನು ಬಯಸಿ ಹೋಗಬಾರದು. ವಿಶೇಷ ಸ್ಥಾನಮಾನಗಳನ್ನು ಬಯಸಬಾರದು. ಕಾರಣ ಆ ಸ್ಥಾನ- ಮಾನಗಳ ಅಪೇಕ್ಷೆಯಿಂದ ಅವುಗಳಲ್ಲಿಯೇ ಆಸಕ್ತಿ ಹುಟ್ಟುತ್ತದೆ.
ಅಹಂಕಾರೋ ನ ಕರ್ತವ್ಯೋ ಯಾಜ್ಯೇ ತಸ್ಮಿನ್ನರಾಧಿಪೇ |
ಸ್ಥಾತವ್ಯಂ ಚ ವಶೇ ತಸ್ಯ ಸ ತೇ ಛೇತ್ಸ್ಯತಿ ಸಂಶಯಮ್ ॥10॥
ಯಾಜ್ಯನಾದ ಜನಕರಾಜನ ಮುಂದೆ ಅಹಂಕಾರವನ್ನು ತೋರಿಸಬೇಡ. ಎಲ್ಲ ರೀತಿಯಿಂದಲೂ ಅವನ ಆದೇಶವನ್ನು ಪಾಲಿಸು. ಅವನು ನಿನ್ನ ಎಲ್ಲ ಸಂಶಯವನ್ನೂ ಪರಿಹರಿಸುವನು.
ಸ ಧರ್ಮಕುಶಲೋ ರಾಜಾ ಮೋಕ್ಷಶಾಸ್ತ್ರವಿಶಾರದಃ |
ಯಾಜ್ಯೋ ಮಮ ಸ ಯದ್ ಬ್ರೂಯಾತ್ತತ್ ಕಾರ್ಯಮವಿಶಂಕಯಾ ॥
ಮೋಕ್ಷಶಾಸ್ತ್ರ ವಿಶಾರದನಾದ, ಧರ್ಮಕುಶಲನಾದ, ಯಾಜ್ಯನೆನಿಸಿದ ಜನಕರಾಜನು ಯಾವ ಕಾರ್ಯವನ್ನು ನಿನಗೆ ಮಾಡಬೇಕೆಂದು ಹೇಳುತ್ತಾನೋ ಸಂದೇಹವಿಲ್ಲದೆ ಅದನ್ನು ಆಚರಿಸು.
ಏವಮುಕ್ತಃ ಸ ಧರ್ಮಾತ್ಮಾ ಜಗಾಮ ಮಿಥಿಲಾಂ ಮುನಿಃ |
ಪದ್ಭ್ಯಾಂ ಶಕ್ತೋऽಂತರಿಕ್ಷೇಣ ಕ್ರಾಂತುಂ ಭೂಮಿಂ ಸಸಾಗರಾಮ್ ॥12॥
ಯುಧಿಷ್ಠಿರನೇ, ತಂದೆಯಿಂದ ಹೀಗೆ ಆಜ್ಞಪ್ತನಾದ ಶುಕನು ಸಾಗರದಿಂದ ತುಂಬಿದ ಭೂಮಿಯನ್ನು, ಯೋಗಶಕ್ತಿಯಿಂದ ಅಂತರಿಕ್ಷದ ಮೂಲಕ ಸಾಗುವ ಸಾಮರ್ಥ್ಯವಿದ್ದರೂ ತಂದೆಯ ಮಾತಿನಂತೆಯೇ ಕಾಲ್ನಡಿಗೆಯಲ್ಲಿಯೇ ಸಾಗುತ್ತಾ, ಮಿಥಿಲಾಪುರಕ್ಕೆ ಆಗಮಿಸಿದನು.
ಸ ಗಿರೀಂಶ್ಚಾಪ್ಯತಿಕ್ರಮ್ಯ ನದೀಸ್ತೀರ್ತ್ವಾ ಸರಾಂಸಿ ಚ |
ಬಹುವ್ಯಾಲಮೃಗಾಕೀರ್ಣಾ ವಿವಿಧಾಶ್ಚಾಟವೀಸ್ತಥಾ ॥13॥
ಮೇರೋರ್ಹರೇಶ್ಚ ದ್ವೇ ವರ್ಷೇ ವರ್ಷಂ ಹೈಮವತಂ ತಥಾ |
ಕ್ರಮೇಣೈವ ವ್ಯತಿಕ್ರಮ್ಯ ಭಾರತಂ ವರ್ಷಮಾಸದತ್ ॥14॥
ಮಾರ್ಗದ ಮಧ್ಯದಲ್ಲಿ ಅನೇಕ ಪರ್ವತ, ನದಿ, ತೀರ್ಥ, ಸರೋವರ, ಸರ್ಪ ಮೊದಲಾದ ಅನೇಕ ವಿಷಜಂತುಗಳಿಂದಲೂ, ವನ್ಯಪ್ರಾಣಿಗಳಿಂದಲೂ, ವ್ಯಾಪಿಸಿರುವ ಪ್ರಾಣಿಗಳನ್ನು, ವನಗಳನ್ನು ದಾಟಿ ಮೇರುವಿನ ತಪ್ಪಲೆನಿಸಿದ ಇಲಾವೃತವರ್ಷವನ್ನು, ಹರಿವರ್ಷವನ್ನು, ಹಿಮವದ್ ಪರ್ವತದ ಉತ್ತರಭಾಗದಲ್ಲಿರುವ ಕಿಂಪುರುಷವರ್ಷವನ್ನು ಅತಿಕ್ರಮಿಸುತ್ತಾ ಭಾರತವರ್ಷಕ್ಕೆ ಆಗಮಿಸಿದನು.
ಸ ದೇಶಾನ್ ವಿವಿಧಾನ್ ಪಶ್ಯಂಶ್ಚೀನಹೂಣನಿಷೇವಿತಾನ್ |
ಆರ್ಯಾವರ್ತಮಿಮಂ ದೇಶಮಾಜಗಾಮ ಮಹಾಮುನಿಃ ॥15॥
ಚೀನ, ಹೂಣ ಇವರಿಂದ ಸೇವಿಸಲ್ಪಟ್ಟ ಅನೇಕ ವಿಧ ದೇಶಗಳನ್ನು ಅವನು ನೋಡುತ್ತಾ ವಿಂಧ್ಯ, ಹಿಮಾಚಲದ ಮಧ್ಯದಲ್ಲಿರುವ ಆರ್ಯಾವರ್ತ ಎಂಬ ದೇಶಕ್ಕೆ ಅವನು ಆಗಮಿಸಿದನು.
ಪಿತುರ್ವಚನಮಾಜ್ಞಾಯ ತಮೇವಾರ್ಥಂ ವಿಚಿಂತಯನ್ |
ಅಧ್ವಾನಂ ಸೋऽತಿಚಕ್ರಾಮ ಖಚರಃ ಖೇ ಚರನ್ನಿವ ॥16॥
ತಂದೆಯ ಆದೇಶವನ್ನೇ ಸ್ಮರಿಸಿಕೊಳ್ಳುತ್ತಾ, ಪುನಃ ಪುನಃ ಅವನು ಹೇಳಿದ ಅರ್ಥಗಳನ್ನೇ ಚಿಂತಿಸುತ್ತಾ, ಆಕಾಶದಲ್ಲಿ ಸಂಚರಿಸುವ ಸೂರ್ಯನಂತೆ ದಾರಿಯನ್ನು ದಾಟುತ್ತಾ ಬಂದನು.
ಪತ್ತನಾನಿ ಚ ರಮ್ಯಾಣಿ ಸ್ಫೀತಾನಿ ನಗರಾಣಿ ಚ |

ರತ್ನಾನಿ ಚ ವಿಚಿತ್ರಾಣಿ ಶುಕಃ ಪಶ್ಯನ್ನ ಪಶ್ಯತಿ ॥17॥
ದಾರಿಯ ಮಧ್ಯದಲ್ಲಿ ರಮಣೀಯವಾದ ಪಟ್ಟಣಗಳನ್ನು, ಧನ-ಧಾನ್ಯಗಳಿಂದ ಸಮೃದ್ಧವಾದ ನಗರಗಳನ್ನು, ವಿಚಿತ್ರವಾದ ರತ್ನಗಳನ್ನು ನೋಡುತ್ತಿದ್ದರೂ ಶುಕಮುನಿಗೆ ಅವುಗಳ್ಯಾವವೂ ಆಕರ್ಷಿಸಲಿಲ್ಲ. ನೋಡಿದಂತಾಗಲಿಲ್ಲ.
ಉದ್ಯಾನಾನಿ ಚ ರಮ್ಯಾಣಿ ತಥೈವಾಯತನಾನಿ ಚ |
ಪುಣ್ಯಾನಿ ಚೈವ ತೀರ್ಥಾನಿ ಸೋಽತಿಕ್ರಮ್ಯ ತಥಾಧ್ವನಃ ॥ 18॥
ಮುಂದೆ ಮುಂದೆ ಅನೇಕ ರಮಣೀಯವಾದ ಉದ್ಯಾನವನಗಳನ್ನು, ಸುಂದರವಾದ ಸೌಧಗಳನ್ನು,ಅನೇಕ ಪುಣ್ಯತೀರ್ಥಗಳನ್ನು ಅತಿಕ್ರಮಿಸುತ್ತಾ ದಾರಿಯನ್ನು ಸಾಗಿಸಿದನು.
ಸೋಽಚಿರೇಣೈವ ಕಾಲೇನ ವಿದೇಹಾನಾಸಸಾದ ಹ |
ರಕ್ಷಿತಾಂಧರ್ಮರಾಜೇನ ಜನಕೇನ ಮಹಾತ್ಮನಾ ॥19॥
ಹೀಗೆ ಪ್ರಯಾಣ ಮಾಡುತ್ತಾ ಅತ್ಯಲ್ಪಕಾಲದಲ್ಲಿಯೇ ಮಹಾತ್ಮನಾದ ಜನಕನಿಂದ ರಕ್ಷಿಸಲ್ಪಡುತ್ತಿದ್ದ ವಿದೇಹ ಪಟ್ಟಣವನ್ನು ತಲುಪಿದನು.
ತತ್ರ ಗ್ರಾಮಾನ್ ಬಹೂನ್ ಪಶ್ಯನ್ ಬಹ್ವನ್ನರಸಭೋಜನಾನ್ |
ಪಲ್ಲೀಘೋಷಾನ್ ಸಮೃದ್ಧಾಂಶ್ಚ ಬಹುಗೋಕುಲಸಂಕುಲಾನ್ ॥20॥
ಅನ್ನ-ಪಾನಗಳಿಂದ, ನಾನಾ ವಿಧವಾದ ಖಾದ್ಯವಸ್ತುಗಳಿಂದ ಸಮೃದ್ಧವಾಗಿರುವ ವಿದೇಹನ ರಾಜ್ಯದಲ್ಲಿದ್ದ ಅನೇಕ ಗ್ರಾಮಗಳನ್ನು, ಧನ-ಧಾನ್ಯಗಳಿಂದ ಸಮೃದ್ಧವಾದ ಹಳ್ಳಿಗಳನ್ನು, ಅಸಂಖ್ಯಗೋಸಮೃದ್ಧಿಯಿಂದ ತುಂಬಿದ ಗೊಲ್ಲರ ಹಟ್ಟಿಗಳನ್ನು ನೋಡುತ್ತಾ ಶುಕನು ಮುಂದೆ ಸಾಗಿದನು.
ಸ್ಫೀತಾಂಶ್ಚ ಶಾಲಿಯವಸ್ಯೈರ್ಹಂಸಸಾರಸಸೇವಿತಾನ್ |
ಪದ್ಮಿನೀಭಿಶ್ಚ ಶತಶಃ ಶ್ರೀಮತೀಭಿರಲಂಕೃತಾನ್ ॥21॥
ಸಮೃದ್ಧವಾಗಿ ಧಾನ್ಯಗಳಿಂದ ಟಿಸಿಲೊಡೆದ ಭತ್ತಗಳ ಗದ್ದೆಗಳನ್ನು, ಹಂಸ-ಸಾರಸ ಪಕ್ಷಿಗಳಿಂದ ಸೇವಿಸಲ್ಪಡುತ್ತಿದ್ದ, ಕಾಂತಿಯಿಂದ ಕೂಡಿರುವ ಕಮಲಗಳಿಂದ ಅಲಂಕೃತವಾದ ನೂರರು ಸರೋವರಗಳನ್ನು ನೋಡುತ್ತಾ ಮುಂದೆ ಸಾಗಿದನು.
ಸ ವಿದೇಹಾನತಿಕ್ರಮ್ಯ ಸಮೃದ್ಧಜನಸೇವಿತಾನ್ |
ಮಿಥಿಲೋಪವನಂ ರಮ್ಯಮಾಸಸಾದ ಮಹರ್ದ್ಧಿಮತ್ ॥22॥
ಸಮೃದ್ಧರಾದ ಜನರಿಂದ ಸೇವಿತವಾಗಿರುವ ವಿದೇಹನಗರದ ರಮಣೀಯವಾದ, ಮಹತ್ತಾದ ವೃದ್ಧಿಯಿಂದ ಕೂಡಿರುವ ಉಪವನವನ್ನು ಸಮೀಪಿಸಿದನು.
ಹಸ್ತ್ಯಶ್ವರಥಸಂಕೀರ್ಣಂ ನರನಾರೀಸಮಾಕುಲಮ್ |
ಪಶ್ಯನ್ನಪಶ್ಯನ್ನಿವ ತತ್ ಸಮತಿಕ್ರಾಮದಚ್ಯುತಃ ॥23॥
ಚ್ಯುತಿಯಿಲ್ಲದೆ ಶುಕಮುನಿಯು ಆನೆಗಳಿಂದ, ಕುದುರೆಗಳಿಂದ, ನರ- ನಾರಿಯರಿಂದ ತುಂಬಿಹೋಗಿರುವ ಸುಂದರವಾದ ಉಪವನವನ್ನು ನೋಡಿಯೂ ನೋಡದಂತೆ ಮುಂದೆ ಸಾಗಿದನು.
ಮನಸಾ ತಂ ವಹನ್ ಭಾರಂ ತಮೇವಾರ್ಥಂ ವಿಚಿಂತಯನ್ |
ಆತ್ಮಾರಾಮಃ ಪ್ರಸನ್ನಾತ್ಮಾ ಮಿಥಿಲಾಮಾಸಸಾದ ಹ ॥24॥
ತಿಳಿಯಬೇಕಾದ ಭಗವತ್ತತ್ತ್ವದ ವಿಚಾರದ ಭಾರವನ್ನೇ ಮನಸ್ಸಿನಲ್ಲಿ ಹೊತ್ತುಕೊಂಡು, ಅದರ ಅಂತರಾರ್ಥವೇನೆಂದು ಮನಸ್ಸಿನಲ್ಲಿಯೇ ವಿಚಾರ ಮಾಡುತ್ತಾ, ಭಗವತತ್ತ್ವದಲ್ಲಿಯೇ ಸಂತೋಷವನ್ನು ಹೊಂದಿರುವ ಪ್ರಸನ್ನಾತ್ಮನಾದ ಶುಕಮುನಿಯು ಮಿಥಿಲಾಪಟ್ಟಣವನ್ನು ಸೇರಿದನು.
ತಸ್ಯಾ ದ್ವಾರಂ ಸಮಾಸಾದ್ಯ ದ್ವಾರಪಾಲೈರ್ನಿವಾರಿತಃ |
ಸ್ಥಿತೋ ಧ್ಯಾನಪರೋ ಮುಕ್ತೋ ವಿದಿತಃ ಪ್ರವಿವೇಶ ಹ ॥25॥
ಮಿಥಿಲಾಪಟ್ಟಣದ ಹೆಬ್ಬಾಗಿಲಿಗೆ ಆಗಮಿಸಿ ಯಾವ ವಿಧವಾದ ಸಂಶಯವೂ ಇಲ್ಲದೆ ಒಳಕ್ಕೆ ಪ್ರವೇಶಿಸಿದನು. ಆದರೆ ಅಲ್ಲಿರುವ ದ್ವಾರಪಾಲಕರು ತಮ್ಮ ಅನುಮತಿ ಇಲ್ಲದೆ ಒಳಕ್ಕೆ ಹೋಗುತ್ತಿದ್ದ ಶುಕನನ್ನು ಕಠಿಣವಾದ ಮಾತುಗಳಿಂದ ತಡೆದು ನಿಲ್ಲಿಸಿದರು.
ಸ ರಾಜಮಾರ್ಗಮಾಸಾದ್ಯ ಸಮೃದ್ಧಜನಸಂಕುಲಮ್ |
ಪಾರ್ಥಿವಕ್ಷಯಮಾಸಾದ್ಯ ನಿಃಶಂಕಃ ಪ್ರವಿವೇಶ ಹ ॥26॥
ದ್ವಾರಪಾಲಕನ ಮಾತುಗಳಿಂದ ರಾಜಮಾರ್ಗದಲ್ಲಿ ನಿಂತಿರುವ ಶುಕಮುನಿಯು ಸಮೃದ್ಧ ಜನಸಂಕುಲವಾದ ರಾಜಮಾರ್ಗವನ್ನು ನಿಶ್ಶಂಕೆಯಿಂದಲೇ ಪ್ರವೇಶಿಸಿದನು.
ತತ್ರಾಪಿ ದ್ವಾರಪಾಲಾಸ್ತಮುಗ್ರವಾಚೋ ನ್ಯಷೇಧಯನ್ |
ತಥೈವ ಚ ಶುಕಸ್ತತ್ರ ನಿರ್ಮನ್ಯುಃ ಸಮತಿಷ್ಠತ ॥27॥
ಮುಂದೆ ಸಾಗುತ್ತಾ ಮುಂದಿನ ದ್ವಾರಪಾಲಕರು ಶುಕಮುನಿಯನ್ನು ಉಗ್ರವಾದ ಮಾತುಗಳಿಂದ ತಡೆದರು. ಶುಕಮುನಿಯು ಉಗ್ರ ಮಾತುಗಳನ್ನಾಡಿದ ಅವರ ಮಾತುಗಳಿಂದ ಸಿಟ್ಟುಗೊಳ್ಳದೆ ಅಲ್ಲಿಯೇ ನಿಂತನು.
ನ ಚಾತಪಾಧ್ವಸಂತಪ್ತಃ ಕ್ಷುತ್ಪಿಪಾಸಾಶ್ರಮಾನ್ವಿತಃ |
ಪ್ರತಾಮ್ಯತಿ ಗ್ಲಾಯತಿ ವಾ ನಾಪೈತಿ ಚ ತಥಾತಪಾತ್ ॥28॥
ಮಾರ್ಗದ ಆಯಾಸವು ಅವನ ಮುಖದಲ್ಲಿ ಕಾಣುತ್ತಿರಲಿಲ್ಲ. ಹಸಿವು- ನೀರಡಿಕೆಗಳ ಆಯಾಸವೂ ಕಾಣುತ್ತಿರಲಿಲ್ಲ. ಪರಿತಾಪ, ಕುಗ್ಗುವಿಕೆ ಯಾವುದನ್ನೂ ಸೂರ್ಯನ ಬಿಸಿಲಿನಿಂದ ಹೊಂದಿರಲಿಲ್ಲ.
ತೇಷಾಂ ತು ದ್ವಾರಪಾಲಾನಾಮೇಕಃ ಶೋಕಸಮನ್ವಿತಃ |

ಮಧ್ಯಂಗತಮಿವಾದಿತ್ಯಂ ದೃಷ್ಟ್ವಾ ಶುಕಮವಸ್ಥಿತಮ್ ॥29॥
ಪೂಜಯಿತ್ವಾ ಯಥಾನ್ಯಾಯಮಭಿವಾದ್ಯ ಕೃತಾಂಜಲಿಃ।
ಪ್ರಾವೇಶಯತ್ತತಃ ಕಕ್ಷ್ಯಾಂ ದ್ವಿತೀಯಾಂ ರಾಜವೇಶ್ಮನಃ ॥30॥
ಅಂತಹ ಶುಕಮುನಿಯನ್ನು ಕಂಡು ದ್ವಾರಪಾಲಕರ ಸಮುದಾಯದಲ್ಲಿ ಒಬ್ಬನಿಗೆ ಮಾತ್ರ ದುಃಖವಾಯಿತು. ಬೆಳಗುವ ಮಧ್ಯಾಹ್ನದ ಸೂರ್ಯನಂತೆ ತೇಜಸ್ಸಿನಿಂದ ಕೂಡಿರುವ ಶುಕನನ್ನು ಕಂಡು, ಮೌನಿಯಾಗಿರುವ ಆತನನ್ನು ನೋಡಿದ ದ್ವಾರಪಾಲಕನು ಕೈಮುಗಿದು ನಮಸ್ಕರಿಸಿ, ವಿಧಿಬದ್ಧವಾಗಿ ಕೂರಿಸಿ ರಾಜನ ಅರಮನೆಯ ಎರಡನೆಯ ಆವರಣಕ್ಕೆ ಕಳುಹಿಸಿಕೊಟ್ಟನು.
ತತ್ರಾಸೀನಃ ಶುಕಸ್ತಾತ ಮೋಕ್ಷಮೇವಾನುಚಿಂತಯನ್।
ಛಾಯಾಯಾಮಾತಪೇ ಚೈವ ಸಮದರ್ಶೀ ಮಹಾದ್ಯುತಿಃ ॥31॥
ಬಿಸಿಲು, ನೆರಳುಗಳನ್ನು ಸಮಾನವಾಗಿ ಭಾವಿಸಿದ್ದ, ಅರ್ಥಾತ್ ಸುಖ-ದುಃಖ- ನಿಂದಾ-ಸ್ತುತಿಗಳನ್ನು ಸಮಾನವಾಗಿ ಭಾವಿಸಿದ್ದ ಮಹಾಕಾಂತಿಯುಕ್ತನಾದ ಶುಕದೇವನು ಎರಡನೆಯ ಆವರಣದಲ್ಲಿದ್ದ ಒಂದು ಜಗಲಿಯ ಮೇಲೆ ಕುಳಿತು ಮೋಕ್ಷದ ವಿಷಯವನ್ನೇ ಚಿಂತಿಸಲಾರಂಭಿಸಿದನು.
ತಂ ಮುಹೂರ್ತಾದಿವಾಗಮ್ಯ ರಾಜ್ಞೋ ಮಂತ್ರೀ ಕೃತಾಂಜಲಿಃ।
ಪ್ರಾವೇಶಯತ್ತತಃ ಕಕ್ಷ್ಯಾಂ ತೃತೀಯಾಂ ರಾಜವೇಶ್ಮನಃ ॥32॥
ಒಂದು ಮುಹೂರ್ತದ ಬಳಿಕ ರಾಜನ ಮಂತ್ರಿಯು ಕೈಮುಗಿದು ಶುಕನ ಬಳಿಗೆ ಬಂದು, ಅವನನ್ನು ರಾಜನ ಅರಮನೆಯ ಮೂರನೆಯ ಆವರಣಕ್ಕೆ ಕರೆದುಕೊಂಡು ಹೋದನು.
ತತ್ರಾಂತಃಪುರಸಂಬದ್ಧಂ ಮಹಚ್ಚೈತ್ರರಥೋಪಮಮ್।
ಸುವಿಭಕ್ತಜಲಾಕ್ರೀಡಂ ರಮ್ಯಂ ಪುಷ್ಪಿತಪಾದಪಮ್ ॥33॥
ಆ ಮೂರನೆಯ ಆವರಣದಲ್ಲಿ ಅಂತಃಪುರಕ್ಕೆ ಸಂಬಂಧಿಸಿದಂತಹ ಸುಂದರವಾದ, ವಿಶಾಲವಾದ ಹೆಣ್ಣುಮಕ್ಕಳ ಉದ್ಯಾನವನವಿತ್ತು. ಉದ್ಯಾನವನವು ಕುಬೇರನ ಚೈತ್ರರಥ ಉದ್ಯಾನವನಕ್ಕೆ ಸಮಾನವಾಗಿತ್ತು. ಜಲಕ್ರೀಡೆಯಾಡಲು ಸುಂದರವಾದ ಜಲಾಶಯಗಳಿದ್ದವು. ಅನೇಕ ಪುಷ್ಪಾಲಂಕೃತ ವೃಕ್ಷಗಳಿದ್ದವು.
ತದ್ದರ್ಶಯಿತ್ವಾ ಸ ಶುಕಂ ಮಂತ್ರೀ ಕಾನನಮುತ್ತಮಮ್।
ಅರ್ಹಮಾಸನಮಾದಿಶ್ಯ ನಿಶ್ಚಕ್ರಾಮ ತತಃ ಪುನಃ ॥34॥
ಪ್ರಮದೆಯರಿಂದ ಕೂಡಿದ ಅಂತಹ ಉದ್ಯಾನವನದ ಒಳಗಡೆ ಮಂತ್ರಿಯು ಕರೆದುಕೊಂಡು ಹೋಗಿ ಅಲ್ಲಿಯೇ ಕುಳಿತುಕೊಳ್ಳಲು ಆಸನವನ್ನು ಕೊಟ್ಟು, ಮಂತ್ರಿಯು ಹೊರಟು ಹೋದನು.
ತಂ ಚಾರುವೇಷಾಃ ಸುಶ್ರೋಣ್ಯಸ್ತರುಣ್ಯಃ ಪ್ರಿಯದರ್ಶನಾಃ।
ಸೂಕ್ಷ್ಮರಕ್ತಾಂಬರಧರಾಸ್ತಪ್ತಕಾಂಚನಭೂಷಣಾಃ ॥35॥
ಸಂಲಾಪೋಲ್ಲಾಪಕುಶಲಾ ನೃತ್ತಗೀತವಿಶಾರದಾಃ।
ಸ್ಮಿತಪೂರ್ವಾಭಿಭಾಷಿಣ್ಯೋ ರೂಪೇಣಾಪ್ಸರಸಾಂ ಸಮಾಃ ॥36॥
ಕಾಮೋಪಚಾರಕುಶಲಾ ಭಾವಜ್ಞಾಃ ಸರ್ವಕೋವಿದಾಃ।
ಪರಂ ಪಂಚಾಶತೋ ನಾರ್ಯೋ ವಾರಮುಖ್ಯಾಃ ಸಮಾದ್ರವನ್ ॥37॥
ಮಂತ್ರಿಯು ಆಚೆ ಹೊರಟ ಕೂಡಲೇ ಐದುನೂರು ವಾರಾಂಗನೆಯರು ಶುಕನ ಬಳಿಗೆ ಧಾವಿಸಿ ಬಂದರು. ಅವರೆಲ್ಲರೂ ಸುಂದರವಾದ ವೇಷಭೂಷಣಗಳನ್ನು ಧರಿಸಿದ್ದರು. ಸುಂದರವಾದ ನಿತಂಬವುಳ್ಳವರಾಗಿದ್ದರು. ತರುಣಿಯರಾಗಿದ್ದರು. ಪ್ರಿಯವಾದ ದರ್ಶನ ಸುಖವನ್ನು ನೀಡಲು ಸಮರ್ಥರಾಗಿದ್ದರು. ತೆಳುವಾದ ಕೆಂಪು ಸೀರೆಯನ್ನು ಧರಿಸಿದ್ದರು. ಪುಟಕ್ಕೆ ಹಾಕಿ ಫಳಫಳ ಹೊಳೆಯುವ ಚಿನ್ನದ ಆಭರಣಗಳನ್ನು ಧರಿಸಿದ್ದರು. ಮಧುರವಾದ ಮಾತುಗಳಲ್ಲಿ ಅತ್ಯಂತ ನಿಪುಣರಾಗಿದ್ದರು. ನೃತ್ಯ-ಗೀತೆಗಳಲ್ಲಿ ಪ್ರಾವೀಣ್ಯವನ್ನು ಹೊಂದಿದ್ದರು. ಮತ್ತೊಬ್ಬರ ಬಳಿ ಮಂದಹಾಸವನ್ನು ಬೀರುತ್ತಾ ಮಾತನಾಡುವವರಾಗಿದ್ದರು. ರೂಪದಲ್ಲಿ ಅಪ್ಸರೆಯರಿಗೆ ಸಮಾನರಾಗಿದ್ದರು. ಕಾಮಪ್ರಚೋದನೆಯಾಗುವಂತೆ ಉಪಚರಿಸುವುದರಲ್ಲಿಯೂ ಬಹಳ ಕುಶಲೆಯರಾಗಿದ್ದರು. ಇತರರ ಮನಸ್ಸಿನ ಅಭಿಪ್ರಾಯವನ್ನು ತಿಳಿಯಲು ಸಮರ್ಥರಾಗಿದ್ದರು. ಸರ್ವಕಲೆಗಳನ್ನು ತಿಳಿದವರಾಗಿದ್ದರು.
ಪಾದ್ಯಾದೀನಿ ಪ್ರತಿಗ್ರಾಹ್ಯ ಪೂಜಯಾ ಪರಯಾರ್ಚ್ಯ ಚ।
ದೇಶಕಾಲೋಪಪನ್ನೇನ ಸಾಧ್ವನ್ನೇನಾಪ್ಯತರ್ಪಯನ್ ॥38॥
ಇಂತಹ ಐದುನೂರು ಮಂದಿ ವೇಶ್ಯೆಯರು ಶುಕದೇವನನ್ನು ಸುತ್ತುವರಿದು, ಅರ್ಘ್ಯ-ಪಾದ್ಯಗಳನ್ನು ನೀಡಿ, ಶ್ರೇಷ್ಠವಾದ ಪೂಜೆಯಿಂದ ಅವನನ್ನು ಸಮ್ಮಾನಿಸಿದರು. ಆ ದೇಶ-ಕಾಲಕ್ಕೆ ಯೋಗ್ಯವಾದ, ಶ್ರೇಷ್ಠವಾದ, ರುಚಿಕರ ಭೋಜನದಿಂದ ತೃಪ್ತಿಪಡಿಸಿದರು.
ತಸ್ಯ ಭುಕ್ತವತಸ್ತಾತ ತದಂತಃಪುರಕಾನನಮ್।
ಸುರಮ್ಯಂ ದರ್ಶಯಾಮಾಸುರೇಕೈಕಶ್ಯೇನ ಭಾರತ ॥39॥
ಶುಕದೇವನಿಗೆ ಭೋಜನ ಮಾಡಿಸಿದ ಬಳಿಕ ಆ ವೇಶ್ಯೆಯರು ಶುಕಮುನಿಯನ್ನು ಜೊತೆಯಲ್ಲಿ, ಕರೆದುಕೊಂಡು ಪ್ರಮದಾವನದ ಸುತ್ತಲು ತಿರುಗಾಡುತ್ತಾ, ಅಲ್ಲಿದ್ದ ಪ್ರತಿಯೊಂದು ವಸ್ತುವನ್ನು ತೋರಿಸಿದರು.
ಕ್ರೀಡಂತ್ಯಶ್ಚ ಹಸಂತ್ಯಶ್ಚ ಗಾಯಂತ್ಯಶ್ಚೈವ ತಾಃ ಶುಕಮ್।
ಉದಾರಸತ್ತ್ವಂ ಸತ್ತ್ವಜ್ಞಾಃ ಸರ್ವಾಃ ಪರ್ಯಚರಂಸ್ತದಾ ॥40॥
ಶುಭಚರಿತನಾದ ಶುಕದೇವನ ಅಂತಃಸತ್ತ್ವವನ್ನು ಪರೀಕ್ಷಿಸಲು ವಾರಾಂಗನೆಯರು ಅನೇಕ ವಿಧವಾದ ಮನೋಲ್ಲಾಸಕರವಾದ ಆಟವನ್ನಾಡುತ್ತಾ, ಕಿಲಕಿಲನೆ ನಗುತ್ತಾ, ಗಾಯನ ಮಾಡುತ್ತಾ ಉಪಚರಿಸಿದರು.
ಆರಣೇಯಸ್ತು ಶುದ್ಧಾತ್ಮಾ ತ್ರಿಸಂದೇಹಸ್ತ್ರಿಕರ್ಮಕೃತ್।

ವಶ್ಯೇಂದ್ರಿಯೋ ಜಿತಕ್ರೋಧೋ ನ ಹೃಷ್ಯತಿ ನ ಕುಪ್ಯತಿ ॥41॥
ಅರಣಿಸಂಭೂತನಾದ, ಶುದ್ಧಾತ್ಮನಾದ, ಮೋಕ್ಷೇತರ ಪುರುಷಾರ್ಥಗಳಲ್ಲಿ, ಅನಿಷಿದ್ಧವಾದುದರಲ್ಲಿ ಆಸಕ್ತಿಯನ್ನು ಹೊಂದಿ, ನಿಷಿದ್ಧವಾದ ಧರ್ಮ-ಅರ್ಥ- ಕಾಮಗಳಲ್ಲಿ ಅನಾಸಕ್ತಿಯನ್ನು ಹೊಂದಿರುವಂತಹ, ವ್ಯವಸ್ಥಿತವಾದ ಮೂರು ಸಂದೇಹಗಳನ್ನು ಹೊಂದಿರುವ, ಮೂರು ಕರ್ಮಗಳನ್ನು ಆಚರಿಸುತ್ತಿರುವ, ಇಂದ್ರಿಯಗಳನ್ನು ವಶಪಡಿಸಿಕೊಂಡಿರುವ, ಕ್ರೋಧವನ್ನು ಜಯಿಸಿರುವ ಈ ಶುಕಮುನಿಯು ಈ ವೇಶ್ಯೆಯರ ಆಟ-ಪಾಠಗಳಿಂದ, ಮಂದಹಾಸಗಳಿಂದ ಸಂತೋಷವನ್ನೂ ಹೊಂದಲಿಲ್ಲ, ಕ್ರೋಧವನ್ನೂ ಹೊಂದಲಿಲ್ಲ.
ತಸ್ಮೈ ಶಯ್ಯಾಸನಂ ದಿವ್ಯಂ ವರಾರ್ಹಂ ರತ್ನಭೂಷಿತಮ್ ।
ಸ್ಪರ್ಧ್ಯಾಸ್ತರಣಸಂಸ್ತೀರ್ಣಂ ದದುಸ್ತಾಃ ಪರಮಸ್ತ್ರಿಯಃ ॥42॥
ಆ ವಾರಾಂಗನೆಯರು ತಮ್ಮ ಚೇಷ್ಟೆಗಳನ್ನೆಲ್ಲ ಮುಗಿಸಿದ ಬಳಿಕ ಶುಕಮುನಿಗೆ ದಿವ್ಯವಾದ, ದೇವಾರ್ಹವಾದ, ರತ್ನಭೂಷಿತವಾದ, ಬಹುಮಾಲ್ಯವಾದ ರತ್ನಗಂಬಳಿಯಿಂದ ಆಚ್ಛಾದಿತವಾದ ಹಾಸಿಗೆಯನ್ನು ಮಲಗಲು ಸಿದ್ಧಪಡಿಸಿದರು.
ಪಾದಶೌಚಂ ತು ಕೃತ್ವೈವ ಶುಕಃ ಸಂಧ್ಯಾಮುಪಾಸ್ಯ ಚ ।
ನಿಷಸಾದಾಸನೇ ಪುಣ್ಯೇ ತಮೇವಾರ್ಥಂ ವಿಚಿಂತಯನ್ ॥43॥
ಆದರೆ ಶುಕಮುನಿಯು ಕೈ-ಕಾಲುಗಳನ್ನು ತೊಳೆದುಕೊಂಡು, ಸಂಧ್ಯೋಪಾಸನೆಯನ್ನು ಮಾಡಿ, ಶುಭ್ರವಾದ ಆಸನದಲ್ಲಿ ಕುಳಿತು ಮೋಕ್ಷದ ವಿಷಯವನ್ನೇ ಚಿಂತಿಸುತ್ತಿದ್ದನು.
ಪೂರ್ವರಾತ್ರೇ ತು ತತ್ರಾಸೌ ಭೂತ್ವಾ ಧ್ಯಾನಪರಾಯಣಃ ।
ಮಧ್ಯರಾತ್ರೇ ಯಥಾನ್ಯಾಯಂ ನಿದ್ರಾಮಾಹಾರಯತ್ ಪ್ರಭುಃ ॥44॥
ಪ್ರಭುವಾದ, ಬುದ್ಧಿವಂತನಾದ ಶುಕಮುನಿಯು ರಾತ್ರಿಯ ಮೊದಲನೆಯ ಯಾಮದಲ್ಲಿ ಧ್ಯಾನಾಸಕ್ತನಾಗಿದ್ದು, ಮಧ್ಯರಾತ್ರಿಯಲ್ಲಿ ಶಾಸ್ತ್ರದ ವಿಧಿಯಂತೆ ನಿದ್ರಿಸಿದನು.
ತತೋ ಮುಹೂರ್ತಾದುತ್ಥಾಯ ಕೃತ್ವಾ ಶೌಚಮನಂತರಮ್ ।
ಸ್ತ್ರೀಭಿಃ ಪರಿವೃತೋ ಧೀಮಾನ್ ಧ್ಯಾನಮೇವಾನ್ವಪದ್ಯತ ॥45॥
ಬಳಿಕ ಬ್ರಾಹ್ಮಮುಹೂರ್ತದಲ್ಲಿ ಎದ್ದು, ಶೌಚಾದಿಗಳನ್ನು ಪೂರೈಸಿ, ಬಳಿಕ ಸ್ತ್ರೀಯರಿಂದ ಪರಿವೃತನಾಗಿದ್ದರೂ ಭಗವದ್ಧ್ಯಾನದಲ್ಲಿಯೇ ಆಸಕ್ತನಾದನು.
ಅನೇನ ವಿಧಿನಾ ಕಾರ್ಷ್ಣಿಸ್ತದಹಃಶೇಷಮಚ್ಯುತಃ ।
ತಾಂ ಚ ರಾತ್ರಿಂ ನೃಪಕುಲೇ ವರ್ತಯಾಮಾಸ ಭಾರತ ॥46॥
ಅಚ್ಯುತನಾದ ವ್ಯಾಸರ ಸುತನಾದ ಶುಕನು ಈ ರೀತಿಯಾಗಿ ವಿಧಿಬದ್ಧವಾಗಿ ಹಗಲು-ರಾತ್ರಿಗಳನ್ನು ರಾಜಭವನದಲ್ಲಿ ಕಳೆದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೆಂಟನೆಯ ಅಧ್ಯಾಯ
ಶುಕ-ಜನಕರ ಸಂವಾದ.
ಭೀಷ್ಮಃ
ತತಃ ಸ ರಾಜಾ ಜನಕೋ ಮಂತ್ರಿಭಿಃ ಸಹ ಭಾರತ ।
ಪುರಃ ಪುರೋಹಿತಂ ಕೃತ್ವಾ ಸರ್ವಾಣ್ಯಂತಃಪುರಾಣಿ ಚ ॥1॥
ಆಸನಂ ಚ ಪುರಸ್ಕೃತ್ಯ ರತ್ನಾನಿ ವಿವಿಧಾನಿ ಚ ।
ಶಿರಸಾ ಚಾರ್ಘ್ಯಮಾದಾಯ ಗುರುಪುತ್ರಂ ಸಮಭ್ಯಗಾತ್ ॥2॥
ಭೀಷ್ಮ ಯುಧಿಷ್ಠಿರನೇ, ನಂತರ ಜನಕರಾಜನು ಮಂತ್ರಿಗಳಿಂದ ಕೂಡಿಕೊಂಡು ಪುರೋಹಿತರನ್ನು, ಸಮಸ್ತ ಅಂತಃಪುರದವರನ್ನು ಮುಂದೆ ಮಾಡಿಕೊಂಡು ಆಸನವನ್ನು, ವಿಧವಿಧವಾದ ರತ್ನಗಳನ್ನು, ಅರ್ಘ್ಯವನ್ನು ತಲೆಯ ಮೇಲೆ ಹೊತ್ತುಕೊಂಡು ಗುರುಪುತ್ರನ ಬಳಿಗೆ ಆಗಮಿಸಿದನು.
ಸ ತದಾಸನಮಾದಾಯ ಬಹುರತ್ನವಿಭೂಷಿತಮ್ ।
ಸ್ಪರ್ಧ್ಯಾಸ್ತರಣಸಂಸ್ತೀರ್ಣಂ ಸರ್ವತೋಭದ್ರಮೃದ್ಧಿಮತ್ ॥3॥
ಪುರೋಧಸಾ ಸಂಗೃಹೀತಂ ಹಸ್ತೇನಾಲಭ್ಯ ಪಾರ್ಥಿವಃ ।
ಪ್ರದದೌ ಗುರುಪುತ್ರಾಯ ಶುಕಾಯ ಪರಮಾರ್ಚಿತಮ್ ॥4॥
ಅನೇಕ ರತ್ನಗಳಿಂದ ವಿಭೂಷಿತವಾದ, ಬಹುಮೌಲ್ಯಭರಿತವಾದ, ಪರಿಪೂರ್ಣವಾದ, ಸರ್ವತೋಭದ್ರ ಎನಿಸಿದ, ವೃದ್ಧಿಯಿಂದ ಕೂಡಿದ ಪೂಜಾರ್ಹವಾದ ಆಸನವನ್ನು ತೆಗೆದುಕೊಂಡು ಗುರುಪುತ್ರನಾದ ಶುಕನಿಗೆ ಅರ್ಪಿಸಿದನು.
ತತ್ರೋಪವಿಷ್ಟಂ ತಂ ಕಾರ್ಷ್ಣಿಂ ಶಾಸ್ತ್ರತಃ ಪ್ರತ್ಯಪೂಜಯತ್ ।
ಪಾದ್ಯಂ ನಿವೇದ್ಯ ಪ್ರಥಮಮರ್ಘ್ಯಂ ಗಾಂ ಚ ನ್ಯವೇದಯತ್ ।
ಸ ಚ ತಾಂ ಮಂತ್ರವತ್ ಪೂಜಾಂ ಪ್ರತ್ಯಗೃಹ್ಣಾದ್ ಯಥಾವಿಧಿ ॥5॥
ಆ ಶ್ರೇಷ್ಠವಾದ, ಮಂಗಳಮಯವಾದ ಆಸನದಲ್ಲಿ ಕುಳಿತಿರುವ ಶುಕದೇವನನ್ನು ಜನಕನು ಶಾಸ್ತ್ರೋಕ್ತವಾದ ವಿಧಿಯಿಂದ ಸತ್ಕರಿಸಿದನು. ಮೊದಲು ಪಾದ್ಯವನ್ನು ಅರ್ಪಿಸಿ, ನಂತರ ಅರ್ಘ್ಯವನ್ನು,ಗೋವನ್ನು ಶುಕಮುನಿಗೆ ಅರ್ಪಿಸಿದನು. ಶುಕದೇವನು

ಜನಕರಾಜನಿಂದ ಅರ್ಪಿತವಾದ, ಮಂತ್ರಪೂರ್ವಕವಾದ ಸತ್ಕಾರವನ್ನು ವಿಧಿಗೆ ಅನುಗುಣವಾಗಿಯೇ ಸ್ವೀಕರಿಸಿದನು.
ಪ್ರತಿಗೃಹ್ಯ ಚ ತಾಂ ಪೂಜಾಂ ಜನಕಾದ್ ದ್ವಿಜಸತ್ತಮಃ |
ಗಾಂ ಚೈವ ಸಮನುಜ್ಞಾಯ ರಾಜಾನಮನುಮಾನ್ಯ ಚ ॥6॥
ಪರ್ಯಪೃಚ್ಛನ್ಮಹಾತೇಜಾ ರಾಜ್ಞಃ ಕುಶಲಮವ್ಯಯಮ್ |
ಅನಾಮಯಂ ಚ ರಾಜೇಂದ್ರ ಶುಕಃ ಸಾನುಚರಸ್ಯ ಹ ॥7॥
ನಂತರ ದ್ವಿಜಶ್ರೇಷ್ಠನಾದ ಶುಕಮುನಿಯು ಜನಕನಿಂದ ನೀಡಲ್ಪಟ್ಟ ಆ ಪೂಜೆಯನ್ನು ಸ್ವೀಕರಿಸಿ, ಹಸುವನ್ನು ನಿಯತಸ್ಥಳಕ್ಕೆ ಒಯ್ಯುವಂತೆ ಹೇಳಿ, ರಾಜನನ್ನು ಸನ್ಮಾನಿಸಿ, ಎಂದೂ ನಾಶವಾಗದೆ ಇರುವ ರಾಜನ ಕುಶಲವನ್ನು ಮಹಾತೇಜಸ್ವಿಯಾದ ಶುಕಮುನಿಯು ಪ್ರಶ್ನಿಸಿದನು. ಪರಿವಾರದಿಂದ ಸಹಿತನಾದ ರಾಜನ ಸಮಸ್ತ ವಿಧವಾದ ಆರೋಗ್ಯವನ್ನು ಶುಕಮುನಿಯು ವಿಚಾರಿಸಿದನು.
ಅನುಜ್ಞಾತಃ ಸ ತೇನಾಥ ನಿಷಸಾದ ಸಹಾನುಗಃ |
ಉದಾರಸತ್ತ್ವಭಿಜನೋ ಭೂಮೌ ರಾಜಾ ಕೃತಾಂಜಲಿಃ ॥8॥
ಅವನಿಂದ ಅಪ್ಪಣೆಯನ್ನು ಪಡೆದ ಜನಕನು ಆಸನದಲ್ಲಿ ಕುಳಿತನು. ಉದಾರವಾದ ಹೃದಯವುಳ್ಳ ಜನಕರಾಜನು ಕೈಮುಗಿದುಕೊಂಡು ಶುಕಮುನಿಯು ಕುಳಿತಿರುವ ಆಸನದಿಂದ ಕೆಳಗೆ ಭೂಮಿಯಲ್ಲಿ ಕುಳಿತನು.
ಕುಶಲಂ ಚಾವ್ಯಯಂ ಚೈವ ಪೃಷ್ಟ್ವಾ ವೈಯಾಸಕಿಂ ನೃಪಃ |
ಕಿಮಾಗಮನಮಿತ್ಯೇವ ಪರ್ಯಪೃಚ್ಛತ ಪಾರ್ಥಿವಃ ॥9॥
ರಾಜನಾದ ಜನಕನು ಶುಕಮುನಿಯನ್ನು ಕುರಿತು ಅವ್ಯಯವಾದ ಕುಶಲವನ್ನು ಪ್ರಶ್ನಿಸಿ, ಜನಕಪುರಿಗೆ ಆಗಮಿಸಿದ ಕಾರಣವೇನೆಂದು ಪ್ರಶ್ನಿಸಿದನು.
ಶುಕಃ
ಪಿತ್ರಾಹಮುಕ್ತೋ ಭದ್ರಂ ತೇ ಮೋಕ್ಷಧರ್ಮಾರ್ಥಕೋವಿದಃ |
ವಿದೇಹರಾಜೋ ಯಾಜ್ಯೋ ಮೇ ಜನಕೋ ನಾಮ ವಿಶ್ರುತಃ ॥10॥
ಶುಕ ನನ್ನ ತಂದೆಯು, ಜನಕಮಹಾರಾಜನು ಮೋಕ್ಷಧರ್ಮಾರ್ಥಗಳನ್ನು ತಿಳಿದಿದ್ದಾನೆ. ನನಗೆ ಯಾಜ್ಯನಾದ ಜನಕನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ವಿದೇಹರಾಜನಿದ್ದಾನೆ ಎಂದು ಹೇಳಿ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ.
ತತ್ರ ಗಚ್ಛಸ್ವ ವೈ ತೂರ್ಣಂ ಯದಿ ತೇ ಹೃದಿ ಸಂಶಯಃ |
ಪ್ರವೃತ್ತೌ ವಾ ನಿವೃತ್ತೌ ವಾ ಸ ತೇ ಛೇತ್ಸ್ಯತಿ ಸಂಶಯಮ್ ॥11॥
ನಿನ್ನ ಮನಸ್ಸಿನಲ್ಲಿ ಪ್ರವೃತ್ತಿ ಮಾರ್ಗದಲ್ಲಾಗಲಿ, ನಿವೃತ್ತಿ ಮಾರ್ಗದಲ್ಲಾಗಲಿ ಸಂಶಯವಿದ್ದಲ್ಲಿ ಶೀಘ್ರವಾಗಿ ಜನಕರಾಜನ ಮನೆಗೆ ಹೋಗು. ಅವನು ನಿನ್ನ ಎಲ್ಲ ಸಂಶಯವನ್ನು ಪರಿಹರಿಸುತ್ತಾನೆ ಎಂದು ಹೇಳಿದನು.
ಸೋಽಹಂ ಪಿತುರ್ನಿಯೋಗಾತ್ತ್ವಮುಪಪ್ರಷ್ಟುಮಿಹಾಗತಃ |
ತನ್ಮೇ ಧರ್ಮಭೃತಾಂ ಶ್ರೇಷ್ಠ ಯಥಾವದ್ ವಕ್ತುಮರ್ಹಸಿ ॥12॥
ಹೀಗೆ ತಂದೆಯಿಂದ ಆಜ್ಞಪ್ತನಾದ ನಾನು ನಿನ್ನನ್ನು ಮೋಕ್ಷದ ವಿಷಯದಲ್ಲಿ ಪ್ರಶ್ನಿಸಲು ಇಲ್ಲಿಗೆ ಆಗಮಿಸಿರುತ್ತೇನೆ. ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ, ನಾನು ಕೇಳುವ ಪ್ರಶ್ನೆಗಳಿಗೆ ಯಥಾರ್ಥವಾಗಿ ಉತ್ತರ ಹೇಳಲು ಅರ್ಹನಾಗಿರುತ್ತಿ.
ಕಿಂ ಕಾರ್ಯಂ ಬ್ರಾಹ್ಮಣೇನೇಹ ಮೋಕ್ಷಾರ್ಥಶ್ಚ ಕಿಮಾತ್ಮಕಃ |
ಕಥಂ ಚ ಮೋಕ್ಷಃ ಕರ್ತವ್ಯೋ ಜ್ಞಾನೇನ ತಪಸಾಪಿ ವಾ ॥13॥
ಬ್ರಾಹ್ಮಣನ ಕರ್ತವ್ಯವೇನು? ಮೋಕ್ಷವೆಂಬ ಪುರುಷಾರ್ಥದ ಸ್ವರೂಪವೇನು? ಮೋಕ್ಷವನ್ನು ಪಡೆದುಕೊಳ್ಳುವ ಬಗ್ಗೆ ಹೇಗೆ? ಮೋಕ್ಷವು ಜ್ಞಾನದಿಂದ ಲಭಿಸುತ್ತದೋ ಅಥವಾ ತಪಸ್ಸಿನಿಂದ ಲಭಿಸುತ್ತದೋ?
ಜನಕಃ
ಯತ್ ಕಾರ್ಯಂ ಬ್ರಾಹ್ಮಣೇನೇಹ ಜನ್ಮಪ್ರಭೃತಿ ತಚ್ಛೃಣು |
ಕೃತೋಪನಯನಸ್ತಾತ ಭವೇದ್ ವೇದಪರಾಯಣಃ ॥14॥
ಜನಕ ಹುಟ್ಟಿನಿಂದ ಬ್ರಾಹ್ಮಣನು ಮಾಡಬೇಕಾದ ಕರ್ತವ್ಯವೇನೆಂದು ಹೇಳುತ್ತೇನೆ, ಕೇಳು. ಉಪನಯನ ಸಂಸ್ಕಾರವಾದ ಬಳಿಕ ಬ್ರಾಹ್ಮಣವಟುವು ವೇದಾಧ್ಯಯನ ತತ್ಪರನಾಗಿರಬೇಕು.
ತಪಸಾ ಗುರುವೃತ್ತ್ಯಾ ಚ ಬ್ರಹ್ಮಚರ್ಯೇಣ ಚಾಭಿಭೋ |
ದೇವತಾನಾಂ ಪಿತೄಣಾಂ ಚಾಪ್ಯನೃಣಶ್ಚಾನಸೂಯಕಃ ॥15॥
ತಪಸ್ಸಿನಿಂದಲೂ, ಗುರುಸೇವೆಯಿಂದಲೂ, ಬ್ರಹ್ಮಚರ್ಯದಿಂದಲೂ ಸಮಸ್ತ ವೇದಗಳನ್ನು, ವೇದಾಂಗಗಳನ್ನು ಅಧ್ಯಯನ ಮಾಡಬೇಕು. ಹವನಾದಿಗಳಿಂದ ದೇವ ಋಣವನ್ನು, ತರ್ಪಣಾದಿಗಳಿಂದ ಪಿತೃಗಳ ಋಣವನ್ನು ಮಾತ್ಸರ್ಯವಿಲ್ಲದೆ ತೀರಿಸಬೇಕು.
ವೇದಾನಧೀತ್ಯ ನಿಯತೋ ದಕ್ಷಿಣಾಮಪವರ್ಜ್ಯ ಚ |
ಅಭ್ಯನುಜ್ಞಾಮಥ ಪ್ರಾಪ್ಯ ಸಮಾವರ್ತೇತ ವೈ ದ್ವಿಜಃ ॥16॥
ಜಿತೇಂದ್ರಿಯನಾಗಿದ್ದು, ವೇದಗಳನ್ನು ಅಧ್ಯಯನ ಮಾಡಿ ಗುರುಗಳಿಗೆ ದಕ್ಷಿಣೆಯನ್ನು ನೀಡಿ, ಅವರ ಅನುಮತಿಯನ್ನು ಪಡೆದು ಸಮಾವರ್ತನವೆಂಬ ವಿಧಿಯನ್ನು ಬ್ರಾಹ್ಮಣನು ಹೊಂದಬೇಕು.
ಸಮಾವೃತ್ತಸ್ತು ಗಾರ್ಹಸ್ಥ್ಯೇ ಸದಾರೋ ನಿಯತೋ ವಸೇತ್ |
ಅನಸೂಯುರ್ಯಥಾನ್ಯಾಯಮಾಹಿತಾಗ್ನಿಸ್ತಥೈವ ಚ ॥17॥
ಸಮಾವರ್ತನ ವಿಧಿಯನ್ನು ಹೊಂದಿದ ಬಳಿಕ ಸ್ನಾತಕನಾದ ಅವನು ವಿವಾಹವನ್ನು ಮಾಡಿಕೊಂಡು, ಗಾರ್ಹಸ್ಥ್ಯಧರ್ಮದಲ್ಲಿ

ನಿಯಮವನ್ನು ಪಾಲಿಸುತ್ತಾ, ಪತ್ನಿಯಲ್ಲಿ ಅನುರಾಗ ಉಳ್ಳವನಾಗಿ, ಮತ್ತೊಬ್ಬರ ದೋಷವನ್ನೆಣಿಸದೆ, ಯಥೋಚಿತವಾಗಿ ವ್ಯವಹರಿಸುತ್ತಾ ಆಹಿತಾಗ್ನಿಯಾಗಿ ಕರ್ತವ್ಯಗಳನ್ನು ಮಾಡಬೇಕು.
ಉತ್ಪಾದ್ಯ ಪುತ್ರಪೌತ್ರಂ ತು ವನ್ಯಾಶ್ರಮಪದೇ ವಸೇತ್ |
ತಾನೇವಾಗ್ನೀನ್ ಯಥಾಶಾಸ್ತ್ರಮರ್ಚಯನ್ನತಿಥಿಪ್ರಿಯಃ ॥18॥
ಮಕ್ಕಳನ್ನು, ಮೊಮ್ಮಕ್ಕಳನ್ನು ಹೊಂದಿದ ಗೃಹಸ್ಥನು ಕಾಲಿಕವಾಗಿ ವಾನಪ್ರಸ್ಥಾಶ್ರಮವನ್ನು ಅವಲಂಬಿಸಬೇಕು. ಆ ಸಮಯದಲ್ಲಿಯೂ ಶಾಸ್ತ್ರವಿಧಿಗೆ ಅನುಗುಣವಾಗಿ ಗಾರ್ಹಪತ್ಯಾದಿ ಅಗ್ನಿಯನ್ನೇ ಆರಾಧಿಸುತ್ತಾ, ಅತಿಥಿಪ್ರಿಯನಾಗಿದ್ದು, ಪ್ರೀತಿಯಿಂದ ಅವರನ್ನು ಸತ್ಕರಿಸಬೇಕು.
ಸ ವನೇಽಗ್ನೀನ್ ಯಥಾನ್ಯಾಯಮಾತ್ಮನ್ಯಾರೋಪ್ಯ ಧರ್ಮವಿತ್ |
ನಿರ್ದ್ವಂದ್ವೋ ವೀತರಾಗಾತ್ಮಾ ಬ್ರಹ್ಮಾಶ್ರಮಪದೇ ವಸೇತ್ ॥19॥
ವಾನಪ್ರಸ್ಥಾಶ್ರಮದಲ್ಲಿದ್ದ ಅವನು ವಿಧಿಗೆ ಅನುಗುಣವಾಗಿ ಅಗ್ನಿಯನ್ನು ತನ್ನಲ್ಲಿ ಆರೋಪಿಸಿಕೊಂಡು, ಧರ್ಮಜ್ಞನಾಗಿ, ಸುಖ-ದುಃಖಗಳ ದ್ವಂದ್ವವನ್ನು ನೀಗಿಸಿಕೊಂಡು, ರಾಗಾದಿಗಳಿಂದ ಮುಕ್ತನಾಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು.
ಶುಕಃ
ಉತ್ಪನ್ನೇ ಜ್ಞಾನವಿಜ್ಞಾನೇ ಪ್ರತ್ಯಕ್ಷೇ ಹೃದಿ ಶಾಶ್ವತೇ |
ಕಿಮವಶ್ಯಂ ನಿವಸ್ತವ್ಯಮಾಶ್ರಮೇಷು ವನೇಷು ಚ ॥20॥
ಶುಕ ಮಹಾರಾಜನೇ, ಬ್ರಹ್ಮಚರ್ಯಾಶ್ರಮದಲ್ಲಿದ್ದಾಗ ಯಾರಿಗಾದರೂ ಜ್ಞಾನ- ವಿಜ್ಞಾನಗಳ ರಹಸ್ಯವು ತಿಳಿದುಬಿಟ್ಟರೆ, ರಾಗ-ದ್ವೇಷ, ಪ್ರಿಯ-ಅಪ್ರಿಯ ಇವೇ ಮೊದಲಾದ ದ್ವಂದ್ವಗಳು ಮನಸ್ಸಿನಿಂದ ದೂರವಾದರೆ, ಗೃಹಸ್ಥಾದಿ ಆಶ್ರಮಗಳು ಆವಶ್ಯಕವೆ?
ಏತದ್ ಭವಂತಂ ಪೃಚ್ಛಾಮಿ ತದ್ ಭವಾನ್ ವಕ್ತುಮರ್ಹತಿ |
ಯಥಾವೇದಾರ್ಥತತ್ತ್ವೇನ ಬ್ರೂಹಿ ಮೇ ತ್ವಂ ಜನಾಧಿಪ ॥21॥
ಈ ಪ್ರಶ್ನೆಯನ್ನು ನಿನ್ನ ಮುಂದಿಟ್ಟಿದ್ದೇನೆ. ಯಥೋಚಿತವಾಗಿ ಉತ್ತರಿಸು. ವೇದದಲ್ಲಿ ಹೇಳಿದ ಅಭಿಪ್ರಾಯಕ್ಕನುಗುಣವಾಗಿ ನನಗೆ ನೀನು ಉತ್ತರವನ್ನು ಹೇಳು.
ಜನಕಃ
ನ ವಿನಾ ಜ್ಞಾನವಿಜ್ಞಾನಂ ಮೋಕ್ಷಸ್ಯಾಧಿಗಮೋ ಭವೇತ್ |
ನ ವಿನಾ ಗುರುಸಂಬಂಧಂ ಜ್ಞಾನಸ್ಯಾಧಿಗಮಃ ಸ್ಮೃತಃ ॥22॥
ಜನಕ ಜ್ಞಾನ-ವಿಜ್ಞಾನಗಳ ರಹಸ್ಯಗಳನ್ನು ತಿಳಿಯದಿದ್ದರೆ ಮೋಕ್ಷ ದೊರೆಯದು. ಸದ್ಗುರುಗಳ ಸಹವಾಸದಿಂದಲೇ ಶಾಸ್ತ್ರಜ್ಞಾನವು ದೊರೆಯುವುದಿಲ್ಲ.
ಆಚಾರ್ಯಃ ಪ್ಲಾವಿತಾ ತಸ್ಯ ಜ್ಞಾನಂ ಪ್ಲವ ಇಹೋಚ್ಯತೇ |
ವಿಜ್ಞಾಯ ಕೃತಕೃತ್ಯಸ್ತು ತೀರ್ಣಸ್ತದುಭಯಂ ತ್ಯಜೇತ್ ॥23॥
ಸಂಸಾರವನ್ನು ದಾಟಿಸುವ ನಾವಿಕನೇ ಗುರುವು. ಗುರುವು ಉಪದೇಶಿಸಿದ ಜ್ಞಾನವೇ ನೌಕೆ ಎನಿಸಿದೆ. ಈ ರಹಸ್ಯವನ್ನು ತಿಳಿದ ಸಾಧಕನು ಸಂಸಾರ ಸಾಗರವನ್ನು ದಾಟಿ ಕೃತಕೃತ್ಯನಾಗಬೇಕು. ಸಂಸಾರವನ್ನು ದಾಟಿದ ಬಳಿಕ ಜ್ಞಾನ-ಗುರು ಇವೆಲ್ಲವನ್ನೂ ಬಿಡಬೇಕು.
ಅನುಚ್ಛೇದಾಯ ಲೋಕಾನಾಮನುಚ್ಛೇದಾಯ ಕರ್ಮಣಾಮ್ |
ಪೂರ್ವೈರಾಚರಿತೋ ಧರ್ಮಶ್ಚಾತುರಾಶ್ರಮ್ಯಸಂಕಥಃ ॥24॥
ಲೋಕವು ನಾಶ ಹೊಂದದೆ ಬೆಳೆಯಬೇಕು. ಕರ್ಮಗಳು ನಾಶ ಹೊಂದದೆ ಮುಂದುವರೆಯಬೇಕು ಎಂಬ ಕಾರಣದಿಂದ ನಾಲ್ಕು ಆಶ್ರಮಧರ್ಮಗಳ ಆಚರಣೆಗಳನ್ನು ಹಿರಿಯರು ರೂಢಿಯಲ್ಲಿ ತಂದಿರುತ್ತಾರೆ.
ಅನೇನ ಕ್ರಮಯೋಗೇನ ಬಹುಜಾತಿಷು ಕರ್ಮಣಾ |
ಕೃತ್ವಾ ಶುಭಾಶುಭಂ ಕರ್ಮ ಮೋಕ್ಷೋ ನಾಮೇಹ ಲಭ್ಯತೇ ॥25॥
ಈ ರೀತಿಯಾದ ಕರ್ಮದಿಂದಲೇ ಅನೇಕ ಜಾತಿಗಳಲ್ಲಿ ಸತ್ಕರ್ಮವನ್ನಾಚರಿಸುತ್ತಾ ಇದ್ದರೆ ಶುಭಾಶುಭ ಕರ್ಮಗಳ ಹಿನ್ನೆಲೆಯಲ್ಲಿ ಮೋಕ್ಷವು ಲಭಿಸುತ್ತದೆ.
ಭವಿತೈಃ ಕಾರಣೈಶ್ಚಾಯಂ ಬಹುಸಂಸಾರಯೋನಿಷು |
ಆಸಾದಯತಿ ಶುದ್ಧಾತ್ಮಾ ಮೋಕ್ಷಂ ವೈ ಪ್ರಥಮಾಶ್ರಮೇ ॥26॥
ಅನೇಕ ಜನ್ಮಗಳನ್ನು ಪಡೆದು, ಶುಭಕರ್ಮಗಳನ್ನೇ ಆಚರಿಸುತ್ತಾ, ಪವಿತ್ರವಾದ ಇಂದ್ರಿಯಗಳನ್ನು ಹೊಂದಿದ ಶುದ್ಧಾತ್ಮನಾದ ಪುರುಷನು ಮೊದಲನೆಯ ಆಶ್ರಮವೆನಿಸಿದ ಬ್ರಹ್ಮಚರ್ಯಾಶ್ರಮದಲ್ಲಿಯೇ ಮೋಕ್ಷವನ್ನು ಹೊಂದಬಹುದು.
ತಮಾಸಾದ್ಯ ತು ಮುಕ್ತಸ್ಯ ದೃಷ್ಟಾರ್ಥಸ್ಯ ವಿಪಶ್ಚಿತಃ |
ತ್ರಿಷ್ವಾಶ್ರಮೇಷು ಕೋ ನ್ವರ್ಥೋ ಭವೇತ್ ಪರಮಭೀಪ್ಸತಃ ॥27॥
ಬ್ರಹ್ಮಚರ್ಯಾಶ್ರಮವನ್ನು ಹೊಂದಿದ ಬಳಿಕ ಆತ್ಮತತ್ತ್ವವನ್ನು ಚೆನ್ನಾಗಿ ತಿಳಿದ ವಿದ್ವಾಂಸನಿಗೆ ಮೂರು ಆಶ್ರಮವನ್ನು ಸ್ವೀಕರಿಸುವುದರಲ್ಲಿ ಯಾವ ಪ್ರಯೋಜನವೂ ಇರುವುದಿಲ್ಲ. (ಜೀವನ್ಮುಕ್ತನಾಗಿ ಭಗವಂತನನ್ನೇ ಬಯಸುವ ಅವನು ಆಶ್ರಮದಿಂದ ಏನು ಮಾಡಬೇಕು ಎಂದು ತಾತ್ಪರ್ಯ).
ರಾಜಸಾಂಸ್ತಾಮಸಾಂಶ್ಚೈವ ನಿತ್ಯಂ ದೋಷಾನ್ ವಿವರ್ಜಯೇತ್ |
ಸಾತಿತ್ವಕಂ ಮಾರ್ಗಮಾಸ್ಥಾಯ ಪಶ್ಯೇದಾತ್ಮಾನಮಾತ್ಮನಾ ॥28॥
ವಿದ್ವಾಂಸನಾದವನು ರಾಜಸ-ತಾಮಸ ದೋಷಗಳನ್ನು ಸದಾ ಕಾಲ ತ್ಯಜಿಸಬೇಕು. ಸಾತ್ವಿಕವಾದ ಮಾರ್ಗವನ್ನು ಬುದ್ಧಿಯ ಮೂಲಕ ಆಶ್ರಯಿಸಿ ಪರಮಾತ್ಮನನ್ನು ಕಂಡುಕೊಳ್ಳಬೇಕು.

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ |
ಸಂಪಶ್ಯನ್ನೋಪಲಿಪ್ಯೇತ ಜಲೇ ವಾರಿಚರೋ ಯಥಾ ॥29॥
ಯಾವ ವ್ಯಕ್ತಿಯು ಸಮಸ್ತ ಪ್ರಾಣಿಗಳ ಹೃದಯದಲ್ಲಿ ಪರಮಾತ್ಮನನ್ನು, ಪರಮಾತ್ಮನಲ್ಲಿ ಸಮಸ್ತ ಪ್ರಾಣಿಗಳನ್ನು ಕಾಣುತ್ತಾನೋ ಅವನು ನೀರಿನಲ್ಲಿ ಸಂಚರಿಸುವ ಪ್ರಾಣಿಯು ಅಸಂಗವಾಗಿರುವಂತೆ ಸಂಸಾರದಲ್ಲಿದ್ದರೂ ಅಸಂಗನಾಗಿರುತ್ತಾನೆ.
ಪಕ್ಷೀವ ಪ್ಲವನಾದೂರ್ಧ್ವಮಮುತ್ರಾನಂತ್ಯಮಶ್ನುತೇ |
ವಿಹಾಯ ದೇಹಂ ನಿರ್ಮುಕ್ತೋ ನಿರ್ದ್ವಂದ್ವಃ ಪ್ರಶಮಂ ಗತಃ ॥30॥
ಗೂಡಿನಲ್ಲಿ ಕುಳಿತ ಹಕ್ಕಿಯು ಗೂಡನ್ನು ಬಿಟ್ಟು ಹಾರಿದ ಬಳಿಕ ಗೂಡನ್ನು ಹೇಗೆ ಮರೆಯುತ್ತದೋ, ಹಾಗೆ ಈ ದೇಹವೆಂಬ ಗೂಡಿನಿಂದ ಮುಕ್ತನಾದ ಜೀವನು ಸುಖ- ದುಃಖಗಳ ದ್ವಂದ್ವದಿಂದಲೂ ಬಿಡುಗಡೆಯನ್ನು ಹೊಂದಿ ಮೋಕ್ಷಸುಖವನ್ನು ಅನುಭವಿಸುತ್ತಾನೆ.
ಅತ್ರ ಗಾಥಾಃ ಪುರಾ ಗೀತಾಃ ಶೃಣು ರಾಜ್ಞಾ ಯಯಾತಿನಾ |
ಧಾರ್ಯಂತೇ ಯಾ ದ್ವಿಜೈಸ್ತಾತ ಮೋಕ್ಷಶಾಸ್ತ್ರವಿಶಾರದೈಃ ॥31॥
ಈ ವಿಷಯದಲ್ಲಿ ಹಿಂದೆ ಯಯಾತಿ ರಾಜನು ಹಾಡಿರುವ ಶ್ಲೋಕಗಳು ಹೀಗಿವೆ. ಈಗಲೂ ಮೋಕ್ಷಶಾಸ್ತ್ರಜ್ಞರು ಆ ಶ್ಲೋಕಗಳನ್ನು ಧಾರಣೆ ಮಾಡಿ ಹೇಳುತ್ತಾರೆ.
ಜ್ಯೋತಿರಾತ್ಮನಿ ನಾನ್ಯತ್ರ ರತಂ ತತ್ರೈವ ಚೈವ ತತ್ |
ಸ್ವಯಂ ಚ ಶಕ್ಯಂ ತದ್ದ್ರಷ್ಟುಂ ಸುಸಮಾಹಿತಚೇತಸಾ ॥32॥
ಭಗವಂತನೆಂಬ ಜ್ಯೋತಿಯು ನಮ್ಮ ಹೃದಯದಲ್ಲೇ ಇದೆ. ಯಾವ ಮನುಷ್ಯನು ಆ ಹೃದ್ಗತನಾದ ಭಗವಂತನಲ್ಲಿಯೇ ಆಸಕ್ತನಾಗಿರುತ್ತಾನೋ ಅವನು ಆ ಹೃದಯದಲ್ಲಿರುವ ಜ್ಯೋತಿಸ್ಸನ್ನು ಕಾಣಲು ತಾನು ಸಮರ್ಥನಾಗುತ್ತಾನೆ.
ನ ಬಿಭೇತಿ ಪರೋ ಯಸ್ಮಾನ್ನ ಬಿಭೇತಿ ಪರಾಚ್ಚ ಯಃ |
ಯಶ್ಚ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥33॥
ಯಾವಾತನು ಇತರ ಪ್ರಾಣಿಗಳನ್ನು ಭಯಗೊಳಿಸುವುದಿಲ್ಲವೋ ಇತರ ಪ್ರಾಣಿಗಳಿಂದ ಭಯ ಹೊಂದುವುದಿಲ್ಲವೋ, ಯಾವನು ಯಾವ ವಸ್ತುವನ್ನೂ ಬಯಸುವುದಿಲ್ಲವೋ, ಯಾರನ್ನೂ ದ್ವೇಷಿಸುವುದಿಲ್ಲವೋ ಅಂಥವನು ಬ್ರಹ್ಮಭಾವವನ್ನು ಹೊಂದುತ್ತಾನೆ.
ಯದಾ ಭಾವಂ ನ ಕುರುತೇ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥34॥
ಯಾವನು ಕರ್ಮ, ಮನಸ್ಸು, ಮಾತುಗಳಿಂದ ಯಾವುದೇ ಪ್ರಾಣಿಯ ವಿಷಯದಲ್ಲಿ ಪಾಪವನ್ನು ಹೊಂದುವುದಿಲ್ಲವೋ, ಸಮಸ್ತ ಪ್ರಾಣಿಗಳಲ್ಲಿಯೂ ದಯಾಪೂರ್ಣನಾಗಿ ದ್ವೇಷರಹಿತನಾಗಿರುತ್ತಾನೆಯೋ ಅವನು ಬ್ರಹ್ಮಭಾವವನ್ನು ಹೊಂದುತ್ತಾನೆ.
ಸಂಯೋಜ್ಯ ತಪಸಾತ್ಮಾನಮೀರ್ಷ್ಯಾಮುತ್ಸೃಜ್ಯ ಮೋಹಿನೀಮ್ |
ತ್ಯಕತ್ವ ಕಾಮಂ ಚ ಲೋಭಂ ಚ ತತೋ ಬ್ರಹ್ಮತ್ವಮಶ್ನುತೇ ॥35॥
ಸಾಧಕನು ಮೋಹಗೊಳಿಸುವ ಹೊಟ್ಟೆಕಿಚ್ಚನ್ನು ತ್ಯಜಿಸಿ, ತನ್ನನ್ನು ತಪಸ್ಸಿನಲ್ಲಿ ತೊಡಗಿಸಿಕೊಂಡು, ಕಾಮ-ಲೋಭಗಳನ್ನು ಬಿಟ್ಟಲ್ಲಿ ಸುಖದಿಂದ ವೃದ್ಧಿಯನ್ನು ಹೊಂದುತ್ತಾನೆ.
ಯದಾ ಶ್ರವ್ಯೇ ಚ ದೃಶ್ಯೇ ಚ ಸರ್ವಭೂತೇಷು ಚಾಪ್ಯಯಮ್ |
ಸಮೋ ಭವತಿ ನಿರ್ದ್ವಂದ್ವೋ ಬ್ರಹ್ಮ ಸಂಪದ್ಯತೇ ತದಾ ॥36॥
ಯಾವಾಗ ಸಾಧಕನು ಕಿವಿಗೆ ಕೇಳಿಸುವ ಶಬ್ದಗಳಲ್ಲಿ ಕಣ್ಣಿಗೆ ಕಾಣುವ ವಸ್ತುಗಳಲ್ಲಿ, ಸಮಸ್ತ ಪ್ರಾಣಿಗಳಲ್ಲಿ ಸಮಭಾವವನ್ನು ಹೊಂದುತ್ತಾನೋ, ದ್ವಂದ್ವಗಳನ್ನು ದಾಟಿರುತ್ತಾನೋ ಅವನು ಭಗವಂತನನ್ನು ಆಗ ಹೊಂದುತ್ತಾನೆ.
ಯದಾ ಸ್ತುತಿಂ ಚ ನಿಂದಾಂ ಚ ಸಮತ್ವೇನೈವ ಪಶ್ಯತಿ |
ಕಾಂಚನಂ ಚಾಯಸಂ ಚೈವ ಸುಖದುಃಖೇ ತಥೈವ ಚ ॥37॥
ಶೀತಮುಷ್ಣಂ ತಥೈವಾರ್ಥಮನರ್ಥಂ ಪ್ರಿಯಮಪ್ರಿಯಮ್ |
ಜೀವಿತಂ ಮರಣಂ ಚೈವ ಬ್ರಹ್ಮ ಸಂಪದ್ಯತೇ ತದಾ ॥38॥
ಯಾವಾಗ ಸಾಧಕನು ನಿಂದಾ-ಸ್ತುತಿಗಳನ್ನು ಸಮಾನವಾಗಿ ಕಾಣುತ್ತಾನೋ, ಸುವರ್ಣವನ್ನು-ಕಬ್ಬಿಣವನ್ನು, ಸುಖವನ್ನು-ದುಃಖವನ್ನು, ಚಳಿಯನ್ನು ಬಿಸಿಯನ್ನು, ಅರ್ಥವನು- ಅನರ್ಥವನ್ನು, ಪ್ರಿಯವನ್ನು-ಅಪ್ರಿಯವನ್ನು, ಜೀವನವನ್ನು -ಮರಣವನ್ನು ಸಮಾನವಾಗಿ ಕಾಣುತ್ತಾನೋ ಆಗ ಬ್ರಹ್ಮನನ್ನು ಹೊಂದುತ್ತಾನೆ.
ಪ್ರಸಾರ್ಯೇಹ ಯಥಾಂಗಾನಿ ಕೂರ್ಮಃ ಸಂಹರತೇ ಪುನಃ |
ತಥೇಂದ್ರಿಯಾಣಿ ಮನಸಾ ಸಂಯಂತವ್ಯಾನಿ ಭಿಕ್ಷುಣಾ ॥39॥
ಆಮೆಯು ಹೇಗೆ ತನ್ನ ಅಂಗಗಳನ್ನೆಲ್ಲ ಹೊರಗೆ ಬಿಟ್ಟರೂ ಪುನಃ ಒಳಕ್ಕೆ ಸೆಳೆದುಕೊಳ್ಳುತ್ತದೋ ಹಾಗೆ ಸಂನ್ಯಾಸಿಯು ಇಂದ್ರಿಯಗಳನ್ನು ಹೊರಗೆ ಬಿಟ್ಟಿದ್ದರೂ ಮನಸ್ಸಿನ ಮೂಲಕ ನಿಗ್ರಹಿಸಿಕೊಳ್ಳಬೇಕು.
ತಮಃಪರಿಗತಂ ವೇಶ್ಮ ಯಥಾ ದೀಪೇನ ದೃಶ್ಯತೇ |
ತಥಾ ಬುದ್ಧಿಪ್ರದೀಪೇನ ಶಕ್ಯ ಆತ್ಮಾ ನಿರೀಕ್ಷಿತುಮ್ ॥40॥
ಏತತ್ ಸರ್ವಂ ಪ್ರಪಶ್ಯಾಮಿ ತ್ವಯಿ ಬುದ್ಧಿಮತಾಂ ವರ |
ಯಚ್ಚಾನ್ಯದಪಿ ವೇತ್ತವ್ಯಂ ತತ್ತ್ವತೋ ವೇದ ತದ್ ಭವಾನ್ ॥41॥
ಕತ್ತಲಿನಿಂದ ಆವೃತವಾದ ಮನೆಯು ದೀಪದ ಬೆಳಕಿನಿಂದ ನೋಡಲು ಸಾಧ್ಯವಾಗುವಂತೆ ಬುದ್ಧಿಯೆಂಬ ದೀಪದಿಂದ ಹೃದಯದಲ್ಲಿರುವ ಪರಮಾತ್ಮನನ್ನು ನೋಡಲು ಸಮರ್ಥನಾಗುತ್ತಾನೆ. ಬುದ್ಧಿವಂತರಲ್ಲಿ ಶ್ರೇಷ್ಠನೇ, ನಾನು ಹೇಳಿದ ಜ್ಞಾನಿಯ ಗುಣಗಳೆಲ್ಲವನ್ನೂ ನಿನ್ನಲ್ಲಿ ಕಾಣುತ್ತೇನೆ. ಈ ವಿಷಯದಲ್ಲಿ ಮತ್ತೇನಾದರೂ ತಿಳಿಯಬೇಕೆಂದಿದ್ದರೆ ಯಥಾವತ್ತಾಗಿ ನೀನು ಅದನ್ನು

ತಿಳಿದಿರುತ್ತಿ.
ಬ್ರಹ್ಮರ್ಷೇ ವಿದಿತಶ್ಚಾಸಿ ವಿಷಯಾಂತಮುಪಾಗತಃ |
ಗುರೋಸ್ತವ ಪ್ರಸಾದೇನ ತವ ಚೈವೋಪಶಿಕ್ಷಯಾ ॥42॥
ಬ್ರಹ್ಮರ್ಷಿಯೇ, ನಿನ್ನ ತಂದೆಯ ಕರುಣೆಯಿಂದ, ಅವರಿಂದ ಹೊಂದಿದ ಜ್ಞಾನದಿಂದ ನೀನು ವಿಷಯಸುಖದಿಂದ ದೂರನಾಗಿರುತ್ತಿ ಎಂದು ತಿಳಿದಿದ್ದೇನೆ.
ತಸ್ಯೈವ ಚ ಪ್ರಸಾದೇನ ಪ್ರಾದುರ್ಭೂತಂ ಮಹಾಮುನೇ |
ಜ್ಞಾನಂ ದಿವ್ಯಂ ಮಮಾಪೀದಂ ತೇನಾಸಿ ವಿದಿತೋ ಮಮ ॥43॥
ಮಹಾಮುನಿಯೇ, ವ್ಯಾಸರ ಅನುಗ್ರಹದಿಂದ ನನಗೂ ದಿವ್ಯಜ್ಞಾನವು ಲಭಿಸಿದೆ. ಆ ದಿವ್ಯಜ್ಞಾನದ ಸಹಾಯದಿಂದಲೇ ನಿನ್ನ ನಿಜರೂಪವನ್ನು ನಾನು ಬಲ್ಲವನಾಗಿದ್ದೇನೆ.
ಅಧಿಕಂ ತವ ವಿಜ್ಞಾನಮಧಿಕಾ ಚ ಗತಿಸ್ತವ |
ಅಧಿಕಂ ಚ ತವೈಶ್ವರ್ಯಂ ತಚ್ಚ ತ್ವಂ ನಾವಬುಧ್ಯಸೇ ॥44॥
ನಿನ್ನ ವಿಜ್ಞಾನವು ಶ್ರೇಷ್ಠವಾದುದು. ನಿನ್ನ ಗತಿಯೂ ಶ್ರೇಷ್ಠವಾದುದು. ಯೋಗ- ಐಶ್ವರ್ಯಗಳು ನಿನ್ನಲ್ಲಿ ಅಧಿಕವಾಗಿವೆ. ಆದರೆ ನಿನ್ನ ಮಹಿಮೆಯನ್ನು ನೀನು ತಿಳಿದಿರುವುದಿಲ್ಲ.
ಬಾಲ್ಯಾದ್ವಾ ಸಂಶಯಾದ್ವಾಪಿ ಭಯಾದ್ವಾಪ್ಯವಿಮೋಕ್ಷಜಾತ್ |
ಉತ್ಪನ್ನೇ ಚಾಪಿ ವಿಜ್ಞಾನೇ ನಾಧಿಗಚ್ಛತಿ ತಾಂ ಗತಿಮ್ ॥45॥
ಮನುಷ್ಯನಿಗೆ ವಿಜ್ಞಾನವು ಲಭಿಸಿದ್ದರೂ ಬಾಲ್ಯದ ಕಾರಣದಿಂದ, ಸಂಶಯದಿಂದ ಮೋಕ್ಷವು ಲಭಿಸಿಲ್ಲವೆಂದು ಕಾಲ್ಪನಿಕ ಭಯದಿಂದ ಮೋಕ್ಷವನ್ನು ಹೊಂದಿರುವುದಿಲ್ಲ.
ವ್ಯವಸಾಯೇನ ಶುದ್ಧೇನ ಮದ್ವಿಧೈಶ್ಛಿನ್ನಸಂಶಯಃ |
ವಿಮುಚ್ಯ ಹೃದಯಗ್ರಂಥೀನಾಸಾದಯತಿ ತಾಂ ಗತಿಮ್ ॥46॥
ಯಾವನು ನಮ್ಮಂತಹವರ ಮಾರ್ಗದರ್ಶನದಿಂದ ಸಂಶಯವನ್ನು ಪರಿಹರಿಸಿಕೊಂಡು, ಶುದ್ಧವಾದ ಪ್ರಯತ್ನದಿಂದ ಹೃದಯದ ಅಜ್ಞಾನವನ್ನೆಲ್ಲ ಪರಿಹರಿಸಿಕೊಳ್ಳುತ್ತಾನೋ ಅವನು ಮೋಕ್ಷಮಾರ್ಗವನ್ನು ಹೊಂದುತ್ತಾನೆ.
ಭವಾಂಶ್ಚೋತ್ಪನ್ನವಿಜ್ಞಾನಃ ಸ್ಥಿರಬುದ್ಧಿರಲೋಲುಪಃ |
ವ್ಯವಸಾಯಾದೃತೇ ಬ್ರಹ್ಮನ್ನಾಸಾದಯತಿ ತತ್ಪರಮ್ ॥47॥
ಬ್ರಾಹ್ಮಣಶ್ರೇಷ್ಠನೇ, ನಿನ್ನಲ್ಲಿ ಬ್ರಹ್ಮಜ್ಞಾನದ ಉದಯವಾಗಿದೆ. ನಿನ್ನ ಬುದ್ಧಿಯು ಸ್ಥಿರವಾಗಿದೆ. ನೀನು ವಿಷಯಲೋಲುಪನಾಗಿರುವುದಿಲ್ಲ. ಆದರೆ ಬ್ರಹ್ಮಜ್ಞಾನಕ್ಕೆ ಪ್ರಯತ್ನವು ಅನಿವಾರ್ಯವು.ಪ್ರಯತ್ನವಿಲ್ಲದೆ ಬ್ರಹ್ಮಜ್ಞಾನವು ದೊರೆಯದು.
ನಾಸ್ತಿ ತೇ ಸುಖದುಃಖೇಷು ವಿಶೇಷೋ ನಾಸ್ತಿ ಲೋಲುಪಾ |
ನೌತ್ಸುಕ್ಯಂ ನೃತ್ತಗೀತೇಷು ನ ರಾಗ ಉಪಜಾಯತೇ ॥48॥
ನೀನು ಸುಖ-ದುಃಖಗಳಲ್ಲಿ ಯಾವ ವಿಶೇಷವನ್ನೂ ಕಾಣುತ್ತಿಲ್ಲ. ವಿಷಯ ಸುಖಗಳಲ್ಲಿ ಆಸಕ್ತನಾಗಿಲ್ಲ. ನೃತ್ಯ-ಗೀತೆ ಇವುಗಳ ಕುತೂಹಲವು ನಿನ್ನಲ್ಲಿ ಇಲ್ಲದಿರುವುದರಿಂದ ನಿನ್ನಲ್ಲಿ ಅವುಗಳ ಕುರಿತು ಪ್ರೀತಿ ಹುಟ್ಟಿರುವುದಿಲ್ಲ.
ನ ಬಂಧುಷು ನಿಬಂಧಸ್ತೇ ನ ಭಯೇಷ್ವಸ್ತಿ ತೇ ಭಯಮ್ |
ಪಶ್ಯಾಮಿ ತ್ವಾಂ ಮಹಾಭಾಗ ತುಲ್ಯಲೋಷ್ಟಾಶ್ಮಕಾಂಚನಮ್ ॥49॥
ಬಂಧುಗಳ ವಿಷಯದಲ್ಲಿ ಆಸಕ್ತಿಯಿಲ್ಲ, ಭಯದ ಸನ್ನಿವೇಶದಲ್ಲಿ ಭಯವಾಗುವುದಿಲ್ಲ. ಮಹಾಭಾಗ್ಯವಂತನೇ, ಕಲ್ಲು-ಮಣ್ಣು-ಸುವರ್ಣಗಳನ್ನು ನೀನು ಸಮಾನವಾಗಿ ಕಾಣುತ್ತಿರುವಿ ಎಂದು ಭಾವಿಸಿದ್ದೇನೆ.
ಅಹಂ ಚ ತ್ವಾನುಪಶ್ಯಾಮಿ ಯೇ ಚಾಪ್ಯನ್ಯೇ ಮನೀಷಿಣಃ |
ಆಸ್ಥಿತಂ ಪರಮಂ ಮಾರ್ಗಮಕ್ಷಯಂ ತಮನಾಮಯಮ್ ॥50॥
ನೀನು ಅಕ್ಷಯವಾದ, ಈತಿಬಾಧೆಗಳಿಂದ ರಹಿತವಾದ, ಶ್ರೇಷ್ಠವಾದ ಮೋಕ್ಷಮಾರ್ಗವನ್ನು ಆಶ್ರಯಿಸಿರುತ್ತಿ ಎಂದು ತಿಳಿದಿದ್ದೇನೆ. ವಿದ್ವಾಂಸರು ನಿನ್ನನ್ನು ಹಾಗೆ ಭಾವಿಸಿರುತ್ತಾರೆ.
ಯತ್ಫಲಂ ಬ್ರಾಹ್ಮಣಸ್ಯೇಹ ಮೋಕ್ಷಾರ್ಥಶ್ಚ ಯದಾತ್ಮಕಃ |
ತಸ್ಮಿನ್ ವೈ ವರ್ತಸೇ ವಿಪ್ರಾ ಕಿಮನ್ಯತ್ ಪರಿಪೃಚ್ಛಸಿ ॥51॥
ಬ್ರಾಹ್ಮಣೋತ್ತಮನೇ, ಬ್ರಾಹ್ಮಣನಾಗಿ ಹುಟ್ಟಿದ್ದಕ್ಕೆ ಯಾವ ಫಲವನ್ನು ಪಡೆಯಬೇಕೋ ಅಂತಹ ಮೋಕ್ಷವೆಂಬ ಫಲವನ್ನು ನೀನು ಪಡೆದಿರುವಿ. ಮೋಕ್ಷ ಮಾರ್ಗದಲ್ಲಿಯೇ ಇರುವಿ. ಮೋಕ್ಷದ ಸ್ವರೂಪವೇನು ಎಂಬುದನ್ನು ನಿನಗೆ ತಿಳಿಸಿದ್ದೇನೆ. ಬೇರೆ ವಿಷಯವಾಗಿ ಪ್ರಶ್ನೆಗಳಿದ್ದಲ್ಲಿ ಕೇಳು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಶುಕ-ಜನಕಸಂವಾದೇ ಬ್ರಹ್ಮಪ್ರತಿಪಾದನಂ ನಾಮ ಅಷ್ಟಪಂಚಾಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೊಂಬತ್ತನೆಯ ಅಧ್ಯಾಯ
ವ್ಯಾಸರಿಂದ ಶುಕಮುನಿಗೆ ಧರ್ಮೋಪದೇಶ.
ಭೀಷ್ಮಃ

ಏತಚ್ಛ್ರುತ್ವಾ ತು ವಚನಂ ಕೃತಾತ್ಮಾ ಕೃತನಿಶ್ಚಯಃ |
ಆತ್ಮನಾತ್ಮಾನಮಾಸ್ಥಾಯ ದೃಷ್ಟ್ವಾ ಚಾತ್ಮಾನಮಾತ್ಮನಾ ||1||
ಕೃತಕಾರ್ಯಃ ಸುಖೀ ಶಾಂತಸ್ತೂಷ್ಣೀಂ ಪ್ರಾಯಾದುದಙ್ಮುಖಃ |
ಶೈಶಿರಂ ಗಿರಿಮುದ್ದಿಶ್ಯ ಸಧರ್ಮಾ ಮಾತರಿಶ್ವನಃ ||2||
ಭೀಷ್ಮ ಯುಧಿಷ್ಠಿರನೇ, ಜನಕರಾಜನು ಉಪದೇಶಿಸಿದ ಮಾತನ್ನು ಕೇಳಿ ಶುದ್ಧವಾದ ಅಂತಃಕರಣವುಳ್ಳ ಶುಕದೇವನು ನಿಶ್ಚಿತವಾದ ಮನಸ್ಸಿನಿಂದ ಭಗವಂತನಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ತನ್ನ ಹೃದಯದಲ್ಲಿ ಭಗವಂತನನ್ನೇ ಧ್ಯಾನಿಸುತ್ತಾ, ಸಮಸ್ತ ಸತ್ಕಾರಗಳನ್ನು ಮಾಡಲ್ಪಟ್ಟವನಾಗಿ, ಸುಖಿಯಾಗಿ, ಶಾಂತನಾಗಿ, ಮೌನವಾಗಿ ಉತ್ತರಾಭಿಮುಖವಾಗಿ ಪ್ರಯಾಣ ಬೆಳೆಸಿದನು. ವಾಯುವಿಗೆ ಸಮಾನವಾದ ವೇಗವುಳ್ಳ ಶುಕಮುನಿಯು ಹಿಮವದ್ ಪರ್ವತದ ಪ್ರದೇಶದಲ್ಲಿ ಸಾಗಲಾರಂಭಿಸಿದನು.
ಏತಸ್ಮಿನ್ನೇವ ಕಾಲೇ ತು ದೇವರ್ಷಿರ್ನಾರದಸ್ತದಾ |
ಹಿಮವಂತಮಿಯಾದ್ ದ್ರಷ್ಟುಂ ಸಿದ್ಧಚಾರಣಸೇವಿತಮ್ ||3||
ತಮಪ್ಸರೋಗಣಾಕೀರ್ಣಂ ಗೀತಸ್ವನನಿನಾದಿತಮ್ |
ಕಿನ್ನರಾಣಾಂ ಸಮೂಹೈಶ್ಚ ಭೃಂಗರಾಜೈಸ್ತಥೈವ ಚ ||4||
ಮದ್ಗುಭಿಃ ಖಂಜರೀಟೈಶ್ಚ ವಿಚಿತ್ರೈರ್ಜೀವಜೀವಕೈಃ |
ಚಿತ್ರವರ್ಣೈರ್ಮಯೂರೈಶ್ಚ ಕೇಕಾಶತವಿರಾಜಿತೈಃ |
ರಾಜಹಂಸಸಮೂಹೈಶ್ಚ ಹೃಷ್ಟೈಃ ಪರಭೃತೈಸ್ತಥಾ ||5||
ಇದೇ ಸಮಯಕ್ಕೆ ಸರಿಯಾಗಿ ದೇವಲೋಕದ ಋಷಿಗಳಾದ ನಾರದರು ಸಿದ್ಧ-ಚಾರಣರಿಂದ ಸೇವಿತರಾದ ಹಿಮವದ್ ಪರ್ವತವನ್ನು ನೋಡಲು ಆಗಮಿಸಿದರು. ಈ ಪರ್ವತವಾದರೂ ಅಪ್ಸರೆಯರ ಸಮೂಹಗಳಿಂದ ತುಂಬಿತ್ತು. ನಾಲ್ಕು ಕಡೆಗಳಿಂದಲೂ ಅವರ ಹಾಡಿನ ನಿನಾದವು ಕೇಳಿ ಬರುತ್ತಿತ್ತು. ಕಿನ್ನರರ ಸಮೂಹದಿಂದಲೂ, ದುಂಬಿಗಳಿಂದಲೂ, ಗೀಜುಗ ಹಕ್ಕಿಗಳಿಂದಲೂ, ವಿಚಿತ್ರವಾದ ಚಕೋರ ಪಕ್ಷಿಗಳಿಂದಲೂ, ಚಿತ್ರವರ್ಣಗಳಿಂದ ರಂಜಿಸುವ ನೂರಾರು ಕಲರವ ಶಬ್ದಗಳಿರುವ ನವಿಲುಗಳಿಂದಲೂ, ರಾಜಹಂಸ ಸಮೂಹಗಳಿಂದಲೂ, ಸಂತುಷ್ಟವಾದ ಸಮುದಾಯದಿಂದಲೂ,
ಪಕ್ಷಿರಾಜೋ ಗರುತ್ಮಾಂಶ್ಚ ಯಂ ನಿತ್ಯಮಧಿಗಚ್ಛತಿ |
ಚತ್ವಾರೋ ಲೋಕಪಾಲಾಶ್ಚ ದೇವಾಃ ಸರ್ಷಿಗಣಾಸ್ತಥಾ |
ಯತ್ರ ನಿತ್ಯಂ ಸಮಾಯಾಂತಿ ಲೋಕಸ್ಯ ಹಿತಕಾಮ್ಯಯಾ ||6||
ಪಕ್ಷಿರಾಜನಾದ ಗರುಡನು ಯಾವ ಪರ್ವತವನ್ನು ಆಶ್ರಯಿಸಿರುತ್ತಾನೋ, ಲೋಕ ಹಿತಾರ್ಥವಾಗಿ ಪ್ರತಿದಿವಸವೂ ನಾಲ್ವರು ಲೋಕಪಾಲಕರು, ಋಷಿಗಳ ಸಮೂಹದಿಂದ ಕೂಡಿದ ದೇವತೆಗಳು ಯಾವ ಹಿಮವದ್ ಪರ್ವತಕ್ಕೆ ಜಗತ್ತಿಗೆ ಹಿತವನ್ನಾಚರಿಸಲು ಆಗಮಿಸುತ್ತಾರೋ
ವಿಷ್ಣುನಾ ಯತ್ರ ಪುತ್ರಾರ್ಥೇ ತಪಸ್ತಪ್ತಂ ಮಹಾತ್ಮನಾ |
ಯತ್ರೈವ ಚ ಕುಮಾರೇಣ ಬಾಲ್ಯೇ ಕ್ಷಿಪ್ತಾ ದಿವೌಕಸಃ ||7||
ಮಹಾನುಭಾವನಾದ ವಿಷ್ಣುವು ಸಂತಾನಪ್ರಾಪ್ತಿಗಾಗಿ ಎಲ್ಲಿ ತಪಸ್ಸನ್ನಾಚರಿಸಿದನೋ, ದೇವತೆಗಳೆಲ್ಲರೂ ಯಾವ ತಪ್ಪಲಿನಲ್ಲಿ ಸ್ಕಂಧನಿಂದ ಪರಾಜಯ ಹೊಂದಿದರೋ,
ಶಕ್ತಿರ್ನ್ಯಸ್ತಾ ಕ್ಷಿತಿತಲೇ ತ್ರೈಲೋಕ್ಯಮವಮನ್ಯ ವೈ |
ಯತ್ರೋವಾಚ ಜಗತ್ಸ್ಕಂದಃ ಕ್ಷಿಪನ್ ವಾಕ್ಯಮಿದಂ ತದಾ ||8||
ಮೂರುಲೋಕಗಳನ್ನೂ ಅಲಕ್ಷಿಸಿ ಯಾವ ಸ್ಕಂದನು ತನ್ನ ಶಕ್ತ್ಯಾಯುಧವನ್ನು ಭೂಮಿಯ ಮೇಲೆ ಪ್ರಯೋಗಿಸಿದನೋ, ಯಾವ ಷಣ್ಮುಖನು ಜಗತ್ತನ್ನೇ ಕಡೆಗಣಿಸುತ್ತಾ ಮುಂದೆ ಹೇಳುವ ವಾಕ್ಯಗಳನ್ನು ಯಾವ ತಪ್ಪಲಿನಲ್ಲಿ ಘೋಷಿಸಿದನೋ;
ಯೋಽನ್ಯೋಽಸ್ತಿ ಮತ್ತೋಽಭ್ಯಧಿಕೋ ವಿಪ್ರಾ ಯಸ್ಯಾಧಿಕಂ ಪ್ರಿಯಾಃ |
ಯೋ ಬ್ರಹ್ಮಣ್ಯೋ ದ್ವಿತೀಯೋಽಸ್ತಿ ತ್ರಿಷು ಲೋಕೇಷು ವೀರ್ಯವಾನ್ ||
ಯಾರಿಗೆ ಬ್ರಾಹ್ಮಣರು ಅತ್ಯಂತ ಪ್ರೀತಿಪಾತ್ರರೋ ಅಂತಹ ನನಗೆ ನನ್ನ ಬಲಕ್ಕಿಂತಲೂ ಅಧಿಕನಾದವನು ಈ ಜಗತ್ತಿನಲ್ಲಿ ಯಾರಿದ್ದಾರೆ? ಮೂರುಲೋಕದಲ್ಲಿ ಬ್ರಾಹ್ಮಣ ಪ್ರಿಯನಾದವನು, ಪರಾಕ್ರಮಿಯಾದವನು ನನ್ನನ್ನು ಬಿಟ್ಟು ಎರಡನೆಯ ವ್ಯಕ್ತಿ ಯಾರಿದ್ದಾನೆ?
ಸೋಽಭ್ಯುದ್ಧರತ್ವಿಮಾಂ ಶಕ್ತಿಮಥ ವಾ ಕಂಪಯತ್ವಿತಿ |
ತಚ್ಛ್ರುತ್ವಾ ವ್ಯಥಿತಾ ಲೋಕಾಃ ಕ ಇಮಾಮುದ್ಧರೇದಿತಿ ||10||
ಅಂತಹ ಯಾವ ವ್ಯಕ್ತಿಯಾದರೂ ಇರುವುದಾದಲ್ಲಿ ನಾನುಭೂಮಿಯಲ್ಲಿ ನೆಟ್ಟಿರುವ ಶಕ್ತ್ಯಾಯುಧವನ್ನು ಕಂಪಿಸಲಿ ಎಂದು ಉದ್ಘೋಷಿಸಲು, ಕಳವಳಗೊಂಡ ಎಲ್ಲ ಲೋಕದವರೂ ಈ ಶಕ್ತ್ಯಾಯುಧವನ್ನು ಯಾರು ಕಿತ್ತುತ್ತಾರೆ ಎಂದು ಚಿಂತಿಸತೊಡಗಿದರು. ವ್ಯಾಖ್ಯಾನ ವಿಶೇಷ ಇಂತಹ ಹಿಮವದ್ ಪರ್ವತಕ್ಕೆ ನಾರದರು ಆಗಮಿಸಿದರು ಎಂದು ಈ ಶ್ಲೋಕಗಳ ನಡುವೆ ಅನ್ವಯವನ್ನು ಮಾಡಿಕೊಳ್ಳಬೇಕು. ಹಿಮವದ್ ಪರ್ವತದ ಮಹಿಮೆಯನ್ನೇ ಹೇಳುತ್ತಾ ಸ್ಕಂದನ ಮಹಿಮೆಯನ್ನು ಭೀಷ್ಮರು ಮುಂದುವರೆಸುತ್ತಾರೆ. ಆ ಹಿಮವದ್ ಪರ್ವತದಲ್ಲಿ ವ್ಯಾಸರು ನಡೆಸಿದ ಶಿಷ್ಯೋಪದೇಶದ ಕಥೆಯನ್ನು ಮುಂದೆ ನಿರೂಪಿಸುತ್ತಾರೆ.
ಅಥ ದೇವಗಣಂ ಸರ್ವಂ ಸಂಭ್ರಾಂತೇಂದ್ರಿಯಮಾನಸಮ್ |
ಅಪಶ್ಯದ್ಭಗವಾನ್ ವಿಷ್ಣುಃ ಕ್ಷಿಪ್ತಂ ಸಾಸುರರಾಕ್ಷಸಮ್ |
ಕಿಂ ನ್ವತ್ರ ಸುಕೃತಂ ಕಾರ್ಯಂ ಭವೇದಿತಿ ವಿಚಿಂತಯನ್ ||11||
ಬಳಿಕ ಸಮಸ್ತ ದೇವತಾವೃಂದವು ಮನಸ್ಸು, ಇಂದ್ರಿಯಗಳಿಂದ ಕಳವಳಗೊಂಡಿರುವುದನ್ನು, ಅಸುರ-ರಾಕ್ಷಸರೇ ಮೊದಲಾದ ಎಲ್ಲರೂ ಸ್ಕಂದನಿಂದ ತಿರಸ್ಕೃತರಾಗಿರುವುದನ್ನು ಮಹಾವಿಷ್ಣುವು ನೋಡಿದನು. ಈಗ ಯಾರ ಕಾರ್ಯವನ್ನು ಮಾಡಿದರೆ

ಇವರೆಲ್ಲರಿಗೂ ಹಿತವಾಗುತ್ತದೆ ಎಂಬುದನ್ನು ಆಲೋಚಿಸುತ್ತಿದ್ದನು.
ಸ ನಾಮೃಷ್ಯತ ತಂ ಕ್ಷೇಪಮವ್ಯೈಕ್ಷತ ಚ ಪಾವಕಿಮ್ |
ಸ ಪ್ರಹಸ್ಯ ವಿಶುದ್ಧಾತ್ಮಾ ಶಕ್ತಿಂ ಪ್ರಜ್ವಲಿತಾಂ ತದಾ |
ಕಂಪಯಾಮಾಸ ಸವ್ಯೇನ ಪಾಣಿನಾ ಪುರುಷೋತ್ತಮಃ ॥12॥
ಸ್ಕಂದನು ದೇವತೆಗಳ ವಿಷಯದಲ್ಲಿ ಎಸಗಿದ ತಿರಸ್ಕಾರವನ್ನು ಸಹಿಸಲಾರದ ವಿಷ್ಣುವು ಸ್ಕಂದನನ್ನು ಕಂಡು, ಪ್ರಜ್ವಲಿಸುತ್ತಿದ್ದ ಶಕ್ತ್ಯಾಯುಧವನ್ನು ತನ್ನ ಎಡಗೈಯಿಂದ ಅಲ್ಲಾಡಿಸಿದನು.
ಶಕ್ತ್ಯಾಂ ತು ಕಂಪಮಾನಾಯಾಂ ವಿಷ್ಣುನಾ ಬಲಿನಾ ತದಾ |
ಮೇದಿನೀ ಕಮ್ಪಿತಾ ಸರ್ವಾ ಸಶೈಲವನಕಾನನಾ ॥13॥
ಬಲಿಷ್ಠನಾದ ವಿಷ್ಣುವು ಸ್ಕಂದನು ಪ್ರಯೋಗಿಸಿದ ಶಕ್ತ್ಯಾಯುಧವನ್ನು ತನ್ನ ಎಡಗೈಯಿಂದ ಅಲ್ಲಾಡಿಸುತ್ತಿದ್ದಾಗ ಪರ್ವತ, ವನ, ಅರಣ್ಯಗಳಿಂದ ಕೂಡಿದ ಭೂಮಂಡಲವೇ ನಡುಗಿತು.
ಶಕ್ತೇನಾಪಿ ಸಮುದ್ಧರ್ತುಂ ಕಂಪಿತಾ ಸಾ ನ ತೂದ್ಧೃತಾ |
ರಕ್ಷಿತಾ ಸ್ಕಂದರಾಜಸ್ಯ ಧರ್ಷತಾಂ ಪ್ರಭವಿಷ್ಣುನಾ ॥14॥
ತಾಂ ಕಂಪಯಿತ್ವಾ ಭಗವಾನ್ ಪ್ರಹ್ಲಾದಮಿದಮಬ್ರವೀತ್ |
ಪಶ್ಯ ವೀರ್ಯಂ ಕುಮಾರಸ್ಯ ನೈತದನ್ಯಃ ಕರಿಷ್ಯತಿ ॥15॥
ವಿಷ್ಣುವು ಶಕ್ತ್ಯಾಯುಧವನ್ನು ಕಿತ್ತುಹಾಕಲು ಸಮರ್ಥನಾಗಿದ್ದರೂ ಅದನ್ನು ಕಿತ್ತದೆ ಎಡಗೈಯಿಂದ ಅಲ್ಲಾಡಿಸಿದನು. ಸ್ಕಂದನಿಗೆ ಆಗುವ ಅವಮಾನವನ್ನು ತಪ್ಪಿಸಿ ಶಕ್ತ್ಯಾಯುಧವನ್ನು ಅಲ್ಲಾಡಿಸುತ್ತಾ, ದೈತ್ಯ ಪ್ರಮುಖನೆನಿಸಿದ ಪ್ರಹ್ಲಾದನಿಗೆ ಹೀಗೆ ಹೇಳಿದನು: ಪ್ರಹ್ಲಾದನೇ, ಈ ಸ್ಕಂದನ ಬಲವನ್ನು ನೋಡು. ಬೇರೆ ಯಾರೂ ಇಂತಹ ಕಾರ್ಯವನ್ನು ಮಾಡಲಾರರು ಎಂದು ಹೇಳಿದನು.
ವ್ಯಾಖ್ಯಾನ ವಿಶೇಷ ಸ್ಕಂದನ ಪ್ರತಿಜ್ಞೆಯನ್ನು ಮಹಾವಿಷ್ಣುವು ರಕ್ಷಿಸಿದನು. ಶಕ್ತ್ಯಾಯುಧವನ್ನು ಅಲ್ಲಾಡಿಸುವ ಮೂಲಕ ಅವನ ಅಹಂಕಾರವನ್ನು ಧಿಕ್ಕರಿಸಿದನು. ಕಿತ್ತದಿರುವ ಮೂಲಕ ಮಾನವನ್ನು ರಕ್ಷಿಸಿದನು ಎಂದು ಭಾವ.
ಸೋಽಮೃಷ್ಯಮಾಣಸ್ತದ್ವಾಕ್ಯಂ ಸಮುದ್ಧರಣನಿಶ್ಚಿತಃ |
ಜಗ್ರಾಹ ತಾಂ ತಸ್ಯ ಶಕ್ತಿಂ ನ ಚೈನಾಮಪ್ಯಕಂಪಯತ್ ॥16॥
ಮಹಾವಿಷ್ಣುವು ಹೇಳಿದ ಮಾತನ್ನು ಸಹಿಸಲಾಗದ ಪ್ರಹ್ಲಾದನು ಶಕ್ತ್ಯಾಯುಧವನ್ನು ಕಿತ್ತುಹಾಕಬೇಕೆಂದೇ ನಿಶ್ಚಯಿಸಿದನು. ತನ್ನ ಬಲವನ್ನು ಹಾಕಿ ಆಯುಧವನ್ನು ಸೆಳೆದನು.
ನಾದಂ ಮಹಾಂತಂ ಮುಕ್ತ್ವಾ ಸ ಮೂರ್ಛಿತೋ ಗಿರಿಮೂರ್ಧನಿ |
ವಿಹ್ವಲಃ ಪ್ರಾಪತದ್ ಭೂಮೌ ಹಿರಣ್ಯಕಶಿಪೋಃ ಸುತಃ ॥17॥
ಅದನ್ನು ಅಲ್ಲಾಡಿಸಲು ಸಾಧ್ಯವಾಗದೆ, ಆಯಾಸದಿಂದ ಗಟ್ಟಿಯಾಗಿ ನಾದ ಮಾಡುತ್ತಾ, ಕಂಗಾಲಾದ, ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ಮೂರ್ಛಿತನಾಗಿ ಆ ಪರ್ವತದ ಭೂಮಿಯಲ್ಲಿ ಬಿದ್ದನು.
ಯತ್ರೋತ್ತರಾಂ ದಿಶಂ ಗತ್ವಾ ಶೈಲರಾಜಸ್ಯ ಪಾರ್ಶ್ವತಃ |
ತಪೋಽತಪ್ಯತ ದುರ್ಧರ್ಷಸ್ತಾತ ನಿತ್ಯಂ ವೃಷಧ್ವಜಃ ॥18॥
ಅದೇ ಸಮಯದಲ್ಲಿ ವೃಷಭಧ್ವಜನಾದ ಪರಶಿವನು ಹಿಮವತ್ ಗಿರಿಯ ಪಕ್ಕದಲ್ಲಿ ಉತ್ತರದಿಕ್ಕಿಗೆ ಪ್ರಯಾಣ ಮಾಡಿ, ಯಾರಿಂದಲೂ ಜಯಿಸಲಾಗದ ತಪಸ್ಸನ್ನು ಆರಂಭಿಸಿದನು.
ಪಾವಕೇನ ಪರಿಕ್ಷಿಪ್ತೋ ದೀಪ್ಯತಾ ತಸ್ಯ ಚಾಶ್ರಮಃ |
ಆದಿತ್ಯಬಂಧನಂ ನಾಮ ದುರ್ಧರ್ಷಮಕೃತಾತ್ಮಭಿಃ ॥19॥
ಶಿವನು ತಪಸ್ಸನ್ನು ಆಚರಿಸುತ್ತಿದ್ದ ಆಶ್ರಮವು ನಾಲ್ಕುದಿಕ್ಕಿನಲ್ಲಿಯೂ ಅಗ್ನಿಯಿಂದ ಆವೃತವಾಗಿತ್ತು. ಆದಿತ್ಯಬಂಧನ ಎಂಬ ಹೆಸರುಳ್ಳ ಆ ತಪ್ಪಲು ಜಿತೇಂದ್ರಿಯರಲ್ಲದವರಿಗೆ ಹೊಂದಲು ಅಸಾಧ್ಯವಾಗಿತ್ತು.
ನ ತತ್ರ ಶಕ್ಯತೇ ಗಂತುಂ ಯಕ್ಷರಾಕ್ಷಸದಾನವೈಃ |
ದಶಯೋಜನವಿಸ್ತಾರಮಗ್ನಿಜ್ವಾಲಾಸಮಾವೃತಮ್ ॥20॥
ಯಕ್ಷ-ರಾಕ್ಷಸ-ದಾನವರಿಗೆ ಅಲ್ಲಿ ಹೋಗಲು ಸಾಧ್ಯವಿರಲಿಲ್ಲ. ಹತ್ತು ಯೋಜನ ವಿಸ್ತಾರವಾದ ಆ ಆಶ್ರಮ ಪ್ರದೇಶವು ಅಗ್ನಿಯ ಜ್ವಾಲೆಗಳಿಂದ ಆವೃತವಾಗಿತ್ತು.
ಭಗವಾನ್ ಪಾವಕಸ್ತತ್ರ ಸ್ವಯಂ ತಿಷ್ಠತಿ ವೀರ್ಯವಾನ್ |
ಸರ್ವವಿಘ್ನಾನ್ ಪ್ರಶಮಯನ್ ಮಹಾದೇವಸ್ಯ ಧೀಮತಃ ॥21॥
ದಿವ್ಯಂ ವರ್ಷಸಹಸ್ರಂ ಹಿ ಪಾದೇನೈಕೇನ ತಿಷ್ಠತಃ |
ದೇವಾನ್ ಸಂತಾಪಯಂಸ್ತತ್ರ ಮಹಾದೇವೋ ಧೃತವ್ರತಃ ॥22॥
ವೀರ್ಯವಂತನಾದ ಅಗ್ನಿದೇವನು ದಿವ್ಯಸಹಸ್ರ ವರ್ಷಪರ್ಯಂತ ಒಂದೇ ಕಾಲಿನಲ್ಲಿ ನಿಂತು ಅಲ್ಲಿ ತಪಸ್ಸನ್ನು ಆಚರಿಸುತ್ತಿದ್ದನು. ಜ್ಞಾನಿಯಾದ ಮಹದೇವನ ತಪಸ್ಸಿನಿಂದಾಗಿ ಅಲ್ಲಿ ಯಾವ ವಿಘ್ನಗಳೂ ಬರುತ್ತಿರಲಿಲ್ಲ. ಆದ್ದರಿಂದ ಅಲ್ಲೇ ನೆಲೆಸಿದ್ದನು. ಮಹದೇವನು ತನ್ನ ಘೋರ ತಪಸ್ಸಿನಿಂದ ದೇವತೆಗಳನ್ನು ಸಂತಾಪಗೊಳಿಸುತ್ತಿದ್ದನು.
ಐಂದ್ರೀಂ ತು ದಿಶಮಾಸ್ಥಾಯ ಶೈಲರಾಜಸ್ಯ ಧೀಮತಃ |
ವಿವಿಕ್ತೇ ಪರ್ವತತಟೇ ಪಾರಾಶರ್ಯೋ ಮಹಾತಪಾಃ |
ವೇದಾನಧ್ಯಾಪಯಾಮಾಸ ವ್ಯಾಸಃ ಶಿಷ್ಯಾನ್ ಮಹಾತಪಾಃ ॥23॥
ಇದೇ ಸಮಯದಲ್ಲಿ ಪೂರ್ವದಿಕ್ಕನ್ನು ಆಶ್ರಯಿಸಿ ಮಹಾತಪಸ್ವಿಗಳಾದ, ಜ್ಞಾನಿಗಳಾದ ವ್ಯಾಸರು ಧೀಮಂತನಾದ ಹಿಮಾಲಯನ

ಏಕಾಂತದ ಪ್ರದೇಶದಲ್ಲಿ ತಮ್ಮ ಶಿಷ್ಯರಾದ ಸುಮಂತು, ವೈಶಂಪಾಯನ ಮೊದಲಾದವರಿಗೆ ವೇದಗಳನ್ನು ಅಧ್ಯಯನ ಮಾಡಿಸಿದರು.
ಸುಮಂತುಂ ಚ ಮಹಾಭಾಗಂ ವೈಶಂಪಾಯನಮೇವ ಚ |
ಜೈಮಿನಿಂ ಚ ಮಹಾಪ್ರಾಜ್ಞಂ ಪೈಲಂ ಚಾಪಿ ತಪಸ್ವಿನಮ್ ||24||
ಏಭಿಃ ಶಿಷ್ಯೈಃ ಪರಿವೃತೋ ವ್ಯಾಸ ಆಸ್ತೇ ಮಹಾತಪಾಃ |
ತತ್ರಾಶ್ರಮಪದಂ ಪುಣ್ಯಂ ದದರ್ಶ ಪಿತುರುತ್ತಮಮ್ |
ಆರಣೇಯೋ ವಿಶುದ್ಧಾತ್ಮಾ ನಭಸೀವ ದಿವಾಕರಃ ||25||
ಅಥ ವ್ಯಾಸಃ ಪರಿಕ್ಷಿಪ್ತಂ ಜ್ವಲಂತಮಿವ ಪಾವಕಮ್ |
ದದರ್ಶ ಸುತಮಾಯಾಂತಂ ದಿವಾಕರಸಮಪ್ರಭಮ್ ||26||
ಮಹಾಭಾಗ್ಯವಂತನಾದ ಸುಮಂತು, ವೈಶಂಪಾಯನ, ಮಹಾಪ್ರಾಜ್ಞನಾದ ಜೈಮಿನಿ, ತಪಸ್ವಿಯಾದ ಪೈಲ- ಈ ಶಿಷ್ಯರಿಂದ ಕೂಡಿಕೊಂಡಿರುವ ವ್ಯಾಸರು ಎಲ್ಲಿದ್ದರೋ ಅಂತಹ ತಂದೆಯ ಪುಣ್ಯಾಶ್ರಮ ಸ್ಥಾನವನ್ನು ಶುಕಮುನಿಯು ನೋಡಿದನು. ಅರಣ್ಯಗರ್ಭಸಂಜಾತನಾದ, ವಿಶುದ್ಧಾತ್ಮನಾದ, ಆಕಾಶದಲ್ಲಿನ ಸೂರ್ಯನಂತೆ ತೇಜಸ್ಸಿನಿಂದ ಕಂಗೊಳಿಸುವ ಶುಕಮುನಿಯು ಪ್ರಜ್ವಲಿಸುತ್ತಿರುವ ಅಗ್ನಿದೇವನಂತೆ ತೇಜಸ್ಸಿನಿಂದ ಸುತ್ತುವರಿದು, ಸೂರ್ಯಸದೃಶಕಾಂತಿಯಿಂದ ಕೂಡಿದವನಾಗಿ ತನ್ನ ಆಶ್ರಮದ ಕಡೆಗೆ ಆಗಮಿಸುತ್ತಿರುವುದನ್ನು ವ್ಯಾಸರು ನೋಡಿದರು.
ಅಸಜ್ಜಮಾನಂ ವೃಕ್ಷೇಷು ಶೈಲೇಷು ವಿಷಮೇಷು ಚ |
ಯೋಗಯುಕ್ತಂ ಮಹಾತ್ಮಾನಂ ಯಥಾ ಬಾಣಂ ಗುಣಚ್ಯುತಮ್ ||27||
ಸುಂದರವಾದ ವೃಕ್ಷ, ಶೈಲ, ಶಿಖರಗಳನ್ನು ನೋಡದೆ, ಧನುಸ್ಸಿನ ಹಗ್ಗದಿಂದ ಬಿಡಲ್ಪಟ್ಟ ಬಾಣವು ಲಕ್ಷ್ಯದ ಕಡೆ ಸಾಗುವಂತೆ ಬರುತ್ತಿರುವ ಯೋಗಯುಕ್ತನಾದ, ಮಹಾತ್ಮನಾದ ಶುಕಮುನಿಯನ್ನು ನೋಡಿದರು.
ಸೋಽಭಿಗಮ್ಯ ಪಿತುಃ ಪಾದಾವಗೃಹ್ಣಾದರಣೀಸುತಃ |
ಯಥೋಪಜೋಷಂ ತೈಶ್ಚಾಪಿ ಸಮಾಗಚ್ಛನ್ಮಹಾಮುನಿಃ ||28||
ಆ ಶುಕಮುನಿಯಾದರೂ ಬಾಣದ ವೇಗದಂತೆ ನೇರವಾಗಿ ತಂದೆಯ ಆಶ್ರಮದ ಕಡೆ ಸಾಗುತ್ತಾ, ಜ್ಞಾನಿಯಾದ ತಂದೆಯನ್ನು ಕಂಡು, ಅವನ ಪಾದಗಳನ್ನು ಹಿಡಿದುಕೊಂಡು, ಮೌನಿಯಾಗಿ ಇತರ ಶಿಷ್ಯರ ಜೊತೆಗೆ ಸೇರಿಕೊಂಡನು.
ತತೋ ನಿವೇದಯಾಮಾಸ ಪಿತ್ರೇ ಸರ್ವಮಶೇಷತಃ |
ಶುಕೋ ಜನಕರಾಜೇನ ಸಂವಾದಂ ಪ್ರೀತಮಾನಸಃ ||29||
ಸ್ವಲ್ಪ ಸಮಯದ ನಂತರ ಪ್ರಸನ್ನಚಿತ್ತರಾಗಿ ಇರುವ ಶುಕಮುನಿಯು ತಂದೆಯ ಜೊತೆಗೆ ತನಗೂ, ಜನಕನಿಗೂ ನಡೆದ ಸಂವಾದವನ್ನು ತಿಳಿಸಿದನು.
ಏವಮಧ್ಯಾಪಯನ್ ಶಿಷ್ಯಾನ್ ವ್ಯಾಸಃ ಪುತ್ರಂ ಚ ವೀರ್ಯವಾನ್ |
ಉವಾಸ ಹಿಮವತ್ ಪೃಷ್ಠೇ ಪಾರಾಶರ್ಯೋ ಮಹಾಮುನಿಃ ||30||
ವೇದವ್ಯಾಸರಾದರೂ ಸುಮಂತು, ಜೈಮಿನಿ ಮೊದಲಾದ ಶಿಷ್ಯರಿಗೆ, ಮಗನಾದ ಶುಕಮುನಿಗೆ ಅನೇಕ ಸಮಯ ಹಿಮವದ್ ಪರ್ವತದಲ್ಲಿಯೇ ಭಗವತ್ತತ್ತ್ವವನ್ನು ಉಪದೇಶಿಸುತ್ತಾ ವಾಸಿಸಿದರು.
ತತಃ ಕದಾಚಿಚ್ಛಿಷ್ಯಾಸ್ತಂ ಪರಿವಾರ್ಯಾವತಸ್ಥಿರೇ |
ವೇದಾಧ್ಯಯನಸಂಪನ್ನಾಃ ಶಾಂತಾತ್ಮಾನೋ ಜಿತೇಂದ್ರಿಯಾಃ ||31||
ಒಂದು ಸಮಯದಲ್ಲಿ ಸುಮಂತು ಮೊದಲಾದ ಶಿಷ್ಯರು ವ್ಯಾಸರನ್ನು ಸುತ್ತುವರಿದು ಕುಳಿತಿದ್ದರು. ಅವರೆಲ್ಲರೂ ವೇದಾಧ್ಯಯನ ಸಂಪನ್ನರಾಗಿದ್ದರು. ಶಾಂತಮನಸ್ಕರೂ, ಜಿತೇಂದ್ರಿಯರೂ ಆಗಿದ್ದರು.
ವೇದೇಷು ನಿಷ್ಠಾಂ ಸಂಪ್ರಾಪ್ಯ ಸಾಂಗೇಷ್ವತಿತಪಸ್ವಿನಃ |
ಅಥೋಚುಸ್ತೇ ತದಾ ವ್ಯಾಸಂ ಶಿಷ್ಯಾಃ ಪ್ರಾಂಜಲಯೋ ಗುರುಮ್ ||
ತಪಸ್ವಿಗಳಾದ ಅವರೆಲ್ಲರೂ ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ಅತ್ಯಂತ ಪ್ರಾವೀಣ್ಯವನ್ನು ಪಡೆದು, ವ್ಯಾಸರ ಶಿಷ್ಯರಾಗಿದ್ದು, ಕೈಮುಗಿದುಕೊಂಡು ಗುರುಗಳಾದ ವೇದವ್ಯಾಸರಿಗೆ ಹೀಗೆ ಹೇಳಿದರು.
ಮಹತಾ ಶ್ರೇಯಸಾ ಯುಕ್ತಾ ಯಶಸಾ ಚ ಸ್ಮ ವರ್ಧಿತಾಃ |
ಏಕಂ ತ್ವಿದಾನೀಮಿಚ್ಛಾಮೋ ಗುರುಣಾನುಗ್ರಹಂ ಕೃತಮ್ ||33||
ಗುರುದೇವನೇ, ತಮ್ಮ ಕೃಪಾಬಲದಿಂದ ನಾವಿಂದು ಬ್ರಹ್ಮತೇಜಸ್ಸನ್ನು ಸಂಪಾದಿಸಿರುತ್ತೇವೆ. ನಮ್ಮ ಯಶಸ್ಸು ಎಲ್ಲ ಕಡೆ ಹರಡಿದೆ. ನಿಮ್ಮಿಂದ ಈಗ ಒಂದು ಅನುಗ್ರಹವನ್ನು ನಾವು ಬಯಸುತ್ತಿದ್ದೇವೆ.
ಇತಿ ತೇಷಾಂ ವಚಃ ಶ್ರುತ್ವಾ ಬ್ರಹ್ಮರ್ಷಿಸ್ತಾನುವಾಚ ಹ |
ಉಚ್ಯತಾಮಿತಿ ತದ್ವತ್ ಸಾ ಯದ್ವಃ ಕಾರ್ಯಂ ಪ್ರಿಯಂ ಮಯಾ ||34||
ಯುಧಿಷ್ಠಿರನೇ, ಶಿಷ್ಯರ ಈ ಮಾತನ್ನು ಕೇಳಿಸಿಕೊಂಡು ಬ್ರಹ್ಮಜ್ಞಾನಿಗಳಾದ ವ್ಯಾಸರು ನಿಮ್ಮ ಹೃದಯದಲ್ಲಿರುವ ಅಪೇಕ್ಷೆ ಏನೆಂದು ತಿಳಿಸಿರಿ. ನಿಮಗೆ ನಾನು ಯಾವ ಹಿತವನ್ನು ಉಂಟುಮಾಡಲಿ? ಎಂದು ಕೇಳಿದರು.
ಏತದ್ ವಾಕ್ಯಂ ಗುರೋಃ ಶ್ರುತ್ವಾ ಶಿಷ್ಯಾಸ್ತೇ ಹೃಷ್ಟಮಾನಸಾಃ |
ಪುನಃ ಪ್ರಾಂಜಲಯೋ ಭೂತ್ವಾ ಪ್ರಣಮ್ಯ ಶಿರಸಾ ಗುರುಮ್ ||35||
ಊಚುಸ್ತೇ ಸಹಿತಾ ರಾಜನ್ನಿದಂ ವಚನಮುತ್ತಮಮ್ |
ಯದಿ ಪ್ರೀತ ಉಪಾಧ್ಯಾಯೋ ಧನ್ಯಾಃ ಸ್ಮೋ ಮುನಿಸತ್ತಮ ||36||
ಗುರುಗಳ ಈ ಮಾತನ್ನು ತಿಳಿದು ಶಿಷ್ಯರೆಲ್ಲರೂ ಪರಮಸಂತುಷ್ಟ ಮನಸ್ಸುಳ್ಳವರಾಗಿ ಪುನಃ ಕೈಜೋಡಿಸಿಕೊಂಡು ಗುರುಗಳಿಗೆ ತಲೆಬಾಗಿ

ನಮಸ್ಕರಿಸಿ, ಅತ್ಯಂತ ಶ್ರೇಷ್ಠವಾದ ಈ ಮಾತನ್ನು ವ್ಯಾಸರಿಗೆ ಹೇಳಿದರು: ಮುನಿಶ್ರೇಷ್ಠರೇ, ಉಪಾಧ್ಯಾಯರಾದ ನೀವು ನಮ್ಮ ವಿಷಯದಲ್ಲಿ ಪ್ರೀತರಾಗಿದ್ದೀರಿ ಎಂದಾದರೆ ನಾವು ಧನ್ಯರೇ ಸರಿ ಎಂದು.
ಕಾಂಕ್ಷಿಮಸ್ತು ವಯಂ ಸರ್ವೇ ವರಂ ದತ್ತಂ ಮಹರ್ಷಿಣಾ |
ಷಷ್ಠಃ ಶಿಷ್ಯೋ ನ ತೇ ಖ್ಯಾತಿಂ ಗಚ್ಛೇದತ್ರ ಪ್ರಸೀದ ನಃ ॥37॥
ನಾವೆಲ್ಲರೂ ತಮ್ಮಿಂದ ಒಂದು ವರವನ್ನು ಬಯಸುತ್ತೇನೆ. ನಿಮ್ಮ ಆರನೆ ಶಿಷ್ಯನು ಖ್ಯಾತಿ ಹೊಂದಬಾರದು ಎಂಬುದೇ ನಮ್ಮ ವರದ ಅಪೇಕ್ಷೆಯು. ಈ ವಿಷಯದಲ್ಲಿ ಪ್ರಸನ್ನರಾಗಿರಿ.
ಚತ್ವಾರಸ್ತೇ ವಯಂ ಶಿಷ್ಯಾ ಗುರುಪುತ್ರಶ್ಚ ಪಂಚಮಃ |
ಇಹ ವೇದಾಃ ಪ್ರತಿಷ್ಠೇರನ್ನೇಷ ನಃ ಕಾಂಕ್ಷಿತೋ ವರಃ ॥38॥
ನಾವು ನಾಲ್ವರು ತಮ್ಮ ಶಿಷ್ಯರಾಗಿದ್ದೇವೆ. ಗುರುಪುತ್ರನಾದ ಶುಕನು ಐದನೆಯವನಾಗಿದ್ದಾನೆ. ಈ ಐವರಲ್ಲಿ ನೀವು ಉಪದೇಶಿಸಿದ ವೇದಗಳು ಪ್ರತಿಷ್ಠಾಪಿತವಾಗಿರಬೇಕು. ಇದು ನಾವು ಬೇಡುವ ವರವಾಗಿದೆ.
ಶಿಷ್ಯಾಣಾಂ ವಚನಂ ಶ್ರುತ್ವಾ ವ್ಯಾಸೋ ವೇದಾರ್ಥತತ್ತ್ವವಿತ್ |
ಪರಾಶರಾತ್ಮಜೋ ಧೀಮಾನ್ ಪರಲೋಕಾರ್ಥಚಿಂತಕಃ |
ಉವಾಚ ಶಿಷ್ಯಾನ್ ಧರ್ಮಾತ್ಮಾ ಧರ್ಮ್ಯಂ ನೈಃಶ್ರೇಯಸಂ ವಚಃ ॥39॥
ಯುಧಿಷ್ಠಿರನೇ, ವೇದಾರ್ಥ ತತ್ತ್ವವನ್ನು ಬಲ್ಲವರಾದ ವ್ಯಾಸರು ಶಿಷ್ಯರು ಹೇಳಿದ ಮಾತನ್ನು ಕೇಳಿಸಿಕೊಂಡು, ಪರಾಶರರ ಸುತರಾದ, ಬುದ್ಧಿವಂತರಾದ, ಪರಲೋಕಾರ್ಥ ಚಿಂತಕರಾದ, ಧರ್ಮಾತ್ಮರಾದ ವ್ಯಾಸರು ಮೋಕ್ಷಕ್ಕೆ ಕಾರಣವಾದ ಈ ಮಾತನ್ನು ಶಿಷ್ಯರಿಗೆ ಹೇಳಿದರು.
ಬ್ರಾಹ್ಮಣಾಯ ಸದಾ ದೇಯಂ ಬ್ರಹ್ಮ ಶುಶ್ರೂಷವೇ ಭವೇತ್ |
ಬ್ರಹ್ಮಲೋಕೇ ನಿವಾಸಂ ಯೋ ಧ್ರುವಂ ಸಮಭಿಕಾಂಕ್ಷತಿ ॥40॥
ಮಕ್ಕಳೇ, ಬ್ರಹ್ಮಲೋಕದಲ್ಲಿ ಶಾಶ್ವತ ಸ್ಥಾನವನ್ನು ಯಾರು ಬಯಸುತ್ತಾರೋ ಅವರು ವೇದಾಧ್ಯಯನವನ್ನು ಮಾಡುವ ಇಚ್ಛೆಯಿಂದ ಆಗಮಿಸಿದ್ದಲ್ಲಿ ಸೇವಿಸಿ ಜ್ಞಾನಸಂಪಾದನೆಯ ಬಯಕೆಯುಳ್ಳ ಅವರಿಗೆ ನೀವು ನಿಶ್ಚಿತವಾಗಿ ವೇದಾಧ್ಯಯನವನ್ನು ಮಾಡಿಸಬೇಕು.
ಭವಂತೋ ಬಹುಲಾಃ ಸಂತು ವೇದೋ ವಿಸ್ತಾರ್ಯತಾಮಯಮ್ |
ನಾಶಿಷ್ಯೇ ಸಂಪ್ರದಾತವ್ಯೋ ನಾವ್ರತೇ ನಾಕೃತಾತ್ಮನಿ ॥41॥
ನೀವು ಅನೇಕ ಶಿಷ್ಯರನ್ನು ಪಡೆದು ವಿಸ್ತಾರವಾಗಿ ಬೆಳೆಯಿರಿ. ವೇದವನ್ನು ಎಲ್ಲ ಕಡೆ ಪ್ರಚಾರ ಮಾಡಿರಿ. ಅಜಿತೇಂದ್ರಿಯನಾದವನಿಗೆ, ಬ್ರಹ್ಮಚರ್ಯ ಇಲ್ಲದವನಿಗೆ, ಶಿಷ್ಯಭಾವ ಹೊಂದದವನಿಗೆ ವೇದಗಳನ್ನು ಉಪದೇಶಿಸಬೇಡಿರಿ.
ಏತೇ ಶಿಷ್ಯಗುಣಾಃ ಸರ್ವೇ ವಿಜ್ಞಾತವ್ಯಾ ಯಥಾರ್ಥತಃ |
ನಾಪರೀಕ್ಷಿತಚಾರಿತ್ರೇ ವಿದ್ಯಾ ದೇಯಾ ಕಥಂಚನ ॥42॥
ಜಿತೇಂದ್ರಿಯತ್ವ, ಬ್ರಹ್ಮಚರ್ಯ,ಗುರುಸೇವಾ ಇವೆಲ್ಲವೂ ಶಿಷ್ಯರಲ್ಲಿರಬೇಕಾದ ಗುಣಗಳೆಂದು ತಿಳಿಯಿರಿ. ಈ ಗುಣಗಳನ್ನು ಪರೀಕ್ಷಿಸಿಕೊಂಡು ವಿದ್ಯಾದಾನವನ್ನು ಮಾಡಬೇಕು. ಪರೀಕ್ಷೆ ಇಲ್ಲದೆ ಈ ವಿದ್ಯೆಯನ್ನು ನೀಡಬಾರದು.
ಯಥಾ ಹಿ ಕನಕಂ ಶುದ್ಧಂ ತಾಪಚ್ಛೇದನಿಘರ್ಷಣೈಃ |
ಪರೀಕ್ಷೇತ ತಥಾ ಶಿಷ್ಯಾನೀಕ್ಷೇತ್ ಕುಲಗುಣಾದಿಭಿಃ ॥43॥
ಹೇಗೆ ಬೆಂಕಿಯಲ್ಲಿ ಕುದಿಸಿದಾಗ, ಕತ್ತರಿಸಿದಾಗ, ಒರೆಗಲ್ಲಿನಲ್ಲಿ ಹಚ್ಚಿ ತಿಕ್ಕಿ ನೋಡಿದಾಗ ಚಿನ್ನದ ಪರಿಶುದ್ಧತೆಯು ಅರ್ಥವಾಗುತ್ತದೋ ಅದರಂತೆ ಶಿಷ್ಯರನ್ನು ಕುಲ, ಗುಣ, ಆಚಾರಗಳ ಮೂಲಕ ಚೆನ್ನಾಗಿ ಪರೀಕ್ಷಿಸಬೇಕು.
ನ ನಿಯೋಜ್ಯಾಶ್ಚ ವಃ ಶಿಷ್ಯಾ ಅನಿಯೋಗೇ ಮಹಾಭಯೇ |
ಯಥಾಮತಿ ಯಥಾಪಾಠಂ ತಥಾ ವಿದ್ಯಾ ಫಲಿಷ್ಯತಿ ॥44॥
ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು |
ಶ್ರಾವಯೇಚ್ಚತುರೋ ವರ್ಣಾನ್ ಕೃತ್ವಾ ಬ್ರಾಹ್ಮಣಮಗ್ರತಃ ॥45॥
ಅಯೋಗ್ಯವಾದ ಕೆಲಸದಲ್ಲಿ ಶಿಷ್ಯರನ್ನು ನೇಮಿಸಬಾರದು. ಭಯಜನಕವಾದ ಕಾರ್ಯದಲ್ಲಿಯೂ ನೇಮಿಸಬಾರದು. ಶಿಷ್ಯನಲ್ಲಿ ಯಾವ ಜ್ಞಾನವಿದೆಯೋ, ಯಾವ ರೀತಿ ನೀವು ಪಾಠವನ್ನು ಹೇಳುತ್ತೀರೋ ಅದರಂತೆ ಶಿಷ್ಯರಲ್ಲಿ ವಿದ್ಯೆಯು ಫಲಿಸುತ್ತದೆ. ಎಲ್ಲರೂ ಎಲ್ಲ ರೀತಿಯಾದ ಕಷ್ಟಗಳಿಂದ ದೂರರಾಗಲಿ. ಎಲ್ಲರಿಗೂ ಕಲ್ಯಾಣ ಉಂಟಾಗಲಿ. ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ನಾಲ್ಕು ವರ್ಣದವರಿಗೂ ಧರ್ಮೋಪದೇಶವನ್ನು ಮಾಡಿರಿ.
ವೇದಸ್ಯಾಧ್ಯಯನಂ ಹೀದಂ ತಚ್ಚ ಕಾರ್ಯಂ ಮಹತ್ ಸ್ಮೃತಮ್ |
ಸ್ತುತ್ಯರ್ಥಮಿಹ ದೇವಾನಾಂ ವೇದಾಃ ಸೃಷ್ಟಾಃ ಸ್ವಯಂಭುವಾ ॥46॥
ವೇದಾಧ್ಯಯನವೆಂಬುದು ಮಹತ್ಕಾರ್ಯವಾಗಿದೆ. ಇಂತಹ ಸತ್ಕರ್ಮವನ್ನು ನೀವು ಮಾಡಲೇಬೇಕು. ಭಗವಂತನನ್ನು ಸ್ತೋತ್ರ ಮಾಡುವ ದೃಷ್ಟಿಯಿಂದಲೇ ಚತುರ್ಮುಖ ಬ್ರಹ್ಮನು ವೇದಗಳನ್ನು ತನ್ನ ಬುದ್ಧಿಯಿಂದ ಹೊರಹಾಕಿರುತ್ತಾನೆ.
ಯೋ ನಿರ್ವದೇತ ಸಮ್ಮೋಹಾದ್ ಬ್ರಾಹ್ಮಣಂ ವೇದಪಾರಗಮ್ |
ಸೋಽಪಧ್ಯಾನಾದ್ ಬ್ರಾಹ್ಮಣಸ್ಯ ಪರಾಭೂಯಾದಸಂಶಯಮ್ ॥47॥
ಯಾವಾತನು ವೇದಜ್ಞನಾದ ಬ್ರಾಹ್ಮಣನನ್ನು ಮೋಹದಿಂದಾಗಿ ನಿಂದಿಸುತ್ತಾನೋ ಅವನು ಬ್ರಾಹ್ಮಣನನ್ನು ನಿಂದಿಸಿದುದರಿಂದ ಎಲ್ಲ ರೀತಿಯಾದ ಪರಾಭವವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ.
ಯಶ್ಚಾಧರ್ಮೇಣ ವಿಬ್ರೂಯಾದ್ ಯಶ್ಚಾಧರ್ಮೇಣ ಪೃಚ್ಛತಿ |
ತಯೋರನ್ಯತರಃ ಪ್ರೈತಿ ವಿದ್ವೇಷಂ ವಾಧಿಗಚ್ಛತಿ ॥48॥

ಯಾವನು ಅಧರ್ಮದಿಂದ ಪ್ರಶ್ನಿಸುತ್ತಾನೋ, ಯಾವನು ಅಧರ್ಮದಿಂದಲೇ ಉತ್ತರಿಸುತ್ತಾನೋ ಇಬ್ಬರೂ ಮರಣ ಹೊಂದುತ್ತಾರೆ. ಇಬ್ಬರಲ್ಲಿಯೂ ದ್ವೇಷವು ಉಂಟಾಗುತ್ತದೆ.
ಏತದ್ವಃ ಸರ್ವಮಾಖ್ಯಾತಂ ಸ್ವಾಧ್ಯಾಯಸ್ಯ ವಿಧಿಂ ಪ್ರತಿ |
ಉಪಕುರ್ಯಾಚ್ಚ ಶಿಷ್ಯಾಣಾಮೇತಚ್ಚ ಹೃದಿ ವೋ ಭವೇತ್ ॥49॥
ಸ್ವಾಧ್ಯಾಯದ ವಿಧಿಯನ್ನು ಕುರಿತು ನಿಮಗೆ ಎಲ್ಲ ವಿಷಯವನ್ನೂ ಹೇಳಿದ್ದೇನೆ. ನೀವು ಶಿಷ್ಯರಿಗೆ ಉಪಕರಿಸಬೇಕು. ಇದೆಲ್ಲವೂ ನಿಮ್ಮ ಮನಸ್ಸಿನಲ್ಲಿರಲಿ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತನೆಯ ಅಧ್ಯಾಯ
ವ್ಯಾಸ ಕಥಾ
ಭೀಷ್ಮಃ
ಏತಚ್ಛ್ರುತ್ವಾ ಗುರೋರ್ವಾಕ್ಯಂ ವ್ಯಾಸಶಿಷ್ಯಾ ಮಹೌಜಸಃ |
ಅನ್ಯೋನ್ಯಂ ಹೃಷ್ಟಮನಸಃ ಪರಿಷಸ್ವಜಿರೇ ತದಾ ॥1॥
ಭೀಷ್ಮ ಯುಧಿಷ್ಠಿರನೇ, ಗುರುಗಳ ಮಾತಿನಿಂದ ಸಂತುಷ್ಟರಾದ ವ್ಯಾಸರ ಶಿಷ್ಯರು ಪರಸ್ಪರ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು. ಬಳಿಕ ವ್ಯಾಸರನ್ನು ಕುರಿತು ಹೇಳಿದರು.
ಉಕ್ತಾಃ ಸ್ಮೋ ಯದ್ ಭಗವತಾ ತದಾತ್ವಾಯತಿ ಸಂಹಿತಾಮ್ |
ತನ್ನೋ ಮನಸಿ ಸಂರೂಢಂ ಕರಿಷ್ಯಾಮಸ್ತಥಾ ಚ ತತ್ ॥2॥
ಗುರುಗಳೇ, ನೀವು ನಮ್ಮ ಮುಂದಿನ ಹಿತಚಿಂತನೆಯಿಂದ ಯಾವ ವೇದವನ್ನು ಉಪದೇಶಿಸಿದ್ದೀರೋ ಆ ನಿಮ್ಮ ವಚನರೂಪವಾದ ವೇದವನ್ನು ನಾವು ಅಧ್ಯಯನ ಮಾಡುತ್ತಾ, ಶಿಷ್ಯರಿಗೂ ಉಪದೇಶ ಮಾಡುತ್ತಾ ಅದನ್ನು ರಕ್ಷಿಸುತ್ತೇವೆ. ನಿಮ್ಮ ಉಪದೇಶಗಳು ನಮ್ಮ ಮನಸ್ಸಿನಲ್ಲಿ ಬೇರೂರಿ ನಿಂತಿವೆ. ನೀವು ಹೇಳಿದಂತೆ ನಾವು ನಡೆದುಕೊಳ್ಳುತ್ತೇವೆ.
ಅನ್ಯೋನ್ಯಂ ಚ ಸಭಾಜ್ಯೈವಂ ಸುಪ್ರೀತಮನಸಃ ಪುನಃ |
ವಿಜ್ಞಾಪಯಂತಿ ಸ್ಮ ಗುರುಂ ಪುನರ್ವಾಕ್ಯವಿಶಾರದಾಃ ॥3॥
ಯುಧಿಷ್ಠಿರನೇ, ಈ ರೀತಿಯಾಗಿ ಪರಸ್ಪರ ಸಂಭಾಷಣೆ ಮಾಡುತ್ತಾ ಗುರು-ಶಿಷ್ಯರು ಪ್ರಸನ್ನ ಮನಸ್ಸಿನಲ್ಲಿದ್ದರು. ಸ್ವಲ್ಪ ಸಮಯದ ಬಳಿಕ ವಾಕ್ಯವಿಶಾರದರಾದ ಸುಮಂತು ಮೊದಲಾದ ಶಿಷ್ಯರು ಗುರುಗಳಲ್ಲಿ ಹೀಗೆ ತಿಳಿಸಿದರು.
ಶೈಲಾದಸ್ಮಾನ್ಮಹೀಂ ಗಂತುಂ ಕಾಂಕ್ಷಿತಂ ನೋ ಮಹಾಮುನೇ |
ವೇದಾನನೇಕಧಾ ಕರ್ತುಂ ಯದಿ ತೇ ರುಚಿತಂ ವಿಭೋ ॥4॥
ಗುರುಗಳೇ, ಈ ಪರ್ವತದಿಂದ ನಾವು ಭೂಮಿಗೆ ಹೋಗಲು ಇಚ್ಛಿಸಿದ್ದೇವೆ. ವೇದಗಳನ್ನು ಅನೇಕ ಪ್ರಕಾರ ವಿಂಗಡಿಸಿ, ಅದನ್ನು ಪ್ರಚಾರ ಮಾಡುವುದೇ ನಮ್ಮ ಯಾತ್ರೆಯ ಉದ್ದೇಶವಾಗಿದೆ. ನಿಮಗೆ ನಮ್ಮ ಅಭಿಪ್ರಾಯವು ಸಮ್ಮತವಾಗಿದ್ದಲ್ಲಿ ಆಜ್ಞಾಪಿಸಿರಿ.
ಶಿಷ್ಯಾಣಾಂ ವಚನಂ ಶ್ರುತ್ವಾ ಪರಾಶರಸುತಃ ಪ್ರಭುಃ |
ಪ್ರತ್ಯುವಾಚ ತತೋ ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ ॥5॥
ಯುಧಿಷ್ಠಿರನೇ, ಶಿಷ್ಯರ ಮಾತನ್ನು ಕೇಳಿಸಿಕೊಂಡ ಪರಾಶರ ಮುನಿಗಳ ಮಗನಾದ, ಪ್ರಭುವಾದ ವ್ಯಾಸರು ಧರ್ಮಾರ್ಥಸಹಿತವಾದ, ಹಿತಕರವಾದ ಮಾತನ್ನು ಹೇಳಿದರು.
ಕ್ಷಿತಿಂ ವಾ ದೇವಲೋಕಂ ವಾ ಗಮ್ಯತಾಂ ಯದಿ ರೋಚತೇ |
ಅಪ್ರಮಾದಶ್ಚ ವಃ ಕಾರ್ಯೋ ಬ್ರಹ್ಮ ಹಿ ಪ್ರಚುರಚ್ಛಲಮ್ ॥6॥
ಶಿಷ್ಯರೇ, ನಿಮಗೆ ಇಷ್ಟವಾಗಿದ್ದಲ್ಲಿ ಭೂಮಿಗೆ ಬೇಕಾದರೂ ಹೋಗಿರಿ, ದೇವಲೋಕಕ್ಕಾದರೂ ಹೋಗಿರಿ. ಆದರೆ ವೇದದ ಪ್ರಚಾರವನ್ನು ಎಚ್ಚರದಿಂದ ಮಾಡಿರಿ.
ತೇಽನುಜ್ಞಾತಾಸ್ತತಃ ಸರ್ವೇ ಗುರುಣಾ ಸತ್ಯವಾದಿನಾ |
ಜಗ್ಮುಃ ಪ್ರದಕ್ಷಿಣಂ ಕೃತ್ವಾ ವ್ಯಾಸಂ ಮೂರ್ಧ್ನಾಭಿವಾದ್ಯ ಚ ॥7॥
ಸತ್ಯವಾದಿಯಾದ ವ್ಯಾಸರಿಂದ ಆಜ್ಞಪ್ತರಾದ ಆ ಎಲ್ಲ ಶಿಷ್ಯರು ವ್ಯಾಸರನ್ನು ಶಿರಸಾ ನಮಿಸಿ, ಪ್ರದಕ್ಷಿಣೆಯನ್ನು ಮಾಡಿ ಅಲ್ಲಿಂದ ಹೊರಟರು.
ಅವತೀರ್ಯ ಮಹೀಂ ತೇಥ ಚಾತುರ್ಹೋತ್ರಮಕಲ್ಪಯನ್ |
ಸಂಯಾಜಯಂತೋ ವಿಪ್ರಾಂಶ್ಚ ರಾಜನ್ಯಾಂಶ್ಚ ವಿಶಸ್ತಥಾ ॥8॥
ವ್ಯಾಸಶಿಷ್ಯರು ಪರ್ವತದಿಂದ ಕೆಳಗಿಳಿದು ಬಂದು ಭೂಮಿಯಲ್ಲಿ ಅಗ್ನಿಹೋತ್ರ ಮೊದಲಾದ ಸೋಮಯಾಗದ ತನಕ ಇರುವ ಎಲ್ಲ ಕರ್ಮಗಳನ್ನು ಪ್ರಚಾರ ಮಾಡಿದರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ದ್ವಿಜರಿಂದ ಪ್ರತಿದಿನವೂ ಯಜ್ಞವನ್ನು ಮಾಡಿಸಿದರು.
ಪೂಜ್ಯಮಾನಾ ದ್ವಿಜೈರ್ನಿತ್ಯಂ ಮೋದಮಾನಾ ಗೃಹೇ ರತಾಃ |
ಯಾಜನಾಧ್ಯಾಪನರತಾಃ ಶ್ರೀಮಂತೋ ಲೋಕವಿಶ್ರುತಾಃ ॥9॥
ನಾಲ್ಕು ವರ್ಣದವರಿಂದ ನಿತ್ಯವೂ ಪೂಜಿತರಾಗಿ ತಮ್ಮ ತಮ್ಮ ಮನೆಗಳಲ್ಲಿ ಸುಖವಾಗಿ ಇರುತ್ತಿದ್ದರು. ಯಾಜನ-ಅಧ್ಯಾಪನದಲ್ಲಿ ನಿರತರಾದ, ಶ್ರೀಮಂತರಾದ, ಗೃಹಸ್ಥಧರ್ಮದಲ್ಲಿ ಆಸಕ್ತರಾದ ವ್ಯಾಸಶಿಷ್ಯರು ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿದರು.

ಅವತೀರ್ಣೇಷು ಶಿಷ್ಯೇಷು ವ್ಯಾಸಃ ಪುತ್ರಸಹಾಯವಾನ್ ।
ತೂಷ್ಣೀಂ ಧ್ಯಾನಪರೋ ಧೀಮಾನೇಕಾಂತೇ ಸಮುಪಾವಿಶತ್ ॥10॥
ಶಿಷ್ಯರೆಲ್ಲರೂ ಪರ್ವತದಿಂದಿಳಿದು ಭೂಮಿಗೆ ಹೋದ ಬಳಿಕ ಪುತ್ರನೊಬ್ಬನ ಸಹಾಯವನ್ನು ಹೊಂದಿರುವ ಜ್ಞಾನಿಗಳಾದ ವ್ಯಾಸರು ಏಕಾಂತದಲ್ಲಿ ಧ್ಯಾನಾಸಕ್ತರಾಗಿ ಕುಳಿತರು.
ತಂ ದದರ್ಶಾಶ್ರಮಪದೇ ನಾರದಃ ಸುಮಹಾತಪಾಃ ।
ಅಥೈನಮಬ್ರುವೀತ್ ಕಾಲೇ ಮಧುರಾಕ್ಷರಯಾ ಗಿರಾ ॥11॥
ಅದೇ ಸಮಯಕ್ಕೆ ಸರಿಯಾಗಿ ಮಹಾತಪಸ್ವಿಗಳಾದ ನಾರದರು ವ್ಯಾಸರ ಆಶ್ರಮಕ್ಕೆ ಏಕಾಂತ ಸ್ಥಳಕ್ಕೆ ಆಗಮಿಸಿ ವ್ಯಾಸರು ಧ್ಯಾನಮಗ್ನರಾಗಿರುವುದನ್ನು ಕಂಡರು. ಮಧುರವಾದ ಅಕ್ಷರಗಳಿಂದ ಕೂಡಿದ ಮಾತಿನಿಂದ ವ್ಯಾಸರನ್ನು ಕುರಿತು ಹೀಗೆ ಹೇಳಿದರು.
ಭೋ ಭೋ ಮಹರ್ಷೇ ವಾಸಿಷ್ಠ ಬ್ರಹ್ಮಘೋಷೋ ನ ವರ್ತತೇ ।
ಏಕೋ ಧ್ಯಾನಪರಸ್ತೂಷ್ಣೀಂ ಕಿಮಾಸ್ಸೇ ಚಿಂತಯನ್ನಿವ ॥12॥
ಎಲೈ ಎಲೈ ವಸಿಷ್ಠಗೋತ್ರನಾದ ಬ್ರಹ್ಮರ್ಷಿಯೇ, ನಿನ್ನ ಆಶ್ರಮದಲ್ಲಿ ಏಕೆ ಬ್ರಹ್ಮಘೋಷ ಕೇಳಿಬರುತ್ತಿಲ್ಲ? ಒಬ್ಬನೇ ಏನನ್ನೋ ಚಿಂತಿಸುತ್ತಾ ಏಕಾಂತದಲ್ಲಿ ಧ್ಯಾನ ಮಗ್ನನಾಗಿ ಏಕೆ ಕುಳಿತಿರುವಿ?
ಬ್ರಹ್ಮಘೋಷೈರ್ವಿರಹಿತಃ ಪರ್ವತೋಽಯಂ ನ ಶೋಭತೇ ।
ರಜಸಾ ತಮಸಾ ಚೈವ ಸೋಮಃ ಸೋಪಪ್ಲವೋ ಯಥಾ ॥13॥
ವೇದಘೋಷಗಳಿಂದ ರಹಿತವಾದ ಈ ಪರ್ವತವು ಹಿಂದಿನಂತೆ ಶೋಭಾಯ ಮಾನವಾಗಿರುವುದಿಲ್ಲ. ರಜಸ್ಸು, ತಮಸ್ಸುಗಳಿಂದ ಆಚ್ಛಾದಿತವಾದ ರಾಹುಗ್ರಸ್ತನಾದ ಚಂದ್ರನಂತೆ ಈ ಪರ್ವತವು ಕಂಡುಬರುತ್ತಿದೆ.
ನ ಭ್ರಾಜತೇ ಯಥಾಪೂರ್ವಂ ನಿಷಾದಾನಾಮಿವಾಲಯಃ ।
ದೇವರ್ಷಿಗಣಜುಷ್ಟೋಽಪಿ ವೇದಧ್ವನಿನಿರಾಕೃತಃ ॥14॥
ದೇವತೆಗಳ ಸಮುದಾಯದಿಂದ ಕೂಡಿದ್ದರೂ ವೇದಧ್ವನಿಹೀನವಾದ ಈ ಪರ್ವತವು ಬೇಡರ ಮನೆಯಂತಾಗಿದೆ. ಹಿಂದಿನಂತೆ ಶೋಭಿಸುತ್ತಿಲ್ಲ.
ಋಷಯಶ್ಚ ಹಿ ದೇವಾಶ್ಚ ಗಂಧರ್ವಾಶ್ಚ ಮಹೌಜಸಃ ।
ವಿಮುಕ್ತಾ ಬ್ರಹ್ಮಘೋಷೇಣ ನ ಭ್ರಾಜಂತೇ ಯಥಾ ಪುರಾ ॥15॥
ಇಲ್ಲಿರುವ ಋಷಿಗಳು, ದೇವರ್ಷಿಗಳು, ಮಹಾತೇಜಸ್ವಿಗಳು, ಗಂಧರ್ವರು ವೇದಘೋಷವನ್ನು ಕೇಳಿಸಿಕೊಳ್ಳದಿರುವುದರಿಂದ ಪ್ರಕಾಶಮಾನರಾಗಿಲ್ಲ.
ನಾರದಸ್ಯ ವಚಃ ಶ್ರುತ್ವಾ ಕೃಷ್ಣದ್ವೈಪಾಯನೋಽಬ್ರುವೀತ್ ।
ಮಹರ್ಷೇ ಯತ್ತ್ವಯಾ ಪ್ರೋಕ್ತಂ ವೇದವಾದವಿಚಕ್ಷಣ ॥16॥
ಏತನ್ಮನೋನುಕೂಲಂ ಮೇ ಭವಾನರ್ಹತಿ ಭಾಷಿತುಮ್ ।
ಸರ್ವಜ್ಞಃ ಸರ್ವದರ್ಶೀ ಚ ಸರ್ವತ್ರ ಚ ಕುತೂಹಲೀ ॥17॥
ಯುಧಿಷ್ಠಿರನೇ, ನಾರದರು ಹೇಳಿದ ಮಾತನ್ನು ಕೇಳಿಸಿಕೊಂಡ ಕೃಷ್ಣದ್ವೈಪಾಯನರು ಹೇಳುತ್ತಾರೆ: ಮಹರ್ಷಿಯೇ, ವೇದವಾದಗಳಲ್ಲಿ ಜಾಣನಾದವನೇ, ನೀನು ಹೇಳಿದ ಮಾತು ನನಗೂ ಒಪ್ಪಿಗೆಯಾಗಿದೆ. ಇಂತಹ ಮಾತನ್ನಾಡಲು ಯೋಗ್ಯನಾಗಿರುವಿ. ಸರ್ವಜ್ಞನೂ, ಸರ್ವದರ್ಶಿಯೂ, ಎಲ್ಲೆಡೆಯೂ ವಿಷಯವನ್ನು ತಿಳಿಯುವುದರಲ್ಲಿ ಆಸಕ್ತನೂ ಆಗಿರುವಿ.
ತ್ರಿಷು ಲೋಕೇಷು ಯದ್ವೃತ್ತಂ ಸರ್ವಂ ತವ ಮತೇ ಸ್ಥಿತಮ್ ।
ತದಾಜ್ಞಾಪಯ ವಿಪ್ರರ್ಷೇ ಬ್ರೂಹಿ ಕಿಂ ಕರವಾಣಿ ತೇ ॥18॥
ಮೂರುಲೋಕದಲ್ಲಿ ನಡೆಯುವ ಎಲ್ಲ ಸಮಾಚಾರಗಳು ನಿನ್ನ ಬುದ್ಧಿಯಲ್ಲಿವೆ. ನಾನು ಏನು ಮಾಡಬೇಕೆಂಬುದನ್ನು ವಿಪ್ರರ್ಷಿಯಾದ ನಾರದನೇ, ನೀನೇ ತಿಳಿಸು.
ಯನ್ಮಯಾ ಸಮನುಷ್ಠೇಯಂ ಬ್ರಹ್ಮರ್ಷೇ ತದುದಾಹರ ।
ವಿಯುಕ್ತಸ್ಯೇಹ ಶಿಷ್ಯೈರ್ಮೇ ನಾತಿಹೃಷ್ಟಮಿದಂ ಮನಃ ॥19॥
ನಾನು ಯಾವ ಕರ್ತವ್ಯಗಳನ್ನು ಮಾಡಬೇಕೆಂಬುದನ್ನು ನೀನೇ ಹೇಳು. ಶಿಷ್ಯರಿಂದ ವಿಹೀನನಾಗಿರುವುದರಿಂದ ನನ್ನ ಮನಸ್ಸು ಅಷ್ಟು ಪ್ರಸನ್ನವಾಗಿಲ್ಲ.
ನಾರದಃ
ಅನಾಮ್ನಾಯಮಲಾ ವೇದಾ ಬ್ರಾಹ್ಮಣಸ್ಯಾವ್ರತಂ ಮಲಮ್ ।
ಮಲಂ ಪೃಥಿವ್ಯಾ ವಾಹೀಕಾಃ ಸ್ತ್ರೀಣಾಂ ಕೌತೂಹಲಂ ಮಲಮ್ ॥20॥
ನಾರದ ಋಷಿಪುಂಗವನೇ, ವೇದವನ್ನು ಅಧ್ಯಯನ ಮಾಡಿ, ಪುನಃ ಪುನಃ ಆವೃತ್ತಿ ಮಾಡದಿದ್ದಲ್ಲಿ ವೇದಾಧ್ಯಯನವು ದೂಷಿತವಾಗುತ್ತದೆ. ವ್ರತಾನುಷ್ಠಾನ ಮಾಡದಿದ್ದಲ್ಲಿ ಬ್ರಾಹ್ಮಣನು ದೂಷ್ಯನಾಗುತ್ತಾನೆ. ವಾಹೀಕದೇಶದ ರಾಜರು ಭೂಮಿಯಲ್ಲಿ ಕಳಂಕವೆನಿಸಿದ್ದಾರೆ. ಸ್ತ್ರೀಯರಿಗೆ ಕುತೂಹಲವೆಂಬುದೇ ದೋಷಕ್ಕೆ ಕಾರಣವಾಗಿದೆ.
ಅಧೀಯತಾಂ ಭವಾನ್ ವೇದಾನ್ ಸಾರ್ಧಂ ಪುತ್ರೇಣ ಧೀಮತಾ ।
ವಿಧುನ್ವನ್ ಬ್ರಹ್ಮಘೋಷೇಣ ರಕ್ಷೋಭಯಕೃತಂ ತಮಃ ॥21॥
ನೀನು ಮಗನ ಜೊತೆಗೆ ಪುನಃ ವೇದವನ್ನು ಅಧ್ಯಯನ ಮಾಡು. ಆ ವೇದಾಧ್ಯಯನ ಘೋಷದಿಂದ ರಾಕ್ಷಸರ ಭಯವೆಂಬ ತಮಸ್ಸನ್ನು ಪರಿಹರಿಸು.
ಭೀಷ್ಮಃ

ನಾರದಸ್ಯ ವಚಃ ಶ್ರುತ್ವಾ ವ್ಯಾಸಃ ಪರಮಧರ್ಮವಿತ್ |
ತಥೇತ್ಯುವಾಚ ಸಂಹೃಷ್ಟೋ ವೇದಾಭ್ಯಾಸೇ ದೃಢವ್ರತಃ ॥22॥
ಭೀಷ್ಮ ಯುಧಿಷ್ಠಿರನೇ, ನಾರದರು ಹೇಳಿದ ಮಾತನ್ನು ಕೇಳಿ ವೇದವ್ಯಾಸರು ವೇದಾಭ್ಯಾಸವನ್ನು ಮಾಡುವುದರಲ್ಲಿ ದೀಕ್ಷಿತರಾಗಿ, ಸಂತುಷ್ಟರಾಗಿ, `ಹಾಗೆ ಆಗಲಿ' ಎಂದು ಹೇಳಿದರು.
ಉವಾಚ ಚ ಮಹಾಪ್ರಾಜ್ಞಂ ನಾರದಂ ಪುನರೇವ ಹಿ |
ಮಲಂ ಪೃಥಿವ್ಯಾ ಬಾಹ್ಲೀಕಾ ಇತ್ಯುಕ್ತಮಧುನಾ ತ್ವಯಾ |
ಕೀದೃಶಾಶ್ಚೈವ ಬಾಹ್ಲೀಕಾ ಬ್ರೂಹಿ ಮೇ ವದತಾಂ ವರ ॥23॥
ಆ ಸಮಯದಲ್ಲಿ ವೇದವ್ಯಾಸರು, `ದೇವರ್ಷಿಯೇ, ಭೂಮಿಯಲ್ಲಿ ಬಾಹ್ಲೀಕರನ್ನು ಮಲವೆಂದು ಹೇಳಿದೆಯಲ್ಲವೆ? ಅವರು ಯಾರು? ಅವರ ಸ್ವಭಾವವೇನು? ಅದನ್ನು ನನಗೆ ತಿಳಿಸಬೇಕು' ಎಂದು ಹೇಳಿದಾಗ, ನಾರದರು ಹೇಳುತ್ತಾರೆ.
ನಾರದಃ
ಅಸ್ಯಾಂ ಪೃಥಿವ್ಯಾಂ ಚತ್ವಾರೋ ದೇಶಾಃ ಪಾಪಜನೈರ್ವೃತಾಃ |
ಯುಗಂಧರಸ್ತು ಪ್ರಥಮಸ್ತಥಾ ಭೂತಿಲಕಃ ಸ್ಮೃತಃ ॥24॥
ದ್ವೈಪಾಯನನೇ ಕೇಳು. ಈ ಭೂಮಿಯಲ್ಲಿ ನಾಲ್ಕು ದೇಶಗಳು ಪಾಪಹೀನರಾದ ಜನರಿಂದ ತುಂಬಿರುತ್ತವೆ. ಮೊದಲನೆಯದ್ದು ಯುಗಂಧರ, ಎರಡನೆಯದ್ದು ಭೂತಿಲಕ ಎಂದು ಕರೆಯಲ್ಪಟ್ಟಿದೆ.
ಅಚ್ಯುತಶ್ಥಲ ಇತ್ಯುಕ್ತಸ್ತೃತೀಯಃ ಪಾಪಕೃತ್ತಮಃ |
ಚತುರ್ಥಸ್ತು ಮಹಾಪಾಪೋ ಬಾಹ್ಲೀಕ ಇತಿ ಸಂಜ್ಞಿತಃ ॥25॥
ಮೂರನೆಯದ್ದು ಅಚ್ಯುತಶ್ಥಲ. ಇದು ವಿಶೇಷವಾದ ಪಾಪಗಳಿಂದ ಕೂಡಿದ ದೇಶವು. ಇದಕ್ಕಿಂತಲೂ ಅಧಿಕ ಪಾಪಕ್ಕೆ ಎಡೆಯಾದುದು ಬಾಹ್ಲೀಕ ಎಂಬ ಹೆಸರಿನ ನಾಲ್ಕನೆಯ ದೇಶವು.
ಮೃಗೋಷ್ಟ್ರಗರ್ದಭಕ್ಷೀರಂ ಪಿಬಂತ್ಯಸ್ಯ ಯುಗಂಧರೇ |
ಏಕಕರ್ಣಾಸ್ತು ದೃಶ್ಯಂತೇ ಜನಾ ವೈ ಹ್ಯಚ್ಯುತಸ್ಥಲೇ ॥26॥
ಯುಗಂಧರದಲ್ಲಿ ಜನರು ಜಿಂಕೆ, ಒಂಟೆ, ಕತ್ತೆ ಇವುಗಳ ಹಾಲನ್ನು ಕುಡಿಯುತ್ತಾರೆ. ಅಚ್ಯುತಸ್ಥಲದ ಜನರೆಲ್ಲ ತಲೆಕೂದಲನ್ನು ಕೆದರಿಕೊಂಡು ವ್ರತಭ್ರಷ್ಟರಾಗಿರುತ್ತಾರೆ. ಅಲ್ಲದೆ ಒಂದೇ ಕಿವಿಯುಳ್ಳವರಾಗಿ ಕಾಣುತ್ತಾರೆ.
ಮೇಹಂತಿ ಚ ಮಲಂ ಪಾಪಾ ವಿಸೃಜಂತಿ ಜಲೇಷು ವೈ |
ನಿತ್ಯಂ ಭೂತಿಲಕೇತ್ಯನ್ನಂ ತಜ್ಜಲಂ ಚ ಪಿಬಂತಿ ಚ ॥27॥
ಭೂತಿಲಕದ ಜನರು ಜಲಾಶಯಗಳಲ್ಲಿ, ಜಲಗಳಲ್ಲಿಯೇ ಮಲವನ್ನು ವಿಸರ್ಜಿಸುತ್ತಾ, ಆ ನೀರನ್ನೇ ಪಾನಕ್ಕೂ ಉಪಯೋಗಿಸುತ್ತಾರೆ. ಆ ಜಲದಿಂದಲೇ ಅನ್ನವನ್ನೂ ಬೇಯಿಸಿಕೊಂಡು ತಿನ್ನುತ್ತಾರೆ.
ಹರಿಬಾಹ್ಯಾಸ್ತು ಬಾಹ್ಲೀಕಾ ನ ಸ್ಮರಂತಿ ಹರಿಂ ಕ್ವಚಿತ್ |
ಐಹಲೌಕಿಕಮೋಕ್ಷಂ ತೇ ಮಾಂಸಶೋಣಿತವರ್ಧನಾಃ |
ವೃಥಾ ಜಾತಾ ಭವಿಷ್ಯಂತಿ ಬಾಹ್ಲೀಕಾ ಇತಿ ವಿಶ್ರುತಾಃ ॥28॥
ಬಾಹ್ಲೀಕ ದೇಶದ ಜನರ ವಿಷ್ಣುವಿರೋಧಿಗಳು. ಅವರಿಗೆ ಹರಿಸ್ಮರಣೆಯಲ್ಲಿ ವಿರೋಧವಿದೆ. ತಮ್ಮ ದೇಹದ ರಕ್ತ-ಮಾಂಸಗಳನ್ನು ಬೆಳೆಸಿಕೊಳ್ಳುವುದೇ ಅವರಿಗೆ ಮುಖ್ಯವೆನಿಸಿದೆ. ಇಹಲೋಕದ ಭೋಗವನ್ನೇ ಮೋಕ್ಷವೆಂದು ತಿಳಿದುಕೊಂಡಿರುತ್ತಾರೆ. ವ್ಯರ್ಥವಾಗಿ ಹುಟ್ಟಿ ಜೀವನವನ್ನು ನಡೆಸುವವರು ಬಾಹ್ಲೀಕರು ಎಂದು ಪ್ರಸಿದ್ಧಿ ಇದೆ.
ಪುಷ್ಕರಾಹಾರನಿರತಾಃ ಪಿಶಾಚಾಃ ಯದಭಾಷತೇ |
ಮುಸುಂಠೀಂ ಪರಿಗೃಹ್ಯೋಗ್ರಾಂ ತಚ್ಛೃಣುಷ್ವ ಮಹಾಮುನೇ ॥29॥
ಮಹರ್ಷಿಯೇ, ಹಿಂದೆ ಪುಷ್ಕರ ಕ್ಷೇತ್ರದಲ್ಲಿ ಆಹಾರವನ್ನು ಸಂಪಾದಿಸುವುದಕ್ಕಾಗಿ ಅತ್ಯಂತ ಆತುರದಿಂದ ಅಲ್ಲಿ ಕಾದಿದ್ದ ಕೆಲವು ಪಿಶಾಚಿಗಳು ಮುಸುಂಠಿ ಎಂಬ ಆಯುಧವನ್ನು ಕೈಯಲ್ಲಿ ಹಿಡಿದುಕೊಂಡು ಹೇಳಿದ ಮಾತುಗಳಿವೆ, ಅದನ್ನು ಕೇಳು.
ಬ್ರಾಹ್ಮಣೀಂ ಬಹುಪುತ್ರಾಂ ತಾಂ ಪುಷ್ಕರೇ ಸ್ನಾತುಮಾಗತಾಮ್ |
ಯುಗಂಧರೇ ಪಯಃ ಪೀತ್ವಾ ಹ್ಯುಚಿತಾ ಹ್ಯಚ್ಯುತಸ್ಥಳೇ ॥30॥
ಆ ಪುಷ್ಕರತೀರ್ಥದಲ್ಲಿ ಒಂದು ಹೆಣ್ಣು ಪಿಶಾಚಿಯು ಯಾವಾಗಲೂ ಕಾವಲು ಕಾಯುತ್ತಿತ್ತು. ಒಮ್ಮೆ ಅನೇಕ ಮಕ್ಕಳ ಜೊತೆಗೆ ಒಬ್ಬ ಬ್ರಾಹ್ಮಣಸ್ತ್ರೀ ಆ ಪುಷ್ಕರ ತೀರ್ಥಕ್ಕೆ ಸ್ನಾನಕ್ಕಾಗಿ ಬಂದಳು. ಆ ಹೆಣ್ಣು ಪಿಶಾಚಿಯು ಆಯುಧವನ್ನು ಎತ್ತಿಕೊಂಡು ಹೀಗೆ ಹೇಳಿತು: ಎಲೈ ಹೆಂಗಸೇ, ನೀನು ಯುಗಂಧರದ ನೀರನ್ನು ಪಾನ ಮಾಡಿ ಅಚ್ಯುತ ಸ್ಥಲದಲ್ಲಿ ವಾಸ ಮಾಡಿದೆ.
ತಥಾ ಭೂತಿಲಕೇ ಸ್ನಾತ್ವಾ ಬಾಹ್ಲೀಕಾಂಶ್ಚ ನಿರೀಕ್ಷ್ಯ ವೈ |
ಆಗತಾಸಿ ತಥಾ ಸ್ನಾತುಂ ಕಥಂ ಸ್ವರ್ಗಂ ನ ಗಚ್ಛಸಿ ॥31॥
ಭೂತಿಲಕದಲ್ಲಿ ಸ್ನಾನ ಮಾಡಿ ಬಾಹ್ಲೀಕವನ್ನೆಲ್ಲ ಸುತ್ತುತ್ತಾ ಬಂದಿರುವಿ. ಈಗ ಇಲ್ಲಿ ಸ್ನಾನಕ್ಕಾಗಿ ಬಂದಿರುವೆಯಾ? ಇಂತಹ ನಿನಗೆ ಹೇಗೆ ತಾನೆ ಸ್ವರ್ಗವು ದೊರೆಯುತ್ತದೆ? ಇಲ್ಲಿ ಸ್ನಾನ ಮಾಡಿದರೂ ನಿನಗೆ ಸ್ವರ್ಗ ದೊರೆಯದು.
ಇತ್ಯುಕ್ತತ್ವ ಬ್ರಾಹ್ಮಣೀಭಾಂಡಂ ಪೋಥಯಿತ್ವಾ ಮುಸುಂಠಿನಾ |
ಉವಾಚ ಕ್ರೋಧತಾಮ್ರಾಕ್ಷೀ ಪಿಶಾಚೀ ತೀರ್ಥಪಾಲಿಕಾ ॥32॥
ಈ ರೀತಿಯಾಗಿ ಕೋಪದಿಂದ ಮುಸುಂಠಿಯನ್ನೆತ್ತಿಕೊಂಡು ಬ್ರಾಹ್ಮಣಿಯ ಕೈಯಲ್ಲಿದ್ದ ಗಡಿಗೆಯನ್ನು ಪಿಶಾಚಿಯು ಒಡೆದು ಹಾಕಿತು.
ಏತತ್ ತು ತೇ ದಿವಾವೃತ್ತಂ ಪರಾವೃತ್ಯ ಪರೀಕ್ಷ್ಯ ಚ |
ಗಚ್ಛ ಬಾಹ್ಲೀಕಸಂಸರ್ಗಾದಶುಚಿತ್ವಂ ನ ಸಂಶಯಃ ॥33॥

ಅವಳನ್ನು ಕುರಿತು- `ಎಲೈ ಹೆಂಗಸೆ, ಇದು ನಿನ್ನ ಹಗಲಿನ ನಡತೆ. ನಿನ್ನ ರಾತ್ರಿಯ ನಡತೆಯೇ ಬೇರೆ. ಈ ನಿನ್ನ ಹಗಲಿನ ಚರ್ಯೆಯಲ್ಲಿ ಪ್ರಾಮಾಣಿಕತನವು ಇರುವುದಿಲ್ಲ. ಚೆನ್ನಾಗಿ ಪರೀಕ್ಷಿಸಿ ನಿನ್ನ ಬಗ್ಗೆ ಹೀಗೆ ಹೇಳುತ್ತಿರುವೆ. ನೀನು ಬಾಹ್ಲೀಕರ ಸಂಸರ್ಗದಿಂದ ಅಶುಚಿಯಾಗಿರುತ್ತಿ. ನಿನಗೆ ಇಲ್ಲಿ ಸ್ನಾನ ಮಾಡಲು ಯೋಗ್ಯತೆ ಇರುವುದಿಲ್ಲ'.

ಯದ್ ದ್ವಿಷಂತಿ ಮಹಾತ್ಮಾನಂ ನ ಸ್ಮರಂತಿ ಜನಾರ್ದನಮ್ |
ನ ತೇಷಾಂ ಪುಣ್ಯತೀರ್ಥೇಷು ಗತಿಃ ಸಂಸರ್ಗಿಣಾಮಪಿ ||34||

ಯಾರು ಮಹಾತ್ಮನಾದ ವಿಷ್ಣುವನ್ನು ದ್ವೇಷಿಸುತ್ತಾರೋ, ಯಾರು ಅವನನ್ನು ಸ್ಮರಿಸುವುದಿಲ್ಲವೋ ಅಂತಹವರಿಗೆ ಪುಣ್ಯತೀರ್ಥದಿಂದ ಸದ್ಗತಿಯಾಗುವುದಿಲ್ಲ. ಅಷ್ಟೇ ಏನು, ಅಂತಹ ವಿಷ್ಣುದ್ವೇಷಿಗಳ ಸಂಬಂಧ ಮಾಡಿದವರಿಗೂ ಇಲ್ಲಿ ಸ್ನಾನ ಮಾಡುವ ಅವಕಾಶವಿಲ್ಲ.

ಉದ್ಯುಕ್ತಾ ಬ್ರಾಹ್ಮಣೀ ಭೀತಾ ಪ್ರತಿಯಾತಾ ಸುತೈಃ ಸಹ |
ಸ್ವದೇಹಸ್ಥಾ ಜಜಾಪೈವಂ ಸಪುತ್ರಾ ಧ್ಯಾನತತ್ಪರಾ ||35||

ಈ ಮಾತನ್ನು ಕೇಳಿಸಿಕೊಂಡು ಬ್ರಾಹ್ಮಣಿಯು ಭಯದಿಂದ ಅಲ್ಲಿಂದ ಹೊರಟು ತನ್ನ ಮಕ್ಕಳ ಜೊತೆಗೆ ತನ್ನ ದೇಶಕ್ಕೆ ಸೇರಿಕೊಂಡು, ನಿರಂತರ ಹರಿಧ್ಯಾನರತಳಾಗಿ ಅನನ್ಯವಾದ ಮನಸ್ಸಿನಿಂದ ವಿಷ್ಣುವನ್ನೇ ಜಪಿಸತೊಡಗಿದಳು.

ಅನಂತಸ್ಯ ಹರೇಃ ಶುದ್ಧಂ ನಾಮ ವೈ ದ್ವಾದಶಾಕ್ಷರಮ್ |
ವತ್ಸರತ್ರಿತಯೇ ಪೂರ್ಣೇ ಬ್ರಾಹ್ಮಣೀ ಪುನರಾಗತಾ ||36||

ಹೀಗೆ ವಿಷ್ಣುವಿನ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಮೂರು ಸಂವತ್ಸರಗಳ ಕಾಲ ಜಪಿಸಿ, ಪುನಃ ಮರಳಿ ಮಕ್ಕಳ ಜೊತೆಗೆ ಪುಷ್ಕರ ಸ್ನಾನಕ್ಕಾಗಿ ಆಗಮಿಸಿದಳು.

ಸಪುತ್ರಾ ಪುಷ್ಕರದ್ವಾರಂ ಪಿಶಾಚ್ಯಾಹ ತಥಾಗತಮ್ |
ನಮಸ್ತೇ ಬ್ರಾಹ್ಮಣಿ ಶುಭೇ ಪೂತಾಽಹಂ ತವ ದರ್ಶನಾತ್ ||37||

ಆಗ ಆ ತೀರ್ಥವನ್ನು ಕಾಯುತ್ತಿದ್ದ ಹೆಣ್ಣು ಪಿಶಾಚಿಯು ಸಂತೋಷದಿಂದ ಆಗಮಿಸಿ- `ಅಮ್ಮಾ ನಿನಗೆ ನಮಸ್ಕಾರವು. ನಿನ್ನ ದರ್ಶನದಿಂದ ನಾನು ಪವಿತ್ರನಾದೆನು'.

ಕುರು ತೀರ್ಥಾಭಿಷೇಕಂ ಚ ಸಪುತ್ರಾ ಪಾಪವರ್ಜಿತಾ |
ಹರೇರ್ನಾಮ್ನಾ ಚ ಮಾಂ ಸಾಧ್ವೀ ಜಲೇನ ಸ್ಪ್ರಷ್ಟುಮರ್ಹಸಿ ||38||

`ಪಾಪವಿಮುಕ್ತಳಾದ ನೀನು ಈ ತೀರ್ಥದಲ್ಲಿ ಸ್ನಾನ ಮಾಡಬಹುದು. ಅಲ್ಲದೇ, ನೀನು ಸ್ನಾನ ಮಾಡಿದ ಬಳಿಕ ಈ ತೀರ್ಥದ ನೀರನ್ನು ಕೈಯಲ್ಲಿ ಹಿಡಿದು ಹರಿನಾಮವನ್ನು ಹೇಳುತ್ತಾ ನನ್ನ ಮೇಲೆ ಪ್ರೋಕ್ಷಿಸು' ಎಂದಳು.

ಇತ್ಯುಕ್ತಾ ಬ್ರಾಹ್ಮಣೀ ಹೃಷ್ಟಾ ಪುತ್ರೈಃ ಸಹ ಶುಭವ್ರತಾ |
ಜಲೇನ ಪ್ರೋಕ್ಷಯಾಮಾಸ ದ್ವಾದಶಾಕ್ಷರಸಂಯುತಮ್ ||39||

ಅದರಂತೆ ಆ ಬ್ರಾಹ್ಮಣಿಯು ಮಕ್ಕಳ ಜೊತೆಗೆ ತೀರ್ಥಸ್ನಾನವನ್ನು ಮಾಡಿ, ಸಂತೋಷದಿಂದ ಆ ನೀರನ್ನು ತೆಗೆದು ಆ ಪಿಶಾಚಿಯ ಮೇಲೆ ದ್ವಾದಶಾಕ್ಷರ ಮಂತ್ರವನ್ನು ಜಪಿಸಿ ಪ್ರೋಕ್ಷಿಸಿದಳು.

ತತ್ಕ್ಷಣಾದಭವಚ್ಛುದ್ಧಾ ಪಿಶಾಚೀ ದಿವ್ಯರೂಪಿಣೀ |
ಅಪ್ಸರಾ ಹ್ಯಭವದ್ ದಿವ್ಯಾ ಗತಾ ಸ್ವರ್ಲೋಕಮುತ್ತಮಮ್ ||40||

ಆ ಕ್ಷಣದಲ್ಲಿಯೇ ಪಿಶಾಚಿಯು ದಿವ್ಯರೂಪವನ್ನು ತಾಳಿ, ಅಪ್ಸರೆಯ ರೂಪದಿಂದ ದೇವಲೋಕಕ್ಕೆ ಹೋಗಿ ಸೇರಿಕೊಂಡಿತು.

ಬ್ರಾಹ್ಮಣೀ ಚೈವ ಕಾಲೇನ ವಾಸುದೇವಪರಾಯಣಾ |
ಸಪುತ್ರಾ ಚಾಗತಾ ಸ್ಥಾನಮಚ್ಯುತಸ್ಯ ಶುಭಂ ಪರಮ್ ||41||

ಆ ಬ್ರಾಹ್ಮಣಿಯು ವಿಷ್ಣುಧ್ಯಾನಪರಳಾಗಿ ಕೊನೆಗೆ ವಿಷ್ಣುವಿನ ಸ್ಥಾನವನ್ನೇ ಹೊಂದಿದಳು.

ಏತತ್ ತೇ ಕಥಿತಂ ವಿದ್ವನ್ ಮುನೇ ಕಾಲೋಽಯಮಾಗತಃ ||42||
ಗಮಿಷ್ಯೇಽಹಂ ಮಹಾಪ್ರಾಜ್ಞ ಆಗಮಿಷ್ಯಾಮಿ ವೈ ಪುನಃ |
ಇತ್ಯುಕತ್ವ ಸ ಜಗಾಮಾಥ ನಾರದೋ ವದತಾಂವರಃ ||43||

ವ್ಯಾಸಮಹರ್ಷಿಯೇ, ಇದೇ ಬಾಹ್ಲೀಕ ದೇಶದ ಚರಿತ್ರೆಯು. ಇನ್ನು ನಾನು ಹೊರಡುವ ಸಮಯವು ಆಗಮಿಸಿದೆ. ಮತ್ತೊಮ್ಮೆ ನಿನ್ನನ್ನು ಬಂದು ಕಾಣುತ್ತೇನೆ. ಈ ರೀತಿಯಾಗಿ ಉತ್ತಮ ಮಾತನ್ನು ಹೇಳುವುದರಲ್ಲಿ ಸಮರ್ಥರಾದ ನಾರದರು ಅದೃಶ್ಯರಾದರು.

ದ್ವೈಪಾಯನಸ್ತು ಭಗವಾಂಸ್ತಚ್ಛ್ರುತ್ವಾ ಮುನಿಸತ್ತಮಾತ್ |
ಶುಕೇನ ಸಹ ಪುತ್ರೇಣ ವೇದಾಭ್ಯಾಸಮಥಾಕರೋತ್ |
ಸ್ವರೇಣೋಚ್ಚೈಃ ಸ ಶೈಕ್ಷೇಣ ಲೋಕಾನಾಪೂರಯನ್ನಿವ ||44||

ನಾರದರ ಮಾತಿಗನುಗುಣವಾಗಿ ವ್ಯಾಸರು ಮೂರುಲೋಕಗಳನ್ನೂ ವೇದಘೋಷದಿಂದ ತುಂಬುವಂತೆ ತಮ್ಮ ಮಗನ ಜೊತೆಗೆ ಸೇರಿಕೊಂಡು ನಿಯಮಬದ್ಧವಾಗಿ ಉಚ್ಚಧ್ವನಿಯಿಂದ ವೇದಾಭ್ಯಾಸವನ್ನು ಮಾಡತೊಡಗಿದರು.

ತಯೋರಭ್ಯಸತೋರೇವಂ ನಾನಾಧರ್ಮಪ್ರವಾದಿನೋಃ |
ವಾತೋಽತಿಮಾತ್ರಂ ಪ್ರವವೌ ಸಮುದ್ರಾನಿಲವೇಜಿತಃ ||45||

ನಾನಾಧರ್ಮಗಳನ್ನು ಬೋಧಿಸುತ್ತಿರುವ, ನಿರಂತರ ವೇದಾಭ್ಯಾಸವನ್ನು ಮಾಡುತ್ತಿರುವ ವ್ಯಾಸ-ಶುಕರ ಪ್ರಭಾವದಿಂದ ಸಮುದ್ರದ ಮೇಲಿನ ಗಾಳಿಯಿಂದ ಪ್ರಚೋದಿತವಾದ ಬಿರುಗಾಳಿಯು ಬಹಳ ಜೋರಾಗಿ ಬೀಸಲು ಆರಂಭಿಸಿತು.

ತತೋಽನಧ್ಯಾಯ ಇತಿ ತಂ ವ್ಯಾಸಃ ಪುತ್ರಮವಾರಯತ್ |
ಶುಕೋ ವಾರಿತಮಾತ್ರಸ್ತು ಕೌತೂಹಲಸಮನ್ವಿತಃ ||46||

ಕೂಡಲೇ ವ್ಯಾಸರು ಅನಧ್ಯಾಯ ಒದಗಿತು ಎಂದು ಹೇಳಿ ವೇದಪಾಠವನ್ನು ನಿಲ್ಲಿಸುವಂತೆ ಮಗನಿಗೆ ಹೇಳಿದರು. ತಂದೆಯು ಹೀಗೆ

ಹೇಳಿದಾಗ ಕುತೂಹಲದಿಂದ ಕೂಡಿದ ಶುಕಮುನಿಯು ಹೀಗೆ ಪ್ರಶ್ನಿಸಿದನು.
ಅಪೃಚ್ಛತ್ ಪಿತರಂ ಬ್ರಹ್ಮನ್ ಕುತೋ ವಾಯುರಭೂದಯಮ್ |
ಆಖ್ಯಾತುಮರ್ಹತಿ ಭವಾನ್ ವಾಯೋಃ ಸರ್ವಂ ವಿಚೇಷ್ಟಿತಮ್ ॥47॥
ತಂದೆಯೇ, ಗಾಳಿಯು ಎಲ್ಲಿಂದ ಹುಟ್ಟಿಬಂದಿತು? ವಾಯುವಿನ ಸಕಲವಾದ ಚೇಷ್ಟೆಗಳನ್ನು ನನಗೆ ತಿಳಿಸಿರಿ. ತಾವು ಹೇಳಲು ಸಮರ್ಥರಾಗಿದ್ದೀರಿ.
ಶುಕಸ್ಯೈತದ್ ವಚಃ ಶ್ರುತ್ವಾ ವ್ಯಾಸಃ ಪರಮವಿಸ್ಮಿತಃ |
ಅನಧ್ಯಾಯನಿಮಿತ್ತೇಽಸ್ಮಿನ್ನಿದಂ ವಚನಮಬ್ರವೀತ್ ॥48॥
ಯುಧಿಷ್ಠಿರನೇ, ಶುಕನ ಮಾತನ್ನು ಕೇಳಿಸಿಕೊಂಡ ವ್ಯಾಸರು ಪರಮವಿಸ್ಮಿತರಾದರು. ಅನಧ್ಯಾಯದ ಕಾರಣವನ್ನು ವಿವರಿಸುತ್ತಾ ಹೀಗೆ ಹೇಳಿದರು.
ದಿವ್ಯಂ ತೇ ಚಕ್ಷುರುತ್ಪನ್ನಂ ಸ್ವಸ್ಥಂ ತೇ ನಿರ್ಮಲಂ ಮನಃ |
ತಮಸಾ ರಜಸಾ ಚಾಪಿ ತ್ಯಕ್ತಃ ಸತ್ತ್ವೇ ವ್ಯವಸ್ಥಿತಃ ॥49॥
ಮಗನೇ, ನಿನಗೆ ಸ್ವತಃ ದಿವ್ಯಚಕ್ಷುಸ್ಸು ಒದಗಿ ಬಂದಿದೆ. ನಿನ್ನ ಮನಸ್ಸು ಅತ್ಯಂತ ನಿರ್ಮಲವಾಗಿದೆ. ರಜಸ್ಸು, ತಮಸ್ಸುಗಳಿಂದ ರಹಿತನಾಗಿರುವ ನೀನು ಶುದ್ಧಸತ್ತ್ವ ಗುಣದಲ್ಲಿ ಪ್ರತಿಷ್ಠಿತನಾಗಿರುವಿ.
ಆದರ್ಶೇ ಸ್ವಾಮಿವ ಛಾಯಾಂ ಪಶ್ಯಸ್ಯಾತ್ಮಾನಮಾತ್ಮನಾ |
ನ್ಯಸ್ಯಾತ್ಮನಿ ಸ್ವಯಂ ವೇದಾನ್ ಬುದ್ಧ್ಯಾ ಸಮನುಚಿಂತಯ ॥50॥
ಜನರೆಲ್ಲ ತಮ್ಮ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಹೇಗೆ ನೋಡಿಕೊಳ್ಳುತ್ತಾರೋ ಹಾಗೆ ಬುದ್ಧಿ ಎಂಬ ಕನ್ನಡಿಯಲ್ಲಿ ಪರಮಾತ್ಮನನ್ನು ನೆಲೆಗೊಳಿಸಿ, ವೇದಗಳನ್ನು ಚೆನ್ನಾಗಿ ಆಲೋಚಿಸು.
ದೇವಯಾನಚರೋ ವಿಷ್ಣೋಃ ಪಿತೃಯಾನಶ್ಚ ತಾಮಸಃ |
ದ್ವಾವೇತೌ ಪ್ರೇತ್ಯ ಪಂಥಾನೌ ದಿವಂ ಚಾಧಶ್ಚ ಗಚ್ಛತಃ ॥51॥
ಮರಣದ ಬಳಿಕ ದೇವಯಾನದಲ್ಲಿ ಸಂಚರಿಸುವವರು ವಿಷ್ಣುವಿನ ಭಕ್ತರಾಗಿರುತ್ತಾರೆ. ಪಿತೃಯಾನದಲ್ಲಿ ಸಂಚರಿಸುವವರು ತಾಮಸರೆನಿಸಿದ್ದಾರೆ. ಈ ಎರಡು ಮಾರ್ಗಗಳನ್ನು ಅನುಸರಿಸಿ ಒಬ್ಬರು ಮೇಲ್ಮುಖವಾಗಿಯೂ, ಒಬ್ಬರು ಕೆಳಮುಖವಾಗಿಯೂ ಸಾಗುತ್ತರೆ.
ಪೃಥಿವ್ಯಾಮಂತರಿಕ್ಷೇ ಚ ಯತ್ರ ಸಂವಾಂತಿ ವಾಯವಃ |
ಸಪ್ತೈತೇ ವಾಯುಮಾರ್ಗಾ ವೈ ತಾನ್ನಿಬೋಧಾನುಪೂರ್ವಶಃ ॥52॥
ಪೃಥಿವಿ, ಅಂತರಿಕ್ಷದಲ್ಲಿ ಎಲ್ಲೆಲ್ಲಿ ವಾಯುವು ಸಂಚರಿಸುತ್ತದೆಯೋ ಅದಕ್ಕೆ ಏಳು ಮಾರ್ಗಗಳಿವೆ. ಕ್ರಮವಾಗಿ ಅವುಗಳನ್ನು ಹೇಳುತ್ತೇನೆ, ಕೇಳು.
ತತ್ರ ದೇವಗಣಾಃ ಸಾಧ್ಯಾಃ ಸಮಭೂವನ್ ಮಹಾಬಲಾಃ |
ತೇಷಾಮಪ್ಯಭವತ್ ಪುತ್ರಃ ಸಮಾನೋ ನಾಮ ದುರ್ಜಯಃ ॥53॥
ಪೃಥಿವಿ, ಅಂತರಿಕ್ಷದಲ್ಲಿ ಮಹಾಸುರೂಪಿಗಳೂ, ಮಹಾಬಲಿಷ್ಠರೂ ಆದ ಸಾಧ್ಯರೆಂಬ ದೇವತೆಗಳು ವಾಸ ಮಾಡಿದ್ದಾರೆ. ಸಮಾನನೆಂಬ ದುರ್ಜಯನಾದ ವಾಯುವು ಅವರ ಮಗನೆನಿಸಿದ್ದಾನೆ.
ಉದಾನಸ್ತಸ್ಯ ಪುತ್ರೋಽಭೂದ್ವ್ಯಾನಸ್ತಸ್ಯಾಭವತ್ ಸುತಃ |
ಅಪಾನಶ್ಚ ತತೋ ಜ್ಞೇಯಃ ಪ್ರಾಣಶ್ಚಾಪಿ ತತಃ ಪರಮ್ ॥54॥
ಸಮಾನನಿಗೆ ಉದಾನನೆಂಬ ಮಗನು, ಉದಾನನಿಗೆ ವ್ಯಾನನೆಂಬ ಮಗನು, ವ್ಯಾನನಿಗೆ ಅಪಾನನೆಂಬ ಮಗನು, ಅಪಾನನಿಗೆ ಪ್ರಾಣನೆಂಬ ಮಗನು ಹುಟ್ಟಿದನು.
ಅನಪತ್ಯೋಽಭವತ್ ಪ್ರಾಣೋ ದುರ್ಧರ್ಷಃ ಶತ್ರುತಾಪನಃ |
ಪೃಥಕ್ಕರ್ಮಾಣಿ ತೇಷಾಂ ತು ಪ್ರವಕ್ಷ್ಯಾಮಿ ಯಥಾತಥಮ್ ॥55॥
ಎದುರಿಸಲು ಅಸಾಧ್ಯನಾದ, ಶತ್ರುತಾಪನನಾದ ಪ್ರಾಣನಿಗೆ ಸಂತಾನವಾಗಲಿಲ್ಲ. ಸಮಾನಾದಿಗಳ ಪ್ರತ್ಯೇಕವಾದ ವ್ಯಾಪಾರವನ್ನು ಕ್ರಮವಾಗಿ ಹೇಳುತ್ತೇನೆ, ಕೇಳು.
ಪ್ರಾಣಿನಾಂ ಸರ್ವತೋ ವಾಯುಶ್ಚೇಷ್ಟಾ ವರ್ತಯತೇ ಪೃಥಕ್ |
ಪ್ರಾಣನಾಚ್ಚೈವ ಭೂತಾನಾಂ ಪ್ರಾಣ ಇತ್ಯಭಿಧೀಯತೇ ॥56॥
ವಾಯುವು ಪ್ರಾಣಿಗಳ ದೇಹದಲ್ಲಿ ಪ್ರತ್ಯೇಕ ಪ್ರತ್ಯೇಕ ವ್ಯಾಪಾರವನ್ನು ಮಾಡುತ್ತದೆ. ಪ್ರಾಣಿಗಳ ಚೇಷ್ಟೆಗೆ ವಾಯುವೇ ಮುಖ್ಯಕಾರಣ. ಪ್ರಾಣಿಗಳನ್ನು ಜೀವಿಸುವಂತೆ ಮಾಡುವುದಕ್ಕೆ ಪ್ರಾಣ ಎಂದು ಹೆಸರು ಬಂದಿದೆ.
ಪ್ರೇರಯತ್ಯಭ್ರಸಂಘಾತಾಂಧೂಮಜಾಂಶ್ಚೋಷ್ಮಜಾಂಶ್ಚ ಯಃ |
ಪ್ರಥಮಃ ಪ್ರಥಮೇ ಮಾರ್ಗೇ ಪ್ರವಹೋ ನಾಮ ಸೋಽನಿಲಃ ॥57॥
ಹೊಗೆಯಿಂದ ತಾಪದಿಂದ ಹುಟ್ಟಿದ ಮೇಘಗಳು ಅತ್ತಿಂದಿತ್ತ ಸಂಚರಿಸುವಂತೆ ಮಾಡುವ ಮೊದಲ ಮಾರ್ಗದಲ್ಲಿ ಸಂಚರಿಸುವ ಪ್ರವಹ ವಾಯುವು ಮೊದಲನೆ ವಾಯು ಎನಿಸಿದೆ.
ಅಂಬರೇ ಸ್ನೇಹಮಭ್ರೇಭ್ಯಸ್ತಡಿದ್ಭ್ಯಶ್ಚೋತ್ತಮದ್ಯುತಿಃ |
ಆವಹೋ ನಾಮ ಸಂವಾತಿ ದ್ವಿತೀಯಃ ಶ್ವಸನೋ ನದನ್ ॥58॥
ವಿದ್ಯುತ್ತಿನೊಡನೆ ಸಂಬಂಧವನ್ನು ಹೊಂದಿ ಮಹಾಕಾಂತಿಯಿಂದ ಯಾವ ವಾಯುವು ಗಟ್ಟಿಯಾಗಿ ಶಬ್ದ ಮಾಡುತ್ತಾ ಆಕಾಶದಲ್ಲಿ ಬೀಸುತ್ತದೋ ಆ ವಾಯುವಿಗೆ ಆವಹ ಎಂದು ಹೆಸರು.

ಉದಯಂ ಜ್ಯೋತಿಷಾಂ ಶಶ್ವತ್ ಸೋಮಾದೀನಾಂ ಕರೋತಿ ಯಃ |
ಅಂತರ್ದೇಹೇಷು ಚೋದಾನಂ ಯಂ ವದಂತಿ ಮಹರ್ಷಯಃ ||59||
ಯಾವ ವಾಯುವು ನಕ್ಷತ್ರ, ಸೋಮ, ಸೂರ್ಯ ಇವರ ಉದಯವನ್ನು ಮಾಡುತ್ತದೋ, ಪ್ರಾಣಿಗಳ ದೇಹದಲ್ಲಿ ಚೇಷ್ಟೆ ಮಾಡುತ್ತಿದೆಯೋ ಅದನ್ನು ವಿದ್ವಾಂಸರು ಉದಾನ ಎಂದು ಹೇಳುತ್ತಾರೆ.
ಯಶ್ಚತುರ್ಭ್ಯಃ ಸಮುದ್ರೇಭ್ಯೋ ವಾಯುರ್ಧಾರಯತೇ ಜಲಮ್ |
ಉದ್ವತ್ಯಾದದತೇ ಚಾಪೋ ಜೀಮೂತೇಭ್ಯೋಽಂಬರೇಽನಿಲಃ ||60||
ಯೋಽದ್ಭಿಃ ಸಂಯೋಜ್ಯ ಜೀಮೂತಾನ್ ಪರ್ಜನ್ಯಾಯ ಪ್ರಯಚ್ಛತಿ |
ಉದ್ವಹೋ ನಾಮ ವರ್ಷಿಷ್ಠಸ್ತೃತೀಯಃ ಸ ಸದಾಗತಿಃ ||61||
ನಾಲ್ಕು ಸಮುದ್ರಗಳಿಂದಲೂ ನೀರನ್ನು ಸ್ವೀಕರಿಸಿ ಅಂತಹ ಜಲರಾಶಿಯನ್ನು ಆಕಾಶ ಮಂಡಲಕ್ಕೆ ಎತ್ತಿಕೊಂಡು ಹೋಗಿ ಮೇಘಗಳಿಗೆ ನೀಡುವಂತಹ, ಮೇಘಗಳನ್ನು ನೀರಿನ ಜೊತೆಗೆ ಸಂಯೋಜಿಸಿ ಪರ್ಜನ್ಯನಿಗೆ ಒಪ್ಪಿಸುವಂತಹ, ಸದಾ ಚಲನಶೀಲವಾದ ಮಹಾವಾಯುವಿಗೆ ಉದ್ವಹ ಎಂದು ಹೆಸರು.
ಸಮುಹ್ಯಮಾನಾ ಬಹುಧಾ ಯೇನ ನೀಲಾಃ ಪೃಥಗ್ಘನಾಃ |
ವರ್ಷಮೋಕ್ಷಕೃತಾರಂಭಾಸ್ತೇ ಭವಂತಿ ಘನಾಘನಾಃ ||62||
ಸಂಹತಾ ಯೇನ ಚಾವಿದ್ಧಾ ಭವಂತಿ ನದತಾಂ ನದಾಃ |
ರಕ್ಷಣಾರ್ಥಾಯ ಸಂಭೂತಾ ಮೇಘತ್ವಮುಪಯಾಂತಿ ಚ ||63||
ಯೋಽಸೌ ವಹತಿ ದೇವಾನಾಂ ವಿಮಾನಾನಿ ವಿಹಾಯಸಾ |
ಚತುರ್ಥಃ ಸಂವಹೋ ನಾಮ ವಾಯುಃ ಸ ಗಿರಿಮರ್ದನಃ ||64||
ಪ್ರತ್ಯೇಕ ಪ್ರತ್ಯೇಕವಾಗಿರುವ ಅನೇಕ ಮೇಘಗಳನ್ನು ಯಾವ ವಾಯುವು ಒಟ್ಟಿಗೆ ಸೇರಿಸಿ ಪ್ರಚೋದಿಸಿ ನೀರಿನ ಮೇಘಗಳು ಮಳೆಗರೆಯಲು ಆರಂಭಿಸುವವೋ, ಯಾವ ವಾಯುವಿನಿಂದ ಘನೀಭೂತವಾದ ಮೇಘಗಳು ಚದುರಿ ಹೋಗುವವೋ, ಯಾವ ವಾಯುವಿನ ಪ್ರೇರಣೆಯಿಂದ ಮೇಘಗಳೆಲ್ಲ ಪುನಃ ನೀರಿನ ರೂಪದಿಂದ ಒಟ್ಟಾಗಿ ಸೇರಿ, ಶಬ್ದ ಮಾಡುವ ವಸ್ತುಗಳಲ್ಲಿ ಬಹಳ ಗಟ್ಟಿಯಾಗಿ ಶಬ್ದ ಮಾಡುವ ಸಮುದ್ರಗಳಾಗುವವೋ, ಯಾವ ವಾಯುವು ಪ್ರಾಣಿಗಳ ರಕ್ಷಣೆಗಾಗಿ ಸಮುದ್ರದ ನೀರನ್ನು ಧರಿಸಿ ಆಕಾಶದಲ್ಲಿ ಮೇಘವನ್ನು ನಿರ್ಮಾಣ ಮಾಡುತ್ತದೋ, ದೇವತೆಗಳ ವಿಮಾನಗಳನ್ನು ಆಕಾಶದ ಮೂಲಕ ಸಂಚರಿಸುವಂತೆ ಮಾಡುತ್ತದೋ, ಪರ್ವತದ ಶಿಖರವನ್ನೇ ಧ್ವಂಸ ಮಾಡುತ್ತದೋ ಅಂತಹ ವಾಯುವು ಸಂವಹ ಎಂಬ ನಾಲ್ಕನೆಯ ವಾಯುವಾಗಿದೆ.
ಯೇನ ವೇಗವತಾ ರುಗ್ಣಾ ರೂಕ್ಷೇಣಾರುಜತಾ ರಸಾನ್ |
ವಾಯುನಾ ವಿಹತಾ ಮೇಘಾಸ್ತೇ ಭವಂತಿ ಬಲಾಹಕಾಃ ||65||
ಭಯಂಕರವಾದ ವೇಗವಾಗಿ ಬೀಸುವ, ಬೆಟ್ಟಗಳನ್ನು ಪುಡಿಮಾಡುವ ವಾಯುವು ಮೇಘದ ಜೊತೆಗೆ ಸೇರಿದಾಗ ಬೆಟ್ಟಗಳನ್ನೂ ಭೇದಿಸುವ ಸಾಮರ್ಥ್ಯವನ್ನು ಪಡೆಯುತ್ತದೆ. ಇದಕ್ಕೆ ಬಲಾಹಕ ಮೇಘಗಳು ಎಂದು ಕರೆಯುತ್ತಾರೆ.
ದಾರುಣೋತ್ಪಾತಸಂಚಾರೋ ನಭಸಃ ಸ್ತನಯಿತ್ನುಮಾನ್ |
ಪಂಚಮಃ ಸ ಮಹಾವೇಗೋ ವಿವಹೋ ನಾಮ ಮಾರುತಃ ||66||
ಯಾವ ವಾಯುವಿನ ಸಂಚಾರವು ಭಯಂಕರ ಉತ್ಪಾತಗಳನ್ನು ಸೃಷ್ಟಿ ಮಾಡುತ್ತದೋ, ಯಾವ ವಾಯುವು ಆಕಾಶದ ಮೇಘಗಳನ್ನು ಚಲಿಸುವಂತೆ ಮಾಡುತ್ತದೋ, ಮಹಾವೇಗದಿಂದ ಕೂಡಿದ ಆ ವಾಯುವು ವಿವಹ ಎಂಬ ಐದನೆಯ ವಾಯುವಾಗಿದೆ.
ಯಸ್ಮಿನ್ ಪಾರಿಪ್ಲವೇ ದಿವ್ಯಾ ವಹಂತ್ಯಾಪೋ ವಿಹಾಯಸಾ |
ಪುಣ್ಯಂ ಚಾಕಾಶಗಂಗಾಯಾಸ್ತೋಯಂ ವಿಷ್ಟಭ್ಯ ತಿಷ್ಠತಿ ||67||
ಯಾವ ವಾಯುವಿನ ಆಶ್ರಯದಲ್ಲಿ ನೀರಿನ ಪ್ರವಾಹಗಳು ಆಕಾಶದ ಮೂಲಕ ನೀರಿನಲ್ಲಿ ಸಂಚರಿಸುವ ಶ್ರೇಷ್ಠ ಪಕ್ಷಿಗಳನ್ನು ಕರೆದುಕೊಂಡು ಹೋಗುತ್ತವೆಯೋ, ಯಾವ ವಾಯುವು ಪುಣ್ಯತಮವಾದ ಆಕಾಶಗಂಗೆಯನ್ನು ಧರಿಸಿರುವುದೋ,
ದೂರಾತ್ ಪ್ರತಿಹತೋ ಯಸ್ಮಿನ್ನೇಕರಶ್ಮಿರ್ದಿವಾಕರಃ |
ಯೋನಿರಂಶುಸಹಸ್ರಸ್ಯ ಯೇನ ಭಾತಿ ವಸುಂಧರಾ ||68||
ಸಹಸ್ರಕಿರಣನೆನಿಸಿದ ಸೂರ್ಯನು ಭೂಮಿಯನ್ನು ಬೆಳಗುತ್ತಾ ಯಾವ ವಾಯುವಿನಿಂದ ಹೊಡೆಯಲ್ಪಟ್ಟು ಏಕರಶ್ಮಿಯಾಗಿ ಕಾಣುತ್ತಾನೋ, ಯಾವ ವಾಯುವಿನಿಂದ ಭೂಮಿಯು ಪ್ರಕಾಶಮಾನವಾಗಿದೆಯೋ,
ಯಸ್ಮಾದಾಪ್ಯಾಯತೇ ಸೋಮೋ ನಿಧಿರ್ದಿವ್ಯೋಽಮೃತಸ್ಯ ಚ |
ಷಷ್ಠಃ ಪರಿವಹೋ ನಾಮ ಸ ವಾಯುರ್ಜವತಾಂ ವರಃ ||69||
ಅಮೃತಕ್ಕೆ ದಿವ್ಯನಿಧಿ ಎನಿಸಿದ ಚಂದ್ರನು ಯಾವ ವಾಯುವಿನಿಂದ ಪೋಷಿತನಾಗಿದ್ದಾನೋ, ವಿಜಯಿಗಳಲ್ಲೇ ಶ್ರೇಷ್ಠನಾದ ಅಂತಹ ಆರನೆಯ ವಾಯುವು ಪರಿವಹ ಎಂಬ ಹೆಸರಿನಿಂದ ಕರೆಯಲ್ಪಡುತ್ತಾನೆ.
ಸರ್ವಪ್ರಾಣಭೃತಾಂ ಪ್ರಾಣಾನ್ಯೋಽಂತಕಾಲೇ ನಿರಸ್ಯತಿ |
ಯಸ್ಯ ವರ್ತ್ಮಾನುವರ್ತೇತೇ ಮೃತ್ಯುವೈವಸ್ವತಾವುಭೌ ||70||
ಯಾವ ವಾಯುವು ಅಂತ್ಯಕಾಲದಲ್ಲಿ ಸಮಸ್ತ ಪ್ರಾಣಿಗಳ ಪ್ರಾಣವನ್ನು ಶರೀರದಿಂದ ಹೊರತೆಗೆಯುತ್ತದೋ, ಪ್ರಾಣವನ್ನು ಹೊರತೆಗೆದ ಬಳಿಕ ಮೃತು-ವೈವಸ್ವತರು ಯಾವ ವಾಯುವನ್ನು ಅನುಸರಿಸಿ ಸಾಗುತ್ತಾರೋ,
ಸಮ್ಯಗನ್ವೀಕ್ಷತಾಂ ಬುದ್ಧ್ಯಾ ಶಾಂತಯಾಧ್ಯಾತ್ಮನಿತ್ಯಯಾ |
ಧ್ಯಾನಾಭ್ಯಾಸಾಭಿರಾಮಾಣಾಂ ಯೋಽಮೃತತ್ವಾಯ ಕಲ್ಪತೇ ||71||
ಅಧ್ಯಾತ್ಮ ಚಿಂತನೆಯಲ್ಲಿ ನಿರತರಾದ, ಶಾಂತಬುದ್ಧಿಯಿಂದ ಮತ್ತು ಧ್ಯಾನಾಸಕ್ತಿಯಿಂದ ಆನಂದ ಹೊಂದುವ ಸಜ್ಜನರಿಗೆ

ಅಮೃತತ್ವವನ್ನು ತಂದುಕೊಡುತ್ತದೆಯೋ,
ಯಂ ಸಮಾಸಾದ್ಯ ವೇಗೇನ ದಿಶಾಮಂತಂ ಪ್ರಪೇದಿರೇ |
ದಕ್ಷಸ್ಯ ದಶ ಪುತ್ರಾಣಾಂ ಸಹಸ್ರಾಣಿ ಪ್ರಜಾಪತೇಃ ॥72॥
ಯಾವ ವಾಯುವನ್ನು ಆಶ್ರಯಿಸಿ ದಕ್ಷಪ್ರಜಾಪತಿಯ ಹತ್ತುಸಾವಿರ ಮಕ್ಕಳು ದಿಕ್ಕುಗಳ ಕೊನೆಯನ್ನು ಸೇರಿದರೋ,
ಯೇನ ಸ್ಪೃಷ್ಟಃ ಪರಾಭೂತೋ ಯಾತ್ಯೇವ ನ ನಿವರ್ತತೇ |
ಪರಾವಹೋ ನಾಮ ಪರೋ ವಾಯುಃ ಸ ದುರತಿಕ್ರಮಃ ॥73॥
ಯಾವ ವಾಯುವಿನಿಂದ ಮುಟ್ಟಲ್ಪಟ್ಟ ಜೀವನು ಪ್ರಾಣವನ್ನು ತೆತ್ತು ಇಲ್ಲಿಂದ ಹೊರಟು ಹೋಗುತ್ತಾನೋ, ಮತ್ತೆ ಹಿಂದೆ ತಿರುಗಿ ಬರುವುದಿಲ್ಲವೋ, ಅಂತಹ ಅತಿಕ್ರಮಿಸಲು ಅಸಾಧ್ಯವಾದ ಏಳನೆಯ ವಾಯುವು ಪರಾವಹ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ.
ಏವಮೇತೇಽದಿತೇಃ ಪುತ್ರಾ ಮಾರುತಾಃ ಪರಮಾದ್ಭುತಾಃ |
ಅನಾರಮಂತಃ ಸಂವಾಂತಿ ಸರ್ವಗಾಃ ಸರ್ವಧಾರಿಣಃ ॥74॥
ಹೀಗೆ ಏಳು ಜನ ಮರುದ್ದೇವತೆಗಳು ದಿತಿಯ ಶ್ರೇಷ್ಠರಾದ ಮಕ್ಕಳಾಗಿರುತ್ತಾರೆ. ಈ ಎಲ್ಲ ಕಡೆಯೂ ಸಂಚರಿಸುವ, ಎಲ್ಲವನ್ನೂ ಧಾರಣೆ ಮಾಡಿರುವ ಈ ವಾಯುಗಳು ನಿರಂತರವಾಗಿ ಬೀಸುತ್ತಿರುತ್ತವೆ.
ಏತತ್ತು ಮಹದಾಶ್ಚರ್ಯಂ ಯದಯಂ ಪರ್ವತೋತ್ತಮಃ |
ಕಂಪಿತಃ ಸಹಸಾ ತೇನ ವಾಯುನಾಭಿಪ್ರವಾಯತಾ ॥75॥
ಅತ್ಯಂತ ವೇಗವಾಗಿ ಬೀಸುತ್ತಿರುವ ಈ ವಾಯುವಿನ ಮೂಲಕ ಪರ್ವತಗಳಲ್ಲೇ ಶ್ರೇಷ್ಠವಾದ ಹಿಮಾಲಯವು ಕಂಪಿಸುತ್ತಿರುವುದು ತುಂಬಾ ದೊಡ್ಡ ಆಶ್ಚರ್ಯಕರ ಸಂಗತಿಯಾಗಿದೆ.
ವಿಷ್ಣೋರ್ನಿಃಶ್ವಾಸವಾತೋಽಯಂ ಯದಾ ವೇಗಸಮೀರಿತಃ |
ಸಹಸೋದೀರ್ಯತೇ ತಾತ ಜಗತ್ ಪ್ರವ್ಯಥತೇ ತದಾ ॥76॥
ಮಗುವೇ, ಈ ವಾಯುವು ಮಹಾವಿಷ್ಣುವಿನ ನಿಃಶ್ವಾಸವೆನಿಸಿದೆ. ಯಾವಾಗ ನಿಃಶ್ವಾಸವೆನಿಸಿದ ವಾಯುವು ಯೋಗದಿಂದ ಮೂಗಿನ ದ್ವಾರಾ ಹೊರಗೆ ಬರುತ್ತದೋ ಆಗ ದೇಹವೆಂಬ ಜಗತ್ತು ಬಹಳ ದುಃಖಕ್ಕೆ ತುತ್ತಾಗುತ್ತದೆ.
ತಸ್ಮಾದ್ ಬ್ರಹ್ಮವಿದೋ ಬ್ರಹ್ಮ ನಾಧೀಯಂತೇಽತಿವಾಯತಿ |
ವಾಯೋರ್ವಾಯುಭವೇ ಹ್ಯುಕ್ತಂ ಬ್ರಹ್ಮ ತತ್ ಪೀಡಿತಂ ಭವೇತ್ ॥
ಪುನಃ ಪುನಃ ವಾಯುವಿನ ಮಹಾಘೋಷವು ಯಾವಾಗ ಉಂಟಾಗುತ್ತದೋ ಆ ಘೋಷದಿಂದಾಗಿ ವೇದಗಳು ಪೀಡಿತವಾಗಿ ಸರಿಯಾಗಿ ಕೇಳಿಸುವುದಿಲ್ಲವೋ, ಪ್ರಬಲವಾದ ವಾಯುವಿನ ಘೋಷವು ಕೇಳಿಸುತ್ತಿರುವಾಗ ಗುರುಗಳಿಂದ ಉಚ್ಚರಿಸಲ್ಪಡುವ ವೇದವು ಶಿಷ್ಯರಿಂದ ಕೇಳಲಾಗದ ಕಾರಣ ಬ್ರಹ್ಮಜ್ಞಾನಿಗಳಾದ ಪುರುಷರು ಅನಧ್ಯಾಯವನ್ನು ಮಾಡಬೇಕು ಎಂದು ಹೇಳುತ್ತಾರೆ.
ಏತಾವದುಕತ್ವ ವಚನಂ ಪರಾಶರಸುತಃ ಪ್ರಭುಃ |
ಉಕತ್ವ ಪುತ್ರಮಧೀಷ್ವೇತಿ ವ್ಯೋಮಗಂಗಾಮಯಾತ್ತದಾ ॥78॥
ಯುಧಿಷ್ಠಿರನೇ, ಪರಾಶರರ ಮಗನಾದ ವ್ಯಾಸರು ಅನಧ್ಯಯನ ವಿಷಯವಾಗಿ ಮಗನಿಗೆ ಹೀಗೆ ಹೇಳಿ, ವೇದಾಧ್ಯಯನವನ್ನು ಮುಂದುವರೆಸುವಂತೆ ಆದೇಶಿಸಿ ಆಕಾಶಗಂಗೆಯ ಕಡೆ ತೆರಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೊಂದನೆಯ ಅಧ್ಯಾಯ
ನಾರದರಿಂದ ಶುಕಮುನಿಗೆ ವೇದಾಧ್ಯಯನ, ಜ್ಞಾನಗಳ ಉಪದೇಶ.
ಭೀಷ್ಮಃ
ಏತಸ್ಮಿನ್ನಂತರೇ ಶೂನ್ಯೇ ನಾರದಃ ಸಮುಪಾಗಮತ್ |
ಶುಕಂ ಸ್ವಾಧ್ಯಾಯನಿರತಂ ವೇದಾರ್ಥಾನ್ವಕ್ತುಮೀಪ್ಸಿತಾನ್ ॥1॥
ದೇವರ್ಷಿಂ ತು ಶುಕೋ ದೃಷ್ಟ್ವಾ ನಾರದಂ ಸಮುಪಸ್ಥಿತಮ್ |
ಅರ್ಘ್ಯಪೂರ್ವೇಣ ವಿಧಿನಾ ವೇದೋಕ್ತೇನಾಭ್ಯಪೂಜಯತ್ ॥2॥
ಭೀಷ್ಮ ಧರ್ಮಜನೇ, ಯಾರೂ ಇಲ್ಲದ ಸಮಯದಲ್ಲಿ ಸ್ವಾಧ್ಯಾಯ ನಿರತನಾದ ಶುಕರಿದ್ದ ಸ್ಥಳಕ್ಕೆ ನಾರದರು ಆಗಮಿಸಿದರು.
ವೇದಾರ್ಥಗಳನ್ನು ಹೇಳುವ ಇಚ್ಛೆಯಿಂದ ಆಗಮಿಸಿದ, ದೇವರ್ಷಿಗಳಾದ ನಾರದರು ಬಂದು ಎದುರು ನಿಂತಿರುವುದನ್ನು ನೋಡಿದ ಶುಕಮುನಿಗಳು ವಿಧಿಬದ್ಧವಾಗಿ ಅರ್ಘ್ಯಪೂರ್ವಕವಾಗಿ ವೇದೋಕ್ತ ಕ್ರಮದಿಂದ ಪೂಜಿಸಿದರು.
ನಾರದೋಽಥಾಬ್ರವೀತ್ ಪ್ರೀತೋ ಬ್ರೂಹಿ ಬ್ರಹ್ಮವಿದಾಂ ವರ |
ಕೇನ ತ್ವಾಂ ಶ್ರೇಯಸಾ ತಾತ ಯೋಜಯಾಮೀತಿ ಹೃಷ್ಟವತ್ ॥3॥
ಅರ್ಘ್ಯ-ಪಾದ್ಯಾದಿಗಳಿಂದ ನಾರದರು ಸಂತುಷ್ಟರಾದರು. ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ, ನಾನು ನಿನ್ನನ್ನು ಯಾವ ಶ್ರೇಯೋಮಾರ್ಗದಲ್ಲಿ ಸಂಯೋಜಿಸಲಿ? ಎಂದು ಪ್ರಶ್ನಿಸಿದರು.
ನಾರದಸ್ಯ ವಚಃ ಶ್ರುತ್ವಾ ಶುಕಃ ಪ್ರೋವಾಚ ಭಾರತ |
ಅಸ್ಮಿಲ್ಲೋಕೇ ಹಿತಂ ಯತ್ಸ್ಯಾತ್ತೇನ ಮಾಂ ಯೋಕ್ತುಮರ್ಹಸಿ ॥4॥
ನಾರದರ ಮಾತನ್ನು ಕೇಳಿ ಶುಕಮುನಿಯು ಉತ್ತರಿಸಿದನು: `ಪೂಜ್ಯರೇ, ಈ ಲೋಕದಲ್ಲಿ ಯಾವುದರಿಂದ ಹಿತವಾಗುತ್ತದೋ ಅದನ್ನೇ

ನನಗೆ ಉಪದೇಶಿಸಿರಿ'.
ನಾರದಃ
ತತ್ತ್ವಂ ಜಿಜ್ಞಾಸತಾಂ ಪೂರ್ವಮೃಷೀಣಾಂ ಭಾವಿತಾತ್ಮನಾಮ್ |
ಸನತ್ಕುಮಾರೋ ಭಗವಾನಿದಂ ವಚನಮಬ್ರುವೀತ್ ॥5॥
ನಾರದ ಶುಕದೇವನೇ, ಪರತತ್ತ್ವದ ಬಗ್ಗೆ ಜಿಜ್ಞಾಸೆ ಮಾಡುತ್ತಿದ್ದ, ಪವಿತ್ರವಾದ ಅಂತಃಕರಣವುಳ್ಳವರಾಗಿದ್ದ ಋಷಿಗಳಿಗೆ ಹಿಂದೊಮ್ಮೆ ಭಗವಾನ್ ಸನತ್ಕುಮಾರನು ಈ ಮಾತನ್ನು ಹೇಳಿರುತ್ತಾನೆ.
ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ಸತ್ಯಸಮಂ ತಪಃ |
ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್ ॥6॥
ಋಷಿಗಳೇ, ಭಗವದ್ವಿದ್ಯೆಗೆ ಸಮಾನವಾದ ಕಣ್ಣಿಲ್ಲ. ಸತ್ಯಕ್ಕೆ ಸಮಾನವಾದ ತಪಸ್ಸಿಲ್ಲ. ರಾಗಕ್ಕೆ ಸಮಾನವಾದ ದುಃಖವಿಲ್ಲ. ತ್ಯಾಗಕ್ಕೆ ಸಮಾನವಾದ ಸುಖವಿಲ್ಲ.
ನಿವೃತ್ತಿಃ ಕರ್ಮಣಃ ಪಾಪಾತ್ ಸತತಂ ಪುಣ್ಯಶೀಲತಾ |
ಸದ್ವೃತ್ತಿಃ ಸಮುದಾಚಾರಃ ಶ್ರೇಯ ಏತದನುತ್ತಮಮ್ ॥7॥
ಯಾವಾಗಲೂ ಪಾಪಕರ್ಮಗಳಿಂದ ದೂರವಿರುವುದು, ಪುಣ್ಯಕರ್ಮಗಳಲ್ಲಿ ಆಸಕ್ತವಾಗಿರುವುದು, ಸಜ್ಜನರ ವ್ಯವಹಾರ ಮತ್ತು ಸದಾಚಾರಗಳನ್ನು ಅನುಷ್ಠಾನ ಮಾಡುವುದು- ಶ್ರೇಯಸ್ಸಿನ ಅತ್ಯಂತ ಶ್ರೇಷ್ಠವಾದ ಸಾಧನೆಗಳಾಗಿವೆ.
ಮಾನುಷ್ಯಮಸುಖಂ ಪ್ರಾಪ್ಯ ಯಃ ಸಜ್ಜತಿ ಸ ಮುಹ್ಯತಿ |
ನಾಲಂ ಸ ದುಃಖಮೋಕ್ಷಾಯ ಸಂಗೋ ವೈ ದುಃಖಲಕ್ಷಣಮ್ ॥8॥
ಸುಖವಿಲ್ಲದ ಮನುಷ್ಯಯೋನಿಯನ್ನು ಹೊಂದಿದ ಪುರುಷನು ವಿಷಯ ಸುಖಗಳಲ್ಲಿಯೇ ಆಸಕ್ತನಾಗುತ್ತಾನೋ ಅವನು ಮೋಹ ಹೊಂದಿದವನಾಗಿ ದುಃಖದಲ್ಲಿಯೇ ಮುಳುಗುತ್ತಾನೆ. ವಿಷಯಗಳ ಸಂಬಂಧದಿಂದ ದುಃಖವನ್ನು ನಿವಾರಿಸಿಕೊಳ್ಳಲಾಗದು. ಕಾರಣ ವಿಷಯಗಳ ಸಂಬಂಧವೇ ದುಃಖದ ಲಕ್ಷಣವಾಗಿದೆ.
ಸಕ್ತಸ್ಯ ಬುದ್ಧಿಶ್ಚಲತಿ ಮೋಹಜಾಲವಿವರ್ಧಿನೀ |
ಮೋಹಜಾಲಾವೃತೋ ದುಃಖಮಿಹ ಚಾಮುತ್ರ ಚಾಶ್ನುತೇ ॥9॥
ವಿಷಯಗಳಲ್ಲಿ ಆಸಕ್ತನಾದ ಪುರುಷನ ಬುದ್ಧಿಯು ಚಂಚಲವಾಗಿರುತ್ತದೆ. ಅಂತಹ ಚಂಚಲಬುದ್ಧಿಯು ಮೋಹಜಾಲಗಳನ್ನು ಹುಟ್ಟಿಸುತ್ತಾ, ಅಧಿಕಗೊಳಿಸುತ್ತಾ ಹೋಗುತ್ತದೆ. ಮೋಹಜಾಲದಲ್ಲಿ ಸಿಕ್ಕಿಬಿದ್ದ ಪುರುಷನು ಇಹ-ಪರಗಳಲ್ಲಿ ದುಃಖಕ್ಕೆ ಈಡಾಗುತ್ತಾನೆ.
ಸರ್ವೋಪಾಯೇನ ಕಾಮಸ್ಯ ಕ್ರೋಧಸ್ಯ ಚ ವಿನಿಗ್ರಹಃ |
ಕಾರ್ಯಃ ಶ್ರೇಯೋರ್ಥಿನಾ ತೌ ಹಿ ಶ್ರೇಯೋಘಾತಾರ್ಥಮುದ್ಯತೌ ॥
ಶ್ರೇಯೋಮಾರ್ಗವನ್ನು ಬಯಸುವವನು ಯಾವಾಗಲೂ ಸಮಸ್ತ ಉಪಾಯಗಳಿಂದ ಕಾಮ-ಕ್ರೋಧಗಳನ್ನು ನಿಗ್ರಹಿಸಿಕೊಳ್ಳಬೇಕು. ಕಾರಣ ಕಾಮ- ಕ್ರೋಧಗಳು ಮನುಷ್ಯರ ಶ್ರೇಯಸ್ಸನ್ನು ಹಾಳುಮಾಡಲೆಂದೇ ಪ್ರಯತ್ನಿಸುತ್ತಿರುತ್ತವೆ.
ನಿತ್ಯಂ ಕ್ರೋಧಾತ್ತಪೋ ರಕ್ಷೇಚ್ಛ್ರಿಯಂ ರಕ್ಷೇತ ಮತ್ಸರಾತ್ |
ವಿದ್ಯಾಂ ಮಾನಾವಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥11॥
ಯಾವಾಗಲೂ ತಪಸ್ಸನ್ನು ಕ್ರೋಧದಿಂದ ರಕ್ಷಿಸಬೇಕು. ಐಶ್ವರ್ಯವನ್ನು ಮಾತ್ಸರ್ಯದಿಂದ ರಕ್ಷಿಸಬೇಕು. ವಿದ್ಯೆಯನ್ನು ಮಾನಾಪಮಾನಗಳಿಂದ ರಕ್ಷಿಸಬೇಕು. ತನ್ನನ್ನು ಪ್ರಮಾದದಿಂದ ರಕ್ಷಿಸಿಕೊಳ್ಳಬೇಕು.
ವ್ಯಾಖ್ಯಾನ ವಿಶೇಷ ಕೋಪದಿಂದ ತಪಸ್ಸಿನ ಕ್ಷಯವಾಗುತ್ತದೆ. ಮಾತ್ಸರ್ಯದಿಂದ ಐಶ್ವರ್ಯದ ಹಾನಿಯಾಗುತ್ತದೆ. ಮಾನಾಪಮಾನಗಳಿಗೆ ತುತ್ತಾದಲ್ಲಿ ವಿದ್ಯೆಯು ಹಾಳಾಗುತ್ತದೆ. ಅಜಾಗರೂಕತೆಯಿಂದ ತನಗೆ ಅಧಃಪತನವಾಗುತ್ತದೆ.
ಆನೃಶಂಸ್ಯಂ ಪರೋ ಧರ್ಮಃ ಕ್ಷಮಾ ಚ ಪರಮಂ ಬಲಮ್ |
ಆತ್ಮಜ್ಞಾನಂ ಪರಂ ಜ್ಞಾನಂ ನ ಸತ್ಯಾದ್ ವಿದ್ಯತೇ ಪರಮ್ ॥12॥
ದಯೆಯೇ ಶ್ರೇಷ್ಠವಾದ ಧರ್ಮವು. ಸಹನೆಯೇ ಶ್ರೇಷ್ಠವಾದ ಬಲವು. ಆತ್ಮಜ್ಞಾನವೇ ಶ್ರೇಷ್ಠವಾದ ಜ್ಞಾನವು. ಸತ್ಯಕ್ಕಿಂತಲೂ ಶ್ರೇಷ್ಠವಾದುದು ಇರುವುದಿಲ್ಲ.
ಸತ್ಯಸ್ಯ ವಚನಂ ಶ್ರೇಯಃ ಸತ್ಯಾದಪಿ ಹಿತಂ ಭವೇತ್ |
ಯದ್ಭೂತಹಿತಮತ್ಯಂತಮೇತತ್ ಸತ್ಯಂ ಮತಂ ಮಮ ॥13॥
ಸತ್ಯದ ವಚನವೇ ಶ್ರೇಯಸ್ಕರವಾದುದು. ಹಿತವನ್ನಾಚರಿಸುವುದು ಸತ್ಯಕ್ಕಿಂತಲೂ ಶ್ರೇಯಸ್ಕರವು. ಯಾವುದರಿಂದ ಪ್ರಾಣಿಗಳಿಗೆ ಅತ್ಯಂತ ಹಿತವಾಗಿರುತ್ತದೋ ಅದೇ ಸತ್ಯವೆಂದು ನನ್ನ ಮತವಾಗಿದೆ.
ಸರ್ವಾರಂಭಫಲತ್ಯಾಗೀ ನಿರಾಶೀರ್ನಿಷ್ಪರಿಗ್ರಹಃ |
ಯೇನ ಸರ್ವಂ ಪರಿತ್ಯಕ್ತಂ ಸ ವಿದ್ವಾನ್ ಸ ಚ ಪಂಡಿತಃ ॥14॥
ಯಾವನು ಬಂಧಕವಾದ ಕಾರ್ಯಗಳನ್ನು ಆಚರಿಸಲು ಸಂಕಲ್ಪಗಳನ್ನು ಮಾಡುವುದಿಲ್ಲವೋ, ಯಾವನ ಮನಸ್ಸು ಎಲ್ಲ ವಿಧವಾದ ಬಾಹ್ಯ ಕಾಮನೆಗಳಿಂದ ಮುಕ್ತವಾಗಿರುತ್ತದೋ, ಮತ್ತೊಬ್ಬರ ಪದಾರ್ಥಗಳನ್ನು ಹೊಂದಬೇಕು ಎಂಬ ಬಯಕೆ ಯಾವನಿಗೆ ಇರುವುದಿಲ್ಲವೋ, ಎಲ್ಲವನ್ನೂ ಪೂರ್ಣವಾಗಿ ಪರಿತ್ಯಾಗ ಮಾಡಿರುತ್ತಾನೋ ಅವನೇ ವಿದ್ವಾಂಸನು, ಅವನೇ ಪಂಡಿತನು.
ಇಂದ್ರಿಯೈರಿಂದ್ರಿಯಾರ್ಥೇಭ್ಯಶ್ಚರತ್ಯಾತ್ಮವಶೈರಿಹ |
ಅಸಜ್ಜಮಾನಃ ಶಾಂತಾತ್ಮಾ ನಿರ್ವಿಕಾರಃ ಸಮಾಹಿತಃ ॥15॥
ತನ್ನ ವಶದಲ್ಲಿರುವ ಇಂದ್ರಿಯಗಳಿಂದ ಇಂದ್ರಿಯವಿಷಯಗಳನ್ನು ಯಾವನು ಅತಿಯಾದ ಮೋಹಕ್ಕೆ ತುತ್ತಾಗದೆ ಸೇವಿಸುತ್ತಾನೋ, ಶಾಂತವಾದ ಮನಸ್ಸುಳ್ಳವನೋ, ನಿರ್ವಿಕಾರನೋ, ಏಕಾಗ್ರತೆಯನ್ನು ಸಂಪಾದಿಸಿಕೊಂಡಿರುವನೋ,

ಆತ್ಮಭೂತೈರತದ್ಭೂತಃ ಸಹ ಚೈವ ವಿನೈವ ಚ |
ಸ ವಿಮುಕ್ತಃ ಪರಂ ಶ್ರೇಯೋ ನಚಿರೇಣಾಧಿಗಚ್ಛತಿ ॥16॥
ಪರಮಾತ್ಮನಿಂದ ಸೃಷ್ಟರಾಗಿರುವ ಪುತ್ರ-ಮಿತ್ರ-ಕಳತ್ರಾದಿಗಳಲ್ಲಿ ಪರಮಾತ್ಮನ ಅಧೀನತೆಯನ್ನು ಕಾಣುತ್ತಾ, ಅವರಿಗೆ ಅಧೀನನಾಗದೆ ಕರ್ತವ್ಯವನ್ನು ಮಾಡಿದವನು ಮುಕ್ತನಾದಂತೆ ಸರಿ. ಅವನು ಬಹಳ ಶೀಘ್ರವಾಗಿ ಪರಮಶ್ರೇಯಸ್ಸನ್ನು ಹೊಂದುತ್ತಾನೆ.

ಅದರ್ಶನಮಸಂಸ್ಪರ್ಶಸ್ತಥಾಸಂಭಾಷಣಂ ಸದಾ |
ಯಸ್ಯ ಭೂತೈಃ ಸಹ ಮುನೇ ಸ ಶ್ರೇಯೋ ವಿಂದತೇ ಪರಮ್ ॥17॥
ಶುಕಮುನಿಯೇ, ಯಾರು ಯಾವ ಪ್ರಾಣಿಯನ್ನು ನೋಡುವುದೇ ಇಲ್ಲವೋ, ಮುಟ್ಟುವುದೇ ಇಲ್ಲವೋ, ಯಾವ ಪ್ರಾಣಿಗಳೊಡನೆ ಮಾತನಾಡುವುದಿಲ್ಲವೋ ಅವನು ಶ್ರೇಷ್ಠವಾದ ಶ್ರೇಯಸ್ಸನ್ನು ಹೊಂದುತ್ತಾನೆ.
ನ ಹಿಂಸ್ಯಾತ್ ಸರ್ವಭೂತಾನಿ ಮೈತ್ರಾಯಣಗತಶ್ಚರೇತ್ |
ನೇದಂ ಜನ್ಮ ಸಮಾಸಾದ್ಯ ವೈರಂ ಕುರ್ವೀತ ಕೇನಚಿತ್ ॥18॥
ಯಾವ ಪ್ರಾಣಿಯನ್ನೂ ಹಿಂಸೆ ಮಾಡಬಾರದು. ಎಲ್ಲರೊಡನೆ ಮಿತ್ರಭಾವದಿಂದ ವ್ಯವಹರಿಸಬೇಕು. ಮನುಷ್ಯಜನ್ಮವನ್ನು ಪಡೆದು ಯಾರ ಬಳಿಯೂ ದ್ವೇಷವನ್ನು ಕಟ್ಟಿಕೊಳ್ಳಬಾರದು.
ಆಕಿಂಚನ್ಯಂ ಸುಸಂತೋಷೋ ನಿರಾಶೀಷ್ಟ್ವಮಚಾಪಲಮ್ |
ಏತದಾಹುಃ ಪರಂ ಶ್ರೇಯ ಆತ್ಮಜ್ಞಸ್ಯ ಜಿತಾತ್ಮನಃ ॥19॥
ಧನದ ಸಂಚಯನದಲ್ಲಿ ಆಸಕ್ತಿ ಇಲ್ಲದವನು, ಹೇಗಿದ್ದರೂ ಸಂತುಷ್ಟನಾದವನು, ಯಾವುದರ ಅಪೇಕ್ಷೆಯಿಲ್ಲದೆ ಚಾಪಲ್ಯವಿಲ್ಲದೆ ಇರುವವವನು ಪರಮಶ್ರೇಯಸ್ಸನ್ನು ಹೊಂದುತ್ತಾನೆ. ಜಿತೇಂದ್ರಿಯನಾದ ಆತ್ಮಜ್ಞಾನಿಗೆ ಇವುಗಳೇ ಶ್ರೇಯೋಮಾರ್ಗಗಳು.
ಪರಿಗ್ರಹಂ ಪರಿತ್ಯಜ್ಯ ಭವ ತಾತ ಜಿತೇಂದ್ರಿಯಃ |
ಅಶೋಕಂ ಸ್ಥಾನಮಾತಿಷ್ಠ ಇಹ ಚಾಮುತ್ರ ಚಾಭಯಮ್ ॥20॥
ದಾನವನ್ನು ಸ್ವೀಕರಿಸುವ ಚಾಪಲ್ಯವನ್ನು ಬಿಟ್ಟು ಜಿತೇಂದ್ರಿಯನಾಗಿರು. ಇಹ- ಪರಗಳಲ್ಲಿ ಭಯವಿಲ್ಲದೆ ಇರುವ, ಶೋಕವಿಲ್ಲದೆ ಇರುವ ಸ್ಥಾನವನ್ನು ಅರ್ಥಾತ್ ಅಧ್ಯಾತ್ಮ ಮಾರ್ಗವನ್ನು ಅವಲಂಬಿಸು.
ನಿರಾಮಿಷಾ ನ ಶೋಚಂತಿ ತ್ಯಜೇಹಾಮಿಷಮಾತ್ಮನಃ |
ಪರಿತ್ಯಜ್ಯಾಮಿಷಂ ಸೌಮ್ಯ ದುಃಖತಾಪಾದ್ ವಿಮೋಕ್ಷ್ಯಸೇ ॥21॥
ಕಾಮಾದಿಗಳಲ್ಲಿ ಆಸಕ್ತಿ ಇಲ್ಲದವರು ಶೋಕಕ್ಕೆ ತುತ್ತಾಗುವುದಿಲ್ಲ. ಆದ್ದರಿಂದ ಮನುಷ್ಯನು ಅತಿಯಾದ ಭೋಗಾಸಕ್ತಿಯನ್ನು ತ್ಯಜಿಸಬೇಕು. ಭೋಗ ಪದಾರ್ಥಗಳಲ್ಲಿ ಆಸೆಯನ್ನು ತ್ಯಜಿಸುವುದರಿಂದ ದುಃಖಗಳಿಂದ ಮುಕ್ತನಾಗುತ್ತಾನೆ.
ತಪೋನಿತ್ಯೇನ ದಾಂತೇನ ಮುನಿನಾ ಸಂಯತಾತ್ಮನಾ |
ಅಜಿತಂ ಜೇತುಕಾಮೇನ ಭಾವ್ಯಂ ಸಂಗೇಷ್ವಸಂಗಿನಾ ॥22॥
ಜಯಿಸಲು ಅಸಾಧ್ಯವಾದ ಮೋಕ್ಷವನ್ನು ಯಾವನು ಹೊಂದಲು ಇಚ್ಛಿಸುತ್ತಾನೋ ಅವನು ತಪಸ್ಸು, ಜಿತೇಂದ್ರಿಯತ್ವ, ಮನೋನಿಗ್ರಹತ್ವ, ವಿಷಯಸುಖದಲ್ಲಿ ಅನಾಸಕ್ತಿಯನ್ನು ಹೊಂದಬೇಕು.
ಗುಣಸಂಗೇಷ್ವನಾಸಕ್ತ ಏಕಚರ್ಯಾರತಃ ಸದಾ |
ಬ್ರಾಹ್ಮಣೋ ನಚಿರಾದೇವ ಸುಖಮಾಯಾತ್ಯನುತ್ತಮಮ್ ॥23॥
ದ್ವಂದ್ವಾರಾಮೇಷು ಭೂತೇಷು ಯ ಏಕೋ ರಮತೇ ಮುನಿಃ |
ವಿದ್ಧಿ ಪ್ರಜ್ಞಾನತೃಪ್ತಂ ತಂ ಜ್ಞಾನತೃಪ್ತೋ ನ ಶೋಚತಿ ॥24॥
ಯಾವನು ಮೂರುಗುಣಗಳಿಂದ ಕೂಡಿದ ವಿಷಯಗಳಲ್ಲಿ ಅನಾಸಕ್ತನಾಗಿರುತ್ತಾನೋ, ಏಕಾಂತದಲ್ಲೇ ಯಾವಾಗಲೂ ಭಗವತ್‌ಚಿಂತನೆಯನ್ನೇ ನಡೆಸುತ್ತಿರುತ್ತಾನೋ ಅಂತಹ ಬ್ರಾಹ್ಮಣನು ಬಹಳ ಬೇಗ ಮೋಕ್ಷರೂಪವಾದ ಮಹಾಸುಖವನ್ನು ಹೊಂದುತ್ತಾನೆ. ಸುಖ-ದುಃಖಗಳ ನಡುವೆಯೇ ಆನಂದವೆಂದು ಭಾವಿಸಿದ ಜೀವರ ನಡುವೆಯೂ ಇದ್ದು, ಯಾವ ಮುನಿಯು ಏಕಾಕಿಯಾಗಿ ಆನಂದವನ್ನು ಹೊಂದುತ್ತಾನೋ ಅಂತಹ ಮುನಿಯನ್ನು ವಿಶೇಷವಾದ ಆತ್ಮಜ್ಞಾನದಿಂದ ತೃಪ್ತನಾದವನು ಎಂದು ತಿಳಿ. ಜ್ಞಾನ ತೃಪ್ತನಾದವನು ಎಂದೂ ಶೋಕವನ್ನು ಹೊಂದನು.
ಶುಭೈರ್ಲಭತಿ ದೇವತ್ವಂ ವ್ಯಾಮಿಶ್ರೈರ್ಜನ್ಮ ಮಾನುಷಮ್ |
ಅಶುಭೈಶ್ಚಾಪ್ಯಧೋಜನ್ಮ ಕರ್ಮಭಿರ್ಲಭತೇಽವಶಃ ॥25॥
ಅಸ್ವತಂತ್ರನಾದ ಜೀವನು ತಾನು ಮಾಡುವ ಶುಭಕರ್ಮದಿಂದ ದೇವತ್ವವನ್ನು, ಶುಭಾಶುಭ ಕರ್ಮಗಳಿಂದ ಮನುಷ್ಯತ್ವವನ್ನು, ಕೇವಲ ಅಶುಭ ಕರ್ಮಗಳ ಆಚರಣೆಯಿಂದ ನೀಚಯೋನಿ ಎನಿಸಿದ ಪಶು-ಪಕ್ಷಿ ಜನ್ಮಗಳನ್ನು ಹೊಂದುತ್ತಾನೆ.
ತತ್ರ ಮೃತ್ಯುಜರಾದುಃಖೈಃ ಸತತಂ ಸಮಭಿದ್ರುತಃ |
ಸಂಸಾರೇ ಪಚ್ಯತೇ ಜಂತುಸ್ತತ್ ಕಥಂ ನಾವಬುಧ್ಯಸೇ ॥26॥
ಆ ಯೋನಿಗಳಲ್ಲಾದರೂ ಮುಪ್ಪು, ಸಾವು ಮೊದಲಾದ ದುಃಖಗಳಿಂದ ನಿರಂತರವೂ ಪೀಡಿಸಲ್ಪಟ್ಟವರಾಗಿ, ಸಂಸಾರ ಚಕ್ರದಲ್ಲಿ ಬೇಯಲ್ಪಡುತ್ತಾನೆ. ಈ ವಿಷಯವನ್ನು ನೀನು ಏಕೆ ಇನ್ನೂ ತಿಳಿದುಕೊಂಡಿರುವುದಿಲ್ಲ?
ಅಹಿತೇ ಹಿತಸಂಜ್ಞಸ್ತ್ವಮಧ್ರುವೇ ಧ್ರುವಸಂಜ್ಞಕಃ |
ಅನರ್ಥೇ ಚಾರ್ಥಸಂಜ್ಞಸ್ತ್ವಂ ಕಿಮರ್ಥಂ ನಾವಬುಧ್ಯಸೇ ॥27॥
ಅಹಿತವಾದ ಕರ್ಮದಲ್ಲಿ ಹಿತ ಎಂದು ತಿಳಿದಿರುವ, ಅಶಾಶ್ವತವಾದ ವಸ್ತುವನ್ನು ಶಾಶ್ವತವೆಂದು ತಿಳಿದಿರುವ, ಅನರ್ಥಕಾರಿಯಾದ ಪ್ರಯೋಜನದಲ್ಲಿ ಸಾರ್ಥಕವೆಂದು ಭಾವಿಸಿರುವ ಯಥಾರ್ಥ ಜ್ಞಾನವನ್ನು ಏಕೆ ಹೊಂದಿರುವುದಿಲ್ಲ?

ಸಂವೇಷ್ಟ್ಯಮಾನಂ ಬಹುಭಿರ್ಮೋಹತಂತುಭಿರಾತ್ಮಜೈಃ |
ಕೋಶಕಾರವದಾತ್ಮಾನಂ ವೇಷ್ಟಯನ್ನಾವಬುಧ್ಯಸೇ ॥28॥
ರೇಷ್ಮೆ ಹುಳುವು ತನ್ನ ಶರೀರದಿಂದ ಹುಟ್ಟಿದ ನೂಲಿನಿಂದ ಗೂಡನ್ನು ನಿರ್ಮಿಸಿ ತಾನೇ ಅದರ ಬಂಧನದಲ್ಲಿ ಸಿಲುಕುವಂತೆ, ಮೋಹವಶವಾದ ಶರೀರಸಂಬಂಧದಿಂದ ಹುಟ್ಟಿದ ಮಕ್ಕಳು, ಪತ್ನಿ ಮೊದಲಾದ ಬಂಧುವರ್ಗದಲ್ಲಿ ಬಂಧಿತನಾದ ನಿನ್ನನ್ನು ನೀನು ಅರಿಯುತ್ತಿಲ್ಲ.
ವ್ಯಾಖ್ಯಾನ ವಿಶೇಷ ಶುಕಮುನಿಯು ವಿರಕ್ತನಾಗಿರುತ್ತಾನೆ. ಶುಕಮುನಿಯನ್ನು ನಿಮಿತ್ತ ಮಾಡಿಕೊಂಡು ಸಜ್ಜನರಿಗೆ ಉಪದೇಶಿಸಿದ ವೇದಾಂತವಿದೆಂದು ಭಾವಿಸಬೇಕು.
ಅಲಂ ಪರಿಗ್ರಹೇಣೇಹ ದೋಷವಾನ್ ಹಿ ಪರಿಗ್ರಹಃ |
ಕೃಮಿರ್ಹಿ ಕೋಶಕಾರಸ್ತು ಬಧ್ಯತೇ ಸ್ವಪರಿಗ್ರಹಾತ್ ॥29॥
ದಾನದ ಸ್ವೀಕಾರವನ್ನು ನಿಲ್ಲಿಸು. ದಾನವನ್ನು ಸ್ವೀಕರಿಸುತ್ತಾ ದೋಷಕ್ಕೆ ಈಡಾಗುತ್ತಾನೆ. ರೇಷ್ಮೆ ಹುಳುವು ಇತರ ಹುಳುಗಳನ್ನು ಸಂಗ್ರಹಿಸುವ ದೃಷ್ಟಿಯಿಂದ ಗೂಡು ಕಟ್ಟುತ್ತದೆ. ಅದರಿಂದಲೇ ತಾನೇ ಬಂಧನವನ್ನು ಹೊಂದುತ್ತದೆ.
ಪುತ್ರದಾರಕುಟುಮ್ಬೇಷು ಸಕ್ತಾಃ ಸೀದಂತಿ ಜಂತವಃ |
ಸರಃಪಂಕಾರ್ಣವೇ ಮಗ್ನ ಜೀರ್ಣಾ ವನಗಜಾ ಇವ ॥30॥
ಪುತ್ರ-ಪತ್ನಿ, ಕುಟುಂಬಗಳಲ್ಲಿ ಆಸಕ್ತರಾದ ಜೀವರು ದುಃಖಕ್ಕೆ ತುತ್ತಾಗುತ್ತಾರೆ. ಕೆಸರು ತುಂಬಿದ ಸರೋವರಗಳಲ್ಲಿ ಆನೆಗಳು ಸಿಲುಕಿ ಮರಣ ಹೊಂದುವಂತೆ ಈ ಜೀವರ ಸ್ಥಿತಿಯಾಗಿದೆ.
ಮಹಾಜಾಲಸಮಾಕೃಷ್ಟಾನ್ ಸ್ಥಲೇ ಮತ್ಸ್ಯಾನಿವೋದ್ಧತಾನ್ |
ಸ್ನೇಹಜಾಲಸಮಾಕೃಷ್ಟಾನ್ ಪಶ್ಯ ಜಂತೂನ್ ಸುದುಃಖಿತಾನ್ ॥31॥
ದೊಡ್ಡ ಬಲೆಯಿಂದ ಸೆಳೆಯಲ್ಪಟ್ಟು ನೀರಿನಿಂದ ಮೇಲಕ್ಕೆತ್ತಿದ ಮೀನುಗಳು ಒದ್ದಾಡುವಂತೆ ಸ್ನೇಹವೆಂಬ ಬಲೆಯಿಂದ ಸೆಳೆಯಲ್ಪಟ್ಟು ಅತ್ಯಂತ ದುಃಖದಲ್ಲಿ ಬಳಲುತ್ತಿರುವ ಈ ಪ್ರಾಣಿಗಳನ್ನು ನೋಡು.
ಕುಟುಂಬಂ ಪುತ್ರದಾರಂ ಚ ಶರೀರಂ ದ್ರವ್ಯಸಂಚಯಾಃ |
ಪಾರಕ್ಯಮಧ್ರುವಂ ಸರ್ವಂ ಕಿಂ ತತ್ ಸುಕೃತದುಷ್ಕೃತಮ್ ॥32॥
ಕುಟುಂಬ, ಮಕ್ಕಳು, ಪತ್ನಿಯರು, ಶರೀರ, ದ್ರವ್ಯಸಂಚಯ- ಎಲ್ಲವೂ ನಮಗೆ ಸಂಬಂಧಿಸಿದವುಗಳಲ್ಲ. ಅಶಾಶ್ವತವಾದವುಗಳು. ಇವುಗಳು ಪುಣ್ಯ-ಪಾಪಗಳೆಂದು ಕರೆಸಿಕೊಳ್ಳುವುದಿಲ್ಲ.
ಯದಾ ಸರ್ವಂ ಪರಿತ್ಯಜ್ಯ ಗಂತವ್ಯಮವಶೇನ ತೇ |
ಅನರ್ಥೇ ಕಿಂ ಪ್ರಸಕ್ತಸ್ತ್ವಂ ಸ್ವಮರ್ಥಂ ನಾನುತಿಷ್ಠಸಿ ॥33॥
ಅಸ್ವತಂತ್ರನಾದ ನೀನು ಈ ಸಮಸ್ತವನ್ನೂ ತ್ಯಜಿಸಿ ಒಂದು ದಿನ ಸಾಗಲೇಬೇಕು. ಹೀಗಿರುವಾಗ ಅನರ್ಥಮಯವಾದ ಈ ಸಂಸಾರದಲ್ಲಿ ಆಸಕ್ತಿಯನ್ನು ಏಕೆ ಹೊಂದಿರುವೆ? ಮೋಕ್ಷಸಾಧನೆಗಾಗಿ ಇನ್ನೂ ಏಕೆ ಪ್ರಯತ್ನಿಸುತ್ತಿಲ್ಲ?
ಅವಿಶ್ರಾಂತಮನಾಲಂಬಮಪಾಥೇಯಮದೈಶಿಕಮ್ |
ತಮಃಕಾಂತಾರಮಧ್ವಾನಂ ಕಥಮೇಕೋ ಗಮಿಷ್ಯಸಿ ॥34॥
ನೀನು ಸಾಗುತ್ತಿರುವ ದಾರಿಯಲ್ಲಿ ವಿಶ್ರಾಂತಿಯಿಲ್ಲ, ಸರಿಯಾದ ಆಶ್ರಯವಿಲ್ಲ, ಸರಿಯಾದ ಬುದ್ಧಿಯೂ ಇಲ್ಲ. ದೇಶವು ಯೋಗ್ಯವಾಗಿರುವುದಿಲ್ಲ, ಕಗ್ಗತ್ತಲೆಯಿಂದ ತುಂಬಿರುವ ಮಾರ್ಗದಲ್ಲಿ ಏಕಾಂತವಾಗಿ ಹೇಗೆ ಸಾಗುತ್ತಿ?
ನ ಹಿ ತ್ವಾ ಪ್ರಸ್ಥಿತಂ ಕಶ್ಚಿತ್ ಪೃಷ್ಠತೋಽನುಗಮಿಷ್ಯತಿ |
ಸುಕೃತಂ ದುಷ್ಕೃತಂ ಚ ತ್ವಾ ಯಾಸ್ಯಂತಮನುಯಾಸ್ಯತಿ ॥35॥
ಮರಣ ಹೊಂದಿದ ಬಳಿಕ ಪರಲೋಕಕ್ಕೆ ಹೊರಡುವ ನಿನ್ನ ಹಿಂದೆ ಯಾರೂ ಬರುವುದಿಲ್ಲ. ಸುಕೃತ-ದುಷ್ಕೃತಗಳು ಮಾತ್ರ ಪರಲೋಕಕ್ಕೆ ಹೋಗುತ್ತಿರುವ ನಿನ್ನನ್ನು ಅನುಸರಿಸುತ್ತವೆ.
ವಿದ್ಯಾ ಕರ್ಮ ಚ ಶೌರ್ಯಂ ಚ ಜ್ಞಾನಂ ಚ ಬಹುವಿಸ್ತರಮ್ |
ಅರ್ಥಾರ್ಥಮನುಸಾರ್ಯಂತೇ ಸಿದ್ಧಾರ್ಥಸ್ತು ವಿಮುಚ್ಯತೇ ॥36॥
ವಿದ್ಯೆ, ಕರ್ಮ, ಶೌಚ, ಬಹುವಿಶಾಲವಾದ ಜ್ಞಾನ ಇವೆಲ್ಲವೂ ಪುರುಷಾರ್ಥವನ್ನು ಅನುಸರಿಸುತ್ತವೆ. ಪುರುಷಾರ್ಥವು ಸಿದ್ಧಿಸಿದ ಬಳಿಕ ಮನುಷ್ಯನು ಮುಕ್ತನಾಗುತ್ತಾನೆ.
ನಿಬಂಧನೀ ರಜ್ಜುರೇಷಾ ಯಾ ಗ್ರಾಮೇ ವಸತೋ ರತಿಃ |
ಛಿತ್ತ್ವೈನಾಂ ಸುಕೃತೋ ಯಾಂತಿ ನೈನಾಂ ಛಿಂದಂತಿ ದುಷ್ಕೃತಃ ॥37॥
ಯಾರಿಗೆ ಇಂದ್ರಿಯಗಳಿಂದಲೇ ಸುಖವನ್ನು ಹೊಂದಬೇಕು ಎಂಬ ಆಸಕ್ತಿ ಇದೆಯೋ ಆ ವಿಷಯಾಸಕ್ತಿಯೇ ಅವನನ್ನು ಬಂಧಿಸುವ ಹಗ್ಗವಾಗಿದೆ. ಪುಣ್ಯಪುರುಷರು ಈ ಬಂಧನವನ್ನು ತುಂಡು ಮಾಡಿಕೊಂಡು ಪರಮಪದವನ್ನು ಹೊಂದುತ್ತಾರೆ. ಪಾಪಿಷ್ಟರು ಈ ಹಗ್ಗವನ್ನು ಕತ್ತರಿಸರು.
ರೂಪಕೂಲಾಂ ಮನಃಸ್ರೋತಾಂ ಸ್ಪರ್ಶದ್ವೀಪಾಂ ರಸಾವಹಾಮ್ |
ಗಂಧಪಂಕಾಂ ಶಬ್ದಜಲಾಂ ಸ್ವರ್ಗಮಾರ್ಗದುರಾವಹಾಮ್ ॥38॥
ಕ್ಷಮಾರಿತ್ರಾಂ ಸತ್ಯಮಯೀಂ ಧರ್ಮಸ್ಥೈರ್ಯವಟಾಕರಾಮ್ |
ತ್ಯಾಗವಾತಾಧ್ವಗಾಂ ಶೀಘ್ರಾಂ ಬುದ್ಧಿನಾವಾ ನದೀಂ ತರೇತ್ ॥39॥
ರೂಪವೆಂಬ ತೀರದಿಂದ ಕೂಡಿದ, ಮನಸ್ಸೆಂಬ ಪ್ರವಾಹದಿಂದ, ಸ್ಪರ್ಶವೆಂಬ ದ್ವೀಪದಿಂದ, ಗಂಧವೆಂಬ ಕೆಸರಿನಿಂದ, ಶಬ್ದವೆಂಬ ಜಲದಿಂದ, ಕಷ್ಟದಿಂದ ಹೋಗುವ, ಸ್ವರ್ಗಮಾರ್ಗದಿಂದ ಕೂಡಿರುವ, ಕೇವಲ ನೌಕೆಯಿಂದ ದಾಟಲು ಸಾಧ್ಯವಾದ ಸಂಸಾರ

ನದಿಯನ್ನು, ಕ್ಷಮೆಯೆಂಬ ಹುಟ್ಟಿನಿಂದ, ಸತ್ಯಧರ್ಮದಿಂದ ಸ್ಥಿರಗೊಂಡಿರುವ ಹಗ್ಗದಿಂದ ಬಿಗಿಯಲ್ಪಟ್ಟಿರುವ, ತ್ಯಾಗವೆಂಬ ಅನುಕೂಲವಾದ ಗಾಳಿಯಿಂದ ಕೂಡಿರುವ ನೌಕೆಯಿಂದ ದಾಟಬೇಕು.
ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ |
ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತಂ ತ್ಯಜ ॥40॥
ಧರ್ಮಾಧರ್ಮಗಳನ್ನು ತೊರೆದು, ಸತ್ಯ-ಅನೃತಗಳನ್ನು ಬಿಟ್ಟು ಯಾವ ದುಃಖಕ್ಕೆ ಈಡಾಗುತ್ತಿದ್ದೀಯೋ, ಪರಲೋಕವನ್ನು ತಪ್ಪಿಸುವ ಅಂತಹ ಸಂಸಾರವನ್ನೇ ನೀನು ಬಿಟ್ಟುಬಿಡು.
ತ್ಯಜ ಧರ್ಮಮಸಂಕಲ್ಪಾದಧರ್ಮಂ ಚಾಪ್ಯಹಿಂಸಯಾ |
ಉಭೇ ಸತ್ಯಾನೃತೇ ಬುದ್ಧ್ಯಾ ಬುದ್ಧಿಂ ಪರಮನಿಶ್ಚಯಾತ್ ॥41॥
ತ್ಯಾಗದಿಂದ ಧರ್ಮವನ್ನು ತ್ಯಜಿಸು. ಅಹಿಂಸೆಯಿಂದ ಅಧರ್ಮವನ್ನು ತ್ಯಜಿಸು. ಸತ್ಯಾನೃತಗಳನ್ನು ಬುದ್ಧಿಯಿಂದ ತ್ಯಜಿಸು. ಭಗವಂತನನ್ನು ಚಿಂತಿಸುತ್ತಾ ಈ ಬಂಧಕವಾದ ಬುದ್ಧಿಯನ್ನು ತ್ಯಜಿಸು.
ಅಸ್ಥಿಸ್ಥೂಣಂ ಸ್ನಾಯುಯುತಂ ಮಾಂಸಶೋಣಿತಲೇಪನಮ್ |
ಚರ್ಮಾವನದ್ಧಂ ದುರ್ಗಂಧಿ ಪೂರ್ಣಂ ಮೂತ್ರಪುರೀಷಯೋಃ ॥42॥
ಮೂಳೆಗಳೆಂಬ ಸ್ತಂಭದಿಂದ ಕೂಡಿರುವ, ನರ-ನಾಡಿಗಳಿಂದ ಕೂಡಿರುವ, ಮಾಂಸ-ರಕ್ತಗಳಿಂದ ಯುಕ್ತವಾಗಿರುವ, ಚರ್ಮದಿಂದ ವರ್ಜಿಸಲ್ಪಟ್ಟಿರುವ, ದುರ್ಗಂಧಯುಕ್ತವಾದ ಮಲ-ಮೂತ್ರಗಳಿಂದ ತುಂಬಿರುವ,
ಜರಾಶೋಕಸಮಾವಿಷ್ಟಂ ರೋಗಾಯತನಮಾತುರಮ್ |
ರಜಸ್ವಲಮನಿತ್ಯಂ ಚ ಭೂತಾವಾಸಂ ಸಮುತ್ಸೃಜ ॥43॥
ಮುಪ್ಪು-ದುಃಖಗಳಿಂದ ಕೂಡಿರುವ, ರೋಗಗಳ ಮನೆಯಾಗಿರುವ, ರೋಗ ಪೀಡಿತವಾಗಿರುವ, ರಜೋಗುಣರೂಪವಾದ ಧೂಳಿನಿಂದ ಮುಚ್ಚಿಹೋಗಿರುವಾಗ, ಪಂಚಭೂತಗಳ ಆವಾಸಸ್ಥಾನವಾಗಿರುವ ಈ ಶರೀರವನ್ನು ಬಿಟ್ಟುಬಿಡು.
ಇದಂ ವಿಶ್ವಂ ಜಗತ್ ಸರ್ವಮಜಗಚ್ಚಾಪಿ ಯದ್ ಭವೇತ್ |
ಮಹಾಭೂತಾತ್ಮಕಂ ಸರ್ವಂ ಮಹದ್ ಯತ್ ಪರಮಾಣು ತತ್ ॥44॥
ಹುಟ್ಟು-ಸಾವುಗಳನ್ನು ಹೊಂದುವುದರಿಂದಲೇ ಈ ಪ್ರಪಂಚವು ಜಗತ್ ಎನಿಸಿದೆ. ಈ ಸ್ಥಾವರ-ಜಂಗಮಾತ್ಮಕವಾದ, ಪಂಚಭೂತಾತ್ಮಕವಾದ ಸಮಸ್ತ ಜಗತ್ತು ಮಹತ್ತಾಗಿ ಕಂಡರೂ ಪರಮಾತ್ಮನ ದೃಷ್ಟಿಯಿಂದ ಪರಮಾಣುವಾಗಿಯೇ ಇದೆ.
ಇಂದ್ರಿಯಾಣಿ ಚ ಪಂಚೈವ ತಮಃ ಸತ್ತ್ವಂ ರಜಸ್ತಥಾ |
ಇತ್ಯೇಷ ಸಪ್ತದಶಕೋ ರಾಶಿರವ್ಯಕ್ತಸಂಜ್ಞಕಃ ॥45॥
ಪಂಚಜ್ಞಾನೇಂದ್ರಿಯಗಳು, ಸತ್ವ-ರಜಸ್ಸು-ತಮಸ್ಸು ಎಂಬ ಮೂರು ಗುಣಗಳು, ಇವುಗಳಿಂದ ಕೂಡಿದ ಹದಿನೇಳರ ಸಮೂಹವೆನಿಸಿದ ಈ ಶರೀರಕ್ಕೆ ಅವ್ಯಕ್ತವೆಂದು ಹೆಸರು.
ಸರ್ವೈರಿಹೇಂದ್ರಿಯಾರ್ಥೈಶ್ಚ ವ್ಯಕ್ತಾವ್ಯಕ್ತೈರ್ಹಿ ಸಂಹಿತಃ |
ಪಂಚವಿಂಶಕ ಇತ್ಯೇಷ ವ್ಯಕ್ತಾವ್ಯಕ್ತಮಯೋ ಗುಣಃ ॥46॥
ಅವ್ಯಕ್ತಗುಣಕ್ಕೆ ಸೇರಿದ ಹದಿನೇಳರ ಜೊತೆ ವ್ಯಕ್ತಗುಣಕ್ಕೆ ಸೇರಿದ ಶಬ್ದ-ಸ್ಪರ್ಶ- ರೂಪ-ರಸ-ಗಂಧ-ಸಂಕಲ್ಪ-ವಿಕಲ್ಪ ಹೀಗೆ ಏಳು ಸೇರಿದಾಗ ಒಟ್ಟು ಇಪ್ಪತ್ನಾಲ್ಕು ಗುಣಗಳಾಗುತ್ತವೆ.
ಏತೈಃ ಸರ್ವೈಃ ಸಮಾಯುಕ್ತಃ ಪುಮಾನಿತ್ಯಭಿಧೀಯತೇ |
ತ್ರಿವರ್ಗೋಽತ್ರ ಸುಖಂ ದುಃಖಂ ಜೀವಿತಂ ಮರಣಂ ತಥಾ ॥47॥
ಯ ಇದಂ ವೇದ ತತ್ತ್ವೇನ ಸ ವೇದ ಪ್ರಭವಾಪ್ಯಯೌ |
ಪಾರಾಶರ್ಯೇಹ ಬೋದ್ಧವ್ಯಂ ಜ್ಞಾನಾನಾಂ ಯಚ್ಚ ಕಿಂಚನ ॥48॥
ಈ ಇಪ್ಪತ್ನಾಲ್ಕು ತತ್ತ್ವಗಳ ಗುಣದಿಂದ ಕೂಡಿದ ಜೀವನನ್ನು ಪುರುಷನೆಂದು ಕರೆಯುತ್ತಾರೆ. ಯಾವ ಪುರುಷನು ಧರ್ಮ-ಅರ್ಥ-ಕಾಮ ಎಂಬ ತ್ರಿವರ್ಗವನ್ನು, ಸುಖ-ದುಃಖವನ್ನು, ಹುಟ್ಟು-ಸಾವುಗಳನ್ನು ಯಥಾವತ್ತಾಗಿ ಅರಿತಿರುತ್ತಾನೋ ಅವನು ಉತ್ಪತ್ತಿ-ಪ್ರಳಯಗಳ ತತ್ತ್ವವನ್ನು ಯಥವತ್ತಾಗಿ ತಿಳಿದಿರುತ್ತಾನೆ. ಹೀಗೆ ಜ್ಞಾನಕ್ಕೆ ಸಂಬಂಧಿಸಿದ ವಿಷಯಗಳನ್ನು ಪರಾಶರರ ಮೊಮ್ಮಗನಾದ ನೀನು ತಿಳಿದುಕೊಳ್ಳಬೇಕು.
ಇಂದ್ರಿಯೈರ್ಗೃಹ್ಯತೇ ಯದ್ಯತ್ ತತ್ತದ್ವ್ಯಕ್ತಮಿತಿ ಸ್ಥಿತಿಃ |
ಅವ್ಯಕ್ತಮಿತಿ ವಿಜ್ಞೇಯಂ ಲಿಂಗಗ್ರಾಹ್ಯಮತೀಂದ್ರಿಯಮ್ ॥49॥
ಯಾವ ಪದಾರ್ಥವನ್ನು ಇಂದ್ರಿಯಗಳಿಂದ ಗ್ರಹಿಸಲು ಸಾಧ್ಯವಾಗುತ್ತದೋ ಅದಕ್ಕೆ ವ್ಯಕ್ತ ಎಂದು ಹೆಸರು. ಅನುಮಾನದಿಂದ ಗ್ರಾಹ್ಯವಾದುದು, ಅತೀಂದ್ರಿಯವಾದುದು ಅವ್ಯಕ್ತ ಎಂದು ತಿಳಿಯಬೇಕು.
ಇಂದ್ರಿಯೈರ್ನಿಯತೈರ್ದೇಹೀ ಧಾರಾಭಿರಿವ ತರ್ಪ್ಯತೇ |
ಲೋಕೇ ವಿತತಮಾತ್ಮಾನಂ ಲೋಕಂ ಚಾತ್ಮನಿ ಪಶ್ಯತಿ ॥50॥
ಇಂದ್ರಿಯಗಳನ್ನು ನಿಗ್ರಹದಲ್ಲಿಟ್ಟುಕೊಂಡ ಜೀವನು ಜಲಧಾರೆಗಳಿಂದ ತೃಪ್ತಿ ಹೊಂದಿದವನಂತೆ ತೃಪ್ತನಾಗಿರುತ್ತಾನೆ. ಜಗತ್ತಿನಲ್ಲಿ ಭಗವಂತನು ವ್ಯಾಪ್ತನಾದುದನ್ನು, ತನ್ನಲ್ಲಿ ಪರಮಾತ್ಮನು ಅಂತರ್ಯಾಮಿಯಾಗಿರುವುದನ್ನು ಆ ಸಾಧಕನು ನೋಡುತ್ತಾನೆ.
ಪರಾವರದೃಶಃ ಶಕ್ತಿರ್ಜ್ಞಾನವೇಲಾಂ ನ ಪಶ್ಯತಿ |
ಪಶ್ಯತಃ ಸರ್ವಭೂತಾನಿ ಸರ್ವಾವಸ್ಥಾಸು ಸರ್ವದಾ ॥51॥
ಸರ್ವೋತ್ತಮನಾದ ಭಗವಂತನು, ಅವರವಾದ ಪ್ರಪಂಚ ಇವೆರಡರ ಬಗ್ಗೆ ಜ್ಞಾನವುಳ್ಳವನು ಜ್ಞಾನದ ಕೊನೆಯನ್ನೇ ಕಾಣುವುದಿಲ್ಲ. ಎಲ್ಲ ಅವಸ್ಥೆಗಳಲ್ಲಿಯೂ ಯಾವಾಗಲೂ ಸಮಸ್ತ ಭೂತಗಳ ಅಂತರ್ಯಾಮಿಯಾದ ಭಗವಂತನನ್ನೇ ಕಾಣುವವನಾಗುತ್ತಾನೆ.

ಬ್ರಹ್ಮಭೂತಸ್ಯ ಸಂಯೋಗೋ ನಾಶುಭೇನೋಪಪದ್ಯತೇ |
ಜ್ಞಾನೇನ ವಿವಿಧಾನ್ ಕ್ಲೇಶಾನತಿವೃತ್ತಸ್ಯ ಮೋಹಜಾನ್ |
ಲೋಕೇ ಬುದ್ಧಿಪ್ರಕಾಶೇನ ಲೋಕಮಾರ್ಗೋ ನ ರಿಷ್ಯತೇ ॥52॥
ಬ್ರಹ್ಮಜ್ಞಾನನಿರತನಾದ ವ್ಯಕ್ತಿಗೆ ಅಶುಭ ಪದಾರ್ಥಗಳ ಸಂಯೋಗವು ಎಂದಿಗೂ ಆಗುವುದಿಲ್ಲ. ಜ್ಞಾನಬಲದಿಂದ ಮೋಹಜನಿತ ಅನೇಕ ಕ್ಲೇಶಗಳನ್ನು ದಾಟಿರುವ ಜ್ಞಾನಿಗೆ ಜಗತ್ತಿನಲ್ಲಿ ಬೌದ್ಧಿಕವಾಗಿ ಮಾಡಬೇಕಾದ ವ್ಯವಹಾರಗಳಿಗೆ ತಡೆಯುಂಟಾಗುವುದಿಲ್ಲ.
ಅನಾದಿನಿಧನಂ ಜಂತುಮಾತ್ಮನಿ ಸ್ಥಿತಮವ್ಯಯಮ್ |
ಅಕರ್ತಾರಮಮೂರ್ತಂ ಚ ಭಗವಾನಾಹ ತೀರ್ಥವಿತ್ ॥53॥
ಶಾಸ್ತ್ರವನ್ನು ಅರಿತಿರುವ ಭಗವನ್ನಾರಾಯಣನು ಸ್ವತಂತ್ರವಾಗಿ ಕರ್ತೃತ್ವ ಶಕ್ತಿ ರಹಿತನಾದ, ದೇಹಾಭಿಮಾನರಹಿತನಾದ ಜೀವನನ್ನು, ತನ್ನಲ್ಲಿ ನೆಲೆಸಿದ್ದಾನೆಂದು, ತನ್ನ ಅಧೀನದಲ್ಲಿದ್ದಾನೆಂದು ಹೇಳಿರುತ್ತಾನೆ.
ಯೋ ಜಂತುಃ ಸ್ವಕೃತೈಸ್ತೈಸ್ತೈಃ ಕರ್ಮಭಿರ್ನಿತ್ಯದುಃಖಿತಃ |
ಸ ದುಃಖಪ್ರತಿಘಾತಾರ್ಥಂ ಹಂತಿ ಜಂತೂನನೇಕಧಾ ॥54॥
ಯಾವ ಪ್ರಾಣಿಯು ತಾನೇ ಮಾಡಿದ ಆಯಾ ಪುಣ್ಯ-ಪಾಪಗಳ ಸಂಬಂಧದಿಂದ ದುಃಖಿತನಾಗುತ್ತಾನೋ ಅದೇ ಜೀವನು ತನ್ನ ದುಃಖ ನಿವಾರಣೆಗೆ ಅನೇಕ ಜಂತುಗಳನ್ನು ಅನೇಕ ರೀತಿಯಲ್ಲಿ ಸಂಹರಿಸುತ್ತಾನೆ.
ತತಃ ಕರ್ಮ ಸಮಾದತ್ತೇ ಪುನರನ್ಯನ್ನವಂ ಬಹು |
ತಪ್ಯತೇಽಥ ಪುನಸ್ತೇನ ಭುಕ್ತ್ವಾಪಥ್ಯಮಿವಾತುರಃ ॥55॥
ಬಳಿಕ ಆ ಮನುಷ್ಯನು ಕರ್ಮಗಳನ್ನು ಹೊಂದುತ್ತಾ, ಪುನಃ ಬೇರೆಯದ್ದಾದ ಹೊಸದಾದ ಅನೇಕ ಯೋನಿಗಳಲ್ಲಿ ಹುಟ್ಟಿ, ಅಪಥ್ಯವನ್ನಾಚರಿಸಿದ ರೋಗಿಯು ಪುನಃ ಪುನಃ ದುಃಖಕ್ಕೆ ತುತ್ತಾಗುವಂತೆ ದುಃಖಕ್ಕೀಡಾಗುತ್ತಾನೆ.
ಅಜಸ್ರಮೇವ ಮೋಹಾರ್ತೋ ದುಃಖೇಷು ಸುಖಸಂಜ್ಞಿತಃ |
ಬಧ್ಯತೇ ಮಥ್ಯತೇ ಚೈವ ಕರ್ಮಭಿರ್ಮಂಥವತ್ ಸದಾ ॥56॥
ಮೋಹದಿಂದ ವಿವೇಕಶೂನ್ಯನಾದ ಜೀವನು ದುಃಖದಾಯಕ ಭೋಗಗಳಲ್ಲಿಯೇ ಸುಖದ ಭ್ರಮೆಯನ್ನು ಹೊಂದಿರುತ್ತಾನೆ. ತಾವೇ ಮಾಡುವ ಕರ್ಮಗಳಿಂದ ಬಂಧಿತನಾಗಿ ಕಡೆಗೋಲಿನಂತೆ ವಧಿಸಲ್ಪಡುತ್ತಾನೆ.
ತತೋ ನಿವೃತ್ತೋ ಬಂಧಾತ್ಸ್ವಾತ್ ಕರ್ಮಣಾಮುದಯಾದಿಹ |
ಪರಿಭ್ರಮತಿ ಸಂಸಾರಂ ಚಕ್ರವದ್ ಬಹುವೇದನಃ ॥57॥
ಪ್ರಾರಬ್ಧಕರ್ಮಗಳ ಉತ್ಪತ್ತಿಯಿಂದ ಬಂಧಿತನಾದ ಮನುಷ್ಯನು ಕರ್ಮಾನುಸಾರ ಜನ್ಮವನ್ನು ತಾಳಿ, ಅನೇಕ ಯಾತನೆಯನ್ನನುಭವಿಸುತ್ತಾ ಚಕ್ರದಂತೆ ಸುತ್ತುತ್ತಿರುತ್ತಾನೆ.
ಸ ತ್ವಂ ನಿವೃತ್ತಬಂಧಸ್ತು ನಿವೃತ್ತಶ್ಚಾಪಿ ಕರ್ಮತಃ |
ಸರ್ವವಿತ್ ಸರ್ವಜಿತ್ ಸಿದ್ಧೋ ಭವ ಭಾವವಿವರ್ಜಿತಃ ॥58॥
ಆದ್ದರಿಂದ ನೀನು ಕರ್ಮಗಳಿಂದ ಮುಕ್ತನಾಗಿ, ಬಂಧನಗಳಿಂದ ಬಿಡುಗಡೆಯನ್ನು ಹೊಂದಿ, ಸರ್ವಜ್ಞನಾಗಿ, ಸರ್ವವನ್ನೂ ಜಯಿಸಿದವನಾಗಿ, ಸಾಂಸಾರಿಕ ಭಾವನೆಯಿಂದ ರಹಿತನಾಗಿ ಸಿದ್ಧಿಯನ್ನು ಹೊಂದು.
ಸಂಯಮೇನ ನವಂ ಬಂಧಂ ನಿವರ್ತ್ಯ ತಪಸೋ ಬಲಾತ್ |
ಸಂಪ್ರಾಪ್ತಾ ಬಹವಃ ಸಿದ್ಧಿಮಪ್ಯಬಾಧಾಂ ಸುಖೋದಯಾಮ್ ॥59॥
ಅನೇಕ ಜ್ಞಾನಿಗಳು ಮನೋನಿಗ್ರಹದಿಂದ, ತಪೋಬಲದಿಂದ ನೂತನ ಬಂಧನಗಳನ್ನು ನಿವಾರಿಸಿಕೊಂಡು ಯಾವುದೇ ಬಾಧೆಗಳಿಲ್ಲದ ಸುಖವನ್ನು ಕೊಡುವ ಸಿದ್ಧಿಯನ್ನು ಹೊಂದಿರುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಶುಕಾನುಶಾಸನೇ ಏಕಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆರಡನೆಯ ಅಧ್ಯಾಯ
ನಾರದರು ಶುಕಮುನಿಗೆ ನೀಡಿದ ಉಪದೇಶಗಳು.
ನಾರದಃ
ಅಶೋಕಂ ಶೋಕನಾಶಾರ್ಥಂ ಶಾಸ್ತ್ರಂ ಶಾಂತಿಕರಂ ಶಿವಮ್ |
ನಿಶಮ್ಯ ಲಭತೇ ಬುದ್ಧಿಂ ತಾಂ ಲಬ್ಧ್ವಾ ಸುಖಮೇಧತೇ ॥1॥
ನಾರದ ಶುಕದೇವನೆ, ದುಃಖಕ್ಕೆ ಅವಕಾಶವಿಲ್ಲದ, ಪರಮಮಂಗಳಕರವಾದ ಶಾಸ್ತ್ರವನ್ನು ಶೋಕದ ನಾಶಕ್ಕೋಸ್ಕರ ಯಾವಾತನು ಏಕಾಗ್ರಚಿತ್ತದಿಂದ ಕೇಳುತ್ತಾನೋ ಅವನು ಉತ್ತಮವಾದ ಬುದ್ಧಿಯನ್ನು ಹೊಂದಿ ಸುಖವನ್ನು ಪಡೆಯುತ್ತಾನೆ.
ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥2॥
ಸಾವಿರಾರು ಶೋಕದ ಪ್ರಸಂಗಗಳು, ಭಯಕ್ಕೆ ಕಾರಣವಾಗುವ ನೂರಾರು ಪ್ರಸಂಗಗಳು ಪ್ರತಿದಿವಸವೂ ಮೂರ್ಖನಾದ ಮನುಷ್ಯನನ್ನು ಆಕ್ರಮಿಸುವಂತೆ ಪಂಡಿತನನ್ನು ಆಕ್ರಮಿಸುವುದಿಲ್ಲ.
ತಸ್ಮಾದನಿಷ್ಟನಾಶಾರ್ಥಮಿತಿಹಾಸಂ ನಿಬೋಧ ಮೇ |
ತಿಷ್ಠತೇ ಚೇದ್ವಶೇ ಬುದ್ಧಿರ್ಲಭತೇ ಶೋಕನಾಶನಮ್ ॥3॥

ಆದ್ದರಿಂದ ಅನಿಷ್ಟವನ್ನು ಪರಿಹರಿಸಿಕೊಳ್ಳಲು ವ್ಯಕ್ತಿಯು ನಾನು ಹೇಳಲಿರುವ ಉಪದೇಶವನ್ನು ಬುದ್ಧಿಯು ವಶದಲ್ಲಿದ್ದು ತಿಳಿದುಕೊಂಡಲ್ಲಿ ಶೋಕವು ನಾಶವಾಗುತ್ತದೆ.

ಅನಿಷ್ಟಸಂಪ್ರಯೋಗಾಚ್ಚ ವಿಪ್ರಯೋಗಾತ್ ಪ್ರಿಯಸ್ಯ ಚ |
ಮನುಷ್ಯಾ ಮಾನಸೈರ್ದುಃಖೈರ್ಯುಜ್ಯಂತೇ ಅಲ್ಪಬುದ್ಧಯಃ ॥4॥

ಅಪ್ರಿಯವಾದ ವಸ್ತುಗಳನ್ನು ಬಯಸುವುದರಿಂದ, ಪ್ರಿಯವಾದ ವಸ್ತುಗಳನ್ನು ತ್ಯಜಿಸುವುದರಿಂದ ಅಲ್ಪಬುದ್ಧಿಗಳು ಮಾನಸಿಕವಾದ ದುಃಖಗಳಿಗೆ ಈಡಾಗುತ್ತಾರೆ.

ದ್ರವ್ಯೇಷು ಸಮತೀತೇಷು ಯೇ ಗುಣಾಸ್ತಾನ್ನ ಚಿಂತಯೇತ್ |
ತಾನನಾದ್ರಿಯಮಾಣಸ್ಯ ಸ್ನೇಹಬಂಧಃ ಪ್ರಮುಚ್ಯತೇ ॥5॥

ಒಂದು ವಸ್ತುವು ಕಳೆದುಹೋದ ಬಳಿಕ ಅದರಲ್ಲಿದ್ದ ಗುಣಗಳನ್ನು ಚಿಂತಿಸುತ್ತಿರಬಾರದು. ಆದರದಿಂದ ಆ ಗುಣಗಳನ್ನೇ ಆಲೋಚಿಸುತ್ತಿದ್ದರೆ ಸ್ನೇಹ ಬಂಧವು ಬಿಟ್ಟುಹೋಗುವುದಿಲ್ಲ.

ದೋಷದರ್ಶೀ ಭವೇತ್ ತತ್ರ ಯತ್ರ ರಾಗಃ ಪ್ರವರ್ತತೇ |
ಅನಿಷ್ಟಮನ್ವಿತಂ ಪಶ್ಯೇತ್ತಥಾ ಕ್ಷಿಪ್ರಾಂ ವಿರಜ್ಯತೇ ॥6॥

ಯಾವ ಪದಾರ್ಥವು ಮನಸ್ಸಿಗೆ ಅತ್ಯಂತ ಆಕರ್ಷಕವಾಗಿ ಕಾಣಿಸುತ್ತದೋ ಆ ರಾಗ ಹುಟ್ಟಿದ ಪದಾರ್ಥದಲ್ಲಿ ದೋಷವಿದೆ ಎಂಬುದನ್ನು ತಿಳಿದುಕೊಳ್ಳಬೇಕು. ಆ ವಸ್ತುವಿನಲ್ಲಿ ದೋಷವಿದೆ ಎಂಬುದನ್ನು ತಿಳಿದಾಗ ಅದರಿಂದ ವೈರಾಗ್ಯ ಉಂಟಾಗುತ್ತದೆ.

ನಾರ್ಥೋ ನ ಧರ್ಮೋ ನ ಯಶೋ ಯೋಽತೀತಮನುಶೋಚತಿ |
ಅಪ್ಯಭಾವೇನ ಯುಜ್ಯೇತ ತಚ್ಚಾಸ್ಯ ನ ನಿವರ್ತತೇ ॥7॥

ಯಾವನು ಕಳೆದುಹೋದ ವಿಷಯದಲ್ಲಿಯೇ ಶೋಕಪಡುತ್ತಿರುತ್ತಾನೋ ಅವನಿಗೆ ಅರ್ಥವು ಲಭಿಸುವುದಿಲ್ಲ, ಧರ್ಮವೂ ಲಭಿಸುವುದಿಲ್ಲ, ಯಶಸ್ಸೂ ಲಭಿಸುವುದಿಲ್ಲ. ಕಳೆದುಹೋದ ವಸ್ತುವನ್ನೇ ನೆನೆದು ಶೋಕ ಹೊಂದುತ್ತಿದ್ದರೆ ಆ ವಸ್ತುವಿನ ಕೊರತೆಯಿಂದ ದುಃಖಪಡುತ್ತಾನೆಯೇ ಹೊರತು ವಸ್ತುವನ್ನು ಎಂದಿಗೂ ಹೊಂದಲಾಗುವುದಿಲ್ಲ.

ಗುಣೈರ್ಭೂತಾನಿ ಯುಜ್ಯಂತೇ ವಿಯುಜ್ಯಂತೇ ತಥೈವ ಚ |
ಸರ್ವಾಣಿ ನೈತದೇಕಸ್ಯ ಶೋಕಸ್ಥಾನಂ ಹಿ ವಿದ್ಯತೇ ॥8॥

ಎಲ್ಲ ಪ್ರಾಣಿಗಳಿಗೂ ಉತ್ತಮ ಗುಣವುಳ್ಳ ಪ್ರಿಯವಾದ ವಸ್ತುಗಳ ಸಂಯೋಗವು ಆಗುತ್ತದೆ, ವಿಯೋಗವೂ ಆಗುತ್ತದೆ. ಯಾವಾಗಲೂ ಶೋಕವೆಂದಾಗಲಿ, ಯಾವಾಗಲೂ ಸುಖವೆಂಬುದಾಗಲಿ ಮನುಷ್ಯನಿಗೆ ಇರುವುದಿಲ್ಲ. ಕ್ರಮವಾಗಿ ಇವು ಮನುಷ್ಯರನ್ನು ಅನುಸರಿಸುತ್ತವೆ.

ಮೃತಂ ವಾ ಯದಿ ವಾ ನಷ್ಟಂ ಯೋಽತೀತಮನುಶೋಚತಿ |
ದುಃಖೇನ ಲಭತೇ ದುಃಖಂ ದ್ವಾವನರ್ಥೌ ಪ್ರಪದ್ಯತೇ ॥9॥

ಮೃತನಾದ ವ್ಯಕ್ತಿಯ ಬಗ್ಗೆಯಾಗಲಿ, ನಷ್ಟವಾದ ಪದಾರ್ಥದ ಬಗ್ಗೆಯಾಗಲಿ ಯಾವನು ದುಃಖವನ್ನು ಹೊಂದುತ್ತಾನೋ ಅವನಿಗೆ ದುಃಖದಿಂದ ದುಃಖವೇ ಲಭಿಸುತ್ತದೆ. ಎರಡು ಅನರ್ಥಗಳನ್ನು ಹೊಂದಿದಂತಾಗುತ್ತದೆ.

ನಾಶ್ರು ಕುರ್ವಂತಿ ಯೇ ಬುದ್ಧ್ಯಾ ದೃಷ್ಟ್ವಾ ಲೋಕೇಷು ಸಂತತಿಮ್ |
ಸಮ್ಯಕ್ಪ್ರಪಶ್ಯತಃ ಸರ್ವಂ ನಾಶ್ರುಕರ್ಮೋಪಪದ್ಯತೇ ॥10॥

ಯಾರು ಜನಸಮೂಹದಲ್ಲಿ ಆಗುವ ಮರಣ ನಷ್ಟಗಳನ್ನು ನೋಡುತ್ತಿರುತ್ತಾರೋ, ಅದೇ ರೀತಿ ತಮಗೂ ಆಗುವ ಸಂತತಿಯ ಮರಣ-ನಾಶಗಳಿಗಾಗಿ ಯಾರು ಬುದ್ಧಿಯಿಂದ ನಿಯಂತ್ರಿಸಿಕೊಂಡು ಕಣ್ಣೀರು ಸುರಿಸುವುದಿಲ್ಲ, ಹಾಗೆ ಚೆನ್ನಾಗಿ ವಿಮರ್ಶಿಸಿದ ವ್ಯಕ್ತಿಯು ಯಾವ ವಿಷಯದಲ್ಲಾಗಲಿ ಕಣ್ಣೀರನ್ನು ಸುರಿಸುವುದಿಲ್ಲ.

ದುಃಖೋಪಘಾತೇ ಶಾರೀರೇ ಮಾನಸೇ ವಾಪ್ಯುಪಸ್ಥಿತೇ |
ಯಸ್ಮಿನ್ನ ಶಕ್ಯತೇ ಕರ್ತುಂ ಯತ್ನಸ್ತನ್ನಾನುಚಿಂತಯೇತ್ ॥11॥

ಶಾರೀರಿಕವಾದ, ಮಾನಸಿಕವಾದ ದುಃಖವು ಒದಗಿದಾಗ, ದುಃಖವನ್ನು ಯಾವುದೇ ಪ್ರಯತ್ನದಿಂದ ದೂರೀಕರಿಸಲು ಸಾಧ್ಯವಿಲ್ಲದಿದ್ದಾಗ, ಪ್ರಯತ್ನವೆಲ್ಲವೂ ನಿಷ್ಫಲವಾದಾಗ ಆ ವಿಷಯದ ಬಗ್ಗೆ ಚಿಂತಿಸಬಾರದು.

ಭೈಷಜ್ಯಮೇತದ್ ದುಃಖಸ್ಯ ಯದೇತನ್ನಾನುಚಿಂತಯೇತ್ |
ಚಿಂತ್ಯಮಾನಂ ಹಿ ನ ವ್ಯೇತಿ ಭೂಯಶ್ಚಾಪಿ ಪ್ರವರ್ಧತೇ ॥12॥

ದುಃಖಕ್ಕೆ ಔಷಧಿಯೇ ಇದು. ದುಃಖದ ಬಗ್ಗೆ ಯೋಚಿಸಬಾರದು. ಅದನ್ನು ಯೋಚಿಸುತ್ತಿದ್ದರೆ ಆ ದುಃಖವು ಮತ್ತೂ ಉಲ್ಬಣವಾಗುತ್ತದೆ.

ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರಮೌಷಧೈಃ |
ಏತದ್ ವಿಜ್ಞಾನಸಾಮರ್ಥ್ಯಂ ನ ಬಾಲೈಃ ಸಮತಾಮಿಯಾತ್ ॥13॥

ಪ್ರಜ್ಞಾಪೂರ್ವಕವಾಗಿ ಮಾನಸ ದುಃಖಗಳನ್ನು ನಿವಾರಿಸಿಕೊಳ್ಳಬೇಕು. ಶಾರೀರಿಕ ದುಃಖಗಳನ್ನು ಔಷಧಗಳಿಂದ ನಿವಾರಿಸಿಕೊಳ್ಳಬೇಕು. ಜ್ಞಾನದ ಸಾಮರ್ಥ್ಯದಿಂದ ಇದು ಸಾಧ್ಯವಾಗುತ್ತದೆ. ಆದ್ದರಿಂದ ದುಃಖವು ಸಂಭವಿಸಿದಾಗ ಮಕ್ಕಳಂತೆ ಅಳುತ್ತಿರಬಾರದು.

ಅನಿತ್ಯಂ ಯೌವನಂ ರೂಪಂ ಜೀವಿತಂ ದ್ರವ್ಯಸಂಚಯಃ |
ಆರೋಗ್ಯಂ ಪ್ರಿಯಸಂವಾಸೋ ಗೃಧ್ಯೇತ್ತತ್ರ ನ ಪಂಡಿತಃ ॥14॥

ರೂಪ, ಯೌವನ, ಜೀವನ, ಧನಸಂಗ್ರಹ, ಆರೋಗ್ಯ, ಪ್ರಿಯಜನರ ಸಹವಾಸ ಇವೆಲ್ಲವೂ ಅನಿತ್ಯವಾದವುಗಳು. ಆದ್ದರಿಂದ ಪಂಡಿತನಾದವನು ಇವುಗಳಲ್ಲಿ ಆಸಕ್ತಿ ಹೊಂದಬಾರದು.

ನ ಜಾನಪದಿಕಂ ದುಃಖಮೇಕಃ ಶೋಚಿತುಮರ್ಹತಿ |
ಅಶೋಚನ್ ಪ್ರತಿಕುರ್ವೀತ ಯದಿ ಪಶ್ಯೇದುಪಕ್ರಮಮ್ ॥15॥

ದೇಶಕ್ಕೆ ಸಂಬಂಧಿಸಿದ ದುಃಖವು ಒದಗಿದಾಗ ಒಬ್ಬನೇ ದುಃಖಪಡುವುದು ಯೋಗ್ಯವಲ್ಲ. ದುಃಖಪರಿಹಾರದ ಆರಂಭವನ್ನು ಕಂಡುಕೊಂಡವನು ದುಃಖ ಪಡದೆ ಇದ್ದರೆ ಅದಕ್ಕೆ ಚಿಕಿತ್ಸೆ ಕೊಡಲು ಸಾಧ್ಯವಾಗುತ್ತದೆ.
ಸುಖಾದ್ ಬಹುತರಂ ದುಃಖಂ ಜೀವಿತೇ ನಾತ್ರ ಸಂಶಯಃ |
ಸ್ನಿಗ್ಧತ್ವಂ ಚೇಂದ್ರಿಯಾರ್ಥೇಷು ಮೋಹಾನ್ಮರಣಮಪ್ರಿಯಮ್ ॥16॥
ಜೀವನದಲ್ಲಿ ಸುಖಕ್ಕಿಂತ ದುಃಖವೇ ಅಧಿಕವಾಗಿರುತ್ತದೆ. ಇದರಲ್ಲಿ ಸಂಶಯವಿಲ್ಲ. ಆದರೆ ಮೋಹದಿಂದಾಗಿ ಇಂದ್ರಿಯ ವಿಷಯಗಳಲ್ಲಿ ಅನುರಾಗ ಹುಟ್ಟಿರುವುದರಿಂದ ಮರಣವು ಅಪ್ರಿಯವೆನಿಸುತ್ತದೆ.
ಪರಿತ್ಯಜತಿ ಯೋ ದುಃಖಂ ಸುಖಂ ವಾಪ್ಯುಭಯಂ ನರಃ |
ಅಭ್ಯೇತಿ ಬ್ರಹ್ಮ ಸೋಽತ್ಯಂತಂ ನ ತಂ ಶೋಚಂತಿ ಪಂಡಿತಾಃ ॥17॥
ಯಾವ ಮನುಷ್ಯನು ದುಃಖವನ್ನು, ಸುಖವನ್ನು ತ್ಯಜಿಸಿ ನಿರ್ಲಿಪ್ತನಾಗಿರುತ್ತಾನೋ ಅವನು ಗುಣಪರಿಪೂರ್ಣನಾದ ಬ್ರಹ್ಮನನ್ನು ಹೊಂದುತ್ತಾನೆ. ದುಃಖದ ಕೊನೆಯನ್ನು ಮುಟ್ಟುತ್ತಾನೆ. ಅವನ ವಿಷಯದಲ್ಲಿ ಪಂಡಿತರು ದುಃಖಿಸುವುದಿಲ್ಲ.
ದುಃಖಮರ್ಥಾ ಹಿ ತ್ಯಜ್ಯಂತೇ ಪಾಲನೇ ನ ಚ ತೇ ಸುಖಾಃ |
ದುಃಖೇನ ಚಾಧಿಗಮ್ಯಂತೇ ನಾಶಮೇಷಾಂ ನ ಚಿಂತಯೇತ್ ॥18॥
ಅನ್ಯಾಮನ್ಯಾಂ ಧನಾವಸ್ಥಾಂ ಪ್ರಾಪ್ಯ ವೈಶೇಷಿಕೀಂ ನರಾಃ |
ಅತೃಪ್ತಾ ಯಾಂತಿ ವಿಧ್ವಂಸಂ ಸಂತೋಷಂ ಯಾಂತಿ ಪಂಡಿತಾಃ॥19॥
ಸಂಪಾದಿಸಿದ ಹಣವನ್ನು ದುಃಖದಿಂದಲೇ ತ್ಯಜಿಸುತ್ತಾರೆ. ಆ ಹಣವನ್ನು ಸಂಪಾದಿಸುವಾಗ ಸುಖವನ್ನು ಹೊಂದುವುದಿಲ್ಲ. ಧನ-ಧಾನ್ಯ-ದೇಹಾದಿಗಳೆಲ್ಲವೂ ದುಃಖದಿಂದಲೇ ಹೊಂದಲ್ಪಡುತ್ತವೆ. ಆದ್ದರಿಂದ ಇವುಗಳ ನಾಶಕ್ಕಾಗಿ ದುಃಖಿಸಬಾರದು. ಮನುಷ್ಯನು ಯಾವಾಗಲೂ ದ್ರವ್ಯವನ್ನು ಸಂಗ್ರಹಿಸುತ್ತಾ ಮೊದಲಿಗಿಂತ ಹೆಚ್ಚು ಶ್ರೀಮಂತಿಕೆಯನ್ನು ಹೊಂದುತ್ತಿದ್ದರೂ ತೃಪ್ತಿ ಉಂಟಾಗುವುದಿಲ್ಲ. ಅಸಂತೋಷದಿಂದಲೇ ಮರಣ ಹೊಂದುತ್ತಾರೆ. ವಿಷಯಸುಖದಿಂದ ಅತೃಪ್ತರಾದ ಇವರಿಗೆ ಸಂತೋಷವೆಂಬುದೇ ಇರುವುದಿಲ್ಲ. ಆದರೆ ಪಂಡಿತರಾದವರು ಇವುಗಳ ನಾಶದಿಂದ ದುಃಖಿತರಾಗುವುದಿಲ್ಲ. ಸಂತುಷ್ಟರಾಗಿಯೇ ಇರುತ್ತಾರೆ.
ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ |
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಹಿ ಜೀವಿತಮ್ ॥20॥
ಸಂಪಾದಿಸಿದ ಐಶ್ವರ್ಯಗಳೆಲ್ಲವೂ ನಾಶವುಳ್ಳವುಗಳು. ಉಚ್ಛ್ರಾಯದ ಸ್ಥಿತಿಗಳಿಗೆಲ್ಲ ಪತನವೇ ಗತಿಯು. ಎಲ್ಲ ಸಂಬಂಧಗಳು ವಿಯೋಗದಲ್ಲಿ ಪರ್ಯವಸಾನ ಹೊಂದುತ್ತದೆ. ಜೀವನವು ಮರಣದಿಂದ ಕೊನೆಗೊಳ್ಳುತ್ತದೆ.
ಅಂತೋ ನಾಸ್ತಿ ಪಿಪಾಸಾಯಾಸ್ತುಷ್ಟಿಸ್ತು ಪರಮಂ ಸುಖಮ್ |
ತಸ್ಮಾತ್ ಸಂತೋಷಮೇವೇಹ ಧನಂ ಪಶ್ಯಂತಿ ಪಂಡಿತಾಃ ॥21॥
ಆಸೆಗೆ ಕೊನೆಯೆಂಬುದೇ ಇಲ್ಲ, ತೃಪ್ತಿಯೇ ಪರಮಸುಖವಾದುದು. ಆದ್ದರಿಂದ ಸಂತೋಷವೆಂಬ ಧನಕ್ಕಾಗಿ ಪಂಡಿತರು ಅಪೇಕ್ಷೆ ಪಡುತ್ತಾರೆ.
ನಿಮೇಷಮಾತ್ರಮಪಿ ಹಿ ವಯೋ ಗಚ್ಛನ್ನ ತಿಷ್ಠತಿ |
ಸ್ವಶರೀರೇಷ್ವನಿತ್ಯೇಷು ನಿತ್ಯಂ ಕಿಮನುಚಿಂತಯೇತ್ ॥22॥
ಗತಿಸುವ ಆಯುಷ್ಯವು ರೆಪ್ಪೆ ಮುಚ್ಚಿ ತೆರೆಯುವಷ್ಟು ಕಾಲವೂ ಶಾಶ್ವತವಲ್ಲ. ಶರೀರವೇ ಅನಿತ್ಯವಾದಾಗ ಯಾವುದನ್ನು ಶಾಶ್ವತ ಎಂದು ತಿಳಿಯಬೇಕು?
ಭೂತೇಷ್ವಭಾವಂ ಸಂಚಿಂತ್ಯ ಯೇ ಬುದ್ಧ್ವಾ ತಮಸಃ ಪರಮ್ |
ನ ಶೋಚಂತಿ ಗತಾಧ್ವಾನಃ ಪಶ್ಯಂತಃ ಪರಮಾಂ ಗತಿಮ್ ॥23॥
ಪ್ರಾಣಿಗಳಲ್ಲಿರುವ ನಶ್ವರತೆಯನ್ನು ಯೋಚಿಸಿ, ಯಾರು ಅಜ್ಞಾನದಿಂದ ಆಚೆಯಿರುವ ಪರಬ್ರಹ್ಮನನ್ನು ಚಿಂತಿಸುತ್ತಾರೋ, ಸರಿಯಾದ ಮಾರ್ಗವನ್ನು ಅವಲಂಬಿಸಿದ ಅವರು ಉತ್ತಮವಾದ ಗುರಿಯನ್ನು ತಲುಪಿ ದುಃಖಕ್ಕೆ ಭಾಗಿಗಳಾಗುವುದಿಲ್ಲ.
ಸಂಚಿನ್ವಾನಕಮೇವೈನಂ ಕಾಮಾನಾಮವಿತೃಪ್ತಕಮ್ |
ವ್ಯಾಘ್ರಃ ಪಶುಮಿವಾಸಾದ್ಯ ಮೃತ್ಯುರಾದಾಯ ಗಚ್ಛತಿ ॥24॥
ಯಾವಾಗಲೂ ಧನಾದಿ ಸಂಗ್ರಹಗಳಲ್ಲಿಯೇ ಆಸಕ್ತನಾಗಿರುವ, ಕಾಮನೆಗಳಲ್ಲಿ ತೃಪ್ತಿಯನ್ನು ಹೊಂದದಿರುವ ಪುರುಷನನ್ನು ವ್ಯಾಘ್ರವು ಹಸುವನ್ನು ಕಚ್ಚಿಕೊಂಡು ಹೋಗುವಂತೆ ಮೃತ್ಯುವು ಅಪಹರಿಸಿಕೊಂಡು ಹೋಗುತ್ತದೆ.
ಅಥಾಪ್ಯುಪಾಯಂ ಸಂಪಶ್ಯೇದ್ ದುಃಖಸ್ಯ ಪರಿಮೋಕ್ಷಣೇ |
ಅಶೋಚನ್ನಾರಭೇತೈವ ಯುಕ್ತಶ್ಚಾವ್ಯಸನೀ ಭವೇತ್ ॥25॥
ಹೀಗಿದ್ದರೂ ಸಂಸಾರ ದುಃಖದಿಂದ ಬಿಡುಗಡೆ ಹೊಂದಲು ಯಾವುದಾದರೂ ಉಪಾಯವನ್ನು ಹುಡುಕಬೇಕು. ಯಾವನು ಶೋಕವನ್ನು ದೂರೀಕರಿಸಿಕೊಂಡು ಅಧ್ಯಾತ್ಮ ಸಾಧನೆಯನ್ನು ಆರಂಭಿಸುತ್ತಾನೋ ಅವನು ಯಾವುದೇ ವಿಧವಾದ ದುಃಖವಿಲ್ಲದೆ ಮುಕ್ತನಾಗುತ್ತಾನೆ.
ಶಬ್ದೇ ಸ್ಪರ್ಶೇ ಚ ರೂಪೇ ಚ ಗಂಧೇಷು ಚ ರಸೇಷು ಚ |
ನೋಪಭೋಗಾತ್ ಪರಂ ಕಿಂಚಿದ್ಧನಿನೋ ವಾಧನಸ್ಯ ವಾ ॥26॥
ಶಬ್ದ-ಸ್ಪರ್ಶ-ರೂಪ-ರಸ-ಗಂಧಾದಿಗಳು ಧನಿಕನಿಗಾಗಲಿ, ದರಿದ್ರರಿಗಾಗಲಿ ಅನುಭವಿಸುವಾಗ ಸುಖದಂತೆ ತೋರುತ್ತವೆ. ಬಳಿಕ ಅವುಗಳು ಸುಖಕರವೆನಿಸುವುದಿಲ್ಲ.
ವಾಕ್ಸಂಪ್ರಯೋಗಾದ್ ಭೂತಾನಾಂ ನಾಸ್ತಿ ದುಃಖಮನಾಮಯಮ್ |
ವಿಪ್ರಯೋಗಾತ್ತು ಸರ್ವಸ್ಯ ನ ಶೋಚೇತ್ ಪ್ರಕೃತಿಸ್ಥಿತಃ ॥27॥

ಪ್ರಾಣಿಗಳಲ್ಲಿ ಪ್ರಿಯವಾದ ಮಾತುಗಳನ್ನು ಹೇಳುವುದರಿಂದ ಯಾವುದೇ ದುಃಖವು ಉಂಟಾಗುವುದಿಲ್ಲ. ಅದರಂತೆ ಒಬ್ಬ ಪ್ರಾಣಿಯ ವಿಯೋಗವಾದಾಗಲೂ ಪ್ರಕೃತಿಯ ಸ್ವಭಾವವನ್ನು ಅರಿತು ಇರುವ ಜೀವನು ದುಃಖಕ್ಕೆ ತುತ್ತಾಗಬಾರದು.
ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ |
ಚಕ್ಷುಃಶ್ರೋತ್ರೇ ಚ ಮನಸಾ ಮನೋ ವಾಚಂ ಚ ವಿದ್ಯಯಾ ॥28॥
ಧೈರ್ಯದಿಂದ ಜಿಹ್ವೋಪಸ್ಥಗಳನ್ನು ಜಯಿಸಬೇಕು. ಕೈ-ಕಾಲುಗಳನ್ನು ಕಣ್ಣಿನಿಂದ, ಕಣ್ಣು-ಶ್ರೋತ್ರೇಂದ್ರಿಯಗಳನ್ನು ಮನಸ್ಸಿನಿಂದ, ಮನಸ್ಸು ಮತ್ತು ಮಾತನ್ನು ವಿದ್ಯೆಯಿಂದ ರಕ್ಷಿಸಿಕೊಳ್ಳಬೇಕು.
ಪ್ರಣಯಂ ಪ್ರತಿಸಂಹೃತ್ಯ ಸಂಸ್ತುತೇಷ್ವಿತರೇಷು ಚ |
ವಿಚರೇದಸಮುನ್ನದ್ಧಃ ಸ ಸುಖೀ ಸ ಚ ಪಂಡಿತಃ ॥29॥
ಅತಿಯಾದ ಮೋಹವಿಲ್ಲದೆ ಪರಿಚಿತರಲ್ಲಿ, ಅಪರಿಚಿತರಲ್ಲಿ ಯಾವಾತನು ಪ್ರೀತಿಯನ್ನು ಇಟ್ಟು ವ್ಯವಹರಿಸುತ್ತಾನೋ ಅವನೇ ಸುಖಿಯು, ಅವನೇ ಪಂಡಿತನು.
ಅಧ್ಯಾತ್ಮರತಿರಾಸೀನೋ ನಿರಪೇಕ್ಷೋ ನಿರಾಮಿಷಃ |
ಆತ್ಮನೈವ ಸಹಾಯೇನ ಯಶ್ಚರೇತ್ ಸ ಸುಖೀ ಭವೇತ್ ॥30॥
ಯಾವನು ಅಧ್ಯಾತ್ಮವಿದ್ಯೆಯಲ್ಲಿ ಅನುರಕ್ತನಾಗಿ, ಅಪೇಕ್ಷೆ ಇಲ್ಲದೆ, ಯಾವ ವಿಧದ ಭೋಗದ ಆಸೆಯೂ ಇಲ್ಲದವನಾಗಿ ಸ್ವಾವಲಂಬಿಯಾಗಿ ವರ್ತಿಸುತ್ತಾನೋ ಅವನೇ ಪರಮಸುಖಿಯಾಗಿರುತ್ತಾನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಶುಕ-ನಾರದಸಂವಾದೇ ಅನಿಷ್ಟನಾಶನಪ್ರತಿಪಾದನಂ ನಾಮ ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ಮೂರನೆಯ ಅಧ್ಯಾಯ
ನಾರದರಿಂದ ಶುಕಮುನಿಗೆ ವೈರಾಗ್ಯದ ಉಪದೇಶ.
ನಾರದಃ
ಸುಖದುಃಖವಿಪರ್ಯಾಸೋ ಯದಾ ಸಮುಪಪದ್ಯತೇ |
ನೈನಂ ಪ್ರಜ್ಞಾ ಸುನೀತಂ ವಾ ತ್ರಾಯತೇ ನಾಪಿ ಪೌರುಷಮ್ ॥1॥
ನಾರದ ಶುಕಮುನಿಯೇ, ಯಾವಾಗ ಮನುಷ್ಯನು ಸುಖ-ದುಃಖಗಳಲ್ಲಿ ವಿಭ್ರಮೆ ಹೊಂದುತ್ತಾನೋ ಆಗ ಅವನನ್ನು ಉತ್ತಮವಾದ ಪ್ರಜ್ಞೆಯಾಗಲಿ, ನೀತಿಯಾಗಲಿ, ಪೌರುಷವಾಗಲಿ ರಕ್ಷಿಸಲಾಗದು.
ಸ್ವಭಾವಾದ್ಯತ್ನಮಾತಿಷ್ಠೇದ್ಯತ್ನವಾನ್ನಾವಸೀದತಿ |
ಜರಾಮರಣರೋಗೇಭ್ಯಃ ಪ್ರಿಯಮಾತ್ಮಾನಮುದ್ಧರೇತ್ ॥2॥
ಆದ್ದರಿಂದ ಜೀವನು ಸ್ವಾಭಾವಿಕವಾಗಿ ಭಗವದ್ವಿಷಯದಲ್ಲಿ ಪ್ರಯತ್ನವನ್ನು ಮಾಡಬೇಕು. ಭಗವನ್ಮುಖವಾಗಿ ಪ್ರಯತ್ನವನ್ನು ಮಾಡುವವನು ದುಃಖಕ್ಕೀಡಾಗುವುದಿಲ್ಲ. ತನ್ನ ಹಿತಚಿಂತಕನಾದ ವ್ಯಕ್ತಿಯು ಜರಾ-ಮರಣ- ರೋಗಗಳಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು.
ರುಜಂತಿ ಹಿ ಶರೀರಾಣಿ ರೋಗಾಃ ಶಾರೀರಮಾನಸಾಃ |
ಸಾಯಕಾ ಇವ ತೀಕ್ಷ್ಣಾಗ್ರಾಃ ಪ್ರಯುಕ್ತಾ ದೃಢಧನ್ವಿಭಿಃ ॥3॥
ಶಾರೀರಿಕವಾದ, ಮಾನಸಿಕವಾದ ರೋಗಗಳು ಮನುಷ್ಯರ ಶರೀರಗಳನ್ನು ಬಾಧೆ ಪಡಿಸುತ್ತಿವೆ. ದೃಢವಾದ ಧನುಸ್ಸನ್ನು ಧರಿಸಿದ ವ್ಯಕ್ತಿಗಳು ಚೂಪಾದ ಬಾಣಗಳನ್ನು ಅದರಲ್ಲಿ ಜೋಡಿಸಿ ಪ್ರಯೋಗಿಸುವಂತೆ ಅನೇಕ ವಿಧವಾದ ರೋಗಗಳು ಜೀವನನ್ನು ಬಾಧೆ ಪಡಿಸುತ್ತಿವೆ.
ವ್ಯಾಧಿತಸ್ಯ ವಿವಿತ್ಸಾಭಿಸ್ತ್ರಸ್ಯತೋ ಜೀವಿತೈಷಿಣಃ |
ಅವಶಸ್ಯ ವಿನಾಶಾಯ ಶರೀರಮಪಕೃಷ್ಯತೇ ॥4॥
ರೋಗಗಳಿಂದ ಪೀಡಿತವಾದ, ಅನೇಕ ಆಸೆಗಳಿಂದ ಬದುಕಲು ಬಯಸುವ, ಇಂದ್ರಿಯಗಳಿಗೆ ಅಧೀನನಾದ ಮನುಷ್ಯರ ಶರೀರವು ವಿನಾಶದ ಕಡೆ ಸೆಳೆಯುತ್ತಿದೆ.
ಸ್ರವಂತಿ ನ ನಿವರ್ತಂತೇ ಸ್ರೋತಾಂಸಿ ಸರಿತಾಮಿವ |
ಆಯುರಾದಾಯ ಮರ್ತ್ಯಾನಾಂ ರಾತ್ರ್ಯಹಾನಿ ಪುನಃ ಪುನಃ ॥5॥
ಎಲ್ಲ ನದಿಗಳಿಗೆ ಸಂಬಂಧಿಸಿದ ಪ್ರವಾಹಗಳು ನದಿಗೆ ಅಭಿಮುಖವಾಗಿ ಹರಿಯುತ್ತವೆ ವಿನಾ ತಿರುಗಿ ಬರುವುದಿಲ್ಲ. ಅದರಂತೆ ಪುನಃ ಪುನಃ ಮನುಷ್ಯರಿಗೆ ಸಂಬಂಧಿಸಿದ ಆಯುಷ್ಯವನ್ನು ಹಗಲು-ರಾತ್ರಿಗಳು ತೆಗೆದುಕೊಂಡು ಹೋಗುತ್ತಿವೆ.
ವ್ಯತ್ಯಯೋ ಹ್ಯಯಮತ್ಯಂತಂ ಪಕ್ಷಯೋಃ ಶುಕ್ಲಕೃಷ್ಣಯೋಃ |
ಜಾತಂ ಮರ್ತ್ಯಂ ಜರಯತಿ ನಿಮೇಷಂ ನಾವತಿಷ್ಠತೇ ॥6॥
ಶುಕ್ಲಪಕ್ಷ-ಕೃಷ್ಣಪಕ್ಷ ಎಂಬ ವ್ಯತ್ಯಾಸದ ನಡುವೆ ಹುಟ್ಟಿದ ಸಮಸ್ತ ಜೀವರನ್ನು ಈ ಆಯುಸ್ಸು ಶಿಥಿಲವನ್ನಾಗಿ ಮಾಡುತ್ತಿದೆ. ಈ ಕಾಲವು ಕಣ್ಣುರೆಪ್ಪೆ ಮಿಟುಕಿಸುವಷ್ಟು ಕಾಲದವರೆಗೂ ದೃಢವಾಗಿ ನಿಲ್ಲುವುದಿಲ್ಲ.
ಸುಖದುಃಖಾನಿ ಭೂತಾನಾಮಜರೋ ಜರಯನ್ನಸೌ |
ಆದಿತ್ಯೋ ಹ್ಯಸ್ತಮಭ್ಯೇತಿ ಪುನಃ ಪುನರುದೇತಿ ಚ ॥7॥
ಸೂರ್ಯನು ಪ್ರತಿದಿನವೂ ಅಸ್ತಮಾನ ಹೊಂದುತ್ತಾನೆ, ಉದಯವನ್ನೂ ಹೊಂದುತ್ತಾನೆ. ಸ್ವಯಂ ಅಜರನಾಗಿರುವ ಸೂರ್ಯದೇವನು

ಪ್ರಾಣಿಗಳ ಸುಖ- ದುಃಖಗಳನ್ನು ಜೀರ್ಣಗೊಳಿಸುತ್ತಿರುತ್ತಾನೆ.
ಅದೃಷ್ಟಪೂರ್ವಾನಾದಾಯ ಭಾವಾನಪರಿಶಂಕಿತಾನ್ |
ಇಷ್ಟಾನಿಷ್ಟಾನ್ಮನುಷ್ಯಾಣಾಮಸ್ತಂ ಗಚ್ಛಂತಿ ರಾತ್ರಯಃ ॥8॥
ಅನೇಕ ರಾತ್ರಿಗಳು ಮನುಷ್ಯರಿಗೆ ಅಪೂರ್ವವಾದ, ಕಲ್ಪನಾತೀತವಾದ, ಇಷ್ಟಾನಿಷ್ಟ ಘಟನೆಗಳನ್ನು ಒದಗಿಸುತ್ತಾ ಕಳೆದುಹೋಗುತ್ತಿರುತ್ತವೆ.
ಯೋ ಯಮಿಚ್ಛೇದ್ಯಥಾಕಾಮಂ ಕಾಮಾನಾಂ ತತ್ತದಾಪ್ನುಯಾತ್ |
ಯದಿ ಸ್ಯಾನ್ನ ಪರಾಧೀನಂ ಪುರುಷಸ್ಯ ಕ್ರಿಯಾಫಲಮ್ ॥9॥
ಮನುಷ್ಯನು ಪರಾಧೀನನಾಗಿ ಕೆಲಸ ಮಾಡುತ್ತಿಲ್ಲ ಎಂದಾದಲ್ಲಿ ಅವನು ಬಯಸಿದ ಕಾಮನೆಗಳನ್ನೆಲ್ಲ ಅವನು ಹೊಂದಬೇಕಾಗಿತ್ತು. ಪುರುಷನು ಮಾಡಿದ ಕ್ರಿಯೆಗಳಿಗೆ ಫಲವು ದೊರೆಯುತ್ತಿಲ್ಲವಾದ್ದರಿಂದ ಅವನು ಸ್ವತಂತ್ರನಲ್ಲ ಎಂದು ಅರ್ಥವಾಗುತ್ತದೆ.
ಸಂಯತಾಶ್ಚ ಹಿ ದಕ್ಷಾಶ್ಚ ಮತಿಮಂತಶ್ಚ ಮಾನವಾಃ |
ದೃಶ್ಯಂತೇ ನಿಷ್ಫಲಾಃ ಸಂತಃ ಪ್ರಹೀಣಾಶ್ಚ ಸ್ವಕರ್ಮಭಿಃ ॥10॥
ಇಂದ್ರಿಯಗಳನ್ನು ನಿಗ್ರಹಿಸಿಕೊಂಡವರು, ದಕ್ಷರು, ಬುದ್ಧಿವಂತರು ಆದ ಮಾನವರು ಫಲವನ್ನು ಹೊಂದದಿರುವಂತಹ ದೃಶ್ಯಗಳು ಕಾಣಿಸುತ್ತಿರುತ್ತವೆ. ತಾವು ಮಾಡಿದ ಕರ್ಮಗಳಿಂದ ಫಲವನ್ನು ಹೊಂದದೇ ಇರುವ ಸಜ್ಜನರನ್ನು ನೋಡುತ್ತಿದ್ದೇವೆ.
ಅಪರೇ ಬಾಲಿಶಾಃ ಸಂತೋ ನಿರ್ಗುಣಾಃ ಪುರುಷಾಧಮಾಃ |
ಆಶೀರ್ಭಿರಪ್ಯಸಂಯುಕ್ತಾ ದೃಶ್ಯಂತೇ ಸರ್ವಕಾಮಿನಃ ॥11॥
ಇನ್ನು ಕೆಲವರು ಬಾಲಿಶರು, ನಿರ್ಗುಣರು, ಪುರುಷಾಧಮರು ಆಗಿರುವ ವ್ಯಕ್ತಿಗಳು. ಉತ್ತಮರ ಅನುಗ್ರಹವಿಲ್ಲದಿದ್ದರೂ ಸಮಸ್ತ ಇಷ್ಟಾರ್ಥಗಳನ್ನು ಹೊಂದಿರುವಂತಹ ದೃಶ್ಯಗಳು ಕಾಣಿಸುತ್ತವೆ.
ಭೂತಾನಾಮಪರಃ ಕಶ್ಚಿದ್ಧಿಂಸಾಯಾಂ ಸತತೋತ್ಥಿತಃ |
ವಂಚನಾಯಾಂ ಚ ಲೋಕಸ್ಯ ಸ ಸುಖೇಷ್ವೇವ ಜೀರ್ಯತೇ ॥12॥
ಇನ್ನು ಕೆಲವರು ಮನುಷ್ಯರಲ್ಲಿ ಯಾವಾಗಲೂ ಮತ್ತೊಬ್ಬರ ಹಿಂಸಕರು, ಮತ್ತೊಬ್ಬರನ್ನು ವಂಚಿಸುವುದರಲ್ಲಿಯೇ ಆಸಕ್ತರಾಗಿರುತ್ತಾರೆ. ಆದರೂ ಅವರು ಯಾವಾಗಲೂ ಸುಖಭೋಗಗಳಲ್ಲಿ ಆಯುಷ್ಯವನ್ನು ಕಳೆದಿರುತ್ತಾರೆ.
ಅಚೇಷ್ಟಮಾನಮಾಸೀನಂ ಶ್ರೀಃ ಕಂಚಿದುಪತಿಷ್ಠತಿ |
ಕಶ್ಚಿತ್ ಕರ್ಮಾನುಸೃತ್ಯಾನ್ಯೋ ನ ಪ್ರಾಪ್ಯಮಧಿಗಚ್ಛತಿ ॥13॥
ಕೆಲವೊಂದು ಬಾರಿ ಏನೂ ಕೆಲಸ ಮಾಡದಿರುವ ಸೋಮಾರಿಯ ಬಳಿ ಸಂಪತ್ತು ತಾನಾಗಿಯೇ ಹೋಗಿ ಸೇರುತ್ತದೆ. ಮತ್ತೊಬ್ಬನು ಕಷ್ಟಪಟ್ಟು ದುಡಿದರೂ ತಾನು ಹೊಂದಬೇಕಾದ ವಸ್ತುವನ್ನು ಹೊಂದುವುದಿಲ್ಲ.
ಅಪರಾಧಂ ಸಮಾಚಕ್ಷ್ವ ಪುರುಷಸ್ಯ ಸ್ವಭಾವತಃ |
ಶುಕ್ರಮನ್ಯತ್ರ ಸಂಭೂತಂ ಪುನರನ್ಯತ್ರ ಗಚ್ಛತಿ ॥14॥
ಇದರಲ್ಲಿ ಸ್ವಾಭಾವಿಕವಾಗಿ ಪುರುಷರಲ್ಲಿರುವ ಅಪರಾಧವನ್ನು ಚೆನ್ನಾಗಿ ನೀನೇ ನೋಡು. ಎಲ್ಲಿಯೋ ಹುಟ್ಟಿದ ವೀರ್ಯವು ಎಲ್ಲಿಗೋ ಹೋಗಿ ಸೇರುತ್ತದೆ.
ತಸ್ಯ ಯೋನೌ ಪ್ರಸಕ್ತಸ್ಯ ಗರ್ಭೋ ಭವತಿ ವಾ ನ ವಾ |
ಆಮ್ರಪುಷ್ಪೋಪಮಾ ಯಸ್ಯ ನಿವೃತ್ತಿರುಪಲಭ್ಯತೇ ॥15॥
ಸ್ತ್ರೀಯೋನಿಯಲ್ಲಿ ಪ್ರವೇಶ ಹೊಂದಿದ ವೀರ್ಯವು ಕೆಲವು ಸಮಯದಲ್ಲಿ ಗರ್ಭವಾಗಬಹುದು, ಆಗದೆಯೂ ಇರಬಹುದು. ಮಾವಿನ ಹೂವಿನಂತೆ ಕೆಲವೊಂದು ಬಾರಿ ಅದು ವ್ಯರ್ಥವಾಗುವುದು ಕಂಡುಬಂದಿದೆ.
ಕೇಷಾಂಚಿತ್ ಪುತ್ರಕಾಮಾನಾಮನುಸಂತಾನಮಿಚ್ಛತಾಮ್ |
ಸಿದ್ಧೌ ಪ್ರಯತಮಾನಾನಾಂ ನೈವಾಂಡಮುಪಜಾಯತೇ ॥16॥
ಕೆಲವರು ಪುತ್ರಾಪೇಕ್ಷಿಗಳಾಗಿರುತ್ತಾರೆ, ಸಂತಾನದ ಪರಂಪರೆಯು ಮುಂದುವರೆಯಬೇಕು ಎಂದು ಬಯಸಿರುತ್ತಾರೆ. ಅದಕ್ಕಾಗಿ ಅನೇಕ ಪ್ರಯತ್ನಗಳನ್ನು ಮಾಡಿರುತ್ತಾರೆ. ಆದರೆ ಅವರಿಗೆ ಒಂದು ಸಂತಾನವೂ ಆಗಿರುವುದಿಲ್ಲ.
ಗರ್ಭಾಚ್ಚೋದ್ವಿಜಮಾನಾನಾಂ ಕ್ರುದ್ಧಾದಾಶೀವಿಷಾದಿವ |
ಆಯುಷ್ಮಾಂಜಯತೇ ಪುತ್ರಃ ಕಥಂ ಪ್ರೇತಃ ಪಿತೈವ ಸಃ ॥17॥
ಆದರೆ ಕೆಲವರು ಗರ್ಭವನ್ನು ಧರಿಸಿದ ಕೂಡಲೇ ಉದ್ವಿಗ್ನರಾಗುತ್ತಾರೆ. ಸಿಟ್ಟಾದ ಸರ್ಪದಂತೆ ತೋರುತ್ತಾರೆ. ಹಾಗಿದ್ದರೂ ಅವರಿಗೆ ಆಯುಷ್ಮಂತನಾದ ಮಗನು ಹುಟ್ಟುತ್ತಾನೆ. ಸತ್ತಿರುವ ತಂದೆಯೇ ಮಗನಾಗಿ ಬಂದಂತೆ ಕಾಣುತ್ತಿರುತ್ತಾನೆ.
ದೇವಾನಿಷ್ಟ್ವಾ ತಪಸ್ತಪ್ತ್ವಾ ಕೃಪಣೈಃ ಪುತ್ರಗೃದ್ಧಿಭಿಃ |
ದಶ ಮಾಸಾನ್ ಪರಿಧೃತಾ ಜಾಯಂತೇ ಕುಲಪಾಂಸನಾಃ ॥18॥
ಪುತ್ರಾಭಿಲಾಷೆಯನ್ನು ಹೊಂದಿದ ಅನೇಕರು ಮಕ್ಕಳನ್ನು ಪಡೆಯುವ ದೃಷ್ಟಿಯಿಂದ ದೇವತಾರಾಧನೆಯನ್ನು ಮಾಡುತ್ತಾರೆ. ನಾನಾ ವಿಧವಾದ ತಪಸ್ಸನ್ನು ಮಾಡಿರುತ್ತಾರೆ. ಸ್ತ್ರೀಯಾದವಳು ಹತ್ತು ತಿಂಗಳ ಕಾಲ ಗರ್ಭದಲ್ಲಿ ಮಗನನ್ನು ಧರಿಸಿರುತ್ತಾಳೆ. ಇಷ್ಟು ಮಾಡಿದರೂ ಕುಲಕ್ಕೆ ಕಳಂಕವನ್ನು ತರುವ ಮಕ್ಕಳೇ ಹುಟ್ಟುತ್ತಾರೆ.
ಅಪರೇ ಧನಧಾನ್ಯಾನಿ ಭೋಗಾಂಶ್ಚ ಪಿತೃಸಂಚಿತಾನ್ |
ವಿಪುಲಾನಭಿಜಾಯಂತೇ ಲಬ್ಧಾಸ್ತೈರೇವ ಮಂಗಲೈಃ ॥19॥
ಬೇರೆ ಕೆಲವರಿಗೆ ಹುಟ್ಟಿದ ಮಕ್ಕಳು ಧನ-ಧಾನ್ಯಗಳನ್ನು, ಭೋಗಗಳನ್ನು, ತಂದೆಯು ಸಂಪಾದಿಸಿದ ಆಸ್ತಿಗಳನ್ನು ಯಥೇಷ್ಟವಾಗಿ ಅನುಭವಿಸುತ್ತಾರೆ.

ಅನ್ಯೋನ್ಯಂ ಸಮಭಿಪ್ರೇತ್ಯ ಮೈಥುನಸ್ಯ ಸಮಾಗಮೇ |
ಉಪದ್ರುವ ಇವಾವಿಷ್ಟೋ ಯೋನಿಂ ಗರ್ಭಃ ಪ್ರಪದ್ಯತೇ ॥20॥
ಸ್ತ್ರೀ-ಪುರುಷರು ಮೈಥುನ ಕರ್ಮಕ್ಕಾಗಿ ಪರಸ್ಪರ ಸಂಬಂಧವನ್ನು ಹೊಂದಿದಾಗ ಸ್ತ್ರೀಯೋನಿಯಲ್ಲಿ ಗರ್ಭವು ಒಂದು ದೊಡ್ಡ ಉಪದ್ರುವದಂತೆ ಬಂದು ಸೇರುತ್ತದೆ.
ಶೀರ್ಣಂ ಪರಶರೀರೇಣ ನಿಚ್ಛವೀಕಂ ಶರೀರಿಣಮ್ |
ಪ್ರಾಣಿನಾಂ ಪ್ರಾಣಸಂರೋಧೇ ಮಾಂಸಶ್ಲೇಷ್ಮವಿಚೇಷ್ಟಿತಮ್ ॥21॥
ಜೀವನಿಗೆ ಪ್ರಾಣಗಳು ಬಿಟ್ಟು ಹೋದ ಕೂಡಲೇ ಅವನಿಗೆ ಆ ಸ್ಥೂಲ ಶರೀರವು ಬಿಟ್ಟು ಹೋದರೂ ಬೇರೆಯಾದ ಮಾಂಸ-ಶ್ಲೇಷ್ಮಮಯವಾದ ಶರೀರವು ಹಿಂದಿನ ಕರ್ಮಕ್ಕನುಗುಣವಾಗಿ ಹುಟ್ಟನ್ನು ಪಡೆದು ಆ ದೇಹವು ನಾಶ ಹೊಂದಿದ ಮೇಲೆ ಅದರಂತೆ ನಾಶಸ್ವಭಾವವುಳ್ಳ ಇನ್ನೊಂದು ಶರೀರವನ್ನು ಪ್ರವೇಶಿಸುತ್ತದೆ.
ನಿರ್ದಗ್ಧಂ ಪರದೇಹೇನ ಪರದೇಹಂ ಚಲಾಚಲಮ್ |
ವಿನಶ್ಯಂತಂ ವಿನಾಶಾಂತೇ ನಾವಿ ನಾವಮಿವಾಹಿತಮ್ ॥22॥
ಒಂದು ಹಡಗಿನಲ್ಲಿರುವ ವ್ಯಕ್ತಿಗಳನ್ನು ಮತ್ತೊಂದು ಹಡಗಿಗೆ ತಂದು ಇಳಿಸುವಂತೆ ಈ ಜೀವನಿಗೆ ವಾಸ ಮಾಡಲು ಬೇರೆ ಬೇರೆ ಶರೀರಗಳು ಬರುತ್ತಲೇ ಇರುತ್ತವೆ.
ಸಂಗತ್ಯಾ ಜಠರೇ ನ್ಯಸ್ತಂ ರೇತೋಬಿಂದುಮಚೇತನಮ್ |
ಕೇನ ಯತ್ನೇನ ಜೀವಂತಂ ಗರ್ಭಂ ತ್ವಮಿಹ ಪಶ್ಯಸಿ ॥23॥
ಸ್ತ್ರೀ-ಪುರುಷರ ಪರಸ್ಪರ ಸಮಾಗಮದಿಂದ ಗರ್ಭದಲ್ಲಿ ಇಡಲ್ಪಟ್ಟ ಅಚೇತನವಾದ ರೇತಸ್ಸು ಗರ್ಭರೂಪವನ್ನು ಹೊಂದಿ ಯಾವ ಪ್ರಯತ್ನದಿಂದ ಜೀವಂತವಾಗುತ್ತದೆ ಎಂಬುದನ್ನು ನೀನು ಇಲ್ಲಿ ನೋಡುತ್ತಿ.
ಅನ್ನಪಾನಾನಿ ಜೀರ್ಯಂತೇ ಯತ್ರ ಭಕ್ಷ್ಯಾಶ್ಚ ಭಕ್ಷಿತಾಃ |
ತಸ್ಮಿನ್ನೇವೋದರೇ ಗರ್ಭಃ ಕಿಂ ನಾನ್ನಮಿವ ಜೀರ್ಯತೇ ॥24॥
ಯಾವ ಉದರದಲ್ಲಿ ತಿಂದು, ಕುಡಿದು ಮಾಡಿದ ಆಹಾರಗಳು, ಭಕ್ಷ್ಯಗಳು ಜೀರ್ಣವಾಗಿ ಹೋಗುವವೋ ಅದರಂತೆ ಅದೇ ಹೊಟ್ಟೆಯಲ್ಲಿರುವ ಗರ್ಭವು ಅನ್ನದಂತೆ ಏಕೆ ಜೀರ್ಣವನ್ನು ಹೊಂದುವುದಿಲ್ಲ?
ಗರ್ಭಮೂತ್ರಪುರೀಷಾಣಾಂ ಸ್ವಭಾವನಿಯತಾ ಗತಿಃ |
ಧಾರಣೇ ವಾ ವಿಸರ್ಗೇ ವಾ ನ ಕರ್ತುರ್ವಿದ್ಯತೇ ವಶಃ ॥25॥
ಸ್ರವಂತಿ ಹ್ಯುದರಾದ್ ಗರ್ಭಾ ಜಾಯಮಾನಾಸ್ತಥಾಪರೇ |
ಆಗಮೇನ ತಾಥಾನ್ಯೇಷಾಂ ವಿನಾಶ ಉಪಪದ್ಯತೇ ॥26॥
ಗರ್ಭದಲ್ಲಿರುವ ಮಲ-ಮೂತ್ರಗಳಿಗೆ ಸ್ವಾಭಾವಿಕವಾದ, ನಿಯತವಾದ ಗಮನವಿದೆ. ಗರ್ಭದ ಧಾರಣೆಯಲ್ಲಾಗಲಿ, ವಿಸರ್ಜನೆಯಲ್ಲಾಗಲಿ ಯಾರಿಗೂ ಸ್ವಾತಂತ್ರ್ಯವಿರುವುದಿಲ್ಲ. ಕೆಲವೊಮ್ಮೆ ಗರ್ಭಗಳು ಇಚ್ಛೆ ಇಲ್ಲದೆಯೂ ಪಾತವಾಗುತ್ತವೆ. ಕೆಲವೊಮ್ಮೆ ಹುಟ್ಟುವಾಗಲೇ ಸತ್ತುಹೋಗಿರುತ್ತವೆ. ಕೆಲವೊಮ್ಮೆ ಪಿಶಾಚಿಗಳ ಸಂಯೋಜನೆಯಿಂದ, ಮತ್ಸರಿಗಳ ದುರ್ಮಂತ್ರಗಳಿಂದಲೂ ಗರ್ಭಗಳು ಪತನ ಹೊಂದುತ್ತವೆ.
ಏತಸ್ಮಾದ್ಯೋನಿಸಂಬಂಧಾದ್ಯೋ ಜೀವನ್ ಪರಿಮುಚ್ಯತೇ |
ಪ್ರಜಾಂ ಚ ಲಭತೇ ಕಾಂಚಿತ್ ಪುನರ್ದ್ವಂದ್ವೇಷು ಮಜ್ಜತಿ ॥27॥
ಈ ಯೋನಿಯ ಸಂಬಂಧದಿಂದ ಯಾವ ಜೀವವು ಕ್ಷೇಮವಾಗಿ ಹೊರಬರುತ್ತದೆಯೋ ಅದೇ ಸಂತಾನವೆನಿಸುತ್ತದೆ. ಪುನಃ ಆ ಸ್ತ್ರೀ-ಪುರುಷ ಜೀವರು ಪರಸ್ಪರ ಸಮಾಗಮಕ್ಕೆ ಸಿದ್ಧರಾಗುತ್ತಾರೆ. ಮೈಥುನ ಕರ್ಮದಲ್ಲಿ ಆತುರ ಹೊಂದುತ್ತಾರೆ.
ಶತಸ್ಯ ಸಹಜಾತಸ್ಯ ಸಪ್ತಮೀಂ ದಶಮೀಂ ದಶಾಮ್ |
ಪ್ರಾಪ್ನುವಂತಿ ತತಃ ಪಂಚ ನ ಭವಂತಿ ಶತಾಯುಷಃ ॥28॥
ನೂರು ಆಯುಷ್ಯದಿಂದ ಹುಟ್ಟಿರುವಂತಹ ಜೀವನು ಏಳನೆಯ ಅವಸ್ಥೆ ಎನಿಸಿದ ವಾರ್ಧಕ್ಯವನ್ನು, ಒಂಬತ್ತನೆಯ ದಶಾ ಎನಿಸಿದ ಪ್ರಾಣರೋಧವನ್ನು ಹೊಂದಿ ನೂರು ವರ್ಷ ಆಗುವುದರಲ್ಲಿಯೇ ಪಂಚಭೂತಗಳ ಮೇಲನವನ್ನು ಅರ್ಥಾತ್ ಮರಣವನ್ನು ಹೊಂದುತ್ತಾನೆ.
ನಾಭ್ಯುತ್ಥಾನೇ ಮನುಷ್ಯಾಣಾಂ ಯೋಗಾಃ ಸ್ಯುರ್ನಾತ್ರ ಸಂಶಯಃ |
ವ್ಯಾಧಿಭಿಶ್ಚ ವಿಮಥ್ಯಂತೇ ವ್ಯಾಲೈಃ ಕ್ಷುದ್ರಮೃಗಾ ಇವ ॥29॥
ಸರ್ಪಗಳು ಸಣ್ಣ ಸಣ್ಣ ಮೃಗಗಳನ್ನು ಹಿಂಸಿಸುವಂತೆ ನಾನಾ ವಿಧವಾದ ರೋಗಗಳು ಮನುಷ್ಯನನ್ನು ಬಳಲುವಂತೆ ಮಾಡುತ್ತವೆ. ಆ ಸಮಯದಲ್ಲಿಯೂ ಮನುಷ್ಯರಿಗೆ ಮೇಲೆ ಏಳಲು, ಕುಳಿತುಕೊಳ್ಳುವುದರಲ್ಲಿಯೂ ಶಕ್ತಿ ಇರುವುದಿಲ್ಲ ಎಂಬುದರಲ್ಲಿ ಸಂಶಯವಿಲ್ಲ.
ವ್ಯಾಧಿಭಿರ್ಭಕ್ಷ್ಯಮಾಣಾನಾಂ ತ್ಯಜತಾಂ ವಿಪುಲಂ ಧನಮ್ |
ವೇದನಾಂ ನಾಪಕರ್ಷಂತಿ ಯತಮಾನಾಶ್ಚಿಕಿತ್ಸಕಾಃ ॥30॥
ರೋಗಗಳಿಂದ ಪೀಡಿತರಾಗುವ ಮನುಷ್ಯರು ರೋಗಪರಿಹಾರಕ್ಕಾಗಿ ಅಪಾರವಾದ ಧನವನ್ನೇ ವ್ಯಯ ಮಾಡುತ್ತಾರೆ. ವೈದ್ಯರು ರೋಗನಿವಾರಣೆಗಾಗಿ ಬಹಳವಾಗಿ ಪ್ರಯತ್ನಿಸುತ್ತಾರೆ. ಆದರೂ ರೋಗಿಗಳ ವೇದನೆಯನ್ನು ಪರಿಹರಿಸುವುದರಲ್ಲಿ ಚಿಕಿತ್ಸಕರು ಸಮರ್ಥರಾಗುವುದಿಲ್ಲ.
ತೇ ಚಾಪಿ ನಿಪುಣಾ ವೈದ್ಯಾಃ ಕುಶಲಾಃ ಸಂಭೃತೌಷಧಾಃ |
ವ್ಯಾಧಿಭಿಃ ಪರಿಕೃಷ್ಯಂತೇ ಮೃಗಾ ವ್ಯಾಧೈರಿವಾರ್ದಿತಾಃ ॥31॥
ಚಿಕಿತ್ಸೆಯಲ್ಲಿ ನೈಪುಣ್ಯವನ್ನು ಹೊಂದಿದ, ಅನೇಕ ಔಷಧಿಗಳನ್ನು ಸಂಗ್ರಹಿಸಿರುವ ಕುಶಲರಾದ ವೈದ್ಯರು, ವ್ಯಾಧರಿಂದ ಪ್ರಾಣಿಗಳು

ಮರ್ದಿಸಲ್ಪಡುವಂತೆ ಸ್ವಯಂ ತಾವು ರೋಗಗಳಿಂದ ಪೀಡಿತರಾಗಿರುತ್ತಾರೆ.
ತೇ ಪಿಬಂತಃ ಕಷಾಯಾಂಶ್ಚ ಸರ್ಪೀಂಷಿ ವಿವಿಧಾನಿ ಚ |
ದೃಶ್ಯಂತೇ ಜರಯಾ ಭಗ್ನಾ ನಾಗಾ ನಾಗೈರಿವೋತ್ತಮೈಃ ॥32॥
ಆ ವೈದ್ಯರು ಅನೇಕ ವಿಧ ಕಷಾಯಗಳನ್ನು, ಅನೇಕ ವಿಧವಾದ ಘೃತಗಳನ್ನು ಸೇವಿಸುತ್ತಿದ್ದರೂ ಶ್ರೇಷ್ಠವಾದ ಆನೆಗಳು ಮರಗಳನ್ನು ಕೆಡವುವಂತೆ ಅವರು ಮುಪ್ಪಿನಿಂದ ಭಗ್ನರಾಗುತ್ತಿರುವುದನ್ನು ನಾವು ಕಾಣಬಹುದು.
ಕೇ ವಾ ಭುವಿ ಚಿಕಿತ್ಸಂತೇ ರೋಗಾರ್ತಾನ್ ಮೃಗಪಕ್ಷಿಣಃ |
ಶ್ವಾಪದಾನಿ ದರಿದ್ರಾಂಶ್ಚ ಪ್ರಾಯೋ ನಾರ್ತಾ ಭವಂತಿ ತೇ ॥33॥
ಈ ಪ್ರಪಂಚದಲ್ಲಿ ರೋಗಗ್ರಸ್ಥವಾದ ಮೃಗ-ಪಕ್ಷಿಗಳಿಗೆ, ಕ್ರೂರಪ್ರಾಣಿಗಳಿಗೆ, ದರಿದ್ರರಿಗೆ ಯಾರು ತಾನೇ ಚಿಕಿತ್ಸೆ ನೀಡುತ್ತಾರೆ? ದರಿದ್ರರಿಗಾಗಲೀ, ಮೃಗ ಪಕ್ಷಿಗಳಿಗಾಗಲಿ ಪ್ರಾಯಶಃ ರೋಗಗಳು ಒದಗುವುದಿಲ್ಲ.
ಘೋರಾನಪಿ ದುರಾಧರ್ಷಾನ್ನೃಪತೀನುಗ್ರತೇಜಸಃ |
ಆಕ್ರಮ್ಯ ರೋಗ ಆದತ್ತೇ ಪಶೂನ್ ಪಶುಪಚೋ ಯಥಾ ॥34॥
ಪಶುಗಳನ್ನು ಭಕ್ಷಿಸುವ ಕ್ರೂರ ಮೃಗಗಳು, ಪ್ರಾಣಿಗಳನ್ನು ಆಕ್ರಮಿಸಿ ಅಪಹರಿಸಿ ಒಯ್ಯುವಂತೆ ಪ್ರಚಂಡ ತೇಜಸ್ಸಂಪನ್ನರಾದ, ಘೋರ ಪರಾಕ್ರಮಿಗಳಾದ, ಎದುರಿಸಲು ಅಸಾಧ್ಯರಾದ ರಾಜರನ್ನು ರೋಗಗಳು ಆಕ್ರಮಿಸಿ ವಶಪಡಿಸಿಕೊಂಡು ಬಿಡುತ್ತವೆ.
ಇತಿ ಲೋಕಮನಾಕ್ರಂದಂ ಮೋಹಶೋಕಪರಿಪ್ಲುತಮ್ |
ಸ್ರೋತಸಾ ಸಹಸಾ ಕ್ಷಿಪ್ತಂ ಹ್ರಿಯಮಾಣಂ ಬಲೀಯಸಾ ॥35॥
ಹೀಗೆ ಮೋಹ-ಶೋಕಗಳಲ್ಲಿ ಮುಳುಗಿ, ಸಂಸಾರವೆಂಬ ನದಿಯಲ್ಲಿ ಬಿಡಲ್ಪಟ್ಟು ಬಲಿಷ್ಠ ಪ್ರವಾಹದ ವೇಗದಿಂದ ಸೆಳೆಯಲ್ಪಡುತ್ತಿರುವ ಈ ಜಗತ್ತು ಯಾವ ಶಬ್ದವೂ ಇಲ್ಲದೆ ಚಲಿಸುತ್ತಲೇ ಇದೆ.
ನ ಧನೇನ ನ ರಾಜ್ಯೇನ ನೋಗ್ರೇಣ ತಪಸಾ ತಥಾ |
ಸ್ವಭಾವಾ ವ್ಯತಿವರ್ತಂತೇ ಯೇ ನಿಯುಕ್ತಾಃ ಶರೀರಿಷು ॥36॥
ಕರ್ಮಫಲವನ್ನು ಅನುಭವಿಸಬೇಕೆಂದು ವಿಧಿಲಿಖಿತವು. ಮನುಷ್ಯರು ಧನ- ರಾಜ್ಯ-ತಪಸ್ಸು ಇವುಗಳಿಂದ ಈ ಸಹಜ ಪ್ರಕೃತಿಯ ಪರಾಕ್ರಮವನ್ನು ದಾಟಿ ನಡೆಯಲು ಸಾಧ್ಯವಾಗುವುದಿಲ್ಲ.
ನ ಮ್ರಿಯೇರನ್ನ ಜೀರ್ಯೇರನ್ ಸರ್ವೇ ಸ್ಯುಃ ಸರ್ವಕಾಮಿಕಾಃ |
ನಾಪ್ರಿಯಂ ಪ್ರತಿಪಶ್ಯೇಯುರುತ್ಥಾನಸ್ಯ ಫಲಂ ಪ್ರತಿ ॥37॥
ತಮ್ಮ ಪ್ರಯತ್ನದಂತೆ ಫಲವನ್ನು ಹೊಂದಲು ಜೀವರು ಸಮರ್ಥರಾಗಿದ್ದಲ್ಲಿ ಯಾವ ಜೀವರೂ ಸಾಯುತ್ತಿರಲಿಲ್ಲ. ಸಮಸ್ತ ಕಾಮನೆಗಳನ್ನೂ ಹೊಂದುತ್ತಿದ್ದರು. ಅಪ್ರಿಯವಾದುದನ್ನು ನೋಡುತ್ತಿರಲಿಲ್ಲ. ದುಷ್ಕರ್ಮದ ಫಲವನ್ನು ಹೊಂದುತ್ತಿರಲಿಲ್ಲ.
ಉಪರ್ಯುಪರಿ ಲೋಕಸ್ಯ ಸರ್ವೋ ಭವಿತುಮಿಚ್ಛತಿ |
ಯತತೇ ಚ ಯಥಾಶಕ್ತಿ ನ ಚ ತದ್ವರ್ತತೇ ತಥಾ ॥38॥
ಎಲ್ಲರೂ ಊರ್ಧ್ವಲೋಕಗಳನ್ನು ಹೊಂದಲು ಬಯಸುತ್ತಾರೆ. ತಮ್ಮ ಶಕ್ತಿಗೆ ಅನುಗುಣವಾಗಿ ಪ್ರಯತ್ನವನ್ನೂ ಮಾಡುತ್ತಾರೆ. ಆದರೆ ಅದು ಸಾಧ್ಯವಾಗುವುದಿಲ್ಲ. ಮಾಡಿದ ಪ್ರಯತ್ನಗಳು ಫಲಿಸುವುದಿಲ್ಲ.
ಐಶ್ವರ್ಯಮದಮತ್ತಾಂಶ್ಚ ಮತ್ತಾನ್ ಮದ್ಯಮದೇನ ಚ |
ಅಪ್ರಮತ್ತಾಃ ಶಠಾಃ ಕ್ರೂರಾ ವಿಕ್ರಾಂತಾಃ ಪರ್ಯುಪಾಸತೇ ॥39॥
ಒಳ್ಳೆಯ ಜಾಗರೂಕರೂ, ಶೂರರೂ, ಪರಾಕ್ರಮಶಾಲಿಗಳೂ ಸಹ ಐಶ್ವರ್ಯ ಮದದಿಂದ, ಮದ್ಯವ್ಯಸನದಿಂದ ಸೊಕ್ಕಿದ ಅಲ್ಪಜನರಲ್ಲಿ ಕೈಕಟ್ಟಿ ಸೇವೆ ಮಾಡುತ್ತಾರೆ.
ಕ್ಲೇಶಾಃ ಪ್ರತಿನಿವರ್ತಂತೇ ಕೇಷಾಂಚಿದಸಮೀಕ್ಷಿತಾಃ |
ಸ್ವಂ ಸ್ವಂ ಚ ಪುನರನ್ಯೇಷಾಂ ನ ಕಿಂಚಿದಭಿಗಮ್ಯತೇ ॥40॥
ಕೆಲವರಿಗೆ ಜೀವನದಲ್ಲಿ ಒದಗಿ ಬರುವ ದುಃಖಗಳು ಯೋಚಿಸದೆ ಅಥವಾ ಪ್ರಯತ್ನವಿಲ್ಲದೆ ಪರಿಹಾರವಾಗುತ್ತವೆ. ಮತ್ತೆ ಕೆಲವರಿಗೆ ತಮ್ಮಲ್ಲಿ ಐಶ್ವರ್ಯವಿದ್ದರೂ ಸಮಯಕ್ಕೆ ಉಪಯೋಗಕ್ಕೆ ಬರುವುದಿಲ್ಲ.
ಮಹಚ್ಚ ಫಲವೈಷಮ್ಯಂ ದೃಶ್ಯತೇ ಕರ್ಮಸಂಧಿಷು |
ವಹಂತಿ ಶಿಬಿಕಾಮನ್ಯೇ ಯಾಂತ್ಯನ್ಯೇ ಶಿಬಿಕಾಗತಾಃ ॥41॥
ಕರ್ಮಗಳಿಗೆ ಸಂಬಂಧಿಸಿದ ಫಲಗಳಲ್ಲಿಯೂ, ವಿಶೇಷ ವೈಪರೀತ್ಯವು ಕಾಣಿಸುತ್ತದೆ. ಕರ್ಮಫಲಕ್ಕನುಗುಣವಾಗಿ ಕೆಲವರು ಪಲ್ಲಕ್ಕಿಯನ್ನು ಹೊತ್ತು ತಿರುಗಿದರೆ, ಕೆಲವರು ಅದೇ ಪಲ್ಲಕ್ಕಿಯಲ್ಲಿ ಕುಳಿತು ಸಂಚರಿಸುತ್ತಾರೆ.
ಸರ್ವೇಷಾಮೃದ್ಧಿಕಾಮಾನಾಮನ್ಯೇ ರಥಪುರಃಸರಾಃ |
ಮನುಜಾಶ್ಚ ಶತಸ್ತ್ರೀಕಾಃ ಶತಶೋ ವಿಧವಾಃ ಸ್ತ್ರಿಯಃ ॥42॥
ಎಲ್ಲ ಮನುಷ್ಯರೂ ಐಶ್ವರ್ಯಸಮೃದ್ಧಿಯನ್ನು ಸ್ವಾಭಾವಿಕವಾಗಿ ಬಯಸುತ್ತಾರೆ. ಆದರೆ ಆ ಬಯಕೆವುಳ್ಳವರಲ್ಲಿ ಕೆಲವರು ಮಾತ್ರ ರಥದಲ್ಲಿ ಕುಳಿತು ಸಂಚರಿಸುತ್ತಾರೆ. ಅನೇಕರು ಅನೇಕ ಸ್ತ್ರೀಯರನ್ನು ಹೊಂದಿದ್ದರೆ ಯಾವ ಪುರುಷನನ್ನೂ ಹೊಂದದೆ ಇರುವ ಅನೇಕ ವಿಧವೆಯರೂ ಇದ್ದಾರೆ.
ದ್ವಂದ್ವಾರಾಮೇಷು ಭೂತೇಷು ಗಚ್ಛಂತ್ಯೇಕೈಕಶೋ ನರಾಃ |
ಇದಮನ್ಯತ್ ಪರಂ ಪಶ್ಯ ಮಾತ್ರ ಮೋಹಂ ಕರಿಷ್ಯಸಿ ॥43॥
ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ |
ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತಂ ತ್ಯಜ ॥44॥

ಸಮಸ್ತ ಜೀವರು ಸುಖ-ದುಃಖಾದಿ ದ್ವಂದ್ವಗಳಲ್ಲೇ ಆಸಕ್ತರಾಗಿರುತ್ತಾರೆ. ಒಬ್ಬನು ದುಃಖವನ್ನು ಅನುಭವಿಸುತ್ತಿದ್ದರೆ ಮತ್ತೊಬ್ಬ ಸುಖವನ್ನು ಅನುಭವಿಸುತ್ತಿರುತ್ತಾನೆ. ಇವೆಲ್ಲದಕ್ಕಿಂತಲೂ ವಿಲಕ್ಷಣವಾದುದು ಬ್ರಹ್ಮಪದವು. ಇದರಲ್ಲಿ ನೀನು ಮೋಹವನ್ನು ಹೊಂದಬೇಡ. ಧರ್ಮಾಧರ್ಮಗಳನ್ನು ತ್ಯಜಿಸಿ, ಸುಳ್ಳು-ಸತ್ಯಗಳನ್ನು ಯಾವ ಮನಸ್ಸಿನಿಂದ ಬಿಟ್ಟಿರುವೆಯೋ ಆ ಮನಸ್ಸನ್ನೂ ನೀನು ತ್ಯಜಿಸು.
ಏತತ್ತೇ ಪರಮಂ ಗುಹ್ಯಮಾಖ್ಯಾತಮೃಷಿಸತ್ತಮ |
ಯೇನ ದೇವಾಃ ಪರಿತ್ಯಜ್ಯ ಮರ್ತ್ಯಲೋಕಂ ದಿವಂ ಗತಾಃ ||45||
ಋಷಿಕುಮಾರನೇ, ಯಾವ ಆಖ್ಯಾನವನ್ನು ಕೇಳಿಸಿಕೊಂಡ ದೇವತೆಗಳು ಮನುಷ್ಯಲೋಕವನ್ನು ಬಿಟ್ಟು ಸ್ವರ್ಗಕ್ಕೆ ತೆರಳಿದರೋ ಅಂತಹ ರಹಸ್ಯವಾದ ಆಖ್ಯಾನವನ್ನು ನಿನಗೆ ತಿಳಿಸಿರುತ್ತೇನೆ.
ಭೀಷ್ಮಃ
ನಾರದಸ್ಯ ವಚಃ ಶ್ರುತ್ವಾ ಶುಕಃ ಪರಮಬುದ್ಧಿಮಾನ್ |
ಸಂಚಿಂತ್ಯ ಮನಸಾ ಧೀರೋ ನಿಶ್ಚಯಂ ನಾಧ್ಯಗಚ್ಛತ ||46||
ಭೀಷ್ಮ ಯುಧಿಷ್ಠಿರನೇ, ನಾರದರ ಮಾತನ್ನು ಕೇಳಿ ಬುದ್ಧಿವಂತನಾದ, ಜ್ಞಾನಿಯಾದ ಶುಕನು ಮನಸ್ಸಿನಲ್ಲಿಯೇ ಚಿಂತಿಸಿದನು. ಆದರೆ ಯಾವುದೇ ವಿಷಯದಲ್ಲಿ ನಿಶ್ಚಯವನ್ನು ಹೊಂದಲಿಲ್ಲ.
ಪುತ್ರದಾರೈರ್ಮಹಾನ್ ಕ್ಲೇಶೋ ವಿದ್ಯಾಮ್ನಾಯೇ ಮಹಾನ್ ಶ್ರಮಃ |
ಕಿಂ ನು ಸ್ಯಾಚ್ಛಾಶ್ವತಂ ಸ್ಥಾನಮಲ್ಪಕ್ಲೇಶಂ ಮಹೋದಯಮ್ ||47||
ಹೆಂಡತಿ, ಮಕ್ಕಳಿಂದ ಕ್ಲೇಶವು ಪ್ರಾಪ್ತವಾಗುತ್ತದೆ. ವೇದವಿದ್ಯೆಯ ಲಾಭವು ಅತ್ಯಂತ ಶ್ರಮಸಾಧ್ಯವು. ಸ್ವಲ್ಪ ಶ್ರಮದಿಂದ ಶ್ರೇಷ್ಠವಾದ ಶ್ರೇಯಸ್ಸನ್ನು ಹೊಂದುವ ಶಾಶ್ವತವಾದ ಸ್ಥಾನವನ್ನು ಪಡೆಯುವ ಉಪಾಯವು ಯಾವುದು ಎಂದು ಚಿಂತಿಸಿದನು.
ತತೋ ಮುಹೂರ್ತಂ ಸಂಚಿಂತ್ಯ ನಿಶ್ಚಿತಾಂ ಗತಿಮಾತ್ಮನಃ |
ಪರಾವರಜ್ಞೋ ಧರ್ಮಸ್ಯ ಪರಾಂ ನೈಃಶ್ರೇಯಸೀಂ ಗತಿಮ್ ||48||
ಬಳಿಕ ಒಂದು ಮುಹೂರ್ತ ಕಾಲ ತಾನು ಹೊಂದಬೇಕಾದ ಸ್ಥಾನ ಯಾವುದೆಂಬುದನ್ನು ಯೋಚಿಸಿ, ಧರ್ಮದ ಮಹತ್ವವನ್ನು ತಿಳಿದಿರುವ ತಾರತಮ್ಯಜ್ಞಾನವನ್ನು ಹೊಂದಿರುವ ಶುಕಮುನಿಯು ಮುಕ್ತಿಯ ಮಾರ್ಗವು ಯಾವುದೆಂಬುದನ್ನು ತಿಳಿದುಕೊಂಡನು.
ಕಥಂ ತ್ವಹಮಸಂಕ್ಲಿಷ್ಟೋ ಗಚ್ಛೇಯಂ ಪರಮಾಂ ಗತಿಮ್ |
ನಾವರ್ತೇಯಂ ಯಥಾ ಭೂಯೋ ಯೋನಿಸಂಸಾರಸಾಗರೇ ||49||
ಯಾವುದರಲ್ಲಿಯೂ ಆಸಕ್ತನಾಗದೆ, ಸಂಸಾರಕ್ಕೆ ಮರಳಿ ಬರದಿರುವಂತಹ ಪರಮಗತಿಯನ್ನು ನಾನು ಹೇಗೆ ಹೊಂದಲಿ?
ಪರಂ ಭಾವಂ ಹಿ ಕಾಂಕ್ಷಾಮಿ ಯತ್ರ ನಾವರ್ತತೇ ಪುನಃ |
ಸರ್ವಸಂಗಾನ್ ಪರಿತ್ಯಜ್ಯ ನಿಶ್ಚಿತಾಂ ಮನಸೋ ಗತಿಮ್ ||50||
ಯಾವ ಸ್ಥಾನಕ್ಕೆ ಹೋಗುವುದರಿಂದ ಪುನಃ ಈ ಜೀವನು ಸಂಸಾರಕ್ಕೆ ಹಿಂದಿರುಗಬೇಕಾಗಿಲ್ಲವೋ ಅಂತಹ ಸ್ಥಾನವನ್ನು ಹೊಂದಲು ಬಯಸುತ್ತೇನೆ. ಎಲ್ಲ ಆಸಕ್ತಿಗಳನ್ನು ಬಿಟ್ಟು, ಅವನನ್ನೇ ಧ್ಯಾನಿಸಿ ಉತ್ತಮವಾದ ಗತಿಯನ್ನು ಹೊಂದುತ್ತೇನೆ.
ತತ್ರ ಯಾಸ್ಯಾಮಿ ಯತ್ರಾತ್ಮಾ ಶಮಂ ಮೇಽಧಿಗಮಿಷ್ಯತಿ |
ಅಕ್ಷಯಶ್ಚಾವ್ಯಯಶ್ಚೈವ ಯತ್ರ ಸ್ಥಾಸ್ಯಾಮಿ ಶಾಶ್ವತಃ ||51||
ನನ್ನ ಮನಸ್ಸಿಗೆ ಭಗವನ್ನಿಷ್ಠವಾದ ಬುದ್ಧಿಯು ಎಲ್ಲಿ ದೃಢವಾಗುತ್ತದೋ ಅಲ್ಲಿಗೇ ತೆರಳುತ್ತೇನೆ. ನಾನು ಎಲ್ಲಿಗೆ ತೆರಳುವುದರಿಂದ ಅಕ್ಷಯನೂ, ಅವ್ಯಯನೂ, ಶಾಶ್ವತನೂ ಆಗುತ್ತೇನೋ ಅಲ್ಲಿಗೆ ತೆರಳುತ್ತೇನೆ.
ನ ತು ಯೋಗಮೃತೇ ಶಕ್ಯಾ ಪ್ರಾಪ್ತುಂ ಸಾ ಪರಮಾ ಗತಿಃ |
ಅವಬಂಧೋ ಹಿ ಬದ್ಧಸ್ಯ ಕರ್ಮಭಿರ್ನೋಪಪದ್ಯತೇ ||52||
ಯೋಗಮಾರ್ಗದ ಹೊರತಾಗಿ ಪರಮಗತಿಯನ್ನು ಹೊಂದಲು ಬೇರೆ ಮಾರ್ಗವು ಇರುವುದಿಲ್ಲ. ಬಂಧನದಿಂದ ಬಿಡುಗಡೆಯನ್ನು ಹೊಂದಿದವನು ಕರ್ಮಬಂಧನಕ್ಕೆ ಸಿಲುಕುವುದಿಲ್ಲ.
ತಸ್ಮಾದ್ಯೋಗಂ ಸಮಾಸ್ಥಾಯ ತ್ಯಕ್ತ್ವಾ ಗೃಹಕಲೇವರಮ್ |
ವಾಯುಭೂತಃ ಪ್ರವೇಕ್ಷ್ಯಾಮಿ ತೇಜೋರಾಶಿಂ ದಿವಾಕರಮ್ ||53||
ಆದ್ದರಿಂದ ಯೋಗವನ್ನು ಆಶ್ರಯಿಸಿ, ಮನೆಯಂತಿರುವ ಈ ದೇಹವನ್ನು ಬಿಟ್ಟು ವಾಯುರೂಪನಾಗಿ ತೇಜೋರಾಶಿಯಾದ ಸೂರ್ಯಮಂಡಲವನ್ನು ಪ್ರವೇಶಿಸುತ್ತೇನೆ.
ನ ಹ್ಯೇಷ ಕ್ಷಯಮಾಪ್ನೋತಿ ಸೋಮಃ ಸುರಗಣೈರ್ಯಥಾ |
ಕಂಪಿತಃ ಪತತೇ ಭೂಮಿಂ ಪುನಶ್ಚೈವಾಧಿರೋಹತಿ |
ಕ್ಷೀಯತೇ ಹಿ ಸದಾ ಸೋಮಃ ಪುನಶ್ಚೈವಾಭಿಪೂರ್ಯತೇ ||54||
ದೇವತೆಗಳು ಚಂದ್ರನ ಅಮೃತಕಿರಣಗಳನ್ನು ಹೀರಿಕೊಂಡ ಬಳಿಕ ಚಂದ್ರನು ಕ್ಷಯವನ್ನು ಹೊಂದುವಂತೆ ಈ ಸೂರ್ಯನು ಎಂದಿಗೂ ಕ್ಷಯವನ್ನು ಹೊಂದುವುದಿಲ್ಲ. ಧೂಮಮಾರ್ಗದಲ್ಲಿ ಸಂಚರಿಸಿದ ಜೀವನು ಚಂದ್ರಮಂಡಲಕ್ಕೆ ಹೋಗಿ ಕರ್ಮಫಲ ತೀರಿದ ಬಳಿಕ ಕಂಪಿಸುತ್ತಾ ಭೂಮಿಯ ಮೇಲೆ ಬೀಳುವಂತೆ ಸೂರ್ಯಮಂಡಲಕ್ಕೆ ಹೋಗುವವನಿಗೆ ಪುನರಾಗಮನವು ಇರುವುದಿಲ್ಲ. ಚಂದ್ರನು ಕ್ಷಯವನ್ನೂ ಹೊಂದುತ್ತಾನೆ, ವೃದ್ಧಿಯನ್ನೂ ಹೊಂದುತ್ತಾನೆ. ಅವನ ಸಂಗಮದಿಂದ ಜೀವರಿಗೂ ಕರ್ಮಗಳ ವೃದ್ಧಿ-ಕ್ಷಯವು ನಿಶ್ಚಿತ.
ರವಿಸ್ತು ಸಂತಾಪಯತಿ ಲೋಕಾನ್ರಶ್ಮಿಭಿರುಲ್ಬಣೈಃ |
ಸರ್ವತಸ್ತೇಜ ಆದತ್ತೇ ನಿತ್ಯಮಕ್ಷಯಮಂಡಲಃ ||55||
ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಲೋಕಗಳನ್ನು ಸಂತಾಪಗೊಳಿಸುತ್ತಾನೆ. ಎಲ್ಲ ಕಡೆಯಿಂದಲೂ ತೇಜಸ್ಸನ್ನು

ಸಂಗ್ರಹಿಸುತ್ತಾನೆ. ಆದ್ದರಿಂದಲೇ ಅವನು ಅಕ್ಷಯಮಂಡಲವನ್ನು ಹೊಂದುತ್ತಾನೆ.
ಅತೋ ಮೇ ರೋಚತೇ ಗಂತುಮಾದಿತ್ಯಂ ದೀಪ್ತತೇಜಸಮ್ |
ಅತ್ರ ವತ್ಸ್ಯಾಮಿ ದುರ್ಧರ್ಷೋ ನಿಃಸಂಗೇನಾಂತರಾತ್ಮನಾ ॥56॥
ಆದ್ದರಿಂದ ಬೆಳಗುವ ತೇಜಸ್ಸಿನಿಂದ ಕೂಡಿರುವ ಆದಿತ್ಯಮಂಡಲಕ್ಕೆ ಹೋಗುವುದೇ ನನಗೆ ಯೋಗ್ಯವೆನಿಸುತ್ತದೆ. ಶಂಕೆ ಇಲ್ಲದ ಮನಸ್ಸಿನಿಂದ ಕೂಡಿರುವ ನಾನು ಯಾರಿಂದಲೂ ಎದುರಿಸಲು ಅಸಾಧ್ಯನಾಗಿ ಅಲ್ಲಿ ವಾಸ ಮಾಡುತ್ತೇನೆ.
ಸೂರ್ಯಸ್ಯ ಸದನೇ ಚಾಹಂ ನಿಕ್ಷಿಪ್ಯೇದಂ ಕಲೇವರಮ್ |
ಋಷಿಭಿಃ ಸಹ ಯಾಸ್ಯಾಮಿ ಸೌರಂ ತೇಜೋಽತಿದುಃಸಹಮ್ ॥57॥
ನಾನು ನನ್ನ ಶರೀರವನ್ನು ಸೂರ್ಯಲೋಕದಲ್ಲಿಟ್ಟು, ಅಲ್ಲಿರುವ ಋಷಿಗಳ ಜೊತೆ ದುಸ್ಸಹವಾದ ಸೂರ್ಯನ ತೇಜೋರಾಶಿಯನ್ನೇ ಪ್ರವೇಶಿಸುತ್ತೇನೆ.
ಆಪೃಚ್ಛಾಮಿ ನಗಾನ್ ನಾಗಾನ್ ಗಿರೀನುರ್ವೀಂ ದಿಶೋ ದಿವಮ್ |
ದೇವದಾನವಗಂಧರ್ವಾನ್ ಪಿಶಾಚೋರಗರಾಕ್ಷಸಾನ್ ॥58॥
ಸೂರ್ಯಲೋಕವನ್ನು ಹೊಂದುವ ದೃಷ್ಟಿಯಿಂದ ನಾನು ವೃಕ್ಷಗಳು, ಪರ್ವತಗಳು, ಬೆಟ್ಟ, ಭೂಮಿ, ದಿಕ್ಕು, ಸ್ವರ್ಗ, ದೇವ, ದಾನವ, ಗಂಧರ್ವ, ಪಿಶಾಚಿ, ಉರಗ, ರಾಕ್ಷಸ ಇವರೆಲ್ಲರ ಅನುಮತಿಯನ್ನು ಕೇಳುತ್ತೇನೆ.
ಲೋಕೇಷು ಸರ್ವಭೂತಾನಿ ಪ್ರವೇಕ್ಷ್ಯಾಮಿ ನಸಂಶಯಃ |
ಪಶ್ಯಂತು ಯೋಗವೀರ್ಯಂ ಮೇ ಸರ್ವೇ ದೇವಾಃ ಸಹರ್ಷಿಭಿಃ ॥59॥
ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳಲ್ಲಿಯೂ ಪ್ರವೇಶಿಸುತ್ತೇನೆ. ನನ್ನ ಯೋಗಶಕ್ತಿಯನ್ನು ಋಷಿಗಳೆಲ್ಲರೂ ನೋಡಲಿ. ನನಗೆ ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಅಥಾನುಜ್ಞಾಪ್ಯ ತಮೃಷಿಂ ನಾರದಂ ಲೋಕವಿಶ್ರುತಮ್ |
ತಸ್ಮಾದನುಜ್ಞಾಂ ಸಂಪ್ರಾಪ್ಯ ಜಗಾಮ ಪಿತರಂ ಪ್ರತಿ ॥60॥
ಶುಕನು ಈ ರೀತಿಯಾಗಿ ನಿಶ್ಚಯಿಸಿ ಸೂರ್ಯಲೋಕಕ್ಕೆ ತೆರಳಲು, ಲೋಕದಲ್ಲಿ ಉತ್ತಮ ಪ್ರಸಿದ್ಧಿಯನ್ನು ಹೊಂದಿದ ದೇವರ್ಷಿ ನಾರದರ ಅನುಮತಿಯನ್ನು ಬೇಡಿದನು. ಬಳಿಕ ತಂದೆಯ ಬಳಿ ತೆರಳಿದನು.
ಸೋಽಭಿವಾದ್ಯ ಮಹಾತ್ಮಾನಮೃಷಿಂ ದ್ವೈಪಾಯನಂ ಮುನಿಮ್ |
ಶುಕಃ ಪ್ರದಕ್ಷಿಣೀಕೃತ್ಯ ಕೃಷ್ಣಮಾಪೃಷ್ಟವಾನ್ಮುನಿಃ ॥61॥
ಶುಕಮುನಿಯು ಮಹಾಮುನಿಯಾದ ಕೃಷ್ಣದ್ವೈಪಾಯನರನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಸೂರ್ಯಲೋಕಕ್ಕೆ ಹೊರಡಲು ಅವರಿಂದ ಅನುಜ್ಞೆಯನ್ನು ಕೇಳಿದನು.
ಶ್ರುತ್ವಾ ಋಷಿಸ್ತದ್ವಚನಂ ಶುಕಸ್ಯ
ಪ್ರೀತೋ ಮಹಾತ್ಮಾ ಪುನರಾಹ ಚೈನಮ್ |
ಭೋ ಭೋಃ ಪುತ್ರ ಸ್ಥೀಯತಾಂ ತಾವದದ್ಯ
ಯಾವಚ್ಚಕ್ಷುಃ ಪ್ರೀಣಯಾಮಿ ತ್ವದರ್ಥಮ್ ॥62॥
ವ್ಯಾಸಮಹರ್ಷಿಗಳು ಶುಕನು ಹೇಳಿದ ಮಾತನ್ನು ಕೇಳಿ ಪರಮಪ್ರೀತರಾಗಿ ಹೀಗೆ ಹೇಳಿದರು- ಮಗು ಶುಕನೇ, ನಿಲ್ಲು. ನಿನ್ನನ್ನು ನೋಡುತ್ತಾ ನನ್ನ ಕಣ್ಣುಗಳಿಂದ ಸಂತೋಷವನ್ನು ಹೊಂದುತ್ತೇನೆ. ಅಲ್ಲಿಯ ತನಕ ತೆರಳಬೇಡ, ಇಲ್ಲಿಯೇ ನಿಲ್ಲು.
ನಿರಪೇಕ್ಷಃ ಶುಕೋ ಭೂತ್ವಾ ನಿಃಸ್ನೇಹೋ ಮುಕ್ತಬಂಧನಃ |
ಮೋಕ್ಷಮೇವಾನುಸಂಚಿಂತ್ಯ ಗಮನಾಯ ಮನೋ ದಧೇ |
ಪಿತರಂ ಸಂಪರಿತ್ಯಜ್ಯ ಜಗಾಮ ದ್ವಿಜಸತ್ತಮಃ ॥63॥
ಆದರೆ ಅಪೇಕ್ಷೆಗಳನ್ನೆಲ್ಲ ತೊರೆದಿರುವ ಶುಕಮುನಿಯು ಸ್ನೇಹಬಂಧನವನ್ನು ತೊರೆದು ನಿರಾಸಕ್ತನಾಗಿದ್ದನು. ಭಗವತತ್ತ್ವದ ವಿಷಯದಲ್ಲಿ ಅವನಿಗೆ ಯಾವ ಸಂಶಯವೂ ಇರಲಿಲ್ಲ. ಮೋಕ್ಷವನ್ನೇ ಚಿಂತಿಸುತ್ತಾ ಅಲ್ಲಿಂದ ಹೊರಟು ಹೋಗಲು ನಿಶ್ಚಯಿಸಿದನು. ತಂದೆಯನ್ನು ತ್ಯಜಿಸಿ, ಸಿದ್ಧರ ಸಮೂಹದಿಂದ ಸೇವಿತವಾಗಿರುವ, ವಿಶಾಲವಾದ ಕೈಲಾಸ ಗಿರಿಯ ಕಡೆ ನಡೆದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ನಾಲ್ಕನೆಯ ಅಧ್ಯಾಯ
ಶುಕದೇವನ ಊರ್ಧ್ವಗತಿಯ ವರ್ಣನೆ
ಭೀಷ್ಮಃ
ಗಿರಿಪೃಷ್ಠಂ ಸಮಾರುಹ್ಯ ಸುತೋ ವ್ಯಾಸಸ್ಯ ಭಾರತ |
ಸಮೇ ದೇಶೇ ವಿವಿಕ್ತೇ ಚ ನಿಃಶಲಾಕ ಉಪಾವಿಶತ್ ॥1॥
ಭೀಷ್ಮ ವ್ಯಾಸರ ಮಗನಾದ ಶುಕನು ಕೈಲಾಸಗಿರಿಯ ಶಿಖರವನ್ನು ಏರಿ, ಏಕಾಂತವಾಗಿದ್ದ ಸಮತಟ್ಟಾಗಿದ್ದ ಸ್ಥಳದಲ್ಲಿ ಕುಳಿತುಕೊಂಡನು.
ಧಾರಯಾಮಾಸ ಚಾತ್ಮಾನಂ ಯಥಾಶಾಸ್ತ್ರಂ ಮಹಾಮುನಿಃ |
ಪಾದಾತ್ ಪ್ರಭೃತಿ ಗಾತ್ರೇಷು ಕ್ರಮೇಣ ಕ್ರಮಯೋಗವಿತ್ ॥2॥

ಯೋಗದ ಕ್ರಮವನ್ನು ಅರಿತಿರುವ ಶುಕನು ವಿಧಿಗನುಗುಣವಾಗಿ ಪಾದದಿಂದ ಆರಂಭಿಸಿ ಸಮಸ್ತ ಅವಯವಗಳನ್ನು ನಿಗ್ರಹಿಸಿಕೊಂಡು ಪರಮಾತ್ಮನನ್ನು ಹೃದಯದಲ್ಲಿ ಧ್ಯಾನಿಸತೊಡಗಿದನು.
ತತಃ ಸ ಪ್ರಾಙ್ಮುಖೋ ವಿದ್ವಾನಾದಿತ್ಯೇ ನಚಿರೋದಿತೇ |
ಪಾಣಿಪಾದಂ ಸಮಾಧಾಯ ವಿನೀತವದುಪಾವಿಶತ್ ॥3॥
ಬಳಿಕ ಸೂರ್ಯೋದಯವು ಆಗುತ್ತಿರಲು ಶುಕದೇವನು ಕೈ-ಕಾಲುಗಳನ್ನು ನಿಗ್ರಹಿಸಿಕೊಂಡು ವಿನೀತನಂತೆ ಪೂರ್ವಾಭಿಮುಖವಾಗಿ ಕುಳಿತುಕೊಂಡನು.
ನ ತತ್ರ ಪಕ್ಷಿಸಂಘಾತೋ ನ ಶಬ್ದೋ ನಾಪಿ ದರ್ಶನಮ್ |
ಯತ್ರ ವೈಯಾಸಕಿರ್ಧೀಮಾನ್ಯೋಕ್ತುಂ ಸಮುಪಚಕ್ರಮೇ ॥4॥
ಯೋಗಧಾರಣೆಯನ್ನು ಮಾಡಿ ಕುಳಿತಿರುವ ಶುಕನ ಸ್ಥಳದಲ್ಲಿ ಪಕ್ಷಿಗಳ ಸಮುದಾಯವಾಗಲಿ, ಅವುಗಳ ಶಬ್ದವಾಗಲಿ, ಮನಸ್ಸನ್ನು ವಿಕೃತಗೊಳಿಸುವ ಯಾವುದೇ ದೃಶ್ಯವಾಗಲಿ ಕಾಣಲಿಲ್ಲ.
ಸ ದದರ್ಶ ತದಾತ್ಮಾನಂ ಸರ್ವಸಂಗವಿನಿಃಸೃತಮ್ |
ಪ್ರಜಹಾಸ ತತೋ ಹಾಸಂ ಶುಕಃ ಸಂಪ್ರೇಕ್ಷ್ಯ ಭಾಸ್ಕರಮ್ ॥5॥
ಸಮಸ್ತ ಸಂಗಗಳಿಂದ ಮುಕ್ತನಾಗಿರುವ ಪರಮಾತ್ಮನನ್ನು ತನ್ನ ಹೃದಯದಲ್ಲಿ ಶುಕಮುನಿಯು ಕಂಡನು.
ಸೂರ್ಯಾಂತರ್ಯಾಮಿಯಾದ ಪರಮಾತ್ಮನನ್ನು ಹೃದಯದಲ್ಲಿ ಕಂಡು ಉತ್ಕೃಷ್ಟವಾದ ಮಂದಹಾಸವನ್ನು ಬೀರಿದನು.
ಸ ಪುನರ್ಯೋಗಮಾಸ್ಥಾಯ ಮೋಕ್ಷಮಾರ್ಗೋಪಲಬ್ಧಯೇ |
ಮಹಾಯೋಗೀಶ್ವರೋ ಭೂತ್ವಾ ಸೋಽತ್ಯಕ್ರಾಮದ್ ವಿಹಾಯಸಮ್ ॥
ಮೋಕ್ಷ ಮಾರ್ಗದ ಪ್ರಾಪ್ತಿಗಾಗಿ ಪುನಃ ಕಠಿಣವಾದ ಯೋಗವನ್ನು ಅವಲಂಬಿಸಿದ ಶುಕಮುನಿಯು ಮಹಾಯೋಗೀಶ್ವರನಾಗಿ ಆಕಾಶಮಾರ್ಗವನ್ನು ಅತಿಕ್ರಮಿಸಿದನು.
ತತಃ ಪ್ರದಕ್ಷಿಣಂ ಕೃತ್ವಾ ದೇವರ್ಷಿಂ ನಾರದಂ ತದಾ |
ನಿವೇದಯಾಮಾಸ ತದಾ ಸ್ವಂ ಯೋಗಂ ಪರಮರ್ಷಯೇ ॥7॥
ಆ ಸಮಯಕ್ಕೆ ಸರಿಯಾಗಿ ಆಗಮಿಸಿದ ನಾರದರಿಗೆ ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡಿ ತನ್ನ ಯೋಗಸಿದ್ಧಿಯ ವಿಷಯವನ್ನು ತಿಳಿಸಿದನು.
ದೃಷ್ಟೋ ಮಾರ್ಗಃ ಪ್ರವತ್ತೋಽಸ್ಮಿ ಸ್ವಸ್ತಿ ತೇಽಸ್ತು ತಪೋಧನ |
ತ್ವತ್ಪ್ರಸಾದಾದ್ ಗಮಿಷ್ಯಾಮಿ ಗತಿಮಿಷ್ಟಾಂ ಮಹಾದ್ಯುತೇ ॥8॥
ತಪೋಧನರೇ, ಮಹಾಕಾಂತಿವಂತರೇ, ನಿಮಗೆ ಮಂಗಳವಾಗಲಿ. ನಿಮ್ಮ ಅನುಗ್ರಹದಿಂದ ಮೋಕ್ಷಮಾರ್ಗವು ಗೋಚರಿಸಿತು. ನಾನು ಅಲ್ಲಿಗೆ ತೆರಳುವವನಿದ್ದೇನೆ. ಮೋಕ್ಷಮಾರ್ಗವನ್ನು ಅನುಸರಿಸಿ ಅಲ್ಲಿಗೆ ಹೋಗುತ್ತೇನೆ.
ನಾರದೇನಾಭ್ಯನುಜ್ಞಾತಸ್ತತೋ ದ್ವೈಪಾಯನಾತ್ಮಜಃ |
ಅಭಿವಾದ್ಯ ಪುನರ್ಯೋಗಮಾಸ್ಥಾಯಾಕಾಶಮಾವಿಶತ್ ॥9॥
ಶುಕಮುನಿಯು ನಾರದರ ಬಳಿ ಹೀಗೆ ಹೇಳಿ, ಅನುಮತಿಯನ್ನು ಪಡೆದು, ಪುನಃ ಅವರಿಗೆ ನಮಸ್ಕಾರ ಮಾಡಿ ಯೋಗಮಾರ್ಗದಿಂದ ಅಂತರಿಕ್ಷವನ್ನು ಪ್ರವೇಶಿಸಿದನು.
ಕೈಲಾಸಪೃಷ್ಠಾದುತ್ಪತ್ಯ ಸ ಪಪಾತ ದಿವಂ ತದಾ |
ಅಂತರಿಕ್ಷಚರಃ ಶ್ರೀಮಾನ್ ವ್ಯಾಸಪುತ್ರಃ ಸುನಿಶ್ಚಿತಃ ॥10॥
ಕೈಲಾಸಶಿಖರದಿಂದ ಮೇಲೆ ಹೋಗಿ ಆಕಾಶವನ್ನು ಸೇರಿದನು. ನಿಶ್ಚಯ ಜ್ಞಾನವನ್ನು ಹೊಂದಿರುವ ಜ್ಞಾನಿಯಾದ ಶುಕನು ವಾಯುರೂಪದಿಂದ ಆಕಾಶದಲ್ಲಿ ಸಂಚರಿಸಿದನು. ಮನೋವೇಗ, ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ ದ್ವಿಜಶ್ರೇಷ್ಠನಾದ ಶುಕಮುನಿಯು ಊರ್ಧ್ವಲೋಕಕ್ಕೆ ಹೋಗುತ್ತಿರುವುದನ್ನು ಸಕಲ ಪ್ರಾಣಿಗಳು ನೋಡಿದವು.
ತಮುದ್ಯಂತಂ ದ್ವಿಜಶ್ರೇಷ್ಠಂ ವೈನತೇಯಸಮದ್ಯುತಿಮ್ |
ದದೃಶುಃ ಸರ್ವಭೂತಾನಿ ಮನೋಮಾರುತರಂಹಸಮ್ ॥11॥
ವ್ಯವಸಾಯೇನ ಲೋಕಾಂಸ್ತ್ರೀನ್ ಸರ್ವಾನ್ ಸೋಽಥ ವಿಚಿಂತಯನ್ |
ಆಸ್ಥಿತೋ ದಿವ್ಯಮಧ್ವಾನಂ ಪಾವಕಾರ್ಕಸಮಪ್ರಭಃ ॥12॥
ಸೂರ್ಯಾಗ್ನಿಗಳ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಶುಕಮುನಿಯು ನಿಶ್ಚಯಜ್ಞಾನದಿಂದ ಮೂರುಲೋಕಗಳನ್ನು, ಅದರ ಅಂತರ್ಯಾಮಿಯಾದ ಪರಮಾತ್ಮನನ್ನು ಕಾಣುತ್ತಾ, ಬಹಳ ದೂರ ಪ್ರಯಾಣ ಮಾಡಿದನು.
ತಮೇಕಮನಸಂ ಯಾಂತಮವ್ಯಗ್ರಮಕುತೋಭಯಮ್ |
ದದೃಶುಃ ಸರ್ವಭೂತಾನಿ ಜಂಗಮಾನೀತರಾಣಿ ಚ ॥13॥
ಭಗವನ್ನಿಷ್ಠವಾದ ಬುದ್ಧಿಯಿಂದ ಅವ್ಯಗ್ರನಾಗಿ, ಭಯರಹಿತನಾಗಿ ಸಾಗುತ್ತಿರುವ ಶುಕಮುನಿಯನ್ನು ಸ್ಥಾವರ-ಜಂಗಮಾದಿ ಸಮಸ್ತ ಪ್ರಾಣಿಗಳು ನೋಡಿದವು.
ಯಥಾಶಕ್ತಿ ಯಥಾನ್ಯಾಯಂ ಪೂಜಯಾಂ ಚಕ್ರಿರೇ ತದಾ |
ಪುಷ್ಪವರ್ಷೈಶ್ಚ ದಿವ್ಯೈಸ್ತಮವಚಕ್ರುರ್ದಿವೌಕಸಃ ॥14॥
ಎಲ್ಲ ಪ್ರಾಣಿಗಳು ತಮ್ಮ ಯೋಗ್ಯತೆಗನುಗುಣವಾಗಿ ಅವರನ್ನು ಪೂಜಿಸಿದವು. ದೇವತೆಗಳು ಪುಷ್ಪವೃಷ್ಟಿಯಿಂದ ಶುಕರನ್ನು ಪೂಜಿಸಿದರು.
ತಂ ದೃಷ್ಟ್ವಾ ವಿಸ್ಮಿತಾಃ ಸರ್ವೇ ಗಂಧರ್ವಾಪ್ಸರಸಾಂ ಗಣಾಃ |

ಋಷಯಶ್ಚೈವ ಸಂಸಿದ್ಧಾಃ ಪರಂ ವಿಸ್ಮಯಮಾಗತಾಃ ॥15॥
ಊರ್ಧ್ವಲೋಕಕ್ಕೆ ತೆರಳುತ್ತಿರುವ ಶುಕಮುನಿಯನ್ನು ಕಂಡು ಗಂಧರ್ವರು, ಅಪ್ಸರೆಯರು, ಋಷಿಗಳು, ಸಿದ್ಧರು - ಇವರೆಲ್ಲರ ಸಮುದಾಯವು ಅತ್ಯಂತ ಆಶ್ಚರ್ಯವನ್ನು ಹೊಂದಿತು.
ಅಂತರಿಕ್ಷಚರಃ ಕೋಽಯಂ ತಪಸಾ ಸಿದ್ಧಿಮಾಗತಃ ।
ಅಧಃಕಾಯೋರ್ಧ್ವವಕ್ತ್ರಶ್ಚ ನೇತ್ರೈಃ ಸಮಭಿವಾಹ್ಯತೇ ॥16॥
ಅಂತರಿಕ್ಷ ಮಾರ್ಗದಲ್ಲಿ ಸಾಗುತ್ತಿರುವ, ತಪಸ್ಸಿನಿಂದ ಸಿದ್ಧಿಯನ್ನು ಹೊಂದಿರುವ ಇವನು ಯಾರು? ಇವನ ಶರೀರವು ಕೆಳಗಿದೆ, ಮುಖವು ಮೇಲ್ಮುಖವಾಗಿದೆ. ನಮ್ಮ ಕಣ್ಣುಗಳನ್ನು ಬಲಾತ್ಕಾರವಾಗಿ ಸೆಳೆಯುತ್ತಿದ್ದಾನೆ ಎಂದು ಮಾತನಾಡಿಕೊಂಡರು.
ತತಃ ಪರಮಧೀರಾತ್ಮಾ ತ್ರಿಷು ಲೋಕೇಷು ವಿಶ್ರುತಃ ।
ಭಾಸ್ಕರಂ ಸಮುದೀಕ್ಷನ್ ಸ ಪ್ರಾಙ್ಮುಖೋ ವಾಗ್ಯತೋಽಗಮತ್ ।
ಶಬ್ದೇನಾಕಾಶಮಖಿಲಂ ಪೂರಯನ್ನಿವ ಸರ್ವತಃ ॥17॥
ಬಳಿಕ ಅತ್ಯಂತ ಜ್ಞಾನಿಯಾದ ಶುಕಮುನಿಯು ಮೂರುಲೋಕಗಳಲ್ಲಿ ಪ್ರಸಿದ್ಧನಾದನು. ಜಿತೇಂದ್ರಿಯನಾಗಿ, ಮೌನಿಯಾಗಿ, ಪೂರ್ವದಿಕ್ಕಿಗೆ ಅಭಿಮುಖವಾಗಿ ಸಾಗುತ್ತಾ ಸೂರ್ಯದೇವನನ್ನು ನೋಡಿದನು. ತನ್ನ ಗತಿಯಿಂದುಂಟಾದ ಶಬ್ದದಿಂದ ಆಕಾಶವನ್ನೇ ತುಂಬುತ್ತಿದ್ದಾನೋ ಎಂಬಂತೆ ಕಾಣಿಸುತ್ತಿದ್ದನು.
ತಮಾಪತಂತಂ ಸಹಸಾ ದೃಷ್ಟ್ವಾ ಸರ್ವಾಪ್ಸರೋಗಣಾಃ ।
ಸಂಭ್ರಾಂತಮನಸೋ ರಾಜನ್ನಾಸನ್ ಪರಮವಿಸ್ಮಿತಾಃ ।
ಪಂಚಚೂಡಾಪ್ರಭೃತಯೋ ಭೃಶಮುತ್ಫುಲ್ಲಲೋಚನಾಃ ॥18॥
ರಭಸದಿಂದ ಆಗಮಿಸುತ್ತಿರುವ ಶುಕಮುನಿಯನ್ನು ಅಪ್ಸರಾಸ್ತ್ರೀಯರು ಸಂಭ್ರಾಂತವಾದ ಮನಸ್ಸಿನಿಂದ ನೋಡಿ ಆಶ್ಚರ್ಯವನ್ನು ಹೊಂದಿದರು. ಪಂಚಚೂಡರೇ ಮೊದಲಾದ ಅಪ್ಸರೆಯರು ಅರಳಿದ ಕಣ್ಣುಗಳಿಂದ ಶುಕನನ್ನು ನೋಡುತ್ತಾ ಹೀಗೆ ಮಾತನಾಡಿಕೊಂಡರು.
ದೈವತಂ ಕತಮಂ ಹ್ಯೇತದುತ್ತಮಾಂ ಗತಿಮಾಸ್ಥಿತಮ್ ।
ಸುನಿಶ್ಚಿತಮಿಹಾಯಾತಿ ವಿಮುಕ್ತಮಿವ ನಿಃಸ್ಪೃಹಮ್ ॥19॥
ಯಾವ ದೇವತಾ ಶಕ್ತಿಯಿಂದ ಈ ಗತಿಯನ್ನು ಆಶ್ರಯಿಸಿ ಈ ವ್ಯಕ್ತಿಯು ಇಲ್ಲಿ ಬರುತ್ತಿದ್ದಾನೆ? ನಿಶ್ಚಯವಾದ ಜ್ಞಾನದಿಂದ ಕೂಡಿಕೊಂಡು ಎಲ್ಲ ವಿಧವಾದ ಬಂಧನದಿಂದ, ಸಂಶಯದಿಂದ ಮುಕ್ತನಾಗಿರುವಂತೆ ಕಾಣಿಸುತ್ತಿದ್ದಾನೆ. ಆಸೆಯನ್ನು ತೊರೆದವನಾಗಿ ಕಾಣಿಸುತ್ತಿದ್ದಾನೆ.
ತತಃ ಸಮತಿಚಕ್ರಾಮ ಮಲಯಂ ನಾಮ ಪರ್ವತಮ್ ।
ಉರ್ವಶೀ ಪೂರ್ವಚಿತ್ತಿಶ್ಚ ಯಂ ನಿತ್ಯಮುಪಸೇವತೇ ।
ತೇ ಸ್ಮ ಬ್ರಹ್ಮರ್ಷಿಪುತ್ರಸ್ಯ ವಿಸ್ಮಯಂ ಯಯತುಃ ಪರಮ್ ॥20॥
ಬಳಿಕ ಶುಕಮುನಿಯು ಸ್ವಲ್ಪ ಸಮಯದಲ್ಲಿಯೇ ಆಕಾಶಮಾರ್ಗದಲ್ಲಿ ಸಂಚರಿಸುತ್ತಾ ಊರ್ವಶಿ, ಪೂರ್ವಚಿತ್ತಿ ಎಂಬ ಅಪ್ಸರೆಯರು ಆಶ್ರಯಿಸಿರುವ ಮಲಯ ಎಂಬ ಪರ್ವತದ ಕಡೆಗೆ ತೆರಳಿದನು. ಬ್ರಹ್ಮರ್ಷಿಪುತ್ರನಾದ ಶುಕನ ಆಗಮನವನ್ನು ಕಂಡ ಊರ್ವಶಿ, ಪೂರ್ವಚಿತ್ತಿಯರು ವಿಸ್ಮಿತರಾಗಿ ತಮ್ಮಲ್ಲಿಯೇ ಹೀಗೆ ಮಾತನಾಡಿದರು.
ಅಹೋ ಬುದ್ಧಿಸಮಾಧಾನಂ ವೇದಾಭ್ಯಾಸರತೇ ದ್ವಿಜೇ ।
ಅಚಿರೇಣೈವ ಕಾಲೇನ ನಭಶ್ಚರತಿ ಚಂದ್ರವತ್ ।
ಪಿತೃಶುಶ್ರೂಷಯಾ ಸಿದ್ಧಿಂ ಸಂಪ್ರಾಪ್ತೋಽಯಮನುತ್ತಮಾಮ್ ॥21॥
ಆಶ್ಚರ್ಯವು! ವೇದಾಭ್ಯಾಸ ನಿರತನಾದ ಬ್ರಾಹ್ಮಣನಲ್ಲಿ ಎಂತಹ ಏಕಾಗ್ರಬುದ್ಧಿ ಇದೆ. ಅನುತ್ತಮವಾದ ಸಿದ್ಧಿಯನ್ನು ತಂದೆಯ ಸೇವೆಯಿಂದಲೇ ಪಡೆದುಕೊಂಡ ಈತನು ಸ್ವಲ್ಪ ಸಮಯದಲ್ಲಿಯೇ ಚಂದ್ರನಂತೆ ಈ ಆಕಾಶದಲ್ಲಿ ಸಂಚರಿಸುತ್ತಿದ್ದಾನೆ.
ಪಿತೃಭಕ್ತೋ ದೃಢತಪಾಃ ಪಿತುಃ ಸುದಯಿತಃ ಸುತಃ ।
ಅನನ್ಯಮನಸಾ ತೇನ ಕಥಂ ಪಿತ್ರಾ ವಿವರ್ಜಿತಃ ॥22॥
ಇವನು ತಂದೆಯಲ್ಲಿ ಭಕ್ತಿಯುಳ್ಳವನು, ದೃಢತಪಸ್ವಿಯು, ತಂದೆಗೆ ಅತ್ಯಂತ ಪ್ರೀತಿಪಾತ್ರನಾದ ಮಗನು. ಅತ್ಯಂತ ಮಮತೆಯುಳ್ಳ ವ್ಯಾಸಮುನಿಯು ಇಂತಹ ಮಗನನ್ನು ಹೇಗೆ ಬಿಟ್ಟುಕೊಟ್ಟನು?
ಉರ್ವಶ್ಯಾ ವಚನಂ ಶ್ರುತ್ವಾ ಶುಕಃ ಪರಮಧರ್ಮವಿತ್ ।
ಉದೈಕ್ಷತ ದಿಶಃ ಸರ್ವಾ ವಚನೇ ಗತಮಾನಸಃ ॥23॥
ಯುಧಿಷ್ಠಿರನೇ, ಪರಮಧಾರ್ಮಿಕನಾದ ಶುಕಮುನಿಯು ಊರ್ವಶಿಯು ಹೇಳಿದ ಮಾತನ್ನು ಕೇಳಿಸಿಕೊಂಡು, ಎಲ್ಲ ದಿಕ್ಕುಗಳನ್ನು ನೋಡಿದನು. ಅವನ ಮನಸ್ಸು ಊರ್ವಶಿಯ ಮಾತಿನಲ್ಲಿ ಆಸಕ್ತವಾಗಿತ್ತು.
ಸೋಽಂತರಿಕ್ಷಂ ಮಹೀಂ ಚೈವ ಸಶೈಲವನಕಾನನಾಮ್ ।
ಆಲೋಕಯಾಮಾಸ ತದಾ ಸರಾಂಸಿ ಸರಿತಸ್ತಥಾ ॥24॥
ಶುಕಮುನಿಯು ಆಕಾಶ, ಪರ್ವತ, ಶೈಲ, ವನ, ಕಾಡುಗಳಿಂದ ಕೂಡಿರುವ ಭೂಮಂಡಲ, ಸರೋವರ, ನದಿಗಳು ಈ ಎಲ್ಲ ಕಡೆಯೂ ದೃಷ್ಟಿಯನ್ನು ಪಸರಿಸಿದನು.
ತತೋ ದ್ವೈಪಾಯನಸುತಂ ಬಹುಮಾನಪುರಃಸರಮ್ ।
ಕೃತಾಂಜಲಿಪುಟಾಃ ಸರ್ವಾ ನಿರೀಕ್ಷಂತೇ ಸ್ಮ ದೇವತಾಃ ॥25॥
ಕೃಷ್ಣದ್ವೈಪಾಯನರ ಮಗನಾದ ಶುಕಮುನಿಯನ್ನು ಅತ್ಯಂತ ಆದರದಿಂದ ಕೈಮುಗಿದು, ಸಮಸ್ತ ಗಿರಿ-ಕಾನನ ಅಭಿಮಾನಿದೇವತೆಗಳು

ನಿರೀಕ್ಷಿಸುತ್ತಿದ್ದರು.
ಅಬ್ರುವೀತ್ತಾಸ್ತದಾ ವಾಕ್ಯಂ ಶುಕಃ ಪರಮಧರ್ಮವಿತ್ |
ಪಿತಾ ಯದ್ಯನುಗಚ್ಛೇನ್ಮಾಂ ಕ್ರೋಶಮಾನಃ ಶುಕೇತಿ ವೈ ॥26॥
ಪರಮಧಾರ್ಮಿಕನಾದ ಶುಕನು ತನ್ನನ್ನು ಪ್ರೀತಿ-ಆದರದಿಂದ, ಬಹುಮಾನದಿಂದ ನೋಡುತ್ತಿರುವ ಗಿರಿ-ಪರ್ವತ-ಸರಿತ್ತುಗಳ ಅಧಿದೇವತೆಗಳನ್ನು ಕುರಿತು ಹೀಗೆ ಹೇಳಿದನು.
ತತಃ ಪ್ರತಿವಚೋ ದೇಯಂ ಸರ್ವೈರೇವ ಸಮಾಹಿತೈಃ |
ಏತನ್ಮೇ ಸ್ನೇಹತಃ ಸರ್ವೇ ವಚನಂ ಕರ್ತುಮರ್ಹಥ ॥27॥
ದೇವತೆಗಳೇ, ನಮ್ಮ ತಂದೆ ಏನಾದರೂ ಶುಕ-ಶುಕ ಎಂದು ಕೂಗಿದರೆ, ಇಲ್ಲಿಗೆ ಆಗಮಿಸಿದರೆ ನೀವೆಲ್ಲ ಒಟ್ಟಾಗಿ ಸಮಾಧಾನದ ಮಾತನ್ನು ನನ್ನ ತಂದೆಗೆ ಹೇಳಬೇಕು. ನನ್ನಲ್ಲಿರುವ ಸ್ನೇಹದಿಂದ ನೀವೆಲ್ಲ ಈ ನನ್ನ ಮಾತನ್ನು ನಡೆಸಿಕೊಡಬೇಕು.
ಶುಕಸ್ಯ ವಚನಂ ಶ್ರುತ್ವಾ ದಿಶಃ ಸವನಕಾನನಾಃ |
ಸಮುದ್ರಾಃ ಸರಿತಃ ಶೈಲಾಃ ಪ್ರತ್ಯೂಚುಸ್ತಂ ಸಮಂತತಃ ॥28॥
ಶುಕನ ಮಾತನ್ನು ಕೇಳಿದ ಸಮಸ್ತ ದಿಕ್ಕು, ಕಾನನ, ನದಿ, ಪರ್ವತ, ಸಮುದ್ರ ಮೊದಲಾದ ಅಭಿಮಾನಿದೇವತೆಗಳು ಸುತ್ತಲೂ ನಿಂತು ಹೀಗೆ ಉತ್ತರಿಸಿದರು.
ಯಥಾಜ್ಞಾಪಯಸೇ ವಿಪ್ರ ಬಾಢಮೇವಂ ಭವಿಷ್ಯತಿ |
ಋಷೇರ್ವ್ಯಾಹರತೋ ವಾಕ್ಯಂ ಪ್ರತಿವಕ್ಷ್ಯಾಮಹೇ ವಯಮ್ ॥29॥
ಬ್ರಾಹ್ಮಣನೇ, ಯಾವ ರೀತಿ ನೀನು ಆದೇಶಿಸುತ್ತೀಯೋ ಅದರಂತೆ ನಡೆಯುತ್ತೇವೆ. ವ್ಯಾಸಮುನಿಯು ಇಲ್ಲಿಗೆ ಆಗಮಿಸಿ ನಿನ್ನ ಬಗ್ಗೆ ಪ್ರಶ್ನಿಸಿದಾಗ ನೀನು ಹೇಳಿದಂತೆ ಹಿತವೂ, ಪ್ರಿಯವೂ ಆದ ಮಾತನ್ನೇ ಅವನ ಬಳಿ ಹೇಳುತ್ತೇವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೈದನೆಯ ಅಧ್ಯಾಯ
ಶುಕಮುನಿಯ ವೃತ್ತಾಂತ. ವ್ಯಾಸರಿಗೆ ಮಹದೇವನ ಉತ್ತರ.
ಭೀಷ್ಮಃ
ಇತ್ಯೇವಮುಕತ್ವ ವಚನಂ ಬ್ರಹ್ಮರ್ಷಿಃ ಸುಮಹಾತಪಾಃ |
ಪ್ರಾತಿಷ್ಠತ ಶುಕಃ ಸಿದ್ಧಿಂ ಹಿತ್ವಾ ಲೋಕಾಂಶ್ಚತುರ್ವಿಧಾನ್ ॥1॥
ಭೀಷ್ಮ ಯುಧಿಷ್ಠಿರನೇ, ಮಹಾತಪಸ್ವಿಯಾದ, ಬ್ರಹ್ಮರ್ಷಿಯಾದ ಶುಕಮುನಿಯು ಸಮಸ್ತ ಪ್ರಕೃತಿ ದೇವತೆಗಳ ಬಳಿ ಹೀಗೆ ಹೇಳಿ, ಸಿದ್ಧಿಯನ್ನು ಹೊಂದಲು ಧರ್ಮಾರ್ಥ ಕಾಮ ಮೋಕ್ಷಗಳೆಂಬ ಜಗತ್ತನ್ನೂ ತೊರೆದು ತೆರಳಿದನು.
ತಮೋ ಹ್ಯಷ್ಟವಿಧಂ ಹಿತ್ವಾ ಜಹೌ ಪಂಚವಿಧಂ ರಜಃ |
ತತಃ ಸತ್ತ್ವಂ ಜಹೌ ಧೀಮಾಂಸ್ತದದ್ಭುತಮಿವಾಭವತ್ ॥2॥
ಎಂಟು ವಿಧವಾದ ತಮೋಗುಣಗಳನ್ನು, ಐದು ವಿಧವಾದ ರಜೋಗುಣಗಳನ್ನು ತ್ಯಜಿಸಿ, ಅನಂತರ ಸತ್ತ್ವಗುಣವನ್ನೂ ತ್ಯಜಿಸಿ ಮುಂದೆ ತೆರಳಿದನು. ಅವನ ಈ ವ್ಯಕ್ತಿತ್ವವು ಪರಮಾದ್ಭುತವಾಗಿತ್ತು.
ವ್ಯಾಖ್ಯಾನ ವಿಶೇಷ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಎಂಬಲ್ಲಿನ ದೋಷಗಳನ್ನು ಪರಿಹರಿಸಿಕೊಂಡನು ಎಂದು ಕೆಲವರು ನಾಲ್ಕು ವಿಧ ಲೋಕಗಳನ್ನು ಬಿಟ್ಟನು ಎಂಬುದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಭೂತ, ಇಂದ್ರಿಯ, ಮನಸ್ಸು, ಬುದ್ಧಿ, ಪ್ರಾಣ, ಕರ್ಮ, ವಾಸನೆ, ಅವಿದ್ಯೆ- ಎಂದು ಎಂಟು ವಿಧವಾದ ತಮಸ್ಸನ್ನು, ವಿಷಯಪ್ರವೃತ್ತಿಗೆ ಸಂಬಂಧಿಸಿದ ಐದು ವಿಧವಾದ ರಜಸ್ಸನ್ನು ತೊರೆದು ತೆರಳಿದನು ಎಂದು ಕೆಲವರು ವ್ಯಾಖ್ಯಾನಿಸಿರುತ್ತಾರೆ.
ತತಸ್ತಸ್ಮಿನ್ ಪದೇ ನಿತ್ಯೇ ನಿರ್ಗುಣೇ ಲಿಂಗವರ್ಜಿತೇ |
ಬ್ರಹ್ಮಣಿ ಪ್ರತ್ಯತಿಷ್ಠತ್ ಸ ವಿಧೂಮೋಽಗ್ನಿರಿವ ಜ್ವಲನ್ ॥3॥
ಅನಂತರ ಶುಕನು ಲಿಂಗದೇಹದ ಸಂಬಂಧವಿರದ, ಪ್ರಾಕೃತಗುಣರಹಿತವಾದ, ನಿತ್ಯನೆನಿಸಿದ, ಗುಣಪರಿಪೂರ್ಣನಾದ ಪರಬ್ರಹ್ಮನಲ್ಲಿಯೇ ಹೊಗೆ ಇಲ್ಲದ ಯಜ್ಞೇಶ್ವರನಂತೆ ಆಶ್ರಯವನ್ನು ಹೊಂದಿದನು.
ಉಲ್ಕಾಪಾತಾ ದಿಶಾಂ ದಾಹಾ ಭೂಮಿಕಂಪಾಸ್ತಥೈವ ಚ |
ಪ್ರಾದುರ್ಭೂತಾಃ ಕ್ಷಣೇ ತಸ್ಮಿಂಸ್ತದದ್ಭುತಮಿವಾಭವತ್ ॥4॥
ಎಲ್ಲ ಕಡೆಯೂ ಉಲ್ಕೆಗಳು ಬೀಳತೊಡಗಿದವು. ದಿಕ್ಕುಗಳಲ್ಲಿ ಅಗ್ನಿಯು ಪ್ರಜ್ವಲಿಸಿತು. ಭೂಮಿಯು ನಡುಗಲಾರಂಭಿಸಿತು. ಶುಕಮುನಿಯು ಬ್ರಹ್ಮಜ್ಞಾನ ಹೊಂದಿದ ಬಳಿಕ ಈ ಅದ್ಭುತಗಳು ನಡೆದವು.
ದ್ರುಮಾಃ ಶಾಖಾಶ್ಚ ಮುಮುಚುಃ ಶಿಖರಾಣಿ ಚ ಪರ್ವತಾಃ |
ನಿರ್ಘಾತಶಬ್ದೈಶ್ಚ ಗಿರಿರ್ಹಿಮವಾನ್ ದೀರ್ಯತೀವ ಹ ॥5॥
ನ ಬಭಾಸೇ ಸಹಸ್ರಾಂಶುರ್ನ ಜಜ್ವಾಲ ಚ ಪಾವಕಃ |
ಹ್ರದಾಶ್ಚ ಸರಿತಶ್ಚೈವ ಚುಕ್ಷುಭುಃ ಸಾಗರಾಸ್ತಥಾ ॥6॥
ವೃಕ್ಷಗಳು ಕೊಂಬೆಗಳಿಂದ ಕಳಚಿಬಿದ್ದವು. ಪರ್ವತಗಳು ಶಿಖರಗಳನ್ನು ಕಡಿದು ಕೊಂಡವು. ಶಬ್ದದಿಂದ ಹಿಮವತ್ ಪರ್ವತವು ಸೀಳಿಯೆ ಹೋಗುವಂತೆ ಕಾಣಿಸುತ್ತಿತ್ತು. ಸೂರ್ಯನು ಪ್ರಕಾಶಿಸುತ್ತಿರಲಿಲ್ಲ, ಅಗ್ನಿಯು ಜ್ವಲಿಸುತ್ತಿರಲಿಲ್ಲ. ನದಿ-ಸರೋವರ- ಸಮುದ್ರಗಳು

ಕದಡಿಹೋದವು.
ವವರ್ಷ ವಾಸವಸ್ತೋಯಂ ರಸವಚ್ಚ ಸುಗಂಧಿ ಚ |
ವವೌ ಸಮೀರಣಶ್ಚಾಪಿ ದಿವ್ಯಗಂಧವಹಃ ಶುಚಿಃ ॥7॥
ಇಂದ್ರನು ರಸಮಯವಾದ, ಪರಿಮಳಭರಿತವಾದ ಮಳೆಯನ್ನು ಸುರಿಸಿದನು. ದಿವ್ಯಗಂಧವನ್ನು ಧರಿಸಿರುವ ವಾಯುದೇವನು ಬೀಸತೊಡಗಿದನು.
ಸ ಶೃಂಗೀಪ್ರತಿಮೇ ದಿವ್ಯೇ ಹಿಮವನ್ಮೇರುಸಂಭವೇ |
ಸಂಶ್ಲಿಷ್ಟೇ ಶ್ವೇತಪೀತೇ ದ್ವೇ ರುಕ್ಮರೂಪ್ಯಮಯೇ ಶುಭೇ ॥8॥
ಶುಕನು ಬ್ರಹ್ಮಜ್ಞಾನವನ್ನು ಆಶ್ರಯಿಸಿ ತೆರಳುತ್ತಿರುವಾಗ ಪರ್ವತದ ಎರಡು ಸುಂದರವಾದ ಶಿಖರಗಳನ್ನು ಕಂಡನು. ಪರಸ್ಪರ ಒಂದಕ್ಕೊಂದು ಅಂಟಿಕೊಂಡಿದ್ದವು. ಒಂದು ಹಿಮವತ್ ಪರ್ವತದ ಶಿಖರವು, ಮತ್ತೊಂದು ಮೇರುಪರ್ವತದ ಶಿಖರವು. ಹಿಮವತ್ ಪರ್ವತದ ಶಿಖರವು ರಜತರೂಪವಾಗಿಯೂ, ಮೇರುಪರ್ವತದ ಶಿಖರವು ಬಂಗಾರಮಯವಾಗಿಯೂ ಕಾಣಿಸುತ್ತಿತ್ತು.
ಶತಯೋಜನವಿಸ್ತಾರೇ ತಿರ್ಯಗೂರ್ಧ್ವಂ ಚ ಭಾರತ |
ಉದೀಚೀಂ ದಿಶಮಾಶ್ರಿತ್ಯ ರುಚಿರೇ ಸಂದದರ್ಶ ಹ ॥9॥
ಎರಡು ಶಿಖರಗಳ ಎತ್ತರ ಮತ್ತು ಅಗಲ-ಉದ್ದಗಳು ನೂರು-ನೂರು ಪ್ರಮಾಣಗಳ ಪರಿಮಿತಿಯಲ್ಲಿದ್ದವು. ಉತ್ತರಕ್ಕೆ ಸಾಗುತ್ತಿದ್ದ ಶುಕದೇವನು ಆ ದಿವ್ಯಶಿಖರಗಳನ್ನು ಕಂಡನು.
ಸೋಽವಿಶಂಕೇನ ಮನಸಾ ತಥೈವಾಭ್ಯಪತಚ್ಛುಕಃ |
ತತಃ ಪರ್ವತಶೃಂಗೇ ದ್ವೇ ಸಹಸೈವ ದ್ವಿಧಾಕೃತೇ |
ಅದೃಶ್ಯೇತಾಂ ಮಹಾರಾಜ ತದದ್ಭುತಮಿವಾಭವತ್ ॥10॥
ತತಃ ಪರ್ವತಶೃಂಗಾಭ್ಯಾಂ ಸಹಸೈವ ವಿನಿಃಸೃತಃ |
ನ ಚ ಪ್ರತಿಜಘಾನಾಸ್ಯ ಸ ಗತಿಂ ಪರ್ವತೋತ್ತಮಃ ॥11॥
ಸಂಶಯವಿಲ್ಲದ ಮನಸ್ಸಿನಿಂದ ಆ ಶಿಖರಗಳನ್ನು ಏರತೊಡಗಿದನು. ಪರಸ್ಪರ ಅಂಟಿಕೊಂಡಿರುವ ಶಿಖರಗಳು ಶುಕನ ಸಮಾಗಮದಿಂದ ಎರಡು ಸೀಳಾಗಿ ಹೋದವು. ಆ ದೃಶ್ಯವು ಅದ್ಭುತವಾಗಿತ್ತು. ಆ ಶಿಖರಗಳ ನಡುವಿನಿಂದ ಶುಕಮುನಿಯು ಉದಿಸಿಬಂದನು. ಅವನನ್ನು ಹಿಮವತ್ ಪರ್ವತವು ಪುನಃ ತಡೆಯಲಿಲ್ಲ.
ತತೋ ಮಹಾನಭೂಚ್ಛಬ್ದೋ ದಿವಿ ಸರ್ವದಿವೌಕಸಾಮ್ |
ಗಂಧರ್ವಾಣಾಮೃಷೀಣಾಂ ಚ ಯೇ ಚ ಶೈಲನಿವಾಸಿನಃ ॥12॥
ಅದನ್ನು ಕಂಡು ದೇವತೆಗಳು, ಗಂಧರ್ವರು, ಋಷಿಗಳು, ಪರ್ವತದಲ್ಲಿರುವ ಸಮಸ್ತರು ಏಕಕಾಲದಲ್ಲಿ ಸಂತೋಷದ ಶಬ್ದವನ್ನು ಮಾಡಿದರು.
ದೃಷ್ಟ್ವಾ ಶುಕಮತಿಕ್ರಾಂತಂ ಪರ್ವತಂ ಚ ದ್ವಿಧಾಕೃತಮ್ |
ಸಾಧು ಸಾಧ್ವಿತಿ ತತ್ರಾಸೀನ್ನಾದಃ ಸರ್ವತ್ರ ಭಾರತ ॥13॥
ಆ ಶಿಖರಗಳನ್ನು ದಾಟಿ ಹೋಗುತ್ತಿರುವ ಶುಕಮುನಿಯ ಮಹತ್ವವನ್ನು, ಎರಡಾಗಿ ಸೀಳಿದ ಪರ್ವತದ ಸ್ಥಿತಿಯನ್ನು ಕಾಣುತ್ತಾ ಇರುವ ಅವರೆಲ್ಲರೂ `ಸಾಧು-ಸಾಧು' ಎಂದು ಹೇಳುತ್ತಿರುವಾಗ ಆ ಶಬ್ದವು ಎಲ್ಲೆಡೆಯೂ ತುಂಬಿಹೋಯಿತು.
ಸ ಪೂಜ್ಯಮಾನೋ ದೇವೈಶ್ಚ ಗಂಧರ್ವೈರ್ಋಷಿಭಿಸ್ತಥಾ |
ಯಕ್ಷರಾಕ್ಷಸಸ್ಯೆಂಶ್ಚ ವಿದ್ಯಾಧರಗಣೈಸ್ತಥಾ ॥14॥
ಆ ಶುಕಮುನಿಯು ಸಮಸ್ತ ದೇವತೆಗಳಿಂದ, ಗಂಧರ್ವರಿಂದ, ಋಷಿಗಳಿಂದ, ಯಕ್ಷ-ರಾಕ್ಷಸ-ವಿದ್ಯಾಧರ ಗಣಗಳಿಂದ ಪೂಜಿತನಾಗಿ ಸಾಗುತ್ತಿದ್ದನು.
ದಿವ್ಯೈಃ ಪುಷ್ಪೈಃ ಸಮಾಕೀರ್ಣಮಂತರಿಕ್ಷಂ ಸಮಂತತಃ |
ಆಸೀತ್ ಕಿಲ ಮಹಾರಾಜ ಶುಕಾಭಿಪತನೇ ತದಾ ॥15॥
ದೇವಲೋಕದ ಪುಷ್ಪಗಳಿಂದ ಶುಕಮುನಿಯು ಪೂಜಿತನಾಗುತ್ತಿರಲು ಆಕಾಶವೆಲ್ಲವೂ ಪುಷ್ಪದ ಸಮುದಾಯದಿಂದ ಶೋಭಿಸುತ್ತಿತ್ತು. ಶುಕಮುನಿಯು ಸಾಗುತ್ತಿರುವಾಗ ಇಂತಹ ಸುಂದರವಾದ ದೃಶ್ಯವು ಉಂಟಾಯಿತು.
ತತೋ ಮಂದಾಕಿನೀಂ ರಮ್ಯಾಮುಪರಿಷ್ಟಾದಭಿವ್ರಜನ್ |
ಶುಕೋ ದದರ್ಶ ಧರ್ಮಾತ್ಮಾ ಪುಷ್ಪಿತದ್ರುಮಕಾನನಾಮ್ ॥16॥
ಧರ್ಮಾತ್ಮನಾದ ಶುಕಮುನಿಯು ಮುಂದೆ ಸಾಗುತ್ತಿರಲು ಪುಷ್ಪವನ್ನು ಹೊಂದಿರುವ ವೃಕ್ಷಗಳಿರುವ ಅರಣ್ಯಗಳಿಂದ ಶೋಭಿತವಾದ ದೇವಗಂಗೆಯನ್ನು ಕಂಡನು.
ತಸ್ಯಾಂ ಕ್ರೀಡಂತ್ಯಭಿರತಾಃ ಸ್ನಾಂತಿ ಚೈವಾಪ್ಸರೋಗಣಾಃ |
ಶೂನ್ಯಾಕಾರಂ ನಿರಾಕಾರಾಃ ಶುಕಂ ದೃಷ್ಟ್ವಾ ವಿವಾಸಸಃ ॥17॥
ಆ ಮಂದಾಕಿನಿ ನದಿಯ ತೀರದಲ್ಲಿ ಅಪ್ಸರೆಯರ ಗುಂಪುಗಳು ಜಲಕ್ರೀಡೆ ಆಡುವುದರಲ್ಲಿ ನಿರತವಾಗಿದ್ದವು. ವಿಕಾರವಿಲ್ಲದ ಶುಕಮುನಿಯನ್ನು ಕಂಡು ವಸ್ತ್ರ ರಹಿತರಾದ ಅಪ್ಸರೆಯರು ಯಾವ ವಿಧವಾದ ವಿಕಾರವನ್ನೂ ಹೊಂದಲಿಲ್ಲ.
ತಂ ಪ್ರಕ್ರಮಂತಮಾಜ್ಞಾಯ ಪಿತಾ ಸ್ನೇಹಸಮನ್ವಿತಃ |
ಉತ್ತಮಾಂ ಗತಿಮಾಸ್ಥಾಯ ಪೃಷ್ಠತೋಽನುಸಸಾರ ಹ ॥18॥
ಶುಕಮುನಿಯು ಹೀಗೆ ಸಿದ್ಧಿಯನ್ನು ಪಡೆಯುವ ದೃಷ್ಟಿಯಿಂದ ಸೂರ್ಯಮಂಡಲದ ಕಡೆ ಹೋಗುವುದನ್ನು ತಿಳಿದ ವ್ಯಾಸಮುನಿಯು ಪುತ್ರವಾತ್ಸಲ್ಯದಿಂದ ಅವನ ಮಾರ್ಗವನ್ನೇ ಅನುಸರಿಸಿ ಆಗಮಿಸಿದನು.

ಶುಕಸ್ತು ಮಾರುತಾದೂರ್ಧ್ವಂ ಗತಿಂ ಕೃತ್ವಾಽಂತರಿಕ್ಷಗಾಮ್ |
ದರ್ಶಯಿತ್ವಾ ಪ್ರಭಾವಂ ಸ್ವಂ ಸರ್ವಭೂತೋಽಭವತ್ತದಾ ॥19॥
ಶುಕಮುನಿಯು ವಾಯುಮಂಡಲದಿಂದ ಮೇಲ್ಮುಖವಾದ ಅಂತರಿಕ್ಷ ಮಾರ್ಗವನ್ನು ಅನುಸರಿಸಿ, ತನ್ನ ಪ್ರಭಾವವನ್ನು ತೋರಿಸುತ್ತಾ ಭಗವನ್ನಿಷ್ಠವಾದ ಬುದ್ಧಿಯಿಂದ ಸಾಗುತ್ತಿದ್ದನು.
ಮಹಾಯೋಗಗತಿಂ ತ್ವಗ್ರ್ಯಾಂ ವ್ಯಾಸೋಽಸ್ಥಾಯ ಮಹಾತಪಾಃ |
ನಿಮೇಷಾಂತರಮಾತ್ರೇಣ ಶುಕಾಭಿಪತನಂ ಯಯೌ ॥20॥
ಮಹಾತಪಸ್ವಿಗಳಾದ ವ್ಯಾಸರು ಮತ್ತೊಂದು ಯೋಗವನ್ನು ಆಶ್ರಯಿಸಿ ನಿಮಿಷ ಮಾತ್ರದಲ್ಲಿ ಶುಕಮುನಿಯು ಸಾಗುತ್ತಿದ್ದ ಸ್ಥಳಕ್ಕೆ ತೆರಳಿದರು.
ಸ ದದರ್ಶ ದ್ವಿಧಾ ಕೃತ್ವಾ ಪರ್ವತಾಗ್ರಂ ಶುಕಂ ಗತಮ್ |
ಶಶಂಸುರ್ಋಷಯಸ್ತಸ್ಮೈ ಕರ್ಮ ಪುತ್ರಸ್ಯ ತತ್ತದಾ ॥21॥
ಒಟ್ಟಾಗಿರುವ ಶಿಖರಗಳು ಇಬ್ಭಾಗವಾಗಿರುವ ದೃಶ್ಯವನ್ನು ಕಂಡು, ಶುಕಮುನಿಯು ಹೊರಬಂದ ಸ್ಥಳವು ಇದು ಆದ್ದರಿಂದ ಶುಕಾಭಿಪತನ ಎಂಬ ಹೆಸರಿನಿಂದ ಋಷಿಗಳು ಆ ಸ್ಥಳವನ್ನು ಪ್ರಸಿದ್ಧಿ ಮಾಡಿದ್ದರು. ಆ ಸ್ಥಳದಲ್ಲಿ ವ್ಯಾಸರು ಆಗಮಿಸಿದಾಗ ಋಷಿಗಳೆಲ್ಲರೂ ಬಂದು ಶುಕಮುನಿಯ ಮಹಿಮೆಯನ್ನು ಅವರ ಮುಂದೆ ಪ್ರಶಂಸಿಸಿದರು.
ತತಃ ಶುಕೇತಿ ದೀರ್ಘೇಣ ಶೈಕ್ಷೇಣಾಕ್ರಂದಿತಸ್ತದಾ |
ಸ್ವಯಂ ಪಿತ್ರಾ ಸ್ವರೇಣೋಚ್ಚೈಸ್ತ್ರೀಲ್ಲೋಕಾನನುನಾದ್ಯ ವೈ ॥22॥
ಆ ಸಮಯದಲ್ಲಿ ವ್ಯಾಸರು ವೇದಶಿಕ್ಷಾದಲ್ಲಿ ಹೇಳಿದಂತೆ ಉಚ್ಚಸ್ವರದಿಂದ `ಶುಕಾ' ಎಂದು ಆಕ್ರಂದನ ಮಾಡಿದರು. ವ್ಯಾಸರು ಕರೆದ ಆ ಶಬ್ದವು ಮೂರುಲೋಕವನ್ನೇ ಕಂಪಿಸುವಂತೆ ಮಾಡಿತು.
ಶುಕಃ ಸರ್ವಗತೋ ಭೂತ್ವಾ ಸರ್ವಾತ್ಮಾ ಸರ್ವತೋಮುಖಃ |
ಪ್ರತ್ಯಭಾಷತ ಧರ್ಮಾತ್ಮಾ ಭೋಃಶಬ್ದೇನಾನುನಾದಯನ್ ॥23॥
ಆ ಎಲ್ಲೆಡೆಯೂ ಅಂತರ್ಯಾಮಿಯಾಗಿರುವ, ಸರ್ವತೋಮುಖನಾದ, ಧರ್ಮಾತ್ಮನಾದ ಶುಕಮುನಿಯು ಜಗತ್ತಿನ ಸಮಸ್ತ ಪದಾರ್ಥದಲ್ಲಿ ಸೇರಿಕೊಂಡು `ಭೋಃ' ಎಂಬ ಶಬ್ದದಿಂದ ಉತ್ತರಿಸಿದನು. ಅವನ ಶಬ್ದವು ಪ್ರತಿಧ್ವನಿತವಾಯಿತು.
ತತ ಏಕಾಕ್ಷರಂ ನಾದಂ ಭೋ ಇತ್ಯೇವ ಸಮೀರಯನ್ |
ಪ್ರತ್ಯಾಹರಜ್ಜಗತ್ ಸರ್ವಮುಚ್ಚೈಃ ಸ್ಥಾವರಜಂಗಮಮ್ ॥24॥
ಶುಕನು ಹೇಳಿದ `ಭೋಃ' ಎಂಬ ಏಕಾಕ್ಷರದ ಶಬ್ದವು ಪ್ರತಿಧ್ವನಿಸುತ್ತಾ ಸ್ಥಾವರ- ಜಂಗಮಾತ್ಮವಾದ ಪ್ರಪಂಚವನ್ನೇ ಜಾಗೃತಗೊಳಿಸಿ ವ್ಯಾಸರಿಗೆ ಪ್ರತ್ಯುತ್ತರಿಸಿತು.
ತತಃ ಪ್ರಭೃತಿ ಚಾದ್ಯಾಪಿ ಶಬ್ದಾನುಚ್ಚಾರಿತಾನ್ ಪೃಥಕ್ |
ಗಿರಿಗಹ್ವರಪೃಷ್ಠೇಷು ವ್ಯಾಜಹಾರ ಶುಕಂ ಪ್ರತಿ ॥25॥
ಅಂದಿನಿಂದ ಆರಂಭಿಸಿ ಇಂದಿನತನಕ ಪರ್ವತ ಶಿಖರಗಳಲ್ಲಿ, ಗುಹೆಗಳಲ್ಲಿ ಇರುವವರು ವ್ಯಾಸರು ಶುಕನನ್ನು ಕುರಿತು ಹೇಳಿದ ಶಬ್ದಗಳನ್ನು, ಶುಕನು ಪ್ರತ್ಯುತ್ತರವನ್ನು ನೀಡಿದ್ದನ್ನು ಅನುಸರಿಸಿ ಪ್ರತ್ಯೇಕವಾಗಿ ಹೇಳುತ್ತಿರುತ್ತಾರೆ.
ಅಂತರ್ಹಿತಃ ಪ್ರಭಾವಂ ತು ದರ್ಶಯಿತ್ವಾ ಶುಕಸ್ತದಾ |
ಗುಣಾನ್ ಸಂತ್ಯಜ್ಯ ಶಬ್ದಾದೀನ್ ಪದಮಧ್ಯಗಮತ್ ಪರಮ್ ॥26॥
ಶುಕನು ತನ್ನ ಪ್ರಭಾವದಿಂದ ಮರೆಮಾಚಿಕೊಂಡನು. ಶಬ್ದಾದಿಗಳನ್ನೂ ತ್ಯಜಿಸಿ ಭಗವಂತನ ಪಾದವನ್ನು ಸೇರಿದನು.
ಮಹಿಮಾನಂ ತು ತಂ ದೃಷ್ಟ್ವಾ ಪುತ್ರಸ್ಯಾಮಿತತೇಜಸಃ |
ನಿಷಸಾದ ಗಿರಿಪ್ರಸ್ಥೇ ಪುತ್ರಮೇವಾನುಚಿಂತಯನ್ ॥27॥
ಮಹಾತೇಜಸ್ವಿಯಾದ ಶುಕಮುನಿಯ ಮಹಿಮೆಯನ್ನು ಕಂಡ ವ್ಯಾಸರು ಮಗನನ್ನೇ ಯೋಚಿಸುತ್ತಾ ಹಿಮವತ್ ಪರ್ವತದ ಶಿಖರದಲ್ಲಿ ಕುಳಿತುಕೊಂಡರು.
ತತೋ ಮಂದಾಕಿನೀತೀರೇ ಕ್ರೀಡಂತೋಽಪ್ಸರಸಾಂ ಗಣಾಃ |
ಆಸಾದ್ಯ ತಮೃಷಿಂ ಸರ್ವಾಃ ಸಂಭ್ರಾಂತಾ ಗತಚೇತಸಃ ॥28॥
ಬಳಿಕ ಮಂದಾಕಿನಿ ನದಿಯ ತೀರದಲ್ಲಿ ವಸ್ತ್ರರಹಿತರಾಗಿ ಜಲಕ್ರೀಡೆಯನ್ನಾಡುತ್ತಿದ್ದ ಅಪ್ಸರಾಸ್ತ್ರೀಯರು ವ್ಯಾಸರು ಸಮೀಪದಲ್ಲಿರುವ ಪರ್ವತ ಶಿಖರದಲ್ಲಿ ಕುಳಿತಿರುವುದನ್ನು ನೋಡಿ ಭ್ರಾಂತರಾದರು, ಕಳವಳಗೊಂಡರು.
ಜಲೇ ನಿಲಿಲ್ಯಿರೇ ಕಾಶ್ಚಿತ್ ಕಾಶ್ಚಿದ್ ಗುಲ್ಮಾನ್ ಪ್ರಪೇದಿರೇ |
ವಸನಾನ್ಯಾದದುಃ ಕಾಶ್ಚಿತ್ದೃಷ್ಟ್ವಾ ತಂ ಮುನಿಸತ್ತಮಮ್ ॥29॥
ಕೆಲವರು ನೀರಿನಲ್ಲಿಯೇ ಅಡಗಿ ಕುಳಿತರು. ಕೆಲವರು ಪೊದೆಗಳಲ್ಲಿ ಅವಿತು ಕುಳಿತರು. ಇನ್ನು ಕೆಲವರು ವ್ಯಾಸರನ್ನು ನೋಡುತ್ತಲೇ ವಸ್ತ್ರಗಳನ್ನು ಧರಿಸಲಾರಂಭಿಸಿದರು.
ತಾಂ ಮುಕ್ತತಾಂ ತು ವಿಜ್ಞಾಯ ಮುನಿಃ ಪುತ್ರಸ್ಯ ವೈ ತದಾ |
ಸಕ್ತತಾಮಾತ್ಮನಶ್ಚೈವ ಪ್ರೀತೋಭೂದ್ವ್ರೀಡಿತಶ್ಚ ಹ ॥30॥
ಹಿಂದೆ ಅದೇ ಸ್ಥಳದಲ್ಲಿ ಶುಕಮುನಿಯು ಆಗಮಿಸಿದಾಗ ಅಪ್ಸರೆಯರು ಶುಕಮುನಿಯ ವಿಷಯದಲ್ಲಿ ನಿರ್ಲಕ್ಷ್ಯದಿಂದಿರುವುದನ್ನು, ತನ್ನನ್ನು ಕಂಡು ಕಳವಳಗೊಂಡಿರುವುದನ್ನು ತಿಳಿದಿರುವ ವ್ಯಾಸರು ಶುಕಮುನಿಯು ವಿರಕ್ತನು ಎಂದು ಕಂಡು ಅವನಲ್ಲಿ ಪ್ರೀತರಾದರು. ತಮ್ಮಲ್ಲಿರುವ ಆಸಕ್ತಿಯನ್ನು ಕಂಡು ನಾಚಿದರು.
ವ್ಯಾಖ್ಯಾನ ವಿಶೇಷ ವೇದವ್ಯಾಸರು ನಿರ್ವಿಕಾರನಾದ ಭಗವಂತನೇ ಆಗಿದ್ದರೂ ಭಗವತ್ತತ್ತ್ವದಿಂದ ಶುಕಮುನಿಯು ಹೊಂದಿದ

ವೈರಾಗ್ಯವನ್ನು ಸೂಚಿಸಲು ನಾಚಿಕೆಗೊಂಡವರಂತೆ ತೋರಿಸಿಕೊಂಡರು ಎಂದು ಭಾವ.
ತಂ ದೇವಗಂಧರ್ವವೃತೋ ಮಹರ್ಷಿಗಣಪೂಜಿತಃ |
ಪಿನಾಕಹಸ್ತೋ ಭಗವಾನಭ್ಯಾಗಚ್ಛತ ಶಂಕರಃ ||31||
ಇದೇ ಸಮಯಕ್ಕೆ ಸರಿಯಾಗಿ ದೇವ-ಗಂಧರ್ವರಿಂದ ಆವೃತನಾಗಿದ್ದ, ಮಹರ್ಷಿಗಳಿಂದ ಪೂಜಿಸಲ್ಪಡುವ, ಪಿನಾಕಧಾರಿಯಾದ ಶಂಕರನು ಅಲ್ಲಿಗೆ ಆಗಮಿಸಿದನು.
ತಮುವಾಚ ಮಹಾದೇವಃ ಸಾಂತ್ವಪೂರ್ವಮಿದಂ ವಚಃ |
ಪುತ್ರಶೋಕಾಭಿಸಂತಪ್ತಂ ಕೃಷ್ಣದ್ವೈಪಾಯನಂ ತದಾ ||32||
ಪುತ್ರಶೋಕದಿಂದ ದುಃಖಿತರಾದ ವ್ಯಾಸರನ್ನು ಸಮಾಧಾನಪಡಿಸುತ್ತಾ ಮಹರುದ್ರನು ಹೀಗೆ ಹೇಳಿದನು.
ಅಗ್ನೇರ್ಭೂಮೇರಪಾಂ ವಾಯೋರಂತರಿಕ್ಷಸ್ಯ ಚೈವ ಹ |
ವೀರ್ಯೇಣ ಸದೃಶಃ ಪುತ್ರಸ್ತ್ವಯಾ ಮತ್ತಃ ಪುರಾ ವೃತಃ ||33||
`ಮಹರ್ಷಿಯೇ, ಹಿಂದೆ ನೀನು ನನ್ನನ್ನು ಕುರಿತು ತಪಸ್ಸು ಮಾಡಿ ಅಗ್ನಿ, ಭೂಮಿ, ನೀರು, ವಾಯು, ಅಂತರಿಕ್ಷ - ಈ ಪಂಚಮಹಾಭೂತ ಶಕ್ತಿಗೆ ಸಮಾನನಾಗಿರುವ ಪುತ್ರನನ್ನು ದಯಪಾಲಿಸೆಂದು ವರವನ್ನು ಬೇಡಿರುವಿ.
ಸ ತಥಾಲಕ್ಷಣೋ ಜಾತಸ್ತಪಸಾ ತವ ಸಂಭೃತಃ |
ಮಮ ಚೈವ ಪ್ರಭಾವೇನ ಬ್ರಹ್ಮತೇಜೋಮಯಃ ಶುಚಿಃ ||34||
ನಿನ್ನ ತಪಸ್ಸಿನ ಪ್ರಭಾವದಿಂದ, ನನ್ನ ಅನುಗ್ರಹದಿಂದ ಅಂತಹ ಬ್ರಹ್ಮತೇಜಸ್ಸಿನಿಂದ ಕೂಡಿರುವ ಪರಮಪವಿತ್ರನಾದ ಮಗನೇ ನಿನಗೆ ಹುಟ್ಟಿರುವನು.
ಸ ಗತಿಂ ಪರಮಾಂ ಪ್ರಾಪ್ತೋ ದುಷ್ಪ್ರಾಪಾಮಜಿತೇಂದ್ರಿಯೈಃ |
ದೈವತೈರಪಿ ವಿಪ್ರರ್ಷೇ ತಂ ತ್ವಂ ಕಿಮನುಶೋಚಸಿ ||35||
ವಿಪ್ರರ್ಷಿಯೇ, ಅಜಿತೇಂದ್ರಿಯರಾದ ಮನುಷ್ಯರಿಂದ, ದೇವತೆಗಳಿಂದ ಪಡೆಯಲು ಅಸಾಧ್ಯವಾದ ಪರಮಗತಿಯನ್ನು ಶುಕಮುನಿಯು ಹೊಂದಿರುತ್ತಾನೆ. ಅವನ ವಿಷಯದಲ್ಲಿ ಏಕೆ ದುಃಖಿಸುತ್ತಿರುವಿ?
ಯಾವತ್ಸ್ಥಾಸ್ಯಂತಿ ಗಿರಯೋ ಯಾವತ್ಸ್ಥಾಸ್ಯಂತಿ ಸಾಗರಾಃ |
ತಾವತ್ತವಾಕ್ಷಯಾ ಕೀರ್ತಿಃ ಸಪುತ್ರಸ್ಯ ಭವಿಷ್ಯತಿ ||36||
ಎಲ್ಲಿಯ ತನಕ ಪರ್ವತಗಳಿರುತ್ತವೆಯೋ, ಎಲ್ಲಿಯ ತನಕ ಸಮುದ್ರಗಳು ಇರುತ್ತವೆಯೋ ಅಲ್ಲಿಯ ತನಕ ನಿನ್ನ, ನಿನ್ನ ಪುತ್ರನ ಕೀರ್ತಿಯು ಜಗತ್ತಿನಲ್ಲಿ ವ್ಯಾಪಿಸಿರುತ್ತದೆ.
ಛಾಯಾಂ ಸ್ವಪುತ್ರಸದೃಶೀಂ ಸರ್ವತೋಽನಪಗಾಂ ಸದಾ |
ದ್ರಕ್ಷ್ಯಸೇ ತ್ವಂ ಚ ಲೋಕೇಽಸ್ಮಿನ್ ಮತ್ಪ್ರಸಾದಾನ್ಮಹಾಮುನೇ ||37||
ಮಹಾಮುನಿಯೇ, ನನ್ನ ಅನುಗ್ರಹದಿಂದ ಈ ಲೋಕದಲ್ಲಿ ನಿನ್ನ ಮಗನಂತಿರುವ ಛಾಯೆಯನ್ನು ಯಾವಾಗಲೂ ಕಾಣುತ್ತಿರುವಿ. ಅವನ ಛಾಯೆಯು ಎಂದಿಗೂ ನಿನ್ನಿಂದ ದೂರವಾಗುವುದಿಲ್ಲ'.
ಸೋಽನುನೀತೋ ಭಗವತಾ ಸ್ವಯಂ ರುದ್ರೇಣ ಭಾರತ |
ಛಾಯಾಂ ಪಶ್ಯನ್ ಸಮಾವೃತ್ತಃ ಸ ಮುನಿಃ ಪರಯಾ ಮುದಾ ||38||
ಯುಧಿಷ್ಠಿರನೇ, ಮಹಾರುದ್ರನಿಂದ ಸಂತೈಸಲ್ಪಟ್ಟ ವ್ಯಾಸನು ಈಶ್ವರನ ಅನುಗ್ರಹದಿಂದ ಎಲ್ಲ ಕಡೆ ತನ್ನ ಮಗನ ಪ್ರತಿಬಿಂಬವನ್ನು ನೋಡುತ್ತಾ ಸಂತುಷ್ಟನಾಗಿ ಆಶ್ರಮಕ್ಕೆ ಆಗಮಿಸಿದನು.
ಇತಿ ಜನ್ಮ ಗತಿಶ್ಚೈವ ಶುಕಸ್ಯ ಭರತರ್ಷಭ |
ವಿಸ್ತರೇಣ ಮಯಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ||39||
ಕೌಂತೇಯನೇ, ಹೀಗೆ ನಿನ್ನ ಪ್ರಶ್ನೆಗನುಗುಣವಾಗಿ ಶುಕಮುನಿಯ ಜನ್ಮ, ವಿದ್ಯಾಭ್ಯಾಸ, ಪರಮಪದ ಪ್ರಾಪ್ತಿ ಎಲ್ಲವನ್ನೂ ವಿಸ್ತಾರಗೊಳಿಸಿದ್ದೇನೆ.
ಏತದಾಚಷ್ಟ ಮೇ ರಾಜನ್ ದೇವರ್ಷಿರ್ನಾರದಃ ಪುರಾ |
ವ್ಯಾಸಶ್ಚೈವ ಮಹಾಯೋಗೀ ಸಂಜಲ್ಪೇಷು ಪದೇ ಪದೇ ||40||
ಈ ಆಖ್ಯಾನವನ್ನು ಹಿಂದೆ ನಾರದರು ನನಗೆ ಹೇಳಿದ್ದರು. ವ್ಯಾಸರು ತಮ್ಮ ಮಾತುಗಳ ನಡುವೆ ಈ ಪ್ರಸಂಗ ತಿಳಿಸಿದ್ದರು.
ಇತಿಹಾಸಮಿಮಂ ಪುಣ್ಯಂ ಮೋಕ್ಷಧರ್ಮಾರ್ಥಸಂಹಿತಮ್ |
ಧಾರಯೇದ್ಯಃ ಶಮಪರಃ ಸ ಗಚ್ಛೇತ್ ಪರಮಾಂ ಗತಿಮ್ ||41||
ಶಾಂತಿಯಲ್ಲಿ ಆಸಕ್ತನಾದ ಯಾವ ಪುರುಷನು ಮೋಕ್ಷಧರ್ಮದಿಂದ ಕೂಡಿರುವ, ಪರಮಪವಿತ್ರವಾದ ಈ ಇತಿಹಾಸವನ್ನು ಅಧ್ಯಯನ ಮಾಡಿ, ಮನಸ್ಸಿನಲ್ಲಿ ಧರಿಸುತ್ತಾನೋ ಅವನೂ ಪರಮಗತಿಯನ್ನು ಹೊಂದುತ್ತಾನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಶುಕಸಿದ್ಧಿರ್ನಾಮ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತಾರನೆಯ ಅಧ್ಯಾಯ
ನಾರದ-ನಾರಾಯಣ ಸಂವಾದ
ಯುಧಿಷ್ಠಿರಃ

ಗೃಹಸ್ಥೋ ಬ್ರಹ್ಮಚಾರೀ ವಾ ವಾನಪ್ರಸ್ಥೋಽಥ ಭಿಕ್ಷುಕಃ |
ಯ ಇಚ್ಛೇತ್ ಸಿದ್ಧಿಮಾಸ್ಥಾತುಂ ದೇವತಾಂ ಕಾಂ ಯಜೇತ ಸಃ ॥1॥
ಯುಧಿಷ್ಠಿರ ಪಿತಾಮಹನೇ, ಸಿದ್ಧಿಯನ್ನು ಬಯಸುವ ವ್ಯಕ್ತಿಯು ಬ್ರಹ್ಮಚಾರಿಯಾಗಲಿ ಅಥವಾ ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿಯೇ ಆಗಲಿ. ಯಾವ ದೇವತೆಯನ್ನು ಆರಾಧಿಸಬೇಕು?
ಕುತೋ ಹ್ಯಸ್ಯ ಧ್ರುವಃ ಸ್ವರ್ಗಃ ಕುತೋ ನಿಃಶ್ರೇಯಸಂ ಪರಮ್ |
ವಿಧಿನಾ ಕೇನ ಜುಹುಯಾದ್ದೈವಂ ಪಿತ್ರ್ಯಂ ತಥೈವ ಚ ॥2॥
ಮನುಷ್ಯನಿಗೆ ಯಾವ ಸತ್ಕರ್ಮದಿಂದ ಶಾಶ್ವತ ಸ್ಥಾನವು ದೊರೆಯುತ್ತದೆ? ಮೋಕ್ಷವು ಯಾವ ಕರ್ಮದಿಂದ ಲಭಿಸುತ್ತದೆ? ಯಾವ ವಿಧಿಯಿಂದ ದೇವತೆಗಳನ್ನು ಅಥವಾ ಪಿತೃಗಳನ್ನು ಉದ್ದೇಶಿಸಿ ಯಜನ ಮಾಡಬೇಕು?
ಮುಕ್ತಶ್ಚ ಕಾಂ ಗತಿಂ ಗಚ್ಛೇನ್ಮೋಕ್ಷಶ್ಚೈವ ಕಿಮಾತ್ಮಕಃ |
ಸ್ವರ್ಗತಶ್ಚೈವ ಕಿಂ ಕುರ್ಯಾದ್ಯೇನ ನ ಚ್ಯವತೇ ದಿವಃ ॥3॥
ಮುಕ್ತನಾದವನು ಯಾವ ಗತಿಯನ್ನು ಹೊಂದುತ್ತಾನೆ? ಮೋಕ್ಷದ ಸ್ವರೂಪವೇನು? ಸ್ವರ್ಗಕ್ಕೆ ಹೋದವನು ಅಲ್ಲಿ ಯಾವ ಕಾರ್ಯವನ್ನು ಮಾಡಿದಾಗ ಪುನಃ ಅಧಃಪತನವನ್ನು ಹೊಂದುವುದಿಲ್ಲ?
ದೇವತಾನಾಂ ಚ ಕೋ ದೇವಃ ಪಿತೄಣಾಂ ಚ ತಥಾ ಪಿತಾ |
ತಸ್ಮಾತ್ ಪರತರಂ ಯಚ್ಚ ತನ್ಮೇ ಬ್ರೂಹಿ ಪಿತಾಮಹ ॥4॥
ದೇವತೆಗಳಿಗೂ ದೇವನು, ಪಿತೃಗಳಿಗೂ ತಂದೆಯೂ, ಅಂತಹ ತಂದೆಯಾದ ವಸ್ತುವಿಗಿಂತಲೂ ಶ್ರೇಷ್ಠವಾದ ತತ್ತ್ವವು ಯಾವುದಿದೆ? ಇದನ್ನು ನನಗೆ ತಿಳಿಸು.
ಭೀಷ್ಮಃ
ಗೂಢಂ ಮಾಂ ಪ್ರಶ್ನವಿತ್ ಪ್ರಶ್ನಂ ಪೃಚ್ಛಸೇ ತ್ವಮಿಹಾನಘ |
ನ ಹ್ಯೇಷ ತರ್ಕಯಾ ಶಕ್ಯೋ ವಕ್ತುಂ ವರ್ಷಶತೈರಪಿ ॥5॥
ಭೀಷ್ಮ ನಿರ್ದುಷ್ಟನಾದ ಯುಧಿಷ್ಠಿರನೇ, ಪ್ರಶ್ನೆಯ ಮರ್ಮವನ್ನು ಚೆನ್ನಾಗಿ ಅರಿತು ರಹಸ್ಯವಾದ ಪ್ರಶ್ನೆಯನ್ನೇ ನನ್ನ ಬಳಿ ಕೇಳುತ್ತಿರುವಿ. ಕೇವಲ ತರ್ಕದಿಂದ ನೂರು ವರ್ಷಗಳ ಕಾಲ ಹೇಳಿದರೂ ನಿನ್ನ ಪ್ರಶ್ನೆಗೆ ಉತ್ತರಿಸಲಾಗದು.
ಋತೇ ದೇವಪ್ರಸಾದಾದ್ವಾ ರಾಜನ್ ಜ್ಞಾನಾಗಮೇನ ವಾ |
ಗಹನಂ ಹ್ಯೇತದಾಖ್ಯಾನಂ ವ್ಯಾಖ್ಯಾತವ್ಯಂ ತವಾರಿಹನ್ ॥6॥
ರಾಜನೇ, ಈ ವಿಷಯವು ಗಹನವಾಗಿದ್ದರೂ ದೇವರ ಅನುಗ್ರಹವಿಲ್ಲದೆ, ಸರಿಯಾಗಿ ತಿಳಿಯದೆ ಉತ್ತರಿಸಲು ಆಗುವುದಿಲ್ಲ. ಶತ್ರುಸಂಹಾರಕನೇ, ಹಾಗಿದ್ದರೂ ನಿನಗೆ ಹೇಳಬೇಕಾಗಿದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಾರದಸ್ಯ ಚ ಸಂವಾದಮೃಷೇರ್ನಾರಾಯಣಸ್ಯ ಚ ॥7॥
ಇದೇ ವಿಷಯದಲ್ಲಿ ನಾರದರಿಗೂ ನಾರಾಯಣನಿಗೂ ನಡೆದ ಸಂವಾದ ರೂಪವಾದ ಇತಿಹಾಸವನ್ನು ಉದಾಹರಿಸುತ್ತಾರೆ.
ನಾರಾಯಣೋ ಹಿ ವಿಶ್ವಾತ್ಮಾ ಚತುರ್ಮೂರ್ತಿಃ ಸನಾತನಃ |
ಧರ್ಮಾತ್ಮಜಃ ಸಂಬಭೂವ ಪಿತೈವಂ ಮೇಽಭ್ಯಭಾಷತ ॥8॥
ಜಗತ್ತಿಗೆ ಅಂತರ್ಯಾಮಿಯಾದ, ಚತುರ್ಮೂರ್ತಿಯೂ ಸನಾತನನೂ ಆದ ನಾರಾಯಣನು ಧರ್ಮಪ್ರಜೇಶ್ವರನ ಮಗನಾಗಿ ಅವತರಿಸಿದ ವಿಷಯವನ್ನು ನನ್ನ ತಂದೆಯು ಹೀಗೆ ಹೇಳಿದನು.
ಕೃತೇ ಯುಗೇ ಮಹಾರಾಜ ಪುರಾ ಸ್ವಾಯಂಭುವೇಽಂತರೇ |
ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ ॥9॥
ತೇಭ್ಯೋ ನಾರಾಯಣನರೌ ತಪಸ್ತೇಪತುರವ್ಯಯೌ |
ಬದರ್ಯಾಶ್ರಮಮಾಸಾದ್ಯ ಶಕಟೇ ಕನಕಾಮಯೇ ॥10॥
ಸ್ವಾಯಂಭುವ ಮನ್ವಂತರದಲ್ಲಿ ಧರ್ಮಪ್ರಜೇಶ್ವರನು ನರ-ನಾರಾಯಣ-ಹರಿ- ಕೃಷ್ಣ ಎಂಬ ನಾಲ್ಕು ರೂಪಗಳನ್ನು ಪಡೆದನು. ಅವರಲ್ಲಿ ನರ-ನಾರಾಯಣರು ಬದರಿಕಾಶ್ರಮಕ್ಕೆ ಆಗಮಿಸಿ ಕನಕಮಯವಾದ ರಥದಲ್ಲಿ ಕುಳಿತು ತಪಸ್ಸನ್ನಾಚರಿಸಿದರು.
ಅಷ್ಟಚಕ್ರಂ ಹಿ ತದ್ಯಾನಂ ಭೂತಯುಕ್ತಂ ಮನೋರಮಮ್ |
ತತ್ರಾದ್ಯೌ ಲೋಕನಾಥೌ ತೌ ಕೃಶೌ ಧಮನಿಸಂತತೌ ॥11॥
ಆ ಸುವರ್ಣಮಯವಾದ ರಥಕ್ಕೆ ಚಕ್ರಗಳು ಎಂಟು. ಪಂಚಭೂತಗಳಿಂದ ಕೂಡಿರುವ ಮನೋಹರವಾದ ರಥವಾಗಿತ್ತು. ಅಂತಹ ರಥದಲ್ಲಿ ಲೋಕನಾಥರಾದ ನರ-ನಾರಾಯಣರು ತಪಸ್ಸು ಮಾಡುತ್ತಿದ್ದಾಗ, ತಪಸ್ಸಿನಿಂದಾಗ ಅವರ ನರ ಬಳ್ಳಿಗಳು ಕಾಣಿಸುತ್ತಿದ್ದವು. ಕೃಶಕಾಯರಾಗಿ ಕಾಣಿಸುತ್ತಿದ್ದರು.
ತಪಸಾ ತೇಜಸಾ ಚೈವ ದುರ್ನಿರೀಕ್ಷ್ಯೌ ಸುರೈರಪಿ |
ಯಸ್ಯ ಪ್ರಸಾದಂ ಕುರ್ವಾತೇ ಸ ದೇವೌ ದ್ರಷ್ಟುಮರ್ಹತಿ ॥12॥
ತಪಸ್ಸು ಮತ್ತು ತೇಜಸ್ಸುಗಳಿಂದ ಯುಕ್ತರಾದ ಅವರು ದೇವತೆಗಳಿಂದಲೂ ನೋಡಲು ಅಸಾಧ್ಯರಾಗಿದ್ದರು. ಯಾರಿಗೆ ಅನುಗ್ರಹೋನ್ಮುಖರಾಗುತ್ತಾರೋ ಅವರು ಅವರನ್ನು ನೋಡಬಹುದಿತ್ತು.
ನೂನಂ ತಯೋರನುಮತೇ ಹೃದಿ ಹೃಚ್ಛಯಚೋದಿತಃ |
ಮಹಾಮೇರೋರ್ಗಿರೇಃ ಶೃಂಗಾತ್ ಪ್ರಚ್ಯುತೋ ಗಂಧಮಾದನಮ್ ॥
ನಿಶ್ಚಿತವಾಗಿಯೂ ನರ-ನಾರಾಯಣರ ಪ್ರೇರಣೆಯಂತೆ ಹೃದಯದಲ್ಲಿರುವ ಭಗವಂತನಿಂದ ಪ್ರೇರಿತರಾಗಿ, ಮಹಾಮೇರುಪರ್ವತದ

ಶಿಖರದಿಂದ ಗಂಧಮಾದನ ಗಿರಿಗೆ ನಾರದರು ಆಗಮಿಸಿದರು.
ನಾರದಃ ಸುಮಹದ್ಭೂತಂ ಲೋಕಾನ್ ಸರ್ವಾನಚೀಚರತ್ |
ತಂ ದೇಶಮಗಮದ್ ರಾಜನ್ ಬದರ್ಯಾಶ್ರಮಮಾಶುಗಃ ॥14॥
ವೇಗವಾದ ನಡುಗೆಯುಳ್ಳ, ಸಮಸ್ತ ಲೋಕಗಳನ್ನೂ ಸಂಚರಿಸುತ್ತಾ, ಮಹಾಭೂತಗಳಿಂದ ಕೂಡಿದ ವಿಶಾಲ ಬದರಿಕಾಶ್ರಮಕ್ಕೆ ನಾರದರು ಆಗಮಿಸಿದರು.
ತಯೋರಾಹ್ನಿಕವೇಲಾಯಾಂ ತಸ್ಯ ಕೌತೂಹಲಂ ತ್ವಭೂತ್ |
ಇದಂ ತದಾಸ್ಪದಂ ಕೃತ್ಸ್ನಂ ಯಸ್ಮಿಲ್ಲೋಕಾಃ ಪ್ರತಿಷ್ಠಿತಾಃ ॥15॥
ಸಮಗ್ರ ಜಗತ್ತು ಯಾವ ಭಗವಂತನಲ್ಲಿ ಪ್ರತಿಷ್ಠೆಗೊಂಡಿದೆಯೋ ಅಂತಹ ನರ-ನಾರಾಯಣರು ನಿತ್ಯಕರ್ಮಗಳನ್ನು ಮಾಡುವ ಸಂದರ್ಭದಲ್ಲಿ ನಾರದರಿಗೆ ಅವರನ್ನು ನೋಡಬೇಕೆಂಬ ಕುತೂಹಲವು ಉಂಟಾಯಿತು.
ಸದೇವಾಸುರಗಂಧರ್ವಾಃ ಸರ್ಷಿಕಿನ್ನರಲೇಲಿಹಾಃ |
ಏಕಾ ಮೂರ್ತಿರಿಯಂ ಪೂರ್ವಂ ಜಾತಾ ಭೂಯಶ್ಚತುರ್ವಿಧಾ ॥16॥
ದೇವ-ಅಸುರ-ಗಂಧರ್ವ-ಋಷಿ-ಕಿನ್ನರ-ಸರ್ಪಗಳಿಂದ ಕೂಡಿದ ಸಮಸ್ತ ಲೋಕಗಳೂ ಯಾರಲ್ಲಿ ಪ್ರತಿಷ್ಠೆಗೊಂಡಿವೆಯೋ ಅಂತಹ ಪ್ರಧಾನಮೂರ್ತಿಯಾದ ಭಗವಂತನು ಮೊದಲಿನ ತನ್ನ ರೂಪವನ್ನೇ ನಾಲ್ಕು ರೂಪವನ್ನಾಗಿ ವಿಭಾಗಿಸಿದನು.
ಧರ್ಮಸ್ಯ ಕುಲಸಂತಾನೋ ಮಹಾನ್ಏಭಿರ್ವಿವರ್ಧಿತಃ |
ಅಹೋ ಹ್ಯನುಗೃಹೀತೋದ್ಯ ಧರ್ಮ ಏಭಿಃ ಸುರೈರಿಹ |
ನರನಾರಾಯಣಾಭ್ಯಾಂ ಚ ಕೃಷ್ಣೇನ ಹರಿಣಾ ತಥಾ ॥17॥
ಧರ್ಮಪ್ರಜೇಶ್ವರನ ಕುಲದ ಸಂತತಿಯು ಭಗವಂತನ ಈ ನಾಲ್ಕು ರೂಪಗಳಿಂದ ಅಭಿವೃದ್ಧಿಯನ್ನು ಹೊಂದಿತು. ಇಂತಹ ನಾಲ್ಕು ರೂಪಗಳೆನಿಸಿದ ನರ-ನಾರಾಯಣ- ಹರಿ-ಕೃಷ್ಣ ಎಂಬ ರೂಪಗಳಿಂದ ಧರ್ಮಪ್ರಜೇಶ್ವರನು  ಅನುಗೃಹೀತನಾದನು.
ತತ್ರ ಕೃಷ್ಣೋ ಹರಿಶ್ಚೈವ ಕಸ್ಮಿಂಶ್ಚಿತ್ ಕಾರಣಾಂತರೇ |
ಸ್ಥಿತೌ ಧರ್ಮೋತ್ತರೌ ಹ್ಯೇತೌ ತಥಾ ತಪಸಿ ಧಿಷ್ಠಿತೌ ॥18॥
ಇವರಲ್ಲಿ ಹರಿ-ಕೃಷ್ಣ ಈ ಎರಡು ರೂಪಗಳು ಬೇರೊಂದು ಕಾರ್ಯದಲ್ಲಿ ಆಸಕ್ತವಾಗಿದ್ದರೆ, ನರ-ನಾರಾಯಣ ಎಂಬ ರೂಪಗಳು ಧರ್ಮದ ರಕ್ಷಣೆಗಾಗಿಯೇ ತಪಸ್ಸಿನಲ್ಲಿ ನಿರತವಾಗಿರುತ್ತವೆ.
ಏತೌ ಹಿ ಪರಮಂ ಧಾಮ ಕಾಽನಯೋರಾಹ್ನಿಕಕ್ರಿಯಾ |
ಪಿತರೌ ಸರ್ವಭೂತಾನಾಂ ದೈವತಂ ಚ ಯಶಸ್ವಿನೌ |
ಕಾಂ ದೇವತಾಂ ನು ಯಜತಃ ಪಿತ್ರೂನ್ ವಾ ಕಾನ್ ಮಹಾಮತೀ ॥
ನರ-ನಾರಾಯಣ ಎಂಬ ರೂಪಗಳೇ ಎಲ್ಲರಿಗೂ ಶ್ರೇಷ್ಠವಾದ ಆಶ್ರಯವಾದವುಗಳು. ಇಂತಹ ಈ ರೂಪಗಳಿಂದ ಅವರು ಮಾಡಿದ ನಿತ್ಯಕ್ರಿಯೆಗಳು ಯಾವುವು? ಕೀರ್ತಿಸಂಪನ್ನರಾದ ಈ ಎರಡು ರೂಪಗಳೇ ಜಗತ್ತಿಗೆ ತಂದೆ-ತಾಯಿ ಎನಿಸಿವೆ. ಇಂತಹ ಈ ಎರಡು ರೂಪಗಳಿಂದ ಭಗವಂತನು ಯಾವ ದೇವತೆಯನ್ನು, ಯಾವ ಪಿತೃಗಳನ್ನು ಆರಾಧಿಸಿದನು?
ಇತಿ ಸಂಚಿಂತ್ಯ ಮನಸಾ ಭಕ್ತ್ಯಾ ನಾರಾಯಣಸ್ಯ ಹ |
ಸಹಸಾ ಪ್ರಾದುರಭವತ್ ಸಮೀಪೇ ದೇವಯೋಸ್ತದಾ ॥20॥
ಈ ರೀತಿಯಾಗಿ ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಯೋಚಿಸುತ್ತಾ, ನರ-ನಾರಾಯಣರ ಸಮೀಪದಲ್ಲಿ ನಾರದರು ಪ್ರಕಟರಾದರು.
ಕೃತೇ ದೈವೇ ಚ ಪಿತ್ರ್ಯೇ ಚ ತತಸ್ತಾಭ್ಯಾಂ ನಿರೀಕ್ಷಿತಃ |
ಪೂಜಿತಶ್ಚೈವ ವಿಧಿನಾ ಯಥಾಪ್ರೋಕ್ತೇನ ಶಾಸ್ತ್ರತಃ ॥21॥
ಪಿತೃದೇವತಾ ಸಂಬಂಧವಾದ ಸತ್ಕರ್ಮಗಳನ್ನು ಮಾಡಿದ ಬಳಿಕ ಶಾಸೋತ್ರೇಕ್ತ ವಿಧಿಯಿಂದ ನಾರದರು ನರ-ನಾರಾಯಣರನ್ನು ಪೂಜಿಸಿದರು.
ತಂ ದೃಷ್ಟ್ವಾ ಮಹದಾಶ್ಚರ್ಯಮಪೂರ್ವಂ ವಿಧಿವಿಸ್ತರಮ್ |
ಉಪೋಪವಿಷ್ಟಃ ಸುಪ್ರೀತೋ ನಾರದೋ ಭಗವಾನೃಷಿಃ ॥22॥
ಆಶ್ಚರ್ಯಕರ ರೀತಿಯಲ್ಲಿ ನರ-ನಾರಾಯಣರು ಅಪೂರ್ವವಾದ ಶಾಸ್ತ್ರ ವಿಧಿಗೆ ಅನುಗುಣವಾಗಿ ವ್ಯವಹರಿಸುವುದನ್ನು ಕಂಡು ಪ್ರೀತರಾದ ನಾರದರು ಅವರ ಸಮೀಪದಲ್ಲಿ ಕುಳಿತರು.
ನಾರಾಯಣಂ ಸನ್ನಿರೀಕ್ಷ್ಯ ಪ್ರಸನ್ನೇನಾಂತರಾತ್ಮನಾ |
ನಮಸ್ಕೃತ್ವಾ ಮಹಾದೇವಮಿದಂ ವಚನಮಬ್ರವೀತ್ ॥23॥
ನಾರದರು ಸಂತೋಷಯುತ ಮನದಿಂದ ಮಹಾದೇವನಾದ, ಪೂಜ್ಯನಾದ ನಾರಾಯಣನನ್ನು ವಂದಿಸಿ ಅವನನ್ನೇ ನೋಡುತ್ತಾ ಹೀಗೆ ಹೇಳಿದರು.
ವೇದೇಷು ಸಪುರಾಣೇಷು ಸಾಂಗೋಪಾಂಗೇಷು ಗೀಯಸೇ |
ತ್ವಮಜಃ ಶಾಶ್ವತೋ ಧಾತಾ ಮತೋಽಮೃತಮನುತ್ತಮಮ್ |
ಪ್ರತಿಷ್ಠಿತಂ ಭೂತಭವ್ಯಂ ತ್ವಯಿ ಸರ್ವಮಿದಂ ಜಗತ್ ॥24॥
ಪೂಜ್ಯರೇ, ಷಡಂಗ ಸಹಿತವಾದ ವೇದಗಳು, ಪುರಾಣಗಳು ನಿಮ್ಮ ಮಹಿಮೆಯನ್ನೇ ಸಾರುತ್ತಿವೆ. ನೀನು ಹುಟ್ಟಿಲ್ಲದವನು, ಶಾಶ್ವತನೂ, ಜಗತ್ತಿನ ಧಾರಕನೂ, ಶ್ರೇಷ್ಠವಾದ ಅಮೃತಸ್ವರೂಪನೂ, ಸಮಸ್ತ ಜಗತ್ತೂ ನಿನ್ನಲ್ಲಿ ಪ್ರತಿಷ್ಠಿತವಾಗಿದೆ.
ಚತ್ವಾರೋ ಹ್ಯಾಶ್ರಮಾ ದೇವ ಸರ್ವೇ ಗಾರ್ಹಸ್ಥ್ಯಮೂಲಕಾಃ |
ಯಜಂತೇ ತ್ವಾಮಹರಹರ್ನಾನಾಮೂರ್ತಿಸಮಾಸ್ಥಿತಮ್ ॥25॥

ಗೃಹಸ್ಥಾಶ್ರಮವೇ ಮೂಲವಾಗಿರುವ ನಾಲ್ಕು ಆಶ್ರಮಗಳು ನಿರಂತರವೂ ನಾನಾ ರೂಪಗಳಿರುವ ನಿನ್ನನ್ನು ಆರಾಧಿಸುತ್ತಿವೆ.
ಪಿತಾ ಮಾತಾ ಚ ಸರ್ವಸ್ಯ ಜಗತಃ ಶಾಶ್ವತೋ ಗುರುಃ |
ಕಂ ತ್ವದ್ಯ ಯಜಸೇ ದೇವಂ ಪಿತರಂ ಕಂ ನ ವಿದ್ಮಹೇ ॥26॥
ನೀನು ಜಗತ್ತಿಗೆ ತಂದೆ-ತಾಯಿ, ಶಾಶ್ವತವಾದ ಗುರು ಆಗಿರುತ್ತಿ. ಅಂತಹ ನೀನು ಯಾವ ದೇವತೆಯನ್ನು, ಯಾವ ಪಿತೃದೇವತೆಯನ್ನು ಉದ್ದೇಶಿಸಿ ಪೂಜಿಸುತ್ತಿರುವಿ? ಇದನ್ನು ನಾನು ತಿಳಿದಿರುವುದಿಲ್ಲ.
ಶ್ರೀಭಗವಾನ್
ಅವಾಚ್ಯಮೇತದ್ವಕ್ತವ್ಯಮಾತ್ಮಗುಹ್ಯಂ ಸನಾತನಮ್ |
ತವ ಭಕ್ತಿಮತೋ ಬ್ರಹ್ಮನ್ವಕ್ಷ್ಯಾಮಿ ತು ಯಥಾತಥಮ್ ॥27॥
ಶ್ರೀಭಗವಾನ್ ನಾರದನೇ, ಈ ವಿಷಯವು ಹೇಳಲು ಯೋಗ್ಯವಲ್ಲ. ಅವ್ಯಕ್ತವಾದುದು. ಪರಮಾತ್ಮನ ರಹಸ್ಯವೆನಿಸಿದೆ, ಸನಾತನವಾಗಿದೆ. ಹೀಗಿದ್ದರೂ ಪೂಜ್ಯನೇ, ಭಕ್ತಿಯುಳ್ಳಂತಹ ನಿನ್ನನ್ನು ಕುರಿತು ಯಥಾರ್ಥವಾಗಿ ಹೇಳುತ್ತೇನೆ.
ಯತ್ತತ್ ಸೂಕ್ಷ್ಮಮವಿಜ್ಞೇಯಮವ್ಯಕ್ತಮಚಲಂ ಧ್ರುವಮ್ |
ಇಂದ್ರಿಯೈರಿಂದ್ರಿಯಾರ್ಥೈಶ್ಚ ಸರ್ವಭೂತೈಶ್ಚ ವರ್ಜಿತಮ್ ॥28॥
ಸ ಹ್ಯಂತರಾತ್ಮಾ ಭೂತಾನಾಂ ಕ್ಷೇತ್ರಜ್ಞಶ್ಚೇತಿ ಕಥ್ಯತೇ |
ತ್ರಿಗುಣವ್ಯತಿರಿಕ್ತೋಽಸೌ ಪುರುಷಶ್ಚೇತಿ ಕಲ್ಪಿತಃ |
ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ ॥29॥
ನಾರದನೇ, ಯಾವುದು ಅತ್ಯಂತ ಸೂಕ್ಷ್ಮವೋ, ಸುಲಭವಾಗಿ ತಿಳಿಯಲಾಗದೋ, ಅವ್ಯಕ್ತವೋ, ಶಾಶ್ವತವೋ,
ಇಂದ್ರಿಯ-ಇಂದ್ರಿಯಾರ್ಥಗಳಿಂದ ಸರ್ವ ಪ್ರಾಣಿಗಳಿಂದಲೂ ಅತ್ಯಂತ ಭಿನ್ನವಾಗಿದೆಯೋ, ಎಲ್ಲ ಪ್ರಾಣಿಗಳ ಅಂತರಾತ್ಮ
ಎನಿಸಿದೆಯೋ, ಅದನ್ನೇ ಕ್ಷೇತ್ರಜ್ಞನೆಂದು, ತ್ರಿಗುಣಾತೀತನೆಂದು, ಪುರುಷನೆಂದು ಹೇಳುತ್ತಾರೆ. ಆ ಪರಮಾತ್ಮನಿಂದಲೇ
ತ್ರಿಗುಣಾತ್ಮಕವಾದ ಅವ್ಯಕ್ತತತ್ತ್ವವೆನಿಸಿದ ಜಗತ್ತು ಹುಟ್ಟಿದೆ.
ಅವ್ಯಕ್ತಾ ವ್ಯಕ್ತಭಾವಸ್ಥಾ ಯಾ ಸಾ ಪ್ರಕೃತಿರವ್ಯಯಾ |
ತಾಂ ಯೋನಿಮಾವಯೋರ್ವಿದ್ಧಿ ಯೋಽಸೌ ಸದಸದಾತ್ಮಕಃ |
ಆವಾಭ್ಯಾಂ ಪೂಜ್ಯತೇಽಸೌ ಹಿ ದೈವೇ ಪಿತ್ರ್ಯೇ ಚ ಕಲ್ಪಿತೇ ॥30॥
ಅವ್ಯಕ್ತತತ್ತ್ವವೇ ಪ್ರಕಟವಾದಾಗ ಅದನ್ನೇ ಪ್ರಕೃತಿ ಎಂದು ಕರೆಯುತ್ತಾರೆ. ಕಾರ್ಯ- ಕಾರಣ ಅಥವಾ ಮೂರ್ತಾಮೂರ್ತ
ಸ್ವರೂಪವಾದ ಆ ಅವ್ಯಕ್ತತತ್ತ್ವವು ನಮ್ಮಿಬ್ಬರಿಗೂ ಕಾರಣವಾಗಿದೆ. ನಮ್ಮಿಬ್ಬರಿಂದಲೂ ದೈವ-ಪಿತೃ ಸಂಬಂಧಿ ಕಾರ್ಯಗಳಲ್ಲಿ ಅವನೇ ಆರಾಧ್ಯನಾಗಿದ್ದಾನೆ.
ನಾಸ್ತಿ ತಸ್ಮಾತ್ ಪರೋಽನ್ಯೋ ಹಿ ಪಿತಾ ದೇವೋಽಥ ವಾ ದ್ವಿಜಃ |
ಆತ್ಮಾ ಹಿ ನೌ ಸ ವಿಜ್ಞೇಯಸ್ತತಸ್ತಂ ಪೂಜಯಾವಹೇ ॥31॥
ಅವನಿಗಿಂತ ಶ್ರೇಷ್ಠನಾದ ಪಿತೃದೇವತೆ ಯಾರೂ ಇರುವುದಿಲ್ಲ. ಅವನೇ ನಮಗೂ ಅಂತರ್ಯಾಮಿಯೂ, ವಿಜ್ಞೇಯನೂ ಆಗಿದ್ದಾನೆ. ಆದ್ದರಿಂದ ಅವನನ್ನೇ ಆರಾಧಿಸುತ್ತಿದ್ದೇವೆ.
ತೇನೈಷಾ ಪ್ರಥಿತಾ ಬ್ರಹ್ಮನ್ಮರ್ಯಾದಾ ಲೋಕಭಾವಿನೀ |
ದೈವಂ ಪಿತ್ರ್ಯಂ ಚ ಕರ್ತವ್ಯಮಿತಿ ತಸ್ಯಾನುಶಾಸನಮ್ ॥32॥
ಲೋಕವನ್ನು ಮುನ್ನಡೆಸುವ ಧರ್ಮಮರ್ಯಾದೆಯು ಅವನಿಂದಲೇ ಈ ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ದೇವತಾಸಂಬಂಧಿಯಾದ,
ಪಿತೃಸಂಬಂಧಿಯಾದ ಕರ್ತವ್ಯಗಳನ್ನು ಮಾಡಬೇಕು ಎಂಬುದು ಅವನ ಶಾಸನವಾಗಿದೆ.
ಬ್ರಹ್ಮಾ ಸ್ಥಾಣುರ್ಮನುರ್ದಕ್ಷೋ ಭೃಗುರ್ಧರ್ಮಸ್ತಪೋ ದಮಃ |
ಮರೀಚಿರಂಗಿರಾತ್ರಿಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ॥33॥
ವಸಿಷ್ಠಃ ಪರಮೇಷ್ಠೀ ಚ ವಿವಸ್ವಾನ್ ಸೋಮ ಏವ ಚ |
ಕರ್ದಮಶ್ಚಾಪಿ ಯಃ ಪ್ರೋಕ್ತಃ ಕ್ರೋಧೋ ವಿಕ್ರೀತ ಏವ ಚ ॥34॥
ಏಕವಿಂಶತಿರುತ್ಪನ್ನಾಸ್ತೇ ಪ್ರಜಾಪತಯಃ ಸ್ಮೃತಾಃ |
ತಸ್ಯ ದೇವಸ್ಯ ಮರ್ಯಾದಾಂ ಪೂಜಯಂತಿ ಸನಾತನೀಮ್ ॥35॥
ಚತುರ್ಮುಖ ಬ್ರಹ್ಮನು, ಮಹರುದ್ರನು, ಮನುವು, ದಕ್ಷಪ್ರಜಾಪತಿ, ಭೃಗು, ಧರ್ಮ, ತಪಸ್ಸು, ದಮ, ಮರೀಚಿ, ಅಂಗಿರ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಪರಮೇಷ್ಠೀ, ವಿವಸ್ವಾನ್, ಚಂದ್ರ, ಕರ್ದಮ, ಕ್ರೋಧ, ವಿಕ್ರೀತ - ಈ ಇಪ್ಪತ್ತೊಂದು ಮಂದಿ ಪ್ರಜಾಪತಿಗಳು ಆ ಪರಬ್ರಹ್ಮನಿಂದಲೇ ಉತ್ಪನ್ನರಾದವರು ಎನ್ನುತ್ತಾರೆ. ಇವರು ಎಂದಿಗೂ ಸನಾತನವಾದ ಧರ್ಮಮರ್ಯಾದೆಯನ್ನು ಗೌರವಿಸುತ್ತಾರೆ, ಪಾಲಿಸುತ್ತಾರೆ.
ದೈವಂ ಪಿತ್ರ್ಯಂ ಚ ಸತತಂ ತಸ್ಯ ವಿಜ್ಞಾಯ ತತ್ತ್ವತಃ |
ಆತ್ಮಪ್ರಾಪ್ತಾನಿ ಚ ತತೋ ಜಾನಂತಿ ದ್ವಿಜಸತ್ತಮಾಃ ॥36॥
ಬ್ರಾಹ್ಮಣಶ್ರೇಷ್ಠರು ಪರಮಾತ್ಮನಿಗೆ ಪ್ರಿಯವಾಗಲೆಂದು ವಿಹಿತವಾದ ದೇವತಾ ಸಂಬಂಧಿ, ಪಿತೃಸಂಬಂಧಿಯಾದ ಕರ್ಮಗಳನ್ನು ಯಥಾವತ್ತಾಗಿ ತಿಳಿದು ಅದರಂತೆ ಆಚರಿಸುತ್ತಾ ಇಷ್ಟಾರ್ಥವನ್ನು ಹೊಂದುತ್ತಾರೆ.
ಸ್ವರ್ಗಸ್ಥಾ ಅಪಿ ಯೇ ಕೇಚಿತ್ತಂ ನಮಸ್ಯಂತಿ ದೇಹಿನಃ |
ತೇ ತತ್ಪ್ರಸಾದಾದ್ ಗಚ್ಛಂತಿ ತೇನಾದಿಷ್ಟಫಲಾಂ ಗತಿಮ್ ॥37॥
ಸ್ವರ್ಗದಲ್ಲಿರುವ ದಿವ್ಯಶರೀರಗಳಲ್ಲಿಯೂ ಯಾವ ಪರಮಾತ್ಮನನ್ನು ಜೀವರು ನಮಸ್ಕರಿಸುತ್ತಾರೋ ಅವರು ಅವನ ಅನುಗ್ರಹದಿಂದ

ಅವನ ಆದೇಶದಂತೆ ಅವನು ನಿರ್ಮಿಸಿದ ಫಲವನ್ನು, ಉತ್ತಮ ಗತಿಯನ್ನು ಹೊಂದುತ್ತಾರೆ.
ಯೇ ಹೀನಾಃ ಸಪ್ತದಶಭಿರ್ಗುಣೈಃ ಕರ್ಮಭಿರೇವ ಚ |
ಕಲಾಃ ಪಂಚದಶ ತ್ಯಕತತ್ವ ತೇ ಮುಕ್ತಾ ಇತಿ ನಿಶ್ಚಯಃ ॥38॥
ಯಾರು ಹದಿನೇಳು ಗುಣಗಳಿಂದ, ಸತ್ವಾದಿ ಕರ್ಮಗಳಿಂದ ಹೀನರಾಗಿ ಹದಿನೈದು ಕಲೆಗಳನ್ನು ತ್ಯಜಿಸುತ್ತಾರೋ ಅವರು ಮುಕ್ತರೆಂಬುದೇ ನಿಶ್ಚಯವು.
ವ್ಯಾಖ್ಯಾನ ವಿಶೇಷ ಈ ವಿಚಾರಗಳು ಜನಕ ಮತ್ತು ಸುಲಭೆಯರ ಸಂವಾದದಲ್ಲಿ ಪ್ರಸ್ತುತವಾಗಿವೆ.
ಮುಕ್ತಾನಾಂ ತು ಗತಿರ್ಬ್ರಹ್ಮನ್ ಕ್ಷೇತ್ರಜ್ಞ ಇತಿ ಕಲ್ಪಿತಃ |
ಸ ಹಿ ಸರ್ವಗತಶ್ಚೈವ ನಿರ್ಗುಣಶ್ಚೈವ ಕಥ್ಯತೇ ॥39॥
ಮುಕ್ತರಾದವರಿಗೆ ಕ್ಷೇತ್ರಜ್ಞನೇ ಗತಿಯು. ಕ್ಷೇತ್ರಜ್ಞನು ಪ್ರಕೃತಿ ಗುಣದಿಂದ ದೂರನೂ, ಸರ್ವಗತನು ಎಂದು ಹೇಳಲ್ಪಡುತ್ತಾನೆ.
ದೃಶ್ಯತೇ ಜ್ಞಾನಯೋಗೇನ ಆವಾಂ ಚ ಪ್ರಸೃತೌ ತತಃ |
ಏವಂ ಜ್ಞಾತ್ವಾ ತಮಾತ್ಮಾನಂ ಪೂಜಯಾವಃ ಸನಾತನಮ್ ॥40॥
ಅವನಿಂದ ಹೊರಹೊಮ್ಮಿದ ನಾವು ಜ್ಞಾನಯೋಗದಿಂದ ಕ್ಷೇತ್ರಜ್ಞನನ್ನು ತಿಳಿಯಬಹುದಾಗಿದೆ. ಅವನ ಬಗ್ಗೆ ಹೀಗೆ ತಿಳಿದು ಸನಾತನನಾದ ಅವನನ್ನೇ ಪೂಜಿಸುತ್ತಿದ್ದೇವೆ.
ತಂ ವೇದಾಶ್ಚಾಶ್ರಮಾಶ್ಚೈವ ನಾನಾತನುಸಮಾಸ್ಥಿತಾಃ |
ಭಕ್ತ್ಯಾ ಸಂಪೂಜಯಂತ್ಯಾದ್ಯಂ ಗತಿಂ ಚೈಷಾಂ ದದಾತಿ ಸಃ ॥41॥
ಅಂತಹ ಕ್ಷೇತ್ರಜ್ಞನಾದ ಭಗವಂತನನ್ನು ವೇದಗಳು, ಆಶ್ರಮಗಳು ನಾನಾ ರೂಪಗಳನ್ನು ಧರಿಸಿ ಆಶ್ರಯಿಸಿವೆ. ಅವರೆಲ್ಲರೂ ಭಕ್ತಿಯಿಂದ ಅವನನ್ನೇ ಪೂಜಿಸುತ್ತಾರೆ. ಅವರೆಲ್ಲರಿಗೂ ಅವನು ಉತ್ತಮವಾದ ಗತಿಯನ್ನು ನೀಡುತ್ತಾನೆ.
ಯೇ ತು ತದ್ಭಾವಿತಾ ಲೋಕೇ ಏಕಾಂತಿತ್ವಂ ಸಮಾಸ್ಥಿತಾಃ |
ಏತದಭ್ಯಧಿಕಂ ತೇಷಾಂ ಯತ್ತೇ ತಂ ಪ್ರವಿಶಂತ್ಯುತ ॥42॥
ಯಾರು ಅವನಲ್ಲೇ ಭಕ್ತಿ ಹೊಂದಿದವರಾಗಿ, ಏಕಾಂತವನ್ನು ಹೊಂದಿದವರಾಗಿ ಅವನನ್ನೇ ಸರ್ವೋತ್ತಮ ಎಂದು ಭಜಿಸುತ್ತಾರೋ ಅವರು ಅವನ ಪಾದವನ್ನೇ ಹೊಂದುತ್ತಾರೆ.
ಇತಿ ಗುಹ್ಯಸಮುದ್ದೇಶಸ್ತವ ನಾರದ ಕೀರ್ತಿತಃ |
ಭಕ್ತ್ಯಾ ಪ್ರೇಮ್ಣಾ ಚ ವಿಪ್ರರ್ಷೇ ಅಸ್ಮದ್ಭಕ್ತ್ಯಾ ಚ ತೇ ಶ್ರುತಃ ॥43॥
ಬ್ರಹ್ಮರ್ಷಿ ನಾರದನೇ, ನಿನಗೆ ಆ ಪರಮಾತ್ಮನಲ್ಲಿ ಭಕ್ತಿ ಇರುವುದರಿಂದ ನಮ್ಮ ಬಳಿ ಭಕ್ತಿಯಿಂದ ಕೇಳಿರುತ್ತಿ. ಭಕ್ತಿ, ಪ್ರೇಮಗಳಿಂದ ತುಂಬಿರುವ ನಿನಗೆ ಈ ರಹಸ್ಯವನ್ನು ಹೇಳಿರುತ್ತೇವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೇಳನೆಯ ಅಧ್ಯಾಯ
ನಾರದರಿಂದ ಉಪರಿಚರ ವಸುವಿನ ಚರಿತೆ.
ಭೀಷ್ಮಃ
ಸ ಏವಮುಕ್ತೋ ದ್ವಿಪದಾಂ ವರಿಷ್ಠೋ
ನಾರಾಯಣೇನೋತ್ತಮಪೂರುಷೇಣ |
ಜಗಾದ ವಾಕ್ಯಂ ದ್ವಿಪದಾಂ ವರಿಷ್ಠಂ
ನಾರಾಯಣಂ ಲೋಕಹಿತಾಧಿವಾಸಮ್ ॥1॥
ಭೀಷ್ಮ ಯುಧಿಷ್ಠಿರನೇ, ಪುರುಷೋತ್ತಮನಾದ ಭಗವಾನ್ ನಾರಾಯಣನು ಪುರುಷಶ್ರೇಷ್ಠರಾದ ನಾರದರ ಬಳಿ ಹೀಗೆ ಹೇಳಿದ ಬಳಿಕ, ನಾರದರು ಲೋಕಕ್ಕೆಲ್ಲ ಆಶ್ರಯನೆನಿಸಿದ ಪುರುಷೋತ್ತಮನಾದ ನಾರಾಯಣನ ಬಳಿ ಹೀಗೆ ನುಡಿದರು.
ಯದರ್ಥಮಾತ್ಮಪ್ರಭವೇಹ ಜನ್ಮ
ತವೋತ್ತಮಂ ಧರ್ಮಗೃಹೇ ಚತುರ್ಧಾ |
ತತ್ ಸಾಧ್ಯತಾಂ ಲೋಕಹಿತಾರ್ಥಮದ್ಯ
ಗಚ್ಛಾಮಿ ದ್ರಷ್ಟುಂ ಪ್ರಕೃತಿಂ ತವಾದ್ಯಾಮ್ ॥2॥
ಭಗವಂತನೇ, ನಿನ್ನಿಂದಲೇ ನೀನು ಉತ್ಪತ್ತಿಯುಳ್ಳವನು. ಲೋಕಹಿತಕ್ಕಾಗಿ ಧರ್ಮಪ್ರಜೇಶ್ವರನ ಮನೆಯಲ್ಲಿ ನಾಲ್ಕು ಅವತಾರಗಳನ್ನು ತಾಳಿರುವೆ. ಈ ಉದ್ದೇಶವನ್ನು ಸಾಧಿಸಿಕೊ. ನಾನು ಶ್ವೇತದ್ವೀಪದಲ್ಲಿರುವ ನಿನ್ನ ರೂಪವನ್ನು ನೋಡಲು ತೆರಳುತ್ತೇನೆ.
ವೇದಾಃ ಸ್ವಧೀತಾ ಮಮ ಲೋಕನಾಥ
ತಪ್ತಂ ತಪೋ ನಾನೃತಮುಕ್ತಪೂರ್ವಮ್ |
ಪೂಜಾಂ ಗುರೂಣಾಂ ಸತತಂ ಕರೋಮಿ
ಪರಸ್ಯ ಗುಹ್ಯಂ ನ ಚ ಭಿನ್ನಪೂರ್ವಮ್ ॥3॥
ಲೋಕನಾಥನೇ, ಸದಾ ಗುರುಜನರ ಸತ್ಕಾರವನ್ನು ಮಾಡುತ್ತೇನೆ. ಬೇರೆಯವರ ರಹಸ್ಯ ವಿಷಯಗಳನ್ನು ಮತ್ತೊಬ್ಬರ ಬಳಿ ಎಂದಿಗೂ ತಿಳಿಸುವುದಿಲ್ಲ. ನಾನು ವೇದಾಧ್ಯಯನ, ತಪಸ್ಸು ಇವುಗಳಲ್ಲಿ ರತನಾಗಿರುವುದರಿಂದ ಎಂದಿಗೂ ಸುಳ್ಳನ್ನು ಹೇಳುವುದಿಲ್ಲ.

ಗುಪ್ತಾನಿ ಚತ್ವಾರಿ ಯಥಾಗಮಂ ಮೇ
ಶತ್ರೌ ಚ ಮಿತ್ರೇ ಚ ಸಮೋಽಸ್ಮಿ ನಿತ್ಯಮ್ |
ತಂ ಚಾದಿದೇವಂ ಸತತಂ ಪ್ರಪನ್ನ
ಏಕಾಂತಭಾವೇನ ವೃಣೋಮ್ಯಜಸ್ರಮ್ |
ಏಭಿರ್ವಿಶೇಷೈಃ ಪರಿಶುದ್ಧಸತ್ತ್ವಃ
ಕಸ್ಮಾನ್ನ ಪಶ್ಯೇಯಮನಂತಮೀಶಮ್ ||4||
ಶಾಸ್ತ್ರದ ವಿಧಿಯಂತೆ ನಾನು ಕೈ, ಕಾಲು, ಉದರ, ಉಪಸ್ಥಗಳನ್ನು ಪರಿಶುದ್ಧವಾಗಿ ರಕ್ಷಿಸಿಕೊಂಡಿದ್ದೇನೆ. ಶತ್ರು-ಮಿತ್ರರಲ್ಲಿ ಸಮಭಾವವನ್ನು ಹೊಂದಿ, ಸರ್ವೋತ್ತಮನಾದ ನಾರಾಯಣನನ್ನೇ ಶ್ರೇಷ್ಠವಾದ ಭಕ್ತಿಯಿಂದ, ಭಜನೆ-ಕೀರ್ತನೆಗಳಿಂದ ಸಂತೋಷ ಪಡಿಸುತ್ತೇನೆ.
ತತ್ ಪಾರಮೇಷ್ಠ್ಯಸ್ಯ ವಚೋ ನಿಶಮ್ಯ
ನಾರಾಯಣಃ ಸಾತ್ವತಧರ್ಮಗೋಪ್ತಾ |
ಗಚ್ಛೇತಿ ತಂ ನಾರದಮುಕ್ತವಾನ್ ಸ
ಸಂಪೂಜಯಿತ್ವಾಽಽತ್ಮವಿಧಿಕ್ರಿಯಾಭಿಃ ||5||
ಇಂತಹ ಗುಣಗಳ ಕಾರಣದಿಂದ ಪರಿಶುದ್ಧ ಅಂತಃಕರಣವುಳ್ಳ ನಾನು ಆ ಭಗವಂತನನ್ನು ನೋಡುತ್ತೇನೆ. ಯುಧಿಷ್ಠಿರನೇ, ಬ್ರಹ್ಮನ ಸುತನಾದ ನಾರದನ ಮಾತನ್ನು ಕೇಳಿದ, ಸನಾತನ ಧರ್ಮರಕ್ಷಕನಾದ ನಾರಾಯಣನು ನಾರದರನ್ನು ವಿಧಿಪೂರ್ವಕವಾಗಿ ಪೂಜಿಸಿ ಶ್ವೇತದ್ವೀಪಕ್ಕೆ ಸಾಗಲು ಒಪ್ಪಿದನು. ಅಲ್ಲಿಗೆ ಹೋಗು ಎಂದು ಹೇಳಿದನು.
ತತೋ ವಿಸೃಷ್ಟಃ ಪರಮೇಷ್ಠಿಪುತ್ರಃ
ಸೋಽಭ್ಯರ್ಚಯಿತ್ವಾ ತಮೃಷಿಂ ಪುರಾಣಮ್ |
ಖಮುತ್ಪಪಾತೋತ್ತಮವೇಗಯುಕ್ತ-
ಸ್ತತೋಽಧಿಮೇರೌ ಸಹಸಾ ನಿಲಿಲ್ಯೇ ||6||
ಭಗವಂತನಿಂದ ಕಳುಹಿಸಿಕೊಡಲ್ಪಟ್ಟ ನಾರದರು ಉತ್ತಮ ಯೋಗದಿಂದ ಆಕಾಶದ ಕಡೆ ಸಾಗಿ ಅಲ್ಲಿಂದ ಮುಂದೆ ಮೇರುಪರ್ವತದ ಶಿಖರದಲ್ಲಿ ಅದೃಶ್ಯರಾದರು.
ತತ್ರಾವತಸ್ಥೇ ಚ ಮುನಿರ್ಮುಹೂರ್ತ-
ಮೇಕಾಂತಮಾಸಾದ್ಯ ಗಿರೇಃ ಸ ಶೃಂಗೇ |
ಆಲೋಕಯನ್ನುತ್ತರಪಶ್ಚಿಮೇನ
ದದರ್ಶ ಚಾತ್ಯದ್ಭುತರೂಪಯುಕ್ತಮ್ ||7||
ಆ ಶಿಖರದಲ್ಲಿ ಏಕಾಂತಸ್ಥಳದಲ್ಲಿ ಮುಹೂರ್ತಕಾಲ ವಿಶ್ರಾಂತಿಯನ್ನು ಪಡೆದು ಬಳಿಕ ವಾಯುವ್ಯ ದಿಕ್ಕಿನ ಕಡೆ ನೋಡುತ್ತಿರುವಾಗ ನಾರಾಯಣ ಮುನಿಯು ಹೇಳಿದ ಅದ್ಭುತವಾದ ದೃಶ್ಯವನ್ನು ಕಂಡರು.
ಕ್ಷೀರೋದಧೇರುತ್ತರತೋ ಹಿ ದ್ವೀಪಃ
ಶ್ವೇತಃ ಸ ನಾಮ್ನಾ ಪ್ರಥಿತೋ ವಿಶಾಲಃ |
ಮೇರೋಃ ಸಹಸ್ರೈರಪಿ ಯೋಜನಾನಾಂ
ದ್ವಾತ್ರಿಂಶತೋರ್ಧ್ವಂ ಕವಿಭಿರ್ನಿರುಕ್ತಃ ||8||
ಕ್ಷೀರಸಾಗರದ ಉತ್ತರಭಾಗದಲ್ಲಿರುವ ಶ್ವೇತದ್ವೀಪವೆಂಬ ಪ್ರಸಿದ್ಧವಾದ ವಿಶಾಲವಾದ ಪ್ರದೇಶವು ನಾರದರಿಗೆ ಕಾಣಿಸಿತು. ವಿದ್ವಾಂಸರು ಆ ದ್ವೀಪವನ್ನು ಮೇರುಪರ್ವತಕ್ಕಿಂತ ನಲವತ್ತೊಂಬತ್ತು ಲಕ್ಷ ಯೋಜನ ಎತ್ತರದಲ್ಲಿದೆ ಎಂದು ಹೇಳುತ್ತಾರೆ.
ವ್ಯಾಖ್ಯಾನ ವಿಶೇಷ `ಮೇರೋಃ ಸಹಸ್ರೈಃ' ಎಂಬ ಬಹುವಚನದ ಪ್ರಯೋಗದಿಂದ ಶತಸಹಸ್ರ ಎನಿಸಿದ ಲಕ್ಷಸಂಖ್ಯೆಯಲ್ಲಿ ಗ್ರಹಿಸಬೇಕು. ಮುಂದೆ `ದ್ವಾತ್ರಿಂಶತೋರ್ಧ್ವಂ' ಎಂದು ಹೇಳಿರುವುದರಿಂದ ಮೂವತ್ತೆರಡು ಲಕ್ಷ, ಅದರಲ್ಲಿ ಅರ್ಧ, ಅರ್ಥಾತ್ ಹದಿನಾರು. ಮೂವತ್ತೆರಡು ಮತ್ತು ಹದಿನಾರು ಸೇರಿಸಿದರೆ ನಲವತ್ತೆಂಟು ಲಕ್ಷ ಯೋಜನವಾಗುತ್ತದೆ. ಒಂದು ಲಕ್ಷ ಯೋಜನದ ಮೇರುಪರ್ವತವನ್ನೂ ಸೇರಿಸಿಕೊಂಡಲ್ಲಿ ಶ್ವೇತದ್ವೀಪವು ನಲವತ್ತೊಂಬತ್ತು ಲಕ್ಷ ಯೋಜನ ಎತ್ತರದಲ್ಲಿದೆ ಎಂದಾಗುತ್ತದೆ. ವಾಸ್ತವಿಕವಾಗಿ ಭೂಮಿಯಿಂದ ಶ್ವೇತದ್ವೀಪವು ಐವತ್ತು ಲಕ್ಷ ಎಂದು ಭೂಗೋಳ ನಿರ್ಣಯದಲ್ಲಿ ವಾದಿರಾಜರೇ ತಿಳಿಸಿರುತ್ತಾರೆ. `ಲಕ್ಷಯೋಜನತೋಽಪ್ಯೂರ್ಧ್ವಂ ತದ್ವಿದ್ವದ್ಭಿಃ ಉದಾಹೃತಂ | ತಥಾ ಶ್ವೇತದ್ವೀಪ ಸಂಜ್ಞಂ ಧಾಮಕ್ಷೀರಾಂಬುಧೌ ಹರೇಃ ತತೋಚ್ಛ್ರಿತಂ ಭೂಪ್ರದೇಶಾತ್ ಪಂಚಾಶಲ್ಲಕ್ಷಯೋಜನೈಃ' (ಭೂಗೋಳವರ್ಣನೆ ಶ್ಲೋ. 134, 135). ಈ ಪ್ರಮಾಣದ ಅನುಸಾರವಾಗಿ ಭೂಮಿಯಿಂದ ಐವತ್ತು ಲಕ್ಷ ಯೋಜನ ಎತ್ತರದಲ್ಲಿ ಶ್ವೇತದ್ವೀಪ ಎಂದಾಗಬೇಕು. ಇಲ್ಲಿ ನಲವತ್ತೊಂಬತ್ತು ಲಕ್ಷವನ್ನು ಹೇಳಿದ್ದಾರಲ್ಲ ಎಂಬುದಕ್ಕೆ ಗುರುರಾಜರು `ಅಲ್ಪತ್ವಾತ್ ಏಕಸ್ಯ ಅವಿವಕ್ಷಾ' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ ಸ್ವರ್ಗಕ್ಕೂ ಶ್ವೇತದ್ವೀಪಕ್ಕೂ ಒಂದು ಲಕ್ಷ ಯೋಜನದ ಅಂತರವಿದೆ. ಶ್ವೇತದ್ವೀಪವು ಸ್ವರ್ಗಕ್ಕೆ ಸಮಾನವಾದುದರಿಂದ ಸ್ವರ್ಗದ ಸಮಾನವಾದ ಐವತ್ತು ಲಕ್ಷ ಯೋಜನವನ್ನು ಶ್ವೇತದ್ವೀಪಕ್ಕೂ ಗ್ರಹಿಸಿದ್ದಾರೆ. ಒಂದು ಸಂಖ್ಯೆಯು ಅಲ್ಪವಾದುದರಿಂದ ಅದನ್ನು ಕೈಬಿಟ್ಟು ಇಲ್ಲಿ ನಲವತ್ತೊಂಬತ್ತು ಲಕ್ಷ ಎಂದು ಹೇಳಲಾಗಿದೆ. ಭೂಗೋಳವರ್ಣನೆಯಲ್ಲಿ ಹೇಳಿದ್ದು ಸ್ವರ್ಗಸಮಾನ ಎಂಬ ಅಭಿಪ್ರಾಯದಿಂದ. ಇಲ್ಲಿ ಹೇಳಿದ ನಲವತ್ತೊಂಬತ್ತು ಲಕ್ಷವು ಯಥಾರ್ಥವಾಗಿ ಶ್ವೇತದ್ವೀಪದ ಸ್ಥಿತಿಯನ್ನು ತಿಳಿಸಿದ್ದಾರೆ ಎಂದು ತಿಳಿಯಬೇಕು ಎಂಬುದಾಗಿ ಲಕ್ಷಾಲಂಕಾರದಲ್ಲಿ ಗುರುರಾಜರೇ ವಿವರಿಸಿದ್ದಾರೆ.
ಅತೀಂದ್ರಿಯಾಶ್ಚಾನಶನಾಶ್ಚ ತತ್ರ
ನಿಷ್ಪಂದಹೀನಾಃ ಸುಸುಗಂಧಿನಶ್ಚ |

ಶ್ವೇತಾಃ ಪುಮಾಂಸೋ ಗತಸರ್ವಪಾಪಾಃ
ಚಕ್ಷುರ್ಮುಷಃ ಪಾಪಕೃತಾಂ ನರಾಣಾಮ್ ॥9॥
ಶ್ವೇತದ್ವೀಪದಲ್ಲಿ ವಾಸ ಮಾಡುವವರು ಇಂದ್ರಿಯಗಳನ್ನು ಗೆದ್ದಿರುತ್ತಾರೆ. ಆಹಾರ ತ್ಯಜಿಸಿರುತ್ತಾರೆ. ಬಾಹ್ಯವಾದ ವ್ಯಾಪಾರಗಳಿಂದ ದೂರವಾಗಿರುತ್ತಾರೆ. ಪ್ರಾಕೃತವಾದ ಗಂಧವಿಲ್ಲದೆ ಅಪ್ರಾಕೃತ ಗಂಧದಿಂದ ಕೂಡಿರುತ್ತಾರೆ. ಸ್ವಚ್ಛವರ್ಣದವರಾಗಿಯೂ, ಸಮಸ್ತ ಪಾಪಗಳಿಂದ ಮುಕ್ತರಾಗಿಯೂ, ಪಾಪ ಮಾಡಿದ ಜನರಿಂದ ಅದೃಶ್ಯರಾಗಿಯೂ ಇರುತ್ತಾರೆ.
ವಜ್ರಾಸ್ಥಿಕಾಯಾಃ ಸಮಮಾನೋನ್ಮಾನಾ
ದಿವ್ಯಾನ್ವಯರೂಪಾಃ ಶುಭಸಾರೋಪೇತಾಃ |
ಛತ್ರಾಕೃತಿಶೀರ್ಷಾ ಮೇ ಌಘನಿನಾದಾಃ
ಸತ್ಪುಷ್ಕರಚತುಷ್ಕಾ ರಾಜೀವಶತಪಾದಾಃ ॥10॥
ವಜ್ರದಂತಹ ಶರೀರಗಳನ್ನು ಹೊಂದಿರುವ, ಮಾನಾಪಮಾನಗಳನ್ನು ಸಮಾನವಾಗಿ ಭಾವಿಸಿರುವ ದಿವ್ಯವಾದ ಅವಯವರೂಪಗಳಿಂದ ಕೂಡಿರುವ, ಶುಭಸತ್ವದಿಂದ ಸಂಪನ್ನರಾದ, ಛತ್ರಾಕೃತಿಯ ಶಿರಸ್ಸಿನಿಂದ ಕೂಡಿರುವ, ಗಂಭೀರವಾದ ಶಬ್ದಗಳುಳ್ಳ, ಮನೋಹರವಾದ ವೃಷಣಗಳಿಂದ ಕೂಡಿರುವ, ಕಮಲದ ದಳಕ್ಕೆ ಸಮಾನವಾದ ಪಾದಗಳಿಂದ ಕೂಡಿರುವ;
ಷಷ್ಟ್ಯಾ ದಂತೈರ್ಯುಕ್ತಾಃ ಶುಕ್ಲೈರಷ್ಟಾಭಿರ್ದಂಷ್ಟ್ರಾಭಿರ್ಯೇ |
ಜಿಹ್ವಾಭಿರ್ಯೇ ವಿಷ್ವಗ್ವಕ್ತ್ರಂ ಲೇಲಿಹ್ಯಂತೇ ಸೂರ್ಯಪ್ರಖ್ಯಮ್ ॥11॥
ಹಲ್ಲುಗಳೆಲ್ಲವೂ ಅತ್ಯಂತ ಸೂಕ್ಷ್ಮಕರವಾದ ಅರವತ್ತು ಹಲ್ಲುಗಳಿಂದ ಶೋಭಿಸುತ್ತಿರುವ, ಮೇಲೆ-ಕೆಳಗೆ ನಾಲ್ಕು ನಾಲ್ಕು ಕೋರೆ ಹಲ್ಲುಗಳಿಂದ ಕೂಡಿರುವ, ಜಗತ್ತನ್ನೇ ನೆಕ್ಕುವಂತಹ ಜಿಹ್ವೆಗಳನ್ನು ಹೊಂದಿರುವ, ಸೂರ್ಯಪ್ರಭೆಯಿಂದ ಕೂಡಿದವರು ಶ್ವೇತದ್ವೀಪ ನಿವಾಸಿಗಳು.
ಭಕ್ತ್ಯಾ ದೇವಂ ವಿಶ್ವಾ ವಿಶ್ವೋತ್ಪತ್ತ್ಯವ್ಯಯಂ ಯಸ್ಮಾತ್ ಸರ್ವೇ ಸೂತಾಃ |
ವೇದಾ ಧರ್ಮಾ ಮುನಯಃ ಶಾಂತಾ ದೇವಾಃ ಸರ್ವೇ ತಸ್ಯ ವಿಸರ್ಗಾಃ ॥
ಇಂತಹ ಶ್ವೇತದ್ವೀಪ ನಿವಾಸಿಗಳು ಭಕ್ತಿಯಿಂದ ಮುಕ್ತರ ಉತ್ಪತ್ತಿಗೆ ಕಾರಣನಾದ, ನಾಶರಹಿತನಾದ, ಸಮಸ್ತ ಜಗತ್ತಿಗೆಲ್ಲ ಸೃಷ್ಟಿಕರ್ತನಾದ ಭಗವಂತನನ್ನು ಆರಾಧಿಸುತ್ತಾರೆ. ಸಮಸ್ತ ಜಗತ್ತು, ವೇದ, ಧರ್ಮ, ಶಾಂತರಾದ ಮುನಿಗಳು, ದೇವತೆಗಳು, ಎಲ್ಲರೂ ಅವನಿಂದಲೇ ಸೃಷ್ಟಿಯನ್ನು ಹೊಂದಿರುತ್ತಾರೆ.
ಯುಧಿಷ್ಠಿರಃ
ಅತೀಂದ್ರಿಯಾ ನಿರಾಹಾರಾ ಅನಿಷ್ಪಂದಾಃ ಸುಗಂಧಿನಃ |
ಕಥಂ ತೇ ಪುರುಷಾ ಜಾತಾಃ ಕಾ ತೇಷಾಂ ಗತಿರುತ್ತಮಾ ॥13॥
ಯುಧಿಷ್ಠಿರ ಪಿತಾಮಹನೇ, ಶ್ವೇತದ್ವೀಪ ನಿವಾಸಿಗಳು ಅತೀಂದ್ರಿಯರು, ನಿರಾಹಾರಿಗಳು, ಸ್ಪಂದನೆ ಇಲ್ಲದವರು, ಸುಗಂಧಿಗಳು ಎಂದು ಹೇಳಿರುತ್ತೀರಿ, ಅವರು ಹೇಗೆ ಉತ್ಪತ್ತಿಯನ್ನು ಹೊಂದಿದರು? ಅವರ ಉತ್ತಮವಾದ ಗತಿಯಾದರೂ ಯಾವುದು?
ಯೇ ವಿಮುಕ್ತಾ ಭವಂತೀಹ ನರಾ ಭರತಸತ್ತಮ |
ತೇಷಾಂ ಲಕ್ಷಣಮೇತದ್ಧಿ ಯಚ್ಛ್ವೇತದ್ವೀಪವಾಸಿನಾಮ್ ॥14॥
ಭರತಶ್ರೇಷ್ಠನೇ, ಮುಕ್ತರಾದ ಜನರಿಗೆ ಲೋಕದಲ್ಲಿ ಯಾವ ಲಕ್ಷಣಗಳನ್ನು ಹೇಳಿರುತ್ತಾರೋ ಅದೇ ಲಕ್ಷಣಗಳೇ ಶ್ವೇತದ್ವೀಪ ನಿವಾಸಿಗಳಿಗೂ ಇರುತ್ತದೆ.
ತಸ್ಮಾನ್ಮೇ ಸಂಶಯಂ ಛಿಂಧಿ ಪರಂ ಕೌತೂಹಲಂ ಹಿ ಮೇ |
ತ್ವಂ ಹಿ ಸರ್ವಕಥಾರಾಮಸಃತ್ವಂ ಚೈವೋಪಾಶ್ರಿತಾ ವಯಮ್ ॥15॥
ಇದು ಹೇಗೆ ಸಾಧ್ಯವೆಂಬ ಸಂಶಯವೂ, ಕುತೂಹಲವೂ ನನಗೆ ಉಂಟಾಗಿದೆ. ನೀನು ಎಲ್ಲ ಕಥೆಗಳಿಗೂ ಉದ್ಯಾನವನದಂತಿರುವಿ. ಅಂತಹ ನಿನ್ನನ್ನೇ ನಾವು ಆಶ್ರಯಿಸಿದ್ದೇವೆ. ಆದ್ದರಿಂದ ನನ್ನ ಸಂಶಯವನ್ನು ಪರಿಹರಿಸುವಂತೆ ಉತ್ತರಿಸು.
ಭೀಷ್ಮಃ
ವಿಸ್ತೀರ್ಣೈಷಾ ಕಥಾ ರಾಜನ್ ಶ್ರುತಾ ಮೇ ಪಿತೃಸನ್ನಿಧೌ |
ಸೈಷಾ ತವ ಹಿ ವಕ್ತವ್ಯಾ ಕಥಾಸಾರೋ ಹಿ ಸ ಸ್ಮೃತಃ॥16॥
ಭೀಷ್ಮ ಯುಧಿಷ್ಠಿರನೇ, ಈ ಕಥೆಯು ಬಹಳ ಉತ್ತೀರ್ಣವಾದುದು. ನಮ್ಮ ತಂದೆಯ ಬಳಿ ಕೇಳಿದ್ದೇನೆ. ಅದರ ಸಾರವನ್ನು ನಿನಗೆ ನಾನು ಹೇಳಬೇಕಾಗಿದೆ.
ರಾಜೋಪರಿಚರೋ ನಾಮ ಬಭೂವಾಧಿಪತಿರ್ಭುವಃ |
ಆಖಂಡಲಸಖಃ ಖ್ಯಾತೋ ಭಕ್ತೋ ನಾರಾಯಣಂ ಹರಿಮ್ ॥17॥
ಹಿಂದೆ ಉಪರಿಚರನೆಂಬ ರಾಜನು ಸಮಸ್ತ ಭೂಮಂಡಲಕ್ಕೆ ರಾಜನಾಗಿದ್ದನು. ಶ್ರೀಹರಿಯ ಭಕ್ತನೂ ಆಗಿದ್ದನು.
ಧಾರ್ಮಿಕೋ ನಿತ್ಯಭಕ್ತಶ್ಚ ಪಿತ್ರೂನ್ನಿತ್ಯಮತಂದ್ರಿತಃ |
ಸಾಮ್ರಾಜ್ಯಂ ತೇನ ಸಂಪ್ರಾಪ್ತಂ ನಾರಾಯಣವರಾತ್ ಪುರಾ ॥18॥
ಧಾರ್ಮಿಕನು, ನಿತ್ಯಭಕ್ತನು, ಏಕಾಗ್ರತೆಯಿಂದ ಪಿತೃಗಳನ್ನು ಸೇವಿಸುವವನೂ ಆದ ಆ ರಾಜನು ನಾರಾಯಣನ ವರದಿಂದ ಹಿಂದೆ ಸಮಗ್ರ ಸಾಮ್ರಾಜ್ಯವನ್ನೂ ಹೊಂದಿದ್ದನು.
ಸಾತ್ವತಂ ವಿಧಿಮಾಸ್ಥಾಯ ಪ್ರಾಕ್ಸೂರ್ಯಮುಖನಿಃಸೃತಮ್ |
ಪೂಜಯಾಮಾಸ ದೇವೇಶಂ ತಚ್ಛೇಷೇಣ ಪಿತಾಮಹಾನ್ ॥19॥
ಅವನು ಹಿಂದೆ ಸೂರ್ಯನ ಮುಖದಿಂದ ಪ್ರಕಟವಾದ ಪಂಚರಾತ್ರ ವಿಧಿಯನ್ನು ಆಶ್ರಯಿಸಿ ದೇವೇಶನಾದ ನಾರಾಯಣನ

ಅರ್ಚನೆಯನ್ನು ಮಾಡುತ್ತಿದ್ದನು. ಆ ಭಗವಂತನ ಆರಾಧನೆಯನ್ನು ಮಾಡಿ ಉಳಿದ ಸಾಮಗ್ರಿಗಳಿಂದ ಪಿತೃಗಳನ್ನು ಆರಾಧಿಸುತ್ತಿದ್ದನು.
ಪಿತೃಶೇಷೇಣ ವಿಪ್ರಾಂಶ್ಚ ಸಂವಿಭಜ್ಯಾಶ್ರಿತಾಂಶ್ಚ ಸಃ |
ಶೇಷಾನ್ನಭುಕ್ಸತ್ಯಪರಃ ಸರ್ವಭೂತೇಷ್ವಹಿಂಸಕಃ |
ಸರ್ವಭಾವೇನ ಭಕ್ತಃ ಸ ದೇವದೇವಂ ಜನಾರ್ದನಮ್ ॥20॥
ಪಿತೃಗಳ ಆರಾಧನೆಯಾದ ಬಳಿಕ ಉಳಿದ ಪದಾರ್ಥಗಳನ್ನು ಬ್ರಾಹ್ಮಣರಿಗೆ, ಆಶ್ರಿತರಿಗೆ ದಾನ ಮಾಡಿ, ಅದರಲ್ಲೂ ಉಳಿದ ಬಳಿಕ ಶೇಷಾನ್ನವನ್ನು ಸ್ವೀಕರಿಸುತ್ತಿದ್ದನು. ಸಮಸ್ತ ಭೂತಗಳಲ್ಲಿ ಪ್ರೀತಿಯುಳ್ಳವನೂ, ಅಹಿಂಸಾ ಧರ್ಮನಿರತನೂ ಆದ ಉಪರಿಚರ ವಸುವು ದೇವದೇವನಾದ ಜನಾರ್ದನನನ್ನು ಎಲ್ಲ ವಿಧದಲ್ಲೂ ಆರಾಧಿಸಿದನು.
ತಸ್ಯ ನಾರಾಯಣೇ ಭಕ್ತಿಂ ವಹತೋಽಮಿತ್ರಕರ್ಶನ |
ಏಕಶಯ್ಯಾಸನಂ ಶಕ್ರೋ ದತ್ತವಾನ್ ದೇವರಾಟ್ ಸ್ವಯಮ್ ॥21॥
ಶತ್ರುಗಳನ್ನು ಸಂಹರಿಸುವ ಧರ್ಮರಾಜನೇ, ಉಪರಿಚರ ವಸುವಿನ ನಾರಾಯಣನಲ್ಲಿರುವ ಭಕ್ತಿಯನ್ನು ಕಂಡ ಇಂದ್ರದೇವನು ಪ್ರಸನ್ನನಾಗಿ ತನ್ನ ಹಾಸಿಗೆಯಲ್ಲಿ, ಸಿಂಹಾಸನದಲ್ಲಿ ತನ್ನ ಜೊತೆಯಲ್ಲಿ ಸ್ಥಾನವನ್ನು ಕೊಟ್ಟನು.
ಆತ್ಮಾ ರಾಜ್ಯಂ ಧನಂ ಚೈವ ಕಲತ್ರಂ ವಾಹನಾನಿ ಚ |
ಏತದ್ಭಗವತೇ ಸರ್ವಮಿತಿ ತತ್ ಪ್ರೇಕ್ಷಿತಂ ಸದಾ ॥22॥
ಉಪರಿಚರ ವಸುವು ತನ್ನ ರಾಜ್ಯ, ಐಶ್ವರ್ಯ, ಭಾರ್ಯೆ, ವಸ್ತು, ವಾಹನ ಇವೆಲ್ಲವೂ ಭಗವಂತನದ್ದೇ ಎಂದು ಭಾವಿಸುತ್ತಾ ಅವನಿಗೇ ಸಮರ್ಪಿಸುತ್ತಿದ್ದನು.
ಕಾಮ್ಯನೈಮಿತ್ತಿಕಾಜಸ್ರಂ ಯಜ್ಞಿಯಾಃ ಪರಮಕ್ರಿಯಾಃ |
ಸರ್ವಾಃ ಸಾತ್ವತಮಾಸ್ಥಾಯ ವಿಧಿಂ ಚಕ್ರೇ ಸಮಾಹಿತಃ ॥23॥
ಉಪರಿಚರ ವಸುವು ಭಗವಂತನಲ್ಲಿಯೇ ಏಕಾಗ್ರ ಬುದ್ಧಿಯಿಂದ ಇರುತ್ತಾ ಸಕಾಲ ಕರ್ಮಗಳನ್ನು, ನೈಮಿತ್ತಿಕ ಕರ್ಮಗಳನ್ನು, ಯಜ್ಞ ಮೊದಲಾದ ಶ್ರೇಷ್ಠ ಕರ್ಮಗಳನ್ನು ಪಂಚರಾತ್ರ ವಿಧಿಯನ್ನೇ ಆಶ್ರಯಿಸಿ ಮಾಡುತ್ತಿದ್ದನು.
ಪಂಚರಾತ್ರವಿದೋ ಮುಖ್ಯಾಸ್ತಸ್ಯ ಗೇಹೇ ಮಹಾತ್ಮನಃ |
ಪ್ರಾಯಣಂ ಭಗವತ್ಪ್ರೋಕ್ತಂ ಭುಂಜತೇ ಚಾಗ್ರಭೋಜನಮ್ ॥24॥
ಆ ಉಪರಿಚರ ವಸುವಿನ ಮನೆಯಲ್ಲಿ ಭಗವಂತನಿಗೆ ಅರ್ಪಿತವಾದ ಪ್ರಸಾದವನ್ನು ಪಂಚರಾತ್ರಾಗಮದಲ್ಲಿ ಪ್ರವೀಣರಾದ ಬ್ರಾಹ್ಮಣಶ್ರೇಷ್ಠರು ಮೊದಲು ಸ್ವೀಕರಿಸುತ್ತಿದ್ದರು.
ತಸ್ಯ ಪ್ರಶಾಸತೋ ರಾಜ್ಯಂ ಧರ್ಮೇಣಾಮಿತ್ರಘಾತಿನಃ |
ನಾನೃತಾ ವಾಕ್ಸಮಭವನ್ಮನೋ ದುಷ್ಟಂ ನ ಚಾಭವತ್ |
ನ ಚ ಕಾಯೇನ ಕೃತವಾನ್ ಸ ಪಾಪಂ ಪರಮಣ್ವಪಿ ॥25॥
ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಾ ಶತ್ರುಸಂಹಾರಕನಾದ ರಾಜನ ಬಾಯಿಂದ ಎಂದೂ ಸುಳ್ಳಾದ ಮಾತು ಹೊರಡುತ್ತಿರಲಿಲ್ಲ. ಅವನ ಮನಸ್ಸು ವಿಷಯದಿಂದ ದೂಷಿತವಾಗಿರಲಿಲ್ಲ. ತನ್ನ ಶರೀರದಿಂದ ಅಣುಮಾತ್ರದಷ್ಟೂ ಪಾಪವನ್ನು ಆಚರಿಸಿರಲಿಲ್ಲ.
ಯೇ ಹಿ ತೇ ಮುನಯಃ ಖ್ಯಾತಾಃ ಸಪ್ತ ಚಿತ್ರಶಿಖಂಡಿನಃ |
ತೈರೇಕಮತಿಭಿರ್ಭೂತ್ವಾ ಯತ್ ಪ್ರೋಕ್ತಂ ಶಾಸ್ತ್ರಮುತ್ತಮಮ್ ॥26॥
ಚಿತ್ರಶಿಖಂಡಿಗಳು ಎಂದು ಖ್ಯಾತರಾದ ಮರೀಚ್ಯಾದಿ ಋಷಿಗಳೆಲ್ಲರೂ ಒಂದೇ ಬುದ್ಧಿಯಿಂದ ಹೇಳಿದ ಶ್ರೇಷ್ಠವಾದ ಯಾವ ಶಾಸ್ತ್ರವಿದೆಯೋ ಅದನ್ನು ನಿನಗೆ ಹೇಳುತ್ತೇನೆ, ಕೇಳು.
ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ |
ವಸಿಷ್ಠಶ್ಚ ಮಹಾತೇಜಾ ಏತೇ ಚಿತ್ರಶಿಖಂಡಿನಃ ॥27॥
ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಮಹಾತೇಜಸ್ವಿಯಾದ ವಸಿಷ್ಠ ಇವರು ಚಿತ್ರಶಿಖಂಡಿಗಳು ಎನಿಸಿದ್ದಾರೆ.
ಸಪ್ತ ಪ್ರಕೃತಯೋ ಹ್ಯೇತಾಸ್ತಥಾ ಸ್ವಾಯಂಭುವೋಽಷ್ಟಮಃ |
ಏತಾಭಿರ್ಧಾರ್ಯತೇ ಲೋಕಸ್ತಾಭ್ಯಃ ಶಾಸ್ತ್ರಂ ವಿನಿಃಸೃತಮ್ ॥28॥
ಈ ಏಳು ಮಂದಿ ಋಷಿಗಳು ಎಂಟನೆಯವನಾದ ಸ್ವಾಯಂಭುವ ಮನುವು ಲೋಕಕ್ಕೆ ಕಾರಣರು. ಲೋಕವನ್ನು ಧರಿಸಿದ್ದಾರೆ. ಪಂಚರಾತ್ರಾಗಮವೂ ಇವರಿಂದಲೇ ಹೊರಹೊಮ್ಮಿದೆ.
ಏಕಾಗ್ರಮನಸೋ ದಾಂತಾ ಮುನಯಃ ಸಂಯಮೇ ರತಾಃ |
ಇದಂ ಶ್ರೇಯ ಇದಂ ಬ್ರಹ್ಮ ಇದಂ ಹಿತಮನುತ್ತಮಮ್ |
ಲೋಕಾನ್ ಸಂಚಿಂತ್ಯ ಮನಸಾ ತತಃ ಶಾಸ್ತ್ರಂ ಪ್ರಚಕ್ರಿರೇ ॥29॥
ಇವರೆಲ್ಲರೂ ಭಗವಂತನಲ್ಲಿಯೇ ಏಕಾಗ್ರತೆ ಉಳ್ಳವರು, ಜಿತೇಂದ್ರಿಯರು, ಮನೋನಿಗ್ರಹವುಳ್ಳವರು. ಇದು ಶ್ರೇಯೋಮಾರ್ಗವು, ಇದರಿಂದ ಬ್ರಹ್ಮನ ಪ್ರಾಪ್ತಿಯಾಗುತ್ತದೆ. ಈ ಕರ್ಮವನ್ನು ಮಾಡುವುದರಿಂದ ಶ್ರೇಷ್ಠವಾದ ಹಿತ ಉಂಟಾಗುತ್ತದೆ ಎಂದು ನಿರ್ಧರಿಸಿ, ಅಂತಹ ವಿಧಾನವನ್ನೇ ಶಾಸ್ತ್ರದ ಮೂಲಕ ತಿಳಿಸಿಕೊಟ್ಟರು.
ತತ್ರ ಧರ್ಮಾರ್ಥಕಾಮಾ ಹಿ ಮೋಕ್ಷಃ ಪಶ್ಚಾಚ್ಚ ಕೀರ್ತಿತಃ |
ಮರ್ಯಾದಾ ವಿವಿಧಾಶ್ಚೈವ ದಿವಿ ಭೂಮೌ ಚ ಸಂಸ್ಥಿತಾಃ ॥30॥
ಅವರು ರಚಿಸಿದ ಶಾಸ್ತ್ರದಲ್ಲಿ ಧರ್ಮಾರ್ಥ-ಕಾಮಗಳ ವಿಷಯವು ಮೊದಲು ಹೇಳಲ್ಪಟ್ಟಿದೆ, ಕೇಳಲ್ಪಟ್ಟಿದೆ. ಬಳಿಕ ಮೋಕ್ಷದ

ವಿಷಯವನ್ನು ಹೇಳಿದ್ದಾರೆ. ಅವರು ಹೇಳಿದ ಶಾಸ್ತ್ರದ ವಿಧಿಗಳೇ ಸ್ವರ್ಗಲೋಕದಲ್ಲಿಯೂ, ಭೂಮಿಯಲ್ಲಿಯೂ ಪ್ರಸಿದ್ಧವಾಗಿವೆ.
ಆರಾಧ್ಯ ತಪಸಾ ದೇವಂ ಹರಿಂ ನಾರಾಯಣಂ ಪ್ರಭುಮ್ |
ದಿವ್ಯಂ ವರ್ಷಸಹಸ್ರಂ ವೈ ಸರ್ವೇ ತೇ ಋಷಿಭಿಃ ಸಹ ||31||
ಈ ಸಪ್ತರ್ಷಿಗಳು ಇತರ ಋಷಿಗಳ ಜೊತೆ ಸೇರಿ ದೇವತೆಗಳ ಒಂದು ಸಾವಿರ ವರ್ಷಗಳ ಕಾಲ ಹರಿ-ನಾರಾಯಣರನ್ನು ತಪಸ್ಸಿನ ಮೂಲಕ ಆರಾಧಿಸಿದರು.
ನಾರಾಯಣಾನುಶಾಸ್ತಾ ಹಿ ತದಾ ದೇವೀ ಸರಸ್ವತೀ |
ವಿವೇಶ ತಾನೃಷೀನ್ ಸರ್ವಾಲ್ಲೋಕಾನಾಂ ಹಿತಕಾಮ್ಯಯಾ ||32||
ಪ್ರೀತನಾದ ಶ್ರೀಹರಿಯು ಋಷಿಗಳ ಅಭಿಪ್ರಾಯವನ್ನು ತಿಳಿದು ಸರಸ್ವತಿಯನ್ನು ಅವರ ಬಳಿ ಕಳುಹಿಸಿದನು. ನಾರಾಯಣನ ಆಜ್ಞೆಗನುಗುಣವಾಗಿ ಲೋಕಕ್ಕೆಲ್ಲ ಹಿತವನ್ನು ಮಾಡುವ ಇಚ್ಛೆಯಿಂದ ಸರಸ್ವತೀದೇವಿಯು ಎಲ್ಲ ಋಷಿಗಳಲ್ಲಿಯೂ ಪ್ರವೇಶಿಸಿದಳು.
ತತಃ ಪ್ರವರ್ತಿತಾ ಸಮ್ಯಕ್ ತಪೋವಿದ್ಭಿರ್ದ್ವಿಜಾತಿಭಿಃ |
ಶಬ್ದೇ ಚಾರ್ಥೇ ಚ ಹೇತೌ ಚ ಏಷಾ ಪ್ರಥಮಸರ್ಗಜಾ ||33||
ಬಳಿಕ ತಪಸ್ವಿಗಳಾದ ಬ್ರಾಹ್ಮಣರು ಶಬ್ದ, ಅರ್ಥ, ಯುಕ್ತಿಗಳಿಂದ ಕೂಡಿದ ಶಾಸ್ತ್ರವನ್ನು ಲೋಕದಲ್ಲಿ ಪ್ರಚಾರ ಮಾಡಿದರು. ಪ್ರಥಮ ಸೃಷ್ಟಿಯಲ್ಲಿ ಈ ಪಂಚರಾತ್ರಾಗಮವು ರಚಿತವಾಯಿತು.
ಆದಾವೇವ ಹಿ ತಚ್ಛಾಸ್ತ್ರಮೋಂಕಾರಸ್ವರಭೂಷಿತಮ್ |
ಋಷಿಭಿರ್ಭಾವಿತಂ ತತ್ರ ಯತ್ರ ಕಾರುಣಿಕೋ ಹ್ಯಸೌ ||34||
ಈ ಶಾಸ್ತ್ರವು ಆರಂಭದಲ್ಲಿಯೇ ಓಂಕಾರ ಸ್ವರದಿಂದ ಅಲಂಕೃತವಾಗಿದೆ. ಋಷಿಗಳೆಲ್ಲರೂ ಆ ಶಾಸ್ತ್ರವನ್ನು ಎಲ್ಲಿ ಹೇಳಿದರೋ ಅಲ್ಲಿ ಕಾರುಣಿಕನಾದ ಭಗವಂತನೇ ವಿರಾಜಮಾನನಾಗಿದ್ದಾನೆ.
ತತಃ ಪ್ರಸನ್ನೋ ಭಗವಾನನಿರ್ದಿಷ್ಟಶರೀರಗಃ |
ಋಷೀನುವಾಚ ತಾನ್ ಸರ್ವಾನದೃಶ್ಯಃ ಪುರುಷೋತ್ತಮಃ ||35||
ಬಳಿಕ ನಿಯತವಾದ ಶರೀರವಿಲ್ಲದೆ ಸಂಚರಿಸುವ ಪ್ರಸನ್ನನಾದ ಭಗವಂತನು ಅದೃಶ್ಯನಾಗಿಯೇ ಇದ್ದು ಆ ಋಷಿಗಳಿಗೆ ಹೀಗೆ ಹೇಳಿದನು.
ಕೃತಂ ಶತಸಹಸ್ರಂ ಹಿ ಶ್ಲೋಕಾನಾಮಿದಮುತ್ತಮಮ್ |
ಲೋಕತಂತ್ರಸ್ಯ ಕೃತ್ಸ್ನಸ್ಯ ಯಸ್ಮಾದ್ಧರ್ಮಃ ಪ್ರವರ್ತತೇ ||36||
ಮುನಿಶ್ರೇಷ್ಠರೇ, ನೀವು ಒಂದು ಲಕ್ಷ ಶ್ಲೋಕಗಳಲ್ಲಿ ಸಮಗ್ರ ತಂತ್ರವನ್ನು ಪ್ರತಿಪಾದಿಸುವ ಉತ್ತಮ ಗ್ರಂಥವನ್ನು ರಚಿಸಿದ್ದೀರಿ. ಇದರಿಂದ ಎಲ್ಲ ವಿಧವಾದ ಲೋಕತಂತ್ರಗಳು ಪ್ರವೃತ್ತಿಯನ್ನು ಹೊಂದುತ್ತವೆ.
ಪ್ರವೃತ್ತೌ ಚ ನಿವೃತ್ತೌ ಚ ಯೋನಿರೇತದ್ ಭವಿಷ್ಯತಿ |
ಋಗ್ಯಜುಃಸಾಮಭಿರ್ಜುಷ್ಟಮಥರ್ವಾಂಗಿರಸೈಸ್ತಥಾ ||37||
ನೀವು ರಚಿಸಿದ ಶಾಸ್ತ್ರವು ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳಲ್ಲಿ ಸಾಗುವವರಿಗೆ ಅನುಕೂಲವಾಗುತ್ತದೆ. ಋಗ್ವೇದ, ಯಜುರ್ವೇದ, ಸಾಮವೇದಗಳಿಂದ ಕೂಡಿರುವ ಅಥರ್ವ-ಅಂಗಿರಸಾದಗಳಿಂದಲೂ ಸೇವಿತವಾಗಿರುವ ಶಾಸ್ತ್ರಗಳನ್ನು ರಚಿಸಿರುತ್ತೀರಿ.
ತಥಾ ಪ್ರಮಾಣಂ ಹಿ ಮಯಾ ಕೃತೋ ಬ್ರಹ್ಮಾ ಪ್ರಸಾದಜಃ |
ರುದ್ರಶ್ಚ ಕ್ರೋಧಜೋ ವಿಪ್ರಾ ಯೂಯಂ ಪ್ರಕೃತಯಸ್ತಥಾ ||38||
ಸೂರ್ಯಾಚಂದ್ರಮಸೌ ವಾಯುರ್ಭೂಮಿರಾಪೋಗ್ನಿರೇವ ಚ |
ಸರ್ವೇ ಚ ನಕ್ಷತ್ರಗಣಾ ಯಚ್ಚ ಭೂತಾಭಿಶಬ್ದಿತಮ್ ||39||
ನನ್ನ ಅನುಗ್ರಹದಿಂದ ಚತುರ್ಮುಖ ಬ್ರಹ್ಮನು ಹೇಗೆ ಪ್ರಾಮಾಣಿಕವಾಗಿ ಸೃಷ್ಟಿಯನ್ನು ಹೊಂದಿದನೋ, ಕೋಪದಿಂದ ಹುಟ್ಟಿದ ರುದ್ರನು, ಬ್ರಾಹ್ಮಣರಾದ ನೀವು, ಪ್ರಕೃತಿಗಳು, ಸೂರ್ಯ-ಚಂದ್ರರು, ವಾಯು, ಭೂಮಿ, ಜಲ, ಅಗ್ನಿ, ಸಮಸ್ತ ನಕ್ಷತ್ರಗಳು, ಭೂತ ಎಂಬ ಶಬ್ದದಿಂದ ಕರೆಸಿಕೊಂಡ ಪದಾರ್ಥಗಳು.
ಅಧಿಕಾರೇಷು ವರ್ತಂತೇ ಯಥಾಸ್ವಂ ಬ್ರಹ್ಮವಾದಿನಃ |
ಸರ್ವೇ ಪ್ರಮಾಣಂ ಹಿ ಯಥಾ ತಥೈತಚ್ಛಾಸ್ತ್ರಮುತ್ತಮಮ್ ||40||
ಭವಿಷ್ಯತಿ ಪ್ರಮಾಣಂ ವೈ ಏತನ್ಮದನುಶಾಸನಮ್ |
ಅಸ್ಮಾತ್ ಪ್ರವಕ್ಷ್ಯತೇ ಧರ್ಮಾನ್ಮನುಃ ಸ್ವಾಯಂಭುವಃ ಸ್ವಯಮ್ ||41||
ತಮ್ಮ ತಮ್ಮ ಅಧಿಕಾರದಲ್ಲಿ ಬ್ರಹ್ಮವಾದಿಗಳು ಹೇಗೆ ನಡೆದುಕೊಳ್ಳುತ್ತಾರೋ ಅದರಂತೆ ನೀವು ರಚಿಸಿದ ಈ ಶಾಸ್ತ್ರವು ಲೋಕದಲ್ಲಿ ಪ್ರಮಾಣವೆಂದು ಪ್ರಸಿದ್ಧವಾಗಲಿ. ಇದು ನನ್ನ ಆದೇಶವು. ನೀವು ಹೇಳಿದ ಶಾಸ್ತ್ರವು ಅನುತ್ತಮವಾದ ಶಾಸ್ತ್ರವು. ನೀವು ರಚಿಸಿದ ಶಾಸ್ತ್ರವನ್ನು ಅವಲಂಬಿಸಿಯೇ ಸ್ವಾಯಂಭುವ ಮನುವು ಸ್ವತಃ ಉದ್ಧಾರವನ್ನು ಹೊಂದಿ ಧರ್ಮವನ್ನು ಉಪದೇಶಿಸುತ್ತಾನೆ.
ಉಶನಾ ಬೃಹಸ್ಪತಿಶ್ಚೈವ ಯದೋತ್ಪನ್ನೌ ಭವಿಷ್ಯತಃ |
ತದಾ ಪ್ರವಕ್ಷ್ಯತಃ ಶಾಸ್ತ್ರಂ ಯುಷ್ಮನ್ಮತಿಭಿರುದ್ಧತಮ್ ||42||
ಶುಕ್ರ-ಬೃಹಸ್ಪತಿಗಳು ಹುಟ್ಟಿದ ಬಳಿಕ ಅವರು ನಿಮ್ಮ ಬುದ್ಧಿಯಿಂದ ಪ್ರಕಟವಾಗಿರುವ ಈ ಶಾಸ್ತ್ರವನ್ನೇ ಪ್ರವಚನ ಮಾಡುತ್ತಾರೆ.
ಸ್ವಾಯಂಭುವೇಷು ಧರ್ಮೇಷು ಶಾಸ್ತ್ರೇ ಚೋಶನಸಾ ಕೃತೇ |
ಬೃಹಸ್ಪತಿಮತೇ ಚೈವ ಲೋಕೇಷು ಪ್ರವಿಚಾರಿತೇ ||43||
ಯುಷ್ಮತ್ಕೃತಮಿದಂ ಶಾಸ್ತ್ರಂ ಪ್ರಜಾಪಾಲೋ ವಸುಸ್ತತಃ |
ಬೃಹಸ್ಪತಿಸಕಾಶಾದ್ವೈ ಪ್ರಾಪ್ಸ್ಯತೇ ದ್ವಿಜಸತ್ತಮಾಃ ||44||

ಸ್ವಾಯಂಭುವ ಮನುವಿನಿಂದ ರಚಿತವಾದ ಧರ್ಮಶಾಸ್ತ್ರಗಳು, ಶುಕ್ರನಿಂದ ರಚಿತವಾದ ಧರ್ಮಶಾಸ್ತ್ರಗಳು, ಬೃಹಸ್ಪತಿಗೆ ಅನುಗುಣವಾಗಿ ರಚಿತವಾದ ಶಾಸ್ತ್ರಗಳು ಲೋಕದಲ್ಲಿ ಪ್ರಸಿದ್ಧವಾಗಿರುವಾಗ ನಿಮ್ಮಿಂದ ರಚಿಸಲ್ಪಟ್ಟ ಈ ಶಾಸ್ತ್ರವನ್ನೇ ಪ್ರಜಾಪಾಲಕನಾದ ಉಪರಿಚರ ವಸುವು ಬೃಹಸ್ಪತಿಯ ಸನ್ನಿಧಾನದಲ್ಲಿ ಉಪದೇಶ ರೂಪವಾಗಿ ಹೊಂದುತ್ತಾನೆ.
ಸ ಹಿ ಮದ್ಭಾವಿತೋ ರಾಜಾ ಮದ್ಭಕ್ತಶ್ಚ ಭವಿಷ್ಯತಿ |
ತೇನ ಶಾಸ್ತ್ರೇಣ ಲೋಕೇಷು ಕ್ರಿಯಾಃ ಸರ್ವಾಃ ಕರಿಷ್ಯತಿ ॥45॥
ಸತ್ಪುರುಷರಿಂದ ಸಮ್ಮಾನಿತನಾದ ರಾಜನು ನನ್ನ ಭಕ್ತನಾಗುತ್ತಾನೆ. ಲೋಕದಲ್ಲಿ ಈ ಶಾಸ್ತ್ರಕ್ಕನುಗುಣವಾಗಿಯೇ ಸಮಸ್ತ ಕರ್ಮಗಳನ್ನು ಅನುಸರಿಸುತ್ತಾನೆ.
ಏತದ್ಧಿ ಸರ್ವಶಾಸ್ತ್ರಾಣಾಂ ಶಾಸ್ತ್ರಮುತ್ತಮಸಂಜ್ಞಿತಮ್ |
ಏತದರ್ಥ್ಯಂ ಚ ಧರ್ಮ್ಯಂ ಚ ಯಶಸ್ಯಂ ಚೈತದುತ್ತಮಮ್ ॥46॥
ನೀವು ರಚಿಸಿದ ಶಾಸ್ತ್ರವೇ ಸಮಸ್ತ ಶಾಸ್ತ್ರಗಳಿಗಿಂತ ಶ್ರೇಷ್ಠವಾದ ಅನುತ್ತಮ ಶಾಸ್ತ್ರ ಎಂದು ಪ್ರಸಿದ್ಧವಾಗುತ್ತದೆ. ಈ ಶಾಸ್ತ್ರವು ಕೀರ್ತಿದಾಯಕವೂ, ಧರ್ಮಬೋಧಕವೂ, ಉತ್ತಮವೂ ಆದುದು. ಅರ್ಥಶಾಸ್ತ್ರವೂ ಆಗಿದೆ.
ಅಸ್ಯ ಪ್ರವರ್ತನಾಚ್ಚೈವ ಪ್ರಜಾವಂತೋ ಭವಿಷ್ಯಥ |
ಸ ಚ ರಾಜಾ ಶ್ರಿಯಾ ಯುಕ್ತೋ ಭವಿಷ್ಯತಿ ಮಹಾನ್ ವಸುಃ ॥47॥
ಇದನ್ನು ಪ್ರಚಾರ ಮಾಡುವುದರಿಂದ ನೀವು ಉತ್ತಮ ಪ್ರಜೆಗಳನ್ನು ಹೊಂದುತ್ತೀರಿ. ಉಪರಿಚರ ವಸುವು ಈ ಶಾಸ್ತ್ರವನ್ನು ಅನುಸರಿಸಿ ಕರ್ಮಾಸಕ್ತನಾಗುವುದರಿಂದ ರಾಜ್ಯ ಲಕ್ಷ್ಮಿಯಿಂದ ಸಮೃದ್ಧಿಯನ್ನು ಹೊಂದುತ್ತಾನೆ.
ಸಂಸ್ಥಿತೇ ತು ನೃಪೇ ತಸ್ಮಿನ್ ಶಾಸ್ತ್ರಮೇತತ್ ಸನಾತನಮ್ |
ಅಂತರ್ಧಾಸ್ಯತಿ ತತ್ ಸತ್ಯಮೇತದ್ವಃ ಕಥಿತಂ ಮಯಾ ॥48॥
ಉಪರಿಚರ ವಸುವು ರಚಿಸಿದ ಬಳಿಕ ಈ ಶಾಸ್ತ್ರವು ಮರೆಯಾಗುತ್ತದೆ. ಈ ಶಾಸ್ತ್ರವನ್ನು ರಚಿಸಿರುವ ನಿಮಗೆ ಶಾಸ್ತ್ರಸಂಬಂಧಪಟ್ಟ ವಿಷಯವನ್ನೆಲ್ಲ ಹೇಳಿರುತ್ತೇನೆ.
ಏತಾವದುಕ್ತ್ವಾ ವಚನಮದೃಶ್ಯಃ ಪುರುಷೋತ್ತಮಃ |
ವಿಸೃಜ್ಯ ತಾನೃಷೀನ್ ಸರ್ವಾನ್ ಕಾಮಪಿ ಪ್ರಸ್ಥಿತೋ ದಿಶಮ್ ॥49॥
ಪುರುಷೋತ್ತಮನಾದ ನಾರಾಯಣನು ಅದೃಶ್ಯನಾಗಿ ಋಷಿಗಳ ಬಳಿ ಇಷ್ಟು ಹೇಳಿ, ಋಷಿಗಳನ್ನು ಬಿಟ್ಟು ಅಜ್ಞಾತವಾದ ದಿಕ್ಕಿನ ಕಡೆ ಹೋದನು.
ತತಸ್ತೇ ಲೋಕಪಿತರಃ ಸರ್ವಲೋಕಾರ್ಥಚಿಂತಕಾಃ |
ಪ್ರಾವರ್ತಯಂತ ತಚ್ಛಾಸ್ತ್ರಂ ಧರ್ಮಯೋನಿಂ ಸನಾತನಮ್ ॥50॥
ಬಳಿಕ ಸಕಲ ಲೋಕಗಳ ಹಿತವನ್ನು ಚಿಂತಿಸುವ ಸ್ವಭಾವವುಳ್ಳ ಪಿತೃಗಳು ಧರ್ಮಕ್ಕೆ ಮೂಲಭೂತವಾದ ಆ ಸನಾತನವಾದ ಶಾಸ್ತ್ರವನ್ನು ಪ್ರಚಾರ ಮಾಡಿದರು.
ಉತ್ಪನ್ನೇಂಗಾರಸೇ ಚೈವ ಯುಗೇ ಪ್ರಥಮಕಲ್ಪಿತೇ |
ಸಾಂಗೋಪನಿಷದಂ ಶಾಸ್ತ್ರಂ ಸ್ಥಾಪಯಿತ್ವಾ ಬೃಹಸ್ಪತೌ ॥51॥
ಪ್ರಥಮ ಕಲ್ಪದ ಮೊದಲನೆಯ ಯುಗದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬರಾದ ಅಂಗಿರಸರಿಗೆ ಬೃಹಸ್ಪತಿಯು ಮಗನಾಗಿ ಹುಟ್ಟಿದನು. ಅವನಲ್ಲಿ ಷಡಂಗಗಳಿಂದ ಉಪನಿಷತ್ತಿನಿಂದ ತುಂಬಿರುವ ಪಂಚರಾತ್ರ ಶಾಸ್ತ್ರವನ್ನು ಋಷಿಗಳು ಸ್ಥಾಪಿಸಿದರು.
ಜಗ್ಮುರ್ಯಥೇಪ್ಸಿತಂ ದೇಶಂ ತಪಸೇ ಕೃತನಿಶ್ಚಯಾಃ |
ಧಾರಣಾತ್ ಸರ್ವಲೋಕಾನಾಂ ಸರ್ವಧರ್ಮಪ್ರವರ್ತಕಾಃ ॥52॥
ಬಳಿಕ, ಪ್ರವರ್ತಕರಾದ ಋಷಿಗಳು ಸಮಸ್ತ ಜಗತ್ತಿನ ಧಾರಣೆಗೆ ಈ ಶಾಸ್ತ್ರವೇ ಯೋಗ್ಯವೆಂದು ನಿರ್ಣಯಿಸಿ, ಬೃಹಸ್ಪತಿಯಲ್ಲಿ ಈ ಶಾಸ್ತ್ರವನ್ನು ಇರಿಸಿ ತಮಗೆ ಇಷ್ಟವಾದ ಸ್ಥಳಕ್ಕೆ ಹೊರಟು ಹೋದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಶ್ವೇತದ್ವೀಪವರ್ಣನಂ ನಾಮ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆಂಟೆಯ ಅಧ್ಯಾಯ
ಬೃಹಸ್ಪತಿಯು ಉಪರಿಚರ ವಸುವಿನಿಂದ ಯಜ್ಞವನ್ನು ಮಾಡಿಸಿದಾಗ ಭಗವಂತನೇ ಆ ಯಜ್ಞಕ್ಕೆ ಆಗಮಿಸಿ ಭಾಗವಹಿಸಿದುದು. ಬೃಹಸ್ಪತಿಯು ಕೋಪಗೊಂಡಾಗ ಏಕತನೇ ಮೊದಲಾದ ಋಷಿಗಳು ಸಮಾಧಾನಪಡಿಸಿದುದು.
ಭೀಷ್ಮಃ
ತತೋಽತೀತೇ ಮಹಾಕಲ್ಪೇ ಉತ್ಪನ್ನೇಽಂಗಿರಸಃ ಸುತೇ |
ಬಭೂವುರ್ನಿರ್ವೃತಾ ದೇವಾ ಜಾತೇ ದೇವಪುರೋಹಿತೇ ॥1॥
ಧರ್ಮರಾಜನೇ, ಮಹಾಕಲ್ಪವು ಕಳೆದ ಬಳಿಕ ಅಂಗಿರಸ ಕುಲದಲ್ಲಿ ಬೃಹಸ್ಪತಿಯು ಹುಟ್ಟಿದನು. ದೇವತೆಗಳೆಲ್ಲರೂ ತಮಗೆ ಪುರೋಹಿತನ ಲಾಭವಾಯಿತೆಂದು ಸಂತುಷ್ಟರಾದರು.
ಬೃಹದ್ ಬ್ರಹ್ಮ ಮಹಚ್ಚೇತಿ ಶಬ್ದಾಃ ಪರ್ಯಾಯವಾಚಕಾಃ |
ಏಭಿಃ ಸಮನ್ವಿತೋ ರಾಜನ್ ಗುಣೈರ್ವಿದ್ವಾನ್ ಬೃಹಸ್ಪತಿಃ ॥2॥
ಬೃಹದ್, ಬ್ರಹ್ಮ, ಮಹತ್ತು ಶಬ್ದಗಳು ಪರ್ಯಾಯ ಪದಗಳು. ಈ ಶಬ್ದದಿಂದಲೇ ಬೃಹಸ್ಪತಿಯು ವಿದ್ವಾಂಸನಾಗಿ ಕರೆಯಲ್ಪಟ್ಟಿದ್ದನು.

ಎಲ್ಲ ಗುಣಗಳನ್ನೂ ಹೊಂದಿದ್ದನು.
ತಸ್ಯ ಶಿಷ್ಯೋ ಬಭೂವಾಗ್ರ್ಯೋ ರಾಜೋಪರಿಚರೋ ವಸುಃ |
ಅಧೀತವಾಂಸ್ತದಾ ಶಾಸ್ತ್ರಂ ಸಮ್ಯಕ್ಚಿತ್ರಶಿಖಂಡಿಜಮ್ ॥3॥
ಅವನಿಗೆ ಉಪರಿಚರ ವಸುವು ಅತ್ಯಂತ ಪ್ರಿಯಶಿಷ್ಯನು. ಅತ್ಯಂತ ಪ್ರಿಯ ಶಿಷ್ಯರಲ್ಲೇ ಶ್ರೇಷ್ಠನೆನಿಸಿದ್ದನು. ಸಪ್ತರ್ಷಿಗಳಿಂದ ಪ್ರಣೀತವಾದ ಪಂಚರಾತ್ರಾಗಮವನ್ನು ಅಧ್ಯಯನ ಮಾಡಿದ್ದನು.
ಸ ರಾಜಾ ಭಾವಿತಃ ಪೂರ್ವಂ ದೈವೇನ ವಿಧಿನಾ ವಸುಃ |
ಪಾಲಯಾಮಾಸ ಪೃಥಿವೀಂ ದಿವಮಾಖಂಡಲೋ ಯಥಾ ॥4॥
ಅಂತಹ ರಾಜನು ಅನೇಕ ಯಜ್ಞಗಳನ್ನು ನಡೆಸಿ ಶುದ್ಧನಾಗಿ ದೇವಲೋಕವನ್ನು ಹೇಗೆ ಇಂದ್ರನು ರಕ್ಷಿಸುತ್ತಾನೋ ಹಾಗೆ ಭೂಮಿಯನ್ನು ರಕ್ಷಿಸುತ್ತಿದ್ದನು.
ತಸ್ಯ ಯಜ್ಞೋ ಮಹಾನಾಸೀದಶ್ವಮೇಧೋ ಮಹಾತ್ಮನಃ |
ಬೃಹಸ್ಪತಿರುಪಾಧ್ಯಾಯಸ್ತತ್ರ ಹೋತಾ ಬಭೂವ ಹ ॥5॥
ಒಮ್ಮೆ ಉಪರಿಚರ ವಸುವು ಅಶ್ವಮೇಧ ಯಜ್ಞವನ್ನಾರಂಭಿಸಿದನು. ಆ ಯಜ್ಞಕ್ಕೆ ಬೃಹಸ್ಪತಿಯೇ ಹೋತೃವಾಗಿದ್ದನು.
ಪ್ರಜಾಪತಿಸುತಾಶ್ಚಾತ್ರ ಸದಸ್ಯಾಸ್ತ್ವಭವಂಸ್ತ್ರಯಃ |
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹರ್ಷಯಃ ॥6॥
ಏಕತ, ದ್ವಿತ, ತ್ರಿತ ಎಂಬ ಮೂರು ಮಂದಿ ಮಹರ್ಷಿಗಳು ಆ ಯಜ್ಞದಲ್ಲಿ ಮುಖ್ಯ ಸದಸ್ಯರಾಗಿದ್ದರು.
ಧನುಷಾಕ್ಷೋಽಥ ರೈಭ್ಯಶ್ಚ ಅರ್ವಾವಸುಪರಾವಸೂ |
ಋಷಿರ್ಮೇಧಾತಿಥಿಶ್ಚೈವ ತಾಂಡ್ಯಶ್ಚೈವ ಮಹಾನೃಷಿಃ ॥7॥
ಋಷಿಃ ಶಕ್ತಿರ್ಮಹಾಭಾಗಸ್ತಥಾ ವೇದಶಿರಾಶ್ಚ ಯಃ |
ಕಪಿಲಶ್ಚ ಋಷಿಶ್ರೇಷ್ಠಃ ಶಾಲಿಹೋತ್ರಪಿತಾಮಹಃ ॥8॥
ಆದ್ಯಃ ಕಠಸ್ತೈತ್ತಿರಿಶ್ಚ ವೈಶಂಪಾಯನಪೂರ್ವಜಃ |
ಕಣ್ವೋಽಥ ದೇವಹೋತ್ರಶ್ಚ ಏತೇ ಷೋಡಶ ಕೀರ್ತಿತಾಃ |
ಸಂಭೃತಾಃ ಸರ್ವಸಂಭಾರಾಸ್ತಸ್ಮಿನ್ ರಾಜನ್ ಮಹಾಕ್ರತೌ ॥9॥
ಇವರ ಜೊತೆಗೆ ಧನುಷ, ರೈಭ್ಯ, ಅರ್ವಾವಸು, ಪರಾವಸು, ಮೇಧಾತಿಥಿ, ತಾಂಡ್ಯನೆಂಬ ಮಹರ್ಷಿ, ಪೂಜ್ಯನಾದ ಶಕ್ತಿ, ವೇದಶಿರಸ್ಸು, ಶಾಲಿಹೋತ್ರನ ತಂದೆಯಾದ, ಋಷಿಶ್ರೇಷ್ಠನಾದ ಕಪಿಲನು, ಮೊದಲನೆಯ ಕಠನು, ವೈಶಂಪಾಯನನ ಅಣ್ಣನಾದ ತೈತ್ತಿರಿಯು, ಕಣ್ವನು, ದೇವಹೋತ್ರನೆಂಬ ಋಷಿಯು ಹೀಗೆ ಹದಿನಾರು ಮಂದಿ ಸದಸ್ಯರು ಆ ಯಜ್ಞದಲ್ಲಿದ್ದರು. ಯಜ್ಞ ಸಂಭಾರಗಳೆಲ್ಲ ಸಿದ್ಧವಾದವು.
ನ ತತ್ರ ಪಶುಘಾತೋಽಭೂತ್ಸ ರಾಜೈವಂ ಸ್ಥಿತೋಽಭವತ್ |
ಅಹಿಂಸ್ರಃ ಶುಚಿರಕ್ಷುದ್ರೋ ನಿರಾಶೀಃ ಕರ್ಮಸಂಸ್ತುತಃ |
ಆರಣ್ಯಕಪದೋದ್ ಗೀತಾ ಭಾಗಾಸ್ತತ್ರೋಪಕಲ್ಪಿತಾಃ ॥10॥
ಅಲ್ಲಿ ಪಶುವಧೆಯನ್ನು ಮಾಡಬಾರದೆಂದು ರಾಜನು ಆದೇಶಿಸಿದನು. ಕಾರಣ ರಾಜನು ಪರಮ ದಯಾಳುವೂ, ಶುದ್ಧನೂ, ಉದಾರಬುದ್ಧಿಯುಳ್ಳವನೂ ಆಗಿದ್ದನು. ಯಾವ ಫಲದ ಅಭಿಪ್ರಾಯವೂ ಅವನಿಗಿರಲಿಲ್ಲ. ಅವನು ಸಂಗ್ರಹಿಸಿದ ಪದಾರ್ಥಗಳೆಲ್ಲ ಕಾಡಿನಿಂದಲೇ ಸಂಗ್ರಹಿಸಲ್ಪಟ್ಟಿದ್ದವು. ಶುದ್ಧ ವಸ್ತುಗಳು ಯಜ್ಞಕ್ಕಾಗಿ ಕಲ್ಪಿಸಲ್ಪಟ್ಟಿದ್ದವು.
ಪ್ರೀತಸ್ತತೋಽಸ್ಯ ಭಗವಾನ್ ದೇವದೇವಃ ಪುರಾತನಃ |
ಸಾಕ್ಷಾತ್ತಂ ದರ್ಶಯಾಮಾಸ ಸೋಽದೃಶ್ಯೋಽನ್ಯೇನ ಕೇನಚಿತ್ ॥11॥
ಸ್ವಯಂ ಭಾಗಮುಪಾಘ್ರಾಯ ಪುರೋಡಾಶಂ ಗೃಹೀತವಾನ್ |
ಅದೃಶ್ಯೇನ ಹೃತೋ ಭಾಗೋ ದೇವೇನ ಹರಿಮೇಧಸಾ ॥12॥
ಆ ಯಜ್ಞಕ್ಕೆ ದೇವದೇವನಾದ ಭಗವಾನ್ ಶ್ರೀಹರಿಯು ಸಂತುಷ್ಟನಾಗಿ, ಯಾರಿಗೂ ತಿಳಿಯದಂತೆ ರಾಜನಿಗೆ ಮಾತ್ರ ಪ್ರತ್ಯಕ್ಷನಾಗಿ, ಆಗಮಿಸಿ ತನ್ನ ಹವಿರ್ಭಾವವನ್ನು ಸ್ವೀಕರಿಸುತ್ತಾ ಅಲ್ಲಿರುವ ಪುರೋಡಾಶವನ್ನು ಸ್ವೀಕರಿಸಿದನು. ಹರಿಮೇಧಸ್ಸೆಂದು ಕರೆಯಲ್ಪಡುವ ಆ ಹರಿಯು ಬೃಹಸ್ಪತಿಗೆ ಕಾಣಿಸದೆ ತನ್ನ ಭಾಗವನ್ನು ಸ್ವೀಕರಿಸಿದನು.
ಬೃಹಸ್ಪತಿಸ್ತತಃ ಕ್ರುದ್ಧಃ ಸ್ರುವಮುದ್ಯಮ್ಯ ವೇಗಿತಃ |
ಆಕಾಶಂ ಘ್ನಂಸ್ರುವಃ ಪಾತ್ಯೈ ರೋಷಾದಶ್ರೂಣ್ಯವರ್ತಯತ್ ॥13॥
ತನಗೆ ಕಾಣಿಸದಂತೆ ಹವಿರ್ಭಾಗವನ್ನು ಸ್ವೀಕರಿಸಿದ ಕಾರಣದಿಂದ ಬೃಹಸ್ಪತಿಯು ಸಿಟ್ಟಾದನು. ಆಗ ಅವನು ಕೋಪದಿಂದ ಕೈಯಲ್ಲಿರುವ ಯಜ್ಞದ ಸ್ರುವವನ್ನು ಎಸೆದನು. ದುಃಖದಿಂದ ಕಣ್ಣಿನಲ್ಲಿ ನೀರನ್ನು ಸುರಿಸಿದನು.
ಉವಾಚ ಚೋಪರಿಚರಂ ಮಯಾ ಭಾಗೋಽಯಮುದ್ಯತಃ |
ಗ್ರಾಹ್ಯಃ ಸ್ವಯಂ ಹಿ ದೇವೇನ ಮತ್ಪ್ರತ್ಯಕ್ಷಂ ನ ಸಂಶಯಃ ॥14॥
ಯಜ್ಞದೀಕ್ಷಿತನಾದ ರಾಜನನ್ನು ಕಂಡು ರಾಜನೇ, ಇದೋ ನಾನು ಹವಿರ್ಭಾಗವನ್ನು ನಾರಾಯಣನಿಗಾಗಿ ಕೊಡುತ್ತೇನೆ. ಅವನು ನನ್ನ ಕಣ್ಣಿಗೆ ಎದುರಾಗಿ ಬಂದು ಅದನ್ನು ಸ್ವೀಕರಿಸಬೇಕು. ಇದರಲ್ಲಿ ಯಾವ ಸಂಶಯವೂ ಇಲ್ಲ.
ಉದ್ಯತಾ ಯಜ್ಞಭಾಗಾ ಹಿ ಸಾಕ್ಷಾತ್ ಪ್ರಾಪ್ತಾಃ ಸುರೈರಿಹ |
ಕಿಮರ್ಥಮಿಹ ನ ಪ್ರಾಪ್ತೋ ದರ್ಶನಂ ಸ ಹರಿರ್ವಿಭುಃ ॥15॥
ಬೇರೆ ಬೇರೆ ದೇವತೆಗಳು ತಮ್ಮ ತಮ್ಮ ರೂಪಗಳ ಜೊತೆಗೆ ಬರುತ್ತಿರುವಾಗ ನಾರಾಯಣನು ಅದೃಶ್ಯನಾಗಲು ಕಾರಣವೇನು?

ತತಃ ಸ ತಂ ಸಮುದ್ಭೂತಂ ಭೂಮಿಪಾಲೋ ಮಹಾನ್ ವಸುಃ |
ಪ್ರಸಾದಯಾಮಾಸ ಮುನಿಂ ಸದಸ್ಯಾಸ್ತೇ ಚ ಸರ್ವಶಃ ॥16॥
ಹೀಗೆ ಬೃಹಸ್ಪತಿಯು ಸಿಟ್ಟಿನಿಂದ ಹೇಳುವಾಗ ಅವನನ್ನು ರಾಜನನ್ನು, ಇತರ ಸದಸ್ಯರು ಸಮಾಧಾನ ಪಡಿಸಿದರು.
ಊಚುಶ್ಚೈನಮಸಂಭ್ರಾಂತಾ ನ ರೋಷಂ ಕರ್ತುಮರ್ಹಸಿ |
ನೈಷ ಧರ್ಮಃ ಕೃತಯುಗೇ ಯಸ್ತ್ವಂ ರೋಷಮಚೀಕೃಥಾಃ ॥17॥
ಆಚಾರ್ಯನೇ, ನೀನು ಎಷ್ಟು ಬಾರಿ ಪುರೋಡಾಶಗಳ ಹೋಮವನ್ನು ಮಾಡಿದೆಯೋ ಅದೆಲ್ಲವನ್ನೂ ಭಗವಂತನು ಪ್ರತ್ಯಕ್ಷವಾಗಿಯೇ ಸ್ವೀಕರಿಸಿದ್ದಾನೆ. ಆದ್ದರಿಂದ ನೀನು ಈಗ ರೋಷವನ್ನು ತಾಳಬೇಡ. ಕೃತಯುಗದ ಧರ್ಮದಲ್ಲಿ ರೋಷವನ್ನು ತಾಳುವುದು ಯುಕ್ತವಲ್ಲ.

ಅರೋಷಣೋ ಹ್ಯಸೌ ದೇವೋ ಯಸ್ಯ ಭಾಗೋಽಯಮುದ್ಯತಃ |
ನ ಸ ಶಕ್ಯಸ್ತ್ವಯಾ ದ್ರಷ್ಟುಮಸ್ಮಾಭಿರ್ವಾ ಬೃಹಸ್ಪತೇ |
ಯಸ್ಯ ಪ್ರಸಾದಂ ಕುರುತೇ ಸ ವೈ ತಂ ದ್ರಷ್ಟುಮರ್ಹತಿ ॥18॥
ಭಗವಂತನು ರೋಷಗೊಳ್ಳದೆ ತನ್ನ ಭಾಗವನ್ನು ಸ್ವೀಕರಿಸಿದ್ದಾನೆ. ನಾನಾಗಲಿ, ನೀನಾಗಲಿ ಅವನನ್ನು ನೋಡಲು ಸಾಧ್ಯವಿಲ್ಲ. ಅವನು ಯಾರ ವಿಷಯದಲ್ಲಿ ಪ್ರಸನ್ನನಾಗುತ್ತಾನೋ ಅವನೇ ಅವನನ್ನು ಕಾಣಬಹುದು.
ಏಕತದ್ವಿತತ್ರಿತಾಃ
ವಯಂ ಹಿ ಬ್ರಹ್ಮಣಃ ಪುತ್ರಾ ಮಾನಸಾಃ ಪರಿಕೀರ್ತಿತಾಃ |
ಗತಾ ನಿಃಶ್ರೇಯಸಾರ್ಥಂ ಹಿ ಕದಾಚಿದ್ದಿಶಮುತ್ತರಾಮ್ ॥19॥
ಏಕತ ದ್ವಿತ ತ್ರಿತ ನಾವೆಲ್ಲರೂ ಚತುರ್ಮುಖ ಬ್ರಹ್ಮನ ಮಾನಸ ಪುತ್ರರೆಂದು ಕರೆಸಿಕೊಂಡಿದ್ದೇವೆ. ಒಂದು ಬಾರಿ ಮೋಕ್ಷಕ್ಕಾಗಿ ಚಿಂತಿಸುತ್ತಾ ಉತ್ತರ ದಿಕ್ಕಿನ ಕಡೆ ಪ್ರಯಾಣ ಮಾಡಿದೆವು.
ತಪಸ್ತಪ್ತ್ವಾ ವರ್ಷಸಹಸ್ರಾಣಿ ಚತ್ವಾರಿ ತಪ ಉತ್ತಮಮ್ |
ಏಕಪಾದಸ್ಥಿತಾಃ ಸಮ್ಯಕ್ಕಾಷ್ಠಭೂತಾಃ ಸಮಾಹಿತಾಃ ॥20॥
ಅಲ್ಲಿ ನಾವು ಒಂದೇ ಕಾಲಿನಲ್ಲಿ ನಿಂತು ಸಮಾಧಿಯನ್ನು ಅವಲಂಬಿಸಿ ನಾಲ್ಕು ಸಾವಿರ ವರ್ಷಗಳ ತನಕ ತಪಸ್ಸನ್ನು ಆಚರಿಸುತ್ತಾ ಕಟ್ಟಿಗೆಯಂತೆ ನಿಶ್ಚೇಷ್ಟರಾಗಿದ್ದೆವು.
ಮೇರೋರುತ್ತರಭಾಗೇ ತು ಕ್ಷೀರೋದಸ್ಯಾನುಕೂಲತಃ |
ಸ ದೇಶೋ ಯತ್ರ ನಸ್ತಪ್ತಂ ತಪಃ ಪರಮದಾರುಣಮ್ |
ಕಥಂ ಪಶ್ಯೇಮಹಿ ವಯಂ ದೇವಂ ನಾರಾಯಣಂ ತ್ವಿತಿ ॥21॥
ನಾವು ತಪಸ್ಸನ್ನು ಮಾಡುತ್ತಿದ್ದ ಸ್ಥಳವು ಮಹಾಮೇರುವಿನ ಉತ್ತರದಲ್ಲಿದೆ. ಕ್ಷೀರ ಸಮುದ್ರದ ಹತ್ತಿರದಲ್ಲಿದೆ. ಯಾವ ಸ್ಥಳದಲ್ಲಿ ಅತ್ಯಂತ ಭಯಂಕರವಾದ ತಪಸ್ಸನ್ನು ನಾವು ಆಚರಿಸಿದೆವೋ ಆ ತಪಸ್ಸಿನ ಉದ್ದೇಶವು ನಾವು ನಾರಾಯಣದೇವನನ್ನು ಹೇಗೆ ನೋಡುವುದು ಎಂಬುದೇ ಆಗಿತ್ತು.
ತತೋ ವ್ರತಸ್ಯಾವಭೃಥೇ ವಾಗುವಾಚಾಶರೀರಿಣೀ |
ಸುತಪ್ತಂ ವಸ್ತಪೋ ವಿಪ್ರಾಃ ಪ್ರಸನ್ನೇನಾಂತರಾತ್ಮನಾ ॥22॥
ಆ ತಪಸ್ಸು ಮುಗಿಸಿದ ಬಳಿಕ ಅವಭೃಥ ಕಾಲದಲ್ಲಿ ಗಂಭೀರವಾದ ವಾಣಿಯು ನಮ್ಮ ಕಿವಿಗೆ ಕೇಳಿಸಿತು. ಪ್ರಸನ್ನನಾದ ಭಗವಂತನೇ ಆಡಿದ ಮಾತಾಗಿತ್ತು.
ಯೂಯಂ ಜಿಜ್ಞಾಸವೋ ಭಕ್ತಾಃ ಕಥಂ ದ್ರಕ್ಷ್ಯಥ ತಂ ಪ್ರಭುಮ್ |
ಕ್ಷೀರೋದಧೇರುತ್ತರತಃ ಶ್ವೇತದ್ವೀಪೋ ಮಹಾಪ್ರಭಃ ॥23॥
ಬ್ರಾಹ್ಮಣರೇ, ನೀವು ಉತ್ತಮವಾದ ತಪಸ್ಸನ್ನೇ ಆಚರಿಸಿದ್ದೀರಿ. ಆದರೆ ನೀವು ನೋಡಬೇಕೆಂದು ಬಯಸುವ ಭಗವಂತನನ್ನು ನೀವು ಹೇಗೆ ತಾನೆ ನೋಡಲು ಸಾಧ್ಯ? ಕ್ಷೀರ ಸಮುದ್ರದ ಉತ್ತರಕ್ಕೆ ಕಾಂತಿಯಿಂದ ಬೆಳಗುವ ಶ್ವೇತದ್ವೀಪವೆಂಬ ದ್ವೀಪವಿದೆ.
ತತ್ರ ನಾರಾಯಣಪರಾ ಮಾನವಾಶ್ಚಂದ್ರವರ್ಚಸಃ |
ಏಕಾಂತಭಾವೋಪಗತಾಸ್ತೇ ಭಕ್ತಾಃ ಪುರುಷೋತ್ತಮಮ್ ॥24॥
ಅಲ್ಲಿ ಚಂದ್ರನಂತೆ ಕಾಂತಿಯುಳ್ಳ, ನಾರಾಯಣನಲ್ಲಿಯೇ ಭಕ್ತನಾಗಿರುವ ಪುರುಷೋತ್ತಮನನ್ನು ಏಕಾಂತದಿಂದ ಭಜಿಸುವ ಅನೇಕ ಭಕ್ತರಿದ್ದಾರೆ.
ತೇ ಸಹಸ್ರಾರ್ಚಿಷಂ ದೇವಂ ಪ್ರವಿಶಂತಿ ಸನಾತನಮ್ |
ಅತೀಂದ್ರಿಯಾ ನಿರಾಹಾರಾ ಅನಿಷ್ಪಂದಾಃ ಸುಗಂಧಿನಃ ॥25॥
ಅಂತಹ ಉತ್ತಮ ಭಕ್ತರು ಸಹಸ್ರ ತೇಜಸ್ಸುಳ್ಳ ಸನಾತನನಾದ ಪುರುಷೋತ್ತಮನನ್ನು ಕಾಣಬಲ್ಲರು. ಅವರು ಇಂದ್ರಿಯಗಳನ್ನು ಜಯಿಸಿದವರು, ಆಹಾರವನ್ನು ತ್ಯಜಿಸಿದವರು, ದೇಹದ ಬಾಹ್ಯಚೇಷ್ಟೆಗಳನ್ನು ಸ್ಥಗಿತಗೊಳಿಸಿದವರು. ದಿವ್ಯವಾದ ಗಂಧವನ್ನು ಹೊಂದಿದವರು.
ಏಕಾಂತಿನಸ್ತೇ ಪುರುಷಾಃ ಶ್ವೇತದ್ವೀಪನಿವಾಸಿನಃ |
ಗಚ್ಛಧ್ವಂ ತತ್ರ ಮುನಯಸ್ತತ್ರಾತ್ಮಾ ಮೇ ಪ್ರಕಾಶಿತಃ ॥26॥
ಶ್ವೇತದ್ವೀಪ ನಿವಾಸಿಗಳಾದ ಅವರು ಭಗವಂತನನ್ನೇ ವಿಶೇಷವಾಗಿ ಚಿಂತಿಸುವ ಪುರುಷರು. ನೀವು ಅಂತಹ ಪುಣ್ಯಭೂಮಿಯನ್ನು ಕುರಿತು ತೆರಳಿರಿ. ಅಲ್ಲಿಯೇ ನಿಮಗೆ ಪರಮಾತ್ಮನ ಸ್ವರೂಪವು ಪ್ರತ್ಯಕ್ಷವಾಗುತ್ತದೆ.
ಅಥ ಶ್ರುತ್ವಾ ವಯಂ ಸರ್ವೇ ವಾಚಂ ತಾಮಶರೀರಿಣೀಮ್ |

ಯಥಾಖ್ಯಾತೇನ ಮಾರ್ಗೇಣ ತಂ ದೇಶಂ ಪ್ರತಿಪೇದಿರೇ ॥27॥
ಈ ಅಶರೀರವಾಣಿಯ ಮಾತನ್ನು ಕೇಳಿದ ಕೂಡಲೇ ನಾವೆಲ್ಲರೂ ಆ ಭಗವಂತನ ಸ್ವರೂಪವನ್ನು ನೋಡಬೇಕೆಂಬ ಆತುರದಿಂದ ಭಗವಂತನು ನಿರ್ದೇಶಿಸಿದ ಮಾರ್ಗದಿಂದಲೇ ಆ ದೇಶವನ್ನು ಹೊಂದಿದೆವು.
ಪ್ರಾಪ್ಯ ಶ್ವೇತಂ ಮಹಾದ್ವೀಪಂ ತಚ್ಚಿತ್ತಾಸ್ತದ್ ದಿದೃಕ್ಷವಃ |
ತತೋ ನೋ ದೃಷ್ಟಿವಿಷಯಸ್ತದಾ ಪ್ರತಿಹತೋಽಭವತ್ ॥28॥
ಮಹಾದ್ವೀಪವೆನಿಸಿದ ಆ ಶ್ವೇತದ್ವೀಪದಲ್ಲಿಯೇ ನೋಡುವ ಬಯಕೆಯನ್ನು ಹೊಂದಿರುವ ನಾವು ಆ ದ್ವೀಪವನ್ನು ಸಮೀಪಿಸಿದೆವು. ಆದರೆ ಅತ್ಯಂತ ಪ್ರಭೆಯ ದ್ವೀಪವಾದುದರಿಂದ ನಮ್ಮ ದೃಷ್ಟಿಗೆ ದ್ವೀಪವು ಕಾಣಿಸಲೇ ಇಲ್ಲ.
ನ ಚ ಪಶ್ಯಾಮ ಪುರುಷಂ ತತ್ತೇಜೋಹೃತದರ್ಶನಾಃ |
ತತೋ ನಃ ಪ್ರಾದುರಭವದ್ ವಿಜ್ಞಾನಂ ದೇವಯೋಗಜಮ್ ॥29॥
ಪರಮ ಪುರುಷನಾದ ಭಗವಂತನಿಂದ ಅಪಹರಿಸಲ್ಪಟ್ಟ ದೃಷ್ಟಿಯುಳ್ಳ ನಾವು ಅವನನ್ನು ನೋಡಲಾಗಲಿಲ್ಲ. ಆ ಸಮಯದಲ್ಲಿ ನಮಗೆ ದೇವಯೋಗದಿಂದ ಹುಟ್ಟಿದ ವಿಜ್ಞಾನವು ಹೃದಯದಲ್ಲಿ ಪ್ರಕಟವಾಯಿತು.
ನ ಕಿಲಾತಪ್ತತಪಸಾ ಶಕ್ಯತೇ ದ್ರಷ್ಟುಮಂಜಸಾ |
ತತಃ ಪುನರ್ವರ್ಷಶತಂ ತಪ್ತ್ವಾ ತಾತ್ಕಾಲಿಕಂ ಮಹತ್ ॥30॥
ಈ ಭಗವಂತನ ಸ್ವರೂಪವನ್ನು ತಪಸ್ಸಿಲ್ಲದೆ ನಾವು ನೋಡಲು ಸಾಧ್ಯವಿಲ್ಲ ಎಂಬ ಜ್ಞಾನವು ನಮಗೆ ಬಂದಿತು. ನಾವು ದೇಶ-ಕಾಲಕ್ಕೆ ತಕ್ಕಂತೆ ಮೂರು ಸಂವತ್ಸರಗಳ ಕಾಲ ಮಹಾತಪಸ್ಸನ್ನು ಆರಂಭಿಸಿದೆವು.
ವ್ರತಾವಸಾನೇ ಸುಶುಭಾನ್ ನರಾನ್ ದದೃಶಿರೇ ವಯಮ್ |
ಶ್ವೇತಾಂಶ್ಚಂದ್ರಪ್ರತೀಕಾಶಾನ್ ಸರ್ವಲಕ್ಷಣಲಕ್ಷಿತಾನ್ ॥31॥
ವ್ರತವು ಮುಗಿದ ಬಳಿಕ ಶುಭಲಕ್ಷಣವುಳ್ಳ ಕೆಲವು ವ್ಯಕ್ತಿಗಳು ಅಲ್ಲಿ ನಮಗೆ ಕಾಣಿಸಿಕೊಂಡರು. ಅವರೆಲ್ಲರೂ ಚಂದ್ರನಂತೆ ಬಿಳಿಯಾದ ಛಾಯೆಯುಳ್ಳವರು, ಯಾವಾಗಲೂ ಕೈಜೋಡಿಸಿಕೊಂಡು ಜಪ ಮಾಡುತ್ತಲೇ ಇದ್ದರು.
ನಿತ್ಯಾಂಜಲಿಕೃತಾನ್ ಬ್ರಹ್ಮ ಜಪತಃ ಪ್ರಾಗುದಙ್ಮುಖಾನ್ |
ಮಾನಸೋ ನಾಮ ಸ ಜಪೋ ಜಪ್ಯತೇ ತೈರ್ಮಹಾತ್ಮಭಿಃ |
ತೇನೈಕಾಗ್ರಮನಸ್ತ್ವೇನ ಪ್ರೀತೋ ಭವತಿ ವೈ ಹರಿಃ ॥32॥
ಅವರು ಯಾವಾಗಲೂ ಕೈಜೋಡಿಸಿಕೊಂಡು ಜಪವನ್ನು ಮಾಡುತ್ತಲೇ ಇರುತ್ತಾರೆ. ಕೆಲವರು ಉತ್ತರದಿಕ್ಕಿಗೂ, ಕೆಲವರು ಪೂರ್ವದಿಕ್ಕಿಗೂ ಅಭಿಮುಖವಾಗಿ ಮಾನಸ ಜಪವನ್ನು ಮಹಾತ್ಮರು ಮಾಡುತ್ತಿರುತ್ತಾರೆ. ಅವರ ಏಕಾಗ್ರ ಮನಸ್ಸಿನ ಜಪದಿಂದ ಶ್ರೀಹರಿಯು ಪ್ರೀತನಾಗುತ್ತಾನೆ.
ಯಾ ಭವೇನ್ಮುನಿಶಾರ್ದೂಲ ಭಾಃ ಸೂರ್ಯಸ್ಯ ಯುಗಕ್ಷಯೇ |
ಏಕೈಕಸ್ಯ ಪ್ರಭಾ ತಾದೃಕ್ಸಾಭವನ್ಮಾನವಸ್ಯ ಹ ॥33॥
ಅಲ್ಲಿ ಜಪಿಸುವ ಪ್ರತಿಯೊಬ್ಬರೂ ಪ್ರಳಯಸೂರ್ಯನಂತೆ ಜ್ವಲಿಸುವ ಸೂರ್ಯನಂತೆ ಕೂಡಿರುತ್ತಾರೆ.
ತೇಜೋನಿವಾಸಃ ಸ ದ್ವೀಪ ಇತಿ ವೈ ಮೇನಿರೇ ವಯಮ್ |
ನ ತತ್ರಾಭ್ಯಧಿಕಃ ಕಶ್ಚಿತ್ ಸರ್ವೇ ತೇ ಸಮತೇಜಸಃ ॥34॥
ಆ ದ್ವೀಪವು ತೇಜಸ್ಸಿಗೆಲ್ಲ ನಿವಾಸ ಎನಿಸಿದೆ. ಅಲ್ಲಿ ಒಬ್ಬನು ಹೆಚ್ಚು, ಮತ್ತೊಬ್ಬನು ಕಡಿಮೆ ಎಂಬ ತಾರತಮ್ಯವು ಇರುವುದಿಲ್ಲ. ಎಲ್ಲರೂ ಸಮಾನ ತೇಜಸ್ವಿಗಳು.
ಅಥ ಸೂರ್ಯಸಹಸ್ರಸ್ಯ ಪ್ರಾಚ್ಯಾಂ ಯುಗಪದುತ್ಥಿತಾಮ್ |
ಸಹಸಾ ದೃಷ್ಟವಂತಃ ಸ್ಮ ಪುನರೇವ ಬೃಹಸ್ಪತೇ ॥35॥
ಬೃಹಸ್ಪತಿಯೇ, ಬಳಿಕ ಅಲ್ಲಿ ನಮಗೆ ಕೋಟಿ ಸೂರ್ಯರು ಒಂದೇ ಕಾಲದಲ್ಲಿ ಉದಿಸಿದಷ್ಟು ಅದ್ಭುತವಾದ ಕಾಂತಿಯು ಕಂಡಿತು.
ಸಹಿತಾಶ್ಚಾಭ್ಯಧಾವಂತ ತತಸ್ತೇ ಮಾನವಾ ದ್ರುತಮ್ |
ಕೃತಾಂಜಲಿಪುಟಾ ಹೃಷ್ಟಾ ನಮ ಇತ್ಯೇವ ವಾದಿನಃ ॥36॥
ಅದನ್ನು ನೋಡಿದ ಕೂಡಲೇ ಅಲ್ಲಿದ್ದ ನಾವೆಲ್ಲ ಪರಮಸಂತೋಷದಿಂದ ಎದ್ದು ನಿಂತು ಕೈಮುಗಿದು ಕೊಂಡು ನಮಃ ಎಂದು ಇಷ್ಟು ಮಾತ್ರ ಹೇಳುತ್ತಿದ್ದೆವು.
ತತೋಽಭಿವದತಾಂ ತೇಷಾಮಶ್ರೌಷ್ಮ ವಿಪುಲಂ ಧ್ವನಿಮ್ |
ಬಲಿಃ ಕಿಲೋಪಹ್ರಿಯತೇ ತಸ್ಯ ದೇವಸ್ಯ ತೈರ್ನರೈಃ ॥37॥
ನಂತರ ಅವರು ಮಾತನಾಡುತ್ತಿದ್ದ ಶಬ್ದವು ನಮ್ಮ ಕಿವಿಗೆ ಕೇಳಿಸಿತು. ಅವರು ಪೂಜೆಗಳನ್ನು ಸಮರ್ಪಿಸುವಂತೆ ತೋರಿತು. ಸರ್ವೋತ್ತಮನಾದ ಭಗವಂತನಿಗೆ ಪೂಜೆ ಮಾಡುವ ದೃಶ್ಯಗಳನ್ನು ನೋಡಿದೆವು.
ವಯಂ ತು ತೇಜಸಾ ತಸ್ಯ ಸಹಸಾ ಹೃತಚೇತಸಃ |
ನ ಕಿಂಚಿದಪಿ ಪಶ್ಯಾಮೋ ಹೃತದೃಷ್ಟಿಬಲೇಂದ್ರಿಯಾಃ ॥38॥
ಆ ಬೆಳಕಿನಿಂದ ಕೂಡಲೇ ಅಪಹರಿಸಲ್ಪಟ್ಟ ಮನಸ್ಸುಳ್ಳ ನಾವು ನಮ್ಮ ಇಂದ್ರಿಯಗಳ ಬಲವೆಲ್ಲವೂ ಅದರಿಂದ ಅಪಹೃತವಾದುದರಿಂದ ಏನನ್ನೂ ನಮ್ಮಿಂದ ನೋಡಲಾಗಲಿಲ್ಲ.
ಏಕಸ್ತು ಶಬ್ದೋಽವಿರತಃ ಶ್ರುತೋಽಸ್ಮಾಭಿರುದೀರಿತಃ |
ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ॥39॥
ನಮಸ್ತೇಽಸ್ತು ಹೃಷೀಕೇಶ ಮಹಾಪುರುಷಪೂರ್ವಜ |

ಇತಿ ಶಬ್ದಃ ಶ್ರುತೋಽಸ್ಮಾಭಿಃ ಶಿಕ್ಷಾಕ್ಷರಸಮೀರಿತಃ ॥40॥
ಪುನಃ ಪುನಃ ನಿರಂತರ ನಾವು ಒಂದು ಶಬ್ದವನ್ನು ಕೇಳಿಸಿಕೊಂಡವು. `ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ. ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ' ಎಂಬ ಶ್ಲೋಕದ ಉಚ್ಚಾರಣೆಯು ಸ್ಪಷ್ಟವಾದ ಅಕ್ಷರವುಳ್ಳದ್ದಾಗಿ ಆಕಾಶವನ್ನೆಲ್ಲ ತುಂಬುವಂತೆ ನಮಗೆ ಕೇಳಿಸಿತು.
ಏತಸ್ಮಿನ್ನಂತರೇ ವಾಯುಃ ಸರ್ವಗಂಧವಹಃ ಶುಚಿಃ |
ದಿವ್ಯಾನ್ಯುವಾಹ ಪುಷ್ಪಾಣಿ ಕರ್ಮಣ್ಯಾಶ್ಚೌಷಧೀಸ್ತಥಾ ॥41॥
ಇಷ್ಟರಲ್ಲಿ ದಿವ್ಯಗಂಧವನ್ನು ಬೀರುವ ಗಾಳಿಯು ಬೀಸಲಾರಂಭಿಸಿತು. ಆ ಗಾಳಿಯು ದಿವ್ಯಪುಷ್ಪಗಳನ್ನು, ಕರ್ಮಗಳಿಗೆ ಉಪಯುಕ್ತವಾದ ಒಷಧಿಗಳನ್ನು ತನ್ನಲ್ಲಿ ತುಂಬಿಕೊಂಡು ಬರುತ್ತಿತ್ತು.
ತೈರಿಷ್ಟಃ ಪಂಚಕಾಲಜ್ಞೈರ್ಹರಿರೇಕಾಂತಿಭಿರ್ನರೈಃ |
ನೂನಂ ತತ್ರಾಗತೋ ದೇವೋ ಯಥಾ ತೈರ್ವಾಗುದೀರಿತಾ |
ವಯಂ ತ್ವೇನಂ ನ ಪಶ್ಯಾಮೋ ಮೋಹಿತಾಸ್ತಸ್ಯ ಮಾಯಯಾ ॥42॥
ಅಲ್ಲಿ ಪಂಚರಾತ್ರ ವಿಧಿಗಳನ್ನು ತಿಳಿದ ಭಕ್ತರು ತ್ರಿಕರಣಗಳಿಂದ ಶ್ರೀಹರಿಯನ್ನು ಭಜಿಸತೊಡಗಿದರು. ಆ ಶಬ್ದವು ಬಂದ ಸ್ಥಳದಲ್ಲಿ ಶ್ರೀಹರಿಯೇ ಇರಬೇಕೆಂದು ನಮಗೆ ಅನಿಸಿತು. ಆದರೆ ಅವನ ಮಾಯೆಯಿಂದ ಮೋಹಿತರಾದ ನಮಗೆ ಅದನ್ನು ನೋಡಲು ಸಾಧ್ಯವಾಗಲಿಲ್ಲ.
ಮಾರುತೇ ಸನ್ನಿವೃತ್ತೇ ಚ ಬಲೌ ಚ ಪ್ರತಿಪಾದಿತೇ |
ಚಿಂತಾವ್ಯಾಕುಲಿತಾತ್ಮಾನೋ ಜಾತಾಃ ಸ್ಮೋಽಂಗಿರಸಾಂ ವರ ॥43॥
ಆ ಗಾಳಿಯು ನಿಂತು ಪೂಜಾಕಾರ್ಯವು ಮುಗಿದ ಬಳಿಕ ಬೃಹಸ್ಪತಿಯೇ, ನಮ್ಮ ಮನಸ್ಸು ಚಿಂತಾಗ್ರಸ್ಥವಾಯಿತು.
ಮಾನವಾನಾಂ ಸಹಸ್ರೇಷು ತೇಷು ವೈ ಶುದ್ಧಯೋನಿಷು |
ಅಸ್ಮಾನ್ನ ಕಶ್ಚಿನ್ಮನಸಾ ಚಕ್ಷುಷಾ ವಾಪ್ಯಪೂಜಯತ್ ॥44॥
ಸಾವಿರಾರು ಮಂದಿ ಅಲ್ಲಿ ನೆರೆದಿದ್ದರೂ ಶುದ್ಧಾತ್ಮರಾದ ಅವರಲ್ಲಿ ಒಬ್ಬರೂ ನಮ್ಮನ್ನು ಕಣ್ಣಿನಿಂದಲೂ ಸ್ವಾಗತಿಸಲಿಲ್ಲ. ಮನಸ್ಸಿನಿಂದಲೂ ನೆನೆಯಲಿಲ್ಲ.
ತೇಽಪಿ ಸ್ವಸ್ಥಾ ಮುನಿಗಣಾ ಏಕಭಾವಮನುವ್ರತಾಃ |
ನಾಸ್ಮಾಸು ದಧಿರೇ ಭಾವಂ ಬ್ರಹ್ಮಭಾವಮನುಷ್ಠಿತಾಃ ॥45॥
ಆ ಎಲ್ಲ ಮುನಿಗಳು ಏಕಾಗ್ರಚಿತ್ತರಾಗಿ ದೃಢವಾದ ವ್ರತವನ್ನು ಅವಲಂಬಿಸಿ, ಅನನ್ಯವಾದ ಭಕ್ತಿಯಿಂದ ಭಗವಂತನ ಸ್ವರೂಪವನ್ನು ಹೃದಯದಲ್ಲಿ ಚಿಂತಿಸುತ್ತಿದ್ದರು.
ತತೋಽಸ್ಮಾನ್ ಸುಪರಿಶ್ರಾಂತಾಂಸ್ತಪಸಾ ಚಾಪಿ ಕರ್ಶಿತಾನ್ |
ಉವಾಚ ಖಸ್ಥಂ ಕಿಮಪಿ ಭೂತಂ ತತ್ರಾಶರೀರಕಮ್ ॥46॥
ನಮ್ಮ ವಿಷಯದಲ್ಲಿ ಯಾವುದೇ ಭಾವನೆಯನ್ನು ಅವರು ತಿಳಿಸಲಿಲ್ಲ. ನಾವು ಮೊದಲೇ ತಪಸ್ಸಿನಿಂದ ಬಳಲಿದ್ದೆವು. ಇಷ್ಟರಲ್ಲಿ ನಮಗೆ ಅಶರೀರವಾಣಿಯು ಆಕಾಶದಿಂದ ಹೀಗೆ ನುಡಿಯಿತು.
ದೃಷ್ಟಾ ವಃ ಪುರುಷಾಃ ಶ್ವೇತಾಃ ಸರ್ವೇಂದ್ರಿಯವಿವರ್ಜಿತಾಃ |
ದೃಷ್ಟೋ ಭವತಿ ದೇವೇಶ ಏಭಿರ್ದೃಷ್ಟೈರ್ದ್ವಿಜೋತ್ತಮಾಃ ॥47॥
ಎಲೈ ಪುರುಷರೇ, ಸಮಸ್ತ ಇಂದ್ರಿಯಗಳನ್ನು ಜಯಿಸಿರುವ ಈ ಶ್ವೇತಪುರುಷರೇ ನಾರಾಯಣನನ್ನು ನೋಡಲು ಅರ್ಹರಾಗಿದ್ದಾರೆ. ಇವರ ದರ್ಶನದಿಂದಲೇ ನೀವು ಆ ದೇವದೇವನನ್ನು ನೋಡಿದಂತಾಗಿರುತ್ತೀರಿ.
ಗಚ್ಛಧ್ವಂ ಮುನಯಃ ಸರ್ವೇ ಯಥಾಗತಮಿತೋಽಚಿರಾತ್ |
ನ ಸ ಶಕ್ಯೋ ಅಭಕ್ತೇನ ದ್ರಷ್ಟುಂ ದೇವಃ ಕಥಂಚನ ॥48॥
ನೀವು ಅನುಸರಿಸಿ ಬಂದ ದಾರಿಯನ್ನು ಪುನಃ ಅವಲಂಬಿಸಿ ಹಿಂದಿರುಗಿ ಹೋಗಿರಿ. ಭಕ್ತನಲ್ಲದವನಿಗೆ ಆ ಭಗವಂತನನ್ನು ಯಾವ ರೀತಿಯಿಂದಲೂ ನೋಡಲು ಸಾಧ್ಯವಿಲ್ಲ.
ಕಾಮಂ ಕಾಲೇನ ಮಹತಾ ಏಕಾಂತಿತ್ವಂ ಸಮಾಗತೈಃ |
ಶಕ್ಯೋ ದ್ರಷ್ಟುಂ ಸ ಭಗವಾನ್ ಪ್ರಭಾಮಂಡಲದುರ್ದೃಶಃ ॥49॥
ಏಕಾಂತ ಭಕ್ತಿಯುಳ್ಳವರಿಗೆ ಮಾತ್ರ ಬಹುಕಾಲದ ಬಳಿಕ ಪುಣ್ಯದಿಂದ ಒಂದು ಬಾರಿ ದೃಶ್ಯನಾಗುತ್ತಾನೆ. ಪ್ರಭಾಮಂಡಲದಿಂದ ನೋಡದೆ ಇರುವ ಭಗವಂತನನ್ನು ಕೆಲವೊಮ್ಮೆ ಮಾತ್ರ ಅವರಿಂದಲೂ ನೋಡಲು ಅರ್ಹನಾಗುತ್ತಾನೆ.
ಮಹತ್ ಕಾರ್ಯಂ ತು ಕರ್ತವ್ಯಂ ಯುಷ್ಮಾಭಿರ್ದ್ವಿಜಸತ್ತಮಾಃ |
ಇತಃ ಕೃತಯುಗೇತೀತೇ ವಿಪರ್ಯಾಸಂ ಗತೇಽಪಿ ಚ ॥50॥
ವೈವಸ್ವತೇಽಂತರೇ ವಿಪ್ರಾಃ ಪ್ರಾಪ್ತೇ ತ್ರೇತಾಯುಗೇ ತತಃ |
ಸುರಾಣಾಂ ಕಾರ್ಯಸಿದ್ಧ್ಯರ್ಥಂ ಸಹಾಯಾ ವೈ ಭವಿಷ್ಯಥ ॥51॥
ಮುಂದೆ ನೀವು ಮಾಡಬೇಕಾದ ಮಹತ್ತಾದ ಕಾರ್ಯವಿದೆ. ಕೃತಯುಗ ಕಳೆದ ಬಳಿಕ ತ್ರೇತಾಯುಗದಲ್ಲಿ ವೈವಸ್ವತ ಮನ್ವಂತರದಲ್ಲಿ ಲೋಕಕ್ಕೆಲ್ಲ ದೊಡ್ಡದೊಂದು ಒದಗಿ ಬರುವ ಆಪತ್ತನ್ನು ಪರಿಹರಿಸಲು ನೀವು ದೇವತೆಗಳಿಗೆ ಸಹಾಯಕರಾಗಿರಿ.
ತತಸ್ತದದ್ಭುತಂ ವಾಕ್ಯಂ ನಿಶಮ್ಯೈವಂ ಸ್ಮ ಸೋಮಪ |
ತಸ್ಯ ಪ್ರಸಾದಾತ್ ಪ್ರಾಪ್ತಾಃ ಸ್ಮೋ ದೇಶಮೀಪ್ಸಿತಮಂಜಸಾ ॥52॥
ಈ ವಾಕ್ಯಗಳನ್ನು ಕೇಳಿಸಿಕೊಂಡ ಬಳಿಕ ಅಮೃತಸಮಾನವೂ, ಅದ್ಭುತವೂ ಆದ ವಾಕ್ಯವನ್ನು ಕೇಳಿ, ಭಗವಂತನ ಅನುಗ್ರಹಕ್ಕೆ

ಪಾತ್ರರಾದ ನಾವು ಅಲ್ಲಿಂದ ಹಿಂದಿರುಗಿ ನಮ್ಮ ಇಷ್ಟ ಸ್ಥಳಕ್ಕೆ ಆಗಮಿಸಿದೆವು.
ಏವಂ ಸುತಪಸಾ ಚೈವ ಹವ್ಯಕವ್ಯೈಸ್ತಥೈವ ಚ |
ದೇವೋಽಸ್ಮಾಭಿರ್ನ ದೃಷ್ಟಃ ಸ ಕಥಂ ತ್ವಂ ದ್ರಷ್ಟುಮರ್ಹಸಿ |
ನಾರಾಯಣೋ ಮಹದ್ಭೂತಂ ವಿಶ್ವಸೃಗ್ಘವ್ಯಕವ್ಯಭುಕ್ ॥53॥
ಬೃಹಸ್ಪತಿಯೇ, ನಾವು ಹೀಗೆ ಮಹಾತಪಸ್ಸನ್ನು ಆಚರಿಸಿ ಹವ್ಯ-ಕವ್ಯಗಳನ್ನೆಲ್ಲ ನಿರ್ದುಷ್ಟವಾಗಿ ಆಚರಿಸುತ್ತಿದ್ದರೂ ಪರಮಪುರುಷನಾದ ಭಗವಂತನನ್ನು ಸಾಕ್ಷಾತ್ತಾಗಿ ನೋಡಲು ಶಕ್ತರಾಗಲಿಲ್ಲ. ಅಂತಹ ಭಗವಂತನನ್ನು ನೀನು ಹೇಗೆ ನೋಡಬಲ್ಲೆ? ನಾರಾಯಣನು ಸಮಸ್ತ ಭೂತಗಳಿಗೂ ಅಧಿಕನಾದ ಮಹಾಭೂತನೆನಿಸಿದ್ದಾನೆ. ಅವನೇ ಲೋಕವನ್ನು ಸೃಷ್ಟಿಸುವವನು. ಹವ್ಯ-ಕವ್ಯಗಳನ್ನು ಭುಂಜಿಸುವವನು ಅವನೇ ಆಗಿದ್ದಾನೆ.
ಭೀಷ್ಮಃ
ಏವಮೇಕತವಾಕ್ಯೇನ ದ್ವಿತತ್ರಿತಮತೇನ ಚ |
ಅನುನೀತಃ ಸದಸ್ಯೈಶ್ಚ ಬೃಹಸ್ಪತಿರುದಾರಧೀಃ |
ಸಮಾನೀಯ ತತೋ ಯಜ್ಞಂ ದೈವತಂ ಸಮಪೂಜಯತ್ ॥54॥
ಈ ರೀತಿಯಾಗಿ ಏಕತ, ದ್ವಿತ, ತ್ರಿತ ಮೊದಲಾದ ಎಲ್ಲ ಸದಸ್ಯರು ಇದೇ ಅಭಿಪ್ರಾಯವನ್ನು ಅನುಮೋದಿಸಿದರು. ಆಗ ಬೃಹಸ್ಪತಿಯ ಕೋಪವು ಶಾಂತವಾಯಿತು. ಅವನು ಕ್ರಮವಾಗಿ ದೇವತೆಗಳನ್ನೆಲ್ಲ ಆರಾಧಿಸಿ ಯಜ್ಞವನ್ನು ಸಮಾಪ್ತಿಗೊಳಿಸಿದನು.
ಸಮಾಪ್ತಯಜ್ಞೋ ರಾಜಾಪಿ ಪ್ರಜಾಃ ಪಾಲಿತವಾನ್ ವಸುಃ |
ಬ್ರಹ್ಮಶಾಪಾದ್ದಿವೋ ಭ್ರಷ್ಟಃ ಪ್ರವಿವೇಶ ಮಹೀಂ ತತಃ ॥55॥
ಯಜ್ಞವನ್ನು ಸಮಾಪ್ತಿಗೊಳಿಸಿದ ಉಪರಿಚರ ವಸು ರಾಜನಾದರೂ ಪ್ರಜೆಗಳನ್ನು ಯೋಗ್ಯರೀತಿಯಲ್ಲಿ ಪಾಲಿಸಿದನು. ಬ್ರಹ್ಮಶಾಪದಿಂದ ಸ್ವರ್ಗಭ್ರಷ್ಟನಾಗಿ ಭೂಮಿಗೆ ಇಳಿದನು.
ಅಂತರ್ಭೂಮಿಗತಶ್ಚೈವ ಸತತಂ ಧರ್ಮವತ್ಸಲಃ |
ನಾರಾಯಣಪರೋ ಭೂತ್ವಾ ನಾರಾಯಣಪದಂ ಜಗೌ ॥56॥
ಭೂಮಿಯ ನಡುಭಾಗದಲ್ಲಿ ಆಗಮಿಸಿದ ಉಪರಿಚರ ವಸುವು ಧರ್ಮವತ್ಸಲನಾಗಿ ನಾರಾಯಣನನ್ನೇ ನಿರಂತರ ಧ್ಯಾನಿಸುತ್ತಾ ನಾರಾಯಣಪದವನ್ನು ಹೊಂದಿದನು.
ತಸ್ಯೈವ ಚ ಪ್ರಸಾದೇನ ಪುನರೇವೋತ್ಥಿತಸ್ತು ಸಃ |
ಮಹೀತಲಾದ್ ಗತಃ ಸ್ಥಾನಂ ಬ್ರಹ್ಮಣಃ ಸಮನಂತರಮ್ |
ಪರಾಂ ಗತಿಮನುಪ್ರಾಪ್ತ ಇತಿ ನೈಷ್ಠಿಕಮಂಜಸಾ ॥57॥
ಮುಂದೆ ಉಪರಿಚರ ವಸುವು ನಾರಾಯಣನ ಅನುಗ್ರಹದಿಂದ ಭೂಮಿಯ ಕೆಳಭಾಗದಿಂದ ಮೇಲಕ್ಕೆ ಬಂದು ಬ್ರಹ್ಮಲೋಕಕ್ಕೆ ಹೋಗಿ ಪರಮಗತಿಯನ್ನು ಹೊಂದಿದನು. ನಾರಾಯಣನ ಪರಮ ಭಕ್ತನಾದ್ದರಿಂದ ಉಪರಿಚರ ವಸುವು ನಿಷ್ಠಾವಂತರು ಹೊಂದುವ ಉತ್ತಮ ಗತಿಯನ್ನೇ ಹೊಂದಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೊಂಬತ್ತನೆಯ ಅಧ್ಯಾಯ
ಉಪರಿಚರ ವಸುವು ಸ್ವರ್ಗಭ್ರಷ್ಟನಾಗಲು ಕಾರಣವೇನೆಂಬುದನ್ನು ನಿರೂಪಿಸಿದುದು.
ಯುಧಿಷ್ಠಿರಃ
ಯದಾ ಭಕ್ತೋ ಭಗವತ ಆಸೀದ್ರಾಜಾ ಮಹಾವಸುಃ |
ಕಿಮರ್ಥಂ ಸ ಪರಿಭ್ರಷ್ಟೋ ವಿವೇಶ ವಿವರಂ ಭುವಃ ॥1॥
ಯುಧಿಷ್ಠಿರ ಪಿತಾಮಹನೇ, ಉಪರಿಚರ ವಸುವು ಭಗವಂತನ ಪರಮ ಭಕ್ತನೂ, ಮಹಾಪುರುಷನೂ ಆಗಿದ್ದನು. ಅವನು ಯಾವ ಕಾರಣದಿಂದ ಸ್ವರ್ಗದಿಂದ ಚ್ಯುತನಾಗಿ ಪಾತಾಳಕ್ಕೆ ಪ್ರವೇಶಿಸಿದನು?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಋಷೀಣಾಂ ಚೈವ ಸಂವಾದಂ ತ್ರಿದಶಾನಾಂ ಚ ಭಾರತ ॥2॥
ಭೀಷ್ಮ ಯುಧಿಷ್ಠಿರನೇ, ಈ ವಿಷಯದಲ್ಲಿ ಹಿಂದೆ ಋಷಿಗಳಿಗೂ ಮತ್ತು ದೇವತೆಗಳಿಗೂ ನಡೆದ ಪುರಾತನವಾದ, ಇತಿಹಾಸರೂಪವಾದ ಸಂಭಾಷಣೆಯನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಅಜೇನ ಯಷ್ಟವ್ಯಮಿತಿ ದೇವಾಃ ಪ್ರಾಹುರ್ದ್ವಿಜೋತ್ತಮಾನ್ |
ಸ ಚ ಛಾಗೋ ಹ್ಯಜೋ ಜ್ಞೇಯೋ ನಾನ್ಯಃ ಪಶುರಿತಿ ಸ್ಥಿತಿಃ ॥ 3॥
ಹಿಂದೆ ಯಜ್ಞದ ಪ್ರಸಂಗದಲ್ಲಿ ದೇವತೆಗಳೆಲ್ಲ ಅಜದಿಂದಲೇ ಯಜ್ಞವನ್ನು ಮಾಡಬೇಕೆಂದು ಬ್ರಾಹ್ಮಣರಿಗೆ ಹೇಳಿದರು. ಅಜ ಎಂದರೆ ಹೋತ, ಛಾಗ ಹೊರತು ಬೇರೆ ಯಾವ ಪಶುವೂ ಅಲ್ಲವೆಂದು ಸ್ಪಷ್ಟಪಡಿಸಿದರು.
ಋಷಯಃ
ಬೀಜೈರ್ಯಜ್ಞೇಷು ಯಷ್ಟವ್ಯಮಿತಿ ವೈ ವೈದಿಕೀ ಶ್ರುತಿಃ |

ಅಜಸಂಜ್ಞಾನಿ ಬೀಜಾನಿ ಛಾಗಂ ನ ಘ್ನಂತುಮರ್ಹಥ ॥4॥
ಋಷಿಗಳು ಯಜ್ಞಗಳಲ್ಲಿ ಬೀಜಗಳ ಮೂಲಕ ಪುರೋಡಾಶವನ್ನು ಸಿದ್ಧಗೊಳಿಸಿ ಯಾಗವನ್ನು ಮಾಡಬೇಕೆಂದು ವೇದಗಳು ಹೇಳುತ್ತವೆ. ಬೀಜಗಳಿಗೆ ಅಜ ಎಂದು ಸಂಜ್ಞೆ ಇದೆ. ಅಜ ಎಂದರೆ ಹೋತವೆಂದು ಅರ್ಥಮಾಡಿ ಅದನ್ನು ವಧಿಸುವುದು ಉಚಿತವಲ್ಲ.
ನೈಷ ಧರ್ಮಃ ಸತಾಂ ದೇವಾ ಯತ್ರ ವಧ್ಯೇತ ವೈ ಪಶುಃ।
ಇದಂ ಕೃತಯುಗಂ ಶ್ರೇಷ್ಠಂ ಕಥಂ ವಧ್ಯೇತ ವೈ ಪಶುಃ ॥5॥
ದೇವತೆಗಳೇ, ಯಜ್ಞದಲ್ಲಿ ಪಶುವನ್ನು ಹವಿಸ್ಸಿಗಾಗಿ ವಧಿಸುವುದು ಯೋಗ್ಯರು ಮಾಡುವ ಧರ್ಮವಲ್ಲ. ಕೃತಯುಗವು ಶ್ರೇಷ್ಠವೆನಿಸಿದ ಸತ್ಯವಾದ ಯುಗವು. ಈ ಕೃತಯುಗದಲ್ಲಿ ಪಶುವನ್ನು ವಧಿಸುವುದು ಹೇಗೆ? ಪ್ರಾಣಿಯ ಹಿಂಸೆ ಉಚಿತವೇ?
ಭೀಷ್ಮಃ
ತೇಷಾಂ ಸಂವದತಾಮೇವಮೃಷೀಣಾಂ ವಿಬುಧೈಃ ಸಹ।
ಮಾರ್ಗಾಗತೋ ನೃಪಶ್ರೇಷ್ಠಸ್ತಂ ದೇಶಂ ಪ್ರಾಪ್ತವಾನ್ ವಸುಃ।
ಅಂತರಿಕ್ಷಚರಃ ಶ್ರೀಮಾನ್ ಸಮಗ್ರಬಲವಾಹನಃ ॥6॥
ಭೀಷ್ಮ ಯುಧಿಷ್ಠಿರನೇ, ದೇವತೆಗಳು, ಋಷಿಗಳು ಅಜ ಎಂಬ ಶಬ್ದದ ವಿಷಯದಲ್ಲಿ ಚರ್ಚೆ ಮಾಡುತ್ತಿರುವಾಗ ಅದೇ ಮಾರ್ಗದಲ್ಲಿ ಉಪರಿಚರ ವಸುವು ಆ ಸ್ಥಳಕ್ಕೆ ಆಗಮಿಸಿದನು. ಶ್ರೀಮಂತನಾದ ಆ ರಾಜನು ಸೈನ್ಯ, ವಾಹನಗಳ ಜೊತೆ ಆಕಾಶ ಮಾರ್ಗದಲ್ಲಿ ಸಂಚರಿಸುತ್ತಿದ್ದನು.
ತಂ ದೃಷ್ಟ್ವಾ ಸಹಸಾಯಾಂತಂ ವಸುಂ ತೇ ತ್ವಂತರಿಕ್ಷಗಮ್।
ಊಚುರ್ದ್ವಿಜಾತಯೋ ದೇವಾನೇಷ ಛೇತ್ಸ್ಯತಿ ಸಂಶಯಮ್ ॥7॥
ಆಕಸ್ಮಿಕವಾಗಿ ಅಲ್ಲಿಗೆ ಆಗಮಿಸುತ್ತಿರುವ ರಾಜನನ್ನು ಕಂಡು ಬ್ರಹ್ಮರ್ಷಿಗಳು ದೇವತೆಗಳ ಬಳಿ ಹೇಳಿದರು: `ದೇವತೆಗಳೇ, ಈ ರಾಜನು ನಿಮ್ಮ ಸಂಶಯವನ್ನು ಪರಿಹರಿಸುತ್ತಾನೆ' ಎಂದು.
ಯಜ್ವಾ ದಾನಪತಿಃ ಶ್ರೇಷ್ಠಃ ಸರ್ವಭೂತಹಿತಪ್ರಿಯಃ।
ಕಥಂ ಸ್ವಿದನ್ಯಥಾ ಬ್ರೂಯಾದ್ವಾಕ್ಯಮೇಷ ಮಹಾನ್ವಸುಃ ॥8॥
ಈ ಉಪರಿಚರ ವಸು ರಾಜನು ಯಾಜ್ಞಕನು. ದಾನಿಗಳಲ್ಲಿಯೇ ಶ್ರೇಷ್ಠನು. ಸಮಸ್ತ ಪ್ರಾಣಿಗಳ ಹಿತೈಷಿಯು. ಆದ್ದರಿಂದ ಪಕ್ಷಪಾತವಿಲ್ಲದೆ ನಮ್ಮ ಸಂಶಯವನ್ನು ಪರಿಹರಿಸುತ್ತಾನೆ. ಈ ವಸುರಾಜನು ಶಾಸ್ತ್ರ ಅಸಮ್ಮತವಾದ ಮಾತನ್ನು ಹೇಳುವುದಿಲ್ಲ.
ಏವಂ ತೇ ಸಂವಿದಂ ಕೃತ್ವಾ ವಿಬುಧಾ ಋಷಯಸ್ತಥಾ।
ಅಪೃಚ್ಛನ್ ಸಹಸಾಭ್ಯೇತ್ಯ ವಸುಂ ರಾಜಾನಮಂತಿಕಾತ್ ॥9॥
ಹೀಗೆ ದೇವತೆಗಳು, ಋಷಿಗಳು ಪರಸ್ಪರ ಒಪ್ಪಂದ ಮಾಡಿಕೊಂಡು ಎಲ್ಲರೂ ಸೇರಿ ವಸುವಿನ ಬಳಿ ಹೋಗಿ ಪ್ರಶ್ನಿಸಿದರು.
ಭೋ ರಾಜನ್ಕೇನ ಯಷ್ಟವ್ಯಮಜೇನಾಹೋ ಸ್ವಿದೌಷಧೈಃ।
ಏತನ್ನಃ ಸಂಶಯಂ ಛಿಂಧಿ ಪ್ರಮಾಣಂ ನೋ ಭವಾನ್ ಮತಃ ॥10॥
ಎಲೈ ರಾಜನೇ, ಹೋತವನ್ನು ಹವಿಸ್ಸನ್ನಾಗಿ ಮಾಡಿ ಯಜ್ಞ ಮಾಡಬೇಕೋ ಅಥವಾ ಧಾನ್ಯವನ್ನೇ ಅಜ ಎಂಬ ಶಬ್ದದಿಂದ ತಿಳಿದು ಯಜ್ಞವನ್ನು ಮಾಡಬೇಕೋ? ಅಜ ಎನ್ನುವ ಶಬ್ದದಿಂದ ಭೋಜ್ಯವಾದ ವಸ್ತುವು ಯಾವುದು? ನಮ್ಮ ಈ ಸಂಶಯವನ್ನು ಪರಿಹರಿಸು. ನೀನೇ ನಮಗೆ ಪ್ರಮಾಣಭೂತನು.
ಸ ತಾನ್ಕೃತಾಂಜಲಿರ್ಭೂತ್ವಾ ಪರಿಪಪ್ರಚ್ಛ ವೈ ವಸುಃ।
ಕಸ್ಯ ವಃ ಕೋ ಮತಃ ಪಕ್ಷೋ ಬ್ರೂತ ಸತ್ಯಂ ಸಮಾಗತಾಃ ॥11॥
ಈ ಮಾತನ್ನು ಕೇಳಿಸಿಕೊಂಡ ಉಪರಿಚರ ವಸು ರಾಜನು ಕೈಮುಗಿದು ದೇವತೆಗಳನ್ನೆಲ್ಲ ಪ್ರಶ್ನಿಸಿದನು: `ಬ್ರಾಹ್ಮಣರೇ, ನಿಮಗೆ ಈ ಶಬ್ದಾರ್ಥವು ಏನೆಂದು ಅಭಿಪ್ರೇತವಾಗಿದೆ? ಸತ್ಯ ಹೇಳಿರಿ. ಆಡು ಎಂಬ ಅರ್ಥವನ್ನು ಯಾರು ಹೇಳುತ್ತಿದ್ದಾರೆ?
ಋಷಯಃ
ಧಾನ್ಯೈರ್ಯಷ್ಟವ್ಯಮಿತ್ಯೇಷ ಪಕ್ಷೋಽಸ್ಮಾಕಂ ನರಾಧಿಪ।
ದೇವಾನಾಂ ತು ಪಶುಃ ಪಕ್ಷೋ ಮತೋ ರಾಜನ್ ವದಸ್ವ ನಃ ॥12॥
ಋಷಿಗಳು ನರಶ್ರೇಷ್ಠನೇ, ಅಜ ಎಂದರೆ ಧಾನ್ಯ ಎಂಬ ಅರ್ಥವು ವೇದಾರ್ಥವು. ಆದ್ದರಿಂದ ಧಾನ್ಯದಿಂದ ಯಾಗ ಮಾಡಬೇಕೆಂಬುದು ನಮ್ಮ ಪಕ್ಷ. ಅಜ ಎಂದರೆ ಮೇಕೆ ಎಂದು ಅರ್ಥ ಎಂಬುದು ದೇವತೆಗಳ ಪಕ್ಷ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವನ್ನು ತಿಳಿಸು.
ಭೀಷ್ಮಃ
ದೇವಾನಾಂ ತು ಮತಂ ಜ್ಞಾತ್ವಾ ವಸುನಾ ಪಕ್ಷಸಂಶ್ರಯಾತ್।
ಛಾಗೇನಾಜೇನ ಯಷ್ಟವ್ಯಮೇವಮುಕ್ತಂ ವಚಸ್ತದಾ ॥13॥
ಭೀಷ್ಮ ಉಪರಿಚರ ವಸುವು ಧಾನ್ಯಗಳಿಂದ ಯಜ್ಞ ಮಾಡುತ್ತಿದ್ದರೂ ದೇವತೆಗಳ ಅಭಿಪ್ರಾಯವನ್ನು ತಿಳಿದುಕೊಂಡು ಪಕ್ಷಪಾತದಿಂದ ಅಜ ಎಂಬ ಶಬ್ದಕ್ಕೆ ಹೋತ, ಮೇಕೆ ಎಂಬ ಅರ್ಥವನ್ನೇ ಇಟ್ಟುಕೊಂಡು ಯಜ್ಞ ಮಾಡಬೇಕು ಎಂದು ಹೇಳಿದನು.
ಕುಪಿತಾಸ್ತೇ ತತಃ ಸರ್ವೇ ಮುನಯಃ ಸೂರ್ಯವರ್ಚಸಃ।
ಊಚುರ್ವಸುಂ ವಿಮಾನಸ್ಥಂ ದೇವಪಕ್ಷಾರ್ಥವಾದಿನಮ್ ॥14॥
ಸೂರ್ಯ ಸಮಾನ ತೇಜಸ್ಕರಾದ ಋಷಿಗಳು ವಸುವಿನ ಈ ನಿರ್ಣಯವನ್ನು ಕೇಳಿದ ಕೂಡಲೇ ಕ್ರುದ್ಧರಾಗಿ ವಿಮಾನಾರೂಢನಾದ, ದೇವತಾ ಪಕ್ಷಪಾತಿಯಾಗಿ ಮಾತನಾಡಿದ ವಸುವನ್ನು ಕುರಿತು ಹೀಗೆ ಹೇಳಿದರು.
ಸುರಪಕ್ಷೋ ಗೃಹೀತಸ್ತೇ ಯಸ್ಮಾತ್ತಸ್ಮಾದ್ದಿವಃ ಪತ।
ಅದ್ಯ ಪ್ರಭೃತಿ ತೇ ರಾಜನ್ನಾಕಾಶೇ ವಿಹತಾ ಗತಿಃ।

ಅಸ್ಮಚ್ಛಾಪಾಭಿಘಾತೇನ ಮಹೀಂ ಭಿತ್ತ್ವಾ ಪ್ರವೇಕ್ಷ್ಯಸಿ ॥15॥
ಅಜ ಎಂಬುದಕ್ಕೆ ಬೀಜ ಎಂಬ ಅರ್ಥವು ನಿನಗೆ ತಿಳಿದಿದ್ದರೂ ದೇವತೆಗಳ ಪಕ್ಷವನ್ನು ವಹಿಸಿ ನಿರ್ಣಯವನ್ನು ನೀಡಿದ್ದರಿಂದ ನೀನು ಈಗಲೇ ಸ್ವರ್ಗದಿಂದ ಚ್ಯುತನಾಗು. ಆಕಾಶದಲ್ಲಿ ಸಂಚರಿಸುವ ಶಕ್ತಿಯು ನಾಶವಾಗಲಿ. ನಮ್ಮ ಶಾಪದಿಂದ ಭೂಮಿಯನ್ನು ಸೀಳಿಕೊಂಡು ಪಾತಾಳಕ್ಕೆ ಪ್ರವೇಶಿಸುತ್ತಿ.
ತತಸ್ತಸ್ಮಿನ್ ಮುಹೂರ್ತೇಽಥ ರಾಜೋಪರಿಚರಸ್ತದಾ |
ಅಧೋ ವೈ ಸಂಬಭೂವಾಶು ಭೂಮೇರ್ವಿವರಗೋ ನೃಪಃ |
ಸ್ಮೃತಿಸ್ತ್ವೇನಂ ನ ಪ್ರಜಹೌ ತದಾ ನಾರಾಯಣಾಜ್ಞಯಾ ॥16॥
ಬಳಿಕ ಋಷಿಗಳು ಹೀಗೆ ಹೇಳಿದ ಕ್ಷಣದಲ್ಲಿಯೇ ವಸುರಾಜನು ಕೆಳಕ್ಕೆ ಬಿದ್ದು ಭೂಮಿಯಲ್ಲಿರುವ ಬಿಲವನ್ನು ಪ್ರವೇಶಿಸಿ, ಪಾತಾಳಕ್ಕೆ ಹೊರಟು ಹೋದನು. ನಾರಾಯಣನ ಆಜ್ಞೆಯಿಂದ ಸಮುದ್ರವನ್ನು ಪ್ರವೇಶಿಸಿದರೂ ಅವನಿಗೆ ಸ್ಮರಣಶಕ್ತಿಯು ಕುಂಠಿತವಾಗಿರಲಿಲ್ಲ.
ದೇವಾಸ್ತು ಸಹಿತಾಃ ಸರ್ವೇ ವಸೋಃ ಶಾಪವಿಮೋಕ್ಷಣಮ್ |
ಚಿಂತಯಾಮಾಸುರವ್ಯಗ್ರಾಃ ಸುಕೃತಂ ಹಿ ನೃಪಸ್ಯ ತತ್ ॥17॥
ದೇವತೆಗಳೆಲ್ಲರೂ ಒಟ್ಟಾಗಿ ಸೇರಿ, ಉಪರಿಚರ ವಸುವಿನ ಋಷಿಗಳ ಶಾಪದಿಂದ ಬಿಡುಗಡೆಯನ್ನು ಶಾಂತಾತ್ಮರಾಗಿ ಯೋಚಿಸಿದರು. ಪರಸ್ಪರ ಹೀಗೆ ಮಾತನಾಡಿದರು.
ಅನೇನಾಸ್ಮತ್ಕೃತೇ ರಾಜ್ಞಾ ಶಾಪಃ ಪ್ರಾಪ್ತೋ ಮಹಾತ್ಮನಾ |
ಅಸ್ಯ ಪ್ರತಿಪ್ರಿಯಂ ಕಾರ್ಯಂ ಸಹಿತೈರ್ನೋ ದಿವೌಕಸಃ ॥18॥
ಮಹಾತ್ಮನಾದ ವಸುರಾಜನು ನಮ್ಮಿಂದ ಶಾಪವನ್ನು ಪಡೆದನು. ನಾವೆಲ್ಲರೂ ಒಟ್ಟಾಗಿ ಇವನಿಗೆ ಪ್ರಿಯವಾಗಿ ಕಾರ್ಯವನ್ನು ಮಾಡಬೇಕು. ಋಷಿಗಳ ಶಾಪದಿಂದ ಬಿಡುಗಡೆ ಮಾಡಬೇಕು.
ಇತಿ ಬುದ್ಧ್ಯಾ ವ್ಯವಸ್ಯಾಶು ಗತ್ವಾ ನಿಶ್ಚಯಮೀಶ್ವರಾಃ |
ಊಚುಸ್ತಂ ಹೃಷ್ಟಮನಸೋ ರಾಜೋಪರಿಚರಂ ತದಾ ॥19॥
ಈ ರೀತಿ ಬುದ್ಧಿಯಲ್ಲಿ ನಿಶ್ಚಯಿಸಿಕೊಂಡು ದೇವತೆಗಳು ಉಪರಿಚರ ವಸುವಿನ ಬಳಿ ಸಾಗಿ ಪ್ರಸನ್ನಚಿತ್ತರಾಗಿ ಹೀಗೆ ಹೇಳಿದರು.
ಬ್ರಹ್ಮಣ್ಯದೇವಂ ತ್ವಂ ಭಕ್ತಃ ಸುರಾಸುರಗುರುಂ ಹರಿಮ್ |
ಕಾಮಂ ಸ ತವ ತುಷ್ಟಾತ್ಮಾ ಕುರ್ಯಾಚ್ಛಾಪವಿಮೋಕ್ಷಣಮ್ ॥20॥
ಮಹಾರಾಜನೇ, ಬ್ರಹ್ಮಣ್ಯದೇವನಾದ ನಾರಾಯಣನ ಭಕ್ತನು ನೀನು. ಭಗವಂತನು ದೇವಾಸುರರಿಗೆ ಗುರುವು. ಅವನು ನಿನ್ನ ವಿಷಯದಲ್ಲಿ ಸಂತುಷ್ಟನು. ಆದ್ದರಿಂದ ನಿನ್ನ ಶಾಪ ವಿಮೋಕ್ಷವನ್ನು ಅವನು ಮಾಡಬಹುದು.
ಮಾನನಾ ತು ದ್ವಿಜಾತೀನಾಂ ಕರ್ತವ್ಯಾ ವೈ ಮಹಾತ್ಮನಾಮ್ |
ಅವಶ್ಯಂ ತಪಸಾ ತೇಷಾಂ ಫಲಿತವ್ಯಂ ನೃಪೋತ್ತಮ ॥21॥
ಯತಸ್ತ್ವಂ ಸಹಸಾ ಭ್ರಷ್ಟ ಆಕಾಶಾನ್ಮೇದಿನೀತಲಮ್ |
ಏಕಂ ತ್ವನುಗ್ರಹಂ ತುಭ್ಯಂ ದದ್ಮೋ ವೈ ನೃಪಸತ್ತಮ ॥22॥
ಮಹಾತ್ಮರಾದ ಬ್ರಾಹ್ಮಣರನ್ನು ಎಂದಿಗೂ ಗೌರವಿಸಬೇಕು. ಅವರ ತಪಸ್ಸಿನ ಫಲವಾಗಿ ಅವರು ನುಡಿದಂತೆಯೇ ಫಲ ದೊರೆಯುತ್ತದೆ. ಆದ್ದರಿಂದ ಅವರ ಶಾಪ ವಚನ ಹೊರಹೊಮ್ಮಿದ ಕೂಡಲೇ ಆಕಾಶದಿಂದ ಭ್ರಷ್ಟನಾಗಿ ಪಾತಾಳವನ್ನು ಸೇರಿರುತ್ತಿ. ನಾವು ನಿನಗೆ ಒಂದು ಅನುಗ್ರಹವನ್ನು ಮಾಡುತ್ತೇವೆ.
ಯಾವತ್ತ್ವಂ ಶಾಪದೋಷೇಣ ಕಾಲಮಾಸಿಷ್ಯಸೇಽನಘ |
ಭೂಮೇರ್ವಿವರಗೋ ಭೂತ್ವಾ ತಾವಂತಂ ಕಾಲಮಾಪ್ಸ್ಯಸಿ |
ಯಜ್ಞೇಷು ಸುಹುತಾಂ ವಿಪ್ರೈರ್ವಸೋರ್ಧಾರಾಂ ಮಹಾತ್ಮಭಿಃ ॥23॥
ನೀನು ಶಾಪದೋಷದಿಂದ ಎಷ್ಟು ಕಾಲ ಭೂಮಿಯ ಬಿಲದಲ್ಲಿರುತ್ತೀಯೋ ಅಷ್ಟು ಕಾಲದ ತನಕ ಏಕಾಗ್ರಚಿತ್ತರಾದ ಬ್ರಾಹ್ಮಣರು ಯಜ್ಞದಲ್ಲಿ ಅಗ್ನಿಗೆ ಅರ್ಪಿಸುವ ವಸೋರ್ಧಾರಾ ಎಂಬ ಆಜ್ಯಧಾರೆಯನ್ನು ನಿನಗೆ ದೊರಕುವಂತೆ ಮಾಡಲಿ.
ಪ್ರಾಪ್ಸ್ಯಸೇಽಸ್ಮದನುಧ್ಯಾನಾನ್ಮಾ ಚ ತ್ವಾಂ ಗ್ಲಾನಿರಾಸ್ಪೃಶೇತ್ |
ನ ಕ್ಷುತ್ಪಿಪಾಸೇ ರಾಜೇಂದ್ರ ಭೂಮೇಶ್ಛಿದ್ರೇ ಭವಿಷ್ಯತಃ ॥24॥
ನಮ್ಮನ್ನು ಧ್ಯಾನಿಸುವುದರಿಂದ ನೀನು ವಸೋರ್ಧಾರೆಯನ್ನು ಪಡೆದುಕೊಳ್ಳುವಿ. ವಸೋರ್ಧಾರೆಯ ಫಲದಿಂದ ಭೂಮಿಯ ಬಿಲದಲ್ಲಿ ಬಿದ್ದಿರುವ ನಿನಗೆ ಹಸಿವು- ನೀರಡಿಕೆಗಳು ಉಂಟಾಗುವುದಿಲ್ಲ.
ವಸೋರ್ಧಾರಾನುಪೀತತ್ವಾತ್ತೇಜಸಾಪ್ಯಾಯಿತೇನ ಚ |
ಸ ದೇವೋಽಸ್ಮದ್ವರಾತ್ ಪ್ರೀತೋ ಬ್ರಹ್ಮಲೋಕಂ ಹಿ ನೇಷ್ಯತಿ ॥25॥
ವಸೋರ್ಧಾರೆಯನ್ನು ಪಾನ ಮಾಡುವುದರಿಂದ ನಿನ್ನ ತೇಜಸ್ಸು ಅಭಿವೃದ್ಧಿಯನ್ನು ಹೊಂದುತ್ತದೆ. ನಮ್ಮ ವರದಿಂದ ಪ್ರೀತನಾದ ಭಗವಂತನು ನಿನ್ನನ್ನು ಶಾಪದಿಂದ ಬಿಡುಗಡೆ ಮಾಡಿ ಬ್ರಹ್ಮಲೋಕಕ್ಕೆ ಕೊಂಡೊಯ್ಯುತ್ತಾನೆ.
ಏವಂ ದತ್ತ್ವಾ ವರಂ ರಾಜ್ಞೇ ಸರ್ವೇ ತತ್ರ ದಿವೌಕಸಃ |
ಗತಾಃ ಸ್ವಭವನಂ ದೇವಾ ಋಷಯಶ್ಚ ತಪೋಧನಾಃ ॥26॥
ಯುಧಿಷ್ಠಿರನೇ, ದೇವತೆಗಳು ಉಪರಿಚರ ವಸುವಿಗೆ ಹೀಗೆ ವರವನ್ನು ನೀಡಿ, ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು. ತಪೋಧನರಾದ ಋಷಿಗಳು ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.
ಚಕ್ರೇ ಚ ಸತತಂ ಪೂಜಾಂ ವಿಷ್ವಕ್ಸೇನಾಯ ಭಾರತ |
ಜಪ್ಯಂ ಜಗೌ ಚ ಸತತಂ ನಾರಾಯಣಮುಖೋದ್ಗತಮ್ ॥27॥

ದೇವತೆಗಳು ಹೊರಟ ಬಳಿಕ ಉಪರಿಚರ ವಸುವು ವಿಘ್ನವನ್ನು ಪರಿಹರಿಸುವ ವಿಷ್ವಕ್ಸೇನನಿಗೆ ಪೂಜೆಯನ್ನು ಮಾಡಿದನು. ನಾರಾಯಣನ ಮುಖದಿಂದ ಪ್ರಕಟವಾದ, ಜಪಿಸಲು ಯೋಗ್ಯವಾದ ಮಂತ್ರವನ್ನು ನಿರಂತರ ಜಪಿಸುತ್ತಿದ್ದನು.
ತತ್ರಾಪಿ ಪಂಚಭಿರ್ಯಜ್ಞೈಃ ಪಂಚಕಾಲಾನರಿಂದಮ |
ಅಯಜದ್ಧರಿಂ ಸುರಪತಿಂ ಭೂಮೇರ್ವಿವರಗೋಽಪಿ ಸನ್ ॥28॥
ವಸುವು ಭೂಮಿಯ ಬಿಲದಲ್ಲಿದ್ದರೂ ಐದು ಕಾಲದಲ್ಲಿ ಪಂಚಮಹಾಯಜ್ಞದ ಮೂಲಕ ಸುರಪತಿಯಾದ ಹರಿಯನ್ನು ಆರಾಧಿಸುತ್ತಿದ್ದನು.
ತತೋಽಸ್ಯ ತುಷ್ಟೋ ಭಗವಾನ್ ಭಕ್ತ್ಯಾ ನಾರಾಯಣೋ ಹರಿಃ |
ಅನನ್ಯಭಕ್ತಸ್ಯ ಸತತಸ್ತತ್ಪರಸ್ಯ ಜಿತಾತ್ಮನಃ ॥29॥
ವರದೋ ಭಗವಾನ್ ವಿಷ್ಣುಃ ಸಮೀಪಸ್ಥಂ ದ್ವಿಜೋತ್ತಮಮ್ |
ಗರುತ್ಮಂತಂ ಮಹಾವೇಗಮಾಬಭಾಷೇ ಸ್ಮಯನ್ನಿವ ॥30॥
ಬಳಿಕ ಅವನ ಭಕ್ತಿಯ ಜಪದಿಂದ ಸಂತುಷ್ಟನಾದ ಭಗವಾನ್ ಹರಿ ನಾರಾಯಣನು ಅನನ್ಯ ಭಕ್ತನಾದ, ತನ್ನ ಸರ್ವೋತ್ತಮತ್ವದಲ್ಲಿಯೇ ತಾತ್ಪರ್ಯವುಳ್ಳ ವಸುವಿನ ವಿಷಯದಲ್ಲಿ ಸಂತುಷ್ಟನಾಗಿ, ವರದನಾದ ವಿಷ್ಣುವು ತನ್ನ ಸಮೀಪದಲ್ಲಿಯೇ ಇರುವ ಮಹಾವೇಗಶಾಲಿಯಾದ, ಪಕ್ಷಿಶ್ರೇಷ್ಠನಾದ ಗರುಡನಿಗೆ ಮಂದಹಾಸವನ್ನು ಬೀರುತ್ತಾ ಹೀಗೆ ಹೇಳಿದನು.
ದ್ವಿಜೋತ್ತಮ ಮಹಾಭಾಗ ಗಮ್ಯತಾಂ ವಚನಾನ್ಮಮ |
ಸಮ್ರಾಟ್ ರಾಜಾ ವಸುರ್ನಾಮ ಧರ್ಮಾತ್ಮಾ ಮಾಂ ಸಮಾಶ್ರಿತಃ ॥
ಪಕ್ಷಿಶ್ರೇಷ್ಠನೇ, ಮಹಾಭಾಗನೇ, ವಸು ಎಂಬ ಹೆಸರಿನ ಚಕ್ರವರ್ತಿಯು, ಧರ್ಮಾತ್ಮನು ನನ್ನನ್ನೇ ಧ್ಯಾನಿಸುತ್ತಿದ್ದಾನೆ. ಅವನ ಬಳಿ ನೀನು ಸಾಗು.
ಬ್ರಾಹ್ಮಣಾನಾಂ ಪ್ರಕೋಪೇನ ಪ್ರವಿಷ್ಟೋ ವಸುಧಾತಲಮ್ |
ಮಾನಿತಾಸ್ತೇ ತು ವಿಪ್ರೇಂದ್ರಾಸ್ತ್ವಂ ತು ಗಚ್ಛ ದ್ವಿಜೋತ್ತಮ ॥32॥
ಬ್ರಾಹ್ಮಣರ ಸಿಟ್ಟಿನಿಂದ ಭೂಮಿಯ ಕೆಳಭಾಗದಲ್ಲಿ ಪ್ರವೇಶ ಹೊಂದಿದ್ದಾನೆ. ಅವರ ಶಾಪವನ್ನು ಸ್ವೀಕರಿಸಿದ್ದರಿಂದ ರಾಜನಾದರೂ ಬ್ರಾಹ್ಮಣರನ್ನು ಗೌರವಿಸಿದ್ದಾನೆ. ಅವನ ಸ್ಥಳಕ್ಕೆ ನೀನು ಹೋಗು.
ಭೂಮೇರ್ವಿವರಸಂಗುಪ್ತಂ ಗರುಡೇಹ ಮಮಾಜ್ಞಯಾ |
ಅಧಶ್ಚರಂ ನೃಪಶ್ರೇಷ್ಠಂ ಖೇಚರಂ ಕುರು ಮಾಚಿರಮ್ ॥33॥
ಗರುಡನೇ, ಭೂಮಿಯ ಬಿಲದಲ್ಲಿ ಅಡಗಿರುವ, ಪಾತಾಳದಲ್ಲಿ ಸಂಚರಿಸುತ್ತಿರುವ ರಾಜಶ್ರೇಷ್ಠನಾದ ವಸುವನ್ನು ನನ್ನ ಆಜ್ಞೆಯಂತೆ ಶೀಘ್ರವಾಗಿ ಆಕಾಶದಲ್ಲಿ ಸಂಚರಿಸುವಂತೆ ಮಾಡು.
ಗರುತ್ಮಾನಥ ವಿಕ್ಷಿಪ್ಯ ಪಕ್ಷೌ ಮಾರುತವೇಗವಾನ್ |
ವಿವೇಶ ವಿವರಂ ಭೂಮೇರ್ಯತ್ರಾಸ್ತೇ ವಾಗ್ಯತೋ ವಸುಃ ॥34॥
ನಾರಾಯಣನು ಗರುಡನಿಗೆ ಹೀಗೆ ಆದೇಶ ಮಾಡಿದ ಕೂಡಲೇ ವಾಯುವೇಗನಾದ ಗರುಡನು ತನ್ನ ರೆಕ್ಕೆಗಳನ್ನು ಅಗಲಿಸಿಕೊಂಡು ವಸುವಿದ್ದ ಭೂ ಬಿಲವನ್ನು ಜಿತೇಂದ್ರಿಯನಾಗಿ ಪ್ರವೇಶಿಸಿದನು.
ತತ ಏನಂ ಸಮುತ್ಕ್ಷಿಪ್ಯ ಸಹಸಾ ವಿನತಾಸುತಃ |
ಉತ್ಪಪಾತ ನಭಸ್ತೂರ್ಣಂ ತತ್ರ ಚೈನಮಮುಂಚತ ॥35॥
ವಿನತೆಯ ಸುತನಾದ ಗರುಡನು ರಾಜನನ್ನು ಬಿಲದಿಂದ ಮೇಲಕ್ಕೆತ್ತಿಕೊಂಡು ಆಕಾಶದ ಕಡೆ ಹಾರಿ ರಾಜನನ್ನು ಆಕಾಶದಲ್ಲಿ ಬಿಟ್ಟನು.
ತಸ್ಮಿನ್ಮುಹೂರ್ತೇ ಸಂಜಜ್ಞೇ ರಾಜೋಪರಿಚರಃ ಪುನಃ |
ಸಶರೀರೋ ಗತಶ್ಚೈವ ಬ್ರಹ್ಮಲೋಕಂ ನೃಪೋತ್ತಮಃ ॥36॥
ಆ ಮುಹೂರ್ತದಲ್ಲಿಯೇ ವಸುರಾಜನು ಪುನಃ ಉಪರಿಚರನಾದನು. ಸಶರೀರನಾಗಿಯೇ ಆ ರಾಜಶ್ರೇಷ್ಠನು ಬ್ರಹ್ಮಲೋಕಕ್ಕೆ ಹೋದನು.
ಏವಂ ತೇನಾಪಿ ಕೌಂತೇಯ ವಾಗ್ದೋಷಾದ್ದೇವತಾಜ್ಞಯಾ |
ಪ್ರಾಪ್ತಾ ಗತಿರಯಜ್ವಾರ್ಹಾ ದ್ವಿಜಶಾಪಾನ್ಮಹಾತ್ಮನಾ ॥37॥
ಯುಧಿಷ್ಠಿರನೆ, ಮಹಾತ್ಮನಾದ ಉಪರಿಚರ ವಸು ದೇವತೆಗಳ ಮತವನ್ನು ಬೆಂಬಲಿಸಲು ಹೋಗಿ ಅದರಿಂದಾದ ವಾಗ್ದೋಷದ ಪ್ರಭಾವದಿಂದ ಬ್ರಾಹ್ಮಣರ ಶಾಪಕ್ಕೆ ತುತ್ತಾಗಿ ಅಧೋಗತಿಯನ್ನು ಹೊಂದಿದನು.
ಕೇವಲಂ ಪುರುಷಸ್ತೇನ ಸೇವಿತೋ ಹರಿರೀಶ್ವರಃ |
ತತಃ ಶೀಘ್ರಂ ಜಹೌ ಶಾಪಂ ಬ್ರಹ್ಮಲೋಕಮವಾಪ ಚ ॥38॥
ಆ ಸಮಯದಲ್ಲಿ ಪುರುಷೋತ್ತಮನಾದ ಭಗವಂತನನ್ನು ನಿರಂತರ ಆರಾಧಿಸುತ್ತಿದ್ದನು. ಅದರ ಫಲದಿಂದ ಶಾಪದಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಹೊಂದಿದನು.
ಏತತ್ತೇ ಸರ್ವಮಾಖ್ಯಾತಂ ತೇ ಭೂತಾ ಮಾನವಾ ಯಥಾ |
ನಾರದೋಽಪಿ ಯಥಾ ಶ್ವೇತಂ ದ್ವೀಪಂ ಸ ಗತವಾನೃಷಿಃ |
ತತ್ತೇ ಸರ್ವಂ ಪ್ರವಕ್ಷ್ಯಾಮಿ ಶೃಣುಷ್ವೈಕಮನಾ ನೃಪ ॥39॥
ಯುಧಿಷ್ಠಿರನೇ, ನಿನಗೆ ಮನುಷ್ಯರು ಶ್ವೇತದ್ವೀಪ ನಿವಾಸಿಗಳಾಗಿ ಹೇಗೆ ಹುಟ್ಟಿದರು, ಹೇಗೆ ಇದ್ದಾರೆ ಈ ಎಲ್ಲ ವಿಷಯಗಳನ್ನು ಹೇಳಿದೆನು. ನಾರದರು ಶ್ವೇತದ್ವೀಪಕ್ಕೆ ಹೇಗೆ ಹೋದರು ಎಂಬ ವಿಷಯವನ್ನು ಹೇಳುತ್ತೇನೆ, ಏಕಾಗ್ರಚಿತ್ತನಾಗಿ ಕೇಳಿಸಿಕೊ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಅರವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತನೆಯ ಅಧ್ಯಾಯ
ನಾರದರಿಂದ ಶ್ವೇತದ್ವೀಪಪತಿ ಶ್ರೀಪತಿ ಸ್ತುತಿ
ಭೀಷ್ಮಃ
ಪ್ರಾಪ್ಯ ಶ್ವೇತಂ ಮಹಾದ್ವೀಪಂ ನಾರದೋ ಭಗವಾನೃಷಿಃ |
ದದರ್ಶ ತಾನೇವ ನರಾನ್ ಶ್ವೇತಾಂಶ್ಚಂದ್ರಪ್ರಭಾನ್ ಶುಭಾನ್ ॥1॥
ಭೀಷ್ಮ ಯುಧಿಷ್ಠಿರನೇ, ಪೂಜ್ಯರಾದ ನಾರದರು ಶ್ವೇತದ್ವೀಪಕ್ಕೆ ತೆರಳಿ, ಹಿಂದೆ ಯಾವ ಋಷಿಗಳು ಕಂಡಿದ್ದರೋ ಅಂತಹ ಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಶ್ವೇತವರ್ಣದ ಪುರುಷರನ್ನೇ ಇವರು ನೋಡಿದರು.
ಪೂಜಯಾಮಾಸ ಶಿರಸಾ ಮನಸಾ ತೈಶ್ಚ ಪೂಜಿತಃ |
ದಿದೃಕ್ಷುರ್ಜಪ್ಯಪರಮಃ ಸರ್ವಕೃಚ್ಛ್ರಧರಃ ಸ್ಥಿತಃ ॥2॥
ಬಳಿಕ ಶ್ವೇತದ್ವೀಪ ನಿವಾಸಿಗಳನ್ನು ಮನಸ್ಸಿನಿಂದಲೇ ಪೂಜಿಸಿ ಗೌರವಿಸಿದರು. ನಾರದರು ಕಠೋರವಾದ ನಿಯಮಗಳನ್ನು ಅವಲಂಬಿಸಿ ಶ್ರೀಹರಿಯ ದರ್ಶನದ ಅಪೇಕ್ಷೆಯಿಂದ ಅವನ ಜಪದಲ್ಲಿಯೇ ನಿರತರಾದರು.
ಭೂತ್ವೈಕಾಗ್ರಮನಾ ವಿಪ್ರ ಊರ್ಧ್ವಬಾಹುರ್ಮಹಾಮುನಿಃ |
ಸ್ತೋತ್ರಂ ಜಗೌ ಸ ವಿಶ್ವಾಯ ನಿರ್ಗುಣಾಯ ಮಹಾತ್ಮನೇ ॥3॥
ನಾರದರು ತಮ್ಮ ಎರಡು ತೋಳುಗಳನ್ನು ಮೇಲಕ್ಕೆತ್ತುಕೊಂಡು, ಏಕಾಗ್ರಚಿತ್ತರಾಗಿ ಪ್ರಾಕೃತಗುಣರಹಿತನಾದ, ಅನಂತಗುಣಪರಿಪೂರ್ಣನಾದ, ವಿಶ್ವಾತ್ಮನಾದ ನಾರಾಯಣನ ಪ್ರೀತಿಗಾಗಿ ಹೀಗೆ ಸ್ತೋತ್ರವನ್ನು ಮಾಡಿದರು.
ನಾರದಃ
ನಮಸ್ತೇ ದೇವದೇವ ನಿಷ್ಕ್ರಿಯ ನಿರ್ಗುಣ ಲೋಕಸಾಕ್ಷಿನ್ ಕ್ಷೇತ್ರಜ್ಞ ಅನಂತಪುರುಷ ಮಹಾಪುರುಷ ತ್ರಿಗುಣ ಪ್ರಧಾನ ಅಮೃತ ವ್ಯೋಮ ಸನಾತನ ಸದಸದ್ವ್ಯಕ್ತಾವ್ಯಕ್ತ ಋತಧಾಮನ್ ಪೂರ್ವಾದಿದೇವ ವಸುಪ್ರದ ಪ್ರಜಾಪತೇ ಸುಪ್ರಜಾಪತೇ ವನಸ್ಪತೇ ಮಹಾಪ್ರಜಾಪತೇ ಊರ್ಜಸ್ಪತೇ ವಾಚಸ್ಪತೇ ಮನಸ್ಪತೇ ಜಗತ್ಪತೇ ದಿವಸ್ಪತೇ ಮರುತ್ಪತೇ ಸಲಿಲಪತೇ ಪೃಥಿವೀಪತೇ ದಿಕ್ಪತೇ ಪೂರ್ವನಿವಾಸ ಬ್ರಹ್ಮಪುರೋಹಿತ ಬ್ರಹ್ಮಕಾಯಿಕ ಮಹಾಕಾಯಿಕ ಮಹಾರಾಜಿಕ ಚತುರ್ಮಹಾರಾಜಿಕ ಆಭಾಸುರ ಮಹಾಭಾಸುರ ಸಪ್ತಮಹಾಭಾಸುರ ಯಾಮ್ಯ ಮಹಾಯಾಮ್ಯ ಸಂಜ್ಞಾಸಂಜ್ಞ ತುಷಿತ ಮಹಾತುಷಿತ ಪ್ರತರ್ದನ ಪರಿನಿರ್ಮಿತ ವಶವರ್ತಿನ್ ಅಪರಿನಿರ್ಮಿತ ಯಜ್ಞ ಮಹಾಯಜ್ಞ ಯಜ್ಞಸಂಭವ ಯಜ್ಞಯೋನೇ ಯಜ್ಞಗರ್ಭ ಯಜ್ಞಹೃದಯ ಯಜ್ಞಸ್ತುತ ಯಜ್ಞಭಾಗಹರ ಪಂಚಯಜ್ಞಧರ ಪಂಚಕಾಲಕರ್ತೃಗತೇ ಪಂಚರಾತ್ರಿಕ ವೈಕುಂಠ ಅಪರಾಜಿತ ಮಾನಸಿಕ ಪರಮಸ್ವಾಮಿನ್ ಸುಸ್ನಾತ ಹಂಸ ಪರಮಹಂಸ ಪರಮಯಾಜ್ಞಿಕ ಸಾಂಖ್ಯಯೋಗ ಅಮೃತೇಶಯ ಹಿರಣ್ಯೇಶಯ ವೇದೇಶಯ ಕುಶೇಶಯ ಬ್ರಹ್ಮೇಶಯ ಪದ್ಮೇಶಯ ವಿಶ್ವೇಶ್ವರ ತ್ವಂ ಜಗದನ್ವಯಃ ತ್ವಂ ಜಗತ್ಕೃತಿಃ ತವಾಗ್ನಿರಾಸ್ಯಮ್ ವಡವಾಮುಖೋಗ್ನಿಃ ತ್ವಮಾಹುತಿಃ ತ್ವಂ ಸಾರಥಿಃ ತ್ವಂ ವಷಟ್ಕಾರಃ ತ್ವಮೋಂಕಾರಃ ತ್ವಂ ಮನಃ ತ್ವಂ ಚಂದ್ರಮಾಃ ತ್ವಂ ಚಕ್ಷುರಾದ್ಯಮ್ ತ್ವಂ ಸೂರ್ಯಃ ತ್ವಂ ದಿಶಾಂ ಗಜಃ ದಿಗ್ಭಾನೋ ಹಯಶಿರಃ ಪ್ರಥಮತ್ರಿಸೌಪರ್ಣ ಪಂಚಾಗ್ನೇ ತ್ರಿಣಾಚಿಕೇತ ಷಡಂಗವಿಧಾನ ಪ್ರಾಗ್ಜ್ಯೋತಿಷ ಜ್ಯೇಷ್ಠಸಾಮಗ ಸಾಮಿಕವ್ರತಧರ ಅಥರ್ವಶಿರಃ ಪಂಚಮಹಾಕಲ್ಪ ಫೇನಪಾಚಾರ್ಯ ವಾಲಖಿಲ್ಯ ವೈಖಾನಸ ಅಭಗ್ನಯೋಗ ಅಭಗ್ನಪರಿಸಂಖ್ಯಾನ ಯುಗಾದೇ ಯುಗಮಧ್ಯ ಯುಗನಿಧನ ಆಖಂಡಲ ಪ್ರಾಚೀನಗರ್ಭ ಕೌಶಿಕ ಪುರುಷ್ಟುತ ಪುರುಹೂತ ವಿಶ್ವರೂಪ ಅನಂತಗತೇ ಅನಂತಭೋಗ ಅನಂತ ಅನಾದೇ ಅಮಧ್ಯ ಅವ್ಯಕ್ತಮಧ್ಯ ಅವ್ಯಕ್ತನಿಧನ ವ್ರತಾವಾಸ ಸಮುದ್ರಾಧಿವಾಸ ಯಶೋವಾಸ ತಪೋವಾಸ ಲಕ್ಷ್ಮ್ಯಾವಾಸ ವಿದ್ಯಾವಾಸ ಕೀರ್ತ್ಯಾವಾಸ ಶ್ರೀವಾಸ ಸರ್ವಾವಾಸ ವಾಸುದೇವ ಸರ್ವಚ್ಛಂದಕ ಹರಿಹಯ ಹರಿಮೇಧ ಮಹಾಯಜ್ಞಭಾಗಹರ ವರಪ್ರದ ಯಮನಿಯಮಮಹಾನಿಯಮಕೃಚ್ಛ್ರಾತಿಕೃಚ್ಛ್ರ ಮಹಾಕೃಚ್ಛ್ರಸರ್ವಕೃಚ್ಛ್ರ ನಿಯಮಧರ ನಿವೃತ್ತಧರ್ಮಪ್ರವಚನಗತೇ ಪ್ರವೃತ್ತವೇದಕ್ರಿಯ ಅಜ ಸರ್ವಗತೇ ಸರ್ವದರ್ಶಿನ್ ಅಗ್ರಾಹ್ಯ ಅಚಲ ಮಹಾವಿಭೂತೇ ಮಾಹಾತ್ಮ್ಯಶರೀರ ಪವಿತ್ರ ಮಹಾಪವಿತ್ರ ಹಿರಣ್ಮಯ ಬೃಹತ್ ಅಪ್ರತರ್ಕ್ಯ ಅವಿಜ್ಞೇಯ ಬ್ರಹ್ಮಾಗ್ರ್ಯ ಪ್ರಜಾಸರ್ಗಕರ ಪ್ರಜಾನಿಧನಕರ ಮಹಾಮಾಯಾಧರ ಚಿತ್ರಶಿಖಂಡಿನ್ ವರಪ್ರದ ಪುರೋಡಾಶಭಾಗಹರ ಗತಾಧ್ವನ್ ಛಿನ್ನತೃಷ್ಣ ಛಿನ್ನಸಂಶಯ ಸರ್ವತೋನಿವೃತ್ತ ಬ್ರಾಹ್ಮಣರೂಪ ಬ್ರಾಹ್ಮಣಪ್ರಿಯ ವಿಶ್ವಮೂರ್ತೇ ಮಹಾಮೂರ್ತೇ ಬಾಂಧವ ಭಕ್ತವತ್ಸಲ ಬ್ರಹ್ಮಣ್ಯದೇವ ಭಕ್ತೋಽಹಂ ತ್ವಾಂ ದಿದೃಕ್ಷುಃ ಏಕಾಂತದರ್ಶನಾಯ ನಮೋ ನಮಃ ॥4॥
ನಾರದರು ದೇವದೇವೇಶನೇ ನಿನಗೆ ನಮಸ್ಕಾರ. ನೀನು ಯಾವುದೇ ಬಂಧಕ ಅಥವಾ ಮೋಚಕವಾದ ಕ್ರಿಯೆಗಳನ್ನು ಮಾಡುವವನಲ್ಲ. ಪ್ರಾಕೃತ ಗುಣರಹಿತನು, ಲೋಕಸಾಕ್ಷಿಯು. ಸಮಸ್ತ ಜೀವರ ಅಂತರ್ಯಾಮಿಯಾಗಿ ಕ್ಷೇತ್ರಜ್ಞ ಶಬ್ದವಾಚ್ಯನು. ಶರಣವಿಲ್ಲದ ಅನಂತಪುರುಷನು. ನೀನೇ ಮಹಾಪುರುಷನು. ಸತ್ತ್ವ-ರಜಸ್ಸು-ತಮಸ್ಸು ಎಂಬ ಮೂರು ಗುಣಗಳಿಗೆ ನಿಯಾಮಕನಾದುದರಿಂದ ತ್ರಿಗುಣ ಎಂಬ ಶಬ್ದದಿಂದ ವಾಚ್ಯನು. ಪ್ರಕೃತಿಗೆ ನಿಯಾಮಕನಾದುದರಿಂದ ಪ್ರಧಾನ ಶಬ್ದವಾಚ್ಯನು. ಮೋಕ್ಷವನ್ನು ನೀಡುವುದರಿಂದ ಅಮೃತಶಬ್ದವಾಚ್ಯನು. ಮಹಾ ಆಕಾಶರೂಪನು, ಆದುದರಿಂದ ಯೋಗಶಬ್ದವಾಚ್ಯನು. ಸನಾತನನು. ಮೂರ್ತಾಮೂರ್ತ ವ್ಯಕ್ತಾವ್ಯಕ್ತ ಪ್ರಪಂಚಕ್ಕೆ ನಿಯಾಮಕನು. ಸತ್ಯವೇ ಮನೆಯಾಗಿ ಉಳ್ಳವನು. ಎಲ್ಲರಿಗಿಂತಲೂ ಮೊದಲಿನ ಪರದೈವನು. ಎಲ್ಲರಿಗೂ ವಸುಪ್ರದನು. ಪ್ರಜಾಪತಿಯೇ, ಸುಪ್ರಜಾಪತಿಯೇ, ವನಸ್ಪತಿಗಳಿಗೆಲ್ಲ ರಾಜನಾದ ವನಸ್ಪತಿಯೇ, ಮಹಾಪ್ರಜಾಪತಿಯೇ, ಊರ್ಜಸ್ಪತಿ, ವಾಚಸ್ಪತಿ, ಮನಸ್ಪತಿ, ಜಗತ್ಪತಿ, ದಿವಸ್ಪತೇ, ಮರುತ್ಪತೇ, ಸಲಿಲಪತೇ, ಪೃಥಿವೀಪತೇ ದಿಕ್ಪತೇ, ಎಲ್ಲಕ್ಕೂ ನೀನೇ ಆದಿನಿವಾಸಭೂತನು.ರಹಸ್ಯಸ್ವರೂಪನೂ, ಬ್ರಹ್ಮನಿಗೂ ವೇದವನ್ನುಪದೇಶಿಸಿದವನೂ, ಬ್ರಾಹ್ಮಣಶರೀರದಿಂದ ನಡೆಸಲ್ಪಡುವ ಯಾಗಾದಿ ಕರ್ಮಸ್ವರೂಪನೂ, ರಾಜಕಾರ್ಯನಿರ್ವಾಹಕನೂ, ಮಹಾರಾಜಿಕೆ, ಚಾತುರ್ಮಹಾರಾಜಿಕ, ಆಭಾಸುರ, ಮಹಾಭಾಸುರರೆಂಬ ದೇವತೆಗಳ ಸ್ವರೂಪಿಯೂ ಆದ ನಿನಗೆ ನಮಸ್ಕಾರವು. ಗಾಯತ್ರಿ ಮೊದಲಾದ ಸಪ್ತಮಹಾಮಂತ್ರಗಳಿಂದ

ಅರ್ಪಿಸಲ್ಪಡುವ ಯಜ್ಞಭಾಗಗಳೂ, ಸಪ್ತಸಾಮಸ್ವರಗಳೂ, ಯಮಗಣಗಳೂ, ಚಿತ್ರಗುಪ್ತನೇ ಮೊದಲಾದ ಮಹಾಯಮಗಣಗಳೂ ನಿನ್ನ ಸ್ವರೂಪಗಳೇ! ನೀನೇ ಸಂಜ್ಞೆಯೆಂದು ಕರೆಯಲ್ಪಡತಕ್ಕವನು. ತುಷಿತ, ಮಹಾತುಷಿತರೆಂಬ ದೇವಗಣಗಳೂ ನೀನೇ. ಲೋಕಸಂಚಾರಕನೂ ಮತ್ತು ದೇವತೆಗಳಿಗೆ ಸಹಕಾರಿಗಳೆನಿಸಿದ ಕಾಮ ರೋಗಾದಿ ಸ್ವರೂಪನೂ, ಅವುಗಳಿಗೆ ನಿರೋಧಕಗಳಾದ ಶಾಂತಿ ಸುಖಾರೋಗ್ಯಾದಿ ರೂಪವುಳ್ಳವನೂ, ಶಾಂತಿವಶ್ಯನೂ, ಅನಿಂದಿತನೂ, ಅಪ್ರಮೇಯನೂ, ಲೋಕಶಿಕ್ಷಕನೂ, ವಶನೂ, ಅವಶನೂ, ಯಜ್ಞನೂ, ಮಹಾಯಜ್ಞನೂ, ಯಜ್ಞವಿರುದ್ಧ ಕರ್ಮಸ್ವರೂಪನೂ, ಯಜ್ಞಭವನೂ, ಯಜ್ಞಕ್ಕೆ ಉತ್ಪತ್ತಿಸ್ಥಾನವೂ, ಯಜ್ಞಗರ್ಭನೂ, ಯಜ್ಞಹೃದಯನೂ, ಯಜ್ಞಸ್ತುತ್ಯನೂ, ಯಜ್ಞಭಾಗಿಯೂ, ಪಂಚಯಜ್ಞರೂಪನೂ ಆದ ನಿನಗೆ ನಮಸ್ಕಾರವು. ಪಂಚಕಾಲಸ್ವರೂಪನೂ, ಪಾಂಚರಾತ್ರಪ್ರತಿಪಾದ್ಯನೂ, ವೈಕುಂಠನಾಮಕನೂ, ಅಪರಾಜಿತನೂ, ಮನೋವಾಸಿಯೂ ಆದ ನಿನಗೆ ನಮಸ್ಕಾರವು. ಈಗ ನೀನೇನೂ ಹೊಸದಾಗಿ ತಿಳಿಯಬೇಕಾದವನಲ್ಲ. ಎಲ್ಲಾ ನಾಮಗಳೂ ನಿನ್ನ ನಾಮವೇ! ಪರನೆನಿಸಿದ ಪರನಿಗೂ ನೀನು ಸ್ವಾಮಿ. ಸ್ನಾತಕವೆಂಬ ವೇದವ್ರತವನ್ನು ಮುಗಿಸಿದವನು. ತ್ರಿದಂಡಿಗಳು, ಏಕದಂಡಿಗಳು, ದಂಡಾದಿಗಳೇನೂ ಇಲ್ಲದ ಮಹಾಹಂಸರು, ಈ ಎಲ್ಲಾ ಯತಿಭೇದಗಳೂ ನಿನ್ನ ಸ್ವರೂಪವೇ. ಎಲ್ಲಕ್ಕಿಂತಲೂ ದೀಕ್ಷಿತನೂ ನೀನೇ. ಸಾಂಖ್ಯಯೋಗಸ್ವರೂಪನೂ ನೀನೇ. ಸಾಂಖ್ಯಮೂರ್ತಿಯೂ, ಅಮೃತಕ್ಕೆ ಜನ್ಮ ಸ್ಥಾನವೂ, ಹಿರಣ್ಯವೆಂದು ಕರೆಯಲ್ಪಡುವ ಹೃದಯದಲ್ಲಿ ಶಯನಿಸತಕ್ಕವನೂ, ಎಲ್ಲಾ ವೇದಗಳಲ್ಲಿಯೂ, ದೇವತೆಗಳಲ್ಲಿಯೂ ಶಯನಿಸತಕ್ಕವನೂ ಆದ ನಿನಗೆ ನಮಸ್ಕಾರವು. ವಿಶ್ವೇಶ್ವರಾ! ವಿಷ್ವಕ್ಸೇನಾ! ನಿನಗೆ ನಮಸ್ಕಾರವು. ಜಗತ್ತಿನಲ್ಲಿ ನೀನೇ ಸದ್ರೂಪನು. ಜಗತ್ಪ್ರಕೃತಿಯೂ ನೀನೇ. ಅಗ್ನಿಯು ನಿನ್ನ ಮುಖವು. ನೀನೇ ಬಡಬಾಗ್ನಿ. ನೀನೇ ಆಹುತಿ. ಸಾರಥಿಯೆಂಬ ಅಗ್ನಿಯೂ ನೀನೇ. ಓಂಕಾರವಷಟ್ಕಾರವೂ ನೀನೇ. ತಪಸ್ಸೂ, ಮನಸ್ಸೂ, ಪೂರ್ಣಾಂಗವುಳ್ಳ ಚಂದ್ರನೂ, ಯಾಗಗಳಲ್ಲಿ ಪತ್ನಿಯ ನೋಟದಿಂದ ಪವಿತ್ರವೆನಿಸುವ ಆಜ್ಯವೂ ನೀನೇ! ನೀನೇ ಸೂರ್ಯನು! ನೀನೇ ದಿಗ್ಗಜಗಳನ್ನೂ, ವಿದಿಕ್ಕುಗಳನ್ನೂ, ಪ್ರಕಾಶಗೊಳಿಸುವ ಜ್ಯೋತಿಯೂ ನೀನೇ! ಓ ಹಯಗ್ರೀವಾ! ಮೊದಲನೆಯ ತ್ರಿಸುಪರ್ಣಮಂತ್ರದಿಂದ ಕೀರ್ತಿಸಲ್ಪಡುವ ಆದಿತ್ಯಸ್ವರೂಪವೂ ನಿನ್ನದೇ! ಬ್ರಾಹ್ಮಣಾದಿ ವರ್ಣಗಳನ್ನು ಧರಿಸತಕ್ಕವನೂ, ಗಾರ್ಹಪತ್ಯ, ಆಹವನೀಯ, ದಕ್ಷಿಣ, ಸಭ್ಯ, ಅವಸಥ್ಯವೆಂಬ ಪಂಚಾಗ್ನಿಗಳೂ ನೀನೇ. ನಾಚಿಕೇತವೆಂಬ ಅಗ್ನಿಯನ್ನು ಮೂರಾವರ್ತಿ ಚಯನಮಾಡುವದರಿಂದ ಉಂಟಾಗುವ ತ್ರಿಣಾಚಿಕೇತನೂ ನೀನೇ! ಷಡಂಗಗಳಿಗೆ ಆಧಾರನೂ, ಪ್ರಾಗ್ಜ್ಯೋತಿಷವೆಂಬ ಸಾಮಸ್ವರೂಪನೂ ನೀನೇ! ಜ್ಯೇಷ್ಠವೆಂಬ ಸಾಮವನ್ನು ಗಾನ ಮಾಡತಕ್ಕವನೂ, ಸಾಮವೇದಿಗಳ ವ್ರತಗಳನ್ನು ಧರಿಸತಕ್ಕವನೂ, ಅಥರ್ವಶಿರಸ್ಸೆಂಬ ಉಪನಿಷತ್ ಸ್ವರೂಪನೂ ಆದ ನಿನಗೆ ನಮಸ್ಕಾರವು. ಸೌರ, ಶಾಕ್ತ, ಗಾಣಾಪತ್ಯ, ಶೈವ, ವೈಷ್ಣವವೆಂಬ ಐದು ಆಗಮಗಳಿಂದ ನಿರೂಪಿಸಲ್ಪಡತಕ್ಕವನೂ, ಫೇನಪ, ವಾಲಖಿಲ್ಯ, ವೈಖಾನಸ ಋಷಿಗಳಿಗೆಲ್ಲ ಆಚಾರ್ಯನೂ ಆದ ನಿನಗೆ ನಮಸ್ಕಾರವು. ನಿನ್ನ ವ್ರತಕ್ಕೂ, ನಿನ್ನ ಜ್ಞಾನಕ್ಕೂ ಎಂದಿಗೂ ಭಂಗವಿಲ್ಲ. ಯುಗದ ಆದಿಮಧ್ಯಾಂತಗಳೂ ನೀನೇ. ಇಂದ್ರನೂ, ಪ್ರಾಚೀನ ಗರ್ಭನೆಂಬ ಮುನಿಯೂ, ಕೌಶಿಕಋಷಿಯೂ, ಇವರೆಲ್ಲರ ಸ್ವರೂಪನೂ ನೀನೇ. ನಾನಾ ವಿಧದಿಂದ ಸ್ತುತಿಸಲ್ಪಡತಕ್ಕವನೂ, ಯಾಗಗಳಲ್ಲಿ ವಿಧವಿಧದಿಂದ ಕರೆಯಲ್ಪಡತಕ್ಕವನೂ, ವಿಶ್ವಕರ್ತನೂ, ವಿಶ್ವಚೇತನನೂ, ವಿಶ್ವಸ್ವರೂಪನೂ ಆದ ನಿನಗೆ ನಮಸ್ಕಾರವು. ಅನಂತಗತಿಯೂ, ಅನಂತಭೋಗನೂ, ಅನಂತನೂ, ಅನಾದಿಯೂ, ಆದಿಮಧ್ಯಾಂತ ಗಳಿಲ್ಲದವನೂ ಆದ ನಿನಗೆ ನಮಸ್ಕಾರವು. ನಿನ್ನ ಮಧ್ಯವಾಗಲಿ, ಅಂತ್ಯವಾಗಲಿ ಅವ್ಯಕ್ತವಾದುದು. ಸರ್ವವ್ರತಾವಾಸನೂ, ಸಮುದ್ರಶಾಯಿಯೂ, ಯಶಸ್ಸು, ತಪಸ್ಸು, ದಮ, ಲಕ್ಷ್ಮಿ, ವಿದ್ಯೆ, ಕೀರ್ತಿ, ಸಂಪತ್ತು, ಇವುಗಳಿಗೆಲ್ಲ ವಾಸಭೂತನೂ, ಸರ್ವಾಧಾರನೂ ಆದ ಓ ವಾಸುದೇವಾ! ನಿನಗೆ ನಮಸ್ಕಾರವು. ಎಲ್ಲರ ಇಷ್ಟವನ್ನೂ ಕೊಡತಕ್ಕವನೂ, ಹರಿಹಯನೆಂದು ಕರೆಯಲ್ಪಡತಕ್ಕವನೂ, ಅಶ್ವಮೇಧ ಸ್ವರೂಪನೂ, ಮಹಾಯಜ್ಞದಲ್ಲಿ ಭಾಗವನ್ನು ಕೈಗೊಳ್ಳತಕ್ಕವನೂ, ವರಪ್ರದನೂ, ಸುಖಪ್ರದನೂ, ಧನಪ್ರದನೂ ಆದ ನಿನಗೆ ನಮಸ್ಕಾರವು. ಹರಿಭಕ್ತಿಸ್ವರೂಪನೂ, ಯಮ, ನಿಯಮ, ಮಹಾನಿಯಮ, ಕೃಛ್ರ, ಅತಿಕೃಛ್ರ, ಸರ್ವಕೃಛ್ರಗಳೆಂಬ ಎಲ್ಲಾ ವ್ರತಸ್ವರೂಪನೂ, ವ್ರತಗಳಿಗೆ ಆಧಾರನೂ, ಭ್ರಮರಹಿತನೂ, ನಿವೃತ್ತಿ ಧರ್ಮವನ್ನು ಹಿಡಿದವರಲ್ಲಿ ನೆಲೆಗೊಂಡವನೂ, ವೇದಾಧ್ಯಯನವನ್ನು ಪೂರ್ಣಮಾಡಿದ ಬ್ರಹ್ಮಚಾರಿಸ್ವರೂಪನೂ, ಪೃಶ್ನಿಗರ್ಭನೂ, ವೈದಿಕಕರ್ಮಪ್ರವರ್ತಕನೂ, ಭ್ರಮರಹಿತನೂ, ಸರ್ವಾಂತರ್ಯಾಮಿಯೂ, ಸರ್ವದರ್ಶಿಯೂ ಆದ ನಿನಗೆ ನಮಸ್ಕಾರವು. ಅಗ್ರಾಹ್ಯನೂ, ಅಕ್ಷಯನೂ, ಅಚಲನೂ, ಮಹಾವಿಭೂತಿಯುಳ್ಳವನೂ, ಮಹಿಮೆಯೇ ಶರೀರವಾಗಿ ಉಳ್ಳವನೂ, ಪವಿತ್ರನೂ, ಮಹಾಪವಿತ್ರನೂ, ಹಿರಣ್ಮಯನೂ ಆದ ನಿನಗೆ ನಮಸ್ಕಾರವು. ಮಹತ್ತಿಗಿಂತಲೂ ಮಹಾಂತನೂ, ಅಪ್ರಕರ್ತ್ಯನೂ, ಅವಿಜ್ಞೇಯನೂ, ಕಾರ್ಯ, ಕಾರಣ, ಮಹಾಕಾರಣಗಳಲ್ಲಿ ಮೇಲಾದವನೂ, ಸೃಷ್ಟಿ ಸಂಹಾರಗಳನ್ನು ನಡೆಸತಕ್ಕವನೂ, ಮಹಾಮಾಯೆಯುಳ್ಳವನೂ, ವಿದ್ಯೆಯನ್ನೂ, ಯೋಗವನ್ನೂ ಧರಿಸಿದವನೂ, ವಿಚಿತ್ರಶಿಖಂಡವುಳ್ಳವನೂ, ವರಪ್ರದನೂ, ಪುರೋಡಾಶವೆಂಬ ಯಜ್ಞಭಾಗವನ್ನು ಗ್ರಹಿಸತಕ್ಕವನೂ, ಸಮಸ್ತ ಯಾಗಗಳಲ್ಲಿಯೂ ನೆಲೆಗೊಂಡವನೂ ಆದ ನಿನಗೆ ನಮಸ್ಕಾರವು. ಓ ಪ್ರಭೂ! ನೀನು ತೃಷ್ಣೆಯಿಲ್ಲದವನು! ಸಂಶಯವಿಲ್ಲದವನು! ಸರ್ವವ್ಯಾಪಿ! ರೂಪರಹಿತನು! ಬ್ರಾಹ್ಮಣಸ್ವರೂಪನು! ಬ್ರಾಹ್ಮಣ ಪ್ರಿಯನು! ವಿಶ್ವಮೂರ್ತಿಯೂ, ಮಹಾಮೂರ್ತಿಯೂ, ಸರ್ವಬಂಧುವೂ, ಭಕ್ತವತ್ಸಲನೂ ಬ್ರಹ್ಮಣ್ಯದೇವನೂ ಆದ ನಿನಗೆ ನಮಸ್ಕಾರವು. ನಿರ್ವಿಕಲ್ಪಜ್ಞಾನಕ್ಕಾಗಿ ನಿನ್ನನ್ನು ಮೊರೆಹೋಗುವೆನು. ನಿನ್ನನ್ನು ಏಕಾಂತದಲ್ಲಿ ದರ್ಶನ ಮಾಡಬೇಕೆಂಬ ಆಕಾಂಕ್ಷೆಯಿಂದ ಇಲ್ಲಿ ಉಪಸ್ಥಿತನಾಗಿದ್ದೇನೆ. ನಿನಗೆ ನಮಸ್ಕಾರ, ನಮಸ್ಕಾರ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.

* * * * *

ನೂರ ಎಪ್ಪತ್ತೊಂದನೆಯ ಅಧ್ಯಾಯ
ಶ್ವೇತದ್ವೀಪದಲ್ಲಿ ನಾರದರಿಗಾದ ಭಗವಂತನ ದರ್ಶನ.
ಭೀಷ್ಮಃ
ಏವಂ ಸ್ತುತಃ ಸ ಭಗವಾನ್ ಗುಹ್ಯೈಸ್ತಥ್ಯೈಶ್ಚ ನಾಮಭಿಃ |

ತಂ ಮುನಿಂ ದರ್ಶಯಾಮಾಸ ನಾರದಂ ವಿಶ್ವರೂಪಧೃಕ್ ॥1॥
ಭೀಷ್ಮ ಯುಧಿಷ್ಠಿರನೇ, ನಾರದರು ಯಥಾರ್ಥವಾದ, ಗುಹ್ಯವಾದ, ಭಗವಂತನ ನಾಮಗಳಿಂದ ಹೀಗೆ ಸ್ತುತಿಸಿದ ಬಳಿಕ ವಿಶ್ವರೂಪವನ್ನು ಧರಿಸಿದ ಭಗವಂತನು ನಾರದ ಮುನಿಗೆ ತನ್ನ ರೂಪವನ್ನು ತೋರಿಸಿದನು.
ಕಿಂಚಿಚ್ಚಂದ್ರವಿಶುದ್ಧಾತ್ಮಾ ಕಿಂಚಿಚ್ಚಂದ್ರಾದ್ ವಿಶೇಷವಾನ್ ।
ಕೃಶಾನುವರ್ಣಃ ಕಿಂಚಿಚ್ಚ ಕಿಂಚಿದ್ಧಿಷ್ಣ್ಯಾಕೃತಿಃ ಪ್ರಭುಃ ॥2॥
ಭಗವಂತನ ದಿವ್ಯವಾದ ವಿಶ್ವರೂಪವಾದರೂ ಚಂದ್ರನಿಗಿಂತಲೂ ನಿರ್ಮಲವಾಗಿ ಅವನಿಗಿಂತ ವಿಶೇಷವಾಗಿ ಕಾಣಿಸುತ್ತಿತ್ತು. ವಿಶ್ವರೂಪವನ್ನು ಧರಿಸಿದ ಪರಮಾತ್ಮನ ಶರೀರಗಳಲ್ಲಿ ಅಗ್ನಿಯ ಬಣ್ಣವು, ನಕ್ಷತ್ರದ ಛಾಯೆಯು ಕಾಣಿಸುತ್ತಿತ್ತು.
ಶುಕಪತ್ರವರ್ಣಃ ಕಿಂಚಿತ್ ಕಿಂಚಿತ್ ಸ್ಫಟಿಕಸಪ್ರಭಃ ।
ನೀಲಾಂಜನಚಯಪ್ರಖ್ಯೋ ಜಾತರೂಪಪ್ರಭಃ ಕ್ವಚಿತ್ ॥3॥
ವಿಶ್ವರೂಪದಲ್ಲಿ ಬಿಳಿಯ ರೆಕ್ಕೆಯಂತೆ, ಸ್ಫಟಿಕ ಮಣಿಯಂತೆ, ಕಾಡಿಗೆಯ ರಾಶಿಯಂತೆ ಸಮಾನವಾದ ಕಾಂತಿಯು ಸ್ವಲ್ಪ ಸ್ವಲ್ಪ ಮೇಲನವಾಗಿತ್ತು. ಕೆಲವು ಕಡೆ ಬಂಗಾರದ ಬಣ್ಣವು ಕಾಣಿಸುತ್ತಿತ್ತು.
ಪ್ರವಾಲಾಂಕುರವರ್ಣಶ್ಚ ಶ್ವೇತವರ್ಣಃ ಕ್ವಚಿದ್ ಬಭೌ ।
ಕ್ವಚಿತ್ ಸುವರ್ಣವರ್ಣಾಭೋ ವೈಡೂರ್ಯಸದೃಶಃ ಕ್ವಚಿತ್ ॥4॥
ಕೆಲವೊಂದು ರೂಪದಿಂದ ಪರಮಾತ್ಮನು ನೂತನವಾಗಿ ಚಿಗುರಿದ ಚಿಗುರಿನ ಬಣ್ಣವನ್ನು, ಕೆಲವು ಕಡೆ ಶ್ವೇತವರ್ಣವನ್ನು, ಕೆಲವು ಕಡೆ ಸುವರ್ಣವರ್ಣವನ್ನು, ವೈಡೂರ್ಯಸದೃಶವಾದ ಕಾಂತಿಯನ್ನು ಸೂಸುತ್ತಾ ಪ್ರಕಾಶಮಾನನಾಗಿದ್ದನು.
ನೀಲವೈಡೂರ್ಯಸದೃಶ ಇಂದ್ರನೀಲನಿಭಃ ಕ್ವಚಿತ್ ।
ಮಯೂರಗ್ರೀವವರ್ಣಾಭೋ ಮುಕ್ತಾಹಾರನಿಭಃ ಕ್ವಚಿತ್ ॥5॥
ಕೆಲವೊಂದು ರೂಪಗಳಿಂದ ಭಗವಂತನು ನೀಲವೈಡೂರ್ಯ ಸಮಾನವಾದ ಕಾಂತಿಯಿಂದಲೂ, ಇಂದ್ರನೀಲ ಸದೃಶವಾದ ಕಾಂತಿಯಿಂದಲೂ, ನವಿಲಿನ ಕುತ್ತಿಗೆ ಬಣ್ಣವುಳ್ಳವನಾಗಿಯೂ, ಮುತ್ತಿನ ಮಾಲೆಯಂತೆ ಕಾಂತಿಯುಕ್ತನಾಗಿಯೂ ಶೋಭಿಸುತ್ತಿದ್ದನು.
ಏತಾನ್ವರ್ಣಾನ್ ಬಹುವಿಧಾನ್ರೂಪೇ ಬಿಭ್ರತ್ಸನಾತನಃ ।
ಸಹಸ್ರನಯನಃ ಶ್ರೀಮಾನ್ ಶತಶೀರ್ಷಃ ಸಹಸ್ರಪಾತ್ ॥6॥
ಸಹಸ್ರೋದರಬಾಹುಶ್ಚ ಅವ್ಯಕ್ತ ಇತಿ ಚ ಕ್ವಚಿತ್ ।
ಓಂಕಾರಮುದ್ಗಿರನ್ ವಕ್ತ್ರಾತ್ ಸಾವಿತ್ರೀಂ ಚ ತದನ್ವಯಾಮ್ ॥7॥
ಈ ರೀತಿ ನಾನಾ ಬಣ್ಣಗಳನ್ನು ಹೊಂದಿರುವ ಅನೇಕ ರೂಪಗಳನ್ನೇ ಭಗವಂತನು ಧರಿಸಿದ್ದನು. ಆ ರೂಪಗಳಿಗಾದರೂ ಸಾವಿರಾರು ಕಣ್ಣುಗಳು, ಸಾವಿರಾರು ತಲೆಗಳು, ಸಾವಿರಾರು ಪಾದಗಳು, ಸಾವಿರಾರು ಉದರಗಳು, ಸಾವಿರಾರು ತೋಳುಗಳು ಇದ್ದವು. ಶ್ರೀಹರಿಯ ಆಕೃತಿಯು ಅವ್ಯಕ್ತವಾಗಿ ಕಾಣಿಸುತ್ತಿತ್ತು. ಸಮಸ್ತವನ್ನು ತನ್ನ ವಶದಲ್ಲಿಟ್ಟು- ಕೊಂಡಿರುವ ಹರಿನಾರಾಯಣನು ಒಂದು ಮುಖದಿಂದ ಓಂಕಾರವನ್ನು, ಪ್ರಣವವನ್ನು ಅನುಸರಿಸಿದ ಗಾಯತ್ರಿ ಮಂತ್ರವನ್ನು ಹೇಳುತ್ತಿದ್ದನು.
ಶೇಷೇಭ್ಯಶ್ಚೈವ ವಕ್ತ್ರೇಭ್ಯಶ್ಚತುರ್ವೇದೋದ್ಗತಂ ವಸು ।
ಆರಣ್ಯಕಂ ಜಗೌ ದೇವೋ ಹರಿರ್ನಾರಾಯಣೋ ವಶೀ ॥8॥
ಹರಿನಾರಾಯಣನು ಉಳಿದ ಮುಖಗಳಿಂದ ನಾಲ್ಕು ವೇದಗಳಿಗೆ ಸಂಬಂಧಿಸಿದ ಆರಣ್ಯಕ ಭಾಗಗಳನ್ನು ಹೇಳುತ್ತಿದ್ದನು.
ವೇದೀಂ ಕಮಂಡಲುಂ ದರ್ಭಾನ್ಮಣಿರೂಪಾನಥೋಪಲಾನ್ ।
ಅಜಿನಂ ದಂಡಕಾಷ್ಠಂ ಚ ಜ್ವಲಿತಂ ಚ ಹುತಾಶನಮ್ ।
ಧಾರಯಾಮಾಸ ದೇವೇಶೋ ಹಸ್ತೈರ್ಯಜ್ಞಪತಿಸ್ತದಾ ॥9॥
ಯಜ್ಞಪತಿಯಾದ, ದೇವೇಶ್ವರನಾದ ಮಹಾವಿಷ್ಣುವು ತನ್ನ ಕೈಗಳಲ್ಲಿ ಯಜ್ಞವೇದಿಯನ್ನು, ಕಮಂಡಲುವನ್ನು, ಶುಭ್ರವಾದ ಮಣಿರತ್ನಗಳನ್ನು, ದರ್ಭೆಯನ್ನು, ಮೃಗಚರ್ಮವನ್ನು, ಕಾಷ್ಠದಂಡವನ್ನು ಪ್ರಜ್ವಲಿಸುತ್ತಿರುವ ಯಜ್ಞೇಶ್ವರನನ್ನು ಧರಿಸಿದ್ದನು.
ತಂ ಪ್ರಸನ್ನಂ ಪ್ರಸನ್ನಾತ್ಮಾ ನಾರದೋ ದ್ವಿಜಸತ್ತಮಃ ।
ವಾಗ್ಯತಃ ಪ್ರಯತೋ ಭೂತ್ವಾ ವವಂದೇ ಪರಮೇಶ್ವರಮ್ ।
ತಮುವಾಚ ನತಂ ಮೂರ್ಧ್ನಾ ದೇವಾನಾಮಾದಿರವ್ಯಯಃ ॥10॥
ಪ್ರಸನ್ನ ಮುಖಭಾವದಿಂದ ಕೂಡಿರುವ ಪರಮಾತ್ಮನನ್ನು ಪ್ರಸನ್ನಾತ್ಮರಾದ, ಬ್ರಾಹ್ಮಣ ಶ್ರೇಷ್ಠರಾದ ನಾರದರು ಮೌನಿಯಾಗಿ, ಜಿತೇಂದ್ರಿಯರಾಗಿ ತಲೆಬಾಗಿ ನಮಸ್ಕರಿಸಿದರು. ಆದಿದೇವನಾದ, ನಾಶರಹಿತನಾದ ಶ್ರೀಹರಿಯು ತಲೆಬಾಗಿ ನಮಸ್ಕರಿಸಿದ ನಾರದರಿಗೆ ಹೀಗೆ ಹೇಳಿದನು.
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹರ್ಷಯಃ ।
ಇಮಂ ದೇಶಮನುಪ್ರಾಪ್ತಾ ಮಮ ದರ್ಶನಲಾಲಸಾಃ ॥11॥
ನ ಚ ಮಾಂ ತೇ ದದೃಶಿರೇ ನ ಚ ದ್ರಕ್ಷ್ಯತಿ ಕಶ್ಚನ ।
ಋತೇ ಹ್ಯೇಕಾಂತಿಕಶ್ರೇಷ್ಠಾತ್ತ್ವಂ ಚೈವೈಕಾಂತಿಕೋ ಮತಃ ॥12॥
ನಾರದರೇ, ಏಕತ, ದ್ವಿತ, ತ್ರಿತ ಇನ್ನೂ ಅನೇಕ ಮಹರ್ಷಿಗಳು ನನ್ನ ದರ್ಶನವನ್ನು ಬಯಸುತ್ತಾ ಶ್ವೇತದ್ವೀಪಕ್ಕೆ ಆಗಮಿಸಿದರು. ಆದರೆ ಅವರಿಗೆ ನನ್ನ ದರ್ಶನವಾಗಲಿಲ್ಲ. ವಸ್ತುತಃ ನನ್ನ ಅನನ್ಯ ಭಕ್ತರಿಗೆ ಹೊರತು ಬೇರೆ ಯಾರಿಗೂ ನನ್ನ ದರ್ಶನವಾಗುವುದಿಲ್ಲ. ನೀನು ನನ್ನ ಭಕ್ತರಲ್ಲಿ ಶ್ರೇಷ್ಠನಾಗಿರುವಿ. ಆದ್ದರಿಂದ ದರ್ಶನವನ್ನು ಹೊಂದಲು ಸಾಧ್ಯವಾಯಿತು.
ಮಮೈತಾಸ್ತನವಃ ಶ್ರೇಷ್ಠಾ ಜಾತಾ ಧರ್ಮಗೃಹೇ ದ್ವಿಜ ।
ತಾಸ್ತ್ವಂ ಭಜಸ್ವ ಸತತಂ ಸಾಧಯಸ್ವ ಯಥಾಗತಮ್ ॥13॥

ಬ್ರಾಹ್ಮಣಶ್ರೇಷ್ಠನೇ, ಧರ್ಮಪ್ರಜೇಶ್ವರನ ಮನೆಯಲ್ಲಿ ಅವತರಿಸಿರುವ ನರ- ನಾರಾಯಣ-ಹರಿ-ಕೃಷ್ಣ ನಾಲ್ಕು ರೂಪಗಳು ನನ್ನದ್ದೇ. ನೀನು ನಿರಂತರ ಅವರ ಸೇವೆಯನ್ನೇ ಮಾಡುತ್ತಿರು. ಬಂದಂತೆ ಹಿಂದಿರುಗಿ ಭಗವಂತನ ಧ್ಯಾನವನ್ನೇ ಬದುಕಿನಲ್ಲಿ ಸಾಧಿಸು.
ವೃಣೀಷ್ವ ಚ ವರಂ ವಿಪ್ರ ಮತ್ತಸ್ತ್ವಂ ಯಮಿಹೇಚ್ಛಸಿ |
ಪ್ರಸನ್ನೋಽಹಂ ತವಾದ್ಯೇಹ ವಿಶ್ವಮೂರ್ತಿರಿಹಾವ್ಯಯಃ ॥14॥
ವಿಶ್ವಮೂರ್ತಿಯಾದ, ಅವಿನಾಶಿಯಾದ ನಾನು ನಿನ್ನ ವಿಷಯದಲ್ಲಿ ಪ್ರಸನ್ನನಾಗಿದ್ದೇನೆ. ವಿಪ್ರನೇ, ಯಾವ ವರವನ್ನು ಬಯಸುತ್ತೀಯೋ ಅದನ್ನು ಕೇಳಿಕೊ.
ನಾರದಃ
ಅದ್ಯ ಮೇ ತಪಸೋ ದೇವ ಯಮಸ್ಯ ನಿಯಮಸ್ಯ ಚ |
ಸದ್ಯಃ ಫಲಮವಾಪ್ತಂ ವೈ ದೃಷ್ಟೋ ಯದ್ಭಗವನ್ಮಯಾ ॥15॥
ನಾರದ ದೇವದೇವೇಶನೇ, ನಿನ್ನ ದರ್ಶನದಿಂದಲೇ ನಾನು ಮಾಡಿದ ತಪಸ್ಸು, ಯಮ, ನಿಯಮ, ಅನುಷ್ಠಾನ - ಈ ಎಲ್ಲದಕ್ಕೂ ಈಗಲೇ ಫಲ ದೊರೆತಂತಾಗಿದೆ.
ವರ ಏಷ ಮಮಾತ್ಯಂತಂ ದೃಷ್ಟಸ್ತ್ವಂ ಯತ್ ಸನಾತನಃ |
ಭಗವಾನ್ ವಿಶ್ವದೃಕ್ ಸಿಂಹಃ ಸರ್ವಮೂರ್ತಿರ್ಮಹಾಪ್ರಭುಃ ॥16॥
ಪೂಜ್ಯನೇ, ಸಂಪೂರ್ಣ ಜಗತ್ತಿಗೆ ಕಣ್ಣಿನಂತಿರುವಿ. ಸಕಲ ಜಗತ್ತನ್ನು ಕಾಣುತ್ತಿರುವಿ. ನರಸಿಂಹಸ್ವರೂಪನಾಗಿರುವಿ.
ಸರ್ವಮೂರ್ತಿಯೂ ಆಗಿರುವಿ. ಮಹಾಪ್ರಭುವೇ, ಸನಾತನನಾದ ನೀನು ದರ್ಶನವನ್ನು ನೀಡಿದ್ದೇ ನನ್ನ ಪಾಲಿನ ವರವಾಗಿದೆ.
ಭೀಷ್ಮಃ
ಏವಂ ಸಂದರ್ಶಯಿತ್ವಾ ತು ನಾರದಂ ಪರಮೇಷ್ಠಿಜಮ್ |
ಉವಾಚ ವಚನಂ ಭೂಯೋ ಗಚ್ಛ ನಾರದ ಮಾಚಿರಮ್ ॥17॥
ಭೀಷ್ಮ ಯುಧಿಷ್ಠಿರನೇ, ಭಗವಂತನು ಬ್ರಹ್ಮನ ಮಗನಾದ ನಾರದನಿಗೆ ದರ್ಶನವನ್ನು ನೀಡಿ ಪುನಃ ಹೀಗೆ ಹೇಳಿದನು: ನಾರದನೇ, ಬೇಗ ಹೊರಡು, ತಡ ಮಾಡಬೇಡ.
ಇಮೇ ಹ್ಯನಿಂದ್ರಿಯಾಹಾರಾ ಮದ್ಭಕ್ತಾಶ್ಚಂದ್ರವರ್ಚಸಃ |
ಏಕಾಗ್ರಾಶ್ಚಿಂತಯೇಯುರ್ಮಾಂ ನೈಷಾಂ ವಿಘ್ನೋ ಭವೇದಿತಿ ॥18॥
ಮಗುವೇ, ಶ್ವೇತದ್ವೀಪ ವಾಸಿಗಳೆಲ್ಲರೂ ಬಾಹ್ಯೇಂದ್ರಿಯರಹಿತರಾಗಿ, ಸ್ವರೂಪೇಂದ್ರಿಯದಿಂದಲೇ ವಿಹರಿಸುತ್ತಿರುವವರು. ಚಂದ್ರನ ತೇಜಸ್ಸಿಗೆ ಸಮಾನವಾದ ಪ್ರಭೆಯನ್ನು ಹೊಂದಿರುವ ಇವರು ನನ್ನ ಪರಮಭಕ್ತರು. ನಿರಂತರವೂ ಏಕಾಗ್ರ ಬುದ್ಧಿಯಿಂದ ನನ್ನನ್ನೇ ಧ್ಯಾನಿಸುತ್ತಾರೆ. ಆದ್ದರಿಂದ ಇವರ ಧ್ಯಾನಕ್ಕೆ ಅಡ್ಡಿಯಾಗಬಾರದು. ನೀನು ಇಲ್ಲಿಂದ ತೆರಳು.
ಸಿದ್ಧಾ ಹ್ಯೇತೇ ಮಹಾಭಾಗಾಃ ಪುರಾ ಹ್ಯೇಕಾಂತಿನೋಭವನ್ |
ತಮೋರಜೋವಿನಿರ್ಮುಕ್ತಾ ಮಾಂ ಪ್ರವೇಕ್ಷ್ಯಂತ್ಯಸಂಶಯಮ್ ॥19॥
ಹಿಂದೆ ಇವರೆಲ್ಲರೂ ನನ್ನ ಏಕಾಂತಭಕ್ತರು. ತಮಸ್ಸ, ರಜಸ್ಸುಗಳಿಂದ ರಹಿತರಾದ ಈ ಮಹಾಭಾಗರು ಸಿದ್ಧಿಯನ್ನು ಹೊಂದಿರುತ್ತಾರೆ. ನಿಸ್ಸಂದೇಹವಾಗಿ ನನ್ನ ಪಾದವನ್ನೇ ಹೊಂದುತ್ತಾರೆ.
ನ ದೃಶ್ಯಶ್ಚಕ್ಷುಷಾ ಯೋಸೌ ನ ಸ್ಪೃಶ್ಯಃ ಸ್ಪರ್ಶನೇನ ಚ |
ನ ೆರೇಯಶ್ಚೈವ ಗಂಧೇನ ರಸೇನ ಚ ವಿವರ್ಜಿತಃ ॥20॥
ನಾರದನೇ, ಯಾರನ್ನು ಕಣ್ಣಿನಿಂದ ನೋಡಲು ಸಾಧ್ಯವಾಗುವುದಿಲ್ಲವೋ, ತ್ವಚೆಯಿಂದ ಮುಟ್ಟಲು ಸಾಧ್ಯವಿಲ್ಲವೋ,
ಘ್ರಾಣೇಂದ್ರಿಯದಿಂದ ಆಘ್ರಾಣಿಸಲು, ಸಾಧ್ಯವಿಲ್ಲವೋ, ರಸನೇಂದ್ರಿಯದಿಂದ ಆಸ್ವಾದಿಸಲು ಸಾಧ್ಯವಿಲ್ಲವೋ;
ಸತ್ತ್ವಂ ರಜಸ್ತಮಶ್ಚೈವ ನ ಗುಣಾಸ್ತಂ ಭಜಂತಿ ವೈ |
ಯಶ್ಚ ಸರ್ವಗತಃ ಸಾಕ್ಷೀ ಲೋಕಸ್ಯಾತ್ಮೇತಿ ಕಥ್ಯತೇ ॥21॥
ಸತ್ತ್ವ, ರಜಸ್, ತಮೋಗುಣಗಳು ಯಾರನ್ನು ಮುಟ್ಟಲಾಗದೋ ಅಂತಹ ಗುಣಾತೀತನಾದ, ಸರ್ವವ್ಯಾಪ್ತಿಯಾದ, ಸರ್ವಸಾಕ್ಷಿಯಾದ ಭಗವಂತನಿಗೆ ಲೋಕದ ಆತ್ಮ ಎನ್ನುತ್ತಾರೆ.
ಭೂತಗ್ರಾಮಶರೀರೇಷು ನಶ್ಯತ್ಸು ನ ವಿನಶ್ಯತಿ |
ಅಜೋ ನಿತ್ಯಃ ಶಾಶ್ವತಶ್ಚ ನಿರ್ಗುಣೋ ನಿಷ್ಕಲಸ್ತಥಾ ॥22॥
ಪ್ರಾಣಿಗಳ ಶರೀರಗಳಲ್ಲಿಯೂ ಅಂತರ್ಯಾಮಿಯಾಗಿ, ಶರೀರಗಳು ನಾಶ ಹೊಂದಿದರೂ ನಾಶ ಹೊಂದದೆ, ಹುಟ್ಟಿಲ್ಲದೆ, ನಿತ್ಯವೂ ಶಾಶ್ವತನೂ, ಪ್ರಾಕೃತ ಗುಣರಹಿತನೂ, ನಿಷ್ಕಲನೂ ಆಗಿದ್ದಾನೆ.
ದ್ವಿರ್ದ್ವಾದಶೇಭ್ಯಸ್ತತ್ತ್ವೇಭ್ಯಃ ಖ್ಯಾತೋ ಯಃ ಪಂಚವಿಂಶಕಃ |
ಪುರುಷೋ ನಿಷ್ಕ್ರಿಯಶ್ಚೈವ ಜ್ಞಾನದೃಶ್ಯಶ್ಚ ಕಥ್ಯತೇ ॥23॥
ಚತುರ್ವಿಂಶತಿ ತತ್ತ್ವಗಳಿಂದ ಅತೀತನಾದ ಇಪ್ಪತ್ತೈದನೆಯ ತತ್ತ್ವವೆಂದು ವಿಖ್ಯಾತನಾದವನು ಇವನೇ. ಪುರುಷ,
ಪ್ರಾಕೃತಕ್ರಿಯಾರಹಿತ, ಜ್ಞಾನದೃಶ್ಯ ಎಂದೆಲ್ಲ ಈ ವಾಸುದೇವನನ್ನು ಕರೆಯುತ್ತಾರೆ.
ಯಂ ಪ್ರವಿಶ್ಯ ಭವಂತೀಹ ಮುಕ್ತಾ ವೈ ದ್ವಿಜಸತ್ತಮ |
ಸ ವಾಸುದೇವೋ ವಿಜ್ಞೇಯಃ ಪರಮಾತ್ಮಾ ಸನಾತನಃ ॥24॥
ಯಾವ ಸನಾತನನಾದ ಈ ಪರಮಾತ್ಮನನ್ನು ಹೊಂದಿ ದ್ವಿಜಶ್ರೇಷ್ಠರು ಮುಕ್ತರಾಗುತ್ತಾರೋ ಅವನನ್ನೇ ವಾಸುದೇವನೆಂದು ತಿಳಿಯಬೇಕು.
ಪಶ್ಯ ದೇವಸ್ಯ ಮಾಹಾತ್ಮ್ಯಂ ಮಹಿಮಾನಂ ಚ ನಾರದ |

ಶುಭಾಶುಭೈಃ ಕರ್ಮಭಿರ್ಯೋ ನ ಲಿಪ್ಯತಿ ಕದಾಚನ ॥25॥
ನಾರದನೇ, ಶುಭಾಶುಭ ಕರ್ಮಗಳಿಂದ ಎಂದಿಗೂ ಲಿಪ್ತನಾಗದಿರುವ, ದೇವದೇವನಾದ ಈ ಪರಮಾತ್ಮನ ಮಹಿಮೆಯನ್ನು ನೀನೇ ನೋಡು.
ಸತ್ತ್ವಂ ರಜಸ್ತಮಶ್ಚೈವ ಗುಣಾನೇತಾನ್ ಪ್ರಚಕ್ಷತೇ |
ಏತೇ ಸರ್ವಶರೀರೇಷು ತಿಷ್ಠಂತಿ ವಿಚರಂತಿ ಚ ॥26॥
ಸತ್ತ್ವ, ರಜಸ್ಸು, ತಮಸ್ಸು ಎಂಬ ಈ ಮೂರು ಗುಣಗಳನ್ನು ಗುಣ ಎಂದು ಹೇಳುತ್ತಾರೆ. ಈ ಮೂರು ಗುಣಗಳು ಎಲ್ಲ ಶರೀರಗಳಲ್ಲಿದ್ದು ಸಂಚರಿಸುತ್ತವೆ.
ಏತಾಂಗುಣಾಂಸ್ತು ಕ್ಷೇತ್ರಜ್ಞೋ ಭುಂಕ್ತೇ ನೈಭಿಃ ಸ ಭುಜ್ಯತೇ |
ನಿರ್ಗುಣೋ ಗುಣಭುಕ್ಚೈವ ಗುಣಸ್ರಷ್ಟಾ ಗುಣಾಧಿಕಃ ॥27॥
ಈ ಗುಣಗಳನ್ನು ಕ್ಷೇತ್ರಜ್ಞನಾದ ಪರಮಾತ್ಮನು ಅನುಭವಿಸುತ್ತಿದ್ದರೂ ಆ ಗುಣಗಳಿಂದ ಬದ್ಧನಾಗಿರುವುದಿಲ್ಲ. ಆದ್ದರಿಂದ ಪ್ರಾಕೃತಗುಣರಹಿತನೂ, ಅಪ್ರಾಕೃತ ಗುಣಭೋಕ್ತೃವೂ, ಗುಣಸ್ರಷ್ಟಾರನೂ, ಗುಣಾಧಿಕನೂ ಎನಿಸಿದ್ದಾನೆ.
ಜಗತ್ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ |
ಜ್ಯೋತಿಷ್ಯಾಪಃ ಪ್ರಲೀಯಂತೇ ಜ್ಯೋತಿರ್ವಾಯೌ ಪ್ರಲೀಯತೇ ॥28॥
ಜಗತ್ತೆಲ್ಲವನ್ನೂ ನೆಲೆಗೊಳಿಸಿದವನು. ಪೃಥಿವಿ ತತ್ತ್ವವು ಜಲತತ್ತ್ವದಲ್ಲಿ ಲಯವಾಗುತ್ತದೆ. ಜಲವು ತೇಜಸ್ಸಿನಲ್ಲಿ, ಜ್ಯೋತಿಯು ವಾಯುವಿನಲ್ಲಿ ಲಯ ಹೊಂದುತ್ತದೆ.
ಖೇ ವಾಯುಃ ಪ್ರಲಯಂ ಯಾತಿ ಮನಸ್ಯಾಕಾಶಮೇವ ಚ |
ಮನೋ ಹಿ ಪರಮಂ ಭೂತಂ ತದವ್ಯಕ್ತೇ ಪ್ರಲೀಯತೇ ॥29॥
ವಾಯುವು ಆಕಾಶದಲ್ಲಿ, ಆಕಾಶವು ಮನಸ್ಸಿನಲ್ಲಿ ಲಯ ಹೊಂದುತ್ತದೆ. ಮನಸ್ಸೇ ಮಹಾಭೂತ ಎನಿಸಿದೆ. ಅಂತಹ ಮನಸ್ಸು ಅವ್ಯಕ್ತ ತತ್ತ್ವದಲ್ಲಿ ಲಯ ಹೊಂದುತ್ತದೆ.
ಅವ್ಯಕ್ತಂ ಪುರುಷೇ ಬ್ರಹ್ಮನ್ನಿಷ್ಕ್ರಿಯೇ ಸಂಪ್ರಲೀಯತೇ |
ನಾಸ್ತಿ ತಸ್ಮಾತ್ ಪರತರಂ ಪುರುಷಾದ್ವೈ ಸನಾತನಾತ್ ॥30॥
ಅವ್ಯಕ್ತ ಪ್ರಕೃತಿಯು ಪ್ರಾಕೃತ ಕ್ರಿಯಾ ರಹಿತನಾದ ಪುರುಷನಲ್ಲಿ ಲಯ ಹೊಂದುತ್ತದೆ. ಸನಾತನನಾದ ಆ ಪುರುಷನಿಗಿಂತಲೂ ಪರತರವಾದ ವಸ್ತುವು ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ.
ನಿತ್ಯಂ ಹಿ ನಾಸ್ತಿ ಜಗತಿ ಭೂತಂ ಸ್ಥಾವರಜಂಗಮಮ್ |
ಋತೇ ತಮೇಕಂ ಪುರುಷಂ ವಾಸುದೇವಂ ಸನಾತನಮ್ |
ಸರ್ವಭೂತಾತ್ಮಭೂತೋ ಹಿ ವಾಸುದೇವೋ ಮಹಾಬಲಃ ॥31॥
ಈ ಜಗತ್ತಿನಲ್ಲಿ ಶಾಶ್ವತನಾದ, ಪುರುಷೋತ್ತಮನಾದ ವಾಸುದೇವನನ್ನು ಬಿಟ್ಟು ಚರಾಚರಾತ್ಮಕವಾದ ಯಾವುದೇ ವಸ್ತುವು ಇವನಂತೆ ನಿತ್ಯವಾಗಿರುವುದಿಲ್ಲ. ಮಹಾಪ್ರಬಲನಾದ ವಾಸುದೇವನು ಸರ್ವಪ್ರಾಣಿಗಳಿಗೂ ಅಂತರ್ಯಾಮಿ ಆಗಿದ್ದಾನೆ.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ತೇ ಸಮೇತಾ ಮಹಾತ್ಮಾನಃ ಶರೀರಮಿತಿ ಸಂಜ್ಞಿತಮ್ ॥32॥
ಪೃಥಿವಿ, ವಾಯು, ಆಕಾಶ, ಜಲ, ತೇಜಸ್ಸು - ಇವು ಪಂಚಭೂತಗಳು. ಇವುಗಳು ಒಂದು ಕಡೆ ಸೇರಿದಾಗ ಶರೀರವೆಂಬ ಚಿಹ್ನೆಯು ಮೂಡುತ್ತದೆ.
ತದಾವಿಶತಿ ಯೋ ಬ್ರಹ್ಮನ್ನದೃಶ್ಯೋ ಲಘುವಿಕ್ರಮಃ |
ಉತ್ಪನ್ನ ಏವ ಭವತಿ ಶರೀರಂ ಚೇಷ್ಟಯನ್ ಪ್ರಭುಃ ॥33॥
ಪಂಚಭೂತಾತ್ಮಕವಾದ ಶರೀರವು ಉತ್ಪನ್ನವಾಗುತ್ತಿರಲು ಅದೃಶ್ಯನಾದ ವಾಮನ ರೂಪಿಯಾದ ಭಗವಂತನು ಪ್ರವೇಶಿಸುತ್ತಾನೆ. ಪ್ರಭುವಾದ ಭಗವಂತನು ಶರೀರದಲ್ಲಿ ಪ್ರವೇಶಿಸುತ್ತಿರಲು ದುರ್ಬಲವಾದ ಮಗುವಿನ ಶರೀರವು ಕ್ರಿಯಾಶೀಲವಾಗುತ್ತದೆ.
ವ್ಯಾಖ್ಯಾನ ವಿಶೇಷ `ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಲಶಕ್ತಿಧರಃ' ಎಂಬ ಭಾಗವತದ ಅಭಿಪ್ರಾಯವನ್ನು ಇಲ್ಲಿ ತಿಳಿಸಲಾಗಿದೆ. ಸಮಸ್ತ ಜೀವರ ಇಂದ್ರಿಯಗಳಲ್ಲಿ ನೆಲೆ ನಿಂತು ಭಗವಂತನೇ ಆಯಾ ಶಕ್ತಿಯನ್ನು ಹೊರಹೊಮ್ಮುವಂತೆ ಮಾಡುತ್ತಾನೆ. ಕೇನೋಪನಿಷತ್ತಿನ ಸಾರವೂ ಇದೇ ಆಗಿದೆ.
ನ ವಿನಾ ಧಾತುಸಂಘಾತಂ ಶರೀರಂ ಭವತಿ ಕ್ವಚಿತ್ |
ನ ಚ ಜೀವಂ ವಿನಾ ಬ್ರಹ್ಮನ್ ಧಾತವಶ್ಚೇಷ್ಟಯಂತ್ಯುತ ॥34॥
ಪಂಚಭೂತಗಳ ಸಮಾವೇಶವಿಲ್ಲದೆ ಎಲ್ಲಿಯೂ ಶರೀರದ ರಚನೆಯು ಆಗುವುದಿಲ್ಲ. ಜೀವವು ಶರೀರದಲ್ಲಿ ಪ್ರವೇಶಿಸಿದ್ದರೆ ವಾಯುವಿನ ಚೇಷ್ಟೆಗಳು ನಡೆಯುವುದಿಲ್ಲ.
ಸ ಜೀವಃ ಪರಿಸಂಖ್ಯಾತಃ ಶೇಷಃ ಸಂಕರ್ಷಣಃ ಪ್ರಭುಃ |
ತಸ್ಮಾತ್ ಸನತ್ಕುಮಾರತ್ವಂ ಯೋ ಲಭೇತ ಸ್ವಕರ್ಮಣಾ ॥35॥
ಹೀಗೆ ಶರೀರವನ್ನು ನಿಯಮಿಸುವ ಜೀವನಿಗೆ ಸಂಕರ್ಷಣ ಎಂದು ಹೆಸರು. ಜೀವನವನ್ನು ನೀಡುವ ಜೀವಶಬ್ದವಾಚ್ಯನು ನಾರಾಯಣನೇ ಆಗಿದ್ದಾನೆ. ಪ್ರಳಯ ಕಾಲದಲ್ಲೂ ಇವನು ಉಳಿಯುವುದರಿಂದ ಶೇಷ ಎಂಬ ಹೆಸರನ್ನು ಹೊಂದಿರುತ್ತಾನೆ. ಈ ಕಾರಣದಿಂದಲೇ ಸನತ್ಕುಮಾರ ಎಂಬ ಹೆಸರನ್ನು ತಾನು ಮಾಡುವ ವ್ಯಾಪಾರದ ಹಿನ್ನೆಲೆಯಲ್ಲಿ ಹೊಂದಿರುತ್ತಾನೆ.
ಯಸ್ಮಿಂಶ್ಚ ಸರ್ವಭೂತಾನಿ ಪ್ರಲಯಂ ಯಾಂತಿ ಸಂಕ್ಷಯೇ |
ಸ ಮನಃ ಸರ್ವಭೂತಾನಾಂ ಪ್ರದ್ಯುಮ್ನಃ ಪರಿಪದ್ಯತೇ ॥36॥

ಯಾವ ಭಗವಂತನಲ್ಲಿಯೇ ಪ್ರಳಯ ಕಾಲದಲ್ಲಿ ಎಲ್ಲ ಭೂತಗಳು ಲಯವನ್ನು ಹೊಂದುತ್ತವೆಯೋ ಅಂತಹ ಭಗವಂತನು ಸಮಸ್ತ ಜೀವರ ಮನಸ್ಸಿನಲ್ಲಿ ಪ್ರದ್ಯುಮ್ನ ನಾಮಕನಾಗಿ ಖ್ಯಾತನಾಗಿದ್ದಾನೆ.
ತಸ್ಮಾತ್ ಪ್ರಸೂತೋ ಯಃ ಕರ್ತಾ ಕಾರ್ಯಂ ಕಾರಣಮೇವ ಚ |
ಯಸ್ಮಾತ್ ಸರ್ವಂ ಪ್ರಭವತಿ ಜಗತ್ಸ್ಥಾವರಜಂಗಮಮ್ |
ಸೋಽನಿರುದ್ಧಃ ಸ ಈಶಾನೋ ವ್ಯಕ್ತಿಃ ಸಾ ಸರ್ವಕರ್ಮಸು ॥37॥
ಆ ಪ್ರದ್ಯುಮ್ನನಿಂದ ಯಾವುದು ಹುಟ್ಟುತ್ತದೋ ಅಂತಹ ಅಹಂಕಾರವೇ ಕರ್ತೃವು, ಕಾರಣವು ಆಗಿದೆ. ಅವನಿಂದಲೇ ಸ್ಥಾವರ-ಜಂಗಮಾತ್ಮಕವಾದ ಸಮಸ್ತ ಜಗತ್ತು ಹುಟ್ಟುತ್ತದೆ. ಅವನೇ ಈಶಾನನೂ, ಸಮಸ್ತ ಕರ್ಮಗಳಲ್ಲಿಯೂ ಅಭಿವ್ಯಕ್ತಿಯನ್ನು ಹೊಂದುವವನಾಗಿದ್ದಾನೆ.
ಯೋ ವಾಸುದೇವೋ ಭಗವಾನ್ ಕ್ಷೇತ್ರಜ್ಞೋ ನಿರ್ಗುಣಾತ್ಮಕಃ |
ಜ್ಞೇಯಃ ಸ ಏವ ಭಗವಾನ್ ಜೀವಃ ಸಂಕರ್ಷಣಃ ಪ್ರಭುಃ ॥38॥
ಪ್ರಾಕೃತಗುಣರಹಿತನಾದ, ಕ್ಷೇತ್ರಜ್ಞನೆನಿಸಿದ ಯಾವ ವಾಸುದೇವರೂಪಿಯಾದ ಭಗವಂತನು ಇದ್ದಾನೋ ಆ ಭಗವಂತನನ್ನೇ ಜೀವ ಎಂದು ತಿಳಿಯಬೇಕು. ಲೋಕ ಪ್ರಸಿದ್ಧನಾದ ಜೀವನು ಜೀವನೆನಿಸುವುದಿಲ್ಲ. ಸಮಸ್ತ ಸ್ಥಾವರ-ಜಂಗಮಗಳಿಂದ ಕೂಡಿದ ಜಗತ್ತನ್ನು ಹುಟ್ಟಿಸುತ್ತಾನೆ ಎಂಬ ಮಹಿಮೆಯು ಲೋಕಪ್ರಸಿದ್ಧನಾದ ಜೀವನಿಗೆ ಹೊಂದಿಕೆಯಾಗದ ಕಾರಣ ಸಂಕರ್ಷಣನಾದವನು ಭಗವಂತನೇ ಎಂದು ಹೇಳಬೇಕೇ ವಿನಾ ಹಲಾಯುಧ (ನೇಗಿಲು) ಧರಿಸಿದ ಆದಿಶೇಷ ಎಂದು ಅರ್ಥವಲ್ಲ.
ಸಂಕರ್ಷಣಾಚ್ಚ ಪ್ರದ್ಯುಮ್ನೋ ಮನೋಭೂತಃ ಸ ಉಚ್ಯತೇ |
ಪ್ರದ್ಯುಮ್ನಾದ್ಯೋಽನಿರುದ್ಧಸ್ತು ಸೋಽಹಂಕಾರೋ ಮಹೇಶ್ವರಃ ॥39॥
ಸಂಕರ್ಷಣನಾಮಕನಾದ ಭಗವಂತನಿಂದ ಮನಸ್ಸಿಗೆ ನಿಯಾಮಕನಾದ ಪ್ರದ್ಯುಮ್ನನು ಅವತರಿಸುತ್ತಾನೆ. ಪ್ರದ್ಯುಮ್ನನಿಂದ ಪ್ರಕಟಗೊಂಡ ಅನಿರುದ್ಧನು ಅಹಂಕಾರಕ್ಕೆ ನಿಯಾಮಕನಾದ ಮಹೇಶ್ವರನು.
ಮತ್ತಃ ಸರ್ವಂ ಸಂಭವತಿ ಜಗತ್‌ಸ್ಥಾವರಜಂಗಮಮ್ |
ಅಕ್ಷರಂ ಚ ಕ್ಷರಂ ಚೈವ ಸಚ್ಚಾಸಚ್ಚೈವ ನಾರದ ॥40॥
ನಾರದನೇ, ಕ್ಷರ-ಅಕ್ಷರವೆನಿಸಿದ, ಕಾರ್ಯ-ಕಾರಣವೆನಿಸಿದ, ಸ್ಥಾವರ- ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನನ್ನಿಂದಲೇ ಹುಟ್ಟನ್ನು ಪಡೆಯುತ್ತದೆ.
ಮಾಂ ಪ್ರವಿಶ್ಯ ಭವಂತೀಹ ಮುಕ್ತಾ ಭಕ್ತಾಸ್ತು ಯೇ ಮಮ |
ಅಹಂ ಹಿ ಪುರುಷೋ ಜ್ಞೇಯೋ ನಿಷ್ಕ್ರಿಯಃ ಪಂಚವಿಂಶಕಃ ॥41॥
ನನ್ನ ಭಕ್ತರೆಲ್ಲರೂ ನನ್ನನ್ನೇ ಹೊಂದಿ ಮುಕ್ತರಾಗುತ್ತಾರೆ. ನಾನೇ ಪುರುಷನು, ಜ್ಞೇಯ, ನಿಷ್ಕ್ರಿಯನು, ಇಪ್ಪತ್ತೈದನೆಯ ತತ್ತ್ವವು ಆಗಿದ್ದೇನೆ.
ನಿರ್ಗುಣೋ ನಿಷ್ಕಲಶ್ಚೈವ ನಿರ್ದ್ವಂದ್ವೋ ನಿಷ್ಪರಿಗ್ರಹಃ |
ಏತತ್ತ್ವಯಾ ನ ವಿಜ್ಞೇಯಂ ರೂಪವಾನಿತಿ ದೃಶ್ಯತೇ |
ಇಚ್ಛನ್ಮುಹೂರ್ತಾನ್ನಶ್ಯೇಯಮೀಶೋಽಹಂ ಜಗತೋ ಗುರುಃ ॥42॥
ನಾನು ಪ್ರಾಕೃತಗುಣರಹಿತನೂ, ಪ್ರಾಕೃತ ಕಲಾರಹಿತನೂ, ಸುಖ-ದುಃಖ ದ್ವಂದ್ವ ರಹಿತನೂ, ಪ್ರಾಕೃತಪರಿಗ್ರಹಗಳಿಂದ ರಹಿತನೂ ಆಗಿದ್ದೇನೆ. ನಾನು ನಿನಗೆ ವಿಶ್ವರೂಪವನ್ನು ಧರಿಸಿ ಕಾಣಿಸಿಕೊಳ್ಳುತ್ತಿರುವುದರಿಂದ ಪ್ರಾಕೃತ ರೂಪಿ ಎಂದು ನೀನು ಭಾವಿಸಬಾರದು. ನಾನು ಇಚ್ಛಿಸಿದರೆ ಒಂದು ಮುಹೂರ್ತದಲ್ಲಿ ಜಗತ್ತೆಲ್ಲವನ್ನೂ ನಾಶಗೊಳಿಸಿಯೇನು. ನಾನು ಜಗತ್ತಿಗೆ ಗುರುವೂ ಆಗಿದ್ದೇನೆ.
ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ |
ಸರ್ವಭೂತಗುಣೈರ್ಯುಕ್ತಂ ನೈವಂ ತ್ವಂ ಜ್ಞಾತುಮರ್ಹಸಿ |
ಮಯ್ಯೇತತ್ ಕಥಿತಂ ಸಮ್ಯಕ್ತವ ಮೂರ್ತಿಚತುಷ್ಟಯಮ್ ॥43॥
ನಾರದನೇ, ನಾನು ಸೃಷ್ಟಿಸಿರುವ ಇಚ್ಛಾಶಕ್ತಿಯಿಂದಲೇ ನೀನು ನನ್ನ ದರ್ಶನವನ್ನು ಪಡೆದಿರುತ್ತಿ. ಪ್ರಾಕೃತರೂಪ-ರಸಾದಿ ಗುಣದಿಂದಾಗಲಿ, ದುಃಖಾದಿ ಪ್ರಾಣಿಗಳ ಗುಣದಿಂದಾಗಲಿ ನಾನು ಕೂಡಿದವನೆಂದು ನೀನು ತಿಳಿಯಬೇಡ. ನಾರದನೇ, ನಿನಗೆ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ನಾಲ್ಕು ರೂಪಗಳ ವಿಷಯವನ್ನು ಚೆನ್ನಾಗಿ ಹೇಳಿರುತ್ತೇನೆ.
ಸಿದ್ಧಾ ಹ್ಯೇತೇ ಮಹಾಭಾಗಾ ನರಾ ಹ್ಯೇಕಾಂತಿನೋಽಭವನ್ |
ತಮೋರಜೋಭ್ಯಾಂ ನಿರ್ಮುಕ್ತಾಃ ಪ್ರವೇಕ್ಷ್ಯಂತಿ ಚ ಮಾಂ ಮುನೇ ॥
ಮಹಾಪುಣ್ಯವಂತರಾದ ಶ್ವೇತದ್ವೀಪ ನಿವಾಸಿಗಳೆಲ್ಲರೂ ಸಿದ್ಧ ಪುರುಷರಾಗಿರುತ್ತಾರೆ. ನನ್ನ ಅನನ್ಯಭಕ್ತರಾಗಿದ್ದಾರೆ. ತಮಸ್ಸು, ರಜಸ್ಸುಗಳಿಂದ ಮುಕ್ತರಾಗಿದ್ದಾರೆ. ನನ್ನನ್ನೇ ಇವರೆಲ್ಲರೂ ಹೊಂದುತ್ತಾರೆ.
ಅಹಂ ಕರ್ತಾ ಚ ಕಾರ್ಯಂ ಚ ಕಾರಣಂ ಚಾಪಿ ನಾರದ |
ಅಹಂ ಹಿ ಜೀವಸಂಜ್ಞೋ ವೈ ಮಯಿ ಜೀವಃ ಸಮಾಹಿತಃ |
ಮೈವಂ ತೇ ಬುದ್ಧಿರತ್ರಾಭೂದ್ದೃಷ್ಟೋ ಜೀವೋ ಮಯೇತಿ ಚ ॥45॥
ನಾನೇ ಜಗತ್ತಿನ ಕರ್ತ. ಕಾರ್ಯ-ಕಾರಣಗಳಲ್ಲಿಯೂ ನಾನೇ ಅಂತರ್ಯಾಮಿಯು. ನಾನೇ ಜೀವ ಎಂಬ ಹೆಸರನ್ನು ಜೀವರಲ್ಲಿದ್ದು ಪಡೆದಿರುತ್ತೇನೆ. ಆದ್ದರಿಂದ ನೀನು ನಾನು ಜೀವನನ್ನು ನೋಡಿದೆ ಎಂದು ಭಾವಿಸಬೇಡ. ಪರಮಾತ್ಮನನ್ನೇ ನೋಡಿರುತ್ತಿ ಎಂದು ಭಾವ.
ಅಹಂ ಸರ್ವತ್ರಗೋ ಬ್ರಹ್ಮನ್ ಭೂತಗ್ರಾಮಾಂತರಾತ್ಮಕಃ |
ಭೂತಗ್ರಾಮಶರೀರೇಷು ನಶ್ಯತ್ಸು ನ ನಶಾಮ್ಯಹಮ್ ॥46॥

ನಾನು ಎಲ್ಲೆಡೆಯೂ ನೆಲೆಗೊಂಡಿರುವೆ. ಸಮಸ್ತ ಇಂದ್ರಿಯಗಳಲ್ಲಿಯೂ ಅಂತರ್ಯಾಮಿಯಾಗಿರುವೆ. ಇಂದ್ರಿಯಗಳನ್ನು ಧರಿಸಿದ ಜೀವರ ಶರೀರಗಳು ನಾಶ ಹೊಂದಿದರೂ ನಾನು ನಾಶವನ್ನು ಹೊಂದುವುದಿಲ್ಲ.
ಹಿರಣ್ಯಗರ್ಭೋ ಲೋಕಾದಿಶ್ಚತುರ್ವಕ್ತ್ರೋ ನಿರುಕ್ತಗಃ |
ಬ್ರಹ್ಮಾ ಸನಾತನೋ ದೇವೋ ಮಮ ಬಹ್ವರ್ಥಚಿಂತಕಃ ॥47॥
ಯಾರು ಸಮಸ್ತ ಜಗತ್ತಿಗೆ ಆದಿಯಾಗಿ ನಾಲ್ಕು ಮುಖಗಳನ್ನು ಧರಿಸಿ ಇದ್ದಾನೋ ಅಂತಹ ಸನಾತನನಾದ ಚತುರ್ಮುಖ ಬ್ರಹ್ಮದೇವನು ನನ್ನ ಅನೇಕ ವ್ಯಾಪಾರಗಳನ್ನು ಚೆನ್ನಾಗಿ ಚಿಂತಿಸುತ್ತಾನೆ.
ಪಶ್ಯೈಕಾದಶ ಮೇ ರುದ್ರಾನ್ ದಕ್ಷಿಣಂ ಪಾರ್ಶ್ವಮಾಸ್ಥಿತಾನ್ |
ದ್ವಾದಶೈವ ತಥಾದಿತ್ಯಾನ್ವಾಮಂ ಪಾರ್ಶ್ವಂ ಸಮಾಸ್ಥಿತಾನ್ ॥48॥
ನನ್ನ ಬಲಭಾಗದಲ್ಲಿ ಉಪಸ್ಥಿತರಾದ ಹನ್ನೊಂದು ಮಂದಿ ರುದ್ರರನ್ನು, ಎಡಭಾಗದಲ್ಲಿರುವ ಹನ್ನೆರಡು ಮಂದಿ ಆದಿತ್ಯರನ್ನು ನೀನೇ ನೋಡು.
ಅಗ್ರತಶ್ಚೈವ ಮೇ ಪಶ್ಯ ವಸೂನಷ್ಟೌ ಸುರೋತ್ತಮಾನ್ |
ನಾಸತ್ಯಂ ಚೈವ ದಸ್ರಂ ಚ ಭಿಷಜೌ ಪಶ್ಯ ಪೃಷ್ಠತಃ ॥49॥
ನನ್ನ ಮುಂಭಾಗದಲ್ಲಿರುವ ಸುರೋತ್ತಮರಾದ ಎಂಟು ಮಂದಿ ವಸುದೇವತೆಗಳನ್ನು, ನನ್ನ ಹಿಂಭಾಗದಲ್ಲಿರುವ ನಾಸತ್ಯ, ದಸ್ರ ಎಂಬ ವೈದ್ಯರಾದ ಅಶ್ವಿನೀದೇವತೆಗಳನ್ನು ನೀನೇ ನೋಡು.
ಸರ್ವಾನ್ ಪ್ರಜಾಪತೀನ್ ಪಶ್ಯ ಪಶ್ಯ ಸಪ್ತ ಋಷೀನಪಿ |
ವೇದಾನ್ಯಜ್ಞಾಂಶ್ಚ ಶತಶಃ ಪಶ್ಯಾಮೃತಮಥೌಷಧೀಃ ॥50॥
ಇದರಂತೆ ನನ್ನ ಅವಯವಗಳಲ್ಲಿರುವ ಪ್ರಜಾಪತಿಗಳನ್ನು, ಸಪ್ತರ್ಷಿಗಳನ್ನು, ವೇದಗಳನ್ನು, ಯಜ್ಞಗಳನ್ನು, ಅಮೃತವನ್ನು, ಔಷಧಿಗಳನ್ನು ನೂರಾರು ವಿಧವಾಗಿ ಇರುವುದನ್ನು ನೀನೇ ನೋಡು.
ತಪಾಂಸಿ ನಿಯಮಾಂಶ್ಚೈವ ಯಮಾನಪಿ ಪೃಥಗ್ವಿಧಾನ್ |
ತಥಾಷ್ಟಗುಣಮೈಶ್ವರ್ಯಮೇಕಸ್ಥಂ ಪಶ್ಯ ಮೂರ್ತಿಮತ್ ॥51॥
ತಪಸ್ಸು, ಅನೇಕ ರೀತಿಗಳಾದ ಯಮ-ನಿಯಮಗಳು, ಅಣಿಮಾದಿ ಅಷ್ಟೈಶ್ವರ್ಯಗಳು ಇವೆಲ್ಲವೂ ನನ್ನಲ್ಲಿ ನೆಲೆಗೊಂಡಿರುವುದನ್ನು ನೀನೇ ನೋಡು.
ಶ್ರಿಯಂ ಲಕ್ಷ್ಮೀಂ ಚ ಕೀರ್ತಿಂ ಚ ಪೃಥಿವೀಂ ಚ ಕಕುದ್ಮತೀಮ್ |
ವೇದಾನಾಂ ಮಾತರಂ ಪಶ್ಯ ಮತ್ಸ್ಥಾಂ ದೇವೀಂ ಸರಸ್ವತೀಮ್ ॥52॥
ಶ್ರೀ, ಲಕ್ಷ್ಮೀ, ಕೀರ್ತಿ, ದಿಗಭಿಮಾನಿನಿಯಾದ ಪೃಥಿವಿ, ವೇದಗಳಿಗೆ ಮಾತೆಯಾದ ಸರಸ್ವತಿ - ಇವರೆಲ್ಲರೂ ನನ್ನನ್ನೇ ಆಶ್ರಯಿಸಿರುವುದನ್ನು ನೋಡು.
ಧ್ರುವಂ ಚ ಜ್ಯೋತಿಷಾಂ ಶ್ರೇಷ್ಠಂ ಪಶ್ಯ ನಾರದ ಖೇಚರಮ್ |
ಅಂಭೋಧರಾನ್ ಸಮುದ್ರಾಂಶ್ಚ ಸರಾಂಸಿ ಸರಿತಸ್ತಥಾ ॥53॥
ನಾರದನೇ, ನಕ್ಷತ್ರಗಳಲ್ಲಿ ಶ್ರೇಷ್ಠನಾದ, ಆಕಾಶಚಾರಿಯಾದ ಧ್ರುವನಕ್ಷತ್ರವು ನನ್ನ ಶರೀರದಲ್ಲಿರುವುದನ್ನು ನೋಡು. ಮೇಘಗಳು, ಸಮುದ್ರಗಳು, ಸರೋವರಗಳು, ನದಿಗಳು ನನ್ನಲ್ಲೇ ನೆಲೆಸಿವೆ.
ಮೂರ್ತಿಮಂತಃ ಪಿತೃಗಣಾಂಶ್ಚತುರಃ ಪಶ್ಯ ಸತ್ತಮ |
ತ್ರೀಂಶ್ಚೈವೇಮಾನ್ ಗುಣಾನ್ ಪಶ್ಯ ಮತ್ಸ್ಥಾನ್ ಮೂರ್ತಿವಿವರ್ಜಿತಾನ್
ಮೂರ್ತಿಮಂತರಾಗಿ ನಾಲ್ಕು ವಿಧರಾದ ಪಿತೃಗಣಗಳು ನನ್ನಲ್ಲಿರುವುದನ್ನು ನೋಡು. ಶರೀರಗಳಿಲ್ಲದಿರುವ ತ್ರಿಗುಣಗಳು ಶರೀರವನ್ನು ಧರಿಸಿ ನನ್ನಲ್ಲಿರುವುದನ್ನು ನೋಡು.
ದೇವಕಾರ್ಯಾದಪಿ ಮುನೇ ಪಿತೃಕಾರ್ಯಂ ವಿಶಿಷ್ಯತೇ |
ದೇವಾನಾಂ ಚ ಪಿತೄಣಾಂ ಚ ಪಿತಾ ಹ್ಯೇಕೋಽಹಮಾದಿತಃ ॥55॥
ಪಿತೃಕಾರ್ಯವು ದೇವಕಾರ್ಯಕ್ಕಿಂತ ಅತಿಶಯವೆನಿಸಿದೆ. ದೇವತೆಗಳಿಗೂ ಪಿತೃಗಳಿಗೂ ನಾನೇ ತಂದೆಯ ಸ್ಥಾನದಲ್ಲಿದ್ದೇನೆ.
ಅಹಂ ಹಯಶಿರೋ ಭೂತ್ವಾ ಸಮುದ್ರೇ ಪಶ್ಚಿಮೋತ್ತರೇ |
ಪಿಬಾಮಿ ಸುಹುತಂ ಹವ್ಯಂ ಕವ್ಯಂ ಚ ಶ್ರದ್ಧಯಾನ್ವಿತಮ್ ॥56॥
ನಾನು ಹಯಗ್ರೀವ ರೂಪವನ್ನು ಧರಿಸಿ, ಸಮುದ್ರದ ವಾಯುವ್ಯ ದಿಕ್ಕಿನಲ್ಲಿ ವಾಸಿಸುತ್ತಾ ಶ್ರದ್ಧಾಪೂರ್ವಕವಾಗಿ, ವಿಧಿಪೂರ್ವಕವಾಗಿ ಅರ್ಪಿಸಿದ ಹವ್ಯ-ಕವ್ಯಗಳನ್ನು ಸ್ವೀಕರಿಸುತ್ತೇನೆ.
ಮಯಾ ಸೃಷ್ಟಃ ಪುರಾ ಬ್ರಹ್ಮಾ ಮದ್ಯಜ್ಞಮಯಜತ್ಸ್ವಯಮ್ |
ತತಸ್ತಸ್ಮೈ ವರಾನ್ ಪ್ರೀತೋ ದದಾವಹಮನುತ್ತಮಾನ್ ॥57॥
ನನ್ನಿಂದ ಸೃಷ್ಟಿಸಲ್ಪಟ್ಟ ಚತುರ್ಮುಖ ಬ್ರಹ್ಮನು ಯಜ್ಞಪುರುಷನಾದ ನನ್ನ ಪ್ರೀತಿಗಾಗಿಯೇ ಯಜ್ಞ ಮಾಡಿದನು. ಅದರಿಂದ ಪ್ರೀತನಾದ ನಾನು ಅವನಿಗೆ ಉತ್ತಮವಾದ ವರಗಳನ್ನು ನೀಡಿದೆನು.
ಮತ್ಪುತ್ರತ್ವಂ ಚ ಕಲ್ಪಾದೌ ಲೋಕಾಧ್ಯಕ್ಷತ್ವಮೇವ ಚ |
ಅಹಂಕಾರಕೃತಂ ಚೈವ ನಾಮ ಪರ್ಯಾಯವಾಚಕಮ್ ॥58॥
ಬ್ರಹ್ಮದೇವನೇ, ಪ್ರತಿಯೊಂದು ಕಲ್ಪದ ಆದಿಯಲ್ಲೂ ನೀನು ನನ್ನ ಪುತ್ರನಾಗಿ ಜನ್ಮವನ್ನು ತಾಳು. ಲೋಕಾಧ್ಯಕ್ಷನು ನೀನೇ ಆಗು. ಅಹಂಕಾರ ಎಂಬ ಪರ್ಯಾಯ ನಾಮವು ನಿನಗೇ ಉಂಟಾಗಲಿ.
ತ್ವಯಾ ಕೃತಾಂ ಚ ಮರ್ಯಾದಾಂ ನಾತಿಕ್ರಾಮ್ಯತಿ ಕಶ್ಚನ |

ತ್ವಂ ಚೈವ ವರದೋ ಬ್ರಹ್ಮನ್ ವರೇಪ್ಸೂನಾಂ ಭವಿಷ್ಯಸಿ ॥59॥
ನೀನು ಹಾಕುವ ವಿಧಿ-ನಿಯಮಗಳನ್ನು ಲೋಕದಲ್ಲಿ ಯಾರೂ ಅತಿಕ್ರಮಿಸುವುದಿಲ್ಲ. ಮಹಾಭಾಗನೇ, ತಪೋಧನನೇ, ವರವನ್ನು ಬಯಸುವವರಿಗೆಲ್ಲ ನೀನೇ ವರಪ್ರದನಾಗುತ್ತಿ.
ಸುರಾಸುರಗಣಾನಾಂ ಚ ಋಷೀಣಾಂ ಚ ತಪೋಧನ |
ಪಿತೃಣಾಂ ಚ ಮಹಾಭಾಗ ಸತತಂ ಸಂಶಿತವ್ರತ |
ವಿವಿಧಾನಾಂ ಚ ಭೂತಾನಾಂ ತ್ವಮುಪಾಸ್ಯೋ ಭವಿಷ್ಯಸಿ ॥60॥
ಪ್ರಾದುರ್ಭಾವಗತಶ್ಚಾಹಂ ಸುರಕಾರ್ಯೇಷು ನಿತ್ಯದಾ |
ಅನುಶಾಸ್ಯಸ್ತ್ವಯಾ ಬ್ರಹ್ಮನ್ನಿಯೋಜ್ಯಶ್ಚ ಸುತೋ ಯಥಾ ॥61॥
ದೇವತೆಗಳಿಗೂ, ಅಸುರರಿಗೂ, ಋಷಿಗಳಿಗೂ, ಪಿತೃಗಳಿಗೂ, ನಾನಾ ವಿಧವಾದ ಪ್ರಾಣಿಗಳಿಗೂ ಉಪಾಸ್ಯದೇವನಾಗಿರುತ್ತಿ. ದೇವತೆಗಳ ಕಾರ್ಯಸಿದ್ಧಿಗಾಗಿ ನಾನು ಅನೇಕ ಅವತಾರಗಳನ್ನು ತಾಳುತ್ತಿರುತ್ತೇನೆ. ಅಂತಹ ಸಮಯದಲ್ಲಿ ನೀನು ಹೇಳಿದಂತೆ ನಾನೂ ನಡೆಯುತ್ತೇನೆ. ತಂದೆಯು ಮಗನನ್ನು ಕಾರ್ಯದಲ್ಲಿ ನಿಯೋಜಿಸುವಂತೆ ನೀನು ನಿನ್ನ ಸೃಷ್ಟಿಯಲ್ಲಿ ನನ್ನನ್ನೂ ನಿಯೋಜಿಸಬಹುದು.
ಏತಾಂಶ್ಚಾನ್ಯಾಂಶ್ಚ ರುಚಿರಾನ್ ಬ್ರಹ್ಮಣೇಮಿತತೇಜಸೇ |
ಅಹಂ ದತ್ತ್ವಾ ವರಾನ್ ಪ್ರೀತೋ ನಿವೃತ್ತಿಪರಮೋಭವಮ್ ॥62॥
ನಾರದನೇ, ನಾನು ಮಹಾತೇಜಸ್ವಿಯಾದ ಬ್ರಹ್ಮನಿಗೆ ಇಂತಹ ಅನೇಕ ವಿಧವಾದ ಮನೋಜ್ಞ ವರಗಳನ್ನು ನೀಡಿ ಪರಮ ಆನಂದವನ್ನು ಹೊಂದಿದೆನು.
ನಿರ್ವಾಣಂ ಸರ್ವಧರ್ಮಾಣಾಂ ನಿವೃತ್ತಿಃ ಪರಮಾ ಸ್ಮೃತಾ |
ತಸ್ಮಾನ್ನಿವೃತ್ತಿಮಾಪನ್ನಶ್ಚರೇತ್ ಸರ್ವಾಂಗನಿರ್ವೃತಃ ॥63॥
ಸಮಸ್ತ ಧರ್ಮಗಳಿಂದ ವಿಶ್ರಾಂತನಾಗಿರುವುದೇ ಪರಮಸುಖವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಸಾಧಕನು ಸಮಸ್ತ ಧರ್ಮಗಳಿಂದ ನಿವೃತ್ತಿಯನ್ನು ಹೊಂದಿ ಸಕಲ ಬಂಧನಗಳಿಂದಲೂ ಮುಕ್ತನಾಗಿ ಸಂಚರಿಸಬೇಕು.
ವಿದ್ಯಾಸಹಾಯವಂತಂ ಮಾಮಾದಿತ್ಯಸ್ಥಂ ಸನಾತನಮ್ |
ಕಪಿಲಂ ಪ್ರಾಹುರಾಚಾರ್ಯಾಃ ಸಾಂಖ್ಯನಿಶ್ಚಿತನಿಶ್ಚಯಾಃ ॥64॥
ಸಾಂಖ್ಯತತ್ತ್ವದಲ್ಲಿ ನಿಶ್ಚಯವನ್ನು ಹೊಂದಿರುವ ಜ್ಞಾನಿಗಳು, ವಿದ್ಯಾ, ಸಹಾಯದಿಂದ ಕೂಡಿರುವ ಸೂರ್ಯಮಂಡಲದಲ್ಲಿರುವ ನನ್ನನ್ನು ಸನಾತನನೂ, ಕಪಿಲನೂ ಎಂದು ಹೇಳುತ್ತಾರೆ.
ಹಿರಣ್ಯಗರ್ಭೋ ಭಗವಾನೇಷ ಛಂದಸಿ ಸುಷ್ಟುತಃ |
ಸೋಽಹಂ ಯೋಗಗತಿರ್ಬ್ರಹ್ಮನ್ ಯೋಗಶಾಸ್ತ್ರೇಷು ಶಬ್ದಿತಃ ॥65॥
ವೇದಗಳಿಂದ ಚೆನ್ನಾಗಿ ಸಂಸ್ಕೃತನಾದ ಭಗವಾನ್ ಹಿರಣ್ಯಗರ್ಭನೂ ನಾನೇ. ಯೋಗಶಾಸ್ತ್ರದಲ್ಲಿ ಹೇಳಿರುವ ಯೋಗಗತಿ ಎನಿಸಿದ ಈಶ್ವರನೂ ನಾನೇ.
ಏಷೋಽಹಂ ವ್ಯಕ್ತಿಮಾಗಮ್ಯ ತಿಷ್ಠಾಮಿ ದಿವಿ ಶಾಶ್ವತಃ |
ತತೋ ಯುಗಸಹಸ್ರಾಂತೇ ಸಂಹರಿಷ್ಯೇ ಜಗತ್ ಪುನಃ |
ಕೃತ್ವಾತ್ಮಸ್ಥಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥66॥
ಶಾಶ್ವತನಾದ ನಾನು ಈ ಸಮಯದಲ್ಲಿ ವ್ಯಕ್ತರೂಪವನ್ನು ಧರಿಸಿ ಆಕಾಶದಲ್ಲಿ ನಿಂತಿದ್ದೇನೆ. ಸಾವಿರ ಚತುರ್ಯುಗದ ಕೊನೆಯಲ್ಲಿ ಈ ಜಗತ್ತನ್ನು ಪುನಃ ಸಂಹಾರ ಮಾಡುತ್ತೇನೆ. ಸ್ಥಾವರ-ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ನನ್ನಲ್ಲೇ ಸೆಳೆದುಕೊಳ್ಳುತ್ತೇನೆ.
ಏಕಾಕೀ ವಿದ್ಯಯಾ ಸಾರ್ಧಂ ವಿಹರಿಷ್ಯೇ ದ್ವಿಜೋತ್ತಮ |
ತತೋ ಭೂಯೋ ಜಗತ್ ಸರ್ವಂ ಕರಿಷ್ಯಾಮೀಹ ವಿದ್ಯಯಾ ॥67॥
ವೇದವಿದ್ಯೆಗಳಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯಿಂದ ಸಹಿತನಾಗಿ ಒಬ್ಬನೇ ಪ್ರಳಯಕಾಲದಲ್ಲಿ ವಿಹರಿಸುತ್ತೇನೆ. ಪುನಃ ಲಕ್ಷ್ಮೀ ಮೂಲಕವಾಗಿ ಚರಾಚರಾತ್ಮಕವಾದ ಜಗತ್ತನ್ನು ಸೃಷ್ಟಿಸುತ್ತೇನೆ.
ಅಸ್ಮನ್ಮೂರ್ತಿಶ್ಚತುರ್ಥೀ ಯಾ ಸಾಸೃಜಚ್ಛೇಷಮವ್ಯಯಮ್ |
ಸ ಹಿ ಸಂಕರ್ಷಣಃ ಪ್ರೋಕ್ತಃ ಪ್ರದ್ಯುಮ್ನಂ ಸೋಽಪ್ಯಜೀಜನತ್ ॥68॥
ಈ ವ್ಯೂಹರೂಪವೆನಿಸಿದ ನಾಲ್ಕು ರೂಪಗಳಲ್ಲಿ ನಾಲ್ಕನೆಯ ರೂಪವೆನಿಸಿದ ವಾಸುದೇವ ನಾಮಕನಾದ ನಾನು ಶೇಷಾಂತರ್ಯಾಮಿಯಾದ ಸಂಕರ್ಷಣ ರೂಪವನ್ನು ಅಭಿವ್ಯಕ್ತಿಗೊಳಿಸುತ್ತೇನೆ. ಪ್ರದ್ಯುಮ್ನರೂಪಿಯಾದ ನಾನು ಅನಿರುದ್ಧ ರೂಪವನ್ನು ಹೊಂದುತ್ತೇನೆ. ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ನನ್ನ ಮೂರ್ತಿಗಳ ಅಭಿವ್ಯಕ್ತಿಯೇ ಸೃಷ್ಟಿ ಎನಿಸಿದೆ ಹೊರತು ಈ ಜಗತ್ತು ಸ್ವಯಂ ಸೃಷ್ಟಿಯನ್ನು ಹೊಂದಲರ್ಹವಾಗಿರುವುದಿಲ್ಲ. ಚತುರ್ಮುಖ ಬ್ರಹ್ಮನು ಸೃಷ್ಟಿಸಲು ಸಮರ್ಥನಲ್ಲ.
ಪ್ರದ್ಯುಮ್ನಾದನಿರುದ್ಧೋಹಂ ಸರ್ಗೋ ಮಮ ಪುನಃ ಪುನಃ |
ಅನಿರುದ್ಧಾತ್ತಥಾ ಬ್ರಹ್ಮಾ ತತ್ರಾದಿಕಮಲೋದ್ಭವಃ ॥69॥
ಪ್ರದ್ಯುಮ್ನನಿಂದ ಪುನಃ ಅನಿರುದ್ಧನೆಂಬ ಹೆಸರನ್ನು ಪಡೆದು ಅವತಾರ ಮಾಡುತ್ತೇನೆ. ಅನಿರುದ್ಧನ ನಾಭಿಕಮಲದಿಂದ ಕಮಲೋದ್ಭವನೆನಿಸಿದ ಬ್ರಹ್ಮನ ಸೃಷ್ಟಿಯಾಗುತ್ತದೆ.
ಬ್ರಹ್ಮಣಃ ಸರ್ವಭೂತಾನಿ ಚರಾಣಿ ಸ್ಥಾವರಾಣಿ ಚ |
ಏತಾಂ ಸೃಷ್ಟಿಂ ವಿಜಾನೀಹಿ ಕಲ್ಪಾದಿಷು ಪುನಃ ಪುನಃ ॥70॥
ಬ್ರಹ್ಮನಿಂದ ಸಮಸ್ತ ಚರಾಚರ ಪ್ರಾಣಿಗಳು ಸೃಷ್ಟಿಗೊಳ್ಳುತ್ತವೆ. ಕಲ್ಪದ ಆರಂಭದಲ್ಲಿ ಪುನಃ ಪುನಃ ಇಂತಹ ಸೃಷ್ಟಿಗಳು ಆಗುತ್ತಲೇ

ಇರುತ್ತವೆ ಎಂದು ತಿಳಿ.
ಯಥಾ ಸೂರ್ಯಸ್ಯ ಗಗನಾದುದಯಾಸ್ತಮಯಾವಿಹ |
ನಷ್ಟೌ ಪುನರ್ಬಲಾತ್ ಕಾಲ ಆನಯತ್ಯಮಿತದ್ಯುತಿಃ |
ತಥಾ ಬಲಾದಹಂ ಪೃಥ್ವೀಂ ಸರ್ವಭೂತಹಿತಾಯ ವೈ ॥71॥
ಹೇಗೆ ಆಕಾಶಮಂಡಲದಲ್ಲಿ ಸೂರ್ಯನ ಉದಯ-ಅಸ್ತಮಾನಗಳು ನಡೆಯುತ್ತಲೇ ಇರುತ್ತವೋ, ಸಾಯಂಕಾಲವಾದಾಗ ಸೂರ್ಯನು ಅಸ್ತಂಗತನಾಗಿದ್ದರೂ ಪುನಃ ಅವನನ್ನು ಪ್ರಾತಃಕಾಲದಲ್ಲಿ ಸೆಳೆದು ತರುತ್ತಾನೋ ಅದರಂತೆ ಸಮಸ್ತ ಪ್ರಾಣಿಗಳ ಹಿತಕ್ಕಾಗಿ ಸಮುದ್ರದಲ್ಲಿ ಹುದುಗಿರುವ ಭೂಮಿಯನ್ನು ಪುನಃ ಉದ್ಧರಿಸುತ್ತೇನೆ.
ಸತ್ತ್ವೈರಾಕ್ರಾಂತಸರ್ವಾಂಗಾಂ ನಷ್ಟಾಂ ಸಾಗರಮೇಖಲಾಮ್ |
ಆನಯಿಷ್ಯಾಮಿ ಸ್ವಂ ಸ್ಥಾನಂ ವಾರಾಹಂ ರೂಪಮಾಸ್ಥಿತಃ ॥72॥
ಸ್ಥಾವರ-ಜಂಗಮಗಳಿಂದ ನಿಬಿಡವಾಗಿರುವ ಸಮುದ್ರವನ್ನೇ ಒಡ್ಯಾಣದಂತೆ ಧರಿಸಿರುವ ಭೂಮಿಯು ಪ್ರಳಯೋದಕದಲ್ಲಿ ಮುಳುಗಿರುವಾಗ ವರಾಹ ರೂಪವನ್ನು ಧರಿಸಿ ನಾನು ಅದನ್ನು ಸ್ವಸ್ಥಾನಕ್ಕೆ ತಂದು ಸೇರಿಸುತ್ತೇನೆ.
ಹಿರಣ್ಯಾಕ್ಷಂ ಹನಿಷ್ಯಾಮಿ ದೈತೇಯಂ ಬಲಗರ್ವಿತಮ್ |
ನಾರಸಿಂಹಂ ವಪುಃ ಕೃತ್ವಾ ಹಿರಣ್ಯಕಶಿಪುಂ ಪುನಃ |
ಸುರಕಾರ್ಯೇ ಹನಿಷ್ಯಾಮಿ ಯಜ್ಞಘ್ನಂ ದಿತಿನಂದನಮ್ ॥73॥
ಅದರಂತೆ ಬಲದಿಂದ ಗರ್ವಗೊಂಡಿರುವ ದೈತ್ಯನಾದ ಹಿರಣ್ಯಾಕ್ಷನನ್ನು ಸಂಹರಿಸುತ್ತೇನೆ. ನರಸಿಂಹ ರೂಪವನ್ನು ಧರಿಸಿ ದೇವತೆಗಳ ಕಾರ್ಯಸಿದ್ಧಿಗಾಗಿ ಯಜ್ಞನಾಶಕನಾದ ದೈತ್ಯನಾದ ಹಿರಣ್ಯಕಶಿಪುವನ್ನು ಸಂಹರಿಸುತ್ತೇನೆ.
ವಿರೋಚನಸ್ಯ ಬಲವಾನ್ ಬಲಿಃ ಪುತ್ರೋ ಮಹಾಸುರಃ |
ಭವಿಷ್ಯತಿ ಸ ಶಕ್ರಂ ಚ ಸ್ವರಾಜ್ಯಾಚ್ಚ್ಯಾವಯಿಷ್ಯತಿ ॥74॥
ವಿರೋಚನನಿಗೆ ಮಹಾಬಲಿಷ್ಠನಾದ ಮಗನೊಬ್ಬನು ಹುಟ್ಟುತ್ತಾನೆ. ಮಹಾಸುರನಾದ ಅವನು ಬಲಿ ಎಂಬ ಹೆಸರಿನಿಂದ ಪ್ರಸಿದ್ಧನಾಗುತ್ತಾನೆ. ಅವನು ಇಂದ್ರನನ್ನು ಸ್ವರ್ಗ ರಾಜ್ಯದಿಂದ ಭ್ರಷ್ಟನನ್ನಾಗಿ ಮಾಡುತ್ತಾನೆ.
ತ್ರೈಲೋಕ್ಯೇಽಪಹೃತೇ ತೇನ ವಿಮುಖೇ ಚ ಶಚೀಪತೌ |
ಅದಿತ್ಯಾಂ ದ್ವಾದಶಃ ಪುತ್ರಃ ಸಂಭವಿಷ್ಯಾಮಿ ಕಶ್ಯಪಾತ್ ॥75॥
ಆ ಬಲಿಯಿಂದ ಮೂರುಲೋಕಗಳು ಅಪಹೃತವಾಗಲು ಶಚೀಪತಿಯು ಯುದ್ಧದಿಂದ ವಿಮುಖನಾಗಲು ನಾನು ಅದಿತಿಯಲ್ಲಿ ಕಶ್ಯಪರಿಂದ, ದ್ವಾದಶಾದಿತ್ಯರಲ್ಲಿ ಹನ್ನೆರಡನೆಯ ವಿಶ್ವವಾಗಿ ಅವತರಿಸುತ್ತೇನೆ.
ವಟುರ್ಗತ್ವಾ ಯಜ್ಞಸದಃ ಸ್ತೂಯಮಾನೋ ದ್ವಿಜೋತ್ತಮೈಃ |
ಯಜ್ಞಸ್ತುತಿಂ ಕರಿಷ್ಯಾಮಿ ಶ್ರುತ್ವಾ ಪ್ರೀತೋ ಭವೇದ್ ಬಲಿಃ ॥76॥
ಬ್ರಾಹ್ಮಣಶ್ರೇಷ್ಠರಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ವಟುವಾಗಿ ಬಲಿಚಕ್ರವರ್ತಿಯ ಯಜ್ಞಮಂಟಪಕ್ಕೆ ಹೋಗಿ ಆ ಬಲಿಚಕ್ರವರ್ತಿಯ ಯಜ್ಞದ ಸ್ತುತಿಯನ್ನು ನಾನೇ ಮಾಡುತ್ತೇನೆ. ನನ್ನ ಸ್ತೋತ್ರದಿಂದ ಬಲಿಚಕ್ರವರ್ತಿಯು ಪ್ರೀತನಾಗುತ್ತಾನೆ.
ಕಿಮಿಚ್ಛಸಿ ವಟೋ ಬ್ರೂಹೀತ್ಯುಕ್ತೋ ಯಾಚೇ ಮಹದ್ ವರಮ್ |
ದೀಯತಾಂ ತ್ರಿಪದೀಮಾತ್ರಮಿತಿ ಯಾಚೇ ಮಹಾಽಸುರಮ್ ॥77॥
ವಟುವೇ, ನೀನು ಏನನ್ನು ಬಯಸುತ್ತಿ? ಎಂದು ಬಲಿಚಕ್ರವರ್ತಿಯು ಕೇಳಿದಾಗ ಶ್ರೇಷ್ಠವಾದ ವರವನ್ನೇ ಕೇಳುತ್ತೇನೆ. ಮಹಾಸುರನಾದ ಬಲಿಯ ಬಳಿ ಮೂರು ಹೆಜ್ಜೆಯಷ್ಟು ಪರಿಮಿತಿಯ ಭೂಮಿಯನ್ನು ದಾನ ಮಾಡು ಎಂದು ಕೇಳುತ್ತೇನೆ.
ಸ ದದ್ಯಾನ್ಮಯಿ ಸಂಪ್ರೀತಃ ಪ್ರತಿಷಿದ್ಧಶ್ಚ ಮಂತ್ರಿಭಿಃ |
ಯಾವಜ್ಜಲಂ ಹಸ್ತಗತಂ ತ್ರಿಭಿರ್ವಿಕ್ರಮಣೈರ್ಯುತಮ್ ॥78॥
ಆ ಬಲಿಚಕ್ರವರ್ತಿಯು ಮಂತ್ರಿಗಳಿಂದ ತಡೆಯಲ್ಪಡುತ್ತಿದ್ದರೂ ಪ್ರೀತನಾಗಿ ನನ್ನ ಕೈಯಲ್ಲಿ ಮೂರು ಪಾದಗಳ ದಾನಕ್ಕೆ ಸಂಬಂಧಿಸಿದ ನೀರನ್ನು ಹಾಕುತ್ತಾನೆ. ಮೂರು ಪಾದಗಳನ್ನು ಆಕ್ರಮಿಸುವಂತಹ ದಾನವನ್ನೇ ನಾನು ಸ್ವೀಕರಿಸುತ್ತೇನೆ.
ತತೋ ರಾಜ್ಯಂ ಪ್ರದಾಸ್ಯಾಮಿ ಶಕ್ರಾಯಾಮಿತತೇಜಸೇ |
ದೇವತಾಃ ಸ್ಥಾಪಯಿಷ್ಯಾಮಿ ಸ್ವೇಷು ಸ್ಥಾನೇಷು ನಾರದ |
ಬಲಿಂ ಚೈವ ಕರಿಷ್ಯಾಮಿ ಪಾತಾಳತಳವಾಸಿನಮ್ ॥79॥
ನಾರದನೇ, ಬಳಿಕ ಬಲಿಯಿಂದ ರಾಜ್ಯವನ್ನು ಪಡೆದು ಅಮಿತ ತೇಜಸ್ವಿಯಾದ ಇಂದ್ರನಿಗೆ ಆ ರಾಜ್ಯವನ್ನು ನೀಡುತ್ತೇನೆ. ಆಯಾ ಸ್ಥಾನಗಳಲ್ಲಿ ದೇವತೆಗಳನ್ನೇ ಸ್ಥಾಪಿಸುತ್ತೇನೆ. ಬಲಿಚಕ್ರವರ್ತಿಯನ್ನು ಪಾತಾಳ ತಳವಾಸಿಯನ್ನಾಗಿ ಮಾಡುತ್ತೇನೆ.
ತ್ರೇತಾಯುಗೇ ಭವಿಷ್ಯಾಮಿ ರಾಮೋ ಭೃಗುಕುಲೋದ್ವಹಃ |
ಕ್ಷತ್ರಂ ಚೋತ್ಸಾದಯಿಷ್ಯಾಮಿ ಸಮೃದ್ಧಬಲವಾಹನಮ್ ॥80॥
ಭೃಗುಕುಲದಲ್ಲಿ ಅವತರಿಸಿದ ಪರಶುರಾಮನಾದ ನಾನು, ತ್ರೇತಾಯುಗದಲ್ಲಿ ಸಮೃದ್ಧವಾದ ಬಲ-ವಾಹನಗಳಿಂದ ಕೂಡಿರುವ ದುಷ್ಟ ಕ್ಷತ್ರಕುಲವನ್ನು ನಾಶ ಮಾಡುತ್ತೇನೆ.
ಸಂಧೌ ತು ಸಮನುಪ್ರಾಪ್ತೇ ತ್ರೇತಾಯಾಂ ದ್ವಾಪರಸ್ಯ ಚ |
ರಾಮೋ ರಾಮಶ್ಚರಾಮಶ್ಚ ಭವಿಷ್ಯಾಮಿ ಜಗತ್ಪತಿಃ ॥81॥
ತ್ರೇತಾ-ದ್ವಾಪರಗಳ ಸಂಧಿಯು ಒದಗಿದಾಗ ಜಗತ್ಪತಿಯಾದ ಭಾರ್ಗವರಾಮ ದಾಶರಥಿ ರಾಮಶ್ರೀಕೃಷ್ಣನಾಗಿ ಅವತರಿಸುತ್ತೇನೆ.
ವ್ಯಾಖ್ಯಾನ ವಿಶೇಷ `ರಾಮೋ ರಾಮಶ್ಚ ರಾಮಶ್ಚ' ಎಂಬಲ್ಲಿ ಕೆಲವರು ಪರಶುರಾಮ, ರಾಮ, ಬಲರಾಮ ಎಂದು ಮೂರು ರೂಪಗಳನ್ನು ಸ್ವೀಕರಿಸುತ್ತಾರೆ. ಆದರೆ ರಾಮ ಎಂದರೆ ಪರಶುರಾಮ, ಮತ್ತೊಮ್ಮೆ ರಾಮ ಎಂದರೆ ದಾಶರಥಿ ರಾಮ, ಮೂರನೆಯ

ರಾಮ ಶಬ್ದಕ್ಕೆ ಗೋಪಾಂಗನೆಯರನ್ನು ಸಂತೋಷಪಡಿಸುವ ರಾಮ ಅರ್ಥಾತ್ ಕೃಷ್ಣನೆಂದು ಗ್ರಹಿಸಬೇಕೇ ಹೊರತು ಬಲರಾಮನೆಂದಲ್ಲ. ಕಾರಣ ಇದೇ ಅಧ್ಯಾಯದ ಮುಂದಿನ ಭಾಗದಲ್ಲಿ `ಪ್ರಾದುರ್ಭಾವಃ ಕಂಸಹೇತೋಃ ಮಧುರಾಯಾಂ ಭವಿಷ್ಯತಿ' ಎಂದು ಕಂಸನ ಸಂಹಾರಕ್ಕಾಗಿ ಮಥುರಾ ಪಟ್ಟಣದಲ್ಲಿ ಅವತಾರ ಮಾಡುತ್ತೇನೆ. ಶಿಶುಪಾಲ ವಧೆಯನ್ನು ಧರ್ಮರಾಜನ ಯಜ್ಞದಲ್ಲಿ ಮಾಡುತ್ತೇನೆ. ಇವೇ ಮೊದಲಾದ ವಚನಗಳು ಕೃಷ್ಣನ ಚರಿತ್ರೆಯನ್ನೇ ಕೊಂಡಾಡುವುದರಿಂದ ಬಲರಾಮನ ಪ್ರಸ್ತಾಪವೇ ಮಹಾಭಾರತದಲ್ಲಿ ಇಲ್ಲ. ಹಾಗಾಗಿ ಈ ಮಹಾಭಾರತದ ಆಧಾರದಿಂದ ಮೂರನೆಯ ರಾಮ ಶಬ್ದಕ್ಕೆ ಕೃಷ್ಣನೆಂದೇ ವ್ಯಾಖ್ಯಾನಿಸಬೇಕಾಗಿ ಗುರುವಾದಿರಾಜರು ಮಹಾಭಾರತದ ಈ ಆಧಾರದಿಂದ ದಶಾವತಾರದಲ್ಲಿ ಬಲರಾಮನನ್ನು ಸೇರಿಸಬಾರದು ಎಂದು ಲಕ್ಷಾಲಂಕಾರದಲ್ಲಿ ತಿಳಿಸಿದ್ದಾರೆ.

ತತಃ ಕೃತಯುಗೇ ಪ್ರಾಪ್ತೇ ದ್ವಾತ್ರಿಂಶದ್ಯುಗಪರ್ಯಯೇ |
ಭವಿಷ್ಯಾಮಿ ಋಷಿಸ್ತತ್ರ ಜಮದಗ್ನಿಸುತೋ ಬಲೀ ॥82॥

ಆಮೇಲೆ ಮೂವತ್ತೆರಡನೆಯ ಕೃತಯುಗವು ಪ್ರಾಪ್ತವಾದಾಗ, ಜಮದಗ್ನಿ ಋಷಿಗಳ ಬಲಶಾಲಿ ಮಗನಾಗಿ (ಪರಶುರಾಮ) ಅವತರಿಸುತ್ತೇನೆ.

ತ್ರಿತೋಪಘಾತಾದ್ವೈರೂಪ್ಯಮೇಕತೋಥ ದ್ವಿತಸ್ತಥಾ |
ಪ್ರಾಪ್ಸ್ಯತೋ ವಾನರತ್ವಂ ಹಿ ಪ್ರಜಾಪತಿಸುತಾವೃಷೀ ॥83॥

ಪ್ರಜಾಪತಿಯ ಮಕ್ಕಳಾದ ದ್ವಿತ, ಏಕತ, ತ್ರಿತ ಎಂಬ ಋಷಿಗಳಲ್ಲಿ ತ್ರಿತ ಎಂಬ ಹೆಸರಿನ ಋಷಿಗೆ ದ್ರೋಹವನ್ನೆಸಗುವುದರಿಂದ ವೈರೂಪ್ಯವನ್ನು ಪಡೆದು ವಾನರತ್ವವನ್ನು ಹೊಂದುತ್ತಾರೆ.

ವ್ಯಾಖ್ಯಾನ ವಿಶೇಷ ಮಹರ್ಷಿಗೌತಮರಿಗೆ ಸೂರ್ಯಸಮಾನತೇಜಸ್ವಿಗಳಾದ, ಬ್ರಹ್ಮವಾದಿಗಳಾದ, ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ಮೂವರು ಪುತ್ರರಿದ್ದರು. ಏಕತ, ದ್ವಿತ, ತ್ರಿತ ಎಂಬುದಾಗಿ ಅವರ ಹೆಸರು. ಸದಾಕಾಲ ಧರ್ಮನಿರತನಾಗಿದ್ದ ಮಹರ್ಷಿ ಗೌತಮರು ತಮ್ಮ ಮಕ್ಕಳ ನಿಯಮ, ದಮ, ಜಿತೇಂದ್ರಿಯತೆ ಮತ್ತು ತಪಸ್ಸು ಇತ್ಯಾದಿಗಳಿಂದ ಬಹುಸಂತುಷ್ಟರಾಗಿದ್ದರು. ಕಾಲಾಂತರದಲ್ಲಿ ಪೂಜನೀಯರಾದ ಮಹರ್ಷಿ ಗೌತಮರು ಇಹವನ್ನು ತ್ಯಜಿಸಲು, ಅವರ ಪೌರೋಹಿತ್ಯದಲ್ಲಿ ಯಜ್ಞಗಳನ್ನು ಮಾಡುತ್ತಿದ್ದ ರಾಜರು ಗೌತಮರ ಮಕ್ಕಳನ್ನೇ ಆದರಿಸಿ ಸತ್ಕರಿಸತೊಡಗಿದರು. ಆ ಮೂವರು ಋಷಿಗಳಲ್ಲಿಯೂ ತ್ರಿತನು ಕರ್ಮಾನುಷ್ಠಾನಗಳಿಂದಲೂ ಮತ್ತು ಅಧ್ಯಯನದಿಂದಲೂ ಶ್ರೇಷ್ಠನೆನಿಸಿಕೊಂಡನು. ಗೌತಮರು ಸರ್ವರಿಗೂ ಮಾನ್ಯರಾಗಿದ್ದಂತೆ ತ್ರಿತನೂ ಸರ್ವರಿಗೂ ಮಾನ್ಯನಾಗಿದ್ದನು. ಒಂದು ಬಾರಿ ಮೂವರು ಸಹೋದರರೂ ಜೊತೆಯಾಗಿ ಯಜ್ಞವೊಂದನ್ನು ಮಾಡಿಸಲು ಹೋದರು. ಯಜಮಾನನಿಂದ ವಿಧಿವತ್ತಾಗಿ ಯಜ್ಞವನ್ನು ಮಾಡಿಸಿ, ಆ ಯಜ್ಞಕರ್ಮದ ಮೂಲಕವಾಗಿ ಅವರು ಅನೇಕ ಗೋವುಗಳನ್ನು ಪಡೆದುಕೊಂಡರು. ಬಳಿಕ ಮೂವರೂ ಪೂರ್ವಾಭಿಮುಖವಾಗಿ ಹೊರಟರು. ಅವರಲ್ಲಿ ಮಹರ್ಷಿ ತ್ರಿತನು ಮುಂದುಗಡೆ ಇದ್ದನು. ಹೀಗೆಯೇ ಪ್ರಯಾಣ ಮಾಡುತ್ತಿದ್ದಾಗ ಹಿಂದಿದ್ದ ಏಕತ ಮತ್ತು ದ್ವಿತರು ತಾವು ಸಂಪಾದಿಸಿದ ಗೋವುಗಳಲ್ಲಿ ತ್ರಿತನಿಗೆ ಪಾಲನ್ನು ನೀಡದೇ ಎಲ್ಲವನ್ನೂ ತಾವೇ ಹೊಡೆದುಕೊಂಡು ಹೋಗಬೇಕೆಂದು ಪರಸ್ಪರ ಮಾತನಾಡಿಕೊಂಡರು. ರಾತ್ರಿಯ ಸಮಯ ಅವರು ಹೋಗುತ್ತಿದ್ದ ಮಾರ್ಗದಲ್ಲಿಯೇ ಒಂದು ತೋಳವಿದ್ದಿತು. ಅಲ್ಲಿಗೆ ಸ್ವಲ್ಪ ದೂರದಲ್ಲಿಯೇ ಸರಸ್ವತೀ ನದಿಯ ತೀರದಲ್ಲಿ ಒಂದು ದೊಡ್ಡ ಬಾವಿಯೂ ಇತ್ತು. ಮುಂದೆ ಹೋಗುತ್ತಿದ್ದ ತ್ರಿತನು ತನಗೆದುರಾಗಿ ನಿಂತಿರುವ ತೋಳವನ್ನು ನೋಡಿ ಭಯಪಟ್ಟುಕೊಂಡು ಓಡತೊಡಗಿದನು. ಹಾಗೆಯೇ ಓಡಿಹೋಗುತ್ತಿದ್ದಾಗ ಆ ಮಹಾಕೂಪದಲ್ಲಿ ಬಿದ್ದು ಬಿಟ್ಟನು. ಬಾವಿಯಲ್ಲಿ ಬಿದ್ದ ಮುನಿಶ್ರೇಷ್ಠನಾದ ತ್ರಿತನು ಆರ್ತನಾದ ಮಾಡಿದನು. ಆತನ ಆರ್ತನಾದವನ್ನು ಕೇಳಿ,ತ್ರಿತನು ಬಾವಿಯಲ್ಲಿ ಬಿದ್ದಿರುವನೆಂಬುದನ್ನು ತಿಳಿದೂ ಸಹ ಸಹೋದರರಾದ ಏಕತ ದ್ವಿತರು, ತೋಳವು ತಮ್ಮನ್ನೂ ಬೆನ್ನಟ್ಟಿಕೊಂಡು ಬರಬಹುದೆಂಬ ಭಯದಿಂದಲೂ, ಅವನೇನಾದರೂ ತಮ್ಮ ಸಹಾಯದಿಂದ ಮೇಲೆದ್ದು ಬಂದರೆ ತಾವು ಹೊಡೆದುಕೊಂಡು ಬರುತ್ತಿರುವ ಗೋಸಮೂಹದಲ್ಲಿ ಅವನಿಗೂ ಪಾಲುಕೊಡಬೇಕಾಗುತ್ತದೆಂಬ ಲೋಭದಿಂದಲೂ ತ್ರಿತನನ್ನು ಮಾತನಾಡಿಸಲೂ ಹೋಗದೇ ಗೋವುಗಳನ್ನು ಹೊಡೆದುಕೊಂಡು ಮುನ್ನಡೆದರು. ಪಶುಲುಬ್ಧರಾದ ಅಣ್ಣಂದಿರಿಂದ ಪರಿತ್ಯಕ್ತನಾದ, ಮಹಾತಪಸ್ವಿಯಾದ ತ್ರಿತನು ನೀರಿನಿಂದ ರಹಿತವಾಗಿದ್ದ, ಧೂಳಿನಿಂದ ಮುಚ್ಚಿಹೋಗಿದ್ದ ಆ ಕೂಪದಲ್ಲಿಯೇ ಒದ್ದಾಡುತ್ತಿದ್ದನು. ಆ ಸಮಯದಲ್ಲಿ ತ್ರಿತನು ದೈವಯೋಗದಿಂದ ಜೋತು ಬಿದ್ದಿದ್ದ ಬಳ್ಳಿಯೊಂದನ್ನು ನೋಡಿದನು. ಒಡನೆಯೇ ಆತನು ಧೂಳಿನಿಂದ ಆವೃತವಾಗಿದ್ದ ಆ ಕೂಪದಲ್ಲಿಯೇ ಕುಳಿತು ನೀರನ್ನು ಸ್ಮರಿಸಿಕೊಂಡನು. ಅನಂತರ ಅಗ್ನಿತ್ರಯಗಳನ್ನು ಸ್ಮರಿಸಿಕೊಂಡನು. ಜೋಲಾಡುತ್ತಿದ್ದ ಆ ಬಳ್ಳಿಯನ್ನೇ ಸೋಮಲತೆಯನ್ನಾಗಿ ಕಲ್ಪಿಸಿಕೊಂಡನು. ತ್ರಿತಮುನಿಯು ಋಗ್ಯಜುಸ್ಸಾಮ ಮಂತ್ರಗಳನ್ನು ಮನಸ್ಸಿನಲ್ಲಿಯೇ ಜಪಿಸಿದನು. ಕೂಪದಲ್ಲಿದ್ದ ಕಲ್ಲುಗಳನ್ನೇ ಅಭಿಷವಕ್ಕೆ ಉಪಯೋಗಿಸುವ ಗ್ರಾವಾಣಗಳನ್ನಾಗಿ ಮಾಡಿಕೊಂಡು ಸೋಮರಸವನ್ನು ಸಿದ್ಧಪಡಿಸಿದನು. ನೀರನ್ನೇ ಆಜ್ಯವನ್ನಾಗಿ ಕಲ್ಪಿಸಿಕೊಂಡು, ದೇವತೆಗಳಿಗೆ ಸೋಮಭಾಗಗಳನ್ನು ಕಲ್ಪಿಸಿದನು. ಅನಂತರ ದೇವತೆಗಳನ್ನು ಆಹ್ವಾನಿಸಿ, ಅವರನ್ನು ಉದ್ದೇಶಿಸಿ ಮನಸ್ಸಂಕಲ್ಪಿತವಾಗಿದ್ದ ಅಗ್ನಿಯಲ್ಲಿ ಹೋಮ ಮಾಡಿದನು. ವೇದಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸಿದನು. ಬ್ರಹ್ಮವಾದಿಗಳು ಹೇಳುತ್ತಿದ್ದಂತೆ ವೇದಮಂತ್ರಗಳನ್ನು ಹೇಳಿ, ಯಜ್ಞವನ್ನು ವಿಧಿವಿಹಿತವಾದ ರೀತಿಯಲ್ಲಿ ಮಾಡಿ, ಸೋಮರಸವನ್ನು ಸಿದ್ಧಗೊಳಿಸಿದನು. ತ್ರಿತನು ಮಾಡಿದ ವೇದಘೋಷವು ಸ್ವರ್ಗವನ್ನೂ ಆವರಿಸಿತು.

ಸುಪ್ರೀತರಾದ ದೇವತೆಗಳು ತ್ರಿತನ ಯಜ್ಞವು ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿದರು. ಜಾಜ್ವಲ್ಯಮಾನವಾದ ಕಾಂತಿಯಿಂದ ಕೂಡಿದ್ದ ಮಹಾತ್ಮನಾದ ತ್ರಿತನನ್ನು ಕಂಡು `ಯಜ್ಞದ ಹವಿರ್ಭಾಗವನ್ನು ಪಡೆದುಕೊಳ್ಳಲು ಬಂದಿದ್ದೇವೆ' ಎಂದು ಹೇಳಿದರು. ತ್ರಿತನು ತನ್ನ ದುರವಸ್ಥೆಯನ್ನು ಹೇಳಿ, ದೇವತೆಗಳಿಗೆ ಯಥಾವಿಧಿಯಾಗಿ ಮಂತ್ರಯುಕ್ತವಾದ ಭಾಗಗಳನ್ನು ಸಮರ್ಪಿಸಿದನು. ದೇವತೆಗಳೂ ಪರಮಪ್ರಿಯರಾಗಿ, ತ್ರಿತನ ಮನೋವಾಂಛಿತವಾದ ಎಲ್ಲ ವರಗಳನ್ನೂ ದಯಪಾಲಿಸಿದರು. ದೇವತೆಗಳನ್ನು ಕುರಿತು ಈ ವರಗಳನ್ನು ಕೇಳಿಕೊಂಡನು - ``ದೇವತೆಗಳೇ, ನನ್ನನ್ನು ಈ ಕೂಪದಿಂದ ಉದ್ಧರಿಸಿರಿ. ಈ ಕೂಪದಲ್ಲಿ ಯಾರು ಆಚಮನ ಮಾಡುವರೋ ಅವರಿಗೆ ಮಹಾಯಜ್ಞದಲ್ಲಿ ಸೋಮಪಾನವನ್ನು ಮಾಡಿದವರಿಗೆ ಪ್ರಾಪ್ತವಾಗುವ ಸದ್ಗತಿಯು ಲಭಿಸಲಿ''.

ತ್ರಿತಮುನಿಯು ಹೀಗೆಂದು ಹೇಳುತ್ತಿದ್ದಂತೆಯೇ ಅಲೆಗಳಿಂದ ಕೂಡಿದ ಸರಸ್ವತೀ ನದಿಯು ಆ ಕೂಪದಲ್ಲಿ ಆವಿರ್ಭವಿಸಿ ಮೇಲಕ್ಕೆ

ಉಕ್ಕಿತು. ಸರಸ್ವತೀ ನದಿಯ ಪ್ರವಾಹದಿಂದ ಮೇಲಕ್ಕೆತ್ತಲ್ಪಟ್ಟ ತ್ರಿತಮಹರ್ಷಿಯು ದೇವತೆಗಳಿಗೆ ಅಭಿಮುಖವಾಗಿ ನಿಂತು ಅವರನ್ನು ಯಥೋಚಿತವಾದ ಪೂಜೆಗಳಿಂದ ಸತ್ಕರಿಸಿದನು. ಸುಪ್ರೀತರಾದ ದೇವತೆಗಳು ಹಾಗೂ ತ್ರಿತನು ತಮ್ಮ ತಮ್ಮ ಸ್ಥಾನಗಳನ್ನು ಸೇರಿಕೊಂಡರು. ಆದರೆ ತನ್ನ ಅಣ್ಣಂದಿರು ಮಾಡಿದ್ದ ದ್ರೋಹವನ್ನು ತ್ರಿತನು ಮರೆತಿರಲಿಲ್ಲ. ಪರಮಕ್ರುದ್ಧನಾಗಿದ್ದ ತ್ರಿತಮಹರ್ಷಿಯು ಏಕತ-ದ್ವಿತರಿದ್ದಲ್ಲಿಗೆ ಹೋಗಿ ಅವರಿಗೆ ಶಾಪವನ್ನು ಕೊಟ್ಟನು: ``ಮೂರು ಜನರೂ ಸಂಪಾದಿಸಿದ ಪಶುಗಳನ್ನು ನೀವಿಬ್ಬರೇ ಹಂಚಿಕೊಳ್ಳಬೇಕೆಂಬ ದುರಾಸೆಯಿಂದ ನನ್ನನ್ನು ಕೂಪದಲ್ಲಿಯೇ ಬಿಟ್ಟು ಪಶುಗಳೊಡನೆ ಪಲಾಯನ ಮಾಡಿರುವಿರಿ. ಈ ಪಾಪಕರ್ಮಕ್ಕಾಗಿ ನೀವು ಕೋರೆದಾಡೆಗಳನ್ನು ಹೊಂದಿರುವ ಭಯಂಕರವಾದ ತೋಳಗಳಾಗಿ ಎಲ್ಲೆಡೆಯೂ ಸಂಚರಿಸುತ್ತಿರಿ. ನಿಮ್ಮ ಸಂತತಿಯಲ್ಲಿ ಗೋಲಾಂಗೂಲಗಳು, ಕರಡಿಗಳೂ ಮತ್ತು ಕಪಿಗಳು ಹುಟ್ಟುತ್ತವೆ''. ತ್ರಿತಮಹರ್ಷಿಯು ಈ ರೀತಿ ಶಪಿಸುತ್ತಿದ್ದಂತೆಯೇ ಏಕತ ಮತ್ತು ದ್ವಿತರು ತೋಳಗಳಾಗಿ ಪರಿವರ್ತನೆ ಹೊಂದಿದರು. ತ್ರಿತನು ಬಿದ್ದಿದ್ದ ಆ ಕೂಪವು ಮುಂದೆ ತ್ರಿತಕೂಪವೆಂದೇ ಪ್ರಸಿದ್ಧವಾಯಿತು. ಆ ಸ್ಥಳವು ಉದಪಾನತೀರ್ಥವೆಂದೂ, ಆದಿತೀರ್ಥವೆಂದೂ ಹೆಸರನ್ನು ಪಡೆದುಕೊಂಡು ಮಂಗಳಕರವಾದ ತೀರ್ಥಕ್ಷೇತ್ರವಾಯಿತು.

ತಯೋರ್ಯೇ ತ್ವನ್ವಯೇ ಜಾತಾ ಭವಿಷ್ಯಂತಿ ವನೌಕಸಃ |
ತೇ ಸಹಾಯಾ ಭವಿಷ್ಯಂತಿ ಸುರಕಾರ್ಯೇ ಮಮ ದ್ವಿಜ ॥84॥

ದ್ವಿತ ಮತ್ತು ಏಕತ ವಂಶದಲ್ಲಿ ಹುಟ್ಟಿದ ವಾನರರೆಲ್ಲರೂ ದೇವತೆಗಳಿಗೆ ಹಿತ ಮಾಡುವ ರಾವಣ ವಧೆಕಾರ್ಯದಲ್ಲಿ ನನಗೆ ಸಹಾಯಕರಾಗುತ್ತಾರೆ.

ತತೋ ರಕ್ಷಃಪತಿಂ ಘೋರಂ ಪುಲಸ್ತ್ಯಕುಲಪಾಂಸನಮ್ |
ಹನಿಷ್ಯೇ ರಾವಣಂ ಸಂಖ್ಯೇ ಸಗಣಂ ಲೋಕಕಂಟಕಮ್ ॥85॥

ಅವರ ಸಹಾಯವನ್ನು ಪಡೆದ ನಾನು ಪುಲಸ್ತ್ಯಕುಲಕ್ಕೆ ಕಂಟಕನಾದ, ಘೋರನಾದ, ರಾಕ್ಷಸರಾಜನಾದ, ಲೋಕಕಂಟಕನಾದ ಭಯಂಕರನಾದ ರಾವಣನನ್ನು ಪರಿವಾರ ಸಹಿತವಾಗಿ ನಾಶ ಮಾಡುತ್ತೇನೆ.

ದ್ವಾಪರಸ್ಯ ಕಲೇಶ್ಚೈವ ಸಂಧೌ ಪರ್ಯವಸಾನಿಕೇ |
ಪ್ರಾದುರ್ಭಾವಃ ಕಂಸಹೇತೋರ್ಮಥುರಾಯಾಂ ಭವಿಷ್ಯತಿ ॥86॥

ದ್ವಾಪರ-ಕಲಿಗಳ ಸಂಧಿಕಾಲದಲ್ಲಿ ಕಂಸನ ವಧೆಗಾಗಿ ನಾನು ಮಥುರಾ ಪಟ್ಟಣದಲ್ಲಿ ಅವತಾರ ಮಾಡುತ್ತೇನೆ.

ತತ್ರಾಹಂ ದಾನವಾನ್ ಹತ್ವಾ ಸುಬಹೂನ್ ದೇವಕಂಟಕಾನ್ |
ಕುಶಸ್ಥಲೀಂ ಕರಿಷ್ಯಾಮಿ ನಿವಾಸಂ ದ್ವಾರಕಾಂ ಪುರೀಮ್ ॥87॥

ನಾನು ಅಲ್ಲಿ ದೇವತೆಗಳಿಗೆ ಉಪದ್ರವವನ್ನು ಕೊಡುವ ಅನೇಕ ಸಂಖ್ಯೆಯಲ್ಲಿರುವ ದಾನವರನ್ನು ಸಂಹರಿಸಿ ಕುಶಸ್ಥಲಿ ಎಂಬ ಹೆಸರಿನ ಪಟ್ಟಣವನ್ನು ದ್ವಾರಕಾ ಪುರವನ್ನಾಗಿ ಪರಿವರ್ತಿಸಿ ಅಲ್ಲಿ ವಾಸ ಮಾಡುತ್ತೇನೆ.

ವಸಾನಸ್ತತ್ರ ವೈ ಪುರ್ಯಾಮದಿತೇರ್ವಿಪ್ರಿಯಂಕರಮ್ |
ಹನಿಷ್ಯೇ ನರಕಂ ಭೌಮಂ ಮುರಂ ಪೀಠಂ ಚ ದಾನವಮ್ ॥88॥

ದ್ವಾರಕೆಯಲ್ಲಿಯೇ ವಾಸ ಮಾಡುತ್ತಾ ಅದಿತಿಯ ಕರ್ಣ-ಕುಂಡಲಗಳನ್ನು ಅಪಹರಿಸುವ ಭೂದೇವಿಯ ಸುತನಾದ ನರಕನನ್ನು, ಮುರ, ಪೀಠ ಎಂಬ ದಾನವರನ್ನು ಸಂಹರಿಸುತ್ತೇನೆ.

ಪ್ರಾಗ್ಜ್ಯೋತಿಷಪುರಂ ರಮ್ಯಂ ನಾನಾಧನಸಮನ್ವಿತಮ್ |
ಕುಶಸ್ಥಲೀಂ ನಯಿಷ್ಯಾಮಿ ಹತ್ವಾ ವೈ ದಾನವೋತ್ತಮಾನ್ ॥89॥

ನರಕನನ್ನು ಸಂಹರಿಸಿ ಅವನ ಪಟ್ಟಣದಲ್ಲಿರುವ ಧನ-ಕನಕ-ವೈಡೂರ್ಯಗಳಿಂದ ಸಂವೃತವಾದ ಪ್ರಾಗ್ಜ್ಯೋತಿಷ ಪುರವನ್ನೇ ದ್ವಾರಕೆಗೆ ತಂದುಬಿಡುತ್ತೇನೆ.

ಶಂಕರಂ ಚ ಮಹಾಸೇನಂ ಬಾಣಪ್ರಿಯಹಿತೈಷಿಣಮ್ |
ಪರಾಜೇಷ್ಯಾಮ್ಯಥೋದ್ಯುಕ್ತೌ ದೇವಲೋಕನಮಸ್ಕೃತೌ ॥90॥

ಬಾಣನಿಗೆ ಹಿತವನ್ನು ಮಾಡುವ, ಮಹಾಸೇನೆಯಿಂದ ಕೂಡಿದ ಶಂಕರನನ್ನು, ಬಾಣನಿಗಾಗಿ ಯುದ್ಧಕ್ಕೆ ಬಂದಿರುವ ಶಂಕರ ಮತ್ತು ದೇವನಮಸ್ಕೃತರಾದ ಮಹಾಸೇನರನ್ನು ನಾನು ಪರಾಜಯಗೊಳಿಸುತ್ತೇನೆ.

ತತಃ ಸುತಂ ಬಲೇರ್ಜಿತ್ವಾ ಬಾಣಂ ಬಾಹುಸಹಸ್ರಿಣಮ್ |
ವಿನಾಶಯಿಷ್ಯಾಮಿ ತತಃ ಸರ್ವಾನ್ ಸೌಭನಿವಾಸಿನಃ ॥91॥

ಬಳಿಕ ನಾನು ಬಲಿಯ ಮಗನಾದ ಸಾವಿರ ತೋಳಿನ ಬಾಣನನ್ನು ಸೋಲಿಸಿ ಸಾಲ್ವನ ಸೌಭನಿವಾಸದಲ್ಲಿರುವ ಎಲ್ಲರನ್ನೂ ಧ್ವಂಸಮಾಡುತ್ತೇನೆ.

ಯಃ ಕಾಲಯವನಃ ಖ್ಯಾತೋ ಗರ್ಗತೇಜೋಭಿಸಂವೃತಃ |
ಭವಿಷ್ಯತಿ ವಧಸ್ತಸ್ಯ ಮತ್ತ ಏವ ದ್ವಿಜೋತ್ತಮ ॥92॥

ದ್ವಿಜೋತ್ತಮನೇ, ಗರ್ಗಾಚಾರ್ಯರ ತೇಜಸ್ಸಿನಿಂದ ಹುಟ್ಟಿರುವ, ಕಾಲಯವನ ಎಂದೇ ಖ್ಯಾತನಾದ ಅಸುರನು ನನ್ನಿಂದಲೇ ಮದಭರಿತನಾಗಿ ಸಂಹಾರ ಹೊಂದುತ್ತಾನೆ.

ಜರಾಸಂಧಶ್ಚ ಬಲವಾನ್ ಸರ್ವರಾಜವಿರೋಧಕಃ |
ಭವಿಷ್ಯತ್ಯಸುರಃ ಸ್ಫೀತೋ ಭೂಮಿಪಾಲೋ ಗಿರಿವ್ರಜೇ |
ಮಮ ಬುದ್ಧಿಪರಿಸ್ಪಂದಾದ್ ವಧಸ್ತಸ್ಯ ಭವಿಷ್ಯತಿ ॥93॥

ಗಿರಿವ್ರಜದಲ್ಲಿ ಸಂಪತ್ತಿನಿಂದ ಸಮೃದ್ಧನಾದ, ಮಹಾಬಲಶಾಲಿಯಾದ, ಸಮಸ್ತ ರಾಜರನ್ನು ವಿರೋಧಿಸುವ ಜರಾಸಂಧ ಎಂಬ ಹೆಸರಿನ ಭೂಪಾಲನನ್ನು ಬುದ್ಧಿ- ಕೌಶಲದಿಂದ ವಧಿಸುತ್ತೇನೆ.

ಶಿಶುಪಾಲಂ ವಧಿಷ್ಯಾಮಿ ಯಜ್ಞೇ ಧರ್ಮಸುತಸ್ಯ ವೈ |
ಸಮಾಗತೇಷು ಬಲಿಷು ಪೃಥಿವ್ಯಾಂ ಸರ್ವರಾಜಸು |
ವಾಸವಿಃ ಸುಸಹಾಯೋ ವೈ ಮಮ ಹ್ಯೇಕೋ ಭವಿಷ್ಯತಿ |
ಯುಧಿಷ್ಠಿರಂ ಸ್ಥಾಪಯಿಷ್ಯೇ ಸ್ವರಾಜ್ಯೇ ಭ್ರಾತೃಭಿಃ ಸಹ ॥94॥
ಭೂಮಂಡಲದ ವರಿಷ್ಠನಾದ ಸಮಸ್ತರಾಜರು ಧರ್ಮರಾಜನ ಯಜ್ಞಕ್ಕೆ ಆಗಮಿಸಿದಾಗ ಶಿಶುಪಾಲನನ್ನು ವಧಿಸುತ್ತೇನೆ. ಇಂದ್ರನ ಮಗನಾದ ಅರ್ಜುನನು ನನಗೆ ಒಳ್ಳೆಯ ಸಹಾಯಕನಾಗುತ್ತಾನೆ. ಧರ್ಮರಾಜನ ರಾಜ್ಯದಲ್ಲಿ ಸಹೋದರರಿಂದ ಕೂಡಿರುವ ಯುಧಿಷ್ಠಿರನನ್ನು ರಾಜನನ್ನಾಗಿ ಮಾಡುತ್ತೇನೆ.
ಏವಂ ಲೋಕಾ ವದಿಷ್ಯಂತಿ ನರನಾರಾಯಣಾವೃಷೀ |
ಉದ್ಯುಕ್ತೌ ದಹತಃ ಕ್ಷತ್ರಂ ಲೋಕಕಾರ್ಯಾರ್ಥಮೀಶ್ವರೌ ॥95॥
ಆ ಸಮಯದಲ್ಲಿ ಜನರೆಲ್ಲರೂ ಲೋಕಕಲ್ಯಾಣಕ್ಕಾಗಿ ನರ-ನಾರಾಯಣನೇ ಒಂದು ಕಡೆ ಸೇರಿ ಕ್ಷತ್ರಿಯರನ್ನು ಸಂಹಾರ ಮಾಡುವ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾನೆ ಎಂದು ಹೇಳುತ್ತಾನೆ.
ಕೃತ್ವಾ ಭಾರಾವತರಣಂ ವಸುಧಾಯಾ ಯಥೇಪ್ಸಿತಮ್ |
ಸರ್ವಸಾತ್ವತಮುಖ್ಯಾನಾಂ ದ್ವಾರಕಾಯಾಶ್ಚ ಸತ್ತಮ |
ಕರಿಷ್ಯೇ ಪ್ರಲಯಂ ಘೋರಮಾತ್ಮಜ್ಞಾತಿವಿನಾಶನಮ್ ॥96॥
ಭೂದೇವಿಯ ಸಂಕಲ್ಪಕ್ಕನುಸಾರವಾಗಿ ಕ್ಷತ್ರಿಯರೆಲ್ಲರನ್ನೂ ಸಂಹಾರ ಮಾಡಿ ಭೂಭಾರವನ್ನು ಪರಿಹರಿಸುತ್ತೇನೆ. ಯಾದವರ ಸಹಿತವಾಗಿ ದ್ವಾರಕೆಯನ್ನು ನಾಶ ಮಾಡಿ ಸ್ವಬಂಧು ವಿನಾಶರೂಪವಾದ ಪ್ರಳಯವನ್ನೇ ಉಂಟು ಮಾಡುತ್ತೇನೆ.
ತತಃ ಕಲಿಯುಗಸ್ಯಾದೌ ದ್ವಿಜರಾಜತರುಂ ಶ್ರಿತಃ |
ಭೀಷಯಾ ಮಾಗಧೇನೈವ ಧರ್ಮರಾಜಗೃಹೇ ವಸನ್ ॥97॥
ಕಾಷಾಯವಸ್ತ್ರಸಂವೀತೋ ಮುಂಡಿತಃ ಶುಕ್ಲದಂತವಾನ್ |
ಶುದ್ಧೋದನಸುತೋ ಬುದ್ಧೋ ಮೋಹಯಿಷ್ಯಾಮಿ ಮಾನವಾನ್ ॥98॥
ನಂತರ ಕಲಿಯುಗದ ಆರಂಭದಲ್ಲಿ ಬ್ರಾಹ್ಮಣಶ್ರೇಷ್ಠನ ಮನೆಯನ್ನು ಆಶ್ರಯಿಸಿ ನನ್ನ ಭಯವುಳ್ಳ ಮಗಧರಾಜನಾದ ಜಿನನ ಗೃಹದಲ್ಲಿ ವಾಸ ಮಾಡುತ್ತಾ, ಕಾಷಾಯ ವಸ್ತ್ರವನ್ನು ಧರಿಸಿ, ಮುಂಡಿತನಾಗಿ, ಶುದ್ಧದಂತವುಳ್ಳವನಾಗಿ, ಶುದ್ಧೋದನನ ಮಗನಾಗಿ ಬುದ್ಧಾವತಾರದಿಂದ ಎಲ್ಲ ಮಾನವರನ್ನು ಮೋಹಗೊಳಿಸುತ್ತೇನೆ.
ಶೂದ್ರಾಃ ಶುದ್ಧೇಷು ಭುಜ್ಯಂತೇ ಮಯಿ ಬುದ್ಧತ್ವಮಾಗತೇ |
ಭವಿಷ್ಯಂತಿ ನರಾಃ ಸರ್ವೇ ಬುದ್ಧಾಃ ಕಾಷಾಯಸಂವೃತಾಃ ॥99॥
ಆಗ ಶೂದ್ರರು ಮಾಂಸಾದಿ ಆಹಾರಗಳನ್ನು ಸ್ವೀಕರಿಸದಿರುವವರ ಮನೆಯಲ್ಲಿಯೇ ಊಟ ಮಾಡುತ್ತಾರೆ. ನಾನು ಬುದ್ಧಾವತಾರವನ್ನು ತಾಳಿದ ಮೇಲೆ ಎಲ್ಲ ಮಾನವರು ಕಾಷಾಯವಸ್ತ್ರವನ್ನು ಧರಿಸಿ ಸಂನ್ಯಾಸಿಗಳಂತೆ ಕಾಣುತ್ತಾರೆ.
ಅನಧ್ಯಾಯಾ ಭವಿಷ್ಯಂತಿ ವಿಪ್ರಾ ಯಾಗವಿವರ್ಜಿತಾಃ |
ಅಗ್ನಿಹೋತ್ರಾಣಿ ಸೀದಂತಿ ಗುರುಪೂಜಾ ಚ ನಶ್ಯತಿ ॥100॥
ಬ್ರಾಹ್ಮಣರು ಅಗ್ನಿಹೋತ್ರ, ಯಾಗ, ಅಧ್ಯಯನ, ಗುರುಸೇವೆ ಎಲ್ಲವನ್ನೂ ಬಿಟ್ಟು ಬಿಡುತ್ತಾರೆ.
ನ ಶೃಣ್ವಂತಿ ಪಿತುಃ ಪುತ್ರಾ ನ ಸ್ನುಷಾ ನೈವ ಭ್ರಾತರಃ |
ನ ಪೌತ್ರಾ ನ ಕಲತ್ರಾ ವಾ ವರ್ತಂತೇಪ್ಯಧಮೋತ್ತಮಾಃ ॥101॥
ತಂದೆಯ ಮಾತನ್ನು ಮಕ್ಕಳು, ಆ ಮಕ್ಕಳ ಹೆಂಡತಿಯರು ಯಾರೂ ಕೇಳುವುದಿಲ್ಲ. ಅಣ್ಣಂದಿರ ಮಾತನ್ನು ತಮ್ಮಂದಿರು ಲಕ್ಷಿಸುವುದಿಲ್ಲ. ಅಜ್ಜಂದಿರ ಮಾತುಗಳನ್ನು ಮೊಮ್ಮಕ್ಕಳು, ಪತಿಯ ಮಾತನ್ನು ಪತ್ನಿಯರು ಆದರಿಸುವುದಿಲ್ಲ. ಕೆಳಗಿನವರೇ ಮೇಲಾಗುತ್ತಾರೆ. ಮೇಲಿನವರು ಕೀಳಾಗುತ್ತಾರೆ. ಲೋಕಸ್ಥಿತಿಯೇ ಅವ್ಯವಸ್ಥಿತವಾಗುತ್ತದೆ.
ಏವಂಭೂತಂ ಜಗತ್ಸರ್ವಂ ಶ್ರುತಿಸ್ಮೃತಿವಿವರ್ಜಿತಮ್ |
ಭವಿಷ್ಯತಿ ಕಲೌ ಪೂರ್ಣೇ ಹ್ಯಶುದ್ಧೋ ಧರ್ಮಸಂಕರಃ ॥102॥
ಕಲಿಯುಗವು ಬೆಳೆಯುತ್ತಾ ಲೋಕದಲ್ಲಿ ಶ್ರುತಿ-ಸ್ಮೃತಿಗಳೆಲ್ಲವೂ ನಶಿಸಿ ಹೋಗುತ್ತವೆ. ಧರ್ಮಸಾಂಕರ್ಯವು ಉಂಟಾಗುತ್ತದೆ.
ತೇಷಾಂ ಸಕಾಶಾದ್ ಧರ್ಮಜ್ಞಾ ದೇವಬ್ರಹ್ಮವಿದೋ ನರಾಃ |
ಭವಿಷ್ಯಂತಿ ಹ್ಯಶುದ್ಧಾಶ್ಚ ನ್ಯಾಯಚ್ಛಲವಿಭಾಷಿಣಃ ॥103॥
ಆಗಿನ ಪ್ರಜಾವರ್ಗದಲ್ಲಿ ಧರ್ಮಜ್ಞರು, ಬ್ರಹ್ಮಜ್ಞರು, ದೇವರ್ಷಿಗಳು ಅಶುದ್ಧರೆಂದು, ಅಸತ್ಯವಾದಿಗಳೆಂದು ಕರೆಸಿಕೊಳ್ಳುತ್ತಾರೆ.
ಯೇ ನಷ್ಟಧರ್ಮಶ್ರೋತಾರಸ್ತೇ ಸಮಾಃ ಪಾಪನಿಶ್ಚಯೇ |
ತಸ್ಮಾದೇತಾ ನ ಸಂಭಾಷ್ಯಾ ನ ಸ್ಪ್ರಶ್ಯಾ ಚ ಹಿತಾರ್ಥಿಭಿಃ |
ಉಪವಾಸತ್ರಯಂ ಕುರ್ಯಾತ್ ತತ್ಸಂಸರ್ಗವಿಶುದ್ಧಯೇ ॥104॥
ಅಧಾರ್ಮಿಕರೇ ಉಪದೇಶಕರು. ಅವುಗಳನ್ನು ಕೇಳತಕ್ಕವರು ಪಾಪಕರ್ಮಿಗಳೇ ಆಗಿರುತ್ತಾರೆ. ಅವರಂತೆಯೇ ಆಗುತ್ತಾರೆ. ಆದ್ದರಿಂದ ಶ್ರೇಯಸ್ಸನ್ನು ಬಯಸುವವರು ಅಂತಹವರ ಜೊತೆ ಮಾತನಾಡಬಾರದು. ಅವರನ್ನು ಮುಟ್ಟಬಾರದು. ಅಂತಹವರ ಸಹವಾಸದಿಂದ ಉಂಟಾದ ದೋಷಪರಿಹಾರಕ್ಕೆ ಮೂರು ದಿವಸ ಉಪವಾಸ ಇರಬೇಕು.
ತತಃ ಕಲಿಯುಗಸ್ಯಾಂತೇ ಬ್ರಾಹ್ಮಣೋ ಹರಿಪಿಂಗಲಃ |
ಕಲ್ಕಿರ್ವಿಷ್ಣುಯಶಃ ಪುತ್ರೋ ಯಾಜ್ಞವಲ್ಕ್ಯಃ ಪುರೋಹಿತಃ ॥105॥
ಬಳಿಕ ಕಲಿಯುಗದ ಕೊನೆಯಲ್ಲಿ, ನಾನು ಬ್ರಾಹ್ಮಣ ಜಾತಿಯಲ್ಲಿ ಕಲ್ಕಿಯಾಗಿ ಅವತರಿಸುತ್ತೇನೆ. ನನ್ನ ದೇಹದ ಬಣ್ಣವು ಹಸಿರು ಮತ್ತು

ಹಳದಿ ಇವೆರಡರ ಮಿಶ್ರಣವಾಗಿರುತ್ತದೆ. ವಿಷ್ಣುಯಶಸ್ ಎಂಬ ಬ್ರಾಹ್ಮಣನಿಗೆ ಮಗನಾದ ನಾನು ಯಾಜ್ಞವಲ್ಕ್ಯನೆನಿಸಿ ಪುರೋಹಿತನಾಗುತ್ತೇನೆ.
ತಸ್ಮಿನ್ನಾಶೇ ವನಗ್ರಾಮೇ ತಿಷ್ಠೇತ್ ಸೋನ್ನಾಸಿಮೋ ಹಯಃ |
ಸಹಯಾ ಬ್ರಾಹ್ಮಣಾಃ ಸರ್ವೇ ತೈರಹಂ ಸಹಿತಃ ಪುನಃ |
ಮ್ಲೇಚ್ಛಾನುತ್ಸಾದಯಿಷ್ಯಾಮಿ ಪಾಷಂಡಾಶ್ಚೈವ ಸರ್ವಶಃ ॥106॥
ಆ ಬ್ರಾಹ್ಮಣನು ವಾಸಿಸುವ ಗ್ರಾಮದಲ್ಲಿ ಉದ್ದವಾದ ಮುಖವುಳ್ಳ ಕುದುರೆ ಇರುತ್ತದೆ. ಬ್ರಾಹ್ಮಣರೆಲ್ಲರೂ ಕುದುರೆಯನ್ನು ಸಾಕುತ್ತಾರೆ. ನಾನು ಆ ಬ್ರಾಹ್ಮಣರೊಟ್ಟಿಗೆ ಸೇರಿ ಮ್ಲೇಚ್ಛರನ್ನು, ಪಾಖಂಡಿಗಳನ್ನು ನಿರ್ಮೂಲ ಮಾಡುತ್ತೇನೆ.
ಪಾಷಂಡಶ್ಚ ಕಲೌ ತತ್ರ ಮಾಯಯೈವ ವಿನಶ್ಯತೇ |
ಪಾಷಂಡಕಾಂಶ್ಚೈವ ಹತ್ವಾ ತತ್ರಾಂತಂ ಪ್ರಲಯೇ ಹ್ಯಹಮ್ ॥107॥
ತತಃ ಪಶ್ಚಾದ್ ಭವಿಷ್ಯಾಮಿ ಯಜ್ಞೇಷು ನಿರತಃ ಸದಾ |
ರಾಜ್ಯಂ ಪ್ರಶಾಸತಿ ಪುನಃ ಕುಂತೀಪುತ್ರೇ ಯುಧಿಷ್ಠಿರೇ ॥108॥
ಕರ್ಮಾಣ್ಯಪರಿಮೇಯಾನಿ ಚತುರ್ಮೂರ್ತಿಧರೋ ಹ್ಯಹಮ್ |
ಕೃತ್ವಾ ಲೋಕಾನ್ ಗಮಿಷ್ಯಾಮಿ ಸ್ವಾನಹಂ ಬ್ರಹ್ಮಸತ್ಕೃತಾನ್ ॥109॥
ಕಲಿಯುಗದಲ್ಲಿ ನನ್ನ ಮಾಯೆಯಿಂದ ಪಾಖಂಡ ಮತವು ನಾಶ ಹೊಂದುತ್ತದೆ. ನಾನು ಸಂಪೂರ್ಣವಾಗಿ ಪಾಖಂಡರನ್ನು ಕೊಂದ ಬಳಿಕ ನಿರಂತರವೂ ಯಜ್ಞದಲ್ಲಿ ನಿರತನಾಗಿರುತ್ತೇನೆ. ಚತುರ್ಮೂರ್ತಿಧರನಾದ ನಾನು ಕುಂತೀಪುತ್ರನಾದ ಧರ್ಮರಾಜನು ರಾಜ್ಯವನ್ನಾಳುವಾಗ ಅನಂತ ಕರ್ಮಗಳನ್ನು ನಡೆಸುತ್ತಾ ಬ್ರಹ್ಮನಿಂದಲೂ ಪೂಜಿತವಾದ ನನ್ನ ಲೋಕಕ್ಕೆ ತೆರಳುತ್ತೇನೆ.
ಹಂಸೋ ಹಯಶಿರಾಶ್ಚೈವ ಪ್ರಾದುರ್ಭಾವಾ ದ್ವಿಜೋತ್ತಮ |
ಯದಾ ವೇದಶ್ರುತಿರ್ನಷ್ಟಾ ಮಯಾ ಪ್ರತ್ಯಾಹೃತಾ ತದಾ |
ಸವೇದಾಃ ಸಶ್ರುತೀಕಾಶ್ಚ ಕೃತಾಃ ಪೂರ್ವಂ ಕೃತೇ ಯುಗೇ ॥110॥
ಹಂಸ, ಹಯಗ್ರೀವ ಈ ರೂಪಗಳು ನನ್ನ ಅವತಾರಗಳೇ. ಯಾವಾಗ ವೇದಶ್ರುತಿಯು ನಾಶವಾಗಿ ಹೋಗುತ್ತದೋ ಆಗ ನಾನು ಅವತರಿಸಿ ವೇದಶ್ರುತಿ ಮಾರ್ಗವನ್ನು ಉದ್ಧರಿಸುತ್ತೇನೆ. ಹಿಂದೆ ಕೃತಯುಗದಲ್ಲಿ ವೇದ ಸಹಿತವಾದ ಶ್ರುತಿಯನ್ನು ನಾನೇ ಪ್ರಕಟ ಪಡಿಸಿದ್ದೆನು.
ಅತಿಕ್ರಾಂತಾಃ ಪುರಾಣೇಷು ಶ್ರುತಾಸ್ತೇ ಯದಿ ವಾ ಕ್ವಚಿತ್ |
ಅತಿಕ್ರಾಂತಾಶ್ಚ ಬಹವಃ ಪ್ರಾದುರ್ಭಾವಾ ಮಮೋತ್ತಮಾಃ |
ಲೋಕಕಾರ್ಯಾಣಿ ಕೃತ್ವಾ ಚ ಪುನಃ ಸ್ವಾಂ ಪ್ರಕೃತಿಂ ಗತಾಃ ॥111॥
ಪುರಾಣಗಳಲ್ಲಿ ವರ್ಣಿತವಾಗಿರುವ ನನ್ನ ಅವತಾರ ವಿಷಯಗಳನ್ನು ನೀನು ಕೇಳಿರಬಹುದು. ಆದರೆ ನನ್ನ ಅಸಂಖ್ಯವಾದ ಅನೇಕ ಅವತಾರಗಳು ಈಗಾಗಲೇ ಮುಗಿದು ಹೋಗಿವೆ. ಲೋಕಕಾರ್ಯಗಳನ್ನು ಮಾಡಿ ಪುನಃ ಮೂಲರೂಪದಲ್ಲಿ ಐಕ್ಯ ಹೊಂದಿವೆ.
ನ ಹ್ಯೇತದ್ ಬ್ರಹ್ಮಣಾ ಪ್ರಾಪ್ತಮೀದೃಶಂ ಮಮ ದರ್ಶನಮ್ |
ಯತ್ತ್ವಯಾ ಪ್ರಾಪ್ತಮದ್ಯೇಹ ಏಕಾಂತಗತಬುದ್ಧಿನಾ ॥112॥
ಅನನ್ಯ ಭಕ್ತಿಯಿಂದ ಕೂಡಿರುವ ನಿನಗೆ ನನ್ನ ಯಾವ ವಿಶ್ವರೂಪ ದರ್ಶನವಾಗಿದೆಯೋ ಆ ದರ್ಶನವು ಬ್ರಹ್ಮನಿಗೂ ದೊರೆತಿಲ್ಲ. ವ್ಯಾಖ್ಯಾನ ವಿಶೇಷ ಈ ಭಗವಂತನ ವಚನವು ಸಪ್ತಮ ಸ್ಕಂದದಲ್ಲಿ ನರಸಿಂಹನು ಪ್ರಹ್ಲಾದನನ್ನು ಪ್ರಶಂಸಿಸುವಂತೆ ತಾತ್ಕಾಲಿಕ ಎಂದು ತಿಳಿಯಬೇಕು.
ಏತತ್ತೇ ಸರ್ವಮಾಖ್ಯಾತಂ ಬ್ರಹ್ಮನ್ ಭಕ್ತಿಮತೋ ಮಯಾ |
ಪುರಾಣಂ ಚ ಭವಿಷ್ಯಂ ಚ ಸರಹಸ್ಯಂ ಚ ಸತ್ತಮ ॥113॥
ಬ್ರಾಹ್ಮಣೋತ್ತಮನೇ, ಅನನ್ಯವಾದ ಭಕ್ತಿಯನ್ನು ಹೊಂದಿರುವ ನಿನಗೆ ನಾನು ಹಿಂದೆ ಕಳೆದುಹೋದ, ಮುಂದೆ ನಡೆಯುವ ಅವತಾರಗಳ ವಿಷಯವನ್ನು ರಹಸ್ಯಪೂರ್ಣವಾಗಿ ಹೇಳಿರುತ್ತೇನೆ.
ಏವಂ ಸ ಭಗವಾನ್ ದೇವೋ ವಿಶ್ವಮೂರ್ತಿಧರೋಽವ್ಯಯಃ |
ಏತಾವದುಕ್ತತ್ವ ವಚನಂ ತತ್ರೈವಾಂತರಧೀಯತ ॥114॥
ಯುಧಿಷ್ಠಿರನೇ, ವಿಶ್ವರೂಪವನ್ನು ಧರಿಸಿದ, ಅವ್ಯಯನಾದ, ದೇವದೇವನಾದ ಭಗವಂತನು ನಾರದರ ಬಳಿ ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನ ಹೊಂದಿದನು.
ನಾರದೋಽಪಿ ಮಹಾತೇಜಾಃ ಪ್ರಾಪ್ಯಾನುಗ್ರಹಮೀಪ್ಸಿತಮ್ |
ನರನಾರಾಯಣೌ ದ್ರಷ್ಟುಂ ಪ್ರಾದ್ರವದ್ ಬದರಾಶ್ರಮಮ್ ॥115॥
ನಾರದ ಮುನಿಯಾದರೂ ಮನಸ್ಸಿನಲ್ಲಿ ಬಯಸಿದ ಅನುಗ್ರಹವನ್ನು ಹರಿಯಿಂದ ಪಡೆದು ನರ-ನಾರಾಯಣರನ್ನು ಕಾಣುವ ತವಕದಿಂದ ಬದರಿಕಾಶ್ರಮಕ್ಕೆ ತೆರಳಿದರು.
ಇದಂ ಮಹೋಪನಿಷದಂ ಚತುರ್ವೇದಸಮನ್ವಿತಮ್ |
ಸಾಂಖ್ಯಯೋಗಕೃತಂ ತೇನ ಪಂಚರಾತ್ರಾನುಶಬ್ದಿತಮ್ ॥116॥
ನಾರಾಯಣಮುಖೋದ್ಗೀತಂ ನಾರದೋಽಶ್ರಾವಯತ್ ಪುನಃ |
ಬ್ರಹ್ಮಣಃ ಸದನೇ ತಾತ ಯಥಾ ದೃಷ್ಟಂ ಯಥಾ ಶ್ರುತಮ್ ॥117॥
ಈ ನಾಲ್ಕು ವೇದಗಳಿಂದ ಯುಕ್ತವಾದ, ಸಾಂಖ್ಯಯೋಗ ಸಿದ್ಧಾಂತದಿಂದ ಕೂಡಿರುವ, ಪಂಚರಾತ್ರಾಗಮ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ, ನಾರಾಯಣನ ಮುಖದಿಂದ ಹೇಳಲ್ಪಟ್ಟಿರುವ ಮಹೋಪನಿಷತ್ತನ್ನು ನಾರದರು ಬ್ರಹ್ಮನ ಮನೆ ಎನಿಸಿದ ಶ್ವೇತದ್ವೀಪದಲ್ಲಿ ಭಗವಂತನಿಂದ ಹೇಗೆ ನೋಡಿದ್ದಾರೋ, ಭಗವಂತನ ವಾಣಿಯನ್ನು ಹೇಗೆ ಕೇಳಿದ್ದಾರೋ ಹಾಗೆ ಪ್ರವಚನವನ್ನು

ಮಾಡಿದರು.
ಯುಧಿಷ್ಠಿರಃ
ಏತದಾಶ್ಚರ್ಯಭೂತಂ ಹಿ ಮಾಹಾತ್ಮ್ಯಂ ತಸ್ಯ ಧೀಮತಃ |
ಕಿಂ ಬ್ರಹ್ಮಾ ನ ವಿಜಾನೀತೇ ಯತಃ ಶುಶ್ರಾವ ನಾರದಾತ್ ||118||
ಯುಧಿಷ್ಠಿರ ತಾತನೇ, ಜ್ಞಾನಿಯಾದ ನಾರಾಯಣನ ಮಾಹಾತ್ಮ್ಯವು ಅತ್ಯಾಶ್ಚರ್ಯಕರವು. ಬ್ರಹ್ಮದೇವನು ನಾರಾಯಣನ ಮಹಿಮೆಯನ್ನು ನಾರದರಿಂದ ಕೇಳಬೇಕಾದರೆ ಅದಕ್ಕಿಂತ ಮೊದಲು ಈ ವಿಷಯವು ಅವರಿಗೆ ತಿಳಿದಿರಲಿಲ್ಲವೆ?
ಪಿತಾಮಹೋ ಹಿ ಭಗವಾಂಸ್ತಸ್ಮಾದ್ ದೇವಾದನಂತರಃ |
ಕಥಂ ಸ ನ ವಿಜಾನೀಯಾತ್ ಪ್ರಭಾವಮಮಿತೌಜಸಃ ||119||
ಬ್ರಹ್ಮನು ನಾರಾಯಣನಿಂದಲೇ ಹುಟ್ಟಿದವನು. ಎರಡನೆಯ ಸ್ಥಾನ ಇವನದ್ದು. ಅಂತಹ ಬ್ರಹ್ಮನಿಗೆ ಇವನ ಮಹಿಮೆಯು ಏಕೆ ತಿಳಿಯಲಿಲ್ಲ?
ಭೀಷ್ಮಃ
ಮಹಾಕಲ್ಪಸಹಸ್ರಾಣಿ ಮಹಾಕಲ್ಪಶತಾನಿ ಚ |
ಸಮತೀತಾನಿ ರಾಜೇಂದ್ರ ಸರ್ಗಾಶ್ಚ ಪ್ರಲಯಾಶ್ಚ ಹ ||120||
ಭೀಷ್ಮ ಯುಧಿಷ್ಠಿರನೇ, ಇಲ್ಲಿಯ ತನಕ ನೂರಾರು-ಸಾವಿರಾರು ಮಹಾಕಲ್ಪಗಳು ಸಂದುಹೋಗಿವೆ. ಅನಂತ ಸೃಷ್ಟಿ, ಪ್ರಳಯಗಳು ನಡೆದುಹೋಗಿವೆ.
ಸರ್ಗಸ್ಯಾದೌ ಸ್ಮೃತೋ ಬ್ರಹ್ಮಾ ಪ್ರಜಾಸರ್ಗಕರಃ ಪ್ರಭುಃ |
ಜಾನಾತಿ ದೇವಪ್ರವರಂ ಭೂಯಶ್ಚಾತೋಧಿಕಂ ನೃಪ |
ಪರಮಾತ್ಮಾನಮೀಶಾನಮಾತ್ಮನಃ ಪ್ರಭವಂ ತಥಾ ||121||
ಸೃಷ್ಟಿಯ ಆರಂಭದಲ್ಲಿ ಪ್ರಭುವಾದ ಬ್ರಹ್ಮನೇ ಚರಾಚರ ಪ್ರಾಣಿಗಳಿಗೆ ಸೃಷ್ಟಿಕರ್ತನು. ಬ್ರಹ್ಮನು ತನ್ನ ಉತ್ಪತ್ತಿಗೆ ಕಾರಣನಾದ ನಾರಾಯಣನ ಮಹಾತ್ಮೆಯನ್ನು ಇದಕ್ಕಿಂತಲೂ ಅಧಿಕವಾಗಿಯೇ ತಿಳಿದಿರುತ್ತಾನೆ.
ಯೇ ತ್ವನ್ಯೇ ಬ್ರಹ್ಮಸದನೇ ಸಿದ್ಧಸಂಘಾಃ ಸಮಾಗತಾಃ |
ತೇಭ್ಯಸ್ತಚ್ಛ್ರಾವಯಾಮಾಸ ಪುರಾಣಂ ವೇದಸಮ್ಮಿತಮ್ ||122||
ನಾರದರು ನಾರಾಯಣನ ಮಹಿಮೆಯನ್ನು ಚತುರ್ಮುಖ ಬ್ರಹ್ಮನಿಗೆ ಹೇಳಿದ್ದಲ್ಲ. ಆ ಬ್ರಹ್ಮನ ಸಭೆಯಲ್ಲಿದ್ದ ಸಿದ್ಧರ ಸಮುದಾಯಕ್ಕೆ ವೇದಸದೃಶವಾದ, ಪುರಾತನವಾದ ಪಂಚರಾತ್ರಾಗಮವನ್ನು ಚತುರ್ಮುಖ ಬ್ರಹ್ಮನು ನಾರದರಿಂದ ಹೇಳಿಸಿದನು.
ತೇಷಾಂ ಸಕಾಶಾತ್ ಸೂರ್ಯಶ್ಚ ಶ್ರುತ್ವಾ ವೈ ಭಾವಿತಾತ್ಮನಾಮ್ |
ಆತ್ಮಾನುಗಾಮಿನಾಂ ಬ್ರಹ್ಮ ಶ್ರಾವಯಾಮಾಸ ಭಾರತ ||123||
ಅವರ ದೆಸೆಯಿಂದ ಸೂರ್ಯದೇವನು ನಾರಾಯಣನ ಮಹಿಮೆಯನ್ನು ಸಿದ್ಧರ ಮೂಲಕ ಶ್ರವಣ ಮಾಡಿದನು. ಬಳಿಕ ಸೂರ್ಯನು ತನ್ನನ್ನೇ ಅನುಸರಿಸಿ ಬರುತ್ತಿರುವ ಜ್ಞಾನಿಗಳಿಗೂ ಇದನ್ನು ಕೇಳಿಸಿದನು.
ಚಷಷ್ಟಿರ್ಹಿ ಸಹಸ್ರಾಣಿ ಋಷೀಣಾಂ ಭಾವಿತಾತ್ಮನಾಮ್ |
ಸೂರ್ಯಸ್ಯ ತಪತೋ ಲೋಕಾನ್ನಿರ್ಮಿತಾ ಯೇ ಪುರಃಸರಾಃ |
ತೇಷಾಮಕಥಯತ್ ಸೂರ್ಯಃ ಸರ್ವೇಷಾಂ ಭಾವಿತಾತ್ಮನಾಮ್ ||
ಶುದ್ಧಾಂತಃಕರಣವುಳ್ಳ ಅರವತ್ತು ಸಾವಿರ ಋಷಿಗಳು ಸೂರ್ಯದೇವನು ಲೋಕವನ್ನು ಬೆಳಗುತ್ತಾ ಸಾಗುವಾಗ ಮುಂದೆ ಮುಂದೆ ಸಾಗುತ್ತಿದ್ದಾರೆ. ಅವರೆಲ್ಲ ವಾಲಖಿಲ್ಯರಿಗೂ ಸೂರ್ಯದೇವನು ಈ ದಿವ್ಯವಾದ ಮಹಾತ್ಮೆಯನ್ನು ತಿಳಿಸಿದನು.
ಸೂರ್ಯಾನುಗಾಮಿಭಿಸ್ತಾತ ಋಷಿಭಿಸ್ತೈರ್ಮಹಾತ್ಮಭಿಃ |
ಮೇರೌ ಸಮಾಗತಾ ದೇವಾಃ ಶ್ರಾವಿತಾಶ್ಚೇದಮುತ್ತಮಮ್ ||125||
ಸೂರ್ಯನನ್ನೇ ಅನುಸರಿಸಿ ಹೋಗಿ ನಾರಾಯಣನ ಮಹಿಮೆಯನ್ನು ಕೇಳಿದ ಮಹಾತ್ಮರಾದ ಋಷಿಗಳು ಮೇರುಪರ್ವತಕ್ಕೆ ಆಗಮಿಸಿದ್ದ ದೇವತೆಗಳಿಗೆ ಉತ್ತಮೋತ್ತಮವಾದ ಈ ಚರಿತ್ರೆಯನ್ನು ಹೇಳಿದರು.
ದೇವಾನಾಂ ತು ಸಕಾಶಾದ್ವೈ ತತಃ ಶ್ರುತ್ವಾಸಿತೋ ದ್ವಿಜಃ |
ಶ್ರಾವಯಾಮಾಸ ರಾಜೇಂದ್ರ ಪಿತೄಣಾಂ ಮುನಿಸತ್ತಮಃ ||126||
ಯುಧಿಷ್ಠಿರನೇ, ಮುನಿಶ್ರೇಷ್ಠನಾದ, ದ್ವಿಜವರ್ಯನಾದ ಅಸಿತನು ದೇವತೆಗಳಿಂದ ನಾರಾಯಣನ ಮಹಿಮೆಯನ್ನು ಕೇಳಿ ಬಳಿಕ ಪಿತೃಗಳಿಗೆ ಹೇಳಿದನು.
ಮಮ ಚಾಪಿ ಪಿತಾ ತಾತ ಕಥಯಾಮಾಸ ಶಂತನುಃ |
ತತೋ ಮಯ್ಯೆತಚ್ಛ್ರುತ್ವಾ ಚ ಕೀರ್ತಿತಂ ತವ ಭಾರತ ||127||
ಇದೇ ಪರಂಪರೆಯಿಂದ ಹರಿಯ ಮಹಿಮೆಯು ನನ್ನ ತಂದೆಯಾದ ಶಂತನುವಿಗೂ ತಿಳಿಯಿತು. ಅವನು ನನಗೆ ಈ ನಾರಾಯಣನ ದಿವ್ಯವಾದ ಮಹಿಮೆಯನ್ನು ಹೇಳಿದನು. ನಾನು ನಿನಗೆ ಹೇಳಿದ್ದೇನೆ.
ಸುರೈರ್ವಾ ಮುನಿಭಿರ್ವಾಪಿ ಪುರಾಣಂ ಯೈರಿದಂ ಶ್ರುತಮ್ |
ಸರ್ವೇ ತೇ ಪರಮಾತ್ಮಾನಂ ಪೂಜಯಂತಿ ಪುನಃ ಪುನಃ ||128||
ದೇವತೆಗಳಲ್ಲಾಗಲಿ, ಮುನಿಗಳಲ್ಲಾಗಲಿ ಯಾರು ಈ ಪುರಾಣವನ್ನು ಕೇಳುತ್ತಾರೋ ಅವರೆಲ್ಲ ಭಕ್ತಿ ಪುರಸ್ಸರವಾಗಿ ಶ್ರೀಹರಿಯನ್ನು ಎಲ್ಲ ರೀತಿಯಿಂದ ಆರಾಧಿಸುತ್ತಾರೆ.
ಇದಮಾಖ್ಯಾನಮಾರ್ಷೇಯಂ ಪಾರಂಪರ್ಯಾಗತಂ ನೃಪ |

ನಾವಾಸುದೇವಭಕ್ತಾಯ ತ್ವಯಾ ದೇಯಂ ಕಥಂಚನ ॥129॥
ನರೇಶ್ವರನೇ, ಋಷಿ ಸಂಬಂಧವಾದ ಈ ಆಖ್ಯಾನವು ಪರಂಪರೆಯಿಂದ ಬಂದಿದೆ. ವಾಸುದೇವನ ಭಕ್ತನಲ್ಲದವನಿಗೆ ಯಾವುದೇ ಕಾರಣದಿಂದ ಇದನ್ನು ಉಪದೇಶಿಸಬಾರದು.
ಮತ್ತೋಽನ್ಯಾನಿ ಚ ತೇ ರಾಜನ್ನುಪಾಖ್ಯಾನಶತಾನಿ ವೈ |
ಯಾನಿ ಶ್ರುತಾನಿ ಧರ್ಮ್ಯಾಣಿ ತೇಷಾಂ ಸಾರೋಽಯಮುದ್ಧೃತಃ ॥130॥
ಯುಧಿಷ್ಠಿರನೇ, ಇಲ್ಲಿಯ ತನಕ ಯಾವ ನೂರಾರು ಉಪಾಖ್ಯಾನಗಳನ್ನು ನನ್ನಿಂದ ಕೇಳಿರುತ್ತೀಯೋ ಆ ಎಲ್ಲದರ ಸಾರವೇ ಪಂಚರಾತ್ರ ಉಪಾಖ್ಯಾನವೆನಿಸಿದೆ.
ಸುರಾಸುರೈರ್ಯಥಾ ರಾಜನ್ನಿರ್ಮಥ್ಯಾಮೃತಮುದ್ಧೃತಮ್ |
ಏವಮೇತತ್ ಪುರಾ ವಿಪ್ರೈಃ ಕಥಾಮೃತಮಿಹೋದ್ಧೃತಮ್ ॥131॥
ದೇವತೆಗಳು, ಅಸುರರು, ಸಮುದ್ರವನ್ನು ಮಥನ ಮಾಡಿ ಅಮೃತವನ್ನು ತೆಗೆದಂತೆ ಬ್ರಾಹ್ಮಣರೆಲ್ಲರೂ ಸಮಸ್ತ ಶಾಸ್ತ್ರಗಳನ್ನು ಮಥಿಸಿ ಅಮೃತಸದೃಶವಾದ ಈ ಮಹಾತ್ಮೆಯನ್ನು ಪ್ರಕಟಪಡಿಸಿದ್ದಾರೆ.
ಯಶ್ಚೇದಂ ಪಠತೇ ನಿತ್ಯಂ ಯಶ್ಚೇದಂ ಶೃಣುಯಾನ್ನರಃ |
ಏಕಾಂತಭಾವೋಪಗತ ಏಕಾಂತೇ ಸುಸಮಾಹಿತಃ ॥132॥
ಪ್ರಾಪ್ಯ ಶ್ವೇತಂ ಮಹಾದ್ವೀಪಂ ಭೂತ್ವಾ ಚಂದ್ರಪ್ರಭೋ ನರಃ |
ಸ ಸಹಸ್ರಾರ್ಚಿಷಂ ದೇವಂ ಪ್ರವಿಶೇನ್ನಾತ್ರ ಸಂಶಯಃ ॥133॥
ಯಾವನು ಈ ನಾರಾಯಣನ ಮಹಿಮೆಯನ್ನು ನಿತ್ಯವೂ ಪಠಿಸುತ್ತಾನೋ, ಕೇಳುತ್ತಾನೋ ಅವನು ನಾರಾಯಣನ ವಿಷಯದಲ್ಲಿ ಏಕಾಂತಭಕ್ತಿಯನ್ನು ಚೆನ್ನಾಗಿ ಹೊಂದಿದವನಾಗಿ, ಮಹಾದ್ವೀಪವೆನಿಸಿದ ಶ್ವೇತದ್ವೀಪಕ್ಕೆ ಹೋಗಿ, ಚಂದ್ರಪ್ರಭೆಯಿಂದ ಕೂಡಿದವನಾಗಿ ಸಹಸ್ರಕಿರಣನಾದ ನಾರಾಯಣನನ್ನೇ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಮುಚ್ಯೇದಾರ್ತಸ್ತಥಾ ರೋಗಾಚ್ಛ್ರುತ್ವೇಮಾಮಾದಿತಃ ಕಥಾಮ್ |
ಜಿಜ್ಞಾಸುರ್ಲಭತೇ ಕಾಮಾನ್ ಭಕ್ತೋ ಭಕ್ತಗತಿಂ ವ್ರಜೇತ್ ॥134॥
ಸಂಕಷ್ಟಕ್ಕೆ ತುತ್ತಾದ ಮನುಷ್ಯನು ಮೊದಲಿನಿಂದಲೂ ಈ ಕಥೆಯನ್ನು ಕೇಳಿದರೆ ಕಷ್ಟದಿಂದ ಮುಕ್ತನಾಗುತ್ತಾನೆ. ರೋಗಿಯು ರೋಗದಿಂದಲೂ ಮುಕ್ತನಾಗುತ್ತಾನೆ. ಜಿಜ್ಞಾಸುವು ಜ್ಞಾನವನ್ನು ಹೊಂದುತ್ತಾನೆ. ಭಕ್ತನು ಭಕ್ತರ ಗತಿಯನ್ನು ಹೊಂದುತ್ತಾನೆ.
ತ್ವಯಾಪಿ ಸತತಂ ರಾಜನ್ನಭ್ಯರ್ಚ್ಯಃ ಪುರುಷೋತ್ತಮಃ |
ಸ ಹಿ ಮಾತಾ ಪಿತಾ ಚೈವ ಕೃತ್ಸ್ನಸ್ಯ ಜಗತೋ ಗುರುಃ ॥135॥
ಯುಧಿಷ್ಠಿರನೇ, ನೀನೂ ಪುರುಷೋತ್ತಮನಾದ ಕೃಷ್ಣನನ್ನು ನಿರಂತರ ಆರಾಧಿಸು. ಸಮಗ್ರ ಜಗತ್ತಿಗೆ ಅವನೇ ತಂದೆ, ಅವನೇ ತಾಯಿ, ಅವನೇ ಗುರುವಾಗಿದ್ದಾನೆ.
ಬ್ರಹ್ಮಣ್ಯದೇವೋ ಭಗವಾನ್ ಪ್ರೀಯತಾಂ ತೇ ಸನಾತನಃ |
ಯುಧಿಷ್ಠಿರ ಮಹಾಬಾಹೋ ಮಹಾಬಾಹುರ್ಜನಾರ್ದನಃ ॥136॥
ಮಹಾಬಾಹುವೇ, ಯುಧಿಷ್ಠಿರನೇ, ಬ್ರಾಹ್ಮಣಪ್ರಿಯನಾದ, ಬುದ್ಧಿಶಾಲಿಯಾದ, ಸನಾತನನಾದ, ಭಗವಾನ್ ಶ್ರೀಹರಿಯು ನಿನ್ನ ವಿಷಯದಲ್ಲಿ ಯಾವಾಗಲೂ ಪ್ರಸನ್ನನಾಗಲಿ.
ವೈಶಂಪಾಯನಃ
ಶ್ರುತ್ವೈತದಾಖ್ಯಾನವರಂ ಧರ್ಮರಾಟ್ ಜನಮೇಜಯ |
ಭ್ರಾತರಶ್ಚಾಸ್ಯ ತೇ ಸರ್ವೇ ನಾರಾಯಣಪರಾಭವನ್ ॥137॥
ವೈಶಂಪಾಯನ ಜನಮೇಜಯನೇ, ಶ್ರೇಷ್ಠವಾದ ಉಪಾಖ್ಯಾನವನ್ನು ಕೇಳಿ ಧರ್ಮರಾಜನು, ಅವನ ಸಹೋದರರು ನಾರಾಯಣನ ಪರಮಭಕ್ತರಾದರು.
ಜಿತಂ ಭಗವತಾ ತೇನ ಪುರುಷೇಣೇತಿ ಭಾರತ |
ನಿತ್ಯಂ ಜಪ್ಯಪರಾ ಭೂತ್ವಾ ಸರಸ್ವತೀಮುದೀರಯನ್ ॥138॥
ಮುಂದೆ ಪಾಂಡವರು ಯಾವಾಗಲೂ ಹರಿನಾಮದಲ್ಲೇ ಆಸಕ್ತರಾಗಿ `ಭಗವಂತನಾದ ಪುರುಷೋತ್ತಮನಿಂದ ಎಲ್ಲವೂ ಜಯಿಸಲ್ಪಟ್ಟಿದೆ, ನಾವೆಲ್ಲರೂ ಅವನ ಅಧೀನರು' ಎಂಬ ಜಯವಾಣಿಯನ್ನು ಹೇಳುತ್ತಿದ್ದರು.
ಯೋ ಹ್ಯಸ್ಮಾಕಂ ಗುರುಃ ಶ್ರೇಷ್ಠಃ ಕೃಷ್ಣದ್ವೈಪಾಯನೋ ಮುನಿಃ |
ಸ ಜಗೌ ಪರಮಂ ಜಪ್ಯಂ ನಾರಾಯಣಮುದೀರಯನ್ ॥139॥
ನಮಗೆಲ್ಲ ಗುರುಗಳಾದ ಭಗವಾನ್ ವ್ಯಾಸರು ಉತ್ಕೃಷ್ಟ ಮಂತ್ರವನ್ನು ಜಪಿಸುತ್ತಾ ನಾರಾಯಣನ ಮಹಿಮೆಯನ್ನೇ ಹೇಳುತ್ತಿದ್ದರು.
ಗತ್ವಾಂತರಿಕ್ಷಾತ್ ಸತತಂ ಕ್ಷೀರೋದಮಮೃತಾಶಯಮ್ |
ಪೂಜಯಿತ್ವಾ ಚ ದೇವೇಶಂ ಪುನರಾಯಾತ್ಸ್ವಮಾಶ್ರಮಮ್ ॥140॥
ವ್ಯಾಸರು ಪ್ರತಿದಿನವೂ ಆಕಾಶ ಮಾರ್ಗದ ಮೂಲಕ ಅಮೃತನಿಧಿಯಾದ ಕ್ಷೀರ ಸಮುದ್ರಕ್ಕೆ ತೆರಳಿ ಅಲ್ಲಿ ಶ್ರೀಹರಿಯನ್ನು ಯಥಾವತ್ತಾಗಿ ಪೂಜಿಸಿ ಬಳಿಕ ತಮ್ಮ ಆಶ್ರಮಕ್ಕೆ ಹಿಂದಿರುಗುತ್ತಿದ್ದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತೆರಡನೆಯ ಅಧ್ಯಾಯ
ಶ್ರೀಹರಿಯು ಬ್ರಹ್ಮಾದಿಗಳಿಗೆ ಉಪದೇಶಿಸಿದ ಧರ್ಮರಹಸ್ಯವನ್ನು
ವ್ಯಾಸರು ತಮ್ಮ ಶಿಷ್ಯರಿಗೆ ಬೋಧಿಸಿದುದು.
ಜನಮೇಜಯಃ
ಕಥಂ ಸ ಭಗವಾನ್ ದೇವೋ ಯಜ್ಞೇಷ್ವಗ್ರಹರಃ ಪ್ರಭುಃ |
ಯಜ್ಞಧಾರೀ ಚ ಸತತಂ ವೇದವೇದಾಂಗವಿತ್ತಥಾ ॥1॥
ಜನಮೇಜಯ ಪ್ರಭುವಾದ, ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು ಯಜ್ಞದಲ್ಲಿ ಮೊದಲನೆಯ ಹವಿಸ್ಸನ್ನು ಸ್ವೀಕರಿಸುತ್ತಾನೆ ಎನ್ನುತ್ತಾರೆ. ಅದರಂತೆ ಯಜ್ಞಧಾರಿಯು ಯಾವಾಗಲೂ ವೇದ-ವೇದಾಂಗಗಳನ್ನು ಬಲ್ಲವನು ಭಗವಂತನೆಂದು ಹೇಳುತ್ತಾರೆ.
ನಿವೃತ್ತಂ ಚಾಸ್ಥಿತೋ ಧರ್ಮಂ ಕ್ಷೇಮೀ ಭಾಗವತಪ್ರಿಯಃ |
ಪ್ರವೃತ್ತಿಧರ್ಮಾನ್ ವಿದಧೇ ಸ ಏವ ಭಗವಾನ್ ಪ್ರಭುಃ ॥2॥
ಭಾಗವತರಿಗೆ ಪ್ರಿಯನಾದ ಭಗವಂತನು ಕ್ಷೇಮವುಳ್ಳವನು, ನಿವೃತ್ತಧರ್ಮವನ್ನು ಆಶ್ರಯಿಸಿದವನು. ಅದೇ ಭಗವಂತನೇ ಪ್ರವೃತ್ತಿಧರ್ಮಗಳನ್ನು ವಿಧಾನ ಮಾಡಿದ್ದಾನೆ. ಇದು ಹೇಗೆ?
ಕಥಂ ಪ್ರವೃತ್ತಿಧರ್ಮೇಷು ಭಾಗಾರ್ಹಾ ದೇವತಾಃ ಕೃತಾಃ |
ಕಥಂ ನಿವೃತ್ತಿಧರ್ಮಾಶ್ಚ ಕೃತಾ ವ್ಯಾವೃತ್ತಬುದ್ಧಯಃ ॥3॥
ನಿವೃತ್ತಿಧರ್ಮದ ಅವಲಂಬಿಯಾದ ಭಗವಂತನು ಪ್ರವೃತ್ತಿ ಧರ್ಮದಲ್ಲಿ ದೇವತೆಗಳೆಲ್ಲ ನಿರತರಾಗಿ ಯಜ್ಞಭಾಗವನ್ನು ಸ್ವೀಕರಿಸುವಂತೆ ಏಕೆ ಪ್ರಚೋದಿಸಿದನು? ವಿಷಯಗಳಿಂದ ಆಕೃಷ್ಟರಾದ ಸಾಧಕರನ್ನು ಯಾವ ಕಾರಣದಿಂದ ನಿವೃತ್ತಿಧರ್ಮ ನಿರತರನ್ನಾಗಿಸಿದನು?
ಏತಂ ನಃ ಸಂಶಯಂ ವಿಪ್ರ ಛಿಂಧಿ ಗುಹ್ಯಂ ಸನಾತನಮ್ |
ತ್ವಯಾ ನಾರಾಯಣಕಥಾ ಶ್ರುತಾ ವೈ ಧರ್ಮಸಂಹಿತಾ ॥4॥
ಇದು ನನಗೆ ಬಂದ ಸಂಶಯವಾಗಿದೆ. ಬಹಳ ಕಾಲದಿಂದ ಇರುವ ನನ್ನ ಸಂಶಯವನ್ನು ಪರಿಹರಿಸು. ಧರ್ಮೋಪದೇಶದಿಂದ ಕೂಡಿರುವ ನಾರಾಯಣನ ಅನೇಕ ಕಥೆಗಳನ್ನು ನೀನು ಕೇಳಿರುತ್ತಿಯಷ್ಟೆ!
ಇಮೇ ಸಬ್ರಹ್ಮಕಾ ಲೋಕಾಃ ಸಸುರಾಸುರಮಾನವಾಃ |
ಕ್ರಿಯಾಸ್ವಭ್ಯುದಯೋಕ್ತಾಸು ಸಕ್ತಾ ದೃಶ್ಯಂತಿ ಸರ್ವಶಃ |
ಮೋಕ್ಷಶ್ಚೋಕ್ತಸ್ತ್ವಯಾ ಬ್ರಹ್ಮನ್ನಿರ್ವಾಣಂ ಪರಮಂ ಸುಖಮ್ ॥5॥
ಬ್ರಹ್ಮಲೋಕಪರ್ಯಂತವಾದ ಸಮಸ್ತ ಲೋಕಗಳು, ದೇವ-ಅಸುರ-ಮಾನವರು ಅಭ್ಯುದಯಕ್ಕಾಗಿ ಹೇಳಲ್ಪಟ್ಟ ಕ್ರಿಯೆಗಳಲ್ಲಿಯೇ ಆಸಕ್ತರಾಗಿ, ಎಲ್ಲ ಕಡೆಯಲ್ಲಿಯೂ ಕಂಡುಬರುತ್ತಿದ್ದಾರೆ. ಆದರೆ ಮೋಕ್ಷವೊಂದೇ ಪರಮಶಾಂತಿರೂಪವಾದ ತಾಣವೆಂದು ನೀವು ಹೇಳುತ್ತಿದ್ದೀರಿ.
ಯೇ ಚ ಮುಕ್ತಾ ಭವಂತೀಹ ಪುಣ್ಯಪಾಪವಿವರ್ಜಿತಾಃ |
ತೇ ಸಹಸ್ರಾರ್ಚಿಷಂ ದೇವಂ ಪ್ರವಿಶಂತೀತಿ ಶುಶ್ರುಮಃ ॥6॥
ಯಾರು ಪುಣ್ಯ-ಪಾಪಗಳ ಸಂಬಂಧದಿಂದ ಮುಕ್ತರಾಗಿದ್ದಾರೋ ಅವರು ಸಹಸ್ರ ರಶ್ಮಿಯಾದ ಪರಮಾತ್ಮನನ್ನು ಪ್ರವೇಶಿಸುತ್ತಾರೆ ಎಂಬುದನ್ನು ತಮ್ಮಿಂದಲೇ ಕೇಳಿ ತಿಳಿದಿದ್ದೇನೆ.
ಅಹೋ ಹಿ ದುರನುಷ್ಠೇಯೋ ಮೋಕ್ಷಧರ್ಮಃ ಸನಾತನಃ |
ಯಂ ಹಿತ್ವಾ ದೇವತಾಃ ಸರ್ವಾ ಹವ್ಯಕವ್ಯಭುಜೋಽಭವನ್ ॥7॥
ಸನಾತನವಾದ ಮೋಕ್ಷಧರ್ಮದ ಅನುಷ್ಠಾನವನ್ನು ಅತ್ಯಂತ ಕಷ್ಟದಿಂದ ಆಚರಿಸಬೇಕಾಗುತ್ತದೆ. ಆದ್ದರಿಂದಲೇ ದೇವತೆಗಳು ಮೋಕ್ಷಧರ್ಮವನ್ನು ಬಿಟ್ಟು ಹವ್ಯ- ಕವ್ಯಗಳನ್ನು ಸ್ವೀಕರಿಸುತ್ತಿದ್ದಾರೆ.
ಕಿಂ ನು ಬ್ರಹ್ಮಾ ಚ ರುದ್ರಶ್ಚ ಶಕ್ರಶ್ಚ ಬಲಭಿತ್ ಪ್ರಭುಃ |
ಸೂರ್ಯಸ್ತಾರಾಧಿಪೋ ವಾಯುರಗ್ನಿರ್ವರುಣ ಏವ ಚ |
ಆಕಾಶಂ ಜಗತೀ ಚೈವ ಯೇ ಚ ಶೇಷಾ ದಿವೌಕಸಃ ॥8॥
ಬ್ರಹ್ಮ-ರುದ್ರರಾಗಲಿ, ಬಲಾಸುರನನ್ನು ಸಂಹರಿಸಿದ ಇಂದ್ರನಾಗಲಿ, ತಾರಾಧಿಪನಾದ ಚಂದ್ರನಾಗಲಿ, ಸೂರ್ಯನಾಗಲಿ, ವಾಯು-ಅಗ್ನಿ-ವರುಣರಾಗಲಿ, ಭೂಮಿ-ಆಕಾಶಗಳಾಗಲಿ, ಉಳಿದ ದೇವತೆಗಳೇ ಆಗಲಿ,
ಪ್ರಲಯಂ ನ ವಿಜಾನಂತಿ ಆತ್ಮನಃ ಪರಿನಿರ್ಮಿತಮ್ |
ತತಸ್ತೇ ನಾಸ್ಥಿತಾ ಮಾರ್ಗಂ ಧ್ರುವಮಕ್ಷಯಮವ್ಯಯಮ್ ॥9॥
ಪರಮಾತ್ಮನಿಂದ ಆಗುವ ತಮ್ಮ ನಾಶವನ್ನು ತಿಳಿದಿಲ್ಲವೇ? ಶಾಶ್ವತವೂ, ಅಕ್ಷಯವೂ, ನಾಶರಹಿತವೂ ಆದ ಅವರು ತಮ್ಮ ಮರಣವನ್ನು ತಿಳಿಯದಿರುವ ಕಾರಣದಿಂದಲೇ ಆಶ್ರಯಿಸಿಲ್ಲವೆ?
ಸ್ಮೃತ್ವಾ ಕಾಲಪರೀಮಾಣಂ ಪ್ರವೃತ್ತಿಂ ಯೇ ಸಮಾಸ್ಥಿತಾಃ |
ದೋಷಃ ಕಾಲಪರೀಮಾಣೇ ಮಹಾನೇಷ ಕ್ರಿಯಾವತಾಮ್ ॥10॥
ಯಾರು ಕಾಲದ ವ್ಯಾಪ್ತಿಯನ್ನು ಸ್ಮರಿಸಿಕೊಂಡು ಪ್ರವೃತ್ತಿಮಾರ್ಗವನ್ನು ಆಶ್ರಯಿಸಿದ್ದಾರೋ ಅಂತಹ ವ್ಯಕ್ತಿಗಳಿಗೆ ಕಾಲಪರಿಮಾಣವನ್ನು ತಿಳಿದಾಗಲೂ ಪ್ರವೃತ್ತಿ ಕರ್ಮಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ದೋಷ ಎಂದು ಪರಿಗಣಿಸಲ್ಪಟ್ಟಿದೆ.
ಏತನ್ಮೇ ಸಂಶಯಂ ವಿಪ್ರ ಹೃದಿ ಶಲ್ಯಮಿವಾರ್ಪಿತಮ್ |
ಛಿಂಧೀತಿಹಾಸಕಥನಾತ್ ಪರಂ ಕೌತೂಹಲಂ ಹಿ ಮೇ ॥11॥

ವಿಪ್ರರೇ, ನನ್ನ ಹೃದಯದಲ್ಲಿ ಮುಳ್ಳಿನಂತೆ ಈ ಸಂಶಯವು ಚುಚ್ಚುತ್ತಿದೆ. ಇತಿಹಾಸವನ್ನು ಹೇಳುವ ಮೂಲಕ ನನಗುಂಟಾದ ಸಂಶಯವನ್ನು ಪರಿಹರಿಸಿ. ಈ ತತ್ತ್ವರಹಸ್ಯವನ್ನು ತಿಳಿಯಲು ಕುತೂಹಲನಾಗಿದ್ದೇನೆ.
ಕಥಂ ಭಾಗಹರಾಃ ಪ್ರೋಕ್ತಾ ದೇವತಾಃ ಕ್ರತುಷು ದ್ವಿಜ |
ಕಿಮರ್ಥಂ ಚಾಧ್ವರೇ ಬ್ರಹ್ಮನ್ನಿಜ್ಯಂತೇ ತ್ರಿದಿವೌಕಸಃ ||12||
ಯಜ್ಞಗಳಲ್ಲಿ ದೇವತೆಗಳು ಹವಿರ್ಭಾಗವನ್ನು ಹೊಂದಲು ಅಧಿಕಾರಿಗಳೆಂದು ಏಕೆ ಹೇಳಿದೆ? ಯಾವ ಕಾರಣದಿಂದ ದೇವತೆಗಳನ್ನುದ್ದೇಶಿಸಿ ಹೋಮ ಮಾಡುತ್ತಾರೆ?
ಯೇ ಚ ಭಾಗಂ ಪ್ರಗೃಹ್ಣಂತಿ ಯಜ್ಞೇಷು ದ್ವಿಜಸತ್ತಮ |
ತೇ ಯಜಂತೋ ಮಹಾಯಜ್ಞೈಃ ಕಸ್ಯ ಭಾಗಂ ದದಂತಿ ವೈ ||13||
ಬೇರೆಯವರು ಮಾಡುವ ಯಜ್ಞಗಳಲ್ಲಿ ಆ ಯಜ್ಞದ ಭಾಗವನ್ನು ಸ್ವೀಕರಿಸುವ ದೇವತೆಗಳು, ತಾವೇ ಮಾಡುವ ಯಜ್ಞದಲ್ಲಿ ಯಾರಿಗೆ ಹವಿರ್ಭಾಗವನ್ನು ದಾನ ಮಾಡುತ್ತಾರೆ?
ವೈಶಂಪಾಯನಃ
ಅಹೋ ಗೂಢತಮಃ ಪ್ರಶ್ನಸ್ತ್ವಯಾ ಪೃಷ್ಟೋ ಜನೇಶ್ವರ |
ನಾತಪ್ತತಪಸಾ ಹ್ಯೇಷ ನಾವೇದವಿದುಷಾ ತಥಾ |
ನಾಪುರಾಣವಿದಾ ಚಾಪಿ ಶಕ್ಯೋ ವ್ಯಾಹರ್ತುಮಂಜಸಾ ||14||
ವೈಶಂಪಾಯನ ಮಹಾರಾಜನೇ, ಅತ್ಯಂತ ಗೂಢವಾದ ಪ್ರಶ್ನೆಯನ್ನೇ ಕೇಳಿದ್ದಿ. ತಪಸ್ಸನ್ನಾಚರಿಸದವನು, ವೇದವನ್ನು ಅರಿಯದವನು, ಪುರಾಣವನ್ನು ತಿಳಿಯದವನು ಈ ರೀತಿಯ ಪ್ರಶ್ನೆಗಳನ್ನು ಕೇಳಲು ಸಾಧ್ಯವಿಲ್ಲ.
ಹಂತ ತೇ ಕಥಯಿಷ್ಯಾಮಿ ಯನ್ಮೇ ಪೃಷ್ಟಃ ಪುರಾ ಗುರುಃ |
ಕೃಷ್ಣದ್ವೈಪಾಯನೋ ವ್ಯಾಸೋ ವೇದವ್ಯಾಸೋ ಮಹಾನೃಷಿಃ ||15||
ಸುಮಂತುರ್ಜೈಮಿನಿಶ್ಚೈವ ಪೈಲಶ್ಚ ಸುದೃಢವ್ರತಃ |
ಅಹಂ ಚತುರ್ಥಃ ಶಿಷ್ಯೋ ವೈ ಪಂಚಮಶ್ಚ ಶುಕಃ ಸ್ಮೃತಃ ||16||
ನಾನು ಈ ರೀತಿಯಾದ ಪ್ರಶ್ನೆಯನ್ನೇ ಕೇಳಿದಾಗ ಗುರುಗಳಾದ ವೇದವ್ಯಾಸರು ಏನು ಉತ್ತರಿಸಿದ್ದಾರೋ ಅದನ್ನೇ ನಿನಗೆ ಹೇಳುತ್ತೇನೆ. ಸುಮಂತು, ಜೈಮಿನಿ, ದೃಢವ್ರತನಾದ ಪೈಲ, ನಾಲ್ಕನೆಯವನಾದ ನಾನು, ಐದನೆಯವನಾದ ಶುಕ.
ಏತಾನ್ ಸಮಾಗತಾನ್ ಸರ್ವಾನ್ ಪಂಚ ಶಿಷ್ಯಾನ್ದಮಾನ್ವಿತಾನ್ |
ಶೌಚಾಚಾರಸಮಾಯುಕ್ತಾನ್ ಜಿತಕ್ರೋಧಾನ್ ಜಿತೇಂದ್ರಿಯಾನ್ ||17||
ವೇದಾನಧ್ಯಾಪಯಾಮಾಸ ಮಹಾಭಾರತಪಂಚಮಾನ್ |
ಮೇರೌ ಗಿರಿವರೇ ರಮ್ಯೇ ಸಿದ್ಧಚಾರಣಸೇವಿತೇ ||18||
ಇಷ್ಟು ಜನರು ವ್ಯಾಸರ ಬಳಿ ಶಿಷ್ಯರಾಗಿದ್ದೆವು. ಗುರುಗಳ ಬಳಿ ಹೋದ, ಕ್ಷಮಾದಿ ಗುಣಗಳಿಂದ ಕೂಡಿರುವ, ಶೌಚಾಚಾರ ಸಂಪನ್ನರಾದ, ಕ್ರೋಧವನ್ನು ಜಯಿಸಿರುವ, ಜಿತೇಂದ್ರಿಯರಾದ ನಮ್ಮೆಲ್ಲರಿಗೂ ವ್ಯಾಸರು ವೇದಾಧ್ಯಯನವನ್ನು ಮಾಡಿಸಿದರು. ಐದನೆಯದ್ದಾದ ಮಹಾಭಾರತವನ್ನೂ ಹೇಳುತ್ತಿದ್ದರು. ಸಿದ್ಧ-ಚಾರಣರಿಂದ ಸೇವಿಸಲ್ಪಡುತ್ತಿದ್ದ ಮೇರುಪರ್ವತದಲ್ಲಿ ಹೀಗೆ ಪಾಠವು ನಡೆಯುತ್ತಿರುವಾಗ;
ತೇಷಾಮಭ್ಯಸ್ಯತಾಂ ವೇದಾನ್ ಕದಾಚಿತ್ ಸಂಶಯೋಽಭವತ್ |
ಏಷ ವೈ ಯಸ್ತ್ವಯಾ ಪೃಷ್ಟಸ್ತೇನ ತೇಷಾಂ ಪ್ರಕೀರ್ತಿತಃ |
ತತಃ ಶ್ರುತೋ ಮಯಾ ಚಾಪಿ ತವಾಖ್ಯೇಯೋದ್ಯ ಭಾರತ ||19||
ವೇದಾಭ್ಯಾಸವನ್ನು ಮಾಡುತ್ತಿರುವಾಗ ಒಂದು ಬಾರಿ ಸಂಶಯ ಉಂಟಾಯಿತು. ನೀನು ಕೇಳಿದ ಪ್ರಶ್ನೆಯನ್ನೇ ನಾವು ಕೇಳಿದೆವು. ನಮ್ಮ ಪ್ರಶ್ನೆಗೆ ವ್ಯಾಸರು ಕೊಟ್ಟ ಉತ್ತರವನ್ನು ನಿನಗೆ ಹೇಳುತ್ತೇನೆ.
ಶಿಷ್ಯಾಣಾಂ ವಚನಂ ಶ್ರುತ್ವಾ ಸರ್ವಾಜ್ಞಾನತಮೋನುದಃ |
ಪರಾಶರಸುತಃ ಶ್ರೀಮಾನ್ವ್ಯಾಸೋ ವಾಕ್ಯಮುವಾಚ ಹ ||20||
ಶಿಷ್ಯರು ಹೇಳಿದ ಮಾತನ್ನು ಕೇಳಿ, ಸಮಸ್ತ ಅಜ್ಞಾನವೆಂಬ ಕತ್ತಲನ್ನು ಪರಿಹರಿಸಲು ಸಮರ್ಥರಾದ, ಪರಾಶರರ ಮಗನೆಂದೇ ಪ್ರಸಿದ್ಧರಾದ ಶ್ರೀಮಾನ್ ವ್ಯಾಸರು ಇಂತಹ ವಚನವನ್ನು ಹೇಳಿದರು.
ಮಯಾ ಹಿ ಸುಮಹತ್ತಪ್ತಂ ತಪಃ ಪರಮದಾರುಣಮ್ |
ಭೂತಂ ಭವ್ಯಂ ಭವಿಷ್ಯಚ್ಚ ಜಾನೀಯಾಮಿತಿ ಸತ್ತಮಾಃ ||21||
ಶಿಷ್ಯರೇ, ಹಿಂದೆ ನಾನು ಘೋರ ತಪಸ್ಸನ್ನು ಮಾಡಿದ್ದೇನೆ. ಭೂತ-ಭವ್ಯ- ಭವಿಷ್ಯತ್ತಿನ ಜ್ಞಾನಕ್ಕಾಗಿ ಪರಮ ದಾರುಣವಾದ ತಪಸ್ಸನ್ನು ಮಾಡಿದ್ದೇನೆಂದು ನೀವೆಲ್ಲ ತಿಳಿಯಿರಿ.
ತಸ್ಯ ಮೇ ತಪ್ತತಪಸೋ ನಿಗೃಹೀತೇಂದ್ರಿಯಸ್ಯ ಚ |
ನಾರಾಯಣಪ್ರಸಾದೇನ ಕ್ಷೀರೋದಸ್ಯಾನುಕೂಲತಃ ||22||
ತ್ರೈಕಾಲಿಕಮಿದಂ ಜ್ಞಾನಂ ಪ್ರಾದುರ್ಭೂತಂ ಯಥೇಪ್ಸಿತಮ್ |
ತಚ್ಛೃಣುಧ್ವಂ ಯಥಾಜ್ಞಾನಂ ವಕ್ಷ್ಯೇ ಸಂಶಯಮುತ್ತಮಮ್ |
ಯಥಾ ವೃತ್ತಂ ಹಿ ಕಲ್ಪಾದೌ ದೃಷ್ಟಂ ಮೇ ಜ್ಞಾನಚಕ್ಷುಷಾ ||23||
ಹೀಗೆ ತಪಸ್ಸನ್ನಾಚರಿಸಿದ, ಇಂದ್ರಿಯಗಳನ್ನು ಜಯಿಸಿರುವ ನನಗೆ ನಾರಾಯಣನ ಪ್ರಸಾದದಿಂದ ಕ್ಷೀರಸಮುದ್ರದ ತೀರದಲ್ಲಿ ಯಥೇಷ್ಟವಾದ ತ್ರಿಕಾಲಜ್ಞಾನವು ಲಭಿಸಿತು. ಅದರ ಪ್ರಭಾವದಿಂದ ನಿಮ್ಮ ಸಂಶಯವನ್ನು ಪರಿಹರಿಸಲು ನ್ಯಾಯೋಚಿತವಾದ ಮಾತನ್ನು ಹೇಳುತ್ತೇನೆ, ಅದನ್ನು ಕೇಳಿರಿ. ಕಲ್ಪದ ಆದಿಯಲ್ಲಿ ಹೇಗೆ ನಡೆಯಿತೆಂದು ಜ್ಞಾನದೃಷ್ಟಿಯಿಂದಲೇ ನಾನು

ಕಂಡುಕೊಂಡಿದ್ದೇನೆ.
ಪರಮಾತ್ಮೇತಿ ಯಂ ಪ್ರಾಹುಃ ಸಾಂಖ್ಯಯೋಗವಿದೋ ಜನಾಃ |
ಮಹಾಪುರುಷಸಂಜ್ಞಾಂ ಸ ಲಭತೇ ಸ್ವೇನ ಕರ್ಮಣಾ ॥24॥
ಸಾಂಖ್ಯಯೋಗಗಳನ್ನು ತಿಳಿದ ಜನರು ಯಾರನ್ನು ಪರಮಾತ್ಮನೆಂದು ಹೇಳುತ್ತಾರೋ ಅವನೇ ತನ್ನ ಕರ್ಮದ ಪ್ರಭಾವದಿಂದ ಮಹಾಪುರುಷನೆಂದು ಹೆಸರನ್ನು ಹೊಂದುತ್ತಾನೆ.
ವ್ಯಾಖ್ಯಾನ ವಿಶೇಷ ತನ್ನ ಕರ್ಮದ ಪ್ರಭಾವದಿಂದ ಎಂಬುದಕ್ಕೆ ತನ್ನ ಸ್ವಾತಂತ್ರ್ಯ ಗುಣದಿಂದ ಎಂದು ಅರ್ಥೈಸಿಕೊಳ್ಳಬೇಕು.
ತಸ್ಮಾತ್ ಪ್ರಸೂತಮವ್ಯಕ್ತಂ ಪ್ರಧಾನಂ ತದ್ ವಿದುರ್ಬುಧಾಃ |
ಅವ್ಯಕ್ತಾದ್ ವ್ಯಕ್ತಮುತ್ಪನ್ನಂ ಲೋಕಸೃಷ್ಟ್ಯರ್ಥಮೀಶ್ವರಾತ್ ॥25॥
ಆ ಮಹಾಪುರುಷನಿಂದ ಅವ್ಯಕ್ತತತ್ತ್ವವು ಹುಟ್ಟಿತು. ಅವ್ಯಕ್ತ ಎಂಬ ಪ್ರಕೃತಿಯ ಸೃಷ್ಟಿಯ ಬಳಿಕ ವ್ಯಕ್ತವಾದ ಪ್ರಪಂಚವು ಜಗತ್ತಿನ ಸೃಷ್ಟಿಗಾಗಿ ಈಶ್ವರನಿಂದ ಪ್ರಾದುರ್ಭವಿಸಿತು.
ಅನಿರುದ್ಧೋ ಹಿ ಲೋಕೇಷು ಮಹಾನಾತ್ಮೇತಿ ಕಥ್ಯತೇ |
ಯೋಽಸೌ ವ್ಯಕ್ತತ್ವಮಾಪನ್ನೋ ನಿರ್ಮಮೇ ಚ ಪಿತಾಮಹಮ್ |
ಯೋಽಹಂಕಾರ ಇತಿ ಪ್ರೋಕ್ತಃ ಸರ್ವತೇಜೋಮಯೋ ಹಿ ಸಃ ॥26॥
ಲೋಕಗಳಲ್ಲಿ ಅನಿರುದ್ಧನೇ ಮಹಾಪುರುಷ ಎಂದು ಕರೆಸಿಕೊಳ್ಳುತ್ತಾನೆ. ಈ ಭಗವಂತನೇ ವ್ಯಕ್ತರೂಪವನ್ನು ತಾಳಿ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು. ಈ ಭಗವಂತನೇ ಅಹಂಕಾರತತ್ತ್ವವನ್ನು ಸೃಷ್ಟಿಸಿದನು. ಸಮಸ್ತ ವಿಧವಾದ ತೇಜಸ್ಸಿನಿಂದ ತುಂಬಿದವನು ಅನಿರುದ್ಧರೂಪಿಯಾದ ಪರಮಾತ್ಮನು.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಅಹಂಕಾರಪ್ರಸೂತಾನಿ ಮಹಾಭೂತಾನಿ ಭಾರತ ॥27॥
ಜನಮೇಜಯನೇ, ಪೃಥಿವಿ, ವಾಯು, ಆಕಾಶ, ಜಲ, ಅಗ್ನಿ ಎಂಬ ಐದು ಮಹಾಭೂತಗಳು ಅಹಂಕಾರತತ್ತ್ವದಿಂದ ಹುಟ್ಟಿದವು.
ಮಹಾಭೂತಾನಿ ಸೃಷ್ಟ್ವಾಥ ತದ್ಗುಣಾನ್ನಿರ್ಮಮೇ ಪುನಃ |
ಭೂತೇಭ್ಯಶ್ಚೈವ ನಿಷ್ಪನ್ನಾ ಮೂರ್ತಿಮಂತೋಽಷ್ಟ ತಾನ್ ಶೃಣು ॥28॥
ಅನಿರುದ್ಧರೂಪಿಯಾದ ಹರಿಯು ಮಹಾಭೂತಗಳನ್ನು ಸೃಷ್ಟಿಸಿದ ಬಳಿಕ ಅವುಗಳ ಗುಣಗಳನ್ನು ಪುನಃ ನಿರ್ಮಿಸಿದನು. ಆ ಪಂಚಭೂತಗಳಿಂದ ಎಂತಹ ಮೂರ್ತಿಗಳು ಉತ್ಪನ್ನವಾದವು ಎಂಬುದನ್ನು ಹೇಳುತ್ತೇನೆ, ಕೇಳು.
ಮರೀಚಿರಂಗಿರಾಶ್ಚಾತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ |
ವಸಿಷ್ಠಶ್ಚ ಮಹಾತ್ಮಾ ವೈ ಮನುಃ ಸ್ವಾಯಂಭುವಸ್ತಥಾ |
ಜ್ಞೇಯಾಃ ಪ್ರಕೃತಯೋಽಷ್ಟೌ ತಾ ಯಾಸು ಲೋಕಾಃ ಪ್ರತಿಷ್ಠಿತಾಃ ॥29॥
ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಮಹಾತ್ಮನಾದ ವಸಿಷ್ಠ, ಸ್ವಾಯಂಭುವ ಮನು - ಇವರೇ ಪಂಚಭೂತಗಳ ಮೂರ್ತಸ್ವರೂಪರು. ಪಂಚಭೂತಗಳಿಂದ ಪ್ರಾದುರ್ಭೂತರಾದ ಈ ಅಷ್ಟಪ್ರಕೃತಿಗಳಿಂದಲೇ ಲೋಕಗಳು ಪ್ರತಿಷ್ಠಿತವಾಗಿವೆ.
ವೇದಾನ್ ವೇದಾಂಗಸಂಯುಕ್ತಾನ್ ಯಜ್ಞಾನ್ ಯಜ್ಞಾಂಗಸಂಯುತಾನ್ |
ನಿರ್ಮಮೇ ಲೋಕಸಿದ್ಧ್ಯರ್ಥಂ ಬ್ರಹ್ಮಾ ಲೋಕಪಿತಾಮಹಃ |
ಅಷ್ಟಾಭ್ಯಃ ಪ್ರಕೃತಿಭ್ಯಶ್ಚ ಜಾತಂ ವಿಶ್ವಮಿದಂ ಜಗತ್ ॥30॥
ಲೋಕಪಿತಾಮಹನಾದ ಚತುರ್ಮುಖಬ್ರಹ್ಮನು ವೇದಾಂಗಯುಕ್ತವಾದ ವೇದಗಳನ್ನು, ಯಜ್ಞಾಂಗ ಯುಕ್ತವಾದ ಯಜ್ಞಗಳನ್ನು ಲೋಕದ ಕಾರ್ಯಸಿದ್ಧಿಗಾಗಿ ನಿರ್ಮಿಸಿದನು. ಅದರಂತೆ ಹಿಂದೆ ಹೇಳಿದ ಎಂಟು ಋಷಿಗಳಿಂದಲೇ ಈ ಜಗತ್ತೆಲ್ಲವೂ ಅಭಿವ್ಯಕ್ತಿಯನ್ನು ಹೊಂದಿತು.
ರುದ್ರೋ ರೋಷಾತ್ಮಕೋ ಜಾತೋ ದಶಾನ್ಯಾನ್ ಸೋಽಸೃಜತ್ ಸ್ವಯಮ್ |
ಏಕಾದಶೈತೇ ರುದ್ರಾಸ್ತು ವಿಕಾರಾಃ ಪುರುಷಾಃ ಸ್ಮೃತಾಃ ॥31॥
ಚತುರ್ಮುಖ ಬ್ರಹ್ಮನ ಕೋಪದಿಂದ ರುದ್ರನು ಹುಟ್ಟಿದನು. ಆ ರುದ್ರನೇ ಉಳಿದ ಹತ್ತು ರುದ್ರರನ್ನು ಸೃಷ್ಟಿಸಿದನು. ಈ ಏಕಾದಶರುದ್ರರು ವಿಕಾರ ಪುರುಷರು ಎಂದು ಪ್ರಸಿದ್ಧರು.
ತೇ ರುದ್ರಾಃ ಪ್ರಕೃತಿಶ್ಚೈವ ಸರ್ವೇ ಚೈವ ಸುರರ್ಷಯಃ |
ಉತ್ಪನ್ನಾ ಲೋಕಸಿದ್ಧ್ಯರ್ಥಂ ಬ್ರಹ್ಮಾಣಂ ಸಮುಪಸ್ಥಿತಾಃ ॥32॥
ಏಕಾದಶ ರುದ್ರರು, ಅಷ್ಟಮೂರ್ತಿಗಳು, ಸಮಸ್ತ ದೇವತೆಗಳು ಲೋಕ ರಕ್ಷಣೆಗಾಗಿಯೇ ಹುಟ್ಟಿದರು. ಅವರೆಲ್ಲರೂ ಬ್ರಹ್ಮನ ಬಳಿ ಹೋಗಿ ಹೇಳಿದರು.
ವಯಂ ಹಿ ಸೃಷ್ಟಾ ಭಗವಂಸ್ತ್ವಯಾ ವೈ ಪ್ರಭವಿಷ್ಣುನಾ |
ಯೇನ ಯಸ್ಮಿನ್ನಧಿಕಾರೇ ವರ್ತಿತವ್ಯಂ ಪಿತಾಮಹ ॥33॥
ಪಿತಾಮಹನೇ, ಸರ್ವಸಮರ್ಥನಾದ ನಿನ್ನಿಂದ ನಾವೆಲ್ಲರೂ ಹುಟ್ಟಿದ್ದೇವೆ. ನಮ್ಮಲ್ಲಿ ಯಾರು ಯಾವ ಅಧಿಕಾರವನ್ನು ಹೊಂದಬೇಕು?
ಯೋಽಸೌ ತ್ವಯಾ ವಿನಿರ್ದಿಷ್ಟೋ ಅಧಿಕಾರೋಽರ್ಥಚಿಂತಕಃ |
ಪರಿಪಾಲ್ಯಃ ಕಥಂ ತೇನ ಸೋಽಧಿಕಾರೋಧಿಕರ್ತೃಣಾ ॥34॥
ಅರ್ಥಚಿಂತಕನಾದ ನೀನು ನಿರ್ದೇಶಿಸುವ ಯಾವ ಅಧಿಕಾರವಿದೆಯೋ ಅದನ್ನು ಅಧಿಕಾರ ಹೊಂದಿದ ವ್ಯಕ್ತಿಯು ಹೇಗೆ ಪರಿಪಾಲಿಸಬೇಕು.
ಪ್ರದಿಶಸ್ವ ಬಲಂ ತಸ್ಯ ಯೋಽಧಿಕಾರಾರ್ಥಚಿಂತಕಃ |

ಏವಮುಕ್ತೋ ಮಹಾದೇವೋ ದೇವಾಂಸ್ತಾನಿದಮಬ್ರವೀತ್ ॥35॥
ಯಾರು ಯಾವ ಅಧಿಕಾರವನ್ನು ಮಾಡಬೇಕು ಎಂದು ಬಯಸುತ್ತಾನೋ ಅವನಿಗೆ ಯೋಗ್ಯವಾದ ಬಲವನ್ನು ನೀನೇ ನೀಡು. ಈ ರೀತಿಯಾಗಿ ದೇವತೆಗಳು ಹೇಳಲು ಬ್ರಹ್ಮನು ದೇವತೆಗಳನ್ನು ಕುರಿತು ಹೀಗೆ ಹೇಳಿದನು.
ಸಾಧ್ವಹಂ ಜ್ಞಾಪಿತೋ ದೇವಾ ಯುಷ್ಮಾಭಿರ್ಭದ್ರಮಸ್ತು ವಃ |
ಮಮಾಪ್ಯೇಷಾ ಸಮುತ್ಪನ್ನಾ ಚಿಂತಾ ಯಾ ಭವತಾಂ ಮತಾ ॥36॥
ದೇವತೆಗಳೇ, ನೀವು ಉತ್ತಮ ವಿಷಯವನ್ನೇ ನನಗೆ ತಿಳಿಸಿರುತ್ತೀರಿ. ನಿಮಗೆಲ್ಲ ಮಂಗಳವಾಗಲಿ. ನಿಮಗೆ ಉಂಟಾದ ಚಿಂತೆಯು ನನ್ನ ಮನಸ್ಸಿನಲ್ಲಿಯೂ ಉಂಟಾಗಿದೆ.
ಲೋಕತಂತ್ರಸ್ಯ ಕೃತ್ಸ್ನಸ್ಯ ಕಥಂ ಕಾರ್ಯಃ ಪರಿಗ್ರಹಃ |
ಕಥಂ ಬಲಕ್ಷಯೋ ನ ಸ್ಯಾದ್ಯುಷ್ಮಾಕಂ ಹ್ಯಾತ್ಮನಶ್ಚ ಮೇ ॥37॥
ಮೂರುಲೋಕದ ಕಾರ್ಯಗಳನ್ನು ಹೇಗೆ ನಿರ್ವಹಿಸಬೇಕು? ಕಾರ್ಯ ನಿರ್ವಹಿಸುವಾಗ ಬಲವು ನಾಶ ಹೊಂದದಂತೆ ಆ ಮಹಾಕಾರ್ಯವನ್ನು ಹೇಗೆ ನಿರ್ವಹಿಸಬೇಕು ಎಂಬ ಚಿಂತೆಯು ನನ್ನ ಮನಸ್ಸಿನಲ್ಲಿ ಉಂಟಾಗಿದೆ.
ಇತಃ ಸರ್ವೇಽಪಿ ಗಚ್ಛಾಮಃ ಶರಣಂ ಲೋಕಸಾಕ್ಷಿಣಮ್ |
ಮಹಾಪುರುಷಮವ್ಯಕ್ತಂ ಸ ನೋ ವಕ್ಷ್ಯತಿ ಯದ್ಧಿತಮ್ ॥38॥
ನಮ್ಮೆಲ್ಲರಿಗೂ ರಕ್ಷಕನಾದ, ಲೋಕಸಾಕ್ಷಿ ಎನಿಸಿದ, ಮಹಾಪುರುಷನಾದ, ಅವ್ಯಕ್ತನಾದ ನಾರಾಯಣನ ಬಳಿ ನಾವು ಸಾಗೋಣ. ಅವನು ನಮಗೆ ಹಿತವಾದುದನ್ನು ಬೋಧಿಸುತ್ತಾನೆ.
ತತಸ್ತೇ ಬ್ರಹ್ಮಣಾ ಸಾರ್ಧಮೃಷಯೋ ವಿಬುಧಾಸ್ತಥಾ |
ಕ್ಷೀರೋದಸ್ಯೋತ್ತರಂ ಕೂಲಂ ಜಗ್ಮುರ್ಲೋಕಹಿತಾರ್ಥಿನಃ ॥39॥
ಬಳಿಕ ಸಮಸ್ತ ದೇವತೆಗಳು ಬ್ರಹ್ಮನ ಜೊತೆಗೆ ಕ್ಷೀರಸಮುದ್ರದ ಉತ್ತರದ ತೀರಕ್ಕೆ ತೆರಳಿದರು. ಲೋಕದ ಹಿತಚಿಂತನೆಯ ದೃಷ್ಟಿಯು ಅವರೆಲ್ಲರಿಗೂ ಇತ್ತು.
ತೇ ತಪಃ ಸಮುಪಾತಿಷ್ಠನ್ ಬ್ರಹ್ಮಣೋಕ್ತಂ ವೇದಕಲ್ಪಿತಮ್ |
ಸ ಮಹಾನಿಯಮೋ ನಾಮ ತಪಶ್ಚರ್ಯಾ ಸುದಾರುಣಾ ॥40॥
ಬ್ರಹ್ಮನು ಹೇಳಿದಂತೆ ವೇದೋಕ್ತವಾದ ತಪಸ್ಸನ್ನು ಅವರೆಲ್ಲರೂ ಆರಂಭಿಸಿದರು. ಮಹಾನಿಯಮ ಎಂಬ ಹೆಸರಿನ ಆ ತಪಶ್ಚರ್ಯವು ತುಂಬಾ ಕಠಿಣವಾಗಿತ್ತು.
ಊರ್ಧ್ವಂ ದೃಷ್ಟಿರ್ಬಾಹವಶ್ಚ ಏಕಾಗ್ರಂ ಚ ಮನೋಽಭವತ್ |
ಏಕಪಾದಸ್ಥಿತಾಃ ಸಮ್ಯಕ್ಕಾಷ್ಠಭೂತಾಃ ಸಮಾಹಿತಾಃ ॥41॥
ತಪಸ್ಸು ಮಾಡುತ್ತಿರುವ ದೇವತೆಗಳ ದೃಷ್ಟಿಯೆಲ್ಲವೂ ಊರ್ಧ್ವಮುಖವಾಗಿದ್ದಿತು. ತೋಳುಗಳನ್ನು ಮೇಲೆತ್ತಿದ್ದರು. ಮನಸ್ಸನ್ನು ನಿಗ್ರಹಿಸಿದ್ದರು. ಒಂದೇ ಕಾಲಿನಲ್ಲಿ ನಿಂತಿದ್ದರು. ದೇಹಗಳನ್ನು ಕಟ್ಟಿಗೆಗಳಂತೆ ನಿಶ್ಚೇಷ್ಟಗೊಳಿಸಿದ್ದರು.
ದಿವ್ಯಂ ವರ್ಷಸಹಸ್ರಂ ತೇ ತಪಸ್ತಪ್ತ್ವಾ ತದುತ್ತಮಮ್ |
ಶುಶ್ರುವುರ್ಮಧುರಾಂ ವಾಣೀಂ ವೇದವೇದಾಂಗಭೂಷಿತಾಮ್ ॥42॥
ಸಮಸ್ತ ದೇವತೆಗಳು ದೇವಮಾನದಲ್ಲಿ ಸಹಸ್ರ ವರ್ಷಗಳ ತನಕ ಉಗ್ರವಾದ ತಪಸ್ಸನ್ನು ಆಚರಿಸಿ ಬಳಿಕ, ವೇದ-ವೇದಾಂಗಗಳಿಂದ ಅಲಂಕೃತವಾದ, ಸುಮಧುರವಾದ ಮಾತನ್ನು ಕೇಳಿಸಿಕೊಂಡರು.
ಭೋ ಭೋಃ ಸಬ್ರಹ್ಮಕಾ ದೇವಾ ಋಷಯಶ್ಚ ತಪೋಧನಾಃ |
ಸ್ವಾಗತೇನಾರ್ಚ್ಯ ವಃ ಸರ್ವಾನ್ ಶ್ರಾವಯೇ ವಾಕ್ಯಮುತ್ತಮಮ್ ॥43॥
ಎಲೈ ಬ್ರಹ್ಮನಿಂದ ಕೂಡಿದ ಸಮಸ್ತ ದೇವತೆಗಳೇ, ತಪೋಧನರಾದ ಋಷಿಗಳೇ, ನಿಮ್ಮೆಲ್ಲರನ್ನೂ ಸ್ವಾಗತದ ಮೂಲಕ ಸತ್ಕರಿಸಿ, ನಿಮ್ಮೆಲ್ಲರಿಗೂ ಉತ್ತಮವಾದ ವಾಕ್ಯವನ್ನು ಕೇಳುವಂತೆ ಮಾಡುತ್ತೇನೆ.
ವಿಜ್ಞಾತಂ ವೋ ಮಯಾ ಕಾರ್ಯಂ ತಚ್ಚ ಲೋಕಹಿತಂ ಮಹತ್ |
ಪ್ರವೃತ್ತಿಯುಕ್ತಂ ಕರ್ತವ್ಯಂ ಯುಷ್ಮತ್ಪ್ರಾಣೋಪಬೃಂಹಣಮ್ ॥44॥
ನೀವು ಲೋಕಹಿತಕ್ಕೆ ಸಂಬಂಧಿಸಿದ ಕಾರ್ಯವನ್ನು ಮಾಡಲು ಆಗಮಿಸಿರುತ್ತೀರಿ ಎಂಬುದನ್ನು ನಾನು ತಿಳಿದಿರುತ್ತೇನೆ. ನಿಮ್ಮ ಪ್ರಾಣಶಕ್ತಿಯ ಅಭಿವೃದ್ಧಿಗಾಗಿ ಪ್ರವೃತ್ತಿ ಕರ್ಮಗಳನ್ನು ನೀವು ಆಚರಿಸಬೇಕು.
ಸುತಪ್ತಂ ವಸ್ತಪೋ ದೇವಾ ಮಮಾರಾಧನಕಾಮ್ಯಯಾ |
ಭೋಕ್ಷ್ಯಥಾಸ್ಯ ಮಹಾಸತ್ತ್ವಾಸ್ತಪಸಃ ಫಲಮುತ್ತಮಮ್ ॥45॥
ದೇವತೆಗಳೇ, ನನ್ನ ಆರಾಧನೆಯ ನಿಮಿತ್ತದಿಂದ ಉಗ್ರತಪಸ್ಸನ್ನಾಚರಿಸಿದ್ದೀರಿ. ಈ ತಪಸ್ಸಿನ ಫಲವಾಗಿ ಉತ್ತಮವಾದ ಫಲವನ್ನೇ ಅನುಭವಿಸುತ್ತೀರಿ.
ಏಷ ಬ್ರಹ್ಮಾ ಲೋಕಗುರುಃ ಸರ್ವಲೋಕಪಿತಾಮಹಃ |
ಯೂಯಂ ಚ ವಿಬುಧಶ್ರೇಷ್ಠಾ ಮಾಂ ಯಜಧ್ವಂ ಸಮಾಹಿತಾಃ ॥46॥
ಸಕಲ ಜಗತ್ತಿಗೆ ಮಹಾಗುರುವಾದ ಪಿತಾಮಹನಾದ ಬ್ರಹ್ಮನು, ದೇವಶ್ರೇಷ್ಠರಾದ ನೀವು ಏಕಾಗ್ರತೆಯಿಂದ ನನ್ನನ್ನೇ ಉದ್ದೇಶಿಸಿಕೊಂಡು ಯಜ್ಞವನ್ನು ಮಾಡಿರಿ.
ಸರ್ವೇ ಭಾಗಾನ್ ಕಲ್ಪಯಧ್ವಂ ಯಜ್ಞೇಷು ಮಮ ನಿತ್ಯಶಃ |
ತಥಾ ಶ್ರೇಯೋ ವಿಧಾಸ್ಯಾಮಿ ಯಥಾಧಿಕಾರಮೀಶ್ವರಾಃ ॥47॥
ಪ್ರತಿದಿನವೂ ನೀವೆಲ್ಲರೂ ಯಜ್ಞಗಳಲ್ಲಿ ನನಗೆ ಹವಿರ್ಭಾಗವನ್ನು ಕಲ್ಪಿಸಿ ಸಮರ್ಪಿಸಿರಿ. ನಿಮ್ಮ ಅಧಿಕಾರಕ್ಕೆ ಅನುಗುಣವಾದ

ಶ್ರೇಯಸ್ಸಿನ ಮಾರ್ಗವನ್ನು ನಾನೇ ಉಂಟುಮಾಡುತ್ತೇನೆ.
ವ್ಯಾಖ್ಯಾನ ವಿಶೇಷ ಮಹಾವಿಧಿಗಳಿಂದ ಆರಾಧಿಸುತ್ತಾ ದೇವತೆಗಳು ಯಾವ ಭಾಗವನ್ನು ಶ್ರೀಹರಿಗೆ ಕೊಡುತ್ತಾರೆ ಎಂದು ಹಿಂದೆ ಪ್ರಶ್ನೆ ಕೇಳಿದ್ದಕ್ಕೆ ಇಲ್ಲಿ ಶ್ರೀಹರಿಯು ಉತ್ತರಿಸಿದ್ದಾನೆ ಎಂದು ತಿಳಿಯಬೇಕು.
ಶ್ರುತ್ವೈತದ್ ದೇವದೇವಸ್ಯ ವಾಕ್ಯಂ ಹೃಷ್ಟತನೂರುಹಾಃ |
ತತಸ್ತೇ ವಿಬುಧಾಃ ಸರ್ವೇ ಬ್ರಹ್ಮಾ ತೇ ಚ ಮಹರ್ಷಯಃ ॥48॥
ವೇದದೃಷ್ಟೇನ ವಿಧಿನಾ ವೈಷ್ಣವಂ ಕ್ರತುಮಾಹರನ್ |
ತಸ್ಮಿನ್ ಸತ್ರೇ ತದಾ ಬ್ರಹ್ಮಾ ಸ್ವಯಂ ಭಾಗಮಕಲ್ಪಯತ್ |
ದೇವಾ ದೇವರ್ಷಯಶ್ಚೈವ ಸರ್ವೇ ಭಾಗಾನಕಲ್ಪಯನ್ ॥49॥
ದೇವದೇವನಾದ ಭಗವಂತನ ಮಾತನ್ನು ಕೇಳಿಸಿಕೊಂಡ ದೇವತೆಗಳೆಲ್ಲರ ರೋಮಗಳು ನಿಮಿರಿ ನಿಂತವು. ಬಳಿಕ ಬ್ರಹ್ಮಾದಿ ಸಮಸ್ತ ದೇವತೆಗಳು, ಮಹರ್ಷಿಗಳು ವೇದೋಕ್ತವಾದ ವಿಧಿಯಿಂದ ವೈಷ್ಣವ ವಿಧಿಗಳನ್ನು ಮಾಡುತ್ತಾ ಆ ಯಜ್ಞಗಳಲ್ಲಿ ತಮ್ಮ ತಮ್ಮ ಭಾಗಗಳನ್ನು ವಿಷ್ಣುವಿಗೆ ಸಮರ್ಪಿಸಿದರು.
ತೇ ಕಾರ್ತಯುಗಧರ್ಮಾಣೋ ಭಾಗಾಃ ಪರಮಸತ್ಕೃತಾಃ |
ಪ್ರಾಪುರಾದಿತ್ಯವರ್ಣಂ ತಂ ಪುರುಷಂ ತಮಸಃ ಪರಮ್ |
ಬೃಹಂತಂ ಸರ್ವಗಂ ದೇವಮೀಶಾನಂ ವರದಂ ಪ್ರಭುಮ್ ॥50॥
ಕೃತಯುಗದ ಧರ್ಮಕ್ಕನುಗುಣವಾಗಿ ಯಜ್ಞಭಾಗಗಳು ಎಲ್ಲರಿಂದಲೂ ಪುರಸ್ಕೃತವಾದವು. ಬ್ರಹ್ಮಾದಿ ದೇವತೆಗಳೆಲ್ಲ ವಿಷ್ಣುವನ್ನು ಆದಿತ್ಯರೂಪನೆಂದು, ಅಂತರ್ಯಾಮಿಯಾದ ಪುರುಷನೆಂದು, ತಮಸ್ಸಿನಿಂದ ಆಚೆ ಇರುವವನೆಂದು, ಗುಣಪರಿಪೂರ್ಣನೆಂದು, ಸರ್ವಾಂತರ್ಯಾಮಿ ಎಂದು, ಕ್ರೀಡಾದಿ ಗುಣವಿಶಿಷ್ಟನೆಂದು, ಈಶ್ವರನೆಂದು, ವರದನೆಂದು, ಪ್ರಭುವೆಂದು ಕೊಂಡಾಡಿದರು.
ತತೋಽಥ ವರದೋ ದೇವಸ್ತಾನ್ ಸರ್ವಾನಮರಾನ್ ಸ್ಥಿತಾನ್ |
ಅಶರೀರೋ ಬಭಾಷೇದಂ ವಾಕ್ಯಂ ಖಸ್ಥೋ ಮಹೇಶ್ವರಃ ॥51॥
ಬಳಿಕ ವರದನಾದ, ಮಹೇಶ್ವರನಾದ, ದೇವದೇವನಾದ ಭಗವಂತನು ಸಮಸ್ತ ದೇವತೆಗಳನ್ನು ಕುರಿತು ಅಶರೀರನಾಗಿಯೇ ಹೀಗೆ ಹೇಳಿದನು.
ಯೇನ ಯಃ ಕಲ್ಪಿತೋ ಭಾಗಃ ಸ ತಥಾ ಸಮುಪಾಗತಃ |
ಪ್ರೀತೋಽಹಂ ಪ್ರದಿಶಾಮ್ಯದ್ಯ ಫಲಮಾವೃತ್ತಿಲಕ್ಷಣಮ್ ॥52॥
ಯಾರು ಯಾವ ಭಾಗವನ್ನು ಸಮರ್ಪಿಸಿದ್ದಾರೋ ಆ ಭಾಗವು ನನಗೆ ತಲುಪಿದೆ. ಪ್ರೀತನಾದ ನಾನು ಆವೃತ್ತಿ ಎಂಬ ಹೆಸರಿನ ಫಲವನ್ನು ನಿಮಗೆ ನೀಡುತ್ತೇನೆ.
ವ್ಯಾಖ್ಯಾನ ವಿಶೇಷ ಇಂದ್ರ ಮೊದಲಾದ ನಾಮಗಳಿಂದ ಭಗವಂತನಿಗೆ ನೀಡುವ ಆಹುತಿಯು ನಿವೃತ್ತಿ ಧರ್ಮ ಎನಿಸುತ್ತದೆ. ಇಂದ್ರಾದಿ ನಾಮಗಳಿಂದ ದೇವತೆಗಳಿಗೆ  ನೀಡುವ ಆಹುತಿಯು ಪ್ರವೃತ್ತಿ ಧರ್ಮ ಎನಿಸುತ್ತದೆ.
ಏತದ್ವೋ ಲಕ್ಷಣಂ ದೇವಾ ಮತ್ಪ್ರಸಾದಸಮುದ್ಭವಮ್ |
ಯೂಯಂ ಯಜ್ಞೈರಿಜ್ಯಮಾನಾಃ ಸಮಾಪ್ತವರದಕ್ಷಿಣೈಃ |
ಯುಗೇ ಯುಗೇ ಭವಿಷ್ಯಧ್ವಂ ಪ್ರವೃತ್ತಿಫಲಭೋಗಿನಃ ॥53॥
ದೇವತೆಗಳೇ, ನನ್ನ ಅನುಮತಿಯಿಂದ ಪ್ರವೃತ್ತಿ ಲಕ್ಷಣವುಳ್ಳ ಫಲವನ್ನು ನೀವೆಲ್ಲರೂ ಹೊಂದುತ್ತೀರಿ. ಪ್ರತಿಯೊಂದು ಯಜ್ಞದಲ್ಲಿಯೂ, ಪ್ರತಿಯುಗದಲ್ಲಿಯೂ ನೀವೇ ಯಜಮಾನರಾಗಿ ಉತ್ತಮ ದಕ್ಷಿಣೆಗಳಿಂದ ಕೂಡಿದ ಯಾಗಗಳನ್ನು ಆಚರಿಸಿ, ಪ್ರವೃತ್ತಿ ಫಲ ರೂಪವಾದ ಭೋಗಗಳಿಗೆ ಭಾಗಿಗಳಾಗಿರಿ.
ಯಜ್ಞೈರ್ಯೇ ಚಾಪಿ ಯಕ್ಷ್ಯಂತಿ ಸರ್ವಲೋಕೇಷು ವೈ ಸುರಾಃ |
ಕಲ್ಪಯಿಷ್ಯಂತಿ ವೋ ಭಾಗಾಂಸ್ತೇ ನರಾ ವೇದಕಲ್ಪಿತಾನ್ ॥54॥
ಸಮಸ್ತ ಲೋಕಗಳಲ್ಲಿಯೂ ಯಜ್ಞಗಳ ಮೂಲಕ ಯಾರು ಆರಾಧಿಸಲು ಬಯಸುತ್ತಾರೋ ಅಂತಹ ಮನುಷ್ಯರು ವೇದದಲ್ಲಿ ತಿಳಿಸಿದಂತೆ ನಿಮಗೆ ಯಜ್ಞ ಭಾಗಗಳನ್ನು ನೀಡುತ್ತಾರೆ.
ಯೋ ಮೇ ಯಥಾ ಕಲ್ಪಿತವಾನ್ ಭಾಗಮಸ್ಮಿನ್ಮಹಾಕ್ರತೌ |
ಸ ತಥಾ ಯಜ್ಞಭಾಗಾರ್ಹೋ ವೇದಸೂತ್ರೇ ಮಯಾ ಕೃತಃ ॥55॥
ಚತುರ್ಮುಖ ಬ್ರಹ್ಮನು `ಬ್ರಹ್ಮಣೇ ಸ್ವಾಹಾ' ಎಂಬ ಮಂತ್ರದಿಂದ ಯಾವ ಭಾಗವನ್ನು ಕಲ್ಪಿಸಿದ್ದಾನೋ ಆ ಮಂತ್ರದ ಮೂಲಕ ಆ ಭಾಗವನ್ನು ಅವನೇ ಸ್ವೀಕರಿಸಲಿ. ಅದರಂತೆ ವೇದಸೂತ್ರದಲ್ಲಿ ಯಜ್ಞಭಾಗಾರ್ಹರಾದ ಅಧಿಕಾರಿಗಳು ಯಾರು ಎಂಬುದನ್ನು ನಾನೇ ವ್ಯವಸ್ಥೆ ಮಾಡಿರುತ್ತೇನೆ.
ಯೂಯಂ ಲೋಕಾನ್ ಧಾರಯಧ್ವಂ ಯಜ್ಞಭಾಗಫಲೋದಿತಾಃ |
ಸರ್ವಾರ್ಥಚಿಂತಕಾ ಲೋಕೇ ಯಥಾಧೀಕಾರನಿರ್ಮಿತಾಃ ॥56॥
ನೀವೆಲ್ಲರೂ ಲೋಕಗಳನ್ನು ಧರಿಸಿರಿ. ಯಜ್ಞಭಾಗದ ಫಲಗಳನ್ನು ಸ್ವೀಕರಿಸಿರಿ. ನಿಮ್ಮ ಅಧಿಕಾರ ವ್ಯಾಪ್ತಿಗೆ ಸಂಬಂಧಿಸಿದಂತೆ ಎಲ್ಲರಿಗೂ ಅವರವರ ಪ್ರಯೋಜನವನ್ನು ನೀಡುವವರಾಗಿರಿ.
ಯಾಃ ಕ್ರಿಯಾಃ ಪ್ರಚರಿಷ್ಯಂತಿ ಪ್ರವೃತ್ತಿಫಲಸತ್ಕೃತಾಃ |
ತಾಭಿರಾಪ್ಯಾಯಿತಬಲಾ ಲೋಕಾನ್ ವೈ ಧಾರಯಿಷ್ಯಥ ॥57॥
ಪ್ರವೃತ್ತಿ ಫಲದಿಂದ ಕೂಡಿರುವ ಯಾವ ಯಜ್ಞ ಕರ್ಮಗಳನ್ನು ಲೋಕದಲ್ಲಿ ಹೆಚ್ಚಾಗಿ ಮಾಡುತ್ತಾರೋ ಆ ಕರ್ಮಗಳಿಂದ ಲಭಿಸುವ ಯಜ್ಞಭಾಗಗಳಿಂದ ನೀವು ಬಲವನ್ನು ಪಡೆದು ಲೋಕಗಳನ್ನು ಧರಿಸಿರಿ.

ಯೂಯಂ ಹಿ ಭಾವಿತಾ ಲೋಕೇ ಸರ್ವಯಜ್ಞೇಷು ಮಾನವೈಃ |
ಮಾಂ ತತೋ ಭಾವಯಿಷ್ಯಧ್ವಮೇಷಾ ವೋ ಭಾವನಾ ಮಮ ||58||
ಮಾನವರು ಮಾಡುವ ಸರ್ವಯಜ್ಞಗಳಲ್ಲಿಯೂ ನೀವು ಸಂಧಿಸಿದವರಾಗಿ ಆ ಭಾಗಗಳನ್ನು ಪಡೆದು ಸಂತುಷ್ಟರಾಗಿರಿ. ಅನಂತರ ವೈಷ್ಣವ ಯಜ್ಞದ ಮೂಲಕ ನನ್ನನ್ನು ನೀವು ಆರಾಧಿಸಿರಿ. ಇದೇ ನಾನು ನಿಮಗೆ ಉಪದೇಶಿಸುವ ಸ್ವಾಭಿಪ್ರಾಯ.
ಇತ್ಯರ್ಥಂ ನಿರ್ಮಿತಾ ವೇದಾ ಯಜ್ಞಾಶ್ಚೌಷಧಿಭಿಃ ಸಹ |
ಏಭಿಃ ಸಮ್ಯಕ್ಪ್ರಯುಕ್ತೈರ್ಹಿ ಪ್ರೀಯಂತೇ ದೇವತಾಃ ಕ್ಷಿತೌ ||59||
ಈ ಕಾರಣದಿಂದಲೇ ವೇದಗಳನ್ನು, ಒಷಧಿಗಳಿಂದ ಯುಕ್ತವಾದ ಯಜ್ಞಗಳನ್ನು ನಾನು ಸೃಷ್ಟಿಸಿದ್ದೇನೆ. ಯಜ್ಞಗಳನ್ನು ಶ್ರದ್ಧೆಯಿಂದ ಭೂಮಿಯಲ್ಲಿ ಅನುಷ್ಠಾನ ಮಾಡುವುದರಿಂದ ದೇವತೆಗಳು ಪ್ರೀತರಾಗುತ್ತಾರೆ.
ನಿರ್ಮಾಣಮೇತದ್ಯುಷ್ಮಾಕಂ ಪ್ರವೃತ್ತಿಗುಣಕಲ್ಪಿತಮ್ |
ಮಯಾ ಕೃತಂ ಸುರಶ್ರೇಷ್ಠಾ ಯಾವತ್ಕಲ್ಪಕ್ಷಯಾದಿತಿ |
ಚಿಂತಯಧ್ವಂ ಲೋಕಹಿತಂ ಯಥಾಧಿಕಾರಮೀಶ್ವರಾಃ ||60||
ಪ್ರವೃತ್ತಿ ಗುಣಗಳಿಂದ ಕೂಡಿದ ಯಜ್ಞಗಳು ನಿಮಗಾಗಿಯೇ ನನ್ನಿಂದ ನಿರ್ಮಿತವಾಗಿವೆ. ಕಲ್ಪದ ವಿನಾಶದ ತನಕ ನಿಮ್ಮ ನಿಮ್ಮ ಅಧಿಕಾರಗಳಿಗೆ ಅನುಗುಣವಾಗಿ ಲೋಕಹಿತವನ್ನು ಚಿಂತಿಸಿರಿ.
ಮರೀಚಿರಂಗಿರಾಶ್ಚಾತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ |
ವಸಿಷ್ಠ ಇತಿ ಸಪ್ತೈತೇ ಮಾನಸಾ ನಿರ್ಮಿತಾ ಹಿ ವೈ ||61||
ಮರೀಚಿ, ಅಂಗಿರ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ - ಈ ಏಳು ಋಷಿಗಳು ಬ್ರಹ್ಮನ ಮನಸ್ಸಿನಿಂದ ನಿರ್ಮಿತರಾದವರು.
ಏತೇ ವೇದವಿದೋ ಮುಖ್ಯಾ ವೇದಾಚಾರ್ಯಾಶ್ಚ ಕಲ್ಪಿತಾಃ |
ಪ್ರವೃತ್ತಿಧರ್ಮಿಣಶ್ಚೈವ ಪ್ರಾಜಾಪತ್ಯೇನ ಕಲ್ಪಿತಾಃ ||62||
ಇವರೆಲ್ಲರೂ ವೇದಜ್ಞಾನಿಗಳಲ್ಲಿ ಮುಖ್ಯರು. ವೇದಾಚಾರ್ಯರೆಂದೇ ನಿಯೋಜಿತರು. ಪ್ರವೃತ್ತಿ ಧರ್ಮಾವಲಂಬರು. ಪ್ರಜಾಪತಿ ಸ್ಥಾನದಲ್ಲಿ ಪ್ರತಿಷ್ಠಿತರು.
ಅಯಂ ಕ್ರಿಯಾವತಾಂ ಪಂಥಾ ವ್ಯಕ್ತೀಭೂತಃ ಸನಾತನಃ |
ಅನಿರುದ್ಧ ಇತಿ ಪ್ರೋಕ್ತೋ ಲೋಕಸರ್ಗಕರಃ ಪ್ರಭುಃ ||63||
ಈ ಸನಾತನವಾದ ಕರ್ಮಮಾರ್ಗವು ಕ್ರಿಯಾವಂತರಿಗಾಗಿಯೇ ನಿರ್ಮಿತವಾಗಿದೆ. ಲೋಕವನ್ನು ಸೃಷ್ಟಿ ಮಾಡಿದ ಪ್ರಭುವಾದ ಅನಿರುದ್ಧನು ಹೀಗೆಯೇ ತಿಳಿಸಿದ್ದಾನೆ.
ಸನಃ ಸನತ್ಸುಜಾತಶ್ಚ ಸನಕಃ ಸಸನಂದನಃ |
ಸನತ್ಕುಮಾರಃ ಕಪಿಲಃ ಸಪ್ತಮಶ್ಚ ಸನಾತನಃ ||64||
ಸಪ್ತೈತೇ ಮಾನಸಾಃ ಪ್ರೋಕ್ತಾ ಋಷಯೋ ಬ್ರಹ್ಮಣಃ ಸುತಾಃ |
ಸ್ವಯಮಾಗತವಿಜ್ಞಾನಾ ನಿವೃತ್ತಂ ಧರ್ಮಮಾಸ್ಥಿತಾಃ ||65||
ಸನ, ಸನತ್ಸುಜಾತ, ಸನಕ, ಸನಂದನ, ಸನತ್ಕುಮಾರ, ಕಪಿಲ, ಏಳನೆಯವನಾದ ಸನಾತನ. ಈ ಏಳು ಋಷಿಗಳು ಬ್ರಹ್ಮನ ಮಾನಸ ಪುತ್ರರು. ಇವರು ಹುಟ್ಟಿನಿಂದಲೇ ಬ್ರಹ್ಮಜ್ಞಾನಿಗಳು. ಆದ್ದರಿಂದಲೇ ನಿವೃತ್ತ ಧರ್ಮವನ್ನು ಆಶ್ರಯಿಸಿರುತ್ತಾರೆ.
ಏತೇ ಯೋಗವಿದೋ ಮುಖ್ಯಾಃ ಸಾಂಖ್ಯಧರ್ಮವಿದಸ್ತಥಾ |
ಆಚಾರ್ಯಾ ಮೋಕ್ಷಶಾಸ್ತ್ರೇ ಚ ಮೋಕ್ಷಧರ್ಮಪ್ರವರ್ತಕಾಃ ||66||
ಇವರೆಲ್ಲರೂ ಪ್ರಮುಖವಾದ ಯೋಗವನ್ನು ಅರಿತವರು. ಸಾಂಖ್ಯಜ್ಞಾನವನ್ನು ಬಲ್ಲವರು. ಮೋಕ್ಷಶಾಸ್ತ್ರದಲ್ಲಿ ಆಚಾರ್ಯರು. ಮೋಕ್ಷಧರ್ಮವನ್ನು ತಿಳಿಸುವವರು.
ಯತೋಽಹಂ ಪ್ರಸೃತಃ ಪೂರ್ವಮವ್ಯಕ್ತಾತ್ ತ್ರಿಗುಣೋ ಮಹಾನ್ |
ತಸ್ಮಾತ್ ಪರತರೋ ಯೋಽಸೌ ಕ್ಷೇತ್ರಜ್ಞ ಇತಿ ಕಲ್ಪಿತಃ |
ಸೋಽಹಂ ಕ್ರಿಯಾವತಾಂ ಪಂಥಾಃ ಪುನರಾವೃತ್ತಿದುರ್ಲಭಃ ||67||
ಯಾವ ಕಾರಣದಿಂದ ಅವ್ಯಕ್ತತತ್ತ್ವದಿಂದ ಮೂರು ಗುಣಗಳು, ಮಹತ್ತತ್ತ್ವವು ಉಂಟಾಯಿತೋ, ಮಹತ್ತತ್ತ್ವದಿಂದ ಅಹಂಕಾರತತ್ತ್ವವು ಉಂಟಾಯಿತೋ ಆ ಕಾರಣದಿಂದ ಅವ್ಯಕ್ತತತ್ತ್ವವು, ಅದಕ್ಕೆ ಅಭಿಮಾನಿಯಾದ ಲಕ್ಷ್ಮೀತತ್ತ್ವಕ್ಕಿಂತಲೂ ನಾನು ಪರತರನೆನಿಸಿದ್ದೇನೆ. ನನ್ನನ್ನೇ ಕ್ಷೇತ್ರಜ್ಞನೆನ್ನುತ್ತಾರೆ. ಕ್ಷೇತ್ರಜ್ಞನಾಗಿರುವ ನಾನು ಕ್ರಿಯಾವಂತರಿಗೆ ಮಾರ್ಗನೆನಿಸಿದ್ದೇನೆ. ಸಂಸಾರಕ್ಕೆ ತಿರುಗಿ ಬರುವ ಕರ್ಮಮಾರ್ಗಿಗಳಿಗೆ ನಾನು ದುರ್ಲಭನು.
ಯೋ ಯಥಾ ನಿರ್ಮಿತೋ ಜಂತುರ್ಯಸ್ಮಿನ್ಯಸ್ಮಿಂಶ್ಚ ಕರ್ಮಣಿ |
ಪ್ರವೃತ್ತೌ ವಾ ನಿವೃತ್ತೌ ವಾ ತತ್ಫಲಂ ಸೋಽಶ್ನುತೇ ವಶಃ ||68||
ಯಾವ ಮನುಷ್ಯನು ಯಾವ ರೀತಿಯಲ್ಲಿ ಪ್ರವೃತ್ತಿ ಕರ್ಮ, ನಿವೃತ್ತಿಕರ್ಮದಲ್ಲಿ ತೊಡಗುತ್ತಾನೋ ಆ ಮನುಷ್ಯನು ಆ ಕರ್ಮಕ್ಕನುಗುಣವಾಗಿ ಫಲವನ್ನು ಹೊಂದುತ್ತಾನೆ. ಅವನು ಭಗವಂತನ ವಶನು.
ಏಷ ಲೋಕಗುರುರ್ಬ್ರಹ್ಮಾ ಜಗದಾದಿಕರಃ ಪ್ರಭುಃ |
ಏಷ ಮಾತಾ ಪಿತಾ ಚೈವ ಯುಷ್ಮಾಕಂ ಚ ಪಿತಾಮಹಃ |
ಮಯಾನುಶಿಷ್ಟೋ ಭವಿತಾ ಸರ್ವಭೂತವರಪ್ರದಃ ||69||
ಲೋಕಗುರುವಾದ, ಸೃಷ್ಟಿಕಾರಣನಾದ, ಪ್ರಭುವಾದ ಬ್ರಹ್ಮನು ನಿಮ್ಮೆಲ್ಲರಿಗೂ ತಂದೆ-ತಾಯಿ, ಅಜ್ಜ ಎಲ್ಲವೂ ಆಗಿದ್ದಾನೆ. ನನ್ನ ಆಜ್ಞೆಯಿಂದ ಇವನು ಸಮಸ್ತ ಪ್ರಾಣಿಗಳಿಗೆ ವರಪ್ರದನು.

ಅಸ್ಯ ಚೈವಾನುಜೋ ರುದ್ರೋ ಲಲಾಟಾದ್ಯಃ ಸಮುತ್ಥಿತಃ |
ಬ್ರಹ್ಮಾನುಶಿಷ್ಟೋ ಭವಿತಾ ಸರ್ವತ್ರಸವರಪ್ರದಃ ॥70॥
ಈ ಬ್ರಹ್ಮನ ಹಣೆಯಿಂದ ಪ್ರಾದುರ್ಭೂತನಾದ ಮಹರುದ್ರನೇ ಬ್ರಹ್ಮನ ಮಗನು. ಬ್ರಹ್ಮನ ಆದೇಶದಂತೆ ಈ ರುದ್ರನು ಸರ್ವಪ್ರಾಣಿಗಳನ್ನು ರಕ್ಷಿಸುತ್ತಾನೆ.
ಗಚ್ಛಧ್ವಂ ಸ್ವಾನಧೀಕಾರಾಂಶ್ಚಿಂತಯಧ್ವಂ ಯಥಾವಿಧಿ |
ಪ್ರವರ್ತಂತಾಂ ಕ್ರಿಯಾಃ ಸರ್ವಾಃ ಸರ್ವಲೋಕೇಷು ಮಾಚಿರಮ್ ॥71॥
ನೀವು ನಿಮ್ಮ ನಿಮ್ಮ ಸ್ಥಾನಗಳಿಗೆ ತೆರಳಿರಿ. ನಿಮ್ಮ ಅಧಿಕಾರವನ್ನು ಕುರಿತು ಯೋಚಿಸಿರಿ. ಲೋಕದಲ್ಲಿ ವೇಗವಾಗಿ ವೈದಿಕ ಕ್ರಿಯೆಗಳು ಆರಂಭವಾಗಲಿ.
ಪ್ರದೃಶ್ಯಂತಾಂ ಚ ಕರ್ಮಾಣಿ ಪ್ರಾಣಿನಾಂ ಗತಯಸ್ತಥಾ |
ಪರಿನಿರ್ಮಿತಕಾಲಾನಿ ಆಯೂಂಷಿ ಚ ಸುರೋತ್ತಮಾಃ ॥72॥
ಸಮಸ್ತ ಪ್ರಾಣಿಗಳಿಗೆ ನೀವೇ ಕರ್ಮಗಳನ್ನು ವಿಧಿಸಿರಿ. ಅವರವರ ಕರ್ಮಗಳಿಗೆ ಯೋಗ್ಯವಾಗಿ ಗತಿಗಳನ್ನು ನೀಡಿರಿ. ಪೂರ್ಣಾಯುಷ್ಯವನ್ನು ದಯಪಾಲಿಸಿರಿ.
ಇದಂ ಕೃತಯುಗಂ ನಾಮ ಕಾಲಃ ಶ್ರೇಷ್ಠಃ ಪ್ರವರ್ತತೇ |
ಅಹಿಂಸ್ಯಾ ಯತ್ರ ಪಶವೋ ಯುಗೇಸ್ಮಿನ್ನೈತದನ್ಯಥಾ |
ಚತುಷ್ಪಾತ್ ಸಕಲೋ ಧರ್ಮೋ ಭವಿಷ್ಯತ್ಯತ್ರ ವೈ ಸುರಾಃ ॥73॥
ಈಗ ಕೃತಯುಗವೆಂಬ ಶ್ರೇಷ್ಠಕಾಲವು ನಡೆಯುತ್ತಿದೆ. ಎಲ್ಲರೂ ತಪೋನಿರತರಾದುದರಿಂದ ಹಿಂಸೆಯಿಂದ ದೂರರಾಗಿದ್ದಾರೆ. ಬೇರೆ ಯುಗದಲ್ಲಿ ಈ ರೀತಿಯಾದ ತಪಃಪ್ರವೃತ್ತಿಯು ಇರುವುದಿಲ್ಲ. ಕೃತಯುಗದಲ್ಲಿ ನಾಲ್ಕು ಪಾದಗಳಿಂದ ಕೂಡಿದ ಸಮಸ್ತ ಧರ್ಮವು ಇರುತ್ತದೆ.
ತತಸ್ತ್ರೇತಾಯುಗಂ ನಾಮ ತ್ರಯೀ ಯತ್ರ ಭವಿಷ್ಯತಿ |
ಪ್ರೋಕ್ಷಿತಾ ಯತ್ರ ಪಶವೋ ವಧಂ ಪ್ರಾಪ್ಸ್ಯಂತಿ ವೈ ಮಖೇ |
ತತ್ರ ಪಾದಚತುರ್ಥೋ ವೈ ಧರ್ಮಸ್ಯ ನ ಭವಿಷ್ಯತಿ ॥74॥
ಮೂರು ವೇದಗಳು ಯಾವ ಯುಗದಲ್ಲಿರುತ್ತವೋ ಅದನ್ನು ತ್ರೇತಾಯುಗ ಎನ್ನುತ್ತಾರೆ. ತ್ರೇತಾಯುಗದಲ್ಲಿ ಮಂತ್ರದಿಂದ ಪ್ರೋಕ್ಷಿತವಾದ ಪಶುಗಳು ಯಜ್ಞಗಳಲ್ಲಿ ವಧಿಸಲ್ಪಡುತ್ತವೆ. ಧರ್ಮದ ನಾಲ್ಕನೆಯ ಒಂದು ಪಾದವು ಮುಕ್ತವಾಗುತ್ತದೆ.
ತತೋ ವೈ ದ್ವಾಪರಂ ನಾಮ ಮಿಶ್ರಃ ಕಾಲೋ ಭವಿಷ್ಯತಿ |
ದ್ವಿಪಾದಹೀನೋ ಧರ್ಮಶ್ಚ ಯುಗೇ ತಸ್ಮಿನ್ ಭವಿಷ್ಯತಿ ॥75॥
ತ್ರೇತಾಯುಗದ ಬಳಿಕ ದ್ವಾಪರಯುಗವು. ಧರ್ಮಾಧರ್ಮದ ಮೇಲನದಿಂದ ಕೂಡಿರುತ್ತದೆ. ಧರ್ಮದ ಎರಡು ಪಾದಗಳು ದ್ವಾಪರದಲ್ಲಿ ಕಡಿಮೆಯಾಗುತ್ತವೆ.
ತತಸ್ತಿಷ್ಯೇಽಥ ಸಂಪ್ರಾಪ್ತೇ ಯುಗೇ ಕಲಿಪುರಸ್ಕೃತೇ |
ಏಕಪಾದಸ್ಥಿತೋ ಧರ್ಮೋ ಯತ್ರ ತತ್ರ ಭವಿಷ್ಯತಿ ॥76॥
ದ್ವಾಪರವು ಕಳೆದ ಬಳಿಕ ಪುಷ್ಯನಕ್ಷತ್ರದಲ್ಲಿ ಕಲಿಯುಗವು ಆರಂಭವಾಗುತ್ತದೆ. ಕಲಿಯುಗದಲ್ಲಿ ಧರ್ಮದ ಒಂದು ಪಾದವು ಮಾತ್ರ ಉಳಿದಿರುತ್ತದೆ.
ದೇವಾಃ
ಏಕಪಾದಸ್ಥಿತೇ ಧರ್ಮೇ ಯತ್ರ ಕ್ವಚನ ಗಾಮಿನಿ |
ಕಥಂ ಕರ್ತವ್ಯಮಸ್ಮಾಭಿರ್ಭಗವಂಸ್ತದ್ ವದಸ್ವ ನಃ ॥77॥
ದೇವತೆಗಳು ಕಲಿಯುಗದಲ್ಲಿ ಧರ್ಮವು ಒಂದೇ ಪಾದದಿಂದ ನಿಂತಿರಲು ನಾವು ಯಾವ ರೀತಿಯಾದ ಕರ್ತವ್ಯವನ್ನು ಮಾಡಬೇಕು? ಭಗವಂತನೇ ನಮಗೆ ತಿಳಿಸು.
ಶ್ರೀಭಗವಾನ್
ಯತ್ರ ವೇದಾಶ್ಚ ಯಜ್ಞಾಶ್ಚ ತಪಃ ಸತ್ಯಂ ದಮಸ್ತಥಾ |
ಅಹಿಂಸಾಧರ್ಮಸಂಯುಕ್ತಾಃ ಪ್ರಚರೇಯುಃ ಸುರೋತ್ತಮಾಃ |
ಸ ವೈ ದೇಶಃ ಸೇವಿತವ್ಯೋ ಮಾ ವೋಽಧರ್ಮಃ ಪದಾ ಸ್ಪೃಶೇತ್ ॥
ಶ್ರೀಭಗವಾನ್ ದೇವತೆಗಳೇ, ಯಾವ ದೇಶದಲ್ಲಿ ವೇದ, ಯಜ್ಞ, ತಪಸ್ಸು, ಸತ್ಯ, ಇಂದ್ರಿಯನಿಗ್ರಹ, ಅಹಿಂಸಾಧರ್ಮಗಳು ಪ್ರಚಲಿತವಾಗಿರುತ್ತವೋ ಆ ದೇಶವನ್ನೇ ನೀವು ಆಶ್ರಯಿಸಿರಿ. ನಿಮ್ಮನ್ನು ಅಧರ್ಮವು ಕಾಲಿನಿಂದಲೂ ಮುಟ್ಟಲಾಗದು.
ವ್ಯಾಸಃ
ತೇಽನುಶಿಷ್ಟಾ ಭಗವತಾ ದೇವಾಃ ಸರ್ಷಿಗಣಾಸ್ತಥಾ |
ನಮಸ್ಕೃತ್ವಾ ಭಗವತೇ ಜಗ್ಮುರ್ದೇಶಾನ್ ಯಥೇಪ್ಸಿತಾನ್ ॥79॥
ವ್ಯಾಸರು ಭಗವಂತನಿಂದ ಆಜ್ಞಪ್ತರಾದ ದೇವತೆಗಳು ಋಷಿಗಳ ಜೊತೆಗೆ ಪರಮಾತ್ಮನಿಗೆ ನಮಸ್ಕರಿಸಿ, ತಮಗೆ ಇಷ್ಟವಾದ ಸ್ಥಳಗಳಿಗೆ ಹೊರಟು ಹೋದರು.
ಗತೇಷು ತ್ರಿದಿವೌಕಃಸು ಬ್ರಹ್ಮೈಕಃ ಪರ್ಯವಸ್ಥಿತಃ |
ದಿದೃಕ್ಷುರ್ಭಗವಂತಂ ತಮನಿರುದ್ಧತನೌ ಸ್ಥಿತಮ್ ॥80॥
ಸ್ವರ್ಗದ ದೇವತೆಗಳೆಲ್ಲರೂ ತಮ್ಮ ತಮ್ಮ ನಿರ್ದಿಷ್ಟ ಸ್ಥಳಗಳಿಗೆ ತೆರಳಿದ ಬಳಿಕ ಬ್ರಹ್ಮನೊಬ್ಬನೇ ಅನಿರುದ್ಧರೂಪಿಯಾದ

ಭಗವಂತನನ್ನು ನೋಡಬೇಕೆಂದು ಅಲ್ಲಿ ನಿಂತನು.
ತಂ ದೇವೋ ದರ್ಶಯಾಮಾಸ ಕೃತ್ವಾ ಹಯಶಿರೋ ಮಹತ್ |
ಸಾಂಗಾನಾವರ್ತಯನ್ ವೇದಾನ್ ಕಮಂಡಲುಗಣಿತ್ರಿಧೃಕ್ ॥81॥
ಆ ಸಮಯದಲ್ಲಿ ಭಗವಂತನು ಬೃಹತ್ತಾದ ಹಯಗ್ರೀವರೂಪವನ್ನು ಧರಿಸಿ, ಬ್ರಹ್ಮನಿಗೆ ದರ್ಶನವನ್ನು ನೀಡಿದನು. ಕಮಂಡಲು, ತ್ರಿದಂಡಗಳನ್ನು ಧರಿಸಿದ ದೇವದೇವನು ಷಡಂಗಗಳಿಂದ ಕೂಡಿದ ವೇದಗಳನ್ನು ಅವನಿಗೆ ಉಪದೇಶಿಸಿದನು.
ತತೋಽಶ್ವಶಿರಸಂ ದೃಷ್ಟ್ವಾ ತಂ ದೇವಮಮಿತೌಜಸಮ್ |
ಲೋಕಕರ್ತಾ ಪ್ರಭುರ್ಬ್ರಹ್ಮಾ ಲೋಕಾನಾಂ ಹಿತಕಾಮ್ಯಯಾ ॥82॥
ಮೂರ್ಧ್ನಾ ಪ್ರಣಮ್ಯ ವರದಂ ತಸ್ಥೌ ಪ್ರಾಂಜಲಿರಗ್ರತಃ |
ಸ ಪರಿಷ್ವಜ್ಯ ದೇವೇನ ವಚನಂ ಶ್ರಾವಿತಸ್ತದಾ ॥83॥
ಲೋಕನಿರ್ಮಾತೃವಾದ, ಪ್ರಭುವಾದ ಬ್ರಹ್ಮನು ಮಹಾತೇಜಸ್ವಿಯಾದ ಹಯಗ್ರೀವನನ್ನು ಕಂಡು, ಲೋಕಗಳ ಹಿತವನ್ನು ಬಯಸಿ, ತಲೆಬಾಗಿ ಹಯಗ್ರೀವನಿಗೆ ನಮಸ್ಕರಿಸಿ, ಅವನ ಮುಂದೆ ನಿಂತನು. ಹಯಗ್ರೀವನು ಬ್ರಹ್ಮನನ್ನು ಆದರದಿಂದ ಆಲಿಂಗಿಸಿ ಹೀಗೆ ಹೇಳಿದನು.
ಲೋಕಕಾರ್ಯಗತೀಃ ಸರ್ವಾಸ್ತ್ವಂ ಚಿಂತಯ ಯಥಾವಿಧಿ |
ಧಾತಾ ತ್ವಂ ಸರ್ವಭೂತಾನಾಂ ತ್ವಂ ಪ್ರಭುರ್ಜಗತೋ ಗುರುಃ |
ತ್ವಯ್ಯಾವೇಶಿತಭಾರೋಹಂ ಧೃತಿಂ ಪ್ರಾಪ್ಸ್ಯಾಮ್ಯಥಾಂಜಸಾ ॥84॥
ಬ್ರಹ್ಮದೇವನೇ, ಲೋಕಗಳ ಸಮಸ್ತ ಕರ್ಮಗಳು, ಕರ್ಮಾನುಷ್ಠಾನದಿಂದ ಲಭಿಸುವ ಗತಿ, ಇವುಗಳನ್ನು ವಿಧಿಬದ್ಧವಾಗಿ ಯೋಚಿಸು. ನೀನು ಸಮಸ್ತ ಪ್ರಾಣಿಗಳಿಗೂ ಪಾಲಕನೂ, ಪ್ರಭುವೂ, ಗುರುವೂ ಆಗಿರುವಿ. ನಿನ್ನ ಮೇಲೆ ಜಗತ್ತಿನ ರಕ್ಷಣೆಯ ಭಾರವನ್ನು ವಹಿಸಿ ನಾನು ನಿಶ್ಚಿಂತನಾಗಿರುತ್ತೇನೆ.
ಯದಾ ಚ ಸುರಕಾರ್ಯಂ ತೇ ಅವಿಷಹ್ಯಂ ಭವಿಷ್ಯತಿ |
ಪ್ರಾದುರ್ಭಾವಂ ಗಮಿಷ್ಯಾಮಿ ತದಾತ್ಮಜ್ಞಾನದೇಶಿಕಃ ॥85॥
ಯಾವಾಗ ನೀನು ದೇವತೆಗಳ ಕಾರ್ಯವು ಅಸಾಧ್ಯವೆಂದು ನೋಡುತ್ತೀಯೋ ನಾನು ನನ್ನ ಸ್ವರೂಪವನ್ನು ಉಪದೇಶ ಮಾಡುವ ದೃಷ್ಟಿಯಿಂದ ನಿನ್ನ ಮುಂದೆ ಆವಿರ್ಭವಿಸುತ್ತೇನೆ.
ಏವಮುಕತ್ವ ಹಯಶಿರಾಸ್ತತ್ರೈವಾಂತರಧೀಯತ |
ತೇನಾನುಶಿಷ್ಟೋ ಬ್ರಹ್ಮಾಪಿ ಸ್ವಂ ಲೋಕಮಚಿರಾದ್ ಗತಃ ॥86॥
ಹಯಗ್ರೀವನು ಬ್ರಹ್ಮನಿಗೆ ಹೀಗೆ ಹೇಳಿ ಅದೃಶ್ಯನಾದನು. ಪರಮಾತ್ಮನಿಂದ ಆಜ್ಞಪ್ತನಾದ ಬ್ರಹ್ಮನೂ ತನ್ನ ಲೋಕಕ್ಕೆ ತೆರಳಿದನು.
ಏವಮೇಷ ಮಹಾಭಾಗಃ ಪದ್ಮನಾಭಃ ಸನಾತನಃ |
ಯಜ್ಞೇಷ್ವಗ್ರಹರಃ ಪ್ರೋಕ್ತೋ ಯಜ್ಞಧಾರೀ ಚ ನಿತ್ಯದಾ ॥87॥
ಹೀಗೆ ಮಹಾಭಾಗನಾದ, ಸನಾತನನಾದ ಪದ್ಮನಾಭನು ನಿತ್ಯವೂ ಯಜ್ಞಧಾರಿಯು. ಯಜ್ಞದ ಮೊದಲನೆಯ ಹವಿಸ್ಸನ್ನು ಸ್ವೀಕರಿಸಲು ಅರ್ಹನು ಎಂದು ಹೇಳಲ್ಪಟ್ಟಿದೆ.
ನಿವೃತ್ತಿಂ ಚಾಸ್ಥಿತೋ ಧರ್ಮಂ ಗತಿಮಕ್ಷಯಧರ್ಮಿಣಾಮ್ |
ಪ್ರವೃತ್ತಿಧರ್ಮಾನ್ ವಿದಧೇ ಕೃತ್ವಾ ಲೋಕಸ್ಯ ಚಿತ್ರತಾಮ್ ॥88॥
ನಿವೃತ್ತಿಧರ್ಮವನ್ನು ಆಶ್ರಯಿಸಿರುವವನು. ಮೋಕ್ಷಧರ್ಮಿಗಳಾದ ಮಹಾತ್ಮರಿಗೆ ಸದ್ಗತಿಯನ್ನು ನೀಡುವವನು. ಲೋಕಕ್ಕೆ ವಿಚಿತ್ರವಾದ ಮನಸ್ಸಿನ ಪ್ರವೃತ್ತಿಯನ್ನುಂಟು ಮಾಡಿ ಅದಕ್ಕನುಸಾರವಾಗಿ ಪ್ರವೃತ್ತಿ ಧರ್ಮವನ್ನು ನಿರ್ಮಿಸುವವನು.
ಸ ಆದಿಃ ಸ ಮಧ್ಯಃ ಸ ಚಾಂತಃ ಪ್ರಜಾನಾಂ
ಸ ಧಾತಾ ಸ ಧೇಯಃ ಸ ಕರ್ತಾ ಸ ಕಾರ್ಯಮ್ |
ಯುಗಾಂತೇ ಸ ಸುಪ್ತಃ ಸುಸಂಕ್ಷಿಪ್ಯ ಲೋಕಾನ್
ಯುಗಾದೌ ಪ್ರಬುದ್ಧೋ ಜಗದ್ ಹ್ಯುತ್ಸಸರ್ಜ ॥89॥
ಭಗವಂತನೇ ಆದಿಯೂ, ಮಧ್ಯನೂ, ಅಂತನೂ, ಪ್ರಜೆಗಳನ್ನು ಧರಿಸುವವನೂ, ಪೋಷಿಸುವವನೂ ಅವನೇ ಕರ್ತೃವೂ, ಅವನೇ ಅವತರಿಸಲು ಯೋಗ್ಯನು. ಯುಗದ ಕೊನೆಯಲ್ಲಿ ಮಲಗಿಕೊಂಡೇ ಸಮಗ್ರ ಲೋಕಗಳನ್ನು ಸೂಕ್ಷ್ಮರೂಪಕ್ಕೆ ಕೊಂಡೊಯ್ದು ಯುಗದ ಆರಂಭದಲ್ಲಿ ಎದ್ದವನಾಗಿ ಸಮಸ್ತ ಜಗತ್ತನ್ನು ಸೃಷ್ಟಿಸಿದನು.
ತಸ್ಮೈ ನಮಧ್ವಂ ದೇವಾಯ ನಿರ್ಗುಣಾಯ ಗುಣಾತ್ಮನೇ |
ಅಜಾಯ ವಿಶ್ವರೂಪಾಯ ಧಾಮ್ನೇ ಸರ್ವದಿವೌಕಸಾಮ್ ॥90॥
ಅಂತಹ ಪ್ರಾಕೃತಗುಣರಹಿತನಾದ, ಗುಣಸ್ವರೂಪಿಯಾದ ಭಗವಂತನಿಗೆ ದೇವತೆಗಳೇ, ನಮಸ್ಕರಿಸಿ. ಸಮಸ್ತ ದೇವತೆಗಳಿಗೂ ಆಶ್ರಯನಾದ, ಹುಟ್ಟಿಲ್ಲದ, ವಿಶ್ವರೂಪಿಯಾದ ಭಗವಂತನನ್ನು ನಮಿಸಿ.
ಮಹಾಭೂತಾಧಿಪತಯೇ ರುದ್ರಾಣಾಂ ಪತಯೇ ತಥಾ |
ಆದಿತ್ಯಪತಯೇ ಚೈವ ವಸೂನಾಂ ಪತಯೇ ತಥಾ ॥91॥
ಅಶ್ವಿಭ್ಯಾಂ ಪತಯೇ ಚೈವ ಮರುತಾಂ ಪತಯೇ ತಥಾ |
ವೇದಯಜ್ಞಾಧಿಪತಯೇ ವೇದಾಂಗಪತಯೇಽಪಿ ಚ ॥92॥
ಸಮುದ್ರವಾಸಿನೇ ನಿತ್ಯಂ ಹರಯೇ ಮುಂಜಕೇಶಿನೇ |
ಶಾಂತಯೇ ಸರ್ವಭೂತಾನಾಂ ಮೋಕ್ಷಧರ್ಮಾನುಭಾಷಿಣೇ ॥93॥

ಮಹಾಭೂತಗಳಿಗೆ ಅಧಿಪತಿಯಾದ, ರುದ್ರನಿಗೂ ಪತಿಯಾದ, ಆದಿತ್ಯನಿಗೆ ಅಧಿಪತಿಯಾದ, ವಸುಪತಿಯಾದ, ಅಶ್ವಿನೀದೇವತೆಗಳಿಗೆ ಸ್ವಾಮಿಯಾದ, ಮರುತ್ತುಗಳಿಗೆ ಸ್ವಾಮಿಯಾದ, ವೇದಯಜ್ಞಗಳಿಗೆ ಅಧಿಪತಿಯಾದ, ವೇದಾಂಗಪತಿಯಾದ, ಸಮುದ್ರ ವಾಸಿಯಾದ, ನಜವಲ್ಲಿಗೆ ಸಮಾನವಾದ ತಲೆಕೂದಲಿನಿಂದ ಕೂಡಿದ ಹರಿಗೆ ನಿತ್ಯವೂ ನಮಸ್ಕರಿಸಿ. ಸಮಸ್ತ ಭೂತಗಳ ಶಾಂತಿಗಾಗಿ ಮೋಕ್ಷಧರ್ಮವನ್ನು ಪ್ರವಚನ ಮಾಡುವ ಭಗವಂತನನ್ನು ನಮಸ್ಕರಿಸಿ.

ತಪಸಾಂ ತೇಜಸಾಂ ಚೈವ ಪತಯೇ ಯಶಸೋಽಪಿ ಚ |
ವಾಚಶ್ಚ ಪತಯೇ ನಿತ್ಯಂ ಸರಿತಾಂ ಪತಯೇ ತಥಾ ॥94॥

ತಪಸ್ಸುಗಳಿಗೆ ಒಡೆಯನಾದ, ಸೂರ್ಯ-ಚಂದ್ರ-ಅಗ್ನಿ ಮೊದಲಾದವರಿಗೆ ಸ್ವಾಮಿಯಾದ, ಸಮಸ್ತ ಯಶಸ್ಸಿಗೆ ಪತಿಯಾದ, ವಾಕ್ಪತಿಯಾದ, ಸರಿತ್ಪತಿಯಾದ ನಾರಾಯಣನಿಗೆ ನಿತ್ಯವೂ ನಮಸ್ಕರಿಸಿರಿ.

ಕಪರ್ದಿನೇ ವರಾಹಾಯ ಏಕಶೃಂಗಾಯ ಧೀಮತೇ |
ವಿವಸ್ವತೇಽಶ್ವಶಿರಸೇ ಚತುರ್ಮೂರ್ತಿಧೃತೇ ಸದಾ ॥95॥

ಜಟೆಯನ್ನು ಧರಿಸಿರುವ, ಏಕಶೃಂಗನಾದ, ವಿವಸ್ವಾನ್ ಹಯಗ್ರೀವನಿಗೆ, ಚತುರ್ಮೂರ್ತಿಯನ್ನು ಧರಿಸಿರುವ ಭಗವಂತನಿಗೆ, ವರಾಹನಿಗೆ ನಮಸ್ಕರಿಸಿರಿ.

ಗುಹ್ಯಾಯ ಜ್ಞಾನದೃಶ್ಯಾಯ ಅಕ್ಷರಾಯ ಕ್ಷರಾಯ ಚ |
ಏಷ ದೇವಃ ಸಂಚರತಿ ಸರ್ವತ್ರಗತಿರವ್ಯಯಃ ॥96॥

ಗುಹ್ಯನೂ, ಜ್ಞಾನದೃಶ್ಯನೂ, ಅಕ್ಷರನೂ, ಕ್ಷರನೂ ಆದ ಭಗವಂತನು ನಾಶರಹಿತನಾಗಿ ಎಲ್ಲೆಡೆಯೂ ಸಂಚರಿಸುತ್ತಾನೆ.

ಏವಮೇತತ್ ಪುರಾ ದೃಷ್ಟಂ ಮಯಾ ವೈ ಜ್ಞಾನಚಕ್ಷುಷಾ |
ಕಥಿತಂ ತಚ್ಚ ವಃ ಸರ್ವಂ ಮಯಾ ಪೃಷ್ಟೇನ ತತ್ತ್ವತಃ ॥97॥

ಹಿಂದೆ ಜ್ಞಾನಚಕ್ಷುಸ್ಸಿನಿಂದ ನಾನು ಹೀಗೆ ಅವನನ್ನು ಕಂಡಿರುತ್ತೇನೆ. ನನ್ನ ಬಳಿ ಪ್ರಶ್ನಿಸಿದಾಗ ನಾನು ನಿಮಗೆ ಯಥಾವತ್ತಾಗಿ ಅವನ ಮಹಿಮೆಯನ್ನು ಹೇಳಿರುತ್ತೇನೆ.

ಕ್ರಿಯತಾಂ ಮದ್ವಚಃ ಶಿಷ್ಯಾಃ ಸೇವ್ಯತಾಂ ಹರಿರೀಶ್ವರಃ |
ಗೀಯತಾಂ ವೇದಶಬ್ದೈಶ್ಚ ಪೂಜ್ಯತಾಂ ಚ ಯಥಾವಿಧಿ ॥98॥

ನನ್ನ ಮಾತನ್ನು ಶಿಷ್ಯರಾದ ನೀವೆಲ್ಲರೂ ನಡೆಸಿರಿ. ಭಗವಂತನನ್ನು ಸೇವಿಸಿರಿ. ವೇದಶಬ್ದಗಳಿಂದ ಅವನನ್ನೇ ಸ್ತುತಿಸಿರಿ. ತಂತ್ರಸಾರ ವಿಧಿಗೆ ಅನುಗುಣವಾಗಿ ಪೂಜಿಸಿರಿ.

ವೈಶಂಪಾಯನಃ

ಇತ್ಯುಕ್ತಾಸ್ತು ವಯಂ ತೇನ ವೇದವ್ಯಾಸೇನ ಧೀಮತಾ |
ಸರ್ವೇ ಶಿಷ್ಯಾಃ ಸುತಶ್ಚಾಸ್ಯ ಶುಕಃ ಪರಮಧರ್ಮವಿತ್ ॥99॥

ವೈಶಂಪಾಯನ ಹೀಗೆ ಜ್ಞಾನಿಯಾದ ವೇದವ್ಯಾಸರಿಂದ ಶಿಷ್ಯರಾದ ನಾವೆಲ್ಲರೂ, ಪರಮಧರ್ಮಜ್ಞರಾದ ಶುಕಮುನಿಯೂ ಬೋಧಿಸಲ್ಪಟ್ಟೆವು.

ಸ ಚಾಸ್ಮಾಕಮುಪಾಧ್ಯಾಯಃ ಸಹಾಸ್ಮಾಭಿರ್ವಿಶಾಂಪತೇ |
ಚತುರ್ವೇದೋದ್ಗತಾಭಿಶ್ಚ ಋಗ್ಭಿಸ್ತಮಭಿತುಷ್ಟುವೇ ॥100॥

ಅನಂತರ ನಮ್ಮ ಗುರುಗಳಾದ ವ್ಯಾಸರು ನಮ್ಮ ಜೊತೆಗೆ ಸೇರಿಕೊಂಡು ನಾಲ್ಕು ವೇದಗಳಲ್ಲಿರುವ ಋಕ್‌ಗಳ ಮೂಲಕ ನಾರಾಯಣನನ್ನು ಸ್ತುತಿಸಿದರು.

ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ |
ಏವಂ ಮೇಽಕಥಯದ್ ರಾಜನ್ ಪುರಾ ದ್ವೈಪಾಯನೋ ಗುರುಃ ॥

ಜನಮೇಜಯನೇ, ನೀನು ಕೇಳಿದ ಪ್ರಶ್ನೆಗನುಸಾರವಾಗಿ ಎಲ್ಲ ವಿಷಯಗಳನ್ನು ವಿಷದೀಕರಿಸಿದ್ದೇನೆ. ಇದನ್ನೇ ಗುರುಗಳಾದ ವ್ಯಾಸರು ನನಗೆ ಹೇಳಿದ್ದರು.

ಯಶ್ಚೇದಂ ಶೃಣುಯಾನ್ನಿತ್ಯಂ ಯಶ್ಚೇದಂ ಪರಿಕೀರ್ತಯೇತ್ |
ನಮೋ ಭಗವತೇ ಕೃತ್ವಾ ಸಮಾಹಿತಮನಾ ನರಃ ॥102॥
ಭವತ್ಯರೋಗೋ ದ್ಯುತಿಮಾನ್ ಬಲರೂಪಸಮನ್ವಿತಃ |
ಆತುರೋ ಮುಚ್ಯತೇ ರೋಗಾದ್ ಬದ್ಧೋ ಮುಚ್ಯೇತ ಬಂಧನಾತ್ ॥

ಯಾವನು ಈ ಉಪಾಖ್ಯಾನವನ್ನು ಪ್ರತಿದಿನವೂ ಕೇಳುತ್ತಾನೋ, ಏಕಾಗ್ರಚಿತ್ತನಾಗಿ ಭಗವಂತನನ್ನು ನಮಸ್ಕರಿಸಿ ಉಪಾಖ್ಯಾನವನ್ನು ಪಠಿಸುತ್ತಾನೋ, ಅವನು ರೋಗ ರಹಿತನೂ, ಕಾಂತಿಯುಕ್ತನೂ, ಬಲ-ರೂಪವನ್ನು ಹೊಂದಿದವನೂ ಆಗುತ್ತಾನೆ. ರೋಗಿಯು ರೋಗದಿಂದ ಬಿಡುಗಡೆ ಹೊಂದುತ್ತಾನೆ. ಬಂಧಿಯಾದವನು ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಕಾಮಕಾಮೀ ಲಭೇತ್ ಕಾಮಂ ದೀರ್ಘಮಾಯುರವಾಪ್ನುಯಾತ್ |
ಬ್ರಾಹ್ಮಣಃ ಸರ್ವವೇದೀ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ |
ವೈಶ್ಯೋ ವಿಪುಲಲಾಭಃ ಸ್ಯಾಚ್ಛೂದ್ರಃ ಸುಖಮವಾಪ್ನುಯಾತ್ ॥ 104॥

ಕಾಮನೆಗಳನ್ನು ಬಯಸುವವನು ಆ ಇಷ್ಟಾರ್ಥಗಳನ್ನು ಹೊಂದುತ್ತಾನೆ. ದೀರ್ಘಾಯುಷ್ಯವನ್ನು ಹೊಂದುತ್ತಾನೆ. ಬ್ರಾಹ್ಮಣನು ಸಮಸ್ತ ವೇದಗಳ ಜ್ಞಾನವನ್ನು ಪಡೆಯುತ್ತಾನೆ. ಕ್ಷತ್ರಿಯನು ವಿಜಯ ಹೊಂದುತ್ತಾನೆ. ವೈಶ್ಯನು ಹೇರಳವಾದ ಲಾಭವನ್ನು, ಶೂದ್ರನು ಸುಖವನ್ನು ಹೊಂದುತ್ತಾನೆ.

ಅಪುತ್ರೋ ಲಭತೇ ಪುತ್ರಂ ಕನ್ಯಾ ಚೈವೇಪ್ಸಿತಂ ಪತಿಮ್ |

ಲಗ್ನಗರ್ಭಾ ವಿಮುಚ್ಯೇತ ಗರ್ಭಿಣೀ ಜನಯೇತ್ ಸುತಮ್ |
ವಂಧ್ಯಾ ಪ್ರಸವಮಾಪ್ನೋತಿ ಪುತ್ರಪೌತ್ರಸಮೃದ್ಧಿಮತ್ ॥105॥
ಸಂತಾನಹೀನನು ಸಂತತಿಯನ್ನೂ, ಕನ್ಯೆಯು ಬಯಸಿದ ಪತಿಯನ್ನೂ, ಪ್ರಸವವನ್ನು ಹೊಂದುವ ಹೆಂಗಸಿನ ಗರ್ಭವು ಅಡ್ಡಸಿಕ್ಕಿಬಿದ್ದರೆ ಆ ಗರ್ಭಿಣಿಯು ವೇದನೆ ಇಲ್ಲದೆ ಮಗನನ್ನು ಹಡೆಯುತ್ತಾಳೆ. ಬಂಜೆಯು ಗರ್ಭಿಣಿಯಾಗುತ್ತಾಳೆ. ಈ ಉಪಾಖ್ಯಾನದ ಶ್ರವಣದಿಂದ ಪುತ್ರ-ಪೌತ್ರರ ಸಮೃದ್ಧಿಯು ಉಂಟಾಗುತ್ತದೆ.
ಕ್ಷೇಮೇಣ ಗಚ್ಛೇದಧ್ವಾನಮಿದಂ ಯಃ ಪಠತೇ ಪಥಿ |
ಯೋ ಯಂ ಕಾಮಂ ಕಾಮಯತೇ ಸ ತಮಾಪ್ನೋತಿ ಚ ಧ್ರುವಮ್ ॥
ಪ್ರವಾಸದ ಸಮಯದಲ್ಲಿ, ಮಾರ್ಗಮಧ್ಯದಲ್ಲಿ ಈ ಉಪಾಖ್ಯಾನವನ್ನು ಪಾರಾಯಣ ಮಾಡುವವನು ಕ್ಷೇಮದಿಂದ ಯಾತ್ರೆಯನ್ನು ಮುಗಿಸುತ್ತಾನೆ. ಯಾವ ಯಾವ ಕಾಮನೆಗಳನ್ನು ಹೊಂದಲು ಬಯಸುತ್ತಾನೋ ಆ ಕಾಮನೆಗಳನ್ನು ನಿಶ್ಚಿತವಾಗಿ ಹೊಂದುತ್ತಾನೆ.
ಇದಂ ಮಹರ್ಷೇರ್ವಚನಂ ವಿನಿಶ್ಚಿತಂ
ಮಹಾತ್ಮನಃ ಪುರುಷವರಸ್ಯ ಕೀರ್ತನಮ್ |
ಸಮಾಗಮಂ ಚರ್ಷಿದಿವೌಕಸಾಮಿಮಂ
ನಿಶಮ್ಯ ಭಕ್ತಾಃ ಸುಸುಖಂ ಲಭಂತೇ ॥107॥
ಈ ವಿಷಯವು ಪುರುಷಶ್ರೇಷ್ಠರಾದ, ಮಹಾತ್ಮರಾದ ವ್ಯಾಸಮಹರ್ಷಿಗಳಿಂದ ಹೇಳಲ್ಪಟ್ಟಿದೆ. ಇದೇ ಸಿದ್ಧಾಂತವು. ಈ ವ್ಯಾಸರ ಪ್ರವಚನವನ್ನು, ಋಷಿ-ದೇವತೆಗಳ ಸಮಾಗಮ ವೃತ್ತಾಂತವನ್ನು ಕೇಳುವ ಭಕ್ತರು ಉತ್ತಮ ಸುಖವನ್ನು ಹೊಂದುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಪರ್ವೇ ನಾರಾಯಣೀಯೇ ದ್ವ್ಯಾಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ಮೂರನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ತನ್ನ ನಾಮನಿರ್ವಚನಗಳನ್ನು ಹೇಳುವ ಮೂಲಕ ಮಹಿಮೆಯನ್ನು ತಿಳಿಸಿದುದು.
ಜನಮೇಜಯಃ
ಅಸ್ತೌಷೀದ್ ಯೈರಿಮಂ ವ್ಯಾಸಃ ಸಶಿಷ್ಯೋ ಮಧುಸೂದನಮ್ |
ನಾಮಭಿರ್ವಿವಿಧೈರೇಷಾಂ ನಿರುಕ್ತಂ ಭಗವನ್ಮಮ ॥1॥
ಜನಮೇಜಯ ವೈಶಂಪಾಯನರೇ, ತಮ್ಮ ಶಿಷ್ಯರಿಂದ ಕೂಡಿದ ವ್ಯಾಸರು ಮಧುಸೂದನನನ್ನು ಅನೇಕ ವಿಧವಾದ ದಿವ್ಯನಾಮದಿಂದ ಸ್ತುತಿಸಿದರು. ಆ ದಿವ್ಯನಾಮಗಳ ನಿರ್ವಚನಗಳನ್ನು ಕೇಳಲು ಅಪೇಕ್ಷಿಸುತ್ತೇನೆ.
ವಕ್ತುಮರ್ಹಸಿ ಶುಶ್ರೂಷೋಃ ಪ್ರಜಾಪತಿಪತೇರ್ಹರೇಃ |
ಶ್ರುತ್ವಾ ಭವೇಯಂ ಯತ್ಪೂತಃ ಶರಚ್ಚಂದ್ರ ಇವಾಮಲಃ ॥2॥
ನನಗೆ ಆ ನಾಮಗಳ ಮಹಿಮೆಯನ್ನು ತಿಳಿಸಿರಿ. ಚತುರ್ಮುಖ ಬ್ರಹ್ಮನ ಸ್ವಾಮಿಯಾದ ಶ್ರೀಹರಿಯ ನಾಮಗಳ ವ್ಯುತ್ಪತ್ತಿಯನ್ನು ಕೇಳಿ ಶರತ್ಕಾಲದ ಚಂದ್ರನಂತೆ ನಿರ್ಮಲನಾಗುತ್ತೇನೆ.
ವೈಶಂಪಾಯನಃ
ಶೃಣು ರಾಜನ್ ಯಥಾಚಷ್ಟ ಫಲ್ಗುನಸ್ಯ ಹರಿರ್ವಿಭುಃ |
ಪ್ರಸನ್ನಾತ್ಮಾತ್ಮನೋ ನಾಮ್ನಾಂ ನಿರುಕ್ತಂ ಗುಣಕರ್ಮಜಮ್ ॥3॥
ವೈಶಂಪಾಯನ ಜನಮೇಜಯನೇ, ಸರ್ವಸಮರ್ಥನಾದ ಶ್ರೀಹರಿಯು ಯಾವ ರೀತಿಯಾಗಿ ಅರ್ಜುನನಿಗೆ ಪ್ರಸನ್ನನಾಗಿ, ಅರ್ಜುನನಿಗೆ ತನ್ನ ಗುಣ-ಕರ್ಮಗಳಿಂದ ಪಡೆದಿರುವ ನಾಮಗಳನ್ನು ಬಿಡಿಸಿ ಹೇಳುತ್ತಾನೋ ಅದನ್ನೇ ಹೇಳುತ್ತೇನೆ.
ನಾಮಭಿಃ ಕೀರ್ತಿತೈಸ್ತಸ್ಯ ಕೇಶವಸ್ಯ ಮಹಾತ್ಮನಃ |
ಪೃಷ್ಟವಾನ್ ಕೇಶವಂ ರಾಜನ್ ಫಲ್ಗುನಃ ಪರವೀರಹಾ ॥4॥
ಮಹಾತ್ಮನಾದ ಕೇಶವನ ದಿವ್ಯನಾಮಗಳಿಂದ ಸ್ತೋತ್ರ ಮಾಡುತ್ತಿರುವ ಅರ್ಜುನನು ಆ ನಾಮಗಳ ವಿಷಯದಲ್ಲಿ ಶತ್ರುಸಂಹಾರಕನಾದ ಅರ್ಜುನನೇ ಕೇಶವನನ್ನು ಪ್ರಶ್ನಿಸಿದನು.
ಅರ್ಜುನಃ
ಭಗವನ್ ಭೂತಭವ್ಯೇಶ ಸರ್ವಭೂತಸೃಗವ್ಯಯ |
ಲೋಕಧಾಮ ಜಗನ್ನಾಥ ಲೋಕಾನಾಮಭಯಪ್ರದ ॥5॥
ಅರ್ಜುನ ಕಳೆದ ಕಾಲ, ಮುಂದಿನ ಕಾಲಗಳಿಗೂ ನಿಯಾಮಕನಾದವನೇ, ಸಮಸ್ತ ಪ್ರಾಣಿಗಳನ್ನು ಸೃಷ್ಟಿಸುವವನೇ, ನಿರ್ವಿಕಾರನೇ, ಲೋಕಧಾಮನೇ, ಜಗನ್ನಾಥನೇ, ಲೋಕಗಳಿಗೆಲ್ಲ ಅಭಯಪ್ರದನಾದ, ಪೂಜ್ಯನಾದ ಶ್ರೀಕೃಷ್ಣನೇ.
ಯಾನಿ ನಾಮಾನಿ ತೇ ದೇವ ಕೀರ್ತಿತಾನಿ ಮಹರ್ಷಿಭಿಃ |
ವೇದೇಷು ಸಪುರಾಣೇಷು ಯಾನಿ ಗುಹ್ಯಾನಿ ಕರ್ಮಭಿಃ ॥6॥
ಮಹರ್ಷಿಗಳಿಂದ ಕೊಂಡಾಡಲ್ಪಟ್ಟ ಯಾವ ನಿನ್ನ ನಾಮಗಳಿವೆಯೋ, ನಿನ್ನ ಚೇಷ್ಟೆಗನುಗುಣವಾಗಿ ವೇದ-ಪುರಾಣಗಳಲ್ಲಿ ಯಾವ ಗುಹ್ಯನಾಮಗಳನ್ನು ಕೀರ್ತನೆ ಮಾಡಲಾಗಿದೆಯೋ,
ತೇಷಾಂ ನಿರುಕ್ತಂ ತ್ವತ್ತೋಽಹಂ ಶ್ರೋತುಮಿಚ್ಛಾಮಿ ಕೇಶವ |

ನ ಹ್ಯನ್ಯೋ ವರ್ತಯೇನ್ನಾಮ್ನಾಂ ನಿರುಕ್ತಂ ತ್ವಾಮೃತೇ ಪ್ರಭೋ ॥7॥
ಅವುಗಳ ನಿರ್ವಚನವನ್ನು ಕೇಶವನೇ, ನಿನ್ನಿಂದಲೇ ಕೇಳಲು ಬಯಸುತ್ತೇನೆ. ಆ ನಾಮಗಳ ನಿರ್ವಚನವನ್ನು ನಿನ್ನನ್ನು ಬಿಟ್ಟು ಉಳಿದವರು ವ್ಯಾಖ್ಯಾನಿಸಲಾರರು.
ಶ್ರೀಭಗವಾನ್
ಋಗ್ವೇದೇ ಸಯಜುರ್ವೇದೇ ತಥೈವಾಥರ್ವಸಾಮಸು |
ಪುರಾಣೇ ಸೋಪನಿಷದೇ ತಥೈವ ಜ್ಯೋತಿಷೇಽರ್ಜುನ ॥8॥
ಸಾಂಖ್ಯೇ ಚ ಯೋಗಶಾಸ್ತ್ರೇ ಚ ಆಯುರ್ವೇದೇ ತಥೈವ ಚ |
ಬಹೂನಿ ಮಮ ನಾಮಾನಿ ಕೀರ್ತಿತಾನಿ ಮಹರ್ಷಿಭಿಃ ॥9॥
ಶ್ರೀಭಗವಾನ್ ಅರ್ಜುನನೇ, ಯಜುಸ್, ಸಾಮ, ಅಥರ್ವ, ಪುರಾಣ, ಉಪನಿಷತ್, ಜ್ಯೋತಿಷ್ಯ ಇವುಗಳಲ್ಲಿ, ಸಾಂಖ್ಯ, ಯೋಗಶಾಸ್ತ್ರ, ಆಯುರ್ವೇದ, ಇವುಗಳಲ್ಲಿಯೂ ಮಹರ್ಷಿಗಳಿಂದ ನನ್ನ ಅನೇಕ ನಾಮಗಳು ಹೇಳಲ್ಪಟ್ಟಿವೆ.
ಗೌಣಾನಿ ತತ್ರ ನಾಮಾನಿ ಕರ್ಮಜಾನಿ ಚ ಕಾನಿಚಿತ್ |
ನಿರುಕ್ತಂ ಕರ್ಮಜಾನಾಂ ಚ ಶೃಣುಷ್ವ ಪ್ರಯತೋಽನಘ |
ಕಥ್ಯಮಾನಂ ಮಯಾ ತಾತ ತ್ವಂ ಹಿ ಮೇಽರ್ಧಂ ಸ್ಮೃತಃ ಪುರಾ ॥10॥
ಹೇಳಿರುವ ಆ ನಾಮಗಳಲ್ಲಿ ಕೆಲವು ನಾಮಗಳು ನಾನು ಮಾಡಿದ ವ್ಯಾಪಾರಗಳಿಗೆ ಅನುಗುಣವಾಗಿ ಹೇಳಲ್ಪಟ್ಟಿವೆ. ನನ್ನ ಕ್ರಿಯೆಗಳಿಂದ ಪ್ರಾಪ್ತವಾದ ನಾಮನಿರ್ವಚನವ ಹೇಳುತ್ತೇನೆ, ಏಕಾಗ್ರತೆಯಿಂದ ಕೇಳು. ನೀನು ನನ್ನ ಅರ್ಧಶರೀರನೆಂದೇ ಪ್ರಸಿದ್ಧನಾಗಿರುವಿ. ಅರ್ಥಾತ್ ನರ-ನಾರಾಯಣರಲ್ಲಿ ನರನೆಂದೇ ಖ್ಯಾತನಾಗಿರುವಿ.
ನಮೋಽತಿಯಶಸೇ ತಸ್ಮೈ ದೇಹಿನಾಂ ಪರಮಾತ್ಮನೇ |
ನಾರಾಯಣಾಯ ವಿಶ್ವಾಯ ನಿರ್ಗುಣಾಯ ಗುಣಾತ್ಮನೇ ॥11॥
ಸಮಸ್ತ ಜೀವರಿಗೆಲ್ಲ ಯಾವ ಭಗವಂತನು ಪರಮ ನಿಯಾಮಕನಾಗಿದ್ದಾನೋ ಅಂತಹ ಮಹಾಯಶೋವಂತನಾದ, ಪ್ರಾಕೃತಗುಣರಹಿತನಾದ, ಗುಣಸ್ವರೂಪಿಯಾದ, ವಿಶ್ವನೆನಿಸಿದ ನಾರಾಯಣನಿಗೆ ನಮಸ್ಕಾರವು.
ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ |
ಯೋಽಸೌ ಯೋನಿರ್ಹಿ ಸರ್ವಸ್ಯ ಸ್ಥಾವರಸ್ಯ ಚರಸ್ಯ ಚ ॥12॥
ಯಾವ ಭಗವಂತನ ಪ್ರಸನ್ನತೆಯಿಂದ ಬ್ರಹ್ಮನು ಹುಟ್ಟಿದನೋ, ಯಾವನ ಕ್ರೋಧದಿಂದ ರುದ್ರನ ಉತ್ಪತ್ತಿಯಾಯಿತೋ, ಯಾವ ಭಗವಂತನು ಸಮಗ್ರ ಚರಾಚರ ಪ್ರಪಂಚಕ್ಕೆ ಕಾರಣನಾಗಿದ್ದಾನೋ ಅಂತಹ ನಾರಾಯಣನಿಗೆ ನಮಸ್ಕಾರವು.
ಅಷ್ಟಾದಶಗುಣಂ ಯತ್ತತ್ ಸತ್ತ್ವಂ ಸತ್ತ್ವವತಾಂ ವರ |
ಪ್ರಕೃತಿಃ ಸಾ ಪರಾ ಮಹ್ಯಂ ರೋದಸೀ ಯೋಗಧಾರಿಣೀ |
ಋತಾ ಸತ್ಯಾಮರಾಜಯ್ಯಾ ಲೋಕಾನಾಮಾತ್ಮಸಂಜ್ಞಿತಾ ॥13॥
ಅಂತಃಸತ್ತ್ವವುಳ್ಳವರಲ್ಲಿ ಶ್ರೇಷ್ಠನಾದ ಅರ್ಜುನನೇ, ಯಾವನು ಹದಿನೆಂಟು ಗುಣಗಳಿಂದ ಪೂರ್ಣನಾಗಿದ್ದಾನೋ, ಸತ್ತ್ವಸ್ವರೂಪನೋ ಅಂತಹ ಭಗವಂತನು ನನ್ನ ಪರಾಪ್ರಕೃತಿ ಎನಿಸಿದ್ದಾನೆ. ಪೃಥಿವಿ, ಅಂತರಿಕ್ಷಗಳನ್ನು ಯೋಗಶಕ್ತಿಯಿಂದ ಧರಿಸಿದ್ದಾನೆ. ಋತ, ಸತ್ಯ, ಅಮರ, ಜಯಿಸಲು ಅಶಕ್ಯ, ಲೋಕಗಳಿಗೆಲ್ಲ ಅಂತರ್ಯಾಮಿ ಹೀಗೆ ಕರೆಸಿಕೊಂಡಿದ್ದಾನೆ.
ತಸ್ಮಾತ್ ಸರ್ವಾಃ ಪ್ರವರ್ತಂತೇ ಸರ್ಗಪ್ರಲಯವಿಕ್ರಿಯಾಃ |
ತತೋ ಯಜ್ಞಶ್ಚ ಯಷ್ಟಾ ಚ ಪುರಾಣಃ ಪುರುಷೋ ವಿರಾಟ್ |
ಅನಿರುದ್ಧ ಇತಿ ಪ್ರೋಕ್ತೋ ಲೋಕಾನಾಂ ಪ್ರಭವಾಪ್ಯಯಃ ॥14॥
ಆ ಭಗವಂತನಿಂದಲೇ ಸೃಷ್ಟಿ-ಪ್ರಳಯ ಮೊದಲಾದ ಎಲ್ಲ ವಿಕಾರಗಳು ಉಂಟಾಗುತ್ತವೆ. ಅವನೇ ತಪಸ್ಸು, ಯಜ್ಞ, ಯಜ್ಞ ಮಾಡುವವನು, ಪುರಾಣ ಪುರುಷನು. ಅವನೇ ವಿರಾಟ್. ಅವನೇ ಹುಟ್ಟು-ಸಾವುಗಳನ್ನು ನೀಡುವ ಅನಿರುದ್ಧನು ಅವನೇ.
ಬ್ರಾಹ್ಮೇ ರಾತ್ರಿಕ್ಷಯೇ ಪ್ರಾಪ್ತೇ ತಸ್ಯ ಹ್ಯಮಿತತೇಜಸಃ |
ಪ್ರಸಾದಾತ್ ಪ್ರಾದುರಭವತ್ ಪದ್ಮಂ ಪದ್ಮನಿಭೇಕ್ಷಣ |
ತತ್ರ ಬ್ರಹ್ಮಾ ಸಮಭವತ್ಸ ತಸ್ಯೈವ ಪ್ರಸಾದಜಃ ॥15॥
ಪದ್ಮನೇತ್ರನೇ, ಚತುರ್ಮುಖ ಬ್ರಹ್ಮನ ರಾತ್ರಿಯು ಕಳೆದ ಬಳಿಕ ಅಮಿತ ತೇಜಸ್ವಿಯಾದ ಪದ್ಮನಾಭನ ಪ್ರಸಾದದಿಂದ ಕಮಲವು ಆವಿರ್ಭಾವ ಹೊಂದಿತು. ಆ ಭಗವಂತನ ಪ್ರಸನ್ನತೆಯಿಂದಲೇ ಕಮಲದಿಂದ ಚತುರ್ಮುಖ ಬ್ರಹ್ಮನ ಸೃಷ್ಟಿಯಾಯಿತು.
ಅಹ್ನಃ ಕ್ಷಯೇ ಲಲಾಟಾಚ್ಚ ಸುತೋ ದೇವಸ್ಯ ವೈ ತಥಾ |
ಕ್ರೋಧಾವಿಷ್ಟಸ್ಯ ಸಂಜಜ್ಞೇ ರುದ್ರಃ ಸಂಹಾರಕಾರಕಃ ॥16॥
ಹಗಲು ಕಳೆದ ಕೂಡಲೇ ಕ್ರೋಧಾವಿಷ್ಟನಾದ ಬ್ರಹ್ಮನ ಹಣೆಯಿಂದ ಲೋಕ ಸಂಹಾರಕನಾದ ರುದ್ರನು ಮಗನಾಗಿ ಹುಟ್ಟಿದನು.
ಏತೌ ದ್ವೌ ವಿಬುಧಶ್ರೇಷ್ಠೌ ಪ್ರಸಾದಕ್ರೋಧಜೌ ಸ್ಮೃತೌ |
ತದಾದೇಶಿತಪಂಥಾನೌ ಸೃಷ್ಟಿಸಂಹಾರಕಾರಕೌ |
ನಿಮಿತ್ತಮಾತ್ರಂ ತಾವತ್ರ ಸರ್ವಪ್ರಾಣಿವರಪ್ರದೌ ॥17॥
ಈ ಬ್ರಹ್ಮ-ರುದ್ರರಿಬ್ಬರೂ ದೇವತೆಗಳಲ್ಲೇ ಶ್ರೇಷ್ಠರು. ಬ್ರಹ್ಮನು ಹರಿಯ ಅನುಗ್ರಹದಿಂದ ಹುಟ್ಟಿದರೆ, ರುದ್ರನು ಕ್ರೋಧದಿಂದಲೇ ಹುಟ್ಟನ್ನು ಪಡೆದವನು. ಭಗವಂತನ ಆದೇಶದಂತೆ ಅವರಿಬ್ಬರು ಸೃಷ್ಟಿ-ಸಂಹಾರ ಕ್ರಿಯೆಗಳಲ್ಲಿ ನಿರತರಾಗಿದ್ದಾರೆ. ಸಮಸ್ತ ಪ್ರಾಣಿಗಳಿಗೂ ವರವನ್ನು ನೀಡುವ ಅವರಿಬ್ಬರು ಸೃಷ್ಟಿ-ಲಯಗಳಿಗೆ ಕೇವಲ ನಿಮಿತ್ತ ಕಾರಣರಾಗಿದ್ದಾರೆ.
ಕಪರ್ದೀ ಜಟಿಲೋ ಮುಂಡಃ ಶ್ಮಶಾನಗೃಹಸೇವಕಃ |

ಉಗ್ರವ್ರತಧರೋ ರುದ್ರೋ ಯೋಗೀ ತ್ರಿಪುರದಾರುಣಃ ॥18॥
ದಕ್ಷಕ್ರತುಹರಶ್ಚೈವ ಭಗನೇತ್ರಹರಸ್ತಥಾ |
ನಾರಾಯಣಾತ್ಮಕೋ ಜ್ಞೇಯಃ ಪಾಂಡವೇಯ ಯುಗೇ ಯುಗೇ ॥19॥
ಅರ್ಜುನನೇ, ಸಂಹಾರಕಾರಕನಾದ ರುದ್ರನಿಗೆ ಕಪರ್ದೀ, ಜಟಿಲ, ಮುಂಡ, ಶ್ಮಶಾನಗೃಹಸೇವಕ, ಉಗ್ರವ್ರತಧರ, ರುದ್ರ, ಯೋಗಿ, ತ್ರಿಪುರದಾರುಣ, ದಕ್ಷಕ್ರತುಹರ, ಭಗನೇತ್ರಹರ ಮುಂತಾದ ನಾಮಗಳೆಲ್ಲವೂ ನಾರಾಯಣನ ಅನುಗ್ರಹದಿಂದಲೇ ಪ್ರತಿಯುಗದಲ್ಲಿಯೂ ಲಭಿಸುತ್ತವೆ ಎಂದು ತಿಳಿಯಬೇಕು.
ತಸ್ಮಿನ್ ಹಿ ಪೂಜ್ಯಮಾನೇ ವೈ ದೇವದೇವೇ ಮಹೇಶ್ವರೇ |
ಸಂಪೂಜಿತೋ ಭವೇತ್ ಪಾರ್ಥ ದೇವೋ ನಾರಾಯಣಃ ಪ್ರಭುಃ ॥20॥
ಅರ್ಜುನನೇ, ರುದ್ರದೇವನನ್ನು ಆರಾಧನೆ ಮಾಡಿದರೆ ದೇವದೇವನಾದ ನಾರಾಯಣನನ್ನು ಆರಾಧಿಸಿದಂತೆ ಆಗುತ್ತದೆ.
ಅಹಮಾತ್ಮಾ ಹಿ ಲೋಕಾನಾಂ ವಿಶ್ವಾನಾಂ ಪಾಂಡುನಂದನ |
ತಸ್ಮಾದಾತ್ಮಾನಮೇವಾಗ್ರೇ ರುದ್ರಂ ಸಂಪೂಜಯಾಮ್ಯಹಮ್ ॥21॥
ಪಾಂಡುನಂದನನೇ, ಸಮಸ್ತ ಲೋಕಗಳಿಗೂ ನಾನೇ ಅಂತರ್ಯಾಮಿಯು. ಆದ್ದರಿಂದ ಸೃಷ್ಟಿಯ ಆರಂಭದಲ್ಲಿ ರುದ್ರನಲ್ಲಿರುವ ರುದ್ರ ಎಂಬ ರೂಪವನ್ನೇ ನಾನೂ ಆರಾಧಿಸುತ್ತೇನೆ.
ಯದ್ಯಹಂ ನಾರ್ಚಯೇಯಂ ವೈ ಈಶಾನಂ ವರದಂ ಶಿವಮ್ |
ಆತ್ಮಾನಂ ಚಾರ್ಚಯೇತ್ ಕಶ್ಚಿದಿತಿ ಮೇ ಭಾವಿತಂ ಮನಃ |
ಮಯಾ ಪ್ರಮಾಣಂ ಹಿ ಕೃತಂ ಲೋಕಃ ಸಮನುವರ್ತತೇ ॥22॥
ಒಂದು ವೇಳೆ ನಾನು ವರದನಾದ ರುದ್ರನನ್ನು, ಶಿವನನ್ನು ಪೂಜಿಸದಿದ್ದಲ್ಲಿ ಹೆಸರೇ ಇಲ್ಲದ ರುದ್ರನನ್ನು ತೊರೆದು ದೈತ್ಯ-ಪಿಶಾಚಾದಿಗಳೆಲ್ಲ ನನ್ನನ್ನೇ ಆರಾಧಿಸುತ್ತಿದ್ದವು. ಆದ್ದರಿಂದ ಆ ದೈತ್ಯ-ರಾಕ್ಷಸ-ಪಿಶಾಚಾದಿಗಳನ್ನು ಮೋಹಿಸಲು ನಾನು ರುದ್ರನನ್ನು ಆರಾಧಿಸಿದೆನು. ನಾನು ಏನನ್ನು ಪ್ರಮಾಣ ಎಂದು ಮಾಡುತ್ತೇನೋ, ಲೋಕವು ಅದನ್ನೇ ಅನುಸರಿಸುತ್ತದೆ.
ವ್ಯಾಖ್ಯಾನ ವಿಶೇಷ `ಆತ್ಮಾನಂ ನಾರ್ಚಯೇತ್' ಎಂಬುದು ಒಂದು ಪಾಠ. `ಆತ್ಮಾನಂ ಚಾರ್ಚಯೇತ್' ಎಂಬುದು ಇನ್ನೊಂದು ಪಾಠ. `ಆತ್ಮಾನಂ ನಾರ್ಚಯೇತ್' ಎಂಬ ಪಾಠವನ್ನು ಗ್ರಹಿಸಿದಲ್ಲಿ, ಮನುಷ್ಯಲೋಕದಲ್ಲಿ ಅವತಾರ ಮಾಡಿದ ಭಗವಂತನಾದ ನಾನು ದೇವತೆಗಳ ಆರಾಧನೆಯನ್ನು ಮಾಡದಿದ್ದಲ್ಲಿ ದೇವತ್ವವೆಂಬ ವಿಶೇಷದಲ್ಲಿ ಯಾವ ವ್ಯತ್ಯಾಸವೂ ಇಲ್ಲದ ನನ್ನನ್ನು ಮನುಷ್ಯರು ಪೂಜಿಸುತ್ತಿರಲಿಲ್ಲ. ಆದ್ದರಿಂದ ದೇವತೆಗಳ ಪೂಜೆಯಲ್ಲಿ ಆಸಕ್ತಿಯನ್ನು ಹುಟ್ಟಿಸಲು ನಾನು ರುದ್ರನ ಆರಾಧನೆಯನ್ನು ಮಾಡಿದೆನು. ನಾನು ರುದ್ರನ ಆರಾಧನೆಯನ್ನು ರುದ್ರಾಂತರ್ಯಾಮಿಯಾದ ಭಗವಂತನಿಗೆ ಸಂಬಂಧಿಸಿದ್ದೆಂದು ಅಂತರ್ಯಾಮಿಯಾದ ರುದ್ರ ಎಂಬ ಪರಮಾತ್ಮನ ರೂಪವನ್ನೇ ಪೂಜಿಸುತ್ತೇನೆ, ಹೊರತು ಮಹರುದ್ರನನ್ನು ಪೂಜಿಸಲಾರೆ. ಆದ್ದರಿಂದಲೇ ಆ ರುದ್ರದೇವನು ಉತ್ತಮವಾದ ಆಯುಷ್ಯವನ್ನು ಹೊಂದಿರುತ್ತಾನೆ ಎಂದು ಭಾವ (ಲಕ್ಷಾಲಂಕಾರ).
ಪ್ರಮಾಣಾನಿ ಹಿ ಪೂಜ್ಯಾನಿ ತತಸ್ತಂ ಪೂಜಯಾಮ್ಯಹಮ್ |
ಯಸ್ತಂ ವೇತ್ತಿ ಸ ಮಾಂ ವೇತ್ತಿ ಯೋಽನು ತಂ ಸ ಹಿ ಮಾಮನು ॥23॥
ನಾನು ದೇವತಾ, ಅತಿಥಿಪೂಜೆಗಾಗಿ ಯಾವ ವೇದ-ಶಾಸ್ತ್ರಗಳನ್ನು ಪ್ರಮಾಣವನ್ನಾಗಿ ಮಾಡಿದ್ದೇನೋ ಆ ಪ್ರಮಾಣಗಳು ಮಾನ್ಯವಾದವುಗಳು. ಆದ್ದರಿಂದ ಮನುಷ್ಯ ಯೋನಿಯಲ್ಲಿ ಹುಟ್ಟಿದವರು ದೇವತಾ, ಅತಿಥಿಪೂಜೆಗಳನ್ನು ಮಾಡಬೇಕು ಎಂದು ಪ್ರತಿಪಾದನೆ ಮಾಡುವ ಪ್ರಮಾಣಗಳನ್ನು ರಕ್ಷಿಸಲು ನಾನು ರುದ್ರನನ್ನು ಪೂಜಿಸುತ್ತೇನೆ. ಯಾವನು ರುದ್ರನನ್ನು ತಿಳಿಯುತ್ತಾನೋ ಅವನು ನನ್ನನ್ನು ತಿಳಿಯುತ್ತಾನೆ. ಯಾವನು ರುದ್ರನನ್ನು ಅನುಸರಿಸುತ್ತಾನೋ ಅವನು ನನ್ನನ್ನು ಅನುಸರಿಸುತ್ತಾನೆ.
ರುದ್ರೋ ನಾರಾಯಣಶ್ಚೈವ ಸತ್ತ್ವಮೇಕಂ ದ್ವಿಧಾಕೃತಮ್ |
ಲೋಕೇ ಚರತಿ ಕೌಂತೇಯ ವ್ಯಕ್ತಿಸ್ಥಂ ಸರ್ವಕರ್ಮಸು ॥24॥
ಎರಡು ರೀತಿಯಾದ ಸತ್ತ್ವವಿದೆ. ಒಂದು ನನ್ನ ಸ್ವರೂಪಭೂತವಾದ ಮುಖ್ಯ ಸಾಮರ್ಥ್ಯವು ಸತ್ತ್ವವೆನಿಸಿದೆ. ಮತ್ತೊಂದು ನನಗಿಂತ ಭಿನ್ನವಾದ ಸತ್ತ್ವಗುಣವೆಂಬ ಸಾಮರ್ಥ್ಯವು. ಎರಡೂ ನನಗೆ ಪ್ರಿಯವಾದುದು, ನನ್ನ ಸ್ವರೂಪಭೂತವಾದುದು. ಆದ್ದರಿಂದ ನನ್ನ ಸತ್ತ್ವ ಎಂದು ಹೇಳುತ್ತೇನೆ. ನನ್ನ ಸ್ವರೂಪಭೂತವಾದ ಸತ್ತ್ವ ನಾರಾಯಣ ಎಂದು ಪ್ರಸಿದ್ಧವಾದರೆ, ಸತ್ತ್ವಗುಣವೆಂಬ ಸತ್ತ್ವರುದ್ರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಸಮಸ್ತ ಕರ್ಮಗಳಲ್ಲಿ ಇದು ಪ್ರಕಟವಾಗುತ್ತದೆ. ಇವುಗಳಿಂದಲೇ ಜಗತ್ತು ನಡೆಯುತ್ತದೆ.
ವ್ಯಾಖ್ಯಾನ ವಿಶೇಷ ಈ ವಿಚಾರ ಉಪಲಕ್ಷಣವನ್ನು ಎಲ್ಲರಲ್ಲೂ ಗ್ರಹಿಸಬೇಕು. ಭಗವಂತನು ಬ್ರಹ್ಮ, ಇಂದ್ರ ಮೊದಲಾದ ದೇವತಾರೂಪದಿಂದ ಎಲ್ಲ ಕಡೆಯೂ ಅಂತರ್ಯಾಮಿಯಾಗಿದ್ದಾನೆ. ಆದ್ದರಿಂದ ಭಗವಂತನಿಗೆ ಪ್ರಿಯವೆನಿಸಿದ ಸತ್ತ್ವವೆಂಬ ಗುಣವು ಬ್ರಹ್ಮ-ಇಂದ್ರಾದಿ ದೇವತೆಗಳಲ್ಲಿಯೂ ಇದೆ. ಆ ದೇವತೆಗಳನ್ನು ಆರಾಧಿಸುವುದರಿಂದ ಭಗವಂತನ ಅಂತರ್ಯಾಮಿ ಗುಣವನ್ನೇ ಆರಾಧಿಸಿದಂತಾಗುತ್ತದೆ. ಆ ದೇವತೆಗಳನ್ನು ಸೇವಿಸಿದವರು ಭಗವಂತನನ್ನೂ ಸೇವಿಸಿದಂತೆ ಎಂದು ಸಮಸ್ತ ದೇವತೆಗಳಲ್ಲಿಯೂ ರುದ್ರದೇವರಿಗೆ ಹೇಳಿದ ನಿಯಮವನ್ನು ಚಿಂತಿಸಬೇಕು.
ಅಥವಾ ನನ್ನ ಸತ್ತ್ವ ಎಂಬ ಸಾಮರ್ಥ್ಯವು ನಾರಾಯಣ ಎಂಬ ಹೆಸರಿನಿಂದ ಎಲ್ಲ ಕಡೆ ವ್ಯಾಪ್ತವಾಗಿದೆ. `ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಶ್ರುತಿಯೇ ಇದಕ್ಕೆ ಆಧಾರ. ಮತ್ತೊಂದು ಅಂಶದಿಂದ ರುದ್ರ ಎಂಬ ಹೆಸರಿನಿಂದ ರುದ್ರನ ಅಂತರ್ಯಾಮಿಯಾಗಿಯೂ ಇದ್ದೇನೆ. ಆದ್ದರಿಂದ ನನ್ನ ಸತ್ತ್ವವೇ ಎರಡು ವಿಧವಾಗಿ ವಿಭಜಿಸಲ್ಪಟ್ಟಿದೆ. ಆದ್ದರಿಂದ ರುದ್ರದೇವರಿಗೆ ಮಾಡುವ ಪೂಜೆಯು ರುದ್ರಾಂತರ್ಗತನಾದ ನನ್ನ ಪೂಜೆಯೇ ಎನಿಸಿದೆ. ಹಾಗಾದರೆ ಮಗನನ್ನು ಪಡೆಯುವ ಬಯಕೆಯಿಂದ ಕೈಲಾಸವಾಸಿಯಾದ ಗೌರೀಪತಿಯನ್ನೇ ಕೃಷ್ಣಾವತಾರದಲ್ಲಿ ನೀನು ಏಕೆ ಆರಾಧಿಸಿದೆ ಎಂದರೆ ಅದಕ್ಕೆ ಉತ್ತರವನ್ನು ಕೃಷ್ಣನು ಮುಂದಿನ ಪದ್ಯದಲ್ಲಿ ತಿಳಿಸುತ್ತಾನೆ.
ನ ಹಿ ಮೇ ಕೇನಚಿದ್ ದೇಯೋ ವರಃ ಪಾಂಡವನಂದನ |

ಇತಿ ಸಂಚಿಂತ್ಯ ಮನಸಾ ಪುರಾಣಂ ವಿಶ್ವಮೀಶ್ವರಮ್ ।
ಪುತ್ರಾರ್ಥಮಾರಾಧಿತವಾನಾತ್ಮಾನಮಹಮಾತ್ಮನಾ ॥25॥
ಪಾಂಡವನಂದನನೇ, ನನಗೆ ಯಾರೂ ವರವನ್ನು ನೀಡಬೇಕಾಗಿಲ್ಲ. ಈ ರೀತಿಯಾಗಿ ಮನಸ್ಸಿನಲ್ಲಿ ಯೋಚಿಸಿ ಪುರಾಣನೂ ಜಗದೀಶ್ವರನೂ ಆದ ನಾನು ರುದ್ರಾಂತರ್ಯಾಮಿಯಾದ ನನ್ನ ರೂಪವನ್ನೇ ಮಗನಿಗಾಗಿ ಆರಾಧಿಸಿದೆನು.
ನ ಹಿ ವಿಷ್ಣುಃ ಪ್ರಣಮತಿ ಕಸ್ಮೈಚಿದ್ ವಿಬುಧಾಯ ತು ।
ಋತ ಆತ್ಮಾನಮೇವೇತಿ ತತೋಽರುದ್ರಂ ಭಜಾಮ್ಯಹಮ್ ॥26॥
ವಿಷ್ಣುವು ಯಾವ ಜ್ಞಾನಿಗೂ ತನ್ನನ್ನು ಹೊರತಾಗಿ ನಮಸ್ಕರಿಸುವುದಿಲ್ಲ. ತನ್ನನ್ನೇ ತಾನು ನಮಸ್ಕರಿಸುತ್ತಾನೆ. ಆದ್ದರಿಂದ ನಾನು `ಅರುದ್ರಂ ಭಜಾಮಿ' ರುದ್ರನಿಗಿಂತ ಭಿನ್ನನಾದ, ರೋಗವನ್ನು ಪರಿಹರಿಸುವ ರುದ್ರನಾಮಕನಾದ ನನ್ನನ್ನೇ ಭಜಿಸುತ್ತೇನೆ. ಇಲ್ಲದಿದ್ದಲ್ಲಿ ಇದೇ ಅಧ್ಯಾಯದಲ್ಲಿ ಹೇಳಿದ ಹಿಂದಿನ ಮಾತಿಗೂ ಮುಂದಿನ ಮಾತಿಗೂ ವಿರೋಧವು ಉಂಟಾದೀತು! ಆದ್ದರಿಂದ ಹೀಗೆ ವ್ಯಾಖ್ಯಾನಿಸಬೇಕು ಎಂದು ಭಾವ.
ಸಬ್ರಹ್ಮಕಾಃ ಸರುದ್ರಾಶ್ಚ ಸೇಂದ್ರಾ ದೇವಾಃ ಸಹರ್ಷಿಭಿಃ ।
ಅರ್ಚಯಂತಿ ಸುರಶ್ರೇಷ್ಠಂ ದೇವಂ ನಾರಾಯಣಂ ಹರಿಮ್ ॥27॥
ಬ್ರಹ್ಮ, ರುದ್ರ, ದೇವತೆಗಳು, ಮಹರ್ಷಿಗಳು ಎಲ್ಲರೂ ಪರಿವಾರಸಹಿತವಾಗಿ ಸುರಶ್ರೇಷ್ಠನಾದ, ದೇವದೇವನಾದ ಹರಿನಾರಾಯಣನನ್ನೇ ಪೂಜಿಸುತ್ತಾರೆ.
ಭವಿಷ್ಯತಾಂ ವರ್ತತಾಂ ಚ ಭೂತಾನಾಂ ಚೈವ ಭಾರತ ।
ಸರ್ವೇಷಾಮಗ್ರಣೀರ್ವಿಷ್ಣುಃ ಸೇವ್ಯಃ ಪೂಜ್ಯಶ್ಚ ನಿತ್ಯಶಃ ॥28॥
ಮುಂದೆ ಹುಟ್ಟಲಿರುವ, ಈಗಿರುವ, ಕಳೆದಿರುವ ಸಮಸ್ತ ದೇವತಾ ಸಮುದಾಯದಲ್ಲೇ ವಿಷ್ಣುವು ಎಲ್ಲರಿಗಿಂತಲೂ ಸರ್ವೋತ್ತಮನಾಗಿದ್ದಾನೆ. ನಿತ್ಯವೂ ಎಲ್ಲರಿಂದ ಪೂಜ್ಯನೂ, ಸೇವ್ಯನೂ ಆಗಿರುತ್ತಾನೆ.
ನಮಸ್ವ ಹವ್ಯದಂ ವಿಷ್ಣುಂ ತಥಾ ಶರಣದಂ ನಮ ।
ವರದಂ ನಮಸ್ವ ಕೌಂತೇಯ ಹವ್ಯಕವ್ಯಭುಜಂ ನಮ ॥29॥
ಅರ್ಜುನನೇ, ಹವ್ಯವನ್ನು ನೀಡುವ ವಿಷ್ಣುವಿಗೆ ನಮಸ್ಕರಿಸು. ಶರಣ್ಯನಾದ ಕೃಷ್ಣನಿಗೆ ನಮಸ್ಕರಿಸು. ವರದನಾದ ಕೃಷ್ಣನನ್ನು ನಮಸ್ಕರಿಸು. ಹವ್ಯ-ಕವ್ಯಭೋಕ್ತೃವಾದ ಭಗವಂತನನ್ನು ನಮಸ್ಕರಿಸು.
ಚತುರ್ವಿಧಾ ಮಮ ಜನಾ ಭಕ್ತಾ ಏವಂ ಹಿ ತೇ ಶ್ರುತಮ್ ।
ತೇಷಾಮೇಕಾಂತಿನಃ ಶ್ರೇಷ್ಠಾಸ್ತೇ ಚೈವಾನನ್ಯದೇವತಾಃ ।
ಅಹಮೇವ ಗತಿಸ್ತೇಷಾಂ ನಿರಾಶೀಃ ಕರ್ಮಕಾರಿಣಾಮ್ ॥30॥
ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂದು ನಾಲ್ಕು ಜನ ಭಕ್ತರಿದ್ದಾರೆ ಎಂದು ನಿನಗೆ ಈಗಾಗಲೇ ಗೀತೆಯಲ್ಲಿ ತಿಳಿಸಿದ್ದೇನೆ. ಅವರಲ್ಲಿ ಯಾರು ಇತರ ದೇವತೆಗಳನ್ನು ಆರಾಧಿಸದೆ ನನ್ನಲ್ಲೇ ಅನನ್ಯಭಕ್ತಿಯುಳ್ಳವರಾಗಿ ನನ್ನನ್ನೇ ಆರಾಧಿಸುತ್ತಾರೋ ಅವರೇ ಜ್ಞಾನಿಗಳಾದ ಭಕ್ತಶ್ರೇಷ್ಠರು. ನಿಷ್ಕಾಮನೆಯಿಂದ ಸಮಸ್ತ ಕರ್ಮಗಳನ್ನು ಆಚರಿಸುವ ಅವರಿಗೆ ನಾನೇ ಗತಿದಾಯಕನು.
ಯೇ ಚ ಶಿಷ್ಟಾಸ್ತ್ರಯೋ ಭಕ್ತಾಃ ಫಲಕಾಮಾ ಹಿ ತೇ ಮತಾಃ ।
ಸರ್ವೇ ಚ್ಯವನಧರ್ಮಾಣಃ ಪ್ರತಿಬುದ್ಧಸ್ತು ಶ್ರೇಷ್ಠಭಾಕ್ ॥31॥
ಉಳಿದ ಮೂರು ಮಂದಿ ಭಕ್ತರೇನಿದ್ದಾರೂ ಅವರು ಫಲಕಾಮನೆ ಹೊಂದಿದವರು. ಅವರೆಲ್ಲರೂ ಪುಣ್ಯವನ್ನು ಅನುಭವಿಸಿದ ಬಳಿಕ ಸ್ವರ್ಗದಿಂದ ಬೀಳುವ ಧರ್ಮ ಉಳ್ಳವರು. ಆದರೆ ಚೆನ್ನಾಗಿ ಭಗವತತ್ತ್ವವನ್ನು ಅರಿತ ಜ್ಞಾನಿಭಕ್ತನು ಶ್ರೇಷ್ಠವಾದ ಭಗವತ್ಪ್ರಾಪ್ತಿ ಎಂಬ ಫಲವನ್ನೇ ಹೊಂದುತ್ತಾನೆ.
ಬ್ರಹ್ಮಾಣಂ ಶಿತಿಕಂಠಂ ಚ ಯಾಶ್ಚಾನ್ಯಾ ದೇವತಾಃ ಸ್ಮೃತಾಃ ।
ಪ್ರಬುದ್ಧವರ್ಯಾಃ ಸೇವಂತೇ ಮಾಮೇವೈಷ್ಯಂತಿ ಯತ್ ಪರಮ್ ।
ಭಕ್ತಂ ಪ್ರತಿ ವಿಶೇಷಸ್ತೇ ಏಷ ಪಾರ್ಥಾನುಕೀರ್ತಿತಃ ॥32॥
ಜ್ಞಾನಿಗಳಾದ ಭಕ್ತರು ಬ್ರಹ್ಮನನ್ನಾಗಲಿ, ಶಿವನನ್ನಾಗಲಿ, ಉಳಿದ ದೇವತೆಗಳನ್ನಾಗಲಿ ಸೇವಿಸುತ್ತಿದ್ದರೂ ಕೊನೆಯಲ್ಲಿ ನನ್ನನ್ನೇ ಶ್ರೇಷ್ಠನೆಂದು ಸೇವಿಸುತ್ತಾರೆ. ನಾನು ನನ್ನ ಭಕ್ತರಲ್ಲಿರುವ ವಿಶೇಷವನ್ನು ನಿನಗೆ ತಿಳಿಸಿದ್ದೇನೆ.
ತ್ವಂ ಚೈವಾಹಂ ಚ ಕೌಂತೇಯ ನರನಾರಾಯಣೌ ಸ್ಮೃತೌ ।
ಭಾರಾವತರಣಾರ್ಥಂ ಹಿ ಪ್ರವಿಷ್ಟೌ ಮಾನುಷೀಂ ತನುಮ್ ॥33॥
ನಾನು ಮತ್ತು ನೀನು ನರ-ನಾರಾಯಣ ಎಂಬ ಹೆಸರಿನಿಂದ ಖ್ಯಾತರಾದ ಋಷಿಗಳು. ಭೂಭಾರಹರಣಕ್ಕಾಗಿ ಮನುಷ್ಯಲೋಕವನ್ನು, ಮನುಷ್ಯ ಶರೀರವನ್ನು ಪಡೆದಿರುತ್ತೇವೆ.
ಜಾನಾಮ್ಯಧ್ಯಾತ್ಮಯೋಗಾಂಶ್ಚ ಯೋಽಹಂ ಯಸ್ಮಾಚ್ಚ ಭಾರತ ।
ನಿವೃತ್ತಿಲಕ್ಷಣೋ ಧರ್ಮಸ್ತಥಾಭ್ಯುದಯಿಕೋಽಪಿ ಚ ॥34॥
ನಾನು ಅಧ್ಯಾತ್ಮಯೋಗವನ್ನು ಬಲ್ಲವನು. ನಾನು ಯಾರು, ಎಲ್ಲಿಂದ ಬಂದೆ ಎಂಬುದನ್ನು ತಿಳಿದಿದ್ದೇನೆ. ಲೋಕಸುಖಕ್ಕೆ ಕಾರಣವಾದ ಪ್ರವೃತ್ತಿ ಧರ್ಮ, ಮೋಕ್ಷ ಸಾಧನವಾದ ನಿವೃತ್ತಿಧರ್ಮವು ನಾನೇ ಆಗಿದ್ದೇನೆ.
ನಾರಾಣಾಮಯನಂ ಖ್ಯಾತಮಹಮೇಕಃ ಸನಾತನಃ ।
ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ಮಮ ತತ್ ಪೂರ್ವಮತೋ ನಾರಾಯಣೋ ಹ್ಯಹಮ್ ॥
ದೋಷಗಳಿಗೆ ವಿರುದ್ಧವಾದ, ಗುಣಗಳಿಗೆ ಆಧಾರನಾದುದರಿಂದ ಸನಾತನನಾದ ನಾರಾಯಣನು ನಾನಾಗಿದ್ದೇನೆ ಅಥವಾ ನರನಿಂದ

ಹುಟ್ಟಿದ ಕಾರಣದಿಂದ ನೀರಿಗೆ ನಾರ ಎಂದು ಹೆಸರು. ಆ ನೀರೇ ನಿನಗೆ ವಾಸಿಸಲು ಸ್ಥಾನವಾಗಿತ್ತು. ಆದ್ದರಿಂದ ನಾನು ನಾರಾಯಣನಾಗಿದ್ದೇನೆ.
ಛಾದಯಾಮಿ ಜಗದ್ ವಿಶ್ವಂ ಭೂತ್ವಾ ಸೂರ್ಯ ಇವಾಂಶುಭಿಃ |
ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋ ಹ್ಯಹಮ್ ॥36॥
ನಾನು ಸೂರ್ಯದೇವನು ತನ್ನ ಕಿರಣಗಳಿಂದ ಜಗತ್ತನ್ನು ಮುಚ್ಚುವಂತೆ ಸಮಸ್ತ ಜಗತ್ತನ್ನು ಮುಚ್ಚುತ್ತೇನೆ. ಆದ್ದರಿಂದ ವಾಸುದೇವನೆನಿಸಿದ್ದೇನೆ. (`ವಸ ಆಚ್ಛಾದನೇ' ಎಂಬ ಧಾತುವನ್ನು ಅವಲಂಬಿಸಿ ಹೇಳಿದ ಅರ್ಥ) ಅಥವಾ ಸಮಸ್ತ ಭೂತಗಳಿಗೂ ನಾನು ವಾಸಸ್ಥಾನನಾಗಿರುವುದರಿಂದ ವಾಸುದೇವನಾಗಿದ್ದೇನೆ (`ವಸ ನಿವಾಸೇ' ಎಂಬ ಧಾತುವಿನ ಆಧಾರದಿಂದ ಹೇಳಿದ ಅರ್ಥ).
ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ |
ವ್ಯಾಪ್ತಾ ಮೇ ರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಮಮ ॥37॥
ವಿಶೇಷವಾಗಿ ಸಮಸ್ತ ಭೂತಗಳಿಗೂ ನಾಳೆ ನಾನೇ ಗತಿಯಾದುದರಿಂದ `ವಿಶ್ವ' ಎನಿಸಿದ್ದೇನೆ. ಅಥವಾ ಪೃಥಿವಿ, ಅಂತರಿಕ್ಷಗಳು ವಿಶೇಷವಾಗಿ ನನ್ನಿಂದಲೇ ಅಭಿವೃದ್ಧಿಯನ್ನು ಹೊಂದಿರುವುದರಿಂದಲೂ ನಾನೇ ವಿಶ್ವನೆನಿಸಿದ್ದೇನೆ. ನನ್ನ ಕಾಂತಿಯು ಎಲ್ಲ ತೇಜಸ್ಸಿಗಿಂತಲೂ ಉತ್ಕೃಷ್ಟವಾದುದರಿಂದಲೂ ವಿಶ್ವನೆನಿಸಿದ್ದೇನೆ.
ವ್ಯಾಖ್ಯಾನ ವಿಶೇಷ`ಗತಿಶ್ಚ ಸರ್ವಭೂತಾನಾಂ' ಎಂಬ ಈ ಮಾತು ವಿಶ್ವ ಶಬ್ದದ ನಿರ್ವಚನವಾಗಿದೆ. `ಶುಭ ದೀಪ್ತೌ' ಎಂಬ ಧಾತುವಿಗೆ ನಿರುಕ್ತದಂತೆ ಭಕಾರಕ್ಕೆ ಅಲ್ಪಪ್ರಾಣ ಬಕಾರದ ವಿಕಾರವು ಉಂಟಾಗಲು `ವಿಶೇಷೇಣ ಶ್ವಂ ಕಾಂತಿರ್ಯಸ್ಯ' ಎಂಬ ವ್ಯುತ್ಪತ್ತಿಯಿಂದ `ವಿಶ್ವ' ಎಂಬ ಶಬ್ದವು ರಚಿತವಾಗುತ್ತದೆ. `ಅಧಿಭೂತಾನಿವಿಶ್ವಶ್ಚ' ಎಂಬ ಮಾತಿನಿಂದ `ವಿಶ ಪ್ರವೇಶನೇ' ಎಂಬ ಧಾತುವಿನ ಆಧಾರದಿಂದ ಸಮಸ್ತ ಪ್ರಾಣಿಗಳಲ್ಲೂ ಅಧಿಕನಾಗಿ ಪ್ರವೇಶ ಹೊಂದಿರುವುದರಿಂದ `ವಿಶ್ವ' ಎನಿಸಿದ್ದಾನೆ. ಹೀಗೆ `ಭೂತಾನಾಂ ಶ್ವಂ ಗತಿಃ ಯಸ್ಮಾತ್ ಸಃ ವಿಶ್ವಃ' ಎಂಬುದು ಒಂದು ಅರ್ಥ. (2) `ಟುಓಶ್ವಿ ಗತಿರುದ್ಧ್ಯೋಃ' ಎಂಬ ಧಾತುವಿನಲ್ಲಿ `ವಿಶೇಷೇಣ ಶ್ವಂ ಅಭಿವೃದ್ಧಿಃ ಯಸ್ಯ ಜಗತಃ ಇತಿ ವಿಶ್ವಃ' ಎಂಬುದು ಎರಡನೆಯ ಅರ್ಥ. `ವಿಶೇಷೇಣ ಶ್ವಂ ಕಾಂತಿಃ ಯಸ್ಯ' ಎಂಬುದು ವಿಶ್ವ ಎಂಬ ಶಬ್ದದ ಮೂರನೆಯ ನಿರ್ವಚನ. `ವಿಶ ಪ್ರವೇಶನೇ' ಎಂಬ ಧಾತುವಿನ ಆಧಾರದಿಂದ `ಪ್ರಾಣಿಷು ಅಧಿಕತಯಾ ಪ್ರವಿಷ್ಟಃ' ಎಂಬ ಅರ್ಥದಲ್ಲಿ ವಿಶ್ವಃ ಎಂಬ ಶಬ್ದದ ನಾಲ್ಕನೆಯ ನಿರ್ವಚನವನ್ನು ತಿಳಿಯಬೇಕು. ಹೊರತು ಭಗವಂತನು ಪ್ರಪಂಚ ಸ್ವರೂಪಿ ಎಂದು ಅಭೇದ ಚಿಂತನೆಯಿಂದ ವಿಶ್ವಶಬ್ದಾರ್ಥವನ್ನು ಹೇಳಬಾರದು (ಲಕ್ಷ್ಮಾಲಂಕಾರ).
ಅಧಿಭೂತಾನಿ ಚಾಂತೇऽಹಂ ತದಿಚ್ಛಂಶ್ಚಾಸ್ಮಿ ಭಾರತ |
ಕ್ರಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತಃ ॥38॥
ನಾನು ಸಮಸ್ತ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿದ್ದು ಸಮಸ್ತ ಪ್ರಾಣಿಗಳು ಅಂತ್ಯಕಾಲದಲ್ಲಿ ಪರಬ್ರಹ್ಮನನ್ನು ಕಾಣಬೇಕೆಂದು ಬಯಸುತ್ತವೆ. ಆ ಬ್ರಹ್ಮವಸ್ತುವು ನಾನೇ ಆಗಿದ್ದೇನೆ. ನಾನು ವಿಶೇಷವಾಗಿ ಪಾದಗಳನ್ನು ಎಲ್ಲ ಕಡೆಯೂ ವ್ಯಾಪಿಸಿರುವುದರಿಂದ ವಿಷ್ಣು ಎಂಬ ಹೆಸರನ್ನು ಪಡೆದಿರುತ್ತೇನೆ.
ವ್ಯಾಖ್ಯಾನ ವಿಶೇಷ `ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ' ಎಂಬ ಶ್ರುತ್ಯರ್ಥವು ನಿರೂಪಿತವಾಗಿದೆ.
ದಮಾತ್ ಸಿದ್ಧಿಂ ಪರೀಪ್ಸಂತೋ ಮಾಂ ಜನಾಃ ಕಾಮಯಂತಿ ಹಿ |
ದಿವಂ ಚೋರ್ವೀಂ ಚ ಮಧ್ಯಂ ಚ ತಸ್ಮಾದ್ ದಾಮೋದರೋ ಹ್ಯಹಮ್ ॥
ದಮದಿಂದ ಅರ್ಥಾತ್ ಇಂದ್ರಿಯನಿಗ್ರಹದಿಂದ ಸಿದ್ಧಿಯನ್ನು ಪಡೆಯಲು ಬಯಸುವ ಜನರು ನನ್ನನ್ನೇ ಅಪೇಕ್ಷಿಸುತ್ತಾರೆ. ದಮ ಉಳ್ಳವರ ಉದರದಲ್ಲಿ ನಾನು ಇರುವುದರಿಂದ ದಾಮೋದರ ಎನಿಸಿದ್ದೇನೆ. ಅಥವಾ ದಿವಿ ಎಂಬ ಧಾತುವಿಗೆ ದಾ ಎಂಬ ಪ್ರತ್ಯಯವನ್ನು ಸೇರಿಸಿದರೆ ದಾಃ ಎಂದರೆ ದ್ಯುಲೋಕ ಎಂದು ಅರ್ಥವಾಗುತ್ತದೆ. ಮಾ ಎಂದರೆ ಭೂಲೋಕ ಎಂದು ಅರ್ಥವಾಗುತ್ತದೆ. ಹೀಗೆ ದಾಮ ಎನಿಸಿದ ಭೂಮಿ ಅಂತರಿಕ್ಷಗಳ ನಡುವೆ ಉದರವುಳ್ಳವನಾದ್ದರಿಂದ ದಾಮೋದರ ಎನಿಸಿದ್ದೇನೆ. ಅಂತರಿಕ್ಷ- ಭೂಮಿಗಳ ನಡುವೆ ಭಗವಂತನ ಉದರವಿದೆ ಎಂದು ಚಿಂತಿಸಬೇಕೇ ಹೊರತು ಯಶೋದೆಯಿಂದ ಕಟ್ಟಲ್ಪಟ್ಟ ಉದರ ಎಂಬ ಅರ್ಥವು ಮುಖ್ಯವಾದ ಅರ್ಥವಲ್ಲ.
ವ್ಯಾಖ್ಯಾನ ವಿಶೇಷ (1) `ದಾಃ ದ್ಯೌಃ ಮಾ ಕ್ಷ್ಮಾ ತ್ರಯೋರ್ಮಧ್ಯೇ ಉದರಂ ಯಸ್ಯ ಸಃ ದಾಮೋದರಃ (2) `ದಮಾಃ ದಮವಂತೋ ತೇಷಾಂ ಉದರೇ ವಿದ್ಯಮಾನಃ ದಾಮೋದರಃ'.
ಪೃಶ್ನಿರಿತ್ಯುಚ್ಯತೇ ಚಾನ್ನಂ ವೇದಾ ಆಪೋऽಮೃತಂ ತಥಾ |
ಮಮೈತಾನಿ ಸದಾ ಗರ್ಭೇ ಪೃಶ್ನಿಗರ್ಭಸ್ತತೋ ಹ್ಯಹಮ್ ॥40॥
ಅನ್ನ, ವೇದ, ಜಲ, ಅಮೃತಗಳನ್ನು ಪೃಶ್ನಿ ಎಂದು ಹೇಳುತ್ತಾರೆ. ಇದೆಲ್ಲವೂ ನನ್ನ ಗರ್ಭದಲ್ಲಿರುವುದರಿಂದ ಪೃಶ್ನಿಗರ್ಭನಾಗಿದ್ದೇನೆ ಹೊರತು ಪೃಶ್ನಿ ಎಂಬ ದೇವಿಯ ಗರ್ಭದಲ್ಲಿ ಹುಟ್ಟಿರುವುದರಿಂದ ನಾನು ಪೃಶ್ನಿಗರ್ಭನೆನಿಸುವುದಿಲ್ಲ.
ಋಷಯಃ ಪ್ರಾಹುರೇವಂ ಮಾಂ ತ್ರಿತಕೂಪಾಭಿಪಾತಿತಮ್ |
ಪೃಶ್ನಿಗರ್ಭ ತ್ರಿತಂ ಪಾಹೀತ್ಯೇಕತದ್ವಿತಪಾತಿತಮ್ ॥41॥
ಏಕತ, ದ್ವಿತ ಎಂಬ ಋಷಿಗಳು ತ್ರಿತನನ್ನು ಬಾವಿಗೆ ತಳ್ಳಿದರು. ಆ ಸಮಯದಲ್ಲಿ ಋಷಿಗಳು ನನ್ನನ್ನು ಕುರಿತು ಪೃಶ್ನಿಗರ್ಭನೇ, ಏಕತ, ದ್ವಿತರಿಂದ ಬಾವಿಗೆ ತಳ್ಳಿರುವ ತ್ರಿತನನ್ನು ರಕ್ಷಿಸು ಎಂದು ಪ್ರಾರ್ಥಿಸಿದರು.
ತತಃ ಸ ಬ್ರಹ್ಮಣಃ ಪುತ್ರ ಆದ್ಯೋ ಋಷಿವರಸ್ತ್ರಿತಃ |
ಉತ್ತತಾರೋದಪಾನಾದ್ವೈ ಪೃಶ್ನಿಗರ್ಭಾನುಕೀರ್ತನಾತ್ ॥42॥
ಆ ಸಮಯದಲ್ಲಿ ತ್ರಿತನು ನನ್ನನ್ನು ಪೃಶ್ನಿಗರ್ಭ ಎಂಬ ಹೆಸರಿನಿಂದ ಸ್ತೋತ್ರ ಮಾಡಿದ್ದರಿಂದ ಬ್ರಹ್ಮನ ಮೊದಲನೆಯ ಸುತನಾದ, ವೃಷ್ಣಿಗರ್ಭನಾದ ತ್ರಿತನು ಬಾವಿಯಿಂದ ಮೇಲಕ್ಕೆದ್ದು ಬಂದನು.
ಸೂರ್ಯಸ್ಯ ತಪತೋ ಲೋಕಾನಗ್ನೇಃ ಸೋಮಸ್ಯ ಚಾಪ್ಯುತ |

ಅಂಶವೋ ಯೇ ಪ್ರಕಾಶಂತೇ ಮಮೈತೇ ಕೇಶಸಂಜ್ಞಿತಾಃ |
ಸರ್ವಜ್ಞಾಃ ಕೇಶವಂ ತಸ್ಮಾನ್ಮಾಮಾಹುರ್ದ್ವಿಜಸತ್ತಮಾಃ ॥43॥
ಲೋಕಗಳನ್ನು ಪ್ರಕಾಶಿಸುವ ಸೂರ್ಯನ, ಅಗ್ನಿಯ, ಚಂದ್ರನ ಕಿರಣಗಳೆಲ್ಲವೂ ಕೇಶ ಎಂಬ ಸಂಜ್ಞೆಯನ್ನು ಪಡೆದಿವೆ. ಅಂತಹ ಕೇಶಯುಕ್ತನಾದ್ದರಿಂದ ಸರ್ವಜ್ಞರಾದ ದ್ವಿಜರು ನನ್ನನ್ನು ಕೇಶವ ಎನ್ನುತ್ತಾರೆ. ಕೇಶವುಳ್ಳವನೇ ಕೇಶವನು. ಕೇಶ ಎಂದರೆ ಸೂರ್ಯಾದಿಗಳ ಪ್ರಕಾಶ ಎಂದು ಭಾವ.
ವ್ಯಾಖ್ಯಾನ ವಿಶೇಷ `ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ' ಎಂಬುದರ ವ್ಯಾಖ್ಯಾನವಿದು.
ಸ್ವಪತ್ನ್ಯಾಮಾಹಿತೋ ಗರ್ಭ ಉಚಥ್ಯೇನ ಮಹಾತ್ಮನಾ |
ಉತಥ್ಯೇಽಂತರ್ಹಿತೇ ಚೈವ ಕದಾಚಿದ್ದೇವಮಾಯಯಾ |
ಬೃಹಸ್ಪತಿರಥಾವಿಂದತ್ತಾಂ ಪತ್ನೀಂ ತಸ್ಯ ಭಾರತ ॥44॥
ಒಮ್ಮೆ ಮಹಾತ್ಮನಾದ ಉಚಥ್ಯನು ತನ್ನ ಪತ್ನಿಯಾದ ಮಮತೆಯಲ್ಲಿ ಗರ್ಭಾಧಾನವನ್ನು ಮಾಡಿದ ಬಳಿಕ ದೇವತೆಗಳ ಮಾಯೆಯಿಂದ ಅಡಗಿ ಹೋದನು. ಆ ಸಮಯದಲ್ಲಿ ಉಚಥ್ಯನ ತಮ್ಮನಾದ ಬೃಹಸ್ಪತಿಯು ಉಚಥ್ಯನ ಹೆಂಡತಿಯಾದ ಮಮತೆಯಲ್ಲಿ ಕಾಮದಿಂದ ಪ್ರವೇಶಿಸಲು ಯತ್ನಿಸಿದನು.
ತತೋ ವೈ ತಮೃಷಿಶ್ರೇಷ್ಠಂ ಮೈಥುನೋಪಗತಂ ತಥಾ |
ಉವಾಚ ಗರ್ಭಃ ಕೌಂತೇಯ ಪಂಚಭೂತಸಮನ್ವಿತಃ ॥45॥
ಪೂರ್ವಾಗತೋಽಹಂ ವರದ ನಾರ್ಹಸ್ಯಂಬಾಂ ಪ್ರಬಾಧಿತುಮ್ |
ಏತದ್ ಬೃಹಸ್ಪತಿಃ ಶ್ರುತ್ವಾ ಚುಕ್ರೋಧ ಚ ಶಶಾಪ ಚ ॥46॥
ಹೀಗೆ ಆತುರದಿಂದ ಬಂದ ಋಷಿಯನ್ನು ಕಂಡು ಪಂಚಭೂತಗುಣಗಳುಳ್ಳ ಗರ್ಭವು ನಾನು ಮೊದಲೇ ಈ ಗರ್ಭದಲ್ಲಿದ್ದೇನೆ. ನನ್ನ ತಾಯಿಯನ್ನು ನೀನು ನಿರ್ಬಂಧಿಸಬಾರದು ಎಂದು ಕೂಗಿಕೊಂಡಿತು. ಅದನ್ನು ಕೇಳಿಸಿಕೊಂಡ ಬೃಹಸ್ಪತಿಯು ಸಿಟ್ಟಾಗಿ ಶಪಿಸಿದನು.
ಮೈಥುನೋಪಗತೋ ಯಸ್ಮಾತ್ತ್ವಯಾಹಂ ವಿನಿವಾರಿತಃ |
ತಸ್ಮಾದಂಧೋ ಜಾಸ್ಯಸಿ ತ್ವಂ ಮಚ್ಛಾಪಾನ್ನಾತ್ರ ಸಂಶಯಃ ॥47॥
ಮೈಥುನ ಕರ್ಮಕ್ಕಾಗಿ ಆಗಮಿಸಿದ ನನ್ನನ್ನು ತಡೆದ ಕಾರಣದಿಂದ ನೀನು ಅಂಧನಾಗುತ್ತಿ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಸ ಶಾಪಾದೃಷಿಮುಖ್ಯಸ್ಯ ದೀರ್ಘಂ ತಮ ಉಪೇಯಿವಾನ್ |
ಸ ಹಿ ದೀರ್ಘತಮಾ ನಾಮ ನಾಮ್ನಾ ಹ್ಯಾಸೀದೃಷಿಃ ಪುರಾ ॥48॥
ಆ ಬೃಹಸ್ಪತಿಯ ಶಾಪದಿಂದಾಗಿ ಮಮತೆಯ ಗರ್ಭದಿಂದ ಹುಟ್ಟಿದ ಋಷಿಮುಖ್ಯನು ದೀರ್ಘವಾದ ತಮಸ್ಸನ್ನು ಹೊಂದಿದನು. ಆದ್ದರಿಂದ ದೀರ್ಘತಮ ಎಂಬ ಋಷಿಯಾಗಿ ಹಿಂದೆ ಹುಟ್ಟಿದನು.
ವೇದಾನವಾಪ್ಯ ಚತುರಃ ಸಾಂಗೋಪಾಂಗಾನ್ ಸನಾತನಾನ್ |
ಪ್ರಯೋಜಯಾಮಾಸ ತದಾ ನಾಮ ಗುಹ್ಯಮಿದಂ ಮಮ ॥49॥
ಅವನು ಅಂಧನಾಗಿದ್ದರೂ ಸಾಂಗೋಪಾಂಗವಾಗಿ ನಾಲ್ಕು ವೇದಗಳನ್ನು ಅಭ್ಯಾಸ ಮಾಡಿದನು. ವೇದಗಳನ್ನು ಅಧ್ಯಯನ ಮಾಡಿದ ಬಳಿಕ ಕೇಶವ ಎಂಬ ಈ ನಾಮವನ್ನು ಪುನಃ ಪುನಃ ಸ್ತುತಿ ಮಾಡಿದನು.
ಆನುಪೂರ್ವ್ಯೇಣ ವಿಧಿನಾ ಕೇಶವೇತಿ ಪುನಃ ಪುನಃ |
ಸ ಚಕ್ಷುಷ್ಮಾನ್ ಸಮಭವದ್ ಗೌತಮಶ್ಚಾಭವತ್ ಪುನಃ ॥50॥
ಕ್ರಮವಾಗಿ ಕೇಶವ ಎಂಬ ನಾಮವನ್ನು ಪುನಃ ಪುನಃ ನಿರ್ವಚನ ಮಾಡಿದ ವಿಧಿಯಿಂದಾಗಿ ಆ ಋಷಿಯು ಕಳೆದುಕೊಂಡ ಕಣ್ಣುಗಳನ್ನು ಮತ್ತೆ ಪಡೆದುಕೊಂಡನು. ಗೌತಮ ಎಂಬ ಹೆಸರಿನಿಂದ ಪುನಃ ಪ್ರಸಿದ್ಧನಾದನು.
ಏವಂ ಹಿ ವರದಂ ನಾಮ ಕೇಶವೇತಿ ಮಮಾರ್ಜುನ |
ದೇವಾನಾಮಥ ಸರ್ವೇಷಾಮೃಷೀಣಾಂ ಚ ಮಹಾತ್ಮನಾಮ್ ॥51॥
ಆದ್ದರಿಂದ ದೇವರ್ಷಿಗಳಲ್ಲಿ ಯಾರಾದರೂ ಕೇಶವ ಎಂದು ನನ್ನ ನಾಮವನ್ನು ಉಚ್ಚರಿಸಿದರೆ ನಾನು ಅವರಿಗೆ ವರಪ್ರದನಾಗುತ್ತೇನೆ.
ಅಗ್ನಿಃ ಸೋಮೇನ ಸಂಯುಕ್ತ ಏಕಯೋನಿ ಮುಖಂ ಕೃತಮ್ |
ಅಗ್ನೀಷೋಮಾತ್ಮಕಂ ತಸ್ಮಾಜ್ಜಗತ್ಕೃತ್ಸ್ನಂ ಚರಾಚರಮ್ ॥52॥
ಸೋಮನೊಡನೆ ಸೇರಿ ಅಗ್ನಿಯು ಏಕವಸ್ತುವಾಗಿ ದೇವತೆಗಳಿಗೆ ಮುಖನೆನಿಸುತ್ತಾನೆ. ಆದ್ದರಿಂದ ಚರಾಚರ ಜಗತ್ತೆಲ್ಲವೂ ಅಗ್ನೀಷೋಮೀಯ ಎನಿಸುತ್ತದೆ. ಅರ್ಥಾತ್ ಅಗ್ನಿ- ಸೋಮರ ಸ್ವರೂಪರು ಎಂದು.
ಅಪಿ ಹಿ ಪುರಾಣೇ ಭವತಿ
ಏಕಯೋನ್ಯಾತ್ಮಕಾವಗ್ನೀಷೋಮೌ |
ದೇವಾಶ್ಚಾಗ್ನಿಮುಖಾ ಇತಿ ಏಕಯೋನಿತ್ವಾಚ್ಚ
ಪರಸ್ಪರಂ ಮಹಯಂತೋ ಲೋಕಾನ್ ಧಾರಯತ ಇತಿ ॥53॥
ಪುರಾಣದಲ್ಲಿ ಅಗ್ನಿಯು ಸೋಮನು ಒಂದೇ ಕಾರಣವುಳ್ಳವರೆಂದು, ದೇವತೆಗಳು ಅಗ್ನಿಮುಖರೆಂದು ಹೇಳಲ್ಪಡುತ್ತಾರೆ. ಇವರಿಬ್ಬರು ಏಕಗರ್ಭರಾದುದರಿಂದ ಪರಸ್ಪರ ಒಬ್ಬರನ್ನೊಬ್ಬರು ಸಂತೋಷಪಡಿಸುತ್ತಾ ಲೋಕವನ್ನು ಧರಿಸುವವರು ಎಂದು ಪುರಾಣಗಳು ನಿರೂಪಿಸಿವೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.

* * * * *

नूर ಎಪ್ಪತ್ನಾಲ್ಕನೆಯ ಅಧ್ಯಾಯ

ಮಧುಸೂದನನು ಗಾಂಡೀವಿಗೆ ಬೋಧಿಸಿದ ಭಗನ್ಮಹಿಮೆ

ಅರ್ಜುನಃ

ಅಗ್ನೀಷೋಮೌ ಕಥಂ ಪೂರ್ವಮೇಕಯೋನೀ ಪ್ರವರ್ತಿತೌ |
ಏಷ ಮೇ ಸಂಶಯೋ ಜಾತಸ್ತಂ ಛಿಂಧಿ ಮಧುಸೂದನ ॥1॥

ಅರ್ಜುನ ಮಧುಸೂದನನನೇ, ಅಗ್ನಿ ಮತ್ತು ಸೋಮರು ಏಕಯೋನಿಗಳು ಎಂದು ಹೇಳಿರುವಿ. ಅಗ್ನಿ ಮತ್ತು ಚಂದ್ರ ಇವರಿಬ್ಬರು ಯಜ್ಞಕರ್ಮಕ್ಕೆ ಮುಖ ಎನಿಸಿದ್ದಾರೆ. ಹೀಗೆ ಇಬ್ಬರು ಸೇರಿಕೊಂಡು ಒಂದೇ ಕರ್ಮದ ಪ್ರವೃತ್ತಿಯನ್ನು ಮಾಡಲು ಏನು ಕಾರಣ? ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಮಧುಸೂದನನೇ, ಪರಿಹರಿಸು.

ಶ್ರೀಭಗವಾನ್

ಹಂತ ತೇ ವರ್ತಯಿಷ್ಯಾಮಿ ಪುರಾಣಂ ಪಾಂಡುನಂದನ |
ಆತ್ಮತೇಜೋದ್ಭವಂ ಪಾರ್ಥ ಶೃಣುಷ್ವೈಕಮನಾ ಮಮ ॥2॥

ಶ್ರೀಭಗವಾನ್ ಪಾಂಡುನಂದನನೇ, ನನ್ನ ತೇಜಸ್ಸಿನಿಂದ ಉತ್ಪನ್ನರಾದ ಅಗ್ನಿ- ಸೋಮರ ಹಿಂದಿನ ಇತಿಹಾಸವನ್ನು ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳಿಸಿಕೊ.

ಸಂಪ್ರಕ್ಷಿಲನಕಾಲೇಽತಿಕ್ರಾಂತೇ ಚತುರ್ಥೇ ಯುಗಸಹಸ್ರಾಂತೇ ಅವ್ಯಕ್ತೇ ಸರ್ವಭೂತಪ್ರಲಯೇ ಸ್ಥಾವರಜಂಗಮೇ ಜ್ಯೋತಿರ್ಧರಣಿವಾಯು- ರಹಿತೇಽಂಧೇ ತಮಸಿ ಜಲೈಕಾರ್ಣವೇ ಲೋಕೇ ತಮ ಇತ್ಯೇವಾಭಿ- ಭೂತೇಽಸಂಜ್ಞಕೇದ್ವಿತೀಯೇ ಪ್ರತಿಷ್ಠಿತೇ ನೈವ ರಾತ್ರ್ಯಾಂ ನ ದಿವಸೇ ನ ಸತಿ ನಾಸತಿ ನ ವ್ಯಕ್ತೇ ನಾವ್ಯಕ್ತೇ ವ್ಯವಸ್ಥಿತೇ ಏತಸ್ಯಾಮವಸ್ಥಾಯಾಂ ನಾರಾಯಣ- ಗುಣಾಶ್ರಯಾದಕ್ಷಯಾದಜರಾದನಿಂದ್ರಿಯಾದಗ್ರಾಹ್ಯಾದಸಂಭವಾತ್ ಸತ್ಯಾದಹಿಂಸ್ಯಾಲ್ಲವಾದಿಭಿಃ ವಿವಿಧಪ್ರವೃತ್ತಿವಿಶೇಷಾತ್ ಅಕ್ಷಯಾದ- ಜರಾಮರಾದಮೂರ್ತಿತಃ ಸರ್ವವ್ಯಾಪಿನಃ ಸರ್ವಕರ್ತುಃ ಶಾಶ್ವತಾತ್ತಮಸಃ ಪುರುಷಃ ಪ್ರಾದುರ್ಭೂತೋ ಹರಿರವ್ಯಯಃ ॥3॥

ಯಜನ-ಯಾಜನ-ಅಧ್ಯಯನಾದಿಗಳಿಂದ ಪಾಪಗಳನ್ನು ಚೆನ್ನಾಗಿ ತೊಳೆದುಕೊಳ್ಳುವ ಕಾಲವು ಸ್ಥಿತಿಕಾಲವೆನಿಸಿದೆ. ಇಂತಹ ಸ್ಥಿತಿಕಾಲವು ಕಳೆಯುತ್ತಿರಲು ಚತುರ್ಯುಗಗಳ ಆವೃತ್ತಿಯು ಒಂದು ಸಾವಿರ ಬಾರಿ ನಡೆದಾಗ ಆ ಕೊನೆಯ ಆವೃತ್ತಿಯಲ್ಲಿ ನಾಲ್ಕನೆಯ ಯುಗವೆನಿಸಿದ ಕಲಿಯುಗದ ಕೊನೆಯಲ್ಲಿ ಸರ್ವಸ್ಥಾವರ ಜಂಗಮ ಪ್ರಪಂಚವೆಲ್ಲವೂ ಅವ್ಯಕ್ತತತ್ತ್ವದಲ್ಲಿ ಲಯ ಹೊಂದುತ್ತಿರಲು ಅಗ್ನಿ-ಭೂಮಿ- ವಾಯು ಇವುಗಳಿಂದ ರಹಿತವಾದ ಅಂಧಕಾರವೇ ಎಲ್ಲ ಕಡೆಯೂ ತುಂಬಿರಲು ಜಗತ್ತೆಲ್ಲವೂ ನೀರಿನಿಂದಲೇ ತುಂಬಿಕೊಳ್ಳುತ್ತದೆ. ಎಲ್ಲೆಡೆಯೂ ಕತ್ತಲೆಯಿಂದಲೇ ಜಗತ್ತು ತುಂಬಿಕೊಂಡು ನಾಮಾತ್ಮಕವಾದ, ರೂಪಾತ್ಮಕವಾದ ಪ್ರಪಂಚವೆಲ್ಲವೂ ಭಗವಂತನಲ್ಲಿ ಲಯ ಹೊಂದುತ್ತಿರಲು, ಹಗಲು-ರಾತ್ರಿಗಳು, ಕಾರ್ಯ-ಕಾರಣಗಳು, ವ್ಯಕ್ತಾವ್ಯಕ್ತಗಳೆಲ್ಲವೂ ನಾಶ ಹೊಂದಿರುವಾಗ ಈ ಅವಸ್ಥೆಯಲ್ಲಿ ನಾರಾಯಣನ ಸರ್ವಜ್ಞತ್ವಾದಿ ಗುಣಗಳಿಗೆಲ್ಲ ಆಶ್ರಯವಾದ ಅಜರಾಮರವು, ಅತೀಂದ್ರಿಯವೂ, ಅಗ್ರಾಹ್ಯವೂ, ಅಬಾಧಿತವೂ ಆದ, ಹುಟ್ಟಿನಿಂದ ದೂರವಾದ, ಸತ್ಯರೂಪನಾದ, ಲವ-ನಿಮೇಶ ಮೊದಲಾದ ಕಾಲದ ಅವಯವಗಳಿಂದ ಹಿಂಸಿಸಲು ಸಾಧ್ಯವಿಲ್ಲದ, ಅನೇಕ ವಿಧವಾದ ಚೇಷ್ಟೆಗಳಿಗೆ ಕಾರಣೀಭೂತವಾದ, ಅಕ್ಷಯವೆನಿಸಿದ, ಅಜರಾಮರ ಮೂರ್ತಿ ಎನಿಸಿದ, ಸರ್ವವ್ಯಾಪಿಯಾದ, ಸರ್ವಕರ್ತೃವಾದ, ಶಾಶ್ವತನಾದ, ನಾಶರಹಿತನಾದ, ಪುರುಷನಾಮಕನಾದ ಶ್ರೀಹರಿಯು ಅನೇಕ ಗುಣಗಳಿಂದ ತುಂಬಿದ ಮೂಲರೂಪಿಯಾದ ನಾರಾಯಣನಿಂದ ಪ್ರಾದುರ್ಭೂತನಾದನು.

ನಿದರ್ಶನಮಪಿ ಹ್ಯತ್ರ ಭವತಿ | ನಾಸೀದಹೋ | ನ ರಾತ್ರಿರಾಸೀತ್ | ನ ಸದಾಸೀನ್ನಾಸದಾಸೀತ್| ತಮ ಏವ ಪುರಸ್ತಾದಭವದ್ ವಿಶ್ವರೂಪಮ್
ಸಾ ವಿಶ್ವರೂಪಸ್ಯ ರಜನೀತ್ಯೇವಮಸ್ಯಾರ್ಥೋನುಭಾಷ್ಯತೇ ॥4॥

ಪುರುಷನಾಮಕನಾದ ಭಗವಂತನು ಪ್ರಾದುರ್ಭೂತನಾಗುವ ಸಮಯದಲ್ಲಿ ಏನಿದ್ದಿತು ಎಂಬುದಕ್ಕೆ ನಿದರ್ಶನವು ಇದೆ. ಸೃಷ್ಟಿಗೆ ಮೊದಲು ರಾತ್ರಿ ಇರಲಿಲ್ಲ. ಸತ್, ಅಸತ್‌ಗಳು ಇರಲಿಲ್ಲ. ತಮಸ್ಸು ಮಾತ್ರವೇ ಇತ್ತು. ಎಲ್ಲೆಡೆಯೂ ವಿಶ್ವರೂಪಿಯಾದ ನಾರಾಯಣನಿಂದ ಸೃಷ್ಟವಾದ ತಮೋರಾಶಿಯೇ ಕಾಣಿಸುತ್ತಿತ್ತು ಎಂಬುದಾಗಿ ಸೃಷ್ಟಿಯ ಆರಂಭದ ಪ್ರಕರಣವನ್ನು ವ್ಯಾಖ್ಯಾನಿಸುವ ವೇದಮಂತ್ರಗಳು ಕಾಣಿಸುತ್ತವೆ.

ತಸ್ಯೇದಾನೀಂ ತಮಃಸಂಭವಸ್ಯ ಪುರುಷಸ್ಯ ಪದ್ಮಯೋನೇರ್ಬ್ರಹ್ಮಣಃ
ಪ್ರಾದುರ್ಭಾವೇ ಸ ಪುರುಷಃ ಪ್ರಜಾಃ ಸಿಸೃಕ್ಷಮಾಣೋ ನೇತ್ರಾಭ್ಯಾಮಗ್ನೀಷೋಮೌ ಸಸರ್ಜ | ತತೋ ಭೂತಸರ್ಗೇ ಪ್ರವತ್ತೇ ಪ್ರಜಾಕ್ರಮವಶಾದ್ ಬ್ರಹ್ಮಕ್ಷತ್ರಮುಪಾತಿಷ್ಠತ್ | ಯಃ ಸೋಮಸ್ತದ್ ಬ್ರಹ್ಮ ಯದ್ ಬ್ರಹ್ಮ ತೇ ಬ್ರಾಹ್ಮಣಾಃ ಯೋಗ್ನಿಸ್ತತ್ಕತ್ರಂ ಕ್ಷತ್ರಾದ್ ಬ್ರಹ್ಮ ಬಲವತ್ತರಮ್ ಕಸ್ಮಾದಿತಿ ಲೋಕಪ್ರತ್ಯಕ್ಷಗುಣಮೇತತ್ | ತದ್ಯಥಾ ಬ್ರಾಹ್ಮಣೇಭ್ಯಃ ಪರಂ ಭೂತಂ ನೋತ್ಪನ್ನಪೂರ್ವಮ್ ದೀಪ್ಯಮಾನೇಽಗ್ನೌ ಜುಹೋತೀತಿ ಕೃತ್ವಾ ಬ್ರವೀಮಿ ಭೂತಸರ್ಗಃ ಕೃತೋ ಬ್ರಹ್ಮಣಾ ಭೂತಾನಿ ಚ ಪ್ರತಿಷ್ಠಾಪ್ಯ ತ್ರೈಲೋಕ್ಯಂ ಧಾರ್ಯತ ಇತಿ ॥5॥

ಆ ಸಮಯದಲ್ಲಿ ನಾರಾಯಣನಿಂದ ಸೃಷ್ಟವಾದ ತಮೋರಾಶಿಯು, ಆ ತಮೋರಾಶಿಯ ನಡುವೆ ಅಭಿವ್ಯಕ್ತನಾದ ಪುರುಷನಾಮಕನು, ಪುರುಷನಾಮಕನಿಂದ ಚತುರ್ಮುಖ ಬ್ರಹ್ಮನು ಪ್ರಾದುರ್ಭೂತನಾದನು. ಆ ಪುರುಷನು ಪ್ರಜೆಗಳನ್ನು ಸೃಷ್ಟಿ ಮಾಡುವ ಇಚ್ಛೆಯಿಂದ ತನ್ನ ದಿವ್ಯವಾದ ನೇತ್ರಗಳಿಂದ ಅಗ್ನಿ ಮತ್ತು ಸೋಮರನ್ನು ಸೃಷ್ಟಿಸಿದನು. ಹೀಗೆ ಭೂತಸೃಷ್ಟಿಯು ಕ್ರಮವಾಗಿ ಆರಂಭವಾದ ಬಳಿಕ ಪ್ರಜೆಗಳ ಸೃಷ್ಟಿಯಲ್ಲಿ ಕ್ರಮವಾಗಿ ಬ್ರಹ್ಮ-ಕ್ಷತ್ರರ ಸೃಷ್ಟಿಯಾಯಿತು. ಯಾವನು ಸೋಮನೋ ಅವನೇ ಬ್ರಹ್ಮನು. ಯಾರು ಬ್ರಹ್ಮರೋ ಅವರೇ ಬ್ರಾಹ್ಮಣರು. ಯಾವನು ಅಗ್ನಿಯೋ ಅವನೇ ಕ್ಷತ್ರಿಯನು. ಆದರೆ ಬ್ರಹ್ಮವು ಕ್ಷತ್ರಕ್ಕಿಂತಲೂ ಬಲಿಷ್ಠವಾದುದು. ಹೀಗಾಗಲು ಕಾರಣವೇನೆಂದರೆ ಇದು ಲೋಕಾನುಭವದ ಗುಣವೇ ಆಗಿದೆ. ಬ್ರಾಹ್ಮಣರಿಗಿಂತಲೂ ಶ್ರೇಷ್ಠವಾದ ಬೇರೆ ಯಾವ ಪ್ರಾಣಿಯೂ ಹಿಂದೆ

ಹುಟ್ಟಿರಲಿಲ್ಲ. ಯಾವನು ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಾನೋ ಅವನು ಪ್ರಜ್ವಲಿತವಾದ ಅಗ್ನಿಯಲ್ಲಿ ಹೋಮ ಮಾಡಿದವನಾಗುತ್ತಾನೆ. ಇದನ್ನು ತಿಳಿದೇ ನಾನು ಬ್ರಾಹ್ಮಣರ ವಿಷಯದಲ್ಲಿ ಹೀಗೆ ಹೇಳುತ್ತೇನೆ. ಬ್ರಹ್ಮಶಕ್ತಿಯಿಂದಲೇ ಪ್ರಾಣಿಗಳೆಲ್ಲ ಸೃಷ್ಟಿಸಲ್ಪಟ್ಟಿದ್ದಾರೆ. ಆಯಾ ಪ್ರಾಣಿಗಳಿಗೆ ಯೋಗ್ಯವಾದ ಸ್ಥಾನಗಳನ್ನು ನೀಡಿ, ಅವುಗಳನ್ನು ಸ್ಥಾಪಿಸಿ ಮೂರುಲೋಕಗಳನ್ನೂ ಬ್ರಹ್ಮಶಕ್ತಿಯು ಧರಿಸಿ ನಿಂತಿದೆ.

ಮಂತ್ರವಾದೋಽಪಿ ಹಿ ಭವತಿ ತ್ವಮಗ್ನೇ ಯಜ್ಞಾನಾಂ ಹೋತಾ ವಿಶ್ವೇಷಾಮ್ ಹಿತೋ ದೇವೇಭಿರ್ಮಾನುಷೇ ಜನೇ ಇತಿ | ನಿದರ್ಶನಂ ಚಾತ್ರ ಭವತಿ| ವಿಶ್ವೇಷಾಮಗ್ನೇ ಯಜ್ಞಾನಾಂ ಹೋತೇತಿ ಹಿತೋ ದೇವೈರ್ಮಾನುಷೈರ್ಜಗತ ಇತಿ ತ್ವಮಗ್ನೇ ಯಜ್ಞಾನಾಂ ಹೋತಾ ಕರ್ತಾ ಸ ಚಾಗ್ನಿರ್ಬ್ರಹ್ಮ ॥6॥

ಈ ವಿಷಯದಲ್ಲಿ ವೇದವಾಕ್ಯಗಳೂ ಇವೆ. ಅಗ್ನಿಯೇ, ನೀನು ಯಜ್ಞಗಳಲ್ಲಿ ಹೋತೃವು. ಸಮಸ್ತ ದೇವತೆಗಳಿಗೂ, ಮನುಷ್ಯರಿಗೂ, ಜಗತ್ತಿಗೂ ಹಿತವನ್ನು ಮಾಡುವವನು. ಈ ವಿಷಯದಲ್ಲಿ ನಿದರ್ಶನವೂ ಇದೆ. ಅಗ್ನಿದೇವನೇ, ನೀನು ಎಲ್ಲ ಯಜ್ಞಗಳಿಗೂ ಹೋತೃವಾಗಿರುವೆ. ಸಮಸ್ತ ದೇವತೆಗಳಿಗೂ ಮನುಷ್ಯರಿಂದ ಕೂಡಿದ ಸಮಸ್ತ ಪ್ರಪಂಚಕ್ಕೂ ನೀನೇ ಹಿತಚಿಂತಕನಾಗಿರುವಿ. ಅಗ್ನಿದೇವನೇ ಸಮಸ್ತ ಯಜ್ಞಗಳಲ್ಲಿ ಯಜ್ಞಾಂಗಗಳನ್ನೆಲ್ಲ ಕೊಂಡೊಯ್ಯುವುದರಿಂದ ಅಗ್ನಿನಾಮಕನಾದ ಭಗವಂತನೇ ಬ್ರಹ್ಮ ಎನಿಸಿದ್ದಾನೆ. ಅವನೇ ಜಗತ್ತಿನ ಕರ್ತೃವೂ ಆಗಿದ್ದಾನೆ. ಅವನೇ ಗುಣಪರಿಪೂರ್ಣನಾದ, ಅಗ್ನಿನಾಮಕನಾದ ಬ್ರಹ್ಮನೂ ಅವನೇ ಆಗಿದ್ದಾನೆ.

ನ ಹ್ಯತೇ ಮಂತ್ರಾದ್ಧವನಮಸ್ತಿ | ನ ವಿನಾ ಪುರುಷಂ ತಪಃ ಸಂಭವತಿ|

ಹವಿರ್ಮಂತ್ರಾಣಾಂ ಸಂಪೂಜಾ ವಿದ್ಯತೇ | ದೇವಮನುಷ್ಯಾಣಾಮನೇನ ತ್ವಂ ಹೋತೇತಿ ನಿಯುಕ್ತಃ ಯೇ ಚ ಮಾನುಷಾ ಹೋತ್ರಾಧಿಕಾರಾಸ್ತೇ ಚ ಬ್ರಾಹ್ಮಣಸ್ಯ ಹಿ ಯಾಜನಂ ವಿಧೀಯತೇ | ನ ಕ್ಷತ್ರವೈಶ್ಯಯೋರ್ದ್ವಿಜಾತ್ಯೋಃ ತಸ್ಮಾದ್ ಬ್ರಾಹ್ಮಣಾ ಹ್ಯಗ್ನಿಭೂತಾ ಯಜ್ಞಾನುದ್ವಹಂತಿ | ಯಜ್ಞಾ ದೇವಾಂಸ್ತರ್ಪಯಂತಿ | ದೇವಾಃ ಪೃಥಿವೀಂ ಭಾವಯಂತಿ॥7॥

ಮಂತ್ರವಿಲ್ಲದೆ ಹವನವು ನಡೆಯುವುದಿಲ್ಲ. ಪುರುಷನಿಲ್ಲದೆ ತಪಸ್ಸು ನಡೆಯುವುದಿಲ್ಲ. ಮಂತ್ರೋಕ್ತವಾದ ಹವಿಸ್ಸುಗಳನ್ನು ನೀಡುವುದರಿಂದ ದೇವತೆಗಳು, ಮನುಷ್ಯರು, ಋಷಿಗಳು ಪೂಜಿತರಾಗುತ್ತಾರೆ. ಆದ್ದರಿಂದ ಅಗ್ನಿದೇವನೇ ನಿನ್ನನ್ನು ಯಜ್ಞದಲ್ಲಿ ಹೋತೃವನ್ನಾಗಿ ಮಾಡಿದ್ದಾರೆ. ಮನುಷ್ಯರಲ್ಲಿ ಹೋತೃವಿನ ಅಧಿಕಾರವನ್ನು ವಹಿಸುವವನು ಬ್ರಾಹ್ಮಣನೇ ಆಗಿದ್ದಾನೆ. ಕಾರಣ ಅವನಲ್ಲಿ ಯಜ್ಞ ಮಾಡುವ ವಿಧಾನವಿದೆ. ಅವನೇ ಯಾಜಕನೆಂದು ಶಾಸ್ತ್ರ ವಿಧಿಯಿದೆ. ಕ್ಷತ್ರಿಯ-ವೈಶ್ಯ ಜಾತಿಗಳು ದ್ವಿಜ ಎನಿಸಿದರೂ ಯಾಜಕರಾಗುವ ಅಧಿಕಾರ ಆ ವರ್ಣದವರಿಗಿಲ್ಲ. ಆದ್ದರಿಂದ ಅಗ್ನಿನಾಮಕನಾದ ಭಗವಂತನನ್ನು ಹೃದಯದಲ್ಲಿ ಧರಿಸಿದ ಬ್ರಾಹ್ಮಣರೇ ಯಜ್ಞದ ಭಾಗವನ್ನು ನಿರ್ವಹಿಸುತ್ತಾರೆ. ಬ್ರಾಹ್ಮಣರು ಮಾಡುವ ಯಜ್ಞಗಳು ದೇವತೆಗಳನ್ನು ತೃಪ್ತಿಪಡಿಸುತ್ತವೆ. ತೃಪ್ತರಾದ ದೇವತೆಗಳು ಮಳೆ ಸುರಿಸುವ ಮೂಲಕ ಭೂಮಿಯನ್ನು ಧಾನ್ಯಗಳಿಂದ ಸಮೃದ್ಧವನ್ನಾಗಿಸುತ್ತಾರೆ.

ಶತಪಥೇ ಹಿ ಬ್ರಾಹ್ಮಣಂ ಭವತಿ | ಅಗ್ನೌ ಸಮಿದ್ಧೇ ಸ ಜುಹೋತಿ ಯೋ ವಿದ್ವಾನ್ ಬ್ರಾಹ್ಮಣಮುಖೇ ದಾನಾಹುತಿಂ ಜುಹೋತಿ | ಏವಮಪ್ಯಗ್ನಿಭೂತಾ ಬ್ರಾಹ್ಮಣಾ ವಿದ್ವಾಂಸೋಽಗ್ನಿಂ ಭಾವಯಂತಿ | ಅಗ್ನಿರ್ವಿಷ್ಣುಃ ಸರ್ವಭೂತಾನ್ಯನುಪ್ರವಿಶ್ಯ ಪ್ರಾಣಾನ್ ಧಾರಯತಿ | ಅಪಿ ಚಾತ್ರ ಸನತ್ಕುಮಾರಗೀತಾಃ ಶ್ಲೋಕಾ ಭವಂತಿ ॥8॥

ಕಾಣ್ವಶಾಖೆಯಲ್ಲಿ ಒಂದು ಬ್ರಾಹ್ಮಣವಾಕ್ಯವಿದೆ. ಯಾವ ವಿದ್ವಾಂಸನು ಬ್ರಾಹ್ಮಣನ ಮುಖದಲ್ಲಿರುವ ಅಗ್ನಿಯಲ್ಲಿ ಅನ್ನವೆಂಬ ಆಹುತಿಯನ್ನು ನೀಡುತ್ತಾನೋ ಅವನು ಪ್ರಜ್ವಲಿಸುವ ಅಗ್ನಿಯಲ್ಲಿ ಹೋಮ ಮಾಡಿದವನಾಗುತ್ತಾನೆ. ಹೀಗೆ ಬ್ರಾಹ್ಮಣರು ಅಗ್ನಿಯನ್ನು ಧರಿಸಿದವರು. ವಿದ್ವಾಂಸರಾದ ಬ್ರಾಹ್ಮಣರು ಅಗ್ನಿಯನ್ನು ಆರಾಧಿಸುತ್ತಾರೆ. ಅಗ್ನಿ ಎಂದರೆ ವಿಷ್ಣುವೇ. ವಿಷ್ಣುರೂಪದ ಅಗ್ನಿಯೇ ಸಮಸ್ತ ಪ್ರಾಣಿಗಳನ್ನು ಪ್ರವೇಶಿಸಿ ಅವುಗಳ ಪ್ರಾಣವನ್ನು ಧರಿಸಿರುತ್ತಾನೆ. ಈ ವಿಷಯದಲ್ಲಿ ಸನತ್ಕುಮಾರರು ಹೇಳಿರುವ ಶ್ಲೋಕಗಳೇ ನಿದರ್ಶನವು.

ವಿಶ್ವಂ ಬ್ರಹ್ಮಾಸೃಜತ್ ಪೂರ್ವಂ ಸರ್ವಾದಿರ್ನಿರವಸ್ಕರಮ್ |
ಬ್ರಹ್ಮಘೋಷೈರ್ದಿವಂ ತಿಷ್ಠಂತ್ಯಮರಾ ಬ್ರಹ್ಮಯೋನಯಃ ॥9॥

ಸಮಸ್ತ ಜಗತ್ತಿಗೆ ಆದಿಕಾರಣನಾದ ಭಗವಂತನು ಎಲ್ಲದಕ್ಕಿಂತಲೂ ಮೊದಲು ನಿರ್ಮಲವಾದ ಜಗತ್ತನ್ನು ಸೃಷ್ಟಿಸಿದನು. ಬ್ರಹ್ಮಯೋನಿಗಳಾದ ದೇವತೆಗಳು ಬ್ರಾಹ್ಮಣರ ವೇದಧ್ವನಿಗಳಿಂದಲೇ ಸ್ವರ್ಗಲೋಕಕ್ಕೆ ಹೋಗುತ್ತಾರೆ.

ಬ್ರಾಹ್ಮಣಾನಾಂ ಮತಿರ್ವಾಕ್ಯಂ ಕರ್ಮ ಶ್ರದ್ಧಾ ತಪಾಂಸಿ ಚ |
ಧಾರಯಂತಿ ಮಹೀಂ ದ್ಯಾಂ ಚ ಶೈತ್ಯಾದ್ ವಾಗಮೃತಂ ಯಥಾ ॥10॥

ಯಾವ ರೀತಿ ಮತ್ತೊಬ್ಬರಿಗೆ ಸುಖವನ್ನು ನೀಡುತ್ತದೆ ಎಂಬುದಾಗಿ ಸಜ್ಜನರು ಅಮೃತದಂತಹ ಮಾತನ್ನು ಧರಿಸಿರುತ್ತಾರೋ ಅದರಂತೆ ಬ್ರಾಹ್ಮಣರ ಬುದ್ಧಿಯು ವೇದವಾಕ್ಯಗಳನ್ನು, ಸತ್ಕರ್ಮಗಳನ್ನು, ಶ್ರದ್ಧೆ-ತಪಸ್ಸುಗಳನ್ನು, ಭೂಮಿಯನ್ನು, ಆಕಾಶವನ್ನು ಧರಿಸಿದೆ.

ನಾಸ್ತಿ ಸತ್ಯಾತ್ ಪರೋ ಧರ್ಮೋ ನಾಸ್ತಿ ಮಾತೃಸಮೋ ಗುರುಃ |
ಬ್ರಾಹ್ಮಣೇಭ್ಯಃ ಪರಂ ನಾಸ್ತಿ ಪ್ರೇತ್ಯ ಚೇಹ ಚ ಭೂತಯೇ ॥11॥

ಸತ್ಯಕ್ಕಿಂತಲೂ ಶ್ರೇಷ್ಠವಾದ ಧರ್ಮವಿಲ್ಲ. ತಾಯಿಗಿಂತ ಸಮಾನರಾದ ಗುರುವಿಲ್ಲ. ಇಹಲೋಕದಲ್ಲಾಗಲಿ, ಪರಲೋಕದಲ್ಲೇ ಆಗಲಿ ಕಲ್ಯಾಣ, ಅಭಿವೃದ್ಧಿಗಾಗಿ ಬ್ರಾಹ್ಮಣರಿಗಿಂತಲೂ ಶ್ರೇಷ್ಠನಾದವನು ಬೇರೆ ಯಾರೂ ಇರುವುದಿಲ್ಲ.

ನೈಷಾಮುಕ್ಷಾ ವರ್ಧತೇ ನೋತ ವಾಹಾ ನ ಗರ್ಗರೀ ಮಥ್ಯತೇ ಸಂಪ್ರದಾನೇ |
ಅಪಧ್ವಸ್ತಾ ದಸ್ಯುಭೂತಾ ಭವಂತಿ ಯೇಷಾಂ ರಾಷ್ಟ್ರೇ ಬ್ರಾಹ್ಮಣಾ ವೃತ್ತಿಹೀನಾಃ ॥

ಯಾವ ರಾಜನ ರಾಜ್ಯದಲ್ಲಿ ಬ್ರಾಹ್ಮಣರು ಬದುಕು ಇಲ್ಲದೆ ಇರುತ್ತಾರೋ ಅಂತಹ ರಾಜ್ಯದಲ್ಲಿ ರಾಜನ ಎತ್ತುಗಳಾಗಲಿ, ಕುದುರೆಗಳಾಗಲಿ ಅಭಿವೃದ್ಧಿಯನ್ನು ಹೊಂದವು. ಆ ರಾಜ್ಯದಲ್ಲಿ ಮೊಸರನ್ನು ಕಡೆಯುವ ಪಾತ್ರೆಗಳು ಇರುವುದಿಲ್ಲ. (ವಾಣಿಜ್ಯ, ಗೋಧನಗಳು ಇರುವುದಿಲ್ಲ ಎಂದು ಭಾವ). ಅಂತಹ ರಾಜನು ಎಲ್ಲರಿಂದ ಧಿಕ್ಕರಿಸಲ್ಪಟ್ಟು ಕಳ್ಳನಂತಾಗುತ್ತಾನೆ.

ವೇದಪುರಾಣೇತಿಹಾಸಪ್ರಾಮಾಣ್ಯಾನ್ನಾರಾಯಣಮುಖೋದ್ಗತಾಃ ಸರ್ವಾತ್ಮಾನಃ ಸರ್ವಕರ್ತಾರಃ ಸರ್ವಭಾವನಾಶ್ಚ ಬ್ರಾಹ್ಮಣಾಃ

ವಾಕ್ಸಮಕಾಲಂ ಹಿ ತಸ್ಯ ದೇವಸ್ಯ ವರಪ್ರದಸ್ಯ ಬ್ರಾಹ್ಮಣಾಃ ಪ್ರಥಮಂ ಪ್ರಾದುರ್ಭೂತಾ | ಬ್ರಾಹ್ಮಣೇಽಭ್ಯಶ್ಚ ಶೇಷಾ ವರ್ಣಾಃ ಪ್ರಾದುರ್ಭೂತಾಃ | ಇತ್ಥಂ ಚ ಸುರಾಸುರವಿಶಿಷ್ಟಾ ಬ್ರಾಹ್ಮಣಾ ಯತ್ರ ಮಯಾ ಬ್ರಹ್ಮಭೂತೇನ ಪುರಾ ಸ್ವಯಮೇವೋತ್ಪಾದಿತಾಃ ಸುರಾಸುರ ಮಹರ್ಷಯೋ ಭೂತವಿಶೇಷಾಃ ಸ್ಥಾಪಿತಾ ನಿಗೃಹೀತಾಶ್ಚ ॥ 13 ॥
ಬ್ರಾಹ್ಮಣರು ನಾರಾಯಣನ ಮುಖದಿಂದ ಹುಟ್ಟಿದವರೆಂಬುದು ವೇದ-ಪುರಾಣ- ಇತಿಹಾಸಗಳ ಪ್ರಮಾಣದಿಂದ ತಿಳಿದಿದೆ. ಆದ್ದರಿಂದ ಬ್ರಾಹ್ಮಣರು ಎಲ್ಲರ ಆತ್ಮವಿದ್ದಂತೆ. ಎಲ್ಲವನ್ನೂ ಮಾಡಲು ಸಮರ್ಥರು. ಎಲ್ಲರಲ್ಲಿಯೂ ಪ್ರೀತಿಯುಳ್ಳವರು. ಪುರುಷ ನಾಮಕನಾದ ಭಗವಂತನಿಂದ ಸೃಷ್ಟಿಯ ಆರಂಭದಲ್ಲಿ, ಭಗವಂತನ ಉಪದೇಶದ ಕಾಲದಲ್ಲಿ ವರಪ್ರದನಾದ ದೇವನಾದ ಭಗವಂತನಿಂದ ಬ್ರಾಹ್ಮಣರು ಮೊದಲು ಹುಟ್ಟಿದರು. ಬಳಿಕ ಬ್ರಾಹ್ಮಣ ವರ್ಣದಿಂದ ಬೇರೆಯಾದ ಉಳಿದ ವರ್ಣಗಳು ಹುಟ್ಟಿದವು. ಈ ರೀತಿಯಾಗಿ ಬ್ರಾಹ್ಮಣರು ಸುರಾಸುರರಿಗಿಂತಲೂ ವಿಶಿಷ್ಟರಾದವರು. ಹಿಂದೆ ಗುಣಪರಿಪೂರ್ಣನಾದ ನಾನೇ ಈ ಬ್ರಹ್ಮಾಂಡ ಕುಲದಲ್ಲಿ ಬ್ರಾಹ್ಮಣರನ್ನು ಸೃಷ್ಟಿಸಿದ್ದೇನೆ. ಇಂತಹ ಬ್ರಾಹ್ಮಣರು ದೇವ-ಅಸುರ-ಮಹರ್ಷಿಗಳನ್ನು, ಅನೇಕ ಪ್ರಾಣಿಗಳನ್ನು ಆಯಾ ಸ್ಥಾನಗಳಲ್ಲಿ ಸ್ಥಾಪಿಸಿದರು. ಅಪರಾಧಿಗಳನ್ನು ದಂಡಿಸಿದರು.
ಅಹಲ್ಯಾಧರ್ಷಣನಿಮಿತ್ತಂ ಹಿ ಗೌತಮಾದ್ಧರಿಶ್ಮಶ್ರುತಾಮಿಂದ್ರಃ ಪ್ರಾಪ್ತಃ |
ಕೌಶಿಕನಿಮಿತ್ತಂ ಚೇಂದ್ರೋ ಮುಷ್ಕವಿಯೋಗಂ ಮೇಷವೃಷಣತ್ವಂ ಚಾವಾಪ ಅಶ್ವಿನೋರ್ಗ್ರಹಪ್ರತಿಷೇಧೋದ್ಯತವಜ್ರಸ್ಯ ಪುರಂದರಸ್ಯ ಚ್ಯವನೇನ ಸ್ತಂಭಿತೋ ಬಾಹುಃ ಕ್ರತುವಧಪ್ರಾಪ್ತಮನ್ಯುನಾ ಚ ದಕ್ಷೇಣ ಭೂಯಸ್ತಪಸಾ ಚಾತ್ಮಾನಂ ಸಂಯೋಜ್ಯ ನೇತ್ರಾಕೃತಿರನ್ಯಾ ಲಲಾಟೇ ರುದ್ರಸ್ಯೋತ್ಪಾದಿತಾ ॥14॥
ಅಹಲ್ಯೆಯ ಮಾನಭಂಗವನ್ನು ಮಾಡಿದ ದೇವೇಂದ್ರನು ಬ್ರಾಹ್ಮಣರಾದ ಗೌತಮರ ಶಾಪದಿಂದಲೇ ಹಸಿರಾದ ಮೀಸೆ-ಗಡ್ಡಗಳನ್ನು ಪಡೆದನು. ಗೌತಮರ ಶಾಪದ ಪ್ರಭಾವದಿಂದಲೇ ಇಂದ್ರನು ತನ್ನ ವೃಷಣಗಳನ್ನು ಕಳೆದುಕೊಂಡು ಮೇಷವೃಷಣನಾದನು. ನಾಸತ್ಯ, ದಸ್ರರಿಗೆ ನಿಯತವಾದ ಯಜ್ಞಭಾಗವನ್ನು ತಡೆಯಲು ಇಂದ್ರನು ವಜ್ರಾಯುಧವನ್ನು ಮೇಲೆತ್ತಲು ಇಂದ್ರನ ತೋಳುಗಳನ್ನೇ ಬ್ರಾಹ್ಮಣರಾದ ಚ್ಯವನರು ಸ್ತಬ್ಧಗೊಳಿಸಿದರು. ರುದ್ರನ ಮೂಲಕ ತನ್ನ ಯಜ್ಞವು ಹಾಳಾಗಿದ್ದಕ್ಕೆ ಕುಪಿತನಾದ ದಕ್ಷನು ಘೋರವಾದ ತಪಸ್ಸನ್ನು ಮಾಡಿ, ರುದ್ರನ ಹಣೆಯಲ್ಲಿ ಮತ್ತೊಂದು ಕಣ್ಣು ಹುಟ್ಟುವಂತೆ ಮಾಡಿದನು.
ತ್ರಿಪುರವಧಾರ್ಥಂ ದೀಕ್ಷಾಮಭ್ಯುಪಗತಸ್ಯ ರುದ್ರಸ್ಯೋಶನಸಾ ಶಿರಸೋ ಜಟಾ ಉತ್ಕೃತ್ಯ ಪ್ರಯುಕ್ತಾಃ | ತತಃ ಪ್ರಾದುರ್ಭೂತಾ ಭುಜಗಾಃ ತೈರಸ್ಯ ಭುಜಗೈಃ ಪೀಡ್ಯಮಾನಃ ಕಂಠೋ ನೀಲತಾಮುಪನೀತಃ | ಪೂರ್ವೇ ಚ ಮನ್ವಂತರೇ ಸ್ವಾಯಂಭುವೇ ನಾರಾಯಣಹಸ್ತಬಂಧಗ್ರಹಣಾನ್ನೀಲಕಂಠತ್ವಮೇವ ವಾ ॥
ರುದ್ರನು ತ್ರಿಪುರಾಸುರರನ್ನು ಸಂಹರಿಸಲು ದೀಕ್ಷಿತನಾದನು. ಆ ಸಮಯದಲ್ಲಿ ದೈತ್ಯಗುರುವಾದ ಬ್ರಾಹ್ಮಣರೆನಿಸಿದ ಶುಕ್ರಾಚಾರ್ಯರು ತನ್ನ ಜಟೆಗಳನ್ನು ಕಿತ್ತು ಅಭಿಮಂತ್ರಿಸಿ ಈಶ್ವರನಲ್ಲಿ ಪ್ರಯೋಗಿಸಿದರು. ಕೂಡಲೇ ಜಟೆಗಳೆಲ್ಲವೂ ಹಾವುಗಳಾಗಿ ಪರಿವರ್ತನೆಯನ್ನು ಹೊಂದಿ ರುದ್ರನ ಕಂಠವನ್ನು ಬಿಗಿದು ಹಿಂಸಿಸಲು ಆರಂಭಿಸಿದವು. ಭುಜಂಗಗಳಿಂದ ಪೀಡಿತವಾದ ರುದ್ರನ ಕಂಠವು ನೀಲಿಯಾಯಿತು. ಆದ್ದರಿಂದಲೇ ರುದ್ರನು ನೀಲಕಂಠನಾದನು. ಸ್ವಾಯಂಭುವ ಮನ್ವಂತರದಲ್ಲಿ ಅಮೃತಮಥನದ ಕಾಲದಲ್ಲಿ ರುದ್ರನು ವಿಷವನ್ನುಂಡಾಗ ವಿಷಬಾಧೆಯು ಹೃದಯವನ್ನು ತಲುಪದಿರಲು ನಾರಾಯಣನು ತನ್ನ ಕೈಯಿಂದ ರುದ್ರನ ಕಂಠವನ್ನು ಹಿಡಿದನು. ಆದ್ದರಿಂದ ಕುತ್ತಿಗೆಯು ಕಪ್ಪಾಯಿತು. ಈ ಕಾರಣದಿಂದಲೂ ರುದ್ರನು ನೀಲಕಂಠನೆನಿಸಿದ್ದಾನೆ.
ಅಮೃತೋತ್ಪಾದನೇ ಪುರಶ್ಚರಣತಾಮುಪಗತಸ್ಯಾಂಗಿರಸೋ ಬೃಹಸ್ಪತೇರುಪ- ಸ್ಪೃಶತೋ ನ ಪ್ರಸಾದಂ ಗತವತ್ಯಃ ಕಿಲಾಪಃ | ಅಥ ಬೃಹಸ್ಪತಿರಪಾಂ ಚುಕ್ರೋಧ ಯಸ್ಮಾನ್ಮಮೋಪಸ್ಪೃಶತಃ ಕಲುಷೀಭೂತಾ ನ ಪ್ರಸಾದಮುಪಗತಾಸ್ತಸ್ಮಾದದ್ಯ- ಪ್ರಭೃತಿ ಝುಷಮಕರಮತ್ಸ್ಯಕಚ್ಛಪಜಂತುಸಂಕೀರ್ಣಾಃ ಕಲುಷೀಭವತೇತಿ | ತದಾಪ್ರಭೃತ್ಯಾಪೋ ಯಾದೋಭಿಃ ಸಂಕೀರ್ಣಾಃ ಸಂವೃತ್ತಾಃ ॥16॥
ಅಮೃತಮಥನದ ಕಾಲದಲ್ಲಿ ಅಂಗಿರಸನ ಮಗನಾದ ಬೃಹಸ್ಪತಿಯು ಮಂತ್ರ ಪುರಶ್ಚರಣೆಯನ್ನು ಆರಂಭಿಸಿದನು. ಆರಂಭದಲ್ಲಿ ಅವನು ಜಲದಿಂದ ಉಪಸ್ಪರ್ಶವನ್ನು ಅರ್ಥಾತ್ ಆಚಮನವನ್ನು ಮಾಡಲು ಹೋದಾಗ ಜಲಾಶಯಗಳು ಪ್ರಸನ್ನವಾಗಲಿಲ್ಲ, ಸ್ವಚ್ಛವಾಗಲಿಲ್ಲ. ಆದ್ದರಿಂದ ಕುಪಿತನಾದ ಬೃಹಸ್ಪತಿಯು ನಾನು ಆಚಮನ ಮಾಡಲು ಬಂದ ಸಮಯದಲ್ಲಿ ನೀವು ಕಲುಷಿತರಾಗಿದ್ದೀರಿ, ಪ್ರಶಾಂತರಾಗಿಲ್ಲ, ನಿಮ್ಮನ್ನು ಶಪಿಸುತ್ತೇನೆ. ಇಂದಿನಿಂದ ಮೀನು, ಮೊಸಳೆ, ಆಮೆ ಮೊದಲಾದ ಜಲಚರ ಪ್ರಾಣಿಗಳಿಂದ ಕಲುಷಿತರಾಗಿರಿ ಎಂದು ಶಾಪವನ್ನು ನೀಡಿದನು. ಬೃಹಸ್ಪತಿಯ ಶಾಪದಂತೆ ಜಲಾಶಯವು ಅಂದಿನಿಂದ ಜಲಜಂತುಗಳಿಂದ ತುಂಬಿಹೋಗಿವೆ.
ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್ ಸ್ವಸ್ರೀಯೋಽಸುರಾಣಾಮ್ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗಮದದತ್
ಪರೋಕ್ಷಮಸುರೇಭ್ಯಃ ॥17॥
ಇದರಂತೆ ತ್ವಷ್ಟೃಸುತನಾದ ವಿಶ್ವರೂಪನು ದೇವತೆಗಳಿಗೆ ಪುರೋಹಿತನು. ಅಸುರರಿಗೆಲ್ಲ ತಂಗಿಯ ಮಗನು. ಇಂತಹ ವಿಶ್ವರೂಪನು ದೇವತೆಗಳಿಗೆ ಪ್ರತ್ಯಕ್ಷವಾಗಿ, ಅಸುರರಿಗೆ ಪರೋಕ್ಷವಾಗಿ ಯಜ್ಞಭಾಗಗಳನ್ನು ನೀಡುತ್ತಿದ್ದನು.
ಅಥ ಹಿರಣ್ಯಕಶಿಪುಂ ಪುರಸ್ಕೃತ್ಯ ವಿಶ್ವರೂಪಮಾತರಂ ಸ್ವಸಾರಮಸುರಾ ವರಮಯಾಚಂತ | ಹೇ ಸ್ವಸರಯಂ ತೇ ಪುತ್ರಸ್ತ್ವಷ್ಟ್ರೋ ವಿಶ್ವರೂಪಸ್ತ್ರಿಶಿರಾ ದೇವಾನಾಂ ಪುರೋಹಿತಃ ಪ್ರತ್ಯಕ್ಷಂ ದೇವೇಭ್ಯೋ ಭಾಗಮದದತ್ | ಪರೋಕ್ಷಮಸ್ಮಾಕಮ್ | ತತೋ ದೇವಾ ವರ್ಧಂತೇ | ವಯಂ ಕ್ಷೀಯಾಮಃ ತದೇನಂ ತ್ವಂ ವಾರಯಿತುಮರ್ಹಸಿ ತಥಾ ಯಥಾಸ್ಮಾನ್ ಭಜೇದಿತಿ ॥
ಸ್ವಲ್ಪ ಸಮಯದ ಬಳಿಕ ಹಿರಣ್ಯಕಶಿಪುವನ್ನು ಮುಂದೆ ಮಾಡಿಕೊಂಡು ವಿಶ್ವರೂಪನ ತಾಯಿಯ ಬಳಿಗೆ ಹೋಗಿ ಅಸುರರೆಲ್ಲರೂ ವರವನ್ನು ಬೇಡಿದರು. ಸಹೋದರಿಯೇ, ತ್ವಷ್ಟೃ ಸುತನಾದ, ತ್ರಿಶಿರನಾದ ವಿಶ್ವರೂಪನು ದೇವತೆಗಳಿಗೆ ಹೋತೃವಾಗಿ ಅವರಿಗೆ ಪ್ರತ್ಯಕ್ಷವಾಗಿ ಹವಿರ್ಭಾವವನ್ನು ನೀಡುತ್ತಾನೆ, ನಮಗೆ ಪರೋಕ್ಷವಾಗಿ ನೀಡುತ್ತಾನೆ. ಇದರಿಂದ ದೇವತೆಗಳು ಶಕ್ತಿಯಿಂದ ಅಭಿವೃದ್ಧಿ ಹೊಂದುತ್ತಿದ್ದಾರೆ. ನಾವು ಕ್ಷೀಣಿಸುತ್ತಿದ್ದೇವೆ. ಆದ್ದರಿಂದ ಅವನು ದೇವತೆಗಳ ಬಳಿ ಸಾಗದಂತೆ ತಡೆದು ನಮ್ಮ ಪಕ್ಷಕ್ಕೆ ಸೇರುವಂತೆ ನೀನು

ಮನ ಒಲಿಸು.
ಅಥ ವಿಶ್ವರೂಪಂ ನಂದನವನಮುಪಗತಂ ಮಾತೋವಾಚ ಪುತ್ರ ಕಿಂ ಪರಪಕ್ಷವರ್ಧನಸ್ತ್ವಂ ಮಾತುಲಪಕ್ಷಂ ನಾಶಯಸಿ ನಾರ್ಹಸ್ಯೇವಂ ಕರ್ತುಮಿತಿ| ಸ ವಿಶ್ವರೂಪೋ ಮಾತುರ್ವಾಕ್ಯಮನತಿಕ್ರಮಣೀಯಮಿತಿ ಮತ್ವಾ ಸಂಪೂಜ್ಯ ಹಿರಣ್ಯಕಶಿಪುಮಗಾತ್ ॥19॥
ವಿಶ್ವರೂಪನ ತಾಯಿಯು ಅಸುರರ ಮಾತಿಗೆ ಸಮ್ಮತಿಯನ್ನಿತ್ತು, ಹಿರಣ್ಯಕಶಿಪುವೇ ಮೊದಲಾದ ಅಸುರರಿಗೆ ಅಭಯವನ್ನಿತ್ತು, ಇಂದ್ರನ ನಂದನವನದಲ್ಲಿರುವ ಮಗನ ಬಳಿ ಸಾಗಿ ಹೀಗೆ ಹೇಳಿದಳು: ಮಗುವೇ, ನೀನು ಶತ್ರುಗಳ ಪಕ್ಷವನ್ನು ಬೆಳೆಸುತ್ತಾ ತಾಯಿಯ ಪಕ್ಷವನ್ನು ಏಕೆ ಕ್ಷಯಗೊಳಿಸುತ್ತಿರುವೆ? ಇದು ನಿನಗೆ ಯೋಗ್ಯವಲ್ಲ. ತಾಯಿಯ ಮಾತನ್ನು ಕೇಳಿದ ಕೂಡಲೇ ತಾಯಿಯ ಮಾತು ಅನಾದರಯೋಗ್ಯವಲ್ಲ ಎಂದು ಭಾವಿಸಿ, ತಾಯಿಯನ್ನು ಚೆನ್ನಾಗಿ ಸತ್ಕರಿಸಿ ದೇವತಾಪಕ್ಷವನ್ನು ತೊರೆದು ಹಿರಣ್ಯಕಶಿಪುವಿನ ಬಳಿ ಹೊರಟನು.
ಹೈರಣ್ಯಗರ್ಭಾಚ್ಚ ವಸಿಷ್ಠಾದ್ಧಿರಣ್ಯಕಶಿಪುಃ ಶಾಪಂ ಪ್ರಾಪ್ತವಾನ್
ಯಸ್ಮಾತ್ತ್ವಯಾನ್ಯೋ ವೃತೋ ಹೋತಾ | ತಸ್ಮಾದಸಮಾಪ್ತಯಜ್ಞಸ್ತ್ವಮ್ ಅಪೂರ್ವಾತ್ ಸತ್ತ್ವಜಾತಾದ್ವಧಂ ಪ್ರಾಪ್ಸ್ಯಸೀತಿ ತಚ್ಛಾಪದಾನಾದ್ಧಿರಣ್ಯಕಶಿಪುಃ ಪ್ರಾಪ್ತವಾನ್ವಧಮ್ ॥20॥
ದೇವಪಕ್ಷವನ್ನು ತೊರೆದು ತಮ್ಮ ಬಳಿ ಬಂದ ವಿಶ್ವರೂಪನನ್ನು ಅಸುರೇಶ್ವರನನ್ನು ಸತ್ಕರಿಸಿ, ತಾನು ಆಚರಿಸುತ್ತಿರುವ ಯಾಗಕ್ಕೆ ಹೋತೃವನ್ನಾಗಿಸಿದನು. ಇದಕ್ಕಿಂತ ಮೊದಲು ಬ್ರಹ್ಮನ ಮಾನಸ ಪುತ್ರರಾದ ವಸಿಷ್ಠರು ಹಿರಣ್ಯಕಶಿಪುವಿಗೆ ಪುರೋಹಿತರಾಗಿದ್ದರು. ವಸಿಷ್ಠರನ್ನು ತೊರೆದು ವಿಶ್ವರೂಪನನ್ನು ವರಿಸಿದುದಕ್ಕಾಗಿ ಕುಪಿತರಾದ ವಸಿಷ್ಠರು ಹಿರಣ್ಯಕಶಿಪುವಿಗೆ ಶಾಪವನ್ನು ನೀಡಿದರು. ಹಿರಣ್ಯಕಶಿಪುವೇ, ಯಾವ ಕಾರಣದಿಂದ ನೀನು ಮತ್ತೊಬ್ಬ ಹೋತೃವನ್ನು ಅಂಗೀಕರಿಸಿದೆಯೋ ಅದರಿಂದ ನೀನು ಆರಂಭಿಸುವ ಯಜ್ಞವು ಪರಿಸಮಾಪ್ತಿ ಹೊಂದುವುದರ ಮೊದಲೇ ಅಪೂರ್ವವಾದ ಪ್ರಾಣಿಯಿಂದ ಸಾವನ್ನಪ್ಪುವಿ. ಈ ವಸಿಷ್ಠರ ಶಾಪಕ್ಕೆ ಅನುಸಾರವಾಗಿ ನರಸಿಂಹನಿಂದ ಹಿರಣ್ಯಕಶಿಪುವಿನ ವಧೆಯಾಯಿತು.
ವಿಶ್ವರೂಪೋ ಮಾತೃಪಕ್ಷವರ್ಧನೋಽತ್ಯರ್ಥಂ ತಪಸ್ಯಭವತ್ | ತಸ್ಯ ವ್ರತಭಂಗಾರ್ಥಮಿಂದ್ರೋ ಬಹ್ವೀಃ ಶ್ರೀಮತ್ಯೋಽಪ್ಸರಸೋ ನಿಯುಯೋಜ |
ತಾಶ್ಚ ದೃಷ್ಟ್ವಾ ಮನಃ ಕ್ಷುಭಿತಂ ತಸ್ಯಾಭವತ್ತಾಸು ಚಾಪ್ಸರಃಸು ನಚಿರಾದೇವ ಸಕ್ತೋಽಭವತ್ | ಸಕ್ತಂ ಚೈನಂ ಜ್ಞಾತ್ವಾಪ್ಸರಸ ಊಚುರ್ಗಚ್ಛಾಮಹೇ ವಯಂ ಯಥಾಗತಮಿತಿ ॥21॥
ಇದರಿಂದ ದುಃಖಿತನಾದ ವಿಶ್ವರೂಪನು ಮಾತೃಪಕ್ಷದ ವೃದ್ಧಿಗಾಗಿ ಕಠೋರವಾದ ತಪಸ್ಸನ್ನಾಚರಿಸಿದನು. ಇಂದ್ರದೇವನು ಇವನ ತಪಸ್ಸನ್ನು ನಾಶಗೊಳಿಸಲು ಕಾಂತಿ ಸಂಪನ್ನರಾದ ಅಪ್ಸರೆಯರನ್ನು ವಿಶ್ವರೂಪನ ಬಳಿ ಕಳುಹಿಸಿದನು. ಅವರನ್ನು ಕಂಡು ವಿಶ್ವರೂಪನ ಮನಸ್ಸು ಕ್ಷೋಭೆಗೊಂಡಿತು. ಅವರಲ್ಲಿಯೇ ಆಸಕ್ತನಾದನು. ಇದನ್ನು ತಿಳಿದ ಅಪ್ಸರೆಯರು `ನಾವು ಬಂದ ದಾರಿಯನ್ನು ಹಿಡಿದು ಹೋಗುತ್ತೇವೆ' ಎಂದು ವಿಶ್ವರೂಪನಿಗೆ ಹೇಳಿದರು.
ತಾಸತತ್ವಷ್ಟ್ರ ಉವಾಚ ಕ್ವ ಗಮಿಷ್ಯಥ | ಆಸ್ಯತಾಂ ತಾವನ್ಮಯಾ ಸಹ ಶ್ರೇಯೋ ಭವಿಷ್ಯತೀತಿ | ತಾಸ್ತಮಬ್ರುವನ್ ವಯಂ ದೇವಸ್ತ್ರಿಯೋಽಪ್ಸರಸ ಇಂದ್ರಂ ವರದಂ ಪುರಾ ಪ್ರಭವಿಷ್ಣುಂ ವೃಣೀಮಹ ಇತಿ ॥ 22 ॥
ಅಪ್ಸರೆಯರ ಮಾತನ್ನು ಕೇಳಿಸಿಕೊಂಡ ವಿಶ್ವರೂಪನು ದೇವಕನ್ಯೆಯರಿಗೆ ಹೇಳಿದನು: `ಸುಂದರಿಯರೇ, ನೀವು ಎಲ್ಲಿಗೆ ಹೋಗುತ್ತೀರಿ? ನನ್ನ ಜೊತೆಯಲ್ಲೇ ನೆಲೆಸಿರಿ. ಇದರಿಂದ ನಿಮಗೆ ಶ್ರೇಯಸ್ಸಾಗುತ್ತದೆ'. ಅದಕ್ಕೆ ಅಪ್ಸರೆಯರು ಹೇಳುತ್ತಾರೆ- `ವಿಶ್ವರೂಪನೇ, ನಾವು ದೇವಾಂಗನೆಯರು. ವರದನಾದ, ಪ್ರಭಾವಶಾಲಿಯಾದ ದೇವೇಂದ್ರನನ್ನು ಈಗಾಗಲೇ ನಾವು ವರಿಸಿದ್ದೇವೆ'.
ಅಥ ತಾ ವಿಶ್ವರೂಪೋಽಬ್ರವೀದದ್ಯೈವತೇ ದೇವಾ ಸೇಂದ್ರಾ ನ ಭವಿಷ್ಯಂತೀತಿ| ತತೋ ಮಂತ್ರಾನ್ ಜಜಾಪ | ತೈರ್ಮಂತ್ರೈಃ ಪ್ರಾವರ್ಧತ ತ್ರಿಶಿರಾಃ ಏಕೇನಾಸ್ಯೇನ ಸರ್ವಲೋಕೇಷು ದ್ವಿಜೈಃ ಕ್ರಿಯಾವದ್ಭಿರ್ಯಜ್ಞೇಷು ಸುಹುತಂ ಸೋಮಂ ಪಪಾವೇಕೇನಾಪ ಏಕೇನ ಸೇಂದ್ರಾನ್ ದೇವಾನ್ | ಅಥೇಂದ್ರಸ್ತಂ ವಿವರ್ಧಮಾನಂ ಸೋಮಪಾನಾಪ್ಯಾಯಿತಸರ್ವಗಾತ್ರಂ ದೃಷ್ಟ್ವಾ ಚಿಂತಾಮಾಪೇದೇ ॥23॥
ಅಪ್ಸರೆಯರ ಮಾತುಗಳನ್ನು ಕೇಳಿ ವಿಶ್ವರೂಪನು ಹೇಳಿದನು: ಈ ಕ್ಷಣದಲ್ಲಿಯೇ ಇಂದ್ರ ಸಹಿತರಾದ ದೇವತೆಗಳಲ್ಲಿ ಯಾರೂ ಉಳಿಯುವುದಿಲ್ಲ. ಹೀಗೆ ಹೇಳಿದ ತಕ್ಷಣ ದೇವತೆಗಳೆಲ್ಲರೂ ವಿಶ್ವರೂಪನ ಶ್ರೋತ್ರಾದಿ ದ್ವಾರಗಳಿಂದ ಹೊರಬಂದರು. ವಿಶ್ವರೂಪನು ಮಂತ್ರಗಳನ್ನು ಜಪಿಸಲು ಆರಂಭಿಸಿದನು. ಜಪದ ಪ್ರಭಾವದಿಂದ ಅವನ ಶಕ್ತಿಯು ಅಭಿವೃದ್ಧಿಸಿತು. ಮೂರು ತಲೆಗಳನನ್ನು ಹೊಂದಿದ ವಿಶ್ವರೂಪನು, ಒಂದು ಮುಖದಿಂದ ಸತ್ಕರ್ಮಗಳನ್ನಾಚರಿಸುವ ಬ್ರಾಹ್ಮಣರು ವಿಧಿಪೂರ್ವಕವಾಗಿ ನೀಡುವ ಯಜ್ಞದಲ್ಲಿ ಅರ್ಪಿತವಾಗುತ್ತಿದ್ದ ಸೋಮರಸವನ್ನು ಪಾನ ಮಾಡುತ್ತಿದ್ದನು. ಮತ್ತೊಂದು ಮುಖದಿಂದ ಹವಿಷ್ಯಾನ್ನವನ್ನು, ಮತ್ತೊಂದು ಮುಖದಿಂದ ಇಂದ್ರಾದಿ ದೇವತೆಗಳ ತೇಜಸ್ಸನ್ನು ಹೀರುತ್ತಿದ್ದನು. ವಿಶ್ವರೂಪನ ಸಮಗ್ರ ಶರೀರವು ಸೋಮಪಾನದಿಂದ ಬಲಿಷ್ಠವಾಗಿರುವುದನ್ನು ಇಂದ್ರನು ಕಂಡನು. ಇದರಿಂದ ದೇವತಾ ಸಹಿತನಾದ ಇಂದ್ರನು ಚಿಂತೆಗೀಡಾದನು.
ದೇವಾಶ್ಚ ತೇ ಸಹೇಂದ್ರೇಣ ಬ್ರಹ್ಮಾಣಮಭಿಜಗ್ಮುರೂಚುಶ್ಚ | ವಿಶ್ವರೂಪೇಣ ಸರ್ವಯಜ್ಞೇಷು ಸುಹುತಃ ಸೋಮಃ ಪೀಯತೇ | ವಯಮಭಾಗಾಃ ಸಂವೃತ್ತಾಃ ಅಸುರಪಕ್ಷೋ ವರ್ಧತೇ ವಯಂ ಕ್ಷೀಯಾಮಃ | ತದರ್ಹಸಿ ನೋ ವಿಧಾತುಂ ಶ್ರೇಯೋ ಯದನಂತರಮಿತಿ ॥24॥
ಬಳಿಕ ಇಂದ್ರ ಪ್ರಮುಖರಾದ ಸಮಸ್ತ ದೇವತೆಗಳು ಬ್ರಹ್ಮನ ಬಳಿ ಹೋಗಿ ಹೀಗೆ ಹೇಳಿದರು. `ಪೂಜ್ಯನೆ, ವಿಶ್ವರೂಪನು ಸಮಸ್ತ ಯಜ್ಞಗಳಲ್ಲಿ ಹುತವಾದ ಸೋಮರಸವನ್ನು ಪಾನ ಮಾಡುತ್ತಿದ್ದಾನೆ. ನಮಗೆ ಯಜ್ಞಗಳಲ್ಲಿ ಭಾಗಗಳೇ ಸಿಗುತ್ತಿಲ್ಲ. ಯಜ್ಞಭಾಗವಿಲ್ಲದೆ ಕ್ಷೀಣಿಸುತ್ತಿದ್ದೇವೆ. ಅಸುರರ ಪಕ್ಷವು ವರ್ಧಿಸುತ್ತಿದೆ. ಈ ಸಮಯದಲ್ಲಿ ನೀನು ನಮಗೆ ಶ್ರೇಯಸ್ಸನ್ನು ಉಂಟುಮಾಡಬೇಕು'.
ತಾನ್ ಬ್ರಹ್ಮೋವಾಚ | ಋಷಿರ್ಭಾರ್ಗವಸ್ತಪಸ್ತಪ್ಯತೇ ದಧೀಚಃ ಸ ಯಾಚ್ಯತಾಂ ವರಂ ಯಥಾ ಕಲೇವರಂ ಜಹ್ಯಾತ್ | ತಸ್ಯಾಸ್ಥಿಭಿರ್ವಜ್ರಂ ಕ್ರಿಯತಾಮಿತಿ॥25॥

ದೇವತೆಗಳ ಮಾತನ್ನಾಲಿಸಿದ ಬ್ರಹ್ಮನು ಹೀಗೆ ಹೇಳಿದನು: ದೇವತೆಗಳೇ, ಭೃಗು ವಂಶದಲ್ಲಿ ಜನಿಸಿದ ದಧೀಚ ಎಂಬ ಋಷಿ ತಪಸ್ಸನ್ನು ಮಾಡುತ್ತಿದ್ದಾನೆ. ಅವನ ಸನಿಹಕ್ಕೆ ಹೋಗಿ ಅವನ ಶರೀರವನ್ನು ತ್ಯಜಿಸುವಂತೆ ವರವನ್ನು ಕೇಳಿರಿ. ಬಳಿಕ ಅವನ ಶರೀರದಲ್ಲಿನ ಮೂಳೆಗಳಿಂದ ವಜ್ರಾಯುಧವನ್ನು ನಿರ್ಮಿಸಿರಿ.

ಇಂದ್ರೋ ದಧೀಚೋಽಭವತ್ | ದೇವಾಸ್ತತ್ರಾಗಚ್ಛನ್ ಯತ್ರ ದಧೀಚೋ ಭಗವಾನೃಷಿಸ್ತಪಸ್ತೇಪೇ | ಸೇಂದ್ರಾ ದೇವಾಸ್ತಮಭಿಗಮ್ಯೋಚುರ್ಭಗವಂಸ್ತಪಸಃ ಕುಶಲಮವಿಘ್ನಂ ಚೇತಿ | ತಾನ್ ದಧೀಚ ಉವಾಚ | ಸ್ವಾಗತಂ ಭವದ್ಭ್ಯಃ ಕಿಂ ಕ್ರಿಯತಾಮ್ ಯದ್ ವಕ್ಷ್ಯಥ ತತ್ ಕರಿಷ್ಯಾಮೀತಿ ತೇ ತಮಬ್ರುವನ್ ಶರೀರಪರಿತ್ಯಾಗಂ ಲೋಕಹಿತಾರ್ಥಂ ಭಗವಾನ್ ಕರ್ತುಮರ್ಹತೀತಿ | ಅಥ ದಧೀಚಸ್ತಥೈವಾವಿಮನಾಃ ಸುಖದುಃಖಸಮೋ ಮಹಾಯೋಗೀ ಆತ್ಮಾನಂ ಸಮಾಧಾಯ ಶರೀರಪರಿತ್ಯಾಗಂ ಚಕಾರ ॥26॥

ಬಳಿಕ ಇಂದ್ರನು ದಧೀಚರ ಆಶ್ರಮಕ್ಕೆ ಹೋದನು. ಅವನನ್ನನುಸರಿಸಿ ದೇವತೆಗಳು ಹೋದರು. ದಧೀಚಋಷಿಯನ್ನು ಸಮೀಪಿಸಿ, `ವಿನೀತರಾಗಿ, ತಮ್ಮ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತಿರುವುದೇ' ಎಂದು ಪ್ರಶ್ನಿಸಿದರು. ದಧೀಚನು ಉತ್ತರಿಸುತ್ತಾ ಇಂದ್ರಪ್ರಮುಖರಾದ ದೇವತೆಗಳೇ `ನಿಮಗೆಲ್ಲರಿಗೂ ಸ್ವಾಗತ. ನಿಮಗಾಗಿ ಯಾವ ಕಾರ್ಯವನ್ನು ಮಾಡಲಿ? ನೀವು ಹೇಳಿದಂತೆ ನಡೆದುಕೊಳ್ಳುತ್ತೇನೆ' ಎಂದು ಹೇಳಿದನು. ದೇವತೆಗಳು ಸ್ವಾಭಿಪ್ರಾಯವನ್ನು ತಿಳಿಸಿದರು. `ಋಷಿಸತ್ತಮನೇ, ಲೋಕಕಲ್ಯಾಣಕ್ಕಾಗಿ ನೀನು ನಿನ್ನ ಶರೀರವನ್ನು ತ್ಯಜಿಸುವ ಕೃಪೆತೋರು'. ದೇವತೆಗಳ ಮಾತನ್ನು ಕೇಳಿ ದಧೀಚನು ಸುಖ-ದುಃಖಗಳನ್ನು ಸಮಾನವಾಗಿ ಭಾವಿಸಿ, ಸ್ವಲ್ಪವೂ ಮನಸ್ಸಿನಲ್ಲಿ ದುಃಖಗೊಳ್ಳದೆ ಮಹಾಯೋಗಿಯಾದ ಅವನು ಉತ್ಸಾಹದಿಂದಲೇ ತನ್ನ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ ಶರೀರವನ್ನು ತ್ಯಜಿಸಿದನು.

ತಾವತ್ ಪೂರ್ವೇಣ ಸೇಂದ್ರಾ ದೇವಾ ಆಗಮನ್ | ಕಾಲೋಽಯಂ ದೇಹನ್ಯಾಸಾಯ ಇತ್ಯತ್ರ ಪೂರ್ವೇಣ ಪೂರ್ವೋಕ್ತಪ್ರಕಾರೇಣ | ತಸ್ಯ ಪರಮಾತ್ಮನ್ಯಪಸೃತೇ ತಾನ್ಯಸ್ಥೀನಿ ಧಾತಾ ಸಂಗೃಹ್ಯ ವಜ್ರಮಕರೋತ್ | ತೇನ ವಜ್ರೇಣಾಭೇದ್ಯೇನಾಪ್ರಧೃಷ್ಯೇಣ ಬ್ರಹ್ಮಾಸ್ಥಿಸಂಭೂತೇನ ವಿಷ್ಣುಪ್ರವಿಷ್ಟೇನೇಂದ್ರೋ ವಿಶ್ವರೂಪಂ ಜಘಾನ ಶಿರಸಾಂ ಚಾಸ್ಯ ಛೇದನಮಕರೋತ್| ತಸ್ಮಾದನಂತರಂ ವಿಶ್ವರೂಪಗಾತ್ರಮಥನಸಂಭವಂ ತ್ವಷ್ಟ್ರೋತ್ಪಾದಿತಮೇವಾರಿಂ ವೃತ್ರಮಿಂದ್ರೋ ಜಘಾನ ॥27॥

ದೇಹಾಭಿಮಾನವನ್ನು ಬಿಟ್ಟು ಅವನ ಮನಸ್ಸು ಪರಮಾತ್ಮನಲ್ಲಿ ನೆಲೆಗೊಂಡಾಗ ಬ್ರಹ್ಮನು ಅವನ ಅಸ್ಥಿಗಳನ್ನು ಸಂಗ್ರಹಿಸಿ, ಅದರಿಂದಲೇ ವಜ್ರಾಯುಧವನ್ನು ಸಿದ್ಧಗೊಳಿಸಿದನು. ಅಭೇದ್ಯವಾದ, ಎದುರಿಸಲು ಅಸಾಧ್ಯವಾದ, ಬ್ರಾಹ್ಮಣನ ಅಸ್ಥಿಗಳಿಂದ ನಿರ್ಮಿತವಾದ, ವಿಷ್ಣುವಿನ ಸನ್ನಿಧಾನವಿರುವ ವಜ್ರಾಯುಧದಿಂದ ಇಂದ್ರನು ವಿಶ್ವರೂಪನನ್ನು ಕೊಂದನು. ಅವನ ಮೂರು ತಲೆಗಳನ್ನು ಕತ್ತರಿಸಿದನು. ಅನಂತರ ವಿಶ್ವರೂಪನ ತಂದೆಯಾದ ತ್ವಷ್ಟೃವು ವಿಶ್ವರೂಪನ ಶರೀರವನ್ನೇ ಮಥನ ಮಾಡಿದನು. ಅವನ ಶರೀರದಿಂದ ವೃತ್ರಾಸುರನು ಹುಟ್ಟಿದನು. ವೃತ್ರಾಸುರನನ್ನೂ ಅದೇ ವಜ್ರಾಯುಧದಿಂದಲೇ ಇಂದ್ರನು ಸಂಹರಿಸಿದನು.

ತಸ್ಯಾಂ ದ್ವೈಧೀಭೂತಾಯಾಂ ಬ್ರಹ್ಮವಧ್ಯಾಯಾಂ ಭಯಾದಿಂದ್ರೋ ದೇವರಾಜ್ಯಂ ಪರಿತ್ಯಜ್ಯ ಅಪ್ಸು ಸಂಭವಾಂ ಶೀತಲಾಂ ಮಾನಸಸರೋಗತಾಂ ನಲಿನೀಂ ಪ್ರಪೇದೇ | ತತ್ರ ಚೈಶ್ವರ್ಯಯೋಗಾದಣುಮಾತ್ರೋ ಭೂತ್ವಾ ಬಿಸಗ್ರಂಥಿಂ ಪ್ರವಿವೇಶ ॥28॥

ಹೀಗೆ ಇಂದ್ರನು ವಿಶ್ವರೂಪನನ್ನು, ವೃತ್ರಾಸುರನನ್ನು ಸಂಹರಿಸಿದ ಕಾರಣ ಎರಡು ವಿಧವಾದ ಬ್ರಹ್ಮಹತ್ಯೆಯು ಅವನನ್ನು ಆವರಿಸಿತು. ಇದರಿಂದ ಭಯಗೊಂಡ ಇಂದ್ರನು ದೇವಲೋಕವನ್ನು ಬಿಟ್ಟು ಶೀತಲವಾದ ಮಾನಸ ಸರೋವರದಲ್ಲಿ ಇರುವ ಕಮಲವನ್ನು ಸೇರಿದನು. ಅಣಿಮಾದಿ ಐಶ್ವರ್ಯ ಸಿದ್ಧಿಯಿಂದ ಕಮಲದ ದಂಟಿನ ಗೇಣನ್ನು ಪ್ರವೇಶಿಸಿದನು.

ಅಥ ಬ್ರಹ್ಮವಧ್ಯಾಭಯಪ್ರಣಷ್ಟೇ ತ್ರೈಲೋಕ್ಯನಾಥೇ ಶಚೀಪತೌ ಜಗದನೀಶ್ವರಂ ಬಭೂವ | ದೇವಾನ್ರಜಸ್ತಮಶ್ಚಾವಿವೇಶ ಮಂತ್ರಾ ನ ಪ್ರಾವರ್ತಂತ ಮಹರ್ಷೀಣಾಮ್ | ರಕ್ಷಾಂಸಿ ಪ್ರಾದುರಭವನ್ | ಬ್ರಹ್ಮ ಚೋತ್ಸಾದನಂ ಜಗಾಮ | ಅನಿಂದ್ರಾಶ್ಚಾಬಲಾ ಲೋಕಾಃ ಸುಪ್ರಧೃಷ್ಯಾ ಬಭೂವುಃ ॥29॥

ಬ್ರಹ್ಮಹತ್ಯೆಯ ಭಯದಿಂದ ತ್ರೈಲೋಕ್ಯನಾಥನಾದ, ಶಚೀಪತಿಯಾದ ಇಂದ್ರನು ಕಣ್ಮರೆಯಾದಾಗ ಜಗತ್ತು ರಾಜನಿಲ್ಲದೆ ಬಡವಾಯಿತು. ರಜಸ್-ತಮೋಗುಣಗಳು ದೇವತೆಗಳನ್ನು ಆಕ್ರಮಿಸಿದವು. ಮಹರ್ಷಿಗಳು ಹೇಳುತ್ತಿರುವ ಮಂತ್ರಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ. ರಾಕ್ಷಸರು ಕೊಬ್ಬಿದರು. ವೇದಗಳ ಅಧ್ಯಯನದ ಪರಂಪರೆಯು ಸ್ಥಗಿತವಾಯಿತು. ಇಂದ್ರನಿಲ್ಲದೆ ಲೋಕಗಳೆಲ್ಲವೂ ಬಲಹೀನವಾದವು. ಲೋಕವನ್ನು ಯಾರೂ ಜಯಿಸುವಂತಾಯಿತು.

ಅಥ ದೇವಾ ಋಷಯಶ್ಚಾಯುಷಃ ಪುತ್ರಂ ನಹುಷಂ ನಾಮ ದೇವರಾಜತ್ವೇಽಭಿಷಿಷಿಚುಃ | ನಹುಷಃ ಪಂಚಭಿಃ ಶತೈರ್ಜ್ಯೋತಿಷಾಂ ಲಲಾಟೇ ಜ್ವಲದ್ಭಿಃ ಸರ್ವತೇಜೋಹರೈಸ್ತ್ರಿವಿಷ್ಟಪಂ ಪಾಲಯಾಂಬಭೂವ |

ಅಥ ಲೋಕಾಃ ಪ್ರಕೃತಿಮಾಪೇದಿರೇ, ಸ್ವಸ್ಥಾಶ್ಚ ಬಭೂವುಃ ॥30॥

ಬಳಿಕ ದೇವತೆಗಳು, ಋಷಿಗಳು, ಆಯುವಿನ ಮಗನಾದ ನಹುಷನನ್ನು ದೇವ ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕಗೈದರು. ನಹುಷನು ಸಮಸ್ತ ಪ್ರಾಣಿಗಳ ಶಕ್ತಿಯನ್ನು ಅಪಹರಿಸುವ ಸಾಮರ್ಥ್ಯವನ್ನು ತನ್ನ ಹಣೆಯಲ್ಲಿ ಹೊಂದಿದ್ದನು. ಪ್ರಜ್ವಲಿಸುತ್ತಿದ್ದ ಐದು ನೂರು ಜ್ಯೋತಿಗಳನ್ನು ಹೊಂದಿದ್ದನು. ಆ ಶಕ್ತಿಯ ಮೂಲಕ ಸ್ವರ್ಗರಾಜ್ಯವನ್ನು ಪರಿಪಾಲಿಸುತ್ತಿದ್ದನು. ನಹುಷನು ಮೂರುಲೋಕಗಳ ಚಕ್ರವರ್ತಿಯಾದ ಬಳಿಕ ಎಲ್ಲ ಲೋಕಗಳು ಸಹಜ ಸ್ಥಿತಿಗೆ ಮರಳಿದವು. ಸಕಲ ಪ್ರಜೆಗಳು ಶಾಂತರೂ ಸುಖಿಗಳೂ ಸಂತೋಷಭರಿತರೂ ಆದರು.

ಅಥೋವಾಚ ನಹುಷಃ ಸರ್ವಂ ಮಾಂ ಶಕ್ರೋಪಭುಕ್ತಮುಪಸ್ಥಿತಮೃತೇ ಶಚೀಮಿತಿ | ಸ ಏವಮುಕ್ತ್ವಾ ಶಚೀಸಮೀಪಮಗಮದುವಾಚ | ಚೈನಾಮ್ ಸುಭಗೇಹಮಿಂದ್ರೋ ದೇವಾನಾಂ ಭಜಸ್ವ ಮಾಮಿತಿ | ತಂ ಶಚೀ ಪ್ರತ್ಯುವಾಚ ಪ್ರಕೃತ್ಯಾ ತ್ವಂ ಧರ್ಮವತ್ಸಲಃ ಸೋಮವಂಶೋದ್ಭವಶ್ಚ | ನಾರ್ಹಸಿ ಪರಪತ್ನೀಧರ್ಷಣಂ ಕರ್ತುಮಿತಿ ॥31॥

ಸ್ವಲ್ಪ ಕಾಲ ಕಳೆದ ಬಳಿಕ ನಹುಷನು ದೇವತೆಗಳಿಗೆ ಹೇಳಿದನು: ಇಂದ್ರನು ಉಪಭೋಗಿಸುತ್ತಿದ್ದ ಸಕಲ ಪದಾರ್ಥಗಳು ನನ್ನ ಉಪಭೋಗಕ್ಕೆ ಬಂದಿವೆ. ಆದರೆ ಶಚಿಯೊಬ್ಬಳು ನನ್ನ ಬಳಿ ಬರಲಿಲ್ಲ. ಈ ರೀತಿಯಾಗಿ ಹೇಳಿ ಶಚೀದೇವಿಯ ಬಳಿ ಹೋಗಿ ಅವಳಲ್ಲಿ ಹೀಗೆ ನಹುಷನು ಹೇಳಿದನು: ಸೌಭಾಗ್ಯವತಿಯೇ, ನಾನು ದೇವತೆಗಳಿಗೂ ರಾಜನಾದ ಇಂದ್ರನು. ನನ್ನನ್ನು ನೀನು ಸೇವಿಸು. ಶಚಿಯು ಉತ್ತರಿಸುತ್ತಾಳೆ: ನಹುಷನೇ, ಸ್ವಾಭಾವಿಕವಾಗಿ ನೀನು ಧರ್ಮದಲ್ಲಿ ವಾತ್ಸಲ್ಯವುಳ್ಳವನು. ಪ್ರಸಿದ್ಧವಾದ ಚಂದ್ರವಂಶದಲ್ಲಿ ಜನ್ಮ ತಾಳಿರುವೆ. ನಿನ್ನಂತಹ ಶ್ರೇಷ್ಠ ಪುರುಷನು ಮತ್ತೊಬ್ಬರ ಪತ್ನಿಯನ್ನು ಬಲಾತ್ಕರಿಸುವುದು ಯೋಗ್ಯವಲ್ಲ.

ತಾಮಥೋವಾಚ ನಹುಷಃ ಐಂದ್ರಂ ಪದಮಧ್ಯಾಸ್ಯತೇ ಮಯಾ |
ಅಹಮಿಂದ್ರಸ್ಯ ರಾಜ್ಯರತ್ನಹರೋ ನಾತ್ರಾಧರ್ಮಃ | ಕಶ್ಚಿತ್ತ್ವಮಿಂದ್ರಭುಕ್ತೇತಿ ಸಾ ತಮುವಾಚ ಅಸ್ತಿ ಮಮ ಕಿಂಚಿದವ್ರತಮಪರ್ಯವಸಿತಮ್ ತಸ್ಯಾವಭೃಥೇ ತ್ವಾಮುಪಗಮಿಷ್ಯಾಮಿ ಕೈಶ್ಚಿದೇವಾಹೋಭಿರಿತಿ | ಸ ಶಚ್ಯೈವಮಭಿಹಿತೋ ನಹುಷೋ ಜಗಾಮ ॥32॥

ನಹುಷನು ಪುನಃ ಶಚಿಗೆ ಹೇಳಿದನು: ನಾನು ಈಗ ಇಂದ್ರನ ಪದವಿಯಲ್ಲಿ ಪ್ರತಿಷ್ಠಿತನಾಗಿದ್ದೇನೆ. ಇಂದ್ರನ ರಾಜ್ಯವನ್ನು, ರತ್ನವೇ ಮೊದಲಾದ ಐಶ್ವರ್ಯಗಳನ್ನು ಹೊಂದಿರುತ್ತೇನೆ. ಅದರಂತೆ ನಿನ್ನನ್ನೂ ಹೊಂದುವುದರಲ್ಲಿ ಯಾವ ಅಧರ್ಮವಿದೆ? ನೀನು ಇಂದ್ರನಿಂದ ಉಪಭೋಗಿಸುವ ವಸ್ತುಗಳಲ್ಲೇ ಸೇರಿಕೊಳ್ಳುತ್ತಿ. ಈ ರೀತಿಯಾಗಿ ನಹುಷನು ಹೇಳಿದಾಗ ನಹುಷನನ್ನು ನಿರಾಕರಿಸಲು ಸಾಧ್ಯವಿಲ್ಲವೆಂದು ಮನಗಂಡ ಶಚೀದೇವಿಯು ಬೇರೆ ಉಪಾಯವನ್ನು ಆಶ್ರಯಿಸಿ ನಹುಷನಿಗೆ ಹೇಳಿದಳು: ಮಹಾರಾಜನೇ, ನಾನೊಂದು ವ್ರತವನ್ನು ಆಚರಿಸುತ್ತಿದ್ದೇನೆ. ಇನ್ನೂ ಆ ವ್ರತವು ಮುಗಿದಿರುವುದಿಲ್ಲ. ಆ ವ್ರತದ ಅವಭೃಥವಾದ ಬಳಿಕ ಕೆಲವೇ ದಿನಗಳಲ್ಲಿ ನಿನ್ನನ್ನು ಸೇವಿಸಲು ಸಮೀಪಿಸುತ್ತೇನೆ. ಶಚಿಯು ಹೀಗೆ ಹೇಳುತ್ತಲೇ ನಹುಷನು ತನ್ನ ಅರಮನೆಗೆ ಹೊರಟು ಹೋದನು.

ಅಥ ಶಚೀ ದುಃಖಶೋಕಾರ್ತಾ ಭರ್ತೃರ್ದರ್ಶನಲಾಲಸಾ ನಹುಷಭಯಗೃಹೀತಾ ಬೃಹಸ್ಪತಿಮುಪಾಗಚ್ಛತ್ | ಸ ಚ ತಾಮಭಿಗತಾಂ ದೃಷ್ಟ್ವೈವ ಧ್ಯಾನಂ ಪ್ರವಿಶ್ಯ ಭರ್ತೃಕಾರ್ಯತತ್ಪರಾಂ ಜ್ಞಾತ್ವಾ ಬೃಹಸ್ಪತಿರುವಾಚ | ಅನೇನೈವ ವ್ರತೇನ ತಪಸಾ ಚಾನ್ವಿತಾ ದೇವೀಂ ವರದಾಮುಪಶ್ರುತಿಮಾಹ್ವಯ ಸಾ ತವೇಂದ್ರಂ ದರ್ಶಯಿಷ್ಯತೀತಿ ॥33॥

ಅನಂತರ ಶಚೀದೇವಿಯು ದುಃಖ-ಶೋಕದಿಂದ ಪೀಡಿತಳಾಗಿ, ತನ್ನ ಗಂಡನನ್ನು ಕಾಣುವ ಬಯಕೆಯುಳ್ಳವಳಾಗಿ, ನಹುಷನ ಭಯದಿಂದ ಗೃಹೀತಳಾಗಿ ದೇವಗುರುವಾದ ಬೃಹಸ್ಪತಿಯನ್ನು ಸಮೀಪಿಸಿ ಉಪಾಯವನ್ನು ಕೇಳಿದಳು. ಆ ಬೃಹಸ್ಪತಿಯಾದರೂ ಭಯದಿಂದ ಆಗಮಿಸಿರುವ ಶಚಿಯನ್ನು ಕಂಡು, ಧ್ಯಾನದಿಂದ ಗಂಡನ ಕಾರ್ಯದಲ್ಲಿ ತತ್ಪರಳಾಗಿದ್ದಾಳೆ ಎಂದು ತಿಳಿದು ಶಚಿಗೆ ಹೇಳಿದನು: `ಶಚಿಯೇ, ನೀನು ಉಪಶ್ರುತಿಯನ್ನು ಆಹ್ವಾನಿಸು. ಅವಳು ನಿನಗೆ ಇಂದ್ರನನ್ನು ತೋರಿಸುತ್ತಾಳೆ' ಎಂದು.

ವ್ಯಾಖ್ಯಾನ ವಿಶೇಷ ಉಪಶ್ರುತಿ ಎಂದರೆ ಒಂದು ಕಾರ್ಯವನ್ನು ಸಂಕಲ್ಪಿಸಿದಾಗ ಜನರಿಗೆ ಸಹಜವಾಗಿ ನಿನ್ನ ಕೆಲಸವು ಆಗುತ್ತದೆ `ತವ ಕಾರ್ಯಂ ಭವಿಷ್ಯತಿ' ಎಂಬ ವಚನವೇ ಉಪಶ್ರುತಿ ಎನಿಸಿದೆ. ಆರಂಭಿಸಿದ ಕಾರ್ಯಕ್ಕೆ ಅನುಕೂಲವಾದ ವಾಕ್ಯಸಂಯೋಜನೆಯು ಉಪಶ್ರುತಿ ಎನಿಸಿದೆ. ಅದರಂತೆ ಆ ವಾಕ್ಯಕ್ಕೆ ಅಭಿಮಾನಿನಿಯಾದ ದೇವಿಯು ಉಪಶ್ರುತಿ ಎನಿಸಿದ್ದಾಳೆ. ಗಂಡನನ್ನೇ ಚಿಂತಿಸುತ್ತಿರುವ ಶಚೀದೇವಿಗೆ ಬೃಹಸ್ಪತಿಗಳು ನಿನ್ನ ಕಾರ್ಯವು ಆಗುತ್ತದೆ ಎಂದು ಹೇಳಿದಾಗ ಅದಕ್ಕೆ ಅಭಿಮಾನಿಯಾದ ಉಪಶ್ರುತಿಯು ಎದುರು ಬಂದಳು. ಬೇರೆ ಯಾರ ಕಣ್ಣಿಗೂ ಕಾಣಿಸದಂತೆ ಉಪಕರಿಸುತ್ತಾಳೆ ಈ ಉಪಶ್ರುತಿಯು ಎಂಬುದು ವಿಶೇಷ.

ಸಾऽಥ ಮಹಾನಿಯಮಮಾಸ್ಥಿತಾ ದೇವೀಂ ವರದಾಮುಪಶ್ರುತಿಂ ಮಂತ್ರೈರಾಹ್ವಯತ್ ಸೋಪಶ್ರುತಿಃ ಶಚೀಸಮೀಪಮಗಾತ್ | ಉವಾಚ ಚೈನಾಮಿಯಮಸ್ಮಿ ತ್ವಯೋಪಹೂತೋಪಸ್ಥಿತಾ ಕಿಂ ತೇ ಪ್ರಿಯಂ ಕರವಾಣೀತಿ| ತಾಂ ಮೂರ್ಧ್ನಾ ಪ್ರಣಮ್ಯೋವಾಚ ಶಚೀ ಭಗವತ್ಯರ್ಹಸಿ ಮೇ ಭರ್ತಾರಂ ದರ್ಶಯಿತುಂ | ತ್ವಂ ಸತ್ಯಾ ಋತಾ ಚೇತಿ | ಸೈನಾಂ ಮಾನಸಂ ಸರೋऽನಯತ್ ತತ್ರೇಂದ್ರಂ ಬಿಸಗ್ರಂಥಿಗತಮದರ್ಶಯತ್ ॥34॥

ಬಳಿಕ ಬೃಹಸ್ಪತಿಗಳು ಹೇಳಿದಂತೆ ಮಹಾನಿಯಮ, ಅನುಷ್ಠಾನಸಂಪನ್ನಳಾದ ಶಚೀದೇವಿಯು ವರದಳಾದ ಉಪಶ್ರುತಿ ದೇವಿಯನ್ನು ಮಂತ್ರಪೂರ್ವಕವಾಗಿ ಕರೆದಳು. ಕೂಡಲೇ ಉಪಶ್ರುತಿಯು ಶಚೀದೇವಿಯ ಸಮೀಪಕ್ಕೆ ಬಂದು ಹೇಳಿದಳು: ಶಚೀದೇವಿಯೇ, ನೀನೀಗ ಮಂತ್ರಪೂರ್ವಕವಾಗಿ ಆಹ್ವಾನಿಸಿದ ಉಪಶ್ರುತಿಯು ನಾನೇ. ನಿನ್ನ ಆಹ್ವಾನದಂತೆ ನಾನು ಇಲ್ಲಿ ಆಗಮಿಸಿದ್ದೇನೆ. ನಿನಗೆ ಇಷ್ಟವಾದ ಯಾವ ಕಾರ್ಯವನ್ನು ಮಾಡಲಿ? ಶಚಿಯು ಅವಳಿಗೆ ತಲೆಬಾಗಿ ನಮಸ್ಕರಿಸಿ ಹೀಗೆ ಹೇಳಿದಳು: `ಪೂಜ್ಯಳೇ, ನೀನು ಸತ್ಯವೂ, ಋತವೂ ಆಗಿರುವಿ. ಕೃಪೆಯಿಂದ ನನ್ನ ಗಂಡನನ್ನು ತೋರಿಸು'. ಹಾಗೆಯೇ ಆಗಲೆಂದು ಹೇಳಿದ ಉಪಶ್ರುತಿಯು, ಶಚಿಯನ್ನು ಮಾನಸ ಸರೋವರದ ಸಮೀಪಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಕಮಲದ ದಂಟಿನಲ್ಲಿ ಅಡಗಿ ಕುಳಿತು ಅಣುರೂಪದಲ್ಲಿ ಧ್ಯಾನಿಸುತ್ತಿರುವ ಇಂದ್ರನನ್ನು ತೋರಿಸಿದಳು.

ತಾಮಿಂದ್ರಃ ಪತ್ನೀಂ ಕೃಶಾಂ ಗ್ಲಾನಾಂ ಚ ದೃಷ್ಟ್ವಾ ಚಿಂತಯಾಂಬಭೂವ |
ಅಹೋ ಮಮ ಮಹದ್ದುಃಖಮಿದಮದ್ಯೋಪಗತಮ್ | ನಷ್ಟಂ ಹಿ ಮಾಮಿಯಮನ್ವಿಷ್ಯೋಪಾಗಮದ್ದುಃಖಾರ್ತೇತಿ | ತಾಮಿಂದ್ರ ಉವಾಚ ಕಥಂ ವರ್ತಯಸೀತಿ ಸಾ ತಮುವಾಚ ನಹುಷೋ ಮಾಮಾಹ್ವಯತಿ | ಕಾಲಶ್ಚಾಸ್ಯ ಮಯಾ ಕೃತ ಇತಿ ॥35॥

ಇಂದ್ರದೇವನಾದರೂ ದುರ್ಬಲಳಾಗಿ, ಕೃಶಳಾಗಿರುವ ತನ್ನ ಪತ್ನಿಯನ್ನು ನೋಡಿ ಚಿಂತಾಗ್ರಸ್ತನಾಗಿ ದುಃಖಿಸುತ್ತಾ ತನ್ನಲ್ಲಿಯೇ ಹೀಗೆ ಹೇಳಿಕೊಂಡನು: ಅಹೋ, ನಿಶ್ಚಯವಾಗಿಯೂ ಅತ್ಯಂತ ದುಃಖದ ವಿಷಯವು. ನಾನಿಲ್ಲಿ ಅಡಗಿಕೊಂಡಿದ್ದೇನೆ. ನನ್ನ ಪತ್ನಿಯು ಅತ್ಯಂತ ದುಃಖಿತಳಾಗಿ ನನ್ನನ್ನು ಹುಡುಕಿಕೊಂಡು ಇಲ್ಲಿಗೆ ಆಗಮಿಸಿದ್ದಾಳೆ ಎಂದು ಯೋಚಿಸುತ್ತಾ ಇಂದ್ರನು ಶಚಿಯನ್ನು ಪ್ರಶ್ನಿಸಿದನು: ದೇವಿಯೇ, ದಿನಗಳನ್ನು ಹೇಗೆ ಕಳೆಯುತ್ತಿರುವಿ? ಶಚಿಯು ಹೇಳುತ್ತಾಳೆ. `ಪ್ರಾಣೇಶ್ವರನೇ, ನಹುಷನು ನನ್ನನ್ನು ಪತ್ನಿಯನ್ನಾಗಿ ಮಾಡಬೇಕೆಂದು ಕರೆಯುತ್ತಿದ್ದಾನೆ. ನಾನು ಬೇರೆ ನೆಪವನ್ನು ಹೇಳಿ ಕಾಲಾವಕಾಶವನ್ನು ಕೇಳಿದ್ದೇನೆ'.

ತಾಮಿಂದ್ರ ಉವಾಚ ಗಚ್ಛ ನಹುಷಸ್ತ್ವಯಾ ವಾಚ್ಯೋऽಪೂರ್ವೇಣ
ಮಾಮೃಷಿಯುಕ್ತೇನ ಯಾನೇನ ತ್ವಮಧಿರೂಢ ಉದ್ವಹಸ್ವ | ಇಂದ್ರಸ್ಯ ಹಿ ಮಹಾಂತಿ ವಾಹನಾನಿ | ಮನಸಃ ಪ್ರಿಯಾಣ್ಯಧಿರೂಢಾನಿ ಮಯಾ ತ್ವಮನ್ಯೇನೋಪಯಾತುಮರ್ಹಸೀತಿ | ಸೈವಮುಕ್ತಾ ಹೃಷ್ಟಾ ಜಗಾಮ | ಇಂದ್ರೋऽಪಿ ಬಿಸಗ್ರಂಥಿಮೇವಾವಿವೇಶ ಭೂಯಃ ॥36॥

ಇಂದ್ರನು ಹೇಳಿದನು- `ಶಚಿಯೇ, ನೀನೀಗಲೇ ಸ್ವರ್ಗಕ್ಕೆ ಹೋಗು. ನಹುಷನ ಬಳಿ ಹೀಗೆ ಹೇಳು- ನಹುಷನೇ, ನೀನು ಋಷಿಗಳಿಂದ ಹೊರಲ್ಪಟ್ಟ ಪಲ್ಲಕ್ಕಿಯಲ್ಲಿ ಕುಳಿತು ನನ್ನಲ್ಲಿ ಆಗಮಿಸಿ ನನ್ನನ್ನು ಸ್ವೀಕರಿಸು ಎಂದು ಹೇಳು. ಮನಸ್ಸಿಗೆ ಸಂತೋಷವನ್ನುಂಟು ಮಾಡುವ ವೈಭವದ ಅನೇಕ ವಾಹನಗಳು ಅವನ ಬಳಿ ಇವೆ. ಶಚಿಯಾದ ನಾನು ಆ ಎಲ್ಲ ವಾಹನಗಳಲ್ಲಿಯೂ ಸನ್ನಿಹಿತವಾಗಿದ್ದೇನೆ. ಆ ಎಲ್ಲ ವಾಹನಗಳಿಂದಲೂ ಭಿನ್ನವಾದ, ವಿಲಕ್ಷಣವಾದ ವಾಹನದಲ್ಲಿ ನೀನು ನನ್ನ ಸನಿಹಕ್ಕೆ ಆಗಮಿಸಬೇಕು ಎಂದು ನನ್ನ ಅಭಿಪ್ರಾಯವು. ಶಚಿಯೇ, ನೀನು ನಹುಷನ ಬಳಿ ಹೀಗೆ ಹೇಳಿದರೆ ನಮ್ಮ ಕಾರ್ಯಸಾಧನೆಯಾಗುತ್ತದೆ'. ಇಂದ್ರನ ಮಾತನ್ನು ಕೇಳಿಸಿಕೊಂಡ ಶಚಿಯು ಸಂತೋಷದಿಂದ ಸ್ವರ್ಗಕ್ಕೆ ಹೋದಳು. ಇಂದ್ರನು ಕಮಲದ ದಂಟಿನಲ್ಲಿ ಧ್ಯಾನಾಸಕ್ತನಾದನು.
ಅಥೇಂದ್ರಾಣೀಮಭ್ಯಾಗತಾಂ ದೃಷ್ಟ್ವೋವಾಚ ನಹುಷಃ | ಪೂರ್ಣಃ
ಸ ಕಾಲ ಇತಿ | ತಂ ಶಚ್ಯಬ್ರವೀಚ್ಛಕ್ರೇಣ ಯಥೋಕ್ತಮ್ ಸ ಮಹರ್ಷಿಯುಕ್ತಂ ವಾಹನಮಧಿರೂಢಃ ಶಚೀಸಮೀಪಮುಪಾಗಚ್ಛತ್ ॥37॥
ಬಳಿಕ ಶಚಿಯು ತನ್ನ ಸಮೀಪಕ್ಕೆ ತಾನಾಗಿಯೇ ಆಗಮಿಸಿದ್ದನ್ನು ಕಂಡು ಸಂತೋಷದಿಂದ ನಹುಷನು: ದೇವಿಯೇ, ನೀನು ಹೇಳಿದ ಆ ಕಾಲದ ಅವಧಿಯು ಪೂರ್ಣವಾಗಿದೆ ಎಂದು ಹೇಳಿದಾಗ, ಶಚೀದೇವಿಯು ಹೇಳಿದಳು: ಇಂದ್ರನು ಹೇಳಿದ ಸಲಹೆಯಂತೆ ಋಷಿಗಳು ಹೊತ್ತ ವಾಹನದಲ್ಲಿ ನನ್ನ ಅರಮನೆಗೆ ಆಗಮಿಸಬೇಕೆಂದು ನಹುಷನಿಗೆ ಹೇಳಿ ಹೊರಟು ಹೋದಳು. ಬಳಿಕ ಯುಕ್ತಾಯುಕ್ತ ವಿವೇಚನೆಯಿಲ್ಲದೆ ನಹುಷನು ಋಷಿಗಳು ಹೊತ್ತಿರುವ ಪಲ್ಲಕ್ಕಿಯಲ್ಲಿ ಕುಳಿತು ಶಚಿಯ ಅರಮನೆಗೆ ಹೊರಟನು.
ಅಥ ಮೈತ್ರಾವರುಣಿಃ ಕುಂಭಯೋನಿರಗಸ್ತ್ಯೋ ಮಹರ್ಷೀನ್
ಕ್ರಿಯಮಾಣಾಂಸ್ತಾನ್ನಹುಷೇಣಾಪಶ್ಯತ್ | ಪದ್ಭ್ಯಾಂ ಚ ತೇನಾಸ್ಪೃಶ್ಯತ | ತತಃ ಸ ನಹುಷಮಬ್ರವೀದಕಾರ್ಯಪ್ರವೃತ್ತ ಪಾಪ ಪತಸ್ವ ಮಹೀಮ್ ಸರ್ಪೋ ಭವ ಯಾವದ್ಭೂಮಿರ್ಗಿರಯಶ್ಚ ತಿಷ್ಠೇಯುಸ್ತಾವದಿತಿ | ಸ ಮಹರ್ಷಿವಾಕ್ಯ- ಸಮಕಾಲಮೇವ ತಸ್ಮಾದ್ಯಾನಾದವಾಪತತ್ ॥38॥
ಬಳಿಕ ಪಲ್ಲಕ್ಕಿಯನ್ನು ಹೊತ್ತಿರುವ ಋಷಿಗಳಲ್ಲಿ ಕುಂಭಯೋನಿಯಾದ, ಮಿತ್ರಾವರ್ಣರ ಮಗನಾದ, ಋಷಿಶ್ರೇಷ್ಠನಾದ ಅಗಸ್ತ್ಯನು ಒಬ್ಬನಾಗಿದ್ದನು. ನಹುಷನು ಮಹರ್ಷಿಗಳನ್ನು ಬೇಗ ಬೇಗ ಮುಂದೆ ಸಾಗುವಂತೆ ಗದರಿಸುತ್ತಿರುವಂತೆ, ಬೇಗ ನಡೆಯಲಾಗದೆ ಇರುವವರನ್ನು ತಿರಸ್ಕರಿಸುತ್ತಿರುವುದನ್ನು ಅಗಸ್ತ್ಯನು ನೋಡಿದನು. ಶೀಘ್ರವಾಗಿ ನಡೆಯಲಾಗದ ಅಗಸ್ತ್ಯನಿಗೆ ನಹುಷನು ತನ್ನ ಪಾದಗಳಿಂದ ಸ್ಪರ್ಶಿಸಿದನು. ಸಿಟ್ಟಾದ ಅಗಸ್ತ್ಯನು ನಹುಷನನ್ನು ಕುರಿತು-`ಎಲೈ ಅಸತ್ಕರ್ಮದಲ್ಲಿ ತೊಡಗಿಸಿಕೊಂಡವನೇ, ಪಾಪಿಷ್ಠನಾದ ನಹುಷನೇ, ನೀನು ಈಗಲೇ ಭೂಮಿಯಲ್ಲಿ ಬೀಳು, ಸರ್ಪವಾಗು. ಎಲ್ಲಿಯ ತನಕ ಭೂಮಿ, ಪರ್ವತಗಳು ಇರುತ್ತವೆಯೋ ನೀನು ಅಲ್ಲಿಯ ತನಕ ಸರ್ಪವಾಗಿಯೇ ಇರು' ಎಂದು ಶಪಿಸಿದನು. ಅಗಸ್ತ್ಯನು ಹೀಗೆ ಹೇಳುತ್ತಿರುವಾಗ ನಹುಷನು ಪಲ್ಲಕ್ಕಿಯಿಂದ ಕೆಳಗೆ ಬಿದ್ದನು.
ಅಥಾನಿಂದ್ರಂ ಪುನಸ್ತ್ರೈಲೋಕ್ಯಮಭವತ್ | ತತೋ ದೇವಾ ಋಷಯಶ್ಚ
ಭಗವಂತಂ ವಿಷ್ಣುಂ ಶರಣಮಿಂದ್ರಾರ್ಥೇಽಭಿಜಗ್ಮುಃ | ಊಚುಶ್ಚೈನಂ ಭಗವನ್ನಿಂದ್ರಂ ಬ್ರಹ್ಮವಧ್ಯಾಭಿಭೂತಂ ತ್ರಾತುಮರ್ಹಸೀತಿ | ತತಃ ಸ ವರದಸ್ತಾನಬ್ರವೀದಶ್ವಮೇಧಂ ಯಜ್ಞಂ ವೈಷ್ಣವಂ ಶಕ್ರೋಽಭಿಯಜತು | ತತಃ ಸ್ವಂ ಸ್ಥಾನಂ ಪ್ರಾಪ್ಸ್ಯತೀತಿ ॥39॥
ನಹುಷನು ಶಾಪಗ್ರಸ್ಥನಾಗಿ ಭೂಮಿಯಲ್ಲಿ ಬಿದ್ದಕೂಡಲೇ ಪುನಃ ಮೂರುಲೋಕಗಳಲ್ಲಿಯೂ ಅರಾಜಕತೆ ಉಂಟಾಯಿತು. ದೇವತೆಗಳು, ಋಷಿಗಳು ಇಂದ್ರನಿಗಾಗಿ ಭಗವಂತನಾದ ವಿಷ್ಣುವನ್ನೇ ಮೊರೆಹೊಕ್ಕರು. ಅವನ ಬಳಿ ಹೇಳಿದರು: ಪೂಜ್ಯನೇ, ವಿಷ್ಣುವೇ, ಬ್ರಹ್ಮಹತ್ಯಾ ಪಾಪದಿಂದ ಪೀಡಿತನಾಗಿರುವ ಇಂದ್ರನನ್ನು ಆ ಮಹಾಪಾಪದಿಂದ ದಾಟಿಸುವ ಕರುಣೆ ತೋರು. ದೇವತೆಗಳ, ಋಷಿಗಳ ಮಾತನ್ನು ಕೇಳಿದ ವರದನಾದ ವಿಷ್ಣುವು ಹೇಳಿದನು: `ದೇವತೆಗಳೇ, ಇಂದ್ರನು ನನ್ನನ್ನುದ್ದೇಶಿಸಿ ಅಶ್ವಮೇಧಯಾಗವನ್ನಾಚರಿಸಲಿ. ಬಳಿಕ ಅವನು ತನ್ನ ಪದವಿಯನ್ನು ಹೊಂದುತ್ತಾನೆ' ಎಂದು.
ತತೋ ದೇವಾ ಋಷಯಶ್ಚೇಂದ್ರಂ ನಾಪಶ್ಯನ್ಯದಾ ತದಾ ಶಚೀಮೂಚುರ್ಗಚ್ಛ ಸುಭಗೇ ಇಂದ್ರಮಾನಯಸ್ವೇತಿ | ಸಾ ಪುನಸ್ತತ್ ಸರಃ ಸಮಭ್ಯಗಚ್ಛತ್ | ಇಂದ್ರಶ್ಚ ತಸ್ಮಾತ್ ಸರಸಃ ಸಮುತ್ಥಾಯ ಬೃಹಸ್ಪತಿಮಭಿಜಗಾಮ | ಬೃಹಸ್ಪತಿಶ್ಚಾಶ್ವಮೇಧಂ ಮಹಾಕ್ರತುಂ ಶಕ್ರಾಯಾಹರತ್ | ತತಶ್ಚ ಕೃಷ್ಣಸಾರಂಗಂ ಮೇಧ್ಯಮಶ್ವಮುತ್ಸೃಜ್ಯ ವಾಹನಂ ತಮೇವ ಕೃತ್ವಾ ಇಂದ್ರಂ ಮರುತ್ಪತಿಂ ಬೃಹಸ್ಪತಿಃ ಸ್ವಸ್ಥಾನಂ ಪ್ರಾಪಯಾಮಾಸ | ತತಃ ಸ ದೇವರಾಟ್‌ದೇವೈರ್ಋಷಿಭಿಃ ಸ್ತೂಯಮಾನ- ಸ್ತ್ರಿವಿಷ್ಟಪಸ್ಥೋ ನಿಷ್ಕಲ್ಮಷೋ ಬಭೂವ | ಬ್ರಹ್ಮವಧ್ಯಾಂ ಚತುರ್ಷು ಸ್ಥಾನೇಷು ವ್ಯಭಜತ್ ವನಿತಾವೃಕ್ಷಗಿರ್ಯವನಿಷು | ವನಿತಾಸು ರಜಃ | ವೃಕ್ಷೇಷು ಚ ಸುನಃ | ಗಿರಿಷು ಶಿಂಬಃ | ಪೃಥಿವ್ಯಾಮೂಷರಃ | ತೇಽಸ್ಪೃಶ್ಯಾಃ | ತಸ್ಮಾದ್ದ್ವಿರಲವಣಂ ಪಚ್ಯತೇ | ಏವಮಿಂದ್ರೋ ಬ್ರಹ್ಮತೇಜಃಪ್ರಭಾವೋಪಬೃಂಹಿತಃ ಶತ್ರುವಧಂ ಕೃತ್ವಾ ಸ್ವಸ್ಥಾನಂ ಪ್ರಾಪಿತಃ ॥41॥
ಬಳಿಕ ವಿಷ್ಣುವಿನ ಮಾತನ್ನು ಕೇಳಿಸಿಕೊಂಡ ಋಷಿಗಳು, ದೇವತೆಗಳು ಇಂದ್ರನನ್ನು ಎಲ್ಲ ಪ್ರದೇಶದಲ್ಲೂ ಹುಡುಕಿದರು. ಅವನನ್ನು ಎಲ್ಲಿಯೂ ಕಾಣಲಿಲ್ಲ. ಕೂಡಲೇ ಶಚಿಯ ಬಳಿ ಹೋಗಿ ಅವಳನ್ನು ಕುರಿತು ಹೇಳಿದರು: `ಸೌಭಾಗ್ಯವತಿಯೇ, ಇಂದ್ರಾಣಿ, ದೇವೇಂದ್ರನ ಬಳಿ ಹೋಗು. ಇಂದ್ರನನ್ನು ಕರೆದು ತಾ'. ದೇವತೆಗಳ ಮಾತಿನಂತೆ ಶಚಿಯು ಮಾನಸ ಸರೋವರದ ಬಳಿ ಸಾಗಿದಳು. ಸರೋವರದಿಂದ ಆಗಮಿಸಿದ ಇಂದ್ರನು ಬೃಹಸ್ಪತಿಯ ಬಳಿ ಸಾಗಿದನು. ಬೃಹಸ್ಪತಿಯು ಇಂದ್ರನ ಮೂಲಕ ಮಹಾ ಅಶ್ವಮೇಧಯಾಗವನ್ನು ಮಾಡಿಸಿದನು. ಬಳಿಕ ಆ ಯಜ್ಞದಲ್ಲಿ ಬೃಹಸ್ಪತಿಯು ಕೃಷ್ಣ ಸಾರಂಗಬಣ್ಣದ ಮೇಧ್ಯಾಶ್ವವನ್ನು ದೇಶಪರ್ಯಟನೆಗಾಗಿ ಬಿಟ್ಟನು. ಅದನ್ನೇ ವಾಹನವನ್ನಾಗಿ ಮಾಡಿ ಬೃಹಸ್ಪತಿಯು ಮರುತ್ಪತಿಯಾದ ಇಂದ್ರನನ್ನು ಅವನ ಸ್ಥಾನದಲ್ಲಿ ಪ್ರತಿಷ್ಠಾಪಿಸಿದನು. ಅನಂತರ ಇಂದ್ರನು ದೇವತೆಗಳಿಂದ, ಋಷಿಗಳಿಂದ ಸ್ತುತಿಸಲ್ಪಡುತ್ತಾ ಬ್ರಹ್ಮಹತ್ಯಾ ಪಾಪದಿಂದ ಮುಕ್ತನಾಗಿ ಸ್ವರ್ಗಲೋಕದಲ್ಲಿ ರಾಜ್ಯವನ್ನಾಳತೊಡಗಿದನು. ತನಗೆ ಪ್ರಾಪ್ತವಾದ ಬ್ರಹ್ಮಹತ್ಯಾ ಪಾಪವನ್ನು ಸ್ತ್ರೀ, ಅಗ್ನಿ, ವೃಕ್ಷ, ಗೋವು - ಹೀಗೆ ನಾಲ್ಕು ಸ್ಥಾನಗಳಲ್ಲಿ ವಿಭಾಗಿಸಿ ವಿಸರ್ಜಿಸಿದನು. ವನಿತೆಯರಲ್ಲಿ ರಜೋರೂಪದಲ್ಲಿ ಬ್ರಹ್ಮಹತ್ಯೆಯು ಹರಿಯುತ್ತದೆ. ವೃಕ್ಷಗಳಲ್ಲಿ ಅಂಟಿನಂತೆ ಬ್ರಹ್ಮಹತ್ಯೆಯು ಹರಿಯುತ್ತದೆ. ಪರ್ವತಗಳಲ್ಲಿ ಶಿಂಬ ಎಂಬ ಹೆಸರಿನ ನೀಚ ಜಾತಿಯ ಭೂಮಿಯಾಗಿ ಬ್ರಹ್ಮಹತ್ಯಾ ರೂಪವಾದ ಚೋಳು, ಉಪ್ಪನ್ನು ನಿರ್ಮಿಸುತ್ತದೆ. ಪೃಥಿವಿಯಲ್ಲಿ ಬಂಜರು ಭೂಮಿಯು ಬ್ರಹ್ಮಹತ್ಯೆಯಿಂದ ಕೂಡಿದೆ. ಆದ್ದರಿಂದ ಈ ನಾಲ್ಕು

ವಸ್ತುಗಳು ಅಸ್ಪೃಶ್ಯವಾಗಿವೆ. ಆದ್ದರಿಂದಲೇ ಯಜ್ಞದ ಆಹುತಿಗೆ ಸಿದ್ಧಗೊಳಿಸುವ ಅನ್ನವನ್ನು ಉಪ್ಪನ್ನು ಹಾಕದೆ ಪಕ್ವಗೊಳಿಸಬೇಕು. ಈ ರೀತಿಯಾಗಿ ಇಂದ್ರನು ಬ್ರಹ್ಮತೇಜಸ್ಸಿನ ಪ್ರಭಾವದಿಂದ ಕೂಡಿದವನಾಗಿ ಶತ್ರುವಧೆಯನ್ನು ಮಾಡಿ ತನ್ನ ಸ್ಥಾನವನ್ನು ಹೊಂದಿದನು. ವ್ಯಾಖ್ಯಾನ ವಿಶೇಷ ಯಜ್ಞಕ್ಕೆ ಯೋಗ್ಯವಾದ ಕುದುರೆಯು ಕೃಷ್ಣಸಾರಂಗ ಮೃಗದಂತೆ ಬಣ್ಣವುಳ್ಳದ್ದಾಗಿರಬೇಕು. ಉದರ, ಕಂಠಗಳ ಭಾಗವು ಶುಭ್ರವಾಗಿರಬೇಕು. ಉಳಿದ ಭಾಗಗಳು ನೀಲವಾಗಿರಬೇಕು. ಇಂತಹ ಕುದುರೆಯನ್ನು ಅಶ್ವಮೇಧ ಯಾಗಕ್ಕಾಗಿ ಬಿಟ್ಟಲ್ಲಿ ಮಹಾಸುಖವನ್ನು ಆ ಯಜ್ಞ ಮಾಡಿದವನು ಅನುಭವಿಸುತ್ತಾನೆ. ಯಜ್ಞದಲ್ಲಿ ಹತವಾದ ಪಶುವೂ ಕೂಡ ಮಹಾ ಸುಖವನ್ನು ಅನುಭವಿಸುತ್ತಾ ಶ್ರೇಷ್ಠಪಶು ಎನಿಸಿಕೊಳ್ಳುತ್ತದೆ ಎಂಬುದು ಶಾಸ್ತ್ರದ ಅಭಿಪ್ರಾಯವಾಗಿದೆ (ಲಕ್ಷಾಲಂಕಾರ).

ನಹುಷಸ್ಯ ಶಾಪಮೋಕ್ಷಾರ್ಥಂ ದೇವೈರ್ಋಷಿಭಿಶ್ಚ ಯಾಚ್ಯಮಾನೋಗಸ್ತ್ಯಃ

ಪ್ರಾಹ | ಯಾವತ್ತ್ವತ್ಕುಲಜಃ ಶ್ರೀಮಾನ್ ಧರ್ಮರಾಟ್ ಭ್ರಾತೃಭಿರ್ಯುತಃ | ಭೀಮಸ್ತಸ್ಯಾನುಜಸ್ತಂ ತ್ವಂ ಗೃಹೀತಾ ತು ಯುಧಿಷ್ಠಿರಃ ಕಥಯಿತ್ವಾ ಸ್ವಕಾನ್ ಪ್ರಶ್ನಾನ್ ಸ್ವಾಂ ತನುಂ ಚ ವಿಮೋಕ್ಷ್ಯತೇ | ಆಕಾಶಗಂಗಾಗತಶ್ಚ ಪುರಾ ಭರದ್ವಾಜೋ ಮಹರ್ಷಿರುಪಾಸ್ಪೃಶಂಸ್ತ್ರೀನ್ ಕ್ರಮಾನ್ ಕ್ರಮತಾ ವಿಷ್ಣುನಾಭ್ಯಾಸಾದಿತಃ ಸ ಭರದ್ವಾಜೇನ ಸಸಲಿಲೇನ ಪಾಣಿನೋರಸಿ ತಾಡಿತಃ ಸಲಕ್ಷಣೋರಸ್ಕಃ ಸಂವೃತ್ತಃ ॥42॥

ನಂತರ ದೇವತೆಗಳು, ಋಷಿಗಳು ನಹುಷನ ಶಾಪವನ್ನು ಬಿಡುಗಡೆ ಮಾಡಬೇಕೆಂದು ಅಗಸ್ತ್ಯರಲ್ಲಿ ಪ್ರಾರ್ಥಿಸಿದರು. ಆಗ ಅಗಸ್ತ್ಯರು : `ನಹುಷನೇ, ಮುಂದೆ ನಿನ್ನ ವಂಶದಲ್ಲಿ ಪಾಂಡವರು ಹುಟ್ಟುತ್ತಾರೆ. ಅವರಲ್ಲಿ ನೀನು ಭೀಮಸೇನನನ್ನು ಹಿಡಿಯುತ್ತಿ. ಆಗ ಧರ್ಮರಾಜನು ನಿನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ಭೀಮನನ್ನು ನಿನ್ನ ಕೈಯಿಂದ ಬಿಡಿಸುತ್ತಾನೆ. ಆಗ ನಿನಗೂ ಶಾಪದ ನಿವೃತ್ತಿಯಾಗುತ್ತದೆ' ಎಂದು ಹೇಳಿದರು. ಇಷ್ಟೇ ಅಲ್ಲದೆ, ಹಿಂದೆ ಭಾರದ್ವಾಜ ಮುನಿಯು ಆಕಾಶಗಂಗೆಗೆ ಹೋಗಿ ಸ್ನಾನ ಮಾಡುತ್ತಿರುವಾಗ ತ್ರಿವಿಕ್ರಮ ಮೂರ್ತಿಯಾದ ಭಗವಂತನ ಕಾಲಿನಿಂದ ಹತನಾಗಿ ಅದಕ್ಕಾಗಿಯೇ ಭಗವಂತನನ್ನು ಎದೆಯಲ್ಲಿ ಒದ್ದನು. ಅದರ ಚಿಹ್ನೆಯೇ ವಿಷ್ಣುವಿನ ಎದೆಯಲ್ಲಿ ಮೂಡಿತು. ಈಗಲೂ ಅದನ್ನು ವಿಷ್ಣುವು ಎದೆಯಲ್ಲಿ ಧರಿಸಿದ್ದಾನೆ. ಅದನ್ನೇ ಶ್ರೀವತ್ಸ ಎನ್ನುತ್ತಾರೆ.

ಭೃಗುಣಾ ಮಹರ್ಷಿಣಾ ಶಪ್ತೋಽಗ್ನಿಃ ಸರ್ವಭಕ್ಷತ್ವಮುಪನೀತಃ ॥ 43 ॥

ಬ್ರಾಹ್ಮಣನಾದ ಭೃಗು ಋಷಿಯ ಶಾಪದಿಂದ ಶಪ್ತನಾದ ಅಗ್ನಿಯು ಸರ್ವಭಕ್ಷತ್ವವನ್ನು ಹೊಂದಿದನು.

ಅದಿತಿರ್ವೈ ದೇವಾನಾಮನ್ನಮಪಚದೇತದ್ಭುಕ್ತ್ವಾಸುರಾನ್ ಹನಿಷ್ಯಂತೀತಿ |

ತತ್ರ ಬುಧೋ ವ್ರತಚರ್ಯಾಸಮಾಪ್ತಾವಾಗಚ್ಛತ್ | ಅದಿತಿಂ ಚಾವೋಚದ್ಭಿಕ್ಷಾಂ ದೇಹೀತಿ | ತತ್ರ ದೇವೈಃ ಪೂರ್ವಮೇತತ್ ಪ್ರಾಶ್ಯಂ ನಾನ್ಯೇನೇತ್ಯದಿತಿರ್ಭಿಕ್ಷಾಂ ನಾದಾತ್ | ಅಥ ಭಿಕ್ಷಾಪ್ರತ್ಯಾಖ್ಯಾನರುಷಿತೇನ ಬುಧೇನ ಬ್ರಹ್ಮಭೂತೇನ ವಿವಸ್ವತೋ ದ್ವಿತೀಯೇ ಜನ್ಮನ್ಯಂಡಸಂಜ್ಞಿತಸ್ಯಾಂಡಂ ಮಾರಿತಮದಿತ್ಯಾಃ |

ಸ ಮಾರ್ತಂಡೋ ವಿವಸ್ವಾನಭವಚ್ಛ್ರಾದ್ಧದೇವಃ ॥44॥

ಇನ್ನೊಮ್ಮೆ ಅದಿತಿದೇವಿಯು ದೇವತೆಗಳಿಗೆ ಅನ್ನವನ್ನು ಪಕ್ವಗೊಳಿಸುತ್ತಾ, ಈ ಅನ್ನವನ್ನು ಸ್ವೀಕರಿಸಿದ ದೇವತೆಗಳು ಅಸುರರನ್ನು ಕೊಲ್ಲಲಿ ಎಂದು ಸಂಕಲ್ಪಿಸಿದಳು. ಅವಳ ವ್ರತಾನುಷ್ಠಾನವು ಮುಗಿಯುವುದರಲ್ಲಿ ಬುಧನು ಆಗಮಿಸಿ ಭಿಕ್ಷಾಂದೇಹಿ ಎಂದು ಕೇಳಿದನು. ಇನ್ನೂ ದೇವತೆಗಳಿಗೆ ಅದಿತಿಯು ಆಹಾರವನ್ನು ಕೊಡುವ ಮೊದಲೇ ಬೇರೆ ಯಾರೂ ತಿನ್ನಬಾರದೆಂದು ಅವನಿಗೆ ಭಿಕ್ಷೆಯನ್ನು ನೀಡಲಿಲ್ಲ (ಅಸುರರನ್ನು ಕೊಲ್ಲಲಿ ಎಂದು ಅಭಿಮಂತ್ರಿಸಿದ ಅನ್ನವನ್ನು ನೀಡಲಿಲ್ಲ). ಬುಧನು ಕ್ರುದ್ಧನಾಗಿ ಅದಿತಿಯ ಗರ್ಭಕ್ಕೆ ಪೀಡೆಯುಂಟಾಗಲಿ ಎಂದು ಶಪಿಸಿದನು. ಆದ್ದರಿಂದ ಅಂಡವೆಂದು ಕರೆಯಲ್ಪಡುವ ಗರ್ಭವು ಭೇದಿಸಲ್ಪಟ್ಟಿತು. ಬುಧನ ಶಾಪದಿಂದಾಗಿ ಅಂಡವು ಭೇದಿಸಲ್ಪಟ್ಟಿದ್ದರಿಂದ ಸೂರ್ಯನು ಮೃತಾಂಡನಾಗಿಯೇ ಉತ್ಪತ್ತಿಯಾದನು. ಆದ್ದರಿಂದಲೇ ಮಾರ್ತಾಂಡನೆಂಬ ಹೆಸರು ಅವನಿಗೆ ಪ್ರಸಿದ್ಧವಾಯಿತು. ವಸು-ರುದ್ರ- ಆದಿತ್ಯರಲ್ಲಿ ಶ್ರಾದ್ಧಭೋಜನ ಮಾಡುವವರಲ್ಲಿ ಇವನೊಬ್ಬನಾದುದರಿಂದ ಶ್ರಾದ್ಧದೇವನೆಂದು ಪ್ರಸಿದ್ಧನಾದನು.

ದಕ್ಷಸ್ಯ ವೈ ದುಹಿತರಃ ಷಷ್ಟಿರಾಸನ್ | ತಾಭ್ಯಃ ಕಶ್ಯಪಾಯ ತ್ರಯೋದಶ ಪ್ರಾದಾದ್ದಶ ಧರ್ಮಾಯ, ದಶ ಮನವೇ, ಸಪ್ತವಿಂಶತಿಮಿಂದವೇ | ತಾಸು ತುಲ್ಯಾಸು ನಕ್ಷತ್ರಾಖ್ಯಾಂ ಗತಾಸು ಸೋಮೋ ರೋಹಿಣ್ಯಾಮಭ್ಯಧಿಕಾಂ ಪ್ರೀತಿಮಕರೋತ್ | ತತಸ್ತಾಃ ಶೇಷಾಃ ಪತ್ನ್ಯ ಈರ್ಷ್ಯಾವತ್ಯಃ ಪಿತುಃ ಸಮೀಪಂ ಗತ್ವೇಮಮರ್ಥಂ ಶಶಂಸುಃ | ಭಗವನ್ನಸ್ಮಾಸು ತುಲ್ಯಪ್ರಭಾವಾಸು ಸೋಮೋ ರೋಹಿಣೀಮಧಿಕಂ ಭಜತೀತಿ | ಸೋಽಬ್ರವೀದ್ ಯಕ್ಷ್ಮೈನಮಾವೇಕ್ಷ್ಯತೀತಿ ॥45॥

ದಕ್ಷನಿಗೆ ಅರವತ್ತು ಮಂದಿ ಕನ್ಯೆಯರು. ಅವರಲ್ಲಿ ಹದಿಮೂರು ಜನರನ್ನು ಕಶ್ಯಪರಿಗೆ, ಹತ್ತು ಕನ್ಯೆಯರನ್ನು ಧರ್ಮನಿಗೆ, ಹತ್ತು ಕನ್ಯೆಯರನ್ನು ಮನುವಿಗೆ ಕೊಟ್ಟು, ಉಳಿದ ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೆ ನೀಡಿದನು. ನಕ್ಷತ್ರಾಭಿಮಾನಿಗಳಾದ ಈ ಇಪ್ಪತ್ತೇಳು ಕನ್ಯೆಯರನ್ನು ಒಂದೇ ಭಾವದಿಂದ ನೋಡುವಂತೆ ಚಂದ್ರನಿಗೆ ದಕ್ಷನು ಹೇಳಿದ್ದನು. ಆದರೆ ರೋಹಿಣಿಯಲ್ಲಿ ಚಂದ್ರನಿಗೆ ಅಧಿಕ ಪ್ರೀತಿ ಇರುವುದನ್ನು ಕಂಡು ಉಳಿದ ಕನ್ಯೆಯರು ತಂದೆಯಾದ ದಕ್ಷನ ಬಳಿ ಹೋಗಿ, `ಜನಕನೇ, ನಾವೆಲ್ಲ ಸಮಾನ ಗುಣಶೀಲರಾಗಿರುವಾಗ ನಮ್ಮ ಪತಿಯು ರೋಹಿಣಿಯನ್ನು ಮಾತ್ರ ಅಧಿಕವಾಗಿ ಪ್ರೀತಿಸುತ್ತಿದ್ದಾನೆ' ಎಂದು ಆಕ್ಷೇಪಿಸಿದನು. ಕೂಡಲೇ ಆ ದಕ್ಷನು ಹಾಗಿದ್ದರೆ ಆ ಚಂದ್ರನಿಗೆ ಕ್ಷಯರೋಗವು ಬರಲಿ ಎಂದು ಶಪಿಸಿದನು. ಚಂದ್ರನನ್ನು ಕ್ಷಯರೋಗವು ಆಕ್ರಮಿಸಿತು.

ಗತ್ವಾತ್ಮಾನಮಭಿಷೇಚಯಸ್ವೇತಿ | ಅಥಾಗಚ್ಛತ್ ಸೋಮಸ್ತತ್ರ ಹಿರಣ್ಯಸರಸ್ತೀರ್ಥಮ್ ಗತ್ವಾ ಚಾತ್ಮನಃ ಸ್ನಪನಮಕರೋತ್ | ಸ್ನಾತ್ವಾ ಚಾತ್ಮಾನಂ ಪಾಪ್ಮನೋ ಮೋಕ್ಷಯಾಮಾಸ | ತತ್ರ ಚಾವಭಾಸಿತಸ್ತೀರ್ಥೇ ಯದಾ ಸೋಮಸ್ತದಾಪ್ರಭೃತಿ ತೀರ್ಥಂ ತತ್ ಪ್ರಭಾಸಮಿತಿ ನಾಮ್ನಾ ಖ್ಯಾತಂ ಬಭೂವ| ತಚ್ಛಾಪಾದದ್ಯಾಪಿ ಕ್ಷೀಯತೇ | ಸೋಮೋಮಾವಾಸ್ಯಾಂತರಸ್ಥಃ ಪೌರ್ಣಮಾಸೀಮಾತ್ರೇಧಿಷ್ಠಿತೋ ಮೇಘಲೇಖಾಪ್ರತಿಚ್ಛನ್ನಂ ವಪುರ್ದರ್ಶಯತಿ ಮೇಘಸದೃಶಂ ವರ್ಣಮಗಮತ್ತದಸ್ಯ ಶಶಲಕ್ಷ್ಮ ವಿಮಲಮಭವತ್ ॥46॥

ಚಂದ್ರನು ದಕ್ಷನ ಬಳಿ ಬಂದಾಗ ದಕ್ಷನು ಅವನು ಮಾಡಿದ ತಪ್ಪನ್ನು ತಿಳಿಸಿದನು. ಆಗ ಚಂದ್ರನಲ್ಲಿ ಕರುಣೆಯಿಂದ ಋಷಿಗಳು ಚಂದ್ರನೇ, ಪಶ್ಚಿಮ ದಿಕ್ಕಿನಲ್ಲಿ ಹಿರಣ್ಯಸರಸ್ ಎಂಬ ತೀರ್ಥವಿದೆ, ಅಲ್ಲಿ ಸ್ನಾನ ಮಾಡಿ ಬಾ ಎಂದರು. ಅದರಂತೆ ಆ ತೀರ್ಥಸ್ನಾನದಿಂದ

ಚಂದ್ರನು ವಿಶೇಷವಾದ ಕಾಂತಿಯನ್ನು ಹೊಂದಿದನು. ಬಳಿಕ ಆ ತೀರ್ಥವೇ ಪ್ರಭಾಸವೆಂದು ಪ್ರಸಿದ್ಧವಾಯಿತು. ಆದರೂ ಚಂದ್ರನಿಗೆ ಆ ಶಾಪದ ಸಂಬಂಧವು ಅಂಟಿಕೊಂಡಿರುವುದರಿಂದ ಈಗಲೂ ಅಮಾವಾಸ್ಯೆಯ ತನಕ ಕ್ಷಯವನ್ನು ಹೊಂದುತ್ತಾ, ಪೂರ್ಣಿಮೆಯ ದಿನದಲ್ಲಿ ಪೂರ್ಣಬಿಂಬವನ್ನು ಹೊಂದುತ್ತಾನೆ. ಮೇಘದ ರೇಖೆಯಂತೆ ಕಪ್ಪು ಬಣ್ಣದ ಶರೀರದಿಂದ ಕಾಣಿಸುತ್ತಾನೆ. ಅವನಲ್ಲಿ ಮೇಘದ ಬಣ್ಣವು ಉಂಟಾಗಿದೆ. ಮೊಲದಂತೆ ಕಾಣಿಸುವ ಆಕಾರವು ಶುಭ್ರವಾಯಿತು.

ಸ್ಥೂಲಶಿರಾ ಮಹರ್ಷಿರ್ಮೇರೋಃ ಪ್ರಾಗುತ್ತರೇ ದಿಗ್ಭಾಗೇ ತಪಸ್ತೇಪೇ |

ತಸ್ಯ ತಪಸ್ತಪ್ಯಮಾನಸ್ಯ ಸರ್ವಗಂಧವಹಃ ಶುಚಿರ್ವಾಯುರ್ವಿವಾಯಮಾನಃ ಶರೀರಮಸ್ಪೃಶತ್ | ಸ ತಪಸಾ ತಾಪಿತಶರೀರಃ ಕೃಶೋ ವಾಯುನೋಪವೀಜ್ಯಮಾನೋ ಹೃದಯಪರಿತೋಷಮಗಮತ್ | ತತ್ರ ತಸ್ಯಾನಿಲವ್ಯಜನಕೃತಪರಿತೋಷಸ್ಯ ಸದ್ಯೋ ವನಸ್ಪತಯಃ ಪುಷ್ಪಶೋಭಾಂ ನ ದರ್ಶಿತವಂತ ಇತಿ ಸ ಏತಾನ್ ಶಶಾಪ ನ ಸರ್ವಕಾಲಂ ಪುಷ್ಪವಂತೋ ಭವಿಷ್ಯಥೇತಿ ॥47॥

ಸ್ಥೂಲಶಿರಸ್ ಎಂಬ ಋಷಿಯು ಮೇರುವಿನ ಶಿರಸ್ಸಿನಲ್ಲಿ ತಪಸ್ಸನ್ನು ಆಚರಿಸುವಾಗ ಗಂಧವನ್ನು ಹೊತ್ತ ಶುಭ್ರವಾದ ಗಾಳಿಯು ಅವನ ಮೈಮೇಲೆ ಬೀಸಿತು. ತಪಸ್ಸಿನಿಂದ ಸುಟ್ಟುಹೋದ ಶರೀರವುಳ್ಳ ಅವನಿಗೆ ಸುಗಂಧ ಗಾಳಿಯ ಸ್ಪರ್ಶವು ಸುಖವನ್ನು ನೀಡಿತು. ಅದರಿಂದ ಸಂತೋಷವನ್ನು ಹೊಂದಿರುವಾಗ ವೃಕ್ಷಗಳು ಅವನಿಗೆ ಮತ್ತಷ್ಟು ಮನಸ್ಸು ಪ್ರಕೃತಿಯಿಂದ ಸಂತುಷ್ಟವಾಗುವಂತೆ ತಮ್ಮ ಫಲ-ಪುಷ್ಪಗಳ ಶೋಭೆಯಿಂದ ಕಾಣಿಸಿಕೊಂಡವು. ಆಗ ಸಿಟ್ಟಾದ ಆ ಋಷಿಬ್ರಾಹ್ಮಣನು ನಿಮಗೆ ಇನ್ನು ಮುಂದೆ ನಿಶ್ಚಿತವಾದ ಕಾಲವನ್ನು ಬಿಟ್ಟು ಎಲ್ಲ ಕಾಲಗಳಲ್ಲಿಯೂ ಪುಷ್ಪ-ಫಲಗಳನ್ನು ನೀಡುವ ಸಾಮರ್ಥ್ಯವು ಹೊರಟು ಹೋಗಲಿ ಎಂದು ಶಪಿಸಿದನು.

ನಾರಾಯಣೋ ಲೋಕಹಿತಾರ್ಥಂ ವಡವಾಮುಖೋ ನಾಮ ಮಹರ್ಷಿಃ ಪುರಾಭವತ್ | ತಸ್ಯ ಮೇರೌ ತಪಸ್ತಪ್ಯತಃ ಸಮುದ್ರ ಆಹೂತೋ ನಾಗತಃ| ತೇನಾಮರ್ಷಿತೇನಾತ್ಮಗಾತ್ರೋಷ್ಮಣಾ ಸಮುದ್ರಃ ಸ್ತಿಮಿತಜಲಃ ಕೃತಃ | ಸ್ವೇದಪ್ರಸ್ಯಂದನಸದೃಶಶ್ಚಾಸ್ಯ ಲವಣಭಾವೋ ಜನಿತಃ ಉಕ್ತಶ್ಚಾಪೇಯೋ ಭವಿಷ್ಯಸಿ | ಏತಚ್ಚ ತೇ ತೋಯಂ ವಡವಾಮುಖಸಂಜ್ಞಿತೇನ ಪೀಯಮಾನಂ ಮಧುರಂ ಭವಿಷ್ಯತಿ | ತದೇತದದ್ಯಾಪಿ ವಡವಾಮುಖಸಂಜ್ಞಿತೇನಾನುವರ್ತಿನಾ ತೋಯಂ ಸಾಮುದ್ರಂ ಪೀಯತೇ ॥48॥

ಹಿಂದೆ ನಾರಾಯಣನು ಲೋಕಹಿತಕ್ಕಾಗಿ ಒಡವಾಮುಖ ಎಂಬ ಋಷಿಯಾಗಿ ಮೇರುಶಿಖರದಲ್ಲಿ ತಪಸ್ಸನ್ನಾಚರಿಸುವಾಗ ಯಾವುದೋ ಉದ್ದೇಶದಿಂದ ಸಮುದ್ರನನ್ನು ಕರೆದನು. ಆದರೆ ಸಮುದ್ರರಾಜನು ಬರಲಿಲ್ಲ. ಕ್ರುದ್ಧನಾದ ನಾರಾಯಣನು ತನ್ನ ಶರೀರದ ಬಿಸಿಯಿಂದ ಸಮುದ್ರದ ನೀರನ್ನು ಸ್ತಂಭಿಸುವಂತೆ ಮಾಡಿದನು. ಜೊತೆಗೆ ತನ್ನ ಮೈ ಬೆವರಿನಿಂದ ಸಮುದ್ರಜಲವು ಉಪ್ಪಾಗುವಂತೆ ಮಾಡಿದನು. ಇಷ್ಟು ಮಾತ್ರವಲ್ಲದೆ ನಿನ್ನ ನೀರು ಪ್ರಾಣಿಗಳಿಗೆ ಪ್ರಿಯವಾಗದೆ ಒಡವಾಮುಖ ಎಂಬ ಅಗ್ನಿಗೆ ಮಾತ್ರ ಪ್ರಿಯವಾಗಲಿ ಎಂದು ಶಪಿಸಿದನು. ಇದರಿಂದ ಸಮುದ್ರದಲ್ಲಿ ಒಡವ ಎಂಬ ಅಗ್ನಿಯು ಸೇರಿಕೊಂಡು ಸಮುದ್ರದ ನೀರನ್ನು ನಿರಂತರವೂ ಕುಡಿಯುತ್ತಿದೆ.

ಹಿಮವತೋ ಗಿರೇರ್ದುಹಿತರಮುಮಾಂ ರುದ್ರಶ್ಚಕಮೇ | ಭೃಗುರಪಿ ಚ ಮಹರ್ಷಿರ್ಹಿಮವಂತಮಾಗಮ್ಯಾಬ್ರವೀತ್ ಕನ್ಯಾಮುಮಾಂ ಮೇ ದೇಹೀತಿ| ತಮಬ್ರವೀದ್ಧಿಮವಾನಭಿಲಷಿತೋ ವರೋ ರುದ್ರ ಇತಿ | ತಮಬ್ರವೀದ್ ಭೃಗುರ್ಯಸ್ಮಾತ್ತ್ವಯಾಹಂ ಕನ್ಯಾವರಣಕೃತಭಾವಃ ಪ್ರತ್ಯಾಖ್ಯಾತಸ್ತಸ್ಮಾನ್ನ ರತ್ನಾನಾಂ ಭವಾನ್ ಭಾಜನಂ ಭವಿಷ್ಯತೀತಿ | ಅದ್ಯ ಪ್ರಭೃತ್ಯೇತದವಸ್ಥಿತಮೃಷಿ ವಚನಮ್ ॥49॥

ಉಮಾದೇವಿಯು ದಕ್ಷನ ಮೇಲಿನ ಕೋಪದಿಂದ ದೇಹವನ್ನು ಬಿಟ್ಟು ಪುನಃ ಹಿಮವಂತನ ಪುತ್ರಿಯಾಗಿ ಹುಟ್ಟಿದಳು. ಅವಳು ರುದ್ರನಲ್ಲಿ ಆಸಕ್ತಳಾಗಿದ್ದಳು. ಇದರ ನಡುವೆ ಭೃಗು ಋಷಿಯು ಹಿಮವಂತನ ಬಳಿ ಹೋಗಿ ತನಗೆ ಆ ಮಗಳನ್ನು ನೀಡೆಂದು ಕೇಳಿದನು. ಅದಕ್ಕೆ ಹಿಮವಂತನು, ಈಗಾಗಲೇ ತನ್ನ ಮಗಳು ರುದ್ರನನ್ನು ವರಿಸಿರುವುದಾಗಿ ಹೇಳಿ ನಿರಾಕರಿಸಿದನು. ಇದರಿಂದ ಕ್ರುದ್ಧನಾದ ಭೃಗುವು ನಿನ್ನಲ್ಲಿ ರತ್ನಗಳಿಲ್ಲದೆ ಹೋಗಲಿ ಎಂದು ಶಪಿಸಿದನು. ಆ ಮುನಿಯ ಶಾಪವು ಇಂದಿಗೂ ಸ್ಥಿರವಾಗಿದೆ.

ತದೇವಂವಿಧಂ ಮಾಹಾತ್ಮ್ಯಂ ಬ್ರಾಹ್ಮಣಾನಾಮ್ ಕ್ಷತ್ರಮಪಿ ಶಾಶ್ವತೀಮವ್ಯಯಾಂ ಪೃಥಿವೀಂ ಪತ್ನೀಮಭಿಗಮ್ಯ ಬುಭುಜೇ |

ತದೇತದ್ಬ್ರಹ್ಮಾಗ್ನೀಷೋಮೀಯಮ್ ತೇನ ಜಗದ್ಧಾರ್ಯತೇ ॥50॥

ರಾಜೇಂದ್ರನೇ, ಬ್ರಾಹ್ಮಣರ ಮಹಿಮೆಯು ಈ ವಿಧವಾಗಿದೆ. ಪ್ರಾಯಃ ಕ್ಷತ್ರಿಯ ಜಾತಿಯು ಬ್ರಾಹ್ಮಣರ ಆಶ್ರಯದಿಂದಲೇ ಭೂಮಿಯನ್ನು ಸ್ಥಿರವಾಗಿ ಅನುಭವಿಸುತ್ತಿದೆ. ಅಂತಹ ಬ್ರಹ್ಮ-ಕ್ಷತ್ರಿಯ ಎರಡು ಅಗ್ನಿಗಳು ಸೋಮಸ್ವರೂಪಗಳು. ಅವೆರಡರಿಂದ ಜಗತ್ತು ಧರಿಸಲ್ಪಟ್ಟಿದೆ. ಅಗ್ನಿ-ಸೋಮರ ಮಹಿಮೆಗಳನ್ನು ಹೀಗೆ ತಿಳಿದುಕೊ ಎಂದು ಭಾವ.

॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುಃಸಪ್ತತ್ಯುತ್ತರಶತತಮೋಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *

ನೂರ ಎಪ್ಪತ್ತೈದನೆಯ ಅಧ್ಯಾಯ

ಕೃಷ್ಣನು ತನ್ನ ನಾಮಗಳ ನಿರ್ವಚನವನ್ನು ತಿಳಿಸಿ, ಶಿವನಿಗೂ ನಾರಾಯಣನಿಗೂ ನಡೆದ ಯುದ್ಧವನ್ನು ಅರ್ಜುನನಿಗೆ ತಿಳಿಸಿದುದು.

ಶ್ರೀಭಗವಾನ್

ಸೂರ್ಯಾಚಂದ್ರಮಸೌ ಶಶ್ವತ್ ಕೇಶೈರ್ಮೇ ಅಂಶುಸಂಜ್ಞಿತೈಃ |

ಬೋಧಯಂಸ್ತಾಪಯಂಶ್ಚೈವ ಜಗದುತ್ತಿಷ್ಠತೇ ಪೃಥಕ್ ॥1॥

ಶ್ರೀಭಗವಾನ್ ಅರ್ಜುನನೇ, ಸೂರ್ಯ-ಚಂದ್ರರಿಬ್ಬರೂ ತಮ್ಮ ಕಿರಣಗಳು ಎನಿಸಿಕೊಂಡ ನನ್ನ ಕೇಶಗಳಿಂದಲೇ ಲೋಕಗಳನ್ನು ಎಚ್ಚರಿಸುತ್ತಾ, ಉಷ್ಣವನ್ನು ನೀಡುತ್ತಾ ಪ್ರತ್ಯೇಕವಾಗಿ ಉದಯಮಾನರಾಗುತ್ತಾರೆ.

ವ್ಯಾಖ್ಯಾನ ವಿಶೇಷ ನನ್ನ ಎರಡು ಕಣ್ಣುಗಳಿಂದ ಕೇಶ ಎಂಬ ಕಿರಣರಾಶಿಯು ಹೊರಹೊಮ್ಮುತ್ತದೆ. ಪ್ರಾತಃಕಾಲದಲ್ಲಿ ಹೊರಹೊಮ್ಮುವ ಕಿರಣರಾಶಿಯು ಸೂರ್ಯನ ಮೂಲಕ ಜಗತ್ತನ್ನು ಎಬ್ಬಿಸಿದರೆ ರಾತ್ರಿಯಲ್ಲಿ ಹೊರಹೊಮ್ಮುವ ಕಿರಣರಾಶಿಯು ಚಂದ್ರನ ಮೂಲಕ ಆಹ್ಲಾದವನ್ನು ನೀಡುತ್ತದೆ ಎಂದು ಭಾವ.

ಬೋಧನಾತ್ ತಾಪನಾಚ್ಚೈವ ಜಗತೋ ಹರ್ಷಣಂ ಭವೇತ್ |

ಅಗ್ನೀಷೋಮಕೃತೈರೇಭಿಃ ಕರ್ಮಭಿಃ ಪಾಂಡುನಂದನ |
ಹೃಷೀಕೇಶೋಽಹಮೀಶಾನೋ ವರದೋ ಲೋಕಭಾವನಃ ॥2॥
ಜಗತ್ತಿಗೆ ಸರಿಯಾದ ಜ್ಞಾನವನ್ನು ನೀಡುವ ಕಿರಣಗಳು ಸೂರ್ಯನ ಕಿರಣಗಳು. ಪದಾರ್ಥಗಳನ್ನು ಪಕ್ವಗೊಳಿಸುವ ತಾಪಕ ಶಕ್ತಿಯು ಸೂರ್ಯನ ಕಿರಣಗಳಲ್ಲಿದೆ. ಇದರಿಂದಲೇ ಜಗತ್ತಿಗೆ ಸಂತೋಷವಾಗಿದೆ. ಅಗ್ನಿ-ಸೋಮರು ಮಾಡುವ ಅರ್ಥಾತ್ ಸೂರ್ಯ-ಚಂದ್ರರು ಮಾಡುವ ಈ ಕರ್ಮಗಳಿಂದ ಜಗತ್ತೆಲ್ಲವೂ ಸಂತೋಷ ಹೊಂದುತ್ತದೆ. ಆದುದರಿಂದ ಪಾಂಡುಸುತನೇ, ನಾನು ಈಶಾನ, ಹೃಷೀಕೇಶ, ವರದ, ಲೋಕಭಾವನ ಎನಿಸಿದ್ದೇನೆ.
ವ್ಯಾಖ್ಯಾನ ವಿಶೇಷ `ಹರ್ಷಣಕರೌ ಕೇಶೌ ಯಸ್ಯೇತಿ ಹೃಷೀಕೇಶಃ' ಹೃಷೀ ಎನ್ನುವುದು ನಿರುಕ್ತ ಶಬ್ದವಾದುದರಿಂದ ಹೃಷೀ ಎಂಬಲ್ಲಿನ ದೀರ್ಘವು ಛಂದಸ್ಸಿನ ಪ್ರಯೋಗವೆಂದು ಭಾವಿಸಬೇಕು ಅಥವಾ ಹೃಷೀ ಎನ್ನುವುದು ಇಕಾರಾಂತ ಪದ ಎಂದು ಭಾವಿಸಬಹುದು. ಆಗ `ಹೃಷ್ಟೌ ಕೇಶೌ ಯಸ್ಯ ಸಃ ಹೃಷೀಕೇಶಃ' ಎಂದು ವ್ಯುತ್ಪತ್ತಿಯನ್ನು ಮಾಡಬೇಕು.
ಇಳೋಪಹೂತಂ ಗೇಹೇಷು ಹರೇ ಭಾಗಂ ಕ್ರತುಷ್ವಹಮ್ |
ವರ್ಣಶ್ಚ ಮೇ ಹರಿಶ್ರೇಷ್ಠಸ್ತಸ್ಮಾದ್ಧರಿರಹಂ ಸ್ಮೃತಃ ॥3॥
ಯಜ್ಞದಲ್ಲಿ ಇಡಾಂಗ್ರುಹಾಣ ಎಂಬುದಾಗಿ ಯಾಜ್ಞಕರು ನನ್ನನ್ನು ಕರೆದು ಹವಿರ್ಭಾಗವನ್ನು ನೀಡುತ್ತಾರಾದ್ದರಿಂದ ನಾನು ಅಂತಹ ಹವಿರ್ಭಾಗವನ್ನು ಸ್ವೀಕರಿಸುವ ಹರಿ ಎನಿಸಿದ್ದೇನೆ. ನನ್ನ ಮೈಬಣ್ಣವು ಹರಿಮಣಿಯಂತೆ ಇರುವುದರಿಂದಲೇ ನಾನು ಹರಿ ಎಂದು ಕರೆಸಿಕೊಳ್ಳುತ್ತೇನೆ.
ಧಾಮಸಾರೋ ಹಿ ಲೋಕಾನಾಮೃತಂ ಚೈವ ವಿಚಾರಿತಮ್ |
ಋತಧಾಮಾ ತತೋ ವಿಪ್ರೈಃ ಸತ್ಯಶ್ಚಾಹಂ ಪ್ರಕೀರ್ತಿತಃ ॥4॥
ನಾನು ಲೋಕಕ್ಕೆಲ್ಲ ಶ್ರೇಷ್ಠವಾದ ಆಧಾರನಾಗಿದ್ದೇನೆ. ಜ್ಞಾನರೂಪವಾದ ನನ್ನ ಶರೀರವು ಜಗತ್ತನ್ನು ಧರಿಸಿದೆ. ಜ್ಞಾನರೂಪವಾದ ಶರೀರವನ್ನು ಹೊಂದಿರುವುದರಿಂದಲೇ ಋತಧಾಮ ಎಂದು ಕರೆಸಿಕೊಂಡಿದ್ದೇನೆ. ನಿರ್ದುಷ್ಟವಾದ ಜ್ಞಾನವನ್ನು ಹೊಂದಿರುವುದರಿಂದ ಸತ್ಯನೆನಿಸಿದ್ದೇನೆ.
ವ್ಯಾಖ್ಯಾನ ವಿಶೇಷ `ಋತಶ್ಚ ಅಸೌ ಧಾಮಾ ಚ ಋತಧಾಮಾ' `ಸತ್ ಯಂ ಜ್ಞಾನಂ ಯಸ್ಯ ಸಃ ಸತ್ಯಃ'
ನಷ್ಟಾಂ ಚ ಧರಣೀಂ ಪೂರ್ವಮವಿಂದಂ ವೈ ಗುಹಾಗತಾಮ್ |
ಗೋವಿಂದ ಇತಿ ಮಾಂ ದೇವಾ ವಾಗ್ಭಿಃ ಸಮಭಿತುಷ್ಟುವುಃ ॥5॥
ಹಿಂದೆ ಭೂಮಿಯು ನೀರಿನಲ್ಲಿ ಮುಳುಗಿ ಅದೃಶ್ಯವಾಗಿದ್ದಾಗ ಅದನ್ನು ನಾನು ಕಂಡು ಹಿಡಿದೆನು. ಸಮುದ್ರದೊಳಗಿನಿಂದ ಭೂಮಿಯನ್ನು ಉದ್ಧರಿಸಿದ ಕಾರಣ ದೇವತೆಗಳು ನನ್ನನ್ನು ಗೋವಿಂದನೆಂದು ಸ್ತುತಿಸಿದರು.
ಶಿಪಿವಿಷ್ಟೇತಿ ಚಾಖ್ಯಾಯಾಂ ಹೀನರೋಮಾ ಚ ಯೋ ಭವೇತ್ |
ತೇನಾವಿಷ್ಟಂ ಹಿ ಯತ್ಕಿಂಚಿಚ್ಛಿಪಿವಿಷ್ಟಂ ಹಿ ತತ್ ಸ್ಮೃತಮ್ ॥6॥
ನಾನು ರೋಮಪರದಿಂದ ಉಪಲಕ್ಷಿತವಾದ ತ್ವಗಿಂದ್ರಿಯ - ಇವುಗಳಿಂದ ಹೀನನಾದುದರಿಂದ ಯಜ್ಞದಲ್ಲಿ ನೀಡುವ ಮಾಂಸರೂಪವಾದ ಹವಿಸ್ಸನ್ನು ಶಿಪಿ ಎಂದು ಹೇಳುತ್ತಾರೆ. ಅಂತಹ ಶಿಪಿ ಎಂಬ ಯಜ್ಞದ ವಸ್ತುವಿನಿಂದ ಆವಿಷ್ಟವಾದ ವಸ್ತುವನ್ನು ಶಿಪಿವಿಷ್ಟ ಎನ್ನುತ್ತಾರೆ. ಅಂತಹ ವಸ್ತುವನ್ನು ಸ್ವೀಕರಿಸುವ ನಾನು ಶಿಪಿವಿಷ್ಟನಾಮಕನಾಗಿದ್ದೇನೆ.
ವ್ಯಾಖ್ಯಾನ ವಿಶೇಷ ಶಿಪಿ ಎಂದರೆ ರೋಮ, ಚರ್ಮಗಳಿಲ್ಲದ ಅವಯವಿ. ಅಂತಹ ಜ್ಞಾನಾನಂದಮಯನಾದ ಭಗವಂತನು ಶಿಪಿವಿಷ್ಟನೆನಿಸಿದ್ದಾನೆ. ಯಜ್ಞದಲ್ಲಿ ನೀಡುವ ಶಿಪಿವಿಷ್ಟವನ್ನು ಸ್ವೀಕರಿಸುವುದರಿಂದಲೂ ಶಿಪಿವಿಷ್ಟನೆನಿಸಿದ್ದಾನೆ.
ಯಾಸ್ಕೋ ಮಾಮೃಷಿರವ್ಯಗ್ರೋ ನೈಕಯಜ್ಞೇಷು ಗೀತವಾನ್ |
ಶಿಪಿವಿಷ್ಟ ಇತಿ ಹ್ಯಸ್ಮಾದ್ ಗುಹ್ಯನಾಮಧರೋ ಹ್ಯಹಮ್ ॥7॥
ಯಾಸ್ಕನೆಂಬ ಮುನಿಯು ಯಾಗಗಳಲ್ಲಿ ನನ್ನನ್ನು ಶಿಪಿವಿಷ್ಟ ಎಂಬ ಹೆಸರಿನಿಂದ ಶಾಂತನಾಗಿ ಗಾನ ಮಾಡಿದ ಕಾರಣದಿಂದಲೂ ನನಗೆ ಶಿಪಿವಿಷ್ಟ ಎಂಬ ರಹಸ್ಯವಾದ ಹೆಸರುಂಟಾಯಿತು.
ಸ್ತುತ್ವಾ ಮಾಂ ಶಿಪಿವಿಷ್ಟೇತಿ ಯಾಸ್ಕೋ ಋಷಿರುದಾರಧೀಃ |
ಮತ್ಪ್ರಸಾದಾದಧೋ ನಷ್ಟಂ ನಿರುಕ್ತಮಭಿಜಗ್ಮಿವಾನ್ ॥8॥
ಆ ಯಾಸ್ಕನು ನನ್ನ ಅನುಗ್ರಹದಿಂದ ಪಾತಾಳದಲ್ಲಿ ಅಡಗಿದ್ದ ನಿರುಕ್ತ ಎಂಬ ಗ್ರಂಥವನ್ನು ಪಡೆದುಕೊಂಡನು.
ನ ಹಿ ಜಾತೋ ನ ಜಾಯೇಽಹಂ ನ ಜನಿಷ್ಯೇ ಕದಾಚನ |
ಕ್ಷೇತ್ರಜ್ಞಃ ಸರ್ವಭೂತಾನಾಂ ತಸ್ಮಾದಹಮಜಃ ಸ್ಮೃತಃ ॥9॥
ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ಕ್ಷೇತ್ರಜ್ಞನೆನಿಸಿದ ನಾನು ಹಿಂದೆ ಹುಟ್ಟಿರಲಿಲ್ಲ, ಮುಂದೆಯೂ ಇಲ್ಲ, ಈಗಲೂ ಇಲ್ಲ. ಇದರಿಂದ ನಾನು ಅಜ ಎಂದು ಕರೆಸಿಕೊಳ್ಳುತ್ತೇನೆ.
ನೋಕ್ತಪೂರ್ವಂ ಮಯಾ ಕ್ಷುದ್ರಮಶ್ಲೀಲಂ ವಾ ಕದಾಚನ |
ಋತಾ ಬ್ರಹ್ಮಸುತಾ ಸಾ ಮೇ ಸತ್ಯಾ ದೇವೀ ಸರಸ್ವತೀ ॥10॥
ನಾನು ಸ್ವಲ್ಪವಾದರೂ ಯಾವ ಸಮಯದಲ್ಲಿಯೂ ಅಮಂಗಳವಾದ, ಕ್ಷುದ್ರವಾದ ಮಾತುಗಳನ್ನು ನುಡಿದವನಲ್ಲ. ಸತ್ಯರೂಪಿಣಿಯಾದ ಋತಾ ಎಂದು ಕರೆಯಲ್ಪಡುವ ಬ್ರಹ್ಮಸುತೆಯಾದ ಸರಸ್ವತಿಯೇ ನನ್ನ ವಾಕ್ ಎನಿಸಿದ್ದಾಳೆ. ಅವಳು ನನ್ನ ಜಿಹ್ವೆಯಲ್ಲಿ ವಾಸಿಸುತ್ತಾಳೆ.
ಸಚ್ಚಾಸಚ್ಚೈವ ಕೌಂತೇಯ ಮಯಾವೇಶಿತಮಾತ್ಮನಿ |
ಪೌಷ್ಕರೇ ಬ್ರಹ್ಮಸದನೇ ಸತ್ಯಂ ಮಾಮೃಷಯೋ ವಿದುಃ ॥11॥
ಪೃಥಿವಿ, ಅಪ್, ತೇಜಸ್ಸು ಎಂಬ ಮೂರ್ತಪದಾರ್ಥಗಳು ಸತ್ ಎನಿಸಿವೆ. ಆಕಾಶ, ವಾಯುಗಳೆಂಬ ಅಮೂರ್ತಪದಾರ್ಥಗಳು ಅಸತ್

ಎನಿಸಿವೆ. ಗಗನದಂತೆ ವ್ಯಾಪ್ತವಾದ, ವಾಯುವಿನಂತೆ ಗಮನಶೀಲವಾದ ಪಂಚಭೂತಗಳು ನನ್ನಲ್ಲೇ ನೆಲೆಗೊಂಡಿರುವುದರಿಂದ ಸತ್ಯ ಎಂದು ಕರೆಯುತ್ತಾರೆ. ಕಮಲಪುಷ್ಪದ ಕರ್ಣಿಕಾ ಸ್ಥಾನದಲ್ಲಿರುವ ಸತ್ಯಲೋಕದಲ್ಲಿಯೂ ನನ್ನನ್ನು ಋಷಿಗಳು ಸತ್ಯನೆಂದೇ ಕರೆಯುತ್ತಾರೆ.
ಸತಃಸತ್ವನ್ನ ಚ್ಯುತಪೂರ್ವೋಽಹಂ ಸತ್ತ್ವಂ ವೈ ವಿದ್ಧಿ ಮತ್ಕೃತಮ್ |
ಜನ್ಮನೀಹಾಭವತ್ ಸತ್ತ್ವಂ ಪೌರ್ವಿಕಂ ಮೇ ಧನಂಜಯ ॥12॥
ಎಂದಿಗೂ ನನ್ನ ಸಾಮರ್ಥ್ಯವು ಚ್ಯುತಿ ಹೊಂದಿರುವುದಿಲ್ಲ. ಅಂತಹ ಸತ್ತ್ವಗುಣ ಪೂರ್ಣನಾದುದರಿಂದ ನನ್ನನ್ನು ಸತ್ತ್ವ ಎಂದು ಕರೆಯುತ್ತಾರೆ. ಅನಾದಿಕಾಲದಿಂದಿರುವ ಮೂಲರೂಪಕ್ಕೆ ಸಂಬಂಧಿಸಿದ ಕೃಷ್ಣಾವತಾರದಲ್ಲಿಯೂ ನಾನು ಸತ್ತ್ವ ಎಂದೇ ಕರೆಸಿಕೊಳ್ಳುತ್ತೇನೆ.
ನಿರಾಶೀಃಕರ್ಮಸಂಯುಕ್ತಂ ಸಾತ್ವತಂ ಮಾಂ ಪ್ರಕಲ್ಪಯ |
ಸಾತ್ವತಜ್ಞಾನದೃಷ್ಟೋಽಹಂ ಸಾತ್ವತಃ ಸಾತ್ವತೀಪತೇ ॥13॥
ರಜೋಗುಣ ಸಂಬಂಧ ರಹಿತವಾದ, ಕೇವಲ ಸತ್ತ್ವಗುಣ ನಿಮಿತ್ತವಾದ ನಿವೃತ್ತಿ ಕರ್ಮಕ್ಕೆ ಸಂಬಂಧಿಸಿದವನಾದ್ದರಿಂದ ಸಾತ್ವತನೆನಿಸಿದ್ದೇನೆ. ಸ್ವಾತಂತ್ರ್ಯ ಎಂಬ ಸಾಮರ್ಥ್ಯದಿಂದ ಕೇವಲ ಸತ್ತ್ವಗುಣಪ್ರಿಯನಾದುದರಿಂದಲೂ ರಜಸ್ಸು, ತಮಸ್ಸು ಗುಣಗಳ ನಿಮಿತ್ತವಾದ ಕಲ್ಮಷರಹಿತನಾದುದರಿಂದಲೂ ಸಾತ್ವತ ಎನ್ನುತ್ತಾರೆ. ಅಥವಾ ಸಾತ್ವತ ಎಂದರೆ ಸತ್ತ್ವಗುಣ ಸಂಬಂಧಿ ಎನಿಸಿದ ಪಂಚರಾತ್ರಾದಿ ವೈಷ್ಣವ ಗ್ರಂಥ ಸಮೂಹವು. ಆ ಗ್ರಂಥಗಳನ್ನು ನಾನೇ ಕಂಡ ಕಾರಣ ನನ್ನನ್ನು ಸಾತ್ವತ ಎನ್ನುತ್ತಾರೆ. ಅಥವಾ ಯಾದವ ಕುಲದಲ್ಲಿ ಉತ್ಪನ್ನಳಾದ, ನಿನ್ನ ಹೆಂಡತಿಯಾದ ಸುಭದ್ರೆಯು ಸಾತ್ವತಿ. ಯಾದವ ಕುಲದ ಸಂಬಂಧವು ನನಗೆ ಇರುವುದಿಲ್ಲ. ನಿನ್ನ ಹೆಂಡತಿಗೆ ಇರುತ್ತದೆ. ಯಾದವ ಕುಲವನ್ನು ಸಾತ್ವತ ಕುಲ ಎನ್ನುತ್ತಾರೆ. ಅಂತಹ ಸಾತ್ವತ ಕುಲದ ಕನ್ಯೆಯ ಪತಿ ನೀನಾಗಿರುವಿ ಹೊರತು ನಾನಲ್ಲ ಎಂಬುದಾಗಿ ಸಾತ್ವತೀಪತೇ ಎಂಬುದಾಗಿ ಅರ್ಜುನನನ್ನು ಕೃಷ್ಣನು ಸಂಬೋಧಿಸಿದ್ದಾನೆ.
ಕೃಷಾಮಿ ಮೇದಿನೀಂ ಪಾರ್ಥ ಭೂತ್ವಾ ಕಾರ್ಷ್ಣಾಯಸೋತ್ತರಃ |
ಕೃಷ್ಣೋ ವರ್ಣಶ್ಚ ಮೇ ಯಸ್ಮಾತ್ ತಸ್ಮಾತ್ ಕೃಷ್ಣೋಽಹಮರ್ಜುನ ॥
ಕೃಷ್ಣವರ್ಣದ ಕಬ್ಬಿಣವು ಉತ್ತರ ಭಾಗದಲ್ಲಿ ಉಳ್ಳ ಪದಾರ್ಥಕ್ಕೆ ಲಾಂಗಲ (ನೇಗಿಲು) ಎನ್ನುತ್ತಾರೆ. ಅಂತಹ ನೇಗಿಲನ್ನು ಭೂಪ್ರದೇಶದ ಒಳಗಡೆ ಪ್ರವೇಶಿಸುವಂತೆ ಮಾಡಿ ನಾನೇ ಕಬ್ಬಿಣದ ನೇಗಿಲಿನ ರೂಪವನ್ನು ತಾಳಿ ಭೂಮಿಯನ್ನುಳುವುದರಿಂದಲೂ ಕೃಷ್ಣವರ್ಣದವನಾದುದರಿಂದಲೂ ಅರ್ಜುನನೇ, ನನ್ನನ್ನು ಕೃಷ್ಣ ಎನ್ನುತ್ತಾರೆ.
ಮಯಾ ಸಂಶ್ಲೇಷಿತಾ ಭೂಮಿರದ್ಭಿರ್ವ್ಯೋಮ ಚ ವಾಯುನಾ |
ವಾಯುಶ್ಚ ತೇಜಸಾ ಸಾರ್ಧಂ ವೈಕುಂಠತ್ವಂ ತತೋ ಮಮ ॥15॥
ಅರ್ಜುನನೇ, ನಾನು ಮೂರುವಿಧ ಜೀವರಾಶಿಗಳನ್ನು ಮಳೆಯ ನೀರಿನ ಮೂಲಕ ಭೂಮಿಯಲ್ಲಿ ಸೇರಿಸುತ್ತೇನೆ. ವಾಯುವಿನ ಜೊತೆಗೂ ಸಂಬಂಧವನ್ನು ಹೊಂದುವಂತೆ ಮಾಡುತ್ತೇನೆ. ವಾಯುವನ್ನು ತೇಜಸ್ಸಿನ ಜೊತೆಗೆ ಸಂಬಂಧ ಹೊಂದುವಂತೆ ಮಾಡುತ್ತೇನೆ. ಆದ್ದರಿಂದ ಮೂರು ವಿಧ ಜೀವರಾಶಿಗಳು ತಮ್ಮ ಯೋಗ್ಯತೆಗೆ ಅನುಗುಣವಾದ ಜ್ಞಾನವನ್ನು ಸಂಪಾದಿಸಿ ಅಂಧಂತಮಸ್ಸಿನಲ್ಲಿ ನಾಶವಿಲ್ಲದೆ ಇರುವ ದುಃಖವನ್ನು ಅಧಮ ಜೀವರು ಹೊಂದುತ್ತಾರೆ. ಮಧ್ಯಮಜೀವರು ಮಧ್ಯಮ ಗತಿಯಲ್ಲಿ ನಾಶಹೊಂದದೇ ಇರುವ ಸ್ಥಿತಿಯನ್ನು ಹೊಂದುತ್ತಾರೆ. ಮುಕ್ತಜೀವರು ಮುಕ್ತಿಯಲ್ಲಿ ನಾಶಹೊಂದದೇ ಇರುವ ಸ್ಥಿತಿಯನ್ನು ಹೊಂದುತ್ತಾರೆ. ಈ ರೀತಿಯಾಗಿ ವಿಕುಂಠಣಗಳಿಗೂ ನಾನು ಅಧಿಪತಿಯಾಗಿರುವುದರಿಂದ ವೈಕುಂಠ ಎಂದು ಕರೆಸಿಕೊಂಡಿದ್ದೇನೆ. `ಉಭಯಸ್ಯ ರಾಜ' ಎಂಬ ಶ್ರುತಿಯು ಇದಕ್ಕೆ ಸಂವಾದಿಯಾಗಿದೆ. ಉಭಯಸ್ವಭಾವದವರಿಗೂ ನಾನೇ ರಾಜ ಎಂದು ಸ್ತುತ್ಯರ್ಥವು.
ನಿರ್ವಾಣಂ ಪರಮಂ ಸೌಖ್ಯಂ ಧರ್ಮೋಽಸೌ ಪರ ಉಚ್ಯತೇ |
ತಸ್ಮಾನ್ನ ಚ್ಯುತಪೂರ್ವೋಽಹಮಚ್ಯುತಸ್ತೇನ ಕರ್ಮಣಾ ॥16॥
ಪೃಥಿವೀನಭಸೀ ಚೋಭೇ ವಿಶ್ರುತೇ ವಿಶ್ವತೋಮುಖೇ |
ತಯೋಃ ಸಂಧಾರಣಾರ್ಥಂ ಹಿ ಮಾಮಧೋಕ್ಷಜಮಂಜಸಾ ॥17॥
ನಿರುಕ್ತಂ ವೇದವಿದುಷೋ ಯೇ ಚ ಶಬ್ದಾರ್ಥಚಿಂತಕಾಃ |
ತೇ ಮಾಂ ಗಾಯಂತಿ ಪ್ರಾಗ್ವಂಶೇ ಅಧೋಕ್ಷಜ ಇತಿ ಸ್ಥಿತಿಃ ॥18॥
ಮೋಕ್ಷವು ಪರಮಸುಖವೆನಿಸಿದೆ. ಧರ್ಮವು ಅತ್ಯಂತ ಶ್ರೇಷ್ಠವೆನಿಸಿದೆ. ಇಂತಹ ಮೋಕ್ಷಸುಖದಿಂದಾಗಲಿ, ಧರ್ಮದಿಂದಾಗಲಿ ನಾನೆಂದಿಗೂ ಚ್ಯುತವಾಗುವ ಕರ್ಮಗಳನ್ನು ಆಚರಿಸುವವನಲ್ಲವಾದ್ದರಿಂದ ನನ್ನನ್ನು ಅಚ್ಯುತನೆಂದು ಕರೆಯುತ್ತಾರೆ. ಎಲ್ಲೆಡೆಯೂ ವ್ಯಾಪಿಸಿರುವ ಪೃಥಿವಿ, ಆಕಾಶಗಳನ್ನು ನಾನು ಧರಿಸಿದ್ದೇನೆ. ಈ ಕಾರಣದಿಂದಲೇ ನನ್ನನ್ನು ಅಧೋಕ್ಷಜ ಎಂದು ಕರೆಯುತ್ತಾರೆ. ವೇದಜ್ಞಾನಿಗಳಾದ ಶಬ್ದಾರ್ಥ ಚಿಂತಕರು ನಿರುಕ್ತದಿಂದ ನನ್ನನ್ನು ಪ್ರಾಗ್ವಂಶ ಎಂಬ ಯಜ್ಞಸ್ಥಳದಲ್ಲಿ ಅಧೋಕ್ಷಜ ಎಂದು ಕರೆಯುತ್ತಾರೆ.
ವ್ಯಾಖ್ಯಾನ ವಿಶೇಷ ಅಥವಾ ಕೃಷ್ಣಾವತಾರ ರೂಪಿಯಾದ ನಾನು ಅವತಾರದಲ್ಲಿ ಪೃಥಿವಿಯಂತೆ ಸ್ವಲ್ಪ ಸ್ವಲ್ಪ ಮಾತ್ರ ಕಾಣಿಸಿಕೊಳ್ಳುತ್ತೇನೆ. ಮೂಲರೂಪದಲ್ಲಿ ಆಕಾಶದಂತೆ ಸರ್ವಥಾ ಅಗೋಚರನಾಗಿದ್ದೇನೆ. ಇಂತಹ ನನ್ನನ್ನು ಕಾಣಲು ಇಂದ್ರಿಯಗಳಿಂದ ಉತ್ಪನ್ನವಾದ ಜ್ಞಾನವು ಜಘನ್ಯವೆನಿಸುತ್ತದೆ. ಆದ್ದರಿಂದ `ಅಕ್ಷಜನಿತಂ ಜ್ಞಾನಂ ಅಧಃ ಯಸ್ಮಾತ್ ಇತಿ ಅಧೋಕ್ಷಜಃ' ಎಂದು ನಿರುಕ್ತದಿಂದ ಸಿದ್ಧವಾದ ನನ್ನ ನಾಮವು. ಅಥವಾ ಭೂಮಿಯಲ್ಲಿರುವ ಭೂಮಿ ಎಂಬ ಲಕ್ಷ್ಮೀ ರೂಪದಂತೆ, ಆಕಾಶದಲ್ಲಿರುವ ಶ್ರೀದೇವಿಯೆಂಬ ಲಕ್ಷ್ಮೀರೂಪದಂತೆ ನನ್ನ ಅನುಗ್ರಹವಿಲ್ಲದೆ ಸರ್ವಥಾ ನೋಡಲಾಗದು. ಆದ್ದರಿಂದಲೂ ಅಧೋಕ್ಷಜ ಎನಿಸಿದ್ದೇನೆ. ` `ತದವ್ಯಕ್ತಮಾಹ ಹಿ' ಎಂಬ ಬ್ರಹ್ಮಸೂತ್ರದಲ್ಲಿ ಮತ್ತು ಸ್ಮೃತಿವಾಕ್ಯದಲ್ಲಿ ಹೇಳಿದಂತೆ `ಪಶ್ಯಂತೋಪಿ ನ ಪಶ್ಯಂತಿ ಮೇರೋ ರೂಪಂ ವಿಪಶ್ಚಿತಃ' ಎಂದು ನನ್ನ ರೂಪವು ಅದೃಶ್ಯವಾದುದು ಎಂದು ತಾತ್ಪರ್ಯ. ಅಥವಾ ನಾಶ ಹೊಂದದೆ ಇರುವ ಕಾರಣದಿಂದ ಅಕ್ಷ ಎನಿಸಿದೆ. ಕ್ಷ ಎಂದರೆ `ಕ್ಷಯ' `ಕ್ಷಿ ಕ್ಷಯೇ' ಎಂಬ ಧಾತುವಿನ ಬಲದಿಂದ ಕ್ಷಯ ಎಂದು ಅರ್ಥ. `ಆದೇ ಚ ಉಪದೇಶೇಽಶಿತಿ ಚ' ಎಂಬ

ಸೂತ್ರದಿಂದ ಏಕಾರಕ್ಕೆ ಆಕಾರ ಬರಲು `ಆತೋಽನುಪಸರ್ಗೇ ಕಃ' ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಕಪ್ರತ್ಯಯವು ಬರಲು `ಆತೋ ಲೋಪ ಇಟಿ ಚ' ಎಂಬ ಸೂತ್ರದಿಂದ ಆಕಾರ ಲೋಪವಾಗುತ್ತಿರಲು `ಕ್ಷಂ' ಎಂಬ ರೂಪವು ನಿಷ್ಪನ್ನವಾಗುತ್ತದೆ. `ಅಧಃ' ಎಂದರೆ ಭೂಲೋಕದಲ್ಲಿ `ಜಃ' ಹುಟ್ಟಿದರೂ ಕೂಡ, `ಯಃ' ಯಾವ ಭಗವಂತನು, `ನ ಕ್ಷೀಯತೆ' ಕ್ಷಯವನ್ನು ಹೊಂದುವುದಿಲ್ಲವೋ, ಅವನು ಅಧೋಕ್ಷಜ ಎಂದು ಹೇಳಿದಂತಾಯಿತು.
ಶಬ್ದ ಏಕಮತೈರೇಷ ವ್ಯಾಹೃತಃ ಪರಮರ್ಷಿಭಿಃ |
ನಾನ್ಯೋ ಹ್ಯಧೋಕ್ಷಜೋ ಲೋಕೇ ಋತೇ ನಾರಾಯಣಂ ಪ್ರಭುಮ್ ॥
ಒಂದೇ ಶಬ್ದವನ್ನು ಒಂದೊಂದು ಮತಪ್ರವರ್ತಕರು ಹೇಳಿದ್ದರೂ ಪ್ರಭುವಾದ, ನಾರಾಯಣನಾದ ನನ್ನನ್ನು ಬಿಟ್ಟು ಉಳಿದ ಯಾರೂ ಅಧೋಕ್ಷಜ ಎಂದು ಪ್ರಸಿದ್ಧರಾಗಿರುವುದಿಲ್ಲ.
ಘೃತಂ ಮಮಾರ್ಚಿಷೋ ಲೋಕೇ ಜಂತೂನಾಂ ಪ್ರಾಣಧಾರಣಮ್ |
ಘೃತಾರ್ಚಿರಹಮವ್ಯಗ್ರೈರ್ವೇದಜ್ಞೈಃ ಪರಿಕೀರ್ತಿತಃ ॥20॥
ಅಗ್ನ್ಯಂತರ್ಯಾಮಿಯಾದ ನನಗೆ ಅರ್ಚನೆಗೆ ಸಾಧನವಾದ ಘೃತವು ಅರ್ಚಿಸ್ ಎನಿಸಿದೆ. ಅಥವಾ ಗೋವಿನ ಘೃತವು ಸುವರ್ಣವರ್ಣದಿಂದ ಕೂಡಿರುವುದರಿಂದ ಘೃತವು ನನ್ನ ಕಾಂತಿಗೆ ಸದೃಶವಾಗಿದೆ. ಹೀಗಾಗಿ ಘೃತದಿಂದ ಪೂಜಿತನಾದ ಅಥವಾ ಘೃತದಂತೆ ಬೆಳಗುವ ನಾನು ಘೃತಾಚಿ ಎನಿಸಿದ್ದೇನೆ. ಈ ಅಭಿಪ್ರಾಯದಲ್ಲೇ ಘೃತಪ್ರತೀಕ ಎಂದು ಶ್ರುತಿಯು ಹೇಳುತ್ತದೆ. ಸಮಸ್ತ ಜೀವರಿಗೂ ಪ್ರಾಣಧಾರಕನಾಗಿ ಸಮಾಧಾನಿಗಳಾದ ವೇದಜ್ಞರಿಂದ ಘೃತಾಚಿ ಎಂದು ಸ್ವೀಕೃತನಾಗಿದ್ದೇನೆ.
ತ್ರಯೋ ಹಿ ಧಾತವಃ ಖ್ಯಾತಾಃ ಕರ್ಮಜಾ ಇತಿ ಚ ಸ್ಮೃತಾಃ |
ಪಿತ್ತಂ ಶ್ಲೇಷ್ಮಾ ಚ ವಾಯುಶ್ಚ ಏಷ ಸಂಘಾತ ಉಚ್ಯತೇ ॥21॥
ಏತೈಶ್ಚ ಧಾರ್ಯತೇ ಜಂತುರೇತೈಃ ಕ್ಷೀಣೈಶ್ಚ ಕ್ಷೀಯತೇ |
ಆಯುರ್ವೇದವಿದಸ್ತಸ್ಮಾತ್ ತ್ರಿಧಾತುಂ ಮಾಂ ಪ್ರಚಕ್ಷತೇ ॥22॥
ದೇಹದಲ್ಲಿ ವಾತ, ಪಿತ್ತ, ಶ್ಲೇಷ್ಮ ಎಂಬ ಮೂರು ಧಾತುಗಳ ಸಂಘಾತವಿದೆ. ಅವುಗಳು ಕ್ಷಯಿಸಿದಾಗ ಪ್ರಾಣಿಗಳು ನಾಶ ಹೊಂದುತ್ತವೆ. ಆದ್ದರಿಂದ ಆಯುರ್ವೇದವನ್ನು ಬಲ್ಲವರು ನನ್ನನ್ನೇ ಮೂರು ಧಾತುಗಳ ಧಾರಕನಾದುದರಿಂದ ತ್ರಿಧಾತು ಎನ್ನುತ್ತಾರೆ.
ವೃಷೋ ಹಿ ಭಗವಾನ್ ಧರ್ಮಃ ಖ್ಯಾತೋ ಲೋಕೇಷು ಭಾರತ |
ನೈಘಂಟುಕಪದಾಖ್ಯಾತಂ ವಿದ್ಧಿ ಮಾಂ ವೃಷಮುತ್ತಮಮ್ ॥23॥
ಕಪಿರ್ವರಾಹಃ ಶ್ರೇಷ್ಠಶ್ಚ ಧರ್ಮಶ್ಚ ವೃಷ ಉಚ್ಯತೇ |
ತಸ್ಮಾದ್‌ವೃಷಾಕಪಿಂ ಪ್ರಾಹ ಕಶ್ಯಪೋ ಮಾಂ ಪ್ರಜಾಪತಿಃ ॥24॥
ವೃಷ ಎಂದರೆ ಧರ್ಮವು. ನಾನು ಧರ್ಮರೂಪನು. ಕಪಿ ಎಂದರೆ ವರಾಹವು. ಈ ದೃಷ್ಟಿಯಿಂದಲೇ ಕಶ್ಯಪ ಋಷಿಯು ನನ್ನನ್ನು ವೃಷಾಕಪಿ ಎಂದರು. ನಿಘಂಟುವಿನಿಂದ ನಿಷ್ಪನ್ನವಾದ ವೃಷ ಶಬ್ದವು ಧರ್ಮ ಎಂದು ಹೇಳಿದರೆ, ಕಪಿಶಬ್ದವು ವರಾಹ ಎಂಬ ಅರ್ಥವನ್ನು ಹೇಳುತ್ತದೆ. ಸಮಗ್ರವಾಗಿ ಎಲ್ಲೆಡೆಯೂ ನೀರನ್ನು ಕುಡಿಸುವುದರಿಂದ ಕಪಿ ಎಂದು, ಶ್ರೇಷ್ಠಧರ್ಮಶೀಲರಿಗೆ ದುಃಖವನ್ನು ನಾಶಗೊಳಿಸುತ್ತಾನಾದ್ದರಿಂದ ವೃಷಾಕಪಿ ಎಂದು ಭಗವಂತನು ಪ್ರಸಿದ್ಧನಾಗಿದ್ದಾನೆ.
ನ ಚಾದಿಂ ನ ಮಧ್ಯಂ ತಥಾ ನೈವ ಚಾಂತಂ
ಕದಾಚಿದ್ ವಿದಂತೇ ಸುರಾಶ್ಚಾಸುರಾಶ್ಚ |
ಅನಾದ್ಯೋ ಹ್ಯಮಧ್ಯಸ್ತಥಾ ಚಾಪ್ಯನಂತಃ
ಪ್ರಗೀತೋಽಹಮೀಶೋ ವಿಭುರ್ಲೋಕಸಾಕ್ಷೀ ॥25॥
ಬ್ರಾಹ್ಮಣರಾಗಲಿ, ದೇವತೆಗಳಾಗಲಿ ಆದಿ-ಮಧ್ಯಾಂತವನ್ನು ಕಂಡಿರುವುದಿಲ್ಲ. ಅದರಿಂದ ನಾನು ಆದಿ-ಮಧ್ಯಾಂತಗಳು ಇಲ್ಲದವನೆಂದು ಕೀರ್ತಿಸಲ್ಪಡುತ್ತೇನೆ. ನಾನೇ ಒಡೆಯನೂ, ಸಮರ್ಥನೂ, ಲೋಕಸಾಕ್ಷಿಯೂ ಆಗಿದ್ದೇನೆ.
ಶುಚೀನಿ ಶ್ರವಣೀಯಾನಿ ಶೃಣೋಮೀಹ ಧನಂಜಯ |
ನ ಚ ಪಾಪಾನಿ ಗೃಹ್ಣಾಮಿ ತತೋಽಹಂ ವೈ ಶುಚಿಶ್ರವಾಃ ॥26॥
ಪವಿತ್ರವಾದ ಮತ್ತು ಶ್ರವಣಯೋಗ್ಯವಾದ ಮಾತುಗಳಿಗೆ ನಾನು ಆಸಕ್ತಿ ವಹಿಸುತ್ತೇನೆ ಹೊರತು ಪಾಪವಚನಗಳನ್ನು ಎಂದಿಗೂ ಸ್ವೀಕರಿಸುವುದಿಲ್ಲ. ಆದ್ದರಿಂದಲೇ ನಾನು ಶುಚಿಶ್ರವ ಎನಿಸಿದ್ದೇನೆ.
ಏಕಶೃಂಗಃ ಪುರಾ ಭೂತ್ವಾ ವರಾಹೋ ದಿವ್ಯದರ್ಶನಃ |
ಇಮಾಮುದ್ಧೃತವಾನ್ ಭೂಮಿಮೇಕಶೃಂಗಸ್ತತೋ ಹ್ಯಹಮ್ ॥27॥
ಹಿಂದೆ ಒಂದೇ ಕೊಂಬುಳ್ಳ ವರಾಹರೂಪವನ್ನು ತಾಳಿ ದಿವ್ಯದರ್ಶನನಾದ ನಾನು ಈ ಭೂಮಿಯನ್ನು ಧರಿಸಿದ್ದರಿಂದ ಏಕಶೃಂಗನೆಂದು ಪ್ರಸಿದ್ಧನಾದೆನು.
ತಥೈವಾಸಂ ತ್ರಿಕಕುದಾ ವಾರಾಹಂ ರೂಪಮಾಸ್ಥಿತಃ |
ತ್ರಿಕಕುತ್ತೇನ ವಿಖ್ಯಾತಃ ಶರೀರಸ್ಯ ತು ಮಾಪನಾತ್ ॥28॥
ವರಾಹರೂಪದಲ್ಲಿ ಎರಡು ಭುಜಗಳಲ್ಲಿ, ಶಿರೋಮೂಲದಲ್ಲಿ ಮೂರು ಡುಬ್ಬಗಳು ಇದ್ದ ಕಾರಣ ನನ್ನನ್ನು ತ್ರಿಕಕುತ್ ಎಂದು ಎಲ್ಲರೂ ಕರೆದರು. ಹೀಗೆ ನಾನು ಪ್ರಸಿದ್ಧನಾದೆನು.
ವಿರಿಂಚ ಇತಿ ಯಃ ಪ್ರೋಕ್ತಃ ಕಪಿಲಜ್ಞಾನಚಿಂತಕೈಃ |
ಸ ಪ್ರಜಾಪತಿರೇವಾಹಂ ಚೇತನಾತ್ ಸರ್ವಲೋಕಕೃತ್ ॥29॥
ವಿರಿಂಚ ಎಂದು ಯಾರನ್ನು ಕರೆಯುತ್ತಾರೋ, ತತ್ತ್ವಜ್ಞಾನ ಚಿಂತಕರು ಸರ್ವಲೋಕವನ್ನು ನಿರ್ಮಿಸುವ ಚೇತನನಾದ ಪ್ರಜಾಪತಿಯಾದ ನನ್ನನ್ನೇ ವಿರಿಂಚ ಎಂದು ಕರೆಯುತ್ತಾರೆ.

ವಿದ್ಯಾಸಹಾಯವಂತಂ ಮಾಮಾದಿತ್ಯಸ್ಥಂ ಸನಾತನಮ್ |
ಕಪಿಲಂ ಪ್ರಾಹುರಾಚಾರ್ಯಾಃ ಸಾಂಖ್ಯಾ ನಿಶ್ಚಿತನಿಶ್ಚಯಾಃ ॥30॥
ವಿದ್ಯಾಸಹಾಯನೂ, ಸೂರ್ಯಮಂಡಲದಲ್ಲಿರುವವನೂ ಆದ ನನ್ನನ್ನು ಸಾಂಖ್ಯರು ಕಪಿಲನೆಂದು ಹೇಳುತ್ತಾರೆ.
ವ್ಯಾಖ್ಯಾನ ವಿಶೇಷ `ಕಂ ಮೋಕ್ಷಸುಖಂ ಪಿಬಂತಿ ಅನೇನ ಇತಿ ಕಪಿಃ ತತ್ತ್ವಜ್ಞಾನಮ್ | ತೇನ ಲಸಮಾನಃ ಕಪಿಲಃ'
ಹಿರಣ್ಯಗರ್ಭೋ ದ್ಯುತಿಮಾನೇಷ ಯಶ್ಛಂದಸಿ ಸ್ತುತಃ |
ಯೋಗೈಃ ಸಂಪೂಜ್ಯತೇ ನಿತ್ಯಂ ಸ ಏವಾಹಂ ವಿಭುಃ ಸ್ಮೃತಃ ॥31॥
ಹಿರಣ್ಯಗರ್ಭ ಎಂದು ಯೋಗಿಜನರು ಪೂಜಿಸುವುದು ವೇದಸ್ತುತ್ಯನಾದ ನನ್ನನ್ನೇ. ಆದ್ದರಿಂದ ನಾನೇ ವಿಭು ಎಂದು ಕರೆಸಿಕೊಳ್ಳುತ್ತೇನೆ.

ಏಕವಿಂಶತಿಶಾಖಂ ಚ ಋಗ್ವೇದಂ ಮಾಂ ಪ್ರಚಕ್ಷತೇ |
ಸಹಸ್ರಶಾಖಂ ಯತ್ ಸಾಮ ಯೇ ವೈ ವೇದವಿದೋ ಜನಾಃ |
ಗಾಯಂತ್ಯಾರಣ್ಯಕೇ ವಿಪ್ರಾ ಮದ್ಭಕ್ತಾಸ್ತೇಽಪಿ ದುರ್ಲಭಾಃ ॥32॥
ಇಪ್ಪತ್ತೊಂದು ಶಾಖೆಗಳಿಂದ ಕೂಡಿದ ಋಗ್ವೇದವು, ಸಹಸ್ರ ಶಾಖೆಯುಳ್ಳ ಸಾಮವೇದವು ನನ್ನನ್ನೇ ಕೊಂಡಾಡುತ್ತದೆ ಎಂದು ವೇದಜ್ಞರು ಹೇಳುತ್ತಾರೆ. ಬ್ರಾಹ್ಮಣರು ಆರಣ್ಯಕದಲ್ಲಿ ನನ್ನನ್ನು ಧ್ಯಾನ ಮಾಡುತ್ತಾರೆ.
ಷಟ್‌ಪಂಚಾಶತಮಷ್ಟೌ ಚ ಸಪ್ತತ್ರಿಂಶತಮಿತ್ಯುತ |
ಯಸ್ಮಿನ್ ಶಾಖಾ ಯಜುರ್ವೇದೇ ಸೋಽಹಮಾಧ್ವರ್ಯವೇ ಸ್ಮೃತಃ ॥
ನೂರ ಒಂದು ಶಾಖೆಯುಳ್ಳ ಯಜುರ್ವೇದದ ಮೂಲಕವೂ ಅಧ್ವರ್ಯುಗಳು ನನ್ನನ್ನು ವರ್ಣಿಸುತ್ತಾರೆ.
ಪಂಚಕಲ್ಪಮಥರ್ವಾಣಂ ಕೃತ್ಯಾಭಿಃ ಪರಿಬೃಂಹಿತಮ್ |
ಕಲ್ಪಯಂತಿ ಹಿ ಮಾಂ ವಿಪ್ರಾ ಅಥರ್ವಾಣವಿದಸ್ತಥಾ ॥34॥
ಐದು ಕಲ್ಪಗಳಿಂದ, ಸಮಸ್ತ ಕೃತ್ಯಗಳಿಂದ ಕೂಡಿದ ಅಥರ್ವಣ ವೇದದಲ್ಲಿಯೂ ನನ್ನನ್ನೇ ವೇದಜ್ಞರು ಕೀರ್ತಿಸುತ್ತಾರೆ.
ಶಾಖಾಭೇದಾಶ್ಚ ಯೇ ಕೇಚಿದ್ ಯಾಶ್ಚ ಶಾಖಾಸು ಗೀತಯಃ |
ಸ್ವರವರ್ಣಸಮುಚ್ಚಾರಾಃ ಸರ್ವಾಂಸ್ತಾನ್ ವಿದ್ಧಿ ಮತ್ಕೃತಾನ್ ॥35॥
ಸಮಸ್ತ ವೇದಗಳು, ಅದರ ಭಿನ್ನ ಭಿನ್ನ ಶಾಖೆಗಳು, ಶಾಖೆಯಲ್ಲಡಗಿದ ಗೀತೆಗಳು, ಆ ಗೀತೆಯಲ್ಲಿರುವ ಸ್ವರೂಪಭೇದಗಳು, ವರ್ಣಉಚ್ಚಾರಣ ವಿದ್ಯೆಗಳು ಎಲ್ಲವೂ ನನ್ನಿಂದಲೇ ಉಂಟಾದವು ಎಂದು ತಿಳಿ.
ಯತ್ ತದ್ಧಯಶಿರಃ ಪಾರ್ಥ ಸಮುದೇತಿ ವರಪ್ರದಮ್ |
ಸೋಽಹಮೇವೋತ್ತರೇ ಭಾಗೇ ಕ್ರಮಾಕ್ಷರವಿಭಾಗವಿತ್ ॥36॥
ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಂತೆ ವರಪ್ರದನಾದ, ವೇದಗಳ ಕ್ರಮದಲ್ಲಿ ಅಕ್ಷರಗಳ ಕ್ರಮವನ್ನು ತಿಳಿದವನಾದ, ಉತ್ತರದಿಕ್ಕಿನ ಪಾರ್ಶ್ವದಲ್ಲಿರುವ ಹಯಗ್ರೀವನೆಂಬುವನು ನಾನೇ.
ರಾಮಾದೇಶಿತಮಾರ್ಗೇಣ ಮತ್ಪ್ರಸಾದಾನ್ಮಹಾತ್ಮನಾ |
ಪಾಂಚಾಲೇನ ಕ್ರಮಃ ಪ್ರಾಪ್ತಸ್ತಸ್ಮಾದ್ಭೂತಾತ್ ಸನಾತನಾತ್ |
ಬಾಭ್ರವ್ಯಗೋತ್ರಃ ಸ ಬಭೌ ಪ್ರಥಮಃ ಕ್ರಮಪಾರಗಃ ॥37॥
ರಾಮದೇವರಿಂದ ಉಪದೇಶಿಸಲ್ಪಟ್ಟ ಮಾರ್ಗದಲ್ಲಿ ಪಾಂಚಾಲಮುನಿಯು ನನ್ನ ಅನುಗ್ರಹದಿಂದ ಆ ಹಯಗ್ರೀವರೂಪದಿಂದಲೇ ವೇದಕ್ರಮದ ಪಾಠವನ್ನು ತಿಳಿದುಕೊಂಡನು. ಬಾಭ್ರವ್ಯಗೋತ್ರದ ಆ ಮುನಿಯೇ ಮೊಟ್ಟ ಮೊದಲು ಕ್ರಮ ಪಾಠವನ್ನು ತಿಳಿದವನು.
ನಾರಾಯಣಾದ್ ವರಂ ಲಬ್ಧ್ವಾ ಪ್ರಾಪ್ಯ ಯೋಗಮನುತ್ತಮಮ್ |
ಕ್ರಮಂ ಪ್ರಣೀಯ ಶಿಕ್ಷಾಂ ಚ ಪ್ರಣಯಿತ್ವಾ ಸ ಗಾಲವಃ ॥38॥
ಬಳಿಕ ಗಾಲವ ಋಷಿಯು ನಾರಾಯಣನ ವರದಿಂದ ಉತ್ತಮ ಯೋಗಸಿದ್ಧಿಯನ್ನು ಪಡೆದು ಕ್ರಮಪಾಠವನ್ನು, ವೇದಶಿಕ್ಷೆಯನ್ನು ಅಭ್ಯಸಿಸಿ ಅದರಲ್ಲಿ ಪಾರಂಗತನೆನಿಸಿದನು.
ಪುಂಡರೀಕೋಽಥ ರಾಜಾ ಚ ಬ್ರಹ್ಮದತ್ತಃ ಪ್ರತಾಪವಾನ್ |
ಜಾತೀಮರಣಜಂ ದುಃಖಂ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ |
ಸಪ್ತಜಾತಿಷು ಮುಖ್ಯತ್ವಾದ್ಯೋಗಾನಾಂ ಸಂಪದಂ ಗತಃ ॥39॥
ಬಳಿಕ ಪುಂಡರೀಕ ಎಂಬ ರಾಜನು ಪ್ರತಾಪಶಾಲಿಯಾದ ಬ್ರಹ್ಮದತ್ತನೆಂದು ಖ್ಯಾತನಾಗಿದ್ದನು. ಅವನು ಜನನ-ಮರಣದಿಂದ ಉಂಟಾದ ದುಃಖವನ್ನು ಕ್ಷಣಕ್ಷಣಕ್ಕೂ ಚಿಂತಿಸಿ, ಯೋಗಿಗಳು ಏಳು ಜನ್ಮಗಳಿಂದ ಪಡೆಯುವಂತಹ ಸಂಪತ್ತನ್ನು ನನ್ನ ಪ್ರಸಾದದಿಂದ ಹೊಂದಿದನು.
ಪುರಾಹಮಾತ್ಮಜಃ ಪಾರ್ಥ ಪ್ರಥಿತಃ ಕಾರಣಾಂತರೇ |
ಧರ್ಮಸ್ಯ ಕುರುಶಾರ್ದೂಲ ತತೋಽಹಂ ಧರ್ಮಜಃ ಸ್ಮೃತಃ ॥40॥
ಅರ್ಜುನನೇ, ಹಿಂದೆ ನಾನು ಯಾವುದೋ ಒಂದು ಕಾರಣದಿಂದ ಧರ್ಮನ ಪುತ್ರನಾಗಿ ಅವತರಿಸಿದೆ. ಇದರಿಂದ ನಾನು ಧರ್ಮಜನೆನಿಸಿದ್ದೇನೆ.
ನರನಾರಾಯಣೌ ಪೂರ್ವಂ ತಪಸ್ತೇಪತುರವ್ಯಯಮ್ |
ಧರ್ಮಯಾನಂ ಸಮಾರೂಢೌ ಪರ್ವತೇ ಗಂಧಮಾದನೇ ॥41॥
ನಾನು ನರ-ನಾರಾಯಣ ಎಂದು ಎರಡು ರೂಪದಿಂದ ವೈದಿಕ ಸತ್ಕರ್ಮಾನುಷ್ಠಾನಕ್ಕೆ ಉಪಯುಕ್ತವಾದ ಧರ್ಮದ ವಾಹನವನ್ನು ಏರಿ ಅದೇ ರೂಪದಿಂದ ಗಂಧಮಾದನದಲ್ಲಿ ತಪಸ್ಸನ್ನು ಮಾಡಿದೆನು.

ತತ್ಕಾಲಸಮಯಂ ಚೈವ ದಕ್ಷಯಜ್ಞೋ ಬಭೂವ ಹ |
ನ ಚೈವಾಕಲ್ಪಯದ್ಭಾಗಂ ದಕ್ಷೋ ರುದ್ರಸ್ಯ ಭಾರತ ॥42॥
ಆ ಪ್ರಸಂಗದಲ್ಲಿ ದಕ್ಷಪ್ರಜಾಪತಿಯ ಮಹಾಯಜ್ಞವು ನಡೆಯುತ್ತಿತ್ತು. ದಕ್ಷ ಪ್ರಜಾಪತಿಯು ಆ ಯಜ್ಞದಲ್ಲಿ ರುದ್ರದೇವನಿಗೆ ಹವಿರ್ಭಾಗವನ್ನು ನೀಡಲಿಲ್ಲ.
ತತೋ ದಧೀಚಿವಚನಾದ್ ದಕ್ಷಯಜ್ಞಮಪಾಹರತ್ |
ಸಸರ್ಜ ಶೂಲಂ ಕ್ರೋಧೇನ ಪ್ರಜ್ವಲಂತಂ ಮುಹುರ್ಮುಹುಃ ॥43॥
ಆ ಪ್ರಸಂಗದಲ್ಲಿ ದಧೀಚಿಯ ಪ್ರೇರಣೆಯಂತೆ ರುದ್ರದೇವನು ಯಜ್ಞವನ್ನು ನಾಶಗೊಳಿಸಿದನು. ಆ ಯಜ್ಞನಾಶಕ್ಕಾಗಿ ರುದ್ರನು ಪ್ರಯೋಗಿಸಿದ ಶೂಲವು ರುದ್ರದೇವನ ಕ್ರೋಧದಿಂದ ಹೆಜ್ಜೆ ಹೆಜ್ಜೆಗೂ ಪ್ರಜ್ವಲಿಸುತ್ತಿತ್ತು.
ತಚ್ಛೂಲಂ ಭಸ್ಮಸಾತ್ಕೃತ್ವಾ ದಕ್ಷಯಜ್ಞಂ ಸವಿಸ್ತರಮ್ |
ಆವಯೋಃ ಸಹಸಾಗಚ್ಛದ್ ಬದರ್ಯಾಶ್ರಮಮಂತಿಕಾತ್ |
ವೇಗೇನ ಮಹತಾ ಪಾರ್ಥ ಪತನ್ನಾರಾಯಣೋರಸಿ ॥44॥
ಆ ಪ್ರಜ್ವಲಿಸುವ ಶೂಲವು ದಕ್ಷಯಜ್ಞವನ್ನು ಸಮಗ್ರವಾಗಿ ಭಸ್ಮ ಮಾಡಿ, ಬದರಿಕಾಶ್ರಮದಲ್ಲಿ ನರ-ನಾರಾಯಣರಾಗಿ ನಾವು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಆಗಮಿಸಿತು. ಆ ಶೂಲದ ಮಹಾವೇಗವು ನಾರಾಯಣ ವಕ್ಷಸ್ಸ್ಥಲದಲ್ಲಿಯೇ ಪತನ ಹೊಂದಿತು.
ತತಃ ಸ್ವತೇಜಸಾವಿಷ್ಟಾಃ ಕೇಶಾ ನಾರಾಯಣಸ್ಯ ಹ |
ಬಭೂವುರ್ಮುಂಜವರ್ಣಾಸ್ತು ತತೋಽಹಂ ಮುಂಜಕೇಶವಾನ್ ॥45॥
ಆ ಶೂಲದ ತೇಜಸ್ಸಿನಿಂದ ನಾರಾಯಣನ ಕೇಶಗಳು ಆವೃತವಾಗಿ ಮುಂಜ ಎಂಬ ಬಣ್ಣಕ್ಕೆ ತಿರುಗಿದವು. ಇದರಿಂದ ನನಗೆ ಮುಂಜಕೇಶ ಎಂಬ ಹೆಸರುಂಟಾಯಿತು.
ತಚ್ಚ ಶೂಲಂ ವಿನಿರ್ಧೂತಂ ಹುಂಕಾರೇಣ ಮಹಾತ್ಮನಾ |
ಜಗಾಮ ಶಂಕರಕರಂ ನಾರಾಯಣಸಮಾಹತಮ್ ॥46॥
ಬಳಿಕ ಆ ಶೂಲವನ್ನು ಕಂಡು ನಾರಾಯಣನಾದ ನಾನು ಹೂಂಕಾರ ಮಾಡಿದೆನು. ಕೂಡಲೇ ಅದು ಹಾರಿ ಪುನಃ ಶಂಕರನ ಕೈಯಲ್ಲಿ ಸೇರಿಕೊಂಡಿತು.
ಅಥ ರುದ್ರ ಉಪಾಧಾವತ್ತಾವೃಷೀ ತಪಸಾನ್ವಿತೌ |
ತತ ಏನಂ ಸಮುದ್ಧೂತಂ ಕಂಠೇ ಜಗ್ರಾಹ ಪಾಣಿನಾ |
ನಾರಾಯಣಃ ಸ ವಿಶ್ವಾತ್ಮಾ ತೇನಾಸ್ಯ ಶಿತಿಕಂಠತಾ ॥47॥
ಆ ಸಮಯದಲ್ಲಿ ರುದ್ರನು ಅದರ ವೇಗಕ್ಕೆ ಭಯಪಟ್ಟು ನರ-ನಾರಾಯಣರ ಬಳಿ ಆಗಮಿಸಿ ಶೂಲವು ಅವರ ಮೇಲೆ ಬೀಳುವುದರಲ್ಲಿ ನಾರಾಯಣನು ರುದ್ರನ ಕಂಠಕ್ಕೆ ಕೈಕೊಟ್ಟು ಬಲವಾಗಿ ಹಿಡಿದನು. ಆ ಹಿಡಿತದಿಂದ ರುದ್ರನ ಕಂಠವು ನೀಲಿಯಾಗಿ ಶಿತಿಕಂಠನೆನಿಸಿದನು.
ಅಥ ರುದ್ರವಿಘಾತಾರ್ಥಮಿಷೀಕಾಂ ಜಗೃಹೇ ನರಃ |
ಮಂತ್ರೈಶ್ಚ ಸಂಯುಯೋಜಾಶು ಸೋಽಭವತ್ ಪರಶುರ್ಮಹಾನ್ ॥
ಬಳಿಕ ನರನು ರುದ್ರನನ್ನು ತಡೆಯಲು ಒಂದು ಇಷೀಕಾ ಎಂಬ ಹುಲ್ಲನ್ನು ಎತ್ತಿಕೊಂಡು ಅಭಿಮಂತ್ರಿಸಲು ಆ ಹುಲ್ಲೇ ಒಂದು ದೊಡ್ಡ ಪರಶುವಿನಂತಾಯಿತು.
ಕ್ಷಿಪ್ತಶ್ಚ ಸಹಸಾ ರುದ್ರೇ ಖಂಡನಂ ಪ್ರಾಪ್ತವಾಂಸ್ತದಾ |
ತತೋಽಹಂ ಖಂಡಪರಶುಃ ಸ್ಮೃತಃ ಪರಶುಖಂಡನಾತ್ ॥49॥
ರುದ್ರನ ಮೇಲೆ ಆ ಪರಶುವನ್ನು ಎಸೆದ ಬಳಿಕ, ರುದ್ರನ ಕೈಯಲ್ಲಿರುವಂತಹ ಪರಶುವೇ ನರನು ಪ್ರಯೋಗಿಸಿದ ಇಷೀಕಾ ಎಂಬ ಪರಶುವಿನಿಂದ ತುಂಡಾಯಿತು. ಯಾವ ರುದ್ರನ ಪರಶುವನ್ನು ನರರೂಪದಿಂದ ಖಂಡಿಸಿದೆನೋ ಆದ್ದರಿಂದ ನಾನೂ ಖಂಡಪರಶು ಎಂದು ಪ್ರಸಿದ್ಧನಾದೆನು.
ವ್ಯಾಖ್ಯಾನ ವಿಶೇಷ `ಖಂಡಿತಃ ಪರಶುಃ ಯೇನ ಸಃ ಖಂಡಪರಶುಃ'.
ಅರ್ಜುನಃ
ಅಸ್ಮಿನ್ ಯುದ್ಧೇ ತು ವಾರ್ಷ್ಣೇಯ ತ್ರೈಲೋಕ್ಯಮಥನೇ ತದಾ |
ಜಯಂ ಕಃ ಪ್ರಾಪ್ತವಾಂಸ್ತತ್ರ ಶಂಸೈತನ್ಮೇ ಜನಾರ್ದನ ॥50॥
ಅರ್ಜುನ ಕೃಷ್ಣನೇ, ತ್ರೈಲೋಕ್ಯವಿನಾಶಕವಾದ ರುದ್ರ-ನಾರಾಯಣರ ಯುದ್ಧದಲ್ಲಿ ಯಾರು ಜಯವನ್ನು ಹೊಂದಿದರು? ಇದನ್ನು ನನಗೆ ಹೇಳು.
ಶ್ರೀಭಗವಾನ್
ತಯೋಃ ಸಂಲಗ್ನಯೋರ್ಯುದ್ಧೇ ರುದ್ರನಾರಾಯಣಾತ್ಮನೋಃ |
ಉದ್ವಿಗ್ನಾಃ ಸಹಸಾ ಕೃತ್ಸ್ನಾ ಲೋಕಾಃ ಸರ್ವೇಽಭವಂಸ್ತದಾ ॥51॥
ನಾಗೃಹ್ಣಾತ್ ಪಾವಕಃ ಶುಭ್ರಂ ಮಖೇಷು ಸುಹುತಂ ಹವಿಃ |
ವೇದಾ ನ ಪ್ರತಿಭಾಂತಿ ಸ್ಮ ಋಷೀಣಾಂ ಭಾವಿತಾತ್ಮನಾಮ್ ॥52॥
ಶ್ರೀಭಗವಾನ್ ಅರ್ಜುನನೇ ಕೇಳು. ಆ ಯುದ್ಧದಲ್ಲಿ ಲೋಕವೆಲ್ಲವೂ ಉದ್ವಿಗ್ನವಾಯಿತು. ಯಜ್ಞದಲ್ಲಿ ಹೋಮ ಮಾಡಿದ ಶುದ್ಧವಾದ ಹವಿಸ್ಸನ್ನು ಅಗ್ನಿಯು ಸ್ವೀಕರಿಸಲಿಲ್ಲ. ಋಷಿಗಳಿಗೆ ವೇದಮಂತ್ರಗಳು ತೋರಲಿಲ್ಲ.
ದೇವಾನ್ರಜಸ್ತಮಶ್ಚೈವ ಸಮಾವಿವಿಶತುಸ್ತದಾ |

ವಸುಧಾ ಸಂಚಕಂಪೇऽಥ ನಭಶ್ಚ ವಿಪಫಾಲ ಹ ॥53॥
ದೇವತೆಗಳಲ್ಲಿ ರಜಸ್ಸು, ತಮಸ್ಸು ಗುಣಗಳು ಆವರಿಸಿದವು. ಭೂಮಿಯು ಕಂಪಿಸಿತು. ಆಕಾಶವೇ ಭೇದಿಸಿತು.
ನಿಷ್ಪ್ರಭಾಣಿ ಚ ತೇಜಾಂಸಿ ಬ್ರಹ್ಮಾ ಚೈವಾಸನಾಚ್ಚ್ಯುತಃ |
ಅಗಾಚ್ಛೋಷಂ ಸಮುದ್ರಶ್ಚ ಹಿಮವಾಂಶ್ಚ ವ್ಯಶೀರ್ಯತ ॥54॥
ಸೂರ್ಯಾದಿ ಜ್ಯೋತಿಗಳು ಕಾಂತಿ ಕಳೆದುಕೊಂಡವು. ಬ್ರಹ್ಮನು ಪೀಠದಿಂದ ಜಾರಿ ಬಿದ್ದನು. ಸಮುದ್ರಗಳು ಒಣಗಿ ಹೋದವು. ಹಿಮಾಲಯವೂ ಭೇದಿಸಿತು.
ತಸ್ಮಿನ್ನೇವಂ ಸಮುತ್ಪನ್ನೇ ನಿಮಿತ್ತೇ ಪಾಂಡುನಂದನ |
ಬ್ರಹ್ಮಾ ವೃತೋ ದೇವಗಣೈರ್ಋಷಿಭಿಶ್ಚ ಮಹಾತ್ಮಭಿಃ |
ಆಜಗಾಮಾಶು ತಂ ದೇಶಂ ಯತ್ರ ಯುದ್ಧಮವರ್ತತ ॥55॥
ಇಂತಹ ಅನರ್ಥವನ್ನು ಕಂಡು ಬ್ರಹ್ಮನು ದೇವತೆಗಳ ಜೊತೆ, ಋಷಿಗಳ ಜೊತೆ ಸೇರಿಕೊಂಡು ಆ ಯುದ್ಧಸ್ಥಳಕ್ಕೆ ವೇಗವಾಗಿ ಬಂದು ರುದ್ರನ ಮುಂದೆ ನಿಂತನು.
ಸಾಂಜಲಿಂಪ್ರಗ್ರಹೋ ಭೂತ್ವಾ ಚತುರ್ವಕೊತ್ರೀ ನಿರುಕ್ತಗಃ |
ಉವಾಚ ವಚನಂ ರುದ್ರಂ ಲೋಕಾನಾಮಸ್ತು ವೈ ಶಿವಮ್ |
ನ್ಯಸ್ಯಾಯುಧಾನಿ ವಿಶ್ವೇಶ ಜಗತೋ ಹಿತಕಾಮ್ಯಯಾ ॥56॥
ಆ ಯುದ್ಧದ ನಡುವೆ ಕೈಮುಗಿದು ನಿಂತ ಚತುರ್ಮುಖ ಬ್ರಹ್ಮನು- `ಲೋಕೇಶ್ವರನೇ, ಜಗತ್ತಿಗೆ ಮಂಗಳವಾಗಲಿ. ನಿನ್ನ ಆಯುಧವನ್ನು ಕೆಳಕ್ಕಿಳಿಸು. ಜಗತ್ತಿಗೆ ಹಿತವನ್ನುಂಟು ಮಾಡು'.
ಯದಕ್ಷರಮಥಾವ್ಯಕ್ತಮೀಶಂ ಲೋಕಸ್ಯ ಭಾವನಮ್ |
ಕೂಟಸ್ಥಂ ಕರ್ತೃನಿರ್ದ್ವಂದ್ವಮಕರ್ತೇತಿ ಚ ಯಂ ವಿದುಃ ॥57॥
ವ್ಯಕ್ತಿಭಾವಗತಸ್ಯಾಸ್ಯ ಏಕಾ ಮೂರ್ತಿರಿಯಂ ಶಿವಾ |
ನರೋ ನಾರಾಯಣಶ್ಚೈವ ಜಾತೌ ಧರ್ಮಕುಲೋದ್ವಹೌ ॥58॥
ಯಾವುದು ಅಕ್ಷರವೋ, ಅವ್ಯಕ್ತವೋ, ಲೋಕನಿಯಾಮಕವೋ, ಲೋಕಜನಕವೋ, ಕೂಟಸ್ಥವೋ, ಕರ್ತೃವೋ, ಅಕರ್ತೃವೋ, ದ್ವಂದ್ವ ರಹಿತವೋ ಅಂತಹ ಪರಮವಸ್ತುವೇ ಎರಡು ರೂಪದಿಂದ ನರ-ನಾರಾಯಣ ಎಂಬುದಾಗಿ ಧರ್ಮಕುಲವನ್ನು ಉದ್ಧರಿಸಲು ಅವತರಿಸಿದೆ.
ತಪಸಾ ಮಹತಾ ಯುಕ್ತೌ ದೇವಶ್ರೇಷ್ಠೌ ಮಹಾವ್ರತೌ |
ಅಹಂ ಪ್ರಸಾದಜಸ್ತಸ್ಯ ಕಸ್ಮಿಂಶ್ಚಿತ್ ಕಾರಣಾಂತರೇ |
ತ್ವಂ ಚೈವ ಕ್ರೋಧಜಸ್ತಾತ ಪೂರ್ವಸರ್ಗೇ ಸನಾತನಃ ॥59॥
ಇಬ್ಬರೂ ಮಹತ್ತಾದ ತಪಸ್ಸಿನಿಂದ ಕೂಡಿದ್ದಾರೆ. ಮಹಾಮತಿಗಳು, ದೇವಶ್ರೇಷ್ಠರು, ಅವನ ಅನುಗ್ರಹದಿಂದಲೇ ನಾನು ಹುಟ್ಟಿದ್ದೇನೆ. ಯಾವುದೋ ಕಾರಣಾಂತರದಿಂದ ನೀನು ಕ್ರೋಧದಿಂದಲೇ ಉತ್ಪನ್ನನಾಗಿರುವಿ. ಹಿಂದಿನ ಸೃಷ್ಟಿಯಲ್ಲಿ ಸನಾತನನಾದ ನಿನ್ನ ಸೃಷ್ಟಿಯೂ ಅವನಿಂದಲೇ ಆಗಿದೆ.
ಮಯಾ ಚ ಸಾರ್ಧಂ ವರದಂ ವಿಬುಧೈಶ್ಚ ಮಹರ್ಷಿಭಿಃ |
ಪ್ರಸಾದಯಾಶು ಲೋಕಾನಾಂ ಶಾಂತಿರ್ಭವತು ಮಾಚಿರಮ್ ॥60॥
ಆದ್ದರಿಂದ ನೀನು ಈಗ ನಮ್ಮೆಲ್ಲರ ಜೊತೆ ಸೇರಿ, ವ್ಯಕ್ತಸ್ವರೂಪದಿಂದಿರುವ ಪರಿಪೂರ್ಣನಾದ ಭಗವಂತನನ್ನು ಶಾಂತಗೊಳಿಸು. ಜಗತ್ತಿಗೆಲ್ಲ ಶಾಂತಿಯುಂಟಾಗಲಿ. ವಿಳಂಬ ಮಾಡಬೇಡ ಎಂದು ಹೇಳಿದನು.
ಬ್ರಹ್ಮಣಾ ತ್ವೇವಮುಕ್ತಸ್ತು ರುದ್ರಃ ಕ್ರೋಧಾಗ್ನಿಮುತ್ಸೃಜನ್ |
ಪ್ರಸಾದಯಾಮಾಸ ತತೋ ದೇವಂ ನಾರಾಯಣಂ ಪ್ರಭುಮ್ |
ಶರಣಂ ಚ ಜಗಾಮಾದ್ಯಂ ವರೇಣ್ಯಂ ವರದಂ ಹರಿಮ್ ॥61॥
ಬ್ರಹ್ಮನ ಮಾತಿನಂತೆ ರುದ್ರನು ಶಾಂತನಾಗಿ ನರ-ನಾರಾಯಣರನ್ನು ಪ್ರಸನ್ನೀಕರಿಸಲು ಹರಿಯಲ್ಲಿ ಕ್ಷಮೆ ಕೇಳಿದನು. ವರದನಾದ, ವರೇಂದ್ರನಾದ ಹರಿಯನ್ನೇ ಶರಣು ಹೊಕ್ಕನು.
ತತೋऽಥ ವರದೋ ದೇವೋ ಜಿತಕ್ರೋಧೋ ಜಿತೇಂದ್ರಿಯಃ |
ಪ್ರೀತಿಮಾನಭವತ್ತತ್ರ ರುದ್ರೇಣ ಸಹ ಸಂಗತಃ ॥62॥
ಬಳಿಕ ನಾರಾಯಣನು ಪ್ರಸನ್ನನಾಗಿ ರುದ್ರನ ಜೊತೆ ಸಮಾಧಾನದಿಂದ ವರ್ತಿಸುತ್ತಾ ಕ್ರೋಧವನ್ನು ಜಯಿಸಿ ಜಿತೇಂದ್ರಿಯನಾಗಿದ್ದ ಭಗವಂತನು ಪ್ರೀತಿಯನ್ನು ಹೊಂದಿದನು.
ಋಷಿಭಿರ್ಬ್ರಹ್ಮಣಾ ಚೈವ ವಿಬುಧೈಶ್ಚ ಸುಪೂಜಿತಃ |
ಉವಾಚ ದೇವಮೀಶಾನಮೀಶಃ ಸ ಜಗತೋ ಹರಿಃ ॥63॥
ಋಷಿಗಳಿಂದ, ಬ್ರಹ್ಮನಿಂದ, ಜ್ಞಾನಿಗಳಿಂದ ಪೂಜಿತನಾದ ಭಗವಂತನು ಜಗತ್ತಿಗೆ ಸ್ವಾಮಿಯಾಗಿದ್ದು ರುದ್ರನನ್ನು ಕುರಿತು ಹೀಗೆ ಹೇಳಿದನು.
ಯಸ್ತ್ವಾಂ ವೇತ್ತಿ ಸ ಮಾಂ ವೇತ್ತಿ ಯಸ್ತ್ವಾಮನು ಸ ಮಾಮನು |
ನಾವಯೋರಂತರಂ ಕಿಂಚಿನ್ಮಾ ತೇ ಭೂದ್ ಬುದ್ಧಿರನ್ಯಥಾ ॥64॥
`ರುದ್ರದೇವನೇ, ಯಾರು ನಿನ್ನನ್ನು ತಿಳಿದಿರುತ್ತಾರೋ ಅವರು ನನ್ನನ್ನು ತಿಳಿದಿರುತ್ತಾರೆ. ಯಾರು ನಿನ್ನನ್ನು ಅನುಸರಿಸುತ್ತಾರೋ ಅವರು ನನ್ನನ್ನೂ ಅನುಸರಿಸುತ್ತಾರೆ. ನಮ್ಮಿಬ್ಬರಲ್ಲಿ ಸ್ವಲ್ಪ ಅಂತರವೂ ಇರುವುದಿಲ್ಲ, ಬಹಳವಾದ ಅಂತರವೇ ಇದೆ. ನೀನು ತಪ್ಪಾದ

ಭಾವನೆಯಿಂದ ನನ್ನ ಬಳಿ ಯುದ್ಧಕ್ಕೆ ಆಗಮಿಸಿರುವಿ.
ಅದ್ಯ ಪ್ರಭತಿ ಶ್ರೀವತ್ಸಃ ಶೂಲಾಂಕೋಽಯಂ ಭವತ್ತ್ವಯಮ್ |
ಮಮ ಪಾಣ್ಯಂಕಿತಶ್ಚಾಪಿ ಶ್ರೀಕಂಠಸ್ತ್ವಂ ಭವಿಷ್ಯಸಿ ||65||
ಇಂದಿನಿಂದ ನನ್ನ ಎದೆಯಲ್ಲಿ ನೀನು ಎಸೆದ ಶೂಲದ ಚಿಹ್ನೆಯು ಶ್ರೀವತ್ಸವೆಂಬ ಲಾಂಛನವಾಗಲಿ. ನನ್ನ ಕೈಯಿಂದ ಒತ್ತಲ್ಪಟ್ಟ ನಿನ್ನ ಕಂಠದಿಂದ ನಿನ್ನ ಕಂಠವು ಮುಂದೆ ಶ್ರೀಕಂಠವೆನಿಸಲಿ.
ಏವಂ ಲಕ್ಷಣಮುತ್ಪಾದ್ಯ ಪರಸ್ಪರಕೃತಂ ತದಾ |
ಸಖ್ಯಂ ಚೈವಾತುಲಂ ಕೃತ್ವಾ ರುದ್ರೇಣ ಸಹಿತಾವೃಷೀ |
ತಪಸ್ತೇಪತುರವ್ಯಗ್ರೌ ವಿಸೃಜ್ಯ ತ್ರಿದಿವೌಕಸಃ ||66||
ಹೀಗೆ ನರ-ನಾರಾಯಣರು ತಮ್ಮಲ್ಲುಂಟಾದ ಚಿಹ್ನೆಗಳನ್ನು ಸಖ್ಯದಿಂದಲೇ ಲಕ್ಷ್ಯಗಳನ್ನಾಗಿ ಮಾಡಿಕೊಂಡು ಅತುಲವಾದ ಸ್ನೇಹವನ್ನು ಬೆಳೆಸಿ ನರ-ನಾರಾಯಣರು ರುದ್ರನ ಜೊತೆಗೆ ಸೇರಿದರು. ದೇವತೆಗಳನ್ನು ತೊರೆದು ಪುನಃ ಅವ್ಯಗ್ರವಾದ ಮನಸ್ಸಿನಿಂದ ತಪಸ್ಸನ್ನಾಚರಿಸಿದರು.
ಏಷ ತೇ ಕಥಿತಃ ಪಾರ್ಥ ನಾರಾಯಣಜಯೋ ಮೃಧೇ |
ನಾಮಾನಿ ಚೈವ ಗುಹ್ಯಾನಿ ನಿರುಕ್ತಾನಿ ಚ ಭಾರತ |
ಋಷಿಭಿಃ ಕಥಿತಾನೀಹ ಯಾನಿ ಸಂಕೀರ್ತಿತಾನಿ ತೇ ||67||
ಅರ್ಜುನನೇ, ನಿನಗೆ ಯುದ್ಧದಲ್ಲಿ ನಾರಾಯಣನ ಜಯವನ್ನು ಹೇಳಿದ್ದೇನೆ. ಗುಹ್ಯವಾದ ನಾಮಗಳನ್ನೂ, ಅದರ ನಿರ್ವಚನಗಳನ್ನೂ, ಋಷಿಗಳಿಂದ ಕೀರ್ತಿಸಲ್ಪಡುವ ಮಹಿಮೆಗಳನ್ನೂ ನಿನಗೆ ಹೇಳಿದ್ದೇನೆ.
ಏವಂ ಬಹುವಿಧೈ ರೂಪೈಶ್ಚರಾಮೀಹ ವಸುಂಧರಾಮ್ |
ಬ್ರಹ್ಮಲೋಕಂ ಚ ಕೌಂತೇಯ ಗೋಲೋಕಂ ಚ ಸನಾತನಮ್ |
ಮಯಾ ತ್ವಂ ರಕ್ಷಿತೋ ಯುದ್ಧೇ ಮಹಾಂತಂ ಪ್ರಾಪ್ತವಾನ್ಜಯಮ್ ||
ಹೀಗೆ ನಾನು ಅನೇಕ ರೂಪಗಳಿಂದ ಈ ಭೂಮಿಯಲ್ಲಿ ಸಂಚರಿಸುತ್ತೇನೆ. ಭೂಲೋಕ, ಬ್ರಹ್ಮಲೋಕ, ಗೋಲೋಕಗಳನ್ನೆಲ್ಲ ಸಂಚರಿಸುತ್ತಿದ್ದೇನೆ. ನಾನು ನಿನ್ನನ್ನು ರಕ್ಷಿಸಿದ್ದರಿಂದಲೇ ಮಹತ್ತರವಾದ ಜಯವನ್ನು ನೀನು ಹೊಂದಿರುತ್ತಿ.
ಯಸ್ತು ತೇ ಸೋಗ್ರತೋ ಯಾತಿ ಯುದ್ಧೇ ಸಂಪ್ರತ್ಯುಪಸ್ಥಿತೇ |
ತಂ ವಿದ್ಧಿ ರುದ್ರಂ ಕೌಂತೇಯ ದೇವದೇವಂ ಕಪರ್ದಿನಮ್ ||69||
ಈಗ ಯುದ್ಧವು ಪ್ರಾಪ್ತವಾಗಲು ನಿನ್ನ ಮುಂದೆ ಹೋಗುತ್ತಿರುವವನು ಆ ರುದ್ರನೇ. ಅವನನ್ನು ಕಪರ್ದಿ ಎಂದು, ದೇವದೇವನೆಂದು, ರುದ್ರನೆಂದು ತಿಳಿದುಕೊ.
ಕಾಲಃ ಸ ಏವ ಕಥಿತಃ ಕ್ರೋಧಜೇತಿ ಮಯಾ ತವ |
ನಿಹತಾಂಸ್ತೇನ ವೈ ಪೂರ್ವಂ ಹತವಾನಸಿ ವೈ ರಿಪೂನ್ ||70||
ಆ ರುದ್ರನೇ ಕಾಲನೆನಿಸಿದ್ದಾನೆ. ನನ್ನ ಕ್ರೋಧದಿಂದ ಉತ್ಪನ್ನನಾಗಿದ್ದಾನೆ. ಮೊದಲು ಅವನು ನಿನ್ನ ಶತ್ರುಗಳನ್ನು ಕೊಂದಬಳಿಕ ಅವರನ್ನು ನೀನು ಕೊಲ್ಲುತ್ತಿ ಎಂದು ತಿಳಿ.
ಅಪ್ರಮೇಯಪ್ರಭಾವಂ ತಂ ದೇವದೇವಮುಮಾಪತಿಮ್ |
ನಮಸ್ವ ದೇವಂ ಪ್ರಯತೋ ವಿಶ್ವೇಶಂ ಹರಮವ್ಯಯಮ್ ||71||
ಅಪ್ರಮೇಯವಾದ ಪ್ರಭಾವವುಳ್ಳ, ದೇವದೇವನಾದ ಉಮಾಪತಿಯನ್ನು, ವಿಶ್ವೇಶನನ್ನು, ಅವ್ಯಯನಾದ ಹರನನ್ನು ಜಿತೇಂದ್ರಿಯನಾಗಿ ನೀನು ನಮಸ್ಕರಿಸು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತಾರನೆಯ ಅಧ್ಯಾಯ
ನಾರದರು ಶ್ವೇತದ್ವೀಪಕ್ಕೆ ತೆರಳಿ ನರ-ನಾರಾಯಣರನ್ನು ದರ್ಶನ ಮಾಡಿದುದು. ಶ್ವೇತದ್ವೀಪದ ಮಹಿಮೆ.
ಜನಮೇಜಯಃ
ಬ್ರಹ್ಮನ್ ಸುಮಹದಾಖ್ಯಾನಂ ಭವತಾ ಪರಿಕೀರ್ತಿತಮ್ |
ಯಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಯಂ ಪರಮಂ ಗತಾಃ ||1||
ಜನಮೇಜಯ ಪೂಜ್ಯರೇ, ನರ-ನಾರಾಯಣರ ಮಹಿಮೆಯನ್ನು ತಿಳಿಸುವ ಶ್ರೇಷ್ಠವಾದ ಆಖ್ಯಾನವನ್ನು ನೀವು ನಮಗೆ ತಿಳಿಸಿದ್ದೀರಿ. ಇದನ್ನು ಕೇಳಿ ಎಲ್ಲ ಮುನಿಗಳು ಆಶ್ಚರ್ಯ ಹೊಂದಿದ್ದಾರೆ.
ಇದಂ ಶತಸಹಸ್ರಾದ್ಧಿ ಭಾರತಾಖ್ಯಾನವಿಸ್ತರಾತ್ |
ಆಮಥ್ಯ ಮತಿಮನ್ಥೇನ ಜ್ಞಾನೋದಧಿಮನುತ್ತಮಮ್ ||2||
ಒಂದು ಲಕ್ಷ ಶ್ಲೋಕಗಳಿಂದ ಅಧಿಕವಾಗಿ ವಿಸ್ತಾರವಾಗಿರುವ ಭಾರತಾಖ್ಯಾನವನ್ನು ಚೆನ್ನಾಗಿ ಮಥನ ಮಾಡಿ ಹೊರತೆಗೆದು ಹೇಳುತ್ತಿರುವ ನಿಮ್ಮ ಕಥಾ ಸಮುದಾಯವು ಬುದ್ಧಿ ಎಂಬ ಕಡೆಗೋಲಿನಿಂದ ಹೊರತೆಗೆದ ಜ್ಞಾನವೆಂಬ ಸಮುದ್ರದ ಅಮೃತದಂತಿದೆ.
ನವನೀತಂ ಯಥಾ ದಧ್ನೋ ಮಲಯಾಚ್ಚಂದನಂ ಯಥಾ |
ಆರಣ್ಯಕಂ ಚ ವೇದೇಭ್ಯ ಓಷಧಿಭ್ಯೋಽಮೃತಂ ಯಥಾ ||3||

ಸಮುದ್ಧೃತಮಿದಂ ಬ್ರಹ್ಮನ್ ಕಥಾಮೃತಮನುತ್ತಮಮ್ |
ತಪೋನಿಧೇ ತ್ವಯೋಕ್ತಂ ಹಿ ನಾರಾಯಣಕಥಾಶ್ರಯಮ್ ॥4॥
ಹೇಗೆ ಮೊಸರಿನಿಂದ ಬೆಣ್ಣೆಯನ್ನು ತೆಗೆಯುತ್ತಾರೋ, ಮಲಯ ಪರ್ವತದಿಂದ ಗಂಧವನ್ನು ಹೇಗೆ ತೆಗೆಯುತ್ತಾರೋ ಹಾಗೆ ವೇದಗಳಿಂದ ಉದ್ಧೃತವಾದ ಆರಣ್ಯಕದಂತೆ, ಒಷಧಿಗಳಿಂದ ಅಮೃತವನ್ನು ತೆಗೆಯುವಂತೆ ಅನುತ್ತಮವಾದ ಕಥಾಮೃತವನ್ನು ನೀವು ತೆಗೆದಿದ್ದೀರಿ. ತಪೋನಿಧಿಗಳೇ, ನಾರಾಯಣನ ಕಥೆಗಳಿಗೆ ಸಂಬಂಧಿಸಿದಂತೆ ನೀವು ವಿಚಾರಗಳನ್ನು ತಿಳಿಸಿರುತ್ತೀರಿ.
ಸ ಹೀಶೋ ಭಗವಾನ್ ದೇವಃ ಸರ್ವಭೂತಾತ್ಮಭಾವನಃ |
ಅಹೋ ನಾರಾಯಣಂ ತೇಜೋ ದುರ್ದರ್ಶಂ ದ್ವಿಜಸತ್ತಮ ॥5॥
ಸಮಸ್ತ ಜೀವರ ಅಂತರ್ಯಾಮಿಯಾದ ಭಗವಾನ್ ನಾರಾಯಣನೇ ಜಗತ್ತಿಗೆಲ್ಲ ಸ್ವಾಮಿಯು. ಬ್ರಾಹ್ಮಣಶ್ರೇಷ್ಠನೇ, ನಿಶ್ಚಿತವಾಗಿಯೂ ನಾರಾಯಣನ ತೇಜಸ್ಸು ನೋಡಲು ಅಸಾಧ್ಯವಾದುದು.
ಯತ್ರಾವಿಶಂತಿ ಕಲ್ಪಾಂತೇ ಸರ್ವೇ ಬ್ರಹ್ಮಾದಯಃ ಸುರಾಃ |
ಋಷಯಶ್ಚ ಸಗಂಧರ್ವಾ ಯಚ್ಚ ಕಿಂಚಿಚ್ಚರಾಚರಮ್ |
ನ ತತೋಽಸ್ತಿ ಪರಂ ಮನ್ಯೇ ಪಾವನಂ ದಿವಿ ಚೇಹ ಚ ॥6॥
ಕಲ್ಪದ ಕೊನೆಯಲ್ಲಿ ಬ್ರಹ್ಮಾದಿ ದೇವತೆಗಳು, ಗಂಧರ್ವ ಸಹಿತರಾದ ಋಷಿಗಳು, ಸ್ಥಾವರ-ಜಂಗಮಗಳು ನಾರಾಯಣನೆಂಬ ತೇಜಸ್ಸಿನಲ್ಲೇ ಲಯ ಹೊಂದುತ್ತಾರೆ. ಸ್ವರ್ಗ-ಭೂಮಿಗಳಲ್ಲಿ ಇವನಿಗಿಂತ ತೇಜಸ್ವಿಯಾದ, ಪವಿತ್ರವಾದ ತೇಜಸ್ಸು ಇಲ್ಲ ಎಂದು ನಾನು ತಿಳಿದಿದ್ದೇನೆ.
ಸರ್ವಾಶ್ರಮಾಭಿಗಮನಂ ಸರ್ವತೀರ್ಥಾವಗಾಹನಮ್ |
ನ ತಥಾ ಫಲದಂ ಚಾಪಿ ನಾರಾಯಣಕಥಾ ಯಥಾ ॥7॥
ಸಮಸ್ತ ಆಶ್ರಮಗಳನ್ನು ಹೊಂದಿ, ಸಮಸ್ತ ತೀರ್ಥಗಳಲ್ಲಿ ಅವಗಾಹನ ಸ್ನಾನ ಮಾಡಿದರೂ ನಾರಾಯಣ ಕಥೆಯಷ್ಟು ಫಲಪ್ರದವಾದ ಸತ್ಕರ್ಮಗಳು ಇರುವುದಿಲ್ಲ.
ಸರ್ವಥಾ ಪಾವಿತಾಃ ಸ್ಮೇಹ ಶ್ರುತ್ವೇಮಾಮಾದಿತಃ ಕಥಾಮ್ |
ಹರೇರ್ವಿಶ್ವೇಶ್ವರಸ್ಯೇಹ ಸರ್ವಪಾಪಪ್ರಣಾಶನೀಮ್ ॥8॥
ನಾರಾಯಣನ ಕಥೆಯು ಎಲ್ಲ ರೀತಿಯಾದ ಪಾಪವನ್ನು ಪರಿಹರಿಸಲು ಸಮರ್ಥವಾದುದು. ಮೊದಲಿನಿಂದಲೂ ಅವನ ಕಥೆಯನ್ನು ಕೇಳುತ್ತಿರುವ ನಾವು ಎಲ್ಲ ರೀತಿಯಲ್ಲೂ ಶುದ್ಧಿಯನ್ನು ಹೊಂದಿರುತ್ತೇವೆ.
ನ ಚಿತ್ರಂ ಕೃತವಾಂಸ್ತತ್ರ ಯದಾರ್ಯೋ ಮೇ ಧನಂಜಯಃ |
ವಾಸುದೇವಸಹಾಯೋ ಯಃ ಪ್ರಾಪ್ತವಾನ್ ಜಯಮುತ್ತಮಮ್ ॥9॥
ನನ್ನ ಪ್ರಪಿತಾಮಹನೆನಿಸಿದ ಧನಂಜಯನು ವಾಸುದೇವನ ಸಹಾಯವನ್ನು ಪಡೆದು ಉತ್ತಮವಾದ ಜಯವನ್ನು ಹೊಂದಿದನು. ಇದೇನೂ ಆಶ್ಚರ್ಯವಲ್ಲ. (ಅರ್ಜುನನು ಆಶ್ಚರ್ಯಕರವಾದ ಸಾಹಸವನ್ನೇನೂ ಮಾಡಿಲ್ಲ. ಭಗವಂತನ ಅನುಗ್ರಹದಿಂದಲೇ ಜಯ ಲಭಿಸಿತು ಎಂದು ಭಾವ).
ನ ಚಾಸ್ಯ ಕಿಂಚಿದಪ್ರಾಪ್ಯಂ ಮನ್ಯೇ ಲೋಕೇಷ್ವಪಿ ತ್ರಿಷು |
ತ್ರೈಲೋಕ್ಯನಾಥೋ ವಿಷ್ಣುಃ ಸ ಯಸ್ಯಾಸೀತ್ ಸಾಹ್ಯಕೃತ್ ಸಖಾ ॥10॥
ನನ್ನ ಪ್ರಪಿತಾಮಹನಾದ ಧನಂಜಯನಿಗೆ ತ್ರೈಲೋಕ್ಯಸ್ವಾಮಿಯಾದ ಕೃಷ್ಣನು ಸಹಾಯಕನಾದ್ದರಿಂದ ಮೂರುಲೋಕಗಳಲ್ಲಿಯೂ ಸಿಗದೇ ಇರುವ ಪದಾರ್ಥವು ಯಾವುದೂ ಇರಲಿಲ್ಲ ಎಂಬುದೇ ನನ್ನ ಭಾವವಾಗಿದೆ.
ಧನ್ಯಾಶ್ಚ ಸರ್ವ ಏವಾಸನ್ ಬ್ರಹ್ಮಂಸ್ತೇ ಮಮ ಪೂರ್ವಕಾಃ |
ಹಿತಾಯ ಶ್ರೇಯಸೇ ಚೈವ ಯೇಷಾಮಾಸೀಜ್ಜನಾರ್ದನಃ ॥11॥
ಬ್ರಾಹ್ಮಣೋತ್ತಮರೇ, ನನ್ನ ಪೂರ್ವಜರ ಶ್ರೇಯಸ್ಸು, ಹಿತಕ್ಕೆ ಜನಾರ್ದನನೇ ಕಾರಣನು. ಅವನ ಅನುಗ್ರಹಕ್ಕೆ ಭಾಗಿಯಾದ ನಮ್ಮ ಹಿರಿಯರೆಲ್ಲರೂ ಧನ್ಯರೇ ಸರಿ.
ತಪಸಾಪಿ ನ ದೃಶ್ಯೋ ಹಿ ಭಗವಾಲ್ಲೋಕಪೂಜಿತಃ |
ಯಂ ದೃಷ್ಟವಂತಸ್ತೇ ಸಾಕ್ಷಾಚ್ಛ್ರೀವತ್ಸಾಂಕವಿಭೂಷಣಮ್ ॥12॥
ಲೋಕಪೂಜಿತನಾದ ನಾರಾಯಣನು ತಪಸ್ಸಿನಿಂದ ನೋಡಲು ಅರ್ಹನು. ಶ್ರೀವತ್ಸಚಿಹ್ನೆಯಿಂದ ಅಲಂಕೃತನಾದ ನಾರಾಯಣನನ್ನು ನನ್ನ ಪೂರ್ವಜರು ಸಾಕ್ಷಾತ್ತಾಗಿ ಲಕ್ಷ್ಮೀದೇವಿಯು ಭಗವಂತನನ್ನು ನೋಡುವಂತೆ ನೋಡಿದ್ದರು.
ತೇಭ್ಯೋ ಧನ್ಯತರಶ್ಚೈವ ನಾರದಃ ಪರಮೇಷ್ಠಿಜಃ |
ನ ಚಾಲ್ಪತೇಜಸಮೃಷಿಂ ವೇದ್ಮಿ ನಾರದಮವ್ಯಯಮ್ |
ಶ್ವೇತದ್ವೀಪಂ ಸಮಾಸಾದ್ಯ ಯೇನ ದೃಷ್ಟಃ ಸ್ವಯಂ ಹರಿಃ ॥13॥
ದೇವಪ್ರಸಾದಾನುಗತಂ ವ್ಯಕ್ತಂ ತತ್ತಸ್ಯ ದರ್ಶನಮ್ |
ಯದ್ ದೃಷ್ಟವಾಂಸ್ತದಾ ದೇವಮನಿರುದ್ಧತನೌ ಸ್ಥಿತಮ್ ॥14॥
ಅವರೆಲ್ಲರಿಗಿಂತಲೂ ಧನ್ಯನಾದವನು ಬ್ರಹ್ಮನ ಮಾನಸ ಪುತ್ರನಾದ ನಾರದನು. ನಾಶವಿಲ್ಲದ ನಾರದನು ಸಾಧಾರಣ ತೇಜಸ್ವಿ ಎಂದು ನಾನು ತಿಳಿದಿಲ್ಲ. ಕಾರಣ ಶ್ವೇತದ್ವೀಪ ನಿವಾಸಿಯಾದ ಪರಮಾತ್ಮನನ್ನು ಅಲ್ಲಿಗೆ ಹೋಗಿ ನೋಡಿದ ಭಾಗ್ಯವಂತನು. ಭಗವಂತನ ದರ್ಶನವು ದೊರೆಯಬೇಕಾದರೆ ಅವನ ಕರುಣಾಬಲದಿಂದಲೇ ಸಾಧ್ಯ. ಭಗವಂತನ ಕರುಣಾಪಾತ್ರನು ನಾರದನು ಎಂಬುದು ಇದರಿಂದ ಸ್ಪಷ್ಟವಾಯಿತು. ಶ್ವೇತದ್ವೀಪದಲ್ಲಿ ನಾರದನು ಅನಿರುದ್ಧ ರೂಪಿಯಾದ ನಾರಾಯಣನನ್ನು ಅವನ ಅನುಗ್ರಹದಿಂದ ನೋಡಿದನು.

ಬದರೀಮಾಶ್ರಮಂ ಯತ್ತು ನಾರದಃ ಪ್ರಾದ್ರುವತ್ ಪುನಃ |
ನರನಾರಾಯಣೌ ದ್ರಷ್ಟುಂ ಕಿಂ ನು ತತ್ ಕಾರಣಂ ಮುನೇ ||15||
ಪುನಃ ನಾರದರು ನರ-ನಾರಾಯಣರನ್ನು ನೋಡಲು ಬದರಿಕಾಶ್ರಮಕ್ಕೆ ಧಾವಿಸಿದರು. ಶ್ವೇತದ್ವೀಪದಲ್ಲಿ ದರ್ಶನ ಮಾಡಿದ ನಾರದರು ಬದರಿಗೆ ಹೋಗಲು ಏನು ಕಾರಣ?
ಶ್ವೇತದ್ವೀಪಾನ್ನಿವೃತ್ತಶ್ಚ ನಾರದಃ ಪರಮೇಷ್ಠಿಜಃ |
ಬದರೀಮಾಶ್ರಮಂ ಪ್ರಾಪ್ಯ ಸಮಾಗಮ್ಯ ಚ ತಾವೃಷೀ ||16||
ಕಿಯಂತಂ ಕಾಲಮವಸತ್ಕಾಃ ಕಥಾಃ ಪೃಷ್ಟವಾಂಶ್ಚ ಸಃ |
ಶ್ವೇತದ್ವೀಪಾದುಪಾವೃತ್ತೇ ತಸ್ಮಿನ್ ವಾ ಸುಮಹಾತ್ಮನಿ ||17||
ಕಿಮಬ್ರೂತಾಂ ಮಹಾತ್ಮಾನೌ ನರನಾರಾಯಣಾವೃಷೀ |
ತದೇತನ್ಮೇ ಯಥಾತತ್ತ್ವಂ ಸರ್ವಮಾಖ್ಯಾತುಮರ್ಹಸಿ ||18||
ಬ್ರಹ್ಮನ ಮಗನಾದ ನಾರದನು ಶ್ವೇತದ್ವೀಪದಿಂದ ಮರಳಿ ಬಂದು ಬದರಿಕಾಶ್ರಮಕ್ಕೆ ಹೋಗಿ ನರ-ನಾರಾಯಣರನ್ನು ಕಂಡ ಮೇಲೆ ಎಷ್ಟು ಕಾಲ ಅವರ ಬಳಿಯೇ ಇದ್ದನು? ಯಾವ ಪ್ರಶ್ನೆಗಳನ್ನು ಕೇಳಿದನು. ಶ್ವೇತದ್ವೀಪದಿಂದ ತಿರುಗಿ ಬಂದ ನಾರದರಿಗೆ ನರ-ನಾರಾಯಣರು ಏನು ಹೇಳಿದರು? ಈ ಎಲ್ಲ ವಿಷಯಗಳನ್ನು ಯಥಾವತ್ತಾಗಿ ತಿಳಿಸಿರಿ.
ವೈಶಂಪಾಯನಃ
ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ |
ಯಸ್ಯ ಪ್ರಸಾದಾದ್ ವಕ್ಷ್ಯಾಮಿ ನಾರಾಯಣಕಥಾಮಿಮಾಮ್ ||19||
ವೈಶಂಪಾಯನ ಪೂಜ್ಯರಾದ, ಅಮಿತತೇಜಸ್ಸುಳ್ಳ ವ್ಯಾಸರಿಗೆ ನಮಸ್ಕಾರ. ಅವರ ದಿವ್ಯಾನುಗ್ರಹದಿಂದ ನಾನು ನಾರಾಯಣನ ಈ ಕಥೆಯನ್ನು ಹೇಳುತ್ತಿದ್ದೇನೆ.
ಪ್ರಾಪ್ಯ ಶ್ವೇತಂ ಮಹಾದ್ವೀಪಂ ದೃಷ್ಟ್ವಾ ಚ ಹರಿಮವ್ಯಯಮ್ |
ನಿವೃತ್ತೋ ನಾರದೋ ರಾಜಂಸ್ತರಸಾ ಮೇರುಮಾಗಮತ್ |
ಹೃದಯೇನೋದ್ವಹನ್ ಭಾರಂ ಯದುಕ್ತಂ ಪರಮಾತ್ಮನಾ ||20||
ಜನಮೇಜಯನೇ, ನಾರದರು ಶ್ವೇತದ್ವೀಪಕ್ಕೆ ಹೋಗಿ, ನಾಶರಹಿತನಾದ ಹರಿಯನ್ನು ಆ ಶ್ವೇತದ್ವೀಪದಲ್ಲಿ ಕಂಡು ಅಲ್ಲಿಂದ ತಿರುಗಿ ಬಂದು ವೇಗವಾಗಿ ಮೇರುಪರ್ವತಕ್ಕೆ ತೆರಳಿದರು. ಶ್ವೇತದ್ವೀಪದಿಂದ ಮೇರುಪರ್ವತಕ್ಕೆ ಆಗಮಿಸುವ ನಾರದರ ಹೃದಯದಲ್ಲಿ ಪರಮಾತ್ಮನು ತಿಳಿಸಿದ ಉಪದೇಶಗಳ ಭಾರವೇ ತುಂಬಿತ್ತು.
ಪಶ್ಚಾದಸ್ಯಾಭವದ್ ರಾಜನ್ನಾತ್ಮನಃ ಸಾಧ್ವಸಂ ಮಹತ್ |
ಯದ್ ಗತ್ವಾ ದೂರಮಧ್ವಾನಂ ಕ್ಷೇಮೀ ಪುನರಿಹಾಗತಃ ||21||
ತತೋ ಮೇರೋಃ ಪ್ರಚಕ್ರಾಮ ಪರ್ವತಂ ಗಂಧಮಾದನಮ್ |
ನಿಪಪಾತ ಚ ಖಾತ್ತೂರ್ಣಂ ವಿಶಾಲಾಂ ಬದರೀಮನು ||22||
ಆಗ ನಾರದರ ಮನಸ್ಸಿನಲ್ಲಿ ನಾನು ಕುಶಲವಾಗಿ ಶ್ವೇತದ್ವೀಪದ ತನಕ ಹೋಗಿ ಕ್ಷೇಮದಿಂದ ಬಂದಿದ್ದೇನಲ್ಲ. ಇದು ಹೇಗೆ ಸಾಧ್ಯವಾಯಿತು ಎಂದು ಯೋಚಿಸುತ್ತಲೇ ಮೇರುಪರ್ವತದಿಂದ ಗಂಧಮಾದನಕ್ಕೆ ತೆರಳಿದರು. ಅಲ್ಲಿಂದ ಬಹಳ ಶೀಘ್ರವಾಗಿ ಪ್ರಯಾಣ ಮಾಡುತ್ತಾ ಆಕಾಶಮಾರ್ಗದಿಂದಲೇ ಸಂಚರಿಸಿ ವಿಶಾಲವಾದ ಬದರೀ ಕ್ಷೇತ್ರ ತಲುಪಿದರು.
ತತಃ ಸ ದದೃಶೇ ದೇವೌ ಪುರಾಣಾವೃಷಿಸತ್ತಮೌ |
ತಪಶ್ಚರಂತೌ ಸುಮಹದಾತ್ಮನಿಷ್ಠೌ ಮಹಾವ್ರತೌ ||23||
ಆ ಕ್ಷೇತ್ರದಲ್ಲಿ ಪುರಾತನ ಮಹರ್ಷಿಗಳಾದ ನರ-ನಾರಾಯಣರನ್ನು ನೋಡಿದರು. ಅವರಾದರೂ ಆತ್ಮನಿಷ್ಠರಾಗಿ ಮಹಾತಪಸ್ಸನ್ನು ಮಾಡುತ್ತಾ ಇದ್ದರು.
ತೇಜಸಾಭ್ಯಧಿಕೌ ಸೂರ್ಯಾತ್ ಸರ್ವಲೋಕವಿರೋಚನಾತ್ |
ಶ್ರೀವತ್ಸಲಕ್ಷಣೌ ಪೂಜ್ಯೌ ಜಟಾಮಂಡಲಧಾರಿಣೌ ||24||
ನರ-ನಾರಾಯಣರು ಸೂರ್ಯನಿಗಿಂತಲೂ ಅಧಿಕವಾದ ತೇಜಸ್ಸಿನಿಂದ ಬೆಳಗುತ್ತಿದ್ದರು. ಶ್ರೀವತ್ಸಚಿಹ್ನೆಗಳುಳ್ಳವರಾಗಿದ್ದರು, ಜಟಾಮಂಡಲವನ್ನು ಧರಿಸಿದವರಾಗಿದ್ದರು. ಸಮಸ್ತ ಜಗತ್ತನ್ನೇ ಬೆಳಗುತ್ತಿದ್ದರು.
ಜಾಲಪಾದಭುಜೌ ತೌ ತು ಪಾದಯೋಶ್ಚಕ್ರಲಕ್ಷಣೌ |
ವ್ಯೂಢೋರಸ್ಕೌ ದೀರ್ಘಭುಜೌ ತಥಾ ಮುಷ್ಕಚತುಷ್ಕಿಣೌ ||25||
ಭುಜಗಳಲ್ಲಿ ಹಂಸಪಕ್ಷಿಯ ಗುರುತುಗಳನ್ನು, ಪಾದಗಳಲ್ಲಿ ಚಕ್ರದ ಗುರುತುಗಳನ್ನು ಹೊಂದಿದ್ದರು. ವಿಶಾಲವಾದ ವಕ್ಷಸ್ಸ್ಥಲದಿಂದ ಕೂಡಿದ ಅವರು ಆಜಾನುಬಾಹುಗಳಾಗಿದ್ದರು. ಅಂಡಕೋಶದಲ್ಲಿ ನಾಲ್ಕು ವೃಷಣಗಳನ್ನು ಹೊಂದಿದ್ದರು.
ಷಷ್ಟಿದಂತಾವಷ್ಟದಂಷ್ಟ್ರೌ ಮೇಘೌಘಸದೃಶಸ್ವನೌ |
ಸ್ವಾಸ್ಯೌ ಪೃಥುಲಲಾಟೌ ಚ ಸುಹನೂ ಸುಭ್ರುನಾಸಿಕೌ ||26||
ಅರವತ್ತು ಹಲ್ಲುಗಳನ್ನು, ಎಂಟು ಕೋರೆಹಲ್ಲುಗಳನ್ನು ಹೊಂದಿದ್ದರು. ಮೇಘಗಳ ಸಮೂಹದಿಂದ ಹೊರಬರುವ ಶಬ್ದಕ್ಕೆ ಸಮಾನವಾದ ಕಂಠದ ನಾದದಿಂದ ಕೂಡಿದ್ದರು. ಸುಂದರವಾದ ಮುಖವುಳ್ಳ, ವಿಶಾಲವಾದ ಹಣೆಗಳುಳ್ಳ, ಉತ್ತಮವಾದ ದವಡೆಗಳು, ಮೂಗುಗಳಿಂದಲೂ ಕೂಡಿದ ನರ-ನಾರಾಯಣರನ್ನು ನಾರದರು ನೋಡಿದರು.
ಆತಪತ್ರೇಣ ಸದೃಶೇ ಶಿರಸೀ ದೇವಯೋಸ್ತಯೋಃ |
ಏವಂ ಲಕ್ಷಣಸಂಪನ್ನೌ ಮಹಾಪುರುಷಸಂಜ್ಞಿತೌ ||27||

ಅವರೀರ್ವರ ತಲೆಗಳು ಛತ್ರಕ್ಕೆ ಸಮಾನವಾಗಿದ್ದವು. ಸರ್ವಲಕ್ಷಣ ಸಂಪನ್ನರಾಗಿದ್ದರು. ಮಹಾಪುರುಷರೆಂದು ಪ್ರಸಿದ್ಧರಾಗಿದ್ದರು.
ತೌ ದೃಷ್ಟ್ವಾ ನಾರದೋ ಹೃಷ್ಟಸ್ತಾಭ್ಯಾಂ ಚ ಪ್ರತಿಪೂಜಿತಃ |
ಸ್ವಾಗತೇನಾಭಿಭಾಷ್ಯಾಥ ಪೃಷ್ಟಶ್ಚಾನಾಮಯಂ ತದಾ ॥28॥
ಅಂತಹ ನರ-ನಾರಾಯಣರನ್ನು ಕಂಡ ನಾರದರು ಅವರೀರ್ವರಿಂದ ಪ್ರತಿಯಾಗಿ ಸ್ವಾಗತಿಸಲ್ಪಟ್ಟರು. ಬಳಿಕ ನರ-ನಾರಾಯಣರು ನಾರದರ ಕ್ಷೇಮವನ್ನು ವಿಚಾರಿಸಿದರು.
ಬಭೂವಾಂತರ್ಗತಮತಿರ್ನಿರೀಕ್ಷ್ಯ ಪುರುಷೋತ್ತಮೌ |
ಸದ್ಯೋಗತಾಸ್ತತ್ರ ಯೇ ವೈ ಸರ್ವಭೂತನಮಸ್ಕೃತಾಃ ॥29॥
ಶ್ವೇತದ್ವೀಪೇ ಮಯಾ ದೃಷ್ಟಾಸ್ತಾದೃಶಾವೃಷಿಸತ್ತಮೌ |
ಇತಿ ಸಂಚಿಂತ್ಯ ಮನಸಾ ಕೃತ್ವಾ ಚಾಭಿಪ್ರದಕ್ಷಿಣಮ್ |
ಉಪೋಪವಿವಿಶೇ ತತ್ರ ಪೀಠೇ ಕುಶಮಯೇ ಶುಭೇ ॥30॥
ನಾರದರು ನರ-ನಾರಾಯಣರನ್ನು ಕಂಡು ಮನದಲ್ಲಿಯೇ ನಾನು ಶ್ವೇತದ್ವೀಪದಲ್ಲಿದ್ದಾಗ ಯಾವ ರೀತಿಯಾದ ಭಗವಂತನ ವೈಭವಗಳನ್ನು ನೋಡಿದ್ದೆನೋ ಅದೇ ರೀತಿಯಾದ ವೈಭವದಿಂದ ಈಗಲೂ ನರ-ನಾರಾಯಣರು ಕಾಣಿಸುತ್ತಿದ್ದಾರೆ ಎಂದು ಚಿಂತಿಸಿದರು. ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಾ ಅವರೀರ್ವರಿಗೂ ನಮಸ್ಕರಿಸಿ ಮಂಗಳಮಯವಾದ, ಕುಶಮಯವಾದ ಆಸನದಲ್ಲಿ ಕುಳಿತರು.
ತತಸ್ತೌ ತಪಸಾಂ ವಾಸೌ ಯಶಸಾಂ ತೇಜಸಾಮಪಿ |
ಋಷೀ ಶಮದಮೋಪೇತೌ ಕೃತ್ವಾ ಪೂರ್ವಾಹ್ಣಿಕಂ ವಿಧಿಮ್ ॥31॥
ಬಳಿಕ ತಪೋನಿಧಿಗಳೂ, ಯಶೋನಿಧಿಗಳೂ, ತೇಜೋನಿಧಿಗಳೂ ಆದ ಆ ಋಷಿಗಳು ಪ್ರಾತಃಕಾಲದ ಕರ್ಮಗಳನ್ನೆಲ್ಲ ವಿಧಿಬದ್ಧವಾಗಿ ಪೂರೈಸಿದರು.
ಪಶ್ಚಾನ್ನಾರದಮವ್ಯಗ್ರೌ ಪಾದ್ಯಾರ್ಘ್ಯಾಭ್ಯಾಂ ಪ್ರಪೂಜ್ಯ ಚ |
ಪೀಠಯೋಶ್ಚೋಪವಿಷ್ಟೌ ತೌ ಕೃತಾತಿಥ್ಯಾಹ್ನಿಕೌ ನೃಪ ॥32॥
ಬಳಿಕ ನರ-ನಾರಾಯಣರು ಶಾಂತಸ್ವಭಾವದವರಾದ ನಾರದರನ್ನು ಅರ್ಘ್ಯ-ಪಾದ್ಯಾದಿಗಳ ಮೂಲಕ ಸತ್ಕರಿಸಿ, ತಾವೂ ಪೀಠದ ಮೇಲೆ ಕುಳಿತುಕೊಂಡರು.
ತೇಷು ತತ್ರೋಪವಿಷ್ಟೇಷು ಸ ದೇಶೋಭಿವ್ಯರಾಜತ |
ಆಜ್ಯಾಹುತಿಮಹಾಜ್ವಾಲೈರ್ಯಜ್ಞವಾಟೋಽಗ್ನಿಭಿರ್ಯಥಾ ॥33॥
ಅಥ ನಾರಾಯಣಸ್ತತ್ರ ನಾರದಂ ವಾಕ್ಯಮಬ್ರವೀತ್ |
ಸುಖೋಪವಿಷ್ಟಂ ವಿಶ್ರಾಂತಂ ಕೃತಾತಿಥ್ಯಂ ಸುಖಸ್ಥಿತಮ್ ॥34॥
ಅಪೀದಾನೀಂ ಸ ಭಗವಾನ್ ಪರಮಾತ್ಮಾ ಸನಾತನಃ |
ಶ್ವೇತದ್ವೀಪೇ ತ್ವಯಾ ದೃಷ್ಟ ಆವಯೋಃ ಪ್ರಕೃತಿಃ ಪರಾ ॥35॥
ಆ ಮೂವರು ಕುಳಿತುಕೊಂಡಿರುವ ಪ್ರದೇಶವು ಆಜ್ಯದ ಆಹುತಿಯಿಂದ ಪ್ರಕಾಶಮಾನವಾದ ತ್ರೇತಾಗ್ನಿಗಳುಳ್ಳ ಯಜ್ಞ ಮಂಟಪದಂತೆ ಶೋಭಿಸುತ್ತಿತ್ತು. ಬಳಿಕ ನಾರಾಯಣನು ನಾರದರನ್ನು ಕಂಡು ಹೀಗೆ ಹೇಳಿದನು: ಮಹರ್ಷಿಯೇ, ನೀನು ಶ್ವೇತದ್ವೀಪದಲ್ಲಿ ನಮಗೆ ಮೂಲರೂಪವೆನಿಸಿದ ನಾರಾಯಣರೂಪವನ್ನು ನೋಡಿ ಬಂದಿರುವಿಯಷ್ಟೆ! ಪೂಜ್ಯನಾದ, ಸನಾತನನಾದ ಪರಮಾತ್ಮನನ್ನು ಈಗ ನೋಡಿ ಬಂದಿರುವಿ ಎಂದು ಭಾವಿಸಿದ್ದೇವೆ.
ನಾರದಃ
ದೃಷ್ಟೋ ಮೇ ಪುರುಷಃ ಶ್ರೀಮಾನ್ ವಿಶ್ವರೂಪಧರೋಽವ್ಯಯಃ |
ಸರ್ವೇ ಹಿ ಲೋಕಾಸ್ತತ್ರಸ್ಥಾಸ್ತಥಾ ದೇವಾಃ ಸಹರ್ಷಿಭಿಃ |
ಅದ್ಯಾಪಿ ಚೈನಂ ಪಶ್ಯಾಮಿ ಯುವಾಂ ಪಶ್ಯನ್ ಸನಾತನೌ ॥36॥
ನಾರದರು ಪೂಜ್ಯರೇ, ನಾನು ವಿಶ್ವರೂಪಧಾರಿಯಾದ, ನಾಶರಹಿತನಾದ, ಕಾಂತಿಯುಕ್ತನಾದ ಪರಮಪುರುಷನನ್ನು ನೋಡಿದ್ದೇನೆ. ಎಲ್ಲ ಲೋಕಗಳು ಅವನಲ್ಲಿಯೇ ಸ್ಥಾಪಿತವಾಗಿವೆ. ಅದರಂತೆ ಋಷಿಗಳಿಂದ ಕೂಡಿದ ದೇವತೆಗಳು ಅವನಲ್ಲಿಯೇ ಆಶ್ರಯವನ್ನು ಹೊಂದಿದ್ದಾರೆ. ಈಗ ನಿಮ್ಮನ್ನು ನೋಡುತ್ತಿರುವ ನಮಗೆ ಅವನನ್ನೇ ಕಂಡಂತೆ ಭಾಸವಾಗುತ್ತಿದೆ.
ಯೈರ್ಲಕ್ಷಣೈರುಪೇತಃ ಸ ಹರಿರವ್ಯಕ್ತರೂಪಧೃಕ್ |
ತೈರ್ಲಕ್ಷಣೈರುಪೇತೌ ಹಿ ವ್ಯಕ್ತರೂಪಧರೌ ಯುವಾಮ್ ॥37॥
ಅವ್ಯಕ್ತರೂಪಿಯಾದ ಶ್ರೀಹರಿಯು ಯಾವ ಲಕ್ಷಣಗಳಿಂದ ಕೂಡಿದ್ದಾನೋ, ವ್ಯಕ್ತರೂಪದಿಂದ ಕೂಡಿರುವ ನೀವೂ ಅವೇ ಲಕ್ಷಣಗಳನ್ನು ಹೊಂದಿರುವಿರಿ.
ದೃಷ್ಟೌ ಮಯಾ ಯುವಾಂ ತತ್ರ ತಸ್ಯ ದೇವಸ್ಯ ಪಾರ್ಶ್ವತಃ |
ಇಹ ಚೈವಾಗತೋಽಸ್ಮ್ಯದ್ಯ ವಿಸೃಷ್ಟಃ ಪರಮಾತ್ಮನಾ ॥38॥
ಶ್ವೇತದ್ವೀಪದಲ್ಲಿ ನಿಮ್ಮಿಬ್ಬರನ್ನು ಹರಿಯ ಪಕ್ಕದಲ್ಲಿಯೇ ನಾನು ನೋಡಿದ್ದೇನೆ. ಅವನಿಂದ ಕಳುಹಿಸಲ್ಪಟ್ಟ ನಾನು ನೇರವಾಗಿ ಇಲ್ಲಿಗೆ ಆಗಮಿಸಿದ್ದೇನೆ.
ಕೋ ಹಿ ನಾಮ ಭವೇತ್ತಸ್ಯ ತೇಜಸಾ ಯಶಸಾ ಶ್ರಿಯಾ |
ಸದೃಶಸ್ತ್ರಿಷು ಲೋಕೇಷು ಋತೇ ಧರ್ಮಾತ್ಮಜೌ ಯುವಾಮ್ ॥39॥
ಮೂರುಲೋಕಗಳಲ್ಲಿ ಧರ್ಮನ ಸುತನಾದ ನರ-ನಾರಾಯಣರಾದ ನಿಮ್ಮನ್ನು ಬಿಟ್ಟು ಶ್ವೇತದ್ವೀಪ ನಿವಾಸಿಯಾದ ಭಗವಂತನ

ತೇಜಸ್ವಿಗೂ, ಯಶಸ್ವಿಗೂ ಕಾಂತಿಗೂ ಸಾಟಿಯಾಗುವವರು ಬೇರೆ ಯಾರಿದ್ದಾರೆ?
ತೇನ ಮೇ ಕಥಿತಂ ಪೂರ್ವಂ ನಾಮ ಕ್ಷೇತ್ರಜ್ಞಸಂಜ್ಞಿತಮ್ |
ಪ್ರಾದುರ್ಭಾವಾಶ್ಚ ಕಥಿತಾ ಭವಿಷ್ಯಂತಿ ಹಿ ಯೇ ಯಥಾ ॥40॥
ಆ ಶ್ವೇತದ್ವೀಪ ನಿವಾಸಿಯಾದ ಭಗವಂತನು ತನ್ನ ಜ್ಞಾನಕ್ಕೆ ಸಂಬಂಧಿಸಿದ ಸಮಗ್ರ ಧರ್ಮವನ್ನು ನನಗೆ ಹಿಂದೆ ಹೇಳಿದನು. ಮುಂದಾಗುವ ಅವತಾರಗಳ ಬಗ್ಗೆಯೂ ನಿರೂಪಿಸಿದನು.
ತತ್ರ ಯೇ ಪುರುಷಾಃ ಶ್ವೇತಾಃ ಪಂಚೇಂದ್ರಿಯವಿವರ್ಜಿತಾಃ |
ಪ್ರತಿಬುದ್ಧಾಶ್ಚ ತೇ ಸರ್ವೇ ಭಕ್ತಾಶ್ಚ ಪುರುಷೋತ್ತಮಮ್ ॥41॥
ಶ್ವೇತದ್ವೀಪದಲ್ಲಿರುವ ಸಮಸ್ತ ಪುರುಷರು ಶ್ವೇತವರ್ಣದವರೇ. ಪ್ರಾಕೃತವಾದ ಪಂಚೇಂದ್ರಿಯಗಳಿಂದ ರಹಿತರಾಗಿದ್ದಾರೆ. ಜ್ಞಾನಿಗಳಾಗಿದ್ದಾರೆ. ಅವರೆಲ್ಲರೂ ಪುರುಷೋತ್ತಮನನ್ನೇ ಭಜಿಸುವ ಭಕ್ತರಾಗಿದ್ದಾರೆ.
ತೇಽರ್ಚಯಂತಿ ಸದಾ ದೇವಂ ತೈಃ ಸಾರ್ಧಂ ರಮತೇ ಚ ಸಃ |
ಪ್ರಿಯಭಕ್ತೋ ಹಿ ಭಗವಾನ್ ಪರಮಾತ್ಮಾ ದ್ವಿಜಪ್ರಿಯಃ ॥42॥
ಯಾವಾಗಲೂ ದೇವದೇವನಾದ ಪರಮಪುರುಷನನ್ನು ಶ್ವೇತದ್ವೀಪದಲ್ಲಿ ಆರಾಧಿಸುತ್ತಿರುತ್ತಾರೆ. ಶ್ರೀಹರಿಯೂ ಅವರ ವಿಷಯದಲ್ಲಿ ಎಂದಿಗೂ ಪ್ರಸನ್ನನಾಗಿರುತ್ತಾನೆ. ಪರಮಾತ್ಮನು ಎಂದಿಗೂ ದ್ವಿಜಪ್ರಿಯನಷ್ಟೆ!
ರಮತೇ ಸೋಽರ್ಚ್ಯಮಾನೋ ಹಿ ಸದಾ ಭಾಗವತಪ್ರಿಯಃ |
ವಿಶ್ವಭುಕ್ಸರ್ವಗೋ ದೇವೋ ಬಾಂಧವೋ ಭಕ್ತವತ್ಸಲಃ |
ಸ ಕರ್ತಾ ಕಾರಣಂ ಚೈವ ಕಾರ್ಯಂ ಚಾತಿಬಲದ್ಯುತಿಃ ॥43॥
ಭಾಗವತಪ್ರಿಯನಾದ ಭಗವಂತನು ಭಕ್ತರಿಂದ ಅರ್ಚಿತನಾಗಿ ಸಂತೋಷ ಹೊಂದುತ್ತಾನೆ. ಭಗವಂತನು ವಿಶ್ವಭುಕ್, ಸರ್ವಾಂತರ್ಯಾಮಿ, ಕ್ರೀಡಾದಿಗುಣ ವಿಶಿಷ್ಟ, ಲಕ್ಷ್ಮೀಪತಿ, ಭಕ್ತವತ್ಸಲನಾಗಿ ಭಕ್ತರಿಂದ ಆರಾಧಿತನಾಗಿದ್ದಾನೆ. ಅವನೇ ಜಗತ್ತಿನ ಕರ್ತೃ, ಕಾರಣ, ಕಾರ್ಯ ಎಲ್ಲವೂ ಆಗಿದ್ದಾನೆ. ಅನಂತವಾದ ಬಲ, ಕಾಂತಿಗಳಿಂದ ಕೂಡಿದ್ದಾನೆ.
ತಪಸಾ ಯೋಜ್ಯ ಸೋಽಽತ್ಮಾನಂ ಶ್ವೇತದ್ವೀಪಾತ್ ಪರಂ ಹಿ ಯತ್ |
ತೇಜ ಇತ್ಯಭಿವಿಖ್ಯಾತಂ ಸ್ವಯಂಭಾಸಾವಭಾಸಿತಮ್ ॥44॥
ಶ್ವೇತದ್ವೀಪದ ಆಚೆಯ ಭಾಗದಲ್ಲಿ ಶ್ರೀಹರಿಯ ದೇಹದ ಕಾಂತಿಯಿಂದ ಬೆಳಗುವ ತೇಜಃಪುಂಜವಾದ ತೇಜೋರಾಶಿ ಎಂದೇ ಪ್ರಖ್ಯಾತವಾದ ಒಂದು ಸ್ಥಳವಿದೆ. ಅಲ್ಲಿ ನಾರಾಯಣನು ತಪಸ್ಸನ್ನು ಆಚರಿಸುತ್ತಿದ್ದಾನೆ.
ಶಾಂತಿಃ ಸಾ ತ್ರಿಷು ಲೋಕೇಷು ಸಿದ್ಧಾನಾಂ ಭಾವಿತಾತ್ಮನಾಮ್ |
ಏತಯಾ ಶುಭಯಾ ಬುದ್ಧ್ಯಾ ನೈಷ್ಠಿಕಂ ವ್ರತಮಾಸ್ಥಿತಃ ॥45॥
ಪರಮಾತ್ಮನು ಮೂರುಲೋಕಗಳಲ್ಲಿಯೂ ಶಾಂತಿಯು ನೆಲೆಸುವಂತೆ ಮಾಡಿದ್ದಾನೆ. ಪರಮಮಂಗಳಕರವಾದ ಬುದ್ಧಿಯಿಂದ ಭಗವಂತನು ಜಗತ್ತಿಗೆ ಕಲ್ಯಾಣವಾಗುವ ನೈಷ್ಠಿಕ ವ್ರತವನ್ನು ಹೊಂದಿರುತ್ತಾನೆ.
ನ ತತ್ರ ಸೂರ್ಯಸ್ತಪತಿ ನ ಸೋಮೋಽಭಿವಿರಾಜತೇ |
ನ ವಾಯುರ್ವಾತಿ ದೇವೇಶೇ ತಪಶ್ಚರತಿ ದುಶ್ಚರಮ್ ॥46॥
ಶ್ರೀಹರಿಯು ವಾಸ ಮಾಡುವ ವೈಕುಂಠದಲ್ಲಿ ಸೂರ್ಯನು ತಾಪವನ್ನು ನೀಡುವುದಿಲ್ಲ. ಚಂದ್ರನ ಬೆಳಕಿಗೆ ಅವಕಾಶವಿಲ್ಲ. ದುಶ್ಚರವಾದ ತಪಸ್ಸನ್ನು ಆಚರಿಸುವ ದೇವೇಶನಾದ ಭಗವಂತನು ಇರುವ ಸ್ಥಳದಲ್ಲಿ ಗಾಳಿಯೂ ಬೀಸುವುದಿಲ್ಲ.
ವೇದೀಮಷ್ಟತಲೋತ್ಸೇಧಾಂ ಭೂಮಾವಾಸ್ಥಾಯ ವಿಶ್ವಭುಕ್ |
ಏಕಪಾದಸ್ಥಿತೋ ದೇವ ಊರ್ಧ್ವಬಾಹುರುದಙ್ಮುಖಃ |
ಸಾಂಗಾನಾವರ್ತಯನ್ ವೇದಾಂಸ್ತಪಸ್ತೇಪೇ ಸುದುಶ್ಚರಮ್ ॥47॥
ಸೃಷ್ಟಿಕರ್ತನಾದ, ದೇವದೇವನಾದ ಭಗವಂತನು ಭೂಮಿಯಿಂದ ಎಂಟು ಅಂಗುಲದಷ್ಟು ಎತ್ತರವಾದ ವೇದಿಕೆಯನ್ನು ಹೊಂದಿ, ಊರ್ಧ್ವಬಾಹುವಾಗಿ, ಉತ್ತರಾಭಿಮುಖವಾಗಿ ಏಕಪಾದದಲ್ಲಿ ನಿಂತು ತಪಸ್ಸನ್ನಾಚರಿಸುತ್ತಿದ್ದಾನೆ. ಷಡಂಗಯುಕ್ತವಾದ ವೇದಗಳನ್ನು ಆವೃತ್ತಿ ಮಾಡುತ್ತಾ ತಪಸ್ಸನ್ನಾಚರಿಸುತ್ತಿದ್ದಾನೆ.
ಯದ್ ಬ್ರಹ್ಮಾ ಋಷಯಶ್ಚೈವ ಸ್ವಯಂ ಪಶುಪತಿಶ್ಚ ಯತ್ |
ಶೇಷಾಶ್ಚ ವಿಬುಧಶ್ರೇಷ್ಠಾ ದೈತ್ಯದಾನವರಾಕ್ಷಸಾಃ ॥48॥
ನಾಗಾಃ ಸುಪರ್ಣಾ ಗಂಧರ್ವಾಃ ಸಿದ್ಧಾ ರಾಜರ್ಷಯಶ್ಚ ಯೇ |
ಹವ್ಯಂ ಕವ್ಯಂ ಚ ಸತತಂ ವಿಧಿಪೂರ್ವಂ ಪ್ರಯುಂಜತೇ |
ಕೃತ್ಸ್ನಂ ತತ್ತಸ್ಯ ದೇವಸ್ಯ ಚರಣಾವುಪತಿಷ್ಠತಿ ॥49॥
ಬ್ರಹ್ಮ, ಸ್ವಯಂ ಪಶುಪತಿ, ಋಷಿಗಳು, ಉಳಿದ ವಿಬುಧಶ್ರೇಷ್ಠರು, ದೈತ್ಯ, ದಾನವ, ರಾಕ್ಷಸರು, ನಾಗಗಳು, ಗರುಡರು, ಗಂಧರ್ವ-ಸಿದ್ಧ-ರಾಜರ್ಷಿಗಳು ವಿಧಿಬದ್ಧವಾಗಿ ನಾರಾಯಣನಿಗೆ ನಿರಂತರವಾಗಿ ಹವ್ಯ-ಕವ್ಯಗಳನ್ನು ಅರ್ಪಿಸುತ್ತಲೇ ಇದ್ದಾರೆ. ಅವರು ಸಮರ್ಪಿಸಿದ ಸಮಸ್ತವೂ ದೇವದೇವನಾದ ಭಗವಂತನ ಪಾದವನ್ನೇ ಹೊಂದುತ್ತವೆ.
ಯಾಃ ಕ್ರಿಯಾಃ ಸಂಪ್ರಯುಕ್ತಾಸ್ತು ಏಕಾಂತಗತಬುದ್ಧಿಭಿಃ |
ತಾಃ ಸರ್ವಾಃ ಶಿರಸಾ ದೇವಃ ಪ್ರತಿಗೃಹ್ಣಾತಿ ವೈ ಸ್ವಯಮ್ ॥50॥
ಅಲ್ಲಿರುವ ಹರಿಭಕ್ತರು ಯಾವ ಸತ್ಕರ್ಮಗಳನ್ನು ಚೆನ್ನಾಗಿ, ಅನುಸಂಧಾನ ಪೂರ್ವಕವಾಗಿ ಭಗವಂತನನ್ನೇ ಧ್ಯಾನಿಸುತ್ತಾ ಸಮರ್ಪಿಸುತ್ತಾರೋ ಆ ಎಲ್ಲ ಕರ್ಮಗಳನ್ನು ಶ್ರೀಹರಿಯು ತಾನಾಗಿಯೇ ಮಾನ್ಯ ಮಾಡುತ್ತಾ ಸ್ವೀಕರಿಸುತ್ತಾನೆ.
ನ ತಸ್ಯಾನ್ಯಃ ಪ್ರಿಯತರಃ ಪ್ರತಿಬುದ್ಧೈರ್ಮಹಾತ್ಮಭಿಃ |

ವಿದ್ಯತೇ ತ್ರಿಷು ಲೋಕೇಷು ತತೋಽಸ್ಮ್ಯೈಕಾಂತಿಕಂ ಗತಃ |
ಇಹ ಚೈವಾಗತಸ್ತೇನ ವಿಸೃಷ್ಟಃ ಪರಮಾತ್ಮನಾ ||51||
ಮಹಾತ್ಮರು, ಜ್ಞಾನಿಗಳು, ಭಕ್ತರೂ ಆದ ಸಾಧಕರಿಗೆ ಶ್ರೀಹರಿಗೆ ಪ್ರೀತಿಪಾತ್ರರಾದವರು ಮೂರುಲೋಕದಲ್ಲಿ ಬೇರೆ ಯಾರೂ ಇರುವುದಿಲ್ಲ. ಆದ್ದರಿಂದಲೇ ನಾನೂ ಶ್ರೀಹರಿಯನ್ನು ಅನನ್ಯಭಾವದಿಂದ ಶರಣು ಹೊಕ್ಕಿದ್ದೇನೆ. ಅಂತಹ ಭಗವಂತನಿಂದ ಕಳುಹಿಸಲ್ಪಟ್ಟ ನಾನು ನೇರವಾಗಿ ಇಲ್ಲಿಗೆ ಆಗಮಿಸಿದ್ದೇನೆ.
ಏವಂ ಮೇ ಭಗವಾನ್ ದೇವಃ ಸ್ವಯಮಾಖ್ಯಾತವಾನ್ ಹರಿಃ |
ಆಸಿಷ್ಯೇ ತತ್ಪರೋ ಭೂತ್ವಾ ಯುವಾಭ್ಯಾಂ ಸಹ ನಿತ್ಯಶಃ ||52||
ಭಗವಾನ್ ದೇವದೇವನಾದ ಶ್ರೀಹರಿಯೇ ತನ್ನ ಮಹಿಮೆಯನ್ನು ನನಗೆ ತಿಳಿಸಿದ್ದಾನೆ. ನಾನು ಯಾವಾಗಲೂ ಅವನ ಆರಾಧನೆಯಲ್ಲಿಯೇ ಆಸಕ್ತನಾಗಿ ನಿಮ್ಮನ್ನೇ ಧ್ಯಾನಿಸುತ್ತಾ ನಿಮ್ಮ ಬಳಿಯೇ ಇದ್ದು ಬಿಡುತ್ತೇನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೇಳನೆಯ ಅಧ್ಯಾಯ
ನರ-ನಾರಾಯಣರಿಂದ ನಾರದರ ಪ್ರಶಂಸೆ. ವಾಸುದೇವ ಮಹಿಮಾ ಕಥನ.
ಧನ್ಯೋಽಸ್ಯನುಗೃಹೀತೋಽಸಿ ಯತ್ತೇ ದೃಷ್ಟಃ ಸ್ವಯಂ ಪ್ರಭುಃ |
ನ ಹಿ ತಂ ದೃಷ್ಟವಾನ್ ಕಶ್ಚಿತ್ ಪದ್ಮಯೋನಿರಪಿ ಸ್ವಯಮ್ ||1||
ನಾರದನೇ, ಶ್ವೇತದ್ವೀಪದಲ್ಲಿರುವ ನಾರಾಯಣನನ್ನು ಸಾಕ್ಷಾತ್ ದರ್ಶನ ಮಾಡಿದವನು ನೀನು. ಅವನ ದರ್ಶನವು ಸುಲಭವಲ್ಲ. ನೀನೇ ಧನ್ಯನು. ಅವನಿಂದ ಅನುಗೃಹೀತನಾಗಿರುವಿ. ನಿನ್ನನ್ನು ಹೊರತಾಗಿ ಪದ್ಮಯೋನಿಯಾದ ಬ್ರಹ್ಮನೂ ಅವನನ್ನು ನೋಡಿರುವುದಿಲ್ಲ.
ಅವ್ಯಕ್ತಯೋನಿರ್ಭಗವಾನ್ ದುರ್ದರ್ಶಃ ಪುರುಷೋತ್ತಮಃ |
ನಾರದೈತದ್ಧಿ ತೇ ಸತ್ಯಂ ವಚನಂ ಸಮುದಾಹೃತಮ್ ||2||
ನಾರದನೇ, ಭಗವಂತನಾದ ಪುರುಷೋತ್ತಮನು ಅವ್ಯಕ್ತ ಪ್ರಕೃತಿಗೆ ಮೂಲಕಾರಣನು. ಅವನು ಸುಲಭವಾಗಿ ನೋಡಲು ಯೋಗ್ಯನಲ್ಲ. ನಾವು ನಿನಗೆ ಸತ್ಯವಾದ ಮಾತನ್ನೇ ಹೇಳುತ್ತಿದ್ದೇವೆ.
ನಾಸ್ಯ ಭಕ್ತೈಃ ಪ್ರಿಯತರೋ ಲೋಕೇ ಕಶ್ಚನ ವಿದ್ಯತೇ |
ತತಃ ಸ್ವಯಂ ದರ್ಶಿತವಾನ್ ಸ್ವಮಾತ್ಮಾನಂ ದ್ವಿಜೋತ್ತಮ ||3||
ಲೋಕದಲ್ಲಿ ಭಕ್ತರಿಗಿಂತಲೂ ಪ್ರಿಯರಾದವರು ಭಗವಂತನಿಗೆ ಯಾರೂ ಇರುವುದಿಲ್ಲ. ಆದ್ದರಿಂದಲೇ ತಾನಾಗಿಯೇ ನಿನಗೆ ದರ್ಶನ ನೀಡಿದ್ದಾನೆ.
ತಪೋ ಹಿ ತಪ್ಯತಸ್ತಸ್ಯ ಯತ್ಸ್ಥಾನಂ ಪರಮಾತ್ಮನಃ |
ನ ತತ್ ಸಂಪ್ರಾಪ್ನುತೇ ಕಶ್ಚಿದೃತೇ ಹ್ಯಾವಾಂ ದ್ವಿಜೋತ್ತಮ ||4||
ಬ್ರಾಹ್ಮಣನೇ, ನಿರಂತರ ತಪಸ್ಸನ್ನು ಅನುಷ್ಠಾನ ಮಾಡುತ್ತಿರುವ ಪರಮಾತ್ಮನ ಯಾವ ಸ್ಥಾನವಿದೆಯೋ ಆ ಸ್ಥಳಕ್ಕೆ ನರ-ನಾರಾಯಣರನ್ನು ಬಿಟ್ಟು ಬೇರೆ ಯಾರಿಗೂ ಹೋಗಲಾರದು.
ಯಾ ಹಿ ಸೂರ್ಯಸಹಸ್ರಸ್ಯ ಸಮಸ್ತಸ್ಯ ಭವೇದ್ ದ್ಯುತಿಃ |
ಸ್ಥಾನಸ್ಯ ಸಾ ಭವೇತ್ತಸ್ಯ ಸ್ವಯಂ ತೇನ ವಿರಾಜತಾ ||5||
ಆಕಾಶಮಂಡಲದಲ್ಲಿ ಏಕಕಾಲದಲ್ಲಿ ಸಾವಿರ ಸೂರ್ಯರು ಒಟ್ಟಾಗಿ ಸೇರಿದರೆ ಯಾವ ಕಾಂತಿಯುಂಟಾಗುತ್ತದೋ ಅಷ್ಟು ಕಾಂತಿಯು ಪರಮಾತ್ಮನಿಂದ ಶ್ವೇತದ್ವೀಪದಲ್ಲಿ ಉಂಟಾಗಿದೆ.
ತಸ್ಮಾದುತ್ತಿಷ್ಠತೇ ವಿಪ್ರಾ ದೇವಾದ್ ವಿಶ್ವಭುವಃ ಪತೇಃ |
ಕ್ಷಮಾ ಕ್ಷಮಾವತಾಂ ಶ್ರೇಷ್ಠ ಯಯಾ ಭೂಮಿಸ್ತು ಯುಜ್ಯತೇ ||6||
ಸಹನಶಕ್ತಿಯಿಂದ ಶ್ರೇಷ್ಠನಾದವನೇ, ಬ್ರಾಹ್ಮಣನೇ, ಸಹನಶಕ್ತಿಯು ಬ್ರಹ್ಮಜನಕನಾದ ಭಗವಂತನಿಂದಲೇ ಹುಟ್ಟಿದ ಗುಣವಾಗಿದೆ. ಅಂತಹ ಸಹನಶಕ್ತಿಯಿಂದಲೇ ಭೂಮಿಯು ಇಂದು ಸ್ಥಿರವಾಗಿ ನಿಂತಿದೆ.
ತಸ್ಮಾಚ್ಚೋತ್ತಿಷ್ಠತೇ ದೇವಾತ್ ಸರ್ವಭೂತಹಿತೋ ರಸಃ |
ಆಪೋ ಯೇನ ಹಿ ಯುಜ್ಯಂತೇ ದ್ರವತ್ವಂ ಪ್ರಾಪ್ನುವಂತಿ ಚ ||7||
ಸಮಸ್ತಪ್ರಾಣಿಗಳಿಗೂ ಹಿತವನ್ನು ಮಾಡುವ ನಾರಾಯಣನಿಂದಲೇ ಪ್ರಾಣಿಗಳಿಗೆ ಆಧಾರವಾದ ರಸವು ಪ್ರಾದುರ್ಭವಿಸಿದೆ. ಆ ರಸವು ನೀರಿನ ಜೊತೆಗೆ ದ್ರವತ್ವವನ್ನು ಹೊಂದಿದೆ.
ತಸ್ಮಾದೇವ ಸಮುದ್ಭೂತಂ ತೇಜೋ ರೂಪಗುಣಾತ್ಮಕಮ್ |
ಯೇನ ಸ್ಮ ಯುಜ್ಯತೇ ಸೂರ್ಯಸ್ತತೋ ಲೋಕಾನ್ ವಿರಾಜತೇ ||8||
ಭಗವಂತನಿಂದಲೇ ರೂಪಗುಣದಿಂದ ಕೂಡಿದ ತೇಜಸ್ಸು ಪ್ರಾದುರ್ಭವಿಸಿದೆ. ಆ ತೇಜಸ್ಸಿನ ಜೊತೆಗೆ ಸೂರ್ಯನು ಸಂಯೋಗವನ್ನು ಹೊಂದಿದ ಕಾರಣದಿಂದ ಲೋಕಗಳನ್ನು ತೇಜೋಮಯನಾಗಿ ಬೆಳಗುತ್ತಿದ್ದಾನೆ.
ತಸ್ಮಾದ್ದೇವಾತ್ ಸಮುದ್ಭೂತಃ ಸ್ಪರ್ಶಸ್ತು ಪುರುಷೋತ್ತಮಾತ್ |
ಯೇನ ಸ್ಮ ಯುಜ್ಯತೇ ವಾಯುಸ್ತತೋ ಲೋಕಾನ್ ವಿವಾತ್ಯಸೌ ||9||

ಶ್ವೇತದ್ವೀಪ ನಿವಾಸಿಯಾದ ಪುರುಷೋತ್ತಮನಿಂದಲೇ ಸ್ಪರ್ಶವೆಂಬ ಗುಣವು ಹುಟ್ಟಿದೆ. ಸ್ಪರ್ಶದ ಜೊತೆ ಸಂಯೋಗವನ್ನು ಹೊಂದಿದ್ದರಿಂದ ವಾಯುವು ಎಲ್ಲ ಲೋಕಗಳಲ್ಲಿಯೂ ಚಲನಶೀಲವಾಗಿದೆ.
ತಸ್ಮಾಚ್ಚೋತ್ರಿಷ್ಠತೇ ಶಬ್ದಃ ಸರ್ವಲೋಕೇಶ್ವರಾತ್ ಪ್ರಭೋಃ |
ಆಕಾಶಂ ಯುಜ್ಯತೇ ಯೇನ ತತಸ್ತಿಷ್ಠತ್ಯಸಂವೃತಮ್ ॥10॥
ಶ್ವೇತದ್ವೀಪ ನಿವಾಸಿಯಾದ, ಪ್ರಭುವಾದ ಲೋಕೇಶ್ವರನಿಂದಲೇ ಶಬ್ದವು ಹುಟ್ಟಿದೆ. ಶಬ್ದವು ಆಕಾಶದ ಜೊತೆಗೆ ಸಂಬಂಧವನ್ನು ಹೊಂದಿದ ಕಾರಣ ಎಲ್ಲ ಕಡೆಯೂ ಆಕಾಶವು ಶಬ್ದದಿಂದ ವ್ಯಾಪ್ತವಾಗಿದೆ.
ತಸ್ಮಾಚ್ಚೋತ್ರಿಷ್ಠತೇ ದೇವಾತ್ ಸರ್ವಭೂತಗತಂ ಮನಃ |
ಚಂದ್ರಮಾ ಯೇನ ಸಂಯುಕ್ತಃ ಪ್ರಕಾಶಗುಣಧಾರಣಃ ॥11॥
ಆ ಶ್ವೇತದ್ವೀಪ ನಿವಾಸಿಯಿಂದಲೇ ಸಮಸ್ತ ಪ್ರಾಣಿಗಳ ಅಂತರ್ಯಾಮಿಯಾದ ಮನಸ್ಸು ಹುಟ್ಟಿದೆ. ಮನಸ್ಸಿನ ಜೊತೆ ಚಂದ್ರನು ಸಂಯೋಗವನ್ನು ಹೊಂದಿ ಪ್ರಕಾಶ ಗುಣವನ್ನು ಹೊಂದಿರುತ್ತಾನೆ.
ಷಟ್‌ಭೂತೋತ್ಪಾದಕಂ ನಾಮ ತತ್ಸ್ಥಾನಂ ವೇದಸಂಜ್ಞಿತಮ್ |
ವಿದ್ಯಾಸಹಾಯೋ ಯತ್ರಾಸ್ತೇ ಭಗವಾನ್ಹವ್ಯಕವ್ಯಭುಕ್ ॥12॥
ಹೀಗೆ ಆರು ಭೂತಗಳ ಉತ್ಪತ್ತಿ ಎಂಬ ಸ್ಥಾನನು ಆದ ಭಗವಂತನು ವೇದ ಎಂಬ ವಿದ್ಯೆಯ ಸಹಾಯದ ಜೊತೆಗೆ ಹವ್ಯ-ಕವ್ಯಗಳನ್ನು ಉಪಭುಂಜಿಸುತ್ತಾ ಇದ್ದಾನೆ.
ಯೇ ಹಿ ನಿಷ್ಕಲ್ಮಷಾ ಲೋಕೇ ಪುಣ್ಯಪಾಪವಿವರ್ಜಿತಾಃ |
ತೇಷಾಂ ವೈ ಕ್ಷೇಮಮಧ್ವಾನಂ ಗಚ್ಛತಾಂ ದ್ವಿಜಸತ್ತಮ |
ಸರ್ವಲೋಕತಮೋಹಂತಾ ಆದಿತ್ಯೋ ದ್ವಾರಮುಚ್ಯತೇ ॥13॥
ನಾರದನೇ, ಯಾರು ಜಗತ್ತಿನಲ್ಲಿ ಪುಣ್ಯ-ಪಾಪಗಳಿಂದ ಮುಕ್ತರಾಗಿ ನಿರ್ಮಲರಾಗಿದ್ದಾರೋ, ಶುಭಮಾರ್ಗದಲ್ಲಿ ಇದ್ದು ಭಗವತ್‌ಸನ್ನಿಧಾನಕ್ಕೆ ತೆರಳುತ್ತಾರೋ ಅವರಿಗೆಲ್ಲ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವ ಸೂರ್ಯನೇ ದ್ವಾರನಾಗಿದ್ದಾನೆಂದು ವಿದ್ವಾಂಸರ ಅಭಿಪ್ರಾಯವು.
ಆದಿತ್ಯದಗ್ಧಸರ್ವಾಂಗಾ ಅದೃಶ್ಯಾಃ ಕೇನಚಿತ್ ಕ್ವಚಿತ್ |
ಪರಮಾಣುಭೂತಾ ಭೂತ್ವಾ ತು ತಂ ದೇವಂ ಪ್ರವಿಶಂತ್ಯುತ ॥14॥
ಸೂರ್ಯನಿಂದ ದಗ್ಧಾಂಗರಾದ ಜ್ಞಾನಿಗಳು ಅದೃಶ್ಯರಾಗಿ, ಪರಮಾಣು ಸ್ವರೂಪವನ್ನು ಹೊಂದಿದವರಾಗಿ ಸೂರ್ಯನನ್ನೇ ಪ್ರವೇಶಿಸುತ್ತಾರೆ.
ತಸ್ಮಾದಪಿ ವಿನಿರ್ಮುಕ್ತಾ ಅನಿರುದ್ಧತನೌ ಸ್ಥಿತಾಃ |
ಮನೋಭೂತಾಸ್ತತೋ ಭೂಯಃ ಪ್ರದ್ಯುಮ್ನಂ ಪ್ರವಿಶಂತ್ಯುತ ॥15॥
ಬಳಿಕ ಸೂರ್ಯನಿಂದಲೂ ಹೊರಬಂದು ಅನಿರುದ್ಧನ ಶರೀರಕ್ಕೆ ಸೇರುತ್ತಾರೆ. ಪುನಃ ಮನೋಮಯನಾಗಿ ಪ್ರದ್ಯುಮ್ನನಲ್ಲಿ ಪ್ರವೇಶಿಸುತ್ತಾರೆ.
ಪ್ರದ್ಯುಮ್ನಾಚ್ಚಾಪಿ ನಿರ್ಮುಕ್ತಾ ಜೀವಂ ಸಂಕರ್ಷಣಂ ತಥಾ |
ವಿಶಂತಿ ವಿಪ್ರಪ್ರವಿರಾಃ ಸಾಂಖ್ಯಾ ಭಾಗವತೈಃ ಸಹ ॥16॥
ಸಾಂಖ್ಯಜ್ಞಾನನಿರತರಾದ ಜ್ಞಾನಿಗಳು ಪ್ರದ್ಯುಮ್ನರೂಪದಿಂದಲೂ ಮುಕ್ತರಾಗಿ ಭಗವದ್ಭಕ್ತರ ಜೊತೆಯಲ್ಲಿ ಜೀವನಿಯಾಮಕನಾದ ಸಂಕರ್ಷಣನನ್ನು ಪ್ರವೇಶಿಸುತ್ತಾರೆ.
ತತಸ್ತ್ರೈಗುಣ್ಯಹೀನಾಸ್ತೇ ಪರಮಾತ್ಮಾನಮಂಜಸಾ |
ಪ್ರವಿಶಂತಿ ದ್ವಿಜಶ್ರೇಷ್ಠ ಕ್ಷೇತ್ರಜ್ಞಂ ನಿರ್ಗುಣಾತ್ಮಕಮ್ |
ಸರ್ವಾವಾಸಂ ವಾಸುದೇವಂ ಕ್ಷೇತ್ರಜ್ಞಂ ವಿದ್ಧಿ ತತ್ತ್ವತಃ ॥17॥
ನಂತರ ದ್ವಿಜಶ್ರೇಷ್ಠರಾದ ಸಾಂಖ್ಯಯೋಗಿಗಳು ತ್ರಿಗುಣಗಳಿಂದ ಮುಕ್ತರಾಗಿ ಪ್ರಾಕೃತಗುಣರಹಿತನಾದ, ಕ್ಷೇತ್ರಜ್ಞನಾದ ಪರಮಾತ್ಮನನ್ನು ಹೊಂದುತ್ತಾರೆ. ಸರ್ವರಿಗೂ ಆವಾಸಸ್ಥಾನನಾದ ವಾಸುದೇವನೇ ಯಥಾರ್ಥವಾಗಿ ಕ್ಷೇತ್ರಜ್ಞನೆನಿಸಿದ್ದಾನೆ ಎಂದು ತಿಳಿ.
ಸಮಾಹಿತಮನಸ್ಕಾಶ್ಚ ನಿಯತಾಃ ಸಂಯತೇಂದ್ರಿಯಾಃ |
ಏಕಾಂತಭಾವೋಪಗತಾ ವಾಸುದೇವಂ ವಿಶಂತಿ ತೇ ॥18॥
ಪರಮಾತ್ಮನಲ್ಲಿಯೇ ಮನಸ್ಸನ್ನಿಟ್ಟಿರುವ, ಜಿತೇಂದ್ರಿಯರಾದ, ವಿಧಿಬದ್ಧವಾಗಿ ವರ್ತಿಸುವ, ಏಕಾಂತ ಭಕ್ತಿಯಿಂದ ದೇವರನ್ನೇ ಮೊರೆಹೊಕ್ಕಿರುವ ಭಕ್ತರು ವಾಸುದೇವನನ್ನು ಹೊಂದುತ್ತಾರೆ.
ಆವಾಮಪಿ ಚ ಧರ್ಮಸ್ಯ ಗೃಹೇ ಜಾತೌ ದ್ವಿಜೋತ್ತಮ |
ರಮ್ಯಾಂ ವಿಶಾಲಾಮಾಶ್ರಿತ್ಯ ತಪ ಉಗ್ರಂ ಸಮಾಸ್ಥಿತೌ ॥19॥
ದ್ವಿಜಶ್ರೇಷ್ಠನೇ, ಧರ್ಮನ ಮನೆಯಲ್ಲಿ ಉತ್ಪತ್ತಿಯನ್ನು ಹೊಂದಿದ ನಾವು ರಮಣೀಯವಾದ, ವಿಶಾಲವಾದ ಬದರಿಯನ್ನು ಆಶ್ರಯಿಸಿ ಉಗ್ರತಪಸ್ಸಿನಲ್ಲಿ ರತರಾಗಿದ್ದೇವೆ.
ಯೇ ತು ತಸ್ಯೈವ ದೇವಸ್ಯ ಪ್ರಾದುರ್ಭಾವಾಃ ಸುರಪ್ರಿಯಾಃ |
ಭವಿಷ್ಯಂತಿ ತ್ರಿಲೋಕಸ್ಥಾಸ್ತೇಷಾಂ ಸ್ವಸ್ತೀತ್ಯತೋ ದ್ವಿಜ ॥20॥
ಮೂಲರೂಪಿಯಾದ ನಾರಾಯಣನ ದೇವತೆಗಳಿಗೆ ಪ್ರಿಯವಾದ ಯಾವ ಯಾವ ಅವತಾರಗಳು ಈ ಲೋಕದಲ್ಲಿ ಪ್ರಕಟವಾಗುತ್ತವೋ ಆ ಅವತಾರಗಳಿಗೆಲ್ಲ ಮಂಗಳವಾಗಲಿ ಎಂಬುದೇ ನಮ್ಮ ತಪಸ್ಸಿನ ಉದ್ದೇಶವು.
ವಿಧಿನಾ ಸ್ವೇನ ಯುಕ್ತಾಭ್ಯಾಂ ಯಥಾಪೂರ್ವಂ ದ್ವಿಜೋತ್ತಮ |

ಆಸ್ಥಿತಾಭ್ಯಾಂ ಸರ್ವಕೃಚ್ಛ್ರಂ ವ್ರತಂ ಸಮ್ಯಕ್ತದುತ್ತಮಮ್ ॥21॥
ದ್ವಿಜಶ್ರೇಷ್ಠನೇ, ನಾವು ಮೊದಲಿನಿಂದಲೂ ವಿಧ್ಯುಕ್ತ ಕರ್ಮಾನುಷ್ಠಾನದಲ್ಲಿ ತೊಡಗಿಸಿಕೊಂಡವರು. ಎಲ್ಲ ರೀತಿಯಾದ ಸರ್ವಕೃಚ್ಛ್ರವೆಂಬ ವ್ರತವನ್ನು ಚೆನ್ನಾಗಿ ಅನುಷ್ಠಾನ ಮಾಡಿದ್ದೇವೆ.
ಆವಾಭ್ಯಾಮಪಿ ದೃಷ್ಟಸ್ತ್ವಂ ಶ್ವೇತದ್ವೀಪೇ ತಪೋಧನ |
ಸಮಾಗತೋ ಭಗವತಾ ಸಂಜಲ್ಪಂ ಕೃತವಾನ್ಯಥಾ ॥22॥
ತಪೋಧನನೇ, ಶ್ವೇತದ್ವೀಪದಲ್ಲಿಯೂ ನಾವು ಇದ್ದು ಅಲ್ಲಿ ನಿನ್ನನ್ನು ನೋಡಿದ್ದೇವೆ. ನಿನ್ನ ಸ್ತೋತ್ರದಿಂದ ಸಂತುಷ್ಟನಾದ ಹರಿಯು ನಿನ್ನ ಬಳಿ ಮಾತನಾಡಿದ್ದನ್ನು ನಾವು ತಿಳಿದಿದ್ದೇವೆ.
ಸರ್ವಂ ಹಿ ನೌ ಸಂವಿದಿತಂ ತ್ರೈಲೋಕ್ಯೇ ಸಚರಾಚರೇ |
ಯದ್ಭವಿಷ್ಯತಿ ವೃತ್ತಂ ವಾ ವರ್ತತೇ ವಾ ಶುಭಾಶುಭಮ್ ॥23॥
ಚರಾಚರ ಪ್ರಪಂಚದಲ್ಲಿ ಹಿಂದೆ, ಮುಂದೆ, ಈಗ ನಡೆಯುವ, ಸಮಸ್ತ ಕಾಲದಲ್ಲಿ ನಡೆಯುವ ಶುಭಾಶುಭ ಕರ್ಮಗಳು- ಎಲ್ಲವನ್ನೂ ಶ್ರೀಹರಿಯು ನಿನಗೆ ಉಪದೇಶಿಸಿದನು.
ವೈಶಂಪಾಯನಃ
ಏತಚ್ಛ್ರುತ್ವಾ ತಯೋರ್ವಾಕ್ಯಂ ತಪಸ್ಯುಗ್ರೇಽಭ್ಯವರ್ತತ |
ನಾರದಃ ಪ್ರಾಂಜಲಿರ್ಭೂತ್ವಾ ನಾರಾಯಣಪರಾಯಣಃ ॥24॥
ಜಜಾಪ ವಿಧಿವನ್ ಮಂತ್ರಾನ್ನಾರಾಯಣಗತಾನ್ ಬಹೂನ್ |
ದಿವ್ಯಂ ವರ್ಷಸಹಸ್ರಂ ಹಿ ನರನಾರಾಯಣಾಶ್ರಮೇ ॥25॥
ವೈಶಂಪಾಯನ ಕಠೋರವಾದ ತಪಸ್ಸಿನಲ್ಲಿ ತೊಡಗಿದ್ದ ನರ-ನಾರಾಯಣರ ಮಾತನ್ನು ಕೇಳಿ, ಅವರ ಆಶ್ರಮದಲ್ಲಿಯೇ ಇದ್ದು, ದಿವ್ಯವರ್ಷಗಳ ಸಂಖ್ಯೆಯಲ್ಲಿ ಸಾವಿರ ವರ್ಷಗಳ ಕಾಲ ನಾರಾಯಣನಿಗೆ ಸಂಬಂಧಿಸಿದ ಅನೇಕ ಮಂತ್ರಗಳನ್ನು ವಿಧಿಬದ್ಧವಾಗಿ ಪ್ರಾಂಜಲಮನಸ್ಕರಾಗಿ ಜಪಿಸಿದರು.
ಅವಸತ್ಸ ಮಹಾತೇಜಾ ನಾರದೋ ಭಗವಾನೃಷಿಃ |
ತಮೇವಾಭ್ಯರ್ಚಯನ್ ದೇವಂ ನರನಾರಾಯಣೌ ಚ ತೌ ॥26॥
ಮಹಾತೇಜಸ್ವಿಗಳಾದ, ಪೂಜ್ಯರಾದ ನಾರದರು ಶ್ವೇತದ್ವೀಪ ನಿವಾಸಿಯಾದ ನರ- ನಾರಾಯಣರನ್ನು ಸೇವಿಸುತ್ತಾ ಅಲ್ಲಿಯೇ ಬಹಳ ಕಾಲ ವಾಸಿಸಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೆಂಟನೆಯ ಅಧ್ಯಾಯ
ವರಾಹರೂಪಿಯಾದ ಹರಿಯು ನಿರೂಪಿಸಿದ ಪಿತೃಪೂಜೆ.
ವೈಶಂಪಾಯನಃ
ಕಸ್ಯಚಿತ್ತ್ವಥ ಕಾಲಸ್ಯ ನಾರದಃ ಪರಮೇಷ್ಠಿಜಃ |
ದೈವಂ ಕೃತ್ವಾ ಯಥಾನ್ಯಾಯಂ ಪಿತ್ರ್ಯಂ ಚಕ್ರೇ ತತಃ ಪರಮ್ ॥1॥
ವೈಶಂಪಾಯನ ಜನಮೇಜಯನೇ, ಒಂದು ಸಮಯದಲ್ಲಿ ಪರಮೇಷ್ಠಿಯ ಸುತನಾದ ನಾರದರು ವಿಧಿಗೆ ಅನುಗುಣವಾಗಿ ದೇವಕಾರ್ಯಗಳನ್ನು ಮಾಡಿ ಬಳಿಕ ಪಿತೃಕಾರ್ಯಗಳನ್ನು ನಡೆಸಿದರು.
ತತಸ್ತಂ ವಚನಂ ಪ್ರಾಹ ಜ್ಯೇಷ್ಠೋ ಧರ್ಮಾತ್ಮಜಃ ಪ್ರಭುಃ |
ಕ ಇಜ್ಯತೇ ದ್ವಿಜಶ್ರೇಷ್ಠ ದೈವೇ ಪಿತ್ರ್ಯೇ ಕ್ರಿಯೇ ಚ ಕಲ್ಪಿತೇ ॥2॥
ಆ ಸಮಯದಲ್ಲಿ ಧರ್ಮನ ಜ್ಯೇಷ್ಠಪುತ್ರನು ನಾರದರನ್ನು ಪ್ರಶ್ನಿಸಿದನು: ದ್ವಿಜಶ್ರೇಷ್ಠನೇ, ದೇವಕಾರ್ಯ-ಪಿತೃಕಾರ್ಯಗಳಿಂದ ನೀನು ಯಾರನ್ನು ಪೂಜಿಸಿರುವಿ?
ತ್ವಯಾ ಮತಿಮತಾಂ ಶ್ರೇಷ್ಠ ತನ್ಮೇ ಶಂಸ ಯಥಾಗಮಮ್ |
ಕಿಮೇತತ್ಕ್ರಿಯತೇ ಕರ್ಮ ಫಲಂ ಚಾಸ್ಯ ಕಿಮಿಷ್ಯತೇ ॥3॥
ಬುದ್ಧಿವಂತರಲ್ಲಿ ಅಗ್ರಗಣ್ಯನೇ, ಕರ್ಮಗಳನ್ನು ಏಕೆ ಆಚರಿಸಬೇಕು? ಇದರಿಂದಾಗುವ ಲಾಭವೇನು? ಶಾಸ್ತ್ರವಿಧಿಗನುಗುಣವಾಗಿ ಉತ್ತರಿಸು.
ನಾರದಃ
ತ್ವಯೈತತ್ ಕಥಿತಂ ಪೂರ್ವಂ ದೈವಂ ಕರ್ತವ್ಯಮಿತ್ಯಪಿ |
ದೈವತಂ ಚ ಪರೋ ಯಜ್ಞಃ ಪರಮಾತ್ಮಾ ಸನಾತನಃ ॥4॥
ನಾರದ ಭಗವನ್ ಹಿಂದೆ ನೀನೇ ದೇವಕಾರ್ಯವು ಪ್ರತಿಯೊಬ್ಬರ ಕರ್ತವ್ಯವು ಎಂದು ಹೇಳಿರುವಿ. ಪರಮಶ್ರೇಷ್ಠವಾದ ಯಜ್ಞ ದೇವಕಾರ್ಯವು. ಅದು ಸನಾತನನಾದ ಪರಮಾತ್ಮನ ಸ್ವರೂಪವೇ ಆಗಿದೆ.
ತತಸ್ತದ್ಭಾವಿತೋ ನಿತ್ಯಂ ಯಜೇ ವೈಕುಂಠಮವ್ಯಯಮ್ |
ತಸ್ಮಾಚ್ಚ ಪ್ರಭೃತಃ ಪೂರ್ವಂ ಬ್ರಹ್ಮಾ ಲೋಕಪಿತಾಮಹಃ ॥5॥
ನಿನ್ನ ಉಪದೇಶದಿಂದ ಪ್ರಭಾವಿತನಾದ ನಾನು ನಿತ್ಯವೂ ಶಾಶ್ವತನಾದ ಅವ್ಯಯನಾದ ವೈಕುಂಠನನ್ನು ಆರಾಧಿಸುತ್ತೇನೆ. ಆ

ವೈಕುಂಠದಿಂದಲೇ ಪ್ರಳಯ ಕಾಲದಲ್ಲಿ ಚತುರ್ಮುಖ ಬ್ರಹ್ಮನು ಉದರದಲ್ಲಿ ಧರಿಸಲ್ಪಟ್ಟಿದ್ದಾನೆ.
ಮಮ ವೈ ಪಿತರಂ ಪ್ರೀತಃ ಪರಮೇಷ್ಠ್ಯಪ್ಯಜೀಜನತ್ |
ಅಹಂ ಸಂಕಲ್ಪಜಸ್ತಸ್ಯ ಪುತ್ರಃ ಪ್ರಥಮಕಲ್ಪಿತಃ ॥6॥
ಪ್ರೀತನಾದ ನಾರಾಯಣನು ನನ್ನ ತಂದೆಯಾದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು. ನಾರಾಯಣನ ಮೊದಲನೆಯ ಮಗನಾದ ಬ್ರಹ್ಮನ ಮನಸ್ಸಂಕಲ್ಪದಿಂದ ಹುಟ್ಟಿದವನು ನಾನು.
ಯಜಾಮ್ಯಹಂ ಪಿತೄನ್ ಸಾಧೋ ನಾರಾಯಣವಿಧೌ ಕೃತೇ |
ಏವಂ ಸ ಏವ ಭಗವಾನ್ ಪಿತಾ ಮಾತಾ ಪಿತಾಮಹಃ |
ಇಜ್ಯತೇ ಪಿತೃಯಜ್ಞೇಷು ಮಯಾ ನಿತ್ಯಂ ಜಗತ್ಪತಿಃ ॥7॥
ನಾನು ಮೊದಲಿಗೆ ನಾರಾಯಣನನ್ನು ಆರಾಧಿಸಿದ ಬಳಿಕ ಪಿತೃಗಳನ್ನು ಪೂಜಿಸುತ್ತೇನೆ. ನನಗೆ ಭಗವಂತನೇ ತಂದೆ-ತಾಯಿ, ಪಿತಾಮಹ ಎಲ್ಲವೂ ಆಗಿದ್ದಾನೆ. ಪಿತೃಯಜ್ಞದಲ್ಲಿಯೂ ಭಗವಂತನೇ ನನ್ನಿಂದ ಆರಾಧಿಸಲ್ಪಡುತ್ತಾನೆ.
ಶ್ರುತಿಶ್ಚಾಪ್ಯಪರಾ ದೇವಾಃ ಪುತ್ರಾ ಹಿ ಪಿತರೌ ಯಜನ್ |
ವೇದಶ್ರುತಿಃ ಪ್ರಣಷ್ಟಾ ಚ ಪುನರಧ್ಯಾಪಿತಾ ಸುತೈಃ |
ತತಸ್ತೇ ಮಂತ್ರದಾಃ ಪುತ್ರಾಃ ಪಿತೃತ್ವಮುಪಪೇದಿರೇ ॥8॥
ಮಾತಾ-ಪಿತೃರೂಪರಾದ ನಾರಾಯಣಮೂರ್ತಿಗಳೇ ಪಿತೃಗಳ ಮೂಲಕ ಆರಾಧಿಸಿದರು ಎಂದು ಮತ್ತೊಂದು ಶ್ರುತಿಯಿದೆ.
ವೇದಶ್ರುತಿಗಳು ನಾಶವಾದಾಗ ಮಕ್ಕಳಾದ ಅಗ್ನಿಶ್ವಾತ್ತಾದಿಗಳಿಂದ ದೇವತೆಗಳು ಪುನಃ ಅವುಗಳನ್ನು ಕಲಿತರು. ಆದ್ದರಿಂದ ಅಗ್ನಿಶ್ವಾತ್ತಾದಿ ದೇವತೆಗಳು ತಮ್ಮ ತಂದೆಗಳಿಗೆ ಉಪದೇಶದ ಮೂಲಕ ಪಿತೃತ್ವವನ್ನು ಹೊಂದಿದರು.
ವ್ಯಾಖ್ಯಾನ ವಿಶೇಷ ಯಾರು ಯಾರಿಂದ ಜ್ಞಾನವನ್ನು ಹೊಂದುತ್ತಾರೋ, ಜ್ಞಾನವನ್ನು ನೀಡಿದವರು ತಂದೆಗೆ ಸಮಾನರು ಎಂದು ಶ್ರುತಿ ಇದೆ. `ಯಸ್ತಾವಿಜಾನಾತ್ಸ ಪಿತುಷ್ಪಿತಾಸತ್' ಎಂದು.
ನೂನಂ ಪುರೈತದ್ ವಿದಿತಂ ಯುವಯೋರ್ಭಾವಿತಾತ್ಮನೋಃ |
ಪುತ್ರಾಶ್ಚ ಪಿತರಶ್ಚೈವ ಪರಸ್ಪರಮಪೂಜಯನ್ ॥9॥
ತಂದೆ ಮಕ್ಕಳು ಪರಸ್ಪರವಾಗಿ ಪೂಜಿಸಿದರೆಂಬ ವಿಷಯವು ನಿಮಗೆ ಮೊದಲಿನಿಂದಲೂ ತಿಳಿದಿರುತ್ತದೆ. ಇದು ಸರಿಯಾಗಿದೆ ಎಂದು ದೇವರು ಈ ಕ್ರಿಯೆಯನ್ನು ಅನುಮೋದಿಸಿರುತ್ತಾನೆ.
ತ್ರೀನ್ ಪಿಂಡಾನ್ನ್ಯಸ್ಯ ವೈ ಪೃಥ್ವ್ಯಾಂ ಪೂರ್ವಂ ದತ್ತ್ವ ಕುಶಾನಿತಿ |
ಕಥಂ ತು ಪಿಂಡಸಂಜ್ಞಾಂ ತೇ ಪಿತರೋ ಲೇಭಿರೇ ಪುರಾ ॥10॥
ದೇವತೆಗಳು ಆರಂಭದಲ್ಲಿ ನೆಲದ ಮೇಲೆ ದರ್ಭೆಗಳನ್ನು ಹಾಸಿ ಬಳಿಕ ಅದರ ಮೇಲೆ ಮೂರು ಪಿಂಡಗಳನ್ನು ಸ್ಥಾಪಿಸಿ ಪೂಜಿಸಿದ ಕಾರಣವೇನು? ಪಿತೃಗಳಿಗೆ ಪಿಂಡ ಎಂಬ ಹೆಸರು ಏಕೆ ಬಂದಿತು?
ನರನಾರಾಯಣೌ
ಇಮಾಂ ಹಿ ಧರಣೀಂ ಪೂರ್ವಂ ನಷ್ಟಾಂ ಸಾಗರಮೇಖಲಾಮ್ |
ಗೋವಿಂದ ಉಜ್ಜಹಾರಾಶು ವಾರಾಹಂ ರೂಪಮಾಶ್ರಿತಃ ॥11॥
ನರ-ನಾರಾಯಣ ನಾರದನೇ, ಗೋವಿಂದನು ಹಿಂದೆ ನಾಶ ಹೊಂದಿದ್ದ ಸಾಗರದಿಂದ ಕೂಡಿರುವ ಭೂಮಿಯನ್ನು ವರಾಹರೂಪದಿಂದ ಉದ್ಧರಿಸಿದನು.
ಸ್ಥಾಪಯಿತ್ವಾ ತು ಧರಣೀಂ ಸ್ವೇ ಸ್ಥಾನೇ ಪುರುಷೋತ್ತಮಃ |
ಜಲಕರ್ದಮಲಿಪ್ತಾಂಗೋ ಲೋಕಕಾರ್ಯಾರ್ಥಮುದ್ಯತಃ ॥12॥
ಲೋಕದ ಹಿತಕಾರ್ಯಕ್ಕಾಗಿ ಉದ್ಯಮಶೀಲನಾದ ಶ್ರೀಹರಿಯು ಭೂಮಿಯನ್ನು ಅದರ ಕಕ್ಷೆಯಲ್ಲಿ ಸ್ಥಾಪಿಸಿ, ನೀರಿನಲ್ಲಿರುವ ಕೆಸರಿನಿಂದ ಲಿಪ್ತವಾದ ಅವಯವಗಳಿಂದ ಕೂಡಿದನು.
ಪ್ರಾಪ್ತೇ ಚಾಹ್ನಿಕಕಾಲೇ ಸ ಮಧ್ಯಂದಿನಗತೇ ರವೌ |
ದಂಷ್ಟ್ರಾವಿಲಗ್ನಾನ್ ಮೃತ್ಪಿಂಡಾನ್ ವಿಧೂಯ ಸಹಸಾ ಪ್ರಭುಃ |
ಸ್ಥಾಪಯಾಮಾಸ ವೈ ಪೃಥ್ವ್ಯಾಂ ಕುಶಾನಾಸ್ತೀರ್ಯ ನಾರದ ॥13॥
ಸ ತೇಷ್ವಾತ್ಮಾನಮುದ್ದಿಶ್ಯ ಪಿತ್ರ್ಯಂ ಚಕ್ರೇ ಯಥಾವಿಧಿ |
ಸಂಕಲ್ಪಯಿತ್ವಾ ತ್ರೀನ್ ಪಿಂಡಾನ್ಸ್ವೇನೈವ ವಿಧಿನಾ ಪ್ರಭುಃ ॥14॥
ಆತ್ಮಗಾತ್ರೋಷ್ಮಸಂಭೂತೈಃ ಸ್ನೇಹಗರ್ಭೈಸ್ತಿಲೈರಪಿ |
ಪ್ರೋಕ್ಷ್ಯಾಪವರ್ಗಂ ದೇವೇಶಃ ಪ್ರಾಙ್ಮುಖಃ ಕೃತವಾನ್ಸ್ವಯಮ್ ॥15॥
ಮರ್ಯಾದಾಸ್ಥಾಪನಾರ್ಥಂ ಚ ತತೋ ವಚನಮುಕ್ತವಾನ್ |
ಅಹಂ ಹಿ ಪಿತರಃ ಸ್ರಷ್ಟುಮುದ್ಯತೋ ಲೋಕಕೃತ್ ಸ್ವಯಮ್ ॥16॥
ನಡುನೆತ್ತಿಗೆ ಸೂರ್ಯನು ಬರಲು ಮಧ್ಯಾಹ್ನಕಾಲದ ಆಹ್ನಿಕ ಸಮಯವು ಬಂದಿತು. ವರಾಹಮೂರ್ತಿಯು ತನ್ನ ಕೋರೆಗಳಿಗೆ ಮೆತ್ತಿರುವ ಮಣ್ಣಿನಿಂದ ಮೂರು ಪಿಂಡಗಳನ್ನು ಮಾಡಿದನು. ಬಳಿಕ ದರ್ಭೆಗಳ ಮೇಲೆ ಆ ಮೂರು ಮಣ್ಣಿನ ಪಿಂಡಗಳನ್ನು ಸ್ಥಾಪಿಸಿ ತನ್ನನ್ನೇ ಉದ್ದೇಶಿಸಿ ಪಿತೃಗಳನ್ನು ಆಹ್ವಾನಿಸಿ ಪೂಜಿಸಿದನು. ದೇವೇಶನಾದ ವರಾಹ ಮೂರ್ತಿಯು ತನ್ನದ್ದೇ ಆದ ವಿಧಿಯಿಂದ ಸಂಕಲ್ಪಿಸಿ ತನ್ನ ಶರೀರದ ಶಾಖದಿಂದ ಹುಟ್ಟಿದ ಎಣ್ಣೆಯಿಂದ ಸಿದ್ಧವಾದ ಎಳ್ಳುಗಳಿಂದ ಮೂರು ಪಿಂಡಗಳನ್ನು ಅಪ್ರದಕ್ಷಿಣವಾಗಿ ಪೂಜಿಸಿದನು. ಈ ಪಿಂಡಪೂಜೆಯಲ್ಲಿ ನಿಯಮವನ್ನು ಹೇಳುವ ದೃಷ್ಟಿಯಿಂದ ಪೂರ್ವಕ್ಕೆ ಕುಳಿತು ಹೀಗೆ ಹೇಳಿದನು: ನಾನೇ ಸಮಸ್ತ ಲೋಕದ ಸೃಷ್ಟಿಕರ್ತನಾಗಿದ್ದೇನೆ.

ತಸ್ಯ ಚಿಂತಯತಃ ಸದ್ಯಃ ಪಿತೃಕಾರ್ಯವಿಧಿಂ ಪರಮ್ |
ದಂಷ್ಟ್ರಾಭ್ಯಾಂ ಪ್ರವಿನಿರ್ಧೂತಾ ಮಮೈತೇ ದಕ್ಷಿಣಾಂ ದಿಶಮ್ |
ಆಶ್ರಿತಾ ಧರಣೀಂ ಪಿಂಡಾಸ್ತಸ್ಮಾತ್ ಪಿತರ ಏವ ತೇ ||17||
ನಾನು ಯಾವಾಗ ಪಿತೃಗಳನ್ನು ಸೃಷ್ಟಿಸಲು ಆರಂಭಿಸಿದೆನೋ ಪಿತೃಕಾರ್ಯ ವಿಧಿಗಳನ್ನು ಯೋಜಿಸುತ್ತಿದ್ದೆನೋ ಆ ಸಮಯದಲ್ಲಿಯೇ ನನ್ನ ಕೋರೆದಾಡೆಗಳಿಂದ ಮೂರು ಪಿಂಡಗಳು ದಕ್ಷಿಣ ದಿಕ್ಕಿನ ಕಡೆ ಭೂಮಿಯ ಮೇಲೆ ಬಿದ್ದವು. ಆದ್ದರಿಂದ ಪಿತೃದೇವತೆಗಳಿಂದ ಅಭಿಮನ್ಯಮಾನವಾದ ಆ ಪಿಂಡಗಳಿಗೆ ಪಿತೃ ಎಂಬ ಹೆಸರು ಬಂದಿತು.
ತ್ರಯೋ ಮೂರ್ತಿವಿಹೀನಾ ವೈ ಪಿಂಡಮೂರ್ತಿಧರಾಸ್ತ್ವಮೀ |
ಭವಂತು ಪಿತರೋ ಲೋಕೇ ಮಯಾ ಸೃಷ್ಟಾಃ ಸನಾತನಾಃ ||18||
ಮನುಷ್ಯರಿಂದ ಪೂಜಿಸಲ್ಪಡುವ ಪಿತೃಗಳು ಅಮೂರ್ತರೆನಿಸಿದ್ದಾರೆ. ಮನುಷ್ಯರ ಕಣ್ಣಿಗೆ ಗೋಚರಿಸುವ ಮೂರ್ತಿ ಇಲ್ಲದೆ ಇರುವ ಕಾರಣ ಅಮೂರ್ತರೆಂದು ಹೆಸರು. ದೇವತೆಗಳಿಂದ ಪೂಜ್ಯಮಾನರಾದ ಪಿತೃಗಳು ದುರ್ಗೋಚರರಾದುದರಿಂದ ಸುಮೂರ್ತರೆನಿಸಿದ್ದಾರೆ. ಭೂಮಿಯಲ್ಲಿ ಆಚರಿಸುವ ಮನುಷ್ಯರಿಗೆ ಸಂಬಂಧಿಸಿದ ಕ್ರಿಯೆಯು ಅಮೂರ್ತ ಎನಿಸಿದೆ. `ಅಮೂರ್ತಾನಾಂ ಸುಮೂರ್ತಾನಾಂ' ಎಂದು ಪಿತೃಗಳಿಗೆ ಸಂಬಂಧಿಸಿದ ವಚನಕ್ಕೆ ಈ ರೀತಿ ಅರ್ಥವೆಂದು ಭಾವ.
ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ |
ಅಹಮೇವಾತ್ರ ವಿಜ್ಞೇಯಸ್ತ್ರಿಷು ಪಿಂಡೇಷು ಸಂಸ್ಥಿತಃ ||19||
ಮೂರು ಪಿಂಡಗಳು ಪಿತೃ-ಪಿತಾಮಹ-ಪ್ರಪಿತಾಮಹ ರೂಪವಾಗಿವೆ. ಆ ಮೂರೂ ಪಿಂಡಗಳಲ್ಲಿ ಪಿತೃ-ಪಿತಾಮಹ-ಪ್ರಪಿತಾಮಹ ರೂಪದಲ್ಲಿ ನಾನೇ ಇದ್ದೇನೆ.
ನಾಸ್ತಿಮತ್ತೋಧಿಕಃಕಶ್ಚಿತ್ಕೋವಾಭ್ಯರ್ಚ್ಯೋ ಮಯಾ ಸ್ವಯಮ್ |
ಕೋ ವಾ ಮಮ ಪಿತಾ ಲೋಕೇ ಅಹಮೇವ ಪಿತಾಮಹಃ ||20||
ಜಗತ್ತಿನಲ್ಲಿ ನನಗಿಂತ ಅಧಿಕನಾದವನು ಯಾರೂ ಇಲ್ಲ. ನನ್ನಿಂದ ಪೂಜೆ ಹೊಂದುವ ಅರ್ಹತೆಯು ಯಾರಿಗೂ ಇಲ್ಲ. ನನಗೆ ತಂದೆ ಯಾರು? ಆದ್ದರಿಂದ ನಾನೇ ಪಿತಾಮಹನಾಗಿದ್ದೇನೆ.
ಪಿತಾಮಹಪಿತಾ ಚೈವ ಅಹಮೇವಾತ್ರ ಕಾರಣಮ್ |
ಇತ್ಯೇವಮುಕ್ತ್ವಾ ವಚನಂ ದೇವದೇವೋ ವೃಷಾಕಪಿಃ ||21||
ಪಿತಾಮಹನಿಗೂ ನಾನೇ ತಂದೆಯಾಗಿದ್ದೇನೆ. ಜಗತ್ತಿಗೆಲ್ಲ ನಾನೇ ಕಾರಣನಾದವನು. ವೃಷಾಕಪಿಯಾದ ವರಾಹರೂಪಿಯಾದ ಪರಮಾತ್ಮನು ಈ ರೀತಿಯಾದ ವಚನವನ್ನು ಹೇಳಿ ಹೊರಟನು.
ವರಾಹಪರ್ವತೇ ವಿಪ್ರಾ ದತ್ವಾ ಪಿಂಡಾನ್ ಸವಿಸ್ತರಾನ್ |
ಆತ್ಮಾನಂ ಪೂಜಯಿತ್ವೈವ ತತ್ರೈವಾದರ್ಶನಂ ಗತಃ||22||
ವರಾಹನು ವರಾಹಪರ್ವತದಲ್ಲಿ ವಿಧಿಪೂರ್ವಕವಾಗಿ, ವಿಸ್ತಾರವಾಗಿ ಪಿಂಡ ಪ್ರದಾನವನ್ನು ಮಾಡಿ, ತನ್ನನ್ನೇ ಪಿಂಡಪೂಜೆಯ ಮೂಲಕ ಪೂಜಿಸಿಕೊಂಡು ಅದೃಶ್ಯನಾದನು.
ಏತದರ್ಥಂ ಶುಭಮತೇ ಪಿತರಃ ಪಿಂಡಸಂಜ್ಞಿತಾಃ |
ಲಭಂತೇ ಸತತಂ ಪೂಜಾಂ ವೃಷಾಕಪಿವಚೋ ಯಥಾ ||23||
ಈ ರೀತಿ ವರಾಹನು ಪಿಂಡಗಳ ಮೂಲಕ ಪಿತೃಗಳ ಪೂಜೆಯನ್ನು ವಿಧಿಸಿದ್ದಾನೆ. ಆದ್ದರಿಂದಲೇ ಪಿತೃಗಳು ಪಿಂಡ ಎಂಬ ಸಂಜ್ಞೆಯನ್ನು ಹೊಂದಿದ್ದಾರೆ. ವೃಷಾಕಪಿ ಎನಿಸಿದ ವರಾಹನ ಮಾತಿನಂತೆ ಪಿತೃದೇವತೆಗಳು ಪಿಂಡಗಳ ಮೂಲಕ ಪೂಜಿತರಾಗುತ್ತಿದ್ದಾರೆ.
ಯೇ ಯಜಂತಿ ಪಿತೄನ್ ದೇವಾನ್ ಗುರೂಂಶ್ಚೈವಾತಿಥೀಂಸ್ತಥಾ |
ಗಾಶ್ಚೈವ ದ್ವಿಜಮುಖ್ಯಾಂಶ್ಚ ಪೃಥಿವೀಂ ಮಾತರಂ ತಥಾ |
ಕರ್ಮಣಾ ಮನಸಾ ವಾಚಾ ವಿಷ್ಣುಮೇವ ಯಜಂತಿ ತೇ ||24||
ಯಾರು ಮಾತು, ಮನಸ್ಸು, ಕೃತಿಗಳಿಂದ ಪಿತೃಗಳನ್ನು, ದೇವತೆಗಳನ್ನು, ಗುರುಜನರನ್ನು, ಅತಿಥಿ, ಗೋವು, ಬ್ರಾಹ್ಮಣ, ಪೃಥಿವಿ, ತಾಯಿ ಇವರನ್ನು ಆರಾಧಿಸುತ್ತಾರೋ ಅವರು ಅಂತರ್ಯಾಮಿಯಾದ ವಿಷ್ಣುವನ್ನೆ ಪೂಜಿಸಿದಂತೆ.
ಅಂತರ್ಗತಃ ಸ ಭಗವಾನ್ ಸರ್ವಸತ್ತ್ವಶರೀರಗಃ |
ಸಮಃ ಸರ್ವೇಷು ಭೂತೇಷು ಈಶ್ವರಃ ಸುಖದುಃಖಯೋಃ |
ಮಹಾನ್ಮಹಾತ್ಮಾ ಸರ್ವಾತ್ಮಾ ನಾರಾಯಣ ಇತಿ ಶ್ರುತಃ ||25||
ಸಮಸ್ತ ಜೀವರ ಅಂತರ್ಯಾಮಿಯಾಗಿ ಭಗವಂತನು ಇದ್ದಾನೆ. ಎಲ್ಲ ಜೀವರಲ್ಲಿಯೂ ಅಂತರ್ಯಾಮಿಯಾಗಿರುವ ಸುಖ-ದುಃಖಗಳಿಗೆ ಸ್ವಾಮಿಯಾದ ಭಗವಂತನೇ ಮಹಾತ್ಮನೂ, ಸರ್ವಾತ್ಮನೂ, ನಾರಾಯಣನು ಎಂದು ಪ್ರಸಿದ್ಧನಾಗಿದ್ದಾನೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನಾಶೀತ್ಯುತ್ತರಶತತಮೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ
ನಾರಾಯಣನ ಮಹಿಮೆಯ ಉಪಸಂಹಾರ
ವೈಶಂಪಾಯನಃ
ಶ್ರುತ್ವೈತನ್ನಾರದೋ ವಾಕ್ಯಂ ನರನಾರಾಯಣೇರಿತಮ್ |

ಅತ್ಯಂತಭಕ್ತಿಮಾನ್ ದೇವೇ ಏಕಾಂತಿತ್ವಮುಪೇಯಿವಾನ್ ॥1॥
ವೈಶಂಪಾಯನ ಜನಮೇಜಯನೇ, ನಾರದರು ನರ-ನಾರಾಯಣರು ಹೇಳಿದ ಮಾತನ್ನು ಕೇಳಿಸಿಕೊಂಡು ಕ್ರೀಡಾದಿ ಗುಣವಿಶಿಷ್ಟನಾದ ಭಗವಂತನಲ್ಲಿ ಅತ್ಯಂತ ಭಕ್ತಿಯುಳ್ಳವರಾದರು. ನಾರಾಯಣನ ಅನನ್ಯಭಕ್ತರಾದರು.
ಪ್ರೋಷ್ಯ ವರ್ಷಸಹಸ್ರಂ ತು ನರನಾರಾಯಣಾಶ್ರಮೇ |
ಶ್ರುತ್ವಾ ಭಗವದಾಖ್ಯಾನಂ ದೃಷ್ಟ್ವಾ ಚ ಹರಿಮವ್ಯಯಮ್ |
ಹಿಮವಂತಂ ಜಗಾಮಾಶು ಯತ್ರಾಸ್ಯ ಸ್ವಕ ಆಶ್ರಮಃ ॥2॥
ನಾರದರು ನರ-ನಾರಾಯಣರ ಆಶ್ರಮದಲ್ಲಿಯೇ ಒಂದು ಸಾವಿರ ವರ್ಷಗಳ ತನಕ ವಾಸವಾಗಿದ್ದು, ಪ್ರತಿದಿನವೂ ಭಗವದ್‌ಕಥೆಯನ್ನು ಶ್ರವಣ ಮಾಡುತ್ತಾ, ನಾಶರಹಿತನಾದ ಹರಿಯನ್ನೇ ನೋಡುತ್ತಾ, ಬಳಿಕ ತಮ್ಮದೇ ಆದ ಆಶ್ರಮವಿರುವ ಹಿಮವತ್ ಪರ್ವತಕ್ಕೆ ಹೊರಟು ಹೋದರು.
ತಾವಪಿ ಖ್ಯಾತತಪಸೌ ನರನಾರಾಯಣಾವೃಷೀ |
ತಸ್ಮಿನ್ನೇವಾಶ್ರಮೇ ರಮ್ಯೇ ತೇಪತುಸ್ತಪ ಉತ್ತಮಮ್ ॥3॥
ಪ್ರಸಿದ್ಧ ತಪಸ್ವಿಗಳಾದ ನರ-ನಾರಾಯಣ ಋಷಿಗಳಾದರೂ ಆ ಬದರಿಕಾಶ್ರಮದಲ್ಲಿ ಶ್ರೇಷ್ಠವಾದ ತಪಸ್ಸಿನಲ್ಲಿ ತೊಡಗಿಸಿಕೊಂಡಿದ್ದಾರೆ.
ತ್ವಮಪ್ಯಮಿತವಿಕ್ರಾಂತಃ ಪಾಂಡವಾನಾಂ ಕುಲೋದ್ವಹಃ |
ಪಾವಿತಾತ್ಮಾದ್ಯ ಸಂವೃತ್ತಃ ಶ್ರುತ್ವೇಮಾಮಾದಿತಃ ಕಥಾಮ್ ॥4॥
ಜನಮೇಜಯನೇ, ಪಾಂಡವಕುಲೋತ್ಪನ್ನನಾದ, ಪರಾಕ್ರಮಿಯಾದ ನೀನು ನಾರಾಯಣನ ಮಹಿಮೆಯನ್ನು ಕೇಳಿ ಪವಿತ್ರನಾಗಿರುವಿ.
ನೈವ ತಸ್ಯ ಪರೋ ಲೋಕೋ ನಾಯಂ ಪಾರ್ಥಿವಸತ್ತಮ |
ಕರ್ಮಣಾ ಮನಸಾ ವಾಚಾ ಯೋ ದ್ವಿಷ್ಯಾದ್ ವಿಷ್ಣುಮವ್ಯಯಮ್ ॥
ಯಾವನು ಅವ್ಯಯನಾದ ವಿಷ್ಣುವನ್ನು ಮಾತು, ಮನಸ್ಸು, ಕೃತಿಗಳಿಂದ ದ್ವೇಷಿಸುತ್ತಾನೊ ಅವನಿಗೆ ಪರಲೋಕವೂ ದೊರೆಯುವುದಿಲ್ಲ, ಇಹಲೋಕದಲ್ಲಿ ಸುಖವಿಲ್ಲ. ಉಭಯಲೋಕಗಳಿಂದಲೂ ಭ್ರಷ್ಟನಾಗುತ್ತಾನೆ.
ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ |
ಯೋ ದ್ವಿಷ್ಯಾದ್ ವಿಬುಧಶ್ರೇಷ್ಠಂ ದೇವಂ ನಾರಾಯಣಂ ಹರಿಮ್ ॥6॥
ಯಾವನು ದೇವಶ್ರೇಷ್ಠನಾದ ಹರಿಯನ್ನು, ನಾರಾಯಣನನ್ನು ದ್ವೇಷಿಸುತ್ತಾನೋ ಅವನ ಪಿತೃಗಳೂ ಕೂಡ ಶಾಶ್ವತವಾದ ನರಕದಲ್ಲಿ ಬೀಳುತ್ತಾರೆ.
ಕಥಂ ನಾಮ ಭವೇದ್ ದ್ವೇಷ್ಯ ಆತ್ಮಾ ಲೋಕಸ್ಯ ಕಸ್ಯಚಿತ್ |
ಆತ್ಮಾ ಹಿ ಪುರುಷವ್ಯಾಘ್ರ ಜ್ಞೇಯೋ ವಿಷ್ಣುರಿತಿ ಸ್ಥಿತಿಃ ॥7॥
ಪುರುಷವ್ಯಾಘ್ರನೇ, ಲೋಕದಲ್ಲಿ ತಮ್ಮ ಆತ್ಮವೇ ಯಾರಿಗೂ ಶತ್ರುವಾಗದು. ನಾರಾಯಣನು ಜಗತ್ತಿಗೆ ಆತ್ಮ ಎನಿಸಿದ್ದಾನೆ. ಆದ್ದರಿಂದ ಅವನು ದ್ವೇಷ್ಯನು ಎಂದಿಗೂ ಆಗನು.
ಯ ಏಷ ಗುರುರಸ್ಮಾಕಮೃಷಿರ್ಗಂಧವತೀಸುತಃ |
ತೇನೈತತ್ ಕಥಿತಂ ತಾತ ಮಾಹಾತ್ಮ್ಯಂ ಪರಮಾತ್ಮನಃ |
ತಸ್ಮಾಚ್ಛ್ರುತಂ ಮಯಾ ಚೇದಂ ಕಥಿತಂ ಚ ತವಾನಘ ॥8॥
ಗಂಧವತಿಯಾದ ಸತ್ಯವತಿಯ ಮಗನೆನಿಸಿದ ವ್ಯಾಸರು ನಮಗೆ ಗುರುಗಳಾಗಿದ್ದಾರೆ. ಅವರಿಂದ ಹೇಳಲ್ಪಟ್ಟ ಶ್ರೇಷ್ಠವೂ, ಅವ್ಯಯವೂ ಆದ ವಿಷ್ಣುವಿನ ಮಹಿಮೆಯನ್ನು ನಿನಗೆ ಹೇಳಿದ್ದೇನೆ. ಈ ರಹಸ್ಯವಾದ ಜಗನ್ನಾಥನ ಮಹಿಮೆಯನ್ನು ನಾರದರಿಂದ ಕೇಳಿ ನಾನು ನಿನಗೆ ಹೇಳಿದ್ದೇನೆ.
ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ |
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ |
ಧರ್ಮಾನ್ನಾನಾವಿಧಾಂಶ್ಚೈವ ಕೋ ಬ್ರೂಯಾತ್ತಮೃತೇ ಪ್ರಭುಮ್ ॥9॥
ಜನಮೇಜಯನೇ, ಕೃಷ್ಣದ್ವೈಪಾಯನರಾದ ವ್ಯಾಸರನ್ನು ಪ್ರಭುವಾದ ನಾರಾಯಣನೆಂದೇ ತಿಳಿ. ನಾರಾಯಣನ ಸ್ವರೂಪನಲ್ಲದ, ಪುಂಡರೀಕಾಕ್ಷನಿಂದ ಹೊರತಾಗಿ ಬೇರೆ ಯಾರು ತಾನೇ ಮಹಾಭಾರತದ ಕರ್ತೃವಾಗಲು ಸಾಧ್ಯ? ಪ್ರಭುಗಳಾದ ಅವರಲ್ಲದೇ ನಾನಾ ವಿಧವಾದ ಧರ್ಮಗಳನ್ನು ಬೇರೆ ಯಾರಿಂದ ಹೇಳಲು ಸಾಧ್ಯ?
ವರ್ತತಾಂ ತೇ ಮಹಾಯಜ್ಞೋ ಯಥಾ ಸಂಕಲ್ಪಿತಸ್ತ್ವಯಾ |
ಸಂಕಲ್ಪಿತಾಶ್ವಮೇಧಸ್ತ್ವಂ ಶ್ರುತಧರ್ಮಶ್ಚ ತತ್ತ್ವತಃ ॥10॥
ನೀನು ಯಾವ ರೀತಿಯಾಗಿ ಯಜ್ಞವನ್ನು ಮಾಡಬೇಕೆಂದು ಸಂಕಲ್ಪಿಸಿದ್ದೀಯೋ ಅದರಂತೆ ನಡೆಯಲಿ. ನೀನು ಅಶ್ವಮೇಧ ಯಜ್ಞದ ಸಂಕಲ್ಪ ಮಾಡಿರುತ್ತಿ. ಧರ್ಮವನ್ನು ಯಥಾರ್ಥವಾಗಿ ಕೇಳಿ ತಿಳಿದಿರುವಿ.
ಏತತ್ತು ಮಹದಾಖ್ಯಾನಂ ಶ್ರುತ್ವಾ ಪಾರಿಕ್ಷಿತೋ ನೃಪಃ |
ತತೋ ಯಜ್ಞಸಮಾಪ್ತ್ಯರ್ಥಂ ಕ್ರಿಯಾಃ ಸರ್ವಾಃ ಸಮಾರಭತ್ ॥11॥
ಈ ರೀತಿಯಾದ ಶ್ರೇಷ್ಠವಾದ ಆಖ್ಯಾನವನ್ನು ಪರೀಕ್ಷಿತನ ಸುತನಾದ ಜನಮೇಜಯನು ಕೇಳಿಸಿಕೊಂಡು ಯಜ್ಞವನ್ನು ಪೂರ್ಣ ಮಾಡುವ ದೃಷ್ಟಿಯಿಂದ ಸಮಸ್ತ ಕಾರ್ಯವನ್ನು ಆರಂಭಿಸಿದನು.
ನಾರಾಯಣೀಯಮಾಖ್ಯಾನಮೇತತ್ ತೇ ಕಥಿತಂ ಮಯಾ |
ನಾರದೇನ ಪುರಾ ರಾಜನ್ ಗುರವೇ ಮೇ ನಿವೇದಿತಮ್ |
ಋಷೀಣಾಂ ಪಾಂಡವಾನಾಂ ಚ ಶೃಣ್ವತೋಃ ಕೃಷ್ಣಭೀಷ್ಮಯೋಃ ॥12॥

ನಾರಾಯಣನಿಗೆ ಸಂಬಂಧಿಸಿದ ಈ ಆಖ್ಯಾನವನ್ನು ಹಿಂದೆ ನಾರದರು ನನ್ನ ಗುರುಗಳಿಗೆ ತಿಳಿಸಿದ್ದರು. ಪಾಂಡವರು, ಕೃಷ್ಣನು, ಭೀಷ್ಮನು ಕೇಳುತ್ತಿರುವಾಗ ವ್ಯಾಸರಿಗೆ ಹೇಳಿದ ನಾರದರ ಆಖ್ಯಾನವನ್ನೇ ನಾನು ನಿನಗೆ ಹೇಳಿದ್ದೇನೆ.
ಸ ಹಿ ಪರಮಗುರುರ್ಭುವನಪತಿ-
ರ್ಧರಣಿಧರಃ ಶಮನಿಯಮನಿಧಿಃ |
ಶ್ರುತಿವಿನಯನಿಧಿರ್ದ್ವಿಜಪರಮಹಿತ-
ಸ್ತವ ಭವತು ಗತಿರ್ಹರಿರಮರಹಿತಃ ॥13॥
ನಾರಾಯಣ ಮಹರ್ಷಿಯೇ ತ್ರೈಲೋಕ್ಯಪತಿಯು, ಲೋಕಧಾರಕನು, ಶಾಸ್ತ್ರಗಳಿಗೂ ನೀತಿಗಳಿಗೂ ಆಧಾರನು. ಶಮ-ನಿಯಮಗಳಿಗೆ ನಿಧಿಯು. ಆ ದೇವನು ನಿಮಗೆಲ್ಲ ರಕ್ಷಕನಾಗಲಿ. ದೇವತೆಗಳ ಹಿತಚಿಂತಕನಾದ ಬ್ರಾಹ್ಮಣರಿಗೆ ಹಿತೈಷಿಯಾದ ಶ್ರೀಹರಿಯು ನಿನಗೆ ಆಶ್ರಯನಾಗಲಿ.
ತಪಸಾಂ ನಿಧಿಃ ಸುಮಹತಾಂ ಮಹತೋ
ಯಶಸಶ್ಚ ಭಾಜನಮರಿಷ್ಟಕಹಾ |
ಏಕಾಂತಿನಾಂ ಶರಣದೋಽಭಯದೋ
ಗತಿದೋಽಸ್ತು ವಃ ಸ ಮಖಭಾಗಹರಃ ॥14॥
ಅತ್ಯಂತ ಜ್ಞಾನಿಗಳ ಮಹತ್ತರವಾದ ತಪಸ್ಸಿಗೂ ಇವನೇ ನಿಧಿ ಎನಿಸಿದ್ದಾನೆ. ಅರಿಷ್ಟಕನನ್ನು ಸಂಹರಿಸಿದ ಭಗವಂತನು ಯಶಸ್ಸಿಗೆ ಭಾಜನನಾಗಿದ್ದಾನೆ. ಏಕಾಂತ ಭಕ್ತರಿಗೆ ಗತಿದಾಯಕನು, ಅಭೇದನು, ಶರಣದನು. ಅಂತಹ ಯಜ್ಞಗಳ ಭೋಕ್ತೃವಾದ ಹರಿಯು ನಿನಗೆ ಮಂಗಳಪ್ರದನಾಗಲಿ.
ತ್ರಿಗುಣಾತಿಗಶ್ಚತುಷ್ಪಂಚಧರಃ
ಪೂರ್ತೇಷ್ಟಯೋಶ್ಚ ಫಲಭಾಗಹರಃ |
ವಿದಧಾತಿ ನಿತ್ಯಮಜಿತೋಽತಿಬಲೋ
ಗತಿಮಾತ್ಮಗಾಂ ಸುಕೃತಿನಾಮೃಷಿಣಾಮ್ ॥15॥
ಮೂರುಗುಣಗಳನ್ನು ಮೀರಿ ನಿಂತಿರುವ, ಇಪ್ಪತ್ನಾಲ್ಕು ತತ್ತ್ವಗಳನ್ನು ಧರಿಸಿರುವ, ಯಜ್ಞ-ಯಾಗಾದಿಗಳ ಫಲದ ಭಾಗವನ್ನು ಸ್ವೀಕರಿಸುವ ಅಜಿತನೂ, ಅತಿ ಬಲವಂತನೂ ಆದ ಭಗವಂತನು ತನ್ನಲ್ಲೇ ಮನಸ್ಸುಳ್ಳ ಸುಕೃತಿಗಳಾದ ಋಷಿಗಳಿಗೆ ಉತ್ತಮವಾದ ಗತಿಯನ್ನು ದಯಪಾಲಿಸುತ್ತಾನೆ.
ತಂ ಲೋಕಸಾಕ್ಷಿಣಮಜಂ ಪುರುಷಂ
ರವಿವರ್ಣಮೀಶ್ವರಗತಿಂ ಬಹುಶಃ |
ಪ್ರಣಮಧ್ವಮೇಕಮತಯೋ ಯತಯಃ
ಸಲಿಲೋದ್ಭವೋಽಪಿ ತಮೃಷಿಂ ಪ್ರಣತಃ ॥16॥
ಲೋಕಸಾಕ್ಷಿಯೂ, ಪುರಾಣಪುರುಷನೂ, ಜನ್ಮರಹಿತನೂ, ಸೂರ್ಯವರ್ಣನೂ ಆದ ನಾರಾಯಣನನ್ನು, ಎಲ್ಲ ಪ್ರಕಾರಗಳಲ್ಲಿಯೂ ಸದ್ಗತಿಪ್ರದನಾದ ಶ್ರೀಹರಿಯನ್ನು ಬಾರಿ ಬಾರಿಗೂ ನಮಸ್ಕರಿಸಿರಿ. ಸಲಿಲೋದ್ಭವನಾದ ಚತುರ್ಮುಖ ಬ್ರಹ್ಮನೂ ನಾರಾಯಣನನ್ನು ನಮಸ್ಕರಿಸುತ್ತಾನೆ.
ಸ ಹಿ ಲೋಕಯೋನಿರಮೃತಸ್ಯ ಪದಂ
ಸೂಕ್ಷ್ಮಂ ಪುರಾಣಮಚಲಂ ಪರಮಮ್ |
ತತ್ ಸಾಂಖ್ಯಯೋಗಿಭಿರುದಾರಧೃತಂ
ಬುದ್ಧ್ಯಾ ಯತಾತ್ಮಭಿರ್ವಿದಿತಂ ಸತತಮ್ ॥17॥
ನಾರಾಯಣನು ಜಗತ್ತಿಗೆ ಆದಿಕಾರಣನು, ಮೋಕ್ಷಾಶ್ರಯನು, ಸೂಕ್ಷ್ಮನು, ಪುರಾಣನು, ಅಚಲನು, ಸರ್ವೋತ್ತಮನು. ಸಾಂಖ್ಯಯೋಗಿಯ ಬುದ್ಧಿಯ ಮೂಲಕ ಚೆನ್ನಾಗಿ ಧರಿಸಲ್ಪಟ್ಟವನು. ಜಿತೇಂದ್ರಿಯರಾದ ಜ್ಞಾನಿಗಳಿಂದ ನಿರಂತರವೂ ಬುದ್ಧಿಯಿಂದ ಚೆನ್ನಾಗಿ ತಿಳಿಯಲ್ಪಟ್ಟವನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತನೆಯ ಅಧ್ಯಾಯ
ವೇದ ಉದ್ಧರಿಸಿದ ಹಯಗ್ರೀವನ ಕಥೆ.
ಜನಮೇಜಯಃ
ಶ್ರುತಂ ಭಗವತಸ್ತಸ್ಯ ಮಾಹಾತ್ಮ್ಯಂ ಪರಮಾತ್ಮನಃ |
ಜನ್ಮ ಧರ್ಮಗೃಹೇ ಚೈವ ನರನಾರಾಯಣಾತ್ಮಕಮ್ |
ಮಹಾವರಾಹಸೃಷ್ಟಾ ಚ ಪಿಂಡೋತ್ಪತ್ತಿಃ ಪುರಾತನೀ ॥1॥
ಜನಮೇಜಯ ಪೂಜ್ಯನೇ, ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯ ಮಾಹಾತ್ಮ್ಯವನ್ನು ಕೇಳಿದೆವು. ಧರ್ಮನ ಮನೆಯಲ್ಲಿ ಶ್ರೀಹರಿಯೇ ನರ-ನಾರಾಯಣ ರೂಪದಿಂದ ಅವತರಿಸಿದ ಕಥೆಯನ್ನು ಹೇಳಿರುತ್ತೀರಿ. ಅದರಂತೆ ವರಾಹನಿಂದ ಸೃಷ್ಟವಾದ ಪುರಾತನವಾದ ಪಿಂಡೋತ್ಪತ್ತಿಯ ಕಥೆಯನ್ನು ಕೇಳಿದ್ದೇವೆ.

ಪ್ರವೃತ್ತೌ ಚ ನಿವೃತ್ತೌ ಚ ಯೋ ಯಥಾ ಪರಿಕಲ್ಪಿತಃ |
ಸ ತಥಾ ನಃ ಶ್ರುತೋ ಬ್ರಹ್ಮನ್ ಕಥ್ಯಮಾನಸ್ತ್ವಯಾನಘ ||2||
ಪ್ರವೃತ್ತಿ ಮತ್ತು ನಿವೃತ್ತಿ ಕರ್ಮದ ವಿಷಯದಲ್ಲಿ ಶ್ರವಣ ಮಾಡಿದೆವು. ಪ್ರವೃತ್ತಿ- ನಿವೃತ್ತಿ ಧರ್ಮಗಳಲ್ಲಿ ಇರುವ ವ್ಯವಸ್ಥೆಯನ್ನು ತಿಳಿದುಕೊಂಡಿದ್ದೇವೆ.
ಯಚ್ಚ ತತ್ ಕಥಿತಂ ಪೂರ್ವಂ ತ್ವಯಾ ಹಯಶಿರೋ ಮಹತ್ |
ಹವ್ಯಕವ್ಯಭುಜೋ ವಿಷ್ಣೋರುದಕ್ಪೂರ್ವೇ ಮಹೋದಧೌ |
ತಚ್ಚ ದೃಷ್ಟಂ ಭಗವತಾ ಬ್ರಹ್ಮಣಾ ಪರಮೇಷ್ಠಿನಾ ||3||
ಸಮುದ್ರದ ಈಶಾನ್ಯ ಭಾಗದಲ್ಲಿ ಹವ್ಯ-ಕವ್ಯಗಳನ್ನು ಸ್ವೀಕರಿಸುವ ಶ್ರೀಹರಿಯು ಹಯಗ್ರೀವನಾಗಿ ಅವತರಿಸಿದನು ಎಂಬ ವಿಷಯವನ್ನು ನೀವು ಹಿಂದೆ ಹೇಳಿದ್ದೀರಿ. ಪರಮೇಷ್ಠಿ ಎನಿಸಿದ ಚತುರ್ಮುಖ ಬ್ರಹ್ಮನು ಆ ಹಯಗ್ರೀವನನ್ನು ಕಂಡಿದ್ದಾನೆ ಎಂದು ತಿಳಿಸಿದ್ದೀರಿ.
ಕಿಂ ತದುತ್ಪಾದಿತಂ ಪೂರ್ವಂ ಹರಿಣಾ ಲೋಕಧಾರಿಣಾ |
ರೂಪಂ ಪ್ರಭಾವಮಹತಾಮಪೂರ್ವಂ ಧೀಮತಾಂ ವರ ||4||
ಬುದ್ಧಿವಂತರಲ್ಲಿ ಶ್ರೇಷ್ಠರೇ, ಜಗದ್ರಕ್ಷಕನಾದ ಶ್ರೀಹರಿಯು ಅಂತಹ ಶ್ರೇಷ್ಠವಾದ, ಪ್ರಭಾವಶಾಲಿಯಾದ ರೂಪವನ್ನು ಏಕೆ ಸೃಷ್ಟಿಸಿದನು. ಆ ರೂಪವು ಅಪೂರ್ವವಾದುದು ಎಂದು ಕೇಳಿದ್ದೇನೆ.
ದೃಷ್ಟ್ವಾ ಹಿ ವಿಬುಧಶ್ರೇಷ್ಠಮಪೂರ್ವಮಮಿತೌಜಸಮ್ |
ತದಶ್ವಶಿರಸಂ ಪುಣ್ಯಂ ಬ್ರಹ್ಮಾ ಕಿಮಕರೋನ್ಮುನೇ ||5||
ದೇವಶ್ರೇಷ್ಠನಾದ, ಅಪೂರ್ವನಾದ, ಅಮಿತವಾದ ತೇಜಸ್ಸುಳ್ಳ, ಶುಭ್ರನಾದ ಹಯಗ್ರೀವನನ್ನು ಕಂಡ ಚತುರ್ಮುಖ ಬ್ರಹ್ಮನು ಏನು ಮಾಡಿದನು?
ಏತನ್ನಃ ಸಂಶಯಂ ಬ್ರಹ್ಮನ್ ಪುರಾಣಜ್ಞಾನಸಂಭವಮ್ |
ಕಥಯಸ್ವೋತ್ತಮಮತೇ ಮಹಾಪುರುಷನಿರ್ಮಿತಮ್ |
ಪಾವಿತಾಃ ಸ್ಮ ತ್ವಯಾ ಬ್ರಹ್ಮನ್ ಪುಣ್ಯಾಂ ಕಥಯತಾ ಕಥಾಮ್ ||6||
ಪೂಜ್ಯರೇ, ನನ್ನ ಸಂದೇಹವನ್ನು ಪರಿಹರಿಸಿ. ಪುರಾಣಜ್ಞಾನದಿಂದ ಹುಟ್ಟಿರುವ ಈ ಕಥೆಯನ್ನು ಹೇಳಿರಿ. ಪುಣ್ಯಪ್ರದವಾದ ಈ ಕಥೆಯನ್ನು ಹೇಳಿ ನಮ್ಮನ್ನೂ ಪಾವನರನ್ನಾಗಿ ಮಾಡಿರಿ. ನಿಮ್ಮಿಂದ ನಾವೂ ಪವಿತ್ರರಾಗುತ್ತೇವೆ.
ವೈಶಂಪಾಯನಃ
ಕಥಯಿಷ್ಯಾಮಿ ತೇ ಸರ್ವಂ ಪುರಾಣಂ ವೇದಸಮ್ಮಿತಮ್ |
ಜಗೌ ಯದ್ಭಗವಾನ್ ವ್ಯಾಸೋ ರಾಜ್ಞೋ ಧರ್ಮಸುತಸ್ಯ ವೈ ||7||
ವೈಶಂಪಾಯನ ನಿಮಗೆ ವೇದಸಮ್ಮತವಾದ ಸಮಸ್ತ ಪುರಾಣದ ಕಥೆಯನ್ನು ಹೇಳುತ್ತೇನೆ. ಧರ್ಮರಾಜನಿಗೆ ವ್ಯಾಸರು ಹೇಳಿದ ಯಾವ ಕಥೆ ಇದೆಯೋ ಅದನ್ನೇ ಹೇಳುತ್ತೇನೆ.
ಶ್ರುತ್ವಾಶ್ವಶಿರಸೋ ಮೂರ್ತಿಂ ದೇವಸ್ಯ ಹರಿಮೇಧಸಃ |
ಉತ್ಪನ್ನಸಂಶಯೋ ರಾಜಾ ತಮೇವ ಸಮಚೋದಯತ್ ||8||
ಹಯಗ್ರೀವನ ವಿಷಯವನ್ನು ನಿಮ್ಮಂತೆ ಧರ್ಮರಾಜನು ಸಂಶಯದಿಂದ ವ್ಯಾಸರ ಬಳಿ ಕೇಳಿದನು.
ಯುಧಿಷ್ಠಿರಃ
ಯತ್ತದ್ದರ್ಶಿತವಾನ್ ಬ್ರಹ್ಮಾ ದೇವಂ ಹಯಶಿರೋಧರಮ್ |
ಕಿಮರ್ಥಂ ತತ್ ಸಮಭವದ್ವಪುರ್ದೇವೋಪಕಲ್ಪಿತಮ್ ||9||
ಯುಧಿಷ್ಠಿರ ವ್ಯಾಸರೇ, ಚತುರ್ಮುಖ ಬ್ರಹ್ಮನು ಯಾವ ಹಯಗ್ರೀವ ರೂಪವನ್ನು ನೋಡಿದನೋ ಆ ರೂಪವು ಯಾವ ಕಾರಣದಿಂದ ಅವತರಿಸಿತು ಎಂದು ಹೇಳಿರಿ.
ವ್ಯಾಸಃ
ಯತ್ಕಿಂಚಿದಿಹ ಲೋಕೇಽಸ್ಮಿನ್ ದೇಹಬದ್ಧಂ ವಿಶಾಂಪತೇ |
ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರಬುದ್ಧಿಜೈಃ ||10||
ವ್ಯಾಸರು ಯುಧಿಷ್ಠಿರನೇ, ಈ ಲೋಕದಲ್ಲಿ ಯಾವೆಲ್ಲ ಪ್ರಾಣಿಗಳಿವೆಯೋ ಎಲ್ಲವೂ ಭಗವಂತನ ಸಂಕಲ್ಪದಿಂದ ಹುಟ್ಟಿದ ಪಂಚಭೂತಗಳಿಂದಲೇ ವ್ಯಾಪ್ತವಾಗಿವೆ.
ಈಶ್ವರೋ ಹಿ ಜಗತ್ಸ್ರಷ್ಟಾ ಪ್ರಭುರ್ನಾರಾಯಣೋ ವಿರಾಟ್ |
ಭೂತಾಂತರಾತ್ಮಾ ವರದಃ ಸಗುಣೋ ನಿರ್ಗುಣೋಪಿ ಚ |
ಭೂತಪ್ರಲಯಮವ್ಯಕ್ತಂ ಶುಶ್ರೂಷುರ್ನೃಪಸತ್ತಮ ||11||
ರಾಜನೇ, ವಿರಾಟ್‌ರೂಪಿಯಾದ, ಪ್ರಭುವಾದ ನಾರಾಯಣನು ಸರ್ವ ಸಮರ್ಥನಾಗಿ ಈ ಜಗತ್ತನ್ನು ಸೃಷ್ಟಿಸಿದ್ದಾನೆ. ಸಮಸ್ತ ಭೂತಗಳ ಅಂತರ್ಯಾಮಿಯಾಗಿದ್ದಾನೆ, ವರದನಾಗಿದ್ದಾನೆ. ಗುಣಪರಿಪೂರ್ಣನೂ, ಪ್ರಾಕೃತಗುಣರಹಿತನೂ ಆಗಿದ್ದಾನೆ. ನಾರಾಯಣನ ಸೇವೆಯನ್ನು ಮಾಡುತ್ತಿರುವ ಅವ್ಯಕ್ತನಾಮಕ ಲಕ್ಷ್ಮೀತತ್ತ್ವದ ಬಗ್ಗೆ ನೀನು ತಿಳಿದುಕೊ.
ಧರಣ್ಯಾಮಥ ಲೀನಾಯಾಮಪ್ಸು ಚೈಕಾರ್ಣವೇ ಪುರಾ |
ಜ್ಯೋತಿರ್ಭೂತೇ ಜಲೇ ಚಾಪಿ ಲೀನೇ ಜ್ಯೋತಿಷಿ ಚಾನಿಲೇ ||12||
ಹಿಂದೆ ಮಹಾಪ್ರಲಯದಲ್ಲಿ ಪೃಥಿವಿಯು ನೀರಿನಿಂದ ತುಂಬಿಕೊಂಡು ಅದರಲ್ಲೇ ಮುಳುಗಿ ಹೋಯಿತು. ಆ ಜಲವು

ತೇಜಸ್ಸಿನಲ್ಲಿಯೂ, ತೇಜಸ್ಸು ವಾಯುವಿನಲ್ಲಿಯೂ ಲಯವನ್ನು ಹೊಂದಿತು.
ವಾಯೌ ಚಾಕಾಶಸಂಲೀನೇ ಆಕಾಶೇ ಚ ಮನೋನುಗೇ |
ವ್ಯಕ್ತೇ ಮನಸಿ ಸಂಲೀನೇ ವ್ಯಕ್ತೇ ಚಾವ್ಯಕ್ತತಾಂ ಗತೇ ॥13॥
ವಾಯುವು ಆಕಾಶದಲ್ಲಿ, ಆಕಾಶವು ಮನಸ್ಸಿನಲ್ಲಿ, ಮನಸ್ಸು ಮಹತತ್ತ್ವದಲ್ಲಿ, ಮಹತತ್ತ್ವವು ಪ್ರಕೃತಿ ಎನಿಸಿದ ಅವ್ಯಕ್ತ ತತ್ತ್ವದಲ್ಲಿ ಲಯವಾಯಿತು.
ಅವ್ಯಕ್ತೇ ಪುರುಷಂ ಯಾತೇ ಪುಂಸಿ ಸರ್ವಗತೇಪಿ ಚ |
ತಮ ಏವಾಭವತ್ ಸರ್ವಂ ನ ಪ್ರಾಜ್ಞಾಯತ ಕಿಂಚನ ॥14॥
ಅವ್ಯಕ್ತತತ್ತ್ವವು ಪುರುಷನಲ್ಲಿ ಲಯವಾಯಿತು. ಪುರುಷನು ಎಲ್ಲದಕ್ಕೂ ಆಧಾರನು. ಆ ಸಮಯದಲ್ಲಿ ಎಲ್ಲೆಡೆಯೂ ತಮಸ್ಸು ತುಂಬಿ ಯಾವುದೂ ತಿಳಿಯುತ್ತಿರಲಿಲ್ಲ.
ತಮಸೋ ಬ್ರಹ್ಮ ಸಂಭೂತಂ ತಮೋಮೂಲಮೃತಾತ್ಮಕಮ್ |
ತದ್ ವಿಶ್ವಭಾವಸಂಜ್ಞಾಂತಂ ಪೌರುಷೀಂ ತನುಮಾಸ್ಥಿತಮ್ ॥15॥
ಆ ತಮಸ್ಸೇ ತ್ರಿಗುಣಮೂಲವೆನಿಸಿದ ಯಥಾರ್ಥಜ್ಞಾನಾತ್ಮಕವಾದ, ಗುಣಪರಿಪೂರ್ಣವಾದ ಬ್ರಹ್ಮವೆನಿಸಿತು. ಆ ಗುಣಪರಿಪೂರ್ಣವಾದ ಬ್ರಹ್ಮನೆಂಬ ವಸ್ತುವು ತನ್ನ ಶಕ್ತಿಯಿಂದ ಅಭಿವೃದ್ಧಿಯನ್ನು ಹೊಂದಿ ವಿಶ್ವರೂಪವಾದ ಪುರುಷಾಕಾರವನ್ನು ತಾಳಿತು.
ಸೋಽನಿರುದ್ಧ ಇತಿ ಪ್ರೋಕ್ತಸ್ತತ್ ಪ್ರಧಾನಂ ಪ್ರಚಕ್ಷತೇ |
ತದವ್ಯಕ್ತಮಿತಿ ಜ್ಞೇಯಂ ತ್ರಿಗುಣಂ ನೃಪಸತ್ತಮ ॥16॥
ಆ ಪುರುಷಾಕಾರವೇ ಅನಿರುದ್ಧ ಎಂದು ಕರೆಸಿಕೊಂಡಿದ್ದಾನೆ. ಅನಿರುದ್ಧನನ್ನೇ ಪ್ರಕೃತಿ ನಿಯಾಮಕನು ಎನ್ನುತ್ತಾರೆ. ಅವನನ್ನೇ ಅವ್ಯಕ್ತನೆಂದೂ, ತ್ರಿಗುಣನೆಂದೂ ರಾಜನೇ, ತಿಳಿದುಕೊ.
ವಿದ್ಯಾಸಹಾಯವಾನ್ ದೇವೋ ವಿಷ್ವಕ್ಸೇನೋ ಹರಿಃ ಪ್ರಭುಃ |
ಅಪ್ಸ್ವೇವ ಶಯನಂ ಚಕ್ರೇ ನಿದ್ರಾಯೋಗಮುಪಾಗತಃ |
ಜಗತಶ್ಚಿಂತಯನ್ ಸೃಷ್ಟಿಂ ಚಿತ್ರಾಂ ಬಹುಗುಣೋದ್ಭವಾಮ್ ॥17॥
ಯಾವ ಭಗವಂತನ ಸಹಾಯದಿಂದ ವೇದವಿದ್ಯೆಗಳಿವೆಯೋ ಅಂತಹ ಪ್ರಭುವಾದ ಹರಿಯನ್ನು ವಿಷ್ವಕ್ಸೇನ ಎನ್ನುತ್ತಾರೆ. ಆ ಭಗವಂತನು ಯೋಗನಿದ್ರೆಯಿಂದ ಪ್ರಲಯ ಜಲದಲ್ಲಿ ಮಲಗಿದನು. ಅನೇಕ ಗುಣಗಳಿಂದ ಕೂಡಿದ ಬಗೆಬಗೆಯಾದ ಸೃಷ್ಟಿಗಾಗಿ ಮಲಗಿದಲ್ಲೇ ಚಿಂತಿಸಿದನು.
ತಸ್ಯ ಚಿಂತಯತಃ ಸೃಷ್ಟಿಂ ಮಹಾನಾತ್ಮಗುಣಃ ಸ್ಮೃತಃ |
ಅಹಂಕಾರಸ್ತತೋ ಜಾತೋ ಬ್ರಹ್ಮಾ ಶುಭಚತುರ್ಮುಖಃ |
ಹಿರಣ್ಯಗರ್ಭೋ ಭಗವಾನ್ ಸರ್ವಲೋಕಪಿತಾಮಹಃ ॥18॥
ಹೀಗೆ ಜ್ಞಾನಾದಿ ಗುಣಭರಿತನಾದ ಭಗವಂತನು ಚಿಂತಿಸುತ್ತಿರುವಾಗಲೇ ಮಹತ್ತತತ್ವಭಿಮಾನಿಯಾದ ಚತುರ್ಮುಖಬ್ರಹ್ಮನು ಅವನಿಗೆ ಮಗನಾಗಿ ಹುಟ್ಟಿದನು. ಆ ಚತುರ್ಮುಖನಾದ ಬ್ರಹ್ಮನಿಂದ ಅಹಂಕಾರತತತ್ವಭಿಮಾನಿಯಾದ ರುದ್ರನು ಹುಟ್ಟಿದನು. ಭಗವಾನ್ ಹಿರಣ್ಯಗರ್ಭನು ಸಮಸ್ತ ಜಗತ್ತಿಗೆ ಪಿತಾಮಹನೆನಿಸಿದ್ದಾನೆ.
ಪದ್ಮೇಽನಿರುದ್ಧಾತ್ ಸಂಭೂತಸ್ತದಾ ಪದ್ಮನಿಭೇಕ್ಷಣಃ |
ಸಹಸ್ರಪತ್ರೇ ದ್ಯುತಿಮಾನುಪವಿಷ್ಟಃ ಸನಾತನಃ ॥19॥
ಅನಿರುದ್ಧರೂಪಿಯಾದ ಪರಮಾತ್ಮನಿಂದ ಪದ್ಮದಲ್ಲಿ ಹುಟ್ಟಿದ, ಪದ್ಮನಂತೆ ಕಣ್ಣುಳ್ಳ ಚತುರ್ಮುಖ ಬ್ರಹ್ಮನು ಕಾಂತಿಯುಕ್ತನಾಗಿ, ಸನಾತನನಾಗಿ ಸಹಸ್ರಪತ್ರಗಳುಳ್ಳ ಕಮಲದಲ್ಲಿ ಕುಳಿತುಕೊಂಡನು.
ದದೃಶೇಽದ್ಭುತಸಂಕಾಶೇ ಲೋಕಾನಾಪೋಮಯಾನ್ ಪ್ರಭುಃ |
ಸತ್ತ್ವಸ್ಥಃ ಪರಮೇಷ್ಠೀ ಸ ತತೋ ಭೂತಗಣಾನ್ ಸೃಜತ್ ॥20॥
ಅಲ್ಲಿ ಕುಳಿತ ಬ್ರಹ್ಮನು ಜಲಮಯವಾದ, ಅದ್ಭುತವಾದ ಲೋಕವನ್ನು ಕಂಡನು. ಸತ್ತ್ವಗುಣದಿಂದ ಆವಿರ್ಭೂತನಾದ ಬ್ರಹ್ಮನು ಪ್ರಾಣಿ ಸಮುದಾಯವನ್ನು ಸೃಷ್ಟಿಸಲು ಪ್ರಾರಂಭಿಸಿದನು.
ಪೂರ್ವಮೇವ ಚ ಪದ್ಮಸ್ಯ ಪತ್ರೇ ಸೂರ್ಯಾಂಶುಸಪ್ರಭೇ |
ನಾರಾಯಣಕೃತೌ ಬಿಂದೂ ಅಪಾಮಾಸ್ತಾಂ ಗುಣೋತ್ತರೌ ॥21॥
ಬ್ರಹ್ಮನು ಕುಳಿತಿರುವ ಕಮಲದಲ್ಲಿ ಸೂರ್ಯಪ್ರಭೆಗೆ ಸಮಾನವಾದ, ನಾರಾಯಣನಿಂದ ಸೃಷ್ಟವಾದ ಎರಡು ಗುಣಗಳು ನೀರಿನ ಬಿಂದುಗಳಂತಿದ್ದವು.
ತಾವಪಶ್ಯತ್ ಸ ಭಗವಾನನಾದಿನಿಧನೋಽಚ್ಯುತಃ |
ಏಕಸ್ತತ್ರಾಭವದ್ ಬಿಂದುರ್ಮಧ್ವಾಭೋ ರುಚಿರಪ್ರಭಃ ॥22॥
ಅನಾದಿನಿಧನನೆನಿಸಿದ ಅಚ್ಯುತನು ಆ ಎರಡು ನೀರಿನ ಬಿಂದುಗಳನ್ನು ಕಂಡನು. ಅದರಲ್ಲಿ ಒಂದು ಬಿಂದುವು ಜೇನುತುಪ್ಪದ ಕಾಂತಿಯಂತೆ ಮನೋಹರವಾದ ಕಾಂತಿಯಿಂದ ಕೂಡಿತ್ತು.
ಸ ತಾಮಸೋ ಮಧುರ್ಜಾತಸ್ತದಾ ನಾರಾಯಣಾಜ್ಞಯಾ |
ಕಠಿನಸ್ತ್ವಪರೋ ಬಿಂದುಃ ಕೈಟಭೋ ರಾಜಸಸ್ತು ಸಃ॥23॥
ಆ ಸುಂದರವಾದ ಪ್ರಭೆಯಿಂದ ಕೂಡಿದ ತಮೋಬಿಂದುವಿನಿಂದ ಮಧು ಎಂಬ ದೈತ್ಯನು ಹುಟ್ಟಿದನು. ಅದೇ ಸಮಯದಲ್ಲಿ ನಾರಾಯಣನ ಆದೇಶದಂತೆ ಅತ್ಯಂತ ಕಠಿಣವಾದ ಮತ್ತೊಂದು ರಜೋಬಿಂದುವಿನಿಂದ ಕೈಟಭ ಎಂಬ ರಾಕ್ಷಸ ಹುಟ್ಟಿದನು.
ತಾವಭ್ಯಧಾವತಾಂ ಶ್ರೇಷ್ಠೌ ತಮೋರಜಗುಣಾನ್ವಿತೌ |

ಬಲವಂತೌ ಗದಾಹಸ್ತೌ ಪದ್ಮನಾಲಾನುಸಾರಿಣೌ ॥24॥
ತಮೋಗುಣ, ರಜೋಗುಣಗಳಿಂದ ಕೂಡಿದ, ಬಲಿಷ್ಠರಾದ, ಗದಾಪಾಣಿಗಳಾದ ಮಧು-ಕೈಟಭರೆಂಬ ರಾಕ್ಷಸರು ಪದ್ಮದ ನಾಲವನ್ನೇ ಅನುಸರಿಸಿ ಓಡಿಬಂದರು.
ದದೃಶಾತೇರವಿಂದಸ್ಥಂ ಬ್ರಹ್ಮಾಣಮಮಿತಪ್ರಭಮ್ |
ಸೃಜಂತಂ ಪ್ರಥಮಂ ವೇದಾಂಶ್ಚತುರಶ್ಚಾರುವಿಗ್ರಹಾನ್ ॥25॥
ಕಮಲದ ಮಧ್ಯಭಾಗದಲ್ಲಿ ಕುಳಿತಿದ್ದ, ಮಹಾಪ್ರಭೆಯಿಂದ ಕೂಡಿರುವ, ಸುಂದರವಾದ ದೇಹವುಳ್ಳ, ನಾಲ್ಕು ವೇದಗಳನ್ನು ಸೃಷ್ಟಿಸುತ್ತಿದ್ದ ಬ್ರಹ್ಮನನ್ನು ಅವರು ನೋಡಿದರು.
ತತೋ ವಿಗ್ರಹವಂತಸ್ತಾನ್ ವೇದಾನ್ ದೃಷ್ಟ್ವಾ ಸುರೋತ್ತಮೌ |
ಸಹಸಾ ಜಗೃಹತುರ್ವೇದಾನ್ ಬ್ರಹ್ಮಣಃ ಪಶ್ಯತಸ್ತದಾ ॥26॥
ಆ ಇಬ್ಬರು ಅಸುರರು ಶರೀರದಿಂದ ಕೂಡಿರುವ ವೇದಗಳನ್ನು ಕಂಡು ಚತುರ್ಮುಖ ಬ್ರಹ್ಮನು ನೋಡುತ್ತಿರುವಾಗಲೇ ಆ ವೇದಗಳನ್ನು ಕೂಡಲೇ ಹಿಡಿದು ಕೊಂಡರು.
ಅಥ ತೌ ದಾನವಶ್ರೇಷ್ಠೌ ವೇದಾನ್ ಗೃಹ್ಯ ಸನಾತನಾನ್ |
ರಸಾಂ ವಿವಿಶತುಸ್ತೂರ್ಣಮುದಕ್ಪೂರ್ವೇ ಮಹೋದಧೌ ॥27॥
ದಾನವಶ್ರೇಷ್ಠರಾದ ಅವರಿಬ್ಬರೂ ಸನಾತನವಾದ ವೇದಗಳನ್ನು ಅಪಹರಿಸಿಕೊಂಡು ಸಮುದ್ರದ ಈಶಾನ್ಯಭಾಗದಲ್ಲಿರುವ ಭೂಮಿಯ ಒಳಹೊಕ್ಕರು.
ತತೋ ಹೃತೇಷು ವೇದೇಷು ಬ್ರಹ್ಮಾ ಕಶ್ಮಲಮಾವಿಶತ್ |
ತತೋ ವಚನಮೀಶಾನಂ ಪ್ರಾಹ ವೇದೈರ್ವಿನಾಕೃತಃ ॥28॥
ಹೀಗೆ ಮಧು-ಕೈಟಭರಿಂದ ವೇದಗಳು ಅಪಹೃತವಾಗಲು ಬ್ರಹ್ಮನು ದುಃಖಿತನಾದನು. ವೇದಗಳನ್ನು ಕಳೆದುಕೊಂಡು ಭಗವಂತನ ಬಳಿ ಹೀಗೆ ಹೇಳಿದನು.
ವೇದಾ ಮೇ ಪರಮಂ ಚಕ್ಷುರ್ವೇದಾ ಮೇ ಪರಮಂ ಬಲಮ್ |
ವೇದಾ ಮೇ ಪರಮಂ ಧಾಮ ವೇದಾ ಮೇ ಬ್ರಹ್ಮ ಚೋತ್ತಮಮ್ ॥
ಭಗವಂತನೇ, ವೇದಗಳೇ ನನಗೆ ಶ್ರೇಷ್ಠವಾದ ಕಣ್ಣುಗಳು. ವೇದಗಳೇ ನನಗೆ ಪರಮಬಲವು. ವೇದಗಳೇ ನನಗೆ ನಿವಾಸಸ್ಥಾನವು. ವೇದಗಳೇ ನನಗೆ ಸರ್ವೋತ್ಕೃಷ್ಟವಾದ ತತ್ತ್ವವು.
ಮಮ ವೇದಾ ಹೃತಾಃ ಸರ್ವೇ ದಾನವಾಭ್ಯಾಂ ಬಲಾರ್ದಿತಾಃ |
ಅಂಧಕಾರಾ ಹಿ ಮೇ ಲೋಕಾ ಜಾತಾ ವೇದೈರ್ವಿನಾಕೃತಾಃ |
ವೇದಾನೃತೇ ಹಿ ಕಿಂ ಕುರ್ಯಾಂ ಲೋಕಾನ್ವೈ ಸ್ರಷ್ಟುಮುದ್ಯತಃ ॥30॥
ನಾನು ಸೃಷ್ಟಿಸಿದ ಸಮಸ್ತ ವೇದಗಳು ಬಲಾತ್ಕಾರದಿಂದ ದೈತ್ಯರಿಂದ ಅಪಹೃತವಾಗಿವೆ. ಎಲ್ಲೆಡೆಯೂ ವೇದಹೀನನಾದ ನನಗೆ ಲೋಕಗಳೆಲ್ಲ ಕತ್ತಲೆಯಾಗಿ ಕಾಣಿಸುತ್ತಿವೆ. ವೇದಗಳೇ ಇಲ್ಲದೆ ಸೃಷ್ಟಿಯಲ್ಲಿ ನಿರತನಾದ ನಾನು ಹೇಗೆ ಸೃಷ್ಟಿಯನ್ನು ಮಾಡಲಿ?
ಅಹೋ ಬತ ಮಹದ್ದುಃಖಂ ವೇದನಾಶನಜಂ ಮಮ |
ಪ್ರಾಪ್ತಂ ದುನೋತಿ ಹೃದಯಂ ತೀವ್ರಶೋಕಾಯ ರಂಧಯನ್ ॥31॥
ವೇದಗಳ ವಿನಾಶದಿಂದ ಉಂಟಾದ ದೊಡ್ಡ ದುಃಖವು ನನ್ನನ್ನು ಆಕ್ರಮಿಸಿದೆ. ತೀವ್ರವಾದ ಶೋಕದಲ್ಲಿ ಮುಳುಗಿರುವ ನನ್ನನ್ನು ಯಾರು ಉದ್ಧರಿಸುತ್ತಾರೆ?
ಕೋ ಹಿ ಶೋಕಾರ್ಣವೇ ಮಗ್ನಂ ಮಾಮಿತೋಽದ್ಯ ಸಮುದ್ಧರೇತ್ |
ವೇದಾಂಸ್ತಾನಾನಯೇನ್ನಷ್ಟಾನ್ಕಸ್ಯ ಚಾಹಂ ಪ್ರಿಯೋ ಭವೇ ॥32॥
ಶೋಕಸಾಗರದಲ್ಲಿ ಮುಳುಗಿರುವ ನನ್ನನ್ನು ಯಾರು ಉದ್ಧರಿಸುತ್ತಾರೆ? ನಷ್ಟವಾಗಿರುವ ನನ್ನ ವೇದಗಳನ್ನು ನನ್ನ ಮೇಲಿನ ಪ್ರೀತಿಯಿಂದ ಯಾರು ತಂದು ಕೊಡುತ್ತಾರೆ? ನಾನು ಯಾರಿಗೆ ಅಷ್ಟು ಪ್ರೀತಿಪಾತ್ರನಾಗಿದ್ದೇನೆ?
ಇತ್ಯೇವಂ ಭಾಷಮಾಣಸ್ಯ ಬ್ರಹ್ಮಣೋ ನೃಪಸತ್ತಮ |
ಹರೇಃ ಸ್ತೋತ್ರಾರ್ಥಮುದ್ಭೂತಾ ಬುದ್ಧಿರ್ಬುದ್ಧಿಮತಾಂ ವರ |
ತತೋ ಜಗೌ ಪರಂ ಜಪ್ಯಂ ಸಾಂಜಲಿಪ್ರಗ್ರಹಃ ಪ್ರಭುಃ ॥33॥
ಈ ರೀತಿಯಾಗಿ ಬ್ರಹ್ಮನು ಮಾತನಾಡುತ್ತಿರುವಾಗ ಜ್ಞಾನಿಯೇ, ಚತುರ್ಮುಖ ಬ್ರಹ್ಮನಿಗೆ ಭಗವಂತನನ್ನು ಸ್ತುತಿಸುವ ಬುದ್ಧಿಯುಂಟಾಯಿತು. ಉತ್ತಮವಾದ ಪ್ರತಿದಿನವೂ ಜಪಿಸಲು ಯೋಗ್ಯವಾದ ಸ್ತೋತ್ರದಿಂದ ಭಕ್ತಿಸಂಪನ್ನನಾಗಿ ಬ್ರಹ್ಮನು ಸ್ತುತಿಸಲು ಆರಂಭಿಸಿದನು.
ನಮಸ್ತೇ ಬ್ರಹ್ಮಹೃದಯ ನಮಸ್ತೇ ಮಮ ಪೂರ್ವಜ |
ಲೋಕಾದ್ಯ ಭುವನಶ್ರೇಷ್ಠ ಸಾಂಖ್ಯಯೋಗನಿಧೇ ವಿಭೋ ॥34॥
ವ್ಯಕ್ತಾವ್ಯಕ್ತಕರಾಚಿಂತ್ಯ ಕ್ಷೇಮಂ ಪಂಥಾನಮಾಸ್ಥಿತ |
ವಿಶ್ವಭುಕ್ಸರ್ವಭೂತಾನಾಮಂತರಾತ್ಮನ್ನಯೋನಿಜ ॥35॥
ವೇದಗಳೇ ಹೃದಯವಾಗಿ ಉಳ್ಳ ಭಗವಂತನೇ, ನಿನಗೆ ನಮಸ್ಕಾರ. ನನಗೂ ಪೂರ್ವಜನೇ, ನಿನಗೆ ನಮಸ್ಕಾರ. ಲೋಕಗಳಿಗೆಲ್ಲ ಆದ್ಯನೇ, ಭುವನಶ್ರೇಷ್ಠನೇ, ಸಾಂಖ್ಯಯೋಗಗಳಲ್ಲಿ ನಿಧಿ ಎನಿಸಿದವನೇ, ವಿಭುವೇ, ವ್ಯಕ್ತಾವ್ಯಕ್ತ ಪ್ರಪಂಚವನ್ನು ಸೃಷ್ಟಿಸುವ ಅಚಿಂತ್ಯನೇ, ನಿರ್ದುಷ್ಟವಾದ ಮಾರ್ಗವನ್ನು ಹೊಂದಿದವನೇ, ವಿಶ್ವಭೋಕ್ತೃವೇ, ಸಮಸ್ತ ಭೂತಾಂತರ್ಯಾಮಿಯೇ, ಅಯೋನಿಜನೇ,
ಅಹಂ ಪ್ರಸಾದಜಸ್ತುಭ್ಯಂ ಲೋಕಧಾಮ್ನೇ ಸ್ವಯಂಭುವೇ |

ತ್ವತ್ತೋ ಮೇ ಮಾನಸಂ ಜನ್ಮ ಪ್ರಥಮಂ ದ್ವಿಜಪೂಜಿತಮ್ ॥36॥
ನಾನು ನಿನ್ನ ಅನುಗ್ರಹದಿಂದ ಹುಟ್ಟಿದವನು. ಸಮಸ್ತ ಲೋಕಾಧಾರನಾದ ಸ್ವಯಂಭುವು ನೀನು. ನಿನ್ನಿಂದಲೇ ನನ್ನ ಮೊದಲನೆಯ ಜನ್ಮವು. ದ್ವಿಜಪೂಜಿತವಾದ ನನ್ನ ಜನ್ಮವು ನಿನ್ನಿಂದ ಉಂಟಾಯಿತು. ಮೊದಲನೆಯ ಜನ್ಮವು ನಿನ್ನ ಮನಸ್ಸಿನಿಂದ ಉಂಟಾಯಿತು.
ಚಾಕ್ಷುಷಂ ವೈ ದ್ವಿತೀಯಂ ಮೇ ಜನ್ಮ ಚಾಸೀತ್ ಪುರಾತನಮ್ |
ತ್ವತ್ಪ್ರಸಾದಾಚ್ಚ ಮೇ ಜನ್ಮ ತೃತೀಯಂ ವಾಚಿಕಂ ಮಹತ್ ॥37॥
ತ್ವತ್ತಃ ಶ್ರವಣಜಂ ಚಾಪಿ ಚತುರ್ಥಂ ಜನ್ಮ ಮೇ ವಿಭೋ |
ನಾಸಿಕ್ಯಂ ಚಾಪಿ ಮೇ ಜನ್ಮ ತ್ವತ್ತಃ ಪಂಚಮಮುಚ್ಯತೇ ॥38॥
ನಿನ್ನ ಕಣ್ಣುಗಳಿಂದ ಎರಡನೆಯ ಜನ್ಮವಾಯಿತು. ನಿನ್ನ ವಾಗಿಂದ್ರಿಯದಿಂದ ಮೂರನೆಯ ಜನ್ಮವು, ನಿನ್ನ ಕಿವಿಗಳಿಂದ ನಾಲ್ಕನೆಯ ಜನ್ಮವು ಉಂಟಾಯಿತು. ನಾಭಿಯಿಂದ ಹೇಗೆ ಜನ್ಮ ಪಡೆದೆನೋ ಹಾಗೆ ನಿನ್ನ ಮನಸ್ಸೇ ಮೊದಲಾದ ಇಂದ್ರಿಯಗಳಿಂದಲೂ ಕಾಲಕಾಲಕ್ಕೆ ಅನೇಕ ಜನ್ಮಗಳನ್ನು ನಾನು ಹೊಂದಿದ್ದೇನೆ ಎಂದು ಬ್ರಹ್ಮದೇವರು ಭಗವಂತನನ್ನು ಸ್ತುತಿಸಿದರು ಎಂದು ಭಾವ. ನಿನ್ನ ಮೂಗಿನಿಂದ ನನಗೆ ಐದನೆಯದ್ದಾದ ಜನ್ಮವು ಲಭಿಸಿತು.
ಅಂಡಜಂ ಚಾಪಿ ಮೇ ಜನ್ಮ ತ್ವತ್ತಃ ಷಷ್ಠಂ ವಿನಿರ್ಮಿತಮ್ |
ಇದಂ ಚ ಸಪ್ತಮಂ ಜನ್ಮ ಪದ್ಮಜಂ ಮೇಽಮಿತಪ್ರಭ ॥39॥
ನನ್ನ ಮತ್ತೊಂದು ಜನ್ಮವು ಬ್ರಹ್ಮಾಂಡದಿಂದಲೇ ಉಂಟಾದುದು. ಅದು ನನ್ನ ಆರನೆಯ ಜನ್ಮವೆನಿಸಿದೆ. ನಾಭಿಯಿಂದ ಹುಟ್ಟಿದ ಈಗಿನ ಜನ್ಮವು ಅಮಿತಪ್ರಭನೇ, ನಿನ್ನಿಂದ ಉಂಟಾದ ಏಳನೆಯ ಜನ್ಮವು.
ಸರ್ಗೇ ಸರ್ಗೇ ಹ್ಯಹಂ ಪುತ್ರಸ್ತವ ತ್ರಿಗುಣವರ್ಜಿತಃ |
ಪ್ರಥಿತಃ ಪುಂಡರೀಕಾಕ್ಷ ಪ್ರಧಾನಗುಣಕಲ್ಪಿತಃ ॥40॥
ಪ್ರತಿಯೊಂದು ಸೃಷ್ಟಿಕಾಲದಲ್ಲಿಯೂ ನಾನು ನಿನಗೆ ಮಗನಾಗಿ ಹುಟ್ಟುತ್ತೇನೆ. ತ್ರಿಗುಣವರ್ಜಿತನೇ, ಪುಂಡರೀಕಾಕ್ಷನೇ, ನಿನ್ನ ಮಗನಾದ ನಾನು ಶುದ್ಧಸತ್ತ್ವ ಶರೀರಮಯನೆಂದು ಪ್ರಸಿದ್ಧನಾಗಿದ್ದೇನೆ.
ತ್ವಮೀಶ್ವರಸ್ವಭಾವಶ್ಚ ಸ್ವಯಂಭೂಃ ಪುರುಷೋತ್ತಮಃ |
ತ್ವಯಾ ವಿನಿರ್ಮಿತೋಹಂ ವೈ ವೇದಚಕ್ಷುರ್ವಯೋತಿಗಃ ॥41॥
ನೀನೇ ಈಶ್ವರಸ್ವಭಾವನು. ನೀನೇ ಸ್ವಯಂಭುವು, ನೀನೇ ಪುರುಷೋತ್ತಮನು. ನಿನ್ನಿಂದಲೇ ನಾನು ವೇದಚಕ್ಷು ಎಂದು ನಿರ್ಮಿತನಾದವನು. ಕಾಲವನ್ನು ಮೀರಿದವನು.
ತೇ ಮೇ ವೇದಾ ಹೃತಾಶ್ಚಕ್ಷುರಂಧೋ ಜಾತೋಽಸ್ಮಿ ಜಾಗೃಹಿ |
ದದಸ್ವ ಚಕ್ಷುಷೀ ಮಹ್ಯಂ ಪ್ರಿಯೋಽಹಂ ತೇ ಪ್ರಿಯೋಽಸಿ ಮೇ ॥42॥
ಅಂತಹ ನನ್ನ ಕಣ್ಣಿನಂತೆ ಇರುವ ವೇದಗಳು ದೈತ್ಯರಿಂದ ಅಪಹೃತವಾಗಿ ಅಂಧನಾಗಿದ್ದೇನೆ. ನೀನು ಯೋಗನಿದ್ರೆಯಿಂದ ಎಚ್ಚರಗೊಂಡು ನನ್ನ ಕಣ್ಣುಗಳನ್ನು ತಂದುಕೊಡು. ನಾನು ನಿನಗೆ ಪ್ರಿಯನು. ನೀನೂ ನನಗೆ ಪ್ರಿಯನು.
ಏವಂ ಸ್ತುತಃ ಸ ಭಗವಾನ್ ಪುರುಷಃ ಸರ್ವತೋಮುಖಃ |
ಜಹೌ ನಿದ್ರಾಮಥ ತದಾ ವೇದಕಾರ್ಯಾರ್ಥಮುದ್ಯತಃ |
ಐಶ್ವರೇಣ ಪ್ರಯೋಗೇಣ ದ್ವಿತೀಯಾಂ ತನುಮಾಸ್ಥಿತಃ ॥43॥
ಬ್ರಹ್ಮನು ಹೀಗೆ ಸ್ತುತಿಸಿದ ಬಳಿಕ ಸರ್ವತೋಮುಖನಾದ, ಸರ್ವಾಂತರ್ಯಾಮಿಯಾದ ಭಗವಾನ್ ಪುರುಷೋತ್ತಮನು ಕೂಡಲೇ ನಿದ್ರೆಯನ್ನು ಬಿಟ್ಟು, ವೇದಗಳನ್ನು ರಕ್ಷಿಸುವ ಕಾರ್ಯಕ್ಕೆ ಮುಂದಾದನು. ತನ್ನ ಯೋಗೈಶ್ವರ್ಯ ಶಕ್ತಿಯಿಂದ ನಾರಾಯಣನು ಎರಡನೇ ಶರೀರವನ್ನು ಧರಿಸಿದನು.
ಸುನಾಸಿಕೇನ ಕಾಯೇನ ಭೂತ್ವಾ ಚಂದ್ರಪ್ರಭಸ್ತದಾ |
ಕೃತ್ವಾ ಹಯಶಿರಃ ಶುಭ್ರಂ ವೇದಾನಾಮಾಲಯಂ ಪ್ರಭುಃ ॥44॥
ಚಂದ್ರಪ್ರಭೆಯಿಂದ ಬೆಳಗುವ ಶ್ರೀಹರಿಯು ಸುಂದರ ಮೂಗಿನಿಂದ ಕೂಡಿದ ಶುಭ್ರವಾದ ಹಯಶಿರಸ್ಸನ್ನು ಧರಿಸಿದ್ದನು. ಅವನ ಮುಖವು ವೇದಗಳ ಮನೆಯಂತಿತ್ತು.
ತಸ್ಯ ಮೂರ್ಧಾ ಸಮಭವದ್ ದ್ಯೌಃ ಸನಕ್ಷತ್ರತಾರಕಾ |
ಕೇಶಾಶ್ಚಾಸ್ಯಾಭವನ್ ದೀರ್ಘಾ ರವೇರಂಶುಸಮಪ್ರಭಾಃ ॥45॥
ತಲೆಯು ನಕ್ಷತ್ರಗಳಿಂದಲೂ, ತಾರೆಗಳಿಂದಲೂ ಕೂಡಿತ್ತು. ಅವನ ಕೂದಲುಗಳು ನೀಳವಾಗಿಯೂ ಸೂರ್ಯನ ಪ್ರಭೆಯಂತೆ ಪ್ರಭಾಯುಕ್ತವೂ ಆಗಿದ್ದವು.
ವ್ಯಾಖ್ಯಾನ ವಿಶೇಷ ವಾದಿರಾಜರು ಸರಸಭಾರತೀವಿಲಾಸದಲ್ಲಿ ಇದೇ ಅಭಿಪ್ರಾಯದಿಂದ ಹಯಗ್ರೀವನನ್ನು ಸ್ತುತಿಸುತ್ತಾರೆ. `ತಾರಾವಿಧೇಯಃ ತಾರಾಭ ಹಾರಾಲಂಕಾರ ಭಾಸುರಾಃ ಸಾರಾತ್ಸಾರೋ ಹಯಶಿರಾಃ ತಾರಯೇತ್ ದುಸ್ತರಾತ್ ತರಾತ್' ಎಂದು.
ಕರ್ಣಾವಾಕಾಶಪಾತಾಲೇ ಲಲಾಟಂ ಭೂತಧಾರಿಣೀ |
ಗಂಗಾ ಸರಸ್ವತೀ ಪುಣ್ಯಾ ಭ್ರುವಾವಾಸ್ತಾಂ ಮಹಾನದೀ ॥46॥
ಆಕಾಶ-ಪಾತಾಳಗಳೇ ಹಯಗ್ರೀವನ ಕಿವಿಗಳು. ಪಿಶಾಚಾದಿಗಳಿಗೆ ಆಧಾರಭೂತವಾದ ಅಂತರಿಕ್ಷವೇ ಹಣೆಯು. ಗಂಗಾ-ಸರಸ್ವತಿಗಳೇ ನಿತಂಬಗಳು. ಎರಡು ಸಮುದ್ರಗಳೇ ಹುಬ್ಬುಗಳು.
ಚಕ್ಷುಷೀ ಸೋಮಸೂರ್ಯೌ ತೇ ನಾಸಾ ಸಂಧ್ಯಾ ಪುನಃ ಸ್ಮೃತಾ |
ಓಂಕಾರಸ್ತ್ವಥ ಸಂಸ್ಕಾರೋ ವಿದ್ಯುಜ್ಜಿಹ್ವಾ ಚ ನಿರ್ಮಿತಾ ॥47॥
ಸೂರ್ಯ-ಚಂದ್ರರೇ ಅವನ ಕಣ್ಣುಗಳು. ಸಂಧ್ಯಾಕಾಲವೇ ನಾಸಿಕ. ಓಂಕಾರವೇ ಆಭರಣ. ವಿದ್ಯುತ್ತೇ ನಾಲಿಗೆಯಾಗಿತ್ತು.

ದಂತಾಶ್ಚ ಪಿತರೋ ರಾಜನ್ ಸೋಮಪಾ ಇತಿ ವಿಶ್ರುತಾಃ |
ಗೋಲೋಕೋ ಬ್ರಹ್ಮಲೋಕಶ್ಚ ಕಟೀ ಆಸ್ತಾಮ್ ಮಹಾತ್ಮನಃ |
ಗ್ರೀವಾ ಚಾಸ್ಯಾಭವದ್ ರಾಜನ್ ಕಾಲರಾತ್ರಿರ್ಗುಣೋತ್ತರಾ ॥48॥
ಪ್ರಸಿದ್ಧರಾದ ಸೋಮಪ ಪಿತೃಗಳೇ ಹಯಗ್ರೀವನ ಹಲ್ಲುಗಳು. ಗೋಲೋಕ, ಸ್ವರ್ಗಲೋಕಗಳು ಕಟಿಗಳು. ತಮೋಮಯವಾದ ಕರಾಲರಾತ್ರಿಯು ಹಯಗ್ರೀವನ ಕುತ್ತಿಗೆಯಾಗಿತ್ತು.
ಏತದ್ರೂಯಶಿರಃ ಕೃತ್ವಾ ನಾನಾಮೂರ್ತಿಭಿರಾವೃತಮ್ |
ಅಂತರ್ದಧೇ ಸ ವಿಶ್ವೇಶೋ ವಿವೇಶ ಚ ರಸಾಂ ಪ್ರಭುಃ ॥49॥
ಹೀಗೆ ನಾನಾ ಪ್ರಕಾರಗಳಾದ ವಿಶ್ವಮೂರ್ತಿಯಾದ ಕುದುರೆಯ ಮುಖದ ಆಕಾರವನ್ನು ಹೊಂದಿದ ವಿಶ್ವೇಶ್ವರನಾದ ಭಗವಂತನು ಅದೃಶ್ಯನಾಗಿ ರಸಾತಳವನ್ನು ಪ್ರವೇಶಿಸಿದನು.
ರಸಾಂ ಪುನಃ ಪ್ರವಿಷ್ಟಶ್ಚ ಯೋಗಂ ಪರಮಮಾಸ್ಥಿತಃ |
ಶೈಕ್ಷಂ ಸ್ವರಂ ಸಮಾಸ್ಥಾಯ ಓಮಿತಿ ಪ್ರಾಸೃಜತ್ ಸ್ವರಮ್ ॥50॥
ರಸಾತಳವನ್ನು ಪ್ರವೇಶಿಸಿ, ಯೋಗವನ್ನು ಆಶ್ರಯಿಸಿದ ಭಗವಂತನು ವೇದಮಂತ್ರಗಳ ಉಚ್ಚಾರಣೆಯನ್ನು ತಿಳಿಸುವ ಶಿಕ್ಷಾ ಎಂಬ ವೇದಾಂಗದ ನಿಯಮಕ್ಕನುಗುಣವಾಗಿ ಓಂ ಎಂಬುದಾಗಿ ಸ್ವರವನ್ನು ಸೃಷ್ಟಿಸಿದನು.
ಸ ಸ್ವರಃ ಸಾನುನಾದೀ ಚ ಸರ್ವಗಃ ಸ್ನಿಗ್ಧ ಏವ ಚ |
ಬಭೂವಾಂತರ್ಮಹೀಭೂತಃ ಸರ್ವಭೂತಗುಣೋದಿತಃ ॥51॥
ಆ ಹಯಮುಖದಿಂದ ಹೊರಹೊಮ್ಮಿದ ಸ್ವರವು ರಣರಣಿಸುತ್ತಾ ಎಲ್ಲೆಡೆಯೂ ಮನೋಹರವಾಗಿ ಕೇಳಿಬರುತ್ತಿತ್ತು. ಸಮಸ್ತ ಪ್ರಾಣಿಗಳಿಗೂ ಗುಣಗಳನ್ನು ಪ್ರೇರಿಸುತ್ತಾ ಭೂಮಿಯ ಕೆಳಭಾಗದ ರಸಾತಳದಲ್ಲಿ ವ್ಯಾಪ್ತವಾಗಿತ್ತು.
ತತಸ್ತಾವಸುರೌ ಕೃತ್ವಾ ವೇದಾನ್ ಸಮಯಬಂಧನಾನ್ |
ರಸಾತಲೇ ವಿನಿಕ್ಷಿಪ್ಯ ಯತಃ ಶಬ್ದಸ್ತತೋ ದ್ರುತೌ ॥52॥
ಹೀಗೆ ಭಗವಂತನು ಶಬ್ದವನ್ನು ಮಾಡುತ್ತಿರುವಾಗ ಮಧು-ಕೈಟಭರು ವೇದಗಳನ್ನು ಬಂಧಿಸಿ, ಪಾತಾಳದಲ್ಲಿ ಬಚ್ಚಿಟ್ಟು, ಓಂಕಾರದ ಶಬ್ದವು ಎಲ್ಲಿಂದ ಬರುತ್ತಿತ್ತೋ ಅಲ್ಲಿಗೆ ಧಾವಿಸಿ ಬಂದರು.
ಏತಸ್ಮಿನ್ನಂತರೇ ರಾಜನ್ ದೇವೋ ಹಯಶಿರೋಧರಃ |
ಜಗ್ರಾಹ ವೇದಾನಖಿಲಾನ್ ರಸಾತಲಗತಾನ್ ಹರಿಃ |
ಪ್ರಾದಾಚ್ಚ ಬ್ರಹ್ಮಣೇ ಭೂಯಸ್ತತಃ ಸ್ವಾಂ ಪ್ರಕೃತಿಂ ಗತಃ ॥53॥
ಈ ಮಧ್ಯೆ ದೇವದೇವನಾದ, ಹಯಶಿರಸ್ಸನ್ನು ಧರಿಸಿದ ಶ್ರೀಹರಿಯು ಪಾತಾಳದಲ್ಲಿ ಇಟ್ಟಿದ್ದ ಸಮಸ್ತ ವೇದಗಳನ್ನು ತೆಗೆದುಕೊಂಡು, ಬ್ರಹ್ಮನ ಬಳಿ ಹೋಗಿ ಸಮಸ್ತ ವೇದಗಳನ್ನು ಅವನಿಗೆ ಕೊಟ್ಟನು. ಪುನಃ ತನ್ನ ಮೂಲರೂಪವನ್ನು ಹೊಂದಿದನು.
ಸ್ಥಾಪಯಿತ್ವಾ ಹಯಶಿರ ಉದಕ್ಪೂರ್ವೇ ಮಹೋದಧೌ |
ವೇದಾನಾಮಾಲಯಶ್ಚಾಪಿ ಬಭೂವಾಶ್ವಶಿರಾಸ್ತತಃ ॥54॥
ಬಳಿಕ ಮಹೋದಧಿಯ ಈಶಾನ್ಯಭಾಗದಲ್ಲಿ ವೇದಗಳಿಗೆ ಆಶ್ರಯವಾದ ಹಯಗ್ರೀವ ರೂಪವನ್ನು ಅಲ್ಲಿಯೇ ಸ್ಥಾಪಿಸಿ, ಹಯಗ್ರೀವ ಎಂಬ ಹೆಸರಿನಿಂದಲೇ ಖ್ಯಾತನಾದನು.
ಅಥ ಕಿಂಚಿದಪಶ್ಯಂತೌ ದಾನವೌ ಮಧುಕೈಟಭೌ |
ಪುನರಾಜಗ್ಮತುಸ್ತತ್ರ ವೇಗಿತೌ ಪಶ್ಯತಾಂ ಚ ತೌ |
ಯತ್ರ ವೇದಾ ವಿನಿಕ್ಷಿಪ್ತಾಸ್ತತ್ಸ್ಥಾನಂ ಶೂನ್ಯಮೇವ ಚ ॥55॥
ಈಚೆ ಶಬ್ದದ ಕಡೆ ಧಾವಿಸಿದ ಮಧು-ಕೈಟಭರು ಅಲ್ಲಿ ಏನನ್ನೂ ಕಾಣದೆ ತಾವು ಬಚ್ಚಿಟ್ಟಿದ್ದ ವೇದಗಳ ಬಳಿ ವೇಗವಾಗಿ ಧಾವಿಸಿ ಹೋದರು. ಆದರೆ ಅಲ್ಲಿ ಅವರು ವೇದಗಳನ್ನು ಕಾಣಲಿಲ್ಲ. ವೇದಗಳನ್ನು ಬಚ್ಚಿಟ್ಟ ಜಾಗವು ಬರಿದಾಗಿತ್ತು.
ತತ ಉತ್ತಮಮಾಸ್ಥಾಯ ವೇಗಂ ಬಲವತಾಂ ವರೌ |
ಪುನರುತ್ತಸ್ಥತುಃ ಶೀಘ್ರಂ ರಸಾನಾಮಾಲಯಾತ್ತದಾ |
ದದೃಶಾತೇ ಚ ಪುರುಷಂ ತಮೇವಾದಿಕರಂ ಪ್ರಭುಮ್ ॥56॥
ಬಳಿಕ ಬಲಿಷ್ಠರಾದ ಆ ದೈತ್ಯರು ಉತ್ತಮವಾದ ವೇಗದಿಂದ ರಸಾತಳದಿಂದ ಶೀಘ್ರವಾಗಿ ಮೇಲಕ್ಕೆ ಬಂದರು. ಅವರಿಬ್ಬರೂ ಸೃಷ್ಟಿಕರ್ತನಾದ ಪುರುಷನಾಮಕನಾದ ಭಗವಂತನನ್ನು ಕಂಡರು.
ಶ್ವೇತಂ ಚಂದ್ರವಿಶುದ್ಧಾಭಮನಿರುದ್ಧತನೌ ಸ್ಥಿತಮ್ |
ಭೂಯೋಪ್ಯಮಿತವಿಕ್ರಾಂತಂ ನಿದ್ರಾಯೋಗಮುಪಾಗತಮ್ ॥57॥
ಆತ್ಮಪ್ರಮಾಣರಚಿತೇ ಅಪಾಮುಪರಿ ಕಲ್ಪಿತೇ |
ಶಯನೇ ನಾಗಭೋಗಾಢ್ಯೇ ಜ್ವಾಲಾಮಾಲಾಸಮಾವೃತೇ ॥58॥
ನಿಷ್ಕಲ್ಮಷೇಣ ಸತ್ತ್ವೇನ ಸಂಪನ್ನಂ ರುಚಿರಪ್ರಭಮ್ |
ತಂ ದೃಷ್ಟ್ವಾ ದಾನವೇಂದ್ರೌ ತೌ ಮಹಾಹಾಸಮಮುಂಚತಾಮ್ ॥59॥
ಭಗವಂತನಾದರೂ ಶ್ವೇತವರ್ಣದವನಾಗಿ, ಚಂದ್ರನಂತೆ ವಿಶುದ್ಧವಾದ ಕಿರಣಗಳುಳ್ಳವನಾಗಿ, ಅನಿರುದ್ಧದೇಹದಲ್ಲಿರುವ, ಅಮಿತಪರಾಕ್ರಮಿಯಾದ, ಯೋಗನಿದ್ರೆಯನ್ನಾಶ್ರಯಿಸಿರುವ, ನೀರಿನ ಮೇಲೆ ತನಗೆ ಯೋಗ್ಯವಾದ ಶರೀರವನ್ನು ರಚಿಸಿಕೊಂಡು ಮಲಗಿರುವ, ಶೇಷನ ಮೇಲೆ ಶೇಷನನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡಿರುವ, ಸುಂದರವಾದ ಪ್ರಭೆಗಳಿಂದ ಕೂಡಿರುವ, ಕಷ್ಮಲವಿಲ್ಲದ, ಸತ್ತ್ವಗುಣ ಸಂಪನ್ನನಾದ, ಸುಂದರಕಾಂತಿಯ ಭಗವಂತನನ್ನು ನೋಡಿದರು. ಅವನನ್ನು ಕಂಡ ಕೂಡಲೇ

ಅಟ್ಟಹಾಸದಿಂದ ದಾನವೇಂದ್ರರು ನಗತೊಡಗಿದರು.
ಊಚತುಶ್ಚ ಸಮಾವಿಷ್ಟೌ ರಜಸಾ ತಮಸಾ ಚ ತೌ |
ಅಯಂ ಸ ಪುರುಷಃ ಶ್ವೇತಃ ಶೇತೇ ನಿದ್ರಾಮುಪಾಗತಃ ॥60॥
ರಜೋಗುಣ, ತಮೋಗುಣಗಳಿಂದ ಕೂಡಿರುವ ಅವರು ಹೀಗೆ ಹೇಳಿದರು: ಈ ಬಿಳಿ ಬಣ್ಣದ ಪುರುಷನೇ ವೇದವನ್ನು ಅಪಹರಿಸಿ ಬಂದು ನಿದ್ರೆಗೆ ಜಾರಿದ್ದಾನೆ.
ಅನೇನ ನೂನಂ ವೇದಾನಾಂ ಕೃತಮಾಹರಣಂ ರಸಾತ್ |
ಕಸ್ಯೈಷ ಕೋ ನು ಖಲ್ವೇಷ ಕಿಂ ಚ ಸ್ವಪಿತಿ ಭೋಗವಾನ್ ॥61॥
ನಿಶ್ಚಯವಾಗಿಯೂ ವೇದಗಳನ್ನು ಇವನೇ ರಸಾತಳದಿಂದ ಅಪಹರಿಸಿದವನು. ಇವನು ಯಾರ ಮಗನು? ಯಾರಿರಬಹುದು? ಸರ್ಪವನ್ನು ಹಾಸಿಗೆ ಮಾಡಿಕೊಂಡು ಏಕೆ ಮಲಗಿದ್ದಾನೆ?
ಇತ್ಯುಚ್ಚಾರಿತವಾಕ್ಯೌ ತೌ ಬೋಧಯಾಮಾಸತುರ್ಹರಿಮ್ |
ಯುದ್ಧಾರ್ಥಿನೌ ತು ವಿಜ್ಞಾಯ ವಿಬುದ್ಧಃ ಪುರುಷೋತ್ತಮಃ ॥62॥
ಹೀಗೆ ಪರಸ್ಪರ ಮಾತನಾಡಿಕೊಳ್ಳುತ್ತಾ ದೈತ್ಯರು ಹರಿಯನ್ನು ಎಬ್ಬಿಸಿದರು. ಎಚ್ಚರಗೊಂಡ ಪುರುಷೋತ್ತಮನು ಯುದ್ಧಾರ್ಥಿಗಳಾಗಿದ್ದಾರೆ ಎಂದು ತಿಳಿದನು.
ನಿರೀಕ್ಷ್ಯ ಚಾಸುರೇಂದ್ರೌ ತೌ ತತೋ ಯುದ್ಧೇ ಮನೋ ದಧೇ |
ಅಥ ಯುದ್ಧಂ ಸಮಭವತ್ತಯೋರ್ನಾರಾಯಣಸ್ಯ ಚ ॥63॥
ಅವರೊಡನೆ ಯುದ್ಧಾರ್ಥಿಗಳೆಂದು ಕಂಡು ಯುದ್ಧ ಮಾಡಲು ನಿಶ್ಚಯಿಸಿದನು. ಮಧು-ಕೈಟಭರಿಗೂ ನಾರಾಯಣನಿಗೂ ಯುದ್ಧವು ಆರಂಭವಾಯಿತು.
ರಜಸ್ತಮೋವಿಷ್ಟತನೂ ತಾವುಭೌ ಮಧುಕೈಟಭೌ |
ಬ್ರಹ್ಮಣೋಪಚಿತಿಂ ಕುರ್ವನ್ ಜಘಾನ ಮಧುಸೂದನಃ ॥64॥
ರಜಸ್ಸು-ತಮಸ್ಸು ಗುಣಗಳಿಂದ ಆವಿಷ್ಟರಾದ ಮಧು-ಕೈಟಭರನ್ನು ಮಧುಸೂದನನು ಸಂಹರಿಸಿದನು.
ತತಸ್ತಯೋರ್ವಧೇನಾಶು ವೇದಾಪಹರಣೇನ ಚ |
ಶೋಕಾಪನಯನಂ ಚಕ್ರೇ ಬ್ರಹ್ಮಣಃ ಪುರುಷೋತ್ತಮಃ ॥65॥
ಪುರುಷೋತ್ತಮನು ಅವರ ಸಂಹಾರ ಮಾಡಿ ವೇದಗಳನ್ನು ತಂದು ಬ್ರಹ್ಮನಿಗೆ ನೀಡಿ, ಅವನ ಶೋಕವನ್ನು ಪರಿಹರಿಸಿದನು.
ತತಃ ಪರಿವೃತೋ ಬ್ರಹ್ಮಾ ಹತಾರಿರ್ವೇದಸತ್ಕೃತಃ |
ನಿರ್ಮಮೇ ಸ ತದಾ ಲೋಕಾನ್ ಕೃತ್ಸ್ನಾನ್ ಸ್ಥಾವರಜಂಗಮಾನ್ ॥
ವೇದಗಳಿಂದ ಸತ್ಕೃತನಾದ ಬ್ರಹ್ಮನು ಶ್ರೀಹರಿಯಿಂದ ಸಂರಕ್ಷಿತನಾದನು. ಶತ್ರುವಿನಿಂದ ಮುಕ್ತನಾದನು. ಸಮಗ್ರ ಚರಾಚರ ಪ್ರಾಣಿ ಪ್ರಪಂಚವನ್ನು ಸೃಷ್ಟಿಸಿದನು.
ದತ್ತ್ವಾ ಪಿತಾಮಹಾಯಾಗ್ರ್ಯಾಂ ಬುದ್ಧಿಂ ಲೋಕವಿಸರ್ಗಿಕೀಮ್ |
ತತ್ರೈವಾಂತರ್ದಧೇ ದೇವೋ ಯತ ಏವಾಗತೋ ಹರಿಃ ॥67॥
ಭಗವಾನ್ ನಾರಾಯಣನು ಬ್ರಹ್ಮನಿಗೆ ಲೋಕವನ್ನು ಸೃಷ್ಟಿಸುವ ಉತ್ಕೃಷ್ಟ ಬುದ್ಧಿಯನ್ನು ನೀಡಿ, ಅಲ್ಲಿಯೇ ಅದೃಶ್ಯನಾಗಿ, ಎಲ್ಲಿಂದ ಆಗಮಿಸಿದ್ದನೋ ಅಲ್ಲಿಗೆ ಹೊರಟು ಹೋದನು.
ತೌ ದಾನವೌ ಹರಿರ್ಹತ್ವಾ ಕೃತ್ವಾ ಹಯಶಿರಸ್ತನುಮ್ |
ಪುನಃ ಪ್ರವೃತ್ತಿಧರ್ಮಾರ್ಥಂ ತಾಮೇವ ವಿದಧೇ ತನುಮ್ ॥68॥
ಹಯಗ್ರೀವ ಶರೀರವನ್ನು ಧರಿಸಿ ದಾನವರನ್ನು ಸಂಹರಿಸಿ, ಪ್ರವೃತ್ತಿಧರ್ಮಕ್ಕಾಗಿ ಪುನಃ ಹಿಂದಿನ ಶರೀರವನ್ನೇ ಧರಿಸಿದನು.
ಏವಮೇಷ ಮಹಾಭಾಗೋ ಬಭೂವಾಶ್ವಶಿರಾ ಹರಿಃ |
ಪೌರಾಣಮೇತದಾಖ್ಯಾತಂ ರೂಪಂ ವರದಮೈಶ್ವರಮ್ ॥69॥
ಹೀಗೆ ಮಹಾಭಾಗನಾದ ಶ್ರೀಹರಿಯು ಅಶ್ವಶಿರನಾದನು. ಪುರಾತನನಾದ, ವರದಾಯಕನಾದ ಈ ಹಯಗ್ರೀವ ರೂಪವು ಪ್ರಸಿದ್ಧವಾದುದು.
ಯೋ ಹ್ಯೇತದ್ಬ್ರಾಹ್ಮಣೋ ನಿತ್ಯಂ ಶೃಣುಯಾದ್ಧಾರಯೇತ ವಾ |
ನ ತಸ್ಯಾಧ್ಯಯನಂ ನಾಶಮುಪಗಚ್ಛೇತ್ ಕದಾಚನ ॥70॥
ಯಾವ ದ್ವಿಜನು ಅನುದಿನವೂ ಹಯಗ್ರೀವ ಅವತಾರದ ಕಥೆಯನ್ನು ಕೇಳುತ್ತಾನೋ, ಸ್ಮರಿಸುತ್ತಾನೋ ಅವನ ಅಧ್ಯಯನವು ಎಂದೂ ನಿಷ್ಫಲವಾಗುವುದಿಲ್ಲ.
ಆರಾಧ್ಯ ತಪಸೋಗ್ರೇಣ ದೇವಂ ಹಯಶಿರೋಧರಮ್ |
ಪಾಂಚಾಲೇನ ಕ್ರಮಃ ಪ್ರಾಪ್ತೋ ರಾಮೇಣ ಪಥಿ ದೇಶಿತೇ ॥71॥
ಪಾಂಚಾಲದೇಶದ ಗಾಲವ ಮುನಿಯು ಮಹದೇವನು ಉಪದೇಶಿಸಿದ ರೀತಿಯಲ್ಲಿ ಸರ್ವೋತ್ತಮನಾದ ಹಯಗ್ರೀವನನ್ನು ಶ್ರೇಷ್ಠತಪಸ್ಸಿನಿಂದ ಆರಾಧಿಸಿ ವೇದದ ಕ್ರಮಪಾಠವನ್ನು ತಿಳಿದನು.
ಏತದ್ಧಯಶಿರೋ ರಾಜನ್ನಾಖ್ಯಾನಂ ತವ ಕೀರ್ತಿತಮ್ |
ಪುರಾಣಂ ವೇದಸಮಿತಂ ಯನ್ಮಾಂ ತ್ವಂ ಪರಿಪೃಚ್ಛಸಿ ॥72॥
ರಾಜನೇ, ಹಯಗ್ರೀವನ ವಿಷಯದಲ್ಲಿ ನೀನು ಪ್ರಶ್ನಿಸಿದಂತೆ ಪುರಾತನವಾದ, ವೇದಸಮ್ಮತವಾದ ಆಖ್ಯಾನವನ್ನು ಹೇಳಿದ್ದೇನೆ.
ಯಾಂ ಯಾಮಿಚ್ಛೇತ್ತನುಂ ದೇವಃ ಕರ್ತುಂ ಕಾರ್ಯವಿಧೌ ಕ್ವಚಿತ್ |

ತಾಂ ತಾಂ ಕುರ್ಯಾದ್ ವಿಕುರ್ವಾಣಃ ಸ್ವಯಮಾತ್ಮಾನಮಾತ್ಮನಾ ॥73॥
ಶ್ರೀಹರಿಯು ಯಾವ ಯಾವ ಕಾರ್ಯಸಿದ್ಧಿಗಾಗಿ ದೇಹವನ್ನು ಧರಿಸಲು ಬಯಸುತ್ತಾನೋ ಅಂತಹ ಕಾರ್ಯಗಳನ್ನು ಮಾಡುವ ಸಮಯದಲ್ಲಿ ಆಯಾ ಶರೀರವನ್ನೇ ತನ್ನಿಂದಲೇ ತಾನು ಪ್ರಕಟಪಡಿಸುತ್ತಾನೆ.
ಏಷ ವೇದನಿಧಿಃ ಶ್ರೀಮಾನೇಷ ವೈ ತಪಸೋ ನಿಧಿಃ |
ಏಷ ಯೋಗಶ್ಚ ಸಾಂಖ್ಯಂ ಚ ಬ್ರಹ್ಮ ಚಾಗ್ರ್ಯಂ ಹರಿರ್ವಿಭುಃ ॥74॥
ಕಾಂತಿಯುಕ್ತನಾದ ಶ್ರೀಹರಿಯೇ ವೇದ-ತಪಸ್ಸುಗಳ ನಿಧಿಯು. ಯೋಗ-ಸಾಂಖ್ಯ- ಬ್ರಹ್ಮ-ಹವಿಸ್ಸು ಎಲ್ಲವೂ ವಿಭುವಾದ ಶ್ರೀಹರಿಯೇ ಆಗಿದ್ದಾನೆ.
ನಾರಾಯಣಪರಾ ವೇದಾ ಯಜ್ಞಾ ನಾರಾಯಣಾತ್ಮಕಾಃ |
ತಪೋ ನಾರಾಯಣಪರಂ ನಾರಾಯಣಪರಾ ಗತಿಃ ॥75॥
ವೇದಗಳೆಲ್ಲವೂ ನಾರಾಯಣನ ಸರ್ವೋತ್ತಮತ್ವವನ್ನೇ ಕೊಂಡಾಡುತ್ತಿವೆ. ಇದರಂತೆ ಯಾಗಗಳೆಲ್ಲವೂ ನಾರಾಯಣನ ಸ್ವರೂಪವಾಗಿವೆ. ತಪಸ್ಸಿನ ಫಲವು ನಾರಾಯಣನು. ನಾರಾಯಣನೇ ಪರಮಗತಿಯು.
ನಾರಾಯಣಪರಂ ಸತ್ಯಮೃತಂ ನಾರಾಯಣಾತ್ಮಕಮ್ |
ನಾರಾಯಣಪರೋ ಧರ್ಮಃ ಪುನರಾವೃತ್ತಿದುರ್ಲಭಃ ॥76॥
ನಾರಾಯಣನೇ ಪರಮಸತ್ಯವು. ಮೋಕ್ಷವು ನಾರಾಯಣನ ರೂಪವಾಗಿದೆ. ಪುನಃ ಧರ್ಮಗಳು ಸಂಸಾರವನ್ನು ತಪ್ಪಿಸುವ ನಾರಾಯಣ ಪರವಾಗಿಯೇ ಇವೆ.
ಪ್ರವೃತ್ತಿಲಕ್ಷಣಶ್ಚೈವ ಧರ್ಮೋ ನಾರಾಯಣಾತ್ಮಕಃ |
ನಾರಾಯಣಾತ್ಮಕೋ ಗಂಧೋ ಭೂಮೌ ಶ್ರೇಷ್ಠತಮಃ ಸ್ಮೃತಃ ॥77॥
ಪ್ರವೃತ್ತಿ ಲಕ್ಷಣಗಳಿಂದ ಕೂಡಿದ ಧರ್ಮಗಳು ನಾರಾಯಣನ ಸ್ವರೂಪವಾಗಿಯೇ ಇವೆ. ಪೃಥ್ವಿಯ ಶ್ರೇಷ್ಠಗುಣವೆನಿಸಿದ ಗಂಧವು ನಾರಾಯಣನಿಂದಲೇ ಅಭಿವ್ಯಕ್ತವಾಗಿವೆ.
ಅಪಾಂ ಚೈವ ಗುಣೋ ರಾಜನ್ ರಸೋ ನಾರಾಯಣಾತ್ಮಕಃ |
ಜ್ಯೋತಿಷಾಂ ಚ ಗುಣೋ ರೂಪಂ ಸ್ಮೃತಂ ನಾರಾಯಣಾತ್ಮಕಮ್ ॥
ಜಲದ ಗುಣವಾದ ರಸಗಳು, ತೇಜಸ್ಸಿನ ಉತ್ತಮಗುಣವಾದ ರೂಪವು ನಾರಾಯಣಾತ್ಮಕವೇ ಎನಿಸಿದೆ.
ನಾರಾಯಣಾತ್ಮಕಶ್ಚಾಪಿ ಸ್ಪರ್ಶೋ ವಾಯುಗುಣಃ ಸ್ಮೃತಃ |
ನಾರಾಯಣಾತ್ಮಕಶ್ಚಾಪಿ ಶಬ್ದ ಆಕಾಶಸಂಭವಃ ॥79॥
ವಾಯುವಿನ ಗುಣವಾದ ಸ್ಪರ್ಶವೂ ನಾರಾಯಣನಿಂದಲೇ. ಆಕಾಶದಿಂದ ಹುಟ್ಟುವ ಶಬ್ದವು ನಾರಾಯಣನ ಸ್ವರೂಪದಿಂದಲೇ.
ಮನಶ್ಚಾಪಿ ತತೋ ಭೂತಮವ್ಯಕ್ತಗುಣಲಕ್ಷಣಮ್ |
ನಾರಾಯಣಪರಃ ಕಾಲೋ ಜ್ಯೋತಿಷಾಮಯನಂ ಚ ಯತ್ ॥80॥
ಅವ್ಯಕ್ತಗುಣ ಲಕ್ಷಣದಿಂದ ಕೂಡಿದ ಮನಸ್ಸು, ಕಾಲ, ನಕ್ಷತ್ರಮಂಡಲ ಎಲ್ಲವೂ ನಾರಾಯಣನನ್ನೇ ಆಶ್ರಯಿಸಿವೆ.
ನಾರಾಯಣಪರಾ ಕೀರ್ತಿಃ ಶ್ರೀಶ್ಚ ಲಕ್ಷ್ಮೀಮೇಶ್ಚ ದೇವತಾಃ |
ನಾರಾಯಣಪರಂ ಸಾಂಖ್ಯಂ ಯೋಗೋ ನಾರಾಯಣಾತ್ಮಕಃ ॥81॥
ಕೀರ್ತಿ, ಸಂಪತ್ತು, ಲಕ್ಷ್ಮೀ ಮುಂತಾದ ದೇವತೆಗಳು ನಾರಾಯಣನನ್ನೇ ಆಶ್ರಯಿಸಿದ್ದಾರೆ. ಸಾಂಖ್ಯಯೋಗಗಳು ನಾರಾಯಣನನ್ನೇ ಆಶ್ರಯಿಸಿವೆ.
ಕಾರಣಂ ಪುರುಷೋ ಯೇಷಾಂ ಪ್ರಧಾನಂ ಚಾಪಿ ಕಾರಣಮ್ |
ಸ್ವಭಾವಶ್ಚೈವ ಕರ್ಮಾಣಿ ದೈವಂ ಯೇಷಾಂ ಚ ಕಾರಣಮ್ ॥82॥
ಎಲ್ಲದಕ್ಕೂ ಕಾರಣವಾದ ಪ್ರಕೃತಿತತ್ತ್ವಕ್ಕೂ ಕಾರಣನಾದವನು ಶ್ರೀಹರಿಯು. ಸ್ವಭಾವ, ಕರ್ಮ, ದೈವ ಇವುಗಳಿಗೆಲ್ಲ ಭಗವಂತನೇ ಕಾರಣನು.
ಪಂಚಕಾರಣಸಂಖ್ಯಾತೋ ನಿಷ್ಠಾ ಸರ್ವತ್ರ ವೈ ಹರಿಃ |
ತತ್ತ್ವಂ ಜಿಜ್ಞಾಸಮಾನಾನಾಂ ಹೇತುಭಿಃ ಸರ್ವತೋಮುಖೈಃ ॥83॥
ಐದು ಕಾರಣರೂಪದಲ್ಲಿ ಭಗವಂತ ಎಲ್ಲೆಡೆಯೂ ವ್ಯಾಪಿಸಿದ್ದಾನೆ. ತತ್ತ್ವವನ್ನು ಯಾರು ತಿಳಿಯಲು ಬಯಸುತ್ತಾರೋ ಅವರಿಗೆ ಬೇಕಾದ ಕಾರಣಗಳಿಂದ ತಿಳಿಯಲ್ಪಡುವವನೂ ಇವನೇ.
ವ್ಯಾಖ್ಯಾನ ವಿಶೇಷ ಅಧಿಷ್ಠಾನ, ಕರ್ತಾ, ಕರಣ, ಅನೇಕ ಚೇಷ್ಟೆಗಳು, ದೈವ ಇದೆಲ್ಲದರಲ್ಲಿಯೂ ಪರಮಾತ್ಮನೇ ಸನ್ನಿಹಿತನಾಗಿದ್ದಾನೆ.
ತತ್ತ್ವಮೇಕೋ ಮಹಾಯೋಗೀ ಹರಿರ್ನಾರಾಯಣಃ ಪ್ರಭುಃ |
ಸಬ್ರಹ್ಮಕಾನಾಂ ಲೋಕಾನಾಮೃಷೀಣಾಂ ಚ ಮಹಾತ್ಮನಾಮ್ ॥84॥
ಸಾಂಖ್ಯಾನಾಂ ಯೋಗಿನಾಂ ಚಾಪಿ ಯತೀನಾಮಾತ್ಮವೇದಿನಾಮ್ |
ಮನೀಷಿತಂ ವಿಜಾನಾತಿ ಕೇಶವೋ ನ ತು ತಸ್ಯ ತೇ ॥85॥
ಮಹಾಯೋಗಿಯಾದ, ಪ್ರಭುವಾದ ನಾರಾಯಣನೇ ಜ್ಞೇಯನೆನಿಸಿದ ಮಹಾತತ್ತ್ವವು. ಬ್ರಹ್ಮಾದಿ ದೇವತೆಗಳಿಗೆ, ಮಹಾತ್ಮರಾದ ಋಷಿಗಳಿಗೆ, ಸಾಂಖ್ಯ ಯೋಗಿಗಳಿಗೆ, ಭಗವತ್ತತ್ತ್ವವನ್ನೇ ಚಿಂತಿಸುವ ಯತಿಗಳಿಗೆ ಇವನೇ ಮುಖ್ಯನು. ಇವರೆಲ್ಲರ ಮನಸ್ಸನ್ನು ಕೇಶವನೊಬ್ಬನೇ ಬಲ್ಲವನು. ಕೇಶವನ ಅಂತರಂಗವನ್ನು ಯಾರೂ ತಿಳಿದಿರುವುದಿಲ್ಲ.
ಯೇ ಕೇಚಿತ್ ಸರ್ವಲೋಕೇಷು ದೈವಂ ಪಿತ್ರ್ಯಂ ಚ ಕುರ್ವತೇ |
ದಾನಾನಿ ಚ ಪ್ರಯಚ್ಛಂತಿ ತಪ್ಯಂತಿ ಚ ತಪೋ ಮಹತ್ ॥86॥

ಸರ್ವೇಷಾಮಾಶ್ರಯೋ ವಿಷ್ಣುರೈಶ್ವರಂ ವಿಧಿಮಾಸ್ಥಿತಃ |
ಸರ್ವಭೂತಕೃತಾವಾಸೋ ವಾಸುದೇವೇತಿ ಚೋಚ್ಯತೇ ||87||
ಯಾರು ಸಮಸ್ತ ಲೋಕಗಳಲ್ಲಿಯೂ ದೇವತೆಗಳಿಗೆ ಸಂಬಂಧಿಸಿದ, ಪಿತೃಗಳಿಗೆ ಸಂಬಂಧಿಸಿದ ಕರ್ಮಗಳನ್ನು ಮಾಡುತ್ತಾರೋ, ಮಹತ್ತಾದ ತಪಸ್ಸನ್ನು ಅನುಷ್ಠಾನ ಮಾಡುತ್ತಾರೋ, ದಾನಗಳನ್ನು ಮಾಡುತ್ತಾರೋ ಅವರೆಲ್ಲರಿಗೂ ಐಶ್ವರ್ಯಯೋಗವನ್ನು ಹೊಂದಿರುವ ವಿಷ್ಣುವೇ ಆಧಾರನು. ಸಮಸ್ತ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವುದರಿಂದಲೇ ಅವನನ್ನು ವಾಸುದೇವ ಎನ್ನುತ್ತಾರೆ.
ಅಯಂ ಹಿ ನಿತ್ಯಃ ಪರಮೋ ಮಹರ್ಷಿ-
ರ್ಮಹಾವಿಭೂತಿರ್ಗುಣವಾನ್ನಿರ್ಗುಣಾಖ್ಯಃ |
ಗುಣೈಶ್ಚ ಸಂಯೋಗಮುಪೈತಿ ಶೀಘ್ರಂ
ಕಾಲೋ ಯಥರ್ತಾವೃತುಸಂಪ್ರಯುಕ್ತಃ ||88||
ಮಹರ್ಷಿಯಾದ ನಾರಾಯಣನು ನಿತ್ಯನು, ಪರಮನು, ಮಹಾವಿಭೂತಿ ಗುಣವಂತನು, ಪ್ರಾಕೃತಗುಣರಹಿತನು. ಹೇಗೆ ಕಾಲವು ಗುಣರಹಿತವಾಗಿದ್ದರೂ ಋತುಗಳಿಗೆ ಸಂಬಂಧಿಸಿದ ಶೀತೋಷ್ಣಾದಿ ಗುಣಗಳನ್ನು ಹೊಂದುತ್ತದೋ ಹಾಗೆ ಭಗವಂತನು ಪ್ರಾಕೃತ ಗುಣರಹಿತನಾಗಿದ್ದರೂ ಗುಣಗಳ ಸಂಬಂಧವನ್ನು ಹೊಂದಿರುತ್ತಾನೆ.
ನೈವಾಸ್ಯ ವಿಂದಂತಿ ಗತಿಂ ಮಹಾತ್ಮನೋ
ನ ಚಾಗತಿಂ ಕಶ್ಚಿದಿಹಾನುಪಶ್ಯತಿ |
ಜ್ಞಾನಾತ್ಮಕಾಃ ಸಂಯಮಿನೋ ಮಹರ್ಷಯಃ
ಪಶ್ಯಂತಿ ನಿತ್ಯಂ ಪುರುಷಂ ಗುಣಾಧಿಕಮ್ ||89||
ನಾರಾಯಣನ ಮಾರ್ಗವನ್ನು ಅರಿತವರು ಯಾರೂ ಇಲ್ಲ. ಅವನ ಅವತಾರದ ವಿಷಯವನ್ನೂ ಅರಿಯರು. ಜ್ಞಾನಸ್ವರೂಪಿಗಳಾದ ಮಹರ್ಷಿಗಳು ಅನಂತ ಗುಣಸಂಪನ್ನನಾದ, ನಿತ್ಯನಾದ ಪುರುಷೋತ್ತಮನನ್ನು ಕಾಣುತ್ತಾರೆ.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ನಾರಾಯಣೀಯೇ ಅಶೀತ್ಯುತ್ತರಶತತಮೋಽಧ್ಯಾಯಃ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂದನೆಯ ಅಧ್ಯಾಯ
ಧರ್ಮಬೋಧೆ
ಜನಮೇಜಯಃ
ಅಹೋ ಹ್ಯೇಕಾಂತಿನಃ ಸರ್ವಾನ್ ಪ್ರೀಣಾತಿ ಭಗವಾನ್ ಹರಿಃ |
ವಿಧಿಪ್ರಯುಕ್ತಾಂ ಪೂಜಾಂ ಚ ಗೃಹ್ಣಾತಿ ಭಗವಾನ್ಸ್ವಯಮ್ ||1||
ಜನಮೇಜಯ ಪೂಜ್ಯರೇ, ಆಶ್ಚರ್ಯವು! ಶ್ರೀಹರಿಯು ಏಕಾಂತಭಕ್ತಿಯನ್ನು ಮಾಡುವ ಎಲ್ಲ ಭಕ್ತರ ವಿಷಯದಲ್ಲಿಯೂ ಪ್ರಸನ್ನನಾಗಿರುತ್ತಾನೆ. ಏಕಾಂತಭಕ್ತರು ಮಾಡುವ ಪೂಜೆಯನ್ನು ಶ್ರೀಹರಿಯೇ ಸ್ವತಃ ಸ್ವೀಕರಿಸುತ್ತಾನೆ.
ಯೇ ತು ದಗ್ಧೇಂಧನಾ ಲೋಕೇ ಪುಣ್ಯಪಾಪವಿವರ್ಜಿತಾಃ |
ತೇಷಾಂ ತ್ವಯಾಭಿನಿರ್ದಿಷ್ಟಾ ಪಾರಂಪರ್ಯಾಗತಾ ಗತಿಃ ||2||
ಪ್ರಪಂಚದಲ್ಲಿ ಯಾರು ಪಾಪದಿಂದ ಕಟ್ಟಿಗೆಯನ್ನು ಸುಟ್ಟುಕೊಂಡಿರುತ್ತಾರೋ, ಪುಣ್ಯ-ಪಾಪಗಳಿಂದ ದೂರವಾಗಿರುತ್ತಾರೋ ಅವರಿಗೆ ಪರಂಪರೆಯಿಂದ ಲಭಿಸುವ ಗತಿ ಯಾವುದೆಂದು ತಿಳಿಸಿರಿ.
ಚತುರ್ಥ್ಯಾಂ ಚೈವ ತೇ ಗತ್ಯಾಂ ಗಚ್ಛಂತಿ ಪುರುಷೋತ್ತಮಮ್ |
ಏಕಾಂತಿನಸ್ತು ಪುರುಷಾ ಗಚ್ಛಂತಿ ಪರಮಂ ಪದಮ್ ||3||
ಧರ್ಮ-ಅರ್ಥ-ಕಾಮ-ಮೋಕ್ಷ ಎಂಬಲ್ಲಿ ನಾಲ್ಕನೆಯ ಗತಿಯಿಂದ ಪುರುಷೋತ್ತಮನನ್ನು ಹೊಂದುತ್ತಾರೆ. ಏಕಾಂತಭಕ್ತರು ಮೋಕ್ಷವನ್ನೇ ಹೊಂದುತ್ತಾರೆ.
ನೂನಮೇಕಾಂತಧರ್ಮೋಽಯಂ ಶ್ರೇಷ್ಠೋ ನಾರಾಯಣಪ್ರಿಯಃ |
ಅಗತ್ವಾ ಗತಯಸ್ತಿಸ್ರೋ ಯದ್ ಗಚ್ಛಂತ್ಯವ್ಯಯಂ ಹರಿಮ್ ||4||
ಏಕಾಂತಭಕ್ತಿ ಎಂಬುದು ನಾರಾಯಣನಿಗೆ ಅತ್ಯಂತ ಪ್ರಿಯವಾದುದು, ಶ್ರೇಷ್ಠವಾದುದು. ಅಂತಹ ಭಕ್ತಿಯನ್ನು ಮಾಡಿದವರು ಧರ್ಮ-ಅರ್ಥ-ಕಾಮಗಳೆಂಬ ಮೂರು ಗತಿಗಳಿಗೆ ಸಾಗದೆ ಮೋಕ್ಷಕ್ಕೇ ಹೋಗುತ್ತಾರೆ.
ಸಹೋಪನಿಷದಾನ್ವೇದಾನ್ಯೇ ವಿಪ್ರಾಃ ಸಮ್ಯಗಾಸ್ಥಿತಾಃ |
ಪಠಂತಿ ವಿಧಿಮಾಸ್ಥಾಯ ಯೇ ಚಾಪಿ ಯತಿಧರ್ಮಿಣಃ ||5||
ತೇಭ್ಯೋ ವಿಶಿಷ್ಟಾಂ ಜಾನಾಮಿ ಗತಿಮೇಕಾಂತಿನಾಂ ನೃಣಾಮ್ |
ಕೇನೈಷ ಧರ್ಮಃ ಕಥಿತೋ ದೇವೇನ ಋಷಿಣಾಪಿ ವಾ ||6||
ಯಾರು ಉಪನಿಷತ್ತುಗಳಿಂದ ಕೂಡಿದ ವೇದಗಳನ್ನೇ ಪರಮ ಆಶ್ರಯವೆಂದು ಭಾವಿಸಿ ವಿಧಿಬದ್ಧವಾಗಿ ಅಧ್ಯಯನ ಮಾಡುತ್ತಾರೋ, ಯತಿಧರ್ಮದಲ್ಲಿ ರತರಾಗಿರುತ್ತಾರೋ ಅವರಿಗೆ ಲಭಿಸುವ ಸದ್ಗತಿಗಳಿಗಿಂತಲೂ ಏಕಾಂತಭಕ್ತರಿಗೆ ಲಭಿಸುವ ಗತಿಯು ಶ್ರೇಷ್ಠವಾದುದು ಎಂದು ನಾನು ಭಾವಿಸುತ್ತೇನೆ. ಈ ಭಕ್ತಿ ಸಿದ್ಧಾಂತವನ್ನು ಮೊದಲು ಯಾವ ದೇವತೆ ಅಥವಾ ಯಾವ ಋಷಿಯು ಉಪದೇಶಿಸಿದನು?
ಏಕಾಂತಿನಾಂ ಚ ಕಾ ಚರ್ಯಾ ಕದಾ ಚೋತ್ಪಾದಿತಾ ವಿಭೋ |

ಏತನ್ಮೇ ಸಂಶಯಂ ಛಿಂಧಿ ಪರಂ ಕೌತೂಹಲಂ ಹಿ ಮೇ ॥7॥
ಏಕಾಂತಭಕ್ತರ ಚರ್ಯೆಯು ಹೇಗಿರುತ್ತದೆ? ಯಾವಾಗ ಈ ಭಕ್ತಿಯು ಹುಟ್ಟಿತು? ಇದರಲ್ಲಿ ಸಂಶಯಗಳಿವೆ, ಕುತೂಹಲವಿದೆ. ಇದನ್ನು ಪರಿಹರಿಸಿರಿ.
ವೈಶಂಪಾಯನಃ
ಸಮುಪೋಢೇಷ್ವನೀಕೇಷು ಕುರುಪಾಂಡವಯೋರ್ಮೃಧೇ |
ಅರ್ಜುನೇ ವಿಮನಸ್ಕೇ ಚ ಗೀತಾ ಭಗವತಾ ಸ್ವಯಮ್ ॥8॥
ವೈಶಂಪಾಯನ ಜನಮೇಜಯನೇ, ಕುರು-ಪಾಂಡವರು ಯುದ್ಧಕ್ಕೆ ಸಜ್ಜಾಗಿ ನಿಂತಾಗ ಅರ್ಜುನನು ಖಿನ್ನ ಮನಸ್ಕನಾಗಿ ಕುಳಿತನು. ಆ ಸಮಯದಲ್ಲಿ ಭಗವಂತನಾದ ಕೃಷ್ಣನೇ ಗೀತೆಯನ್ನು ಉಪದೇಶಿಸಿದನು.
ಆಗತಿಶ್ಚ ಗತಿಶ್ಚೈವ ಪೂರ್ವಂ ತೇ ಕಥಿತಾ ಮಯಾ |
ಗಹನೋ ಹ್ಯೇಷ ಧರ್ಮೋ ವೈ ದುರ್ವಿಜ್ಞೇಯೋಽಕೃತಾತ್ಮಭಿಃ ॥9॥
ಹಿಂದೆ ನಾನು ನಿವೃತ್ತಿಧರ್ಮವನ್ನು, ಪ್ರವೃತ್ತಿಧರ್ಮವನ್ನು ಹೇಳಿದ್ದೇನೆ. ಏಕಾಂತ ಧರ್ಮವು ಉಪಾಸಿಸಲು ತುಂಬಾ ಗಹನವಾದುದು. ಅಜಿತೇಂದ್ರಿಯರಿಂದ ತಿಳಿಯಲಾಗದು.
ಸಮ್ಮಿತಃ ಸಾಮವೇದೇನ ಪುರೈವಾದಿಯುಗೇ ಕೃತಃ |
ಧಾರ್ಯತೇ ಸ್ವಯಮೀಶೇನ ರಾಜನ್ನಾರಾಯಣೇನ ಹ ॥10॥
ಮಹಾರಾಜನೇ, ಕೃತಯುಗದಲ್ಲಿಯೇ ಸಾಮವೇದದ ಮೂಲಕ ಈ ಭಕ್ತಿಮಾರ್ಗವು ಹೇಳಲ್ಪಟ್ಟಿದೆ. ಈ ಧರ್ಮವನ್ನು ಸ್ವಯಂ ನಾರಾಯಣನೇ ಧರಿಸಿದ್ದಾನೆ.
ಏತಮರ್ಥಂ ಮಹಾರಾಜ ಪೃಷ್ಟಃ ಪಾರ್ಥೇನ ನಾರದಃ |
ಋಷಿಮಧ್ಯೇ ಮಹಾಭಾಗಃ ಶೃಣ್ವತೋಃ ಕೃಷ್ಣಭೀಷ್ಮಯೋಃ ॥11॥
ಕುಂತೀಸುತನಾದ ಯುಧಿಷ್ಠಿರನು ಕೃಷ್ಣ-ಭೀಷ್ಮರ ನಡುವೆ ಕೇಳುತ್ತಿದ್ದಂತೆ ಋಷಿಗಳ ಮಧ್ಯದಲ್ಲಿ ಇದೇ ವಿಷಯದಲ್ಲಿ ಪಾರ್ಥನು ನಾರದರನ್ನು ಪ್ರಶ್ನಿಸಿದನು.
ಗುರುಣಾ ಚ ಮಮಾಪ್ಯೇಷ ಕಥಿತೋ ನೃಪಸತ್ತಮ |
ಯಥಾ ತು ಕಥಿತಸ್ತತ್ರ ನಾರದೇನ ತಥಾ ಶೃಣು ॥12॥
ನಾರದರು ಋಷಿಗಳ ನಡುವೆ ಪಾರ್ಥಾದಿಗಳಿಗೆ ಹೇಳಿದ ವಿಷಯವನ್ನೇ ನನ್ನ ಗುರುಗಳಾದ ವ್ಯಾಸರು ನನಗೆ ತಿಳಿಸಿದರು. ಅದನ್ನೇ ನಾನು ನಿನಗೆ ಹೇಳುತ್ತೇನೆ, ಕೇಳು.
ಯದಾಸೀನ್ಮಾನಸಂ ಜನ್ಮ ನಾರಾಯಣಮುಖೋದ್ಗತಮ್ |
ಬ್ರಹ್ಮಣಃ ಪೃಥಿವೀಪಾಲ ತದಾ ನಾರಾಯಣಃ ಸ್ವಯಮ್ |
ತೇನ ಧರ್ಮೇಣ ಕೃತವಾನ್ ದೈವಂ ಪಿತ್ರ್ಯಂ ಚ ಭಾರತ ॥13॥
ರಾಜನೇ, ಸೃಷ್ಟಿಯ ಆರಂಭದಲ್ಲಿ ನಾರಾಯಣನ ಮುಖದಿಂದ ಬ್ರಹ್ಮನ ಮಾನಸಿಕ ಸೃಷ್ಟಿಯು ಯಾವಾಗ ಆಯಿತೋ ಆಗಲೇ ನಾರಾಯಣನು ಧರ್ಮವನ್ನು ಬ್ರಹ್ಮನಿಗೆ ಸ್ವಯಂ ಉಪದೇಶಿಸಿದನು. ಆ ಉಪದೇಶದ ಧರ್ಮದಿಂದಲೇ ದೈವ-ಪಿತೃ ಸಂಬಂಧವಾದ ಕ್ರಿಯೆಗಳನ್ನು ನಿರೂಪಿಸಿದನು.
ಫೇನಪಾ ಋಷಯಶ್ಚೈವ ತಂ ಧರ್ಮಂ ಪ್ರತಿಪೇದಿರೇ |
ವೈಖಾನಸಾಃ ಫೇನಪೇಭ್ಯೋ ಧರ್ಮಮೇತಂ ಪ್ರಪೇದಿರೇ |
ವೈಖಾನಸೇಭ್ಯಃ ಸೋಮಸ್ತು ತತಃ ಸೋಽಂತರ್ದಧೇ ಪುನಃ ॥14॥
ಬಳಿಕ ಫೇನಪ ಎಂಬ ಋಷಿಗಳು ಈ ಧರ್ಮವನ್ನು ವಿಷ್ಣುವಿನಿಂದ ಪಡೆದುಕೊಂಡರು. ಫೇನಪರಿಂದ ವೈಖಾನಸರು ಈ ಧರ್ಮವನ್ನು ಹೊಂದಿದರು. ವೈಖಾನಸರಿಂದ ಸೋಮನು ಈ ಧರ್ಮವನ್ನು ಪಡೆದನು. ನಂತರ ಈ ಧರ್ಮವು ಲುಪ್ತವಾಯಿತು.
ಯದಾಸೀಚ್ಚಾಕ್ಷುಷಂ ಜನ್ಮ ದ್ವಿತೀಯಂ ಬ್ರಹ್ಮಣೋ ನೃಪ |
ತದಾ ಪಿತಾಮಹಾತ್ ಸೋಮಾದೇತಂ ಧರ್ಮಮಜಾನತ |
ನಾರಾಯಣಾತ್ಮಕಂ ರಾಜನ್ರುದ್ರಾಯ ಪ್ರದದೌ ಚ ಸಃ ॥15॥
ಮತ್ತೊಂದು ಕಲ್ಪದಲ್ಲಿ ಯಾವಾಗ ಚತುರ್ಮುಖ ಬ್ರಹ್ಮನಿಗೆ ನಾರಾಯಣನ ಕಣ್ಣುಗಳ ದೆಸೆಯಿಂದ ಎರಡನೆಯ ಜನ್ಮವಾಯಿತೋ ಆಗ ಬ್ರಹ್ಮನು ಸೋಮನಿಂದ ಆ ಧರ್ಮವನ್ನು ತಿಳಿದುಕೊಂಡು ಅದೇ ಧರ್ಮವನ್ನು ರುದ್ರನಿಗೆ ಉಪದೇಶಿಸಿದನು.
ತತೋ ಯೋಗಸ್ಥಿತೋ ರುದ್ರಃ ಪುರಾ ಕೃತಯುಗೇ ನೃಪ |
ವಾಲಖಿಲ್ಯಾನೃಷೀನ್ ಸರ್ವಾನ್ ಧರ್ಮಮೇತಮಪಾಠಯತ್ |
ಅಂತರ್ದಧೇ ತತೋ ಭೂಯಸ್ತಸ್ಯ ದೇವಸ್ಯ ಮಾಯಯಾ ॥16॥
ಬಳಿಕ ಯೋಗದಲ್ಲಿ ನಿಷ್ಠನಾದ ರುದ್ರನು ಕೃತಯುಗದಲ್ಲಿರುವ ಈ ಧರ್ಮವನ್ನು ವಾಲಖಿಲ್ಯ ಋಷಿಗಳಿಗೆ ಹೇಳಿದನು. ಬಳಿಕ ವಿಷ್ಣುವಿನ ಸಂಕಲ್ಪದಿಂದ ಆ ಧರ್ಮವು ಪುನಃ ಮುಕ್ತವಾಯಿತು.
ತೃತೀಯಂ ಬ್ರಹ್ಮಣೋ ಜನ್ಮ ಯದಾಸೀದ್ವಾಚಿಕಂ ಮಹತ್ |
ತತ್ರೈಷ ಧರ್ಮಃ ಸಂಭೂತಃ ಸ್ವಯಂ ನಾರಾಯಣಾನ್ನೃಪ ॥17॥
ಮತ್ತೊಂದು ಕಲ್ಪದಲ್ಲಿ ಚತುರ್ಮುಖ ಬ್ರಹ್ಮನಿಗೆ ನಾರಾಯಣನ ವಾಣಿಯಿಂದ ಮೂರನೆಯ ಜನ್ಮವುಂಟಾಯಿತೋ ಆಗ ಅಲ್ಲಿ ಪುನಃ ನಾರಾಯಣನಿಂದಲೇ ಈ ಧರ್ಮವು ಪ್ರಕಟವಾಯಿತು.
ಸುಪರ್ಣೋ ನಾಮ ತಮೃಷಿಃ ಪ್ರಾಪ್ತವಾನ್ ಪುರುಷೋತ್ತಮಾತ್ |

ತಪಸಾ ವೈ ಸುತಪ್ತೇನ ದಮೇನ ನಿಯಮೇನ ಚ ॥18॥
ಪುರುಷೋತ್ತಮನಿಂದಲೇ ಸುಪರ್ಣನೆಂಬ ಋಷಿಯು, ಇಂದ್ರಿಯಸಂಯಮ, ಮನೋನಿಗ್ರಹ ಇವುಗಳಿಂದ ಕೂಡಿದ ದುಷ್ಕರವಾದ ತಪಸ್ಸಿನಿಂದ ಈ ಧರ್ಮವನ್ನು ಪಡೆದುಕೊಂಡನು.
ತ್ರಿಃ ಪರಿಕ್ರಾಂತವಾನೇತತ್ ಸುಪರ್ಣೋ ಧರ್ಮಮುತ್ತಮಮ್ |
ಯಸ್ಮಾತ್ತಸ್ಮಾದ್ವ್ರತಂ ಹ್ಯೇತತ್ತ್ರಿಸೌಪರ್ಣಮಿಹೋಚ್ಯತೇ ॥19॥
ಸುಪರ್ಣನು ಈ ಧರ್ಮಸಂಹಿತೆಯನ್ನು ಮೂರು ಬಾರಿ ಆವೃತ್ತಿ ಮಾಡಿದನು. ಆದ್ದರಿಂದ ಸೌಪರ್ಣ ಎಂದು ಈ ಧರ್ಮವನ್ನು ಕರೆಯುತ್ತಾರೆ.
ಋಗ್ವೇದಪಾಠಪಠಿತಂ ವ್ರತಮೇತದ್ಧಿ ದುಶ್ಚರಮ್ |
ಸುಪರ್ಣಾಚ್ಚಾಪ್ಯಧಿಗತೋ ಧರ್ಮ ಏಷ ಸನಾತನಃ ॥20॥
ಅತ್ಯಂತ ಕಠಿಣವಾದ ಈ ಧರ್ಮವು ಋಗ್ವೇದ ಪಾಠದಲ್ಲಿ ಹೇಳಲ್ಪಟ್ಟಿದೆ. ಜಗತ್ತಿಗೆ ಪ್ರಾಣಸ್ವರೂಪನಾದ ವಾಯುವು ಸುಪರ್ಣನಿಂದ ಈ ಧರ್ಮವನ್ನು ಪಡೆದುಕೊಂಡನು.
ವಾಯುನಾ ದ್ವಿಪದಾಂ ಶ್ರೇಷ್ಠ ಪ್ರಥಿತೋ ಜಗದಾಯುಷಾ |
ವಾಯೋಃ ಸಕಾಶಾತ್ ಪ್ರಾಪ್ತಶ್ಚ ಋಷಿಭಿರ್ವಿಘಸಾಶಿಭಿಃ ॥21॥
ಯಜ್ಞಶೇಷ ಭಕ್ಷಕರಾದ ಋಷಿಗಳು ವಾಯುವಿನಿಂದ ಈ ಧರ್ಮವನ್ನು ಮುಂದೆ ಪಡೆದುಕೊಂಡರು.
ತೇಭ್ಯೋ ಮಹೋದಧಿಶ್ಚೈನಂ ಪ್ರಾಪ್ತವಾನ್ ಧರ್ಮಮುತ್ತಮಮ್ |
ತತಃ ಸೋಽಂತರ್ದಧೇ ಭೂಯೋ ನಾರಾಯಣಸಮಾಹಿತಃ ॥22॥
ಬಳಿಕ ಆ ಮಹರ್ಷಿಗಳಿಂದ ಮಹೋದಧಿಯು ಈ ಧರ್ಮವ ಪಡೆದುಕೊಂಡನು. ಪುನಃ ಈ ಧರ್ಮವು ಲುಪ್ತವಾಗಿ ನಾರಾಯಣನಲ್ಲಿ ಆಶ್ರಯ ಹೊಂದಿತು.
ಯದಾ ಭೂಯಃ ಶ್ರವಣಜಾ ಸೃಷ್ಟಿರಾಸೀನ್ಮಹಾತ್ಮನಃ |
ಬ್ರಹ್ಮಣಃ ಪುರುಷವ್ಯಾಘ್ರ ತತ್ರ ಕೀರ್ತಯತಃ ಶೃಣು ॥23॥
ಮತ್ತೊಂದು ಕಲ್ಪದಲ್ಲಿ ಬ್ರಹ್ಮನ ನಾಲ್ಕನೆಯ ಜನ್ಮವು ನಾರಾಯಣನ ಶ್ರೋತ್ರೇಂದ್ರಿಯದಿಂದ ಆದಾಗ ಪುನಃ ಧರ್ಮವು ಹುಟ್ಟಿತು. ಹೇಗೆ ಎಂಬುದನ್ನು ಹೇಳುತ್ತೇನೆ, ಕೇಳು.
ಜಗತ್ಸ್ರಷ್ಟುಮನಾ ದೇವೋ ಹರಿರ್ನಾರಾಯಣಃ ಸ್ವಯಮ್ |
ಚಿಂತಯಾಮಾಸ ಪುರುಷಂ ಜಗತ್ ಸರ್ಗಕರಂ ಪ್ರಭುಃ ॥24॥
ದೇವನಾದ ಸ್ವಯಂ ಹರಿನಾರಾಯಣನೇ ಜಗತ್ತನ್ನು ಸೃಷ್ಟಿಸಲು ಚಿಂತಿಸಿದನು. ಸ್ಥಾವರ-ಜಂಗಮಾತ್ಮಕವಾದ ಜಗತ್ತನ್ನು ಸೃಷ್ಟಿಸಲು ಸಮರ್ಥನಾದ ಒಬ್ಬ ಪುರುಷನನ್ನು ಸ್ಮರಿಸಿದನು.
ಅಥ ಚಿಂತಯತಸ್ತಸ್ಯ ಕರ್ಣಾಭ್ಯಾಂ ಪುರುಷಃ ಸೃತಃ |
ಪ್ರಜಾಸರ್ಗಕರೋ ಬ್ರಹ್ಮಾ ತಮುವಾಚ ಜಗತ್ಪತಿಃ ॥25॥
ಹೀಗೆ ಚಿಂತಿಸುತ್ತಿರುವಾಗಲೇ ಭಗವಂತನ ಕಿವಿಗಳಿಂದ ಪುರುಷನೊಬ್ಬನು ಸೃಷ್ಟನಾದನು. ಅವನೇ ಪ್ರಜೆಗಳನ್ನು ಸೃಷ್ಟಿಸಿದನು. ಅವನೇ ಬ್ರಹ್ಮನು. ಅವನಿಗೆ ನಾರಾಯಣನು ಹೀಗೆ ಹೇಳಿದನು.
ಸೃಜ ಪ್ರಜಾಃ ಪುತ್ರ ಸರ್ವಾ ಮುಖತಃ ಪಾದತಸ್ತಥಾ |
ಶ್ರೇಯಸ್ತವ ವಿಧಾಸ್ಯಾಮಿ ಬಲಂ ತೇಜಶ್ಚ ಸುವ್ರತ ॥26॥
ಮಗನೇ, ನಿನ್ನ ಮುಖ-ಪಾದಗಳಿಂದ ಪ್ರಜೆಗಳನ್ನು ಸೃಷ್ಟಿಸು. ನಿನಗೆ ಶ್ರೇಯಸ್ಸನ್ನುಂಟು ಮಾಡುತ್ತೇನೆ. ನಿನ್ನ ಬಲ-ತೇಜಸ್ಸುಗಳು ನನ್ನಿಂದ ವೃದ್ಧಿ ಹೊಂದುತ್ತವೆ.
ಧರ್ಮಂ ಚ ಮತ್ತೋ ಗೃಹ್ಣೀಷ್ವ ಸಾತ್ವತಂ ನಾಮ ನಾಮತಃ |
ತೇನ ಸರ್ವಂ ಕೃತಯುಗಂ ಸ್ಥಾಪಯಸ್ವ ಯಥಾವಿಧಿ ॥27॥
ಸಾತ್ವತ ಎಂಬ ಹೆಸರಿನ ಧರ್ಮವನ್ನು ನೀನು ನನ್ನಿಂದ ಸ್ವೀಕರಿಸು. ಇದರಿಂದ ಶ್ರೇಷ್ಠವಾದ ಸತ್ಯಯುಗವನ್ನು ವಿಧಿಬದ್ಧವಾಗಿ ನೀನು ಸ್ಥಾಪಿಸು.
ತತೋ ಬ್ರಹ್ಮಾ ನಮಶ್ಚಕ್ರೇ ದೇವಾಯ ಹರಿಮೇಧಸೇ |
ಧರ್ಮಂ ಚಾಗ್ರ್ಯಂ ಸ ಜಗ್ರಾಹ ಸರಹಸ್ಯಂ ಸಸಂಗ್ರಹಮ್ |
ಆರಣ್ಯಕೇನ ಸಹಿತಂ ನಾರಾಯಣಮುಖೋದ್ಗತಮ್ ॥28॥
ಬಳಿಕ ಬ್ರಹ್ಮನು ದೇವನಾದ ಹರಿಮೇಧನಿಗೆ ನಮಸ್ಕರಿಸಿ ಶ್ರೇಷ್ಠವಾದ ಧರ್ಮವನ್ನು ಸ್ವೀಕರಿಸಿದನು. ರಹಸ್ಯದಿಂದ ಕೂಡಿದ, ಆರಣ್ಯಕದಿಂದ ಸಹಿತವಾದ, ನಾರಾಯಣನ ಮುಖೋದ್ಗತವಾದ ಧರ್ಮವನ್ನು ಸ್ವೀಕರಿಸಿದನು.
ಉಪದಿಶ್ಯ ತತೋ ಧರ್ಮಂ ಬ್ರಹ್ಮಣೇಽಮಿತತೇಜಸೇ |
ತಂ ಕಾರ್ತಯುಗಧರ್ಮಾಣಂ ನಿರಾಶೀಃಕರ್ಮಸಂಜ್ಞಿತಮ್ |
ಜಗಾಮ ತಮಸಃ ಪಾರಂ ಯತ್ರಾವ್ಯಕ್ತಂ ವ್ಯವಸ್ಥಿತಮ್ ॥29॥
ಬಳಿಕ ಮಹಾತೇಜಸ್ವಿಯಾದ ಬ್ರಹ್ಮನಿಗೆ ಸಾತ್ವತ ಧರ್ಮವನ್ನು ಉಪದೇಶಿಸಿದನು. ಶ್ರೀಹರಿಯು ಫಲದ ಆಸೆಯನ್ನು ತೊರೆದು ಕರ್ಮವನ್ನು ಮಾಡುವುದರಿಂದ ಭಗವಂತನಿಂದ ಕರ್ಮ ಎಂಬ ಹೆಸರನ್ನು ಪಡೆದು, ಕೃತಯುಗಧರ್ಮವನ್ನು ಚತುರ್ಮುಖ ಬ್ರಹ್ಮನು ಸ್ಥಾಪಿಸಿದನು. ಬಳಿಕ ಕತ್ತಲೆಯಿಂದ ಆಚೆಯಿರುವ ಅವ್ಯಕ್ತ ತತ್ತ್ವವು ನೆಲೆಸಿದ ವೈಕುಂಠ ಲೋಕಕ್ಕೆ ಭಗವಂತನು ತೆರಳಿದನು.
ತತೋಽಥ ವರದೋ ದೇವೋ ಬ್ರಹ್ಮಲೋಕಪಿತಾಮಹಃ |

ಅಸೃಜತ್ಸ ತದಾ ಲೋಕಾನ್ ಕೃತ್ಸ್ನಾನ್ ಸ್ಥಾವರಜಂಗಮಾನ್ ॥30॥
ಬಳಿಕ ಲೋಕಪಿತಾಮಹನಾದ, ವರದನಾದ ಬ್ರಹ್ಮನು ಸ್ಥಾವರ-ಜಂಗಮಗಳಿಂದ ಕೂಡಿದ ಸಮಸ್ತ ಲೋಕಗಳನ್ನು ಸೃಷ್ಟಿಸಿದನು.
ತತಃ ಪ್ರಾವರ್ತತ ತದಾ ಆದೌ ಕೃತಯುಗಂ ಶುಭಮ್ |
ತತೋ ಹಿ ಸಾತ್ವತೋ ಧರ್ಮೋ ವ್ಯಾಪ್ಯ ಲೋಕಾನವಸ್ಥಿತಃ ॥31॥
ಆಗ ಮೊದಲನೆಯದ್ದಾದ, ಮಂಗಳವಾದ ಕೃತಯುಗವು ಆರಂಭವಾಯಿತು. ಆ ಸಮಯದಲ್ಲಿ ಸಾತ್ವತ ಧರ್ಮವು ಲೋಕದ ತುಂಬಾ ವ್ಯಾಪಿಸಿ ನೆಲೆಗೊಂಡಿತು.
ತೇನೈವಾದ್ಯೇನ ಧರ್ಮೇಣ ಬ್ರಹ್ಮಾ ಲೋಕವಿಸರ್ಗಕೃತ್ |
ಪೂಜಯಾಮಾಸ ದೇವೇಶಂ ಹರಿಂ ನಾರಾಯಣಂ ಪ್ರಭುಮ್ ॥32॥
ಸೃಷ್ಟಿಕರ್ತನಾದ ಬ್ರಹ್ಮನು ಆದಿ ಧರ್ಮವೆನಿಸಿದ ಈ ನಿವೃತ್ತಿಧರ್ಮದ ಮೂಲಕವೇ ಪ್ರಭುವಾದ ನಾರಾಯಣನನ್ನು, ಹರಿಯನ್ನು, ದೇವೇಶನನ್ನು ಪೂಜಿಸಿದನು.
ಧರ್ಮಪ್ರತಿಷ್ಠಾಹೇತೋಶ್ಚ ಮನುಂ ಸ್ವಾರೋಚಿಷಂ ತತಃ |
ಅಧ್ಯಾಪಯಾಮಾಸ ತದಾ ಲೋಕಾನಾಂ ಹಿತಕಾಮ್ಯಯಾ ॥33॥
ಧರ್ಮಪ್ರತಿಷ್ಠಾಪನೆಗಾಗಿ ಲೋಕಗಳಿಗೆ ಹಿತವನ್ನು ಮಾಡುವ ದೃಷ್ಟಿಯಿಂದ ಬ್ರಹ್ಮನು ಸಾತ್ವತ ಧರ್ಮವನ್ನು ಸ್ವಾರೋಚಿಷ ಎಂಬ ಋಷಿಗೆ ಉಪದೇಶಿಸಿದನು.
ತತಃ ಸ್ವಾರೋಚಿಷಃ ಪುತ್ರಂ ಸ್ವಯಂ ಶಂಖಪದಂ ನೃಪ |
ಅಧ್ಯಾಪಯತ್ ಪುರಾವ್ಯಗ್ರಃ ಸರ್ವಲೋಕಪತಿರ್ವಿಭುಃ ॥34॥
ಬಳಿಕ ಲೋಕಪತಿಯಾದ, ಪ್ರಭುವಾದ, ಅವ್ಯಗ್ರನಾದ ಸ್ವಾರೋಚಿಷ ಮನುವು ಶಂಖಪದ ಎಂಬ ತನ್ನ ಮಗನಿಗೆ ಸಾತ್ವತ ಧರ್ಮವನ್ನು ಅಧ್ಯಯನ ಮಾಡಿಸಿದನು.
ತತಃ ಶಂಖಪದಶ್ಚಾಪಿ ಪುತ್ರಮಾತ್ಮಜಮೌರಸಮ್ |
ದಿಶಾಪಾಲಂ ಸುಧರ್ಮಾಣಮಧ್ಯಾಪಯತ ಭಾರತ |
ತತಃ ಸೋಽಂತರ್ದಧೇ ಭೂಯಃ ಪ್ರಾಪ್ತೇ ತ್ರೇತಾಯುಗೇ ಪುನಃ ॥35॥
ನಂತರ ಶಂಖಪದನು ತನ್ನ ಔರಸಪುತ್ರನಾದ, ದಿಕ್ಪತಿಯಾದ ಸುಧರ್ಮನಿಗೆ ಅಧ್ಯಯನ ಮಾಡಿಸಿದನು. ಆದರೆ ತ್ರೇತಾಯುಗದ ಆರಂಭದಲ್ಲಿ ಪುನಃ ಈ ಸಾತ್ವತ ಧರ್ಮವು ಅಂತರ್ಧಾನ ಹೊಂದಿತು.
ನಾಸಿಕ್ಯಜನ್ಮನಿ ಪುರಾ ಬ್ರಹ್ಮಣಃ ಪಾರ್ಥಿವೋತ್ತಮ |
ಧರ್ಮಮೇತಂ ಸ್ವಯಂ ದೇವೋ ಹರಿರ್ನಾರಾಯಣಃ ಪ್ರಭುಃ॥
ಉಜ್ಜಗಾರಾರವಿಂದಾಕ್ಷೋ ಬ್ರಹ್ಮಣಃ ಪಶ್ಯತಸ್ತದಾ ॥36॥
ಪುನಃ ಆ ಸಮಯದಲ್ಲಿ ನಾರಾಯಣನ ಮೂಗಿನಿಂದ ಐದನೆಯ ಬಾರಿ ಜನ್ಮವನ್ನು ತಾಳಿದ ಚತುರ್ಮುಖನು ಕಮಲಾಕ್ಷನಾದ, ಪ್ರಭುವಾದ ಹರಿನಾರಾಯಣನಿಂದ ಈ ಧರ್ಮವನ್ನು ಉಪದೇಶ ಪಡೆದನು. ಬ್ರಹ್ಮನು ನೋಡುತ್ತಿರುವಾಗಲೇ ಅರವಿಂದಾಕ್ಷನು ಪುನಃ ಉದ್ಧರಿಸಿದನು.
ಸನತ್ಕುಮಾರೋ ಭಗವಾಂಸ್ತತಃ ಪ್ರಾಧೀತವಾನ್ನೃಪ |
ಸನತ್ಕುಮಾರಾದಪಿ ಚ ವೀರಣೋ ವೈ ಪ್ರಜಾಪತಿಃ |
ಕೃತಾದೌ ಕುರುಶಾರ್ದೂಲ ಧರ್ಮಮೇತಮಧೀತವಾನ್ ॥37॥
ಬಳಿಕ ಸನತ್ಕುಮಾರನು ಬ್ರಹ್ಮನಿಂದ ಈ ಉಪದೇಶವನ್ನು ಪಡೆದನು. ಕುರುಶ್ರೇಷ್ಠನೇ, ಕೃತಯುಗದ ಆರಂಭದಲ್ಲಿ ವೀರಣ ಎಂಬ ಪ್ರಜಾಪತಿಯು ಸನತ್ಕುಮಾರನಿಂದ ಈ ಧರ್ಮವನ್ನು ಅಧ್ಯಯನ ಮಾಡಿದನು.
ವೀರಣಶ್ಚಾಪ್ಯಧೀತ್ಯೈನಂ ರೌಚ್ಯಾಯ ಮನವೇ ದದೌ |
ರೌಚ್ಯಃ ಪುತ್ರಾಯ ಶುದ್ಧಾಯ ಸುವ್ರತಾಯ ಸುಮೇಧಸೇ ॥38॥
ಕುಕ್ಷಿನಾಮ್ನೇಽಥ ಪ್ರದದೌ ದಿಶಾಂ ಪಾಲಾಯ ಧರ್ಮಿಣೇ |
ತತಃ ಸೋಽಂತರ್ದಧೇ ಭೂಯೋ ನಾರಾಯಣಮುಖೋದ್ಗತಃ ॥39॥
ಈ ಧರ್ಮವನ್ನು ವೀರಣನು ಅಧ್ಯಯನ ಮಾಡಿ ರೌಚ್ಯ ಎಂಬ ಮನುವಿಗೆ ಉಪದೇಶಿಸಿದನು. ರೌಚ್ಯನು ಶುದ್ಧನಾದ, ಸುವ್ರತನಾದ, ಮೇಧಾಶಕ್ತಿಯನ್ನು ಹೊಂದಿರುವ, ಧರ್ಮಿಷ್ಠನಾದ, ರಾಜನಾದ ಕುಕ್ಷಿ ಎಂಬ ಹೆಸರಿನ ತನ್ನ ಮಗನಿಗೆ ಉಪದೇಶಿಸಿದನು. ನಾರಾಯಣನ ಮುಖದಿಂದ ಪ್ರಾದುರ್ಭೂತವಾದ ಈ ಸಾತ್ವತ ಧರ್ಮವು ಪುನಃ ಅಂತರ್ಧಾನ ಹೊಂದಿತು.
ಅಂಡಜೇ ಜನ್ಮನಿ ಪುನರ್ಬ್ರಹ್ಮಣೇ ಹರಿಯೋನಯೇ |
ಏಷ ಧರ್ಮಃ ಸಮುದ್ಭೂತೋ ನಾರಾಯಣಮುಖಾತ್ ಪುನಃ ॥40॥
ಪುನಃ ಬ್ರಹ್ಮನು ವಿಷ್ಣುವಿನ ಉದರದಿಂದ ಆರನೆಯ ಜನ್ಮವನ್ನು ಪಡೆದನು. ಬ್ರಹ್ಮನಿಗಾಗಿ ಸಾತ್ವತ ಧರ್ಮವನ್ನು ನಾರಾಯಣನು ಪುನಃ ಉಪದೇಶಿಸಿದನು.
ಗೃಹೀತೋ ಬ್ರಹ್ಮಣಾ ರಾಜನ್ ಪ್ರಯುಕ್ತಶ್ಚ ಯಥಾವಿಧಿ |
ಅಧ್ಯಾಪಿತಾಶ್ಚ ಮುನಯೋ ನಾಮ್ನಾ ಬರ್ಹಿಷದೋ ನೃಪ ॥41॥
ಭಗವಂತನಿಂದ ಧರ್ಮವನ್ನು ಸ್ವೀಕರಿಸಿದ ಚತುರ್ಮುಖ ಬ್ರಹ್ಮನು ಬರ್ಹಿಷದರೆಂಬ ಮುನಿಗಳಿಗೆ ಅಧ್ಯಾಪನ ಮಾಡಿಸಿದನು.
ಬರ್ಹಿಷದ್ಭ್ಯಶ್ಚ ಸಂಕ್ರಾಂತಃ ಸಾಮವೇದಾಂತಗಂ ದ್ವಿಜಮ್ |
ಜ್ಯೇಷ್ಠಂ ನಾಮ್ನಾಭಿವಿಖ್ಯಾತಂ ಜ್ಯೇಷ್ಠಸಾಮವ್ರತೋ ಹರಿಃ ॥42॥

ಬರ್ಹಿಷದರು ಈ ಧರ್ಮವನ್ನು ಚೆನ್ನಾಗಿ ತಿಳಿದು, ಸಾಮವೇದವನ್ನು ಚೆನ್ನಾಗಿ ಅಧ್ಯಯನ ಮಾಡಿದ, ಜ್ಯೇಷ್ಠ ಎಂಬ ಹೆಸರಿನಿಂದ ವಿಖ್ಯಾತನಾದ ಬ್ರಾಹ್ಮಣನಿಗೆ ಉಪದೇಶಿಸಿದರು. ಜ್ಯೇಷ್ಠಸಾಮವ್ರತನು ಹರಿ ಎಂದು ಪ್ರಸಿದ್ಧನಾದನು.
ಜ್ಯೇಷ್ಠಾಚ್ಚಾಪ್ಯನುಸಂಕ್ರಾಂತೋ ರಾಜಾನಮವಿಕಂಪನಮ್ |
ಅಂತರ್ದಧೇ ತತೋ ರಾಜನ್ನೇಷ ಧರ್ಮಃ ಪ್ರಭೋರ್ಹರೇಃ ॥43॥
ಸಾತ್ವತ ಧರ್ಮದಿಂದ ಕೂಡಿದ ಜ್ಯೇಷ್ಠನು ಅಭಿಕಂಪನ ಎಂಬ ರಾಜನಿಗೆ ಈ ಧರ್ಮವನ್ನು ಉಪದೇಶಿಸಿದನು. ಭಗವಂತನಿಂದ ಪ್ರಾದುರ್ಭೂತವಾದ ಈ ಧರ್ಮವು ಪುನಃ ಅಂತರ್ಧಾನ ಹೊಂದಿತು.
ಯದಿದಂ ಸಪ್ತಮಂ ಜನ್ಮ ಪದ್ಮಜಂ ಬ್ರಹ್ಮಣೋ ನೃಪ |
ತತ್ರೈಷ ಧರ್ಮಃ ಕಥಿತಃ ಸ್ವಯಂ ನಾರಾಯಣೇನ ಹಿ ॥44॥
ನಾರಾಯಣನ ನಾಭಿಯಿಂದ ಪುನಃ ಬ್ರಹ್ಮನು ಏಳನೆಯ ಜನ್ಮವನ್ನು ತಾಳಿದನು. ಪುನಃ ಬ್ರಹ್ಮನಿಗೆ ಸ್ವಯಂ ನಾರಾಯಣನು ಈ ಧರ್ಮವನ್ನು ಉಪದೇಶಿಸಿದನು.
ಪಿತಾಮಹಾಯ ಶುದ್ಧಾಯ ಯುಗಾದೌ ಲೋಕಧಾರಿಣೇ |
ಪಿತಾಮಹಶ್ಚ ದಕ್ಷಾಯ ಧರ್ಮಮೇತಂ ಪುರಾ ದದೌ ॥45॥
ಕೃತಯುಗದ ಆದಿಯಲ್ಲಿ ಲೋಕಧಾರಕನಾದ, ಶುದ್ಧನಾದ ಪಿತಾಮಹನಿಗೆ ಶ್ರೀಹರಿಯು ಸಾತ್ವತ ಧರ್ಮವನ್ನು ಉಪದೇಶಿಸಿದ ಬಳಿಕ ಚತುರ್ಮುಖ ಬ್ರಹ್ಮನು ದಕ್ಷನಿಗೆ ಈ ಧರ್ಮವನ್ನು ಉಪದೇಶಿಸಿದನು.
ತತೋ ಜ್ಯೇಷ್ಠೇ ತು ದೌಹಿತ್ರೇ ಪ್ರಾದಾದ್ದಕ್ಷೋ ನೃಪೋತ್ತಮ |
ಆದಿತ್ಯೇ ಸವಿತುರ್ಜ್ಯೇಷ್ಠೇ ವಿವಸ್ವಾನ್ ಜಗೃಹೇ ತತಃ ॥46॥
ಬಳಿಕ ದಕ್ಷನು ಅದಿತಿಯ ಮಗನಾದ ಸೂರ್ಯನಿಗಿಂತ ಜ್ಯೇಷ್ಠನಾದ, ತನ್ನ ಮಗಳ ಹಿರಿಯ ಮಗನಾದ ಆದಿತ್ಯನಿಗೆ ಉಪದೇಶಿಸಿದನು. ಅವನಿಂದ ವಿವಸ್ವಂತನು ಧರ್ಮವನ್ನು ಉಪದೇಶ ಪಡೆದನು.
ತ್ರೇತಾಯುಗಾದೌ ಚ ಪುನರ್ವಿವಸ್ವಾನ್ ಮನವೇ ದದೌ |
ಮನುಶ್ಚ ಲೋಕಭೂತ್ಯರ್ಥಂ ಸುತಾಯೇಕ್ಷ್ವಾಕವೇ ದದೌ ॥47॥
ತ್ರೇತಾಯುಗದ ಆದಿಯಲ್ಲಿ ವಿವಸ್ವಂತನು ತನ್ನ ಮಗನಾದ ಮನುವಿಗೆ ಈ ಧರ್ಮವನ್ನು ಉಪದೇಶಿಸಿದನು. ಮನುವು ಲೋಕಕಲ್ಯಾಣಕ್ಕಾಗಿ ಇಕ್ಷ್ವಾಕುವಿಗೆ ಈ ಧರ್ಮವನ್ನು ಉಪದೇಶಿಸಿದನು.
ಇಕ್ಷ್ವಾಕುಣಾ ಚ ಕಥಿತೋ ವ್ಯಾಪ್ಯ ಲೋಕಾನವಸ್ಥಿತಃ |
ಗಮಿಷ್ಯತಿ ಕ್ಷಯಾಂತೇ ಚ ಪುನರ್ನಾರಾಯಣಂ ನೃಪ ॥48॥
ಇಕ್ಷ್ವಾಕುವಿನಿಂದ ಈ ಧರ್ಮವು ಲೋಕದಲ್ಲಿ ವ್ಯಾಪಿಸಿ ಪ್ರತಿಷ್ಠಿತವಾಯಿತು. ಪುನಃ ಕಲ್ಪಾಂತ್ಯದಲ್ಲಿ ಲುಪ್ತವಾದ ಧರ್ಮವು ನಾರಾಯಣನನ್ನೇ ಸೇರುತ್ತದೆ.
ಯತಿನಾಂ ಚಾಪಿ ಯೋ ಧರ್ಮಃ ಸ ತೇ ಪೂರ್ವಂ ನೃಪೋತ್ತಮ |
ಕಥಿತೋ ಹರಿಗೀತಾಸು ಸಮಾಸವಿಧಿಕಲ್ಪಿತಃ ॥49॥
ಯತಿಗಳ ಧರ್ಮ ಯಾವುದೆಂದು ಈ ಹಿಂದೆ ನಿನಗೆ ಸಂಕ್ಷಿಪ್ತವಾಗಿ ಹರಿಗೀತೆಯಲ್ಲಿ ತಿಳಿಸಿರುತ್ತೇನೆ.
ನಾರದೇನ ತು ಸಂಪ್ರಾಪ್ತಃ ಸರಹಸ್ಯಃ ಸಸಂಗ್ರಹಃ |
ಏಷ ಧರ್ಮೋ ಜಗನ್ನಾಥಾತ್ ಸಾಕ್ಷಾನ್ನಾರಾಯಣಾನ್ನೃಪ ॥50॥
ರಹಸ್ಯದಿಂದಲೂ, ಸಂಗ್ರಹದಿಂದಲೂ ಕೂಡಿರುವ ಈ ಧರ್ಮವನ್ನು ಜಗನ್ನಾಥನಾದ ನಾರಾಯಣನಿಂದಲೇ ನಾರದರು ಪಡೆದುಕೊಂಡರು.
ಏವಮೇಷ ಮಹಾನ್ ಧರ್ಮ ಆದ್ಯೋ ರಾಜನ್ ಸನಾತನಃ |
ದುರ್ವಿಜ್ಞೇಯೋ ದುಷ್ಕರಶ್ಚ ಸಾತ್ವತೈರ್ಧಾರ್ಯತೇ ಸದಾ ॥51॥
ಈ ಸನಾತನವಾದ ಸಾತ್ವತಧರ್ಮವೇ ಮೊದಲನೆಯ ಧರ್ಮ. ತಿಳಿಯಲು ಕಷ್ಟ, ಆಚರಿಸಲು ದುಷ್ಕರ.ಅನನ್ಯ ಭಕ್ತಿಯುಳ್ಳವರು ಈ ಧರ್ಮವನ್ನು ನಿರಂತರ ಧರಿಸಿರುತ್ತಾರೆ.
ಧರ್ಮಜ್ಞಾನೇನ ಚೈತೇನ ಸುಪ್ರಯುಕ್ತೇನ ಕರ್ಮಣಾ |
ಅಹಿಂಸಾಧರ್ಮಯುಕ್ತೇನ ಪ್ರೀಯತೇ ಹರಿರೀಶ್ವರಃ ॥52॥
ಈ ಧರ್ಮಜ್ಞಾನವನ್ನು ಚೆನ್ನಾಗಿ ಪಡೆದು, ಸತ್ಕರ್ಮಾನುಷ್ಠಾನವನ್ನು ಚೆನ್ನಾಗಿ ಆಚರಿಸಿದಲ್ಲಿ, ಅಹಿಂಸಾವ್ರತಯುಕ್ತರಾಗಿ ಈ ಧರ್ಮವನ್ನು ಆಚರಿಸಿದಲ್ಲಿ ಸರ್ವೋತ್ತಮನಾದ ಶ್ರೀಹರಿಯು ಪ್ರೀತನಾಗುತ್ತಾನೆ.
ಏಕವ್ಯೂಹವಿಭಾಗೋ ವಾ ಕ್ವಚಿದ್ ದ್ವಿವ್ಯೂಹಸಂಜ್ಞಿತಃ |
ತ್ರಿವ್ಯೂಹಶ್ಚಾಪಿ ಸಂಖ್ಯಾತಶ್ಚತುರ್ವ್ಯೂಹಶ್ಚ ದೃಶ್ಯತೇ ॥53॥
ಕೆಲವು ಕಡೆ ಭಕ್ತರು ವಾಸುದೇವನೊಬ್ಬನನ್ನೇ ಉಪಾಸನೆ ಮಾಡುತ್ತಾರೆ. ಕೆಲವು ಕಡೆ ವಾಸುದೇವ-ಸಂಕರ್ಷಣನನ್ನು, ಕೆಲವು ಕಡೆ ವಾಸುದೇವ-ಸಂಕರ್ಷಣ- ಪ್ರದ್ಯುಮ್ನರನ್ನು, ಕೆಲವು ಕಡೆ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ರೂಪಗಳನ್ನು ಉಪಾಸನೆ ಮಾಡುವುದು ಕಾಣಿಸುತ್ತದೆ.
ಹರಿರೇವ ಹಿ ಕ್ಷೇತ್ರಜ್ಞೋ ನಿರ್ಮಮೋ ನಿಷ್ಕಲಸ್ತಥಾ |
ಜೀವಶ್ಚ ಸರ್ವಭೂತೇಷು ಪಂಚಭೂತಗುಣಾತಿಗಃ ॥54॥
ಶ್ರೀಹರಿಯೇ ಕ್ಷೇತ್ರಜ್ಞನೆನಿಸಿದ್ದಾನೆ. ಮಮತಾ ರಹಿತನೂ, ಪ್ರಾಕೃತ ಕಲಾರಹಿತನೂ, ಸಮಸ್ತ ಭೂತಾಂತರ್ಯಾಮಿಯೂ, ಪಂಚಭೂತಗಳನ್ನು ಮೀರಿದವನು ಭಗವಂತನೇ ಆಗಿದ್ದಾನೆ.

ಮನಶ್ಚ ಪ್ರಥಿತಂ ರಾಜನ್ ಪಂಚೇಂದ್ರಿಯಸಮೀರಣಮ್ |
ಏಷ ಲೋಕನಿಧಿರ್ಧೀಮಾನೇಷ ಲೋಕವಿಸರ್ಗಕೃತ್ ॥55॥
ಪಂಚೇಂದ್ರಿಯಗಳಿಗೆ ಪ್ರೇರಕನಾದವನು ಭಗವಂತನೇ. ಮನಸ್ಸಿನಲ್ಲಿ ನಿಯಾಮಕನು ಭಗವಂತನೇ. ಇವನೇ ಲೋಕಗಳ ಸೃಷ್ಟಿಕರ್ತೃವು, ಲೋಕನಿಧಿಯು ಆಗಿದ್ದಾನೆ.
ಅಕರ್ತಾ ಚೈವ ಕರ್ತಾ ಚ ಕಾರ್ಯಂ ಕಾರಣಮೇವ ಚ |
ಯಥೇಚ್ಛತಿ ತಥಾ ರಾಜನ್ ಕ್ರೀಡತೇ ಪುರುಷೋವ್ಯಯಃ ॥56॥
ಅಕರ್ತೃವು, ಕರ್ತೃವು, ಕಾರ್ಯವೂ, ಕಾರಣನೂ ಎಲ್ಲವೂ ಆಗಿದ್ದಾನೆ. ಅವ್ಯಯನಾದ ಭಗವಂತನು ಹೇಗೆ ಬಯಸುತ್ತಾನೋ ಹಾಗೆ ಈ ಜಗತ್ತಿನಲ್ಲಿ ಆಟವಾಡುತ್ತಾನೆ.
ಏಷ ಏಕಾಂತಿಧರ್ಮಸ್ತೇ ಕೀರ್ತಿತೋ ನೃಪಸತ್ತಮ |
ಮಯಾ ಗುರುಪ್ರಸಾದೇನ ದುರ್ವಿಜ್ಞೇಯೋಽಕೃತಾತ್ಮಭಿಃ |
ಏಕಾಂತಿನೋ ಹಿ ಪುರುಷಾ ದುರ್ಲಭಾ ಬಹವೋ ನೃಪ ॥57॥
ರಾಜನೇ, ನಿನಗೆ ಏಕಾಂತಿಗಳ ಧರ್ಮವನ್ನು ಉಪದೇಶಿಸಿದ್ದೇನೆ. ಪುಣ್ಯವಿಲ್ಲದವರಿಗೆ ಈ ಜ್ಞಾನವು ಲಭಿಸದು. ಗುರು ಅನುಗ್ರಹದಿಂದ ನಿನಗೆ ಹೇಳಿದ್ದೇನೆ. ಈ ಜಗತ್ತಿನಲ್ಲಿ ಏಕಾಂತಭಕ್ತರಾದ ಪುರುಷರು ಅತ್ಯಂತ ದುರ್ಲಭರು.
ಯದ್ಯೇಕಾಂತಿಭಿರಾಕೀರ್ಣಂ ಜಗತ್ ಸ್ಯಾತ್ ಕುರುನಂದನ |
ಅಹಿಂಸಕೈರಾತ್ಮವಿದ್ಭಿಃ ಸರ್ವಭೂತಹಿತೇ ರತೈಃ |
ಭವೇತ್ ಕೃತಯುಗಪ್ರಾಪ್ತಿರಾಶೀಃಕರ್ಮವಿವರ್ಜಿತೈಃ ॥58॥
ಈ ಜಗತ್ತೆಲ್ಲವೂ ಒಂದು ವೇಳೆ ಏಕಾಂತಭಕ್ತರಿಂದಲೇ ತುಂಬಿಕೊಂಡರೆ, ಅಹಿಂಸಾ ವಾದಿಗಳು, ಆತ್ಮಜ್ಞಾನಿಗಳು, ಸರ್ವಭೂತಹಿತಾಸಕ್ತರು ಇವರೆಲ್ಲರಿಂದಲೇ ತುಂಬಿಕೊಂಡರೆ ಆಶಾತ್ಯಾಗಿಗಳಾದ ಸಜ್ಜನರಿಂದ ಕೂಡಿದ ಈ ಜಗತ್ತಿನಲ್ಲಿ ಕೃತಯುಗವೇ ನಿರ್ಮಾಣವಾಗುತ್ತಿತ್ತು.
ಏವಂ ಸ ಭಗವಾನ್ವ್ಯಾಸೋ ಗುರುರ್ಮಮ ವಿಶಾಂ ಪತೇ |
ಕಥಯಾಮಾಸ ಧರ್ಮಜ್ಞೋ ಧರ್ಮರಾಜ್ಞೇ ದ್ವಿಜೋತ್ತಮಃ ॥59॥
ಋಷೀಣಾಂ ಸನ್ನಿಧೌ ರಾಜನ್ ಶೃಣ್ವತೋಃ ಕೃಷ್ಣಭೀಷ್ಮಯೋಃ |
ತಸ್ಯಾಪ್ಯಕಥಯತ್ ಪೂರ್ವಂ ನಾರದಃ ಸುಮಹಾತಪಾಃ ॥60॥
ರಾಜನೇ, ಧರ್ಮಜ್ಞರಾದ ನನ್ನ ಗುರುಗಳಾದ ವ್ಯಾಸರು ಧರ್ಮರಾಜನಿಗೆ ಈ ಸಾತ್ವತ ಧರ್ಮವನ್ನು ಋಷಿಗಳ ಸಮಕ್ಷಮದಲ್ಲಿ ಕೃಷ್ಣ-ಭೀಮರು ಕೇಳುತ್ತಿರುವಾಗ ಹೇಳಿದರು. ಅದಕ್ಕಿಂತಲೂ ಹಿಂದೆ ನಾರದರು ಈ ಧರ್ಮವನ್ನು ವ್ಯಾಸರಿಗೆ ಹೇಳಿದ್ದರು.
ದೇವಂ ಪರಮಕಂ ಬ್ರಹ್ಮ ಶ್ವೇತಂ ಚಂದ್ರಾಭಮಚ್ಯುತಮ್ |
ಯತ್ರ ಚೈಕಾಂತಿನೋ ಯಾಂತಿ ನಾರಾಯಣಪರಾಯಣಾಃ ॥61॥
ನಾರಾಯಣನನ್ನೇ ಆಶ್ರಯಿಸಿರುವ, ಸಾತ್ವತಧರ್ಮವನ್ನು ನಂಬಿರುವ ಅನನ್ಯ ಭಕ್ತರು, ಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಅಚ್ಯುತನನ್ನು ನಾರಾಯಣ ಪರಾಯಣರಾಗಿ ಹೊಂದುತ್ತಾರೆ.
ಜನಮೇಜಯಃ
ಏವಂ ಬಹುವಿಧಂ ಧರ್ಮಂ ಪ್ರತಿಬುದ್ಧೈರ್ನಿಷೇವಿತಮ್ |
ನ ಕುರ್ವಂತಿ ಕಥಂ ವಿಪ್ರಾ ಅನ್ಯೇ ನಾನಾವ್ರತೇ ಸ್ಥಿತಾಃ ॥62॥
ಜನಮೇಜಯ ಪೂಜ್ಯರೇ, ಜ್ಞಾನಿಗಳಿಂದ ಆಚರಿಸುವ ಅನೇಕ ವಿಧ ಗುಣಗಳಿಂದ ಕೂಡಿದ, ಶ್ರೇಷ್ಠವಾದ ಸಾತ್ವತಧರ್ಮಗಳನ್ನು ಬೇರೆ ವ್ರತಾನುಷ್ಠಾನಗಳಲ್ಲಿ ಆಸಕ್ತರಾದ ಬ್ರಾಹ್ಮಣರು ಏಕೆ ಆಚರಿಸುವುದಿಲ್ಲ?
ವೈಶಂಪಾಯನಃ
ತಿಸ್ರಃ ಪ್ರಕೃತಯೋ ರಾಜನ್ ದೇಹಬಂಧೇಷು ನಿರ್ಮಿತಾಃ |
ಸಾತಿತ್ವಕೀ ರಾಜಸೀ ಚೈವ ತಾಮಸೀ ಚೇತಿ ಭಾರತ ॥63॥
ವೈಶಂಪಾಯನ ರಾಜನೇ, ಈ ದೇಹದ ಸಂಬಂಧವನ್ನು ಹೊಂದಿದ ಜೀವರಲ್ಲಿ ಸಾತ್ವಿಕ, ರಾಜಸ, ತಾಮಸರೆಂದು, ಮೂರು ಸ್ವಭಾವದವರಿದ್ದಾರೆ.
ದೇಹಬಂಧೇಷು ಪುರುಷಃ ಶ್ರೇಷ್ಠಃ ಕುರುಕುಲೋದ್ವಹ |
ಸಾತಿತ್ವಕಃ ಪುರುಷವ್ಯಾಘ್ರ ಭವೇನ್ಮೋಕ್ಷಾರ್ಥನಿಶ್ಚಿತಃ ॥64॥
ಕುರುಕುಲಶ್ರೇಷ್ಠನೇ, ದೇಹಬಂಧನದಲ್ಲಿರುವ ಜೀವರಲ್ಲಿ ಸತ್ತ್ವಗುಣದಿಂದ ಕೂಡಿದ ಪುರುಷರು ಶ್ರೇಷ್ಠರು. ಅವರೇ ಮೋಕ್ಷಕ್ಕೆ ಅರ್ಹರು. ಇದು ನಿಶ್ಚಯವು.
ಅತ್ರಾಪಿ ಸ ವಿಜಾನಾತಿ ಪುರುಷಂ ಬ್ರಹ್ಮವರ್ತಿನಮ್ |
ನಾರಾಯಣಪರೋ ಮೋಕ್ಷಸ್ತತೋ ವೈ ಸಾತಿತ್ವಕಃ ಸ್ಮೃತಃ ॥65॥
ಸಾತಿತ್ವಕರು ಬ್ರಾಹ್ಮಣರ ಅಂತರ್ಯಾಮಿಯಾದ ಪುರುಷೋತ್ತಮನೇ ಶ್ರೇಷ್ಠವೆಂದೂ, ಮೋಕ್ಷವು ನಾರಾಯಣಪರವೆಂದೂ ತಿಳಿದಿರುತ್ತಾರೆ. ಅವರು ಸಾತಿತ್ವಕರು.
ಮನೀಷಿತಂ ಚ ಪ್ರಾಪ್ನೋತಿ ಚಿಂತಯನ್ ಪುರುಷೋತ್ತಮಮ್ |
ಏಕಾಂತಭಕ್ತಿಃ ಸತತಂ ನಾರಾಯಣಪರಾಯಣಃ ॥66॥
ಸಾತಿತ್ವಕ ಮನುಷ್ಯನು ಪುರುಷೋತ್ತಮನಾದ ಹರಿಯನ್ನು ಧ್ಯಾನಿಸುತ್ತಾ ಮನೋವಾಂಛಿತಗಳನ್ನು ಪಡೆಯುತ್ತಾನೆ.

ಏಕಾಂತಭಕ್ತಿಯು ಎಂದಿಗೂ ನಾರಾಯಣನನ್ನೇ ಆಶ್ರಯಿಸಿರುತ್ತದೆ.
ಮನೀಷಿಣೋ ಹಿ ಯೇ ಕೇಚಿದ್ ಯತಯೋ ಮೋಕ್ಷಕಾಂಕ್ಷಿಣಃ |
ತೇಷಾಂ ವೈ ಛಿನ್ನತೃಷ್ಣಾನಾಂ ಯೋಗಕ್ಷೇಮವಹೋ ಹರಿಃ ॥67॥
ಮೋಕ್ಷಸಾಧನೆಯಲ್ಲಿ ತೊಡಗಿಸಿಕೊಂಡಿರುವ ಕೆಲವು ಜ್ಞಾನಿಗಳಾದ ಯತಿಗಳು ಯಾರು ಇದ್ದಾರೋ, ಆಶಾತ್ಯಾಗ ಮಾಡಿದ ಅವರ ಯೋಗಕ್ಷೇಮವನ್ನು ಶ್ರೀಹರಿಯೇ ನೋಡಿಕೊಳ್ಳುತ್ತಾನೆ.
ಜಾಯಮಾನಂ ಹಿ ಪುರುಷಂ ಯಂ ಪಶ್ಯೇನ್ಮಧುಸೂದನಃ |
ಸಾತ್ತ್ವಿಕಸ್ತು ಸ ವಿಜ್ಞೇಯೋ ಭವೇನ್ಮೋಕ್ಷೇ ಚ ನಿಶ್ಚಿತಃ ॥68॥
ಹುಟ್ಟು-ಸಾವುಗಳಲ್ಲಿ ಸಿಕ್ಕಿರುವ ಪುರುಷರನ್ನು ಮಧುಸೂದನನು ಕೃಪಾದೃಷ್ಟಿಯಿಂದ ಯಾವಾಗ ನೋಡುತ್ತಾನೋ ಅಂಥವನನ್ನೇ ಸಾತ್ವಿಕನೆಂದು ತಿಳಿಯಬೇಕು. ಅವನೇ ಮೋಕ್ಷಾಧಿಕಾರಿಯು. ಇದು ನಿಶ್ಚಯವು.
ಸಾಂಖ್ಯಯೋಗೇನ ತುಲ್ಯೋ ಹಿ ಧರ್ಮ ಏಕಾಂತಸೇವಿತಃ |
ನಾರಾಯಣಾತ್ಮಕೇ ಮೋಕ್ಷೇ ತತೋ ಯಾಂತಿ ಪರಾಂ ಗತಿಮ್ ॥69॥
ಏಕಾಂತಭಕ್ತರಿಂದ ಸೇವಿಸಲ್ಪಡುವ ಧರ್ಮವು ಸಾಂಖ್ಯಯೋಗಗಳ ಧರ್ಮಕ್ಕೆ ಸದೃಶವಾದುದು. ನಾರಾಯಣನನ್ನು ಹೊಂದುವುದು, ಮೋಕ್ಷವನ್ನು ಹೊಂದುವುದು ಸಮಾನವಾದುದು. ಆದ್ದರಿಂದ ನಾರಾಯಣನಲ್ಲಿ ಅನನ್ಯವಾದ ಭಕ್ತಿಯನ್ನು ಮಾಡುವವರು ಮೋಕ್ಷವನ್ನೇ ಹೊಂದುತ್ತಾರೆ.
ನಾರಾಯಣೇನ ದೃಷ್ಟಶ್ಚ ಪ್ರತಿಬುದ್ಧೋ ಭವೇತ್ ಪುಮಾನ್ |
ಏವಮಾತ್ಮೇಚ್ಛಯಾ ರಾಜನ್ ಪ್ರತಿಬುದ್ಧೋ ನ ಜಾಯತೇ ॥70॥
ನಾರಾಯಣನ ಕೃಪಾ ದೃಷ್ಟಿಯು ಜೀವನ ಮೇಲೆ ಬೀಳಲು ಕೂಡಲೇ ಜೀವನು ಜ್ಞಾನಿಯಾಗುತ್ತಾನೆ. ಜ್ಞಾನಿಯಾಗಬೇಕು ಎಂಬ ಇಚ್ಛಾ ಮಾತ್ರದಿಂದ ಜ್ಞಾನಿಯಾಗುವುದಿಲ್ಲ. ನಾರಾಯಣನ ಪ್ರಸಾದಕ್ಕೆ ಪಾತ್ರನಾಗಬೇಕು.
ರಾಜಸೀ ತಾಮಸೀ ಚೈವ ವ್ಯಾಮಿಶ್ರೇ ಪ್ರಕೃತೀ ಸ್ಮೃತೇ |
ತದಾತ್ಮಕಂ ಹಿ ಪುರುಷಂ ಜಾಯಮಾನಂ ವಿಶಾಂ ಪತೇ |
ಪ್ರವೃತ್ತಿಲಕ್ಷಣೈರ್ಯುಕ್ತಂ ನಾವೇಕ್ಷತಿ ಹರಿಃ ಸ್ವಯಮ್ ॥71॥
ರಾಜಸ, ತಾಮಸ, ಮಿಶ್ರ ಎಂಬ ವಿಭಾಗಗಳಿವೆ. ರಾಜಸ-ತಾಮಸ ಗುಣಗಳಿಂದ ಹುಟ್ಟುವ ಮನುಷ್ಯನು ಸಾಮಾನ್ಯವಾಗಿ ಪ್ರವೃತ್ತಿ ಲಕ್ಷಣಗಳನ್ನೇ ಹೊಂದಿರುತ್ತಾನೆ. ಕಾಮ್ಯಕರ್ಮದಲ್ಲಿ ಆಸಕ್ತನಾದ ಅವನನ್ನು ಶ್ರೀಹರಿಯು ಎಂದಿಗೂ ನೋಡಲಾರ.
ಪಶ್ಯತ್ಯೇನಂ ಜಾಯಮಾನಂ ಬ್ರಹ್ಮಾ ಲೋಕಪಿತಾಮಹಃ |
ರಜಸಾ ತಮಸಾ ಚೈವ ಮಾನುಷಂ ಸಮಭಿಪ್ಲುತಮ್ ॥72॥
ರಜಸ್ಸು, ತಮಸ್ಸುಗಳಲ್ಲಿ ಮುಳುಗಿದ ಮನುಷ್ಯನನ್ನು ಲೋಕಪಿತಾಮಹನಾದ ಬ್ರಹ್ಮನು ಬಾಹ್ಯವಾದ ಫಲಗಳನ್ನು ಕೊಟ್ಟು ಸಲಹುತ್ತಾನೆ.
ಕಾಮಂ ದೇವಾಶ್ಚ ಋಷಯಃ ಸತ್ತ್ವಸ್ಥಾ ನೃಪಸತ್ತಮ |
ಹೀನಾಃ ಸತ್ತ್ವೇನ ಸೂಕ್ಷ್ಮೇಣ ತತೋ ವೈಕಾರಿಕಾಃ ಸ್ಮೃತಾಃ ॥73॥
ಮಹಾರಾಜನೇ, ದೇವತೆಗಳು, ಋಷಿಗಳು ಸತ್ತ್ವಗುಣವನ್ನು ಅವಲಂಬಿಸಿರುತ್ತಾರೆ. ದೇವತೆಗಳು ಸೂಕ್ಷ್ಮವಾದ ಸತ್ತ್ವಗುಣದಿಂದ ಕೂಡಿರುತ್ತಾರೆ. ಸೂಕ್ಷ್ಮವಾದ ಸತ್ತ್ವಗುಣವಿಲ್ಲದ ಸ್ಥೂಲವಾದ ಸತ್ತ್ವಗುಣದಲ್ಲಿ ರತರಾದವರು ವೈಕಾರಿಕರು ಎಂದು ಕರೆಯಲ್ಪಡುತ್ತಾರೆ. ಕೆಲವೊಮ್ಮೆ ಇವರಲ್ಲಿ ವಿಕಾರವು ಉಂಟಾಗುವುದರಿಂದ ವೈಕಾರಿಕರು ಅರ್ಥಾತ್ ಮನುಷ್ಯೋತ್ತಮರು ಎಂದು ಕರೆಸಿಕೊಳ್ಳಲ್ಪಡುತ್ತಾರೆ.
ಜನಮೇಜಯಃ
ಕಥಂ ವೈಕಾರಿಕೋ ಗಚ್ಛೇತ್ ಪುರುಷಃ ಪುರುಷೋತ್ತಮಮ್ |
ವದ ಸರ್ವಂ ಯಥಾ ದೃಷ್ಟಂ ಪ್ರವೃತ್ತಿಂ ಚ ಯಥಾಕ್ರಮಮ್ ॥74॥
ಜನಮೇಜಯ ಪೂಜ್ಯರೇ, ವೈಕಾರಿಕನಾದ ಪುರುಷನು ಪುರುಷೋತ್ತಮನನ್ನು ಹೇಗೆ ಹೊಂದುತ್ತಾನೆ? ಈ ವಿಷಯಕ್ಕೆ ಸಂಬಂಧಿಸಿದ ವಿಚಾರವನ್ನು ತಮ್ಮ ಅನುಭವದಲ್ಲಿ ಹೇಳಿರಿ. ಅದರ ಪ್ರವೃತ್ತಿಗಳನ್ನು ತಿಳಿಸಿರಿ.
ವೈಶಂಪಾಯನಃ
ಸುಸೂಕ್ಷ್ಮಸತ್ತ್ವಸಂಯುಕ್ತಂ ಸಂಯುಕ್ತಂ ತ್ರಿಭಿರಕ್ಷರೈಃ |
ಪುರುಷಃ ಪುರುಷಂ ಗಚ್ಛೇನ್ನಿಷ್ಕ್ರಿಯಃ ಪಂಚವಿಂಶಕಮ್ ॥75॥
ವೈಶಂಪಾಯನ ಅತ್ಯಂತ ಸೂಕ್ಷ್ಮನಾದ, ಸತ್ತ್ವಸಂಪನ್ನನಾದ, ಅಕಾರ, ಉಕಾರ, ಮಕಾರಗಳಿಂದ ಕೂಡಿದ ಪ್ರಣವಸ್ವರೂಪಿಯಾದ ಭಗವಂತನನ್ನು ಪಾಪ-ಪುಣ್ಯಾದಿ ಕರ್ಮರಹಿತನಾದ ಜೀವನು ಇಪ್ಪತ್ತೈದನೆಯ ತತ್ತ್ವವೆನಿಸಿದ ಪುರುಷನಾಮಕನನ್ನು ಕೊನೆಗೆ ಹೊಂದುತ್ತಾನೆ.
ಏವಮೇಕಂ ಸಾಂಖ್ಯಯೋಗಂ ವೇದಾರಣ್ಯಕಮೇವ ಚ |
ಪರಸ್ಪರಾಂಗಾನ್ಯೇತಾನಿ ಪಂಚರಾತ್ರಂ ಚ ಕಥ್ಯತೇ |
ಏಷ ಏಕಾಂತಿನಾಂ ಧರ್ಮೋ ನಾರಾಯಣಪರಾತ್ಮಕಃ ॥76॥
ಹೀಗೆ ಸಾಂಖ್ಯಯೋಗ, ವೇದಾರಣ್ಯಕಗಳು ಪರಸ್ಪರ ಸಂಬಂಧವನ್ನು ಹೊಂದಿವೆ. ಪಂಚರಾತ್ರವೂ ಇದೇ ವಿಚಾರವನ್ನು ತಿಳಿಸುತ್ತದೆ. ನಾರಾಯಣನ ಪ್ರಾಪ್ತಿಗಾಗಿ ಏಕಾಂತಧರ್ಮಗಳು ಹೀಗೆ ಏಕಾಂತಿಗಳಿಗೆ ಉಪದೇಶಿಸಲ್ಪಟ್ಟಿವೆ.
ಯಥಾ ಸಮುದ್ರಾತ್ ಪ್ರಸೃತಾ ಜಲೌಘಾ-

ಸ್ತಮೇವ ರಾಜನ್ ಪುನರಾವಿಶಂತಿ |
ಇಮೇ ತಥಾ ಜ್ಞಾನಮಹಾಜಲೌಘಾ
ನಾರಾಯಣಂ ವೈ ಪುನರಾವಿಶಂತಿ ||77||
ಸಮುದ್ರದಿಂದ ಮೇಘವಾದ ನೀರಿನ ಸಮೂಹವು ನದ-ನದಿಗಳ ಮೂಲಕ ಹೇಗೆ ಸಮುದ್ರವನ್ನೇ ಸೇರುತ್ತದೋ ಹಾಗೆ ನಾರಾಯಣನಿಂದ ಪ್ರಾದುರ್ಭೂತವಾದ ಜ್ಞಾನರೂಪವಾದ ಮಹಾಜಲಪ್ರವಾಹವು ನಾರಾಯಣನನ್ನೇ ಸೇರುತ್ತದೆ.
ಏಷ ತೇ ಕಥಿತೋ ಧರ್ಮಃ ಸಾತ್ವತೋ ಯದುಬಾಂಧವ |
ಕುರುಷ್ವೈನಂ ಯಥಾನ್ಯಾಯಂ ಯದಿ ಶಕ್ನೋಷಿ ಭಾರತ ||78||
ಯದುಬಾಂಧವನೇ, ನಿನಗೆ ಸಾತ್ವತ ಧರ್ಮವನ್ನು ವಿಸ್ತರಿಸಿ ಹೇಳಿದ್ದೇನೆ. ನೀನು ಈ ಧರ್ಮವನ್ನು ಆಚರಿಸಲು ಶಕ್ತನಾಗಿದ್ದಲ್ಲಿ ವಿಧಿಬದ್ಧವಾಗಿ ಇದನ್ನು ಆಚರಿಸು.
ಏವಂ ಹಿ ಸುಮಹಾಭಾಗೋ ನಾರದೋ ಗುರವೇ ಮಮ |
ಶ್ವೇತಾನಾಂ ಯತಿನಾಮಾಹ ಏಕಾಂತಗತಿಮವ್ಯಯಾಮ್ ||79||
ಹೀಗೆ ಪುಣ್ಯಾತ್ಮರಾದ ನಾರದರು ನನ್ನ ಗುರುಗಳಾದ ವ್ಯಾಸರಿಗೆ ಶ್ವೇತದ್ವೀಪ ನಿವಾಸಿಗಳಾದ ಯತಿಗಳ ನಿತ್ಯವಾದ ಏಕಾಂತ ಮಾರ್ಗವನ್ನು ವಿವರಿಸಿದರು.
ವ್ಯಾಸಶ್ಚಾಕಥಯತ್ ಪ್ರೀತ್ಯಾ ಧರ್ಮಪುತ್ರಾಯ ಧೀಮತೇ |
ಸ ಏವಾಯಂ ಮಯಾ ತುಭ್ಯಮಾಖ್ಯಾತಃ ಪ್ರಸತೋ ಗುರೋಃ ||80||
ವ್ಯಾಸರು ಸಾತ್ವತ ಧರ್ಮವನ್ನು ಧರ್ಮರಾಜನಿಗೆ ಹೇಳಿದರು. ಆ ಸಾತ್ವತ ಧರ್ಮದ ದಿವ್ಯವಾದ ಉಪದೇಶವನ್ನು ನಿನಗೆ ಯಥಾವತ್ತಾಗಿ ಹೇಳಿದ್ದೇನೆ.
ಇತ್ಥಂ ಹಿ ದುಶ್ಚರೋ ಧರ್ಮ ಏಷ ಪಾರ್ಥಿವಸತ್ತಮ |
ಯಥೈವ ತ್ವಂ ತಥೈವಾನ್ಯೇ ನ ಭಜಂತಿ ವಿಮೋಹಿತಾಃ ||81||
ಹೀಗೆ ಧರ್ಮವು ಆಚರಿಸಲು ಕಷ್ಟಸಾಧ್ಯವಾದುದು. ನೀನು ಹೇಗೆ ಧರ್ಮದ ವಿಷಯದಲ್ಲಿ ಮೋಹಿತನಾಗಿರುವೆಯೋ ಹಾಗೆ ಇತರರೂ ಮೋಹಿತರಾಗಿದ್ದಾರೆ.
ಕೃಷ್ಣ ಏವ ಹಿ ಲೋಕಾನಾಂ ಭಾವನೋ ಮೋಹನಸ್ತಥಾ |
ಸಂಹಾರಕಾರಕಶ್ಚೈವ ಕಾರಣಂ ಚ ವಿಶಾಂ ಪತೇ ||82||
ಜನಮೇಜಯನೇ, ಕೃಷ್ಣನೇ ಸಮಸ್ತ ಲೋಕದ ಹಿತೈಷಿಯು. ಅವನೇ ಸಂಹಾರಕನು. ಅವನೇ ಕಾರಣನು. ಅವನನ್ನೇ ಭಜಿಸು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ನಾರಾಯಣೀಯೇ ಏಕಾಶೀತ್ಯುತ್ತರಶತತಮೋಽಧ್ಯಾಯಃ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೆರಡನೆಯ ಅಧ್ಯಾಯ
ವ್ಯಾಸಾವತಾರ.
ಜನಮೇಜಯಃ
ಸಾಂಖ್ಯಂ ಯೋಗಂ ಪಂಚರಾತ್ರಂ ವೇದಾರಣ್ಯಕಮೇವ ಚ |
ಜ್ಞಾನಾನ್ಯೇತಾನಿ ಬ್ರಹ್ಮರ್ಷೇ ಲೋಕೇಷು ಪ್ರಚರಂತಿ ಹ ||1||
ಜನಮೇಜಯ ಬ್ರಹ್ಮರ್ಷಿಗಳೇ, ಲೋಕದಲ್ಲಿ ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ಪಂಚರಾತ್ರಾಗಮ, ಉಪನಿಷತ್ತು ಎಂಬ ಜ್ಞಾನಗಳು ಎಲ್ಲರ ಬುದ್ಧಿಯಲ್ಲಿಯೂ ಪ್ರಚಲಿತವಾಗಿವೆ.
ಕಿಮೇತಾನ್ಯೇಕನಿಷ್ಠಾನಿ ಪೃಥಗ್ ನಿಷ್ಠಾನಿ ವಾ ಮುನೇ |
ಪ್ರಬ್ರೂಹಿ ವೈ ಮಯಾ ಪೃಷ್ಟಃ ಪ್ರವೃತ್ತಿಂ ಚ ಯಥಾಕ್ರಮಮ್ ||2||
ಈ ಶಾಸ್ತ್ರಗಳು ಒಂದೇ ತತ್ತ್ವವನ್ನು ತಿಳಿಸುತ್ತವೋ ಅಥವಾ ಬೇರೆ ಬೇರೆ ತತ್ತ್ವಗಳನ್ನು ತಿಳಿಸುವುದರ ಅಭಿಪ್ರಾಯವಿದೆಯೋ? ಇದರ ಜೊತೆಗೆ ಪ್ರವೃತ್ತಿ ಮಾರ್ಗದ ಕ್ರಮವನ್ನು ಯಥಾವತ್ತಾಗಿ ನನಗೆ ತಿಳಿಸಿರಿ.
ವೈಶಂಪಾಯನಃ
ಜಜ್ಞೇ ಬಹುಜ್ಞಂ ಪರಮತ್ಯುದಾರಂ
ಯಂ ದ್ವೀಪಮಧ್ಯೇ ಸುತಮಾತ್ಮವಂತಮ್ |
ಪರಾಶರಾದ್ ಗಂಧವತೀ ಮಹರ್ಷಿಂ
ತಸ್ಮೈ ನಮೋಜ್ಞಾನತಮೋನುದಾಯ ||3||
ವೈಶಂಪಾಯನ ದೈವಾನುಗ್ರಹದಿಂದ ಯಮುನಾ ನದಿಯ ದ್ವೀಪದ ನಡುವೆ ಗಂಧವತಿಯಾದ ಸತ್ಯವತಿಯು ಅನೇಕ ಶಾಸ್ತ್ರಜ್ಞನೂ, ಉದಾರಸತ್ತ್ವಸಂಪನ್ನನೂ, ಮಹರ್ಷಿಯೂ ಆದ ಯಾವ ಪುತ್ರನನ್ನು ಪರಾಶರಮುನಿಯಿಂದ ಪಡೆದಳೋ ಅಂತಹ ಅಜ್ಞಾನಾಂಧಕಾರವನ್ನು ಪರಿಹರಿಸುವ ಗುರುಗಳಾದ ವ್ಯಾಸರನ್ನು ನಮಿಸುತ್ತೇನೆ.
ಪಿತಾಮಹಾದ್ಯಂ ಪ್ರವದಂತಿ ಷಷ್ಠಂ
ಮಹರ್ಷಿಮಾರ್ಷೇಯವಿಭೂತಿಯುಕ್ತಮ್ |
ನಾರಾಯಣಸ್ಯಾಂಶಜಮೇಕಪುತ್ರಂ

ದ್ವೈಪಾಯನಂ ವೇದಮಹಾನಿಧಾನಮ್ ॥4॥
ವ್ಯಾಸರು ಚತುರ್ಮುಖ ಬ್ರಹ್ಮನಿಗಿಂತ ಮೊದಲನೆಯವನಾದ ನಾರಾಯಣನಿಂದ ಆರಂಭಿಸಿದರೆ ಆರನೆಯ ಅವತಾರ ಪುರುಷರು. ನಾರಾಯಣ, ಬ್ರಹ್ಮ, ವಸಿಷ್ಠ, ಶಕ್ತಿ, ಪರಾಶರ, ವ್ಯಾಸ- ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ಋಷಿಗಳಿಗೆ ಸಂಬಂಧಿಸಿದ ಎಲ್ಲ ಐಶ್ವರ್ಯಗಳಿಂದಲೂ ಕೂಡಿದ್ದಾರೆ. ನಾರಾಯಣನ ಅಪಾಂತರತಮ ಎಂಬ ಮೊದಲನೆಯ ಅವತಾರದಲ್ಲಿ ವಾಕ್‌ನ ಉಚ್ಚಾರಣೆಯ ಸಮಯದಲ್ಲಿ ನಾರಾಯಣನ ಮುಖದಿಂದ ಹುಟ್ಟಿದವರು ಇವರೇ. ವೇದಗಳಿಗೆ ಮಹಾನಿಧಿಗಳೆನಿಸಿದ ಅಂತಹ ವ್ಯಾಸರಿಗೆ ನಮಸ್ಕರಿಸುತ್ತೇನೆ.
ತಮಾದಿಕಾಲೇಷು ಮಹಾವಿಭೂತಿ-
ರ್ನಾರಾಯಣೋ ಬ್ರಹ್ಮಮಹಾನಿದಾನಮ್ ।
ಸಸರ್ಜ ಪುತ್ರಾರ್ಥಮುದಾರತೇಜಾ
ವ್ಯಾಸಂ ಮಹಾತ್ಮಾನಮಜಃ ಪುರಾಣಃ ॥5॥
ಮಹಾವಿಭೂತಿ ಸಂಪನ್ನನಾದ ನಾರಾಯಣನು ಹಿಂದೆ ವೇದಗಳ ಜ್ಞಾನಕ್ಕೆ ಕಾರಣಭೂತನಾದ, ಮಹಾತ್ಮನಾದ, ಜನ್ಮರಹಿತನಾದ, ಪುರಾಣಪುರುಷನಾದ ವ್ಯಾಸರನ್ನು ಮಗನನ್ನಾಗಿ ಪಡೆದನು.
ಜನಮೇಜಯಃ
ತ್ವಯೈವ ಕಥಿತಃ ಪೂರ್ವಂ ಸಂಭವೋ ದ್ವಿಜಸತ್ತಮ ।
ವಸಿಷ್ಠಸ್ಯ ಸುತಃ ಶಕ್ತಿಃ ಶಕ್ತೇಃ ಪುತ್ರಃ ಪರಾಶರಃ ॥6॥
ಜನಮೇಜಯ ದ್ವಿಜಶ್ರೇಷ್ಠರೇ, ಹಿಂದೆ ಆದಿಪರ್ವದಲ್ಲಿ ವಸಿಷ್ಠರ ಮಗನು ಶಕ್ತಿಯು, ಶಕ್ತಿಯ ಮಗನು ಪರಾಶರರು ಎಂದು ನೀವು ಹೇಳಿದ್ದಿರಿ.
ಪರಾಶರಸ್ಯ ದಾಯಾದಃ ಕೃಷ್ಣದ್ವೈಪಾಯನೋ ಮುನಿಃ ।
ಭೂಯೋ ನಾರಾಯಣಸುತಂ ತ್ವಮೇವೈನಂ ಪ್ರಭಾಷಸೇ ॥7॥
ಪರಾಶರರ ಮಗನು ಕೃಷ್ಣದ್ವೈಪಾಯನ ಮುನಿಯು ಎಂದು ಹೇಳಿರುತ್ತೀರಿ. ಈಗ ವ್ಯಾಸರು ನಾರಾಯಣನ ಮಗನು ಎಂದು ಹೇಳುತ್ತಿದ್ದೀರಿ.
ಕಿಮತಃ ಪೂರ್ವಜಂ ಜನ್ಮ ವ್ಯಾಸಸ್ಯಾಮಿತತೇಜಸಃ ।
ಕಥಯಸ್ವೋತ್ತಮಮತೇ ಜನ್ಮ ನಾರಾಯಣೋದ್ಭವಮ್ ॥8॥
ಉತ್ತಮವಾದ ಮತಿಯುಳ್ಳ ವೈಶಂಪಾಯನರೇ, ಅಮಿತತೇಜಸ್ವಿಗಳಾದ ವ್ಯಾಸರಿಗೆ ಹಿಂದೆ ಇನ್ನೊಂದು ಜನ್ಮವಿದೆಯೇ? ನಾರಾಯಣನಿಂದ ವ್ಯಾಸರ ಜನ್ಮವು ಯಾವಾಗ, ಹೇಗೆ ಆಯಿತು?
ವೈಶಂಪಾಯನಃ
ವೇದಾರ್ಥಾನ್ವೇತ್ತುಕಾಮಸ್ಯ ಧರ್ಮಿಷ್ಠಸ್ಯ ತಪೋನಿಧೇಃ ।
ಗುರೋರ್ಮೇ ಜ್ಞಾನನಿಷ್ಠಸ್ಯ ಹಿಮವತ್ಪಾದ ಆಸತಃ ॥9॥
ವೈಶಂಪಾಯನ ವೇದಾರ್ಥಗಳನ್ನು ತಿಳಿಯಲು ಇಚ್ಛೆಯುಳ್ಳ ಧರ್ಮಿಷ್ಠರಾದ, ತಪೋನಿಧಿಯಾದ, ಜ್ಞಾನನಿಷ್ಠರಾದ, ನನ್ನ ಗುರುಗಳಾದ ವ್ಯಾಸರು ಹಿಮವತ್ ಪರ್ವತದ ತಪ್ಪಲಿನಲ್ಲಿ ವಾಸ ಮಾಡುತ್ತಿದ್ದರು.
ಕೃತ್ವಾ ಭಾರತಮಾಖ್ಯಾನಂ ತಪಃಶ್ರಾಂತಸ್ಯ ಧೀಮತಃ ।
ಶುಶ್ರೂಷಾಂ ತತ್ಪರಾ ರಾಜನ್ಕೃತವಂತೋ ವಯಂ ತದಾ ॥10॥
ಮಹಾಭಾರತ ಸಂಹಿತೆಯನ್ನು ರಚನೆ ಮಾಡಿದ ಬಳಿಕ ತಪಸ್ಸಿನಿಂದ ಬಳಲಿದಂತಿರುವ ಜ್ಞಾನಿಯಾದ ವ್ಯಾಸರನ್ನು ಶಿಷ್ಯರಾದ ನಾವೆಲ್ಲರೂ ಸೇವಿಸುತ್ತಿದ್ದೆವು.
ಸುಮಂತುರ್ಜೈಮಿನಿಶ್ಚೈವ ಪೈಲಶ್ಚ ಸುದೃಢವ್ರತಃ ।
ಅಹಂ ಚತುರ್ಥಃ ಶಿಷ್ಯೋ ವೈ ಶುಕೋ ವ್ಯಾಸಾತ್ಮಜಸ್ತಥಾ ॥11॥
ಏಭಿಃ ಪರಿವೃತೋ ವ್ಯಾಸಃ ಶಿಷ್ಯೈಃ ಪಂಚಭಿರುತ್ತಮೈಃ ।
ಶುಶುಭೇ ಹಿಮವತ್ಪಾದೇ ಭೂತೈರ್ಭೂತಪತಿರ್ಯಥಾ ॥12॥
ಸುಮಂತು, ಜೈಮಿನಿ, ಅತ್ಯಂತ ದೃಢವ್ರತನಾದ ಪೈಲ, ನಾಲ್ಕನೆಯವನಾದ ನಾನು, ವ್ಯಾಸರ ಮಗನಾದ ಶುಕ - ಈ ಐದು ಉತ್ತಮ ಶಿಷ್ಯರಿಂದ ಕೂಡಿಕೊಂಡಿರುವ ವ್ಯಾಸರು ಹಿಮವತ್ ಪರ್ವತದ ತಪ್ಪಲಿನಲ್ಲಿ, ಭೂತಗಳಿಂದ ಕೂಡಿದ ಭೂತನಾಥನಾದ ಶಿವನು ಹೇಗೆ ಶೋಭಿಸುತ್ತಾನೋ ಹಾಗೆ ಶೋಭಿಸುತ್ತಿದ್ದರು.
ವೇದಾನಾವರ್ತಯನ್ ಸಾಂಗಾನ್ ಭಾರತಾರ್ಥಾಂಶ್ಚ ಸರ್ವಶಃ ।
ತಮೇಕಮನಸಂ ದಾಂತಂ ಯುಕ್ತಾ ವಯಮುಪಾಸ್ಮಹೇ ॥13॥
ಷಡಂಗ ಸಹಿತವಾದ ವೇದಗಳನ್ನು, ಮಹಾಭಾರತದ ಸಮಗ್ರ ಅರ್ಥಗಳನ್ನು ಮನನ ಮಾಡುತ್ತಾ, ಜಿತೇಂದ್ರಿಯರಾದ, ಏಕಾಗ್ರಚಿತ್ತರಾದ ವ್ಯಾಸರನ್ನು ನಾವೆಲ್ಲರೂ ಸೇವಿಸುತ್ತಿದ್ದೆವು.
ಕಥಾಂತರೇಽಥ ಕಸ್ಮಿಂಶ್ಚಿತ್ ಪೃಷ್ಟೋಽಸ್ಮಾಭಿರ್ದ್ವಿಜೋತ್ತಮಃ ।
ವೇದಾರ್ಥಾನ್ ಭಾರತಾರ್ಥಾಂಶ್ಚ ಜನ್ಮ ನಾರಾಯಣಾತ್ತಥಾ ॥14॥
ವ್ಯಾಸರು ಕಥೆಯನ್ನು ಹೇಳುವಾಗ ಮಧ್ಯದಲ್ಲಿ ನಾವು ಪ್ರಶ್ನಿಸಿದಾಗ ವ್ಯಾಸರು ವೇದಗಳ ಅರ್ಥವನ್ನು, ಭಾರತಾರ್ಥವನ್ನು, ಅದರಂತೆ ನಾರಾಯಣನಿಂದ ಅವರು ಹೊಂದಿದ ಜನ್ಮವನ್ನು ನಮಗೆ ವಿವರಿಸಿದರು.
ಸ ಪೂರ್ವಮುಕ್ತತ್ವ ವೇದಾರ್ಥಾನ್ ಭಾರತಾರ್ಥಾಂಶ್ಚ ತತ್ತ್ವವಿತ್ ।

ನಾರಾಯಣಾದಿದಂ ಜನ್ಮ ವ್ಯಾಹರ್ತುಮುಪಚಕ್ರಮೇ ॥15॥
ಮೊದಲು ವೇದಗಳ ಅರ್ಥವನ್ನು, ಬಳಿಕ ಜ್ಞಾನಿಗಳಾದ ವ್ಯಾಸರು ಭಾರತಾರ್ಥವನ್ನು, ನಂತರ ನಾರಾಯಣನಿಂದ ಜನ್ಮತಾಳಿದ ತಮ್ಮ ಕಥೆಯನ್ನು ಹೇಳಲು ಆರಂಭಿಸಿದರು.
ಶೃಣುಧ್ವಮಾಖ್ಯಾನವರಮೇತದಾರ್ಷೇಯಮುತ್ತಮಮ್ |
ಆದಿಕಾಲೋದ್ಭವಂ ವಿಪ್ರಾಸ್ತಪಸಾಧಿಗತಂ ಮಯಾ ॥16॥
ಶಿಷ್ಯರೇ ಕೇಳಿರಿ. ಸೃಷ್ಟಿಯ ಆದಿಯಲ್ಲಿ ನಡೆದ, ಋಷಿಗೆ ಸಂಬಂಧಿಸಿದ ಉತ್ತಮವಾದ ಆಖ್ಯಾನವನ್ನು ಹೇಳುತ್ತೇನೆ. ಈ ವಿಚಾರಗಳನ್ನು ತಪಸ್ಸಿನಿಂದ ನಾನು ತಿಳಿದಿರುತ್ತೇನೆ.
ಪ್ರಾಪ್ತೇ ಪ್ರಜಾವಿಸರ್ಗೇ ವೈ ಸಪ್ತಮೇ ಪದ್ಮಸಂಭವೇ |
ನಾರಾಯಣೋ ಮಹಾಯೋಗೀ ಶುಭಾಶುಭವಿವರ್ಜಿತಃ ॥17॥
ಸಸೃಜೇ ನಾಭಿತಃ ಪುತ್ರಂ ಬ್ರಹ್ಮಾಣಮಮಿತಪ್ರಭಮ್ |
ತತಃ ಸ ಪ್ರಾದುರಭವದಥೈನಂ ವಾಕ್ಯಮಬ್ರವೀತ್ ॥18॥
ಏಳನೆಯ ಕಲ್ಪದ ಆರಂಭದಲ್ಲಿ ಚತುರ್ಮುಖ ಬ್ರಹ್ಮನು ಪ್ರಜಾಸೃಷ್ಟಿಗಾಗಿ ಭಗವಂತನಿಂದ ಸೃಷ್ಟನಾದಾಗ, ಪುಣ್ಯ-ಪಾಪಗಳಿಂದ ದೂರನಾದ ಮಹಾ ಯೋಗಿಯಾದ ನಾರಾಯಣನು, ಅಮಿತಪ್ರಭನಾದ ಬ್ರಹ್ಮನೆಂಬ ಮಗನನ್ನು ತನ್ನ ನಾಭಿಯಿಂದ ಸೃಷ್ಟಿಸಿದನು. ಬ್ರಹ್ಮನು ಪ್ರಾದುರ್ಭೂತನಾದ ಬಳಿಕ ಅವನಿಗೆ ಶ್ರೀಹರಿಯು ಹೀಗೆ ಹೇಳಿದನು.
ಮಮ ತ್ವಂ ನಾಭಿತೋ ಜಾತಃ ಪ್ರಜಾಸರ್ಗಕರಃ ಪ್ರಭುಃ |
ಸೃಜ ಪ್ರಜಾಸ್ತ್ವಂ ವಿವಿಧಾ ಬ್ರಹ್ಮನ್ ಸಜಡಪಂಡಿತಾಃ ॥19॥
ಬ್ರಹ್ಮನ್, ಪ್ರಜೆಗಳನ್ನು ಸೃಷ್ಟಿ ಮಾಡುವ ಉದ್ದೇಶದಿಂದ ಸಮರ್ಥನಾದ ನೀನು ನನ್ನ ನಾಭಿಯಿಂದ ಜನ್ಮತಾಳಿರುವೆ. ನೀನು ಅನೇಕ ವಿಧವಾದ ಜಡಜೀವರನ್ನು, ಜ್ಞಾನಿ ಜೀವರನ್ನು ಸೃಷ್ಟಿಸು.
ಸ ಏವಮುಕ್ತೋ ವಿಮುಖಶ್ಚಿಂತಾವ್ಯಾಕುಲಮಾನಸಃ |
ಪ್ರಣಮ್ಯ ವರದಂ ದೇವಮುವಾಚ ಹರಿಮೀಶ್ವರಮ್ ॥20॥
ಹೀಗೆ ಭಗವಂತನಿಂದ ಆಜ್ಞಪ್ತನಾದ ಬ್ರಹ್ಮನು ಸೃಷ್ಟಿಕಾರ್ಯದಿಂದ ವಿಮುಖನಾಗಿ ಚಿಂತಾಗ್ರಸ್ತನಾಗಿ ಕಳವಳ ಹೊಂದಿದನು. ಸರ್ವಸಮರ್ಥನಾದ, ವರದನಾದ ಭಗವಂತನನ್ನು ನಮಿಸಿ ಹೀಗೆ ಹೇಳಿದನು.
ಕಾ ಶಕ್ತಿರ್ಮಮ ದೇವೇಶ ಪ್ರಜಾಃ ಸ್ರಷ್ಟುಂ ನಮೋಽಸ್ತು ತೇ |
ಅಪ್ರಜ್ಞಾ ವಾನಹಂ ದೇವ ವಿಧತ್ಸ್ವ ಯದನಂತರಮ್ ॥21॥
ದೇವೇಶನೇ, ಪ್ರಜೆಗಳನ್ನು ಸೃಷ್ಟಿಸಲು ನನ್ನಲ್ಲಿ ಯಾವ ಶಕ್ತಿಯಿದೆ? ನಿನಗೆ ನಮಸ್ಕರಿಸುತ್ತೇನೆ. ಸೃಷ್ಟಿಯ ವಿಷಯದಲ್ಲಿ ನನಗೆ ಯಾವ ಜ್ಞಾನವೂ ಇರುವುದಿಲ್ಲ. ಆದ್ದರಿಂದ ಮುಂದೆ ಏನು ಮಾಡಬೇಕೆಂಬುದನ್ನು ನೀನೇ ನನಗೆ ತಿಳಿಸು.
ಸ ಏವಮುಕ್ತೋ ಭಗವಾನ್ ಭೂತ್ವಾಥಾಂತರ್ಹಿತಸ್ತತಃ |
ಚಿಂತಯಾಮಾಸ ದೇವೇಶೋ ಬುದ್ಧಿಂ ಬುದ್ಧಿಮತಾಂ ವರಃ ॥22॥
ಬ್ರಹ್ಮನು ಹೀಗೆ ಹೇಳಿದ ಬಳಿಕ ಬುದ್ಧಿವಂತರಲ್ಲಿ ಶ್ರೇಷ್ಠನಾದ ಶ್ರೀಹರಿಯು ಅಂತರ್ಧಾನವನ್ನು ಹೊಂದಿ ಜ್ಞಾನದ ಬಗ್ಗೆಯೇ ಧ್ಯಾನಿಸಿದನು.
ಸ್ವರೂಪಿಣೀ ತತೋ ಬುದ್ಧಿರುಪತಸ್ಥೇ ಹರಿಂ ಪ್ರಭುಮ್ |
ಯೋಗೇನ ಚೈನಾಂ ನಿರ್ಯೋಗಃ ಸ್ವಯಂ ನಿಯುಯುಜೇ ತದಾ ॥23॥
ಶ್ರೀಹರಿಯು ಧ್ಯಾನಾಸಕ್ತನಾದಾಗ ಬುದ್ಧಿಯು ಅರ್ಥಾತ್ ಬುದ್ಧ್ಯಭಿಮಾನಿಯು ಶರೀರವನ್ನು ಧರಿಸಿ ಪ್ರಭುವಾದ ಹರಿಯನ್ನು ಸೇವಿಸಲು ಸಿದ್ಧಳಾಗಿ ನಿಂತಳು. ಆ ಸಮಯದಲ್ಲಿ ಭಗವಂತನು ಬುದ್ಧ್ಯಭಿಮಾನಿ ದೇವತೆಯನ್ನು ಯೋಗಶಕ್ತಿಯ ಜೊತೆಗೆ ಸಂಯೋಜಿಸಿದನು.
ಸ ತಾಮೈಶ್ವರ್ಯಯೋಗಸ್ಥಾಂ ಬುದ್ಧಿಂ ಶಕ್ತಿಮತೀಂ ಸತೀಮ್ |
ಉವಾಚ ವಚನಂ ದೇವೋ ಬುದ್ಧಿಂ ವೈ ಪ್ರಭುರವ್ಯಯಃ ॥24॥
ನಾಶರಹಿತನಾದ ಪ್ರಭುವಾದ ನಾರಾಯಣನು ಐಶ್ವರ್ಯಯೋಗವನ್ನು ಹೊಂದಿರುವ ಸತಿಯಾದ ಶಕ್ತಿವಂತಳಾದ ಬುದ್ಧಿಯನ್ನು ಕುರಿತು ಈ ರೀತಿಯಾಗಿ ಹೇಳಿದನು.
ಬ್ರಹ್ಮಾಣಂ ಪ್ರವಿಶಸ್ವೇತಿ ಲೋಕಸೃಷ್ಟ್ಯರ್ಥಸಿದ್ಧಯೇ |
ತತಸ್ತಮೀಶ್ವರಾದಿಷ್ಟಾ ಬುದ್ಧಿಃ ಕ್ಷಿಪ್ರಾಂ ವಿವೇಶ ಸಾ ॥25॥
ಬುದ್ಧ್ಯಭಿಮಾನಿಯೇ, ಲೋಕದ ಸೃಷ್ಟಿಗಾಗಿ ನೀನು ಚತುರ್ಮುಖಬ್ರಹ್ಮನನ್ನು ಪ್ರವೇಶಿಸು. ಹೀಗೆ ಹೇಳಿದ ಕೂಡಲೇ ಬುದ್ಧ್ಯಭಿಮಾನಿಯು ಈಶ್ವರನಿಂದ ಆಜ್ಞಪ್ತಳಾಗಿ ಬ್ರಹ್ಮನನ್ನು ಪ್ರವೇಶಿಸಿದಳು.
ಅಥೈನಂ ಬುದ್ಧಿಸಂಯುಕ್ತಂ ಪುನಃ ಸ ದದೃಶೇ ಹರಿಃ |
ಭೂಯಶ್ಚೈನಂ ವಚಃ ಪ್ರಾಹ ಸೃಜೇಮಾ ವಿವಿಧಾಃ ಪ್ರಜಾಃ ॥26॥
ಬಳಿಕ ಬುದ್ಧಿ ಸಂಯುಕ್ತನಾದ ಬ್ರಹ್ಮನನ್ನು ಶ್ರೀಹರಿಯು ಪುನಃ ನೋಡಿದನು. ಅನೇಕ ವಿಧ ಪ್ರಜೆಗಳನ್ನು ಸೃಷ್ಟಿಸುವಂತೆ ಪುನಃ ಅವನಿಗೆ ಆದೇಶಿಸಿದನು.
ಏವಮುಕತ್ವ ಸ ಭಗವಾಂಸ್ತತ್ರೈವಾಂತರಧೀಯತ |
ಪ್ರಾಪ ಚೈವ ಮುಹೂರ್ತೇನ ಸ್ವಸ್ಥಾನಂ ದೇವಸಂಜ್ಞಿತಮ್ ॥27॥
ಈ ರೀತಿಯಾಗಿ ಭಗವಂತನು ಬ್ರಹ್ಮನಿಗೆ ಆದೇಶಿಸಿ, ಅಂತರ್ಧಾನವನ್ನು ಹೊಂದಿ ಒಂದು ಮುಹೂರ್ತದಲ್ಲಿ ತನ್ನ

ಮೂಲಸ್ಥಾನವೆನಿಸಿದ ದೇವಲೋಕವನ್ನು ಹೊಂದಿದನು.
ತಾಂ ಚೈವ ಪ್ರಕೃತಿಂ ಪ್ರಾಪ್ಯ ಏಕೀಭಾವಗತೋಽಭವತ್ |
ಅಥಾಸ್ಯ ಬುದ್ಧಿರಭವತ್ ಪುನರನ್ಯಾ ತದಾ ಕಿಲ ॥28॥
ಆ ಬುದ್ಧ್ಯಭಿಮಾನಿಯನ್ನು ಚತುರ್ಮುಖ ಬ್ರಹ್ಮನು ತನ್ನಲ್ಲಿ ಸೇರಿಸಿಕೊಂಡನು. ಸ್ವಲ್ಪ ಸಮಯದ ನಂತರ ಭಗವಂತನಿಗೆ ಇನ್ನೊಂದು ಮನಸ್ಸಿನಲ್ಲಿ ವಿಕಾರವು ಮೂಡಿತು.
ಸೃಷ್ಟ್ವಾ ಇಮಾಃ ಪ್ರಜಾಃ ಸರ್ವಾ ಬ್ರಹ್ಮಣಾ ಪರಮೇಷ್ಠಿನಾ |
ದೈತ್ಯದಾನವಗಂಧರ್ವರಕ್ಷೋಗಣಸಮಾಕುಲಾಃ |
ಜಾತಾ ಹೀಯಂ ವಸುಮತೀ ಭಾರಾಕ್ರಾಂತಾ ತಪಸ್ವಿನೀ ॥29॥
ಚತುರ್ಮುಖ ಬ್ರಹ್ಮನು ಸಮಸ್ತ ವಿಧವಾದ ಪ್ರಜೆಗಳನ್ನೂ ಸೃಷ್ಟಿಸಿದ್ದಾನೆ. ಆದರೆ ದೈತ್ಯ, ದಾನವ, ಗಂಧರ್ವ, ರಾಕ್ಷಸ ಇವರ ಸಮೂಹಗಳಿಂದ ಆಕ್ರಾಂತಳಾಗಿರುವ ತಪಸ್ವಿಯಾದ ಈ ಭೂದೇವಿಯು ಅತಿಯಾದ ಭಾರದಿಂದ ಕುಂಟಿತಳಾಗಿದ್ದಾಳೆ.
ಬಹವೋ ಬಲಿನಃ ಪೃಥ್ವ್ಯಾಂ ದೈತ್ಯದಾನವರಾಕ್ಷಸಾಃ |
ಭವಿಷ್ಯಂತಿ ತಪೋಯುಕ್ತಾ ವರಾನ್ ಪ್ರಾಪ್ಸ್ಯಂತಿ ಚೋತ್ತಮಾನ್ ॥30॥
ಈ ಭೂಮಿಯಲ್ಲಿ ಬಲಿಷ್ಠರಾದ ಅನೇಕ ದೈತ್ಯ-ದಾನವ-ರಾಕ್ಷಸರು ಇನ್ನೂ ಹುಟ್ಟಲಿದ್ದಾರೆ. ಅವರು ತಪಸ್ಸುಗಳನ್ನು ಆಚರಿಸಿ ಉತ್ತಮವಾದ ವರಗಳನ್ನು ಹೊಂದುತ್ತಾರೆ.
ಅವಶ್ಯಮೇವ ತೈಃ ಸರ್ವೈರ್ವರದಾನೇನ ದರ್ಪಿತೈಃ |
ಬಾಧಿತವ್ಯಾಃ ಸುರಗಣಾ ಋಷಯಶ್ಚ ತಪೋಧನಾಃ |
ತತ್ರ ನ್ಯಾಯ್ಯಮಿದಂ ಕರ್ತುಂ ಭಾರಾವತರಣಂ ಮಯಾ ॥31॥
ವರಗಳನ್ನು ಹೊಂದಿರುವ, ದರ್ಪಿಷ್ಠರಾದ ಆ ದೈತ್ಯ-ದಾನವರಿಂದ ತಪೋಧನರಾದ ಋಷಿಗಳು, ದೇವತೆಗಳು ಇವರೆಲ್ಲರೂ ಪೀಡಿತರಾಗುತ್ತಾರೆ. ಆದ್ದರಿಂದ ನಾನು ಅನೇಕ ಅವತಾರಗಳನ್ನು ತಾಳಿ ಭೂಭಾರವನ್ನು ಹರಣ ಮಾಡುವುದು ಯೋಗ್ಯವಾಗಿದೆ.
ಅಥ ನಾನಾಸಮುದ್ಭೂತೈರ್ವಸುಧಾಯಾಂ ಯಥಾಕ್ರಮಮ್ |
ನಿಗ್ರಹೇಣ ಚ ಪಾಪಾನಾಂ ಸಾಧೂನಾಂ ಪ್ರಗ್ರಹೇಣ ಚ ॥32॥
ನಾನು ಅನೇಕ ಅವತಾರಗಳಿಂದ ಭೂಮಿಗೆ ಆಗಮಿಸಿ, ಪಾಪಿಷ್ಠರನ್ನು ನಿಗ್ರಹಿಸಿ ಸಜ್ಜನರನ್ನು ಉದ್ಧರಿಸುವುದು ಕರ್ತವ್ಯವಾಗಿದೆ.
ಇಮಾಂ ತಪಸ್ವಿನೀಂ ಸತ್ಯಾಂ ಧಾರಯಿಷ್ಯಾಮಿ ಮೇದಿನೀಮ್ |
ಮಯಾ ಹ್ಯೇಷಾ ಹಿ ಧ್ರಿಯತೇ ಪಾತಾಲಸ್ಥೇನ ಭೋಗಿನಾ ॥33॥
ಈ ತಪಸ್ವಿನಿಯಾದ, ಪೃಥ್ವಿಯನ್ನು ಸತ್ಯರೂಪಳಾದ ನಾನು ಧರಿಸಬೇಕಾಗಿದೆ. ನಾನು ಪಾತಾಳದಲ್ಲಿ ಶೇಷನ ಅಂತರ್ಯಾಮಿಯಾಗಿ ಸಂಕರ್ಷಣರೂಪದಿಂದ ಇವಳನ್ನು ಧರಿಸುತ್ತೇನೆ.
ಮಯಾ ಧೃತಾ ಧಾರಯತಿ ಜಗದ್ಧಿ ಸಚರಾಚರಮ್ |
ತಸ್ಮಾತ್ ಪೃಥ್ವ್ಯಾಃ ಪರಿತ್ರಾಣಂ ಕರಿಷ್ಯೇ ಸಂಭವಂ ಗತಃ ॥34॥
ನನ್ನಿಂದ ಧರಿಸಲ್ಪಟ್ಟ ಭೂದೇವಿಯು ಈ ಚರಾಚರ ಜಗತ್ತನ್ನು ಧಾರಣೆ ಮಾಡುತ್ತಾಳೆ. ಆದ್ದರಿಂದ ಭೂಮಿಯಲ್ಲಿ ಅವತರಿಸಿ ಭೂಮಿಯನ್ನು ನಾನು ರಕ್ಷಿಸುತ್ತೇನೆ.
ಏವಂ ಸ ಚಿಂತಯಿತ್ವಾ ತು ಭಗವಾನ್ಮಧುಸೂದನಃ |
ರೂಪಾಣ್ಯನೇಕಾನ್ಯಸೃಜತ್ ಪ್ರಾದುರ್ಭಾವಭವಾಯ ಸಃ ॥35॥
ಈ ರೀತಿಯಾಗಿ ಭಗವಾನ್ ಮಧುಸೂದನನು ಆಲೋಚಿಸಿ ಜಗತ್ತಿನಲ್ಲಿ ಅವತರಿಸುವ ದೃಷ್ಟಿಯಿಂದ ಅನೇಕ ಅವತಾರಗಳನ್ನು ತಾಳಿದನು.
ವಾರಾಹಂ ನಾರಸಿಂಹಂ ಚ ವಾಮನಂ ಮಾನುಷಂ ತಥಾ |
ಏಭಿರ್ಮಯಾ ನಿಹಂತವ್ಯಾ ದುರ್ವಿನೀತಾಸುರಾರಯಃ ॥36॥
ವರಾಹ, ನಾರಸಿಂಹ, ವಾಮನ, ಮನುಷ್ಯ ಸಂಬಂಧಿಯಾದ ರಾಮ - ಈ ರೂಪಗಳನ್ನು ತಾಳಿ ದುರ್ವಿನೀತರಾದ ದೈತ್ಯರನ್ನು ನಿಗ್ರಹಿಸಬೇಕಾಗಿದೆ.
ಅಥ ಭೂಯೋ ಜಗತ್ಸ್ರಷ್ಟಾ ಭೋಃಶಬ್ದೇನಾನುನಾದಯನ್ |
ಸರಸ್ವತೀಮುಚ್ಚಚಾರ ತತ್ರ ಸಾರಸ್ವತೋಽಭವತ್ ॥37॥
ನಂತರ ಹೀಗೆ ಯೋಚಿಸಿ ಜಗತ್ ಸೃಷ್ಟಿಕರ್ತನಾದ ಭಗವಂತನು ಭೋಃ ಎಂಬ ಶಬ್ದದಿಂದ ಜಗತ್ತಿನಲ್ಲಿ ಪ್ರತಿಧ್ವನಿಯನ್ನು ಉಂಟು ಮಾಡುತ್ತಾ, ತನ್ನ ಶಬ್ದೋಚ್ಚಾರಣೆಯಿಂದ ಸಾರಸ್ವತನನ್ನು ಸೃಷ್ಟಿಸಿದನು. ಸಾರಸ್ವತನ ಆವಿರ್ಭಾವ ಭಗವಂತನ ಶಬ್ದದ ಮೂಲಕ ಉಂಟಾಯಿತು.
ಅಪಾಂತರತಮಾ ನಾಮ ಸುತೋ ವಾಕ್ಸಂಭವೋ ವಿಭೋಃ |
ಭೂತಭವ್ಯಭವಿಷ್ಯಜ್ಞಃ ಸತ್ಯವಾದೀ ದೃಢವ್ರತಃ ॥38॥
ವರಾಹಾದಿ ರೂಪಗಳಂತೆ ಜ್ಞಾನಕಾರ್ಯಕ್ಕಾಗಿ ಅಪಾಂತರತಮಾ ಎಂಬ ಭಗವಂತನ ರೂಪವು ಆದಿನಾರಾಯಣನಿಂದಲೇ ಪ್ರಾದುರ್ಭಾವಗೊಂಡಿತು. ಸತ್ಯವಾದಿಯಾದ, ದೃಢವ್ರತನಾದ, ಭೂತ-ಭವ್ಯ-ಭವಿಷ್ಯತ್ ಜ್ಞಾನಿಯಾದ ಅಪಾಂತರತಮನೇ ಮುಂದೆ ವ್ಯಾಸನಾಗುತ್ತಾನೆ.
ತಮುವಾಚ ನತಂ ಮೂರ್ಧ್ನಾ ದೇವಾನಾಮಾದಿರವ್ಯಯಃ |
ವೇದಾಖ್ಯಾನೇ ಶ್ರುತಿಃ ಕಾರ್ಯಾ ತ್ವಯಾ ಮತಿಮತಾಂ ವರ |

ತಸ್ಮಾತ್ ಕುರು ಯಥಾಜ್ಞಪ್ತಂ ಮಯ್ಯೆತದ್ವಚನಂ ಮುನೇ ॥39॥
ಹುಟ್ಟಿದ ಕೂಡಲೇ ತಲೆಬಾಗಿ ನಮಸ್ಕರಿಸಿದ ಅಪಾಂತರತಮನಿಗೆ ದೇವತೆಗಳಿಗೂ ಆದಿಯಾದ, ಅವ್ಯಯನಾದ ಭಗವಂತನು ಹೇಳಿದನು: ಜಾಣರಲ್ಲಿ ಶ್ರೇಷ್ಠನೇ, ವೇದವ್ಯಾಖ್ಯಾನಕ್ಕಾಗಿ ನೀನು ವೇದಗಳನ್ನು ವಿಭಾಗಿಸಬೇಕು. ನನ್ನ ಆದೇಶದಂತೆ ನನ್ನ ಮಾತನ್ನು ನೀನು ನಡೆಸು.
ತೇನ ಭಿನ್ನಾಸ್ತದಾ ವೇದಾ ಮನೋಃ ಸ್ವಾಯಂಭುವೇಂತರೇ |
ತತಸ್ತುತೋಷ ಭಗವಾನ್ಹರಿಸ್ತೇನಾಸ್ಯ ಕರ್ಮಣಾ |
ತಪಸಾ ಚ ಸುತಪ್ತೇನ ಯಮೇನ ನಿಯಮೇನ ಚ ॥40॥
ಶ್ರೀಹರಿಯ ಆದೇಶದಂತೆ ಅಪಾಂತರತಮನು ಸ್ವಾಯಂಭುವ ಮನ್ವಂತರದಲ್ಲಿ ವೇದಗಳನ್ನು ವಿಂಗಡಿಸಿದನು. ಇವನ ಈ ಕರ್ಮದಿಂದ, ತಪಸ್ಸಿನಿಂದ, ಯಮ- ನಿಯಮಗಳ ಅನುಷ್ಠಾನದಿಂದ ಸಂತುಷ್ಟನಾದ ಹರಿಯು ಅವನಿಗೆ ಹೀಗೆ ಹೇಳಿದನು.
ಶ್ರೀಭಗವಾನ್
ಮನ್ವಂತರೇಷು ಪುತ್ರ ತ್ವಮೇವಂ ಲೋಕಪ್ರವರ್ತಕಃ |
ಭವಿಷ್ಯಸ್ಯಚಲೋ ಬ್ರಹ್ಮನ್ನಪ್ರಧೃಷ್ಯಶ್ಚ ನಿತ್ಯಶಃ ॥41॥
ಶ್ರೀಭಗವಾನ್ ಮಗನೇ, ನೀನು ಎಲ್ಲ ಮನ್ವಂತರಗಳಲ್ಲಿಯೂ ಇದೇ ರೀತಿ ಧರ್ಮಪ್ರವರ್ತಕನಾಗು. ಬ್ರಹ್ಮಜ್ಞಾನಿಯೇ, ನೀನು ಅಚಲನೂ, ಬಲಾತ್ಕಾರಕ್ಕೆ ತುತ್ತಾಗದವನೂ ಆಗುತ್ತಿ.
ಪುನಸ್ತಿಷ್ಯೇ ಚ ಸಂಪ್ರಾಪ್ತೇ ಕುರವೋ ನಾಮ ಭಾರತಾಃ |
ಭವಿಷ್ಯಂತಿ ಮಹಾತ್ಮಾನೋ ರಾಜಾನಃ ಪ್ರಥಿತಾ ಭುವಿ ॥42॥
ದ್ವಾಪರ, ಕಲಿಯುಗದ ಸಂಧಿಕಾಲದಲ್ಲಿ ಭರತವಂಶದಲ್ಲಿ ಕುರುಗಳೆಂಬ ಹೆಸರಿನ ವಿಖ್ಯಾತರಾದ ಕ್ಷತ್ರಿಯರು ಭೂಮಿಯಲ್ಲಿ ಹುಟ್ಟುತ್ತಾರೆ.
ತೇಷಾಂ ತ್ವತ್ತಃ ಪ್ರಸೂತಾನಾಂ ಕುಲಭೇದೋ ಭವಿಷ್ಯತಿ |
ಪರಸ್ಪರವಿನಾಶಾರ್ಥಂ ತ್ವಾಮೃತೇ ದ್ವಿಜಸತ್ತಮ ॥43॥
ನಿನ್ನಿಂದಲೇ ಜನ್ಮವನ್ನು ತಾಳುವ ಅವರಲ್ಲಿ ನಿನ್ನನ್ನು ಹೊರತುಪಡಿಸಿ ಪರಸ್ಪರ ನಾಶ ಹೊಂದಲು ಅವರಲ್ಲಿ ಕುಲಭೇದ ಉಂಟಾಗುತ್ತದೆ.
ತತ್ರಾಪ್ಯನೇಕಧಾ ವೇದಾನ್ ಭೇತ್ಸ್ಯಸೇ ತಪಸಾನ್ವಿತಃ |
ಕೃಷ್ಣೇ ಯುಗೇ ಚ ಸಂಪ್ರಾಪ್ತೇ ಕೃಷ್ಣವರ್ಣೋ ಭವಿಷ್ಯಸಿ ॥44॥
ಆ ಸಮಯದಲ್ಲಿಯೂ ತಪೋಬಲದಿಂದ ಕೂಡಿದ ನೀನು ವೇದಗಳನ್ನು ಅನೇಕ ಪ್ರಕಾರವಾಗಿ ವಿಭಾಗಿಸುತ್ತಿ. ಕಲಿಯುಗವು ಪ್ರಾಪ್ತವಾಗಲು ನೀನು ಕೃಷ್ಣವರ್ಣನಾಗುತ್ತಿ.
ಧರ್ಮಾಣಾಂ ವಿವಿಧಾನಾಂ ಚ ಕರ್ತಾ ಜ್ಞಾನಕರಸ್ತಥಾ |
ಭವಿಷ್ಯಸಿ ತಪೋಯುಕ್ತೋ ನ ಚ ರಾಗಾದ್ ವಿಮೋಕ್ಷ್ಯಸೇ ॥45॥
ನಾನಾ ವಿಧವಾದ ಧರ್ಮಗಳ ಪ್ರವರ್ತಕನಾಗುತ್ತಿ, ತಪೋಯುಕ್ತನಾಗುತ್ತಿ. ಈ ಜಗತ್ತಿನ ಸಂಬಂಧವನ್ನು ಬಿಟ್ಟಿರುವುದಿಲ್ಲ.
ವೀತರಾಗಶ್ಚ ಪುತ್ರಸ್ತೇ ಪರಮಾತ್ಮಾ ಭವಿಷ್ಯತಿ |
ಮಹೇಶ್ವರಪ್ರಸಾದೇನ ನೈತದ್ವಚನಮನ್ಯಥಾ ॥46॥
ರಾಗದಿಂದ ದೂರನಾದ ನಿನ್ನ ಮಗನು ಭಗವಂತನ ಅನುಗ್ರಹದಿಂದ ಸರ್ವೋತ್ತಮನಾದ ನಾರಾಯಣನಲ್ಲೇ ಮನಸ್ಸುಳ್ಳವನಾಗುತ್ತಾನೆ. ನನ್ನ ಮಾತು ಎಂದಿಗೂ ಸುಳ್ಳಾಗುವುದಿಲ್ಲ.
ಯಂ ಮಾನಸಂ ವೈ ಪ್ರವದಂತಿ ಪುತ್ರಂ
    ಪಿತಾಮಹಸ್ಯೋತ್ತಮಬುದ್ಧಿಯುಕ್ತಮ್ |
ವಸಿಷ್ಠಮಗ್ರ್ಯಂ ತಪಸೋ ನಿಧಾನಂ
    ಯಶ್ಚಾಪಿ ಸೂರ್ಯಂ ವ್ಯತಿರಿಚ್ಯ ಭಾತಿ ॥47॥
ತಸ್ಯಾನ್ವಯೇ ಚಾಪಿ ತತೋ ಮಹರ್ಷಿಃ
    ಪರಾಶರೋ ನಾಮ ಮಹಾಪ್ರಭಾವಃ |
ಪಿತಾ ಸ ತೇ ವೇದನಿಧಿರ್ವರಿಷ್ಠೋ
    ಮಹಾತಪಾ ವೈ ತಪಸೋ ನಿವಾಸಃ |
ಕಾನೀನಗರ್ಭಃ ಪಿತೃಕನ್ಯಕಾಯಾಂ
    ತಸ್ಮಾದೃಷೇಸ್ತ್ವಂ ಭವಿತಾ ಚ ಪುತ್ರಃ ॥48॥
ಯಾರನ್ನು ಬ್ರಾಹ್ಮಣರು ಬ್ರಹ್ಮನ ಮಾನಸ ಪುತ್ರ ಎಂದು ಹೇಳುತ್ತಾರೋ, ಉತ್ತಮ ಬುದ್ಧಿಯಿಂದ ಕೂಡಿರುತ್ತಾನೋ, ತಪೋನಿಧಿಯೋ, ತೇಜಸ್ಸಿನಿಂದ ಸೂರ್ಯನನ್ನು ಮೀರಿಸಿರುತ್ತಾನೋ ಅಂತಹ ವಸಿಷ್ಠ ಮಹರ್ಷಿಯ ವಂಶದಲ್ಲಿ ಪರಾಶರ ಎಂಬ ಹೆಸರಿನ ಮಹಾಪ್ರಭಾವಶಾಲಿಯಾದ ಮಹರ್ಷಿಯು ಹುಟ್ಟುತ್ತಾನೆ. ವೇದನಿಧಿಯಾದ ಶ್ರೇಷ್ಠನಾದ, ತಪಸ್ವಿಯಾದ, ತಪಸ್ಸುಗಳಿಗೆಲ್ಲ ಆವಾಸಸ್ಥಾನನಾದ ಪರಾಶರನು ನಿನಗೆ ತಂದೆಯಾಗುತ್ತಾನೆ. ತಂದೆಯಾದ ಪರಾಶರರ ಮೂಲಕ ಕನ್ಯೆಯಲ್ಲಿ ನೀನು ಅವತರಿಸುವ ಕಾರಣ ಕಾನೀನಗರ್ಭ ಎಂದು ಪ್ರಸಿದ್ಧನಾಗುತ್ತಿ.
ಭೂತಭವ್ಯಭವಿಷ್ಯಾಣಾಂ ಛಿನ್ನಸರ್ವಾರ್ಥಸಂಶಯಃ |
ಯೇ ಹ್ಯತಿಕ್ರಾಂತಕಾಃ ಪೂರ್ವಂ ಸಹಸ್ರಯುಗಪರ್ಯಯಾಃ ॥49॥

ಭೂತ-ಭವ್ಯ-ಭವಿಷ್ಯತ್ತುಗಳ ಬಗ್ಗೆ ಸಂಶಯವಿಲ್ಲದೆ ಜ್ಞಾನ ಹೊಂದಿರುತ್ತಿ. ಹಿಂದೆ ಕಳೆದು ಹೋದ ಸಾವಿರಾರು ಯುಗಗಳ ವಿಚಾರಗಳನ್ನು ಪ್ರತ್ಯಕ್ಷವಾಗಿಯೇ ನೋಡುತ್ತಿ.
ತಾಂಶ್ಚ ಸರ್ವಾನ್ಮಯೋದ್ದಿಷ್ಟಾನ್ ದ್ರಕ್ಷ್ಯಸೇ ತಪಸಾನ್ವಿತಃ|
ಪುನರ್ದ್ರಕ್ಷ್ಯಸಿ ಚಾನೇಕಸಹಸ್ರಯುಗಪರ್ಯಯಾನ್ ॥50॥
ತಪಸ್ಸಿನಿಂದಲೇ ಕೂಡಿರುವ ನೀನು ನನ್ನಿಂದ ಹೇಳಲ್ಪಟ್ಟ ಎಲ್ಲ ವಿಚಾರಗಳನ್ನು ಅನೇಕ ಸಾವಿರ ಯುಗಗಳು ನಡೆದು ಹೋಗಿದ್ದರೂ ಪುನಃ ನೋಡುವ ಸಾಮರ್ಥ್ಯವನ್ನು ಹೊಂದುತ್ತಿ.
ಅನಾದಿನಿಧನಂ ಲೋಕೇ ಚಕ್ರಹಸ್ತಂ ಚ ಮಾಂ ಮುನೇ|
ಅನುಧ್ಯಾನಾನ್ಮಮ ಮುನೇ ನೈತದ್ ವಚನಮನ್ಯಥಾ ॥51॥
ಮಹಾಮುನಿಯೇ, ನಿರಂತರ ನನ್ನನ್ನು ಧ್ಯಾನಿಸುವುದರಿಂದ ಅನಾದಿ ನಿಧನನಾದ, ಚಕ್ರಪಾಣಿಯಾದ ನನ್ನನ್ನು ನೋಡುತ್ತಿರುವೆ. ನನ್ನ ಮಾತು ವ್ಯತ್ಯಾಸವಾಗುವುದಿಲ್ಲ.
ಶನೈಶ್ಚರಃ ಸೂರ್ಯಪುತ್ರೋ ಭವಿಷ್ಯತಿ ಮನುರ್ಮಹಾನ್|
ತಸ್ಮಿನ್ಮನ್ವಂತರೇ ಚೈವ ಸಪ್ತರ್ಷಿಗಣಪೂರ್ವಕಃ|
ತ್ವಮೇವ ಭವಿತಾ ವತ್ಸ ಮತ್ಪ್ರಸಾದಾನ್ನ ಸಂಶಯಃ ॥52॥
ಎಪ್ಪತ್ತೊಂದು ಮಹಾಯುಗಗಳ ತನಕ ಸಂಚರಿಸುವುದರಿಂದ ಶನೈಶ್ಚರ ಎನಿಸಿದ ಶ್ರೇಷ್ಠನಾದ ವೈವಸ್ವತ ಮನುವು ನೀನು ಅವತಾರ ಮಾಡುವ ಮನ್ವಂತರದಲ್ಲಿ ಸಪ್ತರ್ಷಿಗಳಿಂದ ಸಹಿತನಾಗಿ ಪ್ರವರ್ತಕನಾಗಿರುತ್ತಾನೆ. ಅವನಿಗೂ ನೀನು ನನ್ನ ಅನುಗ್ರಹದಿಂದ ಮುಖ್ಯನಾಗಿರುತ್ತಿ. ಇದರಲ್ಲಿ ಸಂಶಯವಿಲ್ಲ.
ವ್ಯಾಸಃ
ಏವಂ ಸಾರಸ್ವತಮೃಷಿಮಪಾಂತರತಮಂ ತದಾ|
ಉಕತ್ವ ವಚನಮೀಶಾನಃ ಸಾಧಯಸ್ವೇತ್ಯಥಾಬ್ರವೀತ್ ॥53॥
ವ್ಯಾಸರು ಹೀಗೆ ಭಗವಂತನು ಸರಸ್ವತಿಯ ಪುತ್ರನಾದ ಅಪಾಂತರತಮನಿಗೆ ಹೇಳಿ ಮುಂದಿನ ಕಾರ್ಯಗಳನ್ನು ಸಾಧಿಸು ಎಂದು ಹೇಳಿದನು.
ಸೋಽಹಂ ತಸ್ಯ ಪ್ರಸಾದೇನ ದೇವಸ್ಯ ಹರಿಮೇಧಸಃ|
ಅಪಾಂತರತಮಾ ನಾಮ ತತೋ ಜಾತೋಽಽಜ್ಞಯಾ ಹರೇಃ|
ಪುನಶ್ಚ ಜಾತೋ ವಿಖ್ಯಾತೋ ವಸಿಷ್ಠಕುಲನಂದನಃ॥54॥
ಆ ಮಹಾವಿಷ್ಣುವಿನ ಅನುಗ್ರಹದಿಂದ ಅಪಾಂತರತಮ ಎಂಬ ಹೆಸರಿನಿಂದ ಹುಟ್ಟಿದೆನು. ಭಗವಂತನ ಆದೇಶದಂತೆ ಪುನಃ ವಸಿಷ್ಠ ಕುಲದಲ್ಲಿ ಪರಾಶರರ ಮಗನಾಗಿ ಅವತರಿಸಿದೆನು.
ತದೇತತ್ ಕಥಿತಂ ಜನ್ಮ ಮಯಾ ಪೂರ್ವಕಮಾತ್ಮನಃ|
ನಾರಾಯಣಪ್ರಸಾದೇನ ತಥಾ ನಾರಾಯಣಾಂಶಜಮ್ ॥55॥
ಶಿಷ್ಯರೇ, ನಾರಾಯಣನ ಅನುಗ್ರಹದಿಂದ, ನಾರಾಯಣನ ಅಂಶದಿಂದ ಹೇಗೆ ಅವತರಿಸಿದೆ ಎಂಬುದನ್ನು ನಿಮಗೆ ಹೇಳಿದ್ದೇನೆ.
ಮಯಾ ಹಿ ಸುಮಹತ್ತಪ್ತಂ ತಪಃ ಪರಮದಾರುಣಮ್|
ಪುರಾ ಮತಿಮತಾಂ ಶ್ರೇಷ್ಠಾಃ ಪರಮೇಣ ಸಮಾಧಿನಾ ॥56॥
ಬುದ್ಧಿವಂತರಲ್ಲಿ ಶ್ರೇಷ್ಠರೇ, ನಾನು ಹಿಂದೆ ಶ್ರೇಷ್ಠವಾದ ಏಕಾಗ್ರತೆಯಿಂದ ಉಗ್ರವಾದ ತಪಸ್ಸನ್ನಾಚರಿಸಿದೆನು.
ಏತದ್ವಃ ಕಥಿತಂ ಸರ್ವಂ ಯನ್ಮಾಂ ಪೃಚ್ಛಥ ಪುತ್ರಕಾಃ|
ಪೂರ್ವಜನ್ಮ ಭವಿಷ್ಯಂ ಚ ಭಕ್ತಾನಾಂ ಸ್ನೇಹತೋ ಮಯಾ ॥57॥
ನೀವು ಕೇಳಿದ ಪ್ರಶ್ನೆಗನುಗುಣವಾಗಿ ಮಕ್ಕಳೇ, ನಾನು ಉತ್ತರಿಸಿದ್ದೇನೆ. ಗುರುಭಕ್ತರಾದ ನಿಮ್ಮ ಮೇಲಿನ ಪ್ರೀತಿಯಿಂದ ಜನ್ಮಾಂತರದ ಕಥೆಯನ್ನು, ಮುಂದೆ ಆಗುವುದನ್ನೂ ಹೇಳಿದ್ದೇನೆ.
ವೈಶಂಪಾಯನಃ
ಏಷ ತೇ ಕಥಿತಃ ಪೂರ್ವಂ ಸಂಭವೋಽಸ್ಮದ್ಗುರೋರ್ನೃಪ|
ವ್ಯಾಸಸ್ಯಾಕ್ಲಿಷ್ಟಮನಸೋ ಯಥಾ ಪೃಷ್ಟಃ ಪುನಃ ಶೃಣು ॥58॥
ವೈಶಂಪಾಯನ ಜನಮೇಜಯನೇ, ನೀನು ಪ್ರಶ್ನಿಸಿದಂತೆ ನನ್ನ ಗುರುವಾದ, ದುಃಖಿತವಲ್ಲದ ಮನಸ್ಸನ್ನು ಹೊಂದಿದ ವ್ಯಾಸರ ವೃತ್ತಾಂತವನ್ನು ಹೇಳಿದ್ದೇನೆ. ಅದಕ್ಕೆ ಸಂಬಂಧಿಸಿದ ಇನ್ನೂ ಕೆಲವು ವಿಷಯಗಳನ್ನು ಹೇಳುತ್ತೇನೆ, ಕೇಳು.
ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ|
ಜ್ಞಾನಾನ್ಯೇತಾನಿ ರಾಜರ್ಷೇ ವಿದ್ಧಿ ನಾನಾಮತಾನಿ ವೈ ॥59॥
ರಾಜರ್ಷಿಯೇ, ಸಾಂಖ್ಯ, ಯೋಗ, ಆರಣ್ಯಕ, ವೇದಗಳು, ಪಾಶುಪತ - ಈ ಎಲ್ಲ ಜ್ಞಾನಗಳು ಒಂದೇ ಲಕ್ಷ್ಯವನ್ನು ಕುರಿತು ಹೇಳಿದ ನಾನಾ ಪ್ರಕಾರವಾದ ಅಭಿಪ್ರಾಯಗಳೆಂದು ತಿಳಿ.
ವ್ಯಾಖ್ಯಾನ ವಿಶೇಷ ಇಲ್ಲಿ ಸಾಂಖ್ಯ ಎಂದರೆ ಷಡ್ದರ್ಶನದಲ್ಲಿ ಹೇಳಿದ ಸಾಂಖ್ಯಮತವು, ಯೋಗಮತವು ಎಂದು ಅಭಿಪ್ರಾಯ.
ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಃ ಸ ಉಚ್ಯತೇ|
ಹಿರಣ್ಯಗರ್ಭೋ ಯೋಗಸ್ಯ ವೇತ್ತಾ ನಾನ್ಯಃ ಪುರಾತನಃ ॥60॥
ಸಾಂಖ್ಯಶಾಸ್ತ್ರವನ್ನು ಹೇಳಿದವನು ಕಪಿಲನು. ಅವನನ್ನು ಪರಮರ್ಷಿ ಎನ್ನುತ್ತಾರೆ. ಪುರಾತನವಾದ ಹಿರಣ್ಯಗರ್ಭನೇ ಯೋಗವನ್ನು ಚೆನ್ನಾಗಿ ತಿಳಿದವನು. ಅವನನ್ನು ಬಿಟ್ಟು ಯೋಗಜ್ಞರಾದವರು ಬೇರೆ ಯಾರೂ ಇಲ್ಲ.

ಅಪಾಂತರತಮಾಶ್ಚೈವ ವೇದಾಚಾರ್ಯಃ ಸ ಉಚ್ಯತೇ |
ಪ್ರಾಚೀನಗರ್ಭಂ ತಮೃಷಿಂ ಪ್ರವದಂತೀಹ ಕೇಚನ ॥61॥
ಅಪಾಂತರತಮನನ್ನು ವೇದಾಚಾರ್ಯನೆಂದೇ ಹೇಳುತ್ತಾರೆ. ಕೆಲವರು ಆ ಋಷಿಯನ್ನು ಪ್ರಾಚೀನಗರ್ಭನೆಂದು ಹೇಳುತ್ತಾರೆ.
ಉಮಾಪತಿರ್ಭೂತಪತಿಃ ಶ್ರೀಕಂಠೋ ಬ್ರಹ್ಮಣಃ ಸುತಃ |
ಉಕ್ತವಾನಿದಮವ್ಯಗ್ರೋ ಜ್ಞಾನಂ ಪಾಶುಪತಂ ಶಿವಃ ॥62॥
ಬ್ರಹ್ಮನ ಮಗನಾದ, ಭೂತಪತಿಯಾದ, ಶ್ರೀಕಂಠನಾದ, ಉಮಾಪತಿಯಾದ ಶಿವನು ಏಕಾಗ್ರಮನಸ್ಸಿನಿಂದ ಪಾಶುಪತ ಶಾಸ್ತ್ರವನ್ನು ಉಪದೇಶಿಸಿದನು.
ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ |
ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ ವಿಶಿಷ್ಯತೇ ॥63॥
ಈ ಎಲ್ಲಾ ಜ್ಞಾನಗಳಲ್ಲಿ ಪಂಚರಾತ್ರಜ್ಞಾನವೇ ಶ್ರೇಷ್ಠವಾದುದು. ಕಾರಣ ಸಮಗ್ರ ಪಂಚರಾತ್ರವನ್ನು ಹೇಳಿದವನು ನಾರಾಯಣನೇ. ವ್ಯಾಖ್ಯಾನ ವಿಶೇಷ ಪಂಚರಾತ್ರಾಗಮ, ವೇದಾರಣ್ಯಕಗಳು ಒಂದೇ ಅಭಿಪ್ರಾಯ ಉಳ್ಳವುಗಳು. ಆದ್ದರಿಂದ ಪಂಚರಾತ್ರಾಗಮಕ್ಕೆ ಮಹತ್ವವನ್ನು ಹೇಳಿದುದರಿಂದ ವೇದಾರಣ್ಯಕಗಳಿಗೂ ವೈಶಿಷ್ಟ್ಯವನ್ನು ಹೇಳಿದಂತಾಯಿತು. ವೇದ, ಆರಣ್ಯಕ, ಪಂಚರಾತ್ರ ಇವುಗಳು ಏಕಾರ್ಥಗಳುಳ್ಳವಾದುದರಿಂದ ಪ್ರಾಮಾಣಿಕವಾದವುಗಳು. ಸಾಂಖ್ಯ, ಯೋಗ, ಪಾಶುಪತ - ಈ ಮೂರು ಶಾಸ್ತ್ರಗಳು ಪಂಚರಾತ್ರಕ್ಕೆ ವಿರುದ್ಧವಾದ ಅರ್ಥವನ್ನು ಬೋಧಿಸುವುದರಿಂದ ಅಪ್ರಮಾಣಿಕವಾದವುಗಳು ಎಂದೇ ಅಭಿಪ್ರಾಯ.
ಯಥಾಗಮಂ ಯಥಾಜ್ಞಾನಂ ನಿಷ್ಠಾ ನಾರಾಯಣಃ ಪ್ರಭುಃ |
ನ ಚೈನಮೇವಂ ಜಾನಂತಿ ತಮೋಭೂತಾ ವಿಶಾಂ ಪತೇ ॥64॥
ಎಲ್ಲ ಶಾಸ್ತ್ರಗಳಲ್ಲಿಯೂ, ವೇದಗಳಲ್ಲಿಯೂ, ಅನುಭವದಲ್ಲಿಯೂ ಪ್ರಭುವಾದ ನಾರಾಯಣನೊಬ್ಬನೇ ಸ್ಥಿರವಾದ ಜ್ಞಾನಿಯು. ಆದರೆ ಭಗವಂತನ ಸರ್ವೋತ್ತಮತ್ವ ಜ್ಞಾನವನ್ನು ಅಜ್ಞಾನಿಗಳಾದವರು ತಿಳಿದಿರುವುದಿಲ್ಲ.
ತಮೇವ ಶಾಸ್ತ್ರಕರ್ತಾರಂ ಪ್ರವದಂತಿ ಮನೀಷಿಣಃ |
ನಿಷ್ಠಾಂ ನಾರಾಯಣಮೃಷಿಂ ನಾನ್ಯೋಽಸ್ತೀತಿ ಚ ವಾದಿನಃ ॥65॥
ಶಾಸ್ತ್ರಕರ್ತೃಗಳಾದ ಜ್ಞಾನಿಗಳು ನಾರಾಯಣಋಷಿಯೇ ಸಕಲ ಶಾಸ್ತ್ರಗಳಿಗೂ ಪರಮಲಕ್ಷ್ಯನೆಂದು ಹೇಳುತ್ತಾರೆ. ಅವನಲ್ಲದೆ ಬೇರೆ ಯಾರೂ ಅಲ್ಲವೆಂಬುದೇ ನನ್ನ ಅಭಿಪ್ರಾಯವು.
ನಿಃಸಂಶಯೇಷು ಸರ್ವೇಷು ನಿತ್ಯಂ ವಸತಿ ವೈ ಹರಿಃ |
ಸಸಂಶಯಾನ್ಹೇತುಬಲಾನ್ನಾಧ್ಯಾವಸತಿ ಮಾಧವಃ ॥66॥
ಜ್ಞಾನದಿಂದ ಯಾರಿಗೆ ಸಂಶಯವು ಪರಿಹಾರವಾಗುತ್ತದೋ ಅಂತಹವರ ಹೃದಯದಲ್ಲಿ ಶ್ರೀಹರಿಯು ನಿತ್ಯವೂ ವಾಸಿಸುತ್ತಾನೆ. ಕುತರ್ಕ ಪ್ರಭಾವದಿಂದ ಪರಮಾತ್ಮನ ಬಗ್ಗೆ ಸಂಶಯವನ್ನು ಹೊಂದಿದವರ ಹೃದಯದಲ್ಲಿ ಮಾಧವನು ಎಂದೂ ವಾಸಿಸುವುದಿಲ್ಲ.
ಪಂಚರಾತ್ರವಿದೋ ಯೇ ತು ಯಥಾಕ್ರಮಪರಾ ನೃಪ |
ಏಕಾಂತಭಾವೋಪಗತಾ ವಾಸುದೇವಂ ವಿಶಂತಿ ತೇ ॥67॥
ರಾಜನೇ, ಯಾರು ಪಂಚರಾತ್ರಾಗಮವನ್ನು ಚೆನ್ನಾಗಿ ತಿಳಿದಿರುತ್ತಾರೋ, ಅದರಲ್ಲಿ ಹೇಳಿದಂತೆ ಕ್ರಮವಾಗಿ ಭಗವಂತನನ್ನು ಆರಾಧಿಸುತ್ತಾರೋ, ಅನನ್ಯವಾದ ಭಕ್ತಿಯನ್ನು ಮಾಡುತ್ತಾರೋ ಅವರು ವಾಸುದೇವನನ್ನು ಹೊಂದುತ್ತಾರೆ.
ಸಾಂಖ್ಯಂ ಚ ಯೋಗಂ ಚ ಸನಾತನೇ ದ್ವೇ
ವೇದಾಶ್ಚ ಸರ್ವೇ ನಿಖಿಲೇನ ರಾಜನ್ |
ಸರ್ವೈಃ ಸಮಸ್ತೈರ್ಋಷಿಭಿರ್ನಿರುಕ್ತೋ
ನಾರಾಯಣೋ ವಿಶ್ವಮಿದಂ ಪುರಾಣಮ್ ॥68॥
ಸಮಸ್ತ ಋಷಿಗಳಿಂದ ಸಾಂಖ್ಯ, ಯೋಗ, ವೇದ, ಪಂಚರಾತ್ರಾದಿ ಸಚ್ಛಾಸ್ತ್ರಗಳಿಂದ ನಾರಾಯಣನೇ ಹೇಳಲ್ಪಟ್ಟಿದ್ದಾನೆ. ಅನಾದಿಕಾಲೀನವಾದ ವಿಶ್ವವು ನಾರಾಯಣನಿಂದ ನಿಯಮ್ಯವಾಗಿದೆ ಎಂದು ಋಷಿಗಳು ಹೇಳುತ್ತಾರೆ.
ಶುಭಾಶುಭಂ ಕರ್ಮ ಸಮೀರಿತಂ ಯತ್
ಪ್ರವರ್ತತೇ ಸರ್ವಲೋಕೇಷು ಕಿಂಚಿತ್ |
ತಸ್ಮಾದೃಷೇಸ್ತದ್ಭವತೀತಿ ವಿದ್ಯಾದ್
ದಿವ್ಯಂತರಿಕ್ಷೇ ಭುವಿ ಚಾಪ್ಸು ಚಾಪಿ ॥69॥
ಸ್ವರ್ಗ, ಅಂತರಿಕ್ಷ, ಭೂಮಿ, ನೀರು, ಸಮಸ್ತ ಸ್ಥಳಗಳಲ್ಲಿಯೂ, ಎಲ್ಲ ಲೋಕಗಳಲ್ಲಿಯೂ, ಶುಭಾಶುಭ ಕರ್ಮಗಳಲ್ಲಿಯೂ ನಾರಾಯಣನೇ ಸನ್ನಿಹಿತನಾಗಿ ವ್ಯಾಪಾರ ಮಾಡುತ್ತಾನೆ ಎಂದು ತಿಳಿಯಬೇಕು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ವ್ಯಾಸಪ್ರಾದುರ್ಭಾವೋ ನಾಮ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ಮೂರನೆಯ ಅಧ್ಯಾಯ
ಬ್ರಹ್ಮನಿಂದ ನಾರಾಯಣನ ಮಹಿಮೆಯ ಕಥನ.
ಜನಮೇಜಯಃ
ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು |

ಕೋ ಹ್ಯತ್ರ ಪುರುಷಃ ಶ್ರೇಷ್ಠಃ ಕೋ ವಾ ಯೋನಿರಿಹೋಚ್ಯತೇ ॥1॥
ಜನಮೇಜಯ ಪುರುಷರು ಅನೇಕರೋ ಅಥವಾ ಒಬ್ಬನೇ ಇರುವನೋ? ಅನೇಕರು ಇರುವುದಾದರೆ ಎಲ್ಲರಿಗಿಂತ ಶ್ರೇಷ್ಠನಾದ ಪುರುಷನಾದವನು ಯಾರು? ಎಲ್ಲರಿಗೂ ಕಾರಣನಾದವನು ಯಾರೆಂದು ಹೇಳುತ್ತಾರೆ?
ವೈಶಂಪಾಯನಃ
ಬಹವಃ ಪುರುಷಾ ಲೋಕೇ ಸಾಂಖ್ಯಯೋಗವಿಚಾರಿಣಾಮ್ |
ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ ॥2॥
ವೈಶಂಪಾಯನ ಕುರುಕುಲಶ್ರೇಷ್ಠನೇ, ಸಾಂಖ್ಯಯೋಗಗಳ ಚಿಂತಕರಲ್ಲಿ ಈ ಜಗತ್ತಿನಲ್ಲಿ ಪುರುಷರು ಅನೇಕರಿದ್ದಾರೆ. ಅವರು ಏಕಪುರುಷ ವಾದವನ್ನು ಹೇಳಲು ಇಚ್ಛಿಸುವುದಿಲ್ಲ.
ಬಹೂನಾಂ ಪುರುಷಾಣಾಂ ಚ ಯಥೈಕಾ ಯೋನಿರುಚ್ಯತೇ |
ತಥಾ ತಂ ಪುರುಷಂ ವಿಶ್ವಂ ವ್ಯಾಖ್ಯಾಸ್ಯಾಮಿ ಗುಣಾಧಿಕಮ್ ॥3॥
ನಮಸ್ಕೃತ್ವಾ ತು ಗುರವೇ ವ್ಯಾಸಾಯಾಮಿತತೇಜಸೇ |
ತಪೋಯುಕ್ತಾಯ ದಾಂತಾಯ ವಂದ್ಯಾಯ ಪರಮರ್ಷಯೇ ॥4॥
ಪರಮಗುರುಗಳಾದ, ಆತ್ಮಜ್ಞಾನಿಗಳಾದ, ತಪಸ್ವಿಗಳಾದ, ಜಿತೇಂದ್ರಿಯರಾದ, ಸರ್ವವಂದ್ಯರಾದ, ಅಮಿತತೇಜಸ್ವಿಗಳಾದ ವ್ಯಾಸರಿಗೆ ನಮಸ್ಕರಿಸಿ ಅನೇಕ ಪುರುಷರಿಗೂ ಯಾವ ಒಬ್ಬ ಪುರುಷನೇ ಕಾರಣನಾಗಿದ್ದಾನೋ ಅಂಥ ಗುಣಾಧಿಕನಾದ, ವಿಶ್ವಾತ್ಮನಾದ ಪುರುಷೋತ್ತಮನನ್ನು ವರ್ಣಿಸುತ್ತೇನೆ ಕೇಳು.
ಇದಂ ಪುರುಷಸೂಕ್ತಂ ಹಿ ಸರ್ವವೇದೇಷು ಪಾರ್ಥಿವ |
ಋತಂ ಸತ್ಯಂ ಚ ವಿಖ್ಯಾತಮೃಷಿಸಿಂಹೇನ ಚಿಂತಿತಮ್ ॥5॥
ಋಷಿಸಿಂಹನಾದ ನಾರಾಯಣನಿಂದ ದೃಷ್ಟವಾದ, ಋತವೂ, ಸತ್ಯವೂ ಎನಿಸಿದ ಪುರುಷಸೂಕ್ತವು ವೇದಗಳಲ್ಲಿ ಕಂಡುಬರುತ್ತದೆ.
ಉತ್ಸರ್ಗೇಣಾಪವಾದೇನ ಋಷಿಭಿಃ ಕಪಿಲಾದಿಭಿಃ |
ಅಧ್ಯಾತ್ಮಚಿಂತಾಮಾಶ್ರಿತ್ಯ ಶಾಸ್ತ್ರಾಣ್ಯುಕ್ತಾನಿ ಭಾರತ ॥6॥
ಕಪಿಲಾದಿ ಋಷಿಗಳಿಂದ ಸಾಮಾನ್ಯ-ವಿಶೇಷ ಎಂಬ ಶಾಸ್ತ್ರಗಳ ಹಿನ್ನೆಲೆಯಲ್ಲಿ ಅಧ್ಯಾತ್ಮ ಚಿಂತನೆಯನ್ನು ಮಾಡಿ ಅನೇಕ ಶಾಸ್ತ್ರಗಳನ್ನು ಬೋಧಿಸಿರುತ್ತಾರೆ.
ಸಮಾಸತಸ್ತು ಯದ್ವ್ಯಾಸಃ ಪುರುಷೈಕತ್ವಮುಕ್ತವಾನ್ |
ತತ್ತೇಽಹಂ ಸಂಪ್ರವಕ್ಷ್ಯಾಮಿ ಪ್ರಸಾದಾದಮಿತೌಜಸಃ ॥7॥
ಸಂಕ್ಷಿಪ್ತವಾಗಿ ಪುರುಷನಾಮಕನಾದ ಭಗವಂತನ ಏಕತ್ವವನ್ನು ಹೇಗೆ ಹೇಳಿದ್ದಾರೋ ಅದನ್ನೇ ನಾನು ನಿನಗೆ ಮಹಾತೇಜಸ್ವಿಗಳ ಅನುಗ್ರಹದಿಂದ ಹೇಳುತ್ತೇನೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬ್ರಹ್ಮಣಾ ಸಹ ಸಂವಾದಂ ತ್ರ್ಯಂಬಕಸ್ಯ ವಿಶಾಂಪತೇ ॥8॥
ಈ ವಿಷಯದಲ್ಲಿ ಹಿಂದೆ ಬ್ರಹ್ಮ-ರುದ್ರರಿಗೆ ನಡೆದ ಇತಿಹಾಸರೂಪವಾದ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಕ್ಷೀರೋದಸ್ಯ ಸಮುದ್ರಸ್ಯ ಮಧ್ಯೇ ಹಾಟಕಸಪ್ರಭಃ |
ವೈಜಯಂತ ಇತಿ ಖ್ಯಾತಃ ಪರ್ವತಪ್ರವರೋ ನೃಪ ॥9॥
ಕ್ಷೀರಸಮುದ್ರದ ನಡುಭಾಗದಲ್ಲಿ ಬಂಗಾರದ ಬಣ್ಣಕ್ಕೆ ಸಮಾನವಾದ ಪ್ರಭೆಯಿಂದ ಕೂಡಿರುವ ವೈಜಯಂತ ಎಂಬ ಹೆಸರಿನಿಂದ ಪ್ರಸಿದ್ಧವಾದ ಶ್ರೇಷ್ಠ ಪರ್ವತವಿದೆ.
ತತ್ರಾಧ್ಯಾತ್ಮಗತಿಂ ದೇವ ಏಕಾಕೀ ಪ್ರವಿಚಿಂತಯನ್ |
ವೈರಾಜಸದನೇ ನಿತ್ಯಂ ವೈಜಯಂತಂ ನಿಷೇವತೇ ॥10॥
ಅಧ್ಯಾತ್ಮ ಮಾರ್ಗವನ್ನು ಚೆನ್ನಾಗಿ ಚಿಂತಿಸುತ್ತಾ, ಏಕಾಕಿಯಾಗಿ ಬ್ರಹ್ಮನು ಪ್ರತಿದಿನವೂ ತನ್ನ ಲೋಕದಿಂದ ಈ ವೈಜಯಂತ ಪರ್ವತಕ್ಕೆ ಆಗಮಿಸಿ ಅದನ್ನು ಸೇವಿಸುತ್ತಿದ್ದಾನೆ.
ಅಥ ತತ್ರಾಸತಸ್ತಸ್ಯ ಚತುರ್ವಕ್ತ್ರಸ್ಯ ಧೀಮತಃ |
ಲಲಾಟಪ್ರಭವಃ ಪುತ್ರಃ ಶಿವ ಆಗಾದ್ಯದೃಚ್ಛಯಾ |
ಆಕಾಶೇನೈವ ಯೋಗೀಶಃ ಪುರಾ ತ್ರಿನಯನಃ ಪ್ರಭುಃ ॥11॥
ಒಮ್ಮೆ ಜ್ಞಾನಿಯಾದ ಬ್ರಹ್ಮನು ವೈಜಯಂತ ಪರ್ವತದಲ್ಲಿ ವಾಸ ಮಾಡುವ ಸಂದರ್ಭದಲ್ಲಿ ಅವನ ಲಲಾಟದಿಂದ ಹುಟ್ಟಿದ ಮಹಾಯೋಗಿಯಾದ ಮೂರು ಕಣ್ಣಿನ ಪರಶಿವನು ಯದೃಚ್ಛೆಯಿಂದ ಆಕಾಶ ಮಾರ್ಗದಲ್ಲಿ ಆಗಮಿಸಿದನು.
ತತಃ ಖಾನ್ನಿಪಪಾತಾಶು ಧರಣೀಧರಮೂರ್ಧನಿ |
ಅಗ್ರತಶ್ಚಾಭವತ್ ಪ್ರೀತೋ ವವಂದೇ ಚಾಪಿ ಪಾದಯೋಃ ॥12॥
ಅವನು ವೈಜಯಂತ ಪರ್ವತದಲ್ಲಿ ಕುಳಿತಿರುವ ಬ್ರಹ್ಮನನ್ನು ಕಂಡು ಕೂಡಲೇ ಆಕಾಶದಿಂದ ಪರ್ವತಶಿಖರದಲ್ಲಿಳಿದು, ಬ್ರಹ್ಮನ ಪಾದಗಳಿಗೆ ಪ್ರೀತನಾಗಿ ನಮಸ್ಕರಿಸಿದನು.
ತಂ ಪಾದಯೋರ್ನಿಪತಿತಂ ದೃಷ್ಟ್ವಾ ಸವ್ಯೇನ ಪಾಣಿನಾ |
ಉತ್ಥಾಪಯಾಮಾಸ ತದಾ ಪ್ರಭುರೇಕಃ ಪ್ರಜಾಪತಿಃ ॥13॥
ಉವಾಚ ಚೈನಂ ಭಗವಾಂಶ್ಚಿರಸ್ಯಾಗತಮಾತ್ಮಜಮ್ |
ಸ್ವಾಗತಂ ತೇ ಮಹಾಬಾಹೋ ದಿಷ್ಟ್ಯಾ ಪ್ರಾಪ್ತೋಽಸಿ ಮೇಽಂತಿಕಮ್ ॥

ನತಮಸ್ತಕನಾದ ಮಹರುದ್ರನನ್ನು ಚತುರ್ಮುಖ ಬ್ರಹ್ಮನು ಎಡಗೈಯಿಂದ ಹಿಡಿದು ಎಬ್ಬಿಸಿದನು. ಒಬ್ಬನೇ ಪ್ರಭುವೆನಿಸಿದ ಪ್ರಜಾಪತಿಯು ಶಂಕರನನ್ನು ಕುರಿತು ಹೀಗೆ ಹೇಳಿದನು: ಮಹಾಬಾಹುವೇ, ಶಂಕರನೇ, ನಿನ್ನನ್ನು ಪ್ರೀತಿಯಿಂದ ಸ್ವಾಗತಿಸುತ್ತೇನೆ. ನನ್ನ ಅದೃಷ್ಟದಿಂದ ನನ್ನ ಬಳಿಗೆ ನೀನು ಆಗಮಿಸಿರುವೆ.

ಕಚ್ಚಿತ್ತೇ ಕುಶಲಂ ಪುತ್ರ ಸ್ವಾಧ್ಯಾಯತಪಸೋಃ ಸದಾ |
ನಿತ್ಯಮುಗ್ರತಪಾಸ್ತ್ವಂ ಹಿ ತತಃ ಪೃಚ್ಛಾಮಿ ತೇ ಪುನಃ ॥15॥

ಮಗನೇ ನೀನು ಕ್ಷೇಮದಿಂದಿರುವೆಯಾ? ನಿನ್ನ ಸ್ವಾಧ್ಯಾಯ, ತಪಸ್ಸುಗಳು ಯಾವಾಗಲೂ ನಡೆಯುತ್ತಿವೆಯಾ? ನೀನು ನಿತ್ಯ ಉಗ್ರತಪೋನಿರತನಾದುದರಿಂದ ಪುನಃ ಆ ತಪಸ್ಸಿನ ಕುರಿತೇ ಪ್ರಶ್ನಿಸುತ್ತೇನೆ.

ರುದ್ರಃ

ತ್ವತ್ಪ್ರಸಾದೇನ ಭಗವನ್ ಸ್ವಾಧ್ಯಾಯತಪಸೋರ್ಮಮ |
ಕುಶಲಂ ಚಾವ್ಯಯಂ ಚೈವ ಸರ್ವಸ್ಯ ಜಗತಸ್ತಥಾ ॥16॥

ರುದ್ರ ಪೂಜ್ಯನೇ, ನಿನ್ನ ಅನುಗ್ರಹದಿಂದ ನನ್ನ ಸ್ವಾಧ್ಯಾಯ, ತಪಸ್ಸುಗಳು ನಿರಾತಂಕವಾಗಿ ನಡೆಯುತ್ತಿವೆ. ಕ್ಷೇಮದಿಂದ ಇದ್ದೇನೆ. ಸಮಸ್ತ ಜಗತ್ತೂ ಕ್ಷೇಮದಿಂದ ಕೂಡಿದೆ.

ಚಿರದೃಷ್ಟೋ ಹಿ ಭಗವಾನ್ವೈರಾಜಸದನೇ ಮಯಾ |
ತತೋಽಹಂ ಪರ್ವತಂ ಪ್ರಾಪ್ತಸ್ತ್ವಮಂ ತ್ವತ್ಪಾದಸೇವಿತಮ್ ॥17॥

ಬಹಳ ದಿವಸಗಳ ಹಿಂದೆ ಬ್ರಹ್ಮಲೋಕದಲ್ಲಿ ನಿನ್ನನ್ನು ನಾನು ಕಂಡಿದ್ದೆನು. ನಿನ್ನ ಚರಣಗಳಿಂದ ಸೇವಿತವಾದ ಈ ಪರ್ವತಕ್ಕೆ ನಿನ್ನನ್ನು ಪುನಃ ನೋಡಬೇಕೆಂದು ನಾನು ಬಂದಿದ್ದೇನೆ.

ಕೌತೂಹಲಂ ಚಾಪಿ ಹಿ ಮೇ ಏಕಾಂತಗಮನೇನ ತೇ |
ನೈತತ್ ಕಾರಣಮಲ್ಪಂ ಹಿ ಭವಿಷ್ಯತಿ ಪಿತಾಮಹ ॥18॥

ನೀನು ಏಕಾಂತದಲ್ಲಿರುವುದನ್ನು ಕಂಡು ಕುತೂಹಲವುಂಟಾಗಿದೆ. ತಂದೆಯೇ, ನೀನು ಏಕಾಂತದಲ್ಲಿರುವ ಕಾರಣ ಅಲ್ಪವಾದ ಕಾರಣವಾಗಿರುವುದಿಲ್ಲ ಎನಿಸುತ್ತಿದೆ.

ಕಿಂ ನು ತತ್ ಸದನಂ ಶ್ರೇಷ್ಠಂ ಕ್ಷುತ್ಪಿಪಾಸಾವಿವರ್ಜಿತಮ್ |
ಸುರಾಸುರೈರಧ್ಯುಷಿತಮೃಷಿಭಿಶ್ಚಾಮಿತಪ್ರಭೈಃ ॥19॥
ಗಂಧರ್ವೈರಪ್ಸರೋಭಿಶ್ಚ ಸತತಂ ಸನ್ನಿಷೇವಿತಮ್ |
ಉತ್ಸೃಜ್ಯೇಮಂ ಗಿರಿವರಂ ಕಿನ್ನುತ್ಯಂ ಪ್ರಾಪ್ತವಾನಸಿ ॥20॥

ನೀನು ಹಸಿವೆ-ನೀರಡಿಕೆಗಳಿಂದ ದೂರವಾದ, ಸುರ-ಅಸುರರಿಂದ ಸೇವಿತವಾದ, ಅಮಿತ ಪ್ರಭೆಯುಳ್ಳ ಋಷಿಗಳಿಂದ, ಗಂಧರ್ವಾಪ್ಸರೆಯರಿಂದ ನಿರಂತರ ಸೇವಿಸಲ್ಪಡುವ, ಶ್ರೇಷ್ಠವಾದ ಸತ್ಯಲೋಕವನ್ನು ತೊರೆದು ವೈಜಯಂತಗಿರಿಗೆ ಆಗಮಿಸಲು ಏನು ಕಾರಣವು? ಯಾವ ಕಾರಣದಿಂದ ಇಲ್ಲಿಗೆ ಆಗಮಿಸಿರುತ್ತಿ?

ಬ್ರಹ್ಮಾ

ವೈಜಯಂತೋ ಗಿರಿವರಃ ಸತತಂ ಸೇವ್ಯತೇ ಮಯಾ |
ಅತ್ರೈಕಾಗ್ರೇಣ ಮನಸಾ ಪುರುಷಶ್ಚಿಂತ್ಯತೇ ವಿರಾಟ್ ॥21॥

ಬ್ರಹ್ಮಾ ಮಗನೇ, ವೈಜಯಂತ ಪರ್ವತವನ್ನು ನಾನು ಯಾವಾಗಲೂ ಸೇವಿಸುತ್ತಲೇ ಇದ್ದೇನೆ. ಇಲ್ಲಿ ನಾನು ಏಕಾಕಿಯಾಗಿದ್ದು ಏಕಾಂತವಾದ ಮನಸ್ಸಿನಿಂದ ವಿರಾಟ್ ಪುರುಷನಾಮಕನಾದ ಭಗವಂತನನ್ನು ಧ್ಯಾನಿಸುತ್ತಿರುತ್ತೇನೆ.

ರುದ್ರಃ

ಬಹವಃ ಪುರುಷಾ ಬ್ರಹ್ಮಂಸ್ತ್ವಯಾ ಸೃಷ್ಟಾಃ ಸ್ವಯಂಭುವಾ |
ಸೃಜ್ಯಂತೇ ಚಾಪರೇ ಬ್ರಹ್ಮನ್ ಸ ಚೈಕಃ ಪುರುಷೋ ವಿರಾಟ್ ॥22॥

ರುದ್ರ ಬ್ರಹ್ಮದೇವನೇ, ನೀನು ಅನೇಕ ಪುರುಷರನ್ನು ಸೃಷ್ಟಿ ಮಾಡಿರುವೆ. ಇನ್ನೂ ಸೃಷ್ಟಿ ಮಾಡಲಿರುವೆ. ಆ ವಿರಾಟ್ ಪುರುಷನು ನೀನು ಸೃಷ್ಟಿಸಿರುವ ಪುರುಷರಲ್ಲಿ ಒಬ್ಬನಾಗಿದ್ದಾನೆ.

ಕೋ ಹ್ಯಸೌ ಚಿಂತ್ಯತೇ ಬ್ರಹ್ಮಂಸ್ತ್ವಯಾ ವೈ ಪುರುಷೋತ್ತಮಃ |
ಏತನ್ಮೇ ಸಂಶಯಂ ಬ್ರೂಹಿ ಮಹತ್ ಕೌತೂಹಲಂ ಹಿ ಮೇ ॥23॥

ಹೀಗಿರಲು ಅಂತಹ ಪುರುಷೋತ್ತಮನನ್ನು ಚಿಂತಿಸಲು ಏನು ಕಾರಣವು? ಅವನ ವೈಶಿಷ್ಟ್ಯವೇನು? ನಿನಗಿಂತಲೂ ಶ್ರೇಷ್ಠನಾದ ಅವನು ಯಾರು? ಈ ವಿಷಯದಲ್ಲಿ ನನಗೆ ಮಹತ್ತಾದ ಕುತೂಹಲವಿದೆ. ನನ್ನ ಸಂಶಯವನ್ನು ಪರಿಹರಿಸು.

ಬ್ರಹ್ಮಾ

ಬಹವಃ ಪುರುಷಾಃ ಪುತ್ರ ಯೇ ತ್ವಯಾ ಸಮುದಾಹೃತಾಃ |
ಏವಮೇತದತಿಕ್ರಾಂತಂ ದ್ರಷ್ಟವ್ಯಂ ನೈವಮಿತ್ಯಪಿ |
ಆಧಾರಂ ತು ಪ್ರವಕ್ಷ್ಯಾಮಿ ಏತಸ್ಯ ಪುರುಷಸ್ಯ ತೇ ॥24॥

ಬ್ರಹ್ಮಾ ಮಗನೇ, ನಾನು ಸೃಷ್ಟಿಸಿರುವ ಅನೇಕ ಪುರುಷರ ವಿಷಯವಾಗಿ ನೀನು ಹೇಳಿರುವೆ. ಆದರೆ ನಿನ್ನ ಈ ಮಾತು ಅತ್ಯಂತ ಕಠಿಣವಾದ ಮಾತಾಗಿರುತ್ತದೆ. ನನ್ನಿಂದ ಸೃಷ್ಟಿ ಆಗದೆ ಇರುವ, ನನ್ನನ್ನೂ ಮೀರಿ ನಿಂತಿರುವ ಪರದೈವವನ್ನು ನೀನು ಚಿಂತಿಸಬೇಕು. ಅದನ್ನು ನಿರಾಕರಿಸುವುದು ಸರಿಯಾದುದಲ್ಲ. ಅನೇಕ ಪುರುಷರಲ್ಲಿ ನನಗೂ ಆಧಾರನಾದ ಪರಮಪುರುಷನನ್ನು ಹೇಳುತ್ತೇನೆ, ಕೇಳು.

ಬಹೂನಾಂ ಪುರುಷಾಣಾಂ ಸ ಯಥೈಕಾ ಯೋನಿರುಚ್ಯತೇ |
ತಥಾ ತಂ ಪುರುಷಂ ವಿಶ್ವಂ ಪರಮಂ ಸುಮಹತ್ತಮಮ್ |

ನಿರ್ಗುಣಂ ನಿರ್ಗುಣಾ ಭೂತ್ವಾ ಪ್ರವಿಶಂತಿ ಸನಾತನಮ್ ॥25॥
ಅನೇಕ ಪುರುಷರಿಗೆ ಮುಖ್ಯಕಾರಣನಾದವನು ಆ ಪರಬ್ರಹ್ಮನೇ ಆಗಿರುತ್ತಾನೆ. ಆ ರೀತಿಯಾಗಿ ಅತ್ಯಂತ ಶ್ರೇಷ್ಠನೆನಿಸಿದ ವಿಶ್ವನಾಮಕನಾದ ಪುರುಷನನ್ನು ನೀನು ಚಿಂತಿಸಬೇಕು. ಪ್ರಾಕೃತ ಗುಣರಹಿತನಾದ, ಸನಾತನನಾದ ಭಗವಂತನನ್ನು ಚಿಂತಿಸುತ್ತಾ ಇರುವ ಸಾಧಕರು ಪ್ರಾಕೃತ ಗುಣಗಳನ್ನು ಕಳೆದುಕೊಂಡು ಅವನನ್ನೇ ಹೊಂದುತ್ತಾರೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ನಾಲ್ಕನೆಯ ಅಧ್ಯಾಯ
ನಾರಾಯಣನ ಮಹಿಮೆಯ ವರ್ಣನೆ
ಬ್ರಹ್ಮಾ
ಶೃಣು ಪುತ್ರ ಯಥಾ ಹ್ಯೇಷ ಪುರುಷಃ ಶಾಶ್ವತೋಽವ್ಯಯಃ ।
ಅಕ್ಷಯಶ್ಚಾಪ್ರಮೇಯಶ್ಚ ಸರ್ವಗಶ್ಚ ನಿರುಚ್ಯತೇ ॥1॥
ಬ್ರಹ್ಮಾ ವಿರಾಟ್ ಪುರುಷನು ಹೇಗೆ ಶಾಶ್ವತನೂ, ಅವ್ಯಯನೂ, ಅಕ್ಷಯನೂ, ಅಪ್ರಮೇಯನೂ, ಸರ್ವಾಂತರ್ಯಾಮಿಯೂ ಎನ್ನುವುದನ್ನು ಹೇಳುತ್ತೇನೆ, ಕೇಳು.
ನ ಸ ಶಕ್ಯಸ್ತ್ವಯಾ ದ್ರಷ್ಟುಂ ಮಯಾನ್ಯೈರ್ವಾಪಿ ಸತ್ತಮ ।
ಸಗುಣೋ ನಿರ್ಗುಣೋ ವಿಶ್ವೋ ಜ್ಞಾನದೃಶ್ಯೋ ಹ್ಯಸೌ ಸ್ಮೃತಃ ॥2॥
ಪ್ರಾಕೃತಗುಣರಹಿತನಾದ, ಗುಣಪರಿಪೂರ್ಣನಾದ, ವಿಶ್ವನೆನಿಸಿದ, ಜ್ಞಾನದಿಂದಲೇ ಗಮ್ಯನಾದ, ಸರ್ವೋತ್ತಮನಾದ ಭಗವಂತನು ನಿನ್ನಿಂದಲೂ ನೋಡಲು ಸಾಧ್ಯವಿಲ್ಲ. ನನ್ನಿಂದಲೂ ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಬೇರೆ ಯಾರಿಂದಲೂ ಅವನನ್ನು ಪೂರ್ಣವಾಗಿ ನೋಡಲು ಸಾಧ್ಯವಿಲ್ಲ.
ಅಶರೀರಃ ಶರೀರೇಷು ಸರ್ವೇಷು ನಿವಸತ್ಯಸೌ ।
ವಸನ್ನಪಿ ಶರೀರೇಷು ನ ಸ ಲಿಪ್ಯತಿ ಕರ್ಮಭಿಃ ॥3॥
ಶರೀರವನ್ನು ಹೊಂದಿರುವ ಸಮಸ್ತ ಪ್ರಾಣಿ ಪ್ರಪಂಚದಲ್ಲಿ ಪ್ರಾಕೃತಶರೀರ ರಹಿತನಾದ, ಚಿನ್ಮಯನಾದ ಭಗವಂತನು ಅಂತರ್ಯಾಮಿಯಾಗಿ ವಾಸಿಸುತ್ತಿದ್ದಾನೆ. ನಮ್ಮ ಶರೀರಗಳಲ್ಲಿ ಅಂತರ್ಯಾಮಿಯಾಗಿ ವಾಸಿಸುತ್ತಿದ್ದರೂ ಈ ಜೀವರಿಗೆ ಸಂಬಂಧಿಸಿದ ಕರ್ಮಲೇಪಗಳು ಅವನಿಗಿರುವುದಿಲ್ಲ.
ಮಮಾಂತರಾತ್ಮಾ ತವ ಚ ಯೇ ಚಾನ್ಯೇ ದೇಹಸಂಜ್ಞಿತಾಃ ।
ಸರ್ವೇಷಾಂ ಸಾಕ್ಷಿಭೂತೋಽಸೌ ನ ಗ್ರಾಹ್ಯಃ ಕೇನಚಿತ್ ಕ್ವಚಿತ್ ॥4॥
ದೇಹವನ್ನು ಹೊಂದಿರುವ ಯಾವ ಯಾವ ಜೀವರಿದ್ದಾರೋ ಅವರೆಲ್ಲರಲ್ಲಿಯೂ ಇವನೇ ಅಂತರ್ಯಾಮಿಯು. ನನಗೂ ಅಂತರ್ಯಾಮಿಯಾದವನು, ನಿನಗೂ ಅಂತರ್ಯಾಮಿಯಾದವನು ಪುರುಷೋತ್ತಮನೇ ಆಗಿದ್ದಾನೆ. ಎಲ್ಲರಿಗೂ ಸಾಕ್ಷಿಭೂತನಾದ ಶ್ರೀಹರಿಯು ಯಾರಿಂದಲೂ ಎಲ್ಲಿಯೂ ಪೂರ್ಣವಾಗಿ ಗ್ರಾಹ್ಯವೆನಿಸುವುದಿಲ್ಲ.
ವಿಶ್ವಮೂರ್ಧಾ ವಿಶ್ವಭುಜೋ ವಿಶ್ವಪಾದಾಕ್ಷಿನಾಸಿಕಃ ।
ಏಕಶ್ಚರತಿ ಕ್ಷೇತ್ರೇಷು ಸ್ವೈರಚಾರೀ ಯಥಾಸುಖಮ್ ॥5॥
ವ್ಯಾಪಿಸಿದ ಶಿರಸ್ಸುಳ್ಳವನು, ವ್ಯಾಪಿಸಿದ ಭುಜಗಳುಳ್ಳವನು, ವ್ಯಾಪಿಸಿರುವ ಪಾದ, ಕಣ್ಣು, ಮೂಗುಳ್ಳವನು. ಒಬ್ಬನೇ ಸಮಸ್ತ ಜೀವರ ದೇಹದಲ್ಲಿ ಸ್ವತಂತ್ರನಾಗಿ ಸುಖದಿಂದಲೇ ಸಂಚರಿಸುವವನು.
ಕ್ಷೇತ್ರಾಣಿ ಹಿ ಶರೀರಾಣಿ ಬೀಜಾನಿ ಚ ಶುಭಾಶುಭೇ ।
ತಾನಿ ವೇತ್ತಿ ಸ ಯೋಗಾತ್ಮಾ ತತಃ ಕ್ಷೇತ್ರಜ್ಞ ಉಚ್ಯತೇ ॥6॥
ಸಮಸ್ತ ಜೀವರ ಶರೀರಗಳನ್ನು, ಜೀವರ ಸ್ವರೂಪಗಳನ್ನು, ಅವರಿಗೆ ಸಂಬಂಧಿಸಿದ ಪುಣ್ಯ-ಪಾಪಗಳ ಕಾರಣಗಳನ್ನು ಯೋಗಾತ್ಮನಾದ ಭಗವಂತನು ತಿಳಿದಿರುವುದರಿಂದಲೇ ಅವನನ್ನು ಕ್ಷೇತ್ರಜ್ಞ ಎನ್ನುತ್ತಾರೆ.
ನಾಗತಿರ್ನ ಗತಿಸ್ತಸ್ಯ ಜ್ಞೇಯಾ ಭೂತೇನ ಕೇನಚಿತ್ ।
ಸಾಂಖ್ಯೇನ ವಿಧಿನಾ ಚೈವ ಯೋಗೇನ ಚ ಯಥಾಕ್ರಮಮ್ ॥7॥
ಚಿಂತಯಾಮಿ ಗತಿಂ ಚಾಸ್ಯ ನ ಗತಿಂ ವೇದ್ಮಿ ಚೋತ್ತಮಾಮ್ ।
ಯಥಾಜ್ಞಾನಂ ತು ವಕ್ಷ್ಯಾಮಿ ಪುರುಷಂ ತಂ ಸನಾತನಮ್ ॥8॥
ಅವನ ಆಗಮವನ್ನಾಗಲಿ, ಅವನ ಗಮನವನ್ನಾಗಲಿ ಯಾವ ಪ್ರಾಣಿಗಳಿಂದಲೂ ತಿಳಿಯಲಾಗದು. ಸಾಂಖ್ಯ, ಯೋಗ ವಿಧಿಗಳಿಂದ ಕ್ರಮವಾಗಿ ಚಿಂತಿಸುತ್ತಿದ್ದರೂ ಮತ್ತೂ ಅವನ ಗತಿಯನ್ನು ಆಲೋಚಿಸುತ್ತಿದ್ದೇನೆ ವಿನಾ ಅವನ ಶ್ರೇಷ್ಠವಾದ ಗತಿಯನ್ನು ಪೂರ್ಣವಾಗಿ ತಿಳಿಯಲಾಗುತ್ತಿಲ್ಲ. ಆದರೂ ಸನಾತನನಾದ ಆ ಪುರುಷನ ಬಗ್ಗೆ ನನಗಿರುವಷ್ಟು ಜ್ಞಾನವನ್ನು ಉಪದೇಶಿಸುತ್ತೇನೆ.
ತಸ್ಯೈಕತ್ವಂ ಮಹತ್ತ್ವಂ ಹಿ ಸ ಚೈಕಃ ಪುರುಷಃ ಸ್ಮೃತಃ ।
ಮಹಾಪುರುಷಶಬ್ದಂ ಸ ಬಿಭರ್ತ್ಯೇಕಃ ಸನಾತನಃ ॥9॥
ಮಹತ್ವದಿಂದಲೂ, ಏಕತ್ವದಿಂದಲೂ ಕೂಡಿರುವ ಸರ್ವೋತ್ತಮನು ಪುರುಷ ನಾಮಕನಾದ ಭಗವಂತನು. ಮಹಾಪುರುಷ ಎಂಬ ಶಬ್ದವನ್ನು ಸನಾತನನಾದ ಇವನೊಬ್ಬನೇ ಧರಿಸಿರುತ್ತಾನೆ.
ಏಕೋ ಹುತಾಶೋ ಬಹುಧಾ ಸಮಿಧ್ಯತೇ

ಏಕಃ ಸೂರ್ಯಸ್ತಪಸಾಂ ಯೋನಿರೇಕಾ |
ಏಕೋ ವಾಯುರ್ಬಹುಧಾ ವಾತಿ ಲೋಕೇ
ಮಹೋದಧಿಶ್ಚಾಂಭಸಾಂ ಯೋನಿರೇಕಃ |
ಪುರುಷಶ್ಚೈಕೋ ನಿರ್ಗುಣೋ ವಿಶ್ವರೂಪ-
ಸ್ತಂ ನಿರ್ಗುಣಂ ಪುರುಷಂ ಚಾವಿಶಂತಿ ॥10॥
ಒಂದೇ ಬೆಂಕಿ ಅನೇಕ ಪ್ರಕಾರಗಳಿಂದ ಜ್ವಲಿಸುವಂತೆ, ಒಬ್ಬನೇ ಸೂರ್ಯನು ಅನೇಕ ವಿಧವಾದ ಪ್ರಕಾಶಕ್ಕೆ ಕಾರಣನಾಗಿರುವಂತೆ, ಒಬ್ಬನೇ ವಾಯುವು ಅನೇಕ ಪ್ರಕಾರವಾಗಿ ಬೀಸುವಂತೆ, ಸಮುದ್ರವು ಹಲವು ರೂಪದಲ್ಲಿರುವ ಮೀನುಗಳಿಗೆ ಒಂದೇ ಕಾರಣವಾಗಿರುವಂತೆ ಪ್ರಾಕೃತಗುಣರಹಿತನಾದ ವಿಶ್ವರೂಪಿಯಾದ ಭಗವಂತನೊಬ್ಬನೇ ಈ ಜಗತ್ತಿಗೆ ಕಾರಣನಾಗಿದ್ದಾನೆ. ಈ ಪ್ರಾಕೃತಗುಣರಹಿತನಾದ ಪುರುಷನನ್ನೇ ಸಮಗ್ರ ಜಗತ್ತು ಸೇರುತ್ತದೆ.
ಹಿತ್ವಾ ಗುಣಮಯಂ ಸರ್ವಂ ಕರ್ಮ ಹಿತ್ವಾ ಶುಭಾಶುಭಮ್ |
ಉಭೇ ಸತ್ಯಾನೃತೇ ತ್ಯಕ್ತ್ವಾ ಏವಂ ಭವತಿ ನಿರ್ಗುಣಃ ॥11॥
ದೇಹೇಂದ್ರಿಯಾದಿ ಸಮಸ್ತ ಗುಣಮಯ ಪದಾರ್ಥಗಳಲ್ಲಿ ಮಮತೆಯನ್ನು ಬಿಟ್ಟು ಪುಣ್ಯ-ಪಾಪಗಳನ್ನು ತ್ಯಜಿಸಿ, ಸತ್ಯಾನೃತಗಳನ್ನು ತ್ಯಜಿಸಿದ ಸಾಧಕನು ಪ್ರಾಕೃತ ಗುಣರಹಿತನಾದ ಭಗವಂತನ ಅನುಗ್ರಹದಿಂದ ಪ್ರಾಕೃತಗುಣರಹಿತನಾಗುತ್ತಾನೆ.
ಅಚಿಂತ್ಯಾಂ ಚಾಮಿತಂ ಜ್ಞಾತ್ವಾ ಭಾವಸೂಕ್ಷ್ಮಂ ಚತುಷ್ಟಯಮ್ |
ವಿಚರೇದ್ ಯೋ ಯತಿರ್ಯತ್ತಃ ಸ ಗಚ್ಛೇತ್ ಪುರುಷಂ ಪ್ರಭುಮ್ ॥
ಚಿಂತಿಸಲು ಅಶಕ್ಯನಾದ, ಅಮಿತನಾದ, ಸಮಸ್ತ ಜೀವರಲ್ಲಿ ವಾಸುದೇವ- ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ನಾಲ್ಕು ರೂಪಗಳಿಂದ ಸನ್ನಿಹಿತನಾದ ನಾರಾಯಣನನ್ನು ಚೆನ್ನಾಗಿ ತಿಳಿದು ಯಾವನು ಸಂಚರಿಸುತ್ತಾನೋ ಅವನೂ ಆ ಪ್ರಭುವಾದ ಪುರುಷನನ್ನು ಹೊಂದುತ್ತಾನೆ.
ಏಕಂ ಹಿ ಪರಮಾತ್ಮಾನಂ ಕೇಚಿದಿಚ್ಛಂತಿ ಪಂಡಿತಾಃ |
ಏಕಾಧ್ಯಾತ್ಮಂ ತಥಾತ್ಮಾನಂ ತಥಾಧ್ಯಾತ್ಮಂ ಚ ಚಿಂತಕಾಃ ॥13॥
ಮೂಲರೂಪದಿಂದ ಕೂಡಿರುವ ಪರಮಾತ್ಮನನ್ನು ಯಾರು ಹೊಂದಲು ಬಯಸುತ್ತಾರೋ ಅವರೇ ನಿಜವಾದ ಪಂಡಿತರು. ಅನೇಕ ಜೀವರ ಅಂತರ್ಗತನಾಗಿದ್ದರೂ ಸ್ವಗತ ಭೇದವಿವರ್ಜಿತನು ಎಂಬ ಅಧ್ಯಾತ್ಮವನ್ನು ಯಾರು ತಿಳಿದಿರುತ್ತಾರೋ, ಸಮಸ್ತ ಜೀವರ ಅಂತರ್ಯಾಮಿಯಾದ ಪರಮಾತ್ಮನನ್ನು ಹೊಂದಲು ಯಾರು ಇಚ್ಛಿಸುತ್ತಾರೋ, ತನ್ನ ದೇಹಕ್ಕೆ ಕಾರಣೀಭೂತನಾದ ಪರಮಾತ್ಮನನ್ನು ಚಿಂತಿಸಲು ಯಾರು ಇಚ್ಛಿಸುತ್ತಾರೋ ಅವರೂ ಪಂಡಿತರೆ. ಕೆಲವರು ಏಕಾಂತಭಕ್ತರು. ಮೂಲರೂಪಿಯಾದ ಪರಮಾತ್ಮನಲ್ಲಿಯೇ ನಿರತರಾಗಿರುತ್ತಾರೆ. ಕೆಲವರು ಪರಾತ್ಪರತತ್ತ್ವಚಿಂತಕರಾಗಿರುತ್ತಾರೆ. (ಅವರೆಲ್ಲರೂ ಪರಮಾತ್ಮನನ್ನೇ ಹೊಂದುತ್ತಾರೆ ಎಂದು ಭಾವ).
ತತ್ರ ಯಃ ಪರಮಾತ್ಮಾ ಹಿ ಸ ನಿತ್ಯಂ ನಿರ್ಗುಣಃ ಸ್ಮೃತಃ |
ಸ ಹಿ ನಾರಾಯಣೋ ಜ್ಞೇಯಃ ಸರ್ವಾತ್ಮಾ ಪುರುಷೋ ಹಿ ಸಃ |
ನ ಲಿಪ್ಯತೇ ಫಲೈಶ್ಚಾಪಿ ಪದ್ಮಪತ್ರಮಿವಾಂಭಸಾ ॥14॥
ವೈಕುಂಠ ಲೋಕದಲ್ಲಿ ನಿತ್ಯವೂ ಪ್ರಾಕೃತಗುಣರಹಿತನಾದ ಯಾವ ಪರಮಾತ್ಮ ಎಂದು ಕರೆಸಿಕೊಳ್ಳುತ್ತಾನೋ ಆ ಪರಮಾತ್ಮನೇ ನಾರಾಯಣನು. ಅವನೇ ಸರ್ವಾಂತರ್ಯಾಮಿಯಾದ ಪುರುಷನು. ಎಲ್ಲರ ಅಂತರ್ಯಾಮಿಯಾಗಿದ್ದರೂ ಪದ್ಮಪತ್ರದ ನೀರಿನಂತೆ ಜೀವರ ಶುಭಾಶುಭ ಫಲಗಳಿಂದ ಲಿಪ್ತನಾಗುವುದಿಲ್ಲ.
ಕರ್ಮಾತ್ಮಾ ತ್ವಪರೋ ಯೋಽಸೌ ಮೋಕ್ಷಬಂಧೈಃ ಸ ಯುಜ್ಯತೇ |
ಸಸಪ್ತದಶಕೇನಾಪಿ ರಾಶಿನಾ ಯುಜ್ಯತೇ ಹಿ ಸಃ |
ಏವಂ ಬಹುವಿಧಃ ಪ್ರೋಕ್ತಃ ಪುರುಷಸ್ತೇ ಯಥಾಕ್ರಮಮ್ ॥15॥
ಪರಮಾತ್ಮನಿಗಿಂತ ವಿಲಕ್ಷಣನಾದ ಕರ್ಮಬಂಧನದಲ್ಲಿ ಸಿಲುಕಿರುವ ಜೀವಾತ್ಮನು ಬಂಧ-ಮೋಕ್ಷಗಳಿಂದ ಕೂಡಿರುತ್ತಾನೆ. ಪಂಚಭೂತಗಳು, ಮನಸ್ಸು, ಬುದ್ಧಿ ಎಂಬ ಏಳರಿಂದ ಸಹಿತವಾದ ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳಿಂದ ಜೀವನು ಕೂಡಿರುತ್ತಾನೆ. ಹೀಗೆ ಹದಿನೇಳರ ಸಮಾಗಮವನ್ನು ಹೊಂದಿದ ಪುರುಷರು ಕ್ರಮವಾಗಿ ಅನೇಕ ಸಂಖ್ಯೆಯಲ್ಲಿದ್ದಾರೆ. (ಇವುಗಳ ಸಮಾಗಮ ಇಲ್ಲದ ಪುರುಷನು ಒಬ್ಬನೇ ಭಗವಂತನು ಎಂದು ಭಾವ).
ಯತ್ತತ್ ಕೃತ್ಸ್ನಂ ಲೋಕತಂತ್ರಸ್ಯ ಧಾಮ
ವೇದ್ಯಂ ಪರಂ ಬೋಧನೀಯಂ ಸಬೋದ್ಧಾ |
ಮಂತಾ ಮಂತವ್ಯಂ ಪ್ರಾಶಿತಾ ಪ್ರಾಶಿತವ್ಯಂ
ಘ್ರಾತಾ ಘ್ರೇಯಂ ಸ್ಪರ್ಶಿತಾ ಸ್ಪರ್ಶನೀಯಮ್ ॥16॥
ಆ ಪರಬ್ರಹ್ಮ ವಸ್ತುವೇ ಸಮಸ್ತ ಲೋಕದ ಕ್ರಿಯೆಗಳಿಗೆ ಆಧಾರವೆನಿಸಿದೆ. ಸಮಗ್ರ ಜಗತ್ತನ್ನು ವ್ಯಾಪಿಸಿರುವ ಸರ್ವೋತ್ತಮವಾದ ವಸ್ತುವೇ ಪುರುಷೋತ್ತಮ ಎನಿಸಿದೆ. ಅವನನ್ನು ತಿಳಿಯಬೇಕು. ಆದ್ದರಿಂದ ಜೀವರು ಅವನನ್ನು ತಿಳಿಯಲು ಅರ್ಹರೇ ವಿನಾ ಜಡದಿಂದ ತಿಳಿಯಲಾಗದು. ಮನನಶೀಲನೂ, ಮನನ ಮಾಡಲು ಯೋಗ್ಯನು, ಭೋಕ್ತೃವು-ಭೋಜ್ಯನು, ಆಘ್ರಾಣಿಸುವವನು-ಘ್ರೇಯನು, ಸ್ಪರ್ಶಿಸುವವನು- ಸ್ಪರ್ಶಿಸುವ ವಸ್ತುವು ಅಂತರ್ಯಾಮಿಯಾದ ಭಗವಂತನೇ ಆಗಿದ್ದಾನೆ.
ದ್ರಷ್ಟಾ ದ್ರಷ್ಟವ್ಯಂ ಶ್ರಾವಿತಾ ಶ್ರಾವಣೀಯಂ
ಜ್ಞಾತಾ ಜ್ಞೇಯಂ ಸಗುಣಂ ನಿರ್ಗುಣಂ ಚ |
ಯದ್ವೈ ಪ್ರೋಕ್ತಂ ಗುಣಸಾಮ್ಯಂ ಪ್ರಧಾನಂ

नಿತ್ಯಂ ಚೈತಚ್ಛಾಶ್ವತಂ ಚಾವ್ಯಯಂ ಚ ॥17॥
ನೋಡುವವನು-ನೋಡುವ ಪದಾರ್ಥನು, ಕೇಳುವವನು-ಕೇಳುವ ಶಬ್ದನು, ತಿಳಿಯುವವನು-ತಿಳಿಯುವ ತತ್ತ್ವನು, ಭಗವಂತನ ಧ್ಯಾನದಿಂದ ಪ್ರಾಕೃತ ಗುಣರಾಹಿತ್ಯವನ್ನು ಹೊಂದುವ ಜೀವನು-ಎಂದಿಗೂ ಪ್ರಕೃತಿಯ ಸಂಬಂಧವನ್ನು ಹೊಂದಿದ ಜಡವು, ಗುಣಸಾಮ್ಯವೆನಿಸಿದ ಪ್ರಕೃತಿ - ಈ ಎಲ್ಲ ವಸ್ತುಗಳಲ್ಲಿ ನಿತ್ಯವೂ, ಶಾಶ್ವತನೂ, ಅವ್ಯಯನೂ ಆದವನು ಭಗವಂತನೇ ಆಗಿದ್ದಾನೆ.
ಯದ್ವೈ ಸೂತೇ ಧಾತುರಾದ್ಯಂ ನಿಧಾನಂ
ತದ್ವೈ ವಿಪ್ರಾಃ ಪ್ರವದಂತೇಽನಿರುದ್ಧಮ್ ।
ಯದ್ವೈ ಲೋಕೇ ವೈದಿಕಂ ಕರ್ಮ ಸಾಧು
ಆಶೀರ್ಯುಕ್ತಂ ತದ್ಧಿ ತಸ್ಯೋಪಭೋಜ್ಯಮ್ ॥18॥
ಯಾವ ಪ್ರಧಾನನೆನಿಸಿದ ಭಗವಂತನು ಬ್ರಹ್ಮನಿಗಿಂತಲೂ ಮೊದಲು ಮೂಲ ಕಾರಣವಾದ ಪ್ರಕೃತಿಯನ್ನು ಸೃಷ್ಟಿಸಿದನೋ ಅದನ್ನೇ ವಿಪ್ರರು ಅನಿರುದ್ಧ ಎಂಬ ಹೆಸರಿನಿಂದ ಕರೆಯುತ್ತಾರೆ. ಲೋಕದಲ್ಲಿ ಕಾಮ್ಯಗಳಾದ ವೈದಿಕ ಶುಭಕರ್ಮಗಳು ಏನು ನಡೆಯುತ್ತವೆಯೋ ಅವೆಲ್ಲವೂ ಅವನಿಂದಲೇ ಉಪಭೋಜ್ಯವಾಗಿವೆ.
ದೇವಾಃ ಸರ್ವೇ ಮುನಯಃ ಸಾಧು ದಾಂತಾ-
ಸ್ತಂ ಪ್ರಾಗ್ವಂಶೇ ಯಜ್ಞಭಾಗಂ ಯಜಂತೇ ।
ಅಹಂ ಬ್ರಹ್ಮಾ ಆದ್ಯ ಈಶಃ ಪ್ರಜಾನಾಂ
ತಸ್ಮಾಜ್ಜಾತಸ್ತ್ವಂ ಚ ಮತ್ತಃ ಪ್ರಸೂತಃ ।
ಮತ್ತೋ ಜಗಜ್ಜಂಗಮಂ ಸ್ಥಾವರಂ ಚ
ಸರ್ವೇ ವೇದಾಃ ಸರಹಸ್ಯಾ ಹಿ ಪುತ್ರ ॥19॥
ಸಮಸ್ತ ದೇವತೆಗಳು, ಮುನಿಗಳು, ಸಾಧುಗಳು, ಇಂದ್ರಿಯನಿಗ್ರಹವುಳ್ಳವರು ಅನೇಕ ಯಜ್ಞಗಳಿಂದ ಯಜ್ಞಭಾಗ ಅರ್ಹನಾದ ಅನಿರುದ್ಧನನ್ನೇ ಆರಾಧಿಸುತ್ತಾರೆ. ಸಮಸ್ತ ಜೀವರಿಗೆ ಆದಿ ಎನಿಸಿದ ಚತುರ್ಮುಖ ಬ್ರಹ್ಮನಾದ ನಾನು ಅವನಿಂದಲೇ ಜನ್ಮವನ್ನು ಹೊಂದಿರುತ್ತೇನೆ. ನೀನು ನನ್ನಿಂದ ಜನ್ಮವನ್ನು ಹೊಂದಿರುತ್ತಿ. ಮಗನೇ, ನನ್ನಿಂದ ಚರಾಚರಗಳಿಂದ ಕೂಡಿದ ಜಗತ್ತು ಮತ್ತು ರಹಸ್ಯಗಳಿಂದ ಕೂಡಿದ ವೇದಗಳು ಹುಟ್ಟಿವೆ.
ಸರ್ವೈರ್ವಿಭಕ್ತಃ ಪುರುಷಃ ಸ ಕ್ರೀಡತಿ ಯಥೇಚ್ಛತಿ ।
ಏವಂ ಸ ಏವ ಭಗವಾನ್ ಜ್ಞಾನೇನ ಪ್ರತಿಬೋಧಿತಃ ॥20॥
ಜೀವ-ಜಡ ಪದಾರ್ಥಗಳಿಗಿಂತಲೂ ಭಿನ್ನನಾದ, ಪುರುಷನಾಮಕನಾದ ಭಗವಂತನು ತಾನು ಹೇಗೆ ಸಂಕಲ್ಪಿಸುತ್ತಾ, ಹಾಗೆ ಅವರಲ್ಲಿ ನಿಂತು ಕ್ರೀಡಿಸುತ್ತಾನೆ. ಆ ಭಗವಂತನು ಜ್ಞಾನವನ್ನು ನೀಡಿದಾಗ ಅವನ ಸ್ವರೂಪವು ಹೀಗೆ ತಿಳಿಯುತ್ತದೆ.
ಏತತ್ತೇ ಕಥಿತಂ ಪುತ್ರ ಯಥಾವದನುಪೃಚ್ಛತಃ ।
ಸಾಂಖ್ಯಜ್ಞಾನೇ ತಥಾ ಯೋಗೇ ಯಥಾವದನುವರ್ಣಿತಮ್ ॥21॥
ಮಹರುದ್ರನೆ, ನಿನ್ನ ಪ್ರಶ್ನೆಗೆ ಅನುಗುಣವಾಗಿ ಉತ್ತರಿಸಿದ್ದೇನೆ. ಸಾಂಖ್ಯ ಯೋಗಗಳಲ್ಲಿ ಭಗವಂತನ ಸ್ವರೂಪವು ಹೇಗೆ ವರ್ಣಿತವಾಗಿದೆಯೋ ಅದರಂತೆ ನಿನಗೆ ತಿಳಿಸಿರುತ್ತೇನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಉಂಛವೃತ್ತ್ಯುಪಾಖ್ಯಾನೇ ಚತುರಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೈದನೆಯ ಅಧ್ಯಾಯ
ಇಂದ್ರನಿಗೆ ನಾರದರು ಉಪದೇಶಿಸಿದ ಬ್ರಾಹ್ಮಣನ ಕಥೆ.
ಯುಧಿಷ್ಠಿರಃ
ಧರ್ಮಾಃ ಪಿತಾಮಹೇನೋಕ್ತಾ ಮೋಕ್ಷಧರ್ಮಾಶ್ರಿತಾಃ ಶುಭಾಃ ।
ಧರ್ಮಮಾಶ್ರಮಿಣಾಂ ಶ್ರೇಷ್ಠಂ ವಕ್ತುಮರ್ಹತಿ ಮೇ ಭವಾನ್ ॥1॥
ಯುಧಿಷ್ಠಿರ ಪಿತಾಮಹನೇ, ಮೋಕ್ಷಧರ್ಮಕ್ಕೆ ಸಂಬಂಧಿಸಿದ ಶುಭಕರವಾದ ಅನೇಕ ಧರ್ಮಗಳನ್ನು ಬೋಧಿಸಿರುತ್ತೀರಿ. ಆಶ್ರಮಧರ್ಮಗಳನ್ನು ಪರಿಪಾಲಿಸುವ ವ್ಯಕ್ತಿಗಳಿಗೆ ಶ್ರೇಷ್ಠವಾದ ಧರ್ಮ ಯಾವುದೆಂದು ನನಗೆ ತಿಳಿಸು.
ಭೀಷ್ಮಃ
ಸರ್ವತ್ರ ವಿಹಿತೋ ಧರ್ಮಃ ಸ್ವರ್ಗ್ಯಃ ಸತ್ಯಫಲೋದಯಃ ।
ಬಹುದ್ವಾರಸ್ಯ ಧರ್ಮಸ್ಯ ನೇಹಾಸ್ತಿ ವಿಫಲಾ ಕ್ರಿಯಾ ॥2॥
ಭೀಷ್ಮ ಧರ್ಮಜನೇ, ಸಮಸ್ತ ಆಶ್ರಮಗಳಿಗೂ ಇಂತಹ ಧರ್ಮ ಎಂಬುದು ವಿಹಿತವಾಗಿದೆ. ಧರ್ಮಗಳು ಅನೇಕ ದ್ವಾರಗಳಿಂದ ಕೂಡಿವೆ. ಧರ್ಮದ ಕ್ರಮಗಳು ಎಂದೂ ವ್ಯರ್ಥವಾಗುವುದಿಲ್ಲ.
ಯಸ್ಮಿನ್ಯಸ್ಮಿಂಸ್ತು ವಿಷಯೇ ಯೋ ಯೋ ಯಾತಿ ವಿನಿಶ್ಚಯಮ್ ।
ಸ ತಮೇವಾಭಿಜಾನಾತಿ ನಾನ್ಯಂ ಭರತಸತ್ತಮ ॥3॥
ಯಾವ ಯಾವ ವಿಷಯದಲ್ಲಿ ಯಾವ ಯಾವ ಪುರುಷನು ನಿಶ್ಚಯ ಬುದ್ಧಿಯನ್ನು ಹೊಂದುತ್ತಾನೋ ಆಯಾ ವ್ಯಕ್ತಿಯು ಅದೇ ವಿಷಯವನ್ನು ಶ್ರೇಷ್ಠವೆಂದು, ಉಳಿದದ್ದನ್ನು ಶ್ರೇಷ್ಠವಲ್ಲವೆಂದು ತಿಳಿಯುತ್ತಾನೆ.
ಅಪಿ ಚ ತ್ವಂ ನರವ್ಯಾಘ್ರ ಶ್ರೋತುಮರ್ಹಸಿ ಮೇ ಕಥಾಮ್ ।

ಪುರಾ ಶಕ್ರಸ್ಯ ಕಥಿತಾಂ ನಾರದೇನ ಸುರರ್ಷಿಣಾ ॥4॥
ನರವ್ಯಾಘ್ರನೇ, ಈ ವಿಷಯದಲ್ಲಿ ಸುರರ್ಷಿಗಳಾದ ನಾರದರು ಇಂದ್ರನಿಗೆ ಹಿಂದೆ ಹೇಳಿದ ಕಥೆಯನ್ನು ನಿನಗೆ ಹೇಳುತ್ತೇನೆ, ಕೇಳು.
ಸುರರ್ಷಿರ್ನಾರದೋ ರಾಜನ್ ಸಿದ್ಧಸ್ತ್ರೈಲೋಕ್ಯಸಮ್ಮತಃ |
ಪರ್ಯೇತಿ ಕ್ರಮಶೋ ಲೋಕಾನ್ ವಾಯುರವ್ಯಾಹತೋ ಯಥಾ ॥5॥
ಸಿದ್ಧಪುರುಷರಾದ, ಮೂರುಲೋಕಗಳಿಗೂ ಸಮ್ಮತರಾದ, ದೇವತೆಗಳಿಗೆ ಋಷಿ ಎನಿಸಿದ ನಾರದರು ವಾಯು ಎಡೆಯಿಲ್ಲದೆ ಸಂಚರಿಸುವಂತೆ ಸಮಸ್ತ ಲೋಕಗಳಲ್ಲಿಯೂ ಸಂಚರಿಸುತ್ತಾರೆ.
ಸ ಕದಾಚಿನ್ಮಹೇಷ್ವಾಸ ದೇವರಾಜಾಲಯಂ ಗತಃ |
ಸತ್ಕೃತಶ್ಚ ಮಹೇಂದ್ರೇಣ ಪ್ರತ್ಯಾಸನ್ನಗತೋಽಭವತ್ ॥6॥
ರಾಜನ್, ಅಂತಹ ನಾರದರು ಒಂದು ಬಾರಿ ಸುರರಾಜನ ಮನೆಗೆ ಹೋದರು. ಇಂದ್ರನಿಂದ ಸತ್ಕೃತನಾಗಿ ಅವನ ಸಮೀಪದಲ್ಲಿ ಕುಳಿತರು.
ತಂ ಕೃತಕ್ಷಣಮಾಸೀನಂ ಪರ್ಯಪೃಚ್ಛಚ್ಛಚೀಪತಿಃ |
ಬ್ರಹ್ಮರ್ಷೇ ಕಿಂಚಿದಾಶ್ಚರ್ಯಮಸ್ತಿ ದೃಷ್ಟಂ ತ್ವಯಾನಘ ॥7॥
ಸತ್ಕೃತರಾದ, ತಮ್ಮ ಬಳಿಯಲ್ಲಿ ಕುಳಿತಿರುವ ನಾರದರನ್ನು ಇಂದ್ರನು ಪ್ರಶ್ನಿಸಿದನು: ಬ್ರಹ್ಮರ್ಷಿಗಳಾದ ನಾರದರೇ, ನೀವು ಜಗತ್ತಿನಲ್ಲಿ ಕಂಡ ಯಾವುದಾದರೂ ಆಶ್ಚರ್ಯಕರ ಸಂಗತಿಯು ಇದೆಯೇ? ಎಂದು.
ಯಥಾ ತ್ವಮಪಿ ವಿಪ್ರರ್ಷೇ ತ್ರೈಲೋಕ್ಯಂ ಸಚರಾಚರಮ್ |
ಜಾತಕೌತೂಹಲೋ ನಿತ್ಯಂ ಸಿದ್ಧಶ್ಚರಸಿ ಸಾಕ್ಷಿವತ್ ॥8॥
ವಸ್ತುತಃ ನೀವು ಸಿದ್ಧರೇ ಆಗಿದ್ದರೂ ಕುತೂಹಲದಿಂದ ಚರಾಚರ ಪ್ರಪಂಚಗಳಿಗೆ ಸಾಕ್ಷಿಯಂತೆ ಸಂಚರಿಸುತ್ತಿರುತ್ತೀರಿ.
ನ ಹ್ಯಸ್ತ್ಯವಿದಿತಂ ಲೋಕೇ ದೇವರ್ಷೇ ತವ ಕಿಂಚನ |
ಶ್ರುತಂ ವಾಽಪ್ಯನುಭೂತಂ ವಾ ದೃಷ್ಟಂ ವಾ ಕಥಯಸ್ವ ಮೇ ॥9॥
ಆದ್ದರಿಂದ ಜಗತ್ತಿನಲ್ಲಿ ತಿಳಿಯದಿರುವ ಸಂಗತಿಗಳು ನಿಮಗೆ ಯಾವುದೂ ಇರುವುದಿಲ್ಲ. ನೀವು ಆಶ್ಚರ್ಯಕರವಾದ ಘಟನೆಯನ್ನು ಕೇಳಿದ್ದರೆ, ನೋಡಿದ್ದರೆ, ಅನುಭವಿಸಿದ್ದರೆ ಅದನ್ನು ನನಗೆ ತಿಳಿಸಿರಿ.
ತಸ್ಮೈ ರಾಜನ್ ಸುರೇಂದ್ರಾಯ ನಾರದೋ ವದತಾಂ ವರಃ |
ಆಸೀನಾಯೋಪಪನ್ನಾಯ ಪ್ರೋಕ್ತವಾನ್ ವಿಪುಲಾಂ ಕಥಾಮ್ ॥10॥
ಯುಧಿಷ್ಠಿರನೇ, ಹೀಗೆ ಪ್ರಶ್ನಿಸಿದ, ತನ್ನ ಸಮೀಪದಲ್ಲಿ ಕುಳಿತಿರುವ ಇಂದ್ರನಿಗೆ ವಾಗ್ಮಿಗಳಲ್ಲಿ ಶ್ರೇಷ್ಠರಾದ ನಾರದರು ವಿಸ್ತಾರವಾದ ಕಥೆಯೊಂದನ್ನು ಹೇಳಿದರು.
ಯಥಾ ಯೇನ ಚ ಕಲ್ಪೇನ ಸ ತಸ್ಮೈ ದ್ವಿಜಸತ್ತಮಃ |
ಕಥಾಂ ಕಥಿತವಾನ್ ಪೃಷ್ಟಸ್ತಥಾ ತ್ವಮಪಿ ಮೇ ಶೃಣು ॥11॥
ಇಂದ್ರನಿಂದ ಪ್ರಶ್ನಿಸಲ್ಪಟ್ಟ ದ್ವಿಜಶ್ರೇಷ್ಠರಾದ ನಾರದರು ಯಾವ ಕಲ್ಪಕ್ಕನುಗುಣವಾದ ಕಥೆಯನ್ನು ಇಂದ್ರನಿಗೆ ತಿಳಿಸಿದರೋ ಅದೇ ಕಲ್ಪವನ್ನನುಸರಿಸಿ ನಾನೂ ನಿನಗೆ ಕಥೆಯನ್ನು ಹೇಳುತ್ತೇನೆ, ಕೇಳು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚಾಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತಾರನೆಯ ಅಧ್ಯಾಯ
ಮಹಾಪದ್ಮಪುರದ ಬ್ರಾಹ್ಮಣನ ಕಥೆ.
ಭೀಷ್ಮಃ
ಆಸೀತ್ ಕಿಲ ಕುರುಶ್ರೇಷ್ಠ ಮಹಾಪದ್ಮೇ ಪುರೋತ್ತಮೇ |
ಗಂಗಾಯಾ ದಕ್ಷಿಣೇ ತೀರೇ ಕಶ್ಚಿದ್ ವಿಪ್ರಃ ಸಮಾಹಿತಃ ॥1॥
ಭೀಷ್ಮ ಕುರುಶ್ರೇಷ್ಠನೇ, ಗಂಗಾನದಿಯ ದಕ್ಷಿಣ ತೀರದಲ್ಲಿ, ಮಹಾಪದ್ಮವೆಂಬ ಶ್ರೇಷ್ಠವಾದ ಪಟ್ಟಣದಲ್ಲಿ ಒಬ್ಬ ಬ್ರಾಹ್ಮಣನು ವಾಸಿಸುತ್ತಿದ್ದನು.
ಸೌಮ್ಯಃ ಸೋಮಾನ್ವಯೇ ವೇದೇ ಗತಾಧ್ವಾ ಛಿನ್ನಸಂಶಯಃ |
ಧರ್ಮನಿತ್ಯೋ ಜಿತಕ್ರೋಧೋ ನಿತ್ಯತೃಪ್ತೋ ಜಿತೇಂದ್ರಿಯಃ ॥2॥
ಅವನು ಸೌಮ್ಯನು, ಚಂದ್ರವಂಶದಲ್ಲಿ ಅತ್ರಿಗೋತ್ರ ಸಮುದ್ಭೂತನೂ, ಜಿತಕ್ರೋಧನೂ, ಧರ್ಮನಿಷ್ಠನೂ, ನಿತ್ಯತೃಪ್ತನೂ, ಜಿತೇಂದ್ರಿಯನೂ, ಸಂಶಯ ರಹಿತನೂ ಆಗಿದ್ದನು.
ಅಹಿಂಸಾನಿರತೋ ನಿತ್ಯಂ ಸತ್ಯಃ ಸಜ್ಜನಸಮ್ಮತಃ |
ನ್ಯಾಯಪ್ರಾಪ್ತೇನ ವಿತ್ತೇನ ಸ್ವೇನ ಶೀಲೇನ ಚಾನ್ವಿತಃ ॥3॥
ಅಹಿಂಸಾಧರ್ಮನಿರತನೂ, ನಿತ್ಯವೂ ಸತ್ಯಶೀಲನೂ, ಸಜ್ಜನರಿಗೆ ಸಮ್ಮತನೂ, ನ್ಯಾಯಪ್ರಾಪ್ತವಾದ ಧನದಿಂದ ಜೀವನವನ್ನು ನಿರ್ವಹಿಸುತ್ತಿದ್ದನು. ಸದಾಚಾರ ಸಂಪನ್ನನೂ ಆಗಿದ್ದನು.
ಜ್ಞಾತಿಸಂಬಂಧಿವಿಪುಲೇ ಮಿತ್ರಾಪಾಶ್ರಯಸಮ್ಮತೇ |
ಕುಲೇ ಮಹತಿ ವಿಖ್ಯಾತೇ ವಿಶಿಷ್ಟಾಂ ವೃತ್ತಿಮಾಸ್ಥಿತಃ ॥4॥

ಜ್ಞಾತಿ-ಬಂಧುಗಳಿಂದ ತುಂಬಿರುವ, ಸ್ನೇಹಿತರು ಮುಂತಾದವರಿಂದ ಕೂಡಿರುವ ವಿಖ್ಯಾತವಾದ ಕುಲದಲ್ಲಿ ಧರ್ಮದ ಶ್ರೇಷ್ಠವಾದ ಕರ್ಮಗಳನ್ನೇ ಆಚರಿಸುತ್ತಿದ್ದನು.
ಸ ಪುತ್ರಾನ್ ಬಹುಲಾನ್ ದೃಷ್ಟ್ವಾ ವಿಪುಲೇ ಕರ್ಮಣಿ ಸ್ಥಿತಃ |
ಕುಲಧರ್ಮಾಶ್ರಿತೋ ರಾಜನ್ ಧರ್ಮಚರ್ಯಾಪರೋಽಭವತ್ ||5||
ಗೃಹಸ್ಥಾಶ್ರಮೋಕ್ತವಾದ ಅನೇಕ ಕರ್ಮಗಳಲ್ಲಿ ತೊಡಗಿದ್ದ ಅವನು ಹಲವಾರು ಮಂದಿ ಮಕ್ಕಳನ್ನು, ಮೊಮ್ಮಕ್ಕಳನ್ನು ಕಂಡನು. ಕುಲಧರ್ಮಗಳನ್ನೇ ಆಶ್ರಯಿಸಿದ್ದ ಅವನು ಧರ್ಮಾಚರಣೆಯಲ್ಲೇ ಯಾವಾಗಲೂ ತತ್ಪರನಾಗಿದ್ದನು.
ತತಃ ಸ ಧರ್ಮಂ ವೇದೋಕ್ತಂ ಯಥಾಶಾಸ್ತ್ರೋಕ್ತಮೇವ ಚ |
ಶಿಷ್ಟಾಚೀರ್ಣಂ ಚ ಧರ್ಮಂ ಚ ತ್ರಿವಿಧಂ ಚಿಂತ್ಯ ಚೇತಸಾ ||6||
ಹೀಗೆ ಕಾಲ ಕಳೆಯುತ್ತಿರುವಾಗ ಒಮ್ಮೆ ವೇದೋಕ್ತವಾದ ಧರ್ಮಗಳು, ಶಾಸ್ತ್ರೋಕ್ತವಾದ ಧರ್ಮಗಳು, ಶಿಷ್ಟಾಚಾರದಿಂದ ಬಂದಿರುವ ಧರ್ಮಗಳು - ಹೀಗೆ ಮೂರು ವಿಧವಾದ ಧರ್ಮಗಳನ್ನು ಕುರಿತು ಅವನು ಆಲೋಚಿಸಲು ತೊಡಗಿದನು.
ಕಿಂ ನು ಮೇ ಸ್ಯಾಚ್ಛುಭಂ ಕೃತ್ವಾ ಕಿಂ ಕ್ಷಮಂ ಕಿಂ ಪರಾಯಣಮ್ |
ಇತ್ಯೇವಂ ಖಿದ್ಯತೇ ನಿತ್ಯಂ ನ ಚ ಯಾತಿ ವಿನಿಶ್ಚಯಮ್ ||7||
ಈ ಮೂರು ವಿಧ ಧರ್ಮಗಳಲ್ಲಿ ಯಾವುದನ್ನಾಚರಿಸಿದರೆ ನನಗೆ ಕ್ಷೇಮವಾಗುತ್ತದೆ? ಯಾವುದು ನನ್ನ ಕರ್ತವ್ಯ? ಯಾವುದು ನನಗೆ ಉತ್ತಮವಾದ ಆಶ್ರಯ? ಹೀಗೆ ಯೋಚಿಸುತ್ತಾ ಚಿಂತಾಗ್ರಸ್ತನಾಗುತ್ತಿದ್ದನೇ ವಿನಾ ನಿಶ್ಚಯವನ್ನು ಹೊಂದುತ್ತಿರಲಿಲ್ಲ.
ತಸ್ಯೈವಂ ಖಿದ್ಯಮಾನಸ್ಯ ಧರ್ಮಂ ಪರಮಮಾಸ್ಥಿತಃ |
ಕದಾಚಿದತಿಥಿಃ ಪ್ರಾಪ್ತೋ ಬ್ರಾಹ್ಮಣಃ ಸುಸಮಾಹಿತಃ ||8||
ಒಂದು ದಿನ ಖಿನ್ನನಾಗಿ, ಅದೇ ವಿಷಯವನ್ನು ಯೋಚಿಸುತ್ತಿದ್ದ ಬ್ರಾಹ್ಮಣನ ಮನೆಗೆ ಪರಮಧರ್ಮಾನುಷ್ಠಾನ ಮಾಡುವ, ಏಕಾಗ್ರತೆಯಿಂದ ಕೂಡಿರುವ ಒಬ್ಬ ಬ್ರಾಹ್ಮಣನು ಅತಿಥಿಯಾಗಿ ಆಗಮಿಸಿದನು.
ಸ ತಸ್ಮೈ ಸತ್ಕ್ರಿಯಾಂ ಚಕ್ರೇ ಕ್ರಿಯಾಯುಕ್ತೇನ ಹೇತುನಾ |
ವಿಶ್ರಾಂತಂ ಚೈನಮಾಸೀನಮಿದಂ ವಚನಮಬ್ರವೀತ್ ||9||
ಆಗಮಿಸಿದ ಅತಿಥಿಗೆ ಶಾಸ್ತ್ರೋಕ್ತವಾದ ವಿಧಿಯಿಂದ ಈ ಬ್ರಾಹ್ಮಣನು ಸತ್ಕಾರವನ್ನು ಮಾಡಿದನು. ಅವನನ್ನು ಕುರಿತು ತನ್ನ ಸಂಶಯದ ಬಗ್ಗೆ ಹೇಳತೊಡಗಿದನು.
|| ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಡಾಶೀತ್ಯುತ್ತರಶತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೇಳನೆಯ ಅಧ್ಯಾಯ
ಅತಿಥಿಯಿಂದ ಅನೇಕ ಧರ್ಮಗಳ ಕಥನ.
ಬ್ರಾಹ್ಮಣಃ
ಸಮುತ್ಪನ್ನಾಭಿಧಾನೋಽಸ್ಮಿ ವಾಙ್ಮಾಧುರ್ಯೇಣ ತೇಽನಘ |
ಮಿತ್ರತಾಮಭಿಪನ್ನಸ್ತ್ವಂ ಕಿಂಚಿದ್ ವಕ್ಷ್ಯಾಮಿ ತಚ್ಛೃಣು ||1||
ಬ್ರಾಹ್ಮಣ ಅನಘನೇ, ನಿನ್ನ ಮಧುರವಾದ ಮಾತನ್ನು ಕೇಳಿದ ಬಳಿಕ ಕೆಲವು ವಿಷಯಗಳನ್ನು ಹೇಳಲು ಮನಸ್ಸಾಗಿದೆ. ನಿನ್ನೊಡನೆ ಮೈತ್ರಿಯನ್ನು ಹೊಂದಿರುವೆ. ಕೆಲವು ವಿಷಯಗಳನ್ನು ಹೇಳುತ್ತೇನೆ, ಕೇಳು.
ಗೃಹಸ್ಥಧರ್ಮಂ ವಿಪ್ರೇಂದ್ರ ಕೃತ್ವಾ ಪುತ್ರಗತಂ ತ್ವಹಮ್ |
ಧರ್ಮಂ ಪರಮಕಂ ಕುರ್ಯಾಂ ಕೋ ಹಿ ಮಾರ್ಗೋ ಭವೇದ್ದ್ವಿಜ ||
ಬ್ರಾಹ್ಮಣನೇ, ಗೃಹಸ್ಥಧರ್ಮವನ್ನು ಮಕ್ಕಳಿಗೆ ವಹಿಸಿದ ನಾನು ಶ್ರೇಷ್ಠ ಧರ್ಮವನ್ನು ಆಚರಿಸಬೇಕೆಂದಿದ್ದೇನೆ. ಅಂತಹ ಧರ್ಮವನ್ನಾಚರಿಸಲು ಯಾವ ಮಾರ್ಗವಿದೆ?
ಅಹಮಾತ್ಮಾನಮಾತ್ಮಸ್ಥಮೇಕ ಏವಾತ್ಮನಿ ಸ್ಥಿತಃ |
ಕರ್ತುಂ ಕಾಂಕ್ಷಾಮಿ ನೇಚ್ಛಾಮಿ ಬದ್ಧಃ ಸಾಧಾರಣೈರ್ಗುಣೈಃ ||3||
ನಾನು ಏಕಾಕಿಯಾಗಿದ್ದು, ಅಂತರ್ಯಾಮಿಯಾದ ಶ್ರೀಹರಿಯಲ್ಲಿಯೇ ಆಸಕ್ತನಾಗಿ ಇರಬೇಕೆಂದು ಭಾವಿಸಿದ್ದೇನೆ. ಆದರೆ ಅತಿಥಿ ಸತ್ಕಾರ ಮೊದಲಾದ ಸಾಧಾರಣ ಗುಣಗಳನ್ನು ಅನುಷ್ಠಾನ ಮಾಡಿಕೊಂಡು ಬಂದಿರುವುದರಿಂದ ಒಮ್ಮೆಲೆ ಅವುಗಳನ್ನು ಬಿಡಲು ಮನಸ್ಸಾಗುತ್ತಿಲ್ಲ.
ಯಾವದೇತದತೀತಂ ಮೇ ವಯಃ ಪುತ್ರಫಲಾಶ್ರಿತಮ್ |
ತಾವದಿಚ್ಛಾಮಿ ಪಾಥೇಯಮಾದಾತುಂ ಪಾರಲೌಕಿಕಮ್ ||4||
ಮಕ್ಕಳೆಂಬ ಫಲವನ್ನೇ ಆಶ್ರಯಿಸಿರುವ ನನ್ನ ಆಯುಷ್ಯವೆಲ್ಲವೂ ಕಳೆದು ಹೋಯಿತು. ನಾನು ಪರಲೋಕ ಗಮನಕ್ಕೆ ಬೇಕಾದ ಬುತ್ತಿಯನ್ನು ಸಂಗ್ರಹಿಸಲು ಇಚ್ಛಿಸುತ್ತಿದ್ದೇನೆ.
ಅಸ್ಮಿನ್ ಹಿ ಲೋಕಸಂತಾನೇ ಪರಂ ಪಾರಮಭೀಪ್ಸತಃ |
ಉತ್ಪನ್ನಾ ಮೇ ಮತಿರಿಯಂ ಕುತೋ ಧರ್ಮಮಯಃ ಪ್ಲವಃ ||5||
ಈ ಲೌಕಿಕ ವಸ್ತುಗಳ ನಡುವೆ ಸಂಸಾರಸಾಗರವನ್ನು ದಾಟಿಸುವ ಧರ್ಮದ ದೋಣಿ ಯಾವುದು ಎಂದು ನನಗೆ ಜಿಜ್ಞಾಸೆ ಹುಟ್ಟುತ್ತಿದೆ.
ಸಮುಹ್ಯಮಾನಾನಿ ನಿಶಮ್ಯ ಲೋಕೇ

ನಿರ್ಯಾತ್ಯಮಾನಾನಿ ಚ ಸಾತಿತ್ವಕಾನಿ |
ದೃಷ್ಟ್ವಾ ಚ ಧರ್ಮಧ್ವಜಕೇತುಮಾಲಾಂ
ಪ್ರಕೀರ್ಯಮಾಣಾಮುಪರಿ ಪ್ರಜಾನಾಮ್ ॥6॥
ಅತಿಥಿಯೇ, ಲೋಕದಲ್ಲಿ ವಿಷಯ ಸಂಪರ್ಕ ಹೊಂದಿದ ಸಜ್ಜನರು ವಿಧವಿಧವಾದ ಯಾತನೆಗಳಿಂದ ಪೀಡಿತರಾಗುತ್ತಿರುವುದನ್ನು ನೋಡುತ್ತಿದ್ದೇನೆ. ಜನರ ಮಧ್ಯೆ ನಾನು ಧರ್ಮಾತ್ಮ ಎಂದು ತೋರಿಸಿಕೊಳ್ಳುವ ವ್ಯಕ್ತಿಗಳನ್ನೂ ಕಾಣುತ್ತಿದ್ದೇನೆ.
ನ ಮೇ ಮನೋ ರಜ್ಯತಿ ಭೋಗಕಾಲೇ
ದೃಷ್ಟ್ವಾ ಯತೀನ್ ಪ್ರಾರ್ಥಯತಃ ಪರತ್ರ |
ತೇನಾತಿಥೇ ಬುದ್ಧಿಬಲಾಶ್ರಯೇಣ
ಧರ್ಮಾರ್ಥತತ್ತ್ವೇ ವಿನಿಯುಂಕ್ಷ್ವ ಮಾಂ ತ್ವಮ್ ॥7॥
ಇದನ್ನು ಕಂಡ ಬಳಿಕ ನನಗೆ ಭೋಗವಸ್ತುಗಳಲ್ಲಿ ಮನಸ್ಸು ಸಂತೋಷ ಹೊಂದುವುದಿಲ್ಲ. ವಿರಕ್ತರು ತಮ್ಮ ಜೀವದ ನಿರ್ವಹಣೆಗಾಗಿ ಮತ್ತೊಬ್ಬರನ್ನು ಬೇಡುವುದನ್ನು ಕಂಡು ಸಂನ್ಯಾಸದಲ್ಲಿಯೂ ಅಭಿರುಚಿ ಉಂಟಾಗುತ್ತಿಲ್ಲ. ಆದ್ದರಿಂದ ನಿನ್ನ ಬುದ್ಧಿಯಿಂದ ಧರ್ಮಮಯವಾದ ನನಗೆ ಯೋಗ್ಯವಾದ ಮಾರ್ಗವು ಯಾವುದೆಂದು ತಿಳಿಸಿಕೊಡು.
ಭೀಷ್ಮಃ
ಸೋಽತಿಥಿರ್ವಚನಂ ತಸ್ಯ ಶ್ರುತ್ವಾ ಧರ್ಮಾಭಿಲಾಷಿಣಃ |
ಪ್ರೋವಾಚ ವಚನಂ ಶ್ಲಕ್ಷ್ಣಂ ಪ್ರಾಜ್ಞೋ ಮಧುರಯಾ ಗಿರಾ ॥8॥
ಭೀಷ್ಮ ಧರ್ಮರಾಜನೇ, ಧರ್ಮಯುಕ್ತವಾದ ಆ ಬ್ರಾಹ್ಮಣನ ಮಾತನ್ನು ಕೇಳಿಸಿಕೊಂಡು ಪ್ರಾಜ್ಞನಾದ ಅತಿಥಿಯು ಮಧುರವಾದ ಮಾತುಗಳನ್ನು ಹೇಳಿದನು.
ಅಹಮಪ್ಯತ್ರ ಮುಹ್ಯಾಮಿ ಮಮಾಪ್ಯೇಷ ಮನೋರಥಃ |
ನ ಚ ಸನ್ನಿಶ್ಚಯಂ ಯಾಮಿ ಬಹುದ್ವಾರೇ ತ್ರಿವಿಷ್ಟಪೇ ॥9॥
ಬ್ರಾಹ್ಮಣನೇ, ಈ ವಿಷಯದಲ್ಲಿ ನನಗೂ ಮೋಹವಿದೆ. ಶ್ರೇಷ್ಠಧರ್ಮವನ್ನು ಆಚರಿಸಬೇಕೆಂದು ಇಚ್ಛೆಯೂ ನನಗಿದೆ. ಸ್ವರ್ಗಕ್ಕೆ ಧರ್ಮದ ಅನೇಕ ದ್ವಾರವಿದೆ. ಯಾವುದು ಯೋಗ್ಯವಾದ ಧರ್ಮ ಎಂಬ ನಿರ್ಣಯವು ನನ್ನಲ್ಲಿಲ್ಲ.
ಕೇಚಿನ್ಮೋಕ್ಷಂ ಪ್ರಶಂಸಂತಿ ಕೇಚಿದ್ಯಜ್ಞಫಲಂ ದ್ವಿಜಾಃ |
ವಾನಪ್ರಸ್ಥಾಶ್ರಮಂ ಕೇಚಿದ್ ಗಾರ್ಹಸ್ಥ್ಯಂ ಕೇಚಿದಾಶ್ರಿತಾಃ ॥10॥
ಕೆಲವರು ಮೋಕ್ಷಮಾರ್ಗವನ್ನು ಸ್ತುತಿ ಮಾಡುತ್ತಾರೆ. ಕೆಲವರು ಯಜ್ಞದಿಂದ ಪ್ರಾಪ್ತವಾಗುವ ಪುಣ್ಯಫಲವನ್ನು ಪ್ರಶಂಸೆ ಮಾಡುತ್ತಾರೆ. ಕೆಲವರು ವಾನಪ್ರಸ್ಥಾಶ್ರಮವನ್ನು, ಕೆಲವರು ಗೃಹಸ್ಥಾಶ್ರಮವನ್ನು ಆಶ್ರಯಿಸಿಕೊಂಡು ಇರುತ್ತಾರೆ.
ರಾಜಧರ್ಮಾಶ್ರಯಂ ಕೇಚಿತ್ ಕೇಚಿದಾತ್ಮಫಲಾಶ್ರಯಮ್ |
ಗುರುಚರ್ಯಾಶ್ರಯಂ ಕೇಚಿತ್ ಕೇಚಿದ್ ವಾಕ್ಯಂ ಯಮಾಶ್ರಯಮ್ ॥
ಕೆಲವರು ರಾಜಧರ್ಮವನ್ನು, ಕೆಲವರು ಅಧ್ಯಾತ್ಮಮಾರ್ಗವನ್ನು, ಕೆಲವರು ಗುರು ಹಿರಿಯರ ಸೇವೆಯನ್ನು, ಕೆಲವರು ಮೌನವ್ರತವನ್ನು ಆಶ್ರಯಿಸಿರುತ್ತಾರೆ.
ಮಾತರಂ ಪಿತರಂ ಕೇಚಿಚ್ಛುಶ್ರೂಷಂತೋ ದಿವಂ ಗತಾಃ |
ಅಹಿಂಸಯಾ ಪರೇ ಸ್ವರ್ಗಂ ಸತ್ಯೇನ ಚ ತಥಾ ಪರೇ ॥12॥
ಕೆಲವರು ತಂದೆ-ತಾಯಿಗಳನ್ನು ಸೇವಿಸುತ್ತಾ ಸ್ವರ್ಗಕ್ಕೆ ಹೋಗಿರುತ್ತಾರೆ. ಅಹಿಂಸಾ ಧರ್ಮವನ್ನು ಆಶ್ರಯಿಸಿ ಸತ್ಯಮಾರ್ಗದಲ್ಲಿ ಆಸಕ್ತರಾಗಿಯೂ ಸ್ವರ್ಗಕ್ಕೆ ಹೋಗಿರುತ್ತಾರೆ.
ಆಹವೇಽಭಿಮುಖಾಃ ಕೇಚಿನ್ನಿಹತಾಃ ಸ್ವಿದ್ದಿವಂ ಗತಾಃ |
ಕೇಚಿದುಂಛವ್ರತೈಃ ಸಿದ್ಧಾಃ ಸ್ವರ್ಗಮಾರ್ಗಸಮಾಶ್ರಿತಾಃ ॥13॥
ಕೆಲವರು ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿ, ಅವರಿಂದ ಹತರಾಗಿ ಸ್ವರ್ಗವನ್ನು ಸೇರಿದ್ದಾರೆ. ಉಂಛವೃತ್ತಿಯನ್ನು ಆಶ್ರಯಿಸಿ ಸಿದ್ಧಿಯನ್ನು ಪಡೆದು ಸ್ವರ್ಗಕ್ಕೆ ಹೋಗಿರುತ್ತಾರೆ.
ಕೇಚಿದಧ್ಯಯನೇ ಯುಕ್ತಾ ವೇದವ್ರತಪರಾಃ ಶುಭಾಃ |
ಬುದ್ಧಿಮಂತೋ ಗತಾಃ ಸ್ವರ್ಗಂ ತುಷ್ಟಾತ್ಮಾನೋ ಜಿತೇಂದ್ರಿಯಾಃ ॥14॥
ಕೆಲವರು ವೇದಾಧ್ಯಯನದಲ್ಲಿ ತೊಡಗಿಸಿಕೊಂಡು, ವೇದವ್ರತ ಪರಾಯಣರಾಗಿ, ಶುಭವಾದ ಕ್ರಿಯೆಗಳಿಂದ ಕೂಡಿದವರಾಗಿ, ಸಂತೃಪ್ತ ಮನಸ್ಸಿನಿಂದ ಜಿತೇಂದ್ರಿಯರಾಗಿ ಸ್ವರ್ಗಕ್ಕೆ ಹೋಗಿರುತ್ತಾರೆ.
ಆರ್ಜವೇನಾಪರೇ ಯುಕ್ತಾ ನಿಹತಾನಾರ್ಜವೈರ್ಜನೈಃ |
ಋಜವೋ ನಾಕಪೃಷ್ಠೇ ವೈ ಶುದ್ಧಾತ್ಮಾನಃ ಪ್ರತಿಷ್ಠಿತಾಃ ॥15॥
ಕೆಲವರು ಶುದ್ಧರಾದ ಜೀವರು ಸರಳವಾದ ಋಜುಮಾರ್ಗದಲ್ಲೇ ಇದ್ದು ವಂಚಕರಿಂದ ಹತರಾಗಿ ಸ್ವರ್ಗವನ್ನು ಸೇರಿರುತ್ತಾರೆ.
ಏವಂ ಬಹುವಿಧೈರ್ಲೋಕೇ ಧರ್ಮದ್ವಾರೈರನಾವೃತೈಃ |
ಮಮಾಪಿ ಮತಿರಾವಿಗ್ನಾ ಮೇಘಲೇಖೇವ ವಾಯುನಾ ॥16॥
ಹೀಗೆ ಅನೇಕ ವಿಧವಾದ ದ್ವಾರಗಳಿಂದ ಕೂಡಿರುವ ಧರ್ಮವು ಲೋಕದಲ್ಲಿ ಇರುತ್ತಿರಲು ನನ್ನ ಮನಸ್ಸು ಯಾವ ಮಾರ್ಗವನ್ನು ಅನುಸರಿಸಬೇಕು ಎಂಬುದರ ಬಗ್ಗೆ ವಾಯುಹತವಾದ ಮೇಘಗಳ ಸಾಲಿನಂತೆ ಉದ್ವಿಗ್ನವಾಗಿದೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೆಂಟನೆಯ ಅಧ್ಯಾಯ
ನಾಗರಾಜನ ಸದಾಚಾರವನ್ನು ವರ್ಣಿಸಿದುದು.
ಅತಿಥಿಃ
ಉಪದೇಶಂ ತು ತೇ ವಿಪ್ರಾ ಕರಿಷ್ಯೇಽಹಂ ಯಥಾಗಮಮ್ |
ಗುರುಣಾ ಮೇ ಯಥಾಖ್ಯಾತಮರ್ಥತಸ್ತಚ್ಚ ಮೇ ಶೃಣು ||1||
ಅತಿಥಿ ಬ್ರಾಹ್ಮಣನೇ, ಗುರುಗಳು ಯಾವ ಯಥಾರ್ಥವಾದ ಉಪದೇಶವನ್ನು ನನಗೆ ಮಾಡಿದ್ದಾರೋ ಅದನ್ನೇ ನಿನಗೆ ಉಪದೇಶಿಸುತ್ತೇನೆ. ಆ ಉಪಾಖ್ಯಾನವನ್ನು ಕೇಳು.
ಯತ್ರ ಪೂರ್ವಾಭಿಸರ್ಗೇಣ ಧರ್ಮಚಕ್ರಂ ಪ್ರವರ್ತಿತಮ್ |
ನೈಮಿಷೇ ಗೋಮತೀತೀರೇ ತತ್ರ ನಾಗಾಹ್ವಯಂ ಪುರಮ್ ||2||
ಹಿಂದಿನ ಕಲ್ಪದಲ್ಲಿ ಆ ಯುಗಕ್ಕೆ ಸಂಬಂಧಿಸಿದಂತೆ ಧರ್ಮಚಕ್ರವು ನಡೆಯುತ್ತಿತ್ತು. ನೈಮಿಷಾರಣ್ಯದಲ್ಲಿ ಗೋಮತೀ ನದಿಯ ತೀರದಲ್ಲಿ ನಾಗ ಎಂಬ ಪಟ್ಟಣವಿತ್ತು.
ಸಮಗ್ರೈಸ್ತ್ರಿದಶೈಸ್ತತ್ರ ಇಷ್ಟಮಾಸೀದ್ ದ್ವಿಜರ್ಷಭ |
ಯತ್ರೇಂದ್ರಾತಿಕ್ರಮಂ ಚಕ್ರೇ ಮಾಂಧಾತಾ ರಾಜಸತ್ತಮಃ ||3||
ಅಲ್ಲಿ ಸಮಸ್ತ ದೇವತೆಗಳು ಯಾಗ ಮಾಡುತ್ತಿದ್ದರು. ಅದರಂತೆ ಶ್ರೇಷ್ಠ ರಾಜನಾದ ಮಾಂಧಾತ ಎಂಬ ರಾಜನು ಅಲ್ಲಿ ಯಾಗ ಮಾಡುತ್ತಿದ್ದನು. ಅವನು ಯಜ್ಞದಿಂದ ಇಂದ್ರನನ್ನೂ ಮೀರಿಸಿದ್ದನು.
ಕೃತಾಧಿವಾಸೋ ಧರ್ಮಾತ್ಮಾ ತತ್ರ ಚಕ್ಷುಃಶ್ರವಾ ಮಹಾನ್ |
ಪದ್ಮನಾಭೋ ಮಹಾಭಾಗಃ ಪದ್ಮ ಇತ್ಯೇವ ವಿಶ್ರುತಃ ||4||
ಅದೇ ನಾಗಪುರದಲ್ಲಿ ಧರ್ಮಬುದ್ಧಿಯನ್ನು ಹೊಂದಿರುವ ಸರ್ಪವೊಂದು ವಾಸ ಮಾಡುತ್ತಿತ್ತು. ಆ ಮಹಾನಾಗನ ಹೆಸರು ಪದ್ಮನಾಭ ಎಂದು. ಅವನು ಪದ್ಮ ಎಂದೇ ಪ್ರಸಿದ್ಧನಾಗಿದ್ದನು.
ಸ ವಾಚಾ ಕರ್ಮಣಾ ಚೈವ ಮನಸಾ ಚ ದ್ವಿಜರ್ಷಭ |
ಪ್ರಸಾದಯತಿ ಭೂತಾನಿ ತ್ರಿವಿಧೇ ವರ್ತ್ಮನಿ ಸ್ಥಿತಃ ||5||
ಆ ಪದ್ಮನು ಮಾತು-ಮನಸ್ಸು-ಕೃತಿಗಳಿಂದ ಕರ್ಮ-ಉಪಾಸನೆ-ಜ್ಞಾನ ಈ ರೀತಿಯಾದ ಧರ್ಮ ಮಾರ್ಗಗಳನ್ನು ಆಶ್ರಯಿಸಿದ್ದನು.
ಸಾಮ್ನಾ ದಾನೇನ ಭೇದೇನ ದಂಡೇನೇತಿ ಚತುರ್ವಿಧಮ್ |
ವಿಷಮಸ್ಥಂ ಜನಂ ಸ್ವಂ ಚ ಚಕ್ಷುರ್ಧ್ಯಾನೇನ ರಕ್ಷತಿ ||6||
ಸಾಮ-ದಾನ-ಭೇದ-ದಂಡ ಎಂಬ ನಾಲ್ಕು ವಿಧವಾದ ಉಪಾಯಗಳಿಂದ ವಿಭಿನ್ನ ಜನರನ್ನು ಸನ್ಮಾರ್ಗಕ್ಕೆ ತರುತ್ತಿದ್ದನು. ಕಣ್ಣುಗಳನ್ನು ಮುಚ್ಚಿ ಧ್ಯಾನಿಸಿ ಜನರಿಗೆ ಒದಗಿರುವ ಕಷ್ಟಗಳನ್ನು ತಿಳಿದು ರಕ್ಷಣೆ ನೀಡುತ್ತಿದ್ದನು. ಅವನು ಇಂದಿಗೂ ಹೀಗೆ ಕ್ರಿಯೆಗಳನ್ನು ಮಾಡುತ್ತಲೇ ಇದ್ದಾನೆ. ಇಂದಿಗೂ ಜೀವಂತವಾಗಿ ಇದ್ದಾನೆ.
ತಮಭಿಕ್ರಮ್ಯ ವಿಧಿನಾ ಪ್ರಷ್ಟುಮರ್ಹಸಿ ಕಾಂಕ್ಷಿತಮ್ |
ಸ ತೇ ಪರಮಕಂ ಧರ್ಮಂ ನಮಿಥ್ಯಾ ದರ್ಶಯಿಷ್ಯತಿ ||7||
ನೀನು ಆ ನಾಗರಾಜನ ಸಮೀಪಕ್ಕೆ ಹೋಗಿ ವಿಧಿಬದ್ಧವಾದ ಪ್ರಶ್ನೆಗಳನ್ನು ಕೇಳು. ಅವನು ನಿನಗೆ ಶ್ರೇಷ್ಠವಾದ ಧರ್ಮಗಳನ್ನೇ ಉಪದೇಶಿಸುತ್ತಾನೆ. ಮಿಥ್ಯಾ ಮಾರ್ಗವನ್ನು ಎಂದಿಗೂ ತೋರಿಸುವುದಿಲ್ಲ.
ಸ ಹಿ ಸರ್ವಾತಿಥಿರ್ನಾಗೋ ಬುದ್ಧಿಶಾಸ್ತ್ರವಿಶಾರದಃ |
ಗುಣೈರನವಮೈರ್ಯುಕ್ತಃ ಸಮಸ್ತೈರಾಭಿಕಾಮಿಕೈಃ ||8||
ಆ ನಾಗನು ಮಹಾಬುದ್ಧಿವಂತನು. ಅತಿಥಿಗಳಲ್ಲಿ ಸತ್ಕಾರ ಬುದ್ಧಿಯುಳ್ಳವನು. ಶಾಸ್ತ್ರವೇತ್ತೃವು. ಎಲ್ಲರೂ ಬಯಸುವ ಶ್ರೇಷ್ಠವಾದ ಗುಣಗಳಿಂದ ಕೂಡಿದವನು.
ಪ್ರಕೃತ್ಯಾ ನಿತ್ಯಸಲಿಲೋ ನಿತ್ಯಮಧ್ಯಯನೇ ರತಃ |
ತಪೋದಮಾಭ್ಯಾಂ ಸಂಯುಕ್ತೋ ವೃತ್ತೇನಾನವರೇಣ ಚ ||9||
ಸ್ವಾಭಾವಿಕವಾಗಿಯೇ ನೀರಿನಂತೆ ನಿರ್ಮಲನು. ಅಧ್ಯಯನದಲ್ಲಿ ಆಸಕ್ತನು. ತಪಸ್ಸು ಇಂದ್ರಿಯನಿಗ್ರಹ ಇವುಗಳಲ್ಲಿ ರತನು. ತಪ್ಪಾಗದೆ ಇರುವ ಸದಾಚಾರಗಳಲ್ಲಿ ನಿರತನು.
ಯಜ್ವಾ ದಾನರುಚಿಃ ಕ್ಷಾಂತೋ ವೃತ್ತೇ ಚ ಪರಮೇ ಸ್ಥಿತಃ |
ಸತ್ಯವಾಗನಸೂಯಶ್ಚ ಶೀಲವಾನಭಿಸಂಶ್ರಿತಃ ||10||
ದಾನಶೀಲನೂ, ಯಜ್ಞಶೀಲನೂ, ಕ್ಷಮಾವಂತನೂ, ಸದಾಚಾರಿಯೂ, ಸತ್ಯವಾದಿಯೂ, ಅಸೂಯಾರಹಿತನೂ, ಶೀಲವಂತನೂ, ಜಿತೇಂದ್ರಿಯನೂ ಆಗಿದ್ದಾನೆ.
ಶೇಷಾನ್ನಭೋಕ್ತಾ ವಚನಾನುಕೂಲೋ
ಹಿತಾರ್ಜವೋತ್ಕೃಷ್ಟಕೃತಾಕೃತಜ್ಞಃ |
ಅವೈರಕೃದ್ ಭೂತಹಿತೇ ನಿಯುಕ್ತೋ
ಗಂಗಾಹ್ರದಾಂಭೋಽಭಿಜನೋಪಪನ್ನಃ ||11||
ಯಜ್ಞಶೇಷವೇ ಅವನ ಭೋಜನ. ಯೋಗ್ಯವಾದ ಮಾತುಗಳನ್ನಾಡುತ್ತಾನೆ. ಹಿತವನ್ನು ಮಾಡುತ್ತಾನೆ. ಋಜುಸ್ವಭಾವದವನು.

ಕರ್ತವ್ಯಾಕರ್ತವ್ಯ ವಿವೇಕಿಯು. ಯಾರನ್ನೂ ದ್ವೇಷ ಮಾಡನು. ಪ್ರಾಣಿಹಿತಚಿಂತಕನು. ಗಂಗಾನದಿಯಂತೆ ನಿರ್ಮಲವಾದ ಕುಲದಲ್ಲಿ ಹುಟ್ಟಿದವನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟಾಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂಬತ್ತನೆಯ ಅಧ್ಯಾಯ
ಅತಿಥಿಯ ಮಾತಿನಂತೆ ನಾಗರಾಜನ ಬಳಿ ತೆರಳಿದ ಬ್ರಾಹ್ಮಣ.
ಬ್ರಾಹ್ಮಣಃ
ಅತಿಭಾರೋದ್ಯತಸ್ಯೈವ ಭಾರಾಪನಯನಂ ಮಹತ್ ।
ಪರಾಶ್ವಾಸಕರಂ ವಾಕ್ಯಮಿದಂ ಮೇ ಭವತಃ ಶ್ರುತಮ್ ॥1॥
ಬ್ರಾಹ್ಮಣ ಅತಿಥಿದೇವನೇ, ಭಾರವಾದ ನನ್ನ ಮನಸ್ಸಿನ ಭಾರವನ್ನು ಪರಿಹರಿಸಿರುವೆ. ಮತ್ತೊಬ್ಬರಿಗೆ ಸಮಾಧಾನವನ್ನು ನೀಡುವ ಮಾತುಗಳನ್ನು ನಿನ್ನಿಂದ ನಾನು ಕೇಳಿದ್ದೇನೆ.
ಅಧ್ವಕ್ಲಾಂತಸ್ಯ ಶಯನಂ ಸ್ಥಾನಕ್ಲಾಂತಸ್ಯ ಚಾಸನಮ್ ।
ತೃಷಿತಸ್ಯ ಚ ಪಾನೀಯಂ ಕ್ಷುಧಾರ್ತಸ್ಯ ಚ ಭೋಜನಮ್ ॥2॥
ಪ್ರಯಾಣ ಮಾಡಿ ಬಳಲಿದವನಿಗೆ ಹಾಸಿಗೆ ಕೊಟ್ಟಂತೆ, ನಿಂತು ಬಳಲಿದವನಿಗೆ ಆಸನ ಕೊಟ್ಟಂತೆ, ತೃಷೆಯಿಂದ ಕಂಗೆಟ್ಟವನಿಗೆ ನೀರು ಕೊಟ್ಟಂತೆ, ಹಸಿವೆಯಿಂದ ಕಂಗಾಲಾದವನಿಗೆ ಭೋಜನ ನೀಡಿದಂತೆ ನಿನ್ನ ಮಾತಿನಿಂದ ಸಂತುಷ್ಟನಾಗಿದ್ದೇನೆ.
ಈಪ್ಸಿತಸ್ಯೇವ ಸಂಪ್ರಾಪ್ತಿರನ್ನಸ್ಯ ಸಮಯೇಽತಿಥೇಃ ।
ಏಷಿತಸ್ಯಾತ್ಮನಃ ಕಾಲೇ ವೃದ್ಧಸ್ಯೇವ ಸುತೋ ಯಥಾ ॥3॥
ಮನಸಾ ಚಿಂತಿತಸ್ಯೇವ ಪ್ರೀತಿಸ್ನಿಗ್ಧಸ್ಯ ದರ್ಶನಮ್ ।
ಪ್ರಹ್ಲಾದಯತಿ ಮಾಂ ವಾಕ್ಯಂ ಭವತಾ ಯದುದೀರಿತಮ್ ॥4॥
ಹಸಿದ ಅತಿಥಿಗೆ ಯೋಗ್ಯಕಾಲದಲ್ಲಿ ಬಯಸಿದ ಅನ್ನವೇ ದೊರೆತಾಗ ಎಷ್ಟು ಸಂತೋಷವಾಗುತ್ತದೋ, ಮಕ್ಕಳೇ ಇಲ್ಲದ ವೃದ್ಧನಿಗೆ ಪುತ್ರಪ್ರಾಪ್ತಿಯಾದರೆ ಎಷ್ಟು ಸಂತೋಷವಾಗುತ್ತದೋ, ಮನಸ್ಸಿನಲ್ಲಿ ನೆನೆದ ಗೆಳೆಯನು ಪ್ರತ್ಯಕ್ಷವಾಗಿ ಬಂದಾಗ ಎಷ್ಟು ಸಂತೋಷವಾಗುತ್ತದೋ, ನೀನು ಹೇಳಿದ ಮಾತುಗಳು ನನಗೆ ಅಷ್ಟೇ ಸಂತೋಷವನ್ನು ನೀಡಿವೆ.
ದತ್ತಚಕ್ಷುರಿವಾಕಾಶೇ ಪಶ್ಯಾಮಿ ವಿಮೃಶಾಮಿ ಚ ।
ಪ್ರಜ್ಞಾ ನವಚನಾದ್ಯೋಽಯಮುಪದೇಶೋ ಹಿ ಮೇ ಕೃತಃ ।
ಬಾಢಮೇವಂ ಕರಿಷ್ಯಾಮಿ ಯಥಾ ಮಾಂ ಭಾಷತೇ ಭವಾನ್ ॥5॥
ನಿನ್ನಿಂದ ಜ್ಞಾನವನ್ನು ಪಡೆದ ನಾನು ಕುರುಡನಿಗೆ ಕಣ್ಣು ಕೊಟ್ಟಂತೆ ಮುಂದಿನ ಮಾರ್ಗವೇನು ಎಂದು ವಿಮರ್ಶೆ ಮಾಡುತ್ತೇನೆ, ಮಾರ್ಗವನ್ನು ನೋಡುತ್ತೇನೆ. ಜ್ಞಾನಮಯವಾದ ಮಾತಿನ ಮೂಲಕ ನನಗೆ ಉಪದೇಶಿಸಿರುವಿ. ನೀನು ಹೇಳಿದಂತೆ ಮಾಡುತ್ತೇನೆ.
ಇಹೇಮಾಂ ರಜನೀಂ ಸಾಧೋ ನಿವಸಸ್ವ ಮಯಾ ಸಹ ।
ಪ್ರಭಾತೇ ಯಾಸ್ಯತಿ ಭವಾನ್ ಪರ್ಯಾಶ್ವಸ್ತಃ ಸುಖೋಷಿತಃ ।
ಅಸೌ ಹಿ ಭಗವಾನ್ ಸೂರ್ಯೋ ಮಂದರಶ್ಮಿರವಾಙ್ಮುಖಃ ॥6॥
ಈಗ ರಾತ್ರಿಯಾಗಿದೆ. ನೀನು ಇಲ್ಲೇ ವಿಶ್ರಾಂತಿಯನ್ನು ಪಡೆ. ವಿಶ್ರಾಂತಿಯನ್ನು ಪಡೆದು ದಣಿವನ್ನು ನೀಗಿಸಿಕೊಂಡು ಬೆಳಿಗ್ಗೆಯಾದ ಬಳಿಕ ಪ್ರಯಾಣಿಸು. ಸೂರ್ಯನು ಪಶ್ಚಿಮ ದಿಕ್ಕಿಗೆ ಸಾಗುತ್ತಾ ಮಂದರಶ್ಮಿಯಾಗುತ್ತಿದ್ದಾನೆ. ಈಗ ಪ್ರಯಾಣ ಮಾಡಬೇಡ.
ಭೀಷ್ಮಃ
ತತಸ್ತೇನ ಕೃತಾತಿಥ್ಯಃ ಸೋಽತಿಥಿಃ ಶತ್ರುಸೂದನ ।
ಉವಾಸ ಕಿಲ ತಾಂ ರಾತ್ರಿಂ ಸಹ ತೇನ ದ್ವಿಜೇನ ವೈ ॥7॥
ಭೀಷ್ಮ ಧರ್ಮಜನೇ, ನಂತರ ಬ್ರಾಹ್ಮಣನಿಂದ ಸತ್ಕೃತನಾದ ಅತಿಥಿಯು ಆ ರಾತ್ರಿಯನ್ನು ಬ್ರಾಹ್ಮಣನ ಮನೆಯಲ್ಲಿಯೇ ಕಳೆದನು.
ತತ್ತಚ್ಚ ಧರ್ಮಸಂಯುಕ್ತಂ ತಯೋಃ ಕಥಯತೋಸ್ತದಾ ।
ವ್ಯತೀತಾ ಸಾ ನಿಶಾ ಕೃತ್ಸ್ನಾ ಸುಖೇನ ದಿವಸೋಪಮಾ ॥8॥
ಮೋಕ್ಷಧರ್ಮಕ್ಕೆ ಸಂಬಂಧಿಸಿದ ಮಾತುಗಳನ್ನಾಡುತ್ತಿದ್ದ ಅವರಿಬ್ಬರಿಗೂ ಸಮಗ್ರ ರಾತ್ರಿಯು ಹಗಲಿನಂತೆ ಸುಖವಾಗಿ ಕಳೆದುಹೋಯಿತು.
ತತಃ ಪ್ರಭಾತಸಮಯೇ ಸೋಽತಿಥಿಸ್ತೇನ ಪೂಜಿತಃ ।
ಬ್ರಾಹ್ಮಣೇನ ಯಥಾಶಕ್ತ್ಯಾ ಸ್ವಕಾರ್ಯಮಭಿಕಾಂಕ್ಷತಾ ॥9॥
ಪುನಃ ಪ್ರಾತಃಕಾಲವಾಗುತ್ತಿರಲು ಕಾರ್ಯದ ಸಿದ್ಧಿಗಾಗಿ ಹವಣಿಸಿದ ಬ್ರಾಹ್ಮಣನು ಅತಿಥಿಯನ್ನು ವಿಧಿಬದ್ಧವಾಗಿ ಪೂಜಿಸಿದನು. ಅತಿಥಿಯು ಬ್ರಾಹ್ಮಣನ ಅನುಮತಿಯನ್ನು ಪಡೆದು ಹೊರಟು ಹೋದನು.
ತತಃ ಸ ವಿಪ್ರಃ ಕೃತಧರ್ಮನಿಶ್ಚಯಃ
ಕೃತಾಭ್ಯನುಜ್ಞಃ ಸ್ವಜನೇನ ಧರ್ಮವಿತ್ ।
ಯಥೋಪದಿಷ್ಟಂ ಭುಜಗೇಂದ್ರಸಂಶ್ರಯಂ
ಜಗಾಮ ಕಾಲೇ ಸುಕೃತೈಕನಿಶ್ಚಯಃ ॥10॥

ಧರ್ಮಶೀಲನಾದ ಬ್ರಾಹ್ಮಣನು ತಾನು ಬಯಸಿದ ಕಾರ್ಯವನ್ನು ಹೊಂದಲು ಇಚ್ಛಿಸಿದವನಾಗಿ, ಬಾಂಧವರಿಂದ ಅನುಮತಿಯನ್ನು ಪಡೆದು ಅತಿಥಿಯು ಹೇಳಿದ ಸ್ಥಳಕ್ಕೆ ಪದ್ಮನಾಭನ ನಾಗಪುರಕ್ಕೆ ಪ್ರಯಾಣ ಮಾಡಿದನು. ಸುಕೃತಫಲವನ್ನು ಪಡೆದುಕೊಳ್ಳಬೇಕೆಂಬುದು ಬ್ರಾಹ್ಮಣನ ನಿಶ್ಚಯವಾಗಿತ್ತು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕೋನನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತನೆಯ ಅಧ್ಯಾಯ
ಬ್ರಾಹ್ಮಣನು ಪದ್ಮರಾಜನ ಮನೆಗೆ ಆಗಮಿಸಿದುದು. ಅವನ ಪತ್ನಿಯಿಂದ ಸತ್ಕಾರ.
ಭೀಷ್ಮಃ
ಸ ವನಾನಿ ವಿಚಿತ್ರಾಣಿ ತೀರ್ಥಾನಿ ಚ ಸರಾಂಸಿ ಚ |
ಅಭಿಗಚ್ಛನ್ ಕ್ರಮೇಣ ಸ್ಮ ಕಂಚಿನ್ಮುನಿಮುಪಸ್ಥಿತಃ ॥1॥
ಭೀಷ್ಮ ಯುಧಿಷ್ಠಿರನೇ, ಆ ಬ್ರಾಹ್ಮಣನು ಪ್ರಯಾಣ ಮಾಡುತ್ತಾ ಚಿತ್ರವಾದ ವನಗಳನ್ನೂ, ತೀರ್ಥಗಳನ್ನೂ, ಸರೋವರಗಳನ್ನೂ ದಾಟಿ ಒಬ್ಬ ಋಷಿಯ ಬಳಿಗೆ ಹೋದನು.
ತಂ ಸ ತೇನ ಯಥೋದ್ದಿಷ್ಟಂ ನಾಗಂ ವಿಪ್ರೇಣ ಬ್ರಾಹ್ಮಣಃ |
ಪರ್ಯಪೃಚ್ಛದ್ ಯಥಾನ್ಯಾಯಂ ಶ್ರುತ್ವೈವ ಚ ಜಗಾಮ ಸಃ ॥2॥
ಆ ಋಷಿಯ ಬಳಿ, ಬ್ರಾಹ್ಮಣನು ಅತಿಥಿಯು ಹೇಳಿದ್ದ ನಾಗರಾಜನ ವಿಷಯವಾಗಿ ಪ್ರಶ್ನಿಸಿದನು. ಅವನಿಂದ ದಾರಿಯನ್ನು ತಿಳಿದು ಹಾಗೆಯೇ ಪ್ರಯಾಣವನ್ನು ಮುಂದುವರೆಸಿದನು.
ಸೋಽಭಿಗಮ್ಯ ಯಥಾಖ್ಯಾತಂ ನಾಗಾಯತನಮರ್ಥವಿತ್ |
ಪ್ರೋಕ್ತವಾನಹಮಸ್ಮೀತಿ ಭೋಃಶಬ್ದಾಲಂಕೃತಂ ವಚಃ ॥3॥
ಪ್ರಯಾಣದ ಉದ್ದೇಶವನ್ನು ಅರಿತಿದ್ದ ಬ್ರಾಹ್ಮಣನು ವಿಧಿಪೂರ್ವಕವಾಗಿ ಯಾತ್ರೆಯನ್ನು ಮುಗಿಸಿ ನಾಗರಾಜನ ಮನೆಯನ್ನು ಮುಟ್ಟಿದನು. ಬಾಗಿಲಲ್ಲಿ ನಿಂತು ಭೋಃ ಎಂಬ ಶಬ್ದದಿಂದ ಅಲಂಕೃತವಾದ ಅಹಮಸ್ಮಿ ಎಂಬ ವಾಕ್ಯವನ್ನು ಹೇಳಿದನು. (ನಾನು ಇಲ್ಲಿಗೆ ಬಂದಿದ್ದೇನೆ ಎಂದು ಬಾಗಿಲಿನಲ್ಲಿ ನಿಂತು ಹೇಳಿದನು).
ತತಸ್ತಸ್ಯ ವಚಃ ಶ್ರುತ್ವಾ ರೂಪಿಣೀ ಧರ್ಮವತ್ಸಲಾ |
ದರ್ಶಯಾಮಾಸ ತಂ ವಿಪ್ರಾಂ ನಾಗಪತ್ನೀ ಪತಿವ್ರತಾ ॥4॥
ಬ್ರಾಹ್ಮಣನ ಮಾತನ್ನು ಕೇಳಿಸಿಕೊಂಡು ರೂಪವತಿಯಾದ, ಧರ್ಮವತ್ಸಲೆಯಾದ, ಪತಿವ್ರತೆಯಾದ ನಾಗಪತ್ನಿಯು ಆ ವಿಪ್ರನ ದೃಷ್ಟಿಗೆ ಬಿದ್ದಳು.
ಸಾ ತಸ್ಮೈ ವಿಧಿವತ್ ಪೂಜಾಂ ಚಕ್ರೇ ಧರ್ಮಪರಾಯಣಾ |
ಸ್ವಾಗತೇನಾಗತಂ ಕೃತ್ವಾ ಕಿಂ ಕರೋಮೀತಿ ಚಾಬ್ರುವೀತ್ ॥5॥
ಕೂಡಲೇ ಧರ್ಮಪರಾಯಣೆಯಾದ ನಾಗಪತ್ನಿಯು ಬ್ರಾಹ್ಮಣನನ್ನು ವಿಧಿಪೂರ್ವಕವಾಗಿ ಸ್ವಾಗತಿಸಿ ಮನೆಯಲ್ಲಿ ಕರೆದು ಸತ್ಕರಿಸುತ್ತಾ ಬ್ರಾಹ್ಮಣನೇ, ನಿನಗೆ ಹೇಗೆ ಉಪಚರಿಸಲಿ? ನಾನೇನು ಮಾಡಲಿ? ಎಂದು ಪ್ರಶ್ನಿಸಿದಳು.
ಬ್ರಾಹ್ಮಣಃ
ವಿಶ್ರಾಂತೋಭ್ಯರ್ಚಿತಶ್ಚಾಸ್ಮಿ ಭವತ್ಯಾ ಶ್ಲಕ್ಷ್ಣಯಾ ಗಿರಾ |
ದ್ರಷ್ಟುಮಿಚ್ಛಾಮಿ ಭವತಿ ತಂ ದೇವಂ ನಾಗಮುತ್ತಮಮ್ ॥6॥
ಬ್ರಾಹ್ಮಣ ದೇವಿಯೇ, ನೀನು ಮಧುರವಾದ ಮಾತಿನಿಂದ ನನ್ನನ್ನು ಸ್ವಾಗತಿಸಿ ವಿಧಿವತ್ತಾಗಿ ಸತ್ಕರಿಸಿದೆ. ಇದರಿಂದಲೇ ನನ್ನ ಮಾರ್ಗಾಯಾಸವು ಪರಿಹಾರವಾಯಿತು. ನಾನು ಶ್ರೇಷ್ಠನಾದ ನಾಗದೇವನನ್ನು ನೋಡಲು ಆಗಮಿಸಿದ್ದೇನೆ.
ಏತದ್ಧಿ ಪರಮಂ ಕಾರ್ಯಮೇತನ್ಮೇ ಫಲಮೀಪ್ಸಿತಮ್ |
ಅನೇನಾರ್ಥೇನ ಚಾಸ್ಮ್ಯದ್ಯ ಸಂಪ್ರಾಪ್ತಃ ಪನ್ನಗಾಲಯಮ್ ॥7॥
ಇದೇ ನನ್ನ ಶ್ರೇಷ್ಠವಾದ ಕಾರ್ಯವಾಗಿದೆ. ನನ್ನ ಮನಸ್ಸಿನ ಅಭಿಲಾಷೆಯೂ ಇದೇ. ಈ ಉದ್ದೇಶದಿಂದಲೇ ನಾನು ನಾಗರಾಜನ ಮನೆಗೆ ಬಂದಿರುತ್ತೇನೆ.
ನಾಗಭಾರ್ಯಾ
ಆರ್ಯ ಸೂರ್ಯರಥಂ ವೋಢುಂ ಗತೋಽಸೌ ಮಾಸಚಾರಿಕಃ |
ಸಪ್ತಾಷ್ಟಭಿರ್ದಿನೈರ್ವಿಪ್ರ ದರ್ಶಯಿಷ್ಯತ್ಯಸಂಶಯಮ್ ॥8॥
ನಾಗಪತ್ನಿ ಬ್ರಾಹ್ಮಣಶ್ರೇಷ್ಠನೇ, ನನ್ನ ಪತಿಯು ವರ್ಷಕ್ಕೆ ಒಂದು ತಿಂಗಳಿನಂತೆ ಸೂರ್ಯನ ರಥವನ್ನು ಹೊರಲು ಅಲ್ಲಿಗೆ ಹೋಗಿದ್ದಾನೆ. ಇನ್ನು ಹದಿನೈದು ದಿನಗಳಲ್ಲಿ ನಿಶ್ಚಿತವಾಗಿಯೂ ಅವನು ಬಂದು ದರ್ಶನವನ್ನು ನೀಡುತ್ತಾನೆ.
ಏತದ್ ವಿದಿತಮಾರ್ಯಸ್ಯ ವಿವಾಸಕರಣಂ ಮಮ |
ಭರ್ತುರ್ಭವತು ಕಿಂ ಚಾನ್ಯತ್ಕ್ರಿಯತಾಂ ತದ್ವದಸ್ವ ಮೇ ॥9॥
ಆರ್ಯಪುತ್ರನ ಈ ಪ್ರಯಾಣಕಾರಣವನ್ನು ನಿನಗೆ ತಿಳಿಸಿದ್ದೇನೆ. ನನ್ನ ಪತಿಯ ಸಂದರ್ಶನವನ್ನು ಬಿಟ್ಟು ಬೇರೆ ಯಾವ ಕಾರ್ಯವನ್ನು ಮಾಡಿಕೊಡಲಿ? ನನಗೆ ಹೇಳು.
ಬ್ರಾಹ್ಮಣಃ

ಅನೇನ ನಿಶ್ಚಯೇನಾಹಂ ಸಾಧ್ವಿ ಸಂಪ್ರಾಪ್ತವಾನಿಹ |
ಪ್ರತೀಕ್ಷನ್ನಾಗಮಂ ದೇವಿ ವತ್ಸ್ಯಾಮ್ಯಸ್ಮಿನ್ ಮಹಾವನೇ ॥10॥
ಬ್ರಾಹ್ಮಣ ಸಾಧ್ವಿಯಾದ ನಾಗದೇವಿಯೇ, ನಾಗನನ್ನು ದರ್ಶನ ಮಾಡುವ ದೃಷ್ಟಿಯಿಂದಲೇ ನಾನಿಲ್ಲಿಗೆ ಬಂದಿರುತ್ತೇನೆ. ಆದ್ದರಿಂದ ಅವನ ಆಗಮನವನ್ನು ನಿರೀಕ್ಷಿಸುತ್ತಾ ಅರಣ್ಯದಲ್ಲಿ ವಾಸ ಮಾಡಿರುತ್ತೇನೆ.
ಸಂಪ್ರಾಪ್ತಸ್ಯೈವ ಚಾವ್ಯಗ್ರುಮಾವೇದ್ಯೋಽಹಮಿಹಾಗತಃ |
ಮಮಾಭಿಗಮನಂ ಪ್ರಾಪ್ತೋ ವಾಚ್ಯಶ್ಚ ವಚನಂ ತ್ವಯಾ ॥11॥
ಅವನು ಮನೆಗೆ ಬಂದ ಕೂಡಲೇ ನಾನು ಇಲ್ಲಿಗೆ ಬಂದಿರುವ ವಿಷಯವನ್ನು ಶಾಂತಭಾವದಿಂದ ನೀನು ತಿಳಿಸು. ಅವನು ನನ್ನ ಬಳಿ ಬಂದು ದರ್ಶನ ನೀಡುವಂತೆ ನಿನ್ನ ಪತಿಯ ಜೊತೆಗೆ ಮಾತನಾಡು.
ಅಹಮಪ್ಯತ್ರ ವತ್ಸ್ಯಾಮಿ ಗೋಮತ್ಯಾಃ ಪುಲಿನೇ ಶುಭೇ |
ಕಾಲಂ ಪರಿಮಿತಾಹಾರೋ ಯಥೋಕ್ತಂ ಪರಿಪಾಲಯನ್ ॥12॥
ನಾನು ಗೋಮತಿ ನದಿಯ ಸುಂದರವಾದ ಈ ಪ್ರದೇಶದಲ್ಲಿಯೇ ಮಿತಾಹಾರನಾಗಿ ನೀನು ಹೇಳಿರುವ ಕಾಲವನ್ನು ನಿರೀಕ್ಷಿಸುತ್ತಾ ವಾಸಿಸುತ್ತೇನೆ.
ಭೀಷ್ಮಃ
ತತಃ ಸ ವಿಪ್ರಸ್ತಾಂ ನಾಗೀಂ ಸಮಾಧಾಯ ಪುನಃ ಪುನಃ |
ತದೇವ ಪುಲಿನಂ ನದ್ಯಾಃ ಪ್ರಯಯೌ ಬ್ರಾಹ್ಮಣರ್ಷಭಃ ॥13॥
ಭೀಷ್ಮ ಹೀಗೆ ಹೇಳಿ ಶ್ರೇಷ್ಠನಾದ ಆ ಬ್ರಾಹ್ಮಣನು ನಾಗಪತ್ನಿಯನ್ನು ಪುನಃ ಸಮಾಧಾನಪಡಿಸಿ, ಗೋಮತಿ ನದಿಯ ಮರಳಿನ ಪ್ರದೇಶಕ್ಕೆ ಹೊರಟು ಹೋದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೊಂದನೆಯ ಅಧ್ಯಾಯ
ನಾಗರಾಜನ ದರ್ಶನಕ್ಕಾಗಿ ಬ್ರಾಹ್ಮಣನ ತಪಶ್ಚರಣೆ.
ಭೀಷ್ಮಃ
ಅಥ ತೇನ ನರಶ್ರೇಷ್ಠ ಬ್ರಾಹ್ಮಣೇನ ತಪಸ್ವಿನಾ |
ನಿರಾಹಾರೇಣ ವಸತಾ ದುಃಖಿತಾಸ್ತೇ ಭುಜಂಗಮಾಃ ॥1॥
ಭೀಷ್ಮ ನರಶ್ರೇಷ್ಠನೇ, ತಪಸ್ವಿಯಾದ ಬ್ರಾಹ್ಮಣನು ಗೋಮತಿ ನದಿಯ ತೀರದಲ್ಲಿ ಆಹಾರವನ್ನು ತೊರೆದು ತಪಸ್ಸನ್ನಾಚರಿಸಲು ಇವನ ಉಪವಾಸದಿಂದ ಸರ್ಪಗಳೆಲ್ಲವೂ ದುಃಖಿತವಾದವು.
ಸರ್ವೇ ಸಂಭೂಯ ಸಹಿತಾಸ್ತಸ್ಯ ನಾಗಸ್ಯ ಬಾಂಧವಾಃ |
ಭ್ರಾತರಸ್ತನಯಾ ಭಾರ್ಯಾ ಯಯುಸ್ತಂ ಬ್ರಾಹ್ಮಣಂ ಪ್ರತಿ ॥2॥
ನಾಗರಾಜನ ಬಂಧು-ಬಾಂಧವರು, ಪತ್ನಿ, ಮಕ್ಕಳು ಎಲ್ಲರೂ ಒಟ್ಟಾಗಿ ಬ್ರಾಹ್ಮಣನ ಬಳಿ ಹೋದರು.
ತೇಽಪಶ್ಯನ್ ಪುಲಿನೇ ತಂ ವೈ ವಿವಿಕ್ತೇ ನಿಯತವ್ರತಮ್ |
ಸಮಾಸೀನಂ ನಿರಾಹಾರಂ ದ್ವಿಜಂ ಜಪ್ಯಪರಾಯಣಮ್ ॥3॥
ತೇ ಸರ್ವೇ ಸಮಭಿಕ್ರಮ್ಯ ವಿಪ್ರಮಭ್ಯರ್ಚ್ಯ ಚಾಸಕೃತ್ |
ಊಚುರ್ವಾಕ್ಯಮಸಂದಿಗ್ಧಮಾತಿಥೇಯಸ್ಯ ಬಾಂಧವಾಃ ॥4॥
ಗೋಮತಿಯ ತೀರದಲ್ಲಿ ಏಕಾಂತ ಸ್ಥಳದಲ್ಲಿ ಜಿತೇಂದ್ರಿಯನಾಗಿ, ವ್ರತಾನುಷ್ಠಾನ ರತನಾಗಿ, ಆಹಾರವನ್ನು ತೊರೆದು ಮಂತ್ರವನ್ನು ಜಪಿಸುತ್ತಿರುವ ಬ್ರಾಹ್ಮಣನನ್ನು ಕಂಡರು. ಎಲ್ಲರೂ ಒಟ್ಟಾಗಿ ಬಂದು ಬ್ರಾಹ್ಮಣನನ್ನು ಅನೇಕ ಬಾರಿ ಸತ್ಕರಿಸಿ, ಸಂಶಯರಹಿತವಾದ ಮಾತುಗಳನ್ನು ಅತಿಥಿಯಾದ ಬ್ರಾಹ್ಮಣನಿಗೆ ಬಂಧುಗಳೆಲ್ಲ ಹೇಳಿದರು.
ಷಷ್ಠೋ ಹಿ ದಿವಸಸ್ತೇಽದ್ಯ ಪ್ರಾಪ್ತಸ್ಯೇಹ ತಪೋಧನ |
ನ ಚಾಭಿಲಷಸೇ ಕಿಂಚಿದಾಹಾರಂ ಧರ್ಮವತ್ಸಲ ॥5॥
ಧರ್ಮವತ್ಸಲನೇ, ತಪೋಧನನೇ, ನೀನು ಇಲ್ಲಿಗೆ ಆಗಮಿಸಿ ಆರು ದಿವಸಗಳಾದವು. ಆದರೆ ನೀನು ಸ್ವಲ್ಪವೂ ಆಹಾರವನ್ನು ಸ್ವೀಕರಿಸದೆ, ನಮ್ಮಿಂದ ಏನೂ ಬಯಸದೆ ಹಾಗೆ ಕುಳಿತಿರುವಿ.
ಅಸ್ಮಾನಭಿಗತಶ್ಚಾಸಿ ವಯಂ ಚ ತ್ವಾಮುಪಸ್ಥಿತಾಃ |
ಕಾರ್ಯಂ ಚಾತಿಥ್ಯಮಸ್ಮಾಭಿರ್ವಯಂ ಸರ್ವೇ ಕುಟುಂಬಿನಃ ॥6॥
ನಮ್ಮ ಮನೆಗೆ ಅತಿಥಿಯಾಗಿ ನೀನು ಆಗಮಿಸಿರುವಿ. ನಾವೆಲ್ಲರೂ ನಿನ್ನ ಬಳಿ ಆಗಮಿಸಿದ್ದೇವೆ. ನಾಗರಾಜನ ಕುಟುಂಬಿಗಳಾದ ನಾವೆಲ್ಲರೂ ನಿನಗೆ ಆತಿಥ್ಯವನ್ನು ಮಾಡುವುದು ಕರ್ತವ್ಯವಾಗಿದೆ.
ಮೂಲಂ ಫಲಂ ವಾ ಪರ್ಣಂ ವಾ ಪಯೋ ವಾ ದ್ವಿಜಸತ್ತಮ |
ಆಹಾರಹೇತೋರನ್ನಂ ವಾ ಭೋಕ್ತುಮರ್ಹಸಿ ಬ್ರಾಹ್ಮಣ ॥7॥
ಬ್ರಾಹ್ಮಣನೇ, ಗೆಡ್ಡೆಗಳಾಗಲಿ, ಹಣ್ಣಾಗಲಿ, ಎಲೆಯಾಗಲಿ, ಹಾಲಾಗಲಿ ಆಹಾರಕ್ಕಾಗಿ ಅನ್ನವನ್ನಾಗಲಿ ನೀನು ಸ್ವೀಕರಿಸಲು ಅರ್ಹನಾಗಿರುವಿ.

ತ್ಯಕ್ತಾಹಾರೇಣ ಭವತಾ ವನೇ ನಿವಸತಾ ಸತಾ |
ಬಾಲವೃದ್ಧಮಿದಂ ಸರ್ವಂ ಪೀಡ್ಯತೇ ಧರ್ಮಸಂಕಟಾತ್ ॥8॥
ಈ ನಮ್ಮ ವನದಲ್ಲಿಯೇ ವಾಸ ಮಾಡುತ್ತಾ ಆಹಾರವನ್ನು ತ್ಯಜಿಸಿರುವ ನಿನ್ನಿಂದ ಆಬಾಲವೃದ್ಧರಾದ ನಾವೆಲ್ಲರೂ ಧರ್ಮಸಂಕಟದಿಂದ ಪೀಡಿತರಾಗಿದ್ದೇವೆ.
ನ ಹಿ ನೋ ಭ್ರೂಣಹಾ ಕಶ್ಚಿದ್ ರಾಜಾಪಥ್ಯೋಽನೃತೋಽಪಿ ವಾ |
ಪೂರ್ವಾಶೀ ವಾ ಕುಲೇ ಹ್ಯಸ್ಮಿನ್ ದೇವತಾತಿಥಿಬಂಧುಷು ॥9॥
ಈ ನಮ್ಮ ಕುಲದಲ್ಲಿ ಭ್ರೂಣಹತ್ಯೆಯನ್ನು ಮಾಡಿದವನಾಗಲಿ, ರಾಜನಿಗೆ ವಿರುದ್ಧವಾಗಿ ವರ್ತಿಸಿದವನಾಗಲಿ, ಸುಳ್ಳು ಮಾತುಗಳನ್ನು ಹೇಳುವವನಾಗಲಿ, ದೇವತೆ, ಅತಿಥಿಗಳಿಗೆ ನೀಡದೆ ಉಣ್ಣುವವನಾಗಲಿ ಯಾರೂ ಇರುವುದಿಲ್ಲ.
ಬ್ರಾಹ್ಮಣಃ
ಉಪದೇಶೇನ ಯುಷ್ಮಾಕಮಾಹಾರೋಽಯಂ ಮಯಾ ವೃತಃ |
ದ್ವಿರೂನಂ ದಶರಾತ್ರಂ ವೈ ನಾಗಸ್ಯಾಗಮನಂ ಪ್ರತಿ ॥10॥
ಬ್ರಾಹ್ಮಣ ನಿಮ್ಮ ಹಿತಕರವಾದ ಮಾತುಗಳಿಂದಲೇ ನಾನು ಆಹಾರವನ್ನು ಸ್ವೀಕರಿಸಿದಂತಾಯಿತು. ನಾಗರಾಜನ ಆಹಾರಕ್ಕೆ ಹತ್ತಕ್ಕೆ ಎರಡು ದಿನ ಕಡಿಮೆಯಾದ ರಾತ್ರಿಗಳು ಮಾತ್ರ ಉಳಿದಿರುತ್ತವೆ. (ಅರ್ಥಾತ್ ಎಂಟು ದಿನ ಮಾತ್ರ ಉಳಿದಿವೆ).
ಯದ್ಯಷ್ಟರಾತ್ರೇ ನಿರ್ಯಾತೇ ನಾಗಮಿಷ್ಯತಿ ಪನ್ನಗಃ |
ತದಾಹಾರಂ ಕರಿಷ್ಯಾಮಿ ತನ್ನಿಮಿತ್ತಮಿದಂ ವ್ರತಮ್ ॥11॥
ಒಂದು ವೇಳೆ ಎಂಟು ದಿವಸ ಕಳೆದ ಬಳಿಕವೂ ನಾಗರಾಜನು ಆಗಮಿಸದಿದ್ದಲ್ಲಿ ನಾನು ಆಹಾರವನ್ನು ಸೇವಿಸುತ್ತೇನೆ. ಅವನನ್ನು ನೋಡುವ ದೃಷ್ಟಿಯಿಂದಲೇ ನನ್ನ ಈ ವ್ರತವು. ನಾನು ವ್ರತನಿಷ್ಠನಾಗಿರುವುದರಿಂದ ನಿರಾಹಾರನಾಗಿದ್ದೇನೆ ಎಂದು ನೀವು ದುಃಖ ಪಡಬೇಡಿರಿ. ಅವನ ಸಂದರ್ಶನಕ್ಕಾಗಿ ಈ ವ್ರತವು.
ಕರ್ತವ್ಯೋ ನ ಚ ಸಂತಾಪೋ ಗಮ್ಯತಾಂ ಚ ಯಥಾಗತಮ್ |
ತನ್ನಿಮಿತ್ತಂ ವ್ರತಂ ಮಹ್ಯಂ ನೈತದ್ ಭೇತ್ತುಮಿಹಾರ್ಹಥ ॥12॥
ನೀವು ಬಂದಂತೆ ಹೊರಟು ಹೋಗಿರಿ. ನನ್ನ ಕರ್ತವ್ಯಕ್ಕೆ ವಿಘ್ನ ಒಡ್ಡದಿರಿ. ಅವನ ನಿಮಿತ್ತವಾಗಿ ಅನುಷ್ಠಾನ ಮಾಡುವ ವ್ರತವನ್ನು ಭಂಗಪಡಿಸಬೇಡಿ. ಇದು ನಿಮಗೆ ಯೋಗ್ಯವಲ್ಲ.
ಭೀಷ್ಮಃ
ತೇನ ತೇ ಸಮನುಜ್ಞಾತಾ ಬ್ರಾಹ್ಮಣೇನ ಭುಜಂಗಮಾಃ |
ಸ್ವಮೇವ ಭವನಂ ಜಗ್ಮುರಕೃತಾರ್ಥಾ ನರರ್ಷಭ ॥13॥
ಭೀಷ್ಮ ಬ್ರಾಹ್ಮಣನು ಹೇಳಿದ ಮಾತನ್ನು ಕೇಳಿ ನಾಗಗಳೆಲ್ಲರೂ ಅವನ ಅನುಮತಿಯನ್ನು ಪಡೆದು ಏನೂ ಮಾಡಲಾಗದೆ ತಮ್ಮ ತಮ್ಮ ಮನೆಗಳಿಗೆ ತೆರಳಿದರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಏಕನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೆರಡನೆಯ ಅಧ್ಯಾಯ
ನಾಗರಾಜನು ಮನೆಗೆ ಆಗಮಿಸಿದುದು. ನಾಗಪತ್ನಿಯು ಬ್ರಾಹ್ಮಣನನ್ನು ನೋಡಲು ಒತ್ತಾಯಿಸಿದುದು.
ಭೀಷ್ಮಃ
ಅಥ ಕಾಲೇ ಬಹುತಿಥೇ ಪೂರ್ಣೇ ಪ್ರಾಪ್ತೋ ಭುಜಂಗಮಃ |
ದತ್ತಾಭ್ಯನುಜ್ಞಃ ಸ್ವಂ ವೇಶ್ಮ ಕೃತಕರ್ಮಾ ವಿವಸ್ವತಃ ॥1॥
ಭೀಷ್ಮ ಯುಧಿಷ್ಠಿರನೇ, ಸೂರ್ಯನ ಬಳಿ ವಾಸ ಮಾಡಬೇಕಾದ ದಿನದ ನಿಯಮಗಳು ಪೂರ್ಣವಾದ ಬಳಿಕ ಕೆಲಸ ಮುಗಿಸಿದ ನಾಗನು ಸೂರ್ಯನ ಅನುಮತಿಯನ್ನು ಪಡೆದು ತನ್ನ ಮನೆಗೆ ಬಂದನು.
ತಂ ಭಾರ್ಯಾ ಸಮಭಿಕ್ರಾಮತ್ ಪಾದಶೌಚಾದಿಭಿರ್ಗುಣೈಃ |
ಉಪಪನ್ನಾಂ ಚ ತಾಂ ಸಾಧ್ವೀಂ ಪನ್ನಗಃ ಪರ್ಯಪೃಚ್ಛತ ॥2॥
ಪತಿಯ ಆಗಮನವನ್ನು ಕಂಡ ಕೂಡಲೇ ಸಾಧ್ವಿಯಾದ ನಾಗಪತ್ನಿಯು ಪತಿಗೆ ಕಾಲುತೊಳೆಯಲು ನೀರನ್ನು, ಸತ್ಕಾರಕ್ಕಾಗಿ ಇತರ ಸಾಮಗ್ರಿಗಳನ್ನು ತೆಗೆದುಕೊಂಡು ಪತಿಯ ಬಳಿ ಹೋದಳು. ಪತಿಯು ಸಮೀಪಿಸುತ್ತಲೇ ನಾಗರಾಜನು ಪ್ರಶ್ನಿಸಿದನು.
ಅಪಿ ತ್ವಮಸಿ ಕಲ್ಯಾಣಿ ದೇವತಾತಿಥಿಪೂಜನೇ |
ಪೂರ್ವಮುಕ್ತೇನ ವಿಧಿನಾ ಯುಕ್ತಾ ಯುಕ್ತೇನ ಮತ್ಸಮಮ್ ॥3॥
ಕಲ್ಯಾಣಿಯೇ, ನಾನು ಹಿಂದೆ ಹೇಳಿದ ರೀತಿಯಲ್ಲಿಯೇ ವಿಧಿಬದ್ಧವಾಗಿ ದೇವತೆಗಳನ್ನು, ಅತಿಥಿಗಳನ್ನು ಪೂಜಿಸುವುದರಲ್ಲಿ ನನ್ನಂತೆಯೇ ಧರ್ಮದಲ್ಲಿ ನಿರತಳಾಗಿರುವಿಯಷ್ಟೆ?
ನ ಖಲ್ವಸ್ಯಕೃತಾರ್ಥೇನ ಸ್ತ್ರೀಬುದ್ಧ್ಯಾ ಮಾರ್ದವೀಕೃತಾ |
ಮದ್ವಿಯೋಗೇನ ಸುಶ್ರೋಣಿ ವಿಯುಕ್ತಾ ಧರ್ಮಸೇತುನಾ ॥4॥
ನಾನು ಇಲ್ಲ ಎಂಬ ಕಾರಣದಿಂದ ಸ್ತ್ರೀ ಸಹಜವಾದ ಬುದ್ಧಿಯಿಂದ ಧರ್ಮ ಮರ್ಯಾದೆಯನ್ನು ಮೀರಿ ವರ್ತಿಸಿಲ್ಲವಷ್ಟೆ?
ನಾಗಭಾರ್ಯಾ

ಶಿಷ್ಯಾಣಾಂ ಗುರುಶುಶ್ರೂಷಾ ವಿಪ್ರಾಣಾಂ ವೇದಪಾರಣಮ್ |
ಭೃತ್ಯಾನಾಂ ಸ್ವಾಮಿವಚನಂ ರಾಜ್ಞಾಂ ಲೋಕಾನುಪಾಲನಮ್ ॥5॥
ನಾಗಪತ್ನಿ ಪತಿದೇವನೇ, ಗುರುಶುಶ್ರೂಷೆಯು ಶಿಷ್ಯರ ಧರ್ಮವು. ವೇದಗಳನ್ನು ಅಧ್ಯಯನ ಮಾಡುವುದು ಬ್ರಾಹ್ಮಣ ಧರ್ಮವು. ರಾಜನ ಆಜ್ಞೆಯನ್ನು ಪಾಲಿಸುವುದು ಸೇವಕರ ಧರ್ಮವು. ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವುದು ರಾಜರ ಧರ್ಮವು.
ಸರ್ವಭೂತಪರಿತ್ರಾಣಂ ಕ್ಷತ್ರಧರ್ಮ ಇಹೋಚ್ಯತೇ |
ವೈಶ್ಯಾನಾಂ ಯಜ್ಞಸಂವೃತ್ತಿರಾತಿಥೇಯಸಮನ್ವಿತಾ ॥6॥
ಸಮಸ್ತ ಪ್ರಾಣಿಗಳಿಗೂ ಜಗತ್ತಿನಲ್ಲಿ ರಕ್ಷಣೆ ನೀಡುವುದು ಕ್ಷತ್ರಿಯ ಧರ್ಮವು. ಅತಿಥಿ ಸತ್ಕಾರದ ಜೊತೆ ಯಜ್ಞವನ್ನಾಚರಿಸುವುದು ವೈಶ್ಯಧರ್ಮವು.
ವಿಪ್ರಕ್ಷತ್ರಿಯವೈಶ್ಯಾನಾಂ ಶುಶ್ರೂಷಾ ಶೂದ್ರಕರ್ಮ ತತ್ |
ಗೃಹಸ್ಥಧರ್ಮೋ ನಾಗೇಂದ್ರ ಸರ್ವಭೂತಹಿತೈಷಿತಾ ॥7॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು ಸೇವಿಸುವುದು ಶೂದ್ರರ ಧರ್ಮವು. ಸಮಸ್ತ ಪ್ರಾಣಿಗಳಿಗೂ ಹಿತ ಚಿಂತಿಸುವುದು ಗೃಹಸ್ಥ ಧರ್ಮವು.
ನಿಯತಾಹಾರತಾ ನಿತ್ಯಂ ವ್ರತಚರ್ಯಾ ಯಥಾಕ್ರಮಮ್ |
ಧರ್ಮೋ ಹಿ ಧರ್ಮಸಂಬಂಧಾದಿಂದ್ರಿಯಾಣಾಂ ವಿಶೇಷಣಮ್ ॥8॥
ವಿಧಿವತ್ತಾಗಿ ಮಿತಾಹಾರವನ್ನು ಸೇವಿಸಿ ವ್ರತ ಆಚರಿಸುವುದು ಸಮಸ್ತರ ಧರ್ಮವು. ಈ ಧರ್ಮವು ವಿಶೇಷವಾಗಿ ಇಂದ್ರಿಯಗಳನ್ನು ಧರ್ಮಮಾರ್ಗದಲ್ಲಿಯೇ ಸಾಗುವಂತೆ ಮಾಡುತ್ತದೆ.
ಅಹಂ ಕಸ್ಯ ಕುತೋ ವಾಹಂ ಕಃ ಕೋ ಮೇ ಹ ಭವೇದಿತಿ |
ಪ್ರಯೋಜನಮತಿರ್ನಿತ್ಯಮೇವಂ ಮೋಕ್ಷಾಶ್ರಮೀ ಭವೇತ್ ॥9॥
ನಾನು ಯಾರಿಗೆ ಸಂಬಂಧಿಸಿದವನು? ಎಲ್ಲಿಂದ ಬಂದಿದ್ದೇನೆ? ನನ್ನವರು ಯಾರು? ಈ ಜೀವನದ ಪ್ರಯೋಜನವೇನು? ಈ ರೀತಿಯಾಗಿ ಈ ವಿಷಯಗಳನ್ನೇ ಚಿಂತಿಸುತ್ತಾ ಸಂನ್ಯಾಸಿಯಾಗಿರುವುದು ಮೋಕ್ಷಾಶ್ರಮಿಯ ಧರ್ಮವಾಗಿದೆ.
ಪತಿವ್ರತಾತ್ವಂ ಭಾರ್ಯಾಯಾಃ ಪರಮೋ ಧರ್ಮ ಉಚ್ಯತೇ |
ತವೋಪದೇಶಾನ್ನಾಗೇಂದ್ರ ತಚ್ಚ ತತ್ತ್ವೇನ ವೇದ್ಮಿ ವೈ ॥10॥
ಪಾತಿವ್ರತ್ಯವೇ ಎಲ್ಲಕ್ಕಿಂತ ಶ್ರೇಷ್ಠವಾದ ಪತ್ನಿಯ ಧರ್ಮವಾಗಿದೆ. ನಿನ್ನ ಉಪದೇಶದಿಂದ ಆ ಧರ್ಮವನ್ನು ಯಥಾವತ್ತಾಗಿ ತಿಳಿದಿರುತ್ತೇನೆ.
ಸಾಹಂ ಧರ್ಮಂ ವಿಜಾನಂತೀ ಧರ್ಮನಿತ್ಯೇ ತ್ವಯಿ ಸ್ಥಿತೇ |
ಸತ್ಪಥಂ ಕಥಮುತ್ಸೃಜ್ಯ ಯಾಸ್ಯಾಮಿ ವಿಷಮೇ ಪಥಿ ॥11॥
ಧರ್ಮಮಾರ್ಗದಲ್ಲಿ ಸ್ಥಿರನಾದ ಪತಿಯನ್ನು ಪಡೆದ, ನಿನ್ನ ಪತ್ನಿಯಾದ ನಾನು ಈ ಧರ್ಮ ಅರಿತಿರುವಾಗ, ಸನ್ಮಾರ್ಗವನ್ನು ತೊರೆದು ದುರ್ಮಾರ್ಗವನ್ನು ಹೇಗೆ ತಾನೆ ಅವಲಂಬಿಸಿಯೇನು?
ದೇವತಾನಾಂ ಮಹಾಭಾಗ ಧರ್ಮಚರ್ಯಾ ನ ಹೀಯತೇ |
ಅತಿಥೀನಾಂ ಚ ಸತ್ಕಾರೇ ನಿತ್ಯಯುಕ್ತಾಸ್ಮ್ಯತಂದ್ರಿತಾ ॥12॥
ಮಹಾಭಾಗನೇ, ದೇವತಾರಾಧನೆಯ ಧರ್ಮಗಳಲ್ಲಿ ಯಾವ ನ್ಯೂನತೆಯೂ ಉಂಟಾಗಿಲ್ಲ. ಅತಿಥಿ ಸತ್ಕಾರದ ವಿಷಯದಲ್ಲಿಯೂ ನಾನು ಅಜಾಗರೂಕತೆಯಿಂದ ವರ್ತಿಸುತ್ತಿಲ್ಲ.
ಸಪ್ತಾಷ್ಟದಿವಸಾಸ್ತ್ವದ್ಯ ವಿಪ್ರಸ್ಯೇಹಾಗತಸ್ಯ ವೈ |
ಸ ಚ ಕಾರ್ಯಂ ನ ಮೇ ಖ್ಯಾತಿ ದರ್ಶನಂ ತವ ಕಾಂಕ್ಷತಿ ॥13॥
ಆದರೆ ಇಂದಿಗೆ ಹದಿನೈದು ದಿವಸಗಳ ಹಿಂದೆ ಒಬ್ಬ ವಿಪ್ರನು ಇಲ್ಲಿಗೆ ಆಗಮಿಸಿದ್ದಾನೆ. ಅವನ ಕಾರ್ಯನಿಮಿತ್ತ ಏನು ಎಂಬುದನ್ನು ನನಗೆ ಹೇಳಲಿಲ್ಲ. ನಿನ್ನ ದರ್ಶನಾಕಾಂಕ್ಷಿಯಾಗಿದ್ದಾನೆ.
ಗೋಮತ್ಯಾಸ್ತ್ವೇಷ ಪುಲಿನೇ ತ್ವದ್ದರ್ಶನಸಮುತ್ಸುಕಃ |
ಆಸೀನೋಽಽವರ್ತಯನ್ ಬ್ರಹ್ಮ ಬ್ರಾಹ್ಮಣಃ ಸಂಶಿತವ್ರತಃ ॥14॥
ವ್ರತಶೀಲನಾದ ಬ್ರಾಹ್ಮಣನು ನಿನ್ನನ್ನು ನೋಡಲೆಂದು ವೇದಪಾರಾಯಣ ಮಾಡುತ್ತಾ ಗೋಮತಿಯ ತೀರದಲ್ಲಿ ಆಸಕ್ತಿಯಿಂದ ಕುಳಿತು ಕಾಯುತ್ತಿದ್ದಾನೆ.
ಅಹಂ ತ್ವನೇನ ನಾಗೇಂದ್ರ ಸಾಮಪೂರ್ವಂ ಸಮಾಹಿತಾ |
ಪ್ರಸ್ಥಾಪ್ಯೋ ಮತ್ಸಕಾಶಂ ಸ ಸಂಪ್ರಾಪ್ತೋ ಭುಜಗೋತ್ತಮಃ ॥15॥
ನಾಗರಾಜನು ಬಂದ ಕೂಡಲೇ ನನ್ನ ಬಳಿ ಕಳುಹಿಸಬೇಕು ಎಂಬ ಸತ್ಯಪ್ರತಿಜ್ಞೆಯನ್ನು ನನ್ನಿಂದ ಮಾಡಿಸಿದ್ದಾನೆ.
ಏತಚ್ಛ್ರುತ್ವಾ ಮಹಾಪ್ರಾಜ್ಞ ತತ್ರ ಗಂತುಂ ತ್ವಮರ್ಹಸಿ |
ದಾತುಮರ್ಹಸಿ ವಾ ತಸ್ಯ ದರ್ಶನಂ ದರ್ಶನಶ್ರವಃ ॥16॥
ಚಕ್ಷುಶ್ರವಸನಾದ ಸರ್ಪರಾಜನೇ, ನನ್ನ ಮಾತನ್ನು ಕೇಳಿದ ನೀನು ಕೂಡಲೇ ಅವನ ಬಳಿ ಹೋಗುವದು ಯೋಗ್ಯವಾಗಿದೆ. ಆ ಬ್ರಾಹ್ಮಣನಿಗೆ ದರ್ಶನವನ್ನು ನೀಡುವುದು ಉಚಿತವಾದುದು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ದ್ವಿನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *

नूರ ತೊಂಬತ್ತೊರನೆಯ ಅಧ್ಯಾಯ
ಪತ್ನಿಯ ಮಾತಿನಿಂದ ಪದ್ಮರಾಜನು ಬ್ರಾಹ್ಮಣನ ಬಳಿ ಹೋಗಲು ನಿಶ್ಚಯಿಸಿದುದು.
ನಾಗಃ
ಅಥ ಬ್ರಾಹ್ಮಣರೂಪೇಣ ಕಂ ತಂ ಸಮನುಪಶ್ಯಸಿ |
ಮಾನುಷಂ ಕೇವಲಂ ವಿಪ್ರಂ ದೇವಂ ವಾಥ ಶುಚಿಸ್ಮಿತೇ ॥1॥
ನಾಗ ಶುಚಿಸ್ಮಿತೆಯೇ, ನಾಗಕುಮಾರಿಯೇ, ನೀನು ಬ್ರಾಹ್ಮಣರೂಪದಿಂದ ಯಾರನ್ನು ಕಂಡೆ? ಬ್ರಾಹ್ಮಣರೂಪವನ್ನು ಧರಿಸಿಬಂದಿರುವ ಅವನು ಮನುಷ್ಯನೋ, ದೇವತೆಯೋ?
ಕೋ ಹಿ ಮಾಂ ಮಾನುಷಃ ಶಕ್ತೋ ದ್ರಷ್ಟುಕಾಮೋ ಯಶಸ್ವಿನಿ |
ಸಂದರ್ಶನರುಚಿರ್ವಾಕ್ಯಮಾಜ್ಞಾಪೂರ್ವಂ ವದಿಷ್ಯತಿ ॥2॥
ಯಶಸ್ವಿನಿಯೇ, ಮನುಷ್ಯರಲ್ಲಿ ನನ್ನನ್ನು ನೋಡಲು ಯಾವನು ತಾನೇ ಶಕ್ತನು? ಒಂದು ವೇಳೆ ಸಮರ್ಥನಾಗಿದ್ದರೂ ನೋಡಲು ಬಯಸಿದರೂ ತನ್ನ ಬಳಿ ಬಂದು ದರ್ಶನ ನೀಡಬೇಕೆಂದು ಯಾವ ಮನುಷ್ಯನು ಆಜ್ಞಾಪೂರ್ವಕವಾಗಿ ಹೇಳಲು ಸಾಧ್ಯ?
ಸುರಾಸುರಗಣಾನಾಂ ಚ ದೇವರ್ಷೀಣಾಂ ಚ ಭಾಮಿನಿ |
ನನು ನಾಗಾ ಮಹಾವೀರ್ಯಾಃ ಸೌರಸೇಯಾಸ್ತರಸ್ವಿನಃ ॥3॥
ಭಾಮಿನಿಯೇ, ಸುರಸೆಯ ವಂಶದಲ್ಲಿ ಉತ್ಪನ್ನರಾದ, ಅತ್ಯಂತ ವೇಗಶಾಲಿಯಾದ ನಾವು ಸುರಾಸುರರಿಗಿಂತಲೂ, ದೇವರ್ಷಿಗಳಿಗಿಂತಲೂ ಮಹಾವೀರ್ಯರು, ಪರಾಕ್ರಮಿಗಳು.
ವಂದನೀಯಾಶ್ಚ ವರದಾ ವಯಮಪ್ಯನುಯಾಯಿನಃ |
ಮನುಷ್ಯಾಣಾಂ ವಿಶೇಷೇಣ ನಾವೇಕ್ಷ್ಯಾ ಇತಿ ಮೇ ಮತಿಃ ॥4॥
ನಮ್ಮನ್ನು ಅನುಸರಿಸುವ ಭಕ್ತರಿಗೆ ವರವನ್ನು ನೀಡುತ್ತೇವೆ. ಹೀಗಿರಲು ಮನುಷ್ಯರಿಂದ ಸುಲಭವಾಗಿ ನೋಡಲು ಯೋಗ್ಯರಲ್ಲ. ಇದು ನನ್ನ ಅಭಿಪ್ರಾಯವು.
ನಾಗಭಾರ್ಯಾ
ಆರ್ಜವೇನಾಭಿಜಾನಾಮಿ ನಾಸೌ ದೇವೋಽನಿಲಾಶನ |
ಏಕಂ ತ್ವಸ್ಯ ವಿಜಾನಾಮಿ ಭಕ್ತಿಮಾನತಿರೋಷಣ ॥5॥
ನಾಗಪತ್ನಿ ವಾಯುಭಕ್ಷಕನೇ, ಭಯಂಕರ ಸಿಟ್ಟುಳ್ಳವನೇ, ಆ ಬ್ರಾಹ್ಮಣನಲ್ಲಿರುವ ಸರಳತೆಯನ್ನು ಕಂಡು ನಾನು ಅವನನ್ನು ದೇವತೆಯಲ್ಲನೆಂದು ತಿಳಿದಿದ್ದೇನೆ. ಅವನು ನಿನ್ನಲ್ಲಿ ಭಕ್ತಿಯುಳ್ಳವನು ಎಂದು ಮಾತ್ರ ತಿಳಿದಿರುತ್ತೇನೆ.
ಸ ಹಿ ಕಾರ್ಯಾಂತರಾಕಾಂಕ್ಷೀ ಜಲೇಪ್ಸುಃ ಸ್ತೋಕಕೋ ಯಥಾ |
ವರ್ಷಂ ವರ್ಷಪ್ರಿಯಃ ಪಕ್ಷೀ ದರ್ಶನಂ ತವ ಕಾಂಕ್ಷತಿ ॥6॥
ವರ್ಷಋತುವನ್ನು ಪ್ರೀತಿಸುವ, ನೀರನ್ನು ಬಯಸುವ ಚಾತಕ ಪಕ್ಷಿಯು ಹೇಗೆ ಮಳೆಯಾಗುವುದನ್ನೇ ನಿರೀಕ್ಷಿಸುತ್ತಿರುತ್ತದೋ ಅದರಂತೆ ಯಾವುದೋ ಕಾರ್ಯದ ಸಿದ್ಧಿಗಾಗಿ ಬ್ರಾಹ್ಮಣನು ನಿನ್ನ ದರ್ಶನವನ್ನೇ ಬಯಸುತ್ತಿದ್ದಾನೆ.
ನ ಹಿ ತ್ವಾ ದೈವತಂ ಕಿಂಚಿದ್ ವಿವಿಘ್ನಂ ಪ್ರತಿಪಾಲಯೇತ್ |
ತುಲ್ಯೇ ಹ್ಯಭಿಜನೇ ಜಾತೋ ನ ಕಶ್ಚಿತ್ ಪರ್ಯುಪಾಸತೇ ॥7॥
ಅವನು ಪೂಜ್ಯನಾದ ನಿನ್ನ ದರ್ಶನವನ್ನು ಬಿಟ್ಟು ಬೇರೆ ಏನನ್ನೂ ಬಯಸುತ್ತಿಲ್ಲ. ಉತ್ತಮವಾದ ಕುಲದಲ್ಲಿ ಹುಟ್ಟಿರುವ, ನಿನಗೆ ಸಮಾನನಾದ ಯಾವನೇ ಆದರೂ ಅತಿಥಿಯನ್ನು ಉಪೇಕ್ಷಿಸಿ ಮನೆಯಲ್ಲಿ ಇರುವುದಿಲ್ಲ.
ತದ್ರೋಷಂ ಸಹಜಂ ತ್ಯಕ್ತ್ವಾ ತ್ವಮೇನಂ ದ್ರಷ್ಟುಮರ್ಹಸಿ |
ಆಶಾಭೇದೇನ ತಸ್ಯಾದ್ಯ ನಾತ್ಮಾನಂ ದಗ್ಧುಮರ್ಹಸಿ ॥8॥
ಆದ್ದರಿಂದ ನಿನಗೆ ಸಹಜವಾಗಿ ಬಂದಿರುವ ಕೋಪವನ್ನು ತ್ಯಜಿಸಿ, ಅವನನ್ನು ನೋಡುವದು ಯೋಗ್ಯವೆನಿಸಿದೆ. ಅವನ ಆಸೆಯನ್ನು ನಾಶಗೊಳಿಸಿ ಅದರ ಪರಿಣಾಮದಿಂದ ನಿನ್ನನ್ನು ಸುಟ್ಟುಕೊಳ್ಳಲು ಹೋಗಬೇಡ.
ಆಶಯಾ ತ್ವಭಿಪನ್ನಾನಾಮಕೃತ್ವಾಶ್ರುಪ್ರಮಾರ್ಜನಮ್ |
ರಾಜಾ ವಾ ರಾಜಪುತ್ರೋ ವಾ ಭ್ರೂಣಹತ್ಯೈವ ಯುಜ್ಯತೇ ॥9॥
ಯಾವುದೋ ಅಪೇಕ್ಷೆಯನ್ನು ಇಟ್ಟುಕೊಂಡು ಶರಣಾಗತರಾಗಿ ಬಂದವರ ಕಣ್ಣೀರನ್ನು ಒರೆಸಿ ಸಂತೈಸದಿದ್ದರೆ ಅವನು ರಾಜನಾಗಲಿ, ರಾಜಪುತ್ರನೇ ಆಗಲಿ ಭ್ರೂಣ ಹತ್ಯಾ ಪಾಪದಿಂದ ಯುಕ್ತನಾಗುತ್ತಾನೆ.
ಮೌನಾಜ್ಜ್ಞಾನಫಲಾವಾಪ್ತಿರ್ದಾನೇನ ಚ ಯಶೋ ಮಹತ್ |
ವಾಗ್ಮಿತ್ವಂ ಸತ್ಯವಾಕ್ಯೇನ ಪರತ್ರ ಚ ಮಹೀಯತೇ ॥10॥
ಮೌನವ್ರತದಿಂದ ಜ್ಞಾನಫಲವು, ದಾನದಿಂದ ಕೀರ್ತಿಯು, ಸತ್ಯವಾಕ್ಯದಿಂದ ವಾಗ್ಮಿತ್ವವು ಉಂಟಾಗುತ್ತದೆ. ಇದರಿಂದ ಪರಲೋಕದಲ್ಲೂ ಪೂಜ್ಯನಾಗುತ್ತಾನೆ.
ಭೂಮಿಪ್ರದಾನೇನ ಗತಿಂ ಲಭತ್ಯಾಶ್ರಮಸಮ್ಮಿತಾಮ್ |
ನಷ್ಟಸ್ಯಾರ್ಥಸ್ಯ ಸಂಪ್ರಾಪ್ತಿಂ ಕೃತ್ವಾ ಫಲಮುಪಾಶ್ನುತೇ ॥11॥
ಭೂದಾನದಿಂದ ಆಶ್ರಮಧರ್ಮ ಅನುಷ್ಠಾನ ಮಾಡಿದ ಫಲಕ್ಕೆ ಸಮಾನವಾದ ಗತಿಯನ್ನು ಹೊಂದುತ್ತಾನೆ. ನ್ಯಾಯಪೂರ್ವಕವಾಗಿ ಧನಸಂಗ್ರಹಿಸುವುದರಿಂದ ಮಹಾಫಲವನ್ನು ಹೊಂದುತ್ತಾನೆ.
ಅಭಿಪ್ರೇತಾಮಸಂಕ್ಲಿಷ್ಟಾಂ ಕೃತ್ವಾಕಾಮವತೀಂ ಕ್ರಿಯಾಮ್ |
ನ ಯಾತಿ ನಿರಯಂ ಕಶ್ಚಿದಿತಿ ಧರ್ಮವಿದೋ ವಿದುಃ ॥12॥

ತನ್ನ ಇಷ್ಟಕ್ಕೆ ಅನುಗುಣವಾದ, ಪಾಪದ ಸಂಬಂಧವಿಲ್ಲದ, ತನಗೆ ಯೋಗ್ಯವಾದ ಕಾರ್ಯವನ್ನು ಮಾಡುವುದರಿಂದ ಯಾರೇ ಆಗಲಿ ನರಕ ಹೊಂದುವುದಿಲ್ಲ ಎಂದು ಧರ್ಮಜ್ಞರು ಹೇಳುತ್ತಾರೆ.
ನಾಗಃ
ಅಭಿಮಾನೇನ ಮಾನೋ ಮೇ ಜಾತಿದೋಷೇಣ ವೈ ಮಹಾನ್ |
ರೋಷಃ ಸಂಕಲ್ಪಜಃ ಸಾಧ್ವಿ ದಗ್ಧೋ ವಾಚಾಗ್ನಿನಾ ತ್ವಯಾ ॥13॥
ನಾಗ ಸಾಧ್ವಿಯೇ, ವೀರ್ಯ, ಪರಾಕ್ರಮ, ಸತ್ಕುಲದಲ್ಲಿ ಜನ್ಮ ಮುಂತಾದ ಅಭಿಮಾನದಿಂದ ನಾನು ಉನ್ಮತ್ತನಾಗಿಲ್ಲ. ಆದರೆ ಜಾತಿಕೃತವಾದ ಕೋಪವಿದೆ. ಆದರೂ ಸ್ವಾಭಾವಿಕವಾದ ಕೋಪವು ನಿನ್ನ ಮಾತಿನಿಂದ ಭಸ್ಮವಾಗಿ ಹೋಯಿತು.
ನ ಚ ರೋಷಾದಹಂ ಸಾಧ್ವಿ ಪಶ್ಯೇಯಮಧಿಕಂ ತಮಃ |
ಯಸ್ಯ ವಕ್ತವ್ಯತಾಂ ಯಾಂತಿ ವಿಶೇಷೇಣ ಭುಜಂಗಮಾಃ ॥14॥
ಸಾಧ್ವಿಯೇ, ಕೋಪಕ್ಕಿಂತ ಅಧಿಕವಾದ ಅಂಧಕಾರವನ್ನು ನಾನು ಕಂಡಿಲ್ಲ. ಅದರಲ್ಲಿಯೂ ವಿಶೇಷವಾಗಿ ಸರ್ಪಗಳು ಅತ್ಯಂತ ರೋಷಯುಕ್ತವಾದ ಪ್ರಾಣಿಗಳು ಎಂಬ ಅಪವಾದವನ್ನು ಹೊಂದಿವೆ.
ರೋಷಸ್ಯ ಹಿ ವಶಂ ಗತ್ವಾ ದಶಗ್ರೀವಃ ಪ್ರತಾಪವಾನ್ |
ತಥಾ ಶಕ್ರಪ್ರತಿಸ್ಪರ್ಧೀ ಹತೋ ರಾಮೇಣ ಸಂಯುಗೇ ॥15॥
ಪ್ರತಾಪವಂತನಾದ ರಾವಣನು ಇಂದ್ರನಿಗೂ ಸ್ಪರ್ಧಿ ಎನಿಸಿದ್ದ. ಆದರೆ ಅವನು ಕ್ರೋಧವಶನಾಗಿ ಯುದ್ಧದಲ್ಲಿ ರಾಮನಿಂದ ಹತನಾದನು.
ಅಂತಃಪುರಗತಂ ವತ್ಸಂ ಶ್ರುತ್ವಾ ರಾಮೇಣ ನಿರ್ಹೃತಮ್ |
ಧರ್ಷಣಾದ್ರೋಷಸಂವಿಗ್ನಾಃ ಕಾರ್ತವೀರ್ಯಸುತಾ ಹತಾಃ ॥16॥
ಅಂತಃಪುರದಲ್ಲಿಟ್ಟ ಹೋಮಧೇನುವನ್ನು ಪರಶುರಾಮನು ಕೊಂಡೊಯ್ದನು ಎಂಬ ವಾರ್ತೆಯನ್ನು ಕೇಳಿ, ಆಕ್ರಮಣಬುದ್ಧಿಯ ರೋಷವನ್ನು ಹೊಂದಿ ಉದ್ವಿಗ್ನರಾದ ಕಾರ್ತವೀರ್ಯಾರ್ಜುನರ ಮಕ್ಕಳೆಲ್ಲರೂ ಪರಶುರಾಮನಿಂದ ಹತರಾಗಿ ಹೋದರು.
ಜಾಮದಗ್ನ್ಯೇನ ರಾಮೇಣ ಸಹಸ್ರನಯನೋಪಮಃ |
ಸಂಯುಗೇ ನಿಹತೋ ರೋಷಾತ್ ಕಾರ್ತವೀರ್ಯೋ ಮಹಾಬಲಃ ॥
ಮಹಾಬಲಿಷ್ಠನಾದ ಇಂದ್ರನಂತೆ ಪರಾಕ್ರಮಿಯಾದ ಕಾರ್ತವೀರ್ಯನು ರೋಷದಿಂದಲೇ ಜಮದಗ್ನಿಯ ಮಗನಾದ ಪರಶುರಾಮನಿಂದ ಯುದ್ಧದಲ್ಲಿ ಹತನಾದನು.
ತದೇಷ ತಪಸಾಂ ಶತ್ರುಃ ಶ್ರೇಯಸಶ್ಚ ನಿಪಾತನಃ |
ನಿಗೃಹೀತೋ ಮಯಾ ರೋಷಃ ಶ್ರುತ್ವೈವ ವಚನಂ ತವ ॥18॥
ನಿಶ್ಚಿತವಾಗಿಯೂ ಕೋಪವೇ ತಪಸ್ಸಿಗೆ ಶತ್ರುವೆನಿಸಿದೆ. ಕಲ್ಯಾಣ ಮಾರ್ಗದಿಂದ ಭ್ರಷ್ಟಗೊಳಿಸುತ್ತದೆ. ನಿನ್ನ ಮಾತಿನಿಂದ ಆ ಕೋಪವನ್ನು ನಿಗ್ರಹಿಸಿಕೊಂಡಿದ್ದೇನೆ.
ಆತ್ಮಾನಂ ಚ ವಿಶೇಷೇಣ ಪ್ರಶಂಸಾಮ್ಯನಪಾಯಿನಿ |
ಯಸ್ಯ ಮೇ ತ್ವಂ ವಿಶಾಲಾಕ್ಷಿ ಭಾರ್ಯಾ ಸರ್ವಗುಣಾನ್ವಿತಾ ॥19॥
ಅನಪಾಯಿನಿಯೇ, ವಿಶಾಲಾಕ್ಷಿಯೇ, ಸರ್ವಗುಣಸಂಪನ್ನೆಯಾದ ನಿನ್ನನ್ನು ಪತ್ನಿಯನ್ನಾಗಿ ಹೊಂದಿರುವ ನಾನು ನನ್ನನ್ನೇ ವಿಶೇಷವಾಗಿ ಪ್ರಶಂಸೆ ಮಾಡಿಕೊಳ್ಳುತ್ತೇನೆ.
ಏಷ ತತ್ರೈವ ಗಚ್ಛಾಮಿ ಯತ್ರ ತಿಷ್ಠತ್ಯಸೌ ದ್ವಿಜಃ |
ಸರ್ವಥಾ ಚೋಕ್ತವಾನ್ ವಾಕ್ಯಂ ನಾಕೃತಾರ್ಥಃ ಪ್ರಯಾಸ್ಯತಿ ॥20॥
ಆ ಬ್ರಾಹ್ಮಣನಿದ್ದ ಸ್ಥಳಕ್ಕೆ ಹೊರಡುತ್ತೇನೆ. ಅವನು ಹೇಳಿದಂತೆ ಮಾಡುತ್ತೇನೆ. ಎಲ್ಲ ರೀತಿಯಿಂದಲೂ ಅವನು ಇಲ್ಲಿಂದ ಕೃತಾರ್ಥನಾಗಿ ಪ್ರಯಾಣ ಮಾಡುವಂತೆ ಮಾಡುತ್ತೇನೆ.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ತ್ರಿನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬನಾಲ್ಕನೆಯ ಅಧ್ಯಾಯ
ಬ್ರಾಹ್ಮಣ-ನಾಗರಾಜರ ಸಂಭಾಷಣೆ.
ಭೀಷ್ಮಃ
ಸ ಪನ್ನಗಪತಿಸ್ತತ್ರ ಪ್ರಯಯೌ ಬ್ರಾಹ್ಮಣಂ ಪ್ರತಿ |
ತಮೇವ ಮನಸಾ ಧ್ಯಾಯನ್ಕಾರ್ಯವತ್ತಾಂ ವಿಚಾರಯನ್ ॥1॥
ಭೀಷ್ಮ ನಾಗರಾಜನು ಪತ್ನಿಯ ಬಳಿ ಹೀಗೆ ಹೇಳಿ, ಬ್ರಾಹ್ಮಣನ ಉದ್ದೇಶವೇನೆಂಬುದನ್ನು ಯೋಚಿಸುತ್ತಾ ಬ್ರಾಹ್ಮಣನಿದ್ದ ಸ್ಥಳಕ್ಕೆ ಪ್ರಯಾಣ ಮಾಡಿದನು.
ತಮಭಿಕ್ರಮ್ಯ ನಾಗೇಂದ್ರೋ ಮತಿಮಾನ್ ಸ ನರೇಶ್ವರ |
ಪ್ರೋವಾಚ ಮಧುರಂ ವಾಕ್ಯಂ ಪ್ರಕೃತ್ಯಾ ಧರ್ಮವತ್ಸಲಃ ॥2॥
ಸ್ವಭಾವತಃ ಧರ್ಮವತ್ಸಲನಾದ, ಬುದ್ಧಿವಂತನಾದ ನಾಗರಾಜನು ಬ್ರಾಹ್ಮಣನ ಬಳಿ ಸಾಗಿ ಮಧುರವಾದ ಈ ಮಾತುಗಳನ್ನು ಹೇಳಿದನು.

ಭೋ ಭೋ ಕ್ಷಾಮ್ಯಾಭಿಭಾಷೇ ತ್ವಾಂ ನ ರೋಷಂ ಕರ್ತುಮರ್ಹಸಿ |
ಇಹ ತ್ವಮಭಿಸಂಪ್ರಾಪ್ತಃ ಕಸ್ಯಾರ್ಥೇ ಕಿಂ ಪ್ರಯೋಜನಮ್ ॥3॥
ಭೋ ಭೋ ಬ್ರಾಹ್ಮಣನೇ, ನನ್ನ ಅಪರಾಧವನ್ನು ಮನ್ನಿಸು. ಸಿಟ್ಟಾಗಬೇಡ. ನಿನ್ನನ್ನು ಪ್ರಶ್ನಿಸುತ್ತಿದ್ದೇನೆ. ಯಾರಿಗಾಗಿ ಆಗಮಿಸಿರುವಿ? ಯಾವ ಪ್ರಯೋಜನವನ್ನು ಬಯಸಿ ಬಂದಿರುವೆ?
ಆಭಿಮುಖ್ಯಾದಭಿಕ್ರಮ್ಯ ಸ್ನೇಹಾತ್ ಪೃಚ್ಛಾಮಿ ತೇ ದ್ವಿಜ |
ವಿವಿಕ್ತೇ ಗೋಮತೀತೀರೇ ಕಿಂ ವಾ ತ್ವಂ ಪರ್ಯುಪಾಸಸೇ ॥4॥
ಬ್ರಾಹ್ಮಣನೇ, ಹತ್ತಿರ ಬಂದು ಸ್ನೇಹದಿಂದ ಪ್ರಶ್ನಿಸುತ್ತಿದ್ದೇನೆ. ನಿರ್ಜನವಾದ ಗೋಮತಿ ತೀರದಲ್ಲಿ ಯಾರನ್ನು ಉಪಾಸನೆ ಮಾಡುತ್ತಿರುವೆ?
ಬ್ರಾಹ್ಮಣಃ
ಧರ್ಮಾರಣ್ಯಂ ಹಿ ಮಾಂ ವಿದ್ಧಿ ನಾಗಂ ದ್ರಷ್ಟುಮಿಹಾಗತಮ್ |
ಪದ್ಮನಾಭಂ ದ್ವಿಜಶ್ರೇಷ್ಠಂ ತತ್ರ ಮೇ ಕಾರ್ಯಮಾಹಿತಮ್ ॥5॥
ಬ್ರಾಹ್ಮಣ ಬ್ರಾಹ್ಮಣನೇ, ನನ್ನನ್ನು ಧರ್ಮಾರಣ್ಯನೆಂಬ ಹೆಸರಿನವನೆಂದು ತಿಳಿ. ನಾನು ಪದ್ಮನಾಭನೆಂಬ ಹೆಸರಿನ ನಾಗರಾಜನನ್ನು ನೋಡುವ ದೃಷ್ಟಿಯಿಂದ ಬಂದಿರುತ್ತೇನೆ. ನನಗೆ ಅವನಲ್ಲಿ ಸ್ವಲ್ಪ ಕೆಲಸವಿದೆ.
ತಸ್ಯ ಚಾಹಮಸಾನ್ನಿಧ್ಯಂ ಶ್ರುತವಾನಸ್ಮಿ ತಂ ಗತಮ್ |
ಸ್ವಜನಂ ತಂ ಪ್ರತೀಕ್ಷಾಮಿ ಪರ್ಜನ್ಯಮಿವ ಕರ್ಷಕಃ ॥6॥
ನಾಗರಾಜನು ನಾಗಪುರದಲ್ಲಿಲ್ಲ ಎಂದು, ದೂರಪ್ರಯಾಣ ಮಾಡಿದ್ದಾನೆಂದು ಅವನ ಬಂಧುಜನರಿಂದ ಕೇಳಿಸಿಕೊಂಡಿದ್ದೇನೆ. ಕೃಷಿಕನು ಮಳೆಯನ್ನು ನಿರೀಕ್ಷಿಸುವಂತೆ ನಾಗರಾಜನ ಆಗಮನವನ್ನು ಪ್ರತೀಕ್ಷಿಸುತ್ತಿದ್ದೇನೆ.
ತಸ್ಯ ಚಾಕ್ಲೇಶಕರಣಂ ಸ್ವಸ್ತಿಕಾರಸಮಾಹಿತಮ್ |
ವರ್ತಯಾಮ್ಯಯುತಂ ಬ್ರಹ್ಮ ಯೋಗಯುಕ್ತೋ ನಿರಾಮಯಃ ॥7॥
ರೋಗದಿಂದ ದೂರನಾದ, ಯೋಗಜ್ಞನಾದ ನಾನು ನಾಗರಾಜನಿಗೆ ಯಾವ ಕ್ಲೇಶವೂ ಆಗದೆ ಕುಶಲನಾಗಿ ಮನೆಗೆ ಮರಳಿಬರಲೆಂದು ವೇದಪಠನ ಮಾಡುತ್ತಿದ್ದೇನೆ.
ನಾಗಃ
ಅಹೋ ಕಲ್ಯಾಣವೃತ್ತಸ್ತ್ವಂ ಸಾಧು ಸಜ್ಜನವತ್ಸಲಃ |
ಶ್ರವಾಢ್ಯಸ್ತ್ವಂ ಮಹಾಭಾಗ ಪರಂ ಸ್ನೇಹೇನ ಪಶ್ಯಸಿ ॥8॥
ನಾಗರಾಜ ಮಹಾಭಾಗನೇ, ನಿನ್ನ ಆಚರಣೆಯು ಮಂಗಳವಾದುದು, ನೀನು ಸತ್ಪುರುಷನು, ಸಜ್ಜನ ವತ್ಸಲನು. ಯಾವುದೇ ಕಾರಣದಿಂದ ನೀನು ನಿಂದನೀಯನಲ್ಲ. ಮತ್ತೊಬ್ಬರನ್ನು ಪ್ರೀತಿಯಿಂದಲೇ ಕಾಣುತ್ತಿ.
ಅಹಂ ಸ ನಾಗೋ ವಿಪ್ರರ್ಷೇ ಯಥಾ ಮಾಂ ವಿಂದತೇ ಭವಾನ್ |
ಆಜ್ಞಾಪಯ ಯಥಾ ಸ್ವೈರಂ ಕಿಂ ಕರೋಮಿ ಪ್ರಿಯಂ ತವ ॥9॥
ವಿಪ್ರರ್ಷಿಯೇ, ನೀನು ಪ್ರತೀಕ್ಷಿಸಲು ಇಚ್ಛಿಸಿರುವ ಪದ್ಮನಾಭನಾಗನು ನಾನೇ. ನಿನ್ನ ಇಚ್ಛೆಗನುಗುಣವಾಗಿ ನನಗೆ ಆದೇಶ ಮಾಡು. ಯಾವ ಪ್ರಿಯವಾದ ಕಾರ್ಯವನ್ನು ಮಾಡಿಕೊಡಲಿ?
ಭವಂತಂ ಸ್ವಜನಾದಸ್ಮಿ ಸಂಪ್ರಾಪ್ತಂ ಶ್ರುತವಾನಿಹ |
ಅತಸ್ತತ್ವಂ ಸ್ವಯಮೇವಾಹಂ ದ್ರಷ್ಟುಮಭ್ಯಾಗತೋ ದ್ವಿಜ ॥10॥
ದ್ವಿಜಶ್ರೇಷ್ಠನೇ, ನನ್ನ ಬಂಧುಜನರಿಂದ ಆಗಮನದ ಸಮಾಚಾರ ಕೇಳಿದೆನು. ಆದ್ದರಿಂದ ನಾನಾಗಿಯೇ ನಿನ್ನನ್ನು ಸಂದರ್ಶಿಸಲು ಆಗಮಿಸಿದ್ದೇನೆ.
ಸಂಪ್ರಾಪ್ತಶ್ಚ ಭವಾನದ್ಯ ಕೃತಾರ್ಥಃ ಪ್ರತಿಯಾಸ್ಯತಿ |
ವಿಸ್ರಬ್ಧೋ ಮಾಂ ದ್ವಿಜಶ್ರೇಷ್ಠ ವಿಷಯೇ ಯೋಕ್ತುಮರ್ಹಸಿ ॥11॥
ನನ್ನ ಉದ್ದೇಶದಿಂದ ಆಗಮಿಸಿರುವ ನೀನು ಕೃತಾರ್ಥನಾಗಿ ಹಿಂದಿರುಗುತ್ತಿ, ಸಂಶಯ ಪಡಬೇಡ. ನಂಬಿಕೆಯಿಟ್ಟು ನನ್ನನ್ನು ನಿನ್ನ ಕಾರ್ಯದಲ್ಲಿ ನಿಯೋಜಿಸು.
ವಯಂ ಹಿ ಭವತಾ ಸರ್ವೇ ಗುಣಕ್ರೀತಾ ವಿಶೇಷತಃ |
ಯಸ್ತ್ವಮಾತ್ಮಹಿತಂ ತ್ಯಕ್ತ್ವಾ ಮಾಮೇವೇಹಾನುರುಧ್ಯಸೇ ॥12॥
ನಿನ್ನ ಸುಖವನ್ನು ತೊರೆದು ನನ್ನ ಕಲ್ಯಾಣವನ್ನೇ ಯೋಚಿಸುತ್ತಿರುವ ನೀನು ನನ್ನನ್ನು, ನನ್ನ ಬಂಧು-ಬಾಂಧವರನ್ನು ಗುಣಗಳಿಂದಲೇ ಕೊಂಡುಕೊಂಡಿರುವೆ.
ಬ್ರಾಹ್ಮಣಃ
ಆಗತೋಽಹಂ ಮಹಾಭಾಗ ತವ ದರ್ಶನಲಾಲಸಃ |
ಕಂಚಿದರ್ಥಮನರ್ಥಜ್ಞಃ ಪ್ರಷ್ಟುಕಾಮೋ ಭುಜಂಗಮ ॥13॥
ಬ್ರಾಹ್ಮಣ ಮಹಾಭಾಗನೇ, ನಾಗರಾಜನೇ, ನಾನು ನಿನ್ನನ್ನು ನೋಡುವ ಅಭಿಪ್ರಾಯದಿಂದಲೇ ಆಗಮಿಸಿದ್ದೇನೆ. ನನಗೆ ತಿಳಿಯದೆ ಇರುವ ಒಂದು ವಿಷಯವನ್ನು ನಿನ್ನಿಂದ ತಿಳಿಯಲು ಬಯಸುತ್ತೇನೆ.
ಅಹಮಾತ್ಮಾನಮಾತ್ಮಸ್ಥೋ ಮಾರ್ಗಮಾಣೋಽಽತ್ಮನೋ ಹಿತಮ್ |
ವಾಸಾರ್ಥಿನಂ ಮಹಾಪ್ರಾಜ್ಞ ಬಲವಂತಮುಪಾಸ್ಮಿ ಹ ॥14॥
ವಿಷಯಗಳ ಚೇಷ್ಟೆಯಿಂದ ವಿರಕ್ತನಾಗಿ ನನ್ನ ಮನಸ್ಸು ಪರಮಾತ್ಮನಲ್ಲೇ ನೆಲೆಗೊಂಡಿರುತ್ತದೆ. ಜೀವರಿಗೆಲ್ಲ ಗತಿ ಎನಿಸಿದ

ಪರಬ್ರಹ್ಮನನ್ನು ಹುಡುಕುತ್ತಿದ್ದೇನೆ. ಆದರೆ ನನ್ನ ಮನಸ್ಸಿನಲ್ಲಿ ದ್ವಂದ್ವ ಹುಟ್ಟಿದೆ. ಚಂಚಲವಾಗಿದೆ. ಗೃಹವನ್ನೇ ಬಯಸುತ್ತಿದೆ, ವೈರಾಗ್ಯವನ್ನೂ ಬಯಸುತ್ತಿದೆ.
ಪ್ರಕಾಶಿತಸ್ತ್ವಂ ಸ್ವಗುಣೈರ್ಯಶೋಗರ್ಭಗಭಸ್ತಿಭಿಃ |
ಶಶಾಂಕಕರಸಂಸ್ಪರ್ಶೈರ್ಹೃದ್ಯೈರಾತ್ಮಪ್ರಕಾಶಿತೈಃ ॥15॥
ಚಂದ್ರನ ಕಿರಣಗಳಂತೆ ಸುಖಸ್ಪರ್ಶ ನೀಡುವ, ಸ್ವಪ್ರಕಾಶವಾದ, ಯಶಸ್ಸಿಗೆ ಕಾರಣವಾದ ಕಿರಣಗಳಿಂದ ಕೂಡಿದ ನಿನ್ನ ಗುಣಗಳಿಂದ ನೀನು ಅತ್ಯಂತ ಪ್ರಕಾಶಮಾನವಾಗಿ ಕಾಣುತ್ತಿರುವೆ.
ತಸ್ಯ ಮೇ ಪ್ರಶ್ನಮುತ್ಪನ್ನಂ ಛಿಂಧಿ ತ್ವಮನಿಲಾಶನ |
ಪಶ್ಚಾತ್ ಕಾರ್ಯಂ ವದಿಷ್ಯಾಮಿ ಶ್ರೋತುಮರ್ಹತಿ ಮೇ ಭವಾನ್ ॥
ವಾಯುಭಕ್ಷನೇ, ಈ ಸಮಯದಲ್ಲಿ ನನ್ನ ಮನಸ್ಸಿನಲ್ಲಿ ಒಂದು ಪ್ರಶ್ನೆ ಹುಟ್ಟಿದೆ. ನೀನು ಉತ್ತರಿಸಿ ಸಂದೇಹವನ್ನು ಪರಿಹರಿಸು. ಬಳಿಕ ನನ್ನ ಕಾರ್ಯವೇನೆಂದು ಹೇಳುತ್ತೇನೆ, ಕೃಪೆ ತೋರು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಚತುರ್ನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೈದನೆಯ ಅಧ್ಯಾಯ
ನಾಗರಾಜನಿಂದ ಬ್ರಾಹ್ಮಣನಿಗೆ ಸೂರ್ಯಲೋಕದ ಆಶ್ಚರ್ಯಸಂಗತಿಗಳ ವಿವರಣೆ.
ಬ್ರಾಹ್ಮಣಃ
ವಿವಸ್ವತೋ ಗಚ್ಛತಿ ಪರ್ಯಯೇಣ
ವೋಢುಂ ಭವಾಂಸ್ತಂ ರಥಮೇಕಚಕ್ರಮ್ |
ಆಶ್ಚರ್ಯಭೂತಂ ಯದಿ ತತ್ರ ಕಿಂಚಿದ್
ದೃಷ್ಟಂ ತ್ವಯಾ ಶಂಸಿತುಮರ್ಹಸಿ ತ್ವಮ್ ॥1॥
ಬ್ರಾಹ್ಮಣ ನಾಗರಾಜನೇ, ನೀನು ಆ ಸೂರ್ಯನ ಏಕಚಕ್ರರಥವನ್ನು ಧರಿಸಲು ನಿಯಮದ ಪ್ರಕಾರ ಅಲ್ಲಿಗೆ ಹೋಗುತ್ತಿ.
ಸೂರ್ಯಮಂಡಲದಲ್ಲಿ ನೀನು ಕಂಡ ಆಶ್ಚರ್ಯಕರವಾದ ಘಟನೆಗಳೇನಾದರೂ ಇದ್ದರೆ ನನಗೂ ಹೇಳುವ ಕೃಪೆತೋರು.
ನಾಗಃ
ಯಸ್ಯ ರಶ್ಮಿಸಹಸ್ರೇಷು ಶಾಖಾಸ್ವಿವ ವಿಹಂಗಮಾಃ |
ವಸಂತ್ಯಾಶ್ರಿತ್ಯ ಮುನಯಃ ಸಂಸಿದ್ಧಾ ದೈವತೈಃ ಸಹ ॥2॥
ನಾಗ ಮರದ ಕೊಂಬೆಗಳಲ್ಲಿ ಪಕ್ಷಿಗಳು ಆಶ್ರಯವನ್ನು ಹೊಂದಿರುವಂತೆ ಸಿದ್ಧಿಯನ್ನು ಪಡೆದ ದೇವತೆಗಳಿಂದ ಸಹಿತರಾದ ಮುನಿಗಳು ಸೂರ್ಯನ ಸಾವಿರಾರು ಕಿರಣಗಳಲ್ಲಿ ಆಶ್ರಯವನ್ನು ಹೊಂದಿ ವಾಸ ಮಾಡುತ್ತಿದ್ದಾರೆ.
ಯತೋ ವಾಯುರ್ವಿನಿಃಸೃತ್ಯ ಸೂರ್ಯರಶ್ಮ್ಯಾಶ್ರಿತೋ ಮಹಾನ್ |
ವಿಜೃಂಭತ್ಯಂಬರೇ ವಿಪ್ರಾ ಕಿಮಾಶ್ಚರ್ಯತರಂ ತತಃ ॥3॥
ವಾಯುವು ಸೂರ್ಯಮಂಡಲದಿಂದಲೇ ಹೊರಹೊಮ್ಮುತ್ತಾ ಸೂರ್ಯ ಕಿರಣಗಳನ್ನು ಆಶ್ರಯಿಸಿ ಆಕಾಶದಲ್ಲಿ ವಿಜೃಂಭಿಸುತ್ತಾನೆ.
ಅದಕ್ಕಿಂತಲೂ ಆಶ್ಚರ್ಯಕರವಾದ ಸಂಗತಿ ಯಾವುದಿದೆ?
ಶುಕ್ರೋ ನಾಮಾಸಿತಃ ಪಾದೋ ಯಸ್ಯ ವಾರಿಧರೋಂಬರೇ |
ತೋಯಂ ಸೃಜತಿ ವರ್ಷಾಸು ಕಿಮಾಶ್ಚರ್ಯಮತಃ ಪರಮ್ ॥4॥
ಶುಕ್ರ ಎಂಬ ಹೆಸರಿನ ಕಾಲಮೇಘವು ಆಕಾಶದಲ್ಲಿ ಮಳೆಗಾಲದಲ್ಲಿ ನೀರನ್ನು ಸೃಷ್ಟಿಸುತ್ತದೆ. ಆ ಮೇಘವು ಸೂರ್ಯನಿಂದಲೇ ಉತ್ಪನ್ನವಾದುದು. ಅದಕ್ಕಿಂತಲೂ ಆಶ್ಚರ್ಯಕರವಾದುದು ಏನು?
ಯೋಽಷ್ಟಮಾಸಾಂಸ್ತು ಶುಚಿನಾ ಕಿರಣೇನೋಜ್ಝಿತಂ ಪಯಃ |
ಪರ್ಯಾದತ್ತೇ ಪುನಃ ಕಾಲೇ ಕಿಮಾಶ್ಚರ್ಯಮತಃ ಪರಮ್ ॥5॥
ಸೂರ್ಯದೇವನು ಮಳೆಗಾಲದಲ್ಲಿ ಭೂಮಿಗೆ ಸುರಿಸಿದ ನೀರನ್ನು ಪುನಃ ಎಂಟು ತಿಂಗಳ ಕಾಲ ಶುದ್ಧವಾದ ಕಿರಣಗಳಿಂದ ಸಂಗ್ರಹಿಸುತ್ತಾನೆ. ಇದಕ್ಕಿಂತಲೂ ಆಶ್ಚರ್ಯಕರವಾದ ಸಂಗತಿ ಏನು?
ಯಸ್ಯ ತೇಜೋವಿಶೇಷೇಷು ನಿತ್ಯಮಾತ್ಮಾ ಪ್ರತಿಷ್ಠಿತಃ |
ಯತೋ ಬೀಜಂ ಮಹೀ ಚೇಯಂ ಧಾರ್ಯತೇ ಸಚರಾಚರಮ್ ॥6॥
ಸೂರ್ಯದೇವನ ಕಿರಣಗಳಲ್ಲಿ ಸಾಕ್ಷಾತ್ ಪರಮಾತ್ಮನೇ ಅಂತರ್ಯಾಮಿಯಾಗಿ ಸನ್ನಿಹಿತನಾಗಿದ್ದಾನೆ. ಸೂರ್ಯನಿಂದಲೇ ಅನೇಕ ವಿಧವಾದ ಬೀಜಗಳು ಹುಟ್ಟುತ್ತವೆ. ಚರಾಚರ ಪ್ರಾಣಿಗಳಿಂದ ಯುಕ್ತವಾದ ಭೂಮಿಯನ್ನು ಸೂರ್ಯನೇ ಧರಿಸಿದ್ದಾನೆ.
ಯತ್ರ ದೇವೋ ಮಹಾಬಾಹುಃ ಶಾಶ್ವತಃ ಪರಮೋಕ್ಷರಃ |
ಅನಾದಿನಿಧನೋ ವಿಪ್ರಾ ಕಿಮಾಶ್ಚರ್ಯಮತಃ ಪರಮ್ ॥7॥
ಯಾವ ಸೂರ್ಯಮಂಡಲದಲ್ಲಿ ಮಹಾಬಾಹುವಾದ, ಶಾಶ್ವತನೂ, ಪರಮನೂ, ಅಕ್ಷರನೂ, ಅನಾದಿನಿಧನನೂ ಆದ ಪರಬ್ರಹ್ಮನು ಸನ್ನಿಹಿತನಾಗಿದ್ದಾನೆ. ವಿಪ್ರನೇ, ಇದಕ್ಕಿಂತಲೂ ಆಶ್ಚರ್ಯಕರವಾದುದು ಏನು?
ಆಶ್ಚರ್ಯಾಣಾಮಿವಾಶ್ಚರ್ಯಮಿದಮೇಕಂ ತು ಮೇ ಶೃಣು |
ವಿಮಲೇ ಯನ್ಮಯಾ ದೃಷ್ಟಮಂಬರೇ ಸೂರ್ಯಸಂಶ್ರಯಾತ್ ॥8॥

ಸೂರ್ಯನ ಆಶ್ರಯದಿಂದ ನಾನು ಮೂಲವಾದ ಆಕಾಶದಲ್ಲಿ ನೋಡಿದ ಆಶ್ಚರ್ಯಗಳಲ್ಲಿಯೇ ಆಶ್ಚರ್ಯಕರವಾದ ಒಂದು ಸಂಗತಿಯನ್ನು ಹೇಳುತ್ತೇನೆ, ಕೇಳು.
ಪುರಾ ಮಧ್ಯಾಹ್ನಸಮಯೇ ಲೋಕಾಂಸ್ತಪತಿ ಭಾಸ್ಕರೇ |
ಪ್ರತ್ಯಾದಿತ್ಯಪ್ರತೀಕಾಶಃ ಸರ್ವತಃ ಪ್ರತ್ಯದೃಶ್ಯತ ॥9॥
ಹಿಂದೆ ಸೂರ್ಯನು ಮಧ್ಯಾಹ್ನದ ಸಮಯದಲ್ಲಿ ಲೋಕಗಳನ್ನು ತನ್ನ ಪ್ರಖರವಾದ ಕಿರಣಗಳಿಂದ ಪ್ರಕಾಶಗೊಳಿಸುತ್ತಿದ್ದಾಗ ಅದೇ ಆಕಾಶದಲ್ಲಿ ಸೂರ್ಯನಂತೆ ಕಂಗೊಳಿಸುತ್ತಿದ್ದ ಮತ್ತೊಬ್ಬ ಪುರುಷನು ಎಲ್ಲ ಕಡೆಯಿಂದಲೂ ಕಾಣಿಸಿದನು.
ಸ ಲೋಕಾಂಸ್ತೇಜಸಾ ಸರ್ವಾನ್ ಸ್ವಭಾಸಾ ನಿರ್ವಿಭಾಸಯನ್ |
ಆದಿತ್ಯಾಭಿಮುಖೋಭ್ಯೇತಿ ಗಗನಂ ಪಾಟಯನ್ನಿವ ॥10॥
ಅವನಾದರೂ ತನ್ನ ತೇಜಸ್ಸಿನಿಂದ ಎಲ್ಲ ಲೋಕಗಳನ್ನು ಪ್ರಕಾಶಗೊಳಿಸುತ್ತಾ ಆಕಾಶವನ್ನೇ ಸೀಳಿಬಿಡುತ್ತಾನೋ ಎಂಬಂತೆ ವೇಗವಾಗಿ ಸೂರ್ಯನಿಗೆ ಅಭಿಮುಖವಾಗಿ ಬಂದನು.
ಹುತಾಹುತಿರಿವ ಜ್ಯೋತಿರ್ವ್ಯಾಪ್ಯ ತೇಜೋಮರೀಚಿಭಿಃ |
ಅನಿರ್ದೇಶ್ಯೇನ ರೂಪೇಣ ದ್ವಿತೀಯ ಇವ ಭಾಸ್ಕರಃ ॥11॥
ಆಜ್ಯಾಹುತಿಯಿಂದ ಪ್ರಜ್ವಲಿಸಲ್ಪಟ್ಟ ಅಗ್ನಿದೇವನಂತೆ ತೇಜೋಮಯವಾದ ಕಿರಣಗಳಿಂದ ಸಮಸ್ತ ಜ್ಯೋತಿರ್ಮಂಡಲವನ್ನು ವ್ಯಾಪಿಸಿ ನಿರ್ದಿಷ್ಟವಾಗಿ ಇದೆ ಎಂದು ಹೇಳಲಾಗದಿರುವ ರೂಪದಿಂದ ಎರಡನೆಯ ಸೂರ್ಯನಂತೆಯೇ ಕಂಗೊಳಿಸುತ್ತಿದ್ದನು.
ತಸ್ಯಾಭಿಗಮನಪ್ರಾಪ್ತೌ ಹಸ್ತೋ ದತ್ತೋ ವಿವಸ್ವತಾ |
ತೇನಾಪಿ ದಕ್ಷಿಣೋ ಹಸ್ತೋ ದತ್ತಃ ಪ್ರತ್ಯರ್ಚನಾರ್ಥಿನಾ ॥12॥
ಆ ಮಹಾಪುರುಷನು ಸೂರ್ಯನ ಸಮೀಪಕ್ಕೆ ಬರುತ್ತಿರಲು ಸೂರ್ಯನು ತನ್ನ ಎರಡೂ ಕೈಗಳನ್ನು ಮುಂದಕ್ಕೆ ಚಾಚಿ ಅವನನ್ನು ಸ್ವಾಗತಿಸಿದನು. ಮಹಾಪುರುಷನೂ ಸೂರ್ಯನನ್ನು ಪ್ರತಿಯಾಗಿ ಸಮ್ಮಾನಿಸಲು ಬಲಗೈಯನ್ನು ಮುಂದೆ ನೀಡಿದನು.
ತತೋ ಭಿತ್ತ್ವೈವ ಗಗನಂ ಪ್ರವಿಷ್ಟೋ ರವಿಮಂಡಲಮ್ |
ಏಕೀಭೂತಂ ಚ ತತ್ತೇಜಃ ಕ್ಷಣೇನಾದಿತ್ಯತಾಂ ಗತಮ್ ॥13॥
ಬಳಿಕ ಮಹಾಪುರುಷನು ಆಕಾಶವನ್ನು ಭೇದಿಸಿಕೊಂಡು ಸೂರ್ಯಮಂಡಲವನ್ನು ಪ್ರವೇಶಿಸಿದನು. ಕ್ಷಣಮಾತ್ರದಲ್ಲಿ ಅವನ ತೇಜಸ್ಸು ಸೂರ್ಯನ ತೇಜಸ್ಸಿನ ಜೊತೆಗೆ ಒಂದಾಗಿ ಆದಿತ್ಯನಂತೆಯೇ ಆಗಿಹೋಯಿತು.
ತತ್ರ ನಃ ಸಂಶಯೋ ಜಾತಸ್ತಯೋಸ್ತೇಜಃಸಮಾಗಮೇ |
ಅನಯೋಃ ಕೋ ಭವೇತ್ ಸೂರ್ಯೋ ರಥಸ್ಥೋ ಯೋಽಯಮಾಗತಃ ॥
ತೇ ವಯಂ ಜಾತಸಂದೇಹಾಃ ಪರ್ಯಪೃಚ್ಛಾಮಹೇ ರವಿಮ್ |
ಕ ಏಷ ದಿವಮಾಕ್ರಮ್ಯ ಗತಃ ಸೂರ್ಯ ಇವಾಪರಃ ॥15॥
ಆ ಎರಡು ತೇಜಸ್ಸುಗಳು ಪರಸ್ಪರ ಸೇರಿದಾಗ ನಿಜವಾದ ಸೂರ್ಯನು ಯಾರೆಂದು ನಮ್ಮಲ್ಲಿ ಸಂಶಯವುಂಟಾಯಿತು. ರಥದಲ್ಲಿರುವವನು ಸೂರ್ಯನೇ ಅಥವಾ ಈಗ ಬಂದು ಸೇರಿಕೊಂಡವನು ನಿಜವಾದ ಸೂರ್ಯನೇ ಎಂದು ಸಂದೇಹ ಪಟ್ಟೆವು. ಸಂದೇಹದಿಂದ ಭಗವನ್ ಆಕಾಶವನ್ನೇ ತೇಜಸ್ಸಿನಿಂದ ವ್ಯಾಪಿಸಿ ಇಲ್ಲಿಗೆ ಆಗಮಿಸಿದ ಸೂರ್ಯನಂತೆಯೇ ಕಾಣುತ್ತಿರುವ ಅವನು ಯಾರು ಎಂದು ರಥದಲ್ಲಿರುವ ಸೂರ್ಯನನ್ನು ಪ್ರಶ್ನಿಸಿದೆವು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ಮೋಕ್ಷಧರ್ಮೇ ಪಂಚನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತಾರನೆಯ ಅಧ್ಯಾಯ
ಉಂಛವೃತ್ತಿಯಿಂದ ಸಿದ್ಧಿಯನ್ನು ಪಡೆದ ಸಾಧಕನ ಗತಿಯ ವರ್ಣನೆ.
ಸೂರ್ಯಃ
ನೈಷ ದೇವೋಽನಿಲಸಖೋ ನಾಸುರೋ ನ ಚ ಪನ್ನಗಃ |
ಉಂಛವೃತ್ತಿವ್ರತೇ ಸಿದ್ಧೋ ಮುನಿರೇಷ ದಿವಂ ಗತಃ ॥1॥
ಸೂರ್ಯ ನನ್ನೆದುರು ಬಂದು ಸೂರ್ಯಮಂಡಲವನ್ನು ಸೇರಿದ ವ್ಯಕ್ತಿಯು ವಾಯುಸಖನಾದ ಅಗ್ನಿಯಲ್ಲ, ಅಸುರನೂ ಅಲ್ಲ, ನಾಗನೂ ಅಲ್ಲ. ಉಂಛವೃತ್ತಿಯ ವ್ರತದಿಂದ ಸಿದ್ಧಿಯನ್ನು ಪಡೆದ ಮುನಿಯು ನನ್ನ ಮೂಲಕ ಸ್ವರ್ಗಲೋಕಕ್ಕೆ ಹೋದನು.
ಏಷ ಮೂಲಫಲಾಹಾರಃ ಶೀರ್ಣಪರ್ಣಾಶನಸ್ತಥಾ |
ಅಬ್ಭಕ್ಷೋ ವಾಯುಭಕ್ಷಶ್ಚ ಆಸೀದ್ ವಿಪ್ರಃ ಸಮಾಹಿತಃ ॥2॥
ಈ ಬ್ರಾಹ್ಮಣನು ಕಂದಮೂಲಫಲಗಳನ್ನೇ ಆಹಾರವನ್ನಾಗಿ ಸ್ವೀಕರಿಸುತ್ತಿದ್ದನು. ಒಣಗಿದ ಎಲೆಗಳು, ಕೇವಲ ನೀರು ಇವುಗಳನ್ನೇ ಸ್ವೀಕರಿಸುತ್ತಾ, ವಾಯು ಭಕ್ಷಕನಾಗಿಯೂ ಏಕಾಗ್ರಚಿತ್ತನಾಗಿ ಹರಿಯ ಧ್ಯಾನದಲ್ಲೇ ಮುಳುಗಿ ಹೋಗಿದ್ದನು.
ಋಚಶ್ಚಾನೇನ ವಿಪ್ರೇಣ ಸಂಹಿತಾಂತರಭಿಷ್ಟುತಾಃ |
ಸ್ವರ್ಗದ್ವಾರಕೃತೋದ್ಯೋಗೋ ಯೇನಾಸೌ ತ್ರಿದಿವಂ ಗತಃ ॥3॥
ಈ ಬ್ರಾಹ್ಮಣನು ಸಂಹಿತೆಗಳ ಮಂತ್ರಗಳಿಂದ ಭಗವಂತನನ್ನು ಸ್ತುತಿಸುತ್ತಿದ್ದನು. ಹೀಗೆ ಸ್ವರ್ಗಕ್ಕೆ ದ್ವಾರಗಳೆನಿಸಿದ ಸತ್ಕರ್ಮಗಳನ್ನು ನಡೆಸಿದ ಕಾರಣ ಇವನು ಸ್ವರ್ಗಕ್ಕೆ ಹೋದನು.
ಅಸನ್ನಧೀರನಾಕಾಂಕ್ಷೀ ನಿತ್ಯಮುಂಛಶಿಲಾಶನಃ |

ಸರ್ವಭೂತಹಿತೇ ಯುಕ್ತ ಏಷ ವಿಪ್ರೋ ಭುಜಂಗಮ ॥4॥
ವಾಮಮಾರ್ಗದಲ್ಲಿ ಇವನ ಬುದ್ಧಿಯು ಎಂದೂ ಚಲಿಸಲಿಲ್ಲ. ಯಾವ ಬಯಕೆಗಳನ್ನೂ ಹೊಂದುತ್ತಿರಲಿಲ್ಲ. ನಿತ್ಯವೂ ಉಂಛ-ಶಿಲವೃತ್ತಿಗಳಿಂದ ಜೀವನ ನಡೆಸುತ್ತಿದ್ದನು (ಕಣದಲ್ಲಿ ಬಿದ್ದ ಕಾಳುಗಳನ್ನು ಸಂಗ್ರಹಿಸುವುದು ಉಂಛವೃತ್ತಿಯಾದರೆ, ಉದುರಿಬಿದ್ದ ಸಣ್ಣ ತೆನೆಗಳನ್ನು ಸಂಗ್ರಹಿಸುವುದು ಶಿಲವೃತ್ತಿ ಎನಿಸಿದೆ). ಸರ್ಪಗಳೇ, ಇವನು ಸರ್ವಭೂತಹಿತಚಿಂತಕನಾಗಿದ್ದನು.
ನ ಹಿ ದೇವಾ ನ ಗಂಧರ್ವಾ ನಾಸುರಾ ನ ಚ ಪನ್ನಗಾಃ |
ಪ್ರಭವಂತೀಹ ಭೂತಾನಾಂ ಪ್ರಾಪ್ತಾನಾಂ ಪರಮಾಂ ಗತಿಮ್ ॥5॥
ದೇವ-ದಾನವ-ಗಂಧರ್ವ-ಅಸುರ-ಸರ್ಪಗಳಲ್ಲಿ ಯಾರೇ ಆದರೂ ಸೂರ್ಯಮಂಡಲವನ್ನು ಪ್ರವೇಶಿಸುವ ಇಂತಹ ಉತ್ತಮ ಗತಿಯನ್ನು ಪಡೆದವರಿಗಿಂತ ಉತ್ತಮರೆನಿಸರು ಎಂದು ಹೇಳಿದನು.
ನಾಗಃ
ಏತದೇವಂವಿಧಂ ದೃಷ್ಟಮಾಶ್ಚರ್ಯಂ ತತ್ರ ಮೇ ದ್ವಿಜ |
ಸಂಸಿದ್ಧೋ ಮಾನುಷಃ ಕಾಯೋ ಯೋಽಸೌ ಸಿದ್ಧಗತಿಂ ಗತಃ |
ಸೂರ್ಯೇಣ ಸಹಿತೋ ಬ್ರಹ್ಮನ್ ಪೃಥಿವೀಂ ಪರಿವರ್ತತೇ ॥6॥
ನಾಗ ಓ ಬ್ರಾಹ್ಮಣನೇ, ನಾನು ನೋಡಿದ ಆಶ್ಚರ್ಯಕರವಿಷಯವೇನೆಂದರೆ ಕೇವಲ ಉಂಛವೃತ್ತಿ ವ್ರತವನ್ನು ಹಿಡಿದು, ಸಿದ್ಧರ ಗತಿಯನ್ನು ಪಡೆದ ಆ ಬ್ರಾಹ್ಮಣನು ಈಗಲೂ, ಸೂರ್ಯನ ಜೊತೆಗೇ ಇದ್ದು ಅವನೂ ಭೂಮಿಯನ್ನು ಸುತ್ತುತ್ತಿದ್ದಾನೆ.
ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಷಣ್ಣವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೇಳನೆಯ ಅಧ್ಯಾಯ
ಉಂಛವೃತ್ತಿಯ ಮಹಿಮೆಯನ್ನು ತಿಳಿದ ಬ್ರಾಹ್ಮಣನು ಹಾಗೆಯೇ
ಅನುಷ್ಠಾನ ಮಾಡುವುದಾಗಿ ಹೇಳಿ ಮನೆಗೆ ಹೊರಟನು.
ಬ್ರಾಹ್ಮಣಃ
ಆಶ್ಚರ್ಯಂ ನಾತ್ರ ಸಂದೇಹಃ ಸುಪ್ರೀತೋಽಸ್ಮಿ ಭುಜಂಗಮ |
ಅನ್ವರ್ಥೋಪಗತೈರ್ವಾಕ್ಯೈಃ ಪಂಥಾನಂ ಚಾಸ್ಮಿ ದರ್ಶಿತಃ ॥1॥
ಬ್ರಾಹ್ಮಣ ನಾಗರಾಜನೇ, ನೀನು ಹೇಳಿದ ಸಂಗತಿಗಳೆಲ್ಲವೂ ಆಶ್ಚರ್ಯವಾದವುಗಳೇ ಎಂಬುದರಲ್ಲಿ ಸಂಶಯವಿಲ್ಲ. ನಿನ್ನ ಮಾತಿನಿಂದ ಸುಪ್ರೀತನಾಗಿದ್ದೇನೆ. ನನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆಯಿತ್ತೋ ಅದಕ್ಕೆ ಅನುಕೂಲವಾದ ಮಾತನ್ನು ಹೇಳಿ ನನಗೆ ಮಾರ್ಗದರ್ಶನ ಮಾಡಿರುವಿ.
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಧೋ ಭುಜಗಸತ್ತಮ |
ಸ್ಮರಣೀಯೋಽಸ್ಮಿ ಭವತಾ ಸಂಪ್ರೇಷಣನಿಯೋಜನೈಃ ॥2॥
ಸರ್ಪರಾಜನೇ, ನಿನಗೆ ಮಂಗಳವಾಗಲಿ. ನಾನು ಹೋಗಿ ಬರುತ್ತೇನೆ. ನಿನಗೆ ಎಲ್ಲಿಗಾದರೂ ಕಳುಹಿಸಿ ಮಾಡಬೇಕಾದ ಕೆಲಸವಿದ್ದಲ್ಲಿ ನನ್ನನ್ನು ಸ್ಮರಿಸು. ಖಂಡಿತ ಬಂದು ಕೆಲಸ ಮಾಡಿಕೊಡುತ್ತೇನೆ.
ನಾಗಃ
ಅನುಕತ್ವಾ ಮದ್ಗತಂ ಕಾರ್ಯಂ ಕ್ವೇದಾನೀಂ ಪ್ರಸ್ಥಿತೋ ಭವಾನ್ |
ಉಚ್ಯತಾಂ ದ್ವಿಜ ಯತ್ ಕಾರ್ಯಂ ಯದರ್ಥಂ ತ್ವಮಿಹಾಗತಃ ॥3॥
ನಾಗರಾಜ ವಿಪ್ರಶ್ರೇಷ್ಠನೇ, ನಿನ್ನ ಮನಸ್ಸಿನ ಕಾರ್ಯವನ್ನು ಹೇಳದೆ ಎಲ್ಲಿಗೆ ಹೋಗುತ್ತಿರುವಿ? ನಿನಗೆ ಆಗಬೇಕಾದ ಕಾರ್ಯ ಯಾವುದು? ಯಾವ ಪ್ರಯೋಜನದ ಉದ್ದೇಶದಿಂದ ಇಲ್ಲಿಗೆ ಬಂದವನಾಗಿದ್ದಿ?
ಉಕ್ತಾನುಕ್ತೇ ಕೃತೇ ಕಾರ್ಯೇ ಮಾಮಾಮಂತ್ರ್ಯ ದ್ವಿಜರ್ಷಭ |
ಮಯಾ ಪ್ರತ್ಯಭ್ಯನುಜ್ಞಾತಸ್ತತೋ ಯಾಸ್ಯಸಿ ಬ್ರಾಹ್ಮಣ ॥4॥
ಸುವ್ರತನೇ, ನಿನ್ನ ಮನಸ್ಸಿನ ಆಸೆಯನ್ನು ಹೇಳು ಅಥವಾ ಹೇಳದಿರು. ನೀನು ಬಂದಿರುವ ಕಾರ್ಯವು ಮುಗಿದ ಬಳಿಕವೇ ನನ್ನ ಅನುಮತಿಯನ್ನು ಪಡೆದು ಇಲ್ಲಿಂದ ಪ್ರಯಾಣ ಮಾಡಬೇಕು.
ನ ಹಿ ಮಾಂ ಕೇವಲಂ ದೃಷ್ಟ್ವಾ ತ್ಯಕತ್ವಾ ಪ್ರಣಯವಾನಿಹ |
ಗಂತುಮರ್ಹಸಿ ವಿಪ್ರರ್ಷೇ ವೃಕ್ಷಮೂಲಗತೋ ಯಥಾ ॥5॥
ವಿಪ್ರರ್ಷಿಯೇ, ನನ್ನ ಮೇಲೆ ಅತಿಯಾದ ಪ್ರೀತಿಯನ್ನು ಹೊಂದಿರುವ ನೀನು ಮರದ ಬುಡದಲ್ಲೇ ಕುಳಿತು ಪ್ರಯಾಣವನ್ನು ಮುಂದುವರಿಸುವ ದಾರಿಹೋಕನಂತೆ ನನ್ನನ್ನು ದರ್ಶನ ಮಾಡಿ ಹೊರಟು ಹೋಗುವುದು ಉಚಿತವಾದುದಲ್ಲ.
ತ್ವಯಿ ಚಾಹಂ ದ್ವಿಜಶ್ರೇಷ್ಠ ಭವಾನ್ ಮಯಿ ನ ಸಂಶಯಃ |
ಲೋಕೋಽಯಂ ಭವತಃ ಸರ್ವಃ ಕಾ ಚಿಂತಾ ಮಯಿ ತೇಽನಘ ॥6॥
ಅನಘನೇ, ಬ್ರಾಹ್ಮಣಶ್ರೇಷ್ಠನೇ, ನನ್ನಲ್ಲಿ ನಿನಗೆ ಪ್ರೀತಿಯಿದೆ, ನಿನ್ನಲ್ಲಿ ನನಗೂ ಪ್ರೀತಿಯಿದೆ. ಇದರಲ್ಲಿ ಸಂಶಯವಿಲ್ಲ. ಈ ನನ್ನ ಲೋಕವೆಲ್ಲವೂ ನಿನ್ನದೇ. ನನ್ನ ಮನೆಯಲ್ಲಿಯೇ ವಾಸಿಸು. ನಿನಗೆ ಯಾವ ಚಿಂತೆ?
ಬ್ರಾಹ್ಮಣಃ
ಏವಮೇತನ್ಮಹಾಪ್ರಾಜ್ಞ ವಿಜ್ಞಾತಾರ್ಥ ಭುಜಂಗಮ |

ನಾತಿರಿಕ್ತಾಸ್ತ್ವಯಾ ದೇವಾಃ ಸರ್ವಥೈವ ಯಥಾತಥಮ್ ॥7॥
ಬ್ರಾಹ್ಮಣ ಮಹಾಪ್ರಾಜ್ಞನೇ, ಆತ್ಮಜ್ಞಾನಿಯೇ, ಸರ್ಪರಾಜನೇ, ನೀನು ಹೇಳಿದಂತೆಯೇ ಆಗಲಿ. ದೇವತೆಗಳೂ ನಿನ್ನನ್ನು ಮೀರರು. ಈ ಮಾತು ಖಂಡಿತವಾಗಿಯೂ ಸತ್ಯವಾದುದು.
ಯ ಏವಾಹಂ ಸ ಏವ ತ್ವಮೇವಮೇತದ್ ಭುಜಂಗಮ |
ಅಹಂ ಭವಾಂಶ್ಚ ಭೂತಾನಿ ಸರ್ವೇ ಸರ್ವತ್ರಗಾಃ ಸದಾ ॥8॥
ನೀನು ಸೂರ್ಯಮಂಡಲಾಂತರ್ಗತನಾದ ನಾರಾಯಣನ ಯಾವ ವಿಷಯವನ್ನು ಹೇಳಿದೆಯೋ, ಸಮಸ್ತ ಪ್ರಾಣಿಗಳು ಎಲ್ಲಿಗೆ ಹೋಗಿ ಸೇರುತ್ತಿದ್ದಾರೋ ಅಂತಹ ನಾರಾಯಣನೇ ನಿನ್ನಲ್ಲಿ ಸನ್ನಿಹಿತನಾಗಿದ್ದಾನೆ, ನನ್ನಲ್ಲೂ ಸನ್ನಿಹಿತನಾಗಿದ್ದಾನೆ. ಎಲ್ಲರಲ್ಲಿಯೂ ಆ ಭಗವಂತನೇ ನೆಲೆಸಿದ್ದಾನೆ.
ಆಸೀತ್ತು ಮೇ ಭೋಗಪತೇ ಸಂಶಯಃ ಪುಣ್ಯಸಂಚಯೇ |
ಸೋಹಮುಂಛವ್ರತಂ ಸಾಧೋ ಚರಿಷ್ಯಾಮ್ಯರ್ಥದರ್ಶನಮ್ ॥9॥
ನನಗೆ ಪುಣ್ಯಸಂಗ್ರಹ ವಿಷಯದಲ್ಲಿ ಸಂಶಯವುಂಟಾಗಿತ್ತು. ಯಾವ ಸಾಧನೆಯ ಮೂಲಕ ಸದ್ಗತಿಯನ್ನು ಹೊಂದಬೇಕೆಂಬ ನಿಶ್ಚಯವಿರಲಿಲ್ಲ. ಆದ್ದರಿಂದ ಆಗಮಿಸಿದೆ. ನಿನ್ನ ಜೊತೆ ನಡೆಸಿದ ಸಂವಾದದಿಂದ ನನ್ನ ಸಂಶಯವು ಪರಿಹಾರವಾಗಿದೆ. ಉಂಛವ್ರತವನ್ನು ಆಚರಿಸಲು ತೆರಳುತ್ತೇನೆ.
ಏಷ ಮೇ ನಿಶ್ಚಯಃ ಸಾಧೋ ಕೃತಃ ಕಾರಣವತ್ತರಃ |
ಆಮಂತ್ರಯಾಮಿ ಭದ್ರಂ ತೇ ಕೃತಾರ್ಥೋಽಸ್ಮಿ ಭುಜಂಗಮ ॥10॥
ಸತ್ಪುರುಷನೇ, ಇದು ನನ್ನ ನಿಶ್ಚಯವು. ನಿನ್ನ ಮೂಲಕ ನಾನು ಉದ್ದೇಶಿಸಿದ ಕಾರ್ಯ ನಡೆದಿದೆ. ಕೃತಾರ್ಥನಾಗಿದ್ದೇನೆ. ನಿನಗೆ ಮಂಗಳವಾಗಲಿ. ಪ್ರಯಾಣಿಸಲು ಅನುಮತಿಯನ್ನು ನೀಡು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಸಪ್ತನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೆಂಟನೆಯ ಅಧ್ಯಾಯ
ನಾಗರಾಜನ ಅನುಮತಿಯನ್ನು ಪಡೆದು ಚ್ಯವನಮಹರ್ಷಿಯ ಬಳಿ ಸಾಗಿದ ಬ್ರಾಹ್ಮಣನು ಉಂಛವೃತ್ತಿಯ ದೀಕ್ಷೆಯನ್ನು ಸ್ವೀಕರಿಸಿದುದು.
ಭೀಷ್ಮಃ
ಸ ಚಾಮಂತ್ರ್ಯೋರಗಶ್ರೇಷ್ಠಂ ಬ್ರಾಹ್ಮಣಃ ಕೃತನಿಶ್ಚಯಃ |
ದೀಕ್ಷಾಕಾಂಕ್ಷೀ ತದಾ ರಾಜನ್ ಚ್ಯವನಂ ಭಾರ್ಗವಂ ಶ್ರಿತಃ ॥1॥
ಭೀಷ್ಮ ಯುಧಿಷ್ಠಿರನೇ, ನಾಗರಾಜನ ಅನುಮತಿಯನ್ನು ಪಡೆದು ಬ್ರಾಹ್ಮಣನು ತನ್ನ ಊರಿಗೆ ಬಂದು ಉಂಛವೃತ್ತಿಯ ದೀಕ್ಷೆಯನ್ನು ಸ್ವೀಕರಿಸಲು ಭಾರ್ಗವನಾದ ಚ್ಯವನ ಮಹರ್ಷಿಯನ್ನು ಸಮೀಪಿಸಿದನು.
ಸ ತೇನ ಕೃತಸಂಸ್ಕಾರೋ ಧರ್ಮಮೇವೋಪತಸ್ಥಿವಾನ್ |
ತಥೈವ ಚ ಕಥಾಮೇತಾಂ ರಾಜನ್ಕಥಿತವಾಂಸ್ತದಾ ॥2॥
ಚ್ಯವನ ಮಹರ್ಷಿಯಾದರೂ ಈ ಧರ್ಮಾರಣ್ಯನೆಂಬ ಬ್ರಾಹ್ಮಣನಿಗೆ ದೀಕ್ಷೆಯನ್ನು ನೀಡಿ, ಅವನನ್ನು ಸತ್ಕರಿಸಿ ಕಳುಹಿಸಿಕೊಟ್ಟನು. ಬಳಿಕ ಧರ್ಮಾರಣ್ಯನು ಉಂಛವೃತ್ತಿಯನ್ನೇ ಆಶ್ರಯಿಸಿ ಜೀವನವನ್ನು ನಿರ್ವಹಿಸುತ್ತಿದ್ದನು.
ಭಾರ್ಗವೇಣಾಪಿ ರಾಜೇಂದ್ರ ಜನಕಸ್ಯ ನಿವೇಶನೇ |
ಕಥೈಷಾ ಕಥಿತಾ ಪುಣ್ಯಾ ನಾರದಾಯ ಮಹಾತ್ಮನೇ ॥3॥
ಉಂಛವೃತ್ತಿಯ ಮಹಿಮೆಗೆ ಸಂಬಂಧಿಸಿದ ಕಥೆಯನ್ನು ಬ್ರಾಹ್ಮಣನು ಚ್ಯವನ ಮಹರ್ಷಿಗೆ ಹೇಳಿದನು. ಚ್ಯವನನು ಜನಕನ ಅರಮನೆಯಲ್ಲಿ ಈ ಪುಣ್ಯಕಥೆಯನ್ನು ನಾರದರಿಗೆ ಹೇಳಿದನು.
ನಾರದೇನಾಪಿ ರಾಜೇಂದ್ರ ದೇವೇಂದ್ರಸ್ಯ ನಿವೇಶನೇ |
ಕಥಿತಾ ಭರತಶ್ರೇಷ್ಠ ಪೃಷ್ಟೇನಾಕ್ಲಿಷ್ಟಕರ್ಮಣಾ ॥4॥
ಭರತಶ್ರೇಷ್ಠನೇ, ಬಳಿಕ ಈ ಮಂಗಳಪ್ರದವಾದ ಕಥೆಯನ್ನು ನಾರದರು ದೇವೇಂದ್ರನ ಮನೆಯಲ್ಲಿ ಹೇಳಿದರು. ದೇವೇಂದ್ರನು ಈ ಕಥೆಯನ್ನು ನಾರದರ ಮುಖದಿಂದ ಕೇಳಿದನು.
ದೇವರಾಜೇನ ಚ ಪುರಾ ಕಥೈಷಾ ಕಥಿತಾ ಶುಭಾ |
ಸಮಸ್ತೇಭ್ಯಃ ಪ್ರಶಂಸ್ತೇಭ್ಯೋ ವಸುಭ್ಯೋ ವಸುಧಾಧಿಪ ॥5॥
ಆ ದೇವೇಂದ್ರನಾದರೂ ಸಮಸ್ತರಾದ, ಪ್ರಶಸ್ತರಾದ ವಸುದೇವತೆಗಳಿಗೆ ಈ ಕಥೆಯನ್ನು ಹೇಳಿದನು.
ಯದಾ ಚ ಮಮ ರಾಮೇಣ ಯುದ್ಧಮಾಸೀತ್ ಸುದಾರುಣಮ್ |
ವಸುಭಿಶ್ಚ ತದಾ ರಾಜನ್ ಕಥೇಯಂ ಕಥಿತಾ ಮಮ ॥6॥
ಯಾವಾಗ ನನಗೂ ಪರಶುರಾಮನಿಗೂ ಯುದ್ಧವು ನಡೆಯಿತೋ ಆ ಸಮಯದಲ್ಲಿ ವಸುಗಳು ಈ ಪುಣ್ಯಕಥೆಯನ್ನು ನನಗೆ ಹೇಳಿದರು.
ಪೃಚ್ಛಮಾನಾಯ ತತ್ತ್ವೇನ ಮಯಾ ತುಭ್ಯಂ ವಿಶಾಂಪತೇ |
ಕಥೇಯಂ ಕಥಿತಾ ಪುಣ್ಯಾ ಧರ್ಮ್ಯಾ ಧರ್ಮಭೃತಾಂ ವರ ॥7॥
ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ, ನೀನು ಧರ್ಮಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿದಾಗ ಅದಕ್ಕೆ ಉತ್ತರವಾಗಿ

ಪುಣ್ಯಪ್ರದವಾದ ಈ ಕಥೆಯನ್ನು ನಿನಗೆ ಹೇಳಿದ್ದೇನೆ.
ತದೇಷ ಪರಮೋ ಧರ್ಮೋ ಯನ್ಮಾಂ ಪೃಚ್ಛಸಿ ಭಾರತ |
ಅಸನ್ನಧೀರನಾಕಾಂಕ್ಷೀ ಧರ್ಮಾರ್ಥಕರಣೇ ನೃಪ ॥8॥
ನೀನು ಯಾವ ಧರ್ಮವು ಶ್ರೇಷ್ಠ ಎಂದು ಕೇಳಿದಾಗ, ಈ ಉಂಛವೃತ್ತಿಯು ಪರಮಧರ್ಮ ಎಂದು ಉತ್ತರಿಸಿದ್ದೇನೆ. ನಿಷ್ಕಾಮನೆಯಿಂದ ಯಾವ ಅಪೇಕ್ಷೆಗಳೂ ಇಲ್ಲದೆ ಧರ್ಮವನ್ನು ಮಾಡಲು ತೊಡಗುವಿಯಾದರೆ ಉಂಛವೃತ್ತಿಯನ್ನೇ ಆಶ್ರಯಿಸಬೇಕು.
ಸ ಚ ಕಿಲ ಕೃತನಿಶ್ಚಯೋ ದ್ವಿಜಾಗ್ರ್ಯೋ
ಭುಜಗಪತಿಪ್ರತಿದೇಶಿತಾರ್ಥಕೃತ್ಯಃ |
ಯಮನಿಯಮಸಮಾಹಿತೋ ವನಾಂತಂ
ಪರಿಗಣಿತೋಂಛಶಿಲಾಶನಃ ಪ್ರವಿಷ್ಟಃ ॥9॥
ಆ ದ್ವಿಜಶ್ರೇಷ್ಠನಾದ ಧರ್ಮಾರಣ್ಯನು ತನ್ನ ಧರ್ಮದಲ್ಲಿ ನಿಶ್ಚಯಜ್ಞಾನವನ್ನು ಹೊಂದಿ, ಆ ನಾಗರಾಜನು ಉಪದೇಶಿಸಿದ ಸತ್ಕರ್ಮವೇ ತನ್ನ ಕರ್ತವ್ಯವೆಂದು ಆ ವ್ರತವನ್ನು ಕೈಗೊಳ್ಳಲು ನಿಶ್ಚಯಿಸಿದನು. ನಂತರ ಮತ್ತೊಂದು ಅರಣ್ಯಕ್ಕೆ ಸಾಗಿ ಯಮ-ನಿಯಮಗಳನ್ನು ಪಾಲಿಸುತ್ತಾ, ಉಂಛ ಮತ್ತು ಶಿಲವೃತ್ತಿಯಿಂದ ದೊರಕಿದ ಪರಿಮಿತವಾದ ಆಹಾರವನ್ನು ಸ್ವೀಕರಿಸುತ್ತಾ, ಆ ವ್ರತದಿಂದಲೇ ಸಿದ್ಧಿಯನ್ನು ಹೊಂದಿದನು.
॥ ಇತಿ ಶ್ರೀಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಮೋಕ್ಷಧರ್ಮೇ ಅಷ್ಟನವತ್ಯುತ್ತರಶತತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೂರ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಮೋಕ್ಷಧರ್ಮಪರ್ವ ॥

॥ ಪ್ರೀತೋऽಸ್ತು ಕೃಷ್ಣಪ್ರಿಯಃ ॥
* * * * *

ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ
ಶ್ರೀಮನ್ಮಹಾಭಾರತ
ಶಾಂತಿಪರ್ವ
ರಾಜಧರ್ಮಪರ್ವ
ಒಂದನೆಯ ಅಧ್ಯಾಯ
ಯುಧಿಷ್ಠಿರನು ಯುದ್ಧದಲ್ಲಿ ಮೃತಪಟ್ಟ ಬಂಧುಗಳಿಗೆ ಧರ್ಮೋದಕವನ್ನು ನೀಡಲು ಗಂಗಾತೀರಕ್ಕೆ ತೆರಳಿದ್ದನು. ಅಲ್ಲಿಗೆ ವೇದವ್ಯಾಸರು ನಾರದರೇ ಮೊದಲಾದ ಮಹರ್ಷಿಗಳು ಆಗಮಿಸಿದರು. ನಾರದರ ಮೂಲಕ ಯುಧಿಷ್ಠಿರನು ಕರ್ಣನ ವೃತ್ತಾಂತವನ್ನು ತಿಳಿಯಲು ಪ್ರಾರ್ಥಿಸಿದನು
ವೈಶಂಪಾಯನಃ
ಕೃತೋದಕಾಸ್ತೇ ಸುಹೃದಾಂ ಸರ್ವೇಷಾಂ ಪಾಂಡುನಂದನಾಃ |
ವಿದುರೋ ಧೃತರಾಷ್ಟ್ರಶ್ಚ ಸರ್ವಾಶ್ಚ ಭರತಸ್ತ್ರಿಯಃ ॥1॥
ವೈಶಂಪಾಯನರು ಎಲ್ಲಾ ಪಾಂಡವರು ಯುದ್ಧದಲ್ಲಿ ಮೃತಪಟ್ಟ ಬಂಧುಗಳಿಗೆ ಧರ್ಮೋದಕವನ್ನು ನೀಡಲು ಗಂಗಾತೀರದಲ್ಲಿ ಸೇರಿದ್ದರು. ವಿದುರ, ಧೃತರಾಷ್ಟ್ರ ಹಾಗೂ ಭರತವಂಶದ ಎಲ್ಲಾ ಹಿರಿಯರು ತಮ್ಮ ನೆಚ್ಚಿನ ಸ್ನೇಹಿತರಾದ ಬಂಧುಗಳಿಗೆ ಧರ್ಮೋದಕಗಳನ್ನು ಎಲ್ಲರೂ ಸೇರಿ ನೀಡಿದರು.
ತತ್ರ ತೇ ಸುಮಾಹಾತ್ಮನೋ ನ್ಯವಸನ್ ಕುರುನಂದನಾಃ |
ಶೌಚಂ ನಿವರ್ತಯಿಷ್ಯಂತೋ ಮಾಸಮೇಕಂ ಬಹಿಃ ಪುರಾತ್ ॥2॥
ಧರ್ಮೋದಕವನ್ನು ಸಾಂಗೋಪಾಂಗವಾಗಿ ಎಲ್ಲರೂ ನೀಡಿದರು. ಅವರೆಲ್ಲರೂ ಶ್ರೇಷ್ಠರಾದ, ಮಹಾತ್ಮರಾದ ಪಾಂಡವರ ಜೊತೆ ಒಂದು ತಿಂಗಳ ಕಾಲ ಅಲ್ಲಿಯೇ ಇದ್ದುಬಿಟ್ಟರು. ನಗರದ ಹೊರಭಾಗದಲ್ಲಿರುವ ಗಂಗಾನದಿಯ ತೀರದಲ್ಲಿ ಶುದ್ಧಿಯ ಕಾರ್ಯಗಳನ್ನು ಆಚರಿಸುತ್ತಾ ಕಾಲ ಕಳೆದರು.
ಟಿಪ್ಪಣಿ - ಶೌಚಂನಿವರ್ತಯಿಷ್ಯಂತ ಇತ್ಯತ್ರ ನಿವರ್ತಯಿಷ್ಯಂತಃ ನಿತರಾಂ ವರ್ತಯಿಷ್ಯಂತಃ | `ನಿವರ್ತಯಿಷ್ಯಂತ' ಎನ್ನುವುದಕ್ಕೆ ಚೆನ್ನಾಗಿ ಆಚರಿಸುವವರಾಗಿ ಎಂದರ್ಥ. ಕುರುನಂದನರು ಒಂದು ತಿಂಗಳುಗಳ ಕಾಲ ಶೌಚವನ್ನು ಚೆನ್ನಾಗಿ ಆಚರಿಸು- ವವರಾಗಿ ಎಂದಭಿಪ್ರಾಯ.
ಒಂದುವಿಮರ್ಶೆ - `ತತ್ರ ತೇ ಸುಮಹಾತ್ಮಾನೋ' ಎಂಬ ಎರಡನೆಯ ಶ್ಲೋಕವು ಆಶೌಚದ ಆಚರಣೆಗೋಸ್ಕರ ಪಾಂಡವರು ಒಂದು ತಿಂಗಳುಗಳ ಕಾಲ ನಗರವನ್ನು ಬಿಟ್ಟು, ಹೊರಗಡೆ ವಾಸ ಮಾಡಿದರು ಎಂದು ಹೇಳುತ್ತಿದೆ. ಇದು ಹೇಗೆ ಸರಿ ? ಎಂಬುದನ್ನು ಈಗ ವಿಮರ್ಶಿಸಬೇಕು.
ದಶಾಹಾಚ್ಛುಧ್ಯತೇ ವಿಪ್ರೋ ದ್ವಾದಶಾಹೇನ ಭೂಪತಿಃ |
ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ ॥

(ಮ.ಸ್ಮೃತಿ.5-82)
ಮೃತಾಶೌಚವನ್ನು ವಿಪ್ರನು ಹತ್ತುದಿವಸಗಳ ಕಾಲ ಆಚರಿಸಬೇಕು. ಕ್ಷತ್ರಿಯನು ಹನ್ನೆರಡು ದಿವಸಗಳು ಆಚರಿಸಬೇಕು. ವೈಶ್ಯನು ಹದಿನೈದು ದಿವಸಗಳ ಕಾಲ ಆಚರಿಸಿದರೆ ಶುದ್ಧನಾಗುತ್ತಾನೆ. ಶೂದ್ರನು ಒಂದು ತಿಂಗಳ ಕಾಲ ಆಚರಣೆ ಮಾಡಿದರೆ ಶುದ್ಧನಾಗುತ್ತಾನೆ. ಈ ವಾಕ್ಯದಂತೆ ಕ್ಷತ್ರಿಯರಿಗೆ ಒಂದು ತಿಂಗಳ ಕಾಲ ಆಶೌಚವು ಇರುವುದೇ ಇಲ್ಲ. ಹೀಗಿರುವಾಗ ಪಾಂಡವರೇಕೆ ಮಾಸಪರ್ಯಂತವಾಗಿ ಗಂಗಾತೀರದಲ್ಲಿ ಆಶೌಚವನ್ನು ಆಚರಿಸಿದರು ?
ಮತ್ತೊಂದು ಪ್ರಶ್ನೆ ಇಲ್ಲಿ ಎದುರಾಗುತ್ತದೆ ? ಯುದ್ಧದಲ್ಲಿ ಮೃತನಾದರೆ ಅವನ ಸಂಬಂಧಿಗಳಿಗೆ ಆಶೌಚವೇ ಇರುವುದಿಲ್ಲ. ಇದನ್ನೂ ಸಹ ಮನುಸ್ಮೃತಿ ಹೀಗೆ ಹೇಳಿದೆ -
ಉದ್ಯತೈರಾಹವೇ ಶಸ್ತ್ರೈಃ ಕ್ಷತ್ರಧರ್ಮಹತಸ್ಯ ಚ |
ಸದ್ಯಃ ಸಂತಿಷ್ಠತೇ ಯಜ್ಞಃ ತಥಾ ಶೌಚಮಿತಿಸ್ಥಿತಿಃ ||
ಯುದ್ಧದಲ್ಲಿ ಆಯುಧಗಳಿಂದ ಹತನಾದ ಕ್ಷಾತ್ರಧರ್ಮಾನುಷ್ಠಾತೃವಿಗೆ ಕೂಡಲೇ ಯಜ್ಞ ಮಾಡಿದ ಫಲವು ಲಭಿಸುತ್ತದೆ. ಮತ್ತು ಸಪಿಂಡರಿಗೆ ಶುದ್ಧಿ- ಯಾಗುತ್ತದೆ.
ಈ ಶ್ಲೋಕದ ಪ್ರಕಾರ ಸಪಿಂಡರಾದ ಸಂಬಂಧಿಕರಿಗೆ ಆಶೌಚ ದೋಷವೇ ಇರುವುದಿಲ್ಲ. ಆದ್ದರಿಂದ ಪಾಂಡವರೇಕೆ ಒಂದು ತಿಂಗಳ ಕಾಲ ಆಶೌಚವನ್ನು ಆಚರಿಸಿದರು? ಎಂಬ ಪ್ರಶ್ನೆ ಮತ್ತಷ್ಟು ದೃಢವಾಗುತ್ತದೆ.
ಮಲಗಿದ್ದಾಗ ಪಶುಗಳಂತೆ ಸಂಹರಿಸಲ್ಪಟ್ಟ ದ್ರೌಪದಿಯ ಮಕ್ಕಳೇ ಮೊದಲಾ- ದವರ ಉದ್ದೇಶಕ್ಕಾಗಿ ಆಶೌಚವನ್ನು ಆಚರಿಸುತ್ತಿದ್ದಾರೆ ಎಂಬ ಸಮಾಧಾನ ಹೇಳಿದರೂ ಕೂಡ ಹನ್ನೆರಡು ದಿವಸವೇ ಸಾಕಿತ್ತು ಮೂವತ್ತು ದಿವಸಗಳ ಅವಶ್ಯಕತೆ ಇರಲಿಲ್ಲ ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ.
ಇದಕ್ಕೆ ಎರಡು ರೀತಿಯಲ್ಲಿ ಸಮಾಧಾನವನ್ನು ತಿಳಿಯಬಹುದು. ಧರ್ಮ- ಶಾಸ್ತ್ರದ ಚೌಕಟ್ಟಿನಲ್ಲಿ ಒಂದು ತಿಂಗಳ ಕಾಲ ಆಶೌಚವನ್ನು ಆಚರಿಸುತ್ತಿದ್ದಾರೆಂದು ಇಲ್ಲಿ ವಿವಕ್ಷಿಸಬೇಕಾಗಿಲ್ಲ. ಅತ್ಯಂತ ಆತ್ಮೀಯರು ಹಾಗೂ ಆ ದೇಶದ ಮುಖ್ಯಸ್ಥರು ಮೃತರಾದಾಗ ಕೆಲವು ದಿವಸಗಳ ಕಾಲ ಶೋಕಾಚರಣೆ ಮಾಡುವ ವಾಡಿಕೆ ಪ್ರಸ್ತುತ ಕಾಲದಲ್ಲೂ ಪ್ರಾಪ್ತವಾಗಿದೆ. ಈ ಪಾಂಡವರೆಲ್ಲರೂ ತಮಗೆ ಅತ್ಯಂತ ಆತ್ಮೀಯರಾದ ಮತ್ತು ಪ್ರಧಾನರಾದ ವ್ಯಕ್ತಿಗಳ ಮರಣನಿಮಿತ್ತವಾಗಿ ಶೌಚಾ- ಚಾರವನ್ನು ಮಾಡಲು ಒಂದು ತಿಂಗಳಕಾಲ ತಾವೇ ನಿರ್ಧಾರ ಮಾಡಿಕೊಂಡು ಗಂಗಾತೀರದಲ್ಲಿ ವಾಸಮಾಡಿದರು. ಮತ್ತು ಮೃತರಾದ ವ್ಯಕ್ತಿಗಳಿಗೆ ಜಲ- ತರ್ಪಣಾದಿಗಳನ್ನು ನೀಡುವ ಮೂಲಕ ಅವರನ್ನು ಸ್ಮರಿಸಿಕೊಂಡು ಅವರಿಗೆ ಕೃತಜ್ಞತೆಯನ್ನು ಹೇಳುವ ಉದ್ದೇಶವೂ ಕೂಡ ಆ ಪಾಂಡವರಿಗಿತ್ತು. ಒಂದುವೇಳೆ ಗಂಗಾತೀರದಲ್ಲಿ ವಾಸಮಾಡದೇ ನಗರದಲ್ಲೇ ವಾಸಮಾಡಿದ್ದರೆ, ಅಂತ್ಯ- ಕ್ರಿಯಾದಿಗಳನ್ನು ಸಾಂಗೋಪಾಂಗವಾಗಿ ನೆರವೇರಿಸಲು ಮೃತಪಟ್ಟ ವ್ಯಕ್ತಿಗಳಿಗೆ ಕೃತಜ್ಞತೆ ಮೊದಲಾದವುಗಳನ್ನು ಸಮರ್ಪಿಸಲು ಅನುಕೂಲವಾಗುತ್ತಿರಲಿಲ್ಲ.
ಮತ್ತೊಂದು ಸಮಾಧಾನ ಹೀಗಿದೆ - ಹದಿನೆಂಟು ದಿವಸಗಳ ಕಾಲ ಯುದ್ಧ- ವಾದ ಕೂಡಲೆ ಯುಧಿಷ್ಠಿರನು ರಾಜ್ಯಭಾರವನ್ನು ವಹಿಸಿಕೊಂಡು. ತನ್ನ ವಿಜೃಂಭಣೆಯ ಜೀವನವನ್ನು ನಡೆಸಲು ಪ್ರಾರಂಭ ಮಾಡಿದರೆ. ಯಾರಿಗೂ ಇದರಿಂದ ಸಂತೋಷವಾಗುತ್ತಿರಲಿಲ್ಲ. ಸ್ವತಃ ಪಾಂಡವರಿಗೂ ಕೂಡ ತೃಪ್ತಿಯು ಸಿಗುತ್ತಿರಲಿಲ್ಲ. ಸಾಮಾಜಿಕ ದೃಷ್ಟಿಯಿಂದ ವೈಯಕ್ತಿಕ ಮನಃಶುದ್ಧಿಯ ದೃಷ್ಟಿಯಿಂದ ಈ ಒಂದು ತಿಂಗಳ ಕಾಲ ಶೋಕಾಚರಣೆಯನ್ನು ಆಚರಿಸಿದರು. ಮತ್ತು ಅತ್ಯಂತ ಆತ್ಮೀಯರಾದ ತಂದೆ, ತಾಯಿ, ಮಕ್ಕಳು ಮೊದಲಾದವರು ಮೃತರಾದಾಗ ಅದೇ ತಿಂಗಳಿನಲ್ಲೇ ಯಾವುದೇ ಮಂಗಳ ಕಾರ್ಯವನ್ನು ಮಾಡುವುದು ಉಚಿತವಲ್ಲ ಎಂಬುದನ್ನೂ ಕೂಡ ಈ ಮೂಲಕ ಪಾಂಡವರು ಮಾರ್ಗದರ್ಶನ ಮಾಡಿರುವರು.
ಕೃತೋದಕಂ ತು ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ಅಭಿಜಗ್ಮುರ್ಮಹಾತ್ಮನಃ ಸಿದ್ಧಾ ಬ್ರಹ್ಮರ್ಷಿಸತ್ತಮಾಃ ||3||
ತನ್ನೆಲ್ಲಾ ಬಂಧುಜನರಿಗೆ ಮತ್ತು ಸ್ನೇಹಿತರಿಗೆ ಧರ್ಮೋದಕವನ್ನು ಧರ್ಮ- ರಾಜನು ನೀಡಿದನು. ಕುಳಿತಿದ್ದ ಅವನ ಬಳಿ ಅನೇಕ ಮಹಾತ್ಮರಾದ ಸಿದ್ಧಪುರುಷ- ರೆನಿಸಿದ ಬ್ರಹ್ಮರ್ಷಿಗಳು ಬಂದರು.
ದ್ವೈಪಾಯನೋ ನಾರದಶ್ಚ ದೇವಲಶ್ಚ ಮಹಾನ್ ಋಷಿಃ |
ದೇವಸ್ಥಾನಶ್ಚ ಕಣ್ವಶ್ಚ ತೇಷಾಂ ಶಿಷ್ಯಾಶ್ಚ ಸತ್ತಮಾಃ ||4||
ವೇದವ್ಯಾಸದೇವರು, ನಾರದಮಹರ್ಷಿಗಳು, ದೇವಲಋಷಿಗಳು, ಮಹಾತ್ಮ- ರಾದ ದೇವಸ್ಥಾನ ಎಂಬ ಮತ್ತೊಬ್ಬ ಋಷಿಗಳು, ಕಣ್ವರೂ ಸಹ ಶಿಷ್ಯಸಹಿತರಾಗಿ ಧರ್ಮರಾಜನ ಬಳಿಗೆ ಬಂದರು. (`ದೇವಸ್ಥಾನ' ಎಂಬ ಋಷಿಯ ಹೆಸರು ಅಪೂರ್ವವಾಗಿದೆ. ಅದನ್ನು ಇಲ್ಲಿ ವ್ಯಾಸರು ಉಲ್ಲೇಖ ಮಾಡಿದ್ದನ್ನು ಗಮನಿಸಬೇಕು).
ಅನ್ಯೇ ಚ ವೇದವಿದ್ವಾಂಸಃ ಕೃತಪ್ರಜ್ಞಾ ದ್ವಿಜಾತಯಃ |
ಗೃಹಸ್ಥಾಃ ಸ್ನಾತಕಾಃ ಸರ್ವೇ ದದೃಶುಃ ಕುರುಸತ್ತಮಮ್ ||5||
ಇಷ್ಟೇ ಅಲ್ಲದೇ ವೇದಜ್ಞಾನಿಗಳಾದ ಅತ್ಯಂತ ಪ್ರಜ್ಞಾವಂತರಾದ ಅನೇಕ ಬ್ರಾಹ್ಮಣರೂ ಕೂಡ ಅಲ್ಲಿಗೆ ಆಗಮಿಸಿದರು. ಗೃಹಸ್ಥರೂ, ಸ್ನಾತಕರು ಅನೇಕ ಸಾಧುಸಜ್ಜನರು ಆ ಕುರುಶ್ರೇಷ್ಠನಾದ ಯುಧಿಷ್ಠಿರನ ಸಮಾಗಮವನ್ನು ಅಪೇಕ್ಷಿಸಿ ಅಲ್ಲಿಗೆ ಬಂದರು.
ಅಭಿಗಮ್ಯ ಮಹಾತ್ಮಾನಃ ಪೂಜಿತಾಶ್ಚ ಯಥಾವಿಧಿ |
ಆಸನೇಷು ಮಹಾರ್ಹೇಷು ವಿವಿಶುಸ್ತೇ ಮಹರ್ಷಯಃ ||6||
ಅಲ್ಲಿಗೆ ಆಗಮಿಸಿದ ಮಹಾತ್ಮರಾದ ಎಲ್ಲ ಸಾಧುಸಜ್ಜನರನ್ನು, ಋಷಿಪುಂಗವ- ರನ್ನು ಪಾಂಡವರು ಯಥೋಚಿತವಾಗಿ ಸತ್ಕಾರ ಮಾಡಿದರು. ಅವರವರಿಗೆ ತಕ್ಕಂತೆ ಆಸನಗಳನ್ನು ನೀಡಿದರು. ಮಹರ್ಷಿಗಳೆಲ್ಲರೂ ಆಸೀನರಾದರು.
ಪ್ರತಿಗೃಹ್ಯ ತತಃ ಪೂಜಾಂ ತತ್ಕಾಲಸದೃಶೀಂ ತದಾ |
ಪರ್ಯುಪಾಸನ್ ಯಥಾನ್ಯಾಯಂ ಪರಿವಾರ್ಯ ಯುಧಿಷ್ಠಿರಮ್ ||7||
ತತ್ಕಾಲಕ್ಕೆ ತಕ್ಕಂತೆ ಸತ್ಕಾರವನ್ನು ಎಲ್ಲಾ ಋಷಿಮುನಿಗಳು ಸ್ವೀಕರಿಸಿದರು. ಯಥಾನುಕ್ರಮವಾಗಿ ಯುಧಿಷ್ಠಿರನನ್ನು ಸುತ್ತುವರೆದು

ಕುಳಿತರು.
ವಿಶೇಷವಿಚಾರ - ಒಂದು ತಿಂಗಳುಗಳ ಕಾಲ ಆಶೌಚವನ್ನು ಆಚರಿಸುವ ಉದ್ದೇಶದಿಂದ ಪಾಂಡವರೇ ಮೊದಲಾದವರು ಊರಿನ ಹೊರಗೆ ವಾಸಿಸಿದರು. ಆಶೌಚವಿದ್ದಾಗ ಊರಿನಲ್ಲಿ ವಾಸಿಸುವ ಸಂಪ್ರದಾಯವು ಆ ಕಾಲದಲ್ಲಿ ಇರಲಿಲ್ಲ ಎಂಬುದು ಇದರಿಂದ ತಿಳಿಯುತ್ತದೆ. ಊರಿನ ಹೊರಗಿರುವ ಗಂಗಾನದಿಯ ತೀರದಲ್ಲಿ ಎಲ್ಲಾ ಋಷಿಮುನಿಗಳು ಯುಧಿಷ್ಠಿರಾದಿಗಳಿಗೆ ಸಾಂತ್ವನಗಳನ್ನು ಹೇಳುವುದಕ್ಕಾಗಿ ಆಗಮಿಸಿದರು. ಆಗ ಅಲ್ಲಿಗೆ ಆಗಮಿಸಿದ ಋಷಿಪುಂಗವರಿಗೆ ಯುಧಿಷ್ಠಿರಾದಿಗಳು ಸತ್ಕಾರವನ್ನು ಮಾಡಿದರು. ಆದರೆ ಊರಿನ ಅರಮನೆಯಲ್ಲಿ ಇದ್ದಾಗ ಹೇಗೆ ವೈಭವದ ಸತ್ಕಾರವಿರುತ್ತದೋ, ಆ ರೀತಿಯ ಸತ್ಕಾರವನ್ನು ಇಲ್ಲಿ ಮಾಡಲಿಲ್ಲ. ಆದ್ದರಿಂದಲೇ `ತತ್ಕಾಲಸದೃಶೀಂ' ಎಂಬುದಾಗಿ ಹೇಳಿದ್ದಾರೆ. ಅರ್ಥಾತ್ ಮಾತಿನ ಮೂಲಕ ಆಶೌಚದಲ್ಲಿ ಮಾಡಲು ಧರ್ಮಸಮ್ಮತಿಯಲ್ಲಿರುವ ರೀತಿಯಲ್ಲಷ್ಟೇ ಸತ್ಕಾರವನ್ನು ಮಾಡಿದರೆಂದು ತಿಳಿಯಬೇಕು.
ಪುಣ್ಯೇ ಭಾಗೀರಥೀತೀರೇ ಶೋಕವ್ಯಾಕುಲಚೇತಸಮ್ |
ಆಶ್ವಾಸಯಂತೋ ರಾಜಾನಂ ವಿಪ್ರಾಃ ಶತಸಹಸ್ರಶಃ ॥8॥
ಅತ್ಯಂತ ಪುಣ್ಯಕರವಾದ ಭಾಗೀರಥೀ ನದಿಯ ತೀರದಲ್ಲಿ ರಾಜನಾದ
ಯುಧಿಷ್ಠಿರನು ದುಃಖದಿಂದ ಕಳವಳಗೊಂಡ ಮನಸ್ಸುಳ್ಳವನಾಗಿದ್ದನು. ಆ ಸಂದರ್ಭ -ದಲ್ಲಿ ನೂರಾರು, ಸಾವಿರಾರು ಬ್ರಾಹ್ಮಣರು ದುಃಖಿತನಾದ ಆ ಧರ್ಮರಾಜನನ್ನು ಪರಿಪರಿಯಾಗಿ ಸಂತೈಸುತ್ತಿದ್ದರು.
ನಾರದಸ್ತ್ವಬ್ರುವೀತ್ ಕಾಲೇ ಧರ್ಮಾತ್ಮಾನಂ ಯುಧಿಷ್ಠಿರಮ್ |
ವಿಚಾರ್ಯ ಮುನಿಭಿಃ ಸಾರ್ಧಂ ತತ್ಕಾಲಸದೃಶಂ ವಚಃ ॥9॥
ಧರ್ಮಾತ್ಮನೆಂದೇ ಪ್ರಸಿದ್ಧನಾದ ಯುಧಿಷ್ಠಿರನ ಜೊತೆ ನಾರದರು ಮಾತನಾ- ಡಲು ಇಚ್ಛಿಸಿದರು. ಅನೇಕ ಮುನಿಗಳ ಜೊತೆ ಸಮಾಲೋಚನೆ ಮಾಡಿ, ಆ ಕಾಲಕ್ಕೆ ಉಚಿತವಾದ ಯಾವ ಮಾತುಗಳನ್ನಾಡಬೇಕೆಂದು ವಿಚಾರ ಮಾಡಿ ಹೀಗೆ ಹೇಳಿ- ದರು-
ಭವತೋ ಬಾಹುವೀರ್ಯೇಣ ಪ್ರಸಾದಾನ್ಮಾಧವಸ್ಯ ಚ |
ಜಿತೇಯಮವನಿಃ ಕೃತ್ಸ್ನಾ ಧರ್ಮೇಣ ಚ ಯುಧಿಷ್ಠಿರ ॥10॥
ಯುಧಿಷ್ಠಿರನೇ ! ನೀನು ನಿನ್ನ ತೋಳಿನ ಪರಾಕ್ರಮದಿಂದ ಶ್ರೀಕೃಷ್ಣಪರಮಾತ್ಮನ ದಿವ್ಯವಾದ ಅನುಗ್ರಹದಿಂದ ಧರ್ಮದ ಬೆಂಬಲದಿಂದ ಸಮಗ್ರ ಭೂಮಂಡಲವನ್ನು ಗೆದ್ದಿರುವಿ.
ದಿಷ್ಟ್ಯಾ ಮುಕ್ತಸ್ತು ಸಂಗ್ರಾಮಾದಸ್ಮಾಲ್ಲೋಕಭಯಂಕರಾತ್ |
ಕ್ಷತ್ರಧರ್ಮರತಶ್ಚಾಪಿ ಕಚ್ಚಿನ್ಮೋದಸಿ ಪಾಂಡವ ॥11॥
ಸೌಭಾಗ್ಯವಶದಿಂದ ನೀನು ಅತ್ಯಂತ ಲೋಕಭಯಂಕರವಾದ ದೊಡ್ಡ ಸಂಗ್ರಾಮ -ದಿಂದ ಮುಕ್ತನಾಗಿ ಗೆದ್ದು ಬಂದಿರುವಿ. ಇದುವೇ ನಿನ್ನ ಕ್ಷತ್ರಧರ್ಮದ ಪರಿಪಾಲನೆ- ಯಾಗಿದೆ. ಕ್ಷತ್ರಿಯಧರ್ಮದಲ್ಲಿ ನಿರತನಾಗಿರುವ ನೀನು ಇದರಿಂದ ಸಂತುಷ್ಟನಾಗಿ- ರುವಿ ಅಲ್ಲವೇ?
ಕಚ್ಚಿಚ್ಚ ನಿಹತಾಮಿತ್ರಃ ಪ್ರೀಣಾಸಿ ಸುಹೃದೋ ನೃಪ |
ಕಚ್ಚಿಚ್ ಛ್ರಿಯಮಿಮಾಂ ಪ್ರಾಪ್ಯ ನ ತ್ವಾಂ ಶೋಕಃ ಪ್ರಬಾಧತೇ ॥12॥
ಎಲ್ಲಾ ಶತ್ರುಗಳನ್ನು ಕೊಂದಿರುವುದರಿಂದ ತೃಪ್ತನಾಗಿರುವಿಯಲ್ಲವೇ? ಎಲ್ಲಾ ನಿನ್ನ ಸಹೋದರರನ್ನು ಸಂತೋಷಪಡಿಸುತ್ತಿರುವಿ ಅಲ್ಲವೇ? ಈ ರಾಜ್ಯಲಕ್ಷ್ಮಿಯನ್ನು ಪಡೆದ ಮೇಲೆ ನಿನಗೆ ಯಾವ ಶೋಕವೂ ಕೂಡ ಪ್ರಬಲವಾಗಿ ಬಾಧಿಸುತ್ತಿಲ್ಲ ಅಲ್ಲವೇ?
ಯುಧಿಷ್ಠಿರಃ
ವಿಜಿತೇಯಂ ಮಹೀ ಕೃತ್ಸ್ನಾ ಕೃಷ್ಣಬಾಹುಬಲಾಶ್ರಯಾತ್ |
ಬ್ರಾಹ್ಮಣಾನಾಂ ಪ್ರಸಾದೇನ ಭೀಮಾರ್ಜುನಬಲೇನ ಚ ॥13॥
ಯುಧಿಷ್ಠಿರ ಓ ನಾರದ ಮಹರ್ಷಿಗಳೇ ! ಶ್ರೀಕೃಷ್ಣಪರಮಾತ್ಮನ ಬಾಹುವಿನ ಪರಾಕ್ರಮದಿಂದಷ್ಟೇ ಈ ಸಮಗ್ರಭೂಮಂಡಲವು ಜಯಸಲ್ಪಟ್ಟಿದೆ. ಬ್ರಾಹ್ಮಣರ ಅನುಗ್ರಹ, ಭೀಮಾರ್ಜುನರ ಬಲವೂ ಕೂಡ ಇದಕ್ಕೆ ಕಾರಣವಾಗಿದೆ.
ಇದಂ ತು ಮೇ ಮಹದ್ ದುಃಖಂ ವರ್ತತೇ ಹೃದಿ ನಿತ್ಯದಾ |
ಕೃತ್ವಾ ಜ್ಞಾತಿಕ್ಷಯಮಿಮಂ ಮಹಾಂತಂ ಲೋಭಕಾರಿತಮ್ ॥14॥
ಆದರೆ ನನ್ನ ಹೃದಯದ ಅಂತರಾಳದಲ್ಲಿ ಬಹುದೊಡ್ಡ ದುಃಖವುಂಟಾಗಿದೆ. ಎಲ್ಲಾ ಬಂಧುಜನರ ಸಂಹಾರವನ್ನು ನಾನು ಮಾಡಿಬಿಟ್ಟೆ. ರಾಜ್ಯಲೋಭದ ಕಾರಣ- ಬಿಟ್ಟರೆ ಇದಕ್ಕೆ ಬೇರೆ ಕಾರಣ ಇಲ್ಲ. ಈ ದುಃಖ ನನ್ನನ್ನು ಸುಡುತ್ತಿದೆ.
ಸೌಭದ್ರಂ ದ್ರೌಪದೇಯಾಂಶ್ಚ ಘಾತಯಿತ್ವಾ ಪ್ರಿಯಾನ್ ಸುತಾನ್ |
ಜಯೋಽಯಮಜಯಾಕಾರೋ ಭಗವನ್ ಪ್ರತಿಭಾತಿ ಮೇ ॥15॥
ಸುಭದ್ರೆಯ ಮಗನಾದ ಅಭಿಮನ್ಯುವನ್ನು ಮತ್ತು ದ್ರೌಪದಿಯ ಐದುಮಂದಿ ಪ್ರಿಯರಾದ ಮಕ್ಕಳನ್ನು ಯುದ್ಧದಲ್ಲಿ ಸಾಯಿಸಿ, ನಾನು ಜಯವನ್ನು ಹೊಂದಿರು- ವೆನು. ಓ ಪೂಜ್ಯರೇ ! ಈ ಜಯವು ನನಗೆ ಪರಾಜಯರೂಪವಾಗಿದೆ ಎಂದೆ- ನಿಸುತ್ತಿದೆ.
ಕಿನ್ನು ವಕ್ಷ್ಯತಿ ವಾರ್ಷ್ಣೇಯೀ ವಧೂರ್ಮೇ ಮಧುಸೂದನಮ್ |
ದ್ವಾರಕಾವಾಸಿನೀ ಕೃಷ್ಣಂ ಇತಃ ಪ್ರತಿಗತಂ ಹರಿಮ್ ॥16॥
ವೃಷ್ಣಿಕುಲದಲ್ಲಿ ಜನಿಸಿದ ನನಗೆ ಸೊಸೆಯಂತಿರುವ ಸುಭದ್ರೆಯು ನನ್ನ ವಿಷಯ- ದಲ್ಲಿ ಏನೆಂದುಕೊಳ್ಳುತ್ತಾಳೆ. ಮಧುಸೂದನನಾದ ಶ್ರೀಕೃಷ್ಣನು ದ್ವಾರಕೆಗೆ ತೆರಳಿದ ಮೇಲೆ ಅಲ್ಲಿರುವ ಜನರು ಕೃಷ್ಣನನ್ನು ಕುರಿತು, ತನ್ನ ಬಗ್ಗೆ ಏನೆಲ್ಲಾ ಮಾತನಾಡುತ್ತಾರೆ.
ವಿಶೇಷವಿಚಾರ - `ದ್ವಾರಕಾವಾಸಿನೀ' ಎಂಬುದಕ್ಕೆ ವ್ಯಾಖ್ಯಾನದಲ್ಲಿ ದ್ವಾರಕೆ- ಯಲ್ಲಿರುವ ಜನಸಮೂಹವು ಎಂಬರ್ಥವನ್ನು ತಿಳಿಸಿದ್ದಾರೆ. `ಕೃಷ್ಣಂ' ಎಂಬುದಕ್ಕೆ `ಹರಿಂ ಮಧುಸೂದನಮ್' ಎಂದೆರಡು ವಿಶೇಷಣಗಳನ್ನಾಗಿ ತಿಳಿಯಬೇಕು.
ಸುಭದ್ರೆಯು ಧರ್ಮರಾಜನ ಸೊಸೆಯೆಂದು `ಮೇ ವಧೂಃ' ಎಂಬ ಪದ- ದಿಂದ ತಿಳಿಯುತ್ತದೆ. ಆದರೆ ನಿಜವಾದ ಸೊಸೆಯಲ್ಲ. ತಮ್ಮನಾದ ಅರ್ಜುನನ ವಿಷಯದಲ್ಲಿ ಯುಧಿಷ್ಠಿರನು ಮಗನಂತೆ ವಾತ್ಸಲ್ಯವನ್ನು ಇಟ್ಟುಕೊಂಡಿದ್ದನು. ಈ ದೃಷ್ಟಿಯಿಂದ ಅವನ

ಹೆಂಡತಿಯನ್ನು ಸೊಸೆಯೆಂದು ಹೇಳಲಾಗಿದೆ. ನನ್ನ ಸೊಸೆಯು `ರಾಜ್ಯಲೋಭಕ್ಕೋಸ್ಕರ ನನ್ನ ಪ್ರಿಯನಾದ ಮಗನನ್ನು ಬಲಿ ಕೊಟ್ಟೆಯಾ?' ಎಂದು ಪ್ರಶ್ನಿಸಿದರೆ ನಾನು ಏನೆಂದು ಅವಳಿಗೆ ಉತ್ತರಿಸಲಿ? ಎಂದು ಧರ್ಮರಾಜನ ಆತಂಕ. ಮತ್ತು ಕೃಷ್ಣಪರಮಾತ್ಮನು ಮುಂದೆ ದ್ವಾರಕೆಗೆ ತೆರಳುತ್ತಾನೆ. ಆಗ ಅಲ್ಲಿರುವ ದ್ವಾರಕೆಯ ಜನರು ಕೃಷ್ಣನನ್ನು ಕುರಿತು `ಆ ಧರ್ಮರಾಜನು ರಾಜ್ಯಲೋಭಕ್ಕೋಸ್ಕರ ಅಭಿಮನ್ಯು ಮೊದಲಾದವರನ್ನು ಕೊಂದುಬಿಟ್ಟನಲ್ಲಾ' ಎಂದು ಪ್ರಶ್ನಿಸಿದರೆ ಏನುತ್ತರ? ಎಂಬುದು ಯುಧಿಷ್ಠಿರನ ಗೊಂದಲ.
ದ್ರೌಪದೀ ಹತಪುತ್ರೇಯಂ ಕೃಪಣಾ ಹತಬಾಂಧವಾ |
ಅಸ್ಮತ್ಪ್ರಿಯಹಿತೇ ಯುಕ್ತಾ ಭೂಯಃ ಪೀಡಯತೀವ ಮಾಮ್ ॥17॥
ದ್ರೌಪದಿಯ ಸ್ಥಿತಿ ಅತ್ಯಂತದಯನೀಯವಾಗಿದೆ. ಎಲ್ಲಾ ಮಕ್ಕಳನ್ನು ಕಳೆದು- ಕೊಂಡಿದ್ದಾಳೆ. ತಂದೆ ಮೊದಲಾದವರನ್ನೂ ಕೂಡ ಕಳೆದುಕೊಂಡು ಅತ್ಯಂತ ದುಃಖಿತಳಾಗಿದ್ದಾಳೆ. ಇವಳು ನಿರಂತರ ನಮಗೆಲ್ಲಾ ಜಯವನ್ನೇ ಉಂಟುಮಾಡು- ವಳಾಗಿದ್ದಾಳೆ. ಇಂಥ ಇವಳಿಗೆ ಒದಗಿದ ದುಃಖವು ನನ್ನನ್ನು ಬಹಳ ಪೀಡಿಸುತ್ತಿದೆ.
ವಿವರಣೆ - ಜೀವನದಲ್ಲಿ ಪ್ರತೀಕ್ಷಣವೂ ನಮಗೆಲ್ಲ ಹಿತವನ್ನೇ ಬಯಸಿದವಳು ದ್ರೌಪದೀದೇವಿ. ಆದರೆ ಅವಳ ತಂದೆಯಾದ ದ್ರುಪದನನ್ನು, ನೆಚ್ಚಿನ ಐದುಮಂದಿ ಮಕ್ಕಳನ್ನು ಇಂದು ನಾನು ಯುದ್ಧದಲ್ಲಿ ಕೊಂದುಬಿಟ್ಟಿರುವೆ ಎಂಬುದು ಧರ್ಮ- ರಾಜನ ಆತಂಕ.
ಇದಮನ್ಯಚ್ಚ ಭಗವನ್ ಯತ್ ತ್ವಾಂ ವಕ್ಷ್ಯಾಮಿ ನಾರದ |
ಮಂತ್ರಸಂವರಣೇನಾಸ್ಮಿ ಕುಂತ್ಯಾ ದುಃಖೇನ ಯೋಜಿತಃ ॥18॥
ಓ ನಾರದರೇ ! ನನ್ನ ದುಃಖ ಇಷ್ಟೇ ಅಲ್ಲ. ಇನ್ನೂ ಅನೇಕ ದುಃಖಗಳಿವೆ. ಅವುಗಳಲ್ಲಿ ಒಂದು ಪ್ರಧಾನವಾದ ಮತ್ತೊಂದು ದುಃಖವಿದೆ. ಅದನ್ನು ನಿಮ್ಮ ಬಳಿ ಹಂಚಿಕೊಳ್ಳುತ್ತೇನೆ. ನನ್ನ ತಾಯಿಯಾದ ಕುಂತಿಯು ಕರ್ಣನ ಜನ್ಮವೃತ್ತಾಂತವನ್ನು ಮುಚ್ಚಿಟ್ಟಿದ್ದರಿಂದ ಆ ಭ್ರಾತೃವಿಯೋಗದ ದುಃಖ ನನ್ನನ್ನು ಸುಡುತ್ತಿದೆ.
ಯೋಽಸೌ ನಾಗಾಯುತಬಲೋ ಲೋಕೇಽಪ್ರತಿರಥೋ ರಣೇ |
ಸಿಂಹಖೇಲಗತಿರ್ಧೀಮಾನ್ ಘೃಣೀ ದಾಂತಾ ಯತವ್ರತಃ ॥19॥
ಆ ಕರ್ಣನು ಎಂಥ ಪರಾಕ್ರಮಿ ಎಂದರೆ ಹತ್ತುಸಾವಿರ ಆನೆಗಳ ಬಲವನ್ನು ಹೊಂದಿದ್ದನು. ಅವನಿಗೆ ಸರಿಸಾಟಿಯಾದ ಮಹಾರಥಿಕರು ರಣರಂಗದಲ್ಲೇ ಇರ- ಲಿಲ್ಲ. ಅರಣ್ಯದಲ್ಲಿ ನಿರ್ಭೀತವಾಗಿ ಸಂಚರಿಸುವ ಸಿಂಹದಂತೆ ರಣರಂಗದಲ್ಲಿ ಭಯರಹಿತನಾಗಿ ಸಂಚರಿಸುತ್ತಿದ್ದನು. ಅತ್ಯಂತ ಧೀಮಂತನಾಗಿದ್ದನು. ಇಂದ್ರಿಯ- ನಿಗ್ರಹವನ್ನು ಹೊಂದಿದ್ದನು. ಮಹಾದಾನಿಯಾಗಿದ್ದನು. ಅನೇಕ ವ್ರತಾನುಷ್ಠಾನಗಳಲ್ಲಿ ತತ್ಪರನಾಗಿದ್ದನು.
ಆಶ್ರಯೋ ಧಾರ್ತರಾಷ್ಟ್ರಾಣಾಂ ಮಾನೀ ತೀಕ್ಷ್ಣಪರಾಕ್ರಮಃ |
ಅಮರ್ಷೀ ನಿತ್ಯಸಂರಂಭೀ ಕ್ಷೇಪ್ತಾಸ್ಮಾಕಂ ರಣೇ ರಣೇ ॥20॥
ಎಲ್ಲಾ ಧೃತರಾಷ್ಟ್ರನ ಮಕ್ಕಳಿಗೆ ತಾನೊಬ್ಬನೇ ಆಶ್ರಯನಾಗಿದ್ದನು. ಆದ್ದರಿಂದಲೇ ಅತ್ಯಂತ ಮಾನ್ಯನಾಗಿದ್ದನು. ಉಗ್ರವಾದ ಪರಾಕ್ರಮವನ್ನು ಹೊಂದಿದ್ದನು. ಕೋಪಿಷ್ಠ- ನಾಗಿರುತ್ತಿದ್ದನು. ಎಲ್ಲಾ ಯುದ್ಧಗಳಲ್ಲಿ ನಮ್ಮೆಲ್ಲರನ್ನು ಪರಾಭವಗೊಳಿಸುತ್ತಿದ್ದನು.
ಶೀಘ್ರಾಸ್ತ್ರಶ್ಚಿತ್ರಯೋಧೀ ಚ ಕೃತೀ ಚಾದ್ಭುತವಿಕ್ರಮಃ |
ಗೂಢೋತ್ಪನ್ನಃ ಸುತಃ ಕುಂತ್ಯಾ ಭ್ರಾತಾಽಸ್ಮಾಕಂ ಚ ಸೋದರಃ ॥21॥
ಶೀಘ್ರವಾದ ಅಸ್ತ್ರಪ್ರಯೋಗವನ್ನು ಮಾಡುವುದರಲ್ಲಿ ಹೆಸರುವಾಸಿಯಾಗಿದ್ದನು. ವಿಚಿತ್ರವಾಗಿ ಯುದ್ಧವನ್ನು ಮಾಡುವುದರಿಂದ ಚಿತ್ರಯೋಧಿ ಎನಿಸಿದ್ದನು. ಮಹಾ- ಪರಾಕ್ರಮಶಾಲಿಯಾಗಿದ್ದನು. ಇಂಥ ಕರ್ಣನು ನಮ್ಮ ತಾಯಿಯಾದ ಕುಂತಿಗೆ ರಹಸ್ಯದಲ್ಲಿ ಹುಟ್ಟಿದ ಮಗನಾಗಿದ್ದಾನೆ. ನಮ್ಮೆಲ್ಲರ ಹಿರಿಯ ಸಹೋದರನಾಗಿದ್ದಾನೆ.
ಗಮನೀಯ ಅಂಶ - ಯುಧಿಷ್ಠಿರನು ನಾರದರ ಬಳಿ ಕರ್ಣನ ಬಗ್ಗೆ ಹೇಳುವಾಗ ಮೊದಲೇ ಅವನ ಹೆಸರನ್ನು ಹೇಳಲಿಲ್ಲ. ಅವನಲ್ಲಿರುವ ಎಲ್ಲಾ ಗುಣಗಳನ್ನು ಹೊಗಳಿ, ಇಂಥ ಗುಣಗಳುಳ್ಳವನು ಕರ್ಣನು ಎಂಬುದಾಗಿ ತಿಳಿಸಿದ್ದಾನೆ. ಅನುವಾದ ಸೌಕರ್ಯಕ್ಕೋಸ್ಕರ ಮೊದಲೇ ಕರ್ಣನ ಹೆಸರನ್ನು ಅನುವಾದದಲ್ಲಿ ಉಲ್ಲೇಖಿಸಲಾಗಿದೆ.
ತೋಯಕರ್ಮಣಿ ಯಂ ಕುಂತೀ ಕಥಯಾಮಾಸ ಸೂರ್ಯಜಮ್ |
ಪುತ್ರಂ ಸರ್ವಗುಣೋಪೇತಮವಕೀರ್ಣಂ ಜಲೇ ಪುರಾ |
ಮಂಜೂಷಾಯಾಂ ಸಮಾಧಾಯ ಗಂಗಾಸ್ರೋತಸ್ಯಾಮಜ್ಜಯತ್ ॥22॥
ಧರ್ಮೋದಕ ನೀಡುವ ಸಂದರ್ಭದಲ್ಲಿ ಸೂರ್ಯನಿಂದ ತನ್ನಲ್ಲಿ ಈ ಕರ್ಣನು ಹುಟ್ಟಿದ ಕಥೆಯನ್ನು ನನ್ನ ತಾಯಿಯಾದ ಕುಂತಿಯು ತಿಳಿಸಿದ್ದಾಳೆ. ಎಲ್ಲಾ ಗುಣ- ಗಳಿಂದ ಕೂಡಿದ ಎಲ್ಲ ಲಕ್ಷಣಗಳಿಂದ ಕೂಡಿದ ಆ ಪುತ್ರನನ್ನು ಸೂರ್ಯನಿಂದ ಹೊಂದಿದ ಮೇಲೆ ತಾನು ನೀರಿನಲ್ಲಿ ತೇಲಿಬಿಟ್ಟೆನು ಎಂಬುದಾಗಿ ನನ್ನ ತಾಯಿ ತಿಳಿಸಿದಳು. ನೀರಿನಲ್ಲಿ ಮುಳುಗಬಾರದೆಂಬ ಉದ್ದೇಶದಿಂದ ಒಂದು ಪೆಟ್ಟಿಗೆಯ ಒಳಗೆ ಆ ಮಗುವನ್ನು ಮಲಗಿಸಿ ಗಂಗಾನದಿಯಲ್ಲಿ ಬಿಟ್ಟುಬಿಟ್ಟಳು.
ಯಂ ಸೂತಪುತ್ರಂ ಲೋಕೋಽಯಂ ರಾಧೇಯಂ ಚಾಪ್ಯಮನ್ಯತ |
ಸ ಜ್ಯೇಷ್ಠಪುತ್ರಃ ಕುಂತ್ಯಾ ವೈ ಭ್ರಾತಾಸ್ಮಾಕಂ ಚ ಮಾತೃಜಃ ॥23॥
ಸಮಸ್ತಲೋಕವು ಯಾರನ್ನು ಸೂತನ ಮಗ, ರಾಧೇಯನಾಗಿದ್ದಾನೆಂದು ತಿಳಿ- ದಿದೆಯೋ, ಅವನು ಬೇರಾರೂ ಅಲ್ಲ, ನಮ್ಮೆಲ್ಲರ ಹಿರಿಯಣ್ಣ. ನಮ್ಮ ತಾಯಿಯ ಹೊಟ್ಟೆಯಲ್ಲಿ ಹುಟ್ಟಿಬಂದ ನಮ್ಮ ಸಹೋದರ.
ಅಜಾನತಾ ಮಯಾ ಸಂಖ್ಯೇ ರಾಜ್ಯಲುಬ್ಧೇನ ಘಾತಿತಃ |
ತನ್ಮೇ ದಹತಿ ಗಾತ್ರಾಣಿ ತೂಲರಾಶಿಮಿವಾನಲಃ ॥24॥
ಈ ವಿಷಯ ನನಗೆ ತಿಳಿದೇ ಇರಲಿಲ್ಲ. ರಾಜ್ಯಲೋಭಕ್ಕೋಸ್ಕರ ತಮ್ಮನ ಮೂಲಕ ಅಣ್ಣನನ್ನು ಕೊಲ್ಲಿಸಿಬಿಟ್ಟೆ. ಹತ್ತಿಯ ರಾಶಿಯನ್ನು ಬೆಂಕಿಯು ಸುಟ್ಟು ಭಸ್ಮ ಮಾಡುವಂತೆ ಈ ವಿಷಯವೆಂಬ ಅಗ್ನಿಯು ನನ್ನ ಅಂಗಾಂಗಗಳನ್ನು ಸುಡುತ್ತಿದೆ.

ನಹಿ ತಂ ವೇದ ಪಾರ್ಥೋಽಪಿ ಭ್ರಾತರಂ ಶ್ವೇತವಾಹನಃ |
ನಾಹಂ ನ ಭೀಮೋ ನ ಯಮೌ ಸ ತ್ವಸ್ಮಾನ್ ವೇದ ಸುವ್ರತಃ ॥25॥
ನನಗಷ್ಟೇ ಅಲ್ಲ, ನನ್ನ ತಮ್ಮನಾದ ಶ್ವೇತವಾಹನನಾದ ಅರ್ಜುನನಿಗೂ ಕೂಡ ಕರ್ಣನು ತನ್ನ ಅಣ್ಣನೆಂಬ ವಿಷಯವು ತಿಳಿದೇ ಇರಲಿಲ್ಲ. ಭೀಮಸೇನನಿಗೂ ತಿಳಿದಿರಲಿಲ್ಲ. ನಕುಲ-ಸಹದೇವರಿಗೂ ಕೂಡ ತಿಳಿದಿರಲಿಲ್ಲ. ಆದರೆ ವ್ರತನಿಷ್ಠನಾದ ಆ ಕರ್ಣನಿಗೆ ನಾವೆಲ್ಲರೂ ಅವನ ತಮ್ಮಂದಿರು ಎಂಬ ವಿಚಾರವು ತಿಳಿದಿತ್ತು.
ಗತಾ ಕಿಲ ಪೃಥಾ ತಸ್ಯ ಸಕಾಶಮಿತಿ ನಃ ಶ್ರುತಮ್ |
ಅಸ್ಮಾಕಂ ಶಮಕಾಮಾ ವೈ ತ್ವಂ ಚ ಪುತ್ರೋ ಮಮೇತ್ಯಥ ॥26॥
ಕರ್ಣನ ಜೊತೆ ನಮಗೆ ಸಂಧಿ ಮಾಡಿಸಬೇಕೆಂಬ ಇಚ್ಛೆಯಿಂದ ಕುಂತೀ- ದೇವಿಯು ಹಿಂದೊಮ್ಮೆ ಕರ್ಣನ ಬಳಿ ತೆರಳಿದ್ದಳೆಂಬ ವಾರ್ತೆಯನ್ನು ನಾವು ಕೇಳಿದ್ದೇವೆ. ಕರ್ಣನ ಬಳಿ ತೆರಳಿದ ಕುಂತಿಯು ``ನೀನು ನನ್ನ ಮಗ'' ಎಂದು ಹೇಳಿದಳಂತೆ.
ಪೃಥಾಯ ನ ಕೃತಃ ಕಾಮಸ್ತೇನ ಚಾಪಿ ಮಹಾತ್ಮನಾ |
ಅಪಿ ಪಶ್ಚಾದಿದಂ ಮಾತರ್ಯವೋಚದಿತಿ ನಃ ಶ್ರುತಮ್ ॥27॥
ಪೃಥೆಯ ಅಭಿಲಾಷೆಯನ್ನು ಮಾತ್ರ ಆ ಕರ್ಣನು ಪೂರೈಸಲಿಲ್ಲ. ಅಲ್ಲದೇ ಮಹಾತ್ಮನಾದ ಕರ್ಣನು ನಮ್ಮ ತಾಯಿಯ ಬಳಿ ಮುಂದಿನ ಮಾತುಗಳನ್ನು ಹೇಳಿದನೆಂದು ಕೇಳಿದ್ದೇನೆ.
ನಹಿ ಶಕ್ಷ್ಯಾಮ್ಯಹಂ ತ್ಯಕ್ತುಂ ನೃಪಂ ದುರ್ಯೋಧನಂ ರಣೇ |
ಅನಾರ್ಯತ್ವಂ ನೃಶಂಸತ್ವಂ ಚ ಕೃತಘ್ನತ್ವಂ ಚ ಮೇ ಭವೇತ್ ॥28॥
ಮಹಾಯುದ್ಧ ನಡೆಯುವ ಇಂಥ ಇಂಥ ಸಂದರ್ಭದಲ್ಲಿ ದುರ್ಯೋಧನನ ಪಕ್ಷವನ್ನು ಪರಿತ್ಯಾಗ ಮಾಡಲು ನನಗೆ ಸಾಧ್ಯವೇ ಇಲ್ಲ. ಹಾಗೇನಾದರೂ ದುರ್ಯೋಧನನನ್ನು ಪರಿತ್ಯಾಗ ಮಾಡಿ, ಪಾಂಡವರ ಪಕ್ಷಕ್ಕೆ ನಾನು ಸೇರಿದರೆ ನನಗೆ `ಅನಾರ್ಯತ್ವ, ನೃಶಂಸತ್ವ, ಕೃತಘ್ನತ್ವ' ಇತ್ಯಾದಿ ದೋಷಗಳು ಬರುತ್ತವೆ.
ವಿವರಣೆ - `ಅನಾರ್ಯತ್ವ' = ನೀಚನಾಗುವಿಕೆ, `ನೃಶಂಸತ್ವ' = ಕ್ರೂರಿಯಾಗುವಿಕೆ, `ಕೃತಘ್ನತ್ವ' = ಉಪಕಾರಸ್ಮರಣೆ ಇಲ್ಲದಿರುವಿಕೆ. ಎಲ್ಲಾ ಜನರು ನನ್ನನ್ನು ನೀಚನೆಂದು, ಕ್ರೂರಿಯೆಂದು ಉಪಕಾರಸ್ಮರಣೆ ಇಲ್ಲದವನೆಂದು ನಿಂದಿಸುತ್ತಾರೆ ಆದ್ದರಿಂದ ನಾನು ದುರ್ಯೋಧನನ ಪಕ್ಷವನ್ನು ಪರಿತ್ಯಾಗ ಮಾಡುವುದಿಲ್ಲ ಎಂಬುದು ಕರ್ಣನ ಅಭಿಪ್ರಾಯ.
ಯುಧಿಷ್ಠಿರೇಣ ಸಂಧಿಂ ಚ ಯದಿ ಕುರ್ಯಾಂ ಮತೇ ತವ |
ಭೀತೋ ರಣೇ ಶ್ವೇತವಾಹಾದಿತಿ ಮಾಂ ಮಂಸ್ಯತೇ ಜನಃ ॥29॥
ಒಂದು ವೇಳೆ ನೀನು ಹೇಳುವಂತೆ ಯುಧಿಷ್ಠಿರನ ಜೊತೆ ಸಂಧಿಯನ್ನು ನಾನು ಮಾಡಿಕೊಳ್ಳುವುದಾದರೆ, ಆಗ ಜನರೆಲ್ಲರು ನನ್ನನ್ನು ನಿಂದಿಸುತ್ತಾರೆ. ಅರ್ಜುನನಿಗೆ ಭಯಪಟ್ಟು ಕರ್ಣನು ಯುಧಿಷ್ಠಿರನ ಜೊತೆ ಸಂಧಿಮಾಡಿಕೊಂಡನೆಂದು ತಿಳಿದು- ಬಿಡುತ್ತಾರೆ.
ಸೋಽಹಂ ನಿರ್ಜಿತ್ಯ ಸಮರೇ ವಿಜಯಂ ಸಹಕೇಶವಮ್ |
ಸಂಧಾಸ್ಯೇ ಧರ್ಮಪುತ್ರೇಣ ಪಶ್ಚಾದಿತಿ ಚ ಸೋಽಬ್ರವೀತ್ ॥30॥
ಆದ್ದರಿಂದ ನಾನು ರಣರಂಗದಲ್ಲಿ ಮೊದಲು ಕೃಷ್ಣನಿಂದ ಕೂಡಿದ ಆ ಅರ್ಜುನನನ್ನು ಸೋಲಿಸುತ್ತೇನೆ. ಅನಂತರ ನೀನು ಹೇಳಿದಂತೆ ಧರ್ಮರಾಜನ ಜೊತೆ ಸಂಧಾನ ಮಾಡಿಕೊಳ್ಳುತ್ತೇನೆ. ಹೀಗೆ ಕರ್ಣನು ನಮ್ಮ ತಾಯಿಗೆ ಹೇಳಿದನು.
ತಮವೋಚತ್ ಕಿಲ ಪೃಥಾ ಪುನಃ ಪೃಥುಳವಕ್ಷಸಮ್ |
ಚತುರ್ಣಾಮಭಯಂ ದೇಹಿ ಕಾಮಂ ಯುದ್ಧ್ಯಸ್ವ ಫಲ್ಗುನಮ್ ॥31॥
ಕರ್ಣನ ಮಾತನ್ನು ಕೇಳಿದ ಆ ಕುಂತಿಯು ವಿಶಾಲವಾದ ವಕ್ಷಸ್ಥಳದಿಂದ ಕೂಡಿದ ತನ್ನ ಹಿರಿಯ ಮಗನಾದ ಕರ್ಣನನ್ನು ಕುರಿತು ಹೀಗೆ ಹೇಳಿದಳು - ``ಅರ್ಜುನನ ಜೊತೆ ನೀನು ಇಚ್ಛೆ ಬಂದಂತೆ ಯುದ್ಧ ಮಾಡು. ಆದರೆ ಉಳಿದ ನಾಕುಮಂದಿ ನನ್ನ ಮಕ್ಕಳನ್ನು ಕೊಲ್ಲುವುದಿಲ್ಲ'' ಎಂಬುದಾಗಿ ನನಗೆ ಅಭಯಪ್ರದಾನ ಮಾಡು.
ಸೋಽಬ್ರವೀನ್ಮಾತರಂ ಧೀಮಾನ್ ವೇಪಮಾನಃ ಕೃತಾಂಜಲಿಃ |
ಕಣ್ಣೀರು ಸುರಿಸುತ್ತಾ, ನಡುಗುತ್ತಿರುವ ತನ್ನ ತಾಯಿಯನ್ನು ಕುರಿತು
ಧೀಮಂತನಾದ ಕರ್ಣನು ಕೈಮುಗಿದನು. ಮತ್ತು ಹೀಗೆ ಅಭಯದಾನ ಮಾಡಿದನು.
ಪ್ರಾಪ್ತಾನ್ ವಿಷಹ್ಯಾಂಶ್ಚತುರೋ ನ ಹನಿಷ್ಯಾಮಿ ತೇ ಸುತಾನ್॥32॥
ಪಂಚೈವ ಹಿ ಸುತಾ ಮಾತರ್ಭವಿಷ್ಯಂತಿ ಹಿ ತೇ ಧ್ರುವಮ್ |
ಸಕರ್ಣಾ ವಾ ಹತೇ ಪಾರ್ಥೇ ಸಾರ್ಜುನಾ ವಾ ಹತೇ ಮಹಿ ॥33॥
ತಾಯಿಯೇ ! ಅರ್ಜುನನ್ನು ಬಿಟ್ಟು ಉಳಿದ ಆ ನಿನ್ನ ನಾಕುಮಂದಿ ಮಕ್ಕಳನ್ನು ಯುದ್ಧದಲ್ಲಿ ನಾನು ಸಂಹಾರ ಮಾಡಲಾರೆ. ನನ್ನಿಂದ ಅವರು ಸೋಲುತ್ತಾರೆ. ಮತ್ತು ಅವರನ್ನು ಸಂಹಾರ ಮಾಡುವ ಸಾಮರ್ಥ್ಯವೂ ನನಗಿದೆ. ಆದರೂ ನಿನಗೆ ಈಗ ಕೊಡುತ್ತಿರುವ ಮಾತಿನಂತೆ ನಾನು ಅವರನ್ನು ಕೊಲ್ಲುವುದಿಲ್ಲ. ಒಂದು ವೇಳೆ ಆ ರಣರಂಗದಲ್ಲಿ ಅರ್ಜುನನು ಸತ್ತರೆ ಕರ್ಣನನ್ನು ಸೇರಿಸಿಕೊಂಡು ನಿನಗೆ ಐದುಮಂದಿ ಮಕ್ಕಳು ಉಳಿಯುತ್ತಾರೆ. ಒಂದುವೇಳೆ ಕರ್ಣನು ಮೃತಪಟ್ಟರೆ, ಅರ್ಜುನನ್ನು ಸೇರಿಸಿಕೊಂಡು ನಿನಗೆ ಐದುಮಂದಿ ಮಕ್ಕಳು ಉಳಿಯುತ್ತಾರೆ. ಏನೇ ಆದರೂ ನಿನಗೆ ಐದುಮಂದಿ ಮಕ್ಕಳು ಉಳಿಯುವುದರಲ್ಲಿ ಸಂಶಯವಿಲ್ಲ. ಇದು ನಿಶ್ಚಯ.
ಟಿಪ್ಪಣಿ - ಪ್ರಾಪ್ತಾನ್ ವಿಷಹ್ಯಾಂಶ್ಚತುರ ಇತ್ಯತ್ರ ವಿಷಹ್ಯಾನ್ ವಿಶೇಷೇಣ ಸೋಢುಂ ಶಕ್ಯಾನ್, ಸಂಹರ್ತುಂ ಶಕ್ಯನಾಪೀತಿ ಯಾವತ್ ॥
`ವಿಷಹ್ಯಾನ್' ಎಂದರೆ ಉಳಿದ ನಾಲ್ವರನ್ನು ಎದುರಿಸಲು ಸಮರ್ಥನಾಗಿದ್ದೇನೆ. ಸಂಹಾರ ಮಾಡಲು ಸಮರ್ಥನಾಗಿದ್ದೇನೆ ಎಂದಭಿಪ್ರಾಯ.
ತಂ ಪುತ್ರಗೃದ್ಧಿನೀ ಭೂಯೋ ಮಾತಾ ಪುತ್ರಮಥಾಬ್ರವೀತ್ |
ಭ್ರಾತೄಣಾಂ ಸ್ವಸ್ತಿ ಕುರ್ವೀಥಾ ಯೇಷಾಂ ಸ್ವಸ್ತಿ ಚಿಕೀರ್ಷಸಿ ॥34॥

ಕರ್ಣನ ಮಾತನ್ನು ಕೇಳಿದ ಕುಂತೀದೇವಿಯು ಎಲ್ಲಾ ಮಕ್ಕಳಿಗೆ ಹಿತವನ್ನು ಅಪೇಕ್ಷಿಸುವವಳಾಗಿ ಪುನಃ ತನ್ನ ಜ್ಯೇಷ್ಠಪುತ್ರನನ್ನು ಕುರಿತು ಹೀಗೆ ಹೇಳಿದಳು - ``ನೀನು ಯಾವ ನಾಕುಮಂದಿ ನಿನ್ನ ಸಹೋದರರಿಗೆ ಕಲ್ಯಾಣವನ್ನು ಅಪೇಕ್ಷಿಸು- ತ್ತೀಯೋ, ಆ ನಾಕುಮಂದಿ ಸಹೋದರರ ವಿಷಯದಲ್ಲಿ ಅವಶ್ಯವಾಗಿ ಮಂಗಳ- ವನ್ನು ಉಂಟುಮಾಡುವಂತೆ ನಡೆದುಕೋ''.
ತಮೇವಮುಕತ್ವ ತು ಪೃಥಾ ವಿಸೃಜ್ಯೋಪಯಯೌ ಗೃಹಾನ್ ॥35॥
ಹೀಗೆ ತನ್ನ ಹಿರಿಯ ಮಗನಿಗೆ ಹೇಳಿ ಕುಂತಿಯು ಆ ಕರ್ಣನನ್ನು ಅಲ್ಲಿಯೇ ಬಿಟ್ಟು ಮನೆಗೆ ವಾಪಸ್ಸು ಬಂದಳು.
ಸೋಽರ್ಜುನೇನ ಹತೋ ವೀರೋ ಭ್ರಾತಾ ಭ್ರಾತ್ರಾ ಸಹೋದರಃ|
ನಚೈವ ವಿವೃತೋ ಮಂತ್ರಃ ಪೃಥಾಯಾಸ್ತಸ್ಯ ವಾ ಮುನೇ ॥36॥
ಓ ನಾರದಮುನಿಗಳೇ! ಇಂಥ ಕರ್ಣನನ್ನು ಅರ್ಜುನನೇ ಸಂಹಾರ ಮಾಡಿ- ದನು. ಸ್ವತಃ ತಮ್ಮನೇ ಅಣ್ಣನನ್ನು ಕೊಂದನು. ಕರ್ಣನು ನಮ್ಮ ಸಹೋದರನೆಂಬ ರಹಸ್ಯವನ್ನು ಕೊನೆಯತನಕ ಕುಂತಿಯು ನಮಗೆ ತಿಳಿಸಲೇ ಇಲ್ಲ. ಕರ್ಣನೂ ಕೂಡ ತಿಳಿಸಲಿಲ್ಲ.
ಅಥ ಶೂರೋ ಮಹೇಷ್ವಾಸಃ ಪಾರ್ಥೇನಾಸೌ ನಿಪಾತಿತಃ |
ಅಹಂ ತ್ವಜ್ಞಾಸಿಷಂ ಪಶ್ಚಾತ್ ಸ್ವಸೋದರ್ಯಂ ದ್ವಿಜೋತ್ತಮ ॥37॥
ಪೂರ್ವಜಂ ಭ್ರಾತರಂ ಕರ್ಣಂ ಪೃಥಾಯಾ ವಚನಾತ್ ಪ್ರಭೋ |
ತೇನ ಮೇ ದೂಯತೇಽತೀವ ಹೃದಯಂ ಭ್ರಾತೃಘಾತಿನಃ ॥38॥
ಓ ಬ್ರಾಹ್ಮಣಶ್ರೇಷ್ಠರೇ ! ಯಾವ ಕಾರಣದಿಂದ ಕರ್ಣನು ನಮ್ಮ ಹಿರಿಯಣ್ಣ- ನಾಗಿದ್ದಾನೆಂಬ ವಿಚಾರವನ್ನು ನಾವು ತಿಳಿಯಲಿಲ್ಲವೋ, ಆ ಕಾರಣದಿಂದ ಅರ್ಜುನನು ಮಹಾಧನುಷ್ಮಂತನಾದ ಕರ್ಣನನ್ನು ಯುದ್ಧದಲ್ಲಿ ಕೊಂದುಬಿಟ್ಟನು. ಆ ಕರ್ಣನು ಸತ್ತ ಬಳಿಕ ನಾನು ನಮ್ಮ ತಾಯಿಯ ಮೂಲಕ ಕರ್ಣನು ನಮ್ಮ ಹಿರಿಯಣ್ಣನೆಂದು ತಿಳಿದುಕೊಂಡೆನು. ಅಣ್ಣನ ಕೊಲೆಗೆ ಕಾರಣನಾದ ನನ್ನ ಹೃದಯವು ಬಹಳವಾಗಿ ಸಂತಾಪಪಡುತ್ತಿದೆ.
ಕರ್ಣಾರ್ಜುನಸಹಾಯೋಽಹಂ ಜಯೇಯಮಪಿ ವಾಸವಮ್ |
ಕರ್ಣ ಮತ್ತು ಅರ್ಜುನ ಇವರಿಬ್ಬರ ಸಹಾಯವು ನನಗೆ ಇದ್ದಿದ್ದರೆ ನಾನು ದೇವರಾಜನಾದ ಇಂದ್ರನನ್ನೂ ಕೂಡ ಗೆದ್ದು ಬಿಡುತ್ತಿದ್ದೆ.
ಸಭಾಯಾಂ ಕ್ಲಿಶ್ಯಮಾನಸ್ಯ ಧಾರ್ತರಾಷ್ಟ್ರೈರ್ದುರಾತ್ಮಭಿಃ |
ಸಹಸೋತ್ಪತಿತಃ ಕ್ರೋಧಃ ಕರ್ಣಂ ದೃಷ್ಟ್ವಾ ಪ್ರಶಾಮ್ಯತಿ ॥38॥
ದುರಾತ್ಮರಾದ ಆ ಧೃತರಾಷ್ಟ್ರನ ಮಕ್ಕಳು ಆ ಸಭೆಯಲ್ಲಿ ನನಗೆ ಬಹಳ ದುಃಖ- ವನ್ನು ಉಂಟುಮಾಡುತ್ತಿದ್ದರು. ಆ ಕ್ಷಣದಲ್ಲಿ ನನಗೆ ಕೋಪವು ಮಿತಿಮೀರಿ ಬರುತ್ತಿತ್ತು. ಆದರೆ ಕರ್ಣನನ್ನು ನೋಡಿದ ಕೂಡಲೇ ಆ ಕೋಪವು ಶಾಂತ- ವಾಗುತ್ತಿತ್ತು.
ಯದಾ ಹ್ಯಸ್ಯ ಗಿರೋ ರೂಕ್ಷಾಃ ಶೃಣೋಮಿ ಕಟುಕೋದಯಾಃ |
ಸಭಾಯಾಂ ಗದತೋ ದ್ಯೂತೇ ದುರ್ಯೋಧನಹಿತೈಷಿಣಃ |
ತದಾ ನಶ್ಯತಿ ಮೇ ಕ್ರೋಧಃ ಪಾದೌ ತಸ್ಯ ನಿರೀಕ್ಷ್ಯ ಹ ॥39॥
ದ್ಯೂತವು ನಡೆಯುವ ಆ ತುಂಬಿದ ಸಭೆಯಲ್ಲಿ ದುರ್ಯೋಧನನಿಗೆ ಸಂತೋಷವನ್ನು ಉಂಟುಮಾಡುವುದಕ್ಕಾಗಿ ಕರ್ಣನು ನನಗೆ ಕರ್ಣಕಠೋರವಾದ ಅತ್ಯಂತ ತೀಕ್ಷ್ಣವಾದ ಮಾತುಗಳಿಂದ ನಿಂದಿಸುತ್ತಿದ್ದನು. ಆ ಮಾತುಗಳನ್ನು ಕೇಳಿ, ನನಗೆ ಬಹಳ ಸಿಟ್ಟು ಬರುತ್ತಿತ್ತು. ಆದರೆ ಆ ಕರ್ಣನ ಎರಡು ಕಾಲುಗಳನ್ನು ನೋಡಿದಾಗ ನನ್ನ ಆ ಕೋಪವು ಶಾಂತವಾಗುತ್ತಿತ್ತು.
ಕುಂತ್ಯಾ ಹಿ ಸದೃಶೌ ಪಾದೌ ಕರ್ಣಸ್ಯೇತಿ ಮತಿರ್ಮಮ |
ಸಾದೃಶ್ಯಹೇತುಮನ್ವಿಚ್ಛನ್ ಪೃಥಾಯಾಸ್ತಸ್ಯ ಚೈವ ಹಿ |
ಕಾರಣಂ ನಾಧಿಗಚ್ಛಾಮಿ ಕಥಂಚಿದಪಿ ಚಿಂತಯನ್ ॥40॥
ಈ ಕುಂತಿಯ ಪಾದಗಳಂತೆ ಕರ್ಣನ ಪಾದಗಳಿದ್ದವು. ಇದನ್ನು ನಾನು ಸ್ಪಷ್ಟವಾಗಿ ತಿಳಿದಿದ್ದೇನೆ. ಇವರಿಬ್ಬರ ಪಾದಗಳು ಒಂದೇ ಲಕ್ಷಣದಿಂದ ಕೂಡಿರಲು ಏನು ಕಾರಣ? ಎಂಬ ಜಿಜ್ಞಾಸೆ ಬಹಳ ಮೂಡುತ್ತಿತ್ತು. ಆದರೆ ಆ ಕಾರಣವನ್ನು ತಿಳಿದು- ಕೊಳ್ಳಲು ನನ್ನಿಂದ ಸಾಧ್ಯವಾಗಲಿಲ್ಲ. ಎಷ್ಟು ಪ್ರಯತ್ನಪಟ್ಟರೂ ಆ ವಿಷಯದಲ್ಲಿ ವಿಫಲನಾದೆ.
ಕಥಂ ನು ತಸ್ಯ ಸಂಗ್ರಾಮೇ ಪೃಥಿವೀ ಚಕ್ರಮಗ್ರಸತ್ |
ಕಥಂಚ ಶಪ್ತೋ ಭ್ರಾತಾ ಮೇ ತತ್ತ್ವಂ ವಕ್ತುಮಿಹಾರ್ಹಸಿ ॥41॥
ಓ ನಾರದರೇ ! ಆ ರಣರಂಗದಲ್ಲಿ ಕರ್ಣನ ರಥಚಕ್ರವನ್ನು ಭೂಮಿಯು ಹೇಗೆ ನುಂಗಿತು? ನನ್ನ ಹಿರಿಯಣ್ಣನಾದ ಆ ಕರ್ಣನಿಗೆ ಅಂಥ ಶಾಪವು ಏಕೆ ಬಂದಿತು? ಮತ್ತು ಯಾರಿಂದ ಆ ಶಾಪ ಬಂದಿತು? ಈ ಎಲ್ಲದರ ಬಗ್ಗೆ ಯಥಾರ್ಥವಾಗಿ ನನಗೆ ತಿಳಿಸಿರಿ.
ಶ್ರೋತುಮಿಚ್ಛಾಮಿ ಭಗವಂಸ್ತ್ವತ್ತಃ ಸರ್ವಂ ಯಥಾತಥಮ್ |
ಭವಾನ್ ಹಿ ಸರ್ವವಿದ್ ವಿದ್ವಾಂಲ್ಲೋಕೇ ವೇದ ಕೃತಾಕೃತಮ್ ॥42॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪ್ರಥಮೋಽಧ್ಯಾಯಃ ॥1॥
ಓ ಪೂಜ್ಯರೇ! ತಾವು ಎಲ್ಲವನ್ನೂ ಕೂಡ ತಿಳಿದವರಾಗಿದ್ದೀರಿ. ವಿದ್ವಾಂಸ- ರಾಗಿದ್ದೀರಿ. ಹಿಂದೆ ನಡೆದದ್ದನ್ನು ಮತ್ತು ಮುಂದೆ ನಡೆಯುವುದನ್ನು ಸ್ಪಷ್ಟವಾಗಿ ತಿಳಿದಿರುತ್ತೀರಿ. ಆದ್ದರಿಂದ ಈ ಎಲ್ಲಾ ವಿಷಯವನ್ನು ಯಥಾರ್ಥವಾಗಿ ತಮ್ಮಿಂದ ಕೇಳಿ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ.
ವಿಶೇಷವಿಚಾರ - ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶಾಂತಿಪರ್ವದ ಪ್ರಾರಂಭವು ಚಾರ್ವಾಕ ಎಂಬ ತ್ರಿದಂಡಿ ಸನ್ಯಾಸಿಯ ಸಂವಾದದಿಂದ ಪ್ರಾರಂಭ- ವಾಗುತ್ತದೆ. ಆದರೆ ಮೂಲ ಮಹಾಭಾರತದಲ್ಲಿ ಗಂಗಾತೀರಕ್ಕೆ ಶೌಚಾಚಾರವನ್ನು ಆಚರಣೆ ಮಾಡುವುದಕ್ಕಾಗಿ ಪಾಂಡವರು ತೆರಳಿದರು ಎಂಬ ಕಥೆಯಿಂದ ಪ್ರಾರಂಭವಾಗುತ್ತದೆ. ಈ ವ್ಯತ್ಯಾಸವನ್ನು ಗಮನಿಸಬೇಕು.
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೊದಲನೆಯ ಅಧ್ಯಾಯವು ಮುಗಿಯಿತು.
* * * * * *

2. ಎರಡನೆಯ ಅಧ್ಯಾಯ
ಬ್ರಹ್ಮಾಸ್ತ್ರವನ್ನು ಪಡೆಯಬೇಕೆಂಬ ಇಚ್ಛೆ ಕರ್ಣನಿಗೆ ಉಂಟಾಯಿತು. ದ್ರೋಣಾಚಾರ್ಯರ ಬಳಿ ತೆರಳಿದಾಗ ಅದು ದೊರಕಲಿಲ್ಲ ಎಂಬ ಉದ್ದೇಶದಿಂದ ಪರಶುರಾಮದೇವರ ಬಳಿ, ತಾನು ಬ್ರಾಹ್ಮಣನೆಂದು ಹೇಳಿಕೊಂಡನು. ಅದಕ್ಕಾಗಿ ಅವರ ಶಿಷ್ಯತ್ವವನ್ನು ವಹಿಸಿದನು. ಅಲ್ಲಿ ಪ್ರಮಾದ- ದಿಂದ ಬ್ರಾಹ್ಮಣರ ಹಸುವಿನ ಕರುವನ್ನು ಕೊಂದುಬಿಟ್ಟನು. ಇದರಿಂದ ಕರ್ಣನಿಗೆ ಆ ಬ್ರಾಹ್ಮಣನ ಶಾಪವು ಉಂಟಾಯಿತು.
ವೈಶಂಪಾಯನಃ
ಸ ಏವಮುಕ್ತಸ್ತು ಮನಿರ್ನಾರದೋ ವದತಾಂ ವರಃ |
ಕಥಯಾಮಾಸ ತತ್ ಸರ್ವಂ ಯಥಾ ಶಪ್ತಃ ಸ ಸೂತಜಃ ॥1॥
ವೈಶಂಪಾಯನರು ಓ ರಾಜನೇ! ವಾಗ್ಮಿಗಳಲ್ಲೇ ಶ್ರೇಷ್ಠರಾದ ಆ ನಾರದ- ಮುನಿಗಳು ಧರ್ಮರಾಜನಿಂದ ಹೀಗೆ ಪ್ರಾರ್ಥಿಸಲ್ಪಟ್ಟರು - ಆ ಧರ್ಮರಾಜನಿಗೆ ಎಲ್ಲವನ್ನು ತಿಳಿಸುವುದಕ್ಕಾಗಿ ಕರ್ಣನು ಆ ಬ್ರಾಹ್ಮಣನಿಂದ ಹೇಗೆ ಶಾಪಕ್ಕೀಡಾದನು ಎಂಬುದನ್ನು ನಾರದರು ಹೇಳಲು ಪ್ರಾರಂಭ ಮಾಡಿದರು.
ಏವಮೇತನ್ಮಹಾಬಾಹೋ ಯಥಾ ವದಸಿ ಭಾರತ |
ನ ಕರ್ಣಾರ್ಜುನಯೋಃ ಕಿಂಚಿದವಿಷಹ್ಯಂ ಭವೇದ್ ರಣೇ ॥2॥
ಓ ಮಹಾಬಾಹುವಾದ ಯುಧಿಷ್ಠಿರನೇ ! ನೀನು ಹೇಳಿದ್ದು ಸರಿ. ಕರ್ಣ ಮತ್ತು ಅರ್ಜುನರಿಗೆ ಯುದ್ಧದಲ್ಲಿ ಸಾಧಿಸಲು ಆಗದೇ ಇರುವುದು ಯಾವುದೂ ಇಲ್ಲ. ಇವರಿಬ್ಬರೂ ಸೇರಿದರೆ ದೇವೇಂದ್ರನನ್ನೂ ಕೂಡ ಸೋಲಿಸುತ್ತಾರೆ.
ಗುಹ್ಯಮೇತತ್ತು ದೇವಾನಾಂ ಕಥಯಿಷ್ಯಾಮಿ ತೇ ನೃಪ |
ತನ್ನಿಬೋಧ ಮಹಾರಾಜ ಯಥಾ ವೃತ್ತಮಿದಂ ಪುರಾ ॥3॥
ಓ ರಾಜನೇ ! ಇದು ದೇವಗುಹ್ಯವಾದ ವಿಚಾರ. ಅದನ್ನು ನಿನಗೆ ತಿಳಿಸಲು ಇಚ್ಛಿಸುತ್ತೇನೆ. ಹಿಂದೆ ಇದು ಹೇಗೆ ನಡೆಯಿತು ಎಂಬುದನ್ನು ಯಥಾವತ್ತಾಗಿ ಹೇಳು- ತ್ತೇನೆ ಕೇಳು.
ವಿವರಣೆ - ಕರ್ಣ ಮತ್ತು ಅರ್ಜುನರು ಒಟ್ಟಿಗೆ ಸ್ನೇಹದಿಂದ ಸೇರಬಾರ- ದೆಂಬುದೇ ದೇವತೆಗಳ ಅಭಿಲಾಷೆ. ಆದ್ದರಿಂದ ಕರ್ಣನು ಅರ್ಜುನನಿಂದ ಸಂಹಾರವನ್ನು ಹೊಂದುವುದಕ್ಕಾಗಿ ಅನೇಕ ಹಂತಗಳಲ್ಲಿ ದೇವತೆಗಳು ಉಪಾಯಗಳನ್ನು ಮಾಡುತ್ತಾ ಬಂದರು. ಅದನ್ನು ನಿನಗೆ ತಿಳಿಸುತ್ತೇನೆ ಎಂಬುದು ಇದರ ಅಭಿಪ್ರಾಯ.
ಕ್ಷತ್ರಂ ಸ್ವರ್ಗಂ ಕಥಂ ಗಚ್ಛೇಚ್ಛಸ್ತ್ರಪೂತಮಿತಿ ಪ್ರಭೋ |
ಸಂಘರ್ಷಜನನಸ್ತಸ್ಮಾತ್ ಕನ್ಯಾಗರ್ಭೋ ವಿನಿರ್ಮಿತಃ ॥4॥
ಓ ಪ್ರಭುವೇ ! ಹಿಂದೊಮ್ಮೆ ದೇವತೆಗಳು ಹೀಗೆ ವಿಚಾರವನ್ನು ಮಾಡಿದರು - ಈ ಭೂಮಂಡಲದಲ್ಲಿರುವ ಎಲ್ಲಾ ಕ್ಷತ್ರಿಯರು ಶಸ್ತ್ರಗಳ ಆಘಾತದಿಂದ ಪವಿತ್ರರಾಗಿ ಸ್ವರ್ಗಲೋಕಕ್ಕೆ ಹೇಗೆ ಹೋಗುತ್ತಾರೆ? ಇದಕ್ಕೆ ಏನು ಮಾಡಬೇಕು? ಎಂದು ಯೋಚನೆ ಮಾಡಿದರು. ಆಗ ದೇವತೆಗಳು ಕ್ಷತ್ರಿಯರಲ್ಲಿ ಪರಸ್ಪರ ಸಂಘರ್ಷವನ್ನು ಉಂಟುಮಾಡುವುದಕ್ಕಾಗಿ ಸೂರ್ಯನ ಮೂಲಕ ಕುಮಾರಿಯಾದ ಕುಂತಿಯ ಗರ್ಭದಲ್ಲಿ ಒಬ್ಬ ತೇಜಸ್ವಿಯಾದ ಬಾಲಕನನ್ನು ಹುಟ್ಟಿಸಿದರು. ಅವನೇ ಈ ಕ್ಷತ್ರಿಯರ ಪರಸ್ಪರ ಸಂಘರ್ಷಕ್ಕೆ ಮೂಲಕಾರಣನಾದನು.
ವಿವರಣೆ - ಭೂಮಿಯಲ್ಲಿ ಕ್ಷತ್ರಿಯರು ತುಂಬಿದ್ದಾರೆ. ಇವರು ಶಸಞತ್ರಸ್ತ್ರಗಳಿಂದ ಮೃತರಾಗಿ ಸ್ವರ್ಗಸ್ಥರಾಗಬೇಕು. ಆದರೆ ಇದಕ್ಕೆ ಏನು ವಿಧಾನ? ಎಂದು ದೇವತೆಗಳು ಯೋಚನೆ ಮಾಡಿದರು. ಪರಸ್ಪರಸಂಘರ್ಷ ಮಾಡಿದರೆ ಶಸ್ತ್ರ- ಪ್ರಹಾರಗಳಿಂದ ಎಲ್ಲ ಕ್ಷತ್ರಿಯರು ಪವಿತ್ರರಾಗುತ್ತಾರೆ. ಅದರಿಂದ ಸ್ವರ್ಗವನ್ನು ಅವರು ಪಡೆಯಬಹುದು. ಹೀಗೆ ಯೋಚನೆಯನ್ನು ಮಾಡಿ, ಆ ಪರಸ್ಪರ- ಸಂಘರ್ಷಕ್ಕೆ ಕಾರಣವಾದ ಗರ್ಭವನ್ನು ಕುಂತಿಯ ಉದರದಲ್ಲಿಟ್ಟರು. ಇದಕ್ಕೆ ಸೂರ್ಯನನ್ನು ನಿಮಿತ್ತವನ್ನಾಗಿ ಮಾಡಿಕೊಂಡರು ಎಂಬುದು ಈ ಶ್ಲೋಕದ ಸಾರಾಂಶ.
ಕ್ಷತ್ರಂ ಸ್ವರ್ಗಂ ಕಥಂ ಗಚ್ಛೇಚ್ಛಸ್ತ್ರಪೂತಮಿತಿ ಪ್ರಭೋ | ಸಂಘರ್ಷಜನನಸ್ತಸ್ಮಾತ್ ಕನ್ಯಾಗರ್ಭೋ ವಿನಿರ್ಮಿತಃ ॥
ಇತ್ಯತ್ರ ಅಯಂ ಭಾವಃ | ಕರ್ಣಸ್ಯ ಕ್ಷತ್ರಿಯಾಯಾಂ ಜನನಾಭಾವೇ ಕ್ಷತ್ರಂ ಶಸ್ತ್ರಪೂತಂ ಸ್ವರ್ಗಂ ಗಚ್ಛೇದಿತಿ ಪ್ರಮೇಯಂ ನ ಸಿದ್ಧ್ಯೇತ್ | ಅತಃ ಕ್ಷತ್ರಿಯಾಯಾಂ ಜನನಮಾವಶ್ಯಕಮ್| ತಚ್ಚಾರ್ಜುನಾದಿವತ್ ಸ್ಪಷ್ಟಂ ಕುಂತ್ಯಾಂ ಜನನೇ ಕ್ಷತ್ರಿಯತ್ವಸ್ಯ ಸುಪ್ರಸಿದ್ಧತ್ವಾತ್ ದ್ರೋಣಾದ್ವಾ ಪರಶುರಾಮಾದ್ವಾ-ಬ್ರಹ್ಮಕ್ಷತ್ರಯೋರುಭಯೋರಪಿ ಯೋಗ್ಯಂ ಬ್ರಹ್ಮಾಸ್ತ್ರಂ ಲಭೇತೈವ | ಬ್ರಹ್ಮಾಸ್ತ್ರಲಾಭೇ ಚ ಕರ್ಣಸ್ಯ ನ ಕುತಶ್ಚಿಚ್ಛಸ್ತ್ರಘಾತಃ ಸ್ಯಾತ್, ಪ್ರತ್ಯುತ ಸ್ವಶತ್ರುಮೇವ ತೇನ ಹನ್ಯಾತ್ | ಅತಶ್ಚ ಕರ್ಣಸ್ಯ ಶಸ್ತ್ರಘಾತಸಾಧ್ಯಸ್ವರ್ಗೋಽಪಿ ನ ಸ್ಯಾತ್ | ಕನ್ಯಾಗರ್ಭಾಜ್ಜನನೇ ತು ಕ್ಷತ್ರಜಾತಿರಪಿ ಜಾತಾ | ಪುನಃ ಸೂತಪುತ್ರತ್ವಪ್ರಸಿದ್ಧೌ ಚ ಬ್ರಹ್ಮಾಸ್ತ್ರಲಾಭೋಽಪಿ ನಾಭೂತ್ | ಅತಃ ಕ್ಷತ್ರಜಾತಿಮತಃ ಕರ್ಣಸ್ಯ ಶಸ್ತ್ರಪೂತಂ ಮರಣಮಪಿ ನ್ಯಾಯಪ್ರಾಪ್ತ ಮಿತ್ಯುಭಯಲಾಭಾಯ ಕನ್ಯಾಯಾಂ ಜನನಂ ದೇವೈರ್ನಿರ್ಮಿತಮಿತಿ ವಕ್ತುರ್ನಾರದಸ್ಯ ಹೃದಯಮಿತಿ | ಸಂಘರ್ಷಜನನಃ ದೇವಾನಾಮನ್ಯೋನ್ಯಂ ಸಂಘರ್ಷಣೇನ ಮಥನೇನ ಜನನಂ ಯಸ್ಯ | `ಸಂಹರ್ಷಜನನಃ' ಇತಿ ಪಾಠೇ ಸ್ಪಷ್ಟೋಽರ್ಥಃ ॥
ಈ ಶ್ಲೋಕದ ಅಭಿಪ್ರಾಯ ಹೀಗಿದೆ - ಕರ್ಣನು ಶಸ್ತ್ರಗಳಿಂದ ಪೂತನಾಗಿ ಸ್ವರ್ಗವನ್ನು ಪಡೆಯಬೇಕು ಎಂಬುದು ದೇವತೆಗಳ ಸಂಕಲ್ಪ. ಹಾಗಾಗಬೇಕೆಂದರೆ ಅವನು ಕ್ಷತ್ರಿಯನಾಗಬೇಕು. ಒಂದುವೇಳೆ ಕರ್ಣನು ಕ್ಷತ್ರಿಯಜಾತಿಯಲ್ಲಿ ಹುಟ್ಟದಿದ್ದರೆ ಶಸ್ತ್ರಪೂತನಾಗಿ ಸ್ವರ್ಗವನ್ನು ಹೊಂದಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಕರ್ಣನಿಗೆ ಕ್ಷತ್ರಿಯ ಜಾತಿಯಲ್ಲಿ ಹುಟ್ಟುವುದು ಅನಿವಾರ್ಯವಾಯಿತು. ಎಲ್ಲಾ ದೇವತೆಗಳು ಭಗವಂತನ ಸಂಕಲ್ಪದಂತೆ ಸೂರ್ಯನ ಮೂಲಕ ಕುಂತಿಯು ಕನ್ಯೆಯಾಗಿರುವಾಗ ಕುಂತಿಯ ಗರ್ಭದಿಂದ ಕರ್ಣನನ್ನು ಹುಟ್ಟುವಂತೆ ಮಾಡಿದರು. ಆದರೆ ಅರ್ಜುನಾದಿಗಳಂತೆ ಸ್ಪಷ್ಟವಾದ ಕ್ಷತ್ರಿಯರಿಗೆ ಮಾಡಬೇಕಾದ ಯಾವುದೇ ಸಂಸ್ಕಾರಗಳು ಕರ್ಣನಿಗೆ ಆಗಲಿಲ್ಲ. ಅರ್ಜುನಾದಿಗಳಂತೆ ಸ್ಪಷ್ಟವಾಗಿ ಕುಂತಿಯಲ್ಲಿ ಜನನವಾಗಿದ್ದರೆ ಅವನೂ ಕೂಡ ಅರ್ಜುನಾದಿಗಳಂತೆ ಕ್ಷತ್ರಿಯನೆಂದು ಪ್ರಸಿದ್ಧನಾಗುತ್ತಿದ್ದನು. ಆಗ ದ್ರೋಣಾಚಾರ್ಯರು, ಅಥವಾ ಪರಶುರಾಮದೇವರು

ಅರ್ಜುನಾದಿಗಳಿಗೆ ಉಪದೇಶಿಸಿದಂತೆ ಕರ್ಣನಿಗೂ ಕೂಡ ಬ್ರಹ್ಮಾಸ್ತ್ರವನ್ನು ಉಪದೇಶ ಮಾಡುತ್ತಿದ್ದರು. ಏಕೆಂದರೆ ಬ್ರಹ್ಮಾಸ್ತ್ರವನ್ನು ಬ್ರಾಹ್ಮಣರಿಗೆ ಮತ್ತು ಕ್ಷತ್ರಿಯರಿಗೆ ಮಾತ್ರ ಉಪದೇಶ ಮಾಡಬೇಕು. ಆದರೆ ಕರ್ಣನಿಗೆ ಬ್ರಹ್ಮಾಸ್ತ್ರದ ಉಪದೇಶ ಆಗಬಾರದೆಂಬುದೇ ದೈವಸಂಕಲ್ಪ. ಒಂದುವೇಳೆ ಕರ್ಣನಿಗೆ ಬ್ರಹ್ಮಾಸ್ತ್ರದ ಲಾಭವಾದರೆ, ಕರ್ಣನು ಯಾವುದೇ ಶಸ್ತ್ರಘಾತವು ತನಗೆ ಆಗದಂತೆ ತನ್ನನ್ನು ರಕ್ಷಣೆ ಮಾಡಿಕೊಳ್ಳುತ್ತಿದ್ದನು. ಬ್ರಹ್ಮಾಸ್ತ್ರವೆಂಬ ದೊಡ್ಡ ಅಸ್ತ್ರದ ರಕ್ಷಣೆಯಿರುವ ಕರ್ಣನನ್ನು ಅರ್ಜುನನಿಗೆ ಕೊಲ್ಲಲು ಸಾಧ್ಯವಾಗುತ್ತಿರಲಿಲ್ಲ. ಹೊರತಾಗಿ ತಾನೇ ಅರ್ಜುನನನ್ನು ಕೊಲ್ಲುತ್ತಿದ್ದನು. ಆದ್ದರಿಂದ ಕರ್ಣನನ್ನು ಕ್ಷತ್ರಿಯನನ್ನಾಗಿ ಹುಟ್ಟಿಸಿದರೂ ಕೂಡ ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನು ಮಾಡಿಕೊಳ್ಳಲು ಸಾಧ್ಯವಾಗದಂತೆ ವಿಧಿಯೇ ನಿರ್ಮಾಣ ಮಾಡಿತು. ಕ್ಷತ್ರಿಯೋಚಿತವಾದ ಸಂಸ್ಕಾರಗಳು ಆಗದ ಕಾರಣ ಕರ್ಣನಿಗೆ ಬ್ರಹ್ಮಾಸ್ತ್ರದ ಉಪದೇಶವು ಇರುವುದಿಲ್ಲ. ಕ್ಷತ್ರಿಯನಾಗಿ ಹುಟ್ಟಿದ ಕಾರಣ ಶಸ್ತ್ರಘಾತದಿಂದ ಪ್ರಾಪ್ತವಾಗುವ ಸ್ವರ್ಗವು ಅವನಿಗೆ ಉಂಟಾಯಿತು. ಕನ್ಯೆಯ ಗರ್ಭದಿಂದ ಹುಟ್ಟಿದ್ದರಿಂದ ಅವನು ಕ್ಷತ್ರಿಯನೇ ಆಗಿದ್ದಾನೆ. ಆದರೆ ಮುಂದೆ ಸೂತಪುತ್ರನೆಂದು ಪ್ರಸಿದ್ಧನಾದ ಕಾರಣ ಬ್ರಹ್ಮಾಸ್ತ್ರದ ಲಾಭವು ಅವನಿಗೆ ಆಗಲಿಲ್ಲ. ಹೀಗೆ ಕ್ಷತ್ರಿಯ ಜಾತಿ, ಶಸ್ತ್ರಪೂತವಾದ ಮರಣವೂ ಕೂಡ ನ್ಯಾಯಪ್ರಾಪ್ತವಾಗುತ್ತದೆ. ಈ ದೃಷ್ಟಿಯಿಂದ ಕನ್ಯೆಯಲ್ಲಿ ಕರ್ಣನ ಜನನನವನ್ನು ದೈವವು ನಿರ್ಮಾಣ ಮಾಡಿತು. ಇಷ್ಟು ನಾರದರ ಮಾತಿನ ಅಭಿಪ್ರಾಯವಾಗಿದೆ.

ವಿಮರ್ಶೆ - ಈ ಲಕ್ಷಾಲಂಕಾರಭಾಗವನ್ನು ಪ್ರಕ್ಷಿಪ್ತವೆಂದೇ ಹೇಳಬೇಕು. ಭಾವೀಸಮೀರರೆಂದೇ ಪ್ರಸಿದ್ಧರಾದ ಶ್ರೀವಾದಿರಾಜರು ತಾತ್ಪರ್ಯನಿರ್ಣಯಕ್ಕೆ ವಿರುದ್ಧವಾಗಿ, ಮೂಲ ಮಹಾಭಾರತಕ್ಕೆ ಹೀಗೆ ವ್ಯಾಖ್ಯಾನ ಮಾಡಲು ಸಾಧ್ಯವಿಲ್ಲ. ಏಕೆಂದರೆ ಕರ್ಣನಿಗೆ ಬ್ರಹ್ಮಾಸ್ತ್ರದ ಉಪದೇಶವಿತ್ತು. ಮತ್ತು ಅದನ್ನು ಯುದ್ಧದಲ್ಲಿ ಪ್ರಯೋಗ ಮಾಡಿದನು ಎಂಬುದಕ್ಕೆ ಸ್ಪಷ್ಟ ಆಧಾರವಿದೆ. ಇದೇ ಶಾಂತಿಪರ್ವದ ಮೂರನೆಯ ಅಧ್ಯಾಯದ ಎರಡನೆಯ ಶ್ಲೋಕ ಹೀಗಿದೆ -

ತಸ್ಮೈ ಸ ವಿಧಿವತ್ ಕೃತ್ಸ್ನಂ ಬ್ರಹ್ಮಾಸ್ತ್ರಂ ಸನಿವರ್ತನಮ್ |
ಪ್ರೋವಾಚಾಖಿಲಮವ್ಯಗ್ರಂ ತಪಸ್ವೀ ತತ್ ತಪಸ್ವಿನೇ ॥2॥

ಈ ಶ್ಲೋಕವು ಪರಶುರಾಮದೇವರು ವಿಧಿಪ್ರಕಾರವಾಗಿ ಬ್ರಹ್ಮಾಸ್ತ್ರವನ್ನು ಕರ್ಣನಿಗೆ ಉಪದೇಶಿಸಿದ್ದಾರೆಂದು ತಿಳಿಸುತ್ತಿದೆ. ಮತ್ತು ಮಹಾಭಾರತ ತಾತ್ಪರ್ಯನಿರ್ಣಯದ 27 ನೇ ಅಧ್ಯಾಯದ 181, 182 ಈ ಎರಡು ಶ್ಲೋಕಗಳಲ್ಲಿ ಸ್ಪಷ್ಟವಾಗಿ ಕರ್ಣಾರ್ಜುನರಿಬ್ಬರೂ ಪರಸ್ಪರವಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದರು. ಮತ್ತು ಅಸ್ತ್ರಗಳನ್ನು ಉಪಶಮನ ಮಾಡಿದರು ಎಂದು ಹೇಳಲಾಗಿದೆ. ಹಾಗೂ ಸರ್ಪಾಸ್ತ್ರವನ್ನು ಬಿಟ್ಟಾಗ ಕರ್ಣನು ಅದರಲ್ಲಿ ಬ್ರಹ್ಮಾಸ್ತ್ರಕ್ಕೆ ಉಪಯುಕ್ತವಾದ ಮಂತ್ರವನ್ನೂ ಕೂಡ ಅಭಿಮಂತ್ರಣೆ ಮಾಡಿದ್ದನೆಂದು ಆಚಾರ್ಯರು ನಿರ್ಣಯವನ್ನು ನೀಡಿದ್ದಾರೆ. ಆದ್ದರಿಂದ ಲಕ್ಷಾಲಂಕಾರದ ಈ ವಾಕ್ಯದಲ್ಲಿ ಬ್ರಹ್ಮಾಸ್ತ್ರದ ಉಪದೇಶವು ಕರ್ಣನಿಗೆ ಇರುವುದಿಲ್ಲ ಎಂದು ಹೇಳಿದ್ದು ವಿರುದ್ಧವಾಗುತ್ತದೆ.

ಮಹಾಭಾರತತಾತ್ಪರ್ಯನಿರ್ಣಯದಲ್ಲಿರುವ ಹಾಗೂ ಮಹಾಭಾರತ- ದಲ್ಲಿರುವ `ಬ್ರಹ್ಮಾಸ್ತ್ರ' ಎಂಬ ಶಬ್ದಕ್ಕೆ ಕೆಲವು ವಿದ್ವಾಂಸರುಗಳು ಆಗ್ನೇಯಾದ್ಯಸ್ತ್ರ ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಇದು ಸರಿಯಲ್ಲ. ಕ್ಷತ್ರಿಯಸಂಸ್ಕಾರವನ್ನು ಹೊಂದದ ಕರ್ಣನಿಗೆ ವೇದಮಂತ್ರದಲ್ಲೇ ಅಧಿಕಾರವಿಲ್ಲ. ಪ್ರಸಿದ್ಧವಾದ ಗಾಯತ್ರಿ -ಯಿಂದ ಅಭಿಮಂತ್ರಣೆ ಮಾಡಿ, ಪ್ರಯೋಗಿಸಲ್ಪಡುವ ಬ್ರಹ್ಮಾಸ್ತ್ರಕ್ಕೆ ಅನಧಿಕಾರಿ- ಯಾದ ಮೇಲೆ ಆಗ್ನೇಯಾದ್ಯಸ್ತ್ರಗಳ ಪ್ರಯೋಗದಲ್ಲೂ ಕೂಡ ಅವನಿಗೆ ಅಧಿಕಾರ- ವಿರುವುದಿಲ್ಲ. ಬ್ರಹ್ಮಾಸ್ತ್ರವು ಹೇಗೆ ವೇದಮೂಲಕವೋ, ಆಗ್ನೇಯಾದ್ಯಸ್ತ್ರವೂ ಕೂಡ ವೇದಮೂಲಕವೇ ಆಗಿರುತ್ತದೆ. ಆಗ್ನೇಯಾದಿ ಮಂತ್ರಗಳನ್ನು ಸ್ವೀಕರಿಸಲು ಕರ್ಣನಿಗೆ ಅಧಿಕಾರವಿದೆಯೆಂದು ಹೇಳುವುದಾದರೆ ಗಾಯತ್ರೀಮಂತ್ರವನ್ನು ಸ್ವೀಕರಿಸಲು ಕರ್ಣನಿಗೆ ಹೇಗೆ ಅಧಿಕಾರವಿರುವುದಿಲ್ಲ? ಮತ್ತು ಲಕ್ಷಾಲಂಕಾರವನ್ನು ಆಧರಿಸಿ ವ್ಯಾಖ್ಯಾನ ಮಾಡುವ ವಿದ್ವಾಂಸರು ಒಂದುಕಡೆ ಆಗ್ನೇಯಾದ್ಯಸ್ತ್ರಗಳೆಂದು ವ್ಯಾಖ್ಯಾನ ಮಾಡುತ್ತಾರೆ. ಮತ್ತೊಂದು ಪಂಚಮವೇದೋಕ್ತ ಮಂತ್ರವೆಂದು ಹೇಳುತ್ತಾರೆ. ಆದ್ದರಿಂದ ನಿರ್ಧಾರಾತ್ಮಕವಾಗಿ ಲಕ್ಷಾಲಂಕಾರವನ್ನು ವ್ಯಾಖ್ಯಾನಿಸಲು ಇಲ್ಲಿ ಅವರಿಗೂ ಸಾಧ್ಯವಾಗುವುದಿಲ್ಲ.

ಸ ಬಾಲಸ್ತೇಜಸಾ ಯುಕ್ತಃ ಸೂತಪುತ್ರತ್ವಮಾಗತಃ |
ಚಕಾರಾಂಗಿರಸಾಂ ಶ್ರೇಷ್ಠೇ ಧನುರ್ವೇದಂ ಗುರೌ ತವ ॥5॥

ಆ ಬಾಲಕನು ಕುಂತಿಯ ಗರ್ಭದಲ್ಲಿ ಹುಟ್ಟಿದರೂ ಕೂಡ ಮುಂದೆ ಸೂತನ ಪುತ್ರನೆಂದು ಪ್ರಸಿದ್ಧನಾದನು. ಅವನು ಅಂಗೀರಸಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣ- ಶ್ರೇಷ್ಠರಾದ ನಿನ್ನ ಗುರುಗಳೇ ಆದ ದ್ರೋಣಾಚಾರ್ಯರಿಂದ ಧನುರ್ವೇದವನ್ನು ಅಧ್ಯಯನ ಮಾಡಿದನು.

ಸ ಬಲಂ ಭೀಮಸೇನಸ್ಯ ಫಲ್ಗುನಸ್ಯ ಚ ಲಾಘವಮ್ |
ಬುದ್ಧಿಂ ಚ ತವ ರಾಜೇಂದ್ರ ಯಮಯೋರ್ವಿನಯಂ ತದಾ ॥6॥

ಓ ರಾಜೇಂದ್ರನೇ ! ಆ ಕರ್ಣನು ಭೀಮಸೇನನ ಬಲವನ್ನು, ಅರ್ಜುನನ ಹಸ್ತಲಾಘವವನ್ನು, ನಿನ್ನ ಬುದ್ಧಿಯನ್ನು, ನಕುಲ-ಸಹದೇವರಲ್ಲಿರುವ ವಿನಯಗುಣ- ವನ್ನು ನೋಡಿ ಹೊಟ್ಟೆಕಿಚ್ಚು ಪಟ್ಟನು.

ಸಖ್ಯಂ ಚ ವಾಸುದೇವೇನ ಬಾಲ್ಯೇ ಗಾಂಡೀವಧನ್ವನಃ |
ಪ್ರಜಾನಾಮನುರಾಗಂ ಚ ಚಿಂತಯಾನೋ ವ್ಯದಹ್ಯತ ॥7॥

ಕೃಷ್ಣನ ಜೊತೆಗೆ ಅರ್ಜುನನಿಗೆ ಇದ್ದ ಮೈತ್ರಿಯನ್ನು, ನಿಮ್ಮ ವಿಷಯದಲ್ಲಿ ಪ್ರಜೆಗಳು ತೋರಿಸುತ್ತಿದ್ದ ಅನುರಾಗವನ್ನು, ಚಿಂತಿಸುತ್ತಾ ಅಸೂಯೆಯನ್ನು ಹೊಂದಿ ಬಹಳ ಪರಿತಾಪಪಟ್ಟನು.

ಸ ಸಖ್ಯಮಗಮದ್ ಬಾಲ್ಯೇ ರಾಜ್ಞಾ ದುರ್ಯೋಧನೇನ ವೈ |
ಯುಷ್ಮಾಭಿರ್ನಿತ್ಯಸಂದ್ವಿಷ್ಟೋ ದೈವಾಚ್ಚಾಪಿ ಸ್ವಭಾವತಃ ॥8॥

ನಿಮ್ಮೆಲ್ಲರ ಮೇಲಿನ ದ್ವೇಷದಿಂದ ಆ ಕರ್ಣನು ರಾಜನಾದ ದುರ್ಯೋಧನನ ಜೊತೆ ಬಾಲ್ಯದಲ್ಲಿಯೇ ಸಖ್ಯವನ್ನು ಬೆಳೆಸಿದನು. ನಿಮ್ಮೆಲ್ಲರನ್ನು ಪ್ರತಿನಿತ್ಯವು ದ್ವೇಷ ಮಾಡುತ್ತಿದ್ದನು. ಹೀಗೆ ದ್ವೇಷಿಸಲು ದೇವತೆಗಳ ಪ್ರೇರಣೆಯೂ ಕಾರಣವಾಗಿತ್ತು. ಮತ್ತು ಅವನ ಸ್ವಭಾವವೂ ಕೂಡ ಕಾರಣವಾಗಿತ್ತು.

ವಿದ್ಯಾಧಿಕಮಥಾಲಕ್ಷ್ಯ ಧನುರ್ವೇದೇ ಧನಂಜಯಮ್ |
ದ್ರೋಣಂ ರಹಸ್ಯುಪಾಗಮ್ಯ ಕರ್ಣೋ ವಚನಮಬ್ರುವೀತ್ ॥9॥
ಧನಂಜಯನು ಧನುರ್ವೇದದಲ್ಲಿ ತನಗಿಂತಲೂ ಹೆಚ್ಚು ವಿದ್ಯಾವಂತನಾಗಿ- ದ್ದಾನೆಂಬುದನ್ನು ಕರ್ಣನು ಗಮನಿಸಿದನು. ಅವನನ್ನು ಮೀರಿಸಬೇಕೆಂಬ ಉದ್ದೇಶ- ದಿಂದ ಒಮ್ಮೆ ರಹಸ್ಯವಾಗಿ ದ್ರೋಣಾಚಾರ್ಯರನ್ನು ಸಮೀಪಿಸಿದನು. ಮತ್ತು ಅವರಲ್ಲಿ ಮುಂದಿನ ಈ ಮಾತುಗಳನ್ನು ಹೇಳಿದನು.
ಬ್ರಹ್ಮಾಸ್ತ್ರಂ ವೇತ್ತುಮಿಚ್ಛಾಮಿ ಸರಹಸ್ಯನಿವರ್ತನಮ್ |
ಅರ್ಜುನೇನ ಸಮೋ ಯುದ್ಧೇ ಭವೇಯಮಿತಿ ಮೇ ಮತಿಃ ॥10॥
ಸಮಃ ಶಿಷ್ಯೇಷು ವಃ ಸ್ನೇಹಃ ಪುತ್ರೇ ಚೈವ ತಥಾ ಧ್ರುವಮ್ |
ತ್ವತ್ಪ್ರಸಾದಾನ್ನ ಮಾಂ ಬ್ರೂಯುರಕೃತಾಸ್ತ್ರಂ ವಿಚಕ್ಷಣಾಃ ॥11॥
ಆಚಾರ್ಯರೇ ಬ್ರಹ್ಮಾಸ್ತ್ರವನ್ನು ನನಗೆ ಉಪದೇಶಿಸಿರಿ. ಅದನ್ನು ತಿಳಿದು- ಕೊಳ್ಳಬೇಕೆಂಬ ಇಚ್ಛೆ ನನಗುಂಟಾಗಿದೆ. ಅದರ ರಹಸ್ಯವನ್ನು ಆ ಬ್ರಹ್ಮಾಸ್ತ್ರವನ್ನು ಹೇಗೆ ಪ್ರಯೋಗ ಮಾಡಬೇಕು? ಹೇಗೆ ಹಿಂದಕ್ಕೆ ತೆಗೆದುಕೊಳ್ಳಬೇಕು ಎಂಬುದನ್ನು ತಮ್ಮಿಂದ ಕಲಿಯಲು ಅಪೇಕ್ಷಿಸುತ್ತೇನೆ. ಯುದ್ಧದಲ್ಲಿ ಅರ್ಜುನನಿಗೆ ಸರಿಸಾಟಿಯಾಗಿ ನಾನು ನಿಲ್ಲಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. ತಾವು ನಿಮ್ಮ ಮಗನಲ್ಲಿ ಹೇಗೆ ಪ್ರೀತಿಯನ್ನು ಮಾಡುತ್ತೀರೋ, ಅದರಂತೆ ನಿಮ್ಮ ಶಿಷ್ಯರಲ್ಲಿಯೂ ಕೂಡ ಸಮಾನವಾದ ಪ್ರೀತಿಯನ್ನು ಮಾಡುತ್ತೀರಿ. ಅಂಥ ಪ್ರೀತಿಯನ್ನು ನನ್ನ ಮೇಲೂ ಸಹ ತೋರಿಸಿರಿ, ಬ್ರಹ್ಮಾಸ್ತ್ರವನ್ನು ಉಪದೇಶಿಸಿರಿ. ನಿಮ್ಮ ಅನುಗ್ರಹದ ಬಲದಿಂದ ಯಾರೊಬ್ಬ ಜ್ಞಾನಿಯೂ ಕೂಡ ನನ್ನನ್ನು ಅಕೃತಾಸ್ತ್ರನೆಂದು (ಬ್ರಹ್ಮಾಸ್ತ್ರದ ಅರಿವಿಲ್ಲ- ದವನೆಂದು) ಹೇಳದಂತಾಗಲಿ.
ವಿಶೇಷವಿಚಾರ - ಕರ್ಣನಿಗೆ ದ್ರೋಣಾಚಾರ್ಯರು ತನ್ನನ್ನು ನಿರಾಕರಿಸ- ಬಹುದೆಂಬ ಭಯವಿತ್ತು. ಆದ್ದರಿಂದ ತಾವು ಯಾರಲ್ಲಿಯೂ ಕೂಡ ಪಕ್ಷಪಾತ ಮಾಡುವುದಿಲ್ಲವೆಂದು ಅವರನ್ನು ಪ್ರಶಂಸೆ ಮಾಡುತ್ತಾನೆ. ಆದರೆ ದ್ರೋಣಾ- ಚಾರ್ಯರಿಗೆ ಅರ್ಜುನನ ಮೇಲೆ ಹೆಚ್ಚು ಒಲವಿದ್ದುದರಿಂದ ಕರ್ಣನ ಅಪೇಕ್ಷೆ- ಯನ್ನು ಪೂರೈಸಲಿಲ್ಲ. ಮತ್ತು ಅರ್ಜುನನಿಗೆ ಸರಿಸಾಟಿಯಾಗಿ ನಿಲ್ಲಬೇಕು. ಅಥವಾ ಅರ್ಜುನನ್ನು ಮೀರಿಸಬೇಕು ಎಂಬ ದುಷ್ಟ ಅಪೇಕ್ಷೆಯನ್ನು ಹೊಂದಿದ್ದನು. ಇದೂ ಸಹ ದ್ರೋಣಾಚಾರ್ಯರಿಗೆ ಇಷ್ಟವಾಗಲಿಲ್ಲ. ಆದ್ದರಿಂದ ಕರ್ಣನನ್ನು ದ್ರೋಣಾಚಾರ್ಯರು ನಿರಾಕರಣೆ ಮಾಡುತ್ತಾರೆ. ನಿಜವಾಗಿಯೂ ಕರ್ಣನನ್ನು ದ್ರೋಣಾಚಾರ್ಯರು ಏಕೆ ನಿರಾಕರಣೆ ಮಾಡಿದರು ಎನ್ನಲು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಹೀಗೆ ನಿರ್ಣಯವನ್ನು ನೀಡಿದ್ದಾರೆ
ತದಾ ಕರ್ಣೋಽಥೈಕಲವ್ಯಶ್ಚ ದಿವ್ಯಾನ್ಯಸ್ತ್ರಾಣ್ಯಾಪ್ತುಂ ದ್ರೋಣಸಮೀಪಮೀಯತುಃ |
ಸೂತೋ ನಿಷಾದ ಇತಿ ನೈತಯೋರದಾದಸ್ತ್ರಾಣಿ ವಿಪ್ರಃ ಸ ತು ರಾಮಶಿಷ್ಯಃ ॥
ಆಗ ಕರ್ಣನೂ ಏಕಲವ್ಯನೂ ದಿವ್ಯಾಸ್ತ್ರಗಳನ್ನು ಪಡೆಯಲು ದ್ರೋಣನ ಬಳಿಗೆ ಬಂದರು. ಒಬ್ಬ ಸೂತ, ಇನ್ನೊಬ್ಬ ಬೇಡ ಎಂದು ಇಬ್ಬರಿಗೂ ದ್ರೋಣ ಅಸ್ತ್ರಗಳನ್ನು ನೀಡಲಿಲ್ಲ.
ದ್ರೋಣಸ್ತಥೋಕ್ತಃ ಕರ್ಣೇನ ಸಾಪೇಕ್ಷಃ ಫಲ್ಗುನಂ ಪ್ರತಿ |
ದೌರಾತ್ಮ್ಯಂ ಚಾಪಿ ಕರ್ಣಸ್ಯ ವಿದಿತ್ವಾ ತಮುವಾಚ ಹ ॥12॥
ಕರ್ಣನು ದ್ರೋಣಾಚಾರ್ಯರನ್ನು ಕುರಿತು ಹೀಗೆ ಪ್ರಾರ್ಥಿಸಿದನು - ದ್ರೋಣಾಚಾರ್ಯರು ಅರ್ಜುನನ ವಿಷಯದಲ್ಲಿ ಸ್ವಾಭಾವಿಕವಾಗಿಯೇ ಹೆಚ್ಚು ಪ್ರೀತಿಯನ್ನು ಇಟ್ಟುಕೊಂಡಿದ್ದರು. ಮತ್ತು ಕರ್ಣನ ದುಷ್ಟ ಆಲೋಚನೆಯನ್ನೂ ಕೂಡ ಗಮನಿಸಿದರು. ಇಂಥ ದ್ರೋಣಾಚಾರ್ಯರು ಕರ್ಣನನ್ನು ಕುರಿತು ಹೀಗೆ ಹೇಳುತ್ತಾರೆ-
ಮಹಾಭಾರತದ ತಾತ್ಪರ್ಯನಿರ್ಣಯದಲ್ಲಿ ದ್ರೋಣಾಚಾರ್ಯರು ಅರ್ಜು- ನನ ಪಕ್ಷಪಾತಿಯಾಗಿದ್ದರೆಂಬುದನ್ನು ಶ್ರೀಮಧ್ವಾಚಾರ್ಯರು ಹೀಗೆ ಹೇಳಿದ್ದಾರೆ -
ಸ ಪಕ್ಷಪಾತಂ ಚ ಚಕಾರ ತಸ್ಮಿನ್ ಕರೋತಿ ಚಾಸ್ಯೋರುತರಾಂ ಪ್ರಶಂಸಾಮ್ |
ರಹಸ್ಯವಿದ್ಯಾಶ್ಚ ದದಾತಿ ತಸ್ಯ ನಾನ್ಯಸ್ಯ ಕಸ್ಯಾಪಿ ತಥಾ ಕಥಂಚಿತ್ ॥46॥
ಅಂದಿನಿಂದ ದ್ರೋಣ ಅರ್ಜುನನ ಪಕ್ಷಪಾತಿಯಾದ. ಅವನ ಪ್ರಶಂಸೆಯನ್ನೇ ಹೆಚ್ಚಾಗಿ ಮಾಡಿದ. ಗೋಪ್ಯವಾದ ಮಂತ್ರಗಳನ್ನು ಅವನಿಗೇ ಉಪದೇಶಿಸಿದ. ಹಾಗೆ ಬೇರೆ ಯಾರಿಗೂ ಯಾವ ರೀತಿಯಲ್ಲಿಯೂ ಮಾಡಲಿಲ್ಲ.
ಬ್ರಹ್ಮಾಸ್ತ್ರಂ ಬ್ರಾಹ್ಮಣೋ ವಿದ್ಯಾದ್ ಯಥಾವಚ್ಚರಿತವ್ರತಃ |
ಕ್ಷತ್ರಿಯೋ ವಾ ತಪಸ್ವೀ ಯೋ ನಾನ್ಯೋ ವಿದ್ಯಾತ್ ಕಥಂಚನ ॥13॥
ಓ ಕುಮಾರನೇ! ವಿಧಿಪ್ರಕಾರವಾಗಿ ಬ್ರಹ್ಮಚರ್ಯವ್ರತವನ್ನು ಪಾಲಿಸುವ ಬ್ರಾಹ್ಮಣನಷ್ಟೇ ಬ್ರಹ್ಮಾಸ್ತ್ರವನ್ನು ತಿಳಿಯಲು ಅಧಿಕಾರಿಯಾಗುತ್ತಾನೆ. ಅಥವಾ ತಪಸ್ವಿ -ಯಾದ ಕ್ಷತ್ರಿಯನು ಬ್ರಹ್ಮಾಸ್ತ್ರವನ್ನು ತಿಳಿಯಲು ಅಧಿಕಾರಿಯಾಗುತ್ತಾನೆ. ಬೇರೆಯ- ವರು ಯಾವುದೇ ಕಾರಣದಿಂದಲೂ ಇದನ್ನು ತಿಳಿಯಲು ಅಧಿಕಾರಿಯಾಗುವುದಿಲ್ಲ.
ಇತ್ಯುಕ್ತೋಽಂಗಿರಸಾಂ ಶ್ರೇಷ್ಠಮಾಮಂತ್ರ್ಯ ಪ್ರತಿಪೂಜ್ಯ ಚ |
ಜಗಾಮ ಸಹಸಾ ರಾಮಂ ಮಹೇಂದ್ರಂ ಪರ್ವತಂ ಪ್ರತಿ ॥14॥
ದ್ರೋಣಾಚಾರ್ಯರು ಹೀಗೆ ಹೇಳಿದಾಗ ಕರ್ಣನು ಅಂಗೀರಸ ಗೋತ್ರೋ- ದ್ಭವರಲ್ಲಿ ಉತ್ತಮರಾದ ಆ ದ್ರೋಣಾಚಾರ್ಯರನ್ನು ಅಗೌರವ ಮಾಡಲಿಲ್ಲ. ಯಥೋಚಿತವಾಗಿ ಅವರನ್ನು ಗೌರವಿಸಿದನು. ಮತ್ತು ಅವರ ಅನುಮತಿಯನ್ನು ತೆಗೆದುಕೊಂಡು ಕೂಡಲೇ ಮಹೇಂದ್ರಪವರ್ತದಲ್ಲಿದ್ದ ಪರಶುರಾಮದೇವರ ಬಳಿ ತೆರಳಿದನು.
ಕರ್ಣೋಽನವಾಪ್ಯ ನಿಜಮೀಪ್ಸಿತಮುಚ್ಚಮಾನೋ
ಯಸ್ಮಾದವಾಪ ಪುರುಷೋತ್ತಮತೋಽಸ್ತ್ರವೃಂದಮ್ |
ವಿಪ್ರೋಽಪ್ಯಯಂ ತಮಜಮೇಮಿ ಭೃಗೋಃ ಕುಲೋತ್ಥ

ಮಿತ್ಥಂ ವಿಚಿಂತ್ಯ ಸ ಯಯೌ ಭೃಗುಪಾಶ್ರಮಾಯ ॥47॥
ಬಹಳ ಸ್ವಾಭಿಮಾನಿಯಾದ ಕರ್ಣನು ದ್ರೋಣನಿಂದ ತನ್ನ ಅಭೀಷ್ಟವನ್ನು ಪಡೆಯದಿದ್ದಾಗ `ಈ ದ್ರೋಣನೂ ಯಾವ ಪರಶುರಾಮರಿಂದ ಅಸ್ತ್ರ ಸಮೂಹ- ವನ್ನು ಪಡೆದನೋ ಭೃಗುಕುಲದಲ್ಲಿ ಅವತರಿಸಿದ ಆ ಹರಿಯನ್ನೇ ನಾನೂ ಆಶ್ರಯಿ- ಸುತ್ತೇನೆ' ಎಂದು ಆಲೋಚಿಸಿ ಪರಶುರಾಮರ ಆಶ್ರಮಕ್ಕೆ ಹೋದ.
ಸ ತು ರಾಮಮುಪಾಗಮ್ಯ ಶಿರಸಾಭಿಪ್ರಣಮ್ಯ ಚ |
ಬ್ರಾಹ್ಮಣೋ ಭಾಗವೋರ್ಽಸ್ಮೀತಿ ಗೌರವೇಣಾಭ್ಯಗಚ್ಛತ ॥15॥
ಕರ್ಣನು ಪರಶುರಾಮದೇವರ ಬಳಿ ತೆರಳಿದನು. ಭಕ್ತಿಪೂರ್ವಕವಾಗಿ ತಲೆಬಾಗಿ ನಮಸ್ಕರಿಸಿದನು. ನಾನು ಭೃಗುವಂಶದ ಬ್ರಾಹ್ಮಣನಾಗಿದ್ದೇನೆ ಎಂದು ಹೇಳಿದನು. ಅತ್ಯಂತಗೌರವದಿಂದ ಆ ಪರಶುರಾಮದೇವರನ್ನು ಉಪಸತ್ತಿ ಮಾಡಿದನು.
ಸ ಸರ್ವವೇತ್ತುಶ್ಚವಿಭೋರ್ಭಯೇನ ವಿಪ್ರೋಽಹಮಿತ್ಯವದದಸ್ತ್ರವರಾತಿಲೋಭಾತ್ |
ಜಾನನ್ನಪಿ ಪ್ರದದಾವಸ್ಯ ರಾಮೋ ದಿವ್ಯಾನ್ಯಸಶತ್ರಣ್ಯಖಿಲಾನ್ಯವ್ಯಯಾತ್ಮಾ ॥48॥
ಕರ್ಣ ಉತ್ತಮ ಅಸ್ತ್ರಗಳ ಅತಿಲೋಭದಿಂದಲೂ ಭಯದಿಂದಲೂ ಸರ್ವಜ್ಞ- ರಾದ ಪರಶುರಾಮರ ಮುಂದೆ `ನಾನು ಬ್ರಾಹ್ಮಣ' ಎಂದನು. ಪರಶುರಾಮರು `ಈತ ಸೂತ'ನೆಂದು ತಿಳಿದೂ ಅವನಿಗೆ ಎಲ್ಲ ದಿವ್ಯ ಅಸ್ತ್ರಗಳನ್ನೂ ಉಪದೇಶಿಸಿ- ದರು.
ರಾಮಸ್ತಂ ಪ್ರತಿಜಗ್ರಾಹ ಪೃಷ್ಟ್ವಾ ಗೋತ್ರಾದಿ ಸರ್ವಶಃ |
ಉಷ್ಯತಾಂ ಸ್ವಾಗತಂ ಚೇತಿ ಪ್ರೀತಿಮಾಂಶ್ಚಾಭವದ್ ಭೃಶಮ್ ॥16॥
ತನ್ನನ್ನು ಉಪಸತ್ತಿ ಮಾಡಿದ ಕರ್ಣನ ಗೋತ್ರ ಮೊದಲಾದವುಗಳನ್ನು ಪರಶು- ರಾಮದೇವರು ಕೇಳಿ ತಿಳಿದುಕೊಂಡರು. ಮತ್ತು ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು. ಬಹಳ ಪ್ರೀತಿಯಿಂದ ವತ್ಸ ! ನೀನು ಇಲ್ಲಿಯೇ ಇರು. ನಿನಗೆ ನಾನು ಸ್ವಾಗತವನ್ನು ಅಪೇಕ್ಷಿಸುತ್ತೇನೆ. ಎಂದು ಹೇಳಿದರು. ಮತ್ತು ಅವನನ್ನು ಅತ್ಯಂತ ಪ್ರೀತಿಯಿಂದಲೇ ಕಾಣುತ್ತಿದ್ದರು.
ತತ್ರ ಕರ್ಣಸ್ಯ ವಸತೋ ಮಹೇಂದ್ರೇ ಪರ್ವತೋತ್ತಮೇ |
ಗಂಧರ್ವೈರ್ರಾಕ್ಷಸೈರ್ಯಕ್ಷೈರ್ದೇವೈಶ್ಚಾಸೀತ್ ಸಮಾಗಮಃ ॥17॥
ಪರ್ವತಗಳಲ್ಲೇ ಶ್ರೇಷ್ಠವಾದ ಆ ಮಹೇಂದ್ರ ಪರ್ವತದಲ್ಲಿ ಕರ್ಣನು ಶಿಷ್ಯನಾಗಿ ಪರಶುರಾಮದೇವರ ಸೇವೆಯಲ್ಲಿ ನಿರತನಾದನು. ಆ ಕಾಲದಲ್ಲಿ ಗಂಧರ್ವರು, ದೇವತೆಗಳು, ಯಕ್ಷರು, ರಾಕ್ಷಸರು ಈ ಕರ್ಣನನ್ನು ಭೇಟಿ ಮಾಡಿದರು.
ಸ ತತ್ರೇಷ್ವಸ್ತ್ರಮಕರೋದ್ ಭೃಗುಶ್ರೇಷ್ಠಾದ್ ಯಥಾವಿಧಿ |
ಪ್ರಿಯಶ್ಚಾಭವದತ್ಯರ್ಥಂ ದೇವಗಂಧರ್ವರಕ್ಷಸಾಮ್ ॥18॥
ಭೃಗುಶ್ರೇಷ್ಠರಾದ ಪರಶುರಾಮದೇವರ ಮೂಲಕ ವಿಧಿಪ್ರಕಾರವಾಗಿ ಎಲ್ಲಾ ಶಸಿತ್ರಸ್ತ್ರಗಳ ವಿದ್ಯೆಯನ್ನು ಅಧ್ಯಯನ ಮಾಡಿದನು. ಆದ್ದರಿಂದಲೇ ದೇವತೆಗಳಿಗೆ, ಗಂಧರ್ವರಿಗೆ ಮತ್ತು ರಾಕ್ಷಸರಿಗೆ ಇವನು ಅತ್ಯಂತ ಪ್ರೀತಿಪಾತ್ರನಾದನು.
ಸ ಕದಾಚಿತ್ ಸಮುದ್ರಾಂತೇ ವಿಚರನ್ನಾಶ್ರಮಾಂತಿಕೇ |
ಏಕಃ ಖಡ್ಗಧನುಷ್ಪಾಣಿಃ ಪರಿಚಕ್ರಾಮ ಸೂರ್ಯಜಃ ॥19॥
ಒಮ್ಮೆ ಕರ್ಣನು ಪರಶುರಾಮದೇವರ ಆಶ್ರಮದ ಸಮೀಪದಲ್ಲೇ ಇರುವ ಸಮುದ್ರದ ತೀರದಲ್ಲಿ ಕತ್ತಿ ಹಾಗೂ ಬಿಲ್ಲುಗಳನ್ನು ಕೈಯಲ್ಲಿ ಹಿಡಿದುಕೊಂಡು ಏಕಾಂಗಿಯಾಗಿ ಸಂಚರಿಸುತ್ತಿದ್ದನು.
ಸೋಽಗ್ನಿಹೋತ್ರಪ್ರಸಕ್ತಸ್ಯ ಕಸ್ಯಚಿದ್ ಬ್ರಹ್ಮವಾದಿನಃ |
ಜಘಾನಾಜ್ಞಾನತಃ ಪಾರ್ಥ ಹೋಮಧೇನುಂ ಯದೃಚ್ಛಯಾ ॥20॥
ಆ ಸಂದರ್ಭದಲ್ಲಿ ಒಬ್ಬ ಅಗ್ನಿಹೋತ್ರಿಯ ಹೋಮಧೇನುವನ್ನು ಕಂಡನು. ಯಾವುದೋ ಪ್ರಾಣಿ ಎಂಬ ಭ್ರಾಂತಿಯಿಂದ ಆ ಹೋಮಧೇನುವನ್ನು ಆಕಸ್ಮಿಕವಾಗಿ ಕೊಂದುಬಿಟ್ಟನು.
ಕರ್ಣನಿಗೆ ಹೋಮಧೇನುವೆಂದು ತಿಳಿದಿರಲಿಲ್ಲ. ಯಾವುದೋ ಹಿಂಸಿಸುವ ಪ್ರಾಣಿ ಎಂದು ಅರಿತು ಕೊಂದುಬಿಟ್ಟನು. ಶಾಪವನ್ನು ಕೊಡಿಸಲು ದೇವತೆಗಳು ಮಾಡಿದ ಉಪಾಯವಿದು.
ತದಜ್ಞಾನಕೃತಂ ಮತ್ವಾ ಬ್ರಾಹ್ಮಣಾಯ ನ್ಯವೇದಯತ್ |
ಕರ್ಣಃ ಪ್ರಸಾದಯಂಶ್ಚೈನಮಿದಮಿತ್ಯಬ್ರವೀದ್ ವಚಃ ॥21॥
ಹತ್ತಿರ ಹೋಗಿ ಪರೀಕ್ಷಿಸಿದಾಗ ಅದು ಹೋಮಧೇನುವೆಂದು ಕರ್ಣನಿಗೆ ತಿಳಿಯಿತು. ತನ್ನ ತಪ್ಪಿನ ಅರಿವಾಯಿತು. ಆ ಬ್ರಾಹ್ಮಣನಲ್ಲಿಗೆ ಬಂದು ತಾನು ಮಾಡಿದ ಅಪರಾಧವನ್ನು ತಿಳಿಸಿದನು. ಮತ್ತು ತನ್ನ ವಿಷಯದಲ್ಲಿ ಆ ಬ್ರಾಹ್ಮಣನು ಪ್ರಸನ್ನನಾಗ- ಬೇಕೆಂಬ ಉದ್ದೇಶದಿಂದ ಈ ಮುಂದಿನ ಮಾತುಗಳನ್ನು ಹೇಳಿದನು.
ಅಬುದ್ಧಿಪೂರ್ವಂ ಭಗವನ್ ಧೇನುರೇಷಾ ಹತಾ ತವ |
ಮಯಾ ತತ್ರ ಪ್ರಸಾದಂ ಮೇ ಕುರುಷ್ವೇತಿ ಪುನಃಪುನಃ ॥22॥
ಪೂಜ್ಯರೇ ! ನನ್ನನ್ನು ಕ್ಷಮಿಸಿರಿ. ನನಗೆ ಇದು ಹೋಮಧೇನುವೆಂದು ತಿಳಿಯಲೇ ಇಲ್ಲ. ಕೊಂದುಬಿಟ್ಟೆನು, ಉದ್ದೇಶಪೂರ್ವಕವಾಗಿ ನಾನು ಸರ್ವಥಾ ಕೊಂದಿರು- ವುದಿಲ್ಲ. ನನ್ನ ವಿಷಯದಲ್ಲಿ ಕುಪಿತರಾಗದೇ ತಾವು ಅನುಗ್ರಹಿಸಬೇಕು. ಹೀಗೆ ಪುನಃ ಪುನಃ ಪ್ರಾರ್ಥನೆ ಮಾಡಿದನು.
ತಂ ಸ ವಿಪ್ರೋಽಬ್ರವೀತ್ ಕ್ರುದ್ಧೋ ವಾಚಾ ನಿರ್ಭರ್ತ್ಸಯನ್ನಿವ |
ದುರಾಚಾರ ವಧಾರ್ಹಸ್ತ್ವಂ ಫಲಂ ಪ್ರಾಪ್ನುಹಿ ದುರ್ಮತೇ ॥23॥
ಯೇನ ವಿಸ್ಪರ್ಧಸೇ ನಿತ್ಯಂ ಯದರ್ಥಂ ಘಟಸೇಽನಿಶಮ್ |
ಯುದ್ಧ್ಯತಸ್ತೇನ ತೇ ಪಾಪ ಭೂಮಿಶ್ಚಕ್ರಂ ಗ್ರಸಿಷ್ಯತಿ ॥24॥
ಆದರೆ ಕರ್ಣನ ಪ್ರಾರ್ಥನೆ ಉಪಯೋಗವಾಗಲಿಲ್ಲ. ಆ ಬ್ರಾಹ್ಮಣನು ತನ್ನ ಮಾತಿನಿಂದಲೇ ಆ ಕರ್ಣನನ್ನು ನಿಂದನೆ ಮಾಡುವಂತೆ

ಹೀಗೆ ಹೇಳಿದನು. ಓ ದುಷ್ಟಬುದ್ಧಿಯವನೇ! ದುರಾಚಾರಿಯೇ! ಹೋಮಧೇನುವನ್ನು ಕೊಂದ ನೀನು ವಧಾರ್ಹನಾಗಿರುವಿ, ಇದರ ಪಾಪದ ಫಲವನ್ನು ಅನುಭವಿಸಿಯೇ ತೀರುವಿ. ``ಓ ದುಷ್ಟನೇ! ನಿನಗಿದು ನನ್ನ ಶಾಪ, ಯಾವ ವ್ಯಕ್ತಿಯ ವಿಷಯದಲ್ಲಿ ನೀನು ಪ್ರತಿನಿತ್ಯವೂ ಸ್ಪರ್ಧೆಯನ್ನು ಮಾಡುತ್ತಿರುವೆಯೋ, ಯಾರನ್ನು ನಾಶ ಮಾಡುವುದಕ್ಕಾಗಿ, ಅಹ- ರ್ನಿಶಿ ಪ್ರಯತ್ನವನ್ನು ಪಡುತ್ತಿರುವೆಯೋ, ಅಂಥ ವೀರನ ಜೊತೆ ನೀನು ಯುದ್ಧ ಮಾಡುವ ಸಂದರ್ಭದಲ್ಲಿ ಭೂಮಿಯು ನಿನ್ನ ರಥದ ಚಕ್ರವನ್ನು ನುಂಗುತ್ತದೆ.
ತತಶ್ಚಕ್ರೇ ಮಹೀಗ್ರಸ್ತೇ ಮೂರ್ಧಾನಂ ತೇ ವಿಚೇತಸಃ |
ಪಾತಯಿಷ್ಯತಿ ವಿಕ್ರಮ್ಯ ಶತ್ರುರ್ಗಚ್ಛ ನರಾಧಮ ॥25॥
ಯಾವಾಗ ನಿನ್ನ ರಥದ ಚಕ್ರವನ್ನು ಭೂಮಿಯು ನುಂಗುತ್ತದೋ, ಆಗ ವ್ಯಾಕುಲನಾದ ನಿನ್ನ ತಲೆಯನ್ನು ನಿನ್ನ ಶತ್ರುವು ಕತ್ತರಿಸಿ ಬಿಡುವನು. ಓ ನೀಚ- ಮನುಷ್ಯನೇ! ಹೊರಟು ಹೋಗು, ಒಂದು ಕ್ಷಣವೂ ಇಲ್ಲಿರಬೇಡ.
ಯಥೇಯಂ ಗೌರ್ಹತಾ ಮೂಢ ಪ್ರಮತ್ತೇನ ತ್ವಯಾ ಮಮ |
ಪ್ರಮತ್ತಸ್ಯೈವಮೇವಾನ್ಯಃ ಶಿರಸ್ತೇ ಪಾತಯಿಷ್ಯತಿ ॥26॥
ಹೇಗೆ ಎಚ್ಚರ ತಪ್ಪಿ ನನ್ನ ಹೋಮಧೇನುವನ್ನು ನೀನು ಸಂಹಾರ ಮಾಡಿದೆಯೋ, ಅದೇ ರೀತಿಯಲ್ಲಿ ನೀನು ಎಚ್ಚರ ತಪ್ಪಿದಾಗಲೇ ಮುಂದೇನು ಮಾಡಬೇಕೆಂದು ತೋರದೇ, ದಿಗ್ಭ್ರಾಂತನಾದ ಸಂದರ್ಭದಲ್ಲಿ ಶತ್ರುವು ನಿನ್ನ ತಲೆಯನ್ನು ನೆಲಕ್ಕುರು- ಳಿಸುತ್ತಾನೆ.
ತತಃ ಪ್ರಸಾದಯಾಮಾಸ ಪುನಸ್ತಂ ದ್ವಿಜಸತ್ತಮಮ್ |
ಗೋಭಿರ್ಧನೈಶ್ಚ ರತ್ನೈಶ್ಚ ಸ ಚೈನಂ ಪುನರಬ್ರವೀತ್ ॥27॥
ಬ್ರಾಹ್ಮಣನಿಂದ ಶಪಿತನಾದ ಕರ್ಣನು ಅತ್ಯಂತ ದುಃಖಿತನಾದನು. ಹೇಗಾದರೂ ಆ ಬ್ರಾಹ್ಮಣನನ್ನು ಪ್ರಸನ್ನಗೊಳಿಸಬೇಕೆಂಬ ಉದ್ದೇಶದಿಂದ ಅನೇಕ ಹಸುಗಳನ್ನು ನೀಡುತ್ತೇನೆಂದು ಪ್ರಾರ್ಥಿಸಿದನು. ಹಸುಗಳಷ್ಟೇ ಅಲ್ಲದೇ ಧನಕನಕಾದಿಗಳನ್ನೂ ಕೂಡ ಯಥೇಚ್ಛವಾಗಿ ನೀಡುತ್ತೇನೆಂದು ಹೇಳಿ ಪ್ರಸನ್ನಗೊಳಿಸಲು ಪ್ರಯತ್ನಪಟ್ಟನು. ಆದರೆ ಅದರಿಂದ ಶಾಂತನಾಗದ ಆ ಬ್ರಾಹ್ಮಣನು ಪುನಃ ಕರ್ಣನನ್ನು ಕುರಿತು ಹೀಗೆ ಹೇಳಿದನು-
ನೇದಂ ಮದ್ವ್ಯಾಹತಂ ಕುರ್ಯಾತ್ ಸರ್ವಲೋಕೋಽಪಿ ವೈ ಮೃಷಾ |
ಗಚ್ಛ ವಾ ತಿಷ್ಠ ವಾ ಯದ್ವಾ ಕಾರ್ಯಂ ತೇ ತತ್ ಸಮಾಚರ ॥28॥
ಓ ಮೂಢನೇ! ನನ್ನ ಮಾತು ಸುಳ್ಳಾಗಲು ಸಾಧ್ಯವೇ ಇಲ್ಲ. ಎಲ್ಲಾ ಲೋಕಗಳು ಒಟ್ಟಾಗಿ ಸೇರಿದರು, ನನ್ನ ಶಾಪವನ್ನು ತಡೆಯಲು ಸಾಧ್ಯವಾಗುವುದಿಲ್ಲ. ನೀನು ಬೇಕಾದರೆ ಇಲ್ಲೇ ಇರು ಅಥವಾ ಹೊರಟುಹೋಗು, ನಿನ್ನ ಕೆಲಸವನ್ನು ಮಾಡಿಕೋ.
ಇತ್ಯುಕ್ತೋ ಬ್ರಾಹ್ಮಣೇನಾಥ ಕರ್ಣೋ ದೈನ್ಯಾದಧೋಮುಖಃ |
ರಾಮಮಭ್ಯಾಗಮದ್ ಭೀತಸ್ತದೇವ ಮನಸಾ ಸ್ಮರನ್ ॥29॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದ್ವಿತೀಯೋಽಧ್ಯಾಯಃ ॥2॥
ಹೀಗೆ ಬ್ರಾಹ್ಮಣನ ಶಾಪದಿಂದ ಕರ್ಣನು ಅತ್ಯಂತ ದೀನನಾದನು. ಮುಖವನ್ನು ಕೆಳಗೆ ಹಾಕಿಕೊಂಡು, ಆ ಬ್ರಾಹ್ಮಣನು ನೀಡಿದ ಶಾಪವನ್ನೇ ಮನಸ್ಸಿನಲ್ಲಿ ಮೆಲಕು ಹಾಕುತ್ತಾ ಭಯಭೀತನಾದನು. ಗುರುವಾದ ಪರಶುರಾಮನ ಬಳಿ ತೆರಳಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 2ನೇ ಅಧ್ಯಾಯವು ಮುಗಿಯಿತು.
*****

3. ಮೂರನೆಯ ಅಧ್ಯಾಯ

ಒಮ್ಮೆ ಪರಶುರಾಮದೇವರು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದರು. ಆ ಸಂದರ್ಭದಲ್ಲಿ ಒಂದು ಕ್ರಿಮಿ ಕರ್ಣನ ತೊಡೆಯನ್ನು ಭೇದಿಸಿತು. ರಕ್ತವು ಧಾರಾಕಾರವಾಗಿ ಹರಿಯಿತು. ಇದರಿಂದ ಪರಶುರಾಮದೇವರಿಗೆ ಎಚ್ಚರವಾಯಿತು. ಕರ್ಣನಿಗೆ ಶಾಪ ನೀಡಿದರು. ಪರಶುರಾಮದೇವರ ಆಜ್ಞೆಯಿಂದ ಕರ್ಣನು ತನ್ನ ದೇಶಕ್ಕೆ ತೆರಳಿದನು.
ನಾರದಃ
ಕರ್ಣಸ್ಯ ಬಾಹುವೀರ್ಯೇಣ ಪ್ರಶ್ರಯೇಣ ದಮೇನ ಚ |
ತುತೋಷ ಭೃಗುಶಾರ್ದೂಲೋ ಗುರುಶುಶ್ರೂಷಯಾ ತಥಾ ॥1॥
ನಾರದರು ಓ ಧರ್ಮರಾಜನೇ! ಕರ್ಣನಿಗಿದ್ದ ಬಾಹುಪರಾಕ್ರಮವನ್ನು ಕಂಡು ಪರಶುರಾಮದೇವರಿಗೆ ಬಹಳ ಸಂತೋಷವಾಯಿತು. ಅಷ್ಟೇ ಅಲ್ಲದೇ ಅವನಲ್ಲಿರುವ ವಿನಯ, ಇಂದ್ರಿಯಜಯ, ತನಗೆ ಮಾಡುತ್ತಿದ್ದ ಗುರುಶೂಶ್ರೂಷೆ ಈ ಎಲ್ಲಾ ಗುಣಗಳಿಂದ ಭೃಗುಶ್ರೇಷ್ಠರಾದ ಪರಶುರಾಮದೇವರು ಸಂತುಷ್ಟರಾದರು.
ತಸ್ಮೈ ಸ ವಿಧಿವತ್ ಕೃತ್ಸ್ನಂ ಬ್ರಹ್ಮಾಸ್ತ್ರಂ ಸನಿವರ್ತನಮ್ |
ಪ್ರೋವಾಚಾಖಿಲಮವ್ಯಗ್ರಂ ತಪಸ್ವೀ ಸುತಪಸ್ವಿನೇ ॥2॥
ಕರ್ಣನ ವಿಷಯದಲ್ಲಿ ಪ್ರೀತರಾದ ಪರಶುರಾಮದೇವರು ಕರ್ಣನಿಗೆ ಅತ್ಯಂತ ಅಪೇಕ್ಷೆ ಇದ್ದ ರಹಸ್ಯವಾದ ಬ್ರಹ್ಮಾಸ್ತ್ರವನ್ನು ವಿಧಿಪ್ರಕಾರವಾಗಿ ಸಂಪೂರ್ಣವಾಗಿ ಉಪದೇಶಿಸಿದರು. ಬ್ರಹ್ಮಾಸ್ತ್ರದ ಪ್ರಯೋಗ ಹಾಗೂ ಉಪಸಂಹಾರಗಳೆರಡನ್ನೂ ಹೇಳಿಕೊಟ್ಟರು. ಇದನ್ನು ಪಡೆಯುವುದಕ್ಕಾಗಿ ಆ ಕರ್ಣನೂ ಸಹ ಒಳ್ಳೆಯ ತಪಸ್ವಿಯೇ ಆಗಿದ್ದನು.
ಟಿಪ್ಪಣಿ -
ಅಸ್ತ್ರಜ್ಞಚೂಡಾಮಣಿಮಿಂದ್ರಸೂನುಂ ವಿಶ್ವಸ್ಯ ಹಂತುಂ ಧೃತರಾಷ್ಟ್ರಪುತ್ರಃ |
ಏನಂ ಸಮಾಶ್ರಿತ್ಯ ದೃಢೋ ಭವೇತೇತ್ಯದಾಜ್ಜ್ಞಾತ್ವೈವಾಸ್ತ್ರಮಸ್ಮೈ ರಮೇಶಃ (ತಾ.ನಿ.)
ಅಸ್ತ್ರಜ್ಞ ಚೂಡಾಮಣಿಯಿಂದ ಅರ್ಜುನನನ್ನು ಕೊಲ್ಲಲು ದುರ್ಯೋಧನ ಇವನನ್ನು ನಂಬಿ ಆಶ್ರಯಿಸಿ ದೃಢನಾಗಲಿ ಎಂದು ಭಾವಿಸಿ ಅವನಿಗೆ ಪರಶು- ರಾಮರು ತಿಳಿದೇ ಅಸ್ತ್ರವನ್ನು ನೀಡಿದರು.

ವಿದಿತಾಸ್ತ್ರಸ್ತತಃ ಕರ್ಣೋ ರಮಮಾಣೋऽऽಶ್ರಮೇ ಭೃಗೋಃ |
ಚಕಾರ ವೈ ಧನುರ್ವೇದೇ ಯತ್ನಮದ್ಭುತವಿಕ್ರಮಃ ॥3॥
ಪರಶುರಾಮದೇವರಿಂದ ಬ್ರಹ್ಮಾಸ್ತ್ರ ಮೊದಲಾದ ಅಸ್ತ್ರವಿದ್ಯೆಯನ್ನು ತಿಳಿದು- ಕೊಂಡ ಕರ್ಣನಿಗೆ ಆ ಪರಶುರಾಮದೇವರ ಆಶ್ರಮದಲ್ಲಿ ಅತ್ಯಂತ ಉಲ್ಲಾಸದಿಂದ ಕಾಲವನ್ನು ಕಳೆದನು. ಮಹಾಪರಾಕ್ರಮಿಯಾದ ಅವನು ಸತತವಾಗಿ ಧನುರ್ವೇದ- ವನ್ನು ಕರಗತಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿದ್ದನು.
ಟಿಪ್ಪಣಿ -
ಜ್ಞಾನಂ ಚ ಭಾಗವತಮಪ್ಯಪರಾಶ್ಚವಿದ್ಯಾ
ರಾಮಾದವಾಪ್ಯ ವಿಜಯಂ ಧನುರಗ್ರ್ಯಯಾನಮ್ |
ಅಬ್ದೈಶ್ಚತುರ್ಭಿರಥ ಚ ನ್ಯವಸತ್ ತದಂತೇ
ಹಾತುಂ ನ ಶಕ್ತ ಉರುಗಾಯಮಿಮಂ ಸ ಕರ್ಣಃ (ತಾ.ನಿ.)
ನಾಲ್ಕು ವರ್ಷಗಳ ಕಾಲ ಪರಶುರಾಮರಿಂದ ಪರಮಾತ್ಮ ಜ್ಞಾನವನ್ನೂ ಬೇರೆ ವಿದ್ಯೆಗಳನ್ನೂ ಜಯಪ್ರದವಾದ ಬಿಲ್ಲನ್ನೂ ಒಳ್ಳೆಯ ರಥವನ್ನೂ ಪಡೆದು ಕರ್ಣ ಮತ್ತೂ ಹರಿಯನ್ನು ಬಿಡಲಾಗದೆ ಬಳಿಯಲ್ಲಿ ವಾಸಮಾಡಿದನು.
ತತಃ ಕದಾಚಿತ್ ರಾಮಸ್ತು ಚರನ್ನಾಶ್ರಮಮಂತಿಕಾತ್ |
ಕರ್ಣೇನ ಸಹಿತೋ ಧೀಮಾನುಪವಾಸೇನ ಕರ್ಶಿತಃ ॥4॥
ಒಮ್ಮೆ ಪರಶುರಾಮದೇವರು ಕರ್ಣನ ಜೊತೆ ತಮ್ಮ ಆಶ್ರಮದ ಸಮೀಪದಲ್ಲಿ ಸಂಚಾರ ಮಾಡುತ್ತಿದ್ದರು. ಆಗ ಉಪವಾಸವ್ರತದಲ್ಲಿ ನಿರತರಾದ ಪರಶುರಾಮ- ದೇವರಿಗೆ ಆಯಾಸವಾಯಿತು.
ಸುಷ್ವಾಪ ಜಾಮದಗ್ನ್ಯೋ ವೈ ವಿಸ್ರಂಭೋತ್ಪನ್ನಸೌಹೃದಃ |
ಕರ್ಣಸ್ಯೋತ್ಸಸಂಗ ಆಧಾಯ ಶರಃ ಕ್ಲಾಂತಮನಾ ಗುರುಃ ॥5॥
ಕರ್ಣನ ವಿಷಯದಲ್ಲಿ ಪರಶುರಾಮದೇವರಿಗೆ ಬಹಳ ಪ್ರೀತಿಯಿತ್ತು. ವಿಶ್ವಾಸವೂ ಕೂಡ ಅಧಿಕವಾಗಿತ್ತು. ಅವನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದರು. ಮನಸ್ಸೂ ಕೂಡ ಅವರಿಗೆ ಬಹಳ ಆಯಾಸವಾಗಿತ್ತು.
ಅಥ ಕೃಮಿಃ ಶ್ಲೇಷ್ಮಮಯೋ ಮಾಂಸಶೋಣಿತಭೋಜನಃ |
ದಾರುಣೋ ದಾರುಣಸ್ಪರ್ಶಃ ಕರ್ಣಸ್ಯಾಭ್ಯಾಶಮಾಗಮತ್ ॥6॥
ಪರಶುರಾಮದೇವರು ನಿದ್ದೆಯನ್ನು ಮಾಡುತ್ತಿರುವಾಗ ಒಂದು ಕ್ರಿಮಿಯು ಕರ್ಣನ ಬಳಿಗೆ ಬಂದಿತು. ಅತ್ಯಂತ ಭಯಂಕರವಾಗಿತ್ತು. ಕಫ, ಮೇದಸ್ಸು, ಮಾಂಸ ಮತ್ತು ರಕ್ತಗಳನ್ನು ಆಹಾರವನ್ನಾಗಿ ಸ್ವೀಕರಿಸುವ ಸ್ವಭಾವವುಳ್ಳದ್ದಾಗಿತ್ತು. ಭಯಂ- ಕರವಾಗಿ ಕಚ್ಚುವ ಸ್ವಭಾವವನ್ನು ಹೊಂದಿತ್ತು.
ಸ ತಸ್ಯೋರುಮಥಾಸಾದ್ಯ ಬಿಭೇದ ರುಧಿಶಾಶನಃ |
ನ ಚೈನಮಶಕತ್ ಕ್ಷೇಪ್ತುಂ ಹಂತುಂ ವಾಪಿ ಗುರೋರ್ಭಯಾತ್ ॥7॥
ರಕ್ತಪಾಯಿಯಾದ ಆ ಕ್ರಿಮಿಯು ಕರ್ಣನ ತೊಡೆಯ ಮೇಲೆ ಕುಳಿತು- ಕೊಂಡಿತು. ಕರ್ಣನ ತೊಡೆಯನ್ನು ಕೊರೆಯಲು ಪ್ರಾರಂಭಿಸಿತು. ಆದರೆ ಕರ್ಣನಿಗೆ ಆ ಕ್ರಿಮಿಯನ್ನು ಎತ್ತಿ ಎಸೆಯಲು ಅಥವಾ ಸಾಯಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ತಾನು ಅಲ್ಲಾಡಿದರೆ ಗುರುಗಳಿಗೆ ಎಚ್ಚರವಾದೀತು ಎಂಬ ಭಯ ಹೊಂದಿದನು.
ಸಂದಶ್ಯಮಾನೋऽಪಿ ತಥಾ ಕೃಮಿಣಾ ತೇನ ಭಾರತ |
ಗುರುಪ್ರಬೋಧಶಂಕೀ ಚ ತಮುಪೈಕ್ಷತ ಸೂತಜಃ ॥8॥
ಓ ಭರತವಂಶೋದ್ಭವನೇ! ಆ ಕ್ರಿಮಿಯು ಭಯಂಕರವಾಗಿ ಆ ಕರ್ಣನ ತೊಡೆ- ಯನ್ನು ಕಚ್ಚುತ್ತಲೇ ಇದೆ. ಆದರೂ ತಾನೂ ಶರೀರ ಕಂಪನವನ್ನು ಮಾಡಿದರೆ ಗುರುವಿಗೆ ನಿದ್ರಾಭಂಗವಾಗಿ ಬಿಡುವುದೋ ಏನೋ ಎಂಬ ಭಯದಿಂದ ಆ ಸೂತ- ಪುತ್ರನಾದ ಕರ್ಣನು ಸುಮ್ಮನಿದ್ದನು. ಕ್ರಿಮಿಯು ತೊಡೆಯನ್ನು ಕೊರೆಯುತ್ತಲೇ ಇದ್ದರೂ ಕೂಡ ಅದನ್ನು ಉಪೇಕ್ಷಿಸಿದನು.
ಕರ್ಣಸ್ತು ವೇದನಾಂ ಧೈರ್ಯಾದಸಹ್ಯಾಂ ವಿನಿಗೃಹ್ಯ ತಾಮ್ |
ಅಕಂಪನ್ನವ್ಯಥಯನ್ ಧಾರಯಾಮಾಸ ಭಾರ್ಗವಮ್ ॥9॥
ಕರ್ಣನಿಗೆ ಆ ಕ್ರಿಮಿಯಿಂದ ಬಹಳ ನೋವಾಯಿತು. ಅದನ್ನು ಸಹಿಸಲು ಕಷ್ಟವೂ ಆಯಿತು. ಆದರೂ ಕೂಡ ಧೈರ್ಯದಿಂದ ಆ ನೋವನ್ನು ಸಹಿಸಿಕೊಂಡನು. ತನ್ನ ಅಂಗಾಂಗಗಳನ್ನು ಸ್ವಲ್ಪವೂ ಕದಲಿಸದೆ, ಎಚ್ಚರಿಕೆಯಿಂದ ಇದ್ದನು. ಆ ಕ್ರಿಮಿಗೂ ತೊಂದರೆ ಕೊಡಲಿಲ್ಲ. ಗುರುಗಳಿಗೂ ಕೂಡ ತೊಂದರೆ ಕೊಡದೇ ಹಾಗೇ ಮಲಗಿಸಿಕೊಂಡಿದ್ದನು.
ಯದಾ ತು ರುಧಿರೇಣಾಂಗಂ ಪರಿಸ್ಪೃಷ್ಟೋ ಭೃಗೂದ್ವಹಃ |
ತದಾ ಬುದ್ಧ್ಯತ ತೇಜಸ್ವೀ ಸಂತ್ರಸ್ತಶ್ಚೇದಮಬ್ರವೀತ್ ॥10॥
ಆದರೆ ಕ್ರಿಮಿಯು ಕೊರೆದದ್ದರಿಂದ ತೊಡೆಯಿಂದ ರಕ್ತವು ಧಾರಾಕಾರವಾಗಿ ಹರಿಯಿತು. ಅದೇ ರಕ್ತವು ಮಲಗಿದ ಪರಶುರಾಮದೇವರನ್ನೂ ಕೂಡ ತಗುಲಿತು. ಕೂಡಲೇ ಪರಶುರಾಮದೇವರಿಗೆ ಎಚ್ಚರವಾಯಿತು. ಅದನ್ನು ಕಂಡು ಕಳವಳಗೊಂಡ ಪರಶುರಾಮದೇವರು ಹೀಗೆ ಹೇಳಿದರು -
ಅಹೋऽಸ್ಮ್ಯಶುಚಿತಾಂ ಪ್ರಾಪ್ತಃ ಕಿಮಿದಂ ಕ್ರಿಯತೇ ತ್ವಯಾ |
ಕಥಯಸ್ವ ಭಯಂ ತ್ಯಕ್ತ್ವಾ ಯಾಥಾತಥ್ಯಮಿದಂ ಮಮ ॥11॥
ಏನಾಶ್ಚರ್ಯ! ಶಿಷ್ಯನೇ ! ರಕ್ತಸ್ಪರ್ಶದಿಂದ ನಾನು ಅಶುಚಿಯಾದೆನು. ನೀನೇಕೆ ಸುಮ್ಮನೆ ಕುಳಿತಿರುವೆ, ಭಯ ಪಡದೇ ಹೇಳು. ಯಥಾರ್ಥಸಂಗತಿಯನ್ನು ನನಗೆ ತಿಳಿಸು.
ತಸ್ಯ ಕರ್ಣಸ್ತದಾಚಷ್ಟ ಕೃಮಿಣಾ ಪರಿಭಕ್ಷಣಮ್ |

ದದರ್ಶ ರಾಮಸ್ತಂ ಚಾಪಿ ಕೃಮಿಂಸೂಕರಸನ್ನಿಭಮ್ ॥12॥
ಆಗ ಕರ್ಣನು ಗುರುಗಳಾದ ಪರಶುರಾಮದೇವರಿಗೆ ಕ್ರಿಮಿಯು ತನ್ನ ತೊಡೆ- ಯನ್ನು ಕಚ್ಚಿದ ಎಲ್ಲಾ ವೃತ್ತಾಂತವನ್ನು ಯಥಾವತ್ತಾಗಿ ತಿಳಿಸಿದನು. ಆಗ ಪರಶು- ರಾಮದೇವರು ಕ್ರಿಮಿಯಿಂದ ಕೊರೆಯಲ್ಪಟ್ಟ ಕರ್ಣನನ್ನೂ, ಹಂದಿಯಂತಿದ್ದ ಆ ಕ್ರಿಮಿಯನ್ನೂ ಕೂಡ ನೋಡಿದರು.
ಅಷ್ಟಪಾದಂ ತೀಕ್ಷ್ಣದಂಷ್ಟ್ರಂ ಸೂಚೀಭಿರಿವ ಸಂವೃತಮ್ |
ರೋಮಭಿಃ ಸನ್ನಿರುದ್ಧಾಂಗಮಲರ್ಕಂ ನಾಮ ನಾಮತಃ ॥13॥
ಆ ಕ್ರಿಮಿಗೆ ಎಂಟು ಕಾಲುಗಳಿದ್ದವು. ತೀಕ್ಷ್ಣವಾದ ಕೋರೆದಾಡಿಗಳಿದ್ದವು. ಸೂಜಿಯಂತಿರುವ ರೋಮಗಳಿಂದ ಆ ಕ್ರಿಮಿಯ ದೇಹವು ಆವೃತವಾಗಿತ್ತು. ಕಷ್ಟದಿಂದ ತನ್ನ ಶರೀರವನ್ನು ಆಗ ಅದು ಸಣ್ಣದನ್ನಾಗಿ ಮಾಡಿಕೊಂಡಿತು. `ಅಲರ್ಕ' ಎಂಬುದು ಅದರ ಹೆಸರು. ಇದರ ಹೆಸರು ಇದಕ್ಕೆ ಅನ್ವರ್ಥವಾಗಿತ್ತು.
ಸ ದೃಷ್ಟಮಾತ್ರೋ ರಾಮೇಣ ಕೃಮಿಃ ಪ್ರಾಣಾನವಾಸೃಜತ್ |
ತಸ್ಮಿನ್ನೇವಾಸೃಜಿಕ್ಲಿನ್ನಸ್ತದದ್ಭುತಮಿವಾಭವತ್ ॥14॥
ಯಾವಾಗ ಪರಶುರಾಮದೇವರು ಆ ಕ್ರಿಮಿಯನ್ನು ನೋಡಿದರೋ, ಅವರ ದೃಷ್ಟಿಯಿಂದಲೇ ಕರ್ಣನ ರಕ್ತದಿಂದ ತೊಯ್ದುಹೋದ ಆ ಕ್ರಿಮಿಯು ಪ್ರಾಣವನ್ನು ಬಿಟ್ಟಿತು. ಇದು ಪರಶುರಾಮದೇವರಿಗೆ ಅತ್ಯಂತ ಆಶ್ಚರ್ಯಕರವಾಗಿ ಕಂಡಿತು.
ತತೋಽಂತರಿಕ್ಷೇ ದದೃಶೇ ವಿಶ್ವರೂಪಃ ಕರಾಲವಾನ್ |
ರಾಕ್ಷಸೋ ಲೋಹಿತಗ್ರೀವಃ ಕೃಷ್ಣಾಂಗೋ ಮೇಘವಾಹನಃ ॥15॥
ಮರುಕ್ಷಣದಲ್ಲಿಯೇ ಅಂತರಿಕ್ಷದಲ್ಲಿ ಅನೇಕವಿಧವಾದ ರೂಪಗಳುಳ್ಳ, ಭಯಂ- ಕರವಾದ ಆಕಾರವುಳ್ಳ, ಕಪ್ಪಾದ ಮೈಬಣ್ಣವುಳ್ಳ, ಕಂಠದಲ್ಲಿ ಮಾತ್ರ ಕೆಂಪುಬಣ್ಣವುಳ್ಳ ಮೇಘದ ಮೇಲೆ ನಿಂತಿರುವ ರಾಕ್ಷಸನು ಕಂಡನು.
ಸ ರಾಮಂ ಪ್ರಾಂಜಲಿರ್ಭೂತ್ವಾ ಬಭಾಷೇ ಪೂರ್ಣಮಾನಸಃ |
ಸ್ವಸ್ತಿ ತೇ ಭೃಗುಶಾರ್ದೂಲ ಗಮಿಷ್ಯಾಮಿ ಯಥಾಗತಮ್ ॥16॥
ಮೋಕ್ಷಿತೋ ನರಕಾದಸ್ಮಿ ಭವತಾ ಮುನಿಸತ್ತಮ |
ಭದ್ರಂ ಚ ತೇಽಸ್ತು ನಂದಿಶ್ಚ ಪ್ರಿಯಂ ಮೇ ಭವತಾ ಕೃತಮ್ ॥17॥
ಆ ರಾಕ್ಷಸನು ಭಕ್ತಿಯಿಂದ ಕೈಜೋಡಿಸಿದವನಾಗಿ ಪೂರ್ಣವಾದ ಮನೋರಥ- ವುಳ್ಳವನಾಗಿ, ಆ ಪರಶುರಾಮದೇವರನ್ನು ಕುರಿತು ಹೀಗೆ ಮಾತನಾಡುತ್ತಾನೆ- ಭೃಗುಶ್ರೇಷ್ಠರಾದ ಪರಶುರಾಮದೇವರೇ ! ತಮಗೆ ಮಂಗಳವಾಗಲಿ. ನಾನು ಎಲ್ಲಿಂದ ಬಂದೆನೋ, ಅಲ್ಲಿಗೆ ತೆರಳುತ್ತೇನೆ. ಮುನಿಶ್ರೇಷ್ಠರೇ ! ತಮ್ಮ ಅನುಗ್ರಹದಿಂದ ನನಗೆ ಈ ಕ್ರಿಮಿಜನ್ಮವೆಂಬ ನರಕದಿಂದ ಉದ್ಧಾರವಾಯಿತು. ತಮಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುತ್ತೇನೆ. ತಮಗೆ ಮಂಗಳವಾಗಲಿ ! ನನಗೆ ಯಾವುದು ಪ್ರಿಯವೋ ಅದನ್ನೇ ತಾವು ಮಾಡಿ ಅನುಗ್ರಹಿಸಿರುವಿರಿ.
ತಮುವಾಚ ಮಹಾಬಾಹುರ್ಜಾಮದಗ್ನ್ಯಃ ಪ್ರತಾಪವಾನ್ |
ಕಸ್ತ್ವಂ ಕಸ್ಮಾಚ್ಚ ನರಕಂ ಪ್ರತಿಪನ್ನೋ ಬ್ರವೀಹಿ ತತ್ ॥18॥
ಮಹಾಬಾಹುಶಾಲಿಯಾದ, ಅತ್ಯಂತ ಪ್ರತಾಪಶಾಲಿಯಾದ ಜಮದಗ್ನಿಋಷಿಗಳ ಮಗನಾದ ಪರಶುರಾಮದೇವರು ಆ ರಾಕ್ಷಸನನ್ನು ಕುರಿತು ಪ್ರಶ್ನಿಸಿದರು. ಯಾರು ನೀನು? ಯಾವ ಕಾರಣಕ್ಕಾಗಿ ನರಕ ಸದೃಶವಾದ ಈ ಕ್ರಿಮಿಶರೀರವನ್ನು ಹೊಂದಿ- ರುವಿ? ನನಗೆ ಕಾರಣವನ್ನು ತಿಳಿಸು.
ಸೋಽಬ್ರವೀದಹಮಾಸಂ ಪ್ರಾಗ್ |
ಪುರಾ ದೇವಯುಗೇ ತಾತ ಭೃಗೋಸ್ತುಲ್ಯವಯಾ ಇವ ॥19॥
ಆಗ ಆ ರಾಕ್ಷಸನು ಹೀಗೆ ಉತ್ತರಿಸಿದನು - ನಾನು ಹಿಂದೆ ದೇವಯುಗವೆನಿಸಿದ ಕೃತಯುಗದಲ್ಲಿ ದಂಶ ಎಂಬ ಹೆಸರಿನ ದೊಡ್ಡ ಅಸುರನಾಗಿದ್ದೆನು. ಭೃಗುಋಷಿಗೆ ಸಮಾನವಯಸ್ಕನಾಗಿದ್ದೆನು.
ಟಿಪ್ಪಣಿ - ದಂಶ, ದೃತ್ಸ, ಪ್ರಾಗ್ವಂಶ ಹೀಗೆ ಅನೇಕ ಹೆಸರುಗಳಿವೆ. ಒಂದೊಂದು ಪಾಠದಲ್ಲಿ ಒಂದೊಂದು ಬಗೆಯ ಹೆಸರುಗಳ ಉಲ್ಲೇಖವಿದೆ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೇತಿ ಎಂಬ ಹೆಸರನ್ನು ಹೇಳಿದ್ದಾರೆ.
ಸೋಽಹಂ ಭೃಗೋಃ ಸುದಯಿತಾಂ ಭಾರ್ಯಾಮಪಹರಂ ಬಲಾತ್|
ಮಹರ್ಷೇರಭಿಶಾಪೇನ ಕೃಮಿಭೂತೋಽಪತಂ ಭುವಿ ॥20॥
ಇಂಥ ನಾನು ಭೃಗುಋಷಿಗಳಿಗೆ ಪ್ರೇಮಪಾತ್ರಳಾದ ಪತ್ನಿಯನ್ನು ಬಲಾತ್ಕಾರದಿಂದ ಅಪಹರಿಸಿದೆನು. ಇದರಿಂದ ಭೃಗುಋಷಿಗಳು ಅತ್ಯಂತ ಕುಪಿತರಾದರು. ಕ್ರಿಮಿಯಾ- ಗೆಂದು ನನಗೆ ಶಪಿಸಿದರು. ನಾನು ಭೂಮಿಯಲ್ಲಿ ಕ್ರಿಮಿಯಾಗಿ ಬಿದ್ದೆನು.
ಅಬ್ರವೀತ್ತು ಸ ಮಾಂ ಕ್ರೋಧಾತ್ ತವ ಪೂರ್ವಪಿತಾಮಹಃ |
ಮೂತ್ರಶ್ಲೇಷ್ಮಾಶನಃ ಪಾಪ ನಿರಯಂ ಪ್ರತಿಪತ್ಸ್ಯಸೇ ॥21॥
ಪರಶುರಾಮದೇವರೇ ! ತಮ್ಮ ವಂಶದ ಪಿತಾಮಹರಾದ ಆ ಭೃಗುಋಷಿಗಳು ನನ್ನನ್ನು ಕುರಿತು ಬಹಳ ಕೋಪದಿಂದ ಹೀಗೆ ಹೇಳಿದರು - ``ಮೂತ್ರ, ಕಫ ಮೊದ- ಲಾದವುಗಳನ್ನು ತಿನ್ನುತ್ತಾ, ನರಕಸದೃಶವಾದ ಜನ್ಮವನ್ನು ತಾಳು''.
ಶಾಪಸ್ಯಾಂತೋ ಭವೇದ್ ಬ್ರಹ್ಮನ್ನಿತ್ಯೇವಂ ತಮಥಾಬ್ರುವಮ್ |
ಭವಿತಾ ಭಾರ್ಗವಾತ್ ರಾಮಾತ್ ಇತಿ ಮಾಮಬ್ರವೀದ್ ಭೃಗುಃ॥22॥
ಅವರು ಶಾಪವನ್ನು ನೀಡಿದ ಮೇಲೆ ನಾನು ಪ್ರಾರ್ಥಿಸಿದೆನು. ಬ್ರಾಹ್ಮಣ- ಶ್ರೇಷ್ಠರೇ ! ಈ ಶಾಪದಿಂದ ನನಗೆ ಮೋಚನೆ ಹೇಗಾಗುತ್ತದೆ? ಎಂದು ಪ್ರಾರ್ಥಿಸಿ- ದೆನು. ಆಗ ಆ ಭೃಗುಋಷಿಗಳು ತಮ್ಮ ವಂಶದಲ್ಲಿ ಭಾರ್ಗವರಾಮನು ಹುಟ್ಟುತ್ತಾನೆ. ಅವನಿಂದ ನಿನಗೆ ಶಾಪವಿಮೋಚನೆಯಾಗುತ್ತದೆ ಎಂದು ತಿಳಿಸಿದರು.

ಸೋಽಹಮೇನಾಂ ಗತಿಂ ಪ್ರಾಪ್ತೋ ಯಥಾ ನಕುಶಲಂ ತಥಾ |
ತ್ವಯಾ ಸಾಧೋ ಸಮಾಗಮ್ಯ ವಿಮುಕ್ತಃ ಪಾಪಯೋನಿತಃ ॥23॥
ಓ ಸಾಧುವರೇಣ್ಯರೇ! ನಾನು ಮಾಡಿದ ತಪ್ಪಿಗೆ ಇಂಥ ಪಾಪಯೋನಿಯಲ್ಲಿ ಹುಟ್ಟಿ, ನರಕದುಃಖವನ್ನು ಅನುಭವಿಸಿದೆನು. ಯಾವ ರೀತಿಯಲ್ಲೂ ಕ್ಷೇಮವನ್ನು ಈ ಜನ್ಮದಲ್ಲಿ ನಾನು ಕಂಡಿಲ್ಲ. ತಮ್ಮ ಸಮಾಗಮದ ಫಲವಾಗಿ ಇಂದು ಈ ಪಾಪ- ಜನ್ಮದಿಂದ ಮುಕ್ತನಾಗಿದ್ದೇನೆ.
ಏವಮುಕ್ತ್ವಾ ನಮಸ್ಕೃತ್ಯ ಯಯೌ ರಾಮಂ ಮಹಾಸುರಃ |
ರಾಮಃ ಕರ್ಣಂ ತು ಸುಕ್ರೋಧಮಿದಂ ವಚನಮಬ್ರವೀತ್ ॥24॥
ಹೀಗೆ ಆ ಮಹಾಸುರನು ಪರಶುರಾಮದೇವರನ್ನು ಕುರಿತು ಹೇಳಿ, ಭಕ್ತಿಯಿಂದ ಪುನಃ ನಮಸ್ಕಾರವನ್ನು ಮಾಡಿದನು. ಅಲ್ಲಿಂದ ತನ್ನ ಸ್ಥಳಕ್ಕೆ ಹೊರಟುಹೋದನು. ಅನಂತರ ಪರಶುರಾಮದೇವರು ಬಹಳ ಸಿಟ್ಟಿನಿಂದ ಕರ್ಣನ ಕಡೆಗೆ ತಿರುಗಿ ಹೀಗೆ ಹೇಳಿದರು -
ಅತಿದುಃಖಮಿದಂ ಮೂಢ ನ ಜಾತು ಬ್ರಾಹ್ಮಣಃ ಸಹೇತ್ |
ಕ್ಷತ್ರಿಯಸ್ಯೇವ ತೇ ಧೈರ್ಯಂ ಕಾಮಯಾ ಸತ್ಯಮುಚ್ಯತಾಮ್ ॥25॥
ಓ ಮೂಢನೇ! ಇಂಥ ಭಯಂಕರವಾದ ಕ್ರಿಮಿಯ ಬಾಧೆಯನ್ನು ಬ್ರಾಹ್ಮಣ- ನಿಂದ ಸಹಿಸಲು ಸಾಧ್ಯವಿಲ್ಲ. ಕ್ಷತ್ರಿಯರು ಮಾತ್ರ ಇಂಥ ವೇದನೆಯನ್ನು ಸಹಿಸಿ- ಕೊಳ್ಳುವ ಧೈರ್ಯವನ್ನು ಹೊಂದಿರುತ್ತಾರೆ. ಇಂಥ ಗುಣವು ನಿನ್ನಲ್ಲಿ ಕಾಣಿಸುತ್ತಿದೆ. ಸುಳ್ಳು ಹೇಳಬೇಡ. ನನ್ನ ಬಳಿ ನೀನಾಗಿಯೇ ಸತ್ಯವನ್ನು ಹೇಳು.
ತಮುವಾಚ ತತಃ ಕರ್ಣಃ ಶಾಪಾದ್ ಭೀತಃ ಪ್ರಸಾದಯನ್ |
ಬ್ರಹ್ಮಕ್ಷತ್ರಾಂತರೇ ಸೂತಂ ಜಾತಂ ಮಾಂ ವಿದ್ಧಿ ಭಾರ್ಗವ ॥26॥
ಆಗ ಕರ್ಣನು ಶಾಪಭಯದಿಂದ ನಡುಗುತ್ತಾ, ಆ ಪರಶುರಾಮದೇವರನ್ನು ಪ್ರಸನ್ನೀಕರಿಸಿಕೊಳ್ಳಲು ಹೀಗೆ ಸತ್ಯವನ್ನು ಬಿಚ್ಚಿಡುವನು. ಓ ಭಾರ್ಗವ! ನಾನು ನಿಜವಾಗಿಯೂ ಕೂಡ ಬ್ರಾಹ್ಮಣನಲ್ಲ. ಬ್ರಾಹ್ಮಣ ಹಾಗೂ ಕ್ಷತ್ರಿಯರಿಬ್ಬರಲ್ಲಿ ಹುಟ್ಟಿದ ಸೂತಜಾತಿಯವನೆಂದು ನನ್ನನ್ನು ತಿಳಿ.
ರಾಧೇಯಃ ಕರ್ಣ ಇತಿ ಮಾ ಪ್ರವದಂತಿ ಜನಾ ಭುವಿ |
ಪ್ರಸಾದಂ ಕುರು ಮೇ ಬ್ರಹ್ಮನ್ನಸ್ತ್ರಲುಬ್ಧಸ್ಯ ಭಾರ್ಗವ ॥27॥
ಕರ್ಣನಾದ ನನ್ನನ್ನು ಜನರು ಭೂಲೋಕದಲ್ಲಿ `ರಾಧೇಯ' ಎಂದೇ ಕರೆಯು- ತ್ತಾರೆ. ನಾನು ಅಸ್ತ್ರವನ್ನು ಕಲಿಯಬೇಕೆಂಬ ಆಸೆಯಿಂದ ನಿನ್ನಲ್ಲಿ ಬ್ರಾಹ್ಮಣವೇಷವನ್ನು ಧರಿಸಿ ಬಂದಿರುವೆನು. ನನ್ನ ಅಪರಾಧವನ್ನು ಮನ್ನಿಸಿ, ಕೃಪೆ ತೋರು.
ಪಿತಾ ಗುರುರ್ನ ಸಂದೇಹೋ ವೇದವಿದ್ಯಾಪ್ರದಃ ಪ್ರಭುಃ |
ಅತೋ ಭಾರ್ಗವ ಇತ್ಯುಕ್ತಂ ಮಯಾ ಗೋತ್ರಂ ತವಾಂತಿಕೇ ॥28॥
ವಿದ್ಯೆಯನ್ನು ನೀಡುವ ಗುರುವೇ ತಂದೆಯೆಂಬ ವಿಷಯದಲ್ಲಿ ನನಗೆ ಸಂದೇಹ- ವಿಲ್ಲ. ಈ ಕಾರಣದಿಂದಲೇ ನನ್ನನ್ನು ಭಾರ್ಗವ ಗೋತ್ರಜನೆಂದು ತಮ್ಮ ಬಳಿ ತಿಳಿಸಿಬಿಟ್ಟೆನು.
ತಮುವಾಚ ಭೃಗುಶ್ರೇಷ್ಠಃ ಸರೋಷಃ ಪ್ರದಹನ್ನಿವ |
ಭೂಮೌ ನಿಪತಿತಂ ದೀನಂ ವೇಪಮಾನಂ ಕೃತಾಂಜಲಿಮ್ ॥29॥
ಇಷ್ಟು ಹೇಳಿ ಕರ್ಣನು ಕೈಮುಗಿದು ನಡುಗುತ್ತಾ ಭೂಮಿಯ ಮೇಲೆ ಬಿದ್ದನು. ಅತ್ಯಂತ ಖಿನ್ನನಾಗಿ ಬದ್ಧಾಂಜಲಿಯಾಗಿ ಪುನಃ ಪುನಃ ಆ ಪರಶುರಾಮದೇವರಿಗೆ ನಮಿಸಿದನು. ಇಂಥ ಉದ್ವಿಗ್ನ ಪರಿಸ್ಥಿತಿಯಲ್ಲಿರುವ ಕರ್ಣನನ್ನು ಕಂಡು ಪರಶು- ರಾಮದೇವರು ಹೀಗೆ ಹೇಳುತ್ತಾರೆ -
ಯಸ್ಮಾನ್ಮಿಥ್ಯೋಪಚರಿತೋ ಅಸ್ತ್ರಲೋಭಾದಿಹ ತ್ವಯಾ |
ತಸ್ಮಾದೇತದ್ಧಿ ತೇ ಮೂಢ ಬ್ರಹ್ಮಾಸ್ತ್ರಂ ಪ್ರತಿಭಾಸ್ಯತಿ ॥30॥
ಅನ್ಯತ್ರ ವಧಕಾಲಾತ್ತೇ ಸದೃಶೇನ ಸವಿಯುಷಃ |
ಎಲೌ ಮೂರ್ಖನೇ! ಬ್ರಹ್ಮಾಸ್ತ್ರವನ್ನು ಪಡೆಯಬೇಕೆಂಬ ದುರಾಸೆಯಿಂದ ನನ್ನ ಬಳಿಯೇ ಸುಳ್ಳನ್ನು ಹೇಳಿ ವಂಚನೆ ಮಾಡಿರುವೆಯಾ? ಈ ಕಾರಣದಿಂದ ನಿನ್ನ ಮೃತ್ಯುಕಾಲವು ಹತ್ತಿರವಾದಾಗ ಮತ್ತು ನಿನಗೆ ಸರಿಸಾಟಿಯಾದ ವೀರನ ಜೊತೆ ಯುದ್ಧಮಾಡುವಾಗ ಆ ಬ್ರಹ್ಮಾಸ್ತ್ರವು ನಿನಗೆ ಸ್ಫುರಣವಾಗದೇ ಇರಲಿ. ಸರಿಯಾದ ಸಮಯದಲ್ಲಿ ಅದರ ಮಂತ್ರವು ನಿನಗೆ ನೆನಪು ಬಾರದಿರಲಿ. ಉಳಿದ ಸಂದರ್ಭದಲ್ಲಿ ಆ ಅಸ್ತ್ರಜ್ಞಾನವು ನಿನಗೆ ಇರುತ್ತದೆ.
ಅಬ್ರಾಹ್ಮಣೇ ನಹಿ ಬ್ರಹ್ಮ ಧ್ರುವಂ ತಿಷ್ಠೇತ್ ಕದಾಚನ ॥31॥
ಗಚ್ಛೇದಾನೀಂ ನ ತೇ ಸ್ಥಾನಮನೃತಸ್ಯೇಹ ವಿದ್ಯತೇ |
ನ ತ್ವಯಾ ಸದೃಶೋ ಯುದ್ಧೇ ಭವಿತಾ ಕ್ಷತ್ರಿಯೋ ಭುವಿ ॥32॥
ಬ್ರಾಹ್ಮಣನಲ್ಲದವನಲ್ಲಿ ಈ ಬ್ರಹ್ಮಾಸ್ತ್ರವು ಹೆಚ್ಚು ಕಾಲ ಎಂದೂ ನಿಲ್ಲುವುದಿಲ್ಲ. ಇನ್ನು ಹೊರಟು ಹೋಗು. ನಿನ್ನಂಥ ಸುಳ್ಳುಹೇಳುವವರಿಗೆ ಇದು ಉಚಿತವಾದ ಸ್ಥಳವಲ್ಲ. ಆದರೂ ನನ್ನ ಬಳಿ ಶಿಷ್ಯತ್ವವನ್ನು ವಹಿಸಿದ್ದು ವ್ಯರ್ಥವಾಗುವುದಿಲ್ಲ. ಯುದ್ಧದಲ್ಲಿ ನಿನಗೆ ಸರಿಸಾಟಿಯಾದ ಮತ್ತೊಬ್ಬ ಕ್ಷತ್ರಿಯನು ಇರಲು ಸಾಧ್ಯವಿಲ್ಲ.
ಏವಮುಕ್ತಸ್ತು ರಾಮೇಣ ನ್ಯಾಯೇನೋಪಜಗಾಮ ಸಃ |
ದುರ್ಯೋಧನಮುಪಾಗಮ್ಯ ಕೃತಾಸ್ತ್ರೋಽಸ್ಮೀತಿ ಚಾಬ್ರವೀತ್ ॥33॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ತೃತೀಯೋಽಧ್ಯಾಯಃ ॥
ಯುಧಿಷ್ಠಿರನೇ ! ಪರಶುರಾಮದೇವರು ಹೀಗೆ ಹೇಳಿದ ಮೇಲೆ ಕರ್ಣನು ತನ್ನ ಯೋಗ್ಯತೆಗೆ ಅನುಗುಣವಾಗಿ ಆ ಗುರುವನ್ನು ಸತ್ಕಾರ ಮಾಡಿದನು. ಮತ್ತು ಅಲ್ಲಿಂದ ಹೊರಟನು. ಹಸ್ತಿನಾಪಟ್ಟಣಕ್ಕೆ ಬಂದು ದುರ್ಯೋಧನನಲ್ಲಿ `ಕೃತಾಸ್ತ್ರೋಽಸ್ಮಿ' ನಾನು ಸಕಲ

ಅಸ್ತ್ರವಿದ್ಯೆಗಳಲ್ಲಿ ಪಾರಂಗತನಾಗಿದ್ದೇನೆ ಎಂದು ಹೇಳಿದನು.
ಟಿಪ್ಪಣಿ - ತನಗೆ ಬಂದ ಯಾವುದೇ ಶಾಪಗಳನ್ನು ದುರ್ಯೋಧನನಿಗೆ ತಿಳಿಸಲಿಲ್ಲ. ಎಲ್ಲಾ ಅಸ್ತ್ರವಿದ್ಯೆಗಳನ್ನು ಕಲಿತಿದ್ದೇನೆ ಎಂದಷ್ಟೇ ತಿಳಿಸಿದನು.
ತಾತ್ಪರ್ಯನಿರ್ಣಯ -
ಅಂಕೇ ನಿಧಾಯ ಸ ಕದಾಚಿದಮುಷ್ಯ ರಾಮಃ
ಶಿಶ್ಯೇ ಶಿರೋ ವಿಗತನಿದ್ರ ಉದಾರಬೋಧಃ |
ಸಂಸುಪ್ತವತ್ ಸುರವರಃ ಸುರಕಾರ್ಯಹೇತೋ
ರ್ದಾತುಂ ಚ ವಾಲಿನಿಧನಸ್ಯ ಫಲಂ ತದಸ್ಯ ॥
ಒಮ್ಮೆ ಪರಶುರಾಮರು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ಮಲಗಿದರು. ನಿದ್ದೆ ಇಲ್ಲದ ಉತ್ತಮಜ್ಞಾನರೂಪನಾದ ಆ ದೇವೋತ್ತಮ ದೇವಕಾರ್ಯಕ್ಕಾಗಿ ಮತ್ತು ಸುಗ್ರೀವಾವತಾರದಲ್ಲಿ ವಾಲಿಯನ್ನು ಕೊಲ್ಲಿಸಿದ್ದಕ್ಕೆ ಫಲಕೊಡುವುದಕ್ಕಾಗಿ ನಿದ್ದೆ ಮಾಡುತ್ತಿರುವಂತೆ ಮಲಗಿದ್ದನು.
ತತ್ರಾಸ ರಾಕ್ಷಸವರಃ ಸ ತು ಹೇತಿನಾಮಾ
ಕಾಲೇ ಮಹೇಂದ್ರಮನುಪಾಸ್ಯ ಹಿ ಶಾಪತೋಽಸ್ಯ |
ಕೀಟಸ್ತಮಿಂದ್ರ ಉತ ತತ್ರ ಸಮಾವಿವೇಶ
ಕರ್ಣಸ್ಯ ಶಾಪಮುಪಪಾದಯಿತುಂ ಸುತಾರ್ಥೇ ॥
ಹೇತಿ ಎಂಬ ಉತ್ತಮ ರಾಕ್ಷಸ ಸಕಾಲದಲ್ಲಿ ಇಂದ್ರನ ಸೇವೆ ಮಾಡದಿದ್ದುದಕ್ಕಾಗಿ ಅವನ ಶಾಪದಿಂದ ಕೀಟನಾಗಿ ಅಲ್ಲಿ ಹುಟ್ಟಿದ್ದನು. ತನ್ನ ಮಗನಾದ ಅರ್ಜುನನ ಹಿತಕ್ಕಾಗಿ ಕರ್ಣನಿಗೆ ಪರಶುರಾಮರಿಂದ ಶಾಪಕೊಡಿಸುವ ಉದ್ದೇಶದಿಂದ ಇಂದ್ರ ಆ ಕೀಟದಲ್ಲಿ ಆವೇಶಗೊಂಡನು.
ಕರ್ಣಃ ಸಕೀಟತನುಗೇನ ಕಿರೀಟನೈವ
ಹ್ಯೂರೋರಧಸ್ತಲತ ಔಪರಿಗಾತ್ರಚಶ್ಚ |
ವಿದ್ಧಃ ಶರೇಣ ಸ ಯಥಾ ರುಧಿರಸ್ಯ ಧಾರಾಂ
ಸುಸ್ರಾವ ತಂ ವಿಗತ ನಿದ್ರ ಇವಾಹ ರಾಮಃ ॥
ಕೀಟ ಶರೀರದಲ್ಲಿದ್ದ ಹೇತಿಯೊಂದಿಗೆ ಇಂದ್ರ ಕರ್ಣನ ತೊಡೆಯ ಕೆಳಭಾಗದಿಂದಾರಂಭಿಸಿ ಮೇಲ್ಭಾಗದ ಚರ್ಮದವರೆಗೂ ಬಾಣದಂತೆ ಕೊರೆದು ಗಾಯ ಮಾಡಿದ. ಆಗ ರಕ್ತದ ಕೋಡಿ ಹರಿಯಿತು. ಪರಶುರಾಮರು ಅದರಿಂದ ಎಚ್ಚೆತ್ತವನಂತೆ ಎದ್ದು ಕೇಳತೊಡಗಿದರು.
ಕಿಂ ತ್ವಂ ನ ಚಾಲಯಸಿ ಮಾಂ ರುಧಿರಪ್ರಸೇಕೇ
ಪ್ರಾಪ್ತೇಽಪಿ ಪಾವನವಿರೋಧಿನಿ ಕೋಽಸಿ ಚೇತಿ |
ತಂ ಪ್ರಾಹ ಕರ್ಣ ಇಹ ನೈವ ಮಯಾ ವಿಧೇಯೋ
ನಿದ್ರಾವಿರೋಧ ಇತಿ ಕೀಟ ಉಪೇಕ್ಷಿತೋ ಮೇ ॥
`ಅಪವಿತ್ರ ರಕ್ತ ಸ್ಪರ್ಶವಾಗುತ್ತಿದ್ದರೂ ನೀನು ನನ್ನನ್ನು ಏಕೆ ಅಲ್ಲಾಡಿಸಲಿಲ್ಲ? ಯಾರು ನೀನು?' ಪರಶುರಾಮ ಹೀಗೆ ಕೇಳಿದಾಗ ಕರ್ಣನೆಂದ, `ನಾನು ನಿಮಗೆ, ಈ ಗಾಢ ನಿದ್ರಾಕಾಲದಲ್ಲಿ ನಿದ್ರಾಭಂಗವನ್ನು ಮಾಡಬಾರದೆಂದು ಕೀಟವನ್ನು ಸುಮ್ಮನೆಬಿಟ್ಟೆ'.
ಜಾತ್ಯಾಸ್ಮಿ ಸೂತ ಉತ ತೇ ತನಯೋಽಸ್ಮಿ ಸತ್ಯಂ
ತೇನಾಸ್ಮಿ ವಿಪ್ರ ಇತಿ ಭಾರ್ಗವವಂಶಜೋಽಹಮ್ |
ಅಗ್ರೇಽಬ್ರುವಂ ಭವತ ಈಶ ನ ಹಿ ತ್ವದನ್ಯೋ
ಮಾತಾ ಪಿತಾ ಗುರುತರೋ ಜಗತೋಽಪಿ ಮುಖ್ಯಃ ॥
``ಜನ್ಮತಃ ನಾನು ಸೂತನಾಗಿದ್ದೇನೆ. ತಮ್ಮ ಮಗನೂ ಆಗಿರುವುದರಿಂದ ಭಾರ್ಗವಗೋತ್ರೋತ್ಪನ್ನಬ್ರಾಹ್ಮಣನೆಂದು ತಮ್ಮ ಮುಂದೆ ಹೇಳಿದ್ದೆ. ಅದೂ ಸತ್ಯವೆ. ಏಕೆಂದರೆ ನಿಮಗಿಂತ ಬೇರೆ ಜಗತ್ತಿಗೆ ಮುಖ್ಯವಾಗಿ ತಾಯಿ ತಂದೆ ಮತ್ತು ಮಹಾಗುರು ಇನ್ನೊಬ್ಬನಿಲ್ಲ ತಾನೆ?'
ಇತ್ಯುಕ್ತಮಾತ್ರವಚನೇ ಸ ತು ಕೀಟಕೋಽಸ್ಯ
ರಾಮಸ್ಯ ದೃಷ್ಟಿವಿಷಯತ್ವತ ಏವ ರೂಪಮ್ |
ಸಂಪ್ರಾಪ್ಯ ನೈಜಮತಿಪೂರ್ಣಗುಣಸ್ಯ ತಸ್ಯ
ವಿಷ್ಣೋರನುಗ್ರಹತ ಆಪ ವಿಮಾನಗಃ ಸ್ವಃ ॥
ಹೀಗೆ ಕರ್ಣ ಹೇಳಿದ ಮಾತ್ರಕ್ಕೆ ಪರಶುರಾಮರ ದೃಷ್ಟಿಗೋಚರವಾದ ಕೀಟ ತನ್ನ ನಿಜರೂಪ ತಳೆದು ಅತ್ಯಂತ ಪೂರ್ಣಗುಣರಾದ ಆ ಪರಶುರಾಮರ ಅನು- ಗ್ರಹದಿಂದ ವಿಮಾನವೇರಿ ಸ್ವರ್ಗ ಪಡೆಯಿತು.
ಅಥಾಹ ರಾಮಸ್ತಮಸತ್ಯವಾಚಂ
ನ ತೇ ಸಕಾಶೇ ಮಮ ವಾಸಯೋಗ್ಯತಾ |
ತಥಾಪಿ ತೇ ನೈವ ವೃಥಾ ಮದೀಯಾ
ಭಕ್ತಿರ್ಭವೇಜ್ಜೇಷ್ಯಸಿ ಸರ್ವ ಶೂತ್ರನ್ ॥
ಸುಳ್ಳು ಹೇಳಿದ ಕರ್ಣನಿಗೆ ಪರಶುರಾಮರು ಶಪಿಸಿದರು - `ನಿನಗೆ ನನ್ನ ಬಳಿ ಇರಲು ಯೋಗ್ಯತೆ ಇಲ್ಲ. ಆದರೂ ನಿನಗೆ ನನ್ನಲ್ಲಿರುವ ಭಕ್ತಿ ಎಂದೂ ವ್ಯರ್ಥ- ವಾಗದು. ಅದರಿಂದ ನೀನು ಎಲ್ಲ ಶತ್ರುಗಳನ್ನು ಗೆಲ್ಲುವಿ.
ಅಸ್ಪರ್ಧಮಾನಂ ನ ಕಥಂಚನ ತ್ವಾಂ ಚೇತಾ ಕಶ್ಚಿತ್ ಸ್ಪರ್ಧಮಾನಸ್ತುಯಾಸಿ |
ಪರಾಭೂತಿಂ ನಾತ್ರ ವಿಚಾರ್ಯಮಾಸ್ತಿಪ್ರಮಾದೀ ತ್ವಂ ಭವಿತಾ ಚಾಸ್ತ್ರಸೇಂ॥

`ನೀನು ಸ್ಪರ್ಧಿಸದಿರುವಾಗ ಯಾರೂ ಯಾವ ರೀತಿಯಿಂದಲೂ ನಿನ್ನನ್ನು ಗೆಲ್ಲ- ಲಾರರು. ಸ್ಪರ್ಧಿಸಿದರೆ ಪರಾಜಯ ಹೊಂದುವಿ, ಅಸ್ತ್ರಸಮೂಹವನ್ನು ಮರೆ- ಯುವಿ, ಇದರಲ್ಲಿ ವಿಚಾರಿಸುವುದೇನಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 3ನೆಯ ಅಧ್ಯಾಯವು ಮುಗಿಯಿತು.
*****
4. ನಾಕನೆಯ ಅಧ್ಯಾಯ
ದುರ್ಯೋಧನನು ಸ್ವಯಂವರಮಂಟಪದಲ್ಲಿ ಕಳಿಂಗರಾಜನ ಕನ್ಯೆಯನ್ನು ಅಪಹರಿಸಿದನು. ಆಗ ಕರ್ಣನು ದುರ್ಯೋಧನನ ಪರವಾಗಿ ಬಂದ ಎಲ್ಲಾ ರಾಜರನ್ನು ಸೋಲಿಸಿದನು.
ನಾರದಃ
ಕರ್ಣಸ್ತು ಸಮವಾಪ್ಯೈತದಸ್ತ್ರಂ ಭಾರ್ಗವನಂದನಾತ್ |
ದುರ್ಯೋಧನೇನ ಸಹಿತೋ ಮುಮುದೇ ಭರತರ್ಷಭ ॥1॥
ನಾರದರು ಓ ಭರತವಂಶೋದ್ಭವನೇ! ಈ ಪ್ರಕಾರವಾಗಿ ದಿವ್ಯಾಸ್ತ್ರಗಳನ್ನು ಪರಶುರಾಮದೇವರ ದೆಸೆಯಿಂದ ಕರ್ಣನು ಪಡೆದುಕೊಂಡನು. ಮುಂದೆ ದುರ್ಯೋಧನನ ಜೊತೆ ಸಂತೋಷದಿಂದ ಕಾಲ ಕಳೆದನು.
ತತಃ ಕದಾಚಿದ್ ರಾಜಾನಃ ಸಮಾಜಗ್ಮುಃ ಸ್ವಯಂವರೇ |
ಕಲಿಂಗವಿಷಯೇ ರಾಜನ್ ರಾಜ್ಞಶ್ಚಿತ್ರಾಂಗದಸ್ಯ ಚ ॥2॥
ಹೀಗೆ ಕಾಲ ಕಳೆಯುತ್ತಿರುವಾಗ ಒಮ್ಮೆ ಕಳಿಂಗದೇಶದ ರಾಜನಾದ ಚಿತ್ರಾಂಗ- ದನು ತನ್ನ ಮಗಳ ಸ್ವಯಂವರವನ್ನು ಏರ್ಪಡಿಸಿದನು. ಆ ಸ್ವಯಂವರದ ಮಹೋ- ತ್ಸವಕ್ಕೆ ಅನೇಕ ದೇಶಗಳಿಂದ ರಾಜರುಗಳು ಬಂದು ನೆರೆದಿದ್ದರು.
ಶ್ರೀಮದ್ ರಾಜಪುರಂ ನಾಮ ನಗರಂ ತತ್ರ ಭಾರತ |
ರಾಜಾನಃ ಶತಶಸ್ತತ್ರ ಕನ್ಯಾರ್ಥಂ ಸಮುಪಾಗಮನ್ ॥3॥
ಸಂಪದ್ಭರಿತವಾದ ಆ ರಾಜಪುರವೆಂಬ ನಗರವು ಕಳಿಂಗ ದೇಶದ ರಾಜಧಾನಿ- ಯಾಗಿತ್ತು. ನೂರಾರು ಮಂದಿ ರಾಜಕುಮಾರರು ಆ ರಾಜಕುಮಾರಿಯನ್ನು ಪಡೆಯುವುದಕ್ಕಾಗಿ ಅಲ್ಲಿಗೆ ಆಗಮಿಸಿದ್ದರು.
ಶ್ರುತ್ವಾ ದುರ್ಯೋಧನಸ್ತತ್ರ ಸಮೇತಾನ್ ಸರ್ವಪಾರ್ಥಿವಾನ್ |
ರಥೇನ ಕಾಂಚನಾಂಗೇನ ಕರ್ಣೇನ ಸಹಿತೋ ಯಯೌ ॥4॥
ಎಲ್ಲಾ ನಗರಗಳಿಂದ ರಾಜಕುಮಾರರು ಆ ಸ್ವಯಂವರಕ್ಕೆ ಬಂದಿರುವರೆಂಬ ವಿಷಯವನ್ನು ದುರ್ಯೋಧನನು ತಿಳಿದನು. ಅಲ್ಲಿಗೆ ತಾನೂ ಹೋಗಬೇಕೆಂದು ಅಪೇಕ್ಷೆ ಪಟ್ಟನು. ಬಂಗಾರಮಯವಾದ ರಥದಲ್ಲಿ ಕುಳಿತು ತನ್ನ ಸ್ನೇಹಿತನಾದ ಕರ್ಣನ ಜೊತೆ ಆ ಸ್ವಯಂವರ ಸ್ಥಳಕ್ಕೆ ಹೊರಟನು.
ತತಃ ಸ್ವಯಂವರೇ ತಸ್ಮಿನ್ ಸಂಪ್ರವೃತ್ತೇ ಮಹೋತ್ಸವೇ |
ಸಮಾಜಗ್ಮುರ್ನೃಪತಯಃ ಕನ್ಯಾರ್ಥೇ ನೃಪಸತ್ತಮ ॥5॥
ಓ ನರೋತ್ತಮನೇ! ಆ ರಾಜಪುರ ಪಟ್ಟಣದಲ್ಲಿ ಸ್ವಯಂವರಕ್ಕೆ ಸಂಬಂಧಪಟ್ಟ ಮಹೋತ್ಸವವು ಪ್ರಾರಂಭವಾಯಿತು. ಅದೇ ಸಂದರ್ಭದಲ್ಲಿ ಕನ್ಯಾರ್ಥಿಗಳಾಗಿ ಅನೇಕ ರಾಜರುಗಳು ಆಗಮಿಸಿದರು.
ಶಿಶುಪಾಲೋ ಜರಾಸಂಧೋ ಭೀಷ್ಮಕೋ ವಕ್ರ ಏವ ಚ |
ಕಪೋತರೋಮಾ ನೀಲಶ್ಚ ರುಕ್ಮೀ ಚ ದೃಢವಿಕ್ರಮಃ ॥6॥
ಸೃಗಾಲಶ್ಚ ಮಹಾರಾಜ ಸ್ತ್ರೀರಾಜ್ಯಾಧಿಪತಿಶ್ಚ ಯಃ |
ಅಶೋಕಃ ಶತಧನ್ವಾ ಚ ಭೋಜೋ ವೀರಶ್ಚ ನಾಮತಃ ॥7॥
ಶಿಶುಪಾಲ, ಜರಾಸಂಧ, ಭೀಷ್ಮ, ದಂತವಕ್ರ, ಕಪೋತರೋಮ, ನೀಲ, ಮಹಾಪರಾಕ್ರಮಶಾಲಿಯಾದ ರುಗ್ಮಿ ಮತ್ತು ಸ್ತ್ರೀರಾಜ್ಯಕ್ಕೆ ಅಧಿಪತಿಯಾದ ಮಹಾ- ರಾಜನೆಂದು ಪ್ರಸಿದ್ಧನಾದ ಸೃಗಾಲವಾಸುದೇವ, ಅಶೋಕ, ಶತಧನ್ವಾ, ಭೋಜ, ವೀರ ಮೊದಲಾದ ರಾಜರುಗಳು ಅಲ್ಲಿಗೆ ಬಂದರು.
ಏತೇ ಚಾನ್ಯೇ ಚ ಬಹವೋ ದಕ್ಷಿಣಾಂ ದಿಶಮಾಶ್ರಿತಾಃ |
ಮ್ಲೇಚ್ಛಾಚಾರ್ಯಾಶ್ಚ ರಾಜಾನಃ ಪ್ರಾಚ್ಯೋದೀಚ್ಯಾಶ್ಚ ಭಾರತ ॥8॥
ಈ ಎಲ್ಲಾ ರಾಜರುಗಳು ಮತ್ತು ಇನ್ನೂ ಅನೇಕ ರಾಜರುಗಳು ಅಲ್ಲಿಗೆ ಬಂದರು. ದಕ್ಷಿಣದೇಶದಿಂದ ಅನೇಕ ರಾಜಕುಮಾರರು ಆಗಮಿಸಿದರು. ಮ್ಲೇಂಛರು, ಆರ್ಯರು ಹಾಗೂ ಪೂರ್ವದಿಕ್ಕಿನ, ಉತ್ತರದಿಕ್ಕಿನ ರಾಜರುಗಳೂ ಕೂಡ ಅಲ್ಲಿಗೆ ಬಂದರು.
ಕಾಂಚನಾಂಗದಿನಃ ಸರ್ವೇ ಬದ್ಧಜಾಂಬೂನದಸ್ರಜಃ |
ಸರ್ವೇ ಭಾಸ್ವರದೇಹಾಶ್ಚ ವ್ಯಾಘ್ರಾ ಇವ ಮದೋತ್ಕಟಾಃ ॥9॥
ಆಗಮಿಸಿದ ಎಲ್ಲಾ ರಾಜರು ಸುವರ್ಣಮಯವಾದ ಆಭರಣಗಳನ್ನು ಧರಿಸಿ- ಕೊಂಡಿದ್ದರು. ಸುವರ್ಣದ ಹಾರಗಳನ್ನು ಕಂಠದಲ್ಲಿ ಧರಿಸಿದ್ದರು. ಅವರ ದೇಹದ ಕಾಂತಿಯು ಸುವರ್ಣದಂತೆ ಕಂಗೊಳಿಸುತ್ತಿತ್ತು. ಪ್ರತಿಯೊಬ್ಬರೂ ಕೂಡ ಶುಭ್ರವಾದ ಶರೀರವುಳ್ಳವರಾಗಿದ್ದರು. ಹುಲಿಯಂತೆ ಬಲದಿಂದ ದರ್ಪಿಷ್ಟರಾಗಿದ್ದರು.
ತತಃ ಸಮುಪವಿಷ್ಟೇಷು ತೇಷು ರಾಜಸು ಭಾರತ |
ವಿವೇಶ ರಂಗಂ ಸಾ ಕನ್ಯಾ ಧಾತ್ರೀವರ್ಷಧರಾನ್ವಿತಾ ॥10॥
ಆ ಸ್ವಯಂವರದ ಸಭಾಂಗಣದಲ್ಲಿ ಎಲ್ಲಾ ರಾಜರು ತಮ್ಮ ಯೋಗ್ಯವಾದ ಆಸನಗಳಲ್ಲಿ ಕುಳಿತುಕೊಂಡರು. ಆಗ ರಾಜಕನ್ಯೆಯು ತನ್ನ ಸಖಿಯರ ಜೊತೆ ಮತ್ತು ದಾದಿಯರ ಜೊತೆ ರಂಗಪ್ರವೇಶ ಮಾಡಿದಳು.
ಧಾತ್ರೀವರ್ಷಧರಾನ್ವಿತಾಇತ್ಯತ್ರವರ್ಷಧರಾಃ ಷಂಢಾಃ | `ಷಂಡೋವರ್ಷಧರಸ್ತುಲ್ಯೌ' ಇತ್ಯಮರಃ ॥

`ಧಾತ್ರೀವರ್ಷಧರಾನ್ವಿತಾ' ಎಂಬಲ್ಲಿ ವರ್ಷಧರ ಎಂಬ ಪದಕ್ಕೆ ಷಂಡರು ಎಂದರ್ಥ. `ಷಂಡೋವರ್ಷಧರಸ್ತುಲ್ಯೌ' ಎಂಬ ಅಮರಕೋಶವು ಇದಕ್ಕೆ ಆಧಾರವಾಗಿದೆ.
ವಿವರಣೆ - ಆ ರಾಜಕುಮಾರಿಯು ರಂಗಪ್ರವೇಶವನ್ನು ಮಾಡುವಾಗ ಅವಳ ಜೊತೆ ಯಾರಿದ್ದರು ? ಎಂಬುದಕ್ಕೆ `ಧಾತ್ರೀವರ್ಷಧರಾನ್ವಿತಾ' ಎಂಬ ಪದವು ವಿವರಣೆಯನ್ನು ನೀಡುತ್ತಿದೆ. ಧಾತ್ರೀ ಎಂಬ ಪದಕ್ಕೆ ದಾದಿಯರು ಎಂದರ್ಥ. ದಾದಿಯರು ಎಂದರೆ ಸಾಕುತಾಯಿಯರು ಎಂದರ್ಥ. ವಾಸ್ತವಿಕವಾಗಿ ಧಾತ್ರೀ ಎಂಬ ಪದವು ತಾಯಿಯೆಂಬರ್ಥದಲ್ಲಿ ಪ್ರಯುಕ್ತವಾಗಿದೆ. ಆದರೆ ಪಟ್ಟದ ರಾಣಿ- ಯರು ಸಾಮಾನ್ಯವಾಗಿ ಹಾಗೇ ಸಭೆಯ ಮಧ್ಯದಲ್ಲಿ ಎಲ್ಲರ ಎದುರು ನಡೆದಾಡುವುದಿಲ್ಲ. ಆದ್ದರಿಂದ ಧಾತ್ರೀ ಎಂಬ ಪದಕ್ಕೆ ಸಾಕುತಾಯಿ ಎಂಬ ಮತ್ತೊಂದು ಅರ್ಥವನ್ನು ಕೋಶಗಳಲ್ಲಿ ಕಾಣುತ್ತೇವೆ. ಕನ್ಯೆಯನ್ನು ಅತ್ಯಂತ ಪ್ರೀತಿವಾತ್ಸಲ್ಯದಿಂದ ನೋಡಿಕೊಂಡ ಹಿರಿಯ ದಾದಿಯರನ್ನು ಇಲ್ಲಿ ವಿವಕ್ಷಿಸಬೇಕು. ಕೆಲವು ಪುಸ್ತಕಗಳಲ್ಲಿ ಸಖಿಯರು ಎಂಬರ್ಥವನ್ನು ಹೇಳುತ್ತಾರೆ. ಈ ಅರ್ಥವನ್ನು ಸುತರಾಂ ಇಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಆ ಕನ್ಯೆಗೆ ಆತ್ಮೀಯರಾದ ಹಿರಿಯರಾದ ಅವಳನ್ನು ಸಾಕಿಬೆಳೆಸಿದ ದಾದಿಯರು ಅವಳ ಜೊತೆ ಇದ್ದರು ಎಂಬರ್ಥವನ್ನೇ ವಿವಕ್ಷಿಸಬೇಕು. ಮತ್ತು ಆ ಕನ್ಯೆಯ ಜೊತೆ ವರ್ಷಧರರೂ ಕೂಡ ಇದ್ದರು. ವರ್ಷಧರರು ಎಂದರೆ ನಪುಂಸಕರು ಎಂದರ್ಥ. ಸಾಮಾನ್ಯವಾಗಿ ರಾಜಕನ್ಯೆಯರ ರಕ್ಷಣೆಗಾಗಿ ಷಂಡರು ಇರುತ್ತಿದ್ದರು. ಯಾವುದೇ ರೀತಿ ಇತರರು ಅವಳ ಮೇಲೆ ದೈಹಿಕವಾದ ತೊಂದರೆಗಳನ್ನು ನೀಡಬಾರದೆನ್ನಲು ಷಂಢರನ್ನು ಏರ್ಪಾಡು ಮಾಡಿರುತ್ತಿದ್ದರು. ರಾಜಕನ್ಯೆಯ ಅಂಗರಕ್ಷಕರಾಗಿ ದಾದಿಯರಿದ್ದರೆ, ಅವಳ ರಕ್ಷಕ- ರಾಗಿ ಷಂಢರು ಇರುತ್ತಿದ್ದರೆಂಬುದನ್ನು ನಾವು ಇತಿಹಾಸದ ಕಥೆಗಳಿಂದ ತಿಳಿಯು- ತ್ತೇವೆ. ಮಹಾಭಾರತದಲ್ಲೂ ಕೂಡ ಇದರ ಉಲ್ಲೇಖವಿರುವುದು ಅತ್ಯಪೂರ್ವ- ವಾಗಿದೆ. ಆದ್ದರಿಂದ ಈ ಶ್ಲೋಕದಲ್ಲಿರುವ ಈ ವಿಶೇಷಣವು ರಾಣಿಯರ ಮತ್ತು ರಾಜಕನ್ಯೆಯರ ರಕ್ಷಣೆಯನ್ನು ಹೇಗೆ ಮಾಡುತ್ತಿದ್ದರು? ಎಂಬ ವಿಷಯದಲ್ಲಿ ಗಮನೀಯವಾದ ಆಧಾರವಾಗಿದೆ.
ಈಗ ಕಾಣಿಸುವ ಅಮರಕೋಶದ ದಾಕ್ಷಿಣಾತ್ಯಪಾಠ ಹಾಗೂ ಔತ್ತರೇಯ- ಪಾಠಗಳಲ್ಲಿ ವರ್ಷಧರಃ ಎಂಬ ಪಾಠವು ಕಾಣಿಸುವುದಿಲ್ಲ. ವರ್ಷವರ ಎಂಬ ಪಾಠವೇ ಕಾಣಿಸುತ್ತದೆ. ಆದರೆ ಬೇರೆ ಕೋಶಗಳಲ್ಲಿ ವರ್ಷಧರ ಮತ್ತು ವರ್ಷವರ ಎಂಬೆರಡು ಶಬ್ದಗಳು ಸಮಾನಾರ್ಥಕಗಳೆಂದು ಬರೆಯುತ್ತಾರೆ. ಆದ್ದರಿಂದ ಲಕ್ಷಾಲಂಕಾರದಲ್ಲಿ ಕಾಣಿಸುವ ವರ್ಷಧರ ಎಂಬ ಪ್ರಯೋಗವು ಸಾಧುವಾಗಿದೆ. ಮತ್ತು ಷಂಢಾಃ ಎಂಬರ್ಥವನ್ನು ಬರೆದಿರುವುದು ಸ್ವರಸವಾದ ಅರ್ಥವಾಗಿದೆ.
ತತಃ ಸಂಶ್ರಾವ್ಯಮಾಣೇಷು ರಾಜ್ಞಾಂ ನಾಮಸು ಭಾರತ |
ಅತ್ಯಕ್ರಾಮದ್ ಧಾರ್ತರಾಷ್ಟ್ರಂ ಸಾ ಕನ್ಯಾ ವರವರ್ಣಿನೀ ॥11॥
ಓ ಭರತನಂದನನೇ! ಅನಂತರ ಆ ರಾಜಕನ್ಯೆಯು ಸ್ವಯಂವರಮಾಲೆಯನ್ನು ಹಿಡಿದುಕೊಂಡು, ಮುಂದೆ ಮುಂದೆ ಸಾಗುತ್ತಿರುವಂತೆ ರಾಜಭಟರು ಅವಳಿಗೆ ಅಲ್ಲಿ ಕುಳಿತಿರುವ ಎಲ್ಲಾ ರಾಜರುಗಳ ಪರಿಚಯವನ್ನು ಮಾಡಿಸುತ್ತಿದ್ದರು. ಆ ರಾಜ- ಕನ್ಯೆಯು ಎಲ್ಲಾ ರಾಜರನ್ನು ನೋಡುತ್ತಾ ಹಾಗೇ ಮುಂದೆ ಸಾಗುತ್ತಿದ್ದಳು. ಆದರೆ ಯಾರಿಗೂ ಸ್ವಯಂವರ ಮಾಲೆಯನ್ನು ಹಾಕುತ್ತಿರಲಿಲ್ಲ. ಅದೇ ರೀತಿಯಾಗಿ ದುರ್ಯೋಧನನ್ನೂ ಕೂಡಿ ಉಪೇಕ್ಷಿಸಿ ಮುಂದೆ ಸಾಗಿದಳು.
ದುರ್ಯೋಧನಸ್ತು ಕೌರವ್ಯೋ ನಾಮರ್ಷಯತ ಲಂಘನಮ್ |
ಪ್ರತ್ಯಷೇಧಚ್ಚ ತಾಂ ಕನ್ಯಾಮಸತ್ಕೃತ್ಯ ನರಾಧಿಪಾನ್ ॥12॥
ತನಗೆ ಸ್ವಯಂವರ ಮಾಲೆಯನ್ನು ಹಾಕದೇ ಉಪೇಕ್ಷಿಸಿ, ಆ ಕನ್ಯೆಯು ಮುಂದೆ ಸಾಗಿದ್ದನ್ನು ಕಂಡು ದುರ್ಯೋಧನನಿಗೆ ಸಹಿಸಲು ಸಾಧ್ಯವಾಗಲಿಲ್ಲ. ಅಲ್ಲಿ ನೆರೆದಿ- ರುವ ಎಲ್ಲಾ ರಾಜರನ್ನು ಉಪೇಕ್ಷಿಸಿ, ಆ ದುರ್ಯೋಧನನು ಎದ್ದು ಬಂದು ಆ ಕನ್ಯೆಯು ಮುಂದೆ ಹೋಗದಂತೆ ತಡೆದನು.
ಸ ವೀರ್ಯಮದಮತ್ತತ್ವಾದ್ ಭೀಷ್ಮದ್ರೋಣಾವುಪಾಶ್ರಿತಃ |
ರಥಮಾರೋಪ್ಯ ತಾ ಕನ್ಯಾಮಾಜಹಾರ ನರಾಧಿಪಃ ॥13॥
ಆ ದುರ್ಯೋಧನನಿಗೆ ತನ್ನ ಪರಾಕ್ರಮದ ಬಗ್ಗೆ ಬಹಳ ಕೆಚ್ಚಿತ್ತು. ಭೀಷ್ಮ- ದ್ರೋಣಾದಿಗಳ ಆಶ್ರಯದ ಬಲವೂ ಕೂಡ ಇತ್ತು. ಆದ್ದರಿಂದ ಯಾರನ್ನೂ ಕೂಡ ಲೆಕ್ಕಿಸದೆ ಆ ಕನ್ಯೆಯನ್ನು ಹಿಡಿದು, ಬಲಾತ್ಕಾರವಾಗಿ ತನ್ನ ರಥದಲ್ಲಿ ಕೂಡಿಸಿ- ಕೊಂಡನು. ಅನಂತರ ಅಲ್ಲಿ ನೆರೆದ ಎಲ್ಲ ರಾಜರನ್ನು ಯುದ್ಧಕ್ಕೆ ಕರೆದನು.
ಟಿಪ್ಪಣಿ - ದುರ್ಯೋಧನ ಅಪಹರಿಸಿದ ಈ ಕನ್ಯೆ ಬೇರಾರೂ ಅಲ್ಲ. ಸಾಕ್ಷಾತ್ ಅಲಕ್ಷ್ಮಿಯೇ ಆಗಿದ್ದಾಳೆ. ಮತ್ತು ಇವಳ ತಂದೆ ಕಾಶೀರಾಜನಾಗಿದ್ದಾನೆ. ಇದನ್ನು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಹೀಗೆ ನಿರ್ಣ- ಯಿಸಿದ್ದಾರೆ -
ಪೂರ್ವಂ ಹಿ ತೇಷು ವನಗೇಷು ಬಭೂವ ಕಾಶಿ-
ರಾಜ್ಞಃ ಸುತಾಕೃತ ಉರುಕ್ಷಿತಿಪಾಲಯೋಗಃ |
ತತ್ರ ಸ್ವಯಂವರಗತಾಂ ಧೃತರಾಷ್ಟ್ರಪುತ್ರಃ
ಕನ್ಯಾಂ ಬಲಾಜ್ಜಗೃಹ ಆತ್ಮಬಲಾತಿದೃಪ್ತಃ ॥
ದ್ರೌಪದೀ ಸ್ವಯಂವರವಾಗುವುದಕ್ಕೆ ಮೊದಲು, ಪಾಂಡವರು ಹಿಡಿಂಬವನ- ದಲ್ಲಿದ್ದಾಗ, ಕಾಶಿರಾಜನ ಮಗಳ ಸ್ವಯಂವರಕ್ಕಾಗಿ ರಾಜರುಗಳ ಮಹಾ ಸಮ್ಮೇಲನ ನಡೆದಿತ್ತು. ಅದರಲ್ಲಿ ದುರ್ಯೋಧನನು ತಾನೇ ಬಲಿಷ್ಠನೆಂಬ ಮಹಾ ಅಹಂಕಾರದಿಂದ ಸ್ವಯಂವರ ಮಂಟಪದಲ್ಲಿ ನಿಂತಿದ್ದ ಕನ್ಯೆಯನ್ನು ಬಲಾತ್ಕಾರವಾಗಿ ಅಪಹರಿಸಿದ.
ಪೂರ್ವಂ ಹಿ ರಾಜಗಣನೇ ಮಗಧಾಧಿರಾಜಃ
ಸಂಖ್ಯಾತ ಇತ್ಯತಿರುಷಾ ಪ್ರಗೃಹೀತಕನ್ಯೇ |
ದುರ್ಯೋಧನೇ ನೃಪತಯೋ ಯುಯುಧುಃ ಸ್ಮತೇನ
ಭಗ್ನಾಶ್ಚ ಕರ್ಣಸಹಿತೇನ ಸಹಾನುಜೇನ ॥
ಸ್ವಯಂವರಮಂಟಪದಲ್ಲಿ ರಾಜರುಗಳಲ್ಲಿ ಮೊದಲಿಗೆ ಜರಾಸಂಧ ಪರಿ- ಗಣಿತನಾದನೆಂದು ಅಸಹನೆಯಿಂದ ದುರ್ಯೋಧನನು

ಕನ್ಯೆಯನ್ನು ಅಪಹರಿ- ಸಿದ್ನ. ಆಗ ರಾಜರು ಅವನೊಡನೆ ಯುದ್ಧ ಮಾಡಿದರು. ದುರ್ಯೋಧನ ಅವರನ್ನು ಕರ್ಣನ ಮತ್ತು ತಮ್ಮಂದಿರ ಸಹಾಯದಿಂದ ಪರಾಭವಗೊಳಿಸಿದ.
ತಮನ್ವಯಾದ್ ರಥೀ ಖಡ್ಗೀ ಬದ್ಧಗೋಧಾಂಗುಲಿತ್ರವಾನ್ |
ಕರ್ಣಃ ಶಸ್ತ್ರಭೃತಾಂ ಶ್ರೇಷ್ಠಃ ಪೃಷ್ಠತಃ ಪುರುಷರ್ಷಭ ॥14॥
ಆ ಕರ್ಣನು ಆ ದುರ್ಯೋಧನನಿಗೆ ಬೆಂಬಲಿಗನಾಗಿ ನಿಂತನು. ರಥಾ- ರೂಢನಾಗಿ ಖಡ್ಗವನ್ನು ಹಿಡಿದು ಕೈಚೀಲಗಳನ್ನು ಧರಿಸಿ, ಆ ದುರ್ಯೋಧನನ ಹಿಂದೆ ಸಾಗಿದನು.
ತತೋ ವಿಮರ್ದಃ ಸುಸಾನ್ ರಾಜ್ಞಾಮಾಸೀದ್ ಯುಧಿಷ್ಠಿರ |
ಸನ್ನಹ್ಯತಾಂ ತನುತ್ರಾಣಿ ರಥಾನ್ ಯೋಜಯತಾಮಪಿ ॥15॥
ಯುಧಿಷ್ಠಿರನೇ! ಆ ದುರ್ಯೋಧನನ ದುಷ್ಕೃತನವನ್ನು ಕಂಡು ಕುಪಿತರಾದ ಅಲ್ಲಿ ನೆರೆದ ರಾಜರೆಲ್ಲರೂ ಯುದ್ಧಕ್ಕೆ ಸಿದ್ಧರಾದರು. ಕೆಲವರು ಕವಚಗಳನ್ನು ಧರಿಸಿದರು. ಕೆಲವರು ರಥಗಳನ್ನು ಸಜ್ಜುಗೊಳಿಸಿದರು.
ತೇಽಭ್ಯಧಾವಂತ ಸಂಕ್ರುದ್ಧಾಃ ಕರ್ಣದುರ್ಯೋಧನಾವುಭೌ |
ಶರವರ್ಷಾಣಿ ಮುಂಚಂತೋ ಮೇಘಾಃ ಪರ್ವತಯೋರಿವ ॥16॥
ಅನಂತರ ಭಯಂಕರ ಯುದ್ಧವೇ ಪ್ರಾರಂಭವಾಯಿತು. ಕರ್ಣ, ದುರ್ಯೋ- ಧನರಿಬ್ಬರು ಅತ್ಯಂತ ಕ್ರುದ್ಧರಾಗಿ ಮೇಘಗಳು ಪರ್ವತದ ಮೇಲೆ ಮಳೆಯನ್ನು ಸುರಿಸುವಂತೆ ಎಡೆಬಿಡದೆ ಬಾಣವರ್ಷಗಳನ್ನು ಸುರಿಸಿದರು.
ಟಿಪ್ಪಣಿ - ದುರ್ಯೋಧನ ಮತ್ತು ಕರ್ಣರಿಬ್ಬರು ಒಟ್ಟಿಗೆ ಯುದ್ಧ ಮಾಡಿದ- ರೆಂದು ಇಲ್ಲಿ ಉಲ್ಲೇಖವಿದೆ. ಆದರೆ ಸ್ವಲ್ಪ ಕಾಲ ದುರ್ಯೋಧನನು ಕರ್ಣನ ಮತ್ತು ತಮ್ಮಂದಿರ ಸಹಾಯದಿಂದ ಯುದ್ಧವನ್ನು ಮಾಡುತ್ತಾನೆ. ಅನಂತರ ಮುಂದೆ ಕರ್ಣನೊಬ್ಬನೇ ಯುದ್ಧವನ್ನು ಮಾಡುತ್ತಾನೆ. ಇದನ್ನು ಮುಂದಿನ ಶ್ಲೋಕವು ಇಲ್ಲಿ ಸ್ಪಷ್ಟ ಪಡಿಸಿದೆ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಇದರ ಬಗ್ಗೆ ಸ್ಪಷ್ಟವಾದ ನಿರ್ಣಯವನ್ನು ಶ್ರೀಮಧ್ವಾಚಾರ್ಯರು ಮಾಡಿರುತ್ತಾರೆ. ಮತ್ತು ಇಲ್ಲಿಲ್ಲದ ಇನ್ನೂ ಹೆಚ್ಚಿನ ವಿಚಾರವನ್ನು ಮಹಾಭಾರತ ತಾತ್ಪರ್ಯನಿರ್ಣಯದಿಂದ ತಿಳಿದುಕೊಳ್ಳಬೇಕು-
ಭಗ್ನೇಷು ತೇಷು ಪುನರಾತ್ತಶರಾಸನೇಷು
ಕರ್ಣೋ ಜಗಾದ ಧೃತರಾಷ್ಟ್ರಸುತಂ ಪ್ರಯಾಹಿ |
ಯುಕ್ತಃ ಸಹೋದರಜನೈರ್ಗುರುಭೀಷ್ಮಮುಖ್ಯೈ-
ರ್ಯುಕ್ತಸ್ಯ ತೇ ನ ಪರಮೇತ್ಯ ಹಿ ಧರ್ಷಣೇಶಾಃ ॥
ಪರಾಜಿತರಾದ ರಾಜರು ಪುನಃ ಬಿಲ್ಲನೆತ್ತಿದಾಗ ಕರ್ಣ ದುರ್ಯೋಧನನಿಗೆ ಹೇಳಿದ. `ನೀನು ತಮ್ಮಂದಿರೊಡನೆ ಹಸ್ತಿನಾವತಿಗೆ ಹೋಗು. ಅಲ್ಲಿ ಭೀಷ್ಮ ಮುಂತಾದವರ ರಕ್ಷಣೆಯಲ್ಲಿರುವಾಗ ನಿನ್ನನ್ನು ಈ ರಾಜರು ಬಂದು ಆಕ್ರಮಿಸಲು ಶಕ್ತರಾಗಲಾರರು.
ಏಕಾಂತತೋ ಜಯಮವೀಕ್ಷ್ಯ ಚ ನಾನುಯಾತಿ
ಬಾರ್ಹದ್ರಥಃ ಪುರಗತಸ್ಯ ಜಯೇ ನ ನಿಷ್ಠಾ |
ದ್ರೌಣಿಂ ಹಿ ರುದ್ರತನುಮೇಷ ಸದಾ ವಿಜಾನನ್
ನೋ ತೇನ ಯುದ್ಧಮಭಿವಾಂಛತಿ ರುದ್ರಭಕ್ತಃ ॥
ಜರಾಸಂಧನೂ ತಾನು ನಿಶ್ಚಿತವಾಗಿ ಜಯಗಳಿಸುವೆನೆಂಬ ವಿಶ್ವಾಸವಿಲ್ಲದೆ ಯುದ್ಧಕ್ಕೆ ಹೊರಡುವುದಿಲ್ಲ. ನೀನು ನಿನ್ನ ಪಟ್ಟಣದಲ್ಲಿದ್ದರೆ ಅವನಿಗೆ ಜಯ- ಗಳಿಸುವ ಬಗ್ಗೆ ಭರವಸೆ ಉಂಟಾಗಲಾರದು. ಇದಲ್ಲದೆ ಅಶ್ವತ್ಥಾಮನನ್ನು ಅವನು ರುದ್ರನ ಅವತಾರವೆಂದು ಸದಾ ತಿಳಿದಿರುವುದರಿಂದ ಅವನೊಡನೆ ಯುದ್ಧವನ್ನು ರುದ್ರಭಕ್ತನಾದ ಆತ ಎಂದಿಗೂ ಇಷ್ಟಪಡುವುದಿಲ್ಲ.
ಏಕೋಽಹಮೇವ ನೃಪತೀನ್ ಪ್ರತಿಯೋಧಯಿಷ್ಯ
ಏತೈರ್ಮಯಿ ಪ್ರವಿಜಿತೇಽಪಿನ ತೇಽಸ್ತ್ಯಕೀರ್ತಿಃ |
ಏಕಂ ಚ ತೇಽನುಜಮಿಮೇ ಯದಿ ಪೌರುಷೇಣ
ಗೃಹ್ಣೀಯುರತ್ರ ತವ ಕೀರ್ತಿರುಪೈತಿ ನಾಶಂ ॥
ಇಲ್ಲಿ ನಾನೊಬ್ಬನೇ ರಾಜರನ್ನು ಇದಿರಿಸಿ ಯುದ್ಧ ಮಾಡಬಲ್ಲೆ. ಒಂದು ವೇಳೆ ನಾನು ಇವರಿಗೆ ಸೋತರೂ ನಿನಗೆ ಅಪಕೀರ್ತಿ ಇಲ್ಲ. ನೀನು ಇಲ್ಲಿಯೆ ಇದ್ದು ನಿನ್ನ ಒಬ್ಬ ತಮ್ಮನನ್ನಾದರೂ ಇವರು ಪೌರುಷದಿಂದ ಸೆರೆ ಹಿಡಿದರೂ ನಿನ್ನ ಕೀರ್ತಿ ಹಾಳಾಗುವುದು.
ಭೀಷ್ಮಾದಯೋಽಪಿ ನ ಹಿ ಯೋಧಯಿತುಂ ಸಮರ್ಥಾ
ರಾಜ್ಞಾ ಹ್ಯನೇನ ತತ ಏವ ಚ ಬಾಹ್ಲಿಕೋಽಸ್ಯ |
ಭೃತ್ಯೋ ಬಭೂವ ನ ಹಿ ಭೀಷ್ಮಮಯಂ ಯುಧೇಽಗಾದ್
ರಾಜಾ ನ ಹೀತಿ ನ ಚ ತೇನ ವಿರೋಧ ಆಸೀತ್ ॥
ಭೀಷ್ಮಾದಿಗಳೂ ಕೂಡ ಈ ಜರಾಸಂಧನೊಡನೆ ಯುದ್ಧ ಮಾಡಲು ಶಕ್ತರಲ್ಲ. ಅದರಿಂದಲೇ ಬಾಹ್ಲಿಕ ಅವನಿಗೆ ಅಡಿಯಾಳಾಗಿದ್ದಾನೆ. ಆದರೂ ಭೀಷ್ಮನನ್ನು ಯುದ್ಧದಲ್ಲಿ ಅವನು ಆಕ್ರಮಿಸಲಿಲ್ಲ. ಏಕೆಂದರೆ ಭೀಷ್ಮ ರಾಜನಲ್ಲ ಎಂದು. ಅದರಿಂದಲೇ ಭೀಷ್ಮನೊಡನೆ ಜರಾಸಂಧ ಎಂದೂ ಯುದ್ಧ ಮಾಡಲಿಲ್ಲ.
ಇತ್ಯುಕ್ತ ಆಶು ಸ ವಿಮೃಶ್ಯ ಯಯೌ ಪುರಂ ಸ್ವಂ
ಕರ್ಣೋಽಪಿ ತೈಃ ಪ್ರತಿಯುಯೋಧ ಜಿಗಾಯ ಚೈತಾನ್ |
ಕರ್ಣಸ್ಯ ವೀರ್ಯಮಗಣಯ್ಯ ಜರಾಸುತೋಽಪಿ
ಹ್ಯೇಕೈಕಮೇವ ನೃಪತಿಂ ಸ ದಿದೇಶ ಯೋದ್ಧುಮ್ ॥
ಕರ್ಣ ಹೀಗೆ ಹೇಳಿದಾಗ ದುರ್ಯೋಧನ ಆಲೋಚಿಸಿ ತನ್ನ ಪಟ್ಟಣಕ್ಕೆ ಹಿಂತಿರುಗಿದ. ಕರ್ಣ ರಾಜರೊಡನೆ ಯುದ್ಧಮಾಡಿ ಅವರನ್ನು

ಗೆದ್ದನು. ಏಕೆಂದರೆ ಕರ್ಣನ ಸಾಮರ್ಥ್ಯವನ್ನು ಲೆಕ್ಕಿಸದೆ ಜರಾಸಂಧ ಒಬ್ಬೊಬ್ಬ ರಾಜನನ್ನೇ ಅವನ ಬಳಿ ಯುದ್ಧ ಮಾಡಲು ಕಳಿಸಿದ್ದ. ಮಹಾಭಾರತದಲ್ಲಿ ಯುದ್ಧ ಮುಗಿದ ಮೇಲೆ ದುರ್ಯೋಧನ ಕರ್ಣರಿಬ್ಬರೂ ಒಟ್ಟಿಗೆ ತಮ್ಮ ಪಟ್ಟಣಕ್ಕೆ ಹಿಂತಿರುಗಿದರೆಂದು ಹೇಳಲಾಗಿದೆ. ಆದರೆ ನಿರ್ಣಯದಲ್ಲಿ ದುರ್ಯೋಧನ ಮೊದಲೇ ತನ್ನ ಪಟ್ಟಣಕ್ಕೆ ಕನ್ಯೆಯನ್ನು ಕರೆದುಕೊಂಡು ಹೋದನು. ಅನಂತರ ಕರ್ಣನು ತೆರಳಿದನು ಎಂದು ಹೇಳಿರುತ್ತಾರೆ.
ಕರ್ಣಸ್ತೇಷಾಮಾಪತತಾಮೇಕೈಕೇನ ಕ್ಷುರೇಣ ಹ |
ಧನೂಂಷಿ ಸಶರಾವಾಪಾ ನ್ಯಪಾತಯತ ಭೂತಲೇ ॥17॥
ಅನಂತರ ಕರ್ಣನೊಬ್ಬನೇ ತನ್ನ ಪರಾಕ್ರಮದಿಂದ ಪ್ರತಿಯೊಬ್ಬ ರಾಜರ ಧನುಸ್ಸುಗಳನ್ನು ಮತ್ತು ಬಾಣಗಳ ಸಮೂಹವನ್ನು ತನ್ನ ಬಾಣದಿಂದ ಕತ್ತರಿಸಿದನು. ಮತ್ತು ಆ ರಾಜರನ್ನು ನೆಲದ ಮೇಲೆ ಬೀಳಿಸಿದನು.
ತತೋ ವಿಧನುಷಃ ಕಾಂಶ್ಚಿತ್ ಕಾಂಶ್ಚಿದ್ ಉದ್ಯತಕಾರ್ಮುಕಾನ್ |
ಕಾಂಶ್ಚಿದುದ್ವಹತೋ ಬಾಣಾನ್ ರಥಶಕ್ತಿಗದಾಸ್ತಥಾ ॥18॥
ಕರ್ಣನು ತನ್ನಲ್ಲಿರುವ ಯುದ್ಧಕೌಶಲ್ಯದಿಂದ ಕೆಲವರ ಬಿಲ್ಲುಬಾಣಗಳನ್ನು ಒಂದೊಂದೇ ತನ್ನ ಬಾಣದಿಂದ ಕತ್ತರಿಸಿ ಉರುಳಿಸಿದನು. ಕೆಲವರನ್ನು ಧನುಸ್ಸಿಲ್ಲದ- ವರನ್ನಾಗಿ ಮಾಡಿದರು. ಕೆಲವರು ಬಿಲ್ಲನ್ನು ಎತ್ತಿ ಬಾಣಗಳನ್ನು ಬಿಡುತ್ತಿರುವಾಗ ಅವರು ಎತ್ತಿದ ಕೈಯ ಜೊತೆ ಹಾಗೆಯೇ ಅವರು ನಿಲ್ಲುವಂತೆ ಮಾಡಿಬಿಟ್ಟನು. ಇನ್ನೂ ಕೆಲವರು ತಮ್ಮ ಬಾಣಗಳನ್ನು, ರಥಗಳನ್ನು, ಶಕ್ತ್ಯಾಯುಧವನ್ನು, ಗದೆ ಮೊದಲಾದ ಆಯುಧಗಳನ್ನು ಅಲ್ಲಿಯೇ ಬಿಟ್ಟು ಓಡಿಹೋಗುವಂತೆ ಮಾಡಿದನು.
ಲಾಘವಾದಾಕುಲೀಕೃತ್ಯ ಕರ್ಣಃ ಪ್ರಹರತಾಂ ವರಃ |
ಹತಸೂತಾಂಶ್ಚ ಭೂಯಿಷ್ಠಾನವಜಿಗ್ಯೇ ನರಾಧಿಪಾನ್ ॥19॥
ತನ್ನ ಕೈಚಳಕದಿಂದ ಆ ಕರ್ಣನು ಅನೇಕ ರಾಜರುಗಳ ಸಾರಥಿಗಳನ್ನು ಕೊಂದು- ಬಿಟ್ಟನು. ಅಲ್ಲಿರುವ ಎಲ್ಲಾ ರಾಜರುಗಳಿಗೆ ವ್ಯಾಕುಲತೆಯನ್ನು ಉಂಟುಮಾಡಿದನು. ತನ್ನೆದುರಿಗೆ ನಿಂತ ಎಲ್ಲಾ ರಾಜರುಗಳನ್ನು ತಾನೊಬ್ಬನೇ ಜಯಿಸಿದನು.
ತೇ ಸ್ವಯಂ ವಾಹಯಂತೋಽಶ್ವಾನ್ ಯಾಹಿ ಯಾಹೀತಿ ವಾದಿನಃ |
ವ್ಯಪೇಯುಸ್ತೇ ರಣಂ ಹಿತ್ವಾ ರಾಜಾನೋ ಭಗ್ನಮಾನಸಾಃ ॥20॥
ಅನಂತರ ಅಲ್ಲಿ ನೆರೆದ ಎಲ್ಲಾ ರಾಜರು ಭಗ್ನಮನೋರಥರಾದರು. ಸಾರಥಿ- ಗಳನ್ನು ಕಳೆದುಕೊಂಡ ಅವರು ರಥಾಶ್ವಗಳನ್ನು ತಾವೇ ನಡೆಸಿಕೊಂಡು, ಓಡಿರಿ ಓಡಿರಿ ಎಂದು ಕೂಗುತ್ತಾ ಪಲಾಯನ ಮಾಡಿದರು.
ದುರ್ಯೋಧನಸ್ತು ಕರ್ಣೇನ ಪಾಲ್ಯಮಾನೋಽಭ್ಯಯಾತ್ ತದಾ |
ಹೃಷ್ಟಃ ಕನ್ಯಾಮುಪಾದಾಯ ನಗರಂ ನಾಗಸಾಹ್ವಯಮ್ ॥21॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಚತುರ್ಥೋಽಧ್ಯಾಯಃ ॥4॥
ಹೀಗೆ ದುರ್ಯೋಧನನು ಕರ್ಣನಿಂದ ರಕ್ಷಿತನಾದನು. ಬಹಳ ಸಂತುಷ್ಟನಾ- ದನು. ಆ ಕನ್ಯೆಯನ್ನು ಅಪಹಾರ ಮಾಡಿಕೊಂಡು ತನ್ನ ಹಸ್ತಿನಾವತಿಗೆ ಬಂದು ಸೇರಿದನು.
ಟಿಪ್ಪಣಿ- ದುರ್ಯೋಧನನು ಅಪಹರಿಸಿದ ಈ ಕನ್ಯೆ ಬೇರೆ ಯಾರು ಅಲ್ಲ. ದುರ್ಯೋಧನನ ಪಟ್ಟದರಸಿಯೇ ಆಗಿದ್ದಾಳೆ. ಅರ್ವಾಚೀನರು ಇವಳನ್ನು ಭಾನು- ಮತಿ ಎಂದು ಕರೆಯುತ್ತಾರೆ. ಆಶ್ಚರ್ಯವೆಂದರೆ ಸಮಗ್ರ ಮಹಾಭಾರತದಲ್ಲಿ ಎಲ್ಲಿಯೂ ಸಹ ಇವಳ ಹೆಸರು ಉಲ್ಲೇಖವಿರುವುದಿಲ್ಲ. ಶ್ರೀಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಇವಳನ್ನು ಅಲಕ್ಷ್ಮೀ ಎಂದಷ್ಟೇ ಕರೆದಿದ್ದಾರೆ. ಉಲ್ಲೇಖ ಹೀಗಿದೆ -
ಉದ್ವಾಹ್ಯ ಕಾಶಿತಯಾಂ ಗಿರಿಜಾಭಿವಿಷ್ಟಾಂ
ಸಾಕ್ಷಾನ್ನರೇಷು ಜನಿತಾಂ ಪ್ರಥಮಾಲಕ್ಷ್ಮೀಂ |
ತಸ್ಯಾಂ ಸುತಂ ತ್ವಜನಯತ್ ಪುರ ಆಸ ಯೋಽಕ್ಷಃ
ಕನ್ಯಾಂ ಪುರಾ ಪ್ರಿಯತಮಾಂ ಚ ಷಡಾನನಸ್ಯ ॥
ಪಾರ್ವತಿಯ ಆವೇಶದೊಂದಿಗೆ ಮನುಷ್ಯರಲ್ಲಿ ಹುಟ್ಟಿದ ಸಾಕ್ಷಾತ್ ಜ್ಯೇಷ್ಠ ಅಲಕ್ಷ್ಮೀಯೇ ಆಗಿದ್ದ ಕಾಶಿರಾಜಕುಮಾರಿಯನ್ನು ದುರ್ಯೋಧನ ಮದುವೆಯಾಗಿ ಅವಳಲ್ಲಿ ಹಿಂದೆ ಅಕ್ಷಕುಮಾರನಾಗಿದ್ದವನನ್ನು ಮಗನನ್ನಾಗಿ ಹುಟ್ಟಿಸಿದ. ಹಿಂದೆ ಷಣ್ಮುಖನ ಭಾರ್ಯೆಯಾಗಿದ್ದವಳನ್ನು ಮಗಳನ್ನಾಗಿಯೂ ಹುಟ್ಟಿಸಿದ.
ಪುತ್ರೋ ಬಭೂವ ಸ ತು ಲಕ್ಷಣನಾಮಧೇಯಃ
ಸಾ ಲಕ್ಷಣೇತ್ಯಧಿಕರೂಪಗುಣಾ ಸುಕನ್ಯಾ |
ತಸ್ಯಾನುಜಾಶ್ಚ ನಿಜಯೋಗ್ಯಗುಣಾ ಅವಾಪು-
ರ್ಭಾರ್ಯಾಃ ಪುನಶ್ಚ ಸ ಸುಯೋಧನ ಆಪ ಭಾರ್ಯಾಃ ॥
ದುರ್ಯೋಧನನ ಮಗನಿಗೆ ಲಕ್ಷಣ ಎಂದು ಹೆಸರು. ಮಗಳಿಗೆ ಲಕ್ಷಣಾ ಎಂದು. ಅವಳು ಅಧಿಕ ಸೌಂದರ್ಯಾದಿಗುಣಗಳಿಂದ ಯುಕ್ತಳು. ದುರ್ಯೋ- ಧನನ ತಮ್ಮಂದಿರೂ ತಮಗೆ ತಕ್ಕುದಾದ ಗುಣವುಳ್ಳ ಹೆಂಡಂದಿರನ್ನು ಪಡೆದರು. ಪುನಃ ದುರ್ಯೋಧನ ಬೇರೆ ಹೆಂಡಂದಿರನ್ನೂ ಪರಿಗ್ರಹಿಸಿದ.
ಪೂರ್ವಂ ಸುರಾಂತಕ ಇತಿ ಪ್ರಥಿತಃ ಸುತೋಽಭೂತ್
ದುಶ್ಯಾಸನಸ್ಯ ತದನು ಪ್ರತಿತಪ್ಯಮಾನಾಃ |
ದೃಷ್ಟ್ವೈವ ಪಾರ್ಥಬಲವೀರ್ಯಗುಣಾನ್ ಸಮೃದ್ಧಿಂ
ತಾಂ ಚೈವ ತೇ ಪ್ರತಿಯಯುಃ ಸ್ವಕಲಿಂಗದೇಶಂ ॥203॥
ಹಿಂದೆ ರಾಮಾಯಣ ಕಾಲದಲ್ಲಿ ಸುರಾಂತಕನೆಂದು ಪ್ರಸಿದ್ಧನಾದ ರಾಕ್ಷಸ ದುಃಶಾಸನನಿಗೆ ಮಗನಾಗಿ ಹುಟ್ಟಿದ. ಬಳಿಕ ಪಾಂಡವರ

ಬಲ ವೀರ್ಯಗುಣ- ಗಳನ್ನೂ ಆ ಮಹಾಸಂಪತ್ತನ್ನೂ ಕಂಡೇ ಪರಿತಾಪಗೊಂಡ ಕೌರವರು ಕಲಿಂಗ ದೇಶಕ್ಕೆ ಹೋದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 4ನೆಯ ಅಧ್ಯಾಯವು ಮುಗಿಯಿತು.
*****
5. ಐದನೆಯ ಅಧ್ಯಾಯ
ಕರ್ಣನ ಬಲ ಮತ್ತು ಪರಾಕ್ರಮಗಳ ವರ್ಣನೆ.
ನಾರದಃ
ಆವಿಷ್ಕೃತಬಲಂ ಕರ್ಣಂ ಜ್ಞಾತ್ವಾ ರಾಜಾ ಸ ಮಾಗಧಃ |
ಆಹ್ವಯದ್ ದ್ವೈರಥೇನಾಜೌ ಜರಾಸಂಧೋ ಮಹೀಪತಿಃ ॥1॥
ನಾರದರು ಕರ್ಣನ ಪರಾಕ್ರಮವನ್ನು ವರ್ಣಿಸುತ್ತಿದ್ದಾರೆ. ಓ ಮಹಾರಾಜನೇ! ಎಲ್ಲೆಡೆಯೂ ಕರ್ಣನ ಪರಾಕ್ರಮದ ವಾರ್ತೆ ಹಬ್ಬಿತು. ಮಗಧರಾಜನಾದ ಜರಾ- ಸಂಧನಿಗೂ ಕೂಡ ಈ ವಿಚಾರ ತಿಳಿಯಿತು. ಅವನು ತನ್ನೊಡನೆ ದ್ವಂದ್ವಯುದ್ಧಕ್ಕಾಗಿ ಬರಬೇಕೆಂದು ಕರ್ಣನಿಗೆ ಆಹ್ವಾನ ನೀಡಿದನು.
ತಯೋಃ ಸಮಭವದ್ ಯುದ್ಧಂ ದಿವ್ಯಾಸ್ತ್ರವಿದುಷೋರ್ದ್ವಯೋಃ |
ಯುಧಿ ನಾನಾಪ್ರಹರಣೈರನ್ಯೋನ್ಯಮಭಿವರ್ಷತೋಃ ॥2॥
ಇಬ್ಬರಿಗೂ ಕೂಡ ದ್ವಂದ್ವಯುದ್ಧವು ಪ್ರಾರಂಭವಾಯಿತು. ಇಬ್ಬರೂ ಕೂಡ ವಿವಿಧವಾದ ದಿವ್ಯಾಸ್ತ್ರಗಳನ್ನು ತಿಳಿದಿದ್ದರು. ಪರಸ್ಪರವಾಗಿ ಆ ಅಸ್ತ್ರಗಳನ್ನು ಪ್ರಯೋಗಿ- ಸುತ್ತಿದ್ದರು.
ಕ್ಷೀಣವಾಣೌ ವಿಧನುಷೌ ಭಗ್ನಖಡ್ಗೌ ಮಹೀಂ ಗತೌ |
ಬಾಹುಭಿಃ ಸಮಸಜ್ಜೇತಾಮುಭಾವಪಿ ಬಲಾನ್ವಿತೌ ॥3॥
ಎಲ್ಲಾ ಆಯುಧಗಳನ್ನು ಪ್ರಯೋಗಿಸಿದ ಮೇಲೆ ಅವರಿಬ್ಬರಲ್ಲಿ ಬಾಣಗಳೇ ಇಲ್ಲದಂತಾದವು. ಧನುಸ್ಸುಗಳನ್ನೂ ಕೂಡ ಕಳೆದುಕೊಂಡರು. ಖಡ್ಗಗಳೂ ಕೂಡ ತುಂಡಾದವು. ಅನಂತರ ಇಬ್ಬರೂ ಕೂಡ ರಥದಿಂದ ಹಾರಿ ನೆಲದಲ್ಲಿ ನಿಂತು ಬಾಹುಯುದ್ಧಕ್ಕೆ ಸಿದ್ಧರಾದರು.
ಟಿಪ್ಪಣಿ - ಕನ್ಯೆಯನ್ನು ಕರೆದುಕೊಂಡು ನಗರಕ್ಕೆ ತೆರಳಿದ ಮೇಲೆ ಕರ್ಣನ ಪರಾಕ್ರಮವನ್ನು ಕೇಳಿದ ಜರಾಸಂಧನು ಯುದ್ಧಕ್ಕೆ ಬರುತ್ತಾನೆಂದು ಈ ಶ್ಲೋಕ- ಗಳನ್ನು ನೋಡಿದಾಗ ಆಪಾತತಃ ಕಾಣಿಸುತ್ತದೆ. ಆದರೆ ಮಹಾಭಾರತತಾತ್ಪರ್ಯ- ನಿರ್ಣಯದಲ್ಲಿ ಆ ಎಲ್ಲಾ ರಾಜರು ಸೋತಮೇಲೆ ಜರಾಸಂಧನು ಕರ್ಣನ ಜೊತೆ ಅಲ್ಲಿಯೇ ಯುದ್ಧ ಮಾಡಿದನೆಂದು ನಿರ್ಣಯಿಸಿದ್ದಾರೆ -
ಸರ್ವೇಷು ತೇಷು ವಿಜಿತೇಷ್ವಭಿಜಗ್ಮಿವಾನ್ ಸ
ಯೋದ್ಧುಂ ಬೃಹದ್ರುಥಸಂತೋऽಪ್ಯಮುನಾ ರಥೇನ |
ತಂ ಚೈವ ರಾಮವರತೋ ವಿರಥಂ ವಿಶಸ್ತ್ರಂ
ಚಕ್ರೇ ಸ ಚೈನಮಥ ಮುಷ್ಟಿಭಿರಭ್ಯುಪೇತೌ ॥
ಒಬ್ಬೊಬ್ಬರಾಗಿ ಎಲ್ಲ ರಾಜರೂ ಪರಾಜಿತರಾದಾಗ ಜರಾಸಂಧ ತಾನೆ ಕರ್ಣ- ನೊಡನೆ ಯುದ್ಧ ಮಾಡಲು ರಥವೇರಿ ಹೊರಟ. ಪರಶುರಾಮರ ವರಬಲದಿಂದ ಕರ್ಣ ಜರಾಸಂಧನನ್ನು ವಿರಥನನ್ನಾಗಿಯೂ ನಿರಾಯುಧನನ್ನಾಗಿಯೂ ಮಾಡಿ- ದನು. ಜರಾಸಂಧನೂ ಕರ್ಣನನ್ನು ಹಾಗೇ ವಿರಥನನ್ನಾಗಿಯೂ ನಿರಾಯುಧ- ನನ್ನಾಗಿಯೂ ಮಾಡಿದನು. ಬಳಿಕ ಇಬ್ಬರೂ ಮುಷ್ಟಿಗಳಿಂದ ಹೋರಾಡಿದರು.
ಬಾಹುಕಂಟಕಯುದ್ಧೇನ ತಸ್ಯ ಕರ್ಣೋऽಥ ಯುದ್ಧ್ಯತಃ |
ಬಿಭೇದ ಸಂಧಿಂ ದೇಹಸ್ಯ ಜರಯಾ ಶ್ಲೇಷಿತಸ್ಯ ಹ ॥4॥
ಆ ಬಾಹುಯುದ್ಧದಲ್ಲಿ ಕರ್ಣನು ಬಾಹುಕಂಟಕವೆಂಬ ಒಂದು ಯುದ್ಧಕ್ರಮ- ದಿಂದ ಮಲ್ಲಯುದ್ಧವನ್ನು ಮಾಡಲು ಪ್ರಾರಂಭಿಸಿದನು. ಜರಾ ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಆ ಜರಾಸಂಧನ ಸಂಧಿಯ ಬಂಧವನ್ನು ಸೀಳಲು ಪ್ರಾರಂಭಿಸಿದನು.
ವಿವರಣೆ -
ಏಕಾಂ ಜಂಘಾಂ ಪದಾಕ್ರಮ್ಯ ಪರಾಮುದ್ಯಮ್ಯಪಾಠ್ಯತೇ॥
ಕೇತಕೀ ಪತ್ರವತ್ ಛತ್ರೋಃ ಯುದ್ಧ ತದ್‌ಬಾಹುಕಂಟಕಂ ॥
ಶತ್ರುವಿನ ಮೊಣಕಾಲನ್ನು ಮೆಟ್ಟಿ ನಿಂತು, ಮತ್ತೊಂದು ಮೊಣಕಾಲನ್ನು ಮೇಲಕ್ಕೆ ಸೀಳುವುದನ್ನು ಬಾಹುಕಂಟಕಯುದ್ಧ ಎನ್ನುತ್ತಾರೆ. ಕೇತಕೀ ಹೂವನ್ನು ಇಬ್ಭಾಗ ಮಾಡುವಂತೆ ಇದು ಒಂದು ಯುದ್ಧದ ಕ್ರಮ. ಇದನ್ನು ಕರ್ಣನು ತಿಳಿದಿ- ದ್ದನು.
ವಿಮರ್ಶೆ - ವಾಸ್ತವಿಕವಾಗಿ `ಬಾಹುಕಂಟಕಯುದ್ಧೇನ ತಸ್ಯ ಕರ್ಣೋऽಥ ಯುದ್ಧ್ಯತಃ' ಎಂಬ ಪಾಠವು ದಾಕ್ಷಿಣಾತ್ಯ ಕೋಶಗಳಲ್ಲಿ ಕಾಣಿಸುವುದೇ ಇಲ್ಲ. ಔತ್ತರೇಯಕೋಶದಲ್ಲಷ್ಟೇ ಈ ಪಾಠವಿರುತ್ತದೆ. ಆದ್ದರಿಂದ ಮೇಲೆ ಹೇಳಿದ ನೀಲಕಂಠೀಯವ್ಯಾಖ್ಯಾನದ ಪ್ರಕಾರ ಬಾಹುಕಂಟಕಯುದ್ಧಪದಕ್ಕೆ ಅದೊಂದು ಯುದ್ಧತಂತ್ರವೆಂಬ ಅರ್ಥವನ್ನು ವಿವಕ್ಷಿಸುವುದು ನಿರವಕಾಶವಾಗುವುದಿಲ್ಲ. ಮತ್ತು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಕರ್ಣ ಹಾಗೂ ಜರಾಸಂಧರ ಯುದ್ಧ- ವನ್ನು ವರ್ಣನೆ ಮಾಡುವಾಗ ಈ ಯುದ್ಧನೀತಿಯನ್ನು ಉಲ್ಲೇಖ ಮಾಡಿರುವು- ದಿಲ್ಲ.
ಸ ವಿಕಾರಂ ಶರೀರಸ್ಯ ದೃಷ್ಟ್ವಾ ನೃಪತಿರಾತ್ಮನಃ |
ಪ್ರೀತೋऽಸ್ಮೀತ್ಯಬ್ರವೀತ್ ಕರ್ಣಂ ವೈರಮುತ್ಸೃಜ್ಯ ಭಾರತ ॥5॥
ಓ ಭರತವಂಶೋದ್ಭವನೇ ! ಜರಾಸಂಧನಿಗೆ ಕರ್ಣನನ್ನು ಗೆಲ್ಲುವುದು ಅಸಾಧ್ಯ ಎನಿಸಿತು. ಅವನಿಂದ ತನ್ನ ಶರೀರಕ್ಕುಂಟಾದ ಆಪತ್ತನ್ನು ಗಮನಿಸಿ ಕರ್ಣನ ಪರಾ- ಕ್ರಮವನ್ನು ಮೆಚ್ಚಿದನು. ಕರ್ಣನ ವಿಷಯದಲ್ಲಿ ವೈರವನ್ನು ಪರಿತ್ಯಾಗ ಮಾಡಿದನು. ಸ್ನೇಹಭಾವದಿಂದ ಕರ್ಣನ ವಿಷಯದಲ್ಲಿ ಪ್ರೀತನಾಗಿ ನಿನ್ನ ಬಳಿ ನಾನು ಸ್ನೇಹ ಮಾಡುತ್ತೇನೆ ಎಂದು ಹೇಳಿದನು.

ಪ್ರೀತ್ಯಾ ದದೌ ಸ ಕರ್ಣಾಯ ಮಾಲಿನೀಂ ನಗರೀಮಥ |
ಅಂಗೇಷು ನರಶಾರ್ದೂಲ ಸ ರಾಜಾಸೀತ್ ಸಪತ್ನಜಿತ್ ॥6॥
ಆಗ ಆ ಜರಾಸಂಧನು ಕರ್ಣನಿಗೆ ತನ್ನ ಅಂಗದೇಶದಲ್ಲಿದ್ದ ಮಾಲಿನೀ ಎಂಬ ನಗರವನ್ನು ಪಾರಿತೋಷಕವಾಗಿ ನೀಡಿದನು. ಆಗ ಕರ್ಣನು ಎಲ್ಲಾ ಶತ್ರುಗಳನ್ನು ಸೋಲಿಸಿ, ಆ ಅಂಗರಾಜ್ಯಕ್ಕೆ ಅಧಿಪತಿಯಾದನು.
ಟಿಪ್ಪಣಿ -
ಸಂಧೌ ಯದೈವ ಜರಯಾ ಪ್ರತಿಸಂಧಿತಸ್ಯ
ಕರ್ಣೋ ಜಘಾನ ನ ಪರತ್ರ ತುತೋಷ ರಾಜಾ |
ನ ಜ್ಞಾತಮೇತದಪಿ ಹೋ ಹಲಿನಾ ತದೇತದ್
ಜ್ಞಾತಂ ತ್ವಯಾ ಭವ ತತೋ ಮಮ ಭೃತ್ಯ ಏವ ॥
ಜರಾಸಂಧನಿಗೆ ಕರ್ಣ ಬೇರೆ ಕಡೆ ಬಿಟ್ಟು ಸಂಧಿಯಲ್ಲಿಯೇ ಯಾವಾಗ ಹೊಡೆಯಲು ತೊಡಗಿದನೋ ಆಗ ಜರಾಸಂಧ ಮೆಚ್ಚಿದ. ನನ್ನ ಮರ್ಮಸ್ಥಳವನ್ನು ಬಲರಾಮನೂ ತಿಳಿಯಲಿಲ್ಲ. ನೀನು ತಿಳಿದುಬಿಟ್ಟೆ. ಅದರಿಂದ ನೀನು ನನ್ನ ಭಟನಾಗಿರು.
ಏವಂವಿಧಂ ಸುಕುಶಲಂ ಬಹುಯುದ್ಧ ಶೌಂಡಂ
ನ ತಾವಂ ಹನಿಷ್ಯ ಉತ ತೇ ಪಿತುರೇವ ಪೂರ್ವಂ |
ಬಾಹ್ವೋರ್ಬಲಾದಭಿಹೃತಂ ಹಿ ಮಯಾಽಂಗರಾಜ್ಯಂ
ತತ್ತ್ವಂ ಗೃಹಾಣ ಯುಧಿ ಕರ್ಮಕರಶ್ಚ ಮೇ ಸ್ಯಾಃ ॥198॥
ಇಂಥ ಒಳ್ಳೆಯ ಕುಶಲನಾದ, ಬಹುಯುದ್ಧ ಸಮರ್ಥನಾದ ನಿನ್ನನ್ನು ನಾನು ಕೊಲ್ಲುವುದಿಲ್ಲ. ಮಾತ್ರವಲ್ಲ, ಹಿಂದೆ ನಿನ್ನ ತಂದೆಯಿಂದ ನಾನು ನನ್ನ ಬಾಹು ಬಲದಿಂದ ಅಂಗರಾಜ್ಯವನ್ನು ಗೆದ್ದುಕೊಂಡಿದ್ದೆ. ಅದನ್ನು ನೀನು ತೆಗೆದುಕೊ. ಯುದ್ಧಗಳಲ್ಲಿ ನೀನು ನನ್ನ ಭಟನಾಗಿರು.
ಪಾಲಯಾಮಾಸ ಚಂಪಾಂ ತು ಕರ್ಣಃ ಪರಬಲಾರ್ದನಃ |
ದುರ್ಯೋಧನಸ್ಯಾನುಮತೇ ತವಾಪಿ ವಿದಿತಂ ತಥಾ ॥7॥
ಆ ಕರ್ಣನು ದುರ್ಯೋಧನನ ಅನುಮತಿಯಿಂದ ಚಂಪಾ ಎಂಬ ಪಟ್ಟಣ- ವನ್ನೂ ಕೂಡ ಪರಿಪಾಲನೆ ಮಾಡಿದನು. ಯುಧಿಷ್ಠಿರನೇ! ಈ ಎಲ್ಲಾ ವಿಷಯಗಳು ನಿನಗೂ ಕೂಡ ತಿಳಿದೇ ಇರುತ್ತದೆ.
ಒಂದು ವಿಮರ್ಶೆ - ಚಂಪಾ ಎಂಬ ದೇಶವನ್ನು ದುರ್ಯೋಧನನು ಕರ್ಣನಿಗೆ ನೀಡಿದನೆಂದು ಈ ಶ್ಲೋಕದಲ್ಲಿ ಕಾಣಿಸುತ್ತದೆ. ಆದರೆ ದಾಕ್ಷಿಣಾತ್ಯಕೋಶಗಳಲ್ಲಿ `ಚಂಪಾಂ ತು' ಎಂಬ ಪಾಠವು ಕಾಣಿಸುವುದಿಲ್ಲ. `ವರ್ಣಾಂಸ್ತು' ಎಂಬ ಪಾಠವು ಕಾಣಿಸುತ್ತದೆ. ಆದ್ದರಿಂದ ದುರ್ಯೋಧನನು `ಚಂಪಾ' ಎಂಬ ದೇಶವನ್ನು ನೀಡಿ- ದನು ಎಂಬುದಕ್ಕೆ ಇದು ನಿರವಕಾಶವಾದ ಆಧಾರವಾಗುವುದಿಲ್ಲ. ದಾಕ್ಷಿಣಾತ್ಯ ಪಾಠದ ಪ್ರಕಾರ ಆ ದೇಶದಲ್ಲಿ ಚತುವರ್ಣದವರನ್ನು ಕರ್ಣನು ರಕ್ಷಣೆ ಮಾಡಿ- ದನು ಎಂದಷ್ಟೇ ಅರ್ಥವಾಗುತ್ತದೆ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೀಗೆ ಶ್ರೀಮಧ್ವಾಚಾರ್ಯರು ನಿರ್ಣಯವನ್ನು ನೀಡಿದ್ದಾರೆ.
ಇತ್ಯುಕ್ತ ಆಶು ಸ ತಥೈವ ಚಕಾರ ಕರ್ಣಃ
ಪೂರ್ವಂ ಹಿ ತಸ್ಯ ನಿಜರಾಜ್ಯಪದೈಕದೇಶಃ |
ದುರ್ಯೋಧನೇನ ವಿಹಿತೋ ಮಗಧಾಧಿರಾಜಂ
ಜಿತ್ವಾ ವೃಕೋದರಹೃತಃ ಪಿತುರೇವ ದತ್ತಃ ॥
ಜರಾಸಂಧ ಹೀಗೆ ಹೇಳಿದಾಗ ಕರ್ಣ ಬೇಗನೇ ಅಂಗರಾಜ್ಯವನ್ನು ಸ್ವೀಕರಿಸಿದ. ಹಿಂದೆ ಶಸಅತ್ರಭ್ಯಾಸಪ್ರದರ್ಶನಕಾಲದಲ್ಲಿ ದುರ್ಯೋಧನ ಕರ್ಣನಿಗೆ ಕೊಟ್ಟಿದ್ದುದು ಅವನ ಅಂಗರಾಜ್ಯದ ಒಂದು ಭಾಗ ಮಾತ್ರ. ಅದು ದಿಗ್ವಿಜಯಕಾಲದಲ್ಲಿ ಭೀಮ ಜರಾಸಂಧನನ್ನು ಗೆದ್ದು ಅವನಿಂದ ಅಪಹರಿಸಿ ಧೃತರಾಷ್ಟ್ರನಿಗೆ ಕೊಟ್ಟಿದ್ದನು.
ಅಂಗಾಧಿರಾಜ್ಯಮುಪಲಭ್ಯ ಜರಾಸುತಸ್ಯ
ಸ್ನೇಹಂ ಚ ಸೂರ್ಯಸುತ ಆಶು ಕುರೂನ್ ಜಗಾಮ |
ದೃಷ್ಟ್ವೈವ ತಂ ಮುಮುದಿರೇ ಧೃತರಾಷ್ಟ್ರಪುತ್ರಾ
ನಾನೇನ ತುಲ್ಯಮಭಿಜಗ್ಮುರತೋ ಹರಿಂ ಚ ॥200॥
ಹೀಗೆ ಅಂಗರಾಜ್ಯವನ್ನೂ ಜರಾಸಂಧನ ಸ್ನೇಹವನ್ನೂ ಸಂಪಾದಿಸಿ ಕರ್ಣನು ಬೇಗನೆ ಕೌರವರ ಬಳಿಗೆ ಬಂದನು. ಅವನನ್ನು ಕಂಡೊಡನೆ ಕೌರವರು ಆನಂದ- ಪಟ್ಟರು. ಅವನಿಗೆ ಶ್ರೀಕೃಷ್ಣನೂ ಸಮನಲ್ಲ ಎಂದುಕೊಂಡರು.
ಕರ್ಣನು ಅಂಗರಾಜ್ಯಾಧಿಪತಿ ಎಂದೇ ಪ್ರಸಿದ್ಧನಾಗಿದ್ದಾನೆ. ಇವನಿಗೆ ಬಂದ ಅಂಗರಾಜ್ಯದ ಬಗ್ಗೆ ವಿವರವನ್ನು ಹೀಗೆ ತಿಳಿಯಬೇಕು - ಕರ್ಣನ ವಂಶದಲ್ಲಿ ಅಂಗ ಎಂಬ ರಾಜನಿದ್ದನು. ಅವನಿಗೆ ಸಂಬಂಧಪಟ್ಟ ದೇಶವೇ ಅಂಗರಾಜ್ಯ ಎನಿಸಿದೆ. ಹಾಗಿದ್ದರೆ ಜರಾಸಂಧನ ಬಳಿ ಈ ಅಂಗರಾಜ್ಯವು ಹೇಗೆ ಬಂದಿತು? ಅವನೇಕೆ ಕರ್ಣನಿಗೆ ಇದನ್ನು ಕೊಟ್ಟನು? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯ- ಬೇಕೆಂದರೆ ಕರ್ಣನ ಪೂರ್ವಜರ ಸಂಕ್ಷೇಪ ಪರಿಚಯವನ್ನು ತಿಳಿಯಬೇಕಾಗುತ್ತದೆ. ಚಂದ್ರವಂಶದಲ್ಲಿ ನಹುಷನು ಹುಟ್ಟಿದನು, ಆ ನಹುಷನಿಗೆ ಯಯಾತಿಯು ಹುಟ್ಟಿದನು. ಆ ಯಯಾತಿಗೆ ನಾಕುಮಂದಿ ಮಕ್ಕಳಿದ್ದರು. ಅವರಲ್ಲಿ ಅನು ಎಂಬುವನೂ ಕೂಡ ಒಬ್ಬನಾಗಿದ್ದನು. ಯಯಾತಿರಾಜನ ಶಾಪದ ಬಲದಿಂದ ಅನು ಎಂಬ ಮಗನ ವಂಶವು ಮುಂದೆ ಕ್ಷತ್ರಿಯ ಪರಂಪರೆಯಲ್ಲಿ ಬರುವುದಿಲ್ಲ. ಸಾಂಕರ್ಯವನ್ನು ಹೊಂದಿ, ಸೂತವಂಶವಾಗಿ ವಿಭಾಗ ಹೊಂದುತ್ತದೆ. ಆ ಅನುರಾಜನ ಮಗನೇ ಸಭಾನರ. ಆ ಸಭಾನರಿಗೆ ಕಾಲನರನು, ಅವನಿಗೆ ಸಂಜಯನು ಹುಟ್ಟುತ್ತಾನೆ. ಇದೇ ವಂಶದಲ್ಲಿ ಹೋಮ ಎಂಬುವನು ಬರುತ್ತಾನೆ. ಅವನ ವಂಶದಲ್ಲೇ ಸುತಪ ಸಹ ಬರುತ್ತಾನೆ. ಅವನ ಮಗನೇ ಬಲಿಯಾಗಿದ್ದಾನೆ. ಆ ಬಲಿಗೆ ಅಂಗ, ವಂಗ, ಕಳಿಂಗ ಇತ್ಯಾದಿ ಮಕ್ಕಳು ಹುಟ್ಟುತ್ತಾರೆ. ಇವರಿಗೆ ಸಂಬಂಧಪಟ್ಟ ದೇಶಗಳೇ ಆಯಾ ಹೆಸರುಗಳಿಂದ ಪ್ರಸಿದ್ಧವಾಗುತ್ತವೆ. ಅಂಗನಿಗೆ ಘನಪಾನ ಎಂಬ ಮಗನು

ಹುಟ್ಟುತ್ತಾನೆ. ದಿವಿರಥ, ಧರ್ಮರಥ, ಮಿತ್ರರಥ, ಸದ್ಧರ್ಮ ಇವರೆಲ್ಲರೂ ಇದೇ ವಂಶದಲ್ಲಿ ಬಂದವರು. ಈ ಸದ್ಧರ್ಮನ ಮಗನೇ ಅಧಿರಥನು. ಈ ಅಧಿರಥನ ಸಾಕುಮಗನೇ ಕರ್ಣನಾಗಿದ್ದಾನೆ. ಭಾಗವತ ಪುರಾಣದ ಒಂಬತ್ತನೆಯ ಸ್ಕಂಧದ ಇಪ್ಪತ್ತನೆಯ ಅಧ್ಯಾಯದಲ್ಲಿ ಈ ವಂಶದ ವಿಸ್ತಾರವು ಪ್ರಾಪ್ತವಾಗಿದೆ. ಆದರೆ ಆ ವಂಶದ ಹೆಸರಿನಲ್ಲಿ ಸ್ವಲ್ಪ ವ್ಯತ್ಯಾಸವು ಕಾಣಿಸುತ್ತದೆ.
ಈ ಚಂದ್ರವಂಶವು ಕ್ಷತ್ರಿಯರ ವಂಶವಾಗಿದೆ. ಇದೇ ವಂಶದಲ್ಲಿ ಬಂದಿರುವ ಅಧಿರಥನು ಹೇಗೆ ಸೂತನಾದನು? ಎಂಬುದೇ ಇಲ್ಲಿ ಮೂಡುವ ಪ್ರಶ್ನೆ. ಉತ್ತರ- ವನ್ನು ಹೀಗೆ ತಿಳಿಯಬೇಕು - ಯಯಾತಿಯ ಶಾಪದಂತೆ ಸದ್ಧರ್ಮ ಅಥವಾ ಅವನ ಪೂರ್ವಿಕರಲ್ಲಿ ಯಾರೋ ಒಬ್ಬರು ಸೂತಜಾತಿಯ ಹೆಂಡತಿಯನ್ನು ವಿವಾಹವಾಗಿ- ದ್ದರು. ಅವಳಲ್ಲಿ ಹುಟ್ಟಿದ ವಂಶದಲ್ಲಿಯೇ ಅಧಿರಥನು ಬಂದಿದ್ದಾನೆ. ಆದ್ದರಿಂದ ಸೂತಪತ್ನಿಯಲ್ಲಿ ಹುಟ್ಟಿದ ಕಾರಣ ಅಧಿರಥನು ಸೂತಜಾತಿಯವನಾಗಿದ್ದಾನೆ. ಹಾಗಾಗಿ ಅವನ ಸಾಕುಮಗನಾದ ಕರ್ಣನೂ ಕೂಡ ಸೂತನೆಂದೇ ಪ್ರಸಿದ್ಧ- ನಾದನು.
ಈ ಅಧಿರಥನಿಗೆ ತನ್ನ ವಂಶದ ಪೂರ್ವಿಕನಾದ ಅಂಗನಿಗೆ ಸಂಬಂಧಪಟ್ಟ ಒಂದು ದೇಶದ ಆಧಿಪತ್ಯವು ದೊರಕಿರುತ್ತದೆ. ಆದರೆ ಜರಾಸಂಧನು ದಿಗ್ವಿಜಯ ಮಾಡುವ ಸಂದರ್ಭದಲ್ಲಿ ಈ ಅಂಗರಾಜ್ಯವನ್ನು ಅಧಿರಥನಿಂದ ವಶಪಡಿಸಿ- ಕೊಂಡಿದ್ದನು. ಪಾಂಡವರು ದ್ರೋಣಾಚಾರ್ಯರ ಬಳಿ ಶಸ್ತ್ರಾಭ್ಯಾಸ ಮಾಡುವ ಮೊದಲು ಭೀಮನು ಒಮ್ಮೆ ದಿಗ್ವಿಜಯ ಮಾಡಿದ್ದನು. ಆ ಸಂದರ್ಭದಲ್ಲಿ ಆ ಜರಾಸಂಧನಿಂದ ಆ ಅಂಗರಾಜ್ಯದ ಒಂದು ಭಾಗವನ್ನು ಗೆದ್ದು, ಧೃತರಾಷ್ಟ್ರನಿಗೆ ಭೀಮಸೇನನು ಅದನ್ನು ನೀಡಿದ್ದನು. ಅನಂತರ ಶಸ್ತ್ರಾಭ್ಯಾಸ ಪ್ರದರ್ಶನವನ್ನು ಮಾಡಿದಾಗ ಕರ್ಣನು ಅರ್ಜುನನ ಜೊತೆ ಸೋಲುತ್ತಾನೆ. ಆಗ ದುರ್ಯೋ- ಧನನು ಕರ್ಣನಿಗೆ ಸಾಂತ್ವನದ ಮಾತುಗಳನ್ನು ಹೇಳಿ ಈ ಅಂಗರಾಜ್ಯವನ್ನು ಕೊಡುತ್ತಾನೆ. ಭೀಮಸೇನನು ಧೃತರಾಷ್ಟ್ರನಿಗೆ ಜರಾಸಂಧನಿಂದ ಗೆದ್ದು ತಂದ ಯಾವ ಅಂಗರಾಜ್ಯವಿದೆಯೋ, ಅದನ್ನು ದುರ್ಯೋಧನನು ಈ ಸಂದರ್ಭದಲ್ಲಿ ಕರ್ಣನಿಗೆ ನೀಡುತ್ತಾನೆ. ಆದರೆ ಹಿಂದೊಮ್ಮೆ ದುರ್ಯೋಧನನ ಮೂಲಕ ಕರ್ಣನಿಗೆ ಅಂಗರಾಜ್ಯದ ಏಕದೇಶವು ಪ್ರಾಪ್ತವಾಗಿತ್ತು. ಈಗ ಜರಾಸಂಧನ ಜೊತೆ ಗೆದ್ದ ಬಳಿಕ ಉಳಿದ ಭಾಗವೂ ಕೂಡ ದೊರಕುತ್ತದೆ. ಹಾಗಾಗಿ ಸಂಪೂರ್ಣ ಅಂಗರಾಜ್ಯದ ಒಡೆತನವನ್ನು ಕರ್ಣನು ಸಂಪಾದನೆ ಮಾಡಿಕೊಳ್ಳುತ್ತಾನೆ. ಆದ್ದರಿಂದ ತಾತ್ಪರ್ಯನಿರ್ಣಯದ ಪ್ರಕಾರ ಚಂಪಾ ಎಂಬ ದೇಶವನ್ನು ದುರ್ಯೋಧನನು ಕೊಟ್ಟಿದ್ದನು ಎಂದು ಹೇಳುವುದು ವಿರುದ್ಧವಾಗುತ್ತದೆ. ಹಿಂದೆ ಅಂಗರಾಜ್ಯದ ಏಕದೇಶವನ್ನು ದುರ್ಯೋಧನನಿಂದ ಪಡೆದುಕೊಂಡಿದ್ದನು. ಈಗ ಜರಾಸಂಧನನ್ನು ಗೆದ್ದು ಉಳಿದ ಅರ್ಧಭಾಗವನ್ನೂ ಕೂಡ ಪಡೆದುಕೊಂಡನು. ಆದ್ದರಿಂದ  ಕರ್ಣನು `ಅಂಗರಾಜ್ಯಾಧಿಪತಿ' ಎಂಬುದಾಗಿ ಪ್ರಸಿದ್ಧಿಯನ್ನು ಹೊಂದಿ- ದನು ಎಂದು ತಿಳಿಯಬೇಕು.
ಏವಂ ಶಸ್ತ್ರಪ್ರತಾಪೇನ ಪ್ರಥಿತಃ ಸೋಽಭವತ್ ಕ್ಷಿತೌ |
ತ್ವದ್ಧಿತಾರ್ಥಂ ಸುರೇಂದ್ರೇಣ ಭಿಕ್ಷಿತೋ ವರ್ಮಕುಂಡಲೇ ॥8॥
ಹೀಗೆ ಕರ್ಣನು ತನ್ನಲ್ಲಿರುವ ಶಸ್ತ್ರಾಸ್ತ್ರಗಳ ಚಾತುರ್ಯದಿಂದ ಲೋಕದಲ್ಲಿ ವಿಖ್ಯಾತನಾದನು. ಇದನ್ನು ಕಂಡು ದೇವೇಂದ್ರನು ನಿಮ್ಮೆಲ್ಲರ ಹಿತಕ್ಕಾಗಿ ಅವನ ಬಳಿ ತೆರಳಿ ಜನ್ಮತಃ ಆಗತವಾದ ಕರ್ಣನ ಕವಚಕುಂಡಲಗಳೆರಡನ್ನು ಯಾಚನೆ ಮಾಡಿದನು.
ಸ ದಿವ್ಯೇ ಸಹಜೇ ಪ್ರಾದಾತ್ ಕುಂಡಲೇ ಪರಮಾರ್ಚಿತೇ |
ಸಹಜಂ ಕವಚಂ ಚೈವ ಮೋಹಿತೋ ದೇವಮಾಯಯಾ ॥9॥
ವಿಮುಕ್ತಃ ಕುಂಡಲಾಭ್ಯಾಂ ಚ ಸಹಜೇನ ಚ ವರ್ಮಣಾ |
ನಿಹತೋ ವಿಜಯೇನಾಜೌ ವಾಸುದೇವಸ್ಯ ಪಶ್ಯತಃ ॥10॥
ಅತ್ಯಂತ ಉದಾರಿಯಾದ ಆ ಕರ್ಣನು, ಆ ಕವಚ ಮತ್ತು ಕುಂಡಲಗಳೆರಡನ್ನೂ ತನ್ನ ದೇಹದಿಂದ ಭೇದನೆ ಮಾಡಿ, ದಾನ ಮಾಡಿಬಿಟ್ಟನು. ದೇವತೆಗಳ ಮಾಯೆಗೆ ಮರುಳಾಗಿ ತನ್ನ ಸಹಜವಾದ ಅಂಗದಂತಿದ್ದ. ಆ ಕವಚ ಕುಂಡಲಗಳೆರಡನ್ನೂ ಕಿತ್ತು ದಾನ ಮಾಡಿದ್ದರಿಂದಲೇ ಶ್ರೀಕೃಷ್ಣನ ಎದುರಿನಲ್ಲಿ ಅರ್ಜುನನಿಂದ ಮೃತನಾದನು.
ಬ್ರಾಹ್ಮಣಸ್ಯಾಭಿಶಾಪೇನ ರಾಮಸ್ಯ ಚ ಮಹಾತ್ಮನಃ |
ಕುಂತ್ಯಾಶ್ಚ ವರದಾನೇನ ಮಾಯಯಾ ಚ ಶತಕ್ರತೋಃ ॥11॥
ಭೀಷ್ಮಾವಮಾನಾತ್ ಸಂಖ್ಯಾಯಾಂ ರಥಾನಾಮರ್ಧಕೀರ್ತನಾತ್ |
ಶಲ್ಯಾತ್ ತೇಜೋವಧಾಚ್ಚಾಪಿ ವಾಸುದೇವನಯೇನ ಚ ॥12॥
ಧರ್ಮರಾಜನೇ! ಆ ಕರ್ಣನ ಮರಣಕ್ಕೆ ಅನೇಕ ಕಾರಣಗಳಿವೆ. ಬ್ರಾಹ್ಮಣನ ಶಾಪ, ಮಹಾತ್ಮನಾದ ಪರಶುರಾಮನ ಶಾಪ, ಕುಂತಿಗೆ ವರದಾನ ಮಾಡಿದ್ದು, ಇಂದ್ರನಿಗೆ ಕವಚ-ಕುಂಡಲಗಳನ್ನು ದಾನಮಾಡಿದ್ದು, ರಥಿಕರು, ಅತಿರಥರು ಎಷ್ಟು ಮಂದಿ ಇದ್ದಾರೆಂದು ಗಣನೆಯನ್ನು ಮಾಡುವ ಸಂದರ್ಭದಲ್ಲಿ ಕರ್ಣನನ್ನು ಅರ್ಧರಥನೆಂದು ಹೇಳಿ ಭೀಷ್ಮಾಚಾರ್ಯರು ಕರ್ಣನನ್ನು ಅವಮಾನಗೊಳಿಸಿದ್ದು, ಅತ್ಯಂತ ಉತ್ಸಾಹದಲ್ಲಿ ಯುದ್ಧವನ್ನು ಮಾಡಲು ಹೊರಟಾಗ ಶಲ್ಯನು ತೇಜೋವಧೆ ಮಾಡಿದ್ದು ಇವೆಲ್ಲವೂ ಅವನ ಮರಣಕ್ಕೆ ಕಾರಣವಾಗಿವೆ. ಜೊತೆಯಲ್ಲಿ ಶ್ರೀಕೃಷ್ಣ- ಪರಮಾತ್ಮನ ಯುದ್ಧನೀತಿಯು ಕರ್ಣನ ಅವಸಾನಕ್ಕೆ ಮುಖ್ಯಕಾರಣವಾಯಿತು.
ರುದ್ರಸ್ಯ ದೇವರಾಜಸ್ಯ ಯಮಸ್ಯ ವರುಣಸ್ಯ ಚ |
ಕುಬೇರದ್ರೋಣಯೋಶ್ಚೈವ ಕೃಪಸ್ಯ ಚ ಮಹಾತ್ಮನಃ ॥13॥
ಅಸ್ತ್ರಾಣಿ ದಿವ್ಯಾನ್ಯಾದಾಯ ಯುಧಿ ಗಾಂಡೀವಧನ್ವನಾ |
ಹತೋ ವೈಕರ್ತನಃ ಕರ್ಣೌ ದಿವಾಕರಸಮದ್ಯುತಿಃ ॥14॥
ಅಷ್ಟೇ ಅಲ್ಲದೇ ಅರ್ಜುನನು ಆ ಯುದ್ಧದಲ್ಲಿಯೂ ಕೂಡ ಇಂದ್ರ, ರುದ್ರ, ಯಮ, ವರುಣ, ಕುಬೇರ, ಕೃಪ, ದ್ರೋಣ ಇವರಿಂದೆಲ್ಲಾ ಪಡೆದುಕೊಂಡ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಗಾಂಡೀವವೆಂಬ ದಿವ್ಯವಾದ ಧನುಸ್ಸಿನ ಸಹಾಯದಿಂದಲೇ ಸೂರ್ಯಸಮಾನವರ್ಚಸ್ವಿಯಾದ ವೈಕರ್ತನಾದ ಕರ್ಣನನ್ನು ಸಂಹಾರ ಮಾಡಿದನು.
ಏವಂ ಶಪ್ತಸ್ತವ ಭ್ರಾತಾ ಬಹುಭಿಶ್ಚಾಪಿ ವಂಚಿತಃ |

ನ ಶೋಚ್ಯಃ ಸ ನರವ್ಯಾಘ್ರೋ ಯುದ್ಧೇ ಹಿ ನಿಧನಂ ಗತಃ ॥15॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚಮೋಽಧ್ಯಾಯಃ ॥5॥
ಓ ಧರ್ಮರಾಜನೇ! ನಿನ್ನ ಅಣ್ಣನಾದ ಆ ಕರ್ಣನು ಹೀಗೆ ಅನೇಕರ ಶಾಪಕ್ಕೆ ಭಾಗಿಯಾಗಿದ್ದನು. ತಾನು ಅನೇಕರಿಗೆ ಮಾಡಿದ ವಂಚನೆಯಿಂದಲೂ ಯುದ್ಧದಲ್ಲಿ ಮೃತನಾದನು. ಆದ್ದರಿಂದ ನೀನು ಅವನ ಮರಣದ ವಿಷಯದಲ್ಲಿ ದುಃಖವನ್ನು ಪಡುವುದು ಯುಕ್ತವಾಗುವುದಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 5ನೆಯ ಅಧ್ಯಾಯವು ಮುಗಿಯಿತು.
6. ಆರನೆಯ ಅಧ್ಯಾಯ
ಕರ್ಣವಧೆಯಿಂದ ದುಃಖಿತನಾದ ಯುಧಿಷ್ಠಿರನಿಗೆ ಕುಂತಿಯಿಂದ ಸಮಾಧಾನ. ಸ್ತ್ರೀಯರಲ್ಲಿ ರಹಸ್ಯವು ನಿಲ್ಲಬಾರದೆಂದು ಯುಧಿಷ್ಠಿರನಿಂದ ಶಾಪಪ್ರದಾನ.
ವೈಶಂಪಾಯನಃ
ಏತಾವದುಕತ್ವಾ ದೇವರ್ಷಿರ್ವಿರರಾಮ ಸ ನಾರದಃ |
ಯುಧಿಷ್ಠಿರಸ್ತು ರಾಜರ್ಷಿರ್ದಧ್ಯೌ ಶೋಕಪರಿಪ್ಲುತಃ ॥1॥
ವೈಶಂಪಾಯನ ಮಹಾರಾಜನೇ ! ದೇವರ್ಷಿಗಳಾದ ನಾರದರು ಯುಧಿಷ್ಠಿರ- ನಿಗೆ ಕರ್ಣನ ವೃತ್ತಾಂತವನ್ನು ಇಷ್ಟು ತಿಳಿಸಿ ಸುಮ್ಮನಾದರು. ಆಗ ರಾಜರ್ಷಿಯಾದ
ಯುಧಿಷ್ಠಿರನು ದುಃಖದಿಂದ ವ್ಯಾಕುಲಗೊಂಡವನಾಗಿ ಕರ್ಣನನ್ನು ಕೊಂದುದರ ಬಗ್ಗೆ ಯೋಚಿಸುತ್ತಿದ್ದನು.
ತಂ ದೀನಮನಸಂ ವೀರಮಧೋವದನಮಾತುರಮ್ |
ನಿಃಶ್ವಸಂತಂ ಯಥಾ ನಾಗಂ ಪರ್ಯಶ್ರುನಯನಂ ತಥಾ ॥2॥
ಕುಂತೀ ಶೋಕಪರಿತಾಂಗೀ ದುಃಖೋಪಹತಚೇತನಾ |
ಅಬ್ರುವೀನ್ಮಧುರಾಭಾಷಾ ಕಾಲೇ ವಚನಮರ್ಥವತ್ ॥3॥
ಚಿಂತಿಸುತ್ತಿರುವ ಆ ಸಂದರ್ಭದಲ್ಲಿ ಯುಧಿಷ್ಠಿರನು ದೈನ್ಯಾವಸ್ಥೆಯನ್ನು ಹೊಂದಿದ್ದನು. ಮತ್ತು ದುಃಖದಿಂದ ಪರಿತಪಿಸುತ್ತಿದ್ದನು. ಹಾವಿನಂತೆ ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಿದ್ದನು. ಕಣ್ಣುಗಳಿಂದ ಅಶ್ರುಬಿಂದುಗಳು ಬೀಳುತ್ತಿದ್ದವು. ಇಂಥ ಸ್ಥಿತಿಯಲ್ಲಿರುವ ಧರ್ಮರಾಜನನ್ನು ನೋಡಿ, ಕುಂತಿಗೆ ಬಹಳ ದುಃಖವಾಯಿತು. ಆಗ ಸಮಯೋಚಿತವಾದ ಮೃದುವಾದ ಮಾತುಗಳಿಂದ ಆ ಯುಧಿಷ್ಠಿರನಿಗೆ ಹೀಗೆ ಅರ್ಥಪೂರ್ಣವಾದ ಮಾತುಗಳಿಂದ ಸಾಂತ್ವನವನ್ನು ಹೇಳಿದಳು.
ಯುಧಿಷ್ಠಿರ ಮಹಾಬಾಹೋ ನೈನಂ ಶೋಚಿತುಮರ್ಹಸಿ |
ಜಹಿ ಶೋಕಂ ಮಹಾಪ್ರಾಜ್ಞ ಶೃಣು ಚೇದಂ ವಚೋ ಮಮ ॥4॥
ಯುಧಿಷ್ಠಿರನೇ! ಮಹಾಬಾಹುವೇ! ಅತ್ಯಂತ ಮೇಧಾವಿ ಕರ್ಣನ ವಿಷಯದಲ್ಲಿ ಇಷ್ಟೊಂದು ದುಃಖಿಸುವ ಅವಶ್ಯಕತೆಯಿಲ್ಲ. ದುಃಖವನ್ನು ಪರಿತ್ಯಾಗ ಮಾಡು. ನನ್ನ ಮಾತನ್ನು ಶ್ರದ್ಧೆಯಿಂದ ಕೇಳು.
ಯತಿತಃ ಸ ಮಯಾ ಪೂರ್ವಂ ಭ್ರಾತ್ರ್ಯಂ ಜ್ಞಾಪಯಿತುಂ ತವ |
ಭಾಸ್ಕರೇಣ ಚ ದೇವೇನ ಪಿತ್ರಾ ಧರ್ಮಭೃತಾಂ ವರ ॥5॥
ಓ ಧರ್ಮಮೂರ್ತಿಗಳಲ್ಲಿ ಶ್ರೇಷ್ಠನಾದವನೇ! ಹಿಂದೆಯೇ ನಾನು ನಿನ್ನ ಸಹೋ- ದರನಾದ ಕರ್ಣನಿಗೆ ಈ ಎಲ್ಲಾ ವಿಷಯವನ್ನು ಹೇಳಿದ್ದೆ. ನಿಮ್ಮಲ್ಲಿ ಸಹೋದರ ಭಾವವನ್ನು ಹೊಂದಿ, ಬದುಕಲು ಉಪದೇಶಿಸಿದ್ದೆ. ನಾನಷ್ಟೇ ಅಲ್ಲದೇ ಅವನ ತಂದೆಯಾದ ಸೂರ್ಯದೇವನೂ ಕೂಡ ನಿಮ್ಮ ಜೊತೆ ಸಹೋದರಭಾವದಿಂದ ಬದುಕಬೇಕೆಂದು ಬುದ್ಧಿ ಹೇಳಿದ್ದನು.
ಯದ್ವಾಚ್ಯಂ ಹಿತಕಾಮೇನ ಸುಹೃದಾ ಭೂತಿಮಿಚ್ಛತಾ |
ತಥಾ ದಿವಾಕರೇಣೋಕ್ತಃ ಸ್ವಪ್ನಾಂತೇ ಮಮ ಚಾಗ್ರತಃ ॥6॥
ಹಿತವನ್ನು ಅಪೇಕ್ಷಿಸುವ ಆಪ್ತಮಿತ್ರನು ತನ್ನ ನೆಚ್ಚಿನ ಸ್ನೇಹಿತರಿಗೆ ಹೇಗೆ ಹಿತವನ್ನೇ ಹೇಳುತ್ತಾನೋ, ಅದರಂತೆ ತಂದೆಯಾದ ಸೂರ್ಯನೂ ಕೂಡ ನನ್ನ ಮುಂದೆಯೇ ಅವನಿಗೆ ಹಿತನುಡಿಗಳನ್ನು ಹೇಳಿದ್ದನು. ಅಷ್ಟೇ ಅಲ್ಲದೇ ಸ್ವಪ್ನದಲ್ಲಿಯೂ ಕೂಡ ಬಂದು ಅವನಿಗೆ ಬುದ್ಧಿ ಹೇಳಿದ್ದನು.
ನಚೈನಮಶಕದ್ ಭಾನುರಹಂ ವಾ ಸ್ನೇಹಕಾರಣೈಃ |
ಪುರಾ ಪ್ರತ್ಯನುನೇತುಂ ವಾ ನೇತುಂ ವಾಪ್ಯೇಕತಾಂ ತ್ವಯಾ ॥7॥
ಆದರೆ ಕರ್ಣನು ಮಾತ್ರ ನನ್ನ ಮಾತನ್ನು, ಅಥವಾ ಸೂರ್ಯದೇವನ ಮಾತನ್ನು ಕೇಳಲಿಲ್ಲ. ದುರ್ಯೋಧನನ ಮೇಲೆ ಅವನಿಗೆ ಗಾಢವಾದ ಸ್ನೇಹವಿತ್ತು. ಆದ್ದರಿಂದ ಆ ಕರ್ಣನನ್ನು ನಿಮ್ಮ ಜೊತೆ ಸೇರಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಸೂರ್ಯ- ನಿಂದಲೂ ಕೂಡ ಸಾಧ್ಯವಾಗಲಿಲ್ಲ.
ತತಃ ಕಾಲಪರೀತಃ ಸ ವೈರಸ್ಯೋದ್ಧರಣೇ ರತಃ |
ಪ್ರತೀಪಕಾರೀ ಯುಷ್ಮಾಕಮಿತಿ ಚೋಪೇಕ್ಷಿತೋ ಮಯಾ ॥8॥
ಅನಂತರ ಕಾಲಪ್ರೇರಿತನಾದ ಕರ್ಣನು ನಿಮ್ಮ ಜೊತೆ ಸ್ನೇಹ ಮಾಡುವುದಿರಲಿ, ವೈರವನ್ನೇ ಹೆಚ್ಚು ಹೆಚ್ಚು ಬೆಳೆಸಿದನು. ಅದರಲ್ಲೇ ಆಸಕ್ತನಾದನು. ನಿಮಗೆ ಪ್ರತೀಕಾರ ಮಾಡುವುದರಲ್ಲೇ ಆಸಕ್ತನಾದನು. ಆದ್ದರಿಂದ ಅವನ ಈ ದುಷ್ಟಗುಣಗಳನ್ನು ಕಂಡು ನಾನು ಅವನನ್ನು ಉಪೇಕ್ಷೆ ಮಾಡಿದನು.
ಇತ್ಯುಕ್ತೋ ಧರ್ಮರಾಜಸ್ತು ಮಾತ್ರಾ ಬಾಷ್ಪಾಕುಲೇಕ್ಷಣಃ |
ಉವಾಚ ವಾಕ್ಯಂ ಧರ್ಮಾತ್ಮಾ ಶೋಕವ್ಯಾಕುಲಚೇತನಃ |
ಭವತ್ಯಾ ಗೂಢಮಂತ್ರತ್ವಾತ್ ಪೀಡಿತೋಽಸ್ಮೀತ್ಯುವಾಚ ತಾಮ್ ॥9॥

ತಾಯಿಯಾದ ಕುಂತಿಯು ಇಷ್ಟು ಹೇಳಿದರೂ ಕೂಡ ಧರ್ಮರಾಜನಿಗೆ ಸಮಾಧಾನವಾಗಲಿಲ್ಲ. ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಬಹಳ ದುಃಖದಿಂದ ಆ ತಾಯಿಯನ್ನು ಕುರಿತು ಹೀಗೆ ಹೇಳುತ್ತಾನೆ - ಅಮ್ಮಾ ! ನೀನು ಈ ರಹಸ್ಯವನ್ನು ಮುಚ್ಚಿಟ್ಟು ನನಗೆ ಬಹಳ ಸಂಕಟವನ್ನು ಉಂಟುಮಾಡಿರುವಿ.

ಶಶಾಪ ಚ ಮಹಾತೇಜಾಃ ಸರ್ವಲೋಕೇಷು ಚ ಸ್ತ್ರಿಯಃ |

ನ ಗುಹ್ಯಂ ಧಾರಯಿಷ್ಯಂತೀತ್ಯತಿದುಃಖಸಮನ್ವಿತಃ ॥10॥

ಇಷ್ಟು ಹೇಳಿದ ಮಹಾತೇಜಸ್ವಿಯಾದ ಧರ್ಮರಾಜನು ತನ್ನ ದುಃಖವನ್ನು ತಡೆದುಕೊಳ್ಳಲಾಗದೇ, ಸಮಸ್ತ ಸ್ತ್ರೀಕುಲಕ್ಕೆ ಶಾಪವನ್ನು ನೀಡಿದನು. ``ಇನ್ನು ಮುಂದೆ ಪ್ರಪಂಚದಲ್ಲಿ ಯಾವ ಸ್ತ್ರೀಯರೂ ಕೂಡ ರಹಸ್ಯ ವಿಚಾರಗಳನ್ನು ಗುಟ್ಟಾಗಿ ಇಟ್ಟು- ಕೊಳ್ಳುವುದಿಲ್ಲ.

ಸ ರಾಜಾ ಪುತ್ರಪೌತ್ರಾಣಾಂ ಸಂಬಂಧಿಸುಹೃದಾಂ ತಥಾ |

ಸ್ಮರನ್ನುದ್ವಿಗ್ನಹೃದಯೋ ಬಭೂವಾಸ್ವಸ್ಥಚೇತನಃ ॥11॥

ಹೀಗೆ ಆ ಧರ್ಮರಾಜನು ಯುದ್ಧದಲ್ಲಿ ಮರಣವನ್ನು ಹೊಂದಿದ ತನ್ನ ಪುತ್ರ ಪೌತ್ರಾದಿಗಳನ್ನು ಮತ್ತೆ ಮತ್ತೆ ನೆನೆಸಿಕೊಂಡನು. ಉದ್ವಿಗ್ನವಾದ ಹೃದಯವುಳ್ಳವನಾಗಿ ಬಂಧುವರ್ಗದ ವಿಯೋಗದಿಂದ ಅತ್ಯಂತ ಅಸ್ವಸ್ಥನಾದನು.

ತತಃ ಶೋಕಪರೀತಾತ್ಮಾ ಸಧೂಮ ಇವ ಪಾವಕಃ |

ನಿರ್ವೇದಮಕರೋದ್ಧೀಮಾನ್ ರಾಜಾ ಸಂತಾಪಪೀಡಿತಃ ॥12॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಷಷ್ಠೋಽಧ್ಯಾಯಃ ॥

ಹೊಗೆಯಾಡುವ ಬೆಂಕಿಯಂತೆ ಮನಸ್ಸಿನ ಒಳಗೆ ಸಂಕಟದಿಂದ ಕುದಿಯುತ್ತಾ ರಾಜ್ಯದ ವಿಷಯದಲ್ಲಿ ಮತ್ತು ತನ್ನ ಜೀವನದ ಬಗ್ಗೆ ಜಿಹಾಸೆಯನ್ನು ಹೊಂದಿದನು.

ರಾಜಧರ್ಮಪರ್ವಕನ್ನಡಾನುವಾದದಲ್ಲಿ 6ನೆಯ ಅಧ್ಯಾಯವು ಮುಗಿಯಿತು.

*****

7. ಏಳನೆಯ ಅಧ್ಯಾಯ

ಯುಧಿಷ್ಠಿರನು ಕರ್ಣನ ವಧೆಯಿಂದ ಅತ್ಯಂತ ಖಿನ್ನನಾದನು. ತನ್ನ ಆತಂಕವನ್ನು ಅರ್ಜುನನ ಜೊತೆ ಪ್ರಕಟ ಪಡಿಸಿದನು. ರಾಜ್ಯವನ್ನು ಪರಿತ್ಯಾಗ ಮಾಡಿ, ಕಾಡಿಗೆ ಹೋಗುತ್ತೇನೆಂದು ತಿಳಿಸಿದನು.

ವೈಶಂಪಾಯನಃ

ಯುಧಿಷ್ಠಿರಸ್ತು ಧರ್ಮಾತ್ಮಾ ಶೋಕವ್ಯಾಕುಲಚೇತನಃ |

ಶುಶೋಚ ದುಃಖಸಂತಪ್ತಃ ಸ್ಮೃತ್ವಾ ಕರ್ಣಂ ಮಹಾರಥಮ್ ॥1॥

ವೈಶಂಪಾಯನರು ಜನಮೇಜಯರಾಜನೇ ! ಧರ್ಮಸ್ವರೂಪನಾದ ಆ ಯುಧಿಷ್ಠಿರನಿಗೆ ತನ್ನ ತಾಯಿಯು ಅಷ್ಟು ಬಗೆಯಲ್ಲಿ ಸಮಾಧಾನ ಮಾಡಿದರೂ ಕೂಡ ಸಮಾಧಾನವಾಗಲಿಲ್ಲ. ಮತ್ತಷ್ಟು ದುಃಖದಿಂದ ಕೊರಗುತ್ತಲೇ ಇದ್ದನು. ಮೃತನಾದ ಆ ಕರ್ಣನನ್ನು ಮತ್ತೆ ಮತ್ತೆ ನೆನೆಸಿಕೊಂಡು ದುಃಖದಿಂದ ಪರಿತಪಿಸಿ- ದನು.

ಆವಿಷ್ಟೋ ದುಃಖಶೋಕಾಭ್ಯಾಂ ನಿಃಶ್ವಸಂಶ್ಚ ಪುನಃಪುನಃ |

ದೃಷ್ಟ್ವಾರ್ಜುನಮುವಾಚೇದಂ ವಚನಂ ಶೋಕಕರ್ಶಿತಃ ॥2॥

ಬಹಳವಾದ ದುಃಖದಿಂದ ಹಾಗೂ ಶೋಕದಿಂದ ಪುನಃ ಪುನಃ ನಿಟ್ಟುಸಿರು ಬಿಡುತ್ತಾ ಪಕ್ಕದಲ್ಲಿ ಕುಳಿತ ಅರ್ಜುನನ್ನು ಕಂಡು, ದುಃಖದ ಮಾತುಗಳನ್ನು ಹೀಗೆ ಹೇಳಿದನು -

ಯದ್ ಭೈಕ್ಷಮಾಚಾರಿಷ್ಯಾಮ ವೃಷ್ಣ್ಯಂಧಕಪುರೇ ವಯಮ್ |

ಜ್ಞಾತೀನ್ ನಿಷ್ಪುರುಷಾನ್ ಕೃತ್ವಾ ನೇಮಾಂ ಪ್ರಾಪ್ಸ್ಯಾಮ ದುರ್ಗತಿಮ್ ॥3॥

ಅರ್ಜುನನೇ! ಒಂದು ವೇಳೆ ನಾವು ಸರಿಯಾಗಿ ಯೋಚನೆಯನ್ನು ಮಾಡಿ, ವೃಷ್ಣ್ಯಂಧಕನಗರಗಳಲ್ಲಿ ಭಿಕ್ಷಾಟನೆಯನ್ನೇ ಮಾಡುತ್ತಿದ್ದರೆ ನಮ್ಮ ಜ್ಞಾತಿಬಂಧುಗಳನ್ನು ಹೀಗೆ ಕೊಲ್ಲುವ ಪರಿಸ್ಥಿತಿ ಬರುತ್ತಿರಲಿಲ್ಲ. ಅವರನ್ನೆಲ್ಲಾ ಕೊಂದು ನಾವು ಇಂಥ ಕೆಟ್ಟ ದುಸ್ಥಿತಿಗೆ ಈಡಾಗುತ್ತಿರಲಿಲ್ಲ.

ಅಮಿತ್ರಾ ನಃ ಸಮೃದ್ಧಾರ್ಥಾ ವೃತ್ತಾರ್ಥಾಃ ಕುರವಃ ಕಿಲ |

ಆತ್ಮಾನಮಾತ್ಮನಾ ಹತ್ವಾ ಕಿಂ ಧರ್ಮಫಲಮಾಪ್ನುಮಃ ॥4॥

ನಮ್ಮ ಶತ್ರುಗಳೆಲ್ಲರೂ ಕೃತಕೃತ್ಯರಾದರು. ಕ್ಷತ್ರಿಯ ಧರ್ಮವನ್ನು ಪರಿಪಾಲನೆ ಮಾಡಿ, ಪುಣ್ಯವನ್ನು ಗಳಿಸಿ ಉತ್ತಮಗತಿಯನ್ನು ಹೊಂದಿದರು. ಆದರೆ ನಾವು ಅದಕ್ಕೆ ವಿರುದ್ಧವಾಗಿ ನಮ್ಮನ್ನು ನಾವೇ ಕೊಂದು ಕೊಂಡೆವು. ಹೀಗಿರುವಾಗ ನಮ್ಮ ಧರ್ಮದ ಫಲವನ್ನು ಹೊಂದಲು ನಾವು ಹೇಗೆ ಸಾಧ್ಯ ?

ಟಿಪ್ಪಣಿ- ಅಮಿತ್ರಾ ನ ಸಮೃದ್ಧಾರ್ಥಾ ವೃತ್ತಾರ್ಥಾಃ ಕುರವಃ ಕಿಲ ಇತ್ಯತ್ರ ವೃತ್ತಾರ್ಥಾಃ ಪ್ರವೃತ್ತಸರ್ವಾರ್ಥಾಃ ಕುರವಃ ಅಮಿತ್ರಾಃ ಕಿಲ ಅಸ್ಮಾಭಿರ್ನಾಶಿತತ್ವಾತ್ ಸಮೃದ್ಧಾ ನ ಕಿಲ | ಏವಂಚ ಆತ್ಮನಾ ಆತ್ಮಾನಂ ಸ್ವಶರೀರಸಮಾನಂ ಕುರುವಂಶಂ ಹತ್ವಾ ಕಿಂ ಧರ್ಮಫಲಮಾಪ್ನುಮ ಇತಿ ಯೋಜನಾ ॥

ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಮೌರಸಮ್ |

ಧಿಗಸ್ತ್ವಮರ್ಷಂ ಯೇನೇಮಾಮಾಪದಂ ಗಮಿತಾ ವಯಮ್ ॥5॥

ಕ್ಷಾತ್ರಧರ್ಮಕ್ಕೆ ಧಿಕ್ಕಾರ! ಕ್ಷತ್ರಿಯರ ಸೇನಾಬಲಕ್ಕೆ ಧಿಕ್ಕಾರ! ಕ್ಷತ್ರಿಯರ ಪೌರುಷಕ್ಕೆ ಧಿಕ್ಕಾರ! ಆ ಸೇಡು ಸಿಟ್ಟುಗಳಿಗೂ ಧಿಕ್ಕಾರ! ಯಾವುದನ್ನು ಹೊಂದಿ ನಾವಿಂದು ಇಂಥ ಆಪತ್ತಿಗೆ ಗುರಿಯಾಗಿದ್ದೇವೆ.

ಸಾಧು ಕ್ಷಮಾ ದಮಃ ಶೌಚಮವೈರೋಧ್ಯಮಮತ್ಸರಃ |

ಅಹಿಂಸಾ ಸತ್ಯವಚನಂ ನಿತ್ಯಾನಿ ವನಚಾರಿಣಾಮ್ ॥6॥

ನಿಜವಾಗಿಯೂ ವನವಾಸದಲ್ಲಿರುವವರ ಕ್ಷಮೆಯೇ ಜಯಿಸುತ್ತದೆ. ಜಿತೇಂದ್ರಿ- ಯತ್ವ, ಶುಚಿತ್ವ ಬೇರೆಯವರಲ್ಲಿ ದ್ವೇಷಮಾತ್ಸರ್ಯಗಳಿಲ್ಲದಿರುವಿಕೆ, ಅಹಿಂಸೆ, ಸತ್ಯ ಇವುಗಳೇ ಶ್ರೇಷ್ಠವಾಗಿವೆ. ಮತ್ತು ನಿತ್ಯಧರ್ಮಗಳಾಗಿವೆ.
ವಯಂ ತು ಲೋಭಾನ್ಮೋಹಾಚ್ಚ ದಂಭಂ ಮಾನಂ ಚ ಸಂಶ್ರಿತಾಃ |
ಇಮಾಮವಸ್ಥಾಮಾಪನ್ನಾ ರಾಜ್ಯಲೇಶಬುಭುಕ್ಷಯಾ ॥7॥
ಆದರೆ ನಾವು ಲೋಭ, ಮೋಹ ಇವುಗಳಿಗೆ ತುತ್ತಾಗಿ ಡಂಭದಿಂದ ಮತ್ತು ದುರಭಿಮಾನದಿಂದ ಇಂಥ ದುರವಸ್ಥೆಯನ್ನು ಹೊಂದಿದ್ದೇವೆ.
ತ್ರೈಲೋಕ್ಯಸ್ಯಾಪಿ ರಾಜ್ಯೇನ ನಾಸ್ಮಾನ್ ಕಶ್ಚಿತ್ ಪ್ರಹರ್ಷಯೇತ್ |
ಬಾಂಧವಾನ್ನಿಹತಾನ್ ದೃಷ್ಟ್ವಾ ಪೃಥಿವ್ಯಾಮಾಮಿಷೈಷಿಣಃ ॥8॥
ಅರ್ಜುನನೇ! ಭೂಮಿಯ ಅಪೇಕ್ಷೆಯಿಂದ ನಮ್ಮ ಬಂಧುಗಳನ್ನು ನಾವು ನಮ್ಮ ಕೈಯ್ಯಾರೆ ಕೊಂದಿದ್ದೇವೆ. ಇಂಥ ನಮಗೆ ಮೂರು ಲೋಕಗಳ ಆಧಿಪತ್ಯವನ್ನೇ ಕೊಟ್ಟರೂ ನಮ್ಮನ್ನು ಸಂತೋಷ ಪಡಿಸಲು ಯಾರಿಗೂ ಸಾಧ್ಯವಿಲ್ಲ.
ತೇ ವಯಂ ಪೃಥಿವೀಹೇತೋರವಧ್ಯಾನ್ ಪೃಥಿವೀಸಮಾನ್ |
ಸಂಪರಿತ್ಯಜ್ಯ ಜೀವಾಮೋ ಹೀನಾರ್ಥಾ ಹತಬಾಂಧವಾಃ ॥9॥
ಭೂಮಿಯ ಆಸೆಯಿಂದ ಅನೇಕ ರಾಜರುಗಳನ್ನು ನಾವು ಕೊಂದಿದ್ದಾಯಿತು. ಯಾರನ್ನು ಕೊಲ್ಲಬಾರದೋ ಅವರನ್ನೆಲ್ಲಾ ಕೊಂದು, ಹಣವನ್ನು, ಸಂಪತ್ತನ್ನು, ಬಂಧುಗಳನ್ನು ಕಳೆದುಕೊಂಡು ನಾವಿಂದು ಬದುಕಬೇಕಾಗಿದೆ.
ಆಮಿಷೇ ಗೃಧ್ಯಮಾನಾನಾಮಶುಭಂ ವೈ ಶುನಾಮಿವ |
ಆಮಿಷಂ ಚೈವ ನೋ ನಷ್ಟಮಾಮಿಷಸ್ಯ ಚ ಭೋಜಿನಾಮ್ ॥10॥
ಒಂದು ಮಾಂಸದ ತುಂಡಿಗೆ ಆಸೆಪಟ್ಟು ಕಚ್ಚಾಡುವ ನಾಯಿಗಳಂತೆ ನಾವು ರಾಜ್ಯಕ್ಕಾಗಿ ಹೊಡೆದಾಡಿದ್ದೇವೆ. ಇಂಥ ಅಮಂಗಲಸ್ಥಿತಿಯನ್ನು ತಂದುಕೊಂಡಿದ್ದೇವೆ. ಆ ನಾಯಿಗಳು ತಮ್ಮೊಳಗೆ ಜಗಳವಾಡಿ ಗೆದ್ದಮೇಲೆ ಆಹಾರವನ್ನು ತಿಂದು ಸುಖ- ಪಡುತ್ತವೆ. ಆದರೆ ನಾವಿಂದು ಎಲ್ಲಾ ಬಂಧುಗಳನ್ನು ಕಳೆದುಕೊಂಡು ರಾಜ್ಯ- ಭೋಗವೂ ಕೂಡ ಇಷ್ಟವಿಲ್ಲದಂತಾಗಿದೆ. ಇದನ್ನು ಭೋಗಿಸಲು ನಮ್ಮಿಂದ ಸಾಧ್ಯವೇ ಇಲ್ಲ.
ಆಮಿಷಂ ಚೈವ ನೋ ನಷ್ಟಮಾಮಿಷಸ್ಯ ಚ ಭೋಜಿನಾಮ್ ಇತ್ಯತ್ರ ಆಮಿಷಸ್ಯ ಆಮಿಷಪ್ರಾಯಸ್ಯ ರಾಜ್ಯಸ್ಯ ಭೋಜಿನಾಂ ನಃ ಆಮಿಷಂ ಆಮಿಷಸ್ಥಾನೀಯಂ ರಾಜ್ಯಂ ನಷ್ಟಂ ಹತಬಂಧುಜನತ್ವಾತ್ ನಷ್ಟಪ್ರಾಯಮ್॥
ನ ಪೃಥಿವ್ಯಾ ಸಕಲಯಾ ನ ಸುವರ್ಣಸ್ಯ ರಾಶಿಭಿಃ |
ನ ಗವಾಶ್ವೇನ ಸರ್ವೇಣ ತೇ ತ್ಯಾಜ್ಯಾ ಯ ಇಮೇ ಹತಾಃ ॥11॥
ಈ ಸಮಗ್ರಭೂಮಿಯನ್ನು ಸುವರ್ಣದ ರಾಶಿಗಳನ್ನು ಗಜ, ತುರಗ ಇವುಗಳ ಸಮೂಹವನ್ನು ಪ್ರತಿಫಲವಾಗಿ ಪಡೆಯಬಹುದು. ಆದರೂ ಯಾರನ್ನು ಬಿಡಬಾರದೋ ಅಂಥವರೆಲ್ಲಾ ನಮ್ಮಿಂದ ಇಂದು ಹತರಾಗಿದ್ದಾರೆ.
ಸಂಯುಕ್ತಾಃ ಕಾಮಮನ್ಯುಭ್ಯಾಂ ಕ್ರೋಧಾಮರ್ಷಸಮನ್ವಿತಾಃ |
ಮೃತ್ಯುಯಾನಂ ಸಮಾರುಹ್ಯ ಗತಾ ವೈವಸ್ವತಕ್ಷಯಮ್ ॥12॥
ಆದರೆ ಅವರೆಲ್ಲರೂ ಕಾಮ ಮತ್ತು ಕ್ರೋಧಗಳಿಗೆ ವಶರಾಗಿದ್ದರು. ಹರ್ಷ ಮತ್ತು ಕ್ರೋಧಗಳಿಂದ ಕೂಡಿದ್ದರು. ಆದ್ದರಿಂದ ಅವರೆಲ್ಲರೂ ಮೃತ್ಯುವೆಂಬ ವಾಹನವನ್ನು ಹತ್ತಿಕೊಂಡು ಯಮನ ಪಟ್ಟಣಕ್ಕೆ ಹೊರಟು ಹೋದರು.
ಬಹುಕಲ್ಯಾಣಮಿಚ್ಛಂತ ಈಹಂತೇ ಪಿತರಃ ಸುತಾನ್ |
ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ತಿತಿಕ್ಷಯಾ ॥13॥
ಪಿತೃಗಳು ತಮ್ಮ ತಪಸ್ಸಿನಿಂದ, ಬ್ರಹ್ಮಚರ್ಯದಿಂದ, ಸತ್ಯನಿಷ್ಠೆಯಿಂದ, ಕ್ಷಮೆ- ಯಿಂದ ಕೂಡಿದವರಿಗೆ ಅನೇಕ ವಿಧವಾದ ಕ್ಷೇಮಗಳನ್ನು ಮತ್ತು ಅಭ್ಯುದಯವನ್ನು ಉದ್ದೇಶಿಸಿ ಮಕ್ಕಳನ್ನು ಅಪೇಕ್ಷೆ ಪಡುತ್ತಾರೆ.
ಉಪವಾಸೈಸ್ತಥೇಜ್ಯಾಭಿರ್ವ್ರತಕೌತುಕಮಂಗಲೈಃ |
ಲಭಂತೇ ಮಾತರೋ ಗರ್ಭಾನ್ ಮಾಸಾನ್ ದಶ ಚ ಬಿಭ್ರತಿ ॥14॥
ಸ್ತ್ರೀಯರೂ ಕೂಡ ಉಪವಾಸ, ಯಾಗ, ಅನೇಕ ಬಗೆಯ ವ್ರತಗಳು, ವಿವಿಧ ಬಗೆಯ ಹರಕೆಗಳು, ನಾನಾವಿಧ ಮಂಗಳಕಾರ್ಯಗಳು ಇವುಗಳನ್ನೆಲ್ಲಾ ಆಚರಿಸಿ, ಸತ್ಪುತ್ರನು ಹುಟ್ಟಬೇಕೆಂಬ ಇಚ್ಛೆಯಿಂದ ಗರ್ಭವನ್ನು ಧರಿಸುತ್ತಾರೆ. ಹತ್ತು ತಿಂಗಳ ತನಕ ಆ ಗರ್ಭವನ್ನು ಜಾಗರೂಕತೆಯಿಂದ ರಕ್ಷಿಸುತ್ತಾರೆ.
ಯದಿ ಸ್ವಸ್ತಿ ಪ್ರಜಾಯಂತೇ ಜಾತಾ ಜೀವಂತಿ ವಾ ಯದಿ |
ಸಂಭಾವಿತಾ ಚಾಬಲಾಸ್ತೇ ದದ್ಯುರ್ಯದಿ ನಃ ಸುಖಮ್ |
ಇಹ ಚಾಮುತ್ರ ಚೈವೇತಿ ಕೃಪಣಾಃ ಫಲಹೇತುಕಾಃ ॥15॥
ಸಂತಾನವನ್ನು ಹೊಂದಬೇಕಾದರೆ ಇಚ್ಛೆ ಹೀಗಿರುತ್ತದೆ - ಕ್ಷೇಮದಿಂದ ಪ್ರಸವ- ವಾಗಬೇಕು. ಹುಟ್ಟಿದ ಮೇಲೆ ಆ ಮಗು ಆರೋಗ್ಯವಾಗಿ ಬದುಕಬೇಕು. ಚಿರಂಜೀವಿಯಾಗಿ ಬೆಳೆದು ಬಲಾಢ್ಯನಾಗಬೇಕು, ಲೋಕದಲ್ಲಿ ಗೌರವವನ್ನು ಪಡೆಯಬೇಕು. ಆಗಷ್ಟೇ ನಾವು ಇಹಲೋಕದಲ್ಲಿ, ಪರಲೋಕದಲ್ಲಿ ಸ್ವಲ್ಪವಾದರೂ ಸುಖವನ್ನು ಅನುಭವಿಸಲು ಸಾಧ್ಯ. ಹೀಗೆ ಬಹಳ ದೈನ್ಯದಿಂದ ತಂದೆ-ತಾಯಂದಿರು ಮಕ್ಕಳ ವಿಷಯದಲ್ಲಿ ಆಸೆಯನ್ನು ಹೊಂದಿರುತ್ತಾರೆ.
ಟಿಪ್ಪಣಿ - ಬಹುಕಲ್ಯಾಣಮಿಚ್ಛಂತ ಎಂಬ ಶ್ಲೋಕದಲ್ಲಿ ಮಕ್ಕಳನ್ನು ಪಡೆಯುವುದಕ್ಕೆ ತಂದೆಯಾದವನ ಶ್ರಮವನ್ನು ವರ್ಣಿಸಿ, `ಉಪವಾಸೈಃ' ಎಂಬ ಶ್ಲೋಕದಿಂದ ತಾಯಿಯ ಆಸೆ ಆಕಾಂಕ್ಷೆಗಳನ್ನು ವರ್ಣಿಸಿದ್ದಾರೆ. `ಯದಿ ಸ್ವಸ್ತಿ' ಎಂಬ ಶ್ಲೋಕದಿಂದ ಇಬ್ಬರ ಸಮಾನವಾದ ಆಕಾಂಕ್ಷೆಯನ್ನು ಹೇಳಿದ್ದಾರೆ.
ತಾಸಾಮಯಂ ಸಮಾರಂಭೋ ನಿವೃತ್ತಃ ಕೇವಲೋಽಫಲಃ |

ಯದಾಸಾಂ ನಿಹತಾಃ ಪುತ್ರಾ ಯುವಾನೋ ಮೃಷ್ಟಕುಂಡಲಾಃ ॥16॥
ಅಭುಕತ್ವ ಪಾರ್ಥಿವಾನ್ ಭೋಗಾನೃಣಾನ್ಯನವದಾಯ ಚ |
ಪಿತೃಭ್ಯೋ ದೇವತಾಭ್ಯಶ್ಚ ಗತಾ ವೈವಸ್ವತಕ್ಷಯಮ್ ॥17॥
ಆದರೆ ಈಗ ನಮ್ಮ ಕುರುಕುಲದ ಸ್ತ್ರೀಯರಿಗೆ ಎಲ್ಲಾ ಆಸೆಗಳು ನಿಷ್ಫಲವಾಗಿವೆ. ತಮ್ಮ ಮಕ್ಕಳು ಒಳ್ಳೆಯ ಯೌವನವಂತರಾಗಿ, ಕುಂಡಲಾದ್ಯಭರಣಗಳನ್ನು ಧರಿಸಿ ತಮ್ಮ ಪರಾಕ್ರಮದಿಂದ ಯುದ್ಧವನ್ನು ಮಾಡಿ, ಅದೇ ಯುದ್ಧದಲ್ಲಿ ಮೃತರಾಗಿದ್ದಾರೆ. ಆ ರಾಜಕುಮಾರರು ತಮ್ಮ ತಂದೆ-ತಾಯಿಯಂದಿರ ಆಸೆಯನ್ನು ಪೂರೈಸದೇ ಮೃತರಾಗಿದ್ದಾರೆ. ಈ ರಾಜಕುಮಾರರು ಹುಟ್ಟಿ ರಾಜಭೋಗಗಳನ್ನು ಅನುಭವಿಸ- ಲಿಲ್ಲ. ಪಿತೃಗಳಿಗೂ ದೇವತೆಗಳಿಗೂ ತಾವು ಸಲ್ಲಿಸಬೇಕಾದ ಋಣವನ್ನು ತೀರಿಸಲಿಲ್ಲ. ತಾವು ಲೋಕದಲ್ಲಿ ಹುಟ್ಟಿದ್ದಕ್ಕೆ ಸಾರ್ಥಕ್ಯವೇ ಇಲ್ಲದಂತೆ ಯಮನ ಪುರಿಗೆ ಹೊರಟು ಬಿಟ್ಟರು.
ಟಿಪ್ಪಣಿ - ಪಿತೃಭ್ಯೋ ದೇವತಾಭ್ಯಾಶ್ಚ ಗತಾ ವೈವಸ್ವತಕ್ಷಯಮ್ ಇತ್ಯತ್ರ ಪಿತೃಭ್ಯೋ ದೇವತಾಭ್ಯಾಶ್ಚ ಋಣಾನಿ ಮನುಷ್ಯೇಭ್ಯಃ ಅನ್ನಂ ಚ ವಿಹಾಯ ವೈವಸ್ವತಕ್ಷಯಂ ಗತಾ ಇತಿ ಯೋಜನಾ ॥
ಪಿತೃಭ್ಯೋ ದೇವತಾಭ್ಯಾಶ್ಚ ಗತಾ ವೈವಸ್ವತಕ್ಷಯಮ್ ಎಂಬಲ್ಲಿ ಪಿತೃಗಳಿಗೆ, ದೇವತೆಗಳಿಗೆ ಋಣವನ್ನು ಪರಿಹರಿಸದೇ, ಮನುಷ್ಯರಿಗೆ ಅನ್ನವನ್ನು ನೀಡದೇ ಯಮ- ಪಟ್ಟಣವನ್ನು ಕುರಿತು ಹೊರಟು ಬಿಟ್ಟರು ಎಂಬುದಾಗಿ ಯೋಜನೆಯನ್ನು ಮಾಡಿ- ಕೊಳ್ಳಬೇಕು.
ವಿಶೇಷವಿಚಾರ - ನಮ್ಮ ಶತ್ರುಗಳು ಈ ಲೋಕಕ್ಕೆ ಬಂದು, ಪಿತೃಋಣ, ದೇವಋಣ, ಭೂತಋಣವನ್ನು ತೀರಿಸದೆ ಯಮನಪಟ್ಟಣಕ್ಕೆ ಹೋಗಿಬಿಟ್ಟರು ಎಂಬುದು ಈ ಶ್ಲೋಕದ ಭಾವ.
`ಋಣಾನಿ ಅನವಧಾಯ' ಎಂಬುದು ಒಂದು ಪಾಠ. `ಅನ್ನಂ ವಿಹಾಯ ಚ' ಎಂಬುದು ಮತ್ತೊಂದು ಪಾಠ. ಲಕ್ಷಾಲಂಕಾರದಲ್ಲಿ `ಅನ್ನಂ ವಿಹಾಯ ಚ' ಎಂಬ ಪಾಠವನ್ನೇ ವಿವಕ್ಷಿಸಿದ್ದಾರೆ.
`ಪಿತೃಭ್ಯಃ ದೇವತಾಭ್ಯಃ' ಎಂಬಲ್ಲಿ ಚತುರ್ಥೀವಿಭಕ್ತಿಯು ಷಷ್ಠ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂಬುದಾಗಿ ಕುಂಭಕೋಣಪ್ರತಿಯಲ್ಲಿ ವ್ಯಾಖ್ಯಾನವನ್ನು ಮಾಡಿದ್ದಾರೆ. ಆಗ ಅನವಧಾಯ ಎಂಬ ಪದಕ್ಕೆ `ತೀರಿಸದೆ' ಎಂಬರ್ಥವನ್ನು ಹೇಳಿದಂತಾಗುತ್ತದೆ. ಆದರೆ ಲಕ್ಷಾಲಂಕಾರದಲ್ಲಿ ಚತುರ್ಥೀವಿಭಕ್ತಿಗೆ ಷಷ್ಠ್ಯರ್ಥ- ವನ್ನು ವಿವಕ್ಷಿಸುವ ಅವಶ್ಯಕತೆಯಿರುವುದಿಲ್ಲ. ವಿಹಾಯ ಎಂಬ ಅವ್ಯಯವನ್ನು ಸೇರಿಸಿದ್ದರಿಂದ `ಪಿತೃಭ್ಯಃ ದೇವತಾಭ್ಯಃ' ಎಂಬಲ್ಲಿರುವ ಚತುರ್ಥೀವಿಭಕ್ತ್ಯರ್ಥವನ್ನೇ ವಿವಕ್ಷಿಸಿದ್ದಾರೆ. ಆದರೆ `ಅನವಧಾಯ' ಎಂಬ ಪದವನ್ನು ವಿವಕ್ಷಿಸದೇ `ಅನ್ನಂ ವಿಹಾಯ' ಎಂಬ ಪಾಠವನ್ನು ವಿವಕ್ಷಿಸಿದಾಗ ಮಾತ್ರ ಹೀಗೆ ವ್ಯಾಖ್ಯಾನ ಮಾಡಲು ಸಾಧ್ಯ. ಚತುರ್ಥಾದ್ಯವಿಭಕ್ತಿಗಳ ಅರ್ಥದಲ್ಲಿ ಷಷ್ಠೀವಿಭಕ್ತಿಯನ್ನು ಪ್ರಯೋಗಿಸು- ವುದು ಕಾಣಿಸುತ್ತದೆ. ಆದರೆ ಷಷ್ಠ್ಯರ್ಥದಲ್ಲಿ ಚತುರ್ಥ್ಯಯದಿವಿಭಕ್ತಿಗಳನ್ನು ಪ್ರಯೋಗಿಸುವುದು ಶಾಸ್ತ್ರಗಳಲ್ಲಿ ಹೆಚ್ಚಾಗಿ ಕಾಣಿಸುವುದಿಲ್ಲ. ಆದ್ದರಿಂದ ಲಕ್ಷಾ- ಲಂಕಾರದ ಪಾಠದ ಪ್ರಕಾರ ವ್ಯಾಖ್ಯಾನ ಮಾಡುವುದು ಇಲ್ಲಿ ಸೂಕ್ತವಾಗಿ ಕಾಣಿಸು- ತ್ತದೆ.
ಯದ್ಯೈಷಾಮಂಗ ಪಿತರೌ ಜಾತೌ ಕಾಮಮಯಾವಿವ |
ಸಂಜಾತಧನರತ್ನೇಷು ತದೈವ ನಿಹತಾ ನೃಪಾಃ ॥18॥
ಆ ರಾಜಕುಮಾರರ ತಂದೆ, ತಾಯಿಯರು ತಮ್ಮ ಮಕ್ಕಳು ಸಂಪಾದನೆ ಮಾಡುವ ಧನಗಳನ್ನು, ರತ್ನಗಳನ್ನು ಉಪಭೋಗಿಸಬೇಕೆಂಬ ಆಸೆಯನ್ನು ಹೊಂದಿ- ದ್ದರು. ಆದರೆ ಆಸೆಯನ್ನು ಈಡೇರಿಸುವಷ್ಟರಲ್ಲಿಯೇ ಯುದ್ಧದಲ್ಲಿ ಮೃತರಾಗಿಬಿಟ್ಟರು.
ಪಾಠಾಂತರದ ಬಗ್ಗೆ - ದಾಕ್ಷಿಣಾತ್ಯಪಾಠದ ಕೆಲವು ಪುಸ್ತಕಗಳಲ್ಲಿ ಹೀಗೆ ಪಾಠ- ವಿದೆ-
ಯದೇವಾಂಶಾ ಚ ಪಿತರೌ ಜಾತಕರ್ಮಕರಾವಿವ |
ಸಂಜಾತಬಾಲರೂಪೇಷು ತದೇವ ನಿಹತಾ ನೃಪಾಃ ॥
ತಂದೆ, ತಾಯಿಗಳು ಬಾಲ್ಯದಲ್ಲಿ ಜಾತಕರ್ಮವನ್ನು ಮಕ್ಕಳಿಗೆ ಮಾಡಿದರು. ಆದರೆ ಅಷ್ಟರಲ್ಲಿಯೇ ತಾವೇ ಮೃತರಾಗಿಬಿಟ್ಟರು.
ಹಿಂದಿನ ಶ್ಲೋಕಗಳಲ್ಲಿ ತಂದೆ, ತಾಯಿಗಳು ಶಿಶುಗರ್ಭದಲ್ಲಿದ್ದಾಗ ಯಾವ ಭಾವನೆಯನ್ನು ಹೊಂದಿರುತ್ತಾರೆಂದು ತಿಳಿಸಲಾಯಿತು. ಈ ಶ್ಲೋಕದಲ್ಲಿ ಹುಟ್ಟಿದ ಮಕ್ಕಳಿಗೆ ಜಾತಕರ್ಮವನ್ನು ಮಾಡಿ, ಹತಾಶರಾದರು ಎಂದು ತಿಳಿಸಲಾಗಿದೆ. ಆದ್ದರಿಂದ ಈ ಪಾಠದಲ್ಲಿ ಹಿಂದಿನ ಶ್ಲೋಕಗಳಲ್ಲಿ ಹೆಚ್ಚಿನ ಸ್ವಾರಸ್ಯವು ಕಾಣಿಸುತ್ತದೆ.
ಸಂಯುಕ್ತಾಃ ಕಾಮಮನ್ಯುಭ್ಯಾಂ ಕ್ರೋಧಹರ್ಷಾಸಮಂಜಸಾಃ |
ನ ತೇ ಜನ್ಮಫಲಂ ಕಿಂಚಿದ್ ಭೋಕ್ತಾರೋ ಜಾತು ಕರ್ಹಿಚಿತ್ ॥22॥
ಕಾಮ ಮತ್ತು ಕ್ರೋಧಗಳಿಗೆ ತುತ್ತಾಗಿ ಕ್ರೋಧ ಮತ್ತು ಹರ್ಷಗಳ ಸಮತೋಲನವನ್ನು ಯಾರು ಕಳೆದುಕೊಂಡರೋ, ಅಂಥವರು ವಿಜಯದ ಆಸೆಯನ್ನು ಹೊಂದಲು ಯಾವಾಗಲೂ ಸಾಧ್ಯವಿಲ್ಲ ಎಂದೂ ಸಹ ಜಯಫಲವನ್ನು ಅವರು ಅನುಭವಿಸುವುದಿಲ್ಲ.
ವಿವರಣೆ - ಅರ್ಥದ ಅಭಿಲಾಷೆಯನ್ನು ಕಾಮವೆಂದು, ಅರ್ಥವು ದೊರೆ- ಯದಿದ್ದಾಗ ಉಂಟಾಗುವ ದೈನ್ಯವನ್ನು ಮನ್ಯುವೆಂದು, ಕಾಮದ ತಡೆಯುವಿಕೆ- ಯಿಂದ ಉಂಟಾಗುವ ತಾಪವನ್ನೇ ಕ್ರೋಧವೆಂದು, ಅರ್ಥದ ಅಭಿಲಾಷೆಯು ಪೂರ್ಣವಾದಾಗ ಉಂಟಾಗುವ ಉಲ್ಲಾಸವನ್ನೇ ಹರ್ಷವೆಂದು ಇಲ್ಲಿ ವ್ಯಾಖ್ಯಾನ- ದಲ್ಲಿ ಪರಿಗಣಿಸಲಾಗಿದೆ. ಇವುಗಳಿಂದ ಯಾರ ಮನಸ್ಸು ಸಮತೋಲನವನ್ನು ಕಳೆದುಕೊಂಡು ವಿಕಾರಕ್ಕೆ ಈಡಾಗುತ್ತದೋ, ಅಂಥ ಮನುಷ್ಯನಿಗೆ ವಿಜಯದ ಫಲ ದೊರೆಯಲು ಸಾಧ್ಯವಿಲ್ಲ ಎಂಬುದು ಶ್ಲೋಕದ ಅಭಿಪ್ರಾಯ.
ಪಾಂಚಾಲಾನಾಂ ಕುರೂಣಾಂ ಚ ಹತಾ ಏವ ಹಿ ಯೇಽಹತಾಃ|
ತೇ ವಯಂ ತ್ವಧಮಾಂಲ್ಲೋಕಾನ್ ಪ್ರಪದ್ಯೇಮ ಸ್ವಕರ್ಮಭಿಃ |
(ನ ಸಕಾಮಾ ವಯಂ ತೇ ನಚಾಸ್ಮಾಭಿರ್ನ ತೈರ್ಜಿತಮ್) ॥23॥
ಪಾಂಚಾಲರಲ್ಲಿ ಮತ್ತು ಕುರುಗಳಲ್ಲಿ ಯಾರು ಮರಣವನ್ನು ಹೊಂದಿದರೋ, ಅವರು ನಿಜವಾಗಿಯೂ ಕೂಡ ಹತರಾಗಲಿಲ್ಲ. ಸ್ವರ್ಗವನ್ನು ಮತ್ತು ಸತ್ಕೀರ್ತಿ- ಯನ್ನು ಪಡೆದು ಅಮರರಾದರು. ಆದರೆ ಅವರನ್ನು ಸಂಹಾರ ಮಾಡಿದ ನಾವು ಮಾತ್ರ ಈ ಬಂಧುಜನ ವಧೆ ಎಂಬ ಕೆಟ್ಟಕರ್ಮದ ಫಲವಾಗಿ ಅಧಮಲೋಕಗಳನ್ನು ಹೊಂದುವವರಿದ್ದೇವೆ.

ಪಾಠಾಂತರದ ಬಗ್ಗೆ - ಕೆಲವು ಪುಸ್ತಕಗಳಲ್ಲಿ `ಹತಾ ಏವ ಹಿ ಯೇ ಹತಾಃ' ಎಂಬ ಪಾಠವಿದೆ. ಈ ಪಾಠದ ಪ್ರಕಾರ ತಾತ್ಪರ್ಯವನ್ನು ಹೀಗೆ ತಿಳಿಯಬೇಕು. ಯಾವ ಕೌರವರು ಹಾಗೂ ಪಾಂಚಾಲರು ಹತರಾದರೋ, ಅವರು ಸಂಪೂರ್ಣವಾಗಿ ನಾಶವನ್ನೇ ಹೊಂದಿದರು. ಒಂದುವೇಳೆ ಅವರು ಯುದ್ಧದಲ್ಲಿ ಹತರಾಗದಿದ್ದರೆ, ತಮ್ಮ ಜೀವನದಲ್ಲಿ ಮುಂದೆ ಉಚ್ಚ್ರಾಯಸ್ಥಿತಿಯಲ್ಲಿ ಇರುತ್ತಿದ್ದರು.
ಈ ಪಾಠದ ಪ್ರಕಾರ ಉತ್ತರಾರ್ಧದಲ್ಲಿ `ನ ಚೇತ್ ಸರ್ವಾನಯಂ ಲೋಕಃ ಪಶ್ಯೇತ್ ಸ್ವೇನೈವ ಕರ್ಮಣಾ' ಎಂದಿರುತ್ತದೆ. ಹಿಂದಿನ ಅರ್ಥದ ಜೊತೆ ಈ ಅರ್ಥವು ಹೊಂದಾಣಿಕೆಯಾಗುವುದರಿಂದ ಈ ಪಾಠದಲ್ಲಿ ಹೆಚ್ಚಿನ ಸ್ವಾರಸ್ಯವಿದೆ ಎಂದು ಭಾಸವಾಗುತ್ತದೆ.
ಪಾಂಚಾಲಾನಾಂ ಕುರೂಣಾಂ ಚ ಇತ್ಯತ್ರ ಪಾಂಚಾಲಾನಾಂ ಕುರೂಣಾಂ ಚ ಮಧ್ಯೇ ಯೇ ಹತಾಃ ತೇ ಹತಾ ಏವ, ಐಹಿಕಫಲಸ್ಯ ಈಷದಪ್ಯನನುಭವಾತ್ | ನ ಸಕಾಮಾ ವಯಂ ತೇ ಚ ಇತ್ಯತ್ರ ವಯಮಪಿ ಸಕಾಮಾ ನ ಭವಾಮಃ, ಪುತ್ರಪೌತ್ರಾದೀನಾಂ ನಷ್ಟತ್ವಾತ್ | ತೇ ಕುರುಪಾಂಚಾಲಾಸ್ತು ಮೃತತ್ವಾದೇವ ಸಕಾಮಾ ನ | ತೈರಪಿ ನ ಜಿತಮ್ | ಅಸ್ಮಾಭಿರಪಿ ಬಂಧೂನಾಮೇವ ವಧಾತ್ ನ ಜಿತಮ್ | ಶತ್ರುಜಯೋ ಹಿ ಜಯಃ ಬಂಧುಜಯಸ್ತು ನೈವ ಜಯ ಇತಿ ಭಾವಃ ॥
`ಪಾಂಚಾಲಾನಾಂ ಕುರೂಣಾಂ ಚ' ಎಂಬಲ್ಲಿ ಪಾಂಚಾಲರಲ್ಲಿ ಹಾಗೂ ಕುರುವಂಶದವರ ಮಧ್ಯದಲ್ಲಿ ಯಾರು ಹತರಾದರೋ, ಅವರು ಸಂಪೂರ್ಣವಾಗಿಯೇ ಹತವಾದರು. ಐಹಿಕಫಲವನ್ನು ಸ್ವಲ್ಪವೂ ಸಹ ಅನುಭವಿಸಲಿಲ್ಲ. ಸ್ವಲ್ಪವೂ ಸಹ ತಮ್ಮ ಅಭಿಲಾಷೆಗಳನ್ನು ಈಡೇರಿಸಿಕೊಳ್ಳಲಿಲ್ಲ. ನಾವೂ ಸಹ ನಮ್ಮ ಅಭಿಲಾಷೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗಲಿಲ್ಲ. ಏಕೆಂದರೆ ನಾವು ಗೆದ್ದರೂ ಕೂಡ ನಮ್ಮ ಮಕ್ಕಳು ಹಾಗೂ ಮೊಮ್ಮಕ್ಕಳು ಮೃತರಾಗಿದ್ದಾರೆ. ಆ ಕುರುಪಾಂಚಾಲರು ಮರಣವನ್ನು ಹೊಂದಿ-ರುವುದರಿಂದಲೇ ತಮ್ಮ ಅಭಿಲಾಷೆಗಳನ್ನು ಈಡೇರಿಸಿಕೊಳ್ಳಲು ಅಸಮರ್ಥರಾಗಿದ್ದಾರೆ. ಆದ್ದರಿಂದ ಅವರೂ ಕೂಡ ಗೆದ್ದಿಲ್ಲ. ನಾವೂ ಸಹ ಗೆಲ್ಲಲಿಲ್ಲ. ಶತ್ರುಗಳ ಜಯವೇ ನಿಜವಾದ ಜಯ. ಬಂಧುಜಯವನ್ನು ಯಾರೂ ಸಹ ಜಯವೆಂದು ಹೇಳುವುದಿಲ್ಲ ಎಂಬುದು ಶ್ಲೋಕದ ಅಭಿಪ್ರಾಯ.
ಲಕ್ಷಾಲಂಕಾರದ ಪ್ರಕಾರ `ಹತಾ ಏವ ಹಿ ಯೇ ಹತಾಃ' ಎಂಬ ಪಾಠವನ್ನು ವಿವಕ್ಷಿಸಬೇಕು. `ಹತಾ ಏವ ಹಿ ಯೇ ಅಹತಾ' ಎಂಬ ಪಾಠಕ್ಕಿಂತ ಈ ಪಾಠದಲ್ಲಿರುವ ಹೆಚ್ಚಿನ ಸ್ವಾರಸ್ಯವನ್ನೂ ಕೂಡ ಗಮನಿಸಬೇಕು.
ವಯಮೇವಾಸ್ಯ ಲೋಕಸ್ಯ ವಿನಾಶೇ ಕಾರಣಂ ಸ್ಮೃತಾಃ |
ಧೃತರಾಷ್ಟ್ರಸ್ಯ ಪುತ್ರೇಣ ನಿಕೃತಿಪ್ರೀತಿಸಂಯುತಃ (ನಿಕೃತ್ಯಾಪ್ರತ್ಯಪತ್ಸ್ಮಹಿ) ॥24॥
ಅರ್ಜುನನೇ! ಇವರೆಲ್ಲರ ನಾಶಕ್ಕೆ ನಾವೇ ಕಾರಣರೆಂಬ ಭಾವನೆ ನನಗಿರುವುದು ನಿಜ. ಆದರೆ ವಿಚಾರ ಮಾಡಿದಾಗ ಈ ಇವರೆಲ್ಲರ ನಾಶಕ್ಕೆ ಧೃತರಾಷ್ಟ್ರನ ಮಗನಾದ ದುರ್ಯೋಧನನ ಕಪಟವೇ ಕಾರಣವೆಂದು ನಾನು ತಿಳಿದಿದ್ದೇನೆ.
ವಿವರಣೆ - ವಿನಾಶದ ಕಾರಣಕ್ಕೆ ಆ ಧೃತರಾಷ್ಟ್ರನ ಮಗನಾದ ದುರ್ಯೋ- ಧನನ ಕಪಟವೇ ಕಾರಣವೆಂದು ನನಗೆ ತಿಳಿದಿದೆ. ಅವನೇ ನಿಜವಾದ ಮುಖ್ಯ- ಕಾರಣ. ನಾವು ಅಮುಖ್ಯಕಾರಣರಾಗಿದ್ದೇವೆ ಎಂಬುದು ಶ್ಲೋಕದ ಭಾವ.
ಧೃತರಾಷ್ಟ್ರಸ್ಯ ಪುತ್ರೇಣ ಇತ್ಯತ್ರ ಧೃತರಾಷ್ಟ್ರಸ್ಯ ಪುತ್ರೇಣ ಕಾರಣೇನ ವಯಮೇವಾಸ್ಯ ಲೋಕಸ್ಯ ವಿನಾಶೇ ಕಾರಣಂ ಸ್ಮೃತಾ ಇತಿ ಯೋಜನಾ | ತಸ್ಯ ಧೃತರಾಷ್ಟ್ರಪುತ್ರಸ್ಯ ದುರ್ಗುಣಾನಾಹ - ನಿಕೃತಿಪ್ರೀತಿಸಂಯುತ ಇತ್ಯಾದಿನಾ ॥ `ಧೃತರಾಷ್ಟ್ರಸ್ಯ ಪುತ್ರೇಷು' ಇತಿ ಪಾಠೇ ಧೃತರಾಷ್ಟ್ರಪುತ್ರಾಣಾಂ ಮಧ್ಯೇ ಜ್ಯೇಷ್ಠೋ ದುರ್ಯೋಧನಃ ನಿಕೃತ್ಯಾಂ ಕಪಟೇ ಪ್ರೀತಿಸಂಯುತ ಇತ್ಯಾದಿಯೋಜನಾ ॥
ಧೃತರಾಷ್ಟ್ರನ ಮಗನಾದ ದುರ್ಯೋಧನನಿಂದಾಗಿ ನಾವೇ ಈ ಲೋಕನಾಶಕ್ಕೆ ಕಾರಣರಾಗಿದ್ದೇವೆಂದು ತಿಳಿಯುತ್ತದೆ. ಧೃತರಾಷ್ಟ್ರನ ಮಗನಲ್ಲಿರುವ ದುರ್ಗುಣವನ್ನು `ನಿಕೃತಿಪ್ರೀತಿಸಂಯುತ' ಎಂಬುದರಿಂದ ಹೇಳಿದ್ದಾರೆ. ಕೆಲವು ಪುಸ್ತಕಗಳ ಪ್ರಕಾರ `ಧೃತರಾಷ್ಟ್ರಸ್ಯ ಪುತ್ರೇಷು' ಎಂಬ ಪಾಠವಿದೆ. ಧೃತರಾಷ್ಟ್ರನ ಮಕ್ಕಳಲ್ಲಿ ದುರ್ಯೋಧನನು ಜ್ಯೇಷ್ಠನಾಗಿದ್ದಾನೆ. ಕಪಟದಲ್ಲಿ ಪ್ರೀತಿಯನ್ನು ಇವನು ಹೊಂದಿದ್ದಾನೆಂಬುದು ಇದರ ಅಭಿಪ್ರಾಯ.
ವಿವರಣೆ - `ನಿಕೃತ್ಯಾ ಪ್ರತ್ಯಪತ್ಸ್ಮಹಿ' ಎಂಬ ಪಾಠವನ್ನು ಮೂಲದಲ್ಲಿ ಕಾಣುತ್ತೇವೆ. ದುರ್ಯೋಧನನ ಕಪಟವೇ ಕಾರಣವೆಂದು ತಿಳಿಯುತ್ತೇನೆಂಬುದು ಇದರ ಅಭಿಪ್ರಾಯ. ಆದರೆ `ನಿಕೃತಿ ಪ್ರೀತಿಸಂಯುತ' ಎಂಬುದು ಟಿಪ್ಪಣಿಯ ಪಾಠ. ದುರ್ಯೋಧನನು ಮೇಲ್ನೋಟಕ್ಕೆ ಪ್ರೀತಿ ಮಾಡುತ್ತಿದ್ದ. ಆದರೆ ಅವನ ಪ್ರೀತಿಯಲ್ಲಿ ಕಪಟವೇ ತುಂಬಿತ್ತು ಎಂಬುದು ಇದರ ಅಭಿಪ್ರಾಯ. ಈ ಪಾಠದಲ್ಲಿ ಹೆಚ್ಚು ಸ್ವಾರಸ್ಯ ಕಾಣಿಸುತ್ತದೆ.
ಸದೈವ ನಿಕೃತಿಪ್ರಜ್ಞೋ ದ್ವೇಷ್ಟಾ ಮಾಯೋಪಜೀವಿನಃ |
ಮಿಥ್ಯಾವೃತ್ತಃ ಸ ಸತತಮಸ್ಮಾಸ್ವನಪಕಾರಿಷು ॥25॥
ಆ ದುರ್ಯೋಧನನು ನಿರಂತರವಾಗಿ ನಮ್ಮ ವಿಷಯದಲ್ಲಿ ಕಪಟ ಬುದ್ಧಿಯನ್ನೇ ಮಾಡುತ್ತಿದ್ದನು. ದ್ವೇಷವನ್ನು ಸಾಧಿಸುತ್ತಿದ್ದನು. ವಂಚನೆಯ ಬುದ್ಧಿಯನ್ನು ಹೊಂದಿ- ದ್ದನು. ಮಿಥ್ಯಾಚಾರಿಯಾಗಿದ್ದನು. ನಮ್ಮ ವಿಷಯದಲ್ಲಿ ಅಪಕಾರವನ್ನೇ ಮಾಡುತ್ತಿ- ದ್ದನು.
ನ ಸಕಾಮಾ ವಯಂ ತೇ ಚ ನಚಾಸ್ಮಾಭಿರ್ನ ತೈರ್ಜಿತಮ್ |
ನ ತೈರ್ಭುಕ್ತೇಯಮವನಿರ್ನ ನಾರ್ಯೋ ಗೀತವಾದಿತಮ್ ॥19॥
ನಮ್ಮ ಕಾಮನೆಯು ಪೂರ್ಣವಾಗಲಿಲ್ಲ. ನಮ್ಮ ಶತ್ರುಗಳ ಕಾಮನೆಯೂ ಕೂಡ ಪೂರ್ಣವಾಗಲಿಲ್ಲ. ನಾವು ಜಯವನ್ನು ಗಳಿಸಲಿಲ್ಲ. ಅವರೂ ಸಹ ಜಯವನ್ನು ಗಳಿಸಲಿಲ್ಲ. ಈ ಭೂಮಂಡಲವನ್ನು ಅವರೂ ಕೂಡ ಭೋಗಿಸಲಿಲ್ಲ. ಸ್ತ್ರೀಯರನ್ನು ನಿರಾತಂಕವಾಗಿ ಉಪಭೋಗ ಮಾಡಲಿಲ್ಲ. ಆನಂದದಾಯಕವಾದ ಗೀತೆಗಳನ್ನು, ವಾದ್ಯಗಳನ್ನು ಕೇಳಲು ಸಾಧ್ಯವಾಗಲಿಲ್ಲ.
ಪಾಠಾಂತರದ ಬಗ್ಗೆ - ಕೆಲವು ಪುಸ್ತಕಗಳಲ್ಲಿ ಈ ಶ್ಲೋಕ ಹಾಗೂ ಮುಂದಿನ ಶ್ಲೋಕವು `ಯದೇಶಾಮಂಗಪಿತರೌ' ಎಂಬ ಶ್ಲೋಕದ ಅನಂತರ ಇರುತ್ತದೆ. ಆದರೆ ಪ್ರಕೃತದಲ್ಲೇ ಇದು ಹೆಚ್ಚು ಪ್ರಸಕ್ತವಾಗುತ್ತದೆ.
ನಾಮಾತ್ಯಸುಹೃದಾಂ ವಾಕ್ಯಂ ನಚ ಶ್ರುತವತಾಂ ಶ್ರುತಮ್ |
ನ ರತ್ನಾನಿ ಪರಾರ್ಧ್ಯಾನಿ ನ ಭೂರ್ನ ದ್ರವಿಣಾಗಮಃ ॥20॥
ನಾಮಾತ್ಯಯಸಮಿತೌ ಕಥ್ಯಂ ನಚ ಶ್ರುತವತಾಂ ಶ್ರುತಮ್ |
ನ ರತ್ನಾನಿ ಪರಾರ್ಘ್ಯನಿ ನ ಭೂರ್ನ ದ್ರವಿಣಾಗಮಃ ॥27॥

ಅವರು ನಿರಂತರವಾಗಿ ಅಮಾತ್ಯರ ಮತ್ತು ಸ್ನೇಹಿತಜನರ ಹಿತವಾಕ್ಯಗಳನ್ನು ಕೇಳಲಿಲ್ಲ. ಶಾಸ್ತ್ರಜ್ಞರ ಉಪದೇಶಗಳನ್ನೂ ಕೂಡ ಕೇಳಿಸಿಕೊಳ್ಳಲಿಲ್ಲ. ಉತ್ತಮ ರತ್ನ- ಗಳನ್ನು, ದ್ರವ್ಯಗಳನ್ನು ಅನುಭವಿಸಲಿಲ್ಲ. ಅವರಿಗೆ ಬರುತ್ತಿದ್ದ ಅಪಾರವಾದ ಕಪ್ಪಕಾಣಿಕೆಗಳೂ ಕೂಡ ಆನಂದವನ್ನು ಉಂಟುಮಾಡಲಿಲ್ಲ.
`ನಾಮಾತ್ಯಸಮಿತೌ' ಇತ್ಯತ್ರ ಅಮಾತ್ಯಸಮಿತೌ ವಾಕ್ಯಂ ನೀತಿವಾಕ್ಯಂ ನಚ ಶ್ರುತಮ್ | ಶ್ರುತವತಾಂ ವಾಕ್ಯಮ್ ಅಧ್ಯಾತ್ಮವಾಕ್ಯಂ ಚ ನ ಶ್ರುತಮಿತಿ ಯೋಜನಾ ॥
`ನಾಮಾತ್ಯಸಮಿತೌ' ಎಂಬಲ್ಲಿ ಅಮಾತ್ಯರ ಮತ್ತು ಸುಹೃಜ್ಜನರ ವಾಕ್ಯವನ್ನು, ಮತ್ತು ನೀತಿವಾಕ್ಯವನ್ನು ಅವರು ಕೇಳಲಿಲ್ಲ ಎಂದರ್ಥ. ಶ್ರುತವತಾಂ = ಶಾಸ್ತ್ರಜ್ಞರ ವಾಕ್ಯವೆಂದರೆ ಅಧ್ಯಾತ್ಮವಾಕ್ಯವನ್ನು ಅವರು ಕೇಳಲಿಲ್ಲ ಎಂಬುದಾಗಿ ಯೋಜನೆಯನ್ನು ಮಾಡಿಕೊಳ್ಳ- ಬೇಕು.
ಋದ್ಧಿಮಸ್ಮಾಸು ತಾಂ ದೃಷ್ಟ್ವಾ ವಿವರ್ಣೋ ಹರಿಣಃ ಕೃಶಃ |
ಧೃತರಾಷ್ಟ್ರಸ್ಯ ನೃಪತೇಃ ಸೌಬಲನೇ ನಿವೇದಿತಃ ॥28॥
ಆ ದುರ್ಯೋಧನನಿಗೆ ನಮ್ಮ ಮೇಲೆ ಅಪಾರವಾದ ದ್ವೇಷವಿತ್ತು. ಆ ದ್ವೇಷದಿಂದ ಪರಿತಾಪವನ್ನು ಹೊಂದಿ, ತಾನು ಸುಖವನ್ನೇ ಅನುಭವಿಸಲಿಲ್ಲ. ನಮ್ಮಲ್ಲಿದ್ದ ಸಮೃದ್ಧಿಯನ್ನು ಕಂಡು ಹೊಟ್ಟೆಕಿಚ್ಚು ಹೊಂದಿ ಬಿಳುಚಿಕೊಂಡನು. ಕೃಶನಾಗಿಬಿಟ್ಟನು. ದುರ್ಯೋಧನನ ಇಂಥ ಸ್ಥಿತಿಯನ್ನು ಶಕುನಿಯು ಧೃತರಾಷ್ಟ್ರನಿಗೆ ವಿವರಿಸಿ ಹೇಳಿದನು.
ಪಾಠಾಂತರದ ಬಗ್ಗೆ - `ಅಸ್ಮದ್ವೇಷೇಣ ತಾದೃಂಷ್ಟ್ವಾ ವಿವರ್ಣೋ ಹರಿಣಃ ಕೃಶಃ' ಎಂಬ ಪಾಠಾಂತರವನ್ನು ಇಲ್ಲಿ ಕಾಣಬಹುದು. `ಸಂಯುಕ್ತಾಃ ಕಾಮಮನ್ಯು- ಭ್ಯಾಂ' ಎಂಬ ಹಿಂದೆ ಇರುವ ಶ್ಲೋಕಕ್ಕಿಂತ ಮೊದಲು ಈ ಶ್ಲೋಕಗಳು ಕೆಲವು ಪುಸ್ತಕಗಳಲ್ಲಿ ಕಾಣಿಸುತ್ತದೆ. ಇನ್ನೂ ಕೆಲವು ಕಡೆ ಎರಡೂ ಕಡೆಯು ಕಾಣಿಸುತ್ತದೆ. ಒಂದೇ ಶ್ಲೋಕ ಎರಡು ಕಡೆ ಅಪ್ರಸ್ತುತವಾದ್ದರಿಂದ ಇಲ್ಲಿ ಮಾತ್ರ ಸೇರಿಸಿ, ಅನುವಾದ ಮಾಡಲಾಗಿದೆ.
ತಂ ಪಿತಾ ಪುತ್ರಗೃದ್ಧಿತ್ವಾದನುಮೇನೇಽನಯೇ ಸ್ಥಿತಮ್ |
ಅನವೇಕ್ಷ್ಯೈಷ ಪಿತರಂ ಗಾಂಗೇಯಂ ವಿದುರಂ ತಥಾ|
ಅಸಂಶಯಂ ಧೃತರಾಷ್ಟ್ರೋ ಯಥೈವಾಹಂ ತಥಾ ಗತಃ ॥29॥
ಪುತ್ರನ ಮೇಲಿನ ವಾತ್ಸಲ್ಯದಿಂದ ಧೃತರಾಷ್ಟ್ರನು ಅನ್ಯಾಯ ಮಾರ್ಗವನ್ನೇ ಅವಲಂಬಿಸಿದನು. ಮಗನ ದುಷ್ಟವಾದ ಆಲೋಚನೆಗಳಿಗೆ ತಾನು ಅನುಮತಿಯನ್ನು ನೀಡಿದನು. ಭೀಷ್ಮಾಚಾರ್ಯರ ಮತ್ತು ವಿದುರನ ಅಭಿಪ್ರಾಯವನ್ನು ಆ ಧೃತರಾಷ್ಟ್ರ- ನು ಉಪೇಕ್ಷೆ ಮಾಡಿಬಿಟ್ಟನು. ಈ ಕಾರಣದಿಂದಲೇ ಇಂದು ನಾನು ಎಲ್ಲರನ್ನು ಹೇಗೆ ಕಳೆದುಕೊಂಡಿದ್ದೇನೋ, ಹಾಗೆ ಧೃತರಾಷ್ಟ್ರನೂ ಕೂಡ ಕಳೆದುಕೊಂಡಿದ್ದಾನೆ. ಇದರಲ್ಲಿ ಸ್ವಲ್ಪವೂ ಕೂಡ ಸಂಶಯವಿಲ್ಲ.
ಟಿಪ್ಪಣಿ - `ಅನಪೇಕ್ಷ್ಯೈವ ಪಿತರಂ ಗಾಂಗೇಯಮ್' ಇತ್ಯತ್ರ `ಪಿತರಂ ಗಾಂಗೇಯಂ ವಿದುರಂ ಚಾನಪೇಕ್ಷ್ಯ' ರಾಜಾ ಧೃತರಾಷ್ಟ್ರಃ ಯಂ ದುರ್ಯೋಧನಮ್ ಅಸಂಶಯಮ್ `ಅನುಮೇನೇ' | ಅಶುಚಿಂ ಲುಬ್ಧಂ ಕಾಮವಶಾನುಗಾಂ ಪುತ್ರಮ್ ಅನಿಯಮ್ಯ, ಯಥಾ ಅಯಂ ದುರ್ಯೋಧನೋ ಗಚ್ಛತಿ ತಥಾ ಸ್ವಯಂ ಚ ಗತ ಇತಿ ಯೋಜನಾ॥
`ಅನಪೇಕ್ಷ್ಯೈವ ಪಿತರಂ ಗಾಂಗೇಯಮ್' ಎಂಬುದರ ಅಭಿಪ್ರಾಯ ಹೀಗಿದೆ - ತಂದೆ ಸಮಾನನಾದ ಭೀಷ್ಮನನ್ನು , ಚಿಕಪ್ಪನನ್ನು ವಿದುರನನ್ನು ಉಪೇಕ್ಷೆ ಮಾಡಿ, ರಾಜನಾದ ಧೃತರಾಷ್ಟ್ರನು ದುರ್ಯೋಧನನಿಗೆ ಸಂಶಯ ಪಡದೇ ಅನುಮತಿ ನೀಡಿದನು. ಆ ದುರ್ಯೋಧನನು ಶುದ್ಧವಾದ ಮನೋಭಾವನೆಯನ್ನು ಹೊಂದಿರಲಿಲ್ಲ. ಕಾಮಪರ- ವಶನಾಗಿದ್ದನು. ಇಂಥ ಮಗನನ್ನು ಆ ಧೃತರಾಷ್ಟ್ರನು ನಿಯಂತ್ರಣ ಮಾಡಲಿಲ್ಲ. ಆದ್ದರಿಂದ ದುರ್ಯೋಧನನು ಯಾವ ಹಾದಿಯಲ್ಲಿ ತೆರಳಿದನೋ, ಅದೇ ಹಾದಿಯಲ್ಲೇ ತಂದೆ- ಯಾದ ಧೃತರಾಷ್ಟ್ರನೂ ಕೂಡ ತೆರಳಿದನು ಎಂಬುದಾಗಿ ಯೋಜನೆಯನ್ನು ತಿಳಿಯಬೇಕು.
ಅನಿಯಮ್ಯಾಶುಚಿಂ ಲುಬ್ಧಂ ಪುತ್ರಂ ಕಾಮವಶಾನುಗಮ್ |
ಪತಿತೋ ಯಶಸೋ ದೀಪ್ತಾದ್ ಘಾತಯಿತ್ವಾ ಸಹೋದರಾನ್ ॥30॥
ದುರ್ಯೋಧನನು ಅಪವಿತ್ರವಾದ ಆಚಾರವಿಚಾರಗಳಿಂದ ಕೂಡಿದ್ದಾನೆ. ಲೋಭಿಯಾಗಿದ್ದಾನೆ, ಕಾಮಪರವಶನಾಗಿದ್ದಾನೆ. ಇಂಥ ಮಗನನ್ನು ಧೃತರಾಷ್ಟ್ರನು ನಿಯಂತ್ರ ಮಾಡಬೇಕಿತ್ತು. ದುರ್ಯೋಧನನ ಸಂಹಾರಕ್ಕೆ ಆ ಧೃತರಾಷ್ಟ್ರನೇ ಕಾರಣನಾದನು ಮತ್ತು ಆ ದುರ್ಯೋಧನನ ಸಹೋದರರ ಸಂಹಾರಕ್ಕೂ ಕೂಡ ಕಾರಣನಾದನು. ಉಜ್ವಲವಾದ ಯಶಸ್ಸನ್ನು ಪಡೆಯದೇ ಭ್ರಷ್ಟನಾದನು.
ಇಮೌ ವೃದ್ಧೌ ಚ ಶೋಕಾಗ್ನೌ ಪ್ರಕ್ಷಿಪ್ಯ ಚ ಸುಯೋಧನಃ |
ಅಸ್ಮತ್ಪ್ರದ್ವೇಷಸಂಯುಕ್ತಃ ಪಾಪಬುದ್ಧಿಃ ಸದೈವ ಹಿ ॥31॥
ಧೃತರಾಷ್ಟ್ರ ಮತ್ತು ಗಾಂಧಾರಿಯರು ವೃದ್ಧರಾಗಿದ್ದಾರೆ. ಇವರನ್ನು ಸಂತೈಸದೇ ಆ ದುಷ್ಟನಾದ ದುರ್ಯೋಧನನು ಪುತ್ರಶೋಕವೆಂಬ ಪ್ರಜ್ವಲಿಸುವ ಅಗ್ನಿಯಲ್ಲಿ ಆ ವೃದ್ಧರನ್ನು ಹಾಕಿಬಿಟ್ಟನು. ಈ ದುರ್ಯೋಧನನು ನಿರಂತರ ನಮ್ಮ ಬಗ್ಗೆ ಅತಿಯಾದ ದ್ವೇಷದಿಂದಲೇ ಸಂತಪ್ತನಾಗಿದ್ದನು.
ಕೋ ಹಿ ಬಂಧುಃ ಕುಲೀನಃ ಸಂಸ್ತಥಾ ಬ್ರೂಯಾತ್ ಸುಹೃಜ್ಜನೇ |
ಯಥಾಸಾವುಕ್ತವಾನ್ ಕ್ಷುದ್ರೋ ಯುಯುತ್ಸುರ್ವೃಷ್ಣಿಸನ್ನಿಧೌ ॥32॥
ಹಿಂದೆ ಶ್ರೀಕೃಷ್ಣನು ಸಂಧಾನಕ್ಕಾಗಿ ಹಸ್ತಿನಾಪಟ್ಟಣಕ್ಕೆ ತೆರಳಿದ್ದನು. ಆಗ ದುರ್ಯೋಧನನು ಸಂಧಾನವನ್ನು ಮಾಡಿಕೊಳ್ಳದೇ ಯುದ್ಧ ಮಾಡುತ್ತೇನೆಂದು ಹೇಳಿದನು. ತನ್ನ ಬಂಧುಗಳ ಬಗ್ಗೆ ಯುದ್ಧ ಮಾಡುತ್ತೇನೆಂದು ಕುಲೀನನಾದ ಯಾರು ತಾನೇ ತನ್ನ ಸ್ನೇಹಿತರಲ್ಲಿ ಹೀಗೆ ಹೇಳುತ್ತಾರೆ ?
ಆತ್ಮನೋ ಹಿ ವಯಂ ದೋಷಾದ್ ವಿನಷ್ಟಾಃ ಶಾಶ್ವತೀಃ ಸಮಾಃ |
ಪ್ರದಹಂತೋ ದಿಶಃ ಸರ್ವಾಸ್ತೇಜಸಾ ಭಾಸ್ಕರಾ ಇವ ॥33॥
ಸೂರ್ಯನು ತನ್ನ ತೇಜಸ್ಸಿನಿಂದ ಎಲ್ಲ ದಿಕ್ಕುಗಳನ್ನು ಹೇಗೆ ಸುಡುತ್ತಾನೋ? ಅದರಂತೆ ಈ ದುರ್ಯೋಧನನು ತನ್ನಲ್ಲಿರುವ

ದೋಷದಿಂದಲೇ ಎಲ್ಲರನ್ನೂ ಕೂಡ ಸುಟ್ಟನು.
ಟಿಪ್ಪಣಿ - ಆತ್ಮನೋ ಹಿ ವಯಂ ದೋಷಾತ್ ಇತ್ಯತ್ರ ಆತ್ಮನಃ ದುರ್ಯೋಧನಸ್ಯ ದೋಷಾತ್ ॥
`ಆತ್ಮನೋ ಹಿ ವಯಂ ದೋಷಾತ್' ಎಂಬಲ್ಲಿ `ಆತ್ಮನಃ' ಎಂಬ ಪದಕ್ಕೆ ದುರ್ಯೋಧನನ ಎಂದರ್ಥ. ಇದಕ್ಕೆ `ದೋಷಾತ್' ಎಂಬಲ್ಲಿ ಅನ್ವಯ.
ವಿವರಣೆ - ಪ್ರಳಯಕಾಲದ ಸೂರ್ಯನು ಎಲ್ಲಾ ದಿಕ್ಕುಗಳಲ್ಲಿರುವ ಪದಾರ್ಥಗಳನ್ನು ಸುಡುವಂತೆ ದುರ್ಯೋಧನನು ಸಹೋದರರನ್ನು, ಪುತ್ರರನ್ನು, ಪೌತ್ರರನ್ನೂ, ಪಿತೃಗಳನ್ನು ಸಂಹಾರ ಮಾಡಿದನು. ನಾವೂ ಸಹ ಅವನಿಂದಲೇ ಹತರಾದೆವು. ಆ ದುರ್ಯೋಧನನೂ ಕೂಡ ಸ್ವತಃ ಹತನಾದನು ಎಂಬುದು ಶ್ಲೋಕದ ಭಾವ.
ಸೋऽಸ್ಮಾಕಂ ವೈರಪುರುಷೋ ದುರ್ಮಂತ್ರಿಪ್ರಗ್ರಹಂ ಗತಃ |
ದುರ್ಯೋಧನಕೃತೇ ಹ್ಯೇತತ್ ಕುಲಂ ನೋ ವಿನಿಪಾತಿತಮ್ |
ಅವಧ್ಯಾನಾಂ ವಧಂ ಕೃತ್ವಾ ಲೋಕೇ ಪ್ರಾಪ್ತಾಃ ಸ್ಮ ವಾಚ್ಯತಾಮ್ ॥34॥
ನಮ್ಮನ್ನು ವೈರ ಮಾಡುವ ಪುರುಷನಾದ ದುರ್ಯೋಧನನು ಕೆಟ್ಟ ಮಂತ್ರಿಜನರ ಬಂಧನಕ್ಕೆ ಸಿಕ್ಕಿದ್ದನು. ಅಂಥ ದುರ್ಯೋಧನನ ನಿಮಿತ್ತದಿಂದ ನಮ್ಮ ಭರತಕುಲವೇ ಇಂದು ನಾಶವಾಗಿ ಹೋಯಿತು. ಅವಧ್ಯರಾದವರನ್ನೂ ಕೂಡ ವಧೆ ಮಾಡಿ ಇಂದು ನಾವು ಲೋಕನಿಂದನೆಗೆ ಆಸ್ಪದರಾಗಿದ್ದೇವೆ.
ಕುಲಸ್ಯಾಸ್ಯಾಂತಕರಣಂ ದುರ್ಮತಿಂ ಪಾಪಕಾರಿಣಮ್ |
ರಾಜಾ ರಾಷ್ಟ್ರೇಶ್ವರಂ ಕೃತ್ವಾ ಧೃತರಾಷ್ಟ್ರೋऽದ್ಯ ಶೋಚತಿ ॥35॥
ನಮ್ಮ ಕುಲದ ಸಂಪೂರ್ಣ ವಿನಾಶಕ್ಕೆ ಕಾರಣನಾದ, ದುರ್ಮತಿಯಾದ, ಪಾಪ- ಭಾಜನನಾದ ಆ ದುರ್ಯೋಧನನ್ನು ನಾನೇಕೆ ರಾಷ್ಟ್ರಪುರುಷನನ್ನಾಗಿ ಮಾಡಿದೆನು? ಎಂಬುದಾಗಿ ಧೃತರಾಷ್ಟ್ರನು ಈಗ ಪಶ್ಚಾತ್ತಾಪ ಪಡುತ್ತಿದ್ದಾನೆ.
ಹತಾಃ ಶೂರಾಃ ಕೃತಂ ಪಾಪಂ ವಿಷಯಃ ಸ್ವೋ ವಿನಾಶಿತಃ |
ಹತ್ವಾ ನೋ ವಿಗತೋ ಮನ್ಯುಃ ಶೋಕೋ ಮಾಂ ರಂಧಯತ್ಯಯಮ್ ॥36॥
ಈ ಯುದ್ಧದಲ್ಲಿ ಅನೇಕ ಶೂರರು ಮರಣವನ್ನು ಹೊಂದಿದರು. ನಾವು ಯಾರನ್ನು ಕೊಲ್ಲಬಾರದೋ, ಅವರನ್ನೆಲ್ಲಾ ಕೊಂದಿದ್ದಾಯಿತು. ಅದರಿಂದ ಪಾಪ- ವನ್ನು ಕಟ್ಟಿಕೊಂಡೆವು. ನಮ್ಮ ದೇಶವು ನಾಶವಾಯಿತು. ಈ ಯುದ್ಧದಿಂದ ಶತ್ರುಗಳ ಮೇಲಿದ್ದ ಕೋಪವು ನಾಶವಾಯಿತು. ಆದರೆ ಬಂಧುಗಳ ವಿಯೋಗದಿಂದ ಉಂಟಾಗಿರುವ ಶೋಕವು ನಮ್ಮನ್ನು ಇಂದು ಸುಡುತ್ತಿದೆ.
`ಶೋಕೋ ಮಾಂ ರಂಧಯತ್ಯಯಮ್' ಇತ್ಯತ್ರ ರಂಧಯತಿ ದಹತಿ ॥
`ಶೋಕೋ ಮಾಂ ರಂಧಯತ್ಯಯಮ್' ಎಂಬಲ್ಲಿ `ರಂಧಯತಿ' ಎಂಬ ಪದಕ್ಕೆ `ದಹತಿ' ಸುಡುತ್ತದೆ ಎಂದರ್ಥ.
ಧನಂಜಯಕೃತಂ ಪಾಪಂ ಕಲ್ಯಾಣೇನೋಪಹನ್ಯತೇ |
ಖ್ಯಾಪನೇನಾನುತಾಪೇನ ದಾನೇನ ತಪಸಾಪಿ ವಾ |
ನಿವೃತ್ತ್ಯಾ ತೀರ್ಥಗಮನಾಚ್ಛ್ರುತಿಸ್ಮೃತಿಜಪೇನ ಚ ॥37॥
ಓ ಅರ್ಜುನನೇ ! ನಾವು ಮಾಡಿದ ಪಾಪವು ಶುಭವಾದ ಕರ್ಮಗಳನ್ನು ಆಚರಣೆ ಮಾಡುವುದರಿಂದ ಪರಿಹಾರವಾಗುತ್ತದೆ. ಅಥವಾ ಮತ್ತೊಬ್ಬರಲ್ಲಿ ಅದನ್ನು ಹೇಳಿಕೊಳ್ಳುವುದರಿಂದಲೂ ಪರಿಹಾರವಾಗುತ್ತದೆ. ಅಥವಾ ಪಶ್ಚಾತ್ತಾಪ ಪಡುವು- ದರಿಂದ ದಾನ ಮತ್ತು ತಪಸ್ಸುಗಳಿಂದ ಆ ಪಾಪವು ಪರಿಹಾರವಾಗುತ್ತದೆ. ಅಥವಾ ವಿಷಯ ಪದಾರ್ಥಗಳ ನಿವೃತ್ತಿಯಿಂದ (ಎಲ್ಲವನ್ನೂ ಪರಿತ್ಯಾಗ ಮಾಡುವುದರಿಂದ) ತೀರ್ಥಕ್ಷೇತ್ರಯಾತ್ರೆ ಮಾಡುವುದರಿಂದ ಶ್ರುತಿ-ಸ್ಮೃತಿಗಳನ್ನು ಜಪ ಮಾಡುವುದ- ರಿಂದಲೂ ಪಾಪವು ಪರಿಹಾರವಾಗುತ್ತದೆ.
ಟಿಪ್ಪಣಿ - ಧನಂಜಯಕೃತಂ ಪಾಪಂ ಕಲ್ಯಾಣೇನೋಪಹನ್ಯತೇ ಇತ್ಯತ್ರ ಧನಸ್ಯ ಶತ್ರುಧನಸ್ಯ ಜಯಃ ಧನಂಜಯಃ, ತೇನ ಕೃತಂ ಪಾಪಂ, ಧನಂಜಯೇನ ಅರ್ಜುನೇನ ಕೃತಂ ಪಾಪಂ ಸ್ವಜ್ಯೇಷ್ಠಕರ್ಣವಧಾಖ್ಯಪಾಪಂ ವಾ | ಕಲ್ಯಾಣೇನ ಪುಣ್ಯಕರ್ಮಕರಣೇನ| ನಿವೃತ್ತ್ಯಾ ವಿಷಯೇಭ್ಯೋ ನಿವೃತ್ತ್ಯಾ, ವೈರಾಗ್ಯೇಣೇತ್ಯರ್ಥಃ ॥
ಧನಂಜಯಕೃತಂ ಪಾಪಂ ಕಲ್ಯಾಣೇನೋಪಹನ್ಯತೇ ಎಂಬಲ್ಲಿ ಶತ್ರುಧನವನ್ನು ಗೆದ್ದಿರುವ ಕಾರಣ, ಅರ್ಜುನನು `ಧನಂಜಯ' ಎಂದು ಕರೆಸಿಕೊಳ್ಳುತ್ತಾನೆ. ಅಂಥ ಧನಂಜಯನಿಂದ ತನಗಿಂತಲೂ ಜ್ಯೇಷ್ಠನಾದ ಕರ್ಣನ ವಧೆಯೆಂಬ ಯಾವ ಪಾಪವು ಬಂದಿದೆಯೋ, ಅದು ಎಂದರ್ಥ. ಕಲ್ಯಾಣೇನ ಎಂಬುದಕ್ಕೆ ಪುಣ್ಯಕರ್ಮವನ್ನು ಆಚರಣೆ ಮಾಡುವುದರಿಂದ ಪರಿಹಾರವಾಗುತ್ತದೆ ಎಂದರ್ಥ.
`ನಿವೃತ್ತ್ಯಾ 'ಎಂಬುದಕ್ಕೆ ವಿಷಯಪದಾರ್ಥಗಳ ನಿವೃತ್ತಿಯಿಂದ ಎಂದರ್ಥ. ಅರ್ಥಾತ್ ವೈರಾಗ್ಯದಿಂದ ಎಂದರ್ಥ.
ವಿವರಣೆ - ಜೀವನದಲ್ಲಿ ಅನೇಕ ದೊಡ್ಡ ತಪ್ಪುಗಳನ್ನು ತಿಳಿದೋ, ಅಥವಾ ತಿಳಿಯದೇ ಆಚರಿಸುತ್ತೇವೆ. ಅಂಥ ಸಂದರ್ಭದಲ್ಲಿ ಅದರಿಂದ ಬರುವ ಪಾಪವನ್ನು ಹೇಗೆ ಪರಿಹಾರ ಮಾಡಿಕೊಳ್ಳಬೇಕೆಂದು ಮಹಾಭಾರತದ ಈ ಶ್ಲೋಕವು ನಮ್ಮನ್ನು ಎಚ್ಚರಿಸುತ್ತಿದೆ. 1. ಅನೇಕ ಪುಣ್ಯಕರ್ಮಗಳನ್ನು ಮಾಡುವುದು, 2. ಅನೇಕ ಶಿಷ್ಟ- ಜನರ ಬಳಿ ನಾವು ಮಾಡಿದ ಪಾಪವನ್ನು ಹೇಳಿಕೊಳ್ಳುವುದು, 3. ಪಶ್ಚಾತ್ತಾಪಪಟ್ಟು ಮುಂದೆಂದೂ ಅದೇ ತಪ್ಪನ್ನು ಮಾಡದೇ ಇರುವುದು. 4. ಮಾಡಿದ ತಪ್ಪಿನ ಪರಿಮಾರ್ಜನೆಗಾಗಿ ಅನೇಕ ಬಗೆಯ ದಾನಗಳನ್ನು ಮಾಡುವುದು, 5. ತಪಸ್ಸನ್ನು ಆಚರಿಸುವುದು, 6. ಎಲ್ಲವನ್ನೂ ಪರಿತ್ಯಾಗ ಮಾಡುವುದು, 7. ತೀರ್ಥಕ್ಷೇತ್ರ- ಯಾತ್ರೆ ಮಾಡುವುದು, ಶ್ರುತಿ-ಸ್ಮೃತಿಗಳಲ್ಲಿ ಹೇಳಿರುವ ಮಹಾಮಂತ್ರಗಳ ಜಪವನ್ನು ಮಾಡುವುದು, ಇಷ್ಟು ಕಾರಣಗಳಿಂದ ಪಾಪವು ಪರಿಹಾರವಾಗುತ್ತದೆ.
ಪ್ರಕೃತ ಯುಧಿಷ್ಠಿರನಿಗೆ ಎಲ್ಲವನ್ನೂ ಪರಿತ್ಯಾಗ ಮಾಡಬೇಕೆಂಬ ಪ್ರಾಯಶ್ಚಿತ್ತ- ವನ್ನು ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಹೀಗೆ ಹೇಳುತ್ತಿದ್ದಾನೆ -
ತ್ಯಾಗವಾಂಶ್ಚ ಪುನಃ ಪಾಪಂ ನಾಲಂಕರ್ತುಮಿತಿ ಶ್ರುತಿಃ |
ತ್ಯಾಗವಾನ್ ಜನ್ಮಮರಣೇ ನಾಪ್ನೋತೀತಿ ಶ್ರುತಿರ್ಯದಾ |

ಇಷ್ಟು ಬಗೆಯ ಪರಿಹಾರಗಳಲ್ಲಿ ಯಾರು ತ್ಯಾಗವನ್ನೇ ಮಾಡುತ್ತಾನೋ, ಅವನು ಮತ್ತೆ ಪಾಪಕರ್ಮದಲ್ಲಿ ತೊಡಗಲು ಸಾಧ್ಯವಿಲ್ಲ. ಈ ವಿಷಯವನ್ನು ಶ್ರುತಿಯೇ ಸ್ಪಷ್ಟಪಡಿಸುತ್ತಿದೆ. ಯಾರು ತ್ಯಾಗವನ್ನು ಮಾಡುತ್ತಾನೋ, ಅವನು ಜನನ ಮತ್ತು ಮರಣಗಳನ್ನು ಪುನಃ ಹೊಂದಲಾರ ಎಂದು.
ವಿವರಣೆ - `ತ್ಯಾಗೇನೈಕೇ ಅಮೃತತ್ವಮಾನಷುಃ' ಎಂಬ ಶ್ರುತಿಯನ್ನೇ ಅರ್ಥತಃ ಈ ಶ್ಲೋಕದಲ್ಲಿ ವ್ಯಾಖ್ಯಾನ ಮಾಡಲಾಗಿದೆ.
ಪ್ರಾಪ್ತವರ್ತ್ಮಾ ಕೃತಮತಿರ್ಬ್ರಹ್ಮ ಸಂಪದ್ಯತೇ ತದಾ ॥38॥
ಸ ಧನಂಜಯನಿರ್ದ್ವಂದ್ವೋ ಮುನಿರ್ಜ್ಞಾನಸಮನ್ವಿತಃ |
ವನಮಾಮಂತ್ರ್ಯ ವಃ ಸರ್ವಾನ್ ಗಮಿಷ್ಯಾಮಿ ಪರಂತಪ ॥39॥
ಅರ್ಜುನನೇ! ಯಾರು ಎಲ್ಲಾ ವಿಷಯಪದಾರ್ಥಗಳನ್ನು ಪರಿತ್ಯಾಗ ಮಾಡು- ತ್ತಾನೋ, ಅವನಿಗೆ ಮೋಕ್ಷಮಾರ್ಗವು ಸುಲಭವಾಗಿ ದೊರಕುತ್ತದೆ. ಜ್ಞಾನದಿಂದ ಕೂಡಿರುವ ಸ್ಥಿರವಾದ ಬುದ್ಧಿಯನ್ನು ಹೊಂದಿರುವ, ದ್ವಂದ್ವಗಳನ್ನು ದಾಟಿದವನಾಗಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಪರಂತಪನೇ! ನಿಮ್ಮೆಲ್ಲರ ಅನುಮತಿಯನ್ನು ಪಡೆದುಕೊಂಡು ನಾನು ಅರಣ್ಯಕ್ಕೆ ಹೊರಡುತ್ತೇನೆ.
ಟಿಪ್ಪಣಿ- ತ್ಯಾಗವಾನ್ ಜನ್ಮಮರಣೇ ಇತ್ಯತ್ರ ಜನ್ಮಕ್ಷಯನಿಮಿತ್ತಂ ಕೈವಲ್ಯಂ ಚ ಯತ್ನೇ ಕೃತೇ ಸತಿ ಪ್ರಾಪ್ತುಂ ಶಕ್ಯಮಿತಿ ಶ್ರುತಿರಾಹ | ಅತಃ ಪಾಪಮಾತ್ರಪರಿಹಾರಃ ಕಿಂ ವಕ್ತವ್ಯ ಇತಿ ಭಾವಃ ॥ `ತ್ಯಾಗವಾನ್ ಜನ್ಮಮರಣೇ' ಎಂಬುದರ ಅಭಿಪ್ರಾಯ ಹೀಗಿದೆ - ಜನನ ಮತ್ತು ಮರಣಗಳನ್ನು ದಾಟಲು ಮೋಕ್ಷವನ್ನು ಅಪೇಕ್ಷಿಸಬೇಕೆಂದು ಶ್ರುತಿ ಹೇಳುತ್ತದೆ. ಯಾರು ಎಲ್ಲ ವಿಷಯಪದಾರ್ಥಗಳನ್ನು ಪರಿತ್ಯಾಗ ಮಾಡುತ್ತಾರೋ, ಅವರಿಗೆ ಮೋಕ್ಷವು ದೊರಕುತ್ತದೆ ಎಂದು ಶ್ರುತಿಯು ಹೇಳುತ್ತಿರುವಾಗ ಕೇವಲ ಪಾಪವು ಪರಿಹಾರವಾಗು- ತ್ತದೆಂಬುದಾಗಿ ಪ್ರತ್ಯೇಕವಾಗಿ ಹೇಳಬೇಕೇನು ? ಎಂಬುದು ಶ್ಲೋಕದ ಭಾವ.
ನಹಿ ಕೃತ್ಸ್ನತಮೋ ಧರ್ಮಃ ಶಕ್ಯಃ ಪ್ರಾಪ್ತುಮಿತಿ ಶ್ರುತಿಃ |
ಪರಿಗ್ರಾಹವತಾ ತನ್ಮೇ ಪ್ರತ್ಯಕ್ಷಮರಿಸೂದನ ॥40॥
ಯಾವ ವ್ಯಕ್ತಿಯು ಮತ್ತೊಬ್ಬರ ಬಳಿ ದಾನವನ್ನು ತೆಗೆದುಕೊಳ್ಳುತ್ತಾನೋ, ತೆಗೆದುಕೊಂಡದ್ದನ್ನು ಸಂಗ್ರಹ ಮಾಡುತ್ತಾನೋ, ಅಂಥವನಿಗೆ ಸಂಪೂರ್ಣವಾದ ಧರ್ಮವನ್ನು ಆಚರಣೆ ಮಾಡಲು ಸಾಧ್ಯವಾಗುವುದಿಲ್ಲ ಎಂಬುದಾಗಿ ಶ್ರುತಿಯೇ ಹೇಳುತ್ತಿದೆ. ಮತ್ತು ಇದು ನನ್ನ ಪ್ರತ್ಯಕ್ಷಾನುಭವವೂ ಕೂಡ ಆಗಿದೆ.
ವಿವರಣೆ - ತ್ಯಾಗಿಯಾದವನಷ್ಟೇ ಸಂಪೂರ್ಣವಾದ ಧರ್ಮವನ್ನು ಆಚರಿಸಲು ಸಾಧ್ಯ. `ಇಜ್ಯಾಚಾರ ಧರ್ಮೋ ಅಹಿಂಸಾದಾನಸ್ವಾಧ್ಯಾಯಕರ್ಮಣಾಂ | ಅಯಂ ತು ಪರಮೋ ಧರ್ಮೋ ಯದ್ಯೋಗೇ ಆತ್ಮದರ್ಶನಂ ॥' ಎಂಬ ಯಾಜ್ಞವಲ್ಕ್ಯರ ಮಾತಿನಂತೆ ಸಂಪೂರ್ಣವಾದ ತ್ಯಾಗವನ್ನು ಮಾಡಿದರೆ ಮಾತ್ರ, ಸಂಪೂರ್ಣವಾದ ಧರ್ಮವನ್ನು ಆಚರಿಸಲು ಸಾಧ್ಯ ಎಂದು ತಿಳಿಯುತ್ತದೆ.
ಮಯಾ ನಿಸೃಷ್ಟಂ ಪಾಪಂ ಹಿ ಪರಿಗ್ರಹಸಮೀಪ್ಸತಾ |
ಜನ್ಮಕ್ಷಯನಿಮಿತ್ತಂ ಚ ಶಕ್ಯಂ ಪ್ರಾಪ್ತುಮಿತಿ ಶ್ರುತಿಃ ॥41॥
ಆದರೆ ನಾನಿಂದು ರಾಜ್ಯವೆಂಬ ಪರಿಗ್ರಹವನ್ನು ಅಪೇಕ್ಷಿಸುತ್ತಿದ್ದೇನೆ. ಆದ್ದರಿಂದ ಪಾಪದ ರಾಶಿಯೇ ನನ್ನನ್ನು ಆವರಿಸಿದೆ. ಇದು ಜನ್ಮ ಮತ್ತು ಮರಣಗಳಿಗೆ ನಿಮಿತ್ತವಾಗಿದೆ. ಯಾರು ಪರಿಗ್ರಹವನ್ನು ಮಾಡುತ್ತಾರೋ, ಅವರಿಗೆ ಮುಕ್ತಿಯು ದೊರಕುವುದಿಲ್ಲವೆಂದು ಶ್ರುತಿಯೇ ಹೇಳುತ್ತಿದೆ.
ಸ ಪರಿಗ್ರಹಮುತ್ಸೃಜ್ಯ ಕೃತ್ಸ್ನಂ ರಾಜ್ಯಂ ತಥೈವ ಚ |
ಗಮಿಷ್ಯಾಮಿ ವಿನಿರ್ಮುಕ್ತೋ ವಿಶೋಕೋ ವಿಜ್ವರಸ್ತಥಾ ॥42॥
ಆದ್ದರಿಂದ ನಾನು ರಾಜ್ಯಪರಿಗ್ರಹವನ್ನು ಪರಿತ್ಯಾಗ ಮಾಡುತ್ತೇನೆ. ಮತ್ತು ಆ ಎಲ್ಲಾ ಸಾಂಸಾರಿಕ ಬಂಧನಗಳಿಂದಲೂ ಮುಕ್ತನಾಗುತ್ತೇನೆ. ಶೋಕರಹಿತನಾಗಿ ಯಾವುದೇ ಮಮತೆಯನ್ನಿಟ್ಟುಕೊಳ್ಳದೇ ನಾನು ಅರಣ್ಯಕ್ಕೆ ತೆರಳುತ್ತೇನೆ.
ಪ್ರಶಾಸಧ್ವಮಿಮಾಮುರ್ವೀಂ ಕ್ಷೇಮಾಂ ನಿಹತಕಂಟಕಾಮ್ |
ನ ಮಮಾರ್ಥೋಽಸ್ತಿ ರಾಜ್ಯೇನ ಭೋಗೈರ್ವಾ ಕುರುನಂದನ ॥43॥
ಓ ಅರ್ಜುನನೇ! ಆದ್ದರಿಂದ ಯಾವುದೇ ಶತ್ರುಗಳ ಉಪದ್ರವವಿಲ್ಲದ ಈ ಭೂಮಂಡಲವನ್ನು ನೀವುಗಳು ಪಾಲನೆ ಮಾಡಿರಿ. ನನಗೆ ಈ ರಾಜ್ಯದಿಂದ ಆಗ- ಬೇಕಾದದ್ದು ಏನೂ ಇಲ್ಲ. ಈ ಭೋಗಗಳಿಂದಲೂ ನನಗೇನೂ ಪ್ರಯೋಜನವಿಲ್ಲ.
ಪಾಠಾಂತರದ ಬಗ್ಗೆ - ಕೆಲವು ಪುಸ್ತಕಗಳಲ್ಲಿ ಪ್ರಶಾಧಿ ತ್ವಂ ಎಂಬ ಪಾಠವಿದೆ. ಈ ಪಾಠದ ಪ್ರಕಾರ - ಓ ಅರ್ಜುನನೇ! ಈ ಭೂಮಿಯನ್ನು ನೀನು ಪರಿಪಾಲನೆ ಮಾಡು ಎಂದು ಹೇಳಿದಂತಾಗುತ್ತದೆ. ಈ ಪಾಠಕ್ಕಿಂತಲೂ `ಪ್ರಶಾಸಧ್ವಂ' ಎಂಬ ಪಾಠವೇ ಉಚಿತವೆಂದು ಕಾಣಿಸುತ್ತದೆ. ಏಕೆಂದರೆ ಅರ್ಜುನನಿಗಿಂತಲೂ ಹಿರಿಯ- ನಾದ ಭೀಮಸೇನನು ಇರುವಾಗ ಅರ್ಜುನನಿಗೆ ಅಧಿಕಾರ ವಹಿಸಲು ಸಾಧ್ಯವಿಲ್ಲ. ಆದ್ದರಿಂದ ನೀವೆಲ್ಲರೂ ಭೂಪಾಲನೆಯನ್ನು ಮಾಡಿರಿ ಎಂಬುದಾಗಿ ಯುಧಿಷ್ಠಿರ- ನು ಹೇಳಿದನೆಂದು ತಿಳಿಯಬೇಕು.
ಏತಾವದುಕತ್ತ್ವ ವಚನಂ ಧರ್ಮರಾಜೋ ಯುಧಿಷ್ಠಿರಃ |
ವ್ಯಾಪಾರಮತ್ ತತಃ ಪಾರ್ಥಃ ಕನೀಯಾನ್ ಪ್ರತ್ಯಭಾಷತ ॥44॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಸಪ್ತಮೋಽಧ್ಯಾಯಃ ॥7॥
ಧರ್ಮರಾಜನಾದ ಯುಧಿಷ್ಠಿರನು ಅರ್ಜುನನ ಬಳಿ ಇಷ್ಟು ಮಾತುಗಳನ್ನು ಹೇಳಿ ವಿರಮಿಸಿದನು. ಅನಂತರ ಕುಂತಿಯಲ್ಲಿ ಕೊನೆಯ ಮಗನಾಗಿ ಹುಟ್ಟಿದ ಅರ್ಜುನನು ತನ್ನ ಅಭಿಪ್ರಾಯವನ್ನು ತಿಳಿಸಲು ಪ್ರಾರಂಭ ಮಾಡಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 7ನೆಯ ಅಧ್ಯಾಯವು ಮುಗಿಯಿತು.
*****

8. ಎಂಟನೆಯ ಅಧ್ಯಾಯ
ಯುಧಿಷ್ಠಿರನ ಅಭಿಪ್ರಾಯವನ್ನು ಅರ್ಜುನನು ನಿರಾಕರಣೆ ಮಾಡಿದನು. ಸಂಪತ್ತನ್ನು ಗಳಿಸುವುದು ಕ್ಷತ್ರಿಯರ ಮುಖ್ಯಧರ್ಮವಾಗಿದೆ. ಗಳಿಸಿದ ಸಂಪತ್ತಿನಿಂದ ಯುಧಿಷ್ಠಿರನಿಗೆ ಯಜ್ಞ ಮಾಡುವಂತೆ ಅರ್ಜುನನು ಪ್ರೇರಿಸಿದುದು.
ವೈಶಂಪಾಯನಃ
ಅಥಾರ್ಜುನ ಉವಾಚೇದಮ್ ಅಧಿಕ್ಷಿಪ್ತ ಇವಾಕ್ಷಮೀ |
ಅಭಿನೀತಿತರಂ ವಾಕ್ಯಂ ದೃಢವಾದಪರಾಕ್ರಮಃ ॥1॥
ದರ್ಶಯನ್ನೈಂದ್ರಿರಾತ್ಮಾನಮುಗ್ರಮುಗ್ರಪರಾಕ್ರಮಃ |
ಸ್ಮಯಮಾನೋ ಮಹಾತೇಜಾಃ ಸೃಕ್ಕಿಣೀ ಪರಿಸಂಲಿಹನ್ ॥2॥
ವೈಶಂಪಾಯನರು ಜನಮೇಜಯನೇ! ಯುಧಿಷ್ಠಿರನ ಮಾತನ್ನು ಕೇಳಿ ಅರ್ಜುನನಿಗೆ ಅಣ್ಣನು ತನ್ನ ಕಾರ್ಯಕ್ಕಾಗಿ ತನ್ನನ್ನು ನಿಂದಿಸಿದಂತೆ ತೋರಿತು. ಆ ಮಾತುಗಳು ಅವನಿಗೆ ದುಸ್ಸಹವಾಗಿ ಕಂಡುಬಂದವು. ಮಾತಿನಲ್ಲಿಯೂ, ಪರಾ- ಕ್ರಮದಲ್ಲಿಯೂ ಮತ್ತೊಬ್ಬರಿಂದ ಹಿಂಜರಿಯದ ಉಗ್ರವಾದ ಪರಾಕ್ರಮವುಳ್ಳ ಮಹಾತೇಜಸ್ವಿಯಾದ ಅರ್ಜುನನು ಅವೇಶದಿಂದ ಕೂಡಿದ ಮಾತುಗಳಿಂದ ಕೋಪಗೊಂಡವನಂತೆ ಕಂಡನು. ಹುಸಿನಗೆಯಿಂದ ಹೀಗೆಂದನು
ಅಹೋ ದುಃಖಮಹೋ ಕೃಚ್ಛ್ರಮಹೋ ವೈಕ್ಲವ್ಯಮುತ್ತಮಮ್ |
ಯತ್ಕೃತ್ವಾ ಮಾನುಷಂ ಕರ್ಮ ತ್ಯಜೇಥಾಃ ಶ್ರಿಯಮುತ್ತಮಾಮ್॥3॥
ನೀನು ಮನುಷ್ಯರಿಗೆ ಸಾಧ್ಯವಲ್ಲದ ವೀರಕಾರ್ಯವನ್ನು ಮಾಡಿರುವಿ. ಗಳಿಸಿದ ಮಹತ್ತಾದ ಈ ಸಂಪತ್ತನ್ನೆಲ್ಲಾ ಬಿಟ್ಟು ಹೋಗಬೇಕೆನ್ನುತ್ತಿರುವಿ? ಆಹಾ! ನಿನ್ನ ದುಃಖವೇನು? ನಿನ್ನ ಪ್ರಯಾಸವೇನು? ನಿನ್ನ ಭಯವೇನು? ಇವೆಲ್ಲ ನನಗೆ ಆಶ್ಚರ್ಯವನ್ನುಂಟುಮಾಡುತ್ತಿವೆ.
ಶತ್ರೂನ್ ಹತ್ವಾ ಮಹೀಂ ಲಬ್ಧ್ವಾ ಸ್ವಧರ್ಮೇಣೋಪಪಾದಿತಾಮ್ |
ಹತಾಮಿತ್ರಃ ಕಥಂ ಸರ್ವಂ ತ್ಯಜೇಥಾ ಬುದ್ಧಿಲಾಘವಾತ್ ॥4॥
ನೀನು ನಿನ್ನ ಸ್ವಧರ್ಮದಿಂದಲೇ ಶತ್ರುಗಳನ್ನು ಸಂಹರಿಸಿ ಭೂಮಿಯನ್ನು ಸಂಪಾದಿಸಿರುವಿ. ಶತ್ರುಗಳನ್ನು ನಿರ್ಮೂಲ ಮಾಡಿದ ಮೇಲೆಯೂ ಸ್ಥಿರಬುದ್ಧಿ- ಯಿಲ್ಲದೆ ನಿಷ್ಕಂಟಕವಾದ ಈ ರಾಜ್ಯವನ್ನು ಹೇಗೆ ತಾನೇ ತ್ಯಜಿಸುವಿ?
ಕ್ಲೀಬಸ್ಯ ಹಿ ಕುತೋ ರಾಜ್ಯಂ ದೀರ್ಘಸೂತ್ರಸ್ಯ ವಾ ಪುನಃ |
ಕಿಮರ್ಥಂ ಚ ಮಹೀಪಾಲಾನವಧೀಃ ಕ್ರೋಧಮೂರ್ಚ್ಛಿತಃ ॥5॥
ಪೌರುಷವಿಲ್ಲದ ಹೇಡಿಗಳಿಗೆ, ಸೋಮಾರಿಗಳಿಗೆ ರಾಜ್ಯವು ಹೇಗೆ ಲಭಿಸು- ವುದು? ಏತಕ್ಕೋಸ್ಕರ ಕೋಪಾವಿಷ್ಟನಾಗಿ ಅನೇಕ ರಾಜರನ್ನು ಸಂಹರಿಸಿದೆ ?
ಯೋ ಹ್ಯಾಜಿಜೀವಿಷೇದ್ ಭೈಕ್ಷ್ಯಂ ಕರ್ಮಣಾ ನೈವ ಕೇನಚಿತ್ |
ಸ ಆರಂಭಾನ್ ಬುಭೂಷೇತ ಹತಸ್ವಸ್ತಿರಕಿಂಚನಃ ॥6॥
ಲೋಕದಲ್ಲಿ ಯಾರು ನಿರ್ಗತಿಕನಾಗಿ, ಅಪ್ರಸಿದ್ಧನಾಗಿ, ಸಂತಾನ ಸಮೃದ್ಧಿ, ಪಶುಸಮೃದ್ಧಿ ಯಾವುದೂ ಇಲ್ಲದವನಾಗಿ, ಅನಾಮಧೇಯನೆನಿಸುವನೋ ಅಂತ- ಹವನು ಭಿಕ್ಷಾಟನದಿಂದ ಜೀವಿಸಬೇಕೆಂದು ಬಯಸುವನು. ಅಂತಹವನು ಸ್ವಪ್ರಯ- ತ್ನದಿಂದ ಯಾವ ರಾಜ್ಯವನ್ನು ಪಡೆಯಲು ಬಯಸುವನು.
ಟಿಪ್ಪಣಿ - ಕರ್ಮಣಾ ನೈವ ಕೇನಚಿದ್ ಇತ್ಯತ್ರ ಕರ್ಮಣಾ ಸ್ವಯೋಗ್ಯ- ಕರ್ಮಣಾ | ಹತಸ್ವಸ್ತಿಃ ಅಕಿಂಚನಃ ಸ ನಿರ್ಭಾಗ್ಯಃ ಆರಂಭಾದ್ಯುದ್ಧಾದ್ಯಾ- ರಂಭಾತ್ ಮಾ ಬುಭೂಷೇತ ॥ `ಕರ್ಮಣ' ಎಂದರೆ ಸ್ವಯೋಗ್ಯವಾದ ಕರ್ಮ- ದಿಂದ ಎಂದರ್ಥ.
`ಹತಸ್ವಸ್ತಿಃ ಅತಿಕಿಂಚನಃ' - ಯಾರ ಜೀವನದಲ್ಲಿ ಮಂಗಳ- ಕಾರ್ಯಗಳು ನಡೆಯುತ್ತಿಲ್ಲವೋ, ನಿರ್ಧನಿಕನಾಗಿರುತ್ತಾನೋ, ಅವನು ನಷ್ಟ- ಭಾಗ್ಯನಾಗಿರುತ್ತಾನೆ. ಅಂಥವನು ಯುದ್ಧವನ್ನು ಮಾಡಲು ಅಪೇಕ್ಷಿಸುವುದೇ ಇಲ್ಲ.
ಕಾಪಾಲೀಂ ನೃಪ ಪಾಪಿಷ್ಠಾಂ ವೃತ್ತಿಮಾಸ್ಥಾಯ ಜೀವತಃ |
ಸಂತ್ಯಜ್ಯ ರಾಜ್ಯಮೃದ್ಧಂ ತ್ವಾಂ ಲೋಕೋಽಯಂ ಪ್ರವಿಷ್ಯತಿ ॥7॥
ಸರ್ವಲೋಕೇಷು ವಿಖ್ಯಾತೋ ನ ಪುತ್ರಪಶುಸಂಹಿತಃ |
ಮಹಾರಾಜನೇ! ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿ, ಪಶು, ಪುತ್ರ ಸಮೃದ್ಧಿ- ಯುಳ್ಳವನಾಗಿರುವವನು ಎಂದಿಗೂ ಪಾಪಿಷ್ಠವಾದ ಇಂಥ ಭಿಕ್ಷಾವೃತ್ತಿಯನ್ನು ಅವ- ಲಂಬಿಸಲಾರನು. ಈಗ ನೀನು ಕೈಗೆ ಬಂದ ರಾಜ್ಯವನ್ನೆಲ್ಲಾ ಬಿಟ್ಟು ಕೇವಲ ಹೀನವಾದ ಕಾಪಾಲವೃತ್ತಿಯನ್ನು ಅವಲಂಬಿಸಿ ಜೀವಿಸಿದರೆ ಲೋಕವು ನಿನ್ನನ್ನು ದೂಷಿಸುತ್ತದೆ.
ಟಿಪ್ಪಣಿ - ಸಂತ್ಯಜ್ಯ ರಾಜ್ಯಮೃದ್ಧಂ ತ್ವಾಮ್ ಇತ್ಯತ್ರ ಋದ್ಧಂ ರಾಜ್ಯಂ ಸಂತ್ಯಜ್ಯ ಗತಂ ತ್ವಾಂ ಅಯಂ ಲೋಕಃ ಪ್ರವಿದಿಷ್ಯತಿ ಇತಿ ಯೋಜನಾ ॥
ಸಮೃದ್ಧವಾದ ರಾಜ್ಯವನ್ನು ಪರಿತ್ಯಾಗ ಮಾಡಿದ ನಿನ್ನನ್ನು ಈ ಲೋಕವು ನಿಂದಿ- ಸುತ್ತದೆಂದು ಯೋಜನೆ ಮಾಡಿಕೊಳ್ಳಬೇಕು.
ಸರ್ವಾರಂಭಾನ್ ಸಮುತ್ಸೃಜ್ಯ ಹತಸ್ವಸ್ತಿರಕಿಂಚನಃ |
ಕಸ್ಮಾದಾಶಂಸಸೇ ಭೈಕ್ಷ್ಯಂ ಕರ್ತುಂ ಪ್ರಾಕೃತವತ್ ಪ್ರಭೋ ॥8॥
ಪ್ರಭುವೇ! ನೀನೀಗ ಸಮಸ್ತಪ್ರಯತ್ನಗಳನ್ನು ಬಿಟ್ಟು ಮುಂದಿನ ಅಭ್ಯುದಯ- ಗಳನ್ನೆಲ್ಲಾ ತೊರೆದು ದರಿದ್ರನಾಗಿ, ಅವಿವೇಕಿಯಂತೆ ಭಿಕ್ಷುವಾಗಬೇಕೆಂದು ಏಕೆ ಆಸೆ ಪಡುತ್ತಿರುವಿ ?
ಅಸ್ಮಿನ್ ರಾಜಕುಲೇ ಜಾತೋ ಜಿತ್ವಾ ಕೃತ್ಸ್ನಾ ವಸುಂಧರಾಮ್ |
ಧರ್ಮಾರ್ಥಾವಖಿಲೌ ಹಿತ್ವಾ ವನಂ ಮೌಢ್ಯಾತ್ ಪ್ರತಿಷ್ಠಸೇ ॥9॥
ಈ ಸರ್ವಶ್ರೇಷ್ಠವಾದ ಕುರುಕುಲದಲ್ಲಿ ಹುಟ್ಟಿ, ಭೂಮಿಯನ್ನೆಲ್ಲಾ ಜಯಿಸಿದ ನೀನು ಈಗ ಮೂರ್ಖತನದಿಂದ ಧರ್ಮಾರ್ಥಗಳನ್ನೆಲ್ಲಾ

ತ್ಯಜಿಸಿ ಏತಕ್ಕಾಗಿ ಕಾಡಿಗೆ ಹೊರಟುನಿಂತಿರುವೆ ?
ಯದೀಮಾನಿ ಹವೀಂಷೀಹ ವಿಮಥಿಷ್ಯಂತ್ಯಸಾಧವಃ |
ಭವತಾ ವಿಪ್ರಹೀಣಾನಿ ಪ್ರಾಪ್ತಂ ತ್ವಾಮೇವ ಕಿಲ್ಬಿಷಮ್ ॥10॥
ಅಣ್ಣಾ! ನೀನು ಬಿಟ್ಟು ಹೋದ ಮೇಲೆ ಅನಾಥವಾದ ಈ ರಾಜ್ಯವೆಂಬ ಹವಿಸ್ಸನ್ನು ಅಲ್ಪಜನಗಳು ಬಂದು ಆಕ್ರಮಿಸಿ ಉಪಭೋಗಿಸಿ ಕೆಡಿಸುವುದಾದರೆ ಆ ಪಾಪಕ್ಕೆ ನೀನೇ ಭಾಗಿಯಾಗುವೆಯಲ್ಲವೇ?
ವಿವರಣೆ - ರಾಜ್ಯವನ್ನು ಧರ್ಮಕ್ಕೋಸ್ಕರ ಗೆದ್ದಿರುವಿ. ಇದನ್ನು ಪರಿಪಾಲನೆ ಮಾಡಿರುವುದೂ ಕೂಡ ನಿನ್ನ ಕರ್ತವ್ಯವಾಗಿದೆ. ರಾಜ್ಯವನ್ನು ಗೆದ್ದಮೇಲೆ ಯಜ್ಞಕ್ಕಾಗಿ ಸಂಗ್ರಹಿಸಲ್ಪಟ್ಟ ಸಾಮಗ್ರಿಗಳನ್ನು ವಿನಿಯೋಗ ಮಾಡುವುದು ನಿನ್ನ ಕರ್ತವ್ಯವಾಗಿದೆ. ಒಂದು ವೇಳೆ ನೀನು ರಾಜ್ಯವನ್ನು ಪರಿಪಾಲನೆ ಮಾಡದಿದ್ದರೆ. ಯಜ್ಞಯಾಗಾದಿಗಳನ್ನು ಆಚರಿಸದಿದ್ದರೆ, ಆಗ ನೀನು ಅನರ್ಥಕ್ಕೆ ಭಾಗಿಯಾಗುವಿ. ಎಲ್ಲವನ್ನು ಪರಿತ್ಯಾಗ ಮಾಡಿ, ಅರಣ್ಯಕ್ಕೆ ಹೋದರೆ ನಿನ್ನನ್ನೇ ಎಲ್ಲರೂ ಅನುಸರಣೆ ಮಾಡುತ್ತಾರೆ. ದೇಶದಲ್ಲಿ ಧರ್ಮಕಾರ್ಯವೇ ನಡೆಯುವುದಿಲ್ಲ. ಯಜ್ಞಗಳೂ ಕೂಡ ನಡೆಯುವುದಿಲ್ಲ. ಭಗವಂತನಿಗೆ ಸಮರ್ಪಿಸಬೇಕಾದ ವಸ್ತುಗಳನ್ನು ಭೋಗಿಜನರು ತಮ್ಮ ಭೋಗಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. ಆ ಎಲ್ಲಾ ಪಾಪವು ನಿನ್ನನ್ನೇ ಸುತ್ತುವರೆಯುತ್ತದೆ. ಧರ್ಮಲೋಪದ ಪಾಪವೂ ಕೂಡ ನಿನಗೆ ಬರುತ್ತದೆ. ಆದ್ದರಿಂದ ನೀನು ಅನಾಥವಾದ ಈ ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗುವುದು ಸರ್ವಥಾ ಯುಕ್ತವಲ್ಲ.
ಆಕಿಂಚನ್ಯಂ ಮುನೀನಾಂ ಚ ಇತಿ ವೈ ನಹುಷೋಽಬ್ರವೀತ್ |
ಕೃತ್ವಾ ನೃಶಂಸಂ ಹ್ಯಧನೇ ಧಿಗಸ್ತ್ವಧನತಾಮಿಹ ॥11॥
ಧನಹೀನನಾಗಿರುವುದು ಮುನಿಗಳ ಧರ್ಮವು, ರಾಜರ ಧರ್ಮವಲ್ಲವೆಂದು ನಹುಷನು ದಾರಿದ್ರ್ಯವನ್ನು ನಿಂದಿಸಿರುವನು. ಧನವಿಲ್ಲದ ಕಾಲದಲ್ಲಿ ಮನುಷ್ಯನು ಕ್ರೂರ ಕೆಲಸಗಳನ್ನು ನಡೆಸುವನು. ಆದ್ದರಿಂದ ಧನಹೀನತ್ವಕ್ಕೆ ಧಿಕ್ಕಾರ ಎಂದು ಹೇಳಿರುವನು.
ಟಿಪ್ಪಣಿ - ಆಕಿಂಚನ್ಯಂ ಮುನೀನಾಮ್ ಇತ್ಯತ್ರ ಅಕಿಂಚನಸ್ಯ ಭಾವಃ ಆಕಿಂಚನ್ಯಂ ವೈರಾಗ್ಯಮ್ | ಕೃತ್ವಾ ನೃಶಂಸಂ ನಿಧನೇ ಇತ್ಯತ್ರ ನಿಧನೇ ಯುದ್ಧೇ ನೃಶಂಸಂ ಕೃತ್ವಾ ಪುನಃ ಅಧನತಾಂ ಧನಾಶಾರಾಹಿತ್ಯಂ ವೈರಾಗ್ಯಮಿತ್ಯರ್ಥಃ, ಧಿಗಸ್ತು `ಅಕಿಂಚನಸ್ಯ ಭಾವಃ ಆಕಿಂಚನ್ಯಂ' ಎಂಬ ವ್ಯುತ್ಪತ್ತಿಯಿಂದ ವೈರಾಗ್ಯ.
ಅಶ್ವಸ್ತನಮೃಷೀಣಾಂ ಹಿ ವಿದ್ಯತೇ ವೇದ ತದ್ ಭವಾನ್ |
ಯೇ ತ್ವಿಮಂ ಧರ್ಮಮಿತ್ಯಾಹುರ್ಧನಾದೇಷ ಪ್ರವರ್ತತೇ ॥12॥
ಮರುದಿನದ ಆಹಾರಕ್ಕಾಗಿ ಏನೂ ಇಲ್ಲದ ಸ್ಥಿತಿಯು ಋಷಿಗಳಿಗೆ ಮಾತ್ರವೇ
ವಿಧಿಸಲ್ಪಟ್ಟಿದೆ ಎಂಬುದನ್ನು ನೀನೂ ತಿಳಿದಿರುವೆ. ಮತ್ತು ಜಗತ್ತಿನಲ್ಲಿ ಕ್ಷತ್ರಿಯಧರ್ಮ -ವನ್ನು ಜೀವನದ ರೀತಿಯನ್ನಾಗಿ ಹೇಗೆ ನಿರೂಪಿಸಿರುತ್ತಾರೋ, ಆ ಧರ್ಮವು ಧನಮೂಲಕವೇ ಆಗಿರುತ್ತದೆ.
ಟಿಪ್ಪಣಿ - ಅಶ್ವಸ್ತನಮೃಷೀಣಾಂ ಹಿ ಇತ್ಯತ್ರ ಶ್ವಸ್ತನಧನಧಾನ್ಯಾದ್ಯಭಾವಃ ಅಶ್ವಸ್ತನಮ್ ॥
ನಾಳೆಗಾಗಿ ಧನ-ಧಾನ್ಯಗಳನ್ನು ಸಂಗ್ರಹ ಮಾಡದೇ ಇರುವುದನ್ನು ಅಶ್ವಸ್ತನ ಎಂದು ಕರೆಯುತ್ತಾರೆ.
ವಿವರಣೆ - `ಅಸಂತುಷ್ಟೋ ದ್ವಿಜೋ ನಷ್ಟಃ ಸಂತುಷ್ಟಶ್ಚ ಮಹೀಪತಿಃ' ತೃಪ್ತನಾಗದ ಬ್ರಾಹ್ಮಣನು ಅವನತಿಯನ್ನು ಹೊಂದುತ್ತಾನೆ. ಧನಕನಕಾದಿಗಳಿಂದ ತೃಪ್ತನಾದ ರಾಜನು ಅವನತಿಯನ್ನು ಹೊಂದುತ್ತಾನೆ ಎಂಬ ಮಾತಿನಂತೆ ಬ್ರಾಹ್ಮಣ- ನಿಗೆ ಎಂದೂ ಸಹ ಅತೃಪ್ತಿಯು ಇರಬಾರದು. ರಾಜನಾದವನಿಗೆ ಎಷ್ಟೇ ಧನ- ಕನಕಾದಿಗಳು ಬಂದರೂ ಕೂಡ ತೃಪ್ತಿಯು ಇರಬಾರದು. ಮತ್ತಷ್ಟು ಹಣ- ಸಂಪಾದನೆ ಮಾಡಬೇಕೆಂಬ ಕಾತುರ ಇರಬೇಕು. ಹಣವನ್ನು ಯಥೇಚ್ಛವಾಗಿ ಸಂಪಾದನೆ ಮಾಡಿ, ರಾಜ್ಯಕೋಶಾದಿಗಳನ್ನು ವೃದ್ಧಿಗೊಳಿಸುತ್ತಲೇ ಇರಬೇಕು. ಇದುವೇ ನಿಜವಾದ ರಾಜಧರ್ಮವಾಗಿದೆ. ಇದನ್ನೆಲ್ಲಾ ಪರಿತ್ಯಾಗ ಮಾಡಿ, ಜೀವನಕ್ಕೆ ಬೇಕಾಗುವಷ್ಟು ಮಾತ್ರ ಭಿಕ್ಷಾಟನೆಯನ್ನು ಮಾಡಿಕೊಂಡು, ಸಂಚರಿ- ಸುವುದು ಕ್ಷತ್ರಿಯರ ಧರ್ಮವಲ್ಲ. ಇದು ಬ್ರಾಹ್ಮಣರ ಧರ್ಮವಾಗಿದೆ. ಬ್ರಾಹ್ಮಣರ ಧರ್ಮವನ್ನು ಕ್ಷತ್ರಿಯರು ಅನುಸರಿಸುವುದು ಅಧರ್ಮವಾಗುತ್ತದೆ. ಕ್ಷತ್ರಿಯರ ಧರ್ಮವನ್ನು ಬ್ರಾಹ್ಮಣರು ಅನುಸರಿಸುವುದೂ ಕೂಡ ಅಧರ್ಮವಾಗುತ್ತದೆ. ಆದ್ದರಿಂದ ನಿನ್ನ ವರ್ತನೆಯು ಧರ್ಮವಿಪರ್ಯಾಸವನ್ನು ಉಂಟುಮಾಡುತ್ತಿದೆ.
ಧರ್ಮಂ ಸಂಹರತೇ ತಸ್ಯ ಧನಂ ಹರತಿ ಯಸ್ಯ ಯಃ |
ಹ್ರಿಯಮಾಣೇ ಧನೇ ರಾಜನ್ ವಯಂ ಕಸ್ಯ ಕ್ಷಮೇಮಹಿ ॥13॥
ಒಬ್ಬನ ಧನವನ್ನು ಮತ್ತೊಬ್ಬನು ಅಪಹರಿಸಿದರೆ, ಅವನ ಧರ್ಮವನ್ನೇ ಅಪಹರಿಸಿದಂತಾಗುವುದು. ನಮ್ಮ ಸ್ಥಿತಿಯು ಈಗ ಹಾಗೆಯೇ ಆಗಿದೆ. ನಮ್ಮ ಧನ- ವನ್ನು ಇನ್ನೊಬ್ಬರು ಅಪಹರಿಸಿಕೊಂಡಾಗ ಹೇಗೆ ತಾನೇ ನಾವು ಕ್ಷಮಿಸಿ ಸುಮ್ಮನಿರ- ಬಹುದು?
ವಿವರಣೆ - ಜೀವನದಲ್ಲಿ ಸಂಪತ್ತು ಮತ್ತು ಧರ್ಮ ಎರಡೂ ಕೂಡ ಇರಬೇಕು. ಒಂದಕ್ಕೊಂದು ಇವು ಪೂರಕಗಳಾಗಿವೆ. ಒಬ್ಬನ ಹಣವನ್ನು ಅಪಹಾರ ಮಾಡಿದರೆ ಅವನ ಧರ್ಮವನ್ನೂ ಕೂಡ ಅಪಹಾರ ಮಾಡಿದಂತಾಗುತ್ತದೆ. ಪ್ರಕೃತ ಶತ್ರುಗಳಾದ ದುರ್ಯೋಧನಾದಿಗಳು ನಮ್ಮ ಸಂಪತ್ತನ್ನು ಅಪಹಾರ ಮಾಡುವ ಮೂಲಕ ನಮ್ಮ ಧರ್ಮವನ್ನೂ ಕೂಡ ಅಪಹಾರ ಮಾಡಿದರು. ಹದಿಮೂರು ವರ್ಷಗಳ ಕಾಲ ನಾವು ಕ್ಷತ್ರಿಯಧರ್ಮವನ್ನು ಅನುಷ್ಠಾನ ಮಾಡಲಾಗದೇ ಧರ್ಮಚ್ಯುತರಾದೆವು. ಹೀಗೆ ಯಾರು ಸಂಪತ್ತನ್ನು ಅಪಹಾರ ಮಾಡುತ್ತಾರೋ, ಅವರ ವಿಷಯದಲ್ಲಿ ನಾವು ಕ್ಷಮೆಯಿಂದಿರಲು ಸಾಧ್ಯವೇ ಇಲ್ಲ. ನಮ್ಮ ಧರ್ಮ- ವನ್ನು ಪರಿಪಾಲನೆ ಮಾಡಿಕೊಳ್ಳುವುದಕ್ಕಾಗಿ ಶತ್ರುಗಳಿಂದ ಅಪಹರಿಸಲ್ಪಟ್ಟ ರಾಜ್ಯವನ್ನು ಕ್ಷತ್ರಿಯೋಚಿತವಾದ ಯುದ್ಧದಲ್ಲಿ ಜಯಗಳಿಸಿದ್ದೇವೆ. ಇದು ನಮಗೆ ಧರ್ಮವೇ ಆಗಿದೆ.
ಅಭಿಶಸ್ತಂ ಪ್ರಪಶ್ಯಂತಿ ದರಿದ್ರಂ ಪಾರ್ಶ್ವತಃ ಸ್ಥಿತಮ್ |
ದಾರಿದ್ರ್ಯಂ ಪಾತಕಂ ಲೋಕೇ ಕಸ್ತಚ್ಛಂಸಿತುಮರ್ಹತಿ ॥14॥
ಜಗತ್ತಿನಲ್ಲಿ ಜನರು ತಮ್ಮ ಪಕ್ಕದಲ್ಲಿ ನಿಂತಿರುವ ದರಿದ್ರನನ್ನು ನೋಡಿ, ಇವನು ಶಾಪದಿಂದ ಹುಟ್ಟಿದ್ದಾನೆ ಎಂದು ತಿಳಿಯುತ್ತಾನೆ. ಈ ಲೋಕದಲ್ಲಿ ದಾರಿದ್ರ್ಯವು ಪಾತಕವೆಂದೇ ಭಾವಿಸಲ್ಪಟ್ಟಿದೆ. ಅಂಥ ದಾರಿದ್ರ್ಯವನ್ನು ನಿನ್ನ ಹೊರತು ಬೇರೆ ಯಾರು ತಾನೇ

ಪ್ರಶಂಸಿಸುವರು.
ಟಿಪ್ಪಣಿ - ಅಭಿಶಸ್ತಂ ಪ್ರಪಶ್ಯಂತಿ ಇತ್ಯತ್ರ ಪಾರ್ಶ್ವತಃ ಸ್ಥಿತಂ ದರಿದ್ರಮ್ ಅಭಿಶಸ್ತಮ್ ಅಭಿತಃ ಶಾಸನಂ ಶಿಕ್ಷಾಂ ಪ್ರಾಪ್ತಮ್, ಸರ್ವೈರ್ಧಿಕ್ಕೃತಮಿತ್ಯರ್ಥಃ, ಪ್ರಪಶ್ಯಂತಿ | ಶಂಸಿತುಂ ಸ್ತೋತುಮ್ |
ಪಕ್ಕದಲ್ಲಿರುವ ದರಿದ್ರನನ್ನು ಕಂಡು ಜನರು ಇವನು ಧಿಕ್ಕಾರಕ್ಕೆ ಒಳಗಾದವ- ನೆಂದು ಕಾಣುತ್ತಾರೆ. `ಶಂಸಿತುಂ' ಎಂದರೆ ಸ್ತುತಿಸಲು ಎಂದರ್ಥ.
ಪತಿತಃ ಶೋಚ್ಯತೇ ರಾಜನ್ ನಿರ್ಧನಶ್ಚಾಪಿ ಶೋಚ್ಯತೇ |
ವಿಶೇಷಂ ನಾಧಿಗಚ್ಛಾಮಿ ಪತಿತಸ್ಯಾಧನಸ್ಯ ಚ ॥15॥
ಪತಿತನು ಹೇಗೋ ನಿರ್ಧನನೂ ಹಾಗೆಯೇ ವ್ಯಸಕ್ಕೀಡು ಮಾಡಲ್ಪಡುವನು. ಆದ್ದರಿಂದ ಪತಿತನಿಗೂ, ದರಿದ್ರನಿಗೂ ನಾನು ಯಾವ ವಿಧವಾದ ಅಂತರವನ್ನು ಕಾಣಲಾರೆ. (ಧರ್ಮಭ್ರಷ್ಟನನ್ನು ಪತಿತನೆನ್ನುತ್ತಾರೆ).
ಅರ್ಥೇಭ್ಯೋ ಹಿ ವಿವೃದ್ಧೇಭ್ಯಃ ಸಂಭೃತೇಭ್ಯಸ್ತತಸ್ತತಃ |
ಕ್ರಿಯಾಃ ಸರ್ವಾಃ ಪ್ರವರ್ತಂತೇ ಪರ್ವತೇಭ್ಯ ಇವಾಪಗಾಃ ॥16॥
ಪರ್ವತಗಳಿಂದ ಅನೇಕ ನದಿಗಳು ಬಂದು ಒಟ್ಟಾಗಿ ಸೇರಿ ಪ್ರವಾಹವಾಗುವಂತೆ ಹಣವು ನಾನಾಕಡೆಯಿಂದ ಕಪ್ಪ-ಕಾಣಿಕೆಗಳ ರೂಪದಲ್ಲಿ ಹರಿದು ಬಂದು ಬೊಕ್ಕಸವನ್ನು ತುಂಬುತ್ತದೆ. ಅದರಿಂದ ಎಲ್ಲ ವಿಧವಾದ ಶುಭಕರ್ಮಗಳಿಗೂ ಹಣವೇ ಮೂಲವಾಗಿರುತ್ತದೆ.
ಅರ್ಥಾದ್ ಧರ್ಮಶ್ಚ ಕಾಮಶ್ಚ ಸ್ವರ್ಗಶ್ಚೈವ ನರಾಧಿಪ |
ಪ್ರಾಣಯಾತ್ರಾ ಹಿ ಲೋಕಸ್ಯ ವಿನಾರ್ಥಂ ನ ಪ್ರಸಿದ್ಧ್ಯತಿ ॥17॥
ನರೇಶ್ವರನೇ! ಧನದಿಂದಲೇ ಧರ್ಮಾಚರಣೆ, ಧನದಿಂದಲೇ ಕಾಮೋಪ- ಭೋಗಗಳನ್ನು ಅನುಭವಿಸಲು ಸಾಧ್ಯ. ಅಷ್ಟೇ ಏಕೆ ಹಣವಿಲ್ಲದ ಮನುಷ್ಯನಿಗೆ ಜೀವನ ಯಾತ್ರೆಯೂ ನಡೆಯುವುದಿಲ್ಲ.
ಅರ್ಥೇನ ಹಿ ವಿಹೀನಸ್ಯ ಪುರುಷಸ್ಯಾಲ್ಪಮೇಧಸಃ |
ವ್ಯುಚ್ಛಿದ್ಯಂತೇ ಕ್ರಿಯಾಃ ಸರ್ವಾ ಗ್ರೀಷ್ಮೇ ಕುಸರಿತೋ ಯಥಾ ॥18॥
ಗ್ರೀಷ್ಮಋತುವಿನಲ್ಲಿ ಚಿಕ್ಕ-ಚಿಕ್ಕ ನದಿಗಳು ಬತ್ತಿಹೋಗುವಂತೆ ಅಲ್ಪಬುದ್ಧಿಯುಳ್ಳ ಧನಹೀನನಾದ ಪುರುಷನ ಕಾರ್ಯಗಳೆಲ್ಲವೂ ನಡುವೆ ಮುರಿದು ಹೋಗುತ್ತವೆ.
ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾಂಧವಾಃ |
ಯಸ್ಯಾರ್ಥಾಃ ಸ ಪುಮಾಂಲ್ಲೋಕೇ ಯಸ್ಯಾರ್ಥಾಃ ಸ ಚ ಪಂಡಿತಃ ॥19॥
ಹಣವು ಯಾರ ಬಳಿ ಇರುತ್ತದೋ, ಅವನ ಬಳಿಗೆ ಮಿತ್ರರು ಬರುತ್ತಾರೆ. ಐಶ್ವರ್ಯ ಇರುವವನ ಬಳಿಗೆ ಬಂಧುಗಳು ಹುಡುಕಿಕೊಂಡು ಬರುತ್ತಾರೆ. ಹಣ- ವಿದ್ದವನೇ ಲೋಕದಲ್ಲಿ ಪುರುಷನು. ಧನಸಂಪತ್ತನ್ನು ಹೊಂದಿದವನೇ ಪಂಡಿತನು.
ವಿವರಣೆ - ಶ್ರೀಮಂತರಾಗಿದ್ದಾಗ ಹುಡುಕಿಕೊಂಡು, ಸಾವಿರಾರು ಜನರು ಬರುತ್ತಾರೆ. ಸಂಬಂಧವಿಲ್ಲದವರೆಲ್ಲರೂ ನಾವು ನಿಮ್ಮ ಸಂಬಂಧಿಗಳೆನ್ನುತ್ತಾರೆ. ನಾವು ನಿಮ್ಮ ಮಿತ್ರರೆನ್ನುತ್ತಾರೆ. ದೂರದ ಬಂಧುಗಳು ಹತ್ತಿರವಾಗುತ್ತಾರೆ. ಐಶ್ವರ್ಯವಿರುವ ನನಗೆ ಸಮಸ್ತ ಜಗತ್ತೇ ಗೌರವ ನೀಡುತ್ತದೆ. ಐಶ್ವರ್ಯವಿದ್ದ- ವನೇ ಪಂಡಿತನು. ಅವನೇ ವಿದ್ಯಾವಂತ. ಇದು ಜಗತ್ತಿನ ನೀತಿಯೇ ಆಗಿದೆ. ಆದ್ದರಿಂದ ಹಣವಿದ್ದವನೇ ಸುಖವಾಗಿ ಬದುಕಲು ಸಾಧ್ಯವೆಂದು ಅರ್ಜುನನು ಇಲ್ಲಿ ಪ್ರತಿಪಾದನೆ ಮಾಡುತ್ತಿದ್ದಾನೆ.
ಅಧನೇನಾರ್ಥಕಾಮೇನ ನಾರ್ಥಃ ಶಕ್ಯೋ ವಿವಿತ್ಸತಾ |
ಅರ್ಥೈರರ್ಥಾ ನಿಬಧ್ಯಂತೇ ಗಜೈರಿವ ಮಹಾಗಜಾಃ ॥20॥
ದರಿದ್ರನಾದವನು ಅರ್ಥವನ್ನು ಅಪೇಕ್ಷಿಸಿದರೂ ಅವನಿಂದ ಅಪಾರ ಧನವನ್ನು ಸಂಗ್ರಹಿಸಲು ಸಾಧ್ಯವಾಗುವುದಿಲ್ಲ. ಮೊದಲೇ ಸ್ವಲ್ಪ ಧನವನ್ನು ಸಂಗ್ರಹಿಸಿ ಆ ಧನದಿಂದ ಅಪಾರ ಧನವನ್ನು ಸಂಗ್ರಹಿಸಬೇಕು. ಆನೆಗಳಿಂದ ಆನೆಯನ್ನು ಹಿಡಿಯುವ ಹಾಗೆ ಹಣದಿಂದಲೇ ಹಣವನ್ನು ಸಂಪಾದಿಸಿ ವೃದ್ಧಿಗೊಳಿಸಬೇಕು.
ವಿವರಣೆ - ಶ್ರೀಮಂತ ಯಾರಲ್ಲಿ ಹಣವಿರುತ್ತದೋ, ಅವರಿಗಷ್ಟೇ ಜನರು ಹಣವನ್ನು ನೀಡುತ್ತಾರೆ. ಬಡವನಿಗೆ ಜನರು ಹಣವನ್ನು ನೀಡುವುದಿಲ್ಲ. ನಿರ್ಧನನು ಊಟ ಬಟ್ಟೆಗಳನ್ನಷ್ಟೇ ಸಂಪಾದನೆ ಮಾಡಬಹುದು. ಆಸ್ತಿಪಾಸ್ತಿ- ಹಣವನ್ನು ಸಂಗ್ರಹಣೆ ಮಾಡಲು ಅವನಿಂದ ಸಾಧ್ಯವಾಗುವುದಿಲ್ಲ. ರಾಜ್ಯ- ಕೋಶಾದಿಗಳನ್ನು ಪಡೆದುಕೊಂಡು, ಐಶ್ವರ್ಯವಂತನಾದ ನೀನು ಪುನಃ ದಾರಿದ್ರ್ಯವನ್ನು ಬಯಸುವುದು ಸೂಕ್ತವಲ್ಲ.
ಟಿಪ್ಪಣಿ - ಅಧನೇನಾರ್ಥಕಾಮೇನ ಇತ್ಯತ್ರ ಅರ್ಥಕಾಮೇನ ಪ್ರಯೋಜನ-ಕಾಮೇನ ॥ `ಕಾಮೇನ' ಎಂಬುದಕ್ಕೆ ಪ್ರಯೋಜನವನ್ನು ಅಪೇಕ್ಷಿಸುವವನಿಂದ ಎಂದರ್ಥ.
ಧರ್ಮಃ ಕಾಮಶ್ಚ ಸ್ವರ್ಗಶ್ಚ ಹರ್ಷಃ ಕ್ರೋಧಃ ಶ್ರುತಂ ದಮಃ |
ಅರ್ಥಾದೇತಾನಿ ಸರ್ವಾಣಿ ಪ್ರವರ್ತಂತೇ ನರಾಧಿಪ ॥21॥
ಪ್ರಜಾಪಾಲಕನೇ ! ಧರ್ಮ, ಕಾಮ, ಸ್ವರ್ಗ, ಸಂತೋಷ, ಕ್ರೋಧ, ಶಾಸ್ತ್ರಜ್ಞಾನ, ಇಂದ್ರಿಯನಿಗ್ರಹ, ಇವೆಲ್ಲವೂ ಧನದಿಂದಲೇ ಸಿದ್ಧವಾಗುತ್ತವೆ. ಧನದಿಂದಲೇ ಶೋಭಿಸುತ್ತವೆ.
ವಿವರಣೆ - ವಿದ್ವಾಂಸರು ಶ್ರೀಮಂತರ ಮನೆಗಳಿಗೆ ಹೋಗಿ ಪಾಠವನ್ನು ಹೇಳುವ ಮೂಲಕ ಸಂಭಾವನೆಯನ್ನು ಪಡೆದುಕೊಳ್ಳುತ್ತಾರೆ. ಹಣವಿದ್ದರೆ, ಶಾಸ್ತ್ರ- ಗಳ ಅಧ್ಯಯನವು ಸುಲಭವಾಗುತ್ತದೆಂಬುದು ಇದರ ಅಭಿಪ್ರಾಯ.
ಧನಾತ್ ಕುಲಂ ಪ್ರಭವತಿ ಧನಾದ್ ಧರ್ಮಃ ಪ್ರವರ್ಧತೇ |
ನಾಧನಸ್ಯಾಸ್ತ್ಯಯಂ ಲೋಕೋ ನ ಪರಃ ಪುರುಷೋತ್ತಮ ॥22॥
ಧನದಿಂದಲೇ ಕುಲಗಳು ಶೋಭಿಸುವವು. ಧನದಿಂದಲೇ ಧರ್ಮವು ಪ್ರವರ್ಧ- ಮಾನವಾಗುವುದು. ಧನವಿಲ್ಲದವನಿಗೆ

ಇಹಪರಗಳೆರಡೂ ಇರುವುದಿಲ್ಲ.
ನಾಧನೋ ಧರ್ಮಕೃತ್ಯಾನಿ ಯಥಾವದನುತಿಷ್ಠತಿ |
ಧನಾದ್ಧಿ ಧರ್ಮಃ ಸ್ರವತಿ ಶೈಲಾದ್ ಗಿರಿನದೀ ಯಥಾ ॥23॥
ಧನವಿಲ್ಲದವನು ಯಾವ ಧರ್ಮಕಾರ್ಯಗಳನ್ನು ಸರಿಯಾಗಿ ನಡೆಸಲಾರನು. ಪರ್ವತ ಬೆಟ್ಟಗಳಿಂದ ನದಿಯು ಹೇಗೆ ತಡೆಯಿಲ್ಲದೆ ಹರಿಯುವುದೋ, ಹಾಗೇ ಧನದಿಂದಲೇ ಧರ್ಮವು ನಿರಂಕುಶವಾಗಿ ಮುಂದುವರಿಯುವುದು.
ಟಿಪ್ಪಣಿ - ಶೈಲಾದ್ ಗಿರಿನದೀ ಯಥಾ ಇತ್ಯತ್ರ ಗಿರಿನದೀ ಗಿರಿಮೂಲಾ ನದೀ ಶೈಲಾದಿವ | `ಗಿರಿನದೀ' ಎಂದರೆ ಗಿರಿಮೂಲಕವಾದ ನದಿಯು ಪರ್ವತದಿಂದ ಧುಮುಕುವಂತೆ ಎಂದರ್ಥ.
ಯಃ ಕೃಶಾರ್ಥಃ ಕೃಶಗವಃ ಕೃಶಭೃತ್ಯಃ ಕೃಶಾತಿಥಿಃ |
ಸ ವೈ ರಾಜನ್ ಕೃಶೋ ನಾಮ ನ ಶರೀರಕೃಶಃ ಕೃಶಃ ॥24॥
ರಾಜನೇ! ಯಾರಲ್ಲಿ ಧನ, ಗೋವು, ಭೃತ್ಯರು, ಅತಿಥಿಗಳು ಸಮೃದ್ಧವಾಗಿಲ್ಲ- ದುದರಿಂದ ಈ ಎಲ್ಲ ಸಂಪತ್ತಿನಿಂದ ಕೃಶನೆನಿಸುವನೋ, ಅವನೇ ನಿಜವಾದ ಕೃಶನೆಂದು ಹೇಳಬೇಕು. ಶರೀರದಿಂದ ಕೃಶನಾದವನನ್ನು ಕೃಶನೆನ್ನಬಾರದು.
ವಿವರಣೆ - ಯಾರು ಶರೀರದಿಂದ ಕೃಶವಾಗಿದ್ದಾನೋ, ಅವನನ್ನು ಕೃಶನೆಂದು ಜಗತ್ತು ಹೇಳುವುದಿಲ್ಲ. ಯಾರ ಬಳಿ, ಹಣವು ಇರುವುದಿಲ್ಲವೋ, ಗೋಸಂಪತ್ತು, ಮೃತ್ಯುಸಂಪತ್ತು, ಶಿಷ್ಯಸಂಪತ್ತು ಇರುವುದಿಲ್ಲವೋ, ಅಂಥವನನ್ನೇ ಕೃಶನೆಂದು ಜಗತ್ತು ತಿಳಿಯುತ್ತದೆ.
ಅವೇಕ್ಷಸ್ವ ಯಥಾನ್ಯಾಯಂ ಪಶ್ಯ ದೇವಾಸುರಂ ಯಥಾ |
ರಾಜನ್ ಕಿಮನ್ಯಜ್-ಜ್ಞಾತೀನಾಂ ವಧಾದ್ ಋದ್ಧ್ಯಂತಿ ದೇವತಾಃ ॥25॥
ಮಹಾರಾಜನೇ! ನ್ಯಾಯಸಮ್ಮತವಾಗಿ ವಿಚಾರ ಮಾಡು. ದೇವಾಸುರರ ವಿಚಾರ -ವೇನು ಎಂಬುದನ್ನು ನೀನು ಚೆನ್ನಾಗಿ ವಿಮರ್ಶಿಸು. ದೇವತೆಗಳು ತಮ್ಮ ಜ್ಞಾತಿ- ಬಾಂಧವರಾದ ಅಸುರರ ವಧೆಯಾಗುವುದನ್ನು ನಿರಂತರ ಅಪೇಕ್ಷಿಸುತ್ತಾರೆ.
ಟಿಪ್ಪಣಿ - ಅವೇಕ್ಷಸ್ವ ಯಥಾನ್ಯಾಯಂ ಪಶ್ಯ ದೈವಾಸುರಂ ಯಥಾ ಇತ್ಯತ್ರ ದೈವಾಸುರಂ ದೇವಾಸುರಸಂಬಂಧಿಕರ್ಮ, ಸ್ವಜ್ಯೇಷ್ಠದಾಯಾದಾನ್ ಅಸುರಾನ್ ಹತ್ವಾ ಕನಿಷ್ಠದಾಯಾದಾಃ ಸುರಾಃ ರಾಜ್ಯಮನುಭವಂತಿ ತದ್ ಯಥಾ ಯಥಾವತ್ ಪಶ್ಯ | ಯಥಾನ್ಯಾಯಂ ತನ್ನ್ಯಾಯಮನತಿಕ್ರಮ್ಯ ಅವೇಕ್ಷಸ್ವ ಸ್ವಜ್ಞಾತಿವಧೇಽಪಿ ದೃಷ್ಟಿಂ ದಿಶೇತಿ ಯೋಜನಾ ॥ ದೇವತೆಗಳು ತಮ್ಮ ಹಿರಿಯದಾಯಾದಿಗಳೆನಿಸಿದ ಅಸುರನನ್ನು ಕೊಂದು ಸ್ವರ್ಗರಾಜ್ಯವನ್ನು ಅನುಭವಿಸುತ್ತಿದ್ದಾರೆ. ಅದೇ ನ್ಯಾಯ- ವನ್ನು ನೀನೂ ಸಹ ಅನುಸರಿಸಿ ನಿನ್ನ ಜ್ಞಾತಿವಧೆಯ ಬಗ್ಗೆ ಆಲೋಚಿಸು. ನಿನಗಿಂತ ಶ್ರೇಷ್ಠರಾದ ದೇವತೆಗಳಂತೆ ನಡೆದುಕೋ
ನಚೇದ್ ಹರ್ತವ್ಯಮನ್ಯಸ್ಯ ಕಥಂ ತದ್ ಧರ್ಮಮಾರಭೇತ್ |
ಏತಾವಾನೇವ ವೇದೇಷು ನಿಶ್ಚಯಃ ಕವಿಭಿಃ ಕೃತಃ ॥26॥
ಅಧ್ಯೇತವ್ಯಾ ತ್ರಯೀ ನಿತ್ಯಂ ಭವಿತವ್ಯಂ ವಿಪಶ್ಚಿತಾ |
ಸರ್ವಥಾ ಧನಮಾಹಾರ್ಯಂ ಯಷ್ಟವ್ಯಂ ಚಾಪಿ ಯತ್ನತಃ ॥27॥
ರಾಜನಾದವನು ಮತ್ತೊಬ್ಬರ ಧನವನ್ನು ತೆಗೆದುಕೊಳ್ಳದಿದ್ದರೆ, ಅವನು ಧರ್ಮವನ್ನು ನಡೆಸುವುದಕ್ಕೆ ಬೇರೆ ದಾರಿ ಏನು? ವೇದಶಾಸ್ತ್ರಗಳನ್ನು ತಿಳಿದ ವಿದ್ವಾಂಸರು ಇದನ್ನೇ ವೇದಗಳಿಂದ ನಿರೂಪಿಸಿ ಹೇಳಿರುವರು. ವೇದಗಳನ್ನು ನಿತ್ಯವೂ ಓದಬೇಕು. ಒಳ್ಳೆಯ ಜ್ಞಾನವಂತನಾಗಬೇಕು, ಸರ್ವವಿಧದಿಂದಲೂ ಧನವನ್ನು ಸಂಪಾದಿಸಿ ಪ್ರಯತ್ನಪೂರ್ವಕವಾಗಿ ಆ ಧನದಿಂದ ಯಜ್ಞ ಯಾಗಾದಿಗಳನ್ನು ನಡೆಸಬೇಕು.
ಟಿಪ್ಪಣಿ - ನಚೇದ್ ಹರ್ತವ್ಯಮನ್ಯಸ್ಯ ಇತ್ಯತ್ರ ನ ಚೇದ್ ದುಷ್ಟಜ್ಞಾತಿವಧಂ ಕೃತ್ವಾ ತದ್ ದ್ರವ್ಯಾಹರಣಂ ಧರ್ಮೋ ನ ಚೇದ್, ಅನ್ಯಸ್ಯ ದೈತ್ಯವರ್ಗಸ್ಯ ಹರ್ತವ್ಯಂ ಹರ್ತುಂ ಯೋಗ್ಯಂ ದ್ರವ್ಯಮಾಹೃತ್ಯ ದೇವತಾಸಮೂಹಃ ಕಥಂ ಧರ್ಮಮಾಚರೇತ್ ॥ ದುಷ್ಟರಾದ ಜ್ಞಾತಿಗಳ ವಧೆಯನ್ನು ಮಾಡಿ ಸಂಪತ್ತನ್ನು ತೆಗೆದುಕೊಳ್ಳುವುದು ಧರ್ಮವಾಗದಿದ್ದರೆ ದೈತ್ಯರ ಸಂಪತ್ತನ್ನು ತೆಗೆದುಕೊಂಡು ದೇವತೆಗಳು ಆಡಳಿತವನ್ನು ನಡೆಸಿದ್ದು ಹೇಗೆ ತಾನೇ ಧರ್ಮವಾಗುತ್ತಿತ್ತು?
ದ್ರೋಹಾದ್ ದೇವೈರವಾಪ್ತಾನಿ ದಿವಿ ಸ್ಥಾನಾನಿ ಸರ್ವಶಃ |
ದ್ರೋಹಾತ್ ಕಿಮನ್ಯಜ್-ಜ್ಞಾತೀನಾಂ ಗೃಧ್ಯಂತೇ ಯೇನ ದೇವತಾಃ ॥28
ದೇವತೆಗಳೂ ಕೂಡ ಅಸುರರ ದ್ರೋಹದಿಂದಲೇ ಸ್ವರ್ಗದ ಸ್ಥಾನವನ್ನು ಸಂಪಾ- ದಿಸಿದರು. ದೇವತೆಗಳು ತಮ್ಮ ಜ್ಞಾತಿಗಳಿಂದ ರಾಜ್ಯವನ್ನು ಸ್ವಾಧೀನ ಮಾಡಿ- ಕೊಂಡರು. ಹೀಗೆ ಮಾಡುವುದು ತಮ್ಮ ಜ್ಞಾತಿಗಳ ದ್ರೋಹವಲ್ಲದೆ ಮತ್ತೇನು!
ಇತಿ ದೇವಾ ವ್ಯವಸಿತಾ ವೇದವಾದಾಶ್ಚ ಶಾಶ್ವತಾಃ |
ಅಧೀಯಂತೇಽಧ್ಯಾಪಯಂತೇ ಯಜಂತೇ ಯಾಜಯಂತಿ ಚ ॥29॥
ಕೃತ್ಸ್ನಂ ತದೇವ ಚ ಶ್ರೇಯೋ ಯದಪ್ಯಾದದತೇಽನ್ಯತಃ |
ನ ಪಶ್ಯಾಮೋಽನಪಹೃತಂ ಧನಂ ಕಿಂಚಿತ್ ಕ್ವಚಿದ್ ವಯಮ್ ॥30॥
ದೇವತೆಗಳೂ ಹ ಸಂಪತ್ತಿನ ಮಾರ್ಗದಲ್ಲಿ ಹೋಗಿರುವರು. ಶಾಶ್ವತಗಳೆನಿಸಿದ, ವೇದವಾಕ್ಯಗಳೂ ಅದನ್ನೇ ಹೇಳುವವು. ಅಧ್ಯಯನ, ಅಧ್ಯಾಪನ, ಯಜನ, ಯಾಜನಗಳೆಂಬ ಈ ಕರ್ಮಗಳು ನಡೆಯುವುದಕ್ಕೆ ಧನವೇ ಮೂಲ ಆಧಾರ. ಜಗತ್ತಿನಲ್ಲಿರುವ ಸಮಸ್ತ ವಸ್ತುಗಳು ಇದರ ಮೂಲವೇ ಆಗಿವೆ. ಶ್ರೇಯಸ್ಸಿಗೂ ಈ ಧನವೇ ಕಾರಣವಾಗಿದೆ. ಬೇರೆಯವರಿಗೆ ಅಪಕಾರವಿಲ್ಲದೆ ಯಾವ ವಿಧದಿಂದಾ- ದರೂ ಎಲ್ಲಿಯಾದರೂ ಅಲ್ಪವೂ ಸಹ ಧನ ಬಂದದ್ದನ್ನು ನಾವು ಕಾಣುತ್ತಿಲ್ಲ. ದುಷ್ಟರ ಹಣವನ್ನು ಸಂಗ್ರಹಿಸಲೇ ಬೇಕಾಗುತ್ತದೆ. ರಾಜರೆಲ್ಲರೂ ಈ ವಿಧವಾಗಿಯೇ ಭೂಮಿಯನ್ನು ವಶಮಾಡಿಕೊಂಡು ಆಳುತ್ತಿದ್ದಾರೆ.
ಏವಮೇವ ಹಿ ರಾಜಾನೋ ಜಯಂತಿ ಪೃಥಿವೀಮಿಮಾಮ್ |
ಜಿತ್ವಾ ಮಮೇಯಂ ಬ್ರುವತೇ ಪುತ್ರಾ ಇವ ಪಿತುರ್ಧನಮ್ ॥31॥

ರಾಜರು ಮತ್ತೊಬ್ಬರ ಭೂಮಿಯನ್ನು ಬಲತ್ಕಾರದಿಂದ ಜಯಿಸುತ್ತಾರೆ. ಮಕ್ಕಳು ತಂದೆಯ ಆಸ್ತಿಯನ್ನು ತಮ್ಮದೆಂದು ಹೇಳಿಕೊಳ್ಳುವಂತೆ, ಶತ್ರುಗಳಿಂದ ಜಯಿಸಿದ ಭೂಮಿಯನ್ನು ತಮ್ಮದೆಂದೇ ರಾಜರು ಹೇಳಿಕೊಳ್ಳುತ್ತಾರೆ.
ರಾಜರ್ಷಯೋ ಜಿತಸ್ವರ್ಗೋ ಧರ್ಮೋ ಹ್ಯೇಷಾಂ ನಿಗದ್ಯತೇ |
ಯಥೈವ ಪೂರ್ಣಾದುದಧೇಃ ಸ್ಯಂದಂತ್ಯಾಪೋ ದಿಶೋ ದಶ |
ಏವಂ ರಾಜಕುಲಾದ್ ವಿತ್ತಂ ಪೃಥಿವೀಂ ಪ್ರತಿತಿಷ್ಠತಿ ॥32॥
ಹಿಂದೆ ಇದೇ ರೀತಿಯಲ್ಲಿ ರಾಜ್ಯವಾಳುತ್ತಿದ್ದ ರಾಜರು ರಾಜರ್ಷಿಗಳೆನಿಸಿ ಸ್ವರ್ಗಕ್ಕೆ ತೆರಳಿದ್ದಾರೆ. ರಾಜರ್ಷಿಗಲಿಗೆ ಅದೇ ಉತ್ತಮ ಧರ್ಮವೆಂದು ಪ್ರಶಂಸಿಸಲ್ಪಟ್ಟಿದೆ. ಸಮುದ್ರದ ನೀರು ಮೇಘಗಳ ರೂಪದಲ್ಲಿ ಭೂಮಿಯಲ್ಲಿ ಎಲ್ಲೆಡೆಯೂ ಸುರಿ- ಯುವಂತೆ; ರಾಜರು ಸಂಪಾದಿಸಿದ ಧನವು ನಾನಾರೂಪದಲ್ಲಿ ಭೂಮಿಯಲ್ಲಿ ಎಲ್ಲೆಡೆಯೂ ಹರಡುವುದು.
ಆಸೀದಿಯಂ ದಿಲೀಪಸ್ಯ ನೃಗಸ್ಯ ನಹುಷಸ್ಯ ಚ |
ಅಂಬರೀಷಸ್ಯ ಮಾಂಧಾತುಃ ಪೃಥಿವೀ ಸಾ ತ್ವಯಿ ಸ್ಥಿತಾ |
ಸ ತ್ವಾಂ ದ್ರವ್ಯಮಯೋ ಯಜ್ಞಃ ಸಂಪ್ರಾಪ್ತಃ ಸರ್ವದಕ್ಷಿಣಃ ॥33॥
ಹಿಂದೆ ಈ ಭೂಮಂಡಲವನ್ನು ದೀಲಿಪನು ಆಳುತ್ತಿದ್ದನು. ನೃಗ, ನಹುಷ, ಅಂಬರೀಷ, ಮಾಂಧಾತಾ ಇವರೆಲ್ಲರೂ ಈ ಭೂಮಿಯನ್ನು ಆಳಿದರು. ಈಗ ನಿನ್ನ ರಕ್ಷಣೆಗೆ ಒಳಪಟ್ಟಿದೆ. ಸರ್ವರಕ್ಷಣೆಗಳುಳ್ಳ ದ್ರವ್ಯರೂಪವಾದ ಆ ಯಜ್ಞದ ನಿರ್ವ- ಹಣೆಯ ಭಾರವು ನಿನ್ನಲ್ಲಿ ಬಂದು ಸೇರಿದೆ.
ತಂ ಚೇನ್ನ ಯಜಸೇ ರಾಜನ್ ಪ್ರಾಪ್ತಸ್ತ್ವಂ ದೇವಕಿಲ್ಬಿಷಮ್ |
ಯೇಷಾಂ ರಾಜಾಶ್ವಮೇಧೇನ ಯಜತೇ ದಕ್ಷಿಣಾವತಾ |
ಉಪೇತ್ಯ ತಸ್ಯಾವಭೃಥಂ ಪೂತಾಃ ಸರ್ವೇ ಭವಂತಿ ತೇ ॥34॥
ನೀನೇನಾದರೂ ಬಹು ದಕ್ಷಿಣೆಗಳುಳ್ಳ ಅಶ್ವಮೇಧಯಾಗವನ್ನು ಮಾಡದಿದ್ದರೆ ರಾಜ್ಯದಲ್ಲಿ ನಡೆಯುವ ಎಲ್ಲಾ ಪಾಪಗಳಿಗೆ ಭಾಗಿಯಾಗುವಿ. ಯಾವ ಪ್ರಜಾ- ರಕ್ಷಕನಾದ ಅರಸನು ಭೂರಿದಕ್ಷಿಣೆಗಳುಳ್ಳ ಅಶ್ವಮೇಧಯಾಗವನ್ನು ನಡೆಸುವನೋ, ಅಂಥ ರಾಜನ ಅವಭೃಥಕಾಲದಲ್ಲಿ ಸಮಸ್ತ ಪ್ರಜೆಗಳು ಆಗಮಿಸಿ ಪವಿತ್ರರಾಗುವರು.
ವಿಶ್ವರೂಪೋ ಮಹಾದೇವಃ ಸರ್ವಮೇಧೇ ಮಹಾಮಖೇ |
ಜುಹಾವ ಸರ್ವಭೂತಾನಿ ತಥೈವಾತ್ಮಾನಮಾತ್ಮನಾ ॥35॥
ಹಿಂದೆ ವಿಶ್ವರೂಪಿಯಾದ ಮಹಾದೇವನಾದ ವಿಷ್ಣುವು ಕೂಡ ಸರ್ವಮೇಧ- ವೆಂಬ ಮಹಾಯಾಗವನ್ನು ಆಚರಿಸಿದ್ದನು. ಎಲ್ಲಾ ಭೂತಗಳನ್ನು ಅದರಲ್ಲಿ ಹೋಮ ಮಾಡಿದನು. ಮತ್ತು ತನ್ನನ್ನೂ ಸಹ ಹೋಮ ಮಾಡಿಕೊಂಡನು. ಮಹಾವಿಷ್ಣು ಜಗತ್ತನ್ನೇ ಹೋಮಿಸುತ್ತಾನೆ. ಯಾಗ ಮಾಡುವವನು, ಅಗ್ನಿ, ದ್ರವ್ಯ ಎಲ್ಲದರ- ಲ್ಲಿಯೂ ವಿಷ್ಣುವೇ ನಿಂತು ಹೋಮವನ್ನು ಮಾಡಿದನು.
ಶಾಶ್ವತೋಽಯಂ ಭೂತಿಪಥೋ ನಾಸ್ಯಾಂತಮನುಶುಶ್ರುಮ |
ಮಹಾನ್ ದಾಶರಥಃ ಪಂಥಾ ಮಾ ರಾಜನ್ ಕುಪಥಂ ಗಮಃ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅಷ್ಟಮೋಽಧ್ಯಾಯಃ ॥8॥
ಮಹಾರಾಜನೇ ! ಇದೇ ಶಾಶ್ವತವಾದ ಕ್ಷೇಮಮಾರ್ಗವು. ಇದಕ್ಕೆ ಎಂದಿಗೂ ನಾಶವಿಲ್ಲವೆಂದು ಕೇಳಿರುವೆನು. ಇದು ದಾಶರಥವೆಂಬ ಮಹಾಮಾರ್ಗವಾಗಿದೆ. ನಮ್ಮ ಹಿರಿಯರು ಹೋದ ಈ ದಾರಿಯನ್ನು ಅನುಸರಿಸಿ ನಡೆ. ಇದನ್ನು ಬಿಟ್ಟು ಬೇರೆ ಮಾರ್ಗವನ್ನು ಹಿಡಿಯಬೇಡ.
ದಶರಥಾಶ್ಚ ಪ್ರಚರಂತಿ ಯಸ್ಮಿನ್ ಸಃ ದಶರಥಃ ಸ ಏವ ದಾಶರಥಃ ಯಜ್ಞಕ್ಕೆ ಹತ್ತು ರಥಗಳಿರುತ್ತದೆ. ಪಶು, ಪತ್ನೀ, ಯಜಮಾನ, ಋಗ್ವಿಕ್, ಮೂರುವೇದಗಳು ನಾಲ್ವರು ಋತ್ವಿಜರು.
ರಾಜಧರ್ಮಪರ್ವ ಕನ್ನಡಾನುವಾದಲ್ಲಿ 8ನೆಯ ಅಧ್ಯಾಯವು ಮುಗಿಯಿತು.
*****

9. ಒಂಬತ್ತನೆಯ ಅಧ್ಯಾಯ

ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಸನ್ನ್ಯಾಸಧರ್ಮವನ್ನು ಪಾಲಿಸುತ್ತೇನೆಂದು ಯುಧಿಷ್ಠಿರನು ಅರ್ಜುನನಿಗೆ ಪ್ರತ್ಯುತ್ತರವನ್ನು ಹೇಳಿದುದು.
ಯುಧಿಷ್ಠಿರಃ
ಮುಹೂರ್ತಂ ತಾವದೇಕಾಗ್ರೋ ಮನಃಶ್ರೋತ್ರೇಽಂತರಾತ್ಮನಿ |
ಧಾರಯಿತ್ವಾಪಿ ತತ್ ಶ್ರುತ್ವಾ ರೋಚೇತಂ ವಚನಂ ಮಮ ॥1॥
ಅರ್ಜುನನೇ! ಒಂದು ಮುಹೂರ್ತಕಾಲದವರೆಗೆ ನಿನ್ನ ಮನಸ್ಸನ್ನು ಮತ್ತು ಕಿವಿಗಳನ್ನು ಪರಮಾತ್ಮನಲ್ಲಿ ನೆಲೆಗೊಳಿಸು. ಏಕಾಗ್ರಚಿತ್ತನಾಗಿ ಧ್ಯಾನಮಾಡು. ಆಗ ನನ್ನ ಮಾತು ನಿನಗೆ ಒಪ್ಪುವುದು.
ಸಾರ್ಥಾಗಮ್ಯಮಹಂ ಮಾರ್ಗಂ ನ ಜಾತು ತ್ವತ್ಕೃತೇ ಪುನಃ |
ಗಚ್ಛೇಯಂ ತದ್ ಗಮಿಷ್ಯಾಮಿ ಹಿತ್ವಾ ಗ್ರಾಮ್ಯಸುಖಾನ್ಯುತ ॥2॥
ಋಷಿಮುನಿಗಳು ಯಾವ ದಾರಿಯನ್ನು ಹಿಡಿದಿರುವರೋ ಅದೇ ದಾರಿಯನ್ನು ಹಿಡಿಯುವೆನು. ನಿನಗಾಗಿ ನಾನು ಎಂದಿಗೂ ವಿಷಯಾಸಕ್ತಿಯನ್ನು ಹೊಂದು- ವುದಿಲ್ಲ. ಈ ಗ್ರಾಮ್ಯಸುಖಗಳನ್ನೆಲ್ಲಾ ಬಿಡುವೆನು.
ಟಿಪ್ಪಣಿ- ಸಾರ್ಥಾಗಮ್ಯಮಹಂ ಮಾರ್ಗಮ್ ಇತ್ಯತ್ರ ಸಾರ್ಥೇನ ಸತಾಂ ಸಮೂಹೇನ ಅಗಮ್ಯಂ ಮಾರ್ಗಂ ತ್ವತ್ಕೃತೇ ಜಾತು ನ ಗಚ್ಛೇಯಮಿತಿ ಯೋಜನಾ ॥ ಸಜ್ಜನರು ಹೋಗದೇ ಇರುವ ಮಾರ್ಗದಲ್ಲಿ ನಿನಗೋಸ್ಕರ ನಾನು ಎಂದೂ ಹೋಗುವುದಿಲ್ಲ.
ಕ್ಷೇಮ್ಯಶ್ಚೈಕಾಕಿನಾ ಗಮ್ಯಃ ಪಂಥಾಃ ಕೋಽಸ್ತೀತಿ ಪೃಚ್ಛ ಮಾಮ್ |

ಅಥವಾ ನೇಚ್ಛಸಿ ಪ್ರಷ್ಟುಮಪೃಚ್ಛನ್ನಪಿ ಮೇ ಶೃಣು ॥3॥
ಅರ್ಜುನ! ಮತ್ತೊಬ್ಬರ ಸಹಾಯವಿಲ್ಲದೆ ತಾನೇ ಒಂಟಿಯಾಗಿ ತೆರಳಲು ಸಾಧ್ಯವಾದ ಕ್ಷೇಮಕರವಾದದು ದಾರಿ ಯಾವುದೆಂದು ನನ್ನನ್ನು ಕೇಳು. ನಾನು ನಿನಗೆ ಹೇಳುವೆನು. ಒಂದುವೇಳೆ ನಿನಗೆ ಪ್ರಶ್ನೆಯನ್ನು ಕೇಳುವುದಕ್ಕೆ ಇಷ್ಟವಿಲ್ಲದಿದ್ದರೂ, ನಾನು ಹೋಗುವ ದಾರಿ ಯಾವುದು ಎಂದು ಹೇಳುವೆನು. ಕೇಳು.
ಹಿತ್ವಾ ಗ್ರಾಮ್ಯಸುಖಾಚಾರಂ ತಪ್ಯಮಾನೋ ಮಹತ್ ತಪಃ |
ಅರಣ್ಯೇ ಫಲಮೂಲಾಶೀ ಚರಿಷ್ಯಾಮಿ ಮೃಗೈಃ ಸಹ ॥4॥
ಇನ್ನು ಮುಂದೆ ನಾನು ಗ್ರಾಮ್ಯಸುಖಗಳನ್ನು ತೊರೆದು ಅರಣ್ಯದಲ್ಲಿ ಕಂದ- ಮೂಲಫಲಗಳನ್ನು ತಿನ್ನುತ್ತಾ ಕಠಿಣವಾದ ತಪಸ್ಸನ್ನು ಮಾಡುವೆನು. ಅರಣ್ಯದಲ್ಲಿ ಮೃಗಗಳೊಡನೆ ಸಂಚರಿಸುವೆನು.
ಜುಹ್ವಾನೋಽಗ್ನಿಂ ಯಥಾಕಾಲಮುಭೌ ಕಾಲಾವುಪಸ್ಪೃಶನ್ |
ಕೃಶಃ ಪರಿಮಿತಾಹಾರಶ್ಚರ್ಮಚೀರಜಟಾಧರಃ ॥5॥
ಪ್ರಾತಃಕಾಲದಲ್ಲಿ ಮತ್ತು ಸಾಯಂಕಾಲದಲ್ಲಿ ಸ್ನಾನ ಮಾಡುತ್ತಾ ಕಾಲಕಾಲಕ್ಕೆ ಅಗ್ನಿಕಾರ್ಯಗಳನ್ನು ಮಾಡುವೆನು. ಜೀವಧಾರಣೆಗೆ ಎಷ್ಟು ಬೇಕೋ ಅಷ್ಟೇ ಆಹಾರ- ವನ್ನು ಸ್ವೀಕರಿಸಿ ದೇಹವನ್ನು ಕೃಶಗೊಳಿಸುವೆನು. ಕೃಷ್ಣಾಜಿನ ಮತ್ತು ವಲ್ಕಲಗಳನ್ನೇ ಬಟ್ಟೆಯನ್ನಾಗಿ ಧರಿಸಿ, ಜಟಾಧಾರಿಯಾಗಿರುವೆನು.
ಶೀತವಾತಾತಪಸಹಃ ಕ್ಷುತ್ಪಿಪಾಸಾಶ್ರಮಕ್ಷಮಃ |
ತಪಸಾ ವಿಧಿದೃಷ್ಟೇನ ಶರೀರಮುಪಶೋಷಯನ್ ॥6॥
ಚಳಿ-ಗಾಳಿ-ಬಿಸಿಲುಗಳನ್ನು ಸಹಿಸಿಕೊಳ್ಳುತ್ತೇನೆ. ಹಸಿವು ಬಾಯಾರಿಕೆ ಮತ್ತು ಪರಿಶ್ರಮಗಳನ್ನು ಸಹಿಸಿಕೊಳ್ಳಲು ಅಭ್ಯಾಸ ಮಾಡುತ್ತೇನೆ. ಶಾಸ್ತ್ರದಲ್ಲಿ ಹೇಳಿದ ತಪೋಮಾರ್ಗದಿಂದ ಶರೀರವನ್ನು ಶೋಷಿಸುವೆನು.
ಮನಃಕರ್ಣಸುಖಾ ನಿತ್ಯಂ ಶೃಣ್ವನ್ನುಚ್ಚಾವಚಾ ಗಿರಃ |
ಮುದಿತಾನಾಮರಣ್ಯೇಷು ವಸತಾಂ ಮೃಗಪಕ್ಷಿಣಾಮ್ ॥7॥
ಅರಣ್ಯದಲ್ಲಿ ಸಂತೋಷದಿಂದ ವಾಸಿಸುವ ಮೃಗಪಕ್ಷಿಗಳ ವಿವಿಧ ಕಲರವಗಳು ಮನಸ್ಸಿಗೆ, ಕಿವಿಗಳಿಗೆ ಆನಂದ ನೀಡುತ್ತವೆ. ಅದನ್ನು ಕೇಳುತ್ತಾ ಸಂತೋಷದಿಂದ ಮೃಗಪಕ್ಷಿಗಳೊಂದಿಗೆ ಕಾಡಿನಲ್ಲಿ ವಾಸಿಸುವೆನು.
ಆಜಿಘ್ರನ್ ಪೇಶಲಾನ್ ಗಂಧಾನ್ ಫುಲ್ಲಾನಾಂ ವೃಕ್ಷವಿರುಧಾಮ್ |
ನಾನಾರೂಪಾನ್ ವನೇ ಪಶ್ಯನ್ ರಮಣೀಯಾನ್ ವನೌಕಸಃ ॥8॥
ಅರಳಿರುವ ಮರ-ಗಿಡ-ಬಳ್ಳಿಗಳಿಂದ ಮನೋಹರವಾದ ಹೂವುಗಳ ಸುಗಂಧವನ್ನು ಆಘ್ರಾಣಿಸುತ್ತೇನೆ. ನಾನಾರೂಪಗಳಿಂದ ಮನೋಹರವಾದ ವನವಾಸಿಗಳನ್ನು ನೋಡುತ್ತಾ ಕಾಲಕಳೆಯುತ್ತೇನೆ.
ವಾನಪ್ರಸ್ಥಜನಸ್ಯಾಪಿ ದರ್ಶನಂ ಕುಲವಾಸಿನಾಮ್ |
ನಾಪ್ರಿಯಾಣ್ಯಾಚರಿಷ್ಯಾಮಿ ಕಿಂ ಪುನರ್ಗ್ರಾಮವಾಸಿನಾಮ್ ॥9॥
ಅರಣ್ಯದಲ್ಲಿ ವಾನಪ್ರಸ್ಥಾಶ್ರಮದಲ್ಲಿರುವವರನ್ನು ಗುರುಕುಲವಾಸಿಗಳಾದ ಬ್ರಹ್ಮ- ಚಾರಿಗಳನ್ನು ಆಗಾಗ ಸಂದರ್ಶಿಸುತ್ತೇನೆ. ಕಾಡಿನಲ್ಲಿರುವ ಯಾವುದೇ ಪ್ರಾಣಿಗಳಿಗೂ ನಾನು ಅಪ್ರಿಯವನ್ನು ಎಣಿಸುವುದಿಲ್ಲ. ಇನ್ನು ಗ್ರಾಮಗಳಲ್ಲಿ ವಾಸಿಸುವ ಜನರಿಗೆ ಅಪ್ರಿಯವಾದ ಕೆಲಸವನ್ನು ಹೇಗೆ ತಾನೇ ಮಾಡುವೆನು?
ಏಕಾಂತಶೀಲೀ ವಿಮೃಶನ್ ಪಕ್ವಾಪಕ್ವೇನ ವರ್ತಯನ್ |
ಪಿತೄನ್ ದೇವಾಂಶ್ಚ ವನ್ಯೇನ ವಾಗ್ಭಿರದ್ಭಿಶ್ಚ ತರ್ಪಯನ್ ॥10॥
ನಿರ್ಜನವಾದ ಸ್ಥಳದಲ್ಲಿ ಧ್ಯಾನನಿರತನಾಗುತ್ತೇನೆ. ಪಕ್ವವಾದ ಆಹಾರವೇ ಆಗಿರಲಿ ಅಪಕ್ವವಾದ ಆಹಾರವೇ ಆಗಿರಲಿ ಅದರಿಂದಲೇ ದೇಹಧಾರಣೆಯನ್ನು ಮಾಡುವೆನು. ಪಿತೃಗಳನ್ನು ಮತ್ತು ದೇವತೆಗಳನ್ನು ಕಾಡಿನಲ್ಲಿ ಸಿಗುವ ವಸ್ತುವಿ- ನಿಂದಲೂ ಮತ್ತು ಮಧುರವಾದ ಮಾತಿನಿಂದಲೂ ತೃಪ್ತಿಪಡಿಸುತ್ತೇನೆ.
ಏವಮಾರಣ್ಯಶಾಸ್ತ್ರಾಣಾಮುಗ್ರಮುಗ್ರತರಂ ವಿಧಿಮ್ |
ಸೇವಮಾನಃ ಪ್ರತೀಕ್ಷಿಷ್ಯೇ ದೇಹಸ್ಯಾಸ್ಯ ಸಮಾಪನಮ್ ॥11॥
ಹೀಗೆ ಅರಣ್ಯಕಶಾಸ್ತ್ರವಿಧಿಗೆ ಅನುಗುಣವಾಗಿ ಕಠಿಣವಾದ ವಿಧಿಯನ್ನು ಆಚರಿಸುವೆನು. ಉಗ್ರವಾದ ನಿಯಮಗಳನ್ನು ಹಿಡಿದು ಈ ದೇಹದ ಅವಸಾನ- ಕಾಲವನ್ನು ನಿರೀಕ್ಷಿಸುವೆನು.
ಅಥವೈಕೋಽಹಮೇಕಾಹಮೇಕೈಕಸ್ಮಿನ್ ವನಸ್ಪತೌ |
ಚರನ್ ಭೈಕ್ಷ್ಯಂ ಮುನಿರ್ಮುಂಡಃ ಕ್ಷಪಯಿಷ್ಯೇ ಕಲೇವರಮ್ ॥12॥
ನಾನು ಮೌನವನ್ನು ಆಚರಿಸುತ್ತಾ ತಲೆಯನ್ನು ಮುಂಡನ ಮಾಡಿಕೊಂಡು ಸನ್ಯಾಸಿಯಾಗಿ ಪ್ರತಿದಿನ ಕೇವಲ ಒಂದೊಂದೇ ವೃಕ್ಷದಿಂದ ಹಣ್ಣನ್ನು ತೆಗೆದು- ಕೊಳ್ಳುತ್ತಾ ಈ ಶರೀರವನ್ನು ಕ್ಷಯಿಸುತ್ತೇನೆ.
ಪಾಂಸುಭಿಃ ಸಮವಚ್ಛನ್ನಃ ಶೂನ್ಯಾಗಾರಪ್ರತಿಶ್ರಯಃ |
ವೃಕ್ಷಮೂಲನಿಕೇತೋ ವಾ ತ್ಯಕ್ತಸರ್ವಪ್ರಿಯಾಪ್ರಿಯಃ ॥13॥
ಯಾರೂ ಇಲ್ಲದ ಕಾಡಿನಲ್ಲಿ ಧೂಳಿನಿಂದ ಬರಿದಾದ ಮನೆಯಲ್ಲಿ ಇಲ್ಲವೇ ವೃಕ್ಷದ ಬುಡದಲ್ಲಿ ವಾಸ ಮಾಡುವೆನು. ಪ್ರಿಯವಾದ ಮತ್ತು ಅಪ್ರಿಯವಾದವು- ಗಳೆರಡನ್ನು ಪರಿತ್ಯಾಗ ಮಾಡುವೆನು.
ನ ಶೋಚನ್ನ ಪ್ರಹೃಷ್ಯಂಶ್ಚ ತುಲ್ಯನಿಂದಾತ್ಮಸಂಸ್ತುತಿಃ |
ನಿರಾಶೀರ್ನಿರ್ಮಮೋ ಭೂತ್ವಾ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥14॥
ಸಂತೋಷ ದುಃಖ ಎರಡನ್ನು ತೊರೆಯುವೆನು. ನಿಂದೆ ಮತ್ತು ಸ್ತುತಿಯನ್ನು ಸಮಾನವಾಗಿ ಕಾಣುವೆನು. ಆಸೆ-ಮಮಕಾರಗಳನ್ನು

ತೊರೆಯುತ್ತೇನೆ. ಸುಖ- ದುಃಖಾದಿ ದ್ವಂದ್ವಗಳಿಂದ ದೂರಸರಿದು, ಯಾವುದೇ ವಸ್ತುಗಳನ್ನು ಪರಿಗ್ರಹಿಸು- ವುದಿಲ್ಲ.
ಆತ್ಮಾರಾಮಃ ಪ್ರಸನ್ನಾತ್ಮಾ ಜಡಾಂಧಬಧಿರಾಕೃತಿಃ |
ಅಕುರ್ವಾಣಃ ಪರೈಃ ಕಾಂಚಿತ್ ಸಂವಿದಂ ಜಾತು ಕೇನಚಿತ್ ॥15॥
ಯೋಗಬಲದಿಂದ ಪ್ರಸನ್ನ ಮನಸ್ಕನಾಗುತ್ತೇನೆ. ಮಂದಬುದ್ಧಿಯವನೂ, ಕುರುಡನು, ಕಿವುಡನು ಇದ್ದ ಹಾಗೆ ಬೇರೆ ಯಾರನ್ನು ಗಮನಿಸದೆ ನನ್ನಲ್ಲಿ ನಾನು ಆನಂದಿಸುವೆನು. ಬೇರೆಯವರಿಂದ ಯಾವುದೇ ಕಾರ್ಯವನ್ನು ಮಾಡಿಸಿಕೊಳ್ಳು- ವುದಿಲ್ಲ, ಯಾರೊಡನೆಯೂ ಮಾತನಾಡುವುದಿಲ್ಲ.
ಜಂಗಮಾಜಂಗಮಾನ್ ಸರ್ವಾನವಿಹಿಂಸಶ್ಚತುರ್ವಿಧಾನ್ |
ಪ್ರಜಾಃ ಸರ್ವಾಃ ಸ್ವಧರ್ಮಸ್ಥಾಃ ಸಮಃ ಪ್ರಾಣಭೃತಃ ಪ್ರತಿ ॥16॥
ಜರಾಯುಜ, ಸ್ವೇದಜ, ಅಂಡಜ, ಉದ್ಭಿಜಗಳೆಂಬ ಜಂಗಮ-ಅಜಂಗಮ ಜೀವಿಗಳಲ್ಲಿ ಒಂದನ್ನೂ ನಾನು ಹಿಂಸಿಸುವವನಲ್ಲ. ಸ್ವಧರ್ಮದಲ್ಲಿರುವ ಅಥವಾ ಇಂದ್ರಿಯಪೋಷಕರಾದ ಪ್ರಜೆಗಳೆಲ್ಲರನ್ನು ಸಮಬುದ್ಧಿಯಿಂದ ನೋಡುವೆನು.
ನಚಾಪ್ಯವಹಸನ್ ಕಂಚಿನ್ನ ಕುರ್ವನ್ ಭ್ರುಕುಟೀಃ ಕ್ವಚಿತ್ |
ಪ್ರಸನ್ನವದನೋ ನಿತ್ಯಂ ಸರ್ವೇಂದ್ರಿಯಸುಸಂಯತಃ ॥17॥
ಯಾರನ್ನು ನೋಡಿ ಹಾಸ್ಯ ಮಾಡುವುದಿಲ್ಲ. ಯಾರ ಮುಂದೆಯೂ ಹುಬ್ಬು- ಗಂಟಿಕ್ಕುವುದಿಲ್ಲ. ಎಲ್ಲ ಇಂದ್ರಿಯಗಳನ್ನು ನಿಯಮಬದ್ಧವಾಗಿರಿಸಿ ಯಾವಾಗಲೂ ಪ್ರಸನ್ನಮುಖದಿಂದಲೇ ಇರುತ್ತೇನೆ.
ಅಪೃಚ್ಛನ್ ಕಸ್ಯಚಿನ್ಮಾರ್ಗಂ ವ್ರಜನ್ ಯೇನೈವ ಕೇನಚಿತ್ |
ನ ದೇಶಂ ನ ದಿಶಂ ಕಾಂಚಿದ್ ಗಂತುಮಿಚ್ಛನ್ ವಿಶೇಷತಃ ॥18॥
ಅರಣ್ಯದಲ್ಲಿ ಸಂಚರಿಸುವಾಗ ಯಾವ ಹಾದಿ ಎಲ್ಲಿಗೆ ಹೋಗುತ್ತದೆಂದು ಯಾರನ್ನೂ ಕೇಳುವುದಿಲ್ಲ. ನಾನು ಇದೇ ದೇಶಕ್ಕೆ ಹೋಗಬೇಕೆಂದು ಈ ದಿಕ್ಕಿಗೆ ಹೋಗಬೇಕೆಂದು ಇಚ್ಛಿಸುವುದಿಲ್ಲ. ಸಿಕ್ಕಿದ ಮಾರ್ಗದಲ್ಲಿ ಪ್ರಯಾಣ ಬೆಳೆಸುತ್ತೇನೆ.
ಗಮನೇ ನಿರಪೇಕ್ಷಶ್ಚ ಪಶ್ಚಾದನವಲೋಕಯನ್ |
ಋಜುಃ ಪ್ರಣಿಹಿತೋ ಗಚ್ಛನ್ ತ್ರಸಂಸ್ಥಾವರವರ್ಜಕಃ ॥19॥
ಇಂಥ ಸ್ಥಳದಲ್ಲೇ ವಿಶ್ರಾಂತಿ ಪಡೆಯಬೇಕೆಂದೂ ಸಹ ಅಪೇಕ್ಷಿಸುವುದಿಲ್ಲ. ಮುಂದೆ ಹೋಗುವಾಗ ಹಿಂದಕ್ಕೆ ನೋಡಲಾರೆನು. ನೇರವಾಗಿ ಹೋಗುತ್ತಲೇ ಇರುತ್ತೇನೆ. ಅಂತರ್ಮುಖಿಯಾಗಿರುತ್ತೇನೆ. ಸ್ಥಾವರ-ಜಂಗಮಗಳಿಗೆ ಯಾವುದೇ ರೀತಿಯಲ್ಲಿಯೂ ತೊಂದರೆಯನ್ನು ನೀಡುವುದಿಲ್ಲ.
ಟಿಪ್ಪಣಿ - ತ್ರಸಂಸ್ಥಾವರವರ್ಜಕ ಇತ್ಯತ್ರ ತ್ರಸನ್ ಪಾಪಾತ್ ತ್ರಸನ್ | ಸ್ಥಾವರವರ್ಜಕಃ ಸ್ಥಾವರಾಣಾಂ ಛೇದಾದಿವರ್ಜಕಃ | ಮಧ್ಯಮಪದಲೋಪೀ ಸಮಾಸಃ ॥ ಪಾಪಕಾರ್ಯಗಳಿಂದ ರಹಿತನಾಗಿರುತ್ತೇನೆ. ಸ್ಥಾವರಪದಾರ್ಥಗಳಿಗೆ ಛೇದನಾದಿಗಳನ್ನು ಮಾಡಲಾರೆನು ಎಂದಭಿಪ್ರಾಯ.
ಸ್ವಭಾವಸ್ತು ಪ್ರಯಾತ್ಯಗ್ರೇ ಪ್ರಭವಂತ್ಯಶನಾನ್ಯಪಿ |
ದ್ವಂದ್ವಾನಿ ಚ ವಿರುದ್ಧಾನಿ ತಾನಿ ಸರ್ವಾಣ್ಯಚಿಂತಯನ್ ॥20॥
ಹುಟ್ಟಿನಿಂದ ಬಂದಿರುವ ಸ್ವಭಾವಕ್ಕೆ ಅನುಗುಣವಾಗಿ ಮುಂದೆ ಸಾಗುತ್ತಿರುತ್ತೇನೆ. ಹಾದಿಯಲ್ಲಿ ಸಿಕ್ಕ ಹಣ್ಣು, ಗೆಡ್ಡೆ-ಗೆಣಸುಗಳನ್ನು ತಿನ್ನುತ್ತಾ ಮುಂದೆ ಸಾಗುತ್ತೇನೆ. ಆ ಸಮಯದಲ್ಲಿ ವಿರುದ್ಧಧರ್ಮಗಳಿರುವ ದ್ವಂದ್ವಗಳನ್ನು ಚಿಂತಿಸುವುದಿಲ್ಲ. ಆಯಾ ಕಾಲಕ್ಕೆ ಸಿಕ್ಕ ಆಹಾರವು ಅಲ್ಪವೇ ಆಗಿರಲಿ, ರುಚಿಯಾಗಿರಲಿ, ಉಣ್ಣುವುದಕ್ಕೆ ಸಾಧ್ಯವಿಲ್ಲದಂತಿರಲಿ. ಅದರಿಂದಲೇ ಕಾಲವನ್ನು ಕಳೆಯುವೆನು. ಯಾವುದಕ್ಕೂ ಚಿಂತೆ ಮಾಡುವುದಿಲ್ಲ.
ಅಲ್ಪಂ ವಾ ಸ್ವಾದು ವಾ ಭೋಜ್ಯಂ ಪೂರ್ವಾಲಾಭೇನ ಜಾತುಚಿತ್ |
ಅನ್ಯೇಷ್ವಪಿ ಚರಂಲ್ಲಾಭಮಲಾಭೇ ಸಪ್ತ ಪೂರಯನ್ ॥21॥
ಭಿಕ್ಷೆಯು ಸ್ವಲ್ಪವೇ ಸಿಕ್ಕಲಿ, ರುಚಿಕರವಿಲ್ಲದ್ದೇ ಇರಲಿ, ಅದನ್ನೇ ಅಮೃತವೆಂದು ಭಾವಿಸಿ ಉಣ್ಣುತ್ತೇನೆ. ಒಂದುವೇಳೆ ಮೊದಲೇ ಮನೆಯಲ್ಲಿ ಭಿಕ್ಷೆ ದೊರಕದಿದ್ದರೆ ಎರಡು, ಮೂರು, ಹೀಗೆ ಏಳು ಮನೆಗಳಿಗೆ ಹೋಗುತ್ತೇನೆ. ಏಳನೆಯ ಮನೆ- ಯಲ್ಲಿಯೂ ಭಿಕ್ಷೆಯು ಸಿಗದಿದ್ದರೆ ಎಂಟನೆಯ ಮನೆಗೆ ಹೋಗುವುದಿಲ್ಲ.
ವಿಧೂಮೇ ನ್ಯಸ್ತಮುಸಲೇ ವ್ಯಂಗಾರೇ ಭುಕ್ತವಜ್ಜನೇ |
ಅತಿತಪಾತ್ರಸಂಚಾರೇ ಕಾಲೇ ವಿಗತಭಿಕ್ಷುಕೇ ॥22॥
ಏಕಕಾಲಂ ಚರನ್ ಭೈಕ್ಷ್ಯಂ ತ್ರೀನಥ ದ್ವೇ ಚ ಪಂಚ ವಾ |
ಸ್ನೇಹಪಾಶಂ ವಿಮುಚ್ಯಾಹಂ ಚರಿಷ್ಯಾಮಿ ಮಹೀಮಿಮಾಮ್ ॥23॥
ಮನೆಯಲ್ಲಿ ಹೊಗೆಯಾಡದೆ ಇರುವಾಗ, ಒನಕೆಯ ಶಬ್ದವು ನಿಂತಾಗ, ಒಲೆಯಲ್ಲಿ ಬೆಂಕಿ ಆರಿದ ನಂತರ, ಮನೆಯವರೆಲ್ಲರೂ ಭೋಜನ ಮಾಡಿದ ನಂತರ, ಅಡುಗೆಯ ಪಾತ್ರೆಯನ್ನು ಊಟಕ್ಕಾಗಿ ತೆಗೆದುಕೊಂಡು ಮತ್ತೊಂದು ಕಡೆ ಹೋಗುತ್ತಿರುವಾಗ, ಭಿಕ್ಷುಕರೆಲ್ಲರೂ ಭಿಕ್ಷೆಯನ್ನು ತೆಗೆದುಕೊಂಡು ಹೋದ ನಂತರ, ಎರಡು, ಮೂರು ಅಥವಾ ಐದು ಮನೆಗಳಿಗೆ ಹೋಗಿ ದಿನಕ್ಕೆ ಒಂದೇ ಬಾರಿ ಭಿಕ್ಷೆ ಬೇಡುತ್ತೇನೆ. ಸ್ನೇಹವೆಂಬ ಪಾಶವನ್ನು ಸಂಪೂರ್ಣವಾಗಿ ಕಡಿದು ಮುಕ್ತನಂತೆ ಈ ಭೂಮಿಯಲ್ಲಿ ಸಂಚರಿಸುವೆನು.
ಅಲಾಭೇ ಸತಿ ವಾ ಲಾಭೇ ಸಮದರ್ಶೀ ಮಹಾತಪಾಃ |
ನ ಜಿಜೀವಿಷುವತ್ ಕಿಂಚಿನ್ನ ಮುಮೂರ್ಷುವದಾಚರನ್ ॥24॥
ಲಾಭನಷ್ಟಗಳೆರಡನ್ನು ಒಂದೇ ವಿಧವಾಗಿ ಭಾವಿಸುತ್ತ, ಮಹಾತಪಸ್ವಿನಲ್ಲಿ ನೆಲೆ- ಗೊಳ್ಳುತ್ತೇನೆ. ಜೀವಿಸಲು ಬಯಸುವವನು ಧನಾದಿಗಳನ್ನು ಸಂಗ್ರಹಿಸುವಂತೆ ನಾನು ಸಂಗ್ರಹಿಸುವುದಿಲ್ಲ. ಸಾಯಲು ಬಯಸುವವನಂತೆ ಅನ್ನಾದಿಗಳನ್ನು ತ್ಯಾಗ ಮಾಡು- ವುದೂ ಇಲ್ಲ.

ಜೀವಿತಂ ಮರಣಂ ಚೈವ ನಾಭಿನಂದನ್ನ ಚ ದ್ವಿಷನ್ |
ವಾಸ್ಯೈಕಂ ತಕ್ಷತೋ ಬಾಹುಂ ಚಂದನೇನೈಕಮುಕ್ಷತಃ |
ನಾಕಲ್ಯಾಣಂ ನ ಕಲ್ಯಾಣಂ ಚಿಂತಯನ್ನುಭಯೋಸ್ತಯೋಃ ॥25॥
ಬದುಕಿರಬೇಕೆಂದಾಗಲಿ, ಸಾಯಬೇಕೆಂದಾಗಲಿ ಉದ್ದೇಶವಿರುವ ಮನುಷ್ಯ- ನಂತಲ್ಲ. ಜೀವನಕ್ಕೂ-ಮರಣಕ್ಕೂ ನಾನು ಯಾವ ವ್ಯತ್ಯಾಸವನ್ನು ಕಾಣುವುದಿಲ್ಲ. ನನ್ನ ತೋಳನ್ನು ಕತ್ತಿಯಿಂದ ಕಡಿಯತಕ್ಕವನೂ, ನನ್ನ ತೋಳಿಗೆ ಚಂದನವನ್ನು ಲೇಪಮಾಡತಕ್ಕವನೂ, ಇಬ್ಬರಲ್ಲಿಯೂ ಸಮಾನಭಾವದಿಂದ ಕಾಣುವೆನು. ಇವರಿಬ್ಬರೂ ನನ್ನ ದೃಷ್ಟಿಯಲ್ಲಿ ಸಮಾನರೇ ಆಗುತ್ತಾರೆ. ನನಗೆ ಸ್ನೇಹಿತರೂ ಇಲ್ಲ. ದ್ವೇಷಿಯೂ ಇಲ್ಲ.
ಯಾಃ ಕಾಶ್ಚಿಜ್ಜೀವತಾ ಶಕ್ಯಾಃ ಕರ್ತುಮಭ್ಯುದಯಕ್ರಿಯಾಃ |
ಸರ್ವಾಸ್ತಾಃ ಸಮಭಿತ್ಯಜ್ಯ ನಿಮೇಷಾದಿವ್ಯವಸ್ಥಿತಃ ॥26॥
ಬದುಕಿರುವವನು ತನ್ನ ಕ್ಷೇಮಕ್ಕಾಗಿ ಮಾಡಬಹುದಾದ ಕಾರ್ಯಗಳು ಯಾವುವು ಇವೆಯೋ ಅದೆಲ್ಲವನ್ನು ತೊರೆದು ಈ ಶರೀರದಲ್ಲಿ ಆತ್ಮನಿರುವವರೆಗೂ ಅನಿವಾರ್ಯವಾಗಿ ಮಾಡಲೇಬೇಕಾಗುವ ರೆಪ್ಪೆಹೊಡೆಯುವುದು ಸಿಕ್ಕುವ ಭಿಕ್ಷೆ- ಯನ್ನು ಭುಂಜಿಸಲು ಕೈ ಬಾಯಿಗಳನ್ನು ಅಲುಗಾಡಿಸುವುದು, ಇಂಥ ಕಾರ್ಯಗಳನ್ನು ಮಾತ್ರವೇ ಮಾಡುತ್ತೇನೆ.
ಟಿಪ್ಪಣಿ - ನಿಮೇಷಾದಿವ್ಯವಸ್ಥಿತಃ ಇತ್ಯತ್ರ ನಿಮೇಷಾದಿಷು ಚಕ್ಷುಷೋ ರ್ನಿಮೇಷಣೇ ಆದಿಪದೇನ ಉನ್ಮೇಷಣೇ ಚ ಸ್ಥಿತಃ ॥ ಕಣ್ಣು ತೆರೆಯುವುದು ಮುಚ್ಚುವುದು ಮೊದಲಾದವುಗಳನ್ನಷ್ಟೇ ಮಾಡುತ್ತೇನೆಂದಭಿಪ್ರಾಯ.
ತೇಷು ನಿತ್ಯಮಸಕ್ತಶ್ಚ ತ್ಯಕ್ತಸರ್ವೇಂದ್ರಿಯಕ್ರಿಯಃ |
ಸುಪರಿತ್ಯಕ್ತಸಂಕಲ್ಪಃ ಸುನಿರ್ಣಿಕ್ತಾತ್ಮಕಲ್ಮಷಃ ॥27॥
ಈ ಶರೀರವ್ಯಾಪಾರಗಳಲ್ಲಿ ಸಂಬಂಧವನ್ನಿಟ್ಟುಕೊಳ್ಳದೆ, ಎಲ್ಲ ಇಂದ್ರಿಯ ವ್ಯಾಪಾರಗಳನ್ನು ತೊರೆದು, ಸಮಸ್ತ ಸಂಕಲ್ಪವನ್ನು ಬಿಟ್ಟು, ಮನಸ್ಸಿನ ಕಲ್ಮಷವನ್ನು ಸಂಪೂರ್ಣ ತೊರೆದು ಶುದ್ಧನಾಗುವೆನು.
ವಿಮುಕ್ತಃ ಸರ್ವಸಂಗೇಭ್ಯೋ ವ್ಯತೀತಃ ಸರ್ವವಾಗುರಾಃ |
ನ ವಶೇ ಕಸ್ಯಚಿತ್ ತಿಷ್ಠನ್ ಸಧರ್ಮಾ ಮಾತರಿಶ್ವನಃ ॥28॥
ಎಲ್ಲ ವಿಧವಾದ ಸಹವಾಸಗಳನ್ನು ತೊರೆದು, ಸಂಸಾರಪಾಶಗಳನ್ನು ಹರಿದು, ಯಾವನೊಬ್ಬನ ಅಧೀನನೂ ಆಗದೇ ಗಾಳಿಯಂತೆ ಸ್ವೇಚ್ಛೆಯಾಗಿ ಸಂಚರಿಸುವೆನು.
ಟಿಪ್ಪಣಿ - ವ್ಯತೀತಃ ಸರ್ವವಾಗುರಾ ಇತ್ಯತ್ರ ಸರ್ವವಾಗುರಾಃ ಸಮಸ್ತ- ಸಂಸಾರಬಂಧನಾನಿ | `ವಾಗುರಾ ಮೃಗಂಧನೀ' ಇತ್ಯಮರಃ ॥ ಸರ್ವವಾಗುರಾ ಎಂದರೆ ಎಲ್ಲಾ ಬಗೆಯ ಸಂಸಾರಬಂಧನಗಳು ಎಂದಭಿಪ್ರಾಯ.
ವೀತರಾಗಶ್ಚರನ್ನೇವಂ ತುಷ್ಟಿಂ ಪ್ರಾಪ್ಸ್ಯಾಮಿ ಶಾಶ್ವತೀಮ್ |
ತೃಷ್ಣಯಾ ಹಿ ಮಹತ್ ಪಾಪಮಜ್ಞಾನಾದಸ್ಮಿ ಕಾರಿತಃ ॥29॥
ಹೀಗೆ ವಿರಕ್ತಿಯಿಂದ ಸಂಚರಿಸುತ್ತಾ ನಿಜವಾದ ಮನಃಶಾಂತಿಯನ್ನು ಹೊಂದು- ವೆನು. ಅಜ್ಞಾನದಿಂದ ಉಂಟಾದ ರಾಜ್ಯದ ಆಸೆಯು ನನ್ನಿಂದ ಬಹಳ ದೊಡ್ಡ ಪಾಪವನ್ನು ಮಾಡಿಸಿಬಿಟ್ಟಿತು.
ಕುಶಲಾಕುಶಲಾನ್ಯೇಕೇ ಕೃತ್ವಾ ಕರ್ಮಾಣಿ ಮಾನವಾಃ |
ಕಾರ್ಯಕಾರಣಸಂಶ್ಲಿಷ್ಟಂ ಸ್ವಜನಂ ನಾಮ ಬಿಭ್ರತಿ ॥30॥
ಕೆಲವರು ಶುಭಕರ್ಮಗಳನ್ನು ಮಾಡುತ್ತಾರೆ. ಜೊತೆಯಲ್ಲಿ ಅಶುಭಕರ್ಮಗಳನ್ನು ಮಾಡುತ್ತಾರೆ. ತಮ್ಮ ಸುಖಕ್ಕಾಗಿ ಹೆಂಡತಿ-ಮಕ್ಕಳ ಪೋಷಣೆಯಲ್ಲಿ ರತರಾಗುತ್ತಾರೆ.
ವಿವರಣೆ - ನ ವಾ ಅರೇ ಪತ್ಯುಕ್ತಕಾಮಾಯ ಪತಿಃ ಪ್ರಿಯೋ ಭವತಿ | ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ ॥ ಗಂಡನಿಗೆ ಸಂತೋಷವಾಗ- ಬೇಕೆಂಬ ದೃಷ್ಟಿಯಿಂದ ಹೆಂಡತಿಯು ಗಂಡನನ್ನು ಪ್ರೀತಿಸುವುದಿಲ್ಲ. ತನ್ನ ಆಸೆ- ಯನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಗಂಡನನ್ನು ಪ್ರೀತಿಸುತ್ತಾಳೆ ಎಂಬ ಉಪ- ನಿಷತ್ತಿನ ಮಾತಿನಂತೆ ಪ್ರತಿಯೊಬ್ಬರೂ ಕೂಡ ಜಗತ್ತಿನಲ್ಲಿ ಸ್ವಾರ್ಥಿಗಳೇ ಆಗಿರುತ್ತಾರೆ. ಮಕ್ಕಳನ್ನೂ ಕೂಡ ತಮ್ಮ ಹಿತಕ್ಕಾಗಿಯೇ, ತಮ್ಮ ಸಂತೋಷಕ್ಕಾ- ಗಿಯೇ ಪ್ರೀತಿ ಮಾಡುತ್ತಾರೆ. ಮಕ್ಕಳಿಗೆ ಪ್ರೀತಿ ಪಡಿಸಬೇಕೆಂಬ ಉದ್ದೇಶವೂ ಕೂಡ ಯಾರಿಗೂ ಇರುವುದಿಲ್ಲ. ಗಂಡನೂ ಕೂಡ ತನ್ನ ಸುಖಕ್ಕಾಗಿಯೇ ಹೆಂಡತಿಯನ್ನು ಪ್ರೀತಿಸುತ್ತಾನೆ. ಹೀಗೆ ಸಮಸ್ತಜಗತ್ತು ಸ್ವಾರ್ಥಪರವಾಗಿದೆ.
ಆಯುಷೋಽಂತೇ ಪ್ರಹಾಯೇದಂ ಕ್ಷೀಣಪ್ರಾಣಂ ಕಲೇವರಮ್ |
ಪ್ರತಿಗೃಹ್ಣಾತಿ ತತ್ ಪಾಪಂ ಕರ್ತುಃ ಕರ್ಮಫಲಂ ಹಿ ತತ್ ॥31॥
ಒಬ್ಬನು ತನ್ನ ಆಯುಷ್ಯದ ಕೊನೆಯಲ್ಲಿ ಆತ್ಮನು ಶರೀರವನ್ನು ಬಿಟ್ಟು ತಾನು ಮಾಡಿದ ಪಾಪದ ಫಲವನ್ನು ಅನುಭವಿಸುವುದಕ್ಕಾಗಿ ಇಂಥ ಶರೀರಗಳನ್ನು ಪಡೆಯುವನು. ಏಕೆಂದರೆ ಮಾಡಿದ ಕರ್ಮಕ್ಕೆ ಫಲವನ್ನು ಅನುಭವಿಸಿಯೇ ತೀರ- ಬೇಕು.
ಏವಂ ಸಂಸಾರಚಕ್ರೇಽಸ್ಮಿನ್ ವ್ಯಾವಿದ್ಧೇ ರಥಚಕ್ರವತ್ |
ಸಮೇತಿ ಭೂತಗ್ರಾಮೋಽಯಂ ಭೂತಗ್ರಾಮೇಣ ಕಾರ್ಯವಾನ್ ॥32॥
ರಥದ ಚಕ್ರದಂತೆ ನಿರಂತರವಾಗಿ ಸಾಗುವ ಈ ಸಂಸಾರರಥದಲ್ಲಿ ಭೂತ- ಗ್ರಾಮವು (ಪ್ರಾಣಿಸಮೂಹವು) ಪಂಚಭೂತಗಳ ಕಾರ್ಯವಶದಿಂದ ಮತ್ತೊಂದು ಪ್ರಾಣಿಗಳ ಸಮುದಾಯದೊಡನೆ ಬೆರೆಯುತ್ತಾರೆ. (ಬಂಧು-ಮಿತ್ರರ ರೂಪದಿಂದ)
ಟಿಪ್ಪಣಿ - ಸಮೇತಿ ಭೂತಗ್ರಾಮೋಽಯಂ ಭೂತಗ್ರಾಮೇಣ ಕಾರ್ಯವಾನ್ ಇತ್ಯತ್ರ ಭೂತಗ್ರಾಮೇಣ ಪಂಚಮಹಾಭೂತಸಮೂಹೇನ ಕಾರ್ಯೋ ಯೋ ದೇಹಸ್ತದ್ವಾನ್ ಅಯಂ ಭೂತಗ್ರಾಮಃ ಪ್ರಾಣಿಸಮೂಹಃ ಸಮೇತಿ ಇತಿ ಯೋಜನಾ ॥ ಪಂಚಮಹಾಭೂತಗಳ ಸಮೂಹದಿಂದ ರಚಿತವಾದ ಈ ದೇಹ ಎಂದರ್ಥ.
ಜನ್ಮಮೃತ್ಯುಜರಾವ್ಯಾಧಿವೇದನಾಭಿರುಪದ್ರುತಮ್ |

ಅಪಾರಮಿಮಮಚಾಸ್ವಸ್ಥಂ ಸಂಸಾರಂ ತ್ಯಜತಃ ಸುಖಮ್ ॥33॥
ಹುಟ್ಟು, ಸಾವು, ಮುಪ್ಪು ರೋಗ, ವೇದನೆ ಮುಂತಾದ ಕಷ್ಟಗಳಿಂದ ತುಂಬಿದ ಪಾರವೇ ಇಲ್ಲದೆ ಸಮುದ್ರದಂತಿರುವ ಈ ಸಂಸಾರವನ್ನು ಬಿಟ್ಟವನೇ ನಿಜವಾದ ಸುಖಿಯಾದವನು.
ದಿವಃ ಪತತ್ಸು ದೇವೇಷು ಸ್ಥಾನೇಭ್ಯಶ್ಚ ಮಹರ್ಷಿಷು |
ಕೋ ಹಿ ನಾಮ ಭವೇನಾರ್ಥೀ ಭವೇತ್ ಕಾರಣತತ್ತ್ವವಿತ್॥34॥
ಸ್ವರ್ಗದಲ್ಲಿರುವ ದೇವತೆಗಳು ತಮ್ಮ ಪುಣ್ಯಾವಸಾನದಲ್ಲಿ ಕೆಳಕ್ಕೆ ಬೀಳುತ್ತಾರೆ. ಮಹರ್ಷಿಗಳು ತಮ್ಮ ಪದವಿಯನ್ನು ಕಳೆದುಕೊಳ್ಳುತ್ತಾರೆ. ಇದನ್ನು ತಿಳಿದ ಯಾವ ಜ್ಞಾನಿಯು ಜನ್ಮ-ಮೃತ್ಯುರೂಪವಾದ ಈ ಸಂಸಾರದಲ್ಲಿ ಆಸೆಯುಳ್ಳವನಾಗಲು ಸಾಧ್ಯ!
ವಿವರಣೆ - ಸ್ವರ್ಗವು ಶಾಶ್ವತವಲ್ಲ. ಅವರವರ ಸ್ಥಾನಗಳೂ ಕೂಡ ಶಾಶ್ವತವಲ್ಲ. ಮೋಕ್ಷವು ಮಾತ್ರ ಶಾಶ್ವತವಾಗಿದೆ. ಆದ್ದರಿಂದ ಸ್ವರ್ಗಕ್ಕೋಸ್ಕರ ಯಾವುದೇ ಸಾಧನೆಗಳನ್ನು ಮಾಡುವುದು ತನ್ನ ಸ್ಥಾನಮಾನಗಳ ಉಳಿಯುವಿಕೆಗಾಗಿ ಸಾಧನೆಗಳನ್ನು ಮಾಡುವುದು ಸಂಪೂರ್ಣ ವ್ಯರ್ಥವಾದ ಕಾರ್ಯವಾಗಿದೆ. ಭಗವಂತನ ಪ್ರೀತಿಯನ್ನು ಅಪೇಕ್ಷಿಸಿ, ಮೋಕ್ಷಕ್ಕೋಸ್ಕರ ಸಾಧನೆ ಮಾಡುವುದಷ್ಟೇ ಅತ್ಯಂತ ಸಾರ್ಥಕವಾದ ಕಾರ್ಯವಾಗಿದೆ.
ಕೃತ್ವಾ ಹಿ ವಿವಿಧಂ ಕರ್ಮ ತತ್ತದ್ ವಿವಿಧಲಕ್ಷಣಮ್ |
ಪಾರ್ಥಿವೈರ್ನೃಪತಿಃ ಸ್ವಲ್ಪೈಃ ಕಾರಣೈರೇವ ಬದ್ಧ್ಯತೇ ॥35॥
ಅಲ್ಪಸುಖದ ಅಪೇಕ್ಷೆಯಿಂದಲೇ ರಾಜರು ಬೇರೆ ಬೇರೆ ಲಕ್ಷಣಗಳುಳ್ಳ ವಿವಿಧ ಕಾರ್ಯದಲ್ಲಿ ಪ್ರವರ್ತಿಸಿ ಒಬ್ಬರಿಗೊಬ್ಬರು ಸ್ವಲ್ಪ ಕಾರಣಕ್ಕಾಗಿ ಹೊಡೆದಾಡಿ ಸಾಯುವರು.
ತಸ್ಮಾತ್ ಪ್ರಜ್ಞಾಮೃತಮಿದಂ ಚಿರಾನ್ಮಾಂ ಪ್ರತ್ಯುಪಸ್ಥಿತಮ್ |
ತತ್ ಪ್ರಾಪ್ಯ ಪ್ರಾರ್ಥಯೇ ಸ್ಥಾನಮವ್ಯಯಂ ಶಾಶ್ವತಂ ಧ್ರುವಮ್ ॥35॥
ಅರ್ಜುನ! ಆದ್ದರಿಂದ ಈ ಜ್ಞಾನವೆಂಬ ಅಮೃತವು ಬಹುಕಾಲದಿಂದ ನನ್ನ ಮನಸ್ಸನ್ನು ಸೆಳೆಯುತ್ತಿದೆ. ನಾನು ಶಾಶ್ವತವೂ ನಿಷ್ಕಲ್ಮಶವೂ ಆದ ಸ್ಥಾನವನ್ನು ಪಡೆಯಲು ಬಯಸುವೆನು.
ಏತಯಾ ಸತತಂ ಧೃತ್ಯಾ ಚರನ್ನೇವಂಪ್ರಕಾರಯಾ |
ದೇಹಂ ಸಂಸ್ಥಾಪಯಿಷ್ಯಾಮಿ ನಿರ್ಭಯಂ ಮಾರ್ಗಮಾಸ್ಥಿತಃ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ನವಮೋಽಧ್ಯಾಯಃ ॥9॥
ನಾನು ನನ್ನ ಬುದ್ಧಿಯು ಮೂಲಕವಾಗಿ ಈ ಹಿಂದೆ ಹೇಳಿದ ರೀತಿಯಲ್ಲಿ ಕಾಡಿನಲ್ಲಿ ಅಲೆದಾಡುತ್ತಾ, ಜನ್ಮ-ಮೃತ್ಯು-ಜರಾ-ವ್ಯಾಧಿ-ವೇದನೆಗಳಿಂದ ಆಕ್ರಾಂತ- ವಾದ ಈ ದೇಹವನ್ನು ಭಯವಿಲ್ಲದ ದಾರಿಯನ್ನು ಅರೆಸಿ ಮುಕ್ತಿಗೊಳಿಸುತ್ತೇನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 9ನೆಯ ಅಧ್ಯಾಯವು ಮುಗಿಯಿತು.
*****

10. ಹತ್ತನೆಯ ಅಧ್ಯಾಯ
ಯುಧಿಷ್ಠಿರನಿಗೆ ಭೀಮಸೇನದೇವರ ಸಲಹೆ.
ಭೀಮಃ
ಶ್ರೋತ್ರಿಯಸ್ಯೇವ ತೇ ರಾಜನ್ ಮಂದಕಸ್ಯಾವಿಪಶ್ಚಿತಃ |
ಅನುವಾಕಹತಾ ಬುದ್ಧಿರ್ನೈಷಾ ತತ್ತ್ವಾರ್ಥದರ್ಶಿನೀ ॥1॥
ರಾಜನೇ ! ಈಗ ನೀನು ಹೇಳುವ ಮಾತುಗಳನ್ನು ಕೇಳಿದರೆ, ಕೇವಲ ವೇದವನ್ನು ಕಂಠಪಾಠ ಮಾಡಿ, ವೇದಾರ್ಥವನ್ನು ತಿಳಿಯದ ಮೂರ್ಖನಾದ, ವಿವೇಚನಾಶಕ್ತಿ ಇಲ್ಲದ ಮಂದಬುದ್ಧಿಯುಳ್ಳ ಶ್ರೋತ್ರಿಯನ ಬಾಯಿಯಿಂದ ಹೊರಡುವ ಮಾತುಗಳಂತಿರುವ ಈ ನಿನ್ನ ಬುದ್ಧಿಯು ತತ್ತ್ವಾರ್ಥಗಳನ್ನೇನೂ ವಿಮರ್ಶಿಸಿದ ಹಾಗೇ ತೋರುವುದಿಲ್ಲ.
ಟಿಪ್ಪಣಿ - ಅನುವಾಹಕತಾ ಬುದ್ಧಿಃ ಇತ್ಯತ್ರ ಅನುವಾಕಃ ಆಪಾತರಮಣೀಯ- ವೇದವಾಕ್ಯಮ್, ತೇನ ಹತಾ ಬುದ್ಧಿಃ ॥ ಅನುವಾಕ ಎಂದರೆ ಆಪಾತರಮಣೀಯ- ವಾದ ವೇದವಾಕ್ಯದಿಂದ.
ಆಲಸ್ಯೇ ಕೃತಚಿತ್ತಸ್ಯ ರಾಜಧರ್ಮಾನಸೂಯತಃ |
ವಿನಾಶೇ ಧಾರ್ತರಾಷ್ಟ್ರಾಣಾಂ ಕಿಂ ಫಲಂ ಭರತರ್ಷಭ ॥2॥
ಭರತಶ್ರೇಷ್ಠನೇ! ಸೋಮಾರಿತನದಲ್ಲಿಯೇ ಬುದ್ಧಿಯನ್ನು ಸ್ಥಿರಗೊಳಿಸಿ, ರಾಜ- ಧರ್ಮವನ್ನು ನಿಂದಿಸುತ್ತಿರುವ ನೀನು ಆ ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲಿಸಿ ಯಾವ ಫಲವನ್ನು ಪಡೆದಂತಾಯಿತು?
ಕ್ಷಮಾನುಕಂಪಾ ಕಾರುಣ್ಯಮಾನೃಶಂಸ್ಯಂ ನ ವಿದ್ಯತೇ |
ಕ್ಷಾತ್ರಮಾಚರತೋ ಮಾರ್ಗಮಪಿ ಬಂಧೌ ತ್ವದಂತರಾ ॥3॥
ಕ್ಷತ್ರಿಯರಿಗೆ ವಿಹಿತವಾದ ಧರ್ಮಮಾರ್ಗದಲ್ಲಿ ನಡೆಯುವವನಿಗೆ ತನ್ನ ಬಂಧು- ಗಳ ವಿಷಯದಲ್ಲಿಯೂ ಕ್ಷಮೆ, ಅನುಕಂಪ, ಕಾರುಣ್ಯ, ಕಾಠಿಣ್ಯ ಇಲ್ಲದಿರುವಿಕೆ ಇತ್ಯಾದಿಗುಣಗಳು ಇರುವುದಿಲ್ಲ. ಹೀಗಿರುವಾಗ ನೀನು ಕ್ಷತ್ರಿಯಕುಲದಲ್ಲಿ ಹುಟ್ಟಿದ್ದ- ರಿಂದ ನಿನ್ನ ಹೃದಯದಲ್ಲಿ ಈ ಗುಣಗಳು ಬರಲು ಹೇಗೆ ಸಾಧ್ಯ?
ಟಿಪ್ಪಣಿ - ಮಾರ್ಗಮಪಿ ಬಂಧೌ ತ್ವದಂತರಾ ಇತ್ಯತ್ರ ತ್ವದಂತರಾ ತ್ವಾಂ ವಿನಾ ॥ `ತ್ವದಂತರಾ' ಎಂದರೆ ನಿನ್ನನ್ನು ಬಿಟ್ಟು ಎಂದರ್ಥ.
ಯದೀಮಾಂ ಭವತೋ ಬುದ್ಧಿಂ ವಿದ್ಯಾಮ ವಯಮೀದೃಶೀಮ್ |
ಶಸ್ತ್ರಂ ನೈವ ಗ್ರಹೀಷ್ಯಾಮೋ ನ ವಧಿಷ್ಯಾಮ ಕಂಚನ ॥4॥

ನಿನಗೆ ಇಂಥ ಬುದ್ಧಿಯು ಹುಟ್ಟುವುದೆಂದು ನಮಗೆ ಮೊದಲೇ ತಿಳಿದಿದ್ದರೆ, ನಾವು ಶಸ್ತ್ರಗಳನ್ನೇ ಹಿಡಿಯುತ್ತಿರಲಿಲ್ಲ. ಯಾರೊಬ್ಬರನ್ನೂ ಕೊಲ್ಲುತ್ತಿರಲಿಲ್ಲ.
ಭೈಕ್ಷ್ಯಮೇವಾಚರಿಷ್ಯಾಮ ಶರೀರಸ್ಯಾವಿಮೋಕ್ಷಣಾತ್ |
ನಚೇದಂ ದಾರುಣಂ ಯುದ್ಧಮಭವಿಷ್ಯನ್ಮಹೀಕ್ಷಿತಾಮ್ ||5||
ನಾವು ಈ ಶರೀರದ ಅಂತ್ಯವಾಗುವವರೆಗೂ ಭಿಕ್ಷೆಯನ್ನೇ ಮಾಡಿಕೊಂಡು ಜೀವನ ನಿರ್ವಹಣೆಯನ್ನು ಮಾಡುತ್ತಿದ್ದೆವು. ಆಗ ರಾಜರಲ್ಲಿ ಇಂಥ ಭಯಂಕರವಾದ ಯುದ್ಧವೇ ನಡೆಯುತ್ತಿರಲಿಲ್ಲ.
ಪ್ರಾಣಸ್ಯಾನ್ನಮಿದಂ ಸರ್ವಮಿತಿ ವೈ ಕವಯೋ ವಿದುಃ |
ಸ್ಥಾವರಂ ಜಂಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಮ್ ||6||
ಪ್ರಾಜ್ಞರು ಈ ಪ್ರಪಂಚವೆಲ್ಲವೂ ಬಲಿಷ್ಠರಿಗೆ ಅನ್ನವೆಂದು ಹೇಳುತ್ತಾರೆ. ಸ್ಥಾವರ ಜಂಗಮಗಳೆಲ್ಲವೂ ಬಲಿಷ್ಠನಾದವನ ಪಾಲನೆಗೆ ಸೇರಿದುದು.
ಆದದಾನಸ್ಯ ಚೇದ್ ರಾಜ್ಯಂ ಯೇ ಕೇಚಿತ್ ಪರಿಪಂಥಿನಃ |
ಹಂತವ್ಯಾಸ್ತ ಇತಿ ಪ್ರಾಜ್ಞಾಃ ಕ್ಷತ್ರಧರ್ಮವಿದೋ ವಿದುಃ ||7||
ಕ್ಷತ್ರಿಯಧರ್ಮವನ್ನು ತಿಳಿದ ಪ್ರಾಜ್ಞರು ಹೀಗೆ ಹೇಳುತ್ತಾರೆ - ರಾಜರು ರಾಜ್ಯ- ವನ್ನು ಸಂಪಾದಿಸಲು ಹೊರಟಾಗ ಯಾರಾದರೂ ಅದನ್ನು ವಿರೋಧಿಸಿದರೆ ಅವರನ್ನು ವಿರೋಧಿಸಿದರೆ ಅವರನ್ನು ಸಂಹರಿಸಬೇಕೆಂದು ಹೇಳುತ್ತಾರೆ.
ತೇ ಸದೋಷಾ ಹತಾಸ್ಮಾಭಿಃ ರಾಜ್ಯಸ್ಯ ಪರಿಪಂಥಿನಃ |
ತಾನ್ ಹತ್ವಾ ಭುಂಕ್ಷ್ವ ಧರ್ಮೇಣ ಯುಧಿಷ್ಠಿರ ಮಹೀಮಿಮಾಮ್ ||8||
ಅಣ್ಣನಾದ ಯುಧಿಷ್ಠಿರನೇ ! ಹೀಗೆ ನಮ್ಮ ರಾಜ್ಯವನ್ನು ನಾವು ಮತ್ತೆ ಪಡೆಯಲು ಯಾರು ನಮಗೆ ಅಡ್ಡಿಯನ್ನುಂಟು ಮಾಡಿದರೋ, ಆ ಅಪರಾಧಿಗಳು ಅಥವಾ ಶತ್ರುಗಳು ನಮ್ಮಿಂದ ಸಂಹೃತರಾಗಿದ್ದಾರೆ. ಧರ್ಮದಿಂದ ಪ್ರಾಪ್ತವಾಗಿರುವ ಈ ಭೂಮಿಯನ್ನು ಅನುಭವಿಸಲೇಬೇಕು.
ಯಥಾ ಹಿ ಪುರುಷಃ ಖಾತ್ವಾ ಕೂಪಮಪ್ರಾಪ್ಯ ಚೋದಕಮ್ |
ಪಂಕದಿಗ್ಧೋ ನಿವರ್ತೇತ ಕರ್ಮೇದಂ ನಸ್ತಥೋಪಮಮ್ ||9||
ಒಬ್ಬ ಮನುಷ್ಯನು ನೀರಿಗಾಗಿ ಪ್ರಯತ್ನಪಟ್ಟು ಬಾವಿಯನ್ನು ತೋಡುತ್ತಾನೆ. ಕೊನೆಗೆ ಅದರಿಂದ ನೀರನ್ನು ಪಡೆಯದೆ ಅದರೊಳಗಿನ ಕೆಸರನ್ನು ಮೈಗೆ ಹಚ್ಚಿಕೊಂಡು ಮೇಲೆದ್ದು ಬರುತ್ತಾನೆ. ನಮ್ಮ ಈಗಿನ ಸ್ಥಿತಿ ಹೀಗಿದೆ.
ಯಥಾರುಹ್ಯ ಮಹಾವೃಕ್ಷಮಪಹೃತ್ಯ ತತೋ ಮಧು |
ಅಪ್ರಾಶ್ಯ ನಿಧನಂ ಗಚ್ಛೇತ್ ಕರ್ಮೇದಂ ನಸ್ತಥೋಪಪಮ್ ||10||
ಒಬ್ಬನು ಶ್ರಮಪಟ್ಟು ದೊಡ್ಡ ಮರವನ್ನೇರುತ್ತಾನೆ. ಅಲ್ಲಿದ್ದ ಜೇನನ್ನು ಸಂಗ್ರಹಿಸಿ -ಕೊಂಡು ಅದನ್ನು ರುಚಿ ನೋಡುವ ಮೊದಲೇ ಮರಣಕ್ಕೀಡಾಗುತ್ತಾನೆ. ಇದರಂತೆ ಈಗಿನ ನಮ್ಮ ಪ್ರಯತ್ನವು ಹಾಸ್ಯಾಸ್ಪದವಾಗಿದೆ.
ಯಥಾ ಮಹಾಂತಮಧ್ವಾನಮಾಶಯಾ ಪುರುಷಃ ಪತನ್ |
ಸ ನಿರಾಶೋ ನಿವರ್ತೇತ ಕರ್ಮೇದಂ ನಸ್ತಥೋಪಮಮ್ ||11||
ದೊಡ್ಡ ನಿಧಿಯು ಸಿಗುವುದೆಂಬ ಆಸೆಯಿಂದ ಸಾವಿರಾರು ಯೋಜನೆಗಳಷ್ಟು ದೂರ ಹೋಗಿ ಅಲ್ಲಿ ಏನೂ ಇಲ್ಲವೆಂದು ತಿಳಿದೊಡನೆಯೇ ನಿರಾಸೆಯಿಂದ ಹಿಂತಿರುಗವವನಂತೆ ನಮ್ಮ ಈಗಿನ ಸ್ಥಿತಿಯಾಗಿದೆ.
ಯಥಾ ಶತ್ರೂನ್ ಘಾತಯಿತ್ವಾ ಪುರುಷಃ ಕುರುಸತ್ತಮ |
ಆತ್ಮಾನಂ ಘಾತಯೇತ್ ಪಶ್ಚಾತ್ ಕರ್ಮೇದಂ ನಸ್ತಥೋಪವಮ್ ||12||
ಕುರುನಂದನನೇ! ಒಬ್ಬನು ಮಹಾಪ್ರಯತ್ನದಿಂದ ಶತ್ರುಗಳನ್ನೆಲ್ಲ ಕೊಂದು, ಕೊನೆಗೆ ತನ್ನನ್ನು ತಾನೇ ಕೊಲೆ ಮಾಡಿಕೊಳ್ಳುವುದಕ್ಕೆ ನಮ್ಮ ಕಾರ್ಯವನ್ನು ಹೋಲಿ- ಸಬಹುದು.
ಯಥಾನ್ನಂ ಕ್ಷುಧಿತೋ ಲಬ್ಧ್ವಾ ನ ಭುಂಜೀತ ಯದೃಚ್ಛಯಾ |
ಕಾಮೀ ಚ ಕಾಮಿನೀಂ ಲಬ್ಧ್ವಾ ಕರ್ಮೇದಂ ನಸ್ತತೋಪವಮ್ ||13||
ಹಸಿದವನು ಅನ್ನವನ್ನು ಕೈಯಲ್ಲಿಟ್ಟುಕೊಂಡು ಉಣ್ಣದಂತೆ, ಕಾಮವುಳ್ಳವನು ಕಾಮಿನಿಯನ್ನು ಪಡೆದು ಅವಳನ್ನು ಅನುಭವಿಸಲಾರದೆ ಇರುವಂತೆ, ನಮ್ಮ ಸ್ಥಿತಿ- ಯಾಗಿದೆ.
ವಯಮೇವಾತ್ರ ಗಾರ್ಹ್ಯಾ ಹಿ ಯದ್ವಯಂ ಮಂದಚೇತಸಃ |
ತ್ವಾಂ ರಾಜನ್ನನುಗಚ್ಛಾಮೋ ಜ್ಯೇಷ್ಠೋಽಯಮಿತಿ ಭಾರತ ||14||
ಧರ್ಮರಾಜನೇ! ನಿಜವಾಗಿ ಹೇಳುವುದಾದರೆ ನಾವೇ ಮಂದಬುದ್ಧಿಯುಳ್ಳ- ವರು. ನಮ್ಮದೇ ದೋಷ ಹೊರತು ನಿನ್ನ ತಪ್ಪಲ್ಲ. ಮಂದಬುದ್ಧಿಯುಳ್ಳ ನಿನ್ನನ್ನು ಅಣ್ಣನೆಂದು ಗೌರವಿಸಿ ಅನುಸರಿಸಿ ನಡೆಯುತ್ತಿದ್ದುದೇ ನಮ್ಮ ತಪ್ಪಾಯಿತು.
ವಯಂ ಹಿ ಬಾಹುಬಲಿನಃ ಕೃತವಿದ್ಯಾ ಮನಸ್ವಿನಃ |
ಕ್ಲೀಬಸ್ಯ ವಾಕ್ಯೇ ತಿಷ್ಠಾಮೋ ಯಥೈವಾಶಕ್ತಯಸ್ತಥಾ ||15||
ನಾವು ಅಸಮಾನವಾದ ತೋಳ್ಬಲವುಳ್ಳವರಾಗಿದ್ದೇವೆ. ಶಸ್ತ್ರ-ಶಾಸ್ತ್ರವಿದ್ಯೆಗಳಲ್ಲಿ ಪಾರಂಗತರಾಗಿದ್ದೇವೆ. ಇಂದ್ರಿಯನಿಗ್ರಹವುಳ್ಳವರಾಗಿದ್ದೇವೆ. ಹೀಗಿದ್ದರೂ ಬಲಹೀನರಾದ ಮನುಷ್ಯರಂತೆ ನಪುಂಸಕನೊಬ್ಬನ ಮಾತಿನಂತೆ ನಡೆದುಕೊಳ್ಳುತ್ತಿದ್ದೇವೆ.
ಅಗತೀನ್ ಕಾಗತೀನಸ್ಮಾನ್ನಷ್ಟಾರ್ಥಾನರ್ಥಸಿದ್ಧಯೇ |
ಕಥಂ ವೈ ನಾನುಪಶ್ಯೇಯುರ್ಜನಾಃ ಪಶ್ಯಂತ ಯಾದೃಶಮ್ ||16||

ನಿರ್ಗತಿಕರನ್ನು ಕಾಪಾಡತಕ್ಕ ನಾವು ಗತಿಯಿಲ್ಲದವರಂತೆ ಕೈಗೆ ಬಂದ ಹಣವನ್ನೆಲ್ಲ ಕಳೆದುಕೊಂಡ ನಿರ್ಗತಿಕರಾದ ಮಾತ್ರಕ್ಕೆ ಪ್ರಜೆಗಳು ಸ್ವಾರ್ಥಸಿದ್ಧಿಗಾಗಿ ಹೇಗೆ ತಾನೇ ನಮ್ಮನ್ನು ಎದುರು ನೋಡದಿರುವರು ?
ಟಿಪ್ಪಣಿ - ಕಥಂ ವೈ ನಾನುಪಶ್ಯೇಯುರ್ಜನಾಃ ಪಶ್ಯತ ಯಾದೃಶಮ್ ಇತ್ಯತ್ರ ಹೇ ಜನಾಃ, ಭವಂತಃ ಅರ್ಥಸಿದ್ಧಯೇ ನಷ್ಟಾರ್ಥಾನಸ್ಮಾನ್ ಕಥಂ  ನಾನು- ಪಶ್ಯೇಯುಃ | ಯಾದೃಶಮರ್ಥಂ ಯೂಯಂ ಪಶ್ಯತ, ತಸ್ಯೈ ಅರ್ಥಸಿದ್ಧಯೇ ಕಥಂ ನಾನುಪಶ್ಯೇಯುರಿತಿ ಪೂರ್ವೇಣಾನ್ವಯಃ ॥ ಜನರು ಅರ್ಥಕ್ಕಾಗಿ ನಮ್ಮನ್ನು ಆಶ್ರಯಿಸುತ್ತಾರೆ. ಒಂದು ವೇಳೆ ನಾವೇ ಅರ್ಥಹೀನರಾದರೆ ಜನರು ನಮ್ಮ ಬಗ್ಗೆ ಏನೆಂದು ಕೊಂಡಾರು? ನಮ್ಮ ದೌರ್ಬಲ್ಯವನ್ನು ಕಂಡು ಅಸಮಾಧಾನವನ್ನು ಹೊಂದುವರು.
ಆಪತ್ಕಾಲೇ ಹಿ ಸನ್ನ್ಯಾಸಃ ಕರ್ತವ್ಯ ಇತಿ ಶಿಷ್ಯತೇ |
ಜರಯಾಭಿಪರೀತೇನ ಶತ್ರುಭಿರ್ವ್ಯಂಸಿತೇನ ವಾ ॥17॥
ಆಪತ್ಕಾಲದಲ್ಲಿ ಮಾತ್ರವೇ ಸನ್ನ್ಯಾಸವನ್ನು ತೆಗೆದುಕೊಳ್ಳಬೇಕು. ಮುಪ್ಪು ಆವರಿಸಿ -ದಾಗ ಸನ್ನ್ಯಾಸವನ್ನು ತೆಗೆದುಕೊಳ್ಳಬಹುದು. ಶತ್ರುಗಳಿಂದ ರಾಜ್ಯ-ಧನ-ಸಂಪತ್ತು- ಗಳನ್ನು ಕಳೆದುಕೊಂಡು ವಂಚಿತನಾದಾಗಲೂ ಸನ್ನ್ಯಾಸವನ್ನು ತೆಗೆದುಕೊಳ್ಳಬಹುದು.
ತಸ್ಮಾದಿಹ ಕೃತಪ್ರಜ್ಞಾಸ್ತ್ಯಾಗಂ ನ ಪರಿಚಕ್ಷತೇ |
ಧರ್ಮವ್ಯತಿಕ್ರಮಂ ಚೈವ ಮನ್ಯಂತೇ ಸೂಕ್ಷ್ಮದರ್ಶಿನಃ ॥18॥
ನಮ್ಮ ಈಗಿನ ಸ್ಥಿತಿಯಲ್ಲಿ ಸನ್ನ್ಯಾಸ ಸ್ವೀಕಾರವನ್ನು ಪ್ರಾಜ್ಞರು ಒಪ್ಪುವುದಿಲ್ಲ. ಅಷ್ಟು ಮಾತ್ರವಲ್ಲ. ಧರ್ಮಸೂಕ್ಷ್ಮವನ್ನು ತಿಳಿದವರು ಹೀಗೆ ಮಾಡುವುದು ಧರ್ಮಾ- ತಿಕ್ರಮವೆಂದೂ ತಿಳಿಯುವರು.
ಕಥಂ ತಸ್ಮಾತ್ ಸಮುತ್ಪನ್ನಸ್ತನ್ನಿಷ್ಠಸ್ತದುಪಾಶ್ರಯಃ |
ತದೇವ ನಿಂದನ್ನಾಸೀತ ಶ್ರದ್ಧಾ ವಾನ್ಯತ್ರ ಗೃಹ್ಯತೇ ॥19॥
ಕ್ಷತ್ರಿಯಧರ್ಮದಲ್ಲಿ ಹುಟ್ಟಿದ ಯಾರು ಕ್ಷತ್ರಿಯಧರ್ಮದಲ್ಲಿಯೇ ನಿರತರಾಗಿ- ರುವರೋ, ಯಾರು ಕ್ಷತ್ರಿಯಧರ್ಮವನ್ನೇ ಆಶ್ರಯಿಸಿ ಜೀವನವನ್ನು ನಿರ್ವಹಿಸುತ್ತಿ- ರುವರೋ ಅವರೇ ಕ್ಷಾತ್ರಧರ್ಮವನ್ನು ಹೇಗೆ ನಿಂದಿಸುವರು? ಇದರಿಂದ ಕ್ಷತ್ರಿಯರು ಯುದ್ಧಧರ್ಮವನ್ನು ವಿಧಿಸಿದ ವಿಧಾತೃವನ್ನೇ ನಿಂದನೆ ಮಾಡಿದಂತಾಗುವುದಲ್ಲವೇ?
ಶ್ರಿಯಾ ವಿಹೀನೈರಧನೈರ್ನಾಸ್ತಿಕೈಃ ಸಂಪ್ರವರ್ತಿತಮ್ |
ವೇದಾವಾದಸ್ಯ ವಿಜ್ಞಾನಂ ಸತ್ಯಾಭಾಸಮಿವಾನೃತಮ್ ॥20॥
ನಿರ್ಧನರು ಮತ್ತು ನಾಸ್ತಿಕರು - ವೇದಗಳ ಅರ್ಥವಾದ ವಾಕ್ಯಗಳಿಂದ ಪ್ರತಿ- ಪಾದಿತವಾದ ವಿಜ್ಞಾನದ ಆಶ್ರಯವನ್ನು ಪಡೆದವರಾಗಿ ಸತ್ಯದಂತೆ ಕಾಣುವ ಮಿಥ್ಯಾ- ಮತವನ್ನು ಪ್ರಚಾರ ಮಾಡುತ್ತಾರೆ. ಅಂಥ ಅರ್ಥವಾದವನ್ನು ಆಧಾರವನ್ನಾಗಿ ಇಟ್ಟುಕೊಂಡು ಕ್ಷತ್ರಿಯನಾದವನು ಸನ್ನ್ಯಾಸವನ್ನು ಸ್ವೀಕರಿಸುವುದು ಖಂಡಿತವಾಗಿ- ಯೂ ಯೋಗ್ಯವಲ್ಲ.
ಶಕ್ಯಂ ತು ಮೌನಮಾಸ್ಥಾಯ ಬಿಭ್ರಾತಾತ್ಮಾನಮಾತ್ಮನಾ |
ಧರ್ಮಚ್ಛದ್ಮ ಸಮಾಸ್ಥಾಯ ಚ್ಯವಿತುಂ ನ ತು ಜೀವಿತುಮ್ ॥21॥
ಸತ್ಯದಂತೆ ತಿಳಿದದ್ದು ಸುಳ್ಳೇ ಹೊರತು ಸತ್ಯವಲ್ಲ. ಸನ್ನ್ಯಾಸವನ್ನು ಹಿಡಿದು ತನ್ನನ್ನು ಮಾತ್ರ ತಾನು ರಕ್ಷಣೆ ಮಾಡಿಕೊಳ್ಳುವ ಮನುಷ್ಯನು ಧರ್ಮವೆಂಬ ನೆಪದಿಂದ ಅಧರ್ಮವನ್ನು ಹಿಡಿದು ತನ್ನನ್ನು ತಾನೇ ಕೊಲ್ಲುವವನೇ ಹೊರತು ಜೀವನದ ಸಾರ್ಥಕ್ಯವನ್ನು ಹೊಂದಲು ಸಾಧ್ಯವಾಗುವುದಿಲ್ಲ.
ಶಕ್ಯಂ ಪುನರರಣ್ಯೇಷು ಸುಖಮೇಕೇನ ಜೀವಿತುಮ್ |
ಅಬಿಭ್ರತಾ ಪುತ್ರಪೌತ್ರಾನ್ ದೇವರ್ಷೀನತಿಥೀನ್ ಪಿತೄನ್ ॥22॥
ಮಕ್ಕಳು - ಮೊಮ್ಮಕ್ಕಳನ್ನು ಪೋಷಿಸಲಾರದೆ, ದೇವರ್ಷಿ ಪಿತೃಗಳನ್ನು, ಅತಿಥಿಗ- ಳನ್ನು ತೃಪ್ತಿಗೊಳಿಸದೆ ಕಾಡಿನಲ್ಲಿ ಒಂಟಿಯಾಗಿದ್ದು ಅರಣ್ಯದಿಂದಲೇ ಸದ್ಗತಿಯನ್ನು ಪಡೆಯುವುದು ಸಾಧ್ಯವೇ ?
ನೇಮೇ ಮೃಗಾಃ ಸ್ವರ್ಗಜಿತೋ ನ ವರಾಹಾ ನ ಪಕ್ಷಿಣಃ |
ಅಥಾನ್ಯೇನ ಪ್ರಕಾರೇಣ ಪುಣ್ಯಮಾಹುರ್ನ ತಾಂಜನಾಃ ॥23॥
ವನವಾಸದಿಂದ ಸ್ವರ್ಗ ದೊರೆಯುವುದಾದರೆ ಕಾಡಿನಲ್ಲಿರುವ ಮೃಗಗಳು, ಪಕ್ಷಿಗಳು, ಹಂದಿಗಳು, ಸ್ವರ್ಗವನ್ನು ಇನ್ನೂ ಏಕೆ ಹೊಂದಿಲ್ಲ? ಅರಣ್ಯವಾಸದಿಂದ ಸ್ವರ್ಗದೊರೆಯುವ ಪಕ್ಷದಲ್ಲಿ ಜನರು ಬೇರೆ ವಿಧದಿಂದ ತಮಗೆ ಪುಣ್ಯಪ್ರಾಪ್ತಿ- ಯುಂಟೆಂದೇ ಹೇಳುತ್ತಿರಲಿಲ್ಲ.
ಯದಿ ಸನ್ನ್ಯಾಸತಃ ಸಿದ್ಧಿಂ ರಾಜನ್ ಕಶ್ಚಿದವಾಪ್ನುಯಾತ್ |
ಪರ್ವತಾಶ್ಚ  ದ್ರುಮಾಶ್ಚೈವ ಕ್ಷಿಪ್ರಂ ಸಿದ್ಧಿಮವಾಪ್ನುಯುಃ ॥24॥
ರಾಜನಾದವನು ಸನ್ನ್ಯಾಸದಿಂದ ಸಿದ್ಧಿ ಹೊಂದುವ ಪಕ್ಷದಲ್ಲಿ ಕಾಡಿನಲ್ಲಿರುವ ವೃಕ್ಷಗಳೂ, ಪರ್ವತಗಳೂ ಕೂಡಲೇ ಸಿದ್ಧಿಯನ್ನು ಹೊಂದಬೇಕಲ್ಲವೇ?
ಏತೇ ಹಿ ನಿತ್ಯಸನ್ನ್ಯಾಸಾ ದೃಶ್ಯಂತೇ ನಿರುಪದ್ರವಾಃ |
ಅಪರಿಗ್ರಹವಂತಶ್ಚ ಸತತಂ ಬ್ರಹ್ಮಚಾರಿಣಃ ॥25॥
ಪರ್ವತಗಳಿಗೆ ವೃಕ್ಷಗಳಿಗೆ ಸ್ತ್ರೀಸಂಗವಿಲ್ಲ. ದೇಹಯಾತ್ರೆಗೆ ಬೇಕಾದ ವಸ್ತು- ವೊಂದನ್ನೂ ಅವು ಸಂಗ್ರಹಿಸಿಡತಕ್ಕವುಗಳಲ್ಲ. ಮತ್ತೊಬ್ಬರಿಗೆ ಉಪದ್ರವ ಕೊಡು- ವವು ಅಲ್ಲ. ಅವು ನಿತ್ಯಸನ್ನ್ಯಾಸಿಗಳಂತೆ ಕಾಣುತ್ತಿದೆಯಲ್ಲವೇ?
ಅಥ ಚೇದಾತ್ಮಭಾಗ್ಯೇಷು ನಾನ್ಯೇಷಾಂ ಸಿದ್ಧಿಮಶ್ನುತೇ |
ತಸ್ಮಾತ್ ಕರ್ಮೈವ ಕರ್ತವ್ಯಂ ನಾಸ್ತಿ ಸಿದ್ಧಿರಕರ್ಮಣಃ ॥26॥
ಮತ್ತೊಬ್ಬರ ಸಿದ್ಧಿಯಿಂದ ನಮಗೇನೂ ಫಲವಿಲ್ಲವೆಂಬುದಾದರೆ ಪ್ರತಿ- ಯೊಬ್ಬರೂ  ತಮ್ಮ ತಮ್ಮ ಕರ್ಮಗಳಿಂದಲೇ ಸಿದ್ಧಿಯನ್ನು ಪಡೆಯಬೇಕು. ಅದಕ್ಕಾ- ದರೂ ಕರ್ಮವನ್ನು ಮಾಡಿಯೇ ತೀರಬೇಕು. ಕರ್ಮವಿಲ್ಲದೆ ಸಿದ್ಧಿಯಿಲ್ಲ.

ಔದಕಾಃ ಸೃಷ್ಟಯಶ್ಚೈವ ಜಂತವಃ ಸಿದ್ಧಿಮಾಪ್ನುಯುಃ |
ತೇಷಾಮಾತ್ಮೈವ ಭರ್ತವ್ಯೋ ನಾನ್ಯಃ ಕಶ್ಚನ ವಿದ್ಯತೇ ॥27॥
ಕರ್ಮವಿಲ್ಲದೆ ಕೇವಲ ಆತ್ಮವನ್ನು ರಕ್ಷಿಸುವವನಿಗೆ ಸಿದ್ಧಿ ಆಗುತ್ತದೆ ಎಂದು ಹೇಳಿದ ಪಕ್ಷದಲ್ಲಿ, ಜಲದಲ್ಲಿರುವ ಮೀನು ಮೊದಲಾದ ಜಂತುಗಳೂ, ಸ್ಥಾವರಗಳೂ ಸಿದ್ಧಿಯನ್ನು ಹೊಂದಬೇಕಾಗುತ್ತದೆ. ಅವುಗಳಿಗೂ ರಕ್ಷಿಸಬೇಕಾದುದು ತಮ್ಮ ಆತ್ಮವೊಂದೇ ಹೊರತು ಬೇರೆ ಅಲ್ಲ.
ಅವೇಕ್ಷಸ್ವ ಯಥಾ ಸ್ವೈಃ ಸ್ವೈಃ ಕರ್ಮಭಿರ್ವ್ಯಾಪೃತಂ ಜಗತ್|
ತಸ್ಮಾತ್ ಕರ್ಮೈವ ಕರ್ತವ್ಯಂ ನಾಸ್ತಿ ಸಿದ್ಧಿರಕರ್ಮಣಃ ॥28॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದಶಮೋಽಧ್ಯಾಯಃ ॥
ಪ್ರಾಣಿಗಳೆಲ್ಲವೂ ತಮ್ಮ ತಮ್ಮ ಕರ್ಮಗಳಲ್ಲಿ ನಿರತವಾಗಿರುವುವು. ಆದ್ದರಿಂದ ಸ್ವಕರ್ಮವು ಎಲ್ಲರಿಗೂ ಕರ್ತವ್ಯವೇ ಆಗಿದೆ. ಕರ್ಮವನ್ನು ಬಿಟ್ಟವನಿಗೆ ಎಂದಿಗೂ ಸಿದ್ಧಿಯಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 10ನೆಯ ಅಧ್ಯಾಯವು ಮುಗಿಯಿತು.
*****

11. ಹನ್ನೊಂದನೆಯ ಅಧ್ಯಾಯ
ಪಕ್ಷಿರೂಪಿಯಾದ ಇಂದ್ರನಿಗೆ ಮತ್ತು ಪಕ್ಷಿರೂಪಿಯಾದ ಇಂದ್ರನಿಗೂ ಋಷಿಕುಮಾರರಿಗೂ ನಡೆದ ಸಂಭಾಷಣೆಯನ್ನು ಉದಾಹರಿಸಿ ಅರ್ಜುನನು ಯುಧಿಷ್ಠಿರನನ್ನು ಕುರಿತು ಗೃಹಸ್ಥ ಧರ್ಮವೇ ಶ್ರೇಷ್ಠವೆಂದು ನಿರೂಪಿಸಿದುದು.
ಅರ್ಜುನಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ತಾಪಸೈಃ ಸಹ ಸಂವಾದಂ ಶಕ್ರಸ್ಯ ಭರತರ್ಷಭ ॥1॥
ಅರ್ಜುನನು ಭರತರ್ಷಭನೇ ! ಕರ್ಮವು ಮೇಲೋ, ಸನ್ಯಾಸವು ಮೇಲೋ ಎಂಬ ವಿಚಾರದಲ್ಲಿ ಇಂದ್ರನಿಗೂ ಋಷಿಗಳಿಗೂ ನಡೆದ ಸಂವಾದ ರೂಪವಾದ ಪುರಾತನಕಥೆಯೊಂದನ್ನು ಉದಾಹರಿಸಿದರು. ಅದನ್ನು ಹೇಳುವೆನು ಕೇಳು.
ಕೇಚಿದ್ ಗೃಹಾನ್ ಪರಿತ್ಯಜ್ಯ ವನಮಭ್ಯಾಗಮನ್ ದ್ವಿಜಾಃ |
ಅಜಾತಶ್ಮಶ್ರವೋ ಮಂದಾಃ ಕುಲೇ ಜಾತಾಃ ಪ್ರವವ್ರಜುಃ ॥2॥
ಸತ್ಕುಲದಲ್ಲಿ ಹುಟ್ಟಿ, ಭಾಗ್ಯವಂತರಾಗಿ, ಧರ್ಮವನ್ನು ನಡೆಸುವ ಶಕ್ತಿಯುಳ್ಳ ಕೆಲವು ಬ್ರಾಹ್ಮಣಬಾಲಕರು, ಮನೆಯನ್ನು ತೊರೆದು ಕಾಡಿಗೆ ಹೊರಟರು. ವಿವೇಚನೆ ಸಾಲದ ಅವರು ಮೀಸೆಮೊಳೆಯುವ ಪ್ರಾಯಕ್ಕೆ ಮೊದಲೇ ಸನ್ಯಾಸಿಗಳಾಗ- ಬೇಕೆಂದು ನಿರ್ಧರಿಸಿದರು.
ಧರ್ಮೋಽಯಮಿತಿ ಮನ್ವಾನಾ ಬ್ರಹ್ಮಚರ್ಯೇ ವ್ಯವಸ್ಥಿತಾಃ |
ತ್ಯಕ್ತ್ವಾ ಭ್ರಾತೄನ್ ಪಿತೄಂಶ್ಚೈವ ತಾನಿಂದ್ರೋಽನ್ವಕೃಪಾಯತ ॥3॥
ಸನ್ಯಾಸವೇ ಉತ್ತಮ ಧರ್ಮವೆಂದು ಕಾಡಿನಲ್ಲಿ ನಿಶ್ಚಿಂತವಾಗಿರಬಹುದೆಂದು ಆ ಬ್ರಹ್ಮಚಾರಿಗಳು, ತಂದೆತಾಯಂದಿರನ್ನು ಸಹೋದರರನ್ನು ತೊರೆದು ಅರಣ್ಯಕ್ಕೆ ಹೋದರು.
ತಾನಾಬಭಾಷೇ ಭಗವಾನ್ ಪಕ್ಷೀ ಭೂತ್ವಾ ಹಿರಣ್ಮಯಃ |
ಸುದುಷ್ಕರಂ ಮನುಷ್ಯೈಶ್ಚ ಯತ್ ಕೃತಂ ವಿಘಸಾಶಿಭಿಃ ॥4॥
ಪುಣ್ಯಂ ಚ ಬತ ಕರ್ಮೈಷಾಂ ಪ್ರಶಸ್ತಂ ಚೈವ ಜೀವಿತಮ್ |
ಸಂಸಿದ್ಧಾಸ್ತೇ ಗತಿಂ ಮುಖ್ಯಾಂ ಪ್ರಾಪ್ತಾ ಧರ್ಮಪರಾಯಣಾಃ ॥5॥
ಇವರಲ್ಲಿ ಇಂದ್ರನಿಗೆ ಕನಿಕರವು ಹುಟ್ಟಿತು. ಅವನು ಸುವರ್ಣಮಯವಾದ ಒಂದು ಹಕ್ಕಿಯ ರೂಪವನ್ನು ಧರಿಸಿ ಬ್ರಾಹ್ಮಣವಟುಗಳ ಸಮೀಪದಲ್ಲಿ ಬಂದು ಹೀಗೆಂದನು.
ಯಜ್ಞದ ಶೇಷವನ್ನು ಭುಂಜಿಸುವವರ ಪುಣ್ಯಕ್ಕೆ ಸಮಾನವಾದ ಪುಣ್ಯವನ್ನು ಬೇರೆ ಯಾರೂ ಯಾವ ವಿಧದಿಂದಲೂ ಸಂಪಾದಿಸಲಾರರು. ಅವರ ಕರ್ಮವು ಜೀವನಕ್ರಮವು ಅತ್ಯಂತ ಪ್ರಶಸ್ತವೂ ಆಗಿದೆ. ಅವರು ಬಯಸಿದ ಸಿದ್ಧಿಯನ್ನು ಪಡೆಯುವವರು. ಧರ್ಮವನ್ನು ಪ್ರಧಾನವಾಗಿ ನಂಬಿದವರೇ ಉತ್ತಮ ಗತಿಯನ್ನು ಹೊಂದುವರು ಎಂದನು.
ಋಷಯಃ
ಅಹೋ ಬತಾಯಂ ಶಕುನಿರ್ವಿಘಸಾಶಾನ್ ಪ್ರಶಂಸತಿ |
ಅಸ್ಮಾನ್ನೂನಮಯಂ ಶಾಸ್ತಿ ವಯಂ ಚ ವಿಘಸಾಶಿನಃ ॥6॥
ಹಕ್ಕಿಯ ಈ ಮಾತಿನ ನಿಜ ಅರ್ಥವನ್ನು ತಿಳಿಯದ ಆ ಬ್ರಹ್ಮಚಾರಿಗಳು ಹಕ್ಕಿಯು ತಮ್ಮನ್ನೇ ಪ್ರಶಂಸೆ ಮಾಡುತ್ತಿದೆ ಎಂದು ಸಂತೋಷಗೊಂಡರು. (ವಿಘಸವೆಂದರೆ ಹುಲ್ಲು, ಗೆಡ್ಡೆ, ಎಲೆ, ಹಣ್ಣು, ಮುಂತಾದ ವನ ಪದಾರ್ಥಗಳು) ತಮ್ಮನ್ನು ತಾವೇ ಆಹಾ ಸಂತೋಷವು! ವಿಘಸಭೋಜಿಗಳಾದ ನಮ್ಮನ್ನು ಈ ಪಕ್ಷಿಯು ಹೊಗಳುತ್ತಿದೆ. ಕಾಡಿನಲ್ಲಿ ಅಲೆಯುವ ನಮ್ಮನ್ನು ಕುರಿತೇ ಹೇಳುತ್ತಿದೆ. ನಾವು ಇನ್ನು ಮುಂದೆ ವಿಘಸವನ್ನು ಭುಂಜಿಸಬೇಕೆಂದು ಅನುಶಾಸನ ಮಾಡುತ್ತಿದೆ ಎಂದು ಸಂತೋಷದಿಂದ ಮಾತಾಡಿಕೊಳ್ಳುತ್ತಿದ್ದರು.
ಶಕುನಿಃ
ನಾಹಂ ಯುಷ್ಮಾನ್ ಪ್ರಶಂಸಾಮಿ ಪಂಕದಿಗ್ಧಾನ್ ರಜಸ್ವಲಾನ್ |
ಉಚ್ಛಿಷ್ಟಭೋಜಿನೋ ಮಂದಾನನ್ಯೇ ವೈ ವಿಘಸಾಶಿನಃ ॥7॥

ಆಗ ಪಕ್ಷಿಯು ಅವರನ್ನು ಕುರಿತು ಹೀಗೆಂದಿತು. ಕಾಡಿನಲ್ಲಿ ತಿರುಗಿ ಕಾಡಿನ ಧೂಳನ್ನು ಮೈಗೆ ಅಂಟಿಸಿಕೊಂಡು ಒಳಗೂ ಹೊರಗೂ ಕಶ್ಮಲಯುಕ್ತರಾಗಿ ಎಂಜಲನ್ನು ತಿನ್ನುತ್ತಿರುವ ಬುದ್ಧಿಹೀನರಾದ ನಿಮ್ಮಂತಹವರನ್ನು ನಾನು ಹೊಗಳಿಲ್ಲ. ವಿಘಸವನ್ನು ಭುಂಜಿಸುವವರೆಂದರೆ ಅವರೇ ಬೇರೆ. ನೀವಲ್ಲ ಎಂದಿತು.
ಋಷಯಃ
ಇದಂ ಶ್ರೇಯಃ ಪರಮಿತಿ ವಯಮೇವಾಭ್ಯುಪಾಸ್ಮಹೇ |
ಶಕುನೇ ಬ್ರೂಹಿ ಯಚ್ಛ್ರೇಯೋ ಭೃಶಂ ತೇ ಶ್ರದ್ದಧಾಮಹೇ ॥8॥
ಋಷಿಗಳು ಪಕ್ಷಿರಾಜ ! ನಾವು ವನವಾಸವನ್ನೇ ಉತ್ತಮ ಮಾರ್ಗವೆಂದು ತಿಳಿದಿದ್ದೇವೆ. ನಮ್ಮ ಶ್ರೇಯಸ್ಸಿಗೆ ಉತ್ತಮ ದಾರಿಯನ್ನು ತಿಳಿಸು. ನಿನ್ನನ್ನು ನಂಬಿ ನಿನ್ನ ಮಾತಿನಂತೆ ನಡೆಯುವೆವು.
ಶಕುನಿಃ
ಯದಿ ಮಾಂ ನಾಭಿಶಂಕಧ್ವಂ ವಿಭಜ್ಯಾತ್ಮಾನಮಾತ್ಮನಾ |
ತತೋಽಹಂ ವಃ ಪ್ರವಕ್ಷ್ಯಾಮಿ ಯಾಥಾತಥ್ಯಂ ಹಿತಂ ವಚಃ ॥9॥
ಪಕ್ಷಿ ಬ್ರಹ್ಮಚಾರಿಗಳೇ ! ನೀವು ಮನಸ್ಸಿನಲ್ಲಿ ನನ್ನ ಬಗ್ಗೆ ಸಂದೇಹವನ್ನು ತೊರೆದರೆ ನಿಮ್ಮ ಶ್ರೇಯಸ್ಸು ಯಾವುದರಿಂದ ಲಭ್ಯವಾಗುತ್ತದೆಂಬುದನ್ನು ಹೇಳು- ತ್ತೇನೆ. ಈ ಎಲ್ಲ ವಿಷಯಗಳನ್ನು ಮನಸ್ಸಿನಲ್ಲಿಯೂ ತರ್ಕಿಸಿ ವಿಭಜಿಸಿ ನಿಮಗೆ ಹಿತವಾದ ಮಾತನ್ನು ಹೇಳುವೆನು.
ಋಷಯಃ
ಶೃಣುಮಸ್ತೇ ವಚಸ್ತಾತ ಪಂಥಾನೋ ವಿದಿತಾಸ್ತವ |
ನಿಯೋಗೇ ಚೈವ ಧರ್ಮಾತ್ಮನ್ ಸ್ಥಾತುಮಿಚ್ಛಾಮ ಶಾಧಿ ನಃ ॥10॥
ಋಷಿಗಳು ಧರ್ಮಾತ್ಮನೇ! ನಿನ್ನ ಮಾತನ್ನು ನಾವು ನಂಬುವೆವು. ನೀನು ಹೇಳಿದಂತೆ ನಡೆಯುವೆವು. ಶ್ರೇಯಸ್ಸಿನ ಮಾರ್ಗಗಳು ಅನೇಕ ಇವೆ. ಅವುಗಳನ್ನೆಲ್ಲ ಚೆನ್ನಾಗಿ ತಿಳಿದ ನೀನು ನಮ್ಮನ್ನು ಕುರಿತು ಉಪದೇಶಿಸು.
ಶಕುನಿಃ
ಚತುಷ್ಪದಾಂ ಗೌಃ ಪ್ರವರಾ ಲೋಹಾನಾಂ ಕಾಂಚನಂ ವರಮ್ |
ಶಬ್ದಾನಾಂ ಪ್ರವರೋ ಮಂತ್ರೋ ಬ್ರಾಹ್ಮಣೋ ದ್ವಿಪದಾಂ ವರಃ ॥11॥
ಪಕ್ಷಿ ನಾಕು ಕಾಲುಗಳಿರುವ ಪ್ರಾಣಿಗಳಲ್ಲಿ ಹಸುವು ಶ್ರೇಷ್ಠವಾದದ್ದು. ಲೋಹ- ಗಳಲ್ಲಿ ಬಂಗಾರವು ಉತ್ತಮವಾದದ್ದು. ಶಬ್ದಗಳಲ್ಲಿ ವೇದಮಂತ್ರವು, ದ್ವಿಪಾದಗಳಲ್ಲಿ ಬ್ರಾಹ್ಮಣನು ಶ್ರೇಷ್ಠನು.
ಮಂತ್ರೋಽಯಂ ಜಾತಕರ್ಮಾದಿ ಬ್ರಾಹ್ಮಣಸ್ಯ ವಿಧೀಯತೇ |
ಜೀವತೋಽಪಿ ಯಥಾಕಾಲಂ ಶ್ಮಶಾನನಿಧನಾದಿಭಿಃ ॥12॥
ಬ್ರಾಹ್ಮಣನಿಗೆ ಮಂತ್ರಪೂರ್ವಕವಾದ ಜಾತಕರ್ಮಾದಿ ಸಂಸ್ಕಾರಗಳು ವಿಹಿತ- ವಾಗಿವೆ. ಅವನು ಎಲ್ಲಿಯವರೆಗೆ ಜೀವಿಸಿರುವನೋ ಅಲ್ಲಿಯವರೆಗೂ ಆಯಾ ಸಮಯದಲ್ಲಿ ಉಪನಯನ, ವಿವಾಹಾದಿ ಸಂಸ್ಕಾರಗಳು ಮತ್ತು ಮರಣಾನಂತರವೂ ಸ್ಮಶಾನದಲ್ಲಿ ಅಂತ್ಯಸಂಸ್ಕಾರಗಳು ವಿಹಿತವಾಗಿವೆ.
ಕರ್ಮಾಣಿ ವೈದಿಕಾನ್ಯಸ್ಯ ಸ್ವರ್ಗ್ಯಃ ಪಂಥಾಸ್ತ್ವನುತ್ತಮಃ |
ಅಥ ಸರ್ವಾಣಿ ಕರ್ಮಾಣಿ ಮಂತ್ರಸಿದ್ಧಾನಿ ಚಕ್ಷತೇ ॥13॥
ಆಮ್ನಾಯದೃಢವಾದೀನಿ ತಥಾ ಸಿದ್ಧಿರಿಹೇಷ್ಯತೇ |
ಮಾಸಾರ್ಧಮಾಸಾ ಋತವ ಆದಿತ್ಯಶಶಿತಾರಕಮ್ ॥14॥
ಈಹಂತೇ ಸರ್ವಭೂತಾನಿ ತದಿದಂ ಕರ್ಮಸಂಜ್ಞಿತಮ್ |
ಸಿದ್ಧಿಕ್ಷೇತ್ರಮಿದಂ ಪುಣ್ಯಮಯಮೇವಾಶ್ರಮೋ ಮಹಾನ್ ॥15॥
ಬ್ರಾಹ್ಮಣನಿಗೆ ವೇದೋಕ್ತಕರ್ಮಗಳೇ ಸ್ವರ್ಗಾದಿಗಳನ್ನು ಪಡೆಯಲು ಅನು- ಕೂಲವಾದ ಮಾರ್ಗಗಳು. ಕರ್ಮಮಾರ್ಗವೇ ಅವನಿಗೆ ಉತ್ತಮ ಮಾರ್ಗವು. ಕರ್ಮಗಳಿಂದಲೇ ಮಂತ್ರಗಳ ಸಿದ್ಧಿಯೆಂದು ವೇದವಾಕ್ಯಗಳು ಸ್ಪಷ್ಟಪಡಿಸುತ್ತವೆ. ಈ ಕರ್ಮಮಾರ್ಗದಲ್ಲಿ ಪಕ್ಷ, ಮಾಸ, ಋತು ಮೊದಲಾದ ಅಭಿಮಾನಿ ದೇವತೆಗಳನ್ನು ಪುರಸ್ಕರಿಸಿಕೊಂಡು ಚಂದ್ರಮಂಡಲದ ಮೂಲಕ ಪಿತೃಲೋಕಪದವಿಯನ್ನು, ಸೂರ್ಯಮಂಡಲದ ಮೂಲಕ ದೇವಲೋಕಪದವಿಯನ್ನು ಹೊಂದುತ್ತಾರೆ. ಸಂಸಾರಬಂಧದಿಂದ ಬಿಡುಗಡೆಗೊಂಡು ಪರಮಾತ್ಮನ ಸನಿಹಕ್ಕೆ ತೆರಳಲು ಸಾಧನಮಾರ್ಗಗಳಾಗಿವೆ. ಈ ಮೂರು ಬಗೆಯ ಸಿದ್ಧಿಗಳು ಕರ್ಮದಿಂದಲೇ ಉಂಟಾಗುವವು. ಪ್ರಾಣಿಗಳೂ ಕೂಡ ಕರ್ಮದ ಫಲವನ್ನೇ ಉಣ್ಣುವವು. ಕರ್ಮಸಿದ್ಧಾಂತವನ್ನು ಒಪ್ಪಿದವನಿಗೆ ಕರ್ಮವೇ ಸಮಸ್ತಸಿದ್ಧಿಗಳಿಗೂ ಸಾಧನ. ಪುಣ್ಯಕ್ಷೇತ್ರವೆನಿಸುವುದು. ಕರ್ಮಮಾರ್ಗವನ್ನು ಅನುಸರಿಸುವ ಆಶ್ರಯವೇ ದೊಡ್ಡ ಆಶ್ರಮವು
ಅಥ ಯೇ ಕರ್ಮ ನಿಂದಂತೋ ಮನುಷ್ಯಾಃ ಕಾಪಥಂ ಗತಾಃ |
ಮೂಢಾನಾಮರ್ಥಹೀನಾನಾಂ ತೇಷಾಮೇನಸ್ತು ವಿದ್ಯತೇ ॥16॥
ಈ ಕರ್ಮಮಾರ್ಗವನ್ನು ನಿಂದಿಸಿ ಬೇರೆ ಮಾರ್ಗಕ್ಕೆ ಹೋಗುವ ಮೂಢರು ಪುರುಷಾರ್ಥಗಳಿಂದ ಹೀನರಾಗಿ ಪಾಪಿಗಳಾಗುತ್ತಾರೆ.
ದೇವವಂಶಾನ್ ಪಿತೃವಂಶಾನ್ ಬ್ರಹ್ಮವಂಶಾಂಶ್ಚ ಶಾಶ್ವತಾನ್ |
ಸಂತ್ಯಜ್ಯ ಮೂಢಾ ವರ್ತಂತೇ ತತೋ ಯಾಂತ್ಯಶ್ರುತೀಪಥಮ್ ॥17॥
ವೇದದಲ್ಲಿ ತಿಳಿಸಿದ ಕರ್ಮಗಳ ಮೂಲಕ ಬ್ರಾಹ್ಮಣರು ದೇವರ್ಷಿ ಪಿತೃಗಳನ್ನು ಆರಾಧಿಸಬೇಕು. ಆದರೆ ಮೂಢರಾದವರು ಯಜ್ಞ-ಯಾಗಗಳಿಂದ ದೇವತೆಗಳನ್ನು, ಶ್ರಾದ್ಧ-ತರ್ಪಣಾದಿಗಳಿಂದ ಪಿತೃಗಳನ್ನು, ಸ್ವಾಧ್ಯಾಯ-ಬ್ರಹ್ಮಯಜ್ಞಗಳಿಂದ ಋಷಿ- ಗಳನ್ನು ಆರಾಧಿಸುವುದನ್ನು ಬಿಟ್ಟು ವೇದವಿರುದ್ಧವಾದ ಮಾರ್ಗವನ್ನು ಆಶ್ರಯಿಸು- ತ್ತಾರೆ.

ಏತದ್ ವ್ರೋಽಸ್ತು ತಪೋ ಯುಕ್ತಂ ದದಾಮೀತ್ಯೃಷಿಚೋದಿತಮ್ |
ತಸ್ಮಾತ್ ತತ್ತದ್-ವ್ಯವಸ್ಥಾನಂ ತಪಸ್ವಿ ತಪ ಉಚ್ಯತೇ ॥18॥
ವೇದಗಳಲ್ಲಿ ಹೇಳಲ್ಪಟ್ಟ ಕರ್ಮಗಳೇ ತಪಸ್ಸು ಎಂಬುದಾಗಿ ಕರೆಯಿಸಿಕೊಳ್ಳುತ್ತವೆ. ಆದ್ದರಿಂದ ನಿಷ್ಠೆಯಿಂದ ಮಾಡಲ್ಪಡುವ ಕರ್ಮಗಳೇ ತಪಸ್ವಿಗಳ ತಪಸ್ಸು ಎಂದು ಹೇಳಲ್ಪಟ್ಟಿದೆ.
ವಿವರಣೆ - ಕಾಡಿಗೆ ಹೋಗಿ ಧ್ಯಾನ ಮಾಡುವುದಷ್ಟೇ ತಪಸ್ಸಲ್ಲ. ಮನೆಯಲ್ಲಿ ಕುಳಿತು ಶ್ರದ್ಧೆಯಿಂದ ವೇದೋಕ್ತಕರ್ಮಗಳನ್ನು ಆಚರಣೆ ಮಾಡಿದರೂ ಕೂಡ ತಪಸ್ಸು ಎಂಬುದಾಗಿ ಕರೆಸಿಕೊಳ್ಳುತ್ತದೆ ಎಂಬುದು ಭಾವ.
ದೇವವಂಶಾನ್ ಪಿತೃವಂಶಾನ್ ಬ್ರಹ್ಮವಂಶಾಂಶ್ಚ ಶಾಶ್ವತಾನ್ |
ಸಂವಿಭಜ್ಯ ಗುರೋಶ್ಚರ್ಯಾಂ ತದ್ ವೈ ದುಷ್ಕರಮುಚ್ಯತೇ ॥19॥
ಆ ದಿನದ ಯಾವ ಸಮಯದಲ್ಲಿ ಏನನ್ನು ಅನುಷ್ಠಾನ ಮಾಡಬೇಕೆಂಬುದನ್ನು ವಿಚಾರ ಮಾಡಿ ಇಟ್ಟುಕೊಳ್ಳಬೇಕು. ಯಜ್ಞಗಳ ಮೂಲಕ ದೇವತೆಗಳನ್ನು ಆರಾಧನೆ ಮಾಡಬೇಕು. ಸ್ವಾಧ್ಯಾಯದ ಮೂಲಕ ಋಷಿಗಳನ್ನು ಆರಾಧನೆ ಮಾಡಬೇಕು. ಶ್ರಾದ್ಧ ತರ್ಪಣಾದಿಗಳ ಮೂಲಕ ಪಿತೃ ದೇವತೆಗಳನ್ನು ಆರಾಧನೆ ಮಾಡಬೇಕು. ಮತ್ತು ದುಷ್ಕರವಾದ ಗುರುಶುಶ್ರೂಷೆಯನ್ನು ಮಾಡಬೇಕು. ಇದರಿಂದ ಮಹಾ- ಫಲವು ದೊರಕುತ್ತದೆ.
ದೇವಾ ವೈ ದುಷ್ಕರಂ ಕೃತ್ವಾ ವಿಭೂತಿಂ ಪರಮಾಂ ಗತಾಃ |
ತಸ್ಮಾದ್ ಗಾರ್ಹಸ್ಥ್ಯಮುದ್ವೋಢುಂ ದುಷ್ಕರಂ ಪ್ರಬ್ರವೀಮಿ ವಃ ॥20॥
ದೇವತೆಗಳು ಅತ್ಯಂತ ದಕ್ಷಿಣಸಾಧ್ಯವಾದ ವ್ರತಗಳನ್ನು ಅನುಷ್ಠಾನವನ್ನು ಮಾಡಿ- ರುವರು ಅದರ ಫಲವಾಗಿಯೇ ಶ್ರೇಷ್ಠವಾದ ಸ್ಥಾನಮಾನಗಳನ್ನು ಪಡೆದುಕೊಂಡಿ- ರುವರು. ಆ ದೇವತೆಗಳೆಲ್ಲರೂ ಗಾರ್ಹಸ್ಥ್ಯಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಿರು- ವರು. ಆದ್ದರಿಂದ ಅಂತ ಶ್ರೇಷ್ಠವಾದ ಗೃಹಸ್ಥಧರ್ಮವನ್ನು ತಮಗೆ ತಿಳಿಸುತ್ತಿದ್ದೇನೆ.
ತಪಃ ಶ್ರೇಷ್ಠಂ ಪ್ರಜಾನಾಂ ಹಿ ಮೂಲಮೇತನ್ನ ಸಂಶಯಃ |
ಕುಟುಂಬವಿಧಿನಾನೇನ ಯಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥21॥
ವೇದದಲ್ಲಿ ಹೇಳಲ್ಪಟ್ಟ ಈ ಗೃಹಸ್ಥ ಧರ್ಮದ ಆಚರಣೆಯೇ ಶ್ರೇಷ್ಠ ತಪಸ್ಸಾಗಿದೆ. ಈ ಧರ್ಮವು ಹಿತಸಾಧನೆಗೆ ಮೂಲ ಕಾರಣವಾಗಿದೆ. ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಕುಟುಂಬವನ್ನು ರಕ್ಷಣೆ ಮಾಡಬೇಕು. ಈ ಗೃಹಸ್ಥಾಶ್ರಮದಲ್ಲಿ ಈ ಗೃಹಸ್ಥಾಶ್ರಮವನ್ನು ಆಶ್ರಯಿಸಿಕೊಂಡು ಉಳಿದ ಮೂರು ಆಶ್ರಮಗಳು ಇರುತ್ತವೆ.
ಏತದ್ ವಿದುಸ್ತಪೋ ವಿಪ್ರಾ ದ್ವಂದ್ವಾತೀತಾ ವಿಮತ್ಸರಾಃ |
ತಸ್ಮಾದ್ ವ್ರತಂ ಮಧ್ಯಮಂ ಚ ಲೋಕೇಷು ತಪ ಉಚ್ಯತೇ ॥22॥
ಯಾವ ವಿಪ್ರರು ಸುಖದುಃಖಗಳೆಂಬ ದ್ವಂದ್ವಗಳಿಂದ ಅತೀತರಾಗಿದ್ದಾರೆ. ಅಸೂಯೆಗಳಿಂದ ಸ್ನೇಹಿತರಾಗಿದ್ದಾರೊ, ಅವರು ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಹೇಳುತ್ತಾರೆ. ಆದ್ದರಿಂದ ಈ ಗೃಹಸ್ಥಾಶ್ರಮವ್ರತವು ಲೋಕದಲ್ಲಿ ತಪಸ್ಸೆಂದು ಪ್ರಸಿದ್ಧವಾಗಿದೆ.
ದುರಾಧರ್ಷಂ ಪದಂ ಚೈವ ಗಚ್ಛಂತಿ ವಿಘಸಾಶಿನಃ |
ಸಾಯಂಪ್ರಾತರ್ವಿಭಜ್ಯಾನ್ನಂ ಸ್ವಕುಟುಂಬೇ ಯಥಾವಿಧಿ ॥23॥
ದತ್ವಾತಿಥಿಭ್ಯೋ ದೇವೇಭ್ಯಃ ಪಿತೃಭ್ಯಃ ಸ್ವಜನಸ್ಯ ಚ |
ಅವಶಿಷ್ಟಾನಿ ಯೇಽಶ್ನಂತಿ ತಾನಾಹುರ್ವಿಘಸಾಶಿನಃ ॥24॥
ಯಜ್ಞಶೇಷದ ಭೋಜನವನ್ನು ಉಣ್ಣುವವರು ಸಾಮಾನ್ಯರಿಂದ ಜಯಿಸಲು ಅಸಾಧ್ಯವಾದ ಪುಣ್ಯಲೋಕಗಳಿಗೆ ಹೋಗುತ್ತಾರೆ. ಯಾರು ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ತಮ್ಮ ತಮ್ಮ ಸಂಸಾರದಲ್ಲಿ ಯಥಾವಿಧಿಯಾಗಿ ಅನ್ನವನ್ನು ವಿಭಾಗಿಸಿ ದೇವತೆಗಳಿಗೆ-ಪಿತೃಗಳಿಗೆ ನಿವೇದನೆ ಮಾಡಿ, ಅತಿಥಿಗಳಿಗೂ ಮತ್ತು ಬಂಧುವರ್ಗದವರಿಗೂ ಭೋಜನ ಮಾಡಿಸಿ ಅನ್ನಶೇಷವನ್ನು ತಿನ್ನುತ್ತಾರೋ, ಅವರು ವಿಘಸಾಶಿಗಳೆಂದು ಕರೆಯಲ್ಪಡುತ್ತಾರೆ.
ತಸ್ಮಾತ್ ಸ್ವಧರ್ಮಮಾಸ್ಥಾಯ ಸುವ್ರತಾಃ ಸತ್ಯವಾದಿನಃ |
ಲೋಕಸ್ಯ ಗುರವೋ ಭೂತ್ವಾ ತೇ ಭವಂತ್ಯನುಪಸ್ಕೃತಾಃ ॥25॥
ಆದ್ದರಿಂದ ವಿಘಸಾಶಿಗಳು ಸ್ವಧರ್ಮದಲ್ಲಿಯೇ ಆಸಕ್ತರಾಗಿದ್ದು ವರ್ಣಾ- ಶ್ರಮೋಚಿತವಾದ ವ್ರತಾನುಷ್ಠಾನಗಳನ್ನು ಶ್ರದ್ಧೆಯಿಂದ ಮಾಡುತ್ತಾ ಸತ್ಯನಿಷ್ಠರಾಗಿ ಯಾವ ವಿಧವಾದ ಸಂಶಯವೂ ಇಲ್ಲದವರಾಗಿ ಲೋಕದಲ್ಲಿ ಗುರುಗಳಾಗಿ ವಿರಾಜಿಸುತ್ತಾರೆ.
ತ್ರಿದಿವಂ ಪ್ರಾಪ್ಯ ಶಕ್ರಸ್ಯ ಸ್ವರ್ಗಲೋಕೇ ವಿಮತ್ಸರಾಃ |
ವಸಂತಿ ಶಾಶ್ವತೀರ್ವರ್ಷಾ ಜನಾ ದುಷ್ಕರಕಾರಿಣಃ ॥26॥
ಕಷ್ಟಸಾಧ್ಯವಾದ ವೇದದಲ್ಲಿ ಹೇಳಿದ ಗೃಹಸ್ಥಕರ್ಮಗಳಲ್ಲಿ ಆಸಕ್ತರಾಗಿ, ಅನ- ಸೂಯರಾದ ಪುಣ್ಯಾತ್ಮರು ಇಂದ್ರಲೋಕವನ್ನು ಹೊಂದಿ ಸ್ವರ್ಗದಲ್ಲಿ ನಿಷ್ಕಲ್ಮಷಚಿತ್ತ- ರಾಗಿ ಬಹುಕಾಲದವರೆಗೆ ವಾಸಿಸುವರು.
ತತಸ್ತೇ ತದ್ ವಚಃ ಶ್ರುತ್ವಾ ತಸ್ಯ ಧರ್ಮಾರ್ಥಸಂಹಿತಮ್ |
ಉತ್ಸೃಜ್ಯ ನಾಸ್ತೀತಿ ಗತಾ ಗಾರ್ಹಸ್ಥ್ಯಂ ಧರ್ಮಮಾಶ್ರಿತಾಃ ॥27॥
ಅರ್ಜುನ ಪಕ್ಷಿಯು ಹೇಳಿದ ಧರ್ಮಾರ್ಥದಿಂದ ಕೂಡಿದ ಉಪದೇಶವನ್ನು ಕೇಳಿದ ಕೂಡಲೇ ಆ ಬ್ರಹ್ಮಚಾರಿಗಳು ತಮಗೆ ಅನಿಸಿದ ತಪ್ಪನ್ನು ಬಿಟ್ಟು ಗೃಹಸ್ಥ- ಧರ್ಮವನ್ನು ಕೈಗೊಂಡರು.
ತಸ್ಮಾತ್ ತ್ವಮಪಿ ದುರ್ಧರ್ಷಂ ಧೈರ್ಯಮಾಲಂಬ್ಯ ಶಾಶ್ವತಮ್ |
ಪ್ರಶಾಧಿ ಪೃಥಿವೀಂ ಕೃತ್ಸ್ನಾಂ ಹತಾಮಿತ್ರಾಂ ನರೋತ್ತಮ ॥28॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಏಕಾದಶೋಽಧ್ಯಾಯಃ ॥11॥
ನರೋತ್ತಮನೇ! ನಿನಗೆ ತಿಳಿಯದ ವಿಷಯವಿಲ್ಲ. ಪುರುಷಶ್ರೇಷ್ಠನೆನಿಸಿದ ನೀನು ಧೈರ್ಯವನ್ನು ಆಶ್ರಯಿಸಿ ಶತ್ರುಗಳಿಂದ ದೂರವಾದ

ಈ ಅಖಂಡಭೂಮಂಡಲವನ್ನು ರಕ್ಷಣೆ ಮಾಡು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 11ನೆಯ ಅಧ್ಯಾಯವು ಮುಗಿಯಿತು.
*****
12. ಹನ್ನೆರಡನೆಯ ಅಧ್ಯಾಯ
ಯುಧಿಷ್ಠಿರನಿಗೆ ನಕುಲನು ಗೃಹಸ್ಥಧರ್ಮವನ್ನು ಪ್ರಶಂಸೆ ಮಾಡುತ್ತಾ, ಸಮಾಧಾನದ ಮಾತುಗಳನ್ನು ಹೇಳಿದುದು.
ವೈಶಂಪಾಯನಃ
ಅರ್ಜುನಸ್ಯ ವಚಃ ಶ್ರುತ್ವಾ ನಕುಲೋ ವಾಕ್ಯಮಬ್ರವೀತ್ |
ರಾಜಾನಮಭಿಸಂಪ್ರೇಕ್ಷ್ಯ ಸರ್ವಧರ್ಮಭೃತಾಂ ವರಮ್ ॥1॥
ಅನುರುದ್ಧ್ಯ ಮಹಾಪ್ರಾಜ್ಞೋ ಭ್ರಾತುಶ್ಚಿತ್ತಮರಿಂದಮಃ |
ವ್ಯೂಢೋರಸ್ಕೋ ಮಹಾಬಾಹುಸ್ತಾಮ್ರಾಸ್ಯೋ ಮಿತಭಾಷಿತಾ ॥2॥
ವೈಶಂಪಾಯನರು ಅರಿಂದಮನೇ! ಅರ್ಜುನನು ಹೇಳಿದ ಮಾತನ್ನು ಮಹಾ- ಪ್ರಾಜ್ಞನಾದ ವಿಶಾಲವಕ್ಷನಾದ, ಮಹಾನುಬಾಹುವಾದ, ಎಣ್ಣೆಗೆಂಪಾದ ಮುಖವನ್ನು ಹೊಂದಿರುವ, ಮಿತಭಾಷಿಯಾದ ನಕುಲನು ಕೇಳಿದನು. ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗಬೇಕೆನ್ನುವ ಯುಧಿಷ್ಠಿರನ ಮನಃಸ್ಥಿತಿಯನ್ನು ರಾಜ್ಯಾಡಳಿತದ ಕುರಿತು ಒಲವನ್ನು ಬೆಳೆಸಲು ಧರ್ಮರಾಜನನ್ನು ನೋಡುತ್ತಾ ಹೀಗೆಂದನು.
ನಕುಲ
ವಿಶಾಖಯೂಪೇ ದೇವಾನಾಂ ಸರ್ವೇಷಾಮಗ್ನಯಶ್ಚಿತಾಃ |
ತಸ್ಮಾದ್ ವಿದ್ಧಿ ಮಹಾರಾಜ ದೇವಾಃ ಕರ್ಮಫಲೇ ಸ್ಥಿತಾಃ ॥3॥
ನಕುಲ  ವಿಶಾಖಯೂಪವೆಂಬ ಕ್ಷೇತ್ರದಲ್ಲಿ ದೇವತೆಗಳು ಅಗ್ನಿಕಾರ್ಯಕ್ಕಾಗಿ ಮಾಡಿದ ಸ್ಥಂಡಿಲದ ಗುರುತನ್ನು ತೋರಿಸತಕ್ಕ ಭಾಗಗಳು ಇನ್ನೂ ಇಲ್ಲಿ ಕಾಣುತ್ತಿವೆ. ಆದುದರಿಂದ ದೇವತೆಗಳೂ ಕೂಡ ಇಲ್ಲಿ ಕರ್ಮಗಳನ್ನು ನಡೆಸಿ ಅದರ ಫಲವನ್ನೇ ಈಗ ಅನುಭವಿಸುತ್ತಿರುವರು.
ಅನಾಸ್ತಿಕಾನಾಂ ಭೂತಾನಾಂ ಪ್ರಾಣದಾಃ ಪಿತರಶ್ಚ ಯೇ |
ತೇಽಪಿ ಕರ್ಮೈವ ಕುರ್ವಂತಿ ವಿಧಿಂ ಪಶ್ಯಸ್ವ ಪಾರ್ಥಿವ ॥4॥
ಆಸ್ತೀಕರಲ್ಲದ ಪ್ರಾಣಿಗಳಿಗೂ ವೃಷ್ಟಿಯ ಮೂಲಕವಾಗಿ ಅನ್ನದಾನ ಮಾಡು- ವುದರಿಂದ ಲೋಕಪಿತೃಗಳೆನಿಸಿಕೊಂಡ ದೇವತೆಗಳೂ ಕೂಡ ಕರ್ಮಗಳನ್ನು ಮಾಡಿಯೇ ಆ ಪದವಿಯಲ್ಲಿರುವರು.
ವೇದವಾದಾಪವಿದ್ಧಾಂಸ್ತು ತಾನ್ ವಿದ್ಧಿ ಭೃಶನಾಸ್ತಿಕಾನ್ |
ನಹಿ ವೇದೋಕ್ತಮುತ್ಸೃಜ್ಯ ವಿಪ್ರಃ ಸರ್ವೇಷು ಕರ್ಮಸು |
ದೇವಯಾನೇನ ನಾಕಸ್ಯ ಪೃಷ್ಠಮಾಪ್ನೋತಿ ಭಾರತ ॥5॥
ಅರ್ಜುನನು ಈಗ ಪ್ರಸ್ತಾಪಿಸಿದ ಆ ಬ್ರಾಹ್ಮಣರು ವೇದಗಳನ್ನು ಬಿಟ್ಟು ನಾಸ್ತಿಕರೆಂದೇ ತಿಳಿ. ಬ್ರಾಹ್ಮಣನಾದವನು ವೇದೋಕ್ತಮಾರ್ಗವನ್ನು ಬಿಟ್ಟು ಬೇರೆ ಎಂಥ ಕರ್ಮಗಳಿಂದಾದರೂ ದೇವಯಾನಮಾರ್ಗದಿಂದ ಸ್ವರ್ಗಕ್ಕೆ ತೆರಳಿ ಬ್ರಹ್ಮ- ಲೋಕವನ್ನು ಸೇರಲಾರನು.
ಅತ್ಯಾಶ್ರಮಾನಯಂ ಸರ್ವಾನಿತ್ಯಾಹುರ್ವೇದ ನಿಶ್ಚಯಾಃ |
ಬ್ರಾಹ್ಮಣಾಃ ಶ್ರುತಿಸಂಪನ್ನಾಸ್ತಾನ್ ನಿಬೋಧ ಜನಾಧಿಪ ॥6॥
ವೇದಗಳಲ್ಲಿ ನಿಶ್ಚಯಜ್ಞಾನವನ್ನು ಪಡೆದು ಶಾಸ್ತ್ರಗಳನ್ನು ತಿಳಿದ ಬ್ರಾಹ್ಮಣರು ಎಲ್ಲಾ ಆಶ್ರಮಗಳಿಗಿಂತಲೂ ಗೃಹಸ್ಥಾಶ್ರಮವೇ ಮೇಲೆಂದು ಹೇಳುವರು. ಅವರು ಹೇಳಿದ ಮಾತನ್ನಾದರೂ ಕೇಳು.
ವಿತ್ತಾನಿ ಧರ್ಮಲಬ್ಧಾನಿ ಕ್ರತುಮುಖ್ಯೇಷ್ವವಾಸೃಜನ್ |
ಕೃತಾತ್ಮಾ ಸ ಮಹಾರಾಜ ಸ ವೈ ತ್ಯಾಗೀ ಸ್ಮೃತೋ ನರಃ ॥7॥
ಮಹಾರಾಜನೇ ! ಧರ್ಮದಿಂದ ಸಂಪಾದಿಸಿದ ಧನವನ್ನು ಸಂಗ್ರಹಿಸಿ, ಅದರಿಂದ ಉತ್ತಮಯಾಗವನ್ನು ನಡೆಸಿ, ಆ ಯಾಗದ ಮೂಲಕವಾಗಿ ದಾನ ಮಾಡುವವನೇ ನಿಜವಾದ ಜಿತೇಂದ್ರಿಯನು. ಅವನೇ ಸರ್ವವಿಧದಿಂದಲೂ ತ್ಯಾಗಿಯೆನಿಸುವನು.
ಅನವೇಕ್ಷ್ಯ ಸುಖಾದಾನಂ ತಥೈವೋರ್ಧ್ವಂ ಪ್ರತಿಷ್ಠಿತಃ |
ಆತ್ಮತ್ಯಾಗೀ ಮಹಾರಾಜ ಸ ತ್ಯಾಗೀ ತಾಮಸಃ ಮತಃ ॥8॥
ಮಹಾರಾಜನೇ! ಯಾರು ಗೃಹಸ್ಥಧರ್ಮದ ಸುಖಭೋಗಗಳನ್ನು ತೊರೆದು ಕಾಡಿನಲ್ಲಿ ನಿಷ್ಠೆಯಿಂದ ಶರೀರತ್ಯಾಗ ಮಾಡುವವನು ತಾಮಸತ್ಯಾಗಿ ಎನಿಸುವನು.
ಅನಿಕೇತಃ ಪರಿಪತನ್ ವೃಕ್ಷಮೂಲಾಶ್ರಯೋ ಮುನಿಃ |
ಅಪಾಚಕಃ ಸದಾ ಯೋಗೀ ಸ ತ್ಯಾಗೀ ಪಾರ್ಥ ಭಿಕ್ಷುಕಃ ॥9॥
ಮನೆಯನ್ನು ಬಿಟ್ಟು ಭಿಕ್ಷೆಗಾಗಿ ಅಲೆದಾಡುತ್ತಾ ಮರದ ನೆರಳನ್ನೇ ಆಶ್ರಯ- ಮಾಡಿಕೊಂಡು, ಬೇರೆಯವರಲ್ಲಿ ಕೈ ಒಡ್ಡದೆ, ಪಾಕವನ್ನು ಮಾಡಿಕೊಳ್ಳದ ಮುನಿ- ವ್ರತದಲ್ಲಿರುವ ಭಿಕ್ಷುಕನು ಸನ್ಯಾಸಿ ಎನಿಸುತ್ತಾನೆ.
ಕ್ರೋಧಹರ್ಷಾವನಾದೃತ್ಯ ಪೈಶುನ್ಯಂ ಚ ವಿಶೇಷತಃ |
ವಿಪ್ರೋ ವೇದಾನಧೀತೇ ಯಃ ಸ ತ್ಯಾಗೀ ಪಾರ್ಥಂ ಉಚ್ಯತೇ ॥10॥
ಸಂತೋಷ-ಸಿಟ್ಟುಗಳನ್ನು ಬಿಟ್ಟು, ಪರನಿಂದೆಯಲ್ಲಿ ಆಸಕ್ತನಾಗದೇ, ಸದಾ ವೇದಾಧ್ಯಯನದಲ್ಲಿ ಆಸಕ್ತನಾಗಿ, ಗುರುಪೂಜೆಯನ್ನು ಮಾಡುವವನು ತ್ಯಾಗಿ ಎನಿಸುತ್ತಾನೆ.

ವಿವರಣೆ - ತನಗಿಷ್ಟವಾಗದ ವಿಷಯದಲ್ಲಿ ಸಿಟ್ಟು ಮಾಡಿಕೊಳ್ಳುವುದು. ಇಷ್ಟವಾದ ವಿಷಯದಲ್ಲಿ ಸಂತೋಷವನ್ನು ಹೊಂದುವುದು. ಮತ್ತೊಬ್ಬರ ದೋಷಗಳ ಬಗ್ಗೆ ವಿಚಾರ ಮಾಡುವುದು. ಇವುಗಳೆಲ್ಲವನ್ನೂ ಸಂಪೂರ್ಣವಾಗಿ ತ್ಯಾಗ ಮಾಡಬೇಕು. ಇದನ್ನು ಪರಿತ್ಯಾಗ ಮಾಡುವುದು ಸುಲಭವಲ್ಲ. ಸುಖದಲ್ಲಿ ಹಿಗ್ಗದೇ, ದುಃಖದಲ್ಲಿ ಕುಗ್ಗದೇ, ಮತ್ತೊಬ್ಬರನ್ನು ನಿಂದಿಸದೇ, ಚಾಡಿ ಹೇಳದೇ, ಜಿತೇಂದ್ರಿಯನಾಗಲು ಪ್ರಯತ್ನವನ್ನು ಪಡಬೇಕು. ಇಂಥವನೇ ನಿಜವಾದ ತ್ಯಾಗಿ ಎಂಬುದಾಗಿ ಕರೆಯಸಿಕೊಳ್ಳುತ್ತಾನೆ.
ಆಶ್ರಮಾಂಸ್ತುಲಯಾ ಸರ್ವಾನ್ ಧೃತಾನಾಹುರ್ಮನೀಷಿಣಃ |
ಏಕತಸ್ತೇ ತ್ರಯೋ ರಾಜನ್ ಗೃಹಸ್ಥಾಶ್ರಮ ಏಕತಃ ॥11॥
ರಾಜನೇ! ವಿದ್ವಾಂಸರು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ- ಗಳೆಂಬ ಆಶ್ರಮಗಳ ವೈಶಿಷ್ಟ್ಯವೇನೆಂಬುದನ್ನು ತಕ್ಕಡಿಯಲ್ಲಿ ಇಟ್ಟು ತೂಗಿದಾಗ ಗೃಹಸ್ಥಾಶ್ರಮವೊಂದೇ ಬೇರೆ ಮೂರು ಆಶ್ರಮಗಳಿಗೆ ಸಮತೂಕದಲ್ಲಿ ಇತ್ತೆಂದು ಹೇಳುವರು.
ಸಮೀಕ್ಷತೇ ತು ಯೋಽರ್ಥಂ ವೈ ಕಾಮಂ ಸ್ವರ್ಗಂ ಚ ಭಾರತ |
ಅಯಂ ಪಂಥಾ ಮಹರ್ಷೀಣಾಮಿಯಂ ಲೋಕವಿದಾಂ ಗತಿಃ ॥12॥
ವಿವೇಕವೆಂಬ ತಕ್ಕಡಿಯ ತಟ್ಟೆಗಳಲ್ಲಿ ಇಟ್ಟು ತೂಗಿದಾಗ ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಸಿದ್ಧವಾಯಿತು. ಗೃಹಸ್ಥಾಶ್ರಮದಲ್ಲಿ ಕಾಮಸ್ವರ್ಗಗಳೆರಡೂ ಸಮಾನ- ವಾಗಿರುವುದರಿಂದ, ಮಹರ್ಷಿಗಳಿಗೆ ಇದೇ ಸರಿಯಾದ ಮಾರ್ಗವೆಂದು ತಿಳಿಯಿತು.
ಇತಿ ಯಃ ಕುರುತೇ ಭಾವಂ ಸ ತ್ಯಾಗೀ ಭರತರ್ಷಭ |
ನ ಯಃ ಪರಿತ್ಯಜ್ಯ ಗೃಹಾನ್ ವನಮೇತಿ ವಿಮೂಢವತ್ ॥13॥
ಭರತರ್ಷಭನೇ ! ಗೃಹಸ್ಥಾಶ್ರಮದಲ್ಲಿ ಇದ್ದು, ವೇದದಲ್ಲಿ ಹೇಳಿದ ಕರ್ಮ- ಗಳನ್ನು ಮಾಡುವುದೇ ಯೋಗ್ಯವೆಂದು ತಿಳಿದು ಯಾರು ಮಾಡುವನೋ ಅವನೇ ತ್ಯಾಗಿಯೆನಿಸುವನು. ಯಾವ ಮನುಷ್ಯನು, ಸರ್ವಕರ್ಮಗಳನ್ನು ತ್ಯಾಗಮಾಡಿ ಮನೆ-ಮಠಗಳನ್ನು ತೊರೆದು ಕಾಡಿಗೆ ಹೋಗುತ್ತಾನೋ, ಅವನು ಮೂಢನು.
ಯದಾ ಕಾಮಾನ್ ಸಮೀಕ್ಷೇತ ಧರ್ಮವೈತಂಸಿಕೋ ನರಃ |
ಅಥೈನಂ ಮೃತ್ಯುಪಾಶೇನ ಕಂಠೇ ಬಧ್ನಾತಿ ಮೃತ್ಯುರಾಟ್ ॥14॥
ಅರಣ್ಯಕ್ಕೆ ತೆರಳಿದ ಅಂಥ ಮನುಷ್ಯನಿಗೆ ಏನಾದರೂ ಕಾಮಭೋಗಗಳ ಸ್ಮರಣೆ ಬಂದರೆ, ಅವನು ಧರ್ಮವೇಷವನ್ನು ಧರಿಸಿದ ಡಾಂಭಿಕ ಎನಿಸುವನು. ಅಂಥವನನ್ನು ಮೃತ್ಯುದೇವನು ಕಂಠದಲ್ಲಿ ಬಿಗಿದು ಸೆಳೆಯುವನು.
ಅಭಿಮಾನಕೃತಂ ಕರ್ಮ ನೈತತ್ ಫಲವದುಚ್ಯತೇ |
ತ್ಯಾಗಯುಕ್ತಂ ಮಹಾರಾಜ ಸರ್ವಮೇವ ಮಹಾಫಲಮ್ ॥15॥
ಮಹಾರಾಜನೇ! ಯಾವುದೇ ಕರ್ಮವಾಗಲಿ ದುರಭಿಮಾನಪೂರ್ವಕವಾಗಿ ಮಾಡಿದರೆ ಅದು ಫಲಕಾರಿಯಾಗುವುದಿಲ್ಲ. ಯಾವುದೇ ಫಲದ ಅಪೇಕ್ಷೆಯಿಲ್ಲದೆ ಮಾಡಿದ ಕರ್ಮವು ಉತ್ತಮ ಫಲವನ್ನು ಕೊಡುವುದು.
ಶಮೋ ದಮಸ್ತಪೋ ದಾನಂ ಸತ್ಯಂ ಶೌಚಮಥಾರ್ಜವಮ್ |
ಯಜ್ಞೋ ಧೃತಿಶ್ಚ ಧರ್ಮಶ್ಚ ನಿತ್ಯಮಾರ್ಷೋ ವಿಧಿಃ ಸ್ಮೃತಃ ॥16॥
ಶಮ, ದಮ, ಧೈರ್ಯ, ಸತ್ಯ, ಶೌಚ, ಸರಳತೆ, ಯಜ್ಞ, ಧೃತಿ, ಧರ್ಮ ಇವುಗಳು ಋಷಿಗಳಿಗೆ ಹಿತವನ್ನುಂಟು ಮಾಡುವಂಥ ನಿತ್ಯವಾದ ವಿಧಿಗಳು.
ಪಿತೃದೇವಾತಿಥಿಕೃತೇ ಸಮಾರಂಭೋಽತ್ರ ಶಸ್ಯತೇ |
ಅತ್ರೈವ ಹಿ ಮಹಾರಾಜ ತ್ರಿವರ್ಗಃ ಕೇವಲಂ ಫಲಮ್ ॥17॥
ಮಹಾರಾಜನೇ! ಗೃಹಸ್ಥಾಶ್ರಮದಲ್ಲಿ ಪಿತೃಗಳು, ದೇವತೆಗಳು, ಅತಿಥಿಗಳು ಇವರನ್ನು ಕುರಿತು ಮಾಡುವ ಕರ್ಮಗಳೆಲ್ಲವು ಪ್ರಶಂಸೆಗೆ ಪಾತ್ರವಾಗಿವೆ. ಗೃಹಸ್ಥ- ಧರ್ಮದಲ್ಲಿಯೇ ಧರ್ಮಾರ್ಥಕಾಮಗಳೆಂಬ ಮೂರು ವರ್ಗಗಳ ಫಲವು ದೊರೆಯುವುದು.
ಏತಸ್ಮಿನ್ ವರ್ತಮಾನಸ್ಯ ವಿಧೌ ವಿಪ್ರನಿಷೇವಿತೇ |
ತ್ಯಾಗಿನಃ ಪ್ರಸೃತಸ್ಯೇಹ ನೋಚ್ಛಿತ್ತಿರ್ವಿದ್ಯತೇ ಕ್ವಚಿತ್ ॥18॥
ಹೀಗೆ ಅಭಿಮಾನವನ್ನು ಬಿಟ್ಟು, ವೇದವಿಹಿತವಾದ ಕರ್ಮಗಳನ್ನು ನಿಷ್ಠೆಯಿಂದ ನಡೆಸುವವನಿಗೆ ಎಲ್ಲಿಯೂ, ಯಾವ ವಿಧದಿಂದಲೂ ಹಾನಿಯಿರುವುದಿಲ್ಲ.
ಅಸೃಜದ್ಧಿ ಪ್ರಜಾ ರಾಜನ್ ಪ್ರಜಾಪತಿರಕಲ್ಮಷಃ |
ಮಾಂ ಯಕ್ಷ್ಯಂತೀತಿ ಶಾಂತಾತ್ಮಾ ಯಜ್ಞೈರ್ವಿವಿಧದಕ್ಷಿಣೈಃ ॥19॥
ಶಾಂತಾತ್ಮನಾದ ಪಾಪರಹಿತನಾದ ಪ್ರಜಾಪತಿಯು ವಿವಿಧ ದಕ್ಷಿಣೆಗಳಿಂದ ಕೂಡಿರುವ ಯಜ್ಞಗಳ ಮೂಲಕವಾಗಿ ನನ್ನನ್ನು ಆರಾಧಿಸಬೇಕು ಎಂಬ ಉದ್ದೇಶ- ದಿಂದ ಪ್ರಜೆಗಳನ್ನು ಸೃಷ್ಟಿಸಿದನು.
ವೀರುಧಶ್ಚೈವ ವೃಕ್ಷಾಂಶ್ಚ ಯಜ್ಞಾರ್ಥಂ ವೈ ತಥೌಷಧೀಃ |
ಪಶೂಂಶ್ಚೈವ ತಥಾ ಮೇಧ್ಯಾನ್ ಯಜ್ಞಾರ್ಥಾನಿ ಹವೀಂಷಿ ಚ ॥20॥
ಆ ಕಾರಣದಿಂದಲೇ ಯಜ್ಞಕ್ಕೋಸ್ಕರ ಗಿಡಬಳ್ಳಿಗಳನ್ನು, ಔಷಧಿಗಳನ್ನು, ಪವಿತ್ರವಾದ ಪಶುಗಳನ್ನು, ಯಜ್ಞಕ್ಕೆ ಸಂಬಂಧಿಸಿದ ಹವಿಸ್ಸನ್ನು ಲೋಕದಲ್ಲಿ ಸೃಷ್ಟಿಸಿದನು.
ಗೃಹಸ್ಥಾಶ್ರಮಿಣಸ್ತಚ್ಚ ಯಜ್ಞಕರ್ಮ ವಿರೋಧಕಮ್ |
ತಸ್ಮಾದ್ ಗಾರ್ಹಸ್ಥ್ಯಮೇವೇಹ ದುಷ್ಕರಂ ದುರ್ಲಭಂ ತಥಾ ॥21॥
ಇಂಥಹ ಯಜ್ಞಗಳನ್ನು ಸರಿಯಾಗಿ ನಡೆಸುವುದಕ್ಕೆ ಗೃಹಸ್ಥಾಶ್ರಮವೇ ಯೋಗ್ಯವು. ಈ ಕಾರಣದಿಂದ ಗೃಹಸ್ಥಾಶ್ರಮವು ದುಷ್ಕರವೂ; ದುರ್ಲಭವೂ ಆಗಿರುತ್ತದೆ.
ತತ್ ಸಂಪ್ರಾಪ್ಯ ಗೃಹಸ್ಥಾ ಯೇ ಪಶುಧಾನ್ಯಸಮನ್ವಿತಾಃ |

ನ ಯಜಂತೇ ಮಹಾರಾಜ ಶಾಶ್ವತಂ ತೇಷು ಕಿಲ್ಬಿಷಮ್ ॥22॥
ಇಂಥ ದುರ್ಲಭವಾದ ಗೃಹಸ್ಥಾಶ್ರಮವನ್ನು ಪಡೆದು ಧನ-ಧಾನ್ಯ-ಪಶು- ಸಮೃದ್ಧಿಯನ್ನು ಹೊಂದಿ ವಿಧಿಪೂರ್ವಕವಾಗಿ ಯಜ್ಞಯಾಗವನ್ನು ಯಾರು ನಡೆಸು- ವುದಿಲ್ಲವೋ, ಅವರಲ್ಲಿ ಪಾಪವು ಶಾಶ್ವತವಾಗಿ ಉಳಿಯುವುದು.
ಸ್ವಾಧ್ಯಾಯಯಜ್ಞಾ ಋಷಯೋ ಜ್ಞಾನಯಜ್ಞಾಸ್ತಥಾಪರೇ |
ಅಥಾಪರೇ ಮಹಾಯಜ್ಞಾನ್ ಮನಸ್ಯೇವ ವಿತನ್ವತೇ ॥23॥
ಋಷಿಗಳಲ್ಲಿ ಕೆಲವರು ಸ್ವಾಧ್ಯಾಯವನ್ನೇ ಯಜ್ಞವು, ಕೆಲವರು ಜ್ಞಾನವನ್ನು ಯಜ್ಞವೆನ್ನುತ್ತಾರೆ. ಇನ್ನೂ ಕೆಲವರು ಧ್ಯಾನಯೋಗವೆಂಬ ಮಹಾಯಜ್ಞವನ್ನು ಮನಸ್ಸಿನಲ್ಲಿಯೇ ನಡೆಸುತ್ತಾರೆ.
ಇದಮನ್ಯನ್ಮಹಾರಾಜ ವಿದ್ವದ್ಭಿಃ ಕಥಿತಂ ಮಮ |
ಭೂಮಿರಗ್ನಿಶ್ಚ ವಾಯುಶ್ಚ ನಭಶ್ಚ ನ ದಿವಾಕರಃ ॥24॥
ನಕ್ಷತ್ರಾಣಿ ನ ಚಂದ್ರಶ್ಚ ನ ದಿಶಃ ಕಾಲ ಏವ ಚ |
ಶಬ್ದಃ ಸ್ಪರ್ಶಶ್ಚ ರೂಪಂ ಚ ನ ಗಂಧೋ ನ ರಸಃ ಕ್ವಚಿತ್ ॥25॥
ಮಹಾರಾಜನೇ! ಇಷ್ಟೇ ಅಲ್ಲದೆ ವಿದ್ವಾಂಸರಿಂದ ನಾನು ಮತ್ತೊಂದನ್ನು ಕೇಳಿರುವೆನು. ಈ ಜಗತ್ತು ನಿರ್ಮಾಣವಾಗುವ ಮೊದಲು. ಭೂಮಿಯೇ ಮೊದ- ಲಾದ ಪಂಚಭೂತಗಳು, ಸೂರ್ಯಚಂದ್ರ, ನಕ್ಷತ್ರಗಳು, ದಿಕ್ಕುಗಳು, ಕಾಲ, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಲ್ಲಿ ಯಾವುದೊಂದೂ ಇರಲಿಲ್ಲ.
ನಚ ಸಂತಿ ಪ್ರಮಾಣಾನಿ ಯೈಃ ಪ್ರಮೇಯಂ ಪ್ರಸಾಧ್ಯತೇ |
ಪ್ರತ್ಯಕ್ಷಮನುಮಾನಂ ಚ ನೋಪಮಾನಮಥಾಗಮಃ ॥26॥
ಪ್ರಮಾಣಗಳೆನಿಸಿದ ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ, ಉಪಮಾನ ಇವುಗಳಲ್ಲಿ ಯಾವುದೂ ಇರಲಿಲ್ಲ.
ನಾರ್ಥಾಪತ್ತಿರ್ನ ಚೈತಿಹ್ಯಂ ನ ದೃಷ್ಟಾಂತೋ ನ ಸಂಶಯಃ |
ನ ಕ್ವಚಿನ್ನಿರ್ಣಯೋ ರಾಜನ್ನ ಧರ್ಮಾಧರ್ಮ ಏವ ಚ ॥27॥
ರಾಜನೇ! ಅರ್ಥಾಪತ್ತಿ, ಐತಿಹ್ಯಗಳೆಂಬ ಪ್ರಮಾಣಗಳೂ ಇರಲಿಲ್ಲ. ದೃಷ್ಟಾಂತ- ವಿರಲಿಲ್ಲ. ಸಂಶಯ, ನಿಶ್ಚಯಗಳು ಇರಲಿಲ್ಲ. ಧರ್ಮಾಧರ್ಮಗಳೂ ಇರಲಿಲ್ಲ.
ತಿರ್ಯಕ್ ಸ್ಥಾವರಂ ಚೈವ ನ ದೇವಾ ನಚ ಮಾನುಷಾಃ |
ವರ್ಣಾಶ್ರಮವಿಭಾಗಾಶ್ಚ ನಚ ಕರ್ತಾ ನ ಕಾಮಕೃತ್ |
ನಚಾರ್ಥಶ್ಚ ವಿಭೂತಿಶ್ಚ ನಾಚಾರ್ಥಸ್ಯ ವಿಚೇಷ್ಟಿತಮ್ ॥28॥
ವಿವಿಧವಾದ ತಿರ್ಯಕ್, ಸ್ಥಾವರ, ಜಂಗಮಾದಿಗಳು ಇರಲಿಲ್ಲ. ವರ್ಣಾಶ್ರಮ- ವಿಭಾಗಗಳಿರಲಿಲ್ಲ. ಕರ್ತನು, ಕೊಡುವವನೂ ಇರಲಿಲ್ಲ, ಧನ, ಐಶ್ವರ್ಯ, ಅದರ ಫಲಾನುಭವ ಇವುಗಳಲ್ಲಿ ಯಾವುದೊಂದೂ ಇರಲಿಲ್ಲ.
ತಮೋಭೂತಮಿದಂ ಸರ್ವಮನಾಲೋಕಂ ಜಗನ್ನೃಪ |
ನಚಾತ್ಮಾ ವಿದ್ಯಮಾನೋಽಪಿ ಮನಸಾ ಯೋಗಮಿಚ್ಛತಿ ॥29॥
ರಾಜನೇ! ಜಗತ್ತೆಲ್ಲವೂ ತಮೋಮಯವಾಗಿ ಪ್ರಕಾಶಹೀನವಾಗಿತ್ತು. ಆತ್ಮ- ವಿದ್ದರೂ ಮನಸ್ಸಿನ ಸಂಬಂಧವನ್ನು ಹೊಂದಿರಲಿಲ್ಲ.
ಅಚೇತನಂ ಮನಸ್ತತ್ವಸೀದಾತ್ಮಾ ಏವ ಸಚೇತನಃ |
ಈಶ್ವರಶ್ಚೇತನಸ್ತ್ವೇಕಸ್ತೇನೇದಂ ಗಹನೀಕೃತಮ್ |
ಮಂತ್ರಾಶ್ಚ ಚೇತನಾ ರಾಜನ್ನ ಚ ದೇಹೇನ ಯೋಜಿತಾಃ ॥30॥
ರಾಜನೇ! ಆತ್ಮಮಾತ್ರ ಜ್ಞಾನವಿಶಿಷ್ಟನಾಗಿದ್ದನು. ಮನಸ್ಸು ಸಹಅಚೇತನವಾಗಿತ್ತು. ಈ ಪ್ರಪಂಚವನ್ನೆಲ್ಲ ವ್ಯಾಪಿಸಿರುವ ಈಶ್ವರನೊಬ್ಬನೇ ಚೇತನನೆನಿಸಿದ್ದನು. ಅಂಥ ಈಶ್ವರನಿಂದಲೇ ಜಗತ್ತು ತುಂಬಿಹೋಗಿತ್ತು. ಮಂತ್ರಗಳು ಚೈತನ್ಯಪೂರಿತವಾಗಿ- ದ್ದವು. ಆದರೆ ಆ ಮಂತ್ರಗಳಿಗೆ ದೇಹದ ಜೊತಡೆ ಸಂಪರ್ಕವೇ ಇರಲಿಲ್ಲ.
ತೇನ ವಿಶ್ವಸೃಜೋ ನಾಮ ಋಷಯೋ ಮಂತ್ರದೇವತಾಃ |
ಚೈತನ್ಯಮೀಶ್ವರಾತ್ ಪ್ರಾಪ್ಯ ಬ್ರಹ್ಮಾಂಡಂ ತೈರ್ವಿನಿರ್ಮಿತ್ತಮ್ ॥31॥
ಅಂಥ ಸ್ಥಿತಿಯಲ್ಲಿ ಮಂತ್ರದೇವತೆಗಳೆನಿಸಿಕೊಂಡ ಸೃಷ್ಟಿಕರ್ತರೆಂಬ ಋಷಿಗಳು ಮೊದಲು ಈಶ್ವರನಿಂದ ಹುಟ್ಟಿದರು. ಇವರು ಈಶ್ವರನಿಂದ ತಕ್ಕ ಜ್ಞಾನವನ್ನು ಹೊಂದಿ ಈ ಬ್ರಹ್ಮಾಂಡವನ್ನು ಸೃಷ್ಟಿಸಿದರು.
ಇಷ್ಟ್ವಾ ವಿಶ್ವಸೃಜಂ ಯಜ್ಞಂ ನಿರ್ಮಿತಂ ಪ್ರಪಿತಾಮಹಃ |
ಸೃಷ್ಟಿಸ್ತೇನ ಸಮಾರಬ್ಧಾ ಪ್ರಸಾದಾದೀಶ್ವರಸ್ಯ ಚ ॥32॥
ವಿಶ್ವಸೃಜವೆಂಬ ಯಾಗವನ್ನು ನಡೆಸಿ ಪಿತಾಮಹನೆಂಬುವನನ್ನು ಸೃಷ್ಟಿಸಿದರು. ಆ ಪಿತಾಮಹನು ಭಗವಂತನ ಅನುಗ್ರಹದಿಂದ ಲೋಕಗಳನ್ನು ಸೃಷ್ಟಿಸಿದನು.
ಚೈತನ್ಯಮೀಶ್ವರಸ್ಯೇದಂ ಸಚೇತನಮಿದಂ ಜಗತ್ |
ಯೋಗೇನ ಚ ಸಮಾವಿಷ್ಟಂ ಜಗತ್ ಕೃತ್ಸ್ನಂ ಚ ಶಂಭುನಾ ॥33॥
ಚೇತನವಿಶಿಷ್ಟವಾದ ಈ ಜಗತ್ತೆಲ್ಲವೂ ಈಶ್ವರನ ಜ್ಞಾನರೂಪವಾದುದು. ಆ ಈಶ್ವರನೇ ತನ್ನ ಶಕ್ತಿಯಿಂದ ಜಗತ್ತನ್ನು ವ್ಯಾಪಿಸಿದನು.
ಧರ್ಮಶ್ಚಾರ್ಥಶ್ಚ ಕಾಮಶ್ಚ ಉಕ್ತೋ ಮೋಕ್ಷಶ್ಚ ಸಂಕ್ಷಯೇ |
ಬ್ರಹ್ಮಣಃ ಪರಮೇಶಸ್ಯ ಈಶ್ವರೇಣ ಯದೃಚ್ಛಯಾ ॥34॥
ಭಗವಂತನು ಮೊದಲು ಬ್ರಹ್ಮನಿಗೆ ಧಮ, ಅರ್ಥ, ಕಾಮ, ಮೋಕ್ಷವನ್ನು ಉಪದೇಶಿಸಿದನು.
ಅಜ್ಞೋ ಜಂತುರನೀಶಶ್ಚ ಭಾಜನಂ ಸುಖದುಃಖಯೋಃ |

ಈಶ್ವರಪ್ರೇರಿತೋ ಗಚ್ಛೇತ್ ಸ್ವರ್ಗಂ ವಾ ಶ್ವಭ್ರಮೇವ ವಾ ॥35॥
ಜ್ಞಾನಶಕ್ತಿಗಳಿಲ್ಲದೆ, ಸುಖದುಃಖಗಳಿಗೆ ಪಾತ್ರವಾದುದರಿಂದ ಪ್ರಾಣಿಗಳು ಈ ಭಗವಂತನಿಂದ ಪ್ರೇರಿತಗಳಾಗಿಯೇ ಸ್ವರ್ಗನರಕಾದಿಗಳನ್ನು ಹೊಂದುವುವು.
ಪ್ರಧಾನಂ ಪುರುಷಂ ಚೈವ ಆತ್ಮಾನಂ ಸರ್ವದೇಹಿನಾಮ್ |
ಮನಸಾ ವಿಷಯೈಶ್ಚೈವ ಚೇತನೇನ ಪ್ರಚೋದಿತಾಃ |
ಸುಖದುಃಖೇನ ಯುಜ್ಯಂತೇ ಕರ್ಮಭಿಶ್ಚ ಪ್ರಚೋದಿತಾಃ ॥36॥
ಪ್ರಾಣಿಗಳು ಈಶ್ವರನಿಂದಲೂ, ಮನಸ್ಸಿನಿಂದಲೂ, ವಿಷಯಗಳಿಂದಲೂ ತಮ್ಮ ಕರ್ಮಗಳಿಂದಲೂ ಪ್ರೇರಿತಗಳಾಗಿ ಪ್ರಕೃತಿಪುರುಷಸಂಬಂಧಗಳಿಂದ ಸುಖದುಃಖ- ಗಳನ್ನು ಹೊಂದುತ್ತಿವೆ.
ವರ್ಣಾಶ್ರಮವಿಭಾಗಾಶ್ಚ ಈಶ್ವರೇಣ ಪ್ರವರ್ತಿತಾಃ |
ಸದೇವಾಸುರಗಂಧರ್ವಂ ಯೇನೇದಂ ನಿರ್ಮಿತಂ ಜಗತ್ ॥37॥
ದೇವತೆಗಳನ್ನು, ಅಸುರರನ್ನು, ಗಂಧರ್ವರನ್ನು ಸೃಷ್ಟಿಸಿದ ಆ ಈಶ್ವರನೇ ವರ್ಣಾಶ್ರಮಗಳನ್ನು, ಅವುಗಳಲ್ಲಿ ಹಲವು ಅಂತರ್ಭೇದವನ್ನು ಏರ್ಪಡಿಸಿರುವನು. ಅವನ ಆಜ್ಞೆಯಂತೆ ಸಕಲಲೋಕಗಳು ಸ್ವಕರ್ಮದಲ್ಲಿ ಪ್ರವರ್ತಿಸುತ್ತಿದೆ.
ತ್ವಂ ಚಾನ್ಯೇ ಚ ಮಹಾರಾಜ ಈಶ್ವರಸ್ಯ ವಶೇ ಸ್ಥಿತಾಃ |
ಜೀವಂತೇ ಚ ಮ್ರಿಯಂತೇ ಚ ನ ಸ್ವತಂತ್ರಾಃ ಕಥಂಚನ ॥38॥
ಮಹಾರಾಜನೇ! ನೀನು, ನಾನು, ಇತರರು, ಎಲ್ಲರೂ ಆ ಈಶ್ವರನ ಅಧೀನದಲ್ಲಿಯೇ ನಡೆಯುವವರೇ ಹೊರತು ಯಾರೂ ಸ್ವತಂತ್ರರಲ್ಲ? ಪ್ರಾಣಿಗಳ ಜನನ-ಮರಣಗಳು ಭಗವಂತನ ಅಧೀನವೇ ಆಗಿವೆ.
ಹಿತ್ವಾಹಿತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ |
ಯಜಂತೇ ಕರ್ಮಣಾ ದೇವಾ ನ ಸ ಪಾಪೇನ ಲಿಪ್ಯತೇ ॥39॥
ಪ್ರಾಣಿಗಳಿಗೆ ಯಾವುದರಲ್ಲಿಯೂ ಸ್ವಾತಂತ್ರ್ಯವಿಲ್ಲ. ದೇವತೆಗಳು ಪ್ರಾಣಿಗಳನ್ನು ಕೊಂದು ಜಗತ್ತನ್ನು ನಾಶಪಡಿಸಿಯೇ ಕರ್ಮರೂಪವಾದ ಯಾಗಗಳನ್ನು ಮಾಡು- ವರು. ಅದರಿಂದ ಅವರಿಗೆ ಯಾವ ಪಾಪವೂ ಇರುವುದಿಲ್ಲ.
ಹಿಂಸಾತ್ಮಕಾನಿ ಕರ್ಮಾಣಿ ಸರ್ವೇಷಾಂ ಗೃಹಮೇಧಿನಾಮ್ |
ದೇವತಾನಾಮೃಷೀಣಾಂ ಚ ತೇ ಚ ಯಾಂತಿ ಪರಾಂ ಗತಿಮ್ ॥40॥
ದೇವತೆಗಳಾಗಲಿ, ಋಷಿಗಳಾಗಲಿ, ಗೃಹಸ್ಥರಾಗಲಿ ಇವರೆಲ್ಲರ ಕರ್ಮಗಳಲ್ಲಿ ಹಿಂಸೆಯು ಇರುವುದು. ಅಂಥ ಕರ್ಮವನ್ನು ಮಾಡುವ ಗೃಹಸ್ಥರು ಉತ್ತಮ ಗತಿಯನ್ನು ಹೊಂದುವರು.
ಪಾತಿತಾಃ ಶತ್ರವಃ ಪೂರ್ವಂ ಸರ್ವತ್ರ ವಸುಧಾಧಿಪೈಃ |
ಪ್ರಜಾನಾಂ ಹಿತಕಾಮೈಶ್ಚ ಆತ್ಮನಶ್ಚ ಹಿತೈಷಿಭಿಃ ॥41॥
ಮಹಾತ್ಮರೆನಿಸಿದ ನಮ್ಮ ಹಿಂದಿನ ಮಹಾರಾಜರು ಪ್ರಜೆಗಳಿಗೂ ತಮಗೂ ಹಿತವನ್ನು ಬಯಸಿ ಹಲವು ಶತ್ರುಗಳನ್ನು ಸಂಹರಿಸಿರುವರು.

ಯದಿ ತತ್ರ ಭವೇತ್ ಪಾಪಂ ಕಥಂ ತೇ ಸ್ವರ್ಗಮಾಸ್ಥಿತಾಃ |
ನ ಪ್ರಾಪ್ತಾ ನರಕಂ ರಾಜನ್ ವೇಷ್ಟಿತಾಃ ಪಾಪಕರ್ಮಭಿಃ ॥42॥
ರಾಜನೇ! ಅದು ಪಾಪವಾಗಿದ್ದರೆ ಅವರು ಸ್ವರ್ಗವನ್ನು ಹೇಗೆ ಹೊಂದುತ್ತಿದ್ದರು. ಅದೇ ಅವರನ್ನು ನರಕದಲ್ಲಿ ಹಾಕಿರುತ್ತಿತ್ತಲ್ಲವೇ?
ಏವಂ ದಾನಸಮಾಧಾನಂ ಮಾರ್ಗಮಾತಿಷ್ಠತೋ ನೃಪ |
ದ್ವಿಜಾತೇರ್ಬ್ರಹ್ಮಭೂತಸ್ಯ ಸ್ಪೃಹಯಂತಿ ದಿವೌಕಸಃ ॥43॥
ರಾಜನೇ! ಹಿಂದೆ ಹೇಳಿದ್ದನ್ನು ಮನಸ್ಸಿಗೆ ತಂದುಕೊಂಡು ಮನಸ್ಸನ್ನು ಸಮಾ- ಧಾನದಿಂದ ಕರ್ಮಮಾರ್ಗದಲ್ಲಿ ತೊಡಗಿಸು. ಭಗವಂತನನ್ನು ಜಪಿಸುವ ಬ್ರಹ್ಮಾದಿ- ಗಳನ್ನು ನೋಡಿ ದೇವತೆಗಳೂ ಅವರ ಸ್ಥಿತಿಗೆ ಆಸೆಪಡುವರು.
ಸ ರತ್ನಾನಿ ವಿಚಿತ್ರಾಣಿ ಸಂಭೃತಾನಿ ತತಸ್ತತಃ |
ಮಖೇಷ್ವನಿಭಿಸಂತ್ಯಜ್ಯ ನಾಸ್ತಿಕ್ಯಮಭಿಜಲ್ಪಸಿ ॥44॥
ಈ ಮಹಾಯಜ್ಞದ ವಿಜಯದಿಂದ ನಾವು ವಿಚಿತ್ರವಾದ ರತ್ನಗಳನ್ನು ನಾನಾ- ದೇಶಗಳಿಂದ ಸಂಗ್ರಹಿಸಿರುತ್ತೇವೆ. ಹೀಗೆ ಸಂಗ್ರಹಿಸಿದ ರತ್ನಗಳನ್ನು ನಾವು ಯಜ್ಞಗಳ ಮೂಲಕವಾಗಿ ವಿತರಣೆ ಮಾಡಬೇಕಾಗಿದೆ. ನೀನು ಹಾಗೇ ಮಾಡಲಿಚ್ಛಿಸದೇ ನಾಸ್ತಿಕತ್ವಕ್ಕೆ ಸಂಬಂಧಿಸಿದ ಮಾತುಗಳನ್ನು ಆಡುತ್ತಿರುವೆ.
ಕುಟುಂಬಮಾಸ್ಥಿತೇ ತ್ಯಾಗಂ ನ ಪಶ್ಯಾಮಿ ನರಾಧಿಪ |
ರಾಜಸೂಯಾಶ್ವಮೇಧೇಷು ಸರ್ವಮೇಧೇಷು ವಾ ಪುನಃ ॥45॥
ನರಾಧಿಪನೇ! ಕುಟುಂಬದಲ್ಲಿ ಆಸಕ್ತನಾದವನಿಗೆ ತ್ಯಾಗವೆಂಬುದು ಅಸಾಧ್ಯವಾದ ಕಾರ್ಯ. ನೀನೀಗ ಈ ಗೃಹಸ್ಥಾಶ್ರಮಧರ್ಮವನ್ನೇ ಹಿಡಿದು ಬ್ರಾಹ್ಮಣರಿಂದ (ಮೂಲಕ) ಆಚರಿಸಲ್ಪಡತಕ್ಕ ಅಶ್ವಮೇಧ, ರಾಜಸೂಯ, ಸರ್ವಮೇಧಗಳೇ ಮೊದಲಾದ ಹಲವು ಯಜ್ಞಗಳನ್ನು ನಡೆಸು.
ಯೇ ಚಾನ್ಯೇ ಕ್ರತವಸ್ತಾತ ಬ್ರಾಹ್ಮಣೈರಭಿಪೂಜಿತಾಃ |
ತೈರ್ಯಜಸ್ವ ಮಹಾರಾಜ ಶಕ್ರೋ ದೇವಪತಿರ್ಯಥಾ ॥46॥
ಮಹಾರಾಜನೇ! ಈ ಯಜ್ಞಯಾಗಗಳ ಅನುಷ್ಠಾನದಿಂದ, ಬ್ರಾಹ್ಮಣರ ಪ್ರಶಂಸೆಗೆ ಪಾತ್ರನಾಗು. ದೇವಪತಿಯಾದ ಇಂದ್ರನಂತೆ ಆ ಮಹಾಯಜ್ಞಗಳ ಮೂಲಕವಾಗಿ ದೇವತೆಗಳನ್ನು ಅರಾಧಿಸು.
ರಾಜ್ಞಃ ಪ್ರಮಾದದೋಷೇಣ ದಸ್ಯುಭಿಃ ಪರಿಮುಷ್ಯತಾಮ್ |

ಅಶರಣ್ಯಃ ಪ್ರಜಾನಾಂ ಯಃ ಸ ರಾಜಾ ಕಲಿರುಚ್ಯತೇ ॥47॥
ಯಾವ ರಾಜನು ತನ್ನ ಪ್ರಮಾದದೋಷದಿಂದಾಗಿ ಕಳ್ಳರು ಸ್ವತ್ತನ್ನು ಅಪ- ಹರಿಸಿದಾಗ ಪ್ರಜೆಗಳಿಗೆ ರಕ್ಷನಾಗುವುದಿಲ್ಲವೋ, ಅಂಥ ರಾಜನು ಕಲಿ ಎಂಬ ಹೆಸರಿ- ನಿಂದ ಕರೆಯಲ್ಪಡುತ್ತಾನೆ.
ಅಶ್ವಾನ್ ಗಾಶ್ಚೈವ ದಾಸೀಶ್ಚ ಕರೇಣೂಶ್ಚ ಸ್ವಲಂಕೃತಾಃ |
ಗ್ರಾಮಾನ್ ಜನಪದಾಂಶ್ಚೈವ ಕ್ಷೇತ್ರಾಣಿ ಚ ಗೃಹಾಣಿ ಚ ॥48॥
ಅಪ್ರದಾಯ ದ್ವಿಜಾತಿಭ್ಯೋ ಮಾತ್ಸರ್ಯಾವಿಷ್ಟಚೇತಸಃ |
ವಯಂ ತೇ ರಾಜಕಲಯೋ ಭವಿಷ್ಯಾಮೋ ವಿಶಾಂ ಪತೇ ॥49॥
ಮಹಾರಾಜನೇ! ನಾವು ದಾಯಾದಿಗಳ ದ್ವೇಷದಿಂದ ಇಷ್ಟು ಕಾರ್ಯಗಳನ್ನು ನಡೆಸಿದೆವು. ಅವರನ್ನು ಕೊಂದು ಐಶ್ವರ್ಯವನ್ನು ಸಾಧಿಸಿದೆವು. ಹೀಗಿರುವಾಗ ಅದಕ್ಕಾಗಿ ಅಲಂಕೃತವಾದ ಹೂವುಗಳು, ಆನೆಗಳು, ಕುದುರೆಗಳನ್ನು, ದಾಸಿಯರನ್ನು, ಗ್ರಾಮಗಳನ್ನು, ಕ್ಷೇತ್ರಗಳನ್ನು, ಗೃಹಗಳನ್ನು ಬ್ರಾಹ್ಮಣರಿಗೆ ದಾನಮಾಡಿ ಧನವನ್ನು ಸಾರ್ಥಕಗೊಳಿಸದೆ ಹೋದಲ್ಲಿ ನಾವು ರಾಜರೆಂದು ಕರೆಯಲ್ಪಡದೆ ಕಲಿಪುರುಷರೇ ಆಗುವೆವು.
ಅದಾತಾರೋಽಶರಣ್ಯಾಶ್ಚ ರಾಜಕಿಲ್ಬಿಷನಾಗಿನಃ |
ದೋಷಣಾಮೇವ ಭೋಕ್ತಾರೋ ನ ಸುಖಾನಾಂ ಕದಾಚನ ॥50॥
ಮತ್ತೊಬ್ಬರಿಗೆ ದಾನಮಾಡದೆ, ಶರಣಾಗತರನ್ನು ರಕ್ಷಿಸದೆ ಇರುವಂತಹ ರಾಜರು ಮಹಾಪಾಪಕ್ಕೆ ಗುರಿಯಾಗುವರು. ಅವರಿಗೆ ಎಂದಿಗೂ ಸುಖವಿರುವುದಿಲ್ಲ.
ಅನಿಷ್ಟ್ವಾ ಚ ಮಹಾಯಜ್ಞೈರಕೃತ್ವಾ ಚ ಪಿತೃಸ್ವಧಾಮ್ |
ತೀರ್ಥೇಷ್ವನಭಿಸಂತ್ಯಜ್ಯ ಪ್ರವ್ರಜಿಷ್ಯಸಿ ಚೇದಥ ॥51॥
ಛಿನ್ನಾಭ್ರಮಿವ ಗಂತಾಸಿ ವಿಲಯಂ ಮಾರುತೇರಿತಮ್ |
ಲೋಕಯೋರುಭಯೋಽರ್ಭ್ರಷ್ಟೋ ಹ್ಯಂತರಾಲೇ ವ್ಯವಸ್ಥಿತಃ ॥52॥
ಪ್ರಭುವೇ! ಮಹಾಯಜ್ಞಗಳಿಂದ ದೇವತೆಗಳನ್ನು ಆರಾಧಿಸದೆ ಪಿತೃಶ್ರಾದ್ಧಗಳನ್ನು ನಡೆಸದೆ ಪುಣ್ಯತೀರ್ಥಗಳ ಸ್ನಾನವನ್ನು ಮಾಡದೆ ನೀನು ರಾಜ್ಯವನ್ನು ತೊರೆದು ಸನ್ನ್ಯಾಸಿಯಾಗಿ ಹೋದ ಪಕ್ಷದಲ್ಲಿ ಇಹದಲ್ಲಿಯೂ, ಪರದಲ್ಲಿಯೂ ಎಲ್ಲವನ್ನು ಕಳೆದುಕೊಂಡು ಪಿಶಾಚಜನ್ಮದಿಂದ ಬಿರುಗಾಳಿಗೆ ಎದುರಾದ ಮೋಡದಂತೆ ನಾಶ- ಹೊಂದುವಿ.
ಅಂತರ್ಬಹಿಶ್ಚ ಯತ್ಕಿಂಚಿನ್ಮನೋವ್ಯಾಸಂಗಕಾರಕಮ್ |
ಪರಿತ್ಯಜ್ಯ ಭವೇತ್ ತ್ಯಾಗೀ ನ ಯೋ ಹಿತ್ವಾ ಪ್ರತಿಷ್ಠತೇ ॥53॥
ಅಂತರಂಗದಲ್ಲಿ ಬಹಿರಂಗದಲ್ಲಿ ಮನಸ್ಸಿಗೆ ಚಿಂತೆಯನ್ನುಂಟುಮಾಡುವ ವಸ್ತುವನ್ನು ತೊರೆದವನು ತ್ಯಾಗಿಯೆನಿಸುವನೇ ಹೊರತು; ಮನೆಯನ್ನು ಬಿಟ್ಟು ಹೋದ ಮಾತ್ರಕ್ಕೆ ಸನ್ನ್ಯಾಸಿಯಾಗುವುದಿಲ್ಲ.
ಏತಸ್ಮಿನ್ ವರ್ತಮಾನಸ್ಯ ವಿಧೌ ವಿಪ್ರನಿಷೇವಿತೇ |
ಬ್ರಾಹ್ಮಣಸ್ಯ ಮಹಾರಾಜ ನೋಚ್ಛಿತ್ತಿರ್ವಿದ್ಯತೇ ಕ್ವಚಿತ್ ॥54॥
ಇಂಥ ಪರಮಶ್ರೇಷ್ಠವಾದ ಗೃಹಸ್ಥಾಶ್ರಮದಲ್ಲಿಯೇ ಇದ್ದುಕೊಂಡು ಧರ್ಮಕ್ಕೆ ಅವಿರುದ್ಧವಾದ, ವೇದವಿಹಿತವಾದ ಕರ್ಮಮಾರ್ಗದಲ್ಲಿ ವರ್ತಿಸತಕ್ಕವನಿಗೆ ಎಂದಿಗೂ ಎಲ್ಲಿಯೂ ಹಾನಿಯಿರುವುದಿಲ್ಲ.
ನಿಹತ್ಯ ಶತ್ರೂಂಸ್ತರಸಾ ಸಮೃದ್ಧಾನ್
ಶಕ್ರೋ ಯಥಾ ದೈತ್ಯಬಲಾನಿ ಸಂಖ್ಯೇ |
ಕಃ ಪಾರ್ಥ ಶೋಚೇನ್ನಿರತಃ ಸ್ವಧರ್ಮೇ
ಪೂರ್ವೈಃ ಸ್ಮೃತೇ ಪಾರ್ಥಿವ ಶಿಷ್ಟಜುಷ್ಟೇ ॥55॥
ಕುಂತಿಪುತ್ರನೇ! ಇಂದ್ರನು ಯುದ್ಧದಲ್ಲಿ ದೈತ್ಯರನ್ನು ಕೊಂದನು. ಪೂರ್ವಜ- ರಿಂದ ವಿಧಿಸಲ್ಪಟ್ಟ, ಶಿಷ್ಟರಾದ ರಾಜರಿಂದ ಆಚರಿಸಲ್ಪಡುತ್ತಿರುವ ಸ್ವಧರ್ಮದಲ್ಲಿ ನೆಲೆಗೊಂಡನು. ಯಾರು ತಾನೇ ಇಂಥ ದುಃಖಕ್ಕೆ ಅವಕಾಶ ಕೊಡುವನು !
ಕ್ಷಾತ್ರೇಣ ಧರ್ಮೇಣ ಪರಾಕ್ರಮೇಣ
ಜಿತ್ವಾ ಮಹೀಂ ಮಂತ್ರವಿದ್ಭ್ಯಃ ಪ್ರದಾಯ |
ನಾಕಸ್ಯ ಪೃಷ್ಠೇಽಸಿ ನರೇಂದ್ರ ಗಂತಾ
ನ ಶೋಚಿತವ್ಯಂ ಭವತಾದ್ಯ ಪಾರ್ಥ ॥56॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದ್ವಾದಶೋಽಧ್ಯಾಯಃ ॥12॥
ಕ್ಷತ್ರಿಯ ಧರ್ಮದಿಂದ ನಿನ್ನ ಪರಾಕ್ರಮವನ್ನು ತೋರಿಸು. ಈ ಭೂಮಿಯನ್ನು ಸಾಧಿಸಿದ ನೀನು ವೇದವನ್ನು ಬಲ್ಲ ಬ್ರಾಹ್ಮಣನಿಗೆ ಧನವನ್ನು ದಾನಮಾಡಿ ಪುಣ್ಯಫಲದಿಂದ ಸ್ವರ್ಗವನ್ನು ಹೊಂದಬಹುದು. ಈ ಸ್ಥಿತಿಯಲ್ಲಿ ನೀನು ಶೋಕಿಸು- ವುದು ಯುಕ್ತವೇ ಅಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿಯಿತು.
*****
13. ಹದಿಮೂರನೆಯ ಅಧ್ಯಾಯ
ಯುಧಿಷ್ಠಿರನನ್ನು ಕುರಿತು ಸಹದೇವನ ಮಾತು.
ಸಹದೇವಃ
ನ ಬಾಹ್ಯಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ಭಾರತ |
ಶಾರೀರಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ವಾ ನ ವಾ ॥1॥

ಸಹದೇವ  ಭಾರತನೇ! ಬಾಹ್ಯವಾದ ಸಂಪತ್ತುಗಳನ್ನು ತ್ಯಾಗ ಮಾಡುವುದ- ರಿಂದ ಸಿದ್ಧಿಯುಂಟಾಗುವುದಿಲ್ಲ. ಆದರೆ ಶರೀರಕ್ಕೆ ಸಂಬಂಧಿಸಿದ ಅಹಂಕಾರ ಮಮಕಾರಗಳನ್ನು ಬಿಡುವುದುರಿಂದ ಸಿದ್ಧಿಯಾಗಬಹುದು.

ಬಾಹ್ಯದ್ರವ್ಯವಿಮುಕ್ತಸ್ಯ ಶಾರೀರೇಷು ಚ ಗೃಧ್ಯತಃ |
ಯೋ ಧರ್ಮೋ ಯತ್ ಸುಖಂ ವಾ ಸ್ಯಾದ್ ದುರ್ಹೃದಾಂ
ತತ್ ತಥಾಸ್ತು ನಃ ॥2॥

ಹೊರಗಿನ ವಸ್ತುಗಳನ್ನು ಬಿಟ್ಟು ಶರೀರದ ಒಳಗಿನ ಸುಖವನ್ನು ಯಾರು ಬಯಸುತ್ತಾನೋ, ಅವನ  ಧರ್ಮ, ಸುಖಗಳೆಲ್ಲವೂ ಶತ್ರುಗಳಿಗೆ ಮಾತ್ರವೇ ಲಭಿಸಲಿ.

ಶಾರೀರಂ ದ್ರವ್ಯಮುತ್ಸೃಜ್ಯ ಪೃಥಿವೀಮನುಶಾಸತಃ |
ಯೋ ಧರ್ಮೋ ಯತ್ ಸುಖಂ ವಾ ಸ್ಯಾತ್ ಸುಹೃದಾಂ
ತತ್ ತಥಾಸ್ತು ನಃ ॥3॥

ಶರೀರ ಸಂಬಂಧವಾದ ಅಹಂಕಾರ-ಮಮಕಾರಗಳನ್ನು ತ್ಯಜಿಸಿ ಪೃಥಿವಿಯನ್ನು ಪಾಲನೆ ಮಾಡುವವನಿಗೆ ಯಾವ ಧರ್ಮವಿರುವುದೋ ಮತ್ತು ಯಾವ ಸುಖವಿರುವುದೋ, ಅಂಥ ಸುಖವು ಮತ್ತು ಧರ್ಮವು ನಮ್ಮ ಸುಹೃದರಿಗೆ ಇರಲಿ.

ದ್ವ್ಯಕ್ಷರಸ್ತು ಭವೇನ್ಮೃತ್ಯುಸ್ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್ |
ಮಮೇತಿ ಚ ಭವೇನ್ಮೃತ್ಯುರ್ನ ಮಮೇತಿ ಚ ಶಾಶ್ವತಮ್ ॥4॥

ಮೃತ್ಯುವಿನ ಮಾರ್ಗವು ಎರಡೇ ಅಕ್ಷರಗಳಲ್ಲಿರುವುದು. ಶಾಶ್ವತವಾದ ಬ್ರಹ್ಮ- ಮಾರ್ಗವು ಮೂರು ಅಕ್ಷರಗಳಲ್ಲಿ ಅಡಗಿರುವುದು. ಮಮ ಎಂಬ ಎರಡಕ್ಷರಗಳೇ ಮೃತ್ಯುವಿಗೆ ಮಾರ್ಗವು `ನಮಮ' ಎಂಬ ಮೂರಕ್ಷರಗಳು ಶಾಶ್ವತ ಪರಬ್ರಹ್ಮಕ್ಕೆ ಕಾರಣವು.

ಬ್ರಹ್ಮಮೃತ್ಯೂ ಚ ತೌ ರಾಜನ್ನಾತ್ಮನ್ಯೇವ ಸಮಾಶ್ರಿತೌ |
ಅದೃಶ್ಯಮಾನೌ ಭೂತಾನಿ ಯೋಧಯೇತಾಮಸಂಶಯಮ್ ॥5॥

ರಾಜನೇ! ಬ್ರಹ್ಮ ಮತ್ತು ಮೃತ್ಯುಗಳು ಅವರವರ ಬುದ್ಧಿಯಲ್ಲಿಯೇ ಕಾಣದಂತೆ ಸೇರಿಕೊಂಡಿವೆ. ಪ್ರಾಣಿಗಳನ್ನು ತಮ್ಮ ವಶಮಾಡಿಕೊಳ್ಳುವವು. ಇದರಲ್ಲಿ ಸಂದೇಹ- ವಿಲ್ಲ.

ಅವಿನಾಶೋಽಸ್ಯ ಸತ್ವಸ್ಯ ನಿಯತೋ ಯದಿ ಭಾರತ |
ಭಿತ್ತ್ವಾ ಶರೀರಂ ಭೂತಾನಾಂ ನ ಹಿಂಸಾ ಪ್ರತಿಪತ್ಸ್ಯತೇ ॥6॥

ಭಾರತನೇ! ನೀನು ತಿಳಿದುಕೊಂಡಿರುವಂತೆ ಈ ಜೀವಕ್ಕೆ ವಿನಾಶವೆಂಬುದೇ ಇಲ್ಲವಾದಲ್ಲಿ ಪ್ರಾಣಿಗಳ ಶರೀರವನ್ನು ಕತ್ತರಿಸಿ ಹಾಕಿದರೂ ಆ ಶರೀರದಲ್ಲಿ ಇರುವ ಜೀವಕ್ಕೆ ಯಾವ ಹಿಂಸೆಯೂ ಆಗುವುದಿಲ್ಲ.

ಅಥಾಪಿ ಚ ಸಹೋತ್ಪತ್ತಿಃ ಸತ್ತ್ವಸ್ಯ ಪ್ರಲಯಸ್ತಥಾ |
ನಷ್ಟೇ ಶರೀರೇ ನಷ್ಟಂ ಸ್ಯಾದ್ ವೃಥಾ ಚ ಸ್ಯಾತ್ ಕ್ರಿಯಾಪಥಃ ॥7॥

ಒಂದು ವೇಳೆ ಈ ಶರೀರದೊಡನೆ ಜೀವವೂ ವಿನಾಶವಾದ ಪಕ್ಷದಲ್ಲಿ, ಶರೀರದೊಡನೆ ಜೀವವೂ ಹೋಗಿಬಿಡುವುದು. ಆಗ ಕರ್ಮಮಾರ್ಗವು ವ್ಯರ್ಥವೇ ಆಗುವುದು.

ತಸ್ಮಾದೇಕಾಂತಮುತ್ಸೃಜ್ಯ ಪೂರ್ವೈಃ ಪೂರ್ವತರೈಶ್ಚ ಯಃ |
ಪಂಥಾ ನಿಷೇವಿತಃ ಸದ್ಭಿಃ ಸ ನಿಷೇವ್ಯೋ ವಿಜಾನತಾ ॥8॥

ಈ ಕಾರಣದಿಂದ ತಿಳಿವಳಿಕೆಯುಳ್ಳವನು ತನ್ನ ಬುದ್ಧಿಯನ್ನು ಪ್ರಮಾಣವಾಗಿಟ್ಟು- ಕೊಳ್ಳದೇ ನಮ್ಮ ಹಿರಿಯರು ಹಾಗೂ ಪೂರ್ವಜರು, ಸತ್ಪುರುಷರು ಅನುಸರಿಸಿ- ಕೊಂಡು ಬಂದ ಹಾದಿಯನ್ನೇ ಆಶ್ರಯಿಸಬೇಕು.

ಲಬ್ಧ್ವಾಪಿ ಪೃಥಿವೀಂ ಕೃತ್ಸ್ನಾಂ ಸಹಸ್ಥಾವರಜಂಗಮಾಮ್ |
ನ ಭುಂಕ್ತೇ ಯೋ ನೃಪಃ ಸಮ್ಯಗ್ ನಿಷ್ಫಲಂ ತಸ್ಯ ಜೀವಿತಮ್ ॥9॥

ಸ್ಥಾವರ-ಜಂಗಮಗಳಿಂದ ಯುಕ್ತವಾದ ಈ ಸಕಲ ಭೂಮಿಯನ್ನು ಪಡೆದು ಯಾವ ರಾಜನೂ ಅದನ್ನು ಚೆನ್ನಾಗಿ ಪಾಲನೆ ಮಾಡುವುದಿಲ್ಲವೋ ಅಂಥವನ ಜೀವನವು ವ್ಯರ್ಥವೇ ಸರಿ.

ಅಥವಾ ವಸತೋ ರಾಜನ್ ವನೇ ವನ್ಯೇನ ಜೀವತಃ |
ದ್ರವ್ಯೇಷು ಯಸ್ಯ ಮಮತಾ ಮೃತ್ಯೋರಾಸ್ಯೇ ಸ ವರ್ತತೇ ॥10॥

ಒಂದುವೇಳೆ ಎಲ್ಲವನ್ನೂ ತ್ಯಾಗ ಮಾಡಿ ಕಾಡಿಗೆ ಹೋದರೂ, ಅಲ್ಲಿರುವ ವಸ್ತುಗಳಿಂದ ಬದುಕತಕ್ಕವನಿಗೆ ಆ ದ್ರವ್ಯಗಳಲ್ಲಿ ಮಮತೆ ಹುಟ್ಟಿದರೆ, ಅವನು ಮೃತ್ಯುವಿಗೆ ಬಾಯಿಗೆ ಸಿಲುಕಿದಂತೆಯೇ ಸರಿ.

ಬಾಹ್ಯಾಭ್ಯಂತರಭೂತಾನಾಂ ಸ್ವಭಾವಂ ಪಶ್ಯ ಭಾರತ |
ಯೇ ತು ಪಶ್ಯಂತಿ ತದ್ಭಾವಂ ಶುಷ್ಯಂತೇ ಸ್ತೋಕಕಾ ಇವ ॥11॥

ಭಾರತನೇ! ಬಾಹ್ಯದಲ್ಲಿ ಅಂತರಂಗದಲ್ಲಿ ಇರುವ ವಸ್ತುಗಳ ಸ್ವಭಾವ ಭೇದಗಳನ್ನು ಚೆನ್ನಾಗಿ ವಿಮರ್ಶಿಸು. ಇವೆರಡನ್ನು ಯಥಾವತ್ತಾಗಿ  ತಿಳಿದವನು ಮಹಾ -ಭಯದಿಂದ ಮುಕ್ತನಾಗುತ್ತಾನೆ.

ಭವಾನ್ ಪಿತಾ ಭವಾನ್ ಮಾತಾ ಭವಾನ್ ಭ್ರಾತಾ ಭವಾನ್ ಗುರುಃ|
ದುಃಖಪ್ರಲಾಪಾನಾರ್ತಸ್ಯ ತಸ್ಮಾನ್ಮೇ ಕ್ಷಂತುಮರ್ಹಸಿ ॥12॥

ನೀನು ಮಹಾಪ್ರಾಜ್ಞನು, ನನಗೆ ತಂದೆ, ತಾಯಿ, ಗುರು, ಒಡಹುಟ್ಟಿದವನು ಎಲ್ಲವೂ ನೀನೇ ಆಗಿರುವಿ. ದುಃಖದಿಂದ ನಿನ್ನ ಮುಂದೆ ಪ್ರಲಾಪಿಸಿದ ನನ್ನ ಮಾತು- ಗಳನ್ನು ನೀನು ಮನ್ನಿಸಬೇಕು.

ತಥ್ಯಂ ವಾ ಯದಿ ವಾಽತಥ್ಯಂ ಯನ್ಮಯೈತತ್ ಪ್ರಭಾಷಿತಮ್ |
ತದ್ ವಿದ್ಧಿ ಪೃಥಿವೀಪಾಲ ಭಕ್ತ್ಯಾ ಭರತಸತ್ತಮ ॥13॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ತ್ರಯೋದಶೋಽಧ್ಯಾಯಃ ॥13॥
ಭರತಸತ್ತಮನೇ ! ನಾನು ಹೇಳಿದುದು ಸತ್ಯವಾಗಿರಲಿ, ಅಸತ್ಯವಾಗಿರಲಿ, ನಿನ್ನಲ್ಲಿ ಭಕ್ತಿಯಿಂದ ಹೇಳಿದ್ದೆಂದೇ ಗ್ರಹಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 13ನೆಯ ಅಧ್ಯಾಯವು ಮುಗಿಯಿತು.
*****
14. ಹದಿನಾಕನೆಯ ಅಧ್ಯಾಯ
ದ್ರೌಪದೀದೇವಿಯು ಯುಧಿಷ್ಠಿರನನ್ನು ಕುರಿತು ರಾಜ್ಯಭಾರವನ್ನು ಮಾಡು ಎಂಬುದಾಗಿ ವಿವರವಾಗಿ ತಿಳಿಸುತ್ತಾಳೆ. ಕ್ಷತ್ರಿಯರು ಬ್ರಾಹ್ಮಣಧರ್ಮವನ್ನು ಆಶ್ರಯಿಸಬಾರದು. ಕ್ಷತ್ರಿಯರ ಧರ್ಮ ಹಾಗೂ ಬ್ರಾಹ್ಮಣ ಧರ್ಮದ ಬಗ್ಗೆ ವಿವೇಚನೆ. ದಂಡನೀತಿಯ ಅನುಸರಣೆಯಿಂದ ಆಗುವ ಲಾಭಗಳು. ಅಳವಡಿಸಿಕೊಂಡ ಕ್ಷತ್ರಿಯನ ವೈಭವ. ಬ್ರಾಹ್ಮಣರೂ ಕೂಡ ಕೆಲವೊಮ್ಮೆ ಯುದ್ಧಮಾಡಬೇಕು ಎಂಬ ಬೋಧನೆ. ಅವೈಷ್ಣವನಿಗೆ ಮತ್ತು ಪಾತಕಿಗಳಿಗೆ ಕಟ್ಟೆಚ್ಚರ. ದುರ್ಯೋಧನಾದಿಗಳು ಮಹಾಪಾತಕಿಗಳು ಎಂಬುದರ ಬೋಧನೆ. ಯುಧಿಷ್ಠಿರನಿಗೆ ಕರ್ತವ್ಯತ್ವದ ಬೋಧನೆ.
ವೈಶಂಪಾಯನಃ
ಅವ್ಯಾಹರತಿ ಕೌಂತೇಯೇ ಧರ್ಮರಾಜೇ ಯುಧಿಷ್ಠಿರೇ |
ಭ್ರಾತೄಣಾಂ ಬ್ರುವತಾಂ ತಾಂಸ್ತಾನ್ ವಿವಿಧಾನ್ ವೇದನಿಶ್ಚಯಾನ್ ॥1॥
ವೈಶಂಪಾಯನರು ಜನಮೇಜಯರಾಜನೇ! ಹೀಗೆ ತನ್ನ ನಾಲ್ವರು ಸಹೋದರರು ಹೇಳಿದ ವಿವಿಧ ಸಿದ್ಧಾಂತಗಳನ್ನು ಕೇಳಿಯೂ ಧರ್ಮರಾಜನು ಏನನ್ನೂ ಮಾತ- ನಾಡದೇ ಸುಮ್ಮನಿದ್ದನು.
ಮಹಾಭಿಜನಸಂಪನ್ನಾ ಶ್ರೀಮತ್ಯಾಯತಲೋಚನಾ |
ಅಭ್ಯಭಾಷತ ರಾಜೇಂದ್ರಂ ದ್ರೌಪದೀ ಯೋಷಿತಾಂ ವರಾ ॥2॥
ಆ ಸಂದರ್ಭದಲ್ಲಿ ಸತ್ಕುಲಪ್ರಸೂತೆಯಾದ, ಕಾಂತಿಯುಕ್ತಳಾದ, ವಿಶಾಲನೇತ್ರೆ- ಯಾದ, ದ್ರೌಪದಿಯು ರಾಜೇಂದ್ರನಾದ ಯುಧಿಷ್ಠಿರನನ್ನು ನೋಡಿದಳು.
ಆಸೀನಮೃಷಭಂ ರಾಜ್ಞಾಂ ಭ್ರಾತೃಭಿಃ ಪರಿವಾರಿತಮ್ |
ಸಿಂಹಶಾರ್ದೂಲ ಸದೃಶೈರ್ವಾರಣೈರಿವ ಯೂಥಪಮ್ ॥3॥
ಸಿಂಹ ಶಾರ್ದೂಲಗಳಂತಿರುವ ತನ್ನ ತಮ್ಮಂದಿರೆಲ್ಲ ಸುತ್ತಲೂ ಕುಳಿತಿರಲು ಮದಭರಿತವಾದ ಆನೆಗಳಿಂದ ಆವೃತವಾದ ಯೂಥಪತಿಯಂತೆ ಆ ನಾಲ್ವರ ನಡುವೆ ಮೌನದಿಂದ ಕುಳಿತಿದ್ದನು.
ಅಭಿಮಾನವತೀ ನಿತ್ಯಂ ವಿಶೇಷೇಣ ಯುಧಿಷ್ಠಿರೇ |
ಲಾಲಿತಾ ಸತತಂ ರಾಜ್ಞಾ ಧರ್ಮಜ್ಞಾ ಧರ್ಮದರ್ಶಿನೀ ॥4॥
ದ್ರೌಪದಿಗೆ ಎಲ್ಲರಿಗಿಂತಲೂ ಧರ್ಮರಾಜನಲ್ಲಿ ಭಕ್ತಿಗೌರವಗಳು ಹೆಚ್ಚು. ಧರ್ಮರಾಜನು ಅವಳನ್ನು ವಿಶೇಷವಾಗಿ ಆದರಿಸುತ್ತಿದ್ದನು.
ಆಮಂತ್ರ್ಯ ವಿಪುಲಶ್ರೋಣೀ ನಾಮ್ನಾ ಪರಮವಲ್ಗುನಾ |
ಭರ್ತಾರಮಭಿಸಂಪ್ರೇಕ್ಷ್ಯ ತತೋ ವಚನಬ್ರವೀತ್ ॥5॥
ಧರ್ಮಾಧರ್ಮಗಳನ್ನು ನಿರೂಪಿಸುವುದರಲ್ಲಿ ಸಮರ್ಥಳೆನಿಸಿದ ಆ ದ್ರೌಪದಿ- ದೇವಿಯು ತನ್ನ ಪತಿಯನ್ನು ನೋಡಿ ಅತ್ಯಂತ ಮೃದುವಾಕ್ಯದಿಂದ ಹೇಳಿದಳು.
ದ್ರೌಪದೀ
ಇಮೇ ತೇ ಭ್ರಾತರಃ ಪಾರ್ಥ ಶುಷ್ಯಂತಸ್ತೋಕಕಾ ಇವ |
ವಾವಾಶ್ಯಮಾನಾಸ್ತಿಷ್ಠಂತಿ ನಚೈನಾನಭಿನಂದಸೇ ॥6॥
ದ್ರೌಪದೀ ಪಾರ್ಥನೇ! ನಿನ್ನ ತಮ್ಮಂದಿರು ನೀನು ಅರಣ್ಯಕ್ಕೆ ಹೋಗಬಾರ- ದೆಂದು ಎಷ್ಟು ಕಳವಳಿಸುತ್ತಿರುವರು ನೋಡು. ಚಾತಕಪಕ್ಷಿಗಳಂತೆ ಬಾರಿಬಾರಿಗೂ ಅಂಗಲಾಚಿ ಬೇಡಿಕೊಳ್ಳುತ್ತಿದ್ದಾರೆ. ದುಃಖಿತರಾದ ಅವರನ್ನು ಯುಕ್ತಿಯುಕ್ತವಾದ ಮಾತುಗಳಿಂದ ಸಂತೋಷಗೊಳಿಸು.
ನಂದಯೈತಾನ್ ಮಹಾರಾಜ ಮತ್ತಾನಿವ ಮಹಾದ್ವಿಪಾನ್ |
ಉಪಪನ್ನೇನ ವಾಕ್ಯೇನ ಸತತಂ ದುಃಖಭಾಗಿನಃ ॥7॥
ಮಹಾರಾಜನೇ! ಮದಿಸಿದ ಆನೆಗಳಂತೆಯೇ ಇರುವ ಈ ನಿನ್ನ ಸಹೋದರರನ್ನು ಯುಕ್ತಿಯುಕ್ತವಾದ ಮಾತುಗಳಿಂದ ಸಂತೋಷಗೊಳಿಸು. ನಿಶ್ಚಯವಾಗಿಯೂ ಇವರು ಇದುವರೆಗೂ ನಿರಂತರವಾಗಿ ದುಃಖದಲ್ಲಿಯೇ ಕಾಲ ಕಳೆದಿರುತ್ತಾರೆ.
ಕಥಂ ದ್ವೈತವನೇ ರಾಜನ್ ಪೂರ್ವಮುಕ್ತ್ವಾ ತಥಾ ವಚಃ |
ಭ್ರಾತೄನೇತಾನ್ ಸ್ಮ ಸಹಿತಾನ್ ಶೀತವಾತಾತಪಾರ್ದಿತಾನ್ ॥8॥
ರಾಜ್ಯದ ವಿಷಯವಾಗಿ ಹಿಂದೆ ನೀನು ಹೇಳಿದ ಮಾತನ್ನು ಸ್ಮರಣೆಗೆ ತರುತ್ತೇನೆ. ನಾವೆಲ್ಲರೂ ದ್ವೈತವನದಲ್ಲಿದ್ದೆವು. ಆ ಸಂದರ್ಭದಲ್ಲಿ ನಿನ್ನ ಸಹೋದರರು ಚಳಿ, ಗಾಳಿ, ಬಿಸಿಲುಗಳಿಂದ ಪೀಡಿಸಲ್ಪಡುತ್ತಿದ್ದರು. ಆಗ ನೀನು ನಿನ್ನ ಸಹೋದರರನ್ನು ಸಂತೈಸುವುದಕ್ಕಾಗಿ ಈ ಮಾತನ್ನಾಡಿದೆ -
ವಯಂ ದುರ್ಯೋಧನಂ ಹತ್ವಾ ಮೃಧೇ ಭೋಕ್ಷ್ಯಾಮ ಮೇದಿನೀಮ್|
ಸಂಪೂರ್ಣಾಂ ಸರ್ವಕಾಮಾನಾಮಾಹವೇ ವಿಜಯೈಷಿಣಃ ॥9॥
ವಿರಥಾಂಶ್ಚ ರಥಾನ್ ಕೃತ್ವಾ ನಿಹತ್ಯ ಚ ಮಹಾಗಜಾನ್ |
ಸಂಸ್ತೀರ್ಯ ಚ ರಥೈರ್ಭೂಮಿಂ ಸಸಾದಿಭಿರರಿಂದಮಾಃ ॥10॥
ಯಜತಾಂ ವಿವಿಧೈರ್ಯಜ್ಞೈಃ ಸಮೃದ್ಧೈರಾಪ್ತದಕ್ಷಿಣೈಃ |

ವನವಾಸಕೃತಂ ದುಃಖಂ ಭವಿಷ್ಯತಿ ಸುಖಾಯ ನಃ ॥11॥
ಅರಿಂದಮರೇ ! ನಾವು ಯುದ್ಧದಲ್ಲಿ ದುರ್ಯೋಧನನನ್ನು ಕೊಂದು ಸಮಸ್ತ ಕಾಮಭೋಗಗಳಿಂದ ತುಂಬಿದ ಈ ಭೂಮಿಯನ್ನು ಶೀಘ್ರದಲ್ಲಿ ಅನುಭವಿಸುತ್ತೇವೆ. ನಾವು ಯುದ್ಧದಲ್ಲಿ ಅನೇಕ ಶತ್ರುವೀರರನ್ನು, ರಥ, ತುರಗಗಳನ್ನು ಕೊಂದು ರಥಿಕರ ದೇಹಗಳಿಂದ ಮತ್ತು ರಥಗಳಿಂದ ರಣಭೂಮಿಯನ್ನೆಲ್ಲ ಹರಡಿ ಜಯಶೀಲರಾಗು- ತ್ತೇವೆ. ಸಮೃದ್ಧವಾದ ದಾನ-ದಕ್ಷಿಣೆಗಳಿಂದ ವಿವಿಧ ಯಜ್ಞಗಳಿಂದ ದೇವತೆಗಳನ್ನು ಪೂಜಿಸುತ್ತೇವೆ. ಈಗ ನಾವು ಅನುಭವಿಸುವ ವನವಾಸದುಃಖವೆಲ್ಲವೂ ಮುಂದಿನ ನಮ್ಮ ಅಪಾರ ಸುಖಕ್ಕೆ ಕಾರಣ ಎಂದು ಹೇಳಿದೆಯಲ್ಲವೇ?
ಇತ್ಯೇತಾನೇವಮುಕ್ತತ್ವ ತ್ವಂ ಸ್ವಯಂ ಧರ್ಮಭೃತಾಂ ವರ |
ಕಥಮದ್ಯ ಪುನರ್ವೀರ ವಿನಿಹಂಸಿ ಮನಾಂಸ್ಯುತ ॥12॥
ಧರ್ಮಶ್ರೇಷ್ಠನೇ! ಇದೇ ಸಾಂತ್ವನದ ಮಾತುಗಳನ್ನು, ನೀನೇ ಈ ಹಿಂದೆ ಹೇಳಿ ಈಗ ಪುನಃ ಅನುಚಿತವಾದ ಮಾತುಗಳಿಂದ ನಮ್ಮ ಮನಸ್ಸನ್ನೇಕೆ ನೋಯಿಸು- ತ್ತಿರುವಿ?
ನ ಕ್ಲೀಬೋ ವಸುಧಾಂ ಭುಂಕ್ತೇ ನ ಕ್ಲೀಬೋ ಧನಮಶ್ನುತೇ |
ನ ಕ್ಲೀಬಸ್ಯ ಗೃಹೇ ಪುತ್ರಾ ಮತ್ಸ್ಯಾಃ ಪಂಕ ಇವಾಸತೇ ॥13॥
ಹೇಡಿಯಾದವನು ಭೂಮಿಯನ್ನು ಅನುಭವಿಸಲಾರನು. ಧನವನ್ನು ಅನು- ಭವಿಸಲಾರನು. ಹೇಡಿಯ ಮನೆಯಲ್ಲಿ ಹುಟ್ಟಿದ ಮಕ್ಕಳೂ ಕೆಸರಿನಲ್ಲಿ ಬಿದ್ದ ಮೀನಿ- ನಂತಿರುವರು ಸುಖವನ್ನೇ ಅವರು ಕಾಣಲಾರರು.
ನಾದಂಡಃ ಕ್ಷತ್ರಿಯೋ ಭಾತಿ ನಾದಂಡೋ ಭೂತಿಮಶ್ನುತೇ |
ನಾದಂಡಸ್ಯ ಪ್ರಜಾ ರಾಜ್ಞಃ ಸುಖಮೇಧಂತಿ ಭಾರತ ॥14॥
ಭಾರತನೇ! ದಂಡವನ್ನು ಹಿಡಿಯದಿರುವ ಕ್ಷತ್ರಿಯನು ಶೋಭಿಸುವುದಿಲ್ಲ. ಅಂಥವನು ಭೂಮಿಯನ್ನು ಅನುಭವಿಸಲಾರನು. ಅವನ ಪ್ರಜೆಗಳೂ ಸುಖದಿಂದ ಇರಲಾರರು.
ಸದೇವಾಸುರಗಂಧರ್ವೈರಪ್ಸರೋಭಿರ್ವಿಭೂಷಿತಮ್ |
ರಕ್ಷೋಭಿರ್ಗುಹ್ಯಕೈರ್ನಾಗೈರ್ಮನುಷ್ಯೈಶ್ಚ ವಿಭೂಷಿತಮ್ ॥15॥
ದೇವತೆಗಳು, ಅಸುರರು, ಗಂಧರ್ವರು, ಅಪ್ಸರರು, ಗುಹ್ಯಕರು, ರಾಕ್ಷಸರು, ನಾಗರು, ಮನುಷ್ಯರು ಇದರಿಂದ ತುಂಬಿದ ಧರ್ಮಾರ್ಥ-ಕಾಮಗಳಿಂದ ಪೂರ್ಣ- ವಾದ ಈ ಜಗತ್ತೆಲ್ಲವೂ ರಾಜದಂಡದಿಂದ ನಿಯಂತ್ರಿಸಲ್ಪಟ್ಟಾಗಲೇ ಅನುಭವ- ಯೋಗ್ಯವಾಗುವುದು.
ತ್ರಿವರ್ಗೇಣ ಚ ಸಂಪೂರ್ಣಂ ತ್ರಿವರ್ಗಸ್ಯಾಗಮೇನ ಚ |
ದಂಡೇನಾಭ್ಯಾಹೃತಂ ಸರ್ವಂ ಜಗದ್ಭೋಗಾಯ ಕಲ್ಪತೇ ॥16॥
ಸಂಪೂರ್ಣವಾದ ಆಗಮದ ಅಧಿಕಾರವನ್ನು ಹೊಂದಿದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ತ್ರಿವರ್ಗದಿಂದ ಕೂಡಿದ ಈ ಜಗತ್ತು ಅನುಭವಕ್ಕೆ ಯೋಗ್ಯವಾಗುತ್ತದೆ.
ಸ್ವಾಯಂಭುವಂ ಮಹೀಪಾಲ ಆಗಮಂ ಶೃಣು ಶಾಶ್ವತಮ್ |
ವಿಪ್ರಾಣಾಂ ವಿದಿತಶ್ಚಾಯಂ ತವ ಚೈವ ವಿಶಾಂಪತೇ ॥17॥
ಸ್ವಾಯಂಭುವಮನುವಿನ ನೀತಿಶಾಸ್ತ್ರವು ಈ ಭೂಲೋಕದಲ್ಲಿ ಎಂದೆಂದೂ ಶಾಶ್ವತವಾಗಿದೆ. ಇದನ್ನು ಶ್ರದ್ಧೆಯಿಂದ ನೀನು ಕೇಳು. ಪ್ರತಿಯೊಬ್ಬ ಬ್ರಾಹ್ಮಣರಿಗೂ ಇದರ ಬಗ್ಗೆ ತಿಳಿದಿದೆ. ನೀನೂ ಸಹ ಈ ಆಗಮದ ಬಗ್ಗೆ ತಿಳಿದುಕೊಂಡಿರುವಿ.
ಅರಾಜಕೇ ಹಿ ಲೋಕೇಽಸ್ಮಿನ್ ಸರ್ವತೋ ವಿದ್ರುತೇ ಭಯಾತ್ |
ರಕ್ಷಾರ್ಥಮಸ್ಯ ಲೋಕಸ್ಯ ರಾಜಾನಮಸೃಜತ್ ಪ್ರಭುಃ |
ಮಹಾಕಾಯಂ ಮಹಾವೀರ್ಯಂ ಪಾಲೇನ ಜಗತಃ ಕ್ಷಮಮ್ ॥18॥
ಒಮ್ಮೆ ಈ ಜಗತ್ತು ರಾಜನಿಲ್ಲದೇ ಎಲ್ಲೆಡೆಯು ಭಯದಿಂದ ಚದುರಿ ಹೋಗಿತ್ತು. ಆಗ ಜಗತ್ತನ್ನು ರಕ್ಷಣೆ ಮಾಡುವುದಕ್ಕಾಗಿ ಆ ಸರ್ವೇಶ್ವರನಾದ ಪರ- ಮಾತ್ಮನು ರಾಜನನ್ನು ಸೃಷ್ಟಿ ಮಾಡಿದನು. ಅಂಥ ರಾಜನು ದೃಢವಾದ ಶರೀರ- ವುಳ್ಳವನೂ ಅತ್ಯಂತ ಪರಾಕ್ರಮಶಾಲಿಯೂ ಜಗತ್ತಿನ ರಕ್ಷಣೆಯಲ್ಲಿ ಸಂಪೂರ್ಣವಾಗಿ ಸಮರ್ಥನೂ ಆಗಿದ್ದನು.
ಅನಿಲಾಗ್ನಿಯಮಾರ್ಕಾಣಾಮಿಂದ್ರಸ್ಯ ವರುಣಸ್ಯ ಚ |
ಚಂದ್ರವಿತ್ತೇಶಯೋಶ್ಚೈವ ಮಾತ್ರಾ ನಿರ್ಹೃತ್ಯ ಶಾಶ್ವತೀಃ ॥19॥
ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ ಮೊದಲಾದ ಲೋಕ- ಪಾಲಕರು ಮತ್ತು ಸೂರ್ಯಚಂದ್ರರು ಇವರುಗಳಲ್ಲಿರುವ ಶಾಶ್ವತವಾದ ಅಂಶಗ- ಳನ್ನು ತೆಗೆದುಕೊಂಡು ಸಮರ್ಥರಾದ ರಾಜರುಗಳನ್ನು ಆ ಪರಮಾತ್ಮನು ಸೃಷ್ಟಿ ಮಾಡಿದನು.
ಟಿಪ್ಪಣಿ - ಮಾತ್ರಾ ನಿರ್ಹೃತ್ಯ ಶಾಶ್ವತೀಃ ಇತ್ಯತ್ರ ಯಸ್ಮಾದೇಷಾಂ ಸುರೇಂದ್ರಾ- ಣಾಂ ಶಾಶ್ವತೀಃ ಮಾತ್ರಾಃ ಅಂಶಾನ್ ನಿರ್ಹೃತ್ಯ ಆದಾಯ ಈಶ್ವರಾಃ ಸಮರ್ಥಾಃ ನೃಪಾಃ ಸಂಭವಂತಿ | ಏಷಃ ರಾಜಾ |
`ಮಾತ್ರಾ ನಿರ್ಹೃತ್ಯ ಶಾಶ್ವತೀಃ' - ಎಂಬಲ್ಲಿ `ಯಸ್ಮಾದೇಷಾಂ ಸುರೇಂದ್ರಾಣಾಂ ಶಾಶ್ವತೀಃ ಮಾತ್ರಾಃ' = ಯಾವ ದೇವಶ್ರೇಷ್ಠರ ಶಾಶ್ವತವಾದ ಅಂಶಗಳಿವೆಯೋ, ಅವುಗಳನ್ನು `ನಿರ್ಹೃತ್ಯ' = ತೆಗೆದುಕೊಂಡು, `ಈಶ್ವರಾಃ' =ಸಮರ್ಥರಾದ ರಾಜರುಗಳು ಸೃಷ್ಟರಾದರು.`ಏಷಃ' = ರಾಜನು.
ಯಸ್ಮಾದೇಷಾಂ ಸುರೇಂದ್ರಾಣಾಂ ಸಂಭವತ್ಯಂಶತೋ ನೃಪಃ |
ತಸ್ಮಾದಭಿಭವತ್ಯೇಷ ಸರ್ವಭೂತಾನಿ ತೇಜಸಾ ॥20॥
ಯಾವ ಕಾರಣದಿಂದ ರಾಜನು ದೇವಶ್ರೇಷ್ಠರ ಅಂಶದಿಂದ ಭೂಲೋಕದಲ್ಲಿ ಅವತರಿಸುವನೋ, ಆ ಕಾರಣದಿಂದ ಸಮಸ್ತ ಭೂತಗಳನ್ನು ಅಡಗಿಸುವ ಶಕ್ತಿ ಅವನಿಗಿರುತ್ತದೆ.

ತಪತ್ಯಾದಿತ್ಯವಚ್ಚೈವ ಚಕ್ಷೂಂಷಿ ಚ ಮನಾಂಸಿ ಚ |
ನಚೈನಂ ಭುವಿ ಶಕ್ನೋತಿ ಕಶ್ಚಿದಪ್ಯಭಿವೀಕ್ಷಿತುಮ್ ॥21॥
ಇಂಥ ಶ್ರೇಷ್ಠನಾದ ರಾಜನು ಸೂರ್ಯನಂತೆ ಜ್ವಲಿಸುತ್ತಾನೆ. ನೇರವಾಗಿ ಕಣ್ಣಿಟ್ಟು ಈ ರಾಜನನ್ನು ನೋಡುವ ಸಾಮರ್ಥ್ಯ ಯಾರಿಗೂ ಇರುವುದಿಲ್ಲ. ಮನಸ್ಸಿ- ನಿಂದಲೂ ಅವನ ಬಗ್ಗೆ ತಿಳಿಯಲು ಸಾಧ್ಯವಾಗುವುದಿಲ್ಲ. ಒಬ್ಬಿಬ್ಬರಿಗೆ ಅಷ್ಟೇ ಅಲ್ಲ. ಸಮಸ್ತಲೋಕದಲ್ಲಿ ಯಾರೊಬ್ಬರಿಗೂ ಕೂಡ ಈ ರಾಜನನ್ನು ತಿಳಿಯಲು ಸಾಧ್ಯವಾ- ಗುವುದಿಲ್ಲ.
ಸೋಽಗ್ನಿರ್ಭವತಿ ವಾಯುಶ್ಚ ಸೋಽರ್ಕಃ ಸೋಮಶ್ಚ ಧರ್ಮರಾಟ್ |
ಸ ಕುಬೇರಃ ಸ ವರುಣಃ ಸ ಮಹೇಂದ್ರಃ ಪ್ರತಾಪವಾನ್ ॥22॥
ರಾಜನು ಭೂಲೋಕದಲ್ಲಿ ಅಗ್ನಿಯಂತೆ ಬೆಳಗುತ್ತಾನೆ. ವಾಯುವಂತೆ ಸಂಚರಿ- ಸುತ್ತಾನೆ. ಸೂರ್ಯನಂತೆ ಪ್ರಖರನಾಗಿರುತ್ತಾನೆ. ಚಂದ್ರನಂತೆ ಶಾಂತನಾಗಿರುತ್ತಾನೆ. ಕುಬೇರನಂತೆ ಧನವಂತನಾಗಿರುತ್ತಾನೆ. ವರುಣನಂತೆ ಸುವೃಷ್ಟಿಪ್ರದನಾಗಿರುತ್ತಾನೆ. ಮಹೇಂದ್ರನಂತೆ ಪ್ರತಾಪಶಾಲಿಯಾಗಿರುತ್ತಾನೆ.
ಪಿತಾಮಹಸ್ಯ ದೇವಸ್ಯ ವಿಷ್ಣೋಃ ಶರ್ವಸ್ಯ ಚೈವ ಹಿ |
ಋಷೀಣಾಂ ಚೈವ ಸರ್ವೇಷಾಂ ತಸ್ಮಿಂಸ್ತೇಜಃ ಪ್ರತಿಷ್ಠಿತಮ್ ॥23॥
ಜಗದೀಶ್ವರನಾದ ಕ್ರೀಡಾದಿಗುಣವಿಶಿಷ್ಟನಾದ ಮಹಾವಿಷ್ಣುವಿನಲ್ಲಿರುವ ಜಗತ್ಪಾಲಕತ್ವಶಕ್ತಿಯು ಇವನಲ್ಲಿರುತ್ತದೆ. ಚತುರ್ಮುಖಬ್ರಹ್ಮನಲ್ಲಿರುವ ಸರ್ಜನ- ಶಕ್ತಿಯು ಇವನಲ್ಲಿರುತ್ತದೆ. ಮಹಾರುದ್ರದೇವನ ಸಂಹಾರಶಕ್ತಿಯೂ ಕೂಡ ಈ ರಾಜನಲ್ಲಿರುತ್ತದೆ. ಸಮಸ್ತಋಷಿಗಳ ಬ್ರಹ್ಮತೇಜಸ್ಸು ಇವನಲ್ಲಿ ನೆಲೆಗೊಂಡಿರುತ್ತದೆ.
ಬಾಲೋಽಪಿ ನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ |
ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥24॥
ರಾಜನು ಬಾಲಕನಾಗಿದ್ದರೂ ಕೂಡ ಸಾಮಾನ್ಯ ಮನುಷ್ಯನೆಂದು ಅವನನ್ನು ಉಪೇಕ್ಷೆ ಮಾಡಬಾರದು. ಮನುಷ್ಯರೂಪದಲ್ಲಿರುವ ಬಹುದೊಡ್ಡ ದೇವತೆಯೆಂದೇ ಅವನನ್ನು ಗೌರವಿಸಬೇಕು.
ಏಕಮೇವ ದಹತ್ಯಗ್ನಿರ್ನರಂ ದುರುಪಸರ್ಪಿಣಮ್ |
ಕುಲಂ ದಹತಿ ರಾಜಾಗ್ನಿಃ ಸಪಶುದ್ರವ್ಯಸಂಚಯಮ್ ॥25॥
ಒಂದೇ ಅಗ್ನಿಯು ಎಚ್ಚರ ತಪ್ಪಿ ಸಮೀಪಿಸಿದವನನ್ನು ಸುಟ್ಟುಬಿಡುತ್ತದೆ. ರಾಜ- ನೆಂಬ ಅಗ್ನಿಯೂ ಕೂಡ ಪಶು, ದ್ರವ್ಯಗಳಿಂದ ಸಹಿತವಾದ ಸಮಸ್ತಕುಲವನ್ನೇ ಭಸ್ಮ- ಮಾಡುತ್ತದೆ.
ವಿವರಣೆ - ಅಗ್ನಿಯನ್ನು ಎಚ್ಚರಿಕೆಯಿಂದ ಸರಿಯಾಗಿ ಉಪಯೋಗಿಸಿ- ಕೊಂಡಾಗ ನಮಗೆ ಅಪೇಕ್ಷಿತವಾದ ಎಲ್ಲಾ ಭಕ್ಷ್ಯಭೋಜ್ಯಗಳನ್ನು ನೀಡುತ್ತದೆ. ಜೀವನವನ್ನೇ ಹಸನ್ಮುಖಿಯನ್ನಾಗಿ ಮಾಡುತ್ತದೆ. ಆದರೆ ಉಪೇಕ್ಷೆಯಿಂದ ಉದಾ- ಸೀನದಿಂದ ಎಚ್ಚರ ತಪ್ಪಿ ಅಗ್ನಿಯ ಬಳಿ ಹೋದರೆ ನಮ್ಮನ್ನೇ ಸುಟ್ಟುಬಿಡುತ್ತದೆ. ಅದರಂತೆ ರಾಜನೂ ಕೂಡ ಸರಿಯಾದ ಭಾವನೆಯಿಂದ ಭಯಭಕ್ತಿಗಳಿಂದ ಸಹಿತನಾಗಿ ರಾಜನನ್ನು ಆಶ್ರಯಿಸಿದರೆ ನಮಗೆ ಜೀವನಪ್ರದನಾಗುತ್ತಾನೆ. ಉಪೇ- ಕ್ಷಿಸಿದರೆ ಸಂಪೂರ್ಣವಾಗಿ ನಾಶಮಾಡುತ್ತಾನೆ. ಅಗ್ನಿಯು ಕೇವಲ ನಮ್ಮನ್ನು ಸುಡುತ್ತದೆ. ಆದರೆ ಈ ರಾಜಾಜ್ಞೆಯು ನಮ್ಮನ್ನಷ್ಟೇ ಅಲ್ಲದೇ ನಮ್ಮಲ್ಲಿರುವ ಸಂಪತ್ತು ಪಶುಗಳು ಎಲ್ಲವನ್ನೂ ನಾಶಮಾಡಿ, ಸಮಸ್ತಕುಲವನ್ನೂ ಕೂಡ ನಾಶ ಮಾಡಿಬಿಡುತ್ತದೆ. ಆದ್ದರಿಂದ ಅತ್ಯಂತ ಎಚ್ಚರಿಕೆಯಿಂದ ರಾಜಾಜ್ಞೆಯ ಜೊತೆ ವ್ಯವ -ಹರಿಸಬೇಕು.
ಧೃತರಾಷ್ಟ್ರಕುಲಂ ದಗ್ಧಂ ಕ್ರೋಧೋದ್ಭೂತೇನ ವಹ್ನಿನಾ |
ಪ್ರತ್ಯಕ್ಷಮೇತಲ್ಲೋಕಸ್ಯ ಸಂಶಯೋ ಹಿ ನ ವಿದ್ಯತೇ ॥26॥
ಯುಧಿಷ್ಠಿರನೇ! ನಿನ್ನ ಕ್ರೋಧದಿಂದ ಹುಟ್ಟಿದ ಅಗ್ನಿಯಿಂದಲೇ ಆ ಧೃತರಾಷ್ಟ್ರನ ಕುಲವು ಸಂಪೂರ್ಣವಾಗಿ ಭಸ್ಮವಾಯಿತು. ಇದನ್ನು ಸಮಸ್ತ ಜಗತ್ತೇ ಕಣ್ಣಾರೆ ಕಂಡಿದೆ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.
ಕುಲಜೋ ವೃತ್ತಸಂಪನ್ನೋ ಧಾರ್ಮಿಕಶ್ಚ ಮಹೀಪತಿಃ |
ಪ್ರಜಾನಾಂ ಪಾಲನೇ ಯುಕ್ತಃ ಪೂಜ್ಯತೇ ದೈವತೈರಪಿ ॥27॥
ಉತ್ತಮ ಕುಲದಲ್ಲಿ ಹುಟ್ಟಿ, ಗೌರವದಿಂದ ಎಲ್ಲಾ ಧರ್ಮಗಳನ್ನು ಪಾಲನೆ ಮಾಡುತ್ತಾ, ಪ್ರಜೆಗಳನ್ನು ಹಿತದೃಷ್ಟಿಯಿಂದ ಯಾವ ರಾಜನು ರಕ್ಷಣೆ ಮಾಡು- ತ್ತಾನೋ, ಅಂಥವನನ್ನು ದೇವತೆಗಳೂ ಕೂಡ ಪ್ರಶಂಸೆ ಮಾಡುತ್ತಾರೆ. ಮತ್ತು ಪೂಜಿಸುತ್ತಾರೆ.
ವಿವರಣೆ - ರಾಜನಾದವನು ಉತ್ತಮಕುಲದಲ್ಲಿ ಹುಟ್ಟಿರಬೇಕು. ಎಲ್ಲಾ ಧರ್ಮಗಳನ್ನು ಪಾಲನೆ ಮಾಡಬೇಕು. ಪ್ರಜೆಗಳನ್ನು ನಿಷ್ಕಾಮವಾಗಿ ರಕ್ಷಣೆ ಮಾಡ- ಬೇಕು. ಇಂಥವನನ್ನು ಮಾತ್ರ ದೇವತೆಗಳು ಪೂಜಿಸುತ್ತಾರೆ. ರಾಜನಲ್ಲಿ ಈ ಎಲ್ಲಾ ಧರ್ಮಗಳು ಅವಶ್ಯವಾಗಿ ಇರಬೇಕು ಎಂಬುದು ಅಭಿಪ್ರಾಯ.
ಕಾರ್ಯಂ ಯೋಽವೇಕ್ಷ್ಯ ಶಕ್ತಿಂ ಚ ದೇಶಕಾಲೌ ಚ ತತ್ತ್ವತಃ |
ಕುರುತೇ ಧರ್ಮಸಿದ್ಧ್ಯರ್ಥಂ ವೈಶ್ವರೂಪಂ ಪುನಃಪುನಃ ॥28॥
ತಸ್ಯ ಪ್ರಸಾದೇ ಪದ್ಮಾತ್ಮಾ ವಿಜಯಶ್ಚ ಪರಾಕ್ರಮೇ |
ಮೃತ್ಯುಶ್ಚ ವಸತಿ ಕ್ರೋಧೇ ಸರ್ವತೇಜೋಮಯೋ ಹಿ ಸಃ ॥29॥
ರಾಜನು ತನ್ನಲ್ಲಿರುವ ಶಕ್ತಿ, ಮಾಡಬೇಕಾದ ಕರ್ತವ್ಯ ಹಾಗೂ ದೇಶಕಾಲಗಳು ಇವುಗಳನ್ನೆಲ್ಲಾ ಸರಿಯಾಗಿ ತಿಳಿದುಕೊಂಡಿರಬೇಕು. ಧರ್ಮಸಾಧನೆಗಳನ್ನು ಅನೇಕ ಮುಖಗಳಿಂದ ಮಾಡುತ್ತಿರಬೇಕು. ಒಮ್ಮೆ ಮಾತ್ರವಲ್ಲದೇ ಪುನಃ ಪುನಃ ಧರ್ಮವನ್ನು ಸಾಧಿಸಬೇಕು. ಅಂಥ ರಾಜನ ವಿಷಯದಲ್ಲಿ ಲಕ್ಷ್ಮಿಯು ಸಂಪೂರ್ಣವಾಗಿ ಒಲಿದು- ಬರುವಳು. ಅವನ ಪರಾಕ್ರಮಕ್ಕೆ ವಿಶೇಷವಾದ ಜಯವು ಒದಗಿ ಬರುವುದು. ಅವನ ಕೋಪದಲ್ಲಿ ಮೃತ್ಯುದೇವತೆಯು ನೆಲೆಗೊಳ್ಳುವುದು. ಹೀಗೆ ಅವನು ಸಕಲ ತೇಜೋಮಯನಾಗಿ ಕಂಗೊಳಿಸುವನು.
ಟಿಪ್ಪಣಿ - ವೈಶ್ವರೂಪಂ ನಾನಾರೂಪಂ ಕರ್ಮ, ಸಿದ್ಧ್ಯರ್ಥಂ ಕಾರ್ಯ- ಸಿದ್ಧ್ಯರ್ಥಂ ಕುರುತೇ | ತಸ್ಯ ಪ್ರಸಾದೇ ಸತಿ ಆಶ್ರಿತೋ ಜನಃ

ಪದ್ಮಾತ್ಮಾ ಪದ್ಮಾ ಸಂಪದ್ ಆತ್ಮನಿ ಯಸ್ಯಾಸೌ ಪದ್ಮಾತ್ಮಾ ಭವತಿ | `ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಇತ್ಯಮರಃ | ಪರಾಕ್ರಮೇ ಸತಿ ಶತ್ರವಃ ಶ್ರಿಯಂ ಸ್ವಸಂಪದಂ ವೇದಯಂತೀತಿ ಶ್ರೀವಿದೋ ಭವಂತಿ |
`ವೈಶ್ವರೂಪಂ' - ಅನೇಕ ವಿಧವಾದ ಕಾರ್ಯಗಳ ಸಿದ್ಧಿಗಾಗಿ ಅನೇಕ ಮುಖ- ಗಳಿಂದ ಸಾಧನೆಗೈಯ್ಯುತ್ತಾನೆ. `ತಸ್ಯ ಪ್ರಸಾದೇ ಸತಿ' - ಆ ರಾಜನಷ್ಟೇ ಲಕ್ಷ್ಮಿಯ ಅನುಗ್ರಹವನ್ನು ಹೊಂದುವುದಲ್ಲ. ಅವನನ್ನು ಆಶ್ರಯಿಸಿದ ವ್ಯಕ್ತಿಯೂ ಕೂಡ ಲಕ್ಷ್ಮಿಯ ಅನುಗ್ರಹವನ್ನು ಹೊಂದುತ್ತಾನೆ. `ಪದ್ಮಾತ್ಮಾ ' ಎಂಬಲ್ಲಿರುವ `ಪದ್ಮಾ' ಎಂಬ ಶಬ್ದಕ್ಕೆ ಸಂಪತ್ತು ಎಂದರ್ಥ. ಪದ್ಮಾತ್ಮನಾಗುತ್ತಾನೆ ಎಂದರೆ ಲಕ್ಷ್ಮಿಯ ಅನು- ಗ್ರಹವಿಶೇಷವನ್ನು ಹೊಂದುತ್ತಾನೆ ಎಂದರ್ಥ. ಪದ್ಮಾ ಎಂಬ ಶಬ್ದಕ್ಕೆ ಲಕ್ಷ್ಮೀ ಎಂಬರ್ಥವನ್ನು `ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಎಂಬ ಅಮರಕೋಶವು ಹೇಳುತ್ತದೆ. ರಾಜನಲ್ಲಿ ಉತ್ತಮವಾದ ಪರಾಕ್ರಮವಿದ್ದಾಗ ಶತ್ರುಗಳು ತಮ್ಮ ಸಂಪತ್ತನ್ನು ತಿಳಿಯುತ್ತಾರೆ. ಶ್ರೀವಿದರಾಗುತ್ತಾರೆ.
ತಂ ಯಸ್ತು ದ್ವೇಷ್ಟಿ ಸಮ್ಮೋಹಾತ್ ಸ ವಿನಶ್ಯತಿ ಮಾನವಃ |
ತಸ್ಯ ಹ್ಯಾಶುವಿನಾಶಾಯ ರಾಜಾऽಪಿ ಕುರುತೇ ಮನಃ ॥30॥
ಶ್ರೇಷ್ಠನಾದ ಈ ರಾಜನನ್ನು ಯಾರು ಭ್ರಾಂತಿಯಿಂದ ದ್ವೇಷ ಮಾಡುತ್ತಾನೋ, ಅಂಥ ಮಾನವನು ಸಂಪೂರ್ಣವಾಗಿ ನಾಶ ಹೊಂದುತ್ತಾನೆ. ಅಂಥ ಮಾನವನು ತನ್ನ ರಾಜ್ಯದಲ್ಲಿ ಕ್ಷಣಕಾಲವೂ ಬದುಕುವುದು ಬೇಡವೆಂದು ರಾಜನು ಅಂದುಕೊಳ್ಳು- ತ್ತಾನೆ.
ವಿವರಣೆ - ಅತ್ಯಂತ ಧಾರ್ಮಿಕನಾದ ತಪಃಶಕ್ತಿಯುಳ್ಳ ಅತೀಂದ್ರಿಯ ಸಾಮರ್ಥ್ಯ ಹೊಂದಿದ ರಾಜನಿಗೆ ದುಷ್ಟನಾದ ಮಾನವನು ತನ್ನ ರಾಜ್ಯದಲ್ಲಿ ಇರುವುದು ಬೇಡವೆಂದು ಅನಿಸಿದರೂ ಸಾಕು. ಅಂಥ ಮಾನವನು ಸಂಪೂರ್ಣ- ವಾಗಿ ನಷ್ಟನಾಗುತ್ತಾನೆ. ಆದ್ದರಿಂದ ಗುಣವಂತನಾದ ರಾಜನನ್ನು ಮೋಹದಿಂದ ಅಥವಾ ಬೇರೆ ಯಾವುದೇ ಕಾರಣದಿಂದ ಸರ್ವಥಾ ದ್ವೇಷ ಮಾಡಬಾರದು.
ತಸ್ಮಾದ್ ಧರ್ಮಂ ಯದಿಷ್ಟೇಷು ಸ ವ್ಯವಸ್ಯತಿ ಪಾರ್ಥಿವಃ |
ಅನಿಷ್ಟಂ ಚಾಪ್ಯನಿಷ್ಟೇಷು ತದ್ಧರ್ಮಂ ನ ವಿಚಾಲಯೇತ್ ॥31॥
ಆದ್ದರಿಂದ ರಾಜನು ಯಾರು ತನ್ನನ್ನು ಇಷ್ಟ ಪಡುತ್ತಾರೋ, ಅಂಥವರಲ್ಲಿ ಸದ್ಗುಣವಂತನಾಗಿರುತ್ತಾನೆ. ಅವರಿಗೆ ಒಳ್ಳೆಯದನ್ನೇ ಮಾಡುತ್ತಾನೆ. ಯಾರು ತನ್ನನ್ನು ಇಷ್ಟಪಡುವುದಿಲ್ಲವೋ, ಅಂಥವರಿಗೆ ಒಳ್ಳೆಯದನ್ನು ಸರ್ವಥಾ ಮಾಡಲಾರ. ಅನಿಷ್ಟವನ್ನೇ ಅವರಿಗೆ ಮಾಡುತ್ತಾನೆ. ಇದುವೇ ಆ ರಾಜನ ಧರ್ಮವಾಗಿದೆ. ಈ ಧರ್ಮವನ್ನು ಅವನು ತಪ್ಪುವುದು ಧರ್ಮಸಮ್ಮತವಲ್ಲ.
ತಸ್ಯಾರ್ಥೇ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಮ್ |
ಬ್ರಹ್ಮತೇಜೋಮಯಂ ದಂಡಮಸೃಜತ್ ಪೂರ್ವಮೀಶ್ವರಃ ॥32॥
ಸಮಸ್ತ ಜಗತ್ತನ್ನು ರಕ್ಷಣೆ ಮಾಡುವುದಕ್ಕಾಗಿ ಬ್ರಹ್ಮನ ತೇಜೋಮಯರೂಪ- ವಾದ ದಂಡನೀತಿಯನ್ನು ರಾಜನಿಗೋಸ್ಕರವೇ ಆ ಭಗವಂತನು ಸೃಷ್ಟಿಮಾಡಿ- ರುವನು. ಆ ದಂಡನೀತಿಯನ್ನು ಹೊಂದಿದ ರಾಜನು ಸಕಲಭೂತಗಳನ್ನು ನಿರಾ- ತಂಕವಾಗಿ ರಕ್ಷಣೆ ಮಾಡಲು ಸಮರ್ಥನಾಗುವನು.
ತಸ್ಯ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ಭಯಾದ್ ಭೋಗಾಯ ಕಲ್ಪಂತೇ ಧರ್ಮಾನ್ನ ವಿಚಲಂತಿ ಚ ॥33॥
ಈ ದಂಡನೀತಿಯನ್ನು ತಿಳಿದ ಸ್ಥಾವರ ಜಂಗಮ ಪ್ರಾಣಿಗಳು ಭಯಪಡುತ್ತವೆ. ಆ ಭಯದಿಂದಲೇ ವಿಹಿತವಾದದ್ದನ್ನಷ್ಟೇ ಭೋಗ ಮಾಡುತ್ತವೆ. ಎಂದೆಂದೂ ಧರ್ಮ- ವನ್ನು ಬಿಟ್ಟಿರಲು ಮನಸ್ಸನ್ನು ಮಾಡುವುದಿಲ್ಲ.
ದೇಶಕಾಲೌ ಚ ಶಕ್ತಿಂ ಚ ಕಾರ್ಯಂ ಚಾವೇಕ್ಷ್ಯ ತತ್ತ್ವತಃ |
ಯಥಾರ್ಹತಃ ಸಂಪ್ರಣಯೇನ್ನರೇಷ್ವನ್ಯಾಯವರ್ತಿಷು ॥34॥
ನ್ಯಾಯಮಾರ್ಗದಲ್ಲಿ ಇರುವ ಎಲ್ಲಾ ಪ್ರಜೆಗಳನ್ನು ದೇಶಕಾಲಗಳಿಗೆ ತಕ್ಕಂತೆ ತನ್ನ ಶಕ್ತಿಗೆ ಅನುಗುಣವಾಗಿ ಪ್ರಾಮಾಣಿಕವಾಗಿ ರಾಜನು ರಕ್ಷಣೆ ಮಾಡಬೇಕು. ಅನ್ಯಾಯ ಮಾರ್ಗದಲ್ಲಿ ಸಾಗುವವನಿಗೆ ಯಥಾಯೋಗ್ಯವಾಗಿ ಶಿಕ್ಷೆಯನ್ನೂ ಕೂಡ ನೀಡ- ಬೇಕು.
ಸ ರಾಜಾ ಪುರುಷೋ ದಂಡಃ ಸ ನೇತಾ ಶಾಸಿತಾ ಚ ಸಃ |
ವರ್ಣಾನಾಮಾಶ್ರಮಾಣಾಂ ಚ ಧರ್ಮಪ್ರಭುರಥಾವ್ಯಯಃ ॥35॥
ಸಮಸ್ತ ಲೋಕಕ್ಕೆ ದಂಡನೀತಿಯೇ ರಾಜನ ಸ್ಥಾನದಲ್ಲಿದೆ. ಅದರಿಂದಲೇ ಎಲ್ಲಾ ಪ್ರಜೆಗಳು ತಮ್ಮ ಕರ್ತವ್ಯಗಳ ಬಗ್ಗೆ ಎಚ್ಚರ ವಹಿಸುತ್ತಾರೆ. ಆದ್ದರಿಂದ ದಂಡನೀತಿ- ಯನ್ನು ಅಳವಡಿಸಿಕೊಂಡ ರಾಜನಷ್ಟೇ ಭೂಲೋಕವನ್ನು ರಕ್ಷಣೆ ಮಾಡಲು ಸಮರ್ಥನಾಗುತ್ತಾನೆ. ಸಕಲ ವರ್ಣಗಳ, ಸಕಲ ಆಶ್ರಮಗಳ ಧರ್ಮಗಳಿಗೆ ಸ್ವಾಮಿ- ಯಾದ ಎಂದೆಂದೂ ನಾಶವಾಗದ ಈ ದಂಡನೀತಿಯು ಅತ್ಯಂತ ಶ್ರೇಷ್ಠವಾಗಿದೆ.
ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ |
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥36॥
ದಂಡವೇ ಪ್ರಜೆಗಳನ್ನು ಶಾಸನೆ ಮಾಡುತ್ತದೆ. ರಕ್ಷಣೆ ಮಾಡುತ್ತದೆ. ಸಮಸ್ತ ಜಗತ್ತು ಮಲಗಿದಾಗಲೂ ಈ ದಂಡನೀತಿಯು ಎಚ್ಚರದಿಂದಿರುತ್ತದೆ. ಆದ್ದರಿಂದ ಈ ದಂಡನೀತಿಯನ್ನು ಧರ್ಮಸ್ವರೂಪವೆಂದು ವಿದ್ವಾಂಸರು ತಿಳಿಯುತ್ತಾರೆ.
ಸುಸಮೀಕ್ಷ್ಯ ಧೃತೋ ದಂಡಃ ಸರ್ವಾ ರಂಜಯತಿ ಪ್ರಜಾಃ |
ಅಸಮೀಕ್ಷ್ಯ ಪ್ರಣೀತಸ್ತು ವಿನಾಶಯತಿ ಸರ್ವಶಃ ॥37॥
ಚೆನ್ನಾಗಿ ವಿಚಾರ ಮಾಡಿ, ಅಳವಡಿಸಿದ ದಂಡವು ಪ್ರಜೆಗಳ ಸಂತೋಷಕ್ಕೆ ಕಾರಣವಾಗುತ್ತದೆ. ವಿಚಾರ ಮಾಡದೇ ಪ್ರಯೋಗಿಸಿದ ದಂಡನೀತಿಯು ಎಲ್ಲರನ್ನು ನಾಶಗೊಳಿಸುತ್ತದೆ. ಆದ್ದರಿಂದ ರಾಜನಾದವನು ವಿಚಾರ ಮಾಡಿ, ದಂಡವನ್ನು ಪ್ರಯೋಗ ಮಾಡಬೇಕು.
ಯದಿ ನ ಪ್ರಣಯೇದ್ ರಾಜಾ ದಂಡಂ ದಂಡ್ಯೇಷ್ವತಂದ್ರಿತಃ |
ಜಲೇ ಮತ್ಸ್ಯಾನಿವಾಭಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥38॥
ಇಂದ್ರಿಯಗಳ ಹತೋಟಿಯನ್ನು ಕಳೆದುಕೊಂಡು, ದಂಡನೀತಿಯನ್ನು ಪ್ರಜೆಗಳ ವಿಷಯದಲ್ಲಿ ಎಚ್ಚರಿಕೆಯಿಂದ ಪ್ರಯೋಗ

ಮಾಡದಿದ್ದರೆ ಆಗ ನೀರಿನಲ್ಲಿರುವ ಬಲಿಷ್ಠ -ವಾದ ಮೀನುಗಳು ಸಣ್ಣಮೀನುಗಳನ್ನು ಭಕ್ಷಿಸುವಂತೆ ಲೋಕದಲ್ಲಿ ಬಲಾಢ್ಯರು ದುರ್ಬಲರನ್ನು ಭಕ್ಷಿಸುತ್ತಾರೆ.
ವಿವರಣೆ - ರಾಜನಾದವನು ಆಯಾ ಪ್ರಜೆಗಳಿಗೆ ಅನುಗುಣವಾಗಿ ದಂಡ- ನೀತಿಶಾಸ್ತ್ರವು ಹೇಳುವಂತೆ ದಂಡನೀತಿಯನ್ನು ಅಳವಡಿಸಬೇಕು.  ಗಮನಿಸಿ ಪ್ರತಿಯೊಬ್ಬರಿಗೂ ಶಿಕ್ಷೆಯನ್ನು ಕೊಡಬೇಕು. ಇಲ್ಲದಿದ್ದರೆ ದುರ್ಬಲರು ಅತ್ಯಂತ ಪ್ರಾಮಾಣಿಕರಾಗಿದ್ದರೂ ಕೂಡ ಬಲಿಷ್ಠರಿಂದ ಸೋಲುತ್ತಾರೆ. ದುರ್ಬಲರಲ್ಲಿರುವ ಧರ್ಮ, ಪ್ರಾಮಾಣಿಕತನ ಇವುಗಳಿಗೆ ಜಗತ್ತಿನಲ್ಲಿ ಬೆಲೆಯೇ ಇಲ್ಲದಂತಾಗುತ್ತದೆ. ಆದ್ದರಿಂದ ಧರ್ಮ, ಪ್ರಾಮಾಣಿಕತನ ಇವುಗಳಿಗೆ ಮಾನ್ಯತೆಯನ್ನು ನೀಡುವುದ- ಕ್ಕಾಗಿ ದಂಡನೀತಿಯನ್ನು ಪ್ರತಿಯೊಬ್ಬರಲ್ಲಿಯೂ ಕೂಡ ಅಳವಡಿಸಬೇಕು.
ಕಾಕೋಽದ್ಯಾಚ್ಚ ಪುರೋಡಾಶಂ ಶ್ವಾ ಚೈವಾಬಲಿಹೇದ್ಧವಿಃ |
ಸ್ವಾಮಿತ್ವಂ ನ ಕ್ವಚಿಚ್ಚ ಸ್ಯಾತ್ ಪ್ರಪದ್ಯೇತಾಧರೋತ್ತರಮ್ ॥39॥
ರಾಜನಾದವನು ದಂಡನೀತಿಯನ್ನು ಪ್ರಯೋಗ ಮಾಡದಿದ್ದರೆ ಲೋಕದಲ್ಲಿ ಅನೇಕ ಅನರ್ಥಗಳೇ ಉಂಟಾಗುತ್ತವೆ. ಕಾಗೆಯು ಪವಿತ್ರವಾದ ಪುರೋಡಾಶವನ್ನು ಭಕ್ಷಿಸುತ್ತದೆ. ನಾಯಿಯು ಯಜ್ಞದ ಹವಿಸ್ಸನ್ನು ತಿನ್ನುತ್ತದೆ. ಜಗತ್ತಿನಲ್ಲಿ ಯಾರೊಬ್ಬ ಪ್ರಭುವೇ ಇಲ್ಲದಂತಾಗಿ ಅಧಮರು ಉತ್ತಮರಾಗುತ್ತಾರೆ. ಉತ್ತಮರು ಅಧಮರಾ- ಗುವ ದುಃಸ್ಥಿತಿವುಂಟಾಗುತ್ತದೆ.
ಸರ್ವೋ ದಂಡಜಿತೋ ಲೋಕೋ ದುರ್ಬಲಸ್ತು ಶುಚಿರ್ನರಃ |
ದಂಡಸ್ಯ ಹಿ ಭಯಾತ್ ಸರ್ವಂ ಜಗದ್ಭೋಗಾಯ ಕಲ್ಪತೇ ॥40॥
ಲೋಕದಲ್ಲಿ ದಂಡನೀತಿಯನ್ನು ಅಳವಡಿಸದಿದ್ದರೆ ಬಾಹ್ಯವಾಗಿ, ಆಂತರಿಕವಾಗಿ ಶುಚಿರ್ಭೂತನಾದ ಒಬ್ಬ ಮನುಷ್ಯನೇ ದೊರೆಯಲು ಸಾಧ್ಯವಾಗುವುದಿಲ್ಲ. ಯಾವಾಗ ದಂಡನೀತಿಯನ್ನು ರಾಜನಾದವನು ಅಳವಡಿಸುತ್ತಾನೋ, ಆಗ ಅದರ ಭಯದಿಂದ ಸಮಸ್ತಲೋಕವು ಶುಚಿಯಾಗಿರುತ್ತದೆ. ಅಂಥ ಜಗತ್ತು ಸುಖದ ಅನುಭವವನ್ನು ಹೊಂದಲು ಸಾಧ್ಯ.
ದೇವದಾನವಗಂಧರ್ವಾ ರಕ್ಷಾಂಸಿ ಪತಗೋರಗಾಃ |
ತೇಽಪಿ ಭೋಗಾಯ ಕಲ್ಪಂತೇ ದಂಡೇನೈವಾಭಿಪೀಡಿತಾಃ ॥41॥
ದೇವತೆಗಳು, ಅಸುರರು, ಗಂಧರ್ವರು, ರಕ್ಷಸರು, ಪತಗರು, ಉರಗಗಳು ದಂಡಕ್ಕೆ ಹೆದರಿಯೇ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿದ್ದಾರೆ. ಹಾಗೂ ಭೋಗಗಳಿಗೆ ಪಾತ್ರರಾಗಿರುತ್ತಾರೆ.
ದೂಷ್ಯೇಯುಃ ಸರ್ವವರ್ಣಾಶ್ಚ ಭಿದ್ಯೇರನ್ ಸರ್ವಸೇತವಃ |
ಸರ್ವಲೋಕಪ್ರಕೋಪಶ್ಚ ಭವೇದ್ ದಂಡಸ್ಯ ವಿಭ್ರಮಾತ್ ॥42॥
ದಂಡನೀತಿಯನ್ನು ಅಳವಡಿಸದಿದ್ದರೆ ವರ್ಣಾಶ್ರಮ ವ್ಯವಸ್ಥೆಯೇ ಹಾಳಾಗುತ್ತದೆ. ಎಲ್ಲಾ ಕಟ್ಟುಪಾಡುಗಳು ಛಿದ್ರಗೊಳ್ಳುತ್ತವೆ. ಸಮಸ್ತ ಲೋಕವು ಪ್ರಕ್ಷೋಭವಾಗುತ್ತದೆ.
ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಪಾಪಹಾ |
ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ ಸಾಧು ಪಶ್ಯತಿ ॥43॥
ದಂಡಪುರುಷನು ಕಪ್ಪಾದ ದೇಹದಿಂದ ಕೂಡಿ, ಕೆಂಪಾದ ಕಣ್ಣುಗಳಿಂದ ಎಲ್ಲೆಡೆಯೂ ನೋಡುತ್ತಾ ಪಾಪಿಗಳನ್ನು ಶಿಕ್ಷಿಸುತ್ತಿರುತ್ತಾನೆ. ಇವನ ಸಂಚಾರ ಎಲ್ಲಿರುತ್ತದೋ, ಅಲ್ಲಿರುವ ಪ್ರಜೆಗಳು ತಮ್ಮ ನಿಯಮದಂತೆ ಸರಿಯಾಗಿ ನಡೆದು- ಕೊಂಡು, ಸನ್ಮಾರ್ಗಾನುಯಾಯಿಗಳಾಗುತ್ತಾರೆ. ಎಂದೆಂದೂ ಅಜ್ಞಾನಕ್ಕೆ ತುತ್ತಾಗು- ವುದಿಲ್ಲ.
ಟಿಪ್ಪಣಿ - ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಇತ್ಯತ್ರ ಕೋಪಾತ್ ಶ್ಯಾಮಃ ಶ್ಯಾಮವದನಃ ಲೋಹಿತಾಕ್ಷಶ್ಚ ದಂಡಃ ದಂಡಕೋ ರಾಜಾ |
`ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ' - ಎಂಬಲ್ಲಿ ಕೋಪದಿಂದ ಕಪ್ಪು- ಬಣ್ಣವನ್ನು ಹೊಂದಿದ್ದಾನೆ. ಶ್ಯಾಮವರ್ಣದ ವದನವನ್ನು ಹೊಂದಿದ್ದಾನೆ. ಕೆಂಪಾದ ಕಣ್ಣುಗಳನ್ನು ಹೊಂದಿದ್ದಾನೆ. ಇಂಥ ದಂಡಪುರುಷನೇ ಲೋಕದ ರಾಜನಾಗಿದ್ದಾನೆ ಎಂದಭಿಪ್ರಾಯ.
ಆಹುಸ್ತಸ್ಯ ಪ್ರಣೇತಾರಂ ರಾಜಾನಂ ಸತ್ಯವಾದಿನಮ್ |
ಸಮೀಕ್ಷ್ಯಕಾರಿಣಂ ಪ್ರಾಜ್ಞಂ ಧರ್ಮಕಾಮಾರ್ಥಕೋವಿದಮ್ ॥44॥
ತಂ ರಾಜಾ ಪ್ರಣಯನ್ ಸಮ್ಯಕ್ ಸ್ವರ್ಗಾಯಾಭಿಪ್ರವರ್ತತೇ |
ಕಾಮಾತ್ಮವಿಷಯೀ ಕ್ಷುದ್ರೋ ದಂಡೇನೈವ ನಿಹನ್ಯತೇ ॥45॥
ಸಮಸ್ತ ಪ್ರಜೆಗಳು ತಮ್ಮ ನಿಯಮದಲ್ಲಿ ತೊಡಗಲು ಕಾರಣನಾದ ಈ ದಂಡ- ಪುರುಷನೇ ರಾಜನ ಸ್ಥಾನದಲ್ಲಿ ನಿಂತಿದ್ದಾನೆ. ಎಲ್ಲಾ ಜ್ಞಾನಿಗಳು ಇವನನ್ನು ಸತ್ಯವಾದಿ ಎನ್ನುತ್ತಾರೆ. ಜಗತ್ತಿಗೆ ಪ್ರಣೇತೃವಾಗಿದ್ದಾನೆ. ಎಲ್ಲವನ್ನು ನೋಡುತ್ತಾ ಆಯಾ ಕೆಲಸ- ಗಳನ್ನು ಮಾಡಿಸುತ್ತಾನೆ. ಅತ್ಯಂತ ಪ್ರಾಜ್ಞನಾಗಿದ್ದಾನೆ. ಧರ್ಮ, ಅರ್ಥ, ಕಾಮಗಳನ್ನು ಅರಿತಿದ್ದಾನೆ. ಇಂಥ ದಂಡಪುರುಷನನ್ನು ಸರಿಯಾಗಿ ಆಲೋಚನೆ ಮಾಡಿ, ಪ್ರಜೆಗಳ ವಿಷಯದಲ್ಲಿ ರಾಜನಾದವನು ಪ್ರಯೋಗಿಸಬೇಕು. ಅಂಥ ರಾಜನು ಸ್ವರ್ಗವನ್ನೇ ಪಡೆಯುತ್ತಾನೆ. ಇದನ್ನು ಪಾಲಿಸದೇ ತನ್ನ ಕಾಮನೆಯಲ್ಲೇ ಮನಸ್ಸನ್ನಿಟ್ಟ ನೀಚನಾದ ರಾಜನು ಅದೇ ದಂಡಪುರುಷನಿಂದ ಹತನಾಗುತ್ತಾನೆ.
ವಿವರಣೆ - ರಾಜನಾದವನು ಸ್ವತಂತ್ರವಾಗಿ ಏನನ್ನೂ ಮಾಡುವಂತಿಲ್ಲ. ಕಾನೂನಿಗೆ ಅನುಗುಣವಾಗಿಯೇ ವರ್ತಿಸಬೇಕು. ದಂಡನೀತಿಯು ಆಯಾ ಕಾಲ- ಗಳಲ್ಲಿ ಪ್ರತಿಯೊಬ್ಬನು ಮಾಡಬೇಕಾದ ಕರ್ತವ್ಯಗಳನ್ನು ಬೋಧನೆ ಮಾಡುತ್ತದೆ. ಅದಕ್ಕನುಗುಣವಾಗಿ ಯಾರು ವರ್ತನೆ ಮಾಡುವುದಿಲ್ಲವೋ, ಅವರನ್ನು ಶಿಕ್ಷಿಸು- ವುದು ರಾಜನ ಕರ್ತವ್ಯವಾಗಿರುತ್ತದೆ. ಆದ್ದರಿಂದ ರಾಜನಿಗೂ ಕೂಡ ಮಾನ್ಯವಾ- ದದ್ದು ದಂಡನೀತಿ. ಆದ್ದರಿಂದಲೇ ಪ್ರಕೃತ ಈ ಶ್ಲೋಕಗಳಲ್ಲಿ ದಂಡನೀತಿಯನ್ನೇ ರಾಜನ ಸ್ಥಾನದಲ್ಲಿ ವರ್ಣಿಸುತ್ತಿದ್ದಾರೆ. ರಾಜನಿಗೂ, ರಾಜನಂತಿರುವ ಈ ದಂಡನೀತಿಯು ಪ್ರತಿಯೊಬ್ಬರಿಗೂ ಕೂಡ ಅನ್ವಯಿಸುವಂತೆ ರಾಜನಿಗೂ ಕೂಡ ಅನ್ವಯಿಸುತ್ತದೆ. ಆ ದಂಡನೀತಿಗೆ ವಿರುದ್ಧವಾಗಿ ರಾಜನು ವರ್ತನೆ ಮಾಡಿದಲ್ಲಿ ಸ್ವತಃ ದಂಡಪುರುಷನೇ ಆ ರಾಜನನ್ನು ಸಂಹಾರ

ಮಾಡುತ್ತಾನೆ.
ದಂಡೋ ಹಿ ಸುಮಹಾತೇಜಾ ದುರ್ಧರಶ್ಚಾಕೃತಾತ್ಮಭಿಃ |
ಧರ್ಮಾದ್ ವಿಚಲಿತಂ ಹಂತಿ ನೃಪಮೇವ ಸಬಾಂಧವಮ್ ॥46॥
ಆ ದಂಡನೀತಿಯು ಅತ್ಯಂತ ತೇಜಸ್ಸುಳ್ಳದ್ದು. ಪ್ರಾಜ್ಞರಿಗಲ್ಲದೇ ಅಜ್ಞಾನಿಗಳಿಗೆ ಇದನ್ನು ಅರ್ಥಮಾಡಿಕೊಳ್ಳಲು ಮತ್ತು ಅನುಸರಿಸಲು ಸಾಧ್ಯವೇ ಆಗುವುದಿಲ್ಲ. ಜಗತ್ತಿನಲ್ಲಿ ಯಾರು ಧರ್ಮದಿಂದ ವಿಚಲಿತನಾಗಿರುತ್ತಾನೋ, ಅಂಥವನು ರಾಜ- ನಾಗಿದ್ದರೂ ಸರಿ, ಬಂಧುಬಾಂಧವರ ಜೊತೆ ಆ ದಂಡಪುರುಷನು ನಾಶಮಾಡು- ತ್ತಾನೆ. ರಾಜನನ್ನೇ ಸಂಹಾರ ಮಾಡುತ್ತಾನೆ.
ತತೋ ದುರ್ಗಂ ರಾಷ್ಟ್ರಂ ಚ ಲೋಕಂ ಚ ಸಚರಾಚರಮ್ |
ಅಂತರಿಕ್ಷಗತಾಂಶ್ಚೈವ ಮುನೀನ್ ದೇವಾಂಶ್ಚ ಹಿಂಸತಿ ॥47॥
ಧರ್ಮಭ್ರಷ್ಟನಾದ ರಾಜನನ್ನಷ್ಟೇ ದಂಡಪುರುಷನು ನಾಶಮಾಡುವುದಲ್ಲ. ಅವನ ದುರ್ಗವನ್ನು, ರಾಷ್ಟ್ರವನ್ನು ಚರಾಚರಾತ್ಮಕವಾದ ಸಮಸ್ತಲೋಕವನ್ನೇ ನಾಶಮಾಡುತ್ತಾನೆ. ಮತ್ತು ಆಕಾಶದಲ್ಲಿರುವ ಪ್ರಾಣಿಗಳನ್ನು, ಮುನಿಗಳನ್ನು, ದೇವತೆಗಳನ್ನೂ ಕೂಡ ನಿಗ್ರಹಿಸುತ್ತಾನೆ.
ವಿವರಣೆ - ರಾಜನಾದವನು ಅತ್ಯಂತ ಧರ್ಮಿಷ್ಠನಾಗಿರಬೇಕು. ಇಲ್ಲದಿದ್ದರೆ ತಾನಷ್ಟೇ ದಂಡನೀತಿಯಿಂದ ನಷ್ಟನಾಗುವುದಲ್ಲ, ಅವನಿಂದ ಸಮಸ್ತ ಜಗತ್ತೇ ನಾಶವಾಗುವ ಭೀಕರ ಪರಿಸ್ಥಿತಿ ಎದುರಾಗುತ್ತದೆ. ಇದರಿಂದ ಋಷಿಮುನಿಗಳಿಗೆ ಸಾಕ್ಷಾತ್ಕಾರಕ್ಕಾಗಿ ತಪಸ್ಸನ್ನು ಮಾಡಲೂ ಕೂಡ ಸಾಧ್ಯವಾಗುವುದಿಲ್ಲ. ರಾಜ- ನಾದವನು ಅಧರ್ಮಮಾರ್ಗದಲ್ಲಿದ್ದಾಗ ದೇವತೆಗಳಿಗೂ ಕೂಡ ಸುಖ-ಶಾಂತಿ- ಗಳು ದೊರಕುವುದಿಲ್ಲ. ಆದ್ದರಿಂದ ರಾಜನು ಅತ್ಯಂತ ಎಚ್ಚರಿಕೆಯಿಂದ ದಂಡ- ನೀತಿಯನ್ನು ಅಳವಡಿಸಿಕೊಳ್ಳಬೇಕು.
ಸೋಽಸಹಾಯೇನ ಮೂಢೇನ ಲುಬ್ಧೇನಾಕೃತಬುದ್ಧಿನಾ |
ಅಶಕ್ಯೋ ನ್ಯಾಯತೋ ನೇತುಂ ವಿಷಯಾಂಶ್ಚೈವ ಸೇವತಾ ॥48॥
ಯಾರು ಅಸಹಾಯಕನೋ, ಮೂರ್ಖನೋ, ಲೋಭಿಯೋ, ವಿಚಾರ ಮಾಡದ ಬುದ್ಧಿಯುಳ್ಳವನೋ, ಅಂಥವನಿಗೆ ನ್ಯಾಯರೀತಿಯಿಂದ ಈ ದಂಡನೀತಿ- ಯನ್ನು ಅಳವಡಿಸಿಕೊಳ್ಳಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಇಂದ್ರಿಯನಿಗ್ರಹ- ವನ್ನು ಹೊಂದಲೇಬೇಕು.
ಶುಚಿನಾ ಸತ್ಯಸಂಧೇನ ನೀತಿಶಾಸ್ತ್ರಾನುಸಾರಿಣಾ |
ದಂಡಃ ಪ್ರಣೇತುಂ ಶಕ್ಯೋ ಹಿ ಸುಸಹಾಯೇನ ಧೀಮತಾ ॥49॥
ಶುಚಿಯಾದವನು, ಸತ್ಯಸಂಧನಾದವನು, ನೀತಿಶಾಸ್ತ್ರವನ್ನು ಅನುಸರಿಸುವವನು, ಸಹಾಯಸಂಪತ್ತುಳ್ಳವನು, ಬುದ್ಧಿವಂತನು ಆದ ರಾಜನಷ್ಟೇ ಆ ದಂಡವನ್ನು ಪ್ರಯೋಗಿಸಲು ಸಮರ್ಥನಾಗುತ್ತಾನೆ.
ಸ್ವರಾಷ್ಟ್ರೇ ನ್ಯಾಯವರ್ತೀ ಸ್ಯಾದ್ ಭೃಶದಂಡಶ್ಚ ಶತ್ರುಷು |
ಸುಹೃತ್ಸ್ವಜಿಹ್ಮಃ ಸ್ನಿಗ್ಧೇಷು ಬ್ರಾಹ್ಮಣೇಷು ಕ್ಷಮಾನ್ವಿತಃ ॥50॥
ತನ್ನ ರಾಷ್ಟ್ರದಲ್ಲಿ ನ್ಯಾಯದಿಂದ ವರ್ತಿಸುತ್ತಿರುವ ಶತ್ರುಗಳನ್ನು ಅತ್ಯಂತ ಕಠಿಣ- ವಾಗಿಯೇ ದಂಡಿಸಬೇಕಾಗುತ್ತದೆ. ಸ್ನೇಹಿತರಲ್ಲಿ ಎಂದೂ ಸಹ ವಕ್ರಬುದ್ಧಿಯನ್ನು ಹೊಂದಬಾರದು. ಬ್ರಾಹ್ಮಣರಲ್ಲಿ ಕ್ಷಮಾಶೀಲನಾಗಿರಬೇಕು. ಇಂಥ ರಾಜನು ದಂಡನೀತಿಗೆ ಅರ್ಹನಾಗುತ್ತಾನೆ.
ದಂಡನೀತಿ ಎಂದರೇನು ?
ವಿವರಣೆ - ರಾಜನೀತಿಯನ್ನೇ ದಂಡನೀತಿ ಎನ್ನುತ್ತಾರೆ. ಅರ್ಥಶಾಸ್ತ್ರವನ್ನೂ ಕೂಡ ದಂಡನೀತಿ ಎನ್ನುತ್ತಾರೆ. `ದಂಡೇನ ನೀಯತೇ ದಂಡನೀತಿಃ' ಎಂದು ಇದರ ವ್ಯುತ್ಪತ್ತಿ. ಅಥವಾ `ದಂಡಃ ನೀಯತೇ ಅನಯಾ ಇತಿ ದಂಡನೀತಿಃ' ಎಂಬುದಾ- ಗಿಯೂ ವ್ಯುತ್ಪತ್ತಿಯನ್ನು ತಿಳಿಯಬಹುದು. ಸಾಮ, ದಾನ, ಭೇದ, ದಂಡ ಈ ನಾಕು ಉಪಾಯಗಳಲ್ಲಿ ದಂಡವು ಪ್ರಧಾನವಾಗಿದೆ.
ಧರ್ಮದಿಂದ ಪ್ರಜೆಗಳನ್ನು ಪರಿಪಾಲನೆ ಮಾಡುವುದಕ್ಕಾಗಿ ಪರಮಾತ್ಮನು ಈ ದಂಡನೀತಿಯನ್ನು ಸೃಷ್ಟಿ ಮಾಡಿದ್ದಾನೆ. ಇದನ್ನು ರಾಜನಾದವನು ಅನುಷ್ಠಾನ- ಗೊಳಿಸಬೇಕು. ಹಾಗೇ ಅನುಷ್ಠಾನಗೊಳಿಸಿದ ರಾಜನಿಗೂ ದಂಡವೆಂದೇ ಕರೆಯು- ತ್ತಾರೆ. ಅನೇಕ ಕಾರಣಗಳ ಪೂರ್ವಕವಾಗಿ ಅರ್ಥತತ್ವಗಳ ಪರೀಕ್ಷಾರೂಪವಾದ ಆನ್ವಿಕ್ಷಿಕೀ ಮೊದಲಾದ ಯೋಗಕ್ಷೇಮಸಾಧನವಾದ ದಂಡವನ್ನು ತನ್ನ ರಾಜ್ಯದಲ್ಲಿ ಅನುಷ್ಠಾನ ಮಾಡುವುದರಿಂದ ಇದಕ್ಕೆ ದಂಡನೀತಿ ಎಂಬುದಾಗಿ ಕರೆಯುತ್ತಾರೆ.
`ದಮೋ ದಂಡ ಇತಿ ಖ್ಯಾತಃ ತಾತ್ಸ್ಥ್ಯಾತ್ ದಂಡೋ ಮಹೀಪತಿಃ |
ತಸ್ಯ ನೀತಿಃ ದಂಡನೀತಿಃ ನಯನಾತ್ ನೀತಿರುಚ್ಯತೇ ॥
ಮನುಷ್ಯನ ವ್ಯವಹಾರಕ್ಕೆ ಬೇಕಾದ ಭೂಮಿ, ಧನ ಇವುಗಳ ಲಾಭ ಮತ್ತು ಇವುಗಳ ರಕ್ಷಣೆಗೆ ಉಪಾಯಗಳನ್ನು ಹೇಳುವ ಶಾಸ್ತ್ರವು ಅರ್ಥಶಾಸ್ತ್ರ ಎಂಬುದಾಗಿ ಕರೆಸಿಕೊಳ್ಳುತ್ತದೆ. ಕೃಷಿ, ವಾಣಿಜ್ಯ, ಪಶುಪಾಲನೆಗಳ ಮತ್ತು ಭೂಮಿ, ಧನ- ಕನಕಾದಿಗಳ ಯೋಗಕ್ಷೇಮವು ರಾಜನಿಗೆ ಸೇರಿರುವುದರಿಂದ ಇದಕ್ಕೆ ರಾಜನೀತಿ ಎಂದೂ ಕೂಡ ಕರೆಯುತ್ತಾರೆ.
ಅನ್ವಿಕ್ಷೀಕೀ ತ್ರಯೀವಾರ್ತಾನಾಂ ಯೋಗಕ್ಷೇಮಸಾಧನೋ ದಂಡಃ ತಸ್ಯನೀತಿಃ ದಂಡನೀತಿಃ |
ಸುವ್ಯವಸ್ಥಿತವಾದ ರಾಜ್ಯಪದ್ಧತಿಯನ್ನು ಅಥವಾ ನ್ಯಾಯವಾದ ರಾಜ್ಯದ ಆಡಳಿತವನ್ನು ದಂಡನೀತಿ ಎಂಬುದಾಗಿಯೂ ವ್ಯವಹರಿಸುತ್ತಾರೆ.
ರಾಜನನ್ನು ದಂಡನೇತೃ ಎಂಬುದಾಗಿ ಕರೆಯುತ್ತಾರೆ. ಅನ್ವೀಕ್ಷೀಕೀ ಮೊದಲಾ- ದವುಗಳಿಗೆ ಯೋಗಕ್ಷೇಮಸಾಧನವನ್ನು ರಾಜ್ಯದಲ್ಲಿ ನಯನ ಮಾಡಿ, ಅನುಷ್ಠಾನಕ್ಕೆ ತರುವುದರಿಂದ ರಾಜನನ್ನು ದಂಡನೇತೃ ಎಂಬುದಾಗಿ ಕರೆಯುತ್ತಾರೆ. ಇಂಥ ದಂಡ -ನೀತಿಯ ಬಗ್ಗೆ ಸಂಪೂರ್ಣವಾಗಿ ಅರಿತಿರಬೇಕು ಎಂಬುದಾಗಿ ಮನುಸ್ಮೃತಿಯು ಹೇಳುತ್ತದೆ.
ಸೈನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ |
ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ॥

ಏವಂವೃತ್ತಸ್ಯ ರಾಜ್ಞಸ್ತು ಶಿಲೋಂಚ್ಛೇನಾಪಿ ಜೀವತಃ |
ವಿಸ್ತೀರ್ಯೇತ ಯಶೋ ಲೋಕೇ ತೈಲಬಿಂದುರಿವಾಂಭಸಿ ॥51॥
ಹೀಗೆ ದಂಡನೀತಿಯನ್ನು ಅಳವಡಿಸಿಕೊಂಡ ರಾಜನು ಕಾಡಿನಲ್ಲಿ ಎಲ್ಲರೂ ಆರಿಸಿಕೊಂಡು ಉಳಿದ ಧಾನ್ಯದ ಕಾಳುಗಳನ್ನು ಆಯ್ದುಕೊಂಡು ತಿಂದು ಜೀವಿಸುವ ಶೀಲೋಂಛವೃತ್ತಿಯಲ್ಲಿದ್ದರೂ ಕೂಡ ಕೀರ್ತಿಶಾಲಿಯಾಗುತ್ತಾನೆ. ನೀರಿನ ಮೇಲೆ ಬಿಟ್ಟ ಎಣ್ಣೆಯು ಎಲ್ಲೆಡೆಯೂ ಪಸರಿಸುತ್ತದೆಯೋ, ಅದರಂತೆ ಇವನ ಕೀರ್ತಿಯು ಲೋಕದಲ್ಲಿ ಎಲ್ಲೆಡೆಯೂ ಕೂಡ ವಿಸ್ತಾರವಾಗಿ ಹರಡುತ್ತದೆ.
ವಿವರಣೆ - ಶಿಲೋಂಛವೃತ್ತಿ - ಇದೊಂದು ವ್ರತ. ಕೃಷಿಕನು ತಾನು ಬೆಳೆದ ಧಾನ್ಯಗಳನ್ನೆಲ್ಲಾ ಆರಿಸಿಕೊಂಡು ತೆರಳಿದ ನಂತರ ಪಶು, ಪಕ್ಷಿಗಳೂ ಕೂಡ ಉಳಿದ ಆ ಧಾನ್ಯಗಳನ್ನು ತಿಂದುಳಿದ ಅನಂತರ ಸಿಗುವ ಧಾನ್ಯಗಳನ್ನು ಆರಿಸಿಕೊಂಡು ತಂದು ತಿನ್ನುವುದಕ್ಕೆ ಶಿಲೋಂಛವೃತ್ತಿ ಎಂದು ಕರೆಯುತ್ತಾರೆ.  ವಾನಪ್ರಸ್ಥಾಶ್ರಮಿ- ಗಳು ಈ ವ್ರತವನ್ನು ಆಚರಿಸುತ್ತಾರೆ. ಜಗತ್ತಿನಲ್ಲಿ ಎಂದೂ ಕೂಡ ಇವರು ಬೆಳಕಿಗೆ ಬರುವುದೇ ಇಲ್ಲ. ತಮ್ಮಷ್ಟಕ್ಕೆ ತಾವು ಸಾಧನೆಗೈಯ್ಯುತ್ತಿರುತ್ತಾರೆ. ದಂಡನೀತಿಯನ್ನು ಅಳವಡಿಸಿಕೊಂಡ ರಾಜನು, ಇಂಥ ಸ್ಥಿತಿಯಲ್ಲಿದ್ದರೂ ಕೂಡ ಅವನ ಕೀರ್ತಿಯು ಲೋಕದಲ್ಲಿ ಎಲ್ಲೆಡೆಯೂ ಕೂಡ ಹರಡುತ್ತದೆ ಎಂಬುದು ಈ ಶ್ಲೋಕದ ಧ್ವನಿ.
ಅತಸ್ತು ವಿಪರೀತಸ್ಯ ನೃಪತೇರಕೃತಾತ್ಮನಃ |
ಸಂಕ್ಷಿಪ್ಯೇತ ಯಶೋ ಲೋಕೇ ಘೃತಬಿಂದುರಿವಾಂಭಸಿ ॥52॥
ಒಂದು ವೇಳೆ ದಂಡನೀತಿಯನ್ನು ಅಳವಡಿಸದ ವಿಪರೀತವಾಗಿ ರಾಜನು ವರ್ತನೆ ಮಾಡಿದರೆ, ಅಥವಾ ನಡೆದುಕೊಂಡರೆ ಅವನ ಕೆಲಸಗಳೆಲ್ಲವೂ ವ್ಯರ್ಥವಾಗುತ್ತವೆ. ನೀರಿನಲ್ಲಿ ಬಿಟ್ಟ ತುಪ್ಪದ ಬಿಂದುವಿನಂತೆ ಇದ್ದಲ್ಲಿಯೇ ಅವನ ಕೀರ್ತಿ ಉಳಿಯುತ್ತದೆ.  ಸ್ವಲ್ಪವೂ ಕೂಡ ಅವನ ಕೀರ್ತಿ ಹೆಚ್ಚುವುದಿಲ್ಲ.
ದೇವದೇವೇನ ರುದ್ರೇಣ ಬ್ರಹ್ಮಣಾ ಚ ಮಹೀಪತೇ |
ವಿಷ್ಣುನಾ ಚೈವ ದೇವೇನ ಶಕ್ರೇಣ ಚ ಮಹಾತ್ಮನಾ ॥53॥
ಲೋಕಪಾಲೈಶ್ಚ ಭೂತೈಶ್ಚ ಪಾರ್ಥಿವೈಶ್ಚ ಕೃತಾತ್ಮಭಿಃ |
ಧರ್ಮಾದ್ ವಿಚಲಿತಾ ರಾಜನ್ ಧಾರ್ತರಾಷ್ಟ್ರಾ ನಿಪಾತಿತಾಃ ॥54॥
ಅಧಾರ್ಮಿಕಾ ದುರಾಚಾರಾಃ ಸಸೈನ್ಯಾ ವಿನಿಪಾತಿತಾಃ |
ಓ ಮಹೀಪತಿಯೇ! ನಿನ್ನ ಶತ್ರುಗಳಾದ ಕೌರವರು ದಂಡನೀತಿಯನ್ನು ಅನು- ಸರಿಸಲಿಲ್ಲ. ಧರ್ಮಪರಿಪಾಲನೆಯನ್ನು ಮಾಡಲಿಲ್ಲ. ಆ ಕಾರಣದಿಂದಲೇ ಅವರಿಂದು ಸಂಪೂರ್ಣವಾಗಿ ನಾಶವನ್ನು ಹೊಂದಿದ್ದಾರೆ. ಅವರ ನಾಶಕ್ಕಾಗಿ ನಿನಗೆ ಎಲ್ಲ ದೇವತೆಗಳು ಬೆಂಬಲವನ್ನು ನೀಡಿದ್ದಾರೆ. ಸಕಲ ದೇವತೆಗಳಿಗೆ ದೇವನಾದ ಮಹಾವಿಷ್ಣು, ಜೀವೋತ್ತಮನಾದ ಚತುರ್ಮುಖಬ್ರಹ್ಮ , ವೈಷ್ಣವೋತ್ತಮನಾದ ಮಹಾರುದ್ರದೇವ, ದೇವತೆಗಳ ಅಧಿಪತಿಯಾದ ದೇವೇಂದ್ರ, ಸಕಲ ದಿಕ್‌ಪಾಲಕರು, ಪಂಚಭೂತಗಳು ಮಹಾತ್ಮನಾದ ಪಾಂಡವರು ಇವರೇ ಮೊದಲಾದವರು ಅವರ ನಾಶವನ್ನು ಮಾಡಿರುವರು. ಧೃತರಾಷ್ಟ್ರನ ಮಕ್ಕಳೆಲ್ಲರೂ ಧರ್ಮಮಾರ್ಗವನ್ನು ಪರಿತ್ಯಾಗ ಮಾಡಿದ್ದರಿಂದ ಅಧಾರ್ಮಿಕರಾದ್ದರಿಂದ, ದುರಾಚಾರಿಗಳಾದ್ದರಿಂದ ಸಮಸ್ತಸೈನ್ಯಗಳೊಡನೆ ಸಂಪೂರ್ಣವಾಗಿ ಹತರಾದರು.
ಟಿಪ್ಪಣಿ - ಪಾರ್ಥಿವೈಶ್ಚ ಕೃತಾತ್ಮಭಿಃ ಇತ್ಯತ್ರ ಆಚಾರಿತಾದಿತಿ ಯೋಗಪದಾಧ್ಯಾ- ಹಾರಃ | `ಪಾರ್ಥಿವೈಶ್ಚ ಕೃತಾತ್ಮಭಿಃ' - ಆಚರಿತಾತ್ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಕೃತಾತ್ಮರಾದ ಪಾಂಡವರಿಂದ ಆಚರಿಸಲ್ಪಟ್ಟ ಎಂದಭಿಪ್ರಾಯ.
ತಾನ್ ನಿಹತ್ಯ ನ ದೋಷಸ್ತೇ ಸ್ವಲ್ಪೋಽಪಿ ಜಗತೀಪತೇ |
ಬಲಾದ್ ಧರ್ಮಪಥಾ ವಾ ತಾನ್ ಕ್ಷತ್ರಧರ್ಮೇಣ ವಾ ನೃಪ ॥55॥
ಓ ರಾಜಾಧಿರಾಜನೇ ! ಅಧಾರ್ಮಿಕರಾದ ಆ ಕೌರವರನ್ನು  ಕೊಂದಿದ್ದರಿಂದ ನಿನಗೆ ಸ್ವಲ್ಪವೂ ಕೂಡ ದೋಷವು ಬರುವುದಿಲ್ಲ. ಬಲದಿಂದ ಧರ್ಮದ ಮಾರ್ಗ- ದಿಂದ ಅಥವಾ ಕ್ಷತ್ರಿಯ ಧರ್ಮದಿಂದ ಅವರನ್ನು ನೀನು ವಧೆ ಮಾಡಿರುವಿ. ಪ್ರಜಾಪಾಲಕನೇ! ನಿನಗೆಂತು ದೋಷ ಬರಲು ಸಾಧ್ಯ?
ಟಿಪ್ಪಣಿ -  ಬಲಾದ್ ಧರ್ಮಪಥಾ ವಾ ತಾನ್ ಕ್ಷತ್ರಧರ್ಮೇಣ ವಾ ನೃಪ ಇತ್ಯತ್ರ ಬಲಾದ್ ಧರ್ಮಪಥಾ ವಾ ಕ್ಷತ್ರಧರ್ಮೇಣ ವಾ ತಾನ್ ನಿಹತ್ಯ ನ ದೋಷ ಇತಿ ಪೂರ್ವೇಣಾನ್ವಯಃ |
`ಬಲಾದ್ ಧರ್ಮಪಥಾ ವಾ ತಾನ್ ಕ್ಷತ್ರಧರ್ಮೇಣ' - ಎಂಬಲ್ಲಿ ಬಲಾದ್ ಧರ್ಮಪಥಾ ವಾ ಕ್ಷತ್ರಧರ್ಮೇಣ ವಾ ತಾನ್ ನಿಹತ್ಯ ನ ದೋಷಃ' ಎಂಬುದಾಗಿ ಹಿಂದಿನ ಶ್ಲೋಕಾರ್ಥದ ಜೊತೆ ಅನ್ವಯವನ್ನು ತಿಳಿದುಕೊಳ್ಳಬೇಕು. ಭುಜಬಲದಿಂದ, ಧರ್ಮಮಾರ್ಗದಿಂದ, ಕ್ಷತ್ರಿಯಧರ್ಮದಿಂದ, ಆ ಕೌರವರನ್ನು ಕೊಂದಿರುವ ಕಾರಣ ನಿನಗೆ ಯಾವುದೇ ದೋಷವು ಬರುವುದಿಲ್ಲ ಎಂದಭಿಪ್ರಾಯ.
ಮಿತ್ರತಾ ಸರ್ವಭೂತೇಷು ದಾನಮಧ್ಯಯನಂ ತಪಃ |
ಬ್ರಾಹ್ಮಣಸ್ಯೈಷ ಧರ್ಮಃ ಸ್ಯಾನ್ನ ರಾಜ್ಞೋ ರಾಜಸತ್ತಮ ॥56॥
ರಾಜಶ್ರೇಷ್ಠನೇ! ಸಕಲ ಪ್ರಾಣಿಗಳಲ್ಲಿ ಸ್ನೇಹ, ದಾನಮಾಡುವಿಕೆ, ಅಧ್ಯಯನ ಮಾಡುವಿಕೆ, ತಪಸ್ಸಿನ ಆಚರಣೆ, ಇವುಗಳೆಲ್ಲವೂ ಬ್ರಾಹ್ಮಣನಿಗೆ ನಿತ್ಯಧರ್ಮವಾಗಿವೆ. ಇವುಗಳು ಕ್ಷತ್ರಿಯರ ಧರ್ಮಗಳಲ್ಲ.
ಅಸತಾಂ ಪ್ರತಿಷೇಧಶ್ಚ ಸತಾಂ ಚ ಪರಿಪಾಲನಮ್ |
ಏಷ ರಾಜ್ಞಾಂ ಪರೋ ಧರ್ಮಃ ಸಮರೇ ಚಾಪಲಾಯನಮ್ ॥57॥
ದುಷ್ಟರನ್ನು ನಿಗ್ರಹ ಮಾಡುವಿಕೆ. ಸಜ್ಜನರನ್ನು ರಕ್ಷಣೆ ಮಾಡುವಿಕೆ. ಯುದ್ಧದಿಂದ ಹಿಂತಿರುಗಿ ಓಡದಿರುವಿಕೆ. ಇವುಗಳು ಕ್ಷತ್ರಿಯರ ಮುಖ್ಯಧರ್ಮಗಳಾಗಿವೆ.
ಯಸ್ಮಿನ್ ಕ್ಷಮಾ ಚ ಕ್ರೋಧಶ್ಚ ದಾನಾದಾನೇ ಭಯಾಭಯೇ |
ನಿಗ್ರಾಹಾನುಗ್ರಹೌ ಚೋಭೌ ಸ ವೈ ಧರ್ಮವಿದುಚ್ಯತೇ ॥58॥
ಕ್ಷಮೆ, ಸಿಟ್ಟು, ದಾನ, ಪ್ರತಿಗ್ರಹ, ನಿಗ್ರಹ, ಅನುಗ್ರಹ ಇವುಗಳು ಯಾರಲ್ಲಿ  ಸಮಾನವಾಗಿರುತ್ತವೋ, ಅವನನ್ನೇ ಧರ್ಮಜ್ಞ ಎಂದು

ಕರೆಯುತ್ತಾರೆ.
ನ ಶ್ರುತೇನ ನ ದಾನೇನ ನ ಸಾಂತ್ವೇನ ನಚೇಜ್ಯಯಾ |
ತ್ವಯೇಯಂ ಪೃಥಿವೀ ಲಬ್ಧಾ ನೋತ್ಕೋಚೇನ ತಥಾಪ್ಯುತ ॥59॥
ಓ ರಾಜನೇ! ಈ ಭೂಮಿಯು ನಿನಗೆ ಶಾಸ್ತ್ರಶ್ರವಣದಿಂದ ಪ್ರಾಪ್ತವಾ- ಗಿರುವುದಲ್ಲ. ಅಥವಾ ನೀನು ಮಾಡಿದ ದಾನದ ಪ್ರತಿಫಲವಾಗಿಯೂ ದೊರೆತದ್ದಲ್ಲ. ನಿನ್ನಲ್ಲಿರುವ ಮೃದುವಾದ ವಾಕ್ಯಗಳಿಂದಲೂ ಕೂಡ ಪ್ರಾಪ್ತವಾಗಿಲ್ಲ. ಯಾಗಬಲದಿಂದ ಯಾಚನೆಯಿಂದಲೂ ಕೂಡ ಈ ರಾಜ್ಯವು ನಿನಗೆ ಬಂದಿರು- ವುದಿಲ್ಲ.
ವಿವರಣೆ - ಬ್ರಾಹ್ಮಣನಲ್ಲಿರಬೇಕಾದ ಗುಣಗಳು ನಿನ್ನಲ್ಲಿವೆ. ಇದು ನಿನಗೆ ವಿಹಿತವಲ್ಲ. ಕ್ಷತ್ರಿಯಲ್ಲಿರಬೇಕಾದ ಅಸಾಧಾರಣಗುಣಗಳು ನಿನ್ನಲ್ಲಿರಬೇಕು. ಬ್ರಾಹ್ಮಣನಲ್ಲಿರುವ ಧರ್ಮಗಳನ್ನು ನೀನು ಅಳವಡಿಸಿಕೊಂಡಿರುವಿ. ನಿರಂತರ ಶಾಸ್ತ್ರಶ್ರವಣ ದಾನ, ಯಜ್ಞಯಾಗ ಮೊದಲಾದವುಗಳನ್ನು ಆಚರಿಸುತ್ತಿರುವಿ. ಅದರಿಂದ ನಿನಗೆ ಈ ಭೂಮಂಡಲವು ದೊರೆತಿದೆ ಎಂಬುದಾಗಿ ಸರ್ವಥಾ ತಿಳಿಯಬೇಡ. ಆದ್ದರಿಂದ ಕ್ಷತ್ರಧರ್ಮದಲ್ಲಿ ಆಸಕ್ತನಾಗು ಎಂಬುದು ಈ ಶ್ಲೋಕದ ಅಭಿಪ್ರಾಯ.
ಯತ್ತದ್ ಬಲಮಮಿತ್ರಾಣಾಂ ತಥಾ ವಿರಸಮುದ್ಯತಮ್ |
ಹಸ್ತ್ಯಶ್ವರಥಸಂಪನ್ನಂ ತ್ರಿಭಿರಗ್ರೈರ್ಮಹತ್ತರಮ್ ॥60॥
ರಕ್ಷಿತಂ ದ್ರೋಣಕರ್ಣಾಭ್ಯಾಮಶ್ವತ್ಥಾಮ್ನಾ ಕೃಪೇಣ ಚ |
ತತ್ತ್ವಯಾ ನಿಹತಂ ವೀರ ತಸ್ಮಾದ್ ಭುಂಕ್ಷ ವಸುಂಧರಾಮ್ ॥61॥
ಓ ಪರಾಕ್ರಮಿಯೇ! ವೀರ್ಯಪರಾಕ್ರಮಗಳಲ್ಲಿ ಹೆಸರುವಾಸಿಗಳಾದ ಆನೆ, ಕುದುರೆ ಮತ್ತು ರಥಗಳೆಂಬ ಮೂರು ಶ್ರೇಷ್ಠವಾದ ಸೇನಾಂಗಗಳಿಂದ ಮಹಾಸೈನ್ಯವು ಕೂಡಿತ್ತು. ಮಹಾವೀರರಾದ ದ್ರೋಣ, ಕರ್ಣ, ಕೃಪ, ಅಶ್ವತ್ಥಾಮರಿಂದ ರಕ್ಷಿತವಾಗಿತ್ತು. ಇಂಥ ಬಲಸಂಪನ್ನವಾದ ಶತ್ರುಗಳ ಮಹಾಸೈನ್ಯವನ್ನು ನೀನು ಧ್ವಂಸ ಮಾಡಿರುವಿ. ಆದ್ದರಿಂದಲೇ ಈ ವಸುಂಧರೆಯನ್ನು ನೀನು ಪಡೆದುಕೊಂಡಿರುವಿ. ವೀರ್ಯಶುಲ್ಕದಿಂದ ಪ್ರಾಪ್ತವಾದ ಈ ಭೂಮಂಡಲವನ್ನು ಈಗ ಉಪಭೋಗಿಸು.
ಜಂಬೂದ್ವೀಪೋ ಮಹಾರಾಜ ನಾನಾಜನಪದಾಯುತಃ |
ತ್ವಯಾ ಪುರುಷಶಾರ್ದೂಲ ದಂಡೇನ ಮೃದಿತಃ ಪ್ರಭೋ ॥62॥
ಓ ಪುರುಷಸಿಂಹನಾದ ಮಹಾರಾಜನೇ! ಅನೇಕ ದೇಶಗಳಿಂದ ಕೂಡಿರುವ, ಈ ಜಂಬೂದ್ವೀಪವನ್ನು ನೀನು ದಂಡದಿಂದ ಶತ್ರುಗಳನ್ನು ನಿಗ್ರಹ ಮಾಡಿ, ನಿನ್ನ
ಅಧೀನವನ್ನಾಗಿ ಪಡೆದುಕೊಂಡಿರುವಿ. (ಬ್ರಾಹ್ಮಣಧರ್ಮದ ಪರಿಪಾಲನೆಯಿಂದ- ಲ್ಲ).
ಜಂಬೂದ್ವೀಪೇನ ಸದೃಶಃ ಕ್ರೌಂಚದ್ವೀಪೋ ನರಾಧಿಪ |
ಅಪರೇಣ ಮಹಾಮೇರೋರ್ದಂಡೇನ ಮೃದಿತಸ್ತ್ವಯಾ ॥63॥
ಕ್ರೌಂಚದ್ವೀಪವು ಜಂಬೂದ್ವೀಪಕ್ಕೆ ಸದೃಶವಾಗಿದೆ. ಓ ನರಾಧಿಪನೇ! ನಿನ್ನ ಭುಜಬಲದಿಂದಲೇ ಈ ಕ್ರೌಂಚದ್ವೀಪವನ್ನು ವಶಮಾಡಿಕೊಂಡಿರುವಿ. ಈ ಕ್ರೌಂಚ- ದ್ವೀಪವು ಮಹಾಮೇರುಪರ್ವತದ ಪೂರ್ವಭಾಗದಲ್ಲಿದೆ.
ಕ್ರೌಂಚದ್ವೀಪೇನ ಸದೃಶಃ ಶಾಕದ್ವೀಪೋ ನರಾಧಿಪ |
ಪೂರ್ವೇಣ ತು ಮಹಾಮೇರೋರ್ದಂಡೇನ ಮೃದಿತಸ್ತ್ವಯಾ ॥64॥
ಶಾಕದ್ವೀಪವು ಕ್ರೌಂಚದ್ವೀಪಕ್ಕೆ ಸಮಾನವಾಗಿದೆ. ಮಹಾಮೇರುಪರ್ವತದ ಉತ್ತರಭಾಗದಲ್ಲಿ ಈ ಶಾಕದ್ವೀಪವಿದೆ. ನರಾಧೀಪನೇ! ಈ ಶಾಕದ್ವೀಪವನ್ನೂ ಕೂಡ ನೀನು ದಂಡನೀತಿಯಿಂದಲೇ ವಶಮಾಡಿಕೊಂಡಿರುವಿ.
ಉತ್ತರೇಣ ಮಹಾಮೇರೋಃ ಶಾಕದ್ವೀಪೇನ ಸಮ್ಮಿತಃ |
ಭದ್ರಾಶ್ವಃ ಪುರುಷವ್ಯಾಘ್ರ ದಂಡೇನ ಮೃದಿತಸ್ತ್ವಯಾ ॥65॥
ಮಹಾಮೇರುಪರ್ವತದ ಉತ್ತರದಿಕ್ಕಿನಲ್ಲಿ ಶಾಕದ್ವೀಪವಿದೆ. ಇದಕ್ಕೆ ಸಮಾನ- ವಾಗಿ ಭದ್ರಾಶ್ವವರ್ಷವಿದೆ. ಈ ಭದ್ರಾಶ್ವವರ್ಷವನ್ನೂ ಕೂಡ ನಿನ್ನ ದಂಡಶಕ್ತಿ- ಯಿಂದಲೇ ಅಧೀನವನ್ನಾಗಿ ಮಾಡಿಕೊಂಡಿರುವಿ.
ದ್ವೀಪಾಶ್ಚ ಸಾಂತರದ್ವೀಪಾ ನಾನಾಜನಪದಾಲಯಾಃ |
ವಿಗಾಹ್ಯ ಸಾಗರಂ ವೀರ ದಂಡೇನ ಮೃದಿತಾಸ್ತ್ವಯಾ ॥66॥
ಎಲ್ಲಾ ದ್ವೀಪಗಳು, ವರ್ಷಗಳು ಅಷ್ಟೇ ಅಲ್ಲದೇ ಅನೇಕ ದೇಶಗಳಿಗೆ ಆಶ್ರಯವಾದ ದ್ವೀಪಗಳು, ದ್ವೀಪಾಂತರಗಳು, ಸಮುದ್ರವನ್ನು ದಾಟಿದ ಆ ಎಲ್ಲಾ ಪ್ರದೇಶವನ್ನು ನಿನ್ನ ದಂಡಶಕ್ತಿಯಿಂದಲೇ ಅಧೀನವನ್ನಾಗಿ ಮಾಡಿಕೊಂಡಿರುವಿ.
ವಿವರಣೆ - ಒಟ್ಟು ಏಳು ದ್ವೀಪಗಳಿವೆ. 1. ಜಂಬೂದ್ವೀಪ, 2. ಪ್ಲಕ್ಷದ್ವೀಪ, 3. ಶಾಲ್ಮಲಿದ್ವೀಪ, 4. ಕುಶದ್ವೀಪ, 5. ಕ್ರೌಂಚದ್ವೀಪ, 6. ಶಾಕದ್ವೀಪ,
7. ಪುಷ್ಕರದ್ವೀಪ. ಇವೆಲ್ಲವನ್ನೂ ಹಾಗೂ ಎಲ್ಲಾ ವರ್ಷಗಳನ್ನು ತನ್ನ ಅಧೀನವ- ನ್ನಾಗಿ ಮಾಡಿಕೊಂಡಿದ್ದನು ಎಂದಭಿಪ್ರಾಯ.
ಏತಾನ್ಯಪ್ರತಿಮಾನಿ ತ್ವಂ ಕೃತ್ವಾ ಕರ್ಮಾಣಿ ಭಾರತ |
ನ ಪ್ರೀಯಸೇ ಮಹಾರಾಜ ಪೂಜ್ಯಮಾನೋ ದ್ವಿಜಾತಿಭಿಃ ॥67॥
ಇಂಥ ಅಪ್ರತಿಮವಾದ, ಅನುಪಮವಾದ ಕಾರ್ಯಗಳನ್ನು ನೀನು ಮಾಡಿರುವಿ. ಆದ್ದರಿಂದಲೇ ಬ್ರಾಹ್ಮಣಶ್ರೇಷ್ಠರಿಂದ ಪುರಸ್ಕೃತನಾಗಿರುವಿ. ಆದರೂ ಕೂಡ ನಿನಗೆ ತೃಪ್ತಿಯೇ ಆಗುತ್ತಿಲ್ಲ.
ಸ ತ್ವಂ ಭ್ರಾತೄನಿಮಾನ್ ದೃಷ್ಟ್ವಾ ಪ್ರತಿನಂದಸ್ವ ಭಾರತ |
ಋಷಭಾನಿವ ಸಮ್ಮತ್ತಾನ್ ಗಜೇಂದ್ರಾನೂರ್ಜಿತಾನಿವ ॥68॥
ನಿನ್ನ ಈ ವಿಜಯಯಾತ್ರೆಯಲ್ಲಿ ನಿನ್ನ ಸಹೋದರರು ಪೂರ್ಣವಾಗಿ ಬೆಂಬಲಿಗ- ರಾಗಿದ್ದಾರೆ. ಮದಿಸಿರುವ ಎತ್ತುಗಳಂತಿದ್ದಾರೆ. ಬಲಿಷ್ಠವಾದ ಆನೆಗಳಂತಿದ್ದಾರೆ. ಇಂಥ ನಿನ್ನ ಈ ತಮ್ಮಂದಿರನ್ನು ಒಮ್ಮೆ ಕೃಪಾದೃಷ್ಟಿಯಿಂದ ನೋಡಿ, ಅವರನ್ನು ಸಂತೋಷ

ಪಡಿಸು.
ಅಮರಪ್ರತಿಮಾಃ ಸರ್ವೇ ಶತ್ರುಸಾಹಾಃ ಪರಂತಪಾಃ |
ಏಕೋಽಪಿ ಹಿ ಸುಖಾಯೈಷಾಂ ಕ್ಷಮಃ ಸ್ಯಾದಿತಿ ಮೇ ಮತಿಃ ॥69॥
ನಿನ್ನ ಈ ತಮ್ಮಂದಿರು ಸಾಮಾನ್ಯರಲ್ಲ. ದೇವಶ್ರೇಷ್ಠರಂತಿದ್ದಾರೆ. ಪ್ರತಿಯೊಬ್ಬರೂ ಕೂಡ ಶತ್ರುಗಳನ್ನು ಸಂಪೂರ್ಣವಾಗಿ ನಿಗ್ರಹ ಮಾಡುತ್ತಾರೆ. ಶತ್ರುಗಳಿಗೆ ಪರಿ- ತಾಪವನ್ನು ಉಂಟುಮಾಡುವವರಾಗಿದ್ದಾರೆ. ಇವರಲ್ಲಿ ಯಾರೊಬ್ಬನೂ ಕೂಡ ನನ್ನನ್ನು ಸುಖವಾಗಿಟ್ಟರಲು ಸಂಪೂರ್ಣವಾಗಿ ಸಮರ್ಥರಾಗಿದ್ದಾರೆ.
ಕಿಂ ಪುನಃ ಪುರುಷವ್ಯಾಘ್ರಾಃ ಪತಯೋ ಮೇ ನರರ್ಷಭಾಃ |
ಸಮಸ್ತಾನೀಂದ್ರಿಯಾಣೀವ ಶರೀರಸ್ಯ ವಿಚೇಷ್ಟನೇ ॥70॥
ಐದು ಇಂದ್ರಿಯಗಳು ಶರೀರವನ್ನು ಏಕಭಾವದಿಂದ ನಡೆಸಿಕೊಂಡು ಹೋಗು- ವಂತೆ ಈ ಐದುಮಂದಿ ಪುರುಷೋತ್ತಮರೂ ಆದ ನನ್ನ ಗಂಡಂದಿರು ನನ್ನ ರಕ್ಷಣೆ- ಯಲ್ಲಿ ಬದ್ಧಕಂಕಣರಾಗಿದ್ದಾರೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕೇನು?
ಅನೃತಂ ಮಾ ಬ್ರುವೀಚ್ಛ್ವಶ್ರೂಃ ಸರ್ವಜ್ಞಾ ಸರ್ವದರ್ಶಿನೀ |
ನನ್ನ ಅತ್ತೆಯಾದ ಕುಂತಿಯು ಎಂದೂ ಸಹ ಸುಳ್ಳನ್ನು ಹೇಳಿದವಳಲ್ಲ. ಅದೆಷ್ಟೋ ವಿಷಯಗಳನ್ನು ಕಣ್ಣಾರೆ ಕಂಡ ಅವಳು ಎಲ್ಲವನ್ನು ಬಲ್ಲವಳಾಗಿದ್ದಾಳೆ.
ಯುಧಿಷ್ಠಿರಸತ್ವಂ ಪಾಂಚಾಲಿ ಸುಖೇ ಧಾಸ್ಯತ್ಯನುತ್ತಮೇ ॥71॥
ಹತ್ವಾ ರಾಜಸಹಸ್ರಾಣಿ ಬಹೂನ್ಯಾಶು ಪರಾಕ್ರಮಃ |
ತದ್ ವ್ಯರ್ಥಂ ಸಂಪ್ರಪಶ್ಯಾಮಿ ಮೋಹಾತ್ತವ ಜನಾಧಿಪ ॥72॥
ಅತ್ತೆಯಾದ ಕುಂತಿಯು ನನಗೆ ಹೀಗೆ ಹೇಳಿದ್ದಳು - ``ಓ ಪಾಂಚಾಲಿಯೇ ! ದುಃಖಿಸಬೇಡ. ನನ್ನ ಹಿರಿಯ ಮಗನಾದ ಮಹಾಪರಾಕ್ರಮಿಯಾದ ಯುಧಿಷ್ಠಿರನು ಸಾವಿರಗಟ್ಟಳೆ ಇರುವ ಶತ್ರುಗಳನ್ನು ಸಂಹಾರ ಮಾಡಿ, ನಿನ್ನನ್ನು ಶ್ರೇಷ್ಠವಾದ ಸುಖ-ಸಿಂಹಾಸನದಲ್ಲಿ ಕುಳ್ಳಿರಿಸುತ್ತಾನೆ''. ನಮ್ಮ ಅತ್ತೆಯ ಈ ಮಾತನ್ನು ಇಂದು ನೀನು ವ್ಯರ್ಥಮಾಡುತ್ತಿರುವಿ. ನಿನ್ನಲ್ಲಿರುವ ಮೋಹದಿಂದ ನನಗೆ ಸುಖವನ್ನು ನೀಡದೇ, ಪುನಃ ಕಷ್ಟವನ್ನೇ ನೀಡುತ್ತಿರುವಿ.
ಯೇಷಾಮುನ್ಮತ್ತಕೋ ಜ್ಯೇಷ್ಠಃ ಸರ್ವೇ ತಸ್ಯೋಪಚಾರಿಣಃ |
ತವೋನ್ಮಾದೇನ ರಾಜೇಂದ್ರ ಸೋನ್ಮಾದಾಃ ಸರ್ವಪಾಂಡವಾಃ ॥73॥
ಜ್ಯೇಷ್ಠಪುತ್ರನು ಮೋಹವನ್ನು ಹೊಂದಿದರೆ ಅವನ ತಮ್ಮಂದಿರೂ ಕೂಡ ಅವನನ್ನೇ ಅನುಸರಿಸುತ್ತಾರೆ. ಮಹಾರಾಜನೇ ! ನೀನು ಮೋಹವನ್ನು ಹೊಂದಿ, ಅಧರ್ಮದ ಮಾರ್ಗದಲ್ಲಿ ನಡೆದರೆ ಉಳಿದ ಪಾಂಡವರೂ ಕೂಡ ನಿನ್ನಂತೆಯೇ ನಡೆದುಕೊಳ್ಳುತ್ತಾರೆ.
ವಿವರಣೆ - `ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ' ಎಂಬ ನಾಣ್ಣುಡಿಯಂತೆ, ಹಿರಿಯರು ವರ್ತಿಸಿದಂತೆ ಕಿರಿಯರು ಅನುಸರಿಸುತ್ತಾರೆ. ಹಿರಿಯಣ್ಣನು ಜೀವನ- ದಲ್ಲಿ ತಪ್ಪು ತೀರ್ಮಾನಗಳನ್ನು ತೆಗೆದುಕೊಂಡಾಗ, ಸಣ್ಣವರೂ ಕೂಡ ಅದನ್ನೇ ಧರ್ಮವೆನ್ನುತ್ತಾರೆ. ಆದ್ದರಿಂದ ಹಿರಿಯವನು ಜವಾಬ್ದಾರಿಯಿಂದ ಸನ್ಮಾರ್ಗದಲ್ಲಿ- ಯೇ ನಡೆಯಬೇಕು. ಅದರ ಬಗ್ಗೆಯೇ ಹೆಚ್ಚು ವಿವೇಕವನ್ನು ಹೊಂದಬೇಕು.
ಯದಿ ಹಿ ಸ್ಯುರನುನ್ಮತ್ತಾ ಭ್ರಾತರಸ್ತೇ ಜನಾಧಿಪ |
ಬದ್ಧ್ವಾ ತ್ವಾಂ ನಾಸ್ತಿಕೈಃ ಸಾರ್ಧಂ ಪ್ರಶಾಸೇಯುರ್ವಸುಂಧರಾಮ್ ॥74॥
ಒಂದು ವೇಳೆ ನಿನ್ನಂತೆ ನಿನ್ನ ಸಹೋದರರು ಮೋಹವನ್ನು ಹೊಂದದೇ ಇದ್ದರೆ, ಆಗ ಸತ್ಯಮಾರ್ಗದಲ್ಲಿ ನಾಸ್ತಿಕರೊಡನೆ ನಿನ್ನನ್ನೂ ಕೂಡ ಬಂಧಿಸಿ, ಭೂಮಂಡಲ- ವನ್ನು ತಾವೇ ಆಳುತ್ತಿದ್ದರು.
ವಿವರಣೆ - ನಿನ್ನ ತಮ್ಮಂದಿರು ನೀನು ಹಾಕಿಕೊಟ್ಟ ಮಾರ್ಗದಲ್ಲೇ ನಡೆ- ಯುತ್ತಾರೆ. ಎಂದೂ ಕೂಡ ಅದಕ್ಕೆ ವಿರುದ್ಧವಾಗಿ ನಡೆಯುವವರಲ್ಲ. ಹಿರಿಯಣ್ಣ- ನಿಗೆ ವಿರುದ್ಧವಾಗಿ ನಡೆಯಬಾರದೆಂಬುದೇ ಅವರ ಧೋರಣೆಯಾಗಿದೆ. ಹಾಗಿಲ್ಲ- ದಿದ್ದರೆ ಅವರು ಸ್ವತಃ ತಾವೇ ಭೂಮಂಡಲವನ್ನು ಆಳುತ್ತಿದ್ದರು. ಮತ್ತು ಈ ಜಗತ್ತಿನಲ್ಲಿರುವ ಅನೇಕ ನಾಸ್ತಿಕರ ಜೊತೆ ನಿನ್ನನ್ನೂ ಕೂಡ ಸೇರಿಸಿ ಬಂಧಿಸು- ತ್ತಿದ್ದರು. ಸ್ವಧರ್ಮದಲ್ಲಿ ನಿಷ್ಠೆಯಿಲ್ಲದವನು ಪರಧರ್ಮವನ್ನು ಅನುಸರಿಸುವವನು ನಾಸ್ತಿಕನಿಗೆ ಸಮಾನನಾಗಿದ್ದಾನೆ ಎಂಬುದು ದ್ರೌಪದಿಯ ಅಭಿಪ್ರಾಯ.
ಕುರುತೇ ಮೂಢಮೇವಂ ಹಿ ಯಃ ಶ್ರೇಯೋ ನಾಧಿಗಚ್ಛತಿ |
ಧೂಪೈರಂಜನಯೋಗೈಶ್ಚ ನಸ್ಯಕರ್ಮಭಿರೇವ ಚ |
ಭೇಷಜೈಃ ಸ ಚಿಕಿತ್ಸ್ಯಃ ಸ್ಯಾದ್ ಯ ಉನ್ಮಾರ್ಗೇಣ ಗಚ್ಛತಿ ॥75॥
ಯಾವ ಮೂಢನು ತನ್ನ ಪರಾಕ್ರಮದಿಂದ ಶತ್ರುಗಳನ್ನು ನಿಗ್ರಹ ಮಾಡಿ, ರಾಜ್ಯವನ್ನು ಅನುಭವಿಸದೇ ಕಾಡಿಗೆ ಹೋಗುತ್ತೇನೆನ್ನುತ್ತಾನೋ, ಅವನು ಎಂದೂ ಸಹ ಶ್ರೇಯಸ್ಸನ್ನು ಹೊಂದುವುದಿಲ್ಲ. ಯಾರು ಅಪಮಾರ್ಗದಲ್ಲಿ ಹೀಗೆ ಹೋಗುತ್ತಾನೋ, ಅವನಿಗೆ ಚಿಕಿತ್ಸೆಯನ್ನು ನೀಡಬೇಕು. ಧೂಪಗಳಿಂದ, ಕಣ್ಣಿಗೆ ಅಂಜನವನ್ನು ಹಚ್ಚುವುದರಿಂದ, ಮೂಗಿಗೆ ಔಷಧಿಯನ್ನು ಹಾಕುವುದರಿಂದ ಇನ್ನೂ ಅನೇಕ ಬಗೆಯ ಔಷಧಿಗಳಿಂದ ಅವನ ಹುಚ್ಚನ್ನು ಬಿಡಿಸಬೇಕು.
ವಿವರಣೆ - ತನ್ನ ಭುಜಪರಾಕ್ರಮದಿಂದ ಶತ್ರುಗಳನ್ನು ಜಯಿಸಿ, ಬಂದ ಅಪಾರ ಸಂಪತ್ತನ್ನು ಅನುಭವಿಸದಿದ್ದರೆ, ಅವನ ಬುದ್ಧಿ ಹಾಳಾಗಿದೆ ಎಂದರ್ಥ. ಬುದ್ಧಿ ಹಾಳಾದವನನ್ನು ಮೂರ್ಖ, ಹುಚ್ಚ ಇತ್ಯಾದಿಯಾಗಿ ಕರೆಯುತ್ತಾರೆ. ಅಂಥವನಿಗೆ ಆಯುರ್ವೇದದಲ್ಲಿ ಅನೇಕ ಚಿಕಿತ್ಸೆಗಳಿವೆ. ಹಾಗೇ ಚಿಕಿತ್ಸೆ ನೀಡುವುದರಿಂದ, ಅವನ ಬುದ್ಧಿಯು ಸರಿಯಾಗಿ ಕೆಲಸವನ್ನು ಮಾಡುತ್ತದೆ. ಮೂಗಿಗೆ ಔಷಧಿಯುಕ್ತವಾದ ತೈಲವನ್ನು ಹಾಕುವುದನ್ನೇ `ನಸ್ಯಕರ್ಮ' ಎನ್ನುತ್ತಾರೆ. ನಸ್ಯವಿಧಿಯನ್ನು ವಾಗ್ಭಟನು ಅಷ್ಟಾಂಗಹೃದಯದ ಇಪ್ಪತ್ತನೆಯ ಅಧ್ಯಾಯದಲ್ಲಿ ಹೀಗೆ ಹೇಳಿರುತ್ತಾನೆ -
ಊರ್ಧ್ವಜತ್ರುವಿಕಾರೇಷು ವಿಶೇಷಾನ್ನಸ್ಯಮಿಷ್ಯತೇ |

ನಾಸಾ ಹಿ ಶಿರಸೋ ದ್ವಾರಂ ತೇನ ತದ್ವ್ಯಾಪ್ಯ ಹಂತಿ ತಾನ್ ॥
ಭುಜದ ಮೇಲಿನ ಅಂಗದ ವಿಕಾರಗಳಿಗೆ ನಸ್ಯಪ್ರಯೋಗವನ್ನು ಮಾಡುತ್ತಾರೆ. ಮೂಗು ತಲೆಯ ದ್ವಾರವಾಗಿದೆ. ಆ ದ್ವಾರದಿಂದ ನೀಡುವ ಚಿಕಿತ್ಸೆಯು ಶಿರಸ್ಸಿನಲ್ಲಿ ಎಲ್ಲೆಡೆಯೂ ವ್ಯಾಪಿಸಿ, ಅದರಲ್ಲಿರುವ ವಿಕಾರಗಳನ್ನು ಪರಿಹರಿಸುತ್ತವೆ. ಅನೇಕ ಗಿಡಮೂಲಿಕೆಗಳಿಂದ ಕೂಡಿದ ತೈಲವನ್ನು ಮೂಗಿನ ರಂಧ್ರದಲ್ಲಿ ಹಾಕುತ್ತಾರೆ. ಮತ್ತು ಆರು ಅಂಗುಲ ಉದ್ದವಿರುವ ಪ್ರಣಾಳಿಕೆಯಿಂದ ಚೂರ್ಣವನ್ನು ಕೂಡ ಮೂಗಿನ ರಂಧ್ರಕ್ಕೆ ಹಾಕುತ್ತಾರೆ. ಇದರಿಂದ ಶಿರೋಭಾಗದಲ್ಲಿರುವ ಎಲ್ಲಾ ವಿಕಾರಗಳು ಪರಿಹಾರವಾಗುತ್ತವೆ. ಹುಚ್ಚು ಮೊದಲಾದವುಗಳು ಸಂಪೂರ್ಣವಾಗಿ ನಾಶವಾಗುತ್ತವೆ. ಇದನ್ನು ಚೂರ್ಣಚಿಕಿತ್ಸೆಯೆಂದು `ಧ್ಮಾನಂ ವಿರೇಚಶ್ಚೂರ್ಣೋ' ಎಂಬಂತೆ ಧ್ಮಾನ ಎಂದೂ ಕರೆಯುತ್ತಾರೆ. ಪಂಚಕರ್ಮಚಿಕಿತ್ಸೆಯಲ್ಲಿ ನಸ್ಯಕರ್ಮ- ವೂ ಕೂಡ ಪ್ರಧಾನವಾಗಿದೆ. ಅಭ್ಯಂಗದ ಅನಂತರ ಇಂದೂ ಕೂಡ ಇದನ್ನು ಆಚರಿಸುತ್ತಾರೆ.
ಧೂಮಪಾನವಿಧಿ
ವಾಗ್ಭಟನು ಅಷ್ಟಾಂಗಹೃದಯದ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಧೂಮ- ಪಾನದ ವಿಧಿಯನ್ನು ತಿಳಿಸಿರುತ್ತಾನೆ -
ಜತ್ರೂರ್ಧ್ವಕಫವಾತೋತ್ಥವಿಕಾರಾಣಾಂ ಆಜನ್ಮನೇ |
ಉಚ್ಛೇದಾಯ ಚ ಜಾತಾನ್ ಪಿಬೇದ್ ಧೂಮಂ ಸದಾತ್ಮವಾನ್ ॥
ಭುಜದ ಮೇಲಿನ ಎಲ್ಲಾ ದೋಷಗಳಿಗೆ ಕಫ ಮತ್ತು ವಾತಗಳಿಂದ ಹುಟ್ಟಿದ ವಿಕಾರಗಳ ಪರಿಹಾರಕ್ಕೆ ಮತ್ತು ಯಾವುದೇ ವಿಕಾರವು ಹುಟ್ಟದಿರುವುದಕ್ಕೆ ಧೂಮ- ಪಾನವನ್ನು ವಿಧಿಸುತ್ತಾರೆ. ಧೂಮಪಾನದಲ್ಲಿ ಉಪಯೋಗಿಸುವ ದ್ರವ್ಯಗಳು ಹೀಗಿವೆ - ಅಗುರು, ಗುಗ್ಗುಲು, ಮುಸ್ತಾ, ಸ್ಥೌಣೇಯ, ಶೈಲೇಯ, ನಲದ, ಉಶೀರ, ವಾಲಕ, ವಾರಂಗ, ಕೌಂತೀ, ಮಧುಕಾ, ಬಿಲ್ವಮಜ್ಜ, ಏಲವಾಲುಕ, ಶ್ರೀವೇಷ್ಟಕ, ಸರ್ಜರಸ, ಧ್ಯಾಮಕ, ಮದನ, ಪ್ಲವ, ಶಲ್ಲಕೀ, ಕುಂಕುಮ, ಮಾಷ, ಯವ, ಕಂದುರುಕ, ತಿಲಾ. ಶಲ್ಲಕೀ, ಲಾಕ್ಷಾ, ಪೃಥ್ವೀಕಾ, ಕಮಲ, ಉಲ್ಪಲಾ, ನ್ಯಗ್ರೋಧ, ಉದುಂಬರ, ಅಶ್ವತ್ಥ, ಪ್ಲಕ್ಷಾ, ಲೋದ್ರುತ್ವಚ, ಸಿತಾ, ಯಷ್ಟೀಮಧು, ಸುವರ್ಣತ್ವಕ್, ಪದ್ಮಕಾ, ರಕ್ತಯಷ್ಟಿಕಾ, ಗಂಧ, ಅಕುಷ್ಟತಗರ. ಜ್ಯೋತಿಷ್ಮತೀ, ನಿಶಾ, ದಶಮೂಲ, ಮನೋಹ್ವಾ, ಅಲ, ಲಾಕ್ಷಾ, ಶ್ವೇತಾ. ಹೀಗೆ ಅನೇಕ ಔಷಧಿ ಪದಾರ್ಥಗಳಿಂದ ಕೂಡಿರುವ ಧೂಮಪಾನವನ್ನು ಮಾಡಿದರೆ ಉನ್ಮಾದವು ಪರಿಹಾರವಾಗುತ್ತದೆ.
ಅಂಜನಾವಿಧಿ
ವಾಗ್ಭಟನು ಇಪ್ಪತ್ಮೂರನೆಯ ಅಧ್ಯಾಯದಲ್ಲಿ ಅಂಜನಾವಿಧಿಯನ್ನು ತಿಳಿಸಿ- ದ್ದಾನೆ. ಎಲ್ಲಾ ಬಗೆಯ ಅಕ್ಷಿರೋಗಗಳಿಗೆ ಅಂಜನಾವಿಧಿಯನ್ನು ಮಾಡಬೇಕೆಂದು ತಿಳಿಸಿದ್ದಾನೆ. ಮತ್ತು ಶಿರಸ್ಸಿನ ಎಲ್ಲ ದೋಷಗಳೂ ಪರಿಹಾರವಾಗುತ್ತವೆ ಎಂದೂ ಕೂಡ ತಿಳಿಸಿರುತ್ತಾನೆ.
ಲೇಖನಂ ರೋಪಣಂ ದೃಷ್ಟಿಪ್ರಸಾದನಮಿತಿ ತ್ರಿಧಾ |
ಅಂಜನಂ, ಲೇಖನಂ ತತ್ರ ಕಷಾಯಾಮ್ಲಪಟೂಷಣೈಃ ॥
ರೋಪಣಂ ತಿಕ್ತಕೈರ್ದ್ರವ್ಯೈಃ, ಸ್ವಾದುಶೀತೈಃ ಪ್ರಸಾದನಮ್ ॥
ಸಾಹಂ ಸರ್ವಾಧಮಾ ಲೋಕೇ ಸ್ತ್ರೀಣಾಂ ಭರತಸತ್ತಮ |
ತಥಾ ವಿನಿಕೃತಾऽಮಿತ್ರೈರ್ಯಾಹಮಿಚ್ಛಾಮಿ ಜೀವಿತುಮ್ ॥76॥
ಭರತಕುಲೋತ್ತಂಸನೇ! ಲೋಕದಲ್ಲಿರುವ ಸರ್ವಸ್ತ್ರೀಯರಲ್ಲಿ ನಾನೇ ಅತ್ಯಂತ ನೀಚಳು. ಏಕೆಂದರೆ ಶತ್ರುಗಳಾದ ಧೃತರಾಷ್ಟ್ರಪುತ್ರರಿಂದ ಇಷ್ಟೊಂದು ಅವಮಾನಿತ- ಳಾದರೂ ಕೂಡ ಲಜ್ಜೆಯಿಲ್ಲದೇ ಜೀವಿಸಬೇಕೆಂದು ಬಯಸುತ್ತಿದ್ದೇನಲ್ಲವೇ?
ಧೃತರಾಷ್ಟ್ರಸುತಾ ರಾಜನ್ ನಿತ್ಯಮುತ್ಪಥಗಾಮಿನಃ |
ತಾದೃಶಾನಾಂ ವಧೇ ದೋಷಂ ನಾಹಂ ಪಶ್ಯಾಮಿ ಕರ್ಹಿಚಿತ್ ॥77॥
ನಿರ್ದೋಷಂ ವಧಮೇತೇಷಾಂ ಷಣ್ಣಾಮಪ್ಯಾತತಾಯಿನಾಮ್ |
ರಾಜನೇ! ಆ ಧೃತರಾಷ್ಟ್ರನ ಮಕ್ಕಳು ಎಂದೆಂದೂ ದುರ್ಮಾಗದಲ್ಲಿಯೇ ನಡೆಯುತ್ತಾರೆ. ಅವರನ್ನು ನಾಶ ಮಾಡಿದ್ದಕ್ಕೆ ನಿನಗೆ ಲವಲೇಶವೂ ಕೂಡ ಪಾಪ ಬಂದದ್ದನ್ನು ನಾನು ಕಾಣಲಾರೆನು.
ಇಮಾಂಶ್ಚೋಶನಸಾ ಗೀತಾನ್ ಶ್ಲೋಕಾನ್ ಶೃಣು ನರಾಧಿಪ |
ಆತ್ಮಹಂತಾऽರ್ಥಹಂತಾ ಚ ಬಂಧುಹಂತಾ ವಿಷಪ್ರದಃ |
ಆಥವರ್ಣೇನ ಹಂತಾ ಚ ಯಶ್ಚ ಭಾರ್ಯಾಂ ಪರಾಮೃಶೇತ್ ॥78॥
ನರಾಧಿಪನೇ! ಶುಕ್ರಾಚಾರ್ಯರು ಹೇಳಿದ ಅರ್ಥಪೂರ್ಣವಾದ ಈ ಶ್ಲೋಕ- ವನ್ನು ಕೇಳು - ಆತ್ಮಹತ್ಯೆ, ಸಂಪತ್ತಿನ ಅಪಹರಣ, ಬಂಧುಗಳ ನಾಶ, ವಿಷವನ್ನು ನೀಡುವುದು, ಅಥರ್ವವೇದದಲ್ಲಿ ಹೇಳಿದ ಮಾಟ, ಮಂತ್ರಗಳೆಂಬ ಕೃತ್ಯಪ್ರಯೋಗ -ದಿಂದ ಮತ್ತೊಬ್ಬನನ್ನು ಕೊಲ್ಲುವವನು. ಮತ್ತೊಬ್ಬರ ಹೆಂಡತಿಯನ್ನು ಸ್ಪರ್ಶ ಮಾಡುವುದು. ಈ ಆರು ವಿಧ ಜನರನ್ನು ಆತತಾಯೀ ಎಂಬುದಾಗಿ ಕರೆಯುತ್ತಾರೆ.
ಟಿಪ್ಪಣಿ - ಆಥವರ್ಣೇನ ಹಂತಾ ಚ ಇತ್ಯತ್ರ ಆಥರ್ವಣೇನ ಅಥರ್ವವೇದೋಕ್ತ- ಕೃತ್ಯಾ ಪ್ರಯೋಗಮಂತ್ರೇಣ |
ಆಥವರ್ಣೇನ ಎಂಬುದಕ್ಕೆ ಅಥರ್ವ ವೇದದಲ್ಲಿ ಹೇಳಿದ ಕೃತ್ಯಪ್ರಯೋಗಮಂತ್ರ- ದಿಂದ ಮತ್ತೊಬ್ಬನನ್ನು ಹಿಂಸಿಸಬಾರದು ಎಂದಭಿಪ್ರಾಯ.
ಬ್ರಹ್ಮಾ ನಿರ್ದೋಷಂ ವಧಮೇತೇಷಾಂ ಷಣ್ಣಾಮಪ್ಯಾತತಾಯಿನಾಮ್ |
ಪ್ರೋವಾಚ ಭಗವಾನ್ ಭಾರ್ಗವಾಯ ಮಹಾತ್ಮನೇ ॥79॥
ಇವರನ್ನು ಕೊಲ್ಲುವುದರಿಂದ ಸ್ವಲ್ಪವೂ ಕೂಡ ದೋಷವು ಬರುವುದಿಲ್ಲ. ಹಿಂದೊಮ್ಮೆ ಭಾರ್ಗವನಿಗೆ ಬ್ರಹ್ಮನೂ ಕೂಡ ಈ ನೀತಿವಾಕ್ಯಗಳನ್ನು ಹೇಳಿದ್ದನು.
ಬ್ರಹ್ಮಕ್ಷತ್ರವಿಶಾಂ ರಾಜನ್ ಸತ್ಪಥೇ ವರ್ತಿನಾಮಪಿ |

ಪ್ರಸಹ್ಯಾಗಾರಮಾಗಮ್ಯ ಹಂತಾರಂ ಗರದಂ ತಥಾ ॥80॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರು ಸನ್ಮಾರ್ಗದಲ್ಲಿ ನಡೆಯುತ್ತಿರುವಾಗ ಅವರ ಮನೆಗೆ ನುಗ್ಗಿ, ಅವರನ್ನು ಕೊಲ್ಲುವುದು, ಅವರಿಗೆ ವಿಷವುಣಿಸುವಿಕೆ ಮೊದಲಾದವುಗಳನ್ನು ಮಾಡುವವನನ್ನು ಕೊಲ್ಲಬೇಕು.
ಅಭಕ್ಷ್ಯಾಪೇಯದಾತಾರಮಗ್ನಿದಂ ಚ ನಿಶಾತಯೇತ್ |
ಮಾರ್ಗ ಏಷ ಮಹೀಪಾನಾಂ ಗೋಬ್ರಾಹ್ಮಣವಧೇಷು ಚ ॥81॥
ತಿನ್ನಬಾರದ ವಸ್ತುಗಳನ್ನು ಯಾರು ತಿನ್ನುತ್ತಾನೋ, ಕುಡಿಯಬಾರದ್ದನ್ನು ಯಾರು ಕುಡಿಯುತ್ತಾನೋ, ಯಾರು ಮನೆಗೆ ಬೆಂಕಿ ಹಚ್ಚುತ್ತಾನೋ, ಗೋ-ಬ್ರಾಹ್ಮಣರ ವಧೆಯಲ್ಲಿ ಆಸಕ್ತನಾಗಿರುತ್ತಾನೋ, ಅವನನ್ನು ಎದುರಿಸಲೇ ಬೇಕು.
ಕೇಶಗ್ರಹೇ ಚ ನಾರೀಣಾಮಪಿ ಯುದ್ಧ್ಯೇತ್ ಪಿತಾಮಹಮ್ |
ಬ್ರಹ್ಮಾಣಂ ದೇವದೇವೇಶಂ ಕಿಂ ಪುನಃ ಪಾಪಕಾರಿಣಮ್ ॥82॥
ಹೆಣ್ಮಕ್ಕಳ ತಲೆಕೂದಲಿಗೆ ಕೈಹಾಕುವವನನ್ನೂ ಕೂಡ ಯುದ್ಧಮಾಡಿ ಕೊಲ್ಲ- ಬೇಕು. ಹೀಗಿರುವಾಗ ಎಲ್ಲಾ ಬಗೆಯ ಪಾಪಗಳನ್ನು ಮಾಡಿದ ಧೃತರಾಷ್ಟ್ರರ ಮಕ್ಕಳ ಬಗ್ಗೆ ಪ್ರತ್ಯೇಕವಾಗಿ ಹೇಳುವುದೇನು ?
ಗೋಬ್ರಾಹ್ಮಣಾರ್ಥೇ ವ್ಯಸನೇ ಚ ರಾಜ್ಞಾಂ
ರಾಷ್ಟ್ರೋಪಮರ್ದೇ ಸ್ವಶರೀರಹೇತೋಃ |
ಸ್ತ್ರೀಣಾಂ ಚ ವಿಕ್ರುಷ್ಟರುತಾನಿ ಶ್ರುತ್ವಾ
ವಿಪ್ರೋಽಪಿ ಯುದ್ಧ್ಯೇತ ಮಹಾಪ್ರಭಾವಃ ॥83॥
ಗೋಬ್ರಾಹ್ಮಣರಿಗೆ ಸಂಕಟಸ್ಥಿತಿ ಪ್ರಾಪ್ತವಾದಾಗ ರಾಜರುಗಳು ರಾಷ್ಟ್ರಕ್ಕೆ ದ್ರೋಹವೆಸಗುವಾಗ ತನ್ನ ಶರೀರವನ್ನು ಕಾಪಾಡಿಕೊಳ್ಳುವ ಸಂದರ್ಭ ಒದಗಿದಾಗ, ಸ್ತ್ರೀಯರ ಆಕ್ರಂದನವನ್ನು ಕೇಳಿದಾಗ ಬ್ರಾಹ್ಮಣನೂ ಕೂಡ ಯುದ್ಧಕ್ಕೆ ಸಿದ್ಧನಾಗ- ಬೇಕು.
ವಿವರಣೆ - ಕ್ಷತ್ರಿಯರು ಇಲ್ಲದಿದ್ದಾಗ ಬೇರೆ ಯಾರೂ ಸಹ ಹೋರಾಟ ಮಾಡದೇ ಇದ್ದಾಗ, ಬ್ರಾಹ್ಮಣನು ಧರ್ಮದ ಉದ್ಧಾರಕ್ಕಾಗಿ ಯುದ್ಧ ಮಾಡಲು ಸಿದ್ಧನಾಗಬೇಕಾಗುತ್ತದೆ. ಬ್ರಾಹ್ಮಣನಿಗೆ ಹಿಂಸೆ ಮಾಡುವುದು ಅಧರ್ಮವಾದರೂ ಕೂಡ ಧರ್ಮದ ಉನ್ನತಿಗಾಗಿ ಯುದ್ಧ ಮಾಡುವುದು ಅನಿವಾರ್ಯವೆಂದು ಇಲ್ಲಿ ತಿಳಿಸುತ್ತಿದ್ದಾರೆ. ಬ್ರಾಹ್ಮಣನಿಗೆ ಸಾಮರ್ಥ್ಯವು ಇದ್ದಾಗ ಅಧರ್ಮದ ವಿರುದ್ಧ ಯುದ್ಧಮಾಡಲೇ ಬೇಕು. ಸಾಮರ್ಥ್ಯವು ಇಲ್ಲದಿದ್ದಾಗ ಮಾತಿನಿಂದಲಾದರೂ ಪ್ರತಿಭಟನೆಯನ್ನು ಮಾಡಬೇಕು. ಇದಕ್ಕೂ ಸಾಮರ್ಥ್ಯವಿಲ್ಲದಿದ್ದಾಗ ಆ ಪರಿ- ಸರವನ್ನೇ ಬಿಟ್ಟು, ಮತ್ತೊಂದು ಕಡೆ ತೆರಳಬೇಕು. ಈ ಮೂರನ್ನು ಬಿಟ್ಟು, ಅಧರ್ಮ ನಡೆಯುತ್ತಿದ್ದರೂ ಸುಮ್ಮನೆ ಕುಳಿತುಕೊಳ್ಳಬಾರದು. ಅದು ಮಹಾ- ಪರಾಧವಾಗುತ್ತದೆ. ಈ ಶ್ಲೋಕವು ಜೀವನದ ಪಾಠವನ್ನು ತಿಳಿಸುವ ಉತ್ತಮ ಸುಭಾಷಿತವಾಗಿದೆ.
ಧರ್ಮಾದ್ ವಿಚಲಿತಂ ವಿಪ್ರಂ ನಿಹನ್ಯಾದಾತತಾಯಿನಮ್ |
ತಸ್ಯಾನ್ಯತ್ರ ವಧಂ ವಿದ್ವಾನ್ ಮನಸಾಽಪಿ ನ ಚಿಂತಯೇತ್ ॥84॥
ಯಾವ ಬ್ರಾಹ್ಮಣನು ಧರ್ಮವನ್ನು ಬಿಟ್ಟು, ಆತತಾಯಿ ಎಂದು ಕರೆಸಿಕೊಳ್ಳು- ತ್ತಾನೋ, ಅವನನ್ನು ಕ್ಷತ್ರಿಯನಾದವನು ಕೊಲ್ಲಬೇಕು. ಆದರೆ ಯಾವುದೇ ಪಾಪ- ವನ್ನು ಮಾಡದ, ಬ್ರಾಹ್ಮಣನ ವಧೆಯ ವಿಷಯದಲ್ಲಿ ಮನಸ್ಸನ್ನೂ ಕೂಡ ಮಾಡ- ಬಾರದು. ಮನಸ್ಸಿನಿಂದಲೂ ಕೂಡ ಬ್ರಾಹ್ಮಣವಧೆಯನ್ನು ಚಿಂತಿಸಬಾರದು.
ಗೋಬ್ರಾಹ್ಮಣವಧೇ ವೃತ್ತಂ ಮಂತ್ರತ್ರಾಣಾರ್ಥಮೇವ ಚ |
ನಿಹನ್ಯಾತ್ ಕ್ಷತ್ರಿಯೋ ವಿಪ್ರಂ ಸ್ವಕುಟುಂಬಸ್ಯ ಚಾಪ್ತಯೇ ॥85॥
ಯಾರು ಗೋಬ್ರಾಹ್ಮಣರ ವಧೆಯನ್ನು ಮಾಡಲು ಹೊರಟಿರುತ್ತಾರೋ, ಅಂಥವನನ್ನು ರಾಜನು ಕೊಲ್ಲಬೇಕು. ಬ್ರಾಹ್ಮಣನಾದರೂ ಕೂಡ ಅವನನ್ನು ಬಿಡ- ಬಾರದು. ಆದರೆ ತನ್ನ ಕುಟುಂಬವನ್ನು ರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಕ್ಷತ್ರಿಯನು ದುಷ್ಟಬ್ರಾಹ್ಮಣನನ್ನು ಕೊಲ್ಲಬಹುದು.
ತಸ್ಕರೇಣ ನೃಶಂಸೇನ ಧರ್ಮಾತ್ ಪ್ರಚಲಿತೇನ ಚ |
ಕ್ಷತ್ರಬಂಧುಃ ಪರಂ ಶಕ್ತ್ಯಾ ಯುದ್ಧ್ಯೇದ್ ವಿಪ್ರೇಣ ಸಂಯುಗೇ ॥86॥
ಬ್ರಾಹ್ಮಣನು ಧರ್ಮಚ್ಯುತನಾದಾಗ, ಚೋರನಾದಾಗ, ಕ್ರೂರನಾದಾಗ ಕ್ಷತ್ರಿಯನು ತನ್ನಲ್ಲಿರುವ ಭುಜಪರಾಕ್ರಮದಿಂದ ಆ ಬ್ರಾಹ್ಮಣನನ್ನು ಯುದ್ಧದಲ್ಲಿ ಕೊಲ್ಲಬಹುದು.
ಆತಾತಾಯಿನಮಾಯಾಂತಮಪಿ ವೇದಾಂತಪಾರಗಮ್ |
ಜಿಘಾಂಸಂತಂ ಜಿಘಾಂಸೀಯಾನ್ನ ತೇನ ಭ್ರೂಣಹಾ ಭವೇತ್ ॥87॥
ಬ್ರಾಹ್ಮಣನಾಗಿದ್ದರೂ ಆತತಾಯಿ ಆಗಿದ್ದರೆ ತನ್ನ ಮೇಲೆ ಯುದ್ಧ ಮಾಡಲು ಬಂದಾಗ ಅವನನ್ನು ನಿಸ್ಸಂಶಯವಾಗಿ ಕೊಲ್ಲಬಹುದು. ವೇದಜ್ಞಾನಿಯಾದ ಬ್ರಾಹ್ಮಣನನ್ನು ಕೊಂದಾಗ ಉಂಟಾಗುವ ಭ್ರೂಣಹತ್ಯಾ ದೋಷವು ಬರುವುದಿಲ್ಲ.
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಽಪ್ಯಂತ್ಯಜೋಽಪಿ ವಾ |
ನ ಹನ್ಯಾದ್ ಬ್ರಾಹ್ಮಣಂ ಶಾಂತಂ ತೃಣೇನಾಪಿ ಕದಾಚನ ॥88॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಚಂಡಾಲ ಇವರಲ್ಲಿ ಯಾರೊ- ಬ್ಬನೂ ಕೂಡ ಎಂದೂ ಕೂಡ ಒಂದು ಹುಲ್ಲುಕಡ್ಡಿಯಿಂದಲೂ ಶಾಂತನಾದ ಬ್ರಾಹ್ಮಣನನ್ನು ಹಿಂಸಿಸಬಾರದು.
ಬ್ರಾಹ್ಮಣಾಯಾವಗುರ್ಯಾದ್ಯಃ ಸ್ಪೃಷ್ಟ್ವಾ ಗುರುತರಂ ಮಹತ್ |
ವರ್ಷಾಣಾಂ ತ್ರಿಶತಂ ಪಾಪಃ ಪ್ರತಿಷ್ಠಾಂ ನಾಧಿಗಚ್ಛತಿ ॥89॥
ಸಾಧುಸ್ವಭಾವದ ಬ್ರಾಹ್ಮಣನಿಗೆ ದೊಡ್ಡದಾದ ದೊಣ್ಣೆಯಿಂದ ಹೊಡೆಯಲು ಕೈಎತ್ತಿದರೂ ಸಾಕು. ಆ ಪಾಪದಿಂದ ಮನುಷ್ಯನು ಮುನ್ನೂರು ವರ್ಷಗಳ ಕಾಲ ನೆಲೆ ಇಲ್ಲದೆ ಎಲ್ಲೆಡೆಯೂ ಅಲೆಯುವಂತಾಗುತ್ತದೆ.

ಸಹಸ್ರಾಣಿ ಚ ವರ್ಷಾಣಿ ನಿಹತ್ಯ ನರಕೇ ಪತೇತ್ |
ತಸ್ಮಾನ್ನೈವಾವಗುರ್ಯಾದ್ಧಿ ನೈವ ಶಸ್ತ್ರಂ ನಿಪಾತಯೇತ್ ॥90॥
ಯಾರು ಬ್ರಾಹ್ಮಣನನ್ನು ಹೊಡದೇ ಬಿಡುತ್ತಾನೋ, ಅವನು ಸಾವಿರ ವರ್ಷಗಳ ತನಕ ನರಕದಲ್ಲಿ ಬೀಳುತ್ತಾನೆ. ಆದ್ದರಿಂದ ಬ್ರಾಹ್ಮಣನ ಮೇಲೆ ಕೈ ಎತ್ತುವುದನ್ನು, ಆಯುಧದಿಂದ ಹೊಡೆಯುವುದನ್ನು ಎಂದೂ ಸಹ ಮಾಡಬಾರದು. ಇವೆರಡೂ ಕೂಡ ಮಹಾಪಾತಕಗಳೇ ಆಗಿವೆ.
ಶೋಣಿತಂ ಯಾವತಃ ಪಾಂಸೂನ್ ಗೃಹ್ಣಾತೀತಿ ಹಿ ಧಾರಣಾಮ್ |
ತಾವತೀಃ ಸ ಸಮಾಃ ಪಾಪೋ ನರಕೇ ಪರಿವರ್ತತೇ ॥91॥
ಒಂದು ವೇಳೆ ಬ್ರಾಹ್ಮಣನ ದೇಹಕ್ಕೆ ಶಸತ್ರಘಾತ ಮಾಡಿದರೆ ಅದರಿಂದ ರಕ್ತಕಣ- ಗಳು ಭೂಮಿಯಲ್ಲಿ ಬಿದ್ದಾಗ ಎಷ್ಟು ಧೂಳಿನ ಕಣಗಳಿಗೆ, ಆ ರಕ್ತವು ಅಂಟಿಕೊಳ್ಳು- ತ್ತದೋ, ಅಷ್ಟು ವರ್ಷಗಳ ಕಾಲ ಆ ಪಾಪಿಯು ಎಲ್ಲಾ ನರಕಗಳಲ್ಲಿ ಸುತ್ತಾಡುತ್ತಾನೆ.
ಟಿಪ್ಪಣಿ - ಗೃಹ್ಣಾತೀಹ ಹಿ ಧಾರಣಾನ್ ಇತ್ಯತ್ರ ಅವಗುರೇತ್ ನಿಂದಾ ಕುರ್ಯಾತ್| `ಗುರೀ ಉದ್ಯಮನೇ' ಇತಿ ಧಾತುಃ | ಧಾರಣಾನ್ ಧರಣ್ಯಾಂ ವಿದ್ಯಮಾನಾನ್ | `ಗೃಹ್ಣಾತೀಹ ಹಿ ಧಾರಣಾನ್' ನಿಂದೆಯನ್ನು ಮಾಡಿದರೂ ಸಾಕು ಎಂದಭಿಪ್ರಾಯ- ವನ್ನು ತಿಳಿಯಬೇಕು. `ಧಾರಣಾನ್' ಎಂದರೆ ಭೂಮಿಯಲ್ಲಿ ಬಿದ್ದಿರುವ ಎಂದರ್ಥ.
ತ್ವಗಸ್ಥಿಭೇದಂ ವಿಪ್ರಸ್ಯ ಯಃ ಕುರ್ಯಾತ್ ಕಾರಯೇವ ವಾ |
ಬ್ರಹ್ಮಹಾ ಸ ತು ವಿಜ್ಞೇಯಃ ಪ್ರಾಯಶ್ಚಿತ್ತೀ ನರಾಧಮಃ ॥92॥
ಬ್ರಾಹ್ಮಣನ ಚರ್ಮವನ್ನು, ಮೂಳೆಯನ್ನು ಯಾರು ಗಾಯ ಪಡಿಸುತ್ತಾನೋ, ಅಥವಾ ಹಿಂಸೆ ನೀಡಲು ಪ್ರಚೋದನೆ ಮಾಡುತ್ತಾನೋ, ಅಂಥವನು ಬ್ರಹ್ಮಹತ್ಯೆಗೆ ಗುರಿಯಾಗುತ್ತಾನೆ. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದ ನರಾಧಮ ಎಂದು ಕರೆಸಿಕೊಳ್ಳುತ್ತಾನೆ.
ಶ್ರೋತ್ರಿಯಂ ಬ್ರಾಹ್ಮಣಂ ಹತ್ವಾ ತಥಾಽಽತ್ರೇಯೀಂ ಚ ಬ್ರಾಹ್ಮಣೀಮ್ |
ಚತುರ್ವಿಂಶತಿವರ್ಷಾಣಿ ಚರೇದ್ ಬ್ರಹ್ಮಹಣೋ ವ್ರತಮ್ ॥93॥
ದ್ವಿಗುಣಾ ಬ್ರಹ್ಮಹತ್ಯೇಯಂ ಸರ್ವೈಃ ಪ್ರೋಕ್ತಾ ಮಹರ್ಷಿಭಿಃ |
ಪ್ರಾಯಶ್ಚಿತ್ತಮಕುರ್ವಾಣಂ ಕೃತಾಂಕಂ ವಿಪ್ರವಾಸಯೇತ್ ॥94॥
ಯಾರು ಶ್ರೋತ್ರಿಯ ಬ್ರಾಹ್ಮಣನನ್ನು ಕೊಲ್ಲುತ್ತಾನೋ, ಮತ್ತು ಉತ್ತಮ ಬ್ರಾಹ್ಮಣಸ್ತ್ರೀಯನ್ನು ಕೊಲ್ಲುತ್ತಾನೋ, ಅಂಥವನಿಗೆ ಎರಡು ಪಟ್ಟು ಬ್ರಹ್ಮಹತ್ಯಾ ಪಾತಕವು ಬರುತ್ತದೆ. ಇಪ್ಪತ್ತಾನ್ಕು ವರ್ಷಗಳ ಕಾಲ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ- ಬೇಕೆಂಬ ವ್ರತವನ್ನು ಋಷಿಗಳು ತಿಳಿಸಿದ್ದಾರೆ. ಪಾಪ ಮಾಡಿಯೂ ಕೂಡ ಯಾರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಿಲ್ಲವೋ, ಅಂಥವನ ದೇಹದಲ್ಲಿ ಏನಾದರೂ ಒಂದು ಗುರುತನ್ನು ಮಾಡಿ, ಅವನ ಸಂಪರ್ಕವನ್ನು ಯಾರೂ ಮಾಡದಂತೆ ಎಲ್ಲರಿಗೂ ತಿಳಿಸಿ, ದೇಶವನ್ನು ಬಿಟ್ಟು, ಅವನನ್ನು ಕಳುಹಿಸಬೇಕು. ಅವನ ಸಂಪರ್ಕ- ವನ್ನು ಯಾರೂ ಕೂಡ ಮಾಡಬಾರದು.
ಟಿಪ್ಪಣಿ - ಕೃತಾಂಕಂ ವಿಪ್ರವಾಸಯೇದ್ ಇತ್ಯತ್ರ ಕೃತಾಂಕಂ ಕೃತಶ್ವಾನಮುದ್ರಾ- ದ್ಯಂಕಮ್ | `ಕೃತಾಂಕಂ ವಿಪ್ರವಾಸಯೇದ್' ಎಂಬಲ್ಲಿ `ಕೃತಾಂಕಂ' ಎಂದರೆ ನಾಯಿಯ ಚಿಹ್ನೆಯನ್ನು ಬರೆಯಬೇಕು ಎಂದಭಿಪ್ರಾಯ.
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ವಾ ಘಾತಯೇನ್ನೃಪಃ |
ಬ್ರಹ್ಮಘ್ನಂ ತಸ್ಕರಂ ಚೈವ ಮಾಭೂದೇವಂ ಚರಿಷ್ಯತಿ ॥95॥
ಬ್ರಾಹ್ಮಣನನ್ನು ಕೊಂದ ವ್ಯಕ್ತಿಯು ಬ್ರಾಹ್ಮಣನೇ ಆಗಿರಲಿ, ಕ್ಷತ್ರಿಯನೇ ಆಗಿರಲಿ, ವೈಶ್ಯನೇ ಆಗಿರಲಿ, ಶೂದ್ರನೇ ಆಗಿರಲಿ ರಾಜನಾದವನು ಅವನನ್ನು ದಂಡಿಸಲೇ ಬೇಕು. ಮುಂದೆ ಎಂದೂ ಕೂಡ ಇಂಥ ಅಪರಾಧವನ್ನು ಮಾಡಬಾರದು. ಇದನ್ನು ನೋಡಿ, ಮತ್ತೊಬ್ಬರೂ ಕೂಡ ಇಂಥ ಅಪರಾಧವನ್ನು ಮಾಡಬಾರದೆಂಬ ಎಚ್ಚರಿಕೆಯನ್ನು ನೀಡಬೇಕು.
ಛಿತಕತ್ವ ಹಸ್ತೌ ಚ ಪಾದೌ ಚ ನಾಸಿಕೋಷ್ಠೌ ಚ ಭೂಪತಿಃ |
ಬ್ರಹ್ಮಘ್ನಂ ಚೋತ್ತಮಂ ಪಾಪಂ ನೇತ್ರೋದ್ಧಾರೇಣ ಯೋಜಯೇತ್ ॥96
ಬ್ರಾಹ್ಮಣಘಾತುಕನ ಕೈಗಳನ್ನು ಕತ್ತರಿಸಬೇಕು. ಅಥವಾ ಕಾಲುಗಳನ್ನು ಕತ್ತರಿಸ- ಬೇಕು. ತುಟಿ, ಮೂಗು ಇವುಗಳನ್ನಾದರೂ ತುಂಡರಿಸಬೇಕು. ಇಷ್ಟು ಮಾಡಿದರೂ ಪುನಃ ಬ್ರಹ್ಮಹತ್ಯೆಯನ್ನು ಯಾರು ಮಾಡುತ್ತಾನೋ, ಅಂಥವನ ಕಣ್ಣುಗಳನ್ನೇ ಕಿತ್ತುಹಾಕಬೇಕು.
ಶೂದ್ರಸ್ಯೈಷ ಸ್ಮೃತೋ ದಂಡಸ್ತದ್ವದ್ ರಾಜನ್ಯವೈಶ್ಯಯೋಃ |
ಪ್ರಾಯಶ್ಚಿತ್ತಮಕುರ್ವಾಣಂ ಬ್ರಾಹ್ಮಣಂ ತು ಪ್ರವಾಸಯೇತ್ ॥97॥
ಶೂದ್ರನು ಬ್ರಾಹ್ಮಣಘಾತುಕನಾಗಿದ್ದರೆ ಈ ಬಗೆಯ ಶಿಕ್ಷೆಯನ್ನು ನೀಡಬೇಕು. ವೈಶ್ಯ ಹಾಗೂ ಕ್ಷತ್ರಿಯರಿಗೂ ಕೂಡ ಶೂದ್ರನ ಸಮಾನವಾದ ಶಿಕ್ಷೆಯನ್ನೇ ನೀಡಬೇಕು. ಆದರೆ ಬ್ರಾಹ್ಮಣನೇ ಬ್ರಾಹ್ಮಣಘಾತುಕನಾಗಿದ್ದರೆ ಅವನಿಂದ ಪ್ರಾಯ- ಶ್ಚಿತ್ತವನ್ನು ಮಾಡಿಸಬೇಕು. ಅವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಊರನ್ನು ಬಿಟ್ಟು ಕಳುಹಿಸಬೇಕು.
ಕ್ಷತ್ರಿಯಂ ವೈಶ್ಯಶೂದ್ರೌ ಚ ಶಸ್ತ್ರೇಣೈವ ಚ ಘಾತಯೇತ್ |
ಬ್ರಹ್ಮಘ್ನಾನ್ ಬ್ರಾಹ್ಮಣಾನ್ ರಾಜಾ ಕೃತಾಂಕಾನ್ ವಿಪ್ರವಾಸಯೇತ್ ॥98
ಬ್ರಾಹ್ಮಣನನ್ನು ಕೊಲ್ಲುವ ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರನ್ನು ಶಸ್ತ್ರಗಳಿಂದಲೇ ಕೊಲ್ಲಿಸಬೇಕು. ಬ್ರಹ್ಮಹತ್ಯಾ ಮಾಡಿದ ಬ್ರಾಹ್ಮಣನಿಗೆ ರಾಜನಾದವನು ಯಾವುದಾ- ದರೂ ಒಂದು ಚಿಹ್ನೆಯನ್ನು ದೇಹದಲ್ಲಿ ಮಾಡಿ ಹೊರಗಟ್ಟಬೇಕು.
ವಿಕಲೇಂದ್ರಿಯಾಂಸ್ತ್ರಿವರ್ಣಾಂಶ್ಚ ಚಂಡಾಲೈಃ ಸಹ ವಾಸಯೇತ್ |
ತೈಶ್ಚ ಯಃ ಸಂಪಿಬೇತ್ ಕಶ್ಚಿತ್ ಸ ಪಿಬನ್ ಬ್ರಹ್ಮಹಾ ಭವೇತ್ ॥99॥
ಯಾವ ತ್ರಿವರ್ಣದವರು ಹೀಗೆ ಬ್ರಹ್ಮಹತ್ಯೆಯ ಪಾಪದಿಂದ ವಿಕಲೇಂದ್ರಿಯ- ರಾಗಿರುತ್ತಾರೋ, ಅಂಥವರನ್ನು ಪುನಃ ತಮ್ಮ ಸಂಪರ್ಕದಲ್ಲಿಟ್ಟುಕೊಳ್ಳಬಾರದು. ಚಂಡಾಲರ ಗುಂಪಿನಲ್ಲಿ ಸೇರಿಸಬೇಕು. ಅಂಥವನ ಜೊತೆ ಯಾರು ಸಹಭೋಜನ- ವನ್ನು, ಅಥವಾ

ಸಹಪಾನವನ್ನು ಮಾಡುತ್ತಾನೋ, ಅಂಥವನೂ ಕೂಡ ಬ್ರಹ್ಮ- ಹತ್ಯಾಪಾಪವನ್ನು ಹೊಂದುತ್ತಾನೆ.
ಪ್ರೇತಾನಾಂ ನಚ ದೇಯಾನಿ ಪಿಂಡದಾನಾನಿ ಕೇನಚಿತ್ ॥100॥
ಅಂಥ ಬ್ರಹ್ಮಹತ್ಯೆ ಮಾಡಿದವನು ಮರಣವನ್ನು ಹೊಂದಿದ ಮೇಲೆ ಅವನಿಗೆ ಪಿಂಡದಾನವನ್ನು ಮಾಡಬಾರದು. ಅವನಿಗೋಸ್ಕರ ಯಾವುದೇ ದಾನ ಮೊದಲಾ- ದವುಗಳನ್ನೂ ಕೂಡ ಮಾಡಬಾರದು.
ವಿವರಣೆ - ಮಹಾಪಾತಕಗಳನ್ನು ಮಾಡಿ ಯಾರು ಮೃತನಾಗಿರುತ್ತಾನೋ, ಅವನಿಗೆ ಪಿಂಡದಾನಾದಿಗಳನ್ನೂ ಕೂಡ ಮಾಡಬಾರದು ಎಂಬುದಾಗಿ ಶಾಂತಿ- ಪರ್ವದ ಈ ಶ್ಲೋಕವು ಅತ್ಯಂತಸ್ಪಷ್ಟವಾಗಿ ಹೇಳುತ್ತಿದೆ. ಇದರಿಂದ ಜೀವನದಲ್ಲಿ ಬ್ರಹ್ಮಹತ್ಯೆ ಮೊದಲಾದ ಮಹಾಪಾತಕಗಳನ್ನು ಸರ್ವಥಾ ಮಾಡಬಾರದೆಂದು ಎಚ್ಚೆತ್ತುಕೊಳ್ಳಬೇಕು.
ಒಂದು ವಿಮರ್ಶೆ -
ಅವೈಷ್ಣವರಿಗೆ ಮತ್ತು ಪಾತಕಿಗಳಿಗೆ ಶ್ರಾದ್ಧಾದಿಗಳನ್ನು ಮಾಡಬಹುದೇ ?
ಮಗನಾದವನು ತಂದೆಯ ಶ್ರಾದ್ಧವನ್ನು ಮಾಡಲೇಬೇಕು. ಕರ್ತೃವಾಗಿರುವು- ದರಿಂದ ಶ್ರಾದ್ಧವನ್ನು ಬಿಡುವಂತಿಲ್ಲ. ತಂದೆಯಾದವನು ಒಂದು ವೇಳೆ ಮಹಾ- ಪಾತಕಿಯಾಗಿದ್ದರೆ ಬ್ರಹ್ಮಹತ್ಯಾ ಮೊದಲಾದ ಪಾಪಗಳನ್ನು ಮಾಡಿದ್ದಲ್ಲಿಯೂ ಕೂಡ ಮಗನಾದವನು ಶ್ರಾದ್ಧವನ್ನು ಬಿಡುವಂತಿಲ್ಲ. ಪಿತೃದೇವತೆಗಳಿಗೆ ಆ ಪಿಂಡವನ್ನು ಸಮರ್ಪಣೆ ಮಾಡಿ, ನಮ್ಮ ತಂದೆಯು ಮಾಡಿದ ಅಪರಾಧವನ್ನು ಮನ್ನಿಸಿ, ಅವರಿಗೆ ಸದ್ಗತಿಯನ್ನು ನೀಡು ಎಂಬುದಾಗಿ, ಉತ್ತಮಜನ್ಮವು ಪ್ರಾಪ್ತವಾಗಲೀ ಎಂಬುದಾಗಿ ಪ್ರಾರ್ಥಿಸಲೇ ಬೇಕು. ಬ್ರಹ್ಮರಾಕ್ಷಸ ಮೊದಲಾದ ದೇಹಗಳು ಬಂದಿದ್ದಲ್ಲಿ ಅದರ ಪರಿಹಾರಕ್ಕೂ ಕೂಡ ಪ್ರಯತ್ನವನ್ನು ಪಡಲೇ ಬೇಕು. ಮಗನಾಗಿ ಈ ಕರ್ತವ್ಯವನ್ನು ಆಚರಿಸದೇ ಇರುವಂತಿಲ್ಲ. ಹಾಗೇನಾದರೂ ನಮ್ಮ ತಂದೆಯು ಬ್ರಹ್ಮಹತ್ಯೆಯನ್ನು ಮಾಡಿದ್ದಾನೆಂದು ಶ್ರಾದ್ಧಾದಿಗಳನ್ನು ಮಾಡದೇ ಇದ್ದರೆ ಅವನ ಸದ್ಗತಿಗೆ ಪ್ರಯತ್ನವನ್ನು ಪಡದೇ ಇದ್ದರೆ, ಕರ್ತವ್ಯಭ್ರಷ್ಟನಾಗುತ್ತಾನೆ. ಧರ್ಮಶಾಸ್ತ್ರಗಳ ಆಧಾರದಿಂದ ಈ ಎಲ್ಲಾ ವಿಚಾರಗಳು ಸ್ಪಷ್ಟವಾಗುತ್ತವೆ.
ಹಾಗಾದರೆ ಮಹಾಭಾರತದ ಈ ಶ್ಲೋಕದಲ್ಲಿ ಬ್ರಹ್ಮಹತ್ಯೆ ಮಾಡಿದ ಬ್ರಾಹ್ಮಣಾದಿಗಳಿಗೆ ಶ್ರಾದ್ಧಾದಿಗಳನ್ನು ಕೂಡ ಮಾಡಬಾರದು ಎಂದು ಹೇಳಿ- ದ್ದಾರಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಕರ್ತೃ ಬಿಟ್ಟು ಉಳಿದ ಸಂಬಂಧಿಕರು ಅಥವಾ ಅಭಿಮಾನದಿಂದ ಮಿತ್ರರೇ ಮೊದಲಾದವರು ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಪಿಂಡದಾನಾದಿಗಳನ್ನು ಮಾಡಬಾರದು ಎಂದಭಿಪ್ರಾಯ. ಮಗನು ಪಿಂಡದಾನಾದಿಗಳನ್ನು ಮಾಡಲೇ ಬೇಕು. ಆದರೆ ಉಳಿದವರು ಮಾಡಬಾರದು ಎಂಬುದಾಗಿ ತಿಳಿದುಕೊಳ್ಳಬೇಕು. ರಾವಣನು ಸತ್ತ ಮೇಲೆ ವಿಭೀಷಣನು ಪಿಂಡದಾನಾದಿಗಳಲ್ಲಿ ಪ್ರವೃತ್ತಿಯನ್ನು ಮಾಡದೇ ಇದ್ದಾಗ ಶ್ರೀರಾಮಚಂದ್ರನೇ ಸ್ವತಃ ನಿಂತು ಎಲ್ಲಾ ಕಾರ್ಯಗಳನ್ನು ಮಾಡಿಸುತ್ತಾನೆ. `ಮರಣಾಂತಾನಿ ವೈರಾಣಿ' ಎಂಬುದಾಗಿ ಬೋಧಿಸುತ್ತಾನೆ. ಅಲ್ಲಿ ರಾವಣನ ಮಕ್ಕಳು ಯಾರೂ ಇಲ್ಲದೇ ಇರುವುದರಿಂದ ತಮ್ಮನೇ ಆ ಸ್ಥಾನದಲ್ಲಿ ನಿಂತು ಅಂತ್ಯಸಂಸ್ಕಾರವನ್ನು ಮಾಡುವ ಪ್ರಸಂಗವು ಪ್ರಾಪ್ತವಾಗಿತ್ತು.
ಧೃತರಾಷ್ಟ್ರನು ದುರ್ಯೋಧನಾದಿಗಳಿಗೆ ಪಿಂಡದಾನಾ -ದಿಗಳನ್ನು ಮಾಡುತ್ತೇನೆ ಎಂಬುದಾಗಿ ಹೇಳಿದಾಗ ಭೀಮಸೇನದೇವರು ಅವೈಷ್ಣವರಿಗೆ ಶ್ರಾದ್ಧಾದಿಗಳನ್ನು ಮಾಡುವ ಅವಶ್ಯಕತೆಯಿಲ್ಲ ಎಂಬುದಾಗಿ ಹೇಳಿ ಯಾವುದೇ ಸಹಕಾರವನ್ನು ನೀಡುವುದಿಲ್ಲ. ಭೀಮಸೇನದೇವರ ಅಭಿಪ್ರಾಯ- ವೇನೆಂದರೆ ತಂದೆಯಾದ ನೀನು ಅವೈಷ್ಣವರಿಗೆ ಪಿಂಡದಾನಾದಿಗಳನ್ನು ಮಾಡುವ ಅವಶ್ಯಕತೆಯು ಇರುವುದಿಲ್ಲ. ಶ್ರಾದ್ಧಾದಿಗಳನ್ನು ಮಾಡಲು ನೀನು ಕರ್ತೃವೂ ಅಲ್ಲ. ಅದನ್ನು ಮಾಡುವ ಕರ್ತವ್ಯ ಇರುವವರೇ ಬೇರೆ ಇದ್ದಾರೆ ಎಂದು. ಆದ್ದರಿಂದ ತಂದೆಯು ಅವೈಷ್ಣವನಾಗಿದ್ದರೂ ಕೂಡ ಮಗನಾದವನು ಅವನ ಔನ್ನತ್ಯಕ್ಕೆ ಪ್ರಯತ್ನವನ್ನು ಪಡಲೇ ಬೇಕು. ಪ್ರಹ್ಲಾದರಾಜರು ಈ ವಿಷಯದಲ್ಲಿ ನಮಗೆಲ್ಲರಿಗೂ ಆದರ್ಶರಾಗಿದ್ದಾರೆ.
ಕೃಷ್ಣರೂಪಾ ಸುರೂಪಾ ಚ ನರ್ಮಘ್ನಾ ಲಬ್ಧಮೂರ್ಧಜಾ |
ದುನೋತ್ಯದುಷ್ಕಕರ್ತಾರಂ ಬ್ರಹ್ಮಹತ್ಯೇತಿ ತಾಂ ವಿದುಃ ॥101॥
ಬ್ರಹ್ಮಹತ್ಯೆಯು ಕಪ್ಪುವರ್ಣದಿಂದ ಕೂಡಿದ್ದು, ತಲೆಯನ್ನು ಕೆದರಿಕೊಂಡು ವಿಕಾರರೂಪವುಳ್ಳದ್ದಾಗಿ ಕಣ್ಣಿಗೆ ಕಾಣದಂತೆ ಪಾಪ ಮಾಡಿದವನನ್ನು ಹಿಂಬಾಲಿ- ಸುತ್ತಲೇ ಇರುತ್ತದೆ. ನಿರಂತರ ಅವನನ್ನು ಪೀಡಿಸುತ್ತದೆ. ಅವನು ಮಾಡುವ ಪುಣ್ಯಕರ್ಮಗಳೆಲ್ಲವನ್ನೂ ಸಂಪೂರ್ಣ ನಾಶಮಾಡುತ್ತದೆ.
ಟಿಪ್ಪಣಿ - ಅಸುರೂಪಾ ನರ್ಮಘ್ನಾ ಇತ್ಯತ್ರ ಕೃಷ್ಣವರ್ಣಾ ಅಸುರೂಪಾ ಕ್ರೂರರೂಪಾ ನರ್ಮಘ್ನಾ ಲಂಬಮೂರ್ಧಜಾ ಬ್ರಹ್ಮಹತ್ಯಾ ಅದುಷ್ಕಕರ್ತಾರಂ ಪುಣ್ಯ- ಕರ್ತಾರಂ ದುನೋತಿ ಪೀಡಯತಿ |
`ಅಸುರೂಪಾ ನರ್ಮಘ್ನಾ' ಎಂಬಲ್ಲಿ `ಕೃಷ್ಣವರ್ಣಾ ಅಸುರೂಪಾ' ಎಂಬುದಕ್ಕೆ ಕ್ರೂರರೂಪವಾಗಿದೆ ಎಂದರ್ಥ. `ಅದುಷ್ಕಕರ್ತಾರಂ' ಎಂಬುದಕ್ಕೆ ಪುಣ್ಯಕೆಲಸವನ್ನು ಮಾಡದವನನ್ನು ಎಂದರ್ಥ. `ದುನೋತಿ' ಎಂದರೆ ಪೀಡಿಸುತ್ತದೆ ಎಂದರ್ಥ.
ಪಾಪ ಮಾಡಿದವನ ಪಾಪದ ಸ್ವರೂಪ ಹೀಗಿದೆ - ಅವನ ತಲೆ ಬ್ರಹ್ಮಹತ್ಯೆಯ ಸ್ವರೂಪವಾಗಿದ್ದು, ಕೆದರಿಕೊಂಡು ವಿಕಾರ ರೂಪವನ್ನು ಹೊಂದಿರುತ್ತದೆ. ಅವನ ಎರಡು ಭುಜಗಳು ನಿರಂತರ ಕದಿಯುವುದರಲ್ಲಿ ಆಸಕ್ತವಾಗಿದೆ. ಅವನ ಮನಸ್ಸು ಹೆಂಡ- ಕುಡಿಯುವುದರಲ್ಲೇ ಅನುರಕ್ತವಾಗಿದೆ. ಎರಡು ಕಟಿಗಳು ಉತ್ತಮಸ್ತ್ರೀಯರ ಭೋಗದಲ್ಲಿ ನಿರತವಾಗಿರುತ್ತದೆ. ಪಾತಕಗಳು ಅವನ ಕಾಲಿನ ರೂಪದಲ್ಲಿವೆ. ಅವನ ದೇಹದಲ್ಲಿರುವ ರೋಮಗಳೆಲ್ಲವೂ ಉಪಪಾತಕರೂಪವಾಗಿವೆ. ಕೆಂಪುಮೀಸೆಗಳಿಂದ ಕೂಡಿದ್ದು, ಕ್ರೂರ- ವಾದ ಕಣ್ಣುಗಳಿಂದ ಕೂಡಿವೆ. ಕೆಳಮುಖವಾಗಿ ಕಪ್ಪು ಬಣ್ಣದಲ್ಲಿರುವ ಹೆಬ್ಬೆರಳಿನ ಗಾತ್ರದಲ್ಲಿದೆ. ಖಡ್ಗ, ಚರ್ಮಗಳನ್ನು ಧರಿಸಿ ಹೊಟ್ಟೆಯ ಎಡಭಾಗದಲ್ಲಿ ಈ ಪಾಪ- ಪುರುಷನು ಕುಳಿತಿರುತ್ತಾನೆ.
ಬ್ರಹ್ಮಘ್ನೇನ ಪಿಬಂತಶ್ಚ ವಿಪ್ರಾ ದೇಶಾಃ ಪುರಾಣಿ ಚ |
ಅಚಿರಾದೇವ ಪೀಡ್ಯಂತೇ ದುರ್ಭಿಕ್ಷವ್ಯಾಧಿತಸ್ಕರೈಃ ॥102॥
ಯಾರು ಬ್ರಹ್ಮಹತ್ಯೆಯನ್ನು ಮಾಡಿರುತ್ತಾನೋ, ಅವನ ಜೊತೆ ಸೇರಿ ಪಾನ ಭೋಜನಗಳನ್ನು ಬ್ರಾಹ್ಮಣರು ಮಾಡಬಾರದು. ಹಾಗೇನಾದರೂ ಮಾಡಿದರೆ ಅವರು ವಾಸಿಸುವ ದೇಶಗಳು, ಪಟ್ಟಣಗಳು ಬರಗಾಲದಿಂದ ಪೀಡಿತವಾಗುತ್ತವೆ. ಕಳ್ಳಕಾಕರಿಂದ ಹೆಚ್ಚುತ್ತವೆ. ರೋಗ-ರುಜಿನಗಳು ಉಲ್ಬಣಗೊಳ್ಳುತ್ತವೆ.

ಟಿಪ್ಪಣಿ - ಬ್ರಹ್ಮಘ್ನೇನ ಪಿಬಂತಶ್ಚ ಇತ್ಯತ್ರ ಬ್ರಹ್ಮಘ್ನೇನ ಸಹ ಪಿಬಂತಃ ಮದ್ಯಾದಿಕಂ ಪಿಬಂತಃ | ಬ್ರಹ್ಮಹತ್ಯೆಯನ್ನು ಮಾಡಿದವನ ಜೊತೆ ಸುರಾಪಾನಾದಿಗಳನ್ನು ಮಾಡುವ- ವನು ಎಂದರ್ಥ.
ಬ್ರಾಹ್ಮಣಂ ಪಾಪಕರ್ಮಾಣಂ ವಿಪ್ರಾಣಾಮಾತತಾಯಿನಮ್ |
ಕ್ಷತ್ರಿಯಂ ವೈಶ್ಯಶೂದ್ರೌ ಚ ನೇತ್ರೋದ್ಧಾರೇಣ ಯೋಜಯೇತ್॥103॥
ಬ್ರಹ್ಮಹತ್ಯೆಯನ್ನು ಮಾಡಿದ ವಿಪ್ರರು ಆತತಾಯಿಗಳು ಎಂದು ಕರೆಸಿಕೊಳ್ಳುತ್ತಾರೆ. ಇವರು ನರಕಕ್ಕೆ ತೆರಳುತ್ತಾರೆ. ಬ್ರಹ್ಮಹತ್ಯೆಯನ್ನು ಆಚರಿಸಿದ ಕ್ಷತ್ರಿಯರು, ವೈಶ್ಯರು ಹಾಗೂ ಶೂದ್ರರು ಇವರಲ್ಲಿ ಯಾರೇ ಆಗಿದ್ದರೂ ರಾಜನಾದವನು ಅವರ ಕಣ್ಣು- ಗಳನ್ನು ಕೀಳಿಸಬೇಕು.
ಟಿಪ್ಪಣಿ - ಬ್ರಾಹ್ಮಣಂ ಪಾಪಕರ್ಮಾಣಮ್ ಇತ್ಯತ್ರ ವಿಪ್ರಾಣಾಂ ಮಧ್ಯೇ ಆತ- ತಾಯಿನಂ ಪಾಪಕರ್ಮಾಣಂ ಬ್ರಾಹ್ಮಣಂ ನರಕೇ ಪಾಯಯೇತ್, ನತು ರಾಜಾ ತೇಷಾಂ ನೇತ್ರೋತ್ಪಾಟನಾದಿಕಂ ಕುರ್ಯಾದಿತಿ ಭಾವಃ |
ವಿಪ್ರರ ಮಧ್ಯದಲ್ಲಿ ಪಾಪಕರ್ಮವನ್ನು ಆಚರಿಸಿದ ಬ್ರಾಹ್ಮಣನಿಗೆ ನರಕವೇ ಗತಿ- ಯಾಗುತ್ತದೆ. ಅಂಥವರಿಗೆ ರಾಜನಾದವನು ಕಣ್ಣುಕೀಳಿಸುವಿಕೆ ಮೊದಲಾದ ಶಿಕ್ಷೆಗಳನ್ನು ನೀಡಬಾರದು.
ದುರ್ಬಲಾನಾಂ ಬಲಂ ರಾಜಾ ಬಲಿನೋ ಯೇ ಚ ಸಾಧವಃ |
ಬಲಿನಾಂ ದುರ್ಬಲಾನಾಂ ಚ ಪಾಪಾನಾಂ ಮೃತ್ಯುರಿಷ್ಯತೇ ॥104॥
ಸಾಧುಗಳು ದುರ್ಬಲರೇ ಆಗಿರಲಿ, ಬಲಿಷ್ಠರೇ ಆಗಿರಲಿ ಅವರಿಗೆ ರಾಜನೇ ಬಲ ಎನಿಸುತ್ತಾನೆ. ಪಾಪಿಗಳು ದುರ್ಬಲರೇ ಆಗಿರಲಿ, ಬಲಿಷ್ಠರೇ ಆಗಿರಲಿ ಅಂಥವರಿಗೆ ರಾಜನಾದವನು ಮೃತ್ಯು ಎನಿಸುತ್ತಾನೆ.
ಸದೋಷಮಪಿ ಯೋ ಹನ್ಯಾದಶ್ರಾವ್ಯ ಜಗತೀಪತೇ |
ದುರ್ಬಲಂ ಬಲವಂತಂ ವಾ ಸ ಪರಾಜಯಮರ್ಹತಿ ॥105॥
ಬ್ರಾಹ್ಮಣನಾದವನು ದುಷ್ಟನಾದಾಗ ರಾಜನ ಅನುಮತಿಯನ್ನು ಪಡೆಯದೇ ಶಿಕ್ಷೆಯನ್ನು ನೀಡಿದರೆ ಅವನು ದುರ್ಬಲನೇ ಆಗಿರಲಿ, ಬಲಿಷ್ಠನೇ ಆಗಿರಲಿ, ಅವನು ಶಿಕ್ಷೆಗೆ ಅರ್ಹನಾಗುತ್ತಾನೆ.
ಟಿಪ್ಪಣಿ - ಸದೋಷಮಪಿ ಯೋ ಹನ್ಯಾದ್ ಇತ್ಯತ್ರ ಬ್ರಾಹ್ಮಣಮಿತ್ಯನುವರ್ತತೇ |
`ಸದೋಷಮಪಿ ಯೋ ಹ್ಯನಾತ್' ಎಂಬಲ್ಲಿ `ಬ್ರಾಹ್ಮಣಂ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು.
ರಾಜಾಜ್ಞಾಂ ಪ್ರಾಡ್‌ವಿವಾಕಂ ಚ ನೇಚ್ಛೇದ್ ಯಚ್ಚಾಪಿ ನಿಷ್ಪತೇತ್ |
ಸಾಕ್ಷಿಣಂ ಸಾಧುವಾಕ್ಯಂ ಚ ಜಿತಂ ತಮಪಿ ನಿರ್ದಿಶೇತ್ ॥106॥
ಯಾರು ರಾಜನ ಅಥವಾ ರಾಜನಿಂದ ನಿಯಮಿಸಲ್ಪಟ್ಟ ಅಧಿಕಾರಿಯ ಆಜ್ಞೆ- ಯನ್ನು ಮೀರುತ್ತಾನೋ, ಸಾಕ್ಷಿಗಳನ್ನು ನಿರಾಕರಿಸುತ್ತಾನೋ, ಸಜ್ಜನರ ಮಾತುಗಳನ್ನು ಉಪೇಕ್ಷಿಸುತ್ತಾನೋ, ಅವನೂ ಕೂಡ ಅಪರಾಧಿಯೆಂದೇ ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ಜಿತಂ ತಮಪಿ ನಿರ್ದಿಶೇಷದ್ ಇತ್ಯತ್ರ ಜಿತಂ ಜಯವಂತಮ್ |
`ಜಿತಂ ತಮಪಿ ನಿರ್ದಿಶೇಷದ್' ಎಂಬಲ್ಲಿ `ಜಿತಂ' ಎಂಬುದಕ್ಕೆ ಜಯವುಳ್ಳವನು ಎಂದರ್ಥ. ಜಯವುಳ್ಳವನನ್ನು ಉಪೇಕ್ಷಿಸಬಾರದು ಎಂದಭಿಪ್ರಾಯ.
ಬಂಧನಾನ್ನಿಷ್ಪತೇದ್ ಯಚ್ಚ ಪ್ರತಿಭೂರ್ನ ದದಾತಿ ಚ |
ಕುಲಜಶ್ಚ ಧನಾಢ್ಯಶ್ಚ ಸ ಪರಾಜಯಮರ್ಹತಿ ॥107॥
ಯಾರು ಸೆರೆಯಿಂದ ತಪ್ಪಿಸಿಕೊಂಡು ಹೋಗಿರುತ್ತಾನೋ, ಅಪರಾಧಿಯನ್ನು ಒಪ್ಪಿಸಿಕೊಡದ ಹೊಣೆಗಾರವನ್ನು ಹೊಂದಿರುತ್ತಾನೋ, ಅಂಥವನು ಸತ್ಕುಲ ಪ್ರಸೂತನಾಗಿದ್ದರೂ ಧನಾಢ್ಯನಾಗಿದ್ದರೂ ಕೂಡ ಅಪರಾಧಿಯೆಂದೇ ಕರೆಸಿಕೊಳ್ಳು- ತ್ತಾನೆ. ಶಿಕ್ಷೆಗೆ ಒಳಪಡುತ್ತಾನೆ.
ಟಿಪ್ಪಣಿ - ಪ್ರತಿಭೂರ್ನ ದದಾತಿ ಚ ಇತ್ಯತ್ರ ಪ್ರತಿಭವತೀತಿ ಪ್ರತಿಭೂಃ ವಿಪರೀತ ಇತ್ಯರ್ಥಃ | `ಪ್ರತಿಭೂಃ' ಎಂಬುದಕ್ಕೆ ಪ್ರತಿಭವತೀತಿ ಪ್ರತಿಭೂಃ ಎಂಬ ನಿಷ್ಪತ್ತಿಯನ್ನು ವಿವಕ್ಷಿಸಬೇಕು. ಅಪರಾಧಿಯನ್ನು ಒಪ್ಪಿಸದಿದ್ದರೆ ಎಂದರ್ಥ.
ರಾಜಾಜ್ಞಯಾ ಸಮಾಹೂತೋ ಯೋ ನ ಗಚ್ಛೇತ್ ಸಭಾಂ ನರಃ |
ಬಲವಂತಮುಪಾಶ್ರಿತ್ಯ ಸಾಯುಧಃ ಸ ಪರಾಜಿತಃ ॥108॥
ರಾಜನು ಅಪ್ಪಣೆಯನ್ನು ಮಾಡಿದಾಗ ಯಾರು ರಾಜನ ಆಸ್ಥಾನಕ್ಕೆ ತೆರಳುವುದಿ- ಲ್ಲವೋ, ಮತ್ತೊಬ್ಬ ಬಲಿಷ್ಠನ ಸಹಾಯವನ್ನು ಹೊಂದಿ, ರಾಜದೂತನ ಮೇಲೆ ಆಯುಧಗಳಿಂದ ಕೂಡಿ ನಿಗ್ರಹಿಸಲು ಬರುತ್ತಾನೋ, ಅವನೂ ಸಹ ಅಪರಾಧಿಯೇ ಆಗುತ್ತಾನೆ.
ತಂ ದಂಡೇನ ವಿನಿರ್ಜಿತ್ಯ ಮಹಾಸಾಹಸಿಕಂ ನರಮ್ |
ವಿಯುಕ್ತದೇಹಸರ್ವಸ್ವಂ ಪರಲೋಕಂ ವಿಸರ್ಜಯೇತ್ ॥109॥
ಇಂಥ ಅಪರಾಧಿಗಳಿಗೆ ಮತ್ತು ಮಹಾಪರಾಧಿಗಳಿಗೆ ರಾಜನಾದವನು ಶಿಕ್ಷೆಯನ್ನು ನೀಡಲೇಬೇಕು. ಅವರಲ್ಲಿರುವ ಎಲ್ಲ ಸಂಪತ್ತುಗಳನ್ನು ಕಸಿದುಕೊಂಡು ಮತ್ತೊಂದು ದೇಶಕ್ಕೆ ಅಟ್ಟಬೇಕು.
ಟಿಪ್ಪಣಿ - ಪರಲೋಕಂ ವಿಸರ್ಜಯೇದ್ ಇತ್ಯತ್ರ ಪರಲೋಕಂ ಪ್ರತಿ ವಿಸರ್ಜ- ಯೇತ್ |
ಮೃತಸ್ಯಾಪಿ ನ ದೇಯಾನಿ ಪಿಂಡದಾನಾನಿ ಕೇನಚಿತ್ |
ದತ್ವಾ ದಂಡಂ ಪ್ರಯಚ್ಛೇತ ಮಧ್ಯಮಂ ಪೂರ್ವಸಾಹಸಮ್ ॥110॥
ಹೀಗೆ ಮಹಾಪರಾಧಗಳನ್ನು ಮಾಡಿದ ವ್ಯಕ್ತಿಯು ಮೃತನಾದ ಮೇಲೆ ಅವನಿಗೆ ಪಿಂಡಪ್ರದಾನಾದಿಗಳನ್ನು ಮಾಡಬಾರದು. ರಾಜಾಜ್ಞೆಯನ್ನು ಮೀರಿ ಯಾರಾದರೂ ಪಿಂಡಪ್ರದಾನವನ್ನು ಮಾಡಿದರೆ ಅವನೂ ಸಹ ಎರಡನೇ ಅಪರಾಧಿಯಾಗುತ್ತಾನೆ. ಅಂಥವನಿಗೂ ಕೂಡ ಶಿಕ್ಷೆಯನ್ನು ನೀಡಬೇಕು.
ಟಿಪ್ಪಣಿ- ದತ್ವಾ ದಂಡಮ್ ಇತ್ಯತ್ರ ದತ್ವಾ ಬಲಾತ್ ಪಿಂಡಾದಿಕಂ ದಾಪಯಿತ್ವಾ, ಮಧ್ಯಮಂ ದಂಡಂ ಪ್ರಯಚ್ಛೇತ | ಪೂರ್ವಂ

ಸಾಹಸಂ ನ ಕರೋಮೀತಿ ಸತ್ತ್ವಂ ಯಸ್ಯ ತಸ್ಮಾತ್ ಪೂರ್ವಸಾಹಸಾತ್ |
`ದತ್ತ್ವಾ ದಂಡಮ್' ಎಂಬಲ್ಲಿ ಬಲಾತ್ಕಾರವಾಗಿ ಪಿಂಡಪ್ರದಾನಾದಿಗಳನ್ನು ಯಾರು ಮಾಡುತ್ತಾನೋ, ಅಂಥವನು ಎರಡನೆಯ ಅಪರಾಧಿಯೆಂದು ಕರೆಸಿಕೊಳ್ಳುತ್ತಾನೆ ಎಂದಭಿಪ್ರಾಯ. `ಪೂರ್ವಸಾಹಸಂ' ಎಂದರೆ ಹಿಂದೆ ಮಾಡಿದವನ ಅಪರಾಧವನ್ನು ನಾನು ಮಾಡಲಾರೆ ಎಂದು ಹೇಳುವವನು ಎಂದರ್ಥ.
ಕುಲಸ್ತ್ರೀವ್ಯಭಿಚಾರಂ ಚ ರಾಷ್ಟ್ರಸ್ಯ ಚ ವಿಮರ್ದನಮ್ |
ಬ್ರಹ್ಮಹತ್ಯಾಂ ಚ ಚೌರ್ಯಂ ಚ ರಾಜದ್ರೋಹಂ ಚ ಪಂಚಮಮ್ ॥111॥
ಯಾರು ಉತ್ತಮಕುಲದಲ್ಲಿ ಹುಟ್ಟಿದ ಸ್ತ್ರೀಯನ್ನು ಬಲಾತ್ಕಾರ ಮಾಡುವಿಕೆ, ರಾಷ್ಟ್ರಕ್ಕೆ ಕೆಡಕನ್ನು ಬಯಸುವಿಕೆ, ಬ್ರಹ್ಮಹತ್ಯೆ, ಕಳ್ಳತನ, ರಾಜದ್ರೋಹ ಇವುಗಳು ಮಹಾಪಾತಕಗಳು.
ಯುದ್ಧಾದನ್ಯತ್ರ ಹಿಂಸಾಯಾಂ ಸುರಾಪಸ್ಯ ಚ ಕೀರ್ತನೇ |
ಮಹಾಂತಂ ಗುರುಲ್ಪೇ ಚ ಮಿತ್ರದ್ರೋಹೇ ಚ ಪಾತಕಮ್ ॥112॥
ಯುದ್ಧವಿಲ್ಲದ ಕಾಲದಲ್ಲಿ ಹಿಂಸೆ ನೀಡುವುದು. ಸುರಾಪಾನ ಮಾಡುವುದು, ಗುರುದಾರ ಪರಿಗ್ರಹವನ್ನು ಮಾಡುವುದು, ಮಿತ್ರದ್ರೋಹವನ್ನು ಮಾಡುವುದು ಇವುಗಳು ಮಹಾಪಾತಕಗಳು.
ನ ಕಥಂಚಿದುಪೇಕ್ಷೇತ ಮಹಾಸಾಹಸಿಕಂ ನರಮ್ |
ಸರ್ವಸ್ವಮಪಹೃತ್ಯಾಶು ತತಃ ಪ್ರಾಣೈರ್ವಿಯೋಜಯೇತ್ ॥113॥
ಇಂಥ ಮಹಾಪಾತಕಗಳನ್ನು ಮಾಡುವವರು, ಮಹಾಪರಾಧಿಗಳು ಎಂದು ಕರೆಸಿಕೊಳ್ಳುತ್ತಾರೆ. ಇಂಥವರನ್ನು ಉಪೇಕ್ಷೆ ಮಾಡದೇ ಅವರ ಎಲ್ಲಾ ಸಂಪತ್ತನ್ನು ಕಸಿದುಕೊಂಡು ಅವರಿಗೆ ಗಲ್ಲುಶಿಕ್ಷೆಯನ್ನೇ ನೀಡಬೇಕು.
ತ್ರಿಷು ವರ್ಣೇಷು ಯೋ ದಂಡಃ ಪ್ರಣೀತೋ ಬ್ರಹ್ಮಣಾ ಪುರಾ |
ಮಹಾಸಾಹಸಿಕಂ ವಿಪ್ರಂ ಕೃತಾಂಕಂ ವಿಪ್ರವಾಸಯೇತ್ ॥114॥
ನಾಕುವರ್ಣಗಳಲ್ಲಿ ಮೂರುವರ್ಣದವರಿಗೆ ಮಾತ್ರ ಶಿಕ್ಷೆಯನ್ನು ನೀಡಬೇಕು. ಬ್ರಾಹ್ಮಣನು ಇಂಥ ಮಹಾಪರಾಧವನ್ನು ಮಾಡಿದ ಪಕ್ಷದಲ್ಲಿ ಅವನ ದೇಹದಲ್ಲಿ ಒಂದು ಚಿಹ್ನೆಯನ್ನು ಮಾಡಿ, ಅವನನ್ನು ಯಾರೂ ಸಂಪರ್ಕ ಮಾಡದಂತೆ ದೇಶ ಬಿಟ್ಟು ಹೊರಗೆ ಕಳುಹಿಸಬೇಕು.
ಸಾಹಸ್ರೋ ವಾ ಭವೇದ್ ದಂಡಃ ಕಾಂಚನೋ ದೇಹನಿಷ್ಕ್ರಿಯಾ |
ಚತುರ್ಣಾಮಪಿ ವರ್ಣಾನಾಮೇವಮಾಹೋಶನಾ ಕವಿಃ ॥115॥
ನಾಕು ವರ್ಣದವರು ಮಹಾಪರಾಧವನ್ನು ಮಾಡಿದಾಗ ಅವರಿಗೆ ಶಿಕ್ಷೆಯನ್ನು ನೀಡಬೇಕು. ಸಾವಿರ ವರಹಗಳ ದಂಡವನ್ನು ವಿಧಿಸಬೇಕು ಎಂಬುದಾಗಿ ಶುಕ್ರನೀತಿ- ಯಲ್ಲಿ ಶುಕ್ರಾಚಾರ್ಯರು ಹೇಳಿರುವರು.
ನಾರೀಣಾಂ ಬಾಲವೃದ್ಧಾನಾಂ ಗೋಪತೇಶ್ಚ ಮಹಾಮತಿಃ |
ಪಾಪಾನಾಂ ದುರ್ವಿನೀತಾನಾಂ ಪ್ರಾಣಾಂತಂ ಚ ಬೃಹಸ್ಪತಿಃ ॥116॥
ಸ್ತ್ರೀಯರು, ಬಾಲರು, ವೃದ್ಧರು, ಗೊಲ್ಲರು ಇವರುಗಳು ಅಪರಾಧವನ್ನು ಆಚರಿಸಿದಾಗ ದುರ್ವಿನೀತರಾದಾಗ ಮರಣದಂಡನೆಯನ್ನೇ ನೀಡಬೇಕು. ಹೀಗೆ ಎಲ್ಲಾ ಅಪರಾಧಿಗಳಿಗೂ ಸಮಾನ ಶಿಕ್ಷೆ ಎಂಬುದಾಗಿ ಬೃಹಸ್ಪತ್ಯಾಚಾರ್ಯರು ತಮ್ಮ ನೀತಿ ಶಾಸ್ತ್ರದಲ್ಲಿ ಹೇಳಿರುವರು.
ದಂಡಮಾಹ ಮಹಾಭಾಗ ಸರ್ವೇಷಾಮಾತತಾಯಿನಾಮ್ |
ಸರ್ವೇಷಾಂ ಪಾಪಬುದ್ಧೀನಾಂ ಪಾಪಕರ್ಮೈವ ಕುರ್ವತಾಮ್ |
ಧೃತರಾಷ್ಟ್ರಸ್ಯ ಪುತ್ರಾಣಾಂ ದಂಡೋ ನಿರ್ದೋಷ ಇಷ್ಯತೇ |
ಸೌಬಲಸ್ಯ ಚ ದುರ್ಬುದ್ಧೇಃ ಕರ್ಣಸ್ಯ ಚ ದುರಾತ್ಮನಃ ॥117॥
ಓ ರಾಜನೇ! ಧೃತರಾಷ್ಟ್ರನ ಮಕ್ಕಳು ಈ ಎಲ್ಲಾ ಅಪರಾಧಗಳನ್ನು ಮಾಡಿರು- ತ್ತಾರೆ. ನಿರಂತರ ಪಾಪದಲ್ಲಿಯೇ ಆಸಕ್ತರಾಗಿದ್ದು, ಪಾಪಕರ್ಮಿಗಳಾಗಿದ್ದಾರೆ. ರಾಜನಾದ ನಿನ್ನಿಂದ ಮರಣದಂಡನೆಗೆ ಭಾಗಿಗಳಾಗಿದ್ದಾರೆ. ಆದ್ದರಿಂದ ನಿನಗೆ ಯಾವ ದೋಷಗಳೂ ಕೂಡ ಇದರಿಂದ ಬರುವುದಿಲ್ಲ. ದುರಾತ್ಮನಾದ ಕರ್ಣನ ದುರ್ಬು- ದ್ಧಿಯಿಂದ, ಸೌಬಲನ ಪಾಪಬುದ್ಧಿಯಿಂದ ಅವರು ಇಂದು ಮರಣಶಿಕ್ಷೆಯನ್ನು ಅನುಭವಿಸಿದ್ದಾರೆ.
ಪಶ್ಯತಾಂ ಚೈವ ಶೂರಾಣಾಂ ಯಾಽಹಂ ದ್ಯೂತೇ ಸಭಾಂ ತದಾ |
ರಜಸ್ವಲಾ ಸಮಾನೀತಾ ಭವತಾಂ ಪಶ್ಯತಾಂ ನೃಪ |
ವಾಸಸೈಕೇನ ಸಂವೀತಾ ತವ ದೋಷೇಣ ಭೂಪತೇ ॥118॥
ಅವರೆಲ್ಲರೂ ಪಾಪಬುದ್ಧಿಯಾಗಿದ್ದರು ಎಂಬುದನ್ನು ನೀನೂ ಕೂಡ ಈ ಹಿಂದೆ ನೋಡಿರುವಿ. ಆ ಧೃತರಾಷ್ಟ್ರನ ಮಕ್ಕಳು ಜೂಜಾಟದಲ್ಲಿ ನಿನ್ನನ್ನು ಸೋಲಿಸಿದರು. ಸಭೆಯಲ್ಲಿ ಅನೇಕ ಶೂರರ ಮತ್ತು ನಿನ್ನ ಎದುರು ಏಕವಸ್ತ್ರಳಾದ ನನ್ನನ್ನು ರಾಜಸಭೆಯಲ್ಲಿ ಸೆಳೆದು ತಂದರು. ರಜಸ್ವಲಳಾದ ನನಗೆ ಹೀಗೆ ಅವಮಾನ ಮಾಡಿದ ಅಂಥವರು ಬ್ರಹ್ಮಹತ್ಯಾ, ಸ್ತ್ರೀಹತ್ಯಾ ಮೊದಲಾದ ದೋಷಗಳಿಂದ ಪೂರಿತರಾಗಿ- ದ್ದಾರೆ.
ಮಾಭೂದ್ ಧರ್ಮವಿಲೋಪಸ್ತೇ ಧೃತರಾಷ್ಟ್ರಕುಲಕ್ಷಯಾತ್ |
ಕ್ರೋಧಾಗ್ನಿನಾ ತು ದಗ್ಧಂ ಚ ಸಪಶುದ್ರವ್ಯಸಂಚಯಮ್ ॥119॥
ನಿನ್ನ ಕೋಪಾಗ್ನಿಯಿಂದಲೇ ಸಮಸ್ತ ಪಶುದ್ರವ್ಯಗಳ ಜೊತೆ ಆ ಧೃತರಾಷ್ಟ್ರಕುಲವು ಈ ಹಿಂದೆಯೇ ನಷ್ಟವಾಗಿದೆ. ಅದನ್ನೇ ಈಗ ಯುದ್ಧದಲ್ಲಿ ನಾಶ ಮಾಡಿರುವಿ. ನಿನಗೆ ಈ ವಿಷಯದಲ್ಲಿ ಧರ್ಮಲೋಪದ ಭಯವು ಸರ್ವಥಾ ಬೇಡ.
ಸಾಽಹಮೇವಂವಿಧಂ ದುಃಖಂ ಸಂಪ್ರಾಪ್ತಾ ತವ ಹೇತುನಾ |

ಆದಿತ್ಯಸ್ಯ ಪ್ರಸಾದೇನ ನಚ ಪ್ರಾಣೈರ್ವಿಯೋಜಿತಾ ॥120॥
ನಿನ್ನಲ್ಲಿರುವ ಅತಿಯಾದ ಕಾರುಣ್ಯದಿಂದಲೇ ನಾನು ಇಂಥ ಮಹಾದುಃಖಗಳನ್ನು ಅನುಭವಿಸಿದೆನು. ಆದರೆ ಆ ಸೂರ್ಯನಾರಾಯಣನ ಅನುಗ್ರಹದಿಂದ ನಾನು ಪ್ರಾಣಗಳನ್ನು ರಕ್ಷಣೆ ಮಾಡಿಕೊಂಡೆನು.
ರಕ್ಷಿತಾ ದೇವದೇವೇನ ಜಗತಃ ಕಾಲಹೇತುನಾ |
ದಿವಾಕರೇಣ ದೇವೇನ ವಿವಸಾತ್ರ ನ ಕೃತಾ ತದಾ ॥121॥
ಆ ಸೂರ್ಯನ ರಥದಲ್ಲಿ ಕುಳಿತ ನಾರಾಯಣನು ನನಗೆ ಅವಮಾನವಾ- ಗುತ್ತಿರುವ ಪ್ರಸಂಗವನ್ನು ಅರಿತು, ವಸ್ತ್ರಹೀನಳಾಗದಂತೆ ರಕ್ಷಿಸಿದನು.
ಏತೇಷಾಂ ಯತಮಾನಾನಾಮುತ್ಪದ್ಯಂತೇ ತು ಸಂಪದಃ |
ತ್ವಂ ತು ಸರ್ವಾ ಮಹೀಂ ಲಬ್ಧ್ವಾ ಕುರುಷೇ ಸ್ವಯಮಾಪದಮ್ ॥122॥
ನಿನ್ನ ತಮ್ಮಂದಿರು ನಿನ್ನನ್ನು ಸಮಾಧಾನಗೊಳಿಸಲು ಬಹಳ ಪ್ರಯತ್ನಪಡುತ್ತಿ- ದ್ದಾರೆ. ಸಂಪತ್ತು ಪ್ರಾಪ್ತವಾದಾಗ ಅದನ್ನು ಸ್ವೀಕರಿಸು. ಸಮಸ್ತ ಭೂಮಂಡಲವನ್ನು ಪರಿತ್ಯಾಗ ಮಾಡುವುದಾದರೆ ನೀನೇ ಆಪತ್ತನ್ನು ತಂದುಕೊಂಡಂತಾಗುತ್ತದೆ.
ವಿವರಣೆ - ದ್ರೌಪದೀ ದೇವಿಯು ಯುಧಿಷ್ಠಿರನಿಗೆ ಕ್ಷತ್ರಿಯನ ಕರ್ತವ್ಯವನ್ನು ವಿವರವಾಗಿ ಬೋಧಿಸಿದಳು. ಬ್ರಾಹ್ಮಣರ ಧರ್ಮದ ವ್ಯತ್ಯಾಸವನ್ನು ತಿಳಿಸಿ ಹೇಳಿದಳು. ಕ್ಷತ್ರಿಯನು ಬ್ರಾಹ್ಮಣ ಧರ್ಮವನ್ನು ಸ್ವೀಕರಿಸಬಾರದು. ದಂಡನೀತಿ- ಯನ್ನು ಅಳವಡಿಸಿಕೊಂಡು ರಾಜ್ಯವನ್ನು ಪರಿಪಾಲನೆ ಮಾಡಬೇಕೆಂಬುದನ್ನು ಶುಕ್ರನೀತಿಯ ಉಲ್ಲೇಖ ಮಾಡುವ ಮೂಲಕ ಮಾರ್ಮಿಕವಾಗಿ ಉಪದೇಶಿಸಿ- ದಳು. ಹೀಗೆ ಉಪದೇಶಿಸಿ ನಿನ್ನ ತಮ್ಮಂದಿರು ನಿನಗೆ ಹೇಳಿದ ಮಾತುಗಳೆಲ್ಲವೂ ಸತ್ಯವೇ ಆಗಿವೆ. ಅವರ ಮಾತುಗಳಲ್ಲಿ ವಿಶ್ವಾಸವನ್ನು ನೀನು ಇಡಲೇ ಬೇಕು. ಸರ್ವಥಾ ಉಪೇಕ್ಷೆ ಮಾಡಬಾರದು. ಅದರಂತೆ ನಾನು ಹೇಳುತ್ತಿರುವ ಮಾತು- ಗಳೂ ಕೂಡ ಸತ್ಯವೇ ಆಗಿವೆ. ಅಖಂಡ ಭೂಮಂಡಲವನ್ನು ನಿನ್ನ ಭುಜಪರಾ- ಕ್ರಮದಿಂದ ಪಡೆದಿರುವಿ. ಇನ್ನೇನು ಅನುಭವಿಸುವ ಸಂದರ್ಭ ಒದಗಿದಾಗ ನೀನು ಕಾಡಿಗೆ ತೆರಳಿದರೆ ನಿನ್ನನ್ನು ಮೂರ್ಖನೆಂದೇ ಜಗತ್ತು ತಿಳಿಯುತ್ತದೆ. ಮತ್ತು ಎಲ್ಲಾ ಆಪತ್ತುಗಳನ್ನು ನೀನೇ ತಂದುಕೊಂಡಂತಾಗುತ್ತದೆ. ಆದ್ದರಿಂದ ರಾಜ್ಯಭಾರವನ್ನು ಸ್ವೀಕರಿಸಿ, ಉತ್ತಮ ರೀತಿಯಲ್ಲಿ ಪ್ರಜೆಗಳ ರಕ್ಷಣೆಗಳನ್ನು ಮಾಡಿ, ಧರ್ಮಶೀಲ- ನಾಗು ಎಂದು ಉಪದೇಶಿಸುತ್ತಿದ್ದಾಳೆ.
ಯಥಾಸ್ತಾಂ ಸಮ್ಮತೌ ರಾಜ್ಞಾಂ ಪೃಥಿವ್ಯಾಂ ರಾಜಸತ್ತಮೌ |
ಮಾಂಧಾತಾ ಚಾಂಬರೀಷಶ್ಚ ತಥಾ ರಾಜನ್ ವಿರಾಜಸೇ ॥123॥
ಹಿಂದೆ ಅಂಬರೀಷ ಮತ್ತು ಮಾಂಧಾತಾ ಎಂಬ ಇಬ್ಬರು ರಾಜರಿದ್ದರು. ಇವ- ರನ್ನು ಎಲ್ಲರೂ ಕೂಡ ಒಪ್ಪಿಕೊಂಡಿದ್ದರು. ಧರ್ಮಸಮ್ಮತವಾಗಿ ಅವರ ರಾಜ್ಯಪರಿ- ಪಾಲನೆಯು ಆದರ್ಶಪ್ರಾಯವಾಗಿತ್ತು. ಅದರಂತೆ ನೀನೂ ಸಹ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡಿದರೆ ಸಮಸ್ತರಿಂದ ಸ್ತುತ್ಯನಾಗುವಿ. ಲೋಕದಲ್ಲಿ ವಿರಾಜಿಸುವಿ.
ಪ್ರಶಾಧಿ ಪೃಥಿವೀಂ ದೇವೀಂ ಪ್ರಜಾ ಧರ್ಮೇಣ ಪಾಲಯನ್ |
ಸಪರ್ವತವನದ್ವೀಪಾಂ ಮಾ ರಾಜನ್ ವಿಮನಾ ಭವ ॥124॥
ಪರ್ವತ, ವನ, ದ್ವೀಪಗಳಿಂದ ಕಂಗೊಳಿಸುತ್ತಿರುವ ಈ ಭೂದೇವಿಯನ್ನು ಧರ್ಮದಿಂದ ಪರಿಪಾಲನೆ ಮಾಡು. ಎಂದೂ ಕೂಡ ರಾಜ್ಯಪರಿಪಾಲನೆಯ ವಿಷಯದಲ್ಲಿ ವಿಮುಖನಾಗಬೇಡ.
ಯಜಸ್ವ ವಿವಿಧೈರ್ಯಜ್ಞೈರ್ಜುಹ್ವನ್ನಗ್ನೀನ್ ಪ್ರಯಚ್ಛ ಚ |
ಪುರಾಣಿ ಭೋಗಾನ್ ವಾಸಾಂಸಿ ದ್ವಿಜಾತಿಭ್ಯೋ ನೃಪೋತ್ತಮ ॥125॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಚತುರ್ದಶೋಽಧ್ಯಾಯಃ ॥14॥
ನೃಪೋತ್ತಮನೇ! ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾಗಿ ಅನೇಕ ಧಾರ್ಮಿಕಕಾರ್ಯ -ಗಳನ್ನು ನೆರವೇರಿಸು. ಬಗೆಬಗೆಯ ಯಜ್ಞಯಾಗಾದಿಗಳನ್ನು ಆಚರಿಸು. ಅಗ್ನಿಯಲ್ಲಿ ಎಲ್ಲ ದೇವತೆಗಳಿಗೆ ಆಹುತಿಯನ್ನು ನೀಡಿ ತೃಪ್ತಿ ಪಡಿಸು. ಭೂಲೋಕದಲ್ಲಿರುವ ಬ್ರಾಹ್ಮಣರನ್ನು ಅನೇಕ ಬಗೆಯ ಸಂಪತ್ತುಗಳನ್ನು, ಭೋಗವಸ್ತುಗಳನ್ನು , ವಸ್ತ್ರಗಳನ್ನು ದಾನಮಾಡುವ ಮೂಲಕ ತೃಪ್ತಿಪಡಿಸು.
ಗಮನಿಸಿ - ಹದಿನಾಕನೆಯ ಈ ಅಧ್ಯಾಯದಲ್ಲಿ ಒಟ್ಟು ನೂರಿಪ್ಪತ್ತೈದು ಶ್ಲೋಕ -ಗಳಿವೆ. ಆದರೆ ಪ್ರಚಲಿತ ಪಾಠದಲ್ಲಿ ಕೇವಲ ಮೂವತ್ತೊಂಬತ್ತು ಶ್ಲೋಕಗಳು ಕಾಣಿಸುತ್ತವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 14ನೆಯ ಅಧ್ಯಾಯವು ಮುಗಿಯಿತು.
*****
ಹದಿನೈದನೆಯ ಅಧ್ಯಾಯ
ಅರ್ಜುನನು ಯುಧಿಷ್ಠಿರನಿಗೆ ದಂಡಪ್ರಯೋಗದ ಮಹತ್ವವನ್ನು ತಿಳಿಸುತ್ತಿದ್ದಾನೆ. ಲೋಕದಲ್ಲಿ ನಾಕುವರ್ಣದವರು, ನಾಕು ಆಶ್ರಮದವರು ತಮ್ಮತಮ್ಮ ಕರ್ತವ್ಯದಲ್ಲಿ ದಂಡನೀತಿಗೆ ಭಯಪಟ್ಟೇ ಅನುಷ್ಠಾನವನ್ನು ಮಾಡುತ್ತಿದ್ದಾರೆ. ಸಕಲ ಪ್ರಾಣಿಗಳೂ ಕೂಡ ದಂಡಪ್ರಯೋಗಕ್ಕೆ ಹೆದರುತ್ತವೆ. ದುಷ್ಟರ ವಿಷಯದಲ್ಲಿ, ದುಷ್ಟವಿಚಾರಗಳಲ್ಲಿ, ತಪ್ಪು ಮಾಡಿದವರಲ್ಲಿ ಮಾತ್ರ ದಂಡಪ್ರಯೋಗವನ್ನು ಮಾಡಬೇಕು. ಪ್ರಾಮಾಣಿಕತೆ ಮೊದಲಾದವುಗಳಿದ್ದಲ್ಲಿ ಮಾಡಬಾರದು. ಶತ್ರುಗಳ ವಧದಿಂದ ದುಃಖವನ್ನು ಪಡಬಾರದು. ಮೃತ್ಯುವೆಂದರೆ ಹಳೆಯ ದೇಹವನ್ನು ಬಿಡುವುದು ಎಂದರ್ಥ. ಧರ್ಮರಾಜನೇ! ನಿನಗೆ ದುಃಖಿಸಲು ಯಾವ ಕಾರಣಗಳು ಇರುವುದಿಲ್ಲ.
ವೈಶಂಪಾಯನಃ
ಯಜ್ಞಸೇನ್ಯಾ ವಚಃ ಶ್ರುತ್ವಾ ಪುನರೇವಾರ್ಜುನೋಽಬ್ರವೀತ್ |
ಅನುಮಾನ್ಯ ಮಹಾಬಾಹುಂ ಜ್ಯೇಷ್ಠಂ ಭ್ರಾತರಮೀಶ್ವರಮ್ ॥1॥
ವೈಶಂಪಾಯನರು ಯಾಜ್ಞಸೇನೆಯ ಮಾತುಗಳನ್ನು ಕೇಳಿ ಪುನಃ ಅರ್ಜುನನು ಮಾತನಾಡಲು ಪ್ರಾರಂಭಿಸಿದನು.
ಮಹಾಬಾಹುವಾದ ಲೋಕಕ್ಕೆ ರಾಜನಾದ ತನ್ನ ಹಿರಿಯಣ್ಣನನ್ನು ಕುರಿತು ಗೌರವಪೂರ್ವಕವಾದ ಮಾತುಗಳಿಂದ ಹೀಗೆ ಹೇಳುತ್ತಾನೆ.

ವಿವರಣೆ - ದ್ರೌಪದೀದೇವಿಯು ಶುಕ್ರನೀತಿ, ಬೃಹಸ್ಪತಿನೀತಿ ಮೊದಲಾದವು- ಗಳನ್ನು ಉಲ್ಲೇಖಮಾಡುವ ಮೂಲಕ ರಾಜನಿಗೆ ಅನೇಕ ವಿಧವಾಗಿ ಬೋಧನೆ- ಯನ್ನು ಮಾಡಿದಳು. ಇಷ್ಟಾದರೂ ಯುಧಿಷ್ಠಿರನಿಗೆ ರಾಜ್ಯಭಾರವನ್ನು ಮಾಡಲೇ- ಬೇಕೆಂಬ ದಾರ್ಢ್ಯವು ಬರುವುದಿಲ್ಲ. ವಿಚಲಿತನಾಗದೇ ತುಮುಲದಲ್ಲಿಯೇ ಕುಳಿತ ಯುಧಿಷ್ಠಿರನನ್ನು ಕುರಿತು, ಅರ್ಜುನನಿಗೆ ಸಾಂತ್ವನ ಮಾಡಬೇಕೆಂಬ ಬಯಕೆ ಉಂಟಾಗುತ್ತದೆ. ದ್ರೌಪದೀದೇವಿಯ ಮಾತುಗಳನ್ನೇ ಉಪೋದ್ಬಲಿಸುವ ಮೂಲಕ ತಾನೂ ಸಹ ಯುಧಿಷ್ಠಿರನನ್ನು ಕುರಿತು, ಅನೇಕ ವಿಚಾರಗಳನ್ನು ತಿಳಿಸಲು ಪ್ರಾರಂಭ ಮಾಡುತ್ತಾನೆ. ಅವಳು ತಿಳಿಸಿದ ದಂಡನೀತಿಯ ಬಗ್ಗೆ ಮತ್ತಷ್ಟು ಮಹತ್ವವನ್ನು ಸಾರುತ್ತಾನೆ.

ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ |
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥2॥

ಮಹಾರಾಜನೇ! ದಂಡನೀತಿಯನ್ನು ಅವಶ್ಯವಾಗಿ ಅಳವಡಿಸಿಕೊಳ್ಳಬೇಕು. ಈ ದಂಡವೇ ಸಮಸ್ತಪ್ರಜೆಗಳನ್ನು ಪರಿಪಾಲನೆ ಮಾಡುತ್ತದೆ. ಎಲ್ಲರನ್ನೂ ಕೂಡ ಈ ದಂಡವೇ ರಕ್ಷಿಸುತ್ತದೆ. ಸಮಸ್ತ ಜಗತ್ತು ಮಲಗಿದ್ದರೂ ಕೂಡ ಈ ದಂಡವು ಎಚ್ಚರ- ವಾಗಿರುತ್ತದೆ. ವಿದ್ವಾಂಸರು ಈ ದಂಡವನ್ನು ಧರ್ಮವೆಂದು ಸಾರುತ್ತಾರೆ.

ಧರ್ಮಂ ಸಂರಕ್ಷತೇ ದಂಡಸ್ತಥೈವಾರ್ಥಂ ನರಾಧಿಪ |
ಕಾಮಂ ಸಂರಕ್ಷತೇ ದಂಡಸ್ತ್ರಿವರ್ಗೋ ದಂಡ ಉಚ್ಯತೇ ॥3॥

ನರಾಧಿಪನೇ! ದಂಡವೇ ಧರ್ಮವನ್ನು ರಕ್ಷಿಸುತ್ತದೆ. ಅರ್ಥವನ್ನೂ ಕೂಡ ರಕ್ಷಣೆ ಮಾಡುತ್ತದೆ. ಕಾಮವನ್ನೂ ಕೂಡ ಈ ದಂಡವೇ ಪರಿಪಾಲನೆ ಮಾಡುತ್ತದೆ. ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗವೂ ಕೂಡ ದಂಡವೆಂದೇ ಕರೆಸಿಕೊಳ್ಳುತ್ತದೆ.

ದಂಡೇನ ರಕ್ಷ್ಯತೇ ಧಾನ್ಯಂ ಧನಂ ದಂಡೇನ ರಕ್ಷ್ಯತೇ |
ಏತದ್ ವಿದ್ವನ್ನುಪಾದತ್ಸ್ವ ಸ್ವಭಾವಂ ಪಶ್ಯ ಲೌಕಿಕಮ್ ॥4॥

ಧಾನ್ಯಗಳ ರಕ್ಷಣೆಯೂ ಕೂಡ ದಂಡದಿಂದಲೇ ಆಗುತ್ತದೆ. ಧನದ ರಕ್ಷಣೆಯೂ ಕೂಡ ದಂಡದಿಂದಾಗುತ್ತದೆ. ಈ ರೀತಿಯಾಗಿ ತಿಳಿದು ದಂಡದ ಪರಿಣಾಮಗಳೇನು ಎಂಬುದನ್ನು ಅರ್ಥ ಮಾಡಿಕೊಂಡು, ನೀನು ಆ ದಂಡನೀತಿಯನ್ನು ಅಳವಡಿಸು. ಸಮಸ್ತ ಜಗತ್ತಿನ ಸ್ವಭಾವವನ್ನು ಇದರ ಮೂಲಕ ಅವಲೋಕಿಸು.

ರಾಜದಂಡಭಯಾದೇಕೇ ಪಾಪಾಃ ಪಾಪಂ ನ ಕುರ್ವತೇ |
ಯಮದಂಡಭಯಾದೇಕೇ ಪರಲೋಕಭಯಾದಪಿ ॥5॥

ಕೆಲವರು ರಾಜದಂಡದ ಭಯದಿಂದ ಪಾಪವನ್ನು ಮಾಡುವುದಿಲ್ಲ. ಇನ್ನು ಕೆಲವರು ಯಮದಂಡದ ಭಯದಿಂದ ಪಾಪಕಾರ್ಯಗಳನ್ನು ಮಾಡುವುದಿಲ್ಲ. ಇನ್ನು ಕೆಲವರು ಪರಲೋಕದ ಭಯದಿಂದ ಪಾಪಕಾರ್ಯವನ್ನು ಮಾಡುವುದಿಲ್ಲ. ಹೀಗೆ ದಂಡವೇ ಎಲ್ಲರನ್ನು ಸನ್ಮಾರ್ಗದಲ್ಲಿ ನಡೆಸುತ್ತದೆ.

ವಿವರಣೆ - ಮತ್ತೊಬ್ಬರ ಈ ಲೋಕದಲ್ಲಿ ದಂಡದ ಭಯವು ಇಲ್ಲದಿದ್ದರೆ ಪ್ರತಿಯೊಬ್ಬರೂ ವ್ಯಭಿಚಾರಿಗಳಾಗಿರುತ್ತಿದ್ದರು. ಕಳ್ಳಕಾಕರರಾಗಿರುತ್ತಿದ್ದರು. ಅಧರ್ಮಮಾರ್ಗದಲ್ಲಿ ನಡೆಯುವ ಮೂಲಕ ಪಾತಕಿಗಳಾಗಿರುತ್ತಿದ್ದರು. ಕೆಲವ- ರಿಗೆ ಲೋಕದ ಜನರು ಶಿಕ್ಷಿಸುತ್ತಾರೆಂಬ ಭಯ. ಕೆಲವರಿಗೆ ಸೆರೆಮನೆ ಮೊದಲಾದ- ವುಗಳ ಭಯ. ಕೆಲವರಿಗೆ ರಾಜರುಗಳ ಭಯ. ಕೆಲವರಿಗೆ ಯಮದೇವರ ಭಯ. ಇನ್ನೂ ಕೆಲವರಿಗೆ ನರಕ ಮೊದಲಾದ ಪರಲೋಕಗಳ ಭಯ. ಶಿಕ್ಷೆಗೆ ಹೆದರಿಯೇ ಪ್ರತಿಯೊಬ್ಬರೂ ಕೂಡ ಅಪರಾಧಗಳನ್ನು ಮಾಡದೇ ಸನ್ಮಾರ್ಗದಲ್ಲಿ ನಡೆಯಲು ಪ್ರಯತ್ನಿಸುತ್ತಾರೆ. ದಂಡದ ಭಯವೇ ಇದ್ದಲ್ಲಿ ಹೀಗೆ ಸನ್ಮಾರ್ಗದಲ್ಲಿ ನಡೆಯಲು ಸಾಧ್ಯವಾಗುತ್ತಿರಲಿಲ್ಲ. ಪ್ರಸ್ತುತ ಜೀವನಕ್ಕೆ ಈ ಶ್ಲೋಕವು ಅತ್ಯಂತ ಅರ್ಥ- ಪೂರ್ಣವಾಗಿದೆ.

ಪರಸ್ಪರಭಯಾದೇಕೇ ಪಾಪಾಃ ಪಾಪಂ ನ ಕುರ್ವತೇ |
ಏವಂ ಸಾಂಸಿದ್ಧಿಕೇ ಲೋಕೇ ಸರ್ವಂ ದಂಡೇ ಪ್ರತಿಷ್ಠಿತಮ್ ॥6॥

ದಂಡಕ್ಕೆ ಹೆದರಿ ಒಬ್ಬರನ್ನೊಬ್ಬರು ಪರಸ್ಪರ ಕಬಳಿಸುವುದಿಲ್ಲ. ಈ ದಂಡವು ಲೋಕವನ್ನು ನಿಯಮಿಸುತ್ತಿದೆ. ಆದ್ದರಿಂದ ಎಲ್ಲವೂ ಕೂಡ ದಂಡದಲ್ಲಿಯೇ ಅಡಗಿದೆ.

ವಿವರಣೆ - ಕೆಲವರಲ್ಲಿ ಪರಸ್ಪರ ಭಯವಿರುತ್ತದೆ. ನಾನು ಅವನ ಸ್ವತ್ತನ್ನು ಅಪ- ಹಾರ ಮಾಡಿದರೆ, ಅವನು ನಾಳೆ ನನ್ನ ಸ್ವತ್ತನ್ನು ಅಪಹರಿಸುತ್ತಾನೆಂಬ ಭಯ- ವಿರುತ್ತದೆ. ನಾನು ಅವನನ್ನು ಕೊಂದರೆ ಅವನ ಕಡೆಯವರು ನನ್ನನ್ನು ಕೊಲ್ಲುತ್ತಾ- ರೆಂಬ ಭಯವಿರುತ್ತದೆ. ಹೀಗೆ ಲೋಕದಲ್ಲಿ ಪರಸ್ಪರವಾಗಿಯೂ ದಂಡಪ್ರಯೋಗ- ಗಳಿರುವುದರಿಂದ ಅದಕ್ಕೆ ಹೆದರಿಯೇ ಕೆಟ್ಟ ಕೆಲಸಗಳನ್ನು ಪಾಪಿಗಳೂ ಕೂಡ ಮಾಡುವುದಿಲ್ಲ. ಸಾಧುಗಳೂ ಕೂಡ ದಂಡಕ್ಕೆ ಹೆದರುತ್ತಾರೆ. ಪಾಪಿಷ್ಠರೂ ಕೂಡ ದಂಡಕ್ಕೆ ಹೆದರುತ್ತಾರೆ. ಲೋಕಮಾರ್ಯಾದೆಯನ್ನು ಅತಿಕ್ರಮವನ್ನು ಮಾಡದಿರಲು ಎಲ್ಲರೂ ದಂಡವನ್ನೇ ಅಪೇಕ್ಷಿಸುತ್ತಾರೆ. ಪಶುಗಳೂ ಕೂಡ ಯಜಮಾನನಿಗೆ ಹೆದರಿಯೇ ಉಪಕರಿಸುತ್ತವೆ. ಹೀಗೆ ಸಕಲವೂ ಕೂಡ ದಂಡದಲ್ಲಿಯೇ ಪ್ರತಿಷ್ಠಿತ- ವಾಗಿದೆ.

ದಂಡಸ್ಯೈವ ಭಯಾದೇಕೇ ನ ಖಾದಂತಿ ಪರಸ್ಪರಮ್ |
ಅಂಧೇ ತಮಸಿ ಮಜ್ಜೇಯುರ್ಯದಿ ದಂಡೋ ನ ಪಾಲಯೇತ್॥7॥

ಶಿಕ್ಷೆಯ ಭಯದಿಂದಲೇ ಒಬ್ಬ ಮತ್ತೊಬ್ಬನನ್ನು ಕಡಿದು ತಿನ್ನುತ್ತಿಲ್ಲ. ಒಂದು ವೇಳೆ ಶಿಕ್ಷೆಯ ಭಯವೇ ಇಲ್ಲದಿದ್ದರೆ ಸಮಸ್ತಲೋಕವೇ ಅಂಧಂತಮಸ್ಸಿನಲ್ಲಿ ಮುಳುಗಿಹೋಗುತ್ತಿತ್ತು.

ವಿವರಣೆ - ಜಗತ್ತಿನಲ್ಲಿ ನರಮಾಂಸ ಭಕ್ಷಕರು ಏಕಿಲ್ಲ ಎಂದರೆ ? ಮತ್ತೊಬ್ಬರು ಶಿಕ್ಷಿಸುತ್ತಾರೆ ಎಂಬ ಭಯದಿಂದ ಅಷ್ಟೇ. ಶಿಕ್ಷೆಯ ಭಯವು ಇಲ್ಲದಿದ್ದರೆ ಪರಸ್ಪರ ಜನಗಳೇ ಕೊಚ್ಚಿ ತಿಂದುಹಾಕುತ್ತಿದ್ದರು. ರಾಜರು ದಂಡನೀತಿಯನ್ನು ಪ್ರಯೋಗ ಮಾಡದಿದ್ದರೆ ಸಮಸ್ತ ಜಗತ್ತು ದುಃಖಸಾಗರದಲ್ಲಿ ಮುಳುಗಿ ಹೋಗುತ್ತಿತ್ತು.

ಇಂದಿನ ಸಮಾಜದಲ್ಲೂ ನಾವು ಕಾನೂನಿನ ಮಹತ್ವವನ್ನು ಅರಿತಿದ್ದೇವೆ. ಎಲ್ಲಾ ಮಂತ್ರಿಗಳೂ ಕೂಡ ಕಾನೂನಿನ ಅಧೀನವಾಗಿಯೇ ಕೆಲಸವನ್ನು ಮಾಡುತ್ತಾರೆ. ನ್ಯಾಯಾಲಯಗಳೂ ಕೂಡ ಕಾನೂನಿನ ಅಧೀನವಾಗಿಯೇ ಕಾರ್ಯಗಳನ್ನು ನಿರ್ವಹಿಸುತ್ತವೆ. ಕಾನೂನಿಗೆ

ಎಂಥ ಘಟಾನುಘಟಿಗಳೂ ಕೂಡ ಭಯಪಡುತ್ತಾರೆ. ಅದನ್ನೇ ಇಲ್ಲಿ ದಂಡನೀತಿ ಇತ್ಯಾದಿಯಾಗಿ ಕರೆಯುತ್ತಿದ್ದಾರೆ.
ಯಸ್ಮಾದದಾಂತಾನ್ ದಮಯತ್ಯಶಿಷ್ಟಾನ್ ದಂಡಯತ್ಯಪಿ |
ದಮನಾದ್ ದಂಡಾನಾಚ್ಚೈವ ತಸ್ಮಾದ್ ದಂಡಂ ವಿದುರ್ಬುಧಾಃ ॥8॥
ಸ್ವೇಚ್ಛಾಚಾರಿಗಳನ್ನು ನಿಗ್ರಹ ಮಾಡುವುದರಿಂದಲೇ ಇದಕ್ಕೆ ದಂಡ ಎಂದು ಹೆಸರು. ದುಷ್ಟರನ್ನು ಶಿಕ್ಷೆಗೆ ಒಳಪಡಿಸುವುದರಿಂದಲೂ ಇದಕ್ಕೆ ದಂಡ ಎಂದು ಹೆಸರು. ದಮನ ಮಾಡುವುದರಿಂದ, ದಂಡನೆ ಮಾಡುವುದರಿಂದ ಇದಕ್ಕೆ ದಂಡ ಎಂಬುದಾಗಿ ವಿದ್ವಾಂಸರು ಕರೆಯುತ್ತಾರೆ.
ವಿವರಣೆ - `ದಂಡಯತೀತಿ ದಂಡಃ' ಅಥವಾ `ದಮಯತೀತಿ ದಂಡಃ' ಎಂಬ ವ್ಯುತ್ಪತ್ತಿಯನ್ನು ತಿಳಿಯಬೇಕು. ದಂಡಯತಿ ಎಂದರೆ ಹೊಡೆಯುವುದರಿಂದ ಎಂದರ್ಥ. ಛಡಿ ಏಟು ಕೊಡುವುದರಿಂದ, ಅಥವಾ ಗಲ್ಲುಶಿಕ್ಷೆ ಮೊದಲಾದವು- ಗಳನ್ನು ನೀಡುವುದರಿಂದ ಇದಕ್ಕೆ ದಂಡ ಎಂದು ಕರೆಯುತ್ತಾರೆ. `ದಮಯತಿ ಇತಿ ದಂಡಃ' ಎಂಬುದಕ್ಕೆ ಅವನಲ್ಲಿರುವ ಎಲ್ಲ ಐಶ್ವರ್ಯವನ್ನು ಕಸಿದುಕೊಳ್ಳುವು- ದರಿಂದ ಅವನಲ್ಲಿರುವ ಒಳ್ಳೆಯ ಹೆಸರನ್ನು ಕಸಿದುಕೊಳ್ಳುವುದರಿಂದ ತನ್ಮೂಲಕ- ವಾಗಿ ಸಮಾಜದಲ್ಲಿ ಎಂದೆಂದೂ ಮೇಲೆದ್ದು ಬಾರದಂತೆ ಮಾಡುವುದರಿಂದ `ದಂಡ' ಎಂಬುದಾಗಿ ಕರೆಯುತ್ತಾರೆ. ಆದ್ದರಿಂದ ಯಾರೊಬ್ಬರೂ ಕೂಡ ಸ್ವೇಚ್ಛಾ- ಚಾರಿಗಳಾಗಿ ಬದುಕಲು ಸಾಧ್ಯವಿಲ್ಲ.
ವಾಚಾ ದಂಡೋ ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ಭುಜಾರ್ಪಣಮ್|
ದಾನದಂಡಃ ಸ್ಮೃತೋ ವೈಶ್ಯೋ ನಿರ್ದಂಡಃ ಶೂದ್ರ ಉಚ್ಯತೇ ॥9॥
ಎಲ್ಲರಿಗೂ ಕೂಡ ಸಮಾನವಾಗಿ ಶಿಕ್ಷೆಯನ್ನು ಕೊಡಬಾರದು. ಬ್ರಾಹ್ಮಣರಿಗೆ ಮಾತಿನಿಂದಷ್ಟೇ ಶಿಕ್ಷೆ. ಕ್ಷತ್ರಿಯನಿಗೆ ಯುದ್ಧದಲ್ಲಿ ತೊಡಗಿಸುವಿಕೆಯೇ ಶಿಕ್ಷೆ. ವೈಶ್ಯರಿಗೆ ಸಂಪತ್ತನ್ನು ಕಸಿದುಕೊಳ್ಳುವುದೇ ಶಿಕ್ಷೆ. ಶೂದ್ರರಿಗೆ ಸೇವಾವೃತ್ತಿಯಲ್ಲಿರುವಂತೆ ಮಾಡುವುದೇ ಶಿಕ್ಷೆ.
ವಿವರಣೆ - ಬ್ರಾಹ್ಮಣರಿಗೆ ಗಲ್ಲುಶಿಕ್ಷೆಯನ್ನು ಕ್ಷತ್ರಿಯನು ನೀಡಬಾರದು. ಅಥವಾ ಛಡಿಯೇಟು ಮೊದಲಾದವುಗಳನ್ನೂ ಕೂಡ ಕೊಡಬಾರದು. `ಉತ್ತಮೇ ವಚಸಾ ಶಿಕ್ಷಾ' ಎಂಬ ಮಾತಿನಂತೆ ಮಾತಿನಿಂದ ನಿಂದಿಸಬೇಕು, ಗದರಿಸಬೇಕು. ಇಷ್ಟು ಮಾತ್ರ ಬ್ರಾಹ್ಮಣನಿಗೆ ನೀಡಬಹುದಾದ ಶಿಕ್ಷೆ. ಕ್ಷತ್ರಿಯರು ಅಪರಾಧವನ್ನು ಮಾಡಿದರೆ ಅವರನ್ನು ಯುದ್ಧದಲ್ಲಿ ತೊಡಗಿಸಬೇಕು. ಸೇನೆಯಲ್ಲಿ ಸೇರಿಸಿ ಯುದ್ಧವನ್ನು ಅವನ ಮೂಲಕ ಮಾಡಿಸಬೇಕು. ವೈಶ್ಯರಿಗೆ ಅವರ ಬಳಿ ಇರುವ ಎಲ್ಲಾ ಸಂಪತ್ತನ್ನು ಕಸಿದುಕೊಳ್ಳಬೇಕು. `ನಿರ್ದಂಡಃ ಶೂದ್ರ ಉಚ್ಯತೇ' ಎಂಬಂತೆ ಶೂದ್ರರಿಗೆ ದಂಡವೇ ಇಲ್ಲವೆಂದು ಹೇಳಿದಂತೆ ಕಾಣಿಸುತ್ತದೆ. ಶೂದ್ರನ ಮೂಲಕ ತನ್ನ ಸೇವೆಯನ್ನು ಮಾಡಿಸಿಕೊಳ್ಳುವುದೇ ಅವನಿಗೆ ನೀಡುವ ಶಿಕ್ಷೆ. ಆದರೆ ಇದು ಅವನ ವೃತ್ತಿಯಾಗಿರುವುದರಿಂದ `ನಿರ್ದಂಡಃ' ಎಂಬುದಾಗಿ ಶ್ಲೋಕದಲ್ಲಿ ಹೇಳಿ- ರುತ್ತಾರೆ.
ಟಿಪ್ಪಣಿ - ಕ್ಷತ್ರಿಯಾಣಾಂ ಭುಜಾರ್ಪಣಮ್ ಇತ್ಯತ್ರ ಭುಜಾರ್ಪಣಮ್ ಅನ್ಯೋನ್ಯಂ ಯುದ್ಧಾಯ ಭುಜಯೋರರ್ಪಣಮ್ |
`ಭುಜಾರ್ಪಣ' ಎಂದರೆ ಯುದ್ಧ- ದಲ್ಲಿ ಭುಜಪರಾಕ್ರಮವನ್ನು ಸಮರ್ಪಿಸುವಿಕೆ ಎಂದರ್ಥ.
ಅಸಮ್ಮೋಹಾಯ ಮರ್ತ್ಯಾನಾಮರ್ಥಸಂರಕ್ಷಣಾಯ ಚ |
ಮರ್ಯಾದಾ ಸ್ಥಾಪಿತಾ ಲೋಕೇ ದಂಡಸಂಜ್ಞಾ ವಿಶಾಂಪತೇ ॥10॥
ರಾಜನೇ! ಮನುಷ್ಯರ ಮೋಹವು ದಂಡದಿಂದಲೇ ನಾಶವಾಗಲು ಸಾಧ್ಯ. ಅರ್ಥಸಂರಕ್ಷಣೆಯಾಗಬೇಕೆಂದರೂ ದಂಡನೀತಿಯನ್ನು ಅನುಸರಿಸಬೇಕು. ಲೋಕ- ಮರ್ಯಾದೆಯೇ `ದಂಡ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತದೆ.
ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಸೂನೃತಃ |
ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ ಸಾಧು ಪಶ್ಯತಿ ॥11॥
ಯಾವ ರಾಜ್ಯದಲ್ಲಿ ಕೆಂಪುಕಣ್ಣುಗಳಿಂದ ಕೂಡಿದ, ಕಪ್ಪುದೇಹದಿಂದ ಕೂಡಿರುವ ದಂಡಪುರುಷನು ದುಷ್ಟರನ್ನು ಶಿಕ್ಷಿಸುತ್ತಾನೋ, ಅಂಥ ದಂಡಪುರುಷನು ದಂಡ- ಪಾಣಿಯಾಗಿ ಸಂಚರಿಸಲು ರಾಜನು ಅನುಕೂಲ ಮಾಡುತ್ತಾನೋ, ಅಂಥ ರಾಜ್ಯದಲ್ಲಿ ಪ್ರಜೆಗಳು ಮೋಹಪರವಾಗಿರುವುದಿಲ್ಲ.
ವಿವರಣೆ - ಯಮನನ್ನೇ ಇಲ್ಲಿ ದಂಡಪುರುಷನೆಂದು ವಿವಕ್ಷಿಸಲಾಗಿದೆ. ತಪ್ಪು ಮಾಡಿದರೆ ಆ ಯಮನು ಬಂದು ಸ್ವತಃ ಶಿಕ್ಷೆಯನ್ನು ನೀಡುತ್ತಾನೆ ಎಂದಭಿಪ್ರಾಯ. ಕಪ್ಪುದೇಹದಿಂದ ಕೂಡಿರುವ ಆ ಯಮನು ಕ್ರೋಧಾತಿಶಯದಿಂದ ಕೆಂಪುಕಣ್ಣು- ಗಳನ್ನು ಒಮ್ಮೆ ಬಿಟ್ಟರೆ ಸಾಕು, ಎಂಥ ಅಪರಾಧಿಗಳೂ ಕೂಡ ಭಯಪಡುತ್ತಾರೆ. ಅಂಥ ದಂಡಪುರುಷನನ್ನು ನೆನೆಸಿಕೊಂಡೇ ಕೆಟ್ಟದ್ದನ್ನು ಮಾಡುವುದಿಲ್ಲ ಎಂದಷ್ಟೇ ಅಲ್ಲ. ಕೆಟ್ಟದ್ದನ್ನು ಮಾಡಲು ಯೋಚನೆಯನ್ನೂ ಕೂಡ ಪ್ರಜೆಗಳು ಮಾಡು- ವುದಿಲ್ಲ. ಇಂಥ ದಂಡಪುರುಷನು ಎಲ್ಲೆಡೆಯೂ ಸಂಚರಿಸುತ್ತಾನೆ. ಆದರೆ ರಾಜನು ಅತ್ಯಂತ ಧರ್ಮಯುಕ್ತನಾಗಿರಬೇಕು. ವಿನಯಾದಿ ಗುಣಗಳನ್ನು ಹೊಂದಿರಬೇಕು. ಅಂಥ ರಾಜ್ಯದಲ್ಲಿ ಮಾತ್ರ ದಂಡಪುರುಷನು ಸಂಚರಿಸುತ್ತಾನೆ.
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಽಥ ಭಿಕ್ಷುಕಃ |
ದಂಡಸ್ಯೈವ ಭಯಾದೇತೇ ಮನುಷ್ಯಾ ವರ್ತ್ಮನಿ ಸ್ಥಿತಾಃ ॥12॥
ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಈ ನಾಲ್ಕು ಆಶ್ರಮದವರು ದಂಡ- ಪುರುಷನ ಭಯದಿಂದಲೇ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿದ್ದಾರೆ.
ವಿವರಣೆ - ಪ್ರತಿಯೊಬ್ಬರು ಅವರವರ ಆಶ್ರಮಧರ್ಮಗಳನ್ನು ಪರಿಪಾಲನೆ ಮಾಡಲೇ ಬೇಕು. ಇದೂ ಸಹ ದಂಡಪುರುಷನಾದ ಯಮಧರ್ಮನ ಭಯ- ದಿಂದಲೇ ನಡೆಯುತ್ತಿದೆ ಎಂಬುದಾಗಿ ಇಲ್ಲಿ ತಿಳಿಸಿದ್ದಾರೆ.
ನಾಭೀತೋ ಯಜತೇ ರಾಜನ್ನಾಭೀತೋ ದಾತುಮಿಚ್ಛತಿ |
ನಾಭೀತಃ ಪುರುಷಃ ಕಶ್ಚಿತ್ ಸಮಯೇ ಸ್ಥಾತುಮಿಚ್ಛತಿ ॥13॥
ದಂಡಪುರುಷನಿಗೆ ಹೆದರದವನು ಯಜ್ಞವನ್ನು ಆಚರಿಸುವುದಿಲ್ಲ. ಪಾಪದ ಭಯವಿಲ್ಲದವನು ದಾನವನ್ನು ಮಾಡುವುದಿಲ್ಲ. ಪಾಪದ ಭಯವಿಲ್ಲದವನು ತನ್ನ ಮಾತಿನ ಪ್ರಕಾರ ನಡೆಯಲು ಇಚ್ಛಿಸುವುದಿಲ್ಲ.

ವಿವರಣೆ - ಅನೇಕರು ಪಾಪದ ಭಯದಿಂದಲೇ ಯಜ್ಞ-ಯಾಗಾದಿಗಳನ್ನು ಆಚರಿಸುತ್ತಾರೆ. ಆ ಯಜ್ಞಯಾಗಾದಿಗಳ ಆಚರಣೆಯಿಂದ ಪಾಪಗಳು ಪರಿಹಾರ- ವಾಗುತ್ತವೆ. ಮತ್ತು ಪುಣ್ಯಸಂಪಾದನೆ ಆಗುತ್ತದೆಂಬ ಭಾವನೆಯು ಇರುತ್ತದೆ. ಯಾರಿಗೆ ನಮ್ಮ ಪಾಪಕ್ಕೆ ಶಿಕ್ಷೆಯಾಗುತ್ತದೆಂಬ ಭಯವೇ ಇರುವುದಿಲ್ಲವೋ, ಅಂಥವರು ಯಜ್ಞವನ್ನು ಆಚರಿಸುವುದಿಲ್ಲ. ತಾವು ಸಂಪಾದಿಸಿದ ಹಣದ ದಾನವನ್ನೂ ಕೂಡ ಮಾಡುವುದಿಲ್ಲ. ಏಕೆಂದರೆ ತಮ್ಮ ಪಾಪಕ್ಕೆ ಯಾವುದೇ ಶಿಕ್ಷೆಯು ಇರುವುದಿಲ್ಲ. ಮತ್ತು ಹೇಳಿದಂತೆ ನಡೆದುಕೊಳ್ಳುವುದು ತುಂಬಾ ಮುಖ್ಯವಾದ ಧರ್ಮ. ಪ್ರತಿಜ್ಞಾಭಂಗವನ್ನು ಮಾಡಿದವನು ಪಾಪಿಷ್ಠನಾಗುತ್ತಾನೆ. ಒಂದುವೇಳೆ ದಂಡಪುರುಷನ ಭಯವೇ ಇಲ್ಲದಿದ್ದರೆ ಪ್ರತಿಜ್ಞಾಭಂಗಕ್ಕೆ ಯಾರೂ ಸಹ ಹೆದರುವುದಿಲ್ಲ. ತಾವು ಹೇಳುವುದೇ ಒಂದು, ಮಾಡುವುದೇ ಮತ್ತೊಂದು ಎಂಬುದಾಗಿ ಪ್ರತಿಯೊಬ್ಬರೂ ಅಪ್ರಾಮಾಣಿಕರಾಗುತ್ತಾರೆ.

ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮ ದುಷ್ಕರಮ್ |
ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಮಹತೀಂ ಶ್ರಿಯಮ್ ॥14॥

ಮರ್ಮಸ್ಥಾನವನ್ನು ಕತ್ತರಿಸದಿದ್ದರೆ, ಅಸಾಧ್ಯವಾದ ಕಾರ್ಯವನ್ನು ಮಾಡದಿದ್ದರೆ, ಮತ್ತೊಬ್ಬನನ್ನು ಕೊಲ್ಲದಿದ್ದರೆ ಬೆಸ್ತನಂತೆ ಐಶ್ವರ್ಯವನ್ನು ಸಂಪಾದನೆ ಮಾಡಲು ಸಾಧ್ಯವಾಗುವುದಿಲ್ಲ.

ವಿವರಣೆ - ಈ ಶ್ಲೋಕವನ್ನು ಆಪಾತತಃ ನೋಡಿದಾಗ ಹಿಂದಿನ ವಚನಗಳಿಗೆ ವಿರುದ್ಧವಾಗಿ ಇರುವಂತೆ ಕಾಣಿಸುತ್ತದೆ. ಮತ್ತೊಬ್ಬರಿಗೆ ದುಃಖ ನೀಡಬೇಕು. ಮತ್ತೊಬ್ಬರನ್ನು ಕೊಲ್ಲಬೇಕು. ತನ್ಮೂಲಕ ಹಣ ಸಂಪಾದನೆ ಮಾಡಬೇಕು ಎಂಬುದು ಈ ಶ್ಲೋಕದಿಂದ ತಿಳಿಯುವ ಅರ್ಥ. ಆದರೆ ಶತ್ರುಜನರನ್ನು ಸಂಹಾರ ಮಾಡಬೇಕೆಂಬುದಷ್ಟೇ ಇದರ ಅಭಿಪ್ರಾಯ. ಎಲ್ಲರನ್ನು ನೋಯಿಸಬೇಕು, ಅಥವಾ ಕೊಲ್ಲಬೇಕು ಎಂಬುದು ಇದರ ಅಭಿಪ್ರಾಯವಲ್ಲ. ದಂಡನೀತಿಯನ್ನು ರಾಜನಾದವನು ಅಳವಡಿಸಲೇ ಬೇಕು. ಆ ದಂಡನೀತಿಯನ್ನು ಅಳವಡಿಸುವ ಕ್ರಮವನ್ನು ಈ ಶ್ಲೋಕದಲ್ಲಿ ನಿರೂಪಣೆ ಮಾಡುತ್ತಿದ್ದಾರೆ. ಯಾರು ಪಾಪವನ್ನು ಮಾಡಿರುತ್ತಾನೋ, ಅಥವಾ ಪಾತಕಿಯಾಗಿರುತ್ತಾನೋ, ಅಥವಾ ಶತ್ರುವಾಗಿರು- ತ್ತಾನೋ, ಅಂಥವನ ಮರ್ಮಸ್ಥಾನಗಳನ್ನು ಕತ್ತರಿಸಬೇಕು. ಮತ್ತು ಅಂಥ ಶತ್ರುವನ್ನು ಸಂಹಾರ ಮಾಡಬೇಕು. ಅಸಾಧ್ಯವಾದ ಕಾರ್ಯಗಳಲ್ಲಿ ತೊಡಗಿಸ- ಬೇಕು. ಅಂದರಷ್ಟೇ ವಿಪುಲವಾದ ಸಂಪತ್ತನ್ನು ಪಡೆದುಕೊಳ್ಳುತ್ತಾನೆ. ಬೆಸ್ತನು ಗಾಳಕ್ಕೆ ಮೀನನ್ನು ಹಾಕುವಂತೆ ನಯವಿನಯವಾದ ಮಾತುಗಳಿಂದ ಶತ್ರುವನ್ನು ಮೋಹ- ಗೊಳಿಸಬೇಕು. ಸಮಯವನ್ನು ನೋಡಿ, ಶತ್ರುವಿನ ಮರ್ಮವನ್ನು ಭೇದಿಸಬೇಕು. ಅನಂತರ ಅಂಥ ಶತ್ರುವನ್ನು ಕೊಲ್ಲಬೇಕು. ಶತ್ರುವಿನ ಸಂಹಾರದ ವಿಷಯದಲ್ಲಿ, ಅಥವಾ ಪಾತಕಿಗೆ ಶಿಕ್ಷೆ ನೀಡುವ ಸಂದರ್ಭದಲ್ಲಿ ಭಯಂಕರನಾದ ದಂಡಪುರುಷ- ನನ್ನು ತನ್ನಲ್ಲಿ ಆವಾಹನೆ ಮಾಡಿಕೊಳ್ಳಬೇಕು.

ಟಿಪ್ಪಣಿ - ನಾಚ್ಛಿತ್ವಾ ಪರಮರ್ಮಾಣಿ ಇತ್ಯತ್ರ ಪರಮರ್ಮಾಣಿ ಅಚ್ಛಿತ್ವಾ ಮಹತೀಂ ಶ್ರಿಯಂ ನ ಪ್ರಾಪ್ನೋತಿ ಇತಿ ಸರ್ವತ್ರ ಉತ್ತರೇಣಾನ್ವಯಃ ॥ ದುಷ್ಟನ ಮರ್ಮ- ಸ್ಥಾನಗಳನ್ನು ಕತ್ತರಿಸದಿದ್ದರೆ ವಿಪುಲವಾದ ಸಂಪತ್ತು ದೊರಕುವುದಿಲ್ಲ. ಹೀಗೆ ಮುಂದಕ್ಕೆ ಅನ್ವಯ ತಿಳಿಯಬೇಕು.

ನಾಘ್ನತಃ ಕೀರ್ತಿರಸ್ತೀಹ ನ ವಿತ್ತಂ ನ ಪುನಃ ಪ್ರಜಾಃ |
ಇಂದ್ರೋ ವೃತ್ರವಧೇನೈವ ಮಹೇಂದ್ರಃ ಸಮಪದ್ಯತ ॥15॥

ಶತ್ರುವನ್ನು ಕೊಲ್ಲದ ರಾಜನಿಗೆ ಈ ಭೂಲೋಕದಲ್ಲಿ ಕೀರ್ತಿಯು ಲಭಿಸು- ವುದಿಲ್ಲ. ಐಶ್ವರ್ಯವು ಪ್ರಾಪ್ತವಾಗುವುದಿಲ್ಲ. ಪ್ರಜೆಗಳ ಅನುರಾಗವು ದೊರಕುವು- ದಿಲ್ಲ. ಇಂದ್ರನು ತನ್ನ ಪರಮಶತ್ರುವಾದ ವೃತ್ರಾಸುರನನ್ನು ಸಂಹಾರಮಾಡಿದ್ದ- ರಿಂದಲೇ ಮಹೇಂದ್ರಸ್ಥಾನವನ್ನು ಅಲಂಕರಿಸಿದನು.

ವಿವರಣೆ - ಪ್ರಜೆಗಳನ್ನು ರಕ್ಷಣೆ ಮಾಡುವುದಕ್ಕಾಗಿ ಕೀರ್ತಿ, ಹಣ, ಪ್ರಜೆಗಳ ಬೆಂಬಲ ಇವುಗಳನ್ನು ರಾಜನಾದವನು ಹೊಂದಲೇ ಬೇಕು. ಅದಕ್ಕಾಗಿ ದಂಡ- ನೀತಿಯನ್ನು ಅಳವಡಿಸಬೇಕು. ತನ್ಮೂಲಕವಾಗಿ ಶತ್ರುವನ್ನು ನಿಷ್ಕಾರುಣ್ಯದಿಂದ ಸಂಹಾರ ಮಾಡಬೇಕು.

ಯ ಏವ ದೇವಾ ಹಂತಾರಸ್ತಾಂಲ್ಲೋಕೋಽರ್ಚಯತೇ ಭೃಶಮ್ |
ಹಂತಾ ರುದ್ರಸ್ತಥಾ ಸ್ಕಂದಃ ಶಕ್ರೋಽಗ್ನಿರ್ವರುಣೋ ಯಮಃ ॥16॥
ಹಂತಾ ಕಾಲಸ್ತಥಾ ವಾಯುರ್ಮೃತ್ಯುರ್ವೈಶ್ರವಣೋ ರವಿಃ |
ವಸವೋ ಮರುತಃ ಸಾಧ್ಯಾ ವಿಶ್ವೇದೇವಾಶ್ಚ ಭಾರತ ॥17॥
ಏತಾನ್ ದೇವಾನ್ನಮಸ್ಯಂತಿ ಪ್ರತಾಪಪ್ರಣತಾ ಜನಾಃ |
ನ ಬ್ರಹ್ಮಾಣಂ ನ ಧಾತಾರಂ ನ ಪೂಷಾಣಂ ಕಥಂಚನ ॥18॥

ಯುಧಿಷ್ಠಿರನೇ! ಯಾವ ದೇವತೆಗಳು ದುಷ್ಟರನ್ನು, ಮತ್ತು ಶತ್ರುಗಳನ್ನು ಸಂಹಾರ ಮಾಡಿದ್ದಾರೋ, ಅಂಥ ದೇವತೆಗಳು ಇಂದು ಲೋಕದಲ್ಲಿ ಪೂಜಿತರಾ- ಗಿದ್ದಾರೆ. ಮಹಾರುದ್ರ, ಸ್ಕಂದ, ಇಂದ್ರ, ವರುಣ, ಯಮ, ವಾಯು, ಮೃತ್ಯು, ಕುಬೇರ, ಸೂರ್ಯ, ಅಷ್ಟವಸುಗಳು ನಲವತ್ತೆಂಟು ಮರುತ್‌ದೇವತೆಗಳು, ಸಾಧ್ಯರು, ವಿಶ್ವೇದೇವತೆಗಳು ಇವರೆಲ್ಲರೂ ಕೂಡ ಶತ್ರುಗಳ ಸಂಹಾರವನ್ನು ಮಾಡಿಯೇ ಉತ್ತಮರಾಗಿದ್ದಾರೆ. ಆದರೆ ಇವರನ್ನು ಎಲ್ಲರೂ ಕೂಡ ಪೂಜ್ಯ- ಭಾವನೆಯಿಂದ ನಮಿಸುತ್ತಾರೆ. ಯಾರೊಬ್ಬರೂ ಕೂಡ ಈ ದೇವತೆಗಳನ್ನು ಕೊಲೆ ಮಾಡಿದವರೆಂದು, ನಿಷ್ಕರುಣಿಗಳೆಂದು ತಿರಸ್ಕಾರ ಮಾಡುವುದಿಲ್ಲ. ಈ ದೇವತೆಗಳ ಪ್ರತಾಪಶಕ್ತಿಯನ್ನು ಗಮನಿಸಿ, ವಿನೀತರಾಗಿ ಎಲ್ಲಾ ಭಕ್ತರು ನಿರಂತರವಾಗಿ ದೇವತೆ- ಗಳನ್ನು ನಮಸ್ಕಾರ ಮಾಡುತ್ತಾರೆ. ಬ್ರಹ್ಮನನ್ನು, ಧಾತೃವನ್ನು, ಪೂಷಣನನ್ನು ಈ ಕಾರಣಬಿಟ್ಟು, ಬೇರೆ ಯಾವುದೇ ಕಾರಣದಿಂದ ಭಕ್ತರು ಪೂಜಿಸುವುದಿಲ್ಲ.

ಮಧ್ಯಸ್ಥಾನ್ ಸರ್ವಭೂತೇಷು ದಾಂತಾನ್ ಶಮಪರಾಯಣಾನ್ |
ಯಜಂತೇ ಮಾನವಾಃ ಕೇಚಿತ್ ಪ್ರಶಾಂತಾಃ ಸರ್ವಕರ್ಮಸು ॥19॥

ಎಲ್ಲಾ ಭೂತಗಳಲ್ಲಿ ರಾಗದ್ವೇಷಗಳಿಲ್ಲದೇ ಸಮಾನಭಾವನೆಯಿಂದ ಅವರವರ ಯೋಗ್ಯತೆಗೆ ತಕ್ಕಂತೆ ಫಲಗಳನ್ನು ದೇವತೆಗಳು ನೀಡುತ್ತಾರೆ. ಆ ದೇವತೆಗಳು ಶಾಂತಿಪರಾಯಣರು, ಜಿತೇಂದ್ರಿಯರು ಆಗಿರುತ್ತಾರೆ. ಕೆಲವು ಮನುಷ್ಯರು ಅಂಥ ದೇವತೆಗಳ ಪ್ರೀತಿಗಾಗಿ ಅನೇಕ ಯಜ್ಞ-ಯಾಗಾದಿಗಳನ್ನು ಮಾಡುತ್ತಾರೆ. ಪೂಜೆ ಮಾಡುತ್ತಾರೆ. ಪ್ರತಿಯೊಂದು ಕರ್ಮಗಳ ಪ್ರಾರಂಭದಲ್ಲಿ ಅವರನ್ನು

ಪ್ರಾರ್ಥಿಸುತ್ತಾರೆ.
ನಹಿ ಪಶ್ಯಾಮಿ ಜೀವಂತಂ ಲೋಕೇ ಕಂಚಿದಹಿಂಸಯಾ |
ಸತ್ತ್ವೈಃ ಸತತತ್ವ ಹಿ ಜೀವಂತಿ ದುರ್ಬಲೈರ್ಬಲವತ್ತರಾಃ ॥20॥
ಯುಧಿಷ್ಠಿರನೇ! ಕೇವಲ ಅಹಿಂಸೆಯಿಂದ ಜೀವನ ಮಾಡಲು ಸಾಧ್ಯವೇ ಇಲ್ಲ. ಅಂಥವರನ್ನು ನಾನು ಇದುವರೆಗೂ ಕಂಡೂ ಇಲ್ಲ. ದುರ್ಬಲರಾದ ಪ್ರಾಣಿಗಳನ್ನು ತಿನ್ನುವುದರಿಂದಲೇ ಪ್ರಬಲವಾದ ಪ್ರಾಣಿಗಳು ಇಂದು ಜೀವಿಸುತ್ತಿದ್ದಾರೆ. ಇದುವೇ ಲೋಕದ ಸ್ವಭಾವ.
ನಕುಲೋ ಮೂಷಕಾನತ್ತಿ ಬಿಡಾಲೋ ನಕುಲಂ ತಥಾ |
ಬಿಡಾಲಮತ್ತಿ ಶ್ವಾ ರಾಜನ್ ಶ್ವಾನಂ ವ್ಯಾಲಮೃಗಸ್ತಥಾ ॥21॥
ಈ ಲೋಕದಲ್ಲಿ ಬಲಿಷ್ಠ ಪ್ರಾಣಿಗಳು ದುರ್ಬಲ ಪ್ರಾಣಿಗಳನ್ನು ತಿಂದು ಬದುಕು- ತ್ತವೆ. ಮುಂಗುಸಿಯು ಇಲಿಗಳನ್ನು ತಿನ್ನುತ್ತದೆ. ಬೆಕ್ಕು ಮುಂಗುಸಿಯನ್ನು ತಿನ್ನುತ್ತದೆ. ನಾಯಿಯು ಬೆಕ್ಕನ್ನು ತಿನ್ನುತ್ತದೆ. ಚಿರತೆಯು ನಾಯಿಯನ್ನು ತಿನ್ನುತ್ತದೆ.
ತಾನತ್ತಿ ಪುರುಷಃ ಸರ್ವಾನ್ ಪಶ್ಯ ಧರ್ಮೋ ಯಥಾಗತಃ |
ಪ್ರಾಣಸ್ಯಾನ್ನಮಿದಂ ಸರ್ವಂ ಜಂಗಮಂ ಸ್ಥಾವರಂ ಚ ಯತ್ ॥22॥
ಈ ಎಲ್ಲಾ ಪ್ರಾಣಿಗಳನ್ನು ಮನುಷ್ಯನು ಕೊಂದು ತಿನ್ನುತ್ತಾನೆ. ಹೀಗೆ ಕಾಲಚಕ್ರ- ವನ್ನು ನೀನೇ ಗಮನಿಸು. ಈ ಭೂಮಂಡಲದಲ್ಲಿರುವ ಎಲ್ಲಾ ಸ್ಥಾವರ ಜಂಗಮಗಳು ಪ್ರಾಣಧಾರಣೆಗೆ ಅನ್ನರೂಪವಾಗಿಯೇ ನಿಂತಿವೆ.
ವಿಧಾನಂ ದೇವವಿಹಿತಂ ತತ್ರ ವಿದ್ವಾನ್ನ ಮುಹ್ಯತಿ |
ಯಥಾ ಸೃಷ್ಟೋಽಸಿ ರಾಜೇಂದ್ರ ತಥಾ ಭವಿತುಮರ್ಹಸಿ ॥23॥
ಹೀಗೆ ದುರ್ಬಲ ಪ್ರಾಣಿಗಳನ್ನು ತಿಂದು ಬದುಕಬೇಕೆಂಬುದನ್ನು ದೈವವೇ ಸೃಷ್ಟಿ ಮಾಡಿದೆ. ಇದರಲ್ಲಿ ಜ್ಞಾನಿಯಾದವನು ಮೋಹವನ್ನು ಹೊಂದಿರುವುದಿಲ್ಲ. ವಿಧಾತೃವು ಹೇಗೆ ನಿನ್ನನ್ನು ಸೃಷ್ಟಿ ಮಾಡಿರುವನೋ, ಅದಕ್ಕನುಗುಣವಾಗಿ ನಡೆಯು- ವುದು ನಿನ್ನ ಕರ್ತವ್ಯವಾಗಿದೆ.
ವಿವರಣೆ - ದುರ್ಬಲ ಪ್ರಾಣಿಗಳನ್ನು ತಿಂದು ಬದುಕುವುದು ಅಧರ್ಮವಲ್ಲ. ಇದನ್ನು ದೇವರೇ ಸೃಷ್ಟಿ ಮಾಡಿದ್ದಾನೆ. ಹೀಗಿರುವಾಗ ಶತ್ರುಗಳನ್ನು ಪಾತಕಿಗಳನ್ನು ಸಂಹಾರ ಮಾಡುವುದು ನಿನಗೆ ಅತ್ಯಂತ ಉಚಿತವೇ ಆಗಿದೆ. ಇದು ನಿನ್ನ ಧರ್ಮವೇ ಆಗಿದೆ. ಕ್ಷತ್ರಿಯ ವಂಶದಲ್ಲಿ ಜನಿಸಿದ ನಿನಗೆ ವಿಹಿತವಾದದ್ದು ಶತ್ರು- ಸಂಹಾರ. ಇದನ್ನು ಬಿಟ್ಟರೆ ವರ್ಣಾಶ್ರಮಧರ್ಮಗಳಿಂದ ನೀನು ಚ್ಯುತನಾಗುವಿ.
ವಿನೀತಕ್ರೋಧಹರ್ಷಾ ಹಿ ಮಂದಾ ವನಮುಪಾಶ್ರಿತಾಃ |
ವಿನಾ ವಧಂ ನ ಕುರ್ವಂತಿ ತಾಪಸಾಃ ಪ್ರಾಣಯಾಪನಮ್ ॥24॥
ಆದರೆ ಮೂಢರಾದ ಕ್ಷತ್ರಿಯರು ಕ್ರೋಧ ಹರ್ಷಗಳೆರಡನ್ನು ಬಿಟ್ಟು, ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಾರೆ. ಆದರೆ ಅರಣ್ಯದಲ್ಲಿಯೂ ಕೂಡ ತಮ್ಮ ಆಹಾರ- ಕ್ಕಾಗಿ ಪ್ರಾಣಿಗಳ ವಧೆಯನ್ನು ಮಾಡಲೇಬೇಕು.
ವಿವರಣೆ - ಕ್ಷತ್ರಿಯರಾದವರು ದುಷ್ಟರಲ್ಲಿ ಕ್ರೋಧವನ್ನು, ಶಿಷ್ಟರಲ್ಲಿ ಹರ್ಷವನ್ನು ಹೊಂದಿರಬೇಕು. ದುಷ್ಟರನ್ನು ಶಿಕ್ಷಿಸಿ ರಾಜ್ಯವನ್ನು ಪರಿಪಾಲನೆ ಮಾಡಬೇಕು. ಇದನ್ನೆಲ್ಲಾ ತೊರೆದು ಕಾಡಿಗೆ ಹೋಗುವುದು ಅವರ ಧರ್ಮವಲ್ಲ. ಅಹಿಂಸಾಪಾಲನೆಯ ದೃಷ್ಟಿಯಿಂದ ಕಾಡಿಗೆ ಹೋದರೂ ಕೂಡ ಅವರ ಉದ್ದೇಶವು ಈಡೇರುವುದಿಲ್ಲ. ಕಾಡಿಗೆ ಹೋದರೆ ತಮ್ಮ ಪ್ರಾಣಧಾರಣೆಗೆ ಅಲ್ಲಿಯೂ ಕೂಡ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಅವರು ಪ್ರಾಣಿಹಿಂಸೆಯನ್ನು ಮಾಡಬೇಕು. ಗೆಡ್ಡೆ-ಗೆಣಸುಗಳನ್ನು ತಿಂದಾಗಲೂ ಅವುಗಳು ಸಜೀವವಾದ್ದರಿಂದ ಅಲ್ಲಿರುವ ಜೀವಗಳಿಗೂ ಕೂಡ ಹಿಂಸೆ ಮಾಡಿದಂತಾಗುತ್ತದೆ. ಆದ್ದರಿಂದ ಅಹಿಂಸಾವೃತ್ತಿಯು ಕ್ಷತ್ರಿಯರಿಂದ ಪಾಲಿಸಲು ಸಾಧ್ಯವೇ ಆಗುವುದಿಲ್ಲ. ಅದು ಅಧರ್ಮವೂ ಕೂಡ ಆಗಿರುತ್ತದೆ.
ಟಿಪ್ಪಣಿ - ವಿನಾ ವಧಮ್ ಇತ್ಯತ್ರ ವಧಂ ಕಂದಮೂಲಾದಿಸ್ಥಾವರವಧಮ್ | ಕಾಡಿನಲ್ಲಿ ಮಾಡುವ ವಧೆಯೆಂದರೆ ಗೆಡ್ಡೆಗೆಣಸು ಮೊದಲಾದ ಸ್ಥಾವರಪದಾರ್ಥಗಳ ವಧೆ ಎಂದೇ.
ಉದಕೇ ಬಹವಃ ಪ್ರಾಣಾಃ ಪೃಥಿವ್ಯಾಂ ಚ ಫಲೇಷು ಚ |
ನಚ ಕಶ್ಚಿನ್ನ ತಾನ್ ಹಂತಿ ಕಿಮನ್ಯತ್ ಪ್ರಾಣಯಾಪನಾತ್ ॥25॥
ಜಲದಲ್ಲಿ, ಭೂಮಿಯಲ್ಲಿ, ಕಾಡಿನಲ್ಲಿ ಸಿಗುವ ಫಲಗಳಲ್ಲಿ ಎಷ್ಟೋ ಪ್ರಾಣಿಗಳು ಇರುತ್ತವೆ. ಆ ಪ್ರಾಣಿಗಳನ್ನು ಕೊಲ್ಲದೇ ಜೀವಿಸಲು ಯಾರಿಂದಲೂ ಸಾಧ್ಯವಿಲ್ಲ.
ವಿವರಣೆ - ಪ್ರಾಣಿ ಹಿಂಸೆ ಮಾಡಬಾರದೆಂಬ ದೃಷ್ಟಿಯಿಂದ ಮೊಲ, ಜಿಂಕೆ ಮೊದಲಾದವುಗಳನ್ನು ಕೊಲ್ಲದೇ ಇದ್ದರೂ ಕೂಡ ಕಂದಮೂಲಫಲಗಳನ್ನು ತಿನ್ನ- ಬೇಕು. ಆದರೆ ಅವುಗಳಲ್ಲೂ ಕೂಡ ಎಷ್ಟೋ ಪ್ರಾಣಿಗಳಿರುತ್ತವೆ. ಅವುಗಳನ್ನೂ ಕೂಡ ನಾನು ತಿನ್ನುವುದಿಲ್ಲ. ನೀರನ್ನಷ್ಟೇ ಕುಡಿಯುತ್ತೇನೆ ಎಂದು ಪ್ರತಿಜ್ಞೆ ಮಾಡಿ- ದರೂ ಕೂಡ ಆ ನೀರಿನಲ್ಲೂ ಕೂಡ ಅದೆಷ್ಟೋ ಪ್ರಾಣಿಗಳಿರುತ್ತವೆ. ಹೀಗೆ ಸೂಕ್ಷ್ಮಾತಿಸೂಕ್ಷ್ಮವಾದ ಅನೇಕಪ್ರಾಣಿಗಳನ್ನು ಕೊಲ್ಲದೇ ಬದುಕಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಅಹಿಂಸಾವೃತ್ತಿಯಲ್ಲಿ ಜೀವಿಸುವುದು ಯಾರಿಂದಲೂ ಸಾಧ್ಯವಾಗದ ಮಾತು.
ಟಿಪ್ಪಣಿ- ನಚ ಕಶ್ಚಿನ್ನ ತಾನ್ ಹಂತಿ ಇತ್ಯತ್ರ ಕಶ್ಚಿದಪಿ ತಾನ್ ಹಂತೀತಿ ನ |
`ನಚ ಕಶ್ಚಿನ್ನ ತಾನ್ ಹಂತಿ' ಎಂಬಲ್ಲಿ ಯಾರೊಬ್ಬನೂ ಕೂಡ ಈ ಪ್ರಾಣಿಗಳನ್ನು ಕೊಲ್ಲುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ.
ಸೂಕ್ಷ್ಮಯೋನೀನಿ ಭೂತಾನಿ ತರ್ಕಗಮ್ಯಾನಿ ಕಾನಿಚಿತ್ |
ಪಕ್ಷ್ಮಣೋಽಪಿ ನಿಪಾತೇನ ಯೇಷಾಂ ಸ್ಯಾತ್ ಸ್ಕಂಧಪರ್ಯಯಃ ॥26॥
ಈ ಜಗತ್ತಿನಲ್ಲಿ ಅತ್ಯಂತ ಸೂಕ್ಷ್ಮದೇಹವನ್ನು ಹೊಂದಿದ ಅನೇಕ ಪ್ರಾಣಿಗಳಿವೆ. ಇನ್ನೂ ಕೆಲವು ಕಣ್ಣಿಗೂ ಕಾಣದ ಊಹೆಯಿಂದಷ್ಟೇ ತಿಳಿಯಬೇಕಾದ ಪ್ರಾಣಿಗಳೂ ಇವೆ. ಆಶ್ಚರ್ಯವೆಂದರೆ ಕಣ್ಣಿನ ರೆಪ್ಪೆ ಆಡಿಸುವುದರಿಂದಲೇ ಹೆಗಲನ್ನೇ ಮುರಿದು- ಕೊಳ್ಳುವ ಸೂಕ್ಷ್ಮಜೀವಿಗಳು ಎಷ್ಟೋ ಇವೆ.
ಟಿಪ್ಪಣಿ - ಸ್ಕಂಧಪರ್ಯಯ ಇತ್ಯತ್ರ ಸ್ಕಂಧಸ್ಯ ಪರ್ಯಯಃ ವಿಪರ್ಯಯೋ ನಾಶಃ|

`ಸ್ಕಂಧಪರ್ಯಯಃ' ಎಂಬಲ್ಲಿ `ಸ್ಕಂಧಸ್ಯ ಪರ್ಯಯಃ' ಎಂದು ವಿಗ್ರಹ. ಪರ್ಯಯ ಶಬ್ದಕ್ಕೆ ವಿಪರ್ಯಯ ಎಂದರ್ಥ. ನಾಶ ಎಂದಭಿಪ್ರಾಯ. ಹೆಗಲಿನ ನಾಶ ಎಂದು ಇದರ ಅರ್ಥ.
ಗ್ರಾಮಾನ್ನಿಷ್ಕ್ರಮ್ಯ ಮುನಯೋ ವಿಗತಕ್ರೋಧಮತ್ಸರಾಃ |
ವನೇ ಕುಟುಂಬಧರ್ಮಾಣೋ ದೃಶ್ಯಂತೇ ಪರಿಮೋಹಿತಾಃ ॥27॥
ಕೆಲವು ಮುನಿಗಳು ಕೋಪ, ಅಸೂಯೆ ಮೊದಲಾದವುಗಳನ್ನು ಪರಿತ್ಯಾಗ ಮಾಡಿ, ತಮ್ಮ ಊರನ್ನೇ ಬಿಟ್ಟು ಕಾಡಿಗೆ ಹೋಗುತ್ತಾರೆ. ಆದರೆ ಆ ಕಾಡಿನಲ್ಲಿ ಕುಟುಂಬದ ಪರಿಪಾಲನೆಯಲ್ಲಿ ತೊಡಗುತ್ತಾರೆ. ಪತ್ನಿ-ಪುತ್ರಾದಿಗಳ ಅನುರಾಗದಲ್ಲಿ ಮೋಹಿತರಾಗುತ್ತಾರೆ.
ಭೂಮಿಂ ಭಿತ್ತೌಷಧೀಶ್ಛಿತ್ತ್ವ ವೃಕ್ಷಾದೀನಂಡಜಾನ್ ಪಶೂನ್ |
ಮನುಷ್ಯಾಸ್ತನ್ವತೇ ಯಜ್ಞಾಂಸ್ತೇ ಸ್ವರ್ಗಂ ಪ್ರಾಪ್ನುವಂತಿ ಚ ॥28॥
ಮನುಷ್ಯರು ಯಾಗವನ್ನು ಮಾಡುವುದಕ್ಕಾಗಿ ಭೂಮಿಯನ್ನು ಅಗೆಯುತ್ತಾರೆ. ಔಷಧಿ ಸಸ್ಯಗಳನ್ನು ಕಡಿಯುತ್ತಾರೆ. ವೃಕ್ಷಗಳನ್ನು ಕತ್ತರಿಸುತ್ತಾರೆ. ಪಶು-ಪಕ್ಷ್ಯಾದಿಗಳನ್ನು ಕೊಲ್ಲುತ್ತಾರೆ. ಅನಂತರವೇ ಯಾಗವನ್ನು ಮಾಡಲು ಉದ್ಯುಕ್ತರಾಗುತ್ತಾರೆ. ಇಂಥ ಯಾಗವನ್ನು ಮಾಡುವುದರಿಂದ ಸ್ವರ್ಗವನ್ನೂ ಕೂಡ ಪಡೆಯುತ್ತಾರೆ.
ವಿವರಣೆ - ಹಿಂದಿನ ಶ್ಲೋಕದಲ್ಲಿ ಅಹಿಂಸೆಯನ್ನು ಪರಿಪಾಲನೆ ಮಾಡು- ವುದಕ್ಕಾಗಿ ಕೆಲವರು ಕಾಡಿಗೆ ಹೋಗುತ್ತಾರೆ. ಆದರೆ ಪತ್ನಿ-ಪುತ್ರಾದಿಗಳ ಮೋಹ- ದಿಂದ ಪೀಡಿತರಾಗಿ ಇಹಲೋಕ ಹಾಗೂ ಪರಲೋಕಗಳೆರಡನ್ನೂ ಕಳೆದುಕೊಳ್ಳು- ತ್ತಾರೆಂದು ಹೇಳಲಾಯಿತು. ಇಲ್ಲಿ ಕ್ರೋಧ ಅಸೂಯೆಗಳನ್ನು ಪರಿತ್ಯಾಗ ಮಾಡಿ, ವಾನಪ್ರಸ್ಥರಾಗಿ ಕಾಡಿಗೆ ಹೋಗಿ, ಕಾಮಕ್ಕೆ ತುತ್ತಾಗಿ ಜೀವನವನ್ನು ವ್ಯರ್ಥ ಮಾಡಿಕೊಳ್ಳುವುದಕ್ಕಿಂತ ಗ್ರಾಮದಲ್ಲಿಯೇ ಇದ್ದು, ಯಜ್ಞ-ಯಾಗಾದಿಗಳ ಆಚರಣೆ ಮಾಡಬೇಕು. ಕರ್ತವ್ಯಕರ್ಮಗಳಲ್ಲಿ ನಿರತರಾಗಿದ್ದು ಮತ್ತೊಬ್ಬರಿಗೆ ಹಿಂಸಾಚಾರದಂತೆ ಕಾಣುತ್ತಿದ್ದರೂ ಕೂಡ ವಿಹಿತವಾದ ಸತ್ಕರ್ಮಗಳನ್ನು ಆಚರಣೆ ಮಾಡಿ, ಯಜ್ಞ-ಯಾಗಾದಿಗಳನ್ನು ಆಚರಿಸಿದಾಗ ಸ್ವರ್ಗವೇ ಅವನಿಗೆ ದೊರಕು- ತ್ತದೆ. ಕಾಡಿಗೆ ಹೋಗಿ ತಮ್ಮ ಆಶ್ರಮಧರ್ಮವನ್ನು ಪರಿಪಾಲನೆ ಮಾಡದೇ ಇರುವುದಕ್ಕಿಂತ ರಾಜ್ಯದಲ್ಲಿಯೇ ಇದ್ದು, ತಮ್ಮ ಗೃಹಸ್ಥಾಶ್ರಮದ ಕರ್ತವ್ಯಗಳನ್ನು ಮಾಡುವುದು ಅತ್ಯಂತ ಶ್ರೇಯಸ್ಕರ ಎಂಬುದಾಗಿ ಹೇಳುತ್ತಿದ್ದಾರೆ.
ದಂಡನೀತ್ಯಾಂ ಪ್ರಣೀತಾಯಾಂ ಸರ್ವೇ ಸಿದ್ಧ್ಯಂತ್ಯುಪಕ್ರಮಾಃ |
ಕೌಂತೇಯ ಸರ್ವಭೂತಾನಾಂ ತತ್ರ ಮೇ ನಾಸ್ತಿ ಸಂಶಯಃ ॥29॥
ಕೌಂತೇಯನೇ! ದಂಡನೀತಿಯನ್ನು ಸುವ್ಯವಸ್ಥಿತವಾಗಿ ಅನುಷ್ಠಾನಕ್ಕೆ ತಂದಾಗ ಎಲ್ಲಾ ಪ್ರಾಣಿಗಳ ಸಕಲ ಪ್ರಯತ್ನಗಳು ಸಾರ್ಥಕವಾಗುತ್ತವೆ. ಈ ವಿಷಯದಲ್ಲಿ ನನಗೆ ಸ್ವಲ್ಪವೂ ಸಂಶಯವಿಲ್ಲ.
ವಿವರಣೆ - ದಂಡನೀತಿಯನ್ನು ಅಳವಡಿಸಿಕೊಳ್ಳುವುದು ಸ್ವಾರ್ಥಕ್ಕಾಗಿ ಅಲ್ಲ. ಅಥವಾ ಮತ್ತೊಬ್ಬರಿಗೆ ವಿನಾಕಾರಣ ಹಿಂಸೆ ಮಾಡುವುದಕ್ಕೂ ಅಲ್ಲ. ಪ್ರಜೆಗಳಿಗೆ ಹಿತವಾಗುವುದಕ್ಕೋಸ್ಕರ ಅವರ ಶ್ರಮಗಳೆಲ್ಲವೂ ಸಾರ್ಥಕವಾಗುವುದಕ್ಕೋಸ್ಕರ ಈ ದಂಡನೀತಿಯನ್ನು ರಾಜನಾದವನು ಅಳವಡಿಸಬೇಕು. ಆಗಷ್ಟೇ ಎಲ್ಲಾ ಪ್ರಜೆಗಳ ಸಾಧನೆಯು ಪೂರ್ಣವಾಗುತ್ತದೆ.
ದಂಡಶ್ಚೇನ್ನ ಭವೇಲ್ಲೋಕೇ ವಿನಶ್ಯೇಯುರಿಮಾ ಪ್ರಜಾಃ |
ಜಲೇ ಮತ್ಸ್ಯಾನಿವಾಭಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥30॥
ಒಂದು ವೇಳೆ ದಂಡನೀತಿಯನ್ನು ಅಳವಡಿಸದಿದ್ದರೆ, ಈ ಎಲ್ಲ ಪ್ರಜೆಗಳು ನಾಶ- ವನ್ನು ಹೊಂದುತ್ತಾರೆ. ನೀರಿನಲ್ಲಿರುವ ದೊಡ್ಡ ಮೀನುಗಳು, ಚಿಕ್ಕ ಮೀನುಗಳನ್ನು ತಿಂದು ಬದುಕುವಂತೆ ಬಲಿಷ್ಠರಾದವರು ದುರ್ಬಲರನ್ನು ನಾಶಗೊಳಿಸಿ, ಬದುಕು- ತ್ತಾರೆ.
ಸತ್ಯಂ ಚೇದಂ ಬ್ರಹ್ಮಣಾ ಪೂರ್ವಮುಕ್ತಂ
ದಂಡಃ ಪ್ರಜಾ ರಕ್ಷತಿ ಸಾಧು ನೀತಃ |
ಪಶ್ಯಾಗ್ನಯಶ್ಚ ಪ್ರತಿಶಾಮ್ಯಂತ್ಯಭೀತಾಃ
ಸಂತರ್ಜಿತಾ ದಂಡಭಯಾಜ್ಜ್ವಲಂತಿ ॥31॥
``ಸುವ್ಯವಸ್ಥಿತವಾಗಿ ಪ್ರಯೋಗಿಸಲ್ಪಟ್ಟ ದಂಡವು ಪ್ರಜೆಗಳನ್ನು ರಕ್ಷಣೆ ಮಾಡು- ತ್ತದೆ'' ಎಂಬ ಸತ್ಯವಾದ ಮಾತನ್ನು ಬ್ರಹ್ಮನು ಹಿಂದೆಯೇ ಹೇಳಿದ್ದನು. ಯುಧಿಷ್ಠಿರನೇ ನೀನೇ ಪ್ರತ್ಯಕ್ಷವಾಗಿ ನೋಡು. ಶಾಂತವಾದ ಅಗ್ನಿಗಳು ಪೂತ್ಕಾರದ ಭಯದಿಂದಲೇ ಉಜ್ವಲವಾಗಿ ಹೊತ್ತಿಕೊಂಡು ಉರಿಯಲು ತೊಡಗುತ್ತವೆ.
ಟಿಪ್ಪಣಿ- ಬ್ರಾಹ್ಮಣನು ಕರ್ತವ್ಯವಿಮುಖನಾದಾಗ ಮಾತಿನಿಂದಷ್ಟೇ ಅವನಿಗೆ ಶಿಕ್ಷೆಯನ್ನು ವಿಧಿಸಲಾಗಿದೆ. ಅಗ್ನಿಯು ಶಾಂತವಾದಾಗ ಪೂತ್ಕಾರದಿಂದಷ್ಟೇ ಶಿಕ್ಷೆಯು ವಿಹಿತವಾಗಿದೆ. ಪೂತ್ಕಾರ ಮಾಡಿದಾಗ ಆರಿಹೋದ ಅಗ್ನಿಯು ಹೊತ್ತಿಕೊಳ್ಳುತ್ತದೆ. ದುರ್ಗಂಧವಾದ ಮಾಂಸಕ್ಕೆ ಭಯಪಟ್ಟ ಅಗ್ನಿಯು ಶಾಂತವಾಗಿ ಬಿಡುತ್ತದೆ. ಆಗ ಮತ್ತಷ್ಟು ಕಟ್ಟಿಗೆಗಳನ್ನು ಹಾಕಿ, ಪೂತ್ಕಾರವನ್ನು ಮಾಡಿದಾಗ ಭುಗ್ಗೆಂದು ಹೊತ್ತಿ- ಕೊಂಡು ಉರಿಯುತ್ತದೆ. ಅಗ್ನಿಯು ಆ ದುರ್ಗಂಧವಾದ ಮಾಂಸವನ್ನೂ ಕೂಡ ದಂಡಭಯದಿಂದಲೇ ಸುಡುತ್ತದೆ.
ಅಂಧಂ ತಮ ಇವೇದಂ ಸ್ಯಾನ್ನ ಪ್ರಜ್ಞಾಯೇತ ಕಿಂಚನ |
ದಂಡಶ್ಚೇನ್ನ ಭವೇಲ್ಲೋಕೇ ವಿಭಜನ್ ಸಾಧ್ವಸಾಧುನೀ ॥32॥
ಒಂದು ವೇಳೆ ``ಇದು ಒಳ್ಳೆಯದು, ಇದು ಕೆಟ್ಟದ್ದು'' ಎಂಬುದನ್ನು ವಿಭಾಗ ಮಾಡದಿದ್ದರೆ ಸಜ್ಜನರನ್ನು ಪರಿಪಾಲನೆ ಮಾಡಿ, ದುರ್ಜನರನ್ನು ನಿಗ್ರಹ ಮಾಡ- ದಿದ್ದರೆ, ಈ ಲೋಕವೇ ಅಂಧಂತಮಸ್ಸಿನಿಂದ ತುಂಬುತ್ತಿತ್ತು. ಯಾರು ದುಷ್ಟರು, ಯಾರು ಶಿಷ್ಟರು ಎಂಬ ವಿಭಾಗವೇ ಇಲ್ಲದಂತಾಗುತ್ತಿತ್ತು.
ಯೇಽಪಿ ಸಂಭಿನ್ನಮರ್ಯಾದಾ ನಾಸ್ತಿಕಾ ವೇದನಿಂದಕಾಃ |
ತೇಽಪಿ ಭೋಗಾಯ ಕಲ್ಪಂತೇ ದಂಡೇನಾಶು ನಿಪೀಡಿತಾಃ ॥33॥
ಯಾರು ಧರ್ಮದ ಚೌಕಟ್ಟನ್ನು ದಾಟಿ ನಡೆಯುತ್ತಾರೋ, ನಾಸ್ತಿಕರಾಗು- ತ್ತಾರೋ, ವೇದಗಳನ್ನು ನಿಂದನೆ ಮಾಡುತ್ತಾರೋ, ಅಂಥವರಿಗೆ ರಾಜದಂಡದಿಂದ ಶಿಕ್ಷೆಯನ್ನು ನೀಡಲೇ ಬೇಕು. ಆಗ ಅಂಥ ನಾಸ್ತಿಕರೂ ಕೂಡ ದಂಡಭಯದಿಂದ ಧರ್ಮದ

ಚೌಕಟ್ಟಿನೊಳಗೆ ಬದುಕುತ್ತಾರೆ.
ಟಿಪ್ಪಣಿ - ಕೆಲವರು ಸಂಪರ್ಕದಿಂದ ಅಥವಾ ಅಜ್ಞಾನಾದಿಗಳಿಂದ ನಾಸ್ತಿಕ- ರಾಗಿರುತ್ತಾರೆ. ವೇದಗಳನ್ನು ಏಕೆ ನಂಬಬೇಕೆಂದು ಕುವಾದ ಮಾಡುತ್ತಾರೆ. ಹಿತೋಪದೇಶವನ್ನು ಮಾಡಿದಾಗಲೂ ಒಪ್ಪದಿದ್ದರೆ ಅವರಿಗೆ ದಂಡಪ್ರಯೋಗ- ವನ್ನೇ ಮಾಡಬೇಕು. ಆಗ ಭಯಪಟ್ಟು ಧರ್ಮಮಾರ್ಗದಲ್ಲಿ ಬದುಕಲು ಪ್ರಯತ್ನಿ- ಸುತ್ತಾರೆ. ಹೀಗೆ ಧರ್ಮಬಾಹಿರರನ್ನೂ ಕೂಡ, ನಾಸ್ತಿಕರನ್ನೂ ಕೂಡ ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಮಾಡುವುದೇ ರಾಜದಂಡದ ವೈಶಿಷ್ಟ್ಯವಾಗಿದೆ.
ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ |
ದಂಡಸ್ಯ ಹಿ ಭಯಾದ್ ಭೀತೋ ಭೋಗಾಯೇಹ ಪ್ರಕಲ್ಪತೇ ॥34॥
ಪ್ರತಿಯೊಬ್ಬರೂ ಕೂಡ ದಂಡದಿಂದಲೇ ಜಯಿಸುತ್ತಾರೆ. ಸಹಜವಾಗಿ ಶುಚಿ- ರ್ಭೂತನಾದ ಮನುಷ್ಯನಿರುವುದೇ ದುರ್ಲಭವಾಗಿದೆ. ದಂಡಭಯದಿಂದಲೇ ಪ್ರತಿಯೊಬ್ಬರೂ ಧರ್ಮಪರಿಪಾಲನೆಯಲ್ಲಿ ಪ್ರವೃತ್ತರಾಗುತ್ತಿದ್ದಾರೆ.
ವ್ಯಾಖ್ಯಾನ - ಈ ಲೋಕದಲ್ಲಿ ದಂಡಶಿಕ್ಷೆಯ ಭಯವಿಲ್ಲದಿದ್ದರೆ ಪ್ರತಿ- ಯೊಬ್ಬರೂ ಅಪಮಾರ್ಗದಲ್ಲಿಯೇ ನಡೆಯುತ್ತಿದ್ದರು. ಸಹಜವಾಗಿ ಧರ್ಮವನ್ನು ಆಚರಿಸಬೇಕೆಂಬ ಬುದ್ಧಿ ಇರುವುದು ಬಹಳ ದುರ್ಲಭ. ಹೀಗೇಕೆ ಹೇಳುತ್ತಿದ್ದಾರೆ. ಕೆಲವರು ತಪ್ಪು ಮಾಡುತ್ತಿರುವಾಗ ಇದು ತಪ್ಪೆಂದು ತಿಳಿದಿರುತ್ತದೆ. ಆದರೆ ನನಗೆ ಇದರಿಂದ ಏನೂ ತೊಂದರೆಯಾಗುವುದಿಲ್ಲ ಎಂಬ ಅಥವಾ ಯಾರೂ ಈ ತಪ್ಪನ್ನು ತಿಳಿಯುವುದಿಲ್ಲ ಎಂಬ ಭಾವನೆಯಿಂದ ಮನುಷ್ಯನು ಎಡವುತ್ತಾನೆ. ಹೀಗೆ ತಪ್ಪು- ಗಳನ್ನು ಹೆಚ್ಚಿಸಿಕೊಂಡು ತನ್ನ ಜೀವನವನ್ನು ಅಂಧಕಾರಮಯವನ್ನಾಗಿ ಮಾಡಿ- ಕೊಳ್ಳುತ್ತಾನೆ. ಇವನನ್ನು ನೋಡಿದ ಉಳಿದವರೂ ಕೂಡ ತಪ್ಪು ಮಾಡುವುದರಲ್ಲೇ ನಿರತರಾಗುತ್ತಾರೆ. ಹಿಂಸಾಚಾರ, ದುರ್ವ್ಯವಹಾರ, ಭ್ರಷ್ಟಾಚಾರಗಳು ಹೆಚ್ಚುತ್ತವೆ. ಭ್ರಷ್ಟಾಚಾರ ಮಾಡುವವರಿಗೆ ಪ್ರಜೆಗಳೇ ಅನುಮೋದನೆ ಮಾಡುತ್ತಾರೆ. ಇಂಥ ಸಂದರ್ಭದಲ್ಲಿ ಅವಶ್ಯವಾಗಿ ದಂಡನೀತಿಯನ್ನು ಅಳವಡಿಸಬೇಕು. ಯಾವುದೇ ರೀತಿಯಲ್ಲಿ ಅದನ್ನು ಸಡಿಲಗೊಳಿಸಬಾರದು. ಮತ್ತು ಏಕಾಂತದಲ್ಲಿ ಮಾಡುವ ತಪ್ಪುಗಳನ್ನೂ ಕೂಡ ಗಮನಿಸಿ ಅವನಿಗೆ ಶಿಕ್ಷೆಯನ್ನು ನೀಡಬೇಕು. ಭ್ರಷ್ಟಾಚಾರ ಮೊದಲಾದವುಗಳಿಗೆ ಸ್ವಲ್ಪವೂ ಅವಕಾಶ ಕೊಡದೇ ರಾಜ್ಯವನ್ನು ಪರಿಪಾಲನೆ ಮಾಡಬೇಕು. ಹೀಗೆ ಅತ್ಯಂತಪ್ರಾಮಾಣಿಕವಾಗಿ ಪ್ರಜೆಗಳು ಬದುಕುವಂತೆ ರಾಜ- ನಾದವನು ಪ್ರಯತ್ನ ಪಡಬೇಕು.
ಇಂದಿನ ಕಾಲದಲ್ಲಿ ಭ್ರಷ್ಟಾಚಾರ ಮೊದಲಾದವುಗಳನ್ನು ಮಾಡದೇ ಬದುಕಲು ಸಾಧ್ಯವೇ ಆಗುವುದಿಲ್ಲವೆಂಬ ಭಾವನೆ ಎಲ್ಲ ಸಾತ್ವಿಕರಲ್ಲೂ ತುಂಬಿದೆ. ಯಾವು- ದಾದರೂ ಸಂಕಟ ಪರಿಸ್ಥಿತಿಯು ಎದುರಾದಾಗ ಪರಿಹಾರವಾದರೆ ಸಾಕು ಎಂಬ ಭಾವನೆಯಿಂದ ಭ್ರಷ್ಟಾಚಾರ ಮಾಡುವವರಿಗೆ ಕಾನೂನುಬಾಹಿರವಾಗಿ ಹಣ ಮೊದಲಾದವುಗಳನ್ನು ಕೊಟ್ಟು, ಪಾರಾಗುವ ಮನೋಭಾವನೆ ಪ್ರತಿಯೊಬ್ಬರಲ್ಲೂ ಬೆಳೆಯುತ್ತಿದೆ. ರಾಜರಾದವರೂ ಕೂಡ ಇದನ್ನು ಗಮನಿಸದೇ ಸ್ವತಃ ತಾವೇ ಭ್ರಷ್ಟಾಚಾರ ಮೊದಲಾದವುಗಳನ್ನು ಮಾಡುತ್ತಾ, ರಾಜ್ಯಪರಿಪಾಲನೆಯಲ್ಲಿ ತೊಡ -ಗಿದ್ದಾರೆ. ಇದೆಲ್ಲವೂ ಕೂಡ ಜಗತ್ತಿನ ನಾಶಕ್ಕೆ ಕಾರಣವೆಂದು ಈ ಶ್ಲೋಕಗಳು ನಿರೂಪಣೆ ಮಾಡುತ್ತಿವೆ.
ಚಾತುರ್ವರ್ಣ್ಯಾಪ್ರಮೋಹಾಯ ಸುನೀತಿನಯನಾಯ ಚ |
ದಂಡೋ ವಿಧಾತ್ರಾ ವಿಹಿತೋ ಧರ್ಮಾರ್ಥಾವಭಿರಕ್ಷಿತುಮ್ ॥35॥
ನಾಕುವರ್ಣದವರು ಸಂತೋಷದಿಂದ ಬದುಕುವುದಕ್ಕಾಗಿ ಪ್ರತಿಯೊಬ್ಬರೂ ನೀತಿವಂತರಾಗಿ ಬಾಳುವುದಕ್ಕಾಗಿ ಧರ್ಮ ಮತ್ತು ಅರ್ಥಗಳನ್ನು ಈ ಭೂಲೋಕ - ದಲ್ಲಿ ಸಂರಕ್ಷಣೆ ಮಾಡುವುದಕ್ಕಾಗಿ ಆ ಬ್ರಹ್ಮನೇ ದಂಡನೀತಿಯನ್ನು ವಿಧಾನ ಮಾಡಿರುತ್ತಾನೆ.
ಯದಿ ದಂಡಾನ್ನ ಬಿಭ್ಯೇಯುರ್ವಯಾಂಸಿ ಶ್ವಾಪದಾನಿ ಚ |
ಅದ್ಯುಃ ಪಶೂನ್ ಮನುಷ್ಯಾಂಶ್ಚ ಯಜ್ಞಾರ್ಥಾನಿ ಹವೀಂಷಿ ಚ ॥36॥
ಹಿಂಸೆ ಮಾಡುವ ಮೃಗಗಳು, ಪಕ್ಷಿಗಳು ದಂಡಕ್ಕೆ ಭಯಪಡದಿದ್ದರೆ ಆ ಮೃಗಗಳು ಹಾಗೂ ಪಕ್ಷಿಗಳು ಸಾಧುವಾದ ಪಶುಗಳನ್ನು, ಮನುಷ್ಯರನ್ನು ಹಾಗೂ ಯಜ್ಞ- ಕ್ಕೋಸ್ಕರ ಉಪಯೋಗಿಸಲು ಇಟ್ಟ ಹವಿಸ್ಸುಗಳನ್ನು ತಿಂದುಬಿಡುತ್ತಿದ್ದವು.
ನ ಬ್ರಹ್ಮಚಾರ್ಯಧೀಯೀತ ಕಲ್ಯಾಣೀ ಗೌರ್ನ ದುಹ್ಯತೇ |
ನ ಕನ್ಯೋದ್ವಹನಂ ಗಚ್ಛೇದ್ ಯದಿ ದಂಡೋ ನ ಪಾಲಯೇತ್॥37॥
ದಂಡನೀತಿಯನ್ನು ಈ ಲೋಕದಲ್ಲಿ ಅಳವಡಿಸಿ, ಲೋಕಮರ್ಯಾದೆಯನ್ನು ಸಂರಕ್ಷಣೆ ಮಾಡದಿದ್ದರೆ, ಬ್ರಹ್ಮಚಾರಿಯೂ ಕೂಡ ವೇದಾಧ್ಯಯನದಲ್ಲಿ ತೊಡಗು- ತ್ತಿರಲಿಲ್ಲ. ಕಲ್ಯಾಣಕರವಾದ ಹಸುವೂ ಕೂಡ ಹಾಲು ನೀಡುತ್ತಿರಲಿಲ್ಲ. ಕನ್ಯೆಯೂ ಕೂಡ ಮದುವೆಯಾಗುತ್ತಿರಲಿಲ್ಲ.
ಟಿಪ್ಪಣಿ - ಬ್ರಹ್ಮಚಾರಿಯಾದವನು ವೇದಾಧ್ಯಯನವನ್ನು ಮಾಡುವುದ- ರಿಂದಲೇ ಈ ಜಗತ್ತಿನಲ್ಲಿ ಜ್ಞಾನವು ಸ್ಥಾಪನೆಯಾಗುತ್ತದೆ. ಪ್ರತಿಯೊಬ್ಬ ತ್ರೈವರ್ಣಿಕರು ತಮ್ಮ ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನವನ್ನು ಮಾಡಲೇ ಬೇಕು. ವೇದದಲ್ಲಿ ಹೇಳಲ್ಪಟ್ಟ ತತ್ವಜ್ಞಾನವನ್ನು ಸಂಪಾದನೆ ಮಾಡಬೇಕು. ರಾಜದಂಡದ ಭಯವು ಇಲ್ಲದಿದ್ದರೆ ಬ್ರಹ್ಮಚಾರಿಯಾದವನು ವೇದಾಧ್ಯಯನವನ್ನೇ ಮಾಡುತ್ತಿರಲಿಲ್ಲ. ಹಸುಗಳು ಹಾಲನ್ನು ಕೊಡುವುದರಿಂದಲೇ ಪ್ರತಿಯೊಬ್ಬರೂ ಆರೋಗ್ಯವಂತರಾಗಿದ್ದಾರೆ. ಆದ್ದರಿಂದಲೇ ಹಸುಗಳನ್ನು ಮಾತೃಸ್ಥಾನದಲ್ಲಿ ಪೂಜೆ ಮಾಡಲಾಗುತ್ತದೆ. ಲೋಕಕ್ಕೆ ಕಲ್ಯಾಣವನ್ನು ಉಂಟುಮಾಡುವ ಕಲ್ಯಾಣಿ ಎಂಬು- ದಾಗಿಯೇ ಗೌರವಿಸಲಾಗುತ್ತದೆ. ದಂಡಭಯವಿಲ್ಲದಿದ್ದರೆ ಹಸುಗಳೂ ಕೂಡ ಹಾಲನ್ನು ಕೊಡುತ್ತಿರಲಿಲ್ಲ. ಕನ್ಯೆಯರು ಸರಿಯಾದ ಸಮಯದಲ್ಲಿ ವಿವಾಹ- ವಾಗುವುದರಿಂದಲೇ ಗಾರ್ಹಸ್ಥ್ಯಧರ್ಮವು ಶುದ್ಧವಾಗಿರುತ್ತದೆ. ದಂಡಭಯ- ವಿಲ್ಲದಿದ್ದರೆ ಕನ್ಯೆಯರು ವಿವಾಹವಾಗದೇ ಅನೇಕ ಪುರುಷರ ಸಂಪರ್ಕದಲ್ಲಿ ತೊಡಗಿ, ಗಾರ್ಹಸ್ಥ್ಯಧರ್ಮವನ್ನೇ ಹಾಳುಮಾಡುತ್ತಿದ್ದರು. ಹೀಗೆ ಪ್ರತಿಯೊಬ್ಬರ ವರ್ಣಾಶ್ರಮ ಧರ್ಮಪರಿಪಾಲನೆಯು ಉಳಿಸುವುದಕ್ಕಾಗಿ ದಂಡನೀತಿಯನ್ನು ಅಳವಡಿಸಬೇಕು. ಪರಲೋಕವನ್ನೇ ಒಪ್ಪದೇ ವರ್ಣಾಶ್ರಮಧರ್ಮಗಳೇ ಇರಬಾರ -ದೆಂಬ ಕಾನೂನು ಹೊರಡಿಸಿದ ಇಂದಿನ ಕಾಲದಲ್ಲಿ ಬದುಕುತ್ತಿರುವುದೇ ನಮ್ಮ ದೌರ್ಭಾಗ್ಯ ಎಂಬ ಭಾವನೆ ಮೂಡುತ್ತದೆ.
ವಿಶ್ವಗ್‌ಲೋಪಃ ಪ್ರವರ್ತೇತ ಭಿದ್ಯೇರನ್ ಸರ್ವಸೇತವಃ |

ಮಮತ್ವಂ ನ ಪ್ರಜಾನೀಯುರ್ಯದಿ ದಂಡೋ ನ ಪಾಲಯೇತ್ ॥38॥
ರಾಜದಂಡವು ಲೋಕಮರ್ಯಾದೆಯನ್ನು ಪಾಲನೆ ಮಾಡದೇ ಇದ್ದರೆ ಈ ಭೂಲೋಕದಲ್ಲಿ ಎಲ್ಲ ಧರ್ಮಕರ್ಮಗಳು ನಾಶವಾಗುತ್ತಿದ್ದವು. ಧಾರ್ಮಿಕವಾದ ಕಾರ್ಯಗಳೇ ಸಂಪೂರ್ಣವಾಗಿ ನಾಶವಾಗುತ್ತಿದ್ದವು. ಲೋಕಮರ್ಯಾದೆಯೇ ಇಲ್ಲದಂತಾಗುತ್ತಿತ್ತು. ಇದು ನನ್ನ ಕರ್ತವ್ಯ, ಇದು ನನ್ನ ಕರ್ತವ್ಯವಲ್ಲ ಎಂಬ ವಿವೇಚನೆಯೇ ಯಾರಿಗೂ ಇರುತ್ತಿರಲಿಲ್ಲ.
ನ ಸಂವತ್ಸರಸತ್ರಾಣಿ ತಿಷ್ಠೇಯುರಕುತೋಭಯಾಃ |
ವಿಧಿವದ್ ದಕ್ಷಿಣಾವಂತಿ ಯದಿ ದಂಡೋ ನ ಪಾಲಯೇತ್ ॥39॥
ದಂಡವು ಧರ್ಮಾರ್ಥವನ್ನು ಪರಿಪಾಲನೆ ಮಾಡದೇ ಇದ್ದಿದ್ದರೆ ಒಂದು ಸಂವತ್ಸರದ ಕಾಲ ಆಚರಿಸುವ ಸತ್ರಯಾಗಗಳನ್ನು ಆಚರಿಸಲು ಸಾಧ್ಯವೇ ಆಗು- ತ್ತಿರಲಿಲ್ಲ. ಅದರಲ್ಲಿ ಭೂರಿದಕ್ಷಿಣೆಯನ್ನೂ ಕೂಡ ನೀಡಲು ಸಾಧ್ಯವೇ ಆಗುತ್ತಿರ- ಲಿಲ್ಲ.
ಚರೇಯುರ್ನಾಶ್ರಮೇ ಧರ್ಮಂ ಯಥೋಕ್ತಂ ವಿಧಿಮಾಶ್ರಿತಾಃ |
ನ ವಿದ್ಯಾಂ ಪ್ರಾಪ್ನುಯಾತ್ ಕಶ್ಚಿದ್ ಯದಿ ದಂಡೋ ನ ಪಾಲಯೇತ್ ॥40॥
ರಾಜದಂಡವನ್ನು ಲೋಕದಲ್ಲಿ ಅನುಷ್ಠಾನ ಮಾಡದಿದ್ದರೆ, ಪ್ರಜೆಗಳೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಆಚರಣೆ ಮಾಡುತ್ತಿರಲಿಲ್ಲ. ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಯಾವುದೇ ವಿಧಿಗಳನ್ನು ಅನುಷ್ಠಾನಕ್ಕೆ ತರುತ್ತಿರಲಿಲ್ಲ. ಹೀಗೆ ವರ್ಣಾ- ಶ್ರಮಧರ್ಮಗಳೇ ನಾಶವಾದ ಮೇಲೆ ಯಾರೊಬ್ಬರೂ ಕೂಡ ವೇದಾಧ್ಯಯನ- ವನ್ನು ಮಾಡಿ, ತತ್ವಜ್ಞಾನವನ್ನು ಪಡೆಯುತ್ತಿರಲಿಲ್ಲ.
ಟಿಪ್ಪಣಿ - ತತ್ವಜ್ಞಾನದ ಸಂಪಾದನೆಗೆ ವರ್ಣಾಶ್ರಮಧರ್ಮದ ಪರಿಪಾಲನೆ ಅತ್ಯಂತ ಮುಖ್ಯ. ಯಾರು ವರ್ಣಾಶ್ರಮಧರ್ಮವನ್ನು ಪರಿಪಾಲನೆ ಮಾಡುವು- ದಿಲ್ಲವೋ ಅವರಿಗೆ ಶಿಕ್ಷೆಯನ್ನು ನೀಡಬೇಕು.
ನ ಚೋಷ್ಟ್ರಾ ನ ಬಲೀವರ್ದಾ ನಾಶ್ವಾಶ್ವತರಗರ್ದಭಾಃ |
ಯುಕ್ತಾ ವಹೇಯುರ್ಯಾನಾನಿ ಯದಿ ದಂಡೋ ನ ಪಾಲಯೇತ್ ॥41॥
ಒಂದು ವೇಳೆ ದಂಡವು ಲೋಕಮರ್ಯಾದೆಯನ್ನು ಪಾಲನೆ ಮಾಡದಿದ್ದರೆ ಒಂಟೆಗಳು, ಎತ್ತುಗಳು, ಕುದುರೆಗಳು, ಹೇಸರುಗತ್ತೆಗಳು, ಕತ್ತೆಗಳು ವಾಹವನ್ನು ಧರಿಸಿದ್ದರೂ ಕೂಡ ಎಳೆದುಕೊಂಡು ಹೋಗುತ್ತಿರಲಿಲ್ಲ.
ಟಿಪ್ಪಣಿ - ಮನುಷ್ಯರಷ್ಟೇ ಅಲ್ಲದೇ ಪ್ರಾಣಿಗಳೂ ಕೂಡ ದಂಡಪ್ರಯೋಗಕ್ಕೆ ಹೆದರುತ್ತವೆ. ಗಾಡಿಗೆ ಎತ್ತುಗಳನ್ನು ಕಟ್ಟಿದಾಗ ಚಾವಟಿ ಏಟಿಗೆ ಹೆದರಿಯೇ ಎಳೆದುಕೊಂಡು ಹೋಗುತ್ತವೆ. ಯಜಮಾನನು ದಂಡಪ್ರಯೋಗವನ್ನು ಮಾಡು- ವುದಿಲ್ಲವೆಂದು ಅವುಗಳಿಗೆ ತಿಳಿದರೆ ಒಂದು ಹೆಜ್ಜೆಯನ್ನೂ ಕೂಡ ಮುಂದೆ ಇಡುವುದಿಲ್ಲ.
ನ ಪ್ರೇಷ್ಯಾ ವಚನಂ ಕುರ್ಯುರ್ನ ಬಾಲೋ ಜಾತು ಕರ್ಹಿಚಿತ್ |
ನ ತಿಷ್ಠೇದ್ಯುವತಿ ಧರ್ಮೇ ಯದಿ ದಂಡೋ ನ ಪಾಲಯೇತ್ ॥42॥
ದಂಡವು ಲೋಕವನ್ನು ರಕ್ಷಣೆ ಮಾಡದೇ ಇದ್ದರೆ ಸೇವಕರು ಯಜಮಾನನ ಮಾತನ್ನು ಕೇಳುತ್ತಿರಲಿಲ್ಲ. ಮಕ್ಕಳು ತಾಯಿಯ ಮಾತುಗಳನ್ನು ಕೇಳುತ್ತಿರಲಿಲ್ಲ. ಯುವತಿಯಾದವಳು ತನ್ನ ಸತಿಯ ಧರ್ಮದಲ್ಲಿ ಸ್ಥಿರವಾಗಿ ನಿಲ್ಲುತ್ತಿರಲಿಲ್ಲ.
ದಂಡೇ ಸ್ಥಿತಾಃ ಪ್ರಜಾಃ ಸರ್ವಾ ಭಯಂ ದಂಡೇ ವಿದುರ್ಬುಧಾಃ |
ದಂಡೇ ಸ್ವರ್ಗೋ ಮನುಷ್ಯಾಣಾಂ ಲೋಕೋಽಯಂ ಸುಪ್ರತಿಷ್ಠಿತಃ ॥43॥
ಪ್ರಜೆಗಳೆಲ್ಲರೂ ದಂಡದಿಂದಲೇ ಸತ್ಯಮಾರ್ಗದಲ್ಲಿ ನಡೆಯುತ್ತಿದ್ದಾರೆ. ವಿದ್ವಾಂಸರೂ ಕೂಡ ಭಯವು ದಂಡದಲ್ಲಿಯೇ ಅಡಗಿದೆ ಎಂದು ತಿಳಿಸುತ್ತಾರೆ. ಮನುಷ್ಯನಿಗೆ ಸ್ವರ್ಗ ಹಾಗೂ ಭೂಲೋಕಗಳು ದಂಡದಿಂದಲೇ ಪ್ರಾಪ್ತವಾಗುತ್ತವೆ.
ನ ತತ್ರ ಕೂಟಂ ಪಾಪಂ ವಾ ವಂಚನಾ ವಾಪಿ ದೃಶ್ಯತೇ |
ಯತ್ರ ದಂಡಃ ಸುವಿಹಿತಶ್ಚರತ್ಯರಿವಿನಾಶನಃ ॥44॥
ನ್ಯಾಯರೀತಿಯಿಂದ ಪ್ರಯೋಗಿಸಲ್ಪಟ್ಟು ವಿರೋಧಿಗಳನ್ನು ನಿಗ್ರಹ ಮಾಡುವ ದಂಡವು ಯಾವ ದೇಶದಲ್ಲಿ ನೆಲೆಗೊಂಡಿದೆಯೋ, ಅಲ್ಲಿ ಕಪಟ, ಮೋಸ, ಪಾಪ- ಗಳು ಎಂದೂ ಸಹ ಬರುವುದಿಲ್ಲ.
ಟಿಪ್ಪಣಿ - ದಂಡಪ್ರಯೋಗವನ್ನು ಸುವ್ಯವಸ್ಥಿತವಾಗಿ ಅನುಷ್ಠಾನಕ್ಕೆ ತರಬೇಕು. ಇಲ್ಲದಿದ್ದರೆ ಅನಾಹುತವೇ ಆಗುತ್ತದೆ. ದಂಡಪ್ರಯೋಗವನ್ನು ಶಿಷ್ಟರ ಮೇಲೆ ಎಂದೂ ಮಾಡಬಾರದು. ಅಥವಾ ಸತ್ಯ, ಪ್ರಾಮಾಣಿಕತೆಗಳು ಇದ್ದಲ್ಲಿ ದಂಡ- ಪ್ರಯೋಗವನ್ನು ಮಾಡಬಾರದು. ಅದಕ್ಕಾಗಿಯೇ ಇಲ್ಲಿ `ಸುವಿಹಿತಃ' ಎಂಬುದಾಗಿ ಹೇಳಿದ್ದಾರೆ.
ಹವಿಃ ಶ್ವಾ ಪ್ರಲಿಹೇದ್ ದೃಷ್ಟ್ವಾ ದಂಡಶ್ಚೇನ್ನೋದ್ಯತೋ ಭವೇತ್ |
ಹರೇತ್ ಕಾಕಃ ಪುರೋಡಾಶಂ ಯದಿ ದಂಡೋ ನ ಪಾಲಯೇತ್ ॥45॥
ದಂಡಪ್ರಯೋಗವನ್ನು ಸುವ್ಯವಸ್ಥಿತವಾಗಿ ಮಾಡದಿದ್ದರೆ ನಾಯಿಯು ಹವಿಸ್ಸನ್ನು ತಿನ್ನಲು ಮುನ್ನುಗ್ಗುತ್ತದೆ. ದಂಡದ ಭಯವು ಇಲ್ಲದಿದ್ದರೆ ಕಾಗೆಯು ಪುರೋಡಾಶ- ವನ್ನು ಎತ್ತಿಕೊಂಡು ಹೋಗುತ್ತದೆ.
ಯದಿದಂ ಧರ್ಮತೋ ರಾಜ್ಯಂ ವಿಹಿತಂ ಯದ್ಯಧರ್ಮತಃ |
ಕಾರ್ಯಸ್ತತ್ರ ನ ಶೋಕೋ ವೈ ಭುಂಕ್ಷ್ವ ಭೋಗಾನ್ ಯಜಸ್ವ ಚ ॥46॥
ಯುಧಿಷ್ಠಿರನೇ! ಈ ರಾಜ್ಯವು ನಮಗೆ ಧರ್ಮದಿಂದ ಪ್ರಾಪ್ತವಾಯಿತೋ ಅಥವಾ ಅಧರ್ಮದಿಂದ ಪ್ರಾಪ್ತವಾಯಿತೋ ? ಎಂಬುದರ ಬಗ್ಗೆ ಈಗ ವಿಚಾರವು ಬೇಡ. ಅದಕ್ಕೋಸ್ಕರ ನೀನು ಚಿಂತೆಯನ್ನೂ ಕೂಡ ಮಾಡಬೇಡ. ಭೋಗಗಳನ್ನು ಅನುಭವಿಸು. ಯಾಗಗಳನ್ನು ಆಚರಿಸು.
ಸುಖೇನ ಧರ್ಮಂ ಶ್ರೀಮಂತಶ್ಚರಂತಿ ಶುಚಿವಾಸಸಃ |
ಸಂವಸಂತಃ ಪ್ರಿಯೈರ್ದಾರೈರ್ಭುಂಜಾನಾಶ್ಚಾನ್ನಮುತ್ತಮಮ್ ॥47॥
ಶ್ರೀಮಂತರು ಶುದ್ಧವಾದ ಬಟ್ಟೆಯನ್ನು ಧರಿಸುತ್ತಾರೆ. ತಮ್ಮ ಪ್ರಿಯರಾದ ಪತ್ನಿ- ಯರ ಜೊತೆ ಸೇರುತ್ತಾರೆ. ಮೃಷ್ಟಾನ್ನಗಳನ್ನು ಭುಂಜಿಸುತ್ತಾರೆ. ಸುಖವಾಗಿಯೇ ಧರ್ಮವನ್ನು ಆಚರಣೆ ಮಾಡುತ್ತಾರೆ.

ಅರ್ಥೇ ಸರ್ವೇ ಸಮಾರಂಭಾಃ ಸಮಾಯತ್ತಾ ನ ಸಂಶಯಃ |
ಸ ಚ ದಂಡೇ ಸಮಾಯತ್ತಃ ಪಶ್ಯ ದಂಡಸ್ಯ ಗೌರವಮ್ ॥48॥
ಎಲ್ಲಾ ವೈಭವಗಳು ಅರ್ಥದ ಅಧೀನವಾಗಿವೆ. ಈ ವಿಷಯದಲ್ಲಿ ಸಂಶಯವೇ ಇರುವುದಿಲ್ಲ. ಆ ಅರ್ಥವು ದಂಡದ ಅಧೀನವಾಗಿದೆ. ದಂಡದ ರಕ್ಷಣೆಯು ಇಲ್ಲ- ದಿದ್ದರೆ ಸಂಪತ್ತು ಉಳಿಯುವುದಿಲ್ಲ. ಆದ್ದರಿಂದ ದಂಡದ ಗೌರವವನ್ನು ಗಮನಿಸು.
ಟಿಪ್ಪಣಿ - ಶ್ರೀಮಂತರು ಹಣದಿಂದ ಸುಲಭವಾಗಿ ಧರ್ಮಾಚರಣೆಯನ್ನು ಮಾಡುವಂತೆ, ನೀನೂ ಸಹ ಅಪಾರವಾದ ಸಂಪತ್ತುಗಳನ್ನು ವಿನಿಯೋಗಿಸಿ, ಧರ್ಮಾಚರಣೆಯಲ್ಲಿ ರತನಾಗು. ಸಮಸ್ತ ಅರ್ಥವು ದಂಡದ ಅಧೀನವಾಗಿದೆ. ನಿರಂತರ ದಂಡದ ರಕ್ಷಣೆಯಲ್ಲಿಯೇ ಸಾಕಷ್ಟು ಧನವು ಉಳಿಯುತ್ತದೆ.
ಲೋಕಯಾತ್ರಾರ್ಥಮೇವೇಹ ಧರ್ಮಪ್ರವಚನಂ ಕೃತಮ್ |
ಅಹಿಂಸಾ ಸಾಧುಹಿಂಸೇತಿ ಶ್ರೇಯಾನ್ ಧರ್ಮಪರಿಗ್ರಹಃ ॥49॥
ಲೋಕದಲ್ಲಿ ಸುವ್ಯವಸ್ಥಿತವಾದ ನಡತೆಗೆ ವಿದ್ವಾಂಸರು ಧರ್ಮವನ್ನು ಪ್ರತಿಪಾದನೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಅಹಿಂಸೆಯೇ ಒಳ್ಳೆಯದು ಎಂಬುದನ್ನು ಪ್ರತಿ- ಪಾದನೆ ಮಾಡಿದ್ದಾರೆ. ಹಿಂಸೆ ಮಾಡುವುದು ಅಯುಕ್ತ ಎಂಬುದನ್ನು ಪ್ರತಿಪಾದನೆ ಮಾಡಿದ್ದಾರೆ. ಇಂಥ ಸಂದರ್ಭದಲ್ಲಿ ಯಾವುದು ಧರ್ಮ, ಯಾವುದು ಅಧರ್ಮ ಎಂದು ವಿಚಾರ ಮಾಡಿಯೇ ಕಾರ್ಯದಲ್ಲಿ ಪ್ರವೃತ್ತನಾಗಬೇಕು.
ಟಿಪ್ಪಣಿ - `ಅಹಿಂಸಾ ಸಾಧುಹಿಂಸೇತಿ ಶ್ರೇಯಾನ್ ಧರ್ಮಪರಿಗ್ರಹಃ' ಎಂಬ ಉತ್ತರಾರ್ಧದ ಅಭಿಪ್ರಾಯವನ್ನು ಹೀಗೆ ತಿಳಿಯತಕ್ಕದ್ದು - ಸರ್ವಥಾ ಹಿಂಸೆಯನ್ನೇ ಮಾಡಬಾರದೋ, ಅಥವಾ ದುಷ್ಟರಿಗೆ ಹಿಂಸೆಯನ್ನು ಮಾಡಬೇಕೋ ? ಎಂಬ ಪ್ರಶ್ನೆಯು ಪ್ರಾಪ್ತವಾದಾಗ ಯಾವುದು ಧರ್ಮವೋ, ಅದನ್ನೇ ಮಾಡಬೇಕು ಎಂದಭಿಪ್ರಾಯ. ಒಬ್ಬ ಸಾಧುವಾದ ಋಷಿಯನ್ನು ಕಳ್ಳಕಾಕರು ಹಿಂಸೆ ಮಾಡಲು ಆಗಮಿಸುತ್ತಾರೆ. ನಿಷ್ಕಾರುಣವಾಗಿ ಹಿಂಸೆ ಮಾಡಲು ಹೊರಟ, ಆ ಕಳ್ಳಕಾಕರಿಗೆ ಶಿಕ್ಷೆಯನ್ನು ನೀಡುವುದು ಸಾಧುವೋ? ಅಸಾಧುವೋ? ಎಂಬ ಪ್ರಶ್ನೆಯು ಬಂದರೆ, ವಿವೇಚನೆಯನ್ನು ಮಾಡಿ, ಕಳ್ಳಕಾಕರ ಹಿಂಸೆಯೇ ಸಾಧುವಾಗಿದೆ ಎಂದು ನಿರ್ಣಯ ಮಾಡಬೇಕು. ಇಲ್ಲದಿದ್ದರೆ ನಿಷ್ಕಾರುಣವಾಗಿ ಅವರು ಆ ಸಾಧುವಾದ ಮುನಿಗೆ ಹಿಂಸೆಯನ್ನು ನೀಡಿ, ಧರ್ಮಕ್ಕೆ ಅನ್ಯಾಯವನ್ನು ಮಾಡುತ್ತಾರೆ. ಆದ್ದರಿಂದ ಅಹಿಂಸಾವ್ರತವನ್ನು ಆಚರಿಸುವಾಗ ಸಮಯಾಸಮಯಗಳನ್ನು ನೋಡಿ, ಪ್ರವೃತ್ತಿ- ಯನ್ನು ಮಾಡಬೇಕು. ಹಸುವನ್ನು ತಿನ್ನಲು ಆಗಮಿಸಿದ ಹುಲಿಯನ್ನು ಕೊಲ್ಲುವುದು ಧರ್ಮವೋ? ಅಧರ್ಮವೋ? ಇತ್ಯಾದಿ ವಿಚಾರಗಳನ್ನು ಮಾಡಿ, ಪ್ರವೃತ್ತರಾಗ- ಬೇಕು.
ನಾತ್ಯಂತಗುಣವಾನ್ ಕಶ್ಚಿನ್ನ ಚಾಪ್ಯತ್ಯಂತನಿರ್ಗುಣಃ |
ಉಭಯಂ ಸರ್ವಕಾರ್ಯೇಷು ದೃಶ್ಯತೇ ಸಾಧ್ವಸಾಧು ಚ ॥50॥
ಜಗತ್ತಿನಲ್ಲಿ ಸಂಪೂರ್ಣವಾಗಿ ಕೇವಲ ಗುಣವುಳ್ಳ ಒಂದು ಪದಾರ್ಥವು ಇರುವುದಿಲ್ಲ. ಯಾವುದೇ ಗುಣವೇ ಇಲ್ಲದ ವಸ್ತುವೂ ಕೂಡ ಇರುವುದಿಲ್ಲ. ಪ್ರತಿಯೊಂದು ಕಾರ್ಯಗಳಲ್ಲಿಯೂ ಒಳ್ಳೆಯದು ಹಾಗೂ ಕೆಟ್ಟದ್ದು ಇದ್ದೇ ಇರುತ್ತವೆ.
ಟಿಪ್ಪಣಿ - ಇಂಥವನು ಕೆಟ್ಟವನು, ಇಂಥವನು ದುಷ್ಟನು ಎಂದು ನಿರ್ಣಯ ಮಾಡುವುದೂ ಕೂಡ ಕಠಿಣವಾದದ್ದೇ ಆಗಿದೆ. ಏಕೆಂದರೆ ಪ್ರತಿಯೊಬ್ಬರಲ್ಲಿಯೂ ಒಳ್ಳೆಯ ಗುಣಗಳು ಇರುತ್ತವೆ. ಕೆಟ್ಟಗುಣಗಳು ಇರುತ್ತವೆ. ಆದರೆ ಅವನ ಉದ್ದೇಶ- ವನ್ನರಿತು, ಅವನ ಕೆಟ್ಟ ಕಾಮನೆಗಳನ್ನರಿತು ದಂಡಪ್ರಯೋಗವನ್ನು ಮಾಡತಕ್ಕದ್ದು. ಒಬ್ಬ ಸಾಧುವಾದವನು ಮುಖ್ಯವಾದ ಧರ್ಮವನ್ನು ಆಚರಣೆ ಮಾಡಲು ಹೊರಟಾಗ, ಸಣ್ಣಪುಟ್ಟ ಅಧರ್ಮಗಳು ನಡೆದರೆ, ಅಂಥ ಸಂದರ್ಭದಲ್ಲಿ ದಂಡಪ್ರಯೋಗವನ್ನು ಮಾಡಬಾರದು. ಅದರಂತೆ ಒಬ್ಬ ದರೋಡೆಗಾರನು ದರೋಡೆಯನ್ನು ಮಾಡಿ, ಆ ಹಣದಿಂದ ದಾನ-ಧರ್ಮಾದಿಗಳನ್ನು ಮಾಡಿದರೆ ಅದನ್ನು ಧರ್ಮವೆಂದೂ ಕೂಡ ಭಾವಿಸಿ, ಅವನಿಗೆ ಶಿಕ್ಷೆಯನ್ನು ನೀಡದೇ ಇರಬಾರದು.
ಪಶೂನಾಂ ವೃಷಣಂ ಛಿತ್ತ್ವಾ ತತೋ ಭಿಂದಂತಿ ನಸ್ತ್ಸ ತಾನ್ |
ಕೃಷಂತಿ ಬಹವೋ ಭಾರಾನ್ ಬಧ್ನಂತಿ ದಮಯಂತಿ ಚ ॥51॥
ಲೋಕದ ಜನರು ಹೋರಿಯ ಬೀಜವನ್ನು ಮೊದಲು ಒಡೆಯುತ್ತಾರೆ. ಅನಂತರ ಮೂಗಿಗೆ ದಾರವನ್ನು ಹಾಕುತ್ತಾರೆ. ಅವುಗಳ ಮೇಲೆ ದೊಡ್ಡ ಭಾರವನ್ನು ಹೊರಿಸಿ ಕಟ್ಟಿಹಾಕುತ್ತಾರೆ, ಹೊಡೆಯುತ್ತಾರೆ, ಹೊಲ ಉಳುತ್ತಾರೆ.
ಟಿಪ್ಪಣಿ - ತತೋ ಭಿಂದಂತಿ ನಸ್ತ್ಸ ತಾನ್ ಇತ್ಯತ್ರ ನಸ್ತ್ಸ ನಾಸಾಪುಟೇಷು |
`ತತೋ ಭಿಂದಂತಿ ನಸ್ತ್ಸ ತಾನ್' ಎಂಬಲ್ಲಿ ನಸ್ತ್ಸ ಎಂದರೆ ನಾಸಾಪುಟವನ್ನು ಮೂಗುದಾರದಿಂದ ಬೀರುತ್ತಾರೆ ಎಂದರ್ಥ.
ಏವಂ ಪರ್ಯಾಕುಲೇ ಲೋಕೇ ವಿಪತೇ ಝರ್ಝರೀಕೃತೇ |
ತೈಸ್ತೈರ್ನ್ಯಾಯೈರ್ಮಹಾರಾಜ ಪುರಾಣಂ ಧರ್ಮಮಾಚರ ॥52॥
ಓ ಮಹಾರಾಜನೇ! ಹೀಗೆ ಸಮಸ್ತಲೋಕವು ಆಯಾ ವ್ಯವಹಾರಗಳಿಂದ ಕೂಡಿ, ಭಯದಿಂದ ಸ್ವಕಾರ್ಯದಲ್ಲಿ ಪ್ರವೃತ್ತಿಯನ್ನು ಮಾಡುತ್ತಿವೆ. ಇಲ್ಲದಿದ್ದರೆ ಯಾವುದೂ ಕೂಡ ಸರಿಯಾಗಿ ನಡೆಯುವುದೇ ಇಲ್ಲ. ಆದ್ದರಿಂದ ನೀನು ಈಗ ಹೊಸದಾದ್ದನ್ನು ಏನೂ ಮಾಡಬೇಕಾಗಿಲ್ಲ. ನಮ್ಮ ಪೂರ್ವಿಕರು ಹೇಳಿದ ಧರ್ಮವನ್ನಷ್ಟೇ ಆಚರಣೆ ಮಾಡು. ಧರ್ಮರಕ್ಷಣೆಯನ್ನು ಮಾಡು.
ಯಜ ದೇಹಿ ಪ್ರಜಾಂ ರಕ್ಷ ಧರ್ಮಂ ಸಮನುಪಾಲಯ |
ಅಮಿತ್ರಾನ್ ಜಹಿ ಕೌಂತೇಯ ಮಿತ್ರಾಣಿ ಪರಿಪಾಲಯ ॥50॥
ಯಜ್ಞ-ಯಾಗಾದಿಗಳನ್ನು ನಡೆಸು, ದಾನಗಳನ್ನು ಮಾಡು, ಪ್ರಜೆಗಳನ್ನು ಪರಿ- ಪಾಲನೆ ಮಾಡು, ಧರ್ಮಸ್ಥಾಪನೆಯನ್ನು ಮಾಡು, ಶತ್ರುಗಳನ್ನು ಜಯಿಸು, ಮಿತ್ರ- ರನ್ನು ಹೆಚ್ಚಿಸಿಕೋ.
ಮಾ ಚ ತೇ ನಿಘ್ನತಃ ಶತ್ರೂನ್ ಮನ್ಯುರ್ಭವತು ಭಾರತ |
ನ ತತ್ರ ಕಿಲ್ಬಿಷಂ ಕಿಂಚಿತ್ ಕರ್ತುರ್ಭವತಿ ಭಾರತ ॥51॥
ಶತ್ರುಗಳನ್ನು ಕೊಂದ ಕಾರಣಕ್ಕೆ ದುಃಖವನ್ನು ಅನುಭವಿಸಬೇಡ. ಶತ್ರುವಧದಿಂದ ರಾಜರಿಗೆ ಎಂದೂ ಕೂಡ ಲವಲೇಶವು ಪಾಪವು ಅಂಟುವುದಿಲ್ಲ.

ಆತತಾಯೀ ಹಿ ಯೋ ಹನ್ಯಾದಾತತಾಯಿನಮಾಗತಮ್ |
ನ ತೇನ ಭ್ರೂಣಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮೃಚ್ಛತಿ ॥52॥
ಶಸ್ತ್ರವನ್ನು ಮೇಲೆತ್ತಿಕೊಂಡು ತನ್ನನ್ನು ವಧೆ ಮಾಡಲು ಬರುವವನನ್ನು ಕೊಲ್ಲು- ವುದು ಎಂದೂ ಕೂಡ ಭ್ರೂಣಹತ್ಯೆ ಮಾಡಿದಂತೆ ಆಗುವುದಿಲ್ಲ. ಕೋಪವನ್ನು ನಿಗ್ರಹಿಸುವುದು ಲೋಕದ ನಿಯಮವಾಗಿದೆ.
ಟಿಪ್ಪಣಿ- ಶಸ್ತ್ರವನ್ನು ಹಿಡಿದು ಯಾರು ಕೊಲ್ಲಲು ಮುನ್ನುಗ್ಗುತ್ತಾನೋ, ಅವನನ್ನು ಶಸ್ತ್ರವನ್ನು ಹಿಡಿದವನೇ ಕೊಲ್ಲಬೇಕು. ಇದರಿಂದ ಭ್ರೂಣಹತ್ಯೆಯ ಪಾಪವು ಬರುವುದಿಲ್ಲ. ಏಕೆಂದರೆ ಇಂಥ ಸಂದರ್ಭದಲ್ಲಿ ಶತ್ರುವಿನಲ್ಲಿರುವ ಕೋಪವನ್ನು ನಮ್ಮಲ್ಲಿರುವ ಕೋಪವು ನಿಗ್ರಹ ಮಾಡುತ್ತದಷ್ಟೇ. ಇದನ್ನು ಅರ್ಥ- ಮಾಡಿಕೊಳ್ಳಬೇಕು.
ಟಿಪ್ಪಣಿ - ಮನ್ಯುಸ್ತಂ ಮನ್ಯುಮೃಚ್ಛತಿ ಇತ್ಯತ್ರ ಮನ್ಯುಃ ಏಕಸ್ಯ ಮನ್ಯುಃ ಮನ್ಯುಮ್ ಅಪರಸ್ಯ ತಂ ಮನ್ಯುಮೃಚ್ಛತಿ | ಏಕಸ್ಯ ಮನ್ಯುನಾ ಅಪರಸ್ಯ ಮನ್ಯುನಾಶೋ ಭವತೀತ್ಯರ್ಥಃ|
`ಮನ್ಯುಸ್ತಂ ಮನ್ಯುಮೃಚ್ಛತಿ' ಎಂಬುದರ ಅರ್ಥ ಹೀಗಿದೆ - ಒಬ್ಬನಲ್ಲಿರುವ ಕೋಪವು, ಮತ್ತೊಬ್ಬನಲ್ಲಿರುವ ಕೋಪವನ್ನು ನಿಗ್ರಹ ಮಾಡುತ್ತದೆ. ಒಬ್ಬನಲ್ಲಿರುವ ಕೋಪದಿಂದ ಮತ್ತೊಬ್ಬನ ಕೋಪವು ನಷ್ಟವಾಗುತ್ತದೆ.
ಅವಧ್ಯಃ ಸರ್ವಭೂತಾನಾಮಂತರಾತ್ಮಾ ನ ಸಂಶಯಃ |
ಅವಧ್ಯೇ ಚಾತ್ಮನಿ ಕಥಂ ವಧ್ಯೋ ಭವತಿ ಕೇನಚಿತ್ ॥53॥
ಸಕಲ ಪ್ರಾಣಿಗಳಲ್ಲಿ ಇರುವ ಅಂತರಾತ್ಮನು ಅವಧ್ಯನಾಗಿದ್ದಾನೆ. ಈ ವಿಷಯದಲ್ಲಿ ಸಂಶಯವೇ ಇರುವುದಿಲ್ಲ. ಆತ್ಮನು ಅವಧ್ಯನಾಗಿರುವುದರಿಂದಲೇ ಒಬ್ಬನು ಮತ್ತೊಬ್ಬನನ್ನು ಕೊಲ್ಲುತ್ತಾನೆಂಬುದು ಹೇಗೆ ತಾನೇ ಸಮಂಜಸವಾಗುತ್ತದೆ? ಆತ್ಮ- ನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ.
ಯಥಾ ಹಿ ಪುರುಷಃ ಶಾಲಾಂ ಪುನಃ ಸಂಪ್ರವಿಶೇನ್ನವಾಮ್ |
ಏವಂ ಜೀವಃ ಶರೀರಾಣಿ ತಾನಿ ತಾನಿ ಪ್ರಪದ್ಯತೇ ॥54॥
ಹೇಗೆ ಪುರುಷನು ಹೊಸ ಮನೆಗಳಿಗೆ ವಾಸ ಮಾಡಲು ತೆರಳುತ್ತಾನೋ, ಅದೇ ರೀತಿಯಲ್ಲಿ ನಮ್ಮ ದೇಹದ ಒಳಗಿರುವ ಜೀವನೂ ಕೂಡ ಹೊಸ ಶರೀರಗಳನ್ನು ಧರಿಸುತ್ತಾನೆ. ಇದರಿಂದ ಅವನು ಸತ್ತನು ಎಂದು ದುಃಖಿಸಬಾರದು.
ದೇಹಾನ್ ಪುರಾಣಾನುತ್ಸೃಜ್ಯ ನವಾನ್ ಸಂಪ್ರತಿಪದ್ಯತೇ |
ಏವಂ ಮೃತ್ಯುಮುಖಂ ಪ್ರಾಹುರ್ಯೇ ಜನಾಸ್ತತ್ತ್ವದರ್ಶಿನಃ ॥55॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚದಶೋಽಧ್ಯಾಯಃ ॥15॥
ಈ ಜೀವಾತ್ಮನು ಹಳೆಯ ಶರೀರವನ್ನು ಬಿಟ್ಟು, ಹೊಸ ಶರೀರವನ್ನು ಪಡೆ- ಯುತ್ತಾನೆ. ಇದನ್ನೇ ತತ್ವಜ್ಞಾನಿಗಳು ಮೃತ್ಯು ಎಂಬುದಾಗಿ ಕರೆಯುತ್ತಾರೆ.
ಟಿಪ್ಪಣಿ - ಹಳೆಯ ಜೀರ್ಣವಾದ ದೇಹಗಳನ್ನು ಪರಿತ್ಯಾಗ ಮಾಡುತ್ತಾನೆ. ಹಳೆಯ ಬಟ್ಟೆಯನ್ನು ಪರಿತ್ಯಾಗ ಮಾಡಿ, ಹೊಸ ಬಟ್ಟೆಯನ್ನು ಸ್ವೀಕರಿಸಿದಾಗ ಸುಖವನ್ನು ಅನುಭವಿಸುವಂತೆ ಹಳೆಯ ದೇಹವನ್ನು ಬಿಟ್ಟಾಗ ಸಂತೋಷವನ್ನೇ ನಾವು ಪಡಬೇಕು. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು - `ಯಥಾ ಶರೀರಾಣಿ ವಿಹಾಯ ಜೀರ್ಣಾನಿ ಅನ್ಯಾನಿ ಸಂಯಾತಿ ನವಾನಿ ದೇಹಿ' ಎಂಬುದಾಗಿ ಹೇಳಿರುತ್ತಾನೆ. ಅದನ್ನೇ ಅರ್ಜುನನು ಇಲ್ಲಿ ಯುಧಿಷ್ಠಿರನಿಗೆ ಉಪದೇಶಿಸುತ್ತಿದ್ದಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 15ನೆಯ ಅಧ್ಯಾಯವು ಮುಗಿಯಿತು.
16. ಹದಿನಾರನೆಯ ಅಧ್ಯಾಯ
ದುರ್ಯೋಧನಾದಿಗಳಿಂದ ಹಿಂದೆ ಅನುಭವಿಸಿದ ದುಃಖಗಳನ್ನು ನೆನಪು ಮಾಡಿ ಮೋಹವನ್ನು ತ್ಯಾಗಮಾಡುವಂತೆ ರಾಜ್ಯಭಾರ ಕಾರ್ಯದಲ್ಲಿ ತೊಡಗುವಂತೆ ಭೀಮಸೇನದೇವರ ಸಲಹೆ.
ವೈಶಂಪಾಯನಃ
ಅರ್ಜುನಸ್ಯ ವಚಃ ಶ್ರುತ್ವಾ ಭೀಮಸೇನೋಽತ್ಯಮರ್ಷಣಃ |
ಧೈರ್ಯಮಾಸ್ಥಾಯ ತೇಜಸ್ವೀ ಜ್ಯೇಷ್ಠಂ ಭ್ರಾತರಮಬ್ರವೀತ್ ॥1॥
ಅರ್ಜುನನ ಮಾತನ್ನು ಕೇಳಿದ ಮೇಲೆ ಭೀಮಸೇನನಿಗೆ ಧರ್ಮರಾಜನ ಪ್ರವೃತ್ತಿ ಸಹಿಸಲಾಗಲಿಲ್ಲ. ಧೈರ್ಯವನ್ನು ತಾಳಿದ ಭೀಮಸೇನನು, ತೇಜಸ್ವಿಯಾದ ಹಿರಿಯ ಸಹೋದರನಾದ ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು -
ರಾಜನ್ ವಿದಿತಧರ್ಮೋಽಸಿ ನ ತೇಽಸ್ತ್ಯವಿದಿತಂ ಭುವಿ |
ಉಪಶಿಕ್ಷಾಮ ತೇ ವೃತ್ತಂ ಸದೈವ ನ ಚ ಶಕ್ನುಮಃ ॥2॥
ರಾಜನೇ! ಲೋಕದಲ್ಲಿ ವಿದಿತವಾದ ಎಲ್ಲ ಧರ್ಮವನ್ನು ನೀನು ತಿಳಿದವನು. ನಿನಗೆ ತಿಳಿಯದ್ದು ಯಾವುದೂ ಇಲ್ಲ. ನಿನ್ನ ಸದ್‌ವಿಚಾರಗಳನ್ನು ನಡತೆಗಳನ್ನು ನಾವು ನೋಡಿ ತಿಳಿದಿದ್ದೇವೆ. ಆದರೆ ಅದರಂತೆ ನಡೆಯಲು ಸಾಧ್ಯವಾಗುತ್ತಿಲ್ಲ.
ನ ವಕ್ಷ್ಯಾಮಿ ನ ವಕ್ಷ್ಯಾಮೀತ್ಯೇವಂ ಮೇ ಮನಸಿ ಸ್ಥಿತಮ್ |
ಅತಿ ದುಃಖಾತ್ತು ವಕ್ಷ್ಯಾಮಿ ತನ್ನಿಬೋಧ ಜನಾಧಿಪ ॥3॥
ಪ್ರಜೆಗಳ ಅರಸನೇ! ಈ ಸಂದರ್ಭದಲ್ಲಿ ನಾನು ಏನನ್ನೂ ಸರ್ವಥಾ ಹೇಳ- ಬಾರದೆಂದೇ ನಾನು ಮನಸ್ಸಿನಿಂದ ಸ್ಥಿರವಾಗಿದ್ದೇನೆ. ಆದರೆ ಬಹಳವಾದ ದುಃಖದಿಂದ ನಾನು ಮಾತನಾಡಬೇಕಾಗಿದೆ. ಹೇಳುವೆನು ಕೇಳು.
ಭವತಸ್ತು ಪ್ರಮೋಹೇನ ಸರ್ವಂ ಸಂಶಯಿತಂ ಕೃತಮ್ |
ವಿಕ್ಲವತ್ವಂ ಚ ನಃ ಪ್ರಾಪ್ತಮಬಲತ್ವಂ ತಥೈವ ಚ ॥4॥
ಭರತರ್ಷಭನೇ! ನಿನಗೆ ಇರುವ ಬುದ್ಧಿಮೋಹದಿಂದ ಎಲ್ಲವನ್ನು ಸಂದೇಹ - ದಿಂದಲೇ ಕಾಣಬೇಕಾಗಿದೆ. ನಮಗೆ ಹೇಡಿತನವೂ ಮತ್ತು ಅಶಕ್ತತೆಯೂ ನಿನ್ನಿಂದಲೇ ಉಂಟಾಗುತ್ತಿದೆ.

ಕಥಂ ಹಿ ರಾಜಾ ಲೋಕಸ್ಯ ಸರ್ವಶಾಸ್ತ್ರವಿಶಾರದಃ |
ಮೋಹಮಾಪದ್ಯಸೇ ದೈನ್ಯಾದ್ ಯಥಾ ಕಾಪುರುಷಸ್ತಥಾ ॥5॥
ಪುರುಷೋತ್ತಮನೇ! ಸಕಲಶಾಸ್ತ್ರಗಳನ್ನೆಲ್ಲಾ ತಿಳಿದು ಲೋಕದ ಪ್ರಭುವಾಗಿರುವ ನೀನು ಯಾವ ಮೋಹಕ್ಕೆ ಸಿಲುಕಿ ಇಂಥ ದೈನ್ಯದ ಅವಸ್ಥೆಯನ್ನು ಹೊಂದಿರುವಿ?
ಅಗತಿಶ್ಚ ಗತಿಶ್ಚೈವ ಲೋಕಸ್ಯ ವಿದಿತಾ ತವ |
ಆಯತ್ಯಾಂ ಚ ತದಾತ್ವೇ ಚ ನ ತೇಽಸ್ತ್ಯವಿದಿತಂ ಪ್ರಭೋ ॥6॥
ಅರಸನೇ! ಜಗತ್ತಿನ ಆಗುಹೋಗುಗಳನ್ನು ಚೆನ್ನಾಗಿ ತಿಳಿದವನು ನೀನು. ಈಗ ನಡೆಯುತ್ತಿರುವ ಮುಂದೆ ನಡೆಯುವ ಎಲ್ಲ ವಿಷಯಗಳನ್ನು ಎಲ್ಲವನ್ನು ತಿಳಿದವನು ನೀನು.
ಟಿಪ್ಪಣಿ - ಆಯತ್ಯಾಂ ಚ ತದಾತ್ವ ಇತ್ಯತ್ರ ತದಾತ್ವೇ ತತ್ಕಾಲೇ, ಆಯತ್ಯಾಂ ಉತ್ತರಕಾಲೇ ಚ ಯತ್ ಕಾರ್ಯಂ ತತ್ ತೇ ಅವಿದಿತಂ ನಾಸ್ತಿ | `ತತ್ಕಾಲಸ್ತು ತದಾ ತ್ವಂ ಸ್ಯಾದುತ್ತರಃ ಕಾಲ ಆಯತಿಃ' ಇತ್ಯಮರಃ | ಮುಂದೆ ಆಗುವ ಕಾರ್ಯಗಳು ನಿನಗೆ ತಿಳಿಯದೇ ಇರುವುದು ಯಾವುದೂ ಇಲ್ಲ.
ಏವಂ ಗತೇ ಮಹಾರಾಜ ರಾಜ್ಯಂ ಪ್ರತಿ ಜನಾಧಿಪ |
ಹೇತುಮತ್ರ ಪ್ರವಕ್ಷ್ಯಾಮಿ ತದಿಹೈಕಮನಾಃ ಶೃಣು ॥7॥
ಪ್ರಜೆಗಳ ಪ್ರಭುವೇ! ಮಹಾರಾಜನೇ! ನೀನು ರಾಜ್ಯವನ್ನು ಯಾವ ಕಾರಣದಿಂದ ನಡೆಸಬೇಕು ಎಂಬುದಕ್ಕೆ ಒಂದೆರಡು ಕಾರಣಗಳನ್ನು ಹೇಳುವೆನು. ಒಂದೇ ಮನಸ್ಸಿ- ನಿಂದ ಕೇಳು.
ದ್ವಿವಿಧೋ ಜಾಯತೇ ವ್ಯಾಧಿಃ ಶಾರಿರೋ ಮಾನಸಸ್ತಥಾ |
ಪರಸ್ಪರಂ ತಯೋರ್ಜನ್ಮ ನಿರ್ದ್ವಂದ್ವಂ ನೋಪಲಭ್ಯತೇ ॥8॥
ಜೀವನಿಗೆ ಎರಡು ರೋಗಗಳು ಅಂಟಿಕೊಂಡು ಹುಟ್ಟುತ್ತವೆ. ಒಂದು ಶಾರೀರಿಕ- ರೋಗ ಮತ್ತೊಂದು ಮಾನಸಿಕ ರೋಗ. ಇವೆರಡು ಜನ್ಮಜನ್ಮಗಳಲ್ಲಿಯೂ ಪರಸ್ಪರ ಅಂಟಿಕೊಂಡೇ ಬರುತ್ತವೆಂದು ಜ್ಞಾನಿಗಳು ಹೇಳುತ್ತಾರೆ. ಒಂದರಿಂದ ಮತ್ತೊಂದು ಹುಟ್ಟುತ್ತದೆ.
ಶಾರೀರಾಜ್ಜಾಯತೇ ವ್ಯಾಧಿರ್ಮಾನಸೋ ನಾತ್ರ ಸಂಶಯಃ |
ಮಾನಸಾಜ್ಜಾಯತೇ ವ್ಯಾಧಿ ಶಾರೀರ ಇತಿ ನಿಶ್ಚಯಃ ॥9॥
ಶರೀರದಿಂದ ಹುಟ್ಟಿದ ರೋಗವು ವ್ಯಾಧಿ ಎನಿಸಿದ ಮನಸ್ಸಿನ ರೋಗವಾಗುವಲ್ಲಿ ಸಂದೇಹವಿಲ್ಲ. ಮನಸ್ಸಿನಿಂದ ಹುಟ್ಟಿದ ರೋಗವು ಶರೀರದ ಮೇಲೆ ಪರಿಣಾಮ ಬೀರದೆ ಇರುವುದಿಲ್ಲ. ಇದು ನಿಶ್ಚಯವು.
ಶಾರೀರ ಮಾನಸೇ ದುಃಖೇ ಯೋಽತೀತೇ ಅನುಶೋಚತಿ |
ದುಃಖೇನ ಲಭತೇ ದುಃಖಂ ದ್ವಾವನರ್ಥೌ ಪ್ರಪದ್ಯತೇ ॥10॥
ಹಿಂದೆ ಕಳೆದು ಹೋದ ಶಾರೀರಿಕವಾದ ಮತ್ತು  ಮಾನಸಿಕವಾದ ದುಃಖಗಳನ್ನು ಸ್ಮರಿಸಿಕೊಂಡು ಯಾರು ಶೋಕಪಡುತ್ತಾರೋ ಅವರು ದುಃಖದಿಂದ ದುಃಖವನ್ನೇ ಅನುಭವಿಸುತ್ತಾರೆ. ಈ ಎರಡು ವಿಧವಾದ ಅನರ್ಥವನ್ನೇ ಹೊಂದುತ್ತಾರೆ.
ಶೀತೋಷ್ಣೇ ಚೈವ ವಾಯುಶ್ಚ ತ್ರಯಃ ಶಾರೀರಜಾ ಗುಣಾಃ |
ತೇಷಾಂ ಗುಣಾನಾಂ ಸಾಮ್ಯಂ ಚ ತದಾಹುಃ ಸ್ವಸ್ಥಲಕ್ಷಣಮ್ ॥11॥
ನೀರು (ಶೀತ) ಬೆಂಕಿ (ಪಿತ್ತ) ಗಾಳಿ (ವಾತ) ಇವುಗಳು ಶರೀರದ ಗುಣಗಳು. ಈ ಗುಣಗಳು ಸಮಾನವಾಗಿದ್ದಾಗ ದೇಹವು ಆರೋಗ್ಯವಾಗಿರುತ್ತದೆ.
ತೇಷಾಮನ್ಯತಮೋದ್ರೇಕೇ ವಿಧಾನಮುಪದಿಶ್ಯತೇ |
ಉಷ್ಣೇನ ಬಾಧ್ಯತೇ ಶೀತಂ ಶೀತೇನೋಷ್ಣಂ ಪ್ರಬಾಧ್ಯತೇ ॥12॥
ಈ ಮೂರರಲ್ಲಿ ಯಾವುದೇ ಒಂದು ಉದ್ರೇಕವಾದರೂ ಚಿಕಿತ್ಸೆಯು ಆವಶ್ಯಕ. ಅವುಗಳಲ್ಲಿಯೇ ಒಂದಕ್ಕೊಂದು ನಿವಾರಕ. ಉಷ್ಣದಿಂದ, ಶೀತವೂ ಶೀತದಿಂದ ಉಷ್ಣವೂ, ಅವೆರಡರಿಂದ ವಾತವೂ ಪರಿಹಾರವಾಗುತ್ತದೆ.
ಸತ್ತ್ವಂ ರಜಸ್ತಮಶ್ಚೈವ ಮಾನಸಾಃ ಸ್ಯುಸ್ತ್ರಯೋ ಗುಣಾಃ |
ಹರ್ಷೇಣ ಬಾಧ್ಯತೇ ಲೋಕೋ ಹರ್ಷಃ ಲೋಕೇನ ಬಾಧ್ಯತೇ ॥13॥
ಹಾಗೆಯೇ ಸತ್ವ, ರಜಸ್ಸು, ತಮಸ್ಸು ಈ ಮೂರು ಮಾನಸಿಕ ಗುಣಗಳು. ಸಂತೋಷದಿಂದ ದುಃಖವೂ, ದುಃಖದಿಂದ ಸಂತೋಷವೂ ಜಗತ್ತಿನಲ್ಲಿ ಬಂಧಿತ- ವಾಗಿದೆ.
ವಿವರಣೆ - ಸತ್ವ, ರಜಸ್ಸು, ತಮಸ್ಸು ಎಂಬ ಈ ಮೂರುಗುಣಗಳು ಮಾನಸಿಕ ಗುಣಗಳು. ಈ ಮೂರು ಗುಣಗಳೂ ಸಮಾನವಾಗಿರುವುದೇ ಮನೋವ್ಯಾಧಿ- ಯಿಲ್ಲದುದಕ್ಕೆ ಲಕ್ಷಣವೆಂದು ಹೇಳುವರು. ಈ ಮೂರರಲ್ಲಿ ಒಂದು ಹೆಚ್ಚಾದರೂ ಅದಕ್ಕೆ ಪರಿಹಾರವು ವಿಧಿಸಲ್ಪಟ್ಟಿದೆ. ಸಂತೋಷದಿಂದ ದುಃಖವೂ ದುಃಖದಿಂದ ಸಂತೋಷವೂ ಅವೆರಡರ ಮೋಹವು ಕ್ರಮವಾಗಿ ಕಳೆಯುವುದೆಂದು ವಿಧಿಯಿದೆ.
ಕಶ್ಚಿತ್ ಸುಖೇ ವರ್ತಮಾನೋ ದುಃಖಸ್ಯ ಸ್ಮರ್ತುಮಿಚ್ಛತಿ |
ಕಶ್ಚಿತ್ ದುಃಖೇ ವರ್ತಮಾನಃ ಸುಖಸ್ಯ ಸ್ಮರ್ತುಮಿಚ್ಛತಿ ॥14॥
ಸುಖದಲ್ಲಿರುವ ಕೆಲವರು ಕಳೆದ ದುಃಖದ ಕ್ಷಣಗಳನ್ನು ಮನಸ್ಸಿಗೆ ತಂದು- ಕೊಳ್ಳುವರು. ದುಃಖದಲ್ಲಿರುವ ಕೆಲವರು ಹಿಂದಿನ ಸುಖವನ್ನು ಮನಸ್ಸಿಗೆ ತಂದು- ಕೊಳ್ಳುವರು.
ಸ ತ್ವಂ ನ ದುಃಖೀ ದುಃಖಸ್ಯ ನ ಸುಖೀ ಚ  ಸುಖಸ್ಯ ಚ |
ನ ದುಃಖೀ ಸುಖಜಾತಸ್ಯ ನ ಸುಖೀ ದುಃಖಜಸ್ಯವಾ ॥15॥
ನೀನಾದರೂ ದುಃಖವುಳ್ಳವನೂ ಅಲ್ಲ. ದುಃಖವಿಲ್ಲದವನೂ ಅಲ್ಲ. ನೀನು ದುಃಖವನ್ನು ನೆನೆಯ ಬೇಕಾದ ಸ್ಥಿತಿಯಲ್ಲಾಗಲಿ

ಸುಖವನ್ನು ನೆನೆಯ ಬೇಕಾದ ಸ್ಥಿತಿಯಲ್ಲಾಗಲಿ ಇರುವವನಲ್ಲ.
ಸ್ಮರ್ತುಮರ್ಹಸಿ ಕೌರವ್ಯ ದಿಷ್ಟಂ ತು ಬಲವತ್ತರಮ್ |
ಅಥವಾ ತೇ ಸ್ವಭಾವೋಽಯಂ ಯೇನ ಪಾರ್ಥಿವ ಕ್ಲಿಷ್ಯಸೇ ॥16॥
ದೃಷ್ಟ್ವಾ ಸಭಾಗತಾಂ ಕೃಷ್ಣಾಮೇಕವಸತ್ರಂ ರಜಸ್ವಲಾಮ್ |
ಮಿಷತಾಂ ಪಾಂಡುಪುತ್ರಾಣಾಂ ನ ತತ್ ಸ್ಮರ್ತುಮಿಹಾರ್ಹಸಿ ॥17॥
ಕುರುಕುಲನಂದನನೇ! ಹಿಂದಿನ ಘಟನೆಗಳನ್ನೆಲ್ಲಾ ಗಮನಿಸು. ಮುಖ್ಯವಾಗಿ ದೈವವು ಬಲವತ್ತರವಾದುದು. ಹಾಗಲ್ಲದಿದ್ದರೆ ಇಂಥ ಪರಿಸ್ಥಿತಿಯಲ್ಲಿಯೂ ಶಾಂತಿ- ಯಿಂದಿರುವುದು ನಿನ್ನ ಸ್ವಭಾವವೇ ಆಗಿರಬಹುದು. ನೋಡು, ಸಭಾಮಧ್ಯದಲ್ಲಿ ಏಕವಸ್ತ್ರಧಾರಿಣಿಯಾದ ರಜಸ್ವಲೆಯಾದ ದ್ರೌಪದಿಯನ್ನು ಎಳೆದು ತಂದದ್ದು ನೆನಪಿ- ಲ್ಲವೆ? ಪಾಂಡುಪುತ್ರರಾದ ನಮ್ಮೆದುರೇ ನಡೆದ ಘಟನೆಯು ಮರೆತು ಹೋಯಿತೇ?
ಟಿಪ್ಪಣಿ - ನ ತತ್ ಸ್ಮರ್ತುಮಿಹಾರ್ಹಸಿ ಇತ್ಯತ್ರ ಕಥಮ್ ಇತಿ ಪದಮಿಹಾಪ್ಯಾವರ್ತ್ಯ ಕಥಂ ಸ್ಮರ್ತುಂ ನಾರ್ಹಸೀತಿ ಯೋಜನಾ ಕಾರ್ಯಾ| `ನ ತತ ಸ್ಮತುಮಿಹಾರ್ಹಸಿ' ಎಂಬಲ್ಲಿ ಕಥಮ್ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ಮರಣೆ ಮಾಡಿ- ಕೊಳ್ಳಲು ಏಕೆ ಸಾಧ್ಯವಾಗದು ಎಂಬುದು ಅದರರ್ಥ.
ಪ್ರವ್ರಾಜನಂ ಚ ನಗರಾದಜಿನೈಶ್ಚ ವಿವಾಸನಮ್ |
ಮಹಾರಣ್ಯನಿವಾಸಶ್ಚ ನ ತಸ್ಯ ಸ್ಮರ್ತುಮರ್ಹಸಿ ॥18॥
ಪಟ್ಟಣವನ್ನು ಬಿಟ್ಟು ಹೊರಹಾಕಲ್ಪಟ್ಟ ನಾವು ಕೃಷ್ಣಾಜಿನವನ್ನು ತೊಟ್ಟು ಘೋರ ಅರಣ್ಯದಲ್ಲಿ ಅಲೆದಾಡಿದೆವು. ಅದೆಲ್ಲವೂ ನಿನ್ನ ನೆನಪಿಗೆ ಬರುತ್ತಿಲ್ಲವೇ?
ಜಟಾಸುರಾತ್ ಪರಿಕ್ಲೇಶಂ ಚಿತ್ರಸೇನೇನ ಚಾಹವಮ್ |
ಸೌಂಧವಾಚ್ಚ ಪರಿಕ್ಲೇಶಂ ಕಥಂ ವಿಸ್ಮೃತವಾನಸಿ ॥19॥
ಪುನರಜ್ಞಾತಚರ್ಯಾಯಾಂ ಕೀಚಕೇನ ಪದಾ ವಧಮ್ |
ದ್ರೌಪದ್ಯಾ ರಾಜಪುತ್ರ್ಯಾಶ್ಚ ಕಥಂ ವಿಸ್ಮೃತವಾನಸಿ ॥20॥
ಜಟಾಸುರನು ನಮಗೆ ಉಪದ್ರವ ನೀಡಿದ, ಚಿತ್ರಸೇನನು ಕಾದಾಡಿದ. ಸೈಂಧವನಿಂದ ಅನೇಕ ಕ್ಲೇಶಗಳನ್ನು ಅನುಭವಿಸಿದೆವು. ಎಲ್ಲ ಘಟನೆಗಳು ನಿನ್ನ ಸ್ಮೃತಿಗೆ ಬರುತ್ತಿಲ್ಲವೇಕೆ? ಅಜ್ಞಾತವಾಸ ಕಾಲದಲ್ಲಿ ರಾಜಕುಮಾರಿಯಾದ ದ್ರೌಪದೀದೇವಿ- ಯನ್ನು ಕೀಚಕನು ಕಾಲಿನಿಂದ ಒದ್ದದ್ದು ಇವೆಲ್ಲವನ್ನು ಹೇಗೆ ನೀನು ಮರೆತು ಬಿಟ್ಟೆ ?
ಯಚ್ಚ ತೇ ದ್ರೋಣಭೀಷ್ಮಾಭ್ಯಾಂ ಯುದ್ಧಮಾಸೀದರಿಂದಮ |
ಮನಸೈಕೇನ ಯೋದ್ಧವ್ಯಮಿದಂ ಯುದ್ಧಮುಪಸ್ಥಿತಮ್ ॥21॥
ಯಾವ ರೀತಿಯಾಗಿ ಹಿಂದೆ ನೀನು ದ್ರೋಣ ಭೀಷ್ಮಾದಿಗಳೊಡನೆ ಶತ್ರುವಿನಂತೆ ಯುದ್ಧಭೂಮಿಯಲ್ಲಿ ಕಾದಾಡಿದೆಯೋ, ಹಾಗೆಯೇ ಇಂದು ನೀನು ನಿನ್ನ ಮನಸ್ಸೆಂಬ ಶತ್ರುವಿನೊಡನೆ ಘೋರವಾದ ಯುದ್ಧವನ್ನು ಮಾಡುವ ಕಾಲವು ಬಂದೊದಗಿದೆ.
ಟಿಪ್ಪಣಿ - ಮನಸೈಕೇನ ಯೋದ್ಧವ್ಯಮ್ ಇತ್ಯತ್ರ ಏಕೇನ ತವ ಮನಸಾ ಇದಾನೀಂ ಯೋದ್ಧವ್ಯಮ್ | ನಿನ್ನ ಮನಸ್ಸಿನ ಜೊತೆ ನೀನು ಯುದ್ಧ ಮಾಡಬೇಕು.
ಯತ್ರ ನಾಸ್ತಿ ಶರೈಃ ಕಾರ್ಯಂ ನ ಮಿತ್ರೈರ್ನ ಚ ಬಂಧುಭಿಃ |
ಆತ್ಮನೈಕೇನ ಯೋದ್ಧವ್ಯಂ ತತ್ತೇ ಯುದ್ಧಮುಪಸ್ಥಿತಮ್ ॥22॥
ಈ ಯುದ್ಧಕ್ಕೆ ಬಾಣಗಳು ಬೇಕಾಗಿಲ್ಲ. ಯಾವ ಮಿತ್ರರೂ ಬಂಧುಗಳೂ ಬೇಕಾಗಿಲ್ಲ. ನೀನು ನಿನ್ನ ಮನಸ್ಸಿನ ಜೊತೆ ಹೋರಾಡಬೇಕಾಗಿದೆ.
ತಸ್ಮಿನ್ನನಿರ್ಜಿತೇ ಯುದ್ಧೇ ಪ್ರಾಣಾನ್ ಯದಿ ಹ ಮೋಕ್ಷ್ಯಸೇ |
ಅನ್ಯಂ ದೇಹಂ ಸಮಾಸ್ಥಾಯ ತತಸ್ತೈರಪಿ ಯೋತ್ಸ್ಯಸೇ ॥23॥
ಈ ಮಾನಸಿಕ ಯುದ್ಧದಲ್ಲಿ ನೀನು ನಿನ್ನ ಮನಸ್ಸನ್ನು ಗೆಲ್ಲಲೇಬೇಕು. ಇಲ್ಲದಿದ್ದರೆ ಮತ್ತೊಂದು ದೇಹವನ್ನು ಪಡೆದ ಮೇಲೂ ಆ ಮನಸ್ಸು ಮತ್ತೆ ನಿನ್ನೊಡನೆ ಯುದ್ಧ ಮಾಡದೆ ಬಿಡದು.
ತಸ್ಮಾದದ್ಯೈವ ಗಂತವ್ಯಂ ಯುದ್ಧಸ್ಯ ಭರತರ್ಷಭ |
ಪರಮವ್ಯಕ್ತಧರ್ಮಸ್ಯ ವ್ಯಕ್ತಂ ತ್ಯಕತ್ವ ಸ್ವಕರ್ಮಭಿಃ |
ತಸ್ಮಿನ್ನನಿರ್ಜಿತೇ ಯುದ್ಧೇ ಕಾಮವಸಾಂ ಗಮಿಷ್ಯಸಿ |
ಏತಜ್ಜಿತ್ವಾ ಮಹಾರಾಜ ಕೃತಕೃತ್ಯೋ ಭವಿಷ್ಯಸಿ ॥24॥
ಭರತರ್ಷಭನೇ! ಆದ್ದರಿಂದ ನೀನು ಯುದ್ಧವನ್ನು ಮಾಡಿಯೇ ತೀರಬೇಕು. ಮಹಾರಾಜನೇ! ಈ ಮಾನಸಯುದ್ಧದಲ್ಲಿ ನೀನು ಗೆದ್ದರೆ ಕೃತ್ಯಕೃತ್ಯನಾಗುವಿ.
ಏತಾಂ ಬುದ್ಧಿಂ ವಿನಿಶ್ಚಿತ್ಯ ಭೂತಾನಾಮಾಗತಿಂ ಗತಿಮ್ |
ಪಿತೃಪೈತಾಮಹೇ ವೃತ್ತೇ ಶಾಧಿ ರಾಜ್ಯಂ ಯಥೋಚಿತವತ್ ॥25॥
ಈ ದೃಢಭಾವವನ್ನು ಮನಸ್ಸಿನಲ್ಲಿ ನೆಲೆಗೊಳಿಸಿ ಪ್ರಾಣಿಗಳ ಸುಗತಿ ದುರ್ಗತಿ- ಗಳನ್ನು ಚಿಂತಿಸು. ನಿನ್ನ ತಂದೆ ತಾತಂದಿರು ನಡೆದ ಹಾದಿಯನ್ನೇ ಹಿಡಿದು ಯಥಾಶಕ್ತಿ ರಾಜ್ಯವನ್ನು ರಕ್ಷಿಸು.
ದಿಷ್ಟ್ಯಾ ದುರ್ಯೋಧನಃ ಪಾಪೋ ನಿಹತಃ ಸಾನುಗೋ ಯುಧಿ |
ದ್ರೌಪದ್ಯಾಃ ಕೇಶಪಾಶಸ್ಯ ದಿಷ್ಟ್ಯಾ ತ್ವಂ ಪದವೀಂ ಗತಃ ॥26॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಭೀಮವಾಕ್ಯೇ

ಷೋಡಶೋऽಧ್ಯಾಯಃ ॥16॥
ನಿನ್ನ ಅದೃಷ್ಟದಿಂದ ಪಾಪಿಯಾದ ದುರ್ಯೋಧನನು ಸಮಸ್ತ ಪರಿವಾರ- ದೊಂದಿಗೆ ಯುದ್ಧದಲ್ಲಿ ಹತನಾದನು. ದ್ರೌಪದಿಯ ತಲೆ ಕೂದಲಿನ ಭಾಗ್ಯ ವಿಶೇಷವೇ ಅವನನ್ನು ಸರ್ವನಾಶ ಮಾಡಿತು. ನಿನ್ನ ಅದೃಷ್ಟದಿಂದ ಬಂದ ಈ ರಾಜ್ಯ- ಪದವಿಯನ್ನು ನೀನು ಹೊಂದು.
ಟಿಪ್ಪಣಿ - ಪರಮವ್ಯಕ್ತಧರ್ಮಸ್ಯ ಇತ್ಯತ್ರ ಅವ್ಯಕ್ತಧರ್ಮಸ್ಯ ಅತಿಸೂಕ್ಷ್ಮಸ್ಯ ಮನೋವಿವೇಕಸ್ಯ, ತ್ಯಕ್ತ್ವಾ ಅಜ್ಞಜನಸದೃಶಂ ಭಾವಂ ತ್ಯಕ್ತ್ವಾ ತಸ್ಮಿನ್ ಮನಸಿ ಅರ್ಜಿತೇ ಸತಿ ಕಾಮವಸ್ಥಾಂ ಗಮಿಷ್ಯಸೀತ್ಯರ್ಥಃ |
ದ್ರೌಪದ್ಯಾಃ ಕೇಶಪಕ್ಷಸ್ಯ ಇತ್ಯತ್ರ ದ್ರೌಪದ್ಯಾಃ ಕೇಶಪಕ್ಷಸ್ಯ ಪದವೀಂ ದುರ್ಯೋ- ಧನಾದಯೋ ದಿಷ್ಟ್ಯಾ ಗತಾಃ | ಯಥಾ ದ್ರೌಪದ್ಯಾಃ ಕೇಶಪಕ್ಷಸ್ಪರ್ಶಾಕರ್ಷಣಾದಿನಾ ತೈರ್ಘಾತಿತಮ್, ತಥಾ ಮಯಾಪಿ ಕೇಶಾದೌ ಪಾದಸ್ಪರ್ಶೇನ ಇತಸ್ತತ ಆಕರ್ಷಣೇನ ನ ಘಾತಿತಾ ಇತಿ ಭಾವಃ | ದ್ರೌಪದೀದೇವಿಯ ಕೇಶಾಕರ್ಷಣೆ ಮಾಡುವ ಮೂಲಕ ಹೇಗೆ ದುರ್ಯೋಧನಾದಿಗಳು ತೊಂದರೆ ಮಾಡಿದರೋ ಅದರಂತೆ ಅದೇ ದುರ್ಯೋಧನಾದಿ -ಗಳು ಪಾದಸ್ಪರ್ಶದಿಂದ ಸಂಹೃತರಾದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಹದಿನಾರನೆಯ ಅಧ್ಯಾಯವು ಮುಗಿಯಿತು.
*****
17. ಹದಿನೇಳನೆಯ ಅಧ್ಯಾಯ
ಭೀಮಸೇನದೇವರ ಮಾತುಗಳನ್ನು ಅಂಗೀಕರಿಸದೆ ಜ್ಞಾನಿಜನರ ಮಾರ್ಗವನ್ನು ಪ್ರಶಂಸೆ ಮಾಡಿದ ಯುಧಿಷ್ಠಿರ.
ಯುಧಿಷ್ಠಿರಃ
ಅಸಂತೋಷಃ ಪ್ರಮಾದಶ್ಚ ಮದೋ ರಾಗೋऽಪ್ರಶಾಂತತಾ |
ಬಲಂ ಮೋಹೋऽಭಿಮಾನಶ್ಚಾಪ್ಯುದ್ವೇಗಶ್ಚೈವ ಸರ್ವಶಃ ॥1॥
ಯುಧಿಷ್ಠಿರ ಭೀಮಸೇನ ! ಅಸಂತೃಪ್ತಿ, ಮೈಮರೆಯುವುದು, ಮದ, ರಾಗ, ಅಶಾಂತಿ, ಬಲ, ಮೋಹ, ಅಭಿಮಾನ, ಉದ್ವೇಗ ಎಂಬ ಈ ದುರ್ಗುಣಗಳು ಒಂದೆಡೆ ಸೇರಿದಾಗ ಆಸೆ ಹುಟ್ಟುವುದು ಸಹಜ.
ಏಭಿಃ ಪಾಪ್ಮಭಿರಾವಿಷ್ಟೋ ರಾಜ್ಯಂ ತ್ವಮಭಿಕಾಂಕ್ಷಸೇ |
ನಿರಾಮಿಷೋ ವಿನಿರ್ಮುಕ್ತಃ ಪ್ರಶಾಂತಃ ಸುಸುಖೀ ಭವ ॥2॥
ಈ ಎಲ್ಲ ಪಾಪಗಳು ನಿನ್ನಲ್ಲಿ ಸೇರಿ ರಾಜ್ಯಕ್ಕಾಗಿ ಆಸೆಪಡುತ್ತಿರುವಿ. ಭೋಗ್ಯ- ವಸ್ತುಗಳನ್ನೆಲ್ಲ ಬಿಟ್ಟು ಶಾಂತಿಯನ್ನು ಬಯಸಿದರೆ ಪ್ರಶಾಂತವಾದ ಮನಸ್ಸನ್ನು ಹೊಂದಿ ಸುಖವಾಗಿರುವಿ.
ಯ ಇಮಾಮಖಿಲಾಂ ಭೂಮಿಂ ಶಿಷ್ಯಾದೇಕೋ ಮಹೀಪತಿಃ |
ತಸ್ಯಾಪ್ಯುದರಮೇಕಂ ವೈ ಕಿಮಿದಂ ತ್ವಂ ಪ್ರಶಂಸಸಿ ॥3॥
ಭೂಮಿಪಾಲನೇ! ಸಮಸ್ತ ಭೂಮಂಡಲವನ್ನು ಆಳಬೇಕಾದ ಚಕ್ರವರ್ತಿಗೂ ಹೊರೆಯ ಬೇಕಾದ ಹೊಟ್ಟೆಯು ಒಂದೇ! ವಿಷಯವು ಹೀಗಿರುವಾಗ ರಾಜ್ಯಾಡ- ಳಿತವನ್ನು ಏಕೆ ಪ್ರಶಂಸುತ್ತಿರುವಿ.
ಟಿಪ್ಪಣಿ - ಶಿಷ್ಯಾದೇಕೋ ಮಹೀಪತಿಃ ಇತ್ಯತ್ರ ಶಿಷ್ಯಾತ್ ಶಾಸನಂ ಕುರ್ಯಾತ್| ತಸ್ಯಾಪಿ ಏಕಮೇವ ಉದರಮ್, ನತು ದ್ವಯಮಸ್ತಿ | ರಾಜನೆಂಬ ಕಾರಣದಿಂದ ಅವನಿಗೆ ಎರಡು ಹೊಟ್ಟೆ ಇರುವುದಿಲ್ಲ.
ನಾಹ್ನಾ ಪೂರಯಿತುಂ ಶಕ್ಯಾಂ ನ ಮಾಸೈರ್ಭರತರ್ಷಭ |
ಅಪೂರ್ಯಾಂ ಪೂರಯನ್ನಿಚ್ಛಾಮಾಯುಷಾಪಿ ನ ಶಕ್ನುಯಾತ್ ॥4॥
ನರಸಿಂಹನೇ ! ರಾಜ್ಯವನ್ನು ಪಡೆದುಕೊಳ್ಳಬೇಕೆಂದು ಹೇಳುತ್ತಿರುವಿ. ಒಂದು ದಿನದಲ್ಲಿಯಾಗಲಿ, ಅನೇಕ ತಿಂಗಳುಗಳಿಂದಾಗಲಿ ಪೂರೈಸಲು ಸಾಧ್ಯವಿಲ್ಲದ ಆಸೆ- ಯೆಂಬುದನ್ನು ಆಯುಷ್ಯವೆಲ್ಲವೂ ದುಡಿದರೂ ಪೂರೈಸಲು ಸಾಧ್ಯವಿಲ್ಲ.
ಟಿಪ್ಪಣಿ - ಅಪೂರ್ಯಾಂ ಪೂರಯನ್ನಿಚ್ಛಾಮ್ ಇತ್ಯತ್ರ ಇಚ್ಛಾಂ ನ ಶಕ್ನುಯಾತ್ ಪೂರಯಿತುಂ ನ ಶಕ್ನುಯಾದಿತಿ ಯೋಗ್ಯಪದಾಧ್ಯಾಹಾರೇಣ ಯೋಜನಾ | `ಪೂರ- ಯಿತುಂ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಪೂರಯಿತುಂ ನ ಶಕ್ನುಯಾತ್ ಎಂಬರ್ಥವನ್ನು ಹೇಳಬೇಕು.
ಯಥೇದ್ಧಃ ಪ್ರಜ್ವಲತ್ಯಗ್ನಿರಸಮಿದ್ಧಃ ಪ್ರಶಾಮ್ಯತಿ |
ಅಲ್ಪಾಹಾರತಯಾ ತ್ವಗ್ನಿಂ ಶಮಯೌದರ್ಯಮುತ್ಥಿತಮ್ ॥5॥
ಬೆಂಕಿಗೆ ಕಟ್ಟಿಗೆಯನ್ನು ಹಾಕಿದಷ್ಟು ಪ್ರಜ್ವಲಿಸುವುದು, ಕಟ್ಟಿಗೆಯನ್ನು ಹಾಕುವುದು ನಿಲ್ಲಿಸಿದರೆ ಆ ಅಗ್ನಿಯು ತನ್ನಷ್ಟಕ್ಕೆ ಶಾಂತವಾಗುವುದು.
ಆತ್ಮೋದರಕೃತೇऽಪ್ರಾಜ್ಞಃ ಕರೋತಿ ವಿಘಸಂ ಬಹು |
ಜಯೋದರಂ ಪೃಥಿವ್ಯಾ ತೇ ಶ್ರೇಯೋ ನಿರ್ಜಿತಯಾ ಜಿತಮ್ ॥6॥
ತಿಳುವಳಿಕೆ ಇಲ್ಲದ ಮನುಷ್ಯನು ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿಯೇ ಅನೇಕ ಬಗೆಯ ಹಿಂಸೆಯನ್ನು ಮಾಡುವನು. ಉರಿಯುವ ಜಾಠರಾಗ್ನಿಯನ್ನು ಮಿತವಾದ ಆಹಾರದಿಂದಲೇ ಕ್ರಮವಾಗಿ ಅಡಗಿಸಬಹುದು. ಆದ್ದರಿಂದ ಹೊಟ್ಟೆ- ಯೊಂದನ್ನು ಜಯಿಸಿದರೆ ಸಮಸ್ತಭೂಮಿಯನ್ನೇ ಜಯಿಸಿದ ಶ್ರೇಯಸ್ಸು ನಿನಗಾಗು- ತ್ತದೆ.
ಮಾನುಷಾನ್ ಕಾಮಭೋಗಾಂಸ್ತ್ವಮೈಶ್ವರ್ಯಂ ಚ ಪ್ರಶಂಸಸಿ |
ಅಭೋಗಿನೋऽಬಲಾಶ್ಚೈವ ಯಾಂತಿ ಸ್ಥಾನಮನುತ್ತಮಮ್ ॥7॥
ಮನುಷ್ಯರು ಬಯಸುವ ಕಾಮ, ಭೋಗ ಮತ್ತು ಐಶ್ವರ್ಯಗಳನ್ನು ನೀನು ಪ್ರಶಂಸಿಸುತ್ತಿರುವೆ. ಈ ಎಲ್ಲ ಭೋಗಗಳನ್ನು ತೊರೆದ ದೇಹಬಲಹೀನರಾದ ಅನೇಕರು ಉತ್ತಮವಾದ ಸ್ಥಾನವನ್ನು ಪಡೆದಿರುವರು.
ಯೋಗಃ ಕ್ಷೇಮಶ್ಚ ರಾಷ್ಟ್ರಸ್ಯ ಧರ್ಮಾಧರ್ಮೌ ತ್ವಯಿ ಸ್ಥಿತೌ |

ಮುಚ್ಯಸ್ವ ಮಹತೋ ಭಾರಾತ್ ತ್ಯಾಗಮೇವಾಭಿಸಂಶ್ರಯ ॥8॥
ರಾಷ್ಟ್ರಭಾರವನ್ನು ನೀನು ವಹಿಸಿದರೆ ರಾಷ್ಟ್ರದ ಯೋಗಕ್ಷೇಮವನ್ನು ಮತ್ತು ಧರ್ಮಾಧರ್ಮದ ಭಾರವನ್ನು ಹೊರಬೇಕು. ಇಂಥ ಮಹಾಭಾರವನ್ನು ಹೊರು- ವುದಕ್ಕೆ ಏಕೆ ಬಯಸುವೆ. ತ್ಯಾಗರೂಪದ ಸನ್ಯಾಸವನ್ನು ಆಶ್ರಯಿಸಿ ಮುಕ್ತನಾಗು.
ಏಕೋದರಕೃತೇ ವ್ಯಾಘ್ರಃ ಕರೋತಿ ವಿಘಸಂ ಬಹು |
ತಮನ್ಯೇಽಪ್ಯುಪಜೀವಂತಿ ಮಂದಾ ಲೋಭವಶಾ ಮೃಗಾಃ ॥9॥
ತನ್ನ ಒಂದು ಹೊಟ್ಟೆಗೋಸ್ಕರ ಹುಲಿಯು ಬಹಳ ಪ್ರಾಣಿಗಳನ್ನು ಹಿಂಸೆ ಮಾಡುತ್ತದೆ. ಆ ಮೃಗದಂತೆ ಬುದ್ಧಿಹೀನರಾದ ಕೆಲವು ಮಂದಿ ಕ್ರೂರಮಾರ್ಗವನ್ನೇ ಅನುಸರಿಸುವರು.
ಟಿಪ್ಪಣಿ - ಕರೋತಿ ವಿಘಸಂ ಬಹು ಇತ್ಯತ್ರ ವಿಘಸಂ ವಿಘಸನಂ ಪ್ರಾಣಿಹಿಂಸನಮ್| ಜಯೋದರಂ ಪೃಥಿವ್ಯಾ ತ ಇತ್ಯತ್ರ ಉದರಂ ಜಯ | ನಿರ್ಜಿತಯಾ ತಯಾ ಪೃಥಿವ್ಯಾ ತವ ಶ್ರೇಯೋ ಭವತೀತಿ ಯೋಜನಾ |
ವಿಷಯಾನ್ ಪ್ರತಿಸಂಗೃಹ್ಯ ಸನ್ನ್ಯಾಸಂ ಕುರುತೇ ಯತಿಃ |
ನ ಚ ತುಷ್ಯಂತಿ ರಾಜಾನಃ ಪಶ್ಯ ಬುದ್ಧ್ಯಂತರಂ ಯಥಾ ॥10॥
ರಾಜ್ಯದಲ್ಲಿ ಸುಖವಿದೆ ಎಂದು ತಿಳಿದಿರುವೆಯಾ? ರಾಜನಿಗೆ ವಿಷಯಗಳ ಬಗ್ಗೆ ಮನಸ್ಸು ಚಿಂತಿಸುವುದು. ವಿಷಯಸುಖಗಳನ್ನೆಲ್ಲ ತೊರೆದು ಸನ್ಯಾಸದಲ್ಲಿ ಮನಸ್ಸಿಟ್ಟ- ವನಿಗೆ ಮಾತ್ರ ಮನವು ಸಂತೋಷದಿಂದ ಇರುತ್ತದೆ.
ಪತ್ರಾಹಾರೈರಶ್ಮಕುಟ್ಟೈರ್ದಂತೋಲೂಖಲಿಕೈಸ್ತಥಾ |
ಅಂಬ್ಭಕ್ಷೈರ್ವಾಯುಭಕ್ಷೈಶ್ಚ ತೈರಯಂ ನರಕೋ ಜಿತಃ ॥11॥
ಕೆಲವು ಸನ್ಯಾಸಿಗಳು ಬರೀ ಎಲೆಗಳನ್ನು ಮಾತ್ರ ಉಣ್ಣುವರು. ಕೆಲವರು ತಮಗೆ ದೊರೆತ ಧಾನ್ಯವನ್ನು ಕಲ್ಲಿನಿಂದ ಕುಟ್ಟಿ ತಿನ್ನುವರು. ಕೆಲವರು ಕೇವಲ ತಮ್ಮ ಹಲ್ಲಿನಿಂದ ಜಗಿದು ತಿನ್ನುವರು. ಮತ್ತು ಕೆಲವರು ಕೇವಲ ನೀರನ್ನು ಕುಡಿಯುವರು. ಕೆಲವರು ಕೇವಲ ವಾಯುಭಕ್ಷಕರಾಗಿರುವರು. ಇಂಥವರು ನರಕವನ್ನು ಗೆಲ್ಲುವರು.
ಯಸ್ತ್ವಿಮಾಂ ವಸುಧಾಂ ಕೃತ್ಸ್ನಾಂ ಪ್ರಶಾಸೇದಖಿಲಾಂ ನೃಪಃ |
ತುಲ್ಯಾಶ್ಮಕಾಂಚನೋ ಯಶ್ಚ ಸ ಕೃತಾರ್ಥೋ ನ ಪಾರ್ಥಿವಃ ॥12॥
ಭೂಮಂಡಲವನ್ನು ಚಕ್ರವರ್ತಿಯಾಗಿ ಪಾಲಿಸುವ ರಾಜನು ಕಲ್ಲನ್ನು ಹಾಗೂ ಬಂಗಾರವನ್ನು ಸಮಾನವಾಗಿ ಕಾಣುವ ಸನ್ಯಾಸಿ ಇವರಿಬ್ಬರಲ್ಲಿ ಸನ್ಯಾಸಿಯೇ ಕೃತಾರ್ಥನು; ರಾಜನಲ್ಲ.
ಸಂಕಲ್ಪೇಷು ನಿರಾರಂಭೋ ನಿರಾಶೋ ನಿರ್ಮಮೋ ಭವ |
ಅಶೋಕಂ ಸ್ಥಾನಮಾತಿಷ್ಠ ಇಹ ಚಾಮುತ್ರ ಚಾವ್ಯಯಮ್ ॥13॥
ಆದ್ದರಿಂದ ನೀನು ಅಂದುಕೊಂಡ ಕರ್ಮಗಳನ್ನು ಮಾಡಬೇಕಾಗಿಲ್ಲ. ಆಸೆ- ಗಳನ್ನು ತೊರೆದು ಮಮತೆಯನ್ನು ಪರಿತ್ಯಜಿಸು. ಇದರಮೂಲಕ ಈ ಲೋಕದಲ್ಲಿ ಪರಲೋಕದಲ್ಲಿಯೂ ಅಕ್ಷಯವಾದ ದುಃಖವಿಲ್ಲದ ಪದವಿಯನ್ನು ಹೊಂದುವಿ.
ನಿರಾಮಿಷಾ ನ ಶೋಚಂತಿ ಶೋಚಸಿ ತ್ವಂ ಕಿಮಾಮಿಷಮ್ |
ಪರಿತ್ಯಜ್ಯಾಮಿಷಂ ಸರ್ವಂ ಮೃಷಾವಾದಾತ್ ಪ್ರಮೋಕ್ಷ್ಯಸೇ ॥14॥
ವಿಷಯ ಸುಖದಲ್ಲಿ ಮುಳುಗಿದಷ್ಟು ದುಃಖವೇ ಹೆಚ್ಚು. ವಿಷಯಸುಖವನ್ನು ಬಯಸದವನಿಗೆ ದುಃಖವೇ ಇಲ್ಲ. ಆದ್ದರಿಂದ ನೀನು ವಿಷಯಭೋಗವನ್ನು ಬಿಡು. ರಾಜ್ಯದಲ್ಲಿ ಇದ್ದರೂ ಅವನು ತ್ಯಾಗಿಯೇ ಎಂಬ ಸುಳ್ಳುವಾದವನ್ನು ಬಿಡು.
ಪಂಥಾನೌ ಪಿತೃಯಾನಶ್ಚ ದೇವಯಾನಶ್ಚ ವಿಶ್ರುತೌ |
ಈಜಾನಾಃ ಪಿತೃಯಾನೇನ ದೇವಯಾನೇನ ಮೋಕ್ಷಿಣಃ ॥15॥
ಪಿತೃಯಾನ ಮತ್ತು ದೇವಯಾನ ಎಂಬ ಎರಡು ಮಾರ್ಗಗಳಿವೆ. ಯಾರು ಸಕಾಮರಾಗಿ ಯಜ್ಞಾನುಷ್ಠಾನ ಮಾಡುವರೋ ಅವರು ಪಿತೃಯಾನದ ಮೂಲಕ ಪುಣ್ಯಲೋಕಗಳಿಗೆ ಹೋಗುತ್ತಾರೆ. ಯಾರು ಆಸೆಯನ್ನು ಬಿಟ್ಟು ಸನ್ಯಾಸಿಗಳಾ- ಗುತ್ತಾರೋ, ಅವರು ದೇವಯಾನದ ಮೂಲಕ ಮೋಕ್ಷವನ್ನು ಹೊಂದುತ್ತಾರೆ.
ತಪಸಾ ಬ್ರಹ್ಮಚರ್ಯೇಣ ಸ್ವಾಧ್ಯಾಯೇನ ಮಹರ್ಷಯಃ |
ವಿಮುಚ್ಯ ದೇಹಾಂಸ್ತೇ ಯಾಂತಿ ಮೃತ್ಯೋರವಿಷಯಂ ಗತಾಃ ॥15॥
ಸ್ವಾಧ್ಯಾಯ, ತಪಸ್ಸು, ಬ್ರಹ್ಮಚರ್ಯ, ಇವುಗಳಿಂದ ಕಾಲವನ್ನು ಕಳೆಯುತ್ತಾ ದೇಹವನ್ನು ತ್ಯಜಿಸಿದ ಎಷ್ಟೋ ಮಹರ್ಷಿಗಳು ಮೃತ್ಯುವಿಗೆ ಗೋಚರವಲ್ಲದ ಶಾಶ್ವತಪದವಿಗೆ ಹೋಗಿರುವರು.
ವಿವರಣೆ - ಮೃತ್ಯುವಿಗೆ ಗೋಚರವಲ್ಲದ ಎಂದರೆ ಮುಕ್ತರಾಗುವುದು ಎಂದರ್ಥ. ಮೃತ್ಯುವಶರಾದವರಿಗೆ ಪುನರ್ಜನ್ಮವು ತಪ್ಪಿದ್ದಲ್ಲ. ಜನನ ಮರಣಗಳ ಚಕ್ರ ತಪ್ಪಿದ್ದಲ್ಲ.
ದೇಹವನ್ನು ಬಿಡುವುದೆಂದರೆ ಮರಣ ಹೊಂದುವುದು ಎಂದೇ ಅರ್ಥ- ವಾದರೂ ಮೃತ್ಯುವಿಗೆ ವಿಷಯವಾಗದೇ ದೇಹವನ್ನು ಬಿಟ್ಟು ಪರಮಪದವನ್ನು ಸೇರುತ್ತಾರೆ ಎಂದರ್ಥ.
ಆಮಿಷಂ ಬಂಧನಂ ಲೋಕೇ ಕರ್ಮೇಹೋಕ್ತಂ ತಥಾಮಿಷಮ್ |
ತಾಭ್ಯಾಂ ವಿಮುಕ್ತಃ ಪಾಪಾಭ್ಯಾಂ ಪದಮಾಪ್ನೋತಿ ತತ್ಪರಮ್ ॥17॥
ಜಗತ್ತಿನಲ್ಲಿ ವಿಷಯ ಬಂಧನ ಹಾಗೂ ಅದಕ್ಕೆ ಪೂರಕವಾದ ಕರ್ಮಗಳು ಆಮಿಷಗಳೆಂದು ಕರೆಯಲ್ಪಡುತ್ತವೆ. ವಿಷಯಬಂಧನದಲ್ಲಿ ಸಿಲುಕುವುದು ಮತ್ತು ಅದಕ್ಕೆ ಪೂರಕವಾದ ಕರ್ಮಗಳಲ್ಲಿ ಆಸಕ್ತನಾಗುವುದು ಈ ಎರಡು ಪಾಪಗಳಿಂದ ಮುಕ್ತನಾದವನೇ ಪರಮಪದವನ್ನು ಹೊಂದುವನು.
ಅಪಿ ಗಾಥಾಂ ಪುರಾ ಗೀತಾಂ ಜನಕೇನ ವದಂತ್ಯುತ |
ನಿರ್ದ್ವಂದ್ವೇನ ವಿಮುಕ್ತೇನ ಮೋಕ್ಷಂ ಸಮನುಪಶ್ಯತಾ ॥18॥

ದ್ವಂದ್ವಗಳನ್ನು ತೊರೆದು ಸಂಗವಿಮುಕ್ತನಾಗಿ ಮೋಕ್ಷಮಾರ್ಗವನ್ನು ತಿಳಿದ ಜನಕಮಹಾರಾಜನು ಹಿಂದೆ ಹೇಳಿದ ಗಾಥೆಯೊಂದನ್ನು ಹಿರಿಯರು ಹೇಳುತ್ತಾರೆ. ಅದನ್ನು ನಾನು ಕೇಳಿರುವೆನು.
ಅನಂತಂ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ |
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ ॥19॥
ನನಗೆ ಲೆಕ್ಕವಿಲ್ಲದಷ್ಟು ಧನವಿದೆ. ಆದರೆ ಅದರಲ್ಲಿ ಒಂದೂ ನನ್ನದಲ್ಲ. ಈ ಮಿಥಿಲೆಯು ಬೆಂಕಿಯಲ್ಲಿ ಉರಿದು ಹೋದರೂ ನನ್ನದಾವುದೂ ಸುಡುವುದಿಲ್ಲ.
ವಿವರಣೆ - ಧನವು ನನ್ನದಲ್ಲವೆಂದು ತಿಳಿದಿದ್ದೇನೆ. ನನ್ನ ದೇಹ ಸಹಿತ ಈ ಮಿಥಿಲೆಯೇ ಸುಟ್ಟುಹೋದರೂ ನನ್ನದಾದ ಈ ಆತ್ಮವನ್ನು ಸುಡಲು ಯಾವ ದಾವಾಗ್ನಿಗೂ ಸಾಧ್ಯವಾಗುವುದಿಲ್ಲ.
ಪ್ರಜ್ಞಾಪ್ರಾಸಾದಮಾರುಹ್ಯ ಅಶೋಚನ್ ಶೋಚತೋ ಜನಾನ್ |
ಜಗತೀಸ್ಥಾನಿವಾದ್ರಿಸ್ಥೋ ಮಂದಬುದ್ಧಿನವೇಕ್ಷತೇ ॥20॥
ಪರ್ವತದ ಮೇಲೆ ನಿಂತುಕೊಂಡಿರುವವನು ಕೆಳಗಿರುವವನನ್ನು ಹೇಗೆ ನೋಡುತ್ತಾನೆ. ಅದರಂತೆ ಪ್ರಜ್ಞಾ ಎಂಬ ಮಹಡಿಯ ಮೇಲೆ ಕುಳಿತ ಶೋಕ, ಮೋಹ ಮೊದಲಾದ ದೋಷಗಳಿಲ್ಲದ ಜ್ಞಾನಿಯು ಸಂಸಾರದಲ್ಲಿ ಮುಳುಗಿದ ಮಂದಬುದ್ಧಿ ಜನರನ್ನು ನೋಡುತ್ತಾನೆ.
ವಿವರಣೆ - ಪರ್ವತದ ಮೇಲೆ ನಿಂತಿರುವವನು ನೆಲದ ಮೇಲೆ ನಿಂತಿರು- ವವನನ್ನು ನೋಡಿ ಪ್ರಭಾವಿತನಾಗುವುದಿಲ್ಲವೋ, ಅದರಂತೆ ಪ್ರಜ್ಞಾ ಎಂಬ ಪ್ರಾಸಾದದಲ್ಲಿ ಕುಳಿತ ಜ್ಞಾನಿಯೂ ಕೂಡ ಶೋಕ, ಮೋಹಗಳನ್ನು ಹೊಂದಿ ಸಂಸಾರದಲ್ಲಿ ಮುಳುಗಿದ ಜನರಿಂದ ಯಾವುದೇ ಪ್ರಭಾವಕ್ಕೆ ಒಳಗಾಗುವುದಿಲ್ಲ.
ದೃಶ್ಯಂ ಪ್ರಶ್ಯತಿ ಯಃ ಪಶ್ಯನ್ ಸ ಚಕ್ಷುಷ್ಮಾನ್ ಸ ಬುದ್ಧಿಮಾನ್ |
ಅಜ್ಞಾತಾನಾಂ ಚ ವಿಜ್ಞಾನಾತ್ ಸಂಬೋಧಾದ್ ಬುದ್ಧಿರುಚ್ಯತೇ॥21॥
ತಿಳಿಯುವ ಸಂದರ್ಭದಲ್ಲಿ ತಿಳಿಯಲೇ ಬೇಕಾದದ್ದನ್ನು ಯಾರು ತಿಳಿಯು- ತ್ತಾನೋ, ಅಂಥವನೇ ಬುದ್ಧಿವಂತನು ಮತ್ತು ನಿಜವಾದ ಕಣ್ಣುಗಳನ್ನು ಹೊಂದಿರು- ವವನು. ಅತ್ಯಂತ ನಿಗೂಢವಾದ ವಿಚಾರವನ್ನು ತಿಳಿಸಿಕೊಡುವುದರಿಂದ ಮತ್ತು ಇದು ಕರ್ತವ್ಯ, ಇದು ಕರ್ತವ್ಯವಲ್ಲ ಎಂಬುದಾಗಿ ಬೋಧಿಸುವುದರಿಂದಲೂ ಅಂತಃಕರಣಕ್ಕೆ ಬುದ್ಧಿ ಎಂಬುದಾಗಿ ಕರೆಯುತ್ತಾರೆ.
ವಿವರಣೆ - ಯಾರು ಈ ಸಮಗ್ರ ಜಗತ್ತನ್ನು ನೋಡುತ್ತಾ ಇದೆಲ್ಲವೂ ಕೇವಲ ನಾಟಕವಾಗಿದೆ ಎಂಬುದಾಗಿ ತಿಳಿದುಕೊಳ್ಳುತ್ತಾನೋ, ಅವನು ನಿಜವಾದ ಕಣ್ಣು- ಗಳನ್ನು ಹೊಂದಿದವನು. ಬುದ್ಧಿವಂತನೂ ಕೂಡ ಆಗಿರುತ್ತಾನೆ. ತಿಳಿಯದೇ ಇರುವ ಆತ್ಮನನ್ನು ತಿಳಿಸಿಕೊಡುವುದೇ ಬುದ್ಧಿ. ಅದರ ಅನುಭವಕ್ಕೆ ತಂದುಕೊಳ್ಳು- ವುದರಿಂದ ಅದನ್ನು ಬುದ್ಧಿ ಎಂಬುದಾಗಿ ಕರೆಯುತ್ತಾರೆ. ತಿಳಿಯಬೇಕಾದ ಕರ್ತವ್ಯಾಕರ್ತವ್ಯಗಳನ್ನು ತಿಳಿದವನೇ ನಿಜವಾದ ಕಣ್ಣುಳ್ಳ- ವನು. ಅವನೇ ಬುದ್ಧಿವಂತನು. ತಿಳಿಯದ ವಿಷಯವನ್ನು ತಿಳಿಯುವ ಹಾಗೆ ಹೇಳುವವನು ಸಂಶಯಗಳನ್ನು ಕಳೆಯುವವನು ಬುದ್ಧಿವಂತನೆಂದು ಕರೆಯಲ್ಪಡು- ವನು.
ಯಸ್ತು ವಾಚಂ ವಿಜಾನಾತಿ ಬಹುಮಾನಮಿಯಾತ್ ಸ ವೈ |
ಬ್ರಹ್ಮಭಾವಪ್ರಪನ್ನಾನಾಂ ವೈದ್ಯಾನಾಂ ಭಾವಿತಾತ್ಮನಾಮ್ ॥22॥
ಯಾರು ಆತ್ಮತತ್ವದಲ್ಲಿ ನೆಲೆಗೊಂಡ ಹಿರಿಯರ ನಿಜವಾದ ಮಹಿಮೆಯನ್ನು ತಿಳಿಯಬಲ್ಲನೋ ಅಂಥವನೇ ಬಹುಮಾನವನ್ನು ಹೊಂದುವನು.
ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥23॥
ಬಗೆ ಬಗೆಯ ಜೀವರಾಶಿಗಳು ಒಬ್ಬನೇ ಭಗವಂತನಲ್ಲಿ ಆಶ್ರಯಿಸಿವೆ. ಅವನಿಂದಲೇ ಹುಟ್ಟುತ್ತಿವೆ. ಅವುಗಳ ತಾರತಮ್ಯಜ್ಞಾನಪೂರ್ವಕವಾಗಿ ಯಾವಾಗ ತಿಳಿಯುವನೋ ಆಗ ಸಾಧಕನು ಪರಮಾತ್ಮನನ್ನು ಸೇರುತ್ತಾನೆ.
ಟಿಪ್ಪಣಿ - ತತಃ ಬ್ರಹ್ಮಣ ಏವ ಸೃಷ್ಟಿಕಾಲೇ ವಿಸ್ತಾರಂ ಚ ಪಶ್ಯತಿ ತೇ ಜನಾಃ ಉಕ್ತ- ವಿಧಯಾ ಸೃಷ್ಟಿಪ್ರಲಯಯೋರ್ಭೇದಂ ಜಾನಂತೋ ಜನಾಃ |
ತೇ ಜನಾಸ್ತಾಂ ಗತಿಂ ಯಾಂತಿ ನಾವಿದ್ವಾಂಸೋಽಲ್ಪಚೇತಸಃ |
ನಾಬುದ್ಧಯೋ ನಾಪತಸಃ ಸರ್ವಂ ಬುದ್ಧೌ ಪ್ರತಿಷ್ಠಿತಮ್ ॥24॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಯುಧಿಷ್ಠಿರವಾಕ್ಯೇ ಸಪ್ತದಶೋಽಧ್ಯಾಯಃ ॥17॥
ವಿದ್ಯೆಯಿಲ್ಲದ, ತಪಸ್ಸು ಇಲ್ಲದ, ಬುದ್ಧಿ ಇಲ್ಲದ, ಅಲ್ಪಸತ್ವವುಳ್ಳ ಜನರು ಪರಮಾತ್ಮನನ್ನು ಸೇರಲಾರರು. ಇವೆಲ್ಲವೂ ಅವರವರ ಬುದ್ಧಿಯಲ್ಲಿಯೇ ನೆಲೆ- ಗೊಂಡಿರುವುದು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 17ನೆಯ ಅಧ್ಯಾಯವು ಮುಗಿಯಿತು.
*****
18. ಹದಿನೆಂಟನೆಯ ಅಧ್ಯಾಯ
ಅರ್ಜುನನು ಅಣ್ಣನಾದ ಧರ್ಮರಾಜನಿಗೆ ಮಾಡಬೇಕಾದ ಕರ್ತವ್ಯವನ್ನು ಬೋಧಿಸುತ್ತಿದ್ದಾನೆ. ಅದಕ್ಕಾಗಿ ಜನಕರಾಜನಿಗೂ ಮತ್ತುಅವನ ಪತ್ನಿಗೂ ನಡೆದ ಸಂವಾದವನ್ನು ತಿಳಿಸಿ ಸನ್ಯಾಸವನ್ನು ತೆಗೆದುಕೊಳ್ಳುವಂತೆ ಯುಧಿಷ್ಠಿರನನ್ನು ತಡೆದನು.
ವೈಶಂಪಾಯನಃ
ತೂಷ್ಣೀಂಭೂತಂ ತು ರಾಜಾನಂ ಪುನರೇವಾರ್ಜುನೋಽಬ್ರವೀತ್ |
ಸಂತಪ್ತಃ ಶೋಕದುಃಖಾಭ್ಯಾಂ ರಾಜವಾಕ್ಶಲ್ಯಪೀಡಿತಃ ॥1॥
ವೈಶಂಪಾಯನ - ಯುಧಿಷ್ಠಿರನು ಹೀಗೆ ಹೇಳಿ ಸುಮ್ಮನಾದನು. ಆಗ ಅರ್ಜು- ನನಿಗೆ ಯುಧಿಷ್ಠಿರನ ಮಾತುಗಳೆಲ್ಲವೂ ಶಲ್ಯದಂತೆ

ಹೃದಯಕ್ಕೆ ಘಾಸಿ ಮಾಡಿದವು. ಇದರಿಂದ ಬಹಳ ಶೋಕ ಮತ್ತು ದುಃಖಗಳಿಂದ ಕೂಡಿದ ಅರ್ಜುನನು ಆ ರಾಜನಾದ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿದನು.
ಅರ್ಜುನಃ
ಕಥಯಂತಿ ಪುರಾವೃತ್ತಮಿತಿಹಾಸಮಿಮಂ ಜನಾಃ |
ವಿದೇಹರಾಜ್ಞಃ ಸಂವಾದಂ ಭಾರ್ಯಯಾ ಸಹ ಭಾರತ ॥2॥
ಅರ್ಜುನ - ಹಿಂದೆ ವಿದೇಹರಾಜನಾದ ಜನಕನಿಗೂ ಅವನ ಹೆಂಡತಿಗೂ ನಡೆದಿರುವ ಸಂವಾದದಿಂದ ಇತಿಹಾಸವನ್ನು ಜನರು ಹೇಳುತ್ತಾರೆ. ಅದನ್ನು ನಿನಗೆ ತಿಳಿಸುತ್ತೇನೆ ಕೇಳು.
ಉತ್ಸೃಜ್ಯ ರಾಜ್ಯಂ ಭಿಕ್ಷಾರ್ಥೇ ಕೃತಬುದ್ಧಿಂ ನರೇಶ್ವರಮ್ |
ವಿದೇಹರಾಜಮಹಿಷೀ ದುಃಖಿತಾ ಯದಭಾಷತ ॥3॥
ಜನಕರಾಜನು ತನ್ನ ರಾಜ್ಯವನ್ನು ಪರಿತ್ಯಾಗ ಮಾಡಿ ಭಿಕ್ಷುವಾಗಿ ಹೊರಡಲು ನಿಶ್ಚಯಿಸಿದನು. ಆಗ ಇವನ ಈ ವರ್ತನೆಯನ್ನು ಕಂಡು ಹೆಂಡತಿಗೆ ಬಹಳ ದುಃಖವಾಯಿತು. ಆಗ ತನ್ನ ಗಂಡನ ಸಮೀಪ ಬಂದ ಹೀಗೆ ಮಾತನಾಡಿದಳು
ಧನಾನ್ಯಪತ್ಯಂ ದಾರಾಶ್ಚ ರತ್ನಾನಿ ವಿವಿಧಾನಿ ಚ |
ಪಂಥಾನಂ ಪಾವಕಂ ಹಿತ್ವಾ ಜನಕೋ ಮೌಢ್ಯಮಾಸ್ಥಿತಃ ॥4॥
ತಂ ದದರ್ಶ ಪ್ರಿಯಾ ಭಾರ್ಯಾ ಭೈಕ್ಷ್ಯವೃತ್ತಿಮಕಿಂಚನಮ್ |
ಧಾನಾಮುಷ್ಟಿಮುಪಾಸೀನಂ ನಿರೀಹಂ ಗತಮತ್ಸರಮ್ ॥5॥
ತಮುವಾಚ ಸಮಾಗತ್ಯ ಭರ್ತಾರಮಕುತೋಭಯಮ್ |
ಕ್ರುದ್ಧಾ ಮನಸ್ವಿನೀ ಭಾರ್ಯಾ ವಿವಿಕ್ತೇ ಹೇತುಮದ್ ವಚಃ ॥6॥
ಜನಕರಾಜನು ಮೂರ್ಖನಾಗಿದ್ದಾನೆ. ತನ್ನ ಧನರತ್ನಗಳನ್ನು, ಹೆಂಡಂದಿರನ್ನು, ಮಕ್ಕಳನ್ನು, ಮಿತ್ರರನ್ನು, ತ್ರೇತಾಗ್ನಿಯನ್ನು, ಅತಿಥಿಗಳನ್ನು ಪರಿತ್ಯಾಗ ಮಾಡಿ ಭಿಕ್ಷುವೃತ್ತಿಯನ್ನು ಆಶ್ರಯಿಸಿ ಹೊರಟಿದ್ದಾನೆ. ಕೇವಲ ಮುಷ್ಟಿಮಾತ್ರದ ಹುರಿದ ಧಾನ್ಯವನ್ನೇ ನಿರೀಕ್ಷಿಸುತ್ತಾ ಯಾವುದೇ ಆಸೆಯಿಲ್ಲದೇ ಮಾತ್ಸರ್ಯರಹಿತನಾಗಿ ಯಾರಿಗೂ ಹೆದರದೇ ಹೊರಟಿದ್ದಾನೆ. ಇಂಥ ತನ್ನ ಪತಿಯನ್ನು ಕಂಡು ಧೀರ ಮನಸ್ಸುಳ್ಳ ಅವನ ಹೆಂಡತಿಗೆ ಪತಿಯ ಈ ವರ್ತನೆ ಇಷ್ಟವಾಗುವುದಿಲ್ಲ. ತನ್ನ ಪತಿಯ ಬಳಿ ತೆರಳಿ ಕಾರಣಸಹಿತವಾದ ಮಾತುಗಳಿಂದ ರಹಸ್ಯವಾಗಿ ಹೀಗೆ ಹೇಳುತ್ತಾಳೆ -
ಕಥಮುತ್ಸೃಜ್ಯ ರಾಜ್ಯಂ ಸ್ವಂ ಧನಧಾನ್ಯಸಮನ್ವಿತಮ್ |
ಕಾಪಾಲೀಂ ವೃತ್ತಿಮಾಸ್ಥಾಯ ಧನಾಮುಷ್ಟಿರ್ನ ತೇ ವರಃ ॥7॥
ಆರ್ಯಪುತ್ರ ! ಏಕಿದು? ಏನಿದು ನಿನ್ನ ವರ್ತನೆ? ಧನಧಾನ್ಯಸಮೃದ್ಧವಾದ ಈ ರಾಜ್ಯವನ್ನೇಕೆ ಪರಿತ್ಯಾಗ ಮಾಡುತ್ತಿರುವೆ? ಕಾಪಾಲಿಕವೃತ್ತಿಯನ್ನು ಆಶ್ರಯಿಸಿ ಒಂದು ಮುಷ್ಟಿಧಾನ್ಯ ಸಿಗುವುದೇ? ಎಂಬ ನಿರೀಕ್ಷೆಯಿಂದ ಬೀದಿ ಬೀದಿ ಅಲೆಯುವ ಕಾರಣ -ವೇನು?
ಪ್ರತಿಜ್ಞಾ ತೇಽನ್ಯಥಾ ರಾಜನ್ ವಿಚೇಷ್ಟಾ ಚಾನ್ಯಥಾ ತವ |
ಯದ್ ರಾಜ್ಯಂ ಮಹದುತ್ಸೃಜ್ಯ ಸ್ವಲ್ಪೇ ತುಷ್ಯಸಿ ಪಾರ್ಥಿವ ॥8॥
ಓ ರಾಜನೇ! ನಿನ್ನ ಪ್ರತಿಜ್ಞೆಯೇ ಒಂದು, ನಿನ್ನ ವರ್ತನೆಯೇ ಮತ್ತೊಂದು, ಸಮೃದ್ಧವಾದ ಈ ರಾಜ್ಯವನ್ನು ಪರಿತ್ಯಾಗ ಮಾಡಿ ಅಲ್ಪಸುಖಕ್ಕಾಗಿ ಆಸೆ ಪಡುವು- ದೇಕೆ?
ನೈತೇನಾತಿಥಯೋ ರಾಜನ್ ದೇವರ್ಷಿಪಿತರಸ್ತಥಾ |
ಅದ್ಯ ಶಕ್ಯಾಸ್ತ್ವಯಾ ಭರ್ತುಂ ಮೋಘಸ್ತೇಽಯಂ ಪರಿಶ್ರಮಃ ॥9॥
ಓ ಪತಿದೇವನೇ! ನಿನ್ನ ಈ ಪ್ರಯತ್ನವು ವ್ಯರ್ಥವಾಗಿದೆ. ನೀನು ತೆರಳುತ್ತಿರುವ ಈ ದಾರಿಯಲ್ಲಿ ಯಾರೇ ಒಬ್ಬ ಅತಿಥಿಗೆ, ದೇವತೆಗೆ, ಪಿತೃಗಳಿಗೆ, ಋಷಿಗಳಿಗೆ ತೃಪ್ತಿ ಪಡಿಸಲು ಸಾಧ್ಯವಾಗುವುದಿಲ್ಲ.
ದೇವತಾತಿಥಿಭಿಶ್ಚೈವ ಪಿತೃಭಿಶ್ಚೈವ ಪಾರ್ಥಿವ |
ಸರ್ವೈರೇತೈಃ ಪರಿತ್ಯಕ್ತಃ ಪರಿವ್ರಜಸಿ ನಿಷ್ಕ್ರಿಯಃ ॥10॥
ನೀನು ಕರ್ಮಭ್ರಷ್ಟನಾಗುತ್ತಿರುವೆ. ದೇವತೆಗಳು, ಋಷಿಗಳು, ಪಿತೃಗಳು ಎಲ್ಲರೂ ಕೂಡ ನಿನ್ನ ಕೈಬಿಡುವರು. ಯಾವುದೇ ಕರ್ತವ್ಯಗಳನ್ನು ಆಚರಿಸದೇ ವ್ಯರ್ಥವಾಗಿ ತಿರುಗಲು ಹೊರಟಿರುವಿ.
ಯಸ್ತ್ವಂ ತ್ರೈವಿದ್ಯವೃದ್ಧಾನಾಂ ಬ್ರಾಹ್ಮಣಾನಾಂ ಸಹಸ್ರಶಃ |
ಭರ್ತಾ ಭೂತ್ವಾ ಚ ಲೋಕಸ್ಯ ಸೋಽದ್ಯ ತೈರ್ಭೃತಿಮಿಚ್ಛಸಿ ॥11॥
ಸಾವಿರಾರು ಮಂದಿ ವೇದವನ್ನು ಅಧ್ಯಯನ ಮಾಡುವ ವೃದ್ಧರಾದ ಬ್ರಾಹ್ಮಣರಿಗೆ ಇಷ್ಟರ ತನಕ ಆಶ್ರಯನಾಗಿದ್ದಿ, ಸಮಸ್ತ ಲೋಕಕ್ಕೆ ಒಡೆಯನಾಗಿದ್ದಿ. ಈಗ ಇಷ್ಟೊಂದು ಪುಣ್ಯಕಾರ್ಯವನ್ನು ಪರಿತ್ಯಾಗ ಮಾಡಿ, ನಿನ್ನ ಉದರಭರಣಕ್ಕಾಗಿ ಮತ್ತೊಬ್ಬರ ದಯೆಗೆ ಪಾತ್ರನಾಗಲು ಹೊರಟಿರುವೆ.
ಶ್ರಿಯಂ ಹಿತ್ವಾ ಪದೀಪ್ತಾಂ ತ್ವಂ ಶ್ವವತ್ ಸಂಪ್ರತಿ ವೀಕ್ಷ್ಯಸೇ |
ಅಪುತ್ರಾ ಜನನೀ ತೇಽದ್ಯ ಕೌಸಲ್ಯಾ ಚಾಪತಿಸ್ತ್ವಯಾ ॥12॥
ಸಮೃದ್ಧವಾದ ಸಂಪತ್ತನ್ನು ಪರಿತ್ಯಾಗ ಮಾಡಿ ಬಂದ ನಿನ್ನನ್ನು ಇತರರು ನಾಯಿ- ಯಂತೆ ತಿರಸ್ಕಾರದಿಂದ ಕಾಣುವರು. ನಿನ್ನನ್ನು ಹಡೆದ ತಾಯಿ ಪುತ್ರಹೀನಳೆಂಬ ಭಾವನೆ ಹೊಂದುವಳು. ಕೌಸಲ್ಯೆಯಾದ ನಿನ್ನ್ನ ಹೆಂಡತಿಯಾದ ನಾನೂ ಸಹ ಪತಿಯಿಲ್ಲದಂತೆ ಆಗುವೆನು.
ಅಮೀ ಚ ಧರ್ಮಕಾಮಾಸಶತ್ವಂ ಕ್ಷತ್ರಿಯಾಃ ಪರ್ಯುಪಾಸತೇ |

ತ್ವದಾಶಾಮಭಿಕಾಂಕ್ಷಂತಃ ಕೃಪಣಾಃ ಫಲಹೇತುಕಾಃ ॥13॥
ಧರ್ಮ ಮತ್ತು ಕಾಮಗಳನ್ನು ಅಪೇಕ್ಷಿಸುವ ಕ್ಷತ್ರಿಯರು ನಿನ್ನನ್ನು ಆಶ್ರಯಿಸಿ ಅನೇಕ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳಬೇಕೆಂಬ ಅಭಿಲಾಷೆ ಹೊಂದಿದ್ದಾರೆ. ಅದಕ್ಕಾಗಿ ನಿನ್ನನ್ನೇ ಉಪಾಸನೆಗೈಯುತ್ತಿದ್ದಾರೆ. ನಿನ್ನ ಸೇವೆಯಲ್ಲಿಯೇ ಆಸಕ್ತರಾಗಿ- ದ್ದಾರೆ. ದೀನರಾದ ಆ ಕ್ಷತ್ರಿಯರು ನಿನ್ನಿಂದ ಉತ್ತಮಫಲವನ್ನು ನಿರೀಕ್ಷಿಸುತ್ತಿದ್ದಾರೆ.
ತಾಂಶ್ಚ ತ್ವಂ ವಿಫಲಾನ್ ಕುರ್ವನ್ ಕಂ ನು ಲೋಕಂ ಗಮಿಷ್ಯಸಿ |
ರಾಜನ್ ಸಂಶಿಯಿತೇ ಮೋಕ್ಷೇ ಪರತಂತ್ರೇಷು ದೇಹಿಷು ॥14॥
ಇಂಥ ಕ್ಷತ್ರಿಯರ ಅಪೇಕ್ಷೆಗಳನ್ನೆಲ್ಲಾ ವಿಫಲವನ್ನಾಗಿ ಮಾಡಿ, ಯಾವ ಪುಣ್ಯ- ಲೋಕವನ್ನು ಹೊಂದಲು ಬಯಸುತ್ತಿರುವಿ. ಸರ್ವಸ್ವವನ್ನು ಹೀಗೆ ಪರಿತ್ಯಾಗ ಮಾಡುವುದರಿಂದ ಮೋಕ್ಷವಾಗುತ್ತದೆಂಬ ನಿಶ್ಚಯವೂ ಕೂಡ ಇರುವುದಿಲ್ಲ. ಎಲ್ಲಾ ಜೀವರು ವಿಧಿಯ ಅಧೀನರಾಗಿದ್ದಾರೆ.
ನೈವ ತೇಽಸ್ತಿ ಪರೋ ಲೋಕೋ ನಾಪರಃ ಪಾಪಕರ್ಮಣಃ |
ಧರ್ಮ್ಯಾನ್ ದಾರಾನ್ ಪರಿತ್ಯಜ್ಯ ಯಸ್ತ್ವಮಿಚ್ಛಸಿ ಜೀವಿತುಮ್ ॥15॥
ಧರ್ಮನಿರತರಾದ ಹೆಂಡಂದಿರನ್ನು ಪರಿತ್ಯಾಗ ಮಾಡಿ, ಏಕಾಕಿಯಾಗಿ ಜೀವಿಸಲು ಇಚ್ಛಿಸುತ್ತಿರುವ ನಿನ್ನ ಈ ವರ್ತನೆ ಪಾಪಕರ್ಮವೇ ಆಗಿದೆ. ನಿನಗೆ ಪರಲೋಕದಲ್ಲಿ ಯಾವುದೇ ಸುಖವು ದೊರೆಯುವುದಿಲ್ಲ. ಈ ಲೋಕವೂ ಕೂಡ ಸುಖಕರವಲ್ಲ.
ಸ್ರಜೋ ಗಂಧಾನಲಂಕಾರಾನ್ ವಾಸಾಂಸಿ ವಿವಿಧಾನಿ ಚ |
ಕಿಮರ್ಥಮಭಿಸಂತ್ಯಜ್ಯ ಪರಿವ್ರಜಸಿ ನಿಷ್ಕ್ರಿಯಃ ॥16॥
ಜನಕರಾಜನೇ! ಮಾಲೆಗಳನ್ನು, ಪರಿಮಳ ದ್ರವ್ಯಗಳನ್ನು, ಅಲಂಕಾರವಸ್ತು- ಗಳನ್ನು, ನಾನಾವಿಧವಾದ ವಸ್ತ್ರಗಳನ್ನು ಪರಿತ್ಯಾಗ ಮಾಡಿ, ಎಲ್ಲಾ ಕರ್ತವ್ಯಗಳಿಂದ ಭ್ರಷ್ಟನಾಗಿ ಏಕೆ ಇಲ್ಲಿಂದ ಹೊರಟಿರುವಿ ?
ನಿಪಾನಂ ಸರ್ವಭೂತಾನಾಂ ಭೂತ್ವಾ ತ್ವಂ ಪಾವನಂ ಮಹತ್ |
ಆಢ್ಯೋ ವನಸ್ಪತಿರ್ಭೂತ್ವಾ ಸೋಽನ್ಯಾಂಸ್ತ್ವಂ ಪರ್ಯುಪಾಸತೇ ॥17॥
ಇಲ್ಲಿಯ ತನಕ ನೀನು ಎಲ್ಲಾ ವಿಧದ ಪ್ರಾಣಿಗಳಿಗೆ ನೀರನ್ನು ಒದಗಿಸುವ ಪರಮಪವಿತ್ರವಾದ ದೊಡ್ಡದಾದ ಜಲಾಶಯದಂತೆ ಇದ್ದಿ. ಇಂಥ ನೀನು ಹಸಿವು ತೃಷೆಗಳನ್ನು ನಿವಾರಿಸಿಕೊಳ್ಳಲು ಮತ್ತೊಬ್ಬರನ್ನು ಆಶ್ರಯಿಸಲು ಹೊರಟಿರುವಿ. ಮತ್ತು ಇಲ್ಲಿಯ ತನಕ ಎಲ್ಲರಿಗೂ ಆಶ್ರಯ ನೀಡುವ ಫಲಪುಷ್ಪಭರಿತವಾದ ವೃಕ್ಷದಂತೆ ಭದ್ರವಾಗಿ ನೆಲೆಸಿದ್ದಿ. ಈಗ ಮತ್ತೊಬ್ಬರ ನೆರಳಿನಲ್ಲಿ ಬದುಕಲು ಹೊರಟಿರುವಿ.
ಖಾದಂತಿ ಹಸ್ತಿನಂ ನ್ಯಾಸ್ಯೈಃ ಕ್ರವ್ಯಾದಾ ಬಹವೋಽಪ್ಯುತ |
ಬಹವಃ ಕೃಮಯಶ್ಚೈವ ಕಿಂ ಪುನಸತ್ವಮನರ್ಥಕಮ್ ॥18॥
ಮಾಂಸಾಹಾರಿಗಳಾದ ಕ್ಷುದ್ರವಾದ ಮೃಗಗಳು ಆನೆಯನ್ನು ತಿಂದುಬಿಡುತ್ತವೆ. ಅನೇಕ ಕ್ರಿಮಿಗಳೂ ಕೂಡ ಭಕ್ಷಿಸುತ್ತವೆ. ಹೀಗಿರುವಾಗ ನಿಷ್ಕರ್ಮಿಯಾದ ನಿನ್ನನ್ನು ಆ ಪ್ರಾಣಿಗಳು ತಿನ್ನದೇ ಬಿಡುತ್ತವೇನು ?
ಯ ಇಮಾಂ ಕುಂಡಿಕಾಂ ಭಿಂದ್ಯಾತ್ ತ್ರಿವಿಷ್ಟಬ್ಧಂ ಚ ಯೋ ಹರೇತ್|
ವಾಸಶ್ಚಾಪಿ ಹರೇತ್ ತಸ್ಮಿನ್ ಕಥಂ ತೇ ಮಾನಸಂ ಭವೇತ್ ॥19॥
ನಿನ್ನಷ್ಟಕ್ಕೆ ನೀನು ಅಲೆದಾಡುತ್ತಿರುವಾಗ ಒಬ್ಬನು ಬಂದು ನಿನ್ನ ಕಮಂಡಲುವನ್ನು ಒಡೆದುಹಾಕುತ್ತಾನೆ. ಮತ್ತೊಬ್ಬನು ನಿನ್ನ ತ್ರಿದಂಡವನ್ನು ಅಪಹರಿಸಿಬಿಡುತ್ತಾನೆ. ನೀನು ಉಟ್ಟುಕೊಂಡ ಬಟ್ಟೆಯನ್ನೇ ಕಿತ್ತುಕೊಂಡು ಬಿಡುತ್ತಾನೆ. ನಿನ್ನ ಕೃಷ್ಣಾಜಿನವನ್ನೂ ಕೂಡ ಅಪಹರಿಸುತ್ತಾನೆ. ಇಂಥ ಸಂದರ್ಭದಲ್ಲಿ ನಿನ್ನ ಮನಸ್ಸು ಅವರ ಬಗ್ಗೆ ಏನು ಆಲೋಚಿಸುತ್ತದೆ? ಎಂಬುದನ್ನು ವಿಮರ್ಶೆ ಮಾಡಿರುವಿಯಾ.
ಟಿಪ್ಪಣಿ - ತ್ರಿವಿಷ್ಟತ್ವಂ ಚ ಯೋ ಹರೇದ್ ಇತ್ಯತ್ರ ತ್ರಿಷು ಲೋಕೇಷು ವಿಷ್ಟೋ ನಿವಿಷ್ಟೋ ಯಸ್ಮಿನ್ ಕೃಷ್ಣಾಜಿನಾದೌ ತಸ್ಯ ಭಾವಃ ತ್ರಿವಿಷ್ಟತ್ವಮ್ | `ತ್ರಿವಿಷ್ಟಪತ್ವಂ ಚ ಯೋ ಹರೇತ್'- ಎಂಬಲ್ಲಿ ಮೂರು ಲೋಕಗಳಲ್ಲಿ ಉಪಯೋಗಿಸುವ ಕೃಷ್ಣಾಜಿನ. `ತಸ್ಯಭಾವಃ ತ್ರಿವಿಷ್ಟತ್ವಂ' ಎಂದರ್ಥ.
ಯಸ್ತ್ವಯಂ ಸರ್ವಮುತ್ಸೃಜ್ಯ ಧಾನಾಮುಷ್ಟೇರನುಗ್ರಹಃ |
ಯದಾನೇನ ಸಮಂ ಸರ್ವಂ ಕಿಮಿದಂ ಹ್ಯವಸೀಯತೇ ॥20॥
ಎಲ್ಲವನ್ನು ಪರಿತ್ಯಾಗ ಮಾಡಿ ಒಂದು ಮುಷ್ಟಿ ಧಾನ್ಯವನ್ನು ಪಡೆಯುವುದರಿಂದ ನಿನಗೇನು ಲಾಭ? ಅಷ್ಟರಿಂದಲೇ ನೀನು ಎಲ್ಲವನ್ನು ಪಡೆದು ಚರಿತಾರ್ಥ- ನಾಗುವುದಾದರೆ ಈ ರಾಜ್ಯವನ್ನೇಕೆ ಪರಿತ್ಯಾಗ ಮಾಡುತ್ತಿರುವಿ? ಆ ಮುಷ್ಟಿಯ ಧಾನ್ಯದಿಂದಲೂ ನಿನಗೆ ಸಂಗವು ತಪ್ಪಲಿಲ್ಲ.
ವಿವರಣೆ - ಎಲ್ಲಾ ರಾಜ್ಯಕೋಶಗಳನ್ನು ಪರಿತ್ಯಾಗ ಮಾಡಿ, ಒಂದು ಮುಷ್ಟಿಯ ಹಿಟ್ಟಿಗಾಗಿ ಹೊರಟಿರುವಿ. ಶರೀರವನ್ನು ಧರಿಸುವುದಕ್ಕಾಗಿ ಮುಷ್ಟಿ ಹಿಟ್ಟನ್ನು ಸ್ವೀಕರಿಸಲೇಬೇಕು ಎಂದು ಉತ್ತರಿಸುವುದಾದರೆ, ಸನ್ಯಾಸಿಯಾದರೂ ಕೂಡ ನಿನಗೆ ಅದರ ಸಂಗ ತಪ್ಪಲಿಲ್ಲ ಎಂದು ನೀನೇ ಒಪ್ಪಿಕೊಂಡಂತಾಯಿತು. ಸಮಸ್ತ ವಸ್ತುಗಳನ್ನು ನೀನು ಸಮಾನವಾದ ದೃಷ್ಟಿಯಿಂದ ಕಾಣಬೇಕು. ರಾಜ್ಯದ ವಿಷಯ- ದಲ್ಲಿ ಸಂಗವನ್ನು ಬಿಟ್ಟಂತೆ ಆ ಮುಷ್ಟಿಹಿಟ್ಟಿನಲ್ಲೂ ಸಂಗವನ್ನು ನೀನು ಬಿಡಬೇಕು. ಇಲ್ಲದಿದ್ದರೆ ರಾಜ್ಯವನ್ನಾದರೂ ಏಕೆ ಪರಿತ್ಯಾಗ ಮಾಡುವಿ ? ಒಂದು ಬೇಕು, ಮತ್ತೊಂದು ಬೇಡ ಎಂಬ ಚಿಂತನೆಯೇ ತಪ್ಪು. ಆದ್ದರಿಂದ ನೀನು ಮೊದಲು ವಿವೇಕಿಯಾಗು, ಜ್ಞಾನಶೀಲನಾಗು, ಆಗ ಈ ರಾಜ್ಯವನ್ನು ಪರಿತ್ಯಾಗ ಮಾಡುವ ಅಗತ್ಯವು ಬರುವುದಿಲ್ಲ. ಜ್ಞಾನಿಯಾದವನು ಮುಷ್ಟಿಹಿಟ್ಟನ್ನು ಪರಿತ್ಯಾಗ ಮಾಡ- ದಂತೆ ರಾಜ್ಯವನ್ನೂ ಕೂಡ ಪರಿತ್ಯಾಗ ಮಾಡಲಾರನು.
ಧಾನಾಮುಷ್ಟೇರಿಹಾರ್ಥಶ್ಚೇತ್ ಪ್ರತಿಜ್ಞಾ ತೇ ವಿನಶ್ಯತಿ |
ಕಾ ವಾಹಂ ತವ ಕೋ ಮೇ ತ್ವಂ ಕಶ್ಚ ತೇ ಮಯ್ಯನುಗ್ರಹಃ ॥21॥

ನಿನ್ನ ಜೀವನದ ರಕ್ಷಣೆಗಾಗಿ ಮುಷ್ಟಿಧಾನ್ಯವನ್ನು ಪಡೆಯಲು ಇಚ್ಛಿಸುವಿ- ಯಾದರೇ, ನಿನ್ನ ಸಂಕಲ್ಪವೇ ವ್ಯರ್ಥವಾಗುತ್ತದೆ. ಇದಕ್ಕಿಂತ ರಾಜ್ಯವನ್ನು ವಹಿಸು- ವುದೇ ಹೆಚ್ಚು. ನಿನಗೆ ನಾನು ಯಾರು? ನನಗೆ ನೀನು ಯಾರು? ನನ್ನಲ್ಲಿ ನೀನು ತೋರಿಸಬೇಕಾದ ಅನುಗ್ರಹವಾದರೂ ಕೂಡ ಏನು?

ವಿವರಣೆ - ಜೀವನವನ್ನು ನಡೆಸಲು ಮುಷ್ಟಿ ಅನ್ನವು ಆವಶ್ಯಕವೆಂದು ನೀನು ತಿಳಿದಿರುವಿ. ಆದರೆ ಎಲ್ಲವನ್ನು ತ್ಯಾಗಮಾಡುತ್ತೇನೆಂಬ ಪ್ರತಿಜ್ಞೆಯನ್ನು ಮಾಡಿ- ರುತ್ತಿ. ನಿನ್ನ ಈ ತಿಳುವಳಿಕೆಗೂ, ನೀನು ಮಾಡಿದ ಪ್ರತಿಜ್ಞೆಗೂ ವಿರೋಧವಿದೆ. ಎಲ್ಲವನ್ನು ಪರಿತ್ಯಾಗ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿ, ಒಂದು ವಸ್ತುವನ್ನು ಅಪೇಕ್ಷಿಸಿದರೂ ಸಾಕು ಪ್ರತಿಜ್ಞೆಯು ಭಂಗವಾಗುತ್ತದೆ. ಇದು ಅರ್ಧಜರತೀಯ ನ್ಯಾಯವಾಗುತ್ತದೆ. ಎಲ್ಲವನ್ನು ಪರಿತ್ಯಾಗ ಮಾಡಿದ ಮೇಲೆ ನಾನು ನಿನಗೇನಾ- ಗಬೇಕು? ನಿನ್ನಿಂದ ನನಗೇನಾಗಬೇಕು? ನನ್ನ ಮೇಲೆ ನಿನಗೆ ಅನುಗ್ರಹದ ಬುದ್ಧಿ ಇರುವುದಾದರೆ, ಮೊದಲಿನಂತೆ ಈ ರಾಜ್ಯವನ್ನು ಶಾಸನ ಮಾಡು. ಅರಮನೆಯಲ್ಲಿ ವಾಸಮಾಡು, ಶ್ರೇಷ್ಠವಾದ ವಸ್ತ್ರಾಭರಣಗಳನ್ನು ಧರಿಸು.

ಪ್ರಶಾಧಿ ಪೃಥಿವೀಂ ರಾಜನ್ ಯದಿ ತೇಽನುಗ್ರಹೋ ಭವೇತ್ |
ಪ್ರಾಸಾದಂ ಶಯನಂ ಯಾನಂ ವಾಸಾಂಸ್ಯಾಭರಣಾನಿ ಚ ॥22॥

ನಿನ್ನ ಮನಸ್ಸಿನ ಆಸೆಯು ಈಡೇರಬೇಕೆಂದರೆ ಉಪ್ಪರಿಗೆಯ ಮೇಲೆ ಪವಡಿಸು. ಸಮಲಂಕೃತವಾದ ರಥದಲ್ಲಿ ಕುಳಿತುಕೋ, ಶ್ರೇಷ್ಠವಾದ ವಸ್ತ್ರಗಳನ್ನು, ಆಭರಣ- ಗಳನ್ನು ಧಾರಣೆ ಮಾಡು, ಸಮೃದ್ಧಿಯಿಂದ ರಾಜ್ಯವನ್ನು ಪರಿಪಾಲನೆ ಮಾಡು.

ಶ್ರಿಯಾ ವಿಹೀನೈರಧನೈಸ್ತ್ಯಕ್ತಮಿತ್ರೈರಕಿಂಚನೈಃ |
ಸೌಷ್ಟಿಕೈಃ ಸಂಭೃತಾನರ್ಥಾನ್ ಯಃ ಸಂತ್ಯಜತಿ ಕಿಂ ನು ತತ್ ॥23॥

ಯಾರು ದುಡ್ಡಿನ ಆಸೆಯನ್ನು ಬಿಟ್ಟಿರುತ್ತಾರೋ, ಎಲ್ಲಾ ಬಗೆಯ ಸಂಪತ್ತುಗಳ ಅಪೇಕ್ಷೆಯನ್ನು ಹೊಂದಿರುವುದಿಲ್ಲವೋ, ಮಿತ್ರರನ್ನೂ ಕೂಡ ಪರಿತ್ಯಾಗ ಮಾಡಿ- ರುತ್ತಾರೋ, ಏನೂ ಇಲ್ಲದವರಾಗಿ ಸನ್ಯಾಸಿಗಳಾಗಿರುತ್ತಾರೋ, ಅವರು ತಮ್ಮ ಸುಖಕ್ಕಾಗಿ ದಂಡ, ಕಮಂಡಲು ಮೊದಲಾದವುಗಳನ್ನು ಸಂಗ್ರಹ ಮಾಡಿಟ್ಟು- ಕೊಳ್ಳುತ್ತಾರೆ. ಹೀಗಿರುವಾಗ ಆಸೆಯುಳ್ಳ ಮನುಷ್ಯನು ರಾಜ್ಯವನ್ನು ಏಕೆ ತಾನೇ ಬಿಡಬೇಕು ?

ವಿವರಣೆ - ಯಾರು ಕಾಂತಿಹೀನರೋ, ನಿರ್ಧನರೋ, ಬಂಧು-ಮಿತ್ರ ರಹಿತರೋ, ಅವರು ಸುಖಾಪೇಕ್ಷೆಯಿಂದಲೇ ಕಮಂಡಲು, ಕೃಷ್ಣಾಜಿನ ಮೊದಲಾ- ದವುಗಳನ್ನು ಸಂಗ್ರಹ ಮಾಡಿಕೊಳ್ಳುತ್ತಾರೆ. ನಿಜವಾಗಿಯೂ ಕೂಡ ಅವರು ಸಂಗ್ರಾಹಕರೇ ಹೊರತು, ತ್ಯಾಗಿಗಳಲ್ಲ. ನಿರ್ಧನರಾದವರಿಗೆ ತ್ಯಾಗ ಮಾಡಲು ಏನು ತಾನೇ ಸಿಗುತ್ತದೆ? ಸನ್ಯಾಸಿಗಳು ಯಾವುದನ್ನು ತಾನೇ ತ್ಯಾಗ ಮಾಡಲು ಸಾಧ್ಯ? ಸನ್ಯಾಸಿಯಾದವನಿಗೆ ತ್ಯಾಗದಿಂದ ಆಗಬೇಕಾದದ್ದು ಯಾವುದೂ ಇಲ್ಲ. ರಾಜನಾದವನು ಸನ್ಯಾಸಿಯಾದರೆ ಅವನೂ ಕೂಡ ಏನನ್ನು ತಾನೇ ತ್ಯಾಗ ಮಾಡಲು ಸಾಧ್ಯ? ಸನ್ಯಾಸಿಯಾಗುವ ಮೊದಲಷ್ಟೇ ತ್ಯಾಗ ಮಾಡಬೇಕು. ತಾನು ಸಂಪಾದನೆ ಮಾಡಿದ್ದೆಲ್ಲವನ್ನು ದಾನ ಮಾಡಬೇಕು. ರಾಜತ್ವವನ್ನು ಪರಿತ್ಯಾಗ ಮಾಡಿ ಸನ್ಯಾಸಿಯಾಗುವುದನ್ನು ಯಾರೂ ಸಹ ತ್ಯಾಗ ಎಂದು ಕರೆಯುವುದಿಲ್ಲ. ರಾಜ್ಯಕೋಶಗಳನ್ನು ಬಿಡುವುದು ಪುರುಷಾರ್ಥಸಾಧಕವಲ್ಲ. ಕರ್ತವ್ಯವನ್ನು ಪರಿತ್ಯಾಗ ಮಾಡಿ, ಪಲಾಯನ ಮಾಡುವುದು ತ್ಯಾಗವಲ್ಲ. ನಿಜವಾಗಿಯೂ ಕೂಡ ಸನ್ಯಾಸಿಯಾಗಬೇಕು, ತ್ಯಾಗಿಯಾಗಬೇಕೆಂದರೆ ರಾಜನು ಸ್ವಧರ್ಮವನ್ನು ಪರಿಪಾಲನೆ ಮಾಡಬೇಕು, ರಾಜ್ಯಭಾರ ಮಾಡಬೇಕು, ನಿರ್ಗತಿಕರಿಗೆ ಆಶ್ರಯ ನೀಡಬೇಕು, ಯಥೇಚ್ಛವಾಗಿ ದಾನಮಾಡಬೇಕು. ರಾಜನಾದವನು ತನಗೆ ವಿಹಿತವಾದ ಕಪ್ಪಕಾಣಿಕೆಗಳನ್ನು ಮತ್ತೊಬ್ಬರಿಂದ ಸ್ವೀಕಾರ ಮಾಡಬೇಕು. ಇದನ್ನು ಬಿಟ್ಟು ಹಿಡಿಮುಷ್ಟಿಯ ಧಾನ್ಯವನ್ನು ಬೇಡುವುದು ಅಧರ್ಮವಾಗುತ್ತದೆ. ವಿಹಿತವಾದದ್ದನ್ನು ಪರಿತ್ಯಾಗ ಮಾಡಿರುವುದು ಒಂದು ದೋಷ. ಅವಿಹಿತ- ವಾದದ್ದನ್ನು ಸ್ವೀಕಾರ ಮಾಡುವುದು ಮತ್ತೊಂದು ದೋಷ. ಆದ್ದರಿಂದ ರಾಜನಾದ ನೀನು ಕರ್ತವ್ಯಪರಿಪಾಲನೆಯನ್ನು ಮಾಡಿ ನಿಜವಾದ ತ್ಯಾಗಿಯಾಗಲು ಪ್ರಯತ್ನಿಸು ಎಂಬುದು ಅರ್ಜುನನ ಅಭಿಪ್ರಾಯ.

ಟಿಪ್ಪಣಿ - ಸೌಷ್ಟಿಕೈಃ ಸಂಭೃತಾನ್ ಇತ್ಯತ್ರ ಸುಷ್ಠು ಶೋಭನಂ ಭವೇದಿತ್ಯಾಶಾ ಯೇಷಾಂ ತೇ ಸೌಷ್ಠಿಕಾಃ, ತೈಃ |
ಇದು ನನಗೆ ಸುಖಕರವಾಗುತ್ತದೆ ಎಂಬ ಆಸೆಯನ್ನು ಹೊಂದಿರುವವರು `ಸೌಷ್ಟಿಕರು' ಎಂದು ಕರೆಸಿಕೊಳ್ಳುತ್ತಾರೆ. ಅಂಥ ಸೌಷ್ಟಿಕರಿಂದ ಸಂಗ್ರಹಿಸಲ್ಪಟ್ಟದ್ದು ಎಂದರ್ಥ.

ಯೋಽತ್ಯಂತಂ ಪ್ರತಿಗೃಹ್ಣೀಯಾದ್ ಯಶ್ಚ ದದ್ಯಾತ್ ಸದೈವ ಹಿ |
ತಯೋಸ್ತ್ವಮಂತರಂ ವಿದ್ಧಿ ಶ್ರೇಯಾಂಸ್ತಾಭ್ಯಾಂ ಕ ಉಚ್ಯತೇ ॥24॥

ಭಿಕ್ಷೆ ಬೇಡಲು ಹೋಗುತ್ತೇನೆಂದು ನೀನು ಹೇಳುತ್ತಿರುವಿ. ಆದರೆ ಯಾವಾ- ಗಲೂ ಕೈ ಚಾಚಿ ಬೇಡುವವನಿಗೂ, ಯಾವಾಗಲೂ ದಾನವನ್ನು ನೀಡುವವನಿಗೂ ಇರುವ ತಾರತಮ್ಯವನ್ನು ಒಮ್ಮೆ ಆಲೋಚನೆ ಮಾಡು. ಇವರಿಬ್ಬರಲ್ಲಿ ಯಾರು ಶ್ರೇಷ್ಠರೆಂಬುದನ್ನು ಗಮನಿಸು.

ವಿವರಣೆ - ದಾನ ಮಾಡುವವನು ಹಾಗೂ ದಾನ ಕೊಡುವವನು ಇವರಿಬ್ಬ- ರಲ್ಲಿ ದಾನ ಕೊಡುವವನೇ ಶ್ರೇಷ್ಠನೆಂಬುದು ನಿರ್ಧಾರಿತವಾದ ವಿಚಾರ. ಸನ್ಯಾಸಿ- ಯಾದವನು ಇನ್ನೊಬ್ಬರ ಬಳಿ ಬೇಡುತ್ತಾನೆಯೇ ಹೊರತು, ಇನ್ನೊಬ್ಬನಿಗೆ ಏನನ್ನೂ ಕೂಡ ಕೊಡಲಾರನು. ಯಾರು ದಾನವನ್ನು ಮಾಡುತ್ತಾನೋ, ಅವನು ತನ್ನಲ್ಲಿರುವ ಪಾಪಗಳನ್ನು ಕಳೆದುಕೊಂಡು ದುಷ್ಕರ್ಮದ ಫಲವನ್ನು ನಿವಾರಣೆ ಮಾಡಿಕೊಳ್ಳುತ್ತಾನೆ. ಶ್ರೇಯಸ್ಸಿಗೆ ಪಾತ್ರನಾಗುತ್ತಾನೆ. ಪ್ರತಿಗ್ರಹ ಮಾಡಿದವನು ಆ ಪಾಪಗಳನ್ನು ಪಡೆದುಕೊಳ್ಳುತ್ತಾನೆ. ಆದರೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು, ಆ ಪಾಪವನ್ನು ದಾನ ಸ್ವೀಕರಿಸಿದವನು ಪರಿಹಾರ ಮಾಡಿಕೊಳ್ಳಬಹುದು. ಆದರೆ ಅದನ್ನು ಮೀರಿ ಪುಣ್ಯ ಸಂಪಾದನೆ ಮಾಡುವುದು ಅವನಿಗೆ ಬಹಳ ಕಷ್ಟವೇ ಆಗುತ್ತದೆ. ಆದರೆ ದಾನ ಮಾಡುವವನು ತನ್ನ ಪಾಪವನ್ನು ಕಳೆದುಕೊಂಡು ಸುಲಭವಾಗಿ ಪುಣ್ಯಸಂಪಾದನೆಯಲ್ಲಿ ತೊಡಗುತ್ತಾನೆ. ಹೆಚ್ಚಿನ ಸಮಯದ ವಿನಿಯೋಗ ಇವನಿಗೆ ಆವಶ್ಯಕವಾಗಿರುವುದಿಲ್ಲ. ಆದ್ದರಿಂದ ಯಾಚಕರಿಗೆ ಆಶ್ರಯನಾಗಿರುವುದೇ ಹೆಚ್ಚು ಶ್ರೇಯಸ್ಸಾಧನ. ಇದನ್ನು ಬಿಟ್ಟು ತಾನೇ ಯಾಚಕ- ನಾಗಲು ತೆರಳಬಾರದು.

ಸದೈವ ಯಾಚಮಾನೇಷು ತಥಾ ದಂಭಾನ್ವಿತೇಷು ಚ |

ಏತೇಷು ದಕ್ಷಿಣಾ ದತ್ತಾ ದಾವಾಗ್ನಾವಿವ ದುಹುರ್ಲ್ಯತಮ್ ॥25॥
ನಿರಂತರ ಯಾಚನೆ ಮಾಡುವುದನ್ನೇ ವೃತ್ತಿ ಮಾಡಿಕೊಂಡಿರುವವನಿಗೆ ಡಾಂಭಿಕನಾದವನಿಗೆ ನೀಡುವ ದಕ್ಷಿಣೆಯು ಕಾಡ್ಗಿಚ್ಚಿನಲ್ಲಿ ಹುತ ಮಾಡಿದ ಹವಿಸ್ಸಿನಂತೆ ವ್ಯರ್ಥವಾಗುತ್ತದೆ.
ವಿವರಣೆ - ಯಾಚನೆ ಮಾಡುವುದನ್ನೇ ಯಾರು ವೃತ್ತಿಯನ್ನಾಗಿ ಮಾಡಿ- ಕೊಂಡಿರುತ್ತಾರೋ, ಅವರಿಗೆ ದಾನ ಮಾಡುವುದು ವ್ಯರ್ಥ. ಮತ್ತು ತಾನು ಧರ್ಮಿಷ್ಠನೆಂಬ ಮುಖವಾಡ ಹಾಕಿಕೊಂಡ ಡಾಂಭಿಕನಿಗೂ ದಾನ ಮಾಡುವುದು ವ್ಯರ್ಥ. ಕಾಡ್ಗಿಚ್ಚಿನಲ್ಲಿ ಆಹುತಿ ನೀಡಿದಂತೆ ಇವರಿಗೆ ಮಾಡುವ ದಾನವು ವ್ಯರ್ಥ- ವಾಗುತ್ತದೆ. ಆದ್ದರಿಂದ ಯಾಚನಾವೃತ್ತಿಯನ್ನು ನೀನು ಸ್ವೀಕರಿಸುವುದು ಉಚಿತ- ವಲ್ಲ.
ಜಾತವೇದಾ ಯಥಾ ರಾಜನ್ ನಾದಗ್ಧ್ವೈವೋಪಶಾಮ್ಯತಿ |
ಸದೈವ ಯಾಚಮಾನೋ ಹಿ ತಥಾ ಶಾಮ್ಯತಿ ನ ದ್ವಿಜಃ ॥26॥
ಬೆಂಕಿಗೆ ಎಷ್ಟು ಕಟ್ಟಿಗೆಯನ್ನು ಹಾಕುತ್ತೇವೋ, ಅಷ್ಟು ಚೆನ್ನಾಗಿ ಅದು ಉರಿ- ಯುತ್ತದೆ. ಕಟ್ಟಿಗೆ ಹಾಕಿದಷ್ಟು ಶಾಂತವಾಗಲು ಸಾಧ್ಯವೇ ಇಲ್ಲ. ಅದರಂತೆ ಯಾಚನೆ- ಯನ್ನು ವೃತ್ತಿಯನ್ನಾಗಿ ಮಾಡಿಕೊಂಡ ಬ್ರಾಹ್ಮಣನು ಎಂದೂ ಕೂಡ ಶಾಂತಿಯನ್ನು ಹೊಂದಲಾರನು.
ವಿವರಣೆ - ಬೇಡಿದಾಗ ಮತ್ತೊಬ್ಬರು ನೀಡಬೇಕು. ಇಲ್ಲದಿದ್ದರೆ ಸಿಟ್ಟು ಮಾಡಿಕೊಳ್ಳುತ್ತಾನೆ. ಅವನಿಗೆ ನೆಮ್ಮದಿಯೇ ಇರುವುದಿಲ್ಲ. ಶಾಂತಿಯೂ ಕೂಡ ಇರುವುದಿಲ್ಲ ಎಂಬುದು ಈ ಶ್ಲೋಕದ ಭಾವ.
ಸತಾಂ ವೈ ದದತೋಽನ್ನಂ ಚ ಲೋಕೇಽಸ್ಮಿನ್ ಪ್ರಕೃತಿರ್ಧ್ರುವಾ |
ನ ಚೇದ್ ರಾಜಾ ಭವೇದ್ ದಾತಾ ಕುತಃ ಸ್ಯುರ್ಮೋಕ್ಷಕಾಂಕ್ಷಿಣಃ ॥27॥
ಸನ್ಯಾಸಿಗಿಂತಲೂ ಕೂಡ ಸನ್ಯಾಸಿಗೆ ಅನ್ನವನ್ನು ನೀಡುವ ಬ್ರಾಹ್ಮಣನೇ ಶ್ರೇಷ್ಠನು. ಅನ್ನವನ್ನು ನೀಡುವ ಬ್ರಾಹ್ಮಣನೇ ಇಲ್ಲದಿದ್ದರೆ ಮೋಕ್ಷಾರ್ಥಿಯಾದ ಸನ್ಯಾಸಿಗಳು ಇರಲು ಹೇಗೆ ಸಾಧ್ಯ ?
ವಿವರಣೆ - ಗೃಹಸ್ಥರೇ ಸನ್ಯಾಸಿಗಳಿಗೆ ಆಧಾರರಾಗಿರುತ್ತಾರೆ. ದಾನವನ್ನು ತೆಗೆದುಕೊಳ್ಳುವ ಸನ್ಯಾಸಿಗಿಂತಲೂ ಗೃಹಸ್ಥನೇ ಶ್ರೇಷ್ಠ ಎಂಬುದು ಇಲ್ಲಿಯ ಅಭಿಪ್ರಾಯ.
ಅನ್ನಾದ್ ಗೃಹಸ್ಥಾ ಲೋಕೇಽಸ್ಮಿನ್ ಭಿಕ್ಷವಸ್ತತ ಏವ ಚ |
ಅನ್ನಾತ್ ಪ್ರಾಣಃ ಪ್ರಭವತಿ ಅನ್ನದಃ ಪ್ರಾಣದೋ ಭವೇತ್ ॥28॥
ಗೃಹಸ್ಥರು ನೀಡುವ ಅನ್ನದಿಂದಲೇ ಸನ್ಯಾಸಿಯು ಜೀವನವನ್ನು ನಡೆಸಬೇಕು. ಏಕೆಂದರೆ ಪ್ರಾಣವು ಅನ್ನದಲ್ಲಿ ನೆಲೆಗೊಂಡಿರುತ್ತದೆ. ಅನ್ನದಾತೃವು ಪ್ರಾಣದಾತಾ ಎಂದು ಕರೆಸಿಕೊಳ್ಳುತ್ತಾನೆ.
ವಿವರಣೆ - ಸನ್ಯಾಸಿಗಿಂತಲೂ ಕೂಡ ಗೃಹಸ್ಥನೇ ಏಕೆ ಶ್ರೇಷ್ಠನೆಂಬುದಕ್ಕೆ ಕಾರಣ ಈ ಶ್ಲೋಕದಲ್ಲಿದೆ. ಯಾರು ಅನ್ನದಾತೃವೋ ಅವನು ಪ್ರಾಣಪ್ರದ. ಪ್ರಾಣಪದ- ನಾದವನು ಪಿತೃಸಮಾನ ಎಂಬುದು ಲೋಕಸಿದ್ಧವಾದ ನಿಯಮ. ಆದ್ದರಿಂದ ಸನ್ಯಾಸಿಗಿಂತಲೂ ಗೃಹಸ್ಥನು ಶ್ರೇಷ್ಠನೆಂದು ಇದರಿಂದ ತಿಳಿಯುತ್ತದೆ.
ಗೃಹಸ್ಥೇಭ್ಯೋಽಪಿ ನಿರ್ಮುಕ್ತಾ ಗೃಹಸ್ಥಾನೇವ ಸಂಶ್ರಿತಾಃ |
ಪ್ರಭವಂ ಚ ಪ್ರತಿಷ್ಠಾಂ ಚ ದಾಂತಾ ವಿಂದಂತ ಆಸತೇ ॥29॥
ಜಿತೇಂದ್ರಿಯರಾದ ಸನ್ಯಾಸಿಗಳು ಗೃಹಸ್ಥಾಶ್ರಮವನ್ನು ಪರಿತ್ಯಾಗ ಮಾಡಿ ಗೃಹಸ್ಥ ಜನರನ್ನೇ ಆಶ್ರಯಿಸುತ್ತಾರೆ. ಆ ಎಲ್ಲಾ ಸನ್ಯಾಸಿಗಳಿಗೆ ಗೃಹಸ್ಥರೇ ಆಶ್ರಯದಾತೃ- ರಾಗುತ್ತಾರೆ. ಸನ್ಯಾಸಿಗಳ ಉಗಮಸ್ಥಾನ ಗೃಹಸ್ಥಾಶ್ರಮವೇ ಆಗಿರುತ್ತದೆ. ಆದ್ದರಿಂದ ಗೃಹಸ್ಥರೇ ಶ್ರೇಷ್ಠರಾಗಿದ್ದಾರೆ.
ತ್ಯಾಗಾನ್ನ ಭಿಕ್ಷುಕಂ ವಿದ್ಯಾನ್ನ ಮೌಢ್ಯಾನ್ನ ಚ ಯಾಚನಾತ್ |
ಋಜುಸ್ತು ಯೋಽರ್ಥಂತ್ಯಜತಿ ನಸುಖಂ ವಿದ್ಧಿ ಭಿಕ್ಷುಕಮ್ ॥30॥
ಎಲ್ಲವನ್ನು ಪರಿತ್ಯಾಗ ಮಾಡುವುದರಿಂದ ಅವನು ಸನ್ಯಾಸಿ ಎಂದು ಕರೆಸಿ- ಕೊಳ್ಳುವುದಿಲ್ಲ. ಅಥವಾ ತನ್ನ ಸನ್ಯಾಸಾಶ್ರಮದಲ್ಲಿ ತನಗಿರುವ ಮೋಹದಿಂದಲೂ ತಾನು ಸನ್ಯಾಸಿ ಎಂದು ಕರೆಸಿಕೊಳ್ಳುವುದಿಲ್ಲ. ಪ್ರಾಮಾಣಿಕವಾದ ಬುದ್ಧಿಯಿಂದ ಯಾರು ಎಲ್ಲಾ ಪ್ರಯೋಜನಗಳನ್ನು ಪರಿತ್ಯಾಗ ಮಾಡುತ್ತಾನೋ, ಅಂಥ ಭಿಕ್ಷುಕನೇ ನಿಜವಾದ ಸನ್ಯಾಸಿ ಎಂದು ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ತ್ಯಾಗಾನ್ನ ಭಿಕ್ಷುಕಂ ವಿಂದ್ಯಾದ್ ಇತ್ಯತ್ರ ತ್ಯಾಗಾದ್ ಭಾರ್ಯಾದಿಷು ಕೋಪೇನ ತ್ಯಾಗಾತ್ |
`ತ್ಯಾಗನ್ನಾ ಭಿಕ್ಷುಕಂ ವಿದ್ಯಾಂತ್' ಎಂಬಲ್ಲಿ `ತ್ಯಾಗಾತ್' ಭಾರ್ಯಾದಿಗಳನ್ನು ಕೋಪದಿಂದ ಪರಿತ್ಯಾಗ ಮಾಡುವವನು ಸನ್ಯಾಸಿ ಎಂದು ಕರೆಸಿಕೊಳ್ಳುವುದಿಲ್ಲ ಎಂದರ್ಥ.
ಅಸಕ್ತಃ ಸಕ್ತವದ್ ಗಚ್ಛನ್ ನಿಃಸಂಗೋ ಮುಕ್ತಬಂಧನಃ |
ಸಮಃ ಶತ್ರೌ ಚ ಮಿತ್ರೇ ಚ ಸ ವೈ ಮುಕ್ತೋ ಮಹೀಪತೇ ॥31॥
ಯಾವುದೇ ಪದಾರ್ಥದಲ್ಲಿ ಆಸಕ್ತಿ ಇಲ್ಲದಿದ್ದರೂ ಆಸಕ್ತನಿರುವಂತೆ ಲೋಕ- ವ್ಯವಹಾರಗಳನ್ನು ನಡೆಸುತ್ತಾನೋ, ಯಾವುದಕ್ಕೂ ಅಂಟಿಕೊಳ್ಳುವುದಿಲ್ಲವೋ, ಎಲ್ಲಾ ವಿಧವಾದ ಬಂಧನಗಳಿಂದ ಮುಕ್ತನಾಗಿರುತ್ತಾನೋ, ಶತ್ರು ಹಾಗೂ ಮಿತ್ರರನ್ನು ಸಮಾನ ಭಾವನೆಯಿಂದ ಕಾಣುತ್ತಾನೋ, ಅವನು ರಾಜನಾಗಿದ್ದರೂ ಕೂಡ ಸರ್ವದಾ ಮುಕ್ತನಾಗಿರುತ್ತಾನೆ. ಸನ್ಯಾಸಿಯಾಗಿರುತ್ತಾನೆ.
ಟಿಪ್ಪಣಿ - ಅಸಕ್ತಃ ಸಕ್ತವದ್ ಇತ್ಯತ್ರ ಅಸಕ್ತಃ ಮನಸಾ ಸಂಗರಹಿತಃ, ಸಕ್ತವದ್ ಬಹಿಃ ಸಕ್ತವದ್ ಗಚ್ಛನ್ |
`ಅಸಕ್ತಃ ಸಕ್ತವತ್' - ಅಸಕ್ತಃ = ಮನಸ್ಸಿನಿಂದ ಸಂಗವನ್ನು ಪರಿತ್ಯಾಗ ಮಾಡಿದವನು. ಸಕ್ತವತ್ = ಬಾಹ್ಯವಾಗಿ ಆಸಕ್ತಿಯಿದ್ದವನಂತೆ ವರ್ತಿಸುವವನು.
ಪರಿವ್ರಜಂತಿ ದಾನಾರ್ಥಂ ಮುಂಡಾಃ ಕಾಷಾಯವಾಸಸಃ |
ಸಿತಾ ಬಹುವಿಧೈಃ ಪಾಶೈಃ ಸಂಚಿನ್ವಂತೋ ವೃಥಾಮಿಷಮ್ ॥32॥
ಮುಂಡನ ಮಾಡಿಸಿಕೊಂಡು ಕೆಂಪು ಬಟ್ಟೆಯನ್ನು ಧಾರಣೆ ಮಾಡಿ, ಸನ್ಯಾಸ ಜೀವನವನ್ನು ಸ್ವೀಕಾರ ಮಾಡಿ, ಇನ್ನೊಬ್ಬರ ಬಳಿ

ದಾನವನ್ನು ಬೇಡುವುದಕ್ಕಾಗಿ ಅಲೆದಾಡುತ್ತಿರುತ್ತಾರೆ. ಅವರ ಅಂತರಂಗದಲ್ಲಿ ಆಸೆಗಳೇ ತುಂಬಿರುತ್ತವೆ. ಅದಕ್ಕೆ ಆ ಆಸೆಗಳನ್ನು ಪೂರೈಸಿಕೊಳ್ಳಲು ಸುಖಸಾಮಗ್ರಿಗಳನ್ನೇ ನಿರಂತರ ಯೋಚನೆ ಮಾಡುತ್ತಾರೆ.
ವಿವರಣೆ - ಶಿಷ್ಯಸಂಪತ್ತು, ಮಠಸಂಪತ್ತು, ಧನಸಂಪತ್ತು, ಆಸ್ತಿಸಂಪತ್ತು ಇವುಗಳ ರಕ್ಷಣೆ ಮಾಡಿದರೆ ಮಾತ್ರ ಸನ್ಯಾಸಿ ಎಂಬ ಲೋಕವಾಡಿಕೆಯನ್ನು ಈ ಶ್ಲೋಕದಲ್ಲಿ ನಿರಾಕರಣೆ ಮಾಡಿದ್ದಾರೆ.
ಟಿಪ್ಪಣಿ - ಸಿತಾ ಬಹುವಿಧೈಃ ಪಾಶೈಃ ಸಂಚಿನ್ವಂತೋ ವೃಥಾಮಿಷಮ್ ಇತ್ಯತ್ರ ಸಿತಾಃ ಬದ್ಧಾಃ | ಆಮಿಷಂ ಸ್ವೋದರಮಾಂಸಂ ಸಂಚಿನ್ವಂತಃ ಪೋಷಯಂತಃ |
`ಸಿತಾಃ ಬಹುವಿಧೈಃ ಪಾಶೈಃ ಸಂಚಿನ್ವಂತೋ ವೃಥಾಮಿಷಮ್' - ಸಿತಾಃ = ಬದ್ಧ- ರಾದವರು, ಆಮಿಷಂ = ಅನೇಕ ಆಸೆಗಳನ್ನು, ಸಂಚಿನ್ವಂತಃ = ಪೋಷಿಸುವಂತವರಾಗಿ.
ತ್ರಯೀಂ ಚ ನಾಮ ವಾರ್ತಾಂ ಚ ತ್ಯಕ್ತ್ವಾ ಪುತ್ರಾನ್ ವ್ರಜಂತಿ ಯೇ|
ತ್ರಿವಿಷ್ಟಬ್ಧಂ ಚ ವಾಸಶ್ಚ ಪ್ರತಿಗೃಹ್ಣಂತ್ಯಬುದ್ಧಯಃ ॥33॥
ಯಾರು ಮೂರು ವೇದಗಳ ಅಧ್ಯಯನವನ್ನು, ವಾಣಿಜ್ಯಾದಿ ವೃತ್ತಿಗಳನ್ನು, ಮಕ್ಕಳನ್ನು ಪರಿತ್ಯಾಗ ಮಾಡಿ ಹೊರಡುತ್ತಾರೋ, ತಮ್ಮ ಹೆಸರನ್ನೂ ಕೂಡ ಬಿಡು- ತ್ತಾರೋ, ತ್ರಿದಂಡ ಕಾಷಾಯಗಳನ್ನು ಧರಿಸಿರುತ್ತಾರೋ, ಅವರು ನಾನಾವಿಧವಾದ ಆಸೆಗಳನ್ನು ಮನಸ್ಸಿನಲ್ಲಿ ಹಾಗೇ ತುಂಬಿಕೊಂಡಿರುತ್ತಾರೆ. ಬುದ್ಧಿಹೀನರಾಗಿ ಸನ್ಯಾಸಿ- ಜೀವನವನ್ನು ಇಚ್ಛಿಸಿರುತ್ತಾರೆ.
ಟಿಪ್ಪಣಿ - ತ್ರಯೀಂ ಚ ನಾಮ ವಾರ್ತಾಂ ಚ ಇತ್ಯತ್ರ ವಾರ್ತಾಂ ವೃತ್ತಿಂ ಜೀವನೋಪಾಯಮ್, ನಾಮ ಪೂರ್ವಂ ವಿದ್ಯಮಾನಂ ಗೋತ್ರನಾಮಾದಿಕಮ್ |
`ತ್ರಯೀಂ ಚ ನಾಮ ವಾರ್ತಾಂ ಚ ' ಎಂಬಲ್ಲಿ `ವಾರ್ತಾಂ' ಎಂಬ ಪದಕ್ಕೆ ವೃತ್ತಿ ಎಂದರ್ಥ. ಜೀವನೋಪಾಯ ಎಂದರ್ಥ. `ನಾಮ' = ಮೊದಲು ಇರುವ ಗೋತ್ರ ಮತ್ತು ಹೆಸರುಗಳನ್ನು.
ವಿವರಣೆ - ಮೂರು ವೇದಗಳ ಅಧ್ಯಯನವನ್ನೇ ಬಿಡುತ್ತಾರೆ. ವೇದಗಳಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಬಿಡುತ್ತಾರೆ, ಕೃಷಿ ಗೋರಕ್ಷಕ ವಾಣಿಜ್ಯಾದಿ ಲೌಕಿಕ ವೃತ್ತಿಗಳನ್ನು ಪರಿತ್ಯಾಗ ಮಾಡುತ್ತಾರೆ. ತಮ್ಮ ಹೆಸರು ಗೋತ್ರಗಳನ್ನೂ ಕೂಡ ಬಿಡುತ್ತಾರೆ. ಹೆಂಡತಿ ಮತ್ತು ಮಕ್ಕಳನ್ನೂ ಕೂಡ ಪರಿತ್ಯಾಗ ಮಾಡುತ್ತಾರೆ. ತ್ರಿದಂಡವನ್ನು ಹಿಡಿದು ಕಾಷಾಯವಸ್ತ್ರವನ್ನು ಧರಿಸಿ ಸನ್ಯಾಸಿಗಳೆಂದು ಹೇಳಿ- ಕೊಂಡು ತಿರುಗುತ್ತಾರೆ. ಇಂಥವರು ಬುದ್ಧಿಹೀನರೇ ಸರಿ. ಯಾವುದನ್ನು ತ್ಯಾಗ ಮಾಡಬಾರದೋ ಅದನ್ನು ತ್ಯಾಗ ಮಾಡಿದರೂ, ಪ್ರತಿಗ್ರಹವನ್ನು ಇವರು ಪರಿತ್ಯಾಗ ಮಾಡಿರುವುದೇ ಇಲ್ಲ. ಮೊದಲು ಪ್ರತಿಗ್ರಹವನ್ನು ಪರಿತ್ಯಾಗ ಮಾಡಿ ಅನಂತರ ಸನ್ಯಾಸಿಯಾಗಬೇಕು ಎಂಬುದೇ ಇದರ ಭಾವ.
ಅನಿಷ್ಕಷಾಯೇ ಕಾಷಾಯಮೀಹಾರ್ಥಮಿತಿ ವಿದ್ಧಿ ತಮ್ |
ಧರ್ಮಧ್ವಜಾನಾಂ ಮುಂಡಾನಾಂ ವೃತ್ತ್ಯರ್ಥಮಿತಿ ಮೇ ಮಿತಿಃ ॥34॥
ಹೃದಯದಲ್ಲಿ ರಾಗಾದಿಗಳನ್ನು ಪರಿತ್ಯಾಗ ಮಾಡದೇ ಬಾಹ್ಯವಾಗಿ ಕಾಷಾಯ- ವಸ್ತ್ರವನ್ನು ಧರಿಸುವುದು ಕೇವಲ ಸ್ವಾರ್ಥಸಾಧನೆಯ ಒಂದು ವೇಷವಷ್ಟೇ. ಧರ್ಮದ ಮುಖವಾಡವನ್ನು ಧರಿಸಿ ತಿರುಗುವ ಮುಂಡರಿಗೆ ಸನ್ಯಾಸಿಜೀವನವು ಒಂದು ವೃತ್ತಿಯೇ ಆಗಿದೆ. ಇದು ನನ್ನ ಅಭಿಪ್ರಾಯ.
ವಿವರಣೆ - ಸನ್ಯಾಸಧರ್ಮವನ್ನು ಇಲ್ಲಿ ಅರ್ಜುನನು ನಿಂದಿಸುತ್ತಿಲ್ಲ. ಸನ್ಯಾಸಿ ವೇಷದ ಸೋಗನ್ನು ಹಾಕಿ, ಮನಸ್ಸನ್ನು ಗೆಲ್ಲಲಾಗದೇ ಧರ್ಮದ ಮುಖವಾಡವನ್ನು ಹಾಕಿಕೊಂಡವರನ್ನಷ್ಟೇ ಇಲ್ಲಿ ಅರ್ಜುನನು ನಿಂದಿಸುತ್ತಿದ್ದಾನೆ. ಹೊರಗೆ ಕಾಷಾಯ- ವಸ್ತ್ರವನ್ನು ಧಾರಣೆ ಮಾಡಬೇಕೆಂದರೆ ಹೃದಯದಲ್ಲಿ ಕಾಷಾಯವನ್ನು ಪರಿತ್ಯಾಗ ಮಾಡಿರಬೇಕು. ರಾಗ, ಕಾಮಕ್ರೋಧಾದಿಗಳನ್ನು ಗೆದ್ದಿರಬೇಕು. ಇಲ್ಲದಿದ್ದರೆ ಸ್ವಾರ್ಥಸಾಧನೆಗಾಗಿ ಕೀರ್ತಿಕಾಮುಕತನದಿಂದ ಸನ್ಯಾಸಜೀವನದ ವೇಷವಷ್ಟೇ ಇವನಿಗೆ ಬಂದ ಲಾಭ. ಧರ್ಮದ ಸೋಗನ್ನು ಹಾಕಿ, ತಾನು ನಿಜವಾದ ವಿರಕ್ತನೆಂದು ಹೇಳಿಕೊಳ್ಳುವ ಇವನು ಅಪ್ರಾಮಾಣಿಕ. ಗೋಮುಖವ್ಯಾಘ್ರ ಎಂಬುದು ಅರ್ಜುನನ ಅಭಿಪ್ರಾಯ.
ಕಾಷಾಯೈರಜಿನೈಶ್ಚೀರೈರ್ನಗ್ನಾನ್ ಮುಂಡಾನ್ ಜಟಾಧರಾನ್ |
ಬಿಭ್ರತ್ ಸಾಧೂನ್ ಮಹಾರಾಜ ಜಯ ಲೋಕಾನ್ ಜಿತೇಂದ್ರಿಯಃ ॥35॥
ಓ ಧರ್ಮರಾಜನೇ! ಯಾರು ಜೀವಿಕೆಗೋಸ್ಕರ ಕಾಷಾಯವಸ್ತ್ರವನ್ನು ಧರಿಸಿ- ದ್ದಾರೋ, ಕೃಷ್ಣಾಜಿನ, ಹರಿದ ಬಟ್ಟೆಗಳನ್ನು ಧರಿಸಿದ್ದಾರೋ, ನಗ್ನರಾಗಿ ಮುಂಡಿಗಳಾಗಿ ತಿರುಗುತ್ತಿದ್ದಾರೋ, ಜಟಾಧಾರಿಗಳಾಗಿದ್ದಾರೋ ಅಂಥ ಸನ್ಯಾಸಿಗಳನ್ನೂ ಕೂಡ ನೀನು ಜಯಿಸುವಿ. ಮೊದಲು ಜಿತೇಂದ್ರಿಯನಾಗಿ ನಿನ್ನ ಕರ್ತವ್ಯದಲ್ಲಿ ತೊಡಗು. ಆಗ ಆ ಎಲ್ಲಾ ವಿಧದ ಸನ್ಯಾಸಿಗಳಿಗೆ ಆಶ್ರಯದಾತನಾಗಿರುವಿ.
ವಿವರಣೆ - ಮೇಲೆ ಉಲ್ಲೇಖಿಸಿದಂತೆ ಕರ್ತವ್ಯಕರ್ಮಗಳನ್ನು ಪರಿತ್ಯಾಗ ಮಾಡಿ, ಅಂತರಂಗದಲ್ಲಿ ತ್ಯಾಗಬುದ್ಧಿಯಲ್ಲಿ ಸನ್ಯಾಸಿಜೀವನವನ್ನು ಸ್ವೀಕರಿಸುವುದು ವ್ಯರ್ಥ. ಆದ್ದರಿಂದ ನೀನು ನಿಜವಾದ ಕರ್ತವ್ಯಪರಿಪಾಲಕನಾಗು. ಎಲ್ಲಾ ವಿಧವಾದ ಜನರಿಗೆ ಆಶ್ರಯದಾತನಾಗು, ಆಗ ಆ ಸನ್ಯಾಸಿಗಳನ್ನೂ ಕೂಡ ನೀನು ಜಯಿಸುವಿ. ಅವರಿಗಿಂತಲೂ ಹೆಚ್ಚಿನ ಪುಣ್ಯವನ್ನು ಸಂಪಾದನೆ ಮಾಡುವಿ. ನೀನು ಸನ್ಯಾಸವೃತ್ತಿಯನ್ನು ಸ್ವೀಕರಿಸಿದಾಗ ಏನು ಫಲವು ದೊರಕುತ್ತದೋ, ಅದಕ್ಕಿಂತ ಹೆಚ್ಚಿನ ಫಲವನ್ನೇ ಹೊಂದುವಿ. ಮತ್ತು ಕಾಷಾಯವಸ್ತ್ರವನ್ನು ಉಟ್ಟು, ಜಟಾಧಾರಿಗಳಾಗಿ ಅಥವಾ ಮುಂಡಿಗಳಾಗಿ ಸಂಚರಿಸುವ ಎಲ್ಲಾ ಸನ್ಯಾಸಿಗಳಿಗೂ ನೀನು ಆಶ್ರಯದಾತನಾಗು. ಅದರಿಂದ ನೀನು ಅವರಿಗಿಂತಲೂ ಶ್ರೇಷ್ಠನಾಗುವಿ. ಈಗಾಗಲೇ ಹಿಂದೆ ತಿಳಿಸಿದಂತೆ ದಾನವನ್ನು ಸ್ವೀಕರಿಸುವವನಿಗಿಂತ ದಾನವನ್ನು ಕೊಡುವವನೇ ಶ್ರೇಷ್ಠನಾಗಿರುತ್ತಾನೆ. ಆದ್ದರಿಂದ ಅಂಥವರಿಗೆಲ್ಲಾ ಜೀವನೋಪಾ- ಯವನ್ನು ಕಲ್ಪಿಸಿದಾಗ ಅವರಿಗಿಂತಲೂ ನೀನು ಶ್ರೇಷ್ಠನಾಗುವಿ.
ಟಿಪ್ಪಣಿ - ಕಾಷಾಯೈರಜಿನೈಃ ಇತ್ಯತ್ರ ವೃತ್ತ್ಯರ್ಥಮ್ ಇತಿ ಪ್ರಾಚೀನಪದಮಾವರ್ತ್ಯ ವೃತ್ತ್ಯರ್ಥಂ ಸ್ವೋದರಪೂರಣಾರ್ಥಂ ಕಾಷಾಯೈರಜಿನೈಶ್ಚೀರೈಶ್ಚ ಸಂವೃತೋ ಭವತಿ | ತಥಾ ನಗ್ನಃ ಮುಂಡಃ ಜಟೀ ಚ ಭವತಿ | ಸಾಧೂನ್ ಸಜ್ಜನಾನ್ ಬಿಭ್ರದ್ ಧನ-

ದಾನಾದಿನಾ ಪೋಷಯನ್ ಜಿತೇಂದ್ರಿಯೋ ಗೃಹಸ್ಥಃ ಲೋಕಾನ್ ಜಯೇತ್, ನತು ಪ್ರಾಗುಕ್ತೋ ಡಂಭಃ ಸನ್ನ್ಯಾಸೀತಿ ಭಾವಃ |
`ಕಾಷಾಯೈರಜಿನೈಃ' ಎಂಬಲ್ಲಿ ವೃತ್ತ್ಯರ್ಥಂ ಎಂಬುದಾಗಿ ಹಿಂದೆ ಇರುವ ಪದವನ್ನು ಆವೃತ್ತಿ ಮಾಡಿಕೊಂಡು ತನ್ನ ಹೊಟ್ಟೆಯನ್ನು ತುಂಬಿಸುವುದಕ್ಕಾಗಿ, ಕಾಷಾಯವಸ್ತ್ರವನ್ನು, ಕೃಷ್ಣಾಜಿನವನ್ನು, ಹರಿದ ಬಟ್ಟೆಗಳನ್ನು ಧರಿಸಿರುತ್ತಾರೆ ಎಂಬರ್ಥವನ್ನು ತಿಳಿಯಬೇಕು. ಇದರಂತೆ ನಗ್ನನಾಗುತ್ತಾನೆ, ಮುಂಡಿಯಾಗಿರುತ್ತಾನೆ, ಜಟಾಧಾರಿಯಾಗಿರುತ್ತಾನೆ. ಇಂಥ `ಸಾಧೂನ್' = ಸಜ್ಜನರನ್ನು, `ಬಿಭ್ರತ್' = ಆಹಾರ ಮೊದಲಾದವುಗಳನ್ನು ಕೊಡುವ ಮೂಲಕ ಪೋಷಣೆ ಮಾಡುತ್ತಾ, `ಜಿತೇಂದ್ರಿಯಃ' = ಇಂದ್ರಿಯವನ್ನು ಗೆದ್ದ ಗೃಹಸ್ಥನಾಗಿ ಲೋಕಗಳನ್ನು ಜಯಿಸು, ಹೊರತು ಹಿಂದೆ ಹೇಳಿದಂತೆ ಡಾಂಭಿಕನಾದ ಸನ್ನ್ಯಾಸಿ- ಯಾಗಬೇಡ ಎಂದಭಿಪ್ರಾಯ.
ಅಗ್ನ್ಯಾಧೇಯಾನಿ ಗುರ್ವರ್ಥಂ ಕ್ರತೂನಪಿ ಸುದಕ್ಷಿಣಾನ್ |
ದದಾತ್ಯಹರಹಃ ಪೂರ್ವಂ ಕೋ ನು ಧರ್ಮರತಸ್ತತಃ ॥36॥
ಪ್ರತಿನಿತ್ಯ ಮಾಡುವ ಅಗ್ನ್ಯಾದಾನಾದಿ ಕಾರ್ಯಗಳಿಗೆ ಆವಶ್ಯಕವಾದ ಸಂಪತ್ತನ್ನು, ಪಶುಗಳನ್ನು, ದಕ್ಷಿಣೆಯನ್ನು ಒದಗಿಸಿಕೊಡುತ್ತಾನೋ, ಮತ್ತು ಉತ್ತಮ ದಕ್ಷಿಣೆಗಳನ್ನು ಕೊಡುವ ಮೂಲಕ ಯಜ್ಞಗಳನ್ನೂ ಕೂಡ ಆಚರಿಸುತ್ತಾನೋ, ಅವನಿಗಿಂತಲೂ ಶ್ರೇಷ್ಠರಾದ ಮತ್ತೊಬ್ಬ ಧರ್ಮಪರಾಯಣರು ಜಗತ್ತಿನಲ್ಲಿ ಯಾರು ತಾನೇ ಇರಲು ಸಾಧ್ಯ?
ವಿವರಣೆ - ಮತ್ತೊಬ್ಬರು ಮಾಡುವ ಯಜ್ಞಯಾಗಾದಿಗಳಿಗೆ ತಾವು ಅನುಕೂಲ ಮಾಡಬೇಕು. ಸ್ವತಃ ತಾನೂ ಕೂಡ ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಡುವ ಮೂಲಕ ಯಜ್ಞಯಾಗವನ್ನು ಮಾಡಬೇಕು. ಇವನೇ ನಿಜವಾದ ಧರ್ಮಿಷ್ಠ. ಇವನನ್ನು ಮೀರಿಸಿ ವ್ಯಕ್ತಿ ಮತ್ತೊಬ್ಬನಿರಲು ಸಾಧ್ಯವಿಲ್ಲ ಎಂದು ಭಾವ.
ತತ್ತ್ವಜ್ಞೋ ಜನಕೋ ರಾಜಾ ಲೋಕೇऽಸ್ಮಿನ್ನಿತಿ ಗೀಯತೇ |
ಸೋऽಪ್ಯಾಸೀನ್ಮೋಹಸಂಪನ್ನೋ ಮಾ ಮೋಹವಶಮನ್ವಗಾಃ ॥37॥
ಅಣ್ಣನೇ! ಲೋಕದಲ್ಲಿ ರಾಜನಾದ ಜನಕನು ಶ್ರೇಷ್ಠವಾದ ತತ್ವಜ್ಞಾನಿಯಾಗಿ- ದ್ದನೆಂದು ಎಲ್ಲರೂ ಹೇಳುತ್ತಾರೆ. ಅವನಿಗೂ ಕೂಡ ಒಮ್ಮೆ ಹೀಗೆ ಸನ್ನ್ಯಾಸದ ಮೇಲೆ ಮೋಹವು ಉಂಟಾಗಿತ್ತು. ಅವನಂತೆ ನೀನು ಮೋಹಕ್ಕೆ ವಶನಾಗಬೇಡ.
ಏವಂ ಧರ್ಮಮನುಕ್ರಾಂತಾಃ ಸದಾ ದಾನತಪಃಪರಾಃ |
ಆನೃಶಂಸ್ಯಗುಣೋಪೇತಾಃ ಕಾಮಕ್ರೋಧವಿವರ್ಜಿತಾಃ ॥38॥
ಪ್ರಜಾನಾಂ ಪಾಲನೇ ಯುಕ್ತಾ ದಾನಮುತ್ತಮಮಾಸ್ಥಿತಾಃ |
ಇಷ್ಟಾಂಲ್ಲೋಕಾನವಾಪ್ಸ್ಯಾಮೋ ಗುರುವೃದ್ಧೋಪಚಾಯಿನಃ ॥39॥
ನಾವು ಯಾವಾಗಲೂ ಧರ್ಮಗಳನ್ನೇ ಆಚರಿಸೋಣ. ಯಥೇಚ್ಛವಾಗಿ ದಾನವನ್ನು ಮಾಡೋಣ. ತಪಸ್ಸನ್ನು ಆಚರಿಸೋಣ. ಹಿಂಸೆಯನ್ನು ಮಾಡದೇ ಸದ್ಗುಣಶಾಲಿಗಳಾಗಿ ಜೀವಿಸೋಣ. ಕಾಮಕ್ರೋಧಾದಿಗಳನ್ನು ಪರಿತ್ಯಾಗ ಮಾಡಿ, ಮನೋನಿಗ್ರಹದಿಂದ ಪ್ರಜೆಗಳನ್ನು ರಕ್ಷಿಸೋಣ. ಹಿರಿಯರನ್ನು, ಗುರುಗಳನ್ನು ಪೂಜಿಸಿ, ಯಜ್ಞಯಾಗಾದಿಗಳನ್ನು ನಡೆಸಿ ಜೀವನವನ್ನು ಸಾರ್ಥಕ ಮಾಡಿ- ಕೊಳ್ಳೋಣ. ಇದರಿಂದಲೇ ನಾವು ಪುಣ್ಯಲೋಕಗಳನ್ನು ಪಡೆದುಕೊಳ್ಳುತ್ತೇವೆ.
ದೇವತಾತಿಥಿಭೂತಾನಾಂ ನಿರ್ವಪಂತೋ ಯಥಾವಿಧಿ |
ಸ್ಥಾನಮಿಷ್ಟಮವಾಪ್ಸ್ಯಾಮೋ ಬ್ರಹ್ಮಣ್ಯಾಃ ಸತ್ಯವಾದಿನಃ ॥40॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅರ್ಜುನವಾಕ್ಯೇ ಅಷ್ಟಾದಶೋऽಧ್ಯಾಯಃ ॥18॥
ದೇವತೆಗಳಿಗೆ ಮತ್ತು ಅತಿಥಿಗಳಿಗೆ ಪ್ರಾಣಿಗಳಿಗೆ ಯಥಾಯೋಗ್ಯವಾಗಿ, ಅವರವರ ಭಾಗಗಳನ್ನು ಆಯಾ ಕಾಲಗಳಲ್ಲಿ ಸಮರ್ಪಿಸಿ ತೃಪ್ತಿಯನ್ನು ಪಡಿಸೋಣ. ಇದರಿಂದ ಇಷ್ಟವಾದ ಪುಣ್ಯಲೋಕಗಳನ್ನು ಪಡೆದು ಧನ್ಯರಾಗೋಣ. ಇದುವೇ ನಮ್ಮ ಜೀವನ ಋಜುವಾದ ಮಾರ್ಗ. ಇದರಿಂದಲೇ ಪುಣ್ಯಲೋಕಗಳು ನಮಗೆ ಖಂಡಿತವಾಗಿಯೂ ಲಭಿಸುತ್ತವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 18ನೆಯ ಅಧ್ಯಾಯವು ಮುಗಿಯಿತು.
*****
19. ಹತ್ತೊಂಬತ್ತನೆಯ ಅಧ್ಯಾಯ
ಅರ್ಜುನನ ಬಳಿ ಯುಧಿಷ್ಠಿರ ತನ್ನ ನಿಲುವನ್ನು ಸಮರ್ಥನೆ ಮಾಡಿಕೊಂಡನು. ಸನ್ನ್ಯಾಸವೇ ಉತ್ತಮ ಧರ್ಮವೆಂದು ಪ್ರತಿಪಾದನೆ ಮಾಡಿದನು.
ಯುಧಿಷ್ಠಿರಃ
ವೇದಾಹಂ ತಾತ ಶಾಸ್ತ್ರಾಣಿ ಅಪರಾಣಿ ಪರಾಣಿ ಚ |
ಉಭಯಂ ವೇದವಚನಂ ಕುರು ಕರ್ಮ ತ್ಯಜೇತಿ ಚ ॥1॥
ಯುಧಿಷ್ಠಿರ - ಓ ತಮ್ಮನೇ! ಧರ್ಮವನ್ನು ತಿಳಿಸುವ ಎಲ್ಲ ಶಾಸ್ತ್ರಗಳನ್ನು ನಾನು ಚೆನ್ನಾಗಿ ಅರಿತಿರುವೆನು. ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಾಸ್ತ್ರಜ್ಞಾನ ನನಗಿದೆ. ಕರ್ಮವನ್ನು ಪ್ರತಿಪಾದನೆ ಮಾಡುವ ಶಾಸ್ತ್ರಜ್ಞಾನವೂ ಕೂಡ ನನಗಿದೆ. ಮತ್ತು ಇವೆರಡಕ್ಕೆ ವಿರುದ್ಧವಾದ ಕರ್ಮಗಳನ್ನು ಪರಿತ್ಯಾಗ ಮಾಡಬೇಕೆಂದು ಹೇಳುವ ವೇದವಚನಗಳನ್ನೂ ಕೂಡ ನಾನು ಅರಿತಿರುವೆನು.
ವಿವರಣೆ - ಶಾಸ್ತ್ರಗಳು ಪರ, ಅಪರ ಎಂಬುದಾಗಿ ಎರಡು ವಿಧವಾಗಿದೆ. ಪರತತ್ವವೆನಿಸಿದ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಾಸ್ತ್ರಗಳು ಪರಶಾಸ್ತ್ರ- ಗಳು ಎಂದು ಕರೆಸಿಕೊಳ್ಳುತ್ತವೆ. ಉಳಿದ ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವ ಶಾಸ್ತ್ರಗಳು ಅಪರಶಾಸ್ತ್ರಗಳು ಎಂದು ಕರೆಸಿಕೊಳ್ಳುತ್ತವೆ. ಈ ಎಲ್ಲಾ ಶಾಸ್ತ್ರಗಳನ್ನೂ ಕೂಡ ನಾನು ಅರಿತಿದ್ದೇನೆ. ಮತ್ತು ವೇದದಲ್ಲಿ ಕರ್ಮವನ್ನು ಮಾಡು ಎಂದು ಹೇಳುವ ವಾಕ್ಯಗಳೂ ಇವೆ. ಕರ್ಮವನ್ನು ಪರಿತ್ಯಾಗ ಮಾಡು ಎಂಬುದಾಗಿ ಹೇಳುವ ವಾಕ್ಯಗಳೂ ಕೂಡ ಇವೆ. ಇವೆರಡಕ್ಕೆ ಪರಸ್ಪರವಾಗಿ ವಿರೋಧವು ಕಾಣಿಸುತ್ತದೆ. ಈ ಎಲ್ಲಾ ಬಗೆಯ ಶಾಸ್ತ್ರಬಗೆಯ ವಾಕ್ಯಗಳನ್ನು ನಾನು ಯುಕ್ತಿ- ಪೂರ್ವಕವಾಗಿ ವಿಚಾರ ಮಾಡಿ ತಿಳಿದುಕೊಂಡಿದ್ದೇನೆ. ವಿರುದ್ಧವಾದ ಎರಡು ವಾಕ್ಯಗಳಲ್ಲಿ ಯಾವುದು ಸತ್ಯ, ಯಾವುದು ಸಿದ್ಧಾಂತ

ಎಂಬುದನ್ನು ಯಥಾವತ್ತಾಗಿ ತಿಳಿದುಕೊಂಡಿದ್ದೇನೆ.
ಆಕುಲಾನಿ ಚ ಶಾಸ್ತ್ರಾಣಿ ಹೇತುಭಿಶ್ಚಿಂತಿತಾನಿ ಚ |
ನಿಶ್ಚಯಶ್ಚೈವ ಯೋ ಮಂತ್ರೇ ವೇದಾಹಂ ತಂ ಯಥಾವಿಧಿ ॥2॥
ಶಾಸ್ತ್ರಗಳು ಮೇಲ್ನೋಟದಲ್ಲಿ ಪರಸ್ಪರ ವಿರೋಧವಿರುವಂತೆ ಕಾಣಿಸುತ್ತವೆ. ಅನೇಕ ಕಾರಣಗಳನ್ನು ಹುಡುಕಿ ವಿಚಾರ ಮಾಡಿದರೂ ಕೂಡ ಆ ವಾಕ್ಯಗಳು ಪರಸ್ಪರ ವಿರುದ್ಧವಾದಂತೆಯೇ ತೋರುತ್ತದೆ. ಆದರೆ ನಾನು ಅವುಗಳನ್ನೆಲ್ಲಾ ಪುನಃ ಪುನಃ ವಿಚಾರ ಮಾಡಿ, ಅವುಗಳ ಮುಖ್ಯಸಿದ್ಧಾಂತ ಏನು ಎಂಬುದನ್ನು ಯಥಾ- ವತ್ತಾಗಿ ತಿಳಿದುಕೊಂಡಿದ್ದೇನೆ.
ತ್ವಂ ತು ಕೇವಲಮಸ್ತ್ರಜ್ಞೋ ವೀರವ್ರತಸಮನ್ವಿತಃ |
ಶಾಸ್ತ್ರಾರ್ಥಂ ತತ್ತ್ವತೋ ಗಂತುಂ ನ ಸಮರ್ಥಃ ಕಥಂಚನ ॥3॥
ಆದರೆ ನೀನು ಅಸ್ತ್ರವಿದ್ಯೆಯನ್ನಷ್ಟೇ ಚೆನ್ನಾಗಿ ಅರಿತಿರುವಿ. ವೀರವ್ರತವನ್ನು ಆಚರಿಸುತ್ತಿರುವಿ. ಶಾಸ್ತ್ರಗಳ ಮರ್ಮವನ್ನು ಯಥಾವತ್ತಾಗಿ ತಿಳಿದುಕೊಳ್ಳಲು ನೀನು ಸಮರ್ಥನಲ್ಲ. ತತ್ವನಿರ್ಣಯವನ್ನೂ ಕೂಡ ಮಾಡಲು ನಿನ್ನಿಂದ ಸಾಧ್ಯವಿಲ್ಲ.
ಶಾಸ್ತ್ರಾರ್ಥಸೂಕ್ಷ್ಮದರ್ಶೀ ಯೋ ಧರ್ಮನಿಶ್ಚಯಕೋವಿದಃ |
ತೇನಾಪ್ಯೇವಂ ನ ವಾಚ್ಯೋಽಹಂ ಯದಿ ಧರ್ಮಂ ಪ್ರಪಶ್ಯಸಿ ॥4॥
ಯಾರು ಶಾಸ್ತ್ರಾಸ್ತ್ರಗಳ ಸೂಕ್ಷ್ಮವಿಚಾರಗಳನ್ನು ತಿಳಿದಿರುತ್ತಾರೋ, ಧರ್ಮವನ್ನು ನಿಶ್ಚಯ ಮಾಡುವುದರಲ್ಲಿ ಪ್ರವೀಣರಾಗಿರುತ್ತಾರೋ, ಅಂಥವರು ಯಾರೇ ಆಗಿದ್ದರೂ ನೀನು ಹೇಳಿದ ಮಾತುಗಳನ್ನು ಹೇಳಲಾರರು.
ಭ್ರಾತೃಸೌಹೃದಮಾಸ್ಥಾಯ ಯದುಕ್ತಂ ವಚನಂ ತ್ವಯಾ |
ನ್ಯಾಯ್ಯಂ ಯುಕ್ತಂ ಚ ಕೌಂತೇಯ ಪ್ರೀತೋಽಹಂ ತೇನ ತೇಽರ್ಜುನ ॥5॥
ಅರ್ಜುನನೇ ! ನೀನು ನನ್ನ ಮೇಲಿರುವ ಪ್ರೀತಿಯಿಂದ ನಿನ್ನ ಅಭಿಪ್ರಾಯವನ್ನು ತಿಳಿಸಿರುವಿ. ನ್ಯಾಯಸಮ್ಮತವಾಗಿ ನಿನಗೆ ಅನಿಸಿದ ಮಾತುಗಳನ್ನು ಆಡಿರುವಿ. ಇದ- ರಿಂದ ನನಗೆ ಸಂತೋಷವಾಗಿದೆ.
ಯುದ್ಧಧರ್ಮೇಷು ಸರ್ವೇಷು ಕ್ರಿಯಾಣಾಂ ನೈಪುಣೇಷು ಚ |
ನ ತ್ವಯಾ ಸದೃಶಃ ಕಶ್ಚಿತ್ ತ್ರಿಷು ಲೋಕೇಷು ವಿದ್ಯತೇ ॥6॥
ಧರ್ಮಂ ಸೂಕ್ಷ್ಮತರಂ ವಾಕ್ಯಂ ತತ್ರ ದುಷ್ಪ್ರತರಂ ತ್ವಯಾ |
ಧನಂಜಯ ನ ಮೇ ಬುದ್ಧಿಮಭಿಶಂಕಿತುಮರ್ಹಸಿ ॥7॥
ನಮ್ಮೆಲ್ಲರಿಗೂ ಒಡೆಯನಾದ ಬ್ರಹ್ಮನೆನಿಸಿದ ವಾಸುದೇವನಿಗೆ ಸಮಾನನಾದವನು ಇಲ್ಲಿಯ ತನಕ ಹುಟ್ಟಿರುವುದಿಲ್ಲ. ಈಗಲೂ ಇಲ್ಲ. ಮುಂದೆ ಹುಟ್ಟುವ ಸಾಧ್ಯತೆ- ಯೂ ಇಲ್ಲ. ಅದರಂತೆ ಎಲ್ಲಾ ವಿಧದ ಯೋಧರಲ್ಲಿ ನೀನೇ ಶ್ರೇಷ್ಠನಾಗಿರುವಿ. ನಿನಗೆ ಸರಿಸಾಟಿಯಾದ ಮತ್ತೊಬ್ಬ ವೀರ ಇದುವರೆಗೂ ಹುಟ್ಟಿಲ್ಲ. ಮುಂದೆ ಹುಟ್ಟುವ ಸಾಧ್ಯತೆಯೂ ಇಲ್ಲ.
ಬಲಮಿಂದ್ರೇ ಚ ವಾಯೌ ಚ ಬಲಂ ಯಚ್ಚ ಜನಾರ್ದನೇ |
ತದ್ ಬಲಂ ಭೀಮಸೇನೇ ಚ ತ್ವಯಿ ಚಾರ್ಜುನ ವಿದ್ಯತೇ ॥8॥
ಇಂದ್ರ, ವಾಯು, ಜನಾರ್ದನ ಇವರಲ್ಲಿ ಎಂಥ ಬಲವಿದೆಯೋ, ಅಂಥದ್ದೇ ಬಲ ನಿನ್ನಲ್ಲಿ. ಹಾಗೂ ಭೀಮಸೇನನಲ್ಲಿ ನೆಲೆಗೊಂಡಿದೆ.
ತ್ವತ್ಸಮಶ್ಚಿತ್ರಯೋಧೀ ಚ ದೂರಪಾತೀ ಚ ಪಾಂಡವ |
ದಿವ್ಯಾಸ್ತ್ರೇಣ ಚ ಸಂಪನ್ನ ಕೋ ವಾನ್ಯಸ್ತ್ವತ್ಸಮೋ ನರಃ ॥9॥
ವಿಚಿತ್ರವಾದ ಯುದ್ಧದಲ್ಲಿ ದೂರದಿಂದ ಪಡೆಯುವುದರಲ್ಲಿ ದಿವ್ಯಾಸ್ತ್ರಸಂಪತ್ತಿ- ನಲ್ಲಿ ನಿನಗೆ ಸರಿಸಾಟಿಯಾದ ಮತ್ತೊಬ್ಬ ವೀರನಿರಲು ಸಾಧ್ಯವಿಲ್ಲ.
ಯುದ್ಧಧರ್ಮೇಷು ಸರ್ವೇಷು ಕ್ರಿಯಾಣಾಂ ನೈಪುಣೇಷು ಚ |
ನ ತ್ವಯಾ ಸದೃಶಃ ಕಶ್ಚಿತ್ ತ್ರಿಷು ಲೋಕೆಷು ವಿದ್ಯತೇ ॥10॥
ಅನೇಕ ಬಗೆಯ ಯುದ್ಧದ ಧರ್ಮಗಳಲ್ಲಿ ಮತ್ತು ಸಂಗ್ರಾಮಕೌಶಲಗಳಲ್ಲಿ ನಿನಗೆ ಸರಿಸಾಟಿಯಾದವನೇ ಮೂರು ಲೋಕಗಳಲ್ಲಿ ಯಾರೂ ಇರುವುದಿಲ್ಲ.
ಧರ್ಮಂ ಸೂಕ್ಷ್ಮತರಂ ವಾಚ್ಯಂ ತತ್ರ ದುಷ್ಪ್ರತರಂ ತ್ವಯಾ |
ಧನಂಜಯ ನ ಮೇ ಬುದ್ಧಿಮಭಿಶಂಕಿತುಮರ್ಹಸಿ ॥11॥
ಧರ್ಮವು ಅತ್ಯಂತಸೂಕ್ಷ್ಮವಾಗಿದೆ. ಅದರಲ್ಲಿ ನೀನು ಪ್ರಾವೀಣ್ಯವನ್ನು ಸಾಧಿ- ಸಲು ಸಾಧ್ಯವಿಲ್ಲ. ಅಂಥ ಧರ್ಮದ ವಿಷಯದಲ್ಲಿ ನನ್ನ ಬುದ್ಧಿಗೆ ನಿರ್ಧಾರವಾಗಿ ತೋರಿದ ವಿಷಯದಲ್ಲಿ ನೀನು ಸಂದೇಹಪಡುವುದು ಯುಕ್ತವಲ್ಲ.
ಟಿಪ್ಪಣಿ - ತಚ್ಚ ದುಷ್ಪ್ರತರಂ ತ್ವಯಾ ಇತ್ಯತ್ರ ಪ್ರಕರ್ಷೇಣ ತರ್ತುಂ ಯೋಗ್ಯಂ ಪ್ರತರಂ, ಪ್ರತರಂ ನ ಭವತೀತಿ ದುಷ್ಪ್ರತರಮ್ | ತತ್ತ್ವಂ ನ ವೃದ್ಧಾ ಇತ್ಯತ್ರ ತತ್ತ್ವಂ ತತ್ತ್ವತಃ | ತದ್ವತ್ತ್ವಂ ಯೋಧಮುಖ್ಯೇಷು ಇತ್ಯತ್ರ ತ್ವಂ ಯೋಧಮುಖ್ಯೇಷು ತದ್ವತ್ ಮಹೇಶ್ವರಾದಿವತ್ | ತ್ವಯಿ ಪರಮಂ ಸತ್ತ್ವಮಿಷ್ಯತೇ |
\`ತದ್ವತ್ತ್ವಂ ಯೋಧಮುಖ್ಯೇಷು' ಎಂಬಲ್ಲಿ ಮಹೇಶ್ವರಾದಿಗಳಲ್ಲಿ ವಿಶೇಷಶಕ್ತಿ ಇರುವಂತೆ ನಿನ್ನಲ್ಲಿ ಅಂಥ ಶಕ್ತಿ ಇದೆ ಎಂದಭಿಪ್ರಾಯ.
ಟಿಪ್ಪಣಿ - ತಚ್ಚ ದುಷ್ಪ್ರತರಂ ತ್ವಯಾ ಇತ್ಯತ್ರ ಪ್ರಕರ್ಷೇಣ ತರ್ತುಂ ಯೋಗ್ಯಂ ಪ್ರತರಂ, ಪ್ರತರಂ ನ ಭವತೀತಿ ದುಷ್ಪ್ರತರಮ್ |
\`ತತ್ರ ದುಷ್ಪ್ರತರಂ ತ್ವಯಾ' - ಎಂಬಲ್ಲಿ ಪ್ರಕರ್ಷದಿಂದ ದಾಟಲು ಸಾಧ್ಯವಾದದ್ದು ಯಾವುದೋ, ಅದು \`ಪ್ರತರ' ಎಂದು ಕರೆಸಿಕೊಳ್ಳುತ್ತದೆ. \`ದುಷ್ಪ್ರತರ' ಎಂದರೆ ದಾಟಲು ಸಾಧ್ಯವಾಗದೇ ಇರುವುದು ಎಂದರ್ಥ.
ಯುದ್ಧಶಾಸ್ತ್ರವಿದೇವ ತ್ವಂ ನ ವೃದ್ಧಾಃ ಸೇವಿತಾಸ್ತ್ವಯಾ |
ಸಂಕ್ಷಿಪ್ತವಿಸ್ತರವಿದಾಂ ನ ತೇಷಾಂ ವೇತ್ಸಿ ನಿಶ್ಚಯಮ್ ॥12॥
ಓ ಅರ್ಜುನನೇ! ನೀನು ಕೇವಲ ಯುದ್ಧಶಾಸ್ತ್ರವನ್ನೇ ತಿಳಿದಿರುವಿ. ಎಂದೂ ಸಹ ಜ್ಞಾನವೃದ್ಧರನ್ನು ಸೇವೆ ಮಾಡಿರುವುದಿಲ್ಲ.

ಆದ್ದರಿಂದ ಸಂಕ್ಷೇಪವಾಗಿ ಅಥವಾ ವಿಸ್ತಾರವಾಗಿ ಧರ್ಮದ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ತಿಳಿದುಕೊಂಡಿರುವ ನಿರ್ಧಾರಗಳನ್ನು ನಿನ್ನಿಂದ ತಿಳಿಯಲು ಸಾಧ್ಯವಿಲ್ಲ.
ಟಿಪ್ಪಣಿ - ತತ್ತ್ವಂ ನ ವೃದ್ಧಾ ಇತ್ಯತ್ರ ತತ್ತ್ವಂ ತತ್ತ್ವತಃ |
`ತ್ವಂ ನ ವೃದ್ಧಾಃ' ಎಂಬಲ್ಲಿ ತತ್ವಂ ಎಂಬ ಪದಕ್ಕೆ ತತ್ವತಃ ಎಂದರ್ಥ.
ತಪಸ್ತ್ಯಾಗೋಽವಿಧಿರಿತಿ ನಿಶ್ಚಯಸ್ತ್ವೇಷ ಧೀಮತಾಮ್ |
ಪರಂ ಪರಂ ಜ್ಯಾಯ ಏಷಾಂ ಯೇಷಾಂ ನೈಶ್ಶ್ರೇಯಸೀ ಮತಿಃ ॥13॥
ಯಾರಿಗೆ ಮೋಕ್ಷಾಪೇಕ್ಷಿತವಾದ ನಿಶ್ಚಯ ಜ್ಞಾನವು ಇರುತ್ತದೋ, ಅಂಥಹ ಸಾಧಕರ ನಿರ್ಣಯವು ಹೀಗಿದೆ - ತಪಸ್ಸು, ತ್ಯಾಗ ಮತ್ತು ಶಾಸೊತ್ರೋಕ್ತವಿಧಿ- ವಿಧಾನಗಳಿಂದ ಯಾವ ಬ್ರಹ್ಮಜ್ಞಾನವಿದೆಯೋ, ಆ ಮೂರರಲ್ಲಿ ತಪಸ್ಸಿಗೆ ತ್ಯಾಗವು, ತ್ಯಾಗಕ್ಕಿಂತಲೂ ವಿಧಿಯು ಬಲಿಷ್ಠವಾಗಿದೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಇದೇ ಮೋಕ್ಷಕ್ಕೆ ಸಾಧಕವಾಗಿದೆ.
ಯಸ್ತ್ವೇತನ್ಮನ್ಯಸೇ ಪಾರ್ಥ ನ ಜ್ಯಾಯೋಽಸ್ತಿ ಧನಾದಿತಿ |
ತತ್ರ ತೇ ವರ್ತಯಿಷ್ಯಾಮಿ ಯಥಾ ನೈತತ್ ಪ್ರಧಾನತಃ ॥14॥
ಆದರೆ ನೀನು ಧನವೇ ಶ್ರೇಷ್ಠವೆಂದು ಹೇಳುತ್ತಿರುವಿ. ಆದರೆ ಆ ಧನವು ಪ್ರಧಾನವಲ್ಲ.
ತಪಃಸ್ವಾಧ್ಯಾಯಶೀಲಾ ಹಿ ದೃಶ್ಯಂತೇ ಧಾರ್ಮಿಕಾ ಜನಾಃ |
ಋಷಯಸ್ತಪಸಾ ಯುಕ್ತಾ ಯೇಷಾಂ ಲೋಕಾಃ ಸನಾತನಾಃ ॥15॥
ಲೋಕದಲ್ಲಿ ತಪಸ್ಸು, ಸ್ವಾಧ್ಯಾಯ ಇವುಗಳನ್ನು ನಿರಂತರ ಆಚರಿಸುತ್ತಾ ಧಾರ್ಮಿಕರಾಗಿರುವ ಜನರು ಅನೇಕರಿದ್ದಾರೆ. ಋಷಿಗಳೂ ಕೂಡ ತಪಸ್ಸಿನಲ್ಲೇ ಆಸಕ್ತರಾಗಿರುತ್ತಾರೆ. ಇವರೆಲ್ಲರಿಗೂ ಸನಾತನವಾದ ಪುಣ್ಯಲೋಕಗಳು ಪ್ರಾಪ್ತ- ವಾಗುತ್ತವೆ.
ಅಜಾತಶತ್ರವೋ ಧೀರಾಸ್ತಥಾನ್ಯೇ ವನವಾಸಿನಃ |
ಅರಣ್ಯೇ ಬಹವಶ್ಚೈವ ಸ್ವಾಧ್ಯಾಯೇನ ದಿವಂ ಗತಾಃ ॥16॥
ಕೆಲವು ಧೀರರು ಅಜಾತಶತ್ರುಗಳಾಗಿರುತ್ತಾರೆ. ಇನ್ನೂ ಕೆಲವು ಅರಣ್ಯದಲ್ಲೇ ವಾಸ ಮಾಡುತ್ತಾರೆ. ನಿರಂತರ ಸ್ವಾಧ್ಯಾಯದಲ್ಲೇ ನಿರತರಾಗಿ ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತಾರೆ. ಮರಣವನ್ನು ಹೊಂದಿದ ಮೇಲೆ ಸ್ವರ್ಗಕ್ಕೆ ತೆರಳುತ್ತಾರೆ.
ಉತ್ತರೇಣ ತು ಪಂಥಾನಮಾರ್ಯಾ ವಿಷಯನಿಗ್ರಹಾತ್ |
ಅಬುದ್ಧಿಜಂ ತಮಸ್ತ್ಯಕತ್ವ ಲೋಕಾಂಸ್ತ್ಯಾಗವತಾಂ ಗತಾಃ ॥17॥
ಅನೇಕ ಆರ್ಯಪುರುಷರು ಇಂದ್ರಿಯಗಳನ್ನು ಗೆದ್ದಿದ್ದಾರೆ. ಅವುಗಳಿಗೆ ಸಂಬಂಧ- ಪಟ್ಟ ವಿಷಯಗಳಿಂದ ದೂರ ಸರಿದಿದ್ದಾರೆ. ತಮ್ಮ ಅವಿವೇಕಬುದ್ಧಿಗಳಿಂದ ಹುಟ್ಟಿದ ಅಜ್ಞಾನವನ್ನು ಪರಿತ್ಯಾಗ ಮಾಡಿದ್ದಾರೆ. ದೇವಯಾನದ ಮೂಲಕ ತ್ಯಾಗಿಗಳಷ್ಟೇ ಹೊಂದಲ್ಪಡುವ ಪುಣ್ಯಲೋಕಗಳನ್ನು ಪಡೆದಿದ್ದಾರೆ. ಇವರದ್ದು ಉತ್ತರಾಯಣ ಮಾರ್ಗ.
ದಕ್ಷಿಣೇನ ತು ಪಂಥಾನಂ ಯಂ ಭಾಸ್ವಂತಂ ಪ್ರಚಕ್ಷತೇ |
ಏತೇ ಕ್ರಿಯಾವತಾಂ ಲೋಕಾ ಯೇ ಶ್ಮಶಾನಾನಿ ಭೇಜಿರೇ ॥18॥
ಸಕಾಮಕರ್ಮಿಗಳಾದ ಗೃಹಸ್ಥರು, ದಕ್ಷಿಣಾಯನ ಮಾರ್ಗವಾಗಿದೆ. ಪಿತೃ- ಯಾನವೆಂಬ ದಕ್ಷಿಣಮಾರ್ಗದಿಂದ ಚಂದ್ರಲೋಕವನ್ನು ಹೊಂದುತ್ತಾರೆ ಕರ್ಮ- ಗಳಲ್ಲೇ ನಿರತರಾಗಿರುತ್ತಾರೆ. ಇವರೆಲ್ಲರೂ ಹೋಗುವ ಮಾರ್ಗವೆಂದರೆ ಅದು ಸ್ಮಶಾನಮಾರ್ಗ.
ಅನಿರ್ದೇಶ್ಯಾ ಗತಿಃ ಸಾ ತು ಯಾಂ ಪ್ರಪಶ್ಯಂತಿ ಮೋಕ್ಷಿಣಃ |
ತಸ್ಮಾದ್ ಯೋಗಃ ಪ್ರಧಾನೇಷ್ಟಃ ಸ ತು ದುಃಖಂ ಪ್ರವೇದಿತುಮ್ ॥19॥
ಮೋಕ್ಷಾರ್ಥಿಗಳು ಯಾವ ಮಾರ್ಗವನ್ನು ಹಿಡಿದು ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳುತ್ತಾರೋ, ಅದು ಇಂಥದ್ದೇ ಮಾರ್ಗದಲ್ಲಿ ಅವರು ತೆರಳಿರುತ್ತಾರೆಂದು ಹೇಳಲು ಸಾಧ್ಯವಿಲ್ಲ.
ವಿವರಣೆ - ಗುರುಗಳ ಮಾರ್ಗದರ್ಶನದಲ್ಲಿ ಆತ್ಮಸಾಕ್ಷಾತ್ಕಾರವು ಆಗುತ್ತದೆ. ಧ್ಯಾನಯೋಗದಿಂದ ಅಥವಾ ಜ್ಞಾನಯೋಗದಿಂದ ಆತ್ಮಸಾಕ್ಷಾತ್ಕಾರವು ಸಾಧ್ಯ- ವಾಗುತ್ತದೆ. ಆ ಜ್ಞಾನಯೋಗದ ಅಥವಾ ಧ್ಯಾನಯೋಗದ ಸ್ವರೂಪವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ ಎಂಬುದು ಅಭಿಪ್ರಾಯ.
ಅನುಸ್ಮೃತ್ಯ ತು ಶಾಸ್ತ್ರಾಣಿ ಕವಯಃ ಸಮವಸ್ಥಿತಾಃ |
ಅಪೀಹ ಸ್ಯಾದಪೀಹ ಸ್ಯಾತ್ ಸಾರಾಸಾರದಿದೃಕ್ಷಯಾ ॥20॥
ಎಲ್ಲಾ ವಿದ್ವಾಂಸರು ಒಂದೇ ಕಡೆ ಸೇರಿ ಈ ಮಾರ್ಗದಲ್ಲಿ ನಡೆದರೆ ಆ ಸಾರಾಸಾರ ವಿಮರ್ಶೆಯನ್ನು ತಿಳಿದ ಅನೇಕ ವಿದ್ವಾಂಸರು ಬಹಳ ವಿಷಯಗಳನ್ನು ತಿಳಿದು ಇಲ್ಲಿರುವುದೇ, ಅಲ್ಲಿರಬಹುದೇ ಎಂಬುದಾಗಿ ಹುಡುಕಿ ಕೊನೆಯಲ್ಲಿ ಈ ನಿಶ್ಚಯಕ್ಕೆ ಬಂದಿದ್ದಾರೆ.
ಟಿಪ್ಪಣಿ - ಅಪೀಹ ಸ್ಯಾದಪೀಹ ಸ್ಯಾದ್ ಇತ್ಯತ್ರ ಸಾರಾಸಾರದಿದೃಕ್ಷಯಾ ಇಹ ಸ್ಯಾದಪಿ ಇಹ ಸ್ಯಾದಪೀತಿ ಕ್ರಿಯಾಯೋಗೇ ವಿಚಾರಯಂತಿ |
ವಿವರಣೆ - ವಿದ್ವಾಂಸರು ಒಂದೇ ಕಡೆ ಸೇರಿ ಎಲ್ಲಿ ಸಾರವಿದೆ? ಯಾವುದನ್ನು ಅನುಸರಣೆ ಮಾಡುವುದರಿಂದ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ಈ ಮಾರ್ಗವು ಕೇವಲ ಸಾರರಹಿತವೇ? ಅಥವಾ ಆಡಂಬರವೇ? ಈ ಮಾರ್ಗದಲ್ಲಿ ಜನನ- ಮರಣಗಳ ಬಾಧೆ ತಪ್ಪಿಸಿಕೊಳ್ಳಲು ಸಾಧ್ಯವಿದೆಯೇ? ಯಾವುದು ದಕ್ಷಿಣಮಾರ್ಗ, ಯಾವುದು ಉತ್ತರಮಾರ್ಗ? ಎಂಬುದಾಗಿ ಸಾರಾಸಾರಗಳನ್ನು ಕಂಡುಕೊಳ್ಳಲು ಇಚ್ಛಿಸಿದ್ದಾರೆ. ಅದಕ್ಕೆ ಸಂಬಂಧಪಟ್ಟ ಎಲ್ಲಾ ಶಾಸ್ತ್ರಗಳನ್ನು ಅವಲೋಕಿಸಿದ್ದಾರೆ. ಈ ಎಲ್ಲ ವಿಚಾರಗಳು ನಿನಗೆ ತಿಳಿದಿರುವುದೇ ಇಲ್ಲ.
ವೇದವಾದಾನತಿಕ್ರಮ್ಯ ಶಾಸ್ತ್ರಾಣ್ಯರಣ್ಯಕಾನಿ ಚ |
ವಿಪಾಟ್ಯ ಕದಲೀಸ್ತಂಭಂ ಸಾರಂ ದದೃಶಿರೇ ನ ತೇ ॥21॥
ಎಲ್ಲಾ ವೇದ-ವೇದಾಂತಗಳನ್ನು ಅಧ್ಯಯನ ಮಾಡಿ, ಶಾಸ್ತ್ರಗಳನ್ನು ಆರಣ್ಯಕ- ಗಳನ್ನೂ ಕೂಡ ಅಧ್ಯಯನ ಮಾಡಿ, ಕೊನೆಯಲ್ಲಿ

ಬಾಳೆಯ ಕಂಬವನ್ನು ಸುಲಿದು, ಸುಲಿದು ಅದರಲ್ಲಿರುವ ತಿರುಳನ್ನು ಕಾಣದವರಂತೆ ಮುಖ್ಯಸಾರವನ್ನೇ ಇವರು ಕಾಣಲಾರರು.
ಟಿಪ್ಪಣಿ - ವಿಪಾಟ್ಯ ಕದಲೀಸ್ತಂಭಮ್ ಇತ್ಯತ್ರ ತೇ ಕದಲೀಸ್ತಂಭಂ ವಿಪಾಟ್ಯೈವ ಸಾರಂ ನ ದದೃಶಿರೇ |
`ವಿಪಾಟ್ಯ ಕದಲೀಸ್ತಂಭಂ' ಎಂಬಲ್ಲಿ `ತೇ ಕದಲೀ ಸ್ತಂಭಂ ಸಾರಂ ದದೃಶಿರೇ' ಅವರು  ಬಾಳೇಕಂಬವನ್ನು ಎಷ್ಟು ಸೀಳಿದರು ಸಾರವನ್ನು ಕಾಣುವುದಿಲ್ಲ ಎಂದರ್ಥ.
ವಿವರಣೆ - ಕೆಲವರು ವೇದವಾಕ್ಯಗಳನ್ನು ಚೆನ್ನಾಗಿ ಅಧ್ಯಯನ ಮಾಡುತ್ತಾರೆ. ವೇದಾಂತಶಾಸ್ತ್ರಗಳನ್ನೂ ಕೂಡ ಅಧ್ಯಯನ ಮಾಡುತ್ತಾರೆ. ಶಾಸ್ತ್ರವಿಧಿಗಳನ್ನು ಅನುಸರಿಸುತ್ತಾರೆ, ಚರ್ಚಿಸುತ್ತಾರೆ, ಆರಣ್ಯಕಗಳನ್ನೂ ಕೂಡ ಅಧ್ಯಯನ ಮಾಡು- ತ್ತಾರೆ. ಆದರೂ ಕೂಡ ಮುಖ್ಯಸಾರವನ್ನೇ ಅವರು ಅರ್ಥಮಾಡಿಕೊಳ್ಳುವುದಿಲ್ಲ. ಇಂಥವರು ಎಷ್ಟು ಓದಿಯೂ ವ್ಯರ್ಥ.
ಅಥೈಕಾಂತವ್ಯುದಾಸೇನ ಶರೀರೇ ಪಾಂಚಭೌತಿಕೇ |
ಇಚ್ಛಾದ್ವೇಷಸಮಾಸಕ್ತಮಾತ್ಮಾನಂ ಪ್ರಾಹುರಿಂಗಿತೈಃ ॥22॥
ಅಂಥವರಿಗೆ ಆತ್ಮತತ್ವವು ತಿಳಿಯುವುದಿಲ್ಲ. ಏಕಾಂತವಾದ ಸನ್ಯಾಸ ಮಾರ್ಗ- ವನ್ನು ನಿರಾಕರಣೆ ಮಾಡಿ, ಪಾಂಚಭೌತಿಕವಾದ ಶರೀರದೊಳಗಿರುವ ಆತ್ಮನನ್ನೇ ಇಚ್ಛಾದ್ವೇಷಯುಕ್ತನನ್ನಾಗಿ ತಿಳಿಯುತ್ತಾರೆ. ಆದರೆ ಆತ್ಮತತ್ವ ಹಾಗಿರುವುದೇ ಇಲ್ಲ.
ಟಿಪ್ಪಣಿ - ಏಕಾಂತವ್ಯುದಾಸೇನ ಇತ್ಯತ್ರ ವ್ಯುದಾಸಃ ಔದಾಸೀನ್ಯಮುಪೇಕ್ಷಾ  |
`ಏಕಾಂತ ಉದಾಸೇನ' ಎಂಬಲ್ಲಿ ವ್ಯುದಾಸ ಎಂಬ ಪದಕ್ಕೆ ಔದಾಸೀನ್ಯ ಎಂದರ್ಥ. ಸನ್ಯಾಸದಲ್ಲಿ ಉಪೇಕ್ಷೆಯನ್ನು ಮಾಡಿ ಎಂಬಭಿಪ್ರಾಯವನ್ನು ತಿಳಿಯಬೇಕು.
ವಿವರಣೆ - ಮೊದಲು ಜೀವಾತ್ಮನನ್ನು ತಿಳಿಯಲು ಪ್ರಯತ್ನಿಸಬೇಕು. ಅನಂತರ ಪರಮಾತ್ಮನನ್ನು ತಿಳಿಯಬೇಕು. ಅಹಂಕಾರ ಮಮಕಾರಗಳಿಂದ ಇಚ್ಛಾದ್ವೇಷ- ಗಳನ್ನೇ ತಮ್ಮ ಪಾಂಚಭೌತಿಕ ಶರೀರಗಳಲ್ಲಿ ಇವರು ತುಂಬಿಕೊಂಡಿರುತ್ತಾರೆ. ಇದರಿಂದ ತಮ್ಮನ್ನೇ ತಾವು ತಿಳಿದುಕೊಳ್ಳುವುದಿಲ್ಲ. ಕ್ರೋಧಮೋಹಗಳಿಗೆ ಒಳಗಾಗಿ ಅಂತರಂಗಜ್ಞಾನವನ್ನು ಕಳೆದುಕೊಳ್ಳುತ್ತಾರೆ. ಹೀಗಿರುವಾಗ ಪರಮಾತ್ಮತ- ತ್ವವನ್ನು ತಿಳಿದುಕೊಳ್ಳಲು ಇವರಿಂದ ಸಾಧ್ಯವೇ ಆಗುವುದಿಲ್ಲ.
ಅಗ್ರಾಹ್ಯಂ ಚಕ್ಷುಷಾ ಸೂಕ್ಷ್ಮಮನಿರ್ದೇಶ್ಯಂ ಚ ತದ್ಗಿರಾ |
ಕರ್ಮಹೇತುಪುರಸ್ಕಾರಂ ಭೂತೇಷು ಪರಿವರ್ತತೇ  ॥23॥
ಆ ಆತ್ಮತತ್ವವು ಕಣ್ಣಿಗೆ ಕಾಣಿಸುವುದಿಲ್ಲ. ಇಂದ್ರಿಯಗಳಿಗೆ ಗೋಚರ- ವಾಗುವುದಿಲ್ಲ. ಬಾಯಿಯಿಂದ ನಿರೂಪಣೆ ಮಾಡಲು ಸಾಧ್ಯವಾಗುವುದಿಲ್ಲ. ಕರ್ಮಕ್ಕೆ ಕಾರಣವೆನಿಸಿದ ಅಜ್ಞಾನದಿಂದ ಪುನಃ ಪುನಃ ಶರೀರಗಳನ್ನು ಪಡೆದು ಈ ಸಂಸಾರಚಕ್ರದಲ್ಲಿ ಸುತ್ತುತ್ತಲೇ ಇರುತ್ತದೆ.
ಟಿಪ್ಪಣಿ - ತದ್ಗಿರಾ ಇತ್ಯತ್ರ ತತ್ ಜೀವಸ್ವರೂಪಮ್ |
`ತದ್ಗಿರಾ' ಎಂಬಲ್ಲಿ `ತತ್' ಎಂಬ ಪದಕ್ಕೆ `ಜೀವಸ್ವರೂಪ' ಎಂದರ್ಥ.
ವಿವರಣೆ - ಜೀವಸ್ವರೂಪವನ್ನು ಕಣ್ಣಿಂದ ಕಾಣಲು ಸಾಧ್ಯವಿಲ್ಲ. ಯಾವ ಇಂದ್ರಿಯಗಳಿಗೂ ಅದು ಗೋಚರವಲ್ಲ. ಅತ್ಯಂತಸೂಕ್ಷ್ಮವಾಗಿದೆ. ಮಾತಿ- ನಿಂದಲೂ ಕೂಡ ಅದನ್ನು ವರ್ಣಿಸಲು ಸಾಧ್ಯವಿಲ್ಲ. ಅಜ್ಞಾನದ ಹೊದಿಕೆಯಿಂದ ಆತ್ಮತತ್ವವು ಮುಚ್ಚಿಹೋಗಿದೆ. ಹೀಗಿರುವಾಗ ತನ್ನ ಸ್ವರೂಪವನ್ನು ತಿಳಿದುಕೊಳ್ಳಲು ಇಂಥ ಅಜ್ಞಾನಿಗಳಿಗೆ ಸಾಧ್ಯವೇ ಆಗುವುದಿಲ್ಲ. ಪರಮಾತ್ಮನನ್ನು ತಿಳಿದುಕೊಳ್ಳು- ವುದಂತೂ ದೂರತೋಪಾಸ್ತ.
ಕಲ್ಯಾಣಗೋಚರಂ ಕೃತ್ವಾ ಮನಸ್ತೃಷ್ಣಾಂ ನಿಗೃಹ್ಯ ಚ |
ಕರ್ಮಸಂತತಿಮುತ್ಸೃಜ್ಯ ಸ್ಯಾನ್ನಿರಾಲಂಬನಃ ಸುಖೀ ॥24॥
ಆದ್ದರಿಂದ ಮನಸ್ಸನ್ನು ವಿಷಯದೆಡೆ ಹೋಗದಂತೆ ಮಾಡಿ, ಅಹಂಕಾರವನ್ನು ಪರಿತ್ಯಾಗ ಮಾಡಿ, ಕಲ್ಯಾಣಮಯವಾದ ಮೋಕ್ಷದ ಕಡೆ ನಡೆಯಬೇಕು. ಎಲ್ಲಾ ಕರ್ಮಸಂತತಿಗಳನ್ನು ಪರಿತ್ಯಾಗ ಮಾಡಿ ಯಾರನ್ನು ಆಶ್ರಯಿಸದೇ ಜೀವಿಸಬೇಕು. ಅಲ್ಲಿಯೇ ನಿಜವಾದ ಸುಖವಿದೆ.
ವಿವರಣೆ - ಮನಸ್ಸನ್ನು ಮೋಕ್ಷದೆಡೆ ತೊಡಗಿಸಬೇಕು. ಆಸೆಯನ್ನು ಸಂಪೂರ್ಣವಾಗಿ ನಿಗ್ರಹ ಮಾಡಬೇಕು. ಕರ್ಮಗಳ ಪರಂಪರೆಯನ್ನೇ ಪರಿತ್ಯಾಗ ಮಾಡಬೇಕು. ಯಾವುದೇ ಸಂಪತ್ತನ್ನೂ, ಜನರನ್ನೂ ಆಶ್ರಯಿಸಬಾರದು. ಆಗಷ್ಟೇ ಪರಮಸುಖಿಯಾಗಲು ಸಾಧ್ಯ.
ಅಸ್ಮಿನ್ನೇವಂ ಸೂಕ್ಷ್ಮಗಮ್ಯೇ ಮಾರ್ಗೇ ಸದ್ಭಿರ್ನಿಷೇವಿತೇ |
ಕಥಮರ್ಥಮನರ್ಥಾಢ್ಯಮರ್ಜುನ ತ್ವಂ ಪ್ರಶಂಸಸಿ ॥25॥
ಹೀಗೆ ಅತ್ಯಂತಸೂಕ್ಷ್ಮದೃಷ್ಟಿಯಿಂದ ತಿಳಿಯಲ್ಪಡುವ ಮೋಕ್ಷಮಾರ್ಗದಲ್ಲಿ ನಡೆದಾಗ ಸಂಪೂರ್ಣವಾದ ಸುಖವು ದೊರೆಯುತ್ತದೆ. ಇದನ್ನು ಎಲ್ಲಾ ಸಜ್ಜನರು ಅನುಸರಿಸುತ್ತಾರೆ. ಓ ಅರ್ಜುನನೇ! ಹೀಗಿರುವಾಗ ಅನರ್ಥಪೂರ್ಣವಾದ ಅನ್ಯ- ಮಾರ್ಗವನ್ನೇಕೆ ನೀನು ಪ್ರಶಂಸೆ ಮಾಡುತ್ತಿರುವೆ?
ಟಿಪ್ಪಣಿ - ಅಸ್ಮಿನ್ ವೈ ಸೂಕ್ಷ್ಮಗಮ್ಯೇ  ಚ  ಇತ್ಯತ್ರ ಅಸ್ಮಿನ್ ಮಾರ್ಗೇ ವಿದ್ಯಮಾನಮ್ ಅರ್ಥಂ ಪುರುಷಾರ್ಥಮ್ ಅನರ್ಥಾಖ್ಯಂ ಕಥಂ ಪ್ರಶಂಸಸಿ ಪ್ರಕರ್ಷೇಣ ಶಂಸಸಿ ಪುನಃಪುನಃ ಕಥಯಸೀತ್ಯರ್ಥಃ |
`ಅಸ್ಮಿನ್ನೇವಂ ಸೂಕ್ಷ್ಮಗಮ್ಯೇ  ಚ ' ಎಂಬಲ್ಲಿ `ಅಸ್ಮಿನ್ ಮಾರ್ಗೇ' ಈ ಮಾರ್ಗದಲ್ಲಿ ಪುರುಷಾರ್ಥದಾಯಕವಾದ ಮಾರ್ಗವಿರುವಾಗ ಪುನಃ ಪುನಃ ಅನರ್ಥಮಾರ್ಗವನ್ನೇಕೆ ಪ್ರಶಂಸೆ ಮಾಡುತ್ತಿರುವಿ ಎಂದರ್ಥ.
ವಿವರಣೆ - ಅರ್ಜುನನೇ! ಯಾರೂ ಸಹ ಸಂಪತ್ತನ್ನು, ಭೋಗವನ್ನು ಪ್ರಶಂಸೆ ಮಾಡುವುದಿಲ್ಲ. ಅವೆಲ್ಲವೂ ಕೇವಲ ಅನರ್ಥಕಾರಿಯಾಗಿದೆ. ಸಜ್ಜನರೆಲ್ಲರೂ ಸೂಕ್ಷ್ಮಬುದ್ಧಿಯಿಂದ, ಏಕಾಗ್ರಬುದ್ಧಿಯಿಂದ ಈ ಎಲ್ಲಾ ವಿಷಯಗಳ ಪರಿತ್ಯಾಗವೇ ಪರಮಸುಖಕ್ಕೆ ಕಾರಣವೆಂದು ನಿರ್ಣಯಿಸಿದ್ದಾರೆ. ಆದ್ದರಿಂದ ನೀನು ಆ ಸಜ್ಜನರ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಹೊಂದುವುದು ಅಯುಕ್ತವಾಗಿದೆ.

ಪೂರ್ವಶಾಸ್ತ್ರವಿದೋಽಪ್ಯೇವಂ ಜನಾಃ ಪಶ್ಯಂತಿ ಭಾರತ |
ಕ್ರಿಯಾಸು ನಿರತಾ ನಿತ್ಯಂ ದಾನೇ ಯಜ್ಞೇ ಚ ಕರ್ಮಣಿ ॥26॥
ಎಲ್ಲಾ ಶಾಸ್ತ್ರಗಳನ್ನು ಅರಿತಿರುವ ವಿದ್ವಾಂಸರೂ ಕೂಡ ಮತ್ತು ಯಜ್ಞದಾನಾದಿ ಕರ್ಮಗಳಲ್ಲಿ ನಿರತರಾದವರೂ ಕೂಡ ನೀನು ಹೇಳಿದ ಮಾರ್ಗವು ಅನರ್ಥ- ಕಾರಿಯೆಂದೇ ನಿರ್ಣಯ ಮಾಡಿದ್ದಾರೆ.
ವಿವರಣೆ - ಯಜ್ಞ, ದಾನ ಮೊದಲಾದ ಕರ್ಮಗಳಲ್ಲಿ ನಿರಂತರ ಆಸಕ್ತರಾದ ಪ್ರಾಚೀನಕಾಲದ ಶಾಸ್ತ್ರಜ್ಞರೂ ಕೂಡ ನಾನು ಹೇಳಿದ ಅಭಿಪ್ರಾಯವನ್ನೇ ಹೊಂದಿದ್ದಾರೆ. ಯಾರು ಕರ್ಮಮಾರ್ಗವನ್ನೇ ಅನುಸರಿಸುತ್ತಾರೋ, ಅಂಥವರೇ ಇದು ಪರಮಸುಖಕ್ಕೆ ಕಾರಣವಲ್ಲ ಎಂದು ಹೇಳುತ್ತಿರುವಾಗ ನೀನೇಕೆ ಅದನ್ನು ಪ್ರಶಂಸೆ ಮಾಡುತ್ತಿರುವೆ.
ಭವಂತಿ ಸುದುರಾವರ್ತಾ ಹೇತುಮಂತೋಽಪಿ ಪಂಡಿತಾಃ |
ದೃಢಪೂರ್ವೇ ಸ್ಮೃತಾ ಮೂಢಾ ನೈತದಸ್ತೀತಿವಾದಿನಃ ॥27॥
ಆದರೆ ಕೆಲವು ವಿದ್ವಾಂಸರು ವಿಷಯಾಸಕ್ತಿಯಿಂದ ಮೋಕ್ಷವಿಲ್ಲವೆಂದು ತಿಳಿ- ಸುತ್ತಾ, ತಾವು ಮೂಢರಾಗಿಯೇ ಪ್ರವೃತ್ತಿಯನ್ನು ಮಾಡುತ್ತಿದ್ದಾರೆ. ಅಂಥವರಿಗೆ ಸರಿಯಾದ ಮಾರ್ಗವನ್ನು ತೋರಿಸುವುದು ಬಹಳ ಕಷ್ಟ.
ಟಿಪ್ಪಣಿ - ನೈತದಸ್ತೀತಿ ವಾದಿನ ಇತ್ಯತ್ರ ಏತದ್ ಯೋಗಶಾಸ್ತ್ರಮ್|
`ನೈತದಸ್ತೀತಿವಾದಿನಃ'ಎಂಬಲ್ಲಿ `ಏತತ್' ಎಂಬ ಪದಕ್ಕೆ `ಯೋಗಶಾಸ್ತ್ರ' ಎಂದರ್ಥ.
ವಿವರಣೆ - ಯಾರು ಆತ್ಮನನ್ನೇ ಇಲ್ಲವೆಂದು ಹೇಳುತ್ತಾರೋ, ಅಂಥವರು ಮೂರ್ಖರಾಗುತ್ತಾರೆ. ಯೋಗಶಾಸ್ತ್ರವನ್ನು ಪ್ರಮಾಣವೆಂದು ಒಪ್ಪುವವರು. ಶರೀರ -ವನ್ನೇ ಆತ್ಮವೆಂದು ಹೇಳುತ್ತಾರೆ. ಇಂಥವರು ತಮ್ಮ ದೃಢವಾದ ಸಂಸ್ಕಾರದಿಂದ ಪ್ರಭಾವಿತರಾಗಿ ಮೂರ್ಖರಾಗುತ್ತಾರೆ ಎಂಬುದಾಗಿಯೂ ಕೂಡ ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡಬಹುದು.
ಅನೃ(ಮೃ)ತಸ್ಯಾವಮಂತಾರೋ ವಕ್ತಾರೋ ಜನಸಂಸದಿ |
ಚರಂತಿ ವಸುಧಾಂ ಕೃತ್ಸ್ನಾಂ ವಾವದೂಕಾ ಬಹುಶ್ರುತಾಃ ॥28॥
ಯಾನ್ ವಯಂ ನಾಭಿಜಾನೀಮಃ ಕಸ್ತಾನ್ ಜ್ಞಾತುಮಿಹಾರ್ಹತಿ |
ಏವಂ ಪ್ರಾಜ್ಞಾಃ ಶ್ರುತಶ್ಚಾಪಿ ಮಹಾಂತಃ ಶಾಸ್ತ್ರವಿತ್ತಮಾಃ ॥28ಎ॥
ಪಾರ್ಥ ವಯಂ ವಿಜಾನೀಮಃ ಕಸ್ತಾಂಜ್ಞಾತುಮಿಹಾರ್ಹತಿ |
ಏವಂ ಪ್ರಾಜ್ಞಾಃ ಶ್ರುತಾಶ್ಚಾಪಿ ಮಹಾಂತಃ ಶಾಸ್ತ್ರವಿತ್ತಮಾಃ ॥29॥
ಮೋಕ್ಷವಿಲ್ಲ, ಧರ್ಮವಿಲ್ಲ, ಪರಲೋಕವಿಲ್ಲ ಇತ್ಯಾದಿಯಾಗಿ ಹೇಳುವ ಮಿಥ್ಯಾವಾದಿಗಳನ್ನು, ನಾಸ್ತಿಕರನ್ನು, ವಿದ್ವಾಂಸರು ಯುಕ್ತಿಯುಕ್ತವಾಗಿ ನಿರಾಕರಣೆ ಮಾಡುತ್ತಾರೆ. ಮತ್ತು ಅಖಂಡಭೂಮಂಡಲದಲ್ಲಿ ಜ್ಞಾನದಿಂದ ಬೆಳಗುತ್ತಾರೆ. ಇಂಥ ಬಹುಶ್ರುತರು ಯಾರು ಆಗಿದ್ದಾರೆಂಬುದನ್ನೇ ನಮ್ಮಿಂದ ತಿಳಿಯಲು ಸಾಧ್ಯವಾಗು- ವುದಿಲ್ಲ. ನಾವೇ ಅಂಥ ಮಹಾಪಂಡಿತರನ್ನು ತಿಳಿದಿಲ್ಲವೆಂದ ಮೇಲೆ ಸಾಧಾರಣ ಮನುಷ್ಯರು ಅವರನ್ನು ಹೇಗೆ ತಾನೇ ತಿಳಿಯುತ್ತಾರೆ? ಇಂಥ ಶಾಸ್ತ್ರವಿಶಾರದರು ಈ ಭೂಮಂಡಲದಲ್ಲಿದ್ದಾರೆಂದಷ್ಟೇ ನಾವು ಕೇಳಿದ್ದೇವೆ. ಅವರನ್ನು ಗುರುತಿಸಲು ನಮ್ಮಿಂದ ಸಾಧ್ಯವಾಗಿರುವುದಿಲ್ಲ.
ಟಿಪ್ಪಣಿ - ಯಾನ್ ವಯಂ ನ ವಿಜಾನೀಮ ಇತ್ಯತ್ರ ಯಾನ್ ಜ್ಞಾನನಿಷ್ಠಾನ್ ವಯಮ್ ಅಪಿ ನ ಜಾನೀಮಃ |
`ಯಾನ್ನ ವಯಂ ವಿಜಾನೀಮಃ' ಎಂಬಲ್ಲಿ `ಯಾನ್ ' ಜ್ಞಾನನಿಷ್ಠರಾದವರನ್ನು `ವಯಂ' ನಾವೂ ಕೂಡ ತಿಳಿದಿರುವುದಿಲ್ಲ ಎಂದರ್ಥ.
ತಪಸಾ ಮಹದಾಪ್ನೋತಿ ಬುದ್ಧ್ಯಾ ವೈ ವಿಂದತೇ ಮಹತ್ |
ತ್ಯಾಗೇನ ಸುಖಮಾಪ್ನೋತಿ ಸದಾ ಕೌಂತೇಯ ತತ್ತ್ವವಿತ್ ॥30॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ
ರಾಜಧರ್ಮೇ ಯುಧಿಷ್ಠಿರವಾಕ್ಯೇ ಏಕೋನವಿಂಶೋಽಧ್ಯಾಯಃ ॥19॥
ಅರ್ಜುನನೇ! ಯಾರು ತತ್ತ್ವವನ್ನು ತಿಳಿದಿದ್ದಾನೋ, ತಪಸ್ಸಿನಿಂದ ಮಹಾ- ವೈರಾಗ್ಯವನ್ನು ಪಡೆದಿದ್ದಾನೋ, ಅಂಥವನು ತನ್ನ ಬುದ್ಧಿಯ ಏಕಾಗ್ರತೆಯಿಂದ ಆ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಸ್ವಾರ್ಥವನ್ನು ಪರಿತ್ಯಾಗ ಮಾಡುವುದರಿಂದ ನಿರಂತರವಾಗಿ ಪರಮಸುಖವನ್ನು ಹೊಂದುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 19ನೆಯ ಅಧ್ಯಾಯವು ಮುಗಿಯಿತು.
*****
20. ಇಪ್ಪತ್ತನೆಯ ಅಧ್ಯಾಯ
ದೇವಸ್ಥಾನ ಎಂಬ ಋಷಿಗಳು ಯುಧಿಷ್ಠಿರನಿಗೆ
ಯಜ್ಞಮಹತ್ವವನ್ನು ತಿಳಿಸಿ ಯಜ್ಞ ಮಾಡಲು ಉಪದೇಶಿಸಿದರು.
ವೈಶಂಪಾಯನಃ
ತಸ್ಮಿನ್ ವಾಕ್ಯಾಂತರೇ ವಕ್ತಾ ದೇವಸ್ಥಾನೋ ಮಹಾತಪಾಃ |
ಅಭಿನೀತತರಂ ವಾಕ್ಯಮಿತ್ಯುವಾಚ ಯುಧಿಷ್ಠಿರಮ್ ॥1॥
ವೈಶಂಪಾಯನ - ಅರ್ಜುನನಿಗೂ, ಯುಧಿಷ್ಠಿರನಿಗೂ ಪರಸ್ಪರ ವಾದಪ್ರತಿ- ವಾದಗಳು ನಡೆಯುತ್ತಿದ್ದವು. ಆಗ ಮಹಾತಪಸ್ವಿಗಳು ವಾಕ್‌ಚತುರರು ಆದ ದೇವಸ್ಥಾನ ಎಂಬ ಮುನಿಗಳು ಯುಧಿಷ್ಠಿರನನ್ನು ಕುರಿತು ಹೀಗೆ ಯುಕ್ತಿಯುಕ್ತವಾದ ಮಾತುಗಳನ್ನು ಹೇಳುವರು.
ಟಿಪ್ಪಣಿ - ದೇವಸ್ಥಾನೋ ಮಹಾತಪಾ ಇತ್ಯತ್ರ ದೇವಸ್ಥಾನಃ ದೇವಸ್ಥಾನಾಖ್ಯ- ಋಷಿಃ | `ದೇವಸ್ಥಾನೋ ಮಹಾತಪಾಃ' - ದೇವಸ್ಥಾನ = ದೇವಸ್ಥಾನ ಎಂಬ ಋಷಿಗಳು.
ಯದ್ ವಚಃ ಫಾಲ್ಗುನೇನೋಕ್ತಂ ನ ಜ್ಯಾಯೋಽಸ್ತಿ ಧನಾದಿತಿ |
ಅತ್ರ ತೇ ವರ್ತಯಿಷ್ಯಾಮಿ ತದೇಕಾಂತಮನಾಃ ಶೃಣುಃ ॥2॥

ಓ ಧರ್ಮರಾಜನೇ! ಸಂಪತ್ತಿಗಿಂತ ಶ್ರೇಷ್ಠವಾದದ್ದು ಮತ್ತೊಂದು ಇಲ್ಲವೆಂದು ಅರ್ಜುನನು ನಿನ್ನನ್ನು ಕುರಿತು ಹೇಳಿದನು. ಈ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ನಿನಗೆ ತಿಳಿಸುತ್ತೇನೆ. ಸಾವಧಾನಮನಸ್ಸಿನಿಂದ ಅದನ್ನು ಕೇಳು.

ಅಜಾತಶತ್ರೋ ಧರ್ಮೇಣ ಕೃತ್ಸ್ನಾ ತೇ ವಸುಧಾ ಜಿತಾ |
ತಾಂ ಜಿತ್ವಾ ಚ ವೃಥಾ ರಾಜನ್ ನ ಪರಿತ್ಯಕ್ತುಮರ್ಹಸಿ ॥3॥

ಅಜಾತಶತ್ರುವೇ! ಭೂಮಂಡಲವನ್ನು ಕ್ಷಾತ್ರಧರ್ಮದಿಂದ ನೀನು ಜಯಿಸಿರುವೆ. ಧರ್ಮದಿಂದ ಪಡೆದ ಈ ಭೂಮಿಯನ್ನು ವ್ಯರ್ಥವಾಗಿ ಬಿಡುವುದು ನ್ಯಾಯವಲ್ಲ.

ಚತುಷ್ಪದೀ ಹಿ ನಿಃಶ್ರೇಣೀ ಬ್ರಹ್ಮಣ್ಯೇಷಾ ಪ್ರತಿಷ್ಠಿತಾ |
ತಾಂ ಕ್ರಮೇಣ ಮಹಾಬಾಹೋ ಯಥಾವಜ್ಜಯ ಪಾರ್ಥಿವ ॥4॥

ಬ್ರಹ್ಮನನ್ನು ಪಡೆಯಲು ಬ್ರಹ್ಮಚರ್ಯ, ಗಾರ್ಹಸ್ಥ್ಯ, ಸನ್ನ್ಯಾಸ, ವಾನಪ್ರಸ್ಥ ಎಂಬ ನಾಕು ಹಂತಗಳಿವೆ. ಈ ನಾಕು ಮಜಲುಗಳನ್ನು ಕ್ರಮವಾಗಿ ದಾಟಿಯೇ ಆ ಪರಮಾತ್ಮನನ್ನು ಸೇರಬೇಕು. ಮಹಾಬಾಹುವೇ! ಈ ಕ್ರಮದಲ್ಲಿಯೇ ನೀನೂ ಕೂಡ ಮೊದಲು ಗೃಹಸ್ಥಧರ್ಮವನ್ನು ಆಶ್ರಯಿಸು.

ಟಿಪ್ಪಣಿ - ಬ್ರಹ್ಮಣ್ಯೇಷಾ ಪ್ರತಿಷ್ಠಿತಾ ಇತ್ಯತ್ರ ಚತುಷ್ಪದಾ ಬ್ರಹ್ಮಚಾರೀ ಗೃಹೀ ವಾನಪ್ರಸ್ಥೋ ಭಿಕ್ಷುರಿತಿ ಚತುಃಸ್ಥಾನವತೀ, ಪೂರ್ವಮೇಕಂ ತದುಪರ್ಯೇಕಂ ತದುಪರ್ಯೇಕಮಿತ್ಯಾದಿಕ್ರಮೇಣ ಚತುಷ್ಪದಾ ಚತುಃಸ್ಥಾನವತೀ ನಿಃಶ್ರೇಣೀ ಸ್ವರ್ಗಾರೋಹಣಸೋಪಾನವಿಶೇಷಃ ಬ್ರಹ್ಮಣಿ ವೇದೇ ಪ್ರತಿಷ್ಠಿತಾ |

`ಬ್ರಹ್ಮಣ್ಯೇಷಾ ಪ್ರತಿಷ್ಠಿತಾ' - ಚತುಷ್ಪದ ಎಂದರೆ ಬ್ರಹ್ಮಚಾರಿ, ಗೃಹೀ, ವಾನಪ್ರಸ್ಥ, ಭಿಕ್ಷು ಎಂಬುದು ನಾಕುಸ್ಥಾನಗಳು. ಮೊದಲು ಬ್ರಹ್ಮಚರ್ಯ, ಆನಂತರ ಗಾರ್ಹಸ್ಥ್ಯ, ವಾನಪ್ರಸ್ಥ, ಅನಂತರ ಭಿಕ್ಷು ಎಂಬುದಾಗಿ ಆ ನಾಕು ಹಂತಗಳನ್ನು ಕ್ರಮವಾಗಿಯೇ ದಾಟಬೇಕು. ಈ ನಾಕು ಸ್ವರ್ಗದ ಮೆಟ್ಟಿಲುಗಳಾಗಿವೆ.

ವಿವರಣೆ - ಮೋಕ್ಷಗಳನ್ನು ಹೊಂದಲು ನಾಕು ಆಶ್ರಮಧರ್ಮಗಳನ್ನು ಪರಿಪಾಲನೆ ಮಾಡಬೇಕೆಂದು ವೇದದಲ್ಲೇ ಹೇಳಲ್ಪಟ್ಟಿದೆ. ಈ ನಾಕು ಆಶ್ರಮಗಳನ್ನು ಕ್ರಮಪ್ರಕಾರವಾಗಿಯೇ ಆಚರಿಸಬೇಕು. ಬ್ರಹ್ಮಚರ್ಯ ಆಶ್ರಮವನ್ನು ಪರಿಪಾಲನೆ ಮಾಡಿ, ಗೃಹಸ್ಥಾಶ್ರಮಧರ್ಮವನ್ನು ಆಚರಣೆ ಮಾಡಿ, ಅನಂತರ ವಾನಪ್ರಸ್ಥಾ- ಶ್ರಮವನ್ನು ಸ್ವೀಕರಿಸಬೇಕು. ಅಂತಿಮವಾಗಿ ಸನ್ನ್ಯಾಸಾಶ್ರಮವನ್ನು ಕುರಿತು ತೆರಳ- ಬೇಕು. ಗೃಹಸ್ಥಾಶ್ರಮದಲ್ಲಿ ಮಾಡಬೇಕಾದ ಕರ್ತವ್ಯಕರ್ಮಗಳನ್ನು ಪರಿತ್ಯಾಗ ಮಾಡಿ, ಅಂತಿಮವಾದ ಸನ್ನ್ಯಾಸಾಶ್ರಮಕ್ಕೆ ತೆರಳುವುದು ಸಮಂಜಸವಲ್ಲ.

ತಸ್ಮಾತ್ ಪಾರ್ಥ ಮಹಾಯಜ್ಞೈರ್ಯಜಸ್ವ ಬಹುದಕ್ಷಿಣೈಃ |
ಸ್ವಾಧ್ಯಾಯಯಜ್ಞಾ ಋಷಯೋ ಜ್ಞಾನಯಜ್ಞಾಸ್ತಥಾಪರೇ ॥5॥

ಆದ್ದರಿಂದ ಓ ಕುಂತೀಪುತ್ರನೇ! ಭೂರಿದಕ್ಷಿಣೆಗಳನ್ನು ನೀಡಿ, ಮಹಾಯಜ್ಞವನ್ನು ನೀನು ಆಚರಿಸು. ಕೆಲವು ಜ್ಞಾನಿಗಳು ಸ್ವಾಧ್ಯಾಯವನ್ನೇ ಯಜ್ಞವನ್ನಾಗಿ ಆಚರಿಸು- ತ್ತಾರೆ. ಇನ್ನೂ ಕೆಲವರು ಬ್ರಹ್ಮಜ್ಞಾನವನ್ನೇ ಯಜ್ಞವನ್ನಾಗಿ ಆಚರಿಸುತ್ತಾರೆ.

ವಿವರಣೆ - ಋಷಿಗಳು ಅಧ್ಯಯನ ಅಧ್ಯಾಪನಗಳನ್ನು ಮಾಡುತ್ತಾರೆ. ಇವರಿಗೆ ಸ್ವಾಧ್ಯಾಯವೇ ಯಜ್ಞ. ಸನ್ನ್ಯಾಸಿಗಳು ಕೇವಲ ಜ್ಞಾನದಲ್ಲೇ ಆಸಕ್ತರಾಗಿರುತ್ತಾರೆ. ಇವರು ಜ್ಞಾನಯಜ್ಞವನ್ನು ಆಚರಿಸುತ್ತಾರೆ. ನೀನು ಬಹುದಕ್ಷಿಣಾಕವಾದ ಮಹಾ- ಯಜ್ಞವನ್ನು ಆಚರಿಸಿ, ದೇವತೆಗಳನ್ನು ತೃಪ್ತಿಪಡಿಸು.

ಕರ್ಮನಿಷ್ಠಾಂಶ್ಚ ಬುದ್ಧ್ಯೇಥಾಸ್ತಪೋನಿಷ್ಠಾಂಶ್ಚ ಪಾರ್ಥಿವ |
ವೈಖಾನಸಾನಾಂ ಕೌಂತೇಯ ವಚನಂ ಶ್ರೂಯತೇ ಯಥಾ ॥6॥

ಯಾರು ಕರ್ಮವನ್ನು ಹೆಚ್ಚು ಆಚರಿಸುತ್ತಾರೋ, ಅವರು ಗೃಹಸ್ಥರಾಗಿರುತ್ತಾರೆ. ತಪಸ್ಸಿನಲ್ಲಿ ಯಾರು ನಿರತರಾಗಿರುತ್ತಾರೋ, ಅವರು ವಾನಪ್ರಸ್ಥಾಶ್ರಮಿಗಳಾಗಿರು- ತ್ತಾರೆ. ಹೀಗೆ ವೈಖಾನಸರು ಹೇಳುತ್ತಾರೆ.

ವಿವರಣೆ - ಸ್ವಾಧ್ಯಾಯವನ್ನು ಯಜ್ಞವನ್ನಾಗಿ ಬ್ರಹ್ಮಚಾರಿಗಳು ಮಾಡುತ್ತಾರೆ. ಬ್ರಹ್ಮಜ್ಞಾನವನ್ನು ಯಜ್ಞವನ್ನಾಗಿ ಯೋಗಿಗಳು ಆಚರಿಸುತ್ತಾರೆ. ಗೃಹಸ್ಥರು ಕರ್ಮಾ- ಚರಣೆಯನ್ನೇ ಯಜ್ಞವನ್ನಾಗಿ ಆಚರಿಸುತ್ತಾರೆ. ವಾನಪ್ರಸ್ಥಾಶ್ರಮಿಗಳು ತಪಸ್ಸನ್ನೇ ಯಜ್ಞವನ್ನಾಗಿ ಆಚರಿಸುತ್ತಾರೆ. ಪ್ರತಿಯೊಬ್ಬರು ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ವೇದೋಕ್ತಕರ್ಮಗಳನ್ನು ಆಚರಿಸಲೇಬೇಕು. ಗೃಹಸ್ಥನಾದ ಕ್ಷತ್ರಿಯನು ಅಶ್ವಮೇಧ, ರಾಜಸೂಯ ಮೊದಲಾದ ಯಾಗಗಳನ್ನು ಆಚರಿಸಬೇಕು. ಋಷಿಗಳು ಜ್ಞಾನದ ಕಾರ್ಯವನ್ನು ಹೆಚ್ಚು ಮಾಡಬೇಕು. ನಾಕನೆಯ ಆಶ್ರಮವನ್ನು ಆಶ್ರಯಿಸಿದ ಸನ್ನ್ಯಾಸಿಗಳು ಜ್ಞಾನಯಜ್ಞದಲ್ಲಿ ನಿರತರಾಗಿರುತ್ತಾರೆ. ನೀನು ಕರ್ಮ- ನಿಷ್ಠನಾಗಬೇಕಾದವನು. ಈ ಕರ್ತವ್ಯವನ್ನು ಪರಿತ್ಯಾಗ ಮಾಡಿ ಜ್ಞಾನಯಜ್ಞದಲ್ಲಿ ಪಾಲ್ಗೊಳ್ಳುವುದು ಯುಕ್ತವಾಗುವುದಿಲ್ಲ.

ಈಹೇತ ಧನಹೇತೋರ್ಯಸ್ತಸ್ಯಾನೀಹಾ ಗರೀಯಸೀ |
ಭೂಯಾನ್ ದೋಷೋ ಹಿ ವರ್ಧೇತ ಯಸ್ತಂ ಧನಮುಪಾಶ್ರಯೇತ್ ॥7॥

ಯಾಗಾದಿಕರ್ಮಗಳನ್ನು ನಡೆಸಬೇಕೆಂಬ ಉದ್ದೇಶದಿಂದ ಆಸೆಯನ್ನು ಪಟ್ಟು ಧನಸಂಪಾದನೆಯನ್ನು ಮಾಡುವುದು ಯುಕ್ತವಲ್ಲ. ಹಾಗೆ ಧನವನ್ನು ಸಂಪಾದನೆ ಮಾಡುವುದಕ್ಕಿಂತಲೂ ಆಸೆಯನ್ನು ಬಿಡುವುದೇ ಶ್ರೇಷ್ಠವಾಗಿದೆ. ಏಕೆಂದರೆ ಯಾರು ಯಾವಾಗ ಹಣದ ವಿಷಯದಲ್ಲೇ ನಿರತನಾಗಿರುತ್ತಾನೋ, ಅವನಲ್ಲಿ ಕೇವಲ ದೋಷಗಳೇ ಅಭಿವೃದ್ಧಿಯನ್ನು ಹೊಂದುತ್ತವೆ.

ಟಿಪ್ಪಣಿ - ಈಹೇತ ಧರ್ಮಹೇತೋರ್ಯ ಇತ್ಯತ್ರ ಯಃ ಧರ್ಮಹೇತೋಃ ಈಹೇತ ತಸ್ಯ ಸಾ ಈಹಾ ಗರೀಯಸೀ ಅನೀಹೈವ | ಕೇವಲಂ ಸ್ವೋದರಭರಣಾಯ ಈಹಾಯಾ ಅಕರಣಾತ್ | ಭೂಯಾನ್ ದೋಷ ಇತ್ಯತ್ರ ಸರ್ವಥಾ ಅನೀಹಾಯಾಃ ಭೂಯಾನ್ ದೋಷಃ ಅಭಿವರ್ಧೇತ |

`ಈಹೇತ ಧನಹೇತೋರ್ಯಃ' - ಧರ್ಮವನ್ನು ಆಚರಣೆ ಮಾಡಬೇಕೆಂಬ ದೃಷ್ಟಿ- ಯಿಂದ ಯಾವ ಆಸೆಯು ಉಂಟಾಗುತ್ತದೋ, ಅದು ತಪ್ಪಲ್ಲ. ಕೇವಲ ಉದರಂಭರಣೆ- ಗೋಸ್ಕರ ಆಸೆ ಪಡುವ ಹಣವಷ್ಟೇ ದೋಷದಾಯಕವಾಗಿದೆ. ಯಾವುದಕ್ಕೂ ಆಸೆ ಪಡದೇ ಇರುವುದು ದೋಷಕ್ಕೆ ಕಾರಣವಾಗುತ್ತದೆ.

ಕೃಚ್ಛ್ರಾಚ್ಚ ದ್ರವ್ಯಸಂಹಾರಂ ಕುರ್ವಂತಿ ಧನಕಾರಣಾತ್ |
ಆತ್ಮನಾ ತೃಷಿತೋಽಬುದ್ಧ್ಯಾ ಭ್ರೂಣಹತ್ಯಾಂ ನ ಬುದ್ಧ್ಯತೇ ॥8॥
ಯಾರು ಲೋಭಿಗಳೋ ಅವರು ಹಣವನ್ನು ಕೂಡಿಡಬೇಕು ಎಂಬ ಕಾರಣ- ದಿಂದ ಬಹಳ ಕಷ್ಟದಿಂದಲೇ ತನಗೋಸ್ಕರ ಹಣವನ್ನು ಸಂಗ್ರಹ ಮಾಡುತ್ತಾರೆ. ಆದರೆ ಹಣದ ಆಸೆ ಹಿಂದೆ ಬಿದ್ದು, ಮತ್ತೊಬ್ಬರಿಗೆ ದಾನವನ್ನು ಮಾಡದೇ ಭ್ರೂಣ- ಹತ್ಯಾಪಾಪವನ್ನು ಹೊಂದುತ್ತಾರೆ.
ಟಿಪ್ಪಣಿ - ಆತ್ಮನಾ ತೃಷಿತ ಇತ್ಯತ್ರ ಆತ್ಮನಾ ಸ್ವೇನ ಕಾರಣೇನ ತೃಷಿತಃ ತೃಷ್ಣಾವಾನ್ |
`ಆತ್ಮನ ತೃಷ್ಯತಃ' - ತನಗೋಸ್ಕರ ಹಣವನ್ನು ಸಂಪಾದನೆ ಮಾಡುವವನು
ವಿವರಣೆ - ಹಣವನ್ನು ಕೇವಲ ತನಗೋಸ್ಕರ ಯಾರು ಸಂಪಾದನೆ ಮಾಡು- ತ್ತಾರೋ, ಅಥವಾ ಹಣವನ್ನು ಕೂಡಿಡಬೇಕೆಂಬ ಉದ್ದೇಶದಿಂದ ಹಣವನ್ನು ಸಂಪಾದನೆ ಮಾಡುತ್ತಾರೋ, ಅವರಿಗೆ ಭ್ರೂಣಹತ್ಯಾದೋಷವು ಬರುತ್ತದೆ. ಧನದಾಹದಿಂದ ಕೂಡಿರುವ ಮನುಷ್ಯನು ಮತ್ತೊಬ್ಬನಿಗೆ ದಾನ ಮಾಡಲಾರನು. ಯೋಗ್ಯರಾದವರಿಗೆ ದಾನವನ್ನು ಮಾಡದೇ ಇರುವುದು ಎಷ್ಟು ಪಾಪವೋ, ಅಯೋಗ್ಯರಾದವರಿಗೆ ದಾನವನ್ನು ಕೊಡುವುದೂ ಕೂಡ ಅಷ್ಟೇ ಪಾಪ. ಧನದ ಲೋಭದಿಂದ ಧನವನ್ನು ಸಂಗ್ರಹ ಮಾಡುವುದು ಯುಕ್ತವಲ್ಲ. ಹಾಗೇನಾದರೂ ಲೋಭಗ್ರಸ್ತನಾಗಿ ಹಣವನ್ನು ಸಂಪಾದನೆ ಮಾಡಲು ಪ್ರಾರಂಭಿಸಿದರೆ ಇದರಿಂದ ಮಹಾಪಾಪ ಉಂಟಾಗುತ್ತದೆ. ಆದ್ದರಿಂದ ಹಣ ಸಂಪಾದನೆಯನ್ನು ಮಾಡಿ, ಯಜ್ಞಾಚರಣೆಯನ್ನು ಆಚರಿಸಿ, ಭೂರಿದಕ್ಷಿಣೆಯನ್ನು ಕೊಟ್ಟು ಸಾರ್ಥಕಗೊಳಿಸ- ಬೇಕೆಂಬುದು ದೇವಸ್ಥಾನಋಷಿಗಳ ಅಭಿಪ್ರಾಯವಾಗಿದೆ.
ಅನರ್ಹತೇ ಯದ್ ದದಾತಿ ನ ದದಾತಿ ಯದರ್ಹತೇ |
ಅರ್ಹಾನರ್ಹಾಪರಿಜ್ಞಾನಾದ್ ದಾನಧರ್ಮೋಽಪಿ ದುಷ್ಕರಃ ॥9॥
ಯಾರು ಅಯೋಗ್ಯರಿಗೆ ದಾನವನ್ನು ಮಾಡುತ್ತಾರೋ, ಅಂಥ ದಾನವು ವ್ಯರ್ಥವಾಗುತ್ತದೆ. ದಾನವನ್ನು ಸ್ವೀಕರಿಸಲು ಯಾರು ಪಾತ್ರರೋ, ಅಂಥವರಿಗೆ ಯಾರೂ ದಾನವನ್ನು ಕೊಡುವುದಿಲ್ಲ. ಏಕೆಂದರೆ ಯಾರು ಪಾತ್ರರು, ಯಾರು ಅಪಾತ್ರರು ಎಂಬ ವಿಷಯದಲ್ಲಿ ದಾತೃಗಳಿಗೆ ಪರಿಜ್ಞಾನವೇ ಇರುವುದಿಲ್ಲ. ಆದ್ದರಿಂದ ದಾನಧರ್ಮವು ಅತ್ಯಂತ ದುಷ್ಕರವಾಗಿದೆ.
ಯಜ್ಞಾಯ ಸೃಷ್ಟಾನಿ ಧನಾನಿ ಧಾತ್ರಾ
ಯಜ್ಞೋದ್ದಿಷ್ಟಃ ಪುರುಷೋ ರಕ್ಷಿತಾ ಚ |
ತಸ್ಮಾತ್ ಸರ್ವಂ ಯಜ್ಞ ಏವೋಪಯೋಜ್ಯಂ
ಧನಂ ತತೋಽನಂತರ ಏವ ಕಾಮಃ ॥10॥
ಚತುರ್ಮುಖಬ್ರಹ್ಮನು ಧನವನ್ನು ಯಜ್ಞಕ್ಕೋಸ್ಕರವೇ ಸೃಷ್ಟಿ ಮಾಡಿದ್ದಾನೆ. ಯಜ್ಞಕ್ಕೋಸ್ಕರ ಧನವನ್ನು ಸಂಪಾದಿಸಬೇಕೆಂಬ ಉದ್ದೇಶದಿಂದಲೇ ಪುರುಷನನ್ನು ಸೃಷ್ಟಿ ಮಾಡಿದ್ದಾನೆ. ಆದ್ದರಿಂದ ಎಲ್ಲಾ ಬಗೆಯ ಸಂಪತ್ತನ್ನು ಯಜ್ಞಕ್ಕಾಗಿಯೇ ವಿನಿ- ಯೋಗ ಮಾಡಬೇಕು. ಹಾಗೇ ಯಜ್ಞ ಮಾಡಿದಾಗ ತನ್ನ ಮನಸ್ಸಿನಲ್ಲಿ ಉದ್ದಿಷ್ಟ- ವಾದ ಅಪೇಕ್ಷೆಗಳನ್ನು ಯಜಮಾನನು ಪಡೆದುಕೊಳ್ಳುತ್ತಾನೆ.
ಯಜ್ಞೈರಿಂದ್ರೋ ವಿವಿಧೈ ರತ್ನವದ್ಭಿ-
ರ್ದೇವಾನ್ ಸರ್ವಾನಭ್ಯಯಾದ್ ಭೂರಿತೇಜಾಃ |
ತೇನೇಂದ್ರತ್ವಂ ಪ್ರಾಪ್ಯ ವಿಭ್ರಾಜತೇಽಸೌ
ತಸ್ಮಾದ್ ಯಜ್ಞೇ ಸರ್ವಮೇವೋಪಯೋಜ್ಯಮ್ ॥11॥
ಮಹಾತೇಜಸ್ವಿಯಾದ ಇಂದ್ರನು ಕೂಡ ರತ್ನಗಳನ್ನೇ ದಕ್ಷಿಣೆಯನ್ನಾಗಿ ಯಾಗ- ಗಳಲ್ಲಿ ನೀಡಿದನು. ಆದ್ದರಿಂದಲೇ ದೇವತೆಗಳಿಗೂ ಒಡೆಯನಾದನು. ಈಗಲೂ ಕೂಡ ಇಂದ್ರಪದವಿಯಲ್ಲಿ ಕಂಗೊಳಿಸುತ್ತಿದ್ದಾನೆ. ಆದ್ದರಿಂದ ರಾಜನಾದವನು ಎಲ್ಲಾ ತನ್ನ ಸಂಪತ್ತನ್ನು ಸಕಲೈಶ್ವರ್ಯಗಳನ್ನು ಯಜ್ಞಕ್ಕಾಗಿ ವಿನಿಯೋಗ ಮಾಡಬೇಕು.
ಮಹಾದೇವಃ ಸರ್ವಯಜ್ಞೇ ಮಹಾತ್ಮಾ
ಹುತ್ವಾಽಽತ್ಮಾನಂ ದೇವದೇವೋ ಬಭೂವ |
ವಿಶ್ವಾಂಲ್ಲೋಕಾನ್ ವ್ಯಾಪ್ಯ ವಿಷ್ಟಭ್ಯ ಕೀರ್ತ್ಯಾ
ವಿರಾಜತೇ ದ್ಯುತಿಮಾನ್ ಕೃತ್ತಿವಾಸಾಃ ॥12॥
ಮಹಾತ್ಮನಾದ ಶಿವನೂ ಕೂಡ ಸರ್ವಮೇಧವೆಂಬ ಯಜ್ಞವನ್ನು ಆಚರಿಸಿದನು. ಅದರಲ್ಲಿ ತನ್ನನ್ನೇ ಹೋಮ ಮಾಡಿಕೊಂಡು ತ್ರೈಲೋಕ್ಯಗಳಲ್ಲಿ ತನ್ನ ಕೀರ್ತಿಯಿಂದ ಬೆಳಗಿದನು. ತನ್ನನ್ನು ಆತ್ಮಸಮರ್ಪಣೆ ಮಾಡಿಕೊಂಡ ಕಾರಣದಂದಲೇ ಕೃತ್ತಿವಾಸನು ಸಂಪೂರ್ಣ ವಿಶ್ವವನ್ನೇ ವ್ಯಾಪಿಸಿದನು.
ಆವಿಕ್ಷಿತಃ ಪಾರ್ಥಿವೋಽಸೌ ಮರುತ್ತೋ
ವೃದ್ಧ್ಯಾ ಶಕ್ರಂ ಯೋಽಜಯದ್ ದೇವರಾಜಮ್ |
ಯಜ್ಞೇ ಯಸ್ಯ ಶ್ರೀಃ ಸ್ವಯಂ ಸನ್ನಿವಿಷ್ಟಾ
ಯಸ್ಮಿನ್ ಭಾಂಡಂ ಕಾಂಚನಂ ಸರ್ವಮಾಸೀತ್ ॥13॥
ಆವಿಕ್ಷಿತನ ಮಗನಾದ ಮರುತ್ ಎಂಬ ರಾಜನೂ ಕೂಡ ತನ್ನ ಸಮೃದ್ಧವಾದ ಸಂಪತ್ತಿನಿಂದ ಯಜ್ಞವನ್ನು ಆಚರಿಸಿ, ಇಂದ್ರನನ್ನೂ ಕೂಡ ಜಯಿಸಿದನು. ಅವನ ಯಾಗಪಾತ್ರೆಗಳೆಲ್ಲವೂ ಕೂಡ ಸುವರ್ಣಮಯವಾಗಿತ್ತು. ಅಲ್ಲಿ ಲಕ್ಷ್ಮಿಯ ದಿವ್ಯ- ಸನ್ನಿಧಾನವಿತ್ತು. ಅವನು ಮಾಡಿದ ಯಜ್ಞದಲ್ಲೂ ಕೂಡ ಲಕ್ಷ್ಮೀದೇವಿಯು ಸ್ವತಃ ನೆಲೆಸಿದ್ದಳು.
ಟಿಪ್ಪಣಿ - ಆವಿಕ್ಷಿತಃ ಪಾರ್ಥಿವ ಇತ್ಯತ್ರ ಅವಿಕ್ಷಿತಸ್ಯ ಪುತ್ರಃ ಆವಿಕ್ಷಿತಃ | `ಆವಿಕ್ಷಿತಃ' - ಅವಿಕ್ಷಿತನ ಪುತ್ರನಾದವನು ಆವಿಕ್ಷಿತನು.
ಹರಿಶ್ಚಂದ್ರಃ ಪಾರ್ಥಿವೇಂದ್ರಃ ಶ್ರುತಸ್ತೇ
ಯಜ್ಞೈರಿಷ್ಟ್ವಾ ಪುಣ್ಯಭಾಗ್ ವೀತಶೋಕಃ |

ಋದ್ಧ್ಯಾ ಶಕ್ರಂ ಯೋಽಜಯನ್ಮಾನುಷಃ ಸಂ-
ಸ್ತಸ್ಮಾದ್ ಯಜ್ಞೇ ಸರ್ವಮೇವೋಪಯೋಜ್ಯಮ್ ॥14॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದೇವಸ್ಥಾನವಾಕ್ಯೇ ವಿಂಶೋಽಧ್ಯಾಯಃ ॥20॥
ಮಹಾರಾಜನಾದ ಹರಿಶ್ಚಂದ್ರನು ಅನೇಕ ಯಾಗಗಳನ್ನು ಆಚರಿಸಿ ಮನುಷ್ಯ- ನಾಗಿದ್ದಾಗಲೇ ದೇವೇಂದ್ರನಿಗಿಂತ ಉತ್ತಮನೆನಿಸಿದನು. ಮತ್ತು ಶೋಕರಹಿತನೂ, ಪುಣ್ಯವಂತನೂ ಆದನು. ಆದ್ದರಿಂದ ರಾಜನಾದ ನೀನು ನಿನ್ನೆಲ್ಲ ಐಶ್ವರ್ಯವನ್ನು ಯಜ್ಞದಲ್ಲಿ ಉಪಯೋಗಿಸಿ ಧನ್ಯನಾಗು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 20ನೆಯ ಅಧ್ಯಾಯವು ಮುಗಿಯಿತು.
*****
21. ಇಪ್ಪತ್ತೊಂದನೆಯ ಅಧ್ಯಾಯ
ದೇವಸ್ಥಾನಮುನಿಗಳು ಯುಧಿಷ್ಠಿರನಿಗೆ ಸ್ವಧರ್ಮಾನುಷ್ಠಾನವೇ ಶ್ರೇಯಸ್ಕರವೆಂದು ಉಪದೇಶ ಮಾಡಿದರು.
ದೇವಸ್ಥಾನಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಇಂದ್ರೇಣ ಸಮಯೇ ಪೃಷ್ಟೋ ಯದುವಾಚ ಬೃಹಸ್ಪತಿಃ ॥1॥
ದೇವಸ್ಥಾನ - ಧರ್ಮರಾಜನೇ! ಇದೇ ವಿಷಯದಲ್ಲಿ ಈ ಹಿಂದೆ ಒಂದು ಇತಿಹಾಸ ನಡೆದಿತ್ತು. ಇದನ್ನು ಜ್ಞಾನಿಜನರು ಉದಾಹರಣೆಯನ್ನಾಗಿ ಹೇಳುತ್ತಾರೆ. ಇದೇ ರೀತಿಯಲ್ಲಿ ಬೃಹಸ್ಪತ್ಯಾಚಾರ್ಯರ ಬಳಿ ದೇವೇಂದ್ರನು ಪ್ರಶ್ನಿಸಿದ್ದನು. ಆಗ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ಕುರಿತು ಆ ಇತಿಹಾಸವನ್ನು ಹೇಳಿದರು.
ಸಂತೋಷೋ ವೈ ಸ್ವರ್ಗತಮಃ ಸಂತೋಷಃ ಪರಮಂ ಸುಖಮ್ |
ತುಷ್ಟೇರ್ನ ಕಿಂಚಿತ್ ಪರತಃ ಸಾ ಸಮ್ಯಕ್ ಪ್ರತಿತಿಷ್ಠತಿ ॥2॥
ಸಂತೋಷವು ಸ್ವರ್ಗಕ್ಕೆ ಸಮಾನವಾಗಿರುತ್ತದೆ. ಸಂತೋಷವೇ ಪರಮಸುಖ- ವಾಗಿದೆ. ಸಂತೋಷಕ್ಕಿಂತ ಮಿಗಿಲಾಗಿದುದು ಮತ್ತೊಂದಿಲ್ಲ. ಇಂಥ ಸಂತೋಷ- ವನ್ನು ಪಡೆದ ಮೇಲೆ ಮತ್ತೊಂದರ ಅಪೇಕ್ಷೆಯೇ ಇರುವುದಿಲ್ಲ.
ಯದಾ ಸಂಹರತೇ ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ |
ತದಾಽಽತ್ಮಜ್ಯೋತಿರಚಿರಾತ್ ಸ್ವಾತ್ಮನ್ಯೇವ ಪ್ರಸೀದತಿ ॥3॥
ಆಮೆಯು ತನ್ನ ಅವಯವಗಳನ್ನು ತನ್ನಲ್ಲಿ ಹೇಗೆ ಅಡಗಿಸಿಕೊಳ್ಳುತ್ತದೋ, ಅದರಂತೆ ಯಾರು ತನ್ನ ಇಂದ್ರಿಯಗಳನ್ನೆಲ್ಲಾ ಕಾಮಗಳಿಗೆ ಒಳಪಡಿಸದೇ ತನ್ನೊಳಗೆ ಅಡಗಿಸಿಕೊಳ್ಳುತ್ತಾನೋ, ಆಗ ಅವನಿಗೆ ಜ್ಯೋತಿರ್ಮಯವಾದ ಆತ್ಮತತ್ವವು ಮನಸ್ಸಿನಲ್ಲಿ ಪ್ರಕಟವಾಗುತ್ತದೆ.
ನ ಬಿಭೇತಿ ಯದಾ ಚಾಯಂ ಯದಾ ಚಾಸ್ಮಾನ್ನ ಬಿಭ್ಯತಿ |
ಕಾಮದ್ವೇಷೌ ಚ ಜಯತಿ ತದಾಽಽತ್ಮಾನಂ ಚ ಪಶ್ಯತಿ ॥4॥
ಯಾವಾಗ ಮನುಷ್ಯನು ಯಾವುದೇ ಕಾರಣಕ್ಕೂ ಯಾರಿಂದಲೂ ಹೆದರುವು- ದಿಲ್ಲವೋ, ಮತ್ತು ಯಾವಾಗ ಅವನಿಂದ ಯಾರಿಗೂ ಯಾವುದೇ ವಿಧವಾದ ಭಯವು ಇರುವುದಿಲ್ಲವೋ? ಯಾವಾಗ ಯಾರು ರಾಗದ್ವೇಷಗಳನ್ನು ಜಯಿಸಿರು- ತ್ತಾನೋ, ಆಗ ಅಂಥವನು ತನ್ನ ಹೃದಯದಲ್ಲಿ ಪರಮಾತ್ಮ ತತ್ವವನ್ನು ಕಾಣುತ್ತಾನೆ.
ಯದಾಸೌ ಸರ್ವಭೂತಾನಾಂ ನ ದ್ರುಹ್ಯತಿ ನ ಕಾಂಕ್ಷತಿ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥5॥
ಯಾವ ಪ್ರಾಣಿಗೇ ಆಗಲಿ ಮನೋ-ವಾಕ್-ಕಾಯಗಳಿಂದ ದ್ರೋಹವನ್ನು ಮಾಡುವುದಿಲ್ಲವೋ, ಮತ್ತೊಬ್ಬನಿಗೆ ದ್ರೋಹವಾಗುವುದನ್ನು ಬಯಸುವುದೂ ಇಲ್ಲವೋ, ಇತರ ಯಾವುದೇ ವಸ್ತುವನ್ನೂ ಕೂಡ ಬಯಸುವುದಿಲ್ಲವೋ, ಅಂಥವನು ತನ್ನ ಹೃದಯದಲ್ಲಿ ಪರಮಾತ್ಮ ತತ್ವವನ್ನು ಕಾಣುತ್ತಾನೆ.
ಏವಂ ಕೌಂತೇಯ ಭೂತಾನಿ ತಂ ತಂ ಧರ್ಮಂ ತಥಾ ತಥಾ |
ತದಾಽಽತ್ಮನಾ ಪ್ರಪಶ್ಯಂತಿ ತಸ್ಮಾದ್ ಬುದ್ಧ್ಯಸ್ವ ಭಾರತ ॥6॥
ಓ ಯುಧಿಷ್ಠಿರನೇ! ಸಮಸ್ತಮನುಷ್ಯರು ತಮ್ಮ ಧರ್ಮಗಳನ್ನು ಆಯಾ- ಕಾಲಗಳಲ್ಲಿ ವಿಧಿಪ್ರಕಾರವಾಗಿ ಆಚರಿಸುತ್ತಾ, ತಮ್ಮ ಹೃದಯದಲ್ಲಿ ಪರಮಾತ್ಮನನ್ನು ಕಾಣುತ್ತಾರೆ. ಆದ್ದರಿಂದ ನೀನೂ ಸಹ ಕರ್ತವ್ಯದಲ್ಲಿ ನಿರತನಾಗು.
ಅನ್ಯೇ ಸಾಮ ಪ್ರಶಂಸಂತಿ ವ್ಯಾಯಾಮಮಪರೇ ಜನಾಃ |
ನೈಕಂ ನ ಚಾಪರಂ ಕೇಚಿದುಭಯಂ ಚ ತಥಾಪರೇ ॥7॥
ಕೆಲವರು ಪ್ರಿಯವಚನವನ್ನೇ ಶ್ರೇಷ್ಠವೆನ್ನುವರು. ಇನ್ನೂ ಕೆಲವರು ಯಾಗಾದಿ- ಕರ್ಮಗಳನ್ನು ಶ್ರೇಷ್ಠವೆನ್ನುವರು. ಇನ್ನೂ ಕೆಲವರು ಸನ್ನ್ಯಾಸವನ್ನು ಶ್ರೇಷ್ಠವೆನ್ನುವರು. ಕೆಲವರು ಇವುಗಳಲ್ಲಿ ಒಂದನ್ನು ಮಾತ್ರ ಶ್ರೇಷ್ಠವೆಂದು ಪ್ರಶಂಸೆ ಮಾಡುವುದಿಲ್ಲ. ಈ ಎರಡನ್ನೂ ಕೂಡ ಪ್ರಶಂಸೆ ಮಾಡುತ್ತಾರೆ.
ಟಿಪ್ಪಣಿ - ಅನ್ಯೇ ಸಾಮ ಪ್ರಶಂಸಂತಿ ಇತ್ಯತ್ರ ಸಾಮ ಪ್ರಿಯವಚನಮ್ | ಏಕಂ ಪ್ರಾಗುಕ್ತಂ ಸಾಮ, ಅಪರಂ ಪಶ್ಚಾದುಕ್ತಂ ವ್ಯಾಯಾಮಂ ಚ ನ ಪ್ರಶಂಸಂತಿ, ಅರಣ್ಯೇ ತಪಸ್ಯೇವ ವರ್ತಂತ ಇತಿ ಭಾವಃ | `ಅನ್ಯೇ ಸಾಮ ಪ್ರಶಂಸಂತಿ' ಸಾಮ ಶಬ್ದಕ್ಕೆ `ಪ್ರಿಯವಾದ ಮಾತು 'ಎಂದರ್ಥ. `ಏಕಂ' ಎಂಬ ಶಬ್ದಕ್ಕೆ `ಹಿಂದೆ ಹೇಳಿದ ಸಾಮವಚನ' ಎಂದರ್ಥ. ಅಪರಂ ಎಂದರೆ ವ್ಯಾಯಾಮ ಎಂದರ್ಥ.
ವಿವರಣೆ - ಸಂತೋಷ ಅಥವಾ ಪರಮಾತ್ಮನ ಸಾಕ್ಷಾತ್ಕಾರವಾಗುವುದು ಜೀವನದಲ್ಲಿ ಅತ್ಯಂತಶ್ರೇಷ್ಠವಾಗಿದೆ. ಇಂಥ ಸಂತೋಷವನ್ನು ಪಡೆದುಕೊಳ್ಳ- ಬೇಕೆಂದರೆ ಅರಣ್ಯಕ್ಕೆ ಹೋಗಬೇಕಾಗಿಲ್ಲ. ತಾನಿರುವಲ್ಲಿಯೇ ಅಂಥ ಸಂತೋಷ- ವನ್ನು ಪಡೆದುಕೊಳ್ಳಬಹುದು.

ಮತ್ತು ಆತ್ಮ ಸಾಕ್ಷಾತ್ಕಾರಕ್ಕೆ ಸರ್ವತ್ಯಾಗವನ್ನೂ ಕೂಡ ಮಾಡಬೇಕಾಗಿಲ್ಲ. ಸಾಮಶಬ್ದಕ್ಕೆ ಪ್ರಿಯವಾದ ಮಾತುಗಳು ಎಂದರ್ಥ. ವ್ಯಾಯಾಮಪದಕ್ಕೆ ಯತ್ನ ಮತ್ತು ಪರಿಶ್ರಮ ಎಂದರ್ಥ. ಬೇರೆಯವರು ಧ್ಯಾನ- ವನ್ನು ಪ್ರಶಂಸೆ ಮಾಡಿಯೇ ಮಾಡುತ್ತಾರೆ. ಸಾಮ ಮತ್ತು ವ್ಯಾಯಾಮಗಳೆರಡನ್ನು ಅವಸ್ಥಾಭೇದದಿಂದ ಪ್ರಶಂಸೆ ಮಾಡುತ್ತಾರೆ ಎಂದರ್ಥ.
ಯಜ್ಞಮೇಕೇ ಪ್ರಶಂಸಂತಿ ಸನ್ನ್ಯಾಸಮಪರೇ ಜನಾಃ |
ದಾನಮೇಕೇ ಪ್ರಶಂಸಂತಿ ಕೇಚಿಚ್ಚೈವ ಪ್ರತಿಗ್ರಹಮ್ ॥8॥
ಕೆಲವರು ಯಜ್ಞವನ್ನು ಪ್ರಶಂಸೆ ಮಾಡುತ್ತಾರೆ. ಕೆಲವರು ಸನ್ನ್ಯಾಸವನ್ನು ಪ್ರಶಂಸೆ ಮಾಡುತ್ತಾರೆ. ಇನ್ನೂ ಕೆಲವರು ದಾನ ಮಾಡುವುದನ್ನು ಪ್ರಶಂಸೆ ಮಾಡುತ್ತಾರೆ. ಕೆಲವರು ದಾನವನ್ನು ತೆಗೆದುಕೊಳ್ಳುವುದೇ ಶ್ರೇಷ್ಠವೆಂದು ಹೇಳುತ್ತಾರೆ.
ಕೇಚಿತ್ ಸರ್ವಂ ಪರಿತ್ಯಜ್ಯ ತೂಷ್ಣೀಂ ಧ್ಯಾಯಂತ ಆಸತೇ |
ಕೆಲವರು ಎಲ್ಲವನ್ನೂ ಪರಿತ್ಯಾಗ ಮಾಡಿ, ಮೌನವಾಗಿ ಧ್ಯಾನದಲ್ಲಿಯೇ ಆಸಕ್ತ -ರಾಗಿರುತ್ತಾರೆ.
ರಾಜ್ಯಮೇಕೇ ಪ್ರಶಂಸಂತಿ ಪ್ರಜಾನಾಂ ಪರಿಪಾಲನಮ್ ॥9॥
ಹತ್ವಾ ಛಿತ್ತ್ವಾ ಚ ಭಿತ್ತ್ವಾ ಚ ಕೇಚಿದೇಕಾಂತಶೀಲಿನಃ |
ಕೆಲವರು ಶತ್ರುಗಳನ್ನು ಕೊಂದು, ಶತ್ರುಸೈನಿಕರನ್ನು ತುಂಡರಿಸಿ, ಶತ್ರುಗಳ ಕೋಟೆಯನ್ನು ಭೇದಿಸಿ ಶುತ್ರರಾಜ್ಯವನ್ನು ವಶಮಾಡಿಕೊಂಡು ಪ್ರಜೆಗಳನ್ನು ಪರಿಪಾಲನೆ ಮಾಡುವ ರಾಜ್ಯವನ್ನೇ ಪ್ರಶಂಸೆ ಮಾಡುತ್ತಾರೆ. ಇನ್ನೂ ಕೆಲವರು ಏಕಾಂತವಾಸದಲ್ಲಿ ಧ್ಯಾನಶೀಲವಾಗಿರುವುದನ್ನು ಪ್ರಶಂಸೆ ಮಾಡುತ್ತಾರೆ.
ಏತತ್ ಸರ್ವಂ ಸಮಾಲೋಕ್ಯ ಬುಧಾನಾಮೇಷ ನಿಶ್ಚಯಃ ॥10॥
ಅದ್ರೋಹೇಣೈವ ಭೂತಾನಾಂ ಯೋ ಧರ್ಮಃ ಸ ಸತಾಂ ಮತಃ |
ಇವನ್ನೆಲ್ಲಾ ಸರಿಯಾಗಿ ವಿಮರ್ಶೆ ಮಾಡಿ ಕೊನೆಯಲ್ಲಿ ಪಂಡಿತರು ಹೀಗೆ ನಿಶ್ಚಯಿಸಿದ್ದಾರೆ. ಪ್ರಾಣಿಗಳಿಗೆ ದ್ರೋಹವಿಲ್ಲದೇ ಮಾಡುವ ಧರ್ಮವೇ ಸಜ್ಜನರಿಗೆ ಸಮ್ಮತವಾಗಿದೆ ಎಂದು.
ಅದ್ರೋಹಃ ಸತ್ಯವಚನಂ ಸಂವಿಭಾಗೋ ದಯಾ ದಮಃ ॥11॥
ಪ್ರಜನಂ ಸ್ವೇಷು ದಾರೇಷು ಮಾರ್ದವಂ ಹ್ರೀರಚಾಪಲಮ್ |
ಏವಂ ಧರ್ಮಂ ಪ್ರಧಾನೇಷ್ಟಂ ಮನುಃ ಸ್ವಾಯಂಭುವೋಽಬ್ರವೀತ್ ॥12॥
ತಸ್ಮಾದೇತತ್ ಪ್ರಯತ್ನೇನ ಕೌಂತೇಯ ಪ್ರತಿಪಾಲಯ |
ದ್ರೋಹವಿಲ್ಲದಿರುವುದು, ಸತ್ಯವನ್ನೇ ಹೇಳುವುದು, ದಾನ ಮಾಡುವುದು, ದಯೆ ಇರುವುದು, ಇಂದ್ರಿಯನಿಗ್ರಹವನ್ನು ಹೊಂದಿರುವುದು. ತನ್ನ ಹೆಂಡತಿಯ- ಲ್ಲಷ್ಟೇ ಸಂತಾನವನ್ನು ಉತ್ಪತ್ತಿ ಮಾಡುವುದು. ಎಲ್ಲರ ವಿಷಯದಲ್ಲಿ ಮೃದುವಾಗಿ- ರುವುದು, ದುಷ್ಕರ್ಮಗಳನ್ನು ಮಾಡಲು ನಾಚಿಕೊಳ್ಳುವುದು. ಜಿಹ್ವಾಚಾಪಲ್ಯ, ದೃಷ್ಟಿಚಾಪಲ್ಯ, ಸ್ಪರ್ಶಚಾಪಲ್ಯಗಳಿಂದ ದೂರವಿರುವುದು. ಇವುಗಳೇ ಶ್ರೇಷ್ಠವಾದ ಮತ್ತು ಇಷ್ಟವಾದ ಧರ್ಮಗಳೆಂದು ಸ್ವಾಯಂಭುವಮನು ಹೇಳಿರುತ್ತಾನೆ. ಆದ್ದರಿಂದ ನೀನೂ ಸಹ ಸ್ವಾಯಂಭುವಮನು ಹೇಳಿರುವಂತೆ ಈ ಎಲ್ಲಾ ಧರ್ಮಗಳನ್ನು ಪ್ರಯತ್ನಪೂರ್ವಕವಾಗಿ ಆಚರಿಸು.
ಯೋ ಹಿ ರಾಜ್ಯೇ ಸ್ಥಿತಃ ಶಶ್ವದ್ ವಶೀ ತುಲ್ಯಪ್ರಿಯಾಪ್ರಿಯಃ ॥13॥
ಕ್ಷತ್ರಿಯೋ ಯಜ್ಞಶಿಷ್ಟಾಶೀ ರಾಜಾ ಶಾಸ್ತ್ರಾರ್ಥತತ್ತ್ವವಿತ್ |
ಅಸಾಧುನಿಗ್ರಹರತಃ ಸಾಧೂನಾಂ ಪ್ರಗ್ರಹೇ ರತಃ ॥14॥
ಧರ್ಮವರ್ತ್ಮನಿ ಸಂಸ್ಥಾಪ್ಯ ಪ್ರಜಾ ವರ್ತೇತ ಧರ್ಮತಃ |
ಪುತ್ರಸಂಕ್ರಾಮಿತಶ್ರೀಶ್ಚ ವನೇ ವನ್ಯೇನ ವರ್ತಯನ್ ॥15॥
ವಿಧಿನಾ ಶ್ರಾವಣೇನೈವ ಕುರ್ಯಾತ್ ಕರ್ಮಾಣ್ಯತಂದ್ರಿತಃ |
ಯ ಏವಂ ವರ್ತತೇ ರಾಜನ್ ಸ ರಾಜಾ ಧರ್ಮನಿಶ್ಚಿತಃ ॥16॥
ಯಾರು ರಾಜ್ಯದಲ್ಲಿ ಸಿಂಹಾಸನಾರೂಢನಾಗಿ ಅಧಿಪತಿಯಾಗಿರುತ್ತಾನೋ, ಅವನು ಎಲ್ಲಾ ಇಂದ್ರಿಯಗಳನ್ನು ಜಯಿಸಿರಬೇಕು. ಪ್ರಿಯವಾದದ್ದನ್ನು ಅಪ್ರಿಯ- ವಾದದ್ದನ್ನು ಸಮಾನವಾಗಿ ಕಾಣುವ ಭಾವನೆಯುಳ್ಳವನಾಗಿರಬೇಕು. ಯಾಗವನ್ನು ಮಾಡಿ, ಅದರ ಶೇಷವನ್ನು ಭುಂಜಿಸಬೇಕು. ಶಾಸ್ತ್ರಾರ್ಥಗಳನ್ನು, ರಾಜನೀತಿಯನ್ನು ಯಥಾವತ್ತಾಗಿ ತಿಳಿದಿರಬೇಕು. ದುಷ್ಟರನ್ನು ಶಿಕ್ಷಿಸಬೇಕು. ಸಾಧುಗಳನ್ನು ರಕ್ಷಣೆ ಮಾಡಬೇಕು. ರಾಜ್ಯದಲ್ಲಿರುವ ಪ್ರಜೆಗಳು ಧರ್ಮವನ್ನು ಅನುಸರಿಸುವಂತೆ ಮಾಡ- ಬೇಕು. ಕೊನೆಯಲ್ಲಿ ರಾಜ್ಯವನ್ನು ತನ್ನ ಮಗನಿಗೆ ವಹಿಸಿಕೊಡಬೇಕು. ಅನಂತರ ಕಾಡಿಗೆ ತೆರಳಿ ಅಲ್ಲಿ ಸಿಗುವ ಗೆಡ್ಡೆ-ಗೆಣಸು ಮತ್ತು ಫಲಗಳಿಂದಲೇ ದೇಹಯಾತ್ರೆ- ಯನ್ನು ನಡೆಸಬೇಕು. ಎಚ್ಚರ ತಪ್ಪದೇ ವರ್ಣಾಶ್ರಮಧರ್ಮಗಳನ್ನು ಆಚರಿಸಬೇಕು. ಅರಣ್ಯದಲ್ಲಿ ಶಾಸ್ತ್ರಗಳ ಶ್ರವಣದಿಂದ ತಿಳಿದುಕೊಂಡ ಕರ್ಮಗಳನ್ನು ಆಚರಿಸಬೇಕು. ಇಂಥ ರಾಜನು ಧರ್ಮಪ್ರಭು ಎಂದು ಕರೆಸಿಕೊಳ್ಳುತ್ತಾನೆ.
ಟಿಪ್ಪಣಿ - ವಿಧಿನಾ ಶ್ರಾವಣೇನೈವ ಇತ್ಯತ್ರ ಶ್ರಾವಣೇನ ಶ್ರವಣಾನುಕೂಲೇನ |
`ವಿಧಿನಾ ಶ್ರಾವಣೇನೈವ' ಎಂಬಲ್ಲಿ ಶ್ರಾವಣೇನ ಎಂದರೆ ಶ್ರವಣಾನುಕೂಲ- ವಾದದ್ದರಿಂದ.
ತಸ್ಯಾಯಂ ಚ ಪರಶ್ಚೈವ ಲೋಕಃ ಸ್ಯಾತ್ ಸಫಲೋದಯಃ |
ನಿರ್ವಾಣಂ ಹಿ ಸುದುಷ್ಪ್ರಾಪ್ಯಂ ಬಹುವಿಘ್ನಂ ಚ ಮೇ ಮತಮ್ ॥17॥
ಇಂಥ ಧರ್ಮಪ್ರಭುವಾದ ರಾಜನಿಗೆ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಶುಭಫಲಗಳೇ ದೊರೆಯುತ್ತವೆ. ನನ್ನ ಅಭಿಪ್ರಾಯದಲ್ಲಿ ಸನ್ನ್ಯಾಸದ ಮೂಲಕವಾಗಿ ಮೋಕ್ಷವನ್ನು ಹೊಂದುವುದು ಅತ್ಯಂತ ದುಷ್ಕರವಾಗಿದೆ. ಮತ್ತು ಅನೇಕವಾದ ವಿಘ್ನಗಳಿಂದಲೂ ಕೂಡ ಕೂಡಿರುತ್ತವೆ.
ಟಿಪ್ಪಣಿ - ನಿರ್ವಾಣಂ ಚ ಸುದುಷ್ಪ್ರಾಪ್ಯಮ್ ಇತ್ಯತ್ರ ನಿರ್ವಾಣಂ ಸರ್ವಪರಿತ್ಯಾಗ- ರೂಪಃ ಸನ್ನ್ಯಾಸಃ |
`ನಿರ್ವಾಣಂ ಚ ಸುದುಷ್ಪ್ರಾಪ್ಯಂ' - ಎಂಬಲ್ಲಿ `ನಿರ್ವಾಣಂ' = ಸರ್ವಪರಿತ್ಯಾಗ- ರೂಪವಾದ ಸನ್ನ್ಯಾಸ.

ಏವಂ ಧರ್ಮಮನುಕ್ರಾಂತಾಃ ಸತ್ಯದಾನತಪಃಪರಾಃ |
ಆನೃಶಂಸ್ಯಗುಣೈರ್ಯುಕ್ತಾಃ ಕಾಮಕ್ರೋಧವಿವರ್ಜಿತಾಃ ॥18॥
ಪ್ರಜಾನಾಂ ಪಾಲನೇ ಯುಕ್ತಾ ಧರ್ಮಮುತ್ತಮಮಾಸ್ಥಿತಾಃ |
ಗೋಬ್ರಾಹ್ಮಣಾರ್ಥೇ ಯುಧ್ಯಂತಃ ಪ್ರಾಪ್ತಾ ಗತಿಮನುತ್ತಮಾಮ್॥19॥
ಯಾರು ಈ ಕ್ರಮದಲ್ಲಿ ಧರ್ಮವನ್ನು ಅನುಸರಿಸುತ್ತಾರೋ, ಅವರು ಸತ್ಯ, ದಾನ, ತಪಸ್ಸು, ಸುಳ್ಳು ಹೇಳದಿರುವಿಕೆ ಮೊದಲಾದ ಗುಣಗಳಿಂದ ಕೂಡಿ, ಕಾಮಕ್ರೋಧರಹಿತರಾಗಿ ಪ್ರಜಾಪಾಲನದಲ್ಲಿ ಆಸಕ್ತರಾಗಿ, ಗೋಬ್ರಾಹ್ಮಣರ ಸೇವೆ- ಗಾಗಿಯೇ ಯುದ್ಧವನ್ನು ಮಾಡುತ್ತಾ ಉತ್ತಮವಾದ ಗತಿಯನ್ನು ಪಡೆಯುತ್ತಾರೆ.
ಏವಂ ರುದ್ರಾಃ ಸವಸಸ್ತಥಾಽಽದಿತ್ಯಾಃ ಪರಂತಪ |
ಸಾಧ್ಯಾ ರಾಜರ್ಷಿಸಂಘಾಶ್ಚ ಧರ್ಮಮೇತಂ ಸಮಾಶ್ರಿತಾಃ |
ಅಪ್ರಮತ್ತಾಸ್ತತಃ ಸ್ವರ್ಗಂ ಪ್ರಾಪ್ತಾಃ ಪುಣ್ಯೈಃ ಸ್ವಕರ್ಮಭಿಃ ॥20॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ದೇವಸ್ಥಾನವಾಕ್ಯೇ ಏಕವಿಂಶೋಽಧ್ಯಾಯಃ ॥21॥
ಯುಧಿಷ್ಠಿರನೇ ! ಹೀಗೆ ರುದ್ರರು, ವಸುಗಳು, ಆದಿತ್ಯರು, ಸಾಧ್ಯರು, ಅನೇಕ ಋಷಿಗಳು ಅಪ್ರಮತ್ತರಾಗಿ ಇದೇ ಧರ್ಮವನ್ನು ಆಶ್ರಯಿಸಿ ತಮ್ಮ ತಮ್ಮ ಪುಣ್ಯಕರ್ಮಗಳಿಂದ ಸ್ವರ್ಗಲೋಕವನ್ನು ಪಡೆದುಕೊಳ್ಳುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 21ನೆಯ ಅಧ್ಯಾಯವು ಮುಗಿಯಿತು.
*****
22. ಇಪ್ಪತ್ತೆರಡನೆಯ ಅಧ್ಯಾಯ
ಕ್ಷತ್ರಿಯಧರ್ಮವೇ ಶ್ರೇಷ್ಠ ಎಂಬುದಾಗಿ ಸಮರ್ಥನೆ ಮಾಡುವ ಮೂಲಕ
ಪುನಃ ಯುಧಿಷ್ಠಿರನನ್ನು ಸಮಾಧಾನ ಪಡಿಸಲು ಅರ್ಜುನನ ಪ್ರಯತ್ನ.
ವೈಶಂಪಾಯನಃ
ವೈಶಂಪಾಯನರು ಜನಮೇಜಯರಾಜನನ್ನು ಕುರಿತು ಹೇಳುತ್ತಾರೆ -
ಅಸ್ಮಿನ್ನೇವಾಂತರೇ ವಾಕ್ಯಂ ಪುನರೇವಾರ್ಜುನೋಽಬ್ರವೀತ್ |
ನಿರ್ವಿಣ್ಣಮನಸಂ ಜ್ಯೇಷ್ಠಮಿದಂ ಭ್ರಾತರಮಚ್ಯುತಮ್ ॥1॥
ಯುಧಿಷ್ಠಿರನು ಧರ್ಮಕ್ಕೆ ಕಟ್ಟುಬಿದ್ದು, ತನ್ನ ನಿಲುವನ್ನು ಸಮರ್ಥನೆ ಮಾಡಿ- ಕೊಳ್ಳುತ್ತಿರುವ ಸಂದರ್ಭದಲ್ಲಿ ಪುನಃ ಅರ್ಜುನನು ತನ್ನ ನಿಲುವನ್ನು ಸಮರ್ಥಿಸಲು ಮುಂದಾದನು. ಅತ್ಯಂತ ಖಿನ್ನಮನಸ್ಕನಾಗಿದ್ದನು. ಸ್ವಲ್ಪವೂ ತನ್ನ ನಿರ್ಧಾರದಿಂದ ವಿಚಲಿತನಾಗದ ತನ್ನ ಹಿರಿಯಣ್ಣನ ಜೊತೆ ಈ ಮಾತುಗಳನ್ನು ಹೇಳಿದನು -
ಕ್ಷತ್ರಧರ್ಮೇಣ ಧರ್ಮಜ್ಞ ಪ್ರಾಪ್ಯ ರಾಜ್ಯಮನುತ್ತಮಮ್ |
ಜಿತ್ವಾ ಚಾರೀನ್ನರಶ್ರೇಷ್ಠ ತಪ್ಯತೇ ಕಿಂ ಭವಾನ್ ಭೃಶಮ್ ॥2॥
ಧರ್ಮವನ್ನು ಅರಿತ ಯುಧಿಷ್ಠಿರನಾದ ಅಣ್ಣನನ್ನು ಯಾರಿಂದಲೂ ಹೊಂದಲು ಸಾಧ್ಯವಾಗದ ರಾಜ್ಯವನ್ನು ನಿನ್ನ ಕ್ಷಾತ್ರಧರ್ಮದಿಂದ ಗೆದ್ದಿರುವಿ. ಆ ರಾಜ್ಯಸಂಪತ್ತು ದೊರೆತ ಮೇಲೆ ದುಃಖಿತನಾಗಿರುವಿ. ಇದಕ್ಕೇನು ಕಾರಣ? ಎಂದೇ ಅರ್ಥವಾಗು- ತ್ತಿಲ್ಲ.
ಕ್ಷತ್ರಿಯಾಣಾಂ ಮಹಾರಾಜ ಸಂಗ್ರಾಮೇ ನಿಧನಂ ಮತಮ್ |
ವಿಶಿಷ್ಟಂ ಬಹುಭಿರ್ಯಜ್ಞೈಃ ಕ್ಷತ್ರಧರ್ಮಮನುಸ್ಮರ ॥3॥
ಮಹಾರಾಜನೇ! ಕ್ಷತ್ರಿಯರಿಗೆ ಯುದ್ಧದಲ್ಲಿ ಮರಣವೇ ಸರ್ವಶ್ರೇಷ್ಠ. ಎಲ್ಲ ಯಜ್ಞಗಳಿಗಿಂತಲೂ ಕೂಡ ಅತ್ಯಂತ ಉತ್ತಮ. ಇಂಥ ಕ್ಷಾತ್ರಧರ್ಮವು ಏನು ಹೇಳು- ತ್ತದೆ ಎಂಬುದನ್ನು ಒಮ್ಮೆ ಸ್ಮರಣೆಗೆ ತಂದುಕೋ.
ಬ್ರಾಹ್ಮಣಾನಾಂ ತಪಸ್ತ್ಯಾಗಃ ಪ್ರೇತ್ಯ ಧರ್ಮವಿಧಿಃ ಸ್ಮೃತಃ |
ಕ್ಷತ್ರಿಯಾಣಾಂ ಚ ನಿಧನಂ ಸಂಗ್ರಾಮೇ ವಿಹಿತಂ ಪ್ರಭೋ ॥4॥
ಬ್ರಾಹ್ಮಣರಿಗೆ ತ್ಯಾಗದಿಂದ ಅಥವಾ ಸನ್ಯಾಸದಿಂದಲೇ ಮರಣಹೊಂದುವುದು ಧರ್ಮಸಮ್ಮತವಾಗಿದೆ. ಆದರೆ ಕ್ಷತ್ರಿಯರಿಗೆ ಯುದ್ಧದಲ್ಲಿ ಮರಣ ಹೊಂದುವುದೇ ಧರ್ಮಶಾಸ್ತ್ರಗಳಲ್ಲಿ ವಿಹಿತವಾಗಿದೆ.
ವಿವರಣೆ - ಬ್ರಾಹ್ಮಣರಿಗೆ ತ್ಯಾಗ ಮತ್ತು ತಪಸ್ಸು ಎರಡೂ ಕೂಡ ಬಹಳ ಮುಖ್ಯವಾದ ಧರ್ಮಗಳು. ಪುಣ್ಯಲೋಕಗಳನ್ನು ಗಳಿಸಬೇಕೆಂದರೆ ತಮ್ಮೆಲ್ಲ ಸಂಪತ್ತನ್ನು ಮರಣದ ಸಂದರ್ಭದಲ್ಲಿ ಪರಿತ್ಯಾಗ ಮಾಡಿರಬೇಕು. ಅವುಗಳ ಮೇಲೆ ವ್ಯಾಮೋಹವನ್ನು ಬಿಟ್ಟಿರಬೇಕು. ಹಾಗೇನಾದರೂ ಪರಿತ್ಯಾಗ ಮಾಡದೇ ಸಂಪತ್ತಿನ ಮೇಲೆ ಬಂಧು-ಬಾಂಧವರ ಮೇಲೆ ವ್ಯಾಮೋಹವನ್ನು ಇಟ್ಟುಕೊಂಡು ಮರಣ- ವನ್ನು ಹೊಂದಿದರೆ ಸದ್ಗತಿಯು ಆಗುವುದಿಲ್ಲ. ಇದೇ ರೀತಿಯಾಗಿ ಕ್ಷತ್ರಿಯರಿಗೆ ಯುದ್ಧದಲ್ಲಿ ಮರಣಹೊಂದುವುದೇ ಶ್ರೇಯಸ್ಕರ. ಅದನ್ನು ಬಿಟ್ಟು ಸನ್ಯಾಸಿ ಜೀವನವನ್ನು ಹೊಂದಿ ಮರಣವನ್ನು ಹೊಂದಿದರೆ ಕ್ಷತ್ರಿಯರಿಗೂ ಸದ್ಗತಿ- ಯಾಗದು. ಶಸ್ತ್ರವನ್ನು ಎಂದೂ ಸಹ ಧರಿಸದೇ ಇರಬಾರದು. ಇಂಥ ಶ್ರೇಷ್ಠವಾದ ಕ್ಷಾತ್ರಧರ್ಮದಲ್ಲಿ ಮರಣವನ್ನು ಹೊಂದಿದ ಕ್ಷತ್ರಿಯರ ವಿಷದಲ್ಲೇಕೆ ದುಃಖವನ್ನು ಹೊಂದಿರುವಿ.
ಕ್ಷಾತ್ರಧರ್ಮೋ ಮಹಾರೌದ್ರಃ ಶಸ್ತ್ರನಿತ್ಯ ಇತಿ ಸ್ಮೃತಃ |
ವಧಶ್ಚ ಭರತಶ್ರೇಷ್ಠ ಕಾಲೇ ಶಸ್ತ್ರೇಣ ಸಂಯುಗೇ ॥5॥
ಕ್ಷತ್ರಿಯರು ಆಚರಿಸಬೇಕಾದ ಧರ್ಮವು ಅತ್ಯಂತ ಭಯಂಕರವಾಗಿದೆ. ನಿತ್ಯ- ವಾಗಿಯೂ ಶಸತತ್ರಸ್ತ್ರಗಳನ್ನು ಧರಿಸುವುದೇ ಅವರ ಧರ್ಮವಾಗಿದೆ. ಸಂದರ್ಭ ಬಂದಾಗ ಯುದ್ಧವನ್ನು ಮಾಡಲೇ ಬೇಕು. ಆಗ ಶಸ್ತ್ರದಿಂದ ವಧೆಯಾದರೂ ಚಿಂತಿಸಬಾರದು. ಇದುವೇ

ಕ್ಷತ್ರಿಯರ ಧರ್ಮ.
ಬ್ರಾಹ್ಮಣಸ್ಯಾಪಿ ಚೇದ್ ರಾಜನ್ ಕ್ಷತ್ರಧರ್ಮೇಣ ವರ್ತತಃ |
ಪ್ರಶಸ್ತಂ ಜೀವಿತಂ ಲೋಕೇ ಕ್ಷತ್ರಂ ಹಿ ಬ್ರಹ್ಮಸಂಭವಮ್ ॥6॥
ಬ್ರಾಹ್ಮಣನಾದವನು ಕ್ಷಾತ್ರಧರ್ಮವನ್ನು ಅನುಸರಿಸಿ ಜೀವನವನ್ನು ಮಾಡುವು- ದಾದಲ್ಲಿ ಅವನಿಗೂ ಕೂಡ ಯುದ್ಧದಲ್ಲಿ ಮರಣವನ್ನು ಹೊಂದುವುದು ಧರ್ಮ- ಶಾಸ್ತ್ರಕ್ಕೆ ಸಮ್ಮತವಾಗಿದೆ. ಏಕೆಂದರೆ ಕ್ಷತ್ರಿಯಜನ್ಮವು ಅತ್ಯಂತಪ್ರಶಸ್ತವಾಗಿದೆ. ಆ ಬ್ರಹ್ಮನಿಂದ ಈ ಕ್ಷತ್ರಿಯಜಾತಿಯು ಹುಟ್ಟಿದೆ.
ವಿವರಣೆ - ಕ್ಷತ್ರಧರ್ಮದಿಂದ ಜೀವನವನ್ನು ನಡೆಸಲು ಹೊರಟಿರುವ ಬ್ರಾಹ್ಮಣನಿಗೂ ಕೂಡ ಯುದ್ಧದಲ್ಲಿ ಮರಣ ಹೊಂದುವುದೇ ಧರ್ಮ. ಇದರಿಂದ ಅವನಿಗೆ ಸದ್ಗತಿಯಾಗುವುದರಲ್ಲಿ ಸಂಶಯವಿಲ್ಲ. ಉತ್ತಮವಾದ ಕ್ಷತ್ರಿಯಧರ್ಮ- ವನ್ನು ಆಶ್ರಯಿಸುವುದು ಬ್ರಾಹ್ಮಣರಿಗೆ ದೋಷವಾಗುವುದಿಲ್ಲ. ಯಾವ ಬ್ರಹ್ಮನಿಂದ ಬ್ರಾಹ್ಮಣಜಾತಿಯು ಹುಟ್ಟಿದೆಯೋ, ಅವನಿಂದಲೇ ಕ್ಷತ್ರಿಯಜಾತಿಯೂ ಕೂಡ ಹುಟ್ಟಿದೆ.
ನ ತ್ಯಾಗೋ ನ ಪುನರ್ಯಜ್ಞೋ ನ ತಪೋ ಮನುಜೇಶ್ವರ |
ಕ್ಷತ್ರಿಯಸ್ಯ ವಿಧೀಯಂತೇ ನ ಪರಸ್ವೋಪಜೀವನಮ್ ॥7॥
ಓ ಮನುಜೇಶ್ವರನೇ! ಕ್ಷತ್ರಿಯನಾದವನಿಗೆ ಸನ್ಯಾಸ, ಯಜ್ಞ, ತಪಸ್ಸು ಮತ್ತೊಬ್ಬರನ್ನು ಉಪಜೀವಿಸಿ, ಜೀವನವನ್ನು ನಿರ್ವಹಿಸುವುದು ವಿಹಿತವಾಗಿರು- ವುದಿಲ್ಲ.
ಸ ಭವಾನ್ ಸರ್ವಧರ್ಮಜ್ಞೋ ಧರ್ಮಾತ್ಮಾ ಭರತರ್ಷಭ |
ರಾಜಾ ಮನೀಷೀ ನಿಪುಣೋ ಲೋಕೇ ದೃಷ್ಟಪರಾವರಃ ॥8॥
ಭರತರ್ಷಭನೇ! ನೀನು ಎಲ್ಲಾ ಧರ್ಮಗಳನ್ನು ಚೆನ್ನಾಗಿ ಅರಿತವನು. ಅಷ್ಟೇ ಅಲ್ಲದೇ ಆ ಎಲ್ಲ ಧರ್ಮಗಳನ್ನು ಮನನ ಮಾಡಿರುವವನು. ಲೋಕವ್ಯವಹಾರ- ಗಳಲ್ಲಿ ನಿಪುಣನಾಗಿರುವವನು. ಲೋಕದಲ್ಲಿ ಯಾವುದು ಶ್ರೇಷ್ಠ, ಯಾವುದು ಶ್ರೇಷ್ಠವಲ್ಲ ಎಂಬುದನ್ನು ಯಥಾರ್ಥವಾಗಿ ತಿಳಿದವನು. ಅತ್ಯಂತ ಬುದ್ಧಿವಂತನಾದ ನಿನಗೆ ಈ ದುಃಖವು ಉಚಿತವಲ್ಲ.
ತ್ಯಕ್ತ್ವ ಸಂತಾಪಜಂ ಶೋಕಂ ದಂಶಿತೋ ಭವ ಕರ್ಮಣಿ |
ಕ್ಷತ್ರಿಯಸ್ಯ ವಿಶೇಷೇಣ ಹೃದಯಂ ವಜ್ರಸನ್ನಿಭಮ್ ॥9॥
ಸಂತಾಪದಿಂದ ಹುಟ್ಟಿದ ಈ ಶೋಕವನ್ನು ಪರಿತ್ಯಾಗ ಮಾಡು. ರಾಜನಿಗೆ ಉಚಿತವಾದ ಕಾರ್ಯಗಳನ್ನು ಮಾಡಲು ಸಿದ್ಧನಾಗು. ಕ್ಷತ್ರಿಯನಾದವನಿಗೆ ಹೃದಯವು ವಜ್ರದಂತೆ ಅತ್ಯಂತಕಠಿಣವಾಗಿರಬೇಕು. ನೀನೂ ಸಹ ಅಂಥ ಕಾಠಿಣ್ಯ- ವನ್ನು ಹೊಂದಿ ಕ್ಷಾತ್ರಧರ್ಮವನ್ನು ಅನುಸರಿಸು.
ಜಿತ್ವಾರೀನ್ ಕ್ಷತ್ರಧರ್ಮೇಣ ಪ್ರಾಪ್ಯ ರಾಜ್ಯಮಕಂಟಕಮ್ |
ವಿಜಿತಾತ್ಮಾ ಮನುಷ್ಯೇಂದ್ರ ಯಜ್ಞದಾನಪರೋ ಭವ ॥10॥
ಕ್ಷಾತ್ರಧರ್ಮದಿಂದ ಎಲ್ಲ ಶತ್ರುಗಳನ್ನು ಗೆದ್ದು ಯಾರ ಉಪದ್ರವವೂ ಇಲ್ಲದ ರಾಜ್ಯವನ್ನು ಪಡೆದುಕೊಂಡಿರುವಿ. ಇಂಥ ನೀನು ಶೋಕಾವಿರ್ಭೂತವಾದ ಮನಸ್ಸನ್ನು ಜಯಿಸಲೇಬೇಕು. ಯಜ್ಞ ಮತ್ತು ದಾನಗಳನ್ನು ಮಾಡುವುದರಲ್ಲಿ ಆಸಕ್ತನಾಗು.
ಇಂದ್ರೋ ವೈ ಬ್ರಹ್ಮಣಃ ಪುತ್ರಃ ಕ್ಷತ್ರಿಯಃ ಕರ್ಮಣಾಭವತ್ |
ಜ್ಞಾತೀನಾಂ ಪಾಪವೃತ್ತೀನಾಂ ಜಘಾನ ನವತೀರ್ನವ ॥11॥
ಇಂದ್ರನು ಕಶ್ಯಪಮಹಷಿಯ ಮಗನಾದ್ದರಿಂದ ಬ್ರಾಹ್ಮಣನೇ ಆಗಿರುವನು. ಆದರೂ ಕೂಡ ತನ್ನ ಕರ್ಮದಿಂದ ಕ್ಷಾತ್ರಧರ್ಮವನ್ನು ಅನುಸರಿಸಿದನು. ಕ್ಷಾತ್ರ- ಧರ್ಮಕ್ಕೆ ಅನುಸಾರಿಯಾಗಿ ಪಾಪವೃತ್ತಿಯುಳ್ಳ ಜ್ಞಾತಿಗಳಾದ ಎಂಟುನೂರ ಹತ್ತು- ಮಂದಿ ದೈತ್ಯರನ್ನು ಸಂಹಾರ ಮಾಡಿದನು.
ತಚ್ಚಾಸ್ಯ ಕರ್ಮ ಪೂಜ್ಯಂ ಹಿ ಪ್ರಶಸ್ಯಂ ಚ ವಿಶಾಂಪತೇ |
ತೇನ ಚೇಂದ್ರತ್ವಂ ಸಮಾಪೇದೇ ದೇವಾನಾಮಿತಿ ನಃ ಶ್ರುತಮ್ ॥12॥
ಬ್ರಾಹ್ಮಣನಾಗಿ ಹುಟ್ಟಿ ಕ್ಷಾತ್ರಧರ್ಮವನ್ನು ಅನುಸರಿಸಿದನು ಎಂಬುದಾಗಿ ಯಾರೂ ಸಹ ಆ ದೇವೇಂದ್ರನನ್ನು ನಿಂದನೆ ಮಾಡಲಿಲ್ಲ. ಪ್ರಶಂಸೆಯನ್ನೇ ಮಾಡಿದರು. ಹೀಗೆ ಕ್ಷಾತ್ರಧರ್ಮವನ್ನು ಅವಲಂಬಿಸಿ ದೈತ್ಯರನ್ನು ಸಂಹಾರ ಮಾಡಿದ ಕಾರಣದಿಂದ ಅವನಿಗೆ ದೇವೇಂದ್ರಪದವಿಯೇ ದೊರೆಯಿತು. ಈ ಕಥೆಯನ್ನು ನಾವು ಕೇಳಿದ್ದೇವಷ್ಟೇ.
ಸ ತ್ವಂ ಯಜ್ಞೈರ್ಮಹಾರಾಜ ಯಜಸ್ವ ಬಹುದಕ್ಷಿಣೈಃ |
ಯಥೈವೇಂದ್ರೋ ಮನುಷ್ಯೇಂದ್ರ ಚಿರಾಯ ವಿಗತಜ್ವರಃ ॥13॥
ಮಹಾರಾಜನಾದ ಮನುಷ್ಯೇಂದ್ರನೇ! ನೀನೂ ಕೂಡ ಚಿಂತೆ ಮತ್ತು ಶೋಕ- ಗಳನ್ನು ಪರಿತ್ಯಾಗ ಮಾಡು. ದೇವೇಂದ್ರನಂತೆ ಬಹುದಕ್ಷಿಣಾಕವಾದ ಯಜ್ಞಗಳಿಂದ ದೇವತೆಗಳನ್ನು ಆರಾಧನೆ ಮಾಡು.
ಮಾ ತ್ವಮೇವಂ ಗತೇ ಕಿಂಚಿಚ್ಛೋಚೇಥಾಃ ಕ್ಷತ್ರಿಯರ್ಷಭ |
ಗತಾಸ್ತೇ ಕ್ಷತ್ರಧರ್ಮೇಣ ಶಸ್ತ್ರಪೂತಾಃ ಪರಾಂ ಗತಿಮ್ ॥14॥
ಕ್ಷತ್ರಿಯಶ್ರೇಷ್ಠನೇ! ನಾನು ಹೇಳುತ್ತಿರುವುದೇ ಸತ್ಯವಾದ ಮಾರ್ಗ. ಕಳೆದು ಹೋದ ವಿಷಯದಲ್ಲಿ ಸ್ವಲ್ಪವೂ ಕೂಡ ದುಃಖವು ಪಡಬೇಡ. ಕ್ಷತ್ರಿಯಧರ್ಮಕ್ಕೆ ಅನುಸಾರಿಯಾಗಿ ಯುದ್ಧವನ್ನು ಮಾಡುತ್ತಿದ್ದ ಆ ನಿನ್ನ ಬಂಧುಗಳು ಮತ್ತು ದಾಯಾದಿಗಳು ಶಸ್ತ್ರಪೂತರಾಗಿ ಅತ್ಯಂತ ಶ್ರೇಷ್ಠವಾದ ಸದ್ಗತಿಯನ್ನು ಹೊಂದಿದ್ದಾರೆ.
ಭವಿತವ್ಯಂ ತಥಾ ತಚ್ಚ ಯದ್ ವೃತ್ತಂ ಭರತರ್ಷಭ |
ದಿಷ್ಟಂ ಹಿ ರಾಜಶಾರ್ದೂಲ ನ ಶಕ್ಯಮತಿವರ್ತಿತುಮ್ ॥15॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅರ್ಜುನವಾಕ್ಯೇ

ದ್ವಾವಿಂಶೋಽಧ್ಯಾಯಃ ॥22॥
ಭರತವಂಶೋದ್ಭವನೇ! ರಾಜಸಿಂಹನೇ! ಯಾವುದು ಆಗಬೇಕೋ? ಅದು ಆಗಿಯೇ ಆಗುತ್ತದೆ. ಇದಕ್ಕೆ ನಾನು ನೀನು ಅಥವಾ ಬೇರೆ ಯಾರೂ ಸಹ ಕಾರಣ- ರಲ್ಲ. ವಿಧಿಯ ನಿಯಮವನ್ನು ಉಲ್ಲಂಘನೆ ಮಾಡಿ ನಡೆಯಲು ಯಾರಿಂದಲೂ ಕೂಡ ಸಾಧ್ಯವಾಗುವುದಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 22ನೆಯ ಅಧ್ಯಾಯವು ಮುಗಿಯಿತು.
*****
23. ಇಪ್ಪತ್ತೂರನೆಯ ಅಧ್ಯಾಯ
ವೇದವ್ಯಾಸಮಷಿಗಳು ಯುಧಿಷ್ಠಿರನಿಗೆ ಕ್ಷಾತ್ರಧರ್ಮದ ಅನುಷ್ಠಾನವೇ ನಿನಗೆ ಉಚಿತವೆಂದು ಉಪದೇಶಿಸಿದರು. ಇದಕ್ಕೆ ಶಂಖಲಿಖಿತರ ಕಥೆಯನ್ನು ಹೇಳುವ ಪ್ರಸಂಗದಲ್ಲಿ ಸುದ್ಯುಮ್ನರಾಜನ ದಂಡಧರ್ಮಪರಿಪಾಲನೆಯ ಮಹತ್ವವನ್ನು ಉದಾಹರಣೆಯನ್ನಾಗಿ ತಿಳಿಸಿದರು.
ವೈಶಂಪಾಯನಃ
ಏವಮುಕ್ತಸ್ತು ಕೌಂತೆಯೋ ಗುಡಾಕೇಶೇನ ಪಾಂಡವಃ |
ನೋವಾಚ ಕಿಂಚಿತ್ ಕೌರವ್ಯಸ್ತತೋ ದ್ವೈಪಾಯನೋಽಬ್ರುವೀತ್ ॥1॥
ವೈಶಂಪಾಯನ - ಭರತಕುಲೋತ್ಪನ್ನನೇ! ಅರ್ಜುನನು ಯುಕ್ತಿಬದ್ಧವಾದ ಧರ್ಮಸಮ್ಮತವಾದ ಇಷ್ಟು ಮಾತುಗಳನ್ನು ಹೇಳಿದರೂ ಕೂಡ ಕುಂತಿಯ ಮಗ- ನಾದ ಯುಧಿಷ್ಠಿರನಿಗೆ ಯಾವುದೇ ಪರಿವರ್ತನೆ ಆಗಲಿಲ್ಲ. ಮೌನವಾಗಿಯೇ ಕುಳಿ- ತನು. ಆಗ ಸಾಕ್ಷಾತ್ ವೇದವ್ಯಾಸದೇವರು ಯುಧಿಷ್ಠಿರನನ್ನು ಕುರಿತು ಹಿತೋಪದೇಶ- ವನ್ನು ಮಾಡಲು ಪ್ರವೃತ್ತರಾದರು.
ಶ್ರೀವೇದವ್ಯಾಸಃ
ಬೀಭತ್ಸೋರ್ವಚನಂ ಸೌಮ್ಯ ಸತ್ಯಮೇತದ್ ಯುಧಿಷ್ಠಿರ |
ಶಾಸ್ತ್ರದೃಷ್ಟಃ ಪರೋ ಧರ್ಮಃ ಸ್ಥಿತೋ ಗಾರ್ಹಸ್ಥ್ಯಮಾಶ್ರಿತಃ ॥2॥
ವೇದವ್ಯಾಸದೇವರು ಯುಧಿಷ್ಠಿರನೇ! ಅರ್ಜುನನ ಮಾತುಗಳೆಲ್ಲವೂ ಸತ್ಯವೇ ಆಗಿವೆ. ಶಾಸ್ತ್ರಸಮ್ಮತವಾಗಿವೆ. ಶಾಸ್ತ್ರದಲ್ಲಿ ಗೃಹಸ್ಥಧರ್ಮವನ್ನು ಆಶ್ರಯಿಸಿರುವ ರಾಜ್ಯಶಾಸ್ತ್ರಧರ್ಮವು ಅತ್ಯಂತ ಶ್ರೇಷ್ಠವೆಂದು ಹೇಳಲ್ಪಟ್ಟಿದೆ.
ಸ್ವಧರ್ಮಂ ಚರ ಧರ್ಮಜ್ಞ ಯಥಾಶಾಸ್ತ್ರಂ ಯಥಾವಿಧಿ |
ನ ಹಿ ಗಾರ್ಹಸ್ಥ್ಯಮುತ್ಸೃಜ್ಯ ತವಾರಣ್ಯಂ ವಿಧೀಯತೇ ॥3॥
ಧರ್ಮಜ್ಞನೇ! ವಿಧಿಗೆ ಅನುಸಾರಿಯಾಗಿ ಕರ್ತವ್ಯವನ್ನು ನಿರ್ವಹಿಸು. ಶಾಸ್ತ್ರಕ್ಕೆ ಅನುಗುಣವಾದ ಸ್ವಧರ್ಮಾಚರಣೆಯನ್ನು ಆಚರಿಸು. ಶ್ರೇಷ್ಠವಾದ ಗೃಹಸ್ಥಾಶ್ರಮ- ವನ್ನು ಪರಿತ್ಯಾಗ ಮಾಡಿ, ಅರಣ್ಯದಲ್ಲಿ ಜೀವಿಸುವುದು ಕ್ಷತ್ರಿಯನಾದ ನಿನಗೆ ವಿಹಿತವಲ್ಲ.
ಗೃಹಸ್ಥಂ ಹಿ ಸದಾ ದೇವಾಃ ಪಿತರೋಽತಿಥಯಸ್ತಥಾ |
ಭೃತ್ಯಾಶ್ಚೈವೋಪಜೀವಂತಿ ತಾನ್ ಭರಸ್ವ ಮಹೀಪತೇ ॥4॥
ಯಾವಾಗಲೂ ಕೂಡ ದೇವತೆಗಳು, ಪಿತೃಗಳು, ಅತಿಥಿಗಳು, ಸೇವಕರು, ಗೃಹಸ್ಥರನ್ನೇ ಆಶ್ರಯಿಸಿ ಜೀವಿಸುತ್ತಾರೆ. ಆದ್ದರಿಂದ ಅವರೆಲ್ಲರಿಗೂ ಆಶ್ರಯನಾಗಿ ನೀನು ಗೃಹಸ್ಥಾಶ್ರಮಧರ್ಮವನ್ನೇ ಪರಿಪಾಲನೆ ಮಾಡಬೇಕು.
ವಯಾಂಸಿ ಪಶವಶ್ಚೈವ ಭೂತಾನಿ ಚ ಮಹಿಪತೇ |
ಗೃಹಸ್ಥೈರೇವ ಧಾರ್ಯಂತೇ ತಸ್ಮಾಚ್ಛ್ರೇಷ್ಠೋ ಗೃಹಾಶ್ರಮೀ ॥5॥
ಮಹೀಪತಿಯೇ! ಪಶುಗಳು, ಪಕ್ಷಿಗಳು ಉಳಿದೆಲ್ಲಾ ಪ್ರಾಣಿಗಳೂ ಕೂಡ ಗೃಹಸ್ಥರನ್ನೇ ರಕ್ಷಕರನ್ನಾಗಿ ಆಶ್ರಯಿಸಿರುತ್ತವೆ. ಗೃಹಸ್ಥರೇ ಎಲ್ಲಾ ಪ್ರಾಣಿಗಳ ಭರಣ ಮತ್ತು ಪೋಷಣೆಗಳನ್ನು ಮಾಡುತ್ತಾರೆ. ಆದ್ದರಿಂದಲೇ ಗೃಹಸ್ಥಾಶ್ರಮವು ಅತ್ಯಂತ ಶ್ರೇಷ್ಠವೆಂದು ತಿಳಿ.
ಸೋಽಯಂ ಚತುರ್ಣಾಮೇತೇಷಾಮಾಶ್ರಮಾಣಾಂ ದುರಾಚರಃ |
ತಂ ಚರಾದ್ಯ ವಿಧಿಂ ಪಾರ್ಥ ದುಶ್ಚರಂ ದುರ್ಬಲೇಂದ್ರಿಯೈಃ ॥6॥
ನಾಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮದ ಆಚರಣೆಯೇ ಅತ್ಯಂತಕಠಿಣವಾಗಿದೆ. ಯಾರಿಗೆ ಇಂದ್ರಿಯಗಳು ದುರ್ಬಲವಾಗಿರುತ್ತವೋ, ಅಂಥವರಿಗೆ ಈ ಗೃಹಸ್ಥಾ- ಶ್ರಮದ ಆಚರಣೆಯನ್ನು ಮಾಡಲು ಸಾಧ್ಯವಾಗುವುದಿಲ್ಲ. ಇಂಥ ಅಸಾಧ್ಯವಾದ ಗೃಹಸ್ಥಾಶ್ರಮಧರ್ಮವನ್ನು ನೀನು ಈಗಿನಿಂದಲೇ ಆಚರಿಸುವವನಾಗು.
ವೇದಜ್ಞಾನಂ ಚ ತೇ ಕೃತ್ಸ್ನಂ ತಪಶ್ಚಾಚರಿತಂ ಮಹತ್ |
ಪಿತೃಪೈತಾಮಹಂ ರಾಜ್ಯಂ ಧುರ್ಯವದ್ವೋಢುಮರ್ಹಸಿ ॥7॥
ಓ ಧರ್ಮಜನೇ! ನಿನಗೆ ಎಲ್ಲ ವೇದಾರ್ಥಗಳ ಪರಿಜ್ಞಾನವಿದೆ. ಕಠಿಣವಾದ ತಪಸ್ಸನ್ನೂ ಕೂಡ ಆಚರಣೆ ಮಾಡಿರುವಿ. ನಿನ್ನ ತಂದೆ, ತಾತಂದಿರ ಕಾಲದಿಂದ ಆಗತವಾದ ಈ ರಾಜ್ಯವನ್ನು ನೀನು ದೊಡ್ಡ ಭಾರವನ್ನು ಹೊತ್ತಂತೆ ಧಾರಣೆ ಮಾಡಬೇಕು.
ತಪೋ ಯಜ್ಞಸ್ತಥಾ ವಿದ್ಯಾ ಭೈಕ್ಷ್ಯಮಿಂದ್ರಿಯಸಂಯಮಃ(ನಿಗ್ರಹಃ) |
ಧ್ಯಾನಮೇಕಾಂತಶೀಲತ್ವಂ ತುಷ್ಟಿರ್ಜ್ಞಾನಂ ಚ ಶಕ್ತಿತಃ ॥8॥
ಬ್ರಾಹ್ಮಣಾನಾಂ ಮಹಾರಾಜ ಚೇಷ್ಟಾ ಸಂಸಿದ್ಧಿಕಾರಿಕಾ |
ತಪಸ್ಸು, ಯಾಗ, ಅಧ್ಯಾತ್ಮವಿದ್ಯೆ, ಭಿಕ್ಷೆ, ಇಂದ್ರಿಯ ನಿಗ್ರಹ, ಧ್ಯಾನ, ಏಕಾಂತ- ವಾಸ, ಸಂತೋಷ, ಶಾಸ್ತ್ರಜ್ಞಾನ, ಶಕ್ತಿಗೆ ತಕ್ಕಂತೆ ದಾನ. ಈ ಎಲ್ಲ ಧರ್ಮಗಳು ಬ್ರಾಹ್ಮಣರಾದವರಿಗೆ ಸಿದ್ಧಿಯನ್ನು ತರುವ ಕಾರ್ಯಗಳಾಗಿವೆ. ಕ್ಷತ್ರಿಯರಿಗಲ್ಲ.
ಕ್ಷತ್ರಿಯಾಣಾಂ ತು ವಕ್ಷ್ಯಾಮಿ ತವಾಪಿ ವಿದಿತಂ ಪುನಃ ॥9॥
ಕ್ಷತ್ರಿಯರು ಯಾವ ಧರ್ಮವನ್ನು ಆಚರಿಸಬೇಕೆಂಬುದನ್ನು ನಿನಗೆ ತಿಳಿದಿದ್ದರೂ ಮತ್ತೊಮ್ಮೆ ಹೇಳುತ್ತೇನೆ ಕೇಳು.
ಯಜ್ಞೋ ವಿದ್ಯಾ ಸಮುತ್ಥಾನಮಸಂತೋಷಃ ಶ್ರಿಯಂ ಪ್ರತಿ |
ದಂಡಧಾರಣಮುಗ್ರತ್ವಂ ಪ್ರಜಾನಾಂ ಪರಿಪಾಲನಮ್ ॥10॥

ವೇದಜ್ಞಾನಂ ತಥಾ ಕೃತ್ಸ್ನಂ ತಪಃ ಸುಚರಿತಂ ತಥಾ |
ದ್ರವಿಣೋಪಾರ್ಜನಂ ಭೂರಿ ಪಾತ್ರೇ ಚ ಪ್ರತಿಪಾದನಮ್ ॥11॥
ಏತಾನಿ ರಾಜ್ಞಾಂ ಕರ್ಮಾಣಿ ಸುಕೃತಾನಿ ವಿಶಾಂಪತೇ |
ಇಮಂ ಲೋಕಮಮುಂ ಚೈವ ಸಾಧಯಂತೀತಿ ನಃ ಶ್ರುತಮ್ ॥12॥
ಯಜ್ಞ ಮಾಡುವುದು, ವಿದ್ಯಾಭ್ಯಾಸ ಮಾಡುವುದು, ಮಹಾಪ್ರಯತ್ನ, ಐಶ್ವರ್ಯದಲ್ಲಿ ಅತೃಪ್ತಿ, ದಂಡನೀತಿ, ನಿರ್ದಾಕ್ಷಿಣ್ಯ, ಪ್ರಜೆಗಳ ಪರಿಪಾಲನೆ, ವೇದಗಳ ಅರ್ಥವನ್ನು ಸಂಪೂರ್ಣವಾಗಿ ತಿಳಿಯುವುದು, ತಪಸ್ಸು, ಸದಾಚಾರ, ಧನಾರ್ಜನೆ, ಸತ್ಪಾತ್ರರಲ್ಲಿ ದಾನ, ಇವೇ ಮೊದಲಾದ ಸತ್ಕರ್ಮಗಳು ಕ್ಷತ್ರಿಯರಿಗೆ ಅತ್ಯಂತ ಉಚಿತವಾಗಿವೆ. ಈ ಸತ್ಕರ್ಮಾಚರಣೆಗಳನ್ನು ಯಾರು ಆಚರಿಸುತ್ತಾರೋ, ಅಂಥವರು ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಸುಖವಾಗಿ ಇರುತ್ತಾರೆ. ಇಹಲೋಕದಲ್ಲಿ ಸುಖವಾಗಿದ್ದು, ಅವಸಾನಾಂತರದಲ್ಲಿಯೂ ಪುಣ್ಯಲೋಕಗಳನ್ನು ಪಡೆಯುತ್ತಾರೆ.
ಏಷಾಂ ಜ್ಯಾಯಸ್ತು ಕೌಂತೇಯ ದಂಡಧಾರಣಮುಚ್ಯತೇ |
ಬಲಂ ಹಿ ಕ್ಷತ್ರಿಯೇ ನಿತ್ಯಂ ಬಲೇ ದಂಡಃ ಸಮಾಹಿತಃ ॥13॥
ಮೇಲೆ ಉಲ್ಲೇಖಿಸಿದ ಕ್ಷತ್ರಿಯರ ಧರ್ಮಗಳಲ್ಲಿ ದಂಡಧಾರಣವೇ ಅತ್ಯಂತ ಶ್ರೇಷ್ಠವಾದ ಧರ್ಮವಾಗಿದೆ ಎಂದು ಶಾಸ್ತ್ರಗಳು ಹೇಳುತ್ತವೆ. ಕ್ಷತ್ರಿಯನಲ್ಲಿ ಬಲವು ನಿತ್ಯವಾಗಿರುತ್ತದೆ. ಕ್ಷತ್ರಿಯನ ಬಲದಲ್ಲಿ ದಂಡವು ಪ್ರತಿಷ್ಠಿತವಾಗಿದೆ. ದಂಡನೀತಿ- ಯನ್ನು ಅನುಸರಿಸಲು ಕ್ಷತ್ರಿಯನಿಗೆ ಬಲವಿರಬೇಕು.
ಏತಾ ವಿದ್ಯಾಃ ಕ್ಷತ್ರಿಯಾಣಾಂ ರಾಜನ್ ಸಂಸಿದ್ಧಿಕಾರಿಕಾಃ |
ಅಪಿ ಗಾಥಾಮಿಮಾಂ ಚಾಪಿ ಬೃಹಸ್ಪತಿರಗಾಯತ ॥14॥
ಈ ಎಲ್ಲ ಕ್ರಿಯೆಗಳು ಕ್ಷತ್ರಿಯರ ಸಂಸಿದ್ಧಿಗೆ ಕಾರಣಗಳಾಗಿವೆ. ಈ ಕ್ರಿಯೆಗಳ ಆಚರಣೆಯಿಂದ ಕ್ಷತ್ರಿಯರು ಎಲ್ಲಾ ಬಗೆಯ ಸಿದ್ಧಿಯನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಬೃಹಸ್ಪತಿಯು ಒಂದು ಗಾಥೆಯನ್ನು ಹೇಳಿರುವನು -
ಭೂಮಿರೇತೌ ನಿಗಿರತಿ ಸರ್ಪೋ ಬಿಲಶಯಾನಿವ |
ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥15॥
ಸರ್ಪವು ಬಿಲದಲ್ಲಿ ಅಡಗಿದ ಇಲಿಗಳನ್ನು ಹೇಗೆ ನುಂಗುತ್ತದೋ, ಹಾಗೇ ಭೂಮಿಯು ಶತ್ರುವನ್ನು, ಯುದ್ಧಮಾಡದ ಕ್ಷತ್ರಿಯನನ್ನು, ದೇಶಸಂಚಾರ ಮಾಡದ ಬ್ರಾಹ್ಮಣನನ್ನು ನುಂಗಿಬಿಡುತ್ತದೆ.
ಸುದ್ಯುಮ್ನಶ್ಚಾಪಿ ರಾಜರ್ಷಿಃ ಶ್ರೂಯತೇ ದಂಡಧಾರಣಾತ್ |
ಪ್ರಾಪ್ತವಾನ್ ಪರಮಾಂ ಸಿದ್ಧಿಂ ದಕ್ಷಃ ಪ್ರಾಚೇತಸೋ ಯಥಾ ॥16॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ವ್ಯಾಸವಾಕ್ಯೇ ತ್ರಯೋವಿಂಶೋಽಧ್ಯಾಯಃ ॥23॥
ರಾಜರ್ಷಿಯಾದ ಸುದ್ಯುಮ್ನನೂ ಕೂಡ ದಂಡಧಾರಣದಿಂದಲೇ ಪ್ರಚೇತಸ ಪುತ್ರನಾದ ದಕ್ಷನಂತೆ ಉತ್ತಮಸಿದ್ಧಿಯನ್ನು ಹೊಂದಿದನೆಂದು ಕೇಳಿದ್ದೇವೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 23ನೆಯ ಅಧ್ಯಾಯವು ಮುಗಿಯಿತು.
*****

24. ಇಪ್ಪತ್ನಾಕನೆಯ ಅಧ್ಯಾಯ
ಯುಧಿಷ್ಠಿರನಿಗೆ ವೇದವ್ಯಾಸದೇವರಿಂದ ರಾಜಧರ್ಮದ ಉಪದೇಶ. ಶಂಖಲಿಖಿತರ ಕಥೆಯ ಉಲ್ಲೇಖ. ಅಪರಾಧಿಗಳಿಗೆ ಶಿಕ್ಷೆ ನೀಡುವುದರಿಂದಲೇ ರಾಜನಿಗೆ ಶುದ್ಧಿ. ಕಳ್ಳತನ ಮಾಡಿದ ಪ್ರೀತಿಯ ತಮ್ಮನಿಗೆ ಶಿಕ್ಷೆ ನೀಡಿದ ಅಣ್ಣನ ಉದಾತ್ತಚಿಂತನೆ. ಕಳ್ಳತನವು ಮಹಾಪಾತಕಗಳಲ್ಲಿ ಒಂದಾಗಿದೆ. ಬ್ರಹ್ಮಹತ್ಯೆಗೆ ಸಮಾನವಾಗಿದೆ. ಬ್ರಾಹ್ಮಣನಾದರೂ ಅಪರಾಧಮಾಡಿದ ಲಿಖಿತನಿಗೆ ಶಿಕ್ಷೆ ನೀಡಿದ್ದರಿಂದಲೇ ಸುದ್ಯುಮ್ನನು ಉದ್ಧಾರವಾದನು. ಅಪರಾಧಮಾಡಿದ ದುರ್ಯೋಧನಾದಿಗಳಿಗೆ ಮರಣಶಿಕ್ಷೆಯನ್ನು ನೀಡಿದ್ದರಿಂದ ನೀನೂ ಸಹ ಉದ್ಧೃತನಾಗಿರುವಿ ಎಂದು ವ್ಯಾಸರ ಉಪದೇಶ.
ಯುಧಿಷ್ಠಿರಃ
ಭಗವನ್ ಕರ್ಮಣಾ ಕೇನ ಸುದ್ಯುಮ್ನೋ ವಸುಧಾಧಿಪಃ |
ಸಂಸಿದ್ಧಿಂ ಪರಮಾಂ ಪ್ರಾಪ್ತಃ ಶ್ರೋತುಮಿಚ್ಛಾಮಿ ತಂ ನೃಪಮ್ ॥1॥
ಯುಧಿಷ್ಠಿರ - ಯುಧಿಷ್ಠಿರನು ವೇದವ್ಯಾಸದೇವರ ಬಳಿ ಪ್ರಶ್ನಿಸುತ್ತಾನೆ. ಷಡ್ಗು- ಣೈಶ್ವರ್ಯಪೂರ್ಣರಾದ ಮಹಾತ್ಮರೇ! ರಾಜನಾದ ಸುದ್ಯುಮ್ನನು ಯಾವ ಕ್ರಮದಲ್ಲಿ ಸಿದ್ಧಿಯನ್ನು ಪಡೆದನು. ಮತ್ತು ಶ್ರೇಷ್ಠಸ್ಥಾನವನ್ನು ಹೊಂದಿದನು. ಇದರ ಬಗ್ಗೆ ಕೇಳಿ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ.
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶಂಖಶ್ಚ ಲಿಖಿತಶ್ಚಾಸ್ತಾಂ ಭ್ರಾತರೌ ಸಂಶಿತವ್ರತೌ ॥2॥
ವೇದವ್ಯಾಸದೇವರು ಯುಧಿಷ್ಠಿರನೇ! ಸುದ್ಯುಮ್ನನ ವಿಷಯದಲ್ಲಿ ಪುರಾತನ- ವಾದ ಇತಿಹಾಸ ಹೀಗಿದೆ - ಜಿತೇಂದ್ರಿಯರಾದ ಶಂಖ ಹಾಗೂ ಲಿಖಿತರೆಂಬ ಇಬ್ಬರು ಸಹೋದರರಿದ್ದರು.
ತಯೋರಾವಸಥಾವಾಸ್ತಾಂ ರಮಣೀಯೌ ಪೃಥಕ್ ಪೃಥಕ್ |

ನಿತ್ಯಪುಷ್ಪಫಲೈರ್ವೃಕ್ಷೈರುಪೇತೌ ಬಾಹುದಾಮನು ॥3॥
ಇವರಿಬ್ಬರಿಗೆ ಅತ್ಯಂತರಮಣೀಯವಾದ ಪ್ರತ್ಯೇಕ ಪ್ರತ್ಯೇಕವಾದ ಎರಡು ಆಶ್ರಮಗಳಿದ್ದವು. ಅವು ನಿರಂತರವಾಗಿ ಫಲಪುಷ್ಪಗಳಿಂದ ತುಂಬಿರುತ್ತಿದ್ದವು. ವೃಕ್ಷ- ಗಳಿಂದ ನಿಬಿಡವಾಗಿದ್ದವು. ಬಾಹುದಾ ಎಂಬ ನದಿಯ ದಡದಲ್ಲಿ ಈ ಆಶ್ರಮಗಳಿ- ದ್ದವು.
ಟಿಪ್ಪಣಿ- ಬಾಹುದಾಮನು ಇತ್ಯತ್ರ ಬಾಹುದಾಂ ನಾಮ ನದೀಮ್ |
`ಬಾಹುದಾಮನು' ಎಂಬಲ್ಲಿ `ಬಾಹುದಾ' ಎಂಬುದು ನದಿಯ ಹೆಸರು.
ತತಃ ಕದಾಚಿಲ್ಲಿಖಿತಃ ಶಂಖಸ್ಯಾಶ್ರಮಮಾಗಮತ್ |
ಯದೃಚ್ಛಯಾಪಿ ಶಂಖೋಽಥ ನಿಷ್ಕ್ರಾಂತೋಽಭವದಾಶ್ರಮಾತ್ ॥4॥
ಒಮ್ಮೆ ಲಿಖಿತನು ಅಣ್ಣನಾದ ಶಂಖನ ಆಶ್ರಮಕ್ಕೆ ಆಗಮಿಸಿದನು. ಯದೃಚ್ಛೆ- ಯಿಂದ ಶಂಖನು ಆಗ ಆಶ್ರಮದಲ್ಲಿ ಇರಲಿಲ್ಲ. ಹೊರಗೆ ಹೋಗಿದ್ದನು.
ಸೋಽಭಿಗಮ್ಯಾಶ್ರಮಂ ಭ್ರಾತುಃ ಶಂಖಸ್ಯ ಲಿಖಿತಸ್ತದಾ |
ಫಲಾನಿ ಪಾತಯಾಮಾಸ ಸಮ್ಯಕ್ ಪರಿಣತಾನ್ಯುತ ॥5॥
ಅಣ್ಣನಾದ ಶಂಖನ ಆಶ್ರಮಕ್ಕೆ ಆಗಮಿಸಿದ ಲಿಖಿತನು ಅವನ ತೋಟದಲ್ಲಿದ್ದ ಮರದಲ್ಲಿ ಬಿಟ್ಟ ಕಳಿತವಾದ ಹಣ್ಣುಗಳನ್ನು ಕೆಳಕ್ಕೆ ಬೀಳಿಸಿದನು.
ತಾನ್ಯುಪಾದಾಯ ವಿಸ್ರಬ್ಧೋ ಭಕ್ಷಯಾಮಾಸ ಸ ದ್ವಿಜಃ |
ತಸ್ಮಿಂಶ್ಚ ಭಕ್ಷಯತ್ಯೇವ ಶಂಖೋಽಪ್ಯಾಶ್ರಮಮಾಗಮತ್ ॥6॥
ಬಿದ್ದ ಹಣ್ಣುಗಳನ್ನು ಆರಿಸಿಕೊಂಡನು. ಒಂದೆಡೆಯಲ್ಲಿ ಕುಳಿತು ಸಂತೋಷದಿಂದ ಎಲ್ಲವನ್ನೂ ಕೂಡ ತಿಂದನು. ಹೀಗೆ ಲಿಖಿತನು ಹಣ್ಣನ್ನು ತಿನ್ನುತ್ತಿರುವಾಗಲೇ ಶಂಖನೂ ಕೂಡ ಆಶ್ರಮಕ್ಕೆ ಆಗಮಿಸಿದನು.
ಭಕ್ಷಯಂತಂ ತು ತಂ ದೃಷ್ಟ್ವಾ ಶಂಖೋ ಭ್ರಾತರಮಬ್ರವೀತ್ |
ಕುತಃ ಫಲಾನ್ಯವಾಪ್ತಾನಿ ಹೇತುನಾ ಕೇನ ಖಾದಸಿ ॥7॥
ತೃಪ್ತಿಯಿಂದ ಹಣ್ಣನ್ನು ತಿನ್ನುತ್ತಿರುವ ತಮ್ಮನಾದ ಲಿಖಿತನನ್ನು ನೋಡಿ, ಶಂಖನು ಹೀಗೆ ಪ್ರಶ್ನಿಸಿದನು - ಎಲ್ಲಿಂದ ಈ ಹಣ್ಣುಗಳನ್ನು ಪಡೆದುಕೊಂಡಿ? ಯಾವ ಕಾರಣಕ್ಕಾಗಿ ಈ ಹಣ್ಣುಗಳನ್ನು ತಿನ್ನುತ್ತಿರುವಿ ?
ಸೋಽಬ್ರವೀದ್ ಭ್ರಾತರಂ ಜ್ಯೇಷ್ಠಮುಪಸ್ಪೃಶ್ಯಾಭಿವಾದ್ಯ ಚ |
ಇತ ಏವ ಗೃಹೀತಾನಿ ಮಯೇತಿ ಪ್ರಹಸನ್ನಿವ ॥8॥
ಆಗಮಿಸಿದ ಅಣ್ಣನನ್ನು ಕಂಡು ಲಿಖಿತನು ಮೇಲೆದ್ದು ನಿಂತನು. ಅಭಿವಾದನ ಮಾಡಿದನು. ನಗುತ್ತಲೇ ಸಂತೋಷದಿಂದ ಉತ್ತರಿಸಿದನು - ನಾನು ಈ ಹಣ್ಣುಗಳನ್ನು ನಿನ್ನ ಈ ತೋಟದಲ್ಲಿಯೇ ತೆಗೆದುಕೊಂಡೆನು.
ತಮಬ್ರವೀತ್ ತದಾ ಶಂಖಸ್ತೀವ್ರಕೋಪಸಮನ್ವಿತಃ |
ಸ್ತೇಯಂ ತ್ವಯಾ ಕೃತಮಿದಂ ಫಲಾನ್ಯಾದದತಾ ಸ್ವಯಮ್ ॥9॥
ಗಚ್ಛ ರಾಜಾನಮಾಸಾದ್ಯ ಸ್ವಕರ್ಮ ಪ್ರಥಯಸ್ವ ವೈ ॥
ತಮ್ಮನ ನಡತೆಯನ್ನು ಕಂಡ ಶಂಖನಿಗೆ ತೀವ್ರವಾಗಿ ಕೋಪವು ಉಂಟಾಯಿತು. ಕೋಪದಿಂದಲೇ ಹೀಗೆ ಮಾತನಾಡಿದನು -ನೀನು ಈ ಹಣ್ಣುಗಳನ್ನು ಕಳ್ಳತನ ಮಾಡಿರುವಿ. ನನ್ನ ಅನುಮತಿಯಿಲ್ಲದೇ ತೆಗೆದುಕೊಂಡಿರುವುದರಿಂದ ಕಳ್ಳತನ ಮಾಡಿದಂತೆ ಆಗಿದೆ. ಕೂಡಲೇ ರಾಜನ ಬಳಿ ತೆರಳು. ನೀನು ಮಾಡಿದ ಕಳ್ಳತನವನ್ನು ಅವನಿಗೆ ಹೀಗೆ ಹೇಳು.
ಆದತ್ತಾದಾನಮೇವೇದಂ ಕೃತಂ ಪಾರ್ಥಿವಸತ್ತಮ |
ಸ್ತೇನಂ ಮಾಂ ತ್ವಂ ವಿದಿತ್ವಾ ಚ ಸ್ವಧರ್ಮಮನುಪಾಲಯ ॥10॥
ಶೀಘ್ರಂ ಧಾರಯ ಚೌರಸ್ಯ ಮಮ ದಂಡಂ ನರಾಧಿಪ ॥
ಪಾರ್ಥಿವೇಂದ್ರನೇ! ನನಗೆ ಹಣ್ಣುಗಳನ್ನು ಯಾರೂ ಕೊಟ್ಟಿರಲಿಲ್ಲ. ಮರ- ದಲ್ಲಿರುವ ಫಲಗಳನ್ನು ಯಾರನ್ನು ಕೇಳದೇ, ಯಾರಿಗೂ ಹೇಳದೆ ನಾನಾಗಿಯೇ ತೆಗೆದುಕೊಂಡು ತಿಂದೆನು. ಆದ್ದರಿಂದ ನಾನು ಕಳ್ಳತನವನ್ನು ಮಾಡಿದಂತಾಯಿತು. ನೀನು ರಾಜಧರ್ಮವನ್ನು ಪರಿಪಾಲನೆ ಮಾಡಬೇಕು. ಕಳ್ಳಕಾಕರಿಗೆ ಶಿಕ್ಷೆಯನ್ನು ನೀಡಬೇಕು. ನಿನ್ನ ರಾಜ್ಯದಲ್ಲಿ ಕಳ್ಳತನ ಮಾಡಿದವನಿಗೆ ಯಾವ ಶಿಕ್ಷೆಯನ್ನು ನೀಡುವಿಯೋ, ಅದನ್ನೇ ನನಗೂ ಕೂಡ ನೀಡು (ಎಂದು)
ಇತ್ಯುಕ್ತಸ್ತಸ್ಯ ವಚನಾತ್ ಸುದ್ಯುಮ್ನಂ ವಸುಧಾಧಿಪಮ್ |
ಅಭ್ಯಗಚ್ಛನ್ಮಹಾಬಾಹೋ ಲಿಖಿತಃ ಸಂಶಿತವ್ರತಃ ॥11॥
ಹೀಗೆ ಅಣ್ಣನು ಹೇಳಿದ ಕೂಡಲೇ ದೃಢವ್ರತನಾದ ಲಿಖಿತನು ಅಣ್ಣನ ಮಾತಿನ ಪ್ರಕಾರ ವಸುಧಾಧಿಪನಾದ ಸುದ್ಯುಮ್ನನ ಬಳಿ ತೆರಳಿದನು.
ಸುದ್ಯುಮ್ನಸ್ತ್ವಂತಪಾಲೇಭ್ಯಃ ಶ್ರುತ್ವಾ ಲಿಖಿತಮಾಗತಮ್ |
ಅಭ್ಯಗಚ್ಛತ್ ಮಹಾಮಾತ್ಯಃ ಪದ್ಭ್ಯಾಮೇವ ನರೇಶ್ವರಃ ॥12॥
ಲಿಖಿತನು ತನ್ನ ಅರಮನೆಗೆ ಆಗಮಿಸುತ್ತಿದ್ದಾನೆಂದು ರಾಜನು ದ್ವಾರಪಾಲಕರ ಮೂಲಕ ತಿಳಿದುಕೊಂಡನು. ಕೂಡಲೇ ಅಮಾತ್ಯರಿಂದ ಕೂಡಿಕೊಂಡು ಕಾಲ್ನಡಿಗೆ- ಯಲ್ಲಿಯೇ ಲಿಖಿತನನ್ನು ಆದರಪೂರ್ವಕವಾಗಿ ಸ್ವಾಗತ ಮಾಡಿದನು.
ತಮಬ್ರವೀತ್ ಸಮಾಗತ್ಯ ಸ ರಾಜಾ ಬ್ರಹ್ಮವಿತ್ತಮಮ್ |
ಕಿಮಾಗಮನಮಾಚಕ್ಷ್ವ ಭಗವನ್ ಕೃತಮೇವ ತತ್ ॥13॥
ಬ್ರಹ್ಮಜ್ಞಾನಿಯಾದ ಲಿಖಿತನ ಬಳಿ ತೆರಳಿದ ರಾಜನು ಪ್ರಶ್ನಿಸುತ್ತಾನೆ - ತಾವು ಬಂದ ಕಾರಣವೇನು? ನನ್ನಿಂದ ಆಗಬೇಕಾದ ಕಾರ್ಯ ಯಾವುದಿದೆ?

ಏವಮುಕ್ತಃ ಸ ವಿಪ್ರರ್ಷಿಃ ಸುದ್ಯುಮ್ನಮಿದಮಬ್ರವೀತ್ |
ಪ್ರತಿಶ್ರುತ್ಯ ಕರಿಷ್ಯೇತಿ ಶ್ರುತ್ವಾ ತತ್ ಕರ್ತುಮರ್ಹಸಿ ॥14॥
ಯುಧಿಷ್ಠಿರನೇ! ರಾಜನು ಹೀಗೆ ಹೇಳಿದ ಮೇಲೆ ವಿಪ್ರರ್ಷಿಯಾದ ಲಿಖಿತನು ಸುದ್ಯುಮ್ನನಿಗೆ ಹೀಗೆ ಹೇಳಿದನು -
ಟಿಪ್ಪಣಿ - ಪ್ರತಿಶ್ರುತ್ಯ ಕರಿಷ್ಯೇತಿ ಇತ್ಯತ್ರ ಅಕರಿಷ್ಯೇ ಇತಿ ಲೃಙಿ ಆತ್ಮನೇಪದಿನಿ ಉತ್ತಮಪುರುಷೈಕವಚನಮ್ |
`ಪ್ರತಿಶ್ರುತ್ಯ ಕರಿಷ್ಯೇತಿ' ಎಂಬಲ್ಲಿ ಅಕರಿಷ್ಯೇ ಎಂಬುದಾಗಿ ಪದಚ್ಛೇದವನ್ನು ಮಾಡ- ಬೇಕು. ಆತ್ಮನೇಪದದ ಲೃಙ್ ಲಕಾರದ ಉತ್ತಮಪುರುಷದ ಏಕವಚನವಾಗಿದೆ.
ಅನಿಸೃಷ್ಟಾನಿ ಗುರುಣಾ ಫಲಾನಿ ಪುರುಷರ್ಷಭ |
ಭಕ್ಷಿತಾನಿ ಮಯಾ ರಾಜಂಸ್ತತ್ರ ಮಾಂ ಶಾಧಿ ಮಾಚಿರಮ್ ॥15॥
ಪುರುಷಶ್ರೇಷ್ಠನೇ! ನಾನು ಗುರುಸ್ಥಾನದಲ್ಲಿರುವ ಅಣ್ಣನ ಅನುಮತಿಯನ್ನು ಪಡೆಯದೇ ಅವನ ತೋಟದಲ್ಲಿದ್ದ ಹಣ್ಣುಗಳನ್ನು ತಿಂದುಬಿಟ್ಟೆನು. ಆದ್ದರಿಂದ ಕೂಡಲೇ ಶಿಕ್ಷೆಯನ್ನು ನೀಡು.
ಸುದ್ಯುಮ್ನಃ
ಪ್ರಮಾಣಂ ಚೇನ್ಮತೋ ರಾಜಾ ಭವತೋ ದಂಡಧಾರಣೇ |
ಅನುಜ್ಞಾಯಾಮಪಿ ತಥಾ ಹೇತುಃ ಸ್ಯಾದ್ ಬ್ರಾಹ್ಮಣರ್ಷಭ ॥16॥
ಸುದ್ಯುಮ್ನ ಬ್ರಾಹ್ಮಣಶ್ರೇಷ್ಠರೇ! ಶಿಕ್ಷೆ ನೀಡುವ ಅಧಿಕಾರದಲ್ಲಿ ರಾಜನು ಪ್ರಮಾಣವೆಂಬುದು ನಿಮಗೆ ಅಭಿಪ್ರಾಯವಾಗಿದ್ದಲ್ಲಿ, ಅದರಂತೆ ನಿಮಗೆ ಅನುಜ್ಞೆ- ಯನ್ನು ಕೊಡುವುದಕ್ಕೂ ಆ ರಾಜನಿಗೆ ಅಧಿಕಾರವಿರುತ್ತದಷ್ಟೇ !
ವಿವರಣೆ - ಸುದ್ಯುಮ್ನನು ಉತ್ತರಿಸುತ್ತಾನೆ - ಬ್ರಾಹ್ಮಣಶ್ರೇಷ್ಠನೇ! ಶಿಕ್ಷೆಯನ್ನು ನೀಡಬೇಕೋ, ಬೇಡವೋ? ಎಂಬ ವಿಷಯದಲ್ಲಿ ರಾಜನ ತೀರ್ಮಾನವೇ ಸರಿಯಾದದ್ದು ಎಂಬ ಅಭಿಪ್ರಾಯವು ನಿಮಗೆ ಇರುವುದಾದಲ್ಲಿ ನಿಮ್ಮನ್ನು ಹಿಂತಿರು -ಗಲು ನಾನು ಅನುಮತಿಯನ್ನು ನೀಡಿದ್ದೇನೆ. ಕ್ಷಮಿಸಿರುವುದರಿಂದ ತಮಗೆ ಯಾವುದೇ ಶಿಕ್ಷೆಯು ಇರುವುದಿಲ್ಲ. ರಾಜನಾದವನಿಗೆ ಶಿಕ್ಷೆ ನೀಡಲು ಅಧಿಕಾರ- ವಿರುವಂತೆ ಕ್ಷಮೆಯನ್ನು ನೀಡಲು ಕೂಡ ಅಧಿಕಾರವಿರುತ್ತದೆ. ಆಯಾ ಅಪರಾಧ- ಗಳಿಗೆ ರಾಜನಾದವನು ಕಣ್ಣುಮುಚ್ಚಿ ಶಿಕ್ಷೆಯನ್ನು ನೀಡುವುದಿಲ್ಲ. ಆಯಾ ವ್ಯಕ್ತಿಗಳ ಸ್ವಭಾವ, ಸಂದರ್ಭಗಳನ್ನೆಲ್ಲಾ ಗಮನಿಸಿ ಅಪರಾಧಕ್ಕೆ ಶಿಕ್ಷೆಯನ್ನು ನೀಡುತ್ತಾನೆ. ತಾವು ಬ್ರಹ್ಮಜ್ಞಾನಿಗಳಾಗಿದ್ದೀರಿ, ಸ್ತೋತ್ರಮರಾಗಿದ್ದೀರಿ, ಮತ್ತು ಅತ್ಯಂತಪ್ರಾಮಾ- ಣಿಕವಾಗಿ ಅಲ್ಪಮಟ್ಟದಲ್ಲಿ ನಡೆದ ಅಪರಾಧಕ್ಕೆ ದೊಡ್ಡಮಟ್ಟದಲ್ಲಿ ಶಿಕ್ಷೆಯನ್ನು ಕೇಳುತ್ತಿದ್ದೀರಿ. ಈ ಎಲ್ಲ ಕಾರಣಗಳಿಂದ ನಾನು ತಮಗೆ ಶಿಕ್ಷೆಯನ್ನು ನೀಡುವುದಿಲ್ಲ ಎಂಬುದಾಗಿ ರಾಜನು ಹೇಳುತ್ತಾನೆ.
ಟಿಪ್ಪಣಿ - ಅನುಜ್ಞಾಯಾಮಪಿ ತಥಾ ಇತ್ಯತ್ರ ಅನುಜ್ಞಾಯಾಂ ಕರ್ತವ್ಯಾಯಾಮಪಿ ತಥಾ ಜ್ಯೇಷ್ಠವದ್ ರಾಜಾಪಿ ಹೇತುಃ ಸ್ಯಾತ್ ಸ ಭವಾನ್ ಅಭ್ಯನುಜ್ಞಾತಃ ಮಯಾ ಅಭ್ಯನುಜ್ಞಾತಃ |
`ಅನುಜ್ಞಾಯಾಮಪಿ ತಥಾ' ಎಂಬಲ್ಲಿ ಜ್ಯೇಷ್ಠನಾದ ತಂದೆ ಮತ್ತು ಅಣ್ಣಂದಿರು ಕರ್ತವ್ಯಾಕರ್ತವ್ಯಗಳನ್ನು ನಿರ್ಧರಿಸುವಂತೆ ರಾಜನಿಗೂ ಕೂಡ ನಿರ್ಧಾರ ಮಾಡುವ ಅಧಿ-ಕಾರವಿದೆ. ಆದ್ದರಿಂದ ಅಣ್ಣನ ಅನುಜ್ಞೆಯನ್ನು ಕೊಡದಿದ್ದರೂ ನಾನು ಅನುಜ್ಞೆಯನ್ನು ಕೊಡುತ್ತಿದ್ದೇನೆ ಎಂದಭಿಪ್ರಾಯ.
ಸ ಭವಾನಭ್ಯನುಜ್ಞಾತಃ ಶುಚಿಕರ್ಮಾ ಮಹಾವ್ರತಃ |
ಬ್ರೂಹಿ ಕಾಮಾನತೋಽನ್ಯಾಂಸ್ತ್ವಂ ಕರಿಷ್ಯಾಮಿ ಹಿ ತೇ ವಚಃ ॥17॥
ತಾವು ಅನೇಕ ಸತ್ಕರ್ಮಗಳನ್ನು ಮಾಡಿ, ಮಹಾವ್ರತವುಳ್ಳವರಾಗಿದ್ದೀರಿ. ನೀವು ಇಲ್ಲಿಂದ ಹಿಂತಿರುಗುವಂತೆ ಅನುಜ್ಞೆಯನ್ನು ನೀಡಿದ್ದೇನೆ. ಮತ್ತೇನಾದರೂ ಅಪೇಕ್ಷೆ- ಗಳು ತಮಗಿದ್ದಲ್ಲಿ ತಿಳಿಸಿರಿ. ಆ ನಿಮ್ಮ ಎಲ್ಲಾ ಕಾಮನೆಗಳನ್ನು ಪೂರೈಸುತ್ತೇನೆ.
ವ್ಯಾಸಃ
ಛಂದ್ಯಮಾನೋಽಪಿ ಬ್ರಹ್ಮರ್ಷಿಃ ಪಾರ್ಥಿವೇನ ಮಹಾತ್ಮನಾ |
ನಾನ್ಯಂ ವೈ ವರಯಾಮಾಸ ತಸ್ಮಾದ್ ದಂಡಾದೃತೇ ವರಮ್ ॥18॥
ವೇದವ್ಯಾಸದೇವರು ನಿರ್ಬಂಧಪೂರ್ವಕವಾಗಿ ಆ ರಾಜನು ಲಿಖಿತನಿಗೆ ಹೇಳಿದರೂ ಕೂಡ ಆ ಮಹಾತ್ಮನಾದ ಬ್ರಾಹ್ಮಣನು ತನಗೆ ಶಿಕ್ಷೆಯನ್ನು ಬಿಟ್ಟು ಬೇರೆ ಯಾವುದನ್ನೂ ಕೂಡ ಕೇಳಲಿಲ್ಲ.
ತತಃ ಸ ಪೃಥಿವೀಪಾಲೋ ಲಿಖಿತಸ್ಯ ಮಹಾತ್ಮನಃ |
ಕರೌ ಪ್ರಚ್ಛೇದಯಾಮಾಸ ಧೃತದಂಡೋ ಜಗಾಮ ಸಃ ॥19॥
ಪೃಥಿವೀಪಾಲಕನಾದ ರಾಜನು ಬೇರೆ ವಿಧಿಯಿಲ್ಲದೇ ಆ ಲಿಖಿತನ ಎರಡು ಕೈಗಳನ್ನು ಕತ್ತರಿಸುವಂತೆ ಭಟರಿಗೆ ಆಜ್ಞೆಯನ್ನು ಮಾಡಿದನು. ಶಿಕ್ಷೆಯನ್ನು ಸ್ವೀಕರಿಸಿದ ಲಿಖಿತನು ಅಣ್ಣನ ಬಳಿ ಹೊರಟನು.
ಸ ಗತ್ವಾ ಭ್ರಾತರಂ ಶಂಖಮಾರ್ತರೂಪೋಽಬ್ರವೀದಿದಮ್ |
ಧೃತದಂಡಸ್ಯ ದುರ್ಬುದ್ಧೇರ್ಭಗವನ್ ಕ್ಷಂತುಮರ್ಹಸಿ ॥20॥
ಅಣ್ಣನಾದ ಶಂಖನ ಬಳಿ ತೆರಳಿ ಅತ್ಯಂತ ದುಃಖದಿಂದ ಹೀಗೆ ಹೇಳಿದನು- ರಾಜನಿಂದ ಶಿಕ್ಷೆಯನ್ನು ಪಡೆದುಕೊಂಡಿದ್ದೇನೆ. ಭಗವನ್! ದುರ್ಬುದ್ಧಿಯಾದ ನನ್ನನ್ನು ಕ್ಷಮಿಸಿರಿ.
ಟಿಪ್ಪಣಿ- ಇಂದಿನ ಕಾಲದಲ್ಲಿ ಪ್ರತಿಯೊಬ್ಬ ಸಾತ್ವಿಕರು ಈ ಕಥೆಯನ್ನು ಅರ್ಥಮಾಡಿಕೊಂಡು ಜೀವನವನ್ನು ನಡೆಸಬೇಕು. ಮತ್ತೊಬ್ಬರ ಸ್ವತ್ತನ್ನು ಅಪ- ಹಾರ ಮಾಡಿದರೆ, ಅವರ ಅನುಮತಿಯನ್ನು ಪಡೆಯದೇ ಸ್ವೀಕಾರ ಮಾಡಿದರೆ, ಇಂಥ ಶಿಕ್ಷೆಯನ್ನು ಅನುಭವಿಸಲೇ ಬೇಕು. ಇಲ್ಲದಿದ್ದರೆ ಜನ್ಮಾಂತರದ ತನಕ ಪಾಪ- ರೂಪದಲ್ಲಿ ನಮ್ಮನ್ನೇ ಅದು ಕಾಡುತ್ತದೆ. ಶಿಕ್ಷೆಯನ್ನು ಅನುಭವಿಸುವ ಮೂಲಕ ತತ್ಕ್ಷಣದಲ್ಲಿಯೇ ಆ ಪಾಪವನ್ನು ಪರಿಹಾರ ಮಾಡಿಕೊಳ್ಳಬೇಕು. ಸ್ನೇಹಿತರು, ತಂದೆ, ತಾಯಿ, ಅಣ್ಣ, ತಮ್ಮ ಮೊದಲಾದ ತೀರಾ ಹತ್ತಿರದ ಸಂಬಂಧಿಕರ ಪದಾರ್ಥಗಳನ್ನೂ ಕೂಡ ಅವರ ಅನುಮತಿಯಿಲ್ಲದೇ ಸ್ವೀಕರಿಸಿದರೆ ಅದು ಕಳ್ಳತನವೇ ಆಗುತ್ತದೆ.

ಸಚ್ಚಾರಿತ್ರ್ಯದಿಂದ ಜೀವನು ಉಜ್ವಲವಾಗಬೇಕೆಂದರೆ ಪ್ರಾಮಾಣಿತಕನ ಅತ್ಯಂತ ಮುಖ್ಯವಾಗಿರುತ್ತದೆ. ಕೆಲವರಿಗೆ ಅನ್ಯಾಯ ಮಾಡಿದವರಿಗೆ ಮೋಸ ಮಾಡಬಹುದೆಂಬ ಭಾವನೆಯಿರುತ್ತದೆ. ಇನ್ನೂ ಕೆಲವರಿಗೆ ಸರ್ಕಾರಕ್ಕೆ ಮೋಸ ಮಾಡಿದರೆ ಪಾಪ ಬರುವುದಿಲ್ಲವೆಂಬ ಭಾವನೆಯಿರುತ್ತದೆ. ಮತ್ತೊಬ್ಬ ಕಳ್ಳತನ ಮಾಡಿದ್ದನ್ನು ತಾನು ಅನುಭವಿಸಬಹುದೆಂಬ ಭಾವನೆ- ಯಿರುತ್ತದೆ. ಈ ಎಲ್ಲಾ ಭಾವನೆಯನ್ನು ಹೊಂದಿರುವವರಿಗೆ ಈ ಶಂಖಲಿಖಿತರ ಕಥೆಯು ಆತ್ಮವಿಮರ್ಶೆಗೆ ಅವಕಾಶ ಮಾಡಿಕೊಡುತ್ತದೆ.
ಶಂಖಃ
ನ ಕುಪ್ಯೇ ತವ ಧರ್ಮಜ್ಞ ನಚ ದೂಷಯಸೇ ಮಮ |
ಸುನಿರ್ಮಲಂ ಕುಲಂ ಬ್ರಹ್ಮನ್ನಸ್ಮಿನ್ ಜಗತಿ ವಿಶ್ರುತಮ್ ॥21॥
ಧರ್ಮಸ್ತು ತೇ ವ್ಯತಿಕ್ರಾಂತಸ್ತತಸ್ತೇ ನಿಷ್ಕೃತಿಃ ಕೃತಾ ॥
ಶಂಖ ಧರ್ಮವನ್ನು ಅರಿತ ಅನುಜನೇ ! ನಿಜವಾಗಿಯೂ ನಿನ್ನ ಬಗ್ಗೆ ನನಗೆ ಕೋಪವು ಬಂದಿರುವುದಿಲ್ಲ. ನಿನ್ನನ್ನು ದೂಷಿಸುವುದೂ ಇಲ್ಲ. ನನಗೆ ಯಾವುದೇ ಅಪರಾಧವನ್ನು ನೀನು ಮಾಡಿರುವುದಿಲ್ಲ. ಆದರೆ ನಮ್ಮ ವಂಶವು ಅತ್ಯಂತ ನಿರ್ಮಲವಾಗಿದೆ. ಕಳಂಕರಹಿತವಾಗಿದೆ. ಈ ಜಗತ್ತಿನಲ್ಲಿ ಒಳ್ಳೆಯ ಪ್ರಸಿದ್ಧಿಯನ್ನು ಪಡೆದಿದೆ. ಈ ವಂಶದಲ್ಲಿ ಹುಟ್ಟಿದ ನಿನ್ನಿಂದ ಅಲ್ಪಮಟ್ಟದಲ್ಲಿಯೂ ಧರ್ಮದ ಅತಿಕ್ರಮಣ ಆಗಬಾರದು. ಆದ್ದರಿಂದ ನಿನಗೆ ಈ ಬಗ್ಗೆಯ ಪ್ರಾಯಶ್ಚಿತ್ತವನ್ನು ತಿಳಿಸಿದೆನು.
ಸ ಗತ್ವಾ ಬಾಹುದಾಂ ಶೀಘ್ರಂ ತರ್ಪಯಸ್ವ ಯಥಾವಿಧಿ |
ದೇವಾನ್ ಪಿತೃನೃಷೀಂಶ್ಚೈವ ಮಾ ಚಾಧರ್ಮೇ ಮನಃ ಕೃಥಾಃ ॥22॥
ಈಗ ಶೀಘ್ರದಲ್ಲಿ ಬಾಹುದಾ ನದಿಗೆ ತೆರಳು. ಅಲ್ಲಿ ವಿಧಿಪ್ರಕಾರವಾಗಿ ದೇವತೆ- ಗಳಿಗೆ, ಋಷಿಗಳಿಗೆ, ಪಿತೃಗಳಿಗೆ ತರ್ಪಣವನ್ನು ನೀಡಿ ಅವರನ್ನು ತೃಪ್ತಿಪಡಿಸಿ ಅವರ ಅನುಗ್ರಹವನ್ನು ಪ್ರಾರ್ಥಿಸು. ಇನ್ನು ಮುಂದೆ ಯಾವುದೇ ಕ್ಷಣದಲ್ಲಿ ಇಂಥ ಅಧರ್ಮದ ಕಾರ್ಯದಲ್ಲಿ ಪ್ರವೃತ್ತಿ ಮಾಡಬೇಡ.
ಬ್ರಹ್ಮಹತ್ಯಾಂ ಸುರಾಪಾನಂ ಸ್ತೇಯಂ ಗುರ್ವಂಗನಾಗಮಮ್ |
ಮಹಾಂತಿ ಪಾತಕನ್ಯಾಹುಃ ಸಯೋಗಂ ಚೈವ ತೈಃ ಸಹ ॥23॥
ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುದಾರಪರಿಗ್ರಹ ಇವುಗಳು ಮಹಾ- ಪಾತಕಗಳು ಯಾರು ಮಾಡುತ್ತಾರೋ, ಅವರ ಸಹವಾಸವನ್ನೇ ಮಾಡಬಾರದೆಂದು ವಿದ್ವಾಂಸರು ಹೇಳುತ್ತಾರೆ.
ನ ಸ್ತೇಯಸದೃಶಂ ಬ್ರಹ್ಮನ್ ಮಹಾಪಾತಕಮಸ್ತ್ಯುತ |
ಜಗತ್ಯಸ್ಮಿನ್ ಮಹಾಭಾಗ ಬ್ರಹ್ಮಹತ್ಯಾಸಮೋ ಹಿ ತತ್ ॥24॥
ಕಳ್ಳತನವು ಕೂಡ ಮಹಾಪಾತಕವೇ ಆಗಿದೆ. ಇದಕ್ಕೆ ಸದೃಶವಾದ ಮಹಾಪಾತಕ ಬೇರೊಂದು ಇರುವುದಿಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಮತ್ತೊಂದು ಪಾಪವು ಈ ಜಗತ್ತಿನಲ್ಲಿ ಇರುವುದಿಲ್ಲ.
ಸರ್ವಪಾತಕಿನಾ ಬ್ರಹ್ಮನ್ ದಂಡಃ ಶಾರೀರ ಉಚ್ಯತೇ |
ತಸ್ಕರಸ್ಯ ವಿಶೇಷೇಣ ನಾನ್ಯೋ ದಂಡೋ ವಿಧೀಯತೇ ॥25॥
ಬೇರೆ ಅಪರಾಧವನ್ನು ಮಾಡಿದವರಿಗೆ ಕೆಲವೊಮ್ಮೆ ಮಾತ್ರ ಶಾರೀರಿಕ ದಂಡ- ವನ್ನು ವಿಧಿಸುತ್ತಾರೆ. ಆದರೆ ಕಳ್ಳತನ ಮಾಡಿದವರಿಗೆ ಶಾರೀರಿಕ ದಂಡವೇ ಹೊರತು ಮತ್ತೊಂದು ದಂಡವು ಇರುವುದಿಲ್ಲ.
ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯಃ ಶೂದ್ರೋಽಥ ವಾ ದ್ವಿಜ |
ಸರ್ವೇ ಕಾಮಕೃತೇ ಪಾಪೇ ಹಂತವ್ಯಾ ನ ವಿಚಾರಣಾ ॥26॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರರೆಂಬ ನಾಲ್ಕು ವರ್ಣದವರಲ್ಲಿ ಯಾರೇ ಆದರೂ ಉದ್ದೇಶಪೂರ್ವಕವಾಗಿ ಪಾಪವನ್ನು ಮಾಡಿದರೆ ಅವರಿಗೆ ಶಿಕ್ಷೆ- ಯನ್ನು ನೀಡಲೇಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.
ರಾಜಭಿರ್ಧೃತದಂಡಾ ವೈ ಕೃತ್ವಾ ಪಾಪಾನಿ ಮಾನವಾಃ |
ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ |
ಉದ್ಧೃತಂ ನ ಕುಲಂ ಬ್ರಹ್ಮನ್ ರಾಜ್ಞಾ ದಂಡೇ ಧೃತೇ ತ್ವಯಿ ॥27॥
ಮನುಷ್ಯರು ಪಾಪಗಳನ್ನು ಮಾಡಿದಾಗ ರಾಜನಿಂದ ಶಿಕ್ಷೆಯನ್ನು ಸ್ವೀಕಾರ ಮಾಡಬೇಕು. ಆಗಷ್ಟೇ ಅವರು ಮಾಡಿದ ಪಾಪಗಳು ಪರಿಹಾರವಾಗಿ ನಿರ್ಮಲರಾ- ಗುತ್ತಾರೆ. ಪುಣ್ಯಾತ್ಮರಂತೆ ಸ್ವರ್ಗಕ್ಕೆ ತೆರಳುತ್ತಾರೆ. ನೀನೂ ಸಹ ರಾಜನಿಂದ ಶಿಕ್ಷೆಯನ್ನು ಪಡೆದು ಶುದ್ಧನಾಗಿರುವಿ.
ಟಿಪ್ಪಣಿ - ನಮಗೆ ಅತ್ಯಂತ ಆತ್ಮೀಯರು ಅಪರಾಧವನ್ನು ಮಾಡಿದಾಗ ಅವರಿಗೆ ಶಿಕ್ಷೆಯನ್ನು ಅನುಭವಿಸುವಂತೆ ಉಪದೇಶಿಸಬೇಕು. ಒಂದು ವೇಳೆ ಸಮಾಧಾನ- ಗೊಳಿಸಿ ನೀನು ಸುಖವಾಗಿರು ಎಂದು ಹೇಳಿದರೆ ಅವನು ಮಾಡಿದ ಪಾಪ ಹಾಗೆಯೇ ಉಳಿಯುತ್ತದೆ. ಪಾಪಕರ್ಮಕ್ಕೆ ಪ್ರೇರಣೆ ಮಾಡಿದಂತಾಗುತ್ತದೆ. ನಿಜವಾದ ಸ್ನೇಹವಿರುವವನು ಅಧರ್ಮಮಾರ್ಗದಲ್ಲಿ ಹೋಗದಂತೆ, ಅಕಸ್ಮಾತ್ ಹೋದಾಗ ಅದರಿಂದ ಪಾಪವಿಮುಕ್ತನಾಗುವಂತೆ ಪ್ರೇರಣೆ ಮಾಡಬೇಕು. ಹೆಂಡತಿ ಮಕ್ಕಳು ಯಾರೇ ಅಪರಾಧ ಮಾಡಿದರೂ, ಅವರ ಅಪರಾಧಕ್ಕೆ ಶಿಕ್ಷೆ ನೀಡಲೇ ಬೇಕು.
ವ್ಯಾಸಃ
ತಸ್ಯ ತದ್ ವಚನಂ ಶ್ರುತ್ವಾ ಶಂಖಸ್ಯ ಲಿಖಿತಸ್ತದಾ |
ಅವಗಾಹ್ಯಾಪಗಾಂ ಪುಣ್ಯಾಮುದಕಾರ್ಥಂ ಪ್ರಚಕ್ರಮೇ ॥28॥
ವೇದವ್ಯಾಸದೇವರು ಆಗ ಅಣ್ಣನಾದ ಶಂಖನ ಮಾತುಗಳನ್ನು ಕೇಳಿ, ಲಿಖಿತನು ಕೂಡಲೇ ಬಾಹುದಾನದಿಗೆ ಸ್ನಾನ ಮಾಡುವುದಕ್ಕಾಗಿ ತೆರಳಿದನು. ಆ ನದಿಯಲ್ಲಿ ಸ್ನಾನ ಮಾಡಿ, ತರ್ಪಣವನ್ನು ನೀಡುವುದಕ್ಕಾಗಿ ಪ್ರಯತ್ನ ಪಟ್ಟನು.
ಪ್ರಾದುರಾಸ್ತಾಂ ತತಸ್ತಸ್ಯ ಕರೌ ಜಲಸಜಸನ್ನಿಭೌ |

ತತಃ ಸ ವಿಸ್ಮಿತೋ ಭ್ರಾತುರ್ದರ್ಶಯಾಮಾಸ ತೌ ಕರೌ ॥29॥
ಆಶ್ಚರ್ಯವೆಂದರೆ ಅವನಿಗೆ ಎರಡು ಕೈಗಳು ಪ್ರಾದುರ್ಭವಿಸಿದವು. ಆಶ್ಚರ್ಯ- ದಿಂದ ಆ ಲಿಖಿತನು ತರ್ಪಣವನ್ನು ನೀಡಿದನು. ಅಣ್ಣನಾದ ಶಂಖನ ಬಳಿ ಬಂದು ತನಗೆ ಬಂದ ಎರಡು ಕೈಗಳನ್ನು ತೋರಿಸಿದನು.
ತತಸ್ತಮಬ್ರವೀಚ್ಛಂಖಸ್ತಪಸೇದಂ ಕೃತಂ ಮಯಾ |
ಮಾ ಚ ತೇಽತ್ರ ವಿಶಂಕಾಭೂದ್ ದೈವಮೇವ ವಿಧೀಯತೇ ॥30॥
ಅನುಜನೇ! ನನ್ನ ತಪೋಮಹಿಮೆಯಿಂದ ಈ ಕೆಲಸವನ್ನು ಮಾಡಿರುವೆನು. ಈ ವಿಷಯದಲ್ಲಿ ಸಂಶಯ ಪಡಬೇಡ. ಎಲ್ಲವೂ ಕೂಡ ಭಗವಂತನ ಅನುಗ್ರಹದಿಂದ ನಡೆದಿದೆ ಎಂದನು.
ಲಿಖಿತಃ
ಕಿನ್ನು ನಾಹಂ ತ್ವಯಾ ಪೂತಃ ಪೂರ್ವಮೇವ ಮಹಾದ್ಯುತೇ |
ಯಸ್ಯ ತೇ ತಪಸೋ ವೀರ್ಯಮೀದೃಶಂ ದ್ವಿಜಸತ್ತಮ ॥31॥
ಲಿಖಿತ ಮಹಾತೇಜಸ್ವಿಯೇ! ನಿನ್ನ ತಪಸ್ಸಿಗೆ ಇಷ್ಟು ಶಕ್ತಿಯಿರುವುದಾಗಿದ್ದಲ್ಲಿ ಮೊದಲೇ ನನ್ನನ್ನು ಪರಿಶುದ್ಧನನ್ನಾಗಿ ಮಾಡಬಹುದಿತ್ತಲ್ಲವೇ? ಹಾಗೇಕೆ ಮಾಡ- ಲಿಲ್ಲ?
ಟಿಪ್ಪಣಿ - ಕಿನ್ನು ನಾಹಂ ತ್ವಯಾ ಪೂತ ಇತ್ಯತ್ರ ಅಹಂ ತ್ವಯ್ಯೆವ ಹಸ್ತಚ್ಛೇದಂ ಕೃತ್ವಾ ಪೂರ್ವಮೇವ ಕಿನ್ನು ನ ಪೂತಃ |
`ಕಿನ್ನು ನಾಹಂ ತ್ವಯಾ ಪೂತಃ' ಎಂಬಲ್ಲಿ ನೀನೇ ನನ್ನ ಕೈಗಳನ್ನು ಕತ್ತರಿಸಬಹುದಿತ್ತು. ಆಗ ಮತ್ತಷ್ಟು ಬೇಗ ನಾನು ಪಾಪದಿಂದ ಮುಕ್ತನಾಗುತ್ತಿದ್ದೆನು. ನೀನೇಕೆ ರಾಜನ ಬಳಿ ಕಳುಹಿಸಿ ಪಾಪವನ್ನು ಪರಿಹರಿಸಿಕೊಳ್ಳಲು ತಡಮಾಡಿಸಿದೆ.
ಶಂಖಃ
ಏವಮೇತನ್ಮಯಾ ಕಾರ್ಯಂ ನಾಹಂ ದಂಡಧರಸ್ತವ |
ಸ ಚ ಪೂತೋ ನರಪತಿಸ್ತ್ವಂ ಚಾಪಿ ಪಿತೃಭಿಃ ಸಹ ॥32॥
ಶಂಖ ಅನುಜನೇ! ನನ್ನಿಂದ ಪಾಪಪರಿಹಾರ ಮಾಡಲು ಸಾಧ್ಯವಿತ್ತು. ಆದರೆ ರಾಜದಂಡದಿಂದಲೇ ನಿನಗೆ ಪ್ರಾಯಶ್ಚಿತ್ತವಾಗಬೇಕು. ಇದು ರಾಜನ ಕರ್ತವ್ಯ. ಹೀಗೆಯೇ ರಾಜನಿಂದ ಶಿಕ್ಷೆ ಅನುಭವಿಸುವುದರಿಂದ ಪಿತೃಗಳ ಜೊತೆ ನೀನೂ ಸಹ ಪವಿತ್ರನಾಗುವಿ. ದಂಡನೀತಿಯನ್ನು ಅನುಷ್ಠಾನ ಮಾಡಿದ್ದರಿಂದ ರಾಜನೂ ಕೂಡ ಪವಿತ್ರನಾಗುತ್ತಾನೆ.
ವ್ಯಾಸಃ
ಸ ರಾಜಾ ಪಾಂಡವಶ್ರೇಷ್ಠ ಶ್ರೇಷ್ಠೋ ವೈ ತೇನ ಕರ್ಮಣಾ |
ಪ್ರಾಪ್ತವಾನ್ ಪರಮಾಂ ಸಿದ್ಧಿಂ ದಕ್ಷಃ ಪ್ರಾಚೇತಸೋ ಯಥಾ ॥33॥
ವೇದವ್ಯಾಸದೇವರು ಧರ್ಮರಾಜನೇ! ಹೇಗೆ ದಕ್ಷಪ್ರಜಾಪತಿಯು ಉತ್ತಮ ಸಿದ್ಧಿಯನ್ನು ಪಡೆದನೋ, ಅದರಂತೆ ರಾಜನಾದ ಸುದ್ಯುಮ್ನನು ದಂಡ- ಪ್ರಯೋಗವನ್ನು ಮಾಡಿದ್ದರಿಂದ ಉತ್ತಮ ಸಿದ್ಧಿಯನ್ನು ಪಡೆದನು.
ಟಿಪ್ಪಣಿ - ಪ್ರಜೆಗಳು ಅಪರಾಧ ಮಾಡಿದಾಗ, ರಾಜನು ಶಿಕ್ಷೆಯನ್ನು ನೀಡಲೇ ಬೇಕು. ಇಲ್ಲದಿದ್ದರೆ ಅವನು ಅಪವಿತ್ರನಾಗುತ್ತಾನೆ. ಲಿಖಿತನು ಮಾಡಿದ ಅಪರಾಧ- ವನ್ನು ಕ್ಷಮಿಸದೇ ಶಿಕ್ಷೆಯನ್ನು ನೀಡಿದ್ದರಿಂದ ರಾಜನು ಉದ್ಧಾರನಾಗಿದ್ದಾನೆ. ಅದರಂತೆ ನೀನೂ ಕೂಡ ಕಠಿಣವಾದ ರಾಜದಂಡವನ್ನು ಅನುಸರಿಸು ಎಂಬುದಾಗಿ ವ್ಯಾಸರು ಉಪದೇಶಿಸುತ್ತಿದ್ದಾರೆ.
ಏಷ ಧರ್ಮಃ ಕ್ಷತ್ರಿಯಾಣಾಂ ಪ್ರಜಾನಾಂ ಪರಿಪಾಲನಮ್ |
ಉತ್ಪಥೇಽಸ್ಮಿನ್ ಮಹಾರಾಜ ಮಾ ಚ ಶೋಕೇ ಮನಃ ಕೃಥಾಃ ॥34॥
ಕ್ಷತ್ರಿಯರಿಗೆ ಇದುವೇ ನಿಜವಾದ ಧರ್ಮ. ಪ್ರಜೆಗಳನ್ನು ರಕ್ಷಣೆ ಮಾಡಬೇಕಾ- ದದ್ದು ಅವರ ಕರ್ತವ್ಯ. ಧರ್ಮಜ್ಞನಾದ ನೀನು ಕ್ಷಾತ್ರಧರ್ಮದಿಂದ ನಡೆಸಿದ ಕಾರ್ಯದಲ್ಲಿ ದುಃಖವನ್ನು ಹೊಂದಬೇಡ.
ಭ್ರಾತುರಸ್ಯ ಹಿತಂ ವಾಕ್ಯಂ ಶೃಣು ಧರ್ಮಜ್ಞಸತ್ತಮ |
ದಂಡ ಏವ ಹಿ ರಾಜೇಂದ್ರ ಕ್ಷತ್ರಧರ್ಮೋ ನ ಮುಂಡನಮ್ ॥35॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಚತುರ್ವಿಂಶೋಽಧ್ಯಾಯಃ ॥24॥
ನಿನ್ನ ಸಹೋದರನು ಹೇಳಿದ ಮಾತಿನಂತೆ ನೀನು ನಡೆದುಕೋ. ರಾಜೇಂದ್ರನೇ ! ಕ್ಷತ್ರಿಯರಿಗೆ ಶಿಕ್ಷೆ ನೀಡುವುದೇ ಮುಖ್ಯಧರ್ಮವಾಗಿದೆ. ಮುಂಡನವು ಮುಖ್ಯ- ಧರ್ಮವಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 24ನೆಯ ಅಧ್ಯಾಯವು ಮುಗಿಯಿತು.
*****

25. ಇಪ್ಪತ್ತೈದನೆಯ ಅಧ್ಯಾಯ
ಶ್ರೀವೇದವ್ಯಾಸದೇವರು ಧರ್ಮರಾಜನಿಗೆ ದಂಡನೀತಿಯ ಬಗ್ಗೆ ವಿವರಿಸುತ್ತಿದ್ದಾರೆ. ಬಹಳ ಜಾಗ್ರತೆಯಲ್ಲಿ ದಂಡನೀತಿಯನ್ನು ಅನುಸರಿಸಬೇಕು. ಪಂಡಿತರನ್ನು ಗೌರವಿಸಬೇಕು ಎಂಬುದರ ಬಗ್ಗೆ ವಿಶ್ಲೇಷಣೆ. ಹಯಗ್ರೀವ ಎಂಬ ರಾಜನ ವೃತ್ತಾಂತ.
ಕರ್ತವ್ಯನಿರತನಾದ ರಾಜನು ಯುದ್ಧದಲ್ಲಿ ಅಸು ನೀಗಿದರೂ ಸಂತೋಷ ಪಡುತ್ತಾನೆ. ದಂಡನೀತಿಯನ್ನು ಅನುಸರಿಸುವುದೇ ರಾಜನ ಮುಖ್ಯಕರ್ತವ್ಯ. ಹಯಗ್ರೀವರಾಜನು ಸ್ವಧರ್ಮನಿಷ್ಠೆಯಿಂದ ಪುಣ್ಯಾತ್ಮನಾದುದರ ಬಗ್ಗೆ ವಿವರಣೆ.
ವೈಶಂಪಾಯನಃ
ಪುನರೇವ ಮಹರ್ಷಿಸ್ತಂ ಕೃಷ್ಣದ್ವೈಪಾಯನೋಽಬ್ರವೀತ್ |
ಅಜಾತಶತ್ರುಂ ಕೌಂತೇಯಮಿದಂ ವಚನಮರ್ಥವತ್ ॥1॥
ವೈಶಂಪಾಯನರು ಓ ಜನಮೇಜಯನೇ! ಮಹರ್ಷಿಗಳಾದ ಕೃಷ್ಣದ್ವೈಪಾ- ಯನರು ಪುನಃ ಅಜಾತಶತ್ರುವಾದ ಕುಂತಿಯ ಪುತ್ರನಾದ

ಧರ್ಮರಾಜನಿಗೆ ಹೀಗೆ ಹೇಳುತ್ತಾರೆ-
ಅರಣ್ಯೇ ವಸತಾಂ ತಾತ ಭ್ರಾತೄಣಾಂ ತೇ ತಪಸ್ವಿನಾಮ್ |
ಮನೋರಥಾ ಮಹಾರಾಜ ಯೇ ತತ್ರಾಸನ್ ಯುಧಿಷ್ಠಿರ ॥2॥
ಮಗು ಯುಧಿಷ್ಠಿರನೇ! ನೀವು ವನವಾಸದಲ್ಲಿದ್ದಾಗ ತಪಸ್ವಿಗಳಾದ ನಿನ್ನ ಸಹೋದರರು ಅನೇಕ ಅಭಿಲಾಷೆಗಳನ್ನು ಇಟ್ಟುಕೊಂಡಿದ್ದರು.
ತಾನಿಮೇ ಭರತಶ್ರೇಷ್ಠ ಪ್ರಾಪ್ನುವಂತು ಮಹಾರಥಾಃ |
ಪ್ರಶಾಧಿ ಪೃಥಿವೀಂ ಪಾರ್ಥ ಯಯಾತಿರಿವ ನಾಹುಷಃ ॥3॥
ಕುಂತಿಯ ಮಗನೇ! ನಹುಷನ ಮಗನಾದ ಯಯಾತಿಯಂತೆ ನೀನೂ ಕೂಡ ಈ ಭೂಮಿಯನ್ನು ಪರಿಪಾಲನೆ ಮಾಡು. ಆ ಮನೋರಥಗಳನ್ನು ಈಗ ಪಡೆದು- ಕೊಳ್ಳಲಿ.
ಅರಣ್ಯೇ ದುಃಖವಸತಿರನುಭೂತಾ ತಪಸ್ವಿಭಿಃ |
ದುಃಖಸ್ಯಾಂತೇ ನರವ್ಯಾಘ್ರಾಃ ಸುಖಂ ತ್ವನುಭವಂತ್ವಿಮೇ ॥4॥
ವನವಾಸ ಕಾಲದಲ್ಲಿ ತಪಸ್ವಿಗಳಾದ ನೀವೆಲ್ಲರೂ ಬಹಳ ದುಃಖವನ್ನು ಅನು- ಭವಿಸಿರುವಿರಿ. ಪುರುಷವ್ಯಾಘ್ರರಾದ ನೀವೆಲ್ಲರೂ ಎಲ್ಲಾ ದುಃಖಗಳು ಮುಗಿದ ಮೇಲೆ ಈಗಲಾದರೂ ಸುಖಗಳನ್ನು ಅನುಭವಿಸಿರಿ.
ಧರ್ಮಮರ್ಥಂ ಚ ಕಾಮಂ ಚ ಭ್ರಾತೃಭಿಃ ಸಹ ಭಾರತ |
ಅನುಭೂಯ ತತಃ ಪಶ್ಚಾತ್ ಪ್ರಸ್ಥಾತಾಸಿ ವಿಶಾಂ ಪತೇ ॥5॥
ಭಾರತನೇ! ನೀನೂ ಸಹ ಸಹೋದರರ ಜೊತೆ ಧರ್ಮ, ಅರ್ಥ, ಕಾಮಗಳನ್ನು ಅನುಭವಿಸಿದ ಅನಂತರ ವಾನಪ್ರಸ್ಥಾಶ್ರಮಕ್ಕೆ ತೆರಳಬಹುದು.
ಅತಿಥೀನಾಂ ಚ ಪಿತೄಣಾಂ ದೇವತಾನಾಂ ಚ ಭಾರತ |
ಆನೃಣ್ಯಂ ಗಚ್ಛ ಕೌಂತೇಯ ತತಃ ಸ್ವರ್ಗಂ ಗಮಿಷ್ಯಸಿ ॥6॥
ಭರತವಂಶೋದ್ಭವನಾದ ಕೌಂತೇಯನೇ! ಮೊದಲು ನೀನು ಅತಿಥಿಗಳ, ಪಿತೃಗಳ, ದೇವತೆಗಳ ಋಣವನ್ನು ಪರಿಹಾರ ಮಾಡಿಕೊಳ್ಳಬೇಕು. ಅನಂತರ ನಿನ್ನ ಇಷ್ಟದಂತೆ ಎಲ್ಲಾ ಕಾರ್ಯಗಳನ್ನು ಮಾಡಬಹುದು.
ಸರ್ವಮೇಧಾಶ್ವಮೇಧಾಭ್ಯಾಂ ಯಜಸ್ವ ಕುರುನಂದನ |
ತತಃ ಪಶ್ಚಾನ್ಮಹಾರಾಜ ಗಮಿಷ್ಯಸಿ ಪರಾಂ ಗತಿಮ್ ॥7॥
ಮಹಾರಾಜನೇ! ಸರ್ವಮೇಧ ಹಾಗೂ ಅಶ್ವಮೇಧಗಳೆಂಬ ಯಾಗಗಳನ್ನು ಮಾಡು. ಅನಂತರ ನೀನು ಉತ್ತಮಗತಿಯನ್ನು ಹೊಂದುವಿ.
ಭ್ರಾತೄಂಶ್ಚ ಸರ್ವಾನ್ ಕ್ರತುಭಿಃ ಸಂಯೋಜ್ಯ ಬಹುದಕ್ಷಿಣೈಃ |
ಸಂಪ್ರಾಪ್ತಾಃ ಕೀರ್ತಿಮತುಲಾಂ ಪಾಂಡವೇಯ ಭವಿಷ್ಯಸಿ ॥8॥
ಬಹುದಕ್ಷಿಣಾಕವಾದ ಯಾಗಗಳನ್ನು ಮಾಡುವ ಮೂಲಕ ಎಲ್ಲ ಸಹೋದರ- ರನ್ನು ಒಟ್ಟಿಗೆ ಸೇರಿಸು. ಎಲ್ಲರೂ ಕೂಡ ಅದರಲ್ಲಿ ಪಾಲ್ಗೊಳ್ಳುವಂತೆ ಮಾಡು. ಇದರಿಂದ ಎಣೆಯಿಲ್ಲದ ಕೀರ್ತಿಯನ್ನು ಪಡೆಯುವಿ.
ವಿದ್ಮಸ್ತೇ ಪುರುಷವ್ಯಾಘ್ರ ವಚನಂ ಕುರುನಂದನ |
ಶೃಣುಶ್ಚೈವಂ ಯಥಾ ಕುರ್ವನ್ ಧರ್ಮಾನ್ನ ಚ್ಯವಸೇ ನೃಪಃ ॥9॥
ಪುರುಷವ್ಯಾಘ್ರನೇ! ನೀನು ಹೇಳಿದ ಮಾತುಗಳನ್ನು ನಾವು ಚೆನ್ನಾಗಿ ತಿಳಿದಿದ್ದೇವೆ. ಆದರೆ ಪ್ರಕೃತ ನಾನು ಹೇಳಿದಂತೆ ಮಾಡುವುದರಿಂದ ನಿನಗೆ ಧರ್ಮಭ್ರಷ್ಟತೆಯು ಬರುವುದಿಲ್ಲ.
ಆದದಾನಸ್ಯ ಚ ಧನಂ ವಿಗ್ರಹಂ ಚ ಯುಧಿಷ್ಠಿರ |
ಸಮಾನಂ ಧರ್ಮಕುಶಲಾಃ ಸ್ಥಾಪಯಂತಿ ನರೇಶ್ವರ ॥10॥
ಶತ್ರುರಾಜ್ಯವನ್ನು ವಶಪಡಿಸಿಕೊಂಡವನಿಗೆ ಶತ್ರುಗಳ ಜೊತೆಗೆ ಯುದ್ಧವು ಅವರನ್ನು ಜಯಿಸುವುದು, ಅವರ ಸಂಪತ್ತನ್ನು ಸ್ವೀಕರಿಸುವುದು ಧರ್ಮವೇ ಆಗಿರುತ್ತದೆ. ಸಮಾನಧರ್ಮದಲ್ಲಿ ಕುಶಲರಾದವರು ರಾಜನಿಗೋಸ್ಕರ ಯುದ್ಧವನ್ನು ತಿಳಿಸುತ್ತಾರೆ.
ಪ್ರತ್ಯಕ್ಷಮನುಮಾನಂ ಚ ಉಪಮಾನಂ ತಥಾಗಮಃ |
ಅರ್ಥಾಪತ್ತಿಸ್ತಥೈತಿಹ್ಯಂ ಸಂಶಯೋ ನಿರ್ಣಯಸ್ತಥಾ ॥11॥
ಆಕಾರೋ ಹೀಂಗಿತಶ್ಚೈವ ಗತಿಶ್ಚೇಷ್ಟಾ ಚ ಭಾರತ |
ಪ್ರತಿಜ್ಞಾ ಚೈವ ಹೇತುಶ್ಚ ದೃಷ್ಟಾಂತೋಪನಯಸ್ತಥಾ ॥
ಉಕ್ತನಿಗಮನಂ ತೇಷಾಂ ಪ್ರಮೇಯಂ ಚ ಪ್ರಯೋಜನಮ್ ॥12॥
ಪ್ರತ್ಯಕ್ಷ, ಅನುಮಾನ, ಆಗಮ, ಉಪಮಾನ, ಅರ್ಥಾಪತ್ತಿ, ಐತಿಹ್ಯ, ಸಂಶಯ, ನಿರ್ಣಯ, ಇಂಗಿತ, ಚೇಷ್ಟೆ, ನಡತೆ, ಪ್ರತಿಜ್ಞೆ, ಹೇತು, ದೃಷ್ಟಾಂತ, ಉಪನಯ, ಉಕ್ತಿ, ನಿಗಮನ ಎಂಬುದಾಗಿ ಪ್ರಮಾಣಗಳು ಇರುತ್ತವೆ. ಇವುಗಳಿಂದ ನಿರ್ಣಯ ಮಾಡಲ್ಪಟ್ಟ ವಿಷಯಗಳು ಹಾಗೂ ಅವುಗಳ ಪ್ರಯೋಜನಗಳು ಎಲ್ಲವೂ ಕಾರ್ಯಸಿದ್ಧಿಗೆ ಕಾರಣಗಳಾಗಿವೆ ಎಂದು ಹೇಳುತ್ತಾರೆ.
ದೇಶಕಾಲಪ್ರತೀಕ್ಷೀ ಯೋ ದಸ್ಯೋರ್ದರ್ಶಯತೇ ನೃಪಃ |
ಶಾಸ್ತ್ರಜಾಂ ಬುದ್ಧಿಮಾಸ್ಥಾಯ ನೈನಸಾ ಸ ಹಿ ಯುಜ್ಯತೇ ॥13॥
ಅಪರಾಧಿಗೆ ಶಿಕ್ಷೆಯನ್ನು ಕೊಡುವಾಗ ದೇಶ, ಕಾಲಗಳನ್ನು ಗಮನಿಸಬೇಕು. ಶಾಸ್ತ್ರವನ್ನು ಅರಿತು, ಶಾಸ್ತ್ರದಲ್ಲಿ ನಿರ್ಣಯಿಸಿದಂತೆ ಶಿಕ್ಷೆಯನ್ನು ನೀಡಬೇಕು. ಹೀಗೆ ಮಾಡುವುದರಿಂದ ರಾಜನಿಗೆ ಸ್ವಲ್ಪವೂ ಪಾಪವು ಬರುವುದಿಲ್ಲ.
ಟಿಪ್ಪಣಿ - ದುಷ್ಟರನ್ನು ಶಿಕ್ಷಿಸಲೇ ಬೇಕು. ಆದರೆ ಅಪರಾಧವನ್ನು ಮಾಡದೇ ಇದ್ದಾಗ ಅಪರಾಧ ಮಾಡಿದ್ದು, ನಿರ್ಣಯವಾಗದೇ ಇದ್ದಾಗ ಶಿಕ್ಷೆಯನ್ನು ನೀಡ- ಬಾರದು. ದುಷ್ಟರನ್ನು ಶಿಕ್ಷಿಸುವಾಗ ದೇಶಕಾಲಗಳ ವಿವೇಚನೆಯು ಇರಬೇಕು. ಅವಸರವನ್ನು

ಮಾಡಬಾರದು. ಇವನು ಅಪರಾಧ ಮಾಡಿದ್ದಾನೆ ಎಂಬುದನ್ನು ಅನೇಕ ಪ್ರಮಾಣಗಳಿಂದ ಖಚಿತಪಡಿಸಿಕೊಳ್ಳಬೇಕು. ಇಲ್ಲದಿದ್ದರೆ ನಿರಪರಾಧಿಗೆ ಶಿಕ್ಷೆಯನ್ನು ನೀಡಿದಂತಾಗುತ್ತದೆ. ಶಾಸ್ತ್ರಾಧ್ಯಯನವನ್ನು ಮಾಡಿದವನಿಗಷ್ಟೇ ಯಾರು ಅಪರಾಧಿ, ಯಾರು ಅಪರಾಧಿಯಲ್ಲ ಎಂಬುದನ್ನು ತಿಳಿಯಲು ಸಾಧ್ಯ.
ಆದಾಯ ಬಲಿಷಡ್-ಭಾಗಂ ಯೋ ರಾಷ್ಟ್ರಂ ನಾಭಿರಕ್ಷತಿ |
ಪ್ರತಿಗೃಹ್ಣಾತಿ ತತ್ಪಾಪಂ ಚತುರ್ಥಾಂಶೇನ ಪಾರ್ಥಿವಃ ॥14॥
ಪ್ರಜೆಗಳಿಗೆ ಎಷ್ಟು ಆದಾಯವು ಬರುತ್ತದೋ, ಅದರಲ್ಲಿ ಆರನೆಯ ಒಂದು ಭಾಗವನ್ನು ರಾಜನಾದವನು ಪಡೆದುಕೊಳ್ಳಬೇಕು. ತನ್ಮೂಲಕ ರಾಷ್ಟ್ರದ ರಕ್ಷಣೆಯಲ್ಲಿ ತೊಡಗಬೇಕು. ಹೀಗೆ ಮಾಡದಿದ್ದರೆ ಆ ಪ್ರಜೆಗಳ ಪಾಪದ ನಾಕನೆಯ ಒಂದು ಭಾಗವನ್ನು ಪಡೆದುಕೊಳ್ಳುತ್ತಾನೆ.
ಟಿಪ್ಪಣಿ - ಮಹಾಭಾರತದ ಕಾಲದಲ್ಲಿ ಎಷ್ಟು ತೆರಿಗೆ ಕೊಡುತ್ತಿದ್ದರು ಎಂಬುದನ್ನು ಈ ಶ್ಲೋಕವು ಹೇಳುತ್ತಿದೆ. ಆರನೆಯ ಒಂದು ಭಾಗವೆಂದರೆ ಒಬ್ಬ ವ್ಯಕ್ತಿಗೆ ಒಂದು ಲಕ್ಷ ಲಾಭವು ಬಂದರೆ, ಹದಿನಾರುಸಾವಿರದ ಐದುನೂರು ರೂಪಾಯಿಗಳನ್ನು ತೆರಿಗೆಯ ರೂಪದಲ್ಲಿ ರಾಜನಿಗೆ ಕೊಡಬೇಕಿತ್ತು. ಆ ಹಣವನ್ನು ರಾಜನು ತೆಗೆದುಕೊಂಡು, ಸ್ವಲ್ಪವೂ ತಾನು ಬೇರೆ ಕಾರ್ಯಕ್ಕೆ ಉಪಯೋಗ ಮಾಡದೇ ಪ್ರಜೆಗಳ ಹಿತಕ್ಕಾಗಿಯೇ ಉಪಯೋಗ ಮಾಡಬೇಕು. ಇಲ್ಲದಿದ್ದರೆ ನೂರಕ್ಕೆ ಇಪ್ಪತ್ತೈದು ಭಾಗದಷ್ಟು ಪಾಪವನ್ನು ರಾಜನು ಹೊಂದು- ತ್ತಿದ್ದನು.
ನಿಬೋಧ ಚ ಯಥಾ ತಿಷ್ಠನ್ ಧರ್ಮಾನ್ನ ಚ್ಯವತೇ ನೃಪಃ |
ನಿಗ್ರಹಾದ್ಧರ್ಮಶಾಸ್ತ್ರಾಣಾಮನುರುದ್ಧ್ಯನ್ನಪೇತಭೀಃ ॥5॥
ರಾಜನಾದವನು ಧರ್ಮಮಾರ್ಗದಲ್ಲಿ ಹೇಗೆ ನಡೆಯಬೇಕೆಂಬುದನ್ನು ಹೇಳು- ತ್ತೇನೆ ಕೇಳು? ಧರ್ಮಶಾಸ್ತ್ರಗಳ ನಿಯಮವನ್ನು ಉಲ್ಲಂಘನೆ ಮಾಡಿದರೆ ಹೇಗೆ ಪತಿತನಾಗುತ್ತಾನೆ? ಧರ್ಮಶಾಸ್ತ್ರಗಳ ನಿಯಮದಂತೆ ನಡೆದುಕೊಂಡರೆ ಹೇಗೆ ಭಯರಹಿತನಾಗುತ್ತಾನೆ? ಇವೆಲ್ಲವನ್ನೂ ಹೇಳುತ್ತೇನೆ ಕೇಳು -
ಕಾಮಕ್ರೋಧಾವನಾದೃತ್ಯ ಪಿತೇವ ಸಮದರ್ಶನಃ |
ಶಾಸ್ತ್ರಜಾಂ ಬುದ್ಧಿಮಾಸ್ಥಾಯ ಯುಜ್ಯತೇ ನೈನಸಾ ಹಿಸಃ ॥16॥
ರಾಜನಾದವನು ಕಾಮಕ್ರೋಧಗಳನ್ನು ಎಲ್ಲಾ ಪ್ರಜೆಗಳ ವಿಷಯದಲ್ಲಿ ಪರಿತ್ಯಾಗ ಮಾಡಬೇಕು. ತಂದೆಯಾದವನು ತನ್ನ ಮಕ್ಕಳನ್ನು ಸಮಾನ ದೃಷ್ಟಿಯಿಂದ ಕಾಣುವಂತೆ ರಾಜನೂ ಸಹ ಸಮಾನದೃಷ್ಟಿಯಿಂದ ಎಲ್ಲ ಪ್ರಜೆಗಳನ್ನು ಕಾಣಬೇಕು. ಇಂಥ ರಾಜನಿಗೆ ಯಾವುದೇ ಪಾಪವು ಬರುವುದಿಲ್ಲ.
ದೈವೇನೋಪಹತೋ ರಾಜಾ ಕರ್ಮಕಾಲೇ ಮಹಾದ್ಯುತೇ |
ಪ್ರಮಾದಯತಿ ತತ್ ಕರ್ಮ ನ ತತ್ರಾಹುರತಿಕ್ರಮಮ್ ॥16॥
ಮಹಾಪರಾಕ್ರಮಿಯೇ! ರಾಜನು ಪ್ರಜೆಗಳ ರಕ್ಷಣೆಯನ್ನು ಮಾಡುವ ಸಂದರ್ಭದಲ್ಲಿ ಪ್ರಮಾದದಿಂದ ಅವನು ತೊಂದರೆಗೀಡಾದರೆ ಅಥವಾ ಮಾಡಿದ ಕೆಲಸವನ್ನು ಪೂರ್ಣವಾಗಿ ಮಾಡದಿದ್ದರೆ ಅದು ರಾಜನು ಅತಿಕ್ರಮವನ್ನು ಮಾಡಿದಂತೆ, ಅಥವಾ ಅಪರಾಧವನ್ನು ಮಾಡಿದಂತೆ ಆಗುವುದಿಲ್ಲ.
ರಾಜನು ಪ್ರಜೆಗಳ ಹಿತಕ್ಕೋಸ್ಕರ ಅನೇಕ ಕಾರ್ಯಗಳನ್ನು ಮಾಡುತ್ತಲೇ ಇರಬೇಕು. ಎಂದೆಂದೂ ಕೂಡ ಆ ಕಾರ್ಯಗಳಿಂದ ವಿಮುಖನಾಗಬಾರದು. ಇದು ರಾಜನಾದವನ ಮುಖ್ಯ ಕರ್ತವ್ಯವಾಗಿದೆ. ಪ್ರಜೆಗಳ ಹಿತಕ್ಕೋಸ್ಕರ ಅನೇಕ ಕಾರ್ಯಗಳನ್ನು ಹಮ್ಮಿಕೊಂಡಾಗ ದೈವಯೋಗದಂತೆ ಯಾವುದೋ ಒಂದು ಕಾರ್ಯವು ಆಗದಿದ್ದರೆ ಅದರಿಂದ ರಾಜನು ಪಾಪವನ್ನು ಹೊಂದುವುದಿಲ್ಲ. ಉದ್ದೇಶ ಪೂರ್ವಕವಾಗಿ ಮಾಡಿದ ಕೆಲಸವನ್ನು ಮುಗಿಸದೇ ಇರುವುದರಿಂದ ಅಥವಾ ಅಂದುಕೊಂಡಂತೆ ಸಫಲವನ್ನಾಗಿ ಮಾಡದೇ ಇರುವುದರಿಂದಷ್ಟೇ ಪಾಪವು ಬರುತ್ತದೆ.
ತರಸಾ ಬುದ್ಧಿಪೂರ್ವಂ ವಾ ನಿಗ್ರಾಹ್ಯಾ ಏವ ಶತ್ರವಃ |
ಪಾಪೈಃ ಸಹ ನ ಸಂದಧ್ಯಾದ್ ರಾಷ್ಟ್ರಂ ಪುಣ್ಯಂ ನ ಕಾರಯೇತ್॥17॥
ತನ್ನ ಪರಾಕ್ರಮದಿಂದ, ಬುದ್ಧಿಶಕ್ತಿಯಿಂದ ಶತ್ರುಗಳನ್ನು ದಮನ ಮಾಡಬೇಕು. ಎಂದೆಂದೂ ಪಾಪಿಷ್ಠರ ಸಹವಾಸವನ್ನು ಮಾಡಬಾರದು. ರಾಷ್ಟ್ರವನ್ನು ದುಡ್ಡಿ- ಗೋಸ್ಕರ ಮಾರಾಟ ಮಾಡಬಾರದು.
ವಿವರಣೆ - ರಾಜನು ಎಂದೆಂದೂ ದುಷ್ಟರ, ದರೋಡೆಗಾರರ ಸಹವಾಸವನ್ನು ಮಾಡಬಾರದು. ಮತ್ತು ತನ್ನ ಹಣಸಂಪಾದನೆಗೋಸ್ಕರ ಕೆಲವು ಭಾಗಗಳನ್ನು ಮಾರಾಟ ಮಾಡುವುದು ಮೊದಲಾದವುಗಳನ್ನೂ ಕೂಡ ಮಾಡಬಾರದು.
ಶೂರಾಶ್ಚಾರ್ಯಾಶ್ಚ ಸತ್ಕಾರ್ಯಾ ವಿದ್ವಾಂಸಶ್ಚ ಯುಧಿಷ್ಠಿರ |
ಗೋಮಿನೋ ಧನಿನಶ್ಚೈವ ಪರಿಪಾಲ್ಯಾ ವಿಶೇಷತಃ ॥18॥
ಶೂರರಾದವರನ್ನು, ಪೂಜ್ಯರಾದವರನ್ನು, ವಿದ್ವಾಂಸರನ್ನು ಯಥೋಚಿತವಾಗಿ ಸತ್ಕಾರ ಮಾಡಬೇಕು. ಯಾರು ಗೋಮಿಗಳೋ (ಅಪಾರವಾದ ಗೋಸಂಪತ್ತನ್ನು ಹೊಂದಿರುವರೋ), ಮತ್ತು ಶ್ರೀಮಂತರೋ ಅಂಥವರನ್ನು ವಿಶೇಷವಾಗಿ ರಕ್ಷಣೆ ಮಾಡಬೇಕು.
ಟಿಪ್ಪಣಿ- ಸರ್ವೇಷಾಂ ಯೋನಿರುಚ್ಯತ ಇತ್ಯತ್ರ ಯೋನಿಃ ಪ್ರಮಾಣಮ್ |
ಗೋಮಿನೋ ಧನಿನಶ್ಚೈವ ಇತ್ಯತ್ರ ಗೋಮಿನಃ ಬಹುಗೋಧನವಂತೋ ಗೋಪಾಲಾಃ | `ದ್ವೌ ಗವೀಶ್ವರೇ | ಗೋಮಾನ್ ಗೋಮೀ ಗೋಕುಲಂ ತು ಗೋಧನಂ ಸ್ಯಾದ್ ಗವಾಂ ವ್ರಜೇ ॥' ಇತ್ಯಮರಃ |
`ಗೋಮಿನೋ ಧನಿನಶ್ಚೈವ ಎಂಬಲ್ಲಿ ಗೋಮಿನಃ' - ಎಂಬುದಕ್ಕೆ ಗೋ ಎಂಬ ಸಂಪತ್ತುಳ್ಳವರು ಎಂದರ್ಥ. ಅಮರಕೋಶದಲ್ಲಿ ``ದ್ವೌ ಗವೀಶ್ವರೇ | ಗೋಮಾನ್ ಗೋಮೀ ಗೋಕುಲಂ ತು ಗೋಧನಂ ಸ್ಯಾದ್ ಗವಾಂ ವ್ರಜೇ ॥' ಎಂದು ಹೇಳಿರುತ್ತಾರೆ.
ವಿವರಣೆ - `ಗಾಂ ವಿನುತೇ ಇತಿ ಗೋಮಿನಃ' ಹಸುವನ್ನು ರಕ್ಷಣೆ ಮಾಡು- ವವನಾದ ಗೋಪಾಲಕನು ಗೋಮಿ ಎಂದು ಕರೆಸಿಕೊಳ್ಳುತ್ತಾನೆ. ಆಗಿನ ಕಾಲದಲ್ಲಿ ಯಾರಿಗೆ ಬಹಳಷ್ಟು ಗೋವುಗಳಿರುತ್ತವೋ, ಅವನನ್ನು ಶ್ರೀಮಂತನೆಂದು ಮತ್ತು

ಅಪಾರಸಂಪತ್ತುಳ್ಳವನನ್ನೂ ಕೂಡ ಶ್ರೀಮಂತನೆಂದು ಪರಿಗಣಿಸುತ್ತಿದ್ದರು. ರಾಜ- ನಾದವನು ಶ್ರೀಮಂತರಿಗೆ ಸರಿಯಾದ ರಕ್ಷಣೆಗಳನ್ನು ನೀಡಬೇಕಿತ್ತು.

ವ್ಯವಹಾರೇಷು ಧರ್ಮ್ಯೇಷು ನಿಯೋಜ್ಯಾಶ್ಚ ಬಹುಶ್ರುತಾಃ |
ಗುಣಯುಕ್ತೇಽಪಿ ನೈಕಸ್ಮಿನ್ ವಿಶ್ವಸ್ಯಾಚ್ಚ ವಿಚಕ್ಷಣಃ ॥19॥

ಧರ್ಮಕ್ಕೆ ಸಂಬಂಧಪಟ್ಟವ್ಯವಹಾರಗಳಲ್ಲಿ ಶಾಸ್ತ್ರವನ್ನು ತಿಳಿದವರನ್ನಷ್ಟೇ ಆಡಳಿತದಲ್ಲಿ ನಿಯೋಜನೆ ಮಾಡಬೇಕು. ಒಬ್ಬ ಬುದ್ಧಿವಂತನಾದವನು ಅತ್ಯಂತ ಗುಣಶಾಲಿಯಾಗಿದ್ದರೂ ಕೂಡ ಅವನನ್ನು ಪೂರ್ಣವಾಗಿ ರಾಜನಾದವನು ನಂಬ- ಬಾರದು.

ಪ್ರಮಾಣಜ್ಞಾ ಮಹೀಪಾಲ ನ್ಯಾಯಶಾಸ್ತ್ರಾವಲಂಬಿನಃ |
ವೇದಾರ್ಥತತ್ತ್ವವಿದ್ ರಾಜಂಸ್ತರ್ಕಶಾಸ್ತ್ರಬಹುಶ್ರುತಾಃ ॥20॥
ಮಂತ್ರೇ ಚ ವ್ಯವಹಾರೇ ಚ ನಿಯೋಕ್ತವ್ಯಾ ವಿಜಾನತಾ |

ಪ್ರಮಾಣಗಳ ಬಗ್ಗೆ ಚೆನ್ನಾಗಿ ತಿಳಿದವನು ನ್ಯಾಯಶಾಸ್ತ್ರದ ಪಾಂಡಿತ್ಯವನ್ನು ಹೊಂದಿದವನು ವೇದಗಳ ಅರ್ಥವನ್ನು ಯಥಾವತ್ತಾಗಿ ತಿಳಿದವನು ಬಹುಶ್ರುತನು ಯಾರು ಇರುತ್ತಾನೋ, ಅಂಥ ವಿದ್ವಾಂಸನನ್ನೇ ವ್ಯವಹಾರಗಳಲ್ಲಿ, ಸಭೆಗಳಲ್ಲಿ ಮಂತ್ರಾರ್ಥಲೋಚನೆ ಮಾಡುವ ಸಂದರ್ಭಗಳಲ್ಲಿ ಅಧಿಕಾರಿಗಳನ್ನಾಗಿ ನಿಯಮನ ಮಾಡಬೇಕು.

ತರ್ಕಶಾಸ್ತ್ರಕೃತಾ ಬುದ್ಧಿರ್ಧರ್ಮಶಾಸ್ತ್ರಕೃತಾ ಚ ಯಾ ॥21॥
ದಂಡನೀತಿಕೃತಾ ಚೈವ ತ್ರೈಲೋಕ್ಯಮಪಿ ಸಾಧಯೇತ್ |
ನಿಯೋಜ್ಯಾ ವೇದತತ್ತ್ವಜ್ಞಾ ಯಜ್ಞಕರ್ಮಸು ಪಾರ್ಥಿವ ॥22॥

ರಾಜನಾದವನು ತರ್ಕಶಾಸ್ತ್ರ, ಧರ್ಮಶಾಸ್ತ್ರ, ಮೊದಲಾದವುಗಳಲ್ಲಿ ಸುಶಿಕ್ಷಿತ- ವಾದ ಬುದ್ಧಿಯಿಂದ ದಂಡನೀತಿಯನ್ನು ಅಳವಡಿಸಬೇಕು. ಆಗ ಅವನ ನೀತಿಯು ತ್ರೈಲೋಕ್ಯವು ಅವನ ಅಧೀನವಾಗುವಂತೆ ಮಾಡುತ್ತದೆ. ಯಾರು ವೇದತತ್ವವನ್ನು ತಿಳಿದಿರುತ್ತಾರೋ ಅವರನ್ನೇ ಯಾಗಕರ್ಮಗಳಲ್ಲಿ ರಾಜನು ನಿಯೋಜನೆ ಮಾಡ- ಬೇಕು.

ವೇದಜ್ಞಾ ಯೇ ಚ ಶಾಸ್ತ್ರಜ್ಞಾಸ್ತೇ ಚ ರಾಜನ್ ಸುಬುದ್ಧಯಃ |
ಆನ್ವೀಕ್ಷಿಕೀತ್ರಯೀವಾರ್ತಾದಂಡನೀತಿಷು ಪಾರಗಾಃ ॥23॥
ತೇ ತು ಸರ್ವತ್ರ ಯೋಕ್ತವ್ಯಾಸ್ತೇ ಚ ಬುದ್ಧೇಃ ಪರಾಂ ಗತಾಃ |
ಅರಕ್ಷಿತಾ ದುರ್ವಿನೀತೋ ಮಾನೀ ಸ್ತಬ್ಧೋಽನಸೂಯಕಃ |
ಏನಸಾ ಯುಜ್ಯತೇ ರಾಜಾ ದುರ್ದಾಂತ ಇತಿ ಚೋಚ್ಯತೇ ॥24॥

ಯಾರು ವೇದವನ್ನು ಸಂಪೂರ್ಣವಾಗಿ ತಿಳಿದಿರುತ್ತಾನೋ, ಎಲ್ಲಾ ಶಾಸ್ತ್ರಗಳನ್ನು ಅಧ್ಯಯನ ಮಾಡಿರುತ್ತಾನೋ, ಬುದ್ಧಿಯಿಂದ ಚತುರನಾಗಿರುತ್ತಾನೋ, ತರ್ಕ- ಶಾಸ್ತ್ರದಲ್ಲಿ ವ್ಯವಹಾರಶಾಸ್ತ್ರದಲ್ಲಿ ಮತ್ತು ದಂಡನೀತಿಯಲ್ಲಿ ಪಾರಂಗತನಾಗಿ- ರುತ್ತಾನೋ, ಅಂಥ ಪಂಡಿತನನ್ನೇ ಎಲ್ಲಾ ಕಾರ್ಯಗಳಲ್ಲಿ ನಿಯೋಜನೆ ಮಾಡ- ಬೇಕು. ಪ್ರಜೆಗಳನ್ನು ರಕ್ಷಣೆ ಮಾಡದ ಹಿರಿಯರನ್ನು ಗೌರವಿಸದ, ವಿನೀತನಲ್ಲದ, ಅತ್ಯಂತ ಅಹಂಕಾರವುಳ್ಳ, ಅಸೂಯೆಯಿಂದ ಕೂಡಿದ ಅರಸನು ಪಾಪಕ್ಕೆ ಭಾಗಿ- ಯಾಗುತ್ತಾನೆ. ಮತ್ತು ದುಷ್ಟನೆಂಬ ಬಿರುದಿಗೂ ಭಾಗಿಯಾಗುತ್ತಾನೆ. ರಾಜ್ಯವನ್ನು ಪರಿಪಾಲನೆ ಮಾಡಲು ಇವನಿಗೆ ಸಾಮರ್ಥ್ಯವೇ ಇಲ್ಲವೆಂದು ಕರೆಸಿಕೊಳ್ಳುತ್ತಾನೆ.

ಟಿಪ್ಪಣಿ - ಆನ್ವೀಕ್ಷಿಕೀತ್ರಯೀವಾರ್ತಾ ಇತ್ಯತ್ರ ಅನುಕೂಲಾ ಈಶಾ ಪರಮಾತ್ಮಾ- ಪರೋಕ್ಷಜ್ಞಾನಮ್, ತತ್ಸಂಬಂಧಿನೀ ವಿದ್ಯಾ ಆನ್ವೀಕ್ಷಿಕೀ |

`ಆನ್ವೀಕ್ಷಿಕೀತ್ರಯೀವಾರ್ತಾ' ಎಂಬಲ್ಲಿ ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಸಂಬಂಧ- ಪಟ್ಟ ವಿದ್ಯೆಯೇ `ಆನ್ವೀಕ್ಷಿಕೀ' ಎಂದು ಕರೆಸಿಕೊಳ್ಳುತ್ತದೆ. ತರ್ಕಶಾಸ್ತ್ರವನ್ನು ಆನ್ವೀಕ್ಷಿಕೀ ಎಂದು ಇಲ್ಲಿ ವಿವಕ್ಷಿಸಬಾರದು.

ಯೇಽರಕ್ಷ್ಯಮಾಣಾ ಹೀಯಂತೇ ದೈವೇನೋಪಹತೇ ನೃಪೇ |
ತಸ್ಕರೈಶ್ಚಾಪಿ ಹನ್ಯಂತೇ ಸರ್ವಂ ತದ್ ರಾಜಕಿಲ್ಬಿಷಮ್ ॥25॥

ರಾಜನಿಂದ ರಕ್ಷಿಸಲ್ಪಡದೇ ಇರುವ ಪ್ರಜೆಗಳು ಅತಿವೃಷ್ಟಿ, ಅನಾವೃಷ್ಟಿ ಎಂಬ ದೈವಿಕವಾದ ಆಪತ್ತುಗಳಿಂದ ಮತ್ತು ಕಳ್ಳಕಾಕರ ಉಪಟಳಗಳಿಂದ ವಿನಾಶವನ್ನು ಹೊಂದುತ್ತಾರೆ. ಹೀಗೆ ಪ್ರಜೆಗಳ ವಿನಾಶಕ್ಕೆ ರಾಜನೇ ಕಾರಣನೆಂದು ಆಗುತ್ತದಾ- ದ್ದರಿಂದ ಮಹಾಪಾಪವನ್ನು ಹೊಂದುತ್ತಾನೆ.

ಟಿಪ್ಪಣಿ - ರಾಜನು ಅತ್ಯಂತ ಗುಣವಂತನಾಗಿರಬೇಕು. ನೀತಿವಂತನಾಗಿ- ರಬೇಕು. ಇಲ್ಲದಿದ್ದರೆ ದೇಶದಲ್ಲಿ ಸರಿಯಾದ ಕಾಲಕ್ಕೆ ಮಳೆಬೆಳೆಗಳೂ ಕೂಡ ಬರುವುದಿಲ್ಲ. ಕಳ್ಳಕಾರರ ಭಯವು ಹೆಚ್ಚಾಗುತ್ತದೆ. ಪ್ರಜೆಗಳೂ ಕೂಡ ನಾಶವನ್ನು ಹೊಂದುತ್ತಾರೆ. ಪ್ರಜೆಗಳ ನಾಶದ ಪಾಪವು ರಾಜನಿಗೆ ಬರುತ್ತದೆ.

ಟಿಪ್ಪಣಿ - ದೈವೇನಾಭ್ಯಾಹತಾ ನೃಪ ಇತ್ಯತ್ರ ದೈವೇನ ದೇವವಿಷಯೇ ಯಜ್ಞಾದಿಕರ್ಮಣಾ ಅಭ್ಯಾಹತಾ ರಹಿತಾಃ |

`ದೈವೇನಾಭ್ಯಾಹತಾ ನೃಪ' - ಎಂಬಲ್ಲಿ ದೈವೇನ = ದೇವತೆಯ ವಿಷಯದಿಂದ ಯಜ್ಞಾದಿಕರ್ಮಗಳಿಂದ, ಅಭ್ಯಾಹತಾ = ರಹಿತರಾದವರು ಎಂದರ್ಥ.

ಸುಮಂತ್ರಿತೇ ಸುನೀತೇ ಚ ವಿಧಿವಚ್ಚೋಪಪಾದಿತೇ |
ಪೌರುಷೇ ಕರ್ಮಣಿ ಕೃತೇ ನಾಸ್ತ್ಯಧರ್ಮೋ ಯುಧಿಷ್ಠಿರ ॥26॥

ಯುಧಿಷ್ಠಿರನೇ! ಪ್ರಜೆಗಳಿಗೆ ಯಾವುದನ್ನು ಮಾಡುವುದರಿಂದ ಹಿತವಾಗು- ತ್ತದೆಂಬುದನ್ನು ಚೆನ್ನಾಗಿ ಆಲೋಚನೆ ಮಾಡಬೇಕು. ಧರ್ಮಮೂಲವಾದ ನೀತಿಯನ್ನು ಅನುಸರಿಸಬೇಕು. ಎಲ್ಲಾ ರೀತಿಯಿಂದಲೂ ಮನುಷ್ಯ ಪ್ರಯತ್ನದಿಂದ ಸತ್ಕಾರ್ಯಗಳನ್ನು ಮಾಡಿಯೂ ಕೂಡ ಮಳೆ, ಬೆಳೆಗಳು ಆಗದಿದ್ದರೆ, ರಾಜನು ಅಧರ್ಮ ಮಾಡಿದಂತೆ ಆಗುವುದಿಲ್ಲ.

ವಿಚ್ಛಿದ್ಯಂತೇ ಸಮಾರಂಭಾಃ ಸಿದ್ಧ್ಯಂತ್ಯಪಿ ಚ ದೈವತಃ |
ಕೃತೇ ಪುರುಷಕಾರೇ ತು ನೈನಃ ಸ್ಪೃಶತಿ ಪಾರ್ಥಿವಮ್ ॥27॥

ಒಮೊಮ್ಮೆ ವ್ಯಕ್ತಿಯು ನಿರ್ದುಷ್ಟನಾಗಿದ್ದರೂ ಪ್ರಾರಂಭ ಮಾಡಿದ ಕೆಲಸಗಳು ದುರ್ಯೋಗದಿಂದ ಹಾಳಾಗುತ್ತವೆ. ದೇವತೆಗಳ ಅನುಗ್ರಹದಿಂದ ಒಮ್ಮೊಮ್ಮೆ ಸಫಲವಾಗುತ್ತವೆ. ಮನುಷ್ಯನ ಎಲ್ಲಾ ಪ್ರಯತ್ನಗಳಿಗೆ ದೈವವೇ ಉತ್ತರವನ್ನು ನೀಡು- ತ್ತದೆ. ಆದ್ದರಿಂದ ಶ್ರದ್ಧಾಪೂರ್ವಕವಾಗಿ ಕೆಲಸವನ್ನು ಮಾಡುವ ರಾಜನಿಗೆ ಯಾವುದೇ ಪಾಪಗಳು ತಟ್ಟುವುದಿಲ್ಲ.
ಟಿಪ್ಪಣಿ - ಮಾಡುವ ಕರ್ತವ್ಯವನ್ನು ಮಾಡಲೇಬೇಕು. ಪ್ರಾಮಾಣಿಕವಾಗಿ ಕರ್ತವ್ಯಗಳನ್ನು ಮಾಡಿಯೂ ಕೂಡ ಹಾನಿಯುಂಟಾದರೆ ದುರ್ಭಿಕ್ಷೆಯುಂಟಾದರೆ ದುಃಖವನ್ನು ಪಡಬಾರದು. ಎಲ್ಲವೂ ಕೂಡ ಭಗವಂತನ ಅಧೀನವೆಂದು ತಿಳಿದು ಶಾಂತಮನಸ್ಕನಾಗಿರಬೇಕು. ತಾನು ಪ್ರಾಮಾಣಿಕವಾಗಿ ಕೆಲಸವನ್ನು ನಿರ್ವಹಿಸಿದ ರಾಜನು ಯಾವುದಕ್ಕೂ ಕೂಡ ಹೆದರುವ ಅವಶ್ಯಕತೆಯಿರುವುದಿಲ್ಲ ಎಂದು ಅಭಿಪ್ರಾಯ.
ಅತ್ರ ತೇ ರಾಜಶಾರ್ದೂಲ ವರ್ತಯಿಷ್ಯೇ ಕಥಾಮಿಮಾಮ್ |
ಯದ್ ವೃತ್ತಂ ಪೂರ್ವರಾಜರ್ಷೇರ್ಹಯಗ್ರೀವಸ್ಯ ಪಾರ್ಥಿವ ॥28॥
ರಾಜಸಿಂಹನೇ! ಈ ಸಂದರ್ಭದಲ್ಲಿ ಇದೇ ವಿಷಯಕ್ಕೆ ಸಂಬಂಧಪಟ್ಟ ಒಂದು ಕಥೆಯನ್ನು ನಿನಗೆ ತಿಳಿಸುತ್ತೇನೆ. ಹಿಂದೆ ರಾಜರ್ಷಿಯಾದ ಹಯಗ್ರೀವನ ವಿಷಯ- ದಲ್ಲಿ ಒಂದು ಕಥೆಯು ನಡೆಯಿತು. ಅದನ್ನು ನಿನಗೆ ತಿಳಿಸುತ್ತೇನೆ.
ಶತ್ರೂನ್ ಹತ್ವಾ ಹತಸ್ಯಾಜೌ ಶೂರಸ್ಯಾಕ್ಲಿಷ್ಟಕರ್ಮಣಃ |
ಅಸಹಾಯಸ್ಯ ಧೀರಸ್ಯ ನಿರ್ಜಿತಸ್ಯ ಯುಧಿಷ್ಠಿರ ॥29॥
ರಾಜರ್ಷಿಯಾದ ಹಯಗ್ರೀವನೆಂಬ ರಾಜನು ಶತ್ರುಗಳ ಜೊತೆ ಯುದ್ಧಕ್ಕೆ ನಿಂತನು. ತಾನು ಅಸಹಾಯಕನಾಗಿಯೇ ಅನೇಕ ಶತ್ರುಗಳನ್ನು ಕೊಂದನು. ಅಂತಿಮ -ವಾಗಿ ಶತ್ರುಗಳಿಂದ ಯುದ್ಧದಲ್ಲಿ ಹತನಾದನು. ತನ್ನ ಕರ್ತವ್ಯವನ್ನು ಪರಿಪಾಲನೆ ಮಾಡಿದ್ದರಿಂದ ಉತ್ತಮ ಲೋಕವನ್ನೇ ಹೊಂದಿದನು.
ಯತ್ಕರ್ಮ ವೈ ನಿಗ್ರಹೇ ಶಾತ್ರವಾಣಾಂ
ಯೋಗಶ್ಚಾಗ್ರ್ಯಃ ಪಾಲನೇ ಮಾನವಾನಾಮ್ |
ಕೃತ್ವಾ ಕರ್ಮ ಪ್ರಾಪ್ಯ ಕೀರ್ತಿಂ ಸುಮುದ್ಧಾತ್
ವಾಜಿಗ್ರೀವೋ ಮೋದತೇ ದೇವಲೋಕೇ ॥30॥
ಮಹಾರಾಜನೇ! ಹಯಗ್ರೀವನೆಂಬ ರಾಜನು ಶತ್ರುಗಳ ನಿಗ್ರಹದಲ್ಲಿ ಪ್ರಜೆಗಳ ಪರಿಪಾಲನದಲ್ಲಿ ಏನೇನು ಮಾಡಲು ತನ್ನಿಂದ ಸಾಧ್ಯವೋ, ಅದೆಲ್ಲವನ್ನು ಮಾಡಿ- ದ್ದನು. ಇಹಲೋಕದಲ್ಲಿ ಪ್ರಖ್ಯಾತಿಯನ್ನು ಹೊಂದಿದನು. ಸ್ವರ್ಗದಲ್ಲಿಯೂ ಸುಖ- ವಾಗಿ ವಾಸ ಮಾಡಿದನು.
ಸಂಯುಕ್ತಾತ್ಮಾ ಸಮರೇಷ್ವಾತತಾಯೀ
ಶಸ್ತ್ರೈಶ್ಛಿನ್ನೋ ದಸ್ಯುಭಿರರ್ದ್ಯಮಾನಃ |
ಅಶ್ವಗ್ರೀವಃ ಕರ್ಮಶೀಲೋ ಮಹಾತ್ಮಾ
ಸಂಸಿದ್ಧಾತ್ಮಾ ಮೋದತೇ ದೇವಲೋಕೇ ॥31॥
ಹಯಗ್ರೀವ ಎಂಬ ರಾಜನು ನಿರಂತರ ಆತ್ಮಚಿಂತನೆಯನ್ನೇ ಮಾಡುತ್ತಿದ್ದನು. ಪರಮ ವಿರಕ್ತನಾಗಿದ್ದನು. ಯುದ್ಧದಲ್ಲಿ ಶತ್ರುಗಳನ್ನು ಎದುರಿಸುತ್ತಿದ್ದನು. ಯುದ್ಧ ಮಾಡುತ್ತಿರುವಾಗ ಒಮ್ಮೆ ಅಸಹಾಯಕನಾಗಿ ಶತ್ರುಗಳ ಶಸ್ತ್ರಗಳಿಂದ ಛೇದಿಸಲ್ಪಟ್ಟು ಪ್ರಾಣವನ್ನು ಪರಿತ್ಯಾಗ ಮಾಡಿದನು. ಅತ್ಯಂತಕರ್ಮನಿಷ್ಠನಾದ ಅಶ್ವಗ್ರೀವನು ಸ್ವಧರ್ಮದಿಂದ ಸಿದ್ಧಿಯನ್ನು ಪಡೆದುಕೊಂಡು ದೇವಲೋಕದಲ್ಲಿ ಸುಖವನ್ನು ಅನುಭವಿಸುತ್ತಿದ್ದಾನೆ.
ಟಿಪ್ಪಣಿ - ಕ್ಷತ್ರಿಯರಿಗೆ ಶತ್ರುಗಳನ್ನು ಸಂಹಾರ ಮಾಡುವುದೇ ಸ್ವಧರ್ಮ- ವಾಗಿದೆ. ಶತ್ರುಗಳನ್ನು ಸಂಹಾರ ಮಾಡಿ, ವಿಜಯಶಾಲಿಯಾಗಿ ರಾಜ್ಯವನ್ನು ಪರಿ- ಪಾಲನೆ ಮಾಡಬೇಕು. ಇಂಥ ಸೌಭಾಗ್ಯವು ನಿನ್ನ ಪಾಲಿಗೆ ಒದಗಿದೆ. ಹಯಗ್ರೀವ ಎಂಬ ರಾಜನು ಹಿಂದೆ ಶತ್ರುಗಳ ಜೊತೆ ಯುದ್ಧ ಮಾಡಿ ಸತ್ತನು. ವಿಜಯವನ್ನೂ ಕೂಡ ಪಡೆಯಲಿಲ್ಲ. ಆದರೆ ಧರ್ಮಪರಿಪಾಲನೆ ಮಾಡಬೇಕೆಂಬ ಕರ್ತವ್ಯ- ನಿಷ್ಠತೆಯು ಅವನಲ್ಲಿ ಹೇರಳವಾಗಿತ್ತು. ಶತ್ರುಗಳಿಂದ ತಾನು ಸೋಲುತ್ತೇನೆಂಬ ವಿಚಾರವು ತಿಳಿದಿದ್ದರೂ ಕೂಡ ಯುದ್ಧದಿಂದ ವಿಮುಖನಾಗಲಿಲ್ಲ. ಯುದ್ಧ ಮಾಡಿ ಸತ್ತನು. ಇದರ ಫಲವಾಗಿ ದೇವಲೋಕದಲ್ಲಿ ದೇವತೆಗಳಿಂದಲೂ ಮಾನ್ಯ- ನಾದನು. ಇಂದೂ ಸಹ ಸುಖವಾಗಿ ದೇವಲೋಕದಲ್ಲಿದ್ದಾನೆ. ಹೀಗೆ ಯುದ್ಧದಲ್ಲಿ ಸೋಲುವುದು ಖಚಿತವಾದರೂ ಕೂಡ ಯುದ್ಧ ಮಾಡಬೇಕು. ಹೀಗಿರುವಾಗ ವಿಜಯಶಾಲಿಯಾದ ನಿನ್ನ ಸೌಭಾಗ್ಯ ಮಹತ್ತರವಾಗಿದೆ ಎಂದಭಿಪ್ರಾಯ.
ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್-
ಸ್ರುವಃ ಖಡ್ಗೋ ರುಧಿರಂ ಯತ್ರ ಚಾಜ್ಯಮ್ |
ರಥೋ ವೇದೀ ಕಾಮಗೋ ಯುದ್ಧಮಗ್ನಿಃ
ಚಾತುರ್ಹೋತ್ರಂ ಚತುರೋ ವಾಜಿಮುಖ್ಯಾಃ ॥32॥
ಯುದ್ಧವೇ ಒಂದು ಪವಿತ್ರವಾದ ಯಜ್ಞ. ಆ ಯಜ್ಞದಲ್ಲಿ ಧನಸ್ಸು ಯೂಪ- ಸ್ತಂಭ. ಧನುಸ್ಸಿನ ಹಗ್ಗವೇ ಯಜ್ಞಕ್ಕೆ ಬೇಕಾದ ಬಂಧನರಜ್ಜು. ಬಾಣವು ಸ್ರುಕ್, ಖಡ್ಗವು ಸ್ರುವ, ರಕ್ತವೇ ಆಜ್ಯ. ರಥವು ಯಜ್ಞದ ವೇದಿಕೆ. ಕಾಮಮೂಲವಾದ ಕ್ರೋಧವೇ ಅಗ್ನಿ. ನಾಕು ರಥಾಶ್ವಗಳು ನಾಕುಮಂದಿ ಋತ್ವಿಜರು.
ಟಿಪ್ಪಣಿ - ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್ ಇತ್ಯತ್ರ ಜ್ಯಾ ರಶನಾ ಯೂಪಬಂಧನಮೇಖಲಾ |
`ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್' - ಎಂಬಲ್ಲಿ ಜ್ಯಾ ರಶನಾ ಎಂದರೆ ಯೂಪವನ್ನು ಕಟ್ಟಲು ಉಪಯೋಗಿಸುವ ಹಗ್ಗ ಎಂದರ್ಥ.
ಹುತ್ವಾ ತಸ್ಮಿನ್ ಯಜ್ಞವಹ್ನಾವಥಾರೀನ್
ಪಾಪಾನ್ಮುಕ್ತೋ ರಾಜಸಿಂಹಸ್ತರಸ್ವೀ |

ಪ್ರಾಣಾನ್ ಹುತ್ವಾ ಚಾವಭೃಥೇ ರಣೇ ಸ
ವಾಜಿಗ್ರೀವೋ ಮೋದತೇ ದೇವಲೋಕೇ ॥33॥
ಹಯಗ್ರೀವ ಎಂಬ ರಾಜನು ಇಂಥ ಯುದ್ಧವೆಂಬ ಅಗ್ನಿಯಲ್ಲಿ ಶತ್ರುಗಳನ್ನು ಹೋಮ ಮಾಡಿ, ಸಕಲವಿಧವಾದ ಪಾಪಗಳಿಂದ ಮುಕ್ತನಾದನು. ಆ ರಣಯಜ್ಞದ ಅವಭೃಥದಲ್ಲಿ ತನ್ನ ಪ್ರಾಣಗಳನ್ನು ಹೋಮಮಾಡಿದ ಹಯಗ್ರೀವನೆಂಬ ರಾಜನು ದೇವಲೋಕದಲ್ಲಿ ಸಂತೋಷ ಪಡುತ್ತಿದ್ದಾನೆ.
ವ್ಯಾಖ್ಯಾನ - ಕ್ಷತ್ರಿಯರಿಗೆ ಯುದ್ಧವೇ ಕರ್ತವ್ಯವಾಗಿದೆ. ಇದನ್ನು ಯಜ್ಞವೆಂದು ಅನುಸಂಧಾನ ಮಾಡಿ, ಭಗವಂತನಿಗೆ ಸಮರ್ಪಣೆ ಮಾಡಬೇಕು. ಅದರ ಅನು- ಸಂಧಾನವನ್ನು ಈ ಎರಡು ಶ್ಲೋಕಗಳು ಎಚ್ಚರಿಸುತ್ತಿವೆ. ಹೋಮ ಮಾಡುವುದಕ್ಕೆ ಯೂಪಸ್ತಂಭ ಹಗ್ಗ, ಸ್ರುಕ್, ಸ್ರುವ, ತುಪ್ಪ, ವೇದಿಕೆ, ಅಗ್ನಿ ಇವುಗಳು ಬೇಕು. ಈ ಯುದ್ಧದಲ್ಲಿ ಧನುಸ್ಸನ್ನು ಯೂಪಸ್ತಂಭವೆಂದು ಭಾವಿಸಿ, ಬಾಣವನ್ನು ಸ್ರುಕ್ ಎಂದು, ಖಡ್ಗವನ್ನು ಸ್ರುವವೆಂದು, ರಕ್ತವನ್ನು ಆಜ್ಯವೆಂದು ಭಾವಿಸಿ ಶತ್ರುಗಳನ್ನು ಅಗ್ನಿಯಲ್ಲಿ ಹೋಮ ಮಾಡಬೇಕು. ತಾನೇ ಮರಣವನ್ನು ಹೊಂದುವುದಾದರೆ, ತನ್ನನ್ನೇ ಭಗವಂತನಿಗೆ ಯುದ್ಧಾಗ್ನಿಯಲ್ಲಿ ಹೋಮಿಸಿಕೊಳ್ಳಬೇಕು. ಇದೇ ಕ್ರಮದಲ್ಲಿ ಆಯಾ ಜಾತಿಯವರು ತಮ್ಮ ತಮ್ಮ ಕರ್ತವ್ಯಗಳನ್ನು ಯಜ್ಞವೆಂದು ಅನುಸಂಧಾನ ಮಾಡಿ ಭಗವಂತನಿಗೆ ಸಮರ್ಪಣೆ ಮಾಡಬೇಕು. ಹಯಗ್ರೀವ ಎಂಬ ರಾಜನು ಅತ್ಯಂತ ಕರ್ಮಾಚರಣೆ ಶೀಲನಾಗಿದ್ದನು. ಜೀವನ- ಪೂರ್ತಿ ಅನೇಕ ಯಜ್ಞಯಾಗಾದಿಗಳನ್ನು ಆಚರಿಸಿದ್ದನು. ಅದರ ಫಲವಾಗಿ ಯುದ್ಧವನ್ನೂ ಕೂಡ ಯಜ್ಞವೆಂದೇ ಭಾವಿಸಿ ಸಾರ್ಥಕ ಮಾಡಿಕೊಂಡನು.
ರಾಷ್ಟ್ರಂ ರಕ್ಷನ್ ಬುದ್ಧಿಪೂರ್ವಂ ನಯೇನ
ಸಂತ್ಯಕ್ತಾತ್ಮಾ ಯಜ್ಞಶೀಲೋ ಮಹಾತ್ಮಾ |
ಸರ್ವಾಂಲ್ಲೋಕಾನ್ ವ್ಯಾಪ್ಯ ಕೀರ್ತ್ಯಾ ಮನಸ್ವೀ
ವಾಜಿಗ್ರೀವೋ ಮೋದತೇ ದೇವಲೋಕೇ ॥34॥
ಹಯಗ್ರೀವ ಎಂಬ ರಾಜನು ಯಜ್ಞವನ್ನು ಮಾಡುವುದರಲ್ಲಿ ಆಸಕ್ತನಾಗಿದ್ದನು, ಪುಣ್ಯಾತ್ಮನಾಗಿದ್ದನು, ಮನನಶೀಲನಾಗಿದ್ದನು, ಬುದ್ಧಿಪೂರ್ವಕವಾಗಿ ಒಳ್ಳೆಯ ನೀತಿಯನ್ನು ಅನುಸರಿಸಿ, ರಾಷ್ಟ್ರವನ್ನು ರಕ್ಷಿಸುತ್ತಿದ್ದನು. ಅವನ ಕೀರ್ತಿಯು ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧವಾಗಿತ್ತು. ಇವನು ಯಜ್ಞರೂಪದಲ್ಲಿ ಪ್ರಾಣಾರ್ಪಣೆ- ಯನ್ನು ಮಾಡಿಕೊಂಡು ದೇವಲೋಕದಲ್ಲಿ ಇಂದೂ ಕೂಡ ಆನಂದವಾಗಿದ್ದಾನೆ.
ದೈವೀಂ ಸಿದ್ಧಿಂ ಮಾನುಷೀಂ ದಂಡನೀತಿಂ
ಯೋಗ್ಯನ್ಯಾಸ್ಯೈಃ ಪಾಲಯಿತ್ವಾ ಮಹೀಂ ಚ |
ತಸ್ಮಾದ್ ರಾಜಾ ಧರ್ಮಶೀಲೋ ಮಹಾತ್ಮಾ
ಹಯಗ್ರೀವೋ ಮೋದತೇ ಸ್ವರ್ಗಲೋಕೇ ॥35॥
ಹಯಗ್ರೀವನೆಂಬ ರಾಜನಿಗೆ ಎಲ್ಲ ಕಾರ್ಯಗಳಲ್ಲಿ ಅತ್ಯಂತ ಉತ್ಸಾಹವಿತ್ತು. ಯಾವುದರಲ್ಲೂ ಸ್ವಾಭಿಮಾನವಿರಲಿಲ್ಲ. ಯಾಗ ಮೊದಲಾದ ದೇವಕಾರ್ಯಗಳಲ್ಲಿ ಪ್ರಜೆಗಳನ್ನು ರಕ್ಷಣೆ ಮಾಡುವ ವಿಷಯದಲ್ಲಿ ಅತ್ಯಂತಆಸಕ್ತನಾಗಿದ್ದನು. ಅಹಂಕಾರ- ತ್ಯಾಗರೂಪವಾದ ದೈವೀಸಿದ್ಧಿಯನ್ನು, ದಂಡನೀತಿರೂಪವಾದ ಮಾನುಷೀಸಿದ್ಧಿಯನ್ನು ಹೊಂದಿ ಪುಣ್ಯವಿಶೇಷವನ್ನು ಗಳಿಸಿದನು. ಇದರ ಫಲವಾಗಿ ದೇವಲೋಕದಲ್ಲಿ ಇಂದೂ ಕೂಡ ಸುಖವನ್ನು ಅನುಭವಿಸುತ್ತಿದ್ದಾನೆ.
ವ್ಯಾಖ್ಯಾನ - ಯೋಗನ್ಯಾಸ್ಯೈಃ ಎಂಬಲ್ಲಿ ಯೋಗಶಬ್ದಕ್ಕೆ ಕಾರ್ಯೋತ್ಸಾಹ ಎಂದರ್ಥ. ನ್ಯಾಸ ಶಬ್ದಕ್ಕೆ ಅಭಿಮಾನತ್ಯಾಗ ಎಂದರ್ಥ. ಕಾರ್ಯೋತ್ಸಾಹ ಮತ್ತು ಅಭಿಮಾನತ್ಯಾಗಗಳಿಂದ ದೈವೀಸಿದ್ಧಿಯನ್ನು ಪಡೆದುಕೊಂಡಿದ್ದನು. ದೈವೀಸಿದ್ಧಿ ಎಂದರೆ ಯಜ್ಞಾದಿ ಕ್ರಿಯೆಗಳನ್ನು ಮಾಡಿ, ಸಿದ್ಧಿಯನ್ನು ಪಡೆದುಕೊಂಡಿದ್ದನು ಎಂದು ಅರ್ಥ. ಹೀಗೆ ದೈವಸಂಬಂಧವಾದ ಎಲ್ಲ ಸಿದ್ಧಿಗಳನ್ನು ಪಡೆದುಕೊಂಡು ರಾಜನು ಮಾಡಬೇಕಾದ ದಂಡನೀತಿಯನ್ನು ಅನುಸರಿಸುತ್ತಿದ್ದನು.
ವಿದ್ವಾಂಸ್ತ್ಯಾಗೀ ಶ್ರದ್ದಧಾನಃ ಕೃತಜ್ಞಃ
ತ್ಯಕತ್ವ ಲೋಕಂ ಮಾನುಷಂ ಕರ್ಮ ಕೃತ್ವಾ |
ಮೇಧಾವಿನಾಂ ವಿದುಷಾಂ ಸಮ್ಮತಾನಾಂ
ತನುತ್ಯಜಾಂ ಲೋಕಮಾಕ್ರಮ್ಯ ರಾಜಾ ॥36॥
ಹಯಗ್ರೀವನು ವಿದ್ವಾಂಸನಾಗಿದ್ದನು, ತ್ಯಾಗಿಯಾಗಿದ್ದನು, ಅತ್ಯಂತ ಶ್ರದ್ಧಾಳು- ವಾಗಿದ್ದನು, ಕೃತಜ್ಞನಾಗಿದ್ದನು. ಮನುಷ್ಯರು ಮಾಡಬೇಕಾದ ಕರ್ತವ್ಯಗಳನ್ನು ಆಚರಿಸುತ್ತಿದ್ದನು. ಪ್ರತಿಯೊಂದರಲ್ಲೂ ಉತ್ಸಾಹದಿಂದ ಭಾಗವಹಿಸುತ್ತಿದ್ದನು. ಯುದ್ಧವೆಂಬ ಯಜ್ಞದ ಮೂಲಕ ಈ ಶರೀರವನ್ನು ಪರಿತ್ಯಾಗ ಮಾಡಿ ಪುಣ್ಯ- ಲೋಕಗಳನ್ನು ಹೊಂದಿ, ಆನಂದವಾಗಿ ಕಾಲಕಳೆಯುತ್ತಿದ್ದಾನೆ.
ಸಮ್ಯಗ್ ವೇದಾನ್ ಪ್ರಾಪ್ಯ ಶಾಸ್ತ್ರಾಣ್ಯಧೀತ್ಯ
ಸಮ್ಯಗ್ ರಾಷ್ಟ್ರಂ ಪಾಲಯಿತ್ವಾ ಮಹಾತ್ಮಾ |
ಚಾತುರ್ವರ್ಣ್ಯಂ ಸ್ಥಾಪಯಿತ್ವಾ ಸ್ವಧರ್ಮೇ
ವಾಜಿಗ್ರೀವೋ ಮೊದತೇ ದೇವಲೋಕೇ ॥37॥
ಎಲ್ಲಾ ವೇದಗಳನ್ನು ಚೆನ್ನಾಗಿ ಅಧ್ಯಯನ ಮಾಡಿದ್ದನು. ಶಾಸ್ತ್ರಗಳನ್ನೂ ಕೂಡ ಅಮೂಲಾಗ್ರವಾಗಿ ತಿಳಿದಿದ್ದನು. ರಾಜ್ಯವನ್ನು ನ್ಯಾಯಸಮ್ಮತವಾಗಿ ರಕ್ಷಣೆ ಮಾಡು- ತ್ತಿದ್ದನು. ಆದ್ದರಿಂದಲೇ ಮಹಾತ್ಮನಾಗಿದ್ದನು. ಚಾತುರ್ವರ್ಣ್ಯದ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ನಡೆಸುತ್ತಿದ್ದನು. ತನ್ನ ಧರ್ಮದಲ್ಲಿ ರತನಾಗಿದ್ದನು. ಇಂಥ ವಾಜಿ- ಗ್ರೀವನು ದೇವಲೋಕದಲ್ಲಿ ಸುಖವಾಗಿದ್ದಾನೆ.
ಜಿತ್ವಾ ಸಂಗ್ರಾಮಾನ್ ಪಾಲಯಿತ್ವಾ ಪ್ರಜಾಶ್ಚ
ಸೋಮಂ ಪೀತ್ವಾ ತರ್ಪಯಿತ್ವಾ ದ್ವಿಜಾಗ್ರ್ಯಾನ್ |
ಯುಕ್ತ್ಯಾ ದಂಡಂ ಧಾರಯಿತ್ವಾ ಪ್ರಜಾನಾಂ

ಯುದ್ಧೇ ಕ್ಷೀಣೋ ಮೋದತೇ ದೇವಲೋಕೇ ॥38॥
ಆ ಹಯಗ್ರೀವರಾಜನು ಅನೇಕ ಯುದ್ಧಗಳಲ್ಲಿ ಪಾಲ್ಗೊಂಡು ಶತ್ರುಗಳನ್ನು ಜಯಿಸಿದ್ದನು. ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದನು. ಯಜ್ಞ- ಗಳಲ್ಲಿ ಸೋಮಪಾನವನ್ನು ಮಾಡುವಷ್ಟು ಶ್ರೇಷ್ಠನಾಗಿದ್ದನು. ಶ್ರೇಷ್ಠರಾದ ಬ್ರಾಹ್ಮಣ- ರಿಗೆ, ದಕ್ಷಿಣಾದಿಗಳನ್ನು ಕೊಟ್ಟು ತೃಪ್ತಿಪಡಿಸುತ್ತಿದ್ದನು. ದಂಡನೀತಿಯ ಮೂಲಕ ಮತ್ತು ಯುಕ್ತಿಯಿಂದ ಪ್ರಜೆಗಳ ಪೋಷಣೆಯನ್ನು ಮಾಡುತ್ತಿದ್ದನು. ಇಂಥ ಶ್ರೇಷ್ಠನಾದ ರಾಜನು ಯುದ್ಧದಲ್ಲಿ ಅಸು ನೀಗಿ ದೇವಲೋಕದಲ್ಲಿ ಆನಂದವಾಗಿ- ದ್ದಾನೆ.
ವೃತ್ತಂ ಯಸ್ಯ ಶ್ಲಾಘನೀಯಂ ಮನುಷ್ಯಾಃ
ಸಂತೋ ವಿದ್ವಾಂಸಶ್ಚಾರ್ಹಯಂತ್ಯರ್ಹಣೀಯಾಃ |
ಸ್ವರ್ಗಂ ಜಿತ್ವಾ ವೀರಲೋಕಾಂಶ್ಚ ಗತ್ವಾ
ಸಿದ್ಧಿಂ ಪ್ರಾಪ್ತಾಃ ಪುಣ್ಯಕೀರ್ತಿರ್ಮಹಾತ್ಮಾ ॥39॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚವಿಂಶೋಽಧ್ಯಾಯಃ ॥25॥
ವಿದ್ವಾಂಸರು, ಸಜ್ಜನರು ಇವನ ಉತ್ತಮ ಕಾರ್ಯಗಳನ್ನು ಇಂದೂ ಕೂಡ ಪ್ರಶಂಸೆ ಮಾಡುತ್ತಾರೆ. ಪುಣ್ಯಕೀರ್ತಿಯಾದ ಈ ಮಹಾತ್ಮನು ವೀರಜನರಿಗೆ ಯೋಗ್ಯವಾದ ಗತಿಯನ್ನು ಪಡೆದು, ಈಗ ಸ್ವರ್ಗಲೋಕದಲ್ಲಿ ಆನಂದವನ್ನು ಅನು- ಭವಿಸುತ್ತಿದ್ದಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 25ನೆಯ ಅಧ್ಯಾಯ ಮುಗಿಯಿತು.
*****
26. ಇಪ್ಪತ್ತಾರನೆಯ ಅಧ್ಯಾಯ
ವೇದವ್ಯಾಸದೇವರಿಂದ ಯುಧಿಷ್ಠಿರನಿಗೆ ರಾಜಧರ್ಮದ ಉಪದೇಶ. ಸೇನಜಿತ್ ಎಂಬ ರಾಜನು ಉಪದೇಶಿಸಿದ ಧರ್ಮದ ಅನುವಾದ. ದ್ವಂದ್ವಾತೀತನಾಗಬೇಕೆಂಬುದರ ಉಪದೇಶ. ಕ್ಷಣಿಕವಾದ ಸಂಸಾರದಲ್ಲಿ ಆಸೆಯನ್ನು ಪರಿತ್ಯಾಗ ಮಾಡಬೇಕೆಂಬುದರ ವಿವರಣೆ.
ವೈಶಂಪಾಯನಃ
ದ್ವೈಪಾಯನವಚಃ ಶ್ರುತ್ವಾ ಕುಪಿತೇ ಚ ಧನಂಜಯೇ |
ವ್ಯಾಸಮಾಮಂತ್ರ್ಯ ಕೌಂತೇಯಃ ಪ್ರತ್ಯುವಾಚ ಯುಧಿಷ್ಠಿರಃ ॥1॥
ವೈಶಂಪಾಯನರು ಜನಮೇಜಯನೇ! ಅರ್ಜುನನಿಗೆ ಬಹಳ ಕೋಪವು ಬಂದಿತ್ತು. ಇವನನ್ನು ನೋಡಿ, ವೇದವ್ಯಾಸದೇವರ ಬಳಿ ಯುಧಿಷ್ಠಿರನು ಹೀಗೆ ಹೇಳುತ್ತಾನೆ -
ನ ಪಾರ್ಥಿವಮಿದಂ ರಾಜ್ಯಂ ನಚ ಭೋಗಾಃ ಪೃಥಗ್ವಿಧಾಃ |
ಪ್ರೀಣಯಂತಿ ಮನೋ ಮೇಽದ್ಯ ಶೋಕೋ ಮಾ ನರ್ದಯತ್ಯಯಮ್ ॥2
ಭಗವಾನ್ ವೇದವ್ಯಾಸರೇ! ಸಮಸ್ತ ಭೂಮಿಯಿಂದ ಕೂಡಿದ ಈ ರಾಜ್ಯ ಮತ್ತು ವಿವಿಧ ಭೋಗಗಳು ನನ್ನ ಮನಸ್ಸಿಗೆ ಸಂತೋಷಕರವಾಗಿರುವುದಿಲ್ಲ. ಕೇವಲ ದುಃಖವೇ ನನ್ನಲ್ಲಿ ವಿಜೃಂಭಿಸುತ್ತಿದೆ.
ಶ್ರುತ್ವಾ ಚ ವೀರಹೀನಾನಾಮಪುತ್ರಾಣಾಂ ಚ ಯೋಷಿತಾಮ್ |
ಪರಿದೇವಯಮಾನಾನಾಂ ಶಾಂತಿಂ ನೋಪಲಭೇ ಮುನೇ ॥3॥
ಪತಿಯನ್ನು, ಪುತ್ರರನ್ನು ಕಳೆದುಕೊಂಡ ಸ್ತ್ರೀಯರ ಆಕ್ರಂದನವನ್ನು ಕೇಳಿ ನನ್ನ ಮನಸ್ಸಿಗೆ ಶಾಂತಿಯೇ ದೊರೆಯುತ್ತಿಲ್ಲ.
ಇತ್ಯುಕ್ತಃ ಪ್ರತ್ಯುವಾಚೇದಂ ವ್ಯಾಸೋ ಯೋಗವಿದಾಂ ವರಃ |
ಯುಧಿಷ್ಠಿರಂ ಮಹಾಪ್ರಾಜ್ಞೋ ಧರ್ಮಜ್ಞೋ ವೇದಪಾರಗಃ ॥4॥
ಜನಮೇಜಯನೇ! ಯುಧಿಷ್ಠಿರನು ವೇದವ್ಯಾಸದೇವರನ್ನು ಕುರಿತು ಹೀಗೆ ಹೇಳಿದನು - ಆಗ ಯೋಗಿಜ್ಞಾನಿಗಳಲ್ಲಿ ಸರ್ವೋತ್ತಮರಾದ, ಸರ್ವಜ್ಞರಾದ, ಧರ್ಮಜ್ಞರಾದ, ವೇದವೇದಾಂಗಪರಾಂಗತರಾದ ಶ್ರೀವೇದವ್ಯಾಸದೇವರು
ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿದರು.
ನ ಕರ್ಮಣಾ ಲಭ್ಯತೇ ಚಿಂತಯಾ ವಾ
ನಾಪ್ಯಸ್ತಿ ದಾತಾ ಪುರುಷಸ್ಯ ಕಶ್ಚಿತ್ |
ಪರ್ಯಾಯಯೋಗಾದ್ ವಿಹಿತಂ ವಿಧಾತ್ರಾ
ಕಾಲೇನ ಸರ್ವಂ ಲಭತೇ ಮನುಷ್ಯಃ ॥5॥
ನಮಗೆ ಅಪೇಕ್ಷಿತವಾದ ವಸ್ತುವು ಕೇವಲ ಕಾರ್ಯದಿಂದ ದೊರಕುವುದಿಲ್ಲ. ಚಿಂತೆ ಮಾಡುವುದರಿಂದ ಅದು ಸಿಗುವುದಿಲ್ಲ. ತನಗೆ ಅಪೇಕ್ಷಿತವಾದ ವಸ್ತುವನ್ನು ಕೊಡುವ ಪುರುಷನೂ ಕೂಡ ಯಾರೂ ಇರುವುದಿಲ್ಲ. ಕಾಲಯೋಗವನ್ನನುಸರಿಸಿ ದೈವದಿಂದ ಅದು ದೊರಕುತ್ತದೆ. ಎಲ್ಲವನ್ನೂ ಕೂಡ ಆಯಾ ಸಮಯದಲ್ಲಿ ಮನುಷ್ಯರಿಗೆ ಭಗವಂತನು ನೀಡುತ್ತಾನೆ.
ನ ಬುದ್ಧಿಶಾಸ್ತ್ರಾಧ್ಯಯನೇನ ಶಕ್ಯಂ
ಪ್ರಾಪ್ತುಂ ವಿಶೇಷಂ ಮನುಜೈರಕಾಲೇ |
ಮೂರ್ಖೋಽಪಿ ಪ್ರಾಪ್ನೋತಿ ಕದಾಚಿದರ್ಥಾನ್
ಕಾಲೋ ಹಿ ಕಾರ್ಯಂ ಪ್ರತಿ ನಿರ್ವಿಶೇಷಃ ॥6॥
ಬುದ್ಧಿಯಿಂದ ಶಾಸ್ತ್ರಗಳ ಅಧ್ಯಯನದಿಂದ ಯೋಗವಿಲ್ಲದ ಕಾಲದಲ್ಲಿ ಯಾವುದೇ ವಿಶೇಷಫಲವನ್ನು ಪಡೆಯಲು ಯಾವ ಮನುಷ್ಯರಿಗೂ ಕೂಡ ಸಾಧ್ಯವಿಲ್ಲ. ಕಾಲವು ಪಕ್ವವಾದಾಗಷ್ಟೇ ಫಲವು ದೊರಕುತ್ತದೆ. ಬುದ್ಧಿಹೀನನಾದ ಮೂರ್ಖನಿಗೂ ಕಾಲ ಬಂತೆಂದರೆ ಯಥೇಚ್ಛವಾದ ಐಶ್ವರ್ಯವು ತಾನಾಗಿಯೇ ಬರುತ್ತದೆ. ಆದ್ದರಿಂದ ಕಾರ್ಯದ ಸಿದ್ಧಿಗೆ ಕಾಲದ ಪಕ್ವತೆಯೇ ಕಾರಣವಾಗುತ್ತದೆ. ಪ್ರಾಜ್ಞರು, ಮೂರ್ಖರು ಎಂಬ ಭೇದವಿರುವುದಿಲ್ಲ.
ನಾಭೂತಿಕಾಲೇ ಚ ಫಲಂ ದದಾತಿ

ಶಿಲ್ಪಾನಿ ನ ಮಂತ್ರಾಶ್ಚ ತಥೌಷಧಾನಿ |
ತಾನ್ಯೇವ ಕಾಲೇನ ಸಮಾಹಿತಾನಿ
ಸಿದ್ಧ್ಯಂತಿ ವರ್ಧಂತಿ ಚ ಭೂತಿಕಾಲೇ ॥7॥
ಮನುಷ್ಯನಿಗೆ ದೊರೆಯಬಾರದು ಎಂಬ ಭಗವತ್ ಸಂಕಲ್ಪವಿದ್ದಾಗ, ಮಂತ್ರ- ಗಳು, ಔಷಧಿಗಳು, ಶಿಲ್ಪಶಾಸ್ತ್ರಗಳು ಯಾವುದೇ ಬಗೆಯ ಫಲವನ್ನು ನೀಡುವುದಿಲ್ಲ. ಇದೇ ಶಿಲ್ಪಶಾಸ್ತ್ರ ಹಾಗೂ ಮಂತ್ರೌಷಧಿಗಳು ಮನುಷ್ಯರನ್ನು ಉಚ್ಛ್ರಾಯಸ್ಥಿತಿಯಲ್ಲಿ- ಡುತ್ತವೆ. ಕಾಲನ ಪ್ರೇರಣೆಯಿಂದ ಕೈ ಹಾಕಿದ ಕಾರ್ಯಗಳೆಲ್ಲವೂ ಸಿದ್ಧಿಸುತ್ತವೆ.
ಕಾಲೇನ ಶೀಘ್ರಾಃ ಪ್ರವಿವಾಂತಿ ವಾತಾಃ
ಕಾಲೇನ ವೃಷ್ಟಿರ್ಜಲದಾನುಪೈತಿ |
ಕಾಲೇನ ಪದ್ಮೋತ್ಪಲವಜ್ಜಲಂ ಚ
ಕಾಲೇನ ಪುಷ್ಯಂತಿ ವನೇಷು ವೃಕ್ಷಾಃ ॥8॥
ಕಾಲವು ಬಂದಾಗಷ್ಟೇ ಗಾಳಿಯು ವೇಗವಾಗಿ ಬೀಸುತ್ತದೆ. ಕಾಲವು ಬಂದಾಗಷ್ಟೇ ಮೋಡಗಳು ನೀರನ್ನು ಸುರಿಸುತ್ತವೆ. ಕಾಲವು ಪ್ರಾಪ್ತವಾದಾಗಷ್ಟೇ ಸರೋವರದ ನೀರು ಕಮಲಪುಷ್ಪಗಳಿಂದ ಶೋಭಾಯಮಾನವಾಗುತ್ತದೆ. ಸರಿಯಾದ ಕಾಲದಲ್ಲಷ್ಟೇ ಅರಣ್ಯದಲ್ಲಿರುವ ಮರಗಳು ಚಿಗುರಿ ಹಸಿರಾಗುತ್ತವೆ.
ಟಿಪ್ಪಣಿ - ಬಿರುಗಾಳಿಯು ಯಾವಾಗಲೂ ಬರುವುದಿಲ್ಲ. ಮಳೆಯೂ ಕೂಡ ವರ್ಷಪೂರ್ತಿ ಬರುವುದಿಲ್ಲ. ಕಮಲಪುಷ್ಪ ರಾತ್ರಿ ಅರಳುವುದಿಲ್ಲ. ಕುಮುದಪುಷ್ಪ ಹಗಲು ಅರಳುವುದಿಲ್ಲ. ವಸಂತಕಾಲ ಬಿಟ್ಟು, ಬೇರೆ ಕಾಲದಲ್ಲಿ ಗಿಡಮರಗಳು ಚಿಗುರುವುದಿಲ್ಲ. ಹೀಗೆ ಪ್ರತಿಯೊಂದಕ್ಕೂ ಆಯಾ ಕಾಲಗಳು ಪಕ್ವವಾಗಬೇಕು. ಹೀಗೆ ಪ್ರತಿಯೊಂದಕ್ಕೂ ಕಾಲವು ಬರಬೇಕು.
ಕಾಲೇನ ಕೃಷ್ಣಾಶ್ಚ ಸಿತಾಶ್ಚ ರಾತ್ರ್ಯಃ
ಕಾಲೇನ ಚಂದ್ರಃ ಪರಿಪೂರ್ಣಬಿಂಬಃ |
ನಾಕಾಲತಃ ಪುಷ್ಪಫಲಂ ನಗಾನಾಂ
ನಾಕಾಲವೇಗಾಃ ಸರಿತೋ ವಹಂತಿ ॥9॥
ಕಾಲಕ್ಕೆ ಅನುಗುಣವಾಗಿ ಶುಕ್ಲಪಕ್ಷ-ಕೃಷ್ಣಪಕ್ಷಗಳೆರಡು ಬರುತ್ತವೆ. ಕಾಲಕ್ಕನು- ಗುಣವಾಗಿಯೇ ಚಂದ್ರನು ಪರಿಪೂರ್ಣವಾಗುತ್ತಾನೆ. ಅಕಾಲದಲ್ಲಿ ವೃಕ್ಷಗಳು ಫಲ- ಪುಷ್ಪಗಳನ್ನು ನೀಡುವುದಿಲ್ಲ. ಅಕಾಲದಲ್ಲಿ ನದಿಗಳು ವೇಗವಾಗಿ ಹರಿಯುವುದಿಲ್ಲ.
ನಾಕಾಲಮತ್ತಾಃ ಖಗಪನ್ನಗಾಶ್ಚ
ಮೃಗದ್ವಿಪಾಃ ಶೈಲಮೃಗಾಶ್ಚ ಲೋಕೇ |
ನಾಕಾಲತಃ ಸ್ತ್ರೀಷು ಭವಂತಿ ಗರ್ಭಾ
ನಾಯಾಂತ್ಯಕಾಲೇ ಶಿಶಿರೋಷ್ಣವರ್ಷಾಃ ॥10॥
ಪಕ್ಷಿಗಳು, ಸರ್ಪಗಳು, ಮೃಗಗಳು, ಆನೆಗಳು, ಬೆಟ್ಟದ ಜಂತುಗಳು ಇವುಗಳಲ್ಲಿ ಯಾವುದೊಂದೂ ಕೂಡ ಅಕಾಲದಲ್ಲಿ ಮದಭರಿತವಾಗುವುದಿಲ್ಲ. ಸ್ತ್ರೀಯರಿಗೆ ಅಕಾಲದಲ್ಲಿ ಗರ್ಭವು ಉಂಟಾಗುವುದಿಲ್ಲ. ಶೀತೋಷ್ಣಗಳಾಗಲೀ, ಮಳೆಯಾಗಲೀ ಅಕಾಲದಲ್ಲಿ ಉಂಟಾಗುವುದಿಲ್ಲ.
ನಾಕಾಲತೋ ಮ್ರಿಯತೇ ಜಾಯತೇ ವಾ
ನಾಕಾಲತೋ ವ್ಯಾಹರತೇ ಚ ಬಾಲಃ |
ನಾಕಾಲತೋ ಯೌವನಮಭ್ಯುಪೈತಿ
ನಾಕಾಲತೋ ರೋಹತಿ ಬೀಜಮುಪ್ತಮ್ ॥11॥
ಅಕಾಲದಲ್ಲಿ ಮಗು ಹುಟ್ಟುವುದಿಲ್ಲ. ಮತ್ತು ಸಾಯುವುದೂ ಇಲ್ಲ. ಕಾಲಕ್ಕೂ ಮೊದಲು ಮಾತನಾಡಲು ಕಲಿಯುವುದಿಲ್ಲ. ಕಾಲವು ಪಕ್ವವಾಗದೇ ಯೌವನ ಬರುವುದಿಲ್ಲ.
ಟಿಪ್ಪಣಿ - ಮಗು ಹುಟ್ಟಬೇಕೆಂದು ಏನೇ ಪ್ರಯತ್ನ ಪಟ್ಟರೂ ಮಗುವು ಹುಟ್ಟು- ವುದಿಲ್ಲ. ಪೂರ್ವಕರ್ಮದ ಅನುಸಾರಿಯಾಗಿಯೇ ಮಗುವು ಹುಟ್ಟುತ್ತದೆ. ಅದರಂತೆ ಹುಟ್ಟಿದ ಮಗು ಎಲ್ಲಿ ಸಾಯುತ್ತದೋ, ಎಂಬ ಭಯವೂ ಅನಾವಶ್ಯಕ. ಪೂರ್ವಕರ್ಮ- ದಂತೆ ಕಾಲವು ಬಂದಾಗಷ್ಟೇ ಅದಕ್ಕೆ ಸಾವು ಬರುತ್ತದೆ. ಹುಟ್ಟು ಸಾವುಗಳು ನಮ್ಮ
ಅಧೀನವಾಗಿರುವುದಿಲ್ಲ. ಆದ್ದರಿಂದ ಪ್ರತಿಯೊಂದು ಕಾಲನಾಮಕನಾದ ಪರಮಾತ್ಮನ ಅಧೀನವೆಂದು ಭಾವಿಸಿ, ಸುಖ-ದುಃಖಗಳಿಂದ ರಹಿತರಾಗಿರಬೇಕು.
ನಾಕಾಲತೋ ಭಾನುರುಪೈತಿ ಯೋಗಂ
ನಾಕಾಲತೋಽಸ್ತಂ ಗಿರಿಮಭ್ಯುಪೈತಿ |
ನಾಕಾಲತೋ ವರ್ಧತೇ ಹೀಯತೇ ಚ
ಚಂದ್ರಃ ಸಮುದ್ರೋಪಿ ಮಹೋರ್ಮಿಮಾಲೀ ॥12॥
ಅಕಾಲದಲ್ಲಿ ಸೂರ್ಯೋದಯವಾಗುವುದಿಲ್ಲ. ಅಕಾಲದಲ್ಲಿ ಚಂದ್ರೋ- ದಯವೂ ಆಗುವುದಿಲ್ಲ. ಅಕಾಲದಲ್ಲಿ ಸೂರ್ಯ-ಚಂದ್ರರು ಅಸ್ತಂಗತರೂ ಕೂಡ ಆಗುವುದಿಲ್ಲ. ಪರ್ವಕಾಲವು ಬರದೇ ಅಕಾಲದಲ್ಲಿ ಸಮುದ್ರಕ್ಕೆ ವೃದ್ಧಿಕ್ಷಯವು ಇರುವುದಿಲ್ಲ. ಇದರಂತೆ ಚಂದ್ರನೂ ಕೂಡ ಅಕಾಲದಲ್ಲಿ ವೃದ್ಧಿಹ್ರಾಸಗಳನ್ನು ಹೊಂದುವುದಿಲ್ಲ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ರಾಜ್ಞಾ ಸೇನಜಿತಾ ದುಃಖಾರ್ತೇನ ಯುಧಿಷ್ಠಿರ ॥13॥
ಇದೇ ವಿಷಯದಲ್ಲಿ ಒಮ್ಮೆ ದುಃಖಿತನಾದ ಸೇನಾಜಿತ್ ಎಂಬ ರಾಜನು ತನ್ನ ಅನುಭವವನ್ನು ಪದ್ಯಗಳ ಮೂಲಕ ಹೇಳಿದ್ದಾನೆ.

ಅದನ್ನೇ ನಿನಗೂ ಕೂಡ ತಿಳಿಸುತ್ತೇನೆ ಕೇಳು.
ಸರ್ವಾನೇವೈಷ ಪರ್ಯಾಯೋ ಮರ್ತ್ಯಯನ್ ಸ್ಪೃಶತಿ ದುಸ್ತರಃ |
ಕಾಲೇನ ಪರಿಪಕ್ವಾ ಹಿ ಮ್ರಿಯಂತೇ ಸರ್ವಮಾನವಾಃ ॥14॥
ಯಾರಿಂದಲೂ ಎದುರಿಸಲಾಗದ ಈ ಕಾಲಚಕ್ರವು ಎಲ್ಲಾ ಮನುಷ್ಯರನ್ನು ಬಂಧಿಸುತ್ತದೆ. ಭೂಮಿಯಲ್ಲಿರುವ ಎಲ್ಲಾ ಪ್ರಾಣಿಗಳು ಕಾಲದಿಂದ ಪರಿಪಕ್ವಗೊಂಡೇ ಮರಣವನ್ನು ಹೊಂದುತ್ತವೆ.
ಘ್ನಂತಿ ಚಾನ್ಯಾನ್ನರಾ ರಾಜಂಸ್ತಾನಪ್ಯನ್ಯೇ ನರಾಸ್ತಥಾ |
ಸಂಜ್ಞಯಾ ಲೌಕಿಕೀ ರಾಜನ್ನ ಹಿನಸ್ತಿ ನ ಹನ್ಯತೇ ॥15॥
ಲೋಕದಲ್ಲಿ ಒಬ್ಬನು ಮತ್ತೊಬ್ಬನನ್ನು ಕೊಲ್ಲುತ್ತಾನೆ. ಆ ಕೊಂದವನನ್ನು ಇನ್ನು ಕೆಲವರು ಕೊಲ್ಲುತ್ತಾರೆ. ನಾನು ಕೊಂದೆ, ಅವನು ಕೊಂದನು ಇತ್ಯಾದಿಯಾದ ವ್ಯವಹಾರಗಳೆಲ್ಲವೂ ಕೂಡ ವಿಚಾರ ಮಾಡಿದರೆ ಒಬ್ಬನು ಮತ್ತೊಬ್ಬನನ್ನು ಕೊಲ್ಲು- ವುದೂ ಇಲ್ಲ. ಮತ್ತೊಬ್ಬನಿಂದ ಕೊಲ್ಲಲ್ಪಡುವುದೂ ಇಲ್ಲ. ಕಾಲಾಧೀನವಾಗಿಯೇ ಎಲ್ಲರೂ ಮರಣವನ್ನು ಹೊಂದುತ್ತಾರೆ.
ಹಂತೀತಿ ಮನ್ಯತೇ ಕಶ್ಚಿನ್ನ ಹಂತೀತ್ಯಪಿ ಚಾಪರೇ |
ಸ್ವಭಾವತಸ್ತು ನಿಯತೌ ಭೂತಾನಾಂ ಪ್ರಭವಾಪ್ಯಯೌ ॥16॥
ಅವನು ಇವನನ್ನು ಕೊಲ್ಲುತ್ತಾನೆ. ಇವನು ಅವನನ್ನು ಕೊಲ್ಲುತ್ತಾನೆ ಎಂಬು- ದೆಲ್ಲವೂ ಕೂಡ ಭ್ರಾಂತಿಯಾಗಿದೆ. ವಾಸ್ತವಿಕವಾಗಿ ಪ್ರಾಣಿಗಳ ಹುಟ್ಟುಸಾವುಗಳು ಸ್ವಾಭಾವಿಕವಾಗಿಯೇ ನಡೆಯುತ್ತವೆ.
ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ |
ಅಹೋ ಕಷ್ಟಮಿತಿ ಧ್ಯಾಯನ್ ಶೋಕಸ್ಯಾಪಚಿತಿಂ ಚರೇತ್ ॥17॥
ಧನವು ನಾಶವಾದರೆ ಅಥವಾ ಪತ್ನಿ, ಪುತ್ರ, ಪಿತೃ ಮೊದಲಾದ ತುಂಬಾ ಹತ್ತಿರ- ದವರು ಸತ್ತರೆ, ಅಯ್ಯೋ! ಎಂಥ ಕಷ್ಟವು ಒದಗಿತು! ಎಂಥ ದುಃಖವು ಬಂದಿತು! ಎಂದು ಗೋಳಿಡುತ್ತಾ ದುಃಖಿಸುತ್ತಿದ್ದೂ ದುಃಖವು ಹೆಚ್ಚಾಗುತ್ತದೆ. ಕಡಿಮೆ- ಯಾಗುವುದಿಲ್ಲ.
ಸ ಕಿಂ ಶೋಚಸಿ ಮೂಢಃ ಸಂಶೋಚ್ಯಾನ್ ಕಿಮನುಶೋಚಸಿ |
ಪಶ್ಯ ದುಃಖೇಷು ದುಃಖಾನಿ ಭಯೇಷು ಚ ಭಯಾನ್ಯಪಿ ॥18॥
ಹೀಗೆ ಮನುಷ್ಯನು ತನ್ನಲ್ಲದ ದುಃಖವನ್ನು ಹೆಚ್ಚಿಸಿಕೊಂಡು, ಮರಗುತ್ತಾನೆ. ಹೀಗಿರುವಾಗ ನೀನೇಕೆ ಮೂರ್ಖನಂತೆ ದುಃಖಪಡದವರಿಗಾಗಿ ದುಃಖಿಸುತ್ತಿರುವಿ. ನೀನೇ ಗಮನಿಸು. ದುಃಖಕ್ಕೆ ಅವಕಾಶ ಕೊಟ್ಟಷ್ಟು ಅದು ಉಮ್ಮಳಿಸುತ್ತದೆ. ಭಯವೂ ಕೂಡ ಇದರಂತೆ. ಭಯದಿಂದಲೇ ಭಯ ಹೆಚ್ಚುತ್ತದೆ.
ಟಿಪ್ಪಣಿ - ದುಃಖವು ಬಂದಾಗ ನಿಜವಾದ ವಿವೇಕವನ್ನು ಹೊಂದಿ, ಆ ದುಃಖವನ್ನು ಪರಿತ್ಯಾಗಮಾಡಬೇಕು. ಎಲ್ಲವೂ ಕೂಡ ಕಾಲಾಧೀನವಾಗಿ ನಡೆ- ಯುತ್ತಿರುವಾಗ ದುಃಖಪಡಲು ಯಾವುದೇ ಕಾರಣಗಳಿರುವುದಿಲ್ಲ. ಒಂದುವೇಳೆ ವಿನಾಕಾರಣ ದುಃಖವನ್ನೇ ಅನುಭವಿಸುವುದಾದರೆ, ಆ ದುಃಖದಿಂದ ಮತ್ತೊಂದು ದುಃಖ ಉಲ್ಬಣವಾಗಿ ಬರುತ್ತದೆ. ಅದರಿಂದ ಮತ್ತೊಂದು ದುಃಖ ಬರುತ್ತದೆ. ಇದರಂತೆ ಭಯಪ್ರಸಂಗದಲ್ಲೂ ಭಯವನ್ನು ಪಡುತ್ತಲೇ ಇದ್ದರೆ ಭಯವು ಹೆಚ್ಚಾಗುತ್ತದೆ. ಅಂಥ ಸಂದರ್ಭದಲ್ಲಿ ಭಯವನ್ನು ನಿಗ್ರಹ ಮಾಡಬೇಕು. ನೀನು ದುಃಖವನ್ನು ಅನುಭವಿಸುತ್ತಿದ್ದರೆ, ಉಳಿದ ರಾಜಸ್ತ್ರೀಯರೆಲ್ಲರೂ ಕೂಡ ತಮ್ಮ ದುಃಖವನ್ನು ಹೆಚ್ಚಿಸಿಕೊಂಡು ಪಡಬಾರದ ಕಷ್ಟವನ್ನು ಅನುಭವಿಸುತ್ತಾರೆ. ನೀನು ಮನೋನಿಗ್ರಹವನ್ನು ಮಾಡಿಕೊಂಡು ದುಃಖವನ್ನು ಪರಿತ್ಯಾಗ ಮಾಡಿದರೆ, ನಿನ್ನಿಂದ ಉಳಿದವರೆಲ್ಲರೂ ಸಮಾಧಾನವನ್ನು ಹೊಂದುತ್ತಾರೆ.
ಆತ್ಮಾಪಿ ಚಾಯಂ ನ ಮಮ ಸರ್ವಾಪಿ ಪೃಥಿವೀ ಮಮ |
ಯಥಾ ಮಮ ತಥಾನ್ಯೇಷಾಮಿತಿ ಪಶ್ಯನ್ನ ಮುಹ್ಯತಿ ॥19॥
ದೇಹವು ನನ್ನದಲ್ಲ. ಭೂಮಿಯೊಳಗಿರುವ ಯಾವುದೇ ಪದಾರ್ಥಗಳೂ ಕೂಡ ನನ್ನದಲ್ಲ. ಹೇಗೆ ಈ ಪದಾರ್ಥಗಳು ನನ್ನದಲ್ಲವೋ, ಅದರಂತೆ ಮತ್ತೊಬ್ಬನದ್ದೂ ಅಲ್ಲ ಎಂದೇ ತಿಳಿಯಬೇಕು. ತನ್ನದಲ್ಲ, ಮತ್ತೊಬ್ಬನದ್ದು ಎಂದು ತಿಳಿದರೂ ಕೂಡ ಭ್ರಾಂತಿಯಾಗುತ್ತದೆ.
ಟಿಪ್ಪಣಿ - ಪ್ರತಿಯೊಂದು ಪದಾರ್ಥಗಳು ಪರಮಾತ್ಮನ ಅಧೀನವಾಗಿವೆ. ಸರ್ವತ್ರ ವ್ಯಾಪ್ತನಾದ ಪರಮಾತ್ಮನದ್ದೇ ಪ್ರತಿಯೊಂದು ವಸ್ತುಗಳು. ಹೀಗಿರುವಾಗ ಈ ಪದಾರ್ಥವು ನನ್ನದಲ್ಲ. ಅವನದ್ದು ಎಂದು ಎಷ್ಟೋ ಮಂದಿ ಹೇಳುತ್ತಾರೆ. ಇದೂ ಕೂಡ ಭ್ರಾಂತಿ. ಏಕೆಂದರೆ ಯಾವ ಪದಾರ್ಥಗಳು ಯಾರ ಅಧೀನವೂ ಅಲ್ಲ. ಕೇವಲ ಪರಮಾತ್ಮನ ಅಧೀನವಾಗಿವೆ. ಆದ್ದರಿಂದ ಇದು ನನ್ನದು, ಇದು ಅವನದ್ದು ಎಂಬ ಅಭಿಮಾನದಿಂದ ದುಃಖವನ್ನು ಅನುಭವಿಸುವ ಪ್ರಸಕ್ತಿಯು ಇರುವುದಿಲ್ಲ.
ಶೋಕಸ್ಥಾನಸಹಸ್ರಾಣಿ ಹರ್ಷಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥20॥
ದುಃಖಕ್ಕೆ ಸಾವಿರ ಕಾರಣಗಳಿರುವಂತೆ, ಸಂತೋಷಕ್ಕೂ ಕೂಡ ಸಾವಿರ ಕಾರಣ- ಗಳಿರುತ್ತವೆ. ಇವೆರಡೂ ಕೂಡ ಮೂರ್ಖರನ್ನಷ್ಟೇ ಆವರಿಸುತ್ತವೆ. ನಿಜವಾದ ವಿವೇಕಿಯ ಹತ್ತಿರವೇ ಸುಳಿಯುವುದಿಲ್ಲ.
ಟಿಪ್ಪಣಿ - ಸುಖ-ದುಃಖಗಳೆರಡೂ ಕೂಡ `ಆಗಮಾಪಾಯಿನೋ ನಿತ್ಯಾಃ' ಎಂದು ಹೇಳುವಂತೆ ಸಹಜವಾಗಿ ಬಂದುಹೋಗುವ ಪ್ರಕ್ರಿಯೆಗಳು. ಎರಡೂ ಕೂಡ ಅನಿತ್ಯವೇ ಆಗಿವೆ. ಅನಿತ್ಯವಾದ ಸುಖ-ದುಃಖಗಳನ್ನು ಅನುಭವಿಸಿ ಯಾರು ಕುಗ್ಗುವಿಕೆ, ಹಿಗ್ಗುವಿಕೆಯನ್ನು ಹೊಂದುತ್ತಾನೋ, ಅವನು ಮೂರ್ಖನೇ ಆಗಿದ್ದಾನೆ. ನಿಜವಾದ ವಿವೇಕಿಯಾದ ವಿದ್ವಾಂಸನು ಸುಖ-ದುಃಖಗಳೆರಡರ ವಿಷಯದಲ್ಲಿ ಸಮತ್ವಬುದ್ಧಿಯನ್ನು ಹೊಂದಿರುತ್ತಾನೆ. ಸುಖದಿಂದ ಹಿಗ್ಗುವುದಿಲ್ಲ, ದುಃಖದಿಂದ ಕುಗ್ಗುವುದಿಲ್ಲ. ಆದ್ದರಿಂದ ಅವನ ಮನಸ್ಸಿನ ಮೇಲೆ ಈ ಸುಖ-ದುಃಖಗಳು ಯಾವುದೇ ಪರಿಣಾಮವನ್ನು ಉಂಟುಮಾಡುವುದಿಲ್ಲ.
ಏವಮೇತಾನಿ ಕಾಲೇನ ಪ್ರಿಯದ್ವೇಷ್ಯಾಣಿ ಭಾಗಶಃ |
ಜೀವೇಷು ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ॥21॥
ಕಾಲಕ್ಕೆ ಅನುಗುಣವಾಗಿ ಈ ಸುಖ-ದುಃಖಗಳೆರಡೂ ಅಪ್ರಿಯ ಹಾಗೂ ಪ್ರಿಯಗಳಾಗುತ್ತವೆ. ಜೀವರಲ್ಲಿ ಪ್ರತ್ಯೇಕವಾದ

ಪರಿವರ್ತನೆಯನ್ನು ಹೊಂದಿಸುತ್ತಾ, ಸುಖ-ದುಃಖಗಳೆರಡನ್ನೂ ಹೆಚ್ಚಿಸುತ್ತಾ ಚಕ್ರದಂತೆ ಸುತ್ತಿ, ಸುತ್ತಿ ಬರುತ್ತಲೇ ಇರುತ್ತವೆ. ವಾಸ್ತವಿಕವಾಗಿ ಲೋಕದಲ್ಲಿ ಸುಖವೇ ಇರುವುದಿಲ್ಲ. ದುಃಖವಷ್ಟೇ ಇರುತ್ತದೆ. ಪ್ರಪಂಚದಲ್ಲಿ ದುಃಖವೇ ಬಹಳವಿದೆ. ಸುಖವೇ ಇಲ್ಲದಾಗಿದೆ. ಹೆಜ್ಜೆಹೆಜ್ಜೆಗೂ ದುಃಖವೇ ಒದಗುತ್ತವೆ. ಏಕೆಂದರೆ ಪ್ರತಿಯೊಬ್ಬರಿಗೂ ಅತ್ಯಾಸೆಗಳು ಮೂಡುತ್ತವೆ. ಇದರಿಂದ ಪೀಡಿತರಾಗಿ ದುಃಖವನ್ನೇ ಹೊಂದುತ್ತಾರೆ. ದುಃಖವೆಂಬ ಪೀಡೆಗೆ ವಿನಾಶವೇ ಸುಖ. ಎಲ್ಲಾ ಆಸೆಗಳನ್ನು ಪರಿತ್ಯಾಗ ಮಾಡಬೇಕು. ಆಗಷ್ಟೇ ಸುಖವು ದೊರಕುತ್ತದೆ.

ವಿವರಣೆ - ಆಸೆಗೆ ಮಿತಿಯೇ ಇಲ್ಲ. ಪ್ರತಿಯೊಬ್ಬರೂ ಆಸೆಯಿಂದ ಪೀಡಿತ- ರಾಗಿ ಮನಸ್ಸಿಗೆ ಬಹಳ ದುಃಖವನ್ನು ಅನುಭವಿಸುತ್ತಾರೆ. ಎಷ್ಟೇ ಐಶ್ವರ್ಯವಿದ್ದರೂ ಭೋಗವಿದ್ದರೂ, ತೃಷ್ಣೆಯಿಂದ ಪೀಡಿತನಾದ ವ್ಯಕ್ತಿಯು ದುಃಖಿಯಾಗಿರುತ್ತಾನೆ. ಆದ್ದರಿಂದ ಈ ಲೋಕದಲ್ಲಿ ಸುಖವೇ ಕಾಣಿಸುತ್ತಿಲ್ಲ. ಸುಖಬಂದಾಗಲೂ ಮತ್ತಷ್ಟು ಸುಖದ ಅಪೇಕ್ಷೆಯನ್ನು ಪಟ್ಟು ಬಂದಿರುವ ಸುಖವನ್ನು ಅನುಭವಿಸಲು ಇವನಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಭಾಗವತದಲ್ಲಿ `ನೈರಾಶ್ಯಂ ಪರಮಂ ಸುಖಂ' ಎಂಬುದಾಗಿ ಯಯಾತಿಯು ಹೇಳುತ್ತಾನೆ. ಆಸೆಯನ್ನು ಪರಿತ್ಯಾಗ ಮಾಡುವುದೇ ನಿಜವಾದ ಸುಖ.

ದುಃಖಮೇವಾತಿ ನ ಸುಖಂ ತಸ್ಮಾತ್ ತದುಪಲಭ್ಯತೇ |
ತೃಷ್ಣಾರ್ತಿಪ್ರಭವಂ ದುಃಖಂ ದುಃಖಾರ್ತಿಪ್ರಭವಂ ಸುಖಮ್ ॥22॥

ಈ ಜಗತ್ತಿನಲ್ಲಿ ಕೇವಲ ದುಃಖವೇ ತುಂಬಿದೆ. ಸುಖವೇ ಕಾಣಿಸುತ್ತಿಲ್ಲ. ಪ್ರತಿಯೊಬ್ಬರೂ ದುಃಖವನ್ನೇ ಅನುಭವಿಸುತ್ತಿದ್ದಾರೆ. ಇದಕ್ಕೆ ಕಾರಣವೇನೆಂದರೆ ಅತ್ಯಾಸೆಯೇ ಆಗಿದೆ. ಅತಿಯಾದ ಆಸೆಯಿಂದಲೇ ದುಃಖವು ಹುಟ್ಟುತ್ತದೆ. ಇಂತಹ ದುಃಖದಿಂದ ವಿನಾಶವು ಆಗುತ್ತದೆ. ಆದ್ದರಿಂದ ಅತಿಯಾದ ಆಸೆಯನ್ನು ಬಿಡುವುದೇ ನಿಜವಾದ ಸುಖ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.

ವಿವರಣೆ - ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ಕೂಡ ಅತಿಯಾದ ಆಸೆಯು ಹೆಚ್ಚುತ್ತದೆ. ಈ ಆಸೆ ಎಂಬ ಸಂಕೋಲೆಯಿಂದ ಪ್ರತಿಯೊಬ್ಬರು ಬಂಧಿತರಾಗಿದ್ದಾರೆ. ಅತಿಯಾದ ಆಸೆಯೊಂದು ರೋಗವಾಗಿದೆ. ಯಾರಿಗೆ ಈ ರೋಗವು ಇರುತ್ತದೆ ಅಂಥವರಿಗೆ ಎಷ್ಟು ಐಶ್ವರ್ಯವು ಬಂದರೂ ಕೂಡ ಸುಖ ಉಂಟಾಗುವುದಿಲ್ಲ. ಅದಕ್ಕಾಗಿ ಆಸೆಯನ್ನು ಮೊಟ್ಟಮೊದಲು ಪೂರ್ಣವಾಗಿ ಬಿಟ್ಟುಬಿಡಬೇಕು. `ನೈರಾಶ್ಯಂ ಪರಮಂ ಸುಖಂ' ಎಂಬುದಾಗಿ ಭಾಗವತದಲ್ಲಿ ಹೇಳಿದ್ದನ್ನು ಅನುಸರಿಸಿ ಸುಖದ ಕಡೆ ಧಾವಿಸಬೇಕು.

ಟಿಪ್ಪಣಿ - ದುಃಖಮೇವಾತಿ ನ ಸುಖಮ್ ಇತ್ಯತ್ರ ಅತಿ ಅತಿಶಯೇನ ನಿಯಮೇನ ದುಃಖಮೇವ ನ, ಸುಖಮಪಿ ನ | ತಸ್ಮಾದ್ ದುಃಖಾದನಂತರಂ ತತ್ ಸುಖಮ್, ತಸ್ಮಾತ್ ಸುಖಾದನಂತರಂ ತದ್ ದುಃಖಮಿತ್ಯಾವೃತ್ತ್ಯಾ ಯೋಜನಾ|

`ದುಃಖಮೇವಾತಿ ನ ಸುಖಮ್' ಎಂಬಲ್ಲಿ ಅತಿ ಎಂಬುದಕ್ಕೆ ಅತಿಶಯೇನ ಅಥವಾ ನಿಯಮದಿಂದ ದುಃಖವೇ ಆಗುತ್ತದೆಂಬ ನಿಯಮವಿಲ್ಲ. ಸುಖವೂ ಕೂಡ ಆಗುವುದಿಲ್ಲ. ಆದ್ದರಿಂದ `ದುಃಖದ ಅನಂತರ ಸುಖ, ಸುಖದ ಅನಂತರ ದುಃಖ' ಎಂಬುದಾಗಿ ಆವೃತ್ತಿಯಿಂದ ಯೋಜನೆ ಮಾಡಿಕೊಳ್ಳಬೇಕು.

ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ |
ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ ॥23॥

ಸುಖದ ಅನಂತರ ದುಃಖವು ಬರುತ್ತದೆ. ದುಃಖದ ಅನಂತರ ಸುಖವು ಬರು- ತ್ತದೆ. ಯಾರೊಬ್ಬನೂ ಕೂಡ ಕೇವಲ ದುಃಖವನ್ನು, ಕೇವಲ ಸುಖವನ್ನು ಅನುಭವಿ- ಸಲು ಸಾಧ್ಯವಿಲ್ಲ.

ಟಿಪ್ಪಣಿ - ಸುಖದಿಂದ ಹಿಗ್ಗಬಾರದು. ದುಃಖದಿಂದ ಕುಗ್ಗಬಾರದು. ಏಕೆಂದರೆ ಸುಖದ ಗರ್ಭದಲ್ಲಿ ದುಃಖವಿದೆ ಎಂಬ ಎಚ್ಚರಿಕೆಯನ್ನು ಹೊಂದಿ, ಹಿಗ್ಗದೇ ಸಮಚಿತ್ತನಾಗಿರಬೇಕು. ದುಃಖವು ಬಂದಾಗ, ದುಃಖದ ಗರ್ಭದಲ್ಲಿ ಸುಖವಿದೆ ಎಂದು ತಿಳಿದು ಕುಗ್ಗಬಾರದು.

ಸುಖಮೇವ ಹಿ ದುಃಖಾಂತ ಕದಾಚಿದ್ ದುಃಖತಃ ಸುಖಮ್ |
ತಸ್ಮಾದೇತದ್ ದ್ವಯಂ ಜಹ್ಯಾದ್ಯ ಇಚ್ಛೇಚ್ಛಾಶ್ವತಂ ಸುಖಮ್ ॥24॥

ಸುಖವು ದುಃಖದಲ್ಲಿ ಕೊನೆಗೊಳ್ಳುತ್ತದೆ. ದುಃಖವು ಸುಖದಲ್ಲಿ ಕೊನೆಗೊಳ್ಳು- ತ್ತದೆ. ಸುಖವು ದುಃಖದ ಅಂತ್ಯದಲ್ಲಿ ಪ್ರಾರಂಭವಾಗುತ್ತದೆ. ಹೀಗೆ ಸುಖ-ದುಃಖಗಳೆ- ರಡು ಅನಿತ್ಯವಾಗಿವೆ. ಆದ್ದರಿಂದ ಈ ಎರಡನ್ನು ಪರಿತ್ಯಾಗ ಮಾಡಿ, ಶಾಶ್ವತಸುಖ- ವನ್ನೇ ನಿಜವಾದ ವ್ಯಕ್ತಿಯು ಅಪೇಕ್ಷಿಸಬೇಕು.

ಯನ್ನಿಮಿತ್ತಂ ಭವೇಚ್ಛೋಕಸ್ತಾಪೋ ವಾ ದುಃಖಮೂರ್ಚ್ಛಿತಃ |
ಆಯಾಸೋ ವಾಪಿ ಯನ್ಮೂಲಸ್ತದೇಕಾಂಗಮಪಿ ತ್ಯಜೇತ್ ॥25॥

ಯಾವ ಕಾರಣದಿಂದ ದುಃಖವು ಬಂದಿರುತ್ತದೋ, ಯಾವ ಕಾರಣದಿಂದ ತಡೆಯಲಾರದ ಪರಿತಾಪವು ಬಂದಿರುತ್ತದೋ, ಯಾವ ಕಾರಣದಿಂದ ಆಯಾಸವು ಉಂಟಾಗುತ್ತದೋ, ಆ ಕಾರಣವನ್ನೇ ಮೂಲಸಹಿತ ತೆಗೆದುಹಾಕಬೇಕು. ಶೋಕ, ಪರಿತಾಪ, ಆಯಾಸಗಳು ಶರೀರದ ಅವಯವಗಳಿಂದಲೇ ಬಂದರೂ ಅಂಥ ಅಂಗವನ್ನೇ ಕತ್ತರಿಸಬೇಕು.

ಟಿಪ್ಪಣಿ - ಹಾವು ಕಚ್ಚಿದ ಅವಯವವನ್ನು ತುಂಡರಿಸಿದರೆ ಹೇಗೆ ಕ್ಷೇಮ- ವಾಗುತ್ತದೋ, ಅದರಂತೆ ಯಾವ ಅವಿಭಾಜ್ಯ ಅಂಗದಿಂದ ದುಃಖವಾಗುತ್ತದೋ, ಆ ಅಂಗವನ್ನೇ ಕತ್ತರಿಸಬೇಕು. ಅವಿಭಾಜ್ಯವಾದ ಸಂಬಂಧಿಕರಿಂದ ಅಂಥ ದುಃಖವು ಹೆಚ್ಚುತ್ತಿದ್ದರೆ ಆ ವ್ಯಕ್ತಿಯನ್ನೇ ಪರಿತ್ಯಾಗ ಮಾಡಬೇಕು. ದುರ್ಯೋಧನಾದಿಗಳಿಂದ ಅಸಾಧ್ಯವಾದ ದುಃಖವು ಪ್ರಾಪ್ತವಾಗಿತ್ತು. ಆದ್ದರಿಂದ ಆ ದುರ್ಯೋಧನನನ್ನು ಕೊಂದದ್ದು ಎಲ್ಲರಿಗೂ ಕ್ಷೇಮಕರವಾಗಿದೆ ಎಂದಭಿಪ್ರಾಯ.

ಸುಖಂ ವಾ ಯದಿ ವಾ ದುಃಖಂ ಪ್ರಿಯಂ ವಾ ಯದಿ ವಾಪ್ರಿಯಮ್ |
ಪ್ರಾಪ್ತಂ ಪ್ರಾಪ್ತಮುಪಾಸೀತ ಹೃದಯೇನಾಪರಾಜಿತಃ ॥26॥

ಸುಖವಾಗಲೀ, ದುಃಖವಾಗಲೀ, ಪ್ರಿಯವಾಗಲಿ, ಅಪ್ರಿಯಳಾಗಲೀ ಯಾವುದು ಬಂದರೂ ಎದೆಗುಂದದೆ ಸ್ವಾಗತ ಮಾಡಬೇಕು.

ಟಿಪ್ಪಣಿ - ಜೀವನದಲ್ಲಿ ಸುಖದ ನಿರೀಕ್ಷೆಯಲ್ಲಿ ಕಾಲ ಕಳೆಯಬಾರದು. ಪ್ರಿಯವಾದದ್ದೇ ದೊರಕಬೇಕೆಂದು ಅಪೇಕ್ಷಿಸಬಾರದು. ದುಃಖವು ಬಂದರೆ ಅದನ್ನೂ ಸ್ವಾಗತ ಮಾಡಬೇಕು. ಅಪ್ರಿಯವಾದದ್ದು ಬಂದರೆ ಅದನ್ನೂ ಕೂಡ ಸ್ವಾಗತ ಮಾಡಬೇಕು. ಆಗಷ್ಟೇ ಅವನು ವಿವೇಕಿ ಎಂದು ಕರೆಸಿಕೊಳ್ಳುತ್ತಾನೆ.

ಈರ್ಷದಪ್ಯಂಗ ದಾರಾಣಾಂ ಪುತ್ರಾಣಾಂ ವಾ ಚರಾಪ್ರಿಯಮ್ |
ತತೋ ಜ್ಞಾಸ್ಯಸಿ ಕಃ ಕಸ್ಯ ಕೇನ ವಾ ಕಥಮೇವ ವಾ ॥27॥
ಪ್ರಿಯಮಿತ್ರನೇ! ಅಷ್ಟೇ ಅಲ್ಲದೇ ತನ್ನ ಪತ್ನಿಯರಿಗಾಗಲೀ, ಪುತ್ರರಿಗಾಗಲೀ ಪ್ರಿಯವಲ್ಲದ ಕಾರ್ಯವನ್ನು ಸ್ವಲ್ಪ ಮಾಡಿದರೂ ಸಾಕು, ಯಾರಿಗೆ ಯಾರು ಎಂಬುದು ತಿಳಿಯುತ್ತದೆ. ಮತ್ತು ಯಾರಲ್ಲಿ ಯಾರು ಹೇಗೆ ಇರುತ್ತಾರೆಂಬುದೂ ಕೂಡ ಸ್ಪಷ್ಟವಾಗಿ ತಿಳಿಯುತ್ತದೆ.
ವಿವರಣೆ - ಈ ಲೋಕದಲ್ಲಿ ಯಾರೊಬ್ಬರೂ ಕೂಡ ಅಪ್ರಿಯವಾದದ್ದನ್ನು ಸಹಿಸಿಕೊಳ್ಳುವುದಿಲ್ಲ. ಅಚಾತುರ್ಯದಿಂದ ಅಪ್ರಿಯವಾದದ್ದನ್ನು ಮಾಡಿದರೆ ನಮ್ಮನ್ನು ದ್ವೇಷಿಸುತ್ತಾರೆ. ಉಳಿದವರಿರಲಿ, ಹೆಂಡತಿ ಮಕ್ಕಳೂ ಕೂಡ ಅಪ್ರಿಯ- ವಾದದ್ದನ್ನು ಸಹಿಸಲಾರರು. ಹಿಂದೆ ಎಷ್ಟೇ ಪ್ರೀತಿಯನ್ನು ತೋರಿಸಿದ್ದರೂ ಒಂದು ಬಾರಿ ಅಪ್ರಿಯವಾದದ್ದನ್ನು ಆಚರಿಸಿದರೆ ಅಪ್ರಿಯವಾದದ್ದನ್ನಷ್ಟೇ ನೆನಪಿನಲ್ಲಿ ಇಟ್ಟುಕೊಳ್ಳುತ್ತಾರೆ. ಅಪ್ರಿಯವಾದ ಕಾರ್ಯವನ್ನು ಮಾಡಿದರೆ ಸಂಬಂಧಿಯೇ ಅಲ್ಲವೆಂಬ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ತಮಗೆ ಇವನಿಂದ ಎಷ್ಟು ಉಪ- ಯೋಗವಿದೆ ಎಂಬುದನ್ನಷ್ಟೇ ಅವರು ಗಮನಿಸುತ್ತಿರುತ್ತಾರೆ. ಅವನಿಂದ ತಮಗೆ ಯಾವುದೇ ಉಪಯೋಗವಿಲ್ಲವೆಂದು ತಿಳಿದ ಮೇಲೆ ಅವನನ್ನು ಮೂಲೆಗುಂಪ- ನ್ನಾಗಿ ಮಾಡುತ್ತಾರೆ. ಮುಪ್ಪಿನ ಕಾಲದಲ್ಲಿ ದೇಹವು ಯಾರಿಗೂ ಬೇಡವಾದಾಗ ಸಂಪೂರ್ಣವಾಗಿ ಉಪೇಕ್ಷಿಸುತ್ತಾರೆ. ಆದ್ದರಿಂದ ಯಾರು ಹೆಂಡತಿ, ಯಾರು ಮಗ. ಈ ಸಂಸಾರ ಎಷ್ಟು ವಿಚಿತ್ರ, ನೀನು ಯಾರು? ಅವನು ಯಾರು?  ಎಲ್ಲ ವಿಷಯ -ವನ್ನು ಗಮನಿಸಿದಾಗ ಸಂಸಾರಕ್ಕೂ ನಮಗೂ ಯಾವುದೇ ಸಂಬಂಧವಿಲ್ಲ- ವೆಂದು ಮನದಟ್ಟಾಗುತ್ತದೆ.
ಜೀವನದಲ್ಲಿ ಹೇಗಿರಬೇಕು ಎಂದರೆ ಯಾರು ಭಗವಂತನನ್ನು ಪ್ರೀತಿ ಮಾಡುತ್ತಾರೋ, ಅವರನ್ನಷ್ಟೇ ನಾವು ಪ್ರೀತಿ ಮಾಡಬೇಕು. ಅದರಲ್ಲೂ ಕೂಡ ಇವನು ಹರಿಭಕ್ತನಾಗಿದ್ದಾನೆ. ಇವನಿಂದ ನನ್ನಲ್ಲಿ ಹರಿಭಕ್ತಿ ಅಭಿವೃದ್ಧಿವಾಗು- ತ್ತದೆಂದಷ್ಟೇ ಭಾವನೆಯಿರಬೇಕು. ಹರಿಭಕ್ತನಲ್ಲಿಯೂ ಕೂಡ ವ್ಯಾವಹಾರಿಕವಾದ ಸಂಬಂಧಗಳನ್ನು ಇಟ್ಟುಕೊಳ್ಳಬಾರದು. ಅಧ್ಯಾತ್ಮಬಾಂಧವ್ಯವನ್ನಷ್ಟೇ ಇಟ್ಟುಕೊಳ್ಳ-ಬೇಕು. ಯಾರು ಹರಿಭಕ್ತನಾಗಿರುವುದಿಲ್ಲವೋ, ಅಂಥವನನ್ನು ಹರಿಭಕ್ತರನ್ನಾಗಿ ಮಾಡಲು ಪ್ರಯತ್ನಿಸಬೇಕು. ಅಥವಾ ಹರಿಭಕ್ತನೇ ಆಗಿದ್ದರೂ ಹರಿಭಕ್ತಿಯು ಅವನಲ್ಲಿ ಅಭಿವೃದ್ಧಿ ಆಗುವಂತೆ ಅವನ ಜೊತೆ ಸಂಬಂಧವನ್ನು ಬೆಳೆಸಬೇಕು. ಹರಿಭಕ್ತರಲ್ಲದವರನ್ನು ಅಥವಾ ಹರಿಭಕ್ತರಲ್ಲದ ವಿಷಯದಲ್ಲಷ್ಟೇ ದ್ವೇಷ ತಾತ್ಸಾರ- ಗಳನ್ನು ಮಾಡಬೇಕು. ಇದನ್ನು ಬಿಟ್ಟು ನನಗೆ ಪ್ರಿಯವನ್ನು ಮಾಡುವವನನ್ನು ಪ್ರೀತಿಸುವುದು, ನನಗೆ ಪ್ರಿಯವನ್ನು ಮಾಡದಿರುವವನನ್ನು ದ್ವೇಷಿಸುವುದು ಸರ್ವಥಾ ತಪ್ಪು. ಹೀಗೆ ಮಾಡುವುದರಿಂದ ಜೀವನದಲ್ಲಿ ಅನಂತದುಃಖಗಳನ್ನೇ ಎದುರಿಸ- ಬೇಕಾಗುತ್ತದೆ. ಪ್ರಾಮಾಣಿಕಜೀವನವೆಂದರೆ ಇದು ಮಾತ್ರ. ಮತ್ತೊಂದಲ್ಲ ಎಂಬುದು ಇಲ್ಲಿನ ಅಭಿಪ್ರಾಯ. ಅಂದಮಾತ್ರಕ್ಕೆ ಯಾರಿಗೂ ಪ್ರಿಯವನ್ನೇ ಮಾಡಬಾರದು, ಉಪಕಾರವನ್ನು ಮಾಡಬಾರದು ಎಂದಭಿಪ್ರಾಯವಲ್ಲ. ಏನೇ ಪ್ರಿಯವನ್ನು ಮಾಡಿದರೂ ಅದು ಭಗವಂತನಿಗೆ ಸಮರ್ಪಿತವಾಗಲಿ ಎಂಬ ಅನುಸಂಧಾನವಿರಬೇಕು. ಅಚಾತುರ್ಯದಿಂದ ಮತ್ತೊಬ್ಬರಿಗೆ ಅಪ್ರಿಯವು ನಡೆ- ದರೆ ಅದರಿಂದ ಸಂಸಾರದ ಸ್ವರೂಪವನ್ನು ಅರ್ಥಮಾಡಿಕೊಂಡು ವಿರಕ್ತನಾಗ- ಬೇಕು.
ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇ ಪರಂ ಗತಾಃ |
ತ ಏವ ಸುಖಮೇಧಂತೇ ಮಧ್ಯಮಃ ಕ್ಲಿಶ್ಯತೇ ಜನಃ ॥28॥
ಲೋಕದಲ್ಲಿ ಇಬ್ಬರು ಮಾತ್ರ ಸಂತೋಷದಲ್ಲಿರುತ್ತಾರೆ. ಒಬ್ಬ ಮೂಢ, ಮತ್ತೊಬ್ಬ ಬುದ್ಧಿವಂತ. ಇವರಿಬ್ಬರ ನಡುವೆ ಇರುವ ವ್ಯಕ್ತಿಯು ಯಾವಾಗಲೂ ದುಃಖವನ್ನೇ ಅನುಭವಿಸುತ್ತಾನೆ.
ಇತ್ಯಬ್ರವೀನ್ಮಹಾಪ್ರಾಜ್ಞೋ ಯುಧಿಷ್ಠಿರ ಸ ಸೇನಜಿತ್ |
ಪರಾವರಜ್ಞೋ ಲೋಕಸ್ಯ ಧರ್ಮವಿತ್ ಸುಖದುಃಖವಿತ್ ॥29॥
ಯುಧಿಷ್ಠಿರನೇ! ಇಷ್ಟು ವಿಷಯವನ್ನು ಮಹಾಪ್ರಾಜ್ಞನಾದ, ದೇವಜ್ಞನಾದ ಸೇನಜಿತ್ ಎಂಬ ರಾಜನು ತಿಳಿಸಿರುವನು. ಲೋಕದಲ್ಲಿ ಮುಂದೆ ಏನು ನಡೆ- ಯುತ್ತದೆ, ಹಿಂದೆ ಏನು ನಡೆದಿದೆ ಎಂಬುದನ್ನು, ಯಾವುದು ಸುಖ, ಯಾವುದು ದುಃಖ ಎಂಬುದನ್ನು ಪರಾಂಬರಿಸಿ ತಿಳಿಸಿರುವನು.
ಪರದುಃಖೇನ ಯೋ ದುಃಖೀ ನ ಜಾತು ಸ ಸುಖೀ ಭವೇತ್ |
ದುಃಖಾನಾಂ ಹಿ ಕ್ಷಯೋ ನಾಸ್ತಿ ಜಾಯತೇ ಹ್ಯಪರಾತ್ ಪರಮ್ ॥30॥
ಧರ್ಮರಾಜನೇ! ಮತ್ತೊಬ್ಬರ ದುಃಖಕ್ಕಾಗಿ ಯಾರು ದುಃಖಿಸುತ್ತಾನೋ, ಅವನು ಎಂದೂ ಕೂಡ ಸುಖಿಯಾಗಲಾರ. ಏಕೆಂದರೆ ದುಃಖಗಳಿಗೆ ಎಂದೂ ಕೂಡ ಕೊನೆಯೆಂಬುದೇ ಇರುವುದಿಲ್ಲ. ದುಃಖದಿಂದ ದುಃಖವೇ ಹುಟ್ಟುತ್ತಾ ಹೋಗುತ್ತದೆ.
ಟಿಪ್ಪಣಿ- ಪರದುಃಖೇನ ಯೋ ದುಃಖೀ ಇತ್ಯತ್ರ ಪರದುಃಖೇನ ಪುತ್ರದಾರಾದೀನಾಂ ದುಃಖೇನ |
`ಪರದುಃಖೇನ ಯೋ ದುಃಖೀ' ಎಂಬಲ್ಲಿ `ಪರದುಃಖೇನ' ಮಕ್ಕಳು, ಹೆಂಡತಿ ಮೊದಲಾದವರ ದುಃಖದಿಂದ ಎಂದರ್ಥ.
ಸುಖಂ ಚ ದುಃಖಂ ಚ ಭವಾಭವೌ ಚ
ಲಾಭಾಲಾಭೌ ಮರಣಂ ಜೀವಿತಂ ಚ |
ಪರ್ಯಾಯತಃ ಸರ್ವಮಿಹ ಸ್ಪೃಶಂತಿ
ತಸ್ಮಾದ್ ಧೀರೋ ನೈವ ಹೃಷ್ಯೇನ್ನ ಶೋಚೇತ್ ॥31॥
ಸುಖ-ದುಃಖಗಳು, ಸಂಪತ್ತು-ವಿಪತ್ತುಗಳು, ಲಾಭ-ನಷ್ಟಗಳು, ಜನನ-ಮರಣ -ಗಳು ಇವೆಲ್ಲವೂ ಒಂದಾದ ಮೇಲೆ ಒಂದರಂತೆ ಸುತ್ತಿ ಬರುತ್ತಲೇ ಇರುತ್ತವೆ. ಸಮುದ್ರದ ಅಲೆಗಳಂತೆ ಬರುತ್ತಿರುವ ಇವುಗಳನ್ನು ಕಂಡು ದುಃಖಿಸಲೂ ಬಾರದು. ಸಂತೋಷವನ್ನೂ ಪಡಬಾರದು. ಅಂಥವನೇ ಧೀರ ಎಂದು ಕರೆಸಿಕೊಳ್ಳುತ್ತಾನೆ.
ದೀಕ್ಷಾಂ ರಾಜ್ಞಃ ಸಂಯುಗೇ ಯುದ್ಧಮಾಹು-
ರ್ಯೋಗಂ ರಾಷ್ಟ್ರೇ ದಂಡನೀತ್ಯಾಂ ಚ ಸಮ್ಯಕ್ |
ವಿತ್ತತ್ಯಾಗೋ ದಕ್ಷಿಣಾನಾಂ ಚ ಯಜ್ಞೇ

ಸಮ್ಯಗ್ ಜ್ಞಾನಂ ಪಾವನಾನೀತಿ ವಿದ್ಯಾತ್ ॥32॥
ಧರ್ಮರಾಜನೇ! ಯುದ್ಧ ಮಾಡುವುದು, ರಾಜ್ಯವನ್ನು ಪರಿಪಾಲನೆ ಮಾಡು- ವುದು, ದಂಡನೀತಿಯನ್ನು ಅನುಸರಿಸುವುದು, ಸಂಪತ್ತನ್ನು ದಕ್ಷಿಣರೂಪದಲ್ಲಿ ದಾನ ಮಾಡುವುದು ಇವೆಲ್ಲವೂ ಕುಲಧರ್ಮಗಳಾಗಿವೆ. ಇವುಗಳನ್ನು ಆಚರಣೆ ಮಾಡು- ವುದರಿಂದ ರಾಜನು ಪಾವನನಾಗುತ್ತಾನೆ.
ವಿವರಣೆ - ಜೀವನವು ಯಜ್ಞರೂಪದಿಂದ ಇರಬೇಕು. ಜೀವನವನ್ನು ನಡೆಸು- ವವನು ಯಜ್ಞದೀಕ್ಷಿತನಂತೆ ಇರಬೇಕು. ಯುದ್ಧಭೂಮಿಯಲ್ಲಿ ಮಾಡುವ ಯುದ್ಧವೂ ಕೂಡ ಯಜ್ಞರೂಪವಾಗಿರಬೇಕು. ದಂಡನೀತಿಯನ್ನು ಅಳವಡಿಸುವುದೂ ಕೂಡ ಯೋಗಸಾಧನರೂಪದಲ್ಲಿರಬೇಕು ಎಂದಭಿಪ್ರಾಯ.
ರಕ್ಷನ್ ರಾಷ್ಟ್ರಂ ಬುದ್ಧಿಪೂರ್ವಂ ನಯೇನ
ಸಂತ್ಯಕ್ತಾತ್ಮಾ ಯಜ್ಞಶೀಲೋ ಮಹಾತ್ಮಾ |
ಸರ್ವಾಂಲ್ಲೋಕಾನ್ ಧರ್ಮದೃಷ್ಟ್ಯಾ ಚರಂಶ್ಚಾ-
ಪ್ಯೂರ್ಧ್ವಂ ದೇಹಾನ್ಮೋದತೇ ದೇವಲೋಕೇ ॥33॥
ಯಥಾರ್ಥಜ್ಞಾನವನ್ನು ಪಡೆದು ಅಹಂಕಾರವನ್ನು ಪರಿತ್ಯಾಗ ಮಾಡಿ, ನೀತಿ- ಯಿಂದ ರಾಜ್ಯವನ್ನು ಪರಿಪಾಲನೆ ಮಾಡಬೇಕು. ಯಜ್ಞಗಳನ್ನು ಮಾಡಬೇಕು. ಎಲ್ಲಾ ಪ್ರಾಣಿಗಳನ್ನು ಸಮಾನದೃಷ್ಟಿಯಿಂದ ನೋಡಬೇಕು. ಇಂಥ ಮಹಾತ್ಮನಾದ ರಾಜನು ದೇಹವನ್ನು ಬಿಟ್ಟ ಮೇಲೆ ಸ್ವರ್ಗಲೋಕದಲ್ಲಿ ಆನಂದವಾಗಿರುತ್ತಾನೆ.
ಜಿತ್ವಾ ಸಂಗ್ರಾಮಾನ್ ಪಾಲಯಿತ್ವಾ ಚ ರಾಷ್ಟ್ರಂ
ಸೋಮಂ ಪೀತ್ವಾ ವರ್ಧಯಿತ್ವಾ ಪ್ರಜಾಶ್ಚ |
ಯುಕ್ತ್ಯಾ ದಂಡಂ ಧಾರಯಿತ್ವಾ ಪ್ರಜಾನಾಂ
ಯುದ್ಧೇ ಕ್ಷೀಣೋ ಮೋದತೇ ದೇವಲೋಕೇ ॥34॥
ಯುದ್ಧದಲ್ಲಿ ಜಯಗಳಿಸಬೇಕು. ರಾಜ್ಯವನ್ನು ಧರ್ಮದಿಂದ ಪರಿಪಾಲನೆ ಮಾಡಬೇಕು. ಯಜ್ಞಗಳಲ್ಲಿ ಸೋಮರಸವನ್ನು ಪಾನ ಮಾಡಬೇಕು. ದಂಡನೀತಿ- ಯಿಂದ ಪ್ರಜೆಗಳನ್ನು ಸಂತೋಷಪಡಿಸಬೇಕು. ಈ ಕ್ರಮದಲ್ಲಿ ಯಾವ ಕ್ಷತ್ರಿಯನು ಧರ್ಮಪರಿಪಾಲನೆಯನ್ನು ಮಾಡುತ್ತಾನೋ, ಅಂಥವನು ಮರಣದ ಅನಂತರ ಎಲ್ಲಾ ಲೋಕಗಳಲ್ಲಿಯೂ ಸಂತೋಷಪಡುತ್ತಾನೆ.
ಸಮ್ಯಗ್ ವೇದಾನ್ ಪ್ರಾಪ್ಯ ಶಾಸ್ತ್ರಾಣ್ಯಧೀತ್ಯ
ಸಮ್ಯಗ್ ರಾಷ್ಟ್ರಂ ಪಾಲಯಿತ್ವಾ ಚ ರಾಜಾ |
ಚಾತುರ್ವರ್ಣ್ಯಂ ಸ್ಥಾಪಯಿತ್ವಾ ಸ್ವಧರ್ಮೇ
ಪೂತಾತ್ಮಾ ವೈ ಮೋದತೇ ದೇವಲೋಕೇ ॥35॥
ವೇದಗಳನ್ನು ಮತ್ತು ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣದವರು ಅವರವರ ಧರ್ಮವನ್ನು ನಿಷ್ಠೆಯಿಂದ ಪರಿಪಾಲನೆ ಮಾಡಲು ವ್ಯವಸ್ಥೆಗೊಳಿಸಬೇಕು. ಇಂಥ ರಾಜನು ಪೂತಾತ್ಮನಾಗುತ್ತಾನೆ. ಮರಣದ ಅನಂತರ ದೇವರಾಜ್ಯದಲ್ಲಿ ಸುಖವಾಗಿರುತ್ತಾನೆ.
ಯಸ್ಯ ವೃತ್ತಂ ನಮಸ್ಯಂತಿ ಸ್ವರ್ಗಸ್ಥಸ್ಯಾಪಿ ಮಾನವಾಃ |
ಪೌರಜಾನಪದಾಮಾತ್ಯಾಃ ಸ ರಾಜಾ ರಾಜಸತ್ತಮಃ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಸೇನಜಿದುಪಾಖ್ಯಾನಂ ನಾಮ ಷಡ್ವಿಂಶೋಽಧ್ಯಾಯಃ ॥26॥
ಮರಣದ ಅನಂತರದಲ್ಲಿ ಯಾವ ರಾಜನ ಉತ್ತಮ ನಡತೆಯನ್ನು ಪ್ರತಿಯೊಬ್ಬ ಪ್ರಜೆಗಳು ಮಂತ್ರಿಗಳು ನಿರಂತರ ಕೊಂಡಾಡುತ್ತಾರೋ, ಅಂಥ ರಾಜನೇ ರಾಜ- ಶ್ರೇಷ್ಠನೆಂದು ಕರೆಸಿಕೊಳ್ಳುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 26ನೆಯ ಅಧ್ಯಾಯವು ಮುಗಿಯಿತು.
*****
27. ಇಪ್ಪತ್ತೇಳನೆಯ ಅಧ್ಯಾಯ
ಸಕಲವನ್ನು ಪರಿತ್ಯಾಗ ಮಾಡುವುದೇ ಶ್ರೇಷ್ಠವೆಂದು ಯುಧಿಷ್ಠಿರನ ಸಮರ್ಥನೆ.
ವೈಶಂಪಾಯನಃ
ಅಸ್ಮಿನ್ನೇವ ಪ್ರಕರಣೇ ಧನಂಜಯಮುದಾರಧೀಃ |
ಅಭಿನೀತತರಂ ವಾಕ್ಯಮಿತ್ಯುವಾಚ ಯುಧಿಷ್ಠಿರಃ ॥1॥
ವೈಶಂಪಾಯನರು ಜನಮೇಜಯನೇ! ಉತ್ಕೃಷ್ಟವಾದ ಬುದ್ಧಿಯುಳ್ಳ ಧರ್ಮ- ರಾಜನು ಇದೇ ಸಂದರ್ಭದಲ್ಲಿ ಅರ್ಜುನನ್ನು ಕುರಿತು ಸಂದರ್ಭಕ್ಕೆ ಉಚಿತವಾದ ಮಾತುಗಳನ್ನು ಹೇಳಿದನು.
ಯದೇತನ್ಮನ್ಯಸೇ ಪಾರ್ಥ ನ ಜ್ಯಾಯೋಽಸ್ತಿ ಧನಾದಿತಿ |
ನ ಸ್ವರ್ಗೋ ನ ಸುಖಂ ನಾರ್ಥೋ ನಿರ್ಧನಸ್ಯೇತಿ ತನ್ಮೃಷಾ ॥2॥
ಅರ್ಜುನನೇ! ಹಣವೇ ಶ್ರೇಷ್ಠ. ಹಣಕ್ಕಿಂತಲೂ ಶ್ರೇಷ್ಠವಾದದ್ದು ಮತ್ತೊಂದಿಲ್ಲ. ಹಣವಿಲ್ಲದವನಿಗೆ ಸ್ವರ್ಗ, ಸುಖ, ಪ್ರಯೋಜನಗಳು ಯಾವುದೂ ಇಲ್ಲವೆಂದು ನೀನು ಭಾವಿಸಿರುವುದು ತಪ್ಪು.
ಸ್ವಾಧ್ಯಾಯಯಜ್ಞಸಂಸಿದ್ಧಾ ದೃಶ್ಯಂತೇ ಬಹವೋ ಜನಾಃ |
ತಪೋರತಾಶ್ಚ ಮುನಯೋ ಯೇಷಾಂ ಲೋಕಾಃ ಸನಾತನಾಃ ॥3॥
ಹಣವೇ ಇಲ್ಲದೆ ಅದೆಷ್ಟೋ ಸಾಧಕರು ವೇದಗಳ ಅಧ್ಯಯನ ಮತ್ತು ಅಧ್ಯಾ- ಪನಗಳಿಂದಲೇ ಸಿದ್ಧಿಯನ್ನು ಪಡೆದಿದ್ದಾರೆ. ಅನೇಕ

ಋಷಿಮುನಿಗಳು ತಪೋನಿಷ್ಠರಾಗಿ ಸನಾತನವಾದ ಲೋಕಗಳನ್ನು ಪಡೆದುಕೊಂಡಿದ್ದಾರೆ.
ಋಷೀಣಾಂ ಸಮಯಂ ಶಶ್ವದ್ ಯೇ ರಕ್ಷಂತಿ ಧನಂಜಯ |
ಆಶ್ರಿತಾಃ ಸರ್ವಧರ್ಮಜ್ಞಾ ದೇವಾಸ್ತಾನ್ ಬ್ರಾಹ್ಮಣಾನ್ ವಿದುಃ ॥4॥
ಧನಂಜಯನೇ! ಎಲ್ಲಾ ಧರ್ಮಗಳನ್ನು ತಿಳಿಸಿಕೊಂಡಿರುವ ಯಾವ ಮನುಷ್ಯ- ರಿದ್ದಾರೋ, ಬ್ರಹ್ಮಚರ್ಯ ಆಶ್ರಮದಲ್ಲಿದ್ದು ಋಷಿಗಳ ನಿಯಮದಿಂದ ಯಥಾ- ವತ್ತಾಗಿ ಅಧ್ಯಯನಸಂಪತ್ತನ್ನು ರಕ್ಷಿಸಿಕೊಂಡು ಯಾರು ಬರುತ್ತಿದ್ದಾರೋ, ಅಂಥ ಸಾಧಕರನ್ನೇ ದೇವತೆಗಳು ಬ್ರಾಹ್ಮಣರೆಂದು ಹೇಳುತ್ತಾರೆ.
ಸ್ವಾಧ್ಯಾಯನಿಷ್ಠಾನ್ ಹಿ ಋಷೀನ್ ಜ್ಞಾನನಿಷ್ಠಾಂಸ್ತಥಾಽಪರಾನ್ |
ಬುದ್ಧ್ಯೇಥಾಃ ಸಂತತಂ ಚಾಪಿ ಧರ್ಮನಿಷ್ಠಾನ್ ಧನಂಜಯ ॥5॥
ಧನಂಜಯನೇ! ಕೆಲವು ಋಷಿಗಳು ವೇದಶಾಸ್ತ್ರಗಳ ಅಧ್ಯಯನ ಮತ್ತು ಅಧ್ಯಾ- ಪನಗಳಲ್ಲೇ ಆಸಕ್ತರಾಗಿರುತ್ತಾರೆ. ಇನ್ನೂ ಕೆಲವರು ಜ್ಞಾನವನ್ನು ಸಂಪಾದನೆ ಮಾಡು- ವುದರಲ್ಲಿ ಅಭಿಲಾಷೆಯುಳ್ಳವರಾಗಿರುತ್ತಾರೆ. ಇವರೆಲ್ಲರೂ ನಿರಂತರ ಧರ್ಮಪರಿ- ಪಾಲನೆಯಲ್ಲಿ ಆಸಕ್ತರಾಗಿರುತ್ತಾರೆಂಬುದನ್ನು ನೀನು ಅರ್ಥಮಾಡಿಕೊಳ್ಳಬೇಕು.
ಜ್ಞಾನನಿಷ್ಠೇಷು ಕಾರ್ಯಾಣಿ ಪ್ರತಿಷ್ಠಾಪ್ಯಾನಿ ಪಾಂಡವ |
ವೈಖಾನಸಾನಾಂ ವಚನಂ ಯಥಾ ನೋ ವಿದಿತಂ ಪ್ರಭೋ ॥6॥
ಪಾಂಡವನೇ! ನಮಗೆ ತಿಳಿದಂತೆ ಯಾರು ಶ್ರೇಷ್ಠ ಜ್ಞಾನವನ್ನು ಹೊಂದಿರು- ತ್ತಾರೋ, ಅಂಥವರಿಗೆ ರಾಜ್ಯದ ಆಡಳಿತಕಾರ್ಯವನ್ನು ಒಪ್ಪಿಸಬೇಕು. ಹೀಗೆ ವೈಖಾ ನಸರು ಹೇಳುತ್ತಾರೆ.
ಅಜಾಶ್ಚ ಪೃಶ್ನಯಶ್ಚೈವ ಸಿಕತಾಶ್ಚೈವ ಭಾರತ |
ಅರುಣಾಃ ಕೇತವಶ್ಚೈವ ಸ್ವಾಧ್ಯಾಯೇನ ದಿವಂ ಗತಾಃ ॥7॥
ಅಜರು, ಪೃಶ್ನಿಗಳು, ಸಿಕತರು, ಅರುಣರು, ಕಿತವರು ಇವರೆಲ್ಲರೂ ಅಧ್ಯಯನ- ದಿಂದಲೇ ಉತ್ತಮ ಲೋಕವನ್ನು ಪಡೆದಿದ್ದಾರೆ.
ಟಿಪ್ಪಣಿ - ಅಜಾಶ್ಚ ಪೃಶ್ನಯಶ್ಚೈವ ಇತ್ಯತ್ರ ಅಜಾಃ ಅಜನಾಮಕಾಃ | ಪೃಶ್ನಯಃ ಪೃಶ್ನಿನಾಮಕಾಃ, ಏವಮುತ್ತರತ್ರಾಪಿ |
`ಅಜಾಶ್ಚ ಪೃಶ್ನಯಶ್ಚೈವ ಎಂಬಲ್ಲಿ ಅಜಾಃ ಎಂದರೆ ಅಜನಾಮಕರು ಎಂದರ್ಥ. `ಪೃಶ್ನಯಃ' ಎಂದರೆ ಪೃಶ್ನಿ ಎಂಬ ಹೆಸರುಳ್ಳವರು ಎಂದರ್ಥ. ಇದರಂತೆ ಉಳಿದದ್ದನ್ನೂ ಕೂಡ ತಿಳಿದುಕೊಳ್ಳಬೇಕು.
ಅವಾಪ್ಯೈತಾನಿ ಕರ್ಮಾಣಿ ವೇದೋಕ್ತಾನಿ ಧನಂಜಯ |
ದಾನಮಧ್ಯಯನಂ ಯಜ್ಞೋ ನಿಗ್ರಹಶ್ಚೈವ ದುರ್ಗ್ರಹಃ ॥8॥
ದಾನ, ಅಧ್ಯಯನ, ಯಜ್ಞ, ಇಂದ್ರಿಯನಿಗ್ರಹ ಮೊದಲಾದ ವೇದಗಳಲ್ಲಿ ಹೇಳಲ್ಪಟ್ಟ ಸತ್ಕರ್ಮಗಳ ಆಚರಣೆಯಿಂದಲೇ ಇವರೆಲ್ಲರೂ ಉತ್ತಮಲೋಕವನ್ನು ಪಡೆದಿದ್ದಾರೆ.
ದಕ್ಷಿಣೇನ ಚ ಪಂಥಾನಮರ್ಯಮ್ಣೋ ಯೇ ದಿವಂ ಗತಾಃ |
ಏತಾನ್ ಕ್ರಿಯಾವತಾಂ ಲೋಕಾನುಕ್ತವಾನ್ ಪೂರ್ವಮಪ್ಯಹಮ್ ॥9॥
ಅತ್ಯಂತ ಕಠಿಣವಾದ ಕರ್ಮಗಳನ್ನು ಆಚರಣೆ ಮಾಡಿ, ಅನೇಕ ಸಾಧಕರು ದಕ್ಷಿಣಾಯನ ಮಾರ್ಗದಿಂದ ಸ್ವರ್ಗಕ್ಕೆ ತೆರಳಿದ್ದಾರೆ. ವೇದಗಳಲ್ಲಿ ಹೇಳಲ್ಪಟ್ಟ ಧರ್ಮಾಚರಣೆಯನ್ನು ಮಾಡಿದವರಿಗೆ ಯಾವ ಲೋಕಗಳು ದೊರಕುತ್ತವೆ ಎಂಬು- ದನ್ನು ಈ ಹಿಂದೆಯೇ ನಾನು ತಿಳಿಸಿದ್ದೇನೆ.
ಉತ್ತರೇಣ ತು ಪಂಥಾನಂ ನಿಯಮಾದ್ ಯಂ ಪ್ರಪಶ್ಯಸಿ |
ಏತೇ ಯಾಗವತಾಂ ಲೋಕಾ ಭಾಂತಿ ಪಾರ್ಥ ಸನಾತನಾಃ ॥10॥
ಅರ್ಜುನನೇ! ಅತ್ಯಂತನಿಯಮಾನುಷ್ಠಾನದಲ್ಲಿರುವುದರಿಂದ ನೀನೂ ಸಹ ಇದೆಲ್ಲವನ್ನು ಕಾಣುತ್ತಿರುವಿ. ಅದರಲ್ಲಿ ಯಾವ ಉತ್ತರಾಯಣಮಾರ್ಗವನ್ನು ನೋಡುತ್ತಿರುವಿಯೋ, ಆ ಮಾರ್ಗವು ಜ್ಞಾನಯಜ್ಞವನ್ನು ಆಚರಿಸುವ ಸಾಧಕರಿ- ಗಷ್ಟೇ ದೊರಕುತ್ತದೆ.
ತತ್ರೋತ್ತರಾಂ ಗತಿಂ ಪಾರ್ಥ ಪ್ರಶಂಸಂತಿ ಪುರಾವಿದಃ |
ಸಂತೋಷೋ ವೈ ಸ್ವರ್ಗತಮಃ ಸಂತೋಷಃ ಪರಮಂ ಸುಖಮ್ ॥11॥
ಪಾರ್ಥನೇ! ಜ್ಞಾನದಿಂದ ಲಭಿಸುವ ಉತ್ತರಾಯಣಮಾರ್ಗವನ್ನೇ ಪುರಾತನ- ಮುನಿಗಳು ಪ್ರಶಂಸೆ ಮಾಡುತ್ತಾರೆ. ಸಂತೋಷವೇ ಪರಮಸುಖವಾಗಿದೆ. ಸಂತೋಷ -ಕ್ಕಿಂತಲೂ ಮತ್ತೊಂದು ಪಡೆಯಬೇಕಾದ್ದು ಇರುವುದಿಲ್ಲ.
ತುಷ್ಟೇರ್ನ ಕಿಂಚಿತ್ ಪರಮಂ ಸಾ ಸಮ್ಯಕ್ ಪ್ರತಿತಿಷ್ಠತಿ |
ವಿನೀತಕ್ರೋಧಹರ್ಷಸ್ಯ ಸತತಂ ಸಿದ್ಧಿರುತ್ತಮಾ ॥12॥
ಯಾರು ಕೋಪ ಮತ್ತು ಸಂತೋಷಗಳನ್ನು ಜಯಿಸಿರುತ್ತಾನೋ, ಅವನಿಗೆ ಸಂತೃಪ್ತಿಯು ಇರುತ್ತದೆ. ಅಂತಹವನಿಗೆ ಯಾವಾಗಲೂ ಉತ್ತಮವಾದ ಸಿದ್ಧಿಯು ಲಭಿಸುತ್ತದೆ.
ಅತ್ರಾಪ್ಯುದಾಹರಂತೀಮಾಂ ಗಾಥಾಂ ಗೀತಾಂ ಯಯಾತಿನಾ |
ಯಾಽಭಿಪ್ರತ್ಯಾಹರೇತ್ ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ ॥13
ಇದೇ ವಿಷಯದಲ್ಲಿ ಹಿಂದೆ ಯಯಾತಿರಾಜನು ತನ್ನ ಆತ್ಮಾನುಭವವನ್ನು ಪದ್ಯಗಳ ಮೂಲಕ ಹೇಳಿರುತ್ತಾನೆ. ಅವನು ಹೇಳಿದಂತೆ ಆಮೆಯು ತನ್ನ ಅವ- ಯವಗಳನ್ನು ಒಳಗೆ ಬೇಕಾದಾಗ ಸೆಳೆದುಕೊಂಡು, ಬೇಕಾದಾಗ ಹೊರಗೆ ಬಿಡುತ್ತದೋ, ಅದರಂತೆ ಕಾಮಾದಿಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿರು- ವವನು ಸಂತೋಷದಿಂದ ಇರುತ್ತಾನೆ.
ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ |
ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥14॥
ನಿಜವಾದ ಸಾಧಕನು ಯಾರೊಬ್ಬನಿಗೂ ಭಯ ಪಡುವುದಿಲ್ಲ. ಯಾರೊಬ್ಬ- ರನ್ನು ಭಯಪಡಿಸುವುದೂ ಇಲ್ಲ. ಯಾವಾಗ

ಯಾವುದನ್ನು ಇಚ್ಛಿಸುವುದಿಲ್ಲವೋ. ಯಾವುದನ್ನು ದ್ವೇಷ ಮಾಡುವುದಿಲ್ಲವೋ, ಆಗ ಪರಮಾತ್ಮನ ಸಾಮೀಪ್ಯವನ್ನು ಹೊಂದುತ್ತಾನೆ.

ಯದಾ ನ ಭಾವಂ ಕುರುತೇ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥15॥
ನಿಜವಾದ ಸಾಧಕನು ಬೇರೆ ಪ್ರಾಣಿಗಳಿಗೆ ಮನಸ್ಸಿನಿಂದ ಮಾತಿನಿಂದ ಕಾರ್ಯ- ದಿಂದ ಕೆಟ್ಟದ್ದನ್ನು ಬಯಸುವುದಿಲ್ಲವೋ, ಆಗ ಅವನು ಪರಮಾತ್ಮನನ್ನು ಹೊಂದು- ತ್ತಾನೆ.
ವಿನೀತಮಾನಮೋಹಶ್ಚ ಬಹುಸಂಗವಿವರ್ಜಿತಃ |
ತದಾತ್ಮಜ್ಯೋತಿಷಃ ಸಾಧೋ ನಿರ್ವಾಣಮುಪಪದ್ಯತೇ ॥16॥
ಮಾನ ಮತ್ತು ಮೋಹಗಳನ್ನು ನಿಗ್ರಹ ಮಾಡಿ ಎಲ್ಲರ ಸಂಗವನ್ನು ಯಾವಾಗ ಬಿಡುತ್ತಾನೋ, ಪರಮಾತ್ಮನೆಂಬ ಜ್ಯೋತಿಯ ಬಗ್ಗೆ ನಿರಂತರ ತಿಳಿದುಕೊಳ್ಳು- ತ್ತಾನೋ, ಆಗ ಅಂಥ ಸಾಧಕನು ಮೋಕ್ಷವನ್ನು ಹೊಂದುತ್ತಾನೆ.
ಇದಂ ತು ಶೃಣು ಮೇ ಪಾರ್ಥ ಬ್ರುವತಃ ಸಂಯತೇಂದ್ರಿಯಃ |
ಧರ್ಮಮನ್ಯೇ ವೃತ್ತಮನ್ಯೇ ಧನಮೀಹಂತಿ ಚಾಪರೇ ॥17॥
ಓ ಪಾರ್ಥನೇ! ನಾನು ಈಗ ಹೇಳುವ ವಿಷಯವನ್ನು ಗಮನವಿಟ್ಟು ಕೇಳು. ಇಂದ್ರಿಯನಿಗ್ರಹವು ಅತ್ಯಂತಶ್ರೇಷ್ಠವಾದದ್ದು. ಕೆಲವರು ಧರ್ಮವನ್ನು ಅನುಷ್ಠಾನ- ಮಾಡಬೇಕೆಂದು ಪ್ರಯತ್ನ ಪಡುತ್ತಾರೆ. ಇನ್ನು ಕೆಲವರು ಅಪಾರವಾದ ಹಣವನ್ನು ಸಂಪಾದನೆ ಮಾಡಬೇಕೆಂದು ಪ್ರಯತ್ನ ಪಡುತ್ತಾರೆ.
ಧನಹೇತೋರ್ಯ ಈಹೇತ ತಸ್ಯಾನೀಹಾ ಗರೀಯಸೀ |
ಭೂಯಾನ್ ದೋಷೋ ಹಿ ವಿತ್ತಸ್ಯ ಯಶ್ಚ ಧರ್ಮಸ್ತದಾಶ್ರಯಃ ॥18॥
ಕೆಲವರು ಧರ್ಮಕ್ಕೆ ಧನವು ಆಧಾರವಾಗಿದೆ ಎಂಬ ಉದ್ದೇಶದಿಂದ ಧನಾ- ರ್ಜನೆಯನ್ನು ಮಾಡಲು ಆಸೆ ಪಡಬಹುದು. ಆದರೆ ಅಂಥ ಹಣಕ್ಕಾಗಿ ಆಸೆ ಪಡದಿ- ರುವುದೇ ಒಳ್ಳೆಯದು. ಧರ್ಮಕ್ಕೆ ಆ ಹಣವು ಆವಶ್ಯಕವಾಗಿದ್ದರೂ ಅದರಲ್ಲಿ ಅನೇಕ ದೋಷಗಳಿರುತ್ತವೆ.
ಪ್ರತ್ಯಕ್ಷಮನುಪಶ್ಯಾಮಿ ತ್ವಮಪಿ ದ್ರಷ್ಟುಮರ್ಹಸಿ |
ವರ್ಜನಂ ವರ್ಜನೀಯಾನಾಮೀಹಮಾನೇನ ದುಷ್ಕರಮ್ ॥19॥
ನಾನು ಪ್ರತ್ಯಕ್ಷವಾಗಿಯೇ ಹಣ ಸಂಪಾದನೆಯಲ್ಲಿರುವ ದೋಷಗಳನ್ನು ಕಾಣು- ತ್ತಿದ್ದೇನೆ. ನೀನೂ ಸಹ ಇದನ್ನು ಪ್ರತ್ಯಕ್ಷವಾಗಿ ಕಾಣಬಹುದು. ಹಣದ ಸಂಪಾದನೆ- ಯಲ್ಲಿ ಯಾರು ಆಸಕ್ತರಾಗಿರುತ್ತಾರೋ, ಬಿಡಬೇಕಾದದ್ದನ್ನು ಬಿಡದೇ ಪಾಪವನ್ನೇ ಹೊಂದುತ್ತಾರೆ.
ಯೇ ವಿತ್ತಮಭಿಪದ್ಯಂತೇ ಸಮ್ಯಕ್ತ್ವಂ ತೇಷು ದುರ್ಲಭಮ್ |
ದ್ರುಹ್ಯತಃ ಪ್ರೈತಿ ತತ್ ಪ್ರಾಹುಃ ಪ್ರತಿಕೂಲಂ ಯಥಾತಥಮ್ ॥20॥
ಯಾರು ಹಣದ ಬೆನ್ನು ಹತ್ತುತ್ತಾರೋ, ಅವರಲ್ಲಿ ಸಜ್ಜನಿಕೆಯು ಬಹಳ ಅಪರೂಪ. ಏಕೆಂದರೆ ಹಣವು ದ್ರೋಹ ಮಾಡುವವನಿಗಷ್ಟೇ ಲಭಿಸುತ್ತದೆ. ಹೀಗೆ ಅನುಭವಿಗಳು ಹೇಳುತ್ತಾರೆ. ಹಾಗೇನಾದರೂ ಸಜ್ಜನನು ಹಣವನ್ನು ಸಂಪಾದನೆ ಮಾಡಿದರೂ ಮುಂದೆ ಅದು ತನ್ನ ಸಾಧನೆಗೆ ಪ್ರತಿಕೂಲವೇ ಆಗುತ್ತದೆ.
ಟಿಪ್ಪಣಿ - ದ್ರುಹ್ಯತಃ ಪ್ರೈತಿ ತತ್ ಪ್ರಾಹುಃ ಇತ್ಯತ್ರ ದ್ರುಹ್ಯತಃ ಪುರುಷಸ್ಯ ಪ್ರತಿಕೂಲಂ ಯಥಾ ಭವತಿ ತಥಾ ತತ್ ಪರಲೋಕಸುಖಂ ಪ್ರೈತಿ ನಶ್ಯತಿ |
`ದ್ರುಹ್ಯತಃ' ಎಂಬುದಕ್ಕೆ ಪುರುಷನಿಗೆ ಪ್ರತಿಕೂಲವಾಗುತ್ತದೆ. ಈ ಹಣ ಸಂಪಾ- ದನೆಯಿಂದ ಪರಲೋಕ ಸುಖವು ನಾಶವಾಗುತ್ತದೆ ಎಂದಭಿಪ್ರಾಯ.
ವಿವರಣೆ - ಹಣಸಂಪಾದನೆಯನ್ನು ಮಾಡುವುದೇ ಜೀವನದ ಮುಖ್ಯ ಉದ್ದೇಶವಾಗಿರಬಾರದು. ಹಣಸಂಪಾದನೆಯನ್ನು ಕೇವಲ ಜೀವನ ನಿರ್ವಾಹಣೆಗೆ ಆವಶ್ಯಕವಿದ್ದಷ್ಟೇ ಮಾಡಬೇಕು. ಹೆಚ್ಚು ಮಾಡಿದರೆ ಅದು ಅನ್ಯಮಾರ್ಗದಲ್ಲೇ ನಮ್ಮನ್ನು ಕರೆದುಕೊಂಡು ಹೋಗುತ್ತದೆ. ಅಂದಮಾತ್ರಕ್ಕೆ ಹಣವನ್ನೇ ಸಂಪಾದನೆ ಮಾಡಬಾರದು ಎಂದಭಿಪ್ರಾಯವಲ್ಲ. ಆವಶ್ಯಕವಿದ್ದಷ್ಟು ಹಣವನ್ನು ಸಂಪಾದನೆ ಮಾಡಿ ಅದರಿಂದ ಜೀವನವನ್ನು ಸಾಗಿಸಬೇಕು.
ಯಸ್ತು ಸಂಭಿನ್ನವೃತ್ತಃ ಸ್ಯಾದ್ ವೀತಶೋಕಭಯೋ ನರಃ |
ಅಲ್ಪೇನ ತೃಷಿತೋ ದ್ರುಹ್ಯನ್ ಭ್ರೂಣಹತ್ಯಾಂ ನ ಬುದ್ಧ್ಯತೇ ॥21॥
ಅಲ್ಪವಾದ ಧನದ ಆಸೆಗಾಗಿ ಮನುಷ್ಯನು ಸದಾಚಾರದಿಂದ ಭ್ರಷ್ಟನಾಗುತ್ತಾನೆ. ಶೋಕ ಮತ್ತು ಭಯಗಳನ್ನೇ ಲೆಕ್ಕಿಸುವುದಿಲ್ಲ. ಆದ್ದರಿಂದಲೇ ಮತ್ತೊಬ್ಬರಿಗೆ ದ್ರೋಹವನ್ನೂ ಕೂಡ ಮಾಡುತ್ತಾನೆ. ಇವನು ಭ್ರೂಣಹತ್ಯಾಪಾಪವನ್ನೂ ಕೂಡ ಗಮನಿಸುವುದಿಲ್ಲ.
ಟಿಪ್ಪಣಿ - ಹಣವೇ ಮುಖ್ಯವಾದಾಗ ಎಲ್ಲಾ ಪಾಪಕಾರ್ಯಗಳಲ್ಲೂ ತೊಡ- ಗುತ್ತಾನೆ. ಸುಳ್ಳುಗಳನ್ನು ಹೇಳುವುದು. ಅಪ್ರಾಮಾಣಿಕತನದಿಂದ ನಡೆದುಕೊಳ್ಳು- ವುದು ಆಯಾ ಕಾಲಕ್ಕೆ ಮಾಡಬೇಕಾದ ಕರ್ತವ್ಯಗಳನ್ನು ಪರಿತ್ಯಾಗ ಮಾಡುವುದು. ಕೇವಲ ಸ್ವಾರ್ಥನಾಗಿರುವುದು. ತನ್ನನ್ನು ಪ್ರಶಂಸೆ ಮಾಡಿಕೊಳ್ಳುವುದು. ಮತ್ತೊಬ್ಬ- ರನ್ನು ನಿಂದನೆ ಮಾಡುವುದು. ಈ ದುರ್ಗುಣಗಳು ಇದ್ದರಷ್ಟೇ ಹಣಸಂಪಾ- ದನೆಯು ಸುಲಭವಾಗುತ್ತದೆ. ಆದ್ದರಿಂದ ಸಜ್ಜನನೂ ಕೂಡ ಹಣಸಂಪಾದನೆಯಲ್ಲಿ ತೊಡಗಿದಾಗ ಈ ಎಲ್ಲ ದುರ್ಗುಣಗಳನ್ನು ಹೊಂದುವ ಸಾಧ್ಯತೆಯಿರುತ್ತದೆ.
ಟಿಪ್ಪಣಿ - ಅಲ್ಪೇನ ತೃಷಿತ ಇತ್ಯತ್ರ ತೃಷಿತಃ ಧನತೃಷ್ಣಾವಾನ್ |
`ಅಲ್ಪೇನ ತೃಷಿತಃ' ಎಂಬಲ್ಲಿ `ತೃಷಿತಃ' ಎಂಬುದಕ್ಕೆ ಹಣದ ತೃಷೆ ಇರುವವನು ಎಂದರ್ಥ.
ದುಷ್ಯಂತ್ಯಾದದತೋ ಭೃತ್ಯಾ ನಿತ್ಯಂ ದಸ್ಯುಭಯಾದಿವ |
ದುರ್ಲಭಂ ಚ ಧನಂ ಪ್ರಾಪ್ಯ ಭೃಶಂ ದತ್ತ್ವಾಽನುತಪ್ಯತೇ ॥22॥

ಭೃತ್ಯರು ತಮಗೆ ಬರಬೇಕಾದ ಹಣವನ್ನು ಸರಿಯಾದ ಕಾಲಕ್ಕೆ ಪಡೆದುಕೊಳ್ಳು- ತ್ತಾರೆ. ಮತ್ತು ತಮ್ಮ ಪ್ರಯತ್ನಕ್ಕೆ ಪ್ರತಿಫಲವಾಗಿ ಆ ಹಣವನ್ನು ಪಡೆದುಕೊಳ್ಳುತ್ತಾರೆ. ಹಣವನ್ನು ಕೊಟ್ಟ ಯಜಮಾನನು ಮಾತ್ರ ಕಳ್ಳರು ಧನವನ್ನು ಕೊಳ್ಳೆಹೊಡೆದು- ಕೊಂಡು ಹೋದರೆ ಹೇಗೆ ದುಃಖಿಸುತ್ತಾನೋ, ಹಾಗೇ ಇವನು ದುಃಖಿಸುತ್ತಾನೆ.

ಅಧನಃ ಕಸ್ಯ ಕಿಂ ವಾಚ್ಯೋ ವಿಮುಕ್ತಃ ಸರ್ವಶಃ ಸುಖೀ |
ದೇವಸ್ವಮುಪಗೃಹ್ಯೈವ ಧನೇನ ನ ಸುಖೀ ಭವೇತ್ ॥23॥

ಹಣವಿಲ್ಲದವನ ಬಗ್ಗೆ ಯಾರೂ ಏನನ್ನೂ ಮಾತನಾಡುವುದಿಲ್ಲ. ಯಾವುದೇ ಕಾರಣಕ್ಕೂ ಅವನನ್ನು ಯಾರೂ ನಿಂದಿಸುವುದಿಲ್ಲ. ಎಲ್ಲಾ ವಿಧವಾದ ಭಯಗಳಿಂದ ರಹಿತನಾಗಿರುತ್ತಾನೆ. ಒಂದು ವೇಳೆ ದೇವಸ್ವತ್ತಾದ ಹಣವನ್ನು ಮನುಷ್ಯನು ತೆಗೆದು- ಕೊಂಡರೂ ಅದನ್ನು ಸುಖಕ್ಕಾಗಿ ಉಪಯೋಗಿಸಬಾರದು. ಹಣದಿಂದ ಮನುಷ್ಯನಿಗೆ ಸುಖವು ದೊರಕುವುದಿಲ್ಲ.

ತತ್ರ ಗಾಥಾಂ ಯಜ್ಞಗೀತಾಂ ಕೀರ್ತಯಂತಿ ಪುರಾವಿದಃ |
ತ್ರಯೀಮುಪಾಶ್ರಿತಾಂ ಲೋಕೇ ಯಜ್ಞಸಂಸ್ತರಕಾರಿಕಾಮ್ ॥24॥

ಇದೇ ವಿಷಯದಲ್ಲಿ ಪುರಾಣವನ್ನು ತಿಳಿದವರು ವೇದಪ್ರತಿಪಾದಿತವಾದ ಯಜ್ಞ- ಗೀತೆ ಎಂಬ ಒಂದು ಸುಭಾಷಿತವನ್ನು ಹೇಳುತ್ತಾರೆ.

ಯಜ್ಞಾಯ ಸೃಷ್ಟಾನಿ ಧನಾನಿ ಧಾತ್ರಾ
ಯಜ್ಞಾಯ ಸೃಷ್ಟಃ ಪುರುಷೋ ರಕ್ಷಿತಾ ಚ |
ತಸ್ಮಾತ್ ಸರ್ವಂ ಯಜ್ಞ ಏವೋಪಯೋಜ್ಯಂ
ಧನಂ ನ ಕಾಮಾಯ ಹಿತಂ ಪ್ರಶಸ್ತಮ್ ॥25॥

ಯಜ್ಞಕ್ಕೋಸ್ಕರವೇ ಬ್ರಹ್ಮನು ಹಣವನ್ನು ಸೃಷ್ಟಿ ಮಾಡಿರುವನು. ಆ ಹಣವನ್ನು ರಕ್ಷಣೆ ಮಾಡಿ ಯಜ್ಞ ಮಾಡುವುದಕ್ಕಾಗಿಯೇ ಮನುಷ್ಯರನ್ನು ಸೃಷ್ಟಿ ಮಾಡಿರುವನು. ಆದ್ದರಿಂದ ಆ ಶ್ರೇಷ್ಠವಾದ ಹಣವನ್ನು ಯಜ್ಞಕ್ಕಾಗಿಯೇ ಉಪಯೋಗಿಸಬೇಕು. ಸ್ವೇಚ್ಛೆಯಿಂದ ಹಣವನ್ನು ಉಪಯೋಗಿಸುವುದು ಪ್ರಶಸ್ತವಾಗಿರುವುದಿಲ್ಲ.

ಏತತ್ ಸ್ವಾರ್ಥೇ ಚ ಕೌಂತೇಯ ಧನಂ ಧನವತಾಂ ವರ |
ಧಾತಾ ದದಾತಿ ಮರ್ತ್ಯೇಭ್ಯೋ ಯಜ್ಞಾರ್ಥಮಿತಿ ವಿದ್ಧಿ ತತ್ ॥26॥

ಧನವಂತರಲ್ಲಿ ಶ್ರೇಷ್ಠನಾದ ಅರ್ಜುನನೇ! ಪರಮಾತ್ಮನು ಯಾವ ಕಾರಣಕ್ಕಾಗಿ ಹಣವನ್ನು ನಮಗೆ ನೀಡುತ್ತಾನೋ, ಅದನ್ನು ಯಜ್ಞಕ್ಕೋಸ್ಕರವೇ ಉಪಯೋಗಿಸ- ಬೇಕೆಂದು ತಿಳಿ.

ತಸ್ಮಾದ್ ಬುದ್ಧ್ಯಂತಿ ಪುರುಷಾ ನಹಿ ತತ್ ಕಸ್ಯಚಿದ್ ಧ್ರುವಮ್ |
ಶ್ರದ್ದಧಾನಸ್ತತೋ ಲೋಕೋ ದದ್ಯಾಚ್ಚೈವ ಯಜೇತ ಚ ॥27॥

ಆದ್ದರಿಂದ ಮತಿವಂತರು ಹಣವು ಯಾರಲ್ಲಿಯೂ ಕೂಡ ಸ್ಥಿರವಾಗಿ ನಿಲ್ಲುವು- ದಿಲ್ಲವೆಂದು ಹೇಳುತ್ತಾರೆ. ವೇದೋಕ್ತಕರ್ಮಗಳಲ್ಲಿ ಶ್ರದ್ಧೆಯಿರುವ ಮನುಷ್ಯರು ಕ್ಷಣಿಕವಾದ ಹಣವನ್ನು ಯಜ್ಞದ ಮೂಲಕ ಮತ್ತು ದಾನದ ಮೂಲಕ ಉಪ- ಯೋಗಿಸುತ್ತಾರೆ.

ಲಬ್ಧಸ್ಯ ತ್ಯಾಗಮಿತ್ಯಾಹುರ್ನ ಭೋಗಂ ನಚ ಸಂಚಯಮ್ |
ತಸ್ಯ ಕಿಂ ಸಂಚಯೇನಾರ್ಥಃ ಕಾರ್ಯೇ ಜ್ಯಾಯಸಿ ತಿಷ್ಠತಿ ॥28॥

ಸಂಪಾದನೆ ಮಾಡಿದ ಹಣವನ್ನು ಯಜ್ಞ ಹಾಗೂ ದಾನದ ಮೂಲಕ ತ್ಯಾಗ ಮಾಡಬೇಕು. ಅದನ್ನು ಕೂಡಿಡಬಾರದು. ಸುಖವನ್ನು ಅನುಭವಿಸುವುದಕ್ಕಾಗಿಯೂ ಖರ್ಚು ಮಾಡಬಾರದು. ಆದ್ದರಿಂದ ಹಣವನ್ನು ಸಂಪಾದನೆ ಮಾಡುವುದರಿಂದ ಏನು ಉಪಯೋಗವಿದೆ? ಮತ್ತು ಯಜ್ಞಯಾಗಾದಿಗಳಿಗಿಂತಲೂ ಜ್ಞಾನಸಂಪಾ- ದನೆಯು ಅತ್ಯಂತಶ್ರೇಷ್ಠವಾಗಿರುವುದರಿಂದ ಅದಕ್ಕಾಗಿ ಹಣಸಂಪಾದನೆಯನ್ನೇಕೆ ಮಾಡಬೇಕು.

ಯೇ ಸ್ವಧರ್ಮಾದಪೇತೇಭ್ಯಃ ಪ್ರಯಚ್ಛಂತ್ಯಲ್ಪಬುದ್ಧಯಃ |
ಶತಂ ವರ್ಷಾಣಿ ತೇ ಪ್ರೇತ್ಯ ಪುರೀಷಂ ಭುಂಜತೇ ಜನಾಃ ॥29॥

ಯಾರು ವಿವೇಕವಿಲ್ಲದೇ ಸ್ವಧರ್ಮದಿಂದ ಭ್ರಷ್ಟರಾಗಿ ಹಣವನ್ನು ಸಂಪಾದನೆ ಮಾಡುತ್ತಾರೋ, ಅವರು ದೇಹವನ್ನು ಬಿಟ್ಟ ಮೇಲೆ ನೂರಾರು ವರ್ಷಗಳ ಕಾಲ ಅಮೇಧ್ಯವನ್ನು ತಿನ್ನುತ್ತಾ ಕಾಲವನ್ನು ಕಳೆಯುತ್ತಾರೆ. ಅಪಾತ್ರನಿಗೆ ದಾನ ಮಾಡು- ವುದರಿಂದಲೂ ಇದೇ ದುಃಖವನ್ನು ಅನುಭವಿಸುತ್ತಾನೆ.

ಅನರ್ಹತೇ ಯದ್ ದದಾತಿ ನ ದದಾತಿ ಯದರ್ಹತೇ |
ಅರ್ಹಾನರ್ಹಾಪರಿಜ್ಞಾನಾದ್ ದಾನಧರ್ಮೋಽಪಿ ದುಷ್ಕರಃ ॥30॥

ಅಯೋಗ್ಯರಿಗೆ ಯಾರು ದಾನವನ್ನು ಮಾಡುತ್ತಾರೋ, ಯೋಗ್ಯರಿಗೆ ಯಾರು ದಾನವನ್ನು ಮಾಡುವುದಿಲ್ಲವೋ, ಯಾರಿಗೆ ದಾನಕ್ಕೆ ಪಾತ್ರಾಪಾತ್ರವಿಚಾರವು ತಿಳಿದಿರುವುದಿಲ್ಲವೋ, ಅಂಥವರಿಗೆ ದಾನಧರ್ಮವೂ ಕೂಡ ದುರ್ಲಭವೇ ಆಗು- ತ್ತದೆ.

ಲಬ್ಧಾನಾಮಪಿ ವಿತ್ತಾನಾಂ ಬೋದ್ಧವ್ಯೌ ದ್ವಾವತಿಕ್ರಮೌ |
ಅಪಾತ್ರೇ ಪ್ರತಿಪತ್ತಿಶ್ಚ ಪಾತ್ರೇ ಚಾಪ್ರತಿಪಾದನಮ್ ॥31॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಸಪ್ತವಿಂಶೋಽಧ್ಯಾಯಃ ॥27॥

ಸಂಗ್ರಹ ಮಾಡಿದ ಹಣವನ್ನು ವಿನಿಯೋಗ ಮಾಡುವ ಸಂದರ್ಭದಲ್ಲಿಯೂ ಕೂಡ ಎರಡನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು. ಅಪಾತ್ರನಿಗೆ ದಾನ ಮಾಡು- ವುದು, ಪಾತ್ರನಾದವನಿಗೆ ದಾನವನ್ನು ಕೊಡದಿರುವುದು. ಇವೆರಡೂ ಕೂಡ ಪಾಪಕರವಾದ ಕಾರ್ಯಗಳೇ ಆಗಿವೆ.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 27ನೆಯ ಅಧ್ಯಾಯವು ಮುಗಿಯಿತು.

*****

27. ಇಪ್ಪತ್ತೆಂಟನೆಯ ಅಧ್ಯಾಯ

ಧರ್ಮರಾಜನು ವೇದವ್ಯಾಸರ ಬಳಿ ಬಿಕ್ಕಿ ಬಿಕ್ಕಿ ಅತ್ತನು. ಪ್ರಾಯೋಪವೇಶವನ್ನು ಮಾಡಿ ದೇಹವನ್ನು ಪರಿತ್ಯಾಗ ಮಾಡುತ್ತೇನೆಂದು ಗೋಳಿಟ್ಟನು. ಆಗ ವೇದವ್ಯಾಸದೇವರು ಅಸ್ವತಂತ್ರನಾದ ನಿನಗೆ ಇದರಲ್ಲಿ ಅಧಿಕಾರವಿಲ್ಲ. ನಿನ್ನ ಕರ್ತವ್ಯಪರಿಪಾಲನೆ ಮಾಡುವುದೇ ನಿನಗೆ ಧರ್ಮ ಎಂದು ಉಪದೇಶಿಸಿದರು.
ಯುಧಿಷ್ಠಿರಃ
ಅಭಿಮನ್ಯೌ ಹತೇ ಬಾಲೇ ದ್ರೌಪದ್ಯಾಸ್ತನಯೇಷು ಚ |
ಧೃಷ್ಟದ್ಯುಮ್ನೇ ವಿರಾಟೇ ಚ ದ್ರುಪದೇ ಚ ಮಹೀಪತೌ ॥1॥
ಯುಧಿಷ್ಠಿರ ಮಹಾತ್ಮರೇ! ಪುಟ್ಟ ಬಾಲಕನಾದ ಅಭಿಮನ್ಯು ಮೃತನಾದನು. ದ್ರೌಪದಿಯ ಐದು ಮಕ್ಕಳೂ ಕೂಡ ಸತ್ತುಹೋದರು. ಧೃಷ್ಟದ್ಯುಮ್ನ, ವಿರಾಟ, ದ್ರುಪದ ಮೊದಲಾದ ಮಹೀಪತಿಗಳೂ ಕೂಡ ಮೃತರಾದರು.
ವಸುಷೇಣೇ ಚ ಧರ್ಮಜ್ಞೇ ಧೃಷ್ಟಕೇತೌ ಚ ಪಾರ್ಥಿವೇ |
ತಥಾನ್ಯೇಷು ನರೇಂದ್ರೇಷು ನಾನಾದೇಶ್ಯೇಷು ಸಂಯುಗೇ ॥2॥
ಧರ್ಮಜ್ಞನಾದ ವಸುಷೇಣ, ಧೃಷ್ಟಕೇತು ಅನೇಕ ದೇಶದ ರಾಜರುಗಳು ನಮಗಾಗಿ ಪ್ರಾಣತ್ಯಾಗ ಮಾಡಿದರು.
ನ ವಿಮುಂಚತಿ ಮಾಂ ಶೋಕೋ ಜ್ಞಾತಿಘಾತಿನಮಾತುರಮ್ |
ರಾಜ್ಯಕಾಮುಕಮತ್ಯುಗ್ರಂ ಸ್ವವಂಶೋಚ್ಛೇದಕಾರಕಮ್ ॥3॥
ಈ ಎಲ್ಲ ಬಂಧುಜನರ ದುಃಖಕ್ಕೆ ನಾನೇ ಕಾರಣನಾಗಿದ್ದೇನೆ. ರಾಜ್ಯಲೋಭಿ- ಯಾದ, ಅತ್ಯಂತ ಕಠಿಣವಾದ ಕರ್ಮವನ್ನು ಆಚರಿಸಿರುವ ವಂಶವನ್ನೇ ನಿರ್ಮೂಲ ಮಾಡಿದ ನಾನು ಈ ಎಲ್ಲ ದುಃಖವನ್ನು ಹೇಗೆ ತಾನೇ ಸಹಿಸಿಕೊಳ್ಳಲಿ?
ಯಸ್ಯಾಂಕೇ ಕ್ರೀಡಮಾನೇನ ಮಯಾ ವಿಪರಿವರ್ತಿತಮ್ |
ಸ ಮಯಾ ರಾಜ್ಯಲುಬ್ಧೇನ ಗಾಂಗೇಯೋ ವಿನಿಪಾತಿತಃ ॥4॥
ಯಾರ ತೊಡೆಯ ಮೇಲೆ ಆಟವಾಡಿಕೊಂಡು ಬೆಳೆದೆನೋ, ಅಂಥ ಗಂಗಾಪುತ್ರನಾದ ಭೀಷ್ಮನನ್ನೇ ಕೊಲ್ಲಿಸಿಬಿಟ್ಟೆನು. ರಾಜ್ಯದ ಲೋಭ ಬಿಟ್ಟು ಬೇರೆ ಯಾವ ಉದ್ದೇಶ ನನಗಿತ್ತು.
ಟಿಪ್ಪಣಿ - ಮಯಾ ವಿಪರಿವರ್ತಿತಮ್ ಇತ್ಯತ್ರ ವಿಪರಿವರ್ತಿತಮ್ ಇತಸ್ತತೋ ವೇಷ್ಟನಂ ಕೃತಮ್ |
ಮಯಾ ವಿಪರಿವರ್ತಿತಮ್ ಎಂಬಲ್ಲಿ ವಿಪರಿವರ್ತಿತಮ್ ಎಂಬುದಕ್ಕೆ ಸುತ್ತಲೂ ಹೊರಳಾಡುತ್ತಿದ್ದೆನು ಎಂದರ್ಥ.
ಯದಾ ಹ್ಯೇನಂ ವಿಘೂರ್ಣಂತಮಪಶ್ಯಂ ಪಾರ್ಥಸಾಯಕೈಃ |
ಕಂಪಮಾನಂ ಯಥಾ ವಜ್ರೈಃ ಪ್ರೇಕ್ಷಮಾಣಂ ಶಿಖಂಡಿನಾ ॥5॥
ಜೀರ್ಣಂ ಸಿಂಹಮಿವ ಪ್ರಾಂಶುಂ ನರಸಿಂಹಂ ಪಿತಾಮಹಮ್ |
ಕೀರ್ಯಮಾಣಂ ಶರೈಸ್ತೀಕ್ಷ್ಣೈರ್ದೃಷ್ಟ್ವಾ ಮೇ ವ್ಯಥಿತಂ ಮನಃ ॥6॥
ಆ ಭೀಷ್ಮನು ವಯಸ್ಸಾದರೂ ಸಿಂಹದಂತಿದ್ದನು. ಎತ್ತರವಾದ ಶರೀರ ಅವನ- ದ್ದಾಗಿತ್ತು. ನರಸಿಂಹನಂತೆ ಶೋಭಿಸುತ್ತಿದ್ದನು. ಪಿತಾಮಹನಾದ ಆ ಭೀಷ್ಮನು ಘರ್ಜಿಸುತ್ತಿದ್ದನು. ಅರ್ಜುನನ ತೀಕ್ಷ್ಣವಾದ ಬಾಣಗಳಿಂದ ಪೀಡಿತನಾಗಿ ಕಂಪಿಸು- ತ್ತಿದ್ದನು. ಅವನನ್ನು ಕೊಲ್ಲುವುದಕ್ಕಾಗಿ ಶಿಖಂಡಿಯನ್ನು ಅರ್ಜುನನು ನಿಲ್ಲಿಸಿದನು. ಶಿಖಂಡಿಯನ್ನು ಮುಂದಿಟ್ಟು ಹೊಡೆದ ಅರ್ಜುನನ ಬಾಣಗಳಿಂದ ಶರೀರವೆಲ್ಲವೂ ಮುಚ್ಚಲ್ಪಟ್ಟಿತ್ತು. ಇಂಥ ಪಿತಾಮಹನನ್ನು ನೆನೆಸಿಕೊಂಡರೆ ಇಂದೂ ಕೂಡ ನನ್ನ ಮನಸ್ಸು ಬಹಳ ದುಃಖಿತವಾಗುತ್ತದೆ.
ಪ್ರಾಙ್ಮುಖಂ ಸೀದಮಾನಂ ಚ ರಥಾದಪಚ್ಯುತಂ ಶರೈಃ |
ಘೂರ್ಣಮಾನಂ ಯಥಾ ಶೈಲಂ ತದಾ ಮೇ ಕಶ್ಮಲೋಽಭವತ್॥7॥
ಶತ್ರುಪಕ್ಷದ ಸೈನಿಕರನ್ನು ಧ್ವಂಸ ಮಾಡುವುದರಲ್ಲಿ ಅತ್ಯಂತ ಶಕ್ತಿಶಾಲಿಯಾದ ಆ ಭೀಷ್ಮನು ರಥದಲ್ಲಿ ಪೂರ್ವಾಭಿಮುಖವಾಗಿ ಕುಳಿತುಕೊಂಡನು. ಅರ್ಜುನನ ಬಾಣಗಳ ಪ್ರಹಾರದಿಂದ ಪ್ರತಿಕ್ಷಣವೂ ಕುಸಿಯುತ್ತಿದ್ದನು. ವಜ್ರಾಘಾತದಿಂದ ಕುಸಿ- ಯುವ ಪರ್ವತದಂತೆ ಭೀಷ್ಮನೂ ಕೂಡ ಕುಸಿದು ಬಿದ್ದನು. ಇಂಥ ಭೀಷ್ಮನನ್ನು ನೆನೆಸಿಕೊಂಡರೆ ನನಗೆ ಮೂರ್ಛೆಯೇ ಬರುತ್ತದೆ.
ಯಃ ಸ ಬಾಣಧನುಷ್ಪಾಣಿರ್ಯೋಧಯಾಮಾಸ ಭಾರ್ಗವಮ್ |
ಬಹೂನ್ಯಹಾನಿ ಕೌರವ್ಯಃ ಕುರುಕ್ಷೇತ್ರೇ ಮಹಾಮೃಧೇ ॥8॥
ಸಮೇತಂ ಪಾರ್ಥಿವಂ ಕ್ಷತ್ರಂ ವಾರಣಸ್ಯಾಂ ನದೀಸುತಃ |
ಕನ್ಯಾರ್ಥಮಾಹ್ವಯದ್ ವೀರೋ ರಥೇನೈಕೇನ ಸಂಯುಗೇ ॥9॥
ಯಾವ ಕುರುಕುಲೋದ್ಭವನಾದ ಭೀಷ್ಮನು ಕುರುಕ್ಷೇತ್ರದಲ್ಲಿ ನಡೆದ ಮಹಾ- ಯುದ್ಧದಲ್ಲಿ ಅನೇಕ ದಿವಸಗಳ ಕಾಲ ಧನುರ್ಬಾಣಗಳನ್ನು ಹಿಡಿದು ಪರಶುರಾಮ- ದೇವರ ಜೊತೆ ಯುದ್ಧ ಮಾಡಿದನು. ಕಾಶಿಯಲ್ಲಿ ಭೀಷ್ಮನು ಕನ್ಯಾರ್ಥವಾಗಿ ಹೋಗಿದ್ದಾಗ ಒಬ್ಬನೇ ಎಲ್ಲಾ ರಾಜರುಗಳನ್ನು ಯುದ್ಧಕ್ಕೆ ಆಹ್ವಾನಿಸಿ, ಪರಾಭವ- ಗೊಳಿಸಿದನು. ಅಂಥ ಭೀಷ್ಮನನ್ನೇ ನಾವು ಕೊಂದುಬಿಟ್ಟೆವು.
ಯೇನ ಚೋಗ್ರಾಯುಧೋ ರಾಜಾ ಚಕ್ರವರ್ತೀ ದುರಾಸದಃ |
ದಗ್ಧಃ ಶಸ್ತ್ರಪ್ರತಾಪೇನ ಸ ಮಯಾ ಯುಧಿ ಘಾತಿತಃ ॥10॥
ಯಾವ ಭೀಷ್ಮನು ತನ್ನ ಅಸ್ತ್ರಗಳ ಪ್ರತಾಪದಿಂದ ದುರ್ಜಯನಾದ ಉಗ್ರಾಯುಧ ಎಂಬ ಚಕ್ರವರ್ತಿಯನ್ನು ಸುಟ್ಟುಬಿಟ್ಟನು. ಅಂಥ ಮಹಾತ್ಮನಾದ ಭೀಷ್ಮನನ್ನೇ ನಾನು ತಂತ್ರಗಾರಿಕೆಯಿಂದ ಯುದ್ಧದಲ್ಲಿ ಕೊಂದುಬಿಟ್ಟೆನು.
ಸ್ವಯಂ ಮೃತ್ಯುಂ ರಕ್ಷಮಾಣಃ ಪಾಂಚಾಲ್ಯಂ ಯಃ ಶಿಖಂಡಿನಮ್ |
ನ ಬಾಣೈಃ ಪಾತಯಾಮಾಸ ಸೋಽರ್ಜುನೇನ ನಿಪಾತಿತಃ ॥11॥
ಆ ಭೀಷ್ಮನಿಗೆ ಶಿಖಂಡಿಯು ತನ್ನ ಮೃತ್ಯುವೆಂದು ತಿಳಿದಿತ್ತು. ಆದರೂ ತನ್ನ ಪ್ರತಿಜ್ಞೆಯು ಭಂಗವಾಗಬಾರದೆಂಬ ದೃಷ್ಟಿಯಿಂದ ಅವನ

ಮೇಲೆ ಕೈ ಎತ್ತಲಿಲ್ಲ. ಸುಮ್ಮನೆ ನಿಂತು ಬಿಟ್ಟನು. ಆಗ ಅರ್ಜುನನು ಆ ಭೀಷ್ಮನ ಮೇಲೆ ಬಾಣಪ್ರಯೋಗ- ವನ್ನು ಮಾಡಿ ಬೀಳಿಸಿಬಿಟ್ಟನು.

ಯದ್ಯೈನಂ ಪತಿತಂ ಭೂಮಾವಪಶ್ಯಂ ರುಧಿರೋಕ್ಷಿತಮ್ |
ತದ್ಯೈವಾವಿಶದತ್ಯುಗ್ರೋ ಜ್ವರೋ ಮಾಂ ಮುನಿಸತ್ತಮ ॥12॥

ಓ ಮುನಿಸತ್ತಮನೇ! ಯಾವಾಗ ಅರ್ಜುನನ ಬಾಣಗಳಿಂದ ಗಾಯಗೊಂಡ ಆ ಭೀಷ್ಮನು ಸುರಿಯುವ ರಕ್ತದ ಜೊತೆ ಕೆಳಗೆ ಬೀಳುತ್ತಿದ್ದನೋ, ಅದನ್ನು ನೆನೆಸಿ- ಕೊಂಡು ನನ್ನ ಮನಸ್ಸಿಗೆ ಜ್ವರವು ಬಂದುಬಿಟ್ಟಿದೆ.

ಯೇನ ಸಂವರ್ಧಿತಾ ಬಾಲಾ ಯೇನ ಸ್ಮ ಪರಿರಕ್ಷಿತಾಃ |
ಸ ಮಯಾ ರಾಜ್ಯಲುಬ್ಧೇನ ಪಾಪೇನ ಗುರುಘಾತಿನಾ ॥13॥
ಅಲ್ಪಕಾಲಸ್ಯ ರಾಜ್ಯಸ್ಯ ಕೃತೇ ಮೂಢೇನ ಘಾತಿತಃ ॥

ಯಾವ ಭೀಷ್ಮನಿಂದ ಸಣ್ಣಮಕ್ಕಳಾದ ನಾವೆಲ್ಲರೂ ಬೆಳೆದೆವೋ, ಅಂಥ ಶ್ರೇಷ್ಠ- ನಾದ ಭೀಷ್ಮನನ್ನು ನಾನು ಕೊಂದುಬಿಟ್ಟೆ. ಕ್ಷಣಿಕವಾದ ಅಲ್ಪಕಾಲದ ಈ ರಾಜ್ಯದ ಆಸೆಗಾಗಿ ಮತಿಹೀನನಾಗಿ, ಪಿತೃಘಾತಿಯಾದೆ.

ಆಚಾರ್ಯಶ್ಚ ಮಹೇಷ್ವಾಸಃ ಸರ್ವಪಾರ್ಥಿವಪೂಜಿತಃ |
ಅಭಿಗಮ್ಯ ರಣೇ ಮಿಥ್ಯಾ ಪಾಪೇನೋಕ್ತಃ ಸುತಂ ಪ್ರತಿ ॥14॥

ಇಷ್ಟೇ ಅಲ್ಲದೇ ಆ ದ್ರೋಣನನ್ನೂ ಕೂಡ ಕೊಂದವನು ನಾನೇ. ಆ ದ್ರೋಣಾ- ಚಾರ್ಯರು ಸಾಮಾನ್ಯರಲ್ಲ. ನಮ್ಮೆಲ್ಲರಿಗೂ ಗುರುಗಳೂ ಆಚಾರ್ಯಪುರುಷರೂ ಧನುರ್ಧರರಲ್ಲೇ ಅಗ್ರೇಸರರೂ ಎಲ್ಲಾ ರಾಜರುಗಳಿಂದ ಪೂಜಿತರಾದವರು ಆಗಿದ್ದಾರೆ. ಅವರನ್ನು ಕೊಲ್ಲುವುದಕ್ಕಾಗಿ ಆ ರಣರಂಗದಲ್ಲಿ ಪಾಪಿಯಾದ ನಾನು ನಿಮ್ಮ ಮಗನು ಸತ್ತನು ಎಂಬ ಸುಳ್ಳನ್ನು ಹೇಳಿಬಿಟ್ಟೆನು.

ತನ್ಮೇ ದಹತಿ ಗಾತ್ರಾಣಿ ಯನ್ಮಾಂ ಗುರುರಭಾಷತ |
ಸತ್ಯವಾಕ್ಯೋ ಹಿ ರಾಜಂಸ್ತ್ವಂ ಯದಿ ಜೀವತಿ ಮೇ ಸುತಃ |
ಸತ್ಯಮಾಮರ್ಶಯನ್ ವಿಪ್ರೋ ಮಯಿ ತತ್ ಪರಿಪೃಷ್ಟವಾನ್॥15॥

ಅಂಥ ಸಂದರ್ಭದಲ್ಲಿಯೂ ಕೂಡ ಆ ದ್ರೋಣಾಚಾರ್ಯರು ನನ್ನನ್ನು ಪ್ರಶ್ನಿಸಿದರು. ಧರ್ಮರಾಜನೇ! ನಿನ್ನ ಮೇಲೆ ನನಗೆ ಬಹಳ ವಿಶ್ವಾಸವಿದೆ. ನನ್ನ ಮಗನು ಬದುಕಿದ್ದಾನೋ ಇಲ್ಲವೋ ನಿಜವಾಗಿ ಹೇಳು ಎಂದು ದೈನ್ಯದಿಂದ ಪ್ರಶ್ನಿಸಿದನು. ಅವರ ಈ ಪ್ರಶ್ನೆಗಳು ನನ್ನ ಶರೀರವನ್ನು ಸುಟ್ಟುಬಿಡುತ್ತಿದೆ. ನನ್ನ ಮೇಲೆ ವಿಶ್ವಾಸವಿಟ್ಟು ಪ್ರಶ್ನೆ ಮಾಡಿದಾಗಲೂ ನಾನು ರಾಜ್ಯದ ಆಸೆಯಿಂದ ಸುಳ್ಳನ್ನು ಹೇಳಿಬಿಟ್ಟೆನು.

ಕುಂಜರಂ ಚಾಂತರಂ ಕೃತ್ವಾ ಮಿಥ್ಯೋಪಚರಿತಂ ಮಯಾ |
ಸುಭೃಶಂ ರಾಜ್ಯಲುಬ್ಧೇನ ಪಾಪೇನ ಗುರುಘಾತಿನಾ ॥16॥

ಪಾಪಿಷ್ಟನಾದ ಗುರುಹಂತಕನಾದ ರಾಜ್ಯಲೋಲುಪನಾದ ನಾನು ಆನೆಯನ್ನು ನೆಪವನ್ನಾಗಿ ಮಾಡಿಕೊಂಡು ಅವರ ಬಳಿ ಕೂಡಲೇ ಸುಳ್ಳುಗಳನ್ನು ಹೇಳಿದೆನು.

ಸತ್ಯಕಂಚುಕಮುನ್ಮುಚ್ಯ ಮಯಾಸಕ್ತೋ ಗುರುರಾಹವೇ |
ಅಶ್ವತ್ಥಾಮಾ ಹತ ಇತಿ ಕುಂಜರೇ ವಿನಿಪಾತಿತೇ ॥17॥
ಕಾನ್ನು ಲೋಕಾನ್ ಗಮಿಷ್ಯಾಮಿ ಕೃತ್ವಾ ತತ್ ಕರ್ಮ ದಾರುಣಮ್॥

ಸತ್ಯದ ಮುಸುಕು ಹಾಕಿಕೊಂಡು ಪಾಪಿಯಾದ ನಾನು ರಾಜ್ಯದ ಆಸೆಯಿಂದ ಅಶ್ವತ್ಥಾಮನೆಂಬ ಆನೆಯು ಸತ್ತಿದ್ದರಿಂದ `ಅಶ್ವತ್ಥಾಮಾ ಹತಃ' ಎಂಬುದಾಗಿ ಸುಳ್ಳನ್ನು ಹೇಳಿ ವಂಚಿಸಿದೆನು. ಗುರುಘಾತಿಯಾದ ರಾಜ್ಯಲೋಲುಪನಾದ ನನ್ನಂಥ ಪಾಪಿಷ್ಠ ಮತ್ತೊಬ್ಬನಿರಲು ಸಾಧ್ಯವಿಲ್ಲ. ಇಂಥ ಪಾಪಿಯಾದ ನಾನು ಯಾವ ನರಕಕ್ಕೆ ಹೋಗಬೇಕೋ ನನಗೆ ತಿಳಿಯುತ್ತಿಲ್ಲ.

ಅಘಾತಯಂ ಚ ಯತ್ ಕರ್ಣಂ ಸಮರೇಷ್ವಪಲಾಯಿನಮ್ |
ಜ್ಯೇಷ್ಠಂ ಭ್ರಾತರಮತ್ಯುಗ್ರಂ ಕೋ ಮತ್ತಃ ಪಾಪಕೃತ್ತಮಃ ॥18॥

ಇಷ್ಟೇ ಅಲ್ಲದೇ ಒಡಹುಟ್ಟಿದ ನನ್ನ ಅಣ್ಣನಾದ ಕರ್ಣನನ್ನೂ ಕೂಡ ಕೊಲ್ಲಿಸಿ- ಬಿಟ್ಟೆ. ನನಗಿಂತ ಕಡುಪಾಪಿ ಮತ್ತೊಬ್ಬನಿರಲು ಹೇಗೆ ಸಾಧ್ಯ?

ಅಭಿಮನ್ಯುಂ ಚ ಯದ್ ಬಾಲಂ ಜಾತಂ ಸಿಂಹಮಿವಾದ್ರಿಷು |
ಪ್ರಾವೇಶಯಮಹಂ ಲುಬ್ಧೋ ವಾಹಿನೀಂ ದ್ರೋಣಪಾಲಿತಾಮ್ ॥19॥

ಪರ್ವತದಲ್ಲಿರುವ ಸಿಂಹದಂತೆ ಅರ್ಜುನನ ಮಗುವಾಗಿ ಹುಟ್ಟಿದ ಆ ಅಭಿ- ಮನ್ಯುವನ್ನು ದ್ರೋಣರಿಂದ ಪಾಲಿತವಾದ ಸೇನೆಯ ವ್ಯೂಹದೊಳಗೆ ಪ್ರವೇಶಿಸು- ವಂತೆ ಮಾಡಿದ, ಪಾಪಿಯೂ ಕೂಡ ನಾನೇ ಆಗಿದ್ದೇನೆ.

ತದಾಪ್ರಭೃತಿ ಬೀಭತ್ಸುಂ ನ ಶಕ್ನೋಮಿ ನಿರೀಕ್ಷಿತುಮ್ |
ಕೃಷ್ಣಂ ಚ ಪುಂಡರೀಕಾಕ್ಷಂ ಕಿಲ್ಬಿಷೀ ಭ್ರೂಣಹಾ ಯಥಾ ॥20॥

ಅವತ್ತಿನಿಂದ ಭ್ರೂಣಹತ್ಯೆ ಮಾಡಿದ ಮಹಾಪಾಪಿಷ್ಠನಂತೆ ನಾನು ಅರ್ಜುನ- ನ್ನಾಗಲೀ, ಪುಂಡರೀಕಾಕ್ಷನಾದ ಕೃಷ್ಣನನ್ನಾಗಲೀ ಮುಖ ಎತ್ತಿ ನೋಡಲೂ ಸಹ ನಾಚಿಕೆ ಪಡುತ್ತಿದ್ದೇನೆ.

ದ್ರೌಪದೀಂ ಚಾಪ್ಯದುಃಖಾರ್ಹಾಂ ಪಂಚಪುತ್ರವಿನಾಕೃತಾಮ್ |
ಶೋಚಾಮಿ ಪೃಥಿವೀಂ ಹೀನಾಂ ಪಂಚಭಿಃ ಪರ್ವತೈರಿವ ॥21॥

ಭೂಮಿಯು ಐದು ಪರ್ವತಗಳ ಆಧಾರದಲ್ಲಿದೆ. ಆ ಐದು ಪರ್ವತಗಳನ್ನೂ ಕೂಡ ಕಳೆದುಕೊಂಡ ಪೃಥಿವಿಯು ಎಷ್ಟು ದುಃಖವನ್ನು ಹೊಂದುತ್ತದೋ, ಅದರಂತೆ ದ್ರೌಪದಿಯೂ ಕೂಡ ತನ್ನ ಐದು ಮಂದಿ ಮಕ್ಕಳನ್ನು ಕಳೆದುಕೊಂಡು ದುಃಖ ಕೂಪದಲ್ಲಿ ಮುಳುಗಿದ್ದಾಳೆ.

ಸೋऽಹಮಾಗಸ್ಕರಃ ಪಾಪಃ ಪೃಥಿವೀನಾಶಕಾರಕಃ |
ಆಸೀನ ಏವಮೇವೇದಂ ಶೋಷಯಿಷ್ಯೇ ಕಲೇವರಮ್ ॥22॥
ಸಮಸ್ತಲೋಕಕ್ಕೆ ಹಾನಿಯನ್ನುಂಟುಮಾಡಿದ ಮಹಾಪಾಪಿಷ್ಠನು ನಾನಾಗಿರು- ವೆನು. ಇನ್ನುಮುಂದೆ ನಾನು ಈ ಭೂಮಿಯಲ್ಲಿ ಬದುಕಿರಲು ಅರ್ಹನಲ್ಲ. ನಾನು ಇಲ್ಲಿ ಕುಳಿತಿರುವ ಹಾಗೇ ಈ ದೇಹವನ್ನು ಶೋಷಣೆ ಮಾಡುತ್ತೇನೆ.
ಪ್ರಾಯೋಪವಿಷ್ಟಂ ಜಾನೀಧ್ವಮದ್ಯ ಮಾಂ ಗುರುಘಾತಿನಮ್ |
ಯಥಾನ್ಯಾಸ್ವಪಿ ಜಾತೀಷು ನ ಭವೇಯಂ ಕುಲಾಂತಕೃತ್ ॥23॥
ಅನೇಕ ಗುರುಹಿರಿಯರನ್ನು ಸಂಹಾರ ಮಾಡಿದ ನಾನು ಮುಂದಿನ ಜನ್ಮದಲ್ಲಿ ಈ ಪರಿಯಲ್ಲಿ ಕುಲಘಾತುಕನಾಗಿ ಹುಟ್ಟುವುದು ಬೇಡ. ಅದಕ್ಕಾಗಿ ಈಗಲೇ ಪ್ರಾಯೋಪವೇಶಕ್ಕೆ ಕುಳಿತುಬಿಡುತ್ತೇನೆ.
ನ ಭೋಕ್ಷ್ಯೇ ನ ಚ ಪಾನೀಯಮುಪಯೋಕ್ಷ್ಯೇ ಕಥಂಚನ |
ಶೋಷಯಿಷ್ಯೇ ಪ್ರಿಯಾನ್ ಪ್ರಾಣಾನಿಹಸ್ಥೋऽಯಂ ತಪೋಧನ ॥24॥
ತಪೋಧನರೇ! ಇನ್ನು ಮುಂದೆ ನಾನು ಏನನ್ನೂ ತಿನ್ನಲಾರೆ. ಏನನ್ನೂ ಕುಡಿಯಲಾರೆ. ಹೀಗೆ ಸಂಪೂರ್ಣ ಆಹಾರವನ್ನು ತ್ಯಾಗಮಾಡಿ, ನನ್ನ ಪ್ರಾಣಗಳನ್ನು ಪರಿತ್ಯಾಗ ಮಾಡುತ್ತೇನೆ.
ಯಥೇಷ್ಟಂ ಗಮ್ಯತಾಂ ಕಾಮಮನುಜಾನೇ ಪ್ರಸಾದ್ಯ ವಃ |
ಸರ್ವೇ ಮಾಮನುಜಾನೀತ ತ್ಯಕ್ಷ್ಯಾಮೀದಂ ಕಲೇವರಮ್ ॥25॥
ಬಂದ ತಾವೆಲ್ಲರೂ ತಮ್ಮ ಇಚ್ಛೆಯಂತೆ ಇಲ್ಲಿಂದ ತೆರಳಿರಿ. ತಮ್ಮನ್ನು ಕೈಮುಗಿದು ಪ್ರಾರ್ಥಿಸುತ್ತೇನೆ. ನನ್ನ ಸಂಕಲ್ಪಕ್ಕೆ ಅನುಮತಿಯನ್ನು ಕೊಟ್ಟು, ತಾವು ಹೊರಡಿರಿ. ಪಾಪಿಷ್ಟನಾದ ನಾನು ಈ ಶರೀರವನ್ನು ಇಲ್ಲಿಯೇ ಪರಿತ್ಯಾಗ ಮಾಡುತ್ತೇನೆ.
ವೈಶಂಪಾಯನಃ
ತಮೇವಂವಾದಿನಂ ಪಾರ್ಥಂ ಬಂಧುಶೋಕೇನ ವಿಹ್ವಲಮ್ |
ಮೈವಮಿತ್ಯಬ್ರವೀದ್ ವ್ಯಾಸೋ ನಿಗೃಹ್ಯ ಮುನಿಸತ್ತಮಃ ॥26॥
ವೈಶಂಪಾಯನರು ಜನಮೇಜಯನೇ! ಬಂಧುಗಳ ವಿಯೋಗದಿಂದ ಪ್ರಾಪ್ತ- ವಾದ ಶೋಕವನ್ನು ಧರ್ಮರಾಜನಿಗೆ ತಡೆದುಕೊಳ್ಳಲಾಗಲಿಲ್ಲ. ಅತ್ಯಂತವಿಹ್ವಲ- ನಾದನು. ಪ್ರಾಯೋಪವೇಶದ ಮೂಲಕ ದೇಹವನ್ನೇ ಪರಿತ್ಯಾಗಮಾಡುತ್ತೇನೆಂದು ಹೇಳಿದನು. ಹೀಗಿರುವಾಗ ಆ ವೇದವ್ಯಾಸದೇವರು ಆ ಧರ್ಮರಾಜನನ್ನು ಕುರಿತು ಹೇಳುತ್ತಾರೆ - ಯುಧಿಷ್ಠಿರ ! ಎಂದಿಗೂ ಈ ಕೆಲಸವನ್ನು ಮಾಡಬೇಡ.
ಅತಿವೇಲಂ ಮಹಾರಾಜ ನ ಶೋಕಂ ಕರ್ತುಮರ್ಹಸಿ |
ಪುನರುಕ್ತಂ ಪ್ರವಕ್ಷ್ಯಾಮಿ ದಿಷ್ಟಮೇತದಿತಿ ಪ್ರಭೋ ॥27॥
ಮಹಾರಾಜನೇ! ಮಿತಿಮೀರಿ ಪರಿತಾಪಪಡಬೇಡ. ಎಲ್ಲವೂ ಕೂಡ ದೈವಾ-
ಧೀನವೆಂದು ಈಗಾಗಲೇ ನಾನು ತಿಳಿಸಿರುವೆನು. ಪುನಃ ಅದನ್ನೇ ಹೇಳುತ್ತಿದ್ದೇನೆ. ಆದ್ದರಿಂದ ಈ ವಿಷಯದಲ್ಲಿ ದುಃಖವನ್ನು ಪಡಬೇಡ.
ಸಂಯೋಗಾ ವಿಪ್ರಯೋಗಾಂತಾಃ ಜಾತಾನಾಂ ಪ್ರಾಣಿನಾಂ ಧ್ರುವಮ್|
ಬುದ್ಬುದಾ ಇವ ತೋಯೇಷು ಭವಂತಿ ನ ಭವಂತಿ ಚ ॥28॥
ಲೋಕದಲ್ಲಿ ಹುಟ್ಟಿದ ಪ್ರತಿಯೊಬ್ಬರಿಗೂ ಸೇರುವಿಕೆ ಹಾಗೂ ಅಗಲುವಿಕೆಗಳು ನೀರಿನ ಮೇಲಿನ ಗುಳ್ಳೆಯಂತೆ ಅತ್ಯಂತಕ್ಷಣಿಕವಾಗಿವೆ. ಕೆಲವು ಹೊತ್ತು ಇದ್ದಹಾಗೇ ಕಾಣಿಸುತ್ತವೆ. ಕೂಡಲೇ ಏನೂ ಇಲ್ಲದಂತಾಗುತ್ತವೆ.
ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ |
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಹಿ ಜೀವಿತಮ್ ॥29॥
ಸಾಮಾನ್ಯವಾಗಿ ಸೇರುವಿಕೆಯು ಅಗಲುವಿಕೆಯಲ್ಲಿ ಪರ್ಯವಸಾನವಾಗುತ್ತದೆ. ಅಭಿವೃದ್ಧಿಗಳು ಕ್ಷಯದಲ್ಲಿ ಪರ್ಯವಸಾನವಾಗುತ್ತವೆ. ಉನ್ನತಿಯು ಕೆಳಗೆ ಬೀಳುವು- ದರಲ್ಲಿ ಪರ್ಯವಸಾನವಾಗುತ್ತದೆ. ಜೀವನವು ಮರಣದಲ್ಲಿ ಪರ್ಯವಸಾನವಾಗು- ತ್ತದೆ.
ವಿವರಣೆ - ಜೀವನದಲ್ಲಿ ಮಾಡಿದ ಎಲ್ಲಾ ಸಂಪಾದನೆಗಳು ಅಂತಿಮವಾಗಿ ನಾಶವೇ ಆಗುತ್ತವೆ. ಮಿತಿಮೀರಿದ ಔನ್ನತ್ಯ ಹಾಗೂ ಏರುವಿಕೆಗಳು ಪತನದಲ್ಲಿಯೇ ಪರ್ಯವಸಾನಗೊಳ್ಳುತ್ತವೆ. ಒಬ್ಬರ ಜೊತೆ ಅತಿಯಾದ ಸ್ನೇಹವು ಅಗಲುವಿಕೆ- ಯಲ್ಲಿಯೇ ಕೊನೆಗೊಳ್ಳುತ್ತದೆ. ಹುಟ್ಟು ಮರಣದಲ್ಲಿ ಕೊನೆಗೊಳ್ಳುತ್ತದೆ. ಆದ್ದ- ರಿಂದ ಪ್ರತಿಯೊಂದರಲ್ಲಿಯೂ ದ್ವಂದ್ವಾತೀತರಾಗಲು ಪ್ರಯತ್ನಿಸಬೇಕು.
ಸುಖಂ ದುಃಖಾಂತಮಾಲಸ್ಯಂ ದಾಕ್ಷ್ಯಂ ದುಃಖಂ ಸುಖೋದಯಮ್ |
ಭೂತಿಃ ಶ್ರೀರ್ಹ್ರೀರ್ಧೃತಿಃ ಸಿದ್ಧಿರ್ನಾದಕ್ಷೇ ನಿವಸಂತ್ಯುತ ॥30॥
ಸುಖವು ದುಃಖದಲ್ಲಿ ಕೊನೆಗೊಳ್ಳುತ್ತದೆ. ಆಲಸ್ಯವು ಆ ಕಾಲದಲ್ಲಿ ಮಾತ್ರ ಸುಖದಾಯಕ. ಅದೂ ಸಹ ದುಃಖದಲ್ಲಿಯೇ ಕೊನೆಗೊಳ್ಳುತ್ತದೆ. ಸಾಹಸವು ತತ್ಕಾಲದಲ್ಲಿ ದುಃಖಕರವಾಗಿ ತೋರಿದರೂ ಕೊನೆಯಲ್ಲಿ ಸುಖಕರವಾಗುತ್ತದೆ.
ಅಣಿಮಾಹದ್ಯೈಶ್ವರ್ಯಗಳು, ನಾಚಿಕೆ, ಧೈರ್ಯ, ಕೀರ್ತಿ ಇವುಗಳೆಲ್ಲವೂ ಪ್ರಯತ್ನ- ಶೀಲರಲ್ಲಷ್ಟೇ ನೆಲೆಗೊಳ್ಳುತ್ತದೆ. ಸೋಮಾರಿಗಳಲ್ಲಿ ಕ್ಷಣಮಾತ್ರವು ಇರಲಾರವು.
ವಿವರಣೆ - `ಆಲಸ್ಯಂ ಅಮೃತಂ ವಿಷಂ' ಎಂಬಂತೆ ಮನುಷ್ಯನು ಎಂದೂ ಸಹ ಆಲಸ್ಯವನ್ನು ಮಾಡಬಾರದು. ಅದು ತತ್ಕಾಲದಲ್ಲಷ್ಟೇ ಸುಖಕರವಾಗಿದ್ದರೂ ಅದರಿಂದ ಮುಂದೆ ದುಃಖವೇ ಒದಗುತ್ತದೆ. ಸುಖವೂ ಕೂಡ ದುಃಖದಲ್ಲಿಯೇ ಕೊನೆಗೊಳ್ಳುತ್ತದೆ. ಯಾರಿಗೆ ದುಃಖವು ಬಂದಿರುತ್ತದೋ, ಅವನು ದಕ್ಷತೆಯಿಂದ ಅದನ್ನು ಎದುರಿಸಬೇಕು. ಯಾರು ಕಾರ್ಯದಕ್ಷನಾಗಿರುತ್ತಾನೋ, ಅವನಿಗಷ್ಟೇ ಐಶ್ವರ್ಯ, ಧೈರ್ಯ, ಕೀರ್ತಿಗಳು ಬರುತ್ತವೆ. ಕಾರ್ಯದಕ್ಷನಲ್ಲದವನಿಗೆ ಇವು ಒಂದೂ ಕೂಡ ಸಿಗಲಾರವು.
ನಾಲಂ ಸುಖಾಯ ಸುಹೃದೋ ನಾಲಂ ದುಃಖಾಯ ದುರ್ಹೃದಃ |

ನಚ ಪ್ರಜಾಲಮರ್ಥೇಭ್ಯೋ ನ ಸುಖೇಭ್ಯೋಽಪ್ಯಲಂ ಧನಮ್ ॥31॥
ಸ್ನೇಹಿತರು ನಮಗೆ ನಿರಂತರ ಸುಖವನ್ನು ಕೊಡಲು ಸಮರ್ಥರಲ್ಲ. ಶತ್ರುಗಳೂ ಕೂಡ ನಮಗೆ ದುಃಖವನ್ನು ನೀಡಲು ಸಮರ್ಥರಲ್ಲ. ಎಷ್ಟು ಮಂದಿ ಪ್ರಜೆಗಳಿದ್ದರೂ ಅವರಿಂದ ನಮಗೆ ಧನವು ದೊರೆಯುವುದಿಲ್ಲ. ಎಷ್ಟೇ ಧನವಿದ್ದರೂ ಅದರಿಂದ ಸುಖವು ದೊರೆಯುವುದಿಲ್ಲ.
ಯಥಾ ಸೃಷ್ಟೋಽಸಿ ಕೌಂತೇಯ ಧಾತ್ರಾ ಕರ್ಮಸು ತತ್ ಕುರು |
ಅತ ಏವ ಹಿ ಸಿದ್ಧಿಸ್ತೇ ನೇಶಸ್ತ್ವಂಕರ್ಮಣಾ ನೃಪ ॥32॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಧರ್ಮರಾಜದುಃಖವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ ॥28
ಕುಂತೀಪುತ್ರನೇ! ಆ ವಿಧಿಯು ನಿನ್ನನ್ನು ಯಾವುದಕ್ಕೋಸ್ಕರ ಸೃಷ್ಟಿ ಮಾಡಿ- ದೆಯೋ, ಆ ಕರ್ಮಗಳನ್ನು ನೀನು ಆಚರಿಸಲೇ ಬೇಕು. ಅದರಿಂದಲೇ ನಿನಗೆ ಸಿದ್ಧಿಯುಂಟಾಗುತ್ತದೆ. ಅದಕ್ಕೆ ವಿರುದ್ಧವಾಗಿ ಸ್ವಂತವಾಗಿ ಮಾಡಲು ನಿನಗೆ ಯಾವುದೇ ಸ್ವಾತಂತ್ರ್ಯವಿರುವುದಿಲ್ಲ. ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಧರ್ಮರಾಜನ ದುಃಖವರ್ಣನೆ ಎಂಬ
28ನೆಯ ಅಧ್ಯಾಯವು ಮುಗಿಯಿತು.
*****
29. ಇಪ್ಪತ್ತೊಂಬತ್ತನೆಯ ಅಧ್ಯಾಯ
ಅಶ್ಮಮಹರ್ಷಿ ಮತ್ತು ಜನಕರ ಸಂವಾದವನ್ನು ಉಪಾಖ್ಯಾನವನ್ನು ಹೇಳುವ ಮೂಲಕ ವೇದವ್ಯಾಸದೇವರು ಯುಧಿಷ್ಠಿರನಿಗೆ ಕ್ಷತ್ರಿಯಧರ್ಮದ ಶ್ರೇಷ್ಠತೆಯನ್ನು ಉಪದೇಶಿಸಿದರು.
ವೈಶಂಪಾಯನಃ
ಜ್ಞಾತಿಶೋಕಾಭಿತಪ್ತಸ್ಯ ಪ್ರಾಣಾನಭ್ಯುತ್ಸಿಸೃಕ್ಷತಃ |
ಜ್ಯೇಷ್ಠಸ್ಯ ಪಾಂಡುಪುತ್ರಸ್ಯ ವ್ಯಾಸಃ ಶೋಕಮಪಾನುದತ್ ॥1॥
ವೈಶಂಪಾಯನರು ಬಂಧುಗಳ ವಿಯೋಗದಿಂದ ಪ್ರಾಣತ್ಯಾಗವನ್ನೇ ಮಾಡು- ತ್ತೇನೆಂದು ಹೇಳುತ್ತಿರುವ ಧರ್ಮರಾಜನನ್ನು ನೋಡಿ, ಅವನ ದುಃಖವನ್ನು ಪರಿಹರಿಸಲು ವೇದವ್ಯಾಸದೇವರು ಹೀಗೆ ಹೇಳುತ್ತಾರೆ -
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಶ್ಮಗೀತಂ ನರವ್ಯಾಘ್ರ ತನ್ನಿಬೋಧ ಯುಧಿಷ್ಠಿರ ॥2॥
ಓ ಯುಧಿಷ್ಠಿರನೇ! ಈ ವಿಷಯದಲ್ಲಿ ಹಿಂದೆ ನಡೆದ ಅಶ್ಮಗೀತೆಯೆಂಬ ಒಂದು ಪುರಾತನವಾದ ಇತಿಹಾಸವನ್ನು ಜ್ಞಾನಿಜನರು ಉದಾಹರಿಸುತ್ತಾರೆ. ಅದನ್ನೇ ನಿನಗೆ ತಿಳಿಸುತ್ತೇನೆ ಕೇಳು -
ಅಶ್ಮಾನಾಂ ಬ್ರಾಹ್ಮಣಂ ಪ್ರಾಜ್ಞಂ ವೈದೇಹೋ ಜನಕೋ ನೃಪಃ |
ಸಂಶಯಂ ಪರಿಪಪ್ರಚ್ಛ ದುಃಖಶೋಕಪರಿಪ್ಲುತಃ ॥3॥
ಹಿಂದೆ ವಿದೇಹರಾಜನಾದ ಜನಕನು ಅತ್ಯಂತದುಃಖಿತನಾಗಿದ್ದನು. ಅಶ್ಮ ಎಂಬ ಪ್ರಾಜ್ಞನಾದ ಬ್ರಾಹ್ಮಣನ ಬಳಿ ತೆರಳಿ ತನ್ನ ಸಂಶಯವನ್ನು ಪರಿಹರಿಸೆಂದು ಪ್ರಾರ್ಥಿಸಿ- ದನು.
ಜನಕಃ
ಆಗಮೇ ಯದಿ ವಾಪಾಯೇ ಜ್ಞಾತೀನಾಂ ದ್ರವಿಣಸ್ಯ ಚ |
ನರೇಣ ಪ್ರತಿಪತ್ತವ್ಯಂ ಕಲ್ಯಾಣಂ ಕಥಮಿಚ್ಛತಾ ॥4॥
ಜನಕರಾಜ ಬ್ರಾಹ್ಮಣಶ್ರೇಷ್ಠನೇ! ಬಂಧುಗಳು ಹಾಗೂ ಸಂಪತ್ತು ನಮ್ಮ ಸಮೀಪಕ್ಕೆ ಬರುವಾಗ, ಮತ್ತು ಕೈಬಿಟ್ಟು ಹೋಗುವಾಗ ಕಲ್ಯಾಣವನ್ನೇ ಅಪೇಕ್ಷಿಸುವ ಮನುಷ್ಯನು ಹೇಗೆ ವರ್ತಿಸಬೇಕು? ಇದನ್ನು ದಯವಿಟ್ಟು ನನಗೆ ತಿಳಿಸಿರಿ.
ಅಶ್ಮ
ಉತ್ಪನ್ನಮಿಮಮಾತ್ಮಾನಂ ನರಸ್ಯಾನಂತರಂ ತತಃ |
ತಾನಿ ತಾನ್ಯಭಿವರ್ತಂತೇ ದುಃಖಾನಿ ಚ ಸುಖಾನಿ ಚ ॥5॥
ಅಶ್ಮ ರಾಜನೇ ಈ ದೇಹವು ಹುಟ್ಟುವ ಕ್ಷಣದಲ್ಲಿಯೇ ಸುಖ-ದುಃಖಗಳ ಬೆನ್ನು ಹತ್ತುತ್ತದೆ. ಸ್ವಲ್ಪವೂ ವ್ಯವಧಾನವಿಲ್ಲದೇ ಅವನವನ ಕರ್ಮಗಳಿಗನುಗುಣವಾಗಿ ಸುಖದುಃಖಗಳು ಬರುತ್ತಲೇ ಇರುತ್ತವೆ.
ತೇಷಾಮನ್ಯತರಾಪತ್ತೌ ಯದ್ ಯದೇವೋಪಸೇವತೇ |
ತತ್ ತದ್ಧಿ ಚೇತನಾಮಸ್ಯ ಹರತ್ಯಭ್ರಮಿವಾನಿಲಃ ॥6॥
ಈ ಸುಖ ಮತ್ತು ದುಃಖಗಳು ಎರಡೂ ಕೂಡ ಮನಸ್ಸಿಗೆ ಹೆಚ್ಚು ಹತ್ತಿಸಿ- ಕೊಂಡರೆ, ಗಾಳಿಯು ಮೋಡವನ್ನು ಹೇಗೆ ಹಾರಿಸಿಕೊಂಡು ಹೋಗುತ್ತದೋ, ಹಾಗೇ ಇವುಗಳು ಮನುಷ್ಯನ ವಿವೇಕವನ್ನೇ ಹಾರಿಸಿಬಿಡುತ್ತವೆ.
ವಿವರಣೆ - ಸಹಜವಾಗಿ ಸುಖ-ದುಃಖಗಳು ಬರುತ್ತಲೇ ಇರುತ್ತವೆ. ಎರಡೂ ಕೂಡ ನಮ್ಮ ಮನಸ್ಸಿನ ಸ್ತಿಮಿತವನ್ನು ಅಲ್ಲೋಲಕಲ್ಲೋಲ ಮಾಡುತ್ತವೆ. ಇದನ್ನು ಮನಸ್ಸಿಗೆ ಹತ್ತಿಸಿಕೊಂಡರೆ, ಮನುಷ್ಯನು ವಿವೇಕವನ್ನೇ ಕಳೆದುಕೊಳ್ಳುತ್ತಾನೆ.
ಅಭಿಜಾತೋಽಸ್ಮಿ ಸಿದ್ಧೋಽಸ್ಮಿ ನಾಸ್ಮಿ ಕೇವಲಮಾನುಷಃ |
ಇತ್ಯೇಭಿಃ ಹೇತುಭಿಸ್ತಸ್ಯ ತ್ರಿಭಿಶ್ಚಿತ್ತಂ ಪ್ರಸಿಚ್ಯತೇ ॥7॥
`ನನ್ನ ವಂಶ ದೊಡ್ಡದು', `ನಾನು ಸಿದ್ಧಿಪುರುಷ', `ನಾನು ಇತರರಂತೆ ಸಾಧಾ- ರಣನಲ್ಲ.' ಹೀಗೆ ಮೂರು ಬಗೆಯ ಅಹಂಕಾರಗಳಿಂದ ಮನುಷ್ಯನ ಬುದ್ಧಿಯು ಅವನಲ್ಲಿ ಹುಟ್ಟಿ ಅವನನ್ನು ಉಬ್ಬಿಸಿಬಿಡುತ್ತದೆ. ಮನುಷ್ಯನು ಅತ್ಯಂತ ಗರ್ವಿಷ್ಠನಾಗು- ತ್ತಾನೆ.

ಸಂಪ್ರಸಕ್ತಮನಾ ಭೋಗಾನ್ ವಿಸೃಜ್ಯ ಪಿತೃಸಂಚಿತಾನ್ |
ಪರಿಕ್ಷೀಣಃ ಪರಸ್ವಾನಾಮಾದಾನಂ ಸಾಧು ಮನ್ಯತೇ ॥8॥
ಅಹಂಕಾರವನ್ನು ಹೊಂದಿದ ಮನುಷ್ಯನು ನಿರಂತರ ಕಾಮೋಪಭೋಗಗಳಲ್ಲಿ ಆಸಕ್ತನಾಗುತ್ತಾನೆ. ತಂದೆ, ತಾತ, ಮುತ್ತಾತ ಮೊದಲಾದವರು ಸಂಪಾದನೆ ಮಾಡಿದ ಐಶ್ವರ್ಯವನ್ನು ವ್ಯಯ ಮಾಡುತ್ತಾನೆ. ಅದು ಪೂರ್ಣ ಮುಗಿದ ಮೇಲೆ ಮತ್ತೊ- ಬ್ಬರ ಸ್ವತ್ತನ್ನು ಅಪಹರಿಸುವುದೇ ಒಳ್ಳೆಯದೆಂದು ಭಾವಿಸುತ್ತಾನೆ. `ಭೋಗಾನ್' ಎಂದರೆ ಭೋಗಸಾಧನದ್ರವ್ಯಗಳು ಎಂದರ್ಥ.
ಟಿಪ್ಪಣಿ - ರಥಾತ್ ಪರರಥಾರುಜಮ್ ಇತ್ಯತ್ರ ರಥಾತ್ ಸ್ವರಥಾತ್ ಪರರಥಾ- ನಾಮ್ ಆ ಸಮಂತಾದ್ ರುಗ್ ಯಸ್ಮಾತ್ ತಂ ಪರರಥಾರುಜಮ್ | ಸ ಪ್ರಸಿಕ್ತಮನಾ ಭೋಗಾನ್ ಇತ್ಯತ್ರ ಭೋಗಾನ್ ಭೋಗಸಾಧನದ್ರವ್ಯಾಣಿ |
ತಮತಿಕ್ರಾಂತಮರ್ಯಾದಮಾದದಾನಮಸಾಂಪ್ರತಮ್ |
ಪ್ರತಿಷೇಧಂತಿ ರಾಜಾನೋ ಲುಬ್ಧಾ ಮೃಗಮಿವೇಷುಭಿಃ ॥9॥
ಲೋಕದ ಮೇರೆಯನ್ನೇ ಮೀರಿ, ಕಳ್ಳತನ ಮೊದಲಾದ ಕೆಟ್ಟ ಕೆಲಸಗಳಲ್ಲಿ ತೊಡಗುತ್ತಾನೆ. ಜಿಂಕೆಗಳನ್ನು ಬೇಡರು ಬಾಣಗಳಿಂದ ಹೊಡೆಯುವಂತೆ ರಾಜನು ಅಂಥ ಕಳ್ಳನನ್ನು ದಂಡಿಸುತ್ತಾನೆ.
ಯೇ ಚ ವಿಂಶತಿವರ್ಷಾ ವಾ ತ್ರಿಂಶದ್ವರ್ಷಾಶ್ಚ ಮಾನವಾಃ |
ಪರೇಣ ತೇ ವರ್ಷಶತಾನ್ನ ಭವಿಷ್ಯಂತಿ ಪಾರ್ಥಿವ ॥10॥
ರಾಜದಂಡಕ್ಕೆ ಪಾತ್ರರಾಗಿ ಕೆಟ್ಟಕೆಲಸಗಳಿಂದ ಇಪ್ಪತ್ತು ವರ್ಷದಲ್ಲೇ ಸತ್ತು- ಹೋಗುತ್ತಾರೆ. ಅಥವಾ ಮೂವತ್ತು ವರ್ಷದಲ್ಲಿ ತೀರಿಹೋಗುತ್ತಾರೆ. ಸಂಪೂರ್ಣ ನೂರು ವರ್ಷಗಳ ಕಾಲ ಅಂಥ ಹೀನರು ಬದುಕುವುದೇ ಇಲ್ಲ.
ಟಿಪ್ಪಣಿ - ಪರೇಣ ತೇ ವರ್ಷಶತಾ ಇತ್ಯತ್ರ ಪರೇಣ ವೈರಿಣಾ ವರ್ಷಾಣಾಂ ಶತಂ ಯೇಷಾಂ ತೇ ವರ್ಷಶತಾಃ |
`ಪರೇಣ' ವೈರಿಗಳಿಂದ ನೂರು ವರ್ಷಗಳ ಕಾಲ ಬದುಕುವುದಿಲ್ಲ.
ವಿವರಣೆ - ತಂದೆ, ಮುತ್ತಾತ ಮೊದಲಾದವರು ಸಂಪಾದನೆ ಮಾಡಿದ ಹಣದ ಮೌಲ್ಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಯಾವುದೇ ಕಾರಣಕ್ಕೂ ಅಪವ್ಯಯ ಮಾಡಬಾರದು. ಹಾಗೇನಾದರೂ ತನ್ನ ಇಚ್ಛೆಗೆ ಅನುಗುಣವಾಗಿ ಆ ಹಣವನ್ನು ವ್ಯರ್ಥ ಮಾಡಿದರೆ, ಆಯುಷ್ಯವನ್ನು ಕಳೆದುಕೊಳ್ಳುತ್ತಾನೆ. ಮತ್ತು ಅವನಿಗೆ ಧರ್ಮಾಧರ್ಮಗಳಲ್ಲಿ ನಂಬಿಕೆ ಇಲ್ಲದ ಕಾರಣ, ಪಿತೃವಂಶದ ಹಣವನ್ನೇ ಅಪವ್ಯಯಮಾಡಿದ ಮೇಲೆ ಉಳಿದವರ ಹಣವನ್ನು ಕದಿಯುವುದರಲ್ಲಿಯೂ ಅಧರ್ಮದ ಬುದ್ಧಿಯು ಅವರಿಗೆ ಉಂಟಾಗುವುದಿಲ್ಲ. ಧರ್ಮವನ್ನು ನಂಬದ ಅಂಥ ಮನುಷ್ಯನು ಕಳ್ಳತನ ಆರಂಭ ಮಾಡುತ್ತಾನೆ. ಆದರೆ ಅಂತಿಮವಾಗಿ ಜಗತ್ತಿನಲ್ಲಿ ಅವನು ಕಳ್ಳನೇ ಆಗುತ್ತಾನೆ. ಅವನನ್ನು ಹಿಡಿದು ರಾಜಭಟರು ಶಿಕ್ಷೆಗೆ ಒಳಪಡಿಸುತ್ತಾರೆ. ಅಥವಾ ಶತ್ರುಜನರು ಅವರನ್ನು ಕೊಲ್ಲುತ್ತಾರೆ.
ಟಿಪ್ಪಣಿ - ಕೆಲವು ಕಳ್ಳರು ರಾಜದಂಡಕ್ಕೆ ಪಾತ್ರರಾಗಿ ಮರಣವನ್ನು ಹೊಂದು- ತ್ತಾರೆ. ಇನ್ನು ಕೆಲವರು ತಮ್ಮ ಶತ್ರುಗಳಿಂದಲೇ ಮರಣವನ್ನು ಹೊಂದುತ್ತಾರೆ. ಕಳ್ಳತನವನ್ನು ಮಾಡಲು ಹೊರಟು ಎಲ್ಲರನ್ನೂ ಶತ್ರುಗಳನ್ನಾಗಿ ಮಾಡಿಕೊಳ್ಳುತ್ತಾರೆ. ಅವರಿಂದಲೇ ಸಾಯುತ್ತಾರೆ.
ತೇಷಾಂ ಪರಮದುಃಖಾನಾಂ ಬುದ್ಧ್ಯಾ ಭೈಷದ್ಯಮಾಚರೇತ್ |
ಸರ್ವಪ್ರಾಣಭೃತಾಂ ವೃತ್ತಂ ಪ್ರೇಕ್ಷಮಾಣಸ್ತತಸ್ತತಃ ॥11॥
ಇಂಥ ಪರಮದುಃಖವನ್ನು ಹೊಂದುವ ಮನುಷ್ಯರಿಗೆ ಸರಿಯಾದ ಮಾರ್ಗ- ವನ್ನು ತೋರಿಸುವುದಕ್ಕಾಗಿ ಬುದ್ಧಿಯಿಂದ ಆಲೋಚಿಸಿ, ಚಿಕಿತ್ಸೆಯನ್ನು ಅವರಿಗೆ ನೀಡಬೇಕು. ಅದಕ್ಕಾಗಿ ರಾಜನಾದವನು ತನ್ನ ಎಲ್ಲಾ ಪ್ರಜೆಗಳ ನಡುವಳಿಕೆಗಳನ್ನು ಪರಿಶೀಲನೆ ಮಾಡುತ್ತಲೇ ಇರಬೇಕು.
ಮಾನಸಾನಾಂ ಪುನರ್ಯೋನಿರ್ದುಃಖಾನಾಂ ಚಿತ್ತವಿಭ್ರಮಃ |
ಅನಿಷ್ಟೋಪನಿಪಾತೋ ವಾ ತೃತೀಯಂ ನೋಪಪದ್ಯತೇ ॥12॥
ಮನುಷ್ಯರಿಗೆ ದುಃಖವನ್ನು ತಂದುಕೊಳ್ಳಲು ಎರಡು ಪ್ರಬಲಕಾರಣಗಳಿರುತ್ತವೆ. ಬುದ್ಧಿಭ್ರಮೆ ಮತ್ತು ಅನಿಷ್ಟಪ್ರಾಪ್ತಿ. ಇವೆರಡು ಮಾತ್ರ ಮನುಷ್ಯನಿಗೆ ದುಃಖವನ್ನು ನೀಡುತ್ತವೆ. ಇವೆರಡನ್ನು ಬಿಟ್ಟು, ಮೂರನೆಯ ಕಾರಣವು ಇರುವುದಿಲ್ಲ.
ಏವಮೇತಾನಿ ದುಃಖಾನಿ ತಾನಿ ತಾನೀಹ ಮಾನವಮ್ |
ವಿವಿಧಾನ್ಯುಪವರ್ತಂತೇ ತಥಾ ಸಾಂಸ್ಪರ್ಶಕಾನಿ ಚ ॥13॥
ಹೀಗೆ ಬೇರೆ ಬೇರೆ ವಿಧವಾದ ಆಯಾ ದುಃಖಗಳು ವಿಷಯಸಂಗದಿಂದ ಬರುವ ದುಃಖಗಳು ಮನುಷ್ಯನಿಗೆ ತೊಂದರೆಯನ್ನು ಕೊಡುತ್ತಲೇ ಇರುತ್ತವೆ.
ಜರಾಮೃತ್ಯೂ ಹಿ ಭೂತಾನಾಂ ಖಾದಿತಾರೌ ವೃಕಾವಿವ |
ಬಲಿನಾಂ ದುರ್ಬಲಾನಾಂ ಚ ಹ್ರಸ್ವಾನಾಂ ಮಹತಾಮಪಿ ॥14॥
ಮುಪ್ಪು ಮತ್ತು ಸಾವುಗಳಿಗೆ ಬಲಿಷ್ಠರಾದವರೆಂದು, ದುರ್ಬಲರೆಂದು, ಚಿಕ್ಕವ- ರೆಂದು, ದೊಡ್ಡವರೆಂದು ತಾರತಮ್ಯವೇ ಇರುವುದಿಲ್ಲ. ಎಲ್ಲರನ್ನು ನುಂಗಿಹಾಕುತ್ತವೆ.
ನ ಕಶ್ಚಿಜ್ಜಾತ್ವತಿಕ್ರಾಮೇತ್ ಜರಾಮೃತ್ಯೂ ಹ ಮಾನವಃ |
ಅಪಿ ಸಾಗರಪರ್ಯಂತಾಂ ವಿಜಿತ್ಯೇಮಾಂ ವಸುಂಧರಾಮ್ ॥15॥
ಮನುಷ್ಯನು ಸಾಗರದ ತನಕ ಸಮಸ್ತ ಭೂಮಂಡಲವನ್ನು ಜಯಿಸಬಹುದು. ಆದರೆ ಯಾರೊಬ್ಬನೂ ಕೂಡ ಎಂದೆಂದೂ ಮುಪ್ಪು ಮತ್ತು ಸಾವುಗಳನ್ನು ಗೆಲ್ಲಲು ಸಮರ್ಥನಾಗುವುದಿಲ್ಲ.
ಸುಖಂ ವಾ ಯದಿ ವಾ ದುಃಖಂ ಭೂತಾನಾಂ ಪರ್ಯುಪಸ್ಥಿತಮ್ |
ಪ್ರಾಪ್ತವ್ಯಮವಶೈಃ ಸರ್ವಂ ಪರಿಹಾರೋ ನ ವಿದ್ಯತೇ ॥16॥
ಸುಖ ಮತ್ತು ದುಃಖಗಳು ಪ್ರತಿಯೊಬ್ಬರಿಗೂ ಬರುತ್ತವೆ. ಇದನ್ನು ಎಲ್ಲರೂ ಅನುಭವಿಸಿಯೇ ತೀರಬೇಕು. ತಾವಾಗಿಯೇ ಬಂದು

ಹಿಡಿದುಕೊಳ್ಳುವ ಈ ಸುಖ- ದುಃಖಗಳಿಗೆ ಪರಿಹಾರವು ಇರುವುದಿಲ್ಲ.
ಪೂರ್ವೇ ವಯಸಿ ಮಧ್ಯೇ ವಾಪ್ಯುತ್ತರೇ ವಾ ನರಾಧಿಪ |
ಅವರ್ಜನೀಯಾಸ್ತೇಽರ್ಥಾ ವೈ ಕಾಂಕ್ಷಿತಾಶ್ಚ ತತೋಽನ್ಯಥಾ ॥17॥
ಮನುಷ್ಯನಾಗಿ ಹುಟ್ಟಿದಾಗ ಸಣ್ಣವಯಸ್ಸಿನಲ್ಲಿ, ಯೌವನದಲ್ಲಿ, ವೃದ್ಧಾಪ್ಯದಲ್ಲಿ ಸುಖ-ದುಃಖರೂಪವಾದ ವಿಷಯಗಳು ತಪ್ಪುವುದೇ ಇಲ್ಲ. ತಾನು ಅಪೇಕ್ಷಿಸಿದ ಅಥವಾ ಅಪೇಕ್ಷೆಪಡದ ವಿಷಯಗಳಲ್ಲಿ ಯಾವುದು ಬಂದರೂ ಅದನ್ನು ಸ್ವಾಗತ ಮಾಡಬೇಕು. ಬಿಡಲು ಸಾಧ್ಯವಿಲ್ಲ.
ಸುಪ್ರಿಯೈರ್ವಿಪ್ರಯೋಗಾಶ್ಚ ಸಂಪ್ರಯೋಗಸ್ತಥಾಪ್ರಿಯೈಃ |
ಅರ್ಥಾನರ್ಥೌ ಸುಖಂ ದುಃಖಂ ವಿಧಾನಮನುವರ್ತತೇ ॥18॥
ತನಗೆ ಅತ್ಯಂತ ಇಷ್ಟರಾದವರ ಸಹವಾಸವೇ ದೊರಕುವುದಿಲ್ಲ, ಅಪ್ರಿಯ- ರಾದವರ ಜೊತೆ ಬೇಡವೆಂದರೂ ಸಹವಾಸವು ದೊರಕುತ್ತದೆ. ಅರ್ಥಪ್ರಾಪ್ತಿ, ಅನರ್ಥದ ಪ್ರಾಪ್ತಿ, ಸುಖ ಮತ್ತು ದುಃಖ ಇವುಗಳೆಲ್ಲವೂ ಅವರವರ ಪ್ರಾರಬ್ಧ- ಕರ್ಮವನ್ನು ಅನುಸರಿಸಿಯೇ ಬರುತ್ತವೆ.
ಪ್ರಾದುರ್ಭಾವಶ್ಚ ಭೂತಾನಾಂ ದೇಹತ್ಯಾಗಸ್ತಥೈವ ಚ |
ಪ್ರಾಪ್ತಿರ್ವ್ಯಾಯಾಮಯೋಗಶ್ಚ ಸರ್ವಮೇತತ್ ಪ್ರತಿಷ್ಠಿತಮ್ ॥19॥
ಇದರಂತೆ ಪ್ರಾಣಿಗಳ ಹುಟ್ಟು, ಸಾವು, ಲಾಭ, ನಷ್ಟ ಎಲ್ಲವೂ ಕೂಡ ದೈವದ
ಅಧೀನವಾಗಿಯೇ ಇರುತ್ತವೆ.
ಗಂಧವರ್ಣರಸಸ್ಪರ್ಶಾ ನಿವರ್ತಂತೇ ಸ್ವಭಾವತಃ |
ತಥೈವ ಸುಖದುಃಖಾನಿ ವಿಧಾನಮನುವರ್ತತೇ ॥20॥
ರೂಪ, ರಸ, ಗಂಧ, ಸ್ಪರ್ಶಾದಿಗಳು ಸಹಜವಾಗಿ ಬರುತ್ತವೆ. ಅದರಂತೆ ಸುಖ- ದುಃಖಗಳೂ ಕೂಡ ದೈವಾಧೀನವಾಗಿ ಬರುತ್ತವೆ.
ಟಿಪ್ಪಣಿ - ಗಂಧವರ್ಣರಸಸ್ಪರ್ಶಾ ನಿವರ್ತಂತ ಇತ್ಯತ್ರ ಎಂದರೆ ಸುತರಾಂ ಇರುತ್ತದೆ ಎಂದರ್ಥ.
ವಿವರಣೆ - ಗಂಧ, ರೂಪ, ರಸ, ಸ್ಪರ್ಶಗಳೆಲ್ಲವೂ ಕೂಡ ಸಹಜವಾಗಿ ಬರುತ್ತವೆ, ಹೋಗುತ್ತವೆ. ಹೂವು ಅರಳಿದಾಗ ಸಹಜವಾಗಿ ಪರಿಮಳ ಬರುತ್ತದೆ. ಹೂವು ಬಾಡುವುದರಿಂದ ಪರಿಮಳವು ಹೋಗುತ್ತದೆ. ಅದರಂತೆ ಸುಖ-ದುಃಖ- ಗಳೂ ಕೂಡ ಅವರವರ ಕರ್ಮಗಳಿಗೆ ಅನುಗುಣವಾಗಿ ಬರುತ್ತವೆ, ಹೋಗುತ್ತವೆ.
ಆಸನಂ ಶಯನಂ ಯಾನಮುತ್ಥಾನಂ ಪಾನಭೋಜನಮ್ |
ನಿಯತಂ ಸರ್ವಭೂತಾನಾಂ ಕಾಲೇನೈವ ಭವಂತ್ಯುತ ॥21॥
ಕುಳಿತುಕೊಳ್ಳುವುದು, ಮಲಗುವುದು, ಓಡಾಡುವುದು, ಎದ್ದುನಿಂತುಕೊಳ್ಳು- ವುದು, ಕುಡಿಯುವುದು, ತಿನ್ನುವುದು ಇವುಗಳನ್ನು ಎಲ್ಲಾ ಪ್ರಾಣಿಗಳೂ ಕೂಡ ಮಾಡುತ್ತವೆ.
ವೈದ್ಯಶ್ಚಾಪ್ಯಾತುರಾಃ ಸಂತಿ ಬಲವಂತಃ ಸುದುರ್ಬಲಾಃ |
ಸ್ತ್ರೀಮಂತಶ್ಚ ತಥಾ ಷಂಢಾ ವಿಚಿತ್ರಃ ಕಾಲಪರ್ಯಯಃ ॥22॥
ವೈದ್ಯರೇ ರೋಗಿಗಳಾಗುತ್ತಾರೆ. ಬಲಿಷ್ಠರು ದುರ್ಬಲರಾಗುತ್ತಾರೆ. ಷಂಡರು ಹೆಂಡತಿಯೊಡನೆ ಕೂಡುತ್ತಾರೆ. ಹೀಗೆ ಕಾಲಗತಿಯೇ ಬಲುವಿಚಿತ್ರ.
ಕುಲೇ ಜನ್ಮ ತಥಾ ವೀರ್ಯಮಾರೋಗ್ಯಂ ಧೈರ್ಯಮೇವ ಚ |
ಸೌಭಾಗ್ಯಮುಪಭೋಗಶ್ಚ ಭವಿತವ್ಯೇನ ಲಭ್ಯತೇ ॥23॥
ಸತ್ಕುಲದಲ್ಲಿ ಹುಟ್ಟುವುದು, ವೀರ್ಯವಂತನಾಗುವುದು, ದೇಹವನ್ನು ಆರೋಗ್ಯವಾಗಿ ಇರುವಂತೆ ನೋಡಿಕೊಳ್ಳುವುದು, ಎಂಥಾ ಸಂದರ್ಭದಲ್ಲೂ ಧೈರ್ಯವಂತನಾಗಿರುವುದು, ಸೌಭಾಗ್ಯವಂತನಾಗಿರುವುದು ಎಲ್ಲಾ ಭಾಗ್ಯಗಳನ್ನು ಅನುಭವಿಸುವುದು ಇವೆಲ್ಲವೂ ಆ ದೈವದ ಅಧೀನವಾಗಿಯೇ ಪ್ರಾಪ್ತವಾಗುತ್ತವೆ.
ಸಂತಿ ಪುತ್ರಾಃ ಸುಬಹವೋ ದರಿದ್ರಾಣಾಮನಿಚ್ಛತಾಮ್ |
ಬಹೂನಾಮಿಚ್ಛತಾಂ ನಾಸ್ತಿ ಸಮೃದ್ಧಾನಾಂ ವಿಚೇಷ್ಟತಾಮ್ ॥24॥
ಇಚ್ಛೆಪಡದಿದ್ದರೂ ದರಿದ್ರರಿಗೆ ಅನೇಕ ಮಕ್ಕಳು ಹುಟ್ಟುತ್ತಾರೆ. ಅತ್ಯಂತ- ಶ್ರೀಮಂತರು ತಮ್ಮ ಅಪೇಕ್ಷೆಯಂತೆ ಖರ್ಚು ಮಾಡಿದರೂ ಆಸೆಯನ್ನಿಟ್ಟು- ಕೊಂಡರೂ ಮಕ್ಕಳಾಗುವುದಿಲ್ಲ ಹೀಗೆ ವಿಧಿಯ ಕಾರ್ಯವೇ ಬಲುವಿಚಿತ್ರ.
ವ್ಯಾಧಿರಗ್ನಿರ್ಜಲಂ ಶಸ್ತ್ರಂ ಬುಭುಕ್ಷಾ ಶ್ವಾಪದೋ ವಿಷಮ್ |
ಜ್ವರಶ್ಚ ಮರಣಂ ಜಂತೋರುಚ್ಚಾಚ್ಚ ಪತನಂ ತಥಾ ॥25॥
ನಿರ್ಯಾಣಂ ಯಸ್ಯ ಯದ್ ದಿಷ್ಟಂ ತೇನ ಗಚ್ಛತಿ ಹೇತುನಾ |
ದೃಶ್ಯತೇ ನಾಭ್ಯತಿಕ್ರಾಮನ್ನತಿಕ್ರಾಂತೋ ನವಾ ಪುನಃ ॥26॥
ರೋಗ, ಬೆಂಕಿ, ನೀರು, ಶಸ್ತ್ರ, ಹಸಿವೆ, ಅಪಘಾತ, ವಿಷ, ಜ್ವರ, ಕೆಳಗೆ ಬೀಳು- ವುದು ಇಷ್ಟು ಮರಣದ ನಿಮಿತ್ತಕಾರಣಗಳು. ಪರಲೋಕಯಾತ್ರೆಗೆ ಇವುಗಳೇ ಸೇತುವೆಯಂತಿವೆ. ಆಯಾ ವ್ಯಕ್ತಿಯು ಹುಟ್ಟಿದಾಗ ಇವನು ಹೇಗೆ ಪರಲೋಕಕ್ಕೆ ಹೋಗಬೇಕೆಂದು ನಿರ್ಣಯ ಮಾಡಲಾಗಿರುತ್ತದೋ, ಅದೇ ಕ್ರಮದಲ್ಲಿಯೇ ನಿರ್ಯಾಣವನ್ನು ಮಾಡುತ್ತಾನೆ.
ದೃಶ್ಯತೇ ಹಿ ಯುವೈವೇಹ ವಿನಶ್ಯನ್ ವಸುಮಾನ್ನರಃ |
ದರಿದ್ರಶ್ಚ ಪರಿಕ್ಲಿಷ್ಟಃ ಶತವರ್ಷೋ ಜರಾನ್ವಿತಃ ॥27॥
ಕೆಲವರು ಐಶ್ವರ್ಯವನ್ನು ಹೊಂದಿರುತ್ತಾರೆ. ಆದರೆ ಯುವಕನಾಗಿರುವಾಗಲೇ ಮರಣ ಬರುತ್ತದೆ. ಕೆಲವರು ಬಹಳ ಬಡತನದಲ್ಲಿ ಜೀವನವನ್ನು ನಡೆಸುತ್ತಾರೆ. ಆದರೂ ನೂರು ವರ್ಷಗಳ ತನಕ ಬದುಕುತ್ತಾರೆ.

ವಿವರಣೆ - ಕೆಲವರಿಗೆ ಬೇಕಾದಷ್ಟು ಹಣವಿರುತ್ತದೆ. ಆ ಹಣವನ್ನು ವಿನಿ- ಯೋಗಿಸಿ ತಮ್ಮ ಜೀವನವನ್ನು ಕಾಪಾಡಿಕೊಳ್ಳುತ್ತಾರೆ. ಮತ್ತು ಅತ್ಯಂತಸತ್ವಯುತ- ವಾದ ಆಹಾರವನ್ನು ತಿನ್ನುತ್ತಾರೆ. ಆರೋಗ್ಯವನ್ನು ಯಥೇಚ್ಛವಾಗಿ ಹಣವನ್ನು ವಿನಿಯೋಗ ಮಾಡಿ ಕಾಪಾಡಿಕೊಳ್ಳುತ್ತಾರೆ. ಆದರೂ ಕೂಡ ಅವರಿಗೆ ರೋಗಗಳು ಬಂದೇ ಬರುತ್ತವೆ. ಯೌವನದಲ್ಲಿಯೇ ಮರಣವನ್ನೂ ಹೊಂದುತ್ತಾರೆ. ಆದರೆ ಮತ್ತೊಬ್ಬ ಕಡುಬಡವನಿರುತ್ತಾನೆ. ತನ್ನ ಆರೋಗ್ಯಕ್ಕಾಗಿ ಸತ್ವಯುತವಾದ ಆಹಾರವನ್ನೇ ತಿನ್ನುವುದಿಲ್ಲ. ತಂಗಳನ್ನವನ್ನೇ ತಿಂದು ಬದುಕುತ್ತಾನೆ. ಕೆಲವೊಮ್ಮೆ ಉಪವಾಸವಿರುತ್ತಾನೆ. ನೀರು ಕುಡಿಯುತ್ತಾನೆ. ಆದರೂ ಕೂಡ ನೂರು ವರ್ಷಗಳ ತನಕ ಬದುಕುತ್ತಾನೆ. ಇದರಿಂದಲೇ ತಿಳಿಯುತ್ತದೆ. ಎಲ್ಲವೂ ಕೂಡ ದೈವಾಧೀನ- ವೆಂದು.

ಅಕಿಂಚನಾಶ್ಚ ದೃಶ್ಯಂತೇ ಪುರುಷಾಶ್ಚಿರಜೀವಿನಃ |
ಸಮೃದ್ಧೇ ಚ ಕುಲೇ ಜಾತಾ ವಿನಶ್ಯಂತಿ ಪತಂಗವತ್ ॥28॥

ಯಾರ ಹತ್ತಿರ ಏನೂ ಕೂಡ ಇರುವುದಿಲ್ಲವೋ, ಅಂಥ ದರಿದ್ರನು ಚಿರಂಜೀವಿ -ಯಾಗಿ ಬದುಕುತ್ತಾನೆ. ಆಗರ್ಭಶ್ರೀಮಂತನು ಪತಂಗದಂತೆ ಬಹುಬೇಗ ಸತ್ತು ಹೋಗುತ್ತಾನೆ.

ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನ ವಿದ್ಯತೇ |
ಕಾಷ್ಠಾನ್ಯಪಿ ಹಿ ಜೀರ್ಯಂತೇ ದರಿದ್ರಾಣಾಂ ನರಾಧಿಪ ॥29॥

ಸಾಮಾನ್ಯವಾಗಿ ಶ್ರೀಮಂತರಿಗೆ ಅನ್ನವನ್ನು ಅರಗಿಸಿಕೊಳ್ಳುವ ಶಕ್ತಿಯೇ ಇರು- ವುದಿಲ್ಲ. ದರಿದ್ರರಿಗೆ ಕಟ್ಟಿಗೆಯನ್ನು ತಿಂದರೂ ಕೂಡ ಜೀರ್ಣಿಸಿಕೊಳ್ಳುವ ಶಕ್ತಿಯಿ- ರುತ್ತದೆ.

ಅಹಮೇತತ್ ಕರೋಮೀತಿ ಮನ್ಯತೇ ಕಾಲಚೋದಿತಃ |
ಯದ್ಯದಿಷ್ಟಮಸಂತೋಷಾದ್ ದುರಾತ್ಮಾ ಪಾಪಮಾಚರನ್ ॥30॥

ಒಬ್ಬನು ವಿಧಿಯ ಅಧೀನವಾಗಿ ಎಲ್ಲ ಕೆಲಸವನ್ನು ಮಾಡುತ್ತಾನೆ. ಅಂತಿಮವಾಗಿ ನಾನೇ ಮಾಡಿದೆನೆಂದು ತಿಳಿದುಬಿಡುತ್ತಾನೆ. ಇಂಥವನೇ ನಿಜವಾದ ದುರಾತ್ಮನು ಮತ್ತು ಪಾಪಿಷ್ಠನು.

ಟಿಪ್ಪಣಿ - ಯದ್ಯದಿಷ್ಟಮಸಂತೋಷಾದ್ ಇತ್ಯತ್ರ ಯದಿ ಅದಿಷ್ಟಮ್ ಅಪ್ರಾಪ್ತಮ್ |
`ಯದ್ಯದಿಷ್ಟಮ್' ಎಂಬಲ್ಲಿ ಯದಿ ಅದಿಷ್ಟಮ್ ಎಂಬುದಾಗಿ ಪದಚ್ಛೇದ ಮಾಡ- ಬೇಕು. ಅದಿಷ್ಟಮ್ ಎಂದರೆ ದೊರಕದೇ ಇರುವುದು ಎಂದರ್ಥ. ತನಗೆ ಯಾವುದು ದೊರಕಿಲ್ಲವೋ, ಅದನ್ನು ಸಾಧಿಸಿಕೊಳ್ಳಲು ಪಾಪಕರ್ಮಗಳನ್ನು ಆಚರಿಸುತ್ತಾನೆ ಎಂದಭಿಪ್ರಾಯ.

ಸ್ತ್ರಿಯೋಽಕ್ಷಾ ಮೃಗಯಾ ಪಾನಂ ಪ್ರಸಂಗಾನ್ನಿಂದಿತಾ ಬುಧೈಃ |
ದೃಶ್ಯಂತೇ ಚಾಪಿ ಬಹವಃ ಸಂಪ್ರಸಕ್ತಾ ಬಹುಶ್ರುತಾಃ ॥31॥

ಬೇಟೆಯಾಡುವುದು, ಜೂಜಾಡುವುದು, ಸ್ತ್ರೀಯರಲ್ಲಿ ಅತಿಯಾದ ಆಸಕ್ತಿ- ಯನ್ನು ಹೊಂದಿರುವುದು, ಹೆಂಡ ಕುಡಿಯುವುದು, ಈ ಎಲ್ಲಾ ದುರಭ್ಯಾಸಗಳನ್ನು ವಿದ್ವಾಂಸರು ನಿಂದನೆ ಮಾಡುತ್ತಾರೆ. ಆದರೂ ಕೂಡ ಶಾಸ್ತ್ರಗ್ರಂಥಗಳನ್ನು ಓದಿದ ವಿದ್ವಾಂಸರುಗಳೇ ಇಂಥ ಕುಕೃತ್ಯಗಳಲ್ಲಿ ಆಸಕ್ತರಾಗಿಬಿಡುತ್ತಾರೆ.

ಇತಿ ಕಾಲೇನ ಸರ್ವಾರ್ಥಾನೀಪ್ಸಿತಾನೀಪ್ಸಿತಾನಿ ಚ |
ಸ್ಪೃಶ್ಯಂತಿ ಸರ್ವಭೂತಾನಿ ನಿಮಿತ್ತಂ ನೋಪಲಭ್ಯತೇ ॥32॥

ಹೀಗೆ ಮನುಷ್ಯನಿಗೆ ಬರುವ ಇಷ್ಟ - ಅನಿಷ್ಟಗಳು, ಧರ್ಮ, ಅರ್ಥಗಳೆಲ್ಲವೂ
ವಿಧಿಯ ಅಧೀನವಾಗಿಯೇ ಇರುತ್ತವೆ. ಇದಕ್ಕೆ ಬೇರೆ ಕಾರಣಗಳು ಇರುವುದಿಲ್ಲ.

ಟಿಪ್ಪಣಿ - ನಿಮಿತ್ತಂ ನೋಪಲಭ್ಯತ ಇತ್ಯತ್ರ ನಿಮಿತ್ತಂ ನಿಮಿತ್ತಭೂತಃ ಸರ್ವೇಶ್ವರಃ|
`ನಿಮಿತ್ತಂ' ಎಂದರೆ ನಿಮಿತ್ತನಾದ ಸರ್ವೇಶ್ವರನನ್ನು ಬಿಟ್ಟರೆ, ಬೇರೆ ಕಾರಣವಿರುವು- ದಿಲ್ಲ ಎಂದರ್ಥ.

ವಾಯುಮಾಕಾಶಮಗ್ನಿಂ ಚ ಚಂದ್ರಾದಿತ್ಯಾವಹಃಕ್ಷಪೇ |
ಜ್ಯೋತಿಂಷಿ ಸರಿತಃ ಶೈಲಾನ್ ಕಃ ಕರೋತಿ ಬಿಭರ್ತಿ ವಾ ॥33॥

ವಾಯು, ಆಕಾಶ, ಅಗ್ನಿ, ಚಂದ್ರ, ಸೂರ್ಯ,ಹಗಲು, ರಾತ್ರಿ, ನಕ್ಷತ್ರ, ನದಿಗಳು, ಪರ್ವತಗಳು ಇವುಗಳನ್ನು ಆ ಪರಮಾತ್ಮ ಬಿಟ್ಟರೆ ಬೇರೆ ಯಾರು ತಾನೇ ಸೃಷ್ಟಿ ಮಾಡಲು, ಧಾರಣೆ ಮಾಡಲು ಸಮರ್ಥನಾಗಿರುತ್ತಾನೆ.

ಶೀತಮುಷ್ಣಂ ತಥಾ ವರ್ಷಂ ಕಾಲೇನ ಪರಿವರ್ತತೇ |
ಏವಮೇವ ಮನುಷ್ಯಾಣಾಂ ಸುಖದುಃಖೇ ನರರ್ಷಭ ॥34॥

ಓ ನರೋತ್ತಮನೇ! ಚಳಿಗಾಲ, ಬೇಸಿಗೆಕಾಲ, ಮಳೆಗಾಲಗಳು ಆ ಕಾಲದ
ಅಧೀನವಾಗಿಯೇ ಸುತ್ತಿ ಬರುತ್ತವೆ. ಅದರಂತೆ ಸುಖ-ದುಃಖಗಳೂ ಕೂಡ ಕಾಲದ ಅಧೀನವಾಗಿವೆಯೇ ಒಂದರ ಮೇಲೊಂದು ಬರುತ್ತಿರುತ್ತವೆ.

ನೌಷಧಾನಿ ನ ಶಾಸ್ತ್ರಾಣಿ ನ ಹೋಮಾ ನ ಪುನರ್ಜಪಾಃ |
ತ್ರಾಯಂತೇ ಮೃತ್ಯುನೋಪೇತಂ ಜರಯಾ ವಾಪಿ ಮಾನುಷಮ್ ॥35॥

ಔಷಧಿಗಳು, ಶಾಸ್ತ್ರಗಳು, ಹೋಮಗಳು ಅನೇಕ ಬಗೆಯ ಜಪಗಳು ಮರಣ- ದಿಂದ ಮನುಷ್ಯನನ್ನು ರಕ್ಷಣೆ ಮಾಡಲಾರವು. ಮುಪ್ಪನ್ನೂ ಕೂಡ ತಪ್ಪಿಸಲಾರವು.

ಯಥಾ ಕಾಷ್ಠಂ ನ ಕಾಷ್ಠಂ ಚ ಸಮೇಯಾತಾಂ ಮಹೋದಧೌ |
ಸಮೇತ್ಯ ಚ ವ್ಯತೀಯಾತಾಂ ತದ್ವದ್ ಭೂತಸಮಾಗಮಃ ॥36॥

ಮಹಾಸಮುದ್ರದಲ್ಲಿ ಎರಡು ಕಟ್ಟಿಗೆಗಳು ಎಲ್ಲಿಂದಲೋ ತೇಲಿಕೊಂಡು ಬಂದು, ಕೆಲವು ಸಮಯ ಒಟ್ಟಾಗಿಯೇ ಇದ್ದು ಪುನಃ ಅಗಲುತ್ತವೆ. ಅನಂತರ ಅವೆರಡೂ ಬೇರೆ ಬೇರೆಯೇ ಹೋಗುತ್ತವೆ. ಇದರಂತೆ ಈ ಸಂಸಾರದಲ್ಲಿ ಹೆಂಡತಿ, ಮಕ್ಕಳು, ತಂದೆ, ತಾಯಿ ಮೊದಲಾದ ಬಂಧುಗಳ ಸಮಾಗಮವೂ ಕೂಡ ಕೆಲವು ಕಾಲ ಇರುತ್ತದೆ. ಕೆಲವು ಕಾಲದ ಅನಂತರ ಅಗಲುತ್ತವೆ.

ಟಿಪ್ಪಣಿ - ಈ ಶ್ಲೋಕವು ಭಾಗವತದಲ್ಲಿಯೂ ಕೂಡ ಬರುತ್ತದೆ. ಈ ಶ್ಲೋಕವು ಅತ್ಯಂತಮಾರ್ಮಿಕವಾಗಿದೆ.
ಯೇ ಚಾಪಿ ಪುರುಷೈಃ ಸ್ತ್ರೀಭಿರ್ಗೀತವಾದ್ಯೈರೂಪಸ್ಥಿತಾಃ |
ಯೇ ಚಾನಾಥಾಃ ಪರಾನ್ನಾದಾಃ ಕಾಲಸ್ತೇಷು ಸಮಕ್ರಿಯಃ ॥37॥
ಯಾವ ಪುರುಷರು ಸ್ತ್ರೀಯರ ಮಧ್ಯದಲ್ಲಿಯೇ ಇರುತ್ತಾರೋ, ಅವರ ಗೀತೆಗಳನ್ನು, ವಾದ್ಯಗಳನ್ನು ಕೇಳುತ್ತಾ, ಆನಂದತುಂದಿಲರಾಗಿರುತ್ತಾರೋ, ಅಂಥ ಶ್ರೀಮಂತರ ವಿಷಯದಲ್ಲಿ ಮತ್ತು ಪರಾನ್ನದಲ್ಲಿ ಆಸಕ್ತರಾದ ಅನಾಥರ ವಿಷಯ- ದಲ್ಲಿಯೂ ಕಾಲವು ಸಮಾನವಾಗಿಯೇ ಕೆಲಸವನ್ನು ಮಾಡುತ್ತದೆ. ಧನಿಕರು, ದರಿದ್ರರು, ಮೂರ್ಖರು ವಿದ್ವಾಂಸರು ಎಂಬ ವ್ಯತ್ಯಾಸವು ಕಾಲಕ್ಕೆ ಇರುವುದಿಲ್ಲ.
ಮಾತೃಪಿತೃಸಹಸ್ರಾಣಿ ಪುತ್ರದಾರಶತಾನಿ ಚ |
ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ॥38॥
ಅನೇಕ ಜನ್ಮಗಳಲ್ಲಿ, ಅನೇಕ ತಾಯಿ, ಅನೇಕ ತಂದೆ, ನೂರಾರು ಹೆಂಡತಿ- ಯರು, ಸಾವಿರಾರು ಮಕ್ಕಳು ಇವರನ್ನೆಲ್ಲಾ ಪಡೆದಿದ್ದಾಗಿದೆ. ಅನುಭವಿಸಿದ್ದೂ ಆಗಿದೆ. ಹೀಗಿರುವಾಗ ಯಾರಿಗೆ ಯಾರು ಸಂಬಂಧಪಟ್ಟವರು?
ಟಿಪ್ಪಣಿ - ಅದೆಷ್ಟೋ ಜನ್ಮಗಳನ್ನು ತಾಳಿದ್ದೇವೆ. ಅದೆಷ್ಟೋ ಜನ್ಮಗಳಲ್ಲಿ ಯಾರು ತಂದೆಯಾಗಿದ್ದಾರೆ, ತಾಯಿಯಾಗಿದ್ದಾರೆ, ಮಕ್ಕಳುಗಳಾಗಿದ್ದಾರೆ. ಹೀಗಿರುವಾಗ, ಯಾರು ತಂದೆ, ಯಾರು ತಾಯಿ, ಯಾರು ಮಕ್ಕಳು, ಯಾರು ಹೆಂಡತಿ, ಅವರಲ್ಲಿ ಯಾರೊಬ್ಬರೂ ಕೂಡ ಈ ಜನ್ಮದಲ್ಲಿ ಇರುವುದಿಲ್ಲ. ನಾವೂ ಕೂಡ ಅವರಿಗೆ ಯಾವುದೇ ರೀತಿಯಲ್ಲಿ ಸಂಬಂಧಿಕರಾಗಿರುವುದಿಲ್ಲ. ಈ ಜನ್ಮದಲ್ಲಿ ತಂದೆ, ತಾಯಿ, ಹೆಂಡತಿ, ಮಕ್ಕಳು ಯಾರಾಗಿದ್ದಾರೋ, ಅವರು ಕೇವಲ ಈ ಜನ್ಮಕ್ಕಷ್ಟೇ ಸೀಮಿತರಾದವರು. ಸಂಸಾರವು ಬಲು ಕ್ಷಣಿಕ. ಎಲ್ಲವೂ ಕೂಡ ಭಗವಂತನ
ಅಧೀನವಾಗಿ ನಡೆದು ಹೋಗುತ್ತದೆ. ಹೀಗಿರುವಾಗ ಹೆಂಡತಿ ಮಕ್ಕಳ ಮೇಲೆ ವಿಪರೀತವಾದ ಅಭಿಮಾನವೇಕೆ? ಅವರಿಗೋಸ್ಕರ ಸಮಯವನ್ನು ವ್ಯರ್ಥ- ಮಾಡುವುದೇಕೆ? ಇದನ್ನು ವಿವೇಚನೆ ಮಾಡಿ, ಸಂಸಾರದಲ್ಲಿ ಅನುರಕ್ತನಾಗದೇ ಕರ್ತವ್ಯದೃಷ್ಟಿಯಿಂದಷ್ಟೇ ಬದುಕಲು ಕಲಿಯಬೇಕು.
ನೈವಾಸ್ಯ ಕಶ್ಚಿದ್ ಭವಿತಾ ನಾಯಂ ಭವತಿ ಕಸ್ಯಚಿತ್ |
ಪಥಿ ಸಂಗತಮೇವೇದಂ ದಾರಬಂಧುಸುಹೃದ್ಗಣೈಃ ॥39॥
ಈ ಜಗತ್ತಿನಲ್ಲಿ ಯಾರೊಬ್ಬನೂ ಕೂಡ ಯಾರಿಗೂ ಉಪಕಾರಿಯಲ್ಲ. ಯಾರಿಗೂ ಸಂಬಂಧಪಟ್ಟವನೂ ಅಲ್ಲ. ತಮ್ಮ ಕರ್ಮಕ್ಕೆ ಅನುಗುಣವಾಗಿ ದಾರಿಯಲ್ಲಿ ಪ್ರಯಾಣ ಮಾಡುವವರ ಜೊತೆ ಕೂಡುವಂತೆ ಇವರೂ ಕೂಡ ಕೂಡಿ ಅಗಲುತ್ತಾರೆ.
ವಿವರಣೆ - ತಂದೆ, ತಾಯಿ, ಹೆಂಡತಿ, ಮಕ್ಕಳು, ಸ್ನೇಹಿತರು, ಬಂಧುಗಳು ಇವರೆಲ್ಲರೂ ಕೂಡ ಅತ್ಯಂತ ಕ್ಷಣಿಕರು. ದಾರಿಯಲ್ಲಿ ನಡೆದು ಹೋಗುವಾಗ ಅನೇಕರು ನಮ್ಮ ಜೊತೆ ಕೆಲವು ಕ್ಷಣಗಳ ಕಾಲ ಇರುತ್ತಾರೆ. ಅನಂತರ ಅವರು ಬೇರೆ ಊರಿಗೆ ಹೋಗುತ್ತಾರೆ. ನಾವು ನಮ್ಮ ಊರಿಗೆ ತೆರಳುತ್ತೇವೆ. ಅದರಂತೆ ಮೋಕ್ಷದ ದಾರಿಯಲ್ಲಿ ಸಾಗುವಾಗ, ಈ ಹೆಂಡತಿ, ಮಕ್ಕಳು ಮೊದಲಾದವ- ರೆಲ್ಲರೂ ಕೆಲವು ಕಾಲವಷ್ಟೇ ನಮ್ಮ ಜೊತೆ ಇರುತ್ತಾರೆ. ಇದನ್ನೆಲ್ಲಾ ಆಲೋಚನೆ ಮಾಡಿ, ಮನಸ್ಸನ್ನು ಸ್ಥಿರಗೊಳಿಸಬೇಕು.
ಕ್ವಾಸಂ ಕ್ವಾಸ್ಮಿ ಗಮಿಷ್ಯಾಮಿ ಕೋ ನ್ವಹಂ ಕಿಮಿಹಾಸ್ಥಿತಃ |
ಕಸ್ಮಾತ್ ಕಮನುಶೋಚೇಯಮಿತ್ಯೇವಂ ಸ್ಥಾಪಯೇನ್ಮನಃ ॥40॥
ಆದ್ದರಿಂದ ಯಾರು ವಿವೇಕಿಯೋ, ಅವನು ತನ್ನ ಮನಸ್ಸಿನಲ್ಲಿ ನಾನು ಎಲ್ಲಿ- ದ್ದೇನೆ? ಎಲ್ಲಿಗೆ ಹೋಗುತ್ತಿದ್ದೇನೆ? ನಾನು ಯಾರು? ಇಲ್ಲಿಗೇಕೆ ಬಂದಿದ್ದೇನೆ? ಯಾರಿಗೋಸ್ಕರ ಇಲ್ಲಿ ಇದ್ದೇನೆ? ಏತಕ್ಕಾಗಿ ಇದನ್ನೆಲ್ಲಾ ಆಲೋಚನೆ ಮಾಡುತ್ತಿ- ದ್ದೇನೆ? ಹೀಗೆ ತನ್ನಂತರಂಗದಲ್ಲಿ ಆತ್ಮವಿಮರ್ಶೆಯನ್ನು ಮಾಡಿಕೊಂಡು ಮನಸ್ಸನ್ನು ಸ್ಥಿರಗೊಳಿಸಬೇಕು.
ಅನಿತ್ಯೇ ಪ್ರಿಯಸಂವಾಸೇ ಸಂಸಾರೇ ಚಕ್ರವದ್ ಗತೌ |
ನ ದೃಷ್ಟಪೂರ್ವಂ ಪ್ರತ್ಯಕ್ಷಂ ಪರಲೋಕಂ ವಿದುರ್ಬುಧಾಃ ॥
ಆತಮಾಂಸ್ತ್ವನತಿಕ್ರಮ್ಯ ಶ್ರದ್ಧಾತವ್ಯಂ ಬುಭೂಷತಾ ॥41॥
ಈ ಸಂಸಾರವು ಚಕ್ರದಂತೆ ಸುತ್ತುತ್ತಿದೆ. ಇದರಲ್ಲಿ ಪ್ರಿಯವಾದವರ ಜೊತೆ ಸೇರುವಿಕೆ ಅನಿತ್ಯವಾಗಿದೆ, ಶಾಶ್ವತವಲ್ಲ. ಯಾರು ವಿವೇಕಿಯೋ, ಅವನು ಬಂಧುಮರಣದಿಂದ ದುಃಖಿಸಬಾರದು. ಪರಲೋಕವು ಕಣ್ಣಿಗೆ ಕಾಣಿಸುವುದಲ್ಲ. ಯಾರು ಪರಲೋಕಕ್ಕೆ ಆಸೆ ಪಡುತ್ತಾನೋ, ಅವನು ಶಾಸ್ತ್ರಮಾರ್ಯಾದೆಯನ್ನು ಮೀರದೇ ಅದರಲ್ಲಿ ನಂಬಿಕೆಯನ್ನಿಡಬೇಕೆಂದು ವಿದ್ವಾಂಸರು ಹೇಳುತ್ತಾರೆ. ಆದರೆ ಯಾರು ಶ್ರೇಯಸ್ಸನ್ನು ಅಪೇಕ್ಷಿಸುತ್ತಾನೋ, ಅವನು ವೇದಗಳಲ್ಲಿ ಹೇಳಿದ್ದನ್ನು ಉಲ್ಲಂಘನೆ ಮಾಡದೇ ಶ್ರದ್ಧೆಯನ್ನು ಹೊಂದಬೇಕು.
ವಿವರಣೆ - ನಾವು ಪರಲೋಕವನ್ನು ನೋಡದೇ ಇರಬಹುದು. ಅಥವಾ ನೋಡಿದ್ದು ನೆನಪಿಲ್ಲದೇ ಇರಬಹುದು. ಆದರೆ ಯಾರು ಧರ್ಮಾಧರ್ಮಗಳ ಬಗ್ಗೆ, ಪರಲೋಕದ ಬಗ್ಗೆ ಅನುಭವದಿಂದ ಮಾತನಾಡುತ್ತಾರೋ, ಅಂಥ ಋಷಿ- ಮುನಿಗಳ ಮಾತಿನಲ್ಲಿ ಶ್ರದ್ಧೆಯನ್ನಿಡಬೇಕು. ವೇದೋಕ್ತವಾದ ಕರ್ಮಗಳನ್ನು ಆಚರಿಸುತ್ತಾ, ವೇದವು ಹೇಳಿಕೊಟ್ಟ ಮಾರ್ಗದಲ್ಲಿ ಸಾಗಬೇಕು. ಅಂಥವನು ಮಾತ್ರ ನಿಜವಾದ ವಿವೇಕಿ ಎಂಬುದಾಗಿ ಕರೆಸಿಕೊಳ್ಳುತ್ತಾನೆ.
ಕುರ್ವೀತ ಪಿತೃದೈವತ್ಯಂ ಧರ್ಮಾಣಿ ಚ ಸಮಾಚರೇತ್ |
ಯಜೇಚ್ಚ ವಿದ್ವಾನ್ ವಿಧಿವತ್ ತ್ರಿವರ್ಗಂ ಚಾಪ್ಯನುವ್ರಜೇತ್ ॥42॥
ಯಾರು ನಿಜವಾದ ಜ್ಞಾನಿಯೋ, ಅವನು ಪಿತೃಸಂಬಂಧಿಯಾದ ಶ್ರಾದ್ಧ, ತರ್ಪಣ ಮೊದಲಾದ ಕಾರ್ಯಗಳನ್ನು ಮಾಡಬೇಕು. ದೇವತೆಗಳಿಗೆ ಸಂಬಂಧಪಟ್ಟ ಧರ್ಮಾಚರಣೆಗಳನ್ನು ಮಾಡಬೇಕು. ಹಾಗೂ ಯಾಗದ ಮೂಲಕ ಎಲ್ಲಾ ದೇವತೆ- ಗಳನ್ನು ಸಂತೋಷ ಪಡಿಸಬೇಕು. ಹೀಗೆ ಧರ್ಮ, ಅರ್ಥ, ಕಾಮಗಳಲ್ಲಿ ಅನುರಕ್ತ- ನಾಗಬೇಕು.
ಸನ್ನಿಮಜ್ಜೇಜ್ಜಗದಿದಂ ಗಂಭೀರೇ ಕಾಲಸಾಗರೇ |
ಜರಾಮೃತ್ಯುಮಹಾಗ್ರಾಹೇ ನ ಕಶ್ಚಿದವಬುಧ್ಯತೇ ॥43॥

ಈ ಕಾಲವೆಂಬ ಸಾಗರವು ಮುಪ್ಪು ಮತ್ತು ಮರಣಗಳೆಂಬ ಮೊಸಳೆಗಳಿಂದ ಕೂಡಿದೆ. ಈ ಸಾಗರದಲ್ಲಿ ಜಗತ್ತೇ ಮುಳುಗಿ ಹೋಗುತ್ತಿದೆ. ಆದರೆ ಯಾವ ಮನುಷ್ಯನೂ ಕೂಡ ಇದನ್ನು ತಿಳಿದುಕೊಳ್ಳುತ್ತಿಲ್ಲ.

ಆಯುರ್ವೇದಮಧೀಯಾನಾಃ ಕೇವಲಂ ಸಪರಿಗ್ರಹಮ್ |
ದೃಶ್ಯಂತೇ ಬಹವೋ ವೈದ್ಯಾ ವ್ಯಾಧಿಭಿಃ ಸಮಭಿಪ್ಲುತಾಃ ॥44॥

ಯಾರು ಆಯುರ್ವೇದವನ್ನು ಚೆನ್ನಾಗಿ ತಿಳಿದು ವೈದ್ಯರಾಗಿದ್ದಾರೋ, ಅಂಥ- ವರೂ ಕೂಡ ರೋಗಪೀಡಿತರಾಗಿರುವುದನ್ನು ಕಣ್ಣಾರೆ ಕಾಣುತ್ತಿದ್ದೇವೆ. ಅವರಷ್ಟೇ ಅಲ್ಲದೇ ಅವರ ಪರಿವಾರದವರೂ ಕೂಡ ರೋಗಗಳಿಂದ ಪೀಡಿತರಾಗಿದ್ದಾರೆ.

ತೇ ಪಿಬಂತಃ ಕಷಾಯಾಂಶ್ಚ ಸರ್ಪೀಂಷಿ ವಿವಿಧಾನಿ ಚ |
ನ ಮೃತ್ಯುಮತಿವರ್ತಂತೇ ವೇಲಾಮಿವ ಮಹೋದಧಿಃ ॥45॥

ಆ ಆಯುರ್ವೇದ ವೈದ್ಯರು ರೋಗದ ನಿವಾರಣೆಗಾಗಿ ಅನೇಕ ಬಗೆಯ ಕಷಾಯಗಳನ್ನು ಕುಡಿಯುತ್ತಾರೆ. ಔಷಧಿಸಸ್ಯಗಳಿಂದ ಬೆರೆಸಿದ ಘೃತಗಳನ್ನು ಕುಡಿ- ಯುತ್ತಾರೆ. ಆದರೆ ಸಮುದ್ರವು ತೀರವನ್ನು ದಾಟಿ ಹೊರಗೆ ಬಾರದೇ ಇರುವಂತೆ ಅವರೂ ಕೂಡ ಮೃತ್ಯುವನ್ನು ದಾಟಿ, ಹೊರಗಡೆ ಬರಲು ಸಾಧ್ಯವಾಗುವುದಿಲ್ಲ.

ವಿವರಣೆ - ಸಾಮಾನ್ಯವಾಗಿ ಆಯುರ್ವೇದ ವೈದ್ಯರು ಮುಪ್ಪು ಬರುವುದಿಲ್ಲ, ಯಾವುದೇ ರೋಗಗಳು ಬರುವುದಿಲ್ಲ ಎಂದು ಹೇಳುತ್ತಾ ಅನೇಕ ಬಗೆಯ ಔಷಧಿಗಳನ್ನು ನೀಡುತ್ತಾರೆ. ಮತ್ತೊಬ್ಬರಿಗೆ ಚಿಕಿತ್ಸೆಗಳನ್ನು ಮಾಡುತ್ತಾರೆ. ಆದರೆ ಸ್ವತಃ ತಾವೇ ಆ ಮೃತ್ಯುಕೂಪದಲ್ಲಿ ಬಿದ್ದಿರುತ್ತಾರೆ. ತಮಗೆ ಅಂಟಿಕೊಂಡ ರೋಗಗಳನ್ನು ಪರಿಹರಿಸಿಕೊಳ್ಳಲು ಅವರಿಗೆ ಸಾಧ್ಯವಾಗುತ್ತಿಲ್ಲ. ವೈದ್ಯವಿಜ್ಞಾನವು ಪ್ರತಿಯೊಂದ- ಕ್ಕೂ ಉಪಾಯವನ್ನು ಹೇಳಿದೆ. ಅದೆಲ್ಲವನ್ನೂ ಅನುಷ್ಠಾನಕ್ಕೆ ತಂದರೂ, ಇವರಿಂದ ರೋಗವನ್ನು ದಾಟಲು ಸಾಧ್ಯವಾಗುತ್ತಿಲ್ಲ. ಮರಣವನ್ನೂ ಕೂಡ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದರಿಂದಲೇ ನಮಗೆ ಸ್ಪಷ್ಟವಾಗುತ್ತದೆ. ಎಲ್ಲವೂ ಕೂಡ ಕಾಲದ ಅಧೀನ ಎಂದು.

ರಸಾಯನವಿದಶ್ಚೈವ ಸುಪ್ರಯುಕ್ತರಸಾಯನಾಃ |
ದೃಶ್ಯಂತೇ ಜರಯಾ ಭಗ್ನಾ ನಗಾ ನಾಗೈರಿವೋತ್ತಮೈಃ ॥46॥

ವೈದ್ಯರುಗಳು ಆಯುರ್ವೇದಶಾಸ್ತ್ರವನ್ನು ಅಧ್ಯಯನಮಾಡಿ, ರಸಾಯನಗಳನ್ನು ಸಿದ್ಧಪಡಿಸುತ್ತಾರೆ. ಮತ್ತು ಆಯುರ್ವೇದಶಾಸ್ತ್ರ ಹೇಳಿದ ಪ್ರಕಾರದಲ್ಲಿಯೇ ಎಲ್ಲಾ ಪಥ್ಯಗಳನ್ನು ಮಾಡುತ್ತಾ ಔಷಧಿಗಳನ್ನು ಸೇವಿಸುತ್ತಾರೆ. ಆದರೂ ಕೂಡ ವೃಕ್ಷಗಳು ಬಲಿಷ್ಠವಾದ ಆನೆಯ ಶಕ್ತಿಯಿಂದ ಹೇಗೆ ಮುರಿದುಬಿಡುತ್ತವೋ, ಹಾಗೆಯೇ ಈ ವೈದ್ಯರೂ ಕೂಡ ಮುಪ್ಪಿನಿಂದ ಭಗ್ನರಾಗುತ್ತಾರೆ.

ತಥೈವ ತಪಸೋಪೇತಾಃ ಸ್ವಾಧ್ಯಾಯಾಭ್ಯಸನೇ ರತಾಃ |
ದಾತಾರೋ ಯಜ್ಞಶೀಲಾಶ್ಚ ನ ತರಂತಿ ಜರಾಂತಕೌ ॥47॥

ಇದರಂತೆ ಋಷಿಮುನಿಗಳು ತಪಸ್ಸಿನಲ್ಲಿ ನಿರತರಾಗಿರುತ್ತಾರೆ. ವೇದಶಾಸ್ತ್ರಗಳ ಅಧ್ಯಯನದಲ್ಲಿ ಆಸಕ್ತರಾಗಿರುತ್ತಾರೆ. ಇವರುಗಳು ಮತ್ತು ದಾನಿಗಳು, ಯಜ್ಞ- ಶೀಲರು ಆ ವೈದ್ಯರಂತೆಯೇ ಮುಪ್ಪು ಮತ್ತು ಸಾವುಗಳನ್ನು ದಾಟಲು ಸಮರ್ಥ- ರಾಗುವುದಿಲ್ಲ.

ನ ಹ್ಯಹಾನಿ ನಿವರ್ತಂತೇ ನ ಮಾಸಾ ನ ಪುನಃ ಸಮಾಃ |
ಜಾತಾನಾಂ ಸರ್ವಭೂತಾನಾಂ ನ ಪಕ್ಷಾ ನ ಪುನಃ ಕ್ಷಪಾಃ ॥48॥

ಕಳೆದು ಹೋದ ದಿನಗಳು ಪುನಃ ಬರುವುದಿಲ್ಲ. ಕಳೆದು ಹೋದ ರಾತ್ರಿಗಳು, ಪಕ್ಷಗಳು, ಮಾಸಗಳು, ವರ್ಷಗಳು ಎಂದೆಂದೂ ಹಿಂದೆ ತಿರುಗಿ ಬರುವುದಿಲ್ಲ.

ಟಿಪ್ಪಣಿ - ನಹ್ಯಹಾನಿ ನಿವರ್ತಂತ ಇತ್ಯತ್ರ ಅಹಾನಿ ಗತಾಹಾನಿ ನ ನಿವರ್ತಂತೇ ಪುನರ್ನಾಯಾಂತಿ | ಏವಮುತ್ತರತ್ರಾಪಿ |
`ನಹ್ಯಹಾನಿ' ಎಂದರೆ ಕಳೆದ ದಿನಗಳು ಎಂದರ್ಥ. ನ ನಿವರ್ತಂತೇ' ಎಂದರೆ ಪುನಃ ಬರುವುದಿಲ್ಲ ಎಂದರ್ಥ.

ವಿವರಣೆ - ಆಯುಷ್ಯವು ಪ್ರತಿಕ್ಷಣವು ಕ್ಷೀಣಿಸುತ್ತದೆ. ಕಾಲದ ಬೆಲೆಯನ್ನು ಅರ್ಥಮಾಡಿಕೊಳ್ಳದೇ ಆಯುಷ್ಯದ ಹರಣವನ್ನೇ ಎಲ್ಲರೂ ಮಾಡುತ್ತಾರೆ. ಸೂರ್ಯಾಸ್ತವಾಯಿತೆಂದರೆ ಸಂತೋಷ ಪಡಬಾರದು. ಈ ದಿನದಲ್ಲಿ ನಾನು ಯಾವುದೇ ಸಾಧನೆಯನ್ನು ಮಾಡಲಿಲ್ಲ ಎಂಬುದಾಗಿ ಎಚ್ಚೆತ್ತುಕೊಂಡು, ಸಮಯ -ಸಾರ್ಥಕದ ಬಗ್ಗೆ ಗಮನವನ್ನು ಹರಿಸಬೇಕು. ಉಳಿದವರು ರೋಗರುಜಿನಗಳಿಂದ ಮರಣಗಳಿಂದ ಬಾಧಿತರಾಗುತ್ತಿದ್ದಾರೆ. ನಾನೂ ಕೂಡ ಇಂಥ ಸನ್ನಿವೇಶಕ್ಕೆ ಮುಂದೊಂದು ದಿನ ಭಾಗಿಯಾಗುತ್ತೇನೆ. ಆದ್ದರಿಂದ ಈಗ ನನಗೆ ದೊರೆತ ಸಮಯವನ್ನು ಸಾರ್ಥಕ ಮಾಡಿಕೊಳ್ಳಬೇಕು ಯಾವುದೇ ರೀತಿಯಲ್ಲಿ ಆಲಸ್ಯವನ್ನು ನಾನು ಮಾಡಬಾರದು ಎಂಬುದಾಗಿ ಎಲ್ಲಿಯ ತನಕ ಮನುಷ್ಯನು ಎಚ್ಚೆತ್ತು- ಕೊಳ್ಳುವುದಿಲ್ಲವೋ, ಅಲ್ಲಿಯ ತನಕವೂ ಅವನು ಅವಿವೇಕಿಯಾಗಿಯೇ ಬದುಕು- ತ್ತಾನೆ.

ಸೋಽಯಂ ವಿಪುಲಮಧ್ವಾನಂ ಕಾಲೇನ ಧ್ರುವಮಧ್ರುವಃ |
ನರೋಽವಶಃ ಸಮಭ್ಯೇತಿ ಸರ್ವಭೂತನಿಷೇವಿತಮ್ ॥49॥

ಅತ್ಯಂತ ಅಸ್ಥಿರನಾದ, ಅಸ್ವತಂತ್ರನಾದ ಮನುಷ್ಯನ ಕಾಲವು ಸನ್ನಿಹಿತವಾದಾಗ ಎಲ್ಲಾ ಪ್ರಾಣಿಗಳು ತುತ್ತಾಗುವ ವಿಶಾಲವಾದ ಆ ಮೃತ್ಯುವಿನ ದಾರಿಯನ್ನು ಹಿಡಿ- ಯುತ್ತಾನೆ.

ದೇಹೋ ವಾ ಜೀವತೋಽಪ್ಯೇತಿ ಜೀವೋ ವಾಪ್ಯೇತಿ ದೇಹತಃ |
ಪಥಿ ಸಂಗತಮೇವೇದಂ ದಾರೈರನ್ಯೈಶ್ಚ ಬಂಧುಭಿಃ ॥50॥

ಒಂದೋ ದೇಹವು ಜೀವನನ್ನು ಬಿಡುತ್ತದೆ. ಅಥವಾ ಜೀವನು ದೇಹವನ್ನು ಬಿಡುತ್ತಾನೆ. ಇದರ ನಡುವೆ ಸೇರುವ ಹೆಂಡತಿ ಮಕ್ಕಳೆಂಬ ಸಂಸರ್ಗವು ಕೇವಲ ಪ್ರಯಾಣಿಕರ ಸೇರುವಿಕೆಯಂತೆ ಅಶಾಶ್ವತವಾಗಿದೆ.

ಟಿಪ್ಪಣಿ - ದೇಹೋ ವಾ ಜೀವತಃ ಇತ್ಯತ್ರ ಜೀವತಃ ಜೀವಾತ್ ದೇಹೋ ಗಚ್ಛೇತ್, ಶಿರಶ್ಛೇದದಾಹಾದೌ ದೇಹಸ್ಯೈವ ಪ್ರಾಗ್ ಗಮನಾತ್| ಜೀವೋಽಪ್ಯೇತಿ ದೇಹತಃ ಯೋಗಾಭ್ಯಾಸಾದಿನಾ ಮರಣೇ ಸತಿ ದೇಹತಃ ಜೀವಃ ಅಪ್ಯೇತಿ ನಾಶಂ ಪ್ರಾಪ್ನೋತಿ |
`ಜೀವಿತಃ' ಜೀವಿಸಲ್ಪಟ್ಟ, `ದೇಹಃ' ದೇಹವು ನಾಶವಾಗುತ್ತದೆ. ಶಿರಶ್ಛೇದ ಮತ್ತು ದಾಹಾದಿಗಳಲ್ಲಿ ದೇಹವೇ ಮೊದಲು ನಾಶವಾಗುತ್ತದೆ.

ಅನಂತರ ಜೀವನು ತೆರಳುತ್ತಾನೆ. ಯೋಗಾಭ್ಯಾಸಗಳಿಂದ ಮರಣವಾದಾಗ ಮೊದಲು ಜೀವನು ಹೊರಡುತ್ತಾನೆ. ಅನಂತರ ದೇಹವು ನಾಶವಾಗುತ್ತದೆ.
ನಾಯಮತ್ಯಂತಸಂವಾಸೋ ಲಭ್ಯತೇ ಜಾತು ಕೇನಚಿತ್ |
ಅಪಿ ಸ್ವೇನ ಶರೀರೇಣ ಕಿಮುತಾನ್ಯೇನ ಕೇನಚಿತ್ ॥51॥
ಒಬ್ಬ ಮನುಷ್ಯನು ಮತ್ತೊಬ್ಬ ಮನುಷ್ಯನ ಜೊತೆ ಸ್ನೇಹದಿಂದ ಹೆಚ್ಚು ಕಾಲ
ಬದುಕಲು ಸಾಧ್ಯವಿಲ್ಲ. ಬೇರೆ ಎಲ್ಲರಿಗಿಂತಲೂ ಹೆಚ್ಚು ಪ್ರೀತಿಯನ್ನು ಮಾಡುವ ತನ್ನ ಶರೀರದಲ್ಲಿಯೇ ತಾನು ಹೆಚ್ಚು ಕಾಲವಿರಲು ಸಾಧ್ಯವಾಗುವುದಿಲ್ಲ. ಹೀಗಿರುವಾಗ ಮತ್ತೊಬ್ಬನ ಜೊತೆ ಹೆಚ್ಚು ಕಾಲ ಇರುವುದಿಲ್ಲವೆಂದು ಹೇಳುವುದೇನಿದೆ.
ವಿವರಣೆ - ಪ್ರೀತ್ಯಾಸ್ಪದರು ಅಗಲಿದಾಗ ದುಃಖ ಪಡುವುದು, ಒಂದಾದಾಗ ಸಂತೋಷಪಡುವುದು, ಇದು ಅವಿವೇಕಿಗಳ ವರ್ತನೆ. ಏಕೆಂದರೆ `ಯಾರಿಗೆ ಯಾರಿಗುಂಟು ಎರವಿನ ಸಂಸಾರ' ಎಂಬ ನಾಣ್ಣುಡಿಯಂತೆ ಪ್ರೀತ್ಯಾಸ್ಪದನಾದ ವ್ಯಕ್ತಿಯಿದ್ದರೂ ಅವನ ಜೊತೆ ಅಭಿಮಾನವನ್ನು ಬೆಳಸಿಕೊಳ್ಳದೇ ಬದುಕಬೇಕು. ಆಗಷ್ಟೇ ಅಗಲಿದಾಗ ಯಾವುದೇ ದುಃಖವು ಉಂಟಾಗುವುದಿಲ್ಲ. ತನ್ನ ಶರೀರ- ವನ್ನೂ ಕೂಡ ಹೆಚ್ಚು ಪ್ರೀತಿ ಮಾಡಬಾರದು. ಸಾಧನೆಗೆ ಅನುಕೂಲವಾಗಲು ಮಾತ್ರ ಅದನ್ನು ಉಪಯೋಗಿಸಿಕೊಳ್ಳಬೇಕು. ಒಂದು ವಾಹನವನ್ನು ಉಪ- ಯೋಗಿಸಿಕೊಂಡು ನಾವು ಎಲ್ಲಿಗೆ ತಲುಪಬೇಕೋ, ಅಲ್ಲಿಗೆ ತಲುಪುತ್ತೇವೆ. ತಲುಪುವ ತನಕ ಮಾತ್ರ ವಾಹನವು ನಮಗೆ ಅನಿವಾರ್ಯವಾಗುತ್ತದೆ. ನಮ್ಮ ಉದ್ದಿಷ್ಟವಾದ ಸ್ಥಳವು ದೊರೆತ ಮೇಲೆ ವಾಹನವನ್ನು ಯಾವುದೇ ಅಭಿಮಾನ- ವಿಲ್ಲದೆ ಬಿಟ್ಟು ಹೇಗೆ ತೆರಳುತ್ತೇವೋ, ಅದರಂತೆ ಈ ದೇಹವೂ ಕೂಡ ಒಂದು ಜನ್ಮದಿಂದ ಮತ್ತೊಂದು ಜನ್ಮದ ತನಕ ನಡೆಯಲು ವಾಹನವಾಗಿದೆ. ಆದ್ದರಿಂದ ದೇಹದ ವಿಷಯದಲ್ಲೂ ಹೆಚ್ಚು ಅಭಿಮಾನವನ್ನು ಮಾಡಬಾರದು.
ಕ್ವ ನು ತೇಽದ್ಯ ಪಿತಾ ರಾಜನ್ ಕ್ವ ನು ತೇಽದ್ಯ ಪಿತಾಮಹಃ |
ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯಂತಿ ತೇಽಪಿ ಚ ॥52॥
ಪಾಪರಹಿತನಾದ ಜನಕರಾಜನೇ! ನಿನ್ನ ತಂದೆಯು ಎಲ್ಲಿದ್ದಾನೆ ತಿಳಿಸು. ನಿನ್ನ ತಾತಂದಿರು ಎಲ್ಲಿದ್ದಾರೆ ತಿಳಿಸು. ಯಾರೂ ಸಹ ಇಂದು ನಿನ್ನ ಕಣ್ಣಿಗೆ ಕಾಣಿಸುತ್ತಿಲ್ಲ. ನೀನೂ ಸಹ ಅವರ ಕಣ್ಣಿಗೆ ಕಾಣಿಸುತ್ತಿಲ್ಲ.
ವಿವರಣೆ - ನಿನ್ನ ತಂದೆ ತಾತಂದಿರು, ನಿನ್ನ ಜೊತೆ ಇಂದು ಹೇಗೆ ಇರು- ವುದಿಲ್ಲವೋ, ಅದರಂತೆ ಮುಂದೊಂದು ದಿನ ಹೆಂಡತಿ, ಮಕ್ಕಳು, ಮೊಮ್ಮಕ್ಕಳಿಂದ ದೂರನಾಗುವಿ. ಅಂದು ಅವರನ್ನು ನೀನು ನೋಡಲು ಸಾಧ್ಯವಿಲ್ಲ. ನಿನ್ನನ್ನು ಅವರು ನೋಡಲು ಸಾಧ್ಯವಿಲ್ಲ. ಆದ್ದರಿಂದ ಹೆಂಡತಿ ಮಕ್ಕಳ ಮೇಲೆ ಅಭಿಮಾನ- ವನ್ನು ಪರಿತ್ಯಾಗ ಮಾಡಬೇಕು.
ನ ಹ್ಯೇವ ಪುರುಷೋ ದ್ರಷ್ಟಾ ಸ್ವರ್ಗಸ್ಯ ನರಕಸ್ಯ ವಾ |
ಆಗಮಸ್ತು ಸತಾಂ ಚಕ್ಷುರ್ನೃಪತೇ ತಮಿಹಾಚರ ॥53॥
ನರೋತ್ತಮನೇ! ಯಾರೇ ಒಬ್ಬ ಪುರುಷನು ಮಾಂಸಮಯವಾದ ಈ ಕಣ್ಣಿನಿಂದ ಅತೀಂದ್ರಿಯವಾದ ಸ್ವರ್ಗವನ್ನು ಕಾಣಲು ಸಾಧ್ಯವಿಲ್ಲ. ನರಕವನ್ನೂ ಕೂಡ ನೋಡಲು ಸಾಧ್ಯವಿಲ್ಲ. ಸಜ್ಜನರಿಗೆ ಸ್ವರ್ಗ ಹಾಗೂ ನರಕಗಳನ್ನು ನೋಡುವ ಕಣ್ಣು ಎಂದರೆ ಅದು ವೇದ ಮಾತ್ರ. ಅಂಥ ಕಣ್ಣಿನಂತಿರುವ ವೇದದಲ್ಲಿ ಹೇಳಲ್ಪಟ್ಟ ಕರ್ತವ್ಯಗಳನ್ನು ಆಚರಿಸುವುದರಲ್ಲಿ ಆಸಕ್ತನಾಗು.
ವಿವರಣೆ - ದೇವರು, ಧರ್ಮ, ಸ್ವರ್ಗ, ನರಕ ಇವುಗಳನ್ನು ವೇದದಿಂದಷ್ಟೇ ತಿಳಿಯಲು ಸಾಧ್ಯ. ವೇದವು ಹೇಳುವ ವಿಷಯದಲ್ಲಿ ವಿಶ್ವಾಸವನ್ನಿಟ್ಟು, ನರಕಕ್ಕೆ ಹೆದರಿ ಸ್ವರ್ಗದಲ್ಲಿ ಅನುರಕ್ತರಾಗಿ ನಾವು ನಮ್ಮ ಕರ್ತವ್ಯಗಳಲ್ಲಿ ತೊಡಗಬೇಕು. ಸ್ವರ್ಗಾದಿಗಳನ್ನು ನೋಡಲು ನಮಗಿರುವ ಕಣ್ಣು ಎಂದರೆ ವೇದಮಾತ್ರ. ಯಾರು ಈ ವೇದವನ್ನು ಓದುವುದಿಲ್ಲವೋ, ಅವರು ಕಣ್ಣಿಲ್ಲದ ಕುರುಡನಂತೆ ಪ್ರಪಾತಕ್ಕೆ ಬಿದ್ದು ಅಧೋಗತಿಯನ್ನೇ ಹೊಂದುತ್ತಾನೆ.
ಚರಿತಬ್ರಹ್ಮಚರ್ಯೋ ಹಿ ಪ್ರಜಾಯೇತ ಯಜೇತ ಚ |
ಪಿತೃದೇವಮಹರ್ಷೀಣಾಮಾನೃಣ್ಯಾದನಸೂಯಕಃ ॥54॥
ತ್ರೈವರ್ಣಿಕನಾದ ಪುರುಷನು ಬ್ರಹ್ಮಚರ್ಯ ಆಶ್ರಮವನ್ನು ನಿಷ್ಠೆಯಿಂದ ಪರಿ- ಪಾಲನೆ ಮಾಡಬೇಕು. ಆ ಸಂದರ್ಭದಲ್ಲಿ ಗುರುಶುಶ್ರೂಷೆಯನ್ನು ಮಾಡುತ್ತಾ, ವೇದವನ್ನು ಅಧ್ಯಯನ ಮಾಡಬೇಕು. ವೇದಾಂಗಗಳನ್ನೂ ಕೂಡ ಅಧ್ಯಯನ ಮಾಡಬೇಕು. ಜೀವನದ ಪ್ರಾರಂಭದಲ್ಲಿ ಹೀಗೆ ಬ್ರಹ್ಮಚರ್ಯ ಆಶ್ರಮವನ್ನು ಪಾಲನೆ ಮಾಡಿದ ಮೇಲೆ, ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡಬೇಕು. ಗೃಹಸ್ಥಾಶ್ರಮವನ್ನು ತೆಗೆದುಕೊಂಡ ಮೇಲೆ ಪಿತೃಯಜ್ಞ, ದೇವಯಜ್ಞ, ಮನುಷ್ಯಯಜ್ಞಗಳನ್ನು ಮಾಡುವ ಮೂಲಕ ಋಣಪರಿಹಾರವನ್ನು ಮಾಡಿಕೊಳ್ಳಬೇಕು. ಪ್ರಜಾಸಂತಾನವನ್ನು ಅಭಿವೃದ್ಧಿಗೊಳಿಸಬೇಕು. ಯಜ್ಞಗಳನ್ನು ಆಚರಣೆ ಮಾಡಬೇಕು. ಪ್ರತಿಯೊಂದು ಕರ್ಮಗಳ ಹಿಂದೆ ಅಸೂಯೆಯೆಂಬ ದೋಷವು ಬರಬಾರದು.
ಟಿಪ್ಪಣಿ - ಪ್ರಜಾಯೇತ ಯಜೇತ ಚ ಇತ್ಯತ್ರ ಪ್ರಜಾಯೇತ ಪ್ರಜಾಂ ಜನಯೇತ್ |
ಟಿಪ್ಪಣಿ - ತ್ರೈವರ್ಣಿಕನಾದ ಮನುಷ್ಯನು ಹುಟ್ಟಿದಾಗಿನಿಂದ ಸಾಯುವ ತನಕ ಹೇಗೆ ಸಾಧನೆಯನ್ನು ಮಾಡಿಕೊಳ್ಳಬೇಕು. ಬ್ರಹ್ಮಚರ್ಯ ಆಶ್ರಮದಲ್ಲಿ ಯಾವ ಧರ್ಮವನ್ನು ಮುಖ್ಯವಾಗಿ ಅನುಷ್ಠಾನ ಮಾಡಬೇಕು ಎಂಬುದರ ಬಗ್ಗೆ ಈ ಶ್ಲೋಕದಲ್ಲಿ ವಿಶ್ಲೇಷಣೆ ಮಾಡುತ್ತಿದ್ದಾರೆ. ಗುರುಶುಶ್ರೂಷೆ, ವೇದಾಧ್ಯಯನ, ವೇದಾಂಗಗಳ ಅಧ್ಯಯನ ಈ ಮೂರು ಬ್ರಹ್ಮಚಾರಿಗೆ ಆವಶ್ಯಕವಾದ ಕರ್ಮ- ಗಳಾಗಿವೆ. ಗೃಹಸ್ಥಾಶ್ರಮಿಗೆ ಋಣಪರಿಹಾರ, ಸಂತಾನಾಭಿವೃದ್ಧಿ, ಅಧ್ಯಯನ, ಯಜನ ಮೊದಲಾದ ಕರ್ಮಗಳು ಅತ್ಯಂತ ಅವಶ್ಯಕವಾಗಿವೆ.
ಸ ಯಜ್ಞಶೀಲಃ ಪ್ರಜನೇ ನಿವಿಷ್ಟಃ
ಪ್ರಾಗ್ ಬ್ರಹ್ಮಚಾರೀ ಪ್ರವಿಭಕ್ತಪಕ್ಷಃ |
ಆರಾಧಯೇತ್ ಸ್ವರ್ಗಮಿಮಂ ಚ ಲೋಕಂ
ಪರಂ ಚ ಮುಕತ್ವ ಹೃದಯವ್ಯಲೀಕಮ್ ॥55॥
ಸಾಧಕನಾದವನು ಮೊದಲು ಬ್ರಹ್ಮಚರ್ಯವ್ರತವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡಬೇಕು. ವೇದಾಧ್ಯಯನವು ಮುಗಿದ ಮೇಲೆ

ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡಿ, ಸಂತಾನವನ್ನು ಪಡೆಯಬೇಕು. ಕಣ್ಣಿನಿಂದ ಯಾವುದೇ ತಪ್ಪನ್ನು ಮಾಡ- ಬಾರದು. ಹೃದಯದಲ್ಲಿ ಯಾವುದೇ ದೋಷವನ್ನು ಇಟ್ಟುಕೊಳ್ಳಬಾರದು. ಯಜ್ಞ- ಶೀಲನಾಗಿರಬೇಕು. ಮೋಕ್ಷವನ್ನು ಬಯಸಬೇಕು. ಪರಮಾತ್ಮನನ್ನು ಆರಾಧನೆ ಮಾಡಬೇಕು.
ಟಿಪ್ಪಣಿ - ಯಜ್ಞವನ್ನು ಆಚರಣೆ ಮಾಡಿದರೆ ದೇವತೆಗಳು ತೃಪ್ತರಾಗುತ್ತಾರೆ.   ತನ್ಮೂಲಕ ಭಗವಂತನೂ ಕೂಡ ತೃಪ್ತನಾಗುತ್ತಾನೆ. ಜೀವನದಲ್ಲಿ ಬ್ರಹ್ಮಚರ್ಯ ಆಶ್ರಮವನ್ನು ಮೊದಲು ಹೊಂದಿ, ಉತ್ತಮ ಜ್ಞಾನಿಯಾಗಿ ಅನಂತರ ಗೃಹಸ್ಥಾ- ಶ್ರಮವನ್ನು ಸ್ವೀಕಾರ ಮಾಡಬೇಕು. ಅನೇಕ ಸತ್ಕರ್ಮಗಳನ್ನು ಆಚರಣೆ ಮಾಡುವ ಮೂಲಕ ಗೃಹಸ್ಥಾಶ್ರಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಹೇಳಿದ್ದಾರೆ.
ಸಮ್ಯಗ್ ಹಿ ಧರ್ಮಂ ಚರತೋ ನೃಪಸ್ಯ
ದ್ರವ್ಯಾಣಿ ಚಾಪ್ಯಾಹರತೋ ಯಥಾವತ್ |
ಪ್ರವೃತ್ತಧರ್ಮಸ್ಯ ಯಶೋಽಭಿವರ್ಧತೇ
ಸರ್ವೇಷು ಲೋಕೇಷು ಚರಾಚರೇಷು ॥56॥
ಧರ್ಮವನ್ನು ಅಚ್ಚುಕಟ್ಟಾಗಿ ಅನುಷ್ಠಾನ ಮಾಡಬೇಕು. ಧರ್ಮಮಾರ್ಗದಲ್ಲಿ ಪ್ರಜಾಪರಿರಕ್ಷಣೆಯನ್ನು ಮಾಡಬೇಕು. ಆಯಾ ಪ್ರಜೆಗಳಿಗೆ ಬರುವ ಆದಾಯಕ್ಕೆ ಅನುಗುಣವಾಗಿ ತೆರಿಗೆಯನ್ನು ತೆಗೆದುಕೊಳ್ಳಬೇಕು. ಹೀಗೆ ಯಾರು ಧರ್ಮ- ಮಾರ್ಗದಲ್ಲಿ ರಾಜ್ಯವನ್ನು ಪರಿರಕ್ಷಣೆ ಮಾಡುತ್ತಾನೋ, ಅಂಥ ರಾಜನ ಕೀರ್ತಿಯು ಎಲ್ಲ ಲೋಕಗಳಲ್ಲೂ ಕೂಡ ಹಬ್ಬುತ್ತದೆ.
ಟಿಪ್ಪಣಿ - ಕ್ಷತ್ರಿಯನಾದ ರಾಜನು ಏನು ಮಾಡಬೇಕೆಂಬುದನ್ನು ಈ ಶ್ಲೋಕವು ತಿಳಿಸುತ್ತಿದೆ. ತನ್ನ ವೈಯಕ್ತಿಕ ಅಭಿಪ್ರಾಯವನ್ನಿಟ್ಟುಕೊಂಡು ಒಬ್ಬರಲ್ಲಿ ಅನುರಾಗ, ಮತ್ತೊಬ್ಬರಲ್ಲಿ ದ್ವೇಷಗಳನ್ನು ಮಾಡಬಾರದು. ಎಲ್ಲ ಪ್ರಜೆಗಳನ್ನು ಅನುರಾಗ- ದಲ್ಲಿಯೇ ಕಾಣಬೇಕು. ತನಗೆ ಅವಶ್ಯಕವಿದೆಯೆಂದು ತೆರಿಗೆಯನ್ನೂ ಕೂಡ ಬಹಳ ಸ್ವೀಕಾರ ಮಾಡಬಾರದು. ಎಷ್ಟು ತೆರಿಗೆಯನ್ನು ತೆಗೆದುಕೊಂಡಾಗ ಪ್ರಜೆಗಳಿಗೆ ಕಷ್ಟವಾಗುವುದಿಲ್ಲವೋ, ಅಷ್ಟನ್ನು ಮಾತ್ರ ಸ್ವೀಕಾರ ಮಾಡಬೇಕು.
ಇತ್ಯೇವಮಾಜ್ಞಾಯ ವಿದೇಹರಾಜೋ
ವಾಕ್ಯಂ ಸಮಗ್ರಂ ಪರಿಪೂರ್ಣಹೇತುಃ |
ಅಶ್ಮಾನಮಾಮಂತ್ರ್ಯ ವಿಶುದ್ಧಬುದ್ಧಿಃ
ಯಯೌ ಗೃಹಂ ಸ್ವಂ ಪ್ರತಿ ಶಾಂತಶೋಕಃ ॥57॥
ಹೀಗೆ ಶುದ್ಧವಾದ ಬುದ್ಧಿಯಿಂದ ಕೂಡಿದ ವಿದೇಹರಾಜನು ಅಶ್ಮಮುನಿಯು ಹೇಳಿದ ಯುಕ್ತಿಯಿಂದ ಕೂಡಿದ, ಸಮಗ್ರ ಉಪದೇಶವನ್ನು ಕೇಳಿದನು. ಅದರಿಂದ ಅವನಿಗಿರುವ ದುಃಖವೆಲ್ಲವೂ ಪರಿಹಾರವಾಯಿತು. ಆ ಅಶ್ಮಋಷಿಯ ಅಪ್ಪಣೆಯನ್ನು ಪಡೆದುಕೊಂಡು ತನ್ನ ಅರಮನೆಗೆ ಹಿಂತಿರುಗಿದನು.
ಟಿಪ್ಪಣಿ - ಇಲ್ಲಿಯ ತನಕ ಅಶ್ಮಮುನಿಯು ಜನಕರಾಜನಿಗೆ ಉಪದೇಶ ಮಾಡಿದ್ದನ್ನು ವೇದವ್ಯಾಸದೇವರು ಯುಧಿಷ್ಠಿರನಿಗೆ ತಿಳಿಸಿದರು. ಯುಧಿಷ್ಠಿರನೇ ! ಅಶ್ಮಮುನಿಯ ಯುಕ್ತಿಯುಕ್ತವಾದ ಉಪದೇಶವನ್ನು ಕೇಳಿರುವಿ ಅಲ್ಲವೇ? ಯಾವಾಗ ಸಂಪೂರ್ಣವಾಗಿ ಉಪದೇಶವನ್ನು ಪಡೆದನೋ, ಆಗ ಜನಕರಾಜನು ಬಹಳ ಸಂತೋಷ ಪಟ್ಟನು. ತನ್ನಲ್ಲಿರುವ ದುಃಖವೆಲ್ಲವನ್ನು ಪರಿಹಾರ ಮಾಡಿ- ಕೊಂಡನು. ಮತ್ತು ರಾಜ್ಯಭಾರಕ್ಕಾಗಿ ತನ್ನ ಅರಮನೆಗೆ ಹೊರಟನು.
ತಥಾ ತ್ವಮಪ್ಯಚ್ಯುತ ಮುಂಚ ಶೋಕಂ
ಉತ್ತಿಷ್ಠ ಶಕ್ರೋಪಮ ಹರ್ಷಮೇಹಿ |
ಕ್ಷಾತ್ರೇಣ ಧರ್ಮೇಣ ಮಹೀ ಜಿತಾ ತೇ
ತಾಂ ಭುಂಕ್ಷ್ವ ಕುಂತೀಸುತ ಮಾ ವಿಷಾದೀಃ ॥58॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ವ್ಯಾಸವಾಕ್ಯೇ ಅಶ್ಮಗೀತಂ ನಾಮ ಏಕೋನತ್ರಿಂಶೋಽಧ್ಯಾಯಃ ॥29
ಯಾವುದೇ ದೋಷವಿಲ್ಲದ ಇಂದ್ರನಿಗೆ ಸಮಾನನಾದ ಕುಂತಿಪುತ್ರನೇ! ಅಶ್ಮ- ಋಷಿಯು ಜನಕರಾಜನಿಗೆ ಮನಸ್ಸಿಗೆ ನಾಟುವಂತೆ ಉಪದೇಶವನ್ನು ಮಾಡಿದರು. ಇದರಿಂದ ಆ ಜನಕರಾಜನ ಶೋಕಮೋಹಗಳೆಲ್ಲವೂ ಪರಿಹಾರವಾದವು. ಮತ್ತು ಅದೇ ಪ್ರಭಾವದಿಂದ ನೀನೂ ಸಹ ಶೋಕವನ್ನು ಪರಿತ್ಯಾಗ ಮಾಡು. ಉತ್ಸಾಹ ಭರಿತನಾಗು. ಸಂತೋಷವನ್ನು ಹೊಂದು, ನಿನ್ನ ಧರ್ಮಕ್ಕೆ ಅನುಸಾರಿಯಾಗಿ ಭೂಮಂಡಲವನ್ನು ಜಯಿಸಿರುವಿ, ನಿನಗಾಗಿ ಒಲಿದ ಭೂಮಿಯ ಅವಹೇಳವನ್ನು ಮಾಡಬೇಡ. ನಿನ್ನ ಪರಾಕ್ರಮವೆಂಬ ಶುಲ್ಕದಿಂದ ಪಡೆದುಕೊಂಡ ಈ ಭೂಮಿ- ಯನ್ನು ಅನುಭವಿಸು.
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಇಪ್ಪತೊಂಭತ್ತನೆಯ ಅಧ್ಯಾಯವು ಮುಗಿಯಿತು.
*****
30. ಮೂವತ್ತನೆಯ ಅಧ್ಯಾಯ
ವೈಶಂಪಾಯನಃ
ಅವ್ಯಾಹರತಿ ಕೌಂತೇಯೇ ಧರ್ಮಪುತ್ರೇ ಯುಧಿಷ್ಠಿರೇ |
ಗುಡಾಕೇಶೋ ಹೃಷೀಕೇಶಮಭ್ಯಭಾಷತ ಪಾಂಡವಃ ॥1॥
ವೈಶಂಪಾಯನರು  ಎಲ್ಲ ಋಷಿಮುನಿಗಳು ಎಷ್ಟೇ ಸಮಾಧಾನ ಮಾಡಿದರೂ, ಯುಧಿಷ್ಠಿರನು ಏನನ್ನೂ ಮಾತನಾಡಲಿಲ್ಲ. ಮೌನವಾಗಿಯೇ ಕುಳಿತಿದ್ದ. ಹೀಗಿರು- ವಾಗ ಪಾಂಡುವಿನ ಪುತ್ರನಾದ ಅರ್ಜುನನು ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳುತ್ತಾನೆ
ಜ್ಞಾತಿಶೋಕಾಭಿಸಂತಪ್ತೋ ಧರ್ಮರಾಜಃ ಪರಂತಪಃ |
ಏಷ ಶೋಕಾರ್ಣವೇ ಮಗ್ನಸ್ತಮಾಶ್ವಾಸಯ ಮಾಧವ ॥2॥

ಓ ಮಾಧವನೇ! ಶತ್ರುಗಳಿಗೆ ತಾಪವನ್ನು ಉಂಟುಮಾಡುವ ಧರ್ಮರಾಜನು ಈಗ ಜ್ಞಾತಿಗಳ ವಿಯೋಗದಿಂದ ಬಹಳ ದುಃಖವನ್ನು ಅನುಭವಿಸುತ್ತಿದ್ದಾನೆ. ದುಃಖ- ಸಾಗರದಲ್ಲಿಯೇ ಮುಳುಗಿದ್ದಾನೆ. ಇಂಥ ನಮ್ಮಣ್ಣನಾದ ಧರ್ಮರಾಜನಿಗೆ ನೀನೇ ಸಮಾಧಾನ ಮಾಡಬೇಕು.

ಸರ್ವೇ ಸ್ಮ ತೇ ಸಂಶಯಿತಾಃ ಪುನರೇವ ಜನಾರ್ದನ |
ಅಸ್ಯ ಶೋಕಂ ಮಹಾಬಾಹೋ ಪ್ರಣಾಶಯಿತುಮರ್ಹಸಿ ॥3॥

ಅಣ್ಣನಾದ ಧರ್ಮರಾಜನು ಹೀಗೆ ದುಃಖಿತನಾದರೆ, ನಾವೆಲ್ಲರೂ ಸಂಶಯ- ಗ್ರಸ್ತರಾಗುತ್ತೇವೆ. ಏನನ್ನು ಮಾಡಬೇಕೆಂದು ತಿಳಿಯದೇ ದಿಗ್ಭ್ರಾಂತರಾಗುತ್ತೇವೆ. ಮಹಾಬಾಹುವೇ! ಕಾರುಣ್ಯದಿಂದ ಆ ಧರ್ಮರಾಜನ ಶೋಕವನ್ನು ಪರಿಹಾರ ಮಾಡು. ನೀನೊಬ್ಬನೇ ಇದಕ್ಕೆ ಸಮರ್ಥನು.

ಏವಮುಕ್ತಸ್ತು ಗೋವಿಂದೋ ವಿಜಯೇನ ಮಹಾತ್ಮನಾ |
ಪರ್ಯವರ್ತತ ರಾಜಾನಂ ಪುಂಡರೀಕೇಕ್ಷಣೋಽಚ್ಯುತಃ ॥4॥

ಜನಮೇಜಯರಾಜನೇ! ಅರ್ಜುನನು ಹೀಗೆ ಪ್ರಾರ್ಥನೆ ಮಾಡಿದಾಗ ಪುಂಡ- ರೀಕಾಕ್ಷನಾದ ಶ್ರೀಕೃಷ್ಣಪರಮಾತ್ಮನು ಹಾಗೆಯೇ ಆಗಲಿ ಎಂದು ಸಮ್ಮತಿ ನೀಡಿದನು. ರಾಜನಾದ ಧರ್ಮರಾಜನಿರುವಲ್ಲಿಗೆ ನಡೆದನು. ಅವನೆದುರು ಕುಳಿತು, ಮಾತನಾ- ಡಲು ಪ್ರಾರಂಭ ಮಾಡಿದನು.

ಅನತಿಕ್ರಮಣೀಯೋ ಹಿ ಧರ್ಮರಾಜಸ್ಯ ಕೇಶವಃ |
ಬಾಲ್ಯಾತ್ ಪ್ರಭೃತಿ ಗೋವಿಂದಃ ಪ್ರೀತ್ಯಾ ಚಾಭ್ಯಧಿಕೋಽರ್ಜುನಾತ್ ॥5॥

ಧರ್ಮರಾಜನು ಕೇಶವನಾದ ಶ್ರೀಕೃಷ್ಣನ ಮಾತನ್ನು ಎಂದೂ ಸಹ ಉಲ್ಲಂಘನೆ ಮಾಡಿರುವನಲ್ಲ. ಬಾಲ್ಯದಿಂದ ಅರ್ಜುನನಿಗಿಂತಲೂ ಹೆಚ್ಚು ಶ್ರೀಕೃಷ್ಣನೇ ಪ್ರೀತ್ಯಾ- ಸ್ಪದನಾಗಿದ್ದನು. ಶ್ರೀಕೃಷ್ಣನನ್ನು ಪ್ರೀತಿಸುವಷ್ಟು ಯಾರನ್ನೂ ಸಹ ಪ್ರೀತಿಸುತ್ತಿರಲಿಲ್ಲ.

ಸಂಪ್ರಗೃಹ್ಯ ಮಹಾಬಾಹುರ್ಭುಜಂ ಚಂದನಭೂಷಿತಮ್ |
ಶೈಲಸ್ತಂಭೋಪಮಂ ಶೌರಿರುವಾಚಾಭಿವಿನೋದಯನ್ ॥6॥

ಯುಧಿಷ್ಠಿರನು ದುಃಖದಲ್ಲಿ ಮುಳುಗಿ ಕಲ್ಲಿನ ಕಂಭದಂತೆ ಕುಳಿತುಬಿಟ್ಟಿದ್ದನು. ಅವನ ಭುಜವು ಚಂದನಚರ್ಚಿತವಾಗಿತ್ತು. ಇಂಥ ಎರಡು ಭುಜಗಳನ್ನು ಹಿಡಿದು- ಕೊಂಡು ವಿನೋದದಿಂದ ಶ್ರೀಕೃಷ್ಣಪರಮಾತ್ಮನು ಮಾತನಾಡಲು ಪ್ರಾರಂಭ ಮಾಡಿ- ದನು.

ಶುಶುಭೇ ವದನಂ ತಸ್ಯ ಸುದಂಷ್ಟ್ರಂ ಚಾರುಲೋಚನಮ್ |
ವ್ಯಾಕೋಶಮಿವ ವಿಸ್ಪಷ್ಟಂ ಪದ್ಮಂ ಸೂರ್ಯವಿಬೋಧಿತಮ್ ॥7॥

ಮಾತನಾಡುತ್ತಿರುವಾಗ ಶ್ರೀಕೃಷ್ಣನ ಮುಖಕಮಲವು ಅತ್ಯಂತ ಸುಂದರವಾಗಿ ಕಾಣಿಸುತ್ತಿತ್ತು. ಕಣ್ಣುಗಳಿಂದ ಕಾಂತಿಯು ಹೊರಹೊಮ್ಮುತ್ತಿತ್ತು. ಸುಂದರವಾದ ದಂತಪಂಕ್ತಿಗಳು ಶೋಭಾಯಮಾನವಾಗಿದ್ದವು. ಶ್ರೀಕೃಷ್ಣನ ಮುಖವು ಕಮಲ- ಕ್ಕಿಂತಲೂ ಹೆಚ್ಚು ಮುದವನ್ನು ನೀಡುತ್ತಿದ್ದವು. ಸೂರ್ಯೋದಯವಾದಾಗ ಕಮಲವು ಅರಳುವಂತೆ, ಶ್ರೀಕೃಷ್ಣನು ಅರಳಿದ ಮುಖದಿಂದ ಮಾತನಾಡಲು ಪ್ರಾರಂಭ ಮಾಡಿದನು.

ವಿವರಣೆ - ನಮ್ಮ ಜೀವನದಲ್ಲಿ ಅನೇಕ ಬಾರಿ ದುಃಖಸಾಗರದಲ್ಲಿ ಮುಳುಗಿ ಬಿಡುತ್ತೇವೆ. ಜಗತ್ತೇ ಶೂನ್ಯವಾಗುತ್ತದೆ. ಇಂಥ ಸಂದರ್ಭದಲ್ಲಿ ಶ್ರೀಕೃಷ್ಣಪರ- ಮಾತ್ಮನ ಈ ರೂಪವನ್ನು, ಈ ಸೌಂದರ್ಯವನ್ನು ಸ್ಮರಣೆ ಮಾಡಿಕೊಳ್ಳಬೇಕು. ನಮ್ಮ ದುಃಖವನ್ನು ಶ್ರೀಕೃಷ್ಣನು ಬಂದು ಪರಿಹಾರ ಮಾಡುತ್ತಿದ್ದಾನೆ ಎಂದು ಭಾವಿಸಬೇಕು.

ಮಾ ಕೃಥಾಃ ಪುರುಷವ್ಯಾಘ್ರ ಶೋಕಂ ತ್ವಂ ಗಾತ್ರಶೋಷಣಮ್ |
ನಹಿ ತೇ ಸುಲಭಾ ಭೂಯೋ ಯೇ ಹತಾಽಸ್ಮಿನ್ ರಣಾಜಿರೇ ॥8॥

ಧರ್ಮರಾಜನೇ! ನೀನು ಎಲ್ಲ ಪುರುಷರ ಮಧ್ಯದಲ್ಲಿ ಸಿಂಹದಂತೆ ಇರುವಂಥ- ವನು. ಏಕೆ ದುಃಖವನ್ನು ಹೊಂದಿರುವಿ. ನಿನಗಿರುವ ಈ ದುಃಖವು ನಿನ್ನ ಶರೀರವನ್ನೇ ಶೋಷಣೆ ಮಾಡಿಬಿಡುತ್ತದೆ. ನೀನು ಎಷ್ಟೇ ದುಃಖವನ್ನು ಹೊಂದಿದರೂ ರಣಾಂಗಣದಲ್ಲಿ ಮೃತರಾದವರು ಮರಳಿ ಬರುವುದಿಲ್ಲ. ನಿನ್ನ ಈ ದುಃಖವು ಸಂಪೂರ್ಣ ವ್ಯರ್ಥವಾದುದು.

ಸ್ವಪ್ನಲಬ್ಧಾ ಯಥಾ ಲಾಭಾ ವಿತಥಾಃ ಪ್ರತಿಬೋಧನೇ |
ಏವಂ ತೇ ಕ್ಷತ್ರಿಯಾ ರಾಜನ್ ಯೇ ವ್ಯತೀತಾ ಮಹಾರಣೇ ॥9॥

ಸ್ವಪ್ನದಲ್ಲಿ ಅದೆಷ್ಟೋ ಸಂಪತ್ತು ಸಿಕ್ಕಿರುತ್ತದೆ. ಎಚ್ಚರವಾದ ಮೇಲೆ ಆ ಸಂಪತ್ತು ಬೇಕೆಂದರೂ ಸಹ ದೊರೆಯುವುದಿಲ್ಲ. ಅದರಂತೆ ಮಹಾಯುದ್ಧದಲ್ಲಿ ನಾಶವನ್ನು ಹೊಂದಿದ ಯಾರೊಬ್ಬ ಕ್ಷತ್ರಿಯರೂ ಕೂಡ ನಿನಗೆ ಈಗ ಬೇಕೆಂದರೂ ಸಹ ದೊರಕುವುದಿಲ್ಲ.

ಸರ್ವೇ ಹ್ಯಭಿಮುಖಾಃ ಶೂರಾ ವಿಗತಾ ರಣಶೋಭಿನಃ |
ನೈಷಾಂ ಕಶ್ಚಿತ್ ಪೃಷ್ಠತೋ ವಾ ಪಾಲಯನ್ ವಾಪಿ ಪಾತಿತಃ ॥10॥

ಮಹಾಯುದ್ಧದಲ್ಲಿ ಯುದ್ಧವನ್ನು ಆಡುತ್ತಿದ್ದ ಕ್ಷತ್ರಿಯರು ಆ ಯುದ್ಧಭೂಮಿಗೆ ಅಲಂಕಾರಪ್ರಾಯರಾಗಿದ್ದರು. ಪ್ರತಿಯೊಬ್ಬರೂ ಸಹ ಶತ್ರುಗಳಿಗೆ ಅಭಿಮುಖರಾಗಿ ನಿಂತು, ಧೈರ್ಯದಿಂದ ಯುದ್ಧವನ್ನು ಮಾಡುತ್ತಿದ್ದರು. ಹೀಗಿರುವಾಗಲೇ ಅವರು ಶತ್ರುಗಳಿಂದ ಮೃತರಾಗಿದ್ದಾರೆ. ಮೃತರಾದವರಲ್ಲಿ ಯಾರೊಬ್ಬರೂ ಸಹ ಶತ್ರುಗಳಿಗೆ ಬೆನ್ನು ತೋರಿಸಿ ಓಡಿದವರಲ್ಲ. ತಮ್ಮ ಬೆನ್ನಿಗೆ ಬಾಣವನ್ನು ಚುಚ್ಚಿಸಿಕೊಂಡವರಲ್ಲ. ಅಥವಾ ಭಯಗೊಂಡು ಓಡುತ್ತಾ ಶಸಾತ್ರಪ್ರಘಾತಗಳಿಂದ ಸತ್ತವರೂ ಅಲ್ಲ.

ವಿವರಣೆ - ಯಾರಿಗಾಗಿ ನೀನು ದುಃಖವನ್ನು ಹೊಂದುತ್ತಿರುವೆಯೋ, ಅವರೆಲ್ಲರೂ ಉತ್ತಮಪರಾಕ್ರಮಿಗಳು. ಸಂತೋಷದಿಂದಲೇ ಪ್ರಾಣವನ್ನು ಬಿಟ್ಟ- ವರು. ಯುದ್ಧವನ್ನು ಮಾಡುತ್ತಿರುವಾಗಲೂ ಸಂತೋಷದಿಂದ ಇದ್ದು, ಮೃತರಾದ ಮೇಲೂ ಸಹ ವೀರಸ್ವರ್ಗವನ್ನು ಹೊಂದಿರುವರು. ಇಂಥವರ ಬಗ್ಗೆ ನೀನೇಕೆ ಕಳವಳವನ್ನು ಹೊಂದಿರುವಿ. ಅವರನ್ನು ನೋಡಬೇಕೆಂಬ ಆಸೆಯಿಂದ ದುಃಖವನ್ನು ಹೊಂದುತ್ತಿರುವಿಯಾದರೆ ಇದು ಸಾಧ್ಯವಾಗದ ಮಾತು. ಅವರೆಂದೂ ಸಹ ಮರಳಿ ಬರಲು ಸಾಧ್ಯವಿಲ್ಲ. ಸ್ವಪ್ನದಲ್ಲಿ ಕಂಡ ಚಿನ್ನವು ಹೇಗೆ ಎದ್ದಮೇಲೆ ದೊರಕುವುದಿಲ್ಲವೋ, ಮೃತರಾದವರು ಭೂಲೋಕಕ್ಕೆ ಬರಲು ಸಾಧ್ಯವಿಲ್ಲ ಇತ್ಯಾದಿಯಾಗಿ

ಶ್ರೀಕೃಷ್ಣಪರಮಾತ್ಮನು ಸಮಾಧಾನವನ್ನು ಮಾಡುತ್ತಿದ್ದಾನೆ.
ಸರ್ವೇ ತ್ಯಕ್ತತ್ವತ್ಮನಃ ಪ್ರಾಣಾನ್ ಯುದ್ಧಾ ವೀರಾ ಮಹಾಹವೇ |
ಶಸ್ತ್ರಪೂತಾ ದಿವಂ ಪ್ರಾಪ್ತಾ ನ ತಾನ್ ಶೋಚಿತುಮರ್ಹಸಿ ॥11॥
ಪ್ರತಿಯೊಬ್ಬ ಯೋಧರು ತಮ್ಮ ಸಂಪೂರ್ಣ ಪರಾಕ್ರಮದಿಂದ ಯುದ್ಧವನ್ನು ಮಾಡಿ, ಪ್ರಾಣಗಳನ್ನು ಪರಿತ್ಯಾಗ ಮಾಡಿರುವರು. ಶಸ್ತ್ರದಿಂದ ಪವಿತ್ರರಾಗಿರುವರು. ಆದ್ದರಿಂದಲೇ ಈಗ ಸ್ವರ್ಗದಲ್ಲಿ ಸುಖಿಯಾಗಿರುವರು. ಅವರೆಲ್ಲರೂ ಸುಖದಲ್ಲಿ- ರುವಾಗ ನೀನೇಕೆ ದುಃಖವನ್ನು ಹೊಂದುವಿ.
ಕ್ಷತ್ರಧರ್ಮರತಾ ಶೂರಾ ವೇದವೇದಾಂಗಪಾರಗಾಃ |
ಪ್ರಾಪ್ತಾ ವೀರಗತಿಂ ಪುಣ್ಯಾಂ ನ ತಾನ್ ಶೋಚಿತುಮರ್ಹಸಿ ॥12॥
ತಮ್ಮ ಕ್ಷತ್ರಿಯ ಧರ್ಮಕ್ಕೆ ಉಚಿತವಾದ ರೀತಿಯಲ್ಲಿಯೇ ಆ ಶೂರರು ಪ್ರಾಣ- ತ್ಯಾಗವನ್ನು ಮಾಡಿದ್ದಾರೆ. ಅವೆರಲ್ಲರೂ ವೇದವೇದಾಂಗಪಾರಂಗತರಾಗಿದ್ದಾರೆ. ವೀರರಗಷ್ಟೇ ದೊರಕುವ ಪುಣ್ಯಮಯ ಸ್ವರ್ಗವನ್ನು ಹೊಂದಿರುತ್ತಾರೆ. ಅವರ ವಿಷಯದಲ್ಲಿ ದುಃಖ ಪಡಲು ಕಾರಣವಿಲ್ಲ.
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಸೃಂಜಯಂ ಪುತ್ರಶೋಕಾರ್ತಂ ಯಥಾಯಂ ಪ್ರಾಹ ನಾರದಃ ॥13॥
ಧರ್ಮರಾಜನೇ! ಈ ಹಿಂದೆ ಪುತ್ರಶೋಕದಿಂದ ಸೃಂಜಯನು ಬಹಳ ದುಃಖ- ವನ್ನು ಹೊಂದಿದ್ದನು. ಆಗ ನಾರದರು ಬಂದು ಅವನಿಗೊಂದು ಪುರಾತನದ ಇತಿಹಾಸವನ್ನು ಉದಾಹರಿಸಿದರು. ಅದನ್ನು ನಿನಗೀಗ ಹೇಳುತ್ತೇನೆ ಕೇಳು.
ಸುಖದುಃಖೈರಹಂ ತ್ವಂ ಚ ಪ್ರಜಾಃ ಸರ್ವಾಶ್ಚ ಸೃಂಜಯ |
ಅವಿಮುಕ್ತಂ ಚರಿಷ್ಯಾಮಸ್ತತ್ರ ಕಾ ಪರಿದೇವನಾ ॥14॥
ಸೃಂಜಯನೇ! ಸತ್ತ ಮಗುವಿಗೇಕೇ ಇಷ್ಟೊಂದು ದುಃಖಿಸುವಿ. ನಾನು, ನೀನು ಮತ್ತು ಸಮಸ್ತ ಪ್ರಜೆಗಳು ಸುಖ-ದುಃಖಗಳನ್ನು ದಾಟಲಾರೆವು. ಪ್ರತಿಯೊಬ್ಬರೂ ಅದನ್ನು ಅನುಭವಿಸಲೇಬೇಕು. ಈ ವಿಷಯದಲ್ಲೇಕೆ ನಿನಗೆ ದುಃಖ.
ಮಹಾಭಾಗ್ಯಂ ಪುರಾ ರಾಜ್ಞಾಂ ಕೀರ್ತ್ಯಮಾನಂ ಮಯಾ ಶೃಣು |
ಗಚ್ಛಾವಧಾನಂ ನೃಪತೇ ತತೋ ದುಃಖಂ ಪ್ರಹಾಸ್ಯಸಿ ॥15॥
ನಾನೀಗ ನಿನಗೆ ಹಿಂದಿನ ರಾಜರ ಮಹಾಸೌಭಾಗ್ಯದ ಇತಿಹಾಸವನ್ನು ಹೇಳುತ್ತೇನೆ. ಇದನ್ನು ಸಾವಧಾನಚಿತ್ತದಿಂದ ಕೇಳು. ಇದರಿಂದಲಾದರೂ ನಿನಗೆ ದುಃಖವು ಪರಿಹಾರವಾಗುತ್ತದೆ.
ಮೃತಾನ್ ಮಹಾನುಭಾವಾಂಸ್ತ್ವಂ ಶ್ರುತ್ವೈವ ತು ಮಹೀಪತೀನ್ |
ಶಮಮಾನಯ ಸಂತಾಪಂ ಶೃಣು ವಿಸ್ತರಶಶ್ಚ ಮೇ ॥16॥
ಮಹಾನುಭಾವರಾದ ಪರಲೋಕವನ್ನು ಹೊಂದಿದ, ಆ ಎಲ್ಲಾ ರಾಜರುಗಳ ಚರಿತ್ರೆಗಳನ್ನು ಕೇಳಿದ ನಂತರ ಪುತ್ರವಿಯೋಗದಿಂದ ನಿನಗಾದ ದುಃಖವನ್ನು ಪರಿಹಾರ ಮಾಡಿಕೋ. ಅವರ ಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು.
ಕ್ರೂರಗ್ರಹಾಭಿಶಮನಮಾಯುರ್ವರ್ಧನಮುತ್ತಮಮ್ |
ಅಗ್ರಿಮಾಣಾಂ ಕ್ಷಿತಿಭುಜಾಮುಪಾದಾನಮನೋಹರಮ್ ॥17॥
ಅವರ ಚರಿತ್ರೆಯು ಅತ್ಯಂತ ಪವಿತ್ರವಾಗಿವೆ. ಕೇಳಿದ ಮಾತ್ರದಿಂದಲೇ ಕ್ರೂರವಾದ ಗ್ರಹಗಳ ದೋಷಗಳು ಪರಿಹಾರವಾಗುತ್ತವೆ. ಆಯುಸ್ಸು ಅಭಿವೃದ್ಧವಾ- ಗುತ್ತದೆ. ಶ್ರೇಷ್ಠರಾದ ಹದಿನಾರು ಮಂದಿ ರಾಜರ ಚರಿತ್ರೆಯನ್ನು ನಿನಗೆ ಹೇಳುತ್ತೇನೆ ಕೇಳು.
ಟಿಪ್ಪಣಿ - ಜಾತಕ ಕುಂಡಲಿಯಲ್ಲಿ ಕ್ರೂರ ಗ್ರಹಗಳ ದೃಷ್ಟಿಯಿದ್ದರೆ ಅಥವಾ ಕ್ರೂರ ಗ್ರಹಗಳ ಬಾಧೆಯಿದ್ದರೆ ಮುಂದೆ ಹೇಳುವ ಹದಿನಾರು ಮಂದಿ ರಾಜರ ಚರಿತ್ರೆಯನ್ನು ಓದಬೇಕು. ಆಗ ಆ ಎಲ್ಲ ಬಾಧೆಗಳು ಪರಿಹಾರವಾಗುತ್ತವೆ. ಅಥವಾ ಮತ್ತೊಬ್ಬರಿಗೆ ಗ್ರಹಬಾಧೆ ದೋಷವು ಇದ್ದಲ್ಲಿ ಈ ಹದಿನಾರು ರಾಜರ ಕಥೆಯನ್ನು ಅವರಿಗೆ ಹೇಳುವುದರಿಂದಲೂ ದೋಷವು ಪರಿಹಾರವಾಗುತ್ತದೆ.
ಮರುತ್ ರಾಜನ ಸಾಧನೆ
ಆವಿಕ್ಷಿತಂ ಮರುತ್ತಂ ಮೇ ಮೃತಂ ಸೃಂಜಯ ಶುಶ್ರುಮ |
ಯಸ್ಯ ಸೇಂದ್ರಾಃ ಸವರುಣಾ ಬೃಹಸ್ಪತಿಪುರೋಗಮಾಃ ॥18॥
ದೇವಾ ವಿಶ್ವಸೃಜೋ ರಾಜ್ಞೋ ಯಜ್ಞಮೀಯುರ್ಮಹಾತ್ಮನಃ |
ಯಃ ಸ್ಪರ್ಧಾಮನಯಚ್ಚಕ್ರಂ ದೇವರಾಜಂ ಶತಕ್ರತುಮ್ ॥19॥
ಆವಿಕ್ಷಿತನ ಮಗನಾದ ಮರುತ್ ಎಂಬ ರಾಜನು ಮೃತನಾದ ವಿಷಯವನ್ನು ನಾವು ಕೇಳಿದ್ದೇವೆ. ಮಹಾತ್ಮನಾದ ಮರುತ್‌ರಾಜನು ಒಮ್ಮೆ ಮಹಾಯಜ್ಞವನ್ನು ಆಚರಿಸಿದನು. ಅದರಲ್ಲಿ ಇಂದ್ರ, ವರುಣ, ಬೃಹಸ್ಪತಿ, ಮೊದಲಾದ ದೇವತೆಗಳು ಪ್ರಜಾಪತಿಗಳು ಬೃಹಸ್ಪತಿಯನ್ನು ಮುಂದೆ ಮಾಡಿಕೊಂಡು, ಭಾಗವಹಿಸಿದರು. ಆ ಮರುತ್‌ರಾಜನು ಯಜ್ಞಮಾಡುವುದರ ಮೂಲಕ ದೇವರಾಜನಾದ ಶತಕ್ರತು ಎನಿಸಿದ ಇಂದ್ರನನ್ನೂ ಕೂಡ ಸ್ಪರ್ಧಿಸಿದನು.
ಶಕ್ರಪ್ರಿಯೈಷೀ ಯಂ ವಿದ್ವಾನ್ ಪ್ರತ್ಯಾಚಷ್ಟ ಬೃಹಸ್ಪತಿಃ |
ಸಂವರ್ತೋ ಯಾಜಯಾಮಾಸ ಯಂ ಪೀಡಾರ್ಥಂ ಬೃಹಸ್ಪತೇಃ॥20॥
ಆ ಯಾಗದಲ್ಲಿ ಇಂದ್ರನ ಪ್ರೇರಣೆಯಿಂದ ಬೃಹಸ್ಪತಿಯು ಅವನ ಬಳಿ ತೆರಳಿದನು. ಯಾಗವನ್ನು ನಿಲ್ಲಿಸು ಎಂದು ಹೇಳಿದನು. ಆಗ ಬೃಹಸ್ಪತಿಯ ತಮ್ಮನಾದ ಸಂವರ್ತನು ಇಂದ್ರನ ಮೇಲಿನ ಸ್ಪರ್ಧೆಯಿಂದ ಇಂದ್ರನಿಗೆ ವಿರುದ್ಧವಾದ ಆ ಯಾಗವನ್ನು ಮಾಡಿಸಿದನು.
ಯಸ್ಮಿನ್ ಪ್ರಶಾಸತಿ ಸತಾಂ ನೃಪತೌ ನೃಪಸತ್ತಮ |
ಅಕೃಷ್ಟಪಚ್ಯಾ ಪೃಥಿವೀ ವಿಬಭೌ ಚೈತ್ಯಮಾಲಿನೀ ॥21॥
ಆ ಮರುತ್‌ರಾಜನು ರಾಜ್ಯಭಾರವನ್ನು ಮಾಡುತ್ತಿರುವಾಗ ಕೃಷಿಮಾಡ- ದೆಯೂ, ಪೃಥಿವಿಯು ಸಸ್ಯಗಳಿಂದ ಸಮೃದ್ಧವಾಗಿ

ಶೋಭಿಸುತ್ತಿತ್ತು. ಯಜ್ಞಶಾಲೆಗಳ ಸಾಲುಗಳಿಂದ ಭೂಮಂಡಲವು ಪ್ರಕಾಶಿಸುತ್ತಿತ್ತು.
ಆವಿಕ್ಷಿತಸ್ಯ ವೈ ಸತ್ರೇ ವಿಶ್ವೇ ದೇವಾಃ ಸಭಾಸದಃ |
ಮರುತಃ ಪರಿವೇಷ್ಟಾರಃ ಸಾಧ್ಯಾಶ್ಚಾಸನ್ ಮಹಾತ್ಮನಃ ॥22॥
ಆವಿಕ್ಷಿತನ ಮಗನಾದ ಮಹಾತ್ಮನಾದ ಮರುತ್ತನ ಯಜ್ಞದಲ್ಲಿ ವಿಶ್ವೇ- ದೇವತೆಗಳೇ ಸಭಾಸದರಾಗಿದ್ದರು. ಮರುತ್‌ಗಣಗಳು ಮತ್ತು ಸಾಧ್ಯರು ಯಜ್ಞದಲ್ಲಿ ಭಾಗವಹಿಸಿದ ಋತ್ವಿಜರಿಗೆ ಪರಿಚಾರಕರಾಗಿದ್ದರು.
ಟಿಪ್ಪಣಿ - ``ಮರುತಃ ಪರಿವೇಷ್ಟಾರೋ ಮರುತಸ್ಯಾ ವಸುಂಧರೇಃ | ಆವಿಕ್ಷಿತಸ್ಯ ವೈ ಸತ್ರೇ ವಿಶ್ವೇ ದೇವಾಃ ಸಭಾಸದಃ'' ಎಂಬುದಾಗಿ ಮರುತ್‌ರಾಜನು ಮಾಡಿದ ಯಜ್ಞವನ್ನು ಐತರೇಯ ಬ್ರಾಹ್ಮಣವೂ ಕೂಡ ಪ್ರಶಂಸೆ ಮಾಡುತ್ತದೆ.
ಮರುದ್ಗಣಾ ಮರುತ್ತಸ್ಯ ಯತ್ ಸೋಮಮಪಿಬಂತ ತೇ |
ದೇವಾನ್ ಮನುಷ್ಯಾನ್ ಗಂಧರ್ವಾನತ್ಯರಿಚ್ಯಂತ ದಕ್ಷಿಣಾಃ ॥23॥
ಆ ಯಾಗದಲ್ಲಿ ಅವನು ಕೊಟ್ಟ ದಕ್ಷಿಣೆಗಳು ದೇವತೆಗಳು, ಮನುಷ್ಯರು, ಗಂಧರ್ವಾದಿಗಳೆಲ್ಲರೂ ನೀಡಿದ ದಕ್ಷಿಣೆಗಳಿಗಿಂತಲೂ ಅತಿಶಯವಾಗಿದ್ದವು. ಎಲ್ಲಾ ಮರುದ್ಗಣದವರು ಯಥೇಚ್ಛವಾಗಿ ಸೋಮರಸವನ್ನು ಆ ಯಜ್ಞದಲ್ಲಿ ಪಾನ ಮಾಡಿದರು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥24॥
ಸೃಂಜಯನೇ! ನಿನಗಿಂತಲೂ ನಿನ್ನ ಪುತ್ರನಿಗಿಂತಲೂ, ಧರ್ಮ, ಜ್ಞಾನ, ಐಶ್ವರ್ಯ, ವೈರಾಗ್ಯಗಳೆಂಬ ನಾಲ್ಕರಲ್ಲಿಯೂ ಆ ರಾಜನು ಬಹಳ ಉತ್ತಮನಾಗಿ- ದ್ದನು. ಅಂಥ ರಾಜನೇ! ಇಂದು ಮೃತನಾಗಿರುವಾಗ, ನಿನ್ನ ಮಗನ ವಿಷಯದಲ್ಲಿ ಏಕೆ ದುಃಖ ಪಡುತ್ತಿರುವಿ?
ಟಿಪ್ಪಣಿ - ಸೂರ್ಯವಂಶದಲ್ಲಿ ಅವಿಕ್ಷಿತ್ ಎಂಬ ರಾಜನಿದ್ದನು. ಇವನ ಮಗನೇ ಆವಿಕ್ಷಿತ. ಇವನಿಗೆ ಮರುತ್ ಎಂಬ ಹೆಸರಿದೆ. ಮರುದ್ದೇವತೆಗಳಂತೆ ಮಹಾಶಕ್ತಿವಂತನಾದ್ದರಿಂದ ಇವನನ್ನು ಮರುತ್‌ರಾಜ ಎಂದೇ ಕರೆಯುತ್ತಿದ್ದರು. ವಿಶಾಲಾದೇವಿಯೇ ಇವನ ತಾಯಿ. ಬೃಹಸ್ಪತಿಯ ತಮ್ಮನಾದ ಸಂವರ್ತನನಿಂದ ಒಂದು ಮಹಾಯಾಗವನ್ನು ಆಚರಿಸಿದನು. ಆ ಯಜ್ಞದಲ್ಲಿ ಎಲ್ಲವೂ ಕೂಡ ಸ್ವರ್ಣಮಯವಾಗಿತ್ತು. ಸೋಮರಸಪಾನದಿಂದ ಇಂದ್ರನು ಮತ್ತನಾದನು. ದಕ್ಷಿಣೆಗಳಿಂದ ಬ್ರಾಹ್ಮಣರು ತೃಪ್ತರಾದರು. ಆ ಯಜ್ಞದಲ್ಲಿ ದೇವತೆಗಳಿಗೆ ಮರುತ್‌ಗಳೇ ಬಡಿಸಿದರು. ಮೊದಲು ಇಂದ್ರನು ಯಜ್ಞಕ್ಕೆ ವಿಘ್ನವನ್ನುಂಟು ಮಾಡಿದರೂ ಅಂತಿಮವಾಗಿ ಸ್ನೇಹವನ್ನು ಬೆಳೆಸಿದನು. ಆ ಯಜ್ಞದಲ್ಲಿ ಕೊಟ್ಟ ಹಣವನ್ನು ಬ್ರಾಹ್ಮಣರು ಎತ್ತಲಾಗದೇ, ಒಯ್ಯಲಾಗದೇ ಹಿಮಾಚಲ ಪ್ರದೇಶದಲ್ಲಿ ಚೆಲ್ಲಿ ಹೋದರು. ಇದನ್ನು ವೇದವ್ಯಾಸರ ಸೂಚನೆಯಂತೆ ಧರ್ಮರಾಜನು ಹಸ್ತಿನಾ- ವತಿಗೆ ತರಿಸಿ, ಅಶ್ವಮೇಧಯಾಗವನ್ನು ಮಾಡಿದನು. ಇವನು ಏಕಚಕ್ರಾಧಿಪತಿ- ಯಾಗಿ 85000 ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿದನು. ರಾಮಾಯಣ ಹಾಗೂ ಮಹಾಭಾರತದ ದ್ರೋಣಪರ್ವದಲ್ಲಿಯೂ ಇವನ ಕಥೆಯು ವಿಸ್ತಾರ- ವಾಗಿ ಬರುತ್ತದೆ.
ಸುಹೋತ್ರ ರಾಜನ ಸಾಧನೆ
ಸುಹೋತ್ರಂ ಚೇದ್ ವೈತಿಥಿನಂ ಮೃತಂ ಸೃಂಜಯ ಶುಶ್ರುಮ |
ಯಸ್ಮೈ ಹಿರಣ್ಯಂ ವವೃಷೇ ಮಘವಾನ್ ಪರಿವತ್ಸರಮ್ ॥25॥
ವಿತಿಥ ಎಂಬ ರಾಜನಿಗೆ ಸುಹೋತ್ರ ಎಂಬ ಮಗನಿದ್ದನು. ಇವನೂ ಕೂಡ ಮರಣವನ್ನು ಹೊಂದಿದನು. ಇವನು ರಾಜ್ಯಭಾರ ಮಾಡುತ್ತಿದ್ದಾಗ, ದೇವೇಂದ್ರನು ಒಂದು ವರ್ಷಗಳ ಕಾಲ ಎಡೆಬಿಡದೆ ಸುವರ್ಣವೃಷ್ಟಿಯನ್ನು ಮಾಡುತ್ತಿದ್ದನು.
ಸತ್ಯನಾಮಾ ವಸುಮತೀ ಯಂ ಪ್ರಾಪ್ಯಾಸೀಜ್ಜನಾಧಿಪ |
ಹಿರಣ್ಯಮವಹನ್ನದ್ಯಸ್ತಸ್ಮಿನ್ ಜನಪದೇಶ್ವರೇ ॥26॥
ಅವನ ರಾಜ್ಯಭಾರದಲ್ಲಿಯೇ ಭೂದೇವಿಗೆ ವಸುಮತಿ ಎಂಬ ಹೆಸರು ಬಂದಿತ್ತು. ನದಿಗಳು ಸುವರ್ಣದ ನೀರನ್ನೇ ಪ್ರವಹಿಸುತ್ತಿದ್ದವು.
ಕೂರ್ಮಾನ್ ಕರ್ಕಟಕಾನ್ ನಕ್ರಾನ್ ಮಕರಾನ್ ಶಿಂಶುಕಾನಪಿ |
ನದೀಷ್ವಪಾತಯದ್ ರಾಜನ್ ಮಘವಾ ಲೋಕಪೂಜಿತಾಃ ॥27॥
ಸರ್ವಲೋಕಗಳಿಂದ ಪೂಜಿತನಾದ ದೇವೇಂದ್ರನು ಸುವರ್ಣಮಯವಾದ ಆಮೆಗಳನ್ನು, ಏಡಿಗಳನ್ನು, ಮೊಸಳೆಗಳೇ ಮೊದಲಾದ ಜಲಜಂತುಗಳನ್ನು ದೇವೇಂದ್ರನು ಸುವರ್ಣಮಯಗಳನ್ನಾಗಿಯೇ ಮಾಡಿಟ್ಟಿದ್ದನು.
ಹೈರಣ್ಯಾನ್ ಪತಿತಾನ್ ದೃಷ್ಟ್ವಾ ಮತ್ಸ್ಯಾನ್ ಮಕರಕಚ್ಛಪಾನ್ |
ಸಹಸ್ರಶೋಽಥ ಶತಶಸ್ತತೋಽಸ್ಮಯತ ವೈತಿಥಿಃ ॥28॥
ಸುವರ್ಣಮಯವಾದ ಸಾವಿರಾರು ಮೀನುಗಳು ಅಲ್ಲಿದ್ದವು. ಸಾವಿರಾರು ಮೊಸಳೆಗಳನ್ನು, ಆಮೆಗಳನ್ನು ಆ ನದಿಗಳಲ್ಲಿ ದೇವೇಂದ್ರನು ಬಿಟ್ಟಿದ್ದನ್ನು ನೋಡಿ, ಆ ಸುಹೋತ್ರನೇ ಅಚ್ಚರಿಪಟ್ಟಿದ್ದನು.
ತದ್ ಹಿರಣ್ಯಮಪರ್ಯಂತಮಾವೃತ್ತಂ ಕುರುಜಾಂಗಲೇ |
ಈಜಾನೋ ವಿತತೇ ಯಜ್ಞೇ ಬ್ರಾಹ್ಮಣೇಭ್ಯಃ ಸಮಾರ್ಪಯತ್ ॥29॥
ಕುರುಜಾಂಗಲಾ ದೇಶದಲ್ಲಿ ಸುವರ್ಣರಾಶಿಯು ಮೊದಲಿನಿಂದ ಕೊನೆಯ ತನಕ ಪರ್ವತದಂತೆ ವ್ಯಾಪಿಸಿತ್ತು. ಆಗ ಸುಹೋತ್ರನು ಒಂದು ಮಹಾಯಾಗವನ್ನು ನಡೆಸಿದನು. ಆಗ ಆ ಎಲ್ಲಾ ಸುರ್ವಣದ ರಾಶಿಯನ್ನು ಬ್ರಾಹ್ಮಣರಿಗೆ ದಕ್ಷಿಣಾ- ರೂಪದಲ್ಲಿ ಆ ಸುಹೋತ್ರನು ದಾನ ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥30॥
ಅದಕ್ಷಿಣಮಯಜ್ವಾನಂ ಶ್ವೈತ್ಯ ಸಂಶಾಮ್ಯ ಮಾ ಶುಚಃ |
ಸೃಂಜಯನೇ! ನಿನಗಿಂತಲೂ ಮತ್ತು ನಿನ್ನ ಮಗನಿಗಿಂತಲೂ, ಆ ಸುಹೋತ್ರನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಶ್ರೇಷ್ಠನಾಗಿದ್ದನು. ಹೆಚ್ಚು ಪುಣ್ಯ- ಶಾಲಿಯಾಗಿದ್ದನು. ಅಂಥ ಸುಹೋತ್ರನೂ ಕೂಡ ಮೃತನಾದನು. ಹೀಗಿರುವಾಗ ಯಾವುದೇ ಯಾಗ

ಮಾಡದ, ಬ್ರಾಹ್ಮಣನಿಗೆ ಅಪಾರದಕ್ಷಿಣೆಯನ್ನು ಕೊಡದ ಮೃತನಾದ ನಿನ್ನ ಮಗನ ವಿಷಯದಲ್ಲಿ ಏಕೆ ದುಃಖ ಪಡುತ್ತಿರುವಿ ?
ಟಿಪ್ಪಣಿ - ಚೈತ್ಯ ಸಂಶಾಮ್ಯ ಮಾ ಶುಚ ಇತ್ಯತ್ರ ಚೈತ್ತ್ಯ ಚಿತ್ತಸಮಾಧಾನಯುಕ್ತಃ|
`ಚೈತ್ತ್ಯಃ' ಎಂಬುದಕ್ಕೆ ಚಿತ್ತಸಮಾಧಾನದಿಂದ ಯುಕ್ತನಾದವನು ಎಂದರ್ಥ.
ಟಿಪ್ಪಣಿ - ಭೂಮನ್ಯು ಎಂಬ ರಾಜನ ಮಗನೇ ಸುಹೋತ್ರ. ಚಂದ್ರವಂಶ- ದವನು. ಇವನ ಹೆಂಡತಿ ಜಯಂತಿ. ಅಜಮೀಢಾ ಮತ್ತು ಹಸ್ತಿ ಎಂಬುವರು ಇವನ ಮಕ್ಕಳು. ಇವನೂ ಕೂಡ ಅನೇಕ ಯಾಗಗಳನ್ನು ಆಚರಿಸಿದ್ದು ಮಹಾ- ಭಾರತದ ದ್ರೋಣಪರ್ವದಲ್ಲಿ ವಿಸ್ತಾರವಾಗಿ ಬರುತ್ತದೆ. ಇವನ ರಾಜ್ಯದಲ್ಲಿ ಸುವರ್ಣವೃಷ್ಟಿಯನ್ನು ದೇವೇಂದ್ರನು ಮಾಡಿದ ಬಗ್ಗೆಯೂ ವಿವರಣೆ ದ್ರೋಣ- ಪರ್ವದಲ್ಲೇ ಇರುತ್ತದೆ.
ಬೃಹದ್ರಥರಾಜನ ಸಾಧನೆ
ಅಂಗಂ ಬೃಹದ್ರಥಂ ಚೈವ ಮೃತಂ ಶುಶ್ರುಮ ಸೃಂಜಯ |
ಯಃ ಸಹಸ್ರಂ ಸಹಸ್ರಾಣಾಂ ಗಜಾನಾಮತಿಪದ್ಮಿನಾಮ್ |
ಈಜಾನೋ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ |
ಯಃ ಸಹಸ್ರಂ ಸಹಸ್ರಾಣಾಂ ಶ್ವೇತಾನಶ್ವಾನವಾಸೃಜತ್ ॥31॥
ಅಂಗದೇಶದಲ್ಲಿ ಬೃಹದ್ರಥ ಎಂಬ ರಾಜನಿದ್ದನು. ಅವನೂ ಸಹ ಮೃತನಾದನು. ಇವನು ರಾಜ್ಯಭಾರವನ್ನು ಮಾಡುತ್ತಿದ್ದಾಗ, ಪದ್ಮಮಾಲಿಕೆಯುಳ್ಳ ಹತ್ತು ಲಕ್ಷ ಆನೆಗಳನ್ನು ಮಹಾಯಾಗದಲ್ಲಿ ದಾನ ಮಾಡಿದನು. ಬಿಳಿ ಬಣ್ಣದ ಹತ್ತು ಲಕ್ಷ ಕುದುರೆಗಳನ್ನು ಆ ಯಾಗದಲ್ಲಿ ದಾನ ಮಾಡಿದನು.
ಸಹಸ್ರಂ ಚ ಸಹಸ್ರಾಣಾಂ ಕನ್ಯಾ ಹೇಮವಿಭೂಷಿತಾಃ |
ಈಜಾನೋ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ ॥32॥
ಸುವರ್ಣಾಭರಣಗಳಿಂದ ಅಲಂಕೃತಗೊಂಡ ಹತ್ತುಲಕ್ಷಕನ್ಯೆಯರನ್ನು ದಕ್ಷಿಣಾ- ರೂಪದಲ್ಲಿ ದಾನ ಮಾಡಿದನು.
ಶತಂ ಶತಸಹಸ್ರಾಣಾಂ ವೃಷಾಣಾಂ ಹೇಮಮಾಲಿನಾಮ್ |
ಗವಾಂ ಸಹಸ್ರಾನುಚರಂ ದಕ್ಷಿಣಾಮತ್ಯಕಾಲಯತ್॥33॥
ಬೃಹದ್ರಥನು ಒಂದು ಕೋಟಿ ಗೋವುಗಳನ್ನು, ಹಾಗೂ ಸ್ವರ್ಣಮಾಲೆಗಳಿಂದ ಅಲಂಕೃತಗೊಂಡ ಒಂದು ಕೋಟಿ ಎತ್ತುಗಳನ್ನು ಅವುಗಳ ಸೇವೆಗಾಗಿ ಸಾವಿರಾರು ಸೇವಕರನ್ನು ದಕ್ಷಿಣರೂಪವಾಗಿ ದಾನ ಮಾಡಿದನು.
ಅಂಗಸ್ಯ ಯಜಮಾನಸ್ಯ ತದಾ ವಿಷ್ಣುಪದೇ ಗಿರೌ |
ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ॥34॥
ಅಂಗರಾಜ್ಯದ ದೊರೆಯಾದ ಬೃಹದ್ರಥನು ವಿಷ್ಣುಪದ ಎಂಬ ಗಿರಿಯಲ್ಲಿ ಯಜ್ಞವನ್ನು ಆಚರಿಸಿದನು. ಆಗ ದೇವೇಂದ್ರನೂ ಕೂಡ ಯಥೇಚ್ಛೆಯಾಗಿ ಸೋಮ -ರಸವನ್ನು ಪಾನ ಮಾಡಿ, ದೇಹದ ಬಗ್ಗೆ ಪರಿಜ್ಞಾನವೇ ಇಲ್ಲದಷ್ಟು ತೃಪ್ತನಾದನು. ಬ್ರಾಹ್ಮಣರು ಭೋಜನ ಮತ್ತು ದಕ್ಷಿಣೆಗಳಿಂದ ತೃಪ್ತರಾದರು.
ಯಸ್ಯ ಯಜ್ಞೇಷು ರಾಜೇಂದ್ರ ಶತಸಂಖ್ಯೇಷು ವೈ ಪುರಾ |
ದೇವಾನ್ ಮನುಷ್ಯಾನ್ ಗಂಧರ್ವಾನತ್ಯರಿಚ್ಯಂತ ದಕ್ಷಿಣಾಃ ॥35॥
ಅವನು ನಡೆಸಿದ ನೂರಾರು ಯಜ್ಞಗಳಲ್ಲಿ ಕೊಟ್ಟ ದಕ್ಷಿಣೆಗಳು, ದೇವತೆಗಳು, ಮನುಷ್ಯರು, ಗಂಧರ್ವರು ಎಲ್ಲರೂ ಸೇರಿ, ಯಜ್ಞಸಭೆಯಲ್ಲಿ ಕೊಡುತ್ತಿದ್ದ ದಕ್ಷಿಣೆ- ಗಳನ್ನೆಲ್ಲಾ ಮೀರಿಸಿತ್ತು.
ನ ಜಾತೋ ಜನಿತಾ ಚಾನ್ಯಃ ಪುಮಾನ್ ಯಸ್ತತ್ ಪ್ರದಾಸ್ಯತಿ |
ಯದಂಗಃ ಪ್ರದದೌ ವಿತ್ತಂ ಸೋಮಸಂಸ್ಥಾಸು ಸಪ್ತಸು ॥36॥
ಸೋಮಸಂಸ್ಥಾ ಎಂದು ಕರೆಯಲ್ಪಡುವ ಏಳು ಯಾಗಗಳಲ್ಲಿಯೂ ಅಂಗ- ರಾಜನು ಎಷ್ಟು ದಕ್ಷಿಣೆಗಳನ್ನು ಕೊಟ್ಟನೋ, ಅಷ್ಟು ದಕ್ಷಿಣೆಗಳನ್ನು ಕೊಟ್ಟ ಮನುಷ್ಯನು ಈ ಹಿಂದೆ ಹುಟ್ಟಿಲ್ಲ. ಮುಂದೆಯೂ ಕೂಡ ಹುಟ್ಟಲು ಸಾಧ್ಯವಿಲ್ಲ.
ಟಿಪ್ಪಣಿ - ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಶೋಡಶಿ, ಅತಿರಾತ್ರ, ವಾಜಪೇಯ, ಆಪ್ತೋರ್ಯಾಮ ಎಂಬ ಏಳು ಯಾಗಗಳನ್ನು ಸೋಮಸಂಸ್ಥಾ ಎಂದು ಕರೆಯುತ್ತಾರೆ.
ನ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥37॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯವೆಂಬ ನಾಕು ಗುಣಗಳಲ್ಲಿ ನಿನ್ನ ಮಗನಿಗಿಂತ ಅತ್ಯುತ್ತಮನಾದ ಆ ಬೃಹದ್ರಥರಾಜನೇ ಮರಣವನ್ನು ಹೊಂದಿ- ರುವಾಗ, ನಿನ್ನ ಮಗನಿಗೋಸ್ಕರ ಏಕೆ ದುಃಖವನ್ನು ಅನುಭವಿಸುವಿ.
ಟಿಪ್ಪಣಿ - ಬೃಹದ್ರಥ ಚಂದ್ರವಂಶದ ಕ್ಷತ್ರಿಯ. ಕಾಶೀರಾಜನ ಇಬ್ಬರು ಪುತ್ರಿ- ಯರೇ ಇವನ ಪತ್ನಿಯರು. ಜರಾಸಂಧನು ಇವನ ಮಗ. ಮಹಾಭಾರತದ ಅರಣ್ಯಪರ್ವದಲ್ಲಿ ಇವನ ಕಥೆಯು ವಿಸ್ತಾರವಾಗಿ ಬಂದಿದೆ. ಬೃಹದ್ರಥನ ಹೆಸರು ಋಗ್ವೇದದಲ್ಲಿಯೂ ಕೂಡ ಬರುತ್ತದೆ.
ಶಿಬಿ ಚಕ್ರವರ್ತಿಯ ಸಾಧನೆ
ಶಿಬಿಮೌಶೀನರಂ ಚೈವ ಮೃತಂ ಶುಶ್ರುಮ ಸೃಂಜಯ |
ಯ ಇಮಾಂ ಪೃಥಿವೀಂ ಕೃತ್ಸ್ನಾಂ ಚರ್ಮವತ್ಸಮವೇಷ್ಟಯತ್ ॥38॥
ಉಶೀನರ ಎಂಬ ರಾಜನಿಗೆ, ಶಿಬಿ ಎಂಬ ಮಗನಿದ್ದನು. ಇವನೂ ಸಹ ರಾಜ್ಯ- ಭಾರವನ್ನು ಮಾಡಿ, ಮೃತನಾದನು. ಸೃಂಜಯನೇ! ಸಮಗ್ರಭೂಮಂಡಲವನ್ನು ಚರ್ಮದಂತೆ ಹೊದಿಸಿ, ತನ್ನ ಅಧೀನವನ್ನಾಗಿ ಮಾಡಿಕೊಂಡಿದ್ದನು.
ಟಿಪ್ಪಣಿ - ಚಾಪೆಯ ಸುರುಳಿಯನ್ನು ಬಿಡಿಸಿ, ಹರಡಿದಷ್ಟು ಸುಲಭವಾಗಿ ಸಮಗ್ರ ಭೂಮಂಡಲವನ್ನೇ ಹರಡಿ, ತನ್ನ ಅಧೀನವನ್ನಾಗಿ

ಮಾಡಿಕೊಂಡಿದ್ದನು. ಹರಡಿದ ಚಾಪೆಯು ಹೇಗೆ ಸಂಪೂರ್ಣವಾಗಿ ನಮ್ಮ ಅಧೀನವಾಗಿರುತ್ತದೋ, ಅದರಂತೆ ಈ ಭೂಮಂಡಲವನ್ನು ತನ್ನ  ಅಧೀನವನ್ನಾಗಿ ಮಾಡಿಕೊಂಡಿದ್ದನು. ಅವನ ರಾಜ್ಯಾಡಳಿತದಲ್ಲಿ ಬೇರೆ ಯಾರೊಬ್ಬನೂ ರಾಜನಾಗಿರಲಿಲ್ಲ ಎಂದಭಿ- ಪ್ರಾಯ.
ಮಹತಾ ರಥಘೋಷೇಣ ಪೃಥಿವೀಮನುನಾದಯನ್ |
ಏಕಚ್ಛತ್ರಾಂ ಮಹೀಂ ಚಕ್ರೇ ಜೈತ್ರೇಣೈಕರಥೇನ ಯಃ ॥39॥
ಶಿಬಿಯು ತನ್ನ ರಥದ ಘೋಷದಿಂದ ಭೂಮಂಡಲವನ್ನೇ ಪ್ರತಿಧ್ವನಿಗೊಳಿಸಿ- ದನು. ಸಮಗ್ರ ಭೂಮಂಡಲವನ್ನು ಏಕಚಕ್ರಾಧಿಪತ್ಯದಿಂದ ಆಳಿದನು.
ಯಾವದದ್ಯ ಗವಾಶ್ವಂ ಸ್ಯಾದಾರಣ್ಯೈಃ ಪಶುಭಿಃ ಸಹ |
ತಾವತೀಃ ಪ್ರದದೌ ಗಾಃ ಸ ಶಿಬಿರೌಶೀನರೋಽಧ್ವರೇ ॥40॥
ಆ ಶಿಬಿಯು ಒಮ್ಮೆ ಮಹಾಯಾಗವನ್ನು ಆಚರಿಸಿದನು. ಆಗ ಅರಣ್ಯದಲ್ಲೂ ಸೇರಿದಂತೆ ತನ್ನ ಆಡಳಿತದಲ್ಲಿ ಎಷ್ಟು ಹಸು, ಕುದುರೆಗಳಿದ್ದವೋ, ಅಷ್ಟೇ ಸಂಖ್ಯೆಯ ಹಸುಗಳನ್ನು ದಾನವನ್ನಾಗಿ ನೀಡಿದನು.
ನೋದ್ಯಂತಾರಂ ಧುರಂ ತಸ್ಯ ಕಂಚಿನ್ಮೇನೇ ಪ್ರಜಾಪತಿಃ |
ನ ಭೂತಂ ನ ಭವಿಷ್ಯಂತಂ ಸರ್ವರಾಜಸು ಭಾರತ |
ಅನ್ಯತ್ರೌಶೀನರಾಚ್ಛೈಬ್ಯಾದ್ ರಾಜರ್ಷೇರಿಂದ್ರವಿಕ್ರಮಾತ್ ॥41॥
ಇಂದ್ರನ ಪರಾಕ್ರಮದಂತೆ ಬಲಿಷ್ಠನಾದ ಆ ಶಿಬಿಯೆಂಬ ಯಾವ ರಾಜರ್ಷಿ- ಯಿದ್ದನೋ, ಅವನು ಮಾಡಿದ ಪ್ರಜಾರಕ್ಷಣೆಯಂತೆ ಮತ್ತೊಬ್ಬ ರಾಜನು ಹಿಂದೆಂದೂ ಮಾಡಿರುವುದಿಲ್ಲ. ಮುಂದೆಯೂ ಕೂಡ ಅವನನ್ನು ಮೀರಬಲ್ಲ ಮತ್ತೊಬ್ಬ ರಾಜನು ಹುಟ್ಟಲು ಸಾಧ್ಯವಿಲ್ಲ. ಹೀಗೆ ಆ ಬ್ರಹ್ಮನೇ ತಿಳಿದಿದ್ದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥
ಅದಕ್ಷಿಣಮಯಜ್ವಾನಂ ತಂ ವೈ ಸಂಶಾಮ್ಯ ಮಾ ಶುಚಃ ॥42॥
ನಿನಗಿಂತ ಮತ್ತು ನಿನ್ನ ಮಗನಿಗಿಂತ ಧರ್ಮ, ಜ್ಞಾನ, ವೈರಾಗ್ಯ ಮತ್ತು, ಐಶ್ವರ್ಯ ನಾಲ್ಕು ಗುಣಗಳಲ್ಲಿ ಅಧಿಕನಾದ ಆ ಶಿಬಿ ಚಕ್ರವರ್ತಿಯೇ ಮರಣವನ್ನು ಹೊಂದಿದ ಮೇಲೆ, ಯಜ್ಞ-ಯಾಗಾದಿಗಳನ್ನು ಮಾಡದ, ದಕ್ಷಿಣೆಗಳನ್ನು ಕೊಡದ ನಿನ್ನ ಮಗನ ವಿಷಯದಲ್ಲಿ ಇಷ್ಟೇಕೆ ದುಃಖವನ್ನು ಅನುಭವಿಸುತ್ತಿರುವಿ. ದುಃಖವನ್ನು ಹೊಂದಬೇಡ.
ಟಿಪ್ಪಣಿ - ಚಂದ್ರವಂಶದಲ್ಲಿ ಹುಟ್ಟಿದ ಉಶೀನರ ಎಂಬ ರಾಜನ ಮಗನೇ ಶಿಬಿ. ಯಯಾತಿಯ ಮಗಳಾದ ಮಾಧವಿಯು ಇವನ ತಾಯಿ. ಗೋಪತಿಯು ಇವನ ಮಗ. ಋಷಗರ್ಭ, ಶಿಬಿರ, ಮದ್ರ, ಕೇಕಯ ಮೊದಲಾದ ಮಕ್ಕಳು ಇವನಿಗಿದ್ದರು ಎಂಬುದಾಗಿ ಭಾಗವತವು ಹೇಳುತ್ತಿದೆ. ಇವನಿಗೆ ಬೃಹದ್‌ಗರ್ಭನೆಂಬ ಮತ್ತೊಬ್ಬ ಮಗನಿದ್ದನು. ಇವನನ್ನು ಬ್ರಹ್ಮದೇವನಿಗೆ ಸಮರ್ಪಣೆ ಮಾಡಿದನು. ಇವನೊಮ್ಮೆ ನದಿಯ ದಡದಲ್ಲಿ ಯಾಗವನ್ನು ಮಾಡುತ್ತಿದ್ದಾಗ ಇಂದ್ರನು ಗಿಡುಗನಾಗಿ, ಅಗ್ನಿಯು ಪಾರಿವಾಳವಾಗಿಯೂ ಬಂದರು. ಆ ಪಾರಿವಾಳವನ್ನು ಶಿಬಿಯು ರಕ್ಷಣೆ ಮಾಡುವುದಕ್ಕಾಗಿ ತನ್ನ ದೇಹವನ್ನೇ ಗಿಡುಗಕ್ಕೆ ಸಮರ್ಪಣೆ ಮಾಡಿದನು. ಶರಣಾಗತ ರಕ್ಷಣೆಯ ಈ ಗುಣವನ್ನು ಕಂಡು, ದೇವತೆಗಳು ಮೆಚ್ಚಿದರು.
ಭರತ ಚಕ್ರವರ್ತಿಯ ಸಾಧನೆ
ಭರತಂ ಚೈವ ದೌಃಷಂತಿಂ ಮೃತಂ ಸೃಂಜಯ ಶುಶ್ರುಮ |
ಶಾಕುಂತಲಂ ಮಹೇಷ್ವಾಸಂ ಭೂರಿದ್ರವಿಣತೇಜಸಮ್ ॥43॥
ದುಷ್ಯಂತನಿಗೆ ಶಕುಂತಲೆಯಲ್ಲಿ ಭರತನು ಮಗನಾಗಿ ಹುಟ್ಟಿದನು. ಇವನೂ ಸಹ ಚಕ್ರವರ್ತಿಯಾಗಿ ಭೂಮಿಯನ್ನು ಆಳಿದನು. ಆದರೆ ಕಾಲಗತಿಯಂತೆ ಇವನೂ ಸಹ ಮೃತನಾಗಿದ್ದಾನೆ. ಈ ಭರತನು ಮಹಾತೇಜಸ್ವಿಯಾಗಿದ್ದನು. ಧನುರ್ಧಾರಿಯಾಗಿ- ದ್ದನು. ಅತ್ಯಂತ ಶ್ರೀಮಂತನಾಗಿದ್ದನು.
ಯೋ ಬದ್ಧ್ವಾ ತ್ರಿಂಶತೋ ಹ್ಯಶ್ವಾನ್ ದೇವೇಭ್ಯೋ ಯಮುನಾಮನು |
ಸರಸ್ವತೀಂ ವಿಂಶತಿಂ ಚ ಗಂಗಾಮನು ಚತುರ್ದಶ ॥44॥
ಇವನು ದೇವತೆಗಳನ್ನು ತೃಪ್ತಿ ಪಡಿಸುವುದಕ್ಕಾಗಿ, ಯಮುನಾ ನದಿಯ ತೀರದಲ್ಲಿ ಮೂವತ್ತು ಅಶ್ವಮೇಧಯಾಗಗಳನ್ನು, ಗಂಗಾನದಿ ತೀರದಲ್ಲಿ ಇಪ್ಪತ್ತು ಅಶ್ವಮೇಧ- ಯಾಗಗಳನ್ನು, ಸರಸ್ವತೀ ನದಿಯ ತೀರದಲ್ಲಿ ಹದಿನಾಲ್ಕು ಅಶ್ವಮೇಧಯಾಗಗಳನ್ನು ಆಚರಿಸಿದನು.
ಅಶ್ವಮೇಧಸಹಸ್ರಾಣಿ ರಾಜಸೂಯಶತೇನ ಚ |
ಇಷ್ಟವಾನ್ ಸ ಮಹಾತೇಜಾ ದೌಃಷಂತಿರ್ಭರತಃ ಪುರಾ ॥45॥
ಆ ಭರತನು ತಾನು ಚಕ್ರವರ್ತಿಯಾಗಿದ್ದಾಗ ಒಟ್ಟು ಒಂದು ಸಾವಿರ ಅಶ್ವ- ಮೇಧಯಾಗಗಳನ್ನು, ನೂರು ರಾಜಸೂಯಯಾಗಗಳನ್ನು ಆಚರಿಸಿ ದೇವತೆಗಳನ್ನು ತೃಪ್ತಿಗೊಳಿಸಿದ್ದನು.
ಭರತಸ್ಯ ಮಹತ್ ಕರ್ಮ ಸರ್ವರಾಜಸು ಪಾರ್ಥಿವಾಃ |
ಖಂ ಮರ್ತ್ಯಾ ಇವ ಬಾಹುಭ್ಯಾಂ ನಾನುಗಂತುಮಶಕ್ನುವನ್ ॥46॥
ಮನುಷ್ಯನು ತನ್ನ ಬಾಹುಗಳಿಂದ ಆಕಾಶವನ್ನು ಮುಟ್ಟಲು ಹೇಗೆ ಅಸಾಧ್ಯವೋ? ಅದರಂತೆ ಆ ಭರತನು ಮಾಡಿದ ಮಹತ್ಕಾರ್ಯಗಳನ್ನು ಯಾವ ರಾಜನೂ ಕೂಡ ಅನುಸರಿಸಲು ಸಾಧ್ಯವಾಗುವುದಿಲ್ಲ.
ಪರಂ ಸಹಸ್ರಾದ್ ಯೋ ಬದ್ಧ್ವಾನ್ ಹಯಾನ್ ವೇದೀಂ ವಿತತ್ಯ ಚ |
ಸಹಸ್ರಂ ಯತ್ರ ಪದ್ಮಾನಾಂ ಕಣ್ವಾಯ ಭರತೋ ದದೌ ॥47॥
ಭರತನು ಸಾವಿರಕ್ಕಿಂತ ಅಧಿಕವಾದ ಅಶ್ವಗಳನ್ನು ಬಂಧಿಸಿ, ಯಾಗ ಮಾಡಿದನು. ಆ ಯಾಗದಲ್ಲಿ ನೂರು ಕೋಟಿ ಹಸುಗಳನ್ನು ಕಣ್ವಋಷಿಗಳಿಗೆ ದಾನ ಮಾಡಿದನು.

ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥48॥
ನಾಕು ಗುಣಗಳಿಂದ ನಿನಗಿಂತಲೂ, ನಿನ್ನ ಮಗನಿಗಿಂತಲೂ ಹೆಚ್ಚು ಮಹಾ- ಭಾಗ್ಯಶಾಲಿಯಾದ ಆ ಭರತನೇ ಮರಣವನ್ನು ಹೊಂದಿದ ಮೇಲೆ ನಿನ್ನ ಮಗನ ವಿಷಯದಲ್ಲಿ ಏಕೆ ದುಃಖವನ್ನು ಅನುಭವಿಸುವಿ?
ಟಿಪ್ಪಣಿ - ದುಷ್ಯಂತರಾಜನು ಕಣ್ವಾಶ್ರಮಕ್ಕೆ ತೆರಳಿದಾಗ ಅಲ್ಲಿ ಶಕುಂತಲೆ- ಯನ್ನು ನೋಡಿ ಮನಸೋತನು. ಗಾಂಧರ್ವವಿವಾಹವಾದನು. ಅವಳಲ್ಲಿ ಗರ್ಭಾ -ಧಾನ ಮಾಡಿದನು. ನಿನ್ನನ್ನು ಕರೆಯಿಸಿಕೊಳ್ಳುತ್ತೇನೆಂದು ವಾಗ್ದಾನ ಮಾಡಿ, ತನ್ನ ಪಟ್ಟಣಕ್ಕೆ ಹೊರಟುಬಿಟ್ಟನು. ಶಕುಂತಲೆಯು ಪುತ್ರನನ್ನು ಹೆತ್ತು ಕೆಲವು ವರ್ಷಗಳು ದಾಟಿದರೂ ದುಷ್ಯಂತನು ಈಕೆಯನ್ನು ಕರೆಸಿಕೊಳ್ಳಲಿಲ್ಲ. ಕಣ್ವಋಷಿಗಳು ಶಕುಂತಲೆಯನ್ನು ತನ್ನ ಶಿಷ್ಯರ ಜೊತೆ ರಾಜನ ಆಸ್ಥಾನಕ್ಕೆ ಕಳುಹಿಸಿದರು. ರಾಜನು ಆ ಶಕುಂತಲೆಯನ್ನು ಮತ್ತು ಮಗುವನ್ನು ಸ್ವೀಕರಿಸಲು ಅನುಮಾನ ಪಟ್ಟನು. ಆಗ ಆಕಾಶವಾಣಿಯಾಯಿತು. `ಶಕುಂತಲೆಯು ನಿನ್ನ ಪತ್ನಿ, ಬಾಲಕನು ನಿನ್ನ ಮಗ ಸ್ವೀಕರಿಸು' ಎಂದು. ಅನಂತರ ರಾಜನು ಅವರನ್ನು ಸ್ವೀಕರಿಸಿದನು. ಆ ಮಗುವೇ ಭರತನಾದನು. ದುಷ್ಯಂತನ ಅನಂತರ ಭರತನು ರಾಜನಾದನು. ಅವನಿಗೆ ಮೂರು ಮಂದಿ ಪತ್ನಿಯರಿದ್ದರು. ಒಂಬತ್ತು ಮಂದಿ ಮಕ್ಕಳಾದರು. ಈ ಭರತನ ಆಳ್ವಿಕೆ- ಯಿಂದಲೇ ಈ ದೇಶಕ್ಕೆ `ಭಾರತ' ಎಂಬ ಹೆಸರು ಬಂದಿತು. ಮತ್ತು ಅವನ ವಂಶಕ್ಕೂ `ಭರತವಂಶ' ಎಂದೇ ಹೆಸರು ಬಂದಿತು. ಇವನು ಗಂಗಾತೀರದಲ್ಲಿ ಮತ್ತು ಯಮುನಾ ತೀರದಲ್ಲಿ ಅನೇಕ ಅಶ್ವಮೇಧಯಾಗಗಳನ್ನು ಆಚರಿಸಿದನು. ಚಂದ್ರವಂಶದಲ್ಲೇ ಅತ್ಯಂತ ಹೆಸರುವಾಸಿಯಾದನು. ಇವನು ಕಥೆಯು ಆದಿ- ಪರ್ವದಲ್ಲಿ ವಿಸ್ತಾರವಾಗಿ ಬಂದಿದೆ.
ಶ್ರೀರಾಮಚಂದ್ರನ ಸಾಧನೆ
ರಾಮಂ ದಾಶರಥಿಂ ಚೈವ ಮೃತಂ ಶುಶ್ರುಮ ಸೃಂಜಯ |
ಯೋಽನ್ವಕಂಪತ ವೈ ನಿತ್ಯಂ ಪ್ರಜಾಃ ಪುತ್ರಾನಿವೌರಸಾನ್ ॥49॥
ಸೃಂಜಯನೇ! ದಶರಥನಿಗೆ ಶ್ರೀರಾಮನೆಂಬ ಮಗನಿದ್ದನು. ನಿತ್ಯವಾಗಿಯೂ ಎಲ್ಲಾ ಪ್ರಜೆಗಳನ್ನು ಔರಸಪುತ್ರರಂತೆ ಕಾಣುತ್ತಾ, ಅತ್ಯಂತ ಅನುಕಂಪದಿಂದ ಎಲ್ಲರನ್ನೂ ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದನು. ಅಂಥ ಶ್ರೀರಾಮನೂ ಕೂಡ ಪರಂಧಾಮವನ್ನು ಪ್ರವೇಶಿಸಿದನು.
ವಿಧವಾ ಯಸ್ಯ ವಿಷಯೇ ನಾನಾಥಾಃ ಕಾಶ್ಚನಾಭವನ್ |
ಸರ್ವಸ್ಯಾಸೀತ್ ಪಿತೃಸಮೋ ರಾಮೋ ರಾಜ್ಯಂ ಯದಾನ್ವಶಾತ್॥50॥
ಆ ಶ್ರೀರಾಮಚಂದ್ರನು ರಾಜ್ಯಭಾರವನ್ನು ಮಾಡುತ್ತಿರುವಾಗ, ಒಬ್ಬಳೇ ಒಬ್ಬಳು ಸ್ತ್ರೀಯು ವಿಧವೆಯಾಗಿರಲಿಲ್ಲ. ಒಬ್ಬರೂ ಕೂಡ ಅನಾಥರಾಗಿರಲಿಲ್ಲ. ಪ್ರತಿಯೊಬ್ಬ ಪ್ರಜೆಗಳಿಗೂ ಈ ಶ್ರೀರಾಮಚಂದ್ರನು ತಂದೆಯ ಸಮಾನನಾಗಿದ್ದನು.
ಕಾಲವರ್ಷಾಶ್ಚ ಪರ್ಜನ್ಯಾಃ ಸಸ್ಯಾನಿ ರಸವಂತಿ ಚ |
ನಿತ್ಯಂ ಸುಭಿಕ್ಷಮೇವಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥51॥
ಕಾಲಕ್ಕೆ ಸರಿಯಾಗಿ ಮಳೆಯಾಗುತ್ತಿತ್ತು. ಬೆಳೆಗಳು ಸಮೃದ್ಧವಾಗಿ ಬೆಳೆಯು- ತ್ತಿದ್ದವು. ನಿತ್ಯವೂ ಅವನ ರಾಜ್ಯದಲ್ಲಿ ಸುಭಿಕ್ಷವೇ ಇದ್ದಿತು. ದುರ್ಭಿಕ್ಷವೇ ಆ ರಾಮ- ರಾಜ್ಯದಲ್ಲಿ ಇರಲಿಲ್ಲ.
ಪ್ರಾಣಿನೋ ನಾಪ್ಸು ಮಜ್ಜಂತಿ ನಾನರ್ಥೇ ಪಾವಕೋಽದಹತ್ |
ನ ವ್ಯಾಲಜಂ ಭಯಂ ಚಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥52॥
ಶ್ರೀರಾಮಚಂದ್ರನು ರಾಜ್ಯಭಾರ ಮಾಡುತ್ತಿದ್ದಾಗ ಒಬ್ಬರೇ ಒಬ್ಬರೂ ಕೂಡ ನೀರಿನಲ್ಲಿ ಮುಳುಗಿ ಸಾಯಲಿಲ್ಲ. ಅಗ್ನಿಯಲ್ಲಿ ಬಿದ್ದು ಪ್ರಾಣ ಬಿಡಲಿಲ್ಲ. ರೋಗ- ದಿಂದ ಪೀಡಿತರಾಗಿರಲಿಲ್ಲ.
ಆಸನ್ ವರ್ಷಸಹಸ್ರಾಣಿ ತಥಾ ಪುತ್ರಸಹಸ್ರಿಕಾಃ |
ಅರೋಗಾಃ ಸರ್ವಸಿದ್ಧಾರ್ಥಾಃ ಪ್ರಜಾ ರಾಮೇ ಪ್ರಶಾಸತಿ ॥53॥
ಸ್ತ್ರೀಯರು ಸಾವಿರ ವರ್ಷಗಳ ಕಾಲ ಬದುಕುತ್ತಿದ್ದರು. ಸಾವಿರ ವರ್ಷಗಳನ್ನು ತುಂಬಿದ ಪುರುಷರಿದ್ದರು. ಎಲ್ಲಾ ಪ್ರಜೆಗಳು ರೋಗವಿಲ್ಲದೇ ದೃಢಕಾಯರಾಗಿದ್ದರು. ಪೂರ್ಣವಾದ ಅಭಿಲಾಷೆಗಳನ್ನು ಹೊಂದುತ್ತಿದ್ದರು.
ನಾನ್ಯೋನ್ಯೇನ ವಿವಾದೋಽಭೂತ್ ಸ್ತ್ರೀಣಾಮಪಿ ಕುತೋ ನೃಣಾಮ್|
ಧರ್ಮನಿತ್ಯಾಃ ಪ್ರಜಾಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ ॥54॥
ಆ ರಾಮರಾಜ್ಯದಲ್ಲಿ ಸ್ತ್ರೀಯರು ಪರಸ್ಪರವಾಗಿ ಜಗಳ ಮಾಡುತ್ತಿರಲಿಲ್ಲ. ಹೀಗಿದ್ದ ಮೇಲೆ ಪುರುಷರಲ್ಲಿ ವಿವಾದವಿರಲಿಲ್ಲವೆಂದು ಪ್ರತ್ಯೇಕವಾಗಿ ಹೇಳ- ಬೇಕೇನು? ಪ್ರಜೆಗಳು ಯಾವುದೇ ಭಯ ಇಲ್ಲದೇ ಧರ್ಮವನ್ನು ಅನುಷ್ಠಾನ ಮಾಡುತ್ತಿದ್ದರು. ಇದುವೇ ರಾಮರಾಜ್ಯದ ವೈಭವ.
ಸಂತುಷ್ಟಾ ಸರ್ವಸಿದ್ಧಾರ್ಥಾ ನಿರ್ಭಯಾ ಸ್ವೈರಚಾರಿಣಃ |
ನರಾಃ ಸತ್ಯವ್ರತಾಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ ॥55॥
ಎಲ್ಲ ಪ್ರಜೆಗಳು ತಮ್ಮೆಲ್ಲ ಅಭೀಷ್ಟಗಳನ್ನು ಪೂರೈಸಿಕೊಂಡು ಸಂತೃಪ್ತರಾಗಿದ್ದರು. ಯಾವುದೇ ಭಯವಿರಲಿಲ್ಲ. ಯಥೇಚ್ಛವಾಗಿ ಕಾಮನೆಗಳನ್ನು ಪಡೆದುಕೊಳ್ಳು- ತ್ತಿದ್ದರು. ಪ್ರತಿಯೊಬ್ಬರೂ ಸತ್ಯಪರಾಯಣರಾಗಿದ್ದರು. ಹೀಗೆ ರಾಮರಾಜ್ಯವನ್ನು ಪ್ರಶಂಸೆ ಮಾಡುತ್ತಾರೆ.
ನಿತ್ಯಪುಷ್ಪಫಲಾಶ್ಚೈವ ಪಾದಪಾ ನಿರುಪದ್ರವಾಃ |
ಸರ್ವಾ ದ್ರೋಣದುಘಾ ಗಾವೋ ರಾಮೇ ರಾಜ್ಯಂ ಪ್ರಶಾಸತಿ ॥56॥
ವೃಕ್ಷಗಳೂ ಕೂಡ ಪ್ರತಿನಿತ್ಯ ಹೂವು, ಹಣ್ಣುಗಳನ್ನು ಯಥೇಚ್ಛವಾಗಿ ಬಿಡುತ್ತಿದ್ದವು. ಯಾವುದೇ ಉಪದ್ರವವು ವೃಕ್ಷಗಳಿಗೆ ಇರಲಿಲ್ಲ. ಎಲ್ಲ ಹಸುಗಳು ಕೊಳಗದಷ್ಟು ಹಾಲನ್ನು ನೀಡುತ್ತಿದ್ದವು. ಹೀಗೆ ಶ್ರೀರಾಮನು ರಾಜ್ಯವನ್ನು ಶಾಸನೆ ಮಾಡುತ್ತಿದ್ದನು.

ಸ ಚತುರ್ದಶ ವರ್ಷಾಣಿ ವನೇ ಪ್ರೋಷ್ಯ ಮಹಾತಪಾಃ |
ದಶಾಶ್ವಮೇಧಾನ್ ಜಾರೂಥ್ಯಾಮಾಜಹಾರ ನಿರರ್ಗಲಾನ್ ॥57॥
ಆ ಶ್ರೀರಾಮನು ಹದಿನಾಕು ವರ್ಷಗಳ ಕಾಲ ವನವಾಸವನ್ನು ಮುಗಿಸಿ ರಾಜ್ಯಕ್ಕೆ ಹಿಂತಿರುಗಿದನು. ಅನಂತರ ಹತ್ತು ಅಶ್ವಮೇಧಯಾಗಗಳನ್ನು, ಜಾರೂಥೀ ಎಂಬ ನದಿಯ ತೀರದಲ್ಲಿ ಯಾವ ತೊಂದರೆಯಿಲ್ಲದೇ ಆಚರಿಸಿದನು.
ಟಿಪ್ಪಣಿ- ಜಾರುಥ್ಯಮಾಜಹಾರ ನಿರರ್ಗಲಾನ್ ಇತ್ಯತ್ರ ಜಾರುಥ್ಯಾಂ ಜಾರು- ಥೀಸಂಜ್ಞಾಯಾಂ ನದ್ಯಾಮ್ |
ಜಾರೂಥೀ ಎಂಬ ಹೆಸರುಳ್ಳ ನದಿಯಲ್ಲಿ
ಶ್ಯಾಮೋ ಯುವಾ ಲೋಹಿತಾಕ್ಷೋ ಮತ್ತವಾರಣವಿಕ್ರಮಃ |
ಆಜಾನುಬಾಹುಃ ಸುಮುಖೋ ಹರಿಃ ಸ್ಕಂಧೋ ಮಹಾಭುಜಃ ॥58॥
ದಶವರ್ಷಸಹಸ್ರಾಣಿ ರಾಮೋ ರಾಜ್ಯಮಕಾರಯತ್ |
ಶ್ರೀರಾಮಚಂದ್ರನ ದೇಹದ ಕಾಂತಿಯು ಶ್ಯಾಮಲವರ್ಣದಿಂದ ಕಂಗೊಳಿ- ಸುತ್ತಿತ್ತು. ಕೆಂಪಾದ ಕಡೆಗಣ್ಣುಗಳ ನೋಟವನ್ನು ಹೊಂದಿದ್ದನು. ಆನೆಗಳ ಗುಂಪಿ- ನಲ್ಲಿ ಮಹಾಸಲಗದಂತೆ ಬಲಿಷ್ಠನಾಗಿದ್ದನು. ಆಜಾನುಬಾಹುವಾಗಿದ್ದನು. ಸುಂದರ- ವಾದ ಮುಖವುಳ್ಳವನಾಗಿದ್ದನು. ಸಿಂಹದ ಹೆಗಲಿನಂತೆ ವಿಶಾಲವಾದ ಹೆಗಲುಳ್ಳವ- ನಾಗಿದ್ದನು. ಮಾಂಸಲವಾದ ಭುಜಗಳನ್ನು ಹೊಂದಿದ್ದನು. ಇಂಥ ಶ್ರೀರಾಮ- ಚಂದ್ರನು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಪರಿಪಾಲನೆಯನ್ನು ಮಾಡಿ- ದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥59॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ, ನಿನ್ನ ಮಗನಿಗಿಂತಲೂ ಅತ್ಯಧಿಕನಾದ ಆ ಶ್ರೀರಾಮಚಂದ್ರನೇ ಪರಂಧಾಮವನ್ನು ಪ್ರವೇಶ ಮಾಡಿದ ಮೇಲೆ ನೀನು ನಿನ್ನ ಮಗನ ವಿಷಯದಲ್ಲಿ ಏಕೆ ವ್ಯರ್ಥವಾಗಿ ಸಂಕಟವನ್ನು ಅನುಭವಿಸುತ್ತಿರುವಿ?
ಟಿಪ್ಪಣಿ - ಶ್ರೀರಾಮಚಂದ್ರನ ಆಡಳಿತವನ್ನುರಾಮಾಯಣವು ಅತ್ಯಂತ ವಿಸ್ತಾರವಾಗಿ ವರ್ಣನೆ ಮಾಡಿದೆ. ಮಹಾಭಾರತದ ವನಪರ್ವದಲ್ಲಿಯೂ ಸಂಕ್ಷೇಪವಾಗಿ ಸಂಪೂರ್ಣರಾಮಾಯಣದ ಕಥೆಯು ಇರುತ್ತದೆ. ಶ್ರೀರಾಮ- ಚಂದ್ರನು ಒಟ್ಟು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿ- ದನು. ನಕ್ಷತ್ರಮಾಸದ ಪ್ರಕಾರ ಹದಿಮೂರುಸಾವಿರ ವರ್ಷಗಳ ಕಾಲ ರಾಜ್ಯ- ಭಾರವನ್ನು ಮಾಡಿದ್ದಾನೆ. ಜಾರೂಥೀ ಎಂಬ ನದಿಯ ದಡದಲ್ಲಿ ಹತ್ತು ಅಶ್ವ- ಮೇಧಯಾಗಗಳನ್ನು ಮಾಡಿದನೆಂಬ ವಿಚಾರವು ಇಲ್ಲಿ ಮಾತ್ರ ಬರುತ್ತಿದೆ. ವಾಸ್ತವಿಕವಾಗಿ ಜಾರೂಥೀ ಎಂಬ ಒಂದು ನಗರವಿತ್ತು. ಅಲ್ಲಿ ಆಹುತಿ ಎಂಬ ರಾಜನಿದ್ದನು. ಅವನು ಶ್ರೀಕೃಷ್ಣನಿಂದ ಪರಾಜಿತನಾದನೆಂದು ಮಹಾಭಾರತದ ವನಪರ್ವದಲ್ಲಿ ಕಥೆಯು ಬಂದಿದೆ. ಆದರೆ ಇಲ್ಲಿ ಲಕ್ಷಾಲಂಕಾರದಲ್ಲಿ ಜಾರೂಥೀ ಎಂಬ ನದಿಯ ದಡದಲ್ಲಿ ಎಂದು ಹೇಳುತ್ತಿದ್ದಾರೆ.
ಭಗೀರಥನ ಸಾಧನೆ
ಭಗೀರಥಂ ಚ ರಾಜಾನಂ ಮೃತಂ ಶುಶ್ರುಮ ಸೃಂಜಯ |
ಯಸ್ಯೇಂದ್ರೋ ವಿತತೇ ಯಜ್ಞೇ ಸೋಮಂ ಪೀತ್ವಾ ಮದೋತ್ಕಟಃ ॥60॥
ಅಸುರಾಣಾಂ ಸಹಸ್ರಾಣಿ ಬಹೂನಿ ಸುರಸತ್ತಮಃ |
ಅಜಯದ್ ಬಾಹುವೀರ್ಯೇಣ ಭಗವಾನ್ ಪಾಕಶಾಸನಃ ॥61॥
ಸೃಂಜಯನೇ! ಭಗೀರಥನೆಂಬ ರಾಜನೂ ಕೂಡ ಮರಣವನ್ನು ಹೊಂದಿದ- ನೆಂಬುದನ್ನು ನಾವು ಕೇಳಿದ್ದೇವೆ. ಅವನೂ ಕೂಡ ಒಂದು ದೊಡ್ಡ ಯಾಗವನ್ನು ಆಚರಿಸಿದನು. ಅದರಲ್ಲಿ ಸುರಶ್ರೇಷ್ಠನಾದ ಪಾಕಶಾಸನನಾದ ಭಗವಾನ್ ಇಂದ್ರನು ಸೋಮರಸವನ್ನು ಯಥೇಚ್ಛವಾಗಿ ಪಾನ ಮಾಡಿದನು. ಇದರಿಂದ ಮದಭರಿತ- ನಾದನು. ಹೀಗೆ ಯಾಗವನ್ನು ಆಚರಿಸಿದ ಆ ಭಗೀರಥನು ಸಾವಿರಾರು ಅಸುರರನ್ನು ತನ್ನ ಭುಜಪರಾಕ್ರಮದಿಂದ ಒಬ್ಬನೇ ಸದೆಬಡೆದನು.
ಯಃ ಸಹಸ್ರಂ ಸಹಸ್ರಾಣಾಂ ಕನ್ಯಾ ಹೇಮವಿಭೂಷಿತಾಃ |
ಈಜಾನೋ ವಿತತೇ ಯಜ್ಞೇ ದಕ್ಷಿಣಾಮತ್ಯಕಾಲಯತ್ ॥62॥
ತಾನು ಮಾಡಿದ ಆ ದೊಡ್ಡಯಾಗದಲ್ಲಿ ಸುವರ್ಣಾಭರಣಗಳಿಂದ ಭೂಷಿತ- ರಾದ ಹತ್ತುಲಕ್ಷ ಕನ್ಯೆಯರನ್ನು ದಕ್ಷಿಣಾರೂಪದಲ್ಲಿ ದಾನವನ್ನು ಮಾಡಿದನು.
ಸರ್ವಾ ರಥಗತಾಃ ಕನ್ಯಾ ರಥಾಃ ಸರ್ವೇ ಚತುರ್ಯುಜಃ |
ರಥೇ ರಥೇ ಶತಂ ನಾಗಾಃ ಪದ್ಮಿನೋ ಹೇಮಮಾಲಿನಃ ॥63॥
ಆ ಪ್ರತಿಯೊಬ್ಬ ಕನ್ಯೆಯರು ರಥಾರೂಢರಾಗಿದ್ದರು. ಒಂದೊಂದು ರಥದ ಹಿಂದೆಯೂ ಸುವರ್ಣಾಭರಣಗಳಿಂದ ಭೂಷಿತವಾದ ಹಣೆಯಲ್ಲಿ ಕಮಲದ ಚಿಹ್ನೆಯನ್ನು ಹೊಂದಿದ ನೂರು ಆನೆಗಳಿಂದಲೂ ಮತ್ತು ಪ್ರತಿಯೊಂದು ರಥಕ್ಕೂ ನಾಕು ಕುದುರೆಗಳಿದ್ದವು.
ಸಹಸ್ರಮಶ್ವಾ ಏಕೈಕಂ ಹಸ್ತಿನಂ ಪೃಷ್ಠತೋಽನ್ವಯುಃ |
ಗವಾಂ ಸಹಸ್ರಮಶ್ವೇಽಶ್ವೇ ಸಹಸ್ರಂ ಗವ್ಯಜಾವಿಕಮ್ ॥64॥
ಪ್ರತಿಯೊಂದು ಆನೆಗಳ ಜೊತೆಗೂ ಸಾವಿರಾರು ಕುದುರೆಗಳಿದ್ದವು. ಪ್ರತಿ- ಯೊಂದು ಕುದುರೆಗಳ ಜೊತೆ ಸಾವಿರಾರು ಹಸುಗಳಿದ್ದವು. ಒಂದೊಂದು ಹಸುವಿನ ಹಿಂದೆಯೂ ಸಾವಿರ ಆಡು ಮತ್ತೆ ಮೇಕೆಗಳು ಇದ್ದವು. ಇವೆಲ್ಲವನ್ನೂ ಭಗೀರಥನು ದಾನ ಮಾಡಿದನು.
ಉಪಹ್ವರೇ ನಿವಸತೋ ಯಸ್ಯಾಂಕೇ ನಿಷಸಾದ ಹ |
ಗಂಗಾ ಭಾಗೀರಥೀ ತಸ್ಮಾದುರ್ವಶೀ ಹ್ಯಭವತ್ ಪುರಾ ॥65॥
ಒಮ್ಮೆ ಭಗೀರಥನು ಗಂಗಾನದಿಯ ತೀರದಲ್ಲಿ ವಾಸ ಮಾಡುತ್ತಿದ್ದಾಗ, ಗಂಗಾ- ದೇವಿಯು ಸಣ್ಣಬಾಲಕಿಯಂತೆ ಬಂದು, ಆ ಭಗೀರಥನ ತೊಡೆಯಲ್ಲಿ ಕುಳಿತಳು. ಆದ್ದರಿಂದಲೇ ಆ ಗಂಗೆಯು ಭಾಗೀರಥೀ ಎಂದು, ಊರ್ವಶೀ ಎಂದು ಪ್ರಸಿದ್ಧಳಾ- ದಳು.

ಟಿಪ್ಪಣಿ - ಉಪಹ್ವರೇ ನಿವಸತ ಇತ್ಯತ್ರ ಉಪಹ್ವರೇ ಸಮೀಪೇ ಏಕಾಂತೇ ವಾ|
`ಉಪಹ್ವರೇ' ಎಂಬುದಕ್ಕೆ ಸಮೀಪದಲ್ಲಿ ಅಥವಾ ಏಕಾಂತದಲ್ಲಿ ಎಂದರ್ಥ.
ಭೂರಿದಕ್ಷಿಣಮಿಕ್ಷ್ವಾಕುಂ ಯಜಮಾನಂ ಭಗೀರಥಮ್ |
ತ್ರಿಲೋಕಪಥಗಾ ಗಂಗಾ ದುಹಿತೃತ್ವಮುಪೇಯುಷೀ ॥66॥
ಯಜ್ಞದಲ್ಲಿ ಯಜಮಾನನಾಗಿ ಯಥೇಚ್ಛವಾಗಿ ದಕ್ಷಿಣೆಯನ್ನು ನೀಡುತ್ತಿದ್ದ ಇಕ್ಷ್ವಾಕುಕುಲೋದ್ಭವನಾದ ಆ ಭಗೀರಥನನ್ನು ತ್ರಿಲೋಕಪಾವನೆಯಾದ ಗಂಗಾ- ದೇವಿಯು ತಂದೆಯನ್ನಾಗಿ ಮಾಡಿಕೊಂಡಳು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥67॥
ಸೃಂಜಯನೇ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಭಗೀರಥನು ನಿನಗಿಂತಲೂ, ನಿನ್ನ ಮಗನಿಗಿಂತಲೂ ಅತ್ಯಂತಪುಣ್ಯಶಾಲಿಯಾಗಿದ್ದಾನೆ. ಅವನೇ ಮರಣವನ್ನು ಹೊಂದಿದ ಮೇಲೆ ನೀನು ಬೇರೆಯವರ ವಿಷಯದಲ್ಲಿ ದುಃಖ ಪಡಲು ಅರ್ಹವೇ ಇಲ್ಲ. ಆದ್ದರಿಂದ ನಿನ್ನ ಮಗನು ಸತ್ತನೆಂದು ದುಃಖಿಸಬೇಡ.
ಟಿಪ್ಪಣಿ - ಇಕ್ಷ್ವಾಕುವಂಶದ ದಿಲೀಪನ ಮಗನೇ ಭಗೀರಥನು.  ಇವನಿಗೆ ಹಂಸಿ ಎಂಬ ಮಗಳಿದ್ದಳು. ಕೌತ್ಸಮುನಿಯೇ ಅಳಿಯನು. ಕಪಿಲಮುನಿಯ ಕೋಪ -ದಿಂದ ಬೂದಿಯಾದ ಅರವತ್ತುಸಾವಿರ  ಮಂದಿ ಸಾಗರರ ಸದ್ಗತಿಗಾಗಿ ಗಂಗಾ- ವತರಣವನ್ನು ಮಾಡಿಸಿದ ಮಹಾಧೀರ. ಭಗೀರಥನ ತಂದೆಯಾದ ದಿಲೀಪನು ಗಂಗಾವತರಣದ ಪ್ರಯತ್ನದಲ್ಲಿ ಸದ್ಗತಿಯನ್ನು ಹೊಂದಿದನು. ಅವನ ತಂದೆಯ ಆಸೆಯನ್ನು ಈಡೇರಿಸಬೇಕೆಂದು ಭಗೀರಥನು ತಪಸ್ಸಿಗಾಗಿ ಹಿಮಾಲಯ ಪ್ರಾಂತ್ಯಕ್ಕೆ ತೆರಳಿದನು. ಅಲ್ಲಿ ಆ ರಾಜನು ಕಂದಮೂಲಫಲಗಳನ್ನು ಹಾಗೂ ನೀರನ್ನೇ ಆಹಾರವನ್ನಾಗಿ ಸೇವಿಸುತ್ತಾ, ಒಂದು ಸಾವಿರ ವರ್ಷಗಳ ಕಾಲ ಘೋರ ತಪಸ್ಸನ್ನು ಮಾಡಿದನು. ಅಂತೂ ಗಂಗೆಯು ಪ್ರತ್ಯಕ್ಷಳಾದಳು. ಭೂಮಿಗೆ ಬರಲು ಒಪ್ಪಿದಳು. ಆದರೆ ತನ್ನ ವೇಗವನ್ನು ತಡೆಯುವರು ಯಾರು ಎಂದು ಕೇಳಿದಳು. ಆಗ ಭಗೀರಥನು ಪುನಃ ಮಹಾರುದ್ರದೇವರನ್ನು ಕುರಿತು ತಪಸ್ಸು ಮಾಡಿದನು. ಪ್ರತ್ಯಕ್ಷರಾದ ಮಹಾದೇವರು ಗಂಗೆಯನ್ನು ತಾನು ಧರಿಸುತ್ತೇನೆಂದು ಅಭಯ ಪ್ರದಾನ ಮಾಡಿದರು. ಪುನಃ ಗಂಗೆಯನ್ನು ಪ್ರಾರ್ಥಿಸಿ, ಭೂಮಿಗೆ ಬರುವಂತೆ ಕೇಳಿಕೊಂಡನು. ಆಗ ಗಂಗೆಯು ಶಿವನ ಜಡೆಯಲ್ಲಿ ಧುಮುಕಿದಳು. ಶಿವನ ಜಡೆ- ಯಿಂದ ಕೆಳಗೆ ಹರಿದು, ಆ ಸಗರರಿಗೆ ಸದ್ಗತಿಯನ್ನು ಉಂಟುಮಾಡಿದಳು. ಒಮ್ಮೆ ಕಾಲೇರಯೆಂಬ ರಕ್ಕಸರ ನಾಶಕ್ಕಾಗಿ ಅಗಸ್ತ್ಯನು ಸಮುದ್ರವನ್ನೇ ಆಚಮನ ಮಾಡಿ- ಬಿಟ್ಟನು. ಆಗ ಭಗೀರಥನು ಆ ಸಮುದ್ರವನ್ನು ಗಂಗೋದಕದಿಂದ ತುಂಬಿಸಿದನು. ಗಂಗೋತ್ರಿಯ ಸನ್ನಿಧಾನದಲ್ಲಿ ಭೂಮಿಗೆ ಗಂಗೆಯು ಇಳಿದುಬಂದದ್ದೆಂದು ದಾಖಲೆಗಳಿವೆ. ಅಂದಿನಿಂದ ಇಲ್ಲಿಯ ತನಕವೂ ಭರತಖಂಡದಲ್ಲಿರುವವರನ್ನು, ಈ ಗಂಗೆಯು ಪಾವನ ಮಾಡುತ್ತಿದ್ದಾಳೆ. ಈ ಗಂಗೆಯ ಕಥೆಯನ್ನು ರಾಮಾ- ಯಣದ ಬಾಲಕಾಂಡದಲ್ಲಿ ಶ್ರೀರಾಮನಿಗೆ ವಿಶ್ವಾಮಿತ್ರರು ತಿಳಿಸುತ್ತಾರೆ. ಮತ್ತು ಮಹಾಭಾರತದ ಅರಣ್ಯಪರ್ವದಲ್ಲಿ, ದ್ರೋಣಪರ್ವಗಳಲ್ಲಿಯೂ ಇದರ ವಿಚಾರವಿದೆ.
ದಿಲೀಪರಾಜನ ಸಾಧನೆ
ದಿಲೀಪಂ ಚ ಮಹಾತ್ಮಾನಂ ಮೃತಂ ಶುಶ್ರುಮ ಸೃಂಜಯ |
ಯಸ್ಯ ಕರ್ಮಾಣಿ ಭೂರೀಣಿ ಕಥಯಂತಿ ದ್ವಿಜಾತಯಃ ॥68॥
ಸೃಂಜಯನೇ! ಯಾವ ರಾಜನು ಮಾಡಿದ ಮಹಾಕಾರ್ಯಗಳನ್ನು ಬ್ರಾಹ್ಮಣರು ಇಂದೂ ಕೂಡ ಪ್ರಶಂಸೆ ಮಾಡುತ್ತಾರೋ, ಅಂಥ ಕೀರ್ತಿಶಾಲಿಯಾದ, ಮಹಾತ್ಮ- ನಾದ ದೀಲೀಪನೂ ಕೂಡ ಮೃತನಾದನು ಎಂಬುದಾಗಿ ನಾವು ಕೇಳಿದ್ದೇವೆ.
ಇಮಾಂ ವೈ ವಸುಸಂಪನ್ನಾಂ ವಸುಧಾಂ ವಸುಧಾಧಿಪಃ |
ದದೌ ತಸ್ಮಿನ್ ಮಹಾಯಜ್ಞೇ ಬ್ರಾಹ್ಮಣೇಭ್ಯಃ ಸಮಾಹಿತಃ ॥69॥
ಅವನ ಆಡಳಿತದಲ್ಲಿ ಸಮಗ್ರಭೂಮಿಯು ಧನಸಮೃದ್ಧವಾಗಿತ್ತು. ಆದ್ದರಿಂದಲೇ ವಸುಧೆಯಾಗಿದ್ದಳು. ಇವನು ವಸುಧಾಧಿಪನಾಗಿದ್ದನು. ಇವನು ಒಂದು ದೊಡ್ಡ- ಯಾಗವನ್ನು ಆಚರಣೆ ಮಾಡಿದನು. ಈ ಧನಸಮೃದ್ಧವಾದ ಭೂಮಿಯನ್ನೇ ಬ್ರಾಹ್ಮಣರಿಗೆ ದಾನವನ್ನಾಗಿ ನೀಡಿದನು.
ತಸ್ಯೇಹ ಜಾಯಮಾನಸ್ಯ ಯಜ್ಞೇ ಯಜ್ಞೇ ಪುರೋಹಿತಃ |
ಸಹಸ್ರಂ ವಾರಣಾನ್ ಹೈಮಾನ್ ದಕ್ಷಿಣಾಮತ್ಯಕಾಲಯತ್ ॥70॥
ಆ ಯಾಗದಲ್ಲಿ ಪ್ರತಿಯೊಬ್ಬ ಪುರೋಹಿತರು ಸುವರ್ಣಾಲಂಕೃತವಾದ ಸಾವಿರ ಆನೆಗಳನ್ನು ದಕ್ಷಿಣೆಯನ್ನಾಗಿ ಸ್ವೀಕರಿಸಿದರು.
ತಸ್ಯ ಯಜ್ಞೇ ಮಹಾನಾಸೀದ್ ಯೂಪಃ ಶ್ರೀಮಾನ್ ಹಿರಣ್ಮಯಃ |
ತಂ ದೇವಾಃ ಕರ್ಮ ಕುರ್ವಾಣಾಃ ಶಕ್ರಜ್ಯೇಷ್ಠಾ ಉಪಾಶ್ರಯನ್ ॥71॥
ಅವನು ಮಾಡುತ್ತಿದ್ದ ಯಾಗದಲ್ಲಿ ನೆಡಲ್ಪಟ್ಟ ಯೂಪಸ್ತಂಭವೂ ಕೂಡ ಸುವರ್ಣಮಯವಾಗಿತ್ತು. ಅತ್ಯಂತಕಾಂತಿಯುತವಾಗಿತ್ತು. ಆ ಯೂಪಸ್ತಂಭವನ್ನು ಆಶ್ರಯಿಸಿ, ಇಂದ್ರನೇ ಮೊದಲಾದ ದೇವತೆಗಳು ಯಜ್ಞಕರ್ಮಗಳನ್ನು ಮಾಡುತ್ತಿ- ದ್ದರು.
ಚಷಾಲೌ ಯಸ್ಯ ಸೌವರ್ಣಸ್ತಸ್ಮಿನ್ ಯೂಪೇ ಹಿರಣ್ಮಯೇ |
ನನೃತುರ್ದೇವಗಂಧರ್ವಾಃ ಷಟ್ಸಹಸ್ರಾಣಿ ಸಪ್ತಧಾ ॥72॥
ಸುವರ್ಣಮಯವಾದ ಯೂಪಸ್ತಂಭದ ಮೇಲೆ ಚಷಾಲ ಎಂಬ ಸುವರ್ಣ- ಸ್ತೂಪಿಯು ಆರುಸಾವಿರ ಮಂದಿ ದೇವಗಂಧರ್ವರು ನರ್ತನ ಮಾಡುತ್ತಿದ್ದರು.
ಟಿಪ್ಪಣಿ - ಚಷಾಲೌ ಯಸ್ಯ ಸೌವರ್ಣೌ ಇತ್ಯತ್ರ ಚಷಾಲೌ ಯೂಪಕಟಕೌ| `ಚಷಾಲೋ ಯೂಪಕಟಕಃ' ಇತ್ಯಮರಃ |
`ಚಷಾಲೌ ಯಸ್ಯ ಸೌವರ್ಣೌ' ಎಂಬಲ್ಲಿ `ಚಷಾಲೌ' ಎಂದರೆ ಬಂಗಾರದ ಬಳೆಯಲ್ಲಿ ಎಂದರ್ಥ. `ಚಷಾಲೋ ಯೂಪಕಟಕಃ' ಎಂಬುದಾಗಿ ಅಮರ- ಕೋಶವು ಹೇಳುತ್ತದೆ.
ಅವಾದಯತ್ತತ್ರ ವೀಣಾಂ ಮಧ್ಯೇ ವಿಶ್ವಾವಸುಃ ಸ್ವಯಮ್ |

ಸರ್ವಭೂತಾನ್ಯಮನ್ಯಂತ ಮಮ ವಾದಯತೀತ್ಯಯಮ್ ॥73॥
ಅವರ ಮಧ್ಯದಲ್ಲಿ ವಿಶ್ವಾವಸು ಎಂಬ ಗಂಧರ್ವನು ಸಪ್ತಸ್ವರಗಳಿಂದ ಕೂಡಿದ ವೀಣಾವಾದನವನ್ನು ಮಾಡುತ್ತಿದ್ದನು. ಆ ವೀಣಾವಾದನವನ್ನು ಕೇಳುತ್ತಿದ್ದ ಎಲ್ಲಾ ಭೂತಗಳು ಇದು ನಮಗೋಸ್ಕರವೇ ಎಂಬ ಭಾವನೆಯಿಂದ ಅತ್ಯಂತ ಆದರವುಳ್ಳ- ವರಾಗಿ ಆ ಸಂಗೀತವನ್ನು ಕೇಳುತ್ತಿದ್ದರು.
ಏತದ್ರಾಜ್ಞೋ ದಿಲೀಪಸ್ಯ ರಾಜಾನೋ ನಾನುಚಕ್ರಿರೇ |
ಯತ್ ಸ್ತ್ರಿಯೋ ಹೇಮಸಂಪನ್ನಾಃ ಪಥಿ ಮತ್ತಾಃ ಸ್ಮ ಶೇರತೇ ॥74॥
ಈ ದಿಲೀಪರಾಜನು ಮಾಡಿದ ಯಾಗಕಾರ್ಯದಂತೆ ಮತ್ತೊಬ್ಬ ರಾಜನು ಮಾಡಲು ಸಾಧ್ಯವೇ ಇಲ್ಲ. ಸುವರ್ಣಮಯವಾದ ಆಭರಣಗಳಿಂದ ಅಲಂಕೃತ- ರಾದ ಸಾವಿರಾರು ಆನೆಗಳು ಮದಭರಿತವಾಗಿ ಬೀದಿಯಲ್ಲೇ ಮಲಗುತ್ತಿದ್ದವು.
ಟಿಪ್ಪಣಿ - `ಯತ್ ಸ್ತ್ರಿಯೋ ಹೇಮಸಂಪನ್ನಾಃ' ಎಂಬ ಪಾಠವು ಕಾಣಿಸುತ್ತಿದೆ. ಈ ಪಾಠದ ಪ್ರಕಾರ ಸ್ತ್ರೀಯರು ಮದೋನ್ಮತ್ತರಾಗಿ ಬೀದಿಯಲ್ಲಿ ಮಲಗುತ್ತಿದ್ದ- ರೆಂದು ಅರ್ಥವಾಗುತ್ತದೆ. ಆದರೆ ಉಳಿದ ಪುಸ್ತಕಗಳಲ್ಲಿ `ಗಜಾಃ' ಎಂಬ ಪಾಠವಿದೆ. ಆಗ ಆನೆಗಳು ಸುವರ್ಣಾಭರಣಗಳನ್ನು ಹಾಕಿಕೊಂಡು ಬೀದಿಯಲ್ಲಿ ಮಲಗುತ್ತಿ- ದ್ದವು ಎಂದು ಅರ್ಥವಾಗುತ್ತದೆ.
ರಾಜಾನಮುಗ್ರಧನ್ವಾನಂ ದಿಲೀಪಂ ಸತ್ಯವಾದಿನಮ್ |
ಯೇಽಪಶ್ಯನ್ ಸುಮಹಾತ್ಮಾನಂ ತೇಽಪಿ ಸ್ವರ್ಗಜಿತೋ ನರಾಃ॥75॥
ಆ ದಿಲೀಪನು ಉಗ್ರವಾದ ಧನುಸ್ಸುಳ್ಳವನಾಗಿದ್ದನು. ಸತ್ಯವಾದಿಯಾಗಿದ್ದನು. ಶ್ರೇಷ್ಠಮಹಾತ್ಮನಾಗಿದ್ದನು. ಇವನನ್ನು ಯಾರು ನೋಡುತ್ತಾರೋ, ಅವರೂ ಕೂಡ ಸ್ವರ್ಗವನ್ನು ಪಡೆಯುತ್ತಾರೆ.
ತ್ರಯಃ ಶಬ್ದಾ ನ ಜೀರ್ಯಂತೇ ದಿಲೀಪಸ್ಯ ನಿವೇಶನೇ |
ಸ್ವಾಧ್ಯಾಯಘೋಷೋ ಜ್ಯಾಘೋಷೋ ದೀಯತಾಮಿತಿ ಚೈವ ಹಿ॥76॥
ಆ ದಿಲೀಪನ ಮನೆಯಲ್ಲಿ ವೇದದ ಧ್ವನಿ, ಬಿಲ್ಲಿನ ಧ್ವನಿ, ದಾನ ಮಾಡಿರಿ ಎಂಬ ಧ್ವನಿ ಈ ಮೂರು ನಿರಂತರ ಕೇಳಿಸುತ್ತಲೇ ಇದ್ದವು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥77॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಆ ದಿಲೀಪನು ನಿನ- ಗಿಂತಲೂ ಅತ್ಯಧಿಕನಾಗಿದ್ದಾನೆ. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದಾನೆ. ಅವನೇ ಮರಣವನ್ನು ಹೊಂದಿದಲ್ಲಿ ಬೇರೆಯವರ ವಿಷಯದಲ್ಲಿ ಹೇಳುವುದೇನಿದೆ. ಆದ್ದರಿಂದ ನಿನ್ನ ಮಗನು ಸತ್ತನೆಂಬ ವಿಷಯದಲ್ಲಿ ದುಃಖಿಸಬೇಡ.
ಮಾಂಧಾತ ರಾಜನ ಸಾಧನೆ
ಮಾಂಧಾತಾರಂ ಯೌವನಾಶ್ವಂ ಮೃತಂ ಶುಶ್ರುಮ ಸೃಂಜಯ |
ಯಂ ದೇವಾ ಮರುತೋ ಗರ್ಭಂ ಪಿತುಃ ಪಾರ್ಶ್ವಾದಪಾಹರನ್ ॥78॥
ಯೌವನಾಶ್ವನ ಮಗನೇ ಮಾಂಧಾತಾ ಇವನೂ ಕೂಡ ಮರಣವನ್ನು ಹೊಂದಿ- ದನೆಂಬುದನ್ನು ನಾವು ಕೇಳಿದ್ದೇವೆ. ಇವನು ತನ್ನ ತಂದೆಯ ಗರ್ಭದಲ್ಲಿಯೇ ಬೆಳೆದು ಅವನ ಒಂದು ಪಾರ್ಶ್ವವನ್ನು ಭೇದಿಸಿಕೊಂಡು ಹುಟ್ಟಿದನು.
ಸಮ್ಮೃದ್ಧೋ ಯುವನಾಶ್ವಸ್ಯ ಜಠರೇ ಯೋ ಮಹಾತ್ಮನಃ |
ಪೃಷದಾಜ್ಯೋದ್ಭವಃ ಶ್ರೀಮಾಂಸ್ತ್ರಿಲೋಕವಿಜಯೀ ನೃಪಃ ॥79॥
ಸಂತಾನಪ್ರಾಪ್ತಿಯ ಉದ್ದೇಶದಿಂದ ಯುವನಾಶ್ವನು ತುಪ್ಪ, ಮೊಸರು ಎರಡನ್ನು ಬೆರೆಸಿಟ್ಟದ್ದನ್ನು ಕುಡಿದು ಬಿಟ್ಟನು. ಅದು ಮಂತ್ರಪೂತವಾಗಿತ್ತು. ಇದರ ಪರಿ- ಣಾಮದಿಂದ ಅವನ ಹೊಟ್ಟೆಯಲ್ಲಿಯೇ ಗರ್ಭವು ಬೆಳೆಯಿತು. ಅವನ ದೇಹದ ಭಾಗದಿಂದಲೇ ಮರುದ್ದೇವತೆಗಳು ಆ ಗರ್ಭವನ್ನು ಹೊರಗೆ ತೆಗೆದರು.
ಟಿಪ್ಪಣಿ- ಪೃಷದಾಜ್ಯೋದ್ಭವಃ ಶ್ರೀಮಾನ್ ಇತ್ಯತ್ರ ಪೃಷದಾಜ್ಯಂ ಸರ್ಪಿಷಾ ಮಿಶ್ರಃ ಹವಿಃ | `ಪೃಷದಾಜ್ಯಂ ಹವಿಃ ಸರ್ಪಿಃ' ಇತ್ಯಮರಃ | `ಪೃಷದಾಜ್ಯಂ' ಎಂದರೆ ತುಪ್ಪದಿಂದ ಮಿಶ್ರಿತವಾದ ಹವಿಸ್ಸು. `ಪೃಷದಾಜ್ಯಂ ಹವಿಃ ಸರ್ಪಿಃ' ಎಂಬುದಾಗಿ ಅಮರಕೋಶವು ಹೇಳುತ್ತದೆ.
ಯಂ ದೃಷ್ಟ್ವಾ ಪಿತುರುತ್ಸಂಗೇ ಶಯಾನಂ ದೇವರೂಪಿಣಮ್ |
ಅನ್ಯೋನ್ಯಮಬ್ರುವನ್ ದೇವಾಃ ಕಮಯಂ ಧಾಸ್ಯತೀತಿ ವೈ ॥80॥
ದೇವತೆಯಂತೆ ಕಾಣುತ್ತಿರುವ ಹುಟ್ಟಿದ ಮಗುವು ತನ್ನ ತಂದೆಯ ತೊಡೆಯ ಮೇಲೆ ಮಲಗಿತ್ತು. ಆ ಶಿಶುವನ್ನು ನೋಡಿ, ಜನರು `ಕಂ ಧಾಸ್ಯತಿ' `ಯಾರ ಹಾಲನ್ನು ಕುಡಿಯುತ್ತದೆ' ಎಂದು ಮಾತನಾಡಿಕೊಂಡರು.
ಮಾಮೇವ ಧಾಸ್ಯತೀತ್ಯೇವಮಿಂದ್ರೋ ಅಭ್ಯವಪದ್ಯತ |
ಮಾಂಧಾತೇತಿ ತತಸ್ತಸ್ಯ ನಾಮ ಚಕ್ರೇ ಶತಕ್ರತುಃ ॥81॥
ಆಗ ದೇವೇಂದ್ರನು `ಮಾಮೇವ ಧಾಸ್ಯತಿ' `ನನ್ನ ಹಾಲನ್ನೇ ಕುಡಿಯುತ್ತಾನೆ' ಎಂದು ಹೇಳಿ, ಆ ಶಿಶುವನ್ನು ಸಮೀಪಿಸಿದನು. ಆದ್ದರಿಂದಲೇ `ಮಾಂಧಾತಾ' ಎಂಬ ಹೆಸರು ಅವನಿಗೆ ಬಂದಿತು.
ತತಸ್ತು ಪಯಸೋ ಧಾರಾಂ ಪುಷ್ಟಿಹೇತೋರ್ಮಹಾತ್ಮನಃ |
ತಸ್ಯಾಸ್ಯೇ ಯೌವನಾಶ್ವಸ್ಯ ಪಾಣಿರಿಂದ್ರಸ್ಯ ಚಾಸ್ರುವತ್ ॥82॥
ಅನಂತರ ಮಹಾತ್ಮನಾದ ಯೌವನಾಶ್ವನಾದ ಮಾಂಧಾತನ ಶರೀರದ ಪೋಷಣೆಗಾಗಿ ದೇವೇಂದ್ರನು ತನ್ನ ಬೆರಳನ್ನು ಮಗುವಿನ ಬಾಯಿಯಲ್ಲಿ ಇಟ್ಟನು. ಮಗು ಆ ದೇವೇಂದ್ರನ ಬೆರಳನ್ನೇ ಚೀಪಿತು. ಆ ಬೆರಳಿನಿಂದ ಅಮೃತವು ಸ್ರವಿಸಿತು.
ತಂ ಪಿಬತ್ ಪಾಣಿಮಿಂದ್ರಸ್ಯ ಸಮಾಮಹ್ನಾ ವ್ಯವರ್ಧತ |
ಸ ಆಸೀದ್ ದ್ವಾದಶಸಮೋ ದ್ವಾದಶಾಹೇನ ಪಾರ್ಥಿವ ॥83॥
ದೇವೇಂದ್ರನ ಕೈಯ ಬೆರಳನ್ನು ಚೀಪುತ್ತಾ ಆ ಮಗುವು ಅಮೃತಪಾನವನ್ನೇ ಮಾಡುತ್ತಿತ್ತು. ಇದರಿಂದ ಆ ಮಗುವಿನ ದೇಹವು

ಹನ್ನೆರಡು ದಿವಸಗಳಲ್ಲಿಯೇ ಹನ್ನೆರಡು ವರ್ಷದಷ್ಟು ಪರಿಪುಷ್ಟವಾದ ದೇಹವನ್ನು ಹೊಂದಿತು.
ಟಿಪ್ಪಣಿ - ಸಮಾಮಹ್ನಾ ವ್ಯವರ್ಧತ ಇತ್ಯತ್ರ ಅಹ್ನಾ ಏಕದಿವಸೇನ ಸಮಾಂ ಏಕವರ್ಷಂ ವ್ಯವರ್ಧತ | ಏಕದಿವಸೇನ ಏಕವರ್ಷಬಾಲೋಪಮೋಽಭೂದಿತ್ಯರ್ಥಃ |
`ಅಹ್ನಾ' ಒಂದೇ ದಿವಸದಲ್ಲಿ, `ಸಮಾಂ' ಒಂದು ವರ್ಷದಷ್ಟು ಬೆಳೆದನು. ಒಂದೇ ದಿವಸದಲ್ಲಿ ಒಂದು ವರ್ಷದ ಮಗುವಿಗೆ ಸಮಾನವಾಗಿ ಬೆಳೆದನು ಎಂದು ಅರ್ಥ. ಹನ್ನೆರಡು ದಿವಸದಲ್ಲಿ ಹನ್ನೆರಡು ವರ್ಷದ ಮಗುವಿಗೆ ಸಮಾನವಾಗಿ ಬೆಳೆದನು ಎಂದು ಅರ್ಥ.
ತಮಿಯಂ ಪೃಥಿವೀ ಸರ್ವಾ ಏಕಾಹ್ನಾ ಸಮಪದ್ಯತ |
ಧರ್ಮಾತ್ಮಾನಂ ಮಹಾತ್ಮಾನಂ ಶೂರಮಿಂದ್ರಸಮಂ ಯುಧಿ ॥84॥
ಆ ಬಾಲಕನು ದೇವೇಂದ್ರನಿಗೆ ಸಮಾನನಾಗಿ ಬೆಳೆದನು. ಅಖಂಡ ಭೂ- ಮಂಡಲವನ್ನು ಒಂದೇ ದಿವಸದಲ್ಲಿ ತನ್ನ ಅಧೀನವನ್ನಾಗಿ ಮಾಡಿಕೊಂಡನು. ಮಹಾತ್ಮನು, ಧರ್ಮಸ್ವರೂಪನು, ಅತ್ಯಂತಪರಾಕ್ರಮಿಯೂ ಆಗಿ ಬೆಳೆದನು.
ಯಶ್ಚಾಂಗಾರಂ ಹಿ ನೃಪತಿಂ ಮರುತ್ತಮಸಿತಂ ಗಯಮ್ |
ಅಂಗಂ ಬೃಹದ್ರಥಂ ಚೈವ ಮಾಂಧಾತಾ ಸಮರೇಽಜಯತ್ ॥85॥
ಮಾಂಧಾತನು ಯುದ್ಧದಲ್ಲಿ ಅಂಗಾರ, ಮರುತ್, ಅಸಿತ, ಗಯ, ಬೃಹದ್ರಥ ಮೊದಲಾದ ರಾಜರನ್ನು ಗೆದ್ದನು.
ಯೌವನಾಶ್ವೋ ಯದಾಗಾಂರಂ ಸಮರೇ ಸಮಯೋಧಯತ್ |
ವಿಸ್ಫಾರೈರ್ಧನುಷೋ ದೇವಾ ದ್ಯೌರಭೇದೀತಿ ಮೇನಿರೇ ॥86॥
ಅಂಗರಾಜನ ಜೊತೆ ಮಾಂಧಾತನು ಯುದ್ಧ ಮಾಡುತ್ತಿದ್ದನು. ಆಗೊಮ್ಮೆ ಬಿಲ್ಲಿನಿಂದ ಠೇಂಕಾರವನ್ನು ಮಾಡಿದನು. ಈ ಧ್ವನಿಯು ಎಷ್ಟು ಭಯಂಕರವಾಗಿತ್ತು ಎಂದರೆ ದೇವತೆಗಳು ತಮ್ಮ ಲೋಕವೇ ಸೀಳಿಹೋಯಿತೆಂದು ಹೆದರಿದರು.
ಯತಃ ಸೂರ್ಯ ಉದೇತಿ ಸ್ಮ ಯತ್ರ ಚ ಪ್ರತಿತಿಷ್ಠತಿ |
ಸರ್ವಂ ತದ್ ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥87॥
ಸೂರ್ಯನು ಉದಯಿಸಿ, ಅಸ್ತಂಗತನಾಗುವ ಭೂಭಾಗವೆಲ್ಲವೂ ಮಾಂಧಾತ- ರಾಜನ ಕ್ಷೇತ್ರವೆಂದೇ ಕರೆಯಲ್ಪಡುತ್ತದೆ.
ವಿವರಣೆ - ಸಮಗ್ರ ಭೂಮಂಡಲದಲ್ಲಿಯೇ ಸೂರ್ಯನ ಕಿರಣಗಳು ಬೀಳುತ್ತವೆ. ಆ ಸೂರ್ಯನ ಕಿರಣಗಳು ಬೀಳುವ ಪ್ರದೇಶವನ್ನು ಮಾಂಧಾತ- ರಾಜನು ತನ್ನ ಅಧೀನವನ್ನಾಗಿ ಮಾಡಿಕೊಂಡನು ಎಂದಭಿಪ್ರಾಯ.
ಅಶ್ವಮೇಧಶತೇನೇಷ್ಟ್ವಾ ರಾಜಸೂಯಶತೇನ ಚ |
ಅದದಾದ್ ರೋಹಿತಾನ್ ಮತ್ಸ್ಯಾನ್ ಬ್ರಾಹ್ಮಣೇಭ್ಯೋ ಮಹೀಪತಿಃ ॥88
ಆ ಮಾಂಧಾತರಾಜನು ನೂರು ಅಶ್ವಮೇಧಯಾಗಗಳನ್ನು, ನೂರು ರಾಜ- ಸೂಯಯಾಗಗಳನ್ನು ಮಾಡಿದನು. ಆ ಸಂದರ್ಭದಲ್ಲಿ ರೋಹಿತ ಮತ್ಸ್ಯಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.
ಹೈರಣ್ಯಾನ್ ಯೋಜನೋತ್ಸೇಧಾನಾಯತಾನ್ ದಶಯೋಜನಮ್|
ಅತಿರಿಕ್ತಾನ್ ದ್ವಿಜಾತಿಭ್ಯೋ ವ್ಯಭಜನ್ನಿತರೇ ಜನಾಃ ॥89॥
ದಾನಮಾಡಲ್ಪಟ್ಟ ಆ ರೋಹಿತಮತ್ಸ್ಯಗಳು ಒಂದು ಯೋಜನ ಎತ್ತರವಾಗಿ- ದ್ದವು, ಹತ್ತುಯೋಜನ ಉದ್ದವಾಗಿದ್ದವು. ಬ್ರಾಹ್ಮಣರಿಗೆ ದಾನ ಮಾಡಿ ಉಳಿದ ಹಣವನ್ನು ಬೇರೆ ಜನರು ಹಂಚಿಕೊಂಡರು.
ಟಿಪ್ಪಣಿ - ದ್ರೋಣಪರ್ವದ ಅರವತ್ತೆರಡನೆಯ ಅಧ್ಯಾಯದಲ್ಲೂ ಇಂಥದ್ದೇ ಶ್ಲೋಕವೊಂದು ಇದೆ -`ಹೈರಣ್ಯಾನ್ ಯೋಜನೋತ್ಸೇಧಾನ್ ಆಯತಾನ್ ದಶಯೋಜನಮ್ |' ಎಂದು. ಈ ಮಾಂಧಾತರಾಜನ ಕಥೆಯು ಅಲ್ಲಿಯೂ ಬಂದಿದೆ. ಬಂಗಾರದ ಮೀನುಗಳು ಹತ್ತು ಯೋಜನದಷ್ಟು ಸ್ಥಳದಲ್ಲಿ ತುಂಬಿದ್ದವು ಎಂದೂ ಕೂಡ ಅರ್ಥವನ್ನು ಮಾಡಬಹುದು. ಆಗ ಹತ್ತು ಯೋಜನದಷ್ಟು ಚಿನ್ನವು ತುಂಬಿತ್ತು. ಆ ಮತ್ಸ್ಯಗಳು ಒಂದೊಂದೂ ಕೂಡ ಹತ್ತು ಯೋಜನದಷ್ಟು ಉದ್ದವಾಗಿದ್ದವೆಂದು ಹೇಳಬೇಕಾಗಿಲ್ಲ.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥90॥
ಸೃಂಜಯನೇ! ನಿನಗಿಂತಲೂ ನಿನ್ನ ಮಗನಿಗಿಂತಲೂ ಆ ಮಾಧಾಂತನು ಧರ್ಮ, ಜ್ಞಾನ, ವೈರಾಗ್ಯ ಐಶ್ವರ್ಯಗಳಲ್ಲಿ ಅತ್ಯಧಿಕನು. ಅವನೇ ಮರಣವನ್ನು ಹೊಂದಿದ ಮೇಲೆ ಏನೂ ಮಾಡದ ನಿನ್ನ ಮಗ ಮರಣ ಹೊಂದಿರುವುದರಲ್ಲಿ ಏನು ವಿಶೇಷ- ವಿದೆ? ಇದಕ್ಕೇಕೆ ದುಃಖಿಸುವೆ?
ಟಿಪ್ಪಣಿ - ಯುವನಾಶ್ವನು ಸೂರ್ಯವಂಶದವನು. ಇವನು ಪುತ್ರನಿಗಾಗಿ ಯಾಗವನ್ನು ಆಚರಿಸುತ್ತಿದ್ದನು. ಭೃಗುಋಷಿಗಳು ಪುತ್ರಪ್ರದವಾದ ಉದಕವನ್ನು ಮಂತ್ರಿಸಿಟ್ಟಿದ್ದರು. ಇವನು ತಿಳಿಯದೇ ಅದನ್ನು ಕುಡಿದು ಗರ್ಭವನ್ನು ಧರಿಸಿದನು. ದೇವತೆಗಳೇ ಬಂದು ಆ ಉದರದಿಂದ ಆ ಮಗುವನ್ನು ಹೊರಗೆ ತೆಗೆದರು. ಇಂದ್ರನ ಹೆಬ್ಬೆರಳಿನಿಂದ ಅಮೃತರಸವನ್ನು ಪಾನ ಮಾಡಿ, ದೇವೇಂದ್ರನಿಗೆ ಸಮಾನ- ನಾಗಿ ಭೂಲೋಕದಲ್ಲಿ ಬೆಳೆದನು. ಲವಣಾಸುರನ ಜೊತೆ ಯುದ್ಧವನ್ನು ಮಾಡಿ ಅವನಿಂದ ಹತನಾದನು. ಇವನ ಪತ್ನಿಯೇ ಶಶಿಬಿಂದು, ಪುತ್ರಿ ಬಿಂದುಮತಿ, ಪುರುಪುತ್ಸ, ಅಂಬರೀಷ, ಮುಚುಕುಂದರು ಇವನ ಮಕ್ಕಳು. ಇದಲ್ಲದೇ ಐವತ್ತು ಮಂದಿ ಪುತ್ರಿಯರೂ ಕೂಡ ಮಾಂಧಾತನಿಗೆ ಇದ್ದರು. ಅವರನ್ನೇ ಸೌಭರಿ- ಮಹರ್ಷಿಗಳು ವಿವಾಹವಾದರು.
ಯಯಾತಿಂ ನಾಹುಷಂ ಚೈವ ಮೃತಂ ಶುಶ್ರುಮ ಸೃಂಜಯ |
ಯ ಇಮಾಂ ಪೃಥಿವೀಂ ಸರ್ವಾಂ ವಿಜಿತ್ಯ ಸಹಸಾಗರಾಮ್ ॥91॥
ನಹುಷನ ಪುತ್ರನೇ ಯಯಾತಿ. ಇವನೂ ಕೂಡ ಮೃತನಾದದ್ದನ್ನು ನಾವು ಕೇಳುತ್ತೇವೆ. ಈ ಯಯಾತಿಯು ಸಮುದ್ರದ ತನಕವಿರುವ ಸಮಗ್ರ ಭೂಮಿಯನ್ನು ಗೆದ್ದನು.

ಶಮ್ಯಾಪಾತೇನಾಭ್ಯತೀಯಾದ್ ವೇದೀಭಿಶ್ಚಿತ್ರಯನ್ನೃಪ |
ಈಜಾನಃ ಕ್ರತುಭಿಃ ಪುಣ್ಯೈಃ ಪರ್ಯಗಚ್ಛದ್ ವಸುಂಧರಾಮ್ ॥92॥
ಒಬ್ಬ ಬಲಿಷ್ಠನಾದವನು ಶಮ್ಯಾ ಎಂಬ ದಂಡವನ್ನು ಎಸೆದರೆ ಎಷ್ಟು ದೂರಕ್ಕೆ ಹೋಗಿ ಬೀಳುವುದು. ಅಷ್ಟಷ್ಟು ದೂರಕ್ಕೆ ಒಂದೊಂದು ಯಜ್ಞವೇದಿಕೆಯನ್ನು ಮಾಡಿಸಿದ್ದನು. ಅಷ್ಟು ಯಾಗಗಳನ್ನು ಆಚರಿಸಿದ್ದನು. ಅನೇಕ ಯಾಗಗಳನ್ನು ಆಚರಣೆ ಮಾಡಿ, ಕೊನೆಯಲ್ಲಿ ಸಮಗ್ರಭೂಮಿಯನ್ನೇ ಯಜ್ಞವೇದಿಕೆಯನ್ನಾಗಿ ಮಾಡಿದ್ದನು. ಸಮಗ್ರ ಭೂಮಂಡಲವನ್ನೇ ಪ್ರದಕ್ಷಿಣೆ ಮಾಡಿದನು.
ವಿವರಣೆ - `ಶಮ್ಯಾ' ಎಂಬುದಕ್ಕೆ `ಸ್ಥೂಲಬುದ್ಧ್ಯಾ ಕಾಷ್ಠ ದಂಡಃ' ಎಂದರ್ಥ. ಬುಡವು ಸ್ಥೂಲವಾಗಿರಬೇಕು. ಅಂಥ ಒಂದು ಮರದ ಕೋಲು. ಗೂಟದ ಕೋಲು ಎಂದು ಕರೆಯುತ್ತಾರೆ. ಬಲಿಷ್ಠನಾದ ವ್ಯಕ್ತಿಯು ಈ ದಂಡವನ್ನು ಹಿಡಿದು ಬೀಸಿ ಎಸೆದರೆ ಎಷ್ಟು ದೂರ ಹೋಗಿ ಬೀಳುತ್ತದೋ, ಆ ಸ್ಥಳವನ್ನೇ ಶಮ್ಯಾಪಾತ- ವೆನ್ನುತ್ತಾರೆ. ಈ ಅಳತೆಯನ್ನು ಮಾಡಿಕೊಂಡು ಸಮಗ್ರಭೂಮಂಡಲದಲ್ಲಿ ಯಜ್ಞವೇದಿಕೆಯನ್ನು ನಿರ್ಮಾಣ ಮಾಡಿದ್ದನು. ಪ್ರತಿಯೊಂದು ಶಮ್ಯಾಪಾತಗಳ- ಲ್ಲಿಯೂ ಯಜ್ಞವನ್ನು ಮಾಡಿದ್ದನು. ಹೀಗೆ ಸಮಗ್ರಭೂಮಂಡಲವನ್ನೇ ಪರ್ಯ- ಟನೆ ಮಾಡಿದ್ದನು. ಮತ್ತು ಭೂಮಿಯಲ್ಲೆಲ್ಲೆಡೆಯೂ ಯಜ್ಞವೇದಿಕೆಗಳೇ ಕಾಣು- ವಂತೆ ಮಾಡಿದ್ದನು.
ಟಿಪ್ಪಣಿ- ಶಮ್ಯಾಪಾತೇನಾಭ್ಯಗಚ್ಛನ್ ಇತ್ಯತ್ರ ಆ ಸಮಂತಾತ್ ಪತತೀತ್ಯಾಪಾತೋ ರಥಚಕ್ರಮ್ | ಶಮೀಮಯಃ ಆಪಾತೋ ಯಸ್ಯ ತೇನ ರಥೇನ|
ವಿಮರ್ಶೆ -
`ಶಮ್ಯಾಪ್ರಾಸ ಎಂದರೇನು ?
`ಶಮ್ಯಾ' ಎಂದರೆ ಬುಡವು ದಪ್ಪವಿರುವ ಒಂದು ಕೋಲು. ಇದನ್ನು ಬಲಿಷ್ಠ- ನಾದವನು ದೂರ ಎಸೆದರೆ, ಎಷ್ಟು ದೂರವು ಹೋಗುತ್ತದೋ, ಅದನ್ನು ಅಳತೆಯನ್ನಾಗಿಟ್ಟುಕೊಂಡು, ಯಜ್ಞವೇದಿಕೆಗಳನ್ನು ಸಿದ್ಧಗೊಳಿಸಿ, ಯಜ್ಞವನ್ನು ಆಚರಿಸುವುದು. ಪುನಃ ಅಲ್ಲಿ ಯಜ್ಞವು ಮುಗಿದ ಮೇಲೆ ಆ ಶಮ್ಯವನ್ನು ಎಸೆಯ- ಬೇಕು. ಅದು ಬಿದ್ದಲ್ಲಿ, ಯಜ್ಞಶಾಲೆಯನ್ನು ನಿರ್ಮಾಣ ಮಾಡಿ, ಅಲ್ಲಿ ಯಜ್ಞವನ್ನು ಆಚರಿಸುವುದು. ಹೀಗೆ ಸಮಗ್ರಭೂಮಂಡಲದಲ್ಲಿ ಎಲ್ಲೆಡೆಯು ಯಜ್ಞಶಾಲೆಗಳನ್ನು ನಿರ್ಮಾಣ ಮಾಡಿ, ಯಜ್ಞಗಳನ್ನು ಮಾಡುತ್ತಿದ್ದನೆಂದು ಹೇಳುತ್ತಾರೆ.
ಭಾಗವತದಲ್ಲಿ `ಶಮ್ಯಾಪ್ರಾಸ' ಎಂಬ ಶಬ್ದವು ಪ್ರಸಿದ್ಧವಾಗಿದೆ. ಅದರ ಆಧಾರದಲ್ಲಿ ಇದಕ್ಕೆ ಸ್ಪಷ್ಟವಾದ ಅರ್ಥವನ್ನು ಹೀಗೆ ತಿಳಿಯಬೇಕು. ಶಮ್ಯಾಪ್ರಾಸ ಎಂಬ ಹೆಸರಿನ ಆಶ್ರಮವಿತ್ತು ಎಂಬುದಾಗಿ ಭಾಗವತದಲ್ಲಿ ಹೇಳಿದ್ದಾರೆ. ಭಾಗವತ- ದಲ್ಲಿ ಪ್ರಥಮಸ್ಕಂಧದ ಏಳನೆಯ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ `ಬ್ರಹ್ಮಾದ್ಯಾಃ ಸರಸ್ವತ್ಯಾಃ ಆಶ್ರಮೋ ಪಶ್ಚಿಮೇ ತಟೇ ಶಮ್ಯಾಪ್ರಾಸ ಇತಿ ಪ್ರೋಕ್ತಃ ಋಷೀನಾಂ ಸತ್ಯವರ್ತಿನಃ' ಇದಕ್ಕೆ ಭಾಗವತ ತಾತ್ಪರ್ಯದಲ್ಲಿ ಹೀಗೆ ವ್ಯಾಖ್ಯಾನವನ್ನು ಮಾಡಿದ್ದಾರೆ - `ಶಮ್ಯಾಂ ಪ್ರಾಸ್ಯ ತತ್ರ ಶಾಲಾಂ ಕೃತ್ವಾ ಯಜ್ಞಃ ಕ್ರಿಯತೇ ಸಃ ಶಮ್ಯಾಪ್ರಾಸಃ' ಇಲ್ಲಿಯೂ ಕೂಡ ಶಮ್ಯಾ ಎಂಬುದಕ್ಕೆ ಗೂಟ ಎಂದೇ ಅರ್ಥ. ಅದನ್ನು ಬಿದ್ದ ಸ್ಥಳದಲ್ಲಿ ಆಶ್ರಮವನ್ನು ನಿರ್ಮಾಣ ಮಾಡಬೇಕು ಎಂದೇ ಅರ್ಥ. ಆದರೆ ಶಮ್ಯಾ ಎಂಬುದಕ್ಕೆ ಯಾವುದೋ ಮರದ ಗೂಟ- ವೆಂದರ್ಥವಲ್ಲ. ಖದಿರ ಎಂಬ ಮರವಿದೆ. ಅದರ ಕಾಷ್ಠದಿಂದ ನಿರ್ಮಾಣ ಮಾಡಿರಬೇಕು. ಮೂವತ್ತಾರು ಇಂಚು ಉದ್ದವಿರಬೇಕು. ಗದೆಯ ಆಕಾರದಲ್ಲಿ- ರಬೇಕು. ಇದು ಯಜ್ಞಾಯುಧವೆಂದು ಪರಿಗಣಿಸಲಾಗಿದೆ. ಈ ಗೂಟದ ತುದಿಯು ಎಂಟು ಕುಂಭಗಳಿರುತ್ತವೆ. ಯಜಮಾನನ ಪತ್ನಿಯು ತಲೆಗೆ ಕಟ್ಟಿ- ಕೊಳ್ಳುವ ಬಟ್ಟೆಯನ್ನು ಕಟ್ಟಿರುತ್ತಾರೆ ಎಂದರ್ಥ. ಕೃಷ್ಣಾಜಿನದ ಮೇಲೆ ಶಮ್ಯವನ್ನು ಇಟ್ಟು ಅದರ ಮೇಲೆ ಬೀಸುವ ಕಲ್ಲನ್ನಿಟ್ಟು ಅಗ್ನೀಧ್ರ ಎಂಬ ಋತ್ವಿಜನು ಅಕ್ಕಿ, ಮೊದಲಾದ ಹವಿಸ್ಸುಪದಾರ್ಥಗಳನ್ನು ಬೀಸಬೇಕು. ಭಾಗವತ ವ್ಯಾಖ್ಯಾನಗಳಿಂದ ಈ ವಿಷಯವು ತಿಳಿಯುತ್ತದೆ. ಇಂಥ ಶಮ್ಯವನ್ನು ಎಸೆಯಬೇಕು, ಅಲ್ಲಿಯ ತನಕ ಯಾಗ ಶಾಲೆಯನ್ನು ನಿರ್ಮಾಣ ಮಾಡಬೇಕು. ಆ ಶಮ್ಯವು ಎಲ್ಲಿ ಬಿದ್ದಿರುತ್ತದೋ, ಅಲ್ಲಿಯೇ ಅಗ್ನಿಕುಂಡವನ್ನು ರಚನೆ ಮಾಡಬೇಕು. ಒಂದುವೇಳೆ, ಆ ಗುರುತು ಮಾಡಿದ ಸ್ಥಳದಿಂದ ಹೊರಗೆ ಹೋಮಕಾಲದಲ್ಲಿ ಅಗ್ನಿಯು ಬಿದ್ದರೆ ಕವಿರಗ್ನಿ ಎಂಬ ಮಂತ್ರವನ್ನು ಹೇಳಿ, ಮೂರು ಪ್ರದಕ್ಷಿಣೆ ಮಾಡಿ ಕುಂಡದೊಳಗೆ ಅಗ್ನಿಯನ್ನು ಹಾಕಬೇಕು. ಶಮ್ಯದಿಂದ ಗುರುತು ಮಾಡಿದ ಸ್ಥಳದಿಂದ ಸ್ವಲ್ಪ ದೂರ ಅಗ್ನಿಯು ಬಿದ್ದರೆ, ಕುಂಡದಲ್ಲಿರುವ ಎಲ್ಲಾ ಅಗ್ನಿಯನ್ನು ಆ ಸ್ಥಳಕ್ಕೆ ತಂದು, ಆ ಸ್ಥಳದಲ್ಲಿಟ್ಟು ಋತ್ವಿಜರು ದಿನಪೂರ್ತಿ ಅಲ್ಲಿಯೇ ವಾಸವನ್ನು ಮಾಡಬೇಕು. ಆಪಸ್ತಂಭ ಶ್ರೌತ ಸೂತ್ರದಲ್ಲಿ `ಶಮ್ಯಾ ಪರಾಸ' ಎಂದು ಹೇಳಲಾಗುತ್ತದೆ. ಭಾಗವತದಲ್ಲಿ `ಶಮ್ಯಾ- ಪ್ರಾಸ' ಎಂಬ ಶಬ್ದವಿದೆ. ಆದರೆ ಆಪಸ್ತಂಭದಲ್ಲಿ `ಪರಾಸ' ಎಂಬ ಮೂರಕ್ಷರದ ಶಬ್ದವಿದೆ. ಶಬ್ದದಲ್ಲಿ ಮಾತ್ರ ವ್ಯತ್ಯಾಸ. ಅರ್ಥದಲ್ಲಿ ವ್ಯತ್ಯಾಸವು ಇರುವುದಿಲ್ಲ. ಪ್ರಕೃತ ಮಹಾಭಾರತದ 92ನೆಯ ಶ್ಲೋಕದಲ್ಲಿ `ಪಾತ' ಎಂಬ ಪದಪ್ರಯೋಗ- ವಿದೆ. `ಪಾತ' ಎಂದರೂ ಪ್ರಾಸ' ಎಂದೇ ಅರ್ಥ. ಆದ್ದರಿಂದ ಶಮ್ಯಾಪ್ರಾತ, ಶಮ್ಯಾಪ್ರಾಸ, ಶಮ್ಯಾಪರಾಸ ಮೂರು ಕೂಡ ಪರ್ಯಾಯ ಶಬ್ದಗಳೇ ಆಗಿವೆ.
ದೃಷ್ಟ್ವಾ ಕ್ರತುಸಹಸ್ರೇಣ ವಾಜಿಮೇಘಶತೇನ ಚ |
ತರ್ಪಯಾಮಾಸ ದೇವೇಂದ್ರಂ ತ್ರಿಭಿಃ ಕಾಂಚನಪರ್ವತೈಃ ॥93॥
ಈ ಯಾಯಾತಿಯು ನೂರು ವಾಜಪೇಯಯಾಗಗಳನ್ನು ಸಾವಿರಾರು ಇತರೆ ಯಾಗಗಳನ್ನು ಮಾಡಿ, ಬಂಗಾರದ ಪರ್ವತಗಳನ್ನು ದಾನ ಮಾಡಿ, ದೇವೇಂದ್ರನನ್ನು ತೃಪ್ತಿ ಪಡಿಸಿದನು.
ವ್ಯೂಢೇ ದೇವಾಸುರೇ ಯುದ್ಧೇ ಹತ್ವಾ ದೈತೇಯದಾನವಾನ್ |
ವ್ಯಭಜತ್ ಪೃಥಿವೀಂ ಕೃತ್ಸ್ನಾಂ ಯಯಾತಿರ್ನಹುಷಾತ್ಮಜಃ ॥94॥
ಆ ಯಾಯಾತಿಯು ಯುದ್ಧವನ್ನು ಮಾಡಿ, ಭೂಮಿಯಲ್ಲಿರುವ ದೈತ್ಯರನ್ನು ದಾನವರನ್ನು ಸದೆಬಡೆದನು. ಸಮಗ್ರಭೂಮಂಡಲವನ್ನೇ ತನ್ನ ಅಧೀನವನ್ನಾಗಿ ಮಾಡಿಕೊಂಡನು. ಮತ್ತು ಆ ಭೂಮಿಯನ್ನು ತನ್ನ ಮಕ್ಕಳಿಗೆ ವಿಭಾಗ ಮಾಡಿ ನೀಡಿದನು.
ಅಂತ್ಯೇಷು ಪುತ್ರಾನ್ನಿಕ್ಷಿಪ್ಯ ಯದುದ್ರುಹ್ಯುಪರೋಗಮಾನ್ |
ಪೂರುಂ ರಾಜ್ಯೇಽಭಿಷಿಚ್ಯ ಸ್ವೇ ಸದಾರಃ ಪ್ರಸ್ಥಿತೋ ವನಮ್ ॥95॥
ಆ ಯಯಾತಿಗೆ ಒಟ್ಟು ನಾಕು ಮಕ್ಕಳಿದ್ದರು. ಕೊನೆಯವನೇ ಪುರು ಎಂಬು- ವನು. ಇವನಿಗೆ ತನ್ನ ರಾಜ್ಯದಲ್ಲಿ ಅಭಿಷೇಕವನ್ನು

ಮಾಡಿದನು. ಯದು, ದ್ರುಹ್ಯ, ಅನು ಎಂಬ ಉಳಿದ ಮೂರು ಮಕ್ಕಳನ್ನು ಗಡಿಯ ಪ್ರಾಂತ್ಯದಲ್ಲಿ ರಾಜರನ್ನಾಗಿ ಮಾಡಿದನು. ಪತ್ನಿಯ ಸಹಿತನಾಗಿ ಅರಣ್ಯಕ್ಕೆ ತೆರಳಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥96॥
ಯಯಾತಿಯು, ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನ- ಗಿಂತಲೂ ನಿನ್ನ ಮಗನಿಗಿಂತಲೂ ಅತ್ಯಧಿಕನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ ನೀನೇನು? ನಿನ್ನ ಮಗನೇನು? ಅದಕ್ಕೇಕೆ ನೀನು ಚಿಂತಿಸುವಿ.
ವಿವರಣೆ - ನಹುಷನ ಮಗನೇ ಯಯಾತಿ. ಚಂದ್ರವಂಶದವನು. ದೇವ- ಯಾನಿ, ಶರ್ಮಿಷ್ಠೆ ಎಂಬ ಇಬ್ಬರು ಪತ್ನಿಯರು ಇವನಿಗಿದ್ದರು. ಶುಕ್ರಾಚಾರ್ಯರ ಮಗಳೇ ದೇವಯಾನಿ. ಇವಳಲ್ಲಿ ಯದು ಮತ್ತು ತುರ್ವಸು ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಶರ್ಮಿಷ್ಠೆಯಲ್ಲಿ ದ್ರುಹ್ಯ ಮತ್ತು ಅನು, ಪೂರು  ಎಂಬ ಮೂವರು ಗಂಡು ಮಕ್ಕಳು ಹುಟ್ಟಿದರು.  ಮಾಧವಿ ಎಂಬ ಒಬ್ಬ ಹೆಣ್ಣು ಮಗಳೂ ಕೂಡ ಹುಟ್ಟಿದಳು. ದೇವಯಾನಿಯನ್ನು ಕೇಳದೇ ಶರ್ಮಿಷ್ಠೆಯನ್ನು ವಿವಾಹವಾ- ಗಿದ್ದರಿಂದ ಶುಕ್ರಾಚಾರ್ಯರು ಅಕಾಲವೃದ್ಧಾಪ್ಯವು ಬರುವಂತೆ ಶಪಿಸಿದ್ದರು. ಆ ವೃದ್ಧಾಪ್ಯವನ್ನು ಬೇರೆಯವರಿಗೆ ನೀಡಬಹುದೆಂದೂ ಕೂಡ ಅನುಶಾಪವನ್ನು ನೀಡಿದ್ದರು. ಆದರೆ ಯದು ಮೊದಲಾದ ಮಕ್ಕಳು ಆ ವೃದ್ಧಾಪ್ಯವನ್ನು ಸ್ವೀಕರಿಸ- ಲಿಲ್ಲ. ಶರ್ಮಿಷ್ಠೆಯ ಕೊನೆಯ ಮಗನಾದ ಪೂರುವು ಮಾತ್ರ ತಂದೆಯ ವೃದ್ಧಾಪ್ಯ- ವನ್ನು ಸಂತೋಷದಿಂದ ಸ್ವೀಕರಿಸಿದನು. ಇದರಿಂದ ತೃಪ್ತನಾದ ಯಯಾತಿಯು ಆ ಪೂರುವಿಗೆ ತನ್ನ ರಾಜ್ಯಭಾರವನ್ನು ಒಪ್ಪಿಸಿದನು. ಮುಂದೆ ವೈರಾಗ್ಯವನ್ನು ತಾಳಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನು. ಆದಿಪರ್ವದಲ್ಲಿ ಇವನ ಕಥೆಯು ವಿಸ್ತಾರ- ವಾಗಿ ಬಂದಿದೆ.
ಅಂಬರೀಷಂ ಚ ನಾಭಾಗಂ ಮೃತಂ ಶುಶ್ರುಮ ಸೃಂಜಯ |
ಯಂ ಪ್ರಜಾ ವವ್ರಿರೇ ಪುಣ್ಯಂ ಗೋಪ್ತಾರಂ ನೃಪಸತ್ತಮ್ ॥97॥
ನಾಭಾಗನ ಮಗನಾದ ಅಂಬರೀಷರಾಜನೂ ಕೂಡ ಮೃತನಾಗಿದ್ದಾನೆಂದು ಕೇಳಿದ್ದೇವೆ. ಪ್ರಜೆಗಳು ಅವನನ್ನು ತಮಗೆ ರಕ್ಷಕನಾದ ಪುಣ್ಯಪುರುಷನೆಂದು ಅತ್ಯಂತ ವಿಶ್ವಾಸವಿಟ್ಟಿದ್ದರು.
ಯಃ ಸಹಸ್ರಂ ಸಹಸ್ರಾಣಾಂ ರಾಜ್ಞಾಮಯುತಯಾಜಿನಾಮ್ |
ಈಜಾನೋ ವಿತತೇ ಯಜ್ಞೇ ಬ್ರಾಹ್ಮಣೇಭ್ಯಃ ಸಮಾಹಿತಃ ॥98॥
ಇವನು ಒಂದು ಯಾಗವನ್ನು ಮಾಡಿದನು. ಆ ಯಾಗದ ವೈಭವವೇನೆಂದರೆ ಆ ಯಾಗದಲ್ಲಿ ಯಾವ ಬ್ರಾಹ್ಮಣರನ್ನು ಆಹ್ವಾನ ಮಾಡಿದ್ದನೋ, ಅವರನ್ನು ಸೇವೆ ಮಾಡುವುದಕ್ಕಾಗಿ ಒಂದುಲಕ್ಷ ಹತ್ತುಸಾವಿರ ರಾಜರನ್ನು ಯೋಜಿಸಿದ್ದನು. ಆ ರಾಜರೂ ಕೂಡ ಹತ್ತುಸಾವಿರ ಯಾಗಗಳನ್ನು ಮಾಡಿದ ಮಹಾಪುರುಷರೇ ಆಗಿದ್ದರು.
ನೈತತ್ ಪೂರ್ವೇ ಜನಾಶ್ಚಕ್ರುರ್ನ ಕರಿಷ್ಯಂತಿ ಚಾಪರೇ |
ಇತ್ಯಂಬರೀಷಂ ನಾಭಾಗಿಮನ್ವಮೋದಂತ ದಕ್ಷಿಣಾಃ ॥99॥
``ಇಂಥ ವೈಭವ ಯಾಗವನ್ನು ನಡೆಸದವರು ಇದುವರೆಗೂ ಯಾರು ಹುಟ್ಟಿಲ್ಲ. ಮುಂದೆ ಹುಟ್ಟುವ ಸಾಧ್ಯತೆಯೂ ಇಲ್ಲ'' ಎಂಬುದಾಗಿ ಪ್ರತಿಯೊಬ್ಬರೂ ಕೂಡ ನಾಭಾಗನ ಪುತ್ರನಾದ ಅಂಬರೀಷನನ್ನು ಪ್ರಶಂಸೆ ಮಾಡಿದರು.
ಶತಂ ರಾಜಸಹಸ್ರಾಣಿ ಶತಂ ರಾಜಶತಾನಿ ಚ |
ಸರ್ವೇಽಶ್ವಮೇಧೈರೀಜಾನಾಸ್ತೇಽಭ್ಯಯುರ್ದಕ್ಷಿಣಾಯನಮ್ ॥100॥
ಬ್ರಾಹ್ಮಣರ ಸೇವೆಯಲ್ಲಿ ನಿರತರಾದ ಒಂದು ಲಕ್ಷದ ಹತ್ತುಸಾವಿರ ರಾಜರು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನೇ ಪಡೆದರು. ದಕ್ಷಿಣಾಯಣ ಮಾರ್ಗ- ದಿಂದ ಪುಣ್ಯಲೋಕಗಳಿಗೆ ತೆರಳಿದರು.
ಟಿಪ್ಪಣಿ- ತೇಽಭ್ಯಯುರ್ದಕ್ಷಿಣಾಯನಮ್ ಇತ್ಯತ್ರ ದಕ್ಷಿಣಾಯನಂ ದಕ್ಷಿಣಾ- ಮಾರ್ಗಮ್ | ದಕ್ಷಿಣಾಮಿತಿ ಯಾವತ್ |
ಟಿಪ್ಪಣಿ - `ಅಭ್ಯಯು ದಕ್ಷಿಣಾಯನಮ್' ಎಂಬುದಾಗಿ ದಕ್ಷಿಣಾಯನ ಮಾರ್ಗದಲ್ಲಿ ತೆರಳಿದ್ದಾರೆ ಎಂದು ಹೇಳಿದ್ದಾರೆ. ಆದರೆ ಉತ್ತರಾಯಣದ ಮಾರ್ಗದ ಮೂಲಕ ಬ್ರಹ್ಮಲೋಕಕ್ಕೆ ತೆರಳಿದರು ಎಂದೇ ಅರ್ಥವನ್ನು ಮಾಡ- ಬೇಕು. ಏಕೆಂದರೆ ಪ್ರತಿಯೊಬ್ಬ ಸಾಧಕರು ಉತ್ತರಾಯಣ ಎಂಬ ದೇವಯಾನ ಮಾರ್ಗದಿಂದಲೇ ಬ್ರಹ್ಮಲೋಕಕ್ಕೆ ತೆರಳುತ್ತಾರೆ. ಆದ್ದರಿಂದ ದಕ್ಷಿಣಾಯನದ ಅನಂತರ ಉತ್ತರಾಯಣಮಾರ್ಗದಿಂದ ಬ್ರಹ್ಮಲೋಕಕ್ಕೆ ತೆರಳಿದರು ಎಂಬುದು ಇದರ ಅಭಿಪ್ರಾಯ.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥101॥
ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಅಂಬರೀಷನಿಗಿಂತಲೂ ಅಧಿಕನಾದವನು ಮತ್ತೊಬ್ಬನಿರಲಿಲ್ಲ. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ- ನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ, ನಿನ್ನ ವಿಷಯದಲ್ಲಿ ನಿನ್ನ ಮಗನ ವಿಷಯದಲ್ಲಿ ದುಃಖಪಡಲು ಕಾರಣವೇ ಇಲ್ಲ.
ಟಿಪ್ಪಣಿ - ಈ ಅಂಬರೀಷರಾಜನು ಸೂರ್ಯವಂಶದವನು. ವೈವಸ್ವತ- ಮನುವಿನ ಮೊಮ್ಮಗನು. ನಾಭಾಗನ ಮಗನು. ಏಕಾದಶಿ ವ್ರತ ಮತ್ತು ದ್ವಾದಶಿ ಪಾರಣೆಯ ವಿಷಯದಲ್ಲಿ ಪ್ರಸಿದ್ಧಿಯನ್ನು ಪಡೆದನು. ದೂರ್ವಾಸ ಋಷಿಯು ದ್ವಾದಶಿ ಪಾರಣೆಯ ಕಾಲದಲ್ಲಿ ಬಾರದೇ ಇದಿದ್ದರಿಂದ ತೀರ್ಥಸೇವನೆಯನ್ನು ಮಾಡಿದನು. ಇದರಿಂದ ಕುಪಿತನಾದ ದೂರ್ವಾಸಮುನಿಯು ಅಂಬರೀಷನ ನಾಶಕ್ಕಾಗಿ ಕೃತ್ಯವೊಂದನ್ನು ನಿರ್ಮಾಣ ಮಾಡಿಬಿಟ್ಟನು. ಆಗ ಭಗವಂತನು ತನ್ನ ಚಕ್ರಾಯುಧದಿಂದ ಆ ಕೃತ್ಯನನ್ನು ಸಂಹರಿಸಿ ಅಂಬರೀಷನನ್ನು ಕಾಪಾಡಿದನು. ಈ ಅಂಬರೀಷನಿಗೆ ವಿರೂಪ, ಕೇತುಮಂತ, ಶಂಭು ಎಂಬ ಮೂವರು ಮಕ್ಕಳು ಹುಟ್ಟಿದರು.
ಶಶಬಿಂದು ರಾಜನ ಸಾಧನೆ
ಶಶಬಿಂದುಂ ಚೈತ್ರರಥಂ ಮೃತಂ ಶುಶ್ರುಮ ಸೃಂಜಯ |
ಯಸ್ಯ ಭಾರ್ಯಾಸಹಸ್ರಾಣಾಂ ಶತಮಾಸೀನ್ಮಹಾತ್ಮನಃ ॥102॥

ಚಿತ್ರರಥ ಎಂಬ ರಾಜನ ಮಗನೇ ಶಶಬಿಂದು ರಾಜ. ಇವನೂ ಕೂಡ ಸತ್ತನು ಎಂಬ ವಾರ್ತೆಯನ್ನು ಕೇಳಿದ್ದೇವೆ. ಇವನಿಗೆ ಒಂದು ಲಕ್ಷ ಹೆಂಡತಿಯರಿದ್ದರು. ಪ್ರತಿಯೊಬ್ಬರಲ್ಲಿಯೂ ಹತ್ತುಲಕ್ಷಮಂದಿ ಮಕ್ಕಳನ್ನು ಹುಟ್ಟಿಸಿದ್ದನು.
ಸಹಸ್ರಂ ತು ಸಹಸ್ರಾಣಾಂ ಯಸ್ಯಾಸನ್ ಶಾಶಬಿಂದವಃ |
ಹಿರಣ್ಯಕವಚಾಃ ಸರ್ವೇ ಸರ್ವೇ ಚೋತ್ತಮಧನ್ವಿನಃ ॥103॥
ಆ ಮಕ್ಕಳಲ್ಲಿ ಪ್ರತಿಯೊಬ್ಬರೂ ಕೂಡ ಸುವರ್ಣಕವಚಗಳನ್ನೇ ಧಾರಣೆ ಮಾಡಿದ್ದರು. ಮಹಾಧನುರ್ಧಾರಿಗಳಾಗಿದ್ದರು.
ಟಿಪ್ಪಣಿ - ಯಸ್ಯಾಸನ್ ಶಾಶಬಿಂದವ ಇತ್ಯತ್ರ ಶಾಶಬಿಂದವಃ ಶಶಬಿಂದುಕುಮಾರಾಃ |
`ಶಾಶಬಿಂದವ' ಎಂಬುದಕ್ಕೆ ಶಶಬಿಂದು ರಾಜನ ಮಕ್ಕಳು ಎಂದರ್ಥ.
ಶತಂ ಕನ್ಯಾ ರಾಜಪುತ್ರಮೇಕೈಕಂ ಪೃಷ್ಠತೋಽನ್ವಯುಃ |
ಕನ್ಯಾಂ ಕನ್ಯಾಂ ಶತಂ ನಾಗಾ ನಾಗಂ ನಾಗಂ ಶತಂ ರಥಾಃ ॥104॥
ಈ ಶಶಬಿಂದು ರಾಜನ ಪ್ರತಿಯೊಬ್ಬ ಮಕ್ಕಳೂ ಕೂಡ ನೂರು ಮಂದಿ ಹೆಣ್ಣು- ಮಕ್ಕಳನ್ನು ವಿವಾಹವಾದರು. ಪ್ರತಿಯೊಬ್ಬ ಕನ್ಯೆಯ ಹಿಂದೆಯ ಕೂಡ ನೂರು ನೂರು ಆನೆಗಳು ಹೋಗುತ್ತಿದ್ದವು. ಒಂದೊಂದು ಆನೆಯ ಹಿಂದೆಯೂ ನೂರು ನೂರು ರಥಗಳು ಹೋಗುತ್ತಿದ್ದವು.
ರಥಂ ರಥಂ ಶತಂ ಚಾಶ್ವಾ ದೇಶಜಾ ಹೇಮಮಾಲಿನಃ |
ಅಶ್ವಮಶ್ವಂ ಶತಂ ಗಾವೋ ಗಾಂ ಗಾಂ ತದ್ವದಜಾವಿಕಮ್ ॥105॥
ಪ್ರತಿಯೊಂದು ರಥದ ಹಿಂದೆಯೂ ಸುವರ್ಣಮಾಲೆಗಳಿಂದ ಅಲಂಕೃತವಾದ ನೂರು ನೂರು ದೇಶಿಯ ಕುದುರೆಗಳು ತೆರಳುತ್ತಿದ್ದವು. ಪ್ರತಿಯೊಂದು ಕುದುರೆಯ ಹಿಂದೆಯೂ ಕೂಡ ನೂರು ನೂರು ಹಸುಗಳು ತೆರಳುತ್ತಿದ್ದವು. ಪ್ರತಿಯೊಂದು ಹಸುಗಳ ಹಿಂದೆ ನೂರು ನೂರು ಆಡುಗಳು ತೆರಳುತ್ತಿದ್ದವು.
ಏತದ್ಧನಮಪರ್ಯಂತಮಶ್ವಮೇಧೇ ಮಹಾಮಖೇ |
ಶಶಬಿಂದುರ್ಮಹಾರಾಜಃ ಬ್ರಾಹ್ಮಣೇಭ್ಯಃ ಸಮಾದಿಶತ್ ॥106॥
ಈ ಶಶಬಿಂದು ರಾಜನು ಒಂದು ಅಶ್ವಮೇಧಯಾಗವನ್ನು ಮಾಡಿದನು. ಆ ಯಾಗದಲ್ಲಿ ಇಷ್ಟು ಧನರಾಶಿಯನ್ನು ಬ್ರಾಹ್ಮಣರಿಗೆ ದಾನ ಮಾಡಿಬಿಟ್ಟನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥107॥
ಈ ಶಶಬಿಂದು ರಾಜನೂ ಕೂಡ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಗಳಲ್ಲಿ ನಿನಗಿಂತ ಬಹಳ ಉತ್ತಮನಾಗಿದ್ದನು. ಹೀಗಿರುವಾಗ ನಿನ್ನ ಮಗನ ವಿಷಯ- ದಲ್ಲಿ ನೀನು ದುಃಖಿಸುವುದು, ನಿನ್ನ ವಿಷಯದಲ್ಲಿ ನೀನು ದುಃಖಿಸುವುದರಲ್ಲಿ ಅರ್ಥವೇ ಇಲ್ಲ.
ಟಿಪ್ಪಣಿ - ವೃಷ್ಣಿವಂಶದ ಚಿತ್ರರಥರಾಜನ ಮಗನೇ ಶಶಬಿಂದು. ಇವನು ಮಾಡಿದ ದಂಡನೀತಿ, ನ್ಯಾಯಗಳನ್ನು ಅನುಸರಿಸಿ ಅನೇಕ ರಾಜರು ರಾಜರ್ಷಿ ಪದವನ್ನು ಪಡೆದರು. ಇವನಿಗೆ ಬಿಂದುಮತಿ ಎಂಬ ಮಗಳಿದ್ದಳು. ಇವಳೇ ಮಾಂಧಾತನ ಹೆಂಡತಿ ಈ ಶಶಬಿಂದು ರಾಜನಿಗೆ ಚೈತ್ರರಥ ಎಂಬ ಹೆಸರೂ ಕೂಡ ಇರುತ್ತದೆ.
ಗಯ ರಾಜನ ಸಾಧನೆ
ಗಯಂಚಾಮೂರ್ತರಯಸಂ ಮೃತಂ ಶುಶ್ರುಮ ಸೃಂಜಯ |
ಯಃ ಸ ವರ್ಷಶತಂ ರಾಜಾ ಹುತಶಿಷ್ಟಾಶನೋಽಭವತ್ ॥108॥
ಸಂಜಯನೇ! ಗಯ ಎಂಬ ರಾಜನಿದ್ದನು. ಇವನು ``ಅಮೂರ್ತರಯಸ'' ಎಂಬ ರಾಜನ ಮಗನಿವನು. ನೂರು ವರ್ಷಗಳ ಕಾಲ ಹೋಮವನ್ನು ಮಾಡಿ, ಹೋಮಶೇಷವನ್ನೇ ಇವನು ತಿನ್ನುತ್ತಿದ್ದನು.
ಯಸ್ಮೈ ವಹ್ನಿರ್ವರಾನ್ ಪ್ರಾದಾತ್ ತತೋ ವವ್ರೇ ವರಾನ್ ಗಯಃ |
ದದತೋ ಮೇಽಕ್ಷಯಾ ಚಾಸ್ತು ಧರ್ಮೇ ಶ್ರದ್ಧಾ ಚ ವರ್ಧತಾಮ್ ॥109॥
ಮನೋ ಮೇ ರಮತಾಂ ಸತ್ಯೇ ತ್ವತ್ಪ್ರಸಾದಾದ್ ಹುತಾಶನ |
ಲೇಭೇ ಚ ಕಾಮಾಂಸ್ತಾನ್ ಸರ್ವಾನ್ ಪಾವಕಾದಿತಿ ನಃ ಶ್ರುತಮ್ ॥110॥
ಇವನ ಈ ನಿಷ್ಠೆಯನ್ನು ನೋಡಿ, ಅಗ್ನಿದೇವನು ಸುಪ್ರೀತನಾದನು. ಯಾವು- ದಾದರೂ, ವರವನ್ನು ಕೇಳುವಂತೆ ಗಯನಿಗೆ ಹೇಳಿದನು. ಆಗ ಗಯನು ಅಗ್ನಿಯಿಂದ ಈ ವರವನ್ನು ಕೇಳಿದನು. ``ಯಜ್ಞೇಶ್ವರನೇ ! ನಾನು ಎಷ್ಟು ದಾನವನ್ನು ಮಾಡಿದರೂ ಅದು ಅಷ್ಟೇ ಅಕ್ಷಯವಾಗಬೇಕು. ನನಗೆ ನಿರಂತರಧರ್ಮದಲ್ಲಿ ಶ್ರದ್ಧೆಯು ಅಭಿವೃದ್ಧಿಯಾಗಬೇಕು. ನನ್ನ ಮನಸ್ಸು ಯಾವಾಗಲೂ ಸತ್ಯದಲ್ಲಿ ಆಸಕ್ತವಾಗಿರಬೇಕು. ನಿನ್ನ ಅನುಗ್ರಹ ನನಗೆ ಎಂದೆಂದೂ ಇರಬೇಕು''. ಅಗ್ನಿಯು ಅವನಿಗೆ ಈ ಎಲ್ಲಾ ವರಗಳನ್ನು ನೀಡಿದನೆಂದು ನಾವು ಕೇಳಿದ್ದೇವೆ.
ದರ್ಶೇನ ಪೌರ್ಣಮಾಸೇನ ಚಾತುರ್ಮಾಸ್ಯೈಃ ಪುನಃಪುನಃ |
ಅಯಜತ್ ಸ ಮಹಾತೇಜಾಃ ಸಹಸ್ರಂ ಪರಿವತ್ಸರಾನ್ ॥111॥
ಸೃಂಜಯನೇ! ಆ ಗಯನು ಸಾವಿರ ವರ್ಷಗಳ ಕಾಲ ದರ್ಶಯಾಗ ಪೌರ್ಣ- ಮಾಸ ಯಾಗ, ಚಾತುರ್ಮಾಸ್ಯ ಯಾಗ, ಅಶ್ವಮೇಧಯಾಗಗಳನ್ನು ಆಚರಿಸಿದನು.
ಶತಂ ಗವಾಂ ಸಹಸ್ರಾಣಿ ಶತಮಶ್ವಶತಾನಿ ಚ |
ಉತ್ಥಾಯೋತ್ಥಾಯ ವೈ ಪ್ರಾದಾತ್ ಸಹಸ್ರಂ ಪರಿವತ್ಸರಾನ್ ॥112॥
ಆ ಸಂದರ್ಭದಲ್ಲಿ ಆ ರಾಜನು ಸಾವಿರ ವರ್ಷಗಳವರೆಗೂ ಲಕ್ಷಸಂಖ್ಯೆಯ ಗೋವುಗಳನ್ನು, ಹತ್ತು ಸಾವಿರ ಕುದುರೆಗಳನ್ನು, ಪುನಃ ಪುನಃ ದಾನ ಮಾಡುತ್ತಲೇ ಇದ್ದನು.

ತರ್ಪಯಾಮಾಸ ಸೋಮೇನ ದೇವಾನ್ ವಿತ್ತೈರ್ದ್ವಿಜಾನಪಿ |
ಪಿತ್ರೂನ್ ಸ್ವಧಾಭಿಃ ಕಾಮ್ಯೈಶ್ಚ ಸ್ತ್ರಿಯಃ ಸ್ವಾಃ ಪುರುಷರ್ಷಭ ॥113॥
ದೇವತೆಗಳನ್ನು ಸೋಮರಸವನ್ನು ನೀಡುವ ಮೂಲಕ ತೃಪ್ತಿಪಡಿಸಿದನು. ಯಥೇಚ್ಛವಾದ ಐಶ್ವರ್ಯಗಳನ್ನು ಕೊಡುವ ಮೂಲಕ ಬ್ರಾಹ್ಮಣರನ್ನು ತೃಪ್ತಿ ಪಡಿಸಿದನು. ಶ್ರಾದ್ಧ ಹಾಗೂ ತರ್ಪಣಗಳಿಂದ ಪಿತೃಗಳನ್ನು ತೃಪ್ತಿಪಡಿಸಿದನು. ವಿವಿಧವಾದ ಕಾಮೋಪಭೋಗಗಳಿಂದ ಸ್ತ್ರೀಯರನ್ನು ತೃಪ್ತಿಪಡಿಸಿದನು.
ಸೌವರ್ಣಾಂ ಪೃಥಿವೀಂ ಕೃತ್ವಾ ದಶವ್ಯಾಮಾಂ ದ್ವಿರಾಯತಾಮ್ |
ದಕ್ಷಿಣಾಮದದದ್ ರಾಜಾ ವಾಜಿಮೇಧೇ ಮಹಾಮಖೇ ॥114॥
ಅವನು ಒಂದು ಅಶ್ವಮೇಧಯಾಗದಲ್ಲಿ ಐವತ್ತು ಮಾರುಗಳಷ್ಟು ಅಗಲವಾದ, ನೂರು ಮಾರುಗಳಷ್ಟು ಉದ್ದವಾದ ಸುವರ್ಣದ ಭೂಮಿಯನ್ನು ಮಾಡಿಸಿ, ಅದನ್ನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ನೀಡಿದನು.
ಟಿಪ್ಪಣಿ - ದಶವ್ಯಾಮಾಂ ದ್ವಿರಾಯತಾಮ್ ಇತ್ಯತ್ರ ದಶವ್ಯಾಮಾಂ ದಶಪ್ರಮಾಣೇನ ವ್ಯಾಮೋ ವಿಸ್ತಾರೋ ಯಸ್ಯಾಃ ಸಾ ತಾಮ್ | ದ್ವಿರಾಯತಾಂ ತತೋ ದ್ವಿಃ ಪ್ರಮಾಣೇನ ದೀರ್ಘಾಮ್ |
`ದಶವ್ಯಾಮಾಂ' ಎಂಬುದಕ್ಕೆ ಹತ್ತು ಮಾರುಗಳಷ್ಟು ವಿಸ್ತಾರವಾದ ಎಂದರ್ಥ. ಅದರ ಎರಡು ಪಟ್ಟು ಅಗಲವಾದ ಭೂಮಿಯನ್ನು ಎಂದರ್ಥ.
ಯಾವತ್ಯಃ ಸಿಕತಾ ರಾಜನ್ ಗಂಗಾಯಾಃ ಪುರುಷರ್ಷಭ |
ತಾವತೀರೇವ ಗಾಃ ಪ್ರಾದಾದಾಮೂರ್ತರಯಸೋ ಗಯಃ ॥115॥
ಗಂಗಾನದಿಯಲ್ಲಿ ಎಷ್ಟು ಮರಳಿನ ಕಣಗಳಿವೆಯೋ, ಅಷ್ಟು ಸಂಖ್ಯೆಯ ಗೋವು -ಗಳನ್ನು ಅಮೂರ್ತರಯಸನ ಮಗನಾದ ಗಯನು ಬ್ರಾಹ್ಮಣರಿಗೆ ದಾನವನ್ನು ಮಾಡಿದನು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥116॥
ಸೃಂಜಯನೇ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಆ ಗಯನು ನಿನಗಿಂತ ಅತ್ಯುತ್ತಮನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯವಂತನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ ನೀನೇಕೆ ದುಃಖಿಸುವಿ.
ವ್ಯಾಖ್ಯಾನ - ಅಮೂರ್ತರಯ ಅಥವಾ ಅಧೂರ್ತರಜ ಎಂಬ ರಾಜನ ಮಗನೇ ಗಯ. ಈ ಮಹಾರಾಜನಿಂದ ನಿರ್ಮಿತವಾದ ಪರ್ವತಕ್ಕೆ `ಗಯಶಿರಸ್' ಎಂದು ಕರೆಯುತ್ತಾರೆ. ಫಲ್ಗುನದಿಯು ಇಲ್ಲಿಯೇ ಹರಿಯುತ್ತದೆ. ಈ ಮಹಾ- ರಾಜನು ಪ್ರತಿನಿತ್ಯವು ಪರ್ವತಕಾರವಾಗಿ ಅನ್ನವನ್ನು ಮಾಡಿ, ಕಾಲುವೆಯಂತೆ ತುಪ್ಪವನ್ನು ಹರಿಸಿ, ನದಿಯಂತೆ ಮೊಸರು ಹರಿಸಿ, ವ್ಯಂಜನಗಳನ್ನು ರಾಶಿರಾಶಿ- ಯಾಗಿ ಮಾಡಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುತ್ತಿದ್ದನಂತೆ. ಇವನು ಕೊಟ್ಟ ದಕ್ಷಿಣೆಗಳು ನದಿತೀರದ ಮರಳಿನ ಕಣಗಳಂತೆ ಅಸಂಖ್ಯಾಕವಾಗಿದ್ದವು. ಇವನ ಬಗ್ಗೆ ವನಪರ್ವದಲ್ಲಿ ಇನ್ನೂ ಹೆಚ್ಚಿನ ವಿಚಾರವು ಬಂದಿದೆ.
ರಂತಿದೇವನ ಸಾಧನೆ
ರಂತಿದೇವಂ ಚ ಸಾಂಕೃತ್ಯಂ ಮೃತಂ ಶುಶ್ರುಮ ಸೃಂಜಯ |
ಸಮ್ಯಗಾರಾಧ್ಯ ಯಃ ಶಕ್ರಂ ವರಂ ಲೇಭೇ ಮಹಾಯಶಾಃ ॥117॥
ಸಂಕೃತಿ ಎಂಬ ರಾಜನ ಮಗನೇ ರಂತಿದೇವ. ಇವನೂ ಕೂಡ ಮರಣವನ್ನು ಹೊಂದಿದನೆಂದು ಕೇಳಿದ್ದೇವೆ. ಮಹಾಯಶಸ್ಸನ್ನು ಹೊಂದಿದ ರಂತಿದೇವನು ದೇವೇಂದ್ರನನ್ನು ತನ್ನ ಆರಾಧನೆಯಿಂದ ಒಲಿಸಿಕೊಂಡು, ವರಗಳನ್ನು ಪಡೆದು- ಕೊಂಡನು.
ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ |
ಶ್ರದ್ಧಾ ಚ ನೋ ಮಾ ವ್ಯಗಮನ್ಮಾ ಚ ಯಾಚಿಷ್ಮ ಕಂಚನ ॥118॥
ದಾನಮಾಡಲು ಯಥೇಚ್ಛವಾದ ಅನ್ನ ತನ್ನಲ್ಲಿರಬೇಕು. ಸೇವೆ ಮಾಡುವುದಕ್ಕಾಗಿ ನಿರಂತರ ಅತಿಥಿಗಳು ತನಗೆ ದೊರೆಯಬೇಕು. ಅತಿಥಿ ಸತ್ಕಾರದಲ್ಲಿ ಎಂದೂ ಶ್ರದ್ಧೆಯು ಕಮ್ಮಿಯಾಗಬಾರದು. ಮತ್ತೊಬ್ಬರನ್ನು ಯಾವುದಕ್ಕೂ ಯಾಚನೆ ಮಾಡ- ಬಾರದು.
ಉಪಾತಿಷ್ಠಂತ ಪಶವಃ ಸ್ವಯಂ ತಂ ಸಂಶಿತವ್ರತಮ್ |
ಗ್ರಾಮ್ಯಾರಣ್ಯಾ ಮಹಾತ್ಮಾನಂ ರಂತಿದೇವಂ ಯಶಸ್ವಿನಮ್ ॥119॥
ಅತ್ಯಂತ ನಿಯಮವ್ರತವನ್ನು ಹೊಂದಿದ ಮಹಾತ್ಮನಾದ ರಂತಿದೇವನು ಉತ್ತಮ ಕೀರ್ತಿವಂತನಾದನು. ಅವನ ಬಳಿಗೆ ಗ್ರಾಮಗಳಲ್ಲಿರುವ, ಅರಣ್ಯಗಳಲ್ಲಿರುವ ಪಶು- ಪಕ್ಷಿಗಳು ತಾವಾಗಿಯೇ ಆಗಮಿಸುತ್ತಿದ್ದವು.
ಮಹಾನದೀ ಚರ್ಮರಾಶೇರುತ್ಕ್ಲೇದಾತ್ ಸುಸ್ರುವೇ ಯತಃ |
ತತಶ್ಚರ್ಮಣ್ವತೀತ್ಯೇವಂ ವಿಖ್ಯಾತಾ ಸಾ ಮಹಾನದೀ ॥120॥
ಆ ರಂತಿದೇವನು ಯಾಗದಲ್ಲಿ ಉಪಯೋಗಿಸಿದ ಪಶುಗಳ ಚರ್ಮದಿಂದ ಸ್ರವಿಸಿದ ಜಲವೇ ನದಿಯಾಗಿ ಹರಿದು, ಚರ್ಮಣ್ವತಿ ಎಂದು ಪ್ರಸಿದ್ಧಿ ಪಡೆಯಿತು. ಇದು ಮಹಾನದಿಯಾಗಿದೆ.
ವಿಮರ್ಶೆ -
ರಂತಿದೇವನು ಗೋಹತ್ಯೆಯನ್ನು ಮಾಡುತ್ತಿದ್ದನೇ ?
ಕೆಲವು ಪಾಠಗಳಲ್ಲಿ ಸಸೃಜೇ ಎಂದಿದೆ. ಇಲ್ಲಿ ಸುಸ್ರುವೇ ಎಂದಿದೆ. ಈ ಶ್ಲೋಕಕ್ಕೆ ಹೀಗೆ ವ್ಯಾಖ್ಯಾನವನ್ನು ಮಾಡುತ್ತಾರೆ. ರಂತಿದೇವನ ಆಸ್ಥಾನದಲ್ಲಿ ನಿತ್ಯವು ಪ್ರಾಣಹತ್ಯೆಯು ನಡೆಯುತ್ತಿತ್ತು. ಎಷ್ಟು ನಡೆಯುತ್ತಿತ್ತೆಂದರೆ ಪ್ರಾಣಿಗಳ ರಕ್ತದ ನದಿಯೇ ಹರಿಯಿತು. ಅದರಿಂದಲೇ ಚರ್ಮಣ್ವತಿ ಎಂಬ ಹೆಸರು ಆ ನದಿಗೆ ಬಂದಿತು.
ಮುಂದೆ ಇದಕ್ಕೆ ಪೂರಕವಾದ ಮತ್ತೊಂದು ಶ್ಲೋಕವು ಬರುತ್ತದೆ-
ಸಾಂಕೃತೇ ರಂತಿದೇವಸ್ಯ ಯಾಂ ರಾತ್ರಿಮವಸದ್ ಗೃಹೇ |

ಆಲಭ್ಯಂತ ಶತಂ ಗಾವಃ ಸಹಸ್ರಾಣಿ ಚ ವಿಂಶತಿಃ ॥124॥
ಕೆಲವು ಪುಸ್ತಕಗಳಲ್ಲಿ ಆಲಭ್ಯಂತ ಎಂಬ ಪಾಠವಿದೆ. ಆದರೆ ಅಲಭಂತ ಎಂಬ ಪಾಠವೇ ಸಾಧುವಾಗಿದೆ. `ಅಲಭಂತ' ಎಂದರೆ ಇಪ್ಪತ್ತು ಸಾವಿರ ಹಸುಗಳನ್ನು ಹೊಂದಿದರು ಎಂದರ್ಥ. `ಆಲಭ್ಯಂತ' ಎಂಬ ಪಾಠವನ್ನು ವಿವಕ್ಷಿಸಿ ಕೆಲವರು ನಿತ್ಯವೂ ಇಪ್ಪತ್ತು ಸಾವಿರ ಹಸುಗಳನ್ನು ಕಡಿಯುತ್ತಿದ್ದರು ಎಂದು ವ್ಯಾಖ್ಯಾನವನ್ನು ಮಾಡುತ್ತಾರೆ. ಮಹಾಭಾರತವನ್ನು ಸರಿಯಾಗಿ ಅರ್ಥವನ್ನು ಮಾಡಿಕೊಳ್ಳದೇ ಆಂಗ್ಲಭಾಷೆಯಲ್ಲಿ ಕೆಲವರು ಈ ಶ್ಲೋಕಗಳಿಗೆ ವಿಮರ್ಶೆಯನ್ನು ಮಾಡಿದ್ದಾರೆ. ಇದನ್ನೇ ಆಧಾರವನ್ನಾಗಿ ಇಟ್ಟುಕೊಂಡು ಕೆಲವರು ಪ್ರತಿನಿತ್ಯವು ರಂತಿದೇವನು ಇಪ್ಪತ್ತು ಸಾವಿರ ಹಸುಗಳನ್ನು ಕಡಿಯುತ್ತಿದ್ದರು ಎಂದು ಹೇಳುತ್ತಾರೆ. ಇದು ತಪ್ಪು. ರಂತಿದೇವನು ಸರ್ವಥಾ ಪ್ರಾಣಿಹತ್ಯೆಯನ್ನು ಮಾಡುತ್ತಿದ್ದಾರೆ. ಗೋಹತ್ಯೆಯನ್ನು ಸುತರಾಂ ಮಾಡುತ್ತಿರಲಿಲ್ಲ. ಹಾಗಿದ್ದರೆ `ಚರ್ಮರಾಶೇರು- ಕ್ಲೇದಾತ್ ಸುಸ್ರುವೇ' ಎಂಬುದಕ್ಕೆ ಹೇಗೆ ವ್ಯಾಖ್ಯಾನವನ್ನು ಮಾಡಬೇಕು ಎಂದರೆ, ರಂತಿದೇವನು ಪ್ರತಿನಿತ್ಯವು ಬ್ರಾಹ್ಮಣರಿಗೆ ಇಪ್ಪತ್ತು ಸಾವಿರ ಹಸುಗಳನ್ನು ದಾನ ಮಾಡುತ್ತಿದ್ದನೆಂದು ನೂರಿಪ್ಪತ್ತಾಕನೆಯ ಶ್ಲೋಕದಲ್ಲಿ ಹೇಳಿದ್ದಾರೆ. ಅರ್ಥಾತ್ ಅಷ್ಟು ಹಸುಗಳನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಅವುಗಳಿಗೆ ಉಪಚಾರವನ್ನು ಮಾಡುತ್ತಿದ್ದನು. ಅದಕ್ಕಾಗಿ ನೀರಿನಿಂದ ಹಸುಗಳನ್ನು ತೊಳೆಯುತ್ತಿದ್ದನು. ಆ ತೊಳೆದ ನೀರು ಹರಿದು ಹರಿದು ನದಿಯಾಯಿತು. ಹಸುಗಳ ಚರ್ಮದ ವಾಸನೆ- ಯಿಂದ ಕೂಡಿದ್ದರಿಂದ ಅದಕ್ಕೆ `ಚರ್ಮಣ್ವತಿ' ಎಂಬ ಹೆಸರು ಬಂದಿತು ಎಂಬುದಾಗಿ ಅರ್ಥವನ್ನು ತಿಳಿಯಬೇಕು. ಹೀಗೆ ಸಂಸ್ಕೃತದಲ್ಲಿ ಕ್ರಿಯಾಪದವನ್ನು ಸ್ವಲ್ಪ ವ್ಯತ್ಯಾಸವಾಗಿ ತಿಳಿದರೂ ಅರ್ಥವೇ ವ್ಯತ್ಯಾಸವಾಗಿಬಿಡುತ್ತದೆ. ಸಂಸ್ಕೃತ ಭಾಷೆಯಲ್ಲಿ ಗಮನಿಸಿ ಅರ್ಥವನ್ನು ತಿಳಿಯತಕ್ಕದ್ದು. ಈ ವ್ಯಾಖ್ಯಾನಕ್ಕೆ ಆಧಾರವು ನೂರ ಹತ್ತೊಂಬತ್ತನೆಯ ಶ್ಲೋಕದಿಂದ ತಿಳಿಯುತ್ತಿದೆ.

ಉಪಾತಿಷ್ಠಂತ ಪಶವಃ ಸ್ವಯಂ ತಂ ಸಂಶಿತವ್ರತಮ್ |
ಗ್ರಾಮ್ಯಾರಣ್ಯಾ ಮಹಾತ್ಮಾನಂ ರಂತಿದೇವಂ ಯಶಸ್ವಿನಮ್ ॥119॥
ಅರಣ್ಯದಲ್ಲಿರುವ ಪ್ರಾಣಿಗಳು ನಿರ್ಭಯದಿಂದ ಯಾವುದೇ ಸಂಶಯವಿಲ್ಲದೇ ರಂತಿದೇವನ ಬಳಿ ಬರುತ್ತಿದ್ದವು ಎಂಬುದಾಗಿ ಈ ಶ್ಲೋಕದಲ್ಲಿ ಹೇಳಿದ್ದಾರೆ. ಬಂದ ಪ್ರಾಣಿಗಳಿಗೆ ಸ್ನಾನ, ಪಾನ, ಆಹಾರಗಳನ್ನು ನೀಡುತ್ತಿದ್ದವು ಎಂಬುದನ್ನು ಮುಂದಿನ ಶ್ಲೋಕವು ವರ್ಣನೆ ಮಾಡಿದೆ. ಒಂದು ವೇಳೆ ಪ್ರಾಣಿಗಳನ್ನೆಲ್ಲಾ ರಂತಿದೇವನು ಸಂಹಾರ ಮಾಡುವುದಿದ್ದರೆ ನಿರ್ಭಯದಿಂದ ಆ ಪ್ರಾಣಿಗಳು ಬರುತ್ತರಲೇ ಇರಲಿಲ್ಲ. ಆದ್ದರಿಂದ `ಉಪಾತಿಷ್ಠಂತ' ಎಂಬ ಶ್ಲೋಕದಲ್ಲಿ ನಿರ್ಭಯದಿಂದ ಪ್ರಾಣಿಗಳು ಬರುತ್ತಿದ್ದವು ಎಂದು ಹೇಳಿ, `ಮಹಾನದೀ ಚರ್ಮರಾಶೇಃ' ಎಂಬ ಶ್ಲೋಕದಿಂದ ರಂತಿದೇವನು ಹಸು ಮೊದಲಾದ ಪ್ರಾಣಿಗಳಿಗೆ ಉಪಚಾರವನ್ನು ಮಾಡುತ್ತಿದ್ದನೆಂದು ಹೇಳಿ, ಮುಂದಿನ ಮೂರು ಶ್ಲೋಕಗಳಲ್ಲಿ ಅವನ ಸಂಪತ್ತನ್ನು ವರ್ಣನೆ ಮಾಡಿ, ನೂರಿಪ್ಪತ್ತಾಕನೆಯ ಶ್ಲೋಕದಲ್ಲಿ ಹಸುಗಳನ್ನು ಮುಟ್ಟುವ ಮಾತ್ರದಿಂದಲೇ ಬ್ರಾಹ್ಮಣರಿಗೆ ಇಪ್ಪತ್ತು ಸಾವಿರ ಹಸುಗಳನ್ನು ದಾನ ಮಾಡುತ್ತಿದ್ದ- ನೆಂದು ಹೇಳಿದ್ದಾರೆ. ಆದ್ದರಿಂದ ಗೋಹತ್ಯೆಯನ್ನು ಮಾಡಿ, ಗೋವುಗಳ ರಕ್ತವೇ ಚರ್ಮಣ್ವತಿ ನದಿಯಾಗಿದೆ ಎಂಬ ವಾಕ್ಯವು ಅಪ್ರಬುದ್ಧವಾಗಿದೆ.

ಬ್ರಾಹ್ಮಣೇಭ್ಯೋ ದದೌ ನಿಷ್ಕಾನ್ ಸದಸಿ ಪ್ರತತೇ ನೃಪಃ |
ತುಭ್ಯಂ ತುಭ್ಯಂ ನಿಷ್ಕಮಿತಿ ಯತ್ರಾಕ್ರೋಶಂತಿ ವೈ ದ್ವಿಜಾಃ ॥121॥
ಆ ರಂತಿದೇವನು ಬ್ರಾಹ್ಮಣರಿಗೆ ಯಥೇಚ್ಛವಾಗಿ ಸುವರ್ಣನಾಣ್ಯಗಳನ್ನು ದಕ್ಷಿಣೆಯನ್ನಾಗಿ ನೀಡಿದನು. ಆ ಸಂದರ್ಭದಲ್ಲಿ ಬ್ರಾಹ್ಮಣರು ``ನಿನಗೆ ರಾಜನು ಎಷ್ಟು ವರಾಹಗಳನ್ನು ಕೊಡುತ್ತಿದ್ದಾನೆ, ನನಗೂ ಕೂಡ ಅಷ್ಟೇ ದಕ್ಷಿಣೆಯನ್ನು ಕೊಡು- ತ್ತಾನೆ'' ಎಂದು ಪರಸ್ಪರವಾಗಿ ಚರ್ಚಿಸುತ್ತಿದ್ದರು.

ಸಹಸ್ರಂ ತುಭ್ಯಮಿತ್ಯುಕ್ತತ್ವ ಬ್ರಾಹ್ಮಣಾನ್ ಸಂಪ್ರಪದ್ಯತೇ |
ಅನ್ವಾಹಾರ್ಯೋಪಕರಣಂ ದ್ರವ್ಯೋಪಕರಣಂ ಚ ಯತ್ ॥122॥
ಹೀಗೆ ಬ್ರಾಹ್ಮಣರು ಪರಸ್ಪರ ಮಾತನಾಡಿಕೊಳ್ಳುತ್ತಿರುವಾಗ ಆ ರಂತಿದೇವನು ಸಾವಿರ ನಿಷ್ಕಗಳನ್ನು ನೀವು ತೆಗೆದುಕೊಳ್ಳಿ ಬನ್ನಿ ಎಂಬುದಾಗಿ ಹೇಳುತ್ತಾ, ಅವರವರ ಅಪೇಕ್ಷೆಗಿಂತಲೂ ಹೆಚ್ಚು ದಕ್ಷಿಣೆಗಳನ್ನು ನೀಡಿ ಸಂತೋಷ ಪಡಿಸುತ್ತಿದ್ದನು. ಯಜ್ಞಕ್ಕೆ ಸಂಬಂಧಪಟ್ಟ ಅನ್ವಹಾರ್ಯಾಗ್ನಿಯಲ್ಲಿ ಹೋಮ ಮಾಡಲು ಉಪಯುಕ್ತವಾದ ಉಪಕರಣಗಳು ಹಾಗೂ ಯಜ್ಞದ್ರವ್ಯಗಳನ್ನು ಸಂಗ್ರಹಿಸಲು ಆವಶ್ಯಕವಾದ ಉಪ- ಕರಣಗಳೆಲ್ಲವೂ ಸ್ವರ್ಣಮಯವಾಗಿದ್ದವು.

ಘಟಾಃ ಸ್ಥಾಲ್ಯಃ ಕಟಾಹಾಶ್ಚ ಪಾತ್ರ್ಯಶ್ಚ ಪಿಠರಾ ಅಪಿ |
ನ ತತ್ ಕಿಂಚಿದಸೌವರ್ಣಂ ರಂತಿದೇವಸ್ಯ ಧೀಮತಃ ॥123॥
ಗಡಿಗೆಗಳು, ಹಂಡೆಗಳು, ತಾಲಿಗಳು, ಬೋಗೋಣಿಗಳು ಇವೆಲ್ಲವೂ ಕೂಡ ಬಂಗಾರದ್ದೇ ಆಗಿದ್ದವು. ಬಂಗಾರವಲ್ಲದ ಒಂದೇ ಒಂದು ವಸ್ತು ಅಲ್ಲಿ ಇರಲಿಲ್ಲ.

ಸಾಂಕೃತೇ ರಂತಿದೇವಸ್ಯ ಯಾಂ ರಾತ್ರಿಮವಸದ್ ಗೃಹೇ |
ಅಲಭಂತ ಶತಂ ಗಾವಃ ಸಹಸ್ರಾಣಿ ಚ ವಿಂಶತಿಃ ॥124॥
ಸಂಕೃತಿಯ ಮಗನಾದ ಆ ರಂತಿದೇವನ ಮನೆಯಲ್ಲಿ ಒಂದು ರಾತ್ರಿಯ ಅತಿಥಿ ಭೋಜನಕ್ಕಾಗಿ ಸಾವಿರದ ನೂರಿಪ್ಪತ್ತು, (ಇಪ್ಪತ್ತು ಸಾವಿರದ ನೂರು ಗೋವುಗಳನ್ನು ಸ್ಪರ್ಶ ಮಾಡುವುದರ ಮೂಲಕವೇ ದಾನವನ್ನಾಗಿ ಪಡೆಯುತ್ತಿದ್ದರು.) ಆ ಸಮಯ- ದಲ್ಲಿ ಆ ಬ್ರಾಹ್ಮಣರು

ವಿಮರ್ಶೆ - ಅಲಭಂತ ಎಂಬ ಪಾಠವೇ ಸಾಧುವಾಗಿದೆ. ಆಲಭ್ಯಂತ ಎಂಬ ಪಾಠವು ಅಸಾಧುವಾಗಿದೆ. ಇಂದಿನ ಹಲವಾರು ಪುಸ್ತಕಗಳಲ್ಲಿ ಆಲಭ್ಯಂತ ಎಂಬ ಪಾಠವೇ ಕಾಣಿಸುತ್ತಿದೆ. ಆಲಂಭನ ಮಾಡುವುದು ಎಂದರೆ ಕಡಿಯುವುದು ಎಂದರ್ಥ. ಹಸುಗಳನ್ನು ರಂತಿದೇವನು ಕಡಿಯಲು ಸಾಧ್ಯವೇ ಇಲ್ಲ. ಇದನ್ನು ಯಾರು ತಮ್ಮ ದೃಷ್ಟಿಗೆ ಅನುಗುಣವಾಗಿ ಸೇರಿಸಿದ ಪಾಠ. ಆದ್ದರಿಂದ `ಅಲಭಂತ' ಎಂಬ ಪಾಠವನ್ನೇ ಸ್ವೀಕಾರ ಮಾಡಬೇಕು.

ತತ್ರ ಸ್ಮ ಸೂದಾಃ ಕ್ರೋಶಂತಿ ಸುಮೃಷ್ಟಮಣಿಕುಂಡಲಾಃ |
ಸೂಪಭೂಯಿಷ್ಠಮಶ್ನೀಧ್ವಂ ನಾದ್ಯ ಮಾಂಸಂ ಯಥಾ ಪುರಾ ॥125॥

ಅಲ್ಲಿರುವ ಅಡುಗೆ ಮಾಡುವವರೂ ಕೂಡ ರತ್ನದ ಕುಂಡಲಗಳನ್ನು ಧಾರಣೆ ಮಾಡುತ್ತಿರುತ್ತಿದ್ದರು. ಅವರು ತೊವ್ವೆಗಳನ್ನು ಯಥೇಚ್ಛವಾಗಿ ಭುಂಜಿಸಿರಿ. ಮೊದ- ಲಿನಂತೆ ಈಗ ಊಟದಲ್ಲಿ ಮಾಂಸವಿಲ್ಲ ಎಂದು ಬ್ರಾಹ್ಮಣರನ್ನು ಕುರಿತು ಉಪಚರಿಸು -ತ್ತಿದ್ದರು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥126॥
ಸೃಂಜಯನೇ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಈ ರಂತಿದೇವನು ಅತ್ಯಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯವಂತನಾ- ಗಿದ್ದನು. ಇವನೇ ಮರಣವನ್ನು ಹೊಂದಿದ ಮೇಲೆ ನಿನ್ನ ಮಗನ ವಿಷಯಕ್ಕಾಗಿ ಏಕೆ ದುಃಖವನ್ನು ಹೊಂದುವಿ?
ವ್ಯಾಖ್ಯಾನ - ಸಂಕೃತಿಯ ಮಗನಾದ ಊರು ವಂಶದವನಾದ ರಂತಿದೇವನು ಮಾಡಿದ ಪಶುಯಜ್ಞವು ಈಗಲೂ ಪ್ರಸಿದ್ಧಿಯನ್ನು ಪಡೆದಿದೆ. ಆ ಪಶುಯಜ್ಞದ ಚರ್ಮದ ರಾಶಿಯಿಂದಲೇ ಚರ್ಮಣ್ವತಿ ನದಿಯು ಉತ್ಪತ್ತಿಯಾಗಿದೆ. ರಂತಿ- ದೇವನು ರಾಜ್ಯಭಾರವನ್ನು ಮುಗಿಸಿ ವನಪ್ರಸ್ಥಾಶ್ರಮಕ್ಕೆ ತೆರಳಿದಾಗ ನಲವತ್ತೆಂಟು ದಿವಸಗಳ ಕಾಲ ಉಪವಾಸವನ್ನು ಮಾಡುತ್ತಾನೆ. ಆಗ ನಲವತ್ತೆಂಟನೆಯ ದಿವಸ ದಿವ್ಯಭೋಜನವು ದೊರೆತಾಗ ತನ್ನ ಸಂಸಾರಕ್ಕೆ ಹಂಚಿ, ತನ್ನ ಪಾಲಿನದ್ದನ್ನು ಉಣ್ಣಬೇಕೆನ್ನುವಷ್ಟರಲ್ಲಿ ಬ್ರಾಹ್ಮಣನು ಬಂದು ಆಹಾರ ಬೇಡುತ್ತಾನೆ. ಪುನಃ ಕೆಲವು ದಿವಸಗಳ ಕಾಲ ಉಪವಾಸವಿದ್ದ ಮೇಲೆ ಶೂದ್ರನೊಬ್ಬನು ಬಂದು, ಇನ್ನೂ ಕೆಲವು ದಿವಸಗಳ ಅನಂತರ ತಾಯಿಯು ಬಂದು, ಮತ್ತೊಮ್ಮೆ ಬೇಡನು ಬಂದು, ಆ ರಂತಿದೇವನ ಆಹಾರವನ್ನು ಬೇಡುತ್ತಾರೆ. ಹಸಿದಿದ್ದರೂ ಕೂಡ ರಂತಿದೇವನು ಇವರನ್ನೆಲ್ಲಾ ತೃಪ್ತಿ ಪಡಿಸಿ ನಿರ್ವಿಕಾರನಾಗಿರುತ್ತಾನೆ. ರಂತಿದೇವನ ತ್ಯಾಗದಿಂದ ಭಗವಂತನು ಪ್ರಸನ್ನನಾಗಿ ಸದ್ಗತಿಯನ್ನು ನೀಡುತ್ತಾನೆ. ಭಾಗವತದಲ್ಲಿ ಮಹಾ- ಭಾರತದ ದ್ರೋಣಪರ್ವದಲ್ಲಿಯೂ ಇವನ ಕಥೆಯು ಬರುತ್ತದೆ.
ಸಗರ ಚಕ್ರವರ್ತಿಯ ಸಾಧನೆ
ಸಗರಂ ಚ ಮಹಾತ್ಮಾನಂ ಮೃತಂ ಶುಶ್ರುಮ ಸೃಂಜಯ |
ಐಕ್ಷ್ವಾಕಂ ಪುರುಷವ್ಯಾಘ್ರಮತಿಮಾನುಷವಿಕ್ರಮಮ್ ॥127॥
ಇಕ್ಷ್ವಾಕು ವಂಶದಲ್ಲಿ ಸಗರ ಎಂಬ ರಾಜನಿದ್ದನು. ಇವನೂ ಕೂಡ ಮೃತನಾದ- ನೆಂಬುದನ್ನು ನಾವು ಕೇಳಿದ್ದೇವೆ. ಮಹಾತ್ಮನು, ಪುರುಷಶ್ರೇಷ್ಠನು, ಅತಿಮಾನುಷವಾದ ಪರಾಕ್ರಮವುಳ್ಳವನು ಇವನಾಗಿದ್ದನು.
ಷಷ್ಟಿಃ ಪುತ್ರಸಹಸ್ರಾಣಿ ಯಂ ಯಾಂತಂ ಪೃಷ್ಠತೋಽನ್ವಯುಃ |
ನಕ್ಷತ್ರರಾಜಂ ವರ್ಷಾಂತೇ ವ್ಯಭ್ರೇ ಜ್ಯೋತಿರ್ಗಣಾ ಇವ ॥128॥
ಇವನಿಗೆ ಅರವತ್ತು ಸಾವಿರ ಮಕ್ಕಳಿದ್ದರು. ಚಂದ್ರನನ್ನು ಸಾವಿರಾರು ನಕ್ಷತ್ರಗಳು ಅನುಸರಿಸುವಂತೆ ಎಲ್ಲಾ ಮಕ್ಕಳು ಇವನನ್ನು ಅನುಸರಿಸುತ್ತಿದ್ದರು.
ಏಕಚ್ಛತ್ರಾ ಮಹೀ ಯಸ್ಯ ಪ್ರಣತಾ ಹ್ಯಭವತ್ ಪುರಾ |
ಯೋಽಶ್ವಮೇಧಸಹಸ್ರೇಣ ತರ್ಪಯಾಮಾಸ ದೇವತಾಃ ॥129॥
ಈ ಸಗರನು ಏಕಚ್ಛತ್ರದಿಂದ ಭೂಮಿಯನ್ನು ಪರಿಪಾಲನೆ ಮಾಡಿದನು. ಸಾವಿರ ಅಶ್ವಮೇಧಯಾಗಗಳನ್ನು ಮಾಡಿ, ದೇವತೆಗಳನ್ನು ತೃಪ್ತಿ ಪಡಿಸಿದನು.
ಯಃ ಪ್ರಾದಾತ್ ಕಾಂಚನಸ್ತಂಭಂ ಪ್ರಾಸಾದಂ ಸರ್ವಕಾಂಚನಮ್ |
ಪೂರ್ಣಂ ಪದ್ಮದಲಾಕ್ಷೀಣಾಂ ಸ್ತ್ರೀಣಾಂ ಶಯನಸಂಕುಲಮ್ ॥130॥
ಚಿನ್ನದ ಕಂಬಗಳಿಂದ ನಿರ್ಮಿಸಿದ ಪದ್ಮದಲಾಯತಾಕ್ಷಿಯರಾದ ಸ್ತ್ರೀಯರಿಂದ ಕೂಡಿದ ಹಂಸತೂಲಿಕಾತಲ್ಪಗಳಿಂದ ಅಲಂಕೃತವಾದ ಸುವರ್ಣಮಯವಾದ ಪ್ರಾಸಾದಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.
ದ್ವಿಜಾತಿಭ್ಯೋಽನುರೂಪೇಭ್ಯಃ ಕಾಮಾನುಚ್ಚಾವಚಾಂಸ್ತಥಾ |
ಯಸ್ಯಾದೇಶೇನ ತದ್ ವಿತ್ತಂ ವ್ಯಭಜಂತ ದ್ವಿಜಾತಯಃ ॥131॥
ಬ್ರಾಹ್ಮಣರಿಗೆ ವಿವಿಧವಾದ ಕಾಮೋಪಭೋಗಸಾಮಗ್ರಿಗಳನ್ನು ದಾನ ಮಾಡಿ- ದನು. ಮತ್ತು ಅವರವರು ಕೇಳಿದ ಕೋರಿಕೆಗಳನ್ನೆಲ್ಲಾ ಸಲ್ಲಿಸಿದನು. ಅವನ ಆದೇಶದಿಂದ ಎಲ್ಲಾ ಬ್ರಾಹ್ಮಣರು ಅವನು ನೀಡಿದ ಭೋಗ್ಯವಸ್ತುಗಳನ್ನು ಹಂಚಿ- ಕೊಂಡರು.
ಖಾನಯಾಮಾಸ ಯಃ ಕೋಪಾತ್ ಪೃಥಿವೀಂ ಸಾಗರಾಂಕಿತಾಮ್|
ಯಸ್ಯ ನಾಮ್ನಾ ಸಮುದ್ರಶ್ಚ ಸಾಗರತ್ವಮುಪಾಗತಃ ॥132॥
ಕುಪಿತನಾದ ಚಕ್ರವರ್ತಿಯು ಈಗ ಸಾಗರ ಎಂಬ ಹೆಸರಿನಿಂದ ಕರೆಯುವ ಭೂಭಾಗವನ್ನು ಅಗೆಸಿದನು. ಮುಂದೆ ಅವನ ಹೆಸರಿನಿಂದಲೇ ಸಮುದ್ರವು ಸಾಗರ ಎಂಬ ಬಿರುದನ್ನು ಹೊಂದಿತು.
ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥133॥
ಸೃಂಜಯನೇ! ಹೀಗೆ ಸಗರನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಗಳಲ್ಲಿ ನಿನಗಿಂತಲೂ ನಿನ್ನ ಮಗನಿಗಿಂತಲೂ ಅತ್ಯಧಿಕನಾಗಿದ್ದನು. ಅವನೇ ಮೃತನಾದ ಮೇಲೆ ಬೇರೆಯವರ ವಿಷಯದಲ್ಲಿ ದುಃಖಿಸುವ ಅವಶ್ಯಕತೆಯಿಲ್ಲ. ನಿನ್ನ ಮಗನು ಹೊಂದಿದ್ದಾನೆಂದು ಏಕೆ ದುಃಖಿಸುವಿ?
ವ್ಯಾಖ್ಯಾನ - ಇಕ್ಷ್ವಾಕುವಂಶದ ಬಾಹುಕನ ಮಗನೇ ಸಗರ. ತನ್ನ ಮಲ- ತಾಯಿಯು ತನ್ನ ತಾಯಿಗೆ ಹಾಕಿದ ಗರ್ಭಸ್ತಂಭ ಹಾಗೂ ವಿಷದ ಪರಿಣಾಮವಾಗಿ ಏಳುವರ್ಷ ತಾಯಿಯ ಉದರದಲ್ಲೇ ಇದ್ದನು. ಔರ್ವಮುನಿಯ ಆಶ್ರಮದಲ್ಲೇ ಬಾಹುಕನು ಮೃತನಾದನು. ಅದೇ ಔರ್ವಮುನಿಯಿಂದ ಶಿಕ್ಷಿತನಾದ ಸಗರನು ಹೈಹಯರನ್ನು ನಿಶ್ಶೇಷವಾಗಿ ನಾಶ ಮಾಡಿದನು. ಸಗರಚಕ್ರವರ್ತಿಯು ಸಪ್ತದ್ವೀಪ- ವತಿಯಾದ ಭೂಮಂಡಲವನ್ನು ಪರಿಪಾಲನೆ ಮಾಡಿದನು. ಸುಮತಿ ಮತ್ತು ಕೇಶಿನಿಯರು ಸಗರನ ಪತ್ನಿಯರು. ಇವರೂ ಕೂಡ ಔರ್ವಋಷಿಯನ್ನು ಸೇವೆ ಮಾಡಿದರು. ಆ ಮುನಿಗಳ ಅನುಗ್ರಹದಿಂದ ಸುಮತಿಯು ಅರವತ್ತು ಸಾವಿರ ಕುಮಾರರನ್ನು ಪಡೆದಳು.

ಕೇಶಿನಿ ಅಸಮಂಜಸನೆಂಬ ಮಗನನ್ನೂ ಕೂಡ ಪಡೆದಳು. ಅಸಮಂಜಸನು ಕೆಟ್ಟವನಾದ್ದರಿಂದ ತಂದೆಯು ಆತನನ್ನು ಬಿಟ್ಟನು. ಮುಂದೆ ಅಸಮಂಜಸನ ದುಶ್ಚಟವನ್ನೇ ಅರವತ್ತು ಸಾವಿರ ಬಾಲಕರೂ ಕೂಡ ಅನುಸರಿಸಲು ಅವರಿಂದ ಯಜ್ಞಾದಿಷಟ್ಕರ್ಮಗಳೆಲ್ಲ ನಾಶವಾದವು. ಆಗ ದೇವತೆಗಳು ಕಪಿಲಮಹಾಮುನಿಗೆ ಶರಣಾಗತರಾದರು. ಆಗ ಕಪಿಲಮಹರ್ಷಿಯು ಸ್ವಲ್ಪಕಾಲದಲ್ಲಿಯೇ ಅರವತ್ತು ಸಾವಿರ ಮಕ್ಕಳು ನಾಶ ಹೊಂದುತ್ತಾರೆಂದು ಅಭಯ ದಾನ ಮಾಡಿದನು. ಕೆಲವು ಸಮಯದಲ್ಲಿಯೇ ಸಗರ ಚಕ್ರವರ್ತಿಯು ಅಶ್ವಮೇಧಯಾಗವನ್ನು ಕೈಗೊಂಡನು. ಅರವತ್ತು ಸಾವಿರ ಮಕ್ಕಳು ಆ ಕುದುರೆಯ ರಕ್ಷಣೆಗಾಗಿ ನಿಂತರು. ಆ ಅಶ್ವವನ್ನು ಇಂದ್ರನು ಅಪಹರಿಸಿ, ಬಿಲವನ್ನು ಪ್ರವೇಶಿಸಿ- ದನು. ಆಗ ಸಗರಪುತ್ರರು ಭೂಮಿಯಲ್ಲಿ ಎಲ್ಲಿಯೂ ಅಶ್ವವನ್ನು ಕಾಣದೇ ಪಾತಾಳವನ್ನು ಶೋಧಿಸಬೇಕೆಂದು ಯೋಜನಪ್ರಮಾಣ ಭೂಮಿಯನ್ನು ಅಗೆದರು. ಪಾತಾಳವನ್ನು ಪ್ರವೇಶಮಾಡಿ, ಅಲ್ಲಿ ಶರತ್ಕಾಲದ ಸೂರ್ಯನಂತೆ ಕಂಗೊಳಿಸುತ್ತಿದ್ದ ಕಪಿಲಋಷಿಯನ್ನು ಕಂಡು ಇವನೇ ಕುದುರೆಯನ್ನು ಕದ್ದಿದ್ದಾನೆಂದು ಅವನ ಮೇಲೆ ಯುದ್ಧಕ್ಕೆ ಹೊರಟರು. ಆಗ ಕಪಿಲಋಷಿಯು ಒಮ್ಮೆ ಕಣ್ಣು ತೆರೆದನು. ಅದರಿಂದಲೇ ಎಲ್ಲರೂ ಸುಟ್ಟು ಭಸ್ಮರಾದರು. ಇವರು ಅಗೆದ ಕಾರಣದಿಂದಲೇ ಸಮುದ್ರಕ್ಕೆ ಸಾಗರ ಎಂದು ಹೆಸರು ಬಂದಿತು.

ರಾಜಾನಂ ಚ ಪೃಥುಂ ವೈನ್ಯಂ ಮೃತಂ ಶುಶ್ರುಮ ಸೃಂಜಯ |
ಯಮಭ್ಯಷಿಂಚನ್ ಸಂಭೂಯ ಮಹಾರಣ್ಯೇ ಮಹರ್ಷಯಃ ॥134॥

ವೇನನ ಮಗನೇ ಪೃಥುಚಕ್ರವರ್ತಿ. ಇವನೂ ಸಹ ಮೃತನಾದನೆಂದು ನಾವು ಕೇಳಿದ್ದೇವೆ. ಅನೇಕ ಮಹರ್ಷಿಗಳು ಗೊಂಡಾರಣ್ಯದಲ್ಲಿ ಒಂದಾಗಿ ಸೇರಿ ಈ ಪೃಥು- ಚಕ್ರವರ್ತಿಯನ್ನು ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಿದರು.

ಪ್ರಥಯಿಷ್ಯತಿ ವೈ ಲೋಕಾನ್ ಪೃಥುರಿತ್ಯೇವ ಶಬ್ದಿತಃ |
ಕ್ಷತಾಚ್ಚ ನಸ್ತತ್ರಾಯತೀತಿ ಸ ತಸ್ಮಾತ್ ಕ್ಷತ್ರಿಯಃ ಸ್ಮೃತಃ ॥135॥

ಒಳ್ಳೆಯ ಧರ್ಮಮರ್ಯಾದೆಗಳನ್ನು ಲೋಕದಲ್ಲಿ ಸ್ಥಾಪನೆ ಮಾಡುತ್ತಾನೆ. ಆದ್ದ- ರಿಂದ ಇವನನ್ನು `ಪೃಥು' ಎಂದೇ ಕರೆಯಬೇಕೆಂದು ಎಲ್ಲ ಋಷಿಗಳು ಇವನನ್ನು `ಪೃಥು' ಎಂದರು. ಆಪತ್ತಿನಿಂದ ಎಲ್ಲರನ್ನು ರಕ್ಷಣೆ ಮಾಡುತ್ತಾನಾದ್ದರಿಂದ ಇವನು ಉತ್ತಮಕ್ಷತ್ರಿಯನಾಗಿದ್ದನು.

ಪೃಥುಂ ವೈನ್ಯಂ ಪ್ರಜಾ ದೃಷ್ಟ್ವಾ ರಕ್ತಾಃ ಸ್ಮೇತಿ ಯದಬ್ರುವನ್ |
ತತೋ ರಾಜೇತಿ ನಾಮಾಸ್ಯ ಅನುರಾಗಾದಜಾಯತ ॥136॥

ವೇನರಾಜನ ಮಗನಾದ ಪೃಥುಚಕ್ರವರ್ತಿಯನ್ನು ನೋಡಿದ ಕೂಡಲೇ ಪ್ರಜೆ- ಗಳೆಲ್ಲರೂ ``ನಮಗೆ ಪೃಥು ಎಂದರೆ ಇಷ್ಟ '' ಎಂದು ಹೇಳುತ್ತಿದ್ದರು. ಈ ಅನು- ರಾಗದ ಕಾರಣದಿಂದಲೇ ಅವನಿಗೆ ರಾಜಾ ಎಂಬ ಹೆಸರು ಅನ್ವರ್ಥಕವಾಯಿತು.

ಅಕೃಷ್ಟಪಚ್ಯಾ ಪೃಥಿವೀ ಪುಟಕೇ ಪುಟಕೇ ಮಧು |
ಸರ್ವಾ ದ್ರೋಣದುಘಾ ಗಾವೋ ವೈನ್ಯಸ್ಯಾಸನ್ ಪ್ರಶಾಸತಃ ॥137॥

ಪೃಥುರಾಜನು ರಾಜ್ಯಭಾರವನ್ನು ಮಾಡುತ್ತಿರುವಾಗ ಕೃಷಿಯನ್ನು ಮಾಡದೇ ಇದ್ದರೂ ಕೂಡ ಸಮೃದ್ಧವಾಗಿ ಬೆಳೆಯು ಬೆಳೆಯುತ್ತಿತ್ತು. ಪ್ರತಿಯೊಂದು ವೃಕ್ಷದ ಕೊಟರೆಗಳಲ್ಲಿ ಜೇನು ಕಟ್ಟಿರುತ್ತಿತ್ತು. ಹಸುಗಳು ಕೊಳಗದಷ್ಟು ಹಾಲುಗಳನ್ನು ನೀಡುತ್ತಿದ್ದವು. ಹೀಗೆ ಪೃಥಿವಿಯನ್ನು ಪಾಲನೆ ಮಾಡಿದನು.

ಟಿಪ್ಪಣಿ- ಪುಟಕೇ ಪುಟಕೇ ಮಧು ಇತ್ಯತ್ರ ಪುಟಕೇ ಪುಟಕೇ ವೃಕ್ಷಾದೀನಾಂ ಕೋಟರೇ ಕೋಟರೇ | `ಪುಟಕೇ ಪುಟಕೇ' ವೃಕ್ಷಗಳ ಪ್ರತಿಯೊಂದು ಕೊಟರೆಗಳಲ್ಲಿ.

ಅರೋಗಾಃ ಸರ್ವಸಿದ್ಧಾರ್ಥಾ ಮನುಷ್ಯಾ ಅಕುತೋಭಯಾಃ |
ಯಥಾಭಿಕಾಮಮವಸನ್ ಕ್ಷೇತ್ರೇಷು ಚ ಗೃಹೇಷು ಚ ॥138॥

ಅವನ ರಾಜ್ಯಪರಿಪಾಲನೆಯಲ್ಲಿ ಯಾರೇ ಒಬ್ಬ ಮನುಷ್ಯರಿಗೆ ಖಾಯಿಲೆಗಳು ಇರಲಿಲ್ಲ. ಪ್ರತಿಯೊಬ್ಬರೂ ದೃಢಕಾಯರಾಗಿದ್ದರು. ತಮಗೆ ಆವಶ್ಯಕವಾದ ಎಲ್ಲಾ ಅಭಿಲಾಷೆಗಳನ್ನು ಪಡೆದುಕೊಳ್ಳುತ್ತಿದ್ದರು. ಯಾವುದೇ ಭಯವು ಅವರಿಗಿರಲಿಲ್ಲ. ಆ ಪೃಥುರಾಜನ ಪ್ರಜೆಗಳು ತಾವು ಇರುವ ಕ್ಷೇತ್ರಗಳಲ್ಲಿ ಮನೆಗಳಲ್ಲಿ ನಿಶ್ಚಿಂತೆಯಾಗಿ ವಾಸ ಮಾಡುತ್ತಿದ್ದರು.

ಆಪಃ ಸಂಸ್ತಂಭಿರೇ ಯಸ್ಯ ಸಮುದ್ರಸ್ಯ ಯಿಯಾಸತಃ |
ಸರಿತಶ್ಚಾನುದೀರ್ಯಂತ ಧ್ವಜಸಂಗಶ್ಚ ನಾಭವತ್ ॥139॥

ಅವನು ಸಮುದ್ರದ ಮೇಲೆ ತೆರಳುತ್ತಿರುವಾಗ ಜಲವೂ ಕೂಡ ಕಲ್ಲಿನಂತೆ ಅವನಿಗೆ ಅನುಕೂಲ ಮಾಡಿಕೊಡುತ್ತಿತ್ತು. ಅವನು ತನ್ನ ಬಿಲ್ಲಿನ ತುದಿಗಳಿಂದ ಬೆಟ್ಟಗಳನ್ನೇ ಕಡಿದು ಭೂಮಿಯನ್ನು ಸಮತಟ್ಟನ್ನಾಗಿ ಮಾಡಿದನು.

ಹೈರಣ್ಯಾಂ ತ್ರಿನಲೋತ್ಸೇಧಾನ್ ಪರ್ವತಾನೇಕವಿಂಶತಿಮ್ |
ಬ್ರಾಹ್ಮಣೇಭ್ಯೋ ದದೌ ರಾಜಾ ಯೋಽಶ್ವಮೇಧೇ ಮಹಾಮಖೇ ॥140॥

ಅವನು ಒಂದು ಅಶ್ವಮೇಧಯಾಗವನ್ನು ನಡೆಸಿದನು. ಆಗ ಮೂರು ಆಳು- ಗಳಷ್ಟು ಎತ್ತರದಲ್ಲಿರುವ ಸುವರ್ಣಪರ್ವತಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.

ಸ ಚೇನ್ಮಮಾರ ಸೃಂಜಯ ಚತುರ್ಭದ್ರತರಸ್ತ್ವಯಾ |
ಪುತ್ರಾತ್ ಪುಣ್ಯತರಶ್ಚೈವ ಮಾ ಪುತ್ರಮನುತಪ್ಯಥಾಃ ॥141॥

ಇಂಥ ಶ್ರೇಷ್ಠನಾದ ಪೃಥುರಾಜನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಗಳಲ್ಲಿ ನಿನಗಿಂತಲೂ ಅತ್ಯಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ -ನಾಗಿದ್ದನು. ಅವನೇ ಮರಣವನ್ನು ಹೊಂದಿದ ಮೇಲೆ ಉಳಿದವರ ವಿಷಯದಲ್ಲಿ ಏಕೆ ದುಃಖವನ್ನು ಅನುಭವಿಸುವಿ.

ವ್ಯಾಖ್ಯಾನ - ಪೃಥುರಾಜನ ಪತ್ನಿಯೇ ಅರ್ಚಿ. ಈಕೆಯಲ್ಲಿ ಅಂತರ್ಧಾನನೆಂಬ ಮಗನು ಹುಟ್ಟಿದನು. ಇವನ ಮೊಮ್ಮಗನು ಪ್ರಾಚೀನಬರ್ಹಿ. ಇವನ ತಂದೆಯಾದ ವೇನನು ನಾಸ್ತಿಕನು ದುಷ್ಟನು ಆಗಿದ್ದನು. ಋಷಿಗಳೇ ಹೂಂಕಾರದಿಂದ ಇವನನ್ನು ಕೊಂದರು.

ಮುಂದೆ ಯಾರು ರಾಜನಾಗ ಬೇಕು ಎಂದು ವಿಚಾರ ಮಾಡಿದಾಗ, ಆ ವೇನನ ತೊಡೆಯನ್ನು ಮಥನ ಮಾಡಿದರು. ಆಗ ಪೃಥು ಹುಟ್ಟಿದನು. ಅವನು ಅತ್ಯಂತ ಧರ್ಮಿಷ್ಠನಾದನು. ಎಲ್ಲ ಋಷಿಮುನಿಗಳ ಅನುಗ್ರಹಕ್ಕೆ ಪಾತ್ರನಾದನು. ಸಮಗ್ರ ಭೂಮಂಡಲವನ್ನು ಸಮತಟ್ಟನ್ನಾಗಿ ಮಾಡಿದನು. ಅವನಿಂದಲೇ ಈ ಭೂಮಿಗೆ `ಪಾರ್ಥವ' ಎಂಬ ಹೆಸರು ಬಂದಿತು.

ಕಿಂ ವೈ ತೂಷ್ಣೀಂ ಧ್ಯಾಯಸಿ ಸೃಂಜಯ ತ್ವಂ
ನ ಮೇ ರಾಜನ್ ವಾಚಮಿಮಾಂ ಶೃಣೋಷಿ |
ನ ಚೇನ್ಮೋಘಂ ವಿಪ್ರಲಪ್ತಂ ಮಯೇದಂ
ಪಥ್ಯಂ ಮುಮೂರ್ಷೋರಿವ ಸಮ್ಯಗುಕ್ತಮ್ ॥142॥

ಸೃಂಜಯನೇ! ನಾನಿಷ್ಟು ಹೇಳುತ್ತಿದ್ದರೂ ಕೂಡ ನೀನು ಸುಮ್ಮನೆ ಕುಳಿತು ಏನನ್ನು ಯೋಚನೆ ಮಾಡುತ್ತಿರುವಿ? ನನ್ನ ಮಾತನ್ನೇಕೆ ಕೇಳುತ್ತಿಲ್ಲ? ಸಾಯುತ್ತಿರುವ ಮನುಷ್ಯನಿಗೆ ಪಥ್ಯವು ಹೇಗೆ ವ್ಯರ್ಥವಾಗುತ್ತದೋ, ಅದರಂತೆ ನಾನು ಹೇಳುತ್ತಿರುವ ಹಿತವಾಕ್ಯಗಳು ನಿನ್ನಲ್ಲಿ ವ್ಯರ್ಥವಾಗುವುದಿಲ್ಲ ತಾನೇ?

ಶೃಣೋಮಿ ತೇ ನಾರದ ವಾಚಮೇನಾಂ
ವಿಚಿತ್ರಾರ್ಥಾಂ ಸ್ರಜಮಿವ ಪುಣ್ಯಗಂಧಾಮ್ |
ರಾಜರ್ಷೀಣಾಂ ಪುಣ್ಯಕೃತಾಂ ಮಹಾತ್ಮನಾಂ
ಕೀರ್ತಯ ಯುಕ್ತಾಂ ಶೋಕನಿರ್ಣಾಶನಾರ್ಥಮ್ ॥143॥

ಸೃಂಜಯ ಮಹಾತ್ಮರಾದ ನಾರದರೇ! ಶ್ರದ್ಧೆಯಿಂದ ನಿಮ್ಮ ಮಾತನ್ನು ಕೇಳುತ್ತಿ -ರುವೆನು. ಆ ನಿಮ್ಮ ಮಾತುಗಳು ವಿಚಿತ್ರಾರ್ಥಗಳಿಂದ ಸಹಿತವಾಗಿವೆ. ಪವಿತ್ರವಾದ ಗಂಧದಿಂದ ಕೂಡಿರುವ ಮಾಲೆಯಂತೆ ಅದನ್ನು ನಾನು ಸಂತೋಷದಿಂದ ಸ್ವೀಕರಿಸಿರುವೆ. ಪುಣ್ಯಾತ್ಮರಾದ ಎಲ್ಲಾ ರಾಜರ್ಷಿಗಳ ಕೀರ್ತಿಯನ್ನು ಕೊಂಡಾಡುವ, ಆ ನಿಮ್ಮ ಮಾತುಗಳು ನನ್ನ ದುಃಖವನ್ನು ಸಂಪೂರ್ಣವಾಗಿ ಪರಿಹರಿಸಿವೆ.

ನ ತೇ ಮೋಘಂ ವಿಪ್ರಲಪ್ತಂ ಮಹರ್ಷೇ
ದೃಷ್ಟ್ವೈವ ತ್ವಾಂ ನಾರದಾಹಂ ವಿಶೋಕಃ |
ಶುಶ್ರೂಷೇ ತೇ ವಚನಂ ಬ್ರಹ್ಮವಾದಿನ್
ನ ತೇ ತೃಪ್ಯಾಮ್ಯಮೃತಸ್ಯೇವ ಪಾನಾತ್ ॥144॥

ಮಹರ್ಷಿಗಳೇ ! ತಾವು ನನಗೆ ಹೇಳಿದ ಮಾತುಗಳು ಸರ್ವಥಾ ವ್ಯರ್ಥವಾಗು- ವುದಿಲ್ಲ. ತಮ್ಮನ್ನು ನೋಡಿದಾಕ್ಷಣವೇ ನನ್ನ ದುಃಖವೆಲ್ಲವೂ ಪರಿಹಾರವಾಗಿದೆ. ಬ್ರಹ್ಮಜ್ಞಾನಿಗಳೇ ! ಅಮೃತಪಾನದಂತಿರುವ ನಿಮ್ಮ ಮಾತುಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಾಗುತ್ತಿಲ್ಲ. ಪುನಃ ಕೇಳಬೇಕೆನಿಸುತ್ತಿದೆ.

ಅಮೋಘದರ್ಶಿನ್ಮಮ ಚೇತ್ ಪ್ರಸಾದಂ
ಸುತಾಘದಗ್ಧಸ್ಯ ವಿಭೋ ಪ್ರಕುರ್ಯಾಃ |
ಮೃತಸ್ಯ ಸಂಜೀವನಮದ್ಯ ಮೇ ಸ್ಯಾತ್
ತವ ಪ್ರಸಾದಾತ್ ಸುತಸಂಗಮಶ್ಚ ॥145॥

ತಮ್ಮ ದರ್ಶನವೇ ಅಮೋಘವಾಗಿದೆ. ನಾನು ಪುತ್ರನ ವಿಯೋಗದಿಂದ ದುಃಖ -ಸಂತಪ್ತನಾಗಿರುವೆನು. ನೀವು ಪ್ರಸನ್ನರಾದಲ್ಲಿ ಸತ್ತು ಹೋದ ಆ ಮಗನು ಜೀವಂತ- ವಾಗಿ ಪುನಃ ಬರುತ್ತಾನೆ. ಅಂಥ ಶಕ್ತಿ ನಿಮ್ಮಲ್ಲಿದೆ. ತಮ್ಮ ಪ್ರಸಾದದಿಂದ ನನಗೆ ಪುನಃ ಪುತ್ರ ಸಮಾಗಮವು ಉಂಟಾಗುವಂತೆ ಕರುಣಿಸಿರಿ.

ಯಸ್ತೇ ಪುತ್ರೋ ದಯಿತೋಽಯಂ ವಿಜಾತಃ
ಸ್ವರ್ಣಷ್ಠೀವೀ ಯಮದಾತ್ ಪರ್ವತಸ್ತೇ |
ಪುನಸ್ತೇ ತಂ ಪುತ್ರಮಹಂ ದದಾಮಿ
ಹಿರಣ್ಯನಾಭಂ ವರ್ಷಸಹಸ್ರಿಣಂ ಚ ॥146॥

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ತ್ರಿಂಶೋಽಧ್ಯಾಯಃ ॥30॥

ನಾರದರು ಸೃಂಜಯನೇ! ನಿನಗೆ ಪರ್ವತನು ಅನುಗ್ರಹಿಸಿದ ಸ್ವರ್ಣಷ್ಠೀವಿ ಎಂಬ ಮಗನು ಮೃತನಾಗಿದ್ದಾನೆ. ಅವನ ದೇಹವಷ್ಟೇ ನಿನ್ನ ಮನೆಯಲ್ಲಿ ಮಲಗಿದೆ. ಈ ದೇಹದಲ್ಲಿ ಪುನಃ ಅವನು ಬಂದು ನೆಲೆಸುವಂತೆ ಮಾಡುತ್ತೇನೆ. ಅವನನ್ನು ಬದುಕಿಸುತ್ತೇನೆ. ಅವನು ಸ್ವರ್ಣಸಮಾನವಾದ ದೇಹಕಾಂತಿಯಿಂದ ಸಾವಿರವರ್ಷ- ಕಾಲ ಬದುಕುತ್ತಾನೆ. ಹೀಗೆ ಆ ಸೃಂಜಯನಿಗೆ ನಾರದರು ಅನುಗ್ರಹವನ್ನು ಮಾಡಿ- ದರು.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 30ನೆಯ ಅಧ್ಯಾಯವು ಮುಗಿಯಿತು.

****

31. ಮೂವತ್ತೊಂದನೆಯ ಅಧ್ಯಾಯ

ನಾರದ ಹಾಗೂ ಪರ್ವತರ ಕಥೆಯನ್ನು ಶ್ರೀ ಕೃಷ್ಣನು ಧರ್ಮರಾಜನಿಗೆ ತಿಳಿಸುತ್ತಿದ್ದಾನೆ.

ಯುಧಿಷ್ಠಿರಃ

ಸ ಕಥಂ ಕಾಂಚನಷ್ಠೀವೀ ಸೃಂಜಯಸ್ಯ ಸುತೋಽಭವತ್ |
ಪರ್ವತೇನ ಕಿಮರ್ಥಂ ಚ ದತ್ತಃ ಕೇನ ಮಮಾರ ಚ ॥1॥

ಶ್ರೀಕೃಷ್ಣನೇ! ಸ್ವರ್ಣಷ್ಠೀವಿಯು ಆ ಸೃಂಜಯನಿಗೆ ಹೇಗೆ ಮಗನಾದನು? ಪರ್ವತ ಋಷಿಯು ಸ್ವರ್ಣಷ್ಠೀವಿಯನ್ನು ಸೃಂಜಯನಿಗೆ ಯಾವ ಕಾರಣಕ್ಕಾಗಿ ನೀಡಿ- ದನು? ಯಾವ ಕಾರಣಕ್ಕಾಗಿ ಆ ಸ್ವರ್ಣಷ್ಠೀವಿಯು ಮರಣವನ್ನು ಹೊಂದಿದನು?

ಯದಾ ವರ್ಷಸಹಸ್ರಾಯುಸ್ತದಾ ಭವತಿ ಮಾನವಃ |

ಕಥಮಪ್ರಾಪ್ತಕೌಮಾರಃ ಸೃಂಜಯಸ್ಯ ಸುತೋ ಮೃತಃ ॥2॥
ಆ ಕಾಲದಲ್ಲಿ ಪ್ರತಿಯೊಬ್ಬ ಮಾನವನು ಸಾವಿರ ವರ್ಷಗಳ ಕಾಲ ಜೀವಿಸು- ತ್ತಿದ್ದನು. ಹೀಗಿದ್ದರೂ ಕೌಮಾರಾವಸ್ಥೆಯನ್ನು ಹೊಂದುವ ಮೊದಲೇ ಆ ಸೃಂಜಯನ ಮಗನು ಏಕೆ ಮರಣವನ್ನು ಹೊಂದಿದನು?
ಉತಾಹೋ ನಾಮಮಾತ್ರಂ ವೈ ಸುವರ್ಣಷ್ಠೀವಿನೋಽಭವತ್ |
ತಥ್ಯಂ ವಾ ಕಾಂಚನಷ್ಠೀವೀತ್ಯೇತದಿಚ್ಛಾಮಿ ವೇದಿತುಮ್ ॥3॥
ಅವನಿಗೆ `ಸ್ವರ್ಣಷ್ಠೀವಿ' ಎಂಬುದು ಕೇವಲ ಹೆಸರು ಮಾತ್ರವೋ? ಅಥವಾ ಸಕಾರಣಕವಾಗಿ ಆ ಹೆಸರು ಬಂದಿದೆಯೋ? ಈ ವಿಷಯವನ್ನು ತಮ್ಮಿಂದ ತಿಳಿ- ಯಲು ಬಯಸುತ್ತೇನೆ.
ಶ್ರೀಭಗವಾನ್
ಅತ್ರ ತೇ ಕಥಯಿಷ್ಯಾಮಿ ಯಥಾವೃತ್ತಂ ಜನೇಶ್ವರ |
ನಾರದಃ ಪರ್ವತಶ್ಚೈವ ಪ್ರಾಗ್ ಋಷೀ ಲೋಕಪೂಜಿತೌ ॥4॥
ಶ್ರೀಕೃಷ್ಣ ಜನೇಶ್ವರನೇ ! ಈ ಸಂದರ್ಭದಲ್ಲಿ ಅವನ ಚರಿತ್ರೆಯನ್ನು ನಿನಗೆ ತಿಳಿಸುತ್ತೇನೆ ಕೇಳು. ನಾರದ ಹಾಗೂ ಪರ್ವತ ಇವರಿಬ್ಬರು ಮಹರ್ಷಿಗಳು ಲೋಕ- ದಲ್ಲಿ ಎಲ್ಲರಿಂದಲೂ ಪೂಜಿತರಾದವರು.
ಮಾತುಲೋ ಭಾಗಿನೇಯಶ್ಚ ದೇವಲೋಕಾದಿಹಾಗತೌ |
ವಿಹರ್ತುಕಾಮೌ ಸಂಪ್ರೀತ್ಯಾ ಮಾನುಷೇಷು ಪುರಾ ಪ್ರಭೂ ॥5॥
ಅವರಿಬ್ಬರಲ್ಲಿ ನಾರದರು ಸೋದರಮಾವ ಆಗಬೇಕು. ಪರ್ವತಋಷಿಯು ಸೋದರಳಿಯ ಆಗಬೇಕು. ಇವರಿಬ್ಬರು ಒಮ್ಮೆ ಭೂಲೋಕದಲ್ಲಿ ಸಂಚಾರ ಮಾಡ- ಬೇಕೆಂಬ ಅಪೇಕ್ಷೆಯಿಂದ ದೇವಲೋಕದಿಂದ ಭೂಲೋಕಕ್ಕೆ ಆಗಮಿಸಿದರು.
ಹವಿಃಪವಿತ್ರಭೋಜ್ಯೇನ ದೇವಭೋಜ್ಯೇನ ಚೈವ ಹ |
ನಾರದೋ ಮಾತುಲಶ್ಚೈವ ಭಾಗಿನೇಯಶ್ಚ ಪರ್ವತಃ ॥6॥
ಸೋದರಮಾವ ಹಾಗೂ ಅಳಿಯಂದಿರಾದ ನಾರದರು ಹಾಗೂ ಪರ್ವತ- ಋಷಿಯು ಭೂಲೋಕದಲ್ಲಿ ದೊರೆಯುವ ಹವಿಸ್ಸನ್ನು ಪವಿತ್ರವಾದ ದೇವತೆಗಳು ಉಪಯೋಗಿಸುವ ಆಹಾರಪದಾರ್ಥವನ್ನು ತಿನ್ನುತ್ತಾ ಭೂಲೋಕದಲ್ಲಿ ಸಂಚಾರ ಮಾಡಿದರು.
ತಾವುಭೌ ತಪಸೋಪೇತಾವವನೀತಲಚಾರಿಣೌ |
ಭುಂಜಾನೌ ಮಾನುಷಾನ್ ಭೋಗಾನ್ ಯಥಾವತ್
ಪರ್ಯಧಾವತಾಮ್ ॥7॥
ಅವರಿಬ್ಬರು ಭೂಮಿಯಲ್ಲಿ ತಪಸ್ಸನ್ನು ಆಚರಿಸುತ್ತಿದ್ದರು. ಮನುಷ್ಯರು ಉಪ- ಯೋಗಿಸುವ ಆಹಾರಗಳನ್ನೇ ತಿನ್ನುತ್ತಿದ್ದರು. ಭೂಮಿಯಲ್ಲೆಡೆ ಸಂಚಾರ ಮಾಡುತ್ತಿ- ದ್ದರು.
ಪ್ರೀತಿಮಂತೌ ಮುದಾ ಯುಕ್ತೌ ಸಮಯಂ ತತ್ರ ಚಕ್ರತುಃ |
ಯೋ ಭವೇದ್ ಹೃದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ॥8॥
ಅನ್ಯೋನ್ಯಸ್ಯ ಸ ಆಖ್ಯೇಯೋ ಮೃಷಾ ಶಾಪೋಽನ್ಯಥಾ ಭವೇತ್ |
ತೌ ತಥೇತಿ ಪ್ರತಿಜ್ಞಾಯ ಮಹರ್ಷೀ ಲೋಕಪೂಜಿತೌ |
ಸೃಂಜಯಂ ಶ್ವೈತ್ಯಮಭ್ಯೇತ್ಯ ರಾಜಾನಮಿದಮೂಚತುಃ ॥9॥
ಅವರಿಬ್ಬರು ಪರಸ್ಪರಪ್ರೀತಿಯುಳ್ಳವರಾಗಿದ್ದರು. ಒಮ್ಮೆ ತಮ್ಮ-ತಮ್ಮಲ್ಲಿಯೇ ಒಂದು ನಿರ್ಬಂಧವನ್ನು ಮಾಡಿಕೊಂಡರು. ``ತಮ್ಮಲ್ಲಿ ಒಬ್ಬರಿಗೊಬ್ಬರು ಯಾವುದೇ ವಿಚಾರವನ್ನು ಮುಚ್ಚಿಡಬಾರದು. ಅದು ಒಳ್ಳೆಯದೇ ಆಗಿರಲಿ ಕೆಟ್ಟದ್ದೇ ಆಗಿರಲಿ. ತಮ್ಮ ಮನಸ್ಸಿನಲ್ಲಿ ಹುಟ್ಟಿದ ಸಂಕಲ್ಪವನ್ನು ಮತ್ತೊಬ್ಬನಿಗೆ ಹೇಳಬೇಕು. ಹಾಗೇ ಹೇಳದಿದ್ದರೆ, ಅಥವಾ ಸುಳ್ಳು ಹೇಳಿದರೆ ಅವನು ಶಾಪಕ್ಕೆ ಭಾಗಿಯಾಗುತ್ತಾನೆ'' ಎಂದು.
ಹೀಗೆ ಲೋಕಪೂಜಿತರಾದ ಮಹರ್ಷಿಗಳಾದ ನಾರದರು ಮತ್ತು ಪರ್ವತರು ಹಾಗೆಯೇ ಆಗಲೆಂದು ಪರಸ್ಪರವಾಗಿ ಒಪ್ಪಿಕೊಂಡರು. ಪ್ರತಿಜ್ಞಾವಾಕ್ಯವನ್ನು ಅನು ಸರಿಸಿದರು. ಅನಂತರ ರಾಜಶ್ರೇಷ್ಠನಾದ, ಶ್ವೇತರಾಜನ ಮಗನಾದ ಸೃಂಜಯನ ಬಳಿ ತೆರಳಿ ಹೀಗೆ ಹೇಳಿದರು -
ಆವಾಂ ಭವತಿ ವತ್ಸ್ಯಾವಃ ಕಂಚಿತ್ಕಾಲಂ ಹಿತಾಯ ತೇ |
ಯಥಾವತ್ ಪೃಥಿವೀಪಾಲ ಆವಯೋಃ ಪ್ರಗುಣೀಭವ ॥10॥
ತಥೇತಿ ಕೃತ್ವಾ ತೌ ರಾಜಾ ಸತ್ಕೃತ್ಯೋಪಚಚಾರ ಹ |
ಮಹಾರಾಜನೇ! ನಾವಿಬ್ಬರೂ ನಿನಗೆ ಹಿತವನ್ನು ಬಯಸುತ್ತೇವೆ. ಅದಕ್ಕಾಗಿ ಕೆಲವು ಕಾಲದ ತನಕ ನಿನ್ನ ಸಮೀಪದಲ್ಲಿ ವಾಸಮಾಡುತ್ತೇವೆ. ನಾವು ಎಷ್ಟು ದಿವಸಗಳ ಕಾಲ ಇರುತ್ತೇವೋ, ಅಲ್ಲಿಯ ತನಕ ನೀನು ನಮಗೆ ಅನುಕೂಲವಾದ ಸೌಕರ್ಯಗಳನ್ನು ಕಲ್ಪಿಸಿಕೊಡು. ಹೀಗೆ ನಾರದ ಹಾಗೂ ಪರ್ವತನ ಮಾತನ್ನು ಕೇಳಿದ ರಾಜನು ಬಹಳ ಸಂತೋಷಪಟ್ಟನು. ಹಾಗೆಯೇ ಆಗಲಿ ಎಂದನು. ಅವರನ್ನು ಸತ್ಕಾರ ಮಾಡಿ ಎಲ್ಲಾ ಉಪಚಾರಗಳನ್ನು ಮಾಡಿ, ಸ್ವಾಗತ ಮಾಡಿದನು.
ತತಃ ಕದಾಚಿತ್ ತೌ ರಾಜಾ ಮಹಾತ್ಮಾನೌ ತಥಾಗತೌ |
ಅಬ್ರವೀತ್ ಪರಮಪ್ರೀತಃ ಸುತೇಯಂ ವರವರ್ಣಿನೀ ॥11॥
ಏಕೈವ ಮಮ ಕನ್ಯೇಷಾ ಯುವಾಂ ಪರಿಚರಿಷ್ಯತಿ |
ದರ್ಶನೀಯಾನವದ್ಯಾಂಗೀ ಶೀಲವೃತ್ತಸಮನ್ವಿತಾ ॥12॥
ಸುಕುಮಾರೀ ಕುಮಾರೀ ಚ ಪದ್ಮಕಿಂಜಲ್ಕಸನ್ನಿಭಾ ॥
ಸ್ವಲ್ಪ ಕಾಲವು ಕಳೆದ ಮೇಲೆ ಋಷಿಗಳ ವಿಷಯದಲ್ಲಿ ಪರಮಪ್ರೀತನಾದ ಸೃಂಜಯನು ಮಹಾತ್ಮರಾದ ನಾರದ ಹಾಗೂ ಪರ್ವತರ

ಬಳಿ ತೆರಳಿದನು. ಬಹಳ ಸಂತೋಷದಿಂದ ಅವರ ಬಳಿ ಹೀಗೆ ಹೇಳಿದನು -
ಮಹರ್ಷಿಗಳೇ! ರೂಪಲಾವಣ್ಯಗಳಿಂದ ಕಂಗೊಳಿಸುತ್ತಿರುವ ಈ ಹೆಣ್ಣುಮಗಳು ನನ್ನ ಏಕೈಕಪುತ್ರಿ. ಇವಳು ದೇವಕನ್ಯೆಯಂತಿದ್ದಾಳೆ. ಒಳ್ಳೆಯ ಶೀಲ ಹಾಗೂ ಸ್ವಭಾವಗಳನ್ನು ಹೊಂದಿದ್ದಾಳೆ. ಕಮಲದ ಕುಸುರಿನಂತೆ ಕಾಂತಿಯುಕ್ತಳಾಗಿದ್ದಾಳೆ. ಸುಕುಮಾರಿ ಎಂಬ ಹೆಸರಿನ ಈ ಕುಮಾರಿಯು ತಮ್ಮ ಬಳಿಯಲ್ಲಿದ್ದು ತಮ್ಮ ಸೇವೆ- ಯನ್ನು ಮಾಡಲು ಬಯಸುತ್ತಾಳೆ.
ಪರಮಂ ಸೌಮ್ಯ ಇತ್ಯುಕ್ತಸ್ತಾಭ್ಯಾಂ ರಾಜಾ ಶಶಾಸ ತಾಮ್ |
ಕನ್ಯೇ ವಿಪ್ರಾವುಪಚರ ದೇವವತ್ ಪಿತೃವಚ್ಚ ಹ ॥13॥
ಸೃಂಜಯನ ಮಾತುಗಳನ್ನು ಕೇಳಿ ಇಬ್ಬರು ಮುನಿಗಳು `ಬಹಳ ಸಂತೋಷ ಹಾಗೆಯೇ ಆಗಲಿ' ಎಂದು ಒಪ್ಪಿದರು. ಆಗ ರಾಜನು ಮಗಳನ್ನು ಕರೆದನು. ಮಗಳೇ! ಇವರಿಬ್ಬರು ಶ್ರೇಷ್ಠ ಮುನಿಗಳಾಗಿದ್ದಾರೆ. ಇವರನ್ನು ದೇವತೆಗಳಂತೆ, ತಂದೆಯಂತೆ ಭಕ್ತಿಯಿಂದ ಸೇವೆಯನ್ನು ಮಾಡು.
ಸಾ ಕು ಕನ್ಯಾ ತಥೇತ್ಯುಕತ್ವ ಪಿತರಂ ಧರ್ಮಚಾರಿಣೀ |
ಯಥಾನಿದೇಶಂ ರಾಜ್ಞಸ್ತೌ ಸತ್ಕೃತ್ಯೋಪಚಚಾರ ಹ ॥14॥
ಆಗ ಆ ಕನ್ಯೆಯು ಹಾಗೆಯೇ ಆಗಲಿ ಎಂದು ಸಂತೋಷದಿಂದ ಹೇಳಿದಳು. ತಂದೆಯ ಆಜ್ಞೆಯಂತೆ ಆ ಇಬ್ಬರು ಮಹರ್ಷಿಗಳನ್ನು ಭಕ್ತಿಯಿಂದ ಉಪಚಾರವನ್ನು ಮಾಡುತ್ತಿದ್ದಳು.
ತಸ್ಯಾಸ್ತಥೋಪಚಾರೇಣ ರೂಪೇಣಾಪ್ರತಿಮೇನ ಚ |
ನಾರದಂ ಹೃಚ್ಛಯಸ್ತೂರ್ಣಂ ಸಹಸೈವಾನ್ವಪದ್ಯತ ॥15॥
ಅವಳು ಮಾಡುತ್ತಿದ್ದ ಉಪಚಾರಗಳಿಂದ ಮತ್ತು ಅವಳಲ್ಲಿರುವ ಅಪ್ರತಿಮವಾದ ರೂಪಲಾವಣ್ಯದಿಂದ ನಾರದರ ಮನಸ್ಸು ಕದಲಿತು. ಅವರ ಮನಸ್ಸಿನಲ್ಲಿ ಸುಪ್ತನಾದ ಕಾಮದೇವನು ಎದ್ದುನಿಂತನು.
ವವೃಧೇ ಚ ತತಸ್ತಸ್ಯ ಹೃದಿ ಕಾಮೋ ಮಹಾತ್ಮನಃ |
ಯತಾ ಶುಕ್ಲಸ್ಯ ಪಕ್ಷಸ್ಯ ಪ್ರವೃತ್ತಾವುಡುರಾಟ್ ಶನೈಃ॥16॥
ನಾರದರ ಹೃದಯದಲ್ಲಿ ಕಾಮತಾಪವು ಹೆಚ್ಚಾಯಿತು. ಶುಕ್ಲಪಕ್ಷದ ಚಂದ್ರನಂತೆ ದಿನನಿತ್ಯ ಆ ಕಾಮವು ಬೆಳೆಯುತ್ತಿತ್ತು.
ನಚ ತಂ ಭಾಗಿನೇಯಾಯ ಪರ್ವತಾಯ ಮಹಾತ್ಮನೇ |
ಶಶಂಸ ಮನ್ಮಥಂ ತೀವ್ರಂ ವ್ರೀಡಮಾನಃ ಸ ಧರ್ಮವಿತ್ ॥17॥
ಮಹಾತ್ಮನಾದ ತನ್ನ ಅಳಿಯನಾದ ಪರ್ವತನ ಬಳಿ ತನಗೆ ಆ ಹುಡುಗಿಯ ವಿಷಯದಲ್ಲಿ ಉಂಟಾದ ಕಾಮಭಾವವನ್ನು ಹೇಳಿಕೊಳ್ಳಲು ನಾಚಿಕೆ ಪಟ್ಟರು. ನಾಚಿಕೆಯ ಕಾರಣದಿಂದಾಗಿ ತಮ್ಮ ಹೃದಯದಲ್ಲಿ ಅಡಗಿದ ಕಾಮವಿಷಯವನ್ನು ಹೇಳಲಿಲ್ಲ.
ತಪಸಾ ಚೋಂಗಿತೇನಾಥ ಪರ್ವತೋಽಥ ಬುಬೋಧ ತತ್ |
ಕಾಮಾರ್ತಂ ನಾರದಂ ಕ್ರುದ್ಧಃ ಶಶಾಪೈನಂ ತತೋ ಭೃಶಮ್ ॥18॥
ಆದರೆ ತಮ್ಮ ತಪಸ್ಸಿನ ಪ್ರಭಾವದಿಂದ ಹಾಗೂ ನಾರದರ ಅಂಗಚೇಷ್ಟೆಗಳಿಂದ, ಮುಖದಲ್ಲಿದ್ದ ವಿಕಾರಗಳಿಂದ ಪರ್ವತಮುನಿಗೆ ಎಲ್ಲವೂ ತಿಳಿಯಿತು. ನಾರದರ ಮನಸ್ಸಿನಲ್ಲಿ ಕಾಡುತ್ತಿದ್ದ ಕಾಮಪೀಡೆಯು ಅರ್ಥವಾಯಿತು. ಬಹಳ ಕ್ರುದ್ಧರಾದರು. ಕಾಮಾರ್ಥರಾಗಿದ್ದ ನಾರದರನ್ನು ಕೂಡಲೇ ಶಪಿಸಿಬಿಟ್ಟರು.
ಕೃತ್ವಾ ಸಮಯಮವ್ಯಗ್ರೋ ಭವಾನ್ ವೈ ಸಹಿತೋ ಮಯಾ |
ಯೋ ಭವೇದ್ ಹೃದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ॥19॥
ನೀನು ಹಿಂದೆ ನನ್ನ ಜೊತೆ ಏನೆಂದು ಶಪಥ ಮಾಡಿದ್ದೀ. ಅದನ್ನು ಈಗ ಮರೆತು -ಬಿಟ್ಟೆಯಾ? ಒಳ್ಳೆಯದಾಗಲೀ, ಕೆಟ್ಟದಾಗಲೀ ನಮ್ಮಿಬ್ಬರಲ್ಲಿ ಬಂದ ಸಂಕಲ್ಪವನ್ನು ಕೂಡಲೇ ಮತ್ತೊಬ್ಬರಿಗೆ ತಿಳಿಸಬೇಕು ಎಂದು ಮಾಡಿಕೊಂಡಿದ್ದೇವೆ ಅಲ್ಲವೇ?
ಅನ್ಯೋನ್ಯಸ್ಯ ಸ ಆಖ್ಯೇಯ ಇತಿ ತದ್ ವೈ ಮೃಷಾ ಕೃತಮ್ |
ಭವತಾ ವಚನಂ ಬ್ರಹ್ಮಂಸ್ತಸ್ಮಾದೇತದ್ ವದಾಮ್ಯಹಮ್ ॥20॥
ಇಂಥ ನಮ್ಮಿಬ್ಬರ ನಿರ್ಬಂಧವನ್ನು ನೀನೀಗ ದಾಟಿರುವಿ. ಅದನ್ನು ಸುಳ್ಳು ಮಾಡಿ -ರುವಿ. ಬ್ರಾಹ್ಮಣನೇ ! ಈಗ ನಾನು ನಿನಗೆ ಹೇಳುತ್ತಿದ್ದೇನೆ ಕೇಳು -
ನಹಿ ಕಾಮಂ ಪ್ರವರ್ತಂತಂ ಭವಾನಾಚಷ್ಟ ಮೇ ಪುರಾ |
ಸುಕುಮಾರ್ಯಾಂ ಕುಮಾರ್ಯಾಂ ತೇ ತಸ್ಮಾದೇಷು ಶಪಾಮ್ಯಹಮ್ ॥21॥
ಕುಮಾರಿಯಾದ ಈ ಸುಕುಮಾರಿಯ ವಿಷಯದಲ್ಲಿ ನಿನ್ನ ಮನಸ್ಸಿನಲ್ಲಿ ಕಾಮ- ಭಾವವು ಹುಟ್ಟಿದೆ. ಪ್ರತಿಜ್ಞೆಗೆ ಅನುಗುಣವಾಗಿ ಈ ಕಾಮವಿಕಾರವನ್ನು ನನ್ನೊಡನೆ ನೀನು ಹಂಚಿಕೊಳ್ಳಬೇಕಿತ್ತು. ಆದರೆ ನೀನು ಅದನ್ನು ನನಗೆ ತಿಳಿಸಿಲ್ಲ. ಆದ್ದರಿಂದ ನಿನಗೀಗ ಶಾಪವನ್ನು ನೀಡುತ್ತೇನೆ.
ಬ್ರಹ್ಮವಾದೀ ಗುರುರ್ಯಸ್ಮಾತ್ ತಪಸ್ವೀ ಬ್ರಾಹ್ಮಣಶ್ಚ ಸನ್ |
ಅಕರ್ಷೀಃ ಸಮಯಭ್ರಂಶಮಾವಾಭ್ಯಾಂ ಯಃ ಕೃತೋ ಮಿಥಃ॥22॥
ನೀನು ಬ್ರಹ್ಮಚಾರಿ ಆಗಿರುವಿ. ನನಗೆ ಸೋದರಮಾವನಾಗಿರುವುದರಿಂದ ಗುರುಸ್ಥಾನದಲ್ಲಿರುವಿ. ತಪಸ್ವಿಯಾಗಿರುವಿ, ಬ್ರಾಹ್ಮಣಕುಲದಲ್ಲಿ ಹುಟ್ಟಿರುವಿ. ಇಷ್ಟಿದ್ದರೂ ನಾವಿಬ್ಬರೂ ಮಾಡಿಕೊಂಡ ಶಪಥವನ್ನು ಸುಳ್ಳು ಮಾಡಿರುವಿ.
ಶಪ್ಸ್ಯೇ ತಸ್ಮಾತ್ ಸುಸಂಕ್ರುದ್ಧೋ ಭವಂತಂ ತಂ ನಿಬೋಧ ಮೇ |
ಸುಕುಮಾರೀ ಚ ತೇ ಭಾರ್ಯಾ ಭವಿಷ್ಯತಿ ನ ಸಂಶಯಃ ॥23॥
ವಾನರಂ ಚೈವ ಕನ್ಯಾ ತ್ವಾಂ ವಿವಾಹಾತ್ ಪ್ರಭೃತಿ ಪ್ರಭೋ |
ಸಂದ್ರಕ್ಷ್ಯಂತಿ ನಾರಶ್ಚಾನ್ಯೇ ಸ್ವರೂಪೇಣ ವಿನಾಕೃತಮ್ ॥24॥

ಇದರಿಂದ ನನಗೆ ಬಹಳ ಕೋಪವುಂಟಾಗಿದೆ. ನಾನು ನಿನಗೀಗ ಶಪಿಸುತ್ತಿದ್ದೇನೆ. ನೀನು ಯಾರನ್ನು ಕಾಮಿಸಿರುವೆಯೋ, ಆ ಸುಕುಮಾರಿಯೇ ನಿನ್ನ ಹೆಂಡತಿ- ಯಾಗುತ್ತಾಳೆ. ಇದರಲ್ಲಿ ಸಂಶಯವಿಲ್ಲ. ಆದರೆ ವಿವಾಹವಾದ ಕೂಡಲೇ ನೀನು ಕಪಿಯಾಗುವಿ. ನಿನ್ನ ಸ್ವರೂಪವನ್ನೇ ಕಳೆದುಕೊಳ್ಳುವಿ. ಎಲ್ಲ ಮನುಷ್ಯರು ನೀನು ನಿಜರೂಪವನ್ನು ಕಳೆದುಕೊಂಡು ಕಪಿರೂಪ ಹೊಂದಿದ್ದನ್ನು ಕಾಣುವರು.

ಸ ತದ್ವಾಕ್ಯಂ ತು ವಿಜ್ಞಾಯ ನಾರದಃ ಪರ್ವತಾತ್ತದಾ |
ಅಶಪತ್ತಮಪಿ ಕ್ರೋಧಾದ್ ಭಾಗಿನೇಯಂ ಸ ಮಾತುಲಃ ॥25॥

ಯುಧಿಷ್ಠಿರನೇ! ಆ ಪರ್ವತಮುನಿಯ ಶಾಪವಾಕ್ಯವನ್ನು ಕೇಳಿದ ಕೂಡಲೇ ನಾರದರು ಹೆದರಲಿಲ್ಲ. ಅವರಿಗೂ ಕೂಡ ಕೋಪವು ಬಂದಿತು. ಆ ಕೋಪಾ- ವೇಶದಿಂದ ಸೋದರಳಿಯನನ್ನು ಶಪಿಸಿದರು.

ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ |
ಯುಕ್ತೋಽಪಿ ಧರ್ಮನಿತ್ಯಶ್ಚ ನ ಸ್ವರ್ಗವಾಸಮಾಪ್ಸ್ಯಸಿ ॥26॥

ಪರ್ವತನೇ ! ತಪಸ್ಸು, ಬ್ರಹ್ಮಚರ್ಯ, ಸತ್ಯ, ಇಂದ್ರಿಯನಿಗ್ರಹ ಮೊದಲಾದ ಉತ್ತಮಗುಣಗಳಿಂದ ನಿತ್ಯವಾಗಿಯೂ ನೀನು ಧರ್ಮನಿರತನಾಗಿರುವಿ. ಹಾಗಿದ್ದರೂ ನಿನಗೆ ಪುನಃ ಪುನಃ ಸ್ವರ್ಗಕ್ಕೆ ಹೋಗುವ ಶಕ್ತಿಯು ನಶಿಸಲಿ.

ತೌ ತು ಶಪ್ತ್ವಾ ಭೃಶಂ ಕ್ರುದ್ಧೌ ಪರಸ್ಪರಮಮರ್ಷಣೌ |
ಪ್ರತಿಜಗ್ಮತುರನ್ಯೋನ್ಯಂ ಕ್ರುದ್ಧಾವಿವ ಗಜೋತ್ತಮೌ ॥27॥

ಹೀಗೆ ಅವರಿಬ್ಬರು ಸಹನೆಯಿಲ್ಲದೇ ಪರಸ್ಪರವಾಗಿ ಕ್ರುದ್ಧರಾದರು. ಪರಸ್ಪರ ಶಾಪಗಳನ್ನು ಕೊಟ್ಟರು. ಕೋಪಗೊಂಡು ಎರಡು ಆನೆಗಳಂತೆ ವಿರುದ್ಧವಾದ ದಿಕ್ಕು- ಗಳಿಗೆ ಹೊರಟು ಹೋದರು.

ಪರ್ವತಃ ಪೃಥಿವೀಂ ಕೃತ್ಸ್ನಾಂ ವಿಚಚಾರ ಮಹಾಮುನಿಃ |
ಪೂಜ್ಯಮಾನೋ ಯಥಾನ್ಯಾಯಂ ತೇಜಸಾ ಸ್ವೇನ ಭಾರತ ॥28॥

ಮಹಾಮುನಿಗಳಾದ ಪರ್ವತರು ತಮ್ಮ ತೇಜಸ್ಸಿನ ಪ್ರಭಾವದಿಂದ ಪ್ರಪಂಚದೆ- ಲ್ಲೆಡೆ ಸಂಚಾರ ಮಾಡತೊಡಗಿದರು. ಯಥೋಚಿತವಾದ ಸತ್ಕಾರಗಳನ್ನು ಪಡೆ- ಯುತ್ತಾ ಅಖಂಡಭೂಮಂಡಲವನ್ನೇ ಸಂಚರಿಸಿದರು.

ಅಥ ತಾಮಲಭತ್ ಕನ್ಯಾಂ ನಾರದಃ ಸೃಂಜಯಾತ್ಮಜಾಮ್ |
ಧರ್ಮೇಣ ಧರ್ಮಪ್ರವರಃ ಸುಕುಮಾರೀಮನಿಂದಿತಾಮ್ ॥29॥

ವಿಪ್ರಶ್ರೇಷ್ಠರಾದ ನಾರದಋಷಿಗಳು ರಾಜಕುಮಾರಿಯಾದ ಸೃಂಜಯನ ಮಗ- ಳಾದ ಆ ಸುಕುಮಾರಿಯನ್ನು ಧರ್ಮರೀತಿಯಿಂದ ವಿವಾಹವಾದರು.

ಸಾ ತು ಕನ್ಯಾ ಯಥಾಶಾಪಂ ನಾರದಂ ತಂ ದದರ್ಶ ಹ |
ಪಾಣಿಗ್ರಹಣಮಂತ್ರಾಣಾಂ ಪ್ರಯೋಗಾದೇವ ವಾನರಮ್ ॥30॥

ಆ ವಿವಾಹದಲ್ಲಿ ವಧು-ವರರು ಕೈಹಿಡಿಯುವಾಗ ಯಾವ ಪಾಣಿಗ್ರಹಣ ಮಂತ್ರವನ್ನು ಉಚ್ಚರಿಸುತ್ತಾರೋ, ಅದು ಮುಗಿಯುಷ್ಟರಲ್ಲಿಯೇ ನಾರದರ ಮುಖವು ಕಪಿಮುಖವಾಯಿತು. ಇದನ್ನು ಆ ರಾಜಕುಮಾರಿಯಾದ ಸುಕುಮಾ- ರಿಯು ನೋಡಿದಳು.

ಸುಕುಮಾರೀ ಚ ದೇವರ್ಷಿಂ ವಾನರಪ್ರತಿಮಾನನಮ್ |
ನೈವಾಮನ್ಯತ ತದಾ ಪ್ರೀತಿಮತ್ಯೇವ ಚಾಭವತ್ ॥31॥

ತನ್ನ ಪತಿಯಾದ ನಾರದರ ಮುಖವು ಕಪಿಮುಖವಾದರೂ ಕೂಡ ತಿರಸ್ಕಾರ- ಭಾವವನ್ನು ಹೊಂದಲಿಲ್ಲ. ಮಹಾಪತಿವ್ರತೆಯಾಗಿದ್ದಳು. ನಾರದರಲ್ಲಿ ಸಂಪೂರ್ಣ ಪ್ರೀತಿಯನ್ನೇ ತೋರಿಸಿದಳು.

ಉಪತಸ್ಥೇ ಚ ಭರ್ತಾರಂ ನಚಾನ್ಯಂ ಮನಸಾಪ್ಯಗಾತ್ |
ದೇವಂ ಮುನಿಂ ವಾ ಯಕ್ಷಂ ವಾ ಪತಿತ್ವೇ ಪತಿವತ್ಸಲಾ ॥32॥

ಪತಿಸೇವೆಯಲ್ಲಿ ರತಳಾದ ಆ ಸುಕುಮಾರಿಯು ತನ್ನ ಗಂಡನು ಕಪಿಮುಖನಾಗಿ- ದ್ದಾನೆಂಬ ಕಾರಣದಿಂದ ಬೇರೆಯವರ ಬಗ್ಗೆ ಯೋಚನೆ ಮಾಡಲಿಲ್ಲ. ದೇವತೆಗಳ- ನ್ನಾಗಲೀ, ಮುನಿಗಳನ್ನಾಗಲೀ, ಯಕ್ಷರನ್ನಾಗಲೀ ಯಾವುದೇ ಕಾರಣಕ್ಕೂ ಪತಿರೂಪ- ದಲ್ಲಿ ಯೋಚನೆ ಮಾಡಲಿಲ್ಲ.

ತತಃ ಕದಾಚಿದ್ ಭಗವಾನ್ ಪರ್ವತೋಽನುಸಸಾರ ಹ |
ವನಂ ವಿರಹಿತಂ ಕಿಂಚಿತ್ ತತ್ರಾಪಶ್ಯತ್ ಸ ನಾರದಮ್ ॥33॥

ಹೀಗೆ ಕೆಲವು ದಿವಸಗಳು ಕಳೆದವು. ಒಮ್ಮೆ ಮುನಿವ್ರತ ಪರಾಯಣರಾದ ಪರ್ವತಮುನಿಗಳು ನಿರ್ಜನವಾದ ಕಾಡಿನಲ್ಲಿ ಒಬ್ಬರೇ ತೆರಳುತ್ತಿದ್ದರು. ಅಲ್ಲಿ ಕಪಿಮುಖವನ್ನು ಹೊಂದಿದ ನಾರದರನ್ನು ಕಂಡರು.

ತತೋಽಭಿವಾದ್ಯ ಪ್ರೋವಾಚ ನಾರದಂ ಪರ್ವತಸ್ತದಾ |
ಭವಾನ್ ಪ್ರಸಾದಂ ಕುರುತಾಂ ಸ್ವರ್ಗದೇಶಾಯ ಮೇ ಪ್ರಭೋ ॥34॥

ಕೂಡಲೇ ಪರ್ವತಮುನಿಗಳು ನಾರದರಿಗೆ ನಮಸ್ಕಾರವನ್ನು ಮಾಡಿ, ದೈನ್ಯದಿಂದ ಕೈಮುಗಿದು ಹೀಗೆ ಪ್ರಾರ್ಥಿಸಿದರು - ಪ್ರಭುವೇ! ನನಗೆ ಸ್ವರ್ಗಕ್ಕೆ ಹಿಂತಿರುಗಿ ಹೋಗುವಂತೆ ಅನುಗ್ರಹಿಸು ಎಂದು.

ತಮುವಾಚ ತತೋ ದೃಷ್ಟ್ವಾ ಪರ್ವತಂ ನಾರದಸ್ತದಾ |
ಕೃತಾಂಜಲಿಮುಪಾಸೀನಂ ದೀನಂ ದೀನತರಃ ಸ್ವಯಮ್ ॥35॥

ಆಗ ನಾರದರು ಆ ಪರ್ವತಮುನಿಗಳಿಗೆ ಹೇಳಿದರು - ಪರ್ವತಮುನಿಯ ದೈನ್ಯಸ್ಥಿತಿಯನ್ನು ಕಂಡು ಕನಿಕರಗೊಂಡರು. ಆ ಪರ್ವತಮುನಿಯಾದರೂ ಕೈ- ಮುಗಿದು ಅತ್ಯಂತ ದೀನರಾಗಿ ನಿಂತಿದ್ದರು.

ತ್ವಯಾಹಂ ಪ್ರಥಮಂ ಶಪ್ತೋ ವಾನರಸ್ತ್ವಂ ಭವಿಷ್ಯಸಿ |

ಇತ್ಯುಕ್ತೇನ ಮಯಾ ಪಶ್ಚಾಚ್ಛಪ್ತಸ್ತ್ವಮಪಿ ಮತ್ಸರಾತ್ ॥36॥
ಅದ್ಯಪ್ರಭೃತಿ ವೈ ವಾಸಂ ಸ್ವರ್ಗೇ ನಾವಾಪ್ಸ್ಯಸೀತಿ ಹ ॥
ಪರ್ವತನೇ! ಮೊದಲು ನನಗೆ ವಾನರ ಮುಖ ಬರಲಿ ಎಂದು ಶಾಪವನ್ನು ನೀಡಿದವನು. ನೀನು ನೀಡಿದ ಶಾಪವನ್ನು ಕೇಳಿ ಮಾತ್ಸರ್ಯದಿಂದ ನಾನೂ ಸಹ ಇವತ್ತಿನಿಂದ ನಿನಗೆ ಸ್ವರ್ಗಕ್ಕೆ ತೆರಳದಂತೆ ಆಗಲಿ ಎಂದು ಶಾಪವನ್ನು ನೀಡಿದೆನು.
ತವ ನೈತದ್ಧಿ ಸದೃಶಂ ಪುತ್ರಸ್ಥಾನೇ ಹಿ ಮೇ ಭವಾನ್ |
ನಿವರ್ತಯೇತಾಂ ತೌ ಶಾಪಮನ್ಯೋಽನ್ಯೇನ ತದಾ ಮುನೀ ॥37॥
ಪರ್ವತನೇ! ನೀನು ನನಗೆ ಶಾಪವನ್ನು ನೀಡಬಾರದಿತ್ತು. ಏಕೆಂದರೆ ನೀನು ನನ್ನ ಪುತ್ರನ ಸ್ಥಾನದಲ್ಲಿರುವಿ. ನನಗೆ ಸೋದರಳಿಯನಾಗಿರುವಿ. ಹೀಗೆ ಪರಸ್ಪರ ಮಾತ- ನಾಡಿಕೊಂಡು ನಾರದ ಹಾಗೂ ಪರ್ವತರು ಪಶ್ಚಾತ್ತಾಪವನ್ನು ಪಟ್ಟರು. ಪರಸ್ಪರ ಶಾಪಗಳನ್ನು ನಿವೃತ್ತಿಗೊಳಿಸಿದರು.
ಶ್ರೀಸಮೃದ್ಧಂ ತದಾ ದೃಷ್ಟ್ವಾ ನಾರದಂ ದೇವರೂಪಿಣಮ್ |
ಸುಕುಮಾರೀ ಪ್ರದುದ್ರಾವ ಪರಪತ್ಯಾಭಿಶಂಕಯಾ ॥38॥
ಈಗ ನಾರದರಿಗೆ ಉತ್ತಮರೂಪವು ಬಂದಿತು. ದೇವತೆಗಳಂತೆ ದಿವ್ಯವಾಗಿ ಕಂಗೊಳಿಸಿದರು. ಇಂಥ ನಾರದರನ್ನು ಕಂಡು ಪತ್ನಿಯಾದ ಸುಕುಮಾರಿಯು ಓಡಲು ಪ್ರಾರಂಭಿಸಿದಳು. ಇವರು ನನ್ನ ಪತಿಯಲ್ಲ. ಪರಪುರುಷರಾಗಿದ್ದಾರೆಂದು ತಿಳಿದು ಬಿಟ್ಟಳು.
ತಾಂ ಪರ್ವತಸ್ತೋ ದೃಷ್ಟ್ವಾ ಪ್ರದ್ರವಂತೀಮನಿಂದಿತಾಮ್ |
ಅಬ್ರವೀತ್ ತವ ಭರ್ತೈಷ ನಾತ್ರ ಕಾರ್ಯಾ ವಿಚಾರಣಾ ॥39॥
ಓಡುತ್ತಿರುವ ಸುಕಮಾರಿಯನ್ನು ಪರ್ವತಮುನಿಗಳು ಕಂಡರು. ನಿಷ್ಕಲಂಕಳಾದ ಆ ಸುಕುಮಾರಿಗೆ ಹೇಳಿದರು. ಸುಕುಮಾರಿಯೇ! ಇವನೇ ನಿನ್ನ ಪತಿ ಈ ವಿಷಯದಲ್ಲಿ ಸ್ವಲ್ಪವೂ ವಿಚಾರ ಮಾಡಬೇಡ.
ಋಷಿಃ ಪರಮಧರ್ಮಾತ್ಮಾ ನಾರದೋ ಭಗವಾನ್ ಪ್ರಭುಃ |
ತವೈವಾಭೇದ್ಯಹೃದಯೋ ಮಾ ತೇ ಭೂದತ್ರ ಸಂಶಯಃ ॥40॥
ನಾರದಮಹರ್ಷಿ ಪರಮಧರ್ಮಿಷ್ಠನಾಗಿದ್ದಾನೆ. ಸರ್ವಜ್ಞನಾಗಿದ್ದಾನೆ. ನಿನ್ನಲ್ಲಿ ನಿತ್ಯವಾಗಿಯೂ ಅನುರಕ್ತನಾಗಿದ್ದಾನೆ. ಈ ವಿಷಯದಲ್ಲಿ ನಿನಗೆ ಸ್ವಲ್ಪವೂ ಸಂಶಯವು ಬೇಡ.
ಸಾನುನೀತಾ ಬಹುವಿಧಂ ಪರ್ವತೇನ ಮಹಾತ್ಮನಾ |
ಶಾಪದೋಷಂ ಚ ತಂ ಭರ್ತುಃ ಶ್ರುತ್ವಾ ಸ್ವಾಂ ಪ್ರಕೃತಿಂ ಗತಾ ॥41॥
ಪರ್ವತೋಽಥ ಯಯೌ ಸ್ವರ್ಗಂ ನಾರದೋಽಥ ಯಯೌ ಗೃಹಾನ್॥
ಯುಧಿಷ್ಠಿರನೇ! ಹೀಗೆ ಮಹಾತ್ಮರಾದ ಆ ಪರ್ವತಮುನಿಗಳು ನಾರದರ ಪತ್ನಿಯಾದ ಸುಕುಮಾರಿಗೆ ಅನೇಕ ವಿಧದಲ್ಲಿ ಸಾಂತ್ವನದ ಮಾತುಗಳನ್ನು ಹೇಳಿದರು. ಮತ್ತು ನಾರದರಿಗೆ ಬಂದ ಶಾಪದ ವಿಷಯವನ್ನು ಆ ಸುಕುಮಾರಿಗೆ ತಿಳಿಸಿದರು. ಈ ವಿಷಯವನ್ನು ಪರ್ವತಮುನಿಗಳಿಂದ ಸುಕುಮಾರಿಯು ತಿಳಿದು ಸಮಾಧಾನಚಿತ್ತ- ಳಾದಳು. ಅನಂತರ ಆ ಪರ್ವತಮುನಿಯು ಸ್ವರ್ಗಕ್ಕೆ ತೆರಳಿದರು. ನಾರದರು ತನ್ನ ಪತ್ನಿಯ ಜೊತೆ ಮನೆಗೆ ತೆರಳಿದರು.
ಪ್ರತ್ಯಕ್ಷಕರ್ಮಾ ಸರ್ವಸ್ಯ ನಾರದೋಽಯಂ ಮಹಾನ್ ಋಷಿಃ |
ಏಷ ವಕ್ಷ್ಯತಿ ವೈ ಪೃಷ್ಟೋ ಯಥಾವೃತ್ತಂ ನರೋತ್ತಮ ॥42॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ನಾರದಪರ್ವತಚರಿತ್ರಂ ನಾಮ್ಯೈಕತ್ರಿಂಶೋಽಧ್ಯಾಯಃ ॥31॥
ನರಶ್ರೇಷ್ಠನಾದ ಯುಧಿಷ್ಠಿರನೇ ! ನಿನ್ನ ಎದುರು ನಿಂತಿರುವ ನಾರದರೇ ಈ ಎಲ್ಲ ಘಟನೆಗಳ ಮುಖ್ಯಪಾತ್ರಧಾರಿಗಳು. ಸುವರ್ಣಷ್ಠೀವಿಯ ಹುಟ್ಟುಸಾವುಗಳನ್ನು ಪ್ರತ್ಯಕ್ಷ -ವಾಗಿ ಕಂಡವರು. ಆಗ ಯಥಾವತ್ತಾಗಿ ಎಲ್ಲವನ್ನೂ ಕೂಡ ನಿನಗೆ ತಿಳಿಸುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ನಾರದ ಮತ್ತು ಪರ್ವತರ ಚರಿತ್ರೆಯನ್ನು ಹೇಳುವ 31ನೆಯ ಅಧ್ಯಾಯವು ಮುಗಿಯಿತು.
*****
32. ಮೂವತ್ತೆರಡನೆಯ ಅಧ್ಯಾಯ
ಸುವರ್ಣಷ್ಠೀವಿಯ ಜನನ, ಮರಣ, ಪುನರ್ಜನ್ಮಗಳ ಚರಿತ್ರೆಯನ್ನು
ನಾರದರು ಯುಧಿಷ್ಠಿರನಿಗೆ ಹೇಳಿದರು.
ವೈಶಂಪಾಯನಃ
ತತೋ ರಾಜಾ ಪಾಂಡುಸುತೋ ನಾರದಂ ಪ್ರತ್ಯಭಾಷತ |
ಭಗವನ್ ಶ್ರೋತುಮಿಚ್ಛಾಮಿ ಸುವರ್ಣಷ್ಠೀವಿಸಂಭವಮ್ ॥1॥
ವೈಶಂಪಾಯನರು ಪಾಂಡುವಿನ ಮಗನಾದ ರಾಜನಾದ ಯುಧಿಷ್ಠಿರನು ನಾರದರನ್ನು ಕುರಿತು, ಶ್ರೀಕೃಷ್ಣನ ಸಲಹೆಯಂತೆ ಪ್ರಶ್ನಿಸುತ್ತಾನೆ - ``ಭಗವನ್ ನಾರದರೇ! ಸುವರ್ಣಷ್ಠೀವಿಯ ಜನನದ ವೃತ್ತಾಂತವನ್ನು ಕೇಳಲು ನಾನು ಅಪೇಕ್ಷಿ- ಸುತ್ತೇನೆ. ದಯವಿಟ್ಟು ತಿಳಿಸಿರಿ''.
ಏವಮುಕ್ತಃ ಸ ಚ ಮುನಿರ್ಧರ್ಮರಾಜೇನ ನಾರದಃ |
ಆಚಾಚಕ್ಷೇ ಯಥಾವೃತ್ತಂ ಸುವರ್ಣಷ್ಠೀವಿನಂ ಪ್ರತಿ ॥2॥
ಧರ್ಮರಾಜನು ಹೀಗೆ ಪ್ರಶ್ನಿಸಿದಾಗ ನಾರದರು ಸಂತೋಷಪಟ್ಟರು. ಸುವರ್ಣ- ಷ್ಠೀವಿಯ ಚರಿತ್ರೆಯನ್ನು ಯಥಾವತ್ತಾಗಿ ಯುಧಿಷ್ಠಿರನಿಗೆ ಹೇಳಲು ಪ್ರಾರಂಭಮಾಡಿ- ದರು.
ಏವಮೇತನ್ಮಹಾರಾಜ ಯಥಾಯಂ ಕೇಶವೋಽಬ್ರವೀತ್ |

ಕಾರ್ಯಸ್ಯಾಸ್ಯ ತು ಯಚ್ಛೇಷಂ ತತ್ ತೇ ವಕ್ಷ್ಯಾಮಿ ಪೃಚ್ಛತಃ ॥3॥
ಮಹಾರಾಜನಾದ ಯುಧಿಷ್ಠಿರನೇ! ಶ್ರೀಕೃಷ್ಣಪರಮಾತ್ಮನು ಹೇಳಿದ ಕಥೆ ಬಹಳ ಸತ್ಯವಾಗಿದೆ. ಅದರ ಮುಂದಿನ ಕಥೆಯನ್ನು ಪ್ರಶ್ನೆ ಮಾಡಿದ ನಿನಗೆ ಹೇಳುತ್ತೇನೆ ಕೇಳು.
ಅಹಂ ಚ ಪರ್ವತಶ್ಚೈವ ಸ್ವಸ್ರೀಯೋ ಮೇ ಮಹಾಮುನಿಃ |
ವಸ್ತುಕಾಮಾವಿಭಗತೌ ಸೃಂಜಯಂ ಜಯತಾಂ ವರಮ್ ॥4॥
ನಾನು ಮತ್ತು ನನ್ನ ಸಹೋದರಿಯ ಮಗನಾದ ಮಹಾಮುನಿಯಾದ ಪರ್ವತ- ಮುನಿಯು ಜಯಿಸುವವರಲ್ಲಿ ಶ್ರೇಷ್ಠನಾದ ಸೃಂಜಯರಾಜನ ಅರಮನೆಯಲ್ಲಿ ಕೆಲವು ಕಾಲ ಇರಬೇಕೆಂಬ ಅಪೇಕ್ಷೆಯಿಂದ ತೆರಳಿದ್ದೆವು.
ತತ್ರ ಸಂಪೂಜಿತೌ ತೇನ ವಿಧಿದೃಷ್ಟೇನ ಕರ್ಮಣಾ |
ಸರ್ವಕಾಮೌ ಸುವಿಹಿತೌ ನಿವಸಾವೋಽಸ್ಯ ವೇಶ್ಮನಿ ॥5॥
ಆ ಸಂದರ್ಭದಲ್ಲಿ ಅವನು ನಮ್ಮಿಬ್ಬರಿಗೆ ಆದರಪೂರ್ವಕವಾಗಿ ಸತ್ಕಾರವನ್ನು ಮಾಡಿದನು. ವಿಧಿಪ್ರಕಾರವಾಗಿ ಅರ್ಘ್ಯಪಾದ್ಯಾದಿಗಳನ್ನು ನೀಡಿದನು. ಅಭಿಲಿಷಿತ- ವಾದ ಪದಾರ್ಥಗಳನ್ನು ಒದಗಿಸುತ್ತಿದ್ದನು. ಹೀಗೆ ಅವನ ಮನೆಯಲ್ಲಿ ವಾಸಮಾಡಿ- ದೆವು.
ವ್ಯತಿಕ್ರಾಂತಾಸು ವರ್ಷಾಸು ಸಮಯೇ ಗಮನಸ್ಯ ಚ |
ಪರ್ವತೋ ಮಾಮುವಾಚೇದಂ ಕಾಲೇ ವಚನಮರ್ಥವತ್ ॥6॥
ವರ್ಷಾಕಾಲವು ಕಳೆಯುತ್ತಾ ಬಂದಿತು. ಆ ಸಂದರ್ಭದಲ್ಲಿ ಅವನ ಅರಮನೆ- ಯಿಂದ ಹೊರಡುವ ಕಾಲುವು ಪ್ರಾಪ್ತವಾಯಿತು. ಆಗ ಆ ಪರ್ವತಮುನಿಯು ನನ್ನ ಜೊತೆ ಸಮಯೋಚಿತವಾದ ಮಾತುಗಳನ್ನು ಹೀಗೆ ಹೇಳಿದನು -
ಆವಾಮಸ್ಯ ನರೇಂದ್ರಸ್ಯ ಗೃಹೇ ಪರಮಪೂಜಿತೌ |
ಉಷಿತೌ ಸಮಯೇ ಬ್ರಹ್ಮಂಶ್ಚಿಂತ್ಯತಾಮತ್ರ ಸಾಂಪ್ರತಮ್ ॥7॥
ಈ ಸೃಂಜಯರಾಜನು ನಮ್ಮನ್ನು ಇಲ್ಲಿಯ ತನಕ ಬಹಳ ಆದರದಿಂದ ಸತ್ಕಾರ ಮಾಡಿದ್ದಾನೆ. ಇವನಿಗೆ ನಾವು ಹೊರಡುವ ಸಮಯದಲ್ಲಿ ಯಾವುದಾದರೂ ರೀತಿಯಲ್ಲಿ ಉಪಕಾರವನ್ನು ಮಾಡಬೇಕು. ಉಪಕಾರವನ್ನು ಮಾಡದೇ ಹೊರಡ- ಬಾರದು. ಅದಕ್ಕೇನಾದರೂ ಮಾರ್ಗವನ್ನು ಯೋಚಿಸು ಎಂದನು.
ತತೋಽಹಮಬ್ರುವಂ ರಾಜನ್ ಪರ್ವತಂ ಶುಭದರ್ಶನಮ್ |
ಸರ್ವಮೇತತ್ ತ್ವಯಿ ವಿಭೋ ಭಾಗಿನೇಯೋಪಪದ್ಯತೇ ॥8॥
ವರೇಣ ಛಂದ್ಯತಾಂ ರಾಜಾ ಲಭತಾಂ ಯದ್ ಯದಿಚ್ಛತಿ |
ಆವಯೋಸ್ತಪಸಾ ಸಿದ್ಧಿಂ ಪ್ರಾಪ್ನೋತಿ ಯದಿ ಮನ್ಯಸೇ ॥9॥
ಧರ್ಮಜನೇ! ಶುಭದರ್ಶನನಾದ ಸೋದರಳಿಯನಾದ ಆ ಪರ್ವತಮುನಿಗೆ ನಾನು ಹೀಗೆ ಹೇಳಿದನು - ``ನೀನು ಸೃಂಜಯರಾಜನನ್ನೇ ಕೇಳು. ಅವನು ಏನು ಕೇಳುತ್ತಾನೋ, ಅದೆಲ್ಲವನ್ನು ನಾವು ನಡೆಸಿಕೊಡೋಣ. ನೀನು ಸೂಕ್ತವೆಂದು ಭಾವಿಸುವುದಾದರೆ ನಮ್ಮ ತಪಸ್ಸಿನ ಪ್ರಭಾವದಿಂದ ರಾಜನು ಯಾವ ಸಿದ್ಧಿಯನ್ನು ಬೇಕಾದರೂ ಪಡೆದುಕೊಳ್ಳಲಿ''.
ತತ್ ಆಹೂಯ ರಾಜಾನಂ ಸೃಂಜಯಂ ಶುಭದರ್ಶನಮ್ |
ಪರ್ವತೋಽನುಮತಂ ವಾಕ್ಯಮುವಾಚ ಮುನಿಪುಂಗವಃ ॥10॥
ನಾನು ಹೀಗೆ ಹೇಳಿದ ಮೇಲೆ ಪರ್ವತಮುನಿಯು ನನ್ನ ಅನುಮತಿಯನ್ನು ಪಡೆದುಕೊಂಡು ಶುಭದರ್ಶನನಾದ ರಾಜನಾದ ಸೃಂಜಯನನ್ನು ಕರೆದನು. ಆ ಮುನಿಪುಂಗವನು ಸೃಂಜಯರಾಜನನ್ನು ಕುರಿತು ಹೀಗೆ ಹೇಳಿದನು -
ಪ್ರೀತೌ ಸ್ವೋ ನೃಪ ಸತ್ಕಾರೈಸ್ತವ ಹ್ಯಾರ್ಜವಸಂಭೃತೈಃ |
ಆವಾಭ್ಯಾಮಭ್ಯನುಜ್ಞಾತೋ ವರಂ ನೃವರ ಚಿಂತಯ ॥11॥
``ರಾಜನೇ! ನೀನು ಮಾಡಿದ ಸತ್ಕಾರದಿಂದ ನಾವಿಬ್ಬರು ಪರಮಪ್ರೀತರಾಗಿ- ದ್ದೇವೆ. ಅತ್ಯಂತ ಸರಳತೆಯಿಂದ ನೀನು ಮಾಡಿದ ಪ್ರೀತಿವಿಶ್ವಾಸಗಳಿಂದ ಪ್ರಸನ್ನರಾ- ಗಿದ್ದೇವೆ. ನೀನು ನಮ್ಮಿಬ್ಬರಿಂದ ಯಾವುದೇ ವರವನ್ನು ಪಡೆದುಕೊಳ್ಳಬಹುದು. ನಾವಾಗಿಯೇ ಆ ವರಗಳನ್ನು ಇಷ್ಟಪಟ್ಟು ಕೊಡುತ್ತೇವೆ. ಆಲೋಚನೆ ಮಾಡಿ ಹೇಳು.
ದೇವಾನಾಮವಿಹಿಂಸಾಯಾಂ ಯದ್ ಭವೇನ್ಮಾನುಷಕ್ಷಮಮ್ |
ತದ್ ಗೃಹಾಣ ಮಹಾರಾಜ ಪೂಜಾರ್ಹೋ ನೌ ಮತೋ ಭವಾನ್ ॥12॥
ನೀನು ಕೇಳುವ ವರದಿಂದ ದೇವತೆಗಳಿಗೆ ಹಿಂಸೆಯಾಗಬಾರದು. ಮನುಷ್ಯರಿಗೆ ಯಾವುದೇ ಹಾನಿಯು ಆಗಬಾರದು. ಅಂಥ ವರವನ್ನಷ್ಟೇ ಕೇಳು. ನೀನು ನಮ್ಮಿಂದ ಅಭಿನಂದನೀಯ ಆಗಿರುವಿ ಎಂಬುದು ನಮ್ಮ ಅಭಿಪ್ರಾಯವಾಗಿದೆ.
ಸೃಂಜಯಃ
ಪ್ರೀತೌ ಭವಂತೌ ಯದಿ ಮೇ ಕೃತಮೇತಾವತಾ ಮಮ |
ಏಷ ಏವ ಪರೋ ಲಾಭೋ ನಿರ್ವೃತ್ತೋ ಮೇ ಮಹಾಫಲಃ ॥13॥
ಸೃಂಜಯ ಪ್ರಭುಗಳೇ ! ತಾವು ಸಂತುಷ್ಟರಾದರೆ ಸಾಕು. ನಿಮ್ಮ ಸಂತೋಷವೇ ನನ್ನ ಜೀವನದ ದೊಡ್ಡ ಲಾಭ. ಇದೇ ನಾನು ಪಡೆದ ಮಹಾಫಲವಾಗಿದೆ.
ನಾರದಃ
ತಮೇವಂವಾದಿನಂ ಭೂಯಃ ಪವರ್ತಃ ಪ್ರತ್ಯಭಾಷತ |
ವೃಣೀಷ್ವ ರಾಜನ್ ಸಂಕಲ್ಪೋ ಯಸ್ತೇ ಹೃದಿ ಚಿರಂ ಸ್ಥಿತಃ ॥14॥
ನಾರದರು ಯುಧಿಷ್ಠಿರನೇ ! ಸೃಂಜಯನು ಹೀಗೆ ಪುನಃ ಪುನಃ ಹೇಳುತ್ತಿದ್ದರೂ ಪರ್ವತಮುನಿಯು ಮತ್ತೊಮ್ಮೆ ಆ ರಾಜನಿಗೆ

ಹೇಳುತ್ತಾನೆ - ``ಮಹಾರಾಜನೇ! ನಿನ್ನ ಹೃದಯದಲ್ಲಿ ಬಹುಕಾಲದಿಂದ ಇರುವ ಕೋರಿಕೆಯನ್ನು ಈಗ ಕೇಳಿಕೋ. ನಿನ್ನ ಕೋರಿಕೆಯನ್ನು ಈಡೇರಿಸಿಕೊಳ್ಳಲು ವರವನ್ನು ಕೇಳಿಕೋ''.

ಸೃಂಜಯಃ

ಅಭೀಪ್ಸಾಮಿ ಸುತಂ ವೀರಂ ವೀರ್ಯವಂತಂ ದೃಢವ್ರತಮ್ |

ಆಯುಷ್ಮಂತಂ ಮಹಾಭಾಗಂ ದೇವರಾಜಸಮದ್ಯುತಿಮ್ ॥15॥

ಸೃಂಜಯ ವೀರನು, ದೀರ್ಘಾಯುಷ್ಮಂತನು, ದೃಢವ್ರತವನು ಭಾಗ್ಯವಂತನು, ದೇವೇಂದ್ರನಿಗೆ ಸಮಾನನಾದವನು ಆದ ಪುತ್ರನನ್ನು ನಾನು ಅಪೇಕ್ಷಿಸುತ್ತಿರುವೆ. ತಾವು ನನಗೆ ಅಂಥ ಪುತ್ರನನ್ನು ಕರುಣಿಸಬೇಕು.

ಪರ್ವತಃ

ಭವಿಷ್ಯತ್ಯೇಷ ತೇ ಕಾಮೋ ನ ತ್ವಾಯುಷ್ಮಾನ್ ಭವಿಷ್ಯತಿ |

ದೇವರಾಜಾಭಿಭೂತ್ಯರ್ಥಂ ಸಂಕಲ್ಪೋ ಹ್ಯೇಷ ತೇ ಹೃದಿ ॥16॥

ಪರ್ವತಮುನಿ ರಾಜನೇ ! ಹಾಗೆಯೇ ಆಗಲಿ. ನಿನ್ನ ಕಾಮನೆಯು ಈಡೇ- ರುತ್ತದೆ. ಆದರೆ ನಿನ್ನ ಆ ಮಗನು ದೀರ್ಘಾಯುಷ್ಯವನ್ನು ಹೊಂದುವುದಿಲ್ಲ. ಏಕೆಂದರೆ ದೇವರಾಜನಾದ ಇಂದ್ರನನ್ನು ಸೋಲಿಸುವ ಸಂಕಲ್ಪವನ್ನು ನೀನು ಮಾಡಿ- ರುವಿ. ಏತನ್ಮೂಲಕ ದೇವತೆಗಳನ್ನು ಹಿಂಸೆ ಮಾಡಬೇಕೆಂಬುದು ನಿನ್ನ ಮನಸ್ಸಿನಲ್ಲಿದೆ.

ಸುವರ್ಣಷ್ಠೀವನಾಚ್ಚೈವ ಸ್ವರ್ಣಷ್ಠೀವೀ ಭವಿಷ್ಯತಿ |

ರಕ್ಷ್ಯಶ್ಚ ದೇವರಾಜಾತ್ ಸ ದೇವರಾಜಸಮದ್ಯುತಿಃ ॥17॥

ನಿನ್ನ ಮಗನು ಸುವರ್ಣಷ್ಠೀವಿ ಎಂಬ ಹೆಸರಿನಿಂದ ಪ್ರಖ್ಯಾತನಾಗುತ್ತಾನೆ. ದೇವೇಂದ್ರನ ಸಮಾನವಾದ ತೇಜಸ್ಸನ್ನು ಹೊಂದಿರುವ ಅವನನ್ನು ದೇವೇಂದ್ರನಿಂದ ನೀನೇ ರಕ್ಷಣೆ ಮಾಡಿಕೊಳ್ಳಬೇಕು.

ತಚ್ಛ್ರುತ್ವಾ ಸೃಂಜಯೋ ವಾಕ್ಯಂ ಪರ್ವತಸ್ಯ ಮಹಾತ್ಮನಃ |

ಪ್ರಸಾದಯಾಮಾಸ ತದಾ ನೈತದೇವಂ ಭವೇದಿತಿ ॥18॥

ಮಹಾತ್ಮನಾದ ಪರ್ವತಮುನಿಯ ಮಾತನ್ನು ಕೇಳಿ ಸೃಂಜಯರಾಜನು ಅವನನ್ನು ಸಂತೋಷಗೊಳಿಸುವುದಕ್ಕಾಗಿ ಹೀಗೆ ಪ್ರಾರ್ಥನೆ ಮಾಡಿದನು - ಶ್ರೇಷ್ಠಮುನಿಗಳೇ ! ನನ್ನ ಮಗನಿಗೆ ದಯವಿಟ್ಟು ಅಲ್ಪಾಯುಷ್ಯವನ್ನು ನೀಡಬೇಡಿರಿ.

ಆಯುಷ್ಮಾನ್ ಮೇ ಭವೇತ್ ಪುತ್ರೋ ಭವತಸ್ತಪಸಾ ಮುನೇ |

ನಚ ತಂ ಪರ್ವತಃ ಕಿಂಚಿದುವಾಚೇಂದ್ರವ್ಯಪೇಕ್ಷಯಾ ॥19॥

ಮುನಿಗಳೇ! ನಿಮ್ಮ ತಪಸ್ಸಿನ ಪ್ರಭಾವದಿಂದ ನನ್ನ ಮಗನು ದೀರ್ಘಾಯುಷ್ಯ- ವನ್ನು ಹೊಂದಬೇಕು ಎಂದು ದೈನ್ಯದಿಂದ ಬೇಡಿದನು. ಆಗ ಪರ್ವತಮುನಿಯು ದೇವೇಂದ್ರನಿಗೆ ದ್ರೋಹ ಮಾಡಬಾರದೆಂಬ ದೃಷ್ಟಿಯಿಂದ ಏನನ್ನೂ ಮಾತನಾಡದೇ ಸುಮ್ಮನಿದ್ದನು.

ತಮಹಂ ನೃಪತಿಂ ದೀನಮಬ್ರುವಂ ಪುನರೇವ ತು |

ಸ್ಮರ್ತವ್ಯೋಽಹಂ ಮಹಾರಾಜ ದರ್ಶಯಿಷ್ಯಾಮಿ ತೇ ಸ್ಮೃತಃ ॥20॥

ಆಗ ನಾನು ಅತ್ಯಂತ ದೀನನಾದ ರಾಜನನ್ನು ನೋಡಿ, ಮಹಾರಾಜನೇ! ಆ ಮಗನಿಗೆ ವಿಪತ್ತು ಬಂದಾಗ ನನ್ನನ್ನು ಸ್ಮರಣೆ ಮಾಡು. ನಾನು ನಿನಗೆ ದರ್ಶನವನ್ನು ನೀಡುತ್ತೇನೆಂದು ಸಾಂತ್ವನವನ್ನು ನೀಡಿದನು.

ಅಹಂ ತೇ ದಯಿತಂ ಪುತ್ರಂ ಪ್ರೇತರಾಜವಶಂ ಗತಮ್ |

ಪುನರ್ದಾಸ್ಯಾಮಿ ತದ್ ರೂಪಂ ಮಾ ಶುಚಃ ಪೃಥಿವೀಪತೇ ॥21॥

ಪೃಥಿವೀಪತಿಯೇ! ನಿನ್ನ ಮಗನು ಯಮನ ಕೈಗೆ ಸಿಕ್ಕಿದ್ದರೂ ಯಾವುದೇ ತೊಂದರೆ ಆಗದಂತೆ ಅವನನ್ನು ಪುನಃ ಕರೆದು ಆ ದೇಹದಲ್ಲಿ ಸೇರುವಂತೆ ಮಾಡು- ತ್ತೇನೆ. ದುಃಖಿಸಬೇಡ ಎಂದನು.

ಏವಮುಕತ್ವಾ ತು ನೃಪತಿಂ ಪ್ರಯಾತೌ ಸ್ವೋ ಯಥೇಪ್ಸಿತಮ್ |

ಸೃಂಜಯಶ್ಚ ಯಥಾಕಾಮಂ ಪ್ರವಿವೇಶ ಸ್ವಮಂದಿರಮ್ ॥22॥

ಹೀಗೆ ಆ ರಾಜನಿಗೆ ನಾನು ವಾಗ್ದಾನವನ್ನು ಮಾಡಿದೆನು. ಅನಂತರ ಅಲ್ಲಿಂದ ನಾವು ಹೊರಟು ಹೋದೆವು. ಸೃಂಜಯನು ತನ್ನ ಅರಮನೆಗೆ ಹೋದನು.

ಸೃಂಜಯಸ್ಯಾಥ ರಾಜರ್ಷೇಃ ಕಸ್ಮಿಂಶ್ಚಿತ್ ಕಾಲಪರ್ಯಯೇ |

ಜಜ್ಞೇ ಪುತ್ರೋ ಮಹಾವೀರ್ಯಸ್ತೇಜಸಾ ಪ್ರಜ್ವಲನ್ನಿವ ॥23॥

ಕೆಲವು ದಿವಸಗಳು ಕಳೆದ ಮೇಲೆ ರಾಜರ್ಷಿಯಾದ ಸೃಂಜಯನಿಗೆ ಒಬ್ಬ ಮಗನು ಹುಟ್ಟಿದನು. ತೇಜಸ್ಸಿನಿಂದ ಬೆಳಗುತ್ತಿದ್ದನು.

ವವೃಧೇ ಸ ಯಥಾಕಾಲಂ ಸರಸೀವ ಮಹೋತ್ಪಲಮ್ |

ಬಭೂವ ಕಾಂಚನಷ್ಠೀವೀ ಯಥಾರ್ಥಂ ನಾಮ ತಸ್ಯ ತತ್ ॥24॥

ಸರೋವರದಲ್ಲಿ ಕಮಲವು ಹೇಗೆ ವಿಕಸಿತವಾಗುತ್ತದೋ, ಅದರಂತೆ ಈ ಸೃಂಜಯನ ಪುತ್ರನೂ ಕೂಡ ಕಾಲಕ್ಕೆ ಅನುಗುಣವಾಗಿ ಬೆಳೆಯುತ್ತಾ ಬಂದನು. ಸುವರ್ಣವನ್ನು ಉಗುಳುವಂಥ ಕಾಂತಿಯನ್ನು ಹೊಂದಿದ್ದರಿಂದ ಸುವರ್ಣೇಷ್ಠಿ ಎಂದು ಅವನನ್ನು ಎಲ್ಲರು ಕರೆದರು.

ತದದ್ಭುತತಮಂ ಲೋಕೇ ಪಪ್ರಥೇ ಕುರುಸತ್ತಮ |

ಬುಬುಧೇ ತಚ್ಚ ದೇವೇಂದ್ರೋ ವರದಾನಂ ಮಹಾತ್ಮನೋಃ ॥25॥

ಮಹಾತ್ಮನಾದ ಪರ್ವತಮುನಿಗಳ ವರಬಲದಿಂದ ಇಂಥ ಅದ್ಭುತನಾದ ಮಗನು ಹುಟ್ಟಿದ್ದಾನೆಂಬ ವಿಷಯವು ಲೋಕವೆಲ್ಲವೂ ತಿಳಿಯಿತು. ದೇವೇಂದ್ರನೂ ಕೂಡ ತಿಳಿದುಕೊಂಡನು.

ಟಿಪ್ಪಣಿ- ಪಪ್ರಥೇ ಕುರುಸತ್ತಮ ಇತ್ಯತ್ರ ಪಪ್ರಥೇ ಪ್ರಥಿತಮಭೂತ್ |

`ಪ್ರಪಥೇ' ಎಂದರೆ ಪ್ರಸಿದ್ಧನಾದನು ಎಂದರ್ಥ.
ತತಸ್ತ್ವಭಿಭವಾದ್ ಭೀತೋ ಬೃಹಸ್ಪತಿಮತೇ ಸ್ಥಿತಃ |
ಕುಮಾರಸ್ಯಾಂತರಪ್ರೇಕ್ಷೀ ಬಭೂವ ಬಲವೃತ್ರಹಾ ॥26॥
ಬಲಿಷ್ಠನಾದ ವೃತ್ರಾಸುರನನ್ನು ಕೊಂದ, ಆ ಇಂದ್ರನಿಗೆ ಈ ಬಾಲಕನಿಂದ ಹೆದರಿಕೆ ಪ್ರಾರಂಭವಾಯಿತು. ಈ ಬಾಲಕನು ನನ್ನನ್ನು ಸೋಲಿಸುತ್ತಾನೆ ಅದಕ್ಕೆ ಉಪಾಯ- ವನ್ನು ಈಗಲೇ ಮಾಡಬೇಕೆಂದು ತಿಳಿದು ಬೃಹಸ್ಪತಿಯ ಬಳಿ ಆಲೋಚನೆಯನ್ನು ಮಾಡಿದನು. ಆ ರಾಜಕುಮಾರನಿಗೆ ಏನಾದರೂ ಹಾನಿಯನ್ನು ಮಾಡಬೇಕೆಂದು ಪ್ರತಿನಿತ್ಯವು ಅವಕಾಶವನ್ನು ನಿರೀಕ್ಷಿಸಲು ತೊಡಗಿದನು.
ಚೋದಯಾಮಾಸ ವಜ್ರಂ ಸ ದಿವ್ಯಾಸ್ತ್ರಂ ಮೂರ್ತಿಸಂಸ್ಥಿತಮ್ |
ವ್ಯಾಘ್ರೋ ಭೂತ್ವಾ ಜಹೀಮಂ ತ್ವಂ ರಾಜಪುತ್ರಮಿತಿ ಪ್ರಭೋ॥27॥
ಒಂದು ದಿನ ದೇವೇಂದ್ರನು ಸಾಕ್ಷಾತ್ತಾಗಿ ಬಂದು ನಿಂತು ಬಿಟ್ಟನು. ತನ್ನ ದಿವ್ಯಾಸ್ತ್ರ- ವಾದ ವಜ್ರಾಯುಧಕ್ಕೆ ಆದೇಶ ಮಾಡಿದನು. ಈ ರಾಜಪುತ್ರನನ್ನು ನೀನು ವ್ಯಾಘ್ರ- ರೂಪವನ್ನು ತಾಳಿ ಸಂಹಾರ ಮಾಡು ಎಂದು.
ವಿವೃದ್ಧಃ ಕಿಲ ವೀರ್ಯೇಣ ಮಾಮೇಷೋಽಭಿಭವಿಷ್ಯತಿ |
ಸೃಂಜಯಸ್ಯ ಸುತೋ ವಜ್ರ ಯಥೈನಂ ಪರ್ವತೋ ದದೌ ॥28॥
ಅದರ ಪ್ರಕಾರ ವಜ್ರಾಯುಧದ ಜೊತೆ ದೇವೇಂದ್ರನು ಹೀಗೆ ಕಾರಣವನ್ನು ಹೇಳಿದನು. ವಜ್ರಾಯುಧವೇ! ವೀರ್ಯ ಹಾಗೂ ಪರಾಕ್ರಮಗಳಿಂದ ಬೆಳೆಯು- ತ್ತಿರುವ ಸುವರ್ಣಷ್ಠೀವಿಯು ದೊಡ್ಡವನಾದ ಮೇಲೆ ನನ್ನನ್ನು ಪರಾಭವ- ಗೊಳಿಸುತ್ತಾನೆ. ಸೃಂಜಯನ ಅಪೇಕ್ಷೆಯಿಂದ ಹುಟ್ಟಿದ ವೀರನಾಗಿದ್ದಾನೆ. ನನ್ನ ಬಲಕ್ಕೆ ಸಮಾನವಾದ ಬಲವನ್ನು ಪರ್ವತಮುನಿಯು ಈ ಸೃಂಜಯನ ಮಗನಿಗೆ ಅನು- ಗ್ರಹಿಸಿದ್ದಾನೆ. ಆದ್ದರಿಂದ ಅವನನ್ನು ಈಗಲೇ ಕೊಂದುಬಿಡು.
ಏವಮುಕ್ತಸ್ತು ಶಕ್ರೇಣ ವಜ್ರಃ ಪರಪುರಂಜಯಃ |
ಕುಮಾರಸ್ಯಾಂತರಪ್ರೇಕ್ಷೀ ನಿತ್ಯಮೇವಾನ್ವಪದ್ಯತ ॥29॥
ಯುಧಿಷ್ಠಿರನೇ! ಹೀಗೆ ದೇವೇಂದ್ರನು ಆ ವಜ್ರಾಯುಧಕ್ಕೆ ಹೇಳಿದ ಮೇಲೆ ಶತ್ರುಗಳ ಪಟ್ಟಣವನ್ನು ಗೆಲ್ಲಲು ಸಾಮರ್ಥ್ಯವನ್ನು ಹೊಂದಿರುವ ಆ ವಜ್ರಾಯುಧವು ಹೊರಟೇ ಬಿಟ್ಟಿತು. ತನ್ನ ಒಡೆಯನಾದ ದೇವೇಂದ್ರನ ಆಜ್ಞೆಗೆ ಅನುಗುಣವಾಗಿ ಸೃಂಜಯಕುಮಾರನನ್ನು ಸಂಹರಿಸಲು ನಿತ್ಯವೂ ಹೊಂಚು ಹಾಕುತ್ತಿತ್ತು.
ಸೃಂಜಯೋಽಪಿ ಸುತಂ ಪ್ರಾಪ್ಯ ದೇವರಾಜಸಮದ್ಯುತಿಮ್ |
ಹೃಷ್ಟಃ ಸಾಂತಃಪುರೋ ರಾಜಾ ವನನಿತ್ಯೋಽಭವತ್ತದಾ ॥30॥
ಆ ಸೃಂಜಯನೂ ಕೂಡ ದೇವೇಂದ್ರನಿಗೆ ಸಮಾನವಾದ ಬಲಪರಾಕ್ರಮಗಳನ್ನು ಹೊಂದಿದ ತನ್ನ ಕುಮಾರನನ್ನು ಕಂಡು, ನಿತ್ಯವೂ ಸಂತೋಷವನ್ನು ಅನುಭವಿಸುತ್ತಲೇ ಇದ್ದನು. ಅಂತಃಪುರದ ಪರಿವಾರದವರ ಜೊತೆ ನಿತ್ಯವೂ ಅರಣ್ಯಸಂಚಾರವನ್ನು ಮಾಡುತ್ತಾ ಸಂತೋಷದಲ್ಲಿ ಕಾಲಕಳೆಯುತ್ತಿದ್ದನು.
ತತೋ ಭಾಗೀರಥೀತೀರೇ ಕದಾಚಿದ್ ವನನಿರ್ಝರೇ |
ಧಾತ್ರೀದ್ವಿತೀಯೋ ಬಾಲಃ ಸ ಕ್ರೀಡಾರ್ಥಂ ಪರ್ಯಧಾವತ ॥31॥
ಒಮ್ಮೆ ಆ ಸುವರ್ಣಷ್ಠೀವಿಯು ಯಾರೂ ಇಲ್ಲದ ಭಾಗೀರಥೀ ತೀರಕ್ಕೆ ತೆರಳಿ- ದ್ದನು. ದಾದಿಯೊಬ್ಬಳ ಜೊತೆ ಅಲ್ಲಿ ಆಟವಾಡುತ್ತಿದ್ದನು.
ಪಂಚವರ್ಷಕದೇಶೀಯೋ ಬಾಲೋ ನಾಗೇಂದ್ರವಿಕ್ರಮಃ |
ಸಹಸೋತ್ಪತಿತಂ ವ್ಯಾಘ್ರಮಾಸಸಾದ ಮಹಾಬಲಮ್ ॥32॥
ಆಗ ಆ ಮಗುವಿಗೆ ಕೇವಲ ಐದುವರ್ಷಗಳಿದ್ದವು. ಆದರೆ ಮಹಾಗಜದಂತೆ ಅತ್ಯಂತ ಬಲಿಷ್ಠನಾಗಿದ್ದನು. ಅವನಿಗೆ ತಿಳಿಯದಂತೆ ಹಿಂದಿನಿಂದ ಒಂದು ದೊಡ್ಡ ಹೆಬ್ಬುಲಿಯು ಬಂದು ಅವನ ಮೇಲೆ ಬಿದ್ದಿತು.
ಟಿಪ್ಪಣಿ- ಸಹಸೋತ್ಪತಿತಂ ವ್ಯಾಘ್ರಮಾಸಸಾದ್ ಮಹಾಬಲಮ್ | ಸ ಬಾಲಸ್ತೇನ ನಿಷ್ಪಿಷ್ಟ ಇತ್ಯತ್ರ ವ್ಯಾಘ್ರಹಿಂಸಿತತ್ವೇನೋಕ್ತಂ ಸ್ವರ್ಣಷ್ಠೀವಿರೂಪಂ ಪ್ರಾಕ್ | ಚೋರೈ- ರ್ನಾಶಿತಸ್ಯ ತಸ್ಯ ನಾರದೇನ ದತ್ತಂ ಪ್ರತಿರೂಪಮ್ ಇದಾನೀಂ ಪುನಃ ಪರ್ವತೇನ ರಕ್ಷಿತಮ್| ತಸ್ಮಾತ್ ಕಥಾದ್ವಯಸ್ಯಾಪಿ ನ ವಿರೋಧಃ |
ತೇನ ಚೈವ ವಿನಿಷ್ಪಿಷ್ಟೋ ವೇಪಮಾನೋ ನೃಪಾತ್ಮಜಃ |
ವ್ಯಸುಃ ಪಪಾತ ಮೇದಿನ್ಯಾಂ ತತೋ ಧಾತ್ರೀ ವಿಚುಕ್ರುಶೇ ॥33॥
ತನ್ನ ಮೇಲೆ ಬೀಳುತ್ತಿರುವ ಹುಲಿಯ ಆರ್ಭಟವನ್ನು ಕಂಡು, ಬಾಲಕನು ನಡುಗಿಹೋದನು. ಆ ಸಂದರ್ಭದಲ್ಲಿ ಹುಲಿಯು ಅವನ ಮೇಲೆ ಬಿದ್ದು, ಅಪ್ಪಳಿಸಿತು. ಕೂಡಲೇ ಆ ಕುಮಾರನು ಪ್ರಾಣಬಿಟ್ಟನು. ಇದನ್ನು ಕಂಡು ದಾದಿಯು ಉಚ್ಚಕಂಠದಿಂದ ಕೂಗ ತೊಡಗಿದಳು.
ಹತ್ವಾ ತು ರಾಜಪುತ್ರಂ ಸ ತತ್ರೈವಾಂತರಧೀಯತ |
ಶಾರ್ದೂಲೋ ದೇವರಾಜಸ್ಯ ಮಾಯಯಾಂತರ್ಹಿತಸ್ತದಾ ॥34॥
ಹುಲಿಯು ಹೀಗೆ ಆ ರಾಜಪುತ್ರನನ್ನು ಕೊಂದಿತು. ಅನಂತರ ದೇವರಾಜನ ಮಾಯೆಯಿಂದ ಆಗಮಿಸಿದ ಆ ಹುಲಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿತು.
ಧಾತ್ರ್ಯಾಸ್ತು ನಿನದಂ ಶ್ರುತ್ವಾ ರುದತ್ಯಾಃ ಪರಮಾರ್ತವತ್ |
ಅಭ್ಯಧಾವತ ತಂ ದೇಶಂ ಸ್ವಯಮೇವ ಮಹೀಪತಿಃ ॥35॥
ದಾದಿಯ ಆಕ್ರಂದನವು ಸೃಂಜಯನಿಗೆ ಕೇಳಿಸಿತು. ಕೂಡಲೇ ಸ್ವತಃ ತಾನೇ ಓಡಿಬಂದನು.
ಸ ದದರ್ಶ ಗತಾಸುಂ ತಂ ಶಯಾನಂ ಪೀತಶೋಣಿತಮ್ |
ಕುಮಾರಂ ವಿಗತಾನಂದಂ ನಿಶಾಕರಮಿವ ಚ್ಯುತಮ್ ॥36॥

ತನ್ನ ಮಗನು ಪ್ರಾಣಶೂನ್ಯನಾಗಿ ನೆಲದ ಮೇಲೆ ಬಿದ್ದಿದ್ದನು. ಹುಲಿಯು ರಕ್ತಪಾನವನ್ನು ಮಾಡಿದ್ದರಿಂದ ರಕ್ತಶೂನ್ಯನಾಗಿದ್ದನು. ಆಕಾಶದಲ್ಲಿರುವ ಚಂದ್ರನು ನೆಲದ ಮೇಲೆ ಬಿದ್ದಂತೆ ಆನಂದವನ್ನು ಕಳೆದುಕೊಂಡ ತನ್ನ ಮಗನು ಅಲ್ಲಿ ಬಿದ್ದನು.
ಸ ತಮುತ್ಸಂಗಮಾರೋಪ್ಯ ಪರಪೀಡಿತವಕ್ಷಸಮ್ |
ಪುತ್ರಂ ರುಧಿರಸಂಸಿಕ್ತಂ ಪರ್ಯದೇವಯದಾತುರಃ ॥37॥
ಆ ಸೃಂಜಯನಿಗೆ ಒಮ್ಮೆಲೇ ದುಃಖವು ಉಮ್ಮಳಿಸಿತು. ಎದೆಯನ್ನು ಬಡೆದು- ಕೊಳ್ಳುತ್ತಿದ್ದನು. ಆ ಬಾಲಕನ ಮೃತದೇಹವನ್ನು ಎತ್ತಿ ತನ್ನ ತೊಡೆಯ ಮೇಲಿಟ್ಟು- ಕೊಂಡನು. ಗಟ್ಟಿಯಾಗಿ ಗಳಗಳನೆ ಅತ್ತುಬಿಟ್ಟನು.
ತತಸ್ತಾ ಮಾತರರಸ್ತಸ್ಯ ರುಂದತ್ಯಃ ಶೋಕಕರ್ಶಿತಾಃ |
ಅಭ್ಯಧಾವಂತ ತಂ ದೇಶಂ ಯತ್ರ ರಾಜಾ ಸ ಸೃಂಜಯಃ ॥38॥
ಅದೇ ಸಂದರ್ಭದಲ್ಲಿ ಆ ಬಾಲಕನ ತಾಯಿಂದಿರು ಕೂಡ ಓಡಿ ಬಂದರು. ಸೃಂಜಯನು ಆಕ್ರಂದನ ಮಾಡುತ್ತಿದ್ದನು. ಅವನ ಬಳಿ ಬಂದು ತಾವು ಅಳಲು ಪ್ರಾರಂಭ ಮಾಡಿದರು.
ತತಃ ಸ ರಾಜಾ ಸಸ್ಮಾರ ಮಾಮಂತರ್ಗತಮಾನಸಃ |
ತಚ್ಚಾಹಂ ಚಿಂತಿತಂ ಜ್ಞಾತ್ವಾ ಗತವಾಂಸ್ತಸ್ಯ ದರ್ಶನಮ್ ॥39॥
ಇದೇ ಸಂದರ್ಭದಲ್ಲಿ ಅಂದು ನಾನು ಅವನಿಗೆ ಹೇಳಿದ ಮಾತು ನೆನಪಾಯಿತು. ನನ್ನನ್ನು ಮನಸ್ಸಿನಲ್ಲಿ ನೆನೆಸಿಕೊಂಡನು. ಆಗ ಸ್ಮರಣೆ ಮಾಡಿಕೊಳ್ಳುತ್ತಿದ್ದಾನೆಂದು ತಿಳಿದ ಕೂಡಲೇ ನಾನು ಅವನಿಗೆ  ದರ್ಶನವನ್ನು ನೀಡಿದೆನು.
ಸ ಮಯ್ಯೈತಾನಿ ವಾಕ್ಯಾನಿ ಶ್ರಾವಿತಃ ಶೋಕಲಲಾಸಃ |
ಯಾನಿ ತೇ ಯದುವೀರೇಣ ಕಥಿತಾನಿ ಮಹೀಪತೇ ॥40॥
ಶ್ರೀಕೃಷ್ಣ ಪರಮಾತ್ಮನು ಯಾವ ಮಾತುಗಳನ್ನು ಹೇಳುತ್ತಾ ನಿನಗೆ ಸಮಾಧಾನ- ವನ್ನು ಮಾಡುತ್ತಿದ್ದಾನೋ, ಅಂಥ ಮಾತುಗಳನ್ನೇ ನಾನೂ ಕೂಡ ಸೃಂಜಯನಿಗೆ ಪ್ರಾರಂಭ ಮಾಡಿದೆನು. ಬಗೆ ಬಗೆಯಾಗಿ ಅವನಿಗೆ ಸಾಂತ್ವನವನ್ನು ಮಾಡಲು ಪ್ರಯತ್ನಪಟ್ಟೆನು.
ಸಂಜೀವಿತಶ್ಚಾಪಿ ಮಯಾ ವಾಸವಾನುಮತೇ ತದಾ |
ಭವಿತವ್ಯಂ ತಥಾ ತಚ್ಚ ನ ತಚ್ಛಕ್ಯಮತೋಽನ್ಯಥಾ ॥41॥
ಅವನ ದುಃಖವನ್ನು ನೋಡಿ, ಮಗುವನ್ನು ಬದುಕಿಸಬೇಕೆಂದು ಸಂಕಲ್ಪ ಮಾಡಿದೆನು. ಮೊದಲು ದೇವೇಂದ್ರನ ಬಳಿ ಅನುಮತಿಯನ್ನು ಪಡೆದುಕೊಂಡೆನು. ಪುನಃ ಬಾಲಕನನ್ನು ಬದುಕಿಸಿ ಬಿಟ್ಟೆನು. ಬದುಕಿದ ಮೇಲೆ ಇವನು ಇಂದ್ರನನ್ನು ಅನುಸರಿಸಬೇಕೇ ಹೊರತು, ಅವನಿಗೆ ವಿರುದ್ಧವಾಗಿ ನಡೆಯಬಾರದು. ಇಲ್ಲದಿದ್ದರೆ ಬದುಕಿಸಲು ಸಾಧ್ಯವಿಲ್ಲವೆಂದು ಹೇಳಿದನು.
ಅತ ಊರ್ಧ್ವಂ ಕುಮಾರಃ ಸ ಸ್ವರ್ಣಷ್ಠೀವೀ ಮಹಾಯಶಾಃ |
ಚಿತ್ತಂ ಪ್ರಸಾದಯಾಮಾಸ ಪಿತುರ್ಮಾತುಶ್ಚ ವೀರ್ಯವಾನ್ ॥42॥
ನನ್ನ ಮಾತಿಗೆ ಸೃಂಜಯರಾಜನು ಒಪ್ಪಿದನು. ಅನಂತರ ಆ ಮಗುವನ್ನು ಬದುಕಿಸಿದೆನು. ಅನಂತರ ಸುವರ್ಣಷ್ಠೀವಿಯು ಕೀರ್ತಿಯಲ್ಲಿ, ಪರಾಕ್ರಮದಲ್ಲಿ ಪ್ರಖ್ಯಾತನಾದನು. ತಂದೆ-ತಾಯಿಯರಿಗೆ ಸಂತೋಷವನ್ನುಂಟು ಮಾಡಿದನು.
ಕಾರಯಾಮಾಸ ರಾಜ್ಯಂ ಸ ಪಿತರಿ ಸ್ವರ್ಗತೇ ವಿಭುಃ |
ವರ್ಷಾಣಾಮೇಕಶತವತ್ ಸಹಸ್ರಂ ಭೀಮವಿಕ್ರಮಃ ॥43॥
ತನ್ನ ತಂದೆಯಾದ ಸೃಂಜಯನು ಸ್ವರ್ಗಕ್ಕೆ ತೆರಳಿದ ಮೇಲೆ ಸುವರ್ಣಷ್ಠೀವಿಯು ಸಿಂಹಾಸನವನ್ನೇರಿದನು. ಹನ್ನೊಂದು ನೂರು ವರ್ಷಗಳ ಕಾಲ ಭೀಮಪರಾಕ್ರಮ- ನಾದ ಸುವರ್ಣಷ್ಠೀವಿಯು ರಾಜ್ಯವನ್ನಾಳಿದನು.
ತತ ಇಷ್ಟ್ವಾ ಮಹಾಯಜ್ಞೈರ್ಬಹುಭಿರ್ಭೂರಿದಕ್ಷಿಣೈಃ |
ತರ್ಪಯಾಮಾಸ ದೇವಾಂಶ್ಚ ಪಿತೄಂಶ್ಚೈವ ಮಹಾದ್ಯುತಿಃ ॥44॥
ತನ್ನ ರಾಜ್ಯಭಾರದಲ್ಲಿ ಸುವರ್ಣಷ್ಠೀವಿಯು ಬಹುದಕ್ಷಿಣಾಕವಾದ ಅನೇಕ ಮಹಾಯಾಗಗಳನ್ನು ಆಚರಿಸಿದನು. ದೇವತೆಗಳನ್ನು, ಪಿತೃಗಳನ್ನು ಆ ಮಹಾ- ದ್ಯುತಿಯು ಸಂತೋಷ ಪಡಿಸಿದನು.
ಉತ್ಪಾದ್ಯ ಚ ಬಹೂನ್ ಪುತ್ರಾನ್ ಕುಲಸಂತಾನಕಾರಿಣಃ |
ಕಾಲೇನ ಮಹತಾ ರಾಜನ್ ಕಾಲಧರ್ಮಮುಪೇಯಿವಾನ್ ॥45॥
ಅನೇಕ ಪುತ್ರರನ್ನು ಪಡೆದನು. ಪ್ರತಿಯೊಬ್ಬರು ಸಂತಾನಾಭಿವೃದ್ಧಿಗೆ ಕಾರಣರಾ- ಗಿದ್ದರು. ಚಿರಕಾಲ ಭೂಮಿಯಲ್ಲಿದ್ದು ತಾನೂ ಸಹ ಕಾಲಧರ್ಮಕ್ಕೆ ಅನುಗುಣವಾಗಿ ಲೋಕಾಂತರಕ್ಕೆ ತೆರಳಿದನು.
ಸ ತ್ವಂ ರಾಜೇಂದ್ರ ಸಂಜಾತಂ ಶೋಕಮೇತನ್ನಿವರ್ತಯ |
ಯಥಾ ತ್ವಾಂ ಕೇಶವಃ ಪ್ರಾಹ ವ್ಯಾಸಶ್ಚ ಸುಮಹಾತಪಾಃ ॥46॥
ಧರ್ಮರಾಜನೇ! ನೀನೂ ಕೂಡ ಈ ಶೋಕವನ್ನು ಬಿಡಬೇಕು. ಶ್ರೀಕೃಷ್ಣಪರಮಾತ್ಮ ಹಾಗೂ ಶ್ರೀವೇದವ್ಯಾಸದೇವರು ಹೇಳಿದಂತೆ ನಡೆದುಕೋ.
ಪಿತೃಪೈತಾಮಹಂ ರಾಜ್ಯಮಾಸ್ಥಾಯ ಧುರಮುದ್ವಹ |
ದೃಷ್ಟ್ವಾ ಪುಣ್ಯೈರ್ಮಹಾಯಜ್ಞೈರಿಷ್ಟ್ವಾಂಲ್ಲೋಕಾನವಾಪ್ಸ್ಯಸಿ ॥47॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ನಾರದೇನ ಸ್ವರ್ಣಷ್ಠೀವಿಜನ್ಮಕಥನಂ ನಾಮ ದ್ವಾತ್ರಿಂಶೋಽಧ್ಯಾಯಃ ॥32
ನಿನ್ನ ತಾತ, ಮುತ್ತಾತಂದಿರಿಂದ ವಂಶಪಾರಂಪರ್ಯಕವಾಗಿ ಬಂದಿರುವ ಪುಣ್ಯ- ಕರವಾದ ಮಹಾಯಾಗಗಳನ್ನು ನಡೆಸು. ಆಗ  ನಿನ್ನ ಅಭೀಷ್ಟವಾದ ಪುಣ್ಯಲೋಕ- ಗಳನ್ನು ಪಡೆಯುವಿ.
ದ್ರೋಣಪರ್ವದಲ್ಲಿಯೂ ಈ ಕಥೆಯು ಬಂದಿದೆ. ಆದರೆ  ಸುವರ್ಣೇಷ್ಠಿಯು ಹೇಗೆ ಹುಟ್ಟಿದ? ಹೇಗೆ ಸತ್ತ? ಎಂಬ ಕಥೆಯಷ್ಟೇ ಅಲ್ಲಿ

ಬಂದಿದೆ. ವಿವಾಹದ ಕಥೆಯು ದ್ರೋಣಪರ್ವದಲ್ಲಿ ಬಂದಿರುವುದಿಲ್ಲ. ಅದರ ವಿವರಣೆ ಇಲ್ಲಿ ಪ್ರಸಕ್ತ- ವಾಗಿದೆ. ನಾರದರ ಬಗ್ಗೆ ಬೇರೆ ಬೇರೆ ಪುರಾಣಗಳಲ್ಲಿ ಬಂದ ಕಥೆಯ ಸಂಕ್ಷೇಪ ವಿವರಣೆ ಹೀಗಿದೆ -
ಲಿಂಗಪುರಾಣದಲ್ಲಿ ಬರುವ ಕಥೆ ಹೀಗಿದೆ - ಅಂಬರೀಷ ಎಂಬ ಪ್ರಸಿದ್ಧನಾದ ರಾಜನಿಗೆ ಶ್ರೀಮತಿ ಎಂಬ ಮಗಳಿದ್ದಳು. ಅವನ ಬಳಿ ಒಮ್ಮೆ ನಾರದರು ಹಾಗೂ ಪರ್ವತ ಮಹರ್ಷಿಗಳು ಆಗಮಿಸಿದರು. ಅವನ ಮಗಳನ್ನು ನೋಡಿ, ಮೋಹಿತರಾದರು. ಇಬ್ಬರಲ್ಲೂ ಪರಸ್ಪರ ಜಗಳ ಪ್ರಾರಂಭವಾಯಿತು. ಶ್ರೀಮತಿ- ಯನ್ನು ನಾನು ವಿವಾಹ ಮಾಡಿಕೊಳ್ಳುತ್ತೇನೆಂದು ನಾರದರು ಹೇಳಿದರೆ, ಪರ್ವತ ಋಷಿಗಳು ನಾನು ವಿವಾಹ ಮಾಡಿಕೊಳ್ಳುತ್ತೇನೆಂದು ಹೇಳುತ್ತಾರೆ. ಕೊನೆಯಲ್ಲಿ ಇಬ್ಬರೂ ಕೂಡ ಪರಸ್ಪರ ಶಾಪವನ್ನು ನೀಡಿದರು. ಪರ್ವತ ಋಷಿಯು ನಾರದರಿಗೆ `ನೀನು ಕಪಿಮುಖದವನಾಗು' ಎಂಬುದಾಗಿ ಶಾಪವನ್ನು ನೀಡಿದರು. ನಾರದರು ಪರ್ವತ ಋಷಿಗೆ `ನೀನು ಕತ್ತೆಮುಖದವನಾಗು' ಎಂಬುದಾಗಿ ಶಾಪವನ್ನು ನೀಡಿದರು. ಕೊನೆಯಲ್ಲಿ ಇಬ್ಬರಿಗೂ ಶ್ರೀಮತಿಯನ್ನು ವರಿಸಲು ಸಾಧ್ಯವಾಗದೇ ಅಂಬರೀಷನನ್ನೇ ಶಪಿಸಲು ಮುಂದಾದರು. ಅಂತಿಮವಾಗಿ ಅಂಬರೀಷನು ಭಗವಂತನನ್ನೇ ಮೊರೆಹೊಕ್ಕನು. ಮತ್ತು ತನ್ನ ಮಗಳನ್ನು ಭಗವಂತನಿಗೆ ಕೊಟ್ಟು ವಿವಾಹ ಮಾಡಿದನು.
ದೈವೀಭಾಗವತದಲ್ಲಿ ನಾರದರ ಬಗ್ಗೆ ಹೀಗೆ ಬರುತ್ತದೆ - ಒಮ್ಮೆ ನಾರದರು ಶ್ವೇತದ್ವೀಪಕ್ಕೆ ತೆರಳಿದ್ದರು. ಅಲ್ಲಿ ಮುಕ್ತಜೀವರನ್ನು ಹಾಗೂ ಪರಮಾತ್ಮನನ್ನು ನೋಡಿ ಬಹಳ ಸಂತೋಷ ಪಟ್ಟರು. ಅನಂತರ ನಿನ್ನ ಮಾಯೆಯನ್ನು ನನಗೂ ಕೂಡ ತಿಳಿಸು ಎಂಬುದಾಗಿ ಭಗವಂತನನ್ನು ಶರಣಾಗತರಾದರು. ಆಗ ಪರಮಾತ್ಮನು ನಾರದರನ್ನು ಗರುಡನ ಮೇಲೆ ಕುಳ್ಳಿರಿಸಿಕೊಂಡು ಹೊರಟನು. ಕಾಮ್ಯಕುಬ್ಜ ಎಂಬ ಉತ್ತರಪ್ರದೇಶದಲ್ಲಿರುವ ಕ್ಷೇತ್ರವಿಶೇಷದಲ್ಲಿ ಗರುಡನಿಂದ ನಾರದರನ್ನು ಇಳಿಸಿದನು. ಇಲ್ಲಿರುವ ಸರೋವರದಲ್ಲಿ ಸ್ನಾನ ಮಾಡಿಬಾ ಎಂಬುದಾಗಿ ಭಗವಂತನು ನಾರದರಿಗೆ ಹೇಳಿದರು. ಅದರಂತೆ ನಾರದರು ಸ್ನಾನ ಮಾಡಿದರು. ಆದರೆ ಕೂಡಲೇ ಹೆಣ್ಣಾಗಿ ಬಿಟ್ಟರು. ಹೆಣ್ಣಾದ ನಾರದರು ವಿಷ್ಣುವಿನ ಬಳಿ ತೆರಳಲು ನಾಚಿಕೆ ಪಟ್ಟರು. ಆಗ ನಾರದರ ಕಮಂಡಲು, ವೀಣೆಗಳನ್ನು ಭಗವಂತನು ತೆಗೆದುಕೊಂಡು ತೆರಳಿಬಿಟ್ಟನು. ಇಷ್ಟರಲ್ಲಿ ಆ ಕಾಮ್ಯಕುಬ್ಜದ ತಾಲಧ್ವಜ ಎಂಬ ರಾಜನು ಅಲ್ಲಿಗೆ ಬಂದನು. ನಾರದರನ್ನು ನೋಡಿ ವಿವಾಹವಾದನು. ಆ ತಾಲಧ್ವಜನಿಂದ ವೀರವರ್ಮ, ಸುಧನ್ವ ಮೊದಲಾದ ಇಪ್ಪತ್ತು ಮಂದಿ ಮಕ್ಕಳು ಹುಟ್ಟಿದರು. ಆ ಇಪ್ಪತ್ತು ಮಕ್ಕಳಿಗೂ ಮಕ್ಕಳಾದರು. ಹೀಗೆ ವಂಶವು ಅಭಿವೃದ್ಧವಾಯಿತು. ಒಮ್ಮೆ ತಾಲಧ್ವಜನ ಮೇಲೆ ಶತ್ರುರಾಜ್ಯದವರು ಆಕ್ರಮಣ ಮಾಡಿದರು. ಆಗ ಯುದ್ಧದಲ್ಲಿ ತಾಲಧ್ವಜನು ಸೇರಿದಂತೆ ಮಕ್ಕಳು, ಮೊಮ್ಮಕ್ಕಳೂ ಎಲ್ಲರೂ ಕೂಡ ಯುದ್ಧದಲ್ಲಿ ಸತ್ತುಹೋದರು. ಆಗ ಹೆಣ್ಣಿನ ವೇಷದಲ್ಲಿರುವ ನಾರದರು ರಣರಂಗಕ್ಕೆ ಬಂದು, ಗಂಡ, ಮಕ್ಕಳು, ಮೊಮ್ಮಕ್ಕಳು ಎಲ್ಲರೂ ಮಡಿದದ್ದನ್ನು ಕಂಡು ಗೋಳಾಡಲು ಪ್ರಾರಂಭಮಾಡಿದರು. ಆಗ ಮಹಾವಿಷ್ಣು ಒಬ್ಬ ಮುದುಕನ ವೇಷದಲ್ಲಿ ಅಲ್ಲಿಗೆ ಬಂದನು. ನಾರದರನ್ನು ಸಾಂತ್ವನ ಮಾಡಿದನು. ಗಂಡನಿಗೆ ಮಕ್ಕಳು, ಮೊಮ್ಮಕ್ಕಳಿಗೆ ತಿಲೋದಕವನ್ನು ಕೊಡಿಸಿದನು. ಅನಂತರ ಸಮೀಪದಲ್ಲೇ ಇದ್ದ ಪುಂತೀರ್ಥದಲ್ಲಿ ಸ್ನಾನ ಮಾಡಲು ಹೇಳಿದನು. ಆಗ ಅಲ್ಲಿ ಸ್ನಾನ ಮಾಡಿದ ನಾರದರಿಗೆ ಪುರುಷರೂಪವು ಬಂದಿತು.
ಭಾಗವತದಲ್ಲಿ ಬರುವ ಕಥೆ ಹೀಗಿದೆ - ಚತುರ್ಮುಖಬ್ರಹ್ಮದೇವರ ತೊಡೆ- ಯಿಂದ ನಾರದರು ಹುಟ್ಟಿದರು. ಅನಂತರ ಚತುರ್ಮುಖಬ್ರಹ್ಮದೇವರ ಬಳಿ ನಾನು ಬ್ರಹ್ಮಚಾರಿಯಾಗಿಯೇ ಇರುತ್ತೇನೆಂದು ಆ ನಾರದರು ಹೇಳಿದರು. ಆಗ ಚತುರ್ಮುಖಬ್ರಹ್ಮದೇವರು ಸನಕಾದಿಗಳು ಈಗಾಗಲೇ ಬ್ರಹ್ಮಚಾರಿಗಳಾಗಿದ್ದಾರೆ. ಆದ್ದರಿಂದ ನೀನು ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡು ಎಂದು ಹೇಳಿದರು. ಆದರೆ ನಾರದರು ಸಾಧ್ಯವಿಲ್ಲವೆಂದು ಉತ್ತರಿಸಿದರು. ಕುಪಿತರಾದ ಬ್ರಹ್ಮದೇವರು ಒಂದು ವಿವಾಹವನ್ನು ಮಾಡಿಕೊಳ್ಳಲು ನಿರಾಕರಿಸಿದ ನಿನಗೆ ಐವತ್ತು ವಿವಾಹವಾಗಲಿ ಎಂದು ಶಾಪವನ್ನು ನೀಡಿದರು. ಮತ್ತು ಉಪಬರ್ಹಣ ಎಂಬ ಗಂಧರ್ವ ಜನ್ಮದ ಮುಂದಿನ ಜನ್ಮದಲ್ಲಿ ಒಬ್ಬ ದಾಸಿಯ ಮಗನಾಗಿ ಹುಟ್ಟುವಿ. ಆ ಜನ್ಮದಲ್ಲಿಯೂ ದೊಡ್ಡ ಹರಿಭಕ್ತನಾಗುವಿ. ಅನಂತರ ನನ್ನ ಮಗನಾಗಿ ಜನಿಸುವಿ ಎಂಬುದಾಗಿ ಚತುರ್ಮುಖ- ಬ್ರಹ್ಮದೇವರು ಹೇಳುತ್ತಾರೆ.
ಚಿತ್ರಕೇತು ಎಂಬ ಗಂಧರ್ವನೊಬ್ಬನು ಶಿವನನ್ನು ಕುರಿತು ತಪಸ್ಸು ಮಾಡುತ್ತಾನೆ. ಅವನ ತಪಸ್ಸಿಗೆ ಶಿವನು ಮೆಚ್ಚುತ್ತಾನೆ. ನಾರದನು ನಿನ್ನ ಮಗನಾಗಿ ಜನಿಸುತ್ತಾನೆಂಬ ವರವನ್ನು ಶಿವನು ನೀಡುತ್ತಾನೆ. ಆಗ ನಾರದನಿಗೆ ಉಪಬರ್ಹಣ ಎಂಬುದಾಗಿ ನಾಮಕರಣವನ್ನು ಚಿತ್ರಕೇತುವು ಮಾಡುತ್ತಾನೆ.  ಆ ಉಪಬರ್ಹಣನು ದೊಡ್ಡ ಹರಿಭಕ್ತನಾಗಿದ್ದನು. ಬೃಹಸ್ಪತ್ಯಾಚಾರ್ಯರಿಂದಲೇ ಎಲ್ಲ ವಿದ್ಯೆಗಳ ಉಪದೇಶವಾ- ಗುತ್ತದೆ. ಹಿಮಾಲಯದ ತಪ್ಪಲಿನಲ್ಲಿ ಒಮ್ಮೆ ತಪಸ್ಸು ಮಾಡುತ್ತಿದ್ದರು. ಸಮಾಧ್ಯವ್ಯಸ್ಥ- ಯಲ್ಲಿ ಇದ್ದಾಗ ಚೈತ್ರರಥ ಎಂಬ ಗಂಧರ್ವನ ಐವತ್ತು ಮಕ್ಕಳು ಆ ತಪಸ್ಸು ಮಾಡುತ್ತಿರುವ ಸ್ಥಳಕ್ಕೆ ಆಗಮಿಸಿದರು. ಪ್ರಾರಂಭದಲ್ಲಿ ತಪಸ್ಸಿಗೆ ವಿಘ್ನ ಬಾರದಿದ್ದರೂ ಸ್ವಲ್ಪ ಕಾಲ ಕಳೆದ ಮೇಲೆ ಐವತ್ತು ಜನರನ್ನು ನೋಡಿ, ಮನಸ್ಸು ವಿಕಾರವಾಯಿತು. ಆ ಐವತ್ತು ಜನರ ಜೊತೆ ವಿವಾಹವಾದನು. ತನ್ನ ಅರಮನೆಯಲ್ಲಿ ಸುಖವಾಗಿ ಕಾಲಕಳೆಯುತ್ತಿದ್ದನು. ಈ ಉಪವರ್ಹಣನು ಸಂಗೀತ, ವೀಣೆ ಮೊದಲಾದವುಗಳಲ್ಲಿ ಪ್ರಾವೀಣ್ಯವನ್ನು ಪಡೆದಿದ್ದನು. ಒಮ್ಮೆ ದೇವತೆಗಳು ಈ ಉಪಬರ್ಹಣನನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋದರು. ಉಪಬರ್ಹಣನು ದೇವತೆಗಳ ಜೊತೆ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ರಂಭೆಯೂ ಕೂಡ ಬಂದಿದ್ದಳು. ಆ ರಂಭೆಯನ್ನು ನೋಡಿ, ಈ ಉಪಬರ್ಹಣನಿಗೆ ಮನಸ್ಸು ವಿಕಾರವಾಯಿತು. ಇದನ್ನರಿತ ಪ್ರಜಾಪತಿಗಳಿಗೆ ಸಿಟ್ಟು ಬಂದಿತು. ಕೂಡಲೇ ಶಪಿಸಿದರು. ಇದರಿಂದ ಖಿನ್ನನಾದ ಉಪಬರ್ಹಣನು ತನ್ನ ಅರಮನೆಗೆ ಹಿಂತಿರುಗಿ ಬಂದು ಅತ್ಯಂತ ದುಃಖದಿಂದ ಪ್ರಾಯೋಗವೇಷಕ್ಕಾಗಿ ದರ್ಭಾಸನದ ಮೇಲೆ ಕುಳಿತುಬಿಟ್ಟನು. ಆ ಉಪಬರ್ಹಣನ ಹಿರಿಯ ಪತ್ನಿಯಾದ ಮಾಲತಿಯೆಂಬುವಳು ಇದನ್ನು ತಿಳಿದು ಎಲ್ಲ ಪ್ರಜಾಪತಿಗಳಿಗೆ ತಾನೇ ಶಾಪನೀಡುತ್ತೇನೆಂದು ಧಾವಿಸಿ ಹೊರಟಳು. ನನ್ನ ಪತಿಗೆ ಮರಣ ಬರುವಂತೆ ಏಕೆ ಶಾಪವನ್ನು ನೀಡಿದ್ದೀರಿ? ಎಂದು ಗದರಿಸಿದಳು. ಎಲ್ಲ ಪ್ರಜಾಪತಿಗಳು ವಿಷ್ಣುವನ್ನು ಮೊರೆಹೊಕ್ಕರು. ಮಹಾವಿಷ್ಣುವೇ ಬಂದು ಮಾಲತಿಗೆ ಸಮಾಧಾನ ಹೇಳಿದನು. ದೇವತೆಗಳೂ ಕೂಡ ಆ ಮಾಲತಿಗೆ ಸಮಾಧಾನದ ಮಾತುಗಳನ್ನು ಹೇಳಿದರು. ಹಿಂದೆ ಚತುರ್ಮುಖಬ್ರಹ್ಮನು ವರವನ್ನು ನೀಡಿದ್ದನು. ಅದಕ್ಕೆ ಅನುಗುಣವಾಗಿ ಈಗ ಉಪಬರ್ಹಣನು ಮರವಣವನ್ನು ಹೊಂದಿದರೂ ಕೂಡ ಚತುರ್ಮುಖಬ್ರಹ್ಮನಿಂದ ಹುಟ್ಟುತ್ತಾನೆಂದು ತಿಳಿಸಿದರು. ಪ್ರಜಾಪತಿಗಳ ಶಾಪದ ಪ್ರಭಾವದಿಂದ ಉಪಬರ್ಹಣನು ಮರಣವನ್ನು ಹೊಂದಿದನು. ಮೃತನಾದ ಮೇಲೆ ಮಹಾವಿಷ್ಣುವು ಮುದುಕು ಬ್ರಾಹ್ಮಣನ ವೇಷದಿಂದ ಅಲ್ಲಿಗೆ ಬಂದನು. ಎದ್ದೇಳು ಮೇಲೆ ಎಂಬುದಾಗಿ ಆ ಉಪಬರ್ಹಣನ ತಲೆಯ ಮೇಲೆ ಕೈ ಇಟ್ಟನು. ಕಣ್ಣು ತಿಕ್ಕಿ ಉಪಬರ್ಹಣನು ನಿದ್ದೆಯಿಂದ ಎಚ್ಚೆತ್ತವನಂತೆ ಬದುಕಿ ಬಂದನು. ಪುನಃ ತನ್ನ ಹೆಂಡಂದಿರ

ಜೊತೆ ಸುಖವಾಗಿ ಬದುಕಿದನು. ಅನಂತರ ಆ ಐವತ್ತು ಮಂದಿ ಹೆಂಡಂದಿರಲ್ಲಿ ಮಕ್ಕಳು ಹುಟ್ಟಿದಳು. ಅವರಿಗೂ ಮಕ್ಕಳಾಗಿ ಸಂತಾನವು ಅಭಿ- ವೃದ್ಧವಾಯಿತು. ತಾನು ಪುನಃ ಮರಣವನ್ನು ಹೊಂದುತ್ತೇನೆಂದು ಅವನಿಗೆ ತಿಳಿಯಿತು. ಆ ಸಂದರ್ಭದಲ್ಲಿ ವಯೋವೃದ್ಧನಾದ ಉಪಬರ್ಹಣನು ಗಂಗಾನದಿ ತೀರಕ್ಕೆ ಮಾಲತಿಯ ಜೊತೆ ತೆರಳಿ ತಪಸ್ಸನ್ನು ಆಚರಿಸಿದನು. ಅಲ್ಲಿ ಮೃತನಾದನು. ಮಾಲತಿಯೂ ಕೂಡ ಮೃತಳಾದಳು.

ಆದರೆ ಪ್ರಚಲಿತ ಭಾಗವತದ ಏಳನೆಯ ಸ್ಕಂಧದಲ್ಲಿ ಉಪಬರ್ಹಣನ ಕಥೆಯು ಹೀಗಿರುವುದಿಲ್ಲ. ಸತ್ಯಲೋಕಕ್ಕೆ ಸಂಗೀತವನ್ನು ಹಾಡಲು ತೆರಳಿದ ಉಪಬರ್ಹಣನು ಸರಿಯಾದ ಸಂಗೀತ ಕಛೇರಿಯನ್ನು ನಡೆಸಲಿಲ್ಲ. ಅದಕ್ಕಾಗಿ ಪ್ರಜಾಪತಿಗಳು ಶಾಪವನ್ನು ನೀಡಿದರು ಎಂದು ಇರುತ್ತದೆ. ಇದೇ ಉಪಬರ್ಹಣನು ಮುಂದೆ ದಾಸಿಯ ಪುತ್ರನಾದ ಕಥೆಯು ಭಾಗವತದ ಪ್ರಥಮಸ್ಕಂಧದಲ್ಲಿ ಬರುತ್ತದೆ. ಕಾಮ್ಯಕುಬ್ಜ ಎಂಬ ಪಟ್ಟಣದಲ್ಲಿ ದ್ರುಮಿಳ ಎಂಬ ರಾಜನಿದ್ದನು. ಕಲಾವತಿ ಎಂಬು- ವಳು ಇವನ ಹೆಂಡತಿಯಾಗಿದ್ದಳು. ಇವನು ಗಂಗಾನದಿಯ ತೀರದಲ್ಲಿ ತಪಸ್ಸನ್ನು ಆಚರಿಸಿದನು. ಕಶ್ಯಪಋಷಿಗಳನ್ನು ಕಲಾವತಿಯು ಸಂತೋಷ ಪಡಿಸಿದಳು. ಕಶ್ಯಪ- ಋಷಿಗಳ ತಪಃಶಕ್ತಿಯಿಂದ ಅವಳು ತನ್ನ ಪತಿಯ ಮೂಲಕ ಗರ್ಭಿಣಿಯಾದಳು. ಪತಿಯು ವಿರಕ್ತನಾಗಿ ವಾನಪ್ರಸ್ಥಾಶ್ರಮಕ್ಕೆ ಹೊರಟಾಗ ತಾನೂ ಕೂಡ ಪತಿಯ ಸೇವೆ ಮಾಡಿಕೊಂಡು ಕಾಲವನ್ನು ಕಳೆಯುತ್ತೇನೆಂದು ಸಂಕಲ್ಪ ಮಾಡಿದಳು. ಆ ಸಂದರ್ಭದಲ್ಲಿ ನಿನ್ನ ಉದರದಲ್ಲಿ ಪುತ್ರನು ಬೆಳೆಯುತ್ತಿದ್ದಾನೆ. ಆದ್ದರಿಂದ ಪತಿಸೇವೆ- ಗಾಗಿ ವಾನಪ್ರಸ್ಥಾಶ್ರಮಕ್ಕೆ ತೆರಳಬೇಡ ಎಂದು ಆಕಾಶವಾಣಿ ಆಯಿತು. ಅನಂತರ ಪತಿಯೊಬ್ಬನೇ ವಾನಪ್ರಸ್ಥಾಶ್ರಮಕ್ಕೆ ಹೊರಟನು. ಇವಳು ತನ್ನ ದೇಶವನ್ನು ಬಿಟ್ಟು, ಮತ್ತೊಂದು ಊರಿಗೆ ಬಂದು, ಒಬ್ಬ ಬ್ರಾಹ್ಮಣ ಮನೆಯಲ್ಲಿ ಸೇವೆಗಾಗಿ ಸೇರಿಕೊಂಡಳು. ನವಮಾಸವು ತುಂಬಿದ ಮೇಲೆ ಸುಪುತ್ರನಿಗೆ ಜನ್ಮವನ್ನಿತ್ತಳು. ಆ ಊರಿಗೆ ದೊಡ್ಡ ಪ್ರಮಾಣದಲ್ಲಿ ಬರಗಾಲವು ಬಂದಿತ್ತು. ಈ ಮಗವು ಹುಟ್ಟಿದ ಕೂಡಲೇ ಧಾರಾಕಾರವಾಗಿ ಮಳೆಯು ಬಂದಿತ್ತು. `ನಾರ' ಶಬ್ದಕ್ಕೆ ನೀರು ಎಂಬರ್ಥವೂ ಇದೆ. ನೀರನ್ನು ಕೊಟ್ಟಿರುವ ಕಾರಣ ಮಗುವಿಗೆ `ನಾರದ' ಎಂದು ಹೆಸರನ್ನಿಟ್ಟರು. ಈ ಮಗುವು ದೊಡ್ಡವನಾದ ಮೇಲೆ ಆ ತಾಯಿಯು ಸರ್ಪದಿಂದ ಕಚ್ಚಿಸಿಕೊಂಡು ಮೃತಳಾದಳು. ಈ ಮಗುವು ಅನಾಥವಾಯಿತು. ಅನಂತರ ವಿರಕ್ತ- ರಾದ ನಾರದರು ತಪೋನಿರತರಾದರು. ಭಗವಂತನನ್ನು ತಮ್ಮ ಹೃದಯಕಮಲದಲ್ಲಿ ಕಂಡು ಜೀವನವನ್ನು ಸಾರ್ಥಕ ಮಾಡಿಕೊಂಡರು. ಇಷ್ಟು ಪ್ರಥಮಸ್ಕಂಧದಲ್ಲಿ ಬರುವ ಕಥೆ.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ನಾರದರಿಂದ ಹೇಳಲ್ಪಟ್ಟ ಸುವರ್ಣಷ್ಠೀವಿ ಜನ್ಮಕಥನವೆಂಬ 32ನೆಯ ಅಧ್ಯಾಯವು ಮುಗಿಯಿತು.

*****

32. ಮೂವತ್ತೂರನೆಯ ಅಧ್ಯಾಯ

ವೇದ್ಯವ್ಯಾಸದೇವರು ಯುಕ್ತಿಯುಕ್ತವಾದ ಮಾತುಗಳಿಂದ ಯುಧಿಷ್ಠಿರನನ್ನು ಸಮಾಧಾನ ಮಾಡುತ್ತಾರೆ. ಅನೇಕ ತತ್ವಗಳನ್ನು ಹೇಳುವ ಮೂಲಕ ಕ್ಷತ್ರಿಯ ಧರ್ಮದ ಪರಿಪಾಲನೆಯ ಬಗ್ಗೆ ಉಪದೇಶಿಸುತ್ತಾರೆ.

ವೈಶಂಪಾಯನಃ

ತೂಷ್ಣೀಂಭೂತಂ ತು ರಾಜಾನಂ ಶೋಚಮಾನಂ ಯುಧಿಷ್ಠಿರಮ್ |
ತಪಸ್ವೀ ಧರ್ಮತತ್ತ್ವಜ್ಞಃ ಕೃಷ್ಣದ್ವೈಪಾಯನೋಽಬ್ರವೀತ್ ॥1॥

ವೈಶಂಪಾಯನರು ಜನಮೇಜಯರಾಜನೇ ! ನಾರದರು ವಿವರವಾಗಿ ಇಷ್ಟು ಹೇಳಿದರೂ ಕೂಡ ಯುಧಿಷ್ಠಿರನ ದುಃಖವು ಶಮನವಾಗಲಿಲ್ಲ. ವೌನವಾಗಿಯೇ ಕುಳಿತುಬಿಟ್ಟನು. ಆಗ ಎಲ್ಲ ಧರ್ಮಗಳ ಮರ್ಮವನ್ನು ಪೂರ್ಣವಾಗಿ ಅರಿತ ಕೃಷ್ಣದ್ವೈಪಾಯನರು ರಾಜನಾದ ಧರ್ಮರಾಜನನ್ನು ಕುರಿತು ಹೀಗೆ ಉಪದೇಶಿಸಲು ಪ್ರಾರಂಭ ಮಾಡುತ್ತಾರೆ.

ಪ್ರಜಾನಾಂ ಪಾಲನಂ ಧರ್ಮೋ ರಾಜ್ಞಾಂ ರಾಜೀವಲೋಚನ |
ಧರ್ಮಃ ಪ್ರಮಾಣಂ ಲೋಕಸ್ಯ ನಿತ್ಯಂ ಧರ್ಮಾನುವರ್ತನಮ್ ॥2॥

ರಾಜೀವಲೋಚನನೇ! ರಾಜರಿಗೆ ಪ್ರಜೆಗಳನ್ನು ಪರಿಪಾಲನೆ ಮಾಡುವುದೇ ಪರಮಧರ್ಮವಾಗಿದೆ. ನಿರಂತರ ಧರ್ಮವನ್ನು ಅನುಸರಿಸುವವರಿಗೆ ಧರ್ಮವೇ ಪ್ರಮಾಣವಾಗಿರುತ್ತದೆ.

ಅನುತಿಷ್ಠಸ್ವ ವೈ ರಾಜನ್ ಪಿತೃಪೈತಾಮಹಂ ಪದಮ್ |
ಬ್ರಾಹ್ಮಣೇಷು ಚ ಯೋ ಧರ್ಮಃ ಸ ನಿತ್ಯೋ ವೇದನಿಶ್ಚಿತಃ ॥3॥

ರಾಜನೇ! ನೀನು ಧರ್ಮಮಾರ್ಗದಲ್ಲಿಯೇ ಮುನ್ನಡೆಯಬೇಕು. ನಿನ್ನ ತಂದೆ, ತಾತಂದಿರ ಮಾರ್ಗವನ್ನೇ ನೀನು ಹಿಂಬಾಲಿಸಬೇಕು. ಅವರೆಲ್ಲರೂ ಧರ್ಮಕ್ಕೆ ಅನುಸಾರಿಯಾಗಿ ರಾಜ್ಯವನ್ನು ಪರಿಪಾಲನೆ ಮಾಡುತ್ತಿದ್ದರು. ಅದರಂತೆ ನೀನೂ ಕೂಡ ಈ ರಾಜ್ಯವನ್ನು ಪರಿಪಾಲನೆ ಮಾಡು. ಬ್ರಾಹ್ಮಣನಿಗೆ ತಪಸ್ಸನ್ನು ಮಾಡುವುದು ಧರ್ಮವಾಗಿದೆ. ಇದು ಶಾಶ್ವತವಾಗಿ ಪ್ರಮಾಣಭೂತವಾದ ವೇದಗಳಿಂದ ನಿರ್ಧರಿ- ಸಲ್ಪಟ್ಟಿದೆ.

ತತ್ ಪ್ರಮಾಣಂ ಪ್ರಮಾಣಾನಾಂ ಶಾಶ್ವತಂ ಭರತರ್ಷಭ |
ತಸ್ಯ ಧರ್ಮಸ್ಯ ಕೃತ್ಸ್ನಸ್ಯ ಕ್ಷತ್ರಿಯಃ ಪರಿರಕ್ಷಿತಾಃ ॥4॥

ಬ್ರಾಹ್ಮಣ ಮೊದಲಾದ ಎಲ್ಲಾ ವರ್ಣದವರ ಧರ್ಮಗಳಿಗೆ ಕ್ಷತ್ರಿಯರಾದ ರಾಜರೇ ಪರಿರಕ್ಷಕನು.

ತಥಾ ಯಃ ಪ್ರತಿಹಂತ್ಯಸ್ಯ ಶಾಸನಂ ವಿಷಯೇ ನರಃ |
ಸ ಬಾಹುಭ್ಯಾಂ ವಿನಿಗ್ರಾಹ್ಯೋ ಲೋಕಯಾತ್ರಾವಿಘಾತಕಃ ॥5॥

ಯಾವ ಕ್ಷತ್ರಿಯನು ವಿಷಯಲೋಲುಪನಾಗಿ ಧರ್ಮಕ್ಕೆ ವಿರುದ್ಧವಾಗಿ ನಡೆ- ಯುತ್ತಾನೋ, ಅವನು ಲೋಕಯಾತ್ರೆಗೆ ವಿಘಾತಕನಾಗುತ್ತಾನೆ. ಕ್ಷತ್ರಿಯನಾದವನು ಅಂಥ ಸಮಾಜಘಾತಕನನ್ನು ತನ್ನೆರಡು ಭುಜಪರಾಕ್ರಮದಿಂದ ನಿಗ್ರಹ ಮಾಡಬೇಕು. (ಅಥವಾ ಅವನ ತೋಳುಗಳನ್ನೇ ತುಂಡರಿಸಬೇಕು.)

ಪ್ರಮಾಣಮಪ್ರಮಾಣಂ ಯಃ ಕುರ್ಯಾನ್ಮೋಹವಶಂ ಗತಃ |

ಭೃತ್ಯೋ ವಾ ಯದಿ ವಾ ಪುತ್ರಸ್ತಪಸ್ವೀ ವಾಪಿ ಕಶ್ಚನ ॥6॥
ಪಾಪಾನ್ ಸರ್ವೈರುಪಾಯೈಸ್ತಾನ್ ನಿಯಚ್ಛೇದ್ ಘಾತಯೇತ ವಾ॥
ಯಾವ ವ್ಯಕ್ತಿಯು ಮೋಹಪಾಶಕ್ಕೆ ಸಿಲುಕಿ ಪ್ರಮಾಣವನ್ನು ಅಪ್ರಮಾಣವನ್ನಾಗಿ ಮಾಡುತ್ತಾನೋ, ಅಂಥವನು ಭೃತ್ಯನಾಗಿರಲಿ, ಪುತ್ರನಾಗಿರಲಿ, ತಪಸ್ವಿಯಾಗಿರಲಿ ಅಥವಾ ಬೇರೆ ಯಾರೇ ಆಗಿರಲಿ ಎಲ್ಲಾ ವಿಧವಾದ ಉಪಾಯಗಳಿಂದ ಆ ಪಾಪಿಯನ್ನು ವಿನಾಶಗೊಳಿಸಬೇಕು. ಅಥವಾ  ಮತ್ತೊಬ್ಬರಿಂದಲಾದರೂ ಕೊಲ್ಲಿಸ- ಬೇಕು.
ಅತೋಽನ್ಯಥಾ ವರ್ತಮಾನೋ ರಾಜಾ ಪ್ರಾಪ್ನೋತಿ ಕಿಲ್ಬಿಷಮ್ |
ಧರ್ಮಂ ವಿನಶ್ಯಮಾನಂ ಹಿ ಯೋ ನ ರಕ್ಷೇತ್ ಸ ಧರ್ಮಹಾ ॥7॥
ಒಂದು ವೇಳೆ ಪಾಪಿಯಾದವನನ್ನೂ ಕೂಡ ನಿಗ್ರಹ ಮಾಡದೇ ಕ್ಷಮಿಸಿಬಿಟ್ಟರೆ, ಆ ರಾಜನೂ ಕೂಡ ಪಾಪಿಯ ಪಾಪಕ್ಕೆ ಭಾಗಿಯಾಗುತ್ತಾನೆ. ಕ್ರಮೇಣ ನಾಶ- ಹೊಂದುವ ಧರ್ಮವನ್ನು ಸಂರಕ್ಷಣೆ ಮಾಡದ ರಾಜನೂ ಕೂಡ ಧರ್ಮ- ಘಾತುಕನೇ ಆಗುತ್ತಾನೆ.

ತೇ ತ್ವಯಾ ಧರ್ಮಹಂತಾರೋ ನಿಹತಾಃ ಸಪದಾನುಗಾಃ |
ಸ್ವಧರ್ಮೇ ವರ್ತಮಾನಸ್ತ್ವಂ ಕಿನ್ನು ಶೋಚಸಿ ಪಾಂಡವ ॥8॥
ರಾಜಾ ಹಿ ಹನ್ಯಾದ್ ದದ್ಯಾಚ್ಚ ಪ್ರಜಾ ರಕ್ಷೇಚ್ಚ ಧರ್ಮತಃ ॥
ಯುಧಿಷ್ಠಿರನೇ! ನೀನು ಅತ್ಯಂತಯೋಗ್ಯವಾದ ಕಾರ್ಯವನ್ನು ಮಾಡಿರುವಿ. ಆ ದುರ್ಯೋಧನಾದಿಗಳು ಧರ್ಮಘಾತುಕರಾಗಿದ್ದರೂ ನೀನು ಅದನ್ನು ಸಹಕರಿಸಿದ ಅವರ ಪರಿವಾರಗಳ ಜೊತೆ ನಿಗ್ರಹ ಮಾಡಿರುವಿ. ಇದಕ್ಕೋಸ್ಕರ ಏಕೆ ದುಃಖ- ಪಡುತ್ತಿರುವಿ? ರಾಜನಾದವನು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲಲೇ ಬೇಕು. ಅರ್ಥಿಗಳಾದ ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡಬೇಕು.
ಯುಧಿಷ್ಠಿರಃ
ನ ತೇಽಭಿಶಂಕೇ ವಚನಂ ಯದ್ ಬ್ರವೀಷಿ ತಪೋಧನ |
ಅಪರೋಕ್ಷೋ ಹಿ ತೇ ಧರ್ಮಃ ಸರ್ವಧರ್ಮಭೃತಾಂ ವರ ॥9॥
ಯುಧಿಷ್ಠಿರ  ತಪೋಧನರೇ! ತಾವು ಹೇಳುವ ಮಾತುಗಳಲ್ಲಿ ನನಗೆ ಸಂಶಯ -ವಿಲ್ಲ. ತಾವು ಸಂಪೂರ್ಣವಾಗಿ ಧರ್ಮವನ್ನು ಅರಿತವರು. ಎಲ್ಲ ಧರ್ಮಗಳನ್ನು ಪ್ರತ್ಯಕ್ಷವಾಗಿ ಕಾಣುವವರು.
ಮಯಾ ಹ್ಯವಧ್ಯಾ ಬಹವೋ ಘಾತಿತಾ ರಾಜ್ಯಕಾರಣಾತ್ |
ತಾನ್ಯಕಾರ್ಯಾಣಿ ಮೇ ಬ್ರಹ್ಮನ್ ದಹಂತಿ ಚ ತಪಂತಿ ಚ ॥10॥
ಆದರೆ ನಾನು ಕೊಲ್ಲಬಾರದ ಅನೇಕ ರಾಜರನ್ನು ಸಂಹಾರ ಮಾಡಿಬಿಟ್ಟೆನು. ಇದುವೇ ನನ್ನ ಪರಿತಾಪಕ್ಕೆ ಕಾರಣವಾಗಿದೆ. ಅವಧ್ಯರಾದ ಅನೇಕರನ್ನು ಸಂಹಾರ ಮಾಡಿರುವುದೇ ನನ್ನ ಮನಸ್ಸನ್ನು ಸುಡುತ್ತಿದೆ. ಮತ್ತು ದಹಿಸುತ್ತಿದೆ.
ವ್ಯಾಸಃ
ಈಶ್ವರೋ ವಾ ಭವೇತ್ ಕರ್ತಾ ಪುರುಷೋ ವಾಪಿ ಭಾರತ |
ಭದ್ರೇ ವಾ ವರ್ತತೇ ಲೋಕೇ ಕರ್ಮಜಂ ವಾ ಫಲಂ ಸ್ಮೃತಮ್॥11॥
ವೇದವ್ಯಾಸದೇವರು  ಭಾರತನೇ! ನೀನು ವಿಮರ್ಶೆ ಮಾಡು. ಎಲ್ಲ ಕರ್ಮ- ಗಳನ್ನು ಮಾಡುವವನು ಈಶ್ವರನೋ? ಅಥವಾ ಮನುಷ್ಯನೋ? ಸುಖ- ದುಃಖಾದಿಗಳು ಲೋಕದಲ್ಲಿ ಹೇಗೆ ಬರುತ್ತದೆ? ಆ ಸುಖ-ದುಃಖಗಳು ಅವರವರ ಕರ್ಮದಿಂದ ಉಂಟಾಗುತ್ತವೆಯೇ? ಇದರ ಬಗ್ಗೆ ಯೋಚನೆ ಮಾಡು.
ಟಿಪ್ಪಣಿ- ಭದ್ರೇ ವಾ ವರ್ತತೇ ಲೋಕ ಇತ್ಯತ್ರ ವಾಪದೇನ ಅಭದ್ರೇ ವರ್ತತ ಇತ್ಯಧ್ಯಾಹಾರಣೀಯಮ್ | ಕರ್ಮಜಮ್ ಉಭಯವಿಧಕರ್ಮಜಂ ಫಲಂ ಸ್ಮೃತಂ ಸ್ಮೃತಿಯುಕ್ತಮ್ |
`ಭದ್ರೇ ವಾ ವರ್ತತೇ ಲೋಕೇ' ಎಂಬಲ್ಲಿರುವ `ವಾ' ಪದದಿಂದ `ಅಭದ್ರೇ ವರ್ತತೇ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಕರ್ಮಜಮ್ ಎಂಬುದಕ್ಕೆ ಉಭಯವಿಧವಾದ ಕರ್ಮದಿಂದ ಹುಟ್ಟಿದಎಂದರ್ಥ. ಫಲಂ ಸ್ಮೃತಂ ಎಂದರೆ ಸ್ಮೃತಿಯಿಂದ ಸಿದ್ಧವಾಗಿದೆ ಎಂದರ್ಥ.
ವಿವರಣೆ - ಯುಧಿಷ್ಠಿರನು ಅವಧ್ಯರಾದವರನ್ನು ವಧಿಸಿಬಿಟ್ಟೆ ಎಂದು ಹೇಳುತ್ತಿದ್ದಾನೆ. ಇದಕ್ಕೆ ವೇದವ್ಯಾಸದೇವರು ವಿಮರ್ಶಾತ್ಮಕವಾಗಿ ಉತ್ತರವನ್ನು ನೀಡುತ್ತಿದ್ದಾರೆ. ಯುಧಿಷ್ಠಿರನೇ ! ನಿನ್ನ ಮಾತುಗಳಿಂದ ನೀನೇ ಸರ್ವಕರ್ತಾ ಎಂದು ತಿಳಿಯುತ್ತಿದೆ. ಇದು ಹೇಗೆ ಸರಿ ? ಎಂಬುದನ್ನು ವಿಮರ್ಶೆ ಮಾಡು. ಯಾವುದನ್ನು ಸುಲಭವಾಗಿ ನಿರ್ಧರಿಸಲು ಆಗುವುದಿಲ್ಲ. ಎಲ್ಲ ಶುಭಾಶುಭ ಕರ್ಮಗಳಿಗೆ ಈಶ್ವರನೇ ಪ್ರೇರಕನಾಗಿರುತ್ತಾನೆ. ಮತ್ತು ಮನುಷ್ಯನು `ನಾನು ಕರ್ತಾ' ಎಂದಷ್ಟೇ ತಿಳಿದುಬಿಡುತ್ತಾನೆ. ವಾಸ್ತವಿಕವಾಗಿ ಮನುಷ್ಯನು ಈಶ್ವರನ ಅಧೀನವಾದ ಕರ್ತೃತ್ವ- ವನ್ನಷ್ಟೇ ಹೊಂದಿರುತ್ತಾನೆ. ಆ ಮನುಷ್ಯನ ಯೋಗ್ಯತೆ ಅವನು ಪೂರ್ವಜನ್ಮದಲ್ಲಿ ಮಾಡಿದ ಕಾರಣಗಳು ಪ್ರತಿಯೊಂದು ಕಾರ್ಯಗಳ ಹಿಂದೆ ಕಾರಣಭೂತವಾಗಿ ಇರುತ್ತವೆ. ಸುಖ-ದುಃಖಗಳೆಲ್ಲವೂ ತಮ್ಮ ಹಿಂದಿನ ಕರ್ಮದ ಅಧೀನವಾಗಿಯೇ ನಡೆಯುತ್ತದೆ. ಹೀಗಿರುವಾಗ ಎಲ್ಲವನ್ನು ನಾನೇ ಮಾಡಿಬಿಟ್ಟೆ ಎಂಬ ಕರ್ತೃತ್ವಾ- ಭಿಮಾನವನ್ನೇಕೆ ಮಾಡುತ್ತಿರುವಿ ಎಂದಭಿಪ್ರಾಯ.
ಈಶ್ವರೇಣ ನಿಯುಕ್ತಾ ಹಿ ಸಾಧ್ವಸಾಧು ಚ ಪಾರ್ಥಿವ |
ಕುರ್ವಂತಿ ಪುರುಷಾಃ ಕರ್ಮ ಫಲಮೀಶ್ವರಗಾಮಿ ತತ್ ॥12॥
ಮನುಷ್ಯನಾದವನು ಈಶ್ವರನ ಪ್ರೇರಣೆಗೆ ಒಳಪಟ್ಟು ಕರ್ಮಗಳನ್ನು ನಡೆಸು- ತ್ತಾನೆ. ಜೀವನು ಮಾಡುವ ಶುಭಾಶುಭಕರ್ಮಗಳೆರಡಕ್ಕೂ ಈಶ್ವರನೇ  ಮುಖ್ಯ- ಕಾರಣನು. ಆದ್ದರಿಂದ ಪುರುಷನು ಮಾಡುವ ಶುಭಾಶುಭಕರ್ಮಗಳ ಫಲವು ಈಶ್ವರನಿಗೆ ತಲಪುತ್ತದೆ.
ಟಿಪ್ಪಣಿ- ಫಲಮೀಶ್ವರಗಾಮಿ ತದ್ ಇತ್ಯತ್ರ ಈಶ್ವರಗಾಮಿ ಲೋಕದೃಷ್ಟ್ಯಾ ಈಶ್ವರಗಾಮಿ | ತಸ್ಯ ಚಾತಿಸಮರ್ಥತ್ವಾತ್ ನ

ಫಲಭೋಕ್ತೃತೇತಿ ಭಾವಃ | ತರ್ಹಿ ನಿಷ್ಫಲಂ ಕರ್ಮೇತ್ಯತ ಆಹ - ಅಥವಾ ಇತಿ ॥
`ಈಶ್ವರಗಾಮಿ' ಎಂಬುದಕ್ಕೆ ಲೋಕದೃಷ್ಟಿಯಿಂದ ಈಶ್ವರನನ್ನು ಹೊಂದುತ್ತವೆ ಎಂದಷ್ಟೇ ಅರ್ಥ. ಈಶ್ವರನು ಅತ್ಯಂತ ಸಮರ್ಥನಾದ್ದರಿಂದ ಯಾವುದೇ ಫಲಭೋಕ್ತೃತ್ವ ಅವನಲ್ಲಿ ಬರುವುದಿಲ್ಲ. ಹಾಗಾದರೆ ಎಲ್ಲ ಕರ್ಮಗಳು ನಿಷ್ಫಲವಾಗುತ್ತವಲ್ಲವೇ ? ಎಂಬ ಪ್ರಶ್ನೆಗೆ ಮುಂದಿನ ಅಥವಾ ಎಂಬ ಶ್ಲೋಕವು ಉತ್ತರಿಸುತ್ತಿದೆ.
ಟಿಪ್ಪಣಿ - ತೇನವಿನಾ ತೃಣಮಪಿ ಅಚಲತಿ' ಈಶ್ವರನಿಲ್ಲದೇ ಹುಲ್ಲೂ ಸಹ ಚಲಿಸುವುದಿಲ್ಲ ಎಂಬ ಮಾತಿನಂತೆ ಪ್ರತಿಯೊಬ್ಬರೂ ಮಾಡುವ ಕಾರ್ಯಗಳಿಗೂ ಈಶ್ವರನೇ ಪ್ರೇರಕನಾಗಿರುತ್ತಾನೆ. ಆದ್ದರಿಂದ ಅದರ ಫಲವೂ ಕೂಡ ಈಶ್ವರನನ್ನೇ ಹೊಂದುತ್ತದೆ. ಇದರ ಅಭಿಪ್ರಾಯ ನಾವು ಮಾಡುವ ಕೆಟ್ಟಕೆಲಸ ಮತ್ತು ಒಳ್ಳೆಯ ಕೆಲಸದಿಂದ ಈಶ್ವರನಿಗೆ ದುಃಖವಾಗುತ್ತದೆ ಅಥವಾ ಸುಖವಾಗುತ್ತದೆಂದರ್ಥವಲ್ಲ.  ಸರ್ವತಂತ್ರಸ್ವತಂತ್ರನಾದ್ದರಿಂದ ಪ್ರಾಕೃತವಾದ ಸುಖ-ದುಃಖಗಳೆರಡೂ ಅವನಿಗೆ ತಟ್ಟುವುದೇ ಇಲ್ಲ. ಆದ್ದರಿಂದ ಎಲ್ಲವೂ ಈಶ್ವರನನ್ನು ಸೇರುವಂತೆ ಇವುಗಳೂ ಕೂಡ ಈಶ್ವರನನ್ನು ಸೇರುತ್ತವೆ ಎಂದರೆ ಅವನ ಅಧೀನವಾಗಿ ಇರುತ್ತವೆ ಎಂದಷ್ಟೇ ಅಭಿಪ್ರಾಯವನ್ನು ವಿವಕ್ಷಿಸಬೇಕು.
ಯಥಾ ಹಿ ಪುರುಷಶ್ಛಿಂದ್ಯಾದ್ ವೃಕ್ಷಂ ಪರಶುನಾ ವನೇ |
ಛೇತ್ತುರೇವ ಭವೇತ್ ಪಾಪಂ ಪರಶೋರ್ನ ಕಥಂಚನ ॥13॥
ಒಬ್ಬ ಮನುಷ್ಯನು ಕೊಡಲಿಯಿಂದ ಮರವನ್ನು ಕಡಿದಾಗ ಅದರಿಂದ ಬರುವ ಪಾಪವು ಕಡಿಯುವ ವ್ಯಕ್ತಿಗೆ ಬರುತ್ತದೆ ಹೊರತು, ಕೊಡಲಿಗೆ ಬರುವುದಿಲ್ಲ.
ಅಥವಾ ತದುಪಾದಾನಾತ್ ಪ್ರಾಪ್ನುಯುಃ ಕರ್ಮಣಃ ಫಲಮ್ |
ದಂಡಶಸ್ತ್ರಕೃತಂ ಪಾಪಂ ಪುರುಷೇ ತನ್ನ ವಿದ್ಯತೇ ॥14॥
ಕೊಡಲಿಯು ಛೇದನಕ್ರಿಯೆಗೆ ಉಪಾದಾನ ಕಾರಣವಾಗಿದೆ. ಅಚೇತನವಾದ ಕೊಡಲಿಗೆ ಪಾಪವು ಬರಲು ಸಾಧ್ಯವಿಲ್ಲವೆಂದು ಹೇಳಿದರೆ, ಆ ಕೊಡಲಿಯನ್ನು ನಿರ್ಮಾಣ ಮಾಡಿದ ವ್ಯಕ್ತಿಗೆ ಪಾಪವು ಕತ್ತರಿಸುವವನಿಗೆ ಬರುತ್ತದೆ, ಕೊಡಲಿಗೆ ಬರುವುದಿಲ್ಲ.
ಟಿಪ್ಪಣಿ - ಒಬ್ಬ ಪುರುಷನು ಮರವನ್ನು ಕಡಿಯುತ್ತಾನೆ. ಆ ವೃಕ್ಷವನ್ನು ಕಡಿ-  ಯುವುದರಿಂದ ಅವನಿಗೆ ಪಾಪವು ಬರುತ್ತದೆ. ಇಂಥ ಸಂದರ್ಭದಲ್ಲಿ ಕೊಡಲಿಗೆ ಪಾಪವು ಸರ್ವಥಾ ಬರುವುದಿಲ್ಲ. ಕೊಡಲಿಯಿಂದ ವೃಕ್ಷವನ್ನು ಕತ್ತರಿಸುವವನಿಗಷ್ಟೇ ಪಾಪವು ಬರುತ್ತದೆ. ಕೊಡಲಿಯು ಇಲ್ಲಿಯ ಮರವನ್ನು ಕಡಿದಿದ್ದರೂ ಕೂಡ ಅದು ಉಪಾದಾನಕಾರಣವಾಗಿರುವುದರಿಂದ, ಮತ್ತು ಜಡವಾಗಿರುವುದರಿಂದ ತಾನೇ ಕತ್ತರಿಸಿದೆ ಎಂದು ಅದು ಹೇಳಿಕೊಳ್ಳುವುದಿಲ್ಲ. ಪುರುಷನಾದವನು ಕೊಡಲಿಯ ಪಾತ್ರವನ್ನು ಹೇಳದೇ ತಾನೇ ಸಂಪೂರ್ಣವಾಗಿ ಕತ್ತರಿಸಿಬಿಟ್ಟೆ ಎಂದು ಹೇಳಿ- ಕೊಳ್ಳುತ್ತಾನೆ. ಆದ್ದರಿಂದ ಪಾಪಭಾಗಿಯಾಗುತ್ತಾನೆ. ಅದರಂತೆ ಇಲ್ಲಿಯೂ ಕೂಡ ಈಶ್ವರಪ್ರೇರಣೆಯನ್ನು ಮರೆತು ಎಲ್ಲವನ್ನೂ ತಾನೇ ಮಾಡಿದೆ ಎಂದು ಹೇಳಿದರೆ ಎಲ್ಲಾ ಫಲಗಳಿಗೆ ಆ ಜೀವನು ಭಾಗಿಯಾಗುತ್ತಾನೆ.
ಟಿಪ್ಪಣಿ - ತದುಪಾದಾನಾದ್ ಇತ್ಯತ್ರ ತೇನ ಈಶ್ವರೇಣ ಉಪಾದಾನಾತ್ ಜಡವಿಲಕ್ಷಣಜೀವಸ್ಯ ಈಷತ್ಕರ್ತೃತ್ವಸಂಭವೇನ ಫಲೋಪಾದಾನಾತ್ |
`ತದುಪಾದಾನಾದ್' ಎಂಬಲ್ಲಿ ಆ ಫಲಕ್ಕೆ ಜೀವನು ಉಪಾದಾನನಾಗಿದ್ದಾನೆ. ಜಡವಿಲಕ್ಷಣನಾಗಿರುವುದರಿಂದ ಈಷತ್ಕೃತ್ವವು ಜೀವನಿಗೆ ಬರುತ್ತದೆ ಎಂದಭಿಪ್ರಾಯ.
ನ ಚೈತದಿಷ್ಟಂ ಕೌಂತೇಯ ಯದನ್ಯೇನ ಫಲಂ ಕೃತಮ್ |
ಪ್ರಾಪ್ನುಯಾದಿತಿ ತಸ್ಮಾಚ್ಚ ಈಶ್ವರೇ ತನ್ನಿವೇಶಯ ॥15॥
ಒಬ್ಬನು ಮಾಡಿದ ಕರ್ಮಕ್ಕೆ ಮತ್ತೊಬ್ಬನು ಭಾಗಿಯಾಗುತ್ತಾನೆ ಎಂದು ಹೇಳುವುದೂ ಕೂಡ ಸಮ್ಮತವಲ್ಲ. ಆದ್ದರಿಂದ ನೀನೂ ಸಹ ನಿನ್ನನ್ನು ಅಚೇತನ ಸ್ಥಾನದಲ್ಲಿ ತಿಳಿದು ಕರ್ಮಫಲವನ್ನು ಈಶ್ವರನಿಗೆ ಒಪ್ಪಿಸು.
ಟಿಪ್ಪಣಿ - ಯದ್ಯನ್ಯೇನ ಫಲಂ ಕೃತಮ್ ಇತ್ಯತ್ರ ಯದಿ ಅನ್ಯೇನ ಕೃತಂ ಫಲಮ್ ಅನ್ಯಃ ಪ್ರಾಪ್ನುಯಾದಿತಿ ನೇಷ್ಟಮ್, ತರ್ಹಿ ತತ್ ಸಾಮರ್ಥ್ಯಂ ಈಶ್ವರೇ ನಿವೇಶಯ, ಈಶ್ವರಸಾಮರ್ಥ್ಯಯದೇತಜ್ಜಾತಮಿತಿ ಸ್ಮರ |
`ಯದಿ ಅನ್ಯೇನ ಕೃತಂ ಫಲಮ್ ಅನ್ಯಃ ಪ್ರಾಪ್ನ' ಯುದ್ಧದಲ್ಲಿ ಶತ್ರುಗಳನ್ನು ನಿಗ್ರಹ ಮಾಡಿದ ಸಾಮರ್ಥ್ಯವು ಈಶ್ವರಾಧೀನವೆಂದು ತಿಳಿದುಬಿಡು.
ಅಥಾಪಿ ಪುರುಷಃ ಕರ್ತಾ ಕರ್ಮಣೋಃ ಶುಭಪಾಪಯೋಃ |
ನ ಪರಂ ವಿದ್ಯತೇ ತಸ್ಮಾದೇವಮನ್ಯಚ್ಛುಭಂ ಕುರು ॥16॥
ಒಂದುವೇಳೆ ಪುರುಷನು ಈಶ್ವರಾಧೀನವಾದ ಕರ್ತೃತ್ವವನ್ನು ಹೊಂದಿದ್ದಾನೆಂದು ಒಪ್ಪುವುದಾದರೆ ಪುಣ್ಯಕರ್ಮ ಹಾಗೂ ಪಾಪಕರ್ಮಗಳಿಗೆ ಪುರುಷನು ಕಾರಣ- ನಾಗುತ್ತಾನೆ. ಈಶ್ವರದತ್ತವಾದ ಕರ್ತೃತ್ವಕ್ಕಿಂತ ಮತ್ತೊಂದು ಕಾರಣವಿಲ್ಲದ್ದರಿಂದ ನೀನು ಶುಭಕರ್ಮವನ್ನೇ ಆಚರಿಸಬೇಕು.
ಟಿಪ್ಪಣಿ-ಅಥಾಪಿ ಪುರುಷಃ ಕರ್ತಾ ಇತ್ಯತ್ರ ಅಥಾಪಿ ಈಶ್ವರಸ್ಯ ಸರ್ವಕರ್ತೃತ್ವೇಽಪಿ | ತಸ್ಮಾದ್ ಈಶ್ವರದತ್ತಕರ್ತೃತ್ವಾತ್ | `ಅಥಾಪಿ' ಈಶ್ವರನು ಸರ್ವಕರ್ತೃವಾದರೂ ಕೂಡ, `ತಸ್ಮಾದ್' ಈಶ್ವರನಿಂದ ಕೊಡಲ್ಪಟ್ಟ ಕರ್ತೃತ್ವ ಇರುವುದರಿಂದ ಎಂದರ್ಥ.
ವಿವರಣೆ - ಈ ಶ್ಲೋಕಕ್ಕೆ ಅನೇಕ ರೀತಿಯಲ್ಲಿ ವ್ಯಾಖ್ಯಾನಗಳನ್ನು ಮಾಡುತ್ತಾರೆ. ಶುಭಾಶುಭಕರ್ಮಗಳಿಗೆ ದೈವವು ಕಾರಣವೇ ಅಲ್ಲ ಎಂದು ನೀನು ತಿಳಿಯುವುದಾದರೆ, ಈಶ್ವರನು ಕೇವಲ ಸಾಕ್ಷಿಮಾತ್ರ ಆಗುತ್ತಾನೆ. ಆದ್ದರಿಂದ ನೀನು ದುಃಖಿಸಲು ಕಾರಣವಿಲ್ಲವೆಂದು ಆಪಾತತಃ ಇದರ ಅರ್ಥವು ತೋರುತ್ತದೆ. ಆದರೆ ವೇದವ್ಯಾಸ- ದೇವರು ಹೀಗೆ ಈಶ್ವರನಲ್ಲಿ ಸರ್ವತಂತ್ರ ಕರ್ತೃತ್ವವನ್ನು ನಿರಾಕರಣೆ ಮಾಡಿ ಉತ್ತರಿಸಲು ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಸ್ವತಂತ್ರ ಕರ್ತೃವಾಗಿದ್ದಾನೆ. ಆದರೂ ಕೂಡ ಜೀವನಲ್ಲಿ ಅಸ್ವತಂತ್ರ ಕರ್ತೃತ್ವವನ್ನು ಒಪ್ಪಿ ನೀನು ಮಾತನಾಡುವುದಾದರೆ ಎಂಬಭಿಪ್ರಾಯವನ್ನೇ ಅಥಾಪಿ ಎಂಬ ಪದಕ್ಕೆ ವಿವಕ್ಷಿಸಬೇಕು. ಇದನ್ನು ಲಕ್ಷಾಲಂಕಾರದಲ್ಲಿ ಸ್ಪಷ್ಟಪಡಿಸಿದ್ದಾರೆ.
ನಹಿ ಕಶ್ಚಿತ್ ಕ್ವಚಿದ್ ರಾಜನ್ ದಿಷ್ಟಂ ಪ್ರತಿನಿವರ್ತತೇ |

ದಂಡಶಸ್ತ್ರಕೃತಂ ಪಾಪಂ ಪುರುಷೇ ತನ್ನ ವಿದ್ಯತೇ ॥17॥
ಯಾರೇ ಆಗಲಿ, ಎಲ್ಲಿಯೇ ಆಗಲಿ ವಿಧಿನಿಯಮವನ್ನು ಉಲ್ಲಂಘಿಸುವು- ದಿಲ್ಲವೋ, ಅವನಿಗೆ ಯಾವುದೇ ಪಾಪಗಳು ಬರುವುದಿಲ್ಲ. ಕ್ಷತ್ರಿಯನಾದವನು ದಂಡಧಾರಣನಿಯಮವನ್ನು ಅನುಸರಿಸಿದಾಗ ಅವನಿಗೆ ಯಾವುದೇ ಪಾಪವು ತಟ್ಟುವುದಿಲ್ಲ.
ವಿವರಣೆ - ಕೊಡಲಿಯು ವೃಕ್ಷವನ್ನು ಕತ್ತರಿಸುತ್ತದೆ. ಕತ್ತರಿಸಿದ ಪಾಪ ಕೊಡಲಿಗೆ ಬರುವುದಿಲ್ಲ. ಅಥವಾ ಕೊಡಲಿಯನ್ನು ಸ್ವಧರ್ಮದಂತೆ ತಯಾರು ಮಾಡಿದ ವ್ಯಕ್ತಿಗೂ ಕೂಡ ಪಾಪವು ಬರುವುದಿಲ್ಲ. ಅದರಂತೆ ಯುದ್ಧದಲ್ಲಿ ನೀನು ಅನೇಕ ಶತ್ರುಗಳ ಸಂಹಾರವನ್ನು ಮಾಡಿರುವಿ. ಇದರಿಂದ ಯಾವುದೇ ಪಾಪವು ನಿನಗೆ ಬರುವುದಿಲ್ಲ.
ಯದಿ ವಾ ಮನ್ಯಸೇ ರಾಜನ್ ಹರೇ ಲೋಕಂ (ಸರ್ವಂ) ಪ್ರತಿಷ್ಠಿತಮ್ |
ಏವಮಪ್ಯಶುಭಂ ಕರ್ಮ ನ ಭೂತಂ ನ ಭವಿಷ್ಯತಿ ॥18॥
ಒಂದು ವೇಳೆ ನೀನು ಲೋಕವು ಆಯಾ ಜೀವರ ಸ್ವಭಾವದಲ್ಲಿ ನೆಲೆನಿಂತಿದೆ ಎಂದು ಭಾವಿಸುವುದಾದರೆ, ಅದಕ್ಕಾಗಿ ಏಕೆ ಚಿಂತಿಸುವಿ ? ದುಷ್ಟರಾದ ಶತ್ರುಗಳ ಸಂಹಾರವನ್ನು ನೀನು ಮಾಡಿದ್ದರೂ ಕೂಡ ನಿನ್ನಲ್ಲಿ ಅಶುಭಕರ್ಮವು ಇದುವರೆಗೂ ನಡೆದಿಲ್ಲ. ಮುಂದೆ ನಡೆಯಲೂ ಕೂಡ ಸಾಧ್ಯವಿಲ್ಲ.
ಟಿಪ್ಪಣಿ - ಹರೇ ಸರ್ವಂ ಪ್ರತಿಷ್ಠಿತಮ್ ಏವಮಪಿ ಇತ್ಯತ್ರ ಹರೇ ತ್ರಿವಿಧಜೀವಾನಾಂ ಯೋಗ್ಯತಾಲಕ್ಷಣಸ್ವಭಾವೇ | ಏವಮಪಿ ಶಿಕ್ಷಾಯೋಗ್ಯಾನಾಂ ದುಷ್ಟಾನಾಂ ಶಿಕ್ಷಣಾದ್ ಅಶುಭಂ ಕರ್ಮ ತ್ವಯಿ ನ ಭೂತಮ್, ನ ಭವಿಷ್ಯತಿ |
ಹರೇ = ತ್ರಿವಿಧಜೀವರ ಯೋಗ್ಯತಾ ಎಂಬ ಸ್ವಭಾವದಲ್ಲಿ ಎಂದರ್ಥ. ಶಿಕ್ಷೆಗೆ ಯೋಗ್ಯರಾದ ದುಷ್ಟರನ್ನು ಶಿಕ್ಷಣೆ ಮಾಡುವುದರಿಂದ ಅಶುಭಕರ್ಮವು ನಿನ್ನಲ್ಲಿ ಹಿಂದೆಯು ಅಂಟಿಲ್ಲ. ಮುಂದೆಯೂ ಕೂಡ ಅಂಟಲು ಸಾಧ್ಯವಿಲ್ಲ ಎಂದಭಿಪ್ರಾಯ.
ವಿವರಣೆ - ಈ ಶ್ಲೋಕವನ್ನು ಕೂಡ ಕೆಲವರು ಎಲ್ಲವೂ ಆಕಸ್ಮಿಕವಾಗಿಯೇ ನಡೆಯುತ್ತದೆ. ನೀನೇಕೆ ಚಿಂತಿಸುತ್ತೀ ಎಂಬುದಾಗಿ ದೇವರನ್ನು ಒಪ್ಪದಂತೆ ವ್ಯಾಖ್ಯಾನ ಮಾಡುತ್ತಾರೆ. ಇದು ಸರಿಯಲ್ಲ. ಪ್ರತಿಯೊಂದು ಕರ್ಮಗಳಿಗೆ ಆಯಾ ಜೀವರ ಯೋಗ್ಯತೆಯೂ ಕೂಡ ಒಂದು ಕಾರಣವಾಗಿರುತ್ತದೆ. ಅವರವರ ಯೋಗ್ಯತೆಗೆ ತಕ್ಕಂತೆ ಪುಣ್ಯಪಾಪಕರ್ಮಗಳು ಬರುತ್ತವೆ ಎನ್ನುವುದಾದರೆ, ನೀನು ಯಾವುದೇ ಅಶುಭಕರ್ಮವನ್ನು ಮಾಡಿದಂತಾಗಲಿಲ್ಲ. ಮುಂದೆಯೂ ಕೂಡ ಮಾಡಲು ಸಾಧ್ಯವಿಲ್ಲ. ಎಂಬುದಾಗಿ ವೇದವ್ಯಾಸದೇವರು ಸಾಂತ್ವನ ಮಾಡುತ್ತಿ- ದ್ದಾರೆಂದು ಭಾವಿಸಬೇಕು.
ಅಥಾಭಿಪತ್ತಿರ್ಲೋಕಸ್ಯ ಕರ್ತವ್ಯಾ ಶುಭಪಾಪಯೋಃ |
ಅಭಿಪನ್ನಮಿದಂ ಲೋಕೇ ರಾಜ್ಞಾಮುದ್ಯತದಂಡನಮ್ ॥19॥
ಅಥವಾ ಪುಣ್ಯ-ಪಾಪಗಳನ್ನು ಲೋಕದ ಮಾರ್ಯಾದೆಗೆ ಅನುಗುಣವಾಗಿ ತಿಳಿಯಬೇಕೆಂದು ನೀನು ಹೇಳುವುದಾದರೆ, ರಾಜರು ತಪ್ಪು ಮಾಡಿದವರಿಗೆ ಶಿಕ್ಷಿಸುವುದು ಲೋಕಮಾರ್ಯಾದೆಯೇ ಆಗಿದೆ. ಆದ್ದರಿಂದಲೂ ನೀನು ಚಿಂತಿಸಲು ಕಾರಣವಿಲ್ಲ. ಸಮಸ್ತಲೋಕವು ನೀನು ಮಾಡಿದ ದಂಡಧಾರಣವನ್ನು ಪ್ರಶಂಸೆ ಮಾಡುತ್ತದೆ.
ವಿವರಣೆ - ಲೋಕದಲ್ಲಿ ತಪ್ಪು ಮಾಡಿದವರಿಗೆ, ಅಧಾರ್ಮಿಕರಿಗೆ, ಶಿಕ್ಷೆಯನ್ನು ನೀಡಬೇಕೆಂದು ಎಲ್ಲರೂ ಹೇಳುತ್ತಾರೆ. ಆದ್ದರಿಂದ ದುರ್ಮಾರ್ಗಿಗಳನ್ನು ದಂಡಿಸಿದ್ದಕ್ಕೆ ನೀನು ವ್ಯಥೆ ಪಡಬೇಕಾಗಿಲ್ಲ ಎಂದಭಿಪ್ರಾಯ.
ಅದ್ಯಾಪಿ ಲೋಕೇ ಕರ್ಮಾಣಿ ಸಮಾವರ್ತಂತ ಭಾರತ |
ಶುಭಾಶುಭಫಲಂ ಚೇಮೇ ಪ್ರಾಪ್ನುವಂತೀತಿ ಮೇ ಮತಿಃ ॥20॥
ಇಂದೂ ಕೂಡ ಲೋಕದಲ್ಲಿ ಶುಭಾಶುಭಕರ್ಮಗಳನ್ನು ಪ್ರತಿಯೊಬ್ಬರೂ ಕೂಡ ಆಚರಿಸುತ್ತಲೇ ಇದ್ದಾರೆ. ದಂಡಧಾರಣವಿದ್ದರೂ ಕೂಡ ಶುಭಾಶುಭಫಲವನ್ನು ಪ್ರಜೆಗಳು ಹೊಂದುತ್ತಲೇ ಇದ್ದಾರೆ ಎಂಬುದು ನನ್ನ ಅಭಿಪ್ರಾಯ.
ಏವಂ ಸತ್ಯಂ ಶುಭಾದೇಶಂ ಕರ್ಮಣಸ್ತತ್ಫಲಂ ಧ್ರುವಮ್ |
ತ್ಯಜ ತದ್ ರಾಜಶಾರ್ದೂಲ ಮೈವಂ ಶೋಕೇ ಮನಃ ಕೃಥಾಃ ॥21॥
ಆದ್ದರಿಂದ ಇಷ್ಟು ನಿನಗೆ ಸತ್ಯವನ್ನು ಹೇಳುತ್ತೇನೆ. ನೀನು ಶುಭವನ್ನೇ ಆಚರಣೆ ಮಾಡು. ಇದರಿಂದ ನಿನಗೆ ನಿಶ್ಚಯವಾಗಿ ಶುಭಫಲವು ದೊರಕುತ್ತದೆ. ದುಷ್ಕರ್ಮ- ಗಳನ್ನು ಬಿಟ್ಟುಬಿಡು. ಆದ್ದರಿಂದ ಮನಸ್ಸಿನಲ್ಲಿ ಯಾವುದೇ ದುಃಖವನ್ನು ಅನು- ಭವಿಸಬೇಡ.
ಸ್ವಧರ್ಮೇ ವರ್ತಮಾನಸ್ಯ ಸಾಪವಾದೇಽಪಿ ಭಾರತ |
ಏವಮಾತ್ಮಪರಿತ್ಯಾಗಸ್ತವ ರಾಜನ್ನ ಶೋಭನಃ ॥22॥
ರಾಜನೇ! ಯಾರು ತನ್ನ ಧರ್ಮವನ್ನು ಅಚ್ಚುಕಟ್ಟಾಗಿ ಪಾಲನೆ ಮಾಡುತ್ತಿರು- ತ್ತಾನೋ, ಅಂಥವನು ಅಪವಾದ ಬಂದರೂ ಕೂಡ ಸ್ವಧರ್ಮವನ್ನು ಬಿಡಬಾರದು. ಆದ್ದರಿಂದ ಶತ್ರುನಿಗ್ರಹವನ್ನು ಮಾಡಿ ಸ್ವಧರ್ಮವನ್ನು ಪಾಲನೆ ಮಾಡಿದ ನೀನು ಆತ್ಮವನ್ನು ಪರಿತ್ಯಾಗ ಮಾಡುತ್ತೇನೆಂದು ಹೇಳುವುದು ಕ್ಷೇಮಕರವಲ್ಲ.
ವಿಹಿತಾನಿ ಹಿ ಕೌಂತೇಯ ಪ್ರಾಯಶ್ಚಿತ್ತಾನಿ ಕರ್ಮಿಣಾಮ್ |
ಶರೀರವಾಂಸ್ತಾನಿ ಕುರ್ಯಾದಶರೀರಃ ಪರಾಭವೇತ್ ॥23॥
ಕುಂತಿಪುತ್ರನೇ! ಸ್ವಧರ್ಮಗಳನ್ನು ಆಚರಣೆ ಮಾಡಿದಾಗ ಕೆಲವೊಮ್ಮೆ ದುಷ್ಕರ್ಮಗಳು ನಡೆದರೆ ಅದಕ್ಕೆ ಅನೇಕ ಪ್ರಾಯಶ್ಚಿತ್ತಗಳನ್ನು ಧರ್ಮಶಾಸ್ತ್ರಗಳು ಹೇಳುತ್ತವೆ. ಅಂತಹ ದುಷ್ಕರ್ಮವನ್ನು ಮಾಡಿದ ಕಳಂಕಗಳನ್ನು ಪ್ರಾಯಶ್ಚಿತ್ತಗಳನ್ನು ಆಚರಿಸುವ ಮೂಲಕ ಶುದ್ಧನಾಗಬೇಕು. ಅದನ್ನು ಬಿಟ್ಟು ಶರೀರವನ್ನು ಪರಿತ್ಯಾಗ ಮಾಡಿದರೆ, ಅಧೋಗತಿಯನ್ನು ಹೊಂದುತ್ತಾನೆ.
ವಿವರಣೆ - ಕೆಲವೊಬ್ಬರು ಪಾಪಗಳನ್ನು ಮಾಡಿದ್ದೇವೆಂದು ಭಾವಿಸಿ, ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಇಂಥವರು ಮತ್ತಷ್ಟು ಅನರ್ಥಗಳನ್ನೇ ಎದುರಿಸಬೇಕಾಗುತ್ತದೆ. ಶರೀರವನ್ನು ಸುರಕ್ಷಿತವಾಗಿಟ್ಟುಕೊಂಡು, ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು, ಆ ಪಾಪಗಳನ್ನು ಪರಿಹಾರ ಮಾಡಿಕೊಳ್ಳಲು ಅವಕಾಶವಿದೆ. ಪ್ರಾಣವನ್ನು ಪರಿತ್ಯಾಗ ಮಾಡಿದರೆ ದೇಹಾಂತರದಲ್ಲಿ ಮಹಾದುಃಖವನ್ನು ಅನುಭವಿಸಬೇಕಾಗುತ್ತದೆ.
ಯುಧಿಷ್ಠಿರನೇ! ನೀನು ಸರ್ವಥಾ ಯಾವುದೇ ಪಾಪವನ್ನು ಆಚರಿಸಿಲ್ಲ. ಒಂದು ವೇಳೆ ಪಾಪಕರ್ಮವನ್ನು ಮಾಡಿದ್ದೇನೆಂದು ನಿನಗೆ

ಅನ್ನಿಸಿದರೆ ಅದಕ್ಕೆ ಪ್ರಾಯಶ್ಚಿತ್ತಗಳನ್ನು ಮಾಡಿಕೋ. ಇದನ್ನು ಬಿಟ್ಟು, ರಾಜ್ಯವನ್ನು ಪರಿತ್ಯಾಗ ಮಾಡುವುದು ಮತ್ತಷ್ಟು ಅಧರ್ಮಗಳನ್ನು ಆಚರಣೆ ಮಾಡುವುದು, ಪ್ರಾಣ- ತ್ಯಾಗವನ್ನು ಮಾಡುವುದು, ಇದೆಲ್ಲವೂ ಕೂಡ ಮುಂದೆ ನಿನಗೆ ಮಹಾ ಅನರ್ಥ- ಗಳನ್ನೇ ನೀಡುತ್ತವೆ ಎಂದಭಿಪ್ರಾಯ.

ತದ್ ರಾಜನ್ ಜೀವಮಾನಸ್ತ್ವಂ ಪ್ರಾಯಶ್ಚಿತ್ತಂ ಚರಿಷ್ಯಸಿ |
ಪ್ರಾಯಶ್ಚಿತ್ತಮಕೃತ್ವಾ ತು ಪ್ರೇತ್ಯ ತಪ್ತಾಸಿ ಭಾರತ ॥24॥

ರಾಜೇಂದ್ರನೇ! ನೀನು ಬದುಕಿ, ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ಶುದ್ಧನಾಗು. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಪ್ರಾಣವನ್ನು ಪರಿತ್ಯಾಗ ಮಾಡಿದರೆ, ಮುಂದೆ ದೇಹತ್ಯಾಗ ಮಾಡಿದ ಮೇಲೆ ಪಶ್ಚಾತ್ತಾಪ ಪಡಬೇಕಾಗುತ್ತದೆ.

ಯುಧಿಷ್ಠಿರಃ

ಹತಾಃ ಪುತ್ರಾಶ್ಚ ಪೌತ್ರಾಶ್ಚ ಭ್ರಾತರಃ ಪಿತರಸ್ತಥಾ |
ಶ್ವಶುರಾ ಗುರವಶ್ಚೈವ ಮಾತುಲಾಃ ಸಪಿತಾಮಹಾಃ ॥25॥

ಯುಧಿಷ್ಠಿರ ಪಿತಾಮಹರೇ ! ನಾನು ರಾಜ್ಯದ ಆಸೆಯಿಂದ ವಿವೇಚನೆಯಿ- ಲ್ಲದೇ ಅನೇಕರ ಸಾವಿಗೆ ಕಾರಣನಾದೆನು. ಮಕ್ಕಳು, ಮೊಮ್ಮಕ್ಕಳು, ಸಹೋದರರು, ಪಿತೃಗಳು, ಮಾವಂದಿರು, ಗುರುಗಳು, ಸೋದರಮಾವಂದಿರು, ಪಿತಾಮಹರು, ಇವರೆಲ್ಲರೂ ನನ್ನಿಂದ ಮೃತರಾದರು.

ಕ್ಷತ್ರಿಯಾಶ್ಚ ಮಹಾತ್ಮಾನಃ ಸಬಂಧಿಸುಹೃದಸ್ತಥಾ |
ವಯಸ್ಯಾ ಜ್ಞಾತಯಶ್ಚೈವ ಭ್ರಾತರಶ್ಚ ಪಿತಾಮಹ ॥26॥

ಕ್ಷತ್ರಿಯರು, ಅನೇಕ ಮಹಾತ್ಮರು, ಸಂಬಂಧಿಗಳು, ಸ್ನೇಹಿತರು, ಸುಹೃದರು, ಬಂಧುಜನರು, ಅಣ್ಣ-ತಮ್ಮಂದಿರು ಇವರೆಲ್ಲರೂ ಮೃತರಾದರು.

ಬಹವಶ್ಚ ಮನುಷ್ಯೇಂದ್ರಾ ನಾನಾದೇಶಸಮಾಗತಾಃ |
ಘಾತಿತಾ ರಾಜ್ಯಲುಬ್ಧೇನ ಮಯೈಕೇನ ಪಿತಾಮಹ ॥27॥

ಅನೇಕ ದೇಶಗಳಿಂದ ಆಗಮಿಸಿದ ಅಸಂಖ್ಯಾತರಾಜರನ್ನೆಲ್ಲ ರಾಜ್ಯವು ಸಿಗು- ತ್ತದೆಂಬ ಆಸೆಯಿಂದ ನಾನೇ ಕೊಲ್ಲಿಸಿಬಿಟ್ಟೆನು. ಪಿತಾಮಹರೇ! ನಾನೊಬ್ಬನೇ ಅವರೆಲ್ಲರ ಸಾವಿಗೆ ಕಾರಣನಾಗಿರುವೆನು.

ತಾಂಸ್ತಾದೃಶಾನಹಂ ಹತ್ವಾ ಧರ್ಮನಿತ್ಯಾನ್ ಮಹೀಕ್ಷಿತಃ |
ಅಸಕೃತ್ ಸೋಮಪಾನ್ ವೀರಾನ್ ಕಿಂ ಪ್ರಾಪ್ಸ್ಯಾಮಿ ತಪೋಧನ ॥28॥

ಯುದ್ಧಕ್ಕಾಗಿ ಆಗಮಿಸಿದ ರಾಜರು ಸಾಮಾನ್ಯರಲ್ಲ. ನಿತ್ಯವಾಗಿಯೂ ಧರ್ಮ- ದಲ್ಲಿ ಆಸಕ್ತರಾಗಿದ್ದರು. ಅನೇಕ ಬಾರಿ ಯಜ್ಞಗಳನ್ನು ಮಾಡಿ ಸೋಮಪಾನವನ್ನು ಮಾಡಿದ್ದರು. ಮಹಾವೀರರಾಗಿದ್ದರು. ತಪೋಧನರೇ ! ಅಂಥ ಮಹಾನುಭಾವರನ್ನು ನಾನು ಸಂಹರಿಸಿ ಏನನ್ನು ತಾನೇ ಪಡೆದುಕೊಳ್ಳಲು ಹೊರಟಿದ್ದೇನೆ?

ದಹ್ಯಾಮ್ಯನಿಶಮದ್ಯಾಹಂ ಚಿಂತಯಾನಃ ಪುನಃ ಪುನಃ |
ಹೀನಾಂ ಪಾರ್ಥಿವಸಿಂಹೈಸ್ತೈಃ ಶ್ರೀಮದ್ಭಿಃ ಪೃಥಿವೀಮಿಮಾಮ್ ॥29॥

ಇದೇ ವಿಷಯವನ್ನು ಎಷ್ಟು ಬಾರಿ ಚಿಂತನೆ ಮಾಡುತ್ತಿದ್ದರೂ ನನಗೆ ಸಮಾ- ಧಾನವು ದೊರಕುತ್ತಿಲ್ಲ. ಬಹಳ ಸಂಕಟವಾಗುತ್ತಿದೆ. ಆ ಸಂಕಟದಿಂದ ಬೆಂದು- ಹೋಗುತ್ತಿದ್ದೇನೆ. ಶ್ರೀಮಂತರಾದ, ಧರ್ಮನಿಷ್ಠರಾದ ರಾಜರುಗಳನ್ನು ಕಳೆದು- ಕೊಂಡ ಈ ಪೃಥ್ವಿಯು ನನಗೆ ಶೂನ್ಯವಾಗಿ ಕಾಣಿಸುತ್ತಿದೆ.

ದೃಷ್ಟ್ವಾ ಜ್ಞಾತಿವಧಂ ಘೋರಂ ಹತಾಂಶ್ಚ ಶತಶಃ ಪರಾನ್ |
ಕೋಟಿಶಶ್ಚ ನರಾನನ್ಯಾನ್ ಪರಿತಪ್ಯೇ ಪಿತಾಮಹ ॥30॥

ಜ್ಞಾತಿಗಳ ಘೋರವಾದ ಸಂಹಾರವನ್ನು ಕಂಡು, ನೂರಾರು ರಾಜರು ಮಡಿದ- ದ್ದನ್ನು ಕಂಡು ಕೋಟಿಗಟ್ಟಳೆ ಸೈನಿಕರು ಪ್ರಾಣಪರಿತ್ಯಾಗವನ್ನು ಮಾಡಿದ್ದನ್ನು ಕಂಡು ನನಗೆ ಬಹಳ ದುಃಖವಾಗುತ್ತಿದೆ.

ಕಾ ನು ತಾಸಾಂ ವರಸ್ತ್ರೀಣಾಮವಸ್ಥಾದ್ಯ ಭವಿಷ್ಯತಿ |
ವಿಹೀನಾನಾಂ ಸ್ವತನಯೈಃ ಪತಿಭಿರ್ಭ್ರಾತೃಭಿಸ್ತಥಾ ॥31॥

ಆ ಕ್ಷತ್ರಿಯಸ್ತ್ರೀಯರಿಗೆ ಎಂಥ ದುರವಸ್ಥೆಯು ಪ್ರಾಪ್ತವಾಗಿದೆ. ಅವರೆಲ್ಲರೂ ತಮ್ಮ ಸಂಬಂಧಿಗಳನ್ನು, ಮಕ್ಕಳನ್ನು, ಗಂಡಂದಿರನ್ನು, ಅಣ್ಣ-ತಮ್ಮಂದಿರನ್ನು ಕಳೆದು- ಕೊಂಡು ದುಃಖದ ಮಡುವಿನಲ್ಲಿ ಮುಳುಗಿದ್ದಾರೆ.

ಅಸ್ಮಾನಂತಕರಾನ್ ಘೋರಾನ್ ಪಾಂಡವಾನ್ ವೃಷ್ಣಿಸಂಹಿತಾನ್ |
ಆಕ್ರೋಶಂತ್ಯಃ ಕೃಶಾ ದೀನಾ ನಿಪತಂತ್ಯಶ್ಚ ಭೂತಲೇ ॥32॥

ಆ ಎಲ್ಲ ಸ್ತ್ರೀಯರು ಈಗ ತಮ್ಮ ಸಂಬಂಧಿಗಳ ವಿನಾಶಕ್ಕೆ ಕಾರಣರಾದ, ಅವರ ದೃಷ್ಟಿಯಿಂದ ಘೋರ ಪಾಪಿಗಳಾದ ವೃಷ್ಣಿಗಳಿಂದ ಕೂಡಿರುವ ಪಾಂಡವರನ್ನು ನಿಂದಿಸುತ್ತಿದ್ದಾರೆ. ಶಪಿಸುತ್ತಿದ್ದಾರೆ, ದೀನರಾಗಿ, ದುರ್ಬಲರಾಗಿ ನೆಲದ ಮೇಲೆ ಬಿದ್ದು ಹೊರಳಾಡಿ ಆಕ್ರಂದನವನ್ನು ಮಾಡುತ್ತಿದ್ದಾರೆ.

ಅಪಶ್ಯಂತ್ಯಃ ಪಿತೄನ್ ಭ್ರಾತೄನ್ ಪತೀನ್ ಪುತ್ರಾಂಶ್ಚ ಯೋಷಿತಃ |
ತ್ಯಕ್ತ್ವಾ ಪ್ರಾಣಾನ್ ಪ್ರಿಯಾನ್ ಸರ್ವಾನ್ ಗಮಿಷ್ಯಂತಿ
ಯಮಕ್ಷಯಮ್ ॥33॥

ಆ ಸ್ತ್ರೀಯರು ತಮ್ಮ ಮಕ್ಕಳನ್ನು, ಗಂಡಂದಿರನ್ನು, ಪಿತೃಗಳನ್ನು, ಸಹೋದರ- ರನ್ನು ಕಾಣದೇ ಪ್ರಾಣವನ್ನು ಪರಿತ್ಯಾಗ ಮಾಡಿ ಯಮಲೋಕಕ್ಕೆ ಹೋಗುವ ಪರಿಸ್ಥಿತಿ -ಯಲ್ಲಿದ್ದಾರೆ.

ವತ್ಸಲತ್ವಾದ್ ದ್ವಿಜಶ್ರೇಷ್ಠ ತತ್ರ ಮೇ ನಾಸ್ತಿ ಸಂಶಯಃ |

ವ್ಯಕ್ತಂ ಸೌಕ್ಷ್ಮ್ಯಾಚ್ಚ ಧರ್ಮಸ್ಯ ಪ್ರಾಪ್ಸ್ಯಾಮಃ ಸ್ತ್ರೀವಧಂ ವಯಮ್ ॥34॥
ಓ ದ್ವಿಜಶ್ರೇಷ್ಠರೇ! ಆ ಸ್ತ್ರೀಯರಿಗೆ ತಮ್ಮ ಸಂಬಂಧಿಕರ ಮೇಲೆ ಅಧಿಕವಾದ ವಾತ್ಸಲ್ಯವಿದೆ. ಆದ್ದರಿಂದಲೇ ತಮ್ಮ ಪ್ರಾಣಗಳನ್ನು ಧರಿಸಲು ಅವರು ಈಗ ಸಮರ್ಥರಾಗಿರುವುದಿಲ್ಲ. ಪ್ರಾಣಬಿಡುತ್ತಾರೆಂಬ ವಿಷಯದಲ್ಲಿ ನನಗೆ ಸಂಶಯವೂ ಇಲ್ಲ. ಧರ್ಮದ ಮಾರ್ಗವು ಅತ್ಯಂತಸೂಕ್ಷ್ಮವಾಗಿದೆ. ನಿಶ್ಚಯವಾಗಿಯೂ ನಾವು ಅಸಂಖ್ಯಾತರಾದ ಕುಲಸ್ತ್ರೀಯರನ್ನು ವಧೆ ಮಾಡಿದ ಪಾಪಭಾಜನರಾಗುತ್ತಿದ್ದೇವೆ.
ತೇ ವಯಂ ಸುಹೃದೋ ಹತ್ವಾ ಕೃತ್ವಾ ಪಾಪಮನಂತಕಮ್ |
ನರಕೇ ನಿಪತಿಷ್ಯಾಮೋ ಹ್ಯಧಃಶಿರಸ ಏವ ಚ ॥35॥
ಇಂಥ ನಾವು ಎಲ್ಲಾ ಸುಹೃದರನ್ನು ಕೊಂದಿದ್ದೇವೆ. ಅಪಾರವಾದ ಪಾಪವನ್ನು ಸಂಪಾದನೆ ಮಾಡಿದ್ದೇವೆ. ಈ ಕಾರಣದಿಂದ ಘೋರ ನರಕದಲ್ಲಿ ನಾವು ತಲೆಕೆಳಗಾಗಿ ಬೀಳುತ್ತೇವೆ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಶರೀರಾಣಿ ವಿಮೋಕ್ಷ್ಯಾಮಸ್ತಪಸೋಗ್ರೇಣ ಸತ್ತಮ |
ಆಶ್ರಮಾಂಶ್ಚ ವಿಶೇಷಾಂಸ್ತ್ವಂ ಸಮಾಚಕ್ಷ್ವ ಪಿತಾಮಹ ॥36॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ವ್ಯಾಸವಾಕ್ಯಂ ನಾಮ ತ್ರಯಸಿತ್ರಂಶೋಽಧ್ಯಾಯಃ ॥33॥
ಆದ್ದರಿಂದ ಅತ್ಯಂತ ಉಗ್ರವಾದ ತಪಸ್ಸನ್ನು ಮಾಡಿ, ನಾನು ಈ ಶರೀರವನ್ನು ಪರಿತ್ಯಾಗ ಮಾಡುತ್ತೇನೆ. ಸತ್ಪುರುಷರಲ್ಲಿ ಶ್ರೇಷ್ಠರಾದ ಪಿತಾಮಹರೇ! ನಾನೀಗ ಯಾವ ಆಶ್ರಮಧರ್ಮವನ್ನು ಪರಿಪಾಲನೆ ಮಾಡಬೇಕು. ಅದರ ಬಗ್ಗೆ ನನಗೆ ಉಪದೇಶಿಸಿರಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 33ನೆಯ ಅಧ್ಯಾಯವು ಮುಗಿಯಿತು.
34. ಮೂವತ್ನಾಕನೆಯ ಅಧ್ಯಾಯ
ವೇದವ್ಯಾಸದೇವರು ಯುಧಿಷ್ಠಿರನಿಗೆ ಅನೇಕ ಬಗೆಯಲ್ಲಿ ಸಮಾಧಾನವನ್ನು ಮಾಡುತ್ತಿದ್ದಾರೆ. ಪಾಪಗಳಿಗೆ ಪ್ರಾಯಶ್ಚಿತ್ತಾದಿಗಳನ್ನು ತಿಳಿಸುತ್ತಿದ್ದಾರೆ. ಕಾಲದ ಪ್ರಾಬಲ್ಯವನ್ನು ಹೇಳಿ, ದೇವಾಸುರರ ಯುದ್ಧದ ಉದಾಹರಣೆಯನ್ನು ನೀಡುವ ಮೂಲಕ ಅಧಾರ್ಮಿಕರನ್ನು ದಮನ ಮಾಡುವುದು ಅತ್ಯಂತ ಉಚಿತವೆಂದು ವಿವರಿಸುತ್ತಿದ್ದಾರೆ.
ವೈಶಂಪಾಯನಃ
ಯುಧಿಷ್ಠಿರಸ್ಯ ತದ್ ವಾಕ್ಯಂ ಶ್ರುತ್ವಾ ದ್ವೈಪಾಯನಸ್ತದಾ |
ಸಮೀಕ್ಷ್ಯ ನಿಪುಣಂ ಬುದ್ಧ್ಯಾ ಋಷಿಃ ಪ್ರೋವಾಚ ಪಾಂಡವಮ್ ॥1॥
ವೈಶಂಪಾಯನರು ಯುಧಿಷ್ಠಿರನ ಎಲ್ಲಾ ಬಗೆಯ ಮಾತುಗಳನ್ನು ವೇದವ್ಯಾಸ- ಋಷಿಗಳು ಕೇಳಿಸಿಕೊಂಡರು. ತಮ್ಮ ನಿಪುಣವಾದ ಬುದ್ಧಿಯಿಂದ ಸರಿಯಾಗಿ ವಿಮರ್ಶಿಸಿ, ಆ ಪಾಂಡವನಿಗೆ ಮುಂದೆ ಹೇಳುವಂತೆ ಸಮಾಧಾನಕರವಾದ ಮಾತು- ಗಳನ್ನು ಹೇಳಿದರು.
ಮಾ ವಿಷಾದಂ ಕೃಥಾ ರಾಜನ್ ಕ್ಷತ್ರಧರ್ಮಮನುಸ್ಮರ |
ಸ್ವಧರ್ಮೇಣ ಹತಾ ಹ್ಯೇತೇ ಕ್ಷತ್ರಿಯಾಃ ಕ್ಷತ್ರಿಯರ್ಷಭ ॥2॥
ಓ ಕ್ಷತ್ರಿಯಶ್ರೇಷ್ಠನೇ! ಕ್ಷತ್ರಿಯರ ಧರ್ಮವನ್ನು ಒಮ್ಮೆ ನೆನಪು ಮಾಡಿಕೋ. ಬಹಳ ದುಃಖಪಡಬೇಡ. ಎಲ್ಲಾ ಕ್ಷತ್ರಿಯರು ಸ್ವಧರ್ಮವನ್ನು ಅನುಷ್ಠಾನ ಮಾಡಿಯೇ ಮೃತರಾಗಿದ್ದಾರೆ.
ಕಾಂಕ್ಷಮಾಣಾಃ ಶ್ರಿಯಂ ಕೃತ್ಸ್ನಾಂ ಪೃಥಿವ್ಯಾಂ ಚ ಮಹದ್ ಯಶಃ |
ಕೃತಾಂತವಿಧಿಸಂಯುಕ್ತಾಃ ಕಾಲೇನ ನಿಧನಂ ಗತಾಃ ॥3॥
ಯುದ್ಧದಲ್ಲಿ ಪಾಲ್ಗೊಂಡ ಪ್ರತಿಯೊಬ್ಬ ಕ್ಷತ್ರಿಯರಿಗೂ ಕೂಡ ಸಮಗ್ರ ಭೂ- ಮಂಡಲದ ಆಧಿಪತ್ಯದ ಅಪೇಕ್ಷೆಯಿತ್ತು. ಆದರೆ ಆ ಯಮರಾಜನ ನಿಯಮಕ್ಕೆ
ಅಧೀನವಾಗಿ ಅವರೆಲ್ಲರೂ ಪ್ರಾಣವನ್ನು ಕಳೆದುಕೊಂಡರು.
ನ ತ್ವಂ ಹಂತಾ ನ ಭೀಮೋಽಪಿ ನಾರ್ಜುನೋ ನ ಯಮಾವಪಿ |
ಕಾಲಃ ಪರ್ಯಾಯಧರ್ಮೇಣ ಪ್ರಾಣಾನಾದತ್ತ ದೇಹಿನಾಮ್ ॥4॥
ಆ ಕ್ಷತ್ರಿಯರ ಹಂತಕ ನೀನಲ್ಲ. ಭೀಮಸೇನ, ಅರ್ಜುನ, ನಕುಲ-ಸಹದೇವ ಇವರುಗಳಲ್ಲಿ ಯಾರೂ ಸಹ ಅವರನ್ನು ಕೊಂದಿರುವುದಿಲ್ಲ. ಅವರವರ ಕಾಲವು ಪಕ್ವವಾದಾಗ ಆ ಕಾಲನೇ ಪ್ರಾಣಗಳನ್ನು ಅಪಹರಿಸಿಕೊಂಡು ಹೋಗಿರುವನು.
ನ ತಸ್ಯ ಮಾತಾಪಿತರೌ ನಾನುಗ್ರಾಹ್ಯೋಽಸ್ತಿ ಕಶ್ಚನ |
ಕರ್ಮಸಾಕ್ಷೀ ಪ್ರಜಾನಾಂ ಯಸ್ತೇನ ಕಾಲೇನ ಸಂಹೃತಾಃ ॥5॥
ಆ ಕಾಲನಾಮಕನಾದ ಪರಮಾತ್ಮನಿಗೆ ಯಾರೊಬ್ಬ ತಂದೆಯೂ ಇಲ್ಲ. ತಾಯಿಯೂ ಇಲ್ಲ. ಅವನು ಯಾರೊಬ್ಬರ ಅನುಗ್ರಹಕ್ಕೂ ಪಾತ್ರನಲ್ಲ. ಆಯಾ ಜೀವರುಗಳು ಮಾಡುವ ಕರ್ಮಗಳಿಗೆ ಸಾಕ್ಷಿಭೂತನಾಗಿ ನಿಂತಿರುವನು. ಅಂಥ ಕಾಲನಾಮಕನಾದ ಪರಮಾತ್ಮನಿಂದಲೇ ನಿನ್ನೆಲ್ಲಾ ಶತ್ರುಗಳು ಸಂಹೃತರಾಗಿದ್ದಾರೆ.
ಹೇತುಮಾತ್ರಮಿದಂ ತಸ್ಯ ಕಾಲಸ್ಯ ಪುರುಷರ್ಷಭ |
ಯದ್ ಹಂತಿ ಭೂತೈರ್ಭೂತಾನಿ ತದಸ್ಮೈ ರೂಪಮೈಶ್ವರಮ್ ॥6॥
ಆ ಕಾಲನಿಗೆ ಈ ಮಹಾ ಯುದ್ಧವು ಕೇವಲ ನಿಮಿತ್ತವಾಗಿತ್ತು. ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಯನ್ನು ಆ ಕಾಲನೇ ಸಂಹಾರ ಮಾಡಿಸಿರುವನು. ಇದು ಆ ಕಾಲನ ವಿಭೂತಿಶಕ್ತಿಯಾಗಿದೆ ಎಂದಷ್ಟೇ ತಿಳಿದುಬಿಡು.
ಕರ್ಮಸೂತ್ರಾತ್ಮಕಂ ವಿದ್ಧಿ ಸಾಕ್ಷಿಣಂ ಶುಭಪಾಪಯೋಃ |
ಸುಖದುಃಖಗುಣೋದರ್ಕಂ ಕಾಲಂ ಕಾಲಫಲಪ್ರದಮ್ ॥7॥
ಆ ಕಾಲನು ಪ್ರತಿಯೊಬ್ಬರ ಪುಣ್ಯಪಾಪಗಳಿಗೆ ಸಾಕ್ಷಿಭೂತನಾಗಿರುವನು. ಪ್ರತಿಯೊಬ್ಬರ ಕರ್ಮಗಳಿಗೂ ಸೂತ್ರಪ್ರಾಯನಾಗಿರುವನು. ಆ ಪುಣ್ಯ-ಪಾಪಗಳಿಂದ ದೊರೆಯುವ ಸುಖ-ದುಃಖಗಳ ಆವಿರ್ಭಾವಕ್ಕೂ ಅವನೇ ಕಾರಣನಾಗಿರುವನು. ಸಮಯವು ಪಕ್ವವಾದಾಗ

ಅವರವರ ಕರ್ಮಗಳಿಗೆ ಅನುಗುಣವಾಗಿ ಫಲವನ್ನು ಅವನೇ ನೀಡುವನು.
ತೇಷಾಮಪಿ ಮಹಾಬಾಹೋ ಕರ್ಮಾಣಿ ಪರಿಚಿಂತಯ |
ವಿನಾಶಹೇತುಕಾರಿತ್ವೇ ಯೈಸ್ತೇ ಕಾಲವಶಂ ಗತಾಃ ॥8॥
ಯುದ್ಧದಲ್ಲಿ ಮರಣವನ್ನು ಹೊಂದಿದ, ಆ ದುರ್ಯೋಧನಾದಿಗಳ ಪುಣ್ಯಕಾರ್ಯ, ಪಾಪಕಾರ್ಯವು ಎಷ್ಟು ಇರುವುದೆಂದು ನೀನೇ ಊಹಿಸು. ತಮ್ಮ ವಿನಾಶಕ್ಕೆ ಎಷ್ಟು ಪಾಪಕೆಲಸಗಳನ್ನು ಮಾಡಬೇಕೋ, ಅಷ್ಟನ್ನೂ ಕೂಡ ಸಂಪಾದನೆ ಮಾಡಿ, ಆ ಕಾಲನ ಆಧೀನವಾಗಿಯೇ ಮರಣವನ್ನು ಹೊಂದಿರುವರು.
ಆತ್ಮನಶ್ಚ ವಿಜಾನೀಹಿ ನಿಯಮವ್ರತಶೀಲತಾಮ್ |
ಯದಾ ತ್ವಮೀದೃಶಂ ಕರ್ಮ ವಿಧಿನಾಕ್ರಮ್ಯ ಕಾರಿತಃ ॥9॥
ಮತ್ತು ನಿನ್ನ ನಡೆ-ನುಡಿಗಳು ಎಷ್ಟು ಶುಭದಾಯಕವಾಗಿವೆ ಎಂಬುದನ್ನು ಗಮನಿಸು. ನೀನು ಮಾಡುತ್ತಿರುವ ನಿಯಮನಿಷ್ಠವಾದ ವ್ರತಗಳನ್ನು ಅನುಷ್ಠಾನ- ಗಳನ್ನು, ಸದ್ಗುಣಗಳನ್ನು ಗಮನಿಸು. ನಿನ್ನಲ್ಲಿರುವ ಅಪಾರವಾದ ಸದ್ಗುಣಗಳ ಅಧೀನವಾಗಿಯೇ ನಿನಗೆ ಜಯವನ್ನು ತಂದು, ಆ ದುಷ್ಟರನ್ನು ಆ ಕಾಲನು ವಿನಾಶ- ಗೊಳಿಸಿರುವನು.
ತ್ವಷ್ಟ್ರೇವ ವಿಹಿತಂ ಯಂತ್ರಂ ಯಥಾ ಸ್ಥಾಪಯಿತುರ್ವಶೇ |
ಕರ್ಮಣಾ ಕಾಲಯುಕ್ತೇನ ತಥೇದಂ ಭ್ರಾಮ್ಯತೇ ಜಗತ್ ॥10॥
ಯಾವರೀತಿಯಾಗಿ ಬಡಗಿಯಿಂದ ನಿರ್ಮಿತವಾದ ಕೀಲುಬೊಂಬೆಯು ಅವನ ಅಧೀನವಾಗಿ ಚೇಷ್ಟೆಯನ್ನು ಮಾಡುತ್ತದೋ, ಅದರಂತೆ ಕಾಲನಾಮಕನಾದ ಭಗವಂತನ ಅಧೀನವಾಗಿ ಈ ಜಗತ್ತು ತನ್ನ ವ್ಯಾಪಾರದಲ್ಲಿ ತೊಡಗಿದೆ.
ಟಿಪ್ಪಣಿ - ಅಥಾಭಿಪತ್ತಿಃ ಇತ್ಯತ್ರ ಅಥ ತಸ್ಮಾತ್ ಕಾರಣಾತ್ ಶುಭಪಾಪಯೋಃ ಅಭಿಪತ್ತಿಃ ಪ್ರಾಪ್ತಿಃ ಲೋಕಸ್ಯ ಕರ್ತವ್ಯಾ |
ಉದ್ಯತದಂಡನಂ ಉದ್ಯತಂ ಸನ್ನದ್ಧಂ ದಂಡನಂ ದುಷ್ಟಾನಾಂ ಶಿಕ್ಷಣಂ ಯಸ್ಮಿನ್ ತದಿದಂ ರಾಜ್ಯಮ್ ಅಭಿಪನ್ನಂ ತವ ಪ್ರಾಪ್ತಮ್ |
ಸ್ವಧರ್ಮೇ ವರ್ತಮಾನಸ್ಯ ಇತ್ಯತ್ರ ಸಾಪವಾದೇ ಕ್ವಚಿದ್ ದುಷ್ಟಾನಾಂ ಶಿಕ್ಷಣಂ ಕರ್ತವ್ಯಮಿತ್ಯಪವಾದಸಹಿತೇ ಸ್ವಧರ್ಮೇ |
ಕರ್ಮಣಾ ಕಾಲಯುಕ್ತೇನ ಇತ್ಯತ್ರ ಕಾಲಃ ಸಂಹಾರಕೋ ನಾರಾಯಣಃ |
`ಕಾಲಯುಕ್ತೇನ' ಎಂಬಲ್ಲಿ ಕಾಲಶಬ್ದಕ್ಕೆ ಸಂಹಾರಕರ್ತೃವಾದ ನಾರಾಯಣ ಎಂದರ್ಥ.
ಸಮಸ್ತಪ್ರಪಂಚವು ಕಾಲಾಧೀನವಾಗಿದೆ ಎಂದು ವೇದವ್ಯಾಸದೇವರು ಯುಧಿಷ್ಠಿರನಿಗೆ ಬೋಧಿಸುತ್ತಿದ್ದಾರೆ. ಜಡವಾದ ಕಾಲವನ್ನು ವಿವಕ್ಷಿಸಿ ನಾಸ್ತಿಕ್ಯವನ್ನು ಬೋಧಿಸುತ್ತಿದ್ದಾರೆಂದು ತಿಳಿಯಬಾರದು. ಭಗವಂತನಿಗೆ ಕಾಲವೆಂಬ ರೂಪವಿದೆ. ಈ ರೂಪವೇ ಸಮಸ್ತ ಪ್ರಾಣಿಗಳ ಸಂಹಾರಕ್ಕೆ ಕಾರಣವಾಗಿದೆ. ಇಂಥ ಕಾಲ- ನಾಮಕನಾದ ಪರಮಾತ್ಮನು ಪ್ರತಿಯೊಬ್ಬರ ಕರ್ಮಗಳಿಗೆ ಸಾಕ್ಷಿಯಾಗಿರುತ್ತಾನೆ. ಮತ್ತು ಅವರವರ ಕರ್ಮಗಳಿಗೆ ಫಲಪ್ರದನೂ ಕೂಡ ಆಗಿರುತ್ತಾನೆ. ದುರ್ಯೋಧನಾದಿಗಳು ಆಚರಿಸಿದ ದುಷ್ಕರ್ಮಗಳಿಗೂ ಸಾಕ್ಷಿಯಾಗಿದ್ದಾನೆ. ಧರ್ಮರಾಜಾದಿಗಳು ಆಚರಿಸುತ್ತಿದ್ದ, ಸತ್ಕರ್ಮಗಳಿಗೂ ಕೂಡ ಸಾಕ್ಷಿಯಾಗಿದ್ದಾನೆ. ದುರ್ಯೋಧನಾದಿಗಳು ಮಾಡಿದ ನೀಚ ಕಾರ್ಯಗಳಿಗೆ ವಿನಾಶವನ್ನೇ ಫಲವನ್ನಾಗಿ ನೀಡಿದ್ದಾನೆ. ಯುಧಿಷ್ಠಿರಾದಿಗಳು ಮಾಡಿದ ಸತ್ಕಾರ್ಯಗಳಿಗೆ ಅನಂತಕಾಲದ ತನಕ ವಿಜಯವನ್ನು ಸುಖಸಮೃದ್ಧಿಯ ಸೌಭಾಗ್ಯವನ್ನು ದಯಪಾಲಿಸುತ್ತಾನೆ. ಇಂಥ ಕಾಲನನ್ನು ನಿಯಂತ್ರಿಸುವ ಶಕ್ತಿ ಯಾರಿಗೂ ಇರುವುದಿಲ್ಲ. ದುರ್ಯೋಧನಾದಿ- ಗಳ ವಿನಾಶವನ್ನು ನಿಯಂತ್ರಣ ಮಾಡಲು ಎಷ್ಟೇ ಪ್ರಯತ್ನಪಟ್ಟರೂ ಯುಧಿ- ಷ್ಠಿರನಿಂದಲೂ ಸಾಧ್ಯವಾಗುವುದಿಲ್ಲ. ತನ್ನ ಮಕ್ಕಳ ವಿನಾಶವನ್ನೂ ಕೂಡ ತಪ್ಪಿಸಲು ಯುಧಿಷ್ಠಿರನಿಗೆ ಸಾಧ್ಯವಾಗುವುದಿಲ್ಲ. ಇದೆಲ್ಲವೂ ಕಾಲನಾಮಕನಾದ ಪರಮಾತ್ಮನ ಮಹಿಮೆ ಎಂದಷ್ಟೇ ತಿಳಿದುಕೊಳ್ಳಬೇಕು. ಇದನ್ನು ಹೊರತಾಗಿ ಅಭಿಮನ್ಯು ಮೊದಲಾದವರ ಮೃತ್ಯುವನ್ನು ನಾನು ತಪ್ಪಿಸಬಹುದಿತ್ತು ಎಂಬ ಪರಿತಾಪವು ಅರ್ಥವಿಲ್ಲದ್ದು ಎಂಬುದು ವೇದವ್ಯಾಸದೇವರ ಅಭಿಪ್ರಾಯವಾಗಿದೆ.
ಪುರುಷಸ್ಯ ಹಿ ದೃಷ್ಟ್ವೇಮಾಮುತ್ಪತ್ತಿಮನಿಮಿತ್ತತಃ |
ಯದೃಚ್ಛಯಾ ವಿನಾಶಂ ಚ ಶೋಕಹರ್ಷಾವನರ್ಥಕೌ ॥11॥
ಮನುಷ್ಯನ ಜನ್ಮಕ್ಕೆ ಏನು ಕಾರಣ? ಎಂದು ತಿಳಿಯಲು ಸಾಧ್ಯವಿಲ್ಲ. ಅದರಂತೆ ಅವನ ನಾಶವನ್ನೂ ಕೂಡ ತಿಳಿಯುವುದು ಸಾಧ್ಯವಿಲ್ಲ. ಎಲ್ಲವೂ ಕೂಡ ಆ ಕಾಲನ ಇಚ್ಛೆಯಂತೆಯೇ ನಡೆಯುತ್ತದೆ.
ಟಿಪ್ಪಣಿ - ಉತ್ಪತ್ತಿಮನಿಮಿತ್ತತ ಇತ್ಯತ್ರ ಅನಿಮಿತ್ತತಃ ಅಕಾರವಾಚ್ಯನಾರಾ- ಯಣಾಖ್ಯಸ್ವತಂತ್ರನಿಮಿತ್ತತಃ |
`ಉತ್ಪತ್ತಿಮನಿಮಿತ್ತತಃ' ಎಂಬಲ್ಲಿ ಅನಿಮಿತ್ತತಃ ಎಂಬುದಕ್ಕೆ ಅಕಾರಶಬ್ದದಿಂದ ಪ್ರತಿಪಾದ್ಯನಾದ ನಾರಾಯಣನು ಸ್ವತಂತ್ರವಾಗಿ ಕಾರಣನಾಗಿದ್ದಾನೆ ಎಂದರ್ಥ.
ನಾವು ಏಕೆ ಹುಟ್ಟುತ್ತಿದ್ದೇವೆ? ಏಕೆ ಸಾಯುತ್ತೇವೆ? ಎಂಬುದನ್ನು ನಮ್ಮಿಂದ ತಿಳಿಯಲು ಸಾಧ್ಯವಾಗುವುದಿಲ್ಲ. ಪ್ರತಿಯೊಂದೂ ಕೂಡ ನಮ್ಮ ಕರ್ಮಕ್ಕೆ ಅನು- ಗುಣವಾಗಿ ಆ ಕಾಲನ ಅಧೀನವಾಗಿ ಹುಟ್ಟು-ಸಾವುಗಳನ್ನು ಅನುಭವಿಸುತ್ತಿದ್ದೇವೆ. ಜನನವು ಸುಖಪ್ರದವಾಗಿದೆ ಎಂದು ನಮ್ಮ ಇಚ್ಛೆಗೆ ಅನುಗುಣವಾಗಿ ಹುಟ್ಟಲು ಸಾಧ್ಯವಿಲ್ಲ. ಮರಣವು ದುಃಖಪ್ರದವೆಂಬ ಕಾರಣದಿಂದ ಅದನ್ನು ತಡೆಯಲೂ ಕೂಡ ನಮ್ಮಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಒಬ್ಬನು ಹುಟ್ಟುವುದರಿಂದ ಸಂತೋಷ ಪಡಬಾರದು. ಮತ್ತೊಬ್ಬನು ಸತ್ತನೆಂಬ ಕಾರಣದಿಂದ ದುಃಖವನ್ನು ಪಡಬಾರದು.
ವ್ಯಲೀಕಂ ಚಾಪಿ ಯತ್ತ್ವತ್ರ ಚಿತ್ತಂ ವೈತಂಸಿಕ್ತಂ ತವ |
ತದರ್ಥಮಿಷ್ಯತೇ ರಾಜನ್ ಪ್ರಾಯಶ್ಚಿತ್ತಂ ತದಾಚರ ॥12॥
ದುರ್ಯೋಧನಾದಿಗಳು ತಮ್ಮ ಕರ್ಮಕ್ಕೆ ಅನುಗುಣವಾಗಿ ಮೃತರಾಗಿದ್ದಾರೆ. ಆದರೆ ನಾನು ಅವರನ್ನು ಕೊಂದಿದ್ದೇನೆಂಬ ಕಾರಣದಿಂದ ಮನಸ್ಸನ್ನು ಕುಟಿಲವನ್ನಾಗಿ ಮಾಡಿಕೊಂಡಿರುವಿ. ಈ ಪಾಪದ ನಿವೃತ್ತಿಗಾಗಿ ಅನೇಕ ಪ್ರಾಯಶ್ಚಿತ್ತಗಳು ಶಾಸ್ತ್ರಗಳಲ್ಲಿ ಉಕ್ತವಾಗಿವೆ. ನೀನು ಆ ಪ್ರಾಯಶ್ಚಿತ್ತಗಳನ್ನು ಆಚರಿಸಿ, ಮನಸ್ಸನ್ನು ಶುದ್ಧಿಮಾಡಿ- ಕೊಳ್ಳಬೇಕು.
ಟಿಪ್ಪಣಿ - ದುರ್ಯೋಧನಾದಿಗಳನ್ನು ಸಂಹರಿಸುವವನು ನೀನಲ್ಲ. ಆದರೆ ನಾನೇ ಸಂಹಾರ ಮಾಡಿದ್ದೇನೆಂದು ಮನಸ್ಸನ್ನು

ಹಾಳುಮಾಡಿಕೊಂಡಿರುವಿ. ನಿನ್ನ ಮನಸ್ಸು ಅತ್ಯಂತ ಉದ್ವಿಗ್ನವಾಗಿದೆ. ಆದ್ದರಿಂದಲೇ ನಿನಗೆ ಪಾಪವು ಅಂಟಿದೆ. ಇದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ವ್ಯಾಸರು ಉಪದೇಶಿಸುತ್ತಿದ್ದಾರೆ.
ಟಿಪ್ಪಣಿ - ಚಿತ್ತಂ ವೈತಂಸಿಕಂ ತವ ಇತ್ಯತ್ರ ವೈತಂಸಿಕಂ ಕುಟಿಲಮ್ | `ವೈತಂಸಿಕಃ ಕೌಟಿಕಶ್ಚ' ಇತ್ಯಮರಃ |
ಚಿತ್ತಂ ವೈತಂಸಿಕಂ ತವ ಎಂಬಲ್ಲಿ ವೈತಂಸಿಕಂ ಎಂಬುದಕ್ಕೆ ಕುಟಿಲವಾದದ್ದು ಎಂದರ್ಥ. `ವೈತಂಸಿಕಃ ಕೌಟಿಕಶ್ಚ' ಎಂಬುದಾಗಿ ಅಮರಕೋಶದಲ್ಲಿ ಹೇಳಲಾಗಿದೆ.
ಇದಂ ಚ ಶ್ರೂಯತೇ ಪಾರ್ಥ ಯುದ್ಧೇ ದೇವಾಸುರೇ ಪುರಾ |
ಅಸುರಾ ಭ್ರಾತರೋ ಜ್ಯೇಷ್ಠಾ ದೇವಾಶ್ಚಾಪಿ ಯವೀಯಸಃ ॥13॥
ಯುಧಿಷ್ಠಿರನೇ! ಹಿಂದೆ ದೇವತೆಗಳಿಗೂ ಅಸುರರಿಗೂ ಘೋರವಾದ ಯುದ್ಧ- ವೊಂದು ನಡೆದಿತ್ತು. ಪ್ರಕೃತ ಆ ಪ್ರಸಂಗವನ್ನು ನಿನಗೆ ಹೇಳುತ್ತೇನೆ ಕೇಳು. ಅಸುರರು ಜ್ಯೇಷ್ಠಭ್ರಾತೃಗಳಾಗಿದ್ದರು, ದೇವತೆಗಳು ಕನಿಷ್ಠಭ್ರಾತೃಗಳಾಗಿದ್ದರು.
ತೇಷಾಮಪಿ ಶ್ರೀನಿಮಿತ್ತಂ ಮಹಾನಾಸೀತ್ ಸಮುಚ್ಛ್ರಯಃ |
ಯುದ್ಧಂ ವರ್ಷಸಹಸ್ರಾಣಿ ದ್ವಾತ್ರಿಂಶದಭವತ್ ಕಿಲ ॥14॥
ತ್ರೈಲೋಕ್ಯಾಧಿಪತ್ಯವೆಂಬ ಸಂಪತ್ತು ಯಾರಿಗೆ ಸೇರಬೇಕೆಂಬ ವಿಷಯದಲ್ಲಿ ಅವರಿಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ಮೂವತ್ತೆರಡು ಸಾವಿರ ವರ್ಷಗಳ ಕಾಲ ಮಹಾಯುದ್ಧವನ್ನು ದೇವತೆಗಳು ಹಾಗೂ ಅಸುರರು ಮಾಡಿದರು.
ಏಕಾರ್ಣವಾಂ ಮಹೀಂ ಕೃತ್ವಾ ರುಧಿರೇಣ ಪರಿಪ್ಲುತಾಮ್ |
ಜಘ್ನುರ್ದೈತ್ಯಾಂಸ್ತದಾ ದೇವಾಸ್ತ್ರಿದಿವಂ ಚೈವ ಲೇಭಿರೇ ॥23॥
ಸಮಸ್ತ ಭೂಮಂಡಲವು ದೈತ್ಯರ ರಕ್ತದಿಂದ ತುಂಬಿಹೋಯಿತು. ಭೂ- ಮಂಡಲದ ಸುತ್ತಲೂ ಇರುವ ಸಮುದ್ರಗಳು ರಕ್ತದ ಸಮುದ್ರಗಳಾದವು. ತಮ್ಮ ಹಿರಿಯ ಸಹೋದರರಾದ ದೈತ್ಯರನ್ನು ಕೊಂದು, ಎಲ್ಲ ದೇವತೆಗಳು ವಿಜಯಶಾಲಿ- ಗಳಾದರು. ತ್ರಿಲೋಕಗಳಿಗೆ ಒಡೆಯರಾದರು.
ತಥೈವ ಪೃಥಿವೀಂ ಲಬ್ಧ್ವಾ ಬ್ರಾಹ್ಮಣಾ ವೇದಪಾರಗಾಃ |
ಸಂಶ್ರಿತಾ ದಾನವಾನಾಂ ವೈ ಸಾಹ್ಯಾರ್ಥೇ ದರ್ಪಮೋಹಿತಾಃ ॥24॥
ಶಾಲಾವೃಕಾ ಇತಿ ಖ್ಯಾತಾಸ್ತ್ರಿಷು ಲೋಕೇಷು ಭಾರತ |
ಅಷ್ಟಾಶೀತಿಸಹಸ್ರಾಣಿ ತೇ ಚಾಪಿ ವಿಬುಧೈರ್ಹತಾಃ ॥25॥
ವೇದಪಾರಂಗತರಾದ ಶಾಲಾವೃಕ ಎಂಬುದಾಗಿ ಪ್ರಸಿದ್ಧಿಯನ್ನು ಪಡೆದ 88000 ಬ್ರಾಹ್ಮಣರು ದರ್ಪದಿಂದ ಕೂಡಿದ್ದರು, ಮೋಹವಶರಾಗಿದ್ದರು, ದೈತ್ಯ- ರಿಗೆ ಅಸುರರಿಗೆ ಸಹಾಯವನ್ನು ಮಾಡುವುದಕ್ಕಾಗಿ ಅಸುರರ ಪಕ್ಷವನ್ನು ಸೇರಿದ್ದರು. ಆದರೆ ದೇವತೆಗಳು ಆ ಬ್ರಾಹ್ಮಣರನ್ನೂ ಕೂಡ ಸಂಹಾರ ಮಾಡಿದರು. ಭೂಮಂಡಲವನ್ನು ತಮ್ಮ ಅಧೀನವನ್ನಾಗಿ ಮಾಡಿಕೊಂಡರು.
ಧರ್ಮವ್ಯುಚ್ಛಿತ್ತಿಮಿಚ್ಛಂತೋ ಯೇಽಧರ್ಮಸ್ಯ ಪ್ರವರ್ತಕಾಃ |
ಹಂತವ್ಯಾಸ್ತೇ ದುರಾತ್ಮಾನೋ ದೇವೈರ್ದೈತ್ಯಾ ಇವೋಲ್ಬಣಾಃ ॥26॥
ಧರ್ಮಮಾರ್ಗವು ಸಂಪೂರ್ಣವಾಗಿ ನಾಶವಾಗಬೇಕೆಂಬ ಇಚ್ಛೆಯಿಂದ ಯಾರು ಅಧರ್ಮಕ್ಕೆ ಪ್ರೇರಕರಾಗಿರುತ್ತಾರೋ, ಅಂಥ ದುರಾತ್ಮರನ್ನು ಕೊಲ್ಲಲೇ ಬೇಕು. ಈ ದೃಷ್ಟಿಯಿಂದ ದೇವತೆಗಳು ಎಲ್ಲಾ ದೈತ್ಯರನ್ನು ಸಂಹಾರ ಮಾಡಿದರು. ಅದರಂತೆ ನೀನೂ ಸಹ ದುಷ್ಟರನ್ನು ಸಂಹಾರ ಮಾಡಬೇಕು.
ಏಕಂ ಹತ್ವಾ ಯದಿ ಕುಲೇ ಶಿಷ್ಟಾನಾಂ ಸ್ಯಾದನಾಮಯಮ್ |
ಕುಲಂ ಹತ್ವಾಚ ರಾಷ್ಟ್ರಂ ವಾ ನ ತದ್ವೃತೋಪಘಾತಕಮ್ ॥27॥
ಒಬ್ಬನನ್ನು ಕೊಲ್ಲುವುದರಿಂದ ಕುಲದಲ್ಲಿರುವ ಉಳಿದೆಲ್ಲಾ ಸತ್ಪುರುಷರಿಗೆ ಕ್ಷೇಮವಾಗುವುದಾದರೆ ಅವನನ್ನು ಕೊಲ್ಲುವುದೇ ಧರ್ಮ. ಒಂದು ದುಷ್ಟಕುಲವನ್ನು ಸಂಹಾರ ಮಾಡುವುದರಿಂದ ಸಜ್ಜನರಿಂದ ಕೂಡಿದ ಸಮಸ್ತರಾಷ್ಟ್ರಕ್ಕೆ ಕ್ಷೇಮವಾಗು- ವುದಾದರೆ, ಆ ಕುಲವನ್ನು ಸಂಪೂರ್ಣವಾಗಿ ನಾಶ ಮಾಡುವುದೇ ಧರ್ಮವಾಗು- ತ್ತದೆ. ಇದರಿಂದ ಕುಲವನ್ನು, ಧರ್ಮವನ್ನು ನಾಶ ಮಾಡಿದ ಪಾಪವು ಬರುವುದಿಲ್ಲ.
ಅಧರ್ಮರೂಪೋ ಧರ್ಮೋ ಹಿ ಕಶ್ಚಿದತಸ್ತಿ ನರಾಧಿಪಃ |
ಧರ್ಮಶ್ಚಾಧರ್ಮರೂಪೋಽಸ್ತಿ ತಚ್ಚ ಜ್ಞೇಯಂ ವಿಪಶ್ಚಿತಾ ॥28॥
ಕೆಲವೊಮ್ಮೆ ನಾವು ಮಾಡುವ ಕರ್ಮವು ಅಧರ್ಮದಂತೆ ಕಾಣಬಹುದು. ವಿಚಾರ ಮಾಡಿದರೆ ಅದು ಧರ್ಮವೇ ಆಗಿರುತ್ತದೆ. ಕೆಲವೊಮ್ಮೆ ನಾವು ಮಾಡುವ ಪಾಪಕೆಲಸಗಳು ಧರ್ಮದಂತೆ ಕಾಣಬಹುದು. ಆದರೆ ವಿಚಾರ ಮಾಡಿದರೆ ಅದು ಅಧರ್ಮವೇ ಆಗಿರುತ್ತದೆ. ಹೀಗೆ ವಿದ್ವಾಂಸರು ಧರ್ಮಾಧರ್ಮಗಳ ಸೂಕ್ಷ್ಮ- ರಹಸ್ಯವನ್ನು ಅರಿತುಕೊಳ್ಳಬೇಕು.
ಟಿಪ್ಪಣಿ - ಅಧರ್ಮರೂಪೋ ಧರ್ಮೋ ಹಿ ಇತ್ಯತ್ರ ಕಶ್ಚಿದ್ಧರ್ಮಃ ದುಷ್ಟವಧಾಖ್ಯೋ ಧರ್ಮಃ ಅಧರ್ಮರೂಪಃ ಹಿಂಸಾಮಾತ್ರೇಣ ಅಜ್ಞಾನಿನಾಮ್ ಅಧರ್ಮವದ್ ರೂಪಂ ಯಸ್ಯ ಸಃ ಅಧರ್ಮರೂಪಃ | ಧರ್ಮಃ ಚೋರೈಃ ಪ್ರಶ್ನೇ ಕೃತೇ ಸತಿ ಅನೇನ ಪಥಾ ಬ್ರಾಹ್ಮಣಾ ಗತಾ ಇತಿ ಸತ್ಯರೂಪತ್ವಾದ್ ಧರ್ಮಃ ಅಜ್ಞಾನಾಂ ಧರ್ಮವತ್ ಪ್ರತೀಯಮಾನಃ ಅಧರ್ಮಃ ವಿಪ್ರಹಿಂಸಾಹೇತುತ್ವಾ- ನ್ಮಹಾನಧರ್ಮಃ |
ಅಧರ್ಮರೂಪೋ ಧರ್ಮೋ ಹಿ ಎಂಬಲ್ಲಿ ಕಶ್ಚಿದ್ಧರ್ಮಃ ಎಂಬುದಕ್ಕೆ ದುಷ್ಟವಧೆ ಎಂದರ್ಥ. ಹಿಂಸೆಯನ್ನು ಮಾಡುವುದರಿಂದ ಅಜ್ಞಾನಿಗಳಿಗೆ ಅಧರ್ಮ- ದಂತೆ ಕಾಣಿಸುತ್ತದೆ ಎಂದಭಿಪ್ರಾಯ. `ಧರ್ಮಃ' - ಚೋರರು ಪ್ರಶ್ನೆ ಮಾಡಿದಾಗ ಈ ಮಾರ್ಗದಲ್ಲಿಯೇ ಬ್ರಾಹ್ಮಣನು ಹೋದನು ಎಂಬುದಾಗಿ ಅಜ್ಞಾನಿಗಳಿಗೆ ಧರ್ಮವೆಂದು ಕಾಣಿಸುತ್ತದೆ. ಆದರೆ ವಿಪ್ರಹಿಂಸೆಗೆ ಕಾರಣವಾಗಿರುವುದರಿಂದ ದೊಡ್ಡ ಅಧರ್ಮವೇ ಆಗಿದೆ.
ತಸ್ಮಾತ್ ಸಂಸ್ತಂಭಯಾತ್ಮಾನಂ ಶ್ರುತವಾನಸಿ ಪಾಂಡವ |

ದೇವೈಃ ಪೂರ್ವಗತಂ ಮಾರ್ಗಮನುಯಾತೋಽಸಿ ಭಾರತ ॥21॥
ಯುಧಿಷ್ಠಿರನೇ! ಆದ್ದರಿಂದ ನೀನು ಬಹುಶ್ರುತನಾಗಿರುವಿ. ಶ್ರೇಷ್ಠಪುರುಷರಿಂದ ಉಪದೇಶವನ್ನು ಪಡೆದುಕೊಂಡಿರುವಿ. ನಿನ್ನ ಮನಸ್ಸನ್ನು ಸ್ಥಿರಗೊಳಿಸು. ದೇವತೆಗಳು ಹಿಂದೆ ಯಾವ ಮಾರ್ಗವನ್ನು ಅನುಸರಿಸಿದ್ದರೋ, ಅದೇ ಮಾರ್ಗವನ್ನು ಅನು- ಸರಿಸು.
ನ ಹೀದೃಶಾ ಗಮಿಷ್ಯಂತಿ ನರಕಂ ಪಾಂಡವರ್ಷಭ |
ಭ್ರಾತೄನಾಶ್ವಾಸಯ್ಯೆತಾಂಸ್ತ್ವಂ ಸೃಹೃದಶ್ಚ ಪರಂತಪ ॥22॥
ಓ ಪಾಂಡವಶ್ರೇಷ್ಠನೇ ! ನಿನ್ನಂಥ ಶ್ರೇಷ್ಠರು ಯಾರೂ ಸಹ ನರಕಭಾಜನರಾಗಲು ಸಾಧ್ಯವಿಲ್ಲ. ಪರಂತಪನೇ! ಇನ್ನು ಮುಂದಾದರೂ ನಿನ್ನ ತಮ್ಮಂದಿರನ್ನು ಸಂತೈಸಿ, ರಾಜ್ಯಪರಿಪಾಲನೆಯಲ್ಲಿ ದೃಢಮನಸ್ಸನ್ನು ಮಾಡುವವನಾಗು.
ಯೋ ಹಿ ಪಾಪಸಮಾರಂಭೇ ಕಾರ್ಯೇ ತದ್ಭಾವಭಾವಿತಃ |
ಕುರ್ವನ್ನಪಿ ತಥೈವ ಸ್ಯಾತ್ ಕೃತ್ವಾ ಚ ನಿರಪತ್ರಪಃ ॥23॥
ತಸ್ಮಿಂಸ್ತತ್ ಕಲುಷಂ ಸರ್ವಂ ಸಮಾಪ್ತಮಿತಿ ಶಬ್ದಿತಮ್ |
ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ಹ್ರಾಸೋ ವಾ ಪಾಪಕರ್ಮಣಃ ॥24॥
ಯಾವ ವ್ಯಕ್ತಿಯು ಪಾಪಭಾವನೆಯನ್ನು ಮನಸ್ಸಿನಲ್ಲಿ ತುಂಬಿಕೊಂಡು ಅದರಿಂದ ಪ್ರಭಾವಿತನಾಗಿ ಪಾಪಕರ್ಮದಲ್ಲಿ ಪ್ರವೃತ್ತನಾಗುತ್ತಾನೋ, ಆ ಕೆಲಸವು ಮುಗಿದ ಮೇಲೆ ನಾನು ಮಾಡಿದ್ದು ತಪ್ಪಾಯಿತೆಂದು ಪಶ್ಚಾತ್ತಾಪ ಪಡುವುದಿಲ್ಲವೋ, ತಾನು ಮಾಡಿದ ಪಾಪಕರ್ಮಕ್ಕೆ ನಾಚಿಕೆ ಪಡುವುದಿಲ್ಲವೋ, ಅಂಥವನಲ್ಲಿ ಆ ಪಾಪ- ಕಾರ್ಯವು ಪೂರ್ಣರೂಪದಲ್ಲಿ ಪ್ರತಿಷ್ಠಿತವಾಗಿರುತ್ತದೆಂದು ಶಾಸ್ತ್ರಗಳು ಪ್ರತಿಪಾದನೆ ಮಾಡುತ್ತವೆ. ಅಂಥವನಿಗೆ ಯಾವುದೇ ಪ್ರಾಯಶ್ಚಿತ್ತಗಳಿರುವುದಿಲ್ಲ. ಲೋಕದ ದೃಷ್ಟಿಯಲ್ಲಿ ಬಲಾತ್ಕಾರಕ್ಕೆ ಅವನು ಪ್ರಾಯಶ್ಚಿತ್ತ ಮಾಡಿಕೊಂಡರೂ ಅವನ ಪಾಪವು ಸ್ವಲ್ಪವೂ ಸಹ ಕಡಿಮೆಯಾಗುವುದಿಲ್ಲ.
ತ್ವಂ ತು ಶುಕ್ಲಾಭಿಜಾತೀಯಃ ಪರದೋಷೇಣ ಕಾರಿತಃ |
ಅನಿಚ್ಛಮಾನಃ ಕರ್ಮೇದಂ ಕೃತ್ವಾ ಚ ಪರಿತಪ್ಯಸೇ ॥25॥
ಯುಧಿಷ್ಠಿರನೇ! ನೀನು ಸ್ವಭಾವತಃ ಪರಿಶುದ್ಧನಾಗಿರುವವನು. ನಿನಗೆ ಯುದ್ಧ ಮಾಡಬೇಕೆಂಬ ಇಚ್ಛೆಯು ಸರ್ವಥಾ ಇರಲಿಲ್ಲ. ಶತ್ರುಗಳಾದ ಕಾರಣದಿಂದ ಅನಿ- ವಾರ್ಯವಾಗಿ ನೀನು ಯುದ್ಧವನ್ನು ಮಾಡಬೇಕಾಯಿತು. ಮನಸ್ಸಿಲ್ಲದಿದ್ದರೂ ಯುದ್ಧವನ್ನು ಪೂರ್ಣಗೊಳಿಸಿರುವಿ. ಯುದ್ಧವಾದ ಮೇಲೂ ಸಹ ಪಶ್ಚಾತ್ತಾಪವನ್ನು ಪಡುತ್ತಿರುವಿ.
ಟಿಪ್ಪಣಿ - `ಪರದೋಷೇಣ ಕಾರಿತಃ' ಇತ್ಯತ್ರ ಪರೇಷಾಂ ದುರ್ಯೋ- ಧನಾದೀನಾಂ ದೋಷೇಣ ಕಪಟದ್ಯೂತರಾಜ್ಯಾಪಹಾರಲಾಕ್ಷಾಗೃಹಾದಿಕರಣ- ದೋಷೇಣ |
`ಪರದೋಷೇಣ ಕಾರಿತಃ' ಎಂಬಲ್ಲಿ ಪರರೆಂದರೆ ದುರ್ಯೋಧನಾದಿಗಳು ಎಂದರ್ಥ. ಅವನು ಮಾಡಿದ, ಕಪಟದ್ಯೂತ, ರಾಜ್ಯಾಪಹಾರಲಾಕ್ಷಾಗೃಹದಾಹ, ಇವೇ ಮೊದಲಾದ ಪಾಪಕಾರ್ಯಗಳಿಂದ ಎಂದರ್ಥ.
ಅಶ್ವಮೇಧೋ ಮಹಾಯಜ್ಞಃ ಪ್ರಾಯಶ್ಚಿತ್ತಮುದಾಹೃತಮ್ |
ತಮಾಹರ ಮಹಾರಾಜ ವಿಪಾಪ್ಮೈವಂ ಭವಿಷ್ಯಸಿ ॥26॥
ಇಚ್ಛೆ ಇಲ್ಲದಿದ್ದರೂ ನಡೆದು ಹೋದ ಸರ್ವವಿನಾಶಕ್ಕೆ ಒಂದು ಪ್ರಾಯಶ್ಚಿತ್ತವಿದೆ. ಮಹಾಯಜ್ಞವೆನಿಸಿದ ಅಶ್ವಮೇಧಯಾಗವನ್ನು ಪ್ರಾಯಶ್ಚಿತ್ತವನ್ನಾಗಿ ಉದಾಹರಿಸ- ಲಾಗಿದೆ. ಆ ಅಶ್ವಮೇಧಯಾಗವನ್ನು ನೀನು ಆಚರಿಸು. ಅನಂತರ ನಿನ್ನ ಮನಸ್ಸಿನ- ಲ್ಲಿರುವ ಕಲ್ಮಶವು ಪರಿಹಾರವಾಗಿ ಪಾಪರಹಿತನಾಗುವಿ.
ಮರುದ್ಭಿಃ ಸಹ ಜಿತ್ವಾರೀನ್ ಮಘವಾನ್ ಪಾಕಶಾಸನಃ |
ಏಕೈಕಂ ಕ್ರತುಮಾಹೃತ್ಯ ಶತಕೃತ್ವಃ ಶತಕ್ರತುಃ ॥27॥
ಪಾಕಶಾಸನನಾದ ದೇವೇಂದ್ರನು ಎಲ್ಲ ಮರುದ್ಗಣಗಳ ಜೊತೆ ಆ ದೈತ್ಯರನ್ನು ಜಯಿಸಿದನು. ಒಮ್ಮೊಮ್ಮೆ ಜಯಸಿದಾಗಲೂ ಒಂದೊಂದು ಅಶ್ವಮೇಧಯಾಗವನ್ನು ಆಚರಿಸುತ್ತಿದ್ದನು. ಹೀಗೆ ನೂರು ಬಾರಿ ಜಯಿಸಿ, ನೂರು ಅಶ್ವಮೇಧಯಾಗಗಳನ್ನು ಆಚರಿಸಿದನು. ಆದ್ದರಿಂದಲೇ ಶತಕ್ರತು ಎಂಬುದಾಗಿ ಅನ್ವರ್ಥನಾಮವನ್ನು ಹೊಂದಿದನು.
ಪೂತಪಾಪ್ಮಾ ಜಿತಸ್ವರ್ಗೋ ಲೋಕಾನ್ ಪ್ರಾಪ್ಯ ಸುಖೋದಯಾನ್ |
ಮರುದ್ಗಣವೃತಃ ಶಕ್ರಃ ಶುಶುಭೇ ಭಾಸಯನ್ ದಿಶಃ ॥28॥
ಸಕಲಪಾಪಗಳಿಂದ ರಹಿತನಾದ ಸ್ವರ್ಗಲೋಕವನ್ನು ಜಯಿಸಿದ ಆ ದೇವೇಂದ್ರ- ನು ಎಲ್ಲ ಪುಣ್ಯಲೋಕಗಳಿಗೆ ತೆರಳಿದನು. ದೇವತೆಗಳ ಸಮೂಹದಿಂದ ಪರಿವೃತನಾಗಿ ಹತ್ತುದಿಕ್ಕುಗಳಲ್ಲಿಯೂ ಬೆಳಗುತ್ತಾ ಪ್ರಕಾಶಿಸಿದನು.
ಸ್ವರ್ಗಲೋಕೇ ಮಹೀಯಂತಮಪ್ಸರೋಭಿಃ ಶಚೀಪತಿಮ್ |
ಋಷಯಃ ಪರ್ಯುಪಾಸಂತೇ ದೇವಾಶ್ಚ ವಿಬುಧೇಶ್ವರಮ್ ॥29॥
ಸ್ವರ್ಗಲೋಕದಲ್ಲಿ ಅಪ್ಸರೆಯರಿಂದ ಸೇವಿಸಲ್ಪಟ್ಟನು. ದೇವೇಶ್ವರನಾದ ಶಚೀಪತಿ -ಯಾದ ಆ ಇಂದ್ರನನ್ನು ದೇವತೆಗಳಾದರೂ ನಿರಂತರ ಇಂದೂ ಸಹ ಉಪಾಸನೆ ಮಾಡುತ್ತಲೇ ಇದ್ದಾರೆ.
ಸೋಽಯಂ ತ್ವಮಿಹ ಸಂಕ್ರಾಂತೋ ವಿಕ್ರಮೇಣ ವಸುಂಧರಾಮ್ |
ನಿರ್ಜಿತಾಶ್ಚ ಮಹೀಪಾಲಾ ವಿಕ್ರಮೇಣ ತ್ವಯಾನಘ ॥30॥
ಪಾಪರಹಿತನೇ! ನಿನ್ನ ಭುಜಪರಾಕ್ರಮದಿಂದ ಸಮಗ್ರ ಭೂಮಂಡಲವನ್ನು ನೀನು ಗೆದ್ದಿರುವಿ. ಎಲ್ಲ ರಾಜರನ್ನು ಸೋಲಿಸಿರುವಿ. ನಿನಗೆ ಸಮಸ್ತ ಭೂಮಂಡಲವು ಈಗ ಅಧೀನವಾಗಿದೆ.
ತೇಷಾಂ ಪುರಾಣಿ ರಾಷ್ಟ್ರಾಣಿ ಗತ್ವಾ ರಾಜನ್ ಸುಹೃದ್ವೃತಃ |
ಭ್ರಾತೄನ್ ಪುತ್ರಾಂಶ್ಚ ಪೌತ್ರಾಂಶ್ಚ ಸ್ವೇ ಸ್ವೇ ರಾಜ್ಯೇಽಭಿಷೇಚಯ ॥31॥
ನಿನ್ನಿಂದ ಹತರಾದ ಎಲ್ಲ ರಾಜರುಗಳ ಪಟ್ಟಣಗಳಿಗೆ ತೆರಳು. ರಾಷ್ಟ್ರಗಳಿಗೆ ತೆರಳು. ಅಲ್ಲಿರುವ ಸುಹೃಜ್ಜನರನ್ನು, ರಾಜರ ಅನುಜರನ್ನು,

ಮಕ್ಕಳನ್ನು, ಮೊಮ್ಮಕ್ಕಳನ್ನು, ಆಯಾ ರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡು.
ಬಾಲಾನಪಿ ಚ ಗರ್ಭಸ್ಥಾನ್ ಸಾಂತ್ವಾನಿ ಸಮುದಾಚರನ್ |
ರಂಜಯನ್ ಪ್ರಕೃತೀಃ ಸರ್ವಾಃ ಪರಿಪಾಹಿ ವಸುಂಧರಾಮ್ ॥32॥
ಒಂದುವೇಳೆ ಮಕ್ಕಳುಗಳು ಉಳಿದಿದ್ದರೆ, ಅಥವಾ ಗರ್ಭದಲ್ಲಿ ಶಿಶುಗಳಿದ್ದರೆ, ಆ ರಾಜಪರಿವಾರದವರಿಗೆ ಮುಂದೆ ಆ ಶಿಶುವನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟ- ಗಟ್ಟುತ್ತೇನೆಂದು ಆಶ್ವಾಸನೆಯನ್ನು ನೀಡು. ಅವರನ್ನು ಸಮಾಧಾನಗೊಳಿಸು. ಎಲ್ಲಾ ಪ್ರಜೆಗಳನ್ನು ಸಂತೋಷಪಡಿಸಿ, ಸಮಗ್ರಭೂಮಂಡಲಗಳನ್ನು ಪರಿಪಾಲನೆ ಮಾಡು.
ಕುಮಾರೋ ನಾಸ್ತಿ ಯೇಷಾಂ ಚ ಕನ್ಯಾಸ್ತತ್ರಾಭಿಷೇಚಯ |
ಕಾಮಾಶಯೋ ಹಿ ಸ್ತ್ರೀವರ್ಗಃ ಶೋಕಮೇವಂ ಪ್ರಹಾಸ್ಯಸಿ ॥33॥
ಒಂದು ವೇಳೆ ಯಾವುದಾದರೂ ರಾಜವಂಶದಲ್ಲಿ ಗಂಡುಮಕ್ಕಳಿಲ್ಲದಿದ್ದರೆ, ಕುಮಾರಿಯರನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ, ಪಟ್ಟಾಭಿಷೇಕವನ್ನು ಮಾಡು. ಹೀಗೆ ಮಾಡುವುದರಿಂದ ಅಂತಃಪುರದ ಸ್ತ್ರೀಯರಿಗೆ ಬಹಳ ಸಂತೋಷವಾಗುತ್ತದೆ. ಅವರ ಕಾಮನೆಗಳು ಪೂರ್ಣವಾದಂತಾಗಿ ಅವರ ಶೋಕವನ್ನು ನೀನು ಪರಿಹಾರ ಮಾಡಿ- ದಂತಾಗುತ್ತದೆ.
ಏವಮಾಶ್ವಾಸನಂ ಕೃತ್ವಾ ಸರ್ವರಾಷ್ಟ್ರೇಷು ಭಾರತ |
ಯಜಸ್ವ ವಾಜಿಮೇಧೇನ ಯಥೇಂದ್ರೋ ವಿಜಯೀ ಪುರಾ ॥34॥
ಭಾರತನೇ ! ಪ್ರತಿಯೊಂದು ರಾಷ್ಟ್ರಗಳಿಗೂ ಭೇಟಿ ನೀಡು. ದುಃಖಿತರಾದ ಎಲ್ಲ ಪ್ರಜೆಗಳನ್ನು ಸಮಾಧಾನಪಡಿಸು. ಇಂದ್ರನು ಹೇಗೆ ಅಶ್ವಮೇಧಯಾಗವನ್ನು ಮಾಡಿದನೋ, ಅದರಂತೆ ನೀನೂ ಸಹ ಅಶ್ವಮೇಧಯಾಗವನ್ನು ಆಚರಿಸು.
ಅಶೋಚ್ಯಾಸ್ತೇ ಮಹಾತ್ಮಾನಃ ಕ್ಷತ್ರಿಯಾಃ ಕ್ಷತಿಯರ್ಷಭ |
ಸ್ವಕರ್ಮಭಿರ್ಗತಾ ನಾಶಂ ಕೃತಾಂತಬಲಮೋಹಿತಾಃ ॥35॥
ಯುದ್ಧದಲ್ಲಿ ಯಾರು ಇಚ್ಛೆಪಟ್ಟು ಮೃತರಾಗಿದ್ದಾರೋ, ಅಂಥ ಕ್ಷತ್ರಿಯರ ವಿಷಯದಲ್ಲಿ ನೀನು ದುಃಖಪಡಲು ಕಾರಣವಿಲ್ಲ. ಕ್ಷತ್ರಿಯಶ್ರೇಷ್ಠನೇ ! ಕೃತಾಂತನಾದ ಕಾಲರೂಪಿ ಪರಮಾತ್ಮನ ಬಲದಿಂದ ಮೋಹಿತರಾಗಿ ಅವರೆಲ್ಲರೂ ತಮ್ಮತಮ್ಮ ಕರ್ಮಗಳಿಂದಲೇ ಮೃತರಾಗಿದ್ದಾರೆ.
ಅವಾಪ್ತಃ ಕ್ಷತ್ರಧರ್ಮಸ್ತೇ ರಾಜ್ಯಂ ಪ್ರಾಪ್ತಮಕಲ್ಮಷಮ್ |
ಚಾರಸ್ವ ಧರ್ಮಂ ಕೌಂತೇಯ ಶ್ರೇಯಾನ್ ಯಃ ಪ್ರೇತ್ಯ ಭಾರತಃ ॥26॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಅಶ್ವಮೇಧಪ್ರಶಂಸನಂ ನಾಮ ಚತುಸ್ತ್ರಿಂಶೋಽಧ್ಯಾಯಃ ॥34॥
ನೀನು ನಿನ್ನ ಸ್ವಧರ್ಮವಾದ ಕ್ಷತ್ರಿಯಧರ್ಮಕ್ಕೆ ಅನುಸಾರಿಯಾಗಿ ನಡೆದು- ಕೊಂಡಿರುವಿ. ಇದರ ಫಲವಾಗಿಯೇ ಯಾರೊಬ್ಬ ಶತ್ರುಗಳಿಲ್ಲದ ರಾಜ್ಯಸಂಪತ್ತು ನಿನಗೆ ಲಭಿಸಿದೆ. ಯಾವಧರ್ಮವು ನಿನಗೆ ಬದುಕಿರುವಾಗ ಮತ್ತು ಪರಲೋಕದಲ್ಲಿ ಶ್ರೇಯಸ್ಸನ್ನು ಉಂಟುಮಾಡುತ್ತದೋ, ಅಂಥ ಧರ್ಮವನ್ನು ನೀನು ಪರಿರಕ್ಷಣೆ ಮಾಡು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಅಶ್ವಮೇಧ ಪ್ರಶಂಸೆ ಎಂಬ 34ನೆಯ ಅಧ್ಯಾಯವು ಮುಗಿಯಿತು.
*****
35. ಮೂವತ್ತೈದನೆಯ ಅಧ್ಯಾಯ
ವೇದವ್ಯಾಸದೇವರು ಯುಧಿಷ್ಠಿರನಿಗೆ ಪ್ರಾಯಶ್ಚಿತ್ತಕ್ಕೆ ಕಾರಣವಾದ ಪಾಪಕರ್ಮಗಳ ಬಗ್ಗೆ, ಪ್ರಾಯಶ್ಚಿತ್ತಗಳ ಬಗ್ಗೆ ವಿವರಿಸುತ್ತಾರೆ. ಯಾವ ಪ್ರಾಯಶ್ಚಿತ್ತವನ್ನು ಮಾಡುವುದರಿಂದ ಯಾವ ಪಾಪವು ಪರಿಹಾರವಾಗುತ್ತದೆ ಎಂಬುದರ ವಿವೇಚನೆ.
ಯುಧಿಷ್ಠಿರಃ
ಕಾನಿ ಕೃತ್ವೇಹ ಕರ್ಮಾಣಿ ಪ್ರಾಯಶ್ಚಿತ್ತೀಯತೇ ನರಃ |
ಕಿಂ ಕೃತ್ವಾ ಚೈವ ಮುಚ್ಯೇತ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹರೇ! ಯಾವ ಕರ್ಮವನ್ನು ಆಚರಣೆ ಮಾಡುವು- ದರಿಂದ ಮನುಷ್ಯನಾದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೆ. ಯಾವ ಬಗೆಯ ಪ್ರಾಯಶ್ಚಿತ್ತಗಳನ್ನು ಮಾಡುವುದರಿಂದ ಆ ಪಾಪಗಳು ಪರಿಹಾರವಾಗುತ್ತವೆ. ಈ ವಿಷಯಗಳನ್ನು ನನಗೆ ದಯವಿಟ್ಟು ವಿವರಿಸಿರಿ.
ವ್ಯಾಸಃ
ಅಕುರ್ವನ್ ವಿಹಿತಂ ಕರ್ಮ ಪ್ರತಿಷಿದ್ಧಾನಿ ಚಾಚರನ್ |
ಪ್ರಾಯಶ್ಚಿತ್ತೀಯತೇ ಹ್ಯೇವಂ ನರೋ ಮಿಥ್ಯಾ ಚ ವರ್ತಯನ್ ॥2॥
ಯುಧಿಷ್ಠಿರನೇ ! ವೇದಶಾಸ್ತ್ರದಲ್ಲಿ ಯಾವ ಕರ್ಮಗಳನ್ನು ಮಾಡಬೇಕೆಂದು ವಿಧಿ-ಸಲಾಗಿರುತ್ತದೋ, ಅದನ್ನು ಆಚರಿಸದೇ ಇರುವವನು, ಹಾಗೂ ವೇದಶಾಸ್ತ್ರಗಳಲ್ಲಿ ನಿಷೇಧ ಮಾಡಲ್ಪಟ್ಟ ಕರ್ಮಗಳನ್ನು ಆಚರಿಸುವವನು ಪ್ರಾಯಶ್ಚಿತ್ತವನ್ನು ಮಾಡಿ- ಕೊಳ್ಳಬೇಕು. ಶಾಸ್ತ್ರವಿರುದ್ಧವಾದ ಆಚರಣಶೀಲನೇ ಪ್ರಾಯಶ್ಚಿತ್ತಭಾಗಿಯಾಗುತ್ತಾನೆ.
ಸೂರ್ಯೋಭ್ಯುದಿತೋ ಯಶ್ಚ ಬ್ರಹ್ಮಚಾರೀ ಭವತ್ಯುತ |
ತಥಾ ಸೂರ್ಯಾಭಿನಿರ್ಮುಕ್ತಃ ಕುನಖೀ ಶ್ಯಾವದನ್ನಪಿ ॥3॥
ಸೂರ್ಯೋದಯ ಹಾಗೂ ಸೂರ್ಯಾಸ್ತಗಳಲ್ಲಿ ಯಾವ ಬ್ರಹ್ಮಚಾರಿಯು ಮಲಗಿರುತ್ತಾನೋ ಅವನು ಪ್ರಾಯಶ್ಚಿತ್ತಭಾಗಿಯಾಗುತ್ತಾನೆ. ಉಗುರುಗಳನ್ನು ಬೆಳಿಸಿ- ಕೊಂಡವನು, ಹಲ್ಲುಗಳನ್ನು ಕಪ್ಪಾಗಿ ಇಟ್ಟುಕೊಂಡವನು ಪ್ರಾಯಶ್ಚಿತ್ತಕ್ಕೆ ಭಾಗಿ- ಯಾಗುತ್ತಾನೆ.
ಟಿಪ್ಪಣಿ - ಸೂರ್ಯೇಣಾಭ್ಯುದಿತ ಇತ್ಯತ್ರ ಯಶ್ಚ ಬ್ರಹ್ಮಚಾರೀ ಅರ್ಘ್ಯಯತ್ ಪೂರ್ವಂ ಸೂರ್ಯೇಣ ಅಭ್ಯುದಿತೋ ಭವತಿ ಸೋಽಪಿ ಪ್ರಾಯಶ್ಚಿತ್ತೀ | ತಥಾ ಸಾಯಮರ್ಘ್ಯಕಾಲೇ ಸೂರ್ಯೇಣ ಅಭಿನಿರ್ಮುಕ್ತಃ ಅರ್ಘ್ಯಕಾಲೇ ಸೂರ್ಯ- ರಹಿತ ಇತ್ಯರ್ಥಃ | ತಾವುಭೌ

ಪ್ರಾಯಶ್ಚಿತ್ತಿನೌ | `ಪೂರ್ವಾಂ ಸಂಧ್ಯಾಂ ಸನಕ್ಷತ್ರಾ- ಮುತ್ತರಾಂ ಸದಿವಾಕರಾಮ್' ಇತಿ ಸ್ಮೃತೇಃ |
ಸೂರ್ಯೇಣಾಭ್ಯುದಿತ ಎಂಬಲ್ಲಿ ಯಾವ ಬ್ರಹ್ಮಚಾರಿಯು ಸೂರ್ಯೋ- ದಯಕಾಲದಲ್ಲಿ ಅರ್ಘ್ಯವನ್ನು ನೀಡುವುದಿಲ್ಲವೋ, ಸೂರ್ಯಾಸ್ತಕಾಲದಲ್ಲಿ ಯಾರು ಅರ್ಘ್ಯವನ್ನು ನೀಡುವುದಿಲ್ಲವೋ, ಅವನೂ ಸಹ ಪಾಪಭಾಗಿಯಾ- ಗುತ್ತಾನೆ. `ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುತ್ತರಾಂ ಸದಿವಾಕರಾಮ್' ಎಂಬ ಸ್ಮೃತಿಯ ವಾಕ್ಯದಂತೆ ಸೂರ್ಯನು ಇಲ್ಲದೇ ಇರುವ ನಕ್ಷತ್ರವು ಹುಟ್ಟುವ ಬೆಳಿಗ್ಗೆಯ ಕಾಲದಲ್ಲಿ ಅರ್ಘ್ಯವನ್ನು ನೀಡಬೇಕು. ಸಾಯಂಕಾಲದಲ್ಲಿ ಸೂರ್ಯನು ಇರುವಾಗಲೇ ಅರ್ಘ್ಯವನ್ನು ನೀಡಬೇಕು. ಎರಡನ್ನೂ ಆಚರಿಸದೇ ಇದ್ದರೆ, ಮಹಾಪಾಪಕ್ಕೆ ಭಾಗಿಯಾಗುತ್ತಾನೆಂದಭಿಪ್ರಾಯ.
ಪರಿವಿತ್ತಿಃ ಪರಿವೇತ್ತಾ ಬ್ರಹ್ಮಘ್ನೋ ಯಶ್ಚ ಕುತ್ಸಕಃ |
ದಿಧಿಷೂಪಪತಿರ್ಯಃ ಸ್ಯಾದಗ್ರೇ ದಿಧಿಷುರೇವ ಚ ॥4॥
ಹಿರಿಯಸಹೋದರನು ವಿವಾಹವಾಗದೇ ಇದ್ದಾಗ ತಮ್ಮನಾದವನು ವಿವಾಹ- ವಾದರೆ `ಪರಿವೇತ್ತಾ' ಎಂಬುದಾಗಿ ಕರೆಸಿಕೊಳ್ಳುತ್ತಾನೆ. ಅವನ ಹೆಂಡತಿಯು ಪರಿವಿತ್ತಿ ಎಂಬುದಾಗಿ ಕರೆಸಿಕೊಳ್ಳುತ್ತಾಳೆ. ಇವರಿಬ್ಬರೂ ಪ್ರಾಯಶ್ಚಿತ್ತಭಾಗಿಗಳು. ಇದರಂತೆ ಬ್ರಾಹ್ಮಣರ ಹನನವನ್ನು ಮಾಡಿದವನು, ಲೋಕದಲ್ಲಿ ನಿಂದಿತನಾದವನು, ಒಮ್ಮೆ ವಿವಾಹವಾದ ನಾರಿಯನ್ನು ವಿವಾಹವಾಗುವ ದಿಧಿಷು ಹಾಗೂ ವಿವಾಹಿತಳಾದ
ದಿಧಿಷೂ ಇವರಿಬ್ಬರು ಪ್ರಾಯಶ್ಚಿತ್ತಕ್ಕೆ ಭಾಜನರಾಗುತ್ತಾರೆ.
ಟಿಪ್ಪಣಿ - ದಿಧಿಷೂಪಪತ್ತಿಶ್ಚೈವ ಇತ್ಯತ್ರ ಪರಿವೇತ್ತಾ ಜ್ಯೇಷ್ಠೇ ಅನೂಢೇ ಸತಿ ವಿವಾಹಕರ್ತಾ ಅನುಜಃ | ಪರಿವಿತ್ತಿಃ ತಸ್ಯ ಭಾರ್ಯಾ | `ಪರಿವೇತ್ತಾನುಜೋಽ- ನೂಢೇ ಜ್ಯೇಷ್ಠೇ ದಾರಪರಿಗ್ರಹಾತ್ | ಪರಿವಿತ್ತಿಸ್ತು ತಜ್ಜ್ಯಾಯಾನ್' ಇತ್ಯಮರಃ | ದ್ವಿಃ ಊಢಾ ನಾರೀ ದಿಧಿಷೂಃ ತಸ್ಯಾಃ ಉಪಪತಿಃ ಜಾರಃ | ಅಗ್ರೇದಿಧಿಷುಃ ದ್ವಿರೂಢಾಯಾಃ ಪತಿಃ | `ಪುನರ್ಭೂರ್ದಿಧಿಷೂರೂಢಾ ದ್ವಿಸ್ತಸ್ಯಾ ದಿಧಿಷುಃ ಪತಿಃ' ಇತ್ಯಮರಃ | ದ್ವಿಃ ಊಢಾ ನಾರೀ ಪುನರ್ಭೂಃ ದಿಧಿಷೂಃ ಇತ್ಯುಚ್ಯತೇ | ತಸ್ಯಾಃ ಪತಿಃ ದಿಧಿಷುಃ ಇತ್ಯುಚ್ಯತೇ ಇತ್ಯರ್ಥಃ|
`ಪರಿವೇತ್ತಾ' ಅಣ್ಣನು ಮದುವೆಯಾಗದಿದ್ದಾಗ ತಮ್ಮನು ವಿವಾಹವಾದರೆ ಪರಿವೇತ್ತಾ ಎಂಬುದಾಗಿ ಕರೆಸಿಕೊಳ್ಳುತ್ತಾನೆ. ಅವನ ಹೆಂಡತಿಯು ಪರಿವತ್ತಿ ಎಂಬುದಾಗಿ ಕರೆಸಿಕೊಳ್ಳುತ್ತಾನೆ. `ಪರಿವೇತ್ತಾನುಜೋಽನೂಢೇ ಜ್ಯೇಷ್ಠೇ ದಾರ- ಪರಿಗ್ರಹಾತ್ | ಪರಿವಿತ್ತಿಸ್ತು ತಜ್ಜ್ಯಾಯಾನ್' ಎಂಬುದಾಗಿ ಅಮರಕೋಶವು ಹೇಳುತ್ತದೆ. ಆದ್ದರಿಂದ ಅಣ್ಣನ ಮದುವೆಯಾಗದಿದ್ದಾಗ ತಮ್ಮನು ಮದುವೆ- ಯಾದರೆ ತಮ್ಮ ಹಾಗೂ ತಮ್ಮನ ಹೆಂಡತಿಯು ಪಾಪಭಾಜನರಾಗುತ್ತಾರೆಂದು ತಿಳಿಯಬೇಕು.
ಯಾವ ನಾರಿಯು ಎರಡು ಬಾರಿಯು ವಿವಾಹವಾಗಿರುತ್ತಾಳೋ, ಅವಳನ್ನು `ದಿಧಿಷೂ' ಎಂಬುದಾಗಿ ಕರೆಯುತ್ತಾರೆ. ಅವಳನ್ನು ವಿವಾಹವಾದವನು ಜಾರ ಎಂಬುದಾಗಿ ಕರೆಸಿಕೊಳ್ಳುತ್ತಾನೆ. `ಅಗ್ರೇದಿಧಿಷುಃ' ಎಂಬುದಕ್ಕೂ ಎರಡು ಬಾರಿ ವಿವಾಹವಾದವಳ ಪತಿ ಎಂದರ್ಥ. `ಪುನರ್ಭೂರ್ದಿಧಿಷೂರೂಢಾ ದ್ವಿಸ್ತಸ್ಯಾ ದಿಧಿಷುಃ ಪತಿಃ' ಎಂಬುದಾಗಿ ಅಮರಕೋಶವು ಹೇಳುತ್ತದೆ. ಎರಡು ಬಾರಿ ವಿವಾಹವಾದ ನಾರಿಯು `ದಿಧಿಷೂ' ಎಂಬುದಾಗಿ ಕರೆಸಿಕೊಳ್ಳುತ್ತಾಳೆ. ಅವಳ ಪತಿಯು `ದಿಧಿಷುಃ' ಎಂಬುದಾಗಿ ಕರೆಸಿಕೊಳ್ಳುತ್ತಾನೆ.
ಅವಕೀರ್ಣೀ ಭವೇದ್ ಯಶ್ಚ ದ್ವಿಜಾತಿವಧಕಸ್ತಥಾ |
ಅತೀರ್ಥೇ ಬ್ರಹ್ಮಣಸ್ತ್ಯಾಗೀ ತೀರ್ಥೇ ಚಾಪ್ರತಿಪಾದಕಃ ॥5॥
ಬ್ರಹ್ಮಚರ್ಯವ್ರತವನ್ನು ನಾಶಮಾಡಿಕೊಂಡವನು ದ್ವಿಜಾತಿಗಳನ್ನು ವಧೆ ಮಾಡು -ವವನು. ಅಪಾತ್ರನಿಗೆ ದಾನ ಮಾಡುವವನು. ಪಾತ್ರನಿಗೆ ದಾನ ಮಾಡದವನು. ಇವರೆಲ್ಲರೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಅರ್ಹರಾಗುತ್ತಾರೆ.
ಟಿಪ್ಪಣಿ - ಅವಕೀರ್ಣೀ ಇತ್ಯತ್ರ ಅವಕೀರ್ಣೀ ರೇತಃಸ್ಖಲನಾದಿನಾ ಕ್ಷತವ್ರತೋ ಬ್ರಹ್ಮಚಾರೀ | `ಅವಕೀರ್ಣೀ ಕ್ಷತವ್ರತಃ' ಇತ್ಯಮರಃ | ಅತೀರ್ಥೇ ಅಪಾತ್ರೇ ಬ್ರಹ್ಮಣಃ ಬ್ರಾಹ್ಮಣಸ್ಯ ತ್ಯಾಗೀ | `ನಿದಾನಾಗಮಯೋಸ್ತೀರ್ಥಮೃಷಿಜುಷ್ಟೇ ಜಲೇ ಗುರೌ' ಇತ್ಯಮರಃ | ನಿದಾನಂ ದಾನಸ್ಯಾದಿಕಾರಣಮ್, ಪಾತ್ರಮಿತ್ಯರ್ಥಃ |
ಅವಕೀರ್ಣೀ = ರೇತಃಸ್ಖಲನಾದಿಗಳಿಂದ ಬ್ರಹ್ಮಚರ್ಯವ್ರತವನ್ನು ಹಾಳು ಮಾಡಿಕೊಂಡವನು. ದ್ವಿಜಾತಿವದಕಃ = ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಇವರನ್ನು ಕೊಲ್ಲುವವನು. ಅತೀರ್ಥೇ = ಅಪಾತ್ರರಲ್ಲಿ, ಬ್ರಹ್ಮಣಃ = ಬ್ರಾಹ್ಮಣನ, ತ್ಯಾಗೀ = ತ್ಯಾಗವು, ತೀರ್ಥೇಚ = ಪಾತ್ರರಲ್ಲಿ, ಅಪ್ರತಿಪಾದಕಃ = ದಾನವನ್ನು ಮಾಡದವನು.
ಗ್ರಾಮಘಾತೀ ಚ ಕೌಂತೇಯ ಮಾಂಸಸ್ಯ ಪರಿವಿಕ್ರಯೀ |
ಶೂದ್ರಸ್ತ್ರೀವಧಕೋ ಯಶ್ಚ ಪೂರ್ವಃ ಪೂರ್ವಸ್ತು ಗರ್ಹಿತಃ ॥6॥
ಕೌಂತೇಯನೇ! ಯಾರು ಗ್ರಾಮವನ್ನು ನಾಶಗೊಳಿಸುತ್ತಾನೋ, ಮಾಂಸಾದಿ- ಗಳನ್ನು ಮಾರಾಟ ಮಾಡುತ್ತಾನೋ, ಸ್ತ್ರೀಯರನ್ನು, ಶೂದ್ರರನ್ನು ನಾಶಮಾಡು- ತ್ತಾನೋ, ಇವರುಗಳಲ್ಲಿ ಕೊನೆಯವರಿಗಿಂತ ಮೊದಲಿನವರು ಹೆಚ್ಚು ಪಾಪಿಷ್ಠರಾ- ಗಿರುತ್ತಾರೆ. ಅವರೇ ಹೆಚ್ಚು ಪ್ರಾಯಶ್ಚಿತ್ತಭಾಗಿಗಳಾಗುತ್ತಾರೆ.
ವೃಥಾ ಪಶುಸಮಾಲಂಭೀ ವನದಾಹಸ್ಯ ಕಾರಕಃ |
ಅನೃತೇನೋಪವರ್ತೀ ಚ ಪ್ರತಿರೋದ್ಧಾ ಗುರೋಸ್ತಥಾ ॥7॥
ವ್ಯರ್ಥವಾಗಿ ಯಾರು ಪಶುಗಳನ್ನು ವಧೆ ಮಾಡುತ್ತಾರೋ, ಕಾಡುಗಳಿಗೆ ಬೆಂಕಿ ಹಚ್ಚುತ್ತಾರೋ, ಸುಳ್ಳು ಹೇಳುತ್ತಾರೋ, ಗುರುವನ್ನು ಅವಮಾನಗೊಳಿಸುತ್ತಾರೋ, ಇವರೆಲ್ಲರೂ ಪಾಪಭಾಜನರು.
ಯಶ್ಚಾಗ್ನೀನಪವಿದ್ಧ್ಯೇತ ತಥೈವ ಬ್ರಹ್ಮವಿಕ್ರಯೀ |
ಏತಾನ್ಯೇನಾಂಸಿ ಸರ್ವಾಣಿ ವ್ಯುತ್ಕ್ರಾಂತಸಮಯಶ್ಚ ಯಃ ॥8॥
ಯಾರು ಅಗ್ನಿಯ ಪರಿರಕ್ಷಣೆ ಮಾಡಿಕೊಂಡಿರುವುದಿಲ್ಲವೋ, ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿದ ವಸ್ತುವನ್ನು ಯಾರು ಮಾರಾಟ ಮಾಡುತ್ತಾನೋ, ಪ್ರತಿಜ್ಞಾಭಂಗವನ್ನು ಮಾಡಿಕೊಂಡಿರುತ್ತಾನೋ, ಸಮಯ ಪರಿಪಾಲನೆಯನ್ನು ಮಾಡುವುದಿಲ್ಲವೋ, ಇವರೆಲ್ಲರೂ ಪಾಪಭಾಜನರಾಗುತ್ತಾರೆ. ಆದ್ದರಿಂದ ಇವರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇ ಬೇಕು.
ಅಕಾರ್ಯಾಣ್ಯಪಿ ವಕ್ಷ್ಯಾಮಿ ಯಾನಿ ತಾನಿ ನಿಬೋಧ ಮೇ |

ಲೋಕವೇದವಿರುದ್ಧಾನಿ ತಾನ್ಯೇಕಾಗ್ರಮನಾಃ ಶೃಣು ॥9॥
ಧರ್ಮರಾಜನೇ! ವೇದಕ್ಕೆ ವಿರುದ್ಧವಾದ, ಲೋಕಕ್ಕೆ ವಿರುದ್ಧವಾದ ಮಾಡಬಾರದ ಕೆಲಸಗಳು ಯಾವುದು ಎಂಬುದನ್ನು ವಿವರವಾಗಿ ಹೇಳುತ್ತೇನೆ. ಅವೆಲ್ಲವನ್ನೂ ಏಕಾಗ್ರಚಿತ್ತದಿಂದ ಕೇಳುವವನಾಗು.
ಸ್ವಧರ್ಮಸ್ಯ ಪರಿತ್ಯಾಗಃ ಪರಧರ್ಮಸ್ಯ ಚ ಕ್ರಿಯಾ |
ಅಯಾಜ್ಯಯಾಜನಂ ಚೈವ ತಥಾಭಕ್ಷಸ್ಯ ಭಕ್ಷಣಮ್ ॥10॥
ಶರಣಾಗತಸಂತ್ಯಾಗೋ ಭೃತ್ಯಸ್ಯಾಭರಣಂ ತಥಾ |
ರಸಾನಾಂ ವಿಕ್ರಯಶ್ಚಾಪಿ ತಿರ್ಯಗ್ಯೋನಿವಧಸ್ತಥಾ ॥11॥
ಆಧಾನಾದೀನಿ ಕರ್ಮಾಣಿ ಶಕ್ತಿಮಾನ್ನ ಕರೋತಿ ಯಃ |
ಅಪ್ರಯಚ್ಛಂಶ್ಚ ಸರ್ವಾಣಿ ನಿತ್ಯಂ ದೇಯಾನಿ ಭಾರತ ॥12॥
ದಕ್ಷಿಣಾನಾಮದಾನಂ ಚ ಬ್ರಾಹ್ಮಣ್ಯಸ್ವಾಭಿಮರ್ಶನಮ್ |
ಸರ್ವಾಣ್ಯೇತಾನ್ಯಕಾರ್ಯಾಣಿ ಪ್ರಾಹುರ್ಧರ್ಮವಿದೋ ಜನಾಃ ॥13॥
ಸ್ವಧರ್ಮವನ್ನು ಪರಿತ್ಯಾಗ ಮಾಡುವುದು, ಪರಧರ್ಮವನ್ನು ಅನುಷ್ಠಾನ ಮಾಡುವುದು, ಯಜ್ಞ ಮಾಡಲು ಅನಧಿಕಾರಿಯಾದವನಿಂದ ಯಜ್ಞವನ್ನು ಮಾಡಿಸುವುದು. ತಿನ್ನ ಬಾರದ ಪದಾರ್ಥಗಳನ್ನು ತಿನ್ನುವುದು. ಶರಣಾಗತರಾಗಿ ಬಂದವರನ್ನು ರಕ್ಷಣೆ ಮಾಡದಿರುವುದು. ನಂಬಿದ ಸೇವಕರನ್ನು ರಕ್ಷಣೆ ಮಾಡದಿ- ರುವುದು. ಉಪ್ಪು ಬೆಲ್ಲ ಮೊದಲಾದ ರಸಪದಾರ್ಥಗಳನ್ನು ಮಾರಾಟ ಮಾಡು- ವುದು. ಪಶು-ಪಕ್ಷಿ ಮೊದಲಾದ ತಿರ್ಯಗ್ಯೋನಿಗಳನ್ನು ಕೊಲ್ಲುವುದು. ಅನುಷ್ಠಾನ ಮಾಡಲು ಸಾಮರ್ಥ್ಯವಿದ್ದರೂ ಕೂಡ ಆಧಾನ ಮೊದಲಾದ ವೇದೋಕ್ತ ಕರ್ಮಗಳನ್ನು ಅನುಷ್ಠಾನ ಮಾಡದೇ ಇರುವುದು. ನಿತ್ಯವು ಕೊಡಬೇಕಾದ ಗೋಗ್ರಾಸಾದಿಗಳನ್ನು ಕೊಡದಿರುವುದು. ಸತ್ಪಾತ್ರರಿಗೆ ದಕ್ಷಿಣೆಗಳನ್ನು ಕೊಡದಿ- ರುವುದು. ಬ್ರಾಹ್ಮಣರ ಸ್ವತ್ತನ್ನು ಅಪಹಾರ ಮಾಡುವುದು. ಈ ಎಲ್ಲಾ ಕಾರ್ಯಗಳು ಸರ್ವಥಾ ಮಾಡಲು ಅಯೋಗ್ಯವಾಗಿವೆ. ಧರ್ಮವನ್ನು ತಿಳಿದ ವಿದ್ವಾಂಸರು ಮೇಲೆ ಉಲ್ಲೇಖಿಸಿದ್ದರಲ್ಲಿ ಯಾವುದನ್ನೂ ಕೂಡ ಮಾಡಬಾರದೆಂದು ಹೇಳುತ್ತಾರೆ.
ಪಿತ್ರಾ ವಿಭಜತೇ ಪುತ್ರೋ ಯಶ್ಚ ಸ್ಯಾದ್ ಗುರುತಲ್ಪಗಃ |
ಅಪ್ರಜಾಯನ್ನಧರ್ಮೇಣ ಭವತ್ಯಾಧರ್ಮಿಕೋ ಜನಃ ॥14॥
ಯಾರು ತಂದೆಯ ಆಸ್ತಿಯನ್ನು ಕಸಿದುಕೊಂಡು ಪ್ರತ್ಯೇಕವಾಗಿ ಇರಲು ಬಯಸುತ್ತಾನೋ, ಅಂಥ ಪುತ್ರನು, ಗುರುಪತ್ನಿಯ ಸಮಾಗಮವನ್ನು ಬಯಸುವ ಶಿಷ್ಯನು, ಮಕ್ಕಳನ್ನು ಪಡೆಯಲು ಪ್ರಯತ್ನಿಸದ ಪತಿಯು ಅಧಾರ್ಮಿಕರೆಂದು ಕರೆಸಿಕೊಳ್ಳುತ್ತಾರೆ.
ಉಕ್ತಾನ್ಯೇತಾನಿ ಕರ್ಮಾಣಿ ವಿಸ್ತರೇಣೇತರೇಣ ಚ |
ಯಾನಿ ಕುರ್ವನ್ನಕುರ್ವಂಶ್ಚ ಪ್ರಾಯಶ್ಚಿತ್ತೀಯತೇ ಜನಃ ॥15॥
ಯಾವ ಕರ್ಮಗಳನ್ನು ಆಚರಣೆ ಮಾಡುವುದರಿಂದ ಮನುಷ್ಯನು ಪ್ರಾಯ- ಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೋ, ಯಾವ ಕರ್ಮವನ್ನು ಮಾಡದಿದ್ದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೋ, ಆ ಎಲ್ಲ ಕರ್ಮಗಳನ್ನು ನಿನಗೆ ವಿಸ್ತಾರವಾಗಿ ತಿಳಿಸಿರುವೆನು.
ಟಿಪ್ಪಣಿ - ಯಾನಿ ಕುರ್ವನ್ನಕುರ್ವಂಶ್ಚ ಇತ್ಯತ್ರ ಯಾನಿ ಅವಿಹಿತಾನಿ ತಾನಿ ಕುರ್ವನ್, ಯಾನಿ ವಿಹಿತಾನಿ ತಾನಿ ಅಕುರ್ವನ್ | ಅವಿಹಿತವಾದ ಕರ್ಮಗಳನ್ನು ಮಾಡುವುದರಿಂದ, ಅಕುರ್ವನ್ ವಿಹಿತವಾದ ಕರ್ಮಗಳನ್ನು ಮಾಡದೇ ಇರುವುದರಿಂದ ಪ್ರಾಯಶ್ಚಿತ್ತಭಾಗಿಯಾಗುತ್ತಾನೆ ಎಂದರ್ಥ.
ಏತಾನ್ಯೇವ ತು ಕರ್ಮಾಣಿ ಕ್ರಿಯಮಾಣಾನಿ ಮಾನವಾನ್ |
ಯೇಷು ಯೇಷು ನಿಮಿತ್ತೇಷು ನ ಲಿಂಪಂತ್ಯಥ ತಚ್ಛೃಣು ॥16॥
ಮುಂದೆ ಯಾವ ಕಾರಣಗಳಿಂದ ಮನುಷ್ಯನು ಯಾವ ಕರ್ಮಗಳನ್ನು ಮಾಡಬಾರದು, ಮಾಡಿದರೂ ಪಾಪಗಳಿಂದ ಮುಕ್ತನಾಗುವುದಿಲ್ಲವೋ ಅದರ ಬಗ್ಗೆ ಹೇಳುತ್ತೇನೆ ಕೇಳು.
ಪ್ರಗೃಹ್ಯ ಶಸ್ತ್ರಮಾಯಾಂತಮಪಿ ವೇದಾಂತಗಂ ರಣೇ |
ಜಿಘಾಂಸಂತಂ ಜಿಘಾಂಸೀಮಾನ್ನ ತೇನ ಬ್ರಹ್ಮಹಾ ಭವೇತ್ ॥17॥
ವೇದವೇದಾಂಗಗಳನ್ನು ಅಧ್ಯಯನ ಮಾಡಿದ, ಒಬ್ಬ ಬ್ರಾಹ್ಮಣನು ತನ್ನ ಧರ್ಮವನ್ನು ಪರಿತ್ಯಾಗ ಮಾಡಿ, ಶಸತ್ರಸ್ತ್ರಗಳನ್ನು ಹಿಡಿದು ರಣರಂಗಕ್ಕೆ ಬಂದರೆ, ಅಂಥ ಬ್ರಾಹ್ಮಣನು ಕೊಲ್ಲಲು ಉದ್ಯುಕ್ತನಾದರೆ, ಆ ಸಮಯದಲ್ಲಿ ಆ ಬ್ರಾಹ್ಮಣನನ್ನು ಕೊಂದರೂ ಕೂಡ ಬ್ರಹ್ಮಹತ್ಯಾ ಪಾಪವು ಬರುವುದಿಲ್ಲ.
ಅಪಿ ಚಾಪ್ಯತ್ರ ಕೌಂತೇಯ ಮಂತ್ರೋ ವೇದೇಷು ಪಠ್ಯತೇ |
ವೇದಪ್ರಮಾಣವಿಹಿತಂ ತಂ ಧರ್ಮಂ ಪ್ರಬ್ರವೀಮಿ ತೇ ॥18॥
ಕುಂತೀಪುತ್ರನೇ! ಇದೇ ವಿಷಯದಲ್ಲಿ ವೇದಗಳಲ್ಲಿ ಒಂದು ಮಂತ್ರವನ್ನು ಹೇಳಲಾಗಿದೆ. ಆ ಮಂತ್ರದಿಂದ ತಿಳಿಯುವ ಧರ್ಮವನ್ನು ನಿನಗೆ ಈಗ ಹೇಳುತ್ತೇನೆ ಕೇಳುವವನಾಗು.
ಅಪೇತಂ ಬ್ರಾಹ್ಮಣಂ ವೃತ್ತಾದ್ ಯೋ ಹನ್ಯಾದಾತತಾಯಿನಮ್ |
ನ ತೇನ ಬ್ರಹ್ಮಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮೃಚ್ಛತಿ ॥19॥
ಬ್ರಾಹ್ಮಣನು ಮಾಡಬೇಕಾದ ಕರ್ತವ್ಯಗಳನ್ನು ಮಾಡದೇ, ಭ್ರಷ್ಟನಾಗಿ ಶಸ್ತ್ರವನ್ನು ಹಿಡಿದು ಯುದ್ಧಕ್ಕೆ ಬರುತ್ತಾನೋ, ಅಂಥ ಆತತಾಯಿಯನ್ನು ಸಂಹರಿಸಬೇಕು. ಇದರಿಂದ ಬ್ರಹ್ಮಹತ್ಯಾ ಪಾಪವು ಬರುವುದಿಲ್ಲ. ಅವನ ಕೋಪಕ್ಕೆ ಎದುರಾಗಿ ಮತ್ತೊಂದು ಕೋಪವು ಅವನನ್ನು ಸಂಹಾರ ಮಾಡುತ್ತದೆ.
ಪ್ರಾಣಾತ್ಯಯೇ ತಥಾಜ್ಞಾನಾದಚರನ್ ಮದಿರಾಮಪಿ |

ಅಚೋದಿತೋ ಧರ್ಮಪರ್ಯೈಃ ಪುನಃ ಸಂಸ್ಕಾರಮರ್ಹತಿ ॥20॥
ಯಾರು ಅಜ್ಞಾನದಿಂದ ಮದ್ಯಪಾನವನ್ನು ಮಾಡಿರುತ್ತಾನೋ, ಅವನಿಗೂ ಕೂಡ ಪ್ರಾಯಶ್ಚಿತ್ತವಾಗಲೇಬೇಕು. ಅಥವಾ ಪ್ರಾಣಹೋಗುವ ಸಂದರ್ಭದಲ್ಲಿ ಔಷಧಿಯ ರೂಪದಲ್ಲಿ ಮದ್ಯವನ್ನು ಪಾನ ಮಾಡಿದವನೂ ಕೂಡ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇ ಬೇಕು. ಧರ್ಮನಿಷ್ಠರಾದ ಸತ್ಪುರುಷರ ಬಳಿ ತನ್ನ ಪಾಪಕಾರ್ಯ- ವನ್ನು ತಿಳಿಸಿ, ಅವನ ಮಾರ್ಗದರ್ಶನದಂತೆ ಸಂಸ್ಕಾರವನ್ನು ಮಾಡಿಕೊಳ್ಳಬೇಕು.
ಟಿಪ್ಪಣಿ - ಆಚರನ್ ಮದಿರಾಮಪಿ ಇತ್ಯತ್ರ `ಚರ ಗತಿಭಕ್ಷಣಯೋಃ' ಇತಿ ಧಾತುಃ |
`ಚರ ಗತಿಭಕ್ಷಣಯೋಃ' ಎಂಬ ಧಾತುವಿನಿಂದ ಅಚರನ್ ಎಂಬ ಪದವು ನಿಷ್ಪನ್ನವಾಗಿದೆ. ಮದ್ಯಪಾನವನ್ನು ಮಾಡುವವನು ಎಂದರ್ಥ.
ಏತತ್ ತೇ ಸರ್ವಮಾಖ್ಯಾತಂ ಕೌಂತೇಯಾಭಕ್ಷ್ಯಭಕ್ಷಣಮ್ |
ಪ್ರಾಯಶ್ಚಿತ್ತವಿಧಾನೇನ ಸರ್ವಮೇತೇನ ಶುದ್ಧ್ಯತಿ ॥21॥
ಕೌಂತೇಯನೇ ! ಯಾವುದನ್ನು ಭಕ್ಷಣ ಮಾಡಬಾರದೋ, ಅದೆಲ್ಲವನ್ನು ನಿನಗೆ ಯಥಾರ್ಥವಾಗಿ ಹೇಳಿರುತ್ತೇನೆ. ಪ್ರಾಯಶ್ಚಿತ್ತದ ವಿಧಿಯನ್ನು ಶಾಸ್ತ್ರದ ಮೂಲಕ ತಿಳಿದುಕೊಂಡು, ಆ ಪ್ರಾಯಶ್ಚಿತ್ತದಿಂದ ಅಭಕ್ಷ್ಯಭಕ್ಷಣದಿಂದ ಪ್ರಾಪ್ತವಾಗುವ ಪಾಪವನ್ನು ಪರಿಹಾರ ಮಾಡಿಕೊಂಡು ಶುದ್ಧನಾಗಬೇಕು.
ಗುರುತಲ್ಪಂ ಹಿ ಗುರ್ವರ್ಥೇ ನ ದೂಷಯತಿ ಮಾನವಮ್ |
ಉದ್ದಾಲಕಃ ಶ್ವೇತಕೇತುಂ ಜನಯಾಮಾಸ ಶಿಷ್ಯತಃ ॥22॥
ಗುರುಗಳ ಪತ್ನಿಯನ್ನು ಸಮಾಗಮ ಮಾಡಿದರೆ ಮಹಾಪಾಪವು ಪ್ರಾಪ್ತ- ವಾಗುತ್ತದೆ. ಆದರೆ ಗುರುವಿನ ಅಪ್ಪಣೆಯ ಮೇರೆಗೆ ಗುರುವಿನ ಕಾರ್ಯಸಿದ್ಧಿಗಾಗಿ ಗುರುತಲ್ಪವನ್ನು ಮಾಡಿದರೆ ದೂಷಿತನಾಗುವುದಿಲ್ಲ. ಉದ್ದಾಲಕನು ಮಗನಾದ ಶ್ವೇತಕೇತುವನ್ನು ಶಿಷ್ಯನ ಮೂಲಕವಾಗಿಯೇ ಪಡೆದುಕೊಂಡನು.
ಟಿಪ್ಪಣಿ - ಈ ಶ್ಲೋಕವು ಅಪರೋಕ್ಷಜ್ಞಾನಿಗಳ ವಿಷಯದಲ್ಲಿ ವಿವಕ್ಷಿಸಬೇಕು. ಏನೂ ತಿಳಿಯದ ಅಜ್ಞಾನಿಯಾದ ಗುರುವು ಶಿಷ್ಯನಿಗೆ ಗುರುತಲ್ಪವನ್ನು ವಿಧಿಸಿದರೆ ಗುರುಶಿಷ್ಯರಿಬ್ಬರು ನರಕಕ್ಕೆ ತೆರಳುತ್ತಾರೆ. ಭೂತಭವಿಷ್ಯತ್ ವರ್ತಮಾನಕಾಲಗಳ ಬಗ್ಗೆ ಎಚ್ಚರವಿದ್ದ ಉನ್ನತ ಮಟ್ಟದ ಹರಿಚಿತ್ತವನ್ನು ಅರಿತ ಅಪರೋಕ್ಷಜ್ಞಾನಿಯಾದ ಗುರುವಿಗೆ ಮಾತ್ರ ಈ ಶ್ಲೋಕವು ಸಂಬಂಧಪಟ್ಟಿದೆ.
ಸ್ತೇಯಂ ಕುರ್ವಂಸ್ತು ಗುರ್ವರ್ಥಮಾಪತ್ಸು ನ ನಿಬದ್ಧ್ಯತೇ |
ಬಹುಶಃ ಕಾಮಕಾರೇಣ ನ ಚೇದ್ಯಃ ಸಂಪ್ರವರ್ತತೇ ॥23॥
ಕಳ್ಳತನವನ್ನು ಸರ್ವಥಾ ಮಾಡಬಾರದು. ಆದರೆ ಆಪತ್ಕಾಲದಲ್ಲಿ ಗುರುಗಳ ಪರಿರಕ್ಷಣೆಗೋಸ್ಕರ, ಅಥವಾ ಗುರುದಕ್ಷಿಣೆಯನ್ನು ಕೊಡಬೇಕಾದ ಪರಿಸ್ಥಿತಿಯು ಬಂದಾಗ ಆಪತ್ಕಾಲದಲ್ಲಿ ಕಳ್ಳತನವನ್ನು ಮಾಡಬಹುದು.
ಅನ್ಯತ್ರ ಬ್ರಾಹ್ಮಣಸ್ವೇಭ್ಯ ಆದದಾನೋ ನ ದುಷ್ಯತಿ |
ಸ್ವಯಮಪ್ರಾಶಿತಾ ಯಶ್ಚ ನ ಸ ಪಾಪೇನ ಲಿಪ್ಯತೇ ॥24॥
ಬ್ರಾಹ್ಮಣರ ಸ್ವತ್ತನ್ನು ಬಿಟ್ಟು, ಉಳಿದವರ ಸ್ವತ್ತನ್ನು ಆಪತ್ಕಾಲದಲ್ಲಿ ತೆಗೆದು- ಕೊಳ್ಳುವುದು ತಪ್ಪಾಗುವುದಿಲ್ಲ. ಆದರೆ ಆ ವಸ್ತುವನ್ನು ಸ್ವಾರ್ಥಕ್ಕೋಸ್ಕರ ತನ್ನ ಸುಖಕ್ಕೋಸ್ಕರ ಉಪಯೋಗಿಸಬಾರದು. ಆಗ ಪಾಪದ ಲೇಪವು ಪ್ರಾಪ್ತವಾಗು- ವುದಿಲ್ಲ.
ಪ್ರಾಣತ್ರಾಣೇಽನೃತಂ ವಾಚ್ಯಮಾತ್ಮನೋ ವಾ ಪರಸ್ಯ ವಾ |
ಗುರ್ವರ್ಥೇ ಸ್ತ್ರೀಷು ಚೈವ ಸ್ಯಾದ್ ವಿವಾಹಕರಣೇಷು ಚ ॥25॥
ಸುಳ್ಳನ್ನು ಹೇಳಿದರೆ ಪಾಪವು ಬರುತ್ತದೆ. ಆದರೆ ಪ್ರಾಣವನ್ನು ಪರಿರಕ್ಷಣೆ ಮಾಡಿಕೊಳ್ಳುವ ಸಂದರ್ಭದಲ್ಲಿ ಸುಳ್ಳನ್ನು ಹೇಳಬಹುದು. ಬೇರೆಯವರ ಆಪತ್ಕಾಲ- ದಲ್ಲೂ ಕೂಡ ಸುಳ್ಳನ್ನು ಹೇಳಬಹುದು. ಮತ್ತು ಗುರುಗಳ ಮರ್ಯಾದೆಯನ್ನು ಪರಿರಕ್ಷಣೆ ಮಾಡುವ ಸಂದರ್ಭದಲ್ಲಿ ಸ್ತ್ರೀಯರ ಜೊತೆ ವಿನೋದಕ್ಕಾಗಿ ಮಾತ- ನಾಡುತ್ತಿರುವ ಸಂದರ್ಭದಲ್ಲಿ ವಿವಾಹವನ್ನು ಮಾಡುವ ಉದ್ದೇಶಕ್ಕಾಗಿ ಸುಳ್ಳನ್ನು ಹೇಳಬಹುದು.
ನಾವರ್ತತೇ ವ್ರತಂ ಸ್ವಪ್ನೇ ಶುಕ್ರಮೋಕ್ಷೇ ಕಥಂಚನ |
ಆಜ್ಯಾಹೋಮಃ ಸಮಿದ್ಧೇಽಗ್ನೌ ಪ್ರಾಯಶ್ಚಿತ್ತಂ ವಿಧೀಯತೇ ॥26॥
ಬ್ರಹ್ಮಚಾರಿಯಾದವನು ಸ್ವಪ್ನಕಾಲದಲ್ಲಿಯೂ ಕೂಡ ರೇತಸ್ಖಲನವನ್ನು ಮಾಡ- ಬಾರದು. ಆದರೆ ತಿಳಿಯದೇ ಸ್ವಪ್ನಕಾಲದಲ್ಲಿ ರೇತಸ್ಖಲನವಾದರೆ, ಉಪನಯನ ಸಂಸ್ಕಾರವನ್ನು ಮಾಡಿಕೊಳ್ಳಬೇಕಾಗಿಲ್ಲ. ಪ್ರತಿನಿತ್ಯ ಮಾಡುವ ಸಮಿದ್ಧಾಗ್ನಿಯಲ್ಲಿಯೇ ಆಜ್ಯಹೋಮವನ್ನು ಮಾಡುವ ಮೂಲಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ಟಿಪ್ಪಣಿ - ನಾವರ್ತತೇ ವ್ರತಮ್ ಇತ್ಯತ್ರ ನಾವರ್ತತೇ ತಸ್ಮಾತ್ ಪರಾವೃತ್ಯ ನಾಯಾತಿ | ತತ್ರೈವ ತಿಷ್ಠತೀತ್ಯರ್ಥಃ |
ಪಾರಿವಿತ್ತ್ಯಂ ಚ ಪತಿತೇ ನಾಸ್ತಿ ಪ್ರವ್ರಜಿತೇ ತಥಾ |
ಭಿಕ್ಷಿತೇ ಪಾರದಾರ್ಯಂ ಚ ನ ತದ್ಧರ್ಮಸ್ಯ ದೂಷಕಮ್ ॥27॥
ಒಂದು ವೇಳೆ ಅಣ್ಣನು ಪತಿತನಾಗಿದ್ದರೆ, ಅಥವಾ ಸನ್ಯಾಸಿಯಾಗಿದ್ದರೆ ತಮ್ಮನು ವಿವಾಹವನ್ನು ಮಾಡಿಕೊಳ್ಳಬಹುದು. ಮತ್ತು ಪರಸ್ತ್ರೀಸಂಗವು ಅತ್ಯಂತ ಪಾಪಕಲಸವಾಗಿದ್ದರೂ ಕೂಡ ಸಂತಾನದ ಅಪೇಕ್ಷೆಯಿಂದ ಪರಸ್ತ್ರೀಯು ಭಿಕ್ಷೆಯನ್ನು ಬೇಡಿದಾಗ ಶಾಸೊತ್ರೀಕ್ತವಿಧಿವಿಧಾನಗಳಿಗೆ ಅನುಸಾರಿಯಾಗಿ ಪರಸ್ತ್ರೀ ಸಂಗವನ್ನು ಮಾಡಬಹುದು.
ಟಿಪ್ಪಣಿ - ಪಾರಿವಿತ್ತ್ಯಂ ತು ಪತಿತ ಇತ್ಯತ್ರ ಜ್ಯೇಷ್ಠೇ ಪತಿತೇ ಸತಿ ಪ್ರವ್ರಜಿತೇ ಚ ಸತಿ ಪಾರಿವಿತ್ತ್ಯಂ ಪರಿವಿತ್ತ್ಯಾಖ್ಯದೋಷೋ ನಾಸ್ತಿ |
ಜ್ಯೇಷ್ಠನಾದ ಸಹೋದರನು ಪತಿತನಾಗಿದ್ದರೆ, ಸನ್ಯಾಸಿಯಾಗಿದ್ದರೆ ಪಾರಿವಿತ್ತ ಎಂಬ ದೋಷವು ತಮ್ಮನಿಗೆ ಬರುವುದಿಲ್ಲ. ವಿವಾಹವಾಗಬಹುದು.
ಬೇರೆ ಯುಗಗಳಲ್ಲಿ ಸಂತಾನಕ್ಕೋಸ್ಕರ ಮತ್ತೊಬ್ಬ ಪುರುಷನನ್ನು ಅವಲಂಬಿಸಿ, ಸಂತಾನವನ್ನು ಹೊಂದುವ ಅವಕಾಶವು ಇತ್ತು.

ವೃಥಾ ಪಶುಸಮಾಲಂಭಂ ನೈವ ಕುರ್ಯಾನ್ನ ಕಾರಯೇತ್ |
ಅನುಗ್ರಹಃ ಪಶೂನಾಂ ಹಿ ಸಂಸ್ಕಾರೋ ವಿಧಿಚೋದಿತಃ ॥28॥
ಪಶುಗಳನ್ನು ಕೊಂದು ಮಾಂಸವನ್ನು ತಿನ್ನುವುದು ಅಧರ್ಮವಾಗಿದೆ. ಆದರೆ ವಿದ್ಯುಕ್ತವಾದ ಸಂಸ್ಕಾರಗಳನ್ನು ಮಾಡಿ, ಯಜ್ಞಕ್ಕೋಸ್ಕರ ಪಶುವಧೆಯನ್ನು ಮಾಡ- ಬಹುದು. ಇದು ಪಶುಗಳಿಗೆ ಮಾಡುವ ಅನುಗ್ರಹವೇ ಆಗುತ್ತದೆ. ಇದರಿಂದ ಪಶು- ಗಳಿಗೆ ಉತ್ತಮ ಲೋಕವು ಪ್ರಾಪ್ತವಾಗುತ್ತದೆ.
ಟಿಪ್ಪಣಿ - ಯಾವುದೇ ಪ್ರಾಣಿಗಳನ್ನು ಸರ್ವಥಾ ಕೊಲ್ಲಬಾರದು. ಯಜ್ಞ- ಕ್ಕೋಸ್ಕರ ಹಿಂದಿನ ಯುಗಗಳಲ್ಲಿ ಪ್ರಾಣಿವಧೆಯನ್ನು ಮಾಡುತ್ತಿದ್ದರು. ಆದರೆ ಕಲಿಯುಗದಲ್ಲಿ ಇದನ್ನೂ ಕೂಡ ನಿಷೇಧ ಮಾಡಲಾಗಿದೆ. ಯಜ್ಞಕ್ಕಾಗಿ ಅಥವಾ ಬೇರೆ ಯಾವುದೇ ಧರ್ಮದ ಕಾರ್ಯಗಳಿಗಾಗಿ ಪಶುವಧೆಯನ್ನು ಮಾಡಬಾರದು. ಆದರೆ ಇಂದಿನ ಯುಗದಲ್ಲಿ ಅನೇಕರು ಪ್ರಾಣಿವಧೆಯನ್ನು ಮಾಡಿ, ಮಾಂಸ- ಭಕ್ಷಣೆಯನ್ನು ಮಾಡುತ್ತಿದ್ದಾರೆ. ಇದು ಅತ್ಯಂತಧರ್ಮವಿರುದ್ಧವಾದ ಕಾರ್ಯ- ವಾಗಿದೆ.
ಅನರ್ಹೇ ಬ್ರಾಹ್ಮಣೇ ದತ್ತಮಜ್ಞಾನಾತ್ತನ್ನ ದೂಷಕಮ್ |
ಸತ್ಕಾರಾಣಾಂ ತಥಾತೀರ್ಥೇ ನಿತ್ಯಂ ವಾ ಪ್ರತಿಪಾದನಮ್ ॥29॥
ಯೋಗ್ಯನಲ್ಲದ ಬ್ರಾಹ್ಮಣನಿಗೆ ದಾನವನ್ನು ಮಾಡುವುದು ತಪ್ಪು. ಆದರೆ ಇವನು ಅನರ್ಹನಾಗಿದ್ದಾನೆಂದು ತಿಳಿಯದೇ ದಾನ ಮಾಡಿದಾಗ ಪಾಪವು ಬರುವುದಿಲ್ಲ. ಅದೇ ರೀತಿಯಾಗಿ ಸತ್ಪಾತ್ರನೆಂದು ತಿಳಿಯದೇ ಇದ್ದಾಗ ದಾನ ಮಾಡದೇ ಇದ್ದರೆ ಪಾಪಭಾಜನನಾಗುವುದಿಲ್ಲ.
ಟಿಪ್ಪಣಿ - ತಥಾತೀರ್ಥ ಇತ್ಯತ್ರ ಅತೀರ್ಥೇ ಇತಿ ಪದಚ್ಛೇದಃ |
ಯಾರು ಸತ್ಪಾತ್ರನೋ ಅವನಿಗೆ ದಾನ ಮಾಡಲೇ ಬೇಕು. ಅಪಾತ್ರನಿಗೆ ದಾನ ಮಾಡಲೇ ಬಾರದೆಂಬ ಧರ್ಮವನ್ನು ಈ ಹಿಂದೆ ಹೇಳಿದ್ದರು. ಒಂದುವೇಳೆ ಸತ್ಪಾತ್ರನೆಂದು ತಿಳಿಯದೇ ಇದ್ದರೆ, ದಾನವನ್ನು ಕೊಡದಿದ್ದರೂ ಕೂಡ ತಪ್ಪಾಗು- ವುದಿಲ್ಲ. ಕೆಲವರು ತಮ್ಮನ್ನು ಸತ್ಪಾತ್ರರೆಂದು ಗುರುತಿಸಿಕೊಳ್ಳಲು ಇಚ್ಛಿಸುವುದಿಲ್ಲ. ಅಂಥ ಸಂದರ್ಭದಲ್ಲಿ ಇವರನ್ನು ಸತ್ಪಾತ್ರರೆಂದು ಗುರುತಿಸುವುದೇ ಕಷ್ಟವಾಗುತ್ತದೆ. ಮತ್ತು ಅಪಾತ್ರರಿಗೆ ಸರ್ವಥಾ ದಾನ ಮಾಡಬಾರದು. ಕೆಲವರು ತಾವು ಮಾಡಿದ ದೊಡ್ಡ ದೊಡ್ಡ ಪಾಪಗಳನ್ನು ಜಗತ್ತಿನಲ್ಲಿ ಹಂಚಿಕೊಂಡಿರುವುದೇ ಇಲ್ಲ. ಅಂಥವರನ್ನು ಮೇಲ್ನೋಟಕ್ಕೆ ಅವರ ವೇಷಭೂಷಣಗಳನ್ನು ನಾವು ಸತ್ಪಾತ್ರರೆಂದು ಗುರುತಿಸಿ ದಾನವನ್ನು ಮಾಡುತ್ತೇವೆ. ಅಂತರಂಗದಲ್ಲಿ ಅವರು ಮಾಡಿದ ತಪ್ಪುಗಳು ನಮಗೆ ತಿಳಿದಿರುವುದಿಲ್ಲ. ಇಂಥ ಸಂದರ್ಭದಲ್ಲಿ ದಾನ ಮಾಡಿದವನಿಗೆ ಪಾಪವು ಬರುವುದಿಲ್ಲ. ಆದರೆ ದಾನವನ್ನು ತೆಗೆದುಕೊಂಡ ಅಂಥ ಅಪಾತ್ರನಿಗೆ ಬಹಳಷ್ಟು ಪಾಪವು ಬರುತ್ತದೆ. ಮತ್ತು ಅಪಾತ್ರನಿಗೆ ದಾನ ಮಾಡಿದ ಯಜಮಾನನ ಪಾಪವೂ ಕೂಡ ಅವನಿಗೇ ಬರುತ್ತದೆ ಎಂಬುದಾಗಿ ತಿಳಿಯಬೇಕು.
ಸ್ತ್ರಿಯಾಸ್ತಥಾಪಚಾರಿಣ್ಯಾ ನಿಷ್ಕೃತಿಃ ಸ್ಯಾದದೂಷಿಕಾ |
ಅಪಿ ಸಾ ಪೂಯತೇ ತೇನ ನತು ಭರ್ತಾ ಪ್ರದುಷ್ಯತಿ ॥30॥
ಹೆಂಡತಿಯನ್ನು ಎಂದೂ ಸಹ ತಿರಸ್ಕಾರ ಮಾಡಬಾರದು. ಆದರೆ ಒಂದು ವೇಳೆ ಅವಳು ಪರಪುರುಷರ ಸಂಪರ್ಕವನ್ನು ಮಾಡಿದ್ದರೆ, ಅವಳನ್ನು ತಿರಸ್ಕಾರ ಮಾಡ- ಬೇಕು. ಇದರಿಂದ ಯಾವುದೇ ಪಾಪವು ಬರುವುದಿಲ್ಲ. ಅಂಥ ಪತ್ನಿಯ ಜೊತೆ ಭೋಜನಾದಿಗಳನ್ನು ಮಾಡಬಾರದು. ದೈಹಿಕಸಂಪರ್ಕವನ್ನೂ ಕೂಡ ಮಾಡ- ಬಾರದು. ಇದೇ ಅವಳಿಗೆ ಪ್ರಾಯಶ್ಚಿತ್ತವಾಗಿದೆ. ಪತ್ನಿಯನ್ನು ಪರಿತ್ಯಾಗ ಮಾಡುವುದ- ರಿಂದಲೇ ಅವಳು ಪರಿಶುದ್ಧಳಾಗುತ್ತಾಳೆ.
ಟಿಪ್ಪಣಿ - ನಿಷ್ಕೃತಿಃ ಸ್ಯಾದದೂಷಿಕಾ ಇತ್ಯತ್ರ ನಿಷ್ಕೃತಿಃ ವಿಕ್ರಯಣಮ್ |
ತತ್ವಂ ಜ್ಞಾತ್ವಾ ತು ಸೋಮಸ್ಯ ವಿಕ್ರಯಃ ಸ್ಯಾದದೂಷಕಃ |
ಅಸಮರ್ಥಸ್ಯ ಭೃತ್ಯಸ್ಯ ವಿಸರ್ಗಃ ಸ್ಯಾದದೋಷವಾನ್ ॥
ವನದಾಹೋ ಗವಾಮರ್ಥೇ ಕ್ರಿಯಮಾಣೋ ನ ದೂಷಕಃ |
ಸೋಮಲತೆಯನ್ನು ಯಜ್ಞಕ್ಕೋಸ್ಕರ ಬಳಸಲಾಗುತ್ತದೆ ಎಂಬ ಉದ್ದೇಶವನ್ನು ಅರ್ಥಮಾಡಿಕೊಂಡು ವಿಕ್ರಯ ಮಾಡಿದರೆ ಯಾವುದೇ ದೋಷವು ಬರುವುದಿಲ್ಲ. ಯಾರು ಸೋಮಲತೆಯನ್ನು ಹಣಕ್ಕಾಗಿ ತೆಗೆದುಕೊಂಡು ಅದರ ರಸವನ್ನು ತೆಗೆದು ಕುಡಿದು ಮತ್ತನಾಗುವ ಉದ್ದೇಶವನ್ನು ಹೊಂದಿರುತ್ತಾನೋ, ಅಂಥವನಿಗೆ ವಿಕ್ರಯ- ವನ್ನು ಮಾಡುವುದು ತಪ್ಪಾಗುತ್ತದೆ. ಅದರಂತೆ ಯಾರು ಭೃತ್ಯನೋ ಅವನು ಕೆಲಸ ಕಾರ್ಯಗಳನ್ನು ಮಾಡಲು ಸಮರ್ಥನಾಗದಿದ್ದರೆ. ಅಂಥವನನ್ನು ಪರಿತ್ಯಾಗ ಮಾಡು -ವುದರಿಂದ ಯಾವುದೇ ದೋಷವು ಬರುವುದಿಲ್ಲ. ಹಸುಗಳಿಗೋಸ್ಕರ ಕಾಡನ್ನು ಸುಡುವುದೂ ತಪ್ಪಾಗುವುದಿಲ್ಲ.
ಟಿಪ್ಪಣಿ - ತತ್ತ್ವಂ ಜ್ಞಾತ್ವಾ ತು ಸೋಮಸ್ಯ ಇತ್ಯತ್ರ ಸೋಮಸ್ಯ ಸೋಮ- ಲತಾಯಾಃ ತತ್ತ್ವಂ ಯಾಥಾರ್ಥ್ಯಮ್ |
ಅನ್ಯಲತಾಮಾನೀಯ ಸೋಮಲತೇತ್ಯ- ನೃತೇನ ವಿಕ್ರಯಣಂ ನಿಷಿದ್ಧಮಿತಿ ಸೂಚಯಿತುಂ ತತ್ತ್ವಂ ಜ್ಞಾತ್ವಾ ಇತ್ಯುಕ್ತಮ್ |
ಸೋಮರಸವನ್ನು ಕೇವಲ ಸುಖಕ್ಕೋಸ್ಕರ ಪಾನ ಮಾಡುವುದು ತಪ್ಪು. ಯಜ್ಞಪ್ರಕ್ರಿಯೆಗೋಸ್ಕರವೇ ಇದನ್ನು ಉಪಯೋಗಿಸಬೇಕು. ಇದನ್ನು ಅರ್ಥ- ಮಾಡಿಕೊಳ್ಳದೇ ಸುಮ್ಮನೆ ಮಾರಾಟ ಮಾಡಿದರೆ ಅಧರ್ಮವಾಗುತ್ತದೆ. ಮತ್ತು ಸೇವಕನಾದವನು ಯಜಮಾನನನ್ನು ನಂಬಿ ಬದುಕುತ್ತಿರುತ್ತಾನೆ. ಅಂದಮಾತ್ರಕ್ಕೆ ಅವನು ಕೆಲಸ ಮಾಡದಿದ್ದರೂ ಕೂಡ ಅವನಿಗೆ ಸಂಬಳ ಕೊಡಬೇಕೆಂಬ ನಿಯಮವು ಇರುವುದಿಲ್ಲ. ಕೆಲಸವನ್ನು ಮಾಡಲು ಅವನಿಗೆ ಶಕ್ತಿಯು ಹ್ರಾಸ- ವಾದರೆ, ಅಥವಾ ಕೆಲಸದಲ್ಲಿ ವಂಚನೆ ಮೊದಲಾದವುಗಳನ್ನು ಮಾಡಿದರೆ ಅಂಥ ಸೇವಕನನ್ನು ಕೆಲಸದಿಂದ ಬಿಡಿಸಬಹುದು. ಸಂಬಳವನ್ನು ಕೊಡಬೇಕಾಗಿಲ್ಲ. ಆಗ ಯಜಮಾನನಿಗೆ ಯಾವುದೇ ಪಾಪವು ಬರುವುದಿಲ್ಲ.
ಅರಣ್ಯದಲ್ಲಿ ಹಸುಗಳನ್ನು ತಿನ್ನುವ ಅನೇಕ ಪ್ರಾಣಿಗಳಿರುತ್ತವೆ. ಅಂಥ ದುಷ್ಟ- ಪ್ರಾಣಿಗಳನ್ನು ಓಡಿಸಲು ಸಾಧ್ಯವಾಗದೇ ಇದ್ದಾಗ ಆ ಅರಣ್ಯಪ್ರದೇಶವನ್ನು ಸುಟ್ಟು ವನ್ಯಮೃಗಗಳನ್ನು ಅಲ್ಲಿಂದ ಓಡಿಸಬಹುದು. ಇದರಿಂದ ಹಸುಗಳು ಸಂರಕ್ಷಿತ- ವಾಗುತ್ತದೆ. ಇಂಥ ಸಂದರ್ಭದಲ್ಲಿ ಕಾಡಿಗೆ ಬೆಂಕಿ ಹಚ್ಚುವುದೂ ಕೂಡ ಪಾಪ- ಕೆಲಸವಾಗುವುದಿಲ್ಲ.
ಉಕ್ತಾನ್ಯೇತಾನಿ ಕರ್ಮಾಣಿ ಯಾನಿ ಕುರ್ವನ್ನ ದುಷ್ಯತಿ |

ಪ್ರಾಯಶ್ಚಿತ್ತಾನಿ ವಕ್ಷ್ಯಾಮಿ ವಿಸ್ತರೇಣೈವ ಭಾರತ ॥32॥
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚತ್ರಿಂಶೋಽಧ್ಯಾಯಃ ॥35॥
ಯುಧಿಷ್ಠಿರನೇ ! ಯಾವ ಕರ್ಮಗಳು ಪಾಪಕರವಾಗುತ್ತವೆ. ಯಾವ ಕರ್ಮಗಳು ಪಾಪಕರವಾಗುವುದಿಲ್ಲ ಎಂಬುದನ್ನು ಇಲ್ಲಿಯ ತನಕ ಹೇಳಿದ್ದೇನೆ. ಈಗ ಪಾಪಕರವಾದ ಕಾರ್ಯಗಳಿಗೆ ಯಾವ ಬಗೆಯ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳ- ಬೇಕೆಂಬ ವಿಚಾರವನ್ನು ಮುಂದೆ ಹೇಳುತ್ತೇನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 35ನೆಯ ಅಧ್ಯಾಯವು ಮುಗಿಯಿತು.
*****
36. ಮೂವತ್ತಾರನೆಯ ಅಧ್ಯಾಯ
ಪರಸ್ತ್ರೀಗಮನ, ಪರಪುರುಷಸಂಪರ್ಕ, ಬ್ರಹ್ಮಹತ್ಯಾ, ಸುರಾಪಾನ, ವಿವಿಧ ಪಾತಕಗಳು, ಉಪಪಾತಕಗಳು. ಈ ಎಲ್ಲಾ ದೋಷಗಳಿಗೆ ಪ್ರಾಯಶ್ಚಿತ್ತಗಳು.
ವ್ಯಾಸಃ
ತಪಸಾ ಕರ್ಮಭಿಶ್ಚೈವ ಪ್ರದಾನೇನ ಚ ಭಾರತ |
ಪುನಾತಿ ಪಾಪಂ ಪುರುಷಃ ಪೂತಶ್ಚೇನ್ನ ಪ್ರವರ್ತತೇ ॥1॥
ವೇದವ್ಯಾಸದೇವರು ಯುಧಿಷ್ಠಿರನೇ! ಯಾವ ಮನುಷ್ಯನು ಪಾಪವನ್ನು ಆಚರಿಸಿರುತ್ತಾನೋ, ಅಂಥ ಮನುಷ್ಯನು ಆ ಪಾಪಗಳ ಪರಿಹಾರಕ್ಕಾಗಿ ಕೃಛ್ರ, ಚಾಂದ್ರಾಯಣ ಮೊದಲಾದ ವ್ರತಗಳನ್ನು ಆಚರಿಸಬೇಕು. ಮತ್ತು ಅನೇಕ ಬಗೆಯ ದಾನಗಳನ್ನು ಮಾಡಬೇಕು. ಆಗ ಅವನು ಮಾಡಿದ ಪಾಪಗಳು ನಾಶವಾಗುತ್ತವೆ. ಆದರೆ ಮುಂದೆಂದೂ ಅದೇ ತಪ್ಪನ್ನು ಸರ್ವಥಾ ಮಾಡಬಾರದು.
ಏಕಕಾಲಂ ತು ಭುಂಜಾನಶ್ಚರನ್ ಭೈಕ್ಷಂ ಸ್ವಕರ್ಮಕೃತ್ |
ಕಪಾಲಪಾಣಿಃ ಖಟ್ವಾಂಗೀ ಬ್ರಹ್ಮಚಾರೀ ಸದೋತ್ಥಿತಃ ॥2॥
ಮಹಾಪಾಪವನ್ನು ಆಚರಿಸಿದವನು ಒಂದೇ ಹೊತ್ತು ಊಟ ಮಾಡಬೇಕು. ತನ್ನ ವೈಯಕ್ತಿಕ ಕೆಲಸಗಳನ್ನು ತಾನೇ ಮಾಡಿಕೊಳ್ಳಬೇಕು. ಭಿಕ್ಷೆ ಬೇಡಿ ಊಟವನ್ನು ಮಾಡಬೇಕು. ಬ್ರಹ್ಮಚರ್ಯವ್ರತದಲ್ಲಿರಬೇಕು. ಸದಾಕಾಲವು ಪರಮಾತ್ಮನ ವಿಷಯ -ದಲ್ಲಿ ಜಾಗೃತನಾಗಿರಬೇಕು. ಕಪಾಲವನ್ನು, ದಂಡವನ್ನು ಕೈಯಲ್ಲಿ ಹಿಡಿದು- ಕೊಂಡಿರಬೇಕು.
ಟಿಪ್ಪಣಿ - ಕಪಾಲಪಾಣಿಃ ಖಟ್ವಾಂಗೀ ಇತ್ಯತ್ರ ಕಪಾಲಪಾಣಿಃ ಭಿಕ್ಷಾಸಂಗ್ರಹಾಯ ಮೃಣ್ಮಯಕಪಾಲಪಾಣಿಃ | ಖಟ್ವಾಂಗೀ ಪಶ್ವಾದಿನಿವಾರಣಾಯ ಖಟ್ವಾಂಗೋ ಲಗುಡಮ್, ತದ್ವಾನ್ |
ಭಿಕ್ಷೆಯ ಸಂಗ್ರಹಕ್ಕೋಸ್ಕರ ಮೃಣ್ಮಯವಾದ ಕಪಾಲವನ್ನು ಕೈಯಲ್ಲಿ ಹಿಡಿದು- ಕೊಂಡಿರಬೇಕು. ಖಟ್ವಾಂಗೀ ಅಂದರೆ ಪಶು ಮೊದಲಾದವುಗಳ ನಿವಾರಣೆ- ಗೋಸ್ಕರ ಒಂದು ಕೋಲನ್ನು ಹಿಡಿದುಕೊಂಡಿರಬೇಕು ಎಂದು ಅಭಿಪ್ರಾಯ.
ಅನಸೂಯುರಧಃಶಾಯೀ ಕರ್ಮ ಲೋಕೇ ಪ್ರಕಾಶಯನ್ |
ಪೂರ್ಣೈರ್ದ್ವಾದಶಭಿರ್ವರ್ಷೈರ್ಬ್ರಹ್ಮಹಾ ವಿಪ್ರಮುಚ್ಯತೇ ॥3॥
ಮತ್ತೊಬ್ಬರಲ್ಲಿ ದೋಷವನ್ನು ಎಣಿಸಬಾರದು. ನೆಲದ ಮೇಲೆ ಮಲಗಿಕೊಳ್ಳ- ಬೇಕು. ತನ್ನ ಪಾಪಕರ್ಮವನ್ನು ಲೋಕದಲ್ಲಿ ಪ್ರಸಿದ್ಧಿಗೊಳಿಸಬೇಕು. ಹೀಗೆ ಹನ್ನೆರಡು ವರ್ಷಗಳ ಕಾಲ ವ್ರತವನ್ನು ಆಚರಿಸಿದರೆ ಬ್ರಹ್ಮಹತ್ಯಾ ಮೊದಲಾದ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಲಕ್ಷ್ಯಃ ಶಸ್ತ್ರಭೃತಾಂ ವಾಸ್ಯಾದ್ ವಿದುಷಾಮಿಚ್ಛಯಾತ್ಮನಃ |
ಪ್ರಾಸ್ಯೇದಾತ್ಮಾನಮಗ್ನೌ ವಾ ಸಮಿದ್ಧೇ ನಿರವಾಕ್ಶಿರಾಃ ॥4॥
ಇವನು ಬ್ರಹ್ಮಹತ್ಯೆಯನ್ನು ಮಾಡಿದ್ದಾನೆ ಎಂಬುದಾಗಿ ತಿಳಿದು ಶಸ್ತ್ರಧಾರಿಗಳು ಇವನ ಮೇಲೆ ಲಕ್ಷ್ಯವನ್ನಿಟ್ಟರೆ, ಸ್ವೇಚ್ಛೆಯಿಂದ ಆ ಶಸ್ತ್ರಕ್ಕೆ ಭಾಗಿಯಾಗಬೇಕು. ಉರಿಯುವ ಬೆಂಕಿಯಲ್ಲಿ ತಲೆಕೆಳಗಾಗಿ ಮಾಡಿ, ಧುಮುಕಬೇಕು.
ಟಿಪ್ಪಣಿ - ಶಸ್ತ್ರಘಾತದ ಮೂಲಕ ಅಸುನೀಗಲು ಸಿದ್ಧನಿರಬೇಕು. ಉರಿಯುವ ಬೆಂಕಿಯಲ್ಲಿ ಇಚ್ಛೆಪಟ್ಟು ಧುಮುಕಬೇಕು. ಇಷ್ಟೊಂದು ಘೋರವಾದ ಶಿಕ್ಷೆಯನ್ನು ಅನುಭವಿಸಿದರೆ ಅವನಿಗೆ ಉದ್ಧಾರವಾಗಲು ಸಾಧ್ಯ. ಇಲ್ಲದಿದ್ದರೆ ನೂರಾರು ವರ್ಷಗಳ ಕಾಲ ನರಕ ದುಃಖವನ್ನು ಹೀನ ಯೋನಿಗಳನ್ನು ಅನುಭವಿಸಬೇಕಾ- ಗುತ್ತದೆ. ಇದನ್ನೆಲ್ಲಾ ಗಮನಿಸಿ ಮಹಾಪಾತಕಗಳನ್ನು ಮಾಡುವ ಸಂದರ್ಭದಲ್ಲಿ ಇಂಥ ಘೋರ ಶಿಕ್ಷೆಯ ಎಚ್ಚರವನ್ನು ಹೊಂದಿರಬೇಕು.
ಜಪನ್ ವಾನ್ಯತಮಂ ವೇದಂ ಯೋಜನಾನಾಂ ಶತಂ ವ್ರಜೇತ್ |
ಸರ್ವಸ್ವಂ ವಾ ವೇದವಿದೇ ಬ್ರಾಹ್ಮಣಾಯೋಪಪಾದಯೇತ್ ॥5॥
ನೂರು ಯೋಜನಗಳ ತನಕ ವೇದವನ್ನು ಪಠಿಸುತ್ತಾ, ನಡೆದು ಹೋಗಬೇಕು. ವೇದಜ್ಞನಾದ ಬ್ರಾಹ್ಮಣನಿಗೆ ತನ್ನ ಸರ್ವಸ್ವವನ್ನು ದಾನ ಮಾಡಬೇಕು.
ಧನಂ ವಾ ಜೀವನಾಯಾಲಂ ಗೃಹಂ ವಾ ಸಪರಿಚ್ಛದಮ್ |
ಮುಚ್ಯತೇ ಬ್ರಹ್ಮಹತ್ಯಾಯಾ ಗೋಪ್ತಾ ಗೋಬ್ರಾಹ್ಮಣಸ್ಯ ಚ ॥6॥
ಒಬ್ಬ ಬ್ರಾಹ್ಮಣನಿಗೆ ಜೀವನಕ್ಕೆ ಬೇಕಾಗುವಷ್ಟು ಹಣವನ್ನು ದಾನ ಮಾಡಬೇಕು. ಸುವ್ಯವಸ್ಥಿತವಾದ ಮನೆಯನ್ನು ದಾನಮಾಡಬೇಕು. ಗೋ-ಬ್ರಾಹ್ಮಣರ ಸಂರಕ್ಷಣೆ- ಯನ್ನು ನಿರಂತರವಾಗಿ ಮಾಡಬೇಕು. ಆಗ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾಗು- ತ್ತಾನೆ.
ಷಡ್ಭಿರ್ವರ್ಷೈಃ ಕೃಚ್ಛ್ರಭೋಜೀ ಬ್ರಹ್ಮಹಾ ಪೂಯತೇ ನರಃ |
ಮಾಸೇ ಮಾಸೇ ಸಮಶ್ನಂಸ್ತು ತ್ರಿಭಿರ್ವರ್ಷೈಃ ಪ್ರಮುಚ್ಯತೇ ॥7॥
ಆರು ವರ್ಷಗಳ ಕಾಲ ಹೀಗೆ ಕೃಚ್ಛ್ರವ್ರತದ ಕ್ರಮದಲ್ಲಿ ಭೋಜನವನ್ನು ಮಾಡು -ತ್ತಿದ್ದರೆ, ಬ್ರಹ್ಮಹತ್ಯಾ ಪಾಪವು ಪರಿಹಾರವಾಗುತ್ತದೆ. ಅಥವಾ ಮಾಸಕ್ರಮದಲ್ಲಿ ಕೃಚ್ಛ್ರವ್ರತವನ್ನು ಆಚರಣೆ ಮಾಡಿದರೆ, ಮೂರು ವರ್ಷಗಳಲ್ಲಿಯೇ ಬ್ರಹ್ಮಹತ್ಯಾ ಪಾಪವು

ಪರಿಹಾರವಾಗುತ್ತದೆ.
ಟಿಪ್ಪಣಿ - ಮಾಸೇ ಮಾಸೇ ಸಮಶ್ನಂಸ್ತು ಇತ್ಯತ್ರ ಸಮಶ್ನನ್ ಮಾಸೋಪವಾಸಂ ಕೃತ್ವಾ ಮಾಸೇ ಸಂಪೂರ್ಣೇ ಸತಿ ಸಮಶ್ನನ್ |
ತ್ರಿರವಾಕ್ಶಿರಾ ಇತ್ಯತ್ರ ಋಗಾದಿ- ವೇದಾನಾಂ ಮಧ್ಯೇ ಏಕಂ ವೇದಂ ತ್ರಿರ್ಜಪನ್ |
ಮನುಸ್ಮೃತಿಯಲ್ಲಿ ಕೃಚ್ಛ್ರವ್ರತವನ್ನು ಹೀಗೆ ಹೇಳಿದ್ದಾರೆ - `ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ | ತ್ರ್ಯಹಂ ಪರಂ ಚ ನಾಶ್ನೀಯಾತ್ಪ್ರಾಜಾಪತ್ಯಂ ಚರನ್ದ್ವಿಜಃ II (ಅ 11, ಶ್ಲೋಕ 211). ಮೂರು ದಿವಸಗಳು ಹಗಲು ಊಟ ಮಾಡಬೇಕು. ಮೂರು ದಿವಸಗಳು ರಾತ್ರಿ ಊಟ ಮಾಡಬೇಕು. ಮೂರು ದಿವಸಗಳು ಯಾರ ಬಳಿಯೂ ಬೇಡದೇ ಇರುವಷ್ಟನ್ನೇ ಊಟ ಮಾಡಬೇಕು. ಮೂರು ದಿವಸಗಳು ಉಪವಾಸ ಮಾಡಬೇಕು. ಹೀಗೆ ಹನ್ನೆರಡು ದಿವಸಗಳ ಪರ್ಯಂತವಾಗಿ ವ್ರತವನ್ನು ಆರು ವರ್ಷಗಳ ಕಾಲ ಆಚರಿಸಬೇಕು. ಆಗ ಬ್ರಹ್ಮಹತ್ಯಾ ಪಾಪದಿಂದ ವಿಮುಕ್ತನಾಗುತ್ತಾನೆ.
ಅಥವಾ ಮಾಸಿಕಾವಿಧಾನದಲ್ಲಿ ಈ ವ್ರತವನ್ನು ಹೀಗೆ ತಿಳಿಸುತ್ತಾರೆ - ಒಂದು ತಿಂಗಳು ಹಗಲು ಭೋಜನ. ಒಂದು ತಿಂಗಳು ರಾತ್ರಿ ಭೋಜನ. ಒಂದು ತಿಂಗಳು ಅಯಾಚಿತವಾಗಿ ಸಿಕ್ಕಿದ್ದಷ್ಟನ್ನು ಊಟ ಮಾಡಬೇಕು. ಮತ್ತೊಂದು ತಿಂಗಳು ಸಂಪೂರ್ಣವಾಗಿ ಉಪವಾಸವನ್ನು ಮಾಡಬೇಕು. ಹೀಗೆ ಮಾಡಿದರೆ ಮೂರು ವರ್ಷಗಳಲ್ಲಿಯೇ ಬ್ರಹ್ಮಹತ್ಯೆಯ ಪಾಪದಿಂದ ವಿನಿರ್ಮುಕ್ತನಾಗುತ್ತಾನೆ. ಅಥವಾ ಒಂದು ವರ್ಷದಲ್ಲಿಯೇ ಬ್ರಹ್ಮಹತ್ಯೆಯು ಪರಿಹಾರವಾಗುತ್ತದೆಂದು ಕೆಲವೆಡೆ ಹೇಳಲಾಗಿದೆ.
ಬ್ರಹ್ಮಹತ್ಯಾಪಾಪವಷ್ಟೇ ಅಲ್ಲದೇ, ಪರಸ್ತ್ರೀಗಮನ, ಪರಪುರುಷ ಸಂಪರ್ಕ, ಮದ್ಯಪಾನ ಮೊದಲಾದ ಮಹಾಪಾತಕಗಳ ಪರಿಹಾರಕ್ಕೂ ಕೂಡ ಕೃಚ್ಛ್ರಚಾಂದ್ರಾ- ಯಣವ್ರತವನ್ನು ಶಾಸ್ತ್ರದಲ್ಲಿ ತಿಳಿಸುತ್ತಾರೆ.
ಸಂವತ್ಸರೇಣ ಮಾಸಾಶೀ ಪೂಯತೇ ನಾತ್ರ ಸಂಶಯಃ |
ತಥೈವೋಪವಸನ್ ರಾಜನ್ ಸ್ವಲ್ಪೇನಾಪಿ ಪ್ರಮುಚ್ಯತೇ ॥8॥
ಒಂದು ಮಾಸದಲ್ಲಿ ಭೋಜನಕ್ರಮವನ್ನು ವ್ಯತ್ಯಾಸ ಗೊಳಿಸುತ್ತಾ ಕೃಚ್ಛ್ರವ್ರತವನ್ನು ಆಚರಣೆ ಮಾಡಿದರೆ ಕೂಡಲೇ ಬ್ರಹ್ಮಹತ್ಯಾ ಪಾಪದಿಂದ ವಿಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಕ್ರತುನಾ ಚಾಶ್ವಮೇಧೇನ ಪೂಯತೇ ನಾತ್ರ ಸಂಶಯಃ |
ಯೇ ಚಾಪ್ಯವಭೃಥಸ್ನಾತಾಃ ಕೇಚಿದೇವಂವಿಧಾ ನರಾಃ ॥9॥
ಅಶ್ವಮೇಧಯಾಗವನ್ನು ಮಾಡಿದರೂ ಕೂಡ ಬ್ರಹ್ಮಹತ್ಯಾಪಾಪವು ಪರಿಹಾರ- ವಾಗುತ್ತದೆ. ಇದರಲ್ಲಿಯೂ ಯಾವುದೇ ಸಂಶಯವಿರುವುದಿಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಬೇರೆ ಪಾಪಾಗಳಿಗೂ ಕೂಡ ಅಶ್ವಮೇಧಯಾಗವನ್ನು ಮಾಡಿ ಅವಭೃಥ ಸ್ನಾನ ಮಾಡುವುದರಿಂದ ಶುದ್ಧಿಯನ್ನು ಹೊಂದಬಹುದು.
ತೇ ಸರ್ವೇ ಪೂತಪಾಪ್ಮಾನೋ ಭವಂತೀತಿ ಪರಾ ಶ್ರುತಿಃ |
ಬ್ರಾಹ್ಮಣಾರ್ಥೇ ಹತೋ ಯುದ್ಧೇ ಮುಚ್ಯತೇ ಬ್ರಹ್ಮಹತ್ಯಯಾ ॥10॥
ಗವಾಂ ಶತಸಹಸ್ರಂ ತು ಪಾತ್ರೇಭ್ಯಃ ಪ್ರತಿಪಾದಯನ್ |
ಬ್ರಹ್ಮಹಾ ವಿಪ್ರಮುಚ್ಯೇತ ಸರ್ವಪಾಪೇಭ್ಯ ಏವ ಚ ॥11॥
`ಸರ್ವಂ ಪಾಪ್ಮಾನಂ ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ' ಎಂಬ ಶ್ರುತಿಯು ಅಶ್ವಮೇಧಯಾಗದಿಂದ ಎಲ್ಲಾ ಪಾಪಗಳು ಪರಿಹಾರವಾಗುತ್ತವೆ ಎಂದು ಹೇಳುತ್ತಿದೆ. ಬ್ರಹ್ಮಹತ್ಯೆಯನ್ನು ಮಾಡಿದವನು ಬ್ರಾಹ್ಮಣರ ರಕ್ಷಣೆಗೋಸ್ಕರ ಯುದ್ಧವನ್ನು ಮಾಡಬೇಕು. ಆ ಸಂದರ್ಭದಲ್ಲಿ ಮೃತನಾದರೆ, ಆ ಮಹಾಪಾಪದಿಂದ ವಿಮುಕ್ತನಾಗುತ್ತಾನೆ. ಒಂದು ಲಕ್ಷ ಗೋವುಗಳನ್ನು ಸತ್ಪಾತ್ರರಿಗೆ ದಾನ ಮಾಡುವುದ- ರಿಂದಲೂ ಬ್ರಹ್ಮಹತ್ಯಾಪಾಪವು ಪರಿಹಾರವಾಗುತ್ತದೆ. ಮತ್ತು ಉಳಿದೆಲ್ಲಾ ಪಾಪ- ಗಳಿಂದಲೂ ಕೂಡ ವಿಮುಕ್ತನಾಗುತ್ತಾನೆ.
ಕಪಿಲಾನಾಂ ಸಹಸ್ರಾಣಿ ಯೋ ದದ್ಯಾತ್ ಪಂಚವಿಂಶತಿಮ್ |
ದೋಗ್ಧ್ರೀಣಾಂ ಸ ಚ ಪಾಪೇಭ್ಯಃ ಸರ್ವೇಭ್ಯೋ ವಿಪ್ರಮುಚ್ಯತೇ ॥12॥
ಯಥೇಚ್ಛವಾಗಿ ಹಾಲನ್ನು ನೀಡುವ 25000 ಕಪಿಲಗೋವುಗಳನ್ನು ಸತ್ಪಾತ್ರ- ನಿಗೆ ದಾನ ಮಾಡುವುದರಿಂದ ಎಲ್ಲಾ ಪಾಪಗಳಿಂದಲೂ ಕೂಡ ವಿಮುಕ್ತನಾಗುತ್ತಾನೆ.
ಗೋ ಸಹಸ್ರಂ ಸವತ್ಸಾನಾಂ ದೋಗ್ಧ್ರೀಣಾಂ ಪ್ರಾಣಸಂಶಯೇ |
ಸಾಧುಭ್ಯೋ ವೈ ದರಿದ್ರೇಭ್ಯೋ ದತ್ವಾ ಮುಚ್ಯೇತ ಕಿಲ್ಬಿಷಾತ್ ॥13॥
ಪ್ರಾಣ ಹೋಗುವ ಸಂದರ್ಭದಲ್ಲಿ ಯಾವ ಸಾಧಕನು ಹಾಲನ್ನು ನೀಡುವ ಕರುಗಳುಳ್ಳ 1000 ಹಸುಗಳನ್ನು ಸಾಧುಗಳಾದ ಸಂಪತ್ತಿಲ್ಲದ ಸತ್ಪುರುಷರಿಗೆ ದಾನವನ್ನು ಮಾಡುತ್ತಾನೋ ಅವನು ಜೀವನದಲ್ಲಿ ಮಾಡಿದ ಎಲ್ಲ ಪಾಪಗ- ಳಿಂದಲೂ ಕೂಡ ವಿಮುಕ್ತನಾಗುತ್ತಾನೆ.
ಶತಂ ವೈ ಯಸ್ತು ಕಾಂಭೋಜಾನ್ ಬ್ರಾಹ್ಮಣೇಭ್ಯಃ ಪ್ರಯಚ್ಛತಿ |
ನಿಯತೇಭ್ಯೋ ಮಹೀಪಾಲ ಸ ಚ ಪಾಪಾತ್ ಪ್ರಮುಚ್ಯತೇ ॥14॥
ನಿಯಮಾನುಸಾರಿಯಾಗಿ ಸದ್ಬ್ರಾಹ್ಮಣನಿಗೆ ಕಾಂಭೋಜದೇಶದ ನೂರು ಕುದುರೆ -ಗಳನ್ನು ದಾನ ಮಾಡುವುದರಿಂದ ಎಲ್ಲಾ ಪಾಪಗಳಿಂದ ವಿನಿರ್ಮುಕ್ತನಾಗುತ್ತಾನೆ.
ಮನೋರಥಂ ತು ಯೋ ದದ್ಯಾದೇಕಸ್ಮಾ ಅಪಿ ಭಾರತ |
ನ ಕೀರ್ತಯೇತ ದತ್ವಾ ಯಃ ಸ ಚ ಪಾಪಾತ್ ಪ್ರಮುಚ್ಯತೇ ॥15॥
ಯಾವ ಬ್ರಾಹ್ಮಣನ ಮನೋರಥವನ್ನು ಸಂಪೂರ್ಣವಾಗಿ ಪೂರ್ಣಗೊಳಿಸಿ- ದರೂ ಕೂಡ ಮತ್ತು ತಾನು ದಾನ ಮಾಡಿದ ವಸ್ತುವನ್ನು ಮತ್ತೊಬ್ಬರಿಗೆ ಹೇಳದೇ ಇರುವುದರಿಂದಲೂ ಕೂಡ ಬ್ರಹ್ಮಹತ್ಯಾದಿ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಸುರಾಪಾನಂ ಸಕೃತ್ ಪೀತ್ವಾ ಯೋಽಗ್ನಿವರ್ಣಾಂ ಪಿಬೇದ್ ದ್ವಿಜಃ |

ಸ ಪಾವಯತ್ಯಥಾತ್ಮಾನಮಿಹ ಲೋಕೇ ಪರತ್ರ ಚ ॥16॥
ಒಮ್ಮೆ ಸುರಾಪಾನವನ್ನು ಮಾಡಿದರೂ ಸಾಕು ಮಹಾಪಾಪವು ಬರುತ್ತದೆ. ಈ ಪಾಪದ ಪರಿಹಾರಕ್ಕಾಗಿ ಕೆಂಪಗೆ ಕಾದು ಕುದಿಯುತ್ತಿರುವ ಕೆಂಪು ಬಣ್ಣದ ಸುರೆಯನ್ನು ಕುಡಿದು ಬಿಡಬೇಕು.
ಟಿಪ್ಪಣಿ -ಯೋಽಗ್ನಿವರ್ಣಾಂ ಸುರಾಂ ಪಿಬೇದ್ ಇತ್ಯತ್ರ ಅಗ್ನಿವರ್ಣಾಂ ಪುನಃಪುನಃ ಕ್ವಥನೇನ ಅಗ್ನಿಸಮಾನವರ್ಣಾಮ್ |
ಸುರಾಂಬುಘೃತಗೋಮೂತ್ರಪಯಸಾಮಗ್ನಿಸನ್ನಿಭಮ್ |
ಸುರಾಪೋನ್ಯತಮಂ ಪೀತ್ವಾ ಮರಣಾಚ್ಛುದ್ಧಿಮೃಚ್ಛತಿ ॥
ಸುರೆ, ಜಲ, ತುಪ್ಪ, ಗೋಮೂತ್ರ ಹಾಲು ಇವುಗಳಲ್ಲಿ ಯಾವುದಾದರೂ ಒಂದನ್ನು ಚೆನ್ನಾಗಿ ಕುದಿಸಿ ಪ್ರಾಶನ ಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೂ ಈಗಲೂ ಪರಲೋಕದಲ್ಲಿ ಪರಿಶುದ್ಧನಾಗುತ್ತಾನೆ.
ಮರುಪ್ರಪಾತಂ ಪ್ರಪತನ್ ಜ್ವಲನಂ ವಾ ಸಮಾವಿಶನ್ |
ಮಹಾಪ್ರಸ್ಥಾನಮಾತಿಷ್ಠನ್ ಮುಚ್ಯತೇ ಸರ್ವಕಿಲ್ಬಿಷೈಃ ॥17॥
ಮರುಭೂಮಿಯಲ್ಲಿರುವ ಪರ್ವತದ ತುದಿಯಿಂದ ಪ್ರಪಾತಕ್ಕೆ ತಲೆಕೆಳಗಾಗಿ ಬೀಳಬೇಕು. ಜ್ವಲಿಸುತ್ತಿರುವ ಅಗ್ನಿಯನ್ನು ಪ್ರವೇಶ ಮಾಡಬೇಕು. ಮರಣದೀಕ್ಷೆ- ಯನ್ನು ಕೈಗೊಂಡು ಹಿಮಾಲಯದ ಕಡೆ ಮಹಾಪ್ರಸ್ಥಾನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಎಲ್ಲ ಬಗೆಯ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಟಿಪ್ಪಣಿ - ಮರುಪ್ರಪಾತಮ್ ಇತ್ಯತ್ರ ಮರುಪ್ರಪಾತಂ ಮದುದೇಶಸ್ಥ- ಕೂಪಮ್ |
ಬೃಹಸ್ಪತಿಸವೇನೇಷ್ಟ್ವಾ ಸುರಾಪೋ ಬ್ರಾಹ್ಮಣಃ ಪುನಃ |
ಸಮಿತಿಂ ಬ್ರಾಹ್ಮಣೈರ್ಗಚ್ಛೇದಿತಿ ವೈ ಬ್ರಾಹ್ಮಣೀ ಶ್ರುತಿಃ ॥18॥
ಮದ್ಯಪಾನವನ್ನು ಮಾಡಿದ ಬ್ರಾಹ್ಮಣನು ಬೃಹಸ್ಪತಿಸವನ ಎಂಬ ಯಾಗವನ್ನು ಮಾಡಬೇಕು. ಆಗ ಆ ಬ್ರಾಹ್ಮಣನು ಬ್ರಾಹ್ಮಣರ ಸಭೆಗೆ ತೆರಳಲು ಅರ್ಹನಾಗುತ್ತಾನೆ.
ಭೂಮಿಪ್ರದಾನಂ ಕುರ್ಯಾದ್ ಯಃ ಸುರಾಂ ಪೀತ್ವಾ ವಿಮತ್ಸರಃ |
ಪುನರ್ನಚ ಪಿಬೇದ್ ರಾಜನ್ ಸಂಸ್ಕೃತಃ ಶುದ್ಧ್ಯೇತೇ ನರಃ ॥19॥
ಮದ್ಯಪಾನವನ್ನು ಮಾಡಿದ ವ್ಯಕ್ತಿಯು ಮಾತ್ಸರ್ಯರಹಿತನಾಗಿ, ಸತ್ಪಾತ್ರರಿಗೆ ಭೂದಾನವನ್ನು ಮಾಡಬೇಕು. ಮತ್ತೆಂದೂ ಸುರಾಪಾನವನ್ನು ಮಾಡಬಾರದು. ಹೀಗೆ ಸಂಸ್ಕೃತನಾಗಿ ಪರಿಶುದ್ಧಿಯನ್ನು ಹೊಂದಬೇಕು.
ಗುರುತಲ್ಪೀ ಶಿಲಾಂ ತಪ್ತಾಮಾಯಸೀಮಧಿಸಂವಿಶೇತ್ |
ಪಾಣಾವಾಧಾಯ ವಾ ಶೇಫಂ ಪ್ರವ್ರಜೇದೂರ್ಧ್ವದರ್ಶನಃ ॥20॥
ಯಾವ ಮನುಷ್ಯನು ಗುರುಪತ್ನಿಯ ಸಮಾಗಮವನ್ನು ಮಾಡಿರುತ್ತಾನೋ, ಅಂಥವನು ಕೆಂಪಗೆ ಕಾದಿರುವ ಲೋಹಮಯವಾದ ಶಿಲೆಯ ಮೇಲೆ ಮಲಗಿ- ಕೊಳ್ಳಬೇಕು. ಅಥವಾ ತನ್ನ ಜನನೇಂದ್ರಿಯವನ್ನು ತುಂಡರಿಸಿ ತಲೆಯೆತ್ತಿಕೊಂಡು ಆಕಾಶವನ್ನು ನೋಡುತ್ತಾ ಪ್ರಯಾಣ ಮಾಡಬೇಕು.
ಶರೀರಸ್ಯ ವಿಮೋಕ್ಷೇಣ ಮುಚ್ಯತೇ ಕರ್ಮಣೋಽಶುಭಾತ್ |
ಕರ್ಮಭ್ಯೋ ವಿಪ್ರಮುಚ್ಯಂತೇ ಯತ್ತಾಃ ಸಂವತ್ಸರಂ ಸ್ತ್ರಿಯಃ ॥21॥
ಹೀಗೆ ಅನೇಕ ಶಾರೀರಿಕವಾದ ಶಿಕ್ಷೆಯನ್ನು ನೀಡುತ್ತಾ ಶರೀರವನ್ನು ಪರಿತ್ಯಾಗ ಮಾಡಿದರೆ ಮಾತ್ರ ಆ ಗುರುತಲ್ಪಗನ ಮಹಾಪಾಪವು ಪರಿಹಾರವಾಗುತ್ತದೆ. ಯಾವ ಸ್ತ್ರೀಯು ಗುರುತಲ್ಪಗಮನಕ್ಕೆ ಭಾಗಿಯಾಗಿರುತ್ತಾಳೋ, ಅವಳು ಒಂದು ವರ್ಷಗಳ ಕಾಲ ಜಿತೇಂದ್ರಿಯಳಾಗಿದ್ದರೆ, ಆ ಪಾಪದಿಂದ ವಿನಿರ್ಮುಕ್ತಳಾಗುತ್ತಾಳೆ.
ಮಹಾವ್ರತಂ ಚರೇದ್ ಯಸ್ತು ದದ್ಯಾತ್ ಸರ್ವಸ್ವಮೇವ ತು |
ಗುರ್ವರ್ಥೇ ವಾ ಹತೋ ಯುದ್ಧೇ ಸ ಮುಚ್ಯೇತ್ ಕರ್ಮಣೋಽಶುಭಾತ್ ॥22॥
ಒಂದು ತಿಂಗಳ ಕಾಲ ನೀರನ್ನೂ ಸಹ ಕುಡಿಯದೇ ಉಪವಾಸದಲ್ಲಿ ಮಹಾ- ವ್ರತವನ್ನು ಆಚರಣೆ ಮಾಡಬೇಕು. ತನ್ನಲ್ಲಿರುವ ಸರ್ವಸ್ವವನ್ನು ಸದ್ಬ್ರಾಹ್ಮಣನಿಗೆ ದಾನ ಮಾಡಬೇಕು. ಮತ್ತು ಗುರುವಿಗೋಸ್ಕರ ಯುದ್ಧದಲ್ಲಿ ಪ್ರಾಣವನ್ನು ಪರಿತ್ಯಾಗ ಮಾಡಿ ತಾನು ಮಾಡಿದ ಅಶುಭಕರ್ಮದಿಂದ ವಿಮುಕ್ತನಾಗಬೇಕು.
ಅನೃತೇನೋಪಚರ್ತಾ ಚ ಪ್ರತಿರೋದ್ಧಾ ಗುರೋಸ್ತಥಾ |
ಉಪಹೃತ್ಯ ಪ್ರಿಯಂ ತಸ್ಮೈ ತಸ್ಮಾತ್ ಪಾಪಾತ್ ಪ್ರಮುಚ್ಯತೇ ॥23॥
ಯಾರು ಸುಳ್ಳನ್ನು ಹೇಳಿ, ಗುರುವಿನ ಉಪಸತ್ತಿಯನ್ನು ಮಾಡುತ್ತಾನೋ, ಗುರುವಿಗೆ ವಿರುದ್ಧವಾಗಿ ನಡೆದುಕೊಳ್ಳುತ್ತಾನೋ, ಅಂಥವನಿಗೂ ಪಾಪವು ಬರುತ್ತದೆ. ಅದರ ಪರಿಹಾರಕ್ಕಾಗಿ ಗುರುವಿಗೆ ಯಾವ ವಸ್ತುವನ್ನು ಕೊಡುವುದರಿಂದ ಸಂತೋಷವಾಗುತ್ತದೋ, ಆ ವಸ್ತುವನ್ನು ಕೊಟ್ಟು ಪ್ರಸನ್ನಗೊಳಿಸಬೇಕು.
ಅವಕೀರ್ಣಿನಿಮಿತ್ತಂ ತು ಬ್ರಹ್ಮಹತ್ಯಾವ್ರತಂ ಚರೇತ್ |
ಖರಚರ್ಮವಾಸಾಃ ಷಣ್ಮಾಸಂ ತಥಾ ಮುಚ್ಯೇತ ಕಿಲ್ಬಿಷಾತ್ ॥24॥
ಬ್ರಹ್ಮಚರ್ಯ ವ್ರತದಿಂದ ಯಾರು ಭ್ರಷ್ಟನಾಗಿರುತ್ತಾನೋ, ಅಂಥವನು ಮಹಾ- ಪಾಪಿಯಾಗುತ್ತಾನೆ. ಅಂಥವನು ತಾನು ಮಾಡಿದ ಪಾಪಪರಿಹಾರಕ್ಕೆ ಬ್ರಹ್ಮಹತ್ಯಾ ಪಾಪದ ನಿರಸನಕ್ಕೆ ಹೇಳಿರುವ ವ್ರತವನ್ನೇ ಮಾಡಬೇಕು. ಮತ್ತು ಕತ್ತೆಯ ಚರ್ಮವನ್ನು ಹೊದ್ದುಕೊಂಡಿರಬೇಕು. ಹೀಗೆ ಆರುತಿಂಗಳು ಕಾಲ ಮಾಡುವು- ದರಿಂದ ಬ್ರಹ್ಮಚರ್ಯವ್ರತಭಂಗದಿಂದ ಉಂಟಾದ ಪಾಪವು ಪರಿಹಾರವಾಗುತ್ತದೆ.
ಸ್ತೇಯಂ ತು ಯಸ್ಯಾಪಹರೇತ್ ತಸ್ಮೈ ದದ್ಯಾತ್ ಸಮಂ ವಸು |
ವಿವಿಧೇನಾಭ್ಯುಪಾಯೇನ ತೇನ ಮುಚ್ಯೇತ ಕಿಲ್ಬಿಷಾತ್ ॥25॥

ಯಾರು ಪರಸ್ವವನ್ನು ಅಪಹರಣ ಮಾಡಿರುತ್ತಾನೋ, ಅವನು ಅದಕ್ಕೆ ಸಮಾನವಾದ ವಸ್ತುವನ್ನು ತಂದು ಅವನಿಗೆ ನೀಡಬೇಕು. ಅನೇಕ ಬಗೆಯಿಂದ ಅವನನ್ನು ಸಂತೋಷಗೊಳಿಸಬೇಕು. ಹೀಗೆ ಮಾಡುವುದರಿಂದ ಪರಸ್ವಾಪಹರಣದ ದೋಷವು ಪರಿಹಾರವಾಗುತ್ತದೆ.
ಕೃಚ್ಛ್ರಾದ್ ದ್ವಾದಶರಾತ್ರೇಣ ಸಂಯತಾತ್ಮಾ ವ್ರತೇ ಸ್ಥಿತಃ |
ಪರಿವೇತ್ತಾ ಭವೇತ್ ಪೂತಃ ಪರಿವಿತ್ತಿಶ್ಚ ಭಾರತ ॥26॥
ಅಣ್ಣನು ಮದುವೆಯಾಗುವ ಮೊದಲೇ ತಮ್ಮನು ಮದುವೆಯಾದರೆ ಪರಿವೇತ್ತಾ ಎಂದು ಕರೆಸಿಕೊಳ್ಳುತ್ತಾನೆ. ಇಂಥವನು ಹನ್ನೆರಡು ರಾತ್ರಿಗಳ ಪರ್ಯಂತವಾಗಿ ಕೃಚ್ಛ್ರವ್ರತವನ್ನು ಆಚರಣೆ ಮಾಡುವುದರಿಂದ ಪರಿಶುದ್ಧನಾಗುತ್ತಾನೆ. ಅವನ ಹೆಂಡತಿಯಾದ ಪರಿವಿತ್ತಿಗೂ ಇದೇ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.
ಟಿಪ್ಪಣಿ - ಕೃಚ್ಛ್ರಾದ್ ದ್ವಾದಶರಾತ್ರೇಣ ಇತ್ಯತ್ರ ಲ್ಯಬ್ಲೋಪನಿಮಿತ್ತಾ ಪಂಚಮೀ | ಕೃಚ್ಛ್ರಾತ್ ಕೃಚ್ಛ್ರವ್ರತಂ ಸಂಪಾದ್ಯ ॥
ನಿವೇಶ್ಯಸ್ತು ಭವೇತ್ತೇನ ಸದಾ ತಾರಯಿತಾ ಪಿತೄನ್ |
ನತು ಸ್ತ್ರಿಯಾ ಭವೇತ್ ದೋಷೋ ನತು ಸಾ ತೇನ ಲಿಪ್ಯತೇ ॥27॥
ನಿರಂತರವಾಗಿ ಪಿತೃಗಳನ್ನು ಸಂತೋಷಪಡಿಸುವ ಅಣ್ಣನು ತಮ್ಮನ ವಿವಾಹವಾದ ಮೇಲೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ವಿವಾಹವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ಅಣ್ಣನ ಹೆಂಡತಿಗೆ ಯಾವುದೇ ದೋಷವು ತಟ್ಟುವುದಿಲ್ಲ. ಮತ್ತು ಯಾವುದೇ ಬಗೆಯ ಪಾಪಭಾಜನಳೂ ಆಗುವುದಿಲ್ಲ.
ಟಿಪ್ಪಣಿ - ನಿವೇಶ್ಯಸ್ತು ಭವೇತ್ ತೇನ ಸದಾ ಇತ್ಯತ್ರ ಪ್ರಾಯಶ್ಚಿತ್ತೇನ ನಿವೇಶ್ಯಃ ನಿವೇಶನಂ ಗೃಹಂ ಕೃತ್ವಾ ಸ್ಥಾತುಂ ಯೋಗ್ಯಃ |
ಭೋಜನಂ ಹ್ಯಂತರಾ ಶುದ್ಧಂ ಚಾತುರ್ಮಾಸ್ಯೇ ವಿಧೀಯತೇ |
ಸ್ತ್ರಿಯಸ್ತೇನ ವಿಶುದ್ಧ್ಯಂತಿ ಇತಿ ಧರ್ಮವಿದೋ ವಿದುಃ ॥28॥
ಚಾತುರ್ಮಾಸ್ಯಕಾಲದಲ್ಲಿ ಒಂದು ದಿನ ಊಟ ಮಾಡಬೇಕು. ಮತ್ತೊಂದು ದಿನ ಉಪವಾಸ ಮಾಡಬೇಕು. ಹೀಗೆ ಧಾರಣೆಪಾರಣೆ ವ್ರತವನ್ನು ಆಚರಣೆ ಮಾಡುವುದರಿಂದ ಸ್ತ್ರೀಯರು ಪರಿಶುದ್ಧರಾಗುತ್ತಾರೆ. ಈ ವ್ರತವನ್ನು ಧರ್ಮಜ್ಞರು ತಿಳಿಸಿದ್ದಾರೆ.
ಟಿಪ್ಪಣಿ - ಭೋಜನಂ ಹ್ಯಂತರಾ ಇತ್ಯತ್ರ ಭೋಜನಂ ಅಂತರಾ ವಿನಾ|
ಸ್ತ್ರಿಯಸಶತ್ವಶಂಕಿತಾಃ ಪಾಪೈರ್ನೋಪಗಮ್ಯಾ ಹಿ ಜಾನತಾ |
ರಜಸಾ ತಾ ವಿಶುದ್ಧ್ಯಂತೇ ಭಸ್ಮನಾ ಭಾಜನಂ ಯಥಾ ॥29॥
ಒಂದು ವೇಳೆ ಪತ್ನಿಯು ವ್ಯಭಿಚಾರಿಯಾಗಿದ್ದಾಳೆ ಎಂಬ ಶಂಕೆಯು ಉಂಟಾದರೆ, ಪತಿಯಾದವನು ಅವಳು ರಜಸ್ವಲೆಯಾಗುವ ತನಕ ಸಮಾಗಮವನ್ನು ಮಾಡ- ಬಾರದು. ಭಸ್ಮಲೇಪನವನ್ನು ಮಾಡುವುದರಿಂದ ಪಾತ್ರೆಯು ಹೇಗೆ ಶುದ್ಧವಾಗು- ತ್ತದೋ, ಅದರಂತೆ ಸ್ತ್ರೀಯರು ರಜೋದರ್ಶನದಿಂದ ಪರಿಶುದ್ಧರಾಗುತ್ತಾರೆ.
ಟಿಪ್ಪಣಿ - ಪಾಪೇನೋಪಗಮ್ಯ ವಿಜಾನತೀಃ ಇತ್ಯತ್ರ ಪಾಪೇನ ಪಾಪಿಷ್ಠೇನ ಜಾರಾದಿನಾ ಉಪಗಮ್ಯ ಕಾಪಟ್ಯೇನ ಬಲೇನ ವಾ ಉಪಾಗಮ್ಯ |
ಸ್ತ್ರೀಯರು ಪರಪುರುಷರನ್ನು ಸಂಪರ್ಕ ಮಾಡಬಹುದು. ರಜೋದರ್ಶನದ ನಂತರ ಅವರು ಶುದ್ಧರಾಗುತ್ತಾರೆ ಎಂಬುದು ಇದರ ಅಭಿಪ್ರಾಯವಲ್ಲ. ಪುರುಷನು ಹೇಗೆ ಪರಸ್ತ್ರೀ ಸಂಪರ್ಕವನ್ನು ಮಾಡಿದರೆ ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದಷ್ಟೇ ಪರಿಶುದ್ಧನಾಗುತ್ತಾನೋ, ಸ್ತ್ರೀಯೂ ಕೂಡ ಅಷ್ಟೇ ಕಠಿಣವ್ರತದ ಅನುಸರಣೆಯಿಂದಷ್ಟೇ ಪರಿಶುದ್ಧಳಾಗುತ್ತಾಳೆ. ಒಂದು ವೇಳೆ ಸ್ತ್ರೀ ಮತ್ತೊಬ್ಬ ಪುರುಷನ ಸಂಪರ್ಕವನ್ನು ಮಾಡಿದ್ದಾಳೆಯೇ? ಇಲ್ಲವೇ? ಎಂಬ ಸಂಶಯವು ಬಂದಾಗ ರಜಸ್ವಲೆಯಾದ ನಂತರ ತನ್ನ ಸಂಶಯವನ್ನು ಪರಿಹಾರ ಮಾಡಿ- ಕೊಳ್ಳಬೇಕು. ರಜಸ್ವಲೆಯಾಗುವುದರಿಂದ ಸ್ತ್ರೀಯು ಪರಿಶುದ್ಧಳಾಗಿದ್ದಾಳೆ ಎಂದು ಭಾವಿಸಬೇಕು ಎಂಬುದು ಈ ಶ್ಲೋಕದ ಭಾವವಾಗಿದೆ. ರಜಸ್ವಲೆಯಾಗದಿದ್ದರೆ ಅವಳು ಪತಿತಳಾದ್ದರಿಂದ ಪಾಪಭಾಜನಳಾಗಿದ್ದಾಳೆಂದು ತಿಳಿಯಬೇಕು.
ಪಾದಜೋಚ್ಛಿಷ್ಟಕಾಂಸ್ಯಂ ಚ ಗವಾಘ್ರಾತಮಥಾಪಿ ವಾ |
ಗಂಡೂಷೋಚ್ಛಿಷ್ಟಮಪಿ ವಾ ವಿಶುದ್ಧ್ಯೇದ್ ದಶಭಿಸ್ತು ತತ್ ॥30॥
ಕಂಚಿನ ಪಾತ್ರೆಗೆ ಅಂತ್ಯಜನ ಎಂಜಲು ಸಂಪರ್ಕವಾದರೆ ಹಸು ಮೂಸಿದರೆ ಕಂಚಿನ ಪಾತ್ರೆಯಲ್ಲಿ ಬಾಯಿಮುಕ್ಕಳಿಸಿದರೆ ಹತ್ತು ಬಗೆಯಲ್ಲಿ ಅದನ್ನು ಪರಿಶುದ್ಧ ಮಾಡಬೇಕು.
ಟಿಪ್ಪಣಿ - ಹಸುವಿನ ಬಾಲದಲ್ಲಿ ದೇವತೆಗಳ ಸಾನ್ನಿಧ್ಯವಿರುತ್ತದೆ. ಆದರೆ ಅದು ತಿಂದುಳಿದದ್ದು ಎಂಜಲು ಎಂದೇ ಭಾವಿಸಬೇಕು. ಹತ್ತು ಬಗೆಯಲ್ಲಿ ಕಂಚಿನ ಪಾತ್ರೆಯ ಶುದ್ಧಿಯನ್ನು ತಿಳಿಸುತ್ತಾರೆ. ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ, ಮಣ್ಣು, ನೀರು, ಭಸ್ಮ, ಹುಳಿ, ಅಗ್ನಿ ಈ ಹತ್ತು ಪದಾರ್ಥಗಳು ಎಂದು.
ಚತುಷ್ಪಾತ್ ಸಕಲೋ ಧರ್ಮೋ ಬ್ರಾಹ್ಮಣಾನಾಂ ವಿಧೀಯತೇ |
ಪಾದಾವಕೃಷ್ಟೋ ರಾಜನ್ಯೇ ತಥಾ ಧರ್ಮೋ ವಿಧೀಯತೇ ॥31॥
ತಥೈವ ವೈಶ್ಯೇ ಚ ಶೂದ್ರೇ ಚ ಪಾದಃ ಪಾದೋ ವಿಧೀಯತೇ |
ಬ್ರಾಹ್ಮಣನು ನಾಕುಪಾದಗಳ ಧರ್ಮವನ್ನು ಆಚರಿಸಬೇಕು. ಕ್ಷತ್ರಿಯನು ಮೂರು ಪಾದಗಳ ಧರ್ಮವನ್ನು ಆಚರಿಸಬೇಕು. ವೈಶ್ಯನು ಎರಡು ಪಾದಗಳ ಧರ್ಮವನ್ನು ಆಚರಿಸಬೇಕು. ಶೂದ್ರನು ಒಂದು ಪಾದದ ಧರ್ಮವನ್ನು ಆಚರಿಸಬೇಕು.
ಟಿಪ್ಪಣಿ - ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಷಟ್ಕರ್ಮಗಳನ್ನು ಬ್ರಾಹ್ಮಣನು ಆಚರಿಸಬೇಕು. ಅಧ್ಯಯನ, ದಾನ, ಯಜನ ಎಂಬ ಮೂರು ಕರ್ಮಗಳನ್ನು ಕ್ಷತ್ರಿಯರು ಹಾಗೂ ವೈಶ್ಯರು ಆಚರಿಸಬೇಕು. ಶೂದ್ರನು ಉತ್ತಮರ ಸೇವೆ ಎಂಬ ಒಂದು ಕರ್ಮವನ್ನಷ್ಟೇ ಆಚರಿಸಬೇಕು.
ವಿದ್ಯಾದೇವಂ ವಿಧೇನೈಷಾಂ ಗುರುಲಾಘವನಿಶ್ಚಯಮ್ ॥32॥

ತಿರ್ಯಗ್ಯೋನಿವಧಂ ಕೃತ್ವಾ ದ್ರುಮಾಶ್ಛಿತ್ತ್ವೇತರಾನ್ ಬಹೂನ್ |
ತ್ರಿರಾತ್ರಂ ವಾಯುಭಕ್ಷಃ ಸ್ಯಾತ್ ಕರ್ಮ ಚ ಪ್ರಥಯೇನ್ನರಃ ॥33॥
ಹೀಗೆ ಪಾಪಕರ್ಮಗಳ ಅಲ್ಪತ್ವ ಹಾಗೂ ಮಹತ್ವಗಳನ್ನು ನಿಶ್ಚಯಿಸಿ, ಪ್ರಾಯಶ್ಚಿತ್ತವನ್ನು ಎಷ್ಟು ಆಚರಿಸಬೇಕೆಂಬುದನ್ನು ಮಹಾತ್ಮರ ಮೂಲಕ ದೃಢ- ಪಡಿಸಿಕೊಳ್ಳಬೇಕು. ಪಾಪವು ಗುರುತರವಾಗಿದ್ದರೆ ಒಂದು ವರ್ಷ ಸಂಪೂಣವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅಲ್ಪವಾಗಿದ್ದರೆ, ಮೂರು ದಿವಸಗಳ ಅನುಷ್ಠಾನದಿಂದಲೇ ಪರಿಹಾರವಾಗುತ್ತದೆ. ಪಶುಪಕ್ಷಿಗಳನ್ನು ಸಂಹರಿಸಿದಾಗ ಬರುವ ಪಾಪದ ಪ್ರಾಯಶ್ಚಿತ್ತಕ್ಕೆ ಮೂರು ರಾತ್ರಿಗಳ ತನಕ ವಾಯುಭಕ್ಷಕನಾಗಿ ತಾನು ಮಾಡಿದ ಪಾಪವನ್ನು ಎಲ್ಲರ ಬಳಿ ಹೇಳಿಕೊಳ್ಳುತ್ತಾ ಇರಬೇಕು. ಆಗ ಸಂಹಾರ ಮಾಡಿದ ಪಾಪವು ವೃಕ್ಷಗಳನ್ನು ಕತ್ತರಿಸಿದ ಪಾಪವು ಪರಿಹಾರವಾಗುತ್ತದೆ.
ಅಗಮ್ಯಾಗಮನೇ ರಾಜನ್ ಪ್ರಾಯಶ್ಚಿತ್ತಂ ವಿಧೀಯತೇ |
ಆರ್ದ್ರವಸ್ತ್ರೇಣ ಷಣ್ಮಾಸಂ ವಿಹಾರ್ಯಂ ಭಸ್ಮಶಾಯಿನಾ ॥34॥
ಧರ್ಮರಾಜನೇ! ಪರಸ್ತ್ರೀಸಂಗವನ್ನು ಮಾಡಿದರೆ, ಹೀಗೆ ಪ್ರಾಯಶ್ಚಿತ್ತವು ವಿಹಿತವಾಗಿದೆ -ಒದ್ದೆ ಬಟ್ಟೆಯನ್ನು ಉಟ್ಟುಕೊಂಡು, ಆರು ತಿಂಗಳ ಕಾಲ ಸಂಚಾರ ಮಾಡುತ್ತಲೇ ಇರಬೇಕು. ರಾತ್ರಿಯ ಹೊತ್ತು, ಬೂದಿಯ ಮೇಲೆ ಮಲಗಿಕೊಳ್ಳ- ಬೇಕು.
ಏಷ ಏವ ತು ಸರ್ವೇಷಾಮಕಾರ್ಯಾಣಾಂ ವಿಧಿರ್ಭವೇತ್ |
ಬ್ರಾಹ್ಮಣೋಕ್ತೇನ ವಿಧಿನಾ ದೃಷ್ಟಾಂತಾಗಮಹೇತುಭಿಃ ॥35॥
ಇದೇ ಪ್ರಾಯಶ್ಚಿತ್ತವು ಪ್ರತಿಯೊಬ್ಬರಿಗೂ ಹೇಳಲ್ಪಟ್ಟಿದೆ. ಮಾಡಬಾರದ ಕೆಲಸಗಳನ್ನು ಎಸಗಿದರೆ, ಅದರಿಂದ ಉಂಟಾಗುವ ಎಲ್ಲಾ ಬಗೆಯ ಪಾಪಗಳಿಗೆ ಇದೇ ಪ್ರಾಯಶ್ಚಿತ್ತ ವಿಧಿಸಲ್ಪಟ್ಟಿದೆ. ವೇದಭಾಗವೆನಿಸಿದ ಬ್ರಾಹ್ಮಣದಲ್ಲಿ ಅನೇಕ ದೃಷ್ಟಾಂತ- ಗಳಿಂದ ಕಾರಣಗಳನ್ನು ನೀಡುವ ಮೂಲಕ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.
ಸಾವಿತ್ರೀಮಪ್ಯಧೀಯಾನಃ ಶುಚೌ ದೇಶೇ ಮಿತಾಶನಃ |
ಅಹಿಂಸೋಽಮಂದಕೋಽಜಲ್ಪನ್ ಮುಚ್ಯತೇ ಸರ್ವಕಿಲ್ಬಿಷೈಃ ॥36॥
ಯಾರು ಪವಿತ್ರವಾದ ಸ್ಥಳದಲ್ಲಿ ಕುಳಿತು, ಅಲ್ಪವಾದ ಆಹಾರವನ್ನು ತೆಗೆದು- ಕೊಳ್ಳುತ್ತಾ, ಹರಿಧ್ಯಾನರತನಾಗುತ್ತಾನೋ, ಅಹಿಂಸಾವ್ರತವನ್ನು ಕೈಗೊಳ್ಳುತ್ತಾನೋ, ರಾಗದ್ವೇಷ-ಮಾನ-ಅಪಮಾನ ಮೊದಲಾದವುಗಳನ್ನು ಬಿಡುತ್ತಾನೋ, ಮೌನಿ- ಯಾಗಿರುತ್ತಾನೋ, ಗಾಯತ್ರೀಮಂತ್ರವನ್ನು ನಿರಂತರ ಜಪಿಸುತ್ತಾನೋ, ಅಂಥವನು ಎಲ್ಲಾ ಬಗೆಯ ಪಾಪಗಳಿಂದ ವಿಮುಕ್ತನಾಗುತ್ತಾನೆ.
ಅಹಃಸು ಸತತಂ ತಿಷ್ಠೇದಭ್ಯಾಕಾಶಂ ನಿಶಿ ಸ್ವಪೇತ್ |
ತ್ರಿರಹ್ನಸ್ತ್ರಿರ್ನಿಶಾಯಾಶ್ಚ ಸವಾಸಾ ಜಲಮಾವಿಶೇತ್ ॥37॥
ತಿಳಿಯದೇ ಮಾಡಿದ ಪಾಪಗಳ ಪ್ರಾಯಶ್ಚಿತ್ತಕ್ಕೆ ಈ ವ್ರತವನ್ನು ಆಚರಿಸಬೇಕು - ಹಗಲಿನಲ್ಲಿ ನಿರಂತರ ನಿಂತುಕೊಂಡಿರಬೇಕು. ಕುಳಿತುಕೊಳ್ಳಬಾರದು. ರಾತ್ರಿಯ ಕಾಲದಲ್ಲಿ ಆಕಾಶವನ್ನೇ ಹೊದಿಕೆಯನ್ನಾಗಿ ಮಾಡಿಕೊಂಡು ಮಲಗಿಕೊಳ್ಳಬೇಕು. ಮೂರು ಹಗಲು, ಮೂರು ರಾತ್ರಿ ಉಟ್ಟಬಟ್ಟೆಯಲ್ಲಿಯೇ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು. ಮತ್ತೊಬ್ಬರ ಜೊತೆ ಸಂಭಾಷಣೆಯನ್ನು ಮಾಡಬಾರದು.
ಸ್ತ್ರೀಶೂದ್ರಪತಿತಾಶ್ಚಾಪಿ ನಾಭಿಭಾಷೇದ್ ವ್ರತಾನ್ವಿತಃ |
ಪಾಪಾನ್ಯಜ್ಞಾನತಃ ಕೃತ್ವಾ ಮುಚ್ಯೇದೇವಂವ್ರತೋ ದ್ವಿಜಃ ॥38॥
ವ್ರತಾನುಷ್ಠಾನದಲ್ಲಿರುವನು ಸ್ತ್ರೀಯರ ಜೊತೆ ಶೂದ್ರರ ಜೊತೆ ಪತಿತರ ಜೊತೆ ಮಾತನಾಡಬಾರದು. ಆಗ ಅಜ್ಞಾನದಿಂದ ಮಾಡಿದ ದೋಷಗಳು ಪರಿಹಾರ- ವಾಗುತ್ತವೆ.
ಶುಭಾಶುಭಫಲಂ ಪ್ರೇತ್ಯ ಲಭತೇ ಭೂತಸಾಕ್ಷಿಕಃ |
ಅತಿರಿಚ್ಯೇತ ಯೋ ಯತ್ರ ತತ್ಕರ್ತಾ ಲಭತೇ ಫಲಮ್ ॥39॥
ಯಾವ ಮನುಷ್ಯನು ಶುಭಕರ್ಮಗಳನ್ನು ಹಾಗೂ ಪುಣ್ಯಕರ್ಮಗಳನ್ನು ಮಾಡು -ತ್ತಾನೋ, ಅವನು ಮಾಡುವ ಎಲ್ಲ ಕರ್ಮಗಳಿಗೆ ಪಂಚಭೂತಗಳೇ ಸಾಕ್ಷಿ- ಯಾಗಿರುತ್ತವೆ. ಮರಣವನ್ನು ಹೊಂದಿದ ಮೇಲೆ ತಾನು ಮಾಡಿದ ಕರ್ಮಗಳ ಫಲವನ್ನು ಪಡೆದುಕೊಳ್ಳುತ್ತಾನೆ.
ಟಿಪ್ಪಣಿ - ಅತಿರಿಚ್ಯೇತ ಯೋ ಯತ್ರ ಇತ್ಯತ್ರ ಅತಿರಿಚ್ಯೇತ ಪುಣ್ಯೇನ ಅತಿ- ರಿಚ್ಯೇತ |
ತಸ್ಮಾದ್ ದಾನೇನ ತಪಸಾ ಕರ್ಮಣಾ ಚ ಶುಭಂ ಫಲಮ್ |
ವರ್ಧಯೇದಶುಭಂ ಕೃತ್ವಾ ಯಥಾ ಸ್ಯಾದತಿರೇಕವಾನ್ ॥40॥
ಆದ್ದರಿಂದ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದರೆ ದಾನವನ್ನು ಮಾಡ- ಬೇಕು. ತಪಸ್ಸನ್ನು ಆಚರಿಸಬೇಕು. ಶುಭಕರ್ಮಗಳನ್ನು ನಿರಂತರ ಅಭಿವೃದ್ಧಿಪಡಿಸಿ- ಕೊಳ್ಳಬೇಕು. ಆಗ ಶುಭವಾದ ಫಲವನ್ನೇ ಪಡೆದುಕೊಳ್ಳುತ್ತಾನೆ. ಇದಕ್ಕೆ ವಿಪರೀತ- ವಾಗಿ ಅಶುಭಕರ್ಮಗಳನ್ನು ಮಾಡುತ್ತಿದ್ದರೆ ಕೆಟ್ಟಫಲಗಳನ್ನೇ ಅನುಭವಿಸುತ್ತಾನೆ.
ಕುರ್ಯಾಚ್ಛುಭಾನಿ ಕರ್ಮಾಣಿ ನಿಮಿತ್ತೇ ಪಾಪಕರ್ಮಣಾಮ್ |
ದದ್ಯಾನ್ನಿತ್ಯಂ ಚ ವಿತ್ತಾನಿ ತಥಾ ಮುಚ್ಯೇತ ಕಿಲ್ಬಿಷಾತ್ ॥41॥
ನಿರಂತರ ಶುಭಕರ್ಮಗಳನ್ನೇ ಮಾಡಬೇಕು. ಅನಿವಾರ್ಯವಾದಾಗ ಪಾಪ- ಕರ್ಮಗಳನ್ನು ಮಾಡುವ ಪ್ರಸಂಗವು ಬಂದರೆ, ಅದರ ಪ್ರಾಯಶ್ಚಿತ್ತಕ್ಕೆ ತನ್ನಲ್ಲಿರುವ ಸಂಪತ್ತನ್ನು ಧನವನ್ನು ದಾನ ಮಾಡಬೇಕು. ಆಗ ತಾನು ಮಾಡಿದ ಅಲ್ಪಪಾಪ- ದಿಂದಲೂ ವಿಮುಕ್ತನಾಗುತ್ತಾನೆ.
ಅನುರೂಪಂ ಹಿ ಪಾಪಸ್ಯ ಪ್ರಾಯಶ್ಚಿತ್ತಮುದಾಹೃತಮ್ |
ಮಹಾಪಾತಕವರ್ಜಂ ತು ಪ್ರಾಯಶ್ಚಿತ್ತಂ ವಿಧೀಯತೇ ॥42॥

ಆಯಾ ಪಾಪಕ್ಕೆ ಅನುಗುರೂಪವಾಗಿ ಪ್ರಾಯಶ್ಚಿತ್ತವನ್ನು ಶಾಸ್ತ್ರಗಳಲ್ಲಿ ಉದಾ- ಹರಿಸಲಾಗಿದೆ. ಮಹಾಪಾತಕಕ್ಕೆ ಬಿಟ್ಟು, ಉಳಿದೆಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವನ್ನು ವಿಧಿಸಲಾಗಿದೆ.
ಭಕ್ಷ್ಯಾಭಕ್ಷ್ಯೇಷು ಸರ್ವೇಷು ವಾಚ್ಯಾವಾಚ್ಯೇ ತಥೈವ ಚ |
ಅಜ್ಞಾನಜ್ಞಾನಯೋ ರಾಜನ್ ವಿಹಿತಾನ್ಯವಿಜಾನತಾ ॥43॥
ಯಾವುದನ್ನು ತಿನ್ನಬೇಕು, ಯಾವುದನ್ನು ತಿನ್ನಬಾರದು. ಹೇಗೆ ಮಾತನಾಡಬೇಕು, ಹೇಗೆ ಮಾತನಾಡಬಾರದು,ತಿಳಿಯದೇ ಮಾಡಿದ ಪಾಪಗಳಿಗೇನು ಪರಿಹಾರ? ತಿಳಿದು ಮಾಡಿದ ಪಾಪಗಳಿಗೆ ಏನು ಪರಿಹಾರ? ಧರ್ಮರಾಜನೇ ! ಇದೆಲ್ಲವನ್ನು ನಿನಗೀಗ ನಾನು ತಿಳಿಸಿರುವೆನು.
ಟಿಪ್ಪಣಿ - ವಿಹಿತಾನ್ಯವಿಜಾನತಾ ಇತ್ಯತ್ರ ಅವಿಜಾನತಾ ವಿಹಿತಾನಿ ಪಾಪಾನಿ ಲಘೂನಿ |
ಜಾನತಾ ತು ಕೃತಂ ಪಾಪಂ ಗುರು ಸರ್ವಂ ಭವತ್ಯುತ |
ಅಜ್ಞಾನಾತ್ ಸ್ಖಲಿತೇ ದೋಷೇ ಪ್ರಾಯಶ್ಚಿತ್ತಂ ವಿಧಿಯತೇ ॥44॥
ಪಾಪಕರ್ಮವು ಒಂದೇ ಆಗಿದ್ದರೂ ಅದನ್ನು ತಿಳಿದು ಮಾಡಿದರೆ ದೊಡ್ಡಮಟ್ಟ -ದಲ್ಲಿ ಪಾಪವು ಬರುತ್ತದೆ. ತಿಳಿಯದೇ ಮಾಡಿದರೆ ಅದೇ ಕರ್ಮವು ಸ್ವಲ್ಪವೇ ಪಾಪವನ್ನು ನೀಡುತ್ತದೆ. ಇದನ್ನು ಹೇಗೆ ಅವನಿಂದ ಪಾಪಕಾರ್ಯವು ನಡೆದಿದೆ ಎಂಬುದನ್ನು ವಿಚಾರ ಮಾಡಿ, ಪ್ರಾಯಶ್ಚಿತ್ತವನ್ನು ಶಾಸ್ತ್ರಗಳಲ್ಲಿ ವಿಧಾನ ಮಾಡ- ಲಾಗಿದೆ.
ಶಕ್ಯತೇ ವಿಧಿನಾ ಪಾಪಂ ಯಥೋಕ್ತೇನ ವ್ಯಪೋಹಿತುಮ್ |
ಆಸ್ತಿಕೇ ಶ್ರದ್ದಧಾನೇ ತು ವಿಧಿರೇಷ ವಿಧೀಯತೇ ॥45॥
ಧರ್ಮಶಾಸ್ತ್ರಗಳಲ್ಲಿ ವಿಧಾನ ಮಾಡಲ್ಪಟ್ಟ ಪ್ರಾಯಶ್ಚಿತ್ತಗಳ ಆಚರಣೆಯಿಂದ ಪಾಪಗಳನ್ನು ಖಂಡಿತವಾಗಲೂ ಪರಿಹಾರ ಮಾಡಿಕೊಳ್ಳಲು ಸಾಧ್ಯವಿದೆ. ಭಗವಂತ- ನನ್ನು ನಂಬಬೇಕು. ನಾನು ಪರಿಶುದ್ಧನಾಗಬೇಕೆಂಬ ದೀಕ್ಷೆಯಿರಬೇಕು. ಧರ್ಮದಲ್ಲಿ ಶ್ರದ್ಧೆಯಿರಬೇಕು. ಅಂಥವನಿಗಷ್ಟೇ ಶಾಸ್ತ್ರವು ಪ್ರಾಯಶ್ಚಿತ್ತವನ್ನು ವಿಧಾನ ಮಾಡುತ್ತದೆ.
ನಾಸ್ತಿಕಾಶ್ರದ್ದಧಾನೇಷು ಪುರುಷೇಷು ಕದಾಚನ |
ದಂಭದೋಷಪ್ರಧಾನೇಷು ವಿಧಿರೇಷ ನ ದೃಶ್ಯತೇ ॥46॥
ನಾಸ್ತಿಕರಾದವರಿಗೆ, ಶ್ರದ್ಧೆಯಿಲ್ಲದವರಿಗೆ, ಅಹಂಕಾರವುಳ್ಳವರಿಗೆ, ಕೆಟ್ಟಕೆಲಸದಲ್ಲಿ ನಿರತರಾದವರಿಗೆ ಈ ಪ್ರಾಯಶ್ಚಿತ್ತವನ್ನು ಯಾವುದೇ ಶಾಸ್ತ್ರಗಳು ಸರ್ವಥಾ ಹೇಳು- ವುದಿಲ್ಲ.
ಶಿಷ್ಟಾಚಾರಶ್ಚ ಶಿಷ್ಟಶ್ಚ ಧರ್ಮೋ ಧರ್ಮಭೃತಾಂ ವರ |
ಸೇವಿತವ್ಯೋ ನರವ್ಯಾಘ್ರ ಪ್ರೇತ್ಯ ಚೇಹ ಸುಖಾರ್ಥಿನಾ ॥47॥
ಶ್ರೇಷ್ಠನಾದ ಪುರುಷಶ್ರೇಷ್ಠನೇ! ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಯಾರು ಸುಖವನ್ನು ಇಚ್ಛಿಸುತ್ತಾನೋ, ಅಂಥವನು ಶಿಷ್ಟಾಚಾರಸಂಪ್ರದಾಯವನ್ನು ಅನುಸರಿಸಲೇ ಬೇಕು. ವೇದಗಳಲ್ಲಿ ಹೇಳಲ್ಪಟ್ಟ ಧರ್ಮವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡಬೇಕು.

ಸ ರಾಜನ್ ಮೋಕ್ಷ್ಯಸೇ ಪಾಪಾತ್ ತೇನ ಪೂರ್ವೇಣ ಹೇತುನಾ |
ತ್ರಾಣಾರ್ಥಂ ವಾ ವಧೇನ್ನೈಷಾಮಥ ವಾ ನೃಪಕರ್ಮಣಾ ॥48॥
ಧರ್ಮರಾಜನೇ ! ನೀನು ಶಿಷ್ಟಾಚಾರವನ್ನು ಅನುಸರಿಸುತ್ತಿರುವಿ. ಧರ್ಮ- ಮಾರ್ಗದಲ್ಲಿರುವಿ. ನೀನು ಮಾಡಿದ ಅಲ್ಪವಾದ ಪಾಪದಿಂದ ಖಂಡಿತವಾಗಿಯೂ ವಿಮುಕ್ತನಾಗುವಿ. ಪ್ರಾಣರಕ್ಷಣೆಗೋಸ್ಕರ ರಾಜ್ಯವನ್ನು ಪರಿತ್ಯಾಗ ಮಾಡಬೇಕೆಂಬ ನಿಶ್ಚಯವನ್ನು ಬಿಟ್ಟುಬಿಡು. ಪ್ರಾಯಶ್ಚಿತ್ತವನ್ನು ಮಾಡಿಕೋ. ದಾನ ಮಾಡುವುದರಿಂದ ಧರ್ಮದಿಂದ ಪರಿಪಾಲನೆ ಮಾಡುವಿಕೆಯಿಂದ ಕ್ಷತ್ರಿಯಧರ್ಮದ ಅನುಷ್ಠಾನ- ದಿಂದಲೂ ನೀನು ಪಾಪಗಳಿಂದಲೂ ವಿಮುಕ್ತನಾಗುವಿ.
ಅಥವಾ ತೇ ಘೃಣಾ ಕಾಚಿತ್ ಪ್ರಾಯಶ್ಚಿತ್ತಂ ಚರಿಷ್ಯಸಿ |
ಮಾ ತ್ವೇವಾನಾರ್ಯಜುಷ್ಟೇನ ಕರ್ಮಣಾ ನಿಧನಂ ಗಮಃ ॥49॥
ಒಂದುವೇಳೆ ಯುದ್ಧವೆಂಬ ಘಟನೆಯಿಂದ ನಿನ್ನ ಮನಸ್ಸಿನಲ್ಲಿ ಅನುಕಂಪವು ಉಂಟಾಗಿದ್ದರೆ, ಅಕಾರ್ಯವನ್ನು ಎಸಗಿಬಿಟ್ಟೆ, ಪಶ್ಚಾತ್ತಾಪವುಂಟಾಗಿದ್ದರೆ, ಪ್ರಾಯಶ್ಚಿತ್ತವನ್ನು ಆಚರಿಸು. ಇದನ್ನು ಬಿಟ್ಟು, ಸಂಪ್ರದಾಯವನ್ನು ಅನುಸರಿಸದ ಅನಾರ್ಯರು ತೆರಳುವ ಮಾರ್ಗದಲ್ಲಿ ತೆರಳಬೇಡ. ದೈನ್ಯಾವಸ್ಥೆಯನ್ನು ಹೊಂದ- ಬೇಡ. ಆತ್ಮವಿನಾಶವನ್ನು ಮಾಡಿಕೊಳ್ಳಬೇಡ.
ಏವಮುಕ್ತೋ ಭಗವತಾ ಧರ್ಮರಾಜೋ ಯುಧಿಷ್ಠಿರಃ |
ಚಿಂತಯಿತ್ವಾ ಮುಹೂರ್ತಂ ತು ಪ್ರತ್ಯುವಾಚ ತಪೋಧನಮ್ ॥50॥
ವೈಶಂಪಾಯನರು ಜನಮೇಜಯನೇ! ಶ್ರೀವೇದವ್ಯಾಸದೇವರು ಹೀಗೆ ಯುಧಿ-ಷ್ಠಿರನಿಗೆ ಅನೇಕ ಬಗೆಯಲ್ಲಿ ಸಮಾಧಾನವನ್ನು ಮಾಡಿದರು. ಆ ಯುಧಿಷ್ಠಿರನು ಒಂದು ಮುಹೂರ್ತಗಳ ಕಾಲ ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಾ, ತಪೋ- ಧನರಾದ ಶ್ರೀವೇದವ್ಯಾಸದೇವರನ್ನು ಪುನಃ ಹೀಗೆ ವಿನಮ್ರನಾಗಿ ಪ್ರಶ್ನಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪ್ರಾಯಶ್ಚಿತ್ತೀಯೇ ಷಟ್‌ತ್ರಿಂಶೋಽಧ್ಯಾಯಃ ॥36॥
ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿಯಿತು.
*****

॥ಶ್ರೀಮಧ್ವೇಶಾರ್ಪಣಮಸ್ತು॥
ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ

ಶ್ರೀಮನ್ಮಹಾಭಾರತೇ ಶಾಂತಿಪರ್ವಣಿ
ರಾಜಧರ್ಮಪರ್ವಣಿ
37. ಮೂವತ್ತೇಳನೆಯ ಅಧ್ಯಾಯ
ವ್ಯಾಸರಿಂದ ಯುಧಿಷ್ಠಿರನನ್ನು ಕುರಿತು ಭಕ್ಷ್ಯಾಭಕ್ಷ್ಯ,
ಪಾತ್ರಾಪಾತ್ರ ಮೊದಲಾದವುಗಳ ವಿವೇಚನೆ.
ಯುಧಿಷ್ಠಿರಃ
ಕಿಂ ಭಕ್ಷ್ಯಂ ಕಿಮಭಕ್ಷ್ಯಂ ವಾ ಕಿಂ ಚ ದೇಯಂ ಪ್ರಶಸ್ಯತೇ |
ಕಿಂಚ ಪಾತ್ರಮಪಾತ್ರಂ ವಾ ತನ್ಮೇ ಬ್ರೂಹಿ ತಪೋಧನ ॥1॥
ಯುಧಿಷ್ಠಿರನು ಹೇಳುತ್ತಾನೆ ಎಲೈ ತಪೋಧನರೇ! ಯಾವುದು ಭಕ್ಷ್ಯಮತ್ತು ಯಾವುದು ಅಭಕ್ಷ್ಯವಾಗುತ್ತದೆ. ಯಾವ ವಸ್ತುವನ್ನು ಕೊಟ್ಟರೆ ಪ್ರಶಸ್ತವಾದ ದಾನ- ವಾಗುತ್ತದೆ? ಮತ್ತು ದಾನವನ್ನು ಸ್ವೀಕರಿಸಲು ಪಾತ್ರರು ಮತ್ತು ಅಪಾತ್ರರು ಯಾರು? ಎಂಬುದನ್ನು ನನಗೆ ಹೇಳಿ.
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಿದ್ಧಾನಾಂ ಚೈವ ಸಂವಾದಂ ಮನೋಶ್ಚೈವ ಪ್ರಜಾಪತೇಃ ॥2॥
ವ್ಯಾಸರು ಹೇಳುತ್ತಾರೆ ಈ ವಿಷಯದಲ್ಲಿಯೂ ಸಹ ಪ್ರಜಾಪತಿಯಾದ ಮನುವಿಗೂ ಮತ್ತು ಸಿದ್ಧಪುರುಷರಿಗೂ ನಡೆದ ಪುರಾತನವಾದ ಈ ಸಂವಾದವನ್ನು ಹೇಳುತ್ತಾರೆ.
ಸಿದ್ಧಾಸ್ತಪೋವ್ರತಪರಾಃ ಸಮಾಗಮ್ಯ ಪುರಾ ವಿಭುಮ್ |
ಧರ್ಮಂ ಪಪ್ರಚ್ಛುರಾಸೀನಮಾದಿಕಾಲೇ ಪ್ರಜಾಪತಿಮ್ ॥3॥
ಹಿಂದೆ ಆದಿಕಾಲದಲ್ಲಿ ತಪೋವ್ರತನಿಷ್ಠರಾದ ಸಿದ್ಧರು ಪ್ರಭುವಾದ ಪ್ರಜಾಪತಿ- ಯಾದ ಮನುವಿನ ಸಮೀಪಕ್ಕೆ ಬಂದು, ಕುಳಿತಿದ್ದ ಅವನನ್ನು ಕುರಿತು ಧರ್ಮದ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದರು.
ಕಥಮನ್ನಂ ಕಥಂ ದಾನಂ ಕಥಮಧ್ಯಯನಂ ತಪಃ |
ಕಾರ್ಯಾಕಾರ್ಯಂ ಚ ನಃ ಸರ್ವಂ ಶಂಸ ವೈ ತ್ವಂ ಪ್ರಜಾಪತೇ ॥4॥
ಎಲೈ ಪ್ರಜಾಪತಿಯೇ! ಅನ್ನವು ಯಾವ ರೀತಿಯಾಗಿರಬೇಕು? ದಾನ ಅಧ್ಯಯನ ಮತ್ತು ತಪಸ್ಸುಗಳು ಯಾವ ರೀತಿಯಿರಬೇಕು? ಯಾವುದು ಕಾರ್ಯ ಮತ್ತು ಯಾವುದು ಅಕಾರ್ಯ? ಇವೆಲ್ಲವನ್ನೂ ನಮಗೆ ಹೇಳಿ.
ತೈರೇವಮುಕ್ತೋ ಭಗವಾನ್ ಮನುಃ ಸ್ವಾಯಂಭುವೋಽಬ್ರವೀತ್ |
ಶುಶ್ರೂಷಧ್ವಂ ಯಥಾವೃತ್ತಂ ಧರ್ಮಂ ವ್ಯಾಸಸಮಾಸತಃ ॥5॥
ಅವರಿಂದ ಈ ರೀತಿಯಲ್ಲಿ ಕೇಳಲ್ಪಟ್ಟ ಪೂಜ್ಯನಾದ ಸ್ವಾಯಂಭುವಮನುವು `ಸಂಕ್ಷೇಪವಿಸ್ತಾರಗಳಿಂದ ಯಥಾರ್ಥವಾದ ಧರ್ಮವನ್ನು ಮಾಡಿ' ಎಂದು ಹೇಳಿ- ದನು.
ಅನಾದೇಶೇ ಜಪೋ ಹೋಮ ಉಪವಾಸಸ್ತಥೈವ ಚ |
ಆತ್ಮಜ್ಞಾನಂ ಪುಣ್ಯನದ್ಯೋ ಯತ್ರ ಪ್ರಾಯಶ್ಚ ತತ್ಪರಾಃ ॥6॥
ಅನಾದಿಷ್ಟಂ ತಥೈತಾನಿ ಪುಣ್ಯಾನಿ ಧರಣೀಭೃತಾಮ್ |
ಇನ್ನೊಬ್ಬರಿಂದ ಧನದಾನವನ್ನು ಸ್ವೀಕರಿಸಿ, ಅವರ ಆಜ್ಞೆಯಂತೆ ಮಾಡದ ಜಪ- ಹೋಮ, ಉಪವಾಸ, ಅಧ್ಯಯನ, ಪುಣ್ಯನದೀಸ್ನಾನ ಇವುಗಳು ಪ್ರಾಯಶಃ ಧರ್ಮ -ವನ್ನು ಉಂಟು ಮಾಡುತ್ತವೆ. ಇನ್ನೊಬ್ಬರ ಪ್ರೇರಣೆಯಿಲ್ಲದೆ, ಧನದ ಆಸೆಯಿಲ್ಲದೆ ಮಾಡುವ ಇಂತಹ ಕಾರ್ಯಗಳು ಪುಣ್ಯಪ್ರದವೆನಿಸುತ್ತವೆ.
ಸುವರ್ಣಪ್ರಾಶನಮಪಿ ರತ್ನಾದಿಸ್ನಾನಮೇವ ಚ ॥7॥
ದೇವಸ್ಥಾನಾಭಿಗಮನಮಾಜ್ಯಪ್ರಾಶನಮೇವ ಚ |
ಏತಾನಿ ಮೇಧ್ಯಂ ಪುರುಷಂ ಕುರ್ವಂತ್ಯಾಶು ನ ಸಂಶಯಃ ॥8॥
ಸುವರ್ಣಪ್ರಾಶನ, ರತ್ನಾದಿಮಿಶ್ರಿತಜಲದಿಂದ ಸ್ನಾನ (ರತ್ನಾಭಿಷೇಕ), ದೇವಾ- ಲಯಗಳಿಗೆ ಹೋಗುವುದು, ಘೃತಪ್ರಾಶನ ಇವುಗಳು ಶೀಘ್ರವಾಗಿ ಪುರುಷನನ್ನು ಪವಿತ್ರೀಕರಿಸುತ್ತವೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ನ ಗರ್ವೇಣ ಭವೇತ್ ಪ್ರಾಜ್ಞಃ ಕದಾಚಿದಪಿ ಮಾನದ |
ದೀರ್ಘಮಾಯುರಥೇಚ್ಛನ್ ಹಿ ತ್ರಿರಾತ್ರಂ ಚೋಷ್ಣಪೋ ಭವೇತ್ ॥9॥
ಎಲೈ ಮಾನದನೇ! ಪ್ರಾಜ್ಞನಾದವನು ಎಂದೂ ಗರ್ವವನ್ನು ಮಾಡಬಾರದು. ದೀರ್ಘಾಯುಷ್ಯವನ್ನು ಬಯಸುವವನು ಮೂರು ದಿನಗಳ ಕಾಲದ ಉಷ್ಣಪಾನವನ್ನು ಮಾಡಬೇಕು. (ಇದಕ್ಕೆ ತಪ್ತಕೃಚ್ಛ್ರವೆಂದು ಹೆಸರು. ಮೊದಲ ಮೂರು ದಿನಗಳು ಆರು ಕುಡಿತೆಯಷ್ಟು ಬಿಸಿನೀರನ್ನು ಕುಡಿಯಬೇಕು. ಅನಂತರ ಮೂರು ದಿನಗಳು ಮೂರು ಕುಡಿತೆಯಷ್ಟು ಬಿಸಿ ಹಾಲನ್ನು ಕುಡಿಯಬೇಕು. ಅನಂತರ ಮೂರು ದಿನಗಳು ಒಂದು ಕುಡಿತೆಯಷ್ಟು ಬಿಸಿಯ ತುಪ್ಪವನ್ನು ಮಾತ್ರ ಸೇವಿಸಬೇಕು. ಅನಂತರ ಮೂರು ದಿನಗಳು ಉಪವಾಸವಿರಬೇಕು. ಇದು ತಪ್ತಕೃಚ್ಛ್ರದ ವಿಧಿಯೆಂದು ಮನುಸ್ಮೃತಿಯಲ್ಲಿ ಹೇಳಲ್ಪಟ್ಟಿದೆ).
ಅದತ್ತಸ್ಯಾನುಪಾದಾನಂ ದಾನಮಧ್ಯಯನಂ ತಪಃ |
ಅಹಿಂಸಾ ಸತ್ಯಮಕ್ರೋಧಃ ಕ್ಷಮೇಜ್ಯಾ ಧರ್ಮಲಕ್ಷಣಮ್ ॥10॥
ಇನ್ನೊಬ್ಬರು ಕೊಡದಿದ್ದ ವಸ್ತುವನ್ನು ಸ್ವೀಕರಿಸದಿರುವುದು, ದಾನ, ಅಧ್ಯಯನ, ತಪಸ್ಸು, ಅಹಿಂಸೆ, ಸತ್ಯವಚನ, ಅಕ್ರೋಧ, ಕ್ಷಮೆ, ಪೂಜೆ ಇವು ಧರ್ಮದ ಲಕ್ಷಣಗಳು.

ಸ ಏವ ಧರ್ಮಃ ಸೋಽಧರ್ಮೋಽದೇಶೇಽಕಾಲೇ ಪ್ರತಿಷ್ಠಿತಃ |
ಅದಾನಮನೃತಂ ಹಿಂಸಾ ಧರ್ಮೋ ಹ್ಯಾವಸ್ಥಿಕಃ ಸ್ಮೃತಃ ॥11॥
ಯಾವುದು ಧರ್ಮವೋ ಅದೇ ಕಾರ್ಯವನ್ನು ಅದೇಶದಲ್ಲಿ ಮತ್ತು ಅಕಾಲ- ದಲ್ಲಿ ಮಾಡಿದರೆ ಅದು ಅಧರ್ಮವಾಗುತ್ತದೆ. ಹಾಗೆಯೇ ವಿಶೇಷಸಂದರ್ಭದಲ್ಲಿ ಮಾಡಿದ ಅಧರ್ಮವೂ ಸಹ ಧರ್ಮವಾಗುತ್ತದೆ. ಅಪಾತ್ರರಿಗೆ ದಾನವನ್ನು ಮಾಡ- ದಿರುವುದು, ಬ್ರಾಹ್ಮಣರ ಹಿತದ ಸಲುವಾಗಿ ಸುಳ್ಳನ್ನು ಹೇಳುವುದು, ಮತ್ತು ಗೋವುಗಳನ್ನು ರಕ್ಷಿಸಲು ವ್ಯಾಘ್ರಾದಿಗಳ ಹತ್ಯೆ ಇವು ಅದಾನ, ಅನೃತ, ಹಿಂಸಾ ರೂಪವಾದರೂ ಧರ್ಮವಾಗುತ್ತವೆ. ಅದನ್ನು ಬಿಟ್ಟು ಬೇರೆ ಸ್ಥಳದಲ್ಲಿ ಮಾತ್ರ ಅಧರ್ಮವಾಗುತ್ತವೆ. ಲಕ್ಷಾಲಂಕಾರ.
ದ್ವಿವಿಧೌ ಚಾಪ್ಯುಭಾವೇತೌ ಧರ್ಮಾಧರ್ಮೌ ವಿಜಾನತಾಮ್ |
ಅಪ್ರವೃತ್ತಿಃ ಪ್ರವೃತ್ತಿಶ್ಚ ದ್ವೈವಿಧ್ಯಂ ಲೋಕವೇದಯೋಃ ॥12॥
ಜ್ಞಾನಿಗಳ ದೃಷ್ಟಿಯಲ್ಲಿ ಧರ್ಮ ಮತ್ತು ಅಧರ್ಮಗಳೆರಡೂ ಎರಡು ವಿಧ- ವಾದವುಗಳು. ಲೋಕವೇದವಿಹಿತವಾದ ಧರ್ಮವು ಪ್ರವೃತ್ತಿಧರ್ಮ ಮತ್ತು ನಿವೃತ್ತಿ- ಧರ್ಮ ಎಂದು ಎರಡು ವಿಧ. ಹಾಗೆಯೇ ಅಧರ್ಮವೂ ಸಹ ಧರ್ಮದಲ್ಲಿ ಅಪ್ರವೃತ್ತಿ ಮತ್ತು ಅಧರ್ಮದಲ್ಲಿ ಪ್ರವೃತ್ತಿ ಎಂದು ಎರಡು ವಿಧವಾದದ್ದು.
ಅಪ್ರವೃತ್ತೇರಮರ್ತ್ಯತ್ವಂ ಮರ್ತ್ಯತ್ವಂ ಕರ್ಮಣಃ ಫಲಮ್ |
ಅಶುಭಸ್ಯಾಶುಭಂ ವಿದ್ಯಾಚ್ಛುಭಸ್ಯ ಶುಭಮೇವ ಚ |
ಏತಯೋಶ್ಚೋಭಯೋಃ ಸ್ಯಾತಾಂ ಶುಭಾಶುಭತಯಾ ತಥಾ ॥13॥
ಮೋಕ್ಷವು ನಿವೃತ್ತಿಕರ್ಮಗಳ ಫಲ. ಪುನಃ ಮನುಷ್ಯಾದಿಯೋನಿಗಳು ಪ್ರವೃತ್ತಿ- ಕರ್ಮದ ಫಲ. ಅಶುಭಕರ್ಮದಿಂದ ಅಶುಭವಾದ ಫಲವುಂಟಾಗುತ್ತದೆ. ಶುಭ- ಕರ್ಮದಿಂದ ಶುಭವಾದ ಫಲವುಂಟಾಗುತ್ತದೆ ಎಂದು ತಿಳಿಯಬೇಕು. ಹೀಗೆ ಶುಭಾ- ಶುಭರೂಪವಾದ ಎರಡು ಕರ್ಮಗಳಿಗೂ ಶುಭಾಶುಭರೂಪವಾದ ಫಲವು ದೊರೆ- ಯುತ್ತದೆ.
ದೈವಂ ಚ ದೈವಯುಕ್ತಂ ಚ ಪ್ರಾಣಶ್ಚ ಪ್ರಲಯಶ್ಚ ಹ |
ಅಪೇಕ್ಷಾಪೂರ್ವಕರಣಾದಶುಭಾನಾಂ ಶುಭಂ ಫಲಮ್ ॥14॥
ದೇವಪೂಜೆ ದೇವಮಹಿಮಾಪ್ರತಿಪಾದಕವಾದ ವೇದಾದಿಗಳ ಅಧ್ಯಯನ, ಪ್ರಕೃಷ್ಟಚೇಷ್ಟಾರೂಪವಾದ ಯಜ್ಞ ಮತ್ತು ಫಲಾಪೇಕ್ಷೆಯಿಂದ ಮಾಡುವ ಯಜ್ಞದ ಪಶುಹಿಂಸಾ ಇವುಗಳನ್ನು ಫಲಾಪೇಕ್ಷೆಯಿಂದ ಮಾಡಿದರೆ ಇವು ಅಶುಭ ಕರ್ಮ- ಗಳೆನಿಸುತ್ತವೆ. ಫಲದ ಅಪೇಕ್ಷೆಯನ್ನು ತಿರಸ್ಕರಿಸಿ (ಹಿಂದೆ ಹಾಕಿ)ಅನುಷ್ಠಾನ ಮಾಡಿ- ದರೆ ಇವು ಶುಭಫಲವನ್ನು ಕೊಡುತ್ತವೆ. (ಲಕ್ಷಾಲಂಕಾರ).
ಕ್ರೋಧಮೋಹಕೃತೇ ಚೈವ ದೃಷ್ಟಾಂತಾಗಮಹೇತುಭಿಃ |
ಶರೀರಾಣಾಮುಪಕ್ಲೇಶೋ ಮನಸಶ್ಚ ಪ್ರಿಯಾಪ್ರಿಯೇ |
ತದೌಷಧೈಶ್ಚ ಮಂತ್ರೈಶ್ಚ ಪ್ರಾಯಶ್ಚಿತ್ತೈಶ್ಚ ಶಾಮ್ಯತಿ ॥15॥
ಕ್ರೋಧಮೋಹಗಳಿಗೆ ವಶರಾಗಿ ಕರ್ಮಗಳನ್ನು ಆಚರಿಸಿ ಅವುಗಳಿಂದ ಶರೀರಕ್ಕೆ ಕ್ಲೇಶವೂ, ಮನಸ್ಸಿಗೆ ಪ್ರಿಯಾಪ್ರಿಯಗಳೂ ಉಂಟಾದರೆ ಅವುಗಳನ್ನು ಶಾಸ್ತ್ರದೃಷ್ಟವಾದ ಪರಿಹಾರಕಾರಣಗಳಾದ ಮಂತ್ರಗಳಿಂದಲೂ ಪ್ರಾಯಶ್ಚಿತ್ತಗಳಿಂದಲೂ ಮತ್ತು ಔಷಧಿ-ಗಳಿಂದಲೂ ಪರಿಹರಿಸಿಕೊಳ್ಳಬೇಕು.
ಊರ್ಧ್ವಂ ಭವತಿ ಸಂದೋಹಾದಿಹ ದೃಷ್ಟಾರ್ಥಮೇವ ಚ |
ಅಪೇಕ್ಷಾಪೂರ್ವಕರಣಾತ್ ಪ್ರಾಯಶ್ಚಿತ್ತಂ ವಿಧೀಯತೇ ॥16॥
ಧರ್ಮರೂಪವಾದ ಧೇನುವನ್ನು ಚೆನ್ನಾಗಿ ಕರೆಯುವುದರಿಂದ ಎಂದರೆ ಫಲಾ- ಪೇಕ್ಷೆಯಿಲ್ಲದೇ ಆಚರಿಸುವುದರಿಂದ ಊರ್ಧ್ವಗತಿಯುಂಟಾಗುತ್ತದೆ. ಮತ್ತು ಈ ಲೋಕದಲ್ಲಿಯೂ ದೃಷ್ಟವಾದ ಶುಭಫಲವು ದೊರೆಯುತ್ತದೆ. ಆದರೆ ಫಲಾ- ಪೇಕ್ಷೆಯಿಂದ ಮಾಡಿದರೆ ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ.
ಉಪವಾಸಮೇಕರಾತ್ರಂ ದಂಡೋತ್ಸರ್ಗೇ ನರಾಧಿಪಃ |
ವಿಶುದ್ಧ್ಯೇದಾತ್ಮಶುದ್ಧ್ಯರ್ಥಂ ತ್ರಿರಾತ್ರಂ ತು ಪುರೋಹಿತಃ ॥17॥
ರಾಜನಾದವನು ಶಿಕ್ಷೆಗೆ ಅರ್ಹನಾದವನನ್ನು ಶಿಕ್ಷಿಸದಿದ್ದರೆ ಒಂದು ರಾತ್ರಿ ಉಪವಾಸವನ್ನು ಮಾಡಿ ಶುದ್ಧನಾಗುತ್ತಾನೆ. ಆದರೆ ರಾಜಪುರೋಹಿತನು ಮಾತ್ರ ಮೂರು ದಿನ ಉಪವಾಸವನ್ನು ಮಾಡಬೇಕು. (ಲಕ್ಷಾಲಂಕಾರ)
ಕ್ಷಯಂ ಶೋಕಂ ಪ್ರಕುರ್ವಾಣೋ ನ ಮ್ರಿಯೇತ ಯದಾ ನರಃ |
ಶಸ್ತ್ರಾದಿಭಿರುಪಾವಿಷ್ಟಸ್ತ್ರಿರಾತ್ರಂ ತತ್ರ ನಿರ್ದಿಶೇತ್ ॥18॥
ರಾಜನು ಅಪರಾಧಿಗೆ ಮರಣದಂಡನೆಯನ್ನು ವಿಧಿಸಿ, ಶಸ್ತ್ರಘಾತಾದಿಗಳನ್ನು ಮಾಡಿದರೂ ಅಪರಾಧಿಯು ಮರಣವನ್ನು ಹೊಂದದಿದ್ದರೆ ರಾಜನು ತನ್ನ ಶುದ್ಧಿ- ಗಾಗಿ ಮೂರು ದಿನ ಉಪವಾಸವನ್ನು ಮಾಡಬೇಕು.
ಜಾತಿಶ್ರೇಣ್ಯಧಿವಾಸಾನಾಂ ಕುಲಧರ್ಮಾಂಶ್ಚ ಸರ್ವತಃ |
ವರ್ಜಯಂತಿ ಹಿ ಯೇ ಧರ್ಮಂ ತೇಷಾಂ ಧರ್ಮೋ ನ ವಿದ್ಯತೇ ॥19॥
ತಮ್ಮ ಜಾತಿಯ ತಮ್ಮ ಸಮಾನರ ತಮ್ಮ ಗೃಹದ ಮತ್ತು ತಮ್ಮ ಕುಲದ ಧರ್ಮಗಳನ್ನು ಯಾರು ತ್ಯಜಿಸುತ್ತಾರೆಯೋ ಅವರಿಗೆ ಯಾವ ಧರ್ಮವೂ ಇರುವು- ದಿಲ್ಲ.
ದಶ ವಾ ವೇದಶಾಸ್ತ್ರಜ್ಞಾಸ್ತ್ರಯೋ ವಾ ಧರ್ಮಪಾಠಕಾಃ |
ಯದ್ ಬ್ರೂಯುಃ ಕಾರ್ಯ ಉತ್ಪನ್ನೇ ಸ ಧರ್ಮೋ ಧರ್ಮಸಂಶಯೇ ॥20
ಧರ್ಮಸಂಶಯವುಂಟಾದಾಗ ವೇದಶಾಸ್ತ್ರಗಳನ್ನು ತಿಳಿದ ಹತ್ತು ವಿದ್ವಾಂಸರು ಅಥವಾ ಧರ್ಮಶಾಸ್ತ್ರವನ್ನು ತಿಳಿದ ಮೂರು ವಿದ್ವಾಂಸರು ಯಾವುದನ್ನು ಮಾಡ- ಬೇಕೆಂದು ಹೇಳುತ್ತಾರೆಯೋ ಅದೇ ಧರ್ಮವೆನಿಸುತ್ತದೆ. ಅದನ್ನು ಮಾಡಬೇಕು.

ಅರುಣಾಮೃತ್ತಿಕಾ ಚೈವ ತಥಾ ಚೈವ ಪಿಪೀಲಿಕಾಃ |
ಶ್ಲೇಷ್ಮಾತ್ಮಕಸ್ತಥಾ ವಿಪ್ರೈರಭಕ್ಷ್ಯಂ ವಿಷಮೇವ ಚ ॥21॥
ಕೆಮ್ಮಣ್ಣು, ಇರುವೆಗಳು ಬೆರೆತ ಆಹಾರ, ಚಳ್ಳೆ ಹಣ್ಣು, ಧರ್ಮಶಾಸ್ತ್ರದಲ್ಲಿ ವಿಷವೆಂದು ಪರಿಗಣಿಸಲ್ಪಟ್ಟ ಆಹಾರ ಇವುಗಳನ್ನು ಬ್ರಾಹ್ಮಣರು ತ್ಯಜಿಸಬೇಕು.
ಅಭಕ್ಷ್ಯಾ ಬ್ರಾಹ್ಮಣೈರ್ಮತ್ಸ್ಯಾಃ ಶಕಲೈರ್ಯೇ ವಿವರ್ಜಿತಾಃ |
ಚತುಷ್ಪಾತ್ ಕಚ್ಛಪಾಜ್ಜಾತೋ ಮಂಡೂಕಾ ಜಲಜಾಶ್ಚ ಯೇ ॥22॥
ಭಾಸಾ ಹಂಸಾಃ ಸುಪರ್ಣಾಶ್ಚ ಚಕ್ರವಾಕಾ ಬಕಾಃ ಪ್ಲವಾಃ |
ಕಂಕೋ ಮದ್ಗುಶ್ಚ ಗೃಧ್ರಾಶ್ಚ ಕಾಕೋಲೂಕಂ ತಥೈವ ಚ ॥23॥
ಕ್ರವ್ಯಾದಾಃ ಪಕ್ಷಿಣಃ ಸರ್ವೇ ಚತುಷ್ಪಾದಾಶ್ಚ ದಂಷ್ಟ್ರಿಣಃ |
ಯೇಷಾಂ ಚೋಭಯತೋ ದಂತಾಶ್ಚತುರ್ದಂಷ್ಟ್ರಾಂಶ್ಚ ಸರ್ವಶಃ ॥24॥
ಮುಳ್ಳಿಲ್ಲದ ಮತ್ಸ್ಯಗಳು, ಆಮೆಯ ಜಾತಿಗೆ ಸೇರಿದ ಚತುಷ್ಪಾದ ಪ್ರಾಣಿಗಳು, ಕಪ್ಪೆ ಮೊದಲಾದ ಜಲಜಾತಿಗಳು, ಹಂಸಗಳು, ಗರುಡಗಳು, ಚಕ್ರವಾಕಪಕ್ಷಿಗಳು, ಕೊಕ್ಕರೆಗಳು, ಭಾಸಪಕ್ಷಿಗಳು, ಗಿಡುಗಗಳು, ಕಂಕಪಕ್ಷಿಗಳು, ನೀರು ಕಾಗೆಗಳು, ಹದ್ದುಗಳು, ಕಾಗೆಗಳು, ಗೂಬೆಗಳು, ಮಾಂಸವನ್ನು ತಿನ್ನುವ ಎಲ್ಲ ಪಕ್ಷಿಗಳು, ನಾಲ್ಕು ಪಾದಗಳನ್ನು ಹೊಂದಿದ ಕೋರೆದಾಡೆ ಉಳ್ಳ ಪ್ರಾಣಿಗಳು, ಎರಡು ಸಾಲು ದಂತವಿರುವ ಪ್ರಾಣಿಗಳು, ನಾಲ್ಕು ಕೋರೆದಾಡೆ ಉಳ್ಳ ಪ್ರಾಣಿಗಳು, ಇವುಗಳಲ್ಲಿ ಯಾವುದನ್ನೂ ಬ್ರಾಹ್ಮಣರು ತಿನ್ನಬಾರದು.
ಏಡಕಾಶ್ವ ಖರೋಷ್ಟ್ರೀಣಾಂ ಸೂತಿಕಾನಾಂ ಗವಾಮಪಿ |
ಮಾನುಷೀಣಾಂ ಮೃಗೀಣಾಂ ಚ ನ ಪಿಬೇದ್ ಬ್ರಾಹ್ಮಣಃ ಪಯಃ ॥25॥
ಆಡು, ಕುದುರೆ, ಕತ್ತೆ, ಒಂಟೆ, ಆಗ ತಾನೇ ಕರುವನ್ನು ಹಾಕಿದ ಗೋವುಗಳು, ಮನುಷ್ಯರು, ಜಿಂಕೆಗಳು ಇವುಗಳ ಹಾಲನ್ನು ಬ್ರಾಹ್ಮಣರು ಕುಡಿಯಬಾರದು.
ಪ್ರೇತಾನ್ನಂ ಸೂತಿಕಾನ್ನಂ ಚ ಯಚ್ಚ ಕಿಂಚಿದನಿರ್ದಶಮ್ |
ಅಭೋಜ್ಯಂ ಚಾಪ್ಯಪೇಯಂ ಚ ಧೇನ್ವಾ ದುಗ್ಧಮನಿರ್ದಶಮ್ ॥26॥
ಹತ್ತು ದಿನ ಕಳೆಯದಿದ್ದ ಮೃತರ ಮನೆಯ ಅನ್ನ, ಜಾತಾಶೌಚವಿರುವ ಮನೆಯವರ ಅನ್ನ ಇವುಗಳನ್ನು ತಿನ್ನಬಾರದು. ಹಸುವು ಕರುವನ್ನು ಹಾಕಿದ ಮೇಲೆ ಹತ್ತು ದಿನ ಕಳೆಯುವವರೆಗೆ ಅದರ ಹಾಲನ್ನು ಕುಡಿಯಬಾರದು.
ರಾಜಾನ್ನಂ ತೇಜ ಆದತ್ತೇ ಶೂದ್ರಾನ್ನಂ ಬ್ರಹ್ಮವರ್ಚಸಮ್ |
ಆಯುಃ ಸುವರ್ಣಕಾರಾನ್ನಮವೀರಾಯಾಶ್ಚ ಯೋಷಿತಃ ॥27॥
ರಾಜಾನ್ನವು ತೇಜಸ್ಸನ್ನು ನಾಶ ಮಾಡುತ್ತದೆ. ಶೂದ್ರಾನ್ನವು ಬ್ರಹ್ಮವರ್ಚಸ್ಸನ್ನು ನಾಶ ಮಾಡುತ್ತದೆ. ಅಕ್ಕಸಾಲಿಗನ ಮತ್ತು ಮಕ್ಕಳಿಲ್ಲದ ಸ್ತ್ರೀಯರ ಅನ್ನವು ಆಯುಸ್ಸನ್ನು ನಾಶ ಮಾಡುತ್ತದೆ.
ವಿಷ್ಠಾ ವಾರ್ಧುಷಿಕಸ್ಯಾನ್ನಂ ಗಣಿಕಾನ್ನಮಥೇಂದ್ರಿಯಮ್ |
ಮೃಷ್ಯಂತಿ ಯೇ ಚೋಪಪತಿಂ ಸ್ತ್ರೀಜಿತಾನಾಂ ಚ ಸರ್ವಶಃ ॥28॥
ಬಡ್ಡಿಯಿಂದ ಜೀವನವನ್ನು ಮಾಡುವವನ ಅನ್ನವು ಅಮೇಧ್ಯಕ್ಕೆ ಸಮನಾ- ದುದು, ವೇಶ್ಯೆಯರ ಅನ್ನ, ತನ್ನ ಪತ್ನಿಯ ಇನ್ನೊಬ್ಬನ ಸಂಬಂಧವನ್ನು ಹೊಂದಿದ್ದರೂ ಸಹಿಸಿಕೊಂಡು ಇರುವವನ ಅನ್ನ, ಮತ್ತು ಸ್ತ್ರೀವಶರಾದವರ ಅನ್ನ ಎಲ್ಲವೂ ರೇತಸ್ಸಿಗೆ ಸಮಾನವಾದುದು.
ದೀಕ್ಷಿತಸ್ಯ ಕದರ್ಯಸ್ಯ ಕ್ರತುವಿಕ್ರಯಿಕಸ್ಯ ಚ |
ತಕ್ಷಣಶ್ಚರ್ಮಾವಕರ್ತುಶ್ಚ ಪುಂಶ್ಚಲ್ಯಾ ರಜಕಸ್ಯ ಚ |
ಚಿಕಿತ್ಸಕಸ್ಯ ಯಚ್ಚಾನ್ನಮಭೋಜ್ಯಂ ರಕ್ಷಿಣಸ್ತಥಾ ॥29॥
ಯಜ್ಞದೀಕ್ಷಿತನಾದವನ, ನೀಚಸ್ವಭಾವದವನ, ಪೂಜಾದಿಗಳನ್ನು ಮಾರುವವನ, ಬಡಗಿಯ, ಚರ್ಮಕಾರನ, ವೇಶ್ಯೆಯ, ಅಗಸನ, ವೈದ್ಯನ, ಕಾವಲುಗಾರನ ಅನ್ನವು ಅಭೋಜ್ಯವಾದುದು.
ಗಣಗ್ರಾಮಾಭಿಶಸ್ತಾನಾಂ ರಂಗಸ್ತ್ರೀಜೀವಿನಶ್ಚ ಯೇ |
ಪರಿವಿತ್ತಿನಪುಂಸಾಂ ಚ ವಂದಿದ್ಯೂತವಿದಾಂ ತಥಾ ॥30॥
ಗ್ರಾಮದಿಂದ ಅಥವಾ ಕುಲದಿಂದ ಬಹಿಷ್ಕೃತನಾದವನ, ರಂಗಜೀವಿ- ಯಾದವನ, ಸ್ತ್ರೀಯರನ್ನು ಅವಲಂಬಿಸಿ ಜೀವನವನ್ನು ಮಾಡುವವನ, ಅಣ್ಣನಿಗಿಂತ ಮೊದಲು ಮದುವೆಯಾದ ತಮ್ಮನ, ನಪುಂಸಕನ, ಹೊಗಳು ಭಟ್ಟನ, ದ್ಯೂತಾಸಕ್ತನಅನ್ನವು ಅಭೋಜ್ಯವಾದುದು.
ವಾಮಹಸ್ತಾಹೃತಂ ಚಾನ್ನಂ ಶುಷ್ಕಂ ಪರ್ಯುಷಿತಂ ಚ ಯತ್ |
ಸುರಾನುಗತಮುಚ್ಛಿಷ್ಟಮಭೋಜ್ಯಂ ಶೇಷಿತಂ ಚ ಯತ್ ॥31॥
ಎಡಗೈಯಿಂದ ತೆಗೆದುಕೊಂಡು ಬಂದ ಅನ್ನ, ಎಲೆಯಲ್ಲಿ ಬಡಿಸಿ ಬಹಳ ಹೊತ್ತಾಗಿ ಒಣಗಿ ಹೋದ ಅನ್ನ, ಹಳಸಿದ ಅನ್ನ, ಮದ್ಯದ ಜೊತೆಯಲ್ಲಿ ತೆಗೆದು- ಕೊಂಡ ಬಂದ ಅನ್ನ, ಉಚ್ಛಿಷ್ಟ, ಎಲ್ಲರೂ ಊಟ ಮಾಡಿದ ಮೇಲೆ ಉಳಿದ ಅನ್ನ ಇವು ಅಭೋಜ್ಯವಾದವುಗಳು.
ಪಿಷ್ಟಮಾಂಸೇಕ್ಷುಶಾಖಾನಾಂ ವಿಕಾರಾಃ ಪಯಸಸ್ತಥಾ |
ಸಕ್ತುಧಾನಾಕರಂಭಾಶ್ಚ ನೋಪಭೋಜ್ಯಾಶ್ಚಿರಸ್ಥಿತಾಃ ॥32॥
ಹಿಟ್ಟು, ಮಾಂಸ, ಕಬ್ಬಿನ ರಸ, ಹಾಲು, ಇವುಗಳ ವಿಕಾರಗಳು, ಹೋಳಿಗೆ, ಅರಳು, ಅವಲಕ್ಕಿಪುರಿ, ಬಹಳ ಹೊತ್ತಾದ ಮೊಸರಿನಲ್ಲಿ ಕಲಸಿದ ಹಿಟ್ಟುಹುರಿದ ಹಿಟ್ಟುಗಳು ಇವುಗಳನ್ನು ತಿನ್ನಬಾರದು.
ಪಾಯಸಂ ಕೃಸರಂ ಮಾಂಸಮಪೂಪಾಶ್ಚ ವೃಥಾ ಕೃತಾಃ |

ಅಭೋಜ್ಯಾಶ್ಚಾಪ್ಯಭಕ್ಷ್ಯಾಶ್ಚ ಬ್ರಾಹ್ಮಣೈರ್ಗೃಹಮೇಧಿಭಿಃ ॥33॥
ದೇವತೆಗಳನ್ನು ಅಥವಾ ಅತಿಥಿಗಳನ್ನು ಉದ್ದೇಶಿಸಿ ಮಾಡದ ಪಾಯಸ, ಎಳ್ಳುಪುಡಿ ಅನ್ನ, ಮಾಂಸ, ಅಪೂಪಗಳು ಇವುಗಳನ್ನು ಗೃಹಸ್ಥರಾದ ಬ್ರಾಹ್ಮಣರು ತಿನ್ನಬಾರದು. ಇನ್ನೊಬ್ಬರಿಗೆ ಬಡಿಸಲೂ ಬಾರದು.
ದೇವಾನ್ ಪಿತೄನ್ ಮನುಷ್ಯಾಂಶ್ಚ ಮುನೀನ್ ಗೃಹ್ಯಾಂಶ್ಚ ದೇವತಾಃ |
ಪೂಜಯಿತ್ವಾ ತತಃ ಪಶ್ಚಾತ್ ಗೃಹಸ್ಥೋ ಭೋಕ್ತುಮರ್ಹತಿ ॥34॥
ಗೃಹಸ್ಥನಾದವನು ದೇವತೆಗಳನ್ನು, ಪಿತೃಗಳನ್ನು, ಋಷಿಗಳನ್ನು, ಗೃಹದೇವತೆ- ಗಳನ್ನು, ಮನುಷ್ಯರನ್ನೂ ಪೂಜಿಸಿ ಅನಂತರ ಭೋಜನವನ್ನು ಮಾಡಬೇಕು.
ಯಥಾ ಪ್ರವ್ರಾಜಿತೋ ಭಿಕ್ಷುರ್ಗೃಹಸ್ಥಃ ಸ್ವಗೃಹೇ ವಸೇತ್ |
ಏವಂ ವೃತ್ತಃ ಪ್ರಿಯೈರ್ದಾರೈಃ ಸಂವಸನ್ ಧರ್ಮಮಾಪ್ನುಯಾತ್ ॥35॥
ಗೃಹಸ್ಥನಾದವನು ಸನ್ಯಾಸವನ್ನು ಸ್ವೀಕರಿಸಿದ ಭಿಕ್ಷುವಿನಂತೆ ತನ್ನ ಮನೆಯಲ್ಲಿ ವಾಸ ಮಾಡಬೇಕು. ತನ್ನ ಪ್ರೀತಿಪಾತ್ರಳಾದ ಹೆಂಡತಿಯ ಜೊತೆಯಲ್ಲಿಯೂ ಇಂತಹ ನಡತೆಯನ್ನು ಹೊಂದಿದವನು ಧರ್ಮವನ್ನು ಸಂಪಾದಿಸುತ್ತಾನೆ.
ನ ದದ್ಯಾದ್ ಯಶಸೇ ದಾನಂ ನ ಭಯಾನ್ನೋಪಕಾರಿಣೇ |
ನ ನೃತ್ತಗೀತಶೀಲೇಷು ಹಾಸಕೇಷು ಚ ಧಾರ್ಮಿಕಃ ॥36॥
ಧಾರ್ಮಿಕನಾದವನು ಕೀರ್ತಿಗಾಗಿ ದಾನವನ್ನು ಮಾಡಬಾರದು. ಭಯದಿಂದ ದಾನವನ್ನು ಮಾಡಬಾರದು. ಉಪಕಾರವನ್ನು ಮಾಡಿದವನು ಎಂದು ದಾನವನ್ನು ಮಾಡಬಾರದು. ನರ್ತಕರಿಗೆ ಗಾಯಕರಿಗೆ ಮತ್ತು ವಿದೂಷಕರಿಗೆ ದಾನವನ್ನು ಮಾಡಬಾರದು.
ನ ಮತ್ತೇ ಚೈವ ಚೋನ್ಮತ್ತೇ ನ ಸ್ತೇನೇ ನ ಚಿಕಿತ್ಸಕೇ |
ನ ವಾಗ್ಘೀನೇ ವಿವರ್ಣೇ ವಾ ನಾಂಗಹೀನೇ ನ ವಾಮನೇ ॥37॥
ಪಾನಮತ್ತನಾದವನಿಗೆ, ಹುಚ್ಚನಾದವನಿಗೆ, ಕಳ್ಳನಿಗೆ, ವೈದ್ಯನಿಗೆ, ಮೂಕನಾದ- ವನಿಗೆ, ಚರ್ಮರೋಗವುಳ್ಳವನಿಗೆ, ಅಂಗಹೀನನಾದವನಿಗೆ, ವಾಮನ(ಬಹಳ ಕುಳ್ಳ) -ನಾದವನಿಗೆ ದಾನವನ್ನು ಮಾಡಬಾರದು.
ನ ದುರ್ಜನೇ ದೌಷ್ಕುಲೇ ವಾ ವ್ರತೈರ್ವಾ ಯೋ ನ ಸಂಸ್ಕೃತಃ |
ಅಶ್ರೋತ್ರಿಯೇ ಮೃತಂ ದಾನಂ ಬ್ರಾಹ್ಮಣೇಽಬ್ರಹ್ಮವಾದಿನಿ ॥38॥
ದುರ್ಜನನಿಗೆ, ದುಷ್ಕುಲದಲ್ಲಿ ಹುಟ್ಟಿದವನಿಗೆ, ವ್ರತಗಳನ್ನು ಮಾಡದವನಿಗೆ ದಾನವನ್ನು ಮಾಡಬಾರದು. ಶ್ರೋತ್ರಿಯನಲ್ಲದ, ವೇದವಿದ್ಯಾರಹಿತನಾದ ಬ್ರಾಹ್ಮಣ -ನಿಗೆ ಮಾಡಿದ ದಾನವು ಮೃತವಾಗುತ್ತದೆ.
ಅಸಮ್ಯಕ್ ಚೈವ ಯದ್ ದತ್ತಮಸಮ್ಯಕ್ ಚ ಪ್ರತಿಗ್ರಹಃ |
ಉಭಯೋಃ ಸ್ಯಾದನರ್ಥಾಯ ದಾತುರಾದಾತುರೇವ ಚ ॥39॥
ಸರಿಯಾಗಿ ಕೊಡದಿದ್ದ ದಾನ, ಸರಿಯಾಗಿ ಮಾಡದಿದ್ದ ಪ್ರತಿಗ್ರಹ ಇವೆರಡೂ ದಾನವನ್ನು ಕೊಡುವವನಿಗೂ ದಾನವನ್ನು ಸ್ವೀಕರಿಸುವವನಿಗೂ ಅನರ್ಥವಾದ ಫಲವನ್ನು ಉಂಟು ಮಾಡುತ್ತವೆ.
ಯಥಾ ಖದಿರಮಾಲಂಬ್ಯ ಶಿಲಾಂ ವಾಪ್ಯರ್ಣವಂ ತರನ್ |
ಮಜ್ಜತೇ ಮಜ್ಜತೇ ತದ್ವದ್ ದಾತಾ ಯಶ್ಚ ಪ್ರತೀಚ್ಛಕಃ ॥40॥
ಖದಿರ(ಕಗ್ಗಲಿ)ವೃಕ್ಷದ ಒಂದು ಸಣ್ಣಕೊಂಬೆಯನ್ನು ಹಿಡಿದು, ಅಥವಾ ಕಲ್ಲಿನ ಗುಂಡನ್ನು ಕಟ್ಟಿಕೊಂಡು ಸಮುದ್ರವನ್ನು ದಾಟಲು ಪ್ರಯತ್ನಿಸುವವನು ಮುಳುಗಿ ಹೋಗುವಂತೆ ಇಂತಹ ದಾನವನ್ನು ಮಾಡುವವನು ಮತ್ತು ದಾನವನ್ನು ಸ್ವೀಕರಿ- ಸುವವನು ಮುಳುಗಿ ಹೋಗುತ್ತಾರೆ.
ಕಾಷ್ಠೈರಾರ್ದ್ರೈರ್ಯಥಾ ವಹ್ನಿರುಪಸ್ತೀರ್ಣೋ ನ ದೀಪ್ಯತೇ |
ತಪಃಸ್ವಾಧ್ಯಾಯಚಾರಿತ್ರೈರೇವಂ ಹೀನಃ ಪ್ರತಿಗ್ರಹೀ ॥41॥
ಹಸಿಯ ಕಟ್ಟಿಗೆಗಳನ್ನು ತುಂಬಿದ ಅಗ್ನಿಯು ಹೇಗೆ ಜ್ವಲಿಸುವುದಿಲ್ಲವೋ ಅದರಂತೆ ತಪಸ್ಸು, ಸ್ವಾಧ್ಯಾಯ, ಶೀಲ ಇವುಗಳಿಂದ ಹೀನನಾದ ಪ್ರತಿಗ್ರಹಿಯೂ ಕೂಡ ಶೋಭಿಸುವುದಿಲ್ಲ.
ಕಪಾಲೇ ಯದ್ವದಾಪಃ ಸ್ಯುಃ ಶ್ವದೃತೌ ವಾ ಯಥಾ ಪಯಃ |
ಆಶ್ರಯಸ್ಥಾನದೋಷೇಣ ವೃತ್ತಹೀನೇ ಯಥಾ ಶ್ರುತಮ್ ॥42॥
ಒಳ್ಳೆಯ ಶೀಲವಿಲ್ಲದವನಲ್ಲಿ ಇರುವ ವಿದ್ಯೆಯು ತಲೆಯ ಬುರುಡೆಯಲ್ಲಿ ಹಾಕಿದ ನೀರಿನಂತೆ, ನಾಯಿಯ ಚರ್ಮದಲ್ಲಿ ಶೇಖರಿಸಿದ ಕ್ಷೀರದಂತೆ ಆಶ್ರಯ- ದೋಷದಿಂದ ದುಷ್ಟವಾಗುತ್ತದೆ.
ನಿರ್ಮಂತ್ರೋ ನಿರ್ವ್ರತೋ ಯಃ ಸ್ಯಾದಶಾಸ್ತ್ರಜ್ಞೋಽನಸೂಯಕಃ |
ಅನುಕ್ರೋಶಾತ್ ಪ್ರದಾತವ್ಯಂ ದೀನೇಷ್ವೇವಂ ನರೇಷ್ವಪಿ ॥43॥
ಮಂತ್ರಜಪವಿಲ್ಲದ, ವ್ರತಾನುಷ್ಠಾನವಿಲ್ಲದ, ಶಾಸ್ತ್ರಜ್ಞಾನವಿಲ್ಲದ ಪುರುಷನು ಅಸೂಯಾರಹಿತನಾಗಿದ್ದರೆ ಅಂತಹ ದೀನನಿಗೂ ಅನುಕಂಪದಿಂದ ದಾನವನ್ನು (ಏನನ್ನಾದರೂ) ಕೊಡಬೇಕು.
ನವೈ ದೇಯಮನುಕ್ರೋಶಾದ್ ದೀನಾಯಾಮಪ್ಯಪಕಾರಿಣೇ |
ಆಪ್ತಾಚರಿತಮಿತ್ಯೇವ ಧರ್ಮ ಇತ್ಯೇವ ವಾ ಪುನಃ ॥44॥
ಆದರೆ ಅಂತಹ ದೀನನಾದವನು ಅಪಕಾರವನ್ನು ಮಾಡುವುದಾದರೆ ಅವನಿಗೆ ಸಜ್ಜನರ ಆಚರಣೆಯೆಂದಲಾಗಲೀ ಅಥವಾ ಇದು ಧರ್ಮ ಎಂಬ ದೃಷ್ಟಿಯಿಂದಾ- ಗಲೀ ಅನುಕಂಪದಿಂದಲೂ ಏನನ್ನೂ ಕೊಡಬಾರದು.
ನಿಷ್ಕಾರಣಂ ಸ್ಮ ತದ್ ದತ್ತಂ ಬ್ರಾಹ್ಮಣೇ ಧರ್ಮವರ್ಜಿತೇ |
ಭವೇದಪಾತ್ರದೋಷೇಣ ನ ಮೇಽತ್ರಾಸ್ತಿ ವಿಚಾರಣಾ ॥45॥

ಧರ್ಮರಹಿತನಾದ ಬ್ರಾಹ್ಮಣನಿಗೆ ನಿಷ್ಕಾರಣವಾಗಿ ಕೊಟ್ಟ ದಾನವು ಅಪಾತ್ರನಿಗೆ ಕೊಟ್ಟ ಕಾರಣದಿಂದಾಗಿ ಯಾವ ಫಲವನ್ನೂ ಕೊಡುವುದಿಲ್ಲ. ಈ ವಿಷಯದಲ್ಲಿ ನನಗೆ ಯಾವ ಸಂಶಯವೂ ಇಲ್ಲ.
ಯಥಾ ದಾರುಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ |
ಬ್ರಾಹ್ಮಣಶ್ಚಾನಧೀಯಾನಸ್ತ್ರಯಸ್ತೇ ನಾಮಧಾರಕಾಃ ||46||
ಮರದಿಂದ ಮಾಡಿದ ಆನೆ, ಚರ್ಮದಿಂದ ಮಾಡಿದ ಮೃಗ ಮತ್ತು ಅಧ್ಯಯನವನ್ನು ಮಾಡದಿದ್ದ ಬ್ರಾಹ್ಮಣ ಈ ಮೂವರೂ ಹೆಸರಿಗೆ ಮಾತ್ರ ಆನೆ, ಮೃಗ ಮತ್ತು ಬ್ರಾಹ್ಮಣ ಎಂದು ಕರೆಸಿಕೊಳ್ಳಲ್ಪಡುತ್ತಾರೆ.
ಯಥಾ ಷಂಢೋಽಫಲಃ ಸ್ತ್ರೀಷು ಯಥಾ ಗೌರ್ಗವಿ ಚಾಫಲಾ |
ಶಕುನಿರ್ವಾಪ್ಯಪಕ್ಷಃ ಸ್ಯಾನ್ನಿರ್ಮಂತ್ರೋ ಬ್ರಾಹ್ಮಣಸ್ತಥಾ ||47||
ನಪುಂಸಕನಾದವನು ಸ್ತ್ರೀಯರ ವಿಷಯದಲ್ಲಿ ನಿಷ್ಫಲನಾದಂತೆ, ಹಾಲನ್ನು ಕರೆದು ಮುದಿಯಾದ ಧೇನು(ಇನ್ನು ಮುಂದೆ ಹಾಲುಕೊಡದ ಧೇನು) ಭೂಮಿಯಲ್ಲಿ
ನಿಷ್ಫಲವಾದಂತೆ, ರೆಕ್ಕೆಗಳು ಮೂಡದಿರುವ ಪಕ್ಷಿಯು ನಿಷ್ಫಲವಾದಂತೆ ಮಂತ್ರ- ರಹಿತನಾದ ಬ್ರಾಹ್ಮಣನು ನಿಷ್ಫಲನಾಗುತ್ತಾನೆ. (ಲಕ್ಷ್ಮಾಲಂಕಾರ)
ಗ್ರಾಮಧಾನ್ಯಂ ಯಥಾ ಶೂನ್ಯಂ ಯಥಾ ಕೂಪಶ್ಚ ನಿರ್ಜಲಃ |
ಯಥಾ ಹುತಮನಗ್ನೌ ಚ ತಥೈವ ಸ್ಯಾನ್ನಿರಾಕೃತೌ ||48||
ಧಾನ್ಯವಿಲ್ಲದ ಗ್ರಾಮದಂತೆ, ಜಲವಿಲ್ಲದ ಕೂಪದಂತೆ, ಅಗ್ನಿಯಿಲ್ಲದ ಹೋಮ- ದಂತೆ ಅಂತಹ ನಿರಾಕಾರನಾದ ಬ್ರಾಹ್ಮಣನಿಗೆ ಕೊಟ್ಟ ದಾನವು ವ್ಯರ್ಥವಾಗುತ್ತದೆ.
ದೇವತಾನಾಂ ಪಿತೄಣಾಂ ಚ ಹವ್ಯಕವ್ಯವಿನಾಶನಃ |
ಶತ್ರುರರ್ಥಹರೋ ಮೂರ್ಖೋ ನ ಲೋಕಾನ್ ಪ್ರಾಪ್ತುಮರ್ಹತಿ ||49||
ಅಂತಹ ಬ್ರಾಹ್ಮಣನು ದೇವತೆಗಳಿಗೂ ಮತ್ತು ಪಿತೃಗಳಿಗೂ ಕೊಟ್ಟ ಹವ್ಯ, ಕವ್ಯಗಳನ್ನು ನಾಶ ಪಡಿಸುತ್ತಾನೆ. ಅವನು ಧಾರ್ಮಿಕರಿಗೆ ಶತ್ರುವಾಗಿ ಅವರ ಪ್ರಯೋಜನವನ್ನು ನಾಶ ಮಾಡುವ ಮೂರ್ಖನಾಗುತ್ತಾನೆ. ಅವನಿಗೆ ಸದ್ಗತಿಯಾ- ಗುವುದಿಲ್ಲ.
ಏತತ್ ತೇ ಕಥಿತಂ ಸರ್ವಂ ಯಥಾವೃತ್ತಂ ಯುಧಿಷ್ಠಿರ |
ಸಮಾಸೇನ ಮಹದ್ ಹ್ಯೇತಚ್ಛ್ರೋತವ್ಯಂ ಭರತರ್ಷಭ ||50||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಭಕ್ಷ್ಯಾಭಕ್ಷ್ಯವಿಧಿರ್ನಾಮ ಸಪ್ತತ್ರಿಂಶೋಽಧ್ಯಾಯಃ ||37||
ಎಲೈ ಯುಧಿಷ್ಠಿರನೇ! ನೀನು ಕೇಳಿದ ಎಲ್ಲವನ್ನೂ ನಿನಗೆ ಸಂಕ್ಷೇಪವಾಗಿ ಹೇಳಿರುವೆನು. ಎಲೈ ಭರತರ್ಷಭನೇ! ಇವೆಲ್ಲವನ್ನೂ ಇನ್ನೂ ವಿಸ್ತಾರವಾಗಿ ಕೇಳ- ಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 37ನೆಯ ಅಧ್ಯಾಯವು ಮುಗಿಯಿತು.
0

## 38. ಮೂವತ್ತೆಂಟನೆಯ ಅಧ್ಯಾಯ
ಯುದ್ಧಾನಂತರದಲ್ಲಿ ಯುಧಿಷ್ಠಿರನ ಪುರಪ್ರವೇಶ
ಯುಧಿಷ್ಠಿರಃ
ಶ್ರೋತುಮಿಚ್ಛಾಮಿ ಭಗವನ್ ವಿಸ್ತರೇಣ ಮಹಾಮುನೇ |
ರಾಜಧರ್ಮಾನ್ ದ್ವಿಜಶ್ರೇಷ್ಠ ಚಾತುರ್ವರ್ಣ್ಯಸ್ಯ ಚಾಖಿಲಾನ್ ||1||
ಯುಧಿಷ್ಠಿರ ಪೂಜ್ಯರೇ! ಮಹಾಮುನಿಗಳೇ! ದ್ವಿಜಶ್ರೇಷ್ಠರೇ! ನಾನು ರಾಜ- ಧರ್ಮಗಳನ್ನೂ ಮತ್ತು ಚಾತುರ್ವರ್ಣ್ಯದ ಎಲ್ಲ ಧರ್ಮಗಳನ್ನೂ (ವಿಸ್ತಾರವಾಗಿ) ಕೇಳಲು ಬಯಸುತ್ತೇನೆ.
ಆಪತ್ಸು ಚ ಯಥಾ ನೀತಿರ್ವಿಧಾತವ್ಯಾ ಮಹೀಕ್ಷಿತಾ |
ಧರ್ಮ್ಯಮಾಲಂಬ್ಯ ಪಂಥಾನಂ ವಿಜಯೇಯಂ ಕಥಂ ಮಹೀಮ್ ||2||
ರಾಜನಾದವನು ಆಪತ್ತಿನ ಕಾಲದಲ್ಲಿ ಎಂತಹ ನೀತಿಯನ್ನು ಅನುಸರಿಸಬೇಕು? ನಾನು ಧರ್ಮಮಾರ್ಗವನ್ನು ಅವಲಂಬಿಸಿ ಹೇಗೆ ಭೂಮಿಯನ್ನು ಗೆದ್ದೇನು?
ಪ್ರಾಯಶ್ಚಿತ್ತಕಥಾ ಹ್ಯೇಷಾ ಭಕ್ಷ್ಯಾಭಕ್ಷ್ಯವಿವರ್ಜಿತಾ |
ಕೌತೂಹಲಾನುಪ್ರವಣಾ ಹರ್ಷಂ ಜನಯತೀವ ಮೇ ||3||
ನೀವು ಹೇಳಿದ ಭಕ್ಷ್ಯಾಭಕ್ಷ್ಯವಿವೇಚನೆಯು ಮತ್ತು ಪ್ರಾಯಶ್ಚಿತ್ತವಿಚಾರವು ನನಗೆ ಬಹಳ ಕುತೂಹಲವನ್ನು ಮತ್ತು ಸಂತೋಷವನ್ನು ಉಂಟು ಮಾಡಿವೆ.
ಧರ್ಮಚರ್ಯಾ ಚ ರಾಜ್ಯಂ ಚ ನಿತ್ಯಮೇವ ವಿರುದ್ಧ್ಯತೇ |
ಯೇನ ಮುಹ್ಯತಿ ಮೇ ಚೇತಶ್ಚಿಂತಯಾನಸ್ಯ ನಿತ್ಯಶಃ ||4||
ಧರ್ಮಾಚರಣೆಯು ಮತ್ತು ರಾಜ್ಯಪಾಲನವು ಎರಡೂ ಯಾವಾಗಲೂ ವಿರುದ್ಧವಾದವುಗಳು. ಆದ್ದರಿಂದ ನಾನು ಎಷ್ಟು ಚಿಂತಿಸಿದರೂ ನನ್ನ ಮನಸ್ಸಿಗೆ ಮೋಹವುಂಟಾಗುತ್ತಿದೆ.
ವೈಶಂಪಾಯನಃ
ತಮುವಾಚ ಮಹಾತೇಜಾ ವ್ಯಾಸೋ ವೇದವಿದಾಂವರಃ |

ನಾರದಂ ಸಮಭಿಪ್ರೇಕ್ಷ್ಯ ಸರ್ವಂ ಜಾನನ್ ಪುರಾತನಮ್ ॥5॥
ವೈಶಂಪಾಯನರು ವಿವಿಧವೇತ್ತರಲ್ಲಿ ಶ್ರೇಷ್ಠರಾದ, ಮಹಾತೇಜಸ್ವಿ- ಗಳಾದ ವ್ಯಾಸರು ಪುರಾತನವಾದ ಎಲ್ಲವನ್ನೂ ತಿಳಿದವರಾಗಿ ನಾರದರನ್ನು ನೋಡುತ್ತಾ ಯುಧಿಷ್ಠಿರನನ್ನು ಕುರಿತು ಮಾತನಾಡಿದರು.
ಶ್ರೋತುಮಿಚ್ಛಸಿ ಚೇದ್ ಧರ್ಮಾನಖಿಲೇನ ಯುಧಿಷ್ಠಿರ |
ಪ್ರೈಹಿ ಭೀಷ್ಮಂ ಮಹಾಬಾಹೋ ವೃದ್ಧಂ ಕುರುಪಿತಾಮಹಮ್ ॥6॥
ಎಲೈ ಯುಧಿಷ್ಠಿರನೇ! ನೀನು ಧರ್ಮಗಳನ್ನು ಸಮಗ್ರವಾಗಿ ಕೇಳಲು ಬಯ- ಸುವುದಾದರೆ ಎಲೈ ಮಹಾಬಾಹುವೇ! ಕುರುಪಿತಾಮಹರಾದ ವೃದ್ಧರಾದ ಭೀಷ್ಮರ ಬಳಿಗೆ ಹೋಗು.
ಸ ತೇ ಸರ್ವರಹಸ್ಯೇಷು ಸಂಶಯಾನ್ ಮನಸಿ ಸ್ಥಿತಾನ್ |
ಛೇತ್ತಾ ಭಾಗೀರಥೀಪುತ್ರಃ ಸರ್ವಜ್ಞಃ ಸರ್ವಧರ್ಮವಿತ್ ॥7॥
ಗಂಗಾಪುತ್ರರೂ ಸರ್ವಜ್ಞರೂ ಎಲ್ಲ ಧರ್ಮವನ್ನೂ ತಿಳಿದವರೂ ಆದ ಅವರು ಎಲ್ಲ ರಹಸ್ಯವಿಷಯಗಳಲ್ಲಿಯೂ ನಿನ್ನ ಮನಸ್ಸಿನಲ್ಲಿರುವ ಸಂಶಯಗಳನ್ನು ಪರಿಹರಿಸುವರು.
ಜನಯಾಮಾಸ ಯಂ ದೇವೀ ದಿವ್ಯಾ ತ್ರಿಪಥಗಾ ನದೀ |
ಸಾಕ್ಷಾದ್ ದದರ್ಶ ಯೋ ದೇವಾನ್ ಸರ್ವಾನ್ ಶಕ್ರಪುರೋಗಮಾನ್ ॥8
ಬೃಹಸ್ಪತಿಪುರೋಗಾಂಶ್ಚ ದೇವರ್ಷೀನಸಕೃತ್ ಪ್ರಭುಃ |
ತೋಷಯಿತ್ವೋಪಚಾರೇಣ ರಾಜನೀತಿಮಧೀತವಾನ್ ॥9॥
ತ್ರಿಪಥಗಾಮಿನಿಯಾದ ದೇವಗಂಗೆಯು ಯಾವನನ್ನು ಪುತ್ರನನ್ನಾಗಿ ಪಡೆ- ದಳೋ, ಯಾವನು ಇಂದ್ರುಮೊದಲಾದ ಎಲ್ಲ ದೇವತೆಗಳನ್ನೂ ಸಾಕ್ಷಾತ್ತಾಗಿ ನೋಡಿ- ದ್ದಾನೆಯೋ, ಯಾವನು ಬೃಹಸ್ಪತಿ ಮೊದಲಾದ ದೇವರ್ಷಿಗಳನ್ನು ಅನೇಕಬಾರಿ ನೋಡಿ ಪೂಜಿಸಿ, ಅವರನ್ನು ಸಂತೋಷಪಡಿಸಿ, ರಾಜನೀತಿಶಾಸ್ತ್ರವನ್ನು ಅಧ್ಯಯನ- ವನ್ನು ಮಾಡಿದ್ದಾನೆಯೋ (ಅಂತಹ ಭೀಷ್ಮರ ಬಳಿಗೆ ಹೋಗು).
ಉಶನಾ ವೇದ ಯಚ್ಛಾಸ್ತ್ರಂ ಯಚ್ಚ ದೇವಗುರುರ್ದ್ವಿಜಃ |
ತಚ್ಚ ಸರ್ವಂ ಸವ್ಯೆಯಾಖ್ಯಂ ಪ್ರಾಪ್ತವಾನ್ ಕುರುಸತ್ತಮಃ ॥10॥
ಶುಕ್ರಾಚಾರ್ಯರು ಯಾವ ಶಾಸ್ತ್ರವನ್ನು ತಿಳಿದಿದ್ದಾರೆಯೋ, ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ಯಾವ ಶಾಸ್ತ್ರವನ್ನು ತಿಳಿದಿದ್ದಾರೆಯೋ ಅವೆಲ್ಲವನ್ನೂ ವ್ಯಾಖ್ಯಾನಸಹಿತವಾಗಿ ಕುರುಶ್ರೇಷ್ಠರಾದ ಭೀಷ್ಮರು ತಿಳಿದಿದ್ದಾರೆ.
ಭಾರ್ಗವಾಚ್ಚ್ಯವನಾಚ್ಚಾಪಿ ವೇದಾನಂಗೋಪಬೃಂಹಿತಾನ್ |
ಪ್ರತಿಪೇದೇ ಮಹಾಬುದ್ಧಿರ್ವಸಿಷ್ಠಾಚ್ಚ ಯತವ್ರತಾತ್ ॥11॥
ಮಹಾಬುದ್ಧಿಶಾಲಿಗಳಾದ ಭೀಷ್ಮರು ಭಾರ್ಗವವಂಶದ ಚ್ಯವನರಿಂದ ಮತ್ತು ದೃಢವ್ರತರಾದ ವಸಿಷ್ಠರಿಂದ ಎಲ್ಲ ವೇದವೇದಾಂಗಗಳನ್ನು ಅಧ್ಯಯನ ಮಾಡಿದ್ದಾರೆ.
ಪಿತಾಮಹಸುತಂ ಜ್ಯೇಷ್ಠಂ ಕುಮಾರಂ ದೀಪ್ತತೇಜಸಮ್ |
ಅಧ್ಯಾತ್ಮಗತಿತತ್ತ್ವಜ್ಞಮುಪಾಶಿಕ್ಷತ ಯಃ ಪುರಾ ॥12॥
ಅದರ ಹಿಂದೆ ಬ್ರಹ್ಮದೇವರ ಜ್ಯೇಷ್ಠಪುತ್ರರೂ, ದೀಪ್ತವಾದ ತೇಜಸ್ಸುಳ್ಳವರೂ, ಅಧ್ಯಾತ್ಮಜ್ಞಾನನಿಪುಣರೂ ಆದ ಸನತ್ಕುಮಾರರಿಂದ ಶಿಕ್ಷಣವನ್ನು ಪಡೆದಿದ್ದಾರೆ.
ಮಾರ್ಕಂಡೇಯಮುಖಾತ್ ಕೃತ್ಸ್ನಂ ಯತಿಧರ್ಮಮವಾಪ್ತವಾನ್ |
ರಾಮಾದಸತ್ರಣಿ ಶಕ್ರಾಚ್ಚ ಪ್ರಾಪ್ತವಾನ್ ಭರತರ್ಷಭ ॥13॥
ಮಾರ್ಕಂಡೇಯರಿಂದ ಸಮಗ್ರವಾಗಿ ಯತಿಧರ್ಮಗಳನ್ನು ಕೇಳಿ ತಿಳಿದಿದ್ದಾರೆ. ಎಲೈ ಭರತರ್ಷಭನೇ! ಪರಶುರಾಮರಿಂದಲೂ ಮತ್ತು ಇಂದ್ರನಿಂದಲೂ ಅಸ್ತ್ರ- ಗಳನ್ನು ಪಡೆದಿದ್ದಾರೆ.
ಮೃತ್ಯುರಾತ್ಮೇಚ್ಛಯಾ ಯಸ್ಯ ಜಾತಸ್ಯ ಮನುಜೇಷ್ವಪಿ |
ತಥಾऽನಪತ್ಯಸ್ಯ ಸತಃ ಪುಣ್ಯಶ್ಲೋಕಾ ದಿವಿ ಶ್ರುತಾಃ ॥14॥
ಮನುಷ್ಯಲೋಕದಲ್ಲಿ ಜನಿಸಿದರೂ ಅವರಿಗೆ ಇಚ್ಛಾಮರಣವಿದೆ. ವಿವಾಹವನ್ನು ಮಾಡಿಕೊಳ್ಳದೆ ಮಕ್ಕಳನ್ನು ಪಡೆಯದ ಅವರ ಪವಿತ್ರವಾದ ಕೀರ್ತಿಯು ದೇವ- ಲೋಕದಲ್ಲಿ ಕೇಳಿಬರುತ್ತದೆ.
ಯಸ್ಯ ಬ್ರಹ್ಮರ್ಷಯಃ ಪುಣ್ಯಾ ನಿತ್ಯಮಾಸನ್ ಸಭಾಸದಃ |
ಯಸ್ಯ ನಾವಿದಿತಂ ಕಿಂಚಿಜ್ಜ್ಞಾನಜ್ಞೇಯೇಷು ವಿದ್ಯತೇ ॥15॥
ಅವರಿದ್ದ ಸಭೆಯಲ್ಲಿ ಪವಿತ್ರರಾದ ಬ್ರಹ್ಮರ್ಷಿಗಳು ಯಾವಾಗಲೂ ಸಭಾಸದ- ರಾಗಿದ್ದರು. ಜ್ಞಾನಜ್ಞೇಯಗಳ ವಿಷಯದಲ್ಲಿ ಅವರಿಗೆ ತಿಳಿಯದಿರುವುದು ಯಾವುದೂ ಇಲ್ಲ.
ಸ ತೇ ವಕ್ಷ್ಯತಿ ಧರ್ಮಜ್ಞಃ ಸೂಕ್ಷ್ಮಧರ್ಮಾರ್ಥತತ್ತ್ವವಿತ್ |
ತಮಭ್ಯೇಹಿ ಪುರಾ ಪ್ರಾಣಾನ್ ಸ ವಿಮುಂಚತಿ ಧರ್ಮವಿತ್ ॥16॥
ಸೂಕ್ಷ್ಮವಾದ ಧರ್ಮತತ್ವಗಳನ್ನು ಮತ್ತು ಅರ್ಥತತ್ವಗಳನ್ನು ಧರ್ಮಜ್ಞರಾದ ಅವರು ನಿನಗೆ ಎಲ್ಲವನ್ನೂ ಹೇಳುವರು. ಧರ್ಮಜ್ಞರಾದ ಅವರು ಪ್ರಾಣಗಳನ್ನು ತ್ಯಜಿಸುವುದಕ್ಕಿಂತ ಮೊದಲೇ ನೀನು ಅವರ ಬಳಿಗೆ ಹೋಗು.
ವೈಶಂಪಾಯನಃ
ಏವಮುಕ್ತಸ್ತು ಕೌಂತೇಯೋ ದೀರ್ಘಪ್ರಜ್ಞೋ ಮಹಾದ್ಯುತಿಃ |
ಉವಾಚ ವದತಾಂಶ್ರೇಷ್ಠಂ ವ್ಯಾಸಂ ಸತ್ಯವತೀಸುತಮ್ ॥17॥

ವೈಶಂಪಾಯನರು  ಹೀಗೆ ಹೇಳಲ್ಪಟ್ಟ ಕುಂತಿಯ ಪುತ್ರನೂ, ದೀರ್ಘಪ್ರಜ್ಞ- ಯುಳ್ಳವನೂ, ಮಹಾಕಾಂತಿಯುಕ್ತನೂ ಆದ ಯುಧಿಷ್ಠಿರನು ಸತ್ಯವತೀಸುತರೂ, ಮಾತನಾಡುವವರಲ್ಲಿ ಶ್ರೇಷ್ಠರೂ ಆದ ವ್ಯಾಸರನ್ನು ಕುರಿತು ಹೇಳಿದನು.
ವೈಶಸಂ ಸುಮಹತ್ ಕೃತ್ವಾ ಜ್ಞಾತೀನಾಂ ಲೋಮಹರ್ಷಣಮ್ |
ಆಗಸ್ಕೃತ್ ಸರ್ವಲೋಕಸ್ಯ ಪೃಥಿವೀನಾಶಕಾರಕಃ   ||18||
ಘಾತಯಿತ್ವಾ ತಮೇವಾಜೌ ಛಲೇನಾಜಿಹ್ಮಯೋಧಿನಮ್ |
ಉಪಸಂಪ್ರಷ್ಟುಮರ್ಹಾಮಿ ತಮಹಂ ಕೇನ ಹೇತುನಾ   ||19||
ದಾಯಾದಿಗಳಿಗೆ ರೋಮಾಂಚಕಾರಿಯಾದ ದೊಡ್ಡ ಹಿಂಸೆಯನ್ನು ಉಂಟು- ಮಾಡಿ, ಪೃಥ್ವಿಯ ನಾಶವನ್ನು ಉಂಟುಮಾಡಿ, ಸ್ವರ್ಗಲೋಕಕ್ಕೂ ಅಪಚಾರವನ್ನು ಮಾಡಿರುವ ನಾನು, ಕಪಟಯುದ್ಧವನ್ನು ಮಾಡದಿರುವ ಅದೇ ಭೀಷ್ಮರನ್ನು ಕಪಟ- ದಿಂದ ಘಾಸಿಗೊಳಿಸಿ, ಅವರ ಸಮೀಪಕ್ಕೆ ಹೋಗಲು ಹೇಗೆ ಅರ್ಹನಾಗುತ್ತೇನೆ?
ತತಸ್ತಂ ನೃಪತಿಶ್ರೇಷ್ಠಂ ಚಾತುರ್ವರ್ಣ್ಯಹಿತೇಪ್ಸಯಾ |
ಪುನರಾಹ ಮಹಾಬಾಹುರ್ಯದುಶ್ರೇಷ್ಠೋ ಮಹಾದ್ಯುತಿಃ   ||20||
ಆಗ ಮಹಾಬಾಹುವೂ, ಮಹಾದ್ಯುತಿಯೂ, ಯದುಶ್ರೇಷ್ಠನೂ ಆದ ಕೃಷ್ಣನು ಚಾತುರ್ವರ್ಣ್ಯಕ್ಕೆ ಹಿತವನ್ನುಂಟು ಮಾಡಲು ಬಯಸಿ ಆ ರಾಜಶ್ರೇಷ್ಠನನ್ನು ಕುರಿತು ಮಾತನಾಡಿದನು.
ಶ್ರೀಭಗವಾನ್
ನೇದಾನೀಮತಿನಿರ್ಬಂಧಂ ಶೋಕೇ ಕರ್ತುಮಿಹಾರ್ಹಸಿ |
ಯದಾಹ ಭಗವಾನ್ ವ್ಯಾಸಸ್ತತ್ ಕುರುಷ್ವ ನೃಪೋತ್ತಮ   ||21||
ಶ್ರೀಭಗವಾನ್  ಎಲೈ ನೃಪೋತ್ತಮನೇ! ಈಗ ನೀನು ಬಹಳವಾದ ಶೋಕ- ವನ್ನು ಮಾಡಲು ಅರ್ಹನಲ್ಲ; ಪೂಜ್ಯರಾದ ವ್ಯಾಸರು ಏನು ಹೇಳುತ್ತಾರೆಯೋ ಅದರಂತೆ ಮಾಡು.
ಬ್ರಾಹ್ಮಣಾಸತ್ತ್ವಂ ಮಹಾಬಾಹೋ ಭ್ರಾತರಶ್ಚ ಮಹೌಜಸಃ |
ಪರ್ಜನ್ಯಮಿವ ಘರ್ಮಾರ್ತಾ ಆಶಂಸಾನಾ ಉಪಾಸತೇ   ||22||
ಎಲೈ ಮಹಾಬಾಹುವೇ! ಮಹಾಪರಾಕ್ರಮಿಗಳಾದ ನಿನ್ನ ತಮ್ಮಂದಿರು ಮತ್ತು ಬ್ರಾಹ್ಮಣರು, ಬಿಸಿಲಿನಿಂದ ಬಳಲಿದವರು ಮಳೆಯನ್ನು ನಿರೀಕ್ಷಿಸುವಂತೆ, ನಿನ್ನಿಂದ ಶುಭವನ್ನು ಆಶಂಸಿಸುತ್ತಾ ನಿನ್ನನ್ನು ಉಪಾಸನೆ ಮಾಡುತ್ತಿದ್ದಾರೆ.
ಹತಶಿಷ್ಟಾಶ್ಚ ರಾಜಾನಃ ಕೃತ್ಸ್ನಂ ಚೈವ ಸಮಾಗತಮ್ |
ಚಾತುರ್ವರ್ಣ್ಯಂ ಮಹಾರಾಜ ರಾಷ್ಟ್ರಂ ತೇ ಕುರುಜಾಂಗಲಮ್  ||23||
ಅಳಿದುಳಿದ ರಾಜರೆಲ್ಲರೂ ಇಲ್ಲಿಗೆ ಬಂದಿದ್ದಾರೆ. ಎಲೈ ಮಹಾರಾಜನೇ! ಕುರುಜಾಂಗಲನಿವಾಸಿಗಳಾದ ಚಾತುರ್ವರ್ಣ್ಯಸಂಬಂಧಿಗಳಾದ ನಿನ್ನ ರಾಷ್ಟ್ರದ ಜನರೆಲ್ಲರೂ ಇಲ್ಲಿ ಬಂದಿದ್ದಾರೆ.
ಪ್ರಿಯಾರ್ಥಮಪಿ ಚೈತೇಷಾಂ ಬ್ರಾಹ್ಮಣಾನಾಂ ಮಹಾತ್ಮನಾಮ್ |
ನಿಯೋಗಾದಸ್ಯ ಚ ಗುರೋರ್ವ್ಯಾಸಸ್ಯಾಮಿತತೇಜಸಃ   ||24||
ಸುಹೃದಾಂ ಚಾಸ್ಮದಾದೀನಾಂ ದ್ರೌಪದ್ಯಾಶ್ಚ ಪರಂತಪ |
ಕುರು ಪ್ರಿಯಮಮಿತ್ರಘ್ನ ಲೋಕಸ್ಯ ಚ ಹಿತಂ ಕುರು   ||25||
ಈ ಮಹಾತ್ಮರಾದ ಬ್ರಾಹ್ಮಣರ ಪ್ರಿಯಾರ್ಥವಾಗಿ, ಅಮಿತತೇಜಸ್ವಿಗಳಾದ ಗುರುಗಳಾದ ವ್ಯಾಸರ ಆಜ್ಞೆಗೆ ಅನುಸಾರವಾಗಿ, ನಿನ್ನ ಹಿತೈಷಿಗಳಾದ ನಮ್ಮೆಲ್ಲರ ಮತ್ತು ದ್ರೌಪದಿಯ ಸಲುವಾಗಿ ಎಲೈ ಪರಂತಪನೇ! ಎಲೈ ಶತ್ರುಸೂದನನೇ! ಪ್ರಿಯವನ್ನು ಮಾಡುವವನಾಗು. ಲೋಕಕ್ಕೂ ಹಿತವನ್ನುಂಟುಮಾಡು.
ಏವಮುಕ್ತಸ್ತು ಕೃಷ್ಣೇನ ರಾಜಾ ರಾಜೀವಲೋಚನಃ |
ಹಿತಾರ್ಥಂ ಸರ್ವಲೋಕಸ್ಯ ಸಮುತ್ತಸ್ಥೌ ಮಹಾತಪಾಃ   ||26||
ಕೃಷ್ಣನಿಂದ ಹೀಗೆ ಹೇಳಲ್ಪಟ್ಟ ರಾಜೀವಲೋಚನನೂ, ಮಹಾತಪಸ್ವಿಯೂ ಆದ ಯುಧಿಷ್ಠಿರರಾಜನು ಸರ್ವಲೋಕಕ್ಕೆ ಹಿತವನ್ನುಂಟು ಮಾಡಲು ಉದ್ದೇಶಿಸಿ, ಎದ್ದು ನಿಂತನು.
ಸೋಽನುನೀತೋ ನರವ್ಯಾಘ್ರೋ ವಿಷ್ಟರಶ್ರವಸಾ ಸ್ವಯಮ್ |
ದ್ವೈಪಾಯನೇನ ಚ ತಥಾ ದೇವಸ್ಥಾನೇನ ಜಿಷ್ಣುನಾ ||27||
ಏತೈಶ್ಚಾನ್ಯೈಶ್ಚ ಬಹುಭಿರನುನೀತೋ ಯುಧಿಷ್ಠಿರಃ |
ವ್ಯಜಹಾನ್ಮಾನಸಂ ದುಃಖಂ ಸಂತಾಪಂ ಚ ಮಹಾಮನಾಃ   ||28||
ನರವ್ಯಾಘ್ರನಾದ ಅವನು ವಿಷ್ಣುವಿನ ಸ್ವರೂಪನಾದ ಜಿಷ್ಣುವಿನಿಂದಲೂ ವೇದ- ವ್ಯಾಸರಿಂದಲೂ ದೇವಸ್ಥಾನನಾಮಕ ಋಷಿಗಳಿಂದಲೂ ಅರ್ಜುನನಿಂದಲೂ ಮತ್ತು ಇನ್ನೂ ಅನೇಕರಿಂದಲೂ ಹೀಗೆ ಸಮಾಧಾನ ಪಡಿಸಲ್ಪಟ್ಟವನಾಗಿ ಧೈರ್ಯಶಾಲಿ- ಯಾದ ಅವನು ಮನಸ್ಸಿನ ದುಃಖವನ್ನು ಮತ್ತು ಸಂತಾಪವನ್ನು ತ್ಯಜಿಸಿದನು.
ಶ್ರುತವಾಕ್ಯಃ ಶ್ರುತನಿಧಿಃ ಶ್ರುತಶ್ರವ್ಯವಿಶಾರದಃ |
ವ್ಯವಸ್ಯ ಮನಸಃ ಶಾಂತಿಮಗಚ್ಛತ್ ಪಾಂಡುನಂದನಃ   ||29||
ವೇದವನ್ನು ಶ್ರವಣ ಮಾಡಿದ, ವಿದ್ಯಾನಿಧಿಯಾದ, ಕೇಳಬೇಕಾದುದನ್ನು ಕೇಳುವುದರಲ್ಲಿವಿಶಾರದನಾದ, ಪಾಂಡುನಂದನನಾದ ಅವನು ತನ್ನ ಮನಸ್ಸಿನಿಂದ ವಿಚಾರ ಮಾಡಿ ನಿರ್ಧರಿಸಿ ಶಾಂತಿಯನ್ನು ಹೊಂದಿದನು.
ಸ ತೈಃ ಪರಿವೃತೋ ರಾಜಾ ನಕ್ಷತ್ರೈರಿವ ಚಂದ್ರಮಾಃ |
ಧೃತರಾಷ್ಟ್ರಂ ಪುರಸ್ಕೃತ್ಯ ಸ್ವಪುರಂ ಪ್ರವಿವೇಶ ಹ   ||30||

ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆ ರಾಜನಾದ ಯುಧಿಷ್ಠಿರನು ಅವರೆ- ಲ್ಲರಿಂದಲೂ ಸುತ್ತುವರಿಯಲ್ಪಟ್ಟು ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ತನ್ನ ಪಟ್ಟಣವನ್ನು ಪ್ರವೇಶಿಸಿದನು.
ಪ್ರವಿವಿಕ್ಷುಃ ಸ ಧರ್ಮಜ್ಞಃ ಕುಂತೀಪುತ್ರೋ ಯುಧಿಷ್ಠಿರಃ |
ಅರ್ಚಯಾಮಾಸ ದೇವಾಂಶ್ಚ ಬ್ರಾಹ್ಮಣಾಂಶ್ಚ ಸಹಸ್ರಶಃ ॥31॥
ಧರ್ಮಜ್ಞನಾದ ಕುಂತೀಪುತ್ರನಾದ ಯುಧಿಷ್ಠಿರನು ಪುರವನ್ನು ಪ್ರವೇಶ ಮಾಡಲು ಬಯಸಿ ಮೊದಲು ದೇವತೆಗಳನ್ನೂ ಮತ್ತು ಸಹಸ್ರಾರುಸಂಖ್ಯಾಕರಾದ ಬ್ರಾಹ್ಮಣ- ರನ್ನೂ ಪೂಜಿಸಿದನು.
ತತೋ ರಥಂ ನವಂ ಶುಭ್ರಂ ಕಂಬಳಾಜಿನಸಂವೃತಮ್ |
ಯುಕ್ತಂ ಷೋಡಶಭಿರ್ಗೋಭಿಃ ಪಾಂಡರೈಃ ಶುಭಲಕ್ಷಣೈಃ ॥32॥
ಮಂತ್ರೈರಭ್ಯರ್ಚಿತಃ ಪುಣ್ಯೈಃ ಸ್ತೂಯಮಾನೋ ಮಹರ್ಷಿಭಿಃ |
ಆರುರೋಹ ಯಥಾ ದೇವಃ ಸೋಮೋಽಮೃತಮಯಂ ರಥಮ್ ॥33॥
ಅನಂತರ ಶುಭಲಕ್ಷಣವುಳ್ಳ ಹದಿನಾರು ಶ್ವೇತಾಶ್ವಗಳನ್ನು ಹೂಡಿದ, ರತ್ನಕಂಬಳಿ ಮತ್ತು ಅಜಿನಗಳಿಂದ ಸುತ್ತುವರೆಯಲ್ಪಟ್ಟ, ಶುಭ್ರವಾದ ಹೊಸದಾದ ರಥವನ್ನು ಮಹರ್ಷಿಗಳಿಂದ ಪುಣ್ಯವಚನಗಳಿಂದ ಸ್ತೋತ್ರಮಾಡಲ್ಪಟ್ಟು ಮತ್ತು ಮಂತ್ರಗಳಿಂದ ಸತ್ಕರಿಸಲ್ಪಟ್ಟು ಚಂದ್ರನು ಅಮೃತಮಯವಾದ ರಥವನ್ನು ಏರಿದಂತೆ ಏರಿದನು.
ಜಗ್ರಾಹ ರಶ್ಮೀನ್ ಕೌಂತೇಯೋ ಭೀಮೋ ಭೀಮಪರಾಕ್ರಮಃ |
ಅರ್ಜುನಃ ಪಾಂಡರಂ ಛತ್ರಂ ಧಾರಯಾಮಾಸ ಭಾನುಮತ್ ॥34॥
ಕುಂತೀಪುತ್ರನಾದ ಭಯಂಕರಪರಾಕ್ರಮವುಳ್ಳ ಭೀಮಸೇನನು ಅಶ್ವಗಳ ಕಡಿ- ವಾಣಗಳನ್ನು ಹಿಡಿದನು. ಅರ್ಜುನನು ಪ್ರಕಾಶಮಾನವಾದ ಶ್ವೇತಚ್ಛತ್ರವನ್ನು ಹಿಡಿ- ದನು.
ಧ್ರಿಯಮಾಣಂ ತು ತಚ್ಛತ್ರಂ ಪಾಂಡರಸ್ತಸ್ಯ ಮೂರ್ಧನಿ |
ಶುಶುಭೇ ತಾರಕಾರಾಜಸಿತಮಭ್ರಮಿವಾಂಬರೇ ॥35॥
ಅವನ ಶಿರಸ್ಸಿನ ಮೇಲೆ ಹಿಡಿದ ಆ ಶ್ವೇತಚ್ಛತ್ರವು ಆಕಾಶದಲ್ಲಿ ಚಂದ್ರನಿಂದ ಕೂಡಿದ ಮೋಡದಂತೆ ಶೋಭಿಸಿತು.
ಚಾಮರವ್ಯಜನೇ ಚಾಸ್ಯ ವೀರೌ ಜಗೃಹತುಸ್ತದಾ |
ಚಂದ್ರರಶ್ಮಿಪ್ರಭೇ ಶುಭ್ರೇ ಮಾದ್ರೀಪುತ್ರಾವಲಂಕೃತೇ ॥36॥
ಮಾದ್ರೀಪುತ್ರರಾದ ವೀರರಾದ ನಕುಲಸಹದೇವರು ಚಂದ್ರಕಿರಣಗಳ ಕಾಂತಿ- ಯುಳ್ಳ ಶುಭ್ರವಾದ ಅಲಂಕೃತವಾದ ಚಾಮರವ್ಯಜನಗಳನ್ನು ಹಿಡಿದರು.
ತೇ ಪಂಚ ರಥಮಾಸ್ಥಾಯ ಭ್ರಾತರಃ ಸಮಲಂಕೃತಾಃ |
ಭೂತಾನೀವ ಸಮಸ್ತಾನಿ ರಾಜನ್ ದದೃಶಿರೇ ತದಾ ॥37॥
ಎಲೈ ರಾಜನೇ! ಅಲಂಕೃತರಾಗಿ ರಥವನ್ನು ಏರಿದ ಆ ಐವರು ಸಹೋದರರು ಒಂದು ಗೂಡಿದ ಪಂಚಭೂತಗಳಂತೆ ಆಗ ಕಂಡುಬಂದರು.
ಆಸ್ಥಾಯ ತು ರಥಂ ಶುಭ್ರಂ ಯುಕ್ತಮಶ್ವೈರ್ಮಹಾಜವೈಃ |
ಅನ್ವಯಾತ್ ಪೃಷ್ಠತೋ ರಾಜನ್ ಯುಯುತ್ಸುಃ ಪಾಂಡವಾಗ್ರಜಮ್ ॥38
ಎಲೈ ರಾಜನೇ! ಯುಯುತ್ಸುವು ಮಹಾವೇಗವುಳ್ಳ ಅಶ್ವಗಳಿಂದ ಕೂಡಿದ ಶುಭ್ರವಾದ ರಥವನ್ನು ಏರಿ ಪಾಂಡವರ ಹಿರಿಯನಾದ ಯುಧಿಷ್ಠಿರನನ್ನು ಹಿಂಬಾಲಿ- ಸಿದನು.
ರಥಂ ಹೇಮಮಯಂ ಶುಭ್ರಂ ಸೈನ್ಯಸುಗ್ರೀವಯೋಜಿತಮ್ |
ಸಹ ಸಾತ್ಯಕಿನಾ ಕೃಷ್ಣಃ ಸಮಾಸ್ಥಾಯಾನ್ವಯಾತ್ ಕುರೂನ್ ॥39॥
ಕೃಷ್ಣನು ಸೈನ್ಯಸುಗ್ರೀವ ಅಶ್ವಗಳನ್ನು ಹೂಡಿದ ಸುವರ್ಣಮಯವಾದ ಶುಭ್ರ- ವಾದ ರಥವನ್ನು ಸಾತ್ಯಕಿಯ ಜೊತೆಯಲ್ಲಿ ಏರಿ, ಕುರುಗಳನ್ನು ಹಿಂಬಾಲಿಸಿದನು.
ನರಯಾನೇನ ತು ಜ್ಯೇಷ್ಠಃ ಪಿತಾ ಪಾರ್ಥಸ್ಯ ಭಾರತ |
ಅಗ್ರತೋ ಧರ್ಮರಾಜಸ್ಯ ಗಾಂಧಾರೀಸಹಿತೋ ಯಯೌ ॥40॥
ಎಲೈ ಭಾರತನೇ! ವೃದ್ಧನೂ ತಂದೆಯೂ ಆದ ಧೃತರಾಷ್ಟ್ರನು ಧರ್ಮರಾಜನ ಮುಂಭಾಗದಲ್ಲಿ ಗಾಂಧಾರಿಯ ಜೊತೆಯಲ್ಲಿ ಪಲ್ಲಕ್ಕಿಯ ಮೇಲೆ ಹೊರಟನು.
ಕುರುಸ್ತ್ರಿಯಶ್ಚ ತಾಃ ಸರ್ವಾಃ ಕುಂತೀ ಕೃಷ್ಣಾ ಚ ದ್ರೌಪದೀ |
ಯಾನೈರುಚ್ಚಾವಚೈರ್ಜಗ್ಮುರ್ವಿದುರೇಣ ಪುರಸ್ಕೃತಾಃ ॥41॥
ಎಲ್ಲಾ ಕುರುಸ್ತ್ರೀಯರೂ ಕುಂತೀ ಮತ್ತು ದ್ರುಪದಪುತ್ರಿಯಾದ ಕೃಷ್ಣೆ ಇವರೂ ಶ್ರೇಷ್ಠ-ಕನಿಷ್ಠವಾದ ವಾಹನಗಳನ್ನು ಏರಿ, ವಿದುರನನ್ನು ಮುಂದೆ ಮಾಡಿಕೊಂಡು ಹೊರಟರು.
ತತೋ ರಥಾಶ್ಚ ಬಹುಲಾ ನಾಗಾಶ್ಚ ಸಮಲಂಕೃತಾಃ |
ಪಾದಾತಾಶ್ಚ ಹಯಾಶ್ಚೈವ ಪೃಷ್ಠತಃ ಸಮನುವ್ರಜನ್ ॥42॥
ಅನಂತರ ಅನೇಕ ರಥಗಳು, ಅಲಂಕೃತವಾದ ಗಜಗಳು, ಅಶ್ವಗಳು ಮತ್ತು ಪದಾತಿಗಳು ಅವರನ್ನು ಹಿಂಬಾಲಿಸಿದವು.
ತತೋ ವೈತಾಲಿಕೈಃ ಸೂತೈರ್ಮಾಗಧೈಶ್ಚ ಸುಭಾಷಿತೈಃ |
ಸ್ತೂಯಮಾನೋ ಯಯೌ ರಾಜಾ ನಗರಂ ನಾಗಸಾಹ್ವಯಮ್ ॥43॥
ಅನಂತರ ವೈತಾಲಿಕರಿಂದಲೂ, ಒಳ್ಳೆಯ ರೀತಿಯಲ್ಲಿ ಸ್ತೋತ್ರವನ್ನು ಮಾಡುವ ಸೂತಮಾಗಧರಿಂದಲೂ ಸ್ತೋತ್ರಮಾಡಲ್ಪಟ್ಟು

ಯುಧಿಷ್ಠಿರರಾಜನು ಹಸ್ತಿನಪುರಕ್ಕೆ ಹೊರಟನು.
ತತ್ ಪ್ರಯಾಣಂ ಮಹಾಬಾಹೋರ್ಬಭೂವಾಪ್ರತಿಮಂ ಭುವಿ |
ಆಕುಲಾಕುಲಮುತ್ಕೃಷ್ಟಂ ಹೃಷ್ಟಪುಷ್ಟಜನಾನ್ವಿತಮ್ ||44||
ಸಂತೋಷದಿಂದ ಕೂಡಿದ ಜನಗಳಿಂದ ಬಹಳವಾಗಿ ನಿಬಿಡವಾಗಿ ಅನೇಕ ರೀತಿಯ ಜಯಘೋಷಗಳಿಂದ ಕೂಡಿದ
ಮಹಾಬಾಹುವಾದ ಯುಧಿಷ್ಠಿರನ ಆ ಪ್ರಯಾಣವು ಭೂಮಿಯಲ್ಲಿ ಅಸದೃಶವಾಗಿದ್ದಿತು.
ಅಭಿಯಾನೇ ತು ಪಾರ್ಥಸ್ಯ ನರೈರ್ನಗರವಾಸಿಭಿಃ |
ನಗರಂ ರಾಜಮಾರ್ಗಶ್ಚ ಯಥಾವತ್ ಸಮಲಂಕೃತಮ್ ||45||
ಕುಂತೀಪುತ್ರನಾದ ಯುಧಿಷ್ಠಿರನು ನಗರವನ್ನು ಪ್ರವೇಶಿಸುತ್ತಿರಲು ನಗರವಾಸಿ- ಗಳಾದ ಜನರು ನಗರವನ್ನು ಮತ್ತು ರಾಜಮಾರ್ಗವನ್ನು
ಚೆನ್ನಾಗಿ ಅಲಂಕಾರ ಮಾಡಿದ್ದರು.
ಪಾಂಡರೇಣ ಚ ಮಾಲ್ಯೇನ ಪತಾಕಾಭಿಶ್ಚ ವೇದಿಭಿಃ |
ಸಂವೃತೋ ರಾಜಮಾರ್ಗಶ್ಚ ಧೂಪನೈಶ್ಚ ಸುಧೂಪಿತಃ ||46||
ರಾಜಮಾರ್ಗದಲ್ಲಿ ಶ್ವೇತಪುಷ್ಪದ ಮಾಲೆಗಳು, ಪತಾಕೆಗಳು, ವೇದಿಕೆಗಳು, ಒಳ್ಳೆಯ ಧೂಪಗಳು ನಿಬಿಡವಾಗಿದ್ದವು.
ಅಥ ಚೂರ್ಣೈಶ್ಚ ಗಂಧಾನಾಂ ನಾನಾಪುಷ್ಪೈಃ ಪ್ರಿಯಂಗುಭಿಃ |
ಮಾಲ್ಯದಾಮಭಿರಾಸಕ್ತೈಃ ರಾಜವೇಶ್ಮಾಭಿಸಂವೃತಮ್ ||47||
ರಾಜಮಾರ್ಗವು ಗಂಧದ ಚೂರ್ಣಗಳು, ನಾನಾ ಪುಷ್ಪಗಳು, ಪ್ರಿಯಂಗು (ನವಣೆ) ಮೊದಲಾದ ಮಂಗಳಧಾನ್ಯಗಳು, ಹೂಮಾಲೆಗಳು
ಇವುಗಳಿಂದ ಅಲಂಕೃತವಾಗಿದ್ದ ರಾಜರಿಗೆ ಯೋಗ್ಯವಾದ ಗೃಹಗಳಿಂದ ಕೂಡಿದ್ದಿತು.
ಕುಂಭಾಶ್ಚ ನಗರದ್ವಾರಿ ವಾರಿಪೂರ್ಣಾ ದೃಢಾ ನವಾಃ |
ಕನ್ಯಾಃ ಸುಮನಸಶ್ಚಾಗಾಃ ಸ್ಥಾಪಿತಾಸ್ತತ್ರ ತತ್ರ ಹ ||48||
ನಗರದ ಪ್ರವೇಶದ್ವಾರದಲ್ಲಿ ದೃಢವಾದ ಹೊಸದಾದ ಜಲಪೂರ್ಣವಾದ ಕುಂಭಗಳು, ಅಲಂಕೃತರಾದ ಕನ್ಯೆಯರು, ಪುಷ್ಪಗಳು,
ಹೋತಗಳು ಅಲ್ಲಲ್ಲಿ ಇಡಲ್ಪಟ್ಟಿದ್ದವು.
ತಥಾ ಸ್ವಲಂಕೃತದ್ವಾರಂ ನಗರಂ ಪಾಂಡುನಂದನಃ |
ಸ್ತೂಯಮಾನಃ ಶುಭೈರ್ವಾಕ್ಯೈಃ ಪ್ರವಿವೇಶ ಸುಹೃದ್ವೃತಃ ||49||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ
ಅಷ್ಟತ್ರಿಂಶೋಽಧ್ಯಾಯಃ ||38||
ಪಾಂಡುನಂದನನಾದ ಯುಧಿಷ್ಠಿರನು ತನ್ನ ಸುಹೃಜ್ಜನಗಳಿಂದ ಕೂಡಿದವನಾಗಿ, ಶುಭವಾಕ್ಯಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ
ಪ್ರವೇಶದ್ವಾರವನ್ನೇ ಅಷ್ಟು ಚೆನ್ನಾಗಿ ಅಲಂಕಾರ ಮಾಡಿದ ನಗರವನ್ನು ಪ್ರವೇಶಿಸಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು.
39. ಮೂವತ್ತೊಂಭತ್ತನೆಯ ಅಧ್ಯಾಯ
ಯುಧಿಷ್ಠಿರನ ರಾಜಗೃಹಪ್ರವೇಶ ಮತ್ತು ಸಭಾಪ್ರವೇಶ. ಚಾರ್ವಾಕರಾಕ್ಷಸನಿಂದ
ಯುಧಿಷ್ಠಿರನ ನಿಂದೆ. ಬ್ರಾಹ್ಮಣರಿಂದ ಚಾರ್ವಾಕನ ಭಸ್ಮೀಕರಣ.
ವೈಶಂಪಾಯನಃ
ಪ್ರವೇಶನೇ ತು ಪಾರ್ಥಾನಾಂ ಜನಸ್ಯ ಪುರವಾಸಿನಃ |
ದಿದೃಕ್ಷೂಣಾಂ ಸಹಸ್ರಾಣಿ ಸಮಾಜಗ್ಮುರ್ಬಹೂನ್ಯಥ ||1||
ವೈಶಂಪಾಯನರು  ಪಾಂಡವರು ಪುರವನ್ನು ಪ್ರವೇಶಿಸುತ್ತಿರುವಾಗ ಅವರನ್ನು ನೋಡಲು ಬಯಸಿದ ಪುರಜನರು
ಅನೇಕಸಹಸ್ರಸಂಖ್ಯೆಗಳಲ್ಲಿ ರಾಜಮಾರ್ಗದಲ್ಲಿ ನೆರೆದರು.
ಸ ರಾಜಮಾರ್ಗಃ ಶುಶುಭೇ ಸಮಲಂಕೃತಚತ್ವರಃ |
ಯಥಾ ಚಂದ್ರೋದಯೇ ರಾಜನ್ ವರ್ಧಮಾನೋ ಮಹೋದಧಿಃ ||2||
ಎಲೈ ರಾಜನೇ! ಚಂದ್ರೋದಯಕಾಲದಲ್ಲಿ ಉಕ್ಕುವ ಸಮುದ್ರದಂತೆ ಆ ರಾಜ- ಮಾರ್ಗವು ಅಲಂಕೃತವಾದ ಅಂಗಳಗಳಿಂದ ಮತ್ತು
ಚತುಷ್ಪಥಗಳಿಂದ ಕೂಡಿ ಶೋಭಿಸಿತು.
ಗೃಹಾಣಿ ರಾಜಮಾರ್ಗೇ ತು ರತ್ನವಂತಿ ಬೃಹಂತಿ ಚ |
ಪ್ರಾಕಂಪಂತೇವ ಭಾರೇಣ ಸ್ತ್ರೀಣಾಂ ಪೂರ್ಣಾನಿ ಭಾರತ ||3||
ಎಲೈ ಭಾರತನೇ! ರಾಜಮಾರ್ಗದಲ್ಲಿದ್ದ ರತ್ನಪೂರ್ಣವಾದ ದೊಡ್ಡ ಗೃಹಗಳು ಸ್ತ್ರೀಯರ ಭಾರದಿಂದ ಕಂಪಿಸುವಂತೆ ತೋರುತ್ತಿದ್ದವು.
ತಾಃ ಶನೈರಿವ ಸವ್ರೀಡಂ ಪ್ರಶಶಂಸುರ್ಯುಧಿಷ್ಠಿರಮ್ |
ಭೀಮಸೇನಾರ್ಜುನೌ ಚೈವ ಮಾದ್ರೀಪುತ್ರೌ ಚ ಪಾಂಡವೌ ||4||
ಆ ಸ್ತ್ರೀಯರು ನಾಚಿಕೆಯಿಂದ ನಿಧಾನವಾಗಿ ಪಾಂಡವರಾದ ಯುಧಿಷ್ಠಿರನನ್ನೂ, ಭೀಮಸೇನಾರ್ಜುನರನ್ನೂ ಹಾಗೆಯೇ
ಮಾದ್ರೀಪುತ್ರರನ್ನೂ ಪ್ರಶಂಸೆ ಮಾಡಿದರು.
ಧನ್ಯಾ ತ್ವಮಸಿ ಪಾಂಚಾಲಿ ಯಾ ತ್ವಂ ಪುರುಷಸತ್ತಮಾನ್ |
ಉಪತಿಷ್ಠಸಿ ಕಲ್ಯಾಣಿ ಮಹರ್ಷೀನಿವ ಗೌತಮೀ ||5||
ದ್ರೌಪದಿಯೇ! ಕಲ್ಯಾಣಿಯೇ! ಮಹರ್ಷಿಗಳಂತಿರುವ ಪುರುಷಶ್ರೇಷ್ಠರಾದ ಪಾಂಡವರನ್ನು ಅಹಲ್ಯೆಯಂತೆ ಸೇವಿಸುವ ನೀನು
ಧನ್ಯಳಾದವಳು.

ತವ ಕರ್ಮಾಣ್ಯಮೋಘಾನಿ ವ್ರತಚರ್ಯಾ ಚ ಭಾಮಿನಿ |
ಇತಿ ಕೃಷ್ಣಾಂ ಮಹಾರಾಜ ಪ್ರಶಶಂಸುಸ್ತದಾ ಸ್ತ್ರಿಯಃ ॥6॥
ಎಲೌ ಭಾಮಿನಿಯೇ! ನಿನ್ನ ಕಾರ್ಯಗಳು ಮತ್ತು ವ್ರತಚರ್ಯೆಯು ಅಮೋಘ -ವಾದವುಗಳು ಎಂದು ಎಲೈ ಮಹಾರಾಜನೇ! ಸ್ತ್ರೀಯರು ಆಗ ದ್ರೌಪದಿಯನ್ನು ಪ್ರಶಂಸೆ ಮಾಡಿದರು.
ಪ್ರಶಂಸಾವಚನೈಸ್ತಾಸಾಂ ಮಿಥಃಶಬ್ದೈಶ್ಚ ಭಾರತ |
ಪ್ರೀತಿಜೈಶ್ಚ ತದಾ ಶಬ್ದೈಃ ಪುರಮಾಸೀತ್ ಸಮಾಕುಲಮ್ ॥7॥
ಎಲೈ ಭಾರತನೇ! ಆಗ ಅಂತಹ ಪ್ರಶಂಸಾವಚನಗಳಿಂದಲೂ, ಸಂತೋಷದಿಂದ ಪ್ರಜೆಗಳು ಪರಸ್ಪರ ಮಾತನಾಡುವ ಶಬ್ದಗಳಿಂದಲೂ ಆ ಪಟ್ಟಣವು ತುಂಬಿ ಹೋಯಿತು.
ತಮತೀತ್ಯ ಯಥಾಯುಕ್ತಂ ರಾಜಮಾರ್ಗಂ ಯುಧಿಷ್ಠಿರಃ |
ಅಲಂಕೃತಂ ಶೋಭಮಾನಮುಪಯಾದ್ ರಾಜವೇಶ್ಮ ಹ ॥8॥
ಯುಧಿಷ್ಠಿರನು ಆ ರೀತಿಯಲ್ಲಿ ಅಲಂಕೃತವಾಗಿದ್ದ ರಾಜಮಾರ್ಗವನ್ನು ದಾಟಿ, ಅಲಂಕೃತವಾಗಿ ಶೋಭಿಸುತ್ತಿದ್ದ ರಾಜಗೃಹದ ಸಮೀಪಕ್ಕೆ ಬಂದನು.
ತತಃ ಪ್ರಕೃತಯಃ ಸರ್ವಾಃ ಪೌರಜಾನಪದಾಸ್ತಥಾ |
ಊಚುಃ ಕಥಾಃ ಕರ್ಣಸುಖಾಃ ಸಮುಪೇತ್ಯ ತತಸ್ತತಃ ॥9॥
ಆಗ ರಾಜಧಾನಿಯ ಮತ್ತು ರಾಷ್ಟ್ರದ ಪ್ರಜೆಗಳೆಲ್ಲರೂ ಅಲ್ಲಲ್ಲಿಂದ ಬಂದು ಸೇರಿ, ಕರ್ಣಸುಖಕರವಾದ ಮಾತುಗಳನ್ನು ಆಡಿದರು.
ದಿಷ್ಟ್ಯಾ ಜಯಸಿ ರಾಜೇಂದ್ರ ಶತ್ರೂನ್ ಶತ್ರುನಿಷೂದನ |
ದಿಷ್ಟ್ಯಾರಾಜ್ಯಂ ಪುನಃ ಪ್ರಾಪ್ತಂ ಧರ್ಮೇಣ ಚ ಬಲೇನ ಚ ॥10॥
ಎಲೈ ರಾಜೇಂದ್ರನೇ! ದೇವರ ದಯದಿಂದ ನೀನು ಜಯವನ್ನು ಗಳಿಸಿದ್ದೀಯೆ. ಎಲೈ ಶತ್ರುಸಂಹಾರಕನೇ! ನೀನು ಶತ್ರುಗಳನ್ನು ಸಂಹರಿಸಿ, ದೇವರ ದಯದಿಂದ ಮತ್ತು ನಿನ್ನ ಧರ್ಮ ಮತ್ತು ಬಲದಿಂದ ರಾಜ್ಯವನ್ನು ಪುನಃ ಪಡೆದಿದ್ದೀಯೆ.
ಭವ ನಸ್ತ್ವಂ ಮಹಾರಾಜ ರಾಜೇಹ ಶರದಾಂ ಶತಮ್ |
ಪ್ರಜಾಃ ಪಾಲಯ ಧರ್ಮೇಣ ಯಥೇಂದ್ರಸ್ತ್ರಿದಿವಂ ನೃಪ ॥11॥
ಎಲೈ ಮಹಾರಾಜನೇ! ನೀನು ನೂರು ವರ್ಷಗಳ ಕಾಲ ಇಲ್ಲಿ ನಮಗೆ ರಾಜ- ನಾಗು. ಎಲೈ ರಾಜನೇ! ಇಂದ್ರನು ಸ್ವರ್ಗವನ್ನು ಆಳುವಂತೆ ಧರ್ಮದಿಂದ ನಮ್ಮನ್ನು ರಕ್ಷಿಸುವವನಾಗು.
ಏವಂ ರಾಜಕುಲದ್ವಾರಿ ಮಂಗಲೈರಭಿಪೂಜಿತಃ |
ಆಶೀರ್ವಾದಾನ್ ದ್ವಿಜೈರುಕ್ತಾನ್ ಪ್ರತಿಗೃಹ್ಯ ಸಮಂತತಃ ॥12॥
ಪ್ರವಿಶ್ಯ ಭವನಂ ರಾಜಾ ದೇವರಾಜಗೃಹೋಪಮಮ್ |
ಶ್ರುತ್ವಾ ವಿಜಯಸಂಯುಕ್ತಂ ರಥಾತ್ ಪಶ್ಚಾದವಾತರತ್ ॥13॥
ಈ ರೀತಿಯಲ್ಲಿ ರಾಜಗೃಹದ ದ್ವಾರದಲ್ಲಿ ಮಂಗಳ ವಚನಗಳಿಂದ ಸತ್ಕೃತನಾಗಿ, ಎಲ್ಲ ಕಡೆಗಳಲ್ಲಿಯೂ ನೆರೆದ ಬ್ರಾಹ್ಮಣರಿಂದ ಹೇಳಲ್ಪಟ್ಟ ಆಶೀರ್ವಾದಗಳನ್ನು ಸ್ವೀಕರಿಸಿ, ದೇವರಾಜನಾದ ಇಂದ್ರನ ಮನೆಯಂತಿದ್ದ ರಾಜಭವನವನ್ನು ಪ್ರವೇಶಿಸಿ, ಜಯಕಾರದ ವಚನಗಳನ್ನು ಕೇಳಿ ರಾಜನಾದ ಯುಧಿಷ್ಠಿರನು ತನ್ನ ರಥದಿಂದ ಇಳಿದನು.
ಪ್ರವಿಶ್ಯಾಭ್ಯಂತರಂ ಶ್ರೀಮಾನ್ ದೈವತಾನ್ಯಭಿಗಮ್ಯ ಚ |
ಪೂಜಯಾಮಾಸ ರತ್ನೈಶ್ಚ ಗಂಧೈರ್ಮಾಲ್ಯೈಶ್ಚ ಸರ್ವಶಃ ॥14॥
ಸಂಪದ್ಯುಕ್ತನಾದ ಅವನು ರಾಜಭವನದ ಒಳಭಾಗವನ್ನು ಪ್ರವೇಶಿಸಿ, ದೇವತೆ- ಗಳಿಗೆ ನಮಸ್ಕಾರವನ್ನು ಮಾಡಿ, ರತ್ನಗಳಿಂದಲೂ, ಗಂಧಮಾಲ್ಯಗಳಿಂದಲೂ ಎಲ್ಲ ಕಡೆಗಳಲ್ಲಿಯೂ ದೇವತೆಗಳನ್ನು ಪೂಜಿಸಿದನು.
ನಿಶ್ಚಕ್ರಾಮ ತತಃ ಶ್ರೀಮಾನ್ ಪುನರೇವ ಮಹಾಯಶಾಃ |
ದದರ್ಶ ಬ್ರಾಹ್ಮಣಾಂಶ್ಚೈವ ಸೋಽಭಿರೂಪಾನುಪಸ್ಥಿತಾನ್ ॥15॥
ಮಹಾಕೀರ್ತಿವಂತನೂ ಸಂಪದ್ಯುಕ್ತನೂ ಆದ ಯುಧಿಷ್ಠಿರನು ಅನಂತರ ಹೊರಗೆ ಬಂದು ಯೋಗ್ಯವಾದ ರೀತಿಯಲ್ಲಿ ಉಪಸ್ಥಿತರಾಗಿದ್ದ ಬ್ರಾಹ್ಮಣರನ್ನು ನೋಡಿದನು.
ಸ ಸಂವೃತಸ್ತದಾ ವಿಪ್ರೈರಾಶೀರ್ವಾದವಿವಕ್ಷುಭಿಃ |
ಶುಶುಭೇ ವಿಮಲಶ್ಚಂದ್ರಸ್ತಾರಾಗಣವೃತೋ ಯಥಾ ॥16॥
ಆಶೀರ್ವಾದ ವಚನಗಳನ್ನು ಹೇಳಲು ಬಯಸಿದ ಬ್ರಾಹ್ಮಣರಿಂದ ಸುತ್ತುವರಿ- ಯಲ್ಪಟ್ಟ ಅವನು ಆಗ ನಕ್ಷತ್ರಗಣಗಳಿಂದ ಸಂವೃತನಾದ ಪರಿಶುದ್ಧನಾದ ಚಂದ್ರನಂತೆ ಶೋಭಿಸಿದನು.
ತಾನ್ ಸ ಸಂಪೂಜಯಾಮಾಸ ಕೌಂತೇಯೋ ವಿಧಿವದ್ ದ್ವಿಜಾನ್ |
ಧೌಮ್ಯಂ ಗುರುಂ ಪುರಸ್ಕೃತ್ಯ ಜ್ಯೇಷ್ಠಂ ಪಿತರಮೇವ ಚ ॥17॥
ಸುಮನೋಮೋದಕೈ ರತ್ನೈರ್ಹಿರಣ್ಯೇನ ಚ ಭೂರಿಣಾ |
ಗೋಭಿರ್ವಸ್ತ್ರೈಶ್ಚ ರಾಜೇಂದ್ರ ವಿವಿಧೈಶ್ಚ ಕಿಮಿಚ್ಛಕೈಃ ॥18॥
ಎಲೈ ರಾಜೇಂದ್ರನೇ! ಆಗ ಕುಂತೀಪುತ್ರನಾದ ಯುಧಿಷ್ಠಿರನು ಗುರುಗಳಾದ ಧೌಮ್ಯರನ್ನು, ಮತ್ತು ಜ್ಯೇಷ್ಠನಾದ ತಂದೆಯಾದ ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ಪುಷ್ಪಗಳಿಂದಲೂ ಮೋದಕಗಳಿಂದಲೂ ಬಹುವಾದ ಸುವರ್ಣ- ರತ್ನಗಳಿಂದಲೂ ಗೋವುಗಳಿಂದಲೂ ವಸ್ತ್ರಗಳಿಂದಲೂ ಅವರು ಬಯಸಿದ ಇನ್ನೂ ಅನೇಕವಸ್ತುಗಳಿಂದಲೂ ಆ ಬ್ರಾಹ್ಮಣರನ್ನು ವಿಧಿವತ್ತಾಗಿ ಪೂಜಿಸಿದನು.

ತತಃ ಪುಣ್ಯಾಹಘೋಷೋಽಭೂದ್ ದಿವಂ ಸ್ತಬ್ಧ್ವೇವ ಭಾರತ |
ಸುಹೃದಾಂ ಹರ್ಷಜನನಃ ಪುಣ್ಯಃ ಶ್ರುತಿಸುಖಾವಹಃ ॥19॥
ಎಲೈ ಭಾರತನೇ! ಅನಂತರ ಸಹೃಜ್ಜನರ ಸಂತೋಷದಿಂದ ಉಂಟಾದ ಕರ್ಣ- ಸುಖಕರವಾದ ಪವಿತ್ರವಾದ ಪುಣ್ಯಾಹಘೋಷವು ಆಕಾಶವನ್ನು ಆವರಿಸುವಂತೆ ಕೇಳಿಬಂದಿತು.
ಹಂಸವನ್ನೇದುಷಾಂ ರಾಜನ್ ದ್ವಿಜಾನಾಂ ತತ್ರ ಭಾರತೀ |
ಶುಶ್ರುವೇ ವೇದವಿದುಷೋ ಪುಷ್ಕಲಾರ್ಥಪದಾಕ್ಷರಾ ॥20॥
ಎಲೈ ರಾಜನೇ! ಹಂಸದಂತೆ ಉಲಿಯುವ ವೇದವಿದ್ವಾಂಸರಾದ ಬ್ರಾಹ್ಮಣರ ಬಹ್ವರ್ಥಗರ್ಭಿತವಾದ ಪದಾಕ್ಷರಗಳಿಂದ ಕೂಡಿದ ಪುಣ್ಯಾಹಶಬ್ದವು ಕೇಳಿಬಂದಿತು.
ತತೋ ದುಂದುಭಿನಿರ್ಘೋಷಃ ಶಂಖಾನಾಂ ಚ ಮನೋರಮಃ |
ಜಯಂ ಪ್ರವದತಾಂ ತತ್ರ ಸ್ವನಃ ಪ್ರಾದುರಭೂನ್ನೃಪ ॥21॥
ಎಲೈ ರಾಜನೇ! ಅನಂತರ ಜಯಕಾರವನ್ನು ಮಾಡುವವರ ದುಂದುಭಿ- ಘೋಷವು ಮತ್ತು ಮನೋಹರವಾದ ಶಂಖಗಳ ಶಬ್ದವು ಕೇಳಿಬಂದಿತು.
ನಿಃಶಬ್ದೇ ಚ ಸ್ಥಿತೇ ತತ್ರ ತತೋ ವಿಪ್ರಜನೇ ಪುನಃ |
ರಾಜಾನಂ ಬ್ರಾಹ್ಮಣಚ್ಛದ್ಮಾ ಚಾರ್ವಾಕೋ ರಾಕ್ಷಸೋಽಬ್ರವೀತ್ ॥22॥
ಪುನಃ ಬ್ರಾಹ್ಮಣರು ಮೌನವಾಗಿ ನಿಂತು ನಿಃಶಬ್ದವಾಗಿರುವಾಗ ಕಪಟಬ್ರಾಹ್ಮಣ- ವೇಷದಲ್ಲಿದ್ದ ಚಾರ್ವಾಕರಾಕ್ಷಸನು ಯುಧಿಷ್ಠಿರನನ್ನು ಕುರಿತು ಹೇಳಿದನು.
ತತ್ರ ದುರ್ಯೋಧನಸಖಾ ಭಿಕ್ಷುರೂಪೇಣ ಸಂವೃತಃ |
ಸಾಕ್ಷಃ(ಸಾಂಖ್ಯಃ) ಶಿಖೀ ತ್ರಿದಂಡೀ ಚ ಧೃಷ್ಟೋ ವಿಗತಸಾಧ್ವಸಃ ॥23॥
ಅಲ್ಲಿ ಬ್ರಾಹ್ಮಣರ ಮಧ್ಯದಲ್ಲಿ ದುರ್ಯೋಧನನ ಸಖನಾದ ಸಾಂಖ್ಯಶಾಸ್ತ್ರವನ್ನು ಓದಿದ ಆ ಚಾರ್ವಾಕನು ಅಕ್ಷಮಾಲೆಯನ್ನು ಮತ್ತು ಶಿಖೆಯನ್ನು ಧರಿಸಿ, ತ್ರಿದಂಡಿ- ಯಾಗಿ, ನಿರ್ಭಯನಾಗಿ, ಧಾರ್ಷ್ಟ್ಯವನ್ನು ಹೊಂದಿ ಸನ್ಯಾಸಿಯ ರೂಪದಲ್ಲಿದ್ದನು.
ವೃತಃ ಸರ್ವೈಸ್ತದಾ ವಿಪ್ರೈರಾಶೀರ್ವಾದವಿವಕ್ಷುಭಿಃ |
ಪರಸಹಸ್ರೈಃ ರಾಜೇಂದ್ರ ತಪೋನಿಯಮಸಂಸ್ಥಿತೈಃ ॥24॥
ಎಲೈ ರಾಜೇಂದ್ರನೇ! ಅವನು ತಪೋನಿಯಮಯುಕ್ತರಾದ ಆಶೀರ್ವಾದವನ್ನು ಹೇಳಲು ಇಚ್ಛಿಸಿದ ಸಹಸ್ರಾರು ಬ್ರಾಹ್ಮಣರಿಂದ ಪರಿವೃತನಾಗಿದ್ದನು.
ಸ ದುಷ್ಟಃ ಪಾಪಮಾಶಂಸನ್ ಪಾಂಡವಾನಾಂ ಮಹಾತ್ಮನಾಮ್ |
ಅನಾಮಂತ್ರ್ಯೈವ ತಾನ್ ವಿಪ್ರಾಂಸ್ತಮುವಾಚ ಮಹೀಪತೀಮ್ ॥25॥
ಆ ದುಷ್ಟನು ಮಹಾತ್ಮರಾದ ಪಾಂಡವರಿಗೆ ಪಾಪವನ್ನು ಆಶಂಸಿಸುತ್ತಾ ಆ ಬ್ರಾಹ್ಮಣರ ಅನುಮತಿಯನ್ನು ಪಡೆಯದೆಯೇ ಯುಧಿಷ್ಠಿರನನ್ನು ಕುರಿತು ಹೇಳಿದನು.
ಇಮೇ ಪ್ರಾಹುರ್ದ್ವಿಜಾಃ ಸರ್ವೇ ಸಮಾರೋಪ್ಯ ವಚೋ ಮಯಿ |
ಧಿಗ್ ಭವಂತಂ ಕುನೃಪತಿಂ ಜ್ಞಾತಿಘಾತಿನಮಸ್ತು ವೈ ॥26॥
ಈ ಬ್ರಾಹ್ಮಣರೆಲ್ಲರೂ ತಮ್ಮ ಮಾತುಗಳನ್ನು ನನಗೆ ಒಪ್ಪಿಸಿ ನಿನಗೆ ಹೇಳು- ತ್ತಿದ್ದಾರೆ. ಜ್ಞಾತಿಗಳ ವಧೆಯನ್ನು ಮಾಡಿದ ಕೆಟ್ಟ ರಾಜನಾದ ನಿನಗೆ ಧಿಕ್ಕಾರವಿರಲಿ.
ಕಿಂ ತೇ ರಾಜ್ಯೇನ ಕೌಂತೇಯ ಕೃತ್ವೇಮಂ ಜ್ಞಾತಿಸಂಕ್ಷಯಮ್ |
ಘಾತಯಿತ್ವಾ ಗುರೂಂಶ್ಚೈವ ಮೃತಂ ಶ್ರೇಯೋ ನ ಜೀವಿತಮ್ ॥27॥
ಎಲೈ ಕೌಂತೇಯನೇ! ಇಂತಹ ಜ್ಞಾತಿವಧೆಯನ್ನೂ, ಗುರುಜನವಧೆಯನ್ನೂ ಮಾಡಿ, ನಿನಗೆ ರಾಜ್ಯದಿಂದ ಆಗಬೇಕಾದುದೇನು? ನಿನಗೆ ಮರಣವೇ ಒಳ್ಳೆಯದೇ ಹೊರತು ಜೀವನವಲ್ಲ.
ಇತಿ ತೇ ವೈ ದ್ವಿಜಾಃ ಶ್ರುತ್ವಾ ತಸ್ಯ ಘೋರಸ್ಯ ರಕ್ಷಸಃ |
ವಿವ್ಯಥುಶ್ಚುಕ್ರುಶುಶ್ಚೈವ ತಸ್ಯ ವಾಕ್ಯಪ್ರಧರ್ಷಿತಾಃ ॥28॥
ಹೀಗೆ ಆ ಬ್ರಾಹ್ಮಣರು ಆ ಘೋರರಾಕ್ಷಸನ ಮಾತುಗಳನ್ನು ಕೇಳಿ, ಅವನ ಮಾತುಗಳಿಂದ ಅವಮಾನಿತರಾಗಿ ವ್ಯಥೆಯನ್ನು ಪಟ್ಟು ದುಃಖದಿಂದ ಕಿರುಚಿದರು.
ತತಸ್ತೇ ಬ್ರಾಹ್ಮಣಾಃ ಸರ್ವೇ ಸ ಚ ರಾಜಾ ಯುಧಿಷ್ಠಿರಃ |
ವ್ರೀಡಿತಾ ಪರಮೋದ್ವಿಗ್ನಾಸ್ತೂಷ್ಣೀಮಾಸನ್ ವಿಶಾಂಪತೇ ॥29॥
ಎಲೈ ರಾಜನೇ! ಆಗ  ಆ ಬ್ರಾಹ್ಮಣರೆಲ್ಲರೂ ಮತ್ತು ರಾಜನಾದ ಯುಧಿಷ್ಠಿರನೂ ಸಹ ನಾಚಿಕೆಗೊಂಡು ಪರಮೋದ್ವಿಗ್ನರಾಗಿ ಮೌನವಾಗಿ ನಿಂತರು.
ಯುಧಿಷ್ಠಿರಃ
ಪ್ರಸೀದಂತು ಭವಂತೋ ಮೇ ಪ್ರಣತಸ್ಯಾಭಿಯಾಚತಃ |
ಪ್ರತ್ಯಾಪನ್ನಂ ವ್ಯಸನಿನಂ ನ ಮಾಂ ಧಿಕ್ಕರ್ತುಮರ್ಹಥ ॥30॥
ಯುಧಿಷ್ಠಿರ  ನಾನು ನಿಮ್ಮನ್ನು ನಮಸ್ಕರಿಸಿ ಬೇಡುತ್ತಿದ್ದೇನೆ. ನನ್ನ ಮೇಲೆ ಪ್ರಸನ್ನರಾಗಿ. ವ್ಯಸನದಲ್ಲಿ ಸಿಲುಕಿರುವ ನನ್ನನ್ನು ನೀವು ಧಿಕ್ಕರಿಸಬಾರದು.
ವೈಶಂಪಾಯನಃ

ತತೋ ರಾಜನ್ ಬ್ರಾಹ್ಮಣಾಸ್ತೇ ಸರ್ವ ಏವ ವಿಶಾಂಪತೇ |
ಊಚುರ್ನೈತದ್ ವಚೋಽಸ್ಮಾಕಂ ಶ್ರೀರಸ್ತು ತವ ಪಾರ್ಥಿವ ॥31॥
ವೈಶಂಪಾಯನರು `ಎಲೈ ರಾಜನೇ! ಆಗ ಆ ಬ್ರಾಹ್ಮಣರೆಲ್ಲರೂ ಅವನನ್ನು ಕುರಿತು ರಾಜನೇ ನಿನಗೆ ಮಂಗಳವಾಗಲಿ. ಇದು ನಮ್ಮ ಮಾತಲ್ಲ' ಎಂದು ಹೇಳಿ- ದರು.
ಜಜ್ಞುಶ್ಚೈವ ಮಹಾತ್ಮಾನಸ್ತತಸ್ತಂ ಜ್ಞಾನಚಕ್ಷುಷಾ |
ಬ್ರಾಹ್ಮಣಾ ವೇದವಿದ್ವಾಂಸಸ್ತಪೋಭಿರ್ವಿಮಲೀಕೃತಾಃ ॥32॥
ವೇದವಿದ್ವಾಂಸರೂ, ತಪಸ್ಸುಗಳಿಂದ ಪರಿಶುದ್ಧರಾದವರೂ, ಮಹಾತ್ಮರೂ ಆದ ಆ ಬ್ರಾಹ್ಮಣರು ತಮ್ಮ ಜ್ಞಾನದೃಷ್ಟಿಯಿಂದ ಆ ರಾಕ್ಷಸನನ್ನು ತಿಳಿದರು.
ಬ್ರಾಹ್ಮಣಾಃ
ಏಷ ದುರ್ಯೋಧನಸಖಾ ಚಾರ್ವಾಕೋ ನಾಮ ರಾಕ್ಷಸಃ |
ಪರಿವ್ರಾಜಕರೂಪೇಣ ಹಿತಂ ತಸ್ಯ ಚಿಕೀರ್ಷತಿ ॥33॥
ಬ್ರಾಹ್ಮಣರು ಇವನು ದುರ್ಯೋಧನನ ಸ್ನೇಹಿತನಾದ ಚಾರ್ವಾಕನೆಂಬ ರಾಕ್ಷಸ. ಸನ್ಯಾಸಿಯ ರೂಪವನ್ನು ತಾಳಿ ದುರ್ಯೋಧನನಿಗೆ ಹಿತವನ್ನು ಮಾಡಲು ಬಯಸುತ್ತಿದ್ದಾನೆ.
ನ ವಯಂ ಬ್ರೂಮ ಧರ್ಮಾತ್ಮನ್ ವ್ಯೇತು ತೇ ಭಯಮೀದೃಶಮ್ |
ಉಪತಿಷ್ಠತು ಕಲ್ಯಾಣಂ ಭವಂತಂ ಭ್ರಾತೃಭಿಃ ಸಹ ॥34॥
ಎಲೈ ಧರ್ಮಾತ್ಮನೇ! ನಿನ್ನ ಮನಸ್ಸಿನ ಭಯವನ್ನು ಬಿಡು. ಈ ಧಿಕ್ಕಾರದ ಮಾತುಗಳು ನಮ್ಮವಲ್ಲ. ನಿನಗೂ ಮತ್ತು ನಿನ್ನ ತಮ್ಮಂದಿರಿಗೂ ಕಲ್ಯಾಣವುಂಟಾಗಲಿ.
ವೈಶಂಪಾಯನಃ
ತತಸ್ತೇ ಬ್ರಾಹ್ಮಣಾಃ ಸರ್ವೇ ಹುಂಕಾರೈಃ ಕ್ರೋಧಮೂರ್ಚ್ಛಿತಾಃ |
ನಿರ್ಭರ್ತ್ಸಯಂತಃ ಶುಚಯೋ ನಿಜಘ್ನುಃ ಪಾಪರಾಕ್ಷಸಮ್ ॥35॥
ವೈಶಂಪಾಯನರು ಅನಂತರ ಕ್ರೋಧಮೂರ್ಛಿತರೂ ಪರಿಶುದ್ಧರೂ ಆದ ಆ ಎಲ್ಲಾ ಬ್ರಾಹ್ಮಣರು ಹುಂಕಾರಗಳಿಂದ ಆ ಪಾಪರಾಕ್ಷಸನನ್ನು ಗದರಿಸಿ, ಅವನನ್ನು ಸಂಹರಿಸಿದರು.
ಸ ಪಪಾತ ವಿನಿರ್ದಗ್ಧಸ್ತೇಜಸಾ ಬ್ರಹ್ಮವಾದಿನಾಮ್ |
ಮಹೇಂದ್ರಾಶನಿನಿರ್ದಗ್ಧಃ ಪಾದಪೋಽಂಕುರವಾನಿವ ॥36॥
ಬ್ರಹ್ಮವಾದಿಗಳಾದ ಬ್ರಾಹ್ಮಣರ ತೇಜಸ್ಸಿನಿಂದ ನಿರ್ದಗ್ಧನಾದ ಆ ರಾಕ್ಷಸನು ಇಂದ್ರನ ವಜ್ರಾಯುಧದಿಂದ ದಗ್ಧವಾದ ಅಂಕುರಸಹಿತವಾದ ವೃಕ್ಷದಂತೆ ಕೆಳಗೆ ಬಿದ್ದನು.
ಪೂಜಿತಾಶ್ಚ ಯಯುರ್ವಿಪ್ರಾ ರಾಜಾನಮಭಿನಂದ್ಯ ತಮ್ |
ರಾಜಾ ಚ ಹರ್ಷಮಾಪೇದೇ ಪಾಂಡವಃ ಸಸುಹೃಜ್ಜನಃ ॥37॥
ಬ್ರಾಹ್ಮಣರು ರಾಜನಿಂದ ಪೂಜಿತರಾಗಿ ರಾಜನನ್ನು ಅಭಿನಂದಿಸಿ ಹೊರಟು ಹೋದರು. ಪಾಂಡುಪುತ್ರನಾದ ಯುಧಿಷ್ಠಿರನೂ ಸುಹೃಜ್ಜನರ ಜೊತೆಯಲ್ಲಿ ಸಂತೋಷವನ್ನು ಹೊಂದಿದನು.
ತತಸ್ತತ್ರ ತು ರಾಜಾನಂ ತಿಷ್ಠಂತಂ ಭ್ರಾತೃಭಿಃ ಸಹ |
ಉವಾಚ ದೇವಕೀಪುತ್ರಃ ಸರ್ವದರ್ಶೀ ಜನಾರ್ದನಃ ॥38॥
ಆಗ ದೇವಕೀಪುತ್ರನೂ ಸರ್ವಜ್ಞನೂ ಆದ ಜನಾರ್ದನನು ತಮ್ಮಂದಿರ ಜೊತೆಯಲ್ಲಿದ್ದ ರಾಜನನ್ನು ಕುರಿತು ಮಾತನಾಡಿದನು.
ಶ್ರೀಭಗವಾನ್
ಬ್ರಾಹ್ಮಣಾಸ್ತಾತ ಲೋಕೇಽಸ್ಮಿನ್ನರ್ಚನೀಯಾಃ ಸದಾ ಮಮ |
ಏತೇ ಭೂಮಿಚರಾ ದೇವಾ ವಾಗ್ವಿಷಾಃ ಸುಪ್ರಸಾದಕಾಃ ॥39॥
ಶ್ರೀಭಗವಾನ್ ಎಲೈ ಪ್ರೀತಿಪಾತ್ರನೇ! ಈ ಲೋಕದಲ್ಲಿ ಬ್ರಾಹ್ಮಣರು ನನಗೆ ಯಾವಾಗಲೂ ಪೂಜ್ಯರಾದವರು. ಇವರು ಮಾತಿನಲ್ಲಿ ವಿಷವನ್ನು ಧರಿಸಿದ ಮತ್ತು ಒಳ್ಳೆಯ ಅನುಗ್ರಹವನ್ನು ಮಾಡುವ ಭೂಮಿಚರರಾದ ದೇವತೆಗಳು.
ಪುರಾ ಕೃತಯುಗೇ ತಾತ ಚಾರ್ವಾಕೋ ನಾಮ ರಾಕ್ಷಸಃ |
ತಪಸ್ತೇಪೇ ಮಹಾಬಾಹೋ ಬದರ್ಯಾಂ ಬಹುವತ್ಸರಮ್ ॥40॥
ಎಲೈ ಪ್ರೀತಿಪಾತ್ರನೇ! ಮಹಾಬಾಹುವೇ! ಹಿಂದೆ ಕೃತಯುಗದಲ್ಲಿ ಚಾರ್ವಾಕ- ನೆಂಬ ರಾಕ್ಷಸನು ಬದರೀಕ್ಷೇತ್ರದಲ್ಲಿ ಅನೇಕ ವರ್ಷಗಳ ಕಾಲ ತಪಸ್ಸನ್ನು ಮಾಡಿದನು.
ಛಂದ್ಯಮಾನೋ ವರೇಣಾಥ ಬ್ರಹ್ಮಣಾ ಸ ಪುನಃ ಪುನಃ |
ಅಭಯಂ ಸರ್ವಭೂತೇಭ್ಯಃ ವರಯಾಮಾಸ ಭಾರತ ॥41॥
ಎಲೈ ಭಾರತನೇ! ಬ್ರಹ್ಮದೇವರಿಂದ ಪುನಃ ಪುನಃ ವರವನ್ನು ಕೇಳು ಎಂದು ಹೇಳಲ್ಪಟ್ಟ ಅವನು ಯಾವ ಪ್ರಾಣಿಗಳಿಂದಲೂ ತನಗೆ (ಮರಣ) ಭಯವುಂಟಾಗ- ಬಾರದೆಂಬ ವರವನ್ನು ಬೇಡಿದನು.
ದ್ವಿಜಾವಮಾನಾದನ್ಯತ್ರ ಪ್ರಾದಾದ್ ವರಮನುತ್ತಮಮ್ |
ಅಭಯಂ ಸರ್ವಭೂತೇಭ್ಯಸ್ತತಸ್ತಸ್ಮೈ ಜಗತ್ಪ್ರಭುಃ ॥42॥
`ಬ್ರಾಹ್ಮಣರ ಅವಮಾನವನ್ನು ಮಾಡುವ ಪ್ರಸಂಗವನ್ನು ಬಿಟ್ಟು ಬೇರೆ ಯಾವ ಪ್ರಾಣಿಯಿಂದಲೂ ನಿನಗೆ ಭಯವಿಲ್ಲ' ಎಂಬ ಶ್ರೇಷ್ಠವಾದ ವರವನ್ನು ಜಗತ್ಪ್ರಭು- ಗಳಾದ ಬ್ರಹ್ಮದೇವರು ಅವನಿಗೆ ಕೊಟ್ಟರು.

ಸ ತು ಲಬ್ಧವರಃ ಪಾಪೋ ದೇವಾನಮಿತವಿಕ್ರಮಃ |
ರಾಕ್ಷಸಸ್ತಾಪಯಾಮಾಸ ತೀವ್ರಕರ್ಮಾ ಮಹಾಬಲಃ||43||
ಅಮಿತಪರಾಕ್ರಮಿಯಾದ ಪಾಪಿಯಾದ ಅವನು ವರವನ್ನು ಪಡೆದು, ಮಹಾಬಲಿಷ್ಠನಾಗಿ ಘೋರವಾದ ಕರ್ಮಗಳನ್ನು ಮಾಡಿ ದೇವತೆಗಳಿಗೆ ತಾಪವನ್ನು ಉಂಟುಮಾಡಿದನು.
ತತೋ ದೇವಾಃ ಸಮೇತ್ಯಾಥ ಬ್ರಹ್ಮಾಣಮಿದಮಬ್ರುವನ್ |
ವಧಾಯ ರಕ್ಷಸಸ್ತಸ್ಯ ಬಲವಿಪ್ರಕೃತಾಸ್ತದಾ ||44||
ಆಗ ಅವನ ಬಲದಿಂದ ಅಪಕಾರಕ್ಕೆ ಒಳಗಾದ ದೇವತೆಗಳು ಬ್ರಹ್ಮದೇವರನ್ನು ಸಮೀಪಿಸಿ, ಆ ರಾಕ್ಷಸನ ವಧೆಯನ್ನು ಕುರಿತು ಪ್ರಾರ್ಥನೆಯನ್ನು ಮಾಡಿದರು.
ತಾನುವಾಚಾವ್ಯಯೋ ದೇವೋ ವಿಹಿತಂ ತತ್ರ ವೈ ಮಯಾ |
ಯಥಾಸ್ಯ ಭವಿತಾ ಮೃತ್ಯುರಚಿರೇಣೈವ ಭಾರತ ||45||
ಎಲೈ ಭಾರತನೇ! ಆಗ ಅವ್ಯಯರಾದ ಆ ಬ್ರಹ್ಮದೇವರು ``ಈ ರಾಕ್ಷಸನ ಮರಣವು ಶೀಘ್ರದಲ್ಲೇ ಉಂಟಾಗುವಂತೆ ನಾನು ವ್ಯವಸ್ಥೆಯನ್ನು ಮಾಡಿದ್ದೇನೆ'' ಎಂದು ಹೇಳಿದರು.
ರಾಜಾ ದುರ್ಯೋಧನೋ ನಾಮ ಸಖಾಽಸ್ಯ ಭವಿತಾ ನೃಪ |
ತಸ್ಯ ಸ್ನೇಹಾವಬದ್ಧೋಽಸೌ ಬ್ರಾಹ್ಮಣಾನವಮಂಸ್ಯತೇ ||46||
ಎಲೈ ರಾಜನೇ! ದುರ್ಯೋಧನನೆಂಬ ರಾಜನು ಇವನಿಗೆ ಸ್ನೇಹಿತನಾಗುವನು. ಅವನ ಸ್ನೇಹಕ್ಕೆ ವಶನಾಗಿ ಈ ರಾಕ್ಷಸನು ಬ್ರಾಹ್ಮಣರಿಗೆ ಅವಮಾನವನ್ನು ಮಾಡು- ವನು.
ತತ್ರೈನಂ ರುಷಿತಾ ವಿಪ್ರಾ ವಿಪ್ರಕಾರಪ್ರಧರ್ಷಿತಾಃ |
ಧಕ್ಷ್ಯಂತಿ ವಾಗ್ಬಲಾಃ ಪಾಪಂ ತತೋ ನಾಶಂ ಗಮಿಷ್ಯತಿ ||47||
ಅವನ ಅವಮಾನಕರವಾದ ಮಾತುಗಳಿಂದ ಪೀಡಿಸಲ್ಪಟ್ಟ ವಾಗ್ಬಲರಾದ ಬ್ರಾಹ್ಮಣರು ಕೋಪಗೊಂಡು ಆ ಪಾಪಿಯನ್ನು ಸುಟ್ಟು ಹಾಕುವರು.  ಆಗ ಅವನು ನಾಶವನ್ನು ಹೊಂದುವನು. (ಎಂದು ಹೇಳಿದರು)
ಸ ಏಷ ನಿಹತಃ ಶೇತೇ ಬ್ರಹ್ಮದಂಡೇನ ರಾಕ್ಷಸಃ |
ಚಾರ್ವಾಕೋ ನೃಪತಿಶ್ರೇಷ್ಠ ಮಾ ಶುಚೋ ಭರತರ್ಷಭ ||48||
ಎಲೈ ರಾಜಶ್ರೇಷ್ಠನೇ! ಅಂತಹ ಈ ಚಾರ್ವಾಕರಾಕ್ಷಸನು ಬ್ರಹ್ಮದಂಡದಿಂದ ನಿಹತನಾಗಿ ಸತ್ತು ಬಿದ್ದಿದ್ದಾನೆ. ಭರತರ್ಷಭನೇ! ಶೋಕಪಡಬೇಡ.
ಹತಾಸ್ತೇ ಕ್ಷತ್ರಧರ್ಮೇಣ ಜ್ಞಾತಯಸ್ತವ ಪಾರ್ಥಿವಾಃ |
ಸ್ವರ್ಗತಾಶ್ಚ ಮಹಾತ್ಮಾನೋ ವೀರಾ ಕ್ಷತ್ರಿಯಪುಂಗವಾಃ ||49||
ಎಲೈ ರಾಜನೇ! ನಿನ್ನ ಬಂಧುಗಳು ಕ್ಷತ್ರಿಯಧರ್ಮಕ್ಕೆ ಅನುಗುಣವಾಗಿ ನಿನ್ನಿಂದ ಹತರಾಗಿದ್ದಾರೆ. ಕ್ಷತ್ರಿಯಶ್ರೇಷ್ಠರೂ, ಮಹಾತ್ಮರೂ, ವೀರರೂ ಆದ ಅವರು ಸ್ವರ್ಗ- ವನ್ನು ಪಡೆದಿದ್ದಾರೆ.
ಸ ತ್ವಮಾತಿಷ್ಠ ಕಲ್ಯಾಣಂ ಮಾ ತೇ ಭೂದ್ ಗ್ಲಾನಿರಚ್ಯುತ |
ಶತ್ರೂನ್ ಜಹಿ ಪ್ರಜಾ ರಕ್ಷ ದ್ವಿಜಾಂಶ್ಚ ಪ್ರತಿಪಾಲಯ ||50||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಏಕೋನಚತ್ವಾರಿಂಶೋಽಧ್ಯಾಯಃ ||39||
ಅಂತಹ ನೀನು ಕಲ್ಯಾಣಕಾರ್ಯಗಳನ್ನುಮಾಡು. ಎಲೈ ಅಚ್ಯುತನೇ! ಮನಸ್ಸಿ- ನಲ್ಲಿ ಗ್ಲಾನಿಯನ್ನು ಹೊಂದಬೇಡ. ಶತ್ರುಗಳನ್ನು ಗೆಲ್ಲುವವನಾಗು. ಪ್ರಜೆಗಳನ್ನು ರಕ್ಷಿಸು. ಬ್ರಾಹ್ಮಣರನ್ನು ಪೂಜಿಸು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 39ಯ ಅಧ್ಯಾಯವು ಮುಗಿಯಿತು.
0
40. ನಲವತ್ತನೆಯ ಅಧ್ಯಾಯ
ಯುಧಿಷ್ಠಿರನಿಗೆ ಕೃಷ್ಣನಿಂದ ರಾಜ್ಯದಲ್ಲಿ ಅಭಿಷೇಕ
ವೈಶಂಪಾಯನಃ
ತತಃ ಕುಂತೀಸುತೋ ರಾಜಾ ಗತಮನ್ಯುರ್ಗತಜ್ವರಃ |
ಕಾಂಚನೇ ಪ್ರಾಙ್ಮುಖೋ ಹೃಷ್ಟೋ ನ್ಯಷೀದತ್ ಪರಮಾಸನೇ ||1||
ವೈಶಂಪಾಯನರು ಹೇಳುತ್ತಾರೆ  ಅನಂತರ ಕುಂತಿಯ ಪುತ್ರನಾದ ಯುಧಿಷ್ಠಿರ ರಾಜನು ಮನಸ್ಸಿನ ಚಿಂತೆಯನ್ನು ಮತ್ತು ಸಂತಾಪವನ್ನು ಕಳೆದುಕೊಂಡು ಸುವರ್ಣ- ಮಯವಾದ ಶ್ರೇಷ್ಠವಾದ ಆಸನದಲ್ಲಿ ಸಂತೋಷದಿಂದ ಪೂರ್ವಾಭಿಮುಖವಾಗಿ ಕುಳಿತುಕೊಂಡನು.
ತಮೇವಾಭಿಮುಖೌ ಪೀಠೇ ದಿವ್ಯಾಸ್ತರಣಸಂವೃತೇ |
ಸಾತ್ಯಕಿರ್ವಾಸುದೇವಶ್ಚ ನಿಷೀದತುರರಿಂದವೌ ||2||
ಅರಿಂದಮರಾದ ಸಾತ್ಯಕಿ ಮತ್ತು ಕೃಷ್ಣರು ದಿವ್ಯವಾದ ಹಾಸುಗಳನ್ನು ಹಾಸಿದ ಪೀಠದಲ್ಲಿ ಅವನಿಗೆ ಎದುರಾಗಿ ಕುಳಿತುಕೊಂಡರು.
ಮಧ್ಯೇ ಕೃತ್ವಾ ತು ರಾಜಾನಂ ಭೀಮಸೇನಾರ್ಜುನಾವುಭೌ |
ನಿಷೀದತುರ್ಮಹಾತ್ಮಾನೌ ಶ್ಲಕ್ಷ್ಣಯೋರ್ಮಣಿಪೀಠಯೋಃ ||3||
ಮಹಾತ್ಮರಾದ ಭೀಮಸೇನಾರ್ಜುನರು ರಾಜನನ್ನು ಮಧ್ಯೆ ಮಾಡಿಕೊಂಡು ಶ್ರೇಷ್ಠವಾದ ಮಣಿಪೀಠಗಳಲ್ಲಿ ಕುಳಿತುಕೊಂಡರು.

ದಾಂತೇ ಶಯ್ಯಾಸನೇ ಶುಭ್ರೇ ಜಾಂಬೂನದವಿಭೂಷಿತೇ |
ಪೃಥಾಽಪಿ ಸಹದೇವೇನ ಸಹಾಸ್ತೇ ನಕುಲೇನ ಚ ॥4॥
ಗಜದಂತಮಯವಾದ ಶುಭ್ರವಾದ ಸುವರ್ಣಾಲಂಕೃತವಾದ ಶಯ್ಯಾಸನದಲ್ಲಿ ಕುಂತಿಯೂ ಸಹ ನಕುಲಸಹದೇವರ ಜೊತೆಯಲ್ಲಿ ಕುಳಿತುಕೊಂಡಳು.
ಸುಧರ್ಮಾ ವಿದುರೋ ಧೌಮ್ಯೋ ಧೃತರಾಷ್ಟ್ರಶ್ಚ ಕೌರವಃ |
ನಿಷೇದುರ್ಜ್ವಲನಾಕಾರೇಷ್ವಾಸನೇಷು ಪೃಥಕ್ ಪೃಥಕ್ ॥5॥
ಧರ್ಮಶೀಲನಾದ ವಿದುರ, ಧೌಮ್ಯ, ಕೌರವನಾದ ಧೃತರಾಷ್ಟ್ರ ಇವರು ಅಗ್ನಿಯಂತೆ ಪ್ರಕಾಶಮಾನವಾಗಿದ್ದ ಬೇರೆ ಬೇರೆ ಆಸನಗಳಲ್ಲಿ ಕುಳಿತುಕೊಂಡರು.
ಯುಯುತ್ಸುಃ ಸಂಜಯಶ್ಚೈವ ಗಾಂಧಾರೀ ಚ ಯಶಸ್ವಿನೀ |
ಧೃತರಾಷ್ಟ್ರೋ ಯತೋ ರಾಜಾ ತತಃ ಸರ್ವ ಉಪಾವಿಶನ್ ॥6॥
ಯುಯುತ್ಸು, ಸಂಜಯ, ಕೀರ್ತಿಶಾಲಿನಿಯಾದ ಗಾಂಧಾರೀ ಇವರೆಲ್ಲರೂ ಧೃತರಾಷ್ಟ್ರನ ಬಳಿಯಲ್ಲಿ ಕುಳಿತುಕೊಂಡರು.
ತತ್ರೋಪವಿಷ್ಟೋ ಧರ್ಮಾತ್ಮಾ ಶ್ವೇತಾಃ ಸುಮನಸೋಽಸ್ಪೃಶತ್ |
ಸ್ವಸ್ತಿಕಾನಕ್ಷತಾನ್ ಭೂಮಿಂ ಸುವರ್ಣಂ ರಜತಂ ಮಣೀನ್ ॥7॥
ಅಲ್ಲಿ ಕುಳಿತುಕೊಂಡ ಧರ್ಮಾತ್ಮನಾದ ಯುಧಿಷ್ಠಿರನು ಮಂಗಳದ ಸಲುವಾಗಿ ಶ್ವೇತಪುಷ್ಪಗಳನ್ನು, ಸ್ವಸ್ತಿಕೆಗಳನ್ನು, ಅಕ್ಷತೆಗಳನ್ನು, ಗೋಶಾಲೆ ಮತ್ತು ವೃಂದಾವನದ ಮೃತ್ತಿಕೆಗಳನ್ನು, ಸುವರ್ಣರಜತಮಣಿಗಳನ್ನು ಸ್ಪರ್ಶ ಮಾಡಿದನು.
ತತಃ ಪ್ರಕೃತಯಃ ಸರ್ವಾಃ ಪುರಸ್ಕೃತ್ಯ ಪುರೋಹಿತಮ್ |
ಪೃಥಿವೀಂ ಚ ಸುವರ್ಣಂ ಚ ರತ್ನಾನಿ ಬಹು ಮಂಗಲಮ್ ॥8॥
ಅನಂತರ ಎಲ್ಲಾ ಪ್ರಜೆಗಳು ಪುರೋಹಿತರನ್ನು ಮುಂದೆ ಮಾಡಿಕೊಂಡು ಕೈಯಲ್ಲಿ ಮಂಗಳವಸ್ತುಗಳನ್ನು ಹಿಡಿದು ಧರ್ಮರಾಜನನ್ನು ನೋಡಿದರು.
ಪೃಥಿವೀಂ ಚ ಸುವರ್ಣಂ ಚ ರತ್ನಾನಿ ವಿವಿಧಾನಿ ಚ |
ಆಭಿಷೇಚನಿಕಂ ಭಾಂಡಂ ಸರ್ವಸಂಭಾರಸಂಭೃತಮ್ ॥9॥
ಮೃತ್ತಿಕೆ, ಸುವರ್ಣ, ವಿವಿಧವಾದ ರತ್ನಗಳು, ಅಭಿಷೇಕಕ್ಕೆ ಬೇಕಾದ ಪಾತ್ರೆಗಳು, ಮತ್ತು ಉಳಿದ ಎಲ್ಲಾ ಸಲಕರಣೆಗಳು ಸಿದ್ಧವಾದವು.
ಕಾಂಚನೌದುಂಬರಾಸ್ತತ್ರ ರಾಜತಾಃ ಪೃಥಿವೀಮಯಾಃ |
ಪೂರ್ಣಕುಂಭಾಃ ಸುಮನಸೋ ರಾಜಾ ಬರ್ಹಿಂಷಿ ಗೋರಸಾಃ ॥10॥
ಶಮೀಪಲಾಶಪುನ್ನಾಗಾಃ ಸಮಿಧೋ ಮಧುಸರ್ಪಿಷೀ |
ಸ್ರುವ ಔದುಂಬರಃ ಶಂಖಾಸ್ತಥಾ ಹೇಮವಿಭೂಷಿತಾಃ ॥11॥
ಅಲ್ಲಿ ಸುವರ್ಣಮಯವಾದ, ರಜತಮಯವಾದ, ಮೃಣ್ಮಯವಾದ, ಉದುಂಬರಮಯವಾದ ಪೂರ್ಣಕುಂಭಗಳು, ಪುಷ್ಪಗಳು, ಅರಳುಗಳು, ದರ್ಭೆ- ಗಳು, ಕ್ಷೀರಾದಿ ಗೋರಸಗಳು, ಶಮೀ, ಪಲಾಶ ಮತ್ತು ಪುನ್ನಾಗವೃಕ್ಷಗಳ ಸಮಿತ್ತು- ಗಳು, ಜೇನುತುಪ್ಪ, ತುಪ್ಪ, ಔದುಂಬರ ಸ್ರುವ, ಸುವರ್ಣಭೂಷಿತವಾದ ಶಂಖಗಳು ಎಲ್ಲವೂ ಅಣಿಗೊಂಡವು.
ದಾಶಾರ್ಹೇಣಾಭ್ಯನುಜ್ಞಾತಸ್ತತ್ರ ಧೌಮ್ಯಃ ಪುರೋಹಿತಃ |
ಪ್ರಾಗುದಕ್‌ಪ್ರವಣಾಂ ವೇದೀಂ ಲಕ್ಷಣೇನೋಪಲಿಪ್ಯ ಹ ॥12॥
ವ್ಯಾಘ್ರಚರ್ಮೋತ್ತರೇ ಶ್ಲಕ್ಷ್ಣೇ ಸರ್ವತೋಭದ್ರ ಆಸನೇ |
ದೃಢಪಾದಪ್ರತಿಷ್ಠಾನೇ ಹುತಾಶನಸಮತ್ವಿಷಿ ॥13॥
ಉಪವೇಶ್ಯ ಮಹಾತ್ಮಾನಂ ಕೃಷ್ಣಾಂ ಚ ದ್ರುಪದಾತ್ಮಜಾಮ್ |
ಜುಹಾವ ಪಾವಕಂ ಧೀಮಾನ್ ವಿಧಿಮಂತ್ರಪುರಸ್ಕೃತಮ್ |
ಆಗ ಪುರೋಹಿತರೂ ಮೇಧಾವಿಗಳೂ ಆದ ಧೌಮ್ಯರು ಕೃಷ್ಣನ ಅನುಜ್ಞೆ- ಯನ್ನು ಪಡೆದು ಅಲ್ಲಿ ಈಶಾನ್ಯದಿಕ್ಕಿನಲ್ಲಿ ಇಳಿಜಾರಾಗಿದ್ದ ವೇದಿಕೆಯನ್ನು ರಂಗ- ವಲ್ಲೀ, ಸಾರಣೆ ಮೊದಲಾದವುಗಳಿಂದ ಅಲಂಕರಿಸಿದರು. ವ್ಯಾಘ್ರಚರ್ಮದ ಮೇಲೆ ಹಾಸಿದ ಬೆಲೆಬಾಳುವ ದೃಢವಾದ ಪಾದಪೀಠವುಳ್ಳ ಅಗ್ನಿಯಂತೆ ಕಂಗೊಳಿಸುವ ಸರ್ವತೋಭದ್ರಾಸನದಲ್ಲಿ ದ್ರುಪದಪುತ್ರಿಯಾದ ಕೃಷ್ಣೆಯನ್ನು ಮತ್ತು ಮಹಾತ್ಮನಾದ ಧರ್ಮರಾಜನನ್ನು ಕುಳ್ಳಿರಿಸಿ, ವಿಧಿಮಂತ್ರಪುರಸ್ಸರವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದರು.
ತತ ಉತ್ಥಾಯ ದಾಶಾರ್ಹಃ ಶಂಖಮಾದಾಯ ಪೂಜಿತಮ್ ॥14॥
ಅಭ್ಯಷಿಂಚತ್ ಪತಿಂ ಪೃಥ್ವ್ಯಾಃ ಕುಂತೀಪುತ್ರಂ ಯುಧಿಷ್ಠಿರಮ್ |
ಧೃತರಾಷ್ಟ್ರಶ್ಚ ರಾಜರ್ಷಿಃ ಸರ್ವಾಃ ಪ್ರಕೃತಯಸ್ತಥಾ ॥15॥
ಅನಂತರ ದಾಶಾರ್ಹನಾದ ಕೃಷ್ಣನು ಎದ್ದು ಪೂಜಿಸಲ್ಪಟ್ಟ ಶಂಖವನ್ನು ತೆಗೆದು- ಕೊಂಡು ಕುಂತೀಪುತ್ರನಾದ ಯುಧಿಷ್ಠಿರನನ್ನು ಪೃಥಿವೀಪತಿಯಾಗಿ ಅಭಿಷೇಕ ಮಾಡಿದನು. ಅನಂತರ ಧೃತರಾಷ್ಟ್ರನೂ, ರಾಜರ್ಷಿಗಳೂ ಮತ್ತು ಪ್ರಜೆಗಳಲ್ಲಿ ಪ್ರಧಾನರಾದವರೂ ಅಭಿಷೇಕವನ್ನು ಮಾಡಿದರು.
ಸಮನುಜ್ಞಾಯ ಕೃಷ್ಣೇನ ಭ್ರಾತೃಭಿಃ ಸಹ ಪಾಂಡವ |
ಪಾಂಚಜನ್ಯಾಭಿಷಿಕ್ತಶ್ಚ ರಾಜಾಽಮೃತಮುಖೋಽಭವತ್ ॥16॥
ಎಲೈ ಪಾಂಡವನೇ! ಕೃಷ್ಣನ ಅನುಮತಿಯನ್ನು ಪಡೆದು ತಮ್ಮಂದಿರಿಂದಲೂ ಪಾಂಚಜನ್ಯಶಂಖದಿಂದ ಅಭಿಷೇಕ ಮಾಡಲ್ಪಟ್ಟ ಯುಧಿಷ್ಠಿರನು ಚಂದ್ರನಂತೆ ಪ್ರಸನ್ನ ಮುಖನಾದನು.
ತತೋಽನುವಾದಯಾಮಾಸುಃ ಪಣವಾನಕದುಂದುಭೀಃ |

ಧರ್ಮರಾಜೋಽಪಿ ತತ್ ಸರ್ವಂ ಪ್ರತಿಜಗ್ರಾಹ ಧರ್ಮತಃ ॥17॥
ಅನಂತರ ಪಣವ, ಆನಕ ಮತ್ತು ದುಂದುಭಿಗಳು ಮೊಳಗಿದವು. ಧರ್ಮ- ರಾಜನೂ ಸಹ ಅವೆಲ್ಲವನ್ನೂ ಧಾರ್ಮಿಕವಿಧಿಯಿಂದಲೇ ಸ್ವೀಕರಿಸಿದನು.
ಪೂಜಯಾಮಾಸ ತಾಂಶ್ಚಾಪಿ ವಿಧಿವದ್ ಭೂರಿದಕ್ಷಿಣಃ |
ತತೋ ನಿಷ್ಕಸಹಸ್ರೇಣ ಬ್ರಾಹ್ಮಣಾನ್ ಸ್ವಸ್ತಿ ವಾಚಯತ್ ॥18॥
ವೇದಾಧ್ಯಯನಸಂಪನ್ನಾನ್ ಶೀಲವೃತ್ತಸಮನ್ವಿತಾನ್ |
ಬಹಳ ದಕ್ಷಿಣೆಯನ್ನು ಕೊಡುವ ಸ್ವಭಾವವುಳ್ಳ ಅವನು ಅವರೆಲ್ಲರನ್ನೂ ವಿಧಿ- ವತ್ತಾಗಿ ಪೂಜಿಸಿದನು. ಅನಂತರ ವೇದಾಧ್ಯಯನಸಂಪನ್ನರೂ, ಶೀಲವೃತ್ತಗಳಿಂದ ಕೂಡಿದವರೂ ಆದ ಬ್ರಾಹ್ಮಣರಿಗೆ ಒಂದೊಂದು ಸಹಸ್ರ ನಿಷ್ಕಗಳನ್ನು ನೀಡಿ, ಸ್ವಸ್ತಿ- ವಾಚನವನ್ನು ಮಾಡಿಸಿದನು.
ತೇ ಪ್ರೀತಾ ಬ್ರಾಹ್ಮಣಾ ರಾಜನ್ ಸ್ವಸ್ತ್ಯೂಚುರ್ಜಯಮೇವ ಚ |
ಹಂಸಾ ಇವ ಚ ನರ್ದಂತಃ ಪ್ರಶಶಂಸುರ್ಯುಧಿಷ್ಠಿರಮ್ ॥19॥
ಎಲೈ ರಾಜನೇ! ಪ್ರಸನ್ನರಾದ ಬ್ರಾಹ್ಮಣರು ಅವನಿಗೆ ಮಂಗಳವನ್ನು ಮತ್ತು ಜಯವನ್ನು ಹಾರೈಸಿದರು. ಹಂಸಗಳಂತೆ ಧ್ವನಿಯನ್ನು ಮಾಡುತ್ತಾ ಅವರು ಯುಧಿ- ಷ್ಠಿರನನ್ನು ಪ್ರಶಂಸಿಸಿದರು.
ಯುಧಿಷ್ಠಿರ ಮಹಾಬಾಹೋ ದಿಷ್ಟ್ಯಾ ಜಯಸಿ ಪಾಂಡವ |
ದಿಷ್ಟ್ಯಾ ಸ್ವಧರ್ಮಂ ಪ್ರಾಪ್ತೋಽಸಿ ವಿಕ್ರಮೇಣ ಮಹಾದ್ಯುತೇ ॥20॥
ಮಹಾಬಾಹುವೇ ಪಾಂಡುಪುತ್ರನೇ! ಯುಧಿಷ್ಠಿರನೇ! ದೇವರ ದಯದಿಂದ ನೀನು ಜಯವನ್ನು ಸಂಪಾದಿಸಿದ್ದೀಯೆ. ಎಲೈ ಮಹಾದ್ಯುತಿಯೇ! ನಿನ್ನ ಪರಾಕ್ರಮ- ದಿಂದ ಮತ್ತು ದೇವರ ದಯದಿಂದ ನೀನು ಪುನಃ ನಿನ್ನ ಕ್ಷತ್ರಿಯಧರ್ಮದಲ್ಲಿಯೇ ತೊಡಗಿದ್ದೀಯೆ.

ದಿಷ್ಟ್ಯಾ ಗಾಂಡೀವಧನ್ವಾ ಚ ಭೀಮಸೇನಶ್ಚ ಪಾಂಡವಃ |
ತ್ವಂ ಚಾಪಿ ಕುಶಲೀ ರಾಜನ್ ಮಾದ್ರೀಪುತ್ರೌ ಚ ಪಾಂಡವೌ ॥21॥
ಎಲೈ ರಾಜನೇ ದೇವರ ದಯದಿಂದಲೇ ಗಾಂಡೀವಧನುರ್ಧಾರಿಯಾದ ಅರ್ಜುನನೂ, ಪಾಂಡುಪುತ್ರನಾದ ಭೀಮಸೇನನೂ, ನೀನೂ ಮತ್ತು ಮಾದ್ರಿ- ಪುತ್ರರಾದ ನಕುಲಸಹದೇವರೂ ಕುಶಲದಿಂದ ಇದ್ದೀರಿ.
ಮುಕ್ತಾ ವೀರಕ್ಷಯಾದಸ್ಮಾತ್ ಸಂಗ್ರಾಮಾನ್ನಿಹತದ್ವಿಷಃ |
ಕ್ಷಿಪ್ರಮುತ್ತರಕಾಲಾನಿ ಕುರು ಕಾರ್ಯಾಣಿ ಪಾಂಡವ ॥22॥
ಶತ್ರುಸಂಹಾರಕವಾದ ವೀರರ ಕ್ಷಯವನ್ನುಂಟು ಮಾಡಿದ ಈ ಸಂಗ್ರಾಮದಿಂದ ಬಿಡುಗಡೆಯನ್ನು ಹೊಂದಿದ್ದೀರಿ. ಎಲೈ ಪಾಂಡವನೇ! ಮುಂದೆ ಮಾಡಬೇಕಾದ ಕಾರ್ಯಗಳನ್ನು ಶೀಘ್ರವಾಗಿ ಮಾಡು. (ಎಂದು ಹೇಳಿದರು)
ತತ್ರ ಪ್ರತ್ಯರ್ಚಿತಃ ಸದ್ಭಿರ್ಧರ್ಮರಾಜೋ ಯುಧಿಷ್ಠಿರಃ |
ಪ್ರತಿಪೇದೇ ಮಹದ್ ರಾಜ್ಯಂ ಸುಹೃದ್ಭಿಃ ಸಹ ಭಾರತ ॥23॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಚತ್ವಾರಿಂಶೋಽಧ್ಯಾಯಃ ॥40॥
ಎಲೈ ಭಾರತನೇ! ಆಗ ಧರ್ಮರಾಜನಾದ ಯುಧಿಷ್ಠಿರನು ಸಜ್ಜನರಿಂದ ಪೂಜಿಸಲ್ಪಟ್ಟು, ತನ್ನ ಸುಹೃಜ್ಜನರ ಜೊತೆಯಲ್ಲಿ ತನ್ನ ಶ್ರೇಷ್ಠವಾದ ರಾಜ್ಯವನ್ನು ಹೊಂದಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 40ನೆಯ ಅಧ್ಯಾಯವು ಮುಗಿಯಿತು.
0
41. ನಲವತ್ತೊಂದನೆಯ ಅಧ್ಯಾಯ
ಯುಧಿಷ್ಠಿರನ ಉತ್ತರ ಮತ್ತು ಯೌವರಾಜ್ಯಾದಿಗಳಲ್ಲಿ ಭೀಮಾದಿಗಳ ಸ್ಥಾಪನಾ
ವೈಶಂಪಾಯನಃ
ಪ್ರಕೃತೀನಾಂ ತು ತದ್ ವಾಕ್ಯಂ ದೇಶಕಾಲೋಪಸಂಹಿತಮ್ |
ಶ್ರುತ್ವಾ ಯುಧಿಷ್ಠಿರೋ ರಾಜಾಽಥೋತ್ತರಂ ಪ್ರತ್ಯಭಾಷತ ॥1॥
ವೈಶಂಪಾಯನರು ಪ್ರಜೆಗಳ ದೇಶಕಾಲೋಚಿತವಾದ ಆ ಮಾತುಗಳನ್ನು ಕೇಳಿದ ಯುಧಿಷ್ಠಿರರಾಜನು ಅನಂತರ ಉತ್ತರವನ್ನು ನೀಡಿದನು.
ಧನ್ಯಾಃ ಪಾಂಡುಸುತಾ ಲೋಕೇ ಯೇಷಾಂ ಬ್ರಾಹ್ಮಣಪುಂಗವಾಃ |
ತಥ್ಯಾನ್ ವಾಪ್ಯಥ ವಾಽತಥ್ಯಾನ್ ಗುಣಾನಾಹುಃ ಸಮಾಗತಾಃ ॥2॥
ಬ್ರಾಹ್ಮಣಪುಂಗವರಾದ ನೀವೆಲ್ಲರೂ ಇಲ್ಲಿಗೆ ಬಂದು ನಮ್ಮಲ್ಲಿ ಇರುವ ಅಥವಾ ಇಲ್ಲದಿರುವ ಗುಣಗಳನ್ನು ಹೀಗೆ ಹೇಳುವುದರಿಂದ ಪಾಂಡುಸುತರಾದ ನಾವು ಧನ್ಯರಾಗಿದ್ದೇವೆ.
ಅನುಗ್ರಾಹ್ಯಾ ವಯಂ ನೂನಂ ಭವತಾಮಿತಿ ಮೇ ಮತಿಃ |
ಯತ್ರೈವಂ ಗುಣಸಂಪನ್ನಾನಸ್ಮಾನ್ ಬ್ರೂಥ ವಿಮತ್ಸರಾಃ ॥3॥
ಯಾವ ಮಾತ್ಸರ್ಯವೂ ಇಲ್ಲದೆ ನಮ್ಮನ್ನು ಈ ರೀತಿಯಾಗಿ ಗುಣಸಂಪನ್ನ- ರೆಂದು ಹೇಳುತ್ತಿರುವ ನಿಮ್ಮ ಅನುಗ್ರಹವು ನಮ್ಮ ಮೇಲೆ ಯಾವಾಗಲೂ ಇರ- ಬೇಕೆಂದು ನನ್ನ ಅಭಿಪ್ರಾಯ.
ಧೃತರಾಷ್ಟ್ರೋ ಮಹಾರಾಜಃ ಪಿತಾ ನೋ ದೈವತಂ ಪರಮ್ |

ಶಾಸನೇಽಸ್ಯ ಪ್ರಿಯೇ ಚೈವ ಸ್ಥೇಯಂ ಮತ್ಪ್ರಿಯಕಾಂಕ್ಷಿಭಿಃ ॥4॥
ನಮ್ಮ ತಂದೆಯಾದ ಧೃತರಾಷ್ಟ್ರನೇ ಮಹಾರಾಜ. ಅವನು ನಮಗೆ ದೊಡ್ಡ ದೇವತೆ. ನನಗೆ ಪ್ರಿಯವನ್ನು ಮಾಡಲು ಬಯಸುವ ನೀವು ಯಾವಾಗಲೂ ಅವನ ಶಾಸನವನ್ನು ನೆರವೇರಿಸಿ ಅವನಿಗೆ ಪ್ರಿಯವನ್ನು ಮಾಡಬೇಕು.
ಏತದರ್ಥಂ ಹಿ ಜೀವಾಮಿ ಕೃತ್ವಾ ಜ್ಞಾತಿವಧಂ ಮಹತ್ |
ಅಸ್ಯ ಶು(ಶ್ರಿ)ಶ್ರೂಷಣಂ ಕಾರ್ಯಂ ಮಯಾ ನಿತ್ಯಮತಂದ್ರಿಣಾ ॥5॥
ದೊಡ್ಡ ಜ್ಞಾತಿವಧೆಯನ್ನು ಮಾಡಿ ನಾನು ಇದರ ಸಲುವಾಗಿ ಜೀವಿಸಿದ್ದೇನೆ. ನಾನು ಆಲಸ್ಯವಿಲ್ಲದೆ ಧೃತರಾಷ್ಟ್ರನ ಸೇವೆಯನ್ನು ಯಾವಾಗಲೂ ಮಾಡಬೇಕಾಗಿದೆ.
ಯದಿ ಚಾಹಮನುಗ್ರಾಹ್ಯೋ ಭವತಾಂ ಸುಹೃದಾಂ ತತಃ |
ಧೃತರಾಷ್ಟ್ರೇ ಯಥಾಪೂರ್ವಂ ವೃತ್ತಿಂ ವರ್ತಿತುಮರ್ಹಥ ॥6॥
ಸುಹೃಜ್ಜನರಾದ ನೀವೆಲ್ಲರೂ ನನಗೆ ಅನುಗ್ರಹವನ್ನು ಮಾಡುವುದಾದರೆ ನೀವೆಲ್ಲರೂ ಧೃತರಾಷ್ಟ್ರನ ವಿಷಯದಲ್ಲಿ ಮೊದಲಿನಂತೆಯೇ ನಡೆದುಕೊಳ್ಳಬೇಕು.
ಏಷ ನಾಥೋ ಹಿ ಜಗತೋ ಭವತಾಂ ಚ ಮಯಾ ಸಹ |
ಅಸ್ಯೈವ ಪೃಥಿವೀ ಕೃತ್ಸ್ನಾ ಪಾಂಡವಾಃ ಸರ್ವ ಏವ ಚ |
ಏತನ್ಮನಸಿ ಕರ್ತವ್ಯಂ ಭವದ್ಭಿರ್ವಚನಂ ಮಮ ॥7॥
ಅವನೇ ಜಗತ್ತಿಗೂ ನಿಮಗೂ ಮತ್ತು ನನಗೂ ಒಡೆಯನಾದವನು. ಸಮಗ್ರ- ವಾದ ಭೂಮಿಯು ಮತ್ತು ಎಲ್ಲಾ ಪಾಂಡವರೂ ಅವನಿಗೇ ಸೇರಿದವರು. ಈ ನನ್ನ ಮಾತನ್ನು ನೀವು ಯಾವಾಗಲೂ ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು. (ಎಂದು ಹೇಳಿ- ದನು).
ಅನುಗಮ್ಯ ಚ ರಾಜಾ ತಾನ್ ಯಥೇಷ್ಟಂ ಗಮ್ಯತಾಮಿತಿ |
ಪೌರಜನಪದಾನ್ ಸರ್ವಾನ್ ವಿಸೃಜ್ಯ ಕುರುನಂದನಃ |
ಯೌವರಾಜ್ಯೇನ ಕೌರವ್ಯೋ ಭೀಮಸೇನಮಯೋಜಯತ್ ॥8॥
ಕುರುನಂದನನಾದ ಯುಧಿಷ್ಠಿರನು ಪೌರಜಾನಪದರಿಗೆ ನಿಮಗೆ ಇಚ್ಛೆ ಬಂದಂತೆ ನೀವು ಹೋಗಬಹುದು ಎಂದು ಅನುಮತಿಯನ್ನು ನೀಡಿ, ಭೀಮಸೇನನಿಗೆ ಯುವ- ರಾಜಪದವಿಯನ್ನು ನೀಡಿದನು.
ಮಂತ್ರೇ ಚ ನಿಶ್ಚಯೇ ಚೈವ ಷಾಡ್ಗುಣ್ಯಸ್ಯ ಚ ಚಿಂತನೇ |
ವಿದುರಂ ಬುದ್ಧಿಸಂಪನ್ನಂ ಪ್ರೀತಿಮಾನ್ ವೈ ಸಮಾದಿಶತ್ ॥9॥
ಮಂತ್ರಾಲೋಚನೆಯಲ್ಲಿ ಮುಖ್ಯವಾದ ನಿರ್ಧಾರಗಳ ವಿಷಯದಲ್ಲಿ ಮತ್ತು ರಾಜನೀತಿಯ ಷಡಂಗಗಳಲ್ಲಿ ಬುದ್ಧಿಸಂಪನ್ನನಾದ ವಿದುರನನ್ನು ಸಂತೋಷದಿಂದ ಯೋಜಿಸಿದನು.
ಕೃತಾಕೃತಪರಿಜ್ಞಾನೇ ತಥಾಽಯವ್ಯಯಚಿಂತನೇ |
ಸಂಜಯಂ ಯೋಜಯಾಮಾಸ ಋದ್ಧಮೃದ್ಧೈರ್ಗುಣೈರ್ಯುತಮ್ ॥10॥
ಮಾಡಿದ ಮತ್ತು ಮಾಡಬೇಕಾದ ಕಾರ್ಯಗಳ ಪರಿಶೀಲನೆ ಮತ್ತು ಆಯವ್ಯಯದ ಚಿಂತನೆಯಲ್ಲಿ ಸಮೃದ್ಧವಾದ ಗುಣಗಳಿಂದ ಕೂಡಿದ ಸಮೃದ್ಧನಾದ ಸಂಜಯನನ್ನು ಯೋಜಿಸಿದನು.
ಬಲಸ್ಯ ಪರಿಮಾಣೇ ಚ ಭಕ್ತವೇತನಯೋಸ್ತಥಾ |
ನಕುಲಂ ವ್ಯಾದಿಶದ್ ರಾಜಾ ಕರ್ಮಿಣಾಮನ್ವವೇಕ್ಷಣೇ ॥11॥
ಸೈನ್ಯದ ಜಮಾವಣೆಯ ವಿಷಯದಲ್ಲಿ ಮತ್ತು ಸೈನಿಕರಿಗೆ ಭತ್ಯ ಮತ್ತು ವೇತನ- ವನ್ನು ಕೊಡುವ ವಿಷಯದಲ್ಲಿ ಮತ್ತು ಎಲ್ಲ ಕರ್ಮಕಾರರ ಮೇಲ್ವಿಚಾರಣೆಯಲ್ಲಿ ನಕುಲನನ್ನು ಯೋಜಿಸಿದನು.
ಪರಚಕ್ರೋಪರೋಧೇ ಚ ದೃಪ್ತಾನಾಂ ಚಾವಮರ್ದನೇ |
ಯುಧಿಷ್ಠಿರೋ ಮಹಾರಾಜ ಫಲ್ಗುನಂ ವ್ಯಾದಿದೇಶ ಹ ॥12॥
ಪರದೇಶಗಳನ್ನು ಮುತ್ತಿಗೆ ಹಾಕುವ ವಿಷಯದಲ್ಲಿ ಮತ್ತು ದರ್ಪವನ್ನು ಹೊಂದಿದ ರಾಜರನ್ನು ಸದೆಬಡಿಯುವ ವಿಷಯದಲ್ಲಿ ಮಹಾರಾಜನಾದ ಯುಧಿ- ಷ್ಠಿರನು ಅರ್ಜುನನಿಗೆ ಆದೇಶವನ್ನು ನೀಡಿದನು.
ದ್ವಿಜಾನಾಂ ವೇದಕಾರ್ಯೇಷು ಕಾರ್ಯೇಷ್ವನ್ಯೇಷು ಚೈವ ಹಿ |
ಧೌಮ್ಯಂ ಪುರೋಧಸಾಂ ಶ್ರೇಷ್ಠಂ ವ್ಯಾದಿದೇಶ ಪರಂತಪಃ ॥13॥
ಪರಂತಪನಾದ ಯುಧಿಷ್ಠಿರನು ಬ್ರಾಹ್ಮಣರ ವೈದಿಕಕಾರ್ಯಗಳಲ್ಲಿ ಮತ್ತು ಬೇರೆ ಕಾರ್ಯಗಳಲ್ಲಿಯೂ ಪುರೋಹಿತರಲ್ಲಿ ಶ್ರೇಷ್ಠರಾದ ಧೌಮ್ಯರನ್ನು ಆದೇಶಿಸಿದನು.
ಸಹದೇವಂ ಸಮೀಪಸ್ಥಂ ನಿತ್ಯಮೇವ ಸಮಾದಿಶತ್ |
ತೇನ ಗೋಪ್ಯೋ ಹಿ ನೃಪತಿಃ ಸರ್ವಾವಸ್ಥೋ ವಿಶಾಂಪತೇ ॥14॥
ಸಹದೇವನನ್ನು ಸಮೀಪದಲ್ಲಿ ಇದ್ದು, ಯಾವಾಗಲೂ ತನ್ನ ಅಂಗರಕ್ಷಕ- ನಾಗಿರುವಂತೆ ಆದೇಶಿಸಿದನು. ಎಲೈ ರಾಜನೇ! ಎಲ್ಲ ಕಾಲಗಳಲ್ಲಿಯೂ ರಾಜನು ಸಹದೇವನಿಂದ ರಕ್ಷಿಸಲ್ಪಡಬೇಕಾದವನು.
ಯಾನ್ ಯಾನಮನ್ಯದ್ ಯೋಗ್ಯಾಂಶ್ಚ ಯೇಷು ಯೇಷ್ವಿಹ ಕರ್ಮಸು |
ತಾಂಸ್ತಾಂಸ್ತೇಷ್ವೇವ ಯುಯುಜೇ ಪ್ರೀಯಮಾಣೋ ಮಹೀಪತಿಃ ॥15॥
ರಾಜನಾದ ಯುಧಿಷ್ಠಿರನು ಯಾವ ಯಾವ ಕಾರ್ಯಗಳಿಗೆ ಯಾರು ಯಾರು ಯೋಗ್ಯರೆಂದು ಭಾವಿಸಿದನೋ ಅಂತಹವರನ್ನು ಆಯಾ ಕಾರ್ಯಗಳಲ್ಲಿಯೇ ಸಂತೋಷದಿಂದ ನಿಯೋಜಿಸಿದನು.
ವಿದುರಂ ಸಂಜಯಂ ಚೈವ ಯುಯುತ್ಸುಂ ಚ ಮಹೀಪತಿಃ |

ಅಬ್ರುವೀತ್ ಪರವೀರಘ್ನೋ ಧರ್ಮಾತ್ಮಾ ಧರ್ಮವತ್ಸಲಃ ॥16॥
ಉತ್ಥಾಯೋತ್ಥಾಯ ಯತ್ ಕಾರ್ಯಮಸ್ಯ ರಾಜ್ಞಃ ಪಿತುರ್ಮಮ |
ಸರ್ವಂ ಭವದ್ಭಿಃ ಕರ್ತವ್ಯಮಪ್ರಮತ್ತೈರ್ಯಥಾತಥಮ್ ॥17॥
ಪೌರಜಾನಪದಾನಾಂ ಚ ಯಾನಿ ಕಾರ್ಯಾಣಿ ನಿತ್ಯಶಃ |
ರಾಜಾನಂ ಸಮನುಜ್ಞಾಪ್ಯ ತಾನಿ ಕಾರ್ಯಾಣಿ ಧರ್ಮತಃ ॥18॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಚತ್ವಾರಿಂಶೋಽಧ್ಯಾಯಃ ॥41॥
ವಿದುರ, ಸಂಜಯ ಮತ್ತು ಯುಯುತ್ಸುವನ್ನು ಕುರಿತು ಪರವೀರಘ್ನನೂ ಧರ್ಮಾತ್ಮನೂ ಧರ್ಮವತ್ಸಲನೂ ಆದ ರಾಜನು ನೀವು ಪ್ರತಿದಿನವೂ ಎದ್ದು ರಾಜನಾದ ನನ್ನ ತಂದೆಗೆ ಮಾಡಬೇಕಾದ ಕಾರ್ಯಗಳನ್ನು ಎಚ್ಚರಿಕೆಯಿಂದ ಸರಿಯಾಗಿ ಮಾಡಬೇಕು. ಪೌರಜಾನಪದರಿಗೆ ನಿತ್ಯವೂ ಯಾವ ಕಾರ್ಯವಾಗ- ಬೇಕಾಗಿದೆಯೋ ಅವುಗಳನ್ನೆಲ್ಲಾ ರಾಜನಾದ ಧೃತರಾಷ್ಟ್ರನ ಅನುಮತಿಯನ್ನು ಪಡೆದು ನೀವು ಧರ್ಮದಿಂದ ಮಾಡಬೇಕು ಎಂದು ಹೇಳಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 41ನೆಯ ಅಧ್ಯಾಯವು ಮುಗಿಯಿತು
0

42. ನಲವತ್ತೆರಡನೆಯ ಅಧ್ಯಾಯ
ಯುಧಿಷ್ಠಿರನಿಂದ ಜ್ಞಾತಿಗಳಿಗೆ ಶ್ರಾದ್ಧದಾನ
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ಜ್ಞಾತೀನಾಂ ಯೇ ಹತಾ ಮೃಧೇ |
ಶ್ರಾದ್ಧಾನಿ ಕಾರಯಾಮಾಸ ತೇಷಾಂ ಪೃಥಗುದಾರಧೀಃ ॥1॥
ವೈಶಂಪಾಯನರು ಅನಂತರ ರಾಜನಾದ ಯುಧಿಷ್ಠಿರನು ಉದಾರವಾದ ಬುದ್ಧಿಯುಳ್ಳವನಾಗಿ ಯುದ್ಧದಲ್ಲಿ ಹತರಾದ ಜ್ಞಾತಿಗಳಿಗೆ ಶ್ರಾದ್ಧಗಳನ್ನು ಮಾಡಿಸಿ- ದನು.
ಧೃತರಾಷ್ಟ್ರೋ ದದೌ ರಾಜಾ ಪುತ್ರಾಣಾಮೌರ್ಧ್ವದೇಹಿಕಮ್ |
ಸರ್ವಕಾಮಗುಣೋಪೇತಮನ್ನಂ ಗಾಶ್ಚ ಧನಾನಿ ಚ |
ರತ್ನಾನಿ ಚ ವಿಚಿತ್ರಾಣಿ ಮಹಾರ್ಹಾಣಿ ಮಹಾಯಶಾಃ ॥2॥
ರಾಜನಾದ ಧೃತರಾಷ್ಟ್ರನು ತನ್ನ ಪುತ್ರರಿಗೆ ಸರ್ವಾಪೇಕ್ಷಿತಗುಣಗಳಿಂದ ಕೂಡಿದ ಔರ್ಧ್ವದೈಹಿಕಕ್ರಿಯೆಯನ್ನು ಮಾಡಿ ಮಹಾಕೀರ್ತಿವಂತನಾದ ಅವನು ಅನ್ನವನ್ನೂ ಗೋವುಗಳನ್ನೂ, ಧನವನ್ನೂ, ವಿಚಿತ್ರವಾದ ಬೆಲೆ ಬಾಳುವ ರತ್ನಗಳನ್ನೂ ದಾನ ಮಾಡಿದನು.
ಯುಧಿಷ್ಠಿರಸ್ತು ಕರ್ಣಸ್ಯ ದ್ರೋಣಸ್ಯ ಚ ಮಹಾತ್ಮನಃ |
ಧೃಷ್ಟದ್ಯುಮ್ನಾಭಿಮನ್ಯುಭ್ಯಾಂ ಹೈಡಿಂಬಸ್ಯ ಚ ರಕ್ಷಸಃ ॥3॥
ವಿರಾಟಪ್ರಭೃತೀನಾಂ ಚ ಸುಹೃದಾಮುಪಕಾರಿಣಾಮ್ |
ದ್ರುಪದದ್ರೌಪದೇಯಾನಾಂ ದ್ರೌಪದ್ಯಾ ಸಹಿತೋ ದದೌ ॥4॥
ಯುಧಿಷ್ಠಿರನಾದರೋ ಕರ್ಣನಿಗೆ ಮಹಾತ್ಮರಾದ ದ್ರೋಣರಿಗೆ ಧೃಷ್ಟದ್ಯುಮ್ನ ಮತ್ತು ಅಭಿಮನ್ಯುಗಳಿಗೆ ರಾಕ್ಷಸನಾದ ಘಟೋತ್ಕಚನಿಗೆ ವಿರಾಟ ಮೊದಲಾದ ಉಪಕಾರಿಗಳಾದ ಸುಹೃಜ್ಜನರಿಗೆ ದ್ರುಪದನಿಗೆ ಮತ್ತು ದ್ರುಪದಪುತ್ರರಿಗೆ ದ್ರೌಪದಿ- ಯಿಂದ ಸಹಿತನಾಗಿ ಶ್ರಾದ್ಧವನ್ನು ಮಾಡಿದನು.
ಬ್ರಾಹ್ಮಣಾನಾಂ ಸಹಸ್ರಾಣಿ ಪೃಥಗೇಕೈಕಮುದ್ದಿಶನ್ |
ಧನೈಶ್ಚ ವಸ್ತ್ರೈ ರತ್ನೈಶ್ಚ ಗೋಭಿಶ್ಚ ಸಮತರ್ಪಯತ್ ॥5॥
ಹತರಾದ ಒಬ್ಬೊಬ್ಬರನ್ನೂ ಉದ್ದೇಶಿಸಿ ಸಹಸ್ರಬ್ರಾಹ್ಮಣರನ್ನು ಧನಗಳಿಂದಲೂ, ವಸ್ತ್ರಗಳಿಂದಲೂ, ರತ್ನಗಳಿಂದಲೂ, ಗೋವುಗಳಿಂದಲೂ ತೃಪ್ತಿಪಡಿಸಿದನು.
ಯೇ ಚಾನ್ಯೇ ಪೃಥಿವೀಪಾಲಾ ಯೇಷಾಂ ನಾಸ್ತಿ ಸುಹೃಜ್ಜನಃ |
ಉದ್ದಿಶ್ಯೋದ್ದಿಶ್ಯ ತೇಷಾಂ ಚ ಚಕ್ರೇ ರಾಜೌರ್ಧ್ವದೈಹಿಕಮ್ ॥6॥
ರಾಜನಾದ ಅವನು ಯುದ್ಧದಲ್ಲಿ ಮಡಿದ ಸುಹೃಜ್ಜನರಿಲ್ಲದ ರಾಜರನ್ನು ಪ್ರತಿ- ಯೊಬ್ಬರನ್ನೂ ಉದ್ದೇಶಿಸಿ ಉದ್ದೇಶಿಸಿ ಅವರಿಗೆ ಉತ್ತರಕ್ರಿಯೆಯನ್ನು ಮಾಡಿದನು.
ಸಭಾಃ ಪ್ರಪಾಶ್ಚ ವಿವಿಧಾಸ್ತಡಾಗಾನಿ ಚ ಪಾಂಡವಃ |
ಸುಹೃದಾಂ ಕಾರಯಾಮಾಸ ಸರ್ವೇಷಾಮೌರ್ಧ್ವದೈಹಿಕಮ್ ॥7॥
ಪಾಂಡವನಾದ ಅವನು ಸುಹೃಜ್ಜನರ ಔರ್ಧ್ವದೈಹಿಕಕ್ರಿಯೆಯ ಅಂಗವಾಗಿ ಸಭೆ- ಗಳನ್ನು, ಪಾನಶಾಲೆಗಳನ್ನು ವಿವಿಧವಾದ ಜಲಾಶಯಗಳನ್ನು ನಿರ್ಮಿಸಿದನು.
ಸ ತೇಷಾಮನೃಣೋ ಭೂತ್ವಾ ಗತ್ವಾ ಲೋಕೇಷ್ವವಾಚ್ಯತಾಮ್ |
ಕೃತಕೃತ್ಯೋಽಭವದ್ ರಾಜಾ ಪ್ರಜಾ ಧರ್ಮೇಣ ಪಾಲಯನ್ ॥8॥
ಅವನು ಅವರ ಋಣದಿಂದ ಮುಕ್ತನಾಗಿ, ಲೋಕದಲ್ಲಿ ನಿಂದ್ಯನಾಗದೆ ಪ್ರಜೆ- ಗಳನ್ನು ಧರ್ಮದಿಂದ ಪಾಲಿಸುತ್ತಾ ಕೃತಕೃತ್ಯನಾದನು.
ಧೃತರಾಷ್ಟ್ರಂ ಯಥಾಪೂರ್ವಂ ಗಾಂಧಾರೀಂ ವಿದುರಂ ತಥಾ |

ಸರ್ವಾಂಶ್ಚ ಕೌರವಾಮಾತ್ಯಾನ್ ಭೃತ್ಯಾಂಶ್ಚ ಸಮಪೂಜಯತ್ ॥9॥
ಧೃತರಾಷ್ಟ್ರನನ್ನೂ, ಗಾಂಧಾರಿಯನ್ನೂ, ವಿದುರನನ್ನೂ, ಕೌರವರ ಎಲ್ಲಾ ಮಂತ್ರಿಗಳನ್ನೂ ಮತ್ತು ಭೃತ್ಯರನ್ನೂ ಮೊದಲಿನಂತೆಯೇ ಪೂಜಿಸಿದನು.
ಯಾಶ್ಚ ತತ್ರ ಸ್ತ್ರಿಯಃ ಕಾಶ್ಚಿದ್ ಹತವೀರಾ ಹತಾತ್ಮಜಾಃ ।
ಸರ್ವಾಸ್ತಾಃ ಕೌರವೋ ರಾಜಾ ಸಂಪೂಜ್ಯಾಪಾಲಯದ್ ಘೃಣೀ ॥10॥
ಕೌರವರಾಜನಾದ ಯುಧಿಷ್ಠಿರನು ದಯಾಪೂರ್ಣನಾಗಿ ಯುದ್ಧದಲ್ಲಿ ಪತಿ- ಗಳನ್ನೂ, ಪುತ್ರರನ್ನೂ ಕಳೆದುಕೊಂಡ ಎಲ್ಲಾ ಸ್ತ್ರೀಯರನ್ನೂ ಪೂಜಿಸಿ, ಅವರ ಪಾಲನೆಯನ್ನು ಮಾಡಿದನು.
ದೀನಾಂಧಕೃಪಣಾನಾಂ ಚ ಗೃಹಾಚ್ಛಾದನಭೋಜನೈಃ ।
ಆನೃಂಶಸ್ಯಪರೋ ರಾಜಾ ಚಕಾರಾನುಗ್ರಹಂ ಪ್ರಭುಃ ॥11॥
ಪ್ರಭುವೂ ದಯಾಳುವೂ ಆದ ರಾಜನು ದೀನಾಂಧಕೃಪಣರಿಗೆ ಗೃಹಗಳನ್ನೂ, ವಸ್ತ್ರಗಳನ್ನೂ ಮತ್ತು ಭೋಜನವನ್ನೂ ಕಲ್ಪಿಸಿ ಅನುಗ್ರಹವನ್ನು ಮಾಡಿದನು.
ಸ ವಿಜಿತ್ಯ ಮಹೀಂ ಕೃತ್ಸ್ನಾಮಾನೃಣ್ಯಂ ಪ್ರಾಪ್ಯ ವೈರಿಷು ।
ನಿಃಸಪತ್ನಃ ಸುಖೀ ರಾಜಾ ವಿಜಹಾರ ಯುಧಿಷ್ಠಿರಃ ॥12॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿಚತ್ವಾರಿಂಶೋಽಧ್ಯಾಯಃ ॥42॥
ರಾಜನಾದ ಯುಧಿಷ್ಠಿರನು ಸಮಗ್ರವಾದ ಭೂಮಿಯನ್ನು ಗೆದ್ದು ವೈರಿಗಳಿಗೂ ಶ್ರಾದ್ಧವನ್ನು ಮಾಡಿ ಅವರ ಋಣವನ್ನು ತೀರಿಸಿ, ಶತ್ರುರಹಿತನಾಗಿ ಸಂತೋಷದಿಂದ ವಿಹರಿಸಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 42ನೆಯ ಅಧ್ಯಾಯ ಮುಗಿಯಿತು.
0

43. ನಲವತ್ತಮೂರನೆಯ ಅಧ್ಯಾಯ
ಯುಧಿಷ್ಠಿರನು ಮಾಡಿದ ಕೃಷ್ಣಸ್ತೋತ್ರ
ವೈಶಂಪಾಯನಃ
ಅಭಿಷಿಕ್ತೋ ಮಹಾಪ್ರಾಜ್ಞೋ ರಾಜ್ಯಂ ಪ್ರಾಪ್ಯ ಯುಧಿಷ್ಠಿರಃ ।
ದಾಶಾರ್ಹಂ ಪುಂಡರೀಕಾಕ್ಷಮುವಾಚ ಪ್ರಾಂಜಲಿಃ ಶುಚಿಃ ॥1॥
ವೈಶಂಪಾಯನರು ಮಹಾಪ್ರಾಜ್ಞನಾದ ಯುಧಿಷ್ಠಿರನು ರಾಜ್ಯದಲ್ಲಿ ಅಭಿಷಿಕ್ತ- ನಾಗಿ ರಾಜ್ಯವನ್ನು ಪಡೆದು ಪುಂಡರೀಕಾಕ್ಷನಾದ ದಾಶಾರ್ಹನಾದ ಕೃಷ್ಣನಿಗೆ ಶುಚಿ- ಯಾಗಿ ಕೈಗಳನ್ನು ಮುಗಿದು ಮಾತನಾಡಿದನು.
ತವ ಕೃಷ್ಣ ಪ್ರಸಾದೇನ ನಯೇನ ಚ ಬಲೇನ ಚ ।
ಬುದ್ಧ್ಯಾ ಚ ಯದುಶಾರ್ದೂಲ ತಥಾ ವಿಕ್ರಮಣೇನ ಚ ॥2॥
ಪುನಃ ಪ್ರಾಪ್ತಮಿದಂ ರಾಜ್ಯಂ ಪಿತೃಪೈತಾಮಹಂ ಮಯಾ ।
ನಮಸ್ತೇ ಪುಂಡರೀಕಾಕ್ಷ ಪುನಃ ಪುನರರಿಂದಮ ॥3॥
ಕೃಷ್ಣನೇ ನಿನ್ನ ಅನುಗ್ರಹದಿಂದ, ನೀತಿಯಿಂದ, ಬಲದಿಂದ, ಬುದ್ಧಿಯಿಂದ ಮತ್ತು ಪರಾಕ್ರಮದಿಂದ ಪಿತೃಪಿತಾಮಹರಿಗೆ ಸೇರಿದ ಈ ರಾಜ್ಯವನ್ನು ನಾನು ಪುನಃ ಪಡೆದಿ- ದ್ದೇನೆ. ಎಲೈ ಯದುಶಾರ್ದೂಲನೇ! ಪುಂಡರೀಕಾಕ್ಷನೇ! ಅರಿಂದಮನೇ! ನಿನಗೆ ಪುನಃ ಪುನಃ ನಮಸ್ಕಾರ.
ತ್ವಾಮೇಕಮಾಹುಃ ಪುರುಷಂ ತ್ವಾಮಾಹುಃ ಸಾತ್ವತಾಂಪತಿಮ್ ।
ನಾಮಭಿಸ್ತ್ವಂ ಬಹುವಿಧೈಃ ಸ್ತುವಂತಿ ಪರಮರ್ಷಯಃ ॥4॥
ನಿನ್ನನ್ನು ಸರ್ವೋತ್ತಮನೆಂದು ಕರೆಯುತ್ತಾರೆ. ಪೂರ್ಣಷಡ್ಗುಣಸಂಪನ್ನನೆಂದು ಕರೆಯುತ್ತಾರೆ. ಸಾತ್ವತರಿಗೆ ಪತಿಯೆಂದು ಕರೆಯುತ್ತಾರೆ. ಪರಮ ಋಷಿಗಳು ಅನೇಕ- ವಿಧವಾದ ನಾಮಗಳಿಂದ ನಿನ್ನ ಸ್ತೋತ್ರವನ್ನು ಮಾಡುತ್ತಾರೆ.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ ।
ವಿಷ್ಣೋ ಜಿಷ್ಣೋ ಹರೇ ಕೃಷ್ಣ ವೈಕುಂಠ ಪುರುಷೋತ್ತಮ ॥5॥
ಎಲೈ ಎಲ್ಲ ಕರ್ಮಗಳನ್ನೂ ಮಾಡುವವನೇ! ನಿನಗೆ ನಮಸ್ಕಾರ. ವಿಶ್ವ- ವ್ಯಾಪಕನೇ! ವಿಶ್ವೋತ್ಪತ್ತಿಗೆ ಕಾರಣನೇ! ವಿಶೇಷವಾದ ಪ್ರಾಣಚೇಷ್ಟಾರೂಪನಾದ- ವನೇ! ಜಯಶೀಲನಾದವನೇ! ಪಾಪಪರಿಹಾರಕನೇ! ಕುಂದದ ಗುಣಗಳುಳ್ಳವನೇ! ಪುರುಷೋತ್ತಮನೇ! ಕೃಷ್ಣನೇ! (ನಿನಗೆ ನಮಸ್ಕಾರ).
ಅದಿತ್ಯಾಃ ಸಪ್ತಧಾ ತ್ವಂ ತು ಪುರಾಣೇ ಗರ್ಭತಾಂಗತಃ ।
ಪೃಶ್ನಿಗರ್ಭಸ್ತ್ವಮೇವೈಕಸ್ತ್ರಿಯುಗಂ ತ್ವಾಂ ವದಂತ್ಯಪಿ ॥6॥
ಪುರಾಣಗಳಲ್ಲಿ ನೀನು ಅದಿತಿದೇವಿಯ ಗರ್ಭದಲ್ಲಿ ಏಳು ಬಾರಿ ಜನಿಸಿದ್ದೀಯೆ ಎಂದು ಹೇಳಲ್ಪಡುತ್ತದೆ. ನೀನೇ ಪೃಶ್ನಿಗರ್ಭನಾದವನು. ನಿನ್ನನ್ನು ಮೂರು ಯುಗ- ಗಳಲ್ಲಿ ಅವತಾರ ಮಾಡುವ ಕಾರಣದಿಂದ ತ್ರಿಯುಗನೆಂದು ಕರೆಯುತ್ತಾರೆ.
ಶುಚಿಶ್ರವಾ ಹೃಷೀಕೇಶೋ ಘೃತಾರ್ಚಿರ್ಹಂಸ ಉಚ್ಯಸೇ ।
ತ್ರಿಚಕ್ಷುಃ ಶಂಭುರೇಕಸ್ತ್ವಂ ವಿಭುರ್ದಾಮೋದರೋಽಪಿ ಚ ॥7॥
ನೀನು ಪವಿತ್ರವಾದ ಕೀರ್ತಿಯುಳ್ಳವನು. ಇಂದ್ರಿಯಗಳಿಗೆ ಅಧಿಪತಿಯಾದ- ವನು. ಪ್ರಸರಿಸುವ ಜ್ಞಾನಾದಿ ಜ್ವಾಲೆಯುಳ್ಳವನು.

ದೋಷದೂರನೂ ಮತ್ತು ಗುಣಪರಿಪೂರ್ಣನೂ ಆದ ಕಾರಣದಿಂದ ಶುಚಿಶ್ರವನೆಂದೂ, ಹೃಷೀಕೇಶನೆಂದೂ, ಘೃತಾರ್ಚಿ ಎಂದೂ, ಹಂಸನೆಂದೂ ಹೇಳಲ್ಪಡುತ್ತೀಯೆ. ನರಸಿಂಹರೂಪದಲ್ಲಿ ನೀನು ತ್ರಿನೇತ್ರನಾದವನು. ಪರಮಾನಂದಕ್ಕೆ ಆಶ್ರಯನಾದವನು ನೀನೊಬ್ಬನೇ. ನೀನು ವ್ಯಾಪ್ತನಾದವನು ಮತ್ತು ಯಶೋದೆಯಿಂದ ಉದರದಲ್ಲಿ ಕಟ್ಟಲ್ಪಟ್ಟವನು.

ವರಾಹೋಽಗ್ನಿರ್ಬೃಹದ್ಭಾನುರ್ವರ್ಷಣಸ್ತಾರ್ಕ್ಷ್ಯಲಕ್ಷಣಃ |
ಅನೀಕಸಾಹಃ ಪುರುಷಃ ಶಿಪಿವಿಷ್ಟ ಉರುಕ್ರಮಃ ॥8॥

ನೀನೇ ವರಾಹನಾದವನು. ಅಗ್ರನಾದ್ದರಿಂದ ಅಗ್ನಿಯೆಂದು ಕರೆಯಲ್ಪಡುವ- ವನು. ಅನಂತವಾದ ಜ್ಞಾನಕಿರಣವುಳ್ಳವನು. ಭಕ್ತರ ಅಭೀಷ್ಟವನ್ನು ಮಳೆಯಂತೆ ಸುರಿಸುವವನು. ಗರುಡಧ್ವಜನಾದವನು. ಯಾವ ಸೈನ್ಯವನ್ನೂ ತಡೆಯಲು ಸಮರ್ಥ -ನಾದವನು. ಗರುಡಾರೂಢನಾದವನು. ಮಹಾಪರಾಕ್ರಮವುಳ್ಳವನು.

ವಾಚಿಷ್ಯಃ ಉಗ್ರಃ ಸೇನಾನೀಃ ಸತ್ಯೋ ವಾಜಸನಿರ್ಗುಹಃ |
ಅಚ್ಯುತಶ್ಚ್ಯಾವನೋಽರೀಣಾಂ ಸಂಕೃತಿರ್ವಿಕೃತಿರ್ವೃಷಃ ॥9॥

ವಾಗಿಂದ್ರಿಯಸ್ಥಿತನಾದವನು. ಅಸುರರಿಗೆ ಘೋರರೂಪನಾದವನು. ಸೇನಾ ನಾಯಕನಾದವನು. ಮುಖ್ಯಪ್ರಾಣಪ್ರೇರಕನಾದವನು. ಎಲ್ಲರಿಗೂ ಅನ್ನವನ್ನು ನೀಡುವವನು. ಹೃದಯಗುಹೆಯಲ್ಲಿ ವಾಸಿಸುವವನು. ಚತುರ್ವಿಧನಾಶರಹಿತ- ನಾದವನು. ಶತ್ರುಗಳನ್ನು ನಾಶಪಡಿಸುವವನು. ಸಮೀಚೀನವಾದ ಕಾರ್ಯಗಳನ್ನು ಮಾಡುವವನು. ವಿವಿಧವಾದ ಕಾರ್ಯಗಳನ್ನು ಮಾಡುವವನು. ಸರ್ವಶ್ರೇಷ್ಠನಾ- ದವನು.

ಕೃತವರ್ತ್ಮಾ ತ್ವಮೇವಾದ್ರಿರ್ವೃಷಗರ್ಭೋ ವೃಷಾಕಪಿಃ |
ಸಿಂಧುಕ್ಷಿದೂರ್ಮಿಸ್ತ್ರಿಕಕುತ್ ತ್ರಿಧಾಮಾ ತ್ರಿವೃದಚ್ಯುತಃ ॥10॥

ವೇದಗಳಿಂದ ನಿನ್ನ ಪ್ರಾಪ್ತಿಗೆ ತೋರಿಸಲ್ಪಟ್ಟ ದಾರಿಯುಳ್ಳವನು. ನೀನೇ ಆದರಣೀಯನಾದವನು. ಶ್ರೇಷ್ಠವಾದ ಗರ್ಭವನ್ನು (ಬ್ರಹ್ಮಾಂಡವನ್ನು) ಧರಿಸಿದ- ವನು. ವೃಷಾಕಪಿ ಎನಿಸುವವನು. ಸಮುದ್ರಶಾಯಿಯಾದವನು. ಉತ್ಪತ್ತಿ ಸ್ಥಿತಿ ಸಂಹಾರಗಳ ತರಂಗಗಳನ್ನು ಪ್ರವರ್ತಿಸುವವನು. ಮೂರು ಶಿಖರಗಳನ್ನು ಹೊಂದಿ- ದವನು. ಶ್ವೇತದ್ವೀಪ ಅನಂತಾಸನ ಮತ್ತು ವೈಕುಂಠವೆಂಬ ಮೂರು ವಾಸಸ್ಥಾನ- ವುಳ್ಳವನು. ಮೂರು ವೇದಗಳಿಂದ ಪ್ರತಿಪಾದ್ಯನಾದವನು. ಚತುರ್ವಿಧನಾಶರಹಿತ- ನಾದವನು.

ಸಮ್ರಾಡ್ ವಿರಾಟ್ ಸ್ವರಾಟ್ ಚೈವ ಸುರರಾಟ್ ಧರ್ಮದೋ ಭವಃ |
ವಿಭುರ್ಭೂರಭಿಭೂಃ ಕೃಷ್ಣಃ ಕೃಷ್ಣವರ್ತ್ಮಾ ತ್ವಮೇವ ಚ ॥11॥

ಚೆನ್ನಾಗಿ ಪ್ರಕಾಶಿಸುವವನು. ವಿವಿಧವಾಗಿ ಪ್ರಕಾಶಿಸುವವನು. ಸ್ವತಂತ್ರನಾದವನು. ದೇವತೆಗಳಿಗೆ ಒಡೆಯನಾದವನು. ಧರ್ಮಪ್ರದನಾದವನು. ವೈಭವರೂಪನಾದ- ವನು. ವ್ಯಾಪ್ತನಾದವನು. ಸರ್ವಾಶ್ರಯನಾದವನು. ಶತ್ರುಗಳನ್ನು ಸೋಲಿಸುವವನು. ಎಲ್ಲರನ್ನೂ ಆಕರ್ಷಿಸುವವನು. ಎಲ್ಲರನ್ನೂ ನಿನ್ನೆಡೆಗೆ ಆಕರ್ಷಿಸುವ ಮಾರ್ಗ- ವುಳ್ಳವನು.

ಸ್ವಿಷ್ಟಕೃದ್ ಭಿಷಗಾವರ್ತಃ ಕಪಿಲಸ್ತ್ವಂ ಚ ವಾಮನಃ |
ಯಜ್ಞೋ ಧ್ರುವಃ ಪತಂಗಶ್ಚ ಜಯತ್ಸೇನಸ್ತ್ವಮುಚ್ಯತೇ ॥12॥

ಭಕ್ತರಿಗೆ ಬಹಳ ಇಷ್ಟವಾದ ವಸ್ತುಗಳನ್ನು ಕೊಡುವವನು. ಸಂಸಾರವೆಂಬ ರೋಗಕ್ಕೆ ವೈದ್ಯನಾದವನು. ಪುನಃ ಪುನಃ ಅವತಾರವನ್ನು ಮಾಡುವವನು. ನೀನೇ ಕಪಿಲನಾದವನು. ವಾಮನನಾದವನು. ಯಜನೀಯನಾದವನು. ಶಾಶ್ವತನಾದವನು. ಗರುಡಾದಿ ಪಕ್ಷಿಗಳ ಅಂತರ್ಯಾಮಿಯಾದವನು. ಜಯಶೀಲವಾದ ಸೇನೆಯುಳ್ಳ- ವನು ಎಂದು ಕರೆಯಲ್ಪಡುತ್ತೀಯೆ.

ಶಿಖಂಡೀ ನಹುಷೋ ಬಭ್ರುರ್ದಿವಃಸ್ಪೃಕ್ ತ್ವಂ ಪುನರ್ವಸುಃ |
ಸುಬಭ್ರುರುಕ್ಮೋ ರುಗ್ಮಸ್ತ್ವಂ ಸುಷೇಣೋ ದುಂದುಭಿಸ್ತಥಾ ॥13॥

ನೀನೇ ಶಿಖೆಯನ್ನು ಧರಿಸಿದವನು. ನಹುಷಾದಿ ಚಕ್ರವರ್ತಿಗಳ ಅಂತ- ರ್ಯಾಮಿಯಾದವನು. ಸರ್ವವನ್ನೂ ಧರಿಸಿದವನು. ಅವ್ಯಾಕೃತಾಕಾಶದಲ್ಲಿ ವ್ಯಾಪಿಸಿ -ರುವವನು. ಪುನಃ ಪುನಃ ಭಕ್ತರಿಗೆ ಧನವನ್ನು ಕೊಡುವವನು. ಶ್ರೇಷ್ಠವಾದ ಧಾರಣ- ಶೀಲನಾದವನು. ಭಕ್ತರ ಅಭೀಷ್ಟವನ್ನು ಸುರಿಸುವವನು. ಕಾಂತಿಯಿಂದ ಬೆಳಗು- ವವನು. ಒಳ್ಳೆಯ ಸೈನ್ಯವುಳ್ಳವನು. ದುಂದುಭಿಮೊದಲಾದವುಗಳಲ್ಲಿ ಇದ್ದು ಅವುಗಳ ಕಾರ್ಯವನ್ನು ಮಾಡುವವನು.

ಗಭಸ್ತಿನೇಮಿಃ ಶ್ರೀಪದ್ಮಂ ಪುಷ್ಕರಂ ಪುಷ್ಪಧಾರಣಃ |
ಋಭುರ್ವಿಭುಃ ಸರ್ವಸೂಕ್ಷ್ಮಸ್ತ್ವಂ ಸಾವಿತ್ರಂ ಚ ಪಠ್ಯಸೇ ॥14॥

ಕಿರಣಗಳುಳ್ಳ ಸುದರ್ಶನಚಕ್ರವುಳ್ಳವನು. ಲಕ್ಷ್ಮಿಯಿಂದ ಅಭಿಮನ್ಯವಾದ ಪದ್ಮವನ್ನು ಧರಿಸಿದವನು. ಪುಷ್ಕಳನಾದವನು. ಪುಷ್ಪಗಳಿಂದ ಮಾಡಿದ ವನಮಾಲೆ- ಯನ್ನು ಧರಿಸಿದವನು. ದೇವತೆಗಳಿಗೆ ಒಡೆಯನಾದವನು. ವ್ಯಾಪ್ತನಾದವನು. ಅತ್ಯಂತ ಸೂಕ್ಷ್ಮನಾದವನು(ಅತೀಂದ್ರಿಯನಾದವನು). ನೀನೇ ಗಾಯತ್ರೀಮಂತ್ರ- ಪ್ರತಿಪಾದ್ಯನೆಂದು ಹೇಳಲ್ಪಡುತ್ತೀಯೆ.

ಅಂಭೋನಿಧಿಸ್ತ್ವಂ ಬ್ರಹ್ಮಾ ತ್ವಂ ಪವಿತ್ರಂ ಧಾಮ ಧನ್ವ ಚ |
ಹಿರಣ್ಯಗರ್ಭಂ ತ್ವಾಮಾಹುಃ ಸ್ವಧಾ ಸ್ವಾಹಾ ಚ ಕೇಶವ ॥15॥

ಎಲೈ ಕೇಶವನೇ! ಸಮುದ್ರಗಳು, ಬ್ರಹ್ಮಾದಿ ದೇವತೆಗಳು, ಪವಿತ್ರವಾದ ವಾಸಸ್ಥಾನಗಳು, ಮರುಭೂಮಿಗಳು ಹಿರಣ್ಯಗರ್ಭರೂಪವಾದ ಬ್ರಹ್ಮಾಂಡ, ದೇವತೆಗಳ ಅನ್ನ, ಪಿತೃಗಳ ಅನ್ನ ಎಲ್ಲವೂ ನಿನ್ನ ಅಧೀನವಾದುದು.

ಯೋನಿಸ್ತ್ವಮಸ್ಯ ಪ್ರಲಯಶ್ಚ ಕೃಷ್ಣ
ತ್ವಮೇವೇದಂ ಸೃಜಸಿ ವಿಶ್ವಮಗ್ರೇ |
ವಿಶ್ವಂ ಚೇದಂ ತ್ವದ್ವಶೇ ವಿಶ್ವಯೋನೇ
ನಮೋಽಸ್ತು ತೇ ಶಾರ್ಙ್ಗಚಕ್ರಾಸಿಪಾಣೇ ॥16॥

ಎಲೈ ಕೃಷ್ಣನೇ! ನೀನು ಈ ಜಗತ್ತಿಗೆ ಉತ್ಪತ್ತಿಕಾರಣ ಮತ್ತು ಸಂಹಾರ ಕಾರಣನಾದವನು. ಪ್ರಳಯಕಾಲದಲ್ಲಿ ನೀನೇ ಈ ಜಗತ್ತನ್ನು

ಸೃಷ್ಟಿಸುವವನು. ಎಲೈ ವಿಶ್ವಯೋನಿಯೇ! ಈ ಜಗತ್ತು ನಿನ್ನ ಅಧೀನವಾಗಿದೆ. ಶಾರ್ಙ್ಗಧನುಸ್ಸನ್ನೂ, ಸುದರ್ಶನ ಚಕ್ರವನ್ನೂ, ನಂದಕ ಖಡ್ಗವನ್ನೂ ಹಸ್ತದಲ್ಲಿ ಹಿಡಿದ ನಿನಗೆ ನಮಸ್ಕಾರ.
ಏವಂ ಸ್ತುತೋ ಧರ್ಮರಾಜೇನ ಕೃಷ್ಣಃ
ಸಭಾಮಧ್ಯೇ ಪ್ರೀತಿಮಾನ್ ಪುಷ್ಕರಾಕ್ಷಃ |
ತಮಭ್ಯನಂದದ್ ಭಾರತಂ ಪುಷ್ಕಳಾಭಿಃ
ವಾಗ್ಭಿರ್ಜ್ಯೇಷ್ಠಂ ಪಾಂಡವಂ ಯಾದವಾಗ್ರ್ಯಃ ॥17॥
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಚತ್ವಾರಿಂಶೋಽಧ್ಯಾಯಃ ॥43॥
ಹೀಗೆ ಸಭಾಮಧ್ಯದಲ್ಲಿ ಧರ್ಮರಾಜನಿಂದ ಸ್ತೋತ್ರಮಾಡಲ್ಪಟ್ಟ ಪುಷ್ಕರಾಕ್ಷ- ನಾದ ಕೃಷ್ಣನು ಸಂತೋಷಗೊಂಡವನಾಗಿ, ಯಾದವಶ್ರೇಷ್ಠನಾದ ಅವನು ಪಾಂಡು- ಪುತ್ರರಲ್ಲಿ ಜ್ಯೇಷ್ಠನಾದ ಭರತವಂಶಪ್ರಸೂತನಾದ ಧರ್ಮರಾಜನನ್ನು ಪುಷ್ಕಳವಾದ ವಚನಗಳಿಂದ ಅಭಿನಂದಿಸಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 43ನೆಯ ಅಧ್ಯಾಯ ಮುಗಿಯಿತು.
0

44. ನಲವತ್ತನಾಲ್ಕನೆಯ ಅಧ್ಯಾಯ
ಯುಧಿಷ್ಠಿರನ ಆಜ್ಞೆಯಂತೆ ಭೀಮಾದಿಗಳಿಂದ ದುರ್ಯೋಧನಾದಿ ಗೃಹಪ್ರವೇಶ.
ವೈಶಂಪಾಯನಃ
ತತೋ ವಿಸರ್ಜಯಾಮಾಸ ಸರ್ವಾಃ ಪ್ರಕೃತಯೋ ನೃಪಃ |
ವಿವಿಶುಶ್ಚಾಭ್ಯನುಜ್ಞಾತಾ ಯಥಾಸ್ವಾನಿ ಗೃಹಾಣಿ ಚ ॥1॥
ವೈಶಂಪಾಯನರು ಅನಂತರ ರಾಜನಾದ ಯುಧಿಷ್ಠಿರನು ಎಲ್ಲ ಪ್ರಜೆಗಳನ್ನೂ ಬೀಳ್ಕೊಟ್ಟನು. ರಾಜನ ಅನುಮತಿಯನ್ನು ಪಡೆದ ಅವರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.
ತತೋ ಯುಧಿಷ್ಠಿರೋ ರಾಜಾ ಭೀಮಂ ಭೀಮಪರಾಕ್ರಮಮ್ |
ಸಾಂತ್ವಯನ್ನಬ್ರವೀದ್ ಧೀಮಾನರ್ಜುನಂ ಯಮಜೌ ತಥಾ ॥2॥
ಅನಂತರ ರಾಜನಾದ ಯುಧಿಷ್ಠಿರನು ಭಯಂಕರಪರಾಕ್ರಮವುಳ್ಳ ಭೀಮಸೇನ- ನನ್ನು ಮೇಧಾವಿಯಾದ ಅರ್ಜುನನನ್ನು ಮತ್ತು ನಕುಲ ಸಹದೇವರನ್ನು ಸಮಾಧಾನ ಪಡಿಸುತ್ತಾ ಮಾತನಾಡಿದನು.
ಶತ್ರುಭಿರ್ವಿವಿಧೈಃ ಶಸ್ತ್ರೈಃ ಕೃತ್ತದೇಹಾ ಮಹಾರಣೇ |
ಶ್ರಾಂತಾ ಭವಂತಃ ಸುಭೃಶಂ ತಾಪಿತಾಃ ಶೋಕಮನ್ಯುಭಿಃ ॥3॥
ನೀವು ದೊಡ್ಡ ಯುದ್ಧದಲ್ಲಿ ಶತ್ರುಗಳ ಅನೇಕವಿಧವಾದ ಶಸ್ತ್ರಗಳಿಂದ ಗಾಯ- ಗಳನ್ನು ಹೊಂದಿ ದಣಿದಿದ್ದೀರಿ. ಶೋಕ ಕೋಪಗಳಿಂದ ಬಹಳವಾಗಿ ತಪ್ತರಾಗಿದ್ದೀರಿ.
ಅರಣ್ಯೇ ದುಃಖವಸತೀರ್ಮತ್ಕೃತೇ ಪುರುಷೋತ್ತಮಾಃ |
ಭವದ್ಭಿರನುಭೂತಾಶ್ಚ ಯಥಾ ಕುಪುರುಷೈಸ್ತಥಾ ॥4॥
ಪುರುಷೋತ್ತಮರಾದ ನೀವು ನನ್ನ ಅಪರಾಧದಿಂದ ಕೆಟ್ಟಪುರುಷರಂತೆ ಅರಣ್ಯದಲ್ಲಿ ಕಷ್ಟವಾದ ವಾಸವನ್ನು ಮಾಡಿ ದುಃಖಗಳನ್ನು ಅನುಭವಿಸಿದ್ದೀರಿ.
ಯಥಾಸುಖಂ ಯಥಾಜೋಷಂ ಜಯೋಽಯಮನುಭೂಯತಾಮ್ |
ವಿಶ್ರಾಂತಾನ್ ಲಬ್ಧವಿಜ್ಞಾನಾನ್ ಶ್ವಃ ಸಮೇತಾಸ್ಮಿ ವಃ ಪುನಃ ॥5॥
ನಿಮ್ಮ ಅಭಿರುಚಿಗೆ ಅನುಗುಣವಾಗಿ ಮತ್ತು ನಿಮ್ಮ ಸುಖದ ಆಸೆಗೆ ಅನು- ಗುಣವಾಗಿ ಈ ವಿಜಯವನ್ನು ಅನುಭವಿಸಿ. ಈ ದಿನ ವಿಶ್ರಾಂತಿಯನ್ನು ಪಡೆದು ನಾಳೆ ಬೆಳಿಗ್ಗೆ ಪ್ರಸನ್ನವಾದ ಇಂದ್ರಿಯಗಳುಳ್ಳ ನಿಮ್ಮನ್ನು ನಾನು ಕಾಣುತ್ತೇನೆ. (ಎಂದು ಹೇಳಿದನು.)
ತತೋ ದುರ್ಯೋಧನಗೃಹಂ ಪ್ರಾಸಾದೈರುಪಶೋಭಿತಮ್ |
ಬಹುರತ್ನಸಮಾಕೀರ್ಣಂ ದಾಸೀದಾಸಸಮಾಕುಲಮ್ ॥6॥
ಧೃತರಾಷ್ಟ್ರಾಭ್ಯನುಜ್ಞಾತಂ ಭ್ರಾತ್ರಾ ದತ್ತಂ ವೃಕೋದರಃ |
ಪ್ರತಿಪೇದೇ ಮಹಾಬಾಹುರ್ಮಂದರಂ ಮಘವಾನಿವ ॥7॥
ಅನಂತರ ಅನೇಕ ಉಪ್ಪರಿಗೆಗಳಿಂದ ಶೋಭಿತವಾದ ಅನೇಕ ರತ್ನಗಳಿಂದ ನಿಬಿಡವಾದ ದಾಸೀ-ದಾಸರಿಂದ ಕೂಡಿದ ಅಣ್ಣನಾದ ಯುಧಿಷ್ಠಿರನಿಂದ ಕೊಡಲ್ಪಟ್ಟ ದುರ್ಯೋಧನನ ಗೃಹವನ್ನು ಧೃತರಾಷ್ಟ್ರನ ಅನುಮತಿಯನ್ನು ಪಡೆದು ಮಹಾ- ಬಾಹುವಾದ ಭೀಮಸೇನನು ಇಂದ್ರನು ಮಂದರಪರ್ವತವನ್ನು ಪ್ರವೇಶಿಸುವಂತೆ ಪ್ರವೇಶಿಸಿದನು.
ಯಥಾ ದುರ್ಯೋಧನಗೃಹಂ ತಥಾ ದುಃಶಾಸನಸ್ಯ ಚ |
ಪ್ರಾಸಾದಮಾಲಾಸಂಯುಕ್ತಂ ಹೇಮತೋರಣಭೂಷಿತಮ್ ॥8॥
ದಾಸೀದಾಸಸುಸಂಪೂರ್ಣಂ ಪ್ರಭೂತಧನಧಾನ್ಯವತ್ |
ಪ್ರತಿಪೇದೇ ಮಹಾಬಾಹುರರ್ಜುನೋ ರಾಜಶಾಸನಾತ್ ॥9॥
ದುರ್ಯೋಧನನ ಗೃಹದಂತೆಯೇ ದುಃಶಾಸನನ ಗೃಹವೂ ಸಹ ಉಪ್ಪರಿಗೆಗಳ ಶ್ರೇಣಿಗಳಿಂದ ಅಲಂಕೃತವಾಗಿ ಸುವರ್ಣಮಯವಾದ ತೋರಣಗಳನ್ನು ಹೊಂದಿ- ದ್ದಿತು. ದಾಸೀ-ದಾಸರ ಸಮೂಹದಿಂದ ನಿಬಿಡವಾದ ಧನಧಾನ್ಯಸಮೃದ್ಧವಾದ ಆ ಗೃಹವನ್ನು ರಾಜನ

ಶಾಸನದಂತೆ ಮಹಾಬಾಹುವಾದ ಅರ್ಜುನನು ಪಡೆದನು.
ದುರ್ಮರ್ಷಣಸ್ಯ ಭವನಂ ದುಃಶಾಸನಗೃಹಾದ್ ವರಮ್ |
ಕುಬೇರಭವನಪ್ರಖ್ಯಂ ಮಣಿಹೇಮವಿಭೂಷಿತಮ್ ॥10॥
ನಕುಲಾಯ ವರಾರ್ಹಾಯ ಕರ್ಶಿತಾಯ ಮಹಾವನೇ |
ದದೌ ಪ್ರೀತೋ ಮಹಾರಾಜ ಧರ್ಮರಾಜೋ ಯುಧಿಷ್ಠಿರಃ ॥11॥
ದುರ್ಮರ್ಷಣನ ಭವನವಾದರೋ ದುಃಶಾಸನನ ಗೃಹಕ್ಕಿಂತಲೂ ಶ್ರೇಷ್ಠವಾ- ದುದು. ಕುಬೇರನ ಭವನಕ್ಕೆ ಸದೃಶವಾದ ಮಣಿಹೇಮವಿಭೂಷಿತವಾದ ಆ ಗೃಹ- ವನ್ನು ಧರ್ಮರಾಜನಾದ ಯುಧಿಷ್ಠಿರನು ಮಹಾರಣದಲ್ಲಿ ಕರ್ಶಿತನಾದ ವರಪ್ರಾಪ್ತಿಗೆ ಯೋಗ್ಯನಾದ ನಕುಲನಿಗೆ ಸಂತೋಷದಿಂದ ಕೊಟ್ಟನು.
ದುರ್ಮುಖಸ್ಯ ಚ ವೇಶ್ಮಾಗ್ರಂ ಶ್ರೀಮತ್ಕನಕಭೂಷಿತಮ್ |
ಪೂರ್ಣಂ ಪದ್ಮದಲಾಕ್ಷೀಣಾಂ ಸ್ತ್ರೀಣಾಂ ಶಯನಸಂಕುಲಮ್ ॥12॥
ಪ್ರದದೌ ಸಹದೇವಾಯ ಸತತಂ ಪ್ರಿಯಕಾರಿಣೇ |
ಮುಮುದೇ ತಚ್ಚ ಲಬ್ಧ್ವಾ ಸ ಕೈಲಾಸಂ ಧನದೋ ಯಥಾ ॥13॥
ದುರ್ಮುಖನ ಶ್ರೇಷ್ಠವಾದ ಗೃಹವು ಕಾಂತಿಯುಕ್ತವಾಗಿ ಕನಕಭೂಷಿತವಾಗಿ ಪದ್ಮದಳನೇತ್ರೆಯರಾದ ಸ್ತ್ರೀಯರಿಂದ ಮತ್ತು ಶಯನಗಳಿಂದ ನಿಬಿಡವಾಗಿ ಪೂರ್ಣ- ವಾಗಿದ್ದಿತು. ತನಗೆ ಸತತವಾಗಿ ಪ್ರಿಯವನ್ನು ಮಾಡುವ ಸಹದೇವನಿಗೆ ಯುಧಿಷ್ಠಿರನು ಅದನ್ನು ಕೊಟ್ಟನು. ಸಹದೇವನು ಆ ಗೃಹವನ್ನು ಪಡೆದು, ಕುಬೇರನು ಕೈಲಾಸ- ಪರ್ವತವನ್ನು ಪಡೆದು ಸಂತೋಷವನ್ನು ಪಡುವಂತೆ ಸಂತೋಷಪಟ್ಟನು.
ಯುಯುತ್ಸುರ್ವಿದುರಶ್ಚೈವ ಸಂಜಯಶ್ಚ ಮಹಾಮತಿಃ |
ಸುಧರ್ಮಾ ಚೈವ ಧೌಮ್ಯಶ್ಚ ಯಥಾಸ್ವಂ ಜಗ್ಮುರಾಲಯಾನ್ ॥14॥
ಯುಯುತ್ಸು, ವಿದುರ, ಮಹಾಮತಿಯಾದ ಸಂಜಯ, ಧರ್ಮಿಷ್ಠರಾದ ಧೌಮ್ಯರು ಇವರು ತಮ್ಮ ತಮ್ಮ ಮನೆಗಳಿಗೆ ಹೋದರು.
ಸಹ ಸಾತ್ಯಕಿನಾ ಶೌರಿರರ್ಜುನಸ್ಯ ನಿವೇಶನಮ್ |
ವಿವೇಶ ಪುರುಷವ್ಯಾಘ್ರೋ ವ್ಯಾಘ್ರೋ ಗಿರಿಗುಹಾಮಿವ ॥15॥
ಪುರುಷವ್ಯಾಘ್ರನಾದ ಶೌರಿಯು ಸಾತ್ಯಕಿಯ ಜೊತೆಯಲ್ಲಿ ವ್ಯಾಘ್ರವು ಪರ್ವತದ ಗುಹೆಯನ್ನು ಪ್ರವೇಶಿಸುವಂತೆ ಅರ್ಜುನನ ಗೃಹವನ್ನು ಪ್ರವೇಶಿಸಿದನು.
ತತ್ರ ಭಕ್ಷಾನ್ನಪಾನೈಸ್ತೇ ಸಮುಪೇತಾಃ ಸುಖೋಷಿತಾಃ |
ಸುಖಪ್ರಬುದ್ಧಾ ರಾಜಾನಮುಪತಸ್ಥುರ್ಯುಧಿಷ್ಠಿರಮ್ ॥16॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಶ್ಚತ್ವಾರಿಂಶೋಽಧ್ಯಾಯಃ ॥44॥
ಅಲ್ಲಿ ಭಕ್ಷ್ಯಾನ್ನಪಾನಗಳಿಂದ ಅವರು ಸಂತುಷ್ಟರಾಗಿ ರಾತ್ರಿಯನ್ನು ಸುಖವಾಗಿ ಕಳೆದು ಪ್ರಾತಃಕಾಲದಲ್ಲಿ ಸುಖವಾಗಿ ಎದ್ದು ರಾಜನಾದ ಯುಧಿಷ್ಠಿರನ ಬಳಿಗೆ ಬಂದರು.
ಇಲ್ಲಿಗೆ ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 44ನೆಯ ಅಧ್ಯಾಯವು ಮುಗಿಯಿತು
0
45. ನಲವತ್ತೈದನೆಯ ಅಧ್ಯಾಯ
ಕೃಷ್ಣನ ಬಳಿಗೆ ಬಂದು ಯುಧಿಷ್ಠಿರನಿಂದ ಕುಶಲಪ್ರಶ್ನೆ
ಜನಮೇಜಯಃ
ಪ್ರಾಪ್ಯ ರಾಜ್ಯಂ ಮಹಾತೇಜಾ ಧರ್ಮರಾಜೋ ಯುಧಿಷ್ಠಿರಃ |
ಯದನ್ಯದಕರೋದ್ ವಿಪ್ರ ತನ್ಮೇ ವಕ್ತುಮಿಹಾರ್ಹಸಿ ॥1॥
ಜನಮೇಜಯ ಎಲೈ ಬ್ರಾಹ್ಮಣರೇ! ಮಹಾತೇಜಸ್ವಿಯಾದ ಧರ್ಮರಾಜನಾದ ಯುಧಿಷ್ಠಿರನು ರಾಜ್ಯವನ್ನು ಪಡೆದು ಬೇರೆ ಏನನ್ನು ಮಾಡಿದನೆಂದು ನನಗೆ ಹೇಳಬೇಕು.
ಭಗವಾನ್ ವಾ ಹೃಷೀಕೇಶಸ್ತ್ರೈಲೋಕ್ಯಸ್ಯ ಪರೋ ಗುರುಃ |
ಋಷೇ ಯದಕರೋದ್ ವೀರಸ್ತಚ್ಚ ವ್ಯಾಖ್ಯಾತುಮರ್ಹಸಿ ॥2॥
ಎಲೈ ಋಷಿಗಳೇ! ಮೂರು ಲೋಕಗಳಿಗೂ ಪರಮಗುರುವೂ ವೀರನೂಆದ ಹೃಷೀಕೇಶನು ಏನು ಮಾಡಿದನೆಂದು ಹೇಳಬೇಕು.
ವೈಶಂಪಾಯನಃ
ಶೃಣು ರಾಜೇಂದ್ರ ತತ್ತ್ವೇನ ಕೀರ್ತ್ಯಮಾನಂ ಮಯಾಽನಘ |
ವಾಸುದೇವಂ ಪುರಸ್ಕೃತ್ಯ ಯದಕುರ್ವತ ಪಾಂಡವಾಃ ॥3॥
ವೈಶಂಪಾಯನರು ಎಲೈ ರಾಜೇಂದ್ರನೇ! ವಾಸುದೇವನನ್ನು ಮುಂದೆ ಮಾಡಿ- ಕೊಂಡು ಪಾಂಡವರು ಏನು ಮಾಡಿದರೆಂದು ನಾನು ಹೇಳುವುದನ್ನು ಎಲೈ ಅನಘನೇ! ನೀನು ಕೇಳು.
ಪ್ರಾಪ್ಯ ರಾಜ್ಯಂ ಮಹಾತೇಜಾ ಧರ್ಮರಾಜೋ ಯುಧಿಷ್ಠಿರಃ |
ಚಾತುರ್ವರ್ಣ್ಯಂ ಯಥಾಯೋಗಂ ಸ್ವೇ ಸ್ವೇ ಧರ್ಮೇ ನ್ಯವೇಶಯನ್ ॥4॥
ಮಹಾತೇಜಸ್ವಿಯಾದ ಧರ್ಮರಾಜನಾದ ಯುಧಿಷ್ಠಿರನು ರಾಜ್ಯವನ್ನು ಪಡೆದು ನಾಲ್ಕು ವರ್ಣಗಳಿಗೆ ಸಂಬಂಧಿಸಿದ ಪ್ರಜೆಗಳನ್ನು ಅವರಿಗೆ ಯೋಗ್ಯವಾದ ರೀತಿಯಲ್ಲಿ ತಮ್ಮ ತಮ್ಮ ಧರ್ಮಗಳಲ್ಲಿ ಇರಿಸಿದನು.

ಬ್ರಾಹ್ಮಣಾನಾಂ ಸಹಸ್ರಂ ಚ ಸ್ನಾತಕಾನಾಂ ಮಹಾತ್ಮನಾಮ್ |
ಸಹಸ್ರನಿಷ್ಕಮೇಕೈಕಂ ವಾಚಯಾಮಾಸ ಪಾಂಡವಃ ॥5॥
ಪಾಂಡವನಾದ ಯಧಿಷ್ಠಿರನು ಮಹಾತ್ಮರಾದ ವೇದವಿದ್ಯಾಪಾರಂಗತರಾದ ಸಹಸ್ರ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಸಹಸ್ರನಿಷ್ಕಗಳನ್ನು ಕೊಟ್ಟು ಸ್ವಸ್ತಿವಾಚನವನ್ನು ಮಾಡಿಸಿದನು.
ತಥಾನುಜೀವಿನೋ ಭೃತ್ಯಾನ್ ಸಂಶ್ರಿತಾನತಿಥೀನಪಿ |
ಕಾಮ್ಯೈಃ ಸಂತರ್ಪಯಾಮಾಸ ಕೃಪಣಾನ್ ಯಾಚಕಾನಪಿ ॥6॥
ಹಾಗೆಯೇ ತನ್ನನ್ನು ಅನುಸರಿಸಿ ಜೀವಿಸುವ ಸೇವಕರಿಗೂ, ಆಶ್ರಿತರಿಗೂ, ಅತಿಥಿಗಳಿಗೂ, ಕೃಪಣರಿಗೂ, ಯಾಚಕರಿಗೂ ಸಹ ಅವರವರಿಗೆ ಇಷ್ಟವಾದ ವಸ್ತುಗಳನ್ನು ನೀಡಿ ತೃಪ್ತಿ ಪಡಿಸಿದನು.
ಪುರೋಹಿತಾಯ ಧೌಮ್ಯಾಯ ಪ್ರಾದಾದಯುತಶಃ ಸ ಗಾಃ |
ಧನಂ ಸುವರ್ಣಂ ರಜತಂ ವಾಸಾಂಸಿ ವಿವಿಧಾನಿ ಚ ॥7॥
ಪುರೋಹಿತರಾದ ಧೌಮ್ಯರಿಗೆ ಹತ್ತುಸಾವಿರ ಸಂಖ್ಯೆಗಳಲ್ಲಿ ಗೋವುಗಳನ್ನೂ, ಧನವನ್ನೂ, ಸುವರ್ಣವನ್ನೂ, ರಜತವನ್ನೂ ಮತ್ತು ವಿವಿಧವಾದ ವಸ್ತುಗಳನ್ನೂ ಕೊಟ್ಟನು.
ಕೃಪಾಯ ಚ ಮಹಾರಾಜ ಗುರುವೃತ್ತಿಮವರ್ತತ |
ವಿದುರಾಯ ಚ ಧರ್ಮಾತ್ಮಾ ಪೂಜಾಂ ಚಕ್ರೇ ಯತವ್ರತಃ ॥8॥
ಎಲೈ ಮಹಾರಾಜನೇ! ಕೃಪಾಚಾರ್ಯರಲ್ಲಿ ಗುರುವೃತ್ತಿಯನ್ನು ಹೊಂದಿದನು. ಧರ್ಮಾತ್ಮನಾದ ಅವನು ನಿಯತವ್ರತವುಳ್ಳವನಾಗಿ ವಿದುರನನ್ನು ಪೂಜಿಸಿದನು.
ಭಕ್ಷಾನ್ನಪಾನೈರ್ವಿವಿಧೈರ್ವಾಸೋಭಿಃ ಶಯನಾಸನೈಃ |
ಸರ್ವಾನ್ ಸಂತೋಷಯಾಮಾಸ ಸಂಶ್ರಿತಾನ್ ದದತಾಂವರಃ ॥9॥
ದಾನ ಮಾಡುವವರಲ್ಲಿ ಶ್ರೇಷ್ಠನಾದ ಅವನು ತನ್ನನ್ನು ಆಶ್ರಯಿಸಿದ ಎಲ್ಲರನ್ನೂ ವಿವಿಧವಾದ ಭಕ್ಷ್ಯಾನ್ನಪಾನಗಳಿಂದಲೂ, ವಸ್ತ್ರಗಳಿಂದಲೂ, ಶಯನಾಸನಗಳಿಂದಲೂ ತೃಪ್ತಿ ಪಡಿಸಿದನು.
ಲಬ್ಧಪ್ರಶಮನಂ ಕೃತ್ವಾ ಸ ರಾಜಾ ರಾಜಸತ್ತಮ |
ಯುಯುತ್ಸೋರ್ಧಾರ್ತರಾಷ್ಟ್ರಸ್ಯ ಪೂಜಾಂ ಚಕ್ರೇ ಮಹಾಯಶಾಃ ॥10॥
ಎಲೈ ರಾಜಶ್ರೇಷ್ಠನೇ! ರಾಜನಾದ ಅವನು ಪಡೆದುದನ್ನು ಯಥಾಯೋಗ್ಯವಾಗಿ ವಿಭಾಗವನ್ನು ಮಾಡಿ ಹಂಚಿ ಮಹಾಕೀರ್ತಿವಂತನಾದ ಅವನು ಧೃತರಾಷ್ಟ್ರಪುತ್ರನಾದ ಯುಯುತ್ಸುವಿಗೆ ಪೂಜೆಯನ್ನು ಮಾಡಿದನು.
ಧೃತರಾಷ್ಟ್ರಾಯ ತದ್ ರಾಜ್ಯಂ ಗಾಂಧಾರ್ಯೈ ವಿದುರಾಯ ಚ |
ನಿವೇದ್ಯ ಸ್ವಸ್ಥವದ್ ರಾಜನ್ನಾಸ್ತೇ ರಾಜಾ ಯುಧಿಷ್ಠಿರಃ ॥11॥
ಎಲೈ ರಾಜನೇ! ರಾಜನಾದ ಯುಧಿಷ್ಠಿರನು ಧೃತರಾಷ್ಟ್ರನಿಗೂ, ಗಾಂಧಾರಿಗೂ ಮತ್ತು ವಿದುರನಿಗೂ ಆ ರಾಜ್ಯವನ್ನು ನಿವೇದಿಸಿ ನಿಶ್ಚಿಂತನಾದನು.
ತಥಾ ಸರ್ವಂ ಸ ನಗರಂ ಪ್ರಸಾದ್ಯ ಜನಮೇಜಯ |
ವಾಸುದೇವಂ ಮಹಾತ್ಮಾನಮಭ್ಯಗಚ್ಛತ್ ಕೃತಾಂಜಲಿಃ ॥12॥
ಎಲೈ ಜನಮೇಜಯನೇ! ಈ ರೀತಿಯಲ್ಲಿ ನಗರವಾಸಿಗಳೆಲ್ಲರನ್ನೂ ಸಂತೋಷ ಪಡಿಸಿ ಮಹಾತ್ಮನಾದ ವಾಸುದೇವನ ಬಳಿಗೆ ಬಂದು ಕೈಗಳನ್ನು ಮುಗಿದು ನಿಂತನು.
ತತೋ ಮಹತಿ ಪರ್ಯಂಕೇ ಮಣಿಕಾಂಚನಭೂಷಿತೇ |
ದದರ್ಶ ಕೃಷ್ಣಮಾಸೀನಂ ನೀಲಂ ಮೇರಾವಿವಾಂಬುದಮ್ ॥13॥
ಜಾಜ್ವಲ್ಯಮಾನಂ ವಪುಷಾ ದಿವ್ಯಾಭರಣಭೂಷಿತಮ್ |
ಪೀತಕೌಶೇಯಸಂವೀತಂ ಹೇಮ್ನೀವೋಪಹಿತಂ ಮಣಿಮ್ ॥14॥
ಕೌಸ್ತುಭೇನ ಉರಃಸ್ಥೇನ ಮಣಿನಾಽಭಿವಿರಾಜಿತಮ್ |
ಉದ್ಯತೇವೋದಯಂ ಶೈಲಂ ಸೂರ್ಯೇಣಾಪ್ತಕಿರೀಟಿನಮ್ |
ನೌಪಮ್ಯಂ ವಿದ್ಯತೇ ಯಸ್ಯ ತ್ರಿಷು ಲೋಕೇಷು ಕಿಂಚನ ॥15॥
ಅನಂತರ ಮಣಿಕಾಂಚನವಿಭೂಷಿತವಾದ ದೊಡ್ಡ ಮಂಚದಲ್ಲಿ, ಮೇರು ಪರ್ವತದ ಮೇಲೆ ಇರುವ ನೀಲವಾದ ಮೋಡದಂತೆ ದಿವ್ಯಾಭರಣಭೂಷಿತನಾಗಿ, ಚಿನ್ನದಲ್ಲಿಟ್ಟ ನೀಲಮಣಿಯಂತೆ ಪೀತಾಂಬರವನ್ನು ಧರಿಸಿ, ಜಾಜ್ವಲ್ಯಮಾನವಾದ ದೇಹದಿಂದಲೂ, ವಕ್ಷಸ್ಥಳದಲ್ಲಿದ್ದ ಕೌಸ್ತುಭಮಣಿಯಿಂದಲೂ ವಿರಾಜಿತನಾಗಿ ಉದಯಪರ್ವತದ ಮೇಲೆ ಉದಯಿಸುವ ಸೂರ್ಯನನ್ನು ಹೋಲುವ ಕಿರೀಟವನ್ನು ಧರಿಸಿ ಕುಳಿತಿದ್ದ ಮೂರು ಲೋಕಗಳಲ್ಲಿಯೂ ಉಪಮೆಯೇ ಇಲ್ಲದ ಕೃಷ್ಣನನ್ನು ನೋಡಿದನು.
ಸೋಽಭಿಗಮ್ಯ ಮಹಾತ್ಮಾನಂ ವಿಷ್ಣುಂ ಪುರುಷವಿಗ್ರಹಮ್ |
ಉವಾಚ ಮಧುರಾಭಾಷಃ ಸ್ಮಿತಪೂರ್ವಮಿದಂ ತದಾ ॥16॥
ಮಧುರವಾಗಿ ಮಾತನಾಡುವ ಅವನು ಮಹಾತ್ಮನಾದ ಪುರುಷವಿಗ್ರಹವನ್ನು ಧರಿಸಿದ ವಿಷ್ಣುವಾದ ಕೃಷ್ಣನ ಬಳಿಗೆ ಬಂದು ಆಗ ಮಂದಹಾಸಪೂರ್ವಕವಾಗಿ ಹೀಗೆ ಮಾತನಾಡಿದನು.
ಸುಖೇನ ತೇ ನಿಶಾ ಕಚ್ಚಿದ್ ವ್ಯುಷ್ಟಾ ಬುದ್ಧಿಮತಾಂವರ |
ಕಚ್ಚಿಜ್ ಜ್ಞಾನಾನಿ ಸರ್ವಾಣಿ ಪ್ರಸನ್ನಾನಿ ತವಾಚ್ಯುತ ॥17॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನಾದವನೇ! ನಿನಗೆ ರಾತ್ರಿಯು ಸುಖವಾಗಿ ಕಳೆಯಿತೇ? ಎಲೈ ಅಚ್ಯುತನೇ ನಿನ್ನ ಎಲ್ಲ ಇಂದ್ರಿಯಗಳೂ

ಪ್ರಸನ್ನವಾಗಿವೆಯೇ?
ತವ ಹ್ಯಾಶ್ರಿತ್ಯ ತಾಂ ದೈವೀಂ ಬುದ್ಧಿಂ ಬುದ್ಧಿಮತಾಂವರ |
ವಯಂ ರಾಜ್ಯಮನುಪ್ರಾಪ್ತಾಃ ಪೃಥಿವೀ ಚ ವಶೇ ಸ್ಥಿತಾ ॥18॥
ಎಲೈ ಮೇಧಾವಿಗಳಲ್ಲಿ ಶ್ರೇಷ್ಠನೇ! ನಿನ್ನ ಆ ದೈವೀಬುದ್ಧಿಯನ್ನು ಅವಲಂಬಿಸಿ, ನಾವು ರಾಜ್ಯವನ್ನು ಸಂಪಾದಿಸಿದೆವು. ಮತ್ತು ಪೃಥಿವಿಯು ನಮ್ಮ ವಶವಾಯಿತು.
ಭವತ್ಪ್ರಸಾದಾದ್ ಭಗವಂಸ್ತ್ರಿಲೋಕಗತಿವಿಕ್ರಮ |
ಜಯಃ ಪ್ರಾಪ್ತೋ ಯಶಶ್ಚಾಗ್ರ್ಯಂ ನ ಚ ಧರ್ಮಾಚ್ಚ್ಯುತಾ ವಯಮ್ ॥19॥
ಭಗವಂತನೇ! ತ್ರಿಲೋಕಕ್ಕೆ ಗತಿಯಾದವನೇ, ತ್ರಿವಿಕ್ರಮನೇ! ನಿನ್ನ ಅನುಗ್ರಹ- ದಿಂದ ನಾವು ಜಯವನ್ನೂ ಶ್ರೇಷ್ಠವಾದ ಕೀರ್ತಿಯನ್ನೂ ಪಡೆದೆವು. ಮತ್ತು ಎಂದೂ ಧರ್ಮದಿಂದ ಚ್ಯುತರಾಗಲಿಲ್ಲ.
ತಂ ತಥಾ ಭಾಷಮಾಣಂ ತು ಧರ್ಮರಾಜಂ ಯುಧಿಷ್ಠಿರಮ್ |
ನೋವಾಚ ಭಗವಾನ್ ಕಿಂಚಿದ್ ಧ್ಯಾನಮೇವಾನ್ವಪದ್ಯತ ॥20॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಚತ್ವಾರಿಂಶೋಽಧ್ಯಾಯಃ ॥45॥
ಧರ್ಮರಾಜನಾದ ಯುಧಿಷ್ಠಿರನು ಹಾಗೆ ಮಾತನಾಡುತ್ತಿರಲು, ಭಗವಂತನು ಏನನ್ನೂ ಮಾತನಾಡಲಿಲ್ಲ. ಕೇವಲ ಧ್ಯಾನಪರವಶನಾದನು.
ಇಲ್ಲಿಗೆ ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 45ನೆಯ ಅಧ್ಯಾಯವು ಮುಗಿಯಿತು
46. ನಲವತ್ತಾರನೆಯ ಅಧ್ಯಾಯ
ಯುಧಿಷ್ಠಿರನನ್ನು ಧರ್ಮೋಪದೇಶಶ್ರವಣಕ್ಕಾಗಿ ಭೀಷ್ಮರ ಬಳಿಗೆ
ಹೋಗುವಂತೆ ಪ್ರೇರಿಸಿ ಕೃಷ್ಣನ ಸಿದ್ಧತೆ
ಯುಧಿಷ್ಠಿರಃ
ಕಿಮಿದಂ ಪರಮಾಶ್ಚರ್ಯಂ ಧ್ಯಾಯಸ್ಯಮಿತವಿಕ್ರಮ |
ಕಚ್ಚಿಲ್ಲೋಕತ್ರಯಸ್ಯಾಸ್ಯ ಸ್ವಸ್ತಿ ಲೋಕಪರಾಯಣ ॥1॥
ಯುಧಿಷ್ಠಿರ ಎಲೈ ಅಮಿತವಿಕ್ರಮನೇ! ಲೋಕಕ್ಕೆ ಶ್ರೇಷ್ಠನಾದ ಆಶ್ರಯನಾದ- ವನೇ!. ಇದೇನು ಪರಮಾಶ್ಚರ್ಯ? ಮೂರು ಲೋಕಗಳಿಗೂ ಕ್ಷೇಮವಷ್ಟೆ?.
ಚತುರ್ಥಂ ಧ್ಯಾನಮಾರ್ಗಂ ತ್ವಮಾಲಂಬ್ಯ ಪುರುಷೋತ್ತಮ |
ಅಪಾಕ್ರಾಂತೋ ಯತೋ ದೇವ ತೇನ ಮೇ ವಿಸ್ಮಿತಂ ಮನಃ ॥2॥
ಎಲೈ ಪುರುಷೋತ್ತಮನೇ! ನೀನು ವೈರಾಗ್ಯ, ಭಕ್ತಿ, ಶಾಸ್ತ್ರಾಭ್ಯಾಸಮಾರ್ಗ- ಗಳನ್ನು ಮೀರಿದ ನಾಲ್ಕನೆಯ ಮಾರ್ಗವಾದ ಧ್ಯಾನಮಾರ್ಗವನ್ನು ಅವಲಂಬಿಸಿ ಬಾಹ್ಯಜಗತ್ತಿನಿಂದ ಹಿಂದೆ ಸರಿದಿದ್ದೀಯೆ. ದೇವನೇ! ಅದರಿಂದ ನನ್ನ ಮನಸ್ಸಿಗೆ ವಿಸ್ಮಯವುಂಟಾಗಿದೆ.
ನಿಗೃಹೀತೋ ಹಿ ವಾಯುಸ್ತೇ ಪಂಚಕರ್ಮಾ ಶರೀರಗಃ |
ಇಂದ್ರಿಯಾಣಿ ಚ ಸರ್ವಾಣಿ ಮನಸಿ ಸ್ಥಾಪಿತಾನಿ ತೇ ॥3॥
ಶರೀರದಲ್ಲಿ ಪಂಚವಿಧವಾದ ಕರ್ಮಗಳನ್ನು ಮಾಡುವ ವಾಯುವು ನಿನ್ನಿಂದ ನಿಗೃಹೀತವಾಗಿದೆ. ಎಲ್ಲ ಇಂದ್ರಿಯಗಳೂ ಮನಸ್ಸಿನಲ್ಲಿ ನೆಲೆಗೊಳಿಸಲ್ಪಟ್ಟಿವೆ.
ಇಂದ್ರಿಯಾಣಿ ಮನಶ್ಚೈವ ಬುದ್ಧೌ ಸಂವೇಶಿತಾನಿ ತೇ |
ಸರ್ವಶ್ಚೈವ ಗಣೋ ದೇವ ಕ್ಷೇತ್ರಜ್ಞೇ ತೇ ನಿವೇಶಿತಃ ॥4॥
ಇಂದ್ರಿಯಸಹಿತವಾದ ಮನಸ್ಸು ಬುದ್ಧಿಯಲ್ಲಿ ಇಡಲ್ಪಟ್ಟಿದೆ. ಎಲೈ ದೇವನೇ! ಈ ಎಲ್ಲ ಸಮೂಹವೂ ಕ್ಷೇತ್ರಜ್ಞನಾದ ಪರಮಾತ್ಮನಲ್ಲಿಯೇ ನೆಲೆಗೊಳಿಸಲ್ಪಟ್ಟಿದೆ.
ನೇಂಗಂತಿ ತವ ರೋಮಾಣಿ ಸ್ಥಿರಾ ಬುದ್ಧಿಸ್ತಥಾ ಮನಃ |
ಸ್ಥಾಣುಕುಡ್ಯಶಿಲಾಭೂತೋ ನಿರೀಹಶ್ಚಾಸಿ ಮಾಧವ ॥5॥
ನಿನ್ನ ರೋಮಗಳೂ ಅಲುಗಾಡುತ್ತಿಲ್ಲ. ನಿನ್ನ ಬುದ್ಧಿ ಮತ್ತು ಮನಸ್ಸು ಸ್ಥಿರ- ವಾಗಿವೆ. ಮಾಧವನೇ! ಮರದ ಬುಡದಂತೆ, ಗೋಡೆಯಂತೆ, ಅಥವಾ ಶಿಲೆಯಂತೆ ನಿಶ್ಚೇಷ್ಟನಾಗಿದ್ದೀಯೆ.
ಯಥಾ ದೀಪೋ ನಿವಾತಸ್ಥೋ ನಿರಿಂಗೋ ಜ್ವಲತೇಽಚ್ಯುತ |
ತಥಾಽಸಿ ಭಗವನ್ ದೇವ ನಿಶ್ಚಲೋ ದೃಢನಿಶ್ಚಯಃ ॥6॥
ಎಲೈ ಅಚ್ಯುತನೇ! ದೇವನೇ! ವಾತವಿಲ್ಲದ ಸ್ಥಳದಲ್ಲಿ ದೀಪವು ಹೇಗೆ ಅಲು- ಗಾಡುವುದಿಲ್ಲವೋ ಹಾಗೆ ಭಗವಂತನೇ! ದೃಢನಿಶ್ಚಯವನ್ನು ಹೊಂದಿ ನಿಶ್ಚಲನಾಗಿ- ದ್ದೀಯೆ.
ಯದಿ ಶ್ರೋತುಮಿಹಾರ್ಹಾಮಿ ನ ರಹಸ್ಯಂ ಚ ನ ತೇ ಯದಿ |
ಛಿಂಧಿ ಮೇ ಸಂಶಯಂ ದೇವ ಪ್ರಪನ್ನಾಯಾಭಿಯಾಚತೇ ॥7॥
ದೇವನೇ! ಈ ವಿಷಯವು ರಹಸ್ಯವಲ್ಲದಿದ್ದರೆ ಮತ್ತು ನಾನು ಅದನ್ನು ಕೇಳಲು ಅರ್ಹನಾಗುವುದಾದರೆ ನಿನಗೆ ಶರಣಾಗತನಾಗಿ ಯಾಚಿಸುತ್ತಿರುವ ನನ್ನ ಸಂಶಯ- ವನ್ನು ಪರಿಹರಿಸು.
ತ್ವಂ ಹಿ ಕರ್ತಾ ವಿಕರ್ತಾ ಚ ತ್ವಂ ಕ್ಷರಂ ಚಾಕ್ಷರಂ ಚ ಹಿ |

ಅನಾದಿನಿಧನಶ್ಚಾದ್ಯಸ್ತ್ವಮೇವ ಪುರುಷೋತ್ತಮ ॥8॥
ನೀನು ಎಲ್ಲವನ್ನೂ ಮಾಡುವವನು. ವಿವಿಧರೀತಿಯಲ್ಲಿ ಮಾಡುವವನು. ಕ್ಷರಾಕ್ಷರವಸ್ತುಗಳೆಲ್ಲವೂ ನಿನ್ನ ಅಧೀನವಾಗಿವೆ. ನೀನು ಆದ್ಯಂತಶೂನ್ಯನಾದವನು. ಎಲೈ ಪುರುಷೋತ್ತಮನೇ! ನೀನು ಜಗತ್ತಿನ ಸೃಷ್ಟಿಗಿಂತಲೂ ಮೊದಲು ಇರುವವನು.
ತ್ವತ್‌ಪ್ರಪನ್ನಾಯ ಭಕ್ತಾಯ ಶಿರಸಾ ಪ್ರಣತಾಯ ಚ |
ಧ್ಯಾನಸ್ಯಾಸ್ಯ ಯಥಾತತ್ತ್ವಂ ಬ್ರೂಹಿ ಧರ್ಮಭೃತಾಂವರ ॥9॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ನಿನ್ನ ಭಕ್ತನಾಗಿ ನಿನಗೆ ಶರಣಾಗತನಾಗಿ ಶಿರಸಾ ನಮಸ್ಕಾರವನ್ನು ಮಾಡಿದ ನನಗೆ ಈ ಧ್ಯಾನದ ನಿಜವಾದ ತತ್ತ್ವವನ್ನು ಹೇಳು.
ವೈಶಂಪಾಯನಃ
ತತಃ ಸ್ವಗೋಚರೇ ನ್ಯಸ್ಯ ಮನೋ ಬುದ್ಧೀಂದ್ರಿಯಾಣಿ ಚ |
ಸ್ಮಿತಪೂರ್ವಮುವಾಚೇದಂ ಭಗವಾನ್ ವಾಸವಾನುಜಃ ॥10॥
ವೈಶಂಪಾಯನರು ಅನಂತರ ಭಗವಂತನಾದ, ಇಂದ್ರಾನುಜನಾದ ಕೃಷ್ಣನು ತನ್ನ ಬುದ್ಧೀಂದ್ರಿಯಮನಸ್ಸುಗಳನ್ನು ಅವುಗಳ ವಿಷಯದಲ್ಲಿ ನೆಲೆಗೊಳಿಸಿ, ಮಂದ- ಹಾಸಪೂರ್ವಕವಾಗಿ ಈ ಮಾತನ್ನು ಆಡಿದನು.
ಶರತಲ್ಪಗತೋ ಭೀಷ್ಮಃ ಶಾಮ್ಯನ್ನಿವ ಹುತಾಶನಃ |
ಮಾಂ ಧ್ಯಾತಿ ಪುರುಷವ್ಯಾಘ್ರಸ್ತತೋ ಮೇ ತದ್ಗತಂ ಮನಃ ॥11॥
ನಂದಿಹೋಗುವ ಅಗ್ನಿಯಂತೆ ಇರುವ ಶರತಲ್ಪಗತನಾದ ಪುರುಷವ್ಯಾಘ್ರನಾದ ಭೀಷ್ಮನು ನನ್ನನ್ನು ಧ್ಯಾನಿಸುತ್ತಿದ್ದಾನೆ. ಆದ್ದರಿಂದ ನನ್ನ ಮನಸ್ಸು ಅವನಲ್ಲಿಗೆ ಹೋಯಿತು.
ಯಸ್ಯ ಜ್ಯಾತಳನಿರ್ಘೋಷಂ ವಿಸ್ಫೂರ್ಜಿತಮಿವಾಶನೇಃ |
ನ ಸಹೇದ್ ದೇವರಾಜೋಽಪಿ ತಮಸ್ಮಿ ಮನಸಾ ಗತಃ ॥12॥
ಯಾವನ ಧನುಸ್ಸಿನ ಹೆದೆಯ ನಿರ್ಘೋಷವು ಸಿಡಿಲಿನ ಆರ್ಭಟದಂತಿದ್ದು, ದೇವರಾಜನಾದ ಇಂದ್ರನೂ ಸಹ ಸಹಿಸಲಾರನೋ ಅವನಲ್ಲಿ ನನ್ನ ಮನಸ್ಸು ಹೋಯಿತು.
ಯೇನಾಭಿದ್ರುತ್ಯ ತರಸಾ ಸಮಸ್ತಂ ರಾಜಮಂಡಲಮ್ |
ಊಢಾಸ್ತಿಸ್ರಃ ಪುರಾ ಕನ್ಯಾಸ್ತಮಸ್ಮಿ ಮನಸಾ ಗತಃ ॥13॥
ಯಾವನು ಶೀಘ್ರವಾಗಿ ಕಾಶೀದೇಶಕ್ಕೆ ಧಾವಿಸಿ, ಸಮಗ್ರವಾದ ರಾಜ- ಸಮೂಹವನ್ನು ಪರಾಭವಗೊಳಿಸಿ, ಮೂರು ಕನ್ಯೆಯರನ್ನು ತಂದು ತಮ್ಮನಿಗೆ ವಿವಾಹ ಮಾಡಿಸಿದನೋ ನನ್ನ ಮನಸ್ಸು ಅವನಲ್ಲಿ ಹೋಯಿತು.
ತ್ರಯೋವಿಂಶತಿರಾತ್ರಂ ಯೋ ಯೋಧಯಾಮಾಸ ಭಾರ್ಗವಮ್ |
ನ ಚ ರಾಮೇಣ ನಿಸ್ತೀರ್ಣಸ್ತಮಸ್ಮಿ ಮನಸಾ ಗತಃ ॥14॥
ಯಾವನು ಇಪ್ಪತ್ತಮೂರು ದಿನಗಳ ಕಾಲ ಭಾರ್ಗವರಾಮನ ಜೊತೆಯಲ್ಲಿ ಯುದ್ಧಮಾಡಿದರೂ ಅವನಿಗೆ ಸೋಲಲಿಲ್ಲವೋ ಅವನಲ್ಲಿ ನನ್ನ ಮನಸ್ಸು ಹೋಯಿತು.
ಯಾಂ ಗಂಗಾ ಗರ್ಭವಿಧಿನಾ ಧಾರಯಾಮಾಸ ಪಾರ್ಥಿವಮ್ |
ವಸಿಷ್ಠಶಿಷ್ಯಂ ತಂ ತಾತ ಮನಸಾಽಸ್ಮಿ ಗತೋ ನೃಪ ॥15॥
ಎಲೈ ರಾಜನೇ! ಪ್ರೀತಿಪಾತ್ರನೇ! ರಾಜನಾದ ಯಾವನನ್ನು ಗಂಗೆಯು ಗರ್ಭರೂಪದಲ್ಲಿ ಧರಿಸಿದಳೋ, ವಸಿಷ್ಠರ ಶಿಷ್ಯರಾದ ಆ ಭೀಷ್ಮನಲ್ಲಿಗೆ ನನ್ನ ಮನಸ್ಸು ಹೋಯಿತು.
ದಿವ್ಯಾಸ್ತ್ರಾಣಿ ಮಹಾತೇಜಾ ಯೋ ಧಾರಯತಿ ಬುದ್ಧಿಮಾನ್ |
ಸಾಂಗಾಂಶ್ಚ ಚತುರೋ ವೇದಾಂಸ್ತಮಸ್ಮಿ ಮನಸಾ ಗತಃ ॥16॥
ಮೇಧಾವಿಯೂ, ಮಹಾತೇಜಸ್ವಿಯೂ ಆದ ಯಾವನು ದಿವ್ಯಾಸ್ತ್ರಗಳನ್ನು ಹೊಂದಿದ್ದಾನೆಯೋ ಅಂಗಸಹಿತವಾದ ನಾಲ್ಕುವೇದಗಳನ್ನು ಹೊಂದಿದ್ದಾನೆಯೋ ಅವನೆಡೆಗೆ ನನ್ನ ಮನಸ್ಸು ಹೋಯಿತು.
ರಾಮಸ್ಯ ದಯಿತಂ ಶಿಷ್ಯಂ ಜಾಮದಗ್ನ್ಯಸ್ಯ ಪಾಂಡವ |
ಆಧಾರಂ ಸರ್ವವಿದ್ಯಾನಾಂ ತಮಸ್ಮಿ ಮನಸಾ ಗತಃ ॥17॥
ಎಲೈ ಪಾಂಡವನೇ! ಜಮದಗ್ನಿಯ ಪುತ್ರರಾದ ಪರಶುರಾಮರ ಪ್ರಿಯಶಿಷ್ಯನೂ, ಎಲ್ಲ ವಿದ್ಯೆಗಳಿಗೆ ಆಶ್ರಯನಾದವನೂ ಆದವನಲ್ಲಿ ನನ್ನ ಮನಸ್ಸು ಹೋಯಿತು.
ಏಕೀಕೃತ್ಯೇಂದ್ರಿಯಗ್ರಾಮಂ ಮನಃ ಸಂಯಮ್ಯ ಮೇಧಯಾ |
ಶರಣಂ ಮಾಮುಪಾಗಚ್ಛತ್ ತತೋ ಮೇ ತದ್ಗತಂ ಮನಃ ॥18॥
ಅವನು ತನ್ನ ಇಂದ್ರಿಯಸಮೂಹವನ್ನು ಏಕಾಗ್ರಗೊಳಿಸಿ, ಬುದ್ಧಿಯಿಂದ ಮನಸ್ಸನ್ನು ನಿಯಂತ್ರಿಸಿ, ನನಗೆ ಶರಣಾಗತನಾದನು. ಆದ್ದರಿಂದ ನನ್ನ ಮನಸ್ಸು ಅವನೆಡೆಗೆ ಹೋಯಿತು.
ಸ ಹಿ ಭೂತಂ ಚ ಭವ್ಯಂ ಚ ಭವಚ್ಚ ಪುರುಷರ್ಷಭ |
ವೇತ್ತಿ ಧರ್ಮಭೃತಾಂ ಶ್ರೇಷ್ಠಸ್ತತೋ ಮೇ ತದ್ಗತಂ ಮನಃ ॥19॥
ಎಲೈ ಪುರುಷಶ್ರೇಷ್ಠನೇ! ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಭೂತ, ಭವಿ- ಷ್ಯತ್, ವರ್ತಮಾನವಿಷಯವೆಲ್ಲವನ್ನೂ ತಿಳಿದಿದ್ದಾನೆ. ಆದ್ದರಿಂದ ನನ್ನ ಮನಸ್ಸು ಅವನಲ್ಲಿಗೆ ಹೋಯಿತು.
ತಸ್ಮಿನ್ ಹಿ ಪುರುಷವ್ಯಾಘ್ರೇ ಕರ್ಮಭಿಃ ಸ್ವೈರ್ದಿವಂ ಗತೇ |
ಭವಿಷ್ಯತಿ ಮಹೀ ಪಾರ್ಥ ನಷ್ಟಚಂದ್ರೇವ ಶರ್ವರೀ ॥20॥

ಎಲೈ ಪಾರ್ಥನೇ! ಪುರುಷವ್ಯಾಘ್ರನಾದ ಅವನು ತನ್ನ ಕರ್ಮಗಳಿಗೆ ಅನುಗುಣವಾಗಿ ಸ್ವರ್ಗತನಾದರೆ ಭೂಮಿಯು ಚಂದ್ರನಿಲ್ಲದ ರಾತ್ರಿಯಂತಾಗುತ್ತದೆ.
ತದ್ ಯಧಿಷ್ಠಿರ ಗಾಂಗೇಯಂ ಭೀಷ್ಮಂ ಭೀಷ್ಮಪರಾಕ್ರಮಮ್ |
ಅಭಿಗಮ್ಯೋಪಸಂಗೃಹ್ಯ ಪೃಚ್ಛ ಯತ್ ತೇ ಮನೋಗತಮ್ ॥21॥
ಆದ್ದರಿಂದ ಎಲೈ ಯುಧಿಷ್ಠಿರನೇ! ಗಂಗಾಪುತ್ರನೂ, ಭಯಂಕರ ಪರಾಕ್ರಮ- ವುಳ್ಳವನೂ ಆದ ಭೀಷ್ಮನನ್ನು ಸಮೀಪಿಸಿ, ಉಪಸತ್ತಿಯನ್ನು ಮಾಡಿ, ನಿನ್ನ ಮನಸ್ಸಿ- ನಲ್ಲಿರುವ ವಿಷಯಗಳನ್ನು ಕೇಳುವವನಾಗು.
ಚಾತುರ್ವೇದ್ಯಂ ಚಾತುರ್ಹೋತ್ರಂ ಚಾತುರಾಶ್ರಮ್ಯಮೇವ ಚ |
ಚಾತುರ್ವರ್ಣ್ಯಸ್ಯ ಧರ್ಮಂ ಚ ಪೃಚ್ಛೈನಂ ಪೃಥಿವೀಪತೇ ॥22॥
ಎಲೈ ಪೃಥಿವೀಪತಿಯೇ! ಅವನನ್ನು ಕುರಿತು ನಾಲ್ಕು ವೇದಗಳಿಗೆ ಸಂಬಂಧಿಸಿದ, ನಾಲ್ಕು ಹೋತ್ರಗಳಿಗೆ ಸಂಬಂಧಿಸಿದ, ನಾಲ್ಕು ಆಶ್ರಮಗಳಿಗೆ ಸಂಬಂಧಿಸಿದ, ನಾಲ್ಕು ವರ್ಣಗಳಿಗೆ ಸಂಬಂಧಿಸಿದ ಧರ್ಮಗಳನ್ನು ಕೇಳುವವನಾಗು.
ತಸ್ಮಿನ್ನಸ್ತಮಿತೇ ಭೀಷ್ಮೇ ಕೌರವಾಣಾಂ ಧುರಂಧರೇ |
ಜ್ಞಾನಾನ್ಯಲ್ಪೀಭವಿಷ್ಯಂತಿ ತಸ್ಮಾತ್ ತ್ವಾಂ ಚೋದಯಾಮ್ಯಹಮ್ |
ಕೌರವರ ಧುರಂಧರನಾದ ಭೀಷ್ಮನು ಅಸ್ತವನ್ನು ಹೊಂದಿದರೆ ಈ ಲೋಕದಲ್ಲಿ ಜ್ಞಾನವು ಕೃಶವಾಗುವುದು. ಆದ್ದರಿಂದ ನಿನ್ನನ್ನು ಪ್ರೇರಿಸುತ್ತಿದ್ದೇನೆ.
ತಚ್ಛ್ರುತ್ವಾ ಚ ಸ ಧರ್ಮಜ್ಞೋ ಜನಾರ್ದನಮುವಾಚ ಹ ॥23॥
ಯದ್ ಭವಾನಾಹ ಭೀಷ್ಮಸ್ಯ ಪ್ರಭಾವಂ ಪ್ರತಿ ಮಾಧವ |
ತಥಾ ತನ್ನಾತ್ರ ಸಂದೇಹೋ ವಿದ್ಯತೇ ಮಮ ಮಾನದ ॥24॥
ಆ ಮಾತುಗಳನ್ನು ಕೇಳಿದ ಧರ್ಮಜ್ಞನಾದ ಯುಧಿಷ್ಠಿರನು ಜನಾರ್ದನನನ್ನು ಕುರಿತು ಮಾತನಾಡಿದನು ಮಾಧವನೇ! ಭೀಷ್ಮರ ಪ್ರಭಾವದ ವಿಷಯದಲ್ಲಿ ನೀನು ಏನು ಹೇಳಿದೆಯೋ ಅದು ಹಾಗೆಯೇ ಸರಿ. ಎಲೈ ಮಾನದನೇ! ಈ ವಿಷಯದಲ್ಲಿ ನನಗೆ ಸಂದೇಹವಿಲ್ಲ.
ಮಹಾಭಾಗ್ಯಂ ಹಿ ಭೀಷ್ಮಸ್ಯ ಪ್ರಭಾವಶ್ಚ ಮಹಾತ್ಮನಃ |
ಶ್ರುತಂ ಮಯಾ ಕಥಯತಾಂ ಬ್ರಾಹ್ಮಣಾನಾಂ ಮಹಾತ್ಮನಾಮ್ ॥25॥
ನಾನು ಮಹಾತ್ಮರಾದ ಬ್ರಾಹ್ಮಣರು ಮಾತನಾಡುವಾಗ ಮಹಾತ್ಮರಾದ ಭೀಷ್ಮರ ಮಹಾಭಾಗ್ಯವನ್ನೂ ಮತ್ತು ಪ್ರಭಾವವನ್ನೂ ಕೇಳಿದ್ದೇನೆ.
ಭವಾಂಶ್ಚ ಕರ್ತಾ ಲೋಕಾನಾಂ ಯದ್ ಬ್ರವೀತ್ಯರಿಸೂದನ |
ತಥಾ ತದನಭಿಧ್ಯೇಯಂ ವಾಕ್ಯಂ ಯಾದವನಂದನ ॥26॥
ಎಲೈ ಅರಿಸೂದನನೇ! ಯಾದವನಂದನನೇ! ಲೋಕಗಳನ್ನು ಸೃಷ್ಟಿಸುವ ನೀನು ಏನನ್ನು ಮಾತನಾಡುತ್ತೀಯೋ ಅದನ್ನು ಪುನಃ ವಿಚಾರಮಾಡುವ ಅಗತ್ಯವಿಲ್ಲ.
ಯತಸ್ತ್ವನುಗ್ರಹಕೃತಾ ಬುದ್ಧಿಸ್ತೇ ಮಯಿ ಮಾಧವ |
ತ್ವಾಮಗ್ರತಃ ಪುರಸ್ಕೃತ್ಯ ಭೀಷ್ಮಂ ಪಶ್ಯಾಮಹೇ ವಯಮ್ ॥27॥
ಎಲೈ ಮಾಧವನೇ! ನನ್ನ ಮೇಲೆ ನಿನಗೆ ಅನುಗ್ರಹಬುದ್ಧಿ ಇರುವುದರಿಂದ ನಿನ್ನನ್ನು ಮುಂದೆ ಮಾಡಿಕೊಂಡು ನಾವು ಭೀಷ್ಮರನ್ನು ನೋಡೋಣ.
ಆವೃತ್ತೇ ಭಗವತ್ಯರ್ಕೇ ಸ ಹಿ ಲೋಕಾನ್ ಗಮಿಷ್ಯತಿ |
ತ್ವದ್ದರ್ಶನಂ ಮಹಾಬಾಹೋ ತಸ್ಮಾದರ್ಹತಿ ಕೌರವಃ ॥28॥
ಸೂರ್ಯನು ದಿಕ್ಕನ್ನು ಬದಲಿಸಿದ ಮೇಲೆ ಭೀಷ್ಮರು ಲೋಕಾಂತರಗಳಿಗೆ ಹೋಗುವರು. ಎಲೈ ಮಹಾಬಾಹುವೇ! ಅದರಿಂದ ಕೌರವರಾದ ಅವರು ನಿನ್ನ ದರ್ಶನಕ್ಕೆ ಅರ್ಹರಾದವರು - ಎಂದು ಭಾವಿಸುತ್ತೇನೆ.
ತವ ಹ್ಯಾದ್ಯಸ್ಯ ದೇವಸ್ಯ ಕ್ಷರಸ್ಯೈವಾಕ್ಷರಸ್ಯ ಚ |
ದರ್ಶನಂ ತಸ್ಯ ಲಾಭಃ ಸ್ಯಾತ್ ತ್ವಂ ಹಿ ಬ್ರಹ್ಮಮಯೋ ನಿಧಿಃ ॥29॥
ಕ್ಷರಾಕ್ಷರಗಳಿಗೆ ಒಡೆಯನಾದ ಆದಿದೇವನಾದ ನಿನ್ನ ದರ್ಶನವು ಅವರಿಗೆ ಲಾಭವಾದೀತು! ಏಕೆಂದರೆ ನೀನು ಬ್ರಹ್ಮಮಯನಾದ ನಿಧಿಯಾಗಿದ್ದೀಯೆ. (ಎಂದು ಯುಧಿಷ್ಠಿರನು ಹೇಳಿದನು).
ಶ್ರುತ್ವೈತದ್ ಧರ್ಮರಾಜಸ್ಯ ವಚನಂ ಮಧುಸೂದನಃ |
ಪಾರ್ಶ್ವಸ್ಥಂ ಸಾತ್ಯಕಿಂ ಪ್ರಾಹ ರಥೋ ಮೇ ಯುಜ್ಯತಾಮಿತಿ ॥30॥
ಮಧುಸೂದನನು ಧರ್ಮರಾಜನ ಈ ಮಾತುಗಳನ್ನು ಕೇಳಿ, ಪಾರ್ಶ್ವದಲ್ಲಿದ್ದ ಸಾತ್ಯಕಿಯನ್ನು ಕುರಿತು ನನ್ನ ರಥವನ್ನು ಅಣಿಗೊಳಿಸು ಎಂದು ಹೇಳಿದನು.
ಸಾತ್ಯಕಿಸ್ತೂಪನಿಷ್ಕ್ರಮ್ಯ ಕೇಶವಸ್ಯ ಸಮೀಪತಃ |
ದಾರುಕಂ ಪ್ರಾಹ ಕೃಷ್ಣಸ್ಯ ಯುಜ್ಯತಾಂ ರಥ ಇತ್ಯುತ ॥31॥
ಸಾತ್ಯಕಿಯಾದರೋ ಕೇಶವನ ಸಮೀಪದಿಂದ ಹೊರಬಂದು ದಾರುಕನನ್ನು ಕುರಿತು ಕೃಷ್ಣನ ರಥವನ್ನು ಹೂಡು ಎಂದು ಹೇಳಿದನು.
ಸ ಸಾತ್ಯಕೇರಾಶು ವಚೋ ನಿಶಮ್ಯ
ರಥೋತ್ತಮಂ ಕಾಂಚನಭೂಷಿತಾಂಗಮ್ |
ಮಸಾರಗಲ್ವರ್ಕಮಯೈರ್ವಿಭಂಗೈಃ

ವಿಭೂಷಿತಂ ಹೇಮಪಿನದ್ಧಚಕ್ರಮ್ ॥32॥
ದಿವಾಕರಾಂಶುಪ್ರಭಮಾಶುಗಾಮಿನಂ
ವಿಚಿತ್ರನಾನಾಮಣಿರತ್ನಭೂಷಿತಮ್ |
ನವೋದಿತಂ ಸೂರ್ಯಮಿವ ಪ್ರತಾಪಿನಂ
ವಿಚಿತ್ರತಾರ್ಕ್ಷ್ಯಧ್ವಜಿನಂ ಪತಾಕಿನಮ್ ॥33॥
ಸುಗ್ರೀವಸೈನ್ಯಪ್ರಮುಖೈರ್ವರಾಶ್ವೈಃ
ಮನೋಜವೈಃ ಕಾಂಚನಭೂಷಿತಾಂಗೈಃ |
ಸುಯುಕ್ತಮಾವೇದಯದಚ್ಯುತಾಯ
ಕೃತಾಂಜಲಿರ್ದಾರುಕೋ ರಾಜಸಿಂಹ ॥34॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್ಚತ್ವಾರಿಂಶೋಽಧ್ಯಾಯಃ ॥46॥
ಎಲೈ ರಾಜಸಿಂಹನೇ! ಆ ದಾರುಕನಾದರೋ ಸಾತ್ಯಕಿಯ ಮಾತುಗಳನ್ನು ಕೇಳಿ ಶೀಘ್ರವಾಗಿ ಸುವರ್ಣ ಭೂಷಿತವಾದ ಅಂಗಗಳನ್ನು ಹೊಂದಿದ, ಮರಕತ ಸೂರ್ಯ -ಕಾಂತ ಮತ್ತು ಚಂದ್ರಕಾಂತಮಣಿಗಳಿಂದ ಕೂಡಿದ ಆಯಾಮವುಳ್ಳ, ಸುವರ್ಣ- ವನ್ನು ಮೆಟ್ಟಿದ ಚಕ್ರಗಳನ್ನು ಹೊಂದಿದ, ಸೂರ್ಯನ ಕಿರಣಗಳ ಪ್ರಭೆಯನ್ನು ಹೊಂದಿದ, ಶೀಘ್ರಗಾಮಿಯಾದ, ವಿಚಿತ್ರವಾದ ನಾನಾ ಮಣಿಗಳಿಂದಲೂ ಮತ್ತು ರತ್ನಗಳಿಂದಲೂ ಭೂಷಿತವಾದ, ಆಗ ತಾನೇ ಉದಯಿಸುವ ಸೂರ್ಯನಂತೆ ಪ್ರತಾಪವನ್ನು ಹೊಂದಿದ, ವಿಚಿತ್ರವಾದ ಗರುಡಧ್ವಜವನ್ನು ಹೊಂದಿದ, ಪ್ರತಾಪದಿಂದ ಕೂಡಿದ, ಮನೋವೇಗವುಳ್ಳವೂ ಸುವರ್ಣಭೂಷಿತಾಂಗವುಳ್ಳವೂ ಆದ ಸುಗ್ರೀವಸೈನ್ಯ ಮೊದಲಾದ ಶ್ರೇಷ್ಠ ಅಶ್ವಗಳನ್ನು ಚೆನ್ನಾಗಿ ಹೂಡಿದ ರಥವು ಸಿದ್ಧವಾಗಿದೆ ಎಂದು ಕೈಗಳನ್ನು ಮುಗಿದು ಅಚ್ಯುತನಿಗೆ ಹೇಳಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 46ನೆಯ ಅಧ್ಯಾಯವು ಮುಗಿಯಿತು.
0

47. ನಲವತ್ತೇಳನೆಯ ಅಧ್ಯಾಯ
ಭೀಷ್ಮಸ್ತವರಾಜ
ಜನಮೇಜಯಃ
ಶರತಲ್ಪೇ ಶಯಾನಸ್ತು ಭರತಾನಾಂ ಪಿತಾಮಹಃ |
ಕಥಮುತ್ಸೃಷ್ಟವಾನ್ ದೇಹಂ ಕಂ ಚ ಯೋಗಮಧಾರಯತ್ ॥1॥
ಜನಮೇಜಯ ಶರತಲ್ಪದಲ್ಲಿ ಮಲಗಿದ್ದ ಭರತಪಿತಾಮಹರಾದ ಭೀಷ್ಮರು ದೇಹವನ್ನು ಹೇಗೆ ತ್ಯಜಿಸಿದರು? ಮತ್ತು ಯಾವ ಯೋಗಧಾರಣೆಯನ್ನು ಮಾಡಿ- ದರು?
ವೈಶಂಪಾಯನಃ
ಶೃಣುಷ್ವಾವಹಿತೋ ರಾಜನ್ ಶುಚಿರ್ಭೂತ್ವಾ ಸಮಾಹಿತಃ |
ಭೀಷ್ಮಸ್ಯ ಕುರುಶಾರ್ದೂಲ ದೇಹೋತ್ಸರ್ಗಂ ಮಹಾತ್ಮನಃ ॥2॥
ವೈಶಂಪಾಯನರು ರಾಜನೇ! ಕುರುಶಾರ್ದೂಲನೇ! ಮಹಾತ್ಮರಾದ ಭೀಷ್ಮರ ದೇಹತ್ಯಾಗವನ್ನು ಶುಚಿಯಾಗಿ, ಸಮಾಧಾನದಿಂದ, ಅವಧಾನದಿಂದ ಕೇಳು.
ನಿವೃತ್ತಮಾತ್ರೇ ತ್ವಯನೇ ಉತ್ತರೇ ವೈ ದಿವಾಕರೇ |
ಸಮಾವೇಶಯದಾತ್ಮಾನಮಾತ್ಮನ್ಯೇವ ಸಮಾಹಿತಃ ॥3॥
ಸೂರ್ಯನು ಉತ್ತರಾಯಣಗತಿಗೆ ತಿರುಗುತ್ತಿರಲು ಭೀಷ್ಮರು ಸಮಾಧಾನ- ದಿಂದ ತಮ್ಮ ಮನಸ್ಸನ್ನು ಪರಮಾತ್ಮನಲ್ಲಿ ಇರಿಸಿದರು.
ವಿಕೀರ್ಣಾಂಶುರಿವಾದಿತ್ಯೋ ಭೀಷ್ಮಃ ಶರಶತೈಶ್ಚಿತಃ |
ಶಿಶ್ಯೇ ಪರಮಯಾ ಲಕ್ಷ್ಮ್ಯಾ ವೃತೋ ಬ್ರಾಹ್ಮಣಸತ್ತಮೈಃ ॥4॥
ಸುತ್ತಲೂ ಹೊರಹೊಮ್ಮುವ ಕಿರಣಗಳಿಂದ ಕೂಡಿದ ಸೂರ್ಯನಂತೆ ನೂರಾರು ಬಾಣಗಳಿಂದ ಚುಚ್ಚಲ್ಪಟ್ಟ ಭೀಷ್ಮರು ಬಹಳ ಕಾಂತಿಯಿಂದ ಕೂಡಿದವ- ರಾಗಿ ಬ್ರಾಹ್ಮಣಶ್ರೇಷ್ಠರಿಂದ ಸುತ್ತುವರಿಯಲ್ಪಟ್ಟು ಮಲಗಿದ್ದರು.
ಶುಕ್ಲಪಕ್ಷಸ್ಯ ಚಾಷ್ಟಮ್ಯಾಂ ಮಾಘಮಾಸಸ್ಯ ಪಾರ್ಥಿವ |
ಪ್ರಾಜಾಪತ್ಯೇ ಚ ನಕ್ಷತ್ರೇ ಮಧ್ಯಂ ಪ್ರಾಪ್ತೇ ದಿವಾಕರೇ ॥5॥
ವ್ಯಾಸೇನ ವೇದಶ್ರವಸಾ ನಾರದೇನ ಸುರರ್ಷಿಣಾ |
ದೇವಸ್ಥಾನೇನ ವಾತ್ಸ್ಯೇನ ತಥಾಽಶ್ಮಕಸುಮಂತುನಾ ॥6॥
ತಥಾ ಜೈಮಿನಿನಾ ಚೈವ ಪೈಲೇನ ಚ ಮಹಾತ್ಮನಾ |
ಶಾಂಡಿಲ್ಯದೇವಲಾಭ್ಯಾಂ ಚ ಮೈತ್ರೇಯೇಣ ಚ ಧೀಮತಾ ॥7॥
ಅಸಿತೇನ ವಸಿಷ್ಠೇನ ಕೌಶಿಕೇನ ಮಹಾತ್ಮನಾ |
ಹಾರೀತಲೋಮಶಾಭ್ಯಾಂ ಚ ತಥಾಽಽತ್ರೇಯೇಣ ಧೀಮತಾ ॥8॥
ಬೃಹಸ್ಪತಿಶ್ಚ ಶುಕ್ರಶ್ಚ ಚ್ಯವನಶ್ಚ ಮಹಾಮುನಿಃ |
ಸನತ್ಕುಮಾರಃ ಕಪಿಲೋ ವಾಲ್ಮೀಕಿಸ್ತುಂಬುರುಃ ಕುರುಃ ॥9॥

ಪೌದ್ಗಲ್ಯೋ ಭಾರ್ಗವೋ ರಾಮಸ್ತೃಣಬಿಂದುರ್ಮಹಾಮುನಿಃ |
ಪಿಪ್ಪಲಾದಶ್ಚ ವಾಯುಶ್ಚ ಸಂವರ್ತಃ ಪುಲಹಃ ಕಚಃ ॥10॥
ಕಾಶ್ಯಪಶ್ಚ ಪುಲಸ್ತ್ಯಶ್ಚ ಕ್ರತುರ್ದಕ್ಷಃ ಪರಾಶರಃ |
ಮರೀಚಿರಂಗಿರಾ ಕಾಶ್ಯೋ ಗೌತಮೋ ಗಾಲವೋ ಮುನಿಃ ॥11॥
ಧೌಮ್ಯೋ ವಿಭಾಂಡೋ ಮಾಂಡವ್ಯೋ ಧೌತ್ರಃ ಕೃಷ್ಣಾನುಭೌತಿಕಃ |
ಉಲೂಕಃ ಪರಮೋ ವಿಪ್ರೋ ಮಾರ್ಕಂಡೇಯೋ ಮಹಾಮುನಿಃ |
ಭಾಸ್ಕರಿಃ ಪೂರಣಃ ಕೃಷ್ಣಃ ಸೂತಃ ಪರಮಧಾರ್ಮಿಕಃ ॥12॥
ಏತೈಶ್ಚಾನ್ಯೈರ್ಮುನಿಗಣೈರ್ಮಹಾಭಾಗೈರ್ಮಹಾತ್ಮಭಿಃ |
ಶ್ರದ್ಧಾದಮಪುರಸ್ಕಾರೈರ್ವೃತಶ್ಚಂದ್ರ ಇವ ಗ್ರಹೈಃ ॥13॥
ಎಲೈ ರಾಜನೇ! ಮಾಘಮಾಸದ ಶುಕ್ಲಪಕ್ಷದ ಅಷ್ಟಮಿಯಂದು ಚಂದ್ರನು ರೋಹಿಣೀನಕ್ಷತ್ರದಲ್ಲಿರುವಾಗ ಸೂರ್ಯನು ಮಧ್ಯಂದಿನದಲ್ಲಿರಲು ವ್ಯಾಸರು, ವೇದಶ್ರವಸ, ದೇವರ್ಷಿಗಳಾದ ನಾರದರು, ದೇವಸ್ಥಾನ, ವಾತ್ಸ್ಯ, ಅಶ್ಮಕ, ಸುಮಂತು, ಜೈಮಿನಿ, ಮಹಾತ್ಮನಾದ ಪೈಲ, ಶಾಂಡಿಲ್ಯ, ದೇವಲ, ಮೇಧಾವಿಯಾದ ಮೈತ್ರೇಯ, ಅಸಿತ, ವಸಿಷ್ಠ, ಮಹಾತ್ಮನಾದ ವಿಶ್ವಾಮಿತ್ರ, ಹಾರೀತ, ಲೋಮಶ, ಮೇಧಾವಿಯಾದ ಆತ್ರೇಯ, ಬೃಹಸ್ಪತಿ, ಶುಕ್ರ, ಮಹರ್ಷಿಗಳಾದ ಚ್ಯವನ, ಸನತ್ಕುಮಾರ, ಕಪಿಲ, ವಾಲ್ಮೀಕಿ, ತುಂಬುರು,ಪುರು, ಪೌದ್ಗಲ್ಯ, ಪರಶುರಾಮ, ಮಹಾಮುನಿಗಳಾದ ತೃಣಬಿಂದು, ಪಿಪ್ಪಲಾದ, ವಾಯು, ಸಂವರ್ತ, ಪುಲಹ, ಕಚ, ಕಾಶ್ಯಪ, ಪುಲಸ್ತ್ಯ, ಕ್ರತು, ದಕ್ಷ, ಪರಾಶರ, ಮರೀಚಿ, ಅಂಗಿರಸ್, ಕಾಶ್ಯ, ಗೌತಮ, ಗಾಲವ, ಧೌಮ್ಯ, ವಿಭಾಂಡ, ಮಾಂಡವ್ಯ, ಧೌತ್ರ, ಕೃಷ್ಣಾನುಭೌತಿಕ, ಪರಮ - ಬ್ರಾಹ್ಮಣರಾದ ಉಲೂಕ, ಮಹಾಮುನಿಗಳಾದ ಮಾರ್ಕಂಡೇಯ, ಭಾಸ್ಕರಿ, ಪೂರಣ, ಕೃಷ್ಣ, ಪರಮಧಾರ್ಮಿಕನಾದ ಸೂತ ಈ ಎಲ್ಲಾ ಮಹಾತ್ಮರೂ ಮಹಾ- ಭಾಗ್ಯವಂತರೂ ಆದ ಮುನಿಗಳ ಸಮೂಹದಿಂದ ಶ್ರದ್ಧಾ, ದಮ ಪುರಸ್ಸರವಾಗಿ ಗ್ರಹಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆ ಭೀಷ್ಮರು ಇದ್ದರು.
ಭೀಷ್ಮಸ್ತು ಪುರುಷವ್ಯಾಘ್ರಃ ಕರ್ಮಣಾ ಮನಸಾ ಗಿರಾ |
ಶರತಲ್ಪಗತಃ ಕೃಷ್ಣಂ ಪ್ರದಧ್ಯೌ ಪ್ರಾಂಜಲಿಃ ಸ್ಥಿತಃ ॥14॥
ಪುರುಷವ್ಯಾಘ್ರರಾದ ಶರತಲ್ಪಗತರಾದ ಭೀಷ್ಮರಾದರೋ ಕೈಗಳನ್ನು ಮುಗಿದು ಕರ್ಮದಿಂದಲೂ ಮನಸ್ಸಿನಿಂದಲೂ ಮತ್ತು ಮಾತಿನಿಂದಲೂ ಕೃಷ್ಣನನ್ನು ಧ್ಯಾನ ಮಾಡಿದರು.
ಸ್ವರೇಣ ಪುಷ್ಟನಾದೇನ ತುಷ್ಟಾವ ಮಧುಸೂದನಮ್ |
ಯೋಗೇಶ್ವರಂ ಪದ್ಮನಾಭಂ ವಿಷ್ಣುಂ ಜಿಷ್ಣುಂ ಜಗತ್ಪತಿಮ್ ॥15॥
ಅವರು ಯೋಗೇಶ್ವರನೂ ಪದ್ಮನಾಭನೂ ವಿಷ್ಣುವೂ ಜಿಷ್ಣುವೂ ಜಗತ್ಪತಿಯೂ ಆದ ಮಧುಸೂದನನನ್ನು ತುಂಬಿದ ಸ್ವರದಿಂದ ಸ್ತೋತ್ರಮಾಡಿದರು.
ಕೃತಾಂಜಲಿಃ ಶುಚಿರ್ಭೂತ್ವಾ ವಾಗ್ವಿದಾಂ ಪ್ರವರಃ ಪ್ರಭುಮ್ |
ಭೀಷ್ಮಃ ಪರಮಧರ್ಮಾತ್ಮಾ ವಾಸುದೇವಮಥಾಸ್ತುವತ್ ॥16॥
ಮಾತನಾಡುವವರಲ್ಲಿ ಶ್ರೇಷ್ಠರಾದ ಪರಮಧರ್ಮಾತ್ಮರಾದ ಭೀಷ್ಮರು ಶುಚಿಯಾಗಿ ಕೈಗಳನ್ನು ಮುಗಿದು ಪ್ರಭುವಾದ ವಾಸುದೇವನನ್ನು ಆಗ ಸ್ತೋತ್ರ ಮಾಡಿದರು.
ಆರಿರಾಧಯಿಷುಃ ಕೃಷ್ಣಂ ವಾಚಂ ಜಿಗದಿಷಾಮಿ ಯಾಮ್ |
ತಥಾ ವ್ಯಾಸಸಮಾಸಿನ್ಯಾ ಪ್ರೀಯತಾಂ ಪುರುಷೋತ್ತಮಃ ॥17॥
ನಾನು ಕೃಷ್ಣನನ್ನು ಸ್ತೋತ್ರಮಾಡಲು ಬಯಸಿ ಯಾವ ಮಾತುಗಳನ್ನು ಆಡಲು ಇಚ್ಛಿಸುತ್ತಿದ್ದೇನೆಯೋ ಅಂತಹ ಸಂಕ್ಷಿಪ್ತ ಮತ್ತು ವಿಸ್ತಾರವಾದ ಮಾತುಗಳಿಂದ ಪುರುಷೋತ್ತಮನಾದ ಕೃಷ್ಣನು ಪ್ರಸನ್ನನಾಗಲಿ.
ಶುಚಿಃ ಶುಚಿಪದಂ ಹಂಸಂ ತತ್ಪರಃ ಪರಮೇಷ್ಠಿನಮ್ |
ಯುಕ್ತ್ವಾ ಸರ್ವಾತ್ಮನಾಽಽತ್ಮಾನಂ ತಂ ಪ್ರಪದ್ಯೇ ಪ್ರಜಾಪತಿಮ್ ॥18॥
ನನ್ನ ಮನಸ್ಸನ್ನು ಶುಚಿಯೂ, ವಾಯ್ವಂತರ್ಯಾಮಿಯೂ, ದೋಷ- ದೂರನೂ, ಗುಣಪೂರ್ಣನೂ, ಪರಮೇಷ್ಠಿಯೂ ಆದ ಕೃಷ್ಣನಲ್ಲಿ ನಿಲ್ಲಿಸಿ ಪ್ರಜಾ- ಪತಿಯಾದ ಅವನಿಗೆ ನಾನು ಶರಣಾಗತನಾಗುತ್ತೇನೆ.
ಅನಾದ್ಯಂತಃ ಪರಂ ಬ್ರಹ್ಮ ನ ದೇವಾ ನರ್ಷಯೋ ವಿದುಃ |
ಏಕೋಽಯಂ ವೇದ ಭಗವಾನ್ ಧಾತಾ ನಾರಾಯಣೋ ಹರಿಃ ॥19॥
ಅವನು ಆದ್ಯಂತಶೂನ್ಯನಾದ ಪರಬ್ರಹ್ಮ. ದೇವತೆಗಳಾಗಲೀ ಋಷಿಗಳಾಗಲೀ ಅವನನ್ನು ಪೂರ್ಣವಾಗಿ ತಿಳಿದಿಲ್ಲ. ಜಗತ್ಸೃಷ್ಟಿಕರ್ತನಾದ ಭಗವಂತನಾದ ಹರಿ- ನಾರಾಯಣನೊಬ್ಬನೇ ಅವನನ್ನು ತಿಳಿದವನು.
ನಾರಾಯಣಾದೃಷಿಗಣಾಸ್ತಥಾ ಸಿದ್ಧಮಹೋರಗಾಃ |
ದೇವಾ ದೇವರ್ಷಯಶ್ಚೈವ ಯೇ ವಿದುಃ ಪರಮವ್ಯಯಮ್ ॥20॥
ದೇವತೆಗಳೂ, ದೇವಋಷಿಗಳೂ, ಋಷಿಗಣಗಳೂ, ಸಿದ್ಧರೂ, ಮಹೋರಗ- ಗಳೂ ಮೊದಲಾದ ಯಾರು ಸರ್ವೋತ್ತಮನೂ ಅವ್ಯಯನೂ ಆದ ಅವನನ್ನು ಅಲ್ಪಸ್ವಲ್ಪ ತಿಳಿದಿದ್ದಾರೆಯೋ ಅದೂ ಸಹ ನಾರಾಯಣನ ಉಪದೇಶದಿಂದಲೇ.
ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ |
ಯಂ ನ ಜಾನಂತಿ ಕೋ ಹ್ಯೇಷ ಕುತೋ ವಾ ಭಗವಾನಿತಿ ॥21॥
ಯಾವನನ್ನು ಇವನ ಸ್ವರೂಪವೇನು? ಭಗವಂತನಾದ ಇವನು ಎಲ್ಲಿಂದ ಬಂದಿದ್ದಾನೆ? ಎಂಬುದನ್ನು ದೇವದಾನವಗಂಧರ್ವರಾಗಲೀ, ಯಕ್ಷರಾಕ್ಷಸಸರ್ಪ- ಗಳಾಗಲೀ ತಿಳಿದಿಲ್ಲವೋ,

ಯಸ್ಮಿನ್ ವಿಶ್ವಾನಿ ಭೂತಾನಿ ತಿಷ್ಠಂತಿ ಚ ವಿಶಂತಿ ಚ |
ಗುಣಭೂತಾನಿ ಭೂತೇಶೇ ಸೂತ್ರೇ ಮಣಿಗಣಾ ಇವ ॥22॥
ಭೂತೇಶನಾದ ಯಾವನಲ್ಲಿ ಎಲ್ಲ ಪ್ರಾಣಿಗಳೂ ಸೂತ್ರದಲ್ಲಿ ಪೋಣಿಸಿದ ಮಣಿಗಣಗಳಂತೆ ಪ್ರವೇಶಿಸಿ, ಆಶ್ರಿತವಾಗಿ ಅಪ್ರಧಾನವಾಗಿವೆಯೋ,
ಯಸ್ಮಿನ್ ನಿತ್ಯೇ ತತೇ ತಂತೌ ದೃಢೇ ಸ್ರಗಿವ ತಿಷ್ಠತಿ |
ಸದಸದ್ ಗ್ರಥಿತಂ ವಿಶ್ವಂ ವಿಶ್ವಾಂಗೇ ವಿಶ್ವಕರ್ಮಣಿ ॥23॥
ನಿತ್ಯಾಂಗನಾದ ವಿಶ್ವಶರೀರನೂ, ವಿಶ್ವಕರ್ಮನೂ ಆದ ಯಾವನಲ್ಲಿ ಕಾರ್ಯ- ಕಾರಣಾತ್ಮಕವಾದ ಈ ಪ್ರಪಂಚವು ದೃಢವಾದ ತಂತುವಿನಲ್ಲಿ ಆಶ್ರಯಿಸಿದ ಹೂಮಾಲೆಯಂತಿದೆಯೋ,
ಹರಿಂ ಸಹಸ್ರಶಿರಸಂ ಸಹಸ್ರಚರಣೇಕ್ಷಣಮ್ |
ಪ್ರಾಹುರ್ನಾರಾಯಣಂ ದೇವಂ ಯಂ ವಿಶ್ವಸ್ಯ ಪರಾಯಣಮ್ ॥24॥
ಯಾವನನ್ನು ಹರಿಯೆಂದು, ಸಹಸ್ರಶೀರ್ಷನೆಂದು, ಸಹಸ್ರಪಾದನೆಂದು, ಸಹಸ್ರಾಕ್ಷನೆಂದು, ನಾರಾಯಣನೆಂದು, ವಿಶ್ವಕ್ಕೆ ಶ್ರೇಷ್ಠನಾದ ಆಶ್ರಯನಾದ ದೇವನೆಂದು ಹೇಳುತ್ತಾರೆಯೋ,
ಅಣೀಯಸಾಮಣೀಯಾಂಸಂ ಸ್ಥವಿಷ್ಠಂ ಚ ಸ್ಥವೀಯಸಾಮ್ |
ಗರೀಯಸಾಂ ಗರಿಷ್ಠಂ ಚ ಶ್ರೇಷ್ಠಂ ಚ ಶ್ರೇಯಸಾಮಪಿ ॥25॥
ಯಾವನು ಸೂಕ್ಷ್ಮವಾದ ವಸ್ತುವಿಗಿಂತಲೂ ಅತ್ಯಂತಸೂಕ್ಷ್ಮನೋ, ಸ್ಥೂಲವಾದ ವಸ್ತುಗಳಿಗಿಂತಲೂ ಅತ್ಯಂತಸ್ಥೂಲನೋ, ಭಾರವಾದ ವಸ್ತುಗಳಿಗಿಂತಲೂ ಹೆಚ್ಚು ಭಾರವುಳ್ಳವನೋ, ಶ್ರೇಷ್ಠವಾದ ವಸ್ತುಗಳಿಗಿಂತಲೂ ಅತ್ಯಂತ ಶ್ರೇಷ್ಠನಾದವನೋ,
ಯಂ ವಾಕೇಷ್ವನುವಾಕೇಷು ನಿಷತ್ಸೂಪನಿಷತ್ಸು ಚ |
ಗೃಣಂತಿ ಸತ್ಯಕರ್ಮಾಣಂ ಸತ್ಯಂ ಸತ್ಯೇಷು ನಾಮಸು ॥26॥
ಸತ್ಯಕರ್ಮನಾದ, ಸತ್ಯನಾದ, ಯಾವನನ್ನು ಸತ್ಯರೂಪವಾದ ನಾಮಾತ್ಮಕವಾದ ವಾಕ, ಅನುವಾಕ, ವೇದ ಮತ್ತು ಉಪನಿಷತ್ತುಗಳಿಂದ ಕೊಂಡಾಡುತ್ತಾರೆಯೋ,
ಚತುರ್ಭಿಶ್ಚತುರಾತ್ಮಾನಂ ಸತ್ತ್ವಸ್ಥಂ ಸಾತ್ವತಾಂಪತಿಮ್ |
ಯಂ ದಿವ್ಯೈರ್ದೇವಮರ್ಚಂತಿ ಗುಹ್ಯೈಃ ಪರಮನಾಮಭಿಃ ॥27॥
ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪವನ್ನು ಧರಿಸಿದವನಾಗಿ ಸಾತ್ವತರ ಪತಿಯೂ ಶುದ್ಧಾಂತಃಕರಣದಲ್ಲಿ ನೆಲೆಸಿರುವವನೂ ಆದ ಯಾವ ದೇವನನ್ನು ಶ್ರೇಷ್ಠವಾದ ಮತ್ತು ಪರಮರಹಸ್ಯವಾದ ದಿವ್ಯನಾಮಗಳಿಂದ ಜ್ಞಾನಿಗಳು ಅರ್ಚಿಸುತ್ತಾರೆಯೋ,
ಯಂ ದೇವಂ ದೇವಕೀದೇವೀ ವಸುದೇವಾದಜೀಜನತ್ |
ಭೌಮಸ್ಯ ಬ್ರಹ್ಮಣೋ ಗುಪ್ತ್ಯೈ ದೀಪ್ತಮಗ್ನಿಮಿವಾರಣಿಃ ॥28॥
ಭೂಮಿಯಲ್ಲಿ ವೇದರಕ್ಷಣೆಯನ್ನು ಮಾಡಲು ಅರಣಿಯಿಂದ ದೀಪ್ತವಾದ ಅಗ್ನಿಯನ್ನು ಪಡೆದಂತೆ ಯಾವನನ್ನು ದೇವಕೀದೇವಿಯು ವಸುದೇವನಿಂದ ಪಡೆ- ದಳೋ,
ಯಮನನ್ಯೋ ವ್ಯಪೇತಾಶೀರಾತ್ಮಾನಂ ವೀತಕಲ್ಮಷಮ್ |
ದೃಷ್ಟ್ವಾನಂತ್ಯಾಯ ಗೋವಿಂದಂ ಪಶ್ಯತ್ಯಾತ್ಮನ್ಯವಸ್ಥಿತಮ್ ॥29॥
ಯಾವನು ಸ್ವಾಮಿಯಾದ, ದೋಷದೂರನಾದ, ವೇದಪ್ರತಿಪಾದ್ಯನಾದ ಕೃಷ್ಣ- ನನ್ನು ಅನಂತವಾದ ಮೋಕ್ಷವನ್ನು ಪಡೆಯುವ ಸಲುವಾಗಿ ಎಲ್ಲ ಕಾಮಗಳನ್ನೂ ತೊರೆದು ಅನನ್ಯವಾದ ಭಕ್ತಿಯಿಂದ ತಮ್ಮ ಹೃದಯಗುಹೆಯಲ್ಲಿ ನೋಡು- ತ್ತಾನೆಯೋ,
ಪುರಾಣೇ ಪುರುಷಃ ಪ್ರೋಕ್ತೋ ಬ್ರಹ್ಮಾ ಪ್ರೋಕ್ತೋ ಯುಗಾದಿಷು |
ಕ್ಷಯೇ ಸಂಕರ್ಷಣಃ ಪ್ರೋಕ್ತಸ್ತಮುಪಾಸ್ಯಮುಪಾಸ್ಮಹೇ ॥30॥
ಯಾವನನ್ನು ಪುರಾಣಗಳಲ್ಲಿ ಪುರುಷನೆಂದೂ, ಯುಗದ ಪ್ರಾರಂಭದಲ್ಲಿ ಬ್ರಹ್ಮನೆಂದೂ, ಸಂಹಾರಕಾಲದಲ್ಲಿ ಸಂಕರ್ಷಣನೆಂದೂ ಹೇಳುತ್ತಾರೆಯೋ ಅಂತಹ ಉಪಾಸನೆಗೆ ಯೋಗ್ಯವಾದ ಕೃಷ್ಣನನ್ನು ಉಪಾಸನೆ ಮಾಡುತ್ತೇವೆ.
ಅತಿವಾಯ್ವಗ್ನಿಕರ್ಮಾಣಮತಿಸೂರ್ಯಾಗ್ನಿತೇಜಸಮ್ |
ಅತಿಬುದ್ಧೀಂದ್ರಿಯಾತ್ಮಾನಂ ತಂ ಪ್ರಪದ್ಯೇ ಪ್ರಜಾಪತಿಮ್ ॥31॥
ವಾಯು ಅಗ್ನಿಗಳನ್ನು ಮೀರಿದ ಕರ್ಮಗಳನ್ನು ಮಾಡುವ, ಸೂರ್ಯಾಗ್ನಿಗಳನ್ನು ಮೀರಿದ ತೇಜಸ್ಸನ್ನು ಹೊಂದಿದ, ಜೀವನ ಬುದ್ಧೀಂದ್ರಿಯಗಳಿಗೆ ನಿಲುಕದ ಸ್ವರೂಪವುಳ್ಳ ಆ ಪ್ರಜಾಪತಿಯನ್ನು ಶರಣು ಹೊಂದುತ್ತೇನೆ.
ಯಮೇಕಂ ಬಹುಧಾಮಾನಂ ಪ್ರಾದುರ್ಭೂತಮಧೋಕ್ಷಜಮ್ |
ನಾನ್ಯಭಕ್ತಾ ಕ್ರಿಯಾವಂತೋ ಯಜಂತೇ ಸರ್ವಕಾಮದಮ್ ॥32॥
ಅನೇಕ ವಾಸಸ್ಥಾನಗಳನ್ನು ಹೊಂದಿದ ಸರ್ವಕಾಮಪ್ರದನಾದ ಭೂಮಿಯಲ್ಲಿ ಅವತರಿಸಿದ ಯಾವ ಅಧೋಕ್ಷಜನನ್ನು ಸತ್ಕರ್ಮವನ್ನು ಮಾಡುವ ಜೀವರು ಅನನ್ಯಭಕ್ತಿಯಿಂದ ಪೂಜಿಸುತ್ತಾರೆಯೋ,
ಯಮಾಹುರ್ಜಗತಃ ಕೋಶಂ ಯಸ್ಮಿನ್ ಸನ್ನಿಹಿತಾ ಪ್ರಜಾಃ |
ಯಸ್ಮಿನ್ ಲೋಕಾ ಸ್ಫುರಂತೀಮೇ ಜಲೇ ಶಕುನಯೋ ಯಥಾ ॥33॥
ಯಾವನನ್ನು ಜಗತ್ತಿನ ಕೋಶವೆಂದು ಹೇಳುತ್ತಾರೆಯೋ, ಯಾವನಲ್ಲಿ ಎಲ್ಲ ಪ್ರಜೆಗಳೂ ಆಶ್ರಯಿಸಿಕೊಂಡಿದ್ದಾರೆಯೋ, ಯಾವನಲ್ಲಿ ಜಲದಲ್ಲಿ ಪಕ್ಷಿಗಳು (ಮೀನುಗಳು) ತೋರುವಂತೆ ಈ ಎಲ್ಲ ಲೋಕಗಳೂ ಪ್ರಕಾಶಿಸುತ್ತವೆಯೋ,
ಋತಮೇಕಾಕ್ಷರಂ ಬ್ರಹ್ಮ ಯತ್ ತತ್ ಸದಸತಃ ಪರಮ್ |

ಅನಾದಿಮಧ್ಯಪರ್ಯಂತಂ ನ ದೇವಾ ನರ್ಷಯೋ ವಿದುಃ ॥34॥
ಯಾವನು ಯಾವಾಗಲೂ ಒಂದೇ ರೀತಿಯಲ್ಲಿದ್ದಾನೆಯೋ ಪ್ರಣವಪ್ರತಿ- ಪಾದ್ಯನೋ, ಗುಣಪೂರ್ಣನೋ, ಕಾರ್ಯಕಾರಣಗಳಿಗಿಂತ ಶ್ರೇಷ್ಠನಾದವನೋ, ಆದಿಮಧ್ಯಾಂತಶೂನ್ಯನೋ, ಯಾವನನ್ನು ದೇವತೆಗಳಾಗಲೀ ಋಷಿಗಳಾಗಲೀ ತಿಳಿ- ದಿಲ್ಲವೋ,
ಯಂ ಸುರಾಸುರಗಂಧರ್ವಾಃ ಸಸಿದ್ಧರ್ಷಿಮಹೋರಗಾಃ |
ಪ್ರಯತಾ ನಿತ್ಯಮರ್ಚಂತಿ ಪರಮಂ ದುಃಖಭೇಷಜಮ್ ॥35॥
ದುಃಖಪರಿಹಾರಕನಾದ, ಸರ್ವೋತ್ತಮನಾದ ಯಾವನನ್ನು ಸುರಾಸುರ- ಗಂಧರ್ವರು ಸಿದ್ಧರ್ಷಿಮಹೋರಗರು ನಿತ್ಯವೂ ಶ್ರದ್ಧೆಯಿಂದ ಪೂಜಿಸುತ್ತಾರೆಯೋ
ಅನಾದಿನಿಧನಂ ದೇವಮಾತ್ಮಯೋನಿಂ ಸನಾತನಮ್ |
ಅಪ್ರತರ್ಕ್ಯಮವಿಜ್ಞೇಯಂ ಹರಿಂ ನಾರಾಯಣಂ ಪ್ರಭುಮ್ ॥36॥
ಆದ್ಯಂತರಹಿತನೂ, ಆತ್ಮಯೋನಿಯೂ, ವೇದಪ್ರತಿಪಾದ್ಯನೂ, ತರ್ಕವನ್ನು ಮೀರಿದವನೂ, ಪೂರ್ಣವಾಗಿ ತಿಳಿಯಲು ಅಸಾಧ್ಯನಾದವನೂ, ಪಾಪಪರಿ- ಹಾರಕನೂ ಪ್ರಭುವೂ ಆದ ಆ ನಾರಾಯಣನಿಗೆ ಶರಣಾಗತನಾಗುತ್ತೇನೆ.
ಹಿರಣ್ಯವರ್ಣಂ ಯಂ ಗರ್ಭಮದಿತಿರ್ದೈತ್ಯನಾಶನಮ್ |
ಏಕಂ ದ್ವಾದಶಧಾ ಜಜ್ಞೇ ತಸ್ಮೈ ಸೂರ್ಯಾತ್ಮನೇ ನಮಃ ॥37॥
ದೇವಮಾತೆಯಾದ ಅದಿತಿಯು ದೈತ್ಯನಾಶಕನಾದ ಹಿರಣ್ಯವರ್ಣದ ಗರ್ಭವನ್ನು ಧರಿಸಿ ಯಾವ ಒಬ್ಬನನ್ನು ದ್ವಾದಶ ಆದಿತ್ಯರಾಗಿ ಪ್ರಸವಿಸಿದಳೋ ಅಂತಹ ಸೂರ್ಯ -ನಲ್ಲಿ ವ್ಯಾಪ್ತನಾದ ದೇವನಿಗೆ ನಮಸ್ಕಾರ.
ಶುಕ್ಲೇ ದೇವಾನ್ ಪಿತ್ರೂನ್ ಕೃಷ್ಣೇ ತರ್ಪಯತ್ಯಮೃತೇನ ಯಃ |
ಯಶ್ಚ ರಾಜಾ ದ್ವಿಜಾತೀನಾಂ ತಸ್ಮೈ ಸೋಮಾತ್ಮನೇ ನಮಃ ॥38॥
ಯಾವನು ಚಂದ್ರನಲ್ಲಿ ಸನ್ನಿಹಿತನಾಗಿದ್ದು ಅಮೃತದಿಂದ ಶುಕ್ಲಪಕ್ಷದಲ್ಲಿ ದೇವತೆ- ಗಳನ್ನೂ, ಕೃಷ್ಣಪಕ್ಷದಲ್ಲಿ ಪಿತೃಗಳನ್ನೂ ತೃಪ್ತಿಪಡಿಸುತ್ತಾನೆಯೋ ಮತ್ತು ಬ್ರಾಹ್ಮಣ ಜಾತಿಗೆ ಅಧಿಪತಿಯಾಗಿದ್ದಾನೆಯೋ ಅಂತಹ ಚಂದ್ರಸ್ವಾಮಿಗೆ ನಮಸ್ಕಾರ.
ಹುತಾಶನಮುಖೈರ್ದೇವೈರ್ಧಾರ್ಯತೇ ಸಕಲಂ ಜಗತ್ |
ಹೃದಿ ಪ್ರಥಮಭೋಕ್ತಾ ಚ ತಸ್ಮೈ ಹೋತ್ರಾತ್ಮನೇ ನಮಃ ॥39॥
ಅಗ್ನಿಯೇ ಮೊದಲಾದ ದೇವತೆಗಳಿಂದ ಸಕಲಜಗತ್ತು ಧರಿಸಲ್ಪಡುತ್ತದೆ. ಪ್ರಥಮ ಹವಿರ್ಭೋಕ್ತನಾದ ಹೋತೃವಿನಲ್ಲಿ ವಿಶೇಷವಾಗಿ ಸನ್ನಿಹಿತನಾದ ಅವನಿಗೆ ನಮಸ್ಕಾರ.
ಮಹತಸ್ತಮಸಃ ಪಾರೇ ಪುರುಷಂ ಜ್ವಲನದ್ಯುತಿಮ್ |
ಯಂ ಜ್ಞಾತ್ವಾ ಮೃತ್ಯುಮತ್ಯೇತಿ ತಸ್ಮೈ ಜ್ಞೇಯಾತ್ಮನೇ ನಮಃ ॥40॥
ಮಹಾ ತಮಸ್ಸಿನ ಅಂಚಿನಲ್ಲಿ ಅಗ್ನಿಯ ಪ್ರಕಾಶವನ್ನು ಹೊಂದಿರುವ ಯಾವ ಪುರುಷನನ್ನು ನೋಡಿ ಜೀವನು ಮೃತ್ಯುವನ್ನು ದಾಟುತ್ತಾನೆಯೋ ಅಂತಹ ಜ್ಞೇಯ ವಸ್ತುವಿನಲ್ಲಿ ಶ್ರೇಷ್ಠನಾದ ಕೃಷ್ಣನಿಗೆ ನಮಸ್ಕಾರ.
ಯಂ ಬೃಹಂತಂ ಬೃಹತ್ಯುಕ್ಥೇ ಯಮಗ್ನೌ ಯಂ ಮಹಾಧ್ವರೇ |
ಯಂ ವಿಪ್ರಸಂಘಾ ಗಾಯಂತಿ ತಸ್ಮೈ ವೇದಾತ್ಮನೇ ನಮಃ ॥41॥
ಯಾವ ಮಹಾತ್ಮನನ್ನು ಮಹಾಯಜ್ಞಗಳಲ್ಲಿ ಬೃಹತ್ ಉಕ್ಥಗಳಲ್ಲಿ ಅಗ್ನಿಯಲ್ಲಿ ಬ್ರಾಹ್ಮಣರ ಸಮೂಹಗಳು ಗಾನಮಾಡುತ್ತವೆಯೋ ಅಂತಹ ವೇದಪ್ರತಿಪಾದ್ಯ- ನಾದವನಿಗೆ ನಮಸ್ಕಾರ.
ಋಗ್ಯಜುಃಸಾಮಧಾಮಾನಂ ದಶಾರ್ಧಹವಿರಾಕೃತಿಮ್ |
ಯಂ ಸಪ್ತತಂತುಂ ತನ್ವಂತಿ ತಸ್ಮೈ ಯಜ್ಞಾತ್ಮನೇ ನಮಃ ॥42॥
ಋಗ್ಯಜುಸ್ಸಾಮವೇದಗಳಲ್ಲಿ ಪ್ರತಿಪಾದ್ಯತಯಾ ಆಶಯವನ್ನು ಪಡೆದಿರುವ ಧಾನ, ಕರಂಭ, ಪರಿವಾಪ, ಪುರೋಡಾಶ ಮತ್ತು ಪಯಸ್ಯಗಳೆಂಬ ಐದುವಿಧವಾದ ಹವಿಸ್ಸುಗಳಲ್ಲಿ ಸನ್ನಿಹಿತನಾಗಿರುವ (ಹವಿಸ್ಸುಗಳ ಆಕಾರವನ್ನು ಹೊಂದಿರುವ) ಮತ್ತು ಯಾವನನ್ನು ಉದ್ದೇಶಿಸಿ ಯಜ್ಞಗಳನ್ನು ವಿಸ್ತಾರವಾಗಿ ಮಾಡುತ್ತಾರೆಯೋ ಅಂತಹ ಯಜ್ಞಾತ್ಮನಾದ ಕೃಷ್ಣನಿಗೆ ನಮಸ್ಕಾರ.
ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ |
ಹೂಯತೇ ಚ ಪುನರ್ದ್ವಾಭ್ಯಾಂ ತಸ್ಮೈ ಹೋಮಾತ್ಮನೇ ನಮಃ ॥43॥
ನಾಲ್ಕು ಅಕ್ಷರಗಳ ಮಂತ್ರದಿಂದ ಪುನಃ ನಾಲ್ಕು ಅಕ್ಷರಗಳ ಮಂತ್ರದಿಂದ, ಎರಡು ಅಕ್ಷರಗಳ ಮಂತ್ರದಿಂದ, ಐದು ಅಕ್ಷರಗಳ ಮಂತ್ರದಿಂದ ಪುನಃ ಎರಡು ಅಕ್ಷರಗಳ ಮಂತ್ರದಿಂದ ಯಾವನಲ್ಲಿ ಹೋಮ ಮಾಡಲ್ಪಡುತ್ತದೆಯೋ ಅಂತಹ ಹೋಮ- ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
``ಆಶ್ರಾವಯ, ಅಸ್ತು ಶ್ರೌಷಟ್, ಯಜ, ಯೇಯಜಾಮಹೇ, ವಷಟ್'' ಎಂಬುದು ಕ್ರಮವಾಗಿ ಆ ಮಂತ್ರಗಳು.
ಯಃ ಸುಪರ್ಣೋ ಯಜುರ್ನಾಮ ಛಂದೋಗಾತ್ರಸ್ತ್ರಿವೃಚ್ಛಿರಾಃ |
ರಥಂತರಬೃಹತ್ಯಕ್ಷಸ್ತಸ್ಮೈ ಸ್ತೋತ್ರಾತ್ಮನೇ ನಮಃ ॥44॥
ಯಾವ ಸುಪೂರ್ಣಾನಂದರೂಪನಾದ ಕೃಷ್ಣನು ಯಜನೀಯನಾದ್ದರಿಂದ ಯಜುರ್ನಾಮಕನಾಗಿದ್ದಾನೆಯೋ, ಛಂದಃಶರೀರವುಳ್ಳವನೋ, ತ್ರಿವೃತ್ ಸ್ತೋಮ- ವೇ ಶಿರಸ್ಸನ್ನಾಗಿ ಹೊಂದಿದವನೋ, ರಥಂತರ ಮತ್ತು ಬೃಹತೀ ಸಾಮಗಳನ್ನು ಚಕ್ಷುಸ್ಸಾಗಿ ಹೊಂದಿದ್ದಾನೆಯೋ ಅಂತಹ ಸ್ತೋತ್ರಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಃ ಸಹಸ್ರಸವೇ ಸತ್ರೇ ಜಜ್ಞೇ ವಿಶ್ವಸೃಜಾಮೃಷಿಃ |
ಹಿರಣ್ಯವರ್ಣಃ ಶಕುನಿಸ್ತಸ್ಮೈ ಹಂಸಾತ್ಮನೇ ನಮಃ ॥45॥
ಯಾವ ಸರ್ವಜ್ಞನಾದವನು ವಿಶ್ವಸೃಗ್ ದೇವತೆಗಳ ಸಹಸ್ರಸವನಾಮಕ ಯಜ್ಞದಲ್ಲಿ ಹಿರಣ್ಯವರ್ಣದ ಶಕುನಿಯಾಗಿ (ಪಕ್ಷಿಯಾಗಿ)

ಪ್ರಾದುರ್ಭವಿಸಿದನೋ ಅಂತಹ ಹಂಸರೂಪನಾದ ಕೃಷ್ಣನಿಗೆ ನಮಸ್ಕಾರ. (ಹಿರಣ್ಮಯಶ್ಶಕುನಿಃ ಬ್ರಹ್ಮ ನಾಮ ಎಂಬ ವೇದವಾಕ್ಯವಿದೆ.)
ಯಜ್ಞಾಂಗೋ ಯೋ ವರಾಹೋ ವೈ ಭೂತ್ವಾ ಗಾಮುಜ್ಜಹಾರ ಹ |
ಲೋಕತ್ರಯಹಿತಾರ್ಥಾಯ ತಸ್ಮೈ ವೀರ್ಯಾತ್ಮನೇ ನಮಃ ॥46॥
ಯಾವನು ಯಜ್ಞವರಾಹನಾಗಿ ಅವತರಿಸಿ ಮೂರು ಲೋಕಗಳ ಹಿತಕ್ಕಾಗಿ ಭೂಮಿಯನ್ನು ಮೇಲಕ್ಕೆ ಎತ್ತಿದನೋ ಅಂತಹ ಪರಾಕ್ರಮರೂಪನಾದ ಅವನಿಗೆ ನಮಸ್ಕಾರ.
ಯಃ ಶೇತೇ ಯೋಗಮಾಸ್ಥಾಯ ಪರ್ಯಂಕೇ ನಾಗಭೂಷಿತೇ |
ಫಣಾಸಹಸ್ರಖಚಿತೇ ತಸ್ಮೈ ನಿದ್ರಾತ್ಮನೇ ನಮಃ ॥47॥
ಯಾವನು ಸಹಸ್ರಫಣಗಳಿಂದ ಖಚಿತವಾದ ಸರ್ಪಮಯವಾದ ಪರ್ಯಂಕ- ದಲ್ಲಿ ಯೋಗನಿದ್ರೆಯನ್ನು ಅವಲಂಬಿಸಿ ಮಲಗಿರುತ್ತಾನೆಯೋ ಅಂತಹ ಯೋಗ- ನಿದ್ರಾಸಕ್ತನಾದ ಕೃಷ್ಣನಿಗೆ ನಮಸ್ಕಾರ.
ಪದಾಂಗಂ ಸಂಧಿಪರ್ವಾಣಂ ಸ್ವರವ್ಯಂಜನಲಕ್ಷಣಮ್ |
ಯಮಾಹುರಕ್ಷರಂ ನಿತ್ಯಂ ತಸ್ಮೈ ವಾಗಾತ್ಮನೇ ನಮಃ ॥48॥
ಯಾವನಿಗೆ ಪದಗಳೇ ಶರೀರದ ಅವಯವಗಳೋ, ವರ್ಣ ಸಂಧಿಗಳು ಪರ್ವ- ಗಳೋ (ಗಿಣ್ಣುಗಳೋ) ಯಾವನನ್ನು ಸ್ವರವ್ಯಂಜನರೂಪವಾದ ಅಕ್ಷರನಿಯಾಮಕ- -ನೆಂದು ಹೇಳುತ್ತಾರೆಯೋ ಅಂತಹ ನಾಶರಹಿತನಾದ ನಿತ್ಯನಾದ ವಾಗ್ರೂಪನಾದ ಕೃಷ್ಣನಿಗೆ ನಮಸ್ಕಾರ.
ಯಶ್ಚಿನೋತಿ ಸತಾಂ ಸೇತುಮೃತೇನಾಮೃತಯೋನಿನಾ |
ಧರ್ಮಾರ್ಥವ್ಯವಹಾರಾಂಗೈಸ್ತಸ್ಮೈ ಮತ್ಯಾತ್ಮನೇ ನಮಃ ॥49॥
ಯಾವನು ಧರ್ಮಾರ್ಥವ್ಯವಹಾರ ಎಂಬ ಅಂಗಗಳಿಂದಲೂ, ಮೋಕ್ಷಕ್ಕೆ ಕಾರಣವಾದ ಯಥಾರ್ಥಜ್ಞಾನದಿಂದಲೂ, ಸಜ್ಜನರಿಗೆ ಸಂಸಾರವನ್ನು ದಾಟುವ ಸೇತುವೆಯನ್ನು ನಿರ್ಮಿಸುತ್ತಾನೆಯೋ ಅಂತಹ ಮತಿರೂಪನಾದ (ಮತಿಪ್ರೇರಕ- ನಾದ) ಕೃಷ್ಣನಿಗೆ ನಮಸ್ಕಾರ.
ಯಂ ಪೃಥಗ್ ಧರ್ಮಚರಣಾಃ ಪೃಥಗ್ ಧರ್ಮಫಲೈಷಿಣಃ |
ಪೃಥಗ್ ಧರ್ಮೈಃ ಸಮರ್ಚಂತಿ ತಸ್ಮೈ ಧರ್ಮಾತ್ಮನೇ ನಮಃ ॥50॥
ಬೇರೆ ಬೇರೆ ಫಲಗಳನ್ನು ಅಪೇಕ್ಷಿಸಿ ಬೇರೆ ಬೇರೆ ಧರ್ಮವನ್ನು ಅಚರಿಸುವವರು ಯಾವನನ್ನು ಬೇರೆ ಬೇರೆ ವಿಧಾನಗಳಿಂದ ಚೆನ್ನಾಗಿ ಅರ್ಚಿಸುತ್ತಾರೆಯೋ ಅಂತಹ ಧರ್ಮಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯತಃ ಸರ್ವೇ ಪ್ರಸೂಯಂತೇ ಹ್ಯನಂಗಾತ್ಮಾಂಗದೇಹಿನಃ |
ಉನ್ಮಾದಂ ಸರ್ವಭೂತಾನಾಂ ತಸ್ಮೈ ಕಾಮಾತ್ಮನೇ ನಮಃ ॥51॥
ಯಾವನಿಂದ ಎಲ್ಲ ಜೀವರೂ ಮನ್ಮಥನಿಂದ ವ್ಯಾಪ್ತವಾದ ದೇಹಾವಯವವುಳ್ಳ -ವರಾಗಿ ಪ್ರಸವಕ್ಕೆ ಕಾರಣರಾಗುತ್ತಾರೆಯೋ, ಯಾವನು ಸರ್ವಪ್ರಾಣಿಗಳಿಗೂ ಶ್ರೇಷ್ಠವಾದ ಹರ್ಷವನ್ನು ಕೊಡುತ್ತಾನೆಯೋ ಅಂತಹ ಕಾಮಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಂ ತಂ ವ್ಯಕ್ತಸ್ಥಮವ್ಯಕ್ತಂ ವಿಚಿನ್ವಂತಿ ಮಹರ್ಷಯಃ |
ಕ್ಷೇತ್ರೇ ಕ್ಷೇತ್ರಜ್ಞಮಾಸೀನಂ ತಸ್ಮೈ ಕ್ಷೇತ್ರಾತ್ಮನೇ ನಮಃ ॥52॥
ವ್ಯಕ್ತವಾದ ಶರೀರರೂಪವಾದ ಕ್ಷೇತ್ರದಲ್ಲಿ ಮಹರ್ಷಿಗಳು ಕ್ಷೇತ್ರಜ್ಞನಾದ ಮತ್ತು ಅವ್ಯಕ್ತನಾದ ಯಾವನನ್ನು ಹುಡುಕುತ್ತಾರೆಯೋ ಅಂತಹ ಕ್ಷೇತ್ರಸ್ವಾಮಿಯಾದ ಕೃಷ್ಣ- ನಿಗೆ ನಮಸ್ಕಾರ.
ಯಂ ದೃಗಾತ್ಮಾನಮಾತ್ಮಸ್ಥಂ ವೃತಂ ಷೋಡಶಭಿರ್ಗುಣೈಃ |
ಪ್ರಾಹುಃ ಸಪ್ತದಶಂ ಸಾಂಖ್ಯಾಸ್ತಸ್ಮೈ ಸಾಂಖ್ಯಾತ್ಮನೇ ನಮಃ ॥53॥
ಅಪ್ರಧಾನವಾದ ಪಂಚಭೂತಗಳು, ಮತ್ತು ಏಕಾದಶೇಂದ್ರಿಯಗಳಿಂದ ಪ್ರವೃತ್ತ- ನಾದ ಜ್ಞಾನರೂಪನಾಗಿ ಜೀವನಲ್ಲಿರುವ ಯಾವನನ್ನು ಸಾಂಖ್ಯರು ಹದಿನೇಳನೆಯ- ವನೆಂದು ಹೇಳುತ್ತಾರೆಯೋ ಅಂತಹ ಸಾಂಖ್ಯತತ್ವಪ್ರತಿಪಾದ್ಯನಾದ ಕೃಷ್ಣನಿಗೆ ನಮಸ್ಕಾರ.
ಯಂ ವಿನಿದ್ರಾ ಜಿತಶ್ವಾಸಾಃ ಸತ್ತ್ವಸ್ಥಾಃ ಸಂಯತೇಂದ್ರಿಯಾಃ |
ಜ್ಯೋತಿಃ ಪಶ್ಯಂತಿ ಯುಂಜಾನಾಸ್ತಸ್ಮೈ ಯೋಗಾತ್ಮನೇ ನಮಃ ॥54॥
ಯೋಗಿಗಳಾದವರು ನಿದ್ರೆಯನ್ನು ತೊರೆದು ಶ್ವಾಸವನ್ನು ಜಯಿಸಿ ಸತ್ವಗುಣ- ಪ್ರಧಾನರಾಗಿ ಇಂದ್ರಿಯಜಯವನ್ನು ಹೊಂದಿ, ಯೋಗವನ್ನು ಅನುಷ್ಠಾನ ಮಾಡಿ ಜ್ಯೋತೀರೂಪನಾದ ಯಾವನನ್ನು ನೋಡುತ್ತಾರೆಯೋ ಅಂತಹ ಯೋಗಾತ್ಮನಾದ ಕೃಷ್ಣನಿಗೆ ನಮಸ್ಕಾರ.
ಅಪುಣ್ಯಪುಣ್ಯೋಪರಮೇ ಯಂ ಪುನರ್ಭವನಿರ್ಭಯಾಃ |
ಶಾಂತಾಃ ಸನ್ನ್ಯಾಸಿನೋ ಯಾಂತಿ ತಸ್ಮೈ ಮೋಕ್ಷಾತ್ಮನೇ ನಮಃ ॥55॥
ಪುಣ್ಯಪಾಪಗಳೆರಡನ್ನೂ ಕಳೆದುಕೊಂಡು ಪುನರ್ಭವ(ಪುನರ್ಜನ್ಮ)ದ ಹೆದರಿಕೆ- ಯಿಂದ ಮುಕ್ತರಾದ ಶಾಂತರಾದ ಸನ್ನ್ಯಾಸಿಗಳು ಯಾವನನ್ನು ಹೊಂದುತ್ತಾರೆಯೋ ಅಂತಹ ಮೋಕ್ಷಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ |
ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರೇ ತಸ್ಮೈ ಲೋಕಾತ್ಮನೇ ನಮಃ ॥56॥
ಯಾವನ ಆಸ್ಯವು ಆಗ್ನಿಯೋ, ಶಿರಸ್ಸು ದ್ಯುಲೋಕವೋ, ನಾಭಿಯು ಅಂತ- ರಿಕ್ಷವೋ, ಪಾದಗಳು ಭೂಮಿಯೋ, ಸೂರ್ಯನು ಚಕ್ಷುಸ್ಸೋ, ದಿಕ್ಕುಗಳು ಶ್ರೋತ್ರವೋ ಅಂತಹ ಲೋಕವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.(ಅಗ್ನಿ ಮೊದಲಾದ ದೇವತೆಗಳು ಆಸ್ಯದಿಂದ ಜನ್ಮವನ್ನು ಪಡೆದು, ಆಸ್ಯವನ್ನು ಆಶ್ರಯಿಸಿಕೊಂಡಿದ್ದಾರೆ ಎಂದು ಅಭಿಪ್ರಾಯ).
ಯೋಽಸೌ ಯುಗಸಹಸ್ರಾಂತೇ ಪ್ರದೀಪ್ತಾರ್ಚಿರ್ವಿಭಾವಸುಃ |

ಸಂಭಕ್ಷಯತಿ ಭೂತಾನಿ ತಸ್ಮೈ ಘೋರಾತ್ಮನೇ ನಮಃ ॥57॥
ಯಾವನು ಸಹಸ್ರಯುಗಗಳ ಅಂತ್ಯದಲ್ಲಿ ದೀಪ್ತವಾದ ಜ್ವಾಲೆಗಳಿಂದ ಕೂಡಿದ ಅಗ್ನಿಯಾಗಿ ಎಲ್ಲ ಪ್ರಾಣಿಗಳನ್ನೂ ಭಕ್ಷಿಸುತ್ತಾನೆಯೋ ಅಂತಹ ಘೋರರೂಪನಾದ ಕೃಷ್ಣನಿಗೆ ನಮಸ್ಕಾರ.
ಸಂಭಕ್ಷ್ಯ ಸರ್ವಭೂತಾನಿ ಕೃತ್ವಾ ಚೈಕಾರ್ಣವಂ ಜಗತ್ |
ಬಾಲಃ ಸ್ವಪಿತಿ ಯಶ್ಚೈಕಸ್ತಸ್ಮೈ ಮಾಯಾತ್ಮನೇ ನಮಃ ॥58॥
ಎಲ್ಲ ಪ್ರಾಣಿಗಳನ್ನೂ ಭಕ್ಷಿಸಿ ಸಂಹಾರ ಮಾಡಿ, ಜಗತ್ತನ್ನು ಏಕಾರ್ಣವವನ್ನಾಗಿ ಮಾಡಿ ಬಾಲರೂಪವನ್ನು ಧರಿಸಿ ಒಬ್ಬನೇ ನಿದ್ರಿಸುವ ಸಾಮರ್ಥ್ಯರೂಪನಾದ ಕೃಷ್ಣನಿಗೆ ನಮಸ್ಕಾರ.
ಸಹಸ್ರಶಿರಸೇ ತಸ್ಮೈ ಪುರುಷಾಯಾಮಿತಾತ್ಮನೇ |
ಚತುಃಸಮುದ್ರಪಯಸಿ ಯೋಗನಿದ್ರಾತ್ಮನೇ ನಮಃ ॥59॥
ಸಹಸ್ರಶಿರಸ್ಸುಗಳನ್ನು ಹೊಂದಿದ, ಅಪರಿಮಿತವಾದ ಶರೀರವನ್ನು ಹೊಂದಿದ, ಚತುಃಸಮುದ್ರದ ನೀರಿನಲ್ಲಿ ಯೋಗನಿದ್ರಾರತನಾದ ಕೃಷ್ಣನಿಗೆ ನಮಸ್ಕಾರ.
ಅಜಸ್ಯ ನಾಭಾವಧ್ಯೇಕಂ ಯಸ್ಮಿನ್ ವಿಶ್ವಂ ಪ್ರತಿಷ್ಠಿತಮ್ |
ಪುಷ್ಕರಂ ಪುಷ್ಕರಾಕ್ಷಸ್ಯ ತಸ್ಮೈ ಪದ್ಮಾತ್ಮನೇ ನಮಃ ॥60॥
ಜನ್ಮರಹಿತನಾದ ಪುಂಡರೀಕಾಕ್ಷನಾದ ಯಾವನ ನಾಭಿಯಲ್ಲಿ ಲೋಕಾತ್ಮಕವಾದ ಪದ್ಮವು ಪ್ರತಿಷ್ಠಿತವಾಗಿದೆಯೋ ಅಂತಹ ಪದ್ಮವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.
ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಂಗಸಂಧಿಷು |
ಕುಕ್ಷೌ ಸಮುದ್ರಾಶ್ಚತ್ವಾರಸ್ತಸ್ಮೈ ತೋಯಾತ್ಮನೇ ನಮಃ ॥61॥
ಯಾವನ ತಲೆಕೂದಲುಗಳಲ್ಲಿ ಮೋಡಗಳೂ, ಸರ್ವಾಂಗಸಂಧಿಗಳಲ್ಲಿ ನದಿಗಳೂ, ಕುಕ್ಷಿಯಲ್ಲಿ ಸಮುದ್ರಗಳೂ ಇವೆಯೋ ಅಂತಹ ಜಲದಲ್ಲಿ ವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.
ಯಸ್ಮಾತ್ ಸರ್ವಾಃ ಪ್ರಸೂಯಂತೇ ಸರ್ಗಪ್ರಳಯವಿಕ್ರಿಯಾಃ |
ಯಸ್ಮಿಂಶ್ಚೈವ ಪ್ರಲೀಯಂತೇ ತಸ್ಮೈ ಹೇತ್ವಾತ್ಮನೇ ನಮಃ ॥62॥
ಯಾವನಿಂದ ಸರ್ಗಪ್ರಳಯಾದಿ ಎಲ್ಲ ವಿಕಾರಗಳೂ ಉಂಟಾಗುತ್ತವೆಯೋ, ಯಾವನಲ್ಲಿ ಪ್ರಪಂಚವು ಪ್ರಳಯವನ್ನು ಹೊಂದುತ್ತವೆಯೋ ಅಂತಹ ಸರ್ವ- ಕಾರಣನಾದ ಕೃಷ್ಣನಿಗೆ ನಮಸ್ಕಾರ.
ಯೋ ನಿಷಣ್ಣೋ ಭವೇದ್ ರಾತ್ರೌ ದಿವಾ ಭವತಿ ವಿಷ್ಠಿತಃ |
ಇಷ್ಟಾನಿಷ್ಟಸ್ಯ ಚ ದ್ರಷ್ಟಾ ತಸ್ಮೈ ದ್ರಷ್ಟ್ರಾತ್ಮನೇ ನಮಃ ॥63॥
ಯಾವನು ರಾತ್ರಿಯಲ್ಲಿ ಕುಳಿತು, ಹಗಲಿನಲ್ಲಿ ವಿಶೇಷವಾಗಿ ನಿಂತು ಜೀವರ ಇಷ್ಟಾನಿಷ್ಟಗಳನ್ನು ಸಾಕ್ಷಾತ್ತಾಗಿ ನೋಡುತ್ತಾನೆಯೋ ಅಂತಹ ಸಾಕ್ಷಿರೂಪನಾದ ಕೃಷ್ಣನಿಗೆ ನಮಸ್ಕಾರ.
ಅಕುಂಠಃ ಸರ್ವಕಾರ್ಯೇಷು ಧರ್ಮಕಾರ್ಯಾರ್ಥಮುದ್ಯತಮ್ |
ವೈಕುಂಠಸ್ಯ ಹಿ ತದ್ರೂಪಂ ತಸ್ಮೈ ಕಾರ್ಯಾತ್ಮನೇ ನಮಃ ॥64॥
ಯಾವ ಕಾರ್ಯಗಳಲ್ಲಿಯೂ ವಿಫಲನಾಗದೇ ಧರ್ಮಕಾರ್ಯಗಳಿಗಾಗಿ ಉದ್ಯುಕ್ತನಾದ ವೈಕುಂಠನಾದ ಕೃಷ್ಣರೂಪವೇನಿದೆಯೋ ಅಂತಹ ಸರ್ವಕಾರ್ಯ- ಸಾಧಕನಾದ ಕೃಷ್ಣನಿಗೆ ನಮಸ್ಕಾರ.
ತ್ರಿಃಸಪ್ತಕೃತ್ವೋ ಯಃ ಕ್ಷತ್ರಂ ಧರ್ಮವ್ಯುತ್ಕ್ರಾಂತಗೌರವಮ್ |
ಕ್ರುದ್ಧೋ ನಿಜ್ಘ್ನೇ ಸಮರೇ ತಸ್ಮೈ ಕ್ರೌರ್ಯಾತ್ಮನೇ ನಮಃ ॥65॥
ಯಾವನು ಧರ್ಮದ ಎಲ್ಲೆಯನ್ನು ಮೀರಿದ ಕ್ಷತ್ರಿಯರ ಮೇಲೆ ಕೋಪ- ಗೊಂಡು ಇಪ್ಪತ್ತೊಂದು ಬಾರಿ ಯುದ್ಧದಲ್ಲಿ ಕ್ಷತ್ರಿಯರನ್ನು ಸಂಹರಿಸಿದನೋ ಅಂತಹ ಕ್ರೌರ್ಯರೂಪನಾದ ಪರಶುರಾಮನಿಗೆ ನಮಸ್ಕಾರ.
ವಿಭಜ್ಯ ಪಂಚಧಾಽಽತ್ಮಾನಂ ವಾಯುರ್ಭೂತ್ವಾ ಶರೀರಗಃ |
ಯಶ್ಚೇಷ್ಟಯತಿ ಭೂತಾನಿ ತಸ್ಮೈ ವಾಯ್ವಾತ್ಮನೇ ನಮಃ ॥66॥
ಪ್ರಾಣಾಪಾನಾದಿ ಪಂಚವಾಯುಗಳಲ್ಲಿ ತಾನೂ ಪ್ರಾಣಾಪಾನಾದಿ ಪಂಚರೂಪ- ಗಳನ್ನು ಧರಿಸಿ ಯಾವನು ಎಲ್ಲ ಪ್ರಾಣಿಗಳಿಗೂ ಚೇಷ್ಟೆಯನ್ನು ಉಂಟುಮಾಡು- ತ್ತಾನೆಯೋ ಅಂತಹ ವಾಯುಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯುಗೇಷ್ವಾವರ್ತತೇ ಯೋಽಂಶೈರ್ದಿನರ್ತ್ವಯನಹಾಯನೈಃ |
ಸರ್ಗಪ್ರಲಯಯೋಃ ಕರ್ತಾ ತಸ್ಮೈ ಕಾಲಾತ್ಮನೇ ನಮಃ ॥67॥
ಯಾವನು ದಿನ, ಋತು, ಅಯನ, ಸಂವತ್ಸರ ಎಂಬ ಅಂಶಗಳಿಂದ ಯುಗ- ಗಳನ್ನು ತಿರುಗಿಸುತ್ತಾ ಸೃಷ್ಟಿಪ್ರಳಯಗಳನ್ನು ಮಾಡುತ್ತಾನೆಯೋ ಅಂತಹ ಕಾಲ- ರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಬ್ರಹ್ಮ ವಕ್ತ್ರಂ ಭುಜೌ ಕ್ಷತ್ರಂ ಕೃತ್ಸ್ನಮೂರೂದರಂ ವಿಶಃ |
ಪಾದೌ ಯಸ್ಯಾಶ್ರಿತಾ ಶೂದ್ರಾಸ್ತಸ್ಮೈ ವರ್ಣಾತ್ಮನೇ ನಮಃ ॥68॥
ಯಾವನ ಮುಖದಲ್ಲಿ ಬ್ರಾಹ್ಮಣಜಾತಿಯೂ, ಭುಜಗಳಲ್ಲಿ ಕ್ಷತ್ರಿಯ ಜಾತಿಯೂ, ಉದರ ಮತ್ತು ಊರುಗಳಲ್ಲಿ ವೈಶ್ಯಜಾತಿಯೂ, ಪಾದಗಳಲ್ಲಿ ಶೂದ್ರಜಾತಿಯೂ ಆಶ್ರಯಿಸಿಕೊಂಡಿವೆಯೋ ಅಂತಹ ವರ್ಣಗಳ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಪರಃ ಕಾಲಾತ್ ಪರೋ ಯಜ್ಞಾತ್ ಪರಂ ಸದಸತಶ್ಚ ಯಃ |
ಅನಾದಿರಾದಿರ್ವಿಶ್ವಸ್ಯ ತಸ್ಮೈ ವಿಶ್ವಾತ್ಮನೇ ನಮಃ ॥69॥
ಯಾವನು ಕಾಲಕ್ಕಿಂತಲೂ ಪರನೋ, ಯಜ್ಞಕ್ಕಿಂತಲೂ ಪರನೋ, ಕಾರ್ಯ- ಕಾರಣಗಳಿಗಿಂತಲೂ ಪರನೋ, ಯಾವನಿಗೆ

ಆದಿಯಿಲ್ಲವೋ, ಮತ್ತು ಯಾವನು ವಿಶ್ವಕ್ಕೆ ಆದಿಯೋ ಅಂತಹ ವಿಶ್ವಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ವಿಷಯೇ ವರ್ತಮಾನಾನಾಂ ಯಂ ತಂ ವೈಶೇಷಿಕೈರ್ಗುಣೈಃ |
ಪ್ರಾಹುರ್ವಿಷಯಗೋಪ್ತಾರಂ ತಸ್ಮೈ ಗೋಪಾತ್ರತ್ಮನೇ ನಮಃ ॥70॥
ವಿಷಯಗಳಲ್ಲಿ ಅಭಿಲಾಷೆಯುಳ್ಳವರಿಗೆ ವಿಶೇಷಗುಣಗಳಿಂದ ಕೂಡಿದ ವಿಷಯಗಳನ್ನು ಒದಗಿಸಿ ಯಾವನನ್ನು ವಿಷಯಗಳನ್ನು ರಕ್ಷಿಸುವವನೆಂದು ಹೇಳು- ತ್ತಾರೆಯೋ ಅಂತಹ ರಕ್ಷಕನಾದ ಕೃಷ್ಣನಿಗೆ ನಮಸ್ಕಾರ.
ಅನ್ನಪಾನೇಂಧನಮಯೋ ರಸಪ್ರಾಣವಿವರ್ಧನಃ |
ಯೋ ಧಾರಯತಿ ಭೂತಾನಿ ತಸ್ಮೈ ಪ್ರಾಣಾತ್ಮನೇ ನಮಃ ॥71॥
ಯಾವನು ಅನ್ನಪಾನಗಳೆಂಬ ಇಂಧನಗಳನ್ನು ಹೊಂದಿದವನಾಗಿ ಜೀವರ ರಸ ಮತ್ತು ಪ್ರಾಣಗಳನ್ನು ಅಭಿವೃದ್ಧಿಪಡಿಸುತ್ತಾನೆಯೋ, ಯಾವನು ಎಲ್ಲ ಭೂತಗಳನ್ನೂ ಧರಿಸುತ್ತಾನೆಯೋ ಅಂತಹ ಶರೀರಚೇಷ್ಟಕನಾದ ಕೃಷ್ಣನಿಗೆ ನಮಸ್ಕಾರ.
ಪ್ರಾಣಾನಾಂ ಧಾರಣಾರ್ಥಾಯ ಯೋಽನ್ನಂ ಭುಂಕ್ತೇ ಚತುರ್ವಿಧಮ್ |
ಅಂತರ್ಭೂತಃ ಪಚತ್ಯಗ್ನಿಸ್ತಸ್ಮೈ ಪಾಕಾತ್ಮನೇ ನಮಃ ॥72॥
ಜೀವರು ಪ್ರಾಣಗಳನ್ನು ಧರಿಸುವ ಸಲುವಾಗಿ ಯಾವನು ಭಕ್ಷ, ಭೋಜ್ಯ, ಲೇಹ್ಯ, ಪೇಯ ರೂಪವಾದ ನಾಲ್ಕುವಿಧವಾದ ಅನ್ನವನ್ನು ಭುಂಜಿಸುತ್ತಾನೆಯೋ, ಯಾವನು ಉದರದಲ್ಲಿ ವೈಶ್ವಾನರನಾಮಕ ಅಗ್ನಿಯಾಗಿದ್ದು ಆ ಅನ್ನವನ್ನು ಪಚನ ಮಾಡುತ್ತಾನೆಯೋ ಅಂತಹ ಪಾಕಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಅಪ್ರಮೇಯಶರೀರಾಯ ಸರ್ವತೋ ಬುದ್ಧಿಚಕ್ಷುಷೇ |
ಅಪಾರಪರಿಮಾಣಾಯ ತಸ್ಮೈ ದಿವ್ಯಾತ್ಮನೇ ನಮಃ ॥73॥
ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ ಶರೀರವನ್ನು ಹೊಂದಿದ, ವ್ಯಾಪ್ತವಾದ ಬುದ್ಧಿ ಮತ್ತು ಚಕ್ಷುರಾದಿ ಇಂದ್ರಿಯಗಳನ್ನು ಹೊಂದಿದ, ಎಲ್ಲೆಯೇ ಇಲ್ಲದ ಪರಿಮಾಣವನ್ನು ಹೊಂದಿದ ದಿವ್ಯರೂಪನಾದ ಕೃಷ್ಣನಿಗೆ ನಮಸ್ಕಾರ.
ರಸಸ್ಯಾಂತರ್ಗತೋ ಧೀಮಾನನಂತೋ ಭಗವಾನ್ ವಿಭುಃ |
ಜಗದ್ ಧಾರಯತೇ ಕೃತ್ಸ್ನಂ ತಸ್ಮೈ ಶೇಷಾತ್ಮನೇ ನಮಃ ॥74॥
ಭಗವಂತನೂ ವ್ಯಾಪ್ತನಾದವನೂ ಸಂಪದ್ಯುಕ್ತನಾದವನೂ ಆದ ಕೃಷ್ಣನು ಅನಂತನಾಮಕನಾಗಿ ಅನಂತನಾಮಕನಾದ ಶೇಷನ ಒಳಗಿದ್ದು, ರಸಾತಳರೂಪದಲ್ಲಿ ಇದ್ದು, ಸಮಸ್ತಜಗತ್ತನ್ನು ಧರಿಸುತ್ತಾನೆಯೋ ಅಂತಹ ಶೇಷಾತ್ಮಕನಾದ ಕೃಷ್ಣನಿಗೆ ನಮಸ್ಕಾರ.
ಜ್ವಲನಾರ್ಕೇಂದುತಾರಾಣಾಂ ಜ್ಯೋತಿಷಾಂ ದಿವ್ಯಮೂರ್ತಿನಾಮ್ |
ಯಸ್ತೇಜಯತಿ ತೇಜಾಂಸಿ ತಸ್ಮೈ ತೇಜಾತ್ಮನೇ ನಮಃ ॥75॥
ಯಾವನು ದಿವ್ಯಸ್ವರೂಪವುಳ್ಳ ಅಗ್ನಿ ಸೂರ್ಯ ಚಂದ್ರ ನಕ್ಷತ್ರಗಳು ಮೊದಲಾದ ಜ್ಯೋತಿಸ್ಸುಗಳಿಗೆ ಅವುಗಳ ಜ್ಯೋತಿಸ್ಸನ್ನು ಅಭಿವೃದ್ಧಿಪಡಿಸುತ್ತಾನೆಯೋ ಅಂತಹ ಸ್ವತಃ ತೇಜೋರೂಪನಾದ ಕೃಷ್ಣನಿಗೆ ನಮಸ್ಕಾರ.
ಯೋ ಮೋಹಯತಿ ಭೂತಾನಿ ಸ್ನೇಹರಾಗಾನುಬಂಧನೈಃ |
ಸರ್ಗಸ್ಯ ರಕ್ಷಣಾರ್ಥಾಯ ತಸ್ಮೈ ಮೋಹಾತ್ಮನೇ ನಮಃ ॥76॥
ಯಾವನು ಸೃಷ್ಟಿಯನ್ನು ರಕ್ಷಿಸುವುದಕ್ಕಾಗಿ ಪ್ರಾಣಿಗಳಿಗೆ ಸ್ನೇಹ, ರಾಗ, ಪ್ರೀತಿ- ಗಳನ್ನು ಕೊಟ್ಟು ಮೋಹ ಪಡಿಸುತ್ತಾನೆಯೋ ಅಂತಹ ಮೋಹಪ್ರದನಾದ ಕೃಷ್ಣನಿಗೆ ನಮಸ್ಕಾರ.
ಆತ್ಮಜ್ಞಾನಮಿದಂ ಜ್ಞಾನಂ ಜ್ಞಾತ್ವಾ ಪಂಚಸ್ವವಸ್ಥಿತಮ್ |
ಯಂ ಜ್ಞಾನಿನೋಽಧಿಗಚ್ಛಂತಿ ತಸ್ಮೈ ಜ್ಞಾನಾತ್ಮನೇ ನಮಃ ॥77॥
ಶುದ್ಧವಾದ ಆತ್ಮಜ್ಞಾನವು ದೇವ ಋಷಿ ಪಿತೃ ಚಕ್ರವರ್ತಿ ಮನುಷ್ಯೋತ್ತಮರೆಂಬ ಐದು ವಿಧ ಜೀವರಲ್ಲಿ ಇದೆ ಎಂದು ತಿಳಿದು ಯಾವ ಜ್ಞಾನಿಗಳು ಅವನನ್ನು ಹೊಂದುತ್ತಾರೆಯೋ ಅಂತಹ ಜ್ಞಾನರೂಪನಾದ ಕೃಷ್ಣನಿಗೆ ನಮಸ್ಕಾರ.
ಜಟಿನೇ ದಂಡಿನೇ ನಿತ್ಯಂ ಲಂಬೋದರಶರೀರಿಣೇ |
ಕಮಂಡಲುನಿಷಂಗಾಯ ತಸ್ಮೈ ಬ್ರಹ್ಮಾತ್ಮನೇ ನಮಃ ॥78॥
ಜಟೆಯನ್ನು ಧರಿಸಿ, ದಂಡವನ್ನು ಹಿಡಿದು, ನಿತ್ಯವೂ ಲಂಬೋದರಶರೀರವುಳ್ಳ ಕಮಂಡಲು ಧಾರಿಯಾದ ಬ್ರಹ್ಮನ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಸಾಂಖ್ಯೈರ್ಯೋಗೈರ್ವಿನಿಶ್ಚಿತ್ಯ ಸಾಧ್ಯೈಶ್ಚ ಪರಮರ್ಷಿಭಿಃ |
ಯಸ್ಯ ನ ಜ್ಞಾಯತೇ ತತ್ತ್ವಂ ತಸ್ಮೈ ಗುಹ್ಯಾತ್ಮನೇ ನಮಃ ॥79॥
ಸಾಧ್ಯರು ಮತ್ತು ಪರಮ ಋಷಿಗಳು ಸಾಂಖ್ಯಶಾಸ್ತ್ರವನ್ನು ಯೋಗಶಾಸ್ತ್ರವನ್ನು ತಿಳಿದರೂ ಯಾವನ ಸ್ವರೂಪವನ್ನು ಸರಿಯಾಗಿ ತಿಳಿಯುವುದಿಲ್ಲವೋ ಅಂತಹ ರಹಸ್ಯರೂಪನಾದ ಕೃಷ್ಣನಿಗೆ ನಮಸ್ಕಾರ.
ಪಂಚಭೂತಾತ್ಮಭೂತಾಯ ಭೂತಾದಿನಿಧನಾತ್ಮನೇ |
ಅಕ್ರೋಧದ್ರೋಹಮೋಹಾಯ ತಸ್ಮೈ ಶಾಂತಾತ್ಮನೇ ನಮಃ ॥80॥
ಯಾವನು ಪಂಚಭೂತಗಳ ಅಂತರ್ಯಾಮಿಯಾಗಿ ಅವುಗಳ ಉತ್ಪತ್ತಿ ಮತ್ತು ಸಂಹಾರಕ್ಕೆ ಕಾರಣನಾಗಿದ್ದಾನೆಯೋ, ಕ್ರೋಧದ್ರೋಹಮೋಹಗಳಿಂದ ದೂರನಾಗಿ- ದ್ದಾನೆಯೋ ಅಂತಹ ಶಾಂತರೂಪನಾದ ಕೃಷ್ಣನಿಗೆ ನಮಸ್ಕಾರ.
ಯಸ್ಮಿನ್ ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವತಶ್ಚ ಯಃ |
ಯಶ್ಚ ಸರ್ವಮಯೋ ನಿತ್ಯಂ ತಸ್ಮೈ ಸರ್ವಾತ್ಮನೇ ನಮಃ ॥81॥
ಯಾವನಲ್ಲಿ ಎಲ್ಲವೂ ಆಶ್ರಿತವಾಗಿವೆಯೋ, ಯಾವನಿಂದ ಎಲ್ಲವೂ ಇವೆಯೋ, ಯಾವನು ಎಲ್ಲಕ್ಕೂ ಒಡೆಯನೋ, ಯಾವನು ಸರ್ವತ್ರವ್ಯಾಪ್ತನೋ, ಯಾವನು ನಿತ್ಯವೂ ಸರ್ವಪ್ರಧಾನನೋ ಅಂತಹ ಸರ್ವಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.

ಯಂ ಹಿ ಸೂಕ್ಷ್ಮಂ ವಿಚಿನ್ವಂತಿ ಪರಂ ಸೂಕ್ಷ್ಮವಿದೋ ಜನಾಃ |
ಸೂಕ್ಷ್ಮಂ ತತ್ತ್ವಮಪಿ ಬ್ರಹ್ಮ ತಸ್ಮೈ ಸೂಕ್ಷ್ಮಾತ್ಮನೇ ನಮಃ ॥82॥
ಸೂಕ್ಷ್ಮಜ್ಞಾನಿಗಳಾದ ಜೀವರು ಅತ್ಯಂತಸೂಕ್ಷ್ಮನಾದ ಯಾವ ಬ್ರಹ್ಮತತ್ವವನ್ನು ಹುಡುಕುತ್ತಾರೆಯೋ ಅಂತಹ ಸೂಕ್ಷ್ಮರೂಪನಾದ ಕೃಷ್ಣನಿಗೆ ನಮಸ್ಕಾರ.
ಯಃ ಶೇತೇ ಕ್ಷೀರಪರ್ಯಂಕೇ ದಿವ್ಯೇ ನಾಗವಿಭೂಷಿತೇ |
ಫಣಾಸಹಸ್ರರುಚಿರೇ ತಸ್ಮೈ ನಿದ್ರಾತ್ಮನೇ ನಮಃ ॥83॥
ಯಾವನು ಕ್ಷೀರಸಮುದ್ರದಲ್ಲಿ ಸಹಸ್ರಫಣಗಳಿಂದ ಮನೋಹರವಾಗಿ ಕಾಣುವ ಶೇಷನಿಂದ ಭೂಷಿತವಾದ ದಿವ್ಯಪರ್ಯಂಕದಲ್ಲಿ ಮಲಗುತ್ತಾನೆಯೋ ಅಂತಹ ನಿದ್ರಾಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ವಿಶ್ವೇ ಚ ಮರುತಶ್ಚೈವ ರುದ್ರಾದಿತ್ಯಾಶ್ವಿನಾವಪಿ |
ವಸವಃ ಸಿದ್ಧಸಾಧ್ಯಾಶ್ಚ ತಸ್ಮೈ ದೇವಾತ್ಮನೇ ನಮಃ ॥84॥
ವಿಶ್ವೇದೇವತೆಗಳು, ಮರುತ್ತುಗಳು, ರುದ್ರರು, ಆದಿತ್ಯರು, ಅಶ್ವಿನಿಗಳು, ವಸು- ಗಳು, ಸಿದ್ಧರು, ಸಾಧ್ಯರು ಇಂತಹ ದೇವತೆಗಳ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಅವ್ಯಕ್ತಂ ಬುದ್ಧ್ಯಹಂಕಾರೋ ಮನೋಬುದ್ಧೀಂದ್ರಿಯಾಣಿ ಚ |
ತನ್ಮಾತ್ರಾಣಿ ವಿಶೇಷಾಶ್ಚ ತಸ್ಮೈ ತತ್ತ್ವಾತ್ಮನೇ ನಮಃ ॥85॥
ಅವ್ಯಕ್ತತತ್ವ, ಬುದ್ಧಿ, ಅಹಂಕಾರ, ಮನಸ್ಸು, ಇಂದ್ರಿಯಗಳು, ಶಬ್ದಾದಿತನ್ಮಾತ್ರ- ಗಳು ಅವುಗಳ ವಿಶೇಷಗಳು ಯಾವನ ಅಧೀನವಾಗಿವೆಯೋ ಅಂತಹ ತತ್ವವ್ಯಾಪ್ತ- ನಾದ ಕೃಷ್ಣನಿಗೆ ನಮಸ್ಕಾರ.
ಭೂತಂ ಭವ್ಯಂ ಭವಿಷ್ಯಚ್ಚ ಭೂತಾದಿಪ್ರಭವಾಪ್ಯಯಃ |
ಯೋಽಗ್ರಜಃ ಸರ್ವಭೂತಾನಾಂ ತಸ್ಮೈ ಭೂತಾತ್ಮನೇ ನಮಃ ॥86॥
ಯಾವನು ಭೂತಭವ್ಯಭವಿಷ್ಯತ್ತುಗಳಿಗೆ ಒಡೆಯನೋ, ಎಲ್ಲ ಭೂತಗಳ ಉತ್ಪತ್ತಿ ಸಂಹಾರಗಳಿಗೆ ಕಾರಣನೋ, ಎಲ್ಲ ಭೂತಗಳ ಉತ್ಪತ್ತಿಗಿಂತ ಮೊದಲೇ ಇರುವವನೋ ಅಂತಹ ಭೂತವ್ಯಾಪ್ತನಾದ ಕೃಷ್ಣನಿಗೆ ನಮಸ್ಕಾರ.
ವಾರಾಹಂ ರೂಪಮಾಸ್ಥಾಯ ಮಹೀಂ ಸವನಪರ್ವತಾಮ್ |
ಉದ್ಧರತ್ಯೇಕದಂಷ್ಟ್ರೇಣ ತಸ್ಮೈ ಕ್ರೋಡಾತ್ಮನೇ ನಮಃ ॥87॥
ವರಾಹರೂಪವನ್ನು ಧರಿಸಿ ಕಾನನ ಪರ್ವತಗಳಿಂದ ಸಹಿತವಾದ ಭೂಮಿಯನ್ನು ಒಂದು ಕೋರೆದಾಡೆಯ ಮೇಲೆ ಎತ್ತಿದ ವರಾಹರೂಪನಾದ ಆ ಕೃಷ್ಣನಿಗೆ ನಮಸ್ಕಾರ.
ನಾರಸಿಂಹವಪುಃ ಕೃತ್ವಾ ಸರ್ವಲೋಕಭಯಂಕರಮ್ |
ಹಿರಣ್ಯಕಶಿಪುಂ ಜಘ್ನೇ ತಸ್ಮೈ ಸಿಂಹಾತ್ಮನೇ ನಮಃ ॥88॥
ಸರ್ವಲೋಕಭಯಂಕರವಾದ ನರಸಿಂಹರೂಪವನ್ನು ಧರಿಸಿ ಹಿರಣ್ಯಕಶಿಪುವನ್ನು ಸಂಹರಿಸಿದ ನರಸಿಂಹರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಪಿಂಗೇಕ್ಷಣಸಟಂ ಯಸ್ಯ ರೂಪಂ ದಂಷ್ಟ್ರಾನಖಾಯುತಮ್ |
ದಾನವೇಂದ್ರಾಂತಕರಣಂ ತಸ್ಮೈ ದೃಪ್ತಾತ್ಮನೇ ನಮಃ ॥89॥
ಕಂದು ಬಣ್ಣದ ಕಣ್ಣುಗಳು ಮತ್ತು ಸಟೆಗಳನ್ನು ಹೊಂದಿದ ದಂಷ್ಟ್ರಾನಖಗಳಿಂದ ಕೂಡಿದ ಯಾವನ ರೂಪವು ದಾನವೇಂದ್ರನಾದ ಹಿರಣ್ಯಕಶಿಪುವನ್ನು ಸಂಹರಿಸಿತೋ ದರ್ಪಿಷ್ಠವಾದ ರೂಪವನ್ನು ಧರಿಸಿದ ಅಂತಹ ಕೃಷ್ಣನಿಗೆ ನಮಸ್ಕಾರ.
ವಾಮನಂ ರೂಪಮಾಸ್ಥಾಯ ಬಲಿಂ ಸಂಯಮ್ಯ ಮಾಯಯಾ |
ತ್ರೈಲೋಕ್ಯಂ ಕ್ರಾಂತವಾನ್ ಯಸ್ತು ತಸ್ಮೈ ಕ್ರಾಂತಾತ್ಮನೇ ನಮಃ ॥90॥
ವಾಮನರೂಪವನ್ನು ಧರಿಸಿ, ತನ್ನ ಸಾಮರ್ಥ್ಯದಿಂದ ಬಲಿಯನ್ನು ನಿಯಂತ್ರಿಸಿ, ಮೂರು ಲೋಕವನ್ನೂ ಅಳೆದ ತ್ರಿವಿಕ್ರಮರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಜಮದಗ್ನಿಸುತೋ ಭೂತ್ವಾ ರಾಮಃ ಶಸ್ತ್ರಭೃತಾಂವರಃ |
ಮಹೀಂ ನಿಃಕ್ಷತ್ರಿಯಾಂ ಚಕ್ರೇ ತಸ್ಮೈ ರಾಮಾತ್ಮನೇ ನಮಃ ॥91॥
ಜಮದಗ್ನಿಪುತ್ರನಾಗಿ ಜನಿಸಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪರಶುರಾಮನಾಗಿ ಭೂಮಿಯಲ್ಲಿ ಕ್ಷತ್ರಿಯರಿಲ್ಲದಿರುವಂತೆ ಮಾಡಿದ ಪರಶುರಾಮರೂಪಿಯಾದ ಕೃಷ್ಣನಿಗೆ ನಮಸ್ಕಾರ.
ತ್ರಿಃಸಪ್ತಕೃತ್ವೋ ಯಶ್ಚೈಕೋ ಧರ್ಮೇ ವ್ಯುತ್ಕ್ರಾಂತಿಗೌರವಾತ್ |
ಜಘಾನಕ್ಷತ್ರಿಯಾನ್ ಸಂಖ್ಯೇ ತಸ್ಮೈ ಕ್ರೋಧಾತ್ಮನೇ ನಮಃ ॥92॥
ಯಾವ ಒಬ್ಬನೇ ಧರ್ಮಮಾರ್ಗವನ್ನು ಮೀರಿದ ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಸಂಚರಿಸಿ ಯುದ್ಧದಲ್ಲಿ ಸಂಹರಿಸಿದನೋ ಅಂತಹ ಕೃಷ್ಣನಿಗೆ ನಮಸ್ಕಾರ.
ರಾಮೋ ದಾಶರಥಿರ್ಭೂತ್ವಾ ಪುಲಸ್ತ್ಯಕುಲನಂದನಮ್ |
ಜಘಾನ ರಾವಣಂ ಸಂಖ್ಯೇ ತಸ್ಮೈ ಕ್ಷತ್ರಾತ್ಮನೇ ನಮಃ ॥93॥
ದಶರಥನಪುತ್ರನಾಗಿ ರಾಮನಾಗಿ ಅವತರಿಸಿ ಪುಲಸ್ತ್ಯಕುಲನಂದನನಾದ ರಾವಣ -ನನ್ನು ಯುದ್ಧದಲ್ಲಿ ಸಂಹರಿಸಿದ ಕ್ಷತ್ರಿಯರೂಪಿಯಾದ ಕೃಷ್ಣನಿಗೆ ನಮಸ್ಕಾರ.
ಯೋ ಹಲೀ ಮುಸಲೀ ಶ್ರೀಮಾನ್ ನೀಲಾಂಬರಧರಃ ಸ್ಥಿತಃ |
ರಾಮಾಯ ರೌಹಿಣೇಯಾಯ ತಸ್ಮೈ ಭೋಗಾತ್ಮನೇ ನಮಃ ॥94॥

ಯಾವನು ಹಲ ಮುಸಲಗಳನ್ನು ಧರಿಸಿ ಸಂಪದ್ಯುಕ್ತನಾಗಿ ನೀಲಾಂಬರಧಾರಿ- ಯಾಗಿದ್ದಾನೆಯೋ ಅಂತಹ ರೋಹಿಣೀ ಪುತ್ರನಾದ ಬಲರಾಮನಾದ ಶೇಷನ ಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಶಂಖಿನೇ ಚಕ್ರಿಣೇ ನಿತ್ಯಂ ಶಾರ್ಙ್ಗಿಣೇ ಪೀತವಾಸಸೇ |
ವನಮಾಲಾಧರಾಯೈವ ತಸ್ಮೈ ಕೃಷ್ಣಾತ್ಮನೇ ನಮಃ ||95||
ಶಂಖಚಕ್ರಗಳನ್ನು ಧರಿಸಿ ನಿತ್ಯವೂ ಶಾರ್ಙ್ಗಧನುಸ್ಸನ್ನೂ, ಪೀತಾಂಬರವನ್ನೂ ವನಮಾಲೆಯನ್ನೂ ಧರಿಸಿದ ಕೃಷ್ಣರೂಪನಾದ ನಿನಗೆ ನಮಸ್ಕಾರ.
ವಾಸುದೇವತ್ವಮಾಗಮ್ಯ ಯದೋರ್ವಂಶಸಮುದ್ಭವಃ |
ಭೂಭಾರಹರಣಂ ಚಕ್ರೇ ತಸ್ಮೈ ಕೃಷ್ಣಾತ್ಮನೇ ನಮಃ ||96||
ಯದುವಂಶದಲ್ಲಿ ವಸುದೇವನ ಪುತ್ರನಾಗಿ ಅವತರಿಸಿ ಭೂಭಾರಹರಣವನ್ನು ಮಾಡಿದ ಕೃಷ್ಣರೂಪಿಯಾದ ನಿನಗೆ ನಮಸ್ಕಾರ.
ದಾನವಾಂಸ್ತು ವಶೇ ಕೃತ್ವಾ ಪುನರ್ಬುದ್ಧತ್ವಮಾಗತಃ |
ಸರ್ಗಸ್ಯ ರಕ್ಷಣಾರ್ಥಾಯ ತಸ್ಮೈ ಬುದ್ಧಾತ್ಮನೇ ನಮಃ ||97||
ಪುನಃ ಬುದ್ಧನಾಗಿ ಅವತರಿಸಿ ದಾನವರನ್ನು ವಶಪಡಿಸಿಕೊಂಡು ಜಗತ್ಸೃಷ್ಟಿ- ಯನ್ನು ರಕ್ಷಿಸಿದ ಬುದ್ಧರೂಪನಾದ ಕೃಷ್ಣನಿಗೆ ನಮಸ್ಕಾರ.
ಹನಿಷ್ಯತಿ ಕಲೌ ಪ್ರಾಪ್ತೇ ಮ್ಲೇಚ್ಛಾಂಸ್ತುರಗವಾಹನಃ |
ಧರ್ಮಸಂಸ್ಥಾಪಕೋ ಯಸ್ತು ತಸ್ಮೈ ಕಲ್ಕ್ಯಾತ್ಮನೇ ನಮಃ ||98||
ಯಾವನು ಕಲಿಯುಗವು ಪ್ರಾಪ್ತವಾದಾಗ ತುರಗವಾಹನನಾಗಿ ಮ್ಲೇಚ್ಛರನ್ನು ಸಂಹರಿಸಿ ಧರ್ಮಸಂಸ್ಥಾಪನೆಯನ್ನು ಮಾಡುವನೋ ಅಂತಹ ಕಲ್ಕಿರೂಪನಾದ ಕೃಷ್ಣನಿಗೆ ನಮಸ್ಕಾರ.
ತಾರಾನ್ವಯೇ ಕಾಲನೇಮಿಂ ಹತ್ವಾ ದಾನವಪುಂಗವಮ್ |
ದದೌ ರಾಜ್ಯಂ ಮಹೇಂದ್ರಾಯ ತಸ್ಮೈ ಸಾಂಖ್ಯಾತ್ಮನೇ ನಮಃ ||99||
ತಾರವಂಶದಲ್ಲಿ ಜನಿಸಿದ ದಾನವಪುಂಗವನಾದ ಕಾಲನೇಮಿಯನ್ನು ಕೊಂದು ಇಂದ್ರನಿಗೆ ರಾಜ್ಯವನ್ನು ಕೊಟ್ಟ ಯುದ್ಧಸ್ವಾಮಿಯಾದ ಕೃಷ್ಣನಿಗೆ ನಮಸ್ಕಾರ.
ಯಃ ಸರ್ವಪ್ರಾಣಿನಾಂ ದೇಹೇ ಸಾಕ್ಷಿಭೂತೋ ಹ್ಯವಸ್ಥಿತಃ |
ಅಕ್ಷರಃ ಕ್ಷರಮಾಣಾನಾಂ ತಸ್ಮೈ ಸಾಕ್ಷ್ಯಾತ್ಮನೇ ನಮಃ ||100||
ಯಾವನು ನಾಶವನ್ನು ಹೊಂದುವ ಸರ್ವಪ್ರಾಣಿಗಳ ಶರೀರದಲ್ಲಿ ಸ್ವತಃ ನಾಶ- ರಹಿತನಾಗಿ ಸಾಕ್ಷಿಯಾಗಿದ್ದಾನೆಯೋ ಅಂತಹ ಸಾಕ್ಷಿರೂಪನಾದ ಕೃಷ್ಣನಿಗೆ ನಮಸ್ಕಾರ.
ನಮೋಽಸ್ತು ತೇ ಮಹಾದೇವ ನಮಸ್ತೇ ಭಕ್ತವತ್ಸಲ |
ಸುಬ್ರಹ್ಮಣ್ಯ ನಮಸ್ತೇಽಸ್ತು ಪ್ರಸೀದ ಪರಮೇಶ್ವರ ||101||
ಎಲೈ ಮಹಾದೇವನೇ! ಭಕ್ತವತ್ಸಲನೇ! ನಿನಗೆ ನಮಸ್ಕಾರ. ಸುಬ್ರಹ್ಮಣ್ಯನೇ! ನಿನಗೆ ನಮಸ್ಕಾರ. ಪರಮೇಶ್ವರನೇ! ಪ್ರಸನ್ನನಾಗು.
ಅವ್ಯಕ್ತವ್ಯಕ್ತರೂಪೇಣ ವ್ಯಾಪ್ತಂ ಸರ್ವಂ ತ್ವಯಾ ವಿಭೋ |
ನಾರಾಯಣಂ ಸಹಸ್ರಾಕ್ಷಂ ಸರ್ವಲೋಕಮಹೇಶ್ವರಮ್ ||102||
ಹಿರಣ್ಯನಾಭಂ ಯಜ್ಞಾಂಗಮಮೃತಂ ವಿಶ್ವತೋಮುಖಮ್ |
ಅವ್ಯಕ್ತ ಮತ್ತು ವ್ಯಕ್ತರೂಪದಿಂದ ನೀನು ಎಲ್ಲವನ್ನೂ ವ್ಯಾಪಿಸಿದ್ದೀಯೆ. ಎಲೈ ವಿಭುವೇ! ನಾರಾಯಣನೇ! ಸಹಸ್ರಾಕ್ಷನೇ! ಸರ್ವಲೋಕಮಹೇಶ್ವರನೇ! ಹಿರಣ್ಯ- ನಾಭನೇ! ಯಜ್ಞಾಂಗನೇ! ಅಮೃತನೇ! ವಿಶ್ವತೋಮುಖನೇ! ನಿನಗೆ ನಮಸ್ಕಾರ.
ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಳಮ್ ||103||
ಯೇಷಾಂ ಹೃದಿಸ್ಥೋ ದೇವೇಶೋ ಮಂಗಳಾಯತನಂ ಹರಿಃ |
ಮಂಗಳಂ ಭಗವಾನ್ ವಿಷ್ಣುರ್ಮಂಗಳಂ ಮಧುಸೂದನಃ ||104||
ಮಂಗಳಂ ಪುಂಡರೀಕಾಕ್ಷೋ ಮಂಗಳಂ ಗರುಡಧ್ವಜಃ |
ಯಾರ ಹೃದಯದಲ್ಲಿ ದೇವೇಶನೂ, ಮಂಗಳಾಶ್ರಯನೂ ಆದ ಹರಿಯಿ- ದ್ದಾನೆಯೋ ಅಂತಹವರಿಗೆ ಯಾವಾಗಲೂ ಯಾವ ಕಾರ್ಯಗಳಲ್ಲಿಯೂ ಅಮಂಗಳವಿಲ್ಲ. ಭಗವಂತನಾದ ವಿಷ್ಣುವು ಮಂಗಳಸ್ವರೂಪನಾದವನು. ಮಧು- ಸೂದನನು ಮಂಗಳಸ್ವರೂಪನಾದವನು. ಪುಂಡರೀಕಾಕ್ಷನು ಮಂಗಳಸ್ವರೂಪ- ನಾದವನು. ಗರುಡಧ್ವಜನು ಮಂಗಳಸ್ವರೂಪನಾದವನು.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ ||105||
ಅಪವರ್ಗಸ್ಥಭೂತಾನಾಂ ಪಂಚಾನಾಂ ಪರಮಾಸ್ಥಿತ |
ನಮಸ್ತೇ ತ್ರಿಷುಲೋಕೇಷು ನಮಸ್ತೇ ಪರತಸ್ತ್ರಿಷು ||106||
ಎಲೈ ವಿಶ್ವಕರ್ಮನೇ! ವಿಶ್ವವ್ಯಾಪಕನೇ! ವಿಶ್ವಕಾರಣನೇ! ನಿನಗೆ ನಮಸ್ಕಾರ. ಮೋಕ್ಷದಲ್ಲಿರುವ ದೇವಾದಿಪಂಚವಿಧಜೀವರಿಂದ ಚೆನ್ನಾಗಿ ಆಶ್ರಯಿಸಲ್ಪಟ್ಟ ನಿನಗೆ ನಮಸ್ಕಾರ. ಮೂರು ಲೋಕಗಳಲ್ಲಿರುವ, ಮೂರುಲೋಕಗಳಿಂದಲೂ ಆಚೆಗಿರುವ ನಿನಗೆ ನಮಸ್ಕಾರ.
ನಮಸ್ತೇ ದಿಕ್ಷು ಸರ್ವಾಸು ತ್ವಂ ಹಿ ಸರ್ವಪರಾಯಣಮ್ |
ನಮಸ್ತೇ ಭಗವನ್ ವಿಷ್ಣೋ ಲೋಕಾನಾಂ ಪ್ರಭವಾಪ್ಯಯಮ್ ||107||
ಎಲ್ಲ ದಿಕ್ಕುಗಳಲ್ಲಿಯೂ ನಿನಗೆ ನಮಸ್ಕಾರ. ನೀನು ಎಲ್ಲರಿಗೂ ಶ್ರೇಷ್ಠನಾದ ಆಶ್ರಯನಾಗಿದ್ದೀಯೆ. ಲೋಕಗಳ ಉತ್ಪತ್ತಿ ಸಂಹಾರಗಳಿಗೆ ಕಾರಣನಾಗಿದ್ದೀಯೆ. ಭಗವಂತನಾದ ವಿಷ್ಣುವೇ! ನಿನಗೆ ನಮಸ್ಕಾರ.

ತ್ವಂ ಹಿ ಕರ್ತಾ ಹೃಷೀಕೇಶಃ ಸಂಹರ್ತಾ ಚಾಪರಾಜಿತಃ |
ತೇನ ಪಶ್ಯಾಮಿ ತೇ ದಿವ್ಯಾನ್ ಭಾವಾನ್ ಹಿ ತ್ರಿಷು ವರ್ತ್ಮಸು ॥108॥
ಎಲೈ ಹೃಷೀಕೇಶನೇ! ನೀನೇ ಸೃಷ್ಟಿಕರ್ತನಾದವನು. ಸಂಹಾರಕರ್ತನಾದವನು. ಅಪರಾಜಿತನಾದವನು. ಆದ್ದರಿಂದ ಎಲ್ಲ ಮಾರ್ಗಗಳಲ್ಲಿಯೂ ನಿನ್ನ ದಿವ್ಯವಾದ ಮಹಿಮೆಗಳನ್ನು ನೋಡುತ್ತಿದ್ದೇನೆ.
ತಚ್ಚ ಪಶ್ಯಾಮಿ ತತ್ತ್ವೇನ ಯತ್ ತೇ ರೂಪಂ ಸನಾತನಮ್ |
ದಿವಂ ತೇ ಶಿರಸಾ ವ್ಯಾಪ್ತಂ ಪದ್ಭ್ಯಾಂ ದೇವೀವಸುಂಧರಾ ॥109॥
ವೇದಪ್ರತಿಪಾದ್ಯವಾದ ನಿನ್ನ ರೂಪವೇನಿದೆಯೋ ಅದನ್ನು ನೋಡುತ್ತಿದ್ದೇನೆ. ದ್ಯುಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ಭೂಮಿಯು ನಿನ್ನ ಪಾದಗಳಿಂದ ವ್ಯಾಪ್ತವಾಗಿದೆ.
ವಿಕ್ರಮೇಣ ತ್ರಯೋ ಲೋಕಾಃ ಪುರುಷೋಽಸಿ ಸನಾತನಃ |
ದಿಶೋ ಭುಜಾ ರವಿಶ್ಚಕ್ಷುರ್ವೀರ್ಯೇ ಶುಕ್ರಃ ಪ್ರತಿಷ್ಠಿತಃ |
ಸಪ್ತಮಾರ್ಗಾ ನಿರುದ್ಧಾಸ್ತೇ ವಾಯೋರಮಿತತೇಜಸಃ ॥110॥
ನಿನ್ನ ವಿಕ್ರಮದಿಂದ ಮೂರು ಲೋಕಗಳು ಅಳೆಯಲ್ಪಟ್ಟಿವೆ. ನೀನು ಸನಾತನ- ನಾದ ಪುರುಷನಾಗಿದ್ದೀಯೆ. ದಿಕ್ಕುಗಳು ನಿನ್ನ ಭುಜಗಳು. ಸೂರ್ಯನು ಚಕ್ಷುಸ್ಸು. ನಿನ್ನ ವೀರ್ಯದಲ್ಲಿ ಶುಕ್ರನಿದ್ದಾನೆ. ಅಮಿತತೇಜಸ್ವಿಯಾದ ನಿನ್ನಿಂದ ವಾಯುವಿನ ಸಪ್ತಮಾರ್ಗಗಳು ನಿರೋಧಿಸಲ್ಪಟ್ಟಿವೆ.
ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ |
ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ ॥111॥
ಅಗಸೆಯ ಪುಷ್ಪದ ಬಣ್ಣವನ್ನು ಹೊಂದಿರುವ, ಪೀತಾಂಬರಧಾರಿಯಾದ ಗೋವಿಂದನನ್ನು ಯಾರು ನಮಸ್ಕರಿಸುವರೋ ಅವರಿಗೆ ಭಯವಿಲ್ಲ.
ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮಃ ದಶಾಶ್ವಮೇಧಾವಭೃಥೇನ ತುಲ್ಯಃ |
ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥112॥
ಕೃಷ್ಣನಿಗೆ ಮಾಡಿದ ಭಕ್ತಿಪೂರ್ವಕವಾದ ಒಂದು ಪ್ರಣಾಮವೂ ಸಹ ಹತ್ತು ಅಶ್ವಮೇಧಗಳ ಅವಭೃಥಸ್ನಾನಕ್ಕೆ ಸಮನಾದುದು. ಹತ್ತು ಅಶ್ವಮೇಧಯಜ್ಞಮಾಡಿ- ದವನು ಪುನಃ ಜನ್ಮ ಪಡೆಯುತ್ತಾನೆ. ಕೃಷ್ಣಪ್ರಣಾಮಮಾಡಿದವನು ಪುನಃ ಜನ್ಮವನ್ನು ಪಡೆಯುವುದಿಲ್ಲ.
ಕೃಷ್ಣವ್ರತಾಃ ಕೃಷ್ಣಮನುಸ್ಮರಂತೋ
ರಾತ್ರೌ ಚ ಕೃಷ್ಣಂ ಪುನರುತ್ಥಿತಾ ಯೇ |
ತೇ ಕೃಷ್ಣದೇಹಾಃ ಪ್ರವಿಶಂತಿ ಕೃಷ್ಣಂ
ಆಜ್ಯಂ ಯಥಾ ಮಂತ್ರಹುತಂ ಹುತಾಶೇ ॥113॥
ಯಾರು ಕೃಷ್ಣವ್ರತವನ್ನು ಧರಿಸಿ, ಕೃಷ್ಣನನ್ನು ಸ್ಮರಿಸುತ್ತಾ, ರಾತ್ರಿಯಲ್ಲಿಯೂ ಎದ್ದು ಕೃಷ್ಣನನ್ನು ಸ್ಮರಿಸುತ್ತಾರೆಯೋ ಅವರು ಕೃಷ್ಣನ ಸನ್ನಿಧಾನಕ್ಕೆ ಪಾತ್ರವಾದ ದೇಹವುಳ್ಳ- ವರಾಗಿ ಮಂತ್ರಹುತವಾದ ಆಜ್ಯವು ಅಗ್ನಿಯನ್ನು ಪ್ರವೇಶಿಸುವಂತೆ ಕೃಷ್ಣನನ್ನು ಪ್ರವೇಶಿ- ಸುತ್ತಾರೆ.
ನಮೋ ನರಕಸಂತ್ರಾಸರಕ್ಷಾಮಂಡಲಕಾರಿಣೇ |
ಸಂಸಾರನಿಮ್ನಗಾವರ್ತತರಿಕಾಷ್ಠಾಯ ವಿಷ್ಣವೇ ॥114॥
ನರಕದ ಭಯದಿಂದ ರಕ್ಷಿಸುವ ನಿನಗೆ ನಮಸ್ಕಾರ. ಸಂಸಾರನದಿಯನ್ನು ದಾಟಿಸುವ ತೆಪ್ಪದಂತಿರುವ ವಿಷ್ಣುವಾದ ನಿನಗೆ ನಮಸ್ಕಾರ.
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥115॥
ಬ್ರಾಹ್ಮಣವತ್ಸಲನಾದ, ಗೋಬ್ರಾಹ್ಮಣಹಿತನಾದ ನಿನಗೆ ನಮಸ್ಕಾರ. ಜಗತ್ತಿಗೆ ಹಿತನಾದ, ವೇದಪ್ರತಿಪಾದ್ಯನಾದ, ಕೃಷ್ಣನಾದ ನಿನಗೆ ನಮಸ್ಕಾರ ನಮಸ್ಕಾರ.
ಪ್ರಾಣಕಾಂತಾರಪಾಥೇಯಂ ಸಂಸಾರೋಚ್ಛೇದಭೇಷಜಮ್ |
ದುಃಖಶೋಕಪರಿತ್ರಾಣಂ ಹರಿರಿತ್ಯಕ್ಷರದ್ವಯಮ್ ॥116॥
ಹರಿಯೆಂಬ ಎರಡು ಅಕ್ಷರವು ಸಂಸಾರದ ಕಾಡಿನಲ್ಲಿ ತಿರುಗುವವರಿಗೆ ಪಾಥೇಯವಾದುದು. ಸಂಸಾರವನ್ನು ಪರಿಹರಿಸುವ ಔಷಧರೂಪವಾದುದು. ದುಃಖ -ಶೋಕಗಳ ನಿವಾರಕವಾದುದು.
ನಾರಾಯಣಪರಂ ಬ್ರಹ್ಮ ನಾರಾಯಣಪರಂ ತಪಃ |
ನಾರಾಯಣಪರಂ ಸತ್ಯಂ ನಾರಾಯಣಪರಂ ಪರಮ್ ॥117॥
ವೇದಗಳು ನಾರಾಯಣಪರವಾದವುಗಳು. ತಪಸ್ಸು ನಾರಾಯಣನ ಪ್ರೀತಿಯ ಉದ್ದೇಶದಿಂದ ಇರುವಂಥಹದು. ಸತ್ಯವಚನವು ನಾರಾಯಣನ ಪರವಾದುದು. ಶ್ರೇಷ್ಠವಾದುದೆಲ್ಲವೂ ನಾರಾಯಣಪರವಾದವುಗಳು.
ಯಥಾ ವಿಷ್ಣುಮಯಂ ಸತ್ಯಂ ಯಥಾ ವಿಷ್ಣುಮಯಂ ಹವಿಃ |
ಯಥಾ ವಿಷ್ಣುಮಯಂ ಸರ್ವಂ ಪಾಪ್ಮಾ ಮೇ ನಶ್ಯತಾಂ ತಥಾ ॥118॥
ಹೇಗೆ ಸತ್ಯವು ವಿಷ್ಣುಮಯವಾದುದೋ, ಹವಿಸ್ಸು ವಿಷ್ಣುಮಯವಾದುದೋ, ಎಲ್ಲವೂ ವಿಷ್ಣುಮಯವಾದುದೋ ಈ ಮಾತಿನ ಸತ್ಯದಿಂದ ನನ್ನ ಪಾಪವು ನಾಶವನ್ನು ಹೊಂದಲಿ.
ತಸ್ಯ ಯಜ್ಞವರಾಹಸ್ಯ ವಿಷ್ಣೋರಮಿತತೇಜಸಃ |
ಪ್ರಣಾಮಂ ಯೇಽಪಿ ಕುರ್ವಂತಿ ತೇಷಾಮಪಿ ನಮೋನಮಃ ॥119॥

ಅಮಿತತೇಜಸ್ವಿಯಾದ, ಯಜ್ಞವರಾಹರೂಪಿಯಾದ ವಿಷ್ಣುವಿಗೆ ಯಾರು ನಮಸ್ಕಾರ ಮಾಡುತ್ತಾರೆಯೋ ಅವರಿಗೂ ಸಹ ನಮಸ್ಕಾರಗಳು, ನಮಸ್ಕಾರಗಳು.
ತ್ವಾಂ ಪ್ರಪನ್ನಾಯ ಭಕ್ತಾಯ ಗತಿಮಿಷ್ಟಾಂ ಜಿಗೀಷವೇ |
ಯಚ್ಛ್ರೇಯಃ ಪುಂಡರೀಕಾಕ್ಷ ತದ್ ಧ್ಯಾಯಸ್ವ ಸುರೋತ್ತಮ ॥120॥
ಇತಿ ವಿದ್ಯಾತಪೋಯೋನಿರಯೋನಿರ್ವಿಷ್ಣುರೀಡಿತಃ |
ವಾಗ್ಯಜ್ಞೇನಾರ್ಚಿತೋ ದೇವಃ ಪ್ರೀಯತಾಂ ಮೇ ಜನಾರ್ದನಃ ॥121॥
ಎಲೈ ಪುಂಡರೀಕಾಕ್ಷನೇ! ಎಲೈ ದೇವೋತ್ತಮನೇ! ಉತ್ತಮವಾದ ಗತಿಯನ್ನು ಹೊಂದಲು ಬಯಸಿ ನಿನಗೆ ಶರಣಾಗತನಾದ ನಿನ್ನ ಭಕ್ತನಾದ ನನಗೆ ಯಾವುದು ಶ್ರೇಯಸ್ಸೋ ಅದನ್ನು ಚಿಂತಿಸಿ ದಯಪಾಲಿಸು. ಹೀಗೆ ವಾಗ್ಯಜ್ಞದಿಂದ ನನ್ನಿಂದ ಅರ್ಚಿಸಲ್ಪಟ್ಟ ವಿದ್ಯಾತಪಸ್ಸುಗಳ ಉಗಮಸ್ಥಾನನೂ, ಅಯೋನಿಜನೂ, ದೇವನೂ, ಜನಾರ್ದನನೂ ಆದ ವಿಷ್ಣುವು ನನಗೆ ಪ್ರಸನ್ನನಾಗಲಿ.
ವೈಶಂಪಾಯನಃ
ಏತಾವದುಕತ್ವ ವಚನಂ ಭೀಷ್ಮಸ್ತದ್ಗತಮಾನಸಃ |
ನಮ ಇತ್ಯೇವ ಕೃಷ್ಣಾಯ ಪ್ರಣಾಮಮಕರೋತ್ ತದಾ ॥122॥
ವೈಶಂಪಾಯನರು ಭೀಷ್ಮರು ಹೀಗೆ ಕೃಷ್ಣನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ, ಇಷ್ಟು ಮಾತುಗಳನ್ನು ಹೇಳಿ, ನಮಸ್ಕಾರವೆಂದು ಹೇಳಿ ಕೃಷ್ಣನಿಗೆ ಪ್ರಣಾಮವನ್ನು ಮಾಡಿದರು.
ತಸ್ಮಿನ್ನುಪರತೇ ವಾಕ್ಯೇ ತತಸ್ತೇ ಬ್ರಹ್ಮವಾದಿನಃ |
ಭೀಷ್ಮಂ ವಾಗ್ಭಿರ್ಬಾಷ್ಪಗಲಾಸ್ತಮಾನರ್ಚುರ್ಮಹಾದ್ಯುತಿಮ್ ॥123॥
ಭೀಷ್ಮರು ತಮ್ಮ ಮಾತನ್ನು ನಿಲ್ಲಿಸುತ್ತಿರಲು, ಬ್ರಹ್ಮವಾದಿಗಳು ಬಾಷ್ಪಕಂಠರಾಗಿ ಮಹಾದ್ಯುತಿಯನ್ನು ಹೊಂದಿದ ಭೀಷ್ಮರನ್ನು ತಮ್ಮ ಮಾತುಗಳಿಂದ ಅರ್ಚಿಸಿದರು.
ತೇಽಸ್ತುವಂತಶ್ಚ ವಿಪ್ರೇಂದ್ರಾಃ ಕೇಶವಂ ಪುರುಷೋತ್ತಮಮ್ |
ಭೀಷ್ಮಂ ಚ ಶನಕೈಃ ಸರ್ವೇ ಪ್ರಶಶಂಸುಃ ಪುನಃಪುನಃ ॥124॥
ಆ ವಿಪ್ರೇಂದ್ರರು ಪುರುಷೋತ್ತಮನಾದ ಕೇಶವನನ್ನೂ, ಭೀಷ್ಮರನ್ನೂ ಮೃದು- ವಾದ ಸ್ವರದಲ್ಲಿ ಪುನಃ ಪುನಃ ಪ್ರಶಂಸಿದರು.
ಅಧಿಗಮ್ಯ ತು ಯೋಗೇನ ಭಕ್ತಿಂ ಭೀಷ್ಮಸ್ಯ ಮಾಧವಃ |
ತ್ರೈಲೋಕ್ಯದರ್ಶನಂ ಜ್ಞಾನಂ ದಿವ್ಯಂ ದತ್ತ್ವಾ ಯಯೌ ಹರಿಃ ॥125॥
ಮಾಧವನು ತನ್ನ ಯೋಗಶಕ್ತಿಯಿಂದ ಭೀಷ್ಮರ ಭಕ್ತಿಯೋಗವನ್ನು ತಿಳಿದು, ಅವರಿಗೆ ಮೂರು ಲೋಕಗಳನ್ನೂ ತೋರಿಸುವ ದಿವ್ಯಜ್ಞಾನವನ್ನು ಕರುಣಿಸಿ, ಹರಿ- ಯಾದ ಅವನು ಅಲ್ಲಿಂದ ಹೊರಟನು.
ವಿದಿತ್ವಾ ಭಕ್ತಿಯೋಗಂ ತಂ ಭೀಷ್ಮಸ್ಯ ಪುರುಷೋತ್ತಮಃ |
ಸಹಸೋತ್ಥಾಯ ತಂ ಹೃಷ್ಟೋ ಯಾನಮೇವಾನ್ವಪದ್ಯತ ॥126॥
ಪುರುಷೋತ್ತಮನಾದ ಕೃಷ್ಣನು ಭೀಷ್ಮರ ಭಕ್ತಿಯೋಗವನ್ನು ತಿಳಿದು ಸಂತೋಷಗೊಂಡು ತತ್ಕ್ಷಣದಲ್ಲಿಯೇ ಎದ್ದು ತನ್ನ ರಥವನ್ನು ಸೇರಿದನು.
ಕೇಶವಃ ಸಾತ್ಯಕಿಶ್ಚೈವ ರಥೇನೈಕೇನ ಜಗ್ಮತುಃ |
ಅಪರೇಣ ಮಹಾತ್ಮಾನೌ ಯುಧಿಷ್ಠಿರಧನಂಜಯೌ ॥127॥
ಕೇಶವ ಮತ್ತು ಸಾತ್ಯಕಿಯರು ಒಂದೇ ರಥದಲ್ಲಿ ಹೊರಟರು. ಮಹಾತ್ಮರಾದ ಯುಧಿಷ್ಠಿರ ಮತ್ತು ಅರ್ಜುನರು ಇನ್ನೊಂದು ರಥದಲ್ಲಿ ಹೊರಟರು.
ಭೀಮಸೇನೋ ಯಮೌ ಚೋಭೌ ರಥಮೇಕಂ ಸಮಾಸ್ಥಿತಾಃ |
ಕೃಪೋ ಯುಯುತ್ಸುಃ ಸೂತಶ್ಚ ಸಂಜಯಶ್ಚಾಪರಂ ರಥಮ್ ॥128॥
ಭೀಮಸೇನ ಮತ್ತು ನಕುಲಸಹದೇವರು ಒಂದು ರಥವನ್ನು ಏರಿದರು. ಕೃಪ, ಯುಯುತ್ಸು ಮತ್ತು ಸೂತನಾದ ಸಂಜಯ ಇವರು ಇನ್ನೊಂದು ರಥದಲ್ಲಿ ಹೊರಟರು.
ತೇ ರಥೈರ್ನಗರಾಕಾರೈಃ ಪ್ರಯಾತಾಃ ಪುರುಷರ್ಷಭಾಃ |
ನೇಮಿಘೋಷೇಣ ಮಹತಾ ಕಂಪಯಂತೋ ವಸುಂಧರಾಮ್ ॥129॥
ಪುರುಷಶ್ರೇಷ್ಠರಾದ ಅವರು ಚಕ್ರದ ಮಹಾಘೋಷದಿಂದ ಭೂಮಿಯನ್ನು ನಡುಗಿಸುತ್ತಾ, ನಗರದಂತಿದ್ದ ತಮ್ಮ ರಥಗಳಲ್ಲಿ ಹೊರಟರು.
ತತೋ ಗಿರಃ ಪುರುಷವರಸ್ತವೇರಿತಾ
ದ್ವಿಜೇರಿತಾ ಪಥಿಷು ಮನಾಕ್ ಸ ಶುಶ್ರುವೇ |
ಕೃತಾಂಜಲಿಂ ಪ್ರಣತಮಥಾಪರಂ ಜನಂ
ಸ ಕೇಶಿಹಾ ಮುದಿತಮನಾಶ್ಚ ನಂದತ ॥130॥
ಆಗ ಮಾರ್ಗಗಳಲ್ಲಿ ಶ್ರೇಷ್ಠಪುರುಷರಿಂದಲೂ, ಬ್ರಾಹ್ಮಣರಿಂದಲೂ ಉಚ್ಚರಿಸ- ಲ್ಪಟ್ಟ ಪರಮಾತ್ಮನ ಸ್ತೋತ್ರರೂಪವಾದ ಶಬ್ದಗಳು ಕೇಳಿಬಂದವು. ಕೇಶಿಸೂದನ- ನಾದ ಕೃಷ್ಣನು ಕೈಗಳನ್ನು ಮುಗಿದು ನಮಸ್ಕಾರ ಮಾಡಿ ನಿಂತಿದ್ದ ಉಳಿದ ಜನರನ್ನು ನೋಡಿ ಮನಸ್ಸಿನಲ್ಲಿ ಸಂತೋಷಗೊಂಡು ಅವರನ್ನು ಅಭಿನಂದಿಸಿದನು.
ಇತಿ ಸ್ಮರನ್ ಪಠತಿ ಚ ಶಾರ್ಙ್ಗಧನ್ವನಃ
ಶೃಣೋತಿ ವಾ ಯದುಕುಲನಂದನಸ್ತವಮ್ |

ಸ ಚಕ್ರಭೃತ್ ಪ್ರತಿಹತಸರ್ವಕಿಲ್ಬಿಷೋ
ಜನಾರ್ದನಂ ಪ್ರವಿಶತಿ ದೇಹಸಂಕ್ಷಯೇ ॥131॥
ಹೀಗೆ ಯಾರು ಕೃಷ್ಣನನ್ನು ಸ್ಮರಿಸಿ ಶಾರ್ಙ್ಗಧನುರ್ಧಾರಿಯಾದ ಯದುಕುಲ- ನಂದನನಾದ ಅವನ ಈ ಸ್ತೋತ್ರವನ್ನು ಪಠಿಸುತ್ತಾನೆಯೋ (ಕೇಳುತ್ತಾನೆಯೋ) ಅವನು ಸುದರ್ಶನಧಾರಿಯಾದ ಕೃಷ್ಣನಿಂದ ಎಲ್ಲ ಪಾಪಗಳನ್ನೂ ಕಳೆದುಕೊಂಡು ದೇಹತ್ಯಾಗವನ್ನು ಮಾಡಿ ಜನಾರ್ದನನನ್ನು ಪ್ರವೇಶಿಸುತ್ತಾನೆ.
ಯಂ ಯೋಗಿನಃ ಪ್ರಾಣವಿಯೋಗಕಾಲೇ
ಯತ್ನೇನ ಚಿತ್ತೇ ವಿನಿವೇಶಯಂತಿ |
ಸ ತಂ ಪುರಸ್ತಾದ್ ಹರಿಮೀಕ್ಷಮಾಣಃ
ಪ್ರಾಣಾನ್ ಜಹೌ ಪ್ರಾಪ್ತಫಲೋ ಹಿ ಭೀಷ್ಮಃ ॥132॥
ಯೋಗಿಗಳು ಪ್ರಾಣವಿಯೋಗಕಾಲದಲ್ಲಿ ಯಾವನನ್ನು ಪ್ರಯತ್ನಪೂರ್ವಕವಾಗಿ ಚಿತ್ತದಲ್ಲಿ ಸ್ಥಾಪಿಸಿಕೊಳ್ಳಲು ಪ್ರಯತ್ನಪಡುತ್ತಾರೆಯೋ ಅಂತಹ ಹರಿಯನ್ನು ತನ್ನ ಎದುರಿಗೆ ನೋಡುತ್ತಾ ಪ್ರಾಣಗಳನ್ನು ತ್ಯಜಿಸಿದ ಭೀಷ್ಮರು ಚಕ್ಷುಸ್ಸಿನ ಫಲವನ್ನು ಪಡೆದವರು.
ಸ್ತವರಾಜಃ ಸಮಾಪ್ತೋಽಯಂ ವಿಷ್ಣೋರದ್ಭುತಕರ್ಮಣಃ |
ಗಾಂಗೇಯೇನ ಪುರಾ ಗೀತೋ ಮಹಾಪಾತಕನಾಶನಃ ॥133॥
ಗಂಗಾಪುತ್ರರಾದ ಭೀಷ್ಮರಿಂದ ಮಾಡಲ್ಪಟ್ಟ ಮಹಾಪಾತಕನಾಶನವಾದ ಅದ್ಭುತ- ವಾದ ಈ ವಿಷ್ಣುಸ್ತವರಾಜವು ಸಮಾಪ್ತವಾಯಿತು.
ಇಮಂ ನರಃ ಸ್ತವರಾಜಂ ಮುಮುಕ್ಷುಃ
ಪಠನ್ ಶುಚಿಃ ಕಲುಷಿತಕಲ್ಮಷಾಪಹಮ್ |
ಅತೀತ್ಯ ಲೋಕಾನ್ ಮಲಿನಃ ಸಮಾಗತಾನ್
ಪದಂ ಸ ಗಚ್ಛತ್ಯಮೃತಂ ಮಹಾತ್ಮನಃ ॥134॥
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಸಪ್ತಚತ್ವಾರಿಂಶೋಽಧ್ಯಾಯಃ ॥47॥
ಮುಮುಕ್ಷುವಾದ ಯಾವ ಮನುಷ್ಯನು ಶುಚಿಯಾಗಿ ಕಲುಷಿತವಾದ ಮನಸ್ಸಿನ ಕಲ್ಮಶವನ್ನು ಕಳೆಯುವ ಈ ಸ್ತವರಾಜವನ್ನು ಪಠಿಸುತ್ತಾನೆಯೋ ಅವನು ಪ್ರಾಪ್ತವಾದ ಮಲಿನವಾದ ಲೋಕಗಳನ್ನು ದಾಟಿ, ಮಹಾತ್ಮನಾದ ಕೃಷ್ಣನ ಮೋಕ್ಷಸ್ಥಾನವನ್ನು ಪಡೆ-ಯುತ್ತಾನೆ.
ಇಲ್ಲಿಗೆ ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 47ನೆಯ ಅಧ್ಯಾಯವು ಮುಗಿಯಿತು.
0

48. ನಲವತ್ತೆಂಟನೆಯ ಅಧ್ಯಾಯ
ಕೃಷ್ಣಯುಧಿಷ್ಠಿರಾದಿಗಳಿಂದ ಕುರುಕ್ಷೇತ್ರಗಮನ, ಪರಶುರಾಮರ ಕಥೆಯನ್ನು ಹೇಳುವಂತೆ ಯುಧಿಷ್ಠಿರನಿಂದ ಕೃಷ್ಣನ ಪ್ರಾರ್ಥನೆ

ವೈಶಂಪಾಯನಃ
ತತಃ ಸ ಚ ಹೃಷೀಕೇಶಃ ಸ ಚ ರಾಜಾ ಯುಧಿಷ್ಠಿರಃ |
ಕೃಪಾದಯಶ್ಚ ತೇ ಸರ್ವೇ ಚತ್ವಾರಃ ಪಾಂಡವಾಶ್ಚ ಹ ॥1॥
ರಥೈಸ್ತೇ ನಗರಾಕಾರೈಃ ಪತಾಕಾಧ್ವಜಶೋಭಿತೈಃ |
ಯಯುರಾಶು ಕುರುಕ್ಷೇತ್ರಂ ವಾಜಿಭಿಃ ಶೀಘ್ರಗಾಮಿಭಿಃ ॥2॥
ವೈಶಂಪಾಯನರು ಅನಂತರ ಆ ಹೃಷೀಕೇಶನೂ, ರಾಜನಾದ ಯುಧಿಷ್ಠಿರನೂ, ಕೃಪಾದಿಗಳೆಲ್ಲರೂ, ಉಳಿದ ನಾಲ್ವರು ಪಾಂಡವರೂ ಪತಾಕಾ ಧ್ವಜಗಳಿಂದ ಶೋಭಿತವಾದ ನಗರಾಕಾರವಾದ ರಥಗಳಲ್ಲಿ ಶೀಘ್ರಗಾಮಿಗಳಾದ ಅಶ್ವಗಳಿಂದ ಶೀಘ್ರವಾಗಿ ಕುರುಕ್ಷೇತ್ರಕ್ಕೆ ತಲುಪಿದರು.
ತೇಽವತೀರ್ಯ ಕುರುಕ್ಷೇತ್ರಂ ಕೇಶಮಜ್ಜಾಸ್ಥಿಸಂಕುಲಮ್ |
ದೇಹನ್ಯಾಸಃ ಕೃತೋ ಯತ್ರ ಕ್ಷತ್ರಿಯೈಸ್ತೈರ್ಮಹಾತ್ಮಭಿಃ ॥3॥
ಅವರು ಮಹಾತ್ಮರಾದ ಕ್ಷತ್ರಿಯರು ತಮ್ಮ ದೇಹವನ್ನು ಪರಿತ್ಯಜಿಸಿದ ಕೇಶ, ಮಜ್ಜ, ಅಸ್ಥಿಗಳಿಂದ ನಿಬಿಡವಾದ ಕುರುಕ್ಷೇತ್ರವನ್ನು ತಲುಪಿದರು.
ಗಜಾಶ್ವದೇಹಾಸ್ಥಿಚಯೈಃ ಪರ್ವತೈರಿವ ಸಂಚಿತಮ್ |
ನರಶೀರ್ಷಕಪಾಲೈಶ್ಚ ಶಂಖೈರಿವ ಸಮಾಚಿತಮ್ ॥4॥
ಭೂತಸಂಘಾನುಚರಿತಂ ರಕ್ಷೋಗಣನಿಷೇವಿತಮ್ |
ಆಪಾನಭೂಮಿಂ ಕಾಲಸ್ಯ ತದಾ ಭುಕ್ತೋಜ್ಝಿತಾಮಿವ ॥5॥
ಭೂತಸಂಘಾನುಚರಿತಂ ರಕ್ಷೋಗಣನಿಷೇವಿತಮ್ |
ಪಶ್ಯಂತಸ್ತೇ ಕುರುಕ್ಷೇತ್ರಂ ಯಯುರಾಶು ಮಹಾರಥಾಃ ॥6॥
ಗಜಾಶ್ವದೇಹಗಳ ಅಸ್ಥಿಗಳ ಪರ್ವತಾಕಾರವಾದ ರಾಶಿಯಿಂದ ಕೂಡಿದ್ದ, ಮನುಷ್ಯರ ತಲೆಬುರುಡೆಗಳಿಂದ ಶಂಖಗಳಂತೆ ಎಲ್ಲೆಡೆಯೂ

ಹರಡಿದ್ದ, ಸಹಸ್ರಾರು ಚಿತೆಗಳಿಂದ ತುಂಬಿದ, ಕವಚ ಮತ್ತು ಶಸ್ತ್ರಗಳು ಎಲ್ಲೆಲ್ಲಿಯೂ ಬಿದ್ದಿದ್ದ, ಮೃತ್ಯು- ದೇವತೆಯು ಆಗ ತಾನೆ ಕುಡಿದು ಬಿಟ್ಟಿದ್ದಂತಹ ಪಾನಭೂಮಿಯಂತಿದ್ದ, ಭೂತ- ಸಂಘಗಳ ಸಂಚಾರವನ್ನು ಹೊಂದಿದ ರಾಕ್ಷಸರ ಗಣಗಳಿಂದ ಸೇವಿತವಾದ ಕುರುಕ್ಷೇತ್ರ -ವನ್ನು ನೋಡುತ್ತಾ ಆ ಮಹಾರಥರು ಶೀಘ್ರವಾಗಿ ಮುಂದೆ ಸಾಗಿದರು.
ಗಚ್ಛನ್ನೇವ ಮಹಾಬಾಹುಃ ಸರ್ವಯಾದವನಂದನಃ |
ಯುಧಿಷ್ಠಿರಾಯ ಪ್ರೋವಾಚ ಜಾಮದಗ್ನ್ಯಸ್ಯ ವಿಕ್ರಮಮ್ ॥7॥
ಮಹಾಬಾಹುವೂ ಸರ್ವಯಾದವನಂದನನೂ ಆದ ಕೃಷ್ಣನು ಹೋಗುತ್ತಲೇ ಯುಧಿಷ್ಠಿರನಿಗೆ ಪರಶುರಾಮರ ಪರಾಕ್ರಮವನ್ನು ಹೇಳಿದನು.
ಅಮೀ ರಾಮಹ್ರದಾಃ ಪಂಚ ದೃಶ್ಯಂತೇ ಪಾರ್ಥ ದೂರತಃ |
ಯೇಷು ಸಂತರ್ಪಯಾಮಾಸ ಪೂರ್ವಾನ್ ಕ್ಷತ್ರಿಯಶೋಣಿತೈಃ ॥8॥
ಎಲೈ ಪಾರ್ಥನೇ! ದೂರದಲ್ಲಿ ಈ ಐದು ರಾಮಹ್ರದಗಳು ಕಾಣುತ್ತಿವೆಯಷ್ಟೇ. ಇಲ್ಲಿ ಪರಶುರಾಮರು ತಮ್ಮ ಪೂರ್ವಜರಿಗೆ ಕ್ಷತ್ರಿಯರಕ್ತದಿಂದ ತರ್ಪಣವನ್ನು ಕೊಟ್ಟರು.
ತ್ರಿಃಸಪ್ತಕೃತ್ವೋ ವಸುಧಾಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ |
ಇಹೇದಾನೀಂ ತತೋ ರಾಮಃ ಕರ್ಮಣೋ ವಿರರಾಮ ಹ ॥9॥
ಪ್ರಭುಗಳಾದ ಪರಶುರಾಮರು ಇಪ್ಪತ್ತೊಂದು ಬಾರಿ ಸಂಚರಿಸಿ, ಭೂಮಿ- ಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿ ಈ ಸ್ಥಳದಲ್ಲಿ ಆ ಕರ್ಮಕ್ಕೆ ಮುಕ್ತಾಯವನ್ನು ಹೇಳಿದರು.
ಯುಧಿಷ್ಠಿರಃ
ತ್ರಿಃ ಸಪ್ತಕೃತ್ವಃ ಪೃಥಿವೀ ಕೃತಾ ನಿಃಕ್ಷತ್ರಿಯಾ ತದಾ |
ರಾಮೇಣೇತಿ ಯದಾಽಽತ್ಥ ತ್ವಮತ್ರ ಮೇ ಸಂಶಯೋ ಮಹಾನ್ ॥10॥
ಯುಧಿಷ್ಠಿರ ಇಪ್ಪತ್ತೊಂದು ಬಾರಿ ಭೂಮಿಯನ್ನು ಪರಶುರಾಮರು ಕ್ಷತ್ರಿಯ- ರಹಿತವನ್ನಾಗಿ ಮಾಡಿದರು ಎಂದು ನೀನು ಹೇಳಿದ ವಿಷಯದಲ್ಲಿ ನನಗೆ ಬಹಳ ಸಂಶಯವಿದೆ.
ಕ್ಷತ್ರಬೀಜಂ ಯದಾ ದಗ್ಧಂ ರಾಮೇಣ ಯದುಪುಂಗವ |
ಕಥಂ ಭೂಯಃ ಸಮುತ್ಪತ್ತಿಃ ಕ್ಷತ್ರಸ್ಯಾಮಿತವಿಕ್ರಮ ॥11॥
ಎಲೈ ಯದುಪುಂಗವನೇ! ಅಮಿತವಿಕ್ರಮನೇ! ಪರಶುರಾಮರು ಕ್ಷತ್ರಿಯ- ಬೀಜವನ್ನೇ ಸುಟ್ಟುಹಾಕಿದ ಮೇಲೆ ಪುನಃ ಭೂಮಿಯಲ್ಲಿ ಕ್ಷತ್ರಿಯರ ಉತ್ಪತ್ತಿಯು ಹೇಗೆ ಉಂಟಾಯಿತು?
ಮಹಾತ್ಮನಾ ಭಗವತಾ ರಾಮೇಣ ಯದುಪುಂಗವ |
ಕಥಮುತ್ಸಾದಿತಂ ಕ್ಷತ್ರಂ ಕಥಂ ವೃದ್ಧಿಂ ಪುನರ್ಗತಮ್ ॥12॥
ಎಲೈ ಯದುಪುಂಗವನೇ! ಮಹಾತ್ಮರೂ ಭಗವತ್ಸ್ವರೂಪರೂ ಆದ ಪರಶು- ರಾಮರಿಂದ ಕ್ಷತ್ರಿಯಕುಲವು ಹೇಗೆ ಉತ್ಸನ್ನಗೊಂಡಿತು? ಮತ್ತು ಆ ಕುಲಕ್ಕೆ ಪುನಃ ಹೇಗೆ ವೃದ್ಧಿಯುಂಟಾಯಿತು?
ಮಹಾಭಾರತಯುದ್ಧೇ ಹಿ ಕೋಟಿಶಃ ಕ್ಷತ್ರಿಯಾ ಹತಾಃ |
ತಥಾಭೂಚ್ಚ ಮಹೀ ಕೀರ್ಣಾ ಕ್ಷತ್ರಿಯೈರ್ವದತಾಂವರ ॥13॥
ಮಹಾಭಾರತಯುದ್ಧದಲ್ಲಿ ಕ್ಷತ್ರಿಯರು ಕೋಟಿಸಂಖ್ಯೆಗಳಲ್ಲಿ ಹತರಾದರು. ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ಆದ್ದರಿಂದ ಆ ರೀತಿಯಲ್ಲಿ ಭೂಮಿಯು ಕ್ಷತ್ರಿಯ- ರಿಂದ ತುಂಬಿದ್ದಿತು.
ಕಿಮರ್ಥಂ ಭಾರ್ಗವೇಣೇದಂ ಕ್ಷತ್ರಮುತ್ಸಾದಿತಂ ಪುರಾ |
ರಾಮೇಣ ಯದುಶಾರ್ದೂಲ ಕುರುಕ್ಷೇತ್ರೇ ಮಹಾತ್ಮನಾ ॥14॥
ಎಲೈ ಯದುಶಾರ್ದೂಲನೇ! ಮಹಾತ್ಮರಾದ ಭಾರ್ಗವರಾದ ಪರಶುರಾಮರು ಏತಕ್ಕಾಗಿ ಕುರುಕ್ಷೇತ್ರದಲ್ಲಿ ಕ್ಷತ್ರಿಯರ ಸಂಹಾರವನ್ನು ಮಾಡಿದರು?
ಏತಂ ಮೇ ಛಿಂಧಿ ವಾರ್ಷ್ಣೇಯ ಸಂಶಯಂ ತಾರ್ಕ್ಷ್ಯಕೇತನ |
ಆಗಮೋ ಹಿ ಪರಃ ಕೃಷ್ಣ ತ್ವತ್ತೋ ನೋ ವಾಸವಾನುಜ ॥15॥
ಎಲೈ ವಾರ್ಷ್ಣೇಯನೇ! ಗರುಡಧ್ವಜನೇ! ಈ ನನ್ನ ಸಂಶಯವನ್ನು ಪರಿಹರಿಸು. ಎಲೈ ಇಂದ್ರಾನುಜನೇ! ಕೃಷ್ಣನೇ! ನಿನ್ನಿಂದಲೇ ನಮಗೆ ಎಲ್ಲ ಜ್ಞಾನದ ಪ್ರಾಪ್ತಿ ಉಂಟಾಗಬೇಕು.
ವೈಶಂಪಾಯನಃ
ತತೋ ವ್ರಜನ್ನೇವ ಗದಾಗ್ರಜಃ ಪ್ರಭುಃ
ಶಶಂಸ ತಸ್ಮೈ ನಿಖಿಲೇನ ತತ್ತ್ವತಃ |
ಯುಧಿಷ್ಠಿರಾಯಾಪ್ರತಿಪೌಜಸೇ ತದಾ
ಯಥಾಽಭವತ್ ಕ್ಷತ್ರಿಯಸಂಕುಲಾ ಮಹೀ ॥16॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಚತ್ವಾರಿಂಶೋಽಧ್ಯಾಯಃ ॥48॥
ಆಗ ಗದಾಗ್ರಜನಾದ ಪ್ರಭುವಾದ ಕೃಷ್ಣನು ಹೋಗುತ್ತಲೇ ಅಪ್ರತಿಮ- ಪರಾಕ್ರಮಿಯಾದ ಯುಧಿಷ್ಠಿರನನ್ನು ಕುರಿತು ಎಲ್ಲವೂ ಹೇಗೆ ನಡೆಯಿತು ಮತ್ತು ಪುನಃ ಭೂಮಿಯು ಹೇಗೆ ಕ್ಷತ್ರಿಯರಿಂದ ತುಂಬಿತು ಎಂಬ ವಿಷಯವನ್ನು ಯಥಾರ್ಥವಾಗಿ ಹೇಳಿದನು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 48ನೆಯ ಅಧ್ಯಾಯವು ಮುಗಿಯಿತು

0

# 49. ನಲವತ್ತೊಂಭತ್ತನೆಯ ಅಧ್ಯಾಯ

## ಕೃಷ್ಣನಿಂದ ಪರಶುರಾಮಚರಿತೆಯ ಕಥನ

ಶ್ರೀಭಗವಾನ್
ಶೃಣು ಕೌಂತೇಯ ರಾಮಸ್ಯ ಮಯಾ ಯಾವತ್ ಪರಿಶ್ರುತಮ್ |
ಮಹರ್ಷೀಣಾಂ ಕಥಯತಾಂ ಕಾರಣಂ ತಸ್ಯ ಜನ್ಮ ಚ ||1||
ಶ್ರೀಭಗವಾನ್ ಎಲೈ ಕೌಂತೇಯನೇ! ಮಹರ್ಷಿಗಳು ಮಾತನಾಡುವಾಗ ನಾನು ಎಷ್ಟು ಅಂಶವನ್ನು ಪರಶುರಾಮರ ಜನ್ಮದ ಮತ್ತು ಕ್ಷತ್ರಿಯಸಂಹಾರದ ಕಾರಣದ ವಿಷಯದಲ್ಲಿ ಕೇಳಿದ್ದೇನೆಯೋ ಅಷ್ಟನ್ನು ಕೇಳು.
ಯಥಾ ಜಾಮದಗ್ನ್ಯೇನ ಕೋಟಿಶಃ ಕ್ಷತ್ರಿಯಾ ಹತಾಃ |
ಉದ್ಭೂತಾ ರಾಜವಂಶೇಷು ಯೇ ಭೂಯೋ ಭಾರತೇ ಹತಾಃ ||2||
ಪರಶುರಾಮರಿಂದ ಕೋಟಿಸಂಖ್ಯೆಯಲ್ಲಿ ಕ್ಷತ್ರಿಯರು ಹತರಾದರು. ಹೇಗೆ ಅವರು ಪುನಃ ರಾಜವಂಶಗಳಲ್ಲಿ ಜನಿಸಿ ಮಹಾಭಾರತಯುದ್ಧದಲ್ಲಿ ಹತರಾದರು ಎಂಬುದನ್ನು ಹೇಳುತ್ತೇನೆ.
ಜಹ್ನೋರಜಹ್ನುಸ್ತನಯೋ ಬಲ್ಲವಸ್ತಸ್ಯ ಚಾತ್ಮಜಃ |
ಕುಶಿಕೋ ನಾಮ ಧರ್ಮಜ್ಞಸ್ತಸ್ಯ ಪುತ್ರೋ ಮಹೀಪತಿಃ ||3||
ಜಹ್ನುವಿಗೆ ಅಜಹ್ನುವೆಂಬ ಪುತ್ರನು ಜನಿಸಿದನು. ಅವನ ಪುತ್ರನು ವಲ್ಲವ. ಅವನ ಪುತ್ರನಾದ ಕುಶಿಕನು ಧರ್ಮಜ್ಞನಾದ ರಾಜನಾದನು.

ಉಗ್ರಂ ತಪಃ ಸಮಾತಿಷ್ಠತ್ ಸಹಸ್ರಾಕ್ಷಸಮೋ ಭುವಿ |
ಪುತ್ರಂ ಲಭೇಯಮಜಿತಂ ತ್ರಿಲೋಕೇಶ್ವರಮಿತ್ಯುತ ||4||
ಭೂಮಿಯಲ್ಲಿ ಇಂದ್ರನಿಗೆ ಸಮನಾಗಿದ್ದ ಅವನು `ಯುದ್ಧದಲ್ಲಿ ಎಂದೂ ಸೋಲದ ತ್ರಿಲೋಕಪತಿಯಾದ ಪುತ್ರನನ್ನು ಪಡೆದೇನು' ಎಂದು ಉಗ್ರವಾದ ತಪಸ್ಸನ್ನು ಪ್ರಾರಂಭಿಸಿದನು.
ತಮುಗ್ರತಪಸಂ ದೃಷ್ಟ್ವಾ ಸಹಸ್ರಾಕ್ಷಃ ಪುರಂದರಃ |
ಸಮರ್ಥಂ ಪುತ್ರಜನನೇ ಸ್ವಯಮೇವೈತ್ಯ ಭಾರತ ||5||
ಪುತ್ರತ್ವಮಗಮದ್ ರಾಜಂಸ್ತಸ್ಯ ಲೋಕೇಶ್ವರೇಶ್ವರಃ |
ಗಾಧಿರ್ನಾಮಾಭವತ್ ಪುತ್ರಃ ಕೌಶಿಕಃ ಪಾಕಶಾಸನಃ ||6||
ಎಲೈ ಭಾರತನೇ! ಸಹಸ್ರಾಕ್ಷನಾದ ಪುರಂದರನು ಅವನು ಉಗ್ರತಪಸ್ಸಿನಲ್ಲಿ ನಿರತ -ನಾದುದನ್ನು ನೋಡಿ, ಅಂತಹ ಪುತ್ರನನ್ನು ಪಡೆಯಲು ಅವನು ಸಮರ್ಥನೆಂದು ತಿಳಿದು ತಾನಾಗಿಯೇ ಬಂದು ಲೋಕೇಶ್ವರೇಶ್ವರನಾದ ಅವನು ಅವನ ಪುತ್ರ- ನಾದನು. ರಾಜನೇ ಪಾಕಶಾಸನನಾದ ಇಂದ್ರನು ಗಾಧಿ ಎಂಬ ಹೆಸರಿನಿಂದ ಕುಶಿಕನ ಪುತ್ರನಾಗಿ ಕೌಶಿಕನೆನಿಸಿದನು.
ತಸ್ಯ ಕನ್ಯಾಽಭವದ್ ರಾಜನ್ ನಾಮ್ನಾ ಸತ್ಯವತೀ ಪ್ರಭೋ |
ತಾಂ ಗಾಧಿಃ ಕವಿಪುತ್ರಾಯ ಸೋಽರ್ಚೀಕಾಯ ದದೌ ಪ್ರಭುಃ ||7||
ಎಲೈ ಪ್ರಭುವೇ! ಗಾಧಿಗೆ ಸತ್ಯವತಿಯೆಂಬ ಮಗಳಿದ್ದಳು. ಅವನು ಅವಳನ್ನು ಭಾರ್ಗವವಂಶದ ಕವಿಪುತ್ರನಾದ ಋಚೀಕರಿಗೆ ಕೊಟ್ಟು ವಿವಾಹ ಮಾಡಿದನು.
ತತಃ ಪ್ರೀತಸ್ತು ಕೌಂತೇಯ ಭಾರ್ಗವಃ ಕುರುನಂದನ |
ಪುತ್ರಾರ್ಥೇ ಶ್ರಪಯಾಮಾಸ ಚರುಂ ಗಾಧೇಸ್ತಥೈವ ಚ ||8||
ಎಲೈ ಕೌಂತೇಯನೇ! ಕುರುನಂದನನೇ! ಸಂತೋಷಗೊಂಡ ಭಾರ್ಗವರಾದ ಋಚೀಕರು ಪುತ್ರರನ್ನು ಪಡೆಯಲು ತಮ್ಮ ಸಲುವಾಗಿ ಮತ್ತು ಗಾಧಿಯ ಸಲುವಾಗಿ ಚರುವನ್ನು ಸಿದ್ಧಪಡಿಸಿದರು.
ಆಹೂಯ ಚಾಹ ತಾಂ ಭಾರ್ಯಾಮೃಚೀಕೋ ಭಾರ್ಗವಸ್ತದಾ |
ಉಪಯೋಜ್ಯಶ್ಚರುರಯಂ ತ್ವಯಾ ಮಾತ್ರಾಪ್ಯಯಂ ತವ ||9||
ಭಾರ್ಗವರಾದ ಋಚೀಕರು ತಮ್ಮ ಪತ್ನಿಯನ್ನು ಕರೆದು ಈ ಎರಡು ಚರುಗಳಲ್ಲಿ ಈ ಚರುವನ್ನು ಮಾತ್ರ ನೀನು ಭುಂಜಿಸಬೇಕು. ನಿನ್ನ ತಾಯಿಯು ಮಾತ್ರ ಈ ಇನ್ನೊಂದು ಚರುವನ್ನೇ ಭುಂಜಿಸಬೇಕು.
ತಸ್ಯಾ ಜನಿಷ್ಯತೇ ಪುತ್ರೋ ದೀಪ್ತಿಮಾನ್ ಕ್ಷತ್ರಿಯರ್ಷಭಃ |
ಅಜಯ್ಯಃ ಕ್ಷತ್ರಿಯೈರ್ಲೋಕೇ ಕ್ಷತ್ರಿಯರ್ಷಭಸೂದನಃ ||10||
ಅವಳಿಗೆ ತೇಜಸ್ವಿಯಾದ ಕ್ಷತ್ರಿಯರ್ಷಭನು ಪುತ್ರನಾಗಿ ಜನಿಸುವನು. ಅವನು ಲೋಕದಲ್ಲಿ ಕ್ಷತ್ರಿಯರಿಂದ ಅಜೇಯನಾಗಿ ಶ್ರೇಷ್ಠರಾದ ಕ್ಷತ್ರಿಯರನ್ನು ಸಂಹರಿಸುವವ -ನಾಗುವನು.
ತವಾಪಿ ಪುತ್ರಂ ಕಲ್ಯಾಣಿ ಧೃತಿಮಂತಂ ತಪೋನ್ವಿತಮ್ |
ಶಮಾತ್ಮಕಂ ದ್ವಿಜಶ್ರೇಷ್ಠಂ ಚರುರೇಷ ವಿಧಾಸ್ಯತಿ ||11||
ಎಲೌ ಕಲ್ಯಾಣಿಯೇ! ನಿನಗೂ ಸಹ ಈ ಚರುವು ತಪಸ್ಸಿನಿಂದ ಕೂಡಿದ ಧೈರ್ಯಶಾಲಿಯಾದ ಶಾಂತನಾದ ಬ್ರಾಹ್ಮಣಶ್ರೇಷ್ಠನನ್ನು ಪುತ್ರನನ್ನಾಗಿ ಕೊಡುವುದು. (ಎಂದು ಹೇಳಿದರು).
ಇತ್ಯೇವಮುಕತ್ತ್ವಾ ತಾಂ ಭಾರ್ಯಾಮೃಚೀಕೋ ಭೃಗುನಂದನಃ |
ತಪಸ್ಯಭಿರತೋ ಧೀಮಾನ್ ಜಗಾಮಾರಣ್ಯಮೇವ ಹ ||12||
ಭಾರ್ಯೆಯನ್ನು ಕುರಿತು ಹೀಗೆ ಹೇಳಿ ಮೇಧಾವಿಗಳಾದ ಭೃಗುನಂದನರಾದ ಋಚೀಕರು ತಪಸ್ಸಿನಲ್ಲಿ ನಿರತರಾಗಿ ಕಾಡಿಗೆ ಹೊರಟು

ಹೋದರು.
ಏತಸ್ಮಿನ್ನೇವ ಕಾಲೇ ತು ತೀರ್ಥಯಾತ್ರಾಪರೋ ನೃಪಃ |
ಗಾಧಿಃ ಸದಾರಃ ಸಂಪ್ರಾಪ್ತ ಋಚೀಕಸ್ಯಾಶ್ರಮಂ ಪ್ರತಿ ||13||
ಆ ಸಮಯಕ್ಕೆ ಸರಿಯಾಗಿ ತೀರ್ಥಯಾತ್ರಾಪರನಾದ ಗಾಧಿರಾಜನು ಪತ್ನಿಯ ಸಹಿತನಾಗಿ ಋಚೀಕರ ಆಶ್ರಮಕ್ಕೆ ಬಂದನು.
ಚರುದ್ವಯಂ ಗೃಹೀತ್ವಾ ತು ರಾಜನ್ ಸತ್ಯವತೀ ತದಾ |
ಭರ್ತುರ್ವಾಕ್ಯಾದಥಾವ್ಯಗ್ರಾ ಮಾತ್ರೇ ಹೃಷ್ಟಾ ನ್ಯವೇದಯತ್ ||14||
ಎಲ್ಲೈ ರಾಜನೇ! ಆಗ ಸತ್ಯವತಿಯು ಪತಿಯ ವಾಕ್ಯಕ್ಕೆ ಅನುಸಾರವಾಗಿ ಎರಡು ಚರುಗಳನ್ನೂ ಹಿಡಿದುಕೊಂಡು ತಪ್ಪಿಲ್ಲದಂತೆ ತಾಯಿಗೆ ಸಂತೋಷದಿಂದ ನಿವೇದಿ- ಸಿದಳು.
ಮಾತಾ ತು ತಸ್ಯಾಃ ಕೌಂತೇಯ ದುಹಿತ್ರೇ ಸ್ವಂ ಚರುಂ ದದೌ |
ತಸ್ಯಾಶ್ಚರುಮಥಾಜ್ಞಾತಮಾತ್ಮಸಂಸ್ಥಂ ಚಕಾರ ಹ ||15||
ಎಲ್ಲೈ ಕೌಂತೇಯನೇ! ತಾಯಿಯಾದರೋ ತನ್ನ ಚರುವನ್ನು ಮಗಳಿಗೆ ಕೊಟ್ಟಳು. ಅವಳ ಚರುವನ್ನು ಅವಳಿಗೆ ತಿಳಿಯದಂತೆಯೇ ತಾನು ಉಪಯೋಗಿಸಿದಳು.
ಅಥ ಸತ್ಯವತೀ ಗರ್ಭಂ ಕ್ಷತ್ರಿಯಾಂತಕರಂ ತದಾ |
ಧಾರಯಾಮಾಸ ದೀಪ್ತೇನ ವಪುಷಾ ಘೋರದರ್ಶನಮ್ ||16||
ಅನಂತರ ಸತ್ಯವತಿಯು ಕ್ಷತ್ರಿಯಾಂತಕನಾದ ದೀಪ್ತವಾದ ಶರೀರವುಳ್ಳ ಘೋರ- ದರ್ಶನವನ್ನು ಹೊಂದಿದ ಗರ್ಭವನ್ನು ಧರಿಸಿದಳು.
ತಾಮೃಚೀಕಸ್ತದಾ ದೃಷ್ಟ್ವಾ ಧ್ಯಾನಯೋಗೇನ ವೈ ತತಃ |
ಅಬ್ರವೀದ್ ರಾಜಶಾರ್ದೂಲ ಸ್ವಾಂ ಭಾರ್ಯಾಂ ವರವರ್ಣಿನೀಮ್ ||17
ಎಲ್ಲೈ ರಾಜಶಾರ್ದೂಲನೇ! ಆಗ ಋಚೀಕರು ತಮ್ಮ ಧ್ಯಾನದೃಷ್ಟಿಯಿಂದ ಅದನ್ನು ತಿಳಿದು ಸುಂದರಿಯಾದ ತಮ್ಮ ಭಾರ್ಯೆಯನ್ನು ಕರೆದು ಹೇಳಿದರು.
ಮಾತ್ರಾಽಸಿ ವ್ಯಂಸಿತಾ ಭದ್ರೇ ಚರುವ್ಯತ್ಯಾಸಹೇತುನಾ |
ಜನಿಷ್ಯತೇ ಹಿ ತೇ ಪುತ್ರಃ ಕ್ರೂರಕರ್ಮಾ ಮಹಾಬಲಃ ||18||
ಎಲೌ ಮಂಗಳಸ್ವರೂಪಳೇ! ಚರುವನ್ನು ವ್ಯತ್ಯಾಸ ಮಾಡಿದ ಕಾರಣದಿಂದ ನಿನ್ನ ತಾಯಿಯು ನಿನಗೆ ಮೋಸ ಮಾಡಿದ್ದಾಳೆ. ನಿನಗೆ ಕ್ರೂರಕರ್ಮನೂ ಮಹಾಬಲನೂ ಆದ ಪುತ್ರನು ಜನಿಸುವನು.
ಜನಿಷ್ಯತೇ ಹಿ ತೇ ಭ್ರಾತಾ ಬ್ರಹ್ಮಭೂತಸ್ತಪೋಧನಃ |
ವಿಶ್ವಂ ಹಿ ಬ್ರಹ್ಮ ತಪಸಾ ಮಯಾ ತತ್ರ ಸಮರ್ಪಿತಮ್ ||19||
ನಿನ್ನ ತಮ್ಮನು ಬ್ರಹ್ಮಿಷ್ಠನಾಗಿ ತಪೋಧನನಾಗಿ ಜನಿಸುವನು. ನಾನು ಸಮಗ್ರ- ವಾದ ಬ್ರಹ್ಮತೇಜಸ್ಸನ್ನು ನನ್ನ ತಪಸ್ಸಿನ ಬಲದಿಂದ ಆ ಚರುವಿನಲ್ಲಿ ಆಧಾನ ಮಾಡಿ- ದ್ದೆನು.
ಕ್ಷತ್ರವೀರ್ಯಂ ಚ ಸಕಲಂ ತವ ಮಾತ್ರೇ ಸಮರ್ಪಿತಮ್ |
ವಿಪರ್ಯಯೇಣ ತೇ ಭದ್ರೇ ನೈತದೇವಂ ಭವಿಷ್ಯತಿ |
ಮಾತುಸ್ತೇ ಬ್ರಾಹ್ಮಣೋ ಭೂಯಾತ್ ತವ ಚ ಕ್ಷತ್ರಿಯಃ ಸುತಃ ||20||
ನಿನ್ನ ತಾಯಿಯ ಚರುವಿನಲ್ಲಿ ಸಕಲವಾದ ಕ್ಷತ್ರಿಯತೇಜಸ್ಸನ್ನು ಆಧಾನ ಮಾಡಿ- ದ್ದೆನು. ನೀವು ಚರುವನ್ನು ವ್ಯತ್ಯಾಸ ಮಾಡಿದುದರಿಂದ ಎಲೌ ಮಂಗಳಸ್ವರೂಪಳೇ! ನಾನು ಸಂಕಲ್ಪಿಸಿದಂತೆ ಆಗುವುದಿಲ್ಲ. ನಿನ್ನ ತಾಯಿಗೆ ಬ್ರಾಹ್ಮಣನೂ ಮತ್ತು ನಿನಗೆ ಕ್ಷತ್ರಿಯನೂ ಪುತ್ರರಾಗಿ ಜನಿಸುತ್ತಾರೆ.
ಸೈವಮುಕ್ತಾ ಮಹಾಭಾಗಾ ಭರ್ತ್ರಾ ಸತ್ಯವತೀ ತದಾ |
ಪಪಾತ ಶಿರಸಾ ತಸ್ಮೈ ವೇಪಂತೀ ಚಾಬ್ರವೀದಿದಮ್ ||21||
ನಾಹೋರ್ಽಸಿ ಭಗವನ್ನದ್ಯ ವಕ್ತುಮೇವಂವಿಧಂ ವಚಃ |
ಬ್ರಾಹ್ಮಣಾಪಶದಂ ಪುತ್ರಂ ಪ್ರಾಪ್ಸ್ಯಸೀತಿ ಮಹಾಮುನೇ ||22||
ಪತಿಯಿಂದ ಈ ರೀತಿಯಲ್ಲಿ ಹೇಳಲ್ಪಟ್ಟ ಮಹಾನುಭಾವಳಾದ ಸತ್ಯವತಿಯು ಆಗ ನಡುಗುತ್ತಾ ಪತಿಯ ಪಾದಗಳ ಮೇಲೆ ಶಿರಸಾ ಬಿದ್ದು, ಪೂಜ್ಯರೇ! ಮಹರ್ಷಿ- ಗಳೇ! ನೀವು ಈ ರೀತಿಯಲ್ಲಿ ನೀಚಕ್ಷತ್ರಿಯನನ್ನು ಪುತ್ರನನ್ನಾಗಿ ಪಡೆಯುವಿ ಎಂದು ಹೇಳುವುದು ಯುಕ್ತವಲ್ಲ ಎಂದು ಹೇಳಿದಳು.
ಋಚೀಕಃ
ನೈಷ ಸಂಕಲ್ಪಿತಃ ಕಾಮೋ ಮಯಾ ಭದ್ರೇ ತಥಾ ತ್ವಯಿ |
ಉಗ್ರಕರ್ಮಾ ಭವೇತ್ ಪುತ್ರಶ್ಚರುರ್ಮಾತಾ ಚ ಕಾರಣಮ್ ||23||
ಋಚೀಕ ಎಲೌ ಭದ್ರೆ! ನಿನಗೆ ಉಗ್ರಕರ್ಮವನ್ನು ಮಾಡುವ ಪುತ್ರನಾಗ- ಬೇಕೆಂದು ನಾನು ಸಂಕಲ್ಪಿಸಿರಲಿಲ್ಲ. ಈ ವ್ಯತ್ಯಾಸಕ್ಕೆ ಚರುವೂ ಮತ್ತು ನಿನ್ನ ತಾಯಿಯೂ ಕಾರಣರಾಗಿದ್ದಾರೆ.
ಸತ್ಯವತೀ
ಇಚ್ಛನ್ ಲೋಕಾನಪಿ ಮುನೇ ಸೃಜೇಥಾಃ ಕಿಂ ಪುನರ್ಮಮ |
ಶಮಾತ್ಮಕಮೃಜುಂ ಪುತ್ರಂ ಲಭೇಯಂ ಜಪತಾಂವರ ||24||
ಸತ್ಯವತೀ ಎಲ್ಲೈ ಋಷಿಗಳೇ! ನೀವು ಬಯಸಿದರೆ ಮೂರು ಲೋಕಗಳನ್ನೂ ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿದ್ದೀರಿ. ನನ್ನ ಇಷ್ಟವನ್ನು ಕೊಡುವ ಸಾಮರ್ಥ್ಯದ ವಿಷಯದಲ್ಲಿ ಏನು ಹೇಳಬೇಕು? ಜಪವನ್ನು ಮಾಡುವವರಲ್ಲಿ ಶ್ರೇಷ್ಠರೇ! ನಾನು ಶಾಂತನಾದ

ಆರ್ಜವವನ್ನು ಹೊಂದಿದ ಪುತ್ರನನ್ನು ಪಡೆದೇನು!
ಋಚೀಕಃ
ನೋಕ್ತಪೂರ್ವಂ ಮಯಾ ಭದ್ರೇ ಸ್ವೈರೇಷ್ವಪ್ಯನೃತಂ ವಚಃ |
ಕಿಮುತಾಗ್ನಿಂ ಸಮಾಧಾಯ ಮಂತ್ರವಚ್ಚರುಸಾಧನೇ ॥25॥
ಋಷೀಕ ಭದ್ರೆಯೇ! ನಾನು ವಿನೋದಕ್ಕಾಗಿಯೂ ಹಿಂದೆ ಸುಳ್ಳು ಮಾತ- ನಾಡಿದವನಲ್ಲ. ಹೀಗಿರುವಾಗ ಅಗ್ನ್ಯಾಧಾನವನ್ನು ಮಾಡಿ ಮಂತ್ರಪೂರ್ವಕವಾಗಿ ಚರುವನ್ನು ಸಿದ್ಧಪಡಿಸುವಾಗ ಹೇಗೆ ಸುಳ್ಳನ್ನು ಮಾತನಾಡುವೆನು?
ಸತ್ಯವತೀ
ಕಾಮಮೇವಂ ಭವೇತ್ ಪೌತ್ರೋ ಮಮೇಹ ತವ ಚೈವ ಹ |
ಶಮಾತ್ಮಕಮೃಜುಂ ಪುತ್ರಂ ಲಭೇಯಂ ಜಪತಾಂವರ ॥26॥
ಸತ್ಯವತೀ ಎಲೈ ಜಪಿಸುವವರಲ್ಲಿ ಶ್ರೇಷ್ಠರಾದವರೇ! ಬೇಕಾದರೆ ನನ್ನ ಮತ್ತು ನಿಮ್ಮ ಪೌತ್ರನು ನೀವು ಹೇಳಿದಂತೆಯೇ ಆಗಲಿ. ಆದರೆ ಪುತ್ರನು ಮಾತ್ರ ಶಾಂತನೂ ಮತ್ತು ಋಜುವೂ ಆಗಿರಬೇಕು.
ಋಚೀಕಃ
ಪುತ್ರೇ ನಾಸ್ತಿ ವಿಶೇಷೋ ಮೇ ಪೌತ್ರೇ ವಾ ವರವರ್ಣಿನಿ |
ಯಥಾ ತ್ವಯೋಕ್ತಂ ತು ವಚಸ್ತಥಾ ಭದ್ರೇ ಭವಿಷ್ಯತಿ ॥27॥
ಋಚೀಕರು ಎಲೌ ಸುಂದರಿಯೇ! ನನಗೆ ಪುತ್ರನಲ್ಲಿ ಮತ್ತು ಪೌತ್ರನಲ್ಲಿ ಯಾವ ವಿಶೇಷವೂ ಕಾಣುವುದಿಲ್ಲ. ಎಲೌ ಭದ್ರೆಯೇ! ಆದ್ದರಿಂದ ನೀನು ಹೇಳಿ- ದಂತೆಯೇ ಆಗುವುದು.
ಶ್ರೀಭಗವಾನ್
ತತಃ ಸತ್ಯವತೀ ಪುತ್ರಂ ಜನಯಾಮಾಸ ಭಾರ್ಗವಮ್ |
ತಪಸ್ಯಭಿರತಂ ಶಾಂತಂ ಜಮದಗ್ನಿಂ ಶಮಾತ್ಮಕಮ್ ॥28॥
ಶ್ರೀಭಗವಾನ್ ಅನಂತರ ಸತ್ಯವತಿಯು ಭೃಗುಕುಲಕ್ಕೆ ಸೇರಿದ ತಪೋನಿಷ್ಠರಾದ ಶಾಂತರಾದ ಜಮದಗ್ನಿಗಳನ್ನು ಪುತ್ರರನ್ನಾಗಿ ಪಡೆದಳು.
ವಿಶ್ವಾಮಿತ್ರಂ ಚ ದಾಯಾದಂ ಗಾಧಿಃ ಕುಶಿಕನಂದನಃ |
ಪ್ರಾಪ ಬ್ರಹ್ಮರ್ಷಿಸಮಿತಂ ವಿಶ್ವೇನ ಬ್ರಹ್ಮಣಾ ಯುತಮ್ ॥29॥
ಕುಶಿಕನಂದನನಾದ ಗಾಧಿಯು ವಿಶ್ವಾಮಿತ್ರರನ್ನು ಪುತ್ರರನ್ನಾಗಿ ಪಡೆದನು. ವಿಶ್ವಾಮಿತ್ರರು ಮುಂದೆ ಬ್ರಹ್ಮರ್ಷಿಸಮಾನರಾಗಿ ಪರಿಗಣಿಸಲ್ಪಟ್ಟು ವಿಶ್ವನಾಮಕನಾದ ಪರಬ್ರಹ್ಮನ ಸನ್ನಿಧಾನದಿಂದ ಕೂಡಿದವರಾದರು.
ಆರ್ಚೀಕೋ ಜನಯಾಮಾಸ ಜಮದಗ್ನಿಃ ಸುದಾರುಣಮ್ |
ಸರ್ವವಿದ್ಯಾಂತಗಂ ಶ್ರೇಷ್ಠಂ ಧನುರ್ವೇದೇ ಚ ಪಾರಗಮ್ |
ರಾಮಂ ಕ್ಷತ್ರಿಯಹಂತಾರಂ ಪ್ರದೀಪ್ತಮಿವ ಪಾವಕಮ್ ॥30॥
ಋಚೀಕಪುತ್ರರಾದ ಜಮದಗ್ನಿಗಳು ಅತ್ಯಂತ ಘೋರನೂ, ಸರ್ವವಿದ್ಯಾ ಪಾರಂಗತನೂ, ಶ್ರೇಷ್ಠನೂ, ಧನುರ್ವೇದದಲ್ಲಿಯೂ ಪಾರಂಗತನೂ, ಕ್ಷತ್ರಿಯ- ಸಂಹಾರಕನೂ, ಜ್ವಲಿಸುವ ಅಗ್ನಿಯಂತಿರುವವನೂ ಆದ ರಾಮನನ್ನು ಪುತ್ರನನ್ನಾಗಿ ಪಡೆದರು.
ತೋಷಯಿತ್ವಾ ಮಹಾದೇವಂ ಪರ್ವತೇ ಗಂಧಮಾದನೇ |
ಅಸ್ತ್ರಾಣಿ ವರಯಾಮಾಸ ಪರಶುಂ ಚಾತಿತೇಜಸಮ್ ॥31॥
ರಾಮನು ಗಂಧಮಾದನಪರ್ವತದಲ್ಲಿ ಮಹಾದೇವನನ್ನು ಸಂತೋಷಪಡಿಸಿ ಅವನಿಂದ ಅಸ್ತ್ರಗಳನ್ನೂ ಅತಿತೇಜಸ್ಸುಳ್ಳ ಪರಶುವನ್ನೂ ವರವನ್ನಾಗಿ ಪಡೆದನು. (ಅಲ್ಲಿಂದ ಅವನಿಗೆ ಪರಶುರಾಮನೆಂಬ ಹೆಸರು ಬಂದಿತು).
ಸ ತೇನಾಕುಂಠಧಾರೇಣ ಜ್ವಲಿತಾನಲವರ್ಚಸಾ |
ಕುಠಾರೇಣಾಪ್ರಮೇಯೇನ ಲೋಕೇಷ್ವಪ್ರತಿಮೋಽಭವತ್ ॥32॥
ಜ್ವಲಿಸುವ ಅಗ್ನಿಗೆ ಸಮವಾದ ನಿಶಿತವಾದ ಧಾರೆಯುಳ್ಳ ಅಪರಿಮಿತವಾದ ಶಕ್ತಿಯುಳ್ಳ ಆ ಪರಶುವಿನಿಂದ ಲೋಕದಲ್ಲಿ ಅವನು ಅಪ್ರತಿಮನಾದನು.
ಏತಸ್ಮಿನ್ನೇವ ಕಾಲೇ ತು ಕೃತವೀರ್ಯಾತ್ಮಜೋ ಬಲೀ |
ಅರ್ಜುನೋ ನಾಮ ತೇಜಸ್ವೀ ಕ್ಷತ್ರಿಯೋ ಹೈಹಯಾನ್ವಯಃ ॥33॥
ಅಜಯತ್ ಪೃಥಿವೀಂ ಸರ್ವಾಂ ಸಪ್ತದ್ವೀಪಾಂ ಸಪತ್ತನಾಮ್ |
ಸ್ವಬಾಹ್ವಸ್ತ್ರಬಲೇನಾಜೌ ಧರ್ಮೇಣ ಪರಮೇಣ ಚ ॥34॥
ಇದೇ ಸಮಯದಲ್ಲಿ ಕೃತವೀರ್ಯಪುತ್ರನಾದ ಅರ್ಜುನನೆಂಬ ಹೈಹಯಕುಲದ ತೇಜಸ್ವಿಯಾದ ಕ್ಷತ್ರಿಯನು ತನ್ನ ಬಾಹುಬಲದಿಂದ ಅಸ್ತ್ರಬಲದಿಂದ ಮತ್ತು ಶ್ರೇಷ್ಠ- ವಾದ ಧರ್ಮದ ಬಲದಿಂದ ಪಟ್ಟಣಗಳಿಂದ ಸಹಿತವಾದ ಸಪ್ತದ್ವೀಪವತಿಯಾದ ಭೂಮಿಯನ್ನು ಗೆದ್ದನು.
ತೃಷಿತೇನ ಸ ಕೌರವ್ಯ ಭಿಕ್ಷಿತಶ್ಚಿತ್ರಭಾನುನಾ |
ಸಹಸ್ರಬಾಹುರ್ವಿಕ್ರಾಂತಃ ಪ್ರಾದಾದ್ ಭಿಕ್ಷಾಮಥಾಗ್ನಯೇ ॥35॥
ಎಲೈ ಕೌರವ್ಯನೇ! ಸಹಸ್ರಬಾಹುವಾದ ಅವನು ಅಗ್ನಿಯು ಬಾಯಾರಿ ಬೇಡಿ- ದಾಗ ತನ್ನ ಪರಾಕ್ರಮದಿಂದ ಅಗ್ನಿಗೆ ಭಿಕ್ಷೆಯನ್ನು ನೀಡಿದನು.
ಗ್ರಾಮಾನ್ ಪುರಾಣಿ ಘೋಷಾಂಶ್ಚ ಪತ್ತನಾನಿ ಚ ವೀರ್ಯವಾನ್ |

ಜಜ್ವಾಲ ತಸ್ಯ ಬಾಣೈಸ್ತು ಚಿತ್ರಭಾನುರ್ದಿಧಕ್ಷಯಾ ॥36॥
ಕಾರ್ತವೀರ್ಯಾರ್ಜುನನು ಪ್ರಯೋಗಿಸಿದ ಬಾಣದಿಂದ ಉಂಟಾದ ಅಗ್ನಿ- ಯಿಂದ ಎಲ್ಲವನ್ನೂ ದಹಿಸಿ ಭಕ್ಷಿಸಲು ಬಯಸಿ ಅಗ್ನಿಯು ಗ್ರಾಮಗಳನ್ನೂ, ಪುರ- ಗಳನ್ನೂ, ಪಟ್ಟಣಗಳನ್ನೂ ಮತ್ತು ಹಳ್ಳಿಗಳನ್ನೂ ಜ್ವಲಿಸಿದನು.
ಸ ತಸ್ಯ ಪುರುಷೇಂದ್ರಸ್ಯ ಪ್ರಭಾವೇನ ಮಹಾತಪಾಃ |
ದದಾಹ ಕಾರ್ತವೀರ್ಯಸ್ಯ ಶೈಲಾನಥ ವನಾನಿ ಚ ॥37॥
ಮಹಾತಪಸ್ವಿಯಾದ ಅಗ್ನಿಯು ಪುರುಷೇಂದ್ರನಾದ ಕಾರ್ತವೀರ್ಯಾರ್ಜುನನ ಪ್ರಭಾವದಿಂದ ಕಾರ್ತವೀರ್ಯಾರ್ಜುನನ ಪರ್ವತಗಳನ್ನೂ ವನಗಳನ್ನೂ ಸುಟ್ಟು ಹಾಕಿದನು.
ಸ ಶೂನ್ಯಮಾಶ್ರಮಾರಣ್ಯಮ್ ಆಪವಸ್ಯ ಮಹಾತ್ಮನಃ |
ದದಾಹ ಪವನೇನೇದ್ಧಶ್ಚಿತ್ರಭಾನುಃ ಸಹೈಹಯಃ ॥38॥
ಅಗ್ನಿಯು ಹೈಹಯರಾಜನಿಂದ ಸಹಿತನಾಗಿ ಮಹಾತ್ಮರಾದ ವಸಿಷ್ಠರ ಶೂನ್ಯ- ವಾದ ಅರಣ್ಯಾಶ್ರಮವನ್ನು ವಾಯುವಿನ ಸಹಾಯದಿಂದ ಸುಟ್ಟುಹಾಕಿದನು.
ಆಪವಸ್ತಂ ತತೋ ರೋಷಾಚ್ಛಶಾಪಾರ್ಜುನಮಚ್ಯುತ |
ದಗ್ಧೇ ಶ್ರಮೇ ಮಹಾರಾಜ ಕಾರ್ತವೀರ್ಯೇಣ ವೀರ್ಯವಾನ್ ॥39॥
ಎಲೈ ಮಹಾರಾಜನೇ! ಅಚ್ಯುತನೇ! ಕಾರ್ತವೀರ್ಯನ ಸಹಾಯದಿಂದ ಅಗ್ನಿಯು ತಮ್ಮ ಆಶ್ರಮವನ್ನು ದಹಿಸಿದ ಕಾರಣದಿಂದ ಪರಾಕ್ರಮಶಾಲಿಗಳಾದ ವಸಿಷ್ಠರು ರೋಷದಿಂದ ಅರ್ಜುನನಿಗೆ ಶಾಪವನ್ನು ಕೊಟ್ಟರು.
ತ್ವಯಾ ನ ವರ್ಜಿತಂ ಮೋಹಾದ್ ಯಸ್ಮಾದ್ ವನಮಿದಂ ಮಮ |
ದಗ್ಧಂ ತಸ್ಮಾದ್ ರಣೇ ರಾಮೋ ಬಾಹೂಂಸ್ತೇ ಛೇತ್ಸ್ಯತೇಽರ್ಜುನ ॥40॥
ಎಲೈ ಅರ್ಜುನನೇ! ನೀನು ಮೋಹಕ್ಕೆ ವಶನಾಗಿ ನನ್ನ ಈ ಕಾನನಾಶ್ರಮವನ್ನು ಬಿಡದೆ ದಹಿಸಿದ ಕಾರಣದಿಂದ ಮುಂದೆ ಪರಶುರಾಮನು ಯುದ್ಧದಲ್ಲಿ ನಿನ್ನ ಬಾಹುಗಳನ್ನು ಕತ್ತರಿಸುವನು (ಎಂದು ಶಾಪವನ್ನು ನೀಡಿದರು).
ಅರ್ಜುನಸ್ತು ಮಹಾರಾಜ ಬಲೀ ನಿತ್ಯಂ ಶಮಾತ್ಮಕಃ |
ಬ್ರಹ್ಮಣ್ಯಶ್ಚ ಶರಣ್ಯಶ್ಚ ದಾತಾಶೂರಶ್ಚ ಭಾರತ ॥41॥
ಎಲೈ ಮಹಾರಾಜನೇ! ಭಾರತನೇ! ಅರ್ಜುನನಾದರೋ ಬಲಿಷ್ಠನೂ, ಯಾವಾಗಲೂ ಶಾಂತಸ್ವರೂಪನೂ, ಬ್ರಾಹ್ಮಣವತ್ಸಲನೂ, ಶರಣಾಗತವತ್ಸಲನೂ, ದಾತೃವೂ ಮತ್ತು ಶೂರನೂ ಆಗಿದ್ದನು.
ತಸ್ಯ ಪುತ್ರಾಃ ಸುಬಲಿನಃ ಶಾಪೇನಾಸನ್ ಪಿತುರ್ವಧೇ |
ನಿಮಿತ್ತಮವಲಿಪ್ತಾ ವೈ ನೃಶಂಸಾಶ್ಚೈವ ನಿತ್ಯದಾ ॥42॥
ಅವನ ಪುತ್ರರು ಬಲಿಷ್ಠರೂ ಕ್ರೂರಿಗಳೂ ದರ್ಪಿಷ್ಠರೂ ಆಗಿ ಶಾಪದಿಂದ ಪಿತೃ- ವಧೆಗೆ ಕಾರಣರಾದರು.
ಜಮದಗ್ನಿಧೇನ್ವಾಸ್ತೇ ವತ್ಸಮಾನಿನ್ಯುರ್ಭರತರ್ಷಭ |
ಅಜ್ಞಾತಂ ಕಾರ್ತವೀರ್ಯಸ್ಯ ಹೈಹಯೇಂದ್ರಸ್ಯ ಧೀಮತಃ ॥43॥
ಎಲೈ ಭರತರ್ಷಭನೇ! ಅವರು ಜಮದಗ್ನಿಋಷಿಗಳ ಧೇನುವಿನ ಕರುವನ್ನು ಮೇಧಾವಿಯಾದ ಹೈಹಯರಾಜನಾದ ಕಾರ್ತವೀರ್ಯನಿಗೆ ತಿಳಿಯದಂತೆಯೇ ಎಳೆದುಕೊಂಡು ಬಂದರು.
ತತೋಽರ್ಜುನಸ್ಯ ಬಾಹೂಂಸ್ತು ಛಿತ್ತ್ವಾ ವೈ ಪೌರುಷಾನ್ವಿತಃ |
ತಂ ರುವಂತಂ ತತೋ ವತ್ಸಂ ಜಾಮದಗ್ನ್ಯಃ ಸ್ವಮಾಶ್ರಮಮ್ ॥44॥
ಎಲೈ ರಾಜೇಂದ್ರನೇ! ಅನಂತರ ಪೌರುಷವನ್ನು ಹೊಂದಿದ ಪ್ರಭುಗಳಾದ ಪರಶುರಾಮರು ಅರ್ಜುನನ ಬಾಹುಗಳನ್ನು ಕತ್ತರಿಸಿ ಕಿರುಚಾಡುತ್ತಿದ್ದ ಆ ಕರುವನ್ನು ರಾಜನ ಅಂತಃಪುರದಿಂದ ತಮ್ಮ ಆಶ್ರಮಕ್ಕೆ ಹಿಂದಕ್ಕೆ ತೆಗೆದುಕೊಂಡು ಬಂದರು.
ಅರ್ಜುನಸ್ಯ ಸುತಾಸ್ತೇ ತು ಸಂಭೂಯಾಬುದ್ಧಯಸ್ತದಾ |
ಗತ್ವಾಽಽಶ್ರಮಮಸಂಬುದ್ಧಂ ಜಮದಗ್ನೇರ್ಮಹಾತ್ಮನಃ ॥45॥
ಅಪಾತಯಂತ ಭಲ್ಲಾಗ್ರೈಃ ಶಿರಃ ಕಾಯಾನ್ನರಾಧಿಪ |
ಸಮಿತ್ಕುಶಾರ್ಥಂ ರಾಮಸ್ಯ ನಿರ್ಗತಸ್ಯ ಮಹಾತ್ಮನಃ ॥46॥
ಆಗ ಆ ಅರ್ಜುನನ ಬುದ್ಧಿಹೀನರಾದ ಪುತ್ರರು ಮಹಾತ್ಮರಾದ ಜಮದಗ್ನಿಗಳ ಆಶ್ರಮಕ್ಕೆ ಯಾರಿಗೂ ತಿಳಿಯದಂತೆ ಹೋಗಿ ಭಲ್ಲೆಯಿಂದ ಅವರ ಶಿರಸ್ಸನ್ನು ಕತ್ತರಿಸಿ ಕೆಡವಿದರು. ಎಲೈ ರಾಜನೇ! ಮಹಾತ್ಮರಾದ ಪರಶುರಾಮರು ಆಗ ಸಮಿತ್ತು ಮತ್ತು ಕುಶಗಳನ್ನು ತರಲು ಆಶ್ರಮದಿಂದ ಹೊರಗೆ ಹೋಗಿದ್ದರು.
ಪ್ರತ್ಯಕ್ಷಂ ರಾಮಮಾತುಶ್ಚ ತಥೈವಾಶ್ರಮವಾಸಿನಾಮ್ |
ಶ್ರುತ್ವಾ ರಾಮಸ್ತಮರ್ಥಂ ಚ ಕ್ರುದ್ಧಃ ಕಾಲಾನಲೋಪಮಃ ॥47॥
ರಾಮನ ತಾಯಿಯಾದ ರೇಣುಕೆಯ ಮತ್ತು ಆಶ್ರಮವಾಸಿಗಳ ಎದುರಿನಲ್ಲಿ ತಮ್ಮ ತಂದೆಯನ್ನು ಸಂಹರಿಸಿದುದನ್ನು ಕೇಳಿ ಪರಶುರಾಮರು ಕಾಲಾಗ್ನಿಯಂತೆ ಕೋಪಗೊಂಡರು.
ಧನುರ್ವೇದೇಽದ್ವಿತೀಯೋ ಹಿ ದಿವ್ಯಾಸ್ತ್ರೈಃ ಸಮಲಂಕೃತಃ |
ಚಂದ್ರಬಿಂಬಾರ್ಧಸಂಕಾಶಂ ಪರಶುಂ ಗೃಹ್ಯ ಭಾರ್ಗವಃ ॥48॥
ತತಃ ಪಿತೃವಧಾಮರ್ಷಾದ್ ರಾಮಃ ಪರಮಮನ್ಯುಮಾನ್ |
ನಿಃಕ್ಷತ್ರಿಯಾಂ ಪ್ರತಿಶ್ರುತ್ಯ ಮಹೀಂ ಶಸ್ತ್ರಮಗೃಹ್ಣತ ॥49॥
ಧನುರ್ವೇದದಲ್ಲಿ ಅದ್ವಿತೀಯರೂ ಮತ್ತು ದಿವ್ಯಾಸ್ತ್ರಗಳಿಂದ ಸಮಲಂಕೃತರೂ ಆದ ಪರಶುರಾಮರು ಅರ್ಧಚಂದ್ರಬಿಂಬದಂತಿದ್ದ

ಪರಶುವನ್ನು ತೆಗೆದುಕೊಂಡು ತಂದೆಯ ವಧೆಯಿಂದ ಬಹಳ ಕೋಪಗೊಂಡವರಾಗಿ ಭೂಮಿಯನ್ನು ಕ್ಷತ್ರಿಯ- ರಹಿತವನ್ನಾಗಿ ಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ ಶಸ್ತ್ರಗ್ರಹಣವನ್ನು ಮಾಡಿ- ದರು.
ತತಃ ಸ ಭೃಗುಶಾರ್ದೂಲಃ ಕಾರ್ತವೀರ್ಯಸ್ಯ ವೀರ್ಯವಾನ್ |
ವಿಕ್ರಮ್ಯ ನಿಜಘಾನಾಶು ಪುತ್ರಾನ್ ಪೌತ್ರಾಂಶ್ಚ ಸರ್ವಶಃ ॥50॥
ಅನಂತರ ಪರಾಕ್ರಮಶಾಲಿಗಳಾದ ಭೃಗುಶಾರ್ದೂಲರಾದ ಅವರು ತಮ್ಮ ಪರಾ -ಕ್ರಮದಿಂದ ಕಾರ್ತವೀರ್ಯನ ಪುತ್ರಪೌತ್ರರೆಲ್ಲರನ್ನೂ ಶೀಘ್ರವಾಗಿ ಸಂಹರಿಸಿದರು.
ಸ ಹೈಹಯಸಹಸ್ರಾಣಿ ಹತ್ವಾ ಪರಮಮನ್ಯುಮಾನ್ |
ಚಕಾರ ಭಾರ್ಗವೋ ರಾಜನ್ ಮಹೀಂ ಶೋಣಿತಕರ್ದಮಾಮ್ ॥51॥
ಎಲೈ ರಾಜನೇ! ಪರಮಕೋಪಿಷ್ಠರಾದ ಪರಶುರಾಮರು ಹೈಹಯಕುಲದ ಸಹಸ್ರಪುರುಷರನ್ನು ಕೊಂದು ಭೂಮಿಯನ್ನು ರಕ್ತದ ಕೆಸರುಳ್ಳದ್ದನ್ನಾಗಿ ಮಾಡಿದರು.
ಸ ತಥಾ ಸುಮಹಾತೇಜಾಃ ಕೃತ್ವಾ ನಿಃಕ್ಷತ್ರಿಯಾಂ ಮಹೀಮ್ |
ಕೃಪಯಾ ಪರಯಾವಿಷ್ಟೋ ವನಮೇವ ಜಗಾಮ ಹ ॥52॥
ಮಹಾತೇಜಸ್ವಿಗಳಾದ ಅವರು ಭೂಮಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡಿ ಶ್ರೇಷ್ಠ ಕೃಪೆಯಿಂದ ಕೂಡಿದವರಾಗಿ ಕಾಡಿಗೇ ಹೊರಟುಹೋದರು.
ತತೋ ವರ್ಷಸಹಸ್ರೇಷು ಸಮತೀತೇಷು ಕೇಷುಚಿತ್ |
ಕ್ಷೇಪಂ ಸಂಪ್ರಾಪ್ತವಾಂಸ್ತೀವ್ರಂ ಪ್ರಕೃತ್ಯಾ ಕೋಪನಃ ಪ್ರಭುಃ ॥53॥
ಅನಂತರ ಕೆಲವು ಸಹಸ್ರವರ್ಷಗಳು ಕಳೆದ ಮೇಲೆ ಸ್ವಭಾವದಿಂದಲೇ ಕೋಪ- ಶೀಲರಾದ ಪ್ರಭುಗಳಾದ ಅವರು ತೀವ್ರವಾದ ನಿಂದೆಗೆ ಗುರಿಯಾದರು.
ವಿಶ್ವಾಮಿತ್ರಸ್ಯ ಪೌತ್ರಸ್ತು ರೈಭ್ಯಪುತ್ರೋ ಮಹಾತಪಾಃ |
ಪರಾವಸುರ್ಮಹಾರಾಜ ಕ್ಷಿಪನ್ಕ್ವಹ ಜನಸಂಸದಿ ॥54॥
ಎಲೈ ಮಹಾರಾಜನೇ! ವಿಶ್ವಾಮಿತ್ರನ ಪೌತ್ರನೂ ಮಹಾತಪಸ್ವಿಯೂ ರೈಭ್ಯ- ಪುತ್ರನೂ ಆದ ಪರಾವಸುವು ಜನರ ಸಭೆಯಲ್ಲಿ ಪರಶುರಾಮರನ್ನು ನಿಂದಿಸಿ ಮಾತನಾಡಿದನು.
ಯೇ ತೇ ಯಯಾತಿಪತನೇ ಯಜ್ಞೇ ಸಂತಃ ಸಮಾಗತಾಃ |
ಪ್ರತರ್ದನಪ್ರಭೃತಯೋ ರಾಮ ಕಿಂ ಕ್ಷತ್ರಿಯಾ ನ ತೇ ॥55॥
ಎಲೈ ಪರಶುರಾಮನೇ! ಯಯಾತಿಪತನವೆಂಬ ಸ್ಥಳದಲ್ಲಿ ಯಜ್ಞವನ್ನು ಮಾಡಿ- ದಾಗ ಅಲ್ಲಿಗೆ ಸಮಾಗತರಾದ ಪ್ರತರ್ದನ ಮೊದಲಾದವರು ಕ್ಷತ್ರಿಯರಲ್ಲವೇ? (ಅವರನ್ನು ನೀನು ಏಕೆ ಕೊಲ್ಲಲಿಲ್ಲ?)
ಮಿಥ್ಯಾಪ್ರತಿಜ್ಞೋ ರಾಮ ತ್ವಂ ಕತ್ಥಸೇ ಜನಸಂಸದಿ |
ಭಯಾತ್ ಕ್ಷತ್ರಿಯವೀರಾಣಾಂ ಪರ್ವತಂ ಸಮುಪಾಶ್ರಿತಃ ॥56॥
ಎಲೈ ಪರಶುರಾಮನೇ! ನೀನು ಮಿಥ್ಯಾ ಪ್ರತಿಜ್ಞೆಯನ್ನು ಮಾಡಿ ಜನರೆದುರಿನಲ್ಲಿ ನಿನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಿದ್ದೀಯೆ. ಕ್ಷತ್ರಿಯವೀರರ ಭಯದಿಂದ ನೀನು ಪರ್ವತವನ್ನು ಸೇರಿದ್ದೀಯೆ.
ಸ ಪುನಃ ಕ್ಷತ್ರಿಯಶತೈಃ ಪೃಥಿವೀಮನುಸಂತತಾಮ್ |
ಪರಾವಸೋಸ್ತದಾ ಶ್ರುತ್ವಾ ಶಸ್ತ್ರಂ ಜಗ್ರಾಹ ಭಾರ್ಗವಃ ॥57॥
ಆಗ ಪರಶುರಾಮರು ಪರಾವಸುವಿನ ಆ ಮಾತನ್ನು ಕೇಳಿ, ಪುನಃ ಭೂಮಿಯಲ್ಲಿ ಕ್ಷತ್ರಿಯಜಾತಿಯು ನಿಬಿಡವಾಗಿ ಹರಡಿರುವುದನ್ನು ತಿಳಿದು ಪುನಃ ಶಸ್ತ್ರಗ್ರಹಣವನ್ನು ಮಾಡಿದರು.
ತತೋ ಯೇ ಕ್ಷತ್ರಿಯಾ ರಾಜನ್ ಶತಸ್ತೇನ ಜೀವಿತಾಃ |
ತೇ ವಿವೃದ್ಧಾ ಮಹಾವೀರ್ಯಾಃ ಪೃಥಿವೀಪತಯೋಽಭವನ್ ॥58॥
ಎಲೈ ರಾಜನೇ! ಆಗ ಮೊದಲು ಯಾವ ನೂರಾರು ಸಂಖ್ಯೆಯ ಕ್ಷತ್ರಿಯರನ್ನು ಅವರು ಕೊಲ್ಲದೆ ಜೀವಸಹಿತವಾಗಿ ಉಳಿಸಿದ್ದರೋ, ಅವರೆಲ್ಲರೂ ಬೆಳೆದು ಮಹಾ- ಪರಾಕ್ರಮಿಗಳಾಗಿ ರಾಜರಾಗಿದ್ದರು.
ಸ ಪುನಸ್ತಾನ್ ಜಘಾನಾಶು ಬಾಲಾನಪಿ ನರಾಧಿಪ |
ಗರ್ಭಸ್ಥೈಸ್ತು ಮಹೀ ವ್ಯಾಪ್ತಾ ಪುನರೇವಾಭವತ್ ತದಾ ॥59॥
ಎಲೈ ರಾಜನೇ! ಪರಶುರಾಮರು ಪುನಃ ಬಾಲಕರನ್ನೂ ಸೇರಿಸಿ ಅವರನ್ನು ಶೀಘ್ರವಾಗಿ ಕೊಂದರು. ಆದರೆ ಪುನಃ ಗರ್ಭದಲ್ಲಿದ್ದ ಕ್ಷತ್ರಿಯರಿಂದ ಭೂಮಿಯು ವ್ಯಾಪ್ತವಾಯಿತು.
ಜಾತಂ ಜಾತಂ ಸ ಗರ್ಭಂ ತು ಪುನರೇವ ಜಘಾನ ಹ |
ಅರಕ್ಷಂಶ್ಚ ಸುತಾನ್ ಕಾಶ್ಚಿತ್ ತದಾ ಕ್ಷತ್ರಿಯಯೋಷಿತಃ ॥60॥
ಪರಶುರಾಮರು ಪುನಃ ಗರ್ಭವು ಜನಿಸಿದಂತೆ, ಜನಿಸಿದಂತೆ ಶಿಶುಗಳನ್ನು ಸಂಹರಿಸಿದರು. ಆಗ ಕೆಲವು ಕ್ಷತ್ರಿಯಸ್ತ್ರೀಯರು ಮಾತ್ರ ತಮ್ಮ ಪುತ್ರರನ್ನು ರಕ್ಷಿಸಿದರು.
ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ |
ದಕ್ಷಿಣಾಮಶ್ವಮೇಧಾಂತೇ ಕಶ್ಯಪಾಯಾದದತ್ ತತಃ ॥61॥
ಪ್ರಭುಗಳಾದ ಪರಶುರಾಮರು ಇಪ್ಪತ್ತೊಂದು ಬಾರಿ ಭೂಮಿಯನ್ನು ಸುತ್ತಿ, ನಿಃಕ್ಷತ್ರಿಯವನ್ನಾಗಿ ಮಾಡಿ ಅಶ್ವಮೇಧವನ್ನು ಮಾಡಿ ಸಮಗ್ರವಾದ ಭೂಮಿಯನ್ನು ಕಶ್ಯಪರಿಗೆ ದಕ್ಷಿಣೆಯನ್ನಾಗಿ ನೀಡಿದರು.

ಕ್ಷತ್ರಿಯಾಣಾಂ ತು ಶೇಷಾರ್ಥಂ ಕರೇಣೋದ್ದಿಶ್ಯ ಕಶ್ಯಪಃ |
ಸುಕ್‌ಪ್ರಗ್ರಹವತಾ ರಾಜನ್ ಶ್ರೀಮಾನ್ ವಾಕ್ಯಮಥಾಬ್ರವೀತ್ ॥62॥
ಎಲೈ ರಾಜನೇ! ಕ್ಷತ್ರಿಯಕುಲವನ್ನು ಉಳಿಸುವ ಸಲುವಾಗಿ ಕಾಂತಿಯುಕ್ತರಾದ ಕಶ್ಯಪರು ಸ್ರುವವನ್ನು ಹಿಡಿದ ಹಸ್ತವನ್ನು ಮೇಲಕ್ಕೆ ಎತ್ತಿ ತೋರಿಸಿ ಈ ಮಾತನ್ನಾ- ಡಿದರು.
ಗಚ್ಛಂ ಪಾರಂ ಸಮುದ್ರಸ್ಯ ದಕ್ಷಿಣಸ್ಯ ಮಹಾಮುನೇ |
ನ ತೇ ಮದ್ವಿಷಯೇ ರಾಮ ವಸ್ತವ್ಯಮಿಹ ಕರ್ಹಿಚಿತ್ ॥63॥
ಎಲೈ ಮಹಾಮುನಿಯೇ! ದಕ್ಷಿಣಸಮುದ್ರದ ತೀರಕ್ಕೆ ಹೊರಟು ಹೋಗು. ಎಲೈ ರಾಮನೇ! ನನ್ನ ರಾಜ್ಯದಲ್ಲಿ ನೀನು ಯಾವ ಕಾರಣಕ್ಕೂ ವಾಸವನ್ನು ಮಾಡಬಾರದು - ಎಂದು ಹೇಳಿದರು.
ತತಃ ಶೂರ್ಪಾಕರೋದ್ದೇಶಂ ಸಾಗರಸ್ತಸ್ಯ ನಿರ್ಮಮೇ |
ಸಂತ್ರಾಸಾಜ್ಜಾಮದಗ್ನ್ಯಸ್ಯ ಸೋಽಪರಾಂತಮಹೀತಳಮ್ ॥64॥
ಆಗ ಪರಶುರಾಮರ ಭಯದಿಂದ ಸಾಗರನು ಪಶ್ಚಿಮಸಮುದ್ರದಲ್ಲಿ ಕನ್ಯಾ- ತೀರ್ಥದ ಸಮೀಪದಲ್ಲಿ ಪರಶುರಾಮರ ಶೂರ್ಪಾಕಾರವಾದ ಶರವು ಬಿದ್ದ ಕಾರಣ- ದಿಂದ ಶೂರ್ಪಾಕರವೆಂಬ ದೇಶದವರೆಗೆ ಭೂಮಿಯನ್ನು ನಿರ್ಮಿಸಿಕೊಟ್ಟನು.
ಕಶ್ಯಪಸ್ತು ಮಹಾರಾಜ ಪ್ರತಿಗೃಹ್ಯ ಮಹೀಮಿಮಾಮ್ |
ಕೃತ್ವಾ ಬ್ರಾಹ್ಮಣಸಂಸ್ಥಾಂ ವೈ ಪ್ರವಿವೇಶ ಮಹಾವನಮ್ ॥65॥
ಎಲೈ ಮಹಾರಾಜನೇ! ಕಶ್ಯಪರಾದರೋ ಈ ಭೂಮಿಯನ್ನು ದಾನವಾಗಿ ಸ್ವೀಕರಿಸಿ, ಅದನ್ನು ಬ್ರಾಹ್ಮಣರಿಗೆ ದಾನವನ್ನಾಗಿ ನೀಡಿ, ತಪಸ್ಸಿಗಾಗಿ ಮಹಾರಣ್ಯವನ್ನು ಪ್ರವೇಶಿಸಿದರು.
ತತಃ ಶೂದ್ರಾಶ್ಚ ವೈಶ್ಯಾಶ್ಚ ಯಥಾಸ್ವೈರಪ್ರಚಾರಿಣಃ |
ಅವರ್ತಂತ ದ್ವಿಜಾಗ್ರ್ಯಾಣಾಂ ದಾರೇಷು ಭರತರ್ಷಭ ॥66॥
ಎಲೈ ಭರತಶ್ರೇಷ್ಠನೇ! ಆನಂತರ ಶೂದ್ರರು ಮತ್ತು ವೈಶ್ಯರು ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಳ್ಳುತ್ತಾ ಶ್ರೇಷ್ಠರಾದ ಬ್ರಾಹ್ಮಣರ ಪತ್ನಿಯರ ಸಹವಾಸವನ್ನು ಮಾಡಿದರು.
ಅರಾಜಕೇ ಜೀವಲೋಕೇ ದುರ್ಬಲಾ ಬಲವತ್ತರೈಃ |
ಬಾಧ್ಯಂತೇ ನಚ ವಿತ್ತೇಷು ಪ್ರಭುತ್ವಮಿಹ ಕಸ್ಯಚಿತ್ ॥67॥
ಜೀವಲೋಕವು ಅರಾಜಕವಾದಾಗ ದುರ್ಬಲರು ಬಲಿಷ್ಠರಿಂದ ಪೀಡಿಸ- ಲ್ಪಟ್ಟರು. ಯಾರಿಗೂ ತಮ್ಮ ಧನದ ಮೇಲೆ ಒಡೆತನವಿರಲಿಲ್ಲ.
ಬ್ರಾಹ್ಮಣಾ ಮದ್ಯಪಾ ಕೇಚಿನ್ಮೂರ್ಖಾಃ ಪಂಡಿತಮಾನಿನಃ |
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಶ್ಚೋತ್ಪಥಗಾಮಿನಃ ॥68॥
ಬ್ರಾಹ್ಮಣರು ಮದ್ಯಪಾನರತರಾದರು. ಕೆಲವು ಮೂರ್ಖರು ತಮ್ಮನ್ನೇ ಪಂಡಿತ -ರೆಂದುಕೊಂಡರು.ಬ್ರಾಹ್ಮಣರು ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ದು- ರ್ಮಾರ್ಗಗಾಮಿಗಳಾದರು.
ಪರಸ್ಪರಂ ಸಮಾಶ್ರಿತ್ಯ ಘಾತಯಂತ್ಯಪಥಿ ಸ್ಥಿತಾಃ |
ಸ್ವಧರ್ಮಂ ಬ್ರಾಹ್ಮಣಾಸ್ತ್ಯಕತ್ವ ಪಾಷಂಡಾಶ್ಚ ಸಮಾಶ್ರಿತಾಃ ॥69॥
ದುರ್ಮಾರ್ಗದಲ್ಲಿ ಪ್ರವೃತ್ತರಾಗಿ ಪರಸ್ಪರವಾಗಿ ಸಹಾಯವನ್ನು ಹೊಂದಿ ಪ್ರಜೆ- ಗಳನ್ನು ಕೊಲ್ಲಲು ಪ್ರಾರಂಭಿಸಿದರು. ಬ್ರಾಹ್ಮಣರು ತಮ್ಮ ಧರ್ಮವನ್ನು ತ್ಯಜಿಸಿ, ಪಾಷಂಡಮತಗಳನ್ನು ಆಶ್ರಯಿಸಿದರು.
ಚೌರಿಕಾನೃತಮಾಯಾಶ್ಚ  ಸರ್ವೇ ಚೈವ ಪ್ರಕುರ್ವತೇ |
ಸ್ವಧರ್ಮಸ್ಥಾನ್ ದ್ವಿಜಾನ್ ಹತ್ವಾ ತಥಾಶ್ರಮನಿವಾಸಿನಃ ॥70॥
ಸ್ವಧರ್ಮನಿರತರಾದ ಆಶ್ರಮವಾಸಿಗಳಾದ ಬ್ರಾಹ್ಮಣರನ್ನು ಕೊಂದು ಎಲ್ಲರೂ ಕಳ್ಳತನ ಸುಳ್ಳುತನ ಮತ್ತು ಮೋಸಗಳಲ್ಲಿ ಪ್ರವೃತ್ತರಾದರು.
ವೈಶ್ಯಾ ಸತ್ಪಥಸಂಸ್ಥಾಶ್ಚ ಶೂದ್ರಾ ಯೇ ಚೈವ ಧಾರ್ಮಿಕಾಃ |
ತಾನ್ ಸರ್ವಾನ್ ಘಾತಯಂತಿ ಸ್ಮ ದುರಾಚಾರಾ ಸುನಿರ್ಭಯಾಃ ॥71॥
ಯಜ್ಞಾಧ್ಯಯನಶೀಲಾಂಶ್ಚ ಆಶ್ರಮಸ್ಥಾಂಸ್ತಪಸ್ವಿನಃ |
ಗೋಬಾಲವೃದ್ಧನಾರೀಣಾಂ ನಾಶಂ ಕುರ್ವಂತಿ ಚಾಪರೇ ॥72॥
ದುರಾಚಾರವುಳ್ಳ ನಿರ್ಭಯರಾದ ದುರ್ಜನರು ಸನ್ಮಾರ್ಗದಲ್ಲಿದ್ದು ಧಾರ್ಮಿಕ- ರಾದ ವೈಶ್ಯರನ್ನೂ ಶೂದ್ರರನ್ನೂ ಎಲ್ಲರನ್ನೂ ಕೊಲ್ಲಲು ಪ್ರಾರಂಭಿಸಿದರು. ಇನ್ನು ಕೆಲವರು ಆಶ್ರಮದಲ್ಲಿ ತಪಸ್ಸನ್ನು ಮಾಡುವ ಯಜ್ಞಾಧ್ಯಯನಶೀಲರಾದ ಬ್ರಾಹ್ಮಣ- ರನ್ನೂ, ಗೋವುಗಳನ್ನೂ, ಬಾಲಕರನ್ನೂ, ವೃದ್ಧರನ್ನೂ, ಸ್ತ್ರೀಯರನ್ನೂ ನಾಶ- ಮಾಡಿದರು.
ಆನ್ವೀಕ್ಷಕೀ ತ್ರಯೀ ವಾರ್ತಾ ನ ಚ ನೀತಿಃ ಪ್ರವರ್ತತೇ |
ವ್ರಾತ್ಯತಾಂ ಸಮನುಪ್ರಾಪ್ತಾ ಬಹವೋ ಹಿ ದ್ವಿಜಾತಯಃ |
ಅಧರೋತ್ತರಾಪಚಾರೇಣ ಮ್ಲೇಚ್ಛಭೂತಾಶ್ಚ ಸರ್ವಶಃ ॥73॥
ತರ್ಕವಿದ್ಯೆಯಾಗಲೀ, ವೇದವಿದ್ಯೆಯಾಗಲೀ, ವಾಣಿಜ್ಯನೀತಿಯಾಗಲೀ ಯಾವು -ದೂ ಪ್ರವೃತ್ತವಾಗಲಿಲ್ಲ. ಬಹಳ ಬ್ರಾಹ್ಮಣರು ವ್ರತಭ್ರಷ್ಠರಾದರು. ಅಧಮರಾದ ವೈಶ್ಯಶೂದ್ರರು ಉತ್ತಮಸ್ಥಾನಗಳನ್ನು ಹೊಂದಿ ಎಲ್ಲವೂ ಮ್ಲೇಚ್ಛಮಯವಾಯಿತು.
ತತಃ ಕಾಲೇನ ಪೃಥಿವೀ ಪ್ರವಿವೇಶ ರಸಾತಳಮ್ |
ಅರಕ್ಷ್ಯಮಾಣಾ ವಿಧಿವತ್ ಕ್ಷತ್ರಿಯೈರ್ಧರ್ಮರಕ್ಷಿಭಿಃ ॥74॥
ಆಗ ಧರ್ಮವನ್ನು ರಕ್ಷಿಸುವ ಕ್ಷತ್ರಿಯರಿಂದ ಶಾಸೋತ್ರಕ್ತರೀತಿಯಲ್ಲಿ ರಕ್ಷಿಸಲ್ಪಡದ ಭೂಮಿಯು ರಸಾತಳಲೋಕವನ್ನು ಸೇರಿತು.

ಊರುಣಾ ಧಾರಯಾಮಾಸ ಕಶ್ಯಪಃ ಪೃಥಿವೀಂ ತತಃ |
ನಿಮಜ್ಜಂತೀಂ ತದಾ ರಾಜಂಸ್ತೇನೋರ್ವೀತಿ ಮಹೀ ಸ್ಮೃತಾ ||75||
ಆಗ ಕಶ್ಯಪರು ಮುಳುಗುತ್ತಿದ್ದ ಭೂಮಿಯನ್ನು ತಮ್ಮ ತೊಡೆಗಳಿಂದ ತಡೆದು ನಿಲ್ಲಿಸಿದರು. ಎಲೈ ರಾಜನೇ! ಆ ಕಾರಣದಿಂದ ಭೂಮಿಗೆ ಉರ್ವೀ ಎಂಬ ಹೆಸರು ಬಂದಿತು.
ರಕ್ಷಿಣಶ್ಚ ಸಮುದ್ದಿಶ್ಯ ಪ್ರಾಯಾಚತ್ ಪೃಥಿವೀ ತದಾ |
ಪ್ರಸಾದ್ಯ ಕಶ್ಯಪಂ ದೇವೀ ಕ್ಷತ್ರಿಯಾನ್ ಬಾಹುಶಾಲಿನಃ ||76||
ಆಗ ಭೂದೇವಿಯು ಕಶ್ಯಪರನ್ನು ಪ್ರಸನ್ನೀಕರಿಸಿಕೊಂಡು ತನ್ನನ್ನು ರಕ್ಷಿಸಲು ಬಾಹುಶಾಲಿಗಳಾದ ಕ್ಷತ್ರಿಯರನ್ನು ದಯಪಾಲಿಸಬೇಕೆಂದು ಯಾಚಿಸಿದಳು.
ಸಂತಿ ಬ್ರಹ್ಮನ್ ಮಯಾ ಗುಪ್ತಾ ನೃಷು ಕ್ಷತ್ರಿಯಪುಂಗವಾಃ |
ಹೈಹಯಾನಾಂ ಕುಲೇ ಜಾತಾಸ್ತೇ ಸಂರಕ್ಷಂತು ಮಾಂ ಮುನೇ ||77||
ಎಲೈ ಬ್ರಾಹ್ಮಣಶ್ರೇಷ್ಠರೇ! ಹೈಹಯಕುಲದಲ್ಲಿ ಜನಿಸಿದ ಕ್ಷತ್ರಿಯಪುಂಗವರನ್ನು ನಾನು ಗೋಪ್ಯವಾಗಿ ರಕ್ಷಿಸಿಟ್ಟಿದ್ದೇನೆ. ಎಲೈ ಋಷಿಗಳೇ! ಅವರು ನನ್ನನ್ನು ರಕ್ಷಿಸಲಿ.
ಅಸ್ತಿ ಪೌರವದಾಯಾದೋ ವಿದೂರಥಸುತಃ ಪ್ರಭೋ |
ಋಕ್ಷೈಃ ಸಂವರ್ಧಿತೋ ವಿಪ್ರ ಋಕ್ಷವತ್ಯೇವ ಪರ್ವತೇ ||78||
ಎಲೈ ಪ್ರಭುಗಳೇ! ಪೌರವವಂಶದಲ್ಲಿ ಹುಟ್ಟಿದ, ವಿದೂರಥನ ಪುತ್ರನಾದ, ಕರಡಿಗಳಿಂದ ಪೋಷಿಸಲ್ಪಟ್ಟ ಒಬ್ಬ ಕ್ಷತ್ರಿಯನು ಋಕ್ಷವಾನ್ ಪರ್ವತದಲ್ಲಿದ್ದಾನೆ.
ತಥಾಽನುಕಂಪಮಾನೇನ ಯಜ್ವನಾಽಥಾಮಿತೌಜಸಾ |
ಪರಾಶರೇಣ ದಾಯಾದಃ ಸೌದಾಸಸ್ಯಾಭಿರಕ್ಷಿತಃ ||79||
ಹಾಗೆಯೇ ಅಮಿತಪರಾಕ್ರಮಿಗಳಾದ, ಯಜ್ಞಶೀಲರಾದ, ಪರಾಶರರ ಅನು- ಕಂಪೆಗೆ ಪಾತ್ರನಾದ ಸೌದಾಸನ ಪುತ್ರನು ಪರಾಶರರಿಂದ ರಕ್ಷಿಸಲ್ಪಟ್ಟಿದ್ದಾನೆ.
ಸರ್ವಕರ್ಮಾಣಿ ಕುರುತೇ ತಸ್ಯರ್ಷೇಃ ಶೂದ್ರವದ್ಧಿ ಸಃ |
ಸರ್ವಕರ್ಮೇತ್ಯಭಿಖ್ಯಾತಃ ಸ ಮಾಂ ರಕ್ಷತು ಪಾರ್ಥಿವಃ ||80||
ಅವನು ಆ ಪರಾಶರ ಋಷಿಗಳಿಗೆ ಶೂದ್ರನಂತೆ ಎಲ್ಲ ಕೆಲಸವನ್ನೂ ಮಾಡು- ತ್ತಾನೆ. ಆ ಕಾರಣದಿಂದ ಅವನು ಸರ್ವಕರ್ಮನೆಂದೇ ಪ್ರಸಿದ್ಧನಾಗಿದ್ದಾನೆ. ರಾಜನಾದ ಅವನು ನನ್ನನ್ನು ರಕ್ಷಿಸಲಿ.
ಶಿಬೇಃ ಪುತ್ರೋ ಮಹಾತೇಜಾ ಗೋಪತಿರ್ನಾಮ ನಾಮತಃ |
ವನೇ ಸಂರಕ್ಷಿತೋ ಗೋಭಿಃ ಸೋಽಭಿರಕ್ಷತು ಮಾಂ ಮುನೇ ||81||
ಶಿಬಿಯ ಪುತ್ರನೂ ಮಹಾತೇಜಸ್ವಿಯೂ ಆದ ಗೋಪತಿಯೆಂಬ ಕ್ಷತ್ರಿಯನು ಕಾಡಿನಲ್ಲಿ ಗೋವುಗಳಿಂದ ಸಂರಕ್ಷಿಸಲ್ಪಟ್ಟಿದ್ದಾನೆ. ಎಲೈ ಋಷಿಗಳೇ! ಅವನು ನನ್ನನ್ನು ರಕ್ಷಿಸಲಿ.
ಪ್ರತರ್ದನಸ್ಯ ಪುತ್ರಸ್ತು ವತ್ಸೋ ನಾಮ ಮಹಾಯಶಾಃ |
ವತ್ಸೈಃ ಸಂವರ್ಧಿತೋ ಗೋಷ್ಠೇ ಸ ಮಾಂ ರಕ್ಷತು ಪಾರ್ಥಿವಃ ||82||
ಪ್ರತರ್ದನನ ಪುತ್ರನೂ ಮಹಾಕೀರ್ತಿವಂತನೂ ಆದ ವತ್ಸನೆಂಬುವನು ಗೋ- ಶಾಲೆಯಲ್ಲಿ ಕರುಗಳಿಂದ ಪೋಷಿಸಲ್ಪಟ್ಟಿದ್ದಾನೆ. ರಾಜನಾದ ಅವನು ನನ್ನನ್ನು ರಕ್ಷಿಸಲಿ.
ದಧಿವಾಹನಪೌತ್ರಸ್ತು ಪುತ್ರೋ ದಿವಿರಥಸ್ಯ ಹ |
ಅಂಗಃ ಸ ಗೌತಮೇನಾಪಿ ಗಂಗಾಕೂಲೇಽಭಿರಕ್ಷಿತಃ ||83||
ದಧಿವಾಹನನ ಪೌತ್ರನೂ, ದಿವ್ಯರಥನ ಪುತ್ರನೂ ಆದ ಅಂಗನು ಗಂಗಾ- ತೀರದಲ್ಲಿ ಗೌತಮರಿಂದ ರಕ್ಷಿಸಲ್ಪಟ್ಟಿದ್ದಾನೆ.
ಬೃಹದ್ರಥೋ ಮಹಾಬಾಹುರ್ಭುವಿ ಭೂತಿಪುರಸ್ಕೃತಃ |
ಗೋಲಾಂಗೂಲೈರ್ಮಹಾಭಾಗೋ ಗೃಧ್ರಕೂಟೇಽಭಿರಕ್ಷಿತಃ ||84||
ಮಹಾಬಾಹುವೂ, ಮಹಾನುಭಾವನೂ ಆದ, ಭೂಮಿಯಲ್ಲಿ ಐಶ್ವರ್ಯ- ವಂತನೂ ಆದ ಬೃಹದ್ರಥನು ಮುಖದಲ್ಲಿ ಕಪ್ಪಾದ ದೊಡ್ಡ ಬಾಲವುಳ್ಳ ಗೋ- ಲಾಂಗೂಲ ಎಂಬ ಕಪಿಗಳಿಂದ ಗೃಧ್ರಕೂಟಪರ್ವತದಲ್ಲಿ ರಕ್ಷಿತನಾಗಿದ್ದಾನೆ.
ಮರುತ್ತಸ್ಯಾನ್ವವಾಯೇ ತು ಕ್ಷತ್ರಿಯಾಸ್ತುರ್ವಸೋಸ್ತ್ರಯಃ |
ಮರುತ್ಪತಿಸಮಾ ವೀರ್ಯೇ ಸಮುದ್ರೇಣಾಭಿರಕ್ಷಿತಃ ||85||
ಮರುತ್ತನ ಪುರದಲ್ಲಿ ತುರ್ವಸುವಿನ ವಂಶದಲ್ಲಿ ಮೂರು ಜನ ಕ್ಷತ್ರಿಯರು ಜನಿಸಿ, ಮರುತ್ಪತಿಯಾದ ಇಂದ್ರನಿಗೆ ಸಮಾನವಾದ ಪರಾಕ್ರಮವನ್ನು ಹೊಂದಿದ- ವರಾಗಿ ಸಮುದ್ರನಿಂದ ರಕ್ಷಿತರಾಗಿದ್ದಾರೆ.
ಏತೇ ಕ್ಷತ್ರಿಯದಾಯಾದಾಸ್ತತ್ರ ತತ್ರ ಪರಿಶ್ರುತಾಃ |
ವ್ಯೋಕಾರಹೇಮಕಾರಾದಿಜಾತೀಃ ನಿತ್ಯಂ ಸಮಾಶ್ರಿತಾಃ |
ಯದಿ ಮಾಮಭಿರಕ್ಷಂತಿ ತತಃ ಸ್ಥಾಸ್ಯಾಮಿ ನಿಶ್ಚಲಾ ||86||
ಕ್ಷತ್ರಿಯವಂಶದಲ್ಲಿ ಜನಿಸಿದ ಇವರು ಅಲ್ಲಲ್ಲಿ ಪ್ರಸಿದ್ಧರಾಗಿದ್ದಾರೆ. ಅವರು ಸದ್ಯ- ದಲ್ಲಿ ಲೋಹಕಾರರ ಮತ್ತು ಸ್ವರ್ಣಕಾರರ ವೃತ್ತಿಯನ್ನು ಅವಲಂಬಿಸಿದ್ದಾರೆ. ಅವರು ನನ್ನನ್ನು ರಕ್ಷಿಸುವುದಾದರೆ ನಾನು ಸ್ಥಿರವಾಗಿ ನಿಲ್ಲುವೆನು.
ಏತೇಷಾಂ ಪಿತರಶ್ಚೈವ ತಥೈವ ಚ ಪಿತಾಮಹಾಃ |
ಮದರ್ಥಂ ನಿಹತಾ ಯುದ್ಧೇ ರಾಮೇಣಾಕ್ಲಿಷ್ಟಕರ್ಮಣಾ ||87||

ನನ್ನನ್ನು ಉಳಿಸುವ ಸಲುವಾಗಿ ಹೋರಾಡಿದ ಇವರ ಪಿತೃ ಪಿತಾಮಹರು ಯುದ್ಧದಲ್ಲಿ ಲೀಲಾಜಾಲವಾಗಿ ಕಾರ್ಯವನ್ನು ಮಾಡುವ ಪರಶುರಾಮರಿಂದ ಹತರಾಗಿದ್ದಾರೆ.
ತೇಷಾಮಪಚಿತಿಶ್ಚೈವ ಮಯಾ ಕಾರ್ಯಾ ನ ಸಂಶಯಃ |
ನ ಹ್ಯಹಂ ಕಾಮಯೇ ನಿತ್ಯಮವಿಕ್ರಾಂತೇನ ರಕ್ಷಣಮ್ ॥88॥
ನಾನು ಅವರಿಗೆ ನಿಃಸಂಶಯವಾಗಿ ಪ್ರತ್ಯುಪಕಾರವನ್ನು ಮಾಡಬೇಕಾಗಿದೆ. ನಾನು ಪರಾಕ್ರಮಶಾಲಿಯಲ್ಲದವನಿಂದ ರಕ್ಷಿಸಲ್ಪಡುವುದನ್ನು ಬಯಸುವುದಿಲ್ಲ. (ಎಂದು ಹೇಳಿದಳು).
ತತಃ ಪೃಥಿವ್ಯಾ ನಿರ್ದಿಷ್ಟಾಂಸ್ತಾನ್ ಸಮಾನೀಯ ಕಶ್ಯಪಃ |
ಅಭ್ಯಷಿಂಚತ್ ಮಹೀಪಾಲಾನ್ ಕ್ಷತ್ರಿಯಾನ್ ವೀರ್ಯಸಮ್ಮತಾನ್ ॥89॥
ಅನಂತರ ಕಶ್ಯಪರು ಭೂದೇವಿಯು ಹೇಳಿದ ವೀರ್ಯಸಂಪನ್ನರಾದ ಆ ಕ್ಷತ್ರಿಯರೆಲ್ಲರನ್ನೂ ಕರೆತಂದು ಅವರನ್ನು ರಾಜರನ್ನಾಗಿ ಅಭಿಷೇಕ ಮಾಡಿದರು.
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯೇಷಾಂ ವಂಶಾಃ ಪ್ರತಿಷ್ಠಿತಾಃ |
ಏವಮೇತತ್ ಪುರಾ ವೃತ್ತಂ ಯನ್ಮಾಂ ಪೃಚ್ಛಸಿ ಪಾಂಡವ ॥90॥
ಅವರ ಮಕ್ಕಳು ಮತ್ತು ಮೊಮ್ಮಕ್ಕಳಿಂದ ಅವರ ವಂಶಗಳು ಪುನಃ ಪ್ರತಿಷ್ಠಿತ- ವಾಯಿತು. ಎಲೈ ಪಾಂಡವನೇ! ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಹಿಂದೆ ಹೀಗೆ ನಡೆಯಿತು ಎಂದು ಹೇಳುತ್ತಿದ್ದೇನೆ. (ಅದರಿಂದ ಪುನಃ ಭೂಲೋಕದಲ್ಲಿ ಕ್ಷತ್ರಿಯರು ಬಹುಸಂಖ್ಯಾತರಾದರು).
ವೈಶಂಪಾಯನಃ
ಏವಂ ಬ್ರುವನ್ನೇವ ಯದುಪ್ರವೀರೋ
ಯುಧಿಷ್ಠಿರಂ ಧರ್ಮಭೃತಾಂ ವರಿಷ್ಠಮ್ |
ರಥೇನ ತೇನಾಶು ಯಯೌ ಯಥಾರ್ಕೋ
ವಿಶನ್ ಪ್ರಭಾಭಿರ್ಭಗವಾಂಸ್ತ್ರಿಲೋಕಮ್ ॥91॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಪಂಚಾಶೋಽಧ್ಯಾಯಃ ॥49॥
ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು ಹೀಗೆ ಮಾತನಾಡುತ್ತಲೇ ಯದುಪ್ರವೀರನಾದ ಕೃಷ್ಣನು ಪೂಜ್ಯನಾದ ಸೂರ್ಯನು ತನ್ನ ಪ್ರಭೆಯಿಂದ ಮೂರು ಲೋಕಗಳನ್ನೂ ಪ್ರವೇಶಿಸುವಂತೆ ಶೀಘ್ರವಾಗಿ ಮುಂದೆ ಸಾಗಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 49ನೆಯ ಅಧ್ಯಾಯವು ಮುಗಿಯಿತು.
0
50. ಐವತ್ತನೆಯ ಅಧ್ಯಾಯ
ಕೃಷ್ಣನಿಂದ ಭೀಷ್ಮರ ಪ್ರಶಂಸೆ ಮತ್ತು ಧರ್ಮರಾಜರಿಗೆ ಉಪದೇಶಮಾಡುವಂತೆ ಪ್ರೇರಣೆ
ವೈಶಂಪಾಯನಃ
ತತೋ ರಾಮಸ್ಯ ತತ್ ಕರ್ಮ ಶ್ರುತ್ವಾ ರಾಜಾ ಯುಧಿಷ್ಠಿರಃ |
ವಿಸ್ಮಯಂ ಪರಮಂ ಗತ್ವಾ ಪ್ರತ್ಯುವಾಚ ಜನಾರ್ದನಮ್ ॥1॥
ವೈಶಂಪಾಯನರು ಆಗ ರಾಜನಾದ ಯುಧಿಷ್ಠಿರನು ಪರಶುರಾಮರ ಆ ಕರ್ಮವನ್ನು ಕೇಳಿ ಬಹಳವಿಸ್ಮಯವನ್ನು ಹೊಂದಿ ಜನಾರ್ದನನಾದ ಕೃಷ್ಣನನ್ನು ಕುರಿತು ಮಾತನಾಡಿದನು.
ಅಹೋ ರಾಮಸ್ಯ ವಾರ್ಷ್ಣೇಯ ಶಕ್ರಸ್ಯೇವ ಮಹಾತ್ಮನಃ |
ವಿಕ್ರಮೋ ಯೇನ ವಸುಧಾ ಕ್ರೋಧಾನ್ನಿಃಕ್ಷತ್ರಿಯಾ ಕೃತಾ ॥2॥
ಎಲೈ ವಾರ್ಷ್ಣೇಯನೇ! ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿದ ಮಹಾತ್ಮರಾದ ಪರಶುರಾಮರ ವಿಕ್ರಮವು ಇಂದ್ರನ ವಿಕ್ರಮದಂತೆ ಎಷ್ಟು ಅದ್ಭುತ- ವಾದುದು!
ಗೋಭಿಃ ಸಮುದ್ರೇಣ ತಥಾ ಗೋಲಾಂಗೂಲರ್ಕ್ಷವಾನರೈಃ |
ಗುಪ್ತಾ ರಾಮಭಯೋದ್ವಿಗ್ನಾಃ ಕ್ಷತ್ರಿಯಾಣಾಂ ಕುಲೋದ್ವಹಾಃ ॥3॥
ಪರಶುರಾಮನ ಭಯದಿಂದ ಉದ್ವಿಗ್ನರಾದ ಕ್ಷತ್ರಿಯ ಕುಲಪ್ರವರ್ತಕರು, ಗೋವುಗಳಿಂದಲೂ ಸಮುದ್ರದಿಂದಲೂ ಕಪಿಗಳಿಂದಲೂ ಕರಡಿಗಳಿಂದಲೂ ಗೋ- ಲಾಂಗೂಲಗಳಿಂದಲೂ ರಕ್ಷಿಸಲ್ಪಟ್ಟರಷ್ಟೇ!
ಅಹೋ ಧನ್ಯೋ ಹಿ ಲೋಕೋಽಯಂ ಸಭಾಗ್ಯಾಶ್ಚ ನರಾ ಭುವಿ |
ಯತ್ರ ಕರ್ಮೇದೃಶಂ ಧರ್ಮ್ಯಂ ದ್ವಿಜೇನ ಕೃತಮಚ್ಯುತ ॥4॥
ಅಹೋ! ಈ ಲೋಕವು ಎಷ್ಟು ಧನ್ಯವಾದದು! ಭೂಮಿಯಲ್ಲಿರುವ ಮನುಷ್ಯರು ಎಂತಹ ಭಾಗ್ಯವಂತರು! ಎಲೈ ಅಚ್ಯುತನೇ! ಒಬ್ಬ ಬ್ರಾಹ್ಮಣನು ಇಂತಹ ಧಾರ್ಮಿಕವಾದ ಕಾರ್ಯವನ್ನು ಮಾಡಿದನಷ್ಟೇ?
ತಥಾ ಯಾಂತೌ ತದಾ ತಾತ ತಾವಚ್ಯುತಯುಧಿಷ್ಠಿರೌ |
ಜಗ್ಮತುರ್ಯತ್ರ ಗಾಂಗೇಯಃ ಶರತಲ್ಪಗತಃ ಪ್ರಭುಃ ॥5॥
ಎಲೈ ಪ್ರೀತಿಪಾತ್ರನೇ! ಕೃಷ್ಣ ಯುಧಿಷ್ಠಿರರಿಬ್ಬರೂ ಹಾಗೆಯೇ ಮುಂದೆ ಸಾಗುತ್ತಾ ಶರತಲ್ಪಗತರಾದ ಗಂಗಾಪುತ್ರರಾದ ಭೀಷ್ಮರು ಇದ್ದಲ್ಲಿಗೆ ಬಂದರು.
ತತಸ್ತೇ ದದೃಶುರ್ಭೀಷ್ಮಂ ಶರಪ್ರಸ್ತರಶಾಯಿನಮ್ |

ಸ್ವರಶ್ಮಿಜಾಲಸಂವೀತಂ ಸಾಯಂಸೂರ್ಯಸಮಪ್ರಭಮ್ ॥6॥
ಆಗ ಅವರು ಸಾಯಂಕಾಲದಲ್ಲಿ ತನ್ನ ರಶ್ಮಿಗಳಿಂದ ಕೂಡಿದ ಸೂರ್ಯನಂತೆ ಇದ್ದ ಶರಪಂಜರದಲ್ಲಿ ಮಲಗಿದ್ದ ಭೀಷ್ಮರನ್ನು ನೋಡಿದರು.
ಉಪಾಸ್ಯಮಾನಂ ಮುನಿಭಿರ್ದೇವೈರಿವ ಶತಕ್ರತುಮ್ ।
ದೇಶೇ ಪರಮಧರ್ಮಿಷ್ಠೇ ನದೀಮೋಘವತೀಮನು ॥7॥
ಓಘವತೀ ನದಿಯ ಸಮೀಪದಲ್ಲಿ ಪರಮಧರ್ಮಿಷ್ಠವಾದ ದೇಶದಲ್ಲಿ ದೇವತೆ- ಗಳಿಂದ ಇಂದ್ರನು ಸುತ್ತುವರಿಯಲ್ಪಟ್ಟಂತೆ, ಋಷಿಗಳಿಂದ ಸುತ್ತುವರಿಯಲ್ಪಟ್ಟ ಭೀಷ್ಮ- ರನ್ನು ನೋಡಿದರು.
ದೂರಾದೇವ ತಮಾಲೋಕ್ಯ ಕೃಷ್ಣೋ ರಾಜಾ ಚ ಧರ್ಮರಾಟ್ ।
ಚತ್ವಾರಃ ಪಾಂಡವಾಶ್ಚೈವ ತೇ ಚ ಶಾರದ್ವತಾದಯಃ ॥8॥
ಅವಸ್ಕಂದ್ಯಾಥ ವಾಹೇಭ್ಯಃ ಸಂಯಮ್ಯ ಪ್ರಚಲಂ ಮನಃ ।
ಏಕೀಕೃತ್ಯೇಂದ್ರಿಯಗ್ರಾಮಮುಪತಸ್ಥುರ್ಮಹಾಮುನೀನ್ ॥9॥
ಕೃಷ್ಣನೂ, ರಾಜನಾದ ಯುಧಿಷ್ಠಿರನೂ, ನಾಲ್ವರು ಪಾಂಡವರೂ, ಕೃಪ ಮೊದ- ಲಾದವರೂ ದೂರದಿಂದಲೇ ಭೀಷ್ಮರನ್ನು ನೋಡಿ ತಮ್ಮ ವಾಹನಗಳಿಂದ ಇಳಿದು ಚಂಚಲವಾದ ಮನಸ್ಸನ್ನು ಸ್ಥಿರಗೊಳಿಸಿ ಇಂದ್ರಿಯಸಮೂಹವನ್ನು ಏಕಾಗ್ರವನ್ನಾಗಿ ಮಾಡಿ ಮಹಾಮುನಿಗಳ ಸಮೀಪಕ್ಕೆ ಬಂದರು.
ಅಭಿವಾದ್ಯ ಚ ಗೋವಿಂದಃ ಸಾತ್ಯಕಿಸ್ತೇ ಚ ಕೌರವಾಃ ।
ವ್ಯಾಸಾದೀಂಸ್ತಾನ್ ಋಷೀನ್ ಪಶ್ಚಾದ್ ಗಾಂಗೇಯಮುಪತಸ್ಥಿರೇ ॥10॥
ಗೋವಿಂದನೂ, ಸಾತ್ಯಕಿಯೂ, ಆ ಕೌರವರೂ ವ್ಯಾಸಾದಿ ಋಷಿಗಳಿಗೆ ನಮ- ಸ್ಕರಿಸಿ ಅನಂತರ ಭೀಷ್ಮರ ಸಮೀಪಕ್ಕೆ ಬಂದರು.
ತಪೋವೃದ್ಧಿಂ ತತಃ ಪೃಷ್ಟ್ವಾ ಗಾಂಗೇಯಂ ಯದುಕೌರವಾಃ ।
ಪರಿವಾರ್ಯ ತತಃ ಸರ್ವೇ ನಿಷೇದುಃ ಪುರುಷರ್ಷಭಾಃ ॥11॥
ಯದುಕೌರವರು ಭೀಷ್ಮರನ್ನು ಅವರ ತಪೋವೃದ್ಧಿಯನ್ನು ವಿಚಾರಿಸಿ, ಪುರುಷ- ಶ್ರೇಷ್ಠರಾದ ಅವರೆಲ್ಲರೂ ಅವರ ಸುತ್ತಲೂ ಕುಳಿತರು.
ತತೋ ನಿಶಾಮ್ಯ ಗಾಂಗೇಯಂ ಶಾಮ್ಯಮಾನಮಿವಾನಲಮ್ ।
ಕಿಂಚಿದ್ ದೀನಮನಾ ಭೀಷ್ಮಮಿತಿ ಹೋವಾಚ ಕೇಶವಃ ॥12॥
ಆಗ ಆರಿಹೋಗುವ ಅಗ್ನಿಯಂತಿದ್ದ ಭೀಷ್ಮರನ್ನು ನೋಡಿ, ಕೇಶವನು ಮನಸ್ಸಿ- ನಲ್ಲಿ ಸ್ವಲ್ಪ ವ್ಯಥೆಯನ್ನು ಹೊಂದಿ ಭೀಷ್ಮರನ್ನು ಕುರಿತು ಹೀಗೆ ಮಾತನಾಡಿದನು.
ಕಚ್ಚಿಜ್ಜ್ಞಾನಾನಿ ತೇ ರಾಜನ್ ಪ್ರಸನ್ನಾನಿ ಯಥಾ ಪುರಾ ।
ಕಚ್ಚಿದವ್ಯಾಕುಲಾ ಚೈವ ಬುದ್ಧಿಸ್ತೇ ವದತಾಂವರ ॥13॥
ಎಲೈ ರಾಜನೇ! ನಿನ್ನ ಇಂದ್ರಿಯಗಳು ಮೊದಲಿನಂತೆಯೇ ಪ್ರಸನ್ನವಾಗಿವೆ- ಯಷ್ಟೇ?. ಮಾತನಾಡುವವರಲ್ಲಿ ಶ್ರೇಷ್ಠನಾದವನೇ! ನಿನ್ನ ಬುದ್ಧಿಯು ವ್ಯಾಕುಲ- ವಾಗಿಲ್ಲವಷ್ಟೇ?
ಶರಾಭಿಘಾತದುಃಖಾತ್ ತೇ ಕಚ್ಚಿದ್ ಗಾತ್ರಂ ನ ದೂಯತೇ ।
ಮಾನಸಾದಪಿ ದುಃಖಾದ್ಧಿ ಶರೀರಂ ಬಲವತ್ತರಮ್ ॥14॥
ಬಾಣಗಳ ಪ್ರಹಾರಕ್ಕೆ ಸಿಲುಕಿದ ನಿನ್ನ ದೇಹವು ದುಃಖದಿಂದ ತಪಿಸುತ್ತಿಲ್ಲ- ವಷ್ಟೇ? ಮಾನಸದುಃಖಕ್ಕಿಂತಲೂ ಶರೀರದ ದುಃಖವು ಪ್ರಬಲವಾದುದು.
ವರದಾನಾತ್ ಪಿತುಃ ಕಾಮಂ ಛಂದಮೃತ್ಯುರಸಿ ಪ್ರಭೋ ।
ಶಂತನೋರ್ಧರ್ಮಶೀಲಸ್ಯ ನ ತ್ವೇತದಿಹ ಕಾರಣಮ್ ॥15॥
ಎಲೈ ಪ್ರಭುವೇ! ತಂದೆಯ ವರದಾನದಿಂದ ನೀವು ಸ್ವಚ್ಛಂದ ಮೃತ್ಯುಗಳಾಗಿ- ದ್ದೀರಿ. ಆದರೆ ಧರ್ಮಶೀಲನಾದ ಶಂತನುವಿನ ವರವು ಈ ದೇಹದ ಬಾಧೆಯನ್ನು ನಿವಾರಿಸಲು ಕಾರಣವಾಗುವುದಿಲ್ಲ.
ಸುಸೂಕ್ಷ್ಮೋಽಪೀಹ ದೇಹೇ ವೈ ಶಲ್ಯೋ ಜನಯತೇ ರುಜಮ್ ।
ಕಿಂಪುನಃ ಶರಸಂಘಾತೈಶ್ಚಿತಸ್ಯ ತವ ಪಾರ್ಥಿವ ॥16॥
ಎಲೈ ರಾಜನೇ! ಒಂದು ಸಣ್ಣ ಮುಳ್ಳು ಚುಚ್ಚಿದರೂ ದೇಹಕ್ಕೆ ಬಾಧೆಯನ್ನು ಉಂಟುಮಾಡುತ್ತದೆ. ಹೀಗಿರುವಾಗ ಬಾಣಗಳ ಸಮೂಹವು ಶರೀರದಲ್ಲಿ ಪೋಣಿಸಿ -ಕೊಂಡಿರುವ ನಿಮ್ಮ ವಿಷಯದಲ್ಲಿ ಹೇಳುವುದೇನು?
ಕಾಮಂ ನೈತತ್ ತವಾಖ್ಯೇಯಂ ಪ್ರಾಣಿನಾಂ ಪ್ರಭವಾಪ್ಯಯೌ ।
ಭವಾನ್ ಹ್ಯುಪದಿಶೇಚ್ಛ್ರೇಯೋ ದೇವಾನಾಮಪಿ ಭಾರತ ॥17॥
ಪ್ರಾಣಿಗಳ ಉತ್ಪತ್ತಿ ನಾಶಗಳ ವಿಷಯದಲ್ಲಿ ನಿಮಗೆ ಹೇಳಬೇಕಾದುದು ಏನೂ ಇಲ್ಲ. ಎಲೈ ಭಾರತರೇ! ನೀವು ದೇವತೆಗಳಿಗೂ ಸಹ ಶ್ರೇಯಸ್ಸನ್ನು ಉಪದೇಶಿಸಲು ಸಮರ್ಥರಾಗಿದ್ದೀರಿ.
ಯದ್ಧಿ ಭೂತಂ ಭವಿಷ್ಯಚ್ಚ ಭವಚ್ಚ ಪುರುಷರ್ಷಭ ।
ಸರ್ವಂ ತಜ್ಜ್ಞಾನವೃದ್ಧಸ್ಯ ತವ ಪಾಣಾವಿವಾಹಿತಮ್ ॥18॥
ಎಲೈ ಪುರುಷಶ್ರೇಷ್ಠರೇ! ಭೂತ ವರ್ತಮಾನ ಭವಿಷ್ಯತ್ತುಗಳೆಲ್ಲವೂ ಜ್ಞಾನ- ವೃದ್ಧರಾದ ನಿಮ್ಮಅಂಗೈಮೇಲೆ ಇರುವಂತಿದೆ.
ಸಂಸಾರಶ್ಚೈವ ಭೂತಾನಾಂ ಧರ್ಮಸ್ಯ ಚ ಫಲೋದಯಃ ।
ವಿದಿತಸ್ತೇ ಮಹಾಪ್ರಾಜ್ಞ ತ್ವಂ ಹಿ ಬ್ರಹ್ಮಮಯೋ ನಿಧಿಃ ॥19॥

ಮಹಾಪ್ರಾಜ್ಞರೇ! ಜೀವರ ಸಂಸಾರವು ಧರ್ಮಗಳ ಫಲೋದಯವು ನಿಮಗೆ ತಿಳಿದಿದೆ. ನೀವೇ ಧರ್ಮಮಯವಾದ ನಿಧಿಯಷ್ಟೇ?
ತ್ವಾಂ ಹಿ ರಾಜ್ಯೇ ಸ್ಥಿತಂ ಸ್ಫೀತೇ ಸಮಗ್ರಾಂಗಮರೋಗಿಣಮ್ |
ಸ್ತ್ರೀಸಹಸ್ರೈಃ ಪರಿವೃತಂ ಪಶ್ಯಾಮೀಹೋರ್ಧ್ವರೇತಸಮ್ ||20||
ಸಮೃದ್ಧವಾದ ರಾಜ್ಯದಲ್ಲಿ ಸ್ತ್ರೀಸಹಸ್ರದಿಂದ ಪರಿವೃತರಾಗಿ ಸಮಗ್ರವಾದ ಅವಯವಗಳಿಂದ ರೋಗರಹಿತರಾಗಿ ಇರುವ ನಿಮ್ಮನ್ನು ನೋಡಬೇಕಾಗಿದ್ದ ನಾನು ಇಲ್ಲಿ ಊರ್ಧ್ವರೇತಸ್ಕರಾಗಿರುವುದನ್ನು ನೋಡುತ್ತಿದ್ದೇನೆ.
ಋತೇ ಶಾಂತನವಾದ್ ಭೀಷ್ಮಾತ್ ತ್ರಿಷು ಲೋಕೇಷು ಪಾರ್ಥಿವ |
ಸತ್ಯಸಂಧಾನ್ಮಹಾವೀರ್ಯಾಚ್ಛೂರಾದ್ ಧರ್ಮೈಕತತ್ಪರಾತ್ ||21||
ಎಲ್ಲೈ ಪ್ರೀತಿಪಾತ್ರರೇ! ಶಂತನು ಪುತ್ರರಾದ, ಸತ್ಯಸಂಧರಾದ, ಮಹಾಪರಾ- ಕ್ರಮಿಗಳಾದ ಶೂರಾದ ಧರ್ಮೈಕನಿಷ್ಠರಾದ, ಮೃತ್ಯುವನ್ನು ತಡೆದು ಶರಪಂಜರದಲ್ಲಿ ಮಲಗಿರುವ ಭೀಷ್ಮರೊಬ್ಬರನ್ನು ಬಿಟ್ಟು ಪ್ರಕೃತಿಯಲ್ಲಿ ಜನಿಸಿದ ಇನ್ನೊಬ್ಬ ಇಂತಹ ವ್ಯಕ್ತಿಯನ್ನು ನಾವು ಕೇಳಿಲ್ಲ.
ಮೃತ್ಯುಮವಾರ್ಯ ತಪಸಾ ಶರಪ್ರಸ್ತರಶಾಯಿನಃ |
ನಿಸರ್ಗಪ್ರಭವಂ ಕಿಂಚಿನ್ನ ಚ ತಾತಾನುಶುಶ್ರುಮ ||22||
ಸತ್ಯೇ ತಪಸಿ ದಾನೇ ಚ ಯಜ್ಞಾದಿಕರಣೇ ತಥಾ |
ಧನುರ್ವೇದೇ ಚ ವೇದೇ ಚ ನೀತ್ಯಾಂ ಚೈವಾನ್ವವೇಕ್ಷಣೇ ||23||
ಅನೃಶಂಸಂ ಶುಚಿಂ ದಾಂತಂ ಸರ್ವಭೂತಹಿತೇ ರತಮ್ |
ಮಹಾರಥಂ ತ್ವತ್ಸದೃಶಂ ನ ಕಂಚಿದನುಶುಶ್ರುಮ ||24||
ಸತ್ಯ, ತಪಸ್ಸು, ದಾನ, ಯಜ್ಞಾದಿ ಅನುಷ್ಠಾನ, ಧನುರ್ವೇದ, ವೇದ, ರಾಜ- ನೀತಿ, ರಾಜ್ಯಪಾಲನೆ, ದಯೆ, ಶೌಚ, ಇಂದ್ರಿಯನಿಗ್ರಹ, ಸರ್ವಭೂತಹಿತದಲ್ಲಿ ಆಸಕ್ತಿ ಈ ವಿಷಯಗಳಲ್ಲಿ ಮಹಾರಥರಾದ ನಿಮ್ಮನ್ನು ಬಿಟ್ಟು ನಿಮಗೆ ಸದೃಶರಾದ ಇನ್ನೊಬ್ಬರನ್ನು ನಾನು ಕೇಳುವುದಿಲ್ಲ.
ತ್ವಂ ಹಿ ದೇವಾನ್ ಸಗಂಧರ್ವಾನ್ ಸಸುರಾಸುರರಾಕ್ಷಸಾನ್ |
ಶಕ್ತ ಏಕರಥೇನೈವ ವಿಜೇತುಂ ನಾತ್ರ ಸಂಶಯಃ ||25||
ನೀವಾದರೋ ಗಂಧರ್ವರಿಂದ ಸಹಿತರಾದ ಸುರಾಸುರರಾಕ್ಷಸರಿಂದ ಸಹಿತ- ರಾದ ದೇವತೆಗಳನ್ನು ಒಂದು ರಥದಲ್ಲಿ ಕುಳಿತು ಜಯಿಸುವಿರೆಂಬ ವಿಷಯದಲ್ಲಿ ಸಂಶಯವಿಲ್ಲ.
ತ್ವಂ ಹಿ ಭೀಷ್ಮ ಮಹಾಬಾಹೋ ವಸೂನಾಂ ವಾಸವೋಪಮಃ |
ನಿತ್ಯಂ ವಿಪ್ರೈಃ ಸಮಾಖ್ಯಾತೋ ನವಮೋಽನವಮೋ ಗುಣೈಃ ||26||
ಎಲ್ಲೈ ಮಹಾಬಾಹುಗಳಾದ ಭೀಷ್ಮರೇ! ನೀವು ಎಂಟು ವಸುಗಳ ಸನ್ನಿಧಾನ- ದಿಂದ ಕೂಡಿದ, ಗುಣಗಳಿಂದ ನ್ಯೂನರಾಗದ ಒಂಭತ್ತನೆಯ ವಸುವೆಂದು ಬ್ರಾಹ್ಮಣರು ನಿತ್ಯದಲ್ಲಿಯೂ ಹೇಳುತ್ತಾರೆ.
ಅಹಂ ಹಿ ತ್ವಾಽಭಿಜಾನಾಮಿ ಯಸ್ತ್ವಂ ಪುರುಷಸತ್ತಮ |
ತ್ರಿದಶೇಷ್ವಪಿ ವಿಖ್ಯಾತಃ ಸ್ವಶಕ್ತ್ಯಾ ಸುಮಹಾಬಲಃ ||27||
ಎಲ್ಲೈ ಪುರುಷಶ್ರೇಷ್ಠರೇ! ನೀವು ಯಾರೆಂದು ನಾನು ಚೆನ್ನಾಗಿ ತಿಳಿದಿದ್ದೇನೆ. ಮಹಾಬಲರಾದ ನೀವು ನಿಮ್ಮ ಶಕ್ತಿಯಿಂದ ದೇವತೆಗಳಲ್ಲೂ ಪ್ರಖ್ಯಾತರಾಗಿದ್ದೀರಿ.
ಮನುಷ್ಯೇಷು ಮನುಷ್ಯೇಂದ್ರ ನ ದೃಷ್ಟೋ ನ ಚ ಮೇ ಶ್ರುತಃ |
ಭವತೋ ಯೋ ಗುಣೈಸ್ತುಲ್ಯಃ ಪೃಥಿವ್ಯಾಂ ಪುರುಷಃ ಕ್ವಚಿತ್ ||28||
ಎಲ್ಲೈ ಮನುಷ್ಯೇಂದ್ರರೇ! ಭೂಮಿಯಲ್ಲಿ ಮನುಷ್ಯರಲ್ಲಿ ನಿಮಗೆ ಸದೃಶನಾದ ಇನ್ನೊಬ್ಬ ಮನುಷ್ಯನನ್ನು ನಾವು ಎಂದೂ ನೋಡಲಿಲ್ಲ ಅಥವಾ ಕೇಳಲಿಲ್ಲ.
ತ್ವಂ ಹಿ ಸರ್ವೈರ್ಗುಣೈ ರಾಜನ್ ದೇವಾನಪ್ಯತಿರಿಚ್ಯಸೇ |
ತಪಸಾ ಹಿ ಭವಾನ್ ಶಕ್ತಃ ಸ್ರಷ್ಟುಂ ಲೋಕಾಂಶ್ಚರಾಚರಾನ್ |
ಕಿಂಪುನಶ್ಚಾತ್ಮನೋ ಲೋಕಾನುತ್ತಮಾನುತ್ತಮೈರ್ಗುಣೈಃ ||29||
ಎಲ್ಲೈ ರಾಜರೇ! ನೀವು ಸರ್ವಗುಣಗಳಿಂದಲೂ ದೇವತೆಗಳನ್ನು ಮೀರುತ್ತೀರಿ. ನಿಮ್ಮ ತಪಸ್ಸಿನಿಂದ ಚರಾಚರಲೋಕಗಳನ್ನೂ ಸೃಷ್ಟಿಸಲು ಸಮರ್ಥರಾಗಿದ್ದೀರಿ. ಇನ್ನು ನಿಮ್ಮ ಉತ್ತಮಗುಣಗಳಿಂದ ನಿಮ್ಮ ಉತ್ತಮಲೋಕಗಳನ್ನು ಸಂಪಾದಿಸುವುದು ಯಾವ ದೊಡ್ಡ ವಿಷಯ?
ತದಸ್ಯ ತಪ್ಯಮಾನಸ್ಯ ಜ್ಞಾತೀನಾಂ ಸಂಕ್ಷಯೇಣ ವೈ |
ಜ್ಯೇಷ್ಠಸ್ಯ ಪಾಂಡುಪುತ್ರಸ್ಯ ಶೋಕಂ ಭೀಷ್ಮ ವ್ಯಪಾನುದ ||30||
ಎಲ್ಲೈ ಭೀಷ್ಮರೇ! ಜ್ಞಾತಿಗಳ ವಧೆಯಿಂದ ಸಂತಾಪಕ್ಕೆ ಒಳಗಾದ ಈ ಜ್ಯೇಷ್ಠ ಪಾಂಡುಪುತ್ರನ ಶೋಕವನ್ನು ನಿವಾರಿಸಿ.
ಚಾತುರ್ವರ್ಣ್ಯಸ್ಯ ಯಶ್ಚೋಕ್ತಃ ಸೇವ್ಯಮಾನೋಽನ್ಯ ಏವ ಚ |
ಚಾತುರಾಶ್ರಮ್ಯಸಂಸೃಷ್ಟಾಸ್ತೇ ಸರ್ವೇ ವಿದಿತಾಸ್ತವ ||31||
ಚಾತುರ್ವರ್ಣ್ಯದಿಂದ ಅನುಷ್ಠಾನ ಮಾಡಬೇಕಾದ ಧರ್ಮ, ಅದಕ್ಕೆ ವಿರುದ್ಧ- ವಾದ ಧರ್ಮ, ನಾಲ್ಕು ಆಶ್ರಮಗಳಿಗೆ ಸಂಬಂಧಿಸಿದ ಧರ್ಮ ಇವೆಲ್ಲವೂ ನಿಮಗೆ ತಿಳಿದಿವೆ.
ಚಾತುರ್ವಿದ್ಯೇ ಚ ಯೇ ಪ್ರೋಕ್ತಾಶ್ಚಾತುರ್ಹೋತ್ರೇ ಚ ಭಾರತ |
ಸಾಂಖ್ಯೇ ಯೋಗೇ ಚ ನಿಯತಾ ಯೇ ಚ ಧರ್ಮಾಃ ಸನಾತನಾಃ ||32||

ಚಾತುರ್ವರ್ಣ್ಯೇನ ಯಶ್ಚೈಕೋ ಧರ್ಮೋ ನ ಸ್ಮ ವಿರುದ್ಧ್ಯತೇ |
ಸೇವ್ಯಮಾನಃ ಸ ಚೈವಾದ್ಯೋ ಗಾಂಗೇಯ ವಿದಿತಸ್ತವ ||33||
ಎಲೈ ಭಾರತರೇ! ಎಲೈ ಗಂಗಾಪುತ್ರರೇ! ನಾಲ್ಕು ವೇದವಿದ್ಯೆಗಳಲ್ಲಿ ಹೇಳಲ್ಪಟ್ಟ ಧರ್ಮಗಳು, ನಾಲ್ಕು ಹೋತೃಗಳಿಗೆ ಹೇಳಲ್ಪಟ್ಟ ಧರ್ಮಗಳು, ಸಾಂಖ್ಯ ಮತ್ತು ಯೋಗಶಾಸ್ತ್ರದಲ್ಲಿ ವಿಹಿತವಾದ ಸನಾತನಧರ್ಮಗಳು, ಚಾತುರ್ವರ್ಣ್ಯದಿಂದಲೂ ಸೇವಿಸಲ್ಪಡಬೇಕಾದ ಅವಿರುದ್ಧವಾದ ಮುಖ್ಯವಾದ ಶ್ರೇಷ್ಠವಾದ ಧರ್ಮ ಎಲ್ಲವೂ ನಿಮಗೆ ತಿಳಿದಿದೆ.
ಪ್ರತಿಲೋಮಪ್ರಸೂತಾನಾಂ ಮ್ಲೇಚ್ಛಾನಾಂ ಚೈವ ಯಃ ಸ್ಮೃತಃ |
ದೇಶಜಾತಿಕುಲಾನಾಂ ಚ ಜಾನೀಷೇ ಧರ್ಮಲಕ್ಷಣಮ್ |
ವೇದೋಕ್ತೋ ಯಶ್ಚ ಶಿಷ್ಟೋಕ್ತಃ ಸ ಚೈವ ವಿದಿತಸ್ತವ ||34||
ಪ್ರತಿಲೋಮದಲ್ಲಿ ಜನಿಸಿದ ಮ್ಲೇಚ್ಛರ ಧರ್ಮಗಳು, ದೇಶಜಾತಿಕುಲಧರ್ಮ- ಗಳು , ಧರ್ಮದ ಲಕ್ಷಣ ಎಲ್ಲವನ್ನೂ ನೀವು ತಿಳಿದಿದ್ದೀರಿ. ವೇದೋಕ್ತವಾದ ಮತ್ತು ಶಿಷ್ಟಾಚಾರಪ್ರಾಪ್ತವಾದ ಧರ್ಮಗಳು ನಿಮಗೆ ತಿಳಿದಿವೆ.
ಇತಿಹಾಸಪುರಾಣಂ ಚ ಕಾರ್ತ್ಸ್ನ್ಯೇನ ವಿದಿತಂ ತವ |
ಧರ್ಮಶಾಸ್ತ್ರಂ ಚ ಸಕಲಂ ನಿತ್ಯಂ ಮನಸಿ ತೇ ಸ್ಥಿತಮ್ ||35||
ಇತಿಹಾಸ, ಪುರಾಣಗಳನ್ನು ನೀವು ಸಮಗ್ರವಾಗಿ ತಿಳಿದಿದ್ದೀರಿ. ಸಮಗ್ರವಾದ ಧರ್ಮಶಾಸ್ತ್ರವು ಯಾವಾಗಲೂ ನಿಮ್ಮ ಮನಸ್ಸಿನಲ್ಲಿ ಇದೆ.
ಯೇ ಚ ಕೇಚನ ಲೋಕೇಽಸ್ಮಿನ್ನರ್ಥಾಃ ಸಂಶಯಕಾರಕಾಃ |
ತೇಷಾಂ ಛೇತ್ತಾ ನಾಸ್ತಿ ಲೋಕೇ ತ್ವದನ್ಯಃ ಪುರುಷರ್ಷಭ ||36||
ಎಲೈ ಪುರುಷಶ್ರೇಷ್ಠರೇ! ಈ ಲೋಕದಲ್ಲಿ ಸಂಶಯಕ್ಕೆ ಎಡೆಮಾಡಿಕೊಡುವ ವಿಷಯಗಳು ಯಾವವು ಇವೆಯೋ ಅವುಗಳ ವಿಷಯದಲ್ಲಿ ಸಂಶಯವನ್ನು ಪರಿ- ಹಾರ ಮಾಡುವವರು ನಿಮ್ಮನ್ನು ಬಿಟ್ಟು ಇನ್ನೊಬ್ಬರು ಇಲ್ಲ.
ಸ ಪಾಂಡವೇಯಸ್ಯ ಮನಃಸಮುತ್ಥಿತಂ
ನರೇಂದ್ರ ಶೋಕಂ ವ್ಯಪಕರ್ಷ ಮೇಧಯಾ |
ಭವದ್ವಿಧಾ ಹ್ಯುತ್ತಮಬುದ್ಧಿವಿಸ್ತರಾ
ವಿಮುಹ್ಯಮಾನಸ್ಯ ಜನಸ್ಯ ಶಾಂತಯೇ ||37||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಪಂಚಾಶೋಽಧ್ಯಾಯಃ ||50||
ಎಲೈ ನರೇಂದ್ರರೇ! ಅಂತಹ ನೀವು ಪಾಂಡುಪುತ್ರನಾದ ಯುಧಿಷ್ಠಿರನ ಮನಸ್ಸಿನಲ್ಲಿ ಉಂಟಾಗಿರುವ ಶೋಕವನ್ನು ನಿಮ್ಮ ಬುದ್ಧಿಯಿಂದ ಪರಿಹರಿಸಿ. ಉತ್ತಮವಾದ ಬುದ್ಧಿವಿಸ್ತಾರವುಳ್ಳ ನಿಮ್ಮಂತಹವರು ಮೋಹಕ್ಕೆ ಒಳಗಾಗುವ ಜನರಿಗೆ ಶಾಂತಿಯನ್ನು ಕರುಣಿಸುವುದಕ್ಕಾಗಿ ಇರುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 50ನೆಯ ಅಧ್ಯಾಯವು ಮುಗಿಯಿತು.
0

51. ಐವತ್ತೊಂದನೆಯ ಅಧ್ಯಾಯ
ಕೃಷ್ಣನಿಂದ ಭೀಷ್ಮರಿಗೆ ಶ್ರೇಯಃಪ್ರದಾನ ಮತ್ತು ಧರ್ಮವನ್ನು ಹೇಳುವಂತೆ ಪ್ರೇರಣೆ
ವೈಶಂಪಾಯನಃ
ಶ್ರುತ್ವಾ ತು ವಚನಂ ಭೀಷ್ಮೋ ವಾಸುದೇವಸ್ಯ ಧೀಮತಃ |
ಕಿಂಚಿದುನ್ನಾಮ್ಯ ವದನಂ ಪ್ರಾಂಜಲಿರ್ವಾಕ್ಯಮಬ್ರವೀತ್ ||1||
ವೈಶಂಪಾಯನರು ಭೀಷ್ಮರು ಮೇಧಾವಿಯಾದ ಕೃಷ್ಣನ ಮಾತುಗಳನ್ನು ಕೇಳಿ ಮುಖವನ್ನು ಸ್ವಲ್ಪ ಮೇಲೆತ್ತಿ ಕೈಗಳನ್ನು ಮುಗಿದು ಮಾತನಾಡಿದರು.
ನಮಸ್ತೇ ಭಗವನ್ ವಿಷ್ಣೋ ಲೋಕಾನಾಂ ನಿಧನೋದ್ಭವ |
ತ್ವಂ ಹಿ ಕರ್ತಾ ಹೃಷೀಕೇಶ ಸಂಹರ್ತಾ ಚಾಪರಾಜಿತಃ ||2||
ಎಲೈ ವಿಷ್ಣುವೇ! ಭಗವಂತನೇ! ಲೋಕಗಳ ಸೃಷ್ಟಿ ಸಂಹಾರಕನೇ! ಹೃಷೀಕೇಶನೇ! ನೀನೇ ಕರ್ತೃವಾದವನು, ನೀನೇ ಸಂಹರ್ತೃವಾದವನು. ಮತ್ತು ಎಂದೂ ಪರಾಜಯವನ್ನು ಹೊಂದದವನು.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ |
ಅಪವರ್ಗೋಽಸಿ ಭೂತಾನಾಂ ಪಂಚಾನಾಂ ಪರತಃ ಸ್ಥಿತಃ ||3||
ವಿಶ್ವಕರ್ಮನೇ! ನಿನಗೆ ನಮಸ್ಕಾರ. ವಿಶ್ವಾತ್ಮನೇ! ವಿಶ್ವೋತ್ಪತ್ತಿಕಾರಣನೇ! ನಿನಗೆ ನಮಸ್ಕಾರ. ನೀನು ಜೀವರಿಗೆ ಮೋಕ್ಷಪ್ರದನಾದವನು. ಪಂಚಭೂತಗಳನ್ನು ಮೀರಿದವನು.
ನಮಸ್ತೇ ತ್ರಿಷು ಲೋಕೇಷು ನಮಸ್ತೇ ಪರತಸ್ತ್ರಿಷು |
ಯೋಗೇಶ್ವರ ನಮಸ್ತೇಽಸ್ತು ತ್ವಂ ಹಿ ಸರ್ವಪರಾಯಣಮ್ ||4||
ನಿನಗೆ ಮೂರು ಲೋಕಗಳಲ್ಲಿಯೂ ನಮಸ್ಕಾರ. ಮೂರುಲೋಕಗಳ ಆಚೆ- ಯಲ್ಲಿಯೂ ನಿನಗೆ ನಮಸ್ಕಾರ. ಯೋಗೇಶ್ವರನೇ! ನಿನಗೆ ನಮಸ್ಕಾರ. ನೀನು ಎಲ್ಲರಿಗೂ ಶ್ರೇಷ್ಠವಾದ ಆಶ್ರಯನಾದವನು.
ಮತ್ಸಂಶ್ರಿತಂ ಯದಾತ್ಥ ತ್ವಂ ವಚಃ ಪುರುಷಸತ್ತಮ |
ತೇನ ಪಶ್ಯಾಮಿ ತೇ ದಿವ್ಯಾನ್ ಭಾವಾನ್ ಹಿ ತ್ರಿಷು ವರ್ತ್ಮಸು ||5||

ಎಲೈ ಪುರುಷೋತ್ತಮನೇ! ನೀನು ನನ್ನ ವಿಷಯದಲ್ಲಿ ಏನು ಮಾತನಾ- ಡಿದೆಯೋ ಅದರ ಬಲದಿಂದ ಮೂರು ಮಾರ್ಗಗಳಲ್ಲಿಯೂ ಇರುವ (ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿರುವ) ದಿವ್ಯವಾದ ವಸ್ತುಗಳನ್ನು ನೋಡುತ್ತಿದ್ದೇನೆ.
ತಚ್ಚ ಪಶ್ಯಾಮಿ ತತ್ತ್ವೇನ ಯತ್ ತೇ ರೂಪಂ ಸನಾತನಮ್ |
ಸಪ್ತ ಮಾರ್ಗಾ ನಿರುದ್ಧಾಸ್ತೇ ವಾಯೋರಮಿತತೇಜಸಃ ॥6॥
ನಿನ್ನ ಸನಾತನವಾದ ರೂಪವನ್ನು ಸಹ ಯಥಾರ್ಥವಾಗಿ ನೋಡುತ್ತಿದ್ದೇನೆ. ಅಮಿತತೇಜಸ್ವಿಯಾದ ವಾಯುವಿನ ಸಪ್ತಮಾರ್ಗಗಳನ್ನೂ ನೀನು ತಡೆದಿದ್ದೀಯೆ.
ದಿವಂ ತೇ ಶಿರಸಾ ವ್ಯಾಪ್ತಂ ಪದ್ಭ್ಯಾಂ ದೇವೀ ವಸುಂಧರಾ |
ದಿಶೋ ಭುಜೌ ರವಿಶ್ಚಕ್ಷುರ್ವೀರ್ಯೇ ಶಕ್ರಃ ಪ್ರತಿಷ್ಠಿತಃ ॥7॥
ದ್ಯುಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ಭೂಮಿಯು ನಿನ್ನ ಪಾದಗಳಿಂದ ವ್ಯಾಪ್ತವಾಗಿದೆ. ದಿಕ್ಕುಗಳು ನಿನ್ನ ಭುಜಗಳನ್ನು ಆಶ್ರಯಿಸಿವೆ. ಸೂರ್ಯನು ಚಕ್ಷುಸ್ಸನ್ನೂ, ಇಂದ್ರನು ನಿನ್ನ ವೀರ್ಯವನ್ನೂ ಆಶ್ರಯಿಸಿದ್ದಾರೆ.
ಅಸತೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ |
ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ |
ವಪುರ್ಹ್ಯನುಮಿಮೀಮಸ್ತೇ ಮೇಘಸ್ಯೇವ ಸವಿದ್ಯುತಃ ॥8॥
ಅಗಸೇಪುಷ್ಪದ ಕಾಂತಿಯನ್ನು ಹೊಂದಿದ ಪೀತಾಂಬರಧಾರಿಯಾದ ಗೋವಿಂದ -ನನ್ನು ನಮಸ್ಕರಿಸುವವರು ಯಾವ ಭಯವನ್ನೂ ಹೊಂದುವುದಿಲ್ಲ. ನಿನ್ನ ಶರೀರವು ವಿದ್ಯುತ್ತಿನಿಂದ ಕೂಡಿದ ಮೇಘದಂತೆ ಕಂಡು ಬರುತ್ತದೆ.
ತ್ವತ್ಪ್ರಪನ್ನಾಯ ಭಕ್ತಾಯ ಗತಿಮಿಷ್ಟಾಂ ಜಿಗೀಷವೇ |
ಯಚ್ಛ್ರೇಯಃ ಪುಂಡರೀಕಾಕ್ಷ ತದ್ ಧ್ಯಾಯಸ್ವ ಸುರೋತ್ತಮ ॥9॥
ಪುಂಡರೀಕಾಕ್ಷನೇ! ಸುರೋತ್ತಮನೇ! ಶ್ರೇಷ್ಠವಾದ ಗತಿಯನ್ನು ಬಯಸುವ, ಶರಣಾಗತನಾದ ನಿನ್ನ ಭಕ್ತನಾದ ನನಗೆ ಶ್ರೇಯಸ್ಸನ್ನು ಚಿಂತಿಸು.
ಶ್ರೀಭಗವಾನ್
ಯತಃ ಖಲು ಪರಾ ಭಕ್ತಿರ್ಮಯಿ ತೇ ಪುರುಷರ್ಷಭ |
ತತೋ ವಪುರ್ಮಯಾ ದಿವ್ಯಂ ತವ ರಾಜನ್ ಪ್ರದರ್ಶಿತಮ್ ॥10॥
ಭಗವಾನ್ ಎಲೈ ಪುರುಷಶ್ರೇಷ್ಠನೇ! ರಾಜನೇ ನಿನಗೆ ನನ್ನಲ್ಲಿ ಶ್ರೇಷ್ಠವಾದ ಭಕ್ತಿಯಿರುವ ಕಾರಣದಿಂದ ನನ್ನ ದಿವ್ಯದೇಹವನ್ನು ನಿನಗೆ ತೋರಿಸಿದ್ದೇನೆ.
ನ ಹ್ಯಭಕ್ತಾಯ ರಾಜೇಂದ್ರ ಭಕ್ತಾಯಾನೃಜವೇ ನ ಚ |
ದರ್ಶಯಾಮ್ಯಹಮಾತ್ಮಾನಂ ನ ಚಾದಾಂತಾಯ ಭಾರತ ॥11॥
ಎಲೈ ಭಾರತನೇ! ರಾಜೇಂದ್ರನೇ! ಭಕ್ತನಲ್ಲದವನಿಗೆ ಭಕ್ತನಾದರೂ ವಕ್ರನಾದ- ವನಿಗೆ ಇಂದ್ರಿಯನಿಗ್ರಹವಿಲ್ಲದವನಿಗೆ ನಾನು ನನ್ನನ್ನು ತೋರಿಸುವುದಿಲ್ಲ.
ಭವಾಂಸ್ತು ಮಮ ಭಕ್ತಶ್ಚ ನಿತ್ಯಂ ಚಾರ್ಜವಮಾಸ್ಥಿತಃ |
ದಮೇ ತಪಸಿ ಸತ್ಯೇ ಚ ದಾನೇ ಚ ನಿರತಃ ಶುಚಿಃ ॥12॥
ನೀನಾದರೋ ನನ್ನ ಭಕ್ತನಾದವನು; ಯಾವಾಗಲೂ ನೇರಸ್ವಭಾವದವನು. ಇಂದ್ರಿಯನಿಗ್ರಹದಲ್ಲಿಯೂ ತಪಸ್ಸಿನಲ್ಲಿಯೂ ಸತ್ಯವಚನದಲ್ಲಿಯೂ ದಾನದ- ಲ್ಲಿಯೂ ನಿರತನಾಗಿ ಶುಚಿಯಾಗಿರುವವನು.
ಅರ್ಹಸ್ತ್ವಂ ಭೀಷ್ಮ ಮಾಂ ದ್ರಷ್ಟುಂ ತಪಸಾ ಸ್ವೇನ ಪಾರ್ಥಿವ |
ತವ ಹ್ಯುಪಸ್ಥಿತಾ ಲೋಕಾ ಯೇಭ್ಯೋ ನಾವರ್ತತೇ ಪುನಃ ॥13॥
ಎಲೈ ಭೀಷ್ಮನೇ! ರಾಜನೇ! ನಿನ್ನ ತಪಸ್ಸಿನ ಬಲದಿಂದ ನೀನು ನನ್ನನ್ನು ನೋಡಲು ಅರ್ಹನಾಗಿದ್ದೀಯೆ. ನಿನಗೆ ಪುನಃ ಹಿಂದಿರುಗದ ಲೋಕಗಳು ಸಿದ್ಧವಾಗಿವೆ.
ಪಂಚಾಶತಂ ಷಟ್ ಚ ಕುರುಪ್ರವೀರ
ಶೇಷಂ ದಿನಾನಾಂ ತವ ಜೀವಿತಸ್ಯ |
ತತಃ ಶುಭೈಃ ಕರ್ಮಫಲೋದಯೈಸ್ತ್ವಂ
ಸಮೇಷ್ಯಸೇ ಭೀಷ್ಮ ವಿಮುಚ್ಯ ದೇಹಮ್ ॥14॥
ಎಲೈ ಕುರುಪ್ರವೀರನೇ! ನಿನ್ನ ಜೀವನದಲ್ಲಿ ಇನ್ನೂ ಐವತ್ತಾರು ದಿವಸಗಳು ಉಳಿದಿವೆ. ಅನಂತರ ಎಲೈ ಭೀಷ್ಮನೇ! ನೀನು ಈ ದೇಹವನ್ನು ತ್ಯಜಿಸಿ, ಶುಭವಾದ ಕರ್ಮಫಲಗಳನ್ನು ಹೊಂದುವಿ.
ಏತೇ ಹಿ ದೇವಾ ವಸವೋ ವಿಮಾನಾನ್
ಆಸ್ಥಾಯ ಸರ್ವೇ ಜ್ವಲಿತಾಗ್ನಿಕಲ್ಪಾಃ |
ಅಂತರ್ಹಿತಾಸ್ತ್ವಾಂ ಪ್ರತಿಪಾಲಯಂತಿ
ಕಾಷ್ಠಾಂ ಪ್ರಪದ್ಯಂತಮುದಕ್ ಪತಂಗಮ್ ॥15॥
ಜ್ವಲಿಸುವ ಅಗ್ನಿಯ ಕಾಂತಿಯನ್ನು ಹೊಂದಿರುವ ಈ ದೇವತೆಗಳು ಮತ್ತು ವಸುಗಳೆಲ್ಲರೂ ತಮ್ಮ ವಿಮಾನಗಳಲ್ಲಿ ಕುಳಿತು ಅದೃಶ್ಯರಾಗಿ ಸೂರ್ಯನು ಉತ್ತರ ದಿಕ್ಕಿಗೆ ಗತಿಯನ್ನು ಬದಲಾಯಿಸುವವರೆಗೆ ರಕ್ಷಣೆ ಮಾಡುತ್ತಿದ್ದಾರೆ.
ವ್ಯಾವೃತ್ತಮಾತ್ರೇ ಭಗವತ್ಯುದೀಚೀಂ
ಸೂರ್ಯೇ ದಿಶಂ ಕಾಲವಶಾತ್ ಪ್ರಪನ್ನೇ |

ಗಂತಾಸಿ ಲೋಕಾನ್ ಪುರುಷಪ್ರವೀರ
ನಾವರ್ತತೇ ಯಾನುಪಲಭ್ಯ ವಿದ್ವಾನ್ ॥16॥
ಭಗವಂತನಾದ ಸೂರ್ಯನು ಉತ್ತರದಿಕ್ಕಿಗೆ ಹೊರಟಕೂಡಲೇ ಎಲ್ಲೈ ಪುರುಷ- ಪ್ರವೀರನೇ! ನೀನು ಜ್ಞಾನಿಯಾದವನು ಯಾವ ಲೋಕಗಳನ್ನು ಪಡೆದು ಹಿಂದಿರು- ಗುವುದಿಲ್ಲವೋ ಅಂತಹ ಲೋಕಗಳಿಗೆ ಕಾಲವಶನಾಗಿ ಹೋಗುವವನಾಗುವಿ.
ಅಮುಂ ಚ ಲೋಕಂ ತ್ವಯಿ ಭೀಷ್ಮ ಯಾತೇ
ಜ್ಞಾನಾನಿ ನಂಕ್ಷ್ಯಂತ್ಯಖಿಲೇನ ವೀರ |
ಅತಃ ಸ್ಮ ಸರ್ವೇ ತ್ವಯಿ ಸನ್ನಿಕರ್ಷಂ
ಸಮಾಗತಾ ಧರ್ಮವಿವೇಚನಾಯ ॥17॥
ಎಲ್ಲೈ ವೀರನೇ! ಭೀಷ್ಮನೇ! ನೀನು ಪರಲೋಕಕ್ಕೆ ಪ್ರಯಾಣಮಾಡಿದ ಮೇಲೆ ಈ ಲೋಕದಲ್ಲಿ ಜ್ಞಾನಗಳು ಪೂರ್ಣವಾಗಿ ನಾಶ ಹೊಂದುತ್ತವೆ. ಆದ್ದರಿಂದ ನಾವೆಲ್ಲರೂ ಧರ್ಮವಿವೇಚನೆಯನ್ನು ಮಾಡಲು ನಿನ್ನ ಬಳಿಗೆ ಬಂದಿದ್ದೇವೆ.
ತಜ್ಜ್ಞಾತಿಶೋಕೋಪಹತಶ್ರುತಾಯ
ಸತ್ಯಾಭಿಸಂಧಾಯ ಯುಧಿಷ್ಠಿರಾಯ |
ಪ್ರಬ್ರೂಹಿ ಧರ್ಮಾರ್ಥಸಮಾಧಿಯುಕ್ತ-
ಮರ್ಥ್ಯಂ ವಚೋಽಸ್ಯಾಪನುದಾಥ ಶೋಕಮ್ ॥18॥
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಪಂಚಾಶೋಽ ಧ್ಯಾಯಃ ॥51॥
ಆದ್ದರಿಂದ ಜ್ಞಾತಿವಧೆಯಿಂದುಂಟಾದ ಶೋಕದಿಂದ ಮಲಿನವಾದ ಜ್ಞಾನವನ್ನು ಹೊಂದಿರುವ ಸತ್ಯವಾದ ಅಭಿಪ್ರಾಯವುಳ್ಳ ಯುಧಿಷ್ಠಿರನಿಗೆ ಧರ್ಮಾರ್ಥ- ಸಮಾಧಾನಯುಕ್ತವಾದ ಪ್ರಾರ್ಥನೀಯವಾದ ಮಾತುಗಳನ್ನು ಹೇಳಿ ಅವನ ಶೋಕವನ್ನು ಪರಿಹರಿಸು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 51ನೆಯ ಅಧ್ಯಾಯವು ಮುಗಿಯಿತು
0
52. ಐವತ್ತೆರಡನೆಯ ಅಧ್ಯಾಯ
ಭೀಷ್ಮರಿಂದ ತಮ್ಮ ಅಸಾಮರ್ಥ್ಯದ ನಿವೇದನೆ; ಕೃಷ್ಣನ ಅನುಗ್ರಹದಿಂದ ದೇಹದಾರ್ಢ್ಯಪ್ರಾಪ್ತಿ
ವೈಶಂಪಾಯನಃ
ತತಃ ಕೃಷ್ಣಸ್ಯ ತದ್ ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ |
ಶ್ರುತ್ವಾ ಶಾಂತನವೋ ಭೀಷ್ಮಃ ಪ್ರತ್ಯುವಾಚ ಕೃತಾಂಜಲಿಃ ॥1॥
ವೈಶಂಪಾಯನರು ಆಗ ಧರ್ಮಾರ್ಥಸಹಿತವೂ ಹಿತವೂ ಆದ ಕೃಷ್ಣನ ಆ ಮಾತನ್ನು ಕೇಳಿ ಶಂತನುಪುತ್ರರಾದ ಆ ಭೀಷ್ಮರು ಕೈಗಳನ್ನು ಮುಗಿದು ಮಾತ- ನಾಡಿದರು.
ಲೋಕನಾಥ ಮಹಾಬಾಹೋ ಶಿವ ನಾರಾಯಣಾಚ್ಯುತ |
ತವ ವಾಕ್ಯಮಭಿಶ್ರುತ್ಯ ಹರ್ಷೇಣಾಸ್ಮಿ ಪರಿಪ್ಲುತಃ ॥2॥
ಲೋಕನಾಥನೇ! ಮಹಾಬಾಹುವೇ! ಶಿವನೇ! ನಾರಾಯಣನೇ! ಅಚ್ಯುತನೇ! ನಿನ್ನ ಮಾತನ್ನು ಕೇಳಿ ನಾನು ಸಂತೋಷದಿಂದ ತುಂಬಿಹೋಗಿದ್ದೇನೆ.
ಕಿಂ ಚಾಹಮಭಿಧಾಸ್ಯಾಮಿ ವಾಕ್ಪತೇ ತವ ಸನ್ನಿಧೌ |
ಯದಾ ವಾಚೋಗತಂ ಸರ್ವಂ ತವ ವಾಚಿ ಸಮಾಹಿತಮ್ ॥3॥
ಎಲ್ಲೈ ವಾಕ್ಪತಿಯೇ! ಮಾತಿನಿಂದ ಹೇಳಬೇಕಾದುದೆಲ್ಲವೂ ನಿನ್ನ ಮಾತಿನಲ್ಲಿಯೇ ಅಡಗಿರುವಾಗ ನಿನ್ನ ಸನ್ನಿಧಿಯಲ್ಲಿ ನಾನು ಏನನ್ನು ಹೇಳಲಿ?
ಯದ್ಧಿ ಕಿಂಚಿತ್ ಕೃತಂ ಲೋಕೇ ಕರ್ತವ್ಯಂ ಕ್ರಿಯತೇ ಚ ಯತ್ |
ತ್ವತ್ತಸ್ತನ್ನಿಃಸೃತಂ ದೇವ ಲೋಕಾ ಬುದ್ಧಿಮಯಾ ಹಿ ತೇ ॥4॥
ಲೋಕದಲ್ಲಿ ಮಾಡಬೇಕಾದ ಯಾವ ಕರ್ತವ್ಯವಿದೆಯೋ ಯಾವುದು ಮಾಡಲ್ಪಡುತ್ತದೆಯೋ ಎಲ್ಲೈ ದೇವನೇ! ಅದೆಲ್ಲವೂ ನಿನ್ನಿಂದಲೇ ಉಂಟಾಗುವುದು. ಎಲ್ಲ ಲೋಕಗಳೂ ನಿನ್ನ ಜ್ಞಾನವನ್ನು ಅವಲಂಬಿಸಿವೆ.
ಕಥಯೇದ್ ದೇವಲೋಕಂ ಯೋ ದೇವರಾಜಸಮೀಪತಃ |
ಧರ್ಮಕಾಮಾರ್ಥಶಾಸ್ತ್ರಾಣಾಂ ಸೋಽರ್ಥಾನ್ ಬ್ರೂಯಾತ್ ತವಾಗ್ರತಃ ॥
ಯಾವನು ದೇವರಾಜನಾದ ಇಂದ್ರನಿಗೆ ದೇವಲೋಕವನ್ನು ಪರಿಚಯಮಾಡಿ- ಕೊಡುತ್ತಾನೋ ಅಂತಹವನು ನಿನ್ನ ಎದುರಿನಲ್ಲಿ ಧರ್ಮ, ಅರ್ಥ, ಕಾಮಶಾಸ್ತ್ರಗಳ ಅರ್ಥವನ್ನು ಹೇಳಿಯಾನು!
ಶರಾಭಿಘಾತಾದ್ ವ್ಯಥಿತಂ ಮನೋ ಮೇ ಮಧುಸೂದನ |
ಗಾತ್ರಾಣಿ ಚಾವಸೀದಂತಿ ನ ಚ ಬುದ್ಧಿಃ ಪ್ರಸೀದತಿ ॥6॥
ಎಲ್ಲೈ ಮಧುಸೂದನನೇ! ಬಾಣಗಳಿಂದುಂಟಾದ ವೇದನೆಯಿಂದ ನನ್ನ ಮನಸ್ಸು ವ್ಯಥೆಯಿಂದ ಕೂಡಿದೆ. ಶರೀರವು ಕುಸಿದು ಹೋಗುತ್ತಿದೆ. ಬುದ್ಧಿಯು ಸ್ಪಷ್ಟವಾಗಿಲ್ಲ.
ನ ಚ ಮೇ ಪ್ರತಿಭಾ ಕಾಚಿದಸ್ತಿ ಕಿಂಚಿತ್ ಪ್ರಭಾಷಿತುಮ್ |
ಪೀಡ್ಯಮಾನಸ್ಯ ಗೋವಿಂದ ವಿಷಾನಲಸಮೈಃ ಶರೈಃ ॥7॥
ವಿಷಾಗ್ನಿಗಳಿಗೆ ಸಮಾನವಾದ ಬಾಣಗಳಿಂದ ಪೀಡಿತನಾದ ನನಗೆ ಮಾತ- ನಾಡಲು ಯಾವುದೂ ಹೊಳೆಯುತ್ತಿಲ್ಲ.

ಬಲಂ ಮೇಧಾಃ ಪ್ರಜರತಿ ಪ್ರಾಣಾಃ ಸಂತ್ವರಯಂತಿ ಚ |
ಮರ್ಮಾಣಿ ಪರಿತಪ್ಯಂತೇ ಭ್ರಾಂತಂ ಚೈತಸ್ತಥೈವ ಚ ॥8॥
ಬಲ ಮತ್ತು ಪ್ರತಿಭೆಗಳು ನಶಿಸಿ ಹೋಗುತ್ತಿವೆ. ಪ್ರಾಣಗಳು ಶರೀರವನ್ನು ಬಿಡಲು ತ್ವರೆ ಮಾಡುತ್ತಿವೆ. ಶರೀರದ ಮರ್ಮಸ್ಥಾನಗಳು ತಾಪಕ್ಕೊಳಗಾಗಿವೆ. ನನ್ನ ಮನಸ್ಸು ಭ್ರಾಂತಿಯಿಂದ ಕೂಡಿದೆ.
ದೌರ್ಬಲ್ಯಾತ್ ಸಜ್ಜತೇ ವಾಙ್ ಮೇ ಸ ಕಥಂ ವಕ್ತುಮುತ್ಸಹೇ |
ಸಾಧು ಮೇ ತ್ವಂ ಪ್ರಸೀದಸ್ವ ದಾಶಾರ್ಹಕುಲನಂದನ ॥9॥
ನಿಃಶಕ್ತಿಯಿಂದ ಮಾತು ಉಡುಗಿಹೋಗುತ್ತಿದೆ. ಅಂತಹ ನಾನು ಹೇಗೆ ಮಾತ- ನಾಡಲಿ? ದಾಶಾರ್ಹಕುಲನಂದನನೇ! ನೀನು ನನಗೆ ಪ್ರಸನ್ನನಾಗು.
ತತ್ ಕ್ಷಮಸ್ವ ಮಹಾಬಾಹೋ ನ ಬ್ರೂಯಾಂ ಕಿಂಚಿದಚ್ಯುತ |
ತ್ವಸನ್ನಿಧೌ ಚ ಸೀದೇತ ವಾಚಸ್ಪತಿರಪಿ ಬ್ರುವನ್ ॥10॥
ಎಲೈ ಮಹಾಬಾಹುವೇ! ನನ್ನನ್ನು ಕ್ಷಮಿಸು. ಅಚ್ಯುತನೇ! ನಾನು ಏನನ್ನೂ ಹೇಳಲಾರೆ. ಅದರಲ್ಲೂ ನಿನ್ನ ಸನ್ನಿಧಿಯಲ್ಲಿ ವಾಚಸ್ಪತಿಯೂ ಮಾತನಾಡಲು ಹೊರ- ಟರೆ ಅವನ ಮಾತುಗಳು ನಶಿಸಿಹೋದಾವು!
ನ ದಿಶಃ ಸಂಪ್ರಜಾನಾಮಿ ನಾಕಾಶಂ ನಚ ಮೇದಿನೀಮ್ |
ಕೇವಲಂ ತವ ವೀರ್ಯೇಣ ತಿಷ್ಠಾಮಿ ಮಧುಸೂದನ ॥11॥
ನನಗೆ ದಿಕ್ಕುಗಳು ತಿಳಿಯುತ್ತಿಲ್ಲ. ಭೂಮಿ ಮತ್ತು ಆಕಾಶಗಳು ಗೋಚರಿ- ಸುತ್ತಿಲ್ಲ. ಎಲೈ ಮಧುಸೂದನನೇ! ಕೇವಲ ನಿನ್ನ ಅನುಗ್ರಹದಿಂದ ನಾನು ಬದುಕಿ- ದ್ದೇನೆ.
ಸ್ವಯಮೇವ ಪ್ರಭೋ ತಸ್ಮಾದ್ ಧರ್ಮರಾಜಸ್ಯ ಯದ್ ಹಿತಮ್ |
ತದ್ ಬ್ರವೀಹ್ಯಾಶು ಸರ್ವೇಷಾಮಾಗಮಾನಾಂ ತ್ವಮಾಗಮಃ ॥12॥
ಎಲೈ ಪ್ರಭುವೇ! ಆದ್ದರಿಂದ ನೀನೇ ಧರ್ಮರಾಜನಿಗೆ ಯಾವುದು ಹಿತವೋ ಅದನ್ನು ಹೇಳು. ಎಲ್ಲ ಆಗಮಗಳಿಗೆ ನೀನೇ ಮೂಲನಾದವನು (ನೀನೇ ಜ್ಞಾನಪ್ರದ- ನಾದವನು).
ಕಥಂ ತ್ವಯಿ ಸ್ಥಿತೇ ಲೋಕೇ ಶಾಶ್ವತೇ ಲೋಕಕರ್ತರಿ |
ಪ್ರಬ್ರೂಯಾನ್ಮದ್ವಿಧಾಃ ಕಶ್ಚಿದ್ ಗುರೌ ಶಿಷ್ಯ ಇವ ಸ್ಥಿತೇ ॥13॥
ಲೋಕಕರ್ತನೂ ಶಾಶ್ವತನೂ ಆದ ನಿನ್ನಂತಹವನು ಎದುರಿಗೆ ಇರುವಾಗ ಗುರುವಿನ ಎದುರಿನಲ್ಲಿ ಶಿಷ್ಯನು ಮಾತನಾಡಿದಂತೆ ನನ್ನಂತಹ ಯಾವನು ಮಾತ- ನಾಡಿಯಾನು?
ಶ್ರೀಭಗವಾನ್
ಉಪಪನ್ನಮಿದಂ ವಾಕ್ಯಂ ಕೌರವಾಣಾಂ ಧುರಂಧರೇ |
ಮಹಾವೀರ್ಯೇ ಮಹಾಸತ್ತ್ವೇ ಸ್ಥಿತೇ ಸರ್ವಾರ್ಥದರ್ಶಿನಿ ॥14॥
ಶ್ರೀಭಗವಾನ್ ಕೌರವರ ಧುರಂಧರನೂ, ಮಹಾಪರಾಕ್ರಮಿಯೂ, ಮಹಾ- ಧೈರ್ಯವಂತನೂ ಸರ್ವಜ್ಞನೂ ಆದ ನಿನ್ನಿಂದ ಇಂತಹ ಮಾತುಗಳು ಯೋಗ್ಯ- ವಾಗಿವೆ.
ಯಚ್ಚ ಮಾಮಾತ್ಥ ಗಾಂಗೇಯ ಬಾಣಘಾತರುಜಂ ಪ್ರತಿ |
ಗೃಹಾಣಾತ್ರ ವರಂ ಭೀಷ್ಮ ಮತ್ಪ್ರಸಾದಕೃತಂ ವಿಭೋ ॥15॥
ಎಲೈ ಗಾಂಗೇಯನೇ! ಬಾಣಗಳಿಂದ ಉಂಟಾದ ವೇದನೆಯ ವಿಷಯದಲ್ಲಿ ನೀನು ನನಗೆ ಹೇಳಿದೆಯಷ್ಟೇ. ಎಲೈ ಭೀಷ್ಮನೇ! ವಿಭುವೇ! ನನ್ನ ಅನುಗ್ರಹದಿಂದ ಉಂಟಾದ ವರವನ್ನು ಈ ವಿಷಯದಲ್ಲಿ ಸ್ವೀಕರಿಸು.
ನ ತೇ ಗ್ಲಾನಿರ್ನ ತೇ ಮೂರ್ಚ್ಛಾ ನ ದಾಹೋ ನ ಚ ತೇ ರುಜಾ |
ಪ್ರಭವಿಷ್ಯತಿ ಗಾಂಗೇಯ ಕ್ಷುತ್ಪಿಪಾಸೇ ನ ಚಾಪ್ಯುತ ॥16॥
ಎಲೈ ಗಾಂಗೇಯನೇ! ಅಚ್ಯುತನೇ! ನಿನಗೆ ಶ್ರಮವಾಗಲೀ, ಮೂರ್ಛೆ- ಯಾಗಲೀ, ಉರಿಯಾಗಲೀ, ವೇದನೆಯಾಗಲೀ, ಹಸಿವು ನೀರಡಿಕೆಗಳಾಗಲೀ ಉಂಟಾಗುವುದಿಲ್ಲ.
ಜ್ಞಾನಾನಿ ಚ ಸಮಗ್ರಾಣಿ ಪ್ರತಿಭಾಸ್ಯಂತಿ ತೇಽನಘ |
ನ ಚ ತೇ ಕ್ವಚಿದಾಸಕ್ತಿರ್ಬುದ್ಧೇಃ ಪ್ರಾದುರ್ಭವಿಷ್ಯತಿ ॥17॥
ಎಲೈ ಅನಘನೇ! ನಿನಗೆ ಎಲ್ಲ ಜ್ಞಾನಗಳೂ ಪ್ರಕಾಶಿಸುತ್ತವೆ. ನಿನ್ನ ಬುದ್ಧಿಯು ಸಂಕಲ್ಪ ಮಾಡಿದ ವಿಷಯವನ್ನು ಬಿಟ್ಟು ಬೇರೆ ಕಡೆಗೆ ಹೋಗುವುದಿಲ್ಲ.
ಸತ್ತ್ವಸ್ಥಂ ಚ ಮನೋ ನಿತ್ಯಂ ತವ ಭೀಷ್ಮ ಭವಿಷ್ಯತಿ |
ರಜಸ್ತಮೋಭ್ಯಾಂ ರಹಿತಂ ಘನೈರ್ಮುಕ್ತ ಇವೋಡುರಾಟ್ ॥18॥
ಎಲೈ ಭೀಷ್ಮನೇ! ನಿನ್ನ ಮನಸ್ಸು ರಜೋಗುಣ ಮತ್ತು ತಮೋಗುಣಗಳಿಂದ ರಹಿತವಾಗಿ ಮೋಡನಿಂದ ನಿರ್ಮುಕ್ತನಾದ ಚಂದ್ರನಂತೆ ಯಾವಾಗಲೂ ಸತ್ವಗುಣ- ದಲ್ಲಿ ನಿಲ್ಲುವುದು.
ಯದ್ ಯಚ್ಚ ಧರ್ಮಸಂಯುಕ್ತಮರ್ಥಯುಕ್ತಮಥಾಪಿ ವಾ |
ಚಿಂತಯಿಷ್ಯಸಿ ತತ್ರಾಗ್ರ್ಯಾ ಬುದ್ಧಿಸ್ತವ ಭವಿಷ್ಯತಿ ॥19॥
ಧರ್ಮದ ವಿಷಯದಲ್ಲಿ ಮತ್ತು ಅರ್ಥದ ವಿಷಯದಲ್ಲಿ ನೀನು ಏನೇನು ಚಿಂತಿಸುವಿಯೋ ಆ ವಿಷಯಗಳಲ್ಲಿ ನಿನ್ನ ಬುದ್ಧಿಯು ಬಹಳ ಶ್ರೇಷ್ಠವಾಗುವುದು.
ಇಮಂ ಚ ರಾಜಶಾರ್ದೂಲ ಭೂತಗ್ರಾಮಂ ಚತುರ್ವಿಧಮ್ |

ಚಕ್ಷುರ್ದಿವ್ಯಂ ಸಮಾಶ್ರಿತ್ಯ ದ್ರಕ್ಷ್ಯಸ್ಯಮಿತವಿಕ್ರಮ ॥20॥
ಎಲೈ ರಾಜಶಾರ್ದೂಲನೇ! ಅಮಿತವಿಕ್ರಮನೇ! ನೀನು ದಿವ್ಯವಾದ ಚಕ್ಷುಸ್ಸನ್ನು ಹೊಂದಿ, ಜರಾಯುಜಾದಿ ನಾಲ್ಕು ವಿಧವಾದ ಜೀವರನ್ನು ನೋಡುವಿ.
ಚತುರ್ವಿಧಂ ಪ್ರಜಾಜಾಲಂ ಸಂಯುಕ್ತೋ ಜ್ಞಾನಚಕ್ಷುಷಾ |
ಭೀಷ್ಮ ದ್ರಕ್ಷ್ಯಸಿ ತತ್ತ್ವೇನ ಜಲೇ ಮೀನ ಇವಾಮಲೇ ॥21॥
ಎಲೈ ಭೀಷ್ಮನೇ! ನೀನು ಸ್ವಚ್ಛವಾದ ನೀರಿನಲ್ಲಿ ಮೀನನ್ನು ನೋಡಿದಂತೆ ನಿನ್ನ ಜ್ಞಾನದೃಷ್ಟಿಯಿಂದ ಕೂಡಿದವನಾಗಿ ಎಲ್ಲ ಜೀವರನ್ನೂ ಯಥಾರ್ಥವಾಗಿ ನೋಡುವಿ (ಎಂದು ಹೇಳಿದನು).
ವೈಶಂಪಾಯನಃ
ತತಸ್ತೇ ವ್ಯಾಸಸಹಿತಾಃ ಸರ್ವ ಏವ ಮಹರ್ಷಯಃ |
ಋಗ್ಯಜುಃಸಾಮಸಂಯುಕ್ತೈರ್ವಚೋಭಿಃ ಕೃಷ್ಣಮಾರ್ಚಯನ್ ॥22॥
ವೈಶಂಪಾಯನರು ಅನಂತರ ವ್ಯಾಸರಿಂದ ಕೂಡಿದ ಎಲ್ಲ ಮಹರ್ಷಿಗಳೂ ಋಗ್ಯಜುಃಸಾಮವಾಕ್ಯಗಳಿಂದ ಕೃಷ್ಣನನ್ನು ಪೂಜಿಸಿದರು.
ತತಃ ಸರ್ವರ್ತವಂ ದಿವ್ಯಂ ಪುಷ್ಪವರ್ಷಂ ನಭಸ್ತಲಾತ್ |
ಪಪಾತ ಯತ್ರ ವಾರ್ಷ್ಣೇಯಃ ಸಗಾಂಗೇಯಃ ಸಪಾಂಡವಃ ॥23॥
ಆಗ ಕೃಷ್ಣನೂ ಭೀಷ್ಮರೂ ಮತ್ತು ಪಾಂಡವರೂ ಇದ್ದ ಸ್ಥಳದಲ್ಲಿ ಆಕಾಶದಿಂದ ದಿವ್ಯವಾದ ಸರ್ವ ಋತುಗಳ ಪುಷ್ಪಗಳ ವೃಷ್ಟಿಯು ಉಂಟಾಯಿತು.
ವಾದಿತ್ರಾಣಿ ಚ ದಿವ್ಯಾನಿ ಜಗುಶ್ಚಾಪ್ಸರಸಾಂ ಗಣಾಃ |
ನ ಚಾಹಿತಮನಿಷ್ಟಂ ವಾ ಕಿಂಚಿತ್ ತತ್ರ ವ್ಯದೃಶ್ಯತ ॥24॥
ಆಕಾಶದಲ್ಲಿ ದಿವ್ಯವಾದ ವಾದ್ಯಗಳು ಮೊಳಗಿದವು. ಅಪ್ಸರೆಯರ ಸಮೂಹ- ಗಳು ಗಾನವನ್ನು ಮಾಡಿದವು. ಅಲ್ಲಿ ಅಹಿತವಾದುದಾಗಲೀ, ಅನಿಷ್ಟವಾದುದಾಗಲೀ ಯಾವುದೂ ಕಂಡು ಬರಲಿಲ್ಲ.
ವವೌ ಶಿವಃ ಸುಖೋ ವಾಯುಃ ಸುಖಗಂಧವಹಃ ಶುಚಿಃ |
ಶಾಂತಾಯಾಂ ದಿಶಿ ಶಾಂತಾಶ್ಚ ಪ್ರಾವದನ್ ಮೃಗಪಕ್ಷಿಣಃ ॥25॥
ಅನಂತರ ಮಂಗಳಕರವಾದ ವಾಯುವು ಶುಚಿಯಾಗಿ ಸರ್ವಗಂಧಗಳನ್ನು ತೆಗೆದುಕೊಂಡು ಸುಖವಾಗಿ ಬೀಸಿತು. ದಕ್ಷಿಣದಿಕ್ಕಿನಲ್ಲಿ ಮೃಗಪಕ್ಷಿಗಳು ಶಾಂತವಾಗಿ ಕಿರುಚಿದವು.
ತತೋ ಮುಹೂರ್ತಾದ್ ಭಗವಾನ್ ಸಹಸ್ರಾಂಶುರ್ದಿವಾಕರಃ |
ದಹನ್ ವನಮಿವೈಕಾಂತೇ ಪ್ರತೀಚ್ಯಾಂ ಪ್ರತ್ಯದೃಶ್ಯತ ॥26॥
ಅನಂತರ ಒಂದು ಮುಹೂರ್ತದಲ್ಲಿ ಭಗವಂತನಾದ ಸಹಸ್ರಕಿರಣನಾದ ಸೂರ್ಯನು ಏಕಾಂತದಲ್ಲಿ ಆ ವನವನ್ನು ದಹಿಸುವವನಂತೆ ಪಶ್ಚಿಮದಿಕ್ಕಿನಲ್ಲಿ ಕಾಣಿಸಿ -ಕೊಂಡನು.
ತತೋ ಮಹರ್ಷಯಃ ಸರ್ವೇ ಸಮುತ್ಥಾಯ ಜನಾರ್ದನಮ್ |
ಭೀಷ್ಮಮಾಮಂತ್ರಯಾಂಚಕ್ರೂ ರಾಜಾನಂ ಚ ಯುಧಿಷ್ಠಿರಮ್ ॥27॥
ಆಗ ಮಹರ್ಷಿಗಳೆಲ್ಲರೂ ಎದ್ದು ಹೊರಡಲು ಜನಾರ್ದನನ, ಭೀಷ್ಮರ ಮತ್ತು ರಾಜನಾದ ಯುಧಿಷ್ಠಿರನ ಅನುಮತಿಯನ್ನು ತೆಗೆದುಕೊಂಡರು.
ತತಃ ಪ್ರಣಾಮಮಕರೋತ್ ಕೇಶವಃ ಪಾಂಡವಸ್ತಥಾ |
ಸಾತ್ಯಕಿಃ ಸಂಜಯಶ್ಚೈವ ಸ ಚ ಶಾರದ್ವತಃ ಕೃಪಃ ॥28॥
ಆಗ ಕೇಶವನೂ, ಪಾಂಡವನಾದ ಯುಧಿಷ್ಠಿರನೂ, ಸಾತ್ಯಕಿ, ಸಂಜಯ ಮತ್ತು ಶಾರದ್ವತರಾದ ಕೃಪರೂ ಋಷಿಗಳಿಗೆ ಪ್ರಣಾಮವನ್ನು ಮಾಡಿದರು.
ತತಸ್ತೇ ಧರ್ಮನಿರತಾಃ ಸಮ್ಯಕ್ ತೈರಭಿಪೂಜಿತಾಃ |
ಶ್ವಃ ಸಮೇಷ್ಯಾಮ ಇತ್ಯುಕ್ತ್ವಾ ಯಥೇಷ್ಟಂ ತ್ವರಿತಾ ಯಯುಃ ॥29॥
ಅನಂತರ ಅವರಿಂದ ಚೆನ್ನಾಗಿ ಪೂಜಿಸಲ್ಪಟ್ಟ ಧರ್ಮನಿರತರಾದ ಆ ಮಹರ್ಷಿ- ಗಳು ನಾಳೆ ಸಮಾಗಮವನ್ನು ಹೊಂದೋಣ ಎಂದು ಹೇಳಿ ಶೀಘ್ರವಾಗಿ ತಮಗೆ ಇಷ್ಟವಾದ ಸ್ಥಳಗಳಿಗೆ ಹೊರಟರು.
ತಥೈವಾಮಂತ್ರ್ಯ ಗಾಂಗೇಯಂ ಕೇಶವಸ್ತೇ ಚ ಪಾಂಡವಾಃ |
ಪ್ರದಕ್ಷಿಣಮುಪಾವೃತ್ಯ ರಥಾನಾರುರುಹುಃ ಶುಭಾನ್ ॥30॥
ಹಾಗೆಯೇ ಕೇಶವನು ಮತ್ತು ಪಾಂಡವರು ಭೀಷ್ಮರ ಅನುಮತಿಯನ್ನು ಪಡೆದು ಅವರಿಗೆ ಪ್ರದಕ್ಷಿಣೆಯನ್ನು ಮಾಡಿ ತಮ್ಮ ಶುಭವಾದ ರಥಗಳನ್ನು ಏರಿದರು.
ತತೋ ರಥೈಃ ಕಾಂಚನದಂತಕೂಬರೈಃ
ಮಹೀಧರಾಭೈಃ ಸಮದೈಶ್ಚ ದಂತಿಭಿಃ |
ಹಯೈಃ ಸುಪರ್ಣೈರಿವ ಚಾಶುಗಾಮಿಭಿಃ
ಪದಾತಿಭಿಶ್ಚಾತ್ತಶರಾಸನಾದಿಭಿಃ ॥31॥
ಯಯೌ ರಥಾನಾಂ ಪುರತೋ ಹಿ ಸಾ ಚಮೂಃ
ತಥೈವ ಪಶ್ಚಾದತಿಮಾತ್ರಸಾರಿಣೀ |

ಪುರಶ್ಚ ಪಶ್ಚಾಚ್ಚ ಯಥಾ ಮಹಾನದೀ
ಅಥರ್ಕ್ಷವಂತಂ ಗಿರಿಮೇತಿ ನರ್ಮದಾ ॥32॥
ಅನಂತರ ಸುವರ್ಣ ಮತ್ತು ಗಜದಂತಗಳಿಂದ ಅಲಂಕೃತವಾದ ರಥಗ- ಳಿಂದಲೂ, ಪರ್ವತಪ್ರಾಯವಾದ ಮದಿಸಿದ ಗಜಗಳಿಂದಲೂ, ಗರುಡನಂತೆ ವೇಗ- ಶಾಲಿಗಳಾದ ಹಯಗಳಿಂದಲೂ, ಧನುರ್ಧಾರಿಗಳಾದ ಪದಾತಿಗಳಿಂದಲೂ ಕೂಡಿದ ಆ ಸೈನ್ಯವು ನರ್ಮದಾ ನದಿಯು ಋಕ್ಷವಂತಪರ್ವತ(ವಿಂಧ್ಯಾಚಲ)ದ ಹಿಂದೆಯೂ ಮತ್ತು ಮುಂದೆಯೂ ಹರಿದಂತೆ ರಥಗಳ ಮುಂದೆಯೂ ಮತ್ತು ಹಿಂದೆಯೂ ಚಲಿಸಿತು.
ತತಃ ಪುರಸ್ತಾದ್ ಭಗವಾನ್ ನಿಶಾಕರಃ
ಸಮುತ್ಥಿತಸ್ತಾಮಭಿಹರ್ಷಯಂಶ್ಚಮೂಮ್ ।
ದಿವಾಕರಾಪೀತರಸಾಸ್ತಥೌಷಧೀಃ
ಪುನಃ ಸ್ವಕೇನೈವ ಗುಣೇನ ಯೋಜಯನ್ ॥33॥
ಅನಂತರ ಅವರ ಮುಂಭಾಗದಲ್ಲಿ ಪೂಜ್ಯನಾದ ಚಂದ್ರನು ಆ ಸೈನ್ಯವನ್ನು ಸಂತೋಷವನ್ನುಂಟು ಮಾಡುತ್ತಾ ಸೂರ್ಯನು ಹೀರಿದ್ದ ಔಷಧಿಗಳ ರಸವನ್ನು ತನ್ನ ಗುಣಗಳಿಂದ ಪುನಃ ಅವುಗಳಿಗೆ ಕೊಡುತ್ತಾ ಉದಯಿಸಿದನು.
ತತಃ ಪುರಂ ಸುರಪುರಸನ್ನಿಭದ್ಯುತಿ
ಪ್ರವಿಶ್ಯ ತೇ ಯದುವೃಷಪಾಂಡವಾಸ್ತದಾ ।
ಯಥೋಚಿತಾನ್ ಭವನವರಾನ್ ಸಮಾವಿಶನ್
ಶ್ರಮಾನ್ವಿತಾ ಮೃಗಪತಯೋ ಗುಹಾ ಇವ ॥34॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿಪಂಚಾಶೋಽಧ್ಯಾಯಃ ॥52॥
ಅನಂತರ ದೇವಲೋಕಕ್ಕೆ ಸಮಾನವಾದ ಕಾಂತಿಯುಳ್ಳ ಪಟ್ಟಣವನ್ನು ಪ್ರವೇಶಿಸಿ ಆ ಯದುಶ್ರೇಷ್ಠನು ಮತ್ತು ಪಾಂಡವರು ದಣಿದ ಸಿಂಹಗಳು ಗುಹೆಯನ್ನು ಪ್ರವೇಶಿಸುವಂತೆ ತಮಗೆ ಉಚಿತವಾದ ಶ್ರೇಷ್ಠವಾದ ಭವನಗಳನ್ನು ಪ್ರವೇಶಿಸಿದರು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 52ನೆಯ ಅಧ್ಯಾಯವು ಮುಗಿಯಿತು.
0
53. ಐವತ್ತಮೂರನೆಯ ಅಧ್ಯಾಯ
ಮರುದಿನ ಪ್ರಾತಃಕಾಲದಲ್ಲಿ ಕೃಷ್ಣಯುಧಿಷ್ಠಿರಾದಿಗಳಿಂದ ಭೀಷ್ಮಸಮೀಪಗಮನ
ವೈಶಂಪಾಯನಃ
ತತಃ ಪ್ರವಿಶ್ಯ ಭವನಂ ಪ್ರಸುಪ್ತೋ ಮಧುಸೂದನಃ ।
ಯಾಮಮಾತ್ರಾವಶೇಷಾಯಾಂ ಯಾಮಿನ್ಯಾಂ ಪ್ರತ್ಯಬುದ್ಧ್ಯತ ॥1॥
ವೈಶಂಪಾಯನರು ಅನಂತರ ತನ್ನ ಭವನವನ್ನು ಪ್ರವೇಶಿಸಿ, ನಿದ್ರಿಸಿದ ಮಧು- ಸೂದನನು ರಾತ್ರಿಯಲ್ಲಿ ಇನ್ನೂ ಒಂದು ಯಾಮದ ಕಾಲ ಉಳಿದಿರುವಾಗ ಎಚ್ಚರ- ಗೊಂಡನು.
ಸ ಧ್ಯಾನಪಥಮಾಶ್ರಿತ್ಯ ಸರ್ವಜ್ಞಾನಾನಿ ಮಾಧವಃ ।
ಅವಲೋಕ್ಯ ತತಃ ಪಶ್ಚಾದ್ ದಧ್ಯೌ ಬ್ರಹ್ಮ ಸನಾತನಮ್ ॥2॥
ಆ ಮಾಧವನು ಧ್ಯಾನಮಾರ್ಗವನ್ನು ಆಶ್ರಯಿಸಿ ಎಲ್ಲ ವಿಷಯಗಳನ್ನೂ ಅವಲೋಕಿಸಿ ಅನಂತರ ಸನಾತನನಾದ ಬ್ರಹ್ಮನಾದ ತನ್ನನ್ನೇ ಧ್ಯಾನ ಮಾಡಿದನು.
ತತಃ ಶ್ರುತಿಪುರಾಣಜ್ಞಾಃ ಶಿಕ್ಷಿತಾ ರಕ್ತಕಂಠಿನಃ ।
ಅಸ್ತುವನ್ ವಿಶ್ವಕರ್ಮಾಣಂ ವಾಸುದೇವಂ ಪ್ರಜಾಪತಿಮ್ ॥3॥
ಅನಂತರ ಶ್ರುತಿಪುರಾಣಗಳನ್ನು ತಿಳಿದ, ಸುಶಿಕ್ಷಿತರಾದ, ಅನುರಾಗಪೂರ್ಣ- ವಾದ ಕಂಠದಿಂದ ಕೂಡಿದ ಬ್ರಾಹ್ಮಣರು ವಿಶ್ವಕರ್ಮನೂ ಪ್ರಜಾಪತಿಯೂ ಆದ ವಾಸುದೇವನನ್ನು ಸ್ತೋತ್ರ ಮಾಡಿದರು.
ಪಠಂತಿ ಪಾಣಿಕಾ ಗಾಥಾಸ್ತಥಾ ಗಾಯಂತಿ ಗಾಯನಾಃ ।
ಶಂಖಾನಕಮೃದಂಗಾಶ್ಚ ಪ್ರವಾದ್ಯಂತ ಸಹಸ್ರಶಃ ॥4॥
ಕೈಗಳಲ್ಲಿ ತಾಳಗಳನ್ನು ಹಾಕುತ್ತಾ ಹಾಡುವವರು ಹಾಡಿದರು. ಗಾಯಕರು ಹಾಡಿದರು. ಶಂಖ, ಆನಕ ಮತ್ತು ಮೃದಂಗಗಳು ಸಹಸ್ರಸಂಖ್ಯೆಯಲ್ಲಿ ಮೊಳ- ಗಿದವು.
ವೀಣಾಪಣವವೇಣೂನಾಂ ಸ್ವನಶ್ಚಾತಿಮನೋರಮಃ ।
ಪ್ರಹಾಸ ಇವ ವಿಸ್ತೀರ್ಣಃ ಶುಶ್ರುವೇ ತಸ್ಯ ವೇಶ್ಮನಃ ॥5॥
ಅತ್ಯಂತಮನೋಹರವಾದ ವೀಣಾಪಣವವೇಣುಗಳಿಂದ ಉಂಟಾದ ವಿಸ್ತೀ- ರ್ಣವಾದ ನಾದವು ಆ ಗೃಹದ ಅಟ್ಟಹಾಸದಂತೆ ಕೇಳಿಬಂದಿತು.
ತಥಾ ಯುಧಿಷ್ಠಿರಸ್ಯಾಪಿ ರಾಜ್ಞೋ ಮಂಗಲಸಂಹಿತಾಃ ।
ಉಚ್ಚೇರುರ್ಮಧುರಾ ವಾಚೋ ಗೀತವಾದಿತ್ರಮಿಶ್ರಿತಾಃ ॥6॥
ಹಾಗೆಯೇ ರಾಜನಾದ ಯುಧಿಷ್ಠಿರನ ಮನೆಯಲ್ಲಿಯೂ ಮಂಗಳಸಂಯುಕ್ತ- ವಾದ ಗೀತವಾದಿತ್ರಮಿಶ್ರಿತವಾದ ಮಧುರವಾದ ಮಾತುಗಳು ಕೇಳಿ ಬಂದವು.
ತತ ಉತ್ಥಾಯ ದಾಶಾರ್ಹಃ ಸ್ನಾತಃ ಪ್ರಾಂಜಲಿರಚ್ಯುತಃ ।

ಜಪಿತ್ವಾ ಗುಹ್ಯಂ ಮಹಾಬಾಹುರಗ್ನೀನಾಶ್ರಿತ್ಯ ತಸ್ಥಿವಾನ್ ॥7॥
ಅನಂತರ ಮಹಾಬಾಹುವೂ, ದಾಶಾರ್ಹನೂ ಆದ ಅಚ್ಯುತನು ಎದ್ದು ಸ್ನಾನವನ್ನು ಮಾಡಿ ಕೈಗಳನ್ನು ಮುಗಿದು ರಹಸ್ಯ ಮಂತ್ರಗಳನ್ನು ಜಪ ಮಾಡಿ ಅಗ್ನಿಕಾರ್ಯವನ್ನು ಮಾಡಿ ನಿಂತನು.
ತತಃ ಸಹಸ್ರಂ ವಿಪ್ರಾಣಾಂ ಚತುರ್ವೇದವಿದಾಂ ತಥಾ |
ಗವಾಂ ಸಹಸ್ರೇಣೈಕೈಕಂ ವಾಚಯಾಮಾಸ ಮಾಧವಃ ॥8॥
ಅನಂತರ ಚತುರ್ವೇದಗಳನ್ನು ಬಲ್ಲ ಸಹಸ್ರವಿಪ್ರರಿಗೆ ಒಬ್ಬೊಬ್ಬರಿಗೂ ಸಹಸ್ರ ಗೋವುಗಳನ್ನು ನೀಡಿ ಮಾಧವನು ಸಂತೋಷಪಡಿಸಿದನು.
ಮಂಗಲಾಲಂಭನಂ ಕೃತ್ವಾ ಆತ್ಮಾನಮವಲೋಕ್ಯ ಚ |
ಆದರ್ಶೇ ವಿಮಲೇ ಕೃಷ್ಣಸ್ತತಃ ಸಾತ್ಯಕಿಮಬ್ರವೀತ್ ॥9॥
ಗಚ್ಛ ಶೈನೇಯ ಜಾನೀಹಿ ಗತ್ವಾ ರಾಜನಿವೇಶನಮ್ |
ಅಪಿ ಸಜ್ಜೋ ಮಹಾತೇಜಾ ಭೀಷ್ಮಂ ದ್ರಷ್ಟುಂ ಯುಧಿಷ್ಠಿರಃ ॥10॥
ಕೃಷ್ಣನು ಮಂಗಳಪದಾರ್ಥಗಳನ್ನು ಸ್ಪರ್ಶಮಾಡಿ, ಕನ್ನಡಿಯಲ್ಲಿ ತನ್ನನ್ನು ನೋಡಿ- ಕೊಂಡು ಅನಂತರ ಸಾತ್ಯಕಿಯನ್ನು ಕುರಿತು `ಎಲೈ ಸಾತ್ಯಕಿಯೇ! ರಾಜಮಂದಿರಕ್ಕೆ ಹೋಗಿ ಮಹಾತೇಜಸ್ವಿಯಾದ ಯುಧಿಷ್ಠಿರನು ಭೀಷ್ಮರನ್ನು ನೋಡಲು ಸಿದ್ಧನಾಗಿ- ದ್ದಾನೆಯೇ ಎಂದು ತಿಳಿ' ಎಂದು ಹೇಳಿದನು.
ತತಃ ಕೃಷ್ಣಸ್ಯ ವಚನಾತ್ ಸಾತ್ಯಕಿಸ್ತ್ವರಿತೋ ಯಯೌ |
ಉಪಗಮ್ಯ ಚ ರಾಜಾನಂ ಯುಧಿಷ್ಠಿರಮುವಾಚ ಹ ॥11॥
ಯುಕ್ತೋ ರಥವರೋ ರಾಜನ್ ವಾಸುದೇವಸ್ಯ ಧೀಮತಃ |
ಸಮೀಪಮಾಪಗೇಯಸ್ಯ ಪ್ರಯಾಸ್ಯತಿ ಜನಾರ್ದನಃ ॥12॥
ಭವತ್ಪ್ರತೀಕ್ಷಃ ಕೃಷ್ಣೋಽಸೌ ಧರ್ಮರಾಜ ಮಹಾದ್ಯುತೇ |
ಯದತ್ರಾನಂತರಂ ಕೃತ್ಯಂ ತದ್ ಭವಾನ್ ಕರ್ತುಮರ್ಹತಿ ॥13॥
ಕೃಷ್ಣನ ವಚನದಂತೆ ಸಾತ್ಯಕಿಯು ಶೀಘ್ರವಾಗಿ ಹೋಗಿ ರಾಜನಾದ ಯುಧಿ- ಷ್ಠಿರನ ಗೃಹವನ್ನು ತಲುಪಿ ಅವನನ್ನು ಕುರಿತು `ರಾಜನೇ! ಮೇಧಾವಿಯಾದ ವಾಸುದೇವನ ಶ್ರೇಷ್ಠವಾದ ರಥವು ಸಿದ್ಧವಾಗಿದೆ. ಜನಾರ್ದನನು ಭೀಷ್ಮರ ಸಮೀಪಕ್ಕೆ ಹೊರಡುವನು. ಎಲೈ ಮಹಾದ್ಯುತಿಯಾದ ಧರ್ಮರಾಜನೇ! ಈ ಕೃಷ್ಣನು ನಿನ್ನನ್ನು ನಿರೀಕ್ಷಿಸುತ್ತಿದ್ದಾನೆ. ಈಗ ಮುಂದೆ ಮಾಡಬೇಕಾದ ಕಾರ್ಯವನ್ನು ನೀನು ಮಾಡು- ವುದು ಉಚಿತವಾದುದು' ಎಂದು ಹೇಳಿದನು.
ಯುಧಿಷ್ಠಿರಃ
ಯುಜ್ಯತಾಂ ಮೇ ರಥವರಃ ಫಲ್ಗುನಾಪ್ರತಿಮದ್ಯುತೇ |
ನ ಸೈನಿಕೈಶ್ಚ ಯಾತವ್ಯಂ ಯಾಸ್ಯಾಮೋ ವಯಮೇವ ಹಿ ॥14॥
ಯುಧಿಷ್ಠಿರ ಎಲೈ ಅಮಿತದ್ಯುತಿಯಾದ ಫಲ್ಗುನನೇ! ನನ್ನ ಶ್ರೇಷ್ಠವಾದ ರಥವು ಹೂಡಲ್ಪಡಲಿ. ಅಲ್ಲಿಗೆ ಸೈನಿಕರು ಹೋಗಬಾರದು. ನಾವೇ ಹೋಗುವೆವು.
ನ ಚ ಪೀಡಯಿತವ್ಯೋ ಮೇ ಭೀಷ್ಮೋ ಧರ್ಮಭೃತಾಂವರಃ |
ಅತಃ ಪುರಃಸರಾಶ್ಚಾಪಿ ನಿವರ್ತಂತು ಧನಂಜಯ ॥15॥
ಎಲೈ ಧನಂಜಯನೇ! ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಭೀಷ್ಮರು ಪೀಡಿಸಲ್ಪಡ- ಬಾರದು. ಆದ್ದರಿಂದ ನಮ್ಮ ಮುಂದೆ ಹೋಗುವ ಸೇವಕರೂ ಸಹ ಹಿಂದಿರುಗಲಿ.
ಅದ್ಯ ಪ್ರಭೃತಿ ಗಾಂಗೇಯಃ ಪರಂ ಗುಹ್ಯಂ ಪ್ರವಕ್ಷ್ಯತಿ |
ತತೋ ನೇಚ್ಛಾಮಿ ಕೌಂತೇಯ ಪೃಥಗ್ ಜನಸಮಾಗಮಮ್ ॥16॥
ಈ ದಿನದಿಂದ ಪ್ರಾರಂಭಿಸಿ ಭೀಷ್ಮರು ಪರಮರಹಸ್ಯವಾದ ವಿಷಯಗಳನ್ನು ಹೇಳುವರು. ಎಲೈ ಕೌಂತೇಯನೇ! ಆದ್ದರಿಂದ ಸಾಧಾರಣಜನರ ಸಮಾಗಮವನ್ನು ನಾನು ಅಲ್ಲಿ ಬಯಸುವುದಿಲ್ಲ.
ವೈಶಂಪಾಯನಃ
ತದ್ ವಾಕ್ಯಮಾಕರ್ಣ್ಯ ತಥಾ ಕುಂತೀಪುತ್ರೋ ಧನಂಜಯಃ |
ಯುಕ್ತಂ ರಥವರಂ ತಸ್ಮಾ ಆಚಚಕ್ಷೇ ನರರ್ಷಭ ॥17॥
ವೈಶಂಪಾಯನರು ಕುಂತೀಪುತ್ರನಾದ ಧನಂಜಯನು ಆ ರೀತಿಯಲ್ಲಿ ಆ ಮಾತನ್ನು ಕೇಳಿ `ಎಲೈ ನರಶ್ರೇಷ್ಠನೇ! ನಿನ್ನ ಶ್ರೇಷ್ಠವಾದ ರಥವು ಸಿದ್ಧವಾಗಿದೆ' ಎಂದು ಹೇಳಿದನು.
ತತೋ ಯುಧಿಷ್ಠಿರೋ ರಾಜಾ ಯಮೌ ಭೀಮಾರ್ಜುನಾವಪಿ |
ಭೂತಾನೀವ ಸಮಸ್ತಾನಿ ಯಯುಃ ಕೃಷ್ಣನಿವೇಶನಮ್ ॥18॥
ಅನಂತರ ರಾಜನಾದ ಯುಧಿಷ್ಠಿರನೂ, ನಕುಲ ಸಹದೇವರೂ ಮತ್ತು ಭೀಮಾರ್ಜುನರೂ ಸಮಸ್ತವಾದ ಪಂಚಭೂತಗಳಂತೆ ಕೃಷ್ಣನ ಗೃಹಕ್ಕೆ ಹೋದರು.
ಆಗಚ್ಛತ್ಸ್ವಥ ಕೃಷ್ಣೋಽಪಿ ಪಾಂಡವೇಷು ಮಹಾತ್ಮಸು |
ಶೈನೇಯಸಹಿತೋ ಧೀಮಾನ್ ರಥಮೇವಾನ್ವಪದ್ಯತ ॥19॥
ಮಹಾತ್ಮರಾದ ಪಾಂಡವರು ಬರುತ್ತಿರುವಂತೆಯೇ ಮೇಧಾವಿಯಾದ ಕೃಷ್ಣನು ಶೈನೇಯಸಹಿತನಾಗಿ ತನ್ನ ರಥವನ್ನು ಏರಿದನು.
ರಥಸ್ಥಾಃ ಸಂವಿದಂ ಕೃತ್ವಾ ಸುಖಾಂ ಪೃಷ್ಟ್ವಾ ಚ ಶರ್ವರೀಮ್ |

ಮೇಘಘೋಷೈಃ ರಥವರೈಃ ಪ್ರಯಯುಸ್ತೇ ಮಹಾರಥಾಃ ॥20॥
ರಥದಲ್ಲಿ ಕುಳಿತ ಆ ಮಹಾರಥರು ಪರಸ್ಪರ ಸಂಭಾಷಣೆಯನ್ನು ಮಾಡಿ ರಾತ್ರಿಯು ಕಳೆದ ವಿಷಯದಲ್ಲಿ ಕುಶಲಪ್ರಶ್ನೆಯನ್ನು ಮಾಡಿ ಮೇಘಗರ್ಜನೆಯ ನಾದವನ್ನು ಹೊಂದಿದ್ದ ಶ್ರೇಷ್ಠವಾದ ರಥಗಳಲ್ಲಿ ಅಲ್ಲಿಂದ ಹೊರಟರು.
ಮೇಘಪುಷ್ಪಂ ಬಲಾಹಂ ಚ ಸೈನ್ಯಂ ಸುಗ್ರೀವಮೇವ ಚ |
ದಾರುಕಶ್ಚೋದಯಾಮಾಸ ವಾಸುದೇವಸ್ಯ ವಾಜಿನಃ ॥21॥
ವಾಸುದೇವನ ಸಾರಥಿಯಾದ ದಾರುಕನು ಮೇಘಪುಷ್ಪ, ಬಲಾಹಕ, ಸೈನ್ಯ, ಸುಗ್ರೀವ ಅಶ್ವಗಳನ್ನು ಪ್ರಚೋದಿಸಿದನು.
ತೇ ಹಯಾ ವಾಸುದೇವಸ್ಯ ದಾರುಕೇಣ ಪ್ರಚೋದಿತಾಃ |
ಗಾಂ ಖುರಾಗ್ರೈಸ್ತಥಾ ರಾಜನ್ ಲಿಖಂತಃ ಪ್ರಯಯುಸ್ತದಾ ॥22॥
ಎಲೈ ರಾಜನೇ! ದಾರುಕನಿಂದ ಪ್ರಚೋದಿಸಲ್ಪಟ್ಟ ಕೃಷ್ಣನ ಆ ಅಶ್ವಗಳು ತಮ್ಮ ಗೊರಸುಗಳ ತುದಿಯಿಂದ ಭೂಮಿಯ ಮೇಲೆ ಬರೆಯುತ್ತಾ ಹೊರಟವು.
ತೇ ಗ್ರಸಂತ ಇವಾಕಾಶಂ ವೇಗವಂತೋ ಮಹಾಬಲಾಃ |
ಕ್ಷೇತ್ರಂ ಧರ್ಮಸ್ಯ ಕೃತ್ಸ್ನಸ್ಯ ಕುರುಕ್ಷೇತ್ರಮವಾತರನ್ ॥23॥
ಮಹಾ ಬಲಿಷ್ಠವಾದ ವೇಗಶಾಲಿಗಳಾದ ಆ ಅಶ್ವಗಳು ಆಕಾಶವನ್ನೇ ನುಂಗು- ವಂತೆ ಹೊರಟು ಸಮಗ್ರ ಧರ್ಮದ ಕ್ಷೇತ್ರವಾದ ಕುರುಕ್ಷೇತ್ರವನ್ನು ತಲುಪಿದವು.
ತತೋ ಯಯುರ್ಯತ್ರ ಭೀಷ್ಮಃ ಶರತಲ್ಪಗತಃ ಪ್ರಭುಃ |
ಆಸ್ತೇ ಬ್ರಹ್ಮರ್ಷಿಭಿಃ ಸಾರ್ಧಂ ಬ್ರಹ್ಮಾ ದೇವಗಣೈರ್ಯಥಾ ॥24॥
ಅನಂತರ ಪ್ರಭುಗಳಾದ ಭೀಷ್ಮರು ಶರತಲ್ಪಗತರಾಗಿ ದೇವಗಣಗಳಿಂದ ಬ್ರಹ್ಮ- ದೇವರು ಸುತ್ತುವರೆಯಲ್ಪಟ್ಟಂತೆ ಬ್ರಹ್ಮರ್ಷಿಗಳಿಂದ ಸುತ್ತುವರೆಯಲ್ಪಟ್ಟ ಸ್ಥಳಕ್ಕೆ ಹೋದರು.
ತತೋಽವತೀರ್ಯ ಗೋವಿಂದೋ ರಥಾತ್ ಸ ಚ ಯುಧಿಷ್ಠಿರಃ |
ಭೀಮೋ ಗಾಂಡೀವಧನ್ವಾ ಚ ಯಮೌ ಸಾತ್ಯಕಿರೇವ ಚ |
ಋಷೀನಭ್ಯರ್ಚಯಾಮಾಸುಃ ಕರಾನುದ್ಯಮ್ಯ ದಕ್ಷಿಣಾನ್ ॥25॥
ಸ ತೈಃ ಪರಿವೃತೋ ರಾಜಾ ನಕ್ಷತ್ರೈರಿವ ಚಂದ್ರಮಾಃ |
ಅಭ್ಯಾಜಗಾಮ ಗಾಂಗೇಯಂ ಬ್ರಹ್ಮಾಣಮಿವ ವಾಸವಃ ॥26॥
ಅನಂತರ ಗೋವಿಂದನು ಯುಧಿಷ್ಠಿರನು, ಭೀಮ,ಅರ್ಜುನರು, ನಕುಲ ಸಹದೇವರು, ಸಾತ್ಯಕಿಯು ತಮ್ಮ ರಥಗಳಿಂದ ಇಳಿದು ತಮ್ಮ ಬಲಗೈಯ್ಯನ್ನು ಎತ್ತಿ ಋಷಿಗಳಿಗೆ ಪೂಜೆಯನ್ನು ಸಲ್ಲಿಸಿದರು. ನಕ್ಷತ್ರಗಳಿಂದ ಸುತ್ತುವರೆಯಲ್ಪಟ್ಟ ಚಂದ್ರ- ನಂತೆ ಅವರಿಂದ ಪರಿವೃತನಾದ ರಾಜನು ಬ್ರಹ್ಮದೇವರ ಬಳಿಗೆ ಇಂದ್ರನು ಬಂದಂತೆ ಭೀಷ್ಮರ ಬಳಿಗೆ ಬಂದನು.
ಶರತಲ್ಪೇ ಶಯಾನಂ ತಮಾದಿತ್ಯಂ ಪತಿತಂ ಯಥಾ |
ದದರ್ಶ ಸ ಮಹಾಬಾಹುರ್ಭಯಾದಾಗತಸಾಧ್ವಸಃ ॥27॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಪಂಚಾಶೋಽಧ್ಯಾಯಃ ॥53॥
ಮಹಾಬಾಹುವಾದ ಅವನು ಭೂಮಿಯ ಮೇಲೆ ಬಿದ್ದ ಸೂರ್ಯನಂತೆ ಶರ- ತಲ್ಪದಲ್ಲಿ ಮಲಗಿದ್ದ ಭೀಷ್ಮರನ್ನು ಮನಸ್ಸಿನಲ್ಲಿ ಭಯಗೊಂಡು ನೋಡಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 53ನೆಯ ಅಧ್ಯಾಯ ಮುಗಿಯಿತು
0
54. ಐವತ್ತನಾಲ್ಕನೆಯ ಅಧ್ಯಾಯ
ಕೃಷ್ಣನಿಂದ ಧರ್ಮವನ್ನು ಉಪದೇಶಮಾಡುವಂತೆ ಭೀಷ್ಮರಿಗೆ ಪ್ರೇರಣೆ
ಜನಮೇಜಯಃ
ಧರ್ಮಾತ್ಮನಿ ಮಹಾಸತ್ತ್ವೇ ಸತ್ಯಸಂಧೇ ಜಿತಾತ್ಮನಿ |
ದೇವವ್ರತೇ ಮಹಾಭಾಗೇ ಶರತಲ್ಪಗತೇಽಚ್ಯುತೇ ॥1॥
ಶಯಾನೇ ವೀರಶಯನೇ ಭೀಷ್ಮೇ ಶಂತನುನಂದನೇ |
ಗಾಂಗೇಯೇ ಪುರುಷವ್ಯಾಘ್ರೇ ಪಾಂಡವೈಃ ಪರ್ಯುಪಸ್ಥಿತೇ ॥2॥
ಕಾಃ ಕಥಾಃ ಸಮವರ್ತಂತ ತಸ್ಮಿನ್ ವೀರಸಮಾಗಮೇ |
ಗತೇಷು ಸರ್ವಸೈನ್ಯೇಷು ತನ್ಮೇ ಶಂಸ ಮಹಾಮುನೇ ॥3॥
ಜನಮೇಜಯ ಧರ್ಮಿಷ್ಠರೂ, ಸತ್ಯಸಂಧರೂ, ಜಿತಮನಸ್ಕರೂ, ಮಹಾ- ಧೈರ್ಯಶಾಲಿಗಳೂ, ಮಹಾನುಭಾವರೂ ಆದ ತಮ್ಮ ಗುಣಗಳನ್ನು ಕಳೆದುಕೊಳ್ಳದ ದೇವವ್ರತರಾದ, ಶಂತನುಪುತ್ರರಾದ, ಗಂಗಾಪುತ್ರರಾದ ಪುರುಷವ್ಯಾಘ್ರರಾದ ಭೀಷ್ಮರು ವೀರಶಯ್ಯೆಯಿಂದ ಮಲಗಿ ಪಾಂಡವರಿಂದ ಸುತ್ತುವರಿಯಲ್ಪಟ್ಟಿರಲು ಆ ವೀರಸಮಾಗಮದಲ್ಲಿ ಎಲ್ಲ ಸೈನ್ಯಗಳೂ ಹೊರಟು ಹೋದ ಮೇಲೆ ಯಾವ ಕಥೆಗಳು ನಡೆದವು ಎಂಬುದನ್ನು ಎಲೈ ಮಹಾಮುನಿಯೇ! ನನಗೆ ಹೇಳಬೇಕು.
ವೈಶಂಪಾಯನಃ
ಶರತಲ್ಪಗತೇ ಭೀಷ್ಮೇ ಕೌರವಾಣಾಂ ಧುರಂಧರೇ |
ಆಜಗ್ಮುರ್ಋಷಯಃ ಸಿದ್ಧಾ ನಾರದಪ್ರಮುಖಾ ನೃಪ ॥4॥

ವೈಶಂಪಾಯನರು  ಎಲ್ಲೈ ರಾಜನೇ! ಕೌರವರ ಧುರಂಧರರಾದ ಭೀಷ್ಮರು ಶರತಲ್ಪದಲ್ಲಿ ಮಲಗಿರಲು ಸಿದ್ದರು, ನಾರದರೇ ಮೊದಲಾದ ಋಷಿಗಳು ಅಲ್ಲಿಗೆ ಬಂದರು.
ಹತಶಿಷ್ಟಾಶ್ಚ ರಾಜಾನೋ ಯುಧಿಷ್ಠಿರಪುರೋಗಮಾಃ |
ಧೃತರಾಷ್ಟ್ರಶ್ಚ ಕೃಷ್ಣಶ್ಚ ಭೀಮಾರ್ಜುನಯಮಾಸ್ತಥಾ ॥5॥
ಅಳಿದುಳಿದ ರಾಜರು, ಯುಧಿಷ್ಠಿರ ಮೊದಲಾದವರು, ಧೃತರಾಷ್ಟ್ರ, ಕೃಷ್ಣ, ಭೀಮಾರ್ಜುನ ನಕುಲಸಹದೇವರು ಬಂದರು.
ತೇಽಭಿಗಮ್ಯ ಮಹಾತ್ಮಾನೋ ಭರತಾನಾಂ ಪಿತಾಮಹಮ್ |
ಅನ್ವಶೋಚಂತ ಗಾಂಗೇಯಮಾದಿತ್ಯಂ ಪತಿತಂ ತಥಾ ॥6॥
ಮಹಾತ್ಮರಾದ ಅವರು ಭರತರ ಪಿತಾಮಹರಾದ ಭೀಷ್ಮರ ಸಮೀಪಕ್ಕೆ ಬಂದು ಭೂಮಿಯ ಮೇಲೆ ಬಿದ್ದ ಸೂರ್ಯನಂತಿದ್ದ ಅವರನ್ನು ನೋಡಿ ಶೋಕಪಟ್ಟರು.
ಮುಹೂರ್ತಮಿವ ಚ ಧ್ಯಾತ್ವಾ ನಾರದೋ ದೇವದರ್ಶನಃ |
ಉವಾಚ ಪಾಂಡವಾನ್ ಸರ್ವಾನ್ ಹತಶಿಷ್ಟಾಂಶ್ಚ ಪಾರ್ಥಿವಾನ್ ॥7॥
ದೇವದರ್ಶನರಾದ ನಾರದರು ಒಂದು ಮುಹೂರ್ತಗಳಷ್ಟು ಕಾಲ ಧ್ಯಾನ- ರತರಾಗಿ ಪಾಂಡವರನ್ನೂ, ಅಳಿದುಳಿದ ಎಲ್ಲಾ ರಾಜರನ್ನೂ ಕುರಿತು ಮಾತ- ನಾಡಿದರು.
ಪ್ರಾಪ್ತಕಾಲಂ ಚ ಆಚಕ್ಷೇ ಭೀಷ್ಮೋಽಯಮನುಯುಜ್ಯತಾಮ್ |
ಅಸ್ತಮೇತಿ ಹಿ ಗಾಂಗೇಯೋ ಭಾನುಮಾನಿವ ಭಾರತ ॥8॥
ಎಲ್ಲೈ ಭಾರತನೇ! ಯೋಗ್ಯವಾದ ಕಾಲವು ಸಮೀಪಿಸಿದೆ ಎಂದು ಹೇಳುತ್ತಿ- ದ್ದೇನೆ. ಈ ಭೀಷ್ಮರನ್ನು(ಲ್ಲಿ) ಪ್ರಶ್ನೆಯನ್ನು ಮಾಡು. ಸೂರ್ಯನಂತೆ ಭೀಷ್ಮರು ಅಸ್ತವನ್ನು ಹೊಂದಲಿದ್ದಾರೆ.
ಅಯಂ ಪ್ರಾಣಾನುತ್ಸಿಸೃಕ್ಷುಸ್ತಂ ಸರ್ವೇಽಭ್ಯೇತ್ಯ ಪೃಚ್ಛತ |
ಕೃತ್ಸ್ನಾನ್ ಹಿ ವಿವಿಧಾನ್ ಧರ್ಮಾಂಶ್ಚಾತುರ್ವರ್ಣ್ಯಸ್ಯ ವೇತ್ತ್ಯಯಮ್ ॥9॥
ಇವರು ಪ್ರಾಣಗಳನ್ನು ತೊರೆಯಲು ಬಯಸುತ್ತಿದ್ದಾರೆ. ನೀವೆಲ್ಲರೂ ಅವರ ಬಳಿಗೆ ಹೋಗಿ ಸಮಗ್ರವಾದ ಧರ್ಮಗಳನ್ನು ಪ್ರಶ್ನೆ ಮಾಡಿ ಕೇಳಿ. ಚಾತುರ್ವರ್ಣ್ಯದ ಎಲ್ಲ ಧರ್ಮಗಳನ್ನೂ ಅವರು ತಿಳಿದಿದ್ದಾರೆ.
ಏಷ ವೃದ್ಧಃ ಪುರಾ ಲೋಕಾನ್ ಸಂಪ್ರಾಪ್ನೋತಿ ಸುದುರ್ಲಭಾನ್ |
ತಂ ಶೀಘ್ರಮನುಯುಜ್ಯಧ್ವಂ ಸಂಶಯಾನ್ ಮನಸಿ ಸ್ಥಿತಾನ್ ॥10॥
ವೃದ್ಧರಾದ ಇವರು ಸುದುರ್ಲಭವಾದ ಪರಲೋಕಗಳನ್ನು ಹೊಂದುವುದಕ್ಕಿಂತ ಮೊದಲೇ ನೀವು ಶೀಘ್ರವಾಗಿ ಅವರ ಬಳಿಯಲ್ಲಿ ನಿಮ್ಮ ಮನಸ್ಸಿನಲ್ಲಿರುವ ಸಂಶಯ -ಗಳನ್ನು ಕೇಳಿ. (ಎಂದು ಹೇಳಿದರು).
ಏವಮುಕ್ತಾ ನಾರದೇನ ಭೀಷ್ಮಮೀಯುರ್ನರಾಧಿಪಾಃ |
ಪ್ರಷ್ಟುಂ ಚಾಶಕ್ನುವಂತಸ್ತೇ ವೀಕ್ಷಾಂಚಕ್ರುಃ ಪರಸ್ಪರಮ್ ॥11॥
ನಾರದರಿಂದ ಹೀಗೆ ಹೇಳಲ್ಪಟ್ಟ ರಾಜರು ಭೀಷ್ಮರ ಸಮೀಪಕ್ಕೆ ಹೋದರು. ಅವರನ್ನು ಮಾತನಾಡಿಸಲು ಧೈರ್ಯಸಾಲದೇ ಪರಸ್ಪರವಾಗಿ ನೋಡಿದರು.
ಅಥೋವಾಚ ಹೃಷೀಕೇಶಂ ಪಾಂಡುಪುತ್ರೋ ಯುಧಿಷ್ಠಿರಃ |
ನಾನ್ಯಸ್ತ್ವದ್ ದೇವಕೀಪುತ್ರ ಶಕ್ತಃ ಪ್ರಷ್ಟುಂ ಪಿತಾಮಹಮ್ ॥12॥
ಅನಂತರ ಪಾಂಡುಪುತ್ರನಾದ ಯುಧಿಷ್ಠಿರನು ಹೃಷೀಕೇಶನನ್ನು ಕುರಿತು ದೇವಕೀಪುತ್ರನೇ! ನಿನ್ನನ್ನು ಬಿಟ್ಟು ಇನ್ನೊಬ್ಬನು ಪಿತಾಮಹರಾದ ಭೀಷ್ಮರನ್ನು ಪ್ರಶ್ನೆ ಮಾಡಲಾರನು.
ಪ್ರವ್ಯಾಹಾರಯ ದುರ್ಧರ್ಷಂ ತ್ವಮಗ್ರೇ ಮಧುಸೂದನ |
ತ್ವಂ ಹಿ ನಸ್ತಾತ ಸರ್ವೇಷಾಂ ಸರ್ವಧರ್ಮವಿದುತ್ತಮಃ ॥13॥
ಎಲ್ಲೈ ಮಧುಸೂದನನೇ! ನೀನೇ ದುರ್ಧರ್ಷರಾದ ಭೀಷ್ಮರನ್ನು ಮೊದಲು ಮಾತನಾಡಿಸು. ಎಲ್ಲೈ ಪ್ರೀತಿಪಾತ್ರನೇ! ನಮ್ಮೆಲ್ಲರಲ್ಲಿಯೂ ನೀನೇ ಶ್ರೇಷ್ಠನಾದ ಸರ್ವ -ಧರ್ಮಜ್ಞನಾದವನು. (ಎಂದು ಹೇಳಿದನು.)
ಏವಮುಕ್ತಃ ಪಾಂಡವೇನ ಭಗವಾನ್ ಕೇಶವಸ್ತದಾ |
ಅಭಿಗಮ್ಯ ದುರಾಧರ್ಷಂ ಪ್ರವ್ಯಾಹಾರಯದಚ್ಯುತಃ ॥14॥
ಪಾಂಡವನಾದ ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ಭಗವಂತನೂ, ಅಚ್ಯುತನೂ ಆದ ಕೇಶವನು ದುರಾಧರ್ಷರಾದ ಭೀಷ್ಮರ ಬಳಿಗೆ ಹೋಗಿ ಅವರನ್ನು ಮಾತನಾ- ಡಿಸಿದನು.
ಶ್ರೀಭಗವಾನ್
ಕಚ್ಚಿತ್ ಸುಖೇನ ರಜನೀ ವ್ಯುಷ್ಟಾ ತೇ ರಾಜಸತ್ತಮ |
ವಿಸ್ಪಷ್ಟಲಕ್ಷಣಾ ಬುದ್ಧಿಃ ಕಚ್ಚಿಚ್ಚೋಪಸ್ಥಿತಾ ತವ ॥15॥
ಶ್ರೀಭಗವಾನ್  ಎಲ್ಲೈ ರಾಜಶ್ರೇಷ್ಠನೇ! ನಿನಗೆ ರಾತ್ರಿಯು ಸುಖವಾಗಿ ಕಳೆ- ಯಿತೇ? ನಿನ್ನ ಬುದ್ಧಿಯು ಸ್ಪಷ್ಟವಾಗಿ ನಿನಗೆ ಗೋಚರಿಸುತ್ತಿದೆಯೇ?
ಕಚ್ಚಿಜ್ಜ್ಞಾನಾನಿ ಸರ್ವಾಣಿ ಪ್ರತಿಭಾಂತಿ ಚ ತೇಽನಘ |
ನ ಗ್ಲಾಯತೇ ಚ ಹೃದಯಂ ನ ಚ ತೇ ವ್ಯಾಕುಲಂ ಮನಃ ॥16॥
ಎಲ್ಲೈ ಅನಘನೇ! ನಿನ್ನ ಎಲ್ಲ ಇಂದ್ರಿಯಗಳೂ ಚೆನ್ನಾಗಿ ಕೆಲಸ ಮಾಡುತ್ತಿ- ವೆಯೇ? ನಿನ್ನ ಹೃದಯದಲ್ಲಿ ಗ್ಲಾನಿಯಾಗಲೀ ಮನಸ್ಸಿನಲ್ಲಿ ವ್ಯಾಕುಲತೆಯಾಗಲೀ ಇಲ್ಲವಷ್ಟೇ?

ಭೀಷ್ಮಃ
ದಾಹೋ ಮೋಹಃ ಶ್ರಮಶ್ಚೈವ ಕ್ಲಮೋ ಗ್ಲಾನಿಸ್ತಥಾ ರುಜಾ |
ತವ ಪ್ರಸಾದಾದ್ ಗೋವಿಂದ ಸದ್ಯೋ ವ್ಯಪಗತಾನಘ ॥17॥
ಭೀಷ್ಮರು ಎಲೈ ಗೋವಿಂದನೇ! ಅನಘನೇ! ನಿನ್ನ ಅನುಗ್ರಹದಿಂದ ದಾಹ- ವಾಗಲೀ ಬುದ್ಧಿಯ ಮೋಹವಾಗಲೀ, ಶ್ರಮವಾಗಲೀ ದಣಿವಾಗಲೀ, ಬೇಸರ- ವಾಗಲೀ, ರೋಗವಾಗಲೀ ಎಲ್ಲವೂ ತತ್ಕ್ಷಣದಲ್ಲಿಯೇ ನಾಶವನ್ನು ಹೊಂದಿವೆ.
ಯಚ್ಚ ಭೂತಂ ಭವಿಷ್ಯಚ್ಚ ಭವಚ್ಚ ಪರಮದ್ಯುತೇ |
ತತ್ ಸರ್ವಮನುಪಶ್ಯಾಮಿ ಪಾಣೌ ಫಲಮಿವಾಹಿತಮ್ ॥18॥
ಎಲೈ ಪರಮದ್ಯುತಿಯೇ! ಭೂತಭವಿಷ್ಯದ್ವರ್ತಮಾನಗಳೆಲ್ಲವನ್ನೂ ಅಂಗೈಯಲ್ಲಿ ಹಿಡಿದ ಫಲದಂತೆ ನೋಡುತ್ತಿದ್ದೇನೆ.
ವೇದೋಕ್ತಾಶ್ಚೈವ ಯೇ ಧರ್ಮಾ ವೇದಾಂತನಿಹಿತಾಶ್ಚ ಯೇ |
ತಾನ್ ಸರ್ವಾನ್ ಸಂಪ್ರಪಶ್ಯಾಮಿ ವರದಾನಾತ್ ತವಾಚ್ಯುತ ॥19॥
ಎಲೈ ಅಚ್ಯುತನೇ! ನಿನ್ನ ವರಪ್ರದಾನದಿಂದ ನಾನು ವೇದೋಕ್ತವಾದ ಧರ್ಮ- ಗಳನ್ನು, ವೇದಾಂತವಿಹಿತವಾದ ಧರ್ಮಗಳನ್ನು ಎಲ್ಲವನ್ನೂ ಚೆನ್ನಾಗಿ ಕಾಣುತ್ತಿದ್ದೇನೆ.
ಶಿಷ್ಟೈಶ್ಚ ಧರ್ಮೋ ಯಃ ಪ್ರೋಕ್ತಃ ಸ ಚ ಮೇ ಹೃದಿ ವರ್ತತೇ |
ದೇಶಜಾತಿಕುಲಾನಾಂ ಚ ಧರ್ಮಜ್ಞೋಽಸ್ಮಿ ಜನಾರ್ದನ ॥20॥
ಶಿಷ್ಟಾಚಾರದಿಂದ ಪ್ರಾಪ್ತವಾದ ಧರ್ಮಗಳು ನನ್ನ ಮನಸ್ಸಿಗೆ ತೋರುತ್ತಿವೆ. ಎಲೈ ಜನಾರ್ದನನೇ! ದೇಶಧರ್ಮಗಳನ್ನು, ಜಾತಿಧರ್ಮಗಳನ್ನು ಮತ್ತು ಕುಲಧರ್ಮ- ಗಳನ್ನು ತಿಳಿದಿದ್ದೇನೆ.
ಚತುರ್ಷ್ವಾಶ್ರಮಧರ್ಮೇಷು ಯೋಽರ್ಥಃ ಸ ಚ ಹೃದಿ ಸ್ಥಿತಃ |
ರಾಜಧರ್ಮಾಶ್ಚ ಸಕಲಾನವಗಚ್ಛಾಮಿ ಕೇಶವ ॥21॥
ನಾಲ್ಕು ಆಶ್ರಮಗಳ ಧರ್ಮಗಳ ಫಲವು ಏನಿವೆಯೋ, ಅವೂ ನನ್ನ ಮನಸ್ಸಿ- ನಲ್ಲಿ ತೋರುತ್ತಿದೆ. ಕೇಶವನೇ! ಸಕಲವಾದ ರಾಜಧರ್ಮಗಳನ್ನು ತಿಳಿದಿದ್ದೇನೆ. (ಎಲ್ಲ ಧರ್ಮಗಳ ಫಲವೂ ನನ್ನ ಮನಸ್ಸಿಗೆ ಗೋಚರಿಸುತ್ತಿದೆ.)
ಯತ್ರ ಯತ್ರ ಚ ವಕ್ತವ್ಯಂ ತದ್ ವಕ್ಷ್ಯಾಮಿ ಜನಾರ್ದನ |
ತವ ಪ್ರಸಾದಾದ್ಧಿ ಶುಭಾ ಮನೋ ಮೇ ಬುದ್ಧಿರಾವಿಶತ್ ॥22॥
ಎಲೈ ಜನಾರ್ದನನೇ! ಏನೇನು ಹೇಳಬೇಕಾಗಿದೆಯೋ ಅದೆಲ್ಲವನ್ನೂ ಹೇಳು- ವೆನು. ನಿನ್ನ ಅನುಗ್ರಹದಿಂದ ಶುಭವಾದ ನನ್ನ ಮನಸ್ಸು ಬುದ್ಧಿಯನ್ನು ಆಶ್ರಯಿಸಿದೆ.
ಯುವೇವ ಚಾಸ್ಮಿ ಸಂವೃತ್ತಸ್ತ್ವದನುಧ್ಯಾನಬೃಂಹಿತಃ |
ವಕ್ತುಂ ಶ್ರೇಯಃ ಸಮರ್ಥೋಽಸ್ಮಿ ತ್ವತ್ಪ್ರಸಾದಾಜ್ಜನಾರ್ದನ ॥23॥
ನಿನ ಶುಭಾಶಂಸನೆಯಿಂದ ನಾನು ಯುವಕನಂತೆ ದೃಢನಾಗಿದ್ದೇನೆ. ಎಲೈ ಜನಾ- ರ್ದನನೇ! ನಿನ್ನ ಅನುಗ್ರಹದಿಂದ ಶ್ರೇಯಸ್ಸನ್ನು ಹೇಳಲು ಸಮರ್ಥನಾಗಿದ್ದೇನೆ.
ಸ್ವಯಂ ಕಿಮರ್ಥಂ ತು ಭವಾನ್ ಶ್ರೇಯೋ ನ ಪ್ರಾಹ ಪಾಂಡವಮ್ |
ಕಿಂ ತೇ ವಿವಕ್ಷಿತಂ ಚಾತ್ರ ತದಾಶು ವದ ಮಾಧವ ॥24॥
ಎಲೈ ಮಾಧವನೇ! ನೀನೇ ಸ್ವತಃ ಧರ್ಮರಾಜನಿಗೆ ಏಕೆ ಶ್ರೇಯಸ್ಸನ್ನು ಹೇಳ- ಲಿಲ್ಲ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ಎಂಬುದನ್ನು ಶೀಘ್ರವಾಗಿ ಹೇಳು.
ಶ್ರೀಭಗವಾನ್
ಯಶಸಃ ಶ್ರೇಯಸಶ್ಚೈವ ಮೂಲಂ ಮಾಂ ವಿದ್ಧಿ ಭಾರತ |
ಮತ್ತಃ ಸರ್ವೇಽಭಿನಿರ್ವೃತ್ತಾ ಭಾವಾಃ ಸದಸದಾತ್ಮಕಾಃ ॥25॥
ಶ್ರೀಭಗವಾನ್ ಎಲೈ ಭಾರತನೇ! ಶ್ರೇಯಸ್ಸಿಗೂ ಮತ್ತು ಯಶಸ್ಸಿಗೂ ನಾನು ಮೂಲಕಾರಣನೆಂದು ತಿಳಿ. ಕಾರ್ಯಕಾರಣಾತ್ಮಕವಾದ ಎಲ್ಲ ವಸ್ತುಗಳೂ ನನ್ನಿಂದಲೇ ಉಂಟಾಗುತ್ತವೆ.
ಶೀತಾಂಶುಶ್ಚಂದ್ರ ಇತ್ಯುಕ್ತೇ ಕೋ ಲೋಕೇ ವಿಸ್ಮಯಿಷ್ಯತಿ |
ತಥೈವ ಯಶಸಾ ಪೂರ್ಣೇ ಮಯಿ ಕೋ ವಿಸ್ಮಯಿಷ್ಯತಿ ॥26॥
`ಚಂದ್ರನು ಶೀತಕಿರಣ'ನೆಂದು ಹೇಳಿದರೆ ಲೋಕದಲ್ಲಿ ಯಾರಿಗೆ ಆಶ್ಚರ್ಯ- ವುಂಟಾಗುವುದು? ಆದ್ದರಿಂದ ಯಶಸ್ಸಿನಿಂದ ಪೂರ್ಣವಾದ ನಾನು ಏನನ್ನಾದರೂ ಹೇಳಿದರೆ ಅದರಲ್ಲಿ ಯಾರಿಗೆ ವಿಸ್ಮಯವುಂಟಾಗುವುದು? (ಅದರಲ್ಲಿ ಏನೂ ಆಶ್ಚರ್ಯವಿರುವುದಿಲ್ಲ.)
ಆಧೇಯಂ ತು ಮಯಾ ಭೂಯೋ ಯಶಸ್ತವ ಮಹಾದ್ಯುತೇ |
ತತೋ ಮೇ ವಿಪುಲಾ ಬುದ್ಧಿಸ್ತ್ವಯಿ ಭೀಷ್ಮ ಸಮಾಹಿತಾ ॥27॥
ಎಲೈ ಮಹಾದ್ಯುತಿಯೇ! ನಾನು ನಿನಗೆ ಇನ್ನೂ ಹೆಚ್ಚಿನ ಯಶಸ್ಸನ್ನು ದಯ- ಪಾಲಿಸಬೇಕು. ಆದ್ದರಿಂದ ಎಲೈ ಭೀಷ್ಮನೇ! ನನ್ನ ವಿಪುಲವಾದ ಬುದ್ಧಿಯು ನಿನ್ನಲ್ಲಿ ಕೇಂದ್ರೀಕೃತವಾಗಿದೆ. (ನೀನು ಧರ್ಮೋಪದೇಶವನ್ನು ಮಾಡಬೇಕೆಂದು ನಿರ್ಧರಿ- ಸಿದೆ.)
ಯಾವದ್ಧಿ ಪೃಥಿವೀಪಾಲ ಪೃಥಿವೀ ಸ್ಥಾಸ್ಯತೇ ಧ್ರುವಾ |
ತಾವತ್ ತಸ್ಯಾಕ್ಷಯಾ ಕೀರ್ತಿರ್ಲೋಕಾನನುಚರಿಷ್ಯತಿ ॥28॥
ಎಲೈ ರಾಜನೇ! ಎಲ್ಲಿಯವರೆಗೆ ಶಾಶ್ವತವಾದ ಭೂಮಿಯು ಇರುತ್ತದೆಯೋ ಅಲ್ಲಿಯವರೆಗೆ ಪರಲೋಕದಲ್ಲಿ ಅಕ್ಷಯವಾದ ಕೀರ್ತಿಯಿರುತ್ತದೆ.

ಯಚ್ಚ ತ್ವಂ ವಕ್ಷ್ಯಸೇ ಭೀಷ್ಮ ಪಾಂಡವಾಯಾನುಪೃಚ್ಛತೇ |
ವೇದಪ್ರವಾದಾ ಇವ ತೇ ಸ್ಥಾಸ್ಯಂತಿ ವಸುಧಾತಳೇ ॥29॥
ಎಲೈ ಭೀಷ್ಮನೇ! ಪ್ರಶ್ನೆಯನ್ನು ಮಾಡುವ ಪಾಂಡವನಿಗೆ ನೀನು ಏನು ಉತ್ತರ- ವನ್ನು ಹೇಳುವಿಯೋ ಅದು ವೇದವಾದಗಳಂತೆ ಭೂತಲದಲ್ಲಿ ಶಾಶ್ವತವಾಗಿ ಉಳಿಯುತ್ತದೆ.
ಯಶ್ಚೈತೇನ ಪ್ರಮಾಣೇನ ಯೋಕ್ಷ್ಯತ್ಯಾತ್ಮಾನಮಾತ್ಮನಾ |
ಸ ಫಲಂ ಸರ್ವಪುಣ್ಯಾನಾಂ ಪ್ರೇತ್ಯ ಚಾನುಭವಿಷ್ಯತಿ ॥30॥
ಯಾವನು ನೀನು ಹೇಳಿದುದನ್ನು ಪ್ರಮಾಣವಾಗಿ ಸ್ವೀಕರಿಸಿ ತಾನು ಅದರಂತೆ ನಡೆದುಕೊಳ್ಳುತ್ತಾನೆಯೋ ಅವನು ಮರಣವನ್ನು ಹೊಂದಿ ಸರ್ವಪುಣ್ಯಗಳ ಫಲ- ವನ್ನು ಅನುಭವಿಸುವನು.
ಏತಸ್ಮಾತ್ ಕಾರಣಾದ್ ಭೀಷ್ಮ ಮತಿರ್ದಿವ್ಯಾ ಮಯಾ ಹಿ ತೇ |
ದತ್ತಾ ಯಶೋ ವಿಪ್ರಥೇತ ಕಥಂ ಭೂಯಸ್ತವೇತಿ ಹ ॥31॥
ಎಲೈ ಭೀಷ್ಮನೇ! ಈ ಕಾರಣದಿಂದ ನಿನ್ನ ಕೀರ್ತಿಯು ಹೇಗೆ ಇನ್ನೂ ಹೆಚ್ಚು ವಿಸ್ತಾರವಾದೀತು ಎಂದು ಯೋಚಿಸಿ ನಾನು ನಿನಗೆ ದಿವ್ಯವಾದ ಬುದ್ಧಿಯನ್ನು ಕೊಟ್ಟಿ- ದ್ದೇನೆ.
ಯಾವದ್ಧಿ ಪ್ರಥತೇ ಲೋಕೇ ಪುರುಷಸ್ಯ ಯಶೋ ಭುವಿ |
ತಾವತ್ ತಸ್ಯಾಕ್ಷಯಂ ಸ್ಥಾನಂ ಭವತೀತಿ ವಿನಿಶ್ಚಿತಮ್ ॥32॥
ಎಲ್ಲಿಯವರೆಗೆ ಭೂಮಿಯಲ್ಲಿ ಒಬ್ಬ ಪುರುಷನ ಯಶಸ್ಸು ಹರಡುತ್ತದೆಯೋ ಅಲ್ಲಿಯವರೆಗೆ ಅವನಿಗೆ ಪರಲೋಕದಲ್ಲಿ ಅಕ್ಷಯಸ್ಥಾನವುಂಟಾಗುತ್ತದೆ ಎಂಬುದು ಸುನಿಶ್ಚಿತವಾದುದು.
ರಾಜಾನೋ ಹತಶಿಷ್ಟಾಸ್ತ್ವಾಂ ರಾಜನ್ನಭಿತ ಆಸತೇ |
ಧರ್ಮಾನನುಯುಯುಕ್ಷಂತಸ್ತೇಭ್ಯಃ ಪ್ರಬ್ರೂಹಿ ಭಾರತ ॥33॥
ಎಲೈ ರಾಜನೇ! ಯುದ್ಧದಲ್ಲಿ ಹತರಾಗಿ ಉಳಿದ ರಾಜರು ಧರ್ಮಗಳನ್ನು ಕೇಳಲು ಬಯಸಿ ನಿನ್ನನ್ನು ಸುತ್ತುವರಿದಿದ್ದಾರೆ. ಎಲೈ ಭಾರತನೇ! ಅವರಿಗೆ ಉಪ- ದೇಶವನ್ನು ಮಾಡು.
ಭವಾನ್ ಹಿ ವಯಸಾ ವೃದ್ಧಃ ಶ್ರುತಾಚಾರಸಮನ್ವಿತಃ |
ಕುಶಲೋ ರಾಜಧರ್ಮಾಣಾಂ ಪೂರ್ವೇಷಾಮಪರಾಶ್ಚ ಯೇ ॥34॥
ನೀನು ವಯೋವೃದ್ಧನಾಗಿದ್ದೀಯೆ. ವಿದ್ಯೆ ಮತ್ತು ಆಚಾರಸಂಪನ್ನನಾಗಿದ್ದೀಯೆ. ಪೂರ್ವರಾಜರ ಮತ್ತು ಅನಂತರ ಬಂದ ರಾಜರ ಎಲ್ಲ ಧರ್ಮಗಳನ್ನೂ ಚೆನ್ನಾಗಿ ತಿಳಿದಿದ್ದೀಯೆ.
ಜನ್ಮಪ್ರಭೃತಿ ತೇ ಕಶ್ಚಿದ್ ವೃಜಿನಂ ನ ದದರ್ಶ ಹ |
ಜ್ಞಾತಾರಂ ಮನುಧರ್ಮಾಣಾಂ ತ್ವಾಂ ವಿದುಃ ಸರ್ವಪಾರ್ಥಿವಾಃ ॥35॥
ನೀನು ಹುಟ್ಟಿದಾಗಿನಿಂದ ನಿನ್ನಲ್ಲಿ ಯಾವ ದೋಷವೂ ಕಂಡುಬರಲಿಲ್ಲ. ಎಲ್ಲ ರಾಜರೂ ನೀನು ಮನುಧರ್ಮಗಳನ್ನು ತಿಳಿದವನು ಎಂದು ತಿಳಿದಿದ್ದಾರೆ.
ತೇಭ್ಯಃ ಪಿತೇವ ಪುತ್ರೇಭ್ಯೋ ರಾಜನ್ ಬ್ರೂಹಿ ಪರಂ ನಯಮ್ |
ಋಷಯಶ್ಚ ಹಿ ದೇವಾಶ್ಚ ತ್ವಯಾ ನಿತ್ಯಮುಪಾಸಿತಾಃ ॥36॥
ಎಲೈ ರಾಜನೇ! ಮಕ್ಕಳಿಗೆ ತಂದೆಯು ಹೇಳಿದಂತೆ ಅವರಿಗೆ ಶ್ರೇಷ್ಠವಾದ ರಾಜ- ನೀತಿಯನ್ನು ಹೇಳು. ನೀನು ನಿತ್ಯವೂ ಋಷಿಗಳ ಮತ್ತು ದೇವತೆಗಳ ಸೇವೆಯನ್ನು ಮಾಡಿದ್ದೀಯೆ.
ತಸ್ಮಾದ್ ವಕ್ತವ್ಯಮೇವೇಹ ತ್ವಯಾ ಪಶ್ಯಾಮ್ಯಶೇಷತಃ |
ಧರ್ಮಾನ್ ಶುಶ್ರೂಷಮಾಣೇಭ್ಯಃ ಪೃಷ್ಟೇನ ಚ ಸತಾ ಪುನಃ ॥37॥
ಆದ್ದರಿಂದ ಕೇಳಲು ಬಯಸುವ ಈ ರಾಜರಿಗೆ ಅದರಲ್ಲಿಯೂ ಸಜ್ಜನನಾದ ಯುಧಿಷ್ಠಿರನಿಂದ ಪ್ರಶ್ನೆ ಮಾಡಲ್ಪಟ್ಟ ನೀನು ಎಲ್ಲವನ್ನೂ ಪೂರ್ಣವಾಗಿ ಹೇಳಲೇ ಬೇಕು - ಎಂದು ನಾನು ತಿಳಿಯುತ್ತೇನೆ.
ವಕ್ತವ್ಯಂ ವಿದುಷಾ ಚೇತಿ ಧರ್ಮಮಾಹುರ್ಮನೀಷಿಣಃ |
ಅಪ್ರತಿಬ್ರುವತಃ ಕಷ್ಟೋ ದೋಷೋ ಹಿ ಭವತಿ ಪ್ರಭೋ ॥38॥
ಸಜ್ಜನರು ಪ್ರಶ್ನೆ ಮಾಡಿದಾಗ ವಿದ್ವಾಂಸನಾದವನು ಉತ್ತರವನ್ನು ನೀಡುವುದು ಧರ್ಮವೆಂದು ಜ್ಞಾನಿಗಳು ಹೇಳುತ್ತಾರೆ. ಎಲೈ ಪ್ರಭುವೇ! ಉತ್ತರವನ್ನು ನೀಡದಿದ್ದರೆ ಕಷ್ಟಕರವಾದ ದೋಷವುಂಟಾಗುವುದಷ್ಟೇ!
ತಸ್ಮಾತ್ ಪುತ್ರೈಶ್ಚ ಪೌತ್ರೈಶ್ಚ ಧರ್ಮಾನ್ ಪೃಷ್ಟಃ ಸನಾತನಾನ್ |
ವಿದ್ವಾನ್ ಜಿಜ್ಞಾಸಮಾನೈಸ್ತ್ವಂ ಪ್ರಬ್ರೂಹಿ ಭರತರ್ಷಭ ॥39॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಃಪಂಚಾಶೋಽಧ್ಯಾಯಃ ॥54॥
ಎಲೈ ಭರತಶ್ರೇಷ್ಠನೇ! ಆದ್ದರಿಂದ ಪುತ್ರರಿಂದಲೂ ಮತ್ತು ಪೌತ್ರರಿಂದಲೂ ಸನಾತನಧರ್ಮಗಳ ವಿಷಯದಲ್ಲಿ ಪ್ರಶ್ನೆಮಾಡಲ್ಪಟ್ಟ ನೀನು ಎಲ್ಲವನ್ನೂ ತಿಳಿದವ- ನಾಗಿ ತಿಳಿಯಲು ಬಯಸುವ ಅವರಿಗೆ ಉಪದೇಶವನ್ನು ಮಾಡು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 54ನೆಯಅಧ್ಯಾಯವು ಮುಗಿಯಿತು
0
55. ಪಂಚಪಂಚಾಶೋಽಧ್ಯಾಯಃ
ಯುಧಿಷ್ಠಿರನ ಉಪಸತ್ತಿಯನ್ನು ಕುರಿತು ಕೃಷ್ಣನಿಂದ ಕಾರಣನಿರೂಪಣೆ;

ಭೀಷ್ಮರಿಂದ ಯುಧಿಷ್ಠಿರನಿಗೆ ಪ್ರಶ್ನೆಯನ್ನು ಕೇಳಲು ಅನುಮತಿ
ವೈಶಂಪಾಯನಃ
ಅಥಾಬ್ರವೀನ್ಮಹಾತೇಜಾ ವಾಕ್ಯಂ ಕೌರವನಂದನಃ |
ಹಂತ ಧರ್ಮಾನ್ ಪ್ರವಕ್ಷ್ಯಾಮಿ ದೃಢೇ ವಾಙ್ಮನಸೀ ಮಮ |
ತವ ಪ್ರಸಾದಾದ್ ಗೋವಿಂದ ಭೂತಾತ್ಮಾ ಹ್ಯಸಿ ಶಾಶ್ವತಃ ॥1॥
ವೈಶಂಪಾಯನರು ಆಗ ಮಹಾತೇಜಸ್ವಿಗಳಾದ ಕೌರವನಂದನರಾದ ಭೀಷ್ಮರು ಮಾತನಾಡಿದರು. ಸಂತೋಷ. ಧರ್ಮಗಳನ್ನು ಹೇಳುವೆನು. ಎಲೈ ಗೋವಿಂದನೇ! ನಿನ್ನ ಅನುಗ್ರಹದಿಂದ ನನ್ನ ಮಾತು ಮತ್ತು ಮನಸ್ಸುಗಳು ದೃಢವಾಗಿವೆ. ಗೋವಿಂದನೇ! ನೀನು ಶಾಶ್ವತನಾದ ಸರ್ವಾಂತರ್ಯಾಮಿಯಾಗಿದ್ದೀಯೆ.
ಯುಧಿಷ್ಠಿರಸ್ತು ಮಾಂ ರಾಜಾ ಧರ್ಮಾನ್ ಸಮನುಪೃಚ್ಛತು |
ಏವಂ ಪ್ರೀತೋ ಭವಿಷ್ಯಾಮಿ ಧರ್ಮಾನ್ ವಕ್ಷ್ಯಾಮಿ ಚಾನಘ ॥2॥
ರಾಜನಾದ ಯುಧಿಷ್ಠಿರನು ಧರ್ಮಗಳ ವಿಷಯದಲ್ಲಿ ನನ್ನನ್ನು ಪ್ರಶ್ನಿಸಲಿ. ಎಲೈ ಅನಘನೇ! ಹಾಗೆ ಮಾಡಿದರೆ ನಾನು ಸಂತೋಷಗೊಳ್ಳುವೆನು ಮತ್ತು ಧರ್ಮ- ಗಳನ್ನು ನಿರೂಪಿಸುವೆನು.
ಯಸ್ಮಿನ್ ರಾಜರ್ಷಭೇ ಜಾತೇ ಧರ್ಮಾತ್ಮನಿ ಮಹಾತ್ಮನಿ |
ಅಹೃಷ್ಯನ್ ಋಷಯಃ ಸರ್ವೇ ಸ ಮಾಂ ಪೃಚ್ಛತು ಪಾಂಡವಃ ॥3॥
ಯಾವ ಧರ್ಮಾತ್ಮನಾದ ಮಹಾತ್ಮನಾದ ರಾಜಶ್ರೇಷ್ಠನು ಜನಿಸಿದಾಗ ಎಲ್ಲ ಋಷಿಗಳೂ ಸಂತೋಷಗೊಂಡರೋ ಅಂತಹ ಪಾಂಡವನು ನನ್ನನ್ನು ಪ್ರಶ್ನಿಸಲಿ.
ಸರ್ವೇಷಾಂ ದೀಪ್ತಯಶಸಾಂ ಕುರೂಣಾಂ ಧರ್ಮಚಾರಿಣಾಮ್ |
ಯಸ್ಯ ನಾಸ್ತಿ ಸಮಃ ಕಶ್ಚಿತ್ ಸ ಮಾಂ ಪೃಚ್ಛತು ಪಾಂಡವಃ ॥4॥
ಯಾವ ಯುಧಿಷ್ಠಿರನಿಗೆ ದೀಪ್ತವಾದ ಕೀರ್ತಿಯುಳ್ಳ, ಧರ್ಮಚಾರಿಗಳಾದ, ಎಲ್ಲ ಕುರುಗಳಲ್ಲಿ ಸಮಾನನಾದವನು ಯಾವನೂ ಇಲ್ಲವೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಧೃತಿರ್ದಮೋ ಬ್ರಹ್ಮಚರ್ಯಂ ಕ್ಷಮಾ ಧರ್ಮಶ್ಚ ನಿತ್ಯದಾ |
ಯಸ್ಮಿನ್ನೋಜಶ್ಚ ತೇಜಶ್ಚ ಸ ಮಾಂ ಪೃಚ್ಛತು ಪಾಂಡವಃ ॥5॥
ಯಾವನಲ್ಲಿ ಧೈರ್ಯ, ಇಂದ್ರಿಯನಿಗ್ರಹ, ಬ್ರಹ್ಮಚರ್ಯ, ಕ್ಷಮೆ ನಿತ್ಯವೂ ಧರ್ಮಾಚರಣೆ, ಅವಷ್ಟಂಭಶಕ್ತಿ, ತೇಜಸ್ಸುಗಳು ಇವೆಯೋ ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನೆ ಮಾಡಲಿ.
ಸತ್ಯಂ ದಾನಂ ತಪಃ ಶೌಚಂ ಶಾಂತಿರ್ದಾಕ್ಷ್ಯಮಸಂಭ್ರಮಃ |
ಯಸ್ಮಿನ್ನೇತಾನಿ ಸರ್ವಾಣಿ ಸ ಮಾಂ ಪೃಚ್ಛತು ಪಾಂಡವಃ ॥6॥
ಯಾವನಲ್ಲಿ ಸತ್ಯ, ದಾನ, ತಪಸ್ಸು, ಶೌಚ, ಶಾಂತಿ, ದಕ್ಷತೆ ಮತ್ತು ಅಪ್ರಮಾದ -ಗಳು ಇವೆಲ್ಲವೂ ಇವೆಯೋ ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನೆ ಮಾಡಲಿ.
ಯೋ ನ ಕಾಮಾನ್ನ ಸಂರಂಭಾನ್ನ ಭಯಾನ್ನಾರ್ಥಕಾರಣಾತ್ |
ಕುರ್ಯಾದಧರ್ಮಂ ಧರ್ಮಾತ್ಮಾ ಸ ಮಾಂ ಪೃಚ್ಛತು ಪಾಂಡವಃ ॥7॥
ಧರ್ಮಾತ್ಮನಾದ ಯಾವನು ಕಾಮದಿಂದಾಗಲೀ, ಕ್ರೋಧದಿಂದಾಗಲೀ, ಭಯ- ದಿಂದಾಗಲೀ, ಅರ್ಥಪ್ರಾಪ್ತಿಯ ಕಾರಣದಿಂದಾಗಲೀ ಅಧರ್ಮವನ್ನು ಮಾಡು- ವುದಿಲ್ಲವೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಸಂಬಂಧಿನೋಽತಿಥೀನ್ ಭೃತ್ಯಾನ್ ಸಂಶ್ರಿತೋಪಾಶ್ರಿತಾಂಶ್ಚ ಯಃ |
ಸಮ್ಮಾನಯತಿ ಸತ್ಕೃತ್ಯ ಸ ಮಾಂ ಪೃಚ್ಛತು ಪಾಂಡವಃ ॥8॥
ಯಾವನು ಸಂಬಂಧಿಗಳನ್ನು ಅತಿಥಿಗಳನ್ನು, ಭೃತ್ಯರನ್ನು, ಆಶ್ರಿತರನ್ನು, ಆಶ್ರಿತರ ಸಂಬಂಧಿಗಳನ್ನು ಸತ್ಕರಿಸಿ ಪೂಜಿಸುತ್ತಾನೆಯೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಸತ್ಯನಿತ್ಯಃ ಕ್ಷಮಾನಿತ್ಯೋ ಜ್ಞಾನನಿತ್ಯೋಽತಿಥಿಪ್ರಿಯಃ |
ಯೋ ದದಾತಿ ಸತಾಂ ನಿತ್ಯಂ ಸ ಮಾಂ ಪೃಚ್ಛತು ಪಾಂಡವಃ ॥9॥
ಯಾವನು ನಿತ್ಯವೂ ಸತ್ಯವಚನನೋ, ನಿತ್ಯವೂ ಕ್ಷಮಾಶೀಲನೋ, ನಿತ್ಯವೂ ಜ್ಞಾನರತನೋ, ಅತಿಥಿಪ್ರಿಯನೋ, ಸಜ್ಜನರಿಗೆ ನಿತ್ಯವೂ ದಾನವನ್ನು ಮಾಡು- ತ್ತಾನೆಯೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಇಜ್ಯಾಧ್ಯಯನನಿತ್ಯಶ್ಚ ಧರ್ಮೇ ಚ ನಿರತಃ ಸದಾ |
ಶಾಂತಃ ಶ್ರುತರಹಸ್ಯಶ್ಚ ಸ ಮಾಂ ಪೃಚ್ಛತು ಪಾಂಡವಃ ॥10॥
ಯಾವನು ಅರ್ಚನೆ ಮತ್ತು ಅಧ್ಯಯನಗಳಲ್ಲಿ ನಿತ್ಯವೂ ರತನಾಗಿದ್ದಾನೋ, ಧರ್ಮಗಳಲ್ಲಿ ನಿರತನೋ ಶಾಂತನೋ, ರಹಸ್ಯತತ್ವಗಳನ್ನು ತಿಳಿದವನೋ ಅಂತಹ ಪಾಂಡವನು ನನ್ನನ್ನು ಪ್ರಶ್ನೆ ಮಾಡಲಿ.
ಶ್ರೀಭಗವಾನ್
ಲಜ್ಜಯಾ ಪರಯೋಪೇತೋ ಧರ್ಮಾತ್ಮಾ ಸ ಯುಧಿಷ್ಠಿರಃ |
ಅಭಿಶಾಪಭಯಾದ್ ಭೀತೋ ಭವಂತಂ ನೋಪಸರ್ಪತಿ ॥11॥
ಶ್ರೀಭಗವಾನ್ ಧರ್ಮಾತ್ಮನಾದ ಆ ಯುಧಿಷ್ಠಿರನು ಬಹಳ ನಾಚಿಕೆಯಿಂದ ಕೂಡಿ ನೀನು ಶಾಪವನ್ನು ಕೊಡಬಹುದೆಂದು ಹೆದರಿ ನಿನ್ನ ಬಳಿಗೆ ಬರುತ್ತಿಲ್ಲ.
ಲೋಕಸ್ಯ ಕದನಂ ಕೃತ್ವಾ ಲೋಕನಾಥೋ ವಿಶಾಂಪತೇ |

ಅಭಿಶಾಪಭಯಾದ್ ಭೀತೋ ಭವಂತಂ ನೋಪಸರ್ಪತಿ ॥12॥
ಎಲೈ ರಾಜನೇ! ಲೋಕನಾಥನಾದ ಅವನು ಘೋರವಾದ ಯುದ್ಧವನ್ನು ಮಾಡಿ, ನಿನ್ನಿಂದ ಶಾಪವುಂಟಾಗಬಹುದೆಂಬ ಭಯದಿಂದ ನಿನ್ನ ಬಳಿಗೆ ಬರುತ್ತಿಲ್ಲ.
ಪೂಜ್ಯಾನ್ ಮಾನ್ಯಾಂಶ್ಚ ಭಕ್ತಾಂಶ್ಚ ಗುರೂನ್ ಸಂಬಂಧಿಬಾಂಧವಾನ್ |
ಅರ್ಘ್ಯಾರ್ಹಾನಿಷುಭಿರ್ಹತ್ವಾ ಭವಂತಂ ನೋಪಸರ್ಪತಿ ॥13॥
ಪೂಜ್ಯರೂ, ಮಾನ್ಯರೂ, ಭಕ್ತರೂ, ಗುರುಗಳೂ, ಸಂಬಂಧಿಬಾಂಧವರೂ, ಪೂಜಾರ್ಹರೂ ಆದವರನ್ನು ಬಾಣಗಳಿಂದ ಕೊಂದು ನಿನ್ನ ಬಳಿಗೆ ಬರುತ್ತಿಲ್ಲ.
ಭೀಷ್ಮಃ
ಬ್ರಾಹ್ಮಣಾನಾಂ ಯಥಾ ಧರ್ಮೋ ದಾನಮಧ್ಯಯನಂ ತಪಃ |
ಕ್ಷತ್ರಿಯಾಣಾಂ ತಥಾ ಕೃಷ್ಣ ಸಮರೇ ದೇಹಪಾತನಮ್ ॥14॥
ಭೀಷ್ಮರು ಕೃಷ್ಣನೇ! ಬ್ರಾಹ್ಮಣರಿಗೆ ದಾನ, ಅಧ್ಯಯನ ಮತ್ತು ತಪಸ್ಸುಗಳು ಹೇಗೆ ಧರ್ಮವೋ ಹಾಗೆ ಕ್ಷತ್ರಿಯರಿಗೆ ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವುದು ಧರ್ಮವಾದುದು.
ಪಿತೄನ್ ಪಿತಾಮಹಾನ್ ಪುತ್ರಾನ್ ಗುರೂನ್ ಸಂಬಂಧಿಬಾಂಧವಾನ್ |
ಮಿಥ್ಯಾಪ್ರವೃತ್ತಾನ್ ಯಃ ಸಂಖ್ಯೇ ನಿಹನ್ಯಾದ್ ಧರ್ಮ ಏವ ಸಃ ॥15॥
ಅನ್ಯಾಯದ ಕಾರಣದಿಂದ ಪ್ರವೃತ್ತರಾದ ಪಿತೃಗಳನ್ನೂ, ಪಿತಾಮಹರನ್ನೂ, ಪುತ್ರರನ್ನೂ, ಗುರುಗಳನ್ನೂ, ಸಂಬಂಧಿಬಾಂಧವರನ್ನು ಯುದ್ಧದಲ್ಲಿ ಕೊಲ್ಲುವುದು ಕ್ಷತ್ರಿಯರಿಗೆ ಧರ್ಮವೇ ಆಗುತ್ತದೆ.
ಸಮಯತ್ಯಾಗಿನೋ ಲುಬ್ಧಾನ್ ಗುರೂನಪಿ ಚ ಕೇಶವ |
ನಿಹಂತಿ ಸಮರೇಪಾಪಾನ್ ಕ್ಷತ್ರಿಯೋ ಯಃ ಸ ಧರ್ಮವಿತ್ ॥16॥
ಎಲೈ ಕೇಶವನೇ! ಧರ್ಮವನ್ನು ತಿಳಿದ ಕ್ಷತ್ರಿಯನು ಮಾಡಿಕೊಂಡ ಒಪ್ಪಂದ- ವನ್ನು ಮುರಿದ ಲೋಭಿಗಳಾದ ಪಾಪಿಗಳಾದ ಗುರುಗಳನ್ನೂ ಯುದ್ಧದಲ್ಲಿ ಕೊಲ್ಲು- ತ್ತಾನೆ.
ಲೋಹಿತೋದಾಂ ಕೇಶತೃಣಾಂ ಗಜಶೈಲಾಂ ಧ್ವಜದ್ರುಮಾಮ್ |
ಮಹೀಂ ಕರೋತಿ ಯುದ್ಧೇಷು ಕ್ಷತ್ರಿಯೋ ಯಃ ಸ ಧರ್ಮವಿತ್ ॥17॥
ಯಾವನು ಭೂಮಿಯಲ್ಲಿ ರಕ್ತದ ಪ್ರವಾಹವಿರುವ, ಕೇಶವೆಂಬ ತೃಣಗಳನ್ನು ಹೊಂದಿದ, ಗಜಗಳೆಂಬ ಪರ್ವತಗಳನ್ನು ಹೊಂದಿದ, ಧ್ವಜಗಳೆಂಬ ದ್ರುಮವನ್ನು ಹೊಂದಿದೆ ನದಿಯನ್ನು ಹರಿಸುತ್ತಾನೆಯೋ ಅಂತಹ ಕ್ಷತ್ರಿಯನು ಧರ್ಮವನ್ನು ತಿಳಿದವನಾಗುತ್ತಾನೆ.
ಆಹೂತೇನ ರಣೇ ನಿತ್ಯಂ ಯೋದ್ಧವ್ಯಂ ಕ್ಷತ್ರಬಂಧುನಾ |
ಧರ್ಮ್ಯಂ ಸ್ವರ್ಗ್ಯಂ ಚ ಲೋಕ್ಯಂ ಚ ಯುದ್ಧಂ ಹಿ ಮನುರಬ್ರವೀತ್ ॥18॥
ಕ್ಷತ್ರಿಯನಾದವನು ಯುದ್ಧಕ್ಕೆ ಆಹ್ವಾನಿಸಲ್ಪಟ್ಟರೆ ಅವಶ್ಯವಾಗಿ ಯುದ್ಧವನ್ನು ಮಾಡಬೇಕು. ಅಂತಹ ಯುದ್ಧವು ಧರ್ಮಪ್ರದವಾದುದು, ಸ್ವರ್ಗಪ್ರದವಾದುದು, ಮತ್ತು ಪರಲೋಕಪ್ರದವೂ ಆದುದು ಎಂದು ಮನುವು ಹೇಳಿದ್ದಾನೆ.
ವೈಶಂಪಾಯನಃ
ಏವಮುಕ್ತಸ್ತು ಭೀಷ್ಮೇಣ ಧರ್ಮರಾಜೋ ಯುಧಿಷ್ಠಿರಃ |
ವಿನೀತವದುಪಾಗಮ್ಯ ತಸ್ಥೌ ಸಂದರ್ಶನೇಽಗ್ರತಃ ॥19॥
ವೈಶಂಪಾಯನರು ಭೀಷ್ಮರಿಂದ ಹೀಗೆ ಹೇಳಲ್ಪಟ್ಟ ಧರ್ಮರಾಜನಾದ ಯುಧಿ-ಷ್ಠಿರನು ವಿನಯದಿಂದ ಮುಂದೆ ಬಂದು ಅವರ ದೃಷ್ಟಿಗೆ ಗೋಚರವಾಗುವಂತೆ ಎದುರಿಗೆ ನಿಂತನು.
ಅಥಾಸ್ಯ ಪಾದೌ ಜಗ್ರಾಹ ಭೀಷ್ಮಶ್ಚಾಭಿನನಂದ ತಮ್ |
ಮೂರ್ಧ್ನಿ ಚೈನಮುಪಾಘ್ರಾಯ ನಿಷೀದೇತ್ಯಬ್ರವೀತ್ ತದಾ ॥20॥
ಅನಂತರ ಅವನು ಅವರ ಪಾದಗಳಿಗೆ ನಮಸ್ಕರಿಸಿದನು. ಭೀಷ್ಮರು ಅವನನ್ನು ಅಭಿನಂದಿಸಿದರು. ಅವನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ, ಕುಳಿತುಕೋ ಎಂದು ಹೇಳಿದರು.
ತಮುವಾಚಾಥ ಗಾಂಗೇಯ ಋಷಭಃ ಸರ್ವಧನ್ವಿನಾಮ್ |
ಪೃಚ್ಛ ಮಾಂ ತಾತ ವಿಸ್ರಬ್ಧಂ ಮಾ ಭೈಸ್ತ್ವಂ ಕುರುಸತ್ತಮ ॥21॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಪಂಚಾಶೋಽಧ್ಯಾಯಃ ॥55॥
ಅನಂತರ ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠರಾದ, ಗಂಗಾಪುತ್ರರಾದ ಭೀಷ್ಮರು ಎಲೈ ಪ್ರೀತಿಪಾತ್ರನೇ! ಕುರುಶ್ರೇಷ್ಠನೇ! ಹೆದರಬೇಡ. ವಿಶ್ವಾಸದಿಂದ ಪ್ರಶ್ನೆಗಳನ್ನು ಕೇಳು ಎಂದು ಅವನನ್ನು ಕುರಿತು ಹೇಳಿದರು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 55ನೆಯ ಅಧ್ಯಾಯವು ಮುಗಿಯಿತು.
0
56. ಐವತ್ತಾರನೆಯ ಅಧ್ಯಾಯ
ವೈಶಂಪಾಯನಃ
ಭೀಷ್ಮರಿಂದ ರಾಜಧರ್ಮಕಥನ
ಪ್ರಣಿಪತ್ಯ ಹೃಷೀಕೇಶಮಭಿವಾದ್ಯ ಪಿತಾಮಹಮ್ |
ಅನುಮಾನ್ಯ ಗುರೂನ್ ಸರ್ವಾನ್ ಪರ್ಯಪೃಚ್ಛದ್ ಯುಧಿಷ್ಠಿರಃ ॥1॥

ವೈಶಂಪಾಯನರು ಯುಧಿಷ್ಠಿರನು ಹೃಷೀಕೇಶನಾದ ಕೃಷ್ಣನಿಗೆ ನಮಸ್ಕರಿಸಿ, ಪಿತಾಮಹರಾದ ಭೀಷ್ಮರನ್ನು ನಮಸ್ಕರಿಸಿ, ಎಲ್ಲ ಗುರುಗಳ ಅನುಮತಿಯನ್ನು ಪಡೆದು ಪ್ರಶ್ನೆಯನ್ನು ಮಾಡಿದನು.
ರಾಜ್ಯಂ ವೈ ಪರಮೋ ಧರ್ಮ ಇತಿ ಧರ್ಮವಿದೋ ವಿದುಃ |
ಮಹಾಂತಮೇತಂ ಭಾರಂ ಚ ಮನ್ಯೇ ತದ್ ಬ್ರೂಹಿ ಪಾರ್ಥಿವ ॥2॥
ಧರ್ಮವನ್ನು ತಿಳಿದವರು ರಾಜ್ಯಪಾಲನೆಯು ಶ್ರೇಷ್ಠವಾದ ಧರ್ಮವೆಂದು ತಿಳಿ- ಯುತ್ತಾರೆ (ಹೇಳುತ್ತಾರೆ). ಈ ಭಾರವು ಬಹಳ ದೊಡ್ಡದಾದುದು ಎಂದು ನನ್ನ ಅಭಿಪ್ರಾಯ. ಎಲೈ ರಾಜನೇ! ಅದನ್ನು ನನಗೆ ಹೇಳು.
ರಾಜಧರ್ಮಾನ್ ವಿಶೇಷೇಣ ಕಥಯಸ್ವ ಪಿತಾಮಹ |
ಸರ್ವಸ್ಯ ಜೀವಲೋಕಸ್ಯ ರಾಜಧರ್ಮಾಃ ಪರಾಯಣಮ್ ॥3॥
ಎಲೈ ಪಿತಾಮಹನೇ! ರಾಜಧರ್ಮವನ್ನು ವಿಶೇಷವಾಗಿ ಹೇಳು. ಎಲ್ಲ ಜೀವ- ಲೋಕಕ್ಕೆ ರಾಜಧರ್ಮಗಳೇ ಶ್ರೇಷ್ಠವಾದ ಆಸರೆ.
ತ್ರಿವರ್ಗೋಽತ್ರ ಸಮಾಸಕ್ತೋ ರಾಜಧರ್ಮೇಷು ಕೌರವ |
ಮೋಕ್ಷಧರ್ಮಶ್ಚ ವಿಸ್ಪಷ್ಟಃ ಸಕಲೋಽತ್ರ ಸಮಾಹಿತಃ ॥4॥
ಎಲೈ ಕೌರವನೇ! ರಾಜಧರ್ಮವನ್ನು ಧರ್ಮಾರ್ಥಕಾಮರೂಪವಾದ ತ್ರಿ- ವರ್ಗವು ಅವಲಂಬಿಸಿದೆ. ಸಕಲವಾದ ಮೋಕ್ಷಧರ್ಮವೂ ಕೂಡ ಸ್ಪಷ್ಟವಾಗಿ ರಾಜ- ಧರ್ಮವನ್ನು ಅವಲಂಬಿಸಿದೆ.
ಯಥಾ ಹಿ ರಶ್ಮಯೋಽಶ್ವಸ್ಯ ದ್ವಿರದಸ್ಯಾಂಕುಶೋ ಯಥಾ |
ನರೇಂದ್ರಧರ್ಮೋ ಲೋಕಸ್ಯ ತಥಾ ಪ್ರಗ್ರಹಣಂ ಸ್ಮೃತಮ್ ॥5॥
ಕುದುರೆಗೆ ಕಡಿವಾಣಗಳಿದ್ದಂತೆ, ಆನೆಗೆ ಅಂಕುಶವಿದ್ದಂತೆ ರಾಜಧರ್ಮವು ಲೋಕಕ್ಕೆ ಕಡಿವಾಣವೆಂದು ಹೇಳಲ್ಪಡುತ್ತದೆ.
ಅತ್ರ ವೈ ಸಂಪ್ರಮೂಢೇ ತು ಧರ್ಮೇ ರಾಜರ್ಷಿಸೇವಿತೇ |
ಲೋಕಸ್ಯ ಸಂಸ್ಥಾ ನ ಭವೇತ್ ಸರ್ವಂ ಚ ವ್ಯಾಕುಲಂ ಭವೇತ್ ॥6॥
ರಾಜರ್ಷಿಗಳಿಂದ ಸೇವಿತವಾದ ಅಂತಹ ರಾಜಧರ್ಮವು ಮಲಿನವಾದರೆ ಲೋಕಯಾತ್ರೆಯು ನಡೆಯಲಾರದು. ಎಲ್ಲವೂ ವ್ಯಾಕುಲಗೊಂಡೀತು!
ಉದಯನ್ ಹಿ ಯಥಾ ಸೂರ್ಯೋ ನಾಶಯತ್ಯಾಸುರಂ ತಮಃ |
ರಾಜಧರ್ಮಾಸ್ತಥಾಲೋಕ್ಯಾಮಾಕ್ಷಿಪಂತ್ಯಶುಭಾಂ ಗತಿಮ್ ॥7॥
ಸೂರ್ಯನು ಉದಯಿಸುತ್ತಾ ಹೇಗೆ ಕತ್ತಲೆಯನ್ನು ನಾಶ ಪಡಿಸುತ್ತಾನೋ, ಅದರಂತೆ ರಾಜಧರ್ಮಗಳು ಲೋಕಸಂಬಂಧಿಯಾದ ಅಶುಭಗತಿಯನ್ನು ನಿವಾ- ರಿಸುತ್ತವೆ.
ತದಗ್ರೇ ರಾಜಧರ್ಮಾಣಾಮರ್ಥತತ್ತ್ವಂ ಪಿತಾಮಹ |
ಪ್ರಬ್ರೂಹಿ ಭರತಶ್ರೇಷ್ಠ ತ್ವಂ ಹಿ ಬುದ್ಧಿಮತಾಂ ವರಃ ॥8॥
ಆದ್ದರಿಂದ ಎಲೈ ಪಿತಾಮಹನೇ! ಭರತಶ್ರೇಷ್ಠನೇ! ರಾಜಧರ್ಮಗಳ ಸರಿಯಾದ ತತ್ವವನ್ನು ಹೇಳುವವನಾಗು. ನೀನು ಬುದ್ಧಿವಂತರಲ್ಲಿ ಶ್ರೇಷ್ಠನಾದವನಷ್ಟೇ.
ಆಗಮಶ್ಚ ಪರಸ್ತ್ವತ್ತಃ ಸರ್ವೇಷಾಂ ನಃ ಪರಂತಪ |
ಭವಂತಂ ಹಿ ಪರಂ ಬುದ್ಧ್ಯಾ ವಾಸುದೇವೋಽಭಿಮನ್ಯತೇ ॥9॥
ಎಲೈ ಪರಂತಪನೇ! ನಿನ್ನಿಂದಲೇ ನಮ್ಮೆಲ್ಲರಿಗೂ ಜ್ಞಾನಲಾಭವಾಗಬೇಕಾಗಿದೆ. ಕೃಷ್ಣನು ನಿನ್ನನ್ನು ಬುದ್ಧಿಯಲ್ಲಿ ಶ್ರೇಷ್ಠನಾದವನೆಂದು ಅಭಿಪ್ರಾಯ ಪಡುತ್ತಾನೆ.
ಭೀಷ್ಮಃ
ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ |
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ॥10॥
ಭೀಷ್ಮರು ಮಹತ್ತಾದ ಧರ್ಮಕ್ಕೆ ನಮಸ್ಕಾರ. ಸರ್ವಕರ್ತನಾದ ಕೃಷ್ಣನಿಗೆ ನಮಸ್ಕಾರ. ಬ್ರಾಹ್ಮಣರನ್ನು ನಮಸ್ಕರಿಸಿ ಶಾಶ್ವತವಾದ ಧರ್ಮಗಳನ್ನು ಹೇಳುವೆನು.
ಶೃಣು ಕಾರ್ತ್ಸ್ನ್ಯೇನ ಮತ್ತಸ್ತ್ವಂ ರಾಜಧರ್ಮಾನ್ ಯುಧಿಷ್ಠಿರ |
ನಿರುಚ್ಯಮಾನಾನ್ ನಿಯತೋ ಯಚ್ಚಾನ್ಯದಭಿವಾಂಛಸಿ ॥11॥
ಎಲೈ ಯುಧಿಷ್ಠಿರನೇ! ನೀನು ನಾನು ಹೇಳುವ ರಾಜಧರ್ಮಗಳನ್ನು ಮತ್ತು ನೀನು ಬಯಸುವ ಬೇರೆ ವಿಷಯಗಳನ್ನು ಸಮಗ್ರವಾಗಿ ಹೇಳುವುದನ್ನು ನಿಯಮ- ದಿಂದ ಕೂಡಿದವನಾಗಿ ಕೇಳು.
ಆದಾವೇವ ಕುರುಶ್ರೇಷ್ಠ ರಾಜಾ ರಂಜನಕಾಮ್ಯಯಾ |
ದೇವತಾನಾಂ ದ್ವಿಜಾನಾಂ ಚ ವರ್ತಿತವ್ಯಂ ಯಥಾವಿಧಿ ॥12॥
ಎಲೈ ಕುರುಶ್ರೇಷ್ಠನೇ! ರಾಜನು ಪ್ರಜೆಗಳನ್ನು ರಂಜಿಸುವ ಕಾಮನೆಯಿಂದ ಮೊದಲು ದೇವತೆಗಳ ಮತ್ತು ಬ್ರಾಹ್ಮಣರ ವಿಷಯದಲ್ಲಿ ಸರಿಯಾದ ವಿಧಾನದಿಂದ ನಡೆದುಕೊಳ್ಳಬೇಕು.
ದೇವತಾನ್ಯರ್ಚಯಿತ್ವಾ ಹಿ ಬ್ರಾಹ್ಮಣಾಂಶ್ಚ ಕುರೂದ್ವಹ |
ಆನೃಣ್ಯಂ ಯಾತಿ ಧರ್ಮಸ್ಯ ಲೋಕೇನ ಚ ಸ ಮಾನ್ಯತೇ ॥13॥
ಎಲೈ ಕುರೂದ್ವಹನೇ! ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ಪೂಜಿಸುವವನು ಧರ್ಮದ ಋಣದಿಂದ ಮುಕ್ತನಾಗುತ್ತಾನೆ. ಮತ್ತು ಲೋಕವು ಅವನನ್ನು ಗೌರವಿ- ಸುತ್ತದೆ.
ಉತ್ಥಾನೇ ಚ ಸದಾ ಪುತ್ರ ಪ್ರಯತೇಥಾ ಯುಧಿಷ್ಠಿರ |

ನಹ್ಯುತ್ಥಾನಮೃತೇ ದೈವಂ ರಾಜ್ಞಾಮರ್ಥಂ ಪ್ರಸಾಧಯೇತ್ ॥14॥
ಎಲೈ ಯುಧಿಷ್ಠಿರನೇ! ಪುತ್ರನೇ! ಯಾವಾಗಲೂ ರಾಜಯೋಗ್ಯವಾದ ರಾಜ್ಯ- ಪಾಲನಾದಿ ಪುರುಷಪ್ರಯತ್ನದಲ್ಲಿ ಯಾವಾಗಲೂ ಪ್ರಯತ್ನಿಸು. ಇಲ್ಲದಿದ್ದರೆ ದೈವವು ರಾಜರಿಗೆ ಅರ್ಥವನ್ನು ಸಾಧಿಸಿಕೊಡಲಾರದು.
ಸಾಧಾರಣಂ ದ್ವಯಂ ಹ್ಯೇತತ್ ದೈವಮುತ್ಥಾನಮೇವ ಚ |
ಪೌರುಷಂ ಹಿ ಪರಂ ಮನ್ಯೇ ದೈವಂ ನಿಶ್ಚಿತ್ಯಮುಚ್ಯತೇ ॥15॥
ಎಲ್ಲ ಕರ್ಮಗಳಿಗೂ ದೈವ ಮತ್ತು ಪುರುಷಪ್ರಯತ್ನಗಳು ಸಾಧಾರಣವಾದ ಕಾರಣವಾಗಿವೆ. ಅವುಗಳಲ್ಲಿ ಪುರುಷಪ್ರಯತ್ನವು ಶ್ರೇಷ್ಠವಾದುದೆಂದು ತಿಳಿಯುತ್ತೇನೆ. ಪುರುಷಪ್ರಯತ್ನವನ್ನು ಮಾಡಿ ದೈವವನ್ನು ಹುಡುಕಬೇಕು. (ನಿರೀಕ್ಷಿಸಬೇಕು).
ವಿಪನ್ನೇ ಚ ಸಮಾರಂಭೇ ಸಂತಾಪಂ ಮಾ ಸ್ಮ ವೈ ಕೃಥಾಃ |
ಘಟೇತ ಚ ಸದಾಽಽತ್ಮಾನಂ ರಾಜ್ಞಾಮೇಷ ನಯಃ ಪರಃ ॥16॥
ಒಂದು ಪ್ರಯತ್ನವು ವಿಫಲವಾದರೆ ಸಂತಾಪ ಪಡಬೇಡ. ಅದನ್ನು ಮಾಡಲು ಪುನಃ ಪ್ರಯತ್ನಿಸು. ಇದು ರಾಜರ ಶ್ರೇಷ್ಠವಾದ ನೀತಿ.
ನ ಹಿ ಸತ್ಯಾದೃತೇ ಕಿಂಚಿದ್ ರಾಜ್ಞಾಂ ವೈ ಸಿದ್ಧಿಕಾರಣಮ್ |
ಸತ್ಯೇ ಹಿ ರಾಜಾ ನಿರತಃ ಪ್ರೇತ್ಯ ಚೇಹ ಹಿ ನಂದತಿ ॥17॥
ಸತ್ಯವನ್ನು ಬಿಟ್ಟು ರಾಜರಿಗೆ ಸಿದ್ಧಿಯನ್ನುಂಟುಮಾಡುವ ಬೇರೆ ಯಾವ ಕಾರಣವೂ ಇಲ್ಲ. ಸತ್ಯದಲ್ಲಿ ನಿರತನಾದ ರಾಜನು ಈ ಲೋಕದಲ್ಲಿಯೂ ಮತ್ತು ಮರಣಾನಂತರ ಪರಲೋಕದಲ್ಲಿಯೂ ಸುಖದಿಂದಿರುತ್ತಾನೆ.
ಋಷೀಣಾಮಪಿ ರಾಜೇಂದ್ರ ಸತ್ಯಮೇವ ಪರಂ ಧನಮ್ |
ತಥಾ ರಾಜ್ಞಃ ಪರಂ ಸತ್ಯಾನ್ನಾನ್ಯದ್ ವಿಶ್ವಾಸಕಾರಣಮ್ ॥18॥
ಎಲೈ ರಾಜೇಂದ್ರನೇ! ಋಷಿಗಳಿಗೂ ಸಹ ಸತ್ಯವೇ ಶ್ರೇಷ್ಠವಾದ ಧನ. ಹಾಗೆಯೇ ರಾಜನಲ್ಲಿ ವಿಶ್ವಾಸ ಮಾಡುವುದಕ್ಕೆ ಸತ್ಯಕ್ಕಿಂತ ಶ್ರೇಷ್ಠವಾದುದು ಬೇರೆ ಯಾವುದೂ ಇಲ್ಲ.
ಗುಣವಾನ್ ಶೀಲವಾನ್ ದಾಂತೋ ಮೃದುರ್ಧರ್ಮ್ಯೋ ಜಿತೇಂದ್ರಿಯಃ |
ಸುದರ್ಶಃ ಸ್ಥೂಲಲಕ್ಷ್ಯಶ್ಚ ನ ಭ್ರಶ್ಯೇತ ಸದಾ ಶ್ರಿಯಃ ॥19॥
ಗುಣವಂತನೂ ಶೀಲವಂತನೂ ಇಂದ್ರಿಯನಿಗ್ರಹವುಳ್ಳವನೂ ಮೃದುವೂ ಧರ್ಮಶೀಲನೂ ಜಿತೇಂದ್ರಿಯನೂ ಸುಲಭವಾಗಿ ನೋಡಲು ಸಾಧ್ಯವಾಗುವವನೂ ಪುಣ್ಯಕೀರ್ತಿಯುಳ್ಳವನೂ ಆದ ರಾಜನು ಸಂಪತ್ತನ್ನು ಕಳೆದುಕೊಳ್ಳುವುದಿಲ್ಲ. (ಲಕ್ಷ್ಮಾಲಂಕಾರ)
ಆರ್ಜವಂ ಸರ್ವಕಾರ್ಯೇಷು ಶ್ರಯೇಥಾಃ ಕುರುನಂದನ |
ಪುನರ್ನಯವಿಚಾರೇಣ ತ್ರಯೀಸಂವರಣೇನ ಚ ॥20॥
ಎಲೈ ಕುರುನಂದನನೇ! ಎಲ್ಲ ಕಾರ್ಯಗಳಲ್ಲಿಯೂ ರಾಜನೀತಿಯನ್ನು ವಿಚಾರ ಮಾಡಿ ವಿವಿಧಮಾರ್ಗವನ್ನು ವಿಚಾರ ಮಾಡಿ ಆರ್ಜವವನ್ನು (ನೇರತನವನ್ನು) ಹೊಂದುವವನಾಗು. ಶಾಂತರಾಗಿರುವ ದ್ವಿಜಶ್ರೇಷ್ಠರು ಭೂಮಿಯಲ್ಲಿ ವೇದವನ್ನು ಧರಿಸಿರುತ್ತಾರೆ.
ಮೃದುರ್ಹಿ ರಾಜಾ ಸತತಂ ಲಂಘ್ಯೋ ಭವತಿ ಸರ್ವಶಃ |
ತೀಕ್ಷ್ಣಾಚ್ಚೋದ್ವಿಜತೇ ಲೋಕಸ್ತಸ್ಮಾದುಭಯಮಾಚರ ॥21॥
ಮೃದುವಾದ ರಾಜನು ಯಾವಾಗಲೂ ಎಲ್ಲರಿಂದಲೂ ಉಲ್ಲಂಘಿಸಲ್ಪಡುತ್ತಾನೆ. ರಾಜನು ಉಗ್ರನಾಗಿದ್ದರೆ ಲೋಕವು ಹೆದರುತ್ತದೆ. ಆದ್ದರಿಂದ ಬಹಳ ಮೃದು- ವಾಗದೆ ಬಹಳ ಉಗ್ರನಾಗದೆ ಮೃದುವೂ ಉಗ್ರನೂ ಆಗಿರಬೇಕು.
ಅದಂಡ್ಯಾಶ್ಚೈವ ತೇ ನಿತ್ಯಂ ವಿಪ್ರಾಃ ಸ್ಯುರ್ದದತಾಂವರ |
ಭೂತಮೇತತ್ ಪರಂ ಲೋಕೇ ಬ್ರಾಹ್ಮಣಾ ನಾಮ ಭಾರತ ॥22॥
ಎಲೈ ದಾನಮಾಡುವವರಲ್ಲಿ ಶ್ರೇಷ್ಠನಾದವನೇ! ಬ್ರಾಹ್ಮಣರು ದಂಡನೆಗೆ ಅರ್ಹರಾದವರಲ್ಲ. ಎಲೈ ಭಾರತನೇ! ಬ್ರಾಹ್ಮಣರು ಲೋಕದಲ್ಲಿ ದೊಡ್ಡ ವಸ್ತು- ಗಳೆನಿಸುವವರು.
ಮನುನಾ ಚಾಪಿ ರಾಜೇಂದ್ರ ಗೀತೌ ಶ್ಲೋಕೌ ಮಹಾತ್ಮನಾ |
ಧರ್ಮೇಷು ಸ್ವೇಷು ಕೌರವ್ಯ ಹೃದಿ ತೌ ಕರ್ತುಮರ್ಹಸಿ ॥23॥
ಎಲೈ ರಾಜೇಂದ್ರನೇ! ಮಹಾತ್ಮನಾದ ಮನುವೂ ಸಹ ಈ ವಿಷಯದಲ್ಲಿ ಎರಡು ಶ್ಲೋಕಗಳನ್ನು ಹಾಡಿದ್ದಾನೆ. ಎಲೈ ಕೌರವ್ಯನೇ! ನಿನ್ನ ಧರ್ಮಾಚರಣೆಗಳಲ್ಲಿ ಆ ಎರಡು ಶ್ಲೋಕಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರು.
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥24॥
ಜಲದಿಂದ ಅಗ್ನಿಯು, ಬ್ರಾಹ್ಮಣರಿಂದ ಕ್ಷತ್ರಿಯರು, ಶಿಲೆಯಿಂದ ಲೋಹವು ಉತ್ಪನ್ನವಾಗುತ್ತವೆ. ಉಳಿದೆಲ್ಲ ಕಡೆ ಇರುವ ಅವುಗಳ ತೇಜಸ್ಸುಗಳು ತಮ್ಮ ಮೂಲ ಕಾರಣದಲ್ಲಿ ನಾಶವನ್ನು ಹೊಂದುತ್ತವೆ.
ಅಯೋ ಹಂತಿ ಯದಾಶ್ಮಾನಮಗ್ನಿಶ್ಚಾಪೋಽಭಿಪದ್ಯತೇ |
ಬ್ರಹ್ಮ ಚ ಕ್ಷತ್ರಿಯೋ ದ್ವೇಷ್ಟಿ ತದಾ ಸೀದಂತಿ ತೇ ತ್ರಯಃ ॥25॥
ಕಬ್ಬಿಣವು ಯಾವಾಗ ಶಿಲೆಯನ್ನು ಹೊಡೆಯುತ್ತದೆಯೋ, ಅಗ್ನಿಯು ಯಾವಾಗ ನೀರಿನಲ್ಲಿ ಸೇರುತ್ತದೆಯೋ, ಕ್ಷತ್ರಿಯನು ಬ್ರಾಹ್ಮಣನ ದ್ವೇಷ ಮಾಡುತ್ತಾನೆಯೋ ಆಗ ಕಬ್ಬಿಣವು ಅಗ್ನಿಯೂ ಮತ್ತು ಕ್ಷತ್ರಿಯನೂ ನಾಶವನ್ನು ಹೊಂದುತ್ತಾರೆ.
ಏತಜ್ಜ್ಞಾತ್ವಾ ಮಹಾರಾಜ ನಮಸ್ಯಾ ಏವ ತೇ ದ್ವಿಜಾಃ |
ಭೌಮಂ ಬ್ರಹ್ಮ ದ್ವಿಜಶ್ರೇಷ್ಠಾ ಧಾರಯಂತಿ ಶಮಾನ್ವಿತಾಃ ॥26॥
ಎಲೈ ಮಹಾರಾಜನೇ! ಇದನ್ನು ತಿಳಿದು ನೀನು ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡಲೇಬೇಕು. ಶಾಂತರಾದ ಬ್ರಾಹ್ಮಣಶ್ರೇಷ್ಠರು ಭೂಮಿಯಲ್ಲಿರುವ ವೇದವನ್ನು ಧರಿಸಿರುತ್ತಾರೆ.

ಏವಂ ಚೈವ ನರವ್ಯಾಘ್ರ ಲೋಕತಂತ್ರವಿಘಾತಕಾಃ |
ನಿಗ್ರಾಹ್ಯಾ ಏವ ಸತತಂ ಬಾಹುಭ್ಯಾಂ ಯೇ ಸ್ಯುರೀದೃಶಾಃ ॥27॥
ಆದರೂ ಸಹ ಎಲ್ಲೈ ನರವ್ಯಾಘ್ರನೇ! ಬ್ರಾಹ್ಮಣರು ಲೋಕಯಾತ್ರಾವಿನಾಶಕ- ರಾದರೆ ಅವರನ್ನು ಬಾಹುಬಲದಿಂದ ಸತತವಾಗಿ ನಿಗ್ರಹಿಸಲೇ ಬೇಕು.
ಶ್ಲೋಕೌ ಚೌಶನಸಾ ಗೀತೌ ಪುರಾ ತಾತ ಮಹರ್ಷಿಣಾ |
ತೌ ನಿಬೋಧ ಮಹಾಪ್ರಾಜ್ಞ ತ್ವಮೇಕಾಗ್ರಮನಾ ನೃಪ ॥28॥
ಎಲ್ಲೈ ಪ್ರೀತಿಪಾತ್ರನೇ! ಮಹರ್ಷಿಗಳಾದ ಶುಕ್ರಾಚಾರ್ಯರು ಈ ವಿಷಯದಲ್ಲಿ ಎರಡು ಶ್ಲೋಕಗಳನ್ನು ಹೇಳಿದ್ದಾರೆ. ಎಲ್ಲೈ ಮಹಾಪ್ರಾಜ್ಞನೇ! ರಾಜನೇ! ಏಕಾಗ್ರವಾದ ಮನಸ್ಸಿನಿಂದ ಅವುಗಳನ್ನು ಕೇಳು.
ಉದ್ಯಮ್ಯ ಶಸ್ತ್ರಮಾಯಾಂತಮಪಿ ವೇದಾಂತಗಂ ರಣೇ |
ನಿಗೃಹ್ಣೀಯಾತ್ ಸ್ವಧರ್ಮೇಣ ಧರ್ಮಾಪೇಕ್ಷೀ ನರೇಶ್ವರಃ ॥29॥
ವೇದಾಂತಪಾರಂಗತನಾದ ಬ್ರಾಹ್ಮಣನು ಶಸ್ತ್ರವನ್ನು ಹಿಡಿದು ಯುದ್ಧದಲ್ಲಿ ಎದುರಾಗಿ ಬಂದರೆ ಧರ್ಮಾಪೇಕ್ಷಿಯಾದ ರಾಜನು ತನ್ನ ಧರ್ಮಕ್ಕೆ ಅನುಸಾರವಾಗಿ ಅವನನ್ನು ನಿಗ್ರಹಿಸಬೇಕು. ಯುದ್ಧವನ್ನು ಬಿಟ್ಟು ಬೇರೆ ಸಂದರ್ಭದಲ್ಲಿ ಶಸ್ತ್ರವನ್ನು ಹಿಡಿದು ಬಂದ ಬ್ರಾಹ್ಮಣನನ್ನು ಬಂಧಿಸಬೇಕು. (ಯುದ್ಧದಲ್ಲಿ ಮಾತ್ರ ಅಂತಹ ಬ್ರಾಹ್ಮಣನು ಕ್ಷತ್ರಿಯ ವೃತ್ತಿಯನ್ನು ಅನುಸರಿಸುವುದರಿಂದ ಅವನನ್ನು ಕೊಲ್ಲಬಹುದು ಎಂದು ಅಭಿಪ್ರಾಯ.)
ವಿನಶ್ಯಮಾನಂ ಧರ್ಮಂ ಹಿ ಯೋ ರಕ್ಷತಿ ಸ ಧರ್ಮವಿತ್ |
ನ ತೇನ ಧರ್ಮಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮೃಚ್ಛತಿ ॥30॥
ಆ ರೀತಿಯಲ್ಲಿ ಬ್ರಾಹ್ಮಣವಧೆಯನ್ನು ಮಾಡುವುದರಿಂದ ರಾಜನು ಧರ್ಮ- ನಾಶವನ್ನು ಮಾಡಿದವನಾಗುವುದಿಲ್ಲ. ರಾಜನ ಕೋಪವು ಬ್ರಾಹ್ಮಣನ ಕೋಪವನ್ನು ನುಂಗುತ್ತದೆ. ವಿನಾಶಗೊಳ್ಳುತ್ತಿರುವ ಧರ್ಮವನ್ನು ಯಾವನು ರಕ್ಷಿಸುತ್ತಾನೋ ಅವನೇ ಧರ್ಮವನ್ನು ತಿಳಿದವನು.
ಏವಂ ಚೈವ ನರಶ್ರೇಷ್ಠ ರಕ್ಷ್ಯಾ ಏವ ದ್ವಿಜಾತಯಃ |
ಸ್ವಪರಾದ್ಧಾನಪಿ ಹಿ ತಾನ್ ವಿಷಯಾಂತೇ ಸಮುತ್ಸೃಜೇತ್ ॥31॥
ಎಲ್ಲೈ ನರಶ್ರೇಷ್ಠನೇ! ಹಾಗಾದರೂ ಬ್ರಾಹ್ಮಣರು ರಕ್ಷಿಸಲ್ಪಡಬೇಕಾದವರೇ. ಬಹಳ ಅಪರಾಧವನ್ನು ಮಾಡಿದ ಬ್ರಾಹ್ಮಣರನ್ನು ರಾಜ್ಯದಿಂದ ಹೊರಗೆ ಕಳುಹಿಸ- ಬೇಕು. ಯುದ್ಧಪ್ರಸಂಗವಿಲ್ಲದಿದ್ದರೆ ಅವರನ್ನು ಕೊಲ್ಲಬಾರದು ಎಂದು ಅಭಿಪ್ರಾಯ.
ಅಭಿಶಸ್ತಮಪಿ ಹ್ಯೇಷಾಂ ಕೃಪಾಯೀತ ವಿಶಾಂಪತೇ |
ಬ್ರಹ್ಮಘ್ನೇ ಗುರುತಲ್ಪೇ ಚ ಭ್ರೂಣಹತ್ಯೇ ತಥೈವ ಚ ॥32॥
ಎಲ್ಲೈ ರಾಜನೇ! ಅವನು ಬ್ರಹ್ಮಹತ್ಯವನ್ನಾಗಲೀ, ಗುರುತಲ್ಪಗಮನವನ್ನಾಗಲೀ, ಭ್ರೂಣಹತ್ಯೆಯನ್ನಾಗಲೀ ಮಾಡಿ ಎಲ್ಲ ರೀತಿಯಿಂದಲೂ ಶಾಸನಕ್ಕೆ ಯೋಗ್ಯನಾಗಿ- ದ್ದರೂ ಅವನ ಮೇಲೆ ಕೃಪೆಯನ್ನು ತೋರಿಸಬೇಕು.
ರಾಜದ್ವಿಷ್ಟೇ ಚ ವಿಪ್ರಸ್ಯ ವಿಷಯಾಂತೇ ವಿವಾಸನಮ್ |
ವಿಧೀಯತೇ ನ ಶಾರೀರಂ ಭಯಮೇಷಾಂ ಕಥಂಚನ ॥33॥
ರಾಜನಿಗೆ ಅಪಚಾರವನ್ನು ಮಾಡಿದರೆ ಬ್ರಾಹ್ಮಣನನ್ನು ದೇಶದಿಂದ ಗಡೀಪಾರು ಮಾಡಬೇಕೆಂದು ವಿಧಿಸಲ್ಪಡುತ್ತದೆ. ಅವರಿಗೆ ಎಂದೂ ದೇಹದಂಡನೆಯನ್ನು ಉಂಟು ಮಾಡಬಾರದು.
ದಯಿತಾಶ್ಚ ನರಾಸ್ತೇ ಸ್ಯುರ್ನಿತ್ಯಂ ಪುರುಷಸತ್ತಮ |
ನ ಕೋಶಃ ಪರಮೋ ಹ್ಯನ್ಯೋ ರಾಜ್ಞಾಂ ಪುರುಷಸಂಚಯಾತ್ ॥34॥
ಎಲ್ಲೈ ಪುರುಷಶ್ರೇಷ್ಠನೇ! ಬ್ರಾಹ್ಮಣರು ನಿತ್ಯವೂ ರಾಜನಿಗೆ ಪ್ರಿಯರಾದವ- ರಾಗಿರಬೇಕು. ರಾಜರಿಗೆ ತಮ್ಮಲ್ಲಿ ಪ್ರೀತಿಯುಳ್ಳ ಪುರುಷರನ್ನು ಸಂಗ್ರಹಿಸುವುದಕ್ಕಿಂತ ಶ್ರೇಷ್ಠವಾದ ಇನ್ನೊಂದು ಕೋಶವು ಇರುವುದಿಲ್ಲ.
ದುರ್ಗೇಷು ಚ ಮಹಾರಾಜ ಷಟ್ಸು ಯೇ ಶಾಸ್ತ್ರನಿಶ್ಚಿತಾಃ |
ಸರ್ವೇಷು ತೇಷು ಮನ್ಯಂತೇ ನರದುರ್ಗಂ ಸುದುಸ್ತರಮ್ ॥35॥
ಎಲ್ಲೈ ಮಹಾರಾಜನೇ! ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ ಎಂಬ ಆರು ದುರ್ಗಗಳಿಗಿಂತಲೂ ದಾಟಲು ಅಸಾಧ್ಯವಾದ ಸೇನಾರೂಪವಾದ ಏಳನೆಯ ನರದುರ್ಗವು ಅತ್ಯಂತ ಶ್ರೇಷ್ಠವಾದುದೆಂದು ತಿಳಿಯುತ್ತಾರೆ.
ತಸ್ಮಾನ್ನಿತ್ಯಂ ದಯಾ ಕಾರ್ಯಾ ಚಾತುರ್ವರ್ಣ್ಯೇ ವಿಪಶ್ಚಿತಾ |
ಧರ್ಮಾತ್ಮಾ ಸತ್ಯವಾಕ್ ಚೈವ ರಾಜಾ ರಂಜಯತಿ ಪ್ರಜಾಃ ॥36॥
ಆದ್ದರಿಂದ ವಿವೇಕಿಯಾದ ರಾಜನು ನಾಲ್ಕುವರ್ಣದವರ ಮೇಲೆಯೂ ಯಾವಾಗಲೂ ದಯೆಯನ್ನು ತೋರಿಸಬೇಕು. ಧರ್ಮಾತ್ಮನೂ ಸತ್ಯವಚನನೂ ಆದ ರಾಜನು ಪ್ರಜೆಗಳನ್ನು ರಂಜಿಸುತ್ತಾನೆ.
ನ ಚ ಕ್ಷಾಂತೇನ ತೇ ಭಾವ್ಯಂ ನಿತ್ಯಂ ಪುರುಷಸತ್ತಮ |
ಸುಧರ್ಷೋ ಹಿ ಮೃದೂ ರಾಜಾ ಕ್ಷಮಾವಾನಿವ ಕುಂಜರಃ ॥37॥
ಎಲ್ಲೈ ಪುರುಷಶ್ರೇಷ್ಠನೇ! ನೀನು ಯಾವಾಗಲೂ ಬಹಳ ಮೃದುವಾಗಿರಬಾರದು. ಮೃದುವಾಗಿರುವ ರಾಜನು ಶಾಂತವಾದ ಆನೆಯಂತೆ ಸುಲಭವಾಗಿ ಅವಮಾನ- ಗೊಳಿಸಲ್ಪಡುತ್ತಾನೆ.
ಬಾರ್ಹಸ್ಪತ್ಯೇ ಚ ಶಾಸ್ತ್ರೇ ವೈ ಶ್ಲೋಕೋ ವೈ ಗೀಯತೇ ಪುರಾ |
ಅಸ್ಮಿನ್ನರ್ಥೇ ಮಹಾರಾಜ ತನ್ಮೇ ನಿಗದತಃ ಶೃಣು ॥38॥
ಎಲ್ಲೈ ಮಹಾರಾಜನೇ! ಬೃಹಸ್ಪತ್ಯಾಚಾರ್ಯರು ರಚಿಸಿದ ಶಾಸ್ತ್ರದಲ್ಲಿ ಹಿಂದೆ ಈ ವಿಷಯದಲ್ಲಿ ಒಂದು ಶ್ಲೋಕವು ಹಾಡಲ್ಪಡುತ್ತದೆ.

ನಾನು ಹೇಳುವ ಆ ಶ್ಲೋಕವನ್ನು ನೀನು ಕೇಳುವವನಾಗು.
ಕ್ಷಮಮಾಣಂ ನೃಪಂ ನಿತ್ಯಂ ನೀಚಃ ಪರಿಭವೇಜ್ಜನಃ |
ಹಸ್ತಿಯಂತಾ ಗಜಸ್ಯೇವ ಶಿರ ಏವಾರುರುಕ್ಷತಿ ॥39॥
ಯಾವಾಗಲೂ ಕ್ಷಮಾಶೀಲನಾದ ರಾಜನನ್ನು ನೀಚರಾದ ಜನರು ಅವಮಾನ- ಗೊಳಿಸುತ್ತಾರೆ. ಮಾವುತನು ಆನೆಯ ಶಿರಸ್ಸನ್ನು ಏರಿದಂತೆ ಅವರು ರಾಜನ ಶಿರಸ್ಸನ್ನು ಏರಲು ಬಯಸುತ್ತಾರೆ.
ತಸ್ಮಾನ್ನೈವ ಮೃದುರ್ನಿತ್ಯಂ ತೀಕ್ಷ್ಣೋ ವಾಪಿ ಭವೇನ್ನೃಪಃ |
ವಸಂತೇಽರ್ಕ ಇವ ಶ್ರೀಮಾನ್ನ ಶೀತೋ ನ ಚ ಘರ್ಮದಃ ॥40॥
ಆದ್ದರಿಂದ ರಾಜನಾದವನು ಬಹಳ ಮೃದುವೂ ಆಗಿರಬಾರದು; ಬಹಳ ತೀಕ್ಷ್ಣನೂ ಆಗಿರಬಾರದು. ವಸಂತಕಾಲದ ಸೂರ್ಯನಂತೆ ಸಂಪದ್ಯುಕ್ತನಾಗಿ ಬಹಳ ಶೀತನಾಗದೇ ಬಹಳ ತಾಪವನ್ನೂ ಕೊಡದೇ ಇರುವವನಾಗಬೇಕು.
ಪ್ರತ್ಯಕ್ಷೇಣಾನುಮಾನೇನ ತಥೌಪಮ್ಯೋಪದೇಶತಃ |
ಪರೀಕ್ಷ್ಯಾಸ್ತೇ ಮಹಾರಾಜ ಸ್ವೇ ಪರೇ ಚೈವ ಸರ್ವದಾ ॥41॥
ಎಲ್ಲೈ ಮಹಾರಾಜನೇ! ನಿನ್ನವರನ್ನೂ ಮತ್ತು ಶತ್ರುವರ್ಗದವರನ್ನೂ ಪ್ರತ್ಯಕ್ಷ- ದಿಂದಲೂ ಅನುಮಾನದಿಂದಲೂ ಮತ್ತು ಆಪ್ತರ ಉಪದೇಶಗಳಿಂದಲೂ ಯಾವಾ- ಗಲೂ ಪರೀಕ್ಷಿಸುತ್ತಿರಬೇಕು.
ವ್ಯಸನಾನಿ ಚ ಸರ್ವಾಣಿ ತ್ಯಜೇಥಾ ಭೂರಿದಕ್ಷಿಣ |
ನ ಚೈತಾನಿ ಪ್ರಯುಂಜೀತ ಸಂಗಂ ತು ಪರಿವರ್ಜಯೇತ್ ॥42॥
ಎಲ್ಲೈ ಬಹಳ ದಕ್ಷಿಣೆಯನ್ನು ಕೊಡುವವನೇ! ಎಲ್ಲ ಚಟಗಳನ್ನೂ ಪರಿತ್ಯಜಿಸ- ಬೇಕು. ಚಟಗಳಲ್ಲಿ ಆಸಕ್ತನಾಗಬಾರದು. ಎಲ್ಲರ ಸಹವಾಸವನ್ನು ಪರಿತ್ಯಜಿಸಬೇಕು.
ನಿತ್ಯಂ ಹಿ ವ್ಯಸನೀ ಲೋಕೇ ಪರಿಭೂತೋ ಭವತ್ಯುತ |
ಉದ್ವೇಜಯತಿ ಲೋಕಂ ಚಾಪ್ಯತಿದ್ವೇಷೀ ಮಹೀಪತಿಃ ॥43॥
ಚಟಗಳಿಗೆ ಬಲಿಯಾದ ರಾಜನು ಲೋಕದಲ್ಲಿ ಪರಾಭವವನ್ನು ಹೊಂದುತ್ತಾನೆ. ಲೋಕದ ಜನರನ್ನು ಬಹಳವಾಗಿ ದ್ವೇಷಿಸಿ, ಅವರಿಗೆ ಭಯವನ್ನುಂಟು ಮಾಡುತ್ತಾನೆ.
ಭವಿತವ್ಯಂ ಸದಾ ರಾಜ್ಞಾ ಗರ್ಭಿಣೀಸಹಧರ್ಮಿಣಾ |
ಕಾರಣಂ ಚ ಮಹಾರಾಜ ಶೃಣು ಯೇನೇದಮಿಷ್ಯತೇ ॥44॥
ರಾಜನು ಯಾವಾಗಲೂ ಗರ್ಭಿಣಿಯ ಧರ್ಮವನ್ನು ಆಚರಿಸಬೇಕು. ಎಲ್ಲೈ ಮಹಾರಾಜನೇ! ನಾನು ಹೀಗೆ ಹೇಳುವುದಕ್ಕೆ ಕಾರಣವನ್ನು ಕೇಳು.
ಯಥಾ ಹಿ ಗರ್ಭಿಣೀ ಹಿತ್ವಾ ಸ್ವಂ ಪ್ರಿಯಂ ಮನಸೋಽನುಗಮ್ |
ಗರ್ಭಸ್ಯ ಹಿತಮಾಧತ್ತೇ ತಥಾ ರಾಜ್ಞಾಪ್ಯಸಂಶಯಮ್ ॥45॥
ಹೇಗೆ ಗರ್ಭಿಣಿಯು ತನ್ನ ಮನಸ್ಸಿಗೆ ಪ್ರಿಯವಾದುದನ್ನು ಬಿಟ್ಟು ಗರ್ಭಕ್ಕೆ ಹಿತ- ವಾದುದನ್ನೇ ಮಾಡುತ್ತಾಳೆಯೋ ಅದರಂತೆ ರಾಜನೂ ನಿಸ್ಸಂಶಯವಾಗಿ ತನ್ನ ಪ್ರಿಯವನ್ನು ಬಿಟ್ಟು ಪ್ರಜೆಗಳಿಗೆ ಹಿತವನ್ನುಂಟು ಮಾಡಬೇಕು.
ವರ್ತಿತವ್ಯಂ ಕುರುಶ್ರೇಷ್ಠ ನಿತ್ಯಂ ಧರ್ಮಾನುವರ್ತಿನಾ |
ಸ್ವಂ ಪ್ರಿಯಂ ಸಮಭಿತ್ಯಜ್ಯ ಯದ್ಯಲ್ಲೋಕಹಿತಂ ಭವೇತ್ ॥46॥
ಎಲ್ಲೈ ಕುರುಶ್ರೇಷ್ಠನೇ! ರಾಜನು ಯಾವಾಗಲೂ ಧರ್ಮವನ್ನು ಅನುಸರಿಸುವ- ವನಾಗಬೇಕು. ತನ್ನ ಪ್ರಿಯವನ್ನು ಪರಿತ್ಯಜಿಸಿ ಲೋಕದ ಹಿತವನ್ನು ಸಾಧಿಸುವವ- ನಾಗಬೇಕು.
ನ ಸಂತ್ಯಾಜ್ಯಂ ಚ ತೇ ಧೈರ್ಯಂ ಕದಾಚಿದಪಿ ಪಾಂಡವ |
ಧೀರಸ್ಯ ಸ್ಪಷ್ಟದಂಡಸ್ಯ ನ ಹ್ಯಾಜ್ಞಾ ಪ್ರತಿಹನ್ಯತೇ ॥47॥
ಎಲ್ಲೈ ಪಾಂಡವನೇ! ಧೈರ್ಯವನ್ನು ಎಂದೂ ನೀನು ಕಳೆದುಕೊಳ್ಳಬಾರದು.
ಧೀರನಾದ ಮತ್ತು ಸ್ಪಷ್ಟವಾಗಿ ಶಿಕ್ಷೆಯನ್ನು ವಿಧಿಸುವ ರಾಜನ ಆಜ್ಞೆಯು ತಿರಸ್ಕೃತ- ವಾಗುವುದಿಲ್ಲ.
ಪರಿಹಾಸಶ್ಚ ಭೃತ್ಯೈಸ್ತೇ ನ ನಿತ್ಯಂ ದದತಾಂವರ |
ಕರ್ತವ್ಯೋ ರಾಜಶಾರ್ದೂಲ ದೋಷಮತ್ರ ಹಿ ಮೇ ಶೃಣು ॥48॥
ಎಲ್ಲೈ ದಾನಮಾಡುವವರಲ್ಲಿ ಶ್ರೇಷ್ಠನೇ! ಭೃತ್ಯರ ಜೊತೆಯಲ್ಲಿ ಯಾವಾಗಲೂ ಹಾಸ್ಯವನ್ನು ಮಾಡಿಕೊಂಡಿರಬಾರದು. ಎಲ್ಲೈ ರಾಜಶಾರ್ದೂಲನೇ! ಹಾಗೆ ಮಾಡಿ- ದರೆ ಉಂಟಾಗುವ ದೋಷವನ್ನು ನನ್ನಿಂದ ಕೇಳು.
ಅವಮನ್ಯಂತಿ ಭರ್ತಾರಂ ಸಂಹರ್ಷಾದುಪಜೀವಿನಃ |
ಸ್ವೇ ಸ್ಥಾನೇ ನ ಚ ತಿಷ್ಠಂತಿ ಲಂಘಯಂತಿ ಹಿ ತದ್ವಚಃ ॥49॥
ರಾಜನನ್ನು ಉಪಜೀವಿಸಿ ಬದುಕುವ ಭೃತ್ಯರು ಹಾಸ್ಯದಿಂದುಂಟಾದ ಸಂತೋ- ಷದಿಂದ ಸ್ವಾಮಿಯಾದ ರಾಜನನ್ನು ಅವಮಾನ ಮಾಡುತ್ತಾರೆ. ತಮ್ಮ ತಮ್ಮ ಸ್ಥಾನ- ಗಳಲ್ಲಿ ಅವರು ಇರುವುದಿಲ್ಲ. ಮತ್ತು ರಾಜನ ಆಜ್ಞೆಯನ್ನು ಮೀರುತ್ತಾರೆ.
ಪ್ರೇಷ್ಯಮಾಣಾ ವಿಕಲ್ಪಂತೇ ಗುಹ್ಯಂ ಚಾಪ್ಯನುಯುಂಜತೇ |
ಅಯಾಚ್ಯಂ ಚೈವ ಯಾಚಂತೇಽಭೋಜ್ಯಾನ್ಯಾಹಾರಯಂತಿ ಚ ॥50॥
ಒಂದು ಕಾರ್ಯಕ್ಕಾಗಿ ಕಳುಹಿಸಿದರೆ ಅನೇಕ ಪ್ರಶ್ನೆಗಳನ್ನು ಮಾಡುತ್ತಾರೆ. ರಹಸ್ಯ -ವಾದುದನ್ನು ಕೇಳುತ್ತಾರೆ. ಬೇಡಬಾರದ ವಸ್ತುಗಳನ್ನು ಬೇಡುತ್ತಾರೆ. ರಾಜನು ತಿನ್ನ ಬಾರದ ವಸ್ತುಗಳನ್ನು ತಂದು ಕೊಡುತ್ತಾರೆ.
ಕ್ರುದ್ಧ್ಯಂತಿ ಪರಿದೀಪ್ಯಂತಿ ಭೂತಿಮಧ್ಯಾಸತೇಽಸ್ಯ ಚ |

ಉತ್ಕೋಚೈರ್ವಂಚನಾಭಿಶ್ಚ ಕಾರ್ಯಾಣ್ಯನುವಿಹಂತಿ ಚ ॥51॥
ಕೋಪಗೊಳ್ಳುತ್ತಾರೆ; ಕೋಪದಿಂದ ಜ್ವಲಿಸುತ್ತಾರೆ; ರಾಜನ ವೈಭವವನ್ನು ಉಪ- ಯೋಗಿಸುತ್ತಾರೆ; ನಿಂದಾ ಮತ್ತು ವಂಚನೆಗಳಿಂದ ರಾಜನ ಕಾರ್ಯಗಳನ್ನು ನಾಶ ಮಾಡುತ್ತಾರೆ.
ಜರ್ಜರಂ ಚಾಸ್ಯ ವಿಷಯಂ ಕುರ್ವಂತಿ ಪ್ರತಿರೂಪಕೈಃ |
ಸ್ತ್ರೀರಕ್ಷಿಭಿಶ್ಚ ಸಜ್ಜಂತೇ ತುಲ್ಯವೇಷಾ ಭವಂತಿ ಚ ॥52॥
ರಾಜನ ಪ್ರತಿರೂಪಗಳನ್ನು ನಿರ್ಮಿಸಿ ರಾಜ್ಯವನ್ನು ಶಿಥಿಲಗೊಳಿಸುತ್ತಾರೆ. ರಾಜನ ಸ್ತ್ರೀರಕ್ಷಕರಾದ ನಪುಂಸಕರ ಜೊತೆಯಲ್ಲಿ ಕಂಚುಕಾದಿಗಳನ್ನು ಧರಿಸಿ ಸಮಾನವೇಷ- ವುಳ್ಳವರಾಗಿ ಬೆರೆಯುತ್ತಾರೆ.
ವಾತಂ ನಿಷ್ಠೀವನಂ ಚೈವ ಕುರ್ವತೇ ಚಾಸ್ಯ ಸನ್ನಿಧೌ |
ನಿರ್ಲಜ್ಜಾ ನರಶಾರ್ದೂಲ ವ್ಯಾಹರಂತಿ ಚ ದುರ್ವಚಃ ॥53॥
ರಾಜನೆದುರಿನಲ್ಲಿ ಉಗುಳುವುದು, ವಾಯುವನ್ನು ಬಿಡುವುದು ಮೊದಲಾದ- ವುಗಳನ್ನು ಮಾಡುತ್ತಾರೆ. ಎಲೈ ನರಶಾರ್ದೂಲನೇ! ಲಜ್ಜಾಹೀನರಾಗಿ ದುರ್ವಚನ- ಗಳನ್ನು ಆಡುತ್ತಾರೆ.
ಹಯಂ ವಾ ದಂತಿನಂ ವಾಪಿ ರಥಂ ನೃಪತಿಸಮ್ಮತಮ್ |
ಅಧಿರೋಹಂತ್ಯನಾದೃತ್ಯ ಹರ್ಷಲೇ ಪಾರ್ಥಿವೇ ಮೃದೌ ॥54॥
ರಾಜನು ಹರ್ಷಶೀಲನಾಗಿ ಮೃದುವಾಗಿದ್ದರೆ ಭೃತ್ಯರು ರಾಜನನ್ನು ಲೆಕ್ಕಿಸದೆ ಅವನಿಗೆ ಯೋಗ್ಯವಾದ ಯುದ್ಧದ ಅಶ್ವವನ್ನು ಅಥವಾ ಗಜವನ್ನು ಅಥವಾ ರಥವನ್ನು ಏರುತ್ತಾರೆ.
ಇದಂ ತೇ ದುಷ್ಕರಂ ರಾಜನ್ನಿದಂ ತೇ ದುರ್ವಿಚೇಷ್ಟಿತಮ್ |
ಇತ್ಯೇವಂ ಸುಹೃದೋ ನಾಮ ಬ್ರುವಂತಿ ಪರಿಷದ್ಗತಾಃ ॥55॥
``ರಾಜನೇ! ಇದು ನಿನ್ನಿಂದ ಅಸಾಧ್ಯವಾದ ಕಾರ್ಯ, ರಾಜನೇ! ಇದು ನೀನು ಮಾಡಿದ ದುಷ್ಟಕಾರ್ಯ'' ಎಂದು ಸುಹೃಜ್ಜನರಂತೆ ಸಭೆಯಲ್ಲಿ ರಾಜನಿಗೆ ಹೇಳು- ತ್ತಾರೆ.
ಕ್ರುದ್ಧೇ ಚಾಸ್ಮಿನ್ ಹಸಂತ್ಯೇವ ನ ಚ ಹೃಷ್ಯಂತಿ ಪೂಜಿತಾಃ |
ಸಂಘರ್ಷಶೀಲಾಶ್ಚ ಸದಾ ಭವಂತ್ಯನ್ಯೋನ್ಯಕಾರಣಾತ್ ॥56॥
ರಾಜನು ಕ್ರುದ್ಧನಾದರೆ ನಗುತ್ತಾರೆ. ರಾಜನು ಅವರನ್ನು ಪೂಜಿಸಿದರೆ ಸಂತೋಷ ಪಡುವುದಿಲ್ಲ. ಅವರು ತಮ್ಮ ತಮ್ಮಲ್ಲಿಯೇ ಪರಸ್ಪರವಾಗಿ ಕಲಹಶೀಲರಾಗುತ್ತಾರೆ.
ವಿಸ್ರಂಸಯಂತಿ ಮಂತ್ರಂ ಚ ವಿವೃಣ್ವಂತಿ ಚ ದುಷ್ಕೃತಮ್ |
ಲೀಲಯಾ ಚೈವ ಕುರ್ವಂತಿ ಸಾವಜ್ಞಾಸ್ತಸ್ಯ ಶಾಸನಮ್ |
ರಾಜನ ಮಂತ್ರಾಲೋಚನೆಯನ್ನು ಶಿಥಿಲಗೊಳಿಸುತ್ತಾರೆ. ರಾಜನು ಯಾವುದಾ- ದರೂ ದುಷ್ಕಾರ್ಯವನ್ನು ಮಾಡಿದ್ದರೆ ಅದನ್ನು ಬಹಿರಂಗಪಡಿಸುತ್ತಾರೆ. ರಾಜನ ಶಾಸನವನ್ನು ವಿನೋದದಿಂದ ಅಥವಾ ತಿರಸ್ಕಾರದಿಂದ ಅನುಷ್ಠಾನ ಮಾಡುತ್ತಾರೆ.
ಅಲಂಕರಣಭೋಜ್ಯಂ ಚ ತಥಾ ಸ್ನಾನಾನುಲೇಪನಮ್ ॥57॥
ಹೇಲಮಾನಾ ನರವ್ಯಾಘ್ರ ಸ್ವಸ್ಥಾಸ್ತಸ್ಯೋಪಶೃಣ್ವತೇ |
ನಿಂದಂತಿ ಸ್ವಾನಧೀಕಾರಾನ್ ಸಂತ್ಯಜತಿ ಚ ಭಾರತ ॥58॥
ಎಲೈ ನರವ್ಯಾಘ್ರನೇ! ರಾಜನ ಅಲಂಕಾರಗಳನ್ನು ಅವನ ಭೋಜ್ಯವಸ್ತುಗಳನ್ನು ಅವನ ಸ್ನಾನಾನುಲೇಪನಗಳನ್ನು ರಾಜನನ್ನು ಅವಹೇಳನ ಮಾಡುತ್ತಾ ನಿಶ್ಚಿಂತೆಯಾಗಿ ಉಪಯೋಗಿಸುತ್ತಾರೆ. ಎಲೈ ಭಾರತನೇ! ತಮಗೆ ಕೊಟ್ಟ ಸ್ಥಾನವನ್ನು ತಮ್ಮ ಯೋಗ್ಯತೆಗೆ ಸಾಲದೆಂದು ನಿಂದಿಸುತ್ತಾರೆ. ಸಮಯದಲ್ಲಿ ರಾಜನನ್ನು ತೊರೆಯು- ತ್ತಾರೆ.
ನ ವೃತ್ತ್ಯಾ ಪರಿತುಷ್ಯಂತಿ ರಾಜದೇಯಂ ಹರಂತಿ ಚ |
ಕ್ರೀಡಿತುಂ ತೇನ ಚೇಚ್ಛಂತಿ ಸಸೂತ್ರೇಣೇವ ಪಕ್ಷಿಣಾ ॥59॥
ತಮಗೆ ಕೊಡುವ ವೇತನದಿಂದ ಸಂತೋಷ ಪಡುವುದಿಲ್ಲ. ರಾಜನಿಗೆ ಸಲ್ಲ- ಬೇಕಾದುದನ್ನು ಅಪಹರಿಸುತ್ತಾರೆ. ದಾರವನ್ನು ಕಟ್ಟಿದ ಪಕ್ಷಿಯಂತೆ ರಾಜನ ಜೊತೆ- ಯಲ್ಲಿ ಆಡಲು ಬಯಸುತ್ತಾರೆ. `ರಾಜನು ನಾವು ಹೇಳಿದಂತೆ ಕೇಳುತ್ತಾನೆ' ಎಂದು ಲೋಕದ ಜನರಲ್ಲಿ ಪ್ರಚಾರ ಮಾಡುತ್ತಾರೆ.
ಏತೇ ಚೈವಾಪರೇ ಚೈವ ದೋಷಾಃ ಪ್ರಾದುರ್ಭವಂತ್ಯುತ |
ನೃಪತೌ ಮಾರ್ದವೋಪೇತೇ ಹರ್ಷಲೇ ಚ ಯುಧಿಷ್ಠಿರ ॥60॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಪಂಚಾಶೋಽಧ್ಯಾಯಃ ॥56॥
ಎಲೈ ಯುಧಿಷ್ಠಿರನೇ! ರಾಜನು ಮೃದುವಾಗಿ ಹರ್ಷಶೀಲನಾಗಿದ್ದರೆ ಇವು ಮತ್ತು ಇನ್ನೂ ಅನೇಕ ದೋಷಗಳು ಉಂಟಾಗುತ್ತವೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 56ನೆಯ ಅಧ್ಯಾಯವು ಮುಗಿಯಿತು
0

57. ಐವತ್ತೇಳನೆಯ ಅಧ್ಯಾಯ
ರಾಜಧರ್ಮಕಥನ
ಭೀಷ್ಮಃ
ನಿತ್ಯೋದ್ಯುಕ್ತೇನ ವೈ ರಾಜ್ಞಾ ಭವಿತವ್ಯಂ ಯುಧಿಷ್ಠಿರ |

ಪ್ರಶಾಮ್ಯತೇ ಚ ರಾಜಾ ಹಿ ನಾರೀವೋದ್ಯಮವರ್ಜಿತಃ ॥1॥
ಭೀಷ್ಮರು ಎಲೈ ಯುಧಿಷ್ಠಿರನೇ! ರಾಜನು ಯಾವಾಗಲೂ ಉದ್ಯಮಶೀಲ- ನಾಗಬೇಕು. ಪ್ರಯತ್ನಶೀಲನಲ್ಲದ ರಾಜನು ಹೆಂಗಸಿನಂತೆ ವಿನಾಶವನ್ನು ಹೊಂದು- ತ್ತಾನೆ.
ಭಗವಾನುಶನಾ ಚಾಹ ಶ್ಲೋಕಮತ್ರ ವಿಶಾಂಪತೇ |
ತಮಿಹೈಕಮನಾ ರಾಜನ್ ಗದತಸ್ತ್ವಂ ನಿಬೋಧ ಮೇ ॥2॥
ಎಲೈ ರಾಜನೇ! ಪೂಜ್ಯರಾದ ಶುಕ್ರಾಚಾರ್ಯರು ಈ ವಿಷಯದಲ್ಲಿ ಒಂದು ಶ್ಲೋಕವನ್ನು ಹೇಳಿದ್ದಾರೆ. ರಾಜನೇ ನಾನು ಹೇಳುವ ಆ ಶ್ಲೋಕವನ್ನು ನೀನು ಏಕಾಗ್ರನಾಗಿ ಕೇಳು.
ದ್ವಾವೇತೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ |
ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥3॥
ಶತ್ರುಗಳಿಗೆ ವಿರೋಧ ಮಾಡದಿರುವ ರಾಜ ಮತ್ತು ಪ್ರವಾಸ ಹೋಗದಿರುವ ಬ್ರಾಹ್ಮಣ ಇವರಿಬ್ಬರನ್ನು ಸರ್ಪವು ಮೂಷಿಕಗಳನ್ನು ನುಂಗುವಂತೆ ಭೂಮಿಯು ನುಂಗುತ್ತದೆ.
ತದೇತನ್ನರಶಾರ್ದೂಲ ಹೃದಿ ತ್ವಂ ಕರ್ತುಮರ್ಹಸಿ |
ಸಂಧೇಯಾನಪಿ ಸಂಧತ್ಸ್ವ ವಿರೋಧ್ಯಾಂಶ್ಚ ವಿರೋಧಯ ॥4॥
ಎಲೈ ನರಶಾರ್ದೂಲನೇ! ಇದನ್ನು ನೀನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಸಂಧಿ- ಯನ್ನು ಮಾಡಿಕೊಳ್ಳಬೇಕಾದವರ ಜೊತೆಯಲ್ಲಿ ಸಂಧಿಯನ್ನು ಮಾಡು. ವಿರೋಧ -ವನ್ನು ಮಾಡಬೇಕಾದವರ ಜೊತೆಯಲ್ಲಿ ವಿರೋಧವನ್ನು ಮಾಡು.
ಸಪ್ತಾಂಗೇ ಯಶ್ಚ ತೇ ರಾಜ್ಯೇ ವೈಪರೀತ್ಯಂ ಸಮಾಚರೇತ್ |
ಗುರುರ್ವಾ ಯದಿ ವಾ ಮಿತ್ರಂ ಪ್ರತಿಹಂತವ್ಯ ಏವ ಸಃ ॥5॥
ಸಪ್ತಾಂಗಗಳುಳ್ಳ ನಿನ್ನ ರಾಜ್ಯದಲ್ಲಿ ಯಾರಾದರೂ ವಿಪರೀತವಾಗಿ ನಡೆದು- ಕೊಂಡರೆ ಅವನು ಗುರುವಾಗಲೀ, ಅಥವಾ ಮಿತ್ರನಾಗಲೀ ಅದನ್ನು ಪರಿಹರಿಸಲೇ ಬೇಕು.
ಮರುತ್ತೇನ ಹಿ ರಾಜ್ಞಾಽಯಂ ಗೀತಃ ಶ್ಲೋಕಃ ಪುರಾತನಃ |
ರಾಜ್ಯಾಧಿಕಾರೇ ರಾಜೇಂದ್ರ ಬೃಹಸ್ಪತಿಮತಃ ಪುರಾ ॥6॥
ಎಲೈ ರಾಜೇಂದ್ರನೇ! ಬೃಹಸ್ಪತಿಗೆ ಸಮ್ಮತನಾದ ಮರುತ್ತನೆಂಬ ರಾಜನು ರಾಜ್ಯಪಾಲನೆಯ ವಿಷಯದಲ್ಲಿ ಹಾಡಿದ ಒಂದು ಪುರಾತನವಾದ ಈ ಶ್ಲೋಕವನ್ನು ಕೇಳು.
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ |
ಉತ್ಪಥಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ ॥7॥
ಗುರುವಾದರೂ ಸಹ ಅಹಂಕಾರದಿಂದ ಕೂಡಿ ಕಾರ್ಯಾಕಾರ್ಯಗಳನ್ನು ತಿಳಿ- ಯದೆ ದುರ್ಮಾರ್ಗದಲ್ಲಿ ಪ್ರವೃತ್ತನಾದರೆ ಅವನ ಪರಿತ್ಯಾಗವು ವಿಹಿತವಾಗುತ್ತದೆ.
ಬಾಹೋಃ ಪುತ್ರೇಣ ರಾಜ್ಞಾ ಚ ಸಗರೇಣೇಹ ಧೀಮತಾ |
ಅಸಮಂಜಾಃ ಸುತೋ ಜ್ಯೇಷ್ಠಸ್ತ್ಯಕ್ತಃ ಪೌರಹಿತೈಷಿಣಾ ॥8॥
ಬಾಹುಕನ ಪುತ್ರನಾದ ಮೇಧಾವಿಯಾದ ಸಗರರಾಜನು ಪ್ರಜೆಗಳ ಹಿತವನ್ನು ಬಯಸಿ ತನ್ನ ಜ್ಯೇಷ್ಠಪುತ್ರನಾದ ಅಸಮಂಜನನ್ನು ಪರಿತ್ಯಜಿಸಿದನು.
ಅಸಮಂಜಾಃ ಸರಯ್ವಾಂ ಪ್ರಾಕ್ ಪೌರಾಣಾಂ ಬಾಲಕಾನ್ ನೃಪ |
ನ್ಯಮಜ್ಜಯದತಃ ಪಿತ್ರಾ ನಿರ್ಭರ್ತ್ಸ್ಯ ಸ ವಿವಾಸಿತಃ ॥9॥
ಎಲೈ ರಾಜನೇ! ಹಿಂದೆ ಅಸಮಂಜನು ಪ್ರಜೆಗಳ ಬಾಲಕರನ್ನು ಹಿಡಿದು ಸರಯೂ ನದಿಯಲ್ಲಿ ಮುಳುಗಿಸುತ್ತಿದ್ದನು. ಆದ್ದರಿಂದ ತಂದೆಯಾದ ಸಗರನು ಅವನನ್ನು ಗದರಿಸಿ ಗಡೀಪಾರು ಮಾಡಿದನು.
ಋಷಿಣೋದ್ದಾಲಕೇನಾಪಿ ಶ್ವೇತಕೇತುರ್ಮಹಾತಪಾಃ |
ಮಿಥ್ಯಾ ವಿಪ್ರಾನುಪಚರನ್ ಸಂತ್ಯಕ್ತೋ ದಯಿತಃ ಸುತಃ ॥10॥
ಉದ್ದಾಲಕ ಋಷಿಗಳೂ ಕೂಡ ತಮ್ಮ ಪ್ರಿಯಪುತ್ರನಾದ ಮಹಾತಪಸ್ವಿಯಾದ ಶ್ವೇತಕೇತುವು ಬ್ರಾಹ್ಮಣರನ್ನು ಸುಳ್ಳಾಗಿ ಉಪಚರಿಸುತ್ತಿರಲು ಅವನನ್ನು ಪರಿತ್ಯಜಿಸಿ- ದರು.
ಲೋಕರಂಜನಮೇವಾತ್ರ ರಾಜ್ಞಾಂ ಧರ್ಮಃ ಸನಾತನಃ |
ಸತ್ಯಸ್ಯ ರಕ್ಷಣಂ ಚೈವ ವ್ಯವಹಾರೇಷು ಚಾರ್ಜವಮ್ ॥11॥
ಲೋಕವನ್ನು ಸಂತೋಷಪಡಿಸುವುದೇ ರಾಜರ ಸನಾತನವಾದ ಧರ್ಮ. ಸತ್ಯದ ರಕ್ಷಣೆ ಮತ್ತು ವ್ಯವಹಾರಗಳಲ್ಲಿ ಕಪಟವಿಲ್ಲದಿರುವಿಕೆ ಇವು ರಾಜನ ಕರ್ತವ್ಯಗಳು.
ನ ಹಿಂಸ್ಯಾತ್ ಪರವಿತ್ತಾನಿ ದೇಯಂ ಕಾಲೇ ಚ ದಾಪಯೇತ್ |
ವಿಕ್ರಾಂತಃ ಸತ್ಯವಾಕ್ ಕ್ಷಾಂತೋ ನೃಪೋ ನ ಚ್ಯವತೇ ಪಥಃ ॥12॥
ಪ್ರಜೆಗಳ ಧನಕ್ಕೆ ಹಿಂಸೆಯನ್ನುಂಟು ಮಾಡಬಾರದು. ಕೊಡಬೇಕಾದ ಧನವನ್ನು ಯೋಗ್ಯವಾದ ಕಾಲದಲ್ಲಿ ಕೊಡಿಸಬೇಕು. ಪರಾಕ್ರಮಶಾಲಿಯೂ ಸತ್ಯವಚನನೂ ಕ್ಷಮಾವಂತನೂ ಆದ ರಾಜನು ಸನ್ಮಾರ್ಗದಿಂದ ಚ್ಯುತನಾಗುವುದಿಲ್ಲ.
ಗುಪ್ತಮಂತ್ರೋ ಜಿತಕ್ರೋಧೋ ಶಾಸ್ತ್ರಾರ್ಥಗತನಿಶ್ಚಯಃ |
ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಸತತಂ ರತಃ ॥13॥
ತ್ರಯ್ಯಾ ಸಂವೃತರಂಧ್ರಶ್ಚ ರಾಜಾ ಭವಿತುಮರ್ಹತಿ |

ವೃಜಿನಸ್ಯ ನರೇಂದ್ರಾಣಾಂ ನಾನ್ಯತ್ ಸಂವರಣಾತ್ ಪರಮ್ ॥14॥
ತನ್ನ ಮಂತ್ರಾಲೋಚನೆಯನ್ನು ರಹಸ್ಯವಾಗಿಟ್ಟು, ಕ್ರೋಧವನ್ನು ಜಯಿಸಿ, ಶಾಸ್ತ್ರಕ್ಕೆ ಅನುಗುಣವಾಗಿ ನಿರ್ಧಾರವನ್ನು ಮಾಡಿ ಧರ್ಮಾರ್ಥಕಾಮಮೋಕ್ಷಗಳಲ್ಲಿ ಸತತವಾಗಿ ರತನಾಗಿ ತನ್ನ ದೋಷಗಳನ್ನು ವೇದೋಕ್ತಮಾರ್ಗದಿಂದ ತಿದ್ದಿಕೊಂಡ ಅವನು ರಾಜನಾಗಲು ಅರ್ಹನಾಗುತ್ತಾನೆ. ರಾಜರಿಗೆ ತಪ್ಪುಗಳನ್ನು ಮುಚ್ಚಿಕೊಳ್ಳುವು- ದಕ್ಕಿಂತ ಶ್ರೇಷ್ಠವಾದ ಕಾರ್ಯವು ಇನ್ನೊಂದಿಲ್ಲ.
ಚಾತುರ್ವರ್ಣ್ಯಸ್ಯ ಧರ್ಮಾಶ್ಚ ರಕ್ಷಿತವ್ಯಾ ಮಹೀಕ್ಷಿತಾ |
ಧರ್ಮಸಂಕರರಕ್ಷಾ ಹಿ ರಾಜ್ಞಾಂ ಧರ್ಮಃ ಸನಾತನಃ ॥15॥
ರಾಜನಾದವನು ಚಾತುರ್ವರ್ಣ್ಯದ ಧರ್ಮಗಳನ್ನು ರಕ್ಷಿಸಬೇಕು. ಧರ್ಮ- ಸಂಕರವಾಗದಂತೆ ರಕ್ಷಣೆ ಮಾಡುವುದು ರಾಜರ ಸನಾತನವಾದ ಧರ್ಮ.
ನ ವಿಶ್ವಸೇಚ್ಚ ನೃಪತಿರ್ನ ಚಾತ್ಯರ್ಥಂ ನ ವಿಶ್ವಸೇತ್ |
ಷಾಡ್ಗುಣ್ಯದೋಷಾಂಶ್ಚ ನಿತ್ಯಂ ಬುದ್ಧ್ಯಾಽವಲೋಕಯೇತ್ ॥16॥
ರಾಜನಾದವನು ಯಾರಲ್ಲಿಯೂ ಬಹಳ ವಿಶ್ವಾಸವನ್ನು ಮಾಡಬಾರದು. ಬಹಳ ಅವಿಶ್ವಾಸವನ್ನೂ ಮಾಡಬಾರದು. ರಾಜ್ಯಪಾಲನೆಯ ಅಂಗವಾದ ಆರು ಗುಣಗಳು ಮತ್ತು ಅವುಗಳ ದೋಷಗಳನ್ನು ಯಾವಾಗಲೂ ಆಲೋಚಿಸುತ್ತಿರಬೇಕು.
ದ್ವಿಟ್‌ಛಿದ್ರದರ್ಶೀ ನೃಪತಿರ್ನಿತ್ಯಮೇವ ಪ್ರಶಸ್ಯತೇ |
ತ್ರಿವರ್ಗವಿದಿತಾರ್ಥಶ್ಚ ಯುಕ್ತಾಚಾರೋಪಧಿಶ್ಚ ಯಃ ॥17॥
ತ್ರಿವರ್ಗದ ಅರ್ಥಗಳನ್ನು ತಿಳಿದು ಒಳ್ಳೆಯ ಗೂಢಚಾರರನ್ನು ಮತ್ತು ಭೃತ್ಯ- ರನ್ನು ಹೊಂದಿದ ರಾಜನಿಗೆ ಶತ್ರುಗಳ ದೋಷವನ್ನು ನೋಡುವುದು ಯಾವಾಗಲೂ ಪ್ರಶಂಸಿಸಲ್ಪಡುತ್ತದೆ.
ಕೋಶಸ್ಯೋಪಾರ್ಜನರತಿರ್ಯಮವೈಶ್ರವಣೋಪಮಃ |
ವೇತ್ತಾ ಚ ದಶವರ್ಗಸ್ಯ ಸ್ಥಾನವೃದ್ಧಿಕ್ಷಯಾತ್ಮನಃ ॥18॥
ಕೋಶವನ್ನು ಅಭಿವೃದ್ಧಿಪಡಿಸುವುದರಲ್ಲಿ ಆಸಕ್ತಿ, ಯಮನಿಗೆ ಮತ್ತು ಕುಬೇರ- ನಿಗೆ ಸದೃಶವಾಗಿರುವುದು. ಸ್ಥಾನವೃದ್ಧಿ ಮತ್ತುಕ್ಷಯಗಳಿಗೆ ಸಂಬಂಧಿಸಿದ ಹತ್ತು ಅಂಶಗಳ ಸಮೂಹವನ್ನು ತಿಳಿಯುವುದು ರಾಜನಿಗೆ ಪ್ರಶಂಸಿಸಲ್ಪಡುತ್ತದೆ. ಸ್ಥಾನ- ವೆಂದರೆ ರಾಜ್ಯ, ಅದರ ವೃದ್ಧಿ ಎಂದರೆ ಅಭಿವೃದ್ಧಿ. ಕ್ಷಯವೆಂದರೆ ರಾಜ್ಯವಿರೋಧಿಗಳ ವಿನಾಶ. ಸ್ಥಾನವೆಂದರೆ ಧನ, ಅದರ ವೃದ್ಧಿಯೆಂದರೆ ಕೋಶದ ದೃಢೀಕರಣ. ಕ್ಷಯ- ವೆಂದರೆ ಕೋಶಕ್ಕೆ ವಿರುದ್ಧರಾದ ಚೋರಾದಿಗಳ ವಿನಾಶ. ಕ್ಷಯವೆಂದರೆ ಶತ್ರುಕ್ಷಯ. ಶತ್ರುಗಳ ಸ್ಥಾನಕ್ಷಯ. ಅವರ ಅಭಿವೃದ್ಧಿಯ ಕ್ಷಯ. ಅವರು ಶರಣಾಗತರಾದರೆ ಅವರ ಭಯದ ವಿನಾಶ. ಹೀಗೆ ಸ್ಥಾನವೃದ್ಧಿಕ್ಷಯರೂಪವಾದ ಹತ್ತು ಅಂಶಗಳ ಸಮೂಹವನ್ನು ತಿಳಿದ ರಾಜನು ಯಾವಾಗಲೂ ಪ್ರಶಂಸಿಸಲ್ಪಡುತ್ತಾನೆ. ( ಲಕ್ಷಾ- ಲಂಕಾರ)
ಅಭೃತಾನಾಂ ಭವೇದ್ ಭರ್ತಾ ಭೃತಾನಾಂ ಚಾನ್ವವೇಕ್ಷಕಃ |
ನೃಪತಿಃ ಸುಮುಖಶ್ಚ ಸ್ಯಾತ್ ಸ್ಮಿತಪೂರ್ವಾಭಿಭಾಷಿತಾ ॥19॥
ರಾಜನು ವೃತ್ತಿ ಇಲ್ಲದವರಿಗೆ ಪೋಷಕನಾಗಬೇಕು. ವೃತ್ತಿಯನ್ನು ಹೊಂದಿದವರ ಮೇಲ್ವಿಚಾರಣೆಯನ್ನು ಮಾಡಬೇಕು. ಯಾವಾಗಲೂ ಪ್ರಸನ್ನಮುಖನಾಗಿದ್ದು ಮಂದಹಾಸಪೂರ್ವಕವಾಗಿ ಮಾತನಾಡಬೇಕು.
ಉಪಾಸಿತಾ ಚ ವೃದ್ಧಾನಾಂ ಜಿತತಂದ್ರೀರಲೋಲುಪಃ |
ಸತಾಂ ವೃತ್ತೇ ಸ್ಥಿತಮತಿಃ ಸಂತೋ ಹ್ಯಾಚಾರದರ್ಶಿನಃ ॥20॥
ಹಿರಿಯರ ಸೇವೆಯನ್ನು ಮಾಡಬೇಕು. ಆಲಸ್ಯವನ್ನು ಬಿಡಬೇಕು. ಇಂದ್ರಿಯ- ಲೋಲುಪನಾಗಿರಬಾರದು. ಸಜ್ಜನರ ನಡವಳಿಕೆಯಲ್ಲಿಯೇ ನೆಟ್ಟ ಮನಸ್ಸುಳ್ಳವ- ನಾಗಿರಬೇಕು ಏಕೆಂದರೆ, ಸಜ್ಜನರೇ ಆಚಾರವನ್ನು ತೋರಿಸಿಕೊಡುವವರು.
ನ ಚಾದದೀತ ವಿತ್ತಾನಿ ಸತಾಂ ಹಸ್ತಾತ್ ಕದಾಚನ |
ಅಸದ್ಭ್ಯಸ್ತು ಸಮಾದದ್ಯಾತ್ ಸದ್ಭ್ಯಃ ಸಂಪ್ರತಿಪಾದಯೇತ್ ॥21॥
ಸಜ್ಜನರ ಹಸ್ತದಿಂದ ಎಂದೂ ಧನವನ್ನು ಸ್ವೀಕರಿಸಬಾರದು. ಅಸಜ್ಜನರಿಂದ ಧನ -ವನ್ನು ತೆಗೆದುಕೊಂಡು ಅದನ್ನು ಸಜ್ಜನರಿಗೆ ಹಂಚಬೇಕು.
ಸ್ವಯಂ ಪ್ರಹರ್ತಾದಾತಾ ಚ ವಶ್ಯಾತ್ಮಾ ವಶ್ಯಸಾಧನಃ |
ಕಾಲೇ ದಾತಾ ಚ ಭೋಕ್ತಾ ಚ ಶುದ್ಧಾಚಾರಸ್ತಥೈವ ಚ ॥22॥
ತಾನೇ ಧನವನ್ನು ತೆಗೆದುಕೊಳ್ಳುವವನು, ಸಜ್ಜನರಿಗೆ ಧನವನ್ನು ಕೊಡುವವನು, ಜಿತವಾದ ಮನಸ್ಸುಳ್ಳವನು, ಜಿತವಾದ ಸಾಧನಗಳುಳ್ಳವನು ಯೋಗ್ಯವಾದ ಕಾಲ- ದಲ್ಲಿ ದಾನವನ್ನೂ ಭೋಗವನ್ನೂ ಮಾಡುವವನು ಮತ್ತು ಶುದ್ಧವಾದ ಆಚಾರವುಳ್ಳ ರಾಜನು. (ಪ್ರಶಂಸಿಸಲ್ಪಡುತ್ತಾನೆ).
ಶೂರಾನ್ ಭಕ್ತಾನಸಂಹಾರ್ಯಾನ್ ಮಾನಿನೋಽನವಮಾನಿನಃ |
ಶಿಷ್ಟಾನ್ ಶಿಷ್ಟಾಭಿಸಂಬಂಧಾನ್ ಕುಲೇ ಜಾತಾನರೋಗಿಣಃ ॥23॥
ವಿದ್ಯಾವಿದೋ ಲೋಕವಿದಃ ಪರಲೋಕಾನ್ವವೇಕ್ಷಕಾನ್ |
ಧರ್ಮೇಷು ನಿರತಾನ್ ಸಾಧೂನಚಲಾನಚಲಾನಿವ ॥24॥
ಸಹಾಯಾನ್ ಸತತಂ ಕುರ್ಯಾದ್ ರಾಜಾ ಭೂತಿಪುರಸ್ಕೃತಃ |
ತೈಸ್ತುಲ್ಯಶ್ಚ ಭವೇದ್ ಭೋಗೈಶ್ಛತ್ರಮಾತ್ರಾಜ್ಞಯಾಧಿಕಃ ॥25॥
ಶೂರರು, ನಿಷ್ಠೆಯುಳ್ಳವರು, ಶತ್ರುಗಳಿಂದ ಅಪಹರಿಸಲ್ಪಡದವರು, ಆತ್ಮಾ- ಭಿಮಾನವುಳ್ಳವರು, ರಾಜನನ್ನು ಮತ್ತು ಸಜ್ಜನರನ್ನು ಅವಮಾನಮಾಡದವರು, ಸತ್ಕುಲದಲ್ಲಿ ಜನಿಸಿ ಆರೋಗ್ಯದಿಂದಿರುವವರು, ಶಿಷ್ಟರು, ಶಿಷ್ಟರ ಸಂಬಂಧವನ್ನು ಹೊಂದಿದವರು, ವಿದ್ಯೆಗಳನ್ನು ಬಲ್ಲವರು, ಲೋಕವೃತ್ತವನ್ನು ಬಲ್ಲವರು, ಪರ- ಲೋಕದ ನಿರೀಕ್ಷೆ ಉಳ್ಳವರು, ಧರ್ಮನಿರತರು, ಸಾಧುಗಳು,

ಪರ್ವತದಂತೆ ಅಚಲರಾದವರು ಆದ ಭಟರನ್ನು ಸಮೃದ್ಧಿಯುಳ್ಳ ರಾಜನು ತನ್ನ ಸಹಾಯಕರನ್ನಾಗಿ ಮಾಡಿಕೊಳ್ಳಬೇಕು. ಅಂತಹ ಭಟರ ಜೊತೆಯಲ್ಲಿ ಸಮಾನವಾದ ಭೋಗವನ್ನು ಹೊಂದಿ ಛತ್ರಚಾಮರಾದಿಗಳಿಂದ ಮಾತ್ರ ಅತಿಶಯವನ್ನು ಹೊಂದಿರಬೇಕು.
ಪ್ರತ್ಯಕ್ಷಾ ಚ ಪರೋಕ್ಷಾ ಚ ವೃತ್ತಿಶ್ಚಾಸ್ಯ ಭವೇತ್ ಸದಾ |
ಏವಂ ಕೃತ್ವಾ ನರೇಂದ್ರೋ ಹಿ ನ ಖೇದಮಿಹ ವಿಂದತಿ ॥26॥
ರಾಜನು ಪ್ರತ್ಯಕ್ಷವಾದ ಮತ್ತು ಪರೋಕ್ಷವಾದ ನಡೆವಳಿಕೆಗಳನ್ನು ಹೊಂದಿ- ರಬೇಕು. ಹಾಗೆ ಮಾಡುವ ನರೇಂದ್ರನು ಈ ಲೋಕದಲ್ಲಿ ದುಃಖವನ್ನು ಹೊಂದು- ವುದಿಲ್ಲ.
ಸಭೆಯಲ್ಲಿ ಕುಳಿತು ಮಾಡುವ ಧರ್ಮವಿಚಾರಾದಿ ನಡೆವಳಿಕೆಯು ಪ್ರತ್ಯಕ್ಷ- ರೂಪವಾದದು. ಅಂತಃಪುರದ ನಡೆವಳಿಕೆಯು ಪರೋಕ್ಷವಾದುದು (ಲಕ್ಷ್ಮಾ- ಲಂಕಾರ)
ಸರ್ವಾತಿಶಂಕೀ ನೃಪತಿರ್ಯಶ್ಚ ಸರ್ವಹರೋ ಭವೇತ್ |
ಸ ಕ್ಷಿಪ್ರಮನೃಜುರ್ಲುಬ್ಧಃ ಸ್ವಜನೇನೈವ ಬಾಧ್ಯತೇ ॥27॥
ಯಾವ ರಾಜನು ಎಲ್ಲರನ್ನೂ ಶಂಕಿಸುತ್ತಾನೆಯೋ ಪ್ರಜೆಗಳಿಂದ ಎಲ್ಲವನ್ನೂ ಅಪಹರಿಸುತ್ತಾನೆಯೋ ಅಂತಹ ವಕ್ರನೂ, ಲೋಭಿಯೂ ಆದ ರಾಜನು ಸ್ವಜನ- ರಿಂದಲೇ ಶೀಘ್ರವಾಗಿ ಬಾಧಿಸಲ್ಪಡುತ್ತಾನೆ.
ಶುಚಿಸ್ತು ಪೃಥಿವೀಪಾಲೋ ಲೋಕಚಿತ್ತಗ್ರಹೇ ರತಃ |
ನ ಪತತ್ಯರಿಭಿರ್ಗ್ರಸ್ತಃ ಪತಿತಶ್ಚಾವತಿಷ್ಠತೇ ॥28॥
ಶುಚಿಯೂ, ಪ್ರಜೆಗಳ ಚಿತ್ತಗ್ರಹದಲ್ಲಿ ನಿರತನೂ ಆದ ರಾಜನು ಶತ್ರುಗಳಿಂದ ಗ್ರಸ್ತನಾದರೂ ಕೆಳಗೆ ಬೀಳುವುದಿಲ್ಲ. ಕೆಳಗೆ ಬಿದ್ದರೂ ಪುನಃ ಎದ್ದು ನಿಲ್ಲುತ್ತಾನೆ.
ಅಕ್ರೋಧನೋಽಥಾವ್ಯಸನೀ ಮೃದುದಂಡೋ ಜಿತೇಂದ್ರಿಯಃ |
ರಾಜಾ ಭವತಿ ಭೂತಾನಾಂ ವಿಶ್ವಾಸ್ಯೋ ಹಿಮವಾನಿವ ॥29॥
ಕ್ರೋಧಶೀಲನಲ್ಲದ, ದುಶ್ಚಟಗಳಿಗೆ ಬಲಿಯಾಗದ, ಮೃದುವಾದ ಶಿಕ್ಷೆಯನ್ನು ಕೊಡುವ, ಜಿತೇಂದ್ರಿಯನಾದ ರಾಜನು ಹಿಮಾಲಯದಂತೆ ಪ್ರಜೆಗಳ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ.
ಪ್ರಾಜ್ಞೋ ನ್ಯಾಯಗುಣೋಪೇತಃ ಪರರಂಧ್ರೇಷು ತತ್ಪರಃ |
ಸುದರ್ಶಃ ಸರ್ವವರ್ಣಾನಾಂ ನಯಾಪನಯವಿತ್ ತಥಾ ॥30॥
ಕ್ಷಿಪ್ರಕಾರೀ ಜಿತಕ್ರೋಧಃ ಸುಪ್ರಸಾದೋ ಮಹಾಮನಾಃ |
ಅರೋಷಪ್ರಕೃತಿರ್ಯುಕ್ತಃ ಕ್ರಿಯಾವಾನವಿಕತ್ಥನಃ ॥31॥
ಪ್ರಾಜ್ಞನೂ, ನ್ಯಾಯಗುಣದಿಂದ ಕೂಡಿದವನೂ, ಶತ್ರುಗಳ ದೌರ್ಬಲ್ಯವನ್ನು ಹುಡುಕುವುದರಲ್ಲಿ ತತ್ಪರನೂ, ಎಲ್ಲ ವರ್ಣದವರಿಗೂ ಸುಲಭವಾಗಿ ದರ್ಶನವನ್ನು ಕೊಡುವವನು, ನ್ಯಾಯಾನ್ಯಾಯಗಳನ್ನು ತಿಳಿದವನೂ, ಶೀಘ್ರವಾಗಿ ಕಾರ್ಯವನ್ನು ಮಾಡುವವನೂ, ಕ್ರೋಧವನ್ನು ಜಯಿಸಿದವನೂ, ಧೈರ್ಯಶಾಲಿಯೂ, ಒಳ್ಳೆಯ ಅನುಗ್ರಹವನ್ನು ಮಾಡುವವನೂ, ರೋಷಪ್ರಕೃತಿಯನ್ನು ಹೊಂದದವನೂ, ಕ್ರಿಯಾ- ಶೀಲನಾದವನೂ, ತನ್ನನ್ನು ತಾನು ಹೊಗಳಿಕೊಳ್ಳದವನೂ ಆದ ರಾಜನು (ಸಮೃದ್ಧಿ- ಯನ್ನು ಹೊಂದುತ್ತಾನೆ).
ಆರಬ್ಧಾನ್ಯೇವ ಕಾರ್ಯಾಣಿ ನ ಪರ್ಯವಸಿತಾನಿ ಚ |
ಯಸ್ಯ ರಾಜ್ಞಃ ಪ್ರದೃಶ್ಯಂತೇ ಸ ರಾಜಾ ರಾಜಸತ್ತಮಃ ॥32॥
ಯಾವ ರಾಜನು ಆರಂಭಿಸಿರುವ ಕಾರ್ಯಗಳು ಮಾತ್ರ ಕಂಡುಬರುತ್ತ- ವೆಯೋ, ಮಾಡಿ ಮುಗಿಸಿದ ಕಾರ್ಯಗಳು ಕಂಡುಬರುವುದಿಲ್ಲವೋ ಅಂತಹ ರಾಜನೇ ಶ್ರೇಷ್ಠರಾಜನೆನಿಸುತ್ತಾನೆ.
ಪುತ್ರಾ ಇವ ಪಿತುರ್ಗೇಹೇ ವಿಷಯೇ ಯಸ್ಯ ಮಾನವಾಃ |
ನಿರ್ಭಯಾ ವಿಚರಿಷ್ಯಂತಿ ಸ ರಾಜಾ ರಾಜಸತ್ತಮಃ ॥33॥
ಯಾವನ ರಾಜ್ಯದಲ್ಲಿ ಪ್ರಜೆಗಳು ತಂದೆಯ ಮನೆಯಲ್ಲಿರುವ ಮಕ್ಕಳಂತೆ ನಿರ್ಭಯವಾಗಿ ಸಂಚರಿಸುವರೋ ಅವನೇ ಶ್ರೇಷ್ಠನಾದ ರಾಜನಾದವನು.
ಅಗೂಢವಿಭವಾ ಯಸ್ಯ ಪೌರಾ ರಾಷ್ಟ್ರನಿವಾಸಿನಃ |
ನಯಾಪನಯವೇತ್ತಾರಃ ಸ ರಾಜಾ ರಾಜಸತ್ತಮಃ ॥34॥
ಯಾವನ ರಾಜ್ಯದಲ್ಲಿ ರಾಷ್ಟ್ರನಿವಾಸಿಗಳಾದ ಪೌರರು ತಮ್ಮ ಐಶ್ವರ್ಯವನ್ನು ಮುಚ್ಚಿಕೊಳ್ಳಬೇಕಾದ ಪ್ರಸಂಗವಿಲ್ಲದೆ ನ್ಯಾಯಾನ್ಯಾಯಗಳನ್ನು ತಿಳಿದಿರುತ್ತಾರೆಯೋ ಅಂತಹ ರಾಜನೇ ಶ್ರೇಷ್ಠನಾದ ರಾಜನಾದವನು.
ಸ್ವಕರ್ಮನಿರತಾ ಯಸ್ಯ ಜನಾ ವಿಷಯವಾಸಿನಃ |
ಅಸಂಘಾತರತಾ ದಾಂತಾಃ ಪಾಲ್ಯಮಾನಾ ಯಥಾವಿಧಿ ॥35॥
ವಶ್ಯಾ ನೇಯಾ ವಿನೀತಾಶ್ಚ ನ ಚ ಸಂಘರ್ಷಶೀಲಿನಃ |
ವಿಷಯೇ ದಾನರುಚಯೋ ನರಾ ಯಸ್ಯ ಸ ಪಾರ್ಥಿವಃ ॥36॥
ಯಾವ ರಾಜನ ರಾಜ್ಯದಲ್ಲಿರುವ ಜನರು ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾ- ಗಿರುತ್ತಾರೆಯೋ, ಗುಂಪುಗಾರಿಕೆಯಲ್ಲಿ ನಿರತರಾಗಿರುವುದಿಲ್ಲವೋ, ಇಂದ್ರಿಯ- ನಿಗ್ರಹವನ್ನು ಹೊಂದಿರುತ್ತಾರೆಯೋ, ರಾಜನಿಂದ ಶಾಸ್ತ್ರಕ್ಕನುಗುಣವಾಗಿ ಪಾಲಿಸ- ಲ್ಪಡುತ್ತಾರೆಯೋ, ರಾಜನಿಗೆ ವಶನಾಗಿರುತ್ತಾರೆಯೋ, ರಾಜನು ಹೇಳಿದಂತೆ ವಿನಯ -ದಿಂದ ನಡೆದುಕೊಳ್ಳುತ್ತಾರೆಯೋ, ಪರಸ್ಪರವಿರೋಧವನ್ನು ಮಾಡುವುದರಲ್ಲಿ ಆಸಕ್ತರಾಗಿರುವುದಿಲ್ಲವೋ, ದಾನ ಮಾಡುವುದರಲ್ಲಿ ಅಭಿರುಚಿಯನ್ನು ಹೊಂದಿರು- ತ್ತಾರೆಯೋ ಅವನೇ ನಿಜವಾದ ರಾಜ.

ನ ಯಸ್ಯ ಕೂಟಂ ಕಪಟಂ ನ ಮಾಯಾ ನ ಚ ಮತ್ಸರಃ |
ವಿಷಯೇ ಭೂಮಿಪಾಲಸ್ಯ ತಸ್ಯ ಧರ್ಮಃ ಸನಾತನಃ ॥37॥
ಯಾವ ರಾಜನ ರಾಜ್ಯದಲ್ಲಿ ಗುಂಪುಗಾರಿಕೆಯಾಗಲೀ, ಮೋಸವಾಗಲೀ, ಸುಳ್ಳಾಗಲೀ, ಮಾತ್ಸರ್ಯವಾಗಲೀ ಇರುವುದಿಲ್ಲವೋ ಅಂತಹ ರಾಜನ ಧರ್ಮವು ಸನಾತನವೆನಿಸುತ್ತದೆ.
ಯಃ ಸತ್ಕರೋತಿ ಜ್ಞಾತೀನಿ ನೇಯಃ ಪೌರಹಿತೇ ರತಃ |
ಸತಾಂ ಧರ್ಮಾನುಗಸ್ತ್ಯಾಗೀ ಸ ರಾಜಾ ರಾಜ್ಯಮರ್ಹತಿ ॥38॥
ಯಾವನು ಜ್ಞಾತಿಗಳನ್ನು ಸತ್ಕರಿಸುತ್ತಾನೆಯೋ, ಪ್ರಜೆಗಳ ಹಿತದಲ್ಲಿ ರತನಾಗಿ ಮುಂದುವರೆಯುತ್ತಾನೆಯೋ, ಸಜ್ಜನರ ಧರ್ಮವನ್ನು ಅನುಸರಿಸುತ್ತಾನೆಯೋ, ಸಮಯದಲ್ಲಿ ಧನವನ್ನು ತ್ಯಾಗ ಮಾಡುತ್ತಾನೆಯೋ ಅಂತಹ ರಾಜನೇ ರಾಜ್ಯಕ್ಕೆ ಅರ್ಹನಾದವನು.
ಯಸ್ಯ ಚಾರಶ್ಚ ಮಂತ್ರಶ್ಚ ನಿತ್ಯಂ ಚೈವ ಕೃತಾಕೃತೇ |
ನ ಜ್ಞಾಯತೇ ಹಿ ರಿಪುಭಿಃ ಸ ರಾಜಾ ರಾಜ್ಯಮರ್ಹತಿ ॥39॥
ಯಾವ ರಾಜನ ಚಾರರಾಗಲೀ, ಮಂತ್ರವಾಗಲೀ, ಮಾಡಿದ ಅಥವಾ ಮಾಡದ ಕಾರ್ಯಗಳಾಗಲೀ ಶತ್ರುಗಳಿಗೆ ಎಂದೂ ತಿಳಿಯುವುದಿಲ್ಲವೋ ಅಂತಹ ರಾಜನು ರಾಜ್ಯಕ್ಕೆ ಅರ್ಹನಾಗುತ್ತಾನೆ.
ಶ್ಲೋಕಶ್ಚಾಯಂ ಪುರಾ ಗೀತೋ ಭಾರ್ಗವೇಣ ಮಹಾತ್ಮನಾ |
ಆಖ್ಯಾತೇ ರಾಮಚರಿತೇ ನೃಪತಿಂ ಪ್ರತಿ ಭಾರತ ॥40॥
ಎಲೈ ಭಾರತನೇ! ರಾಜನನ್ನು ಕುರಿತು ಪರಶುರಾಮಚರಿತ್ರೆಯನ್ನು ಹೇಳಿದ ಮೇಲೆ ಮಹಾತ್ಮರಾದ ಶುಕ್ರಾಚಾರ್ಯರು ಹಿಂದೆ ಈ ಶ್ಲೋಕವನ್ನು ಗಾನ ಮಾಡಿ- ದರು.
ರಾಜಾನಂ ಪ್ರಥಮಂ ವಿಂದೇತ್ ತತೋ ಭಾರ್ಯಾಂ ತತೋ ಧನಮ್ |
ಅಸತ್ಯಸ್ಮಿನ್ ಮಹೀಪಾಲೇ ಕುತೋ ಭಾರ್ಯಾ ಕುತೋ ಧನಮ್ ॥41॥
ಮೊದಲು ರಾಜನನ್ನು ಸಂಪಾದಿಸಬೇಕು. ಅನಂತರ ಪತ್ನಿಯನ್ನು, ಅನಂತರ ಧನವನ್ನು ಸಂಪಾದಿಸಬೇಕು. ರಾಜನೇ ಇಲ್ಲದಿದ್ದರೆ ಎಲ್ಲಿಯ ಪತ್ನಿ ಮತ್ತು ಎಲ್ಲಿಯ ಧನ?
ತದ್ ರಾಜನ್ ರಾಜ್ಯಕಾಮಾನಾಂ ನಾನ್ಯೋ ಧರ್ಮಃ ಸನಾತನಃ |
ಋತೇ ರಕ್ಷಾಂ ಸುವಿಸ್ಪಷ್ಟಾ ರಕ್ಷಾ ಲೋಕಸ್ಯ ಧಾರಣಮ್ ॥42॥
ಎಲೈ ರಾಜನೇ! ಆದ್ದರಿಂದ ರಾಜ್ಯವನ್ನು ಬಯಸುವವರಿಗೆ ಪ್ರಜೆಗಳ ರಕ್ಷಣೆ- ಯನ್ನು ಬಿಟ್ಟು, ಸನಾತನವಾದ ಬೇರೆ ಯಾವ ಧರ್ಮವೂ ಇಲ್ಲ. ಅತ್ಯಂತ ಸ್ಪಷ್ಟ- ವಾದ ರಕ್ಷಣೆಯೇ ಲೋಕವನ್ನು ಧರಿಸುತ್ತದೆ.
ಪ್ರಾಚೇತಸೇನ ಮನುನಾ ಶ್ಲೋಕೌ ಚೇಮಾವುದಾಹೃತೌ |
ರಾಜಧರ್ಮೇಷು ರಾಜೇಂದ್ರ ತಾವಿಹೈಕಮನಾಃ ಶೃಣು ॥43॥
ಎಲೈ ರಾಜೇಂದ್ರನೇ! ಪ್ರಚೇತಸರ ಪುತ್ರನಾದ ಮನುವಿನಿಂದ ರಾಜಧರ್ಮಗಳ ವಿಷಯದಲ್ಲಿ ಈ ಎರಡು ಶ್ಲೋಕಗಳು ಹೇಳಲ್ಪಟ್ಟಿವೆ. ಅವುಗಳನ್ನು ಅವಧಾನದಿಂದ ಕೇಳುವವನಾಗು.
ಷಡೇತಾನ್ ಪುರುಷೋ ಜಹ್ಯಾದ್ ಭಿನ್ನಾಂ ನಾವಮಿವಾರ್ಣವೇ |
ಅಪ್ರವಕ್ತಾರಮಾಚಾರ್ಯಮನಧೀಯಾನಮೃತ್ವಿಜಮ್ ॥44॥
ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಮ್ |
ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಮ್ ॥45॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತಪಂಚಾಶೋಽಧ್ಯಾಯಃ ॥57॥
ಉಪದೇಶ ಮಾಡದಿರುವ ಆಚಾರ್ಯ, ಅಧ್ಯಯನಮಾಡದಿರುವ ಋತ್ವಿಕ್, ರಕ್ಷಣೆಯನ್ನು ಮಾಡದಿರುವ ರಾಜ, ಪ್ರತಿಕೂಲವಾಗಿ ಮಾತನಾಡುವ ಭಾರ್ಯೆ, ಗ್ರಾಮದಲ್ಲಿಯೇ ಇರಲು ಬಯಸುವ ಗೋಪಾಲ ಮತ್ತು ಕಾಡಿನಲ್ಲಿ ಇರಲು ಬಯಸುವ ಕ್ಷೌರಿಕ ಈ ಆರು ಜನರನ್ನು ಸಮುದ್ರದಲ್ಲಿ ಒಡೆದು ಹೋದ ದೋಣಿ- ಯನ್ನು ಬಿಡುವಂತೆ ಪುರುಷನು ಪರಿತ್ಯಜಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 57ನೆಯ ಅಧ್ಯಾಯವು ಮುಗಿಯಿತು.
0

58. ಐವತ್ತೆಂಟನೆಯ ಅಧ್ಯಾಯ
ಪ್ರಥಮದಿನದ ಉಪದೇಶದ ಅನಂತರ ಸಾಯಂಕಾಲದಲ್ಲಿ
ಕೃಷ್ಣಾದಿಗಳ ಹಿಂದಿರುವಿಕೆ
ವೈಶಂಪಾಯನಃ
ಏತಾವದುಕತ್ವ ಭೂಯೋಽಪಿ ಭೀಷ್ಮಃ ಕುರುಪಿತಾಮಹಃ |
ಉವಾಚ ವಚನಂ ಧೀಮಾನ್ ಸರ್ವತಃ ಸಾರಸಂಗ್ರಹಮ್ ॥1॥
ವೈಶಂಪಾಯನರು ಇಷ್ಟು ಮಾತುಗಳನ್ನಾಡಿ ಕುರುಪಿತಾಮಹರಾದ ಮೇಧಾವಿಗಳಾದ ಭೀಷ್ಮರು ಪುನಃ ಸರ್ವಸಾರಸಂಗ್ರಹರೂಪವಾದ ಮಾತುಗಳನ್ನು ಆಡಿದರು.

ಏತತ್ ತೇ ರಾಜಧರ್ಮಾಣಾಂ ನವನೀತಂ ಯುಧಿಷ್ಠಿರ |
ಬೃಹಸ್ಪತಿರ್ಹಿ ಭಗವಾನ್ ನಾನ್ಯಂ ಧರ್ಮಂ ಪ್ರಶಂಸತಿ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ರಾಜಧರ್ಮಗಳ ಈ ಸಾರವನ್ನು ನಾನು ನಿನಗೆ ಹೇಳಿದ್ದೇನೆ. ಪೂಜ್ಯರಾದ ಬೃಹಸ್ಪತಿಗಳೂ ಸಹ ಬೇರೆಯ ಧರ್ಮವನ್ನು ಪ್ರಶಂಸಿಸುವುದಿಲ್ಲ.
ವಿಶಾಲಾಕ್ಷಶ್ಚ ಭಗವಾನ್ ಕಾವ್ಯಶ್ಚೈವ ಮಹಾತಪಾಃ |
ಸಹಸ್ರಾಕ್ಷೋ ಮಹೇಂದ್ರಶ್ಚ ತಥಾ ಪ್ರಾಚೇತಸೋ ಮನುಃ ॥3॥
ಭರದ್ವಾಜಶ್ಚ ಭಗವಾಂಸ್ತಥಾ ಗೌರಶಿರಾ ಮುನಿಃ |
ರಾಜಶಾಸ್ತ್ರಪ್ರಣೇತಾರೋ ಬ್ರಾಹ್ಮಣಾ ಸತ್ಯವಾದಿನಃ ॥4॥
ರಕ್ಷಾಮೇವ ಪ್ರಶಂಸಂತಿ ಧರ್ಮಂ ಧರ್ಮಭೃತಾಂವರ |
ರಾಜ್ಞಾಂ ರಾಜೀವತಾಮ್ರಾಕ್ಷ ಸಾಧನಂ ಚಾತ್ರ ವೈ ಶೃಣು ॥5॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ಪೂಜ್ಯರಾದ ವಿಶಾಲಾಕ್ಷನು, ಮಹಾತಪಸ್ವಿ- ಯಾದ ಶುಕ್ರನು, ಸಹಸ್ರಾಕ್ಷನಾದ ದೇವೇಂದ್ರನು, ಪ್ರಚೇತಸರ ಪುತ್ರರಾದ ಮನುವು, ಪೂಜ್ಯನಾದ ಭರದ್ವಾಜನು, ಗೌರಶಿರಾ ಋಷಿಯು ಮತ್ತು ರಾಜಶಾಸ್ತ್ರವನ್ನು ರಚಿಸಿದ ಸತ್ಯವಾದಿಗಳಾದ ಬ್ರಾಹ್ಮಣರು ರಕ್ಷಣೆಯನ್ನೇ ರಾಜರಿಗೆ ಶ್ರೇಷ್ಠವಾದ ಧರ್ಮವೆಂದು ಪ್ರಶಂಸಿಸುತ್ತಾರೆ. ಎಲೈ ರಾಜೀವನೇತ್ರನೇ! ಅದಕ್ಕೆ ಸಾಧನೆಯನ್ನು ಕೇಳುವವನಾಗು.
ಚಾರಶ್ಚ ಪ್ರಣಿಧಿಶ್ಚೈವ ಕಾಲೇ ದಾನಮಮತ್ಸರಃ |
ಯುಕ್ತ್ಯಾಽಽದಾನಂ ನ ಚಾದಾನಮಯೋಗೇನ ಯುಧಿಷ್ಠಿರ ॥6॥
ಸತಾಂ ಸಂಗ್ರಹಣಂ ಶೌರ್ಯಂ ದಾಕ್ಷ್ಯಂ ಸತ್ಯಂ ಪ್ರಜಾಹಿತಮ್ |
ಅನಾರ್ಜವೈರಾರ್ಜವೈಶ್ಚ ಶತ್ರುಪಕ್ಷಸ್ಯ ಭೇದನಮ್ ॥7॥
ಸಾಧೂನಾಮಪರಿತ್ಯಾಗಃ ಕುಲೀನಾನಾಂ ಚ ಧಾರಣಮ್ |
ನಿಚಯಶ್ಚ ನಿಚೇಯಾನಾಂ ಸೇವಾ ಬುದ್ಧಿಮತಾಮಪಿ ॥8॥
ಬಲಾನಾಂ ಹರ್ಷಣಂ ನಿತ್ಯಂ ಪ್ರಜಾನಾಮನ್ವವೇಕ್ಷಣಮ್ |
ಕಾರ್ಯೇಷ್ವಖೇದಃ ಕೋಶಸ್ಯ ತಥೈವ ಚ ವಿವರ್ಧನಮ್ ॥9॥
ಎಲೈ ಯುಧಿಷ್ಠಿರನೇ! ಚಾರರು, ಗುರುದೇವತಾಪ್ರಾರ್ಥನೆ, ಯೋಗ್ಯವಾದ ಕಾಲದಲ್ಲಿ ದಾನ, ಮಾತ್ಸರ್ಯರಾಹಿತ್ಯ, ಯುಕ್ತವಾದ ಕಾಲದಲ್ಲಿ ಪ್ರಜೆಗಳಿಂದ ದಾನದ ಸ್ವೀಕಾರ, ಅನ್ಯಾಯದಿಂದ ಪ್ರಜೆಗಳ ಧನವನ್ನು ಸ್ವೀಕರಿಸದಿರುವುದು, ಸಜ್ಜನರನ್ನು ಸಂಗ್ರಹಿಸುವುದು, ಶೌರ್ಯ, ದಕ್ಷತೆ, ಸತ್ಯ, ಪ್ರಜಾಹಿತ, ನೇರ ಮತ್ತು ವಕ್ರಮಾರ್ಗಗಳಿಂದ ಶತ್ರುಪಕ್ಷವನ್ನು ಭೇದಿಸುವುದು. ಸಜ್ಜನರನ್ನು ಪರಿತ್ಯಾಗ ಮಾಡದಿರುವುದು, ಕುಲೀನರಾದವರನ್ನು ಪೋಷಿಸುವುದು, ಸಂಗ್ರಹಮಾಡಬೇಕಾದ ವಸ್ತುವನ್ನು ಸಂಗ್ರಹಿಸುವುದು, ಮೇಧಾವಿಗಳ ಸೇವೆಯನ್ನು ಮಾಡುವುದು, ಸೈನ್ಯವನ್ನು ಸಂತೋಷಪಡಿಸುವುದು, ನಿತ್ಯವೂ ಪ್ರಜೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು, ಕಾರ್ಯಗಳನ್ನು ಮಾಡುವುದರಲ್ಲಿ ದಣಿಯದಿರುವುದು, ಕೋಶವನ್ನು ಅಭಿವೃದ್ಧಿಪಡಿಸುವುದು.
ಪುರಗುಪ್ತಿರವಿಶ್ವಾಸಃ ಪೌರಸಂಘಾತಭೇದನಮ್ |
ಕೇತನಾನಾಂ ಚ ಜೀರ್ಣಾನಾಮವೇಕ್ಷಾ ಚೈವ ಸೀದತಾಮ್ ॥10॥
ದ್ವಿವಿಧಸ್ಯ ಚ ದಂಡಸ್ಯ ಪ್ರಯೋಗಃ ಕಾಲಚೋದಿತಃ |
ಅರಿಮಧ್ಯಸ್ಥಮಿತ್ರಾಣಾಂ ಯಥಾವಚ್ಚಾನ್ವವೇಕ್ಷಣಮ್ ॥11॥
ಉಪಜಾಪಶ್ಚ ಭೃತ್ಯಾನಾಮಾತ್ಮನಃ ಪುರದರ್ಶನಮ್ |
ಅವಿಶ್ವಾಸಃ ಸ್ವಯಂ ಚೈವ ಪರಸ್ಯಾಶ್ವಾಸನಂ ತಥಾ ॥12॥
ನೀತಿಧರ್ಮಾನುಸರಣಂ ನಿತ್ಯಮುತ್ಥಾನಮೇವ ಚ |
ರಿಪೂಣಾಮನವಜ್ಞಾನಂ ನಿತ್ಯಂ ಚಾನಾರ್ಯವರ್ಜನಮ್ ॥13॥
ಉತ್ಥಾನಂ ಹಿ ನರೇಂದ್ರಾಣಾಂ ಬೃಹಸ್ಪತಿರಭಾಷತ |
ರಾಜಧರ್ಮಸ್ಯ ಯನ್ಮೂಲಂ ಶ್ಲೋಕಶ್ಚಾತ್ರ ನಿಬೋಧ ಮೇ ॥14॥
ರಾಜಧಾನಿಯನ್ನು ರಕ್ಷಿಸುವುದು, ಯಾರನ್ನೂ ಬಹಳವಾಗಿ ನಂಬದಿರುವುದು, ಪ್ರಜೆಗಳ ಗುಂಪುಗಾರಿಕೆಯನ್ನು ಭೇದಿಸುವುದು, ಹಳೆಯದಾದ ಮನೆಗಳ ಉಜ್ಜೀವನ -ವನ್ನು ಮಾಡುವುದು, ಕಷ್ಟದಲ್ಲಿದ್ದವರನ್ನು ನೋಡಿಕೊಳ್ಳುವುದು, ವಾಗ್ದಂಡ ಮತ್ತು ಧನದಂಡರೂಪವಾದ ಎರಡು ದಂಡಗಳನ್ನು ಯೋಗ್ಯವಾದ ಕಾಲದಲ್ಲಿ ಪ್ರಯೋ- ಗಿಸುವುದು, ಶತ್ರುಗಳನ್ನು ಮಿತ್ರರನ್ನು ಮತ್ತು ಮಧ್ಯಸ್ಥರನ್ನು ಅವರವರ ಸ್ವಭಾವಕ್ಕೆ ತಕ್ಕಂತೆ ನೋಡಿಕೊಳ್ಳುವುದು, ಭೃತ್ಯರನ್ನು ಕುರಿತು ಪ್ರಿಯವಾಗಿ ಮಾತನಾಡುವುದು, ತಾನೇ ನಗರದ ಅನ್ವೇಕ್ಷಣೆಯನ್ನು ಮಾಡುವುದು, ತಾನು ಸ್ವತಃ ವಿಶ್ವಾಸವನ್ನು ಮಾಡದೇ ಇನ್ನೊಬ್ಬರು ತನ್ನಲ್ಲಿ ವಿಶ್ವಾಸವನ್ನು ಮಾಡುವಂತೆ ಮಾಡುವುದು, ರಾಜನೀತಿಯ ಧರ್ಮಗಳನ್ನು ಅನುಸರಿಸುವುದು, ನಿತ್ಯವೂ ಉದ್ಯಮಶೀಲನಾಗಿ- ರುವುದು, ಶತ್ರುಗಳನ್ನು ಕಡೆಗಣಿಸದಿರುವುದು, ಯಾವಾಗಲೂ ಅನಾರ್ಯರನ್ನು ಮತ್ತು ಅನಾರ್ಯಕಾರ್ಯಗಳನ್ನು ಪರಿತ್ಯಾಗ ಮಾಡುವುದು ಇವುಗಳೆಲ್ಲ ಉದ್ಯಮ- ಶೀಲತೆಯೆಂದು ಬೃಹಸ್ಪತಿಗಳು ಹೇಳಿದ್ದಾರೆ. ಇವು ರಾಜಧರ್ಮಕ್ಕೆ ಮೂಲಭೂತ- ವಾದುದು. ಈ ವಿಷಯದಲ್ಲಿ ನಾನು ಹೇಳುವ ಒಂದು ಶ್ಲೋಕವನ್ನು ಕೇಳು.
ಉತ್ಥಾನೇನಾಮೃತಂ ಲಬ್ಧಮುತ್ಥಾನೇನಾಸುರಾ ಹತಾಃ |
ಉತ್ಥಾನೇನ ಮಹೇಂದ್ರೇಣ ಶ್ರೈಷ್ಠ್ಯಂ ಪ್ರಾಪ್ತಂ ದಿವೀಹ ಚ ॥15॥
ಉದ್ಯಮಶೀಲತೆಯಿಂದ ಅಮೃತವು ಲಬ್ಧವಾಯಿತು. ಉದ್ಯಮಶೀಲತೆಯಿಂದ ಅಸುರರು ಹತರಾದರು. ಉದ್ಯಮಶೀಲನಾದ

ಮಹೇಂದ್ರನಿಂದ ಈ ಲೋಕದ- ಲ್ಲಿಯೂ ಮತ್ತು ಪರಲೋಕದಲ್ಲಿಯೂ ಶ್ರೇಷ್ಠತ್ವವು ಪಡೆಯಲ್ಪಟ್ಟಿತು.
ಉತ್ಥಾನಧೀರಃ ಪುರುಷೋ ವಾಗ್ಧೀರಾನಧಿತಿಷ್ಠತಿ |
ಉತ್ಥಾನಧೀರಂ ವಾಗ್ಧೀರಾ ರಮಯಂತ ಉಪಾಸತೇ ||16||
ಉದ್ಯಮ ಎಂದರೆ ಪ್ರಯತ್ನಧೀರನಾದ ಪುರುಷನು ವಾಗ್ಧೀರರಾದ ಪುರುಷರ ಮೇಲೆ ನಿಲ್ಲುತ್ತಾನೆ. ಉತ್ಥಾನಧೀರನಾದ ಪುರುಷನನ್ನು ವಾಗ್ಧೀರರಾದವರು ಸಂತೋ- ಷಪಡಿಸುತ್ತಾ ಉಪಾಸನೆ ಮಾಡುತ್ತಾರೆ.
ಉತ್ಥಾನಹೀನೋ ರಾಜಾ ಹಿ ಬುದ್ಧಿಮಾನಪಿ ನಿತ್ಯಶಃ |
ಧರ್ಷಣೀಯೋ ರಿಪೂಣಾಂ ಸ್ಯಾದ್ ಭುಜಂಗ ಇವ ನಿರ್ವಿಷಃ ||17||
ರಾಜನು ಬುದ್ಧಿವಂತನಾಗಿದ್ದರೂ ನಿತ್ಯವೂ ಉದ್ಯಮರಹಿತನಾಗಿದ್ದರೆ ವಿಷವಿ- ಲ್ಲದ ಸರ್ಪದಂತೆ ಅವನು ಶತ್ರುಗಳಿಂದ ಪರಾಭವಾದಿ ಅವಮಾನಗಳಿಗೆ ಒಳ- ಗಾಗುತ್ತಾನೆ.
ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ |
ಅಲ್ಪೋಽಪಿ ಹಿ ದಹತ್ಯಗ್ನಿರ್ವಿಷಮಲ್ಪಂ ಹಿನಸ್ತಿ ಚ ||18||
ಬಲಿಷ್ಠನಾದ ರಾಜನು ದುರ್ಬಲನಾದ ಶತ್ರುವನ್ನೂ ಉಪೇಕ್ಷೆ ಮಾಡಬಾರದು. ಅಲ್ಪವಾದ ಅಗ್ನಿಯೂ ಸುಡುತ್ತದೆಯಷ್ಟೇ!. ಅಲ್ಪವಾದ ವಿಷವೂ ಕೊಲ್ಲುತ್ತದೆ- ಯಷ್ಟೇ!
ಏಕಾಂಗೇನಾಪಿ ಸಂಭೂತಃ ಶತ್ರುರ್ದುರ್ಗಸಮಾಶ್ರಿತಃ |
ಸರ್ವಂ ತಾಪಯತೇ ದೇಶಮಪಿ ರಾಜ್ಞಃ ಸಮೃದ್ಧಿನಃ ||19||
ರಾಜ್ಯದ ಆರು ಅಂಗಗಳಿವೆ. ಒಂದು ಅಂಗದಿಂದ ಸಹಿತನಾದ ಶತ್ರುವೂ ಸಹ ರಾಜನ ಕೋಟೆಯನ್ನು ಆಶ್ರಯಿಸಿದರೆ ಸಮೃದ್ಧಿಯುಳ್ಳ ರಾಜನ ಎಲ್ಲ ದೇಶವನ್ನೂ ಸಂತಾಪಗೊಳಿಸುತ್ತಾನೆ.
ರಾಜ್ಞೋ ರಹಸ್ಯಂ ಯದ್ ವಾಕ್ಯಂ ಜಯಾರ್ಥಂ ಲೋಕಸಂಗ್ರಹಃ |
ಹೃದಿ ಯಚ್ಚಾಸ್ಯ ಜಿಹ್ಮಂ ಸ್ಯಾತ್ ಕಾರಣಾರ್ಥಂ ಚ ಯದ್ ಭವೇತ್ ||20||
ರಾಜನು ಶತ್ರುಜಯಾರ್ಥವಾಗಿ ಯಾವ ರಹಸ್ಯ ಮಾತುಗಳನ್ನಾಡುತ್ತಾನೆಯೋ, ಜಯಾರ್ಥವಾಗಿ ಯಾವ ಲೋಕಸಂಗ್ರಹವನ್ನು ಸಂಗ್ರಹಿಸಲು ಮಾಡುತ್ತಾನೆಯೋ (ಲೋಕಸಂಗ್ರಹ - ಪ್ರಜೆಗಳನ್ನು ಸಂಗ್ರಹ ಮಾಡುವುದಕ್ಕಾಗಿ ಏಕಾಂತದಲ್ಲಿ ಯಾವ ಮಾತುಗಳನ್ನಾಡುತ್ತಾನೆಯೋ) ಅದೆಲ್ಲವನ್ನೂ ಮರೆ ಮಾಡಿ ಸಭೆಯಲ್ಲಿ ಯಾವ ಒಳ್ಳೆಯ ಮಾತುಗಳನ್ನಾಡುತ್ತಾನೆಯೋ, ಅವನ ಹೃದಯದಲ್ಲಿ ಯಾವ ಕುಟಿಲತೆ ಇದೆಯೋ ಅವೆಲ್ಲವೂ ಶತ್ರುಗಳನ್ನು ಜಯಿಸುವ ಉದ್ದೇಶದಿಂದ ತನ್ನ ಭಟರು ಮಾಡಬೇಕಾದ ಕಾರ್ಯದ ಸಲುವಾಗಿ ಇರುತ್ತದೆ ಹೊರತು ರಾಜನು ಯಾವಾ- ಗಲೂ ಅಂತಹ ವಕ್ರತೆಯನ್ನು ಮತ್ತು ಕಪಟತನವನ್ನು ಹೊಂದಿರಬಾರದು. (ಲಕ್ಷ್ಮಾಲಂಕಾರ).
ಯಚ್ಚಾಸ್ಯ ಕಾರ್ಯಂ ವೃಜಿನಮಾರ್ಜವೇನೈವ ಧಾರ್ಯತೇ |
ದಂಭನಾರ್ಥಾಯ ಲೋಕಸ್ಯ ಧರ್ಮಿಷ್ಠಾಮಾಚರೇತ್ ಕ್ರಿಯಾಮ್ ||21||
ಶತ್ರುಗಳನ್ನು ಜಯಿಸುವುದಕ್ಕಾಗಿ ಒಂದು ಪಾಪಕಾರ್ಯವನ್ನು ಮಾಡಬೇಕಾ- ದರೂ ಅದನ್ನು ಸರಳತೆಯಿಂದಲೇ ಮಾಡಬೇಕು. ಪ್ರಜೆಗಳನ್ನು ರಂಜಿಸುವುದಕ್ಕಾಗಿ ಧರ್ಮಿಷ್ಠವಾದ ಕಾರ್ಯಗಳನ್ನು ಮಾಡಬೇಕು.
ರಾಜ್ಯಂ ಹಿ ಸುಮಹತ್ತಂತ್ರಂ ದುರ್ಧಾರ್ಯಮಕೃತಾತ್ಮಭಿಃ |
ನ ಶಕ್ಯಂ ಮೃದುನಾ ವೋಢುಮಾಘಾತಸ್ಥಾನಮುಲ್ಬಣಮ್ ||22||
ರಾಜ್ಯವು ಅನೇಕ ತಂತ್ರಗಳಿಗೆ ಅಧೀನವಾದುದು. ಮೃದುವಾದ ಮಾತುಗಳಿಂದ ಉಲ್ಬಣವಾದ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವುದು ಹೇಗೆ ಸಾಧ್ಯವಿಲ್ಲವೋ ಅದರಂತೆ ಮನೋಜಯವಿಲ್ಲದವರಿಂದ ರಾಜ್ಯವನ್ನು ಧರಿಸುವುದು ಸಾಧ್ಯವಿಲ್ಲವು. ಲಕ್ಷ್ಮಾಲಂಕಾರ.
ರಾಜ್ಯಂ ಸರ್ವಾಮಿಷಂ ನಿತ್ಯಮಾರ್ಜವೇನೇಹ ಧಾರ್ಯತೇ |
ತಸ್ಮಾನ್ಮಿಶ್ರೇಣ ಸತತಂ ವರ್ತಿತವ್ಯಂ ಯುಧಿಷ್ಠಿರ ||23||
ಸರ್ವರಿಗೂ ಪ್ರಿಯವಾದ ರಾಜ್ಯವನ್ನು ಕೇವಲ ಋಜುತನದಿಂದಲೇ ಆಳಲು ಸಾಧ್ಯವಿಲ್ಲ. ಎಲೈ ಯುಧಿಷ್ಠಿರನೇ! ಆದ್ದರಿಂದ ಮಾರ್ದವಕಾಠಿನ್ಯಗಳನ್ನು ಮಿಶ್ರ- ಗೊಳಿಸಿ ಕಾರ್ಯಗಳನ್ನು ಮಾಡಬೇಕು. ಲಕ್ಷ್ಮಾಲಂಕಾರ.
ಯದ್ಯಪ್ಯಸ್ಯ ವಿಪತ್ತಿಃ ಸ್ಯಾದ್ ರಕ್ಷಮಾಣಸ್ಯ ವೈ ಪ್ರಜಾಃ |
ಸೋಽಪ್ಯಸ್ಯ ವಿಪುಲೋ ಧರ್ಮ ಏವಂವೃತ್ತಾ ಹಿ ಭೂಮಿಪಾಃ ||24||
ಪ್ರಜೆಗಳ ರಕ್ಷಣೆಯನ್ನು ಮಾಡುತ್ತಾ ರಾಜನಿಗೆ ವಿಪತ್ತುಂಟಾದರೂ ಅದು ಅವನಿಗೆ ವಿಪುಲವಾದ ಧರ್ಮವೇ ಆಗುತ್ತದೆ. ಹಿಂದಿನ ರಾಜರು ಇಂತಹ ನಡತೆ- ಯನ್ನೇ ಹೊಂದಿದ್ದರು.
ಏಷ ತೇ ರಾಜಧರ್ಮಾಣಾಂ ಲೇಶಃ ಸಮನುವರ್ಣಿತಃ |
ಭೂಯಸ್ತೇ ಯತ್ರ ಸಂದೇಹಸ್ತದ್ ಬ್ರೂಹಿ ಕುರುಸತ್ತಮ ||25||
ಎಲೈ ಕುರುಶ್ರೇಷ್ಠನೇ! ನಾನು ನಿನಗೆ ರಾಜಧರ್ಮಗಳ ಒಂದು ಲೇಶವನ್ನು ಮಾತ್ರ ವರ್ಣಿಸಿದ್ದೇನೆ. ನಿನಗೆ ಪುನಃ ಸಂದೇಹವಿದ್ದಲ್ಲಿ ಅದನ್ನು ಹೇಳು.
ವೈಶಂಪಾಯನಃ
ತತೋ ವ್ಯಾಸಶ್ಚ ಭಗವಾನ್ ದೇವಸ್ಥಾನೋಽಶ್ಮನಾ ಸಹ |
ವಾಸುದೇವಃ ಕೃಪಶ್ಚೈವ ಸಾತ್ಯಕಿಃ ಸಂಜಯಸ್ತಥಾ ||26||
ಸಾಧು ಸಾಧ್ವಿತಿ ಸಂಹೃಷ್ಟಾಃ ಪುಷ್ಯಮಾಣೈರಿವಾನನೈಃ |

ಅಸ್ತುವಂಸ್ತೇ ನರವ್ಯಾಘ್ರಂ ಭೀಷ್ಮಂ ಧರ್ಮಭೃತಾಂವರಮ್ ॥27॥
ವೈಶಂಪಾಯನರು ಆಗ ಪೂಜ್ಯರಾದ ವ್ಯಾಸರು ದೇವಸ್ಥಾನನು, ಅಶ್ಮನು, ಕೃಷ್ಣನು, ಕೃಪರು, ಸಾತ್ಯಕಿಯು ಮತ್ತು ಸಂಜಯನು ಸಂತೋಷಗೊಂಡು ಅರಳಿದ ಮುಖವುಳ್ಳವರಾಗಿ ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಭೀಷ್ಮರನ್ನು ಸಾಧು ಸಾಧು ಎಂದು ಪ್ರಶಂಸಿಸಿದರು.
ತತೋ ದೀನಮನಾ ಭೀಷ್ಮಮುವಾಚ ಕುರುಸತ್ತಮಃ |
ನೇತ್ರಾಭ್ಯಾಮಶ್ರುಪೂರ್ಣಾಭ್ಯಾಂ ಪಾದೌ ತಸ್ಯ ಶನೈಃ ಸ್ಪೃಶನ್ ॥28॥
ಅನಂತರ ಕುರುಶ್ರೇಷ್ಠನಾದ ಯುಧಿಷ್ಠಿರನು ನೀರು ತುಂಬಿದ ಕಣ್ಣುಗಳಿಂದ ಕೂಡಿ ಭೀಷ್ಮರ ಪಾದವನ್ನು ನಿಧಾನವಾಗಿ ಸ್ಪರ್ಶಿಸಿ ಮನಸ್ಸಿನಲ್ಲಿ ದೈನ್ಯವನ್ನು ಹೊಂದಿ ಅವರನ್ನು ಕುರಿತು ಮಾತನಾಡಿದನು.
ಶ್ವ ಇದಾನೀಂ ಸ್ವಸಂದೇಹಂ ಪ್ರಕ್ಷ್ಯಾಮಿ ತ್ವಾ ಪಿತಾಮಹ|
ಉಪೈತಿ ಸವಿತಾಪ್ಯಸ್ತಂ ರಸಮಾಪೀಯ ಪಾರ್ಥಿವಮ್ ॥29॥
ಎಲೈ ಪಿತಾಮಹನೇ! ಈಗ ಇರುವ ನನ್ನ ಸಂದೇಹವನ್ನು ನಾಳೆಯ ದಿನ ಪ್ರಶ್ನೆ ಮಾಡುವೆನು. ಸೂರ್ಯನು ಭೂಮಿಯ ರಸವನ್ನು ಹೀರಿ ಅಸ್ತಂಗತನಾಗುತ್ತಿದ್ದಾನೆ. (ಎಂದು ಹೇಳಿದನು).
ತತೋ ದ್ವಿಜಾತೀನಾಮಭಿವಾದ್ಯ ಕೇಶವಃ
ಕೃಪಶ್ಚ ತೇ ಚೈವ ಯುಧಿಷ್ಠಿರಾದಯಃ |
ಪ್ರದಕ್ಷಿಣೀಕೃತ್ಯ ಮಹಾನದೀಸುತಂ
ತತೋ ರಥಾನಾರುರುಹುರ್ಮುದಾ ಯುತಾಃ ॥30॥
ಅನಂತರ ಕೃಷ್ಣನೂ, ಕೃಪರೂ, ಯುಧಿಷ್ಠಿರಾದಿಗಳೂ, ಬ್ರಾಹ್ಮಣರನ್ನು ನಮ- ಸ್ಕರಿಸಿ ಮಹಾನದೀಪುತ್ರರಾದ ಭೀಷ್ಮರಿಗೆ ಪ್ರದಕ್ಷಿಣೆಯನ್ನು ಮಾಡಿ, ಸಂತೋಷದಿಂದ ಕೂಡಿ ತಮ್ಮ ತಮ್ಮ ರಥಗಳನ್ನು ಏರಿದರು.
ದೃಷದ್ವತೀಂ ಚಾಪ್ಯವಗಾಹ್ಯ ಸುವ್ರತಾಃ
ಕೃತೋದಕಾರ್ಯಾಃ ಕೃತಜಪ್ಯಮಂಗಲಾಃ |
ಉಪಾಸ್ಯಸಂಧ್ಯಾಂ ವಿಧಿವತ್ ಪರಂತಪಾಃ
ತತಃ ಪುರಂ ತೇ ವಿವಿಶುರ್ಗಜಾಹ್ವಯಮ್ ॥31॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಪಂಚಾಶೋಽಧ್ಯಾಯಃ ॥58॥
ಒಳ್ಳೆಯ ವ್ರತಧಾರಿಗಳಾದ ಅವರು ವೃಷದ್ವತೀನದಿಯನ್ನು ಸಮೀಪಿಸಿ, ಜಲ- ತರ್ಪಣಾದಿಗಳನ್ನು ಜಪಗಳನ್ನು ಮಂಗಳಕಾರ್ಯಗಳನ್ನು ಮಾಡಿ, ವಿಧಿವತ್ತಾಗಿ ಸಂಧ್ಯಾವಂದನೆಯನ್ನು ಆಚರಿಸಿ, ಅನಂತರ ಪರಂತಪರಾದ ಅವರು ಹಸ್ತಿನಪುರ- ವನ್ನು ಪ್ರವೇಶಿಸಿದರು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 58ನೆಯ ಅಧ್ಯಾಯವು ಮುಗಿಯಿತು
0
59. ಐವತ್ತೊಂಭತ್ತನೆಯ ಅಧ್ಯಾಯ
ಭೀಷ್ಮರಿಂದ ರಾಜೋತ್ಪತ್ತಿಯ ಬ್ರಹ್ಮಕೃತದಂಡನೀತಿಶಾಸ್ತ್ರದ
ಮತ್ತು ಪೃಥುರಾಜಚರಿತ್ರೆಯ ಕಥನ
ವೈಶಂಪಾಯನಃ
ತತಃ ಕಾಲ್ಯಂ ಸಮುತ್ಥಾಯ ಕೃತಪೌರ್ವಾಹ್ಣಿಕಕ್ರಿಯಾಃ |
ಯಯುಸ್ತೇ ನಗರಾಕಾರೈ ರಥೈಃ ಪಾಂಡವಯಾದವಾಃ ॥1॥
ವೈಶಂಪಾಯನರು ಅನಂತರ ಪಾಂಡವ-ಯಾದವರು ಪ್ರಾತಃಕಾಲದಲ್ಲಿ ಬೇಗ ಎದ್ದು ಪೂರ್ವಾಹ್ಣಿಕಕ್ರಿಯೆಗಳನ್ನು ಮಾಡಿ ನಗರದಂತಿದ್ದ ರಥಗಳಿಂದ ಹೊರಟರು.
ಪ್ರಪದ್ಯ ಚ ಕುರುಕ್ಷೇತ್ರಂ ಭೀಷ್ಮಮಾಸಾದ್ಯ ಚಾನಘಮ್ |
ಸುಖಾಂ ಚ ರಜನೀಂ ಪೃಷ್ಟ್ವಾ ಗಾಂಗೇಯಂ ರಥಿನಾಂವರಮ್ ॥2॥
ವ್ಯಾಸಾದೀನಭಿವಾದ್ಯರ್ಷೀನ್ ಸರ್ವೈಸ್ತೈಶ್ಚಾಭಿನಂದಿತಾಃ |
ನಿಷೇದುರಭಿತೋ ಭೀಷ್ಮಂ ಪರಿವಾರ್ಯ ಸಮಂತತಃ ॥3॥
ಕುರುಕ್ಷೇತ್ರವನ್ನು ತಲುಪಿ, ಅನಘರಾದ ಭೀಷ್ಮರನ್ನು ಸಮೀಪಿಸಿ, ರಥಿಕರಲ್ಲಿ ಶ್ರೇಷ್ಠರಾದ ಭೀಷ್ಮರನ್ನು ರಾತ್ರಿಯ ಕುಶಲಪ್ರಶ್ನೆಯನ್ನು ಮಾಡಿ, ವ್ಯಾಸಾದಿ ಮಹರ್ಷಿ -ಗಳನ್ನು ನಮಸ್ಕರಿಸಿ, ಅವರೆಲ್ಲರಿಂದಲೂ ಅಭಿನಂದಿಸಲ್ಪಟ್ಟು ಭೀಷ್ಮರನ್ನು ಸುತ್ತು- ವರಿದು ಕುಳಿತುಕೊಂಡರು.
ತತೋ ರಾಜಾ ಮಹಾತೇಜಾ ಧರ್ಮರಾಜೋ ಯುಧಿಷ್ಠಿರಃ |
ಅಬ್ರವೀತ್ ಪ್ರಾಂಜಲಿರ್ಭೀಷ್ಮಂ ಪ್ರತಿಪೂಜ್ಯಾಭಿವಾದ್ಯ ಚ ॥4॥
ಅನಂತರ ಮಹಾತೇಜಸ್ವಿಯೂ ಧರ್ಮರಾಜನೂ ಆದ ಯುಧಿಷ್ಠಿರನು ಭೀಷ್ಮರನ್ನು ನಮಸ್ಕರಿಸಿ, ಕೈಗಳನ್ನು ಮುಗಿದು ಮಾತನಾಡಿದನು.
ಯ ಏಷ ರಾಜಾ ರಾಜೇತಿ ಶಬ್ದಶ್ಚರತಿ ಭಾರತ |
ಕಥಮೇಷ ಸಮುತ್ಪನ್ನಸ್ತನ್ಮೇ ಬ್ರೂಹಿ ಪಿತಾಮಹ ॥5॥
ಎಲೈ ಭಾರತನೇ! ಪಿತಾಮಹನೇ! `ಈ ರಾಜ ರಾಜ ಎಂಬ ಶಬ್ದವು ಬಳಕೆ- ಯಲ್ಲಿದೆಯಷ್ಟೇ! ಈ ಶಬ್ದವು ಹೇಗೆ ಉತ್ಪನ್ನವಾಯಿತು?'

ಎಂಬುದನ್ನು ನನಗೆ ಹೇಳು.
ತುಲ್ಯಪಾಣಿಶಿರೋಗ್ರೀವಸ್ತುಲ್ಯಬುದ್ಧೀಂದ್ರಿಯಾತ್ಮಕಃ |
ತುಲ್ಯದುಃಖಸುಖಾತ್ಮಾ ಚ ತುಲ್ಯಪೃಷ್ಠಭುಜೋದರಃ ||6||
ತುಲ್ಯಶುಕ್ರಾಸ್ಥಿಮಜ್ಜಶ್ಚ ತುಲ್ಯಮಾಂಸಾಸೃಗೇವ ಚ |
ನಿಃಶ್ವಾಸೋಚ್ಚ್ವಾಸತುಲ್ಯಶ್ಚ ತುಲ್ಯಪ್ರಾಣಶರೀರವಾನ್ ||7||
ಸಮಾನಜನ್ಮಮರಣಃ ಸಮಃ ಸರ್ವಗುಣೈರ್ನೃಣಾಮ್ |
ವಿಶಿಷ್ಟಬುದ್ಧೀನ್ ಶೂರಾಂಶ್ಚ ಕಥಮೇಕೋಽಧಿತಿಷ್ಠತಿ ||8||
ಸಮಾನವಾದ ಹಸ್ತಶಿರೋಗ್ರೀವಗಳು, ಸಮಾನವಾದ ಬುದ್ಧೀಂದ್ರಿಯಗಳು, ಸಮಾನವಾದ ಸುಖದುಃಖಗಳು, ಸಮಾನವಾದ ಬೆನ್ನು ಭುಜ ಮತ್ತು ಉದರಗಳು, ಸಮಾನವಾದ ಶುಕ್ಲ ಅಸ್ಥಿ ಮಜ್ಜಗಳು, ಸಮಾನವಾದ ಮಾಂಸರಕ್ತಗಳು, ಸಮಾನ- ವಾದ ಉಚ್ಛ್ವಾಸ ನಿಶ್ವಾಸಗಳು, ಸಮಾನವಾದ ಪ್ರಾಣಶರೀರಗಳು, ಸಮಾನವಾದ ಜನ್ಮಮರಣಗಳು ಹೀಗಿದ್ದು ಎಲ್ಲ ಗುಣಗಳಿಂದಲೂ ಉಳಿದ ಮನುಷ್ಯರಿಗೆ ಸಮಾನನಾಗಿರುವ ಒಬ್ಬನು ಮೇಧಾವಿಗಳಾದ ಶೂರರಾದ ಅನೇಕರ ಮೇಲೆ ಹೇಗೆ ಅವರನ್ನು ಮೆಟ್ಟಿ ನಿಲ್ಲುತ್ತಾನೆ?
ಕಥಮೇಕೋ ಮಹೀಂ ಕೃತ್ಸ್ನಾಂ ವೀರಶೂರಾರ್ಯಸಂಕುಲಾಮ್ |
ರಕ್ಷತ್ಯಪಿ ಚ ಲೋಕೋಽಸ್ಯ ಪ್ರಸಾದಮಭಿವಾಂಛತಿ ||9||
ವೀರ, ಶೂರ ಮತ್ತು ಶ್ರೇಷ್ಠರಿಂದ ನಿಬಿಡವಾದ ಸಮಗ್ರವಾದ ಭೂಮಿಯನ್ನು ಒಬ್ಬನೇ ಹೇಗೆ ರಕ್ಷಿಸುತ್ತಾನೆ? ಲೋಕವಾದರೂ ಅವನ ಅನುಗ್ರಹವನ್ನು ಹೇಗೆ ಬಯಸುತ್ತದೆ?
ಏಕಸ್ಯ ಚ ಪ್ರಸಾದೇನ ಕೃತ್ಸ್ನೋ ಲೋಕಃ ಪ್ರಸೀದತಿ |
ವ್ಯಾಕುಲೇನಾಕುಲಃ ಸರ್ವೋ ಭವತೀತಿ ವಿನಿಶ್ಚಿತಃ ||10||
ಅವನೊಬ್ಬನು ಪ್ರಸನ್ನನಾದರೆ ಲೋಕವೆಲ್ಲವೂ ಪ್ರಸನ್ನವಾಗುತ್ತದೆ. ಅವನು ವ್ಯಾಕುಲಗೊಂಡರೆ ಸರ್ವವೂ ವ್ಯಾಕುಲವಾಗುತ್ತದೆ ಎಂಬುದು ನಿಶ್ಚಿತವಾದುದು.
ಏತದಿಚ್ಛಾಮ್ಯಹಂ ಸರ್ವಂ ತತ್ತ್ವೇನ ಭರತರ್ಷಭ |
ಶ್ರೋತುಂ ತನ್ಮೇ ಯಥಾತತ್ತ್ವಂ ಪ್ರಬ್ರೂಹಿ ವದತಾಂವರ ||11||
ಎಲೈ ಭರತರ್ಷಭನೇ! ಇದನ್ನು ನಾನು ಯಥಾರ್ಥವಾಗಿ ತಿಳಿಯಲು ಬಯ- ಸುತ್ತೇನೆ. ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ಅದನ್ನು ನನಗೆ ಯಥಾರ್ಥ- ವಾಗಿ ಹೇಳುವವನಾಗು.
ನೈತತ್ ಕಾರಣಮಲ್ಪಂ ಹಿ ಭವಿಷ್ಯತಿ ವಿಶಾಂಪತೇ |
ಯದೇಕಸ್ಮಿನ್ ಜಗತ್ ಸರ್ವಂ ದೇವವದ್ ಯಾತಿ ಸನ್ನತಿಮ್ ||12||
ಎಲೈ ರಾಜನೇ! ಒಬ್ಬ ವ್ಯಕ್ತಿಯಲ್ಲಿ ಸಮಸ್ತವಾದ ಜಗತ್ತು ದೇವನಂತೆ ಸನ್ನತಿ- ಯನ್ನು ಹೊಂದುವುದಕ್ಕೆ ಅಲ್ಪವಾದ ಕಾರಣವು ಇರಲಾರದು.
ಭೀಷ್ಮಃ
ನಿಯತಸ್ತ್ವಂ ನರಶ್ರೇಷ್ಠ ಶೃಣು ಸರ್ವಮಶೇಷತಃ |
ಯಥಾ ರಾಜ್ಯಂ ಸಮುತ್ಪನ್ನಮಾದೌ ಕೃತಯುಗೇಽಭವತ್ ||13||
ಭೀಷ್ಮರು ಎಲೈ ನರಶ್ರೇಷ್ಠನೇ! ನೀನು ಕೃತಯುಗದಲ್ಲಿ ಮೊದಲು ಹೇಗೆ ರಾಜ್ಯವು ಉತ್ಪನ್ನವಾಯಿತು ಎಂಬುದನ್ನು ನಿಯಮಬದ್ಧನಾಗಿ ಕೇಳು.
ನೈವ ರಾಜ್ಯಂ ನ ರಾಜಾಸೀನ್ನ ದಂಡೋ ನ ಚ ದಾಂಡಿಕಃ |
ಧರ್ಮೇಣೈವ ಪ್ರಜಾಃ ಸರ್ವಾ ರಕ್ಷಂತಿ ಚ ಪರಸ್ಪರಮ್ ||14||
ಆಗ ರಾಜ್ಯವಾಗಲೀ, ರಾಜನಾಗಲೀ, ದಂಡವಾಗಲೀ, ದಂಡವನ್ನು ಕೊಡು- ವವನಾಗಲೀ ಇರಲಿಲ್ಲ. ಪ್ರಜೆಗಳು ಧರ್ಮದಿಂದಲೇ ಪರಸ್ಪರವಾಗಿ ರಕ್ಷಿಸಿಕೊಳ್ಳು- ತ್ತಿದ್ದರು.
ಪಾಲಯಾನಾಸ್ತಥಾನ್ಯೋನ್ಯಂ ನರಾ ಧರ್ಮೇಣ ಭಾರತ |
ಖೇದಂ ಪರಮಮಾಜಗ್ಮುಸ್ತತಸ್ತಾನ್ ಮೋಹ ಆವಿಶತ್ ||15||
ಎಲೈ ಭಾರತನೇ! ಮನುಷ್ಯರು ಧರ್ಮದಿಂದ ಅನ್ಯೋನ್ಯವಾಗಿ ಪಾಲನೆ ಮಾಡುತ್ತಿದ್ದಾಗ ಅವರಿಗೆ ಬಹಳ ಖೇದವುಂಟಾಯಿತು. ಅನಂತರ ಅದರಿಂದ ಮೋಹ ಎಂದರೆ ಭ್ರಾಂತಿಯುಂಟಾಯಿತು.
ತೇ ಮೋಹವಶಮಾಪನ್ನಾ ಮಾನವಾ ಮನುಜರ್ಷಭ |
ಪ್ರತಿಪತ್ತಿವಿಮೋಹಾಚ್ಚ ಧರ್ಮಸ್ತೇಷಾಮನೀನಶತ್ ||16||
ಎಲೈ ಮನುಜಶ್ರೇಷ್ಠನೇ! ಮೋಹವಶರಾದ ಮಾನವರು ಕರ್ತವ್ಯ ಅಕರ್ತವ್ಯ ಪ್ರಜ್ಞೆಯನ್ನು ಕಳೆದುಕೊಂಡರು. ಅದರಿಂದ ಅವರ ಧರ್ಮವು ನಾಶವನ್ನು ಹೊಂದಿತು.
ನಷ್ಟಾಯಾಂ ಪ್ರತಿಪತ್ತೌ ತು ಮೋಹವಶ್ಯಾ ನರಾಸ್ತದಾ |
ಲೋಭಸ್ಯ ವಶಮಾಪನ್ನಾಃ ಸರ್ವೇ ಭರತಸತ್ತಮ ||17||
ಎಲೈ ಭಾರತಶ್ರೇಷ್ಠನೇ! ಆಗ ಅಂತಹ ವಿವೇಕವು ನಷ್ಟವಾಗುತ್ತಿರಲು ಮೋಹಕ್ಕೆ ವಶರಾದ ಮಾನವರೆಲ್ಲರೂ ಹೊಸದಾಗಿ ಲೋಭಕ್ಕೆ ವಶರಾದರು.
ಅಪ್ರಾಪ್ತಸ್ಯಾಭಿಮರ್ಶಂ ತು ಕುರ್ವಂತೋ ಮನುಜಾಸ್ತತಃ |
ಕಾಮೋ ನಾಮಾಪರಸ್ತತ್ರ ಸಮಪದ್ಯತ ವೈ ಪ್ರಭೋ ||18||

ಮನುಷ್ಯರು ಆಗ ತಮಗೆ ದೊರೆಯದ ವಸ್ತುವನ್ನು ಪಡೆಯಲು ಪ್ರಯತ್ನ ಮಾಡಿದರು. ಎಲೈ ಪ್ರಭುವೇ! ಆಗ ಕಾಮ ಎಂಬ ಇನ್ನೊಂದು ದೋಷವು ಜನಿಸಿತು.

ತಾಂಸ್ತು ಕಾಮವಶಂ ಪ್ರಾಪ್ತಾನ್ ರಾಗೋ ನಾಮ ಸಮಸ್ಪೃಶತ್ |
ರಕ್ತಾಶ್ಚ ನಾಭ್ಯಜಾನಂತ ಕಾರ್ಯಾಕಾರ್ಯೇ ಯುಧಿಷ್ಠಿರ ॥19॥

ಕಾಮವಶರಾದ ಆ ಮಾನವರನ್ನು ರಾಗ (ಅತಿಯಾಸೆ) ಎಂಬ ಇನ್ನೊಂದು ದೋಷವು ಸೇರಿಕೊಂಡಿತು. ಎಲೈ ಯುಧಿಷ್ಠಿರನೇ! ಅಂತಹ ರಾಗಕ್ಕೆ ವಶರಾದ ಮಾನವರು ಕಾರ್ಯಾಕಾರ್ಯಗಳನ್ನು ತಿಳಿಯಲಿಲ್ಲ.

ಅಗಮ್ಯಾಗಮನಂ ಚೈವ ವಾಚ್ಯಾವಾಚ್ಯಂ ತಥೈವ ಚ |
ಭಕ್ಷ್ಯಾಭಕ್ಷ್ಯಂ ಚ ರಾಜೇಂದ್ರ ದೋಷಾದೋಷಂ ಚ ನಾತ್ಯಜನ್ ॥20॥

ಎಲೈ ರಾಜೇಂದ್ರನೇ! ಅವರು ಗಮ್ಯ-ಅಗಮ್ಯಗಮನಗಳನ್ನು, ವಾಚ್ಯ-ಅವಾಚ್ಯ -ಗಳನ್ನು, ಭಕ್ಷ್ಯ-ಅಭಕ್ಷ್ಯಗಳನ್ನು, ದೋಷ-ಅದೋಷಗಳನ್ನು ಯಾವುದನ್ನೂ ಬಿಡಲಿಲ್ಲ.

ವಿಪ್ಲುತೇ ನರಲೋಕೇಽಸ್ಮಿಂಸ್ತತೋ ಬ್ರಹ್ಮ ನನಾಶ ಹ |
ನಾಶಾಚ್ಚ ಬ್ರಹ್ಮಣೋ ರಾಜನ್ ಧರ್ಮೋ ನಾಶಮಥಾಗಮತ್ ॥21॥

ಈ ನರಲೋಕವು ವಿಪ್ಲವಕ್ಕೆ ಒಳಗಾಗುತ್ತಿರಲು ವೇದವು ನಾಶವನ್ನು ಹೊಂದಿತು. ಎಲೈ ರಾಜನೇ! ವೇದಗಳ ನಾಶದಿಂದ ಧರ್ಮವು ನಾಶವನ್ನು ಹೊಂದಿತು.

ನಷ್ಟೇ ಬ್ರಹ್ಮಣಿ ಧರ್ಮೇ ಚ ದೇವಾಸ್ತ್ರಸಮಥಾಗಮನ್ |
ತೇ ತ್ರಸ್ತಾ ನರಶಾರ್ದೂಲ ಬ್ರಹ್ಮಾಣಂ ಶರಣಂ ಯಯುಃ ॥22॥

ವೇದವು ಮತ್ತು ಧರ್ಮವು ನಾಶವನ್ನು ಹೊಂದುತ್ತಿರಲು ದೇವತೆಗಳು ಗಾಬರಿ -ಗೊಂಡರು. ಎಲೈ ನರಶಾರ್ದೂಲನೇ! ಗಾಬರಿಗೊಂಡ ಅವರು ಬ್ರಹ್ಮದೇವರಿಗೆ ಶರಣಾಗತರಾದರು.

ಪ್ರಪದ್ಯ ಭಗವಂತಂ ತೇ ದೇವಾ ಲೋಕಪಿತಾಮಹಮ್ |
ಊಚುಃ ಪ್ರಾಂಜಲಯಃ ಸರ್ವೇ ದುಃಖಶೋಕಭಯಾರ್ದಿತಾಃ ॥23॥

ದುಃಖಶೋಕಭಯಗಳಿಂದ ಕೂಡಿದ ಆ ದೇವತೆಗಳೆಲ್ಲರೂ ಪೂಜ್ಯರಾದ ಲೋಕಪಿತಾಮಹರಾದ ಬ್ರಹ್ಮದೇವರ ಬಳಿಯಲ್ಲಿ ಹೋಗಿ, ಕೈಗಳನ್ನು ಮುಗಿದು ಮಾತನಾಡಿದರು.

ಭಗವನ್ ನರಲೋಕಸ್ಥಂ ನಷ್ಟಂ ಬ್ರಹ್ಮ ಸನಾತನಮ್ |
ಲೋಭಮೋಹಾದಿಭಿರ್ಭಾವೈಸ್ತತೋ ನೋ ಭಯಮಾವಿಶತ್ ॥24॥

ಪೂಜ್ಯನೇ! ಮನುಷ್ಯಲೋಕದಲ್ಲಿದ್ದ ಶಾಶ್ವತವಾದ ವೇದವು ಲೋಭ, ಮೋಹ ಮೊದಲಾದ ದುಷ್ಟಭಾವನೆಗಳಿಂದ ನಷ್ಟವಾಗಿದೆ. ಅದರಿಂದ ನಮಗೆ ಭಯ- ವುಂಟಾಗಿದೆ.

ಬ್ರಹ್ಮಣಶ್ಚ ಪ್ರಣಾಶೇನ ಧರ್ಮೋಽಪ್ಯನಶದೀಶ್ವರ |
ತತಃ ಸ್ಮ ಸಮತಾಂ ಯಾತಾ ಮರ್ತ್ಯೈಸ್ತ್ರಿಭುವನೇಶ್ವರ ॥25॥

ಎಲೈ ಈಶ್ವರನೇ! ವೇದಗಳ ನಾಶದಿಂದ ಧರ್ಮವು ನಾಶವನ್ನು ಹೊಂದಿದೆ. ಎಲೈ ತ್ರಿಭುವನೇಶ್ವರನೇ! ಅದರಿಂದ ನಾವು ಮನುಷ್ಯರಿಗೆ ಸಮಾನರಾಗಿ ಮಾಡ- ಲ್ಪಟ್ಟಿದ್ದೇವೆ.

ಅಧೋ ಹಿ ವರ್ಷಮಸ್ಮಾಕಂ ಭೌಮಾಸ್ತೂರ್ಧ್ವಪ್ರಹರ್ಷಿಣಃ |
ಕ್ರಿಯಾವ್ಯುಪರಮಾತ್ ತೇಷಾಂ ತತೋಽಗಚ್ಛಾಮ ಸಂಶಯಮ್ ॥26॥

ನಾವು ಕೆಳಗಡೆಗೆ ಎಲ್ಲವನ್ನೂ ಸುರಿಸುವವರು. ಭೂಮಿಯಲ್ಲಿರುವವರು ಯಜ್ಞಾದಿಗಳಿಂದ ಊರ್ಧ್ವಲೋಕದಲ್ಲಿರುವ ದೇವತೆಗಳನ್ನು ಸಂತೋಷಗೊಳಿಸು- ವವರು. ಆದರೆ ಭೂಮಿಯಲ್ಲಿರುವ ಮನುಷ್ಯರ ಕ್ರಿಯಾಲೋಪದಿಂದ ನಾವು ಈಗ ಸಂಶಯಕ್ಕೆ ಒಳಗಾಗಿದ್ದೇವೆ.

ಅತ್ರ ನಿಶ್ರೇಯಸಂ ಯನ್ನಸ್ತದ್ ಧ್ಯಾಯಸ್ವ ಪಿತಾಮಹ |
ತ್ವತ್ಪ್ರಸಾದಸಮುತ್ಥೋಽಸೌ ಪ್ರಭಾವೋ ನೋ ವಿನಶ್ಯತಿ ॥27॥

ಎಲೈ ಪಿತಾಮಹರೇ! ಈ ವಿಷಯದಲ್ಲಿ ಯಾವುದು ನಮಗೆ ಶ್ರೇಯಸ್ಕರವೋ ಅದನ್ನು ಚಿಂತಿಸಿ. ಇಲ್ಲದಿದ್ದರೆ ನಿಮ್ಮ ಅನುಗ್ರಹದಿಂದ ಉಂಟಾದ ನಮ್ಮ ಈ ಮಹಿಮೆಯು ನಾಶವನ್ನು ಹೊಂದುತ್ತದೆ ಎಂದು ಹೇಳಿದರು.

ತಾನುವಾಚ ಸುರಾನ್ ಸರ್ವಾನ್ ಸ್ವಯಂಭೂರ್ಭಗವಾಂಸ್ತತಃ |
ಶ್ರೇಯೋಽಹಂ ಚಿಂತಯಿಷ್ಯಾಮಿ ವ್ಯೇತು ವೋ ಭೀಃ ಸುರರ್ಷಭಾಃ ॥28॥

ಸ್ವಯಂಭುಗಳಾದ ಪೂಜ್ಯರಾದ ಬ್ರಹ್ಮದೇವರು ಆ ಎಲ್ಲ ದೇವತೆಗಳನ್ನು ಕುರಿತು ಎಲೈ ದೇವಶ್ರೇಷ್ಠರೇ! ನಿಮ್ಮ ಮನಸ್ಸಿನ ಭಯವನ್ನು ಬಿಡಿ. ನಿಮ್ಮ ಶ್ರೇಯಸ್ಸನ್ನು ನಾನು ಚಿಂತಿಸುವೆನು. (ಎಂದು ಹೇಳಿದರು).

ತತೋಽಧ್ಯಾಯಸಹಸ್ರಾಣಾಂ ಶತಂ ಚಕ್ರೇ ಸ್ವಬುದ್ಧಿಜಮ್ |
ಯತ್ರ ಧರ್ಮಸ್ತಥೈವಾರ್ಥಃ ಕಾಮಶ್ಚೈವಾನುವರ್ಣಿತಃ ॥29॥

ಅನಂತರ ಒಂದು ಲಕ್ಷಗ್ರಂಥಪರಿಮಿತವಾದ ಪಂಚರಾತ್ರಶಾಸ್ತ್ರವನ್ನು ಅವರು ತಮ್ಮ ಬುದ್ಧಿಯಿಂದ ರಚಿಸಿದರು. ಅದರಲ್ಲಿ ಧರ್ಮವೂ, ಅರ್ಥವೂ ಮತ್ತು ಕಾಮವೂ ಚೆನ್ನಾಗಿ ವರ್ಣಿತವಾಗಿದೆ. (ಲಕ್ಷಾಲಂಕಾರ)

ತ್ರಿವರ್ಗ ಇತಿ ವಿಖ್ಯಾತೋ ಗಣ ಏಷ ಸ್ವಯಂಭುವಾ |
ಚತುರ್ಥೋ ಮೋಕ್ಷ ಇತ್ಯೇವ ಪೃಥಗರ್ಥಃ ಪೃಥಗ್ ಗಣಃ ॥30॥

ತ್ರಿವರ್ಗ ಎಂದು ಪ್ರಖ್ಯಾತವಾದ ಈ ಗಣವು ಬ್ರಹ್ಮದೇವರಿಂದ ವಿಭಜಿಸಲ್ಪಟ್ಟಿದೆ. ನಾಲ್ಕನೆಯದಾದ ಮೋಕ್ಷವು ಇನ್ನೊಂದು ಪುರುಷಾರ್ಥ. ಅದರ ಗಣವೇ ಪ್ರತ್ಯೇಕ- ವಾದುದು.

ಮೋಕ್ಷಸ್ಯಾಪಿ ತ್ರಿವರ್ಗೋಽನ್ಯಃ ಪ್ರೋಕ್ತಃ ಸತ್ತ್ವಂ ರಜಸ್ತಮಃ |
ಸ್ಥಾನಂ ವೃದ್ಧಿಃ ಕ್ಷಯಶ್ಚೈವ ತ್ರಿವರ್ಗಶ್ಚೈವ ದಂಡಜಃ ||31||
ಮೋಕ್ಷಕ್ಕೂ ಸಹ ಶಾಸ್ತ್ರಾಭ್ಯಾಸ, ಧ್ಯಾನ, ಅಪರೋಕ್ಷಜ್ಞಾನ ಎಂಬ ಬೇರೆಯ ತ್ರಿವರ್ಗವಿದೆ. ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಇನ್ನೊಂದು ತ್ರಿವರ್ಗವಿದೆ. ಸ್ಥಾನ, ವೃದ್ಧಿ ಮತ್ತು ಕ್ಷಯ ಎಂಬ ದಂಡನೀತಿಗೆ ಸಂಬಂಧಿಸಿದ ಇನ್ನೊಂದು ತ್ರಿವರ್ಗ- ವೂ ಇದೆ.
ಆತ್ಮಾ ದೇಶಶ್ಚ ಕಾಲಶ್ಚಾಪ್ಯುಪಾಯಾಃ ಕೃತ್ಯಮೇವ ಚ |
ಸಹಾಯಾಃ ಕಾರಣಂ ಚೈವ ಷಡ್ವರ್ಗೋ ನೀತಿಜಃ ಸ್ಮೃತಃ ||32||
ಆತ್ಮಾ ಅಂದರೆ ತಾನು, ದೇಶ, ಕಾಲ, ಉಪಾಯ, ಕಾರ್ಯ, ಸಹಾಯಗಳೆಂಬ ಕಾರಣ ಎಂಬ ಷಡ್ವರ್ಗವು ರಾಜನೀತಿಗೆ ಸಂಬಂಧಿಸಿವೆ.
ತ್ರಯೀ ಚಾನ್ವೀಕ್ಷಿಕೀ ಚೈವ ವಾರ್ತಾ ಚ ಭರತರ್ಷಭ |
ದಂಡನೀತಿಶ್ಚ ವಿಪುಲಾ ವಿದ್ಯಾಸ್ತತ್ರ ನಿದರ್ಶಿತಾಃ ||33||
ಎಲೈ ಭರತಶ್ರೇಷ್ಠನೇ! ವೇದವಿದ್ಯೆ, ತರ್ಕವಿದ್ಯೆ, ವಾಣಿಜ್ಯವಿದ್ಯೆ, ದಂಡನೀತಿ ಈ ವಿಪುಲವಾದ ವಿದ್ಯೆಗಳು ಬ್ರಹ್ಮದೇವರು ರಚಿಸಿದ ದಂಡನೀತಿಶಾಸ್ತ್ರದಲ್ಲಿ ಪ್ರದರ್ಶಿಸಲ್ಪಟ್ಟಿವೆ.
ಅಮಾತ್ಯರಕ್ಷಾಪ್ರಣಿಧೀ ರಾಜಪುತ್ರಸ್ಯ ರಕ್ಷಣಮ್ |
ಚಾರಶ್ಚ ವಿವಿಧೋಪಾಯಃ ಪ್ರಣಿಧಿಶ್ಚ ಪೃಥಗ್ವಿಧಃ ||34||
ಸಾಮ ಚೋಪಪ್ರದಾನಂ ಚ ಭೇದೋ ದಂಡಶ್ಚ ಪಾಂಡವ |
ಉಪೇಕ್ಷಾ ಪಂಚಮೀ ಚಾತ್ರ ಕಾರ್ತ್ಸ್ನ್ಯೇನ ಸಮುದಾಹೃತಾ ||35||
ಅಮಾತ್ಯರು, ರಕ್ಷಣೆ, ದೇವತಾಪ್ರಾರ್ಥನೆ, ರಾಜಪುತ್ರನ ರಕ್ಷಣೆ, ಗೂಢ- ಚಾರರು(ಭಟರು), ವಿವಿಧೋಪಾಯಗಳು, ವಿವಿಧವಾದ ಗೂಢಚಾರರು, ಸಾಮ, ದಾನ, ಭೇದ, ದಂಡ, ಉಪೇಕ್ಷಾ ಎಂಬ ಐದನೆಯ ಉಪಾಯ ಎಲ್ಲವೂ ಸಮಗ್ರ- ವಾಗಿ ಅಲ್ಲಿ ನಿರೂಪಿಸಲ್ಪಟ್ಟಿವೆ.
ಮಂತ್ರಶ್ಚ ವರ್ಣಿತಃ ಕೃತ್ಸ್ನಸ್ತಥಾ ಭೇದಾರ್ಥ ಏವ ಚ |
ವಿಭ್ರಂಶೈಶ್ಚೈವ ಮಂತ್ರಸ್ಯ ಸಿದ್ಧ್ಯಸಿದ್ಧ್ಯೋಶ್ಚ ಯತ್ ಫಲಮ್ ||36||
ಸಂಧಿಶ್ಚ ತ್ರಿವಿಧಾಭಿಖ್ಯೋ ಹೀನೋ ಮಧ್ಯಸ್ತಥೋತ್ತಮಃ |
ಭಯಸತ್ಕಾರವಿತ್ತಾಖ್ಯಃ ಕಾರ್ತ್ಸ್ನ್ಯೇನ ಪರಿವರ್ಣಿತಃ ||37||
ಮಂತ್ರಾಲೋಚನೆಗಳು ಸಮಗ್ರವಾಗಿ ಅಲ್ಲಿ ವರ್ಣಿತವಾಗಿವೆ. ಅದರಂತೆ ಭೇದ -ರೂಪ ಉಪಾಯವು, ಮಂತ್ರದ ಭ್ರಂಶದಿಂದುಂಟಾಗುವ ಸಿದ್ಧ್ಯಸಿದ್ಧಿಗಳು, ಅದರ ಫಲ ಉತ್ತಮ ಮಧ್ಯಮ ಮತ್ತು ಅಧಮ ಎಂಬ ಭಯ, ಸತ್ಕಾರ ಮತ್ತು ಧನದಿಂದ ಉಂಟುಮಾಡಿದ ಮೂರು ವಿಧವಾದ ಸಂಧಿಗಳು ಅಲ್ಲಿ ಸಮಗ್ರವಾಗಿ ವರ್ಣಿತ- ವಾಗಿವೆ. (ಧನವನ್ನು ಕೊಟ್ಟು ಸಂಧಿಮಾಡಿಕೊಳ್ಳುವುದು ಉತ್ತಮವಾದುದು. ಸತ್ಕಾರವನ್ನು ಪಡೆದು ಸಂಧಿಯನ್ನು ಮಾಡಿಕೊಳ್ಳುವುದು ಮಧ್ಯಮವಾದುದು. ಭಯದಿಂದ ಸಂಧಿಯನ್ನು ಮಾಡಿಕೊಳ್ಳುವುದು ಅಧಮವಾದುದು)
ಯಾತ್ರಾಕಾಲಾಶ್ಚ ಚತ್ವಾರಸ್ತ್ರಿವರ್ಗಸ್ಯ ಚ ವಿಸ್ತರಃ |
ವಿಜಯೋ ಧರ್ಮಯುಕ್ತಶ್ಚ ತಥಾರ್ಥವಿಜಯಶ್ಚ ಹ ||38||
ನಾಲ್ಕು ವಿಧವಾದ ಯಾತ್ರಾ ಕಾಲಗಳು, ಧರ್ಮಾರ್ಥಕಾಮರೂಪವಾದ ತ್ರಿವರ್ಗದ ವಿಸ್ತಾರವು, ಧರ್ಮೋಕ್ತವಾದ ವಿಜಯವು ಅರ್ಥವಿಜಯವು ಅಲ್ಲಿ ಹೇಳಲ್ಪಟ್ಟಿದೆ. (ಮಿತ್ರರ ವೃದ್ಧಿ, ತನ್ನ ಕೋಶದ ವೃದ್ಧಿ, ತನ್ನ ಶತ್ರುಗಳ ದೌರ್ಬಲ್ಯ ಅವರ ಕೋಶನಾಶ ಇವು ಯಾತ್ರಾಕಾಲ ಎಂದರೆ ಯುದ್ಧಕ್ಕೆ ಹೊರಡಲು ಉಚಿತ- ವಾದ ನಾಲ್ಕು ಕಾಲಗಳು)
ಆಸುರಶ್ಚೈವ ವಿಜಯಸ್ತಥಾ ಕಾರ್ತ್ಸ್ನ್ಯೇನ ವರ್ಣಿತಃ |
ಲಕ್ಷಣಂ ಪಂಚವರ್ಗಸ್ಯ ತ್ರಿವಿಧಂ ಚಾತ್ರ ವರ್ಣಿತಮ್ ||39||
ಆಸುರವಿಧಾನದ ವಿಜಯವು ಅಲ್ಲಿ ಸಮಗ್ರವಾಗಿ ವರ್ಣಿತವಾಗಿದೆ. ಉತ್ತಮ- ಮಧ್ಯಮಾಧಮರೂಪವಾದ ಅಮಾತ್ಯ, ರಾಷ್ಟ್ರ, ದುರ್ಗ, ಸೇನೆ ಮತ್ತು ಕೋಶ- ವೆಂಬ ಪಂಚವರ್ಗದ ಲಕ್ಷಣವು ಅಲ್ಲಿ ಹೇಳಲ್ಪಟ್ಟಿದೆ.
ಪ್ರಕಾಶಶ್ಚಾಪ್ರಕಾಶಶ್ಚ ದಂಡೋಽಥ ಪರಿಶಬ್ದಿತಃ |
ಪ್ರಕಾಶೋಽಷ್ಟವಿಧಸ್ತತ್ರ ಗುಹ್ಯಸ್ತು ಬಹುವಿಸ್ತರಃ ||40||
ಪ್ರಕಾಶವಾದ ಮತ್ತು ರಹಸ್ಯವಾದ ದಂಡಗಳು ಅಲ್ಲಿ ಹೇಳಲ್ಪಟ್ಟಿವೆ. ಪ್ರಕಾಶ- ವಾದ ದಂಡವು ಅಷ್ಟವಿಧವಾದುದು, ರಹಸ್ಯವಾದ ದಂಡವು ಬಹಳ ವಿಸ್ತಾರವಾ- ದುದು.
ರಥಾ ನಾಗಾ ಹಯಾಶ್ಚೈವ ಪಾದಾತಾಶ್ಚೈವ ಪಾಂಡವ |
ವಿಷ್ಟಿರ್ನಾವಶ್ಚರಾಶ್ಚೈವ ದೇಶಿಕಾಃ ಇತಿ ಚಾಷ್ಟಕಮ್ ||41||
ಪ್ರಕಾಶರೂಪವಾದ ದಂಡವು(ಸೈನ್ಯವು) ರಥಗಳು, ಗಜಗಳು, ಅಶ್ವಗಳು, ಪದಾತಿಗಳು, ಭಾರವನ್ನು ಹೊರುವವರು, ನಾವಿಕರು, ಗೂಢಚಾರರು, ಆಚಾ- ರ್ಯರು ಎಂಬ ಎಂಟು ಅಂಗಗಳನ್ನು ಒಳಗೊಂಡಿದೆ.
ಅಂಗಾನ್ಯೇತಾನಿ ಕೌರವ್ಯ ಪ್ರಕಾಶಾನಿ ಬಲಸ್ಯ ತು |
ಜಂಗಮಾಜಂಗಮಾಶ್ಚೋಕ್ತಾಶ್ಚೂರ್ಣಯೋಗಾ ವಿಷಾದಯಃ ||42||
ಎಲೈ ಕೌರವ್ಯನೇ! ಇವು ಸೈನ್ಯದ ಪ್ರಕಾಶವಾದ ಅಂಗಗಳು. ಸರ್ಪ ಮೊದಲಾದ ಚಲಿಸುವ ಪ್ರಾಣಿಗಳ ವಿಷಗಳು, ಚೂರ್ಣಯೋಗ ಮೊದಲಾದ ಚಲಿಸದ ವಿಷಗಳು ಇವು ಸೈನ್ಯದ ರಹಸ್ಯವಾದ ಅಂಗಗಳು.
ಸ್ಪರ್ಶೇ ಚಾಭ್ಯವಹಾರ್ಯೇ ಚಾಪ್ಯುಪಾಂಶುರ್ವಿವಿಧಃ ಸ್ಮೃತಃ |
ಅರಿರ್ಮಿತ್ರಮುದಾಸೀನ ಇತ್ಯೇತೇಽಪ್ಯನುವರ್ಣಿತಾಃ ||43||

ದೇಹದ ಸಂಬಂಧದಿಂದ ಮರಣವನ್ನು ಉಂಟುಮಾಡುವ, ಅಥವಾ ಆಹಾರದಲ್ಲಿ ಬೆರೆತು ಮರಣವನ್ನು ಉಂಟುಮಾಡುವ ಈ ರಹಸ್ಯವಾದ ಅಂಗವು ಅನೇಕ ವಿಧವಾಗಿವೆ. ಶತ್ರು, ಮಿತ್ರ ಮತ್ತು ಉದಾಸೀನರು ಅದರಲ್ಲಿ ವರ್ಣಿಸಲ್ಪ- ಟ್ಟಿದ್ದಾರೆ.

ಕ್ರೀಡಾಪೂರ್ವೇ ರಣೇ ದ್ಯೂತೇ ವಿಸ್ರಂಭೇಣ ಸಮನ್ವಿತಮ್ |
ಉಕ್ತಂ ಕೈತವ್ಯಮಿತ್ಯೇತದುಪಾಯೋ ನವಮೋ ಬುಧೈಃ ॥44॥

ಕ್ರೀಡಾರೂಪವಾದ ರಣದಲ್ಲಿ ಅಥವಾ ದ್ಯೂತದಲ್ಲಿ ವಿಶ್ವಾಸದಿಂದ ಪಾಲ್ಗೊಂ- ಡವನನ್ನು ಕೊಲ್ಲುವ ಉಪಾಯಕ್ಕೆ ಕೈತವ್ಯ ಎಂದು ಹೆಸರು. ಇದನ್ನು ಜ್ಞಾನಿಗಳು ಒಂಬತ್ತನೆಯ ಉಪಾಯವೆಂದು ಕರೆಯುತ್ತಾರೆ.

ಉಪೇಕ್ಷಾ ಸರ್ವಕಾರ್ಯೇಷು ಕರ್ಮಣಾಂ ಕರಣೇಷು ಚ |
ಅನಿಷ್ಟಾನಾಂ ಸಮುತ್ಥಾನೇ ತ್ರಿವರ್ಗೋ ನಶ್ಯತೇ ಯಥಾ ॥45॥

ಎಲ್ಲ ಕಾರ್ಯಗಳ ವಿಷಯದಲ್ಲಿ ತನಗೆ ಸರಿಯಾದ ಸಂದರ್ಭವು ಒದಗುವವ -ವರೆಗೆ ಏನೂ ಮಾಡದೇ ಉದಾಸೀನವಾಗಿರುವುದು ಉಪೇಕ್ಷೆ. ಶತ್ರುಗಳಿಗೆ ಅನಿಷ್ಟವುಂಟಾಗಿ ತ್ರಿವರ್ಗವು ನಾಶವಾಗುವ ಸಮಯದವರೆಗೆ ಉಪೇಕ್ಷೆಯನ್ನು ಮಾಡಬೇಕು. (ಲಕ್ಷಾಲಂಕಾರ)

ಇಂದ್ರಜಾಲಾದಿಕಾ ಮಾಯಾ ವಾಗ್ಜೀವನಕುಶೀಲವೈಃ |
ಸುನಿಮಿತ್ತೈರ್ದುರ್ನಿಮಿತ್ತೈರುತ್ಪಾತೈಶ್ಚ ಸಮನ್ವಿತಮ್ ॥46॥

ಮಾತನ್ನು ಅವಲಂಬಿಸಿ ಜೀವನ ಮಾಡುವವರಿಂದ ಮತ್ತು ನಟರಿಂದ ಮಾಡ- ಲ್ಪಡುವ ಇಂದ್ರಜಾಲಾದಿರೂಪವಾದ ಮಾಯೆಗಳು ತನಗೆ ಒಳ್ಳೆಯ ಶಕುನಗಳು, ಶತ್ರುವಿಗೆ ಅಪಶಕುನಗಳು, ಮತ್ತು ತನ್ನ ಶುಭಗಳು ಶತ್ರುವಿನ ಅಶುಭಗಳು ಇವು ವರ್ಣಿಸಲ್ಪಟ್ಟಿವೆ.

ಡಂಭೋ ಲಿಂಗಂ ಸಮಾಶ್ರಿತ್ಯ ಶತ್ರುವರ್ಗೇ ಪ್ರಯುಜ್ಯತೇ |
ಶಾಠ್ಯೇ ನಿಶ್ಚೇಷ್ಟತಾ ಪ್ರೋಕ್ತಾ ಚಿತ್ತದೋಷಪ್ರದೂಷಿತಾ ॥47॥

ಸನ್ಯಾಸಾದಿ ವೇಷವನ್ನು ಧರಿಸಿ ಶತ್ರುವರ್ಗದಲ್ಲಿ ಪ್ರಯೋಗಿಸುವುದು; ಶತ್ರುವು ಶಾಠ್ಯವನ್ನು ಹೊಂದಿದಾಗ ತನಗೆ ಸರಿಯಾದ ಸಮಯವು ದೊರಕುವವರೆಗೂ ಏನನ್ನೂ ಮಾಡದೇ ನಿಶ್ಚೇಷ್ಟಿತನಾಗಿರುವುದು ವರ್ಣಿತವಾಗಿದೆ.

ಕೃತ್ಸ್ನಾ ಮಾರ್ಗಗುಣಾಶ್ಚೈವ ತಥಾ ಭೂಮಿಗುಣಾಶ್ಚ ಹ |
ಆತ್ಮರಕ್ಷಣಮಾಶ್ವಾಸಃ ಸ್ಪಶಾನಾಂ ಚಾನ್ವವೇಕ್ಷಣಮ್ ॥48॥

ಸಮಗ್ರವಾದ ಮಾರ್ಗಗುಣಗಳು, ಹಾಗೆಯೇ ಭೂಮಿಗುಣಗಳು, ತನ್ನನ್ನು ರಕ್ಷಣೆ ಮಾಡಿಕೊಳ್ಳುವ ವಿಧಾನ, ಪ್ರಜೆಗಳಲ್ಲಿ ವಿಶ್ವಾಸವು ಮೂಡುವಂತೆ ಮಾಡುವುದು, ಗೂಢಚಾರರ ಮೇಲ್ವಿಚಾರಣೆ,

ಕಲ್ಪನಾ ವಿವಿಧಾಶ್ಚಾಪಿ ನೃನಾಗರಥವಾಜಿನಾಮ್ |
ವ್ಯೂಹಾಶ್ಚ ವಿವಿಧಾಭಿಖ್ಯಾ ವಿಚಿತ್ರಂ ಯುದ್ಧಕೌಶಲಮ್ ॥49॥

ಪದಾತಿಗಳ, ಗಜಗಳ, ರಥಗಳ ಮತ್ತು ಅಶ್ವಗಳ ವಿವಿಧವಾದ ಅಭಿವೃದ್ಧಿ, ಚಕ್ರ -ವ್ಯೂಹ ಪದ್ಮವ್ಯೂಹ ಶ್ಯೇನವ್ಯೂಹ ಎಂಬ ಅನೇಕ ಹೆಸರಿನ ವ್ಯೂಹಗಳು, ವಿಚಿತ್ರ- ವಾದ ಯುದ್ಧಕೌಶಲ,

ಉತ್ಪಾತಾಶ್ಚ ನಿಪಾತಾಶ್ಚ ಸುಯುದ್ಧಂ ಸುಪಲಾಯನಮ್ |
ಶಸ್ತ್ರಾಣಾಂ ಪಾತನಜ್ಞಾನಂ ತಥೈವ ಭರತರ್ಷಭ ॥50॥

ಎಲೈ ಭರತರ್ಷಭನೇ! ಉತ್ಪಾತಗಳು, ನಿಪಾತಗಳು, ಒಳ್ಳೆಯ ಯುದ್ಧವನ್ನು ಮಾಡುವ ರೀತಿ, ಚೆನ್ನಾಗಿ ಪಲಾಯನವನ್ನು ಮಾಡುವ ರೀತಿ, ಶಸ್ತ್ರಗಳಿಂದ ಪ್ರಹಾರ ಮಾಡುವ ರೀತಿ,

ಬಲವ್ಯಸನಮುಕ್ತಂ ಚ ತಥೈವ ಬಲಹರ್ಷಣಮ್ |
ಪೀಡನಾಸ್ಕಂದಕಾಲಶ್ಚ ಭಯಕಾಲಶ್ಚ ಪಾಂಡವ ॥51॥

ಎಲೈ ಪಾಂಡವನೇ! ಸೈನ್ಯದ ವ್ಯಸನಗಳು, ಸೈನ್ಯದ ಬಲವನ್ನು ಅಭಿವೃದ್ಧಿ- ಪಡಿಸುವುದು, ಶತ್ರುಗಳನ್ನು ಪೀಡಿಸಿ ನಾಶಮಾಡುವ ಕಾಲ, ಶತ್ರುಗಳಿಗೆ ಭಯ- ವನ್ನುಂಟು ಮಾಡುವ ಕಾಲ ಇವು ಹೇಳಲ್ಪಟ್ಟಿವೆ.

ತಥಾ ಯಾನತದಾತ್ವಂ ಚ ಯೋಗಸಂಚಾರ ಏವ ಚ |
ಚೌರಾಟವ್ಯಬಲೈಶ್ಚೋಗ್ರೈಃ ಪರರಾಷ್ಟ್ರಸ್ಯ ಪೀಡನಮ್ ॥52॥

ಹಾಗೆಯೇ ಯಾನಗಳನ್ನು ಯಾವಾಗಲೂ ಸಿದ್ಧವಾಗಿಟ್ಟಿರುವುದು, ಯೋಗ- ಗಳನ್ನು ಪ್ರಯೋಗಿಸುವುದು, ಕಳ್ಳರಿಂದ ವನವಾಸಿಗಳಿಂದ ಉಗ್ರವಾದ ಸೈನ್ಯದಿಂದ ಶತ್ರುರಾಷ್ಟ್ರದ ಪೀಡನೆಯನ್ನು ಮಾಡುವುದು,

ಅಗ್ನಿದೈರ್ಗರದೈಶ್ಚೈವ ಪ್ರತಿರೂಪಕಚಾರಕೈಃ |
ಶ್ರೇಣಿಮುಖ್ಯೋಪಜಾಪೇನ ವೀರುಧಶ್ಛೇದನೇನ ಚ ॥53॥

ಶತ್ರುದೇಶದಲ್ಲಿ ಭೃತ್ಯರ ವೇಷವನ್ನು ಧರಿಸುವವರಿಂದ ಅಗ್ನಿ ಮತ್ತು ವಿಷಗಳ ಪ್ರಯೋಗ. ಶತ್ರುರಾಜನ ಅಂಗರಕ್ಷಕರಲ್ಲಿ ಶ್ರೇಷ್ಠರಾದವರನ್ನು ಪ್ರಿಯವಚನಗಳಿಂದ ವಶಪಡಿಸಿಕೊಳ್ಳುವುದು. ವೃಕ್ಷಾದಿಗಳ ಛೇದನೆ, (ಲಕ್ಷಾಲಂಕಾರ)

ದೂಷಣೇನ ಚ ನಾಗಾನಾಮಾಶಂಕಾಜನನೇನ ಚ |
ಆರೋಧನೇನ ಭಕ್ತಸ್ಯ ಪಥಶ್ಚೋಪಾರ್ಜನೇನ ಚ ॥54॥

ಶತ್ರುಗಳ ಗಜಗಳಿಗೆ ಕೇಡನ್ನುಂಟುಮಾಡುವುದು, ಶತ್ರುಪ್ರಜೆಗಳಿಗೆ ಭಯವನ್ನು ಉಂಟುಮಾಡುವುದು, ಪ್ರಜೆಗಳಿಗೆ ದೊರೆಯುವ ಆಹಾರವನ್ನು ಅವರಿಗೆ ದೊರೆಯ -ದಂತೆ ತಡೆಯುವುದು. ಮಾರ್ಗಗಳನ್ನು ದೂಷಿಸುವುದು,

ಸಪ್ತಾಂಗಸ್ಯ ಚ ರಾಜ್ಯಸ್ಯ ಹ್ರಾಸವೃದ್ಧೀ ಸಮಂಜಸಮ್ |
ದೂತಸಾಮರ್ಥ್ಯಯೋಗಶ್ಚ ರಾಷ್ಟ್ರಸ್ಯ ಚ ವಿವರ್ಧನಮ್ ॥55॥

ಸಪ್ತಾಂಗಸಹಿತವಾದ ಪರರಾಜ್ಯದ ಹ್ರಾಸ, ಸಪ್ತಾಂಗವುಳ್ಳ ತನ್ನ ರಾಜ್ಯದ ವೃದ್ಧಿ, ಸರಿಯಾದ ನಡವಳಿಕೆ, ದೂತರ ಸಾಮರ್ಥ್ಯ, ದೂತರು ಮಾಡಬೇಕಾದ ಉಪಾಯಗಳು, ರಾಷ್ಟ್ರದ ಅಭಿವೃದ್ಧಿ.

ಅರಿಮಧ್ಯಸ್ಥಮಿತ್ರಾಣಾಂ ಸಮ್ಯಕ್ ಚೋಕ್ತಂ ಪ್ರಪಂಚನಮ್ |
ಅವಮರ್ದಃ ಪ್ರತೀಘಾತಸ್ತಥೈವ ಚ ಬಲೀಯಸಾಮ್ ॥56॥
ಶತ್ರು, ತಟಸ್ಥ ಮತ್ತು ಮಿತ್ರರ ವಿಸ್ತಾರ, ತನಗಿಂತ ಬಲಿಷ್ಠರಾದ ರಾಜರನ್ನು ಮರ್ದಿಸಿ ಅವರಿಗೆ ಪ್ರತೀಕಾರವನ್ನು ಮಾಡುವುದು ಇವು ಹೇಳಲ್ಪಟ್ಟಿವೆ.
ವ್ಯವಹಾರಃ ಸುಸೂಕ್ಷ್ಮಶ್ಚ ತಥಾ ಕಂಟಕಶೋಧನಮ್ |
ಶಮೋ ವ್ಯಾಯಾಮಯೋಗಶ್ಚ ಯೋಗೋ ದ್ರವ್ಯಸ್ಯ ಸಂಚಯಃ ॥57॥
ಅತ್ಯಂತಸೂಕ್ಷ್ಮವಾದ ವ್ಯವಹಾರಗಳು, ಎಲ್ಲ ವಿಷಯಗಳಲ್ಲೂ ಉಂಟಾಗ- ಬಹುದಾದ ಪ್ರತಿರೋಧಗಳ ನಿವಾರಣೆ, ಶಾಂತಿ, ವ್ಯಾಯಾಮಪ್ರಕಾರಗಳು, ದ್ರವ್ಯ- ವನ್ನು ಕೂಡಿಡುವ ರೀತಿ,
ಅಭೃತಾನಾಂ ಚ ಭರಣಂ ಭೃತಾನಾಂ ಚಾನ್ವವೇಕ್ಷಣಮ್ |
ಅರ್ಥಕಾಲೇ ಪ್ರದಾನಂ ಚ ವ್ಯಸನೇಷ್ವಪ್ರಸಂಗಿತಾ ॥58॥
ನೇರವಾಗಿ ತನ್ನ ಭಟರಲ್ಲದವರನ್ನು ಪೋಷಣೆ ಮಾಡುವುದು, ವೇತನವನ್ನು ತೆಗೆದುಕೊಳ್ಳುವ ಭಟರನ್ನು ನೋಡಿಕೊಳ್ಳುವುದು. ಧನದ ವೃದ್ಧಿ ಇದ್ದಾಗ ದಾನವನ್ನು ಮಾಡುವುದು. ಕಷ್ಟಕಾಲವು ಬಂದಾಗ ಹೊಸದಾಗಿ ಏನನ್ನೂ ಮಾಡಲು ಹೊರಡ- ದಿರುವುದು.
ತಥಾ ರಾಜಗುಣಾಶ್ಚೈವ ಸೇನಾಪತಿಗುಣಾಶ್ಚ ಯೇ |
ಕರಣಸ್ಯ ಚ ಕರ್ತುಶ್ಚ ಗುಣದೋಷಾಸ್ತಥೈವ ಚ ॥59॥
ಹಾಗೆಯೇ ರಾಜನ ಗುಣಗಳು, ಸೇನಾಪತಿಯ ಗುಣಗಳು, ಕರ್ತೃವಿನ ಮತ್ತು ಕರಣಗಳ ಗುಣದೋಷಗಳು,
ದುಷ್ಟೇಂಗಿತಂ ಚ ವಿವಿಧಂ ವೃತ್ತಿಶ್ಚೈವಾನುಜೀವಿನಾಮ್ |
ಶಂಕಿತತ್ವಂ ಚ ಸರ್ವಸ್ಯ ಪ್ರಮಾದಸ್ಯ ಚ ವರ್ಜನಮ್ ॥60॥
ವಿವಿಧವಾದ ದುಷ್ಟವಾದ ಮನೋಭಿಪ್ರಾಯಗಳು, ತನ್ನನ್ನು ಆಶ್ರಯಿಸಿದವರ ಜೀವನೋಪಾಯ, ಸರ್ವತ್ರ ಶಂಕೆಯನ್ನು ಮಾಡುವುದು, ಪ್ರಮಾದವನ್ನು ಮಾಡ- ದಿರುವುದು,
ಅಲಬ್ಧಲಿಪ್ಸಾ ಲಬ್ಧಸ್ಯ ತಥೈವ ಚ ವಿವರ್ಧನಮ್ |
ಪ್ರದಾನಂ ಚ ವಿವೃದ್ಧಸ್ಯ ಪಾತ್ರೇಭ್ಯೋ ವಿಧಿವತ್ ತಥಾ ॥61॥
ಪಡೆಯದಿರುವುದನ್ನು ಪಡೆಯಲು ಬಯಸುವುದು. ಪಡೆದುದನ್ನು ಅಭಿವೃದ್ಧಿ ಪಡಿಸುವುದು. ಅಭಿವೃದ್ಧಿಯಾದ ಧನವನ್ನು ಪಾತ್ರರಲ್ಲಿ ವಿಧಿವತ್ತಾಗಿ ದಾನ ಮಾಡು- ವುದು.
ವಿಸರ್ಗೋಽರ್ಥಸ್ಯ ಧರ್ಮಾರ್ಥಮರ್ಥಾರ್ಥಂ ಕಾಮಹೇತುನಾ |
ಚತುರ್ಥೋ ವ್ಯಸನಾಘಾತೇ ತಥೈವಾತ್ರಾನುವರ್ಣಿತಃ ॥62॥
ಕೋಶದ ಧನವನ್ನು ಧರ್ಮಾರ್ಥವಾಗಿ ಅರ್ಥಾರ್ಥವಾಗಿ ಮತ್ತು ಕಾಮಾರ್ಥ -ವಾಗಿ ವ್ಯಯಮಾಡುವುದು ಮತ್ತು ನಾಲ್ಕನೆಯದಾಗಿ ಆಪತ್ಕಾಲಕ್ಕಾಗಿ ಸಂಗ್ರಹಿಸಿ- ಡುವುದು ಇವೆಲ್ಲವೂ ಇಲ್ಲಿ ವರ್ಣಿತವಾಗಿವೆ.
ಕ್ರೋಧಜಾನಿ ತಥೋಗ್ರಾಣಿ ಕಾಮಜಾನಿ ತಥೈವ ಚ |
ದಶೋಕ್ತಾನಿ ಕುರುಶ್ರೇಷ್ಠ ವ್ಯಸನಾನ್ಯರ್ಥ ಏವ ಚ ॥63॥
ಎಲೈ ಕುರುಶ್ರೇಷ್ಠನೇ! ಕ್ರೋಧದಿಂದುಂಟಾಗುವ ಉಗ್ರವಾದ ವ್ಯಸನಗಳು, ಹಾಗೆಯೇ ಕಾಮದಿಂದುಂಟಾಗುವ ವ್ಯಸನಗಳು ಹೀಗೆ ಹತ್ತು ವ್ಯಸನಗಳು ಹೇಳ- ಲ್ಪಟ್ಟಿವೆ.
ಮೃಗಯಾಽಕ್ಷಾಸ್ತಥಾ ಪಾನಂ ಸ್ತ್ರಿಯಶ್ಚ ಭರತರ್ಷಭ |
ಕಾಮಜಾನ್ಯಾಹುರಾಚಾರ್ಯಾಃ ಪ್ರೋಕ್ತಾನೀಹ ಸ್ವಯಂಭುವಾ ॥64॥
ಬೇಟೆ, ದ್ಯೂತ, ಮದ್ಯಪಾನ ಮತ್ತು ಸ್ತ್ರೀಯರು ಎಲೈ ಭರತರ್ಷಭನೇ! ಇವುಗಳನ್ನು ಕಾಮಜನ್ಯವಾದ ವ್ಯಸನಗಳೆಂದು ಆಚಾರ್ಯರು ಹೇಳುತ್ತಾರೆ. ಬ್ರಹ್ಮ- ದೇವರು ರಚಿಸಿದ ದಂಡನೀತಿಯಲ್ಲಿ ಇವುಗಳು ಹೇಳಲ್ಪಟ್ಟಿವೆ.
ವಾಕ್ಪಾರುಷ್ಯಂ ತಥೋಗ್ರತ್ವಂ ದಂಡಪಾರುಷ್ಯಮೇವ ಚ |
ಆತ್ಮನೋ ನಿಗ್ರಹಸ್ತ್ಯಾಗೋಽಥಾರ್ಥದೂಷಣಮೇವ ಚ ॥65॥
ಕಠೋರವಾದ ಮಾತುಗಳು, ಉಗ್ರತೆ, ಕಠೋರವಾದ ಶಿಕ್ಷೆ, ತನ್ನನ್ನು ತಾನೇ ನಿಗ್ರಹಿಸಿಕೊಳ್ಳುವುದು, ಧನವನ್ನು ತ್ಯಾಗಮಾಡುವುದು, ಶತ್ರುಗಳ ಧನವನ್ನು ನಾಶ ಮಾಡುವುದು,
ಯಂತ್ರಾಣಿ ವಿವಿಧಾನ್ಯೇವ ಕ್ರಿಯಾಸ್ತೇಷಾಂ ಚ ವರ್ಣಿತಾಃ |
ಅವಮರ್ದಃ ಪ್ರತೀಘಾತಃ ಕೇತನಾನಾಂ ಚ ಭಂಜನಮ್ ॥66॥
ಅನೇಕ ವಿಧವಾದ ಯಂತ್ರಗಳು, ಅವುಗಳು ಕಾರ್ಯವನ್ನು ಮಾಡುವ ರೀತಿ, ಶತ್ರುಗಳ ಮೇಲೆ ಎರಗಿ ಪ್ರತೀಕಾರವನ್ನು ಮಾಡುವುದು, ಶತ್ರುರಾಜ್ಯದ ಗೃಹಗಳ ಧ್ವಂಸ,
ಚೈತ್ಯದ್ರುಮಾಣಾಮಾಮರ್ದೋ ರೋಧಃ ಕರ್ಮಾಂತನಾಶನಮ್ |
ಅಪಸ್ಕರೋಽಥ ಗಮನಂ ತಥೋಪಾಸ್ಯಾ ಚ ವರ್ಣಿತಾಃ ॥67॥
ಶತ್ರುದೇಶದ ಪೂಜ್ಯವೃಕ್ಷಗಳ ಭಂಜನ, ಶತ್ರುವು ಪ್ರಜಾಹಿತಕ್ಕಾಗಿ ಆರಂಭಿಸಿದ ದೊಡ್ಡ ಕಾರ್ಯಗಳನ್ನು ಮಧ್ಯದಲ್ಲಿಯೇ ನಾಶಮಾಡುವುದು, ಅಪಸ್ಕರ = ಶತ್ರುವಿನ ಮೇಲೆ ಯುದ್ಧಕ್ಕಾಗಿ ಪ್ರಯಾಣ, ಸಂಗ್ರಹಿಸಬೇಕಾದ ಜನರು ಎಲ್ಲವೂ ವರ್ಣಿತ- ವಾಗಿವೆ.
ಪಣವಾನಕಶಂಖಾನಾಂ ಭೇರೀಣಾಂ ಚ ಯುಧಾಂವರ |
ಉಪಾರ್ಜನಂ ಚ ದ್ರವ್ಯಾಣಾಂ ಪರಮರ್ಮ ಚ ತಾನಿ ಷಟ್ ॥68॥
ಪಣವ, ಆನಕ, ಶಂಖಗಳು, ಭೇರಿಗಳು ಇವುಗಳನ್ನು ಸಂಪಾದಿಸುವುದು. ಮತ್ತು ದ್ರವ್ಯಗಳ ಆರು ರಹಸ್ಯಗಳು ವರ್ಣಿತವಾಗಿವೆ.

ಲಬ್ಧಸ್ಯ ಚ ಪ್ರಶಮನಂ ಸತಾಂ ಚೈವ ಹಿ ಪೂಜನಮ್ |
ವಿದ್ವದ್ಭಿರೇಕೀಭಾವಶ್ಚ ಪ್ರಾತರ್ಹೋಮವಿಧಿಜ್ಞತಾ ||69||
ಲಬ್ಧವಾದುದರ ರಕ್ಷಣೆ, ಸಜ್ಜನರ ಪೂಜೆ, ವಿದ್ವಾಂಸರ ಜೊತೆಯಲ್ಲಿ ಸಹಮತಿ- ಯನ್ನು ಹೊಂದುವುದು, ಪ್ರಾತಃಕಾಲದ ಹೋಮಪ್ರಕಾರಗಳನ್ನು ತಿಳಿದಿರುವುದು.
ಮಂಗಲಾಲಂಭನಂ ಚೈವ ಶರೀರಸ್ಯ ಪ್ರತಿಕ್ರಿಯಾ |
ಆಹಾರಯೋಜನಂ ಚೈವ ನಿತ್ಯಮಾಸ್ತಿಕ್ಯಮೇವ ಚ ||70||
ಪ್ರಾತಃಕಾಲದಲ್ಲಿ ಮಂಗಳವಸ್ತುಗಳ ಸ್ಪರ್ಶ, ಶರೀರದ ಅಸ್ವಸ್ಥತೆ ಉಂಟಾದಾಗ ಅವುಗಳ ಪರಿಹಾರ, ಆಹಾರವನ್ನು ತೆಗೆದುಕೊಳ್ಳುವ ರೀತಿ, ನಿತ್ಯವೂ ಆಸ್ತಿಕ್ಯಭಾವನೆ
ಏಕೇನ ಚ ಯಥೋತ್ಥೇಯಂ ಸತ್ಯತ್ವಂ ಮಧುರಾ ಗಿರಃ |
ಉತ್ಸವಾನಾಂ ಸಮಾಜಾನಾಂ ಕ್ರಿಯಾಃ ಕೇತನಜಾಸ್ತಥಾ ||71||
ಏಕಾಕಿಯಾದರೂ ಪ್ರಯತ್ನಪಟ್ಟು ಮೇಲೆ ಬರುವ ರೀತಿ, ಸತ್ಯವಚನ, ಮಧುರವಾದ ಮಾತುಗಳು, ಉತ್ಸವ ಮತ್ತು ಸಭೆಗಳನ್ನು ಏರ್ಪಡಿಸುವುದು, ಅರಮನೆಯಲ್ಲಿ ಮಾಡಬೇಕಾದ ಕ್ರಿಯೆಗಳು,
ಪ್ರತ್ಯಕ್ಷಾ ಚ ಪರೋಕ್ಷಾ ಚ ಸರ್ವಾಧಿಕರಣೇಷು ಚ |
ವೃತ್ತಿರ್ಭರತಶಾರ್ದೂಲ ನಿತ್ಯಂ ಚೈವಾನ್ವವೇಕ್ಷಣಮ್ ||72||
ಎಲೈ ಭರತಶಾರ್ದೂಲನೇ! ರಾಜ್ಯಪಾಲನೆಗೆ ಸಂಬಂಧಪಟ್ಟ ಅಧಿಕಾರಿಗಳ ಸರ್ವಕಾರ್ಯಾಲಯಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅವರ ನಡತೆ- ಯನ್ನು ಯಾವಾಗಲೂ ನೋಡಿಕೊಳ್ಳುವುದು.
ಅದಂಡ್ಯತ್ವಂ ಚ ವಿಪ್ರಾಣಾಂ ಯುಕ್ತ್ಯಾ ದಂಡನಿಪಾತನಮ್ |
ಅನುಜೀವಿಸ್ವಜಾತಿಭ್ಯೋ ಗುಣೇಷು ಪರಿರಕ್ಷಣಮ್ ||73||
ಬ್ರಾಹ್ಮಣರಿಗೆ ಶರೀರದಂಡನೆಯನ್ನು ಕೊಡದಿರುವುದು, ಯೋಗ್ಯಕಾಲದಲ್ಲಿ ಅರ್ಹರಾದವರಿಗೆ ದಂಡನೆಯನ್ನು ಕೊಡುವುದು. ತನ್ನ ಜಾತಿಗೆ ಸೇರಿದ ತನ್ನ ಆಶ್ರಿತರನ್ನು ಗುಣವಂತರಾಗುವಂತೆ ರಕ್ಷಣೆಯನ್ನು ಮಾಡುವುದು.
ರಕ್ಷಣಂ ಚೈವ ಪೌರಾಣಾಂ ಸ್ವರಾಷ್ಟ್ರಸ್ಯ ವಿವರ್ಧನಮ್ |
ಮಂಡಲಸ್ಥಾ ಚ ಯಾ ಚಿಂತಾ ರಾಜನ್ ದ್ವಾದಶರಾಜಿಕಾ ||74||
ಎಲೈ ರಾಜನೇ! ಪ್ರಜೆಗಳ ರಕ್ಷಣೆ, ತನ್ನ ರಾಷ್ಟ್ರದ ಅಭಿವೃದ್ಧಿ, ಸಾಮಂತ- ರಾಜರುಗಳ ವಿಷಯದಲ್ಲಿ ಹನ್ನೆರಡುವಿಧವಾದ ಚಿಂತನೆಗಳು.
ದ್ವಾಸಪ್ತತಿಮತಿಶ್ಚೈವ ಪ್ರೋಕ್ತಾ ಯಾ ಚ ಸ್ವಯಂಭುವಾ |
ದೇಶಜಾತಿಕುಲಾನಾಂ ಚ ಧರ್ಮಾಃ ಸಮನುವರ್ಣಿತಾಃ ||75||
ರಾಜ್ಯಪಾಲನೆ ವಿಷಯದಲ್ಲಿ ಹೊಂದಬೇಕಾದ ಎಪ್ಪತ್ತೆರಡು ವಿಧವಾದ ಚಿಂತನೆಗಳು, ದೇಶಜಾತಿ ಕುಲಧರ್ಮಗಳು ಎಲ್ಲವೂ ಬ್ರಹ್ಮದೇವರು ರಚಿಸಿದ ದಂಡನೀತಿಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಿವೆ.
ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚಾತ್ರಾನುವರ್ಣಿತಃ |
ಉಪಾಯಶ್ಚಾರ್ಥಲಿಪ್ಸಾ ಚ ವಿವಿಧಾ ಭೂರಿದಕ್ಷಿಣಾಃ ||76||
ಇದರಲ್ಲಿ ಧರ್ಮಾರ್ಥಕಾಮಮೋಕ್ಷಗಳು, ರಾಜ್ಯಪಾಲನೆಯ ಅನೇಕ ಉಪಾಯಗಳು, ಅನೇಕವಿಧವಾದ ಅರ್ಥಪ್ರಾಪ್ತಿಪ್ರಕಾರಗಳು, ಭೂರಿದಕ್ಷಿಣೆಯನ್ನು ಕೊಡುವ ವಿಧಾನವು ವರ್ಣಿತವಾಗಿದೆ.
ಮೂಲಕರ್ಮಕ್ರಿಯಾ ಚಾತ್ರ ಮಾಯಾಯೋಗಶ್ಚ ವರ್ಣಿತಃ |
ದೂಷಣಂ ಸ್ರೋತಸಾಮತ್ರ ವರ್ಣಿತಂ ಚ ಸ್ಥಿರಾಂಭಸಾಮ್ ||77||
ತನ್ನ ರಾಜ್ಯದ ಅಭಿವೃದ್ಧಿಗೆ ಕಾರಣವಾದ ಮೂಲಕ್ರಿಯೆಗಳಾದ ಕೃಷಿ- ವಾಣಿಜ್ಯಾದಿಗಳು, ಶತ್ರುಗಳ ಮೇಲೆ ಪ್ರಯೋಗಿಸಬೇಕಾದ ಮಾಯಾಯೋಗಗಳು (ಕಪಟೋಪಾಯಗಳು), ಶತ್ರುದೇಶದ ನದಿಗಳನ್ನು ಮತ್ತು ಸರೋವರಗಳನ್ನು ದೂಷಿಸುವುದು ಎಲ್ಲವೂ ವರ್ಣಿತವಾಗಿವೆ.
ಯೈರ್ಯೈರುಪಾಯೈರ್ಲೋಕಶ್ಚ ನ ಚಲೇದಾರ್ಯವರ್ತ್ಮನಃ |
ತತ್ ಸರ್ವಂ ರಾಜಶಾರ್ದೂಲ ನೀತಿಶಾಸ್ತ್ರೇಽನುವರ್ಣಿತಮ್ ||78||
ಎಲೈ ರಾಜಶಾರ್ದೂಲನೇ! ಯಾವ ಯಾವ ಉಪಾಯಗಳಿಂದ ಪ್ರಜೆಗಳು ಆರ್ಯಮಾರ್ಗದಿಂದ ಭ್ರಷ್ಟರಾಗುವುದಿಲ್ಲವೋ, ಅವೆಲ್ಲವೂ ಈ ನೀತಿಶಾಸ್ತ್ರದಲ್ಲಿ ವರ್ಣಿತವಾಗಿವೆ.
ಏತತ್ ಕೃತ್ವಾ ಶುಭಂ ಶಾಸ್ತ್ರಂ ತತಃ ಸ ಭಗವಾನ್ ಪ್ರಭುಃ |
ದೇವಾನುವಾಚ ಸಂಹೃಷ್ಟಃ ಸರ್ವಾನ್ ಶಕ್ರಪುರೋಗಮಾನ್ ||79||
ಪೂಜ್ಯರಾದ ಪ್ರಭುಗಳಾದ ಬ್ರಹ್ಮದೇವರು ಈ ಶುಭವಾದ ಶಾಸ್ತ್ರವನ್ನು ರಚಿಸಿ, ಸಂತೋಷಗೊಂಡು ಇಂದ್ರಮೊದಲಾದ ಎಲ್ಲ ದೇವತೆಗಳನ್ನು ಕುರಿತು ಹೇಳಿದರು.
ಉಪಕಾರಾಯ ಲೋಕಸ್ಯ ತ್ರಿವರ್ಗಸ್ಥಾಪನಾಯ ಚ |
ನವನೀತಂ ಸರಸ್ವತ್ಯಾ ಬುದ್ಧಿರೇಷಾ ಪ್ರಭಾವಿತಾ ||80||
ಲೋಕದ ಉಪಕಾರಕ್ಕಾಗಿ ಮತ್ತು ಧರ್ಮಾರ್ಥಕಾಮಗಳ ಸ್ಥಾಪನೆಗಾಗಿ ವಿದ್ಯೆಯ ಸಾರವಾಗಿ ಬುದ್ಧಿಯಿಂದ ಪ್ರಭಾವಿತವಾಗಿ ಈ ಶಾಸ್ತ್ರವು ರಚಿತವಾಗಿದೆ.
ದಂಡೇನ ಸಹಿತಾ ಹ್ಯೇಷಾ ಲೋಕರಕ್ಷಣಕಾರಿಕಾ |

ನಿಗ್ರಹಾನುಗ್ರಹರತಾ ಲೋಕಾನನು ಚರಿಷ್ಯತಿ ॥81॥
ದಂಡದಿಂದ ಸಹಿತವಾದ ಈ ನೀತಿಯು ಲೋಕರಕ್ಷಣೆಯನ್ನು ಮಾಡುವುದಾಗಿ ದುಷ್ಟರ ನಿಗ್ರಹ, ಶಿಷ್ಟರ ಅನುಗ್ರಹದಲ್ಲಿ ರತವಾಗಿ ಲೋಕಗಳಲ್ಲಿ ಪ್ರಚಾರದಲ್ಲಿ- ರುತ್ತದೆ.
ದಂಡೇನ ನೀಯತೇ ಚೇಯಂ ದಂಡಂ ನಯತಿ ಚಾಪ್ಯುತ |
ದಂಡನೀತಿರಿತಿ ಪ್ರೋಕ್ತಾ ತ್ರೀನ್‌ಲೋಕಾನನುವರ್ತತೇ |
ಷಾಡ್ಗುಣ್ಯಗುಣಸಾರೈಷಾ ಸ್ಥಾಸ್ಯತ್ಯುಗ್ರಾ ಮಹಾತ್ಮಸು ॥82॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಷಷ್ಟಿತಮೋಽಧ್ಯಾಯಃ ॥59॥
ಇದು ದಂಡದಿಂದ ಮುಂದುವರಿಸಲ್ಪಡುತ್ತದೆ. ಮತ್ತು ದಂಡವನ್ನು ವಿವೇಚನೆ ಮಾಡುತ್ತದೆ. ಆದ್ದರಿಂದ ದಂಡನೀತಿ ಎಂದು ಕರೆಯಲ್ಪಡುತ್ತದೆ. ಇದು ಮೂರು ಲೋಕಗಳಲ್ಲಿಯೂ ಪ್ರಚಾರದಲ್ಲಿರುತ್ತದೆ. ಷಾಡ್ಗುಣ್ಯಸಾರರೂಪವಾದ ಉಗ್ರವಾದ ಈ ದಂಡನೀತಿಯು ಮಹಾತ್ಮರಲ್ಲಿ ಶಾಶ್ವತವಾಗಿ ಉಳಿಯುತ್ತದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 59ನೆಯ ಅಧ್ಯಾಯವು ಮುಗಿಯಿತು
0
60. ಅರವತ್ತನೆಯ ಅಧ್ಯಾಯ
ಶಿವಾದಿಗಳಿಂದ ಬ್ರಹ್ಮದೇವರಿಂದ ರಚಿತವಾದ ದಂಡನೀತಿಶಾಸ್ತ್ರದ ಸಂಕ್ಷೇಪಕರಣ
ವೈಶಂಪಾಯನಃ
ಮಹತಶತ್ವಾತ್ ತಸ್ಯ ದಂಡಸ್ಯ ನೀತಿರ್ವಿಸ್ಪಷ್ಟಲಕ್ಷಣಾ |
ನಯಚಾರಶ್ಚ ವಿಪುಲೋ ಯೇನ ಸರ್ವಮಿದಂ ತತಮ್ |
ಆಗಮಶ್ಚ ಪುರಾಣಾನಾಂ ಮಹರ್ಷೀಣಾಂ ಚ ಸಂಭವಃ ॥1॥
ವೈಶಂಪಾಯನರು ಬ್ರಹ್ಮದೇವರಿಂದ ರಚಿತವಾದ ದಂಡನೀತಿಶಾಸ್ತ್ರವು ವಿಸ್ತಾರ -ವಾಗಿರುವುದರಿಂದ ಅಲ್ಲಿ ದಂಡನೀತಿಯು ಬಹಳ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಈ ಲೋಕವೆಲ್ಲವನ್ನೂ ವ್ಯಾಪಿಸಿರುವ ವಿಪುಲವಾದ ನ್ಯಾಯಸಂಚಾರಗಳು, ಪುರಾಣಗಳ ಜ್ಞಾನ, ಮಹರ್ಷಿಗಳ ಉತ್ಪತ್ತಿ,
ತೀರ್ಥವಂಶಶ್ಚ ವಂಶಶ್ಚ ಕ್ಷತ್ರಿಯಾಣಾಂ ಯುಧಿಷ್ಠಿರ |
ಸಕಲಂ ಚಾತುರಾಶ್ರಮ್ಯಂ ಚಾತುರ್ಹೋತ್ರಂ ತಥೈವ ಚ ॥2॥
ಚಾತುರ್ವರ್ಣ್ಯಂ ತಥೈವಾತ್ರ ಚಾತುರ್ವೇದ್ಯಂ ಚ ವರ್ಣಿತಮ್ |
ಇತಿಹಾಸೋಪವೇದಾಶ್ಚ ನ್ಯಾಯಃ ಕೃತ್ಸ್ನಶ್ಚ ವರ್ಣಿತಃ ॥3॥
ಎಲೈ ಯುಧಿಷ್ಠಿರನೇ! ತೀರ್ಥವಂಶಗಳು, ಕ್ಷತ್ರಿಯರ ವಂಶಗಳು, ಚತುರಾ- ಶ್ರಮಗಳಿಗೆ, ಮತ್ತು ಚತುರ್ಹೋತೃಗಳಿಗೆ ಸಂಬಂಧಿಸಿದ ಎಲ್ಲ ಧರ್ಮಗಳು, ಚಾತುರ್ವರ್ಣ್ಯಕ್ಕೆ ಸಂಬಂಧಿಸಿದ ಮತ್ತು ನಾಲ್ಕುವೇದಗಳಿಗೆ ಸಂಬಂಧಿಸಿದ ಧರ್ಮ- ಗಳು, ಇತಿಹಾಸಗಳು, ಉಪವೇದವೆನಿಸುವ ಪುರಾಣಗಳು, ಸಮಗ್ರವಾದ ನ್ಯಾಯ- ಗಳು ಎಲ್ಲವೂ ವರ್ಣಿಸಲ್ಪಟ್ಟಿವೆ.
ತಪೋ ಜ್ಞಾನಮಹಿಂಸಾ ಚ ಸತ್ಯಾಸತ್ಯೇ ನಯಃ ಪರಃ |
ವೃದ್ಧೋಪಸೇವಾ ದಾನಂ ಚ ಶೌಚಮುತ್ಥಾನಮೇವ ಚ ॥4॥
ಸರ್ವಭೂತಾನುಕಂಪಾ ಚ ಸರ್ವಮತ್ರೋಪವರ್ಣಿತಮ್ |
ಭುವಿ ವಾಚೋಗತಂ ಯಚ್ಚ ತಚ್ಚ ಸರ್ವಂ ಸಮರ್ಪಿತಮ್ ॥5॥
ತಪಸ್ಸು, ಜ್ಞಾನ, ಅಹಿಂಸೆ, ಸತ್ಯಾಸತ್ಯಗಳು, ಉತ್ತಮವಾದ ನ್ಯಾಯ, ವೃದ್ಧರ ಸೇವೆ, ದಾನ, ಶೌಚ, ಉದ್ಯಮಶೀಲತೆ, ಸರ್ವಭೂತಗಳಲ್ಲಿ ದಯೆ ಎಲ್ಲವೂ ಇಲ್ಲಿ ವರ್ಣಿಸಲ್ಪಟ್ಟಿವೆ. ಭೂಮಿಯಲ್ಲಿ ಮಾತುಗಳಿಂದ ಹೇಳಬಹುದಾದುದೆಲ್ಲವೂ ಇಲ್ಲಿ ಅಡಕವಾಗಿವೆ.
ತಸ್ಮಿನ್ ಪೈತಾಮಹೇ ಶಾಸ್ತ್ರೇ ಪಾಂಡವೈತದಸಂಶಯಮ್ |
ಧರ್ಮಾರ್ಥಕಾಮಮೋಕ್ಷಾಶ್ಚ ಸಕಲಾ ಹ್ಯತ್ರ ಶಬ್ದಿತಾಃ ॥6॥
ಎಲೈ ಪಾಂಡುಪುತ್ರನಾದ ಯುಧಿಷ್ಠಿರನೇ! ಬ್ರಹ್ಮದೇವರು ರಚಿಸಿದ ಆ ಶಾಸ್ತ್ರದಲ್ಲಿ ಧರ್ಮಾರ್ಥಕಾಮಮೋಕ್ಷಗಳೆಲ್ಲವೂ ನಿಃಸಂಶಯವಾಗಿ ವರ್ಣಿಸಲ್ಪಟ್ಟಿವೆ.
ಅನಾದಿನಿಧನೋ ದೇವಶ್ಚೈತನ್ಯಾದಿಸಮನ್ವಿತಃ |
ಜ್ಞಾನಾನಿ ಚ ವಶೇ ಯಸ್ಯ ತಾರಕಾದೀನ್ಯಶೇಷತಃ ॥7॥
ಅನಾದಿನಿಧನನಾದ ಜ್ಞಾನಾದಿ ಗುಣಗಳಿಂದ ಕೂಡಿದ ದೇವನಾದ ನಾರಾ- ಯಣ, ಅವನ ವಶದಲ್ಲಿರುವ ಜ್ಞಾನಗಳು, ತಾರಕಬ್ರಹ್ಮಮಂತ್ರಾದಿಗಳು ಎಲ್ಲವೂ ವರ್ಣಿಸಲ್ಪಟ್ಟಿವೆ.
ಅಣಿಮಾದಿಗುಣೋಪೇತಮೈಶ್ವರ್ಯಂ ನ ಚ ಕೃತ್ರಿಮಮ್ |
ತುಷ್ಟ್ಯರ್ಥಂ ಬ್ರಹ್ಮಣಃ ಪುತ್ರೋ ಲಲಾಟಾದುತ್ಥಿತಃ ಪ್ರಭುಃ ॥8॥
ಅರುದತ್ ಸಸ್ವನಂ ಘೋರಂ ಜಗತಃ ಪ್ರಭುರವ್ಯಯಃ |
ಜಾಯಮಾನಂ ಪಿತಾ ಪುತ್ರೇ ಪುತ್ರಃ ಪಿತರಿ ಚೈವ ಹಿ ॥9॥
ನಾರಾಯಣನ ಸ್ವಾಭಾವಿಕವಾದ (ಕೃತ್ರಿಮವಲ್ಲದ) ಅಣಿಮಾದಿ ಐಶ್ವರ್ಯವು ಪ್ರಜೆಗಳ ಸಂತೋಷಕ್ಕಾಗಿ ವರ್ಣಿಸಲ್ಪಟ್ಟಿದೆ. ಬ್ರಹ್ಮದೇವರ ಲಲಾಟದಿಂದ ಜಗತ್ತಿನ ಪ್ರಭುವೂ ಅವ್ಯಯನೂ ಆದ ರುದ್ರನು ಜನಿಸಿ ಗಟ್ಟಿಯಾಗಿ ಘೋರವಾಗಿ ಅತ್ತನು. ತಂದೆಯು ಸಂಪಾದಿಸಿದ ಧನಾದಿಗಳನ್ನು ಪುತ್ರನೂ ಪುತ್ರನು ಸಂಪಾದಿಸಿದ ಧನಾದಿಗಳನ್ನು ತಂದೆಯೂ ಪಡೆಯಬೇಕೆಂದು (ಅತ್ತನು)

ಬುದ್ಧಿಂ ವಿಶ್ವಸೃಜೇ ದತ್ವಾ ಬ್ರಹ್ಮಾಂಡಂ ಯೇನ ನಿರ್ಮಿತಮ್ |
ಯಸ್ಮಿನ್ ಹಿರಣ್ಮಯೋ ಹಂಸಃ ಶಕುನಿಃ ಸಮಪದ್ಯತ ॥10॥
ವಿಶ್ವಸೃಷ್ಟಿಕರ್ತನಾದ ರುದ್ರನಿಗೆ ಸುಬುದ್ಧಿಯನ್ನು ಕೊಟ್ಟು, ಅಳಬೇಡವೆಂದು ಹೇಳಿ ಬ್ರಹ್ಮದೇವರು ಬ್ರಹ್ಮಾಂಡವನ್ನು ನಿರ್ಮಿಸಿದರು. ಅದರಲ್ಲಿ ಸುವರ್ಣಮಯ- ವಾದ ಹಂಸಪಕ್ಷಿರೂಪದಲ್ಲಿ ನಾರಾಯಣನು ಅವತರಿಸಿದನು.
ಕರ್ತಾ ಸರ್ವಸ್ಯ ಲೋಕಸ್ಯ ಬ್ರಹ್ಮಾ ಲೋಕಪಿತಾಮಹಃ |
ಸ ದೇವಃ ಸರ್ವಭೂತಾತ್ಮಾ ಮಹಾದೇವಃ ಸನಾತನಃ |
ಅಸಂಖ್ಯಾತಸಹಸ್ರಾಣಾಂ ರುದ್ರಾಣಾಂ ಸ್ಥಾನಮವ್ಯಯಮ್ ॥11॥
ಲೋಕಪಿತಾಮಹರಾದ, ಸರ್ವಲೋಕದ ಸೃಷ್ಟಿಕರ್ತರಾದ ಬ್ರಹ್ಮದೇವರು ವೇದಪ್ರತಿಪಾದ್ಯರಾದವರು. ಶ್ರೇಷ್ಠವಾದ ದೇವತೆಯಾದ ಅವರು ಎಲ್ಲ ಪ್ರಾಣಿ- ಗಳಲ್ಲಿಯೂ ವ್ಯಾಪಿಸಿದ್ದಾರೆ. ಮತ್ತು ಸಂಖ್ಯೆಯಿಲ್ಲದಷ್ಟು ಸಹಸ್ರಾರು ರುದ್ರರೂಪ- ಗಳಿಗೆ ಅವರು ಶಾಶ್ವತವಾದ ಆಶ್ರಯರಾಗಿದ್ದಾರೆ.
ತತಸ್ತಾಂ ಭಗವಾನ್ನೀತಿಂ ಪೂರ್ವಂ ಜಗ್ರಾಹ ಶಂಕರಃ |
ಬಹುರೂಪೋ ವಿಶಾಲಾಕ್ಷಃ ಶಿವಃ ಸ್ಥಾಣುರುಮಾಪತಿಃ ॥12॥
ಅನಂತರ ಬಹುರೂಪವುಳ್ಳ ವಿರೂಪಾಕ್ಷನಾದ (ವಿಶಾಲಾಕ್ಷನಾದ), ಸ್ಥಾಣುವೂ, ಶಿವನೂ ಆದ ಪೂಜ್ಯನಾದ ಉಮಾಪತಿಯು ಆ ದಂಡನೀತಿಶಾಸ್ತ್ರವನ್ನು ಬ್ರಹ್ಮ- ದೇವರಿಂದ ಸ್ವೀಕರಿಸಿದನು.
ಯುಗಾನಾಮಾಯುಷೋ ಹ್ರಾಸಂ ವಿಜ್ಞಾಯ ಭಗವಾನ್ ಶಿವಃ |
ಸಂಚಿಕ್ಷೇಪ ತತಃ ಶಾಸ್ತ್ರಂ ಮಹಾರ್ಥಂ ಬ್ರಹ್ಮಣಾ ಕೃತಮ್ ॥13॥
ಯುಗಗಳು ಕಳೆದಂತೆ ಮನುಷ್ಯರ ಆಯುಷ್ಯವು ಹ್ರಾಸಹೊಂದುವುದನ್ನು ತಿಳಿದು ಪೂಜ್ಯನಾದ ಶಿವನು ಬ್ರಹ್ಮದೇವರಿಂದ ರಚಿತವಾದ ಮಹಾರ್ಥಗಳನ್ನೊಳ- ಗೊಂಡ ಆ ಶಾಸ್ತ್ರವನ್ನು ಸಂಕ್ಷೇಪಗೊಳಿಸಿ ಇಂದ್ರಾದಿ ದೇವತೆಗಳಿಗೆ ಉಪದೇಶಿಸಿ- ದನು. (ಲಕ್ಷಾಲಂಕಾರ)
ವೈಶಾಲಾಕ್ಷಮಿತಿ ಪ್ರೋಕ್ತಂ ತದಿಂದ್ರಃ ಪ್ರತ್ಯಪದ್ಯತ |
ದಶಾಧ್ಯಾಯಸಹಸ್ರಾಣಿ ಸುಬ್ರಹ್ಮಣ್ಯೋ ಮಹಾತಪಾಃ ॥14॥
ಅದಕ್ಕೆ ವೈಶಾಲಾಕ್ಷವೆಂದು ಹೆಸರು. ಅದರಲ್ಲಿ ಹತ್ತುಸಹಸ್ರ ಅಧ್ಯಾಯಗಳಿವೆ. ಅತ್ಯಂತ ಬ್ರಾಹ್ಮಣವತ್ಸಲನೂ, ಮಹಾತಪಸ್ವಿಯೂ ಆದ ಇಂದ್ರನು ಅದನ್ನು ಅಧ್ಯ- ಯನ ಮಾಡಿದನು.
ಭಗವಾನಪಿ ತಚ್ಛಾಸ್ತ್ರಂ ಸಂಚಿಕ್ಷೇಪ ಪುರಂದರಃ |
ಸಹಸ್ರೈಃ ಪಂಚಭಿಸ್ತಾತ ಯದುಕ್ತಂ ಬಾಹುದಂಡಿಕಃ ॥15॥
ಪ್ರೀತಿಪಾತ್ರನೇ! ಪೂಜ್ಯನಾದ ಪುರಂದರರನೂ ಸಹ ರಾಜನು ತನ್ನ ಬಾಹು- ಗಳಿಂದ ದಂಡವನ್ನು ವಿಧಿಸುವ ರೀತಿಯನ್ನು ತಿಳಿಸುವ ಆ ಶಾಸ್ತ್ರವನ್ನು ಐದು ಸಹಸ್ರಶ್ಲೋಕಗಳಿಗೆ ಸಂಕ್ಷೇಪಗೊಳಿಸಿದನು.
ಅಧ್ಯಾಯಾನಾಂ ಸಹಸ್ರೈಸ್ತು ತ್ರಿಭಿರೇವ ಬೃಹಸ್ಪತಿಃ |
ಸಂಚಿಕ್ಷೇಪೇಶ್ವರೋ ಬುದ್ಧ್ಯಾ ಬಾರ್ಹಸ್ಪತ್ಯಂ ತದುಚ್ಯತೇ ॥16॥
ಪ್ರಭುಗಳಾದ ಬೃಹಸ್ಪತ್ಯಾಚಾರ್ಯರು ಅದನ್ನು ಮೂರು ಸಹಸ್ರ ಅಧ್ಯಾಯ- ಗಳಿಗೆ ಸಂಕ್ಷೇಪಗೊಳಿಸಿದರು. ಅದಕ್ಕೆ ಬಾರ್ಹಸ್ಪತ್ಯವೆಂದು ಹೆಸರು.
ಅಧ್ಯಾಯಾನಾಂ ಸಹಸ್ರೇಣ ಕಾವ್ಯಃ ಸಂಕ್ಷೇಪಮಬ್ರವೀತ್ |
ತಚ್ಛಾಸ್ತ್ರಮಮಿತಪ್ರಜ್ಞೋ ಯೋಗಾಚಾರ್ಯೋ ಮಹಾತಪಾಃ ॥17॥
ಅಮಿತಪ್ರಜ್ಞೆಯುಳ್ಳವರೂ, ಯೋಗಾಚಾರ್ಯರೂ, ಮಹಾತಪಸ್ವಿಗಳೂ ಆದ ಶುಕ್ರಾಚಾರ್ಯರು ಅದನ್ನು ಒಂದು ಸಹಸ್ರ ಅಧ್ಯಾಯಗಳಿಗೆ ಸಂಕ್ಷೇಪಗೊಳಿಸಿದರು.
ಏವಂ ಲೋಕಾನುರೋಧೇನ ಶಾಸ್ತ್ರಮೇತನ್ಮಹರ್ಷಿಭಿಃ |
ಸಂಕ್ಷಿಪ್ತಮಾಯುರ್ವಿಜ್ಞಾಯ ಮರ್ತ್ಯಾನಾಂ ಹ್ರಾಸಿ ಪಾಂಡವ ॥18॥
ಎಲೈ ಪಾಂಡವನೇ! ಹೀಗೆ ಪ್ರಜೆಗಳ ಹ್ರಾಸವನ್ನು ಹೊಂದುವ ಆಯುಸ್ಸನ್ನು ಗಮನಿಸಿ ಮಹರ್ಷಿಗಳು ಪ್ರಜೆಗಳ ಹಿತಕ್ಕಾಗಿ ಬ್ರಹ್ಮದೇವರು ರಚಿಸಿದ ಶಾಸ್ತ್ರವನ್ನು ಸಂಕ್ಷೇಪಗೊಳಿಸಿದರು.
ಅಥ ದೇವಾಃ ಸಮಾಗಮ್ಯ ವಿಷ್ಣುಮೂಚುಃ ಪ್ರಜಾಪತಿಮ್ |
ಏಕೋ ಯೋಽರ್ಹತಿ ಮರ್ತ್ಯೇಭ್ಯಃ ಶ್ರೈಷ್ಠ್ಯಂ ತಂ ವೈ ಸಮಾದಿಶ ॥19॥
ಅನಂತರ ದೇವತೆಗಳು ಪ್ರಜಾಪತಿಯಾದ ವಿಷ್ಣುವಿನ ಸಮೀಪದಲ್ಲಿ ಬಂದು ಮನುಷ್ಯರಲ್ಲಿ ಯಾವನು ಎಲ್ಲರಿಗಿಂತಲೂ ಶ್ರೇಷ್ಠತೆಯನ್ನು ಹೊಂದಲು ಅರ್ಹ- ನಾಗುತ್ತಾನೆಯೋ ಅಂತಹವನನ್ನು ನಮಗೆ ನೀಡು ಎಂದು ಕೇಳಿದರು.
ತತಃ ಸಂಚಿಂತ್ಯ ಭಗವಾನ್ ದೇವೋ ನಾರಾಯಣಃ ಪ್ರಭುಃ |
ತೈಜಸಂ ವೈ ವಿರಜಸಂ ಸೋಽಸೃಜನ್ಮಾನಸಂ ಸುತಮ್ ॥20॥
ಆಗ ಭಗವಂತನೂ ಪ್ರಭುವೂ ಆದ ನಾರಾಯಣದೇವನು ಚೆನ್ನಾಗಿ ಚಿಂತಿಸಿ, ತೇಜೋರೂಪನಾದ ವಿರಜನೆಂಬ ಮಾನಸಪುತ್ರನನ್ನು ಸೃಷ್ಟಿಸಿದನು.
ವಿರಜಾಸ್ತು ಮಹಾಭಾಗ ವಿಭುತ್ವಂ ಭುವಿ ನೈಚ್ಛತ |
ನ್ಯಾಸಾಯೈವಾಭವದ್ ಬುದ್ಧಿಃ ಪ್ರಣೀತಾ ತಸ್ಯ ಪಾಂಡವ ॥21॥
ಎಲೈ ಮಹಾನುಭಾವನೇ! ವಿರಜನಾದರೋ ಭೂಮಿಯ ಒಡೆತನವನ್ನು ಬಯಸಲಿಲ್ಲ. ಎಲೈ ಪಾಂಡವನೇ! ಅವನ ಬುದ್ಧಿಯು ಸನ್ನ್ಯಾಸಸ್ವೀಕಾರದಲ್ಲಿಯೇ ಹೋಯಿತು.

ಕೀರ್ತಿಮಾಂಸ್ತಸ್ಯ ಪುತ್ರೋಽಭೂತ್ ಸೋಽಪಿ ಪಂಚಾತಿಗೋಽಭವತ್ |
ಕರ್ದಮಸ್ತಸ್ಯ ಚ ಸುತಃ ಸೋಽಪ್ಯತಪ್ಯನ್ಮಹತ್ ತಪಃ ॥22॥
ಕೀರ್ತಿಮಂತನು ಅವನ ಮಗನಾಗಿ ಜನಿಸಿದನು. ಅವನೂ ಪ್ರಪಂಚವನ್ನು ದಾಟಿ (ಪ್ರಪಂಚದ ಆಸೆಗಳನ್ನು ದಾಟಿ) ವಿರಕ್ತನಾದನು. ಅವನ ಪುತ್ರನಾದ ಕರ್ದಮನೂ ಸಹ ದೊಡ್ಡ ತಪಸ್ಸನ್ನು ಮಾಡಿದನು.
ಪ್ರಜಾಪತೇಃ ಕರ್ದಮಸ್ಯ ಅನಂಗೋ ನಾಮ ವೈ ಸುತಃ |
ಪ್ರಜಾನಾಂ ರಕ್ಷಿತಾ ಸಾಧುರ್ದಂಡನೀತಿವಿಶಾರದಃ ॥23॥
ಕರ್ದಮಪ್ರಜಾಪತಿಯ ಪುತ್ರನಾದ ಅನಂಗನು ದಂಡನೀತಿಯಲ್ಲಿ ವಿಶಾರದ- ನಾಗಿ ಚೆನ್ನಾಗಿ ಪ್ರಜೆಗಳನ್ನು ರಕ್ಷಿಸುವವನಾದನು.
ಅನಂಗಪುತ್ರೋಽತಿಬಲೋ ನೀತಿಮಾನಧಿಗಮ್ಯ ವೈ |
ಅಭಿಪೇದೇ ಮಹೀರಾಜ್ಯಮಥೇಂದ್ರಿಯವಶೋಽಭವತ್ ॥24॥
ಅನಂಗಪುತ್ರನೂ ಅತಿಬಲನೂ ಆದ ನೀತಿವಂತನು ಭೂಮಿಯ ರಾಜ್ಯದ ಒಡೆತನವನ್ನು ಹೊಂದಿ, ಅನಂತರ ಇಂದ್ರಿಯವಶನಾದನು.
ಪ್ರಾಪ್ಯ ನಾರೀಂ ಮಹಾಭಾಗಾಂ ರೂಪಿಣೀಂ ಕಾಮಮೋಹಿತಾಮ್ |
ಸೌಭಾಗ್ಯೇನ ಚ ಸಂಪನ್ನಾಂ ಗುಣೈಶ್ಚಾನುತ್ತಮಾಂ ಸತೀಮ್ ॥25॥
ಅವನು ಮಹಾನುಭಾವಳೂ, ಸುಂದರಳೂ, ಸೌಭಾಗ್ಯಯುಕ್ತಳೂ, ಶ್ರೇಷ್ಠವಾದ ಗುಣಗಳಿಂದ ಕೂಡಿದವಳೂ, ಕಾಮಮೋಹಿತಳೂ ಆದ ಸ್ತ್ರೀಯನ್ನು ಪತ್ನಿಯನ್ನಾಗಿ ಪಡೆದನು.
ಮೃತ್ಯೋಸ್ತು ದುಹಿತಾ ರಾಜನ್ ಸುನೀಥಾ ನಾಮ ಮಾನಸೀ |
ಪ್ರಖ್ಯಾತಾ ತ್ರಿಷು ಲೋಕೇಷು ಯಾ ಸಾ ವೇನಮಜೀಜನತ್ ॥26॥
ಎಲೈ ರಾಜನ್! ಮೃತ್ಯುವಿನ ಮಾನಸಪುತ್ರಿಯಾದ ಸುನೀಥಾ ಎಂಬ ಹೆಸರಿ- ನಿಂದ ಮೂರುಲೋಕದಲ್ಲಿ ಪ್ರಖ್ಯಾತಳಾದ ಅವಳು ವೇನನನ್ನು ಪುತ್ರನನ್ನಾಗಿ ಪಡೆದಳು.
ತಂ ಪ್ರಜಾಸು ವಿಧರ್ಮಾಣಂ ರಾಗದ್ವೇಷವಶಾನುಗಮ್ |
ಮಂತ್ರಪೂತೈಃ ಕುಶೈರ್ಜಘ್ನುರ್ಋಷಯೋ ಬ್ರಹ್ಮವಾದಿನಃ ॥27॥
ರಾಗದ್ವೇಷಗಳಿಗೆ ವಶನಾಗಿ ಪ್ರಜೆಗಳಿಗೆ ವಿರುದ್ಧವಾದ ಧರ್ಮಗಳನ್ನು ಆಚರಿಸುತ್ತಿದ್ದ ಅವನನ್ನು ಬ್ರಹ್ಮವಾದಿಗಳಾದ ಋಷಿಗಳು ಅಭಿಮಂತ್ರಿತವಾದ ಕುಶ- ಗಳಿಂದ ಸಂಹಾರ ಮಾಡಿದರು.
ಮಮಂಥುರ್ದಕ್ಷಿಣಂ ಚೋರುಮೃಷಯಸ್ತಸ್ಯ ಮಂತ್ರತಃ |
ತತೋಽಸ್ಯ ವಿಕೃತೋ ಜಜ್ಞೇ ಹ್ರಸ್ವಾಂಗಃ ಪುರುಷೋ ಭುವಿ ॥28॥
ನಂತರ ಋಷಿಗಳು ಮಂತ್ರಪೂರ್ವಕವಾಗಿ ಅವನ ಬಲತೊಡೆಯನ್ನು ಮಥಿಸಿ- ದರು. ಆಗ ವಿಕೃತವಾದ ರೂಪವನ್ನು ಹೊಂದಿದ್ದ, ಕುಬ್ಜನಾದ ಪುರುಷನು ಭೂಮಿ- ಯಲ್ಲಿ ಜನಿಸಿದನು.
ದಗ್ಧಸ್ಥಾಣುಪ್ರತೀಕಾಶೋ ರಕ್ತಾಕ್ಷಃ ಕೃಷ್ಣಮೂರ್ಧಜಃ |
ನಿಷೀದೇತ್ಯೇವಮೂಚುಸ್ತಮೃಷಯೋ ಬ್ರಹ್ಮವಾದಿನಃ ॥29॥
ಅವನು ಸುಟ್ಟು ಹೋದ ಮರದ ಬುಡದಂತೆ ಕಾಂತಿಯನ್ನು ಹೊಂದಿ, ಕೆಂಪಾದ ಕಣ್ಣುಗಳನ್ನು, ಕಪ್ಪಾದ ಕೇಶಗಳನ್ನೂ ಹೊಂದಿದ್ದನು. ಬ್ರಹ್ಮವಾದಿಗಳಾದ ಋಷಿಗಳು ಅವನನ್ನು `ನಿಷೀದ - ಕುಳಿತುಕೋ' ಎಂದು ಹೇಳಿದರು.
ತಸ್ಮಾನ್ನಿಷಾದಾಃ ಸಂಭೂತಾಃ ಕ್ರೂರಾ ಶೈಲವನಾಶ್ರಯಾಃ |
ಯೇ ಚಾನ್ಯೇ ವಿಂಧ್ಯನಿಲಯಾ ಮ್ಲೇಚ್ಛಾಃ ಶತಸಹಸ್ರಶಃ ॥30॥
ಅವನಿಂದ ನಿಷಾದರು ಉತ್ಪನ್ನರಾದರು. ಅವರು ಕ್ರೂರರು ಮತ್ತು ಪರ್ವತ ಮತ್ತು ಅರಣ್ಯಗಳಲ್ಲಿ ವಾಸಿಸುವವರು. ವಿಂಧ್ಯಪರ್ವತದಲ್ಲಿ ವಾಸಿಸುವ ಸಾವಿರಾರು ಸಂಖ್ಯೆಯ ಮ್ಲೇಚ್ಛರೂ ಸಹ ಅವನ ಜಾತಿಗೇ ಸೇರಿದವರು.
ಭೂಯೋಽಸ್ಯ ದಕ್ಷಿಣಂ ಪಾಣಿಂ ಮಮಂಥುಸ್ತೇ ಮಹರ್ಷಯಃ |
ತತಃ ಪುರುಷ ಉತ್ಪನ್ನೋ ರೂಪೇಣೇಂದ್ರ ಇವಾಪರಃ ॥31॥
ಆ ಮಹರ್ಷಿಗಳು ಪುನಃ ವೇನನ ದಕ್ಷಿಣಬಾಹುವನ್ನು ಮಥಿಸಿದರು. ಆಗ ರೂಪದಲ್ಲಿ ಇಂದ್ರನನ್ನು ಹೋಲುವ ಪುರುಷನು ಉದಯಿಸಿದನು.
ಕವಚೀ ಬದ್ಧನಿಸ್ತ್ರಿಂಶಃ ಸಶರಃ ಸಶರಾಸನಃ |
ವೇದವೇದಾಂಗವಿಚ್ಚೈವ ಧನುರ್ವೇದೇ ಚ ಪಾರಗಃ ॥32॥
ಅವನು ಕವಚವನ್ನು ಧರಿಸಿ, ಖಡ್ಗವನ್ನು ಬಿಗಿದು, ಧನುರ್ಬಾಣಗಳನ್ನು ಹಿಡಿದು, ಧನುರ್ವೇದದಲ್ಲಿ ಪಾರಂಗತನಾಗಿ, ವೇದವೇದಾಂಗಜ್ಞಾನಿಯೂ ಆಗಿ- ದ್ದನು.
ತಂ ದಂಡನೀತಿಃ ಸಕಲಾ ಶ್ರಿತಾ ರಾಜನ್ ನರೋತ್ತಮಮ್ |
ತತಃ ಸ ಪ್ರಾಂಜಲಿರ್ವೈನ್ಯೋ ಮಹರ್ಷೀಂಸ್ತಾನುವಾಚ ಹ ॥33॥
ಎಲೈ ರಾಜನೇ! ಆಗ ಸಮಗ್ರವಾದ ದಂಡನೀತಿಯು ಆ ನರಶ್ರೇಷ್ಠನನ್ನು ಆಶ್ರಯಿಸಿತು. ಅನಂತರ ವೇನಪುತ್ರನಾದ ಅವನು ಕೈಗಳನ್ನು ಮುಗಿದು ಮಹರ್ಷಿ- ಗಳನ್ನು ಕುರಿತು ಹೀಗೆ ಹೇಳಿದನು.
ಸುಸೂಕ್ಷ್ಮಾ ಮೇ ಸಮುತ್ಪನ್ನಾ ಬುದ್ಧಿರ್ಧರ್ಮಾರ್ಥದರ್ಶಿನೀ |
ಅನಯಾ ಕಿಂ ಮಯಾ ಕಾರ್ಯಂ ತನ್ಮೇ ತತ್ತ್ವೇನ ಶಂಸತ ॥34॥
ನನಗೆ ಧರ್ಮಾರ್ಥಗಳನ್ನು ತೋರಿಸುವ ಸೂಕ್ಷ್ಮಬುದ್ಧಿಯುಂಟಾಗಿದೆ. ಈ ಬುದ್ಧಿಯಿಂದ ನಾನು ಏನನ್ನು ಮಾಡಬೇಕೆಂದು ನನಗೆ ಸರಿಯಾಗಿ ತಿಳಿಸಿ.

ಯನ್ಮಾಂ ಭವಂತೋ ವಕ್ಷ್ಯಂತಿ ಕಾರ್ಯಮರ್ಥಸಮನ್ವಿತಮ್ |
ತದಹಂ ವೈ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥35॥
ಅರ್ಥಸಾಧಕವಾದ ಯಾವ ಕಾರ್ಯವನ್ನು ಮಾಡಬೇಕೆಂದು ನೀವು ನನಗೆ ಹೇಳುವಿರೋ ಅದನ್ನು ನಾನು ಮಾಡುವೆನು. ಇದರಲ್ಲಿ ಬೇರೆ ವಿಚಾರವಿಲ್ಲ. (ಎಂದು ಹೇಳಿದನು).
ತಮೂಚುರಥ ದೇವಾಸ್ತೇ ತೇ ಚೈವ ಪರಮರ್ಷಯಃ |
ನಿಯತೋ ಯತ್ರ ಧರ್ಮೋ ವೈ ತಮಶಂಕಃ ಸಮಾಚರ ॥36॥
ಆಗ ದೇವತೆಗಳು ಮತ್ತು ಪರಮ ಋಷಿಗಳು ಅವನನ್ನು ಕುರಿತು ಯಾವುದ- ರಿಂದ ನಿಯಮೇನ ಧರ್ಮಪ್ರಾಪ್ತಿಯಾಗುವುದೋ ಅದನ್ನು ನಿಃಶಂಕವಾಗಿ ಆಚರಿಸು ಎಂದು ಹೇಳಿದರು.
ಪ್ರಿಯಾಪ್ರಿಯೇ ಪರಿತ್ಯಜ್ಯ ಸಮಃ ಸರ್ವೇಷು ಜಂತುಷು |
ಕಾಮಕ್ರೋಧೌ ಚ ಲೋಭಂ ಚ ಮಾನಂ ಚೋತ್ಸೃಜ್ಯ ದೂರತಃ ॥37॥
ಯಶ್ಚ ಧರ್ಮಾತ್ ಪ್ರವಿಚಲೇಲ್ಲೋಕೇ ಕಶ್ಚನ ಮಾನವಃ |
ನಿಗ್ರಾಹ್ಯಸ್ತೇ ಸ ಬಾಹುಭ್ಯಾಂ ಶಶ್ವದ್ ಧರ್ಮಮವೇಕ್ಷತಃ ॥38॥
ಪ್ರಿಯಾಪ್ರಿಯಗಳನ್ನು ಪರಿತ್ಯಜಿಸಿ, ಸರ್ವಪ್ರಾಣಿಗಳಲ್ಲಿಯೂ ಸಮಾನವಾಗಿ ನಡೆದುಕೊಂಡು, ಕಾಮಕ್ರೋಧಗಳನ್ನೂ, ಲೋಭವನ್ನೂ ಮತ್ತು ಅಹಂಕಾರ- ವನ್ನೂ ದೂರದಲ್ಲಿಯೇ ತ್ಯಜಿಸಿ ಲೋಕದಲ್ಲಿ ಯಾವ ಮನುಷ್ಯನು ಧರ್ಮದಿಂದ ಭ್ರಷ್ಟನಾಗುತ್ತಾನೆಯೋ ಅವನನ್ನು ಶಾಶ್ವತವಾಗಿ ಧರ್ಮವನ್ನು ಪರಿಶೀಲಿಸುವ ನೀನು ನಿನ್ನ ಬಾಹುಗಳಿಂದ ನಿಗ್ರಹಿಸಬೇಕು.
ಪ್ರತಿಜ್ಞಾಂ ಚಾಧಿರೋಹಸ್ವ ಮನಸಾ ಕರ್ಮಣಾ ಗಿರಾ |
ಪಾಲಿಯಷ್ಯಾಮ್ಯಹಂ ಭೌಮಂ ಬ್ರಹ್ಮ ಇತ್ಯೇವ ಚಾಸಕೃತ್ ॥39॥
ಯಶ್ಚಾತ್ರ ಧರ್ಮ ಇತ್ಯುಕ್ತೋ ದಂಡನೀತಿವ್ಯಪಾಶ್ರಯಃ |
ತಮಶಂಕಃ ಕರಿಷ್ಯಾಮಿ ಸ್ವವಶೋ ನ ಕದಾಚನ ॥40॥
ಅದಂಡ್ಯಾ ಮೇ ದ್ವಿಜಾಶ್ಚೇತಿ ಪ್ರತಿಜಾನೀಷ್ವ ಚಾಭಿಭೋ |
ಲೋಕಂ ಚ ಸಂಕರಾತ್ ಕೃತ್ಸ್ನಾತ್ ತ್ರಾತಾಸ್ಮೀತಿ ಪರಂತಪ ॥41॥
ಎಲೈ ಪರಂತಪನೇ! ಶತ್ರುಗಳನ್ನು ಸೋಲಿಸುವವನೇ! ನಾನು ಮನಸ್ಸಿನಿಂದಲೂ ಕರ್ಮದಿಂದಲೂ ಮತ್ತು ಮಾತಿನಿಂದಲೂ ಭೂಮಿಯಲ್ಲಿರುವ ವೇದವನ್ನು ರಕ್ಷಿಸುತ್ತೇನೆ ಎಂದು ಅನೇಕ ಬಾರಿ ಪ್ರತಿಜ್ಞೆಯನ್ನು ಮಾಡು. ನಾನು ನನ್ನ ಮನಸ್ಸಿಗೆ ಬಂದಂತೆ ನಡೆದುಕೊಳ್ಳದೆ, ದಂಡನೀತಿಯನ್ನು ಆಧರಿಸಿ, ಯಾವುದು ಧರ್ಮ- ವೆಂದು ಹೇಳಲ್ಪಡುತ್ತದೆಯೋ ಅದನ್ನು ನಿಃಶಂಕೆಯಿಂದ ಮಾಡುವೆನು. ನನಗೆ ಬ್ರಾಹ್ಮಣರು ಶಿಕ್ಷಾರ್ಹರಲ್ಲ. ಲೋಕದಲ್ಲಿ ಉಂಟಾಗಬಹುದಾದ ಧರ್ಮಸಂಕರ- ವೆಲ್ಲವನ್ನೂ ನಾನು ಉಂಟಾಗದಂತೆ ರಕ್ಷಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡು (ಎಂದು ಹೇಳಿದರು.)
ವೈನ್ಯಸ್ತತಸ್ತಾನುವಾಚ ದೇವಾನೃಷಿಪುರೋಗಮಾನ್ |
ಬ್ರಾಹ್ಮಣಾ ಮೇ ಸಹಾಯಾಶ್ಚೇದೇವಮಸ್ತು ಸುರರ್ಷಭಾಃ ॥42॥
ವೈನ್ಯನು ಆಗ ಅವರನ್ನು ಕುರಿತು `ಎಲೈ ಸುರಶ್ರೇಷ್ಠರೇ! ಬ್ರಾಹ್ಮಣರು ನನಗೆ ಸಹಾಯವಾಗಿದ್ದರೆ ಹಾಗೆಯೇ ಆಗಲಿ' ಎಂದು ಹೇಳಿದನು.
ಏವಮಸ್ತ್ವಿತಿ ವೈನ್ಯಸ್ತು ತೈರುಕ್ತೋ ಬ್ರಹ್ಮವಾದಿಭಿಃ |
ಪುರೋಧಾಶ್ಚಾಭವತ್ ತಸ್ಯ ಶುಕ್ರೋ ಬ್ರಹ್ಮಮಯೋ ನಿಧಿಃ ॥43॥
ಬ್ರಹ್ಮವಾದಿಗಳಾದ ಋಷಿಗಳು ವೈನ್ಯನನ್ನು ಕುರಿತು ತಥಾಸ್ತು ಎಂದು ಹೇಳಿ- ದರು. ಆಗ ವೇದನಿಧಿಯಾದ ಶುಕ್ರಾಚಾರ್ಯರು ಅವನಿಗೆ ಪುರೋಹಿತರಾದರು.
ಮಂತ್ರಿಣೋ ವಾಲಖಿಲ್ಯಾಸ್ತು ಸಾರಸ್ವತ್ಯೋ ಗಣೋ ಹ್ಯಭೂತ್ |
ಮಹರ್ಷಿರ್ಭಗವಾನ್ ಗರ್ಗಸ್ತಸ್ಯ ಸಾಂವತ್ಸರೋಽಭವತ್ ॥44॥
ಸರಸ್ವತೀನದಿಯ ತೀರದಲ್ಲಿ ವಾಸಿಸುವ ವಾಲಖಿಲ್ಯ ಋಷಿಗಳ ಗಣವು ಮಂತ್ರಿ- ಗಳಾದರು. ಮಹರ್ಷಿಗಳೂ ಪೂಜ್ಯರೂ ಆದ ಗರ್ಗರು ಜ್ಯೋತಿಃಶಾಸ್ತ್ರಫಲವನ್ನು ಹೇಳುವವರಾದರು.
ಆತ್ಮನಾಽಷ್ಟಮ ಇತ್ಯೇವ ಶ್ರುತಿರೇಷಾ ಪರಾ ನೃಷು |
ಉತ್ಪನ್ನೌ ವಂದಿನೌ ಚಾಸ್ಯ ತತ್ಪೂರ್ವೌ ಸೂತಮಾಗಧೌ ॥45॥
ರಾಜನು ತನ್ನನ್ನು ಸೇರಿಸಿ ಎಂಟನೆಯವನು ಎಂಬ ಈ ಶ್ರುತಿಯು ಪ್ರಜೆಗಳಲ್ಲಿ ಪ್ರಸಿದ್ಧವಾಗಿದೆ. ಪುರೋಹಿತ, ಮಂತ್ರಿ, ಜ್ಯೋತಿಷಿಕ, ಇಬ್ಬರು ಬಂದಿಗಳು, ಸೂತ- ಮಾಗಧರು ಇವರು ಏಳು ರಾಜನನ್ನು ಸೇರಿಸಿ ರಾಜನು ಎಂಟನೆಯವನು. ಅವನಿಗೆ ಇಬ್ಬರು ವಂದಿಗಳು ಮತ್ತು ಅದಕ್ಕಿಂತಲೂ ಪೂರ್ವದಲ್ಲಿ ಸೂತಮಾಗಧರು ಉತ್ಪನ್ನ- ರಾದರು.
ತಯೋಃ ಪ್ರೀತೋ ದದೌ ರಾಜಾ ಪೃಥುರ್ವೈನ್ಯಃ ಪ್ರತಾಪವಾನ್ |
ಅನೂಪದೇಶಂ ಸೂತಾಯ ಮಗಧಂ ಮಾಗಧಾಯ ಚ ॥46॥
ಪ್ರತಾಪಶಾಲಿಯಾದ ವೇನಪುತ್ರನಾದ ಪೃಥುರಾಜನು ಸಂತೋಷದಿಂದ ಅವ- ರಲ್ಲಿ ಸೂತನಿಗೆ ಸಮುದ್ರಪ್ರಾಂತದೇಶವನ್ನು ಮತ್ತು ಮಾಗಧನಿಗೆ ಮಗಧದೇಶವನ್ನು ಕೊಟ್ಟನು.
ಸಮತಾಂ ವಸುಧಾಯಾಶ್ಚ ಸ ಸಮ್ಯಗುಪಪಾದಯತ್ |
ವೈಷಮ್ಯಂ ಹಿ ಪರಂ ಭೂಮೇರಾಸೀದಿತಿ ಹ ನಃ ಶ್ರುತಮ್ ॥47॥
ಭೂಮಿಯನ್ನು ಹೆಚ್ಚು ಕಡಿಮೆ ಸಮತಟ್ಟನ್ನಾಗಿಮಾಡಿದನು. ಮೊದಲು ಭೂಮಿಯು ಬಹಳ ಉಬ್ಬುತಗ್ಗುಗಳಿಂದ ಕೂಡಿದ್ದಿತು ಎಂದು ಕೇಳಿದ್ದೇವೆ.

ಮನ್ವಂತರೇಷು ಸರ್ವೇಷು ವಿಷಮಾ ಜಾಯತೇ ಮಹೀ |
ಉಜ್ಜಹಾರ ತತೋ ವೈನ್ಯಃ ಶಿಲಾಜಾಲಾನ್ ಸಮಂತತಃ ||48||
ಎಲ್ಲಾ ಮನ್ವಂತರಗಳಲ್ಲಿಯೂ ಭೂಮಿಯು ಹೀಗೆಯೇ ಉಬ್ಬು ತಗ್ಗುಗ- ಳಿಂದಲೇ ಸೃಷ್ಟಿಸಲ್ಪಡುತ್ತದೆ. ಆದ್ದರಿಂದ ವೈನ್ಯನು ಅಲ್ಲಲ್ಲಿದ್ದ ಶಿಲಾಸಮೂಹಗಳನ್ನು ತೆಗೆದು ಸಮತಟ್ಟನ್ನಾಗಿ ಮಾಡಿದನು.
ಸ ವಿಷ್ಣುನಾ ಚ ದೇವೇನ ಶಕ್ರೇಣ ವಿಬುಧೈಃ ಸಹ |
ಋಷಿಭಿಶ್ಚ ಪ್ರಜಾಪಾಲ್ಯೇ ಬ್ರಹ್ಮಣಾ ಚಾಭಿಷೇಚಿತಃ ||49||
ವಿಷ್ಣುವೂ, ಇಂದ್ರನೂ, ದೇವತೆಗಳೂ, ಋಷಿಗಳೂ ಮತ್ತು ಬ್ರಹ್ಮದೇವರೂ ಸೇರಿ ಅವನನ್ನು ಪ್ರಜಾಪಾಲಕನೆಂದು ಅಭಿಷೇಕ ಮಾಡಿದರು.
ತಂ ಸಾಕ್ಷಾತ್ ಪೃಥಿವೀ ಭೇಜೇ ರತ್ನಾನ್ಯಾದಾಯ ಪಾಂಡವ |
ಸಾಗರಃ ಸರಿತಾಂ ಭರ್ತಾ ಹಿಮವಾಂಶ್ಚಾಚಲೋತ್ತಮಃ ||50||
ಎಲೈ ಪಾಂಡವನೇ! ಭೂದೇವಿಯು ಸಾಕ್ಷಾತ್ತಾಗಿ ರತ್ನಗಳನ್ನು ತೆಗೆದುಕೊಂಡು ಬಂದು ಅವನನ್ನು ಸೇವಿಸಿದಳು. ಸರಿತ್ಪತಿಯಾದ ಸಾಗರನು ಮತ್ತು ಪರ್ವತಶ್ರೇಷ್ಠ- ನಾದ ಹಿಮಾಲಯನು ರತ್ನಗಳನ್ನು ನೀಡಿದರು.
ಶಕ್ರಶ್ಚ ಧನಮಕ್ಷಯ್ಯಂ ಪ್ರಾದಾತ್ ತಸ್ಯ ಯುಧಿಷ್ಠಿರ |
ರುಗ್ಮಂ ಚಾಪಿ ಮಹಾಮೇರುಃ ಸ್ವಯಂ ಕನಕಪರ್ವತಃ ||51||
ಎಲೈ ಯುಧಿಷ್ಠಿರನೇ! ಇಂದ್ರನು ತಾನೇ ಬಂದು ಅವನಿಗೆ ಅಕ್ಷಯವಾದ ಧನವನ್ನು ಕೊಟ್ಟನು. ಸುವರ್ಣಪರ್ವತವಾದ ಮೇರುವು ತಾನೇ ಸುವರ್ಣವನ್ನು ಕೊಟ್ಟನು.
ಯಕ್ಷರಾಕ್ಷಸಭರ್ತಾ ಚ ಭಗವಾನ್ ನರವಾಹನಃ |
ಧರ್ಮೇ ಚಾರ್ಥೇ ಚ ಕಾಮೇ ಚ ಸಮರ್ಥಂ ಪ್ರದದೌ ಧನಮ್ ||52||
ಯಕ್ಷರಾಕ್ಷಸರ ಪತಿಯಾದ, ಪೂಜ್ಯನಾದ, ನರವಾಹನನಾದ ಕುಬೇರನು ಅವನಿಗೆ ಧರ್ಮಾರ್ಥಕಾಮಗಳಿಗೆ ಬೇಕಾಗುವಷ್ಟು ಧನವನ್ನು ಕೊಟ್ಟನು.
ಹಯಾ ರಥಾಶ್ಚ ನಾಗಾಶ್ಚ ಕೋಟಿಶಃ ಪುರುಷಾಸ್ತಥಾ |
ಪ್ರಾದುರ್ಬಭೂವುರ್ವೈನ್ಯಸ್ಯ ಚಿಂತನಾದೇವ ಪಾಂಡವ |
ನ ಜರಾ ನ ಚ ದುರ್ಭಿಕ್ಷಂ ನಾಧಯೋ ವ್ಯಾಧಯಸ್ತಥಾ ||53||
ಸರೀಸೃಪೇಭ್ಯಃ ಸ್ತೇನೇಭ್ಯೋ ನ ಚಾನ್ಯೋನ್ಯಾತ್ ಕದಾಚನ |
ಭಯಮುತ್ಪದ್ಯತೇ ತತ್ರ ತಸ್ಯ ರಾಜ್ಞೋಽಭಿರಕ್ಷಣಾತ್ ||54||
ಅಶ್ವಗಳು, ರಥಗಳು, ಗಜಗಳು, ಮತ್ತು ಕೋಟಿಗಟ್ಟಲೆ ಪುರುಷರು ಸಹ ಅವನ ಮನಸ್ಸಿನ ಚಿಂತನೆಯಿಂದಲೇ ಪ್ರಾದುರ್ಭವಿಸಿದರು. ಎಲೈ ಪಾಂಡವನೇ! ಅವನ ರಾಜ್ಯದಲ್ಲಿ ಜರೆಯಾಗಲೀ, ದುರ್ಭಿಕ್ಷವಾಗಲೀ, ಆಧಿವ್ಯಾಧಿಗಳಾಗಲೀ, ಸರ್ಪ- ಭಯವಾಗಲೀ, ಚೋರಭಯವಾಗಲೀ, ಪರಸ್ಪರಭಯವಾಗಲೀ ಉಂಟಾಗಲಿಲ್ಲ. ಆ ರಾಜನ ರಕ್ಷಣೆಯು ಆ ರೀತಿ ಇದ್ದಿತು.
ಆಪಸ್ತಸ್ತಂಭಿರೇ ಚಾಸ್ಯ ಸಮುದ್ರಮಭಿಯಾಸ್ಯತಃ |
ಪರ್ವತಾಶ್ಚ ದದುರ್ಮಾರ್ಗಂ ಧ್ವಜಭಂಗಶ್ಚ ನಾಭವತ್ ||55||
ಸಮುದ್ರವನ್ನು ಹೋಗಿ ಸೇರುವ ನದಿಗಳು ಅಲ್ಲಲ್ಲಿ ನಿಂತವು. ಪರ್ವತಗಳು ಅವನಿಗೆ ಮಾರ್ಗವನ್ನು ನೀಡಿದವು. ಅವನ ರಥದ ಧ್ವಜವು ಭಗ್ನವಾಗಲಿಲ್ಲ.
ತೇನೇಯಂ ಪೃಥಿವೀ ದುಗ್ಧಾ ಸಸ್ಯಾನಿ ದಶ ಸಪ್ತ ಚ |
ಯಕ್ಷರಾಕ್ಷಸನಾಗೈಶ್ಚಾಭೀಪ್ಸಿತಂ ಯಸ್ಯ ಯಸ್ಯ ಯತ್ ||56||
ಅವನು ಈ ಭೂಮಿಯನ್ನು ದೋಹನ ಮಾಡಿ ಯಕ್ಷ, ರಾಕ್ಷಸ, ಸರ್ಪಗಳಲ್ಲಿ ಅವರವರಿಗೆ ಇಷ್ಟವಾದ ಹದಿನೇಳು ವಿಧವಾದ ಸಸ್ಯಗಳನ್ನು ಮತ್ತು ಹದಿನೆಂಟು ವಿಧವಾದ ಧಾನ್ಯಗಳನ್ನು ದೋಹನ ಮಾಡಿದನು. (ಲಕ್ಷ್ಮಾಲಂಕಾರ)
ತೇನ ಧರ್ಮೋತ್ತರಶ್ಚಾಯಂ ಕೃತೋ ಲೋಕೋ ಮಹಾತ್ಮನಾ |
ರಂಜಿತಾಶ್ಚ ಪ್ರಜಾಃ ಸರ್ವಾಸ್ತೇನ ರಾಜೇತಿ ಶಬ್ದ್ಯತೇ ||57||
ಮಹಾತ್ಮನಾದ ಅವನು ಈ ಲೋಕವನ್ನು ಧರ್ಮೋತ್ತರವನ್ನಾಗಿ ಮಾಡಿದನು. ಎಲ್ಲಾ ಪ್ರಜೆಗಳನ್ನು ರಂಜನೆ ಮಾಡಿದುದರಿಂದ ಅವನಿಗೆ ರಾಜ ಎಂಬ ಶಬ್ದವು ಬಂದಿತು.
ಬ್ರಾಹ್ಮಣಾನಾಂ ಕ್ಷತತ್ರಾಣಾತ್ ತತಃ ಕ್ಷತ್ರಿಯ ಉಚ್ಯತೇ |
ಪ್ರಥಿತಾ ಧನತಶ್ಚೇಯಂ ಪೃಥಿವೀ ಸಾಧುಭಿಃ ಸ್ಮೃತಾ ||58||
ಬ್ರಾಹ್ಮಣರಿಗೆ ಗಾಯವಾಗದಂತೆ ರಕ್ಷಣೆ ಮಾಡಿದುದರಿಂದ ಕ್ಷತ್ರಿಯನೆಂದು ಕರೆಯುತ್ತಾರೆ. ಅವನ ಆಳ್ವಿಕೆಯಲ್ಲಿ ಈ ಭೂಮಿಯು ಸಂಪತ್ತಿನಿಂದ ವಿಸ್ತಾರ- ಗೊಂಡಿತು. ಆದ್ದರಿಂದ ಸಜ್ಜನರು ಭೂಮಿಯನ್ನು ಪೃಥಿವೀ ಎಂದು ಕರೆಯುತ್ತಾರೆ.
ಸ್ಥಾಪನಂ ಚಾಕರೋದ್ ವಿಷ್ಣುಃ ಸ್ವಯಮೇವ ಸನಾತನಃ |
ನಾತಿವರ್ತಿಷ್ಯತೇ ಕಶ್ಚಿದ್ ರಾಜಂಸ್ತ್ವಾಮಿತಿ ಪಾರ್ಥಿವ ||59||
ಎಲೈ ಪಾರ್ಥಿವನೇ! ಸನಾತನನಾದ ವಿಷ್ಣುವು ತಾನಾಗಿಯೇ ``ಎಲೈ ರಾಜನೇ ನಿನ್ನನ್ನು ಯಾರೂ ಅತಿಕ್ರಮಿಸುವುದಿಲ್ಲ'' ಎಂದು ಕಟ್ಟಳೆಯನ್ನು ವಿಧಿಸಿದನು.
ತೇಜಸಾ ಭಗವಾನ್ ವಿಷ್ಣುರಾವಿವೇಶ ಚ ಭೂಮಿಪಮ್ |
ದೇವವನ್ನರದೇವಾನಾಂ ನಮತೇ ಯಜ್ಜಗನ್ನೃಪ ||60||

ಭಗವಂತನಾದ ವಿಷ್ಣುವು ಆ ರಾಜನನ್ನು ತನ್ನ ತೇಜೋಂಶದಿಂದ ಪ್ರವೇಶಿಸಿ- ದನು. ಆದ್ದರಿಂದ ಎಲೈ ರಾಜನೇ! ಜಗತ್ತು ದೇವತೆಯಂತೆ ನರದೇವನಾದ ರಾಜನಿಗೆ ನಮಸ್ಕರಿಸುತ್ತದೆ.
ದಂಡನೀತ್ಯಾ ಚ ಸತತಂ ರಕ್ಷಿತಂ ತಂ ನರೇಶ್ವರ |
ನಾಧರ್ಷಯತ್ ತತಃ ಕಶ್ಚಿಚ್ಚಾರನಿತ್ಯಾಚ್ಚ ದರ್ಶನಾತ್ ॥61॥
ಎಲೈ ನರೇಶ್ವರನೇ! ದಂಡನೀತಿಯಿಂದ ಸತತವಾಗಿ ರಕ್ಷಿಸಲ್ಪಡುವುದರಿಂದಲೂ ಮತ್ತು ನಿತ್ಯವೂ ಚಾರರ ಮೂಲಕ ಎಲ್ಲವನ್ನೂ ನೋಡುವುದರಿಂದಲೂ ಅವನನ್ನು ಯಾರೂ ಅವಮಾನಗೊಳಿಸಲಿಲ್ಲ.
ಆತ್ಮನಾ ಕರಣೈಶ್ಚೈವ ಸಮಸ್ಯೇಹ ಮಹೀಕ್ಷಿತಃ |
ಕೋ ಹೇತುರ್ಯದ್ವಶೇ ತಿಷ್ಠೇಲ್ಲೋಕೋ ದೈವಾದೃತೇ ಗುಣಾತ್ ॥62॥
ತಾನು ಮತ್ತು ತನ್ನ ಸಹಾಯಕರು ನಿಷ್ಪಕ್ಷಪಾತವಾಗಿ ವರ್ತಿಸುವ ರಾಜನಿಗೆ ದೈವಾನುಗ್ರಹವನ್ನು ಬಿಟ್ಟು ಜಗತ್ತು ವಶವಾಗುವುದಕ್ಕೆ ಬೇರೆ ಯಾವ ಕಾರಣವಿದೆ?
ವಿಷ್ಣೋರ್ಲಲಾಟಾತ್ ಕಮಲಂ ಸೌವರ್ಣಮಭವತ್ ತದಾ |
ಶ್ರೀಃ ಸಂಭೂತಾ ಯತೋ ದೇವೀ ಪತ್ನೀ ಧರ್ಮಸ್ಯ ಧೀಮತಃ ॥63॥
ವಿಷ್ಣುವಿನ ಲಲಾಟದಿಂದ ಸುವರ್ಣಮಯವಾದ ಕಮಲವು ಆಗ ಜನಿಸಿತು. ಅದರಲ್ಲಿ ಮೇಧಾವಿಯಾದ ಧರ್ಮನ ಪತ್ನಿಯಾದ ಶ್ರೀದೇವಿಯು ಜನಿಸಿದಳು.
ಶ್ರಿಯಃ ಸಕಾಶಾದರ್ಥಶ್ಚ ಜಾತೋ ಧರ್ಮೇಣ ಪಾಂಡವ |
ಅಥ ಧರ್ಮಸ್ತಥೈವಾರ್ಥಃ ಶ್ರೀಶ್ಚ ರಾಜ್ಯೇ ಪ್ರತಿಷ್ಠಿತಾ ॥64॥
ಎಲೈ ಪಾಂಡವನೇ! ಧರ್ಮದಿಂದ ಶ್ರೀದೇವಿಯ ಮೂಲಕ ಅರ್ಥವು ಜನಿಸಿತು. ಅನಂತರ ಧರ್ಮ,ಅರ್ಥ ಮತ್ತು ಸಂಪತ್ತುಗಳು ರಾಜ್ಯದಲ್ಲಿ ಪ್ರತಿಷ್ಠಿತವಾದವು.
ಸುಕೃತಸ್ಯ ಕ್ಷಯಾಚ್ಚೈವ ಸ್ವರ್ಲೋಕಾದೇತ್ಯ ಮೇದಿನೀಮ್ |
ಪಾರ್ಥಿವೋ ಜಾಯತೇ ತಾತ ದಂಡನೀತಿವಶಾನುಗಃ ॥65॥
ಪ್ರೀತಿಪಾತ್ರನೇ! ಶ್ರೇಷ್ಠರಾದ ಜೀವರು ಸ್ವರ್ಗವಾಸಕ್ಕೆ ಕಾರಣವಾದ ಪುಣ್ಯವನ್ನು ಭೋಗದಿಂದ ಕಳೆದುಕೊಂಡು ಸ್ವರ್ಗದಿಂದ ಭೂಮಿಗೆ ಬಂದು ರಾಜರಾಗಿ ದಂಡ- ನೀತಿಯ ವಶವರ್ತಿಗಳಾಗುತ್ತಾರೆ.
ಮಹತ್ತ್ವೇನ ಚ ಸಂಯುಕ್ತೋ ವೈಷ್ಣವೇನ ನರೋ ಭುವಿ |
ಬುದ್ಧ್ಯಾ ಭವತಿ ಸಂಯುಕ್ತೋ ಮಾಹಾತ್ಮ್ಯಂ ಚಾಧಿಗಚ್ಛತಿ ॥66॥
ಶ್ರೇಷ್ಠತೆಯಿಂದಲೂ ಮತ್ತು ವಿಷ್ಣುವಿನ ಸನ್ನಿಧಾನದಿಂದಲೂ ಕೂಡಿದ ಅಂತಹ ಮಾನವರು ಒಳ್ಳೆಯ ಬುದ್ಧಿಯನ್ನು ಹೊಂದಿ, ಮಾಹಾತ್ಮ್ಯವನ್ನು ಪಡೆಯುತ್ತಾರೆ.
ಸ್ಥಾಪನಾಮಥ ದೇವಾನಾಂ ನ ಕಶ್ಚಿದತಿವರ್ತತೇ |
ತಿಷ್ಠತ್ಯೇಕಸ್ಯ ಚ ವಶೇ ತಂ ಚೇದನುವಿಧೀಯತೇ ॥67॥
ದೇವತೆಗಳು ವಿಧಿಸಿದ ಕಟ್ಟಳೆಯನ್ನು ಯಾರೂ ಮೀರುವುದಿಲ್ಲ. ಅವನನ್ನು ಅನುಸರಿಸುವ ಪ್ರಜೆಗಳೆಲ್ಲರೂ ಅವನ ವಶದಲ್ಲಿ ಇರುತ್ತಾರೆ.
ಶುಭಂ ಹಿ ಕರ್ಮ ರಾಜೇಂದ್ರ ಶುಭತ್ವಾಯೋಪಕಲ್ಪತೇ |
ತುಲ್ಯಸ್ಯೈಕಸ್ಯ ಯಸ್ಯಾಯಂ ಲೋಕೋ ವಚಸಿ ತಿಷ್ಠತಿ ॥68॥
ಎಲೈ ರಾಜೇಂದ್ರನೇ! ಶುಭಕರ್ಮವು ಶುಭಫಲವನ್ನೇ ಕೊಡುತ್ತದೆ. ಆದ್ದರಿಂದ ಅಂತಹ ತಮಗೆ ಶರೀರಾದಿಗಳಿಂದ ಸಮಾನನಾದ ಒಬ್ಬನ ವಶದಲ್ಲಿ ಲೋಕವು ಇರುತ್ತದೆ.
ಯೋ ಹ್ಯಸ್ಯ ಮುಖಮದ್ರಾಕ್ಷೀತ್ ಸೋಮ್ಯ ಸೋಽಸ್ಯ ವಶಾನುಗಃ |
ಸುಭಗಂ ಚಾರ್ಥವಂತಂ ಚ ರೂಪವಂತಂ ಚ ಪಶ್ಯತಿ ॥69॥
ಯಾವನು ಸುಭಗನೂ, ರೂಪವಂತನೂ, ಶ್ರೀಮಂತನೂ ಆದ ರಾಜನ ಮುಖ -ವನ್ನು ನೋಡುತ್ತಾನೆಯೋ ಅವನು ಎಲೈ ಸೌಮ್ಯನೇ! ಅವನಿಗೆ ವಶನಾಗುತ್ತಾನೆ.
ತತೋ ಜಗತಿ ರಾಜೇಂದ್ರ ಸತತಂ ಶಬ್ದಿತಂ ಬುಧೈಃ |
ದೇವಾಶ್ಚ ನರದೇವಾಶ್ಚ ತುಲ್ಯಾ ಇತಿ ವಿಶಾಂಪತೇ ॥70॥
ಎಲೈ ರಾಜೇಂದ್ರನೇ! ಆಗ ಜಗತ್ತಿನಲ್ಲಿ ಜ್ಞಾನಿಗಳು `ದೇವತೆಗಳು ಮತ್ತು ರಾಜರು ಸಮಾನರಾದವರು' ಎಂಬ ಪ್ರಥೆಯನ್ನು ಉಂಟು ಮಾಡಿದರು.
ಏತತ್ ತೇ ಸರ್ವಮಾಖ್ಯಾತಂ ಮಹತ್ತ್ವಂ ಪ್ರತಿ ರಾಜಸು |
ಕಾರ್ತ್ಸ್ನ್ಯೇನ ಭರತಶ್ರೇಷ್ಠ ಕಿಮನ್ಯದಿಹ ವರ್ತತಾಮ್ ॥71॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಷ್ಟಿತಮೋಽಧ್ಯಾಯಃ ॥60॥
ಎಲೈ ಭರತಶ್ರೇಷ್ಠನೇ! ರಾಜರಲ್ಲಿರುವ ಶ್ರೇಷ್ಠತೆಯ ವಿಷಯದಲ್ಲಿ ನಾನು ನಿನಗೆ ಎಲ್ಲವನ್ನೂ ಸಂಪೂರ್ಣವಾಗಿ ಹೇಳಿದ್ದೇನೆ. ಬೇರೆ ಏನನ್ನು ಹೇಳಲಿ?
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 60ನೆಯ ಅಧ್ಯಾಯವು ಮುಗಿಯಿತು.
0

61. ಅರವತ್ತೊಂದನೆಯ ಅಧ್ಯಾಯ
ಚಾತುರ್ವರ್ಣ್ಯಧರ್ಮಕಥನ
ವೈಶಂಪಾಯನಃ
ತತಃ ಪುನಃ ಸ ಗಾಂಗೇಯಮಭಿವಾದ್ಯ ಪಿತಾಮಹಮ್ |
ಪ್ರಾಂಜಲಿರ್ನಿಯತೋ ಭೂತ್ವಾ ಪರ್ಯಪೃಚ್ಛದ್ ಯುಧಿಷ್ಠಿರಃ ||1||
ವೈಶಂಪಾಯನರು ಅನಂತರ ಯುಧಿಷ್ಠಿರನು ಪುನಃ ಗಂಗಾಪುತ್ರರೂ ಪಿತಾಮಹರೂ ಆದ ಭೀಷ್ಮರಿಗೆ ಅಭಿವಂದಿಸಿ, ಕೈಗಳನ್ನು ಮುಗಿದು ಶ್ರದ್ಧೆಯಿಂದ ಪ್ರಶ್ನೆ ಮಾಡಿದನು.
ಕೇ ಧರ್ಮಾಃ ಸರ್ವವರ್ಣಾನಾಂ ಚಾತುರ್ವರ್ಣ್ಯಸ್ಯ ಕೇ ಪೃಥಕ್ |
ಚತುರ್ಣಾಮಾಶ್ರಮಾಣಾಂ ಚ ರಾಜಧರ್ಮಾಶ್ಚ ಕೇ ಮತಾಃ ||2||
ಅನುಲೋಮಪ್ರತಿಲೋಮವರ್ಣದವರಿಗೆ ಯಾವ ಧರ್ಮಗಳು? ಚಾತು- ರ್ವರ್ಣ್ಯಕ್ಕೆ ಸಂಬಂಧಿಸಿದ ಧರ್ಮಗಳು ಯಾವವು? ನಾಲ್ಕು ಆಶ್ರಮಗಳಿಗೂ ಮತ್ತು ರಾಜರಿಗೂ ಸಂಬಂಧಿಸಿದ ಧರ್ಮಗಳು ಯಾವವು?
ಕೇನಸ್ವಿದ್ ವರ್ಧತೇ ರಾಷ್ಟ್ರಂ ರಾಜಾ ಕೇನ ವಿವರ್ಧತೇ |
ಕೇನ ಪೌರಾಶ್ಚ ಭೃತ್ಯಾಶ್ಚ ವರ್ಧಂತೇ ಭರತರ್ಷಭ ||3||
ರಾಷ್ಟ್ರವು ಯಾವುದರಿಂದ ಅಭಿವೃದ್ಧಿ ಹೊಂದುತ್ತದೆ? ರಾಜನು ಯಾವುದರಿಂದ ಅಭಿವೃದ್ಧಿಯನ್ನು ಹೊಂದುತ್ತಾನೆ? ಎಲೈ ಭರತರ್ಷಭನೇ! ಪೌರರು ಮತ್ತು ಭೃತ್ಯರು ಯಾವುದರಿಂದ ಅಭಿವೃದ್ಧಿಯನ್ನು ಹೊಂದುತ್ತಾರೆ?
ಕೋಶಂ ದಂಡಂ ಚ ದುರ್ಗಂ ಚ ಸಹಾಯಾನ್ ಮಂತ್ರಿಣಸ್ತಥಾ |
ಋತ್ವಿಕ್ಪುರೋಹಿತಾಚಾರ್ಯಾನ್ ಕೀದೃಶಾನ್ ವರ್ಜಯೇನ್ನೃಪಃ ||4||
ಕೋಶ, ದಂಡ, ಕೋಟೆ, ಸಹಾಯಕರು, ಮಂತ್ರಿಗಳು, ಋತ್ವಿಜರು, ಪುರೋಹಿತರು, ಆಚಾರ್ಯರು ಇವರಲ್ಲಿ ಎಂತಹವರನ್ನು ಅಥವಾ ಎಂತಹದನ್ನು ರಾಜನು ವರ್ಜಿಸಬೇಕು?
ಕೇಷು ವಿಶ್ವಸಿತವ್ಯಂ ಸ್ಯಾದ್ ರಾಜ್ಞಾಂ ಕಸ್ಯಾಂಚಿದಾಪದಿ |
ಕುತೋ ವಾಽಽತ್ಮಾ ದೃಢೋ ರಕ್ಷ್ಯಸ್ತನ್ಮೇ ಬ್ರೂಹಿ ಪಿತಾಮಹ ||5||
ರಾಜನಿಗೆ ಯಾವುದಾದರೂ ಆಪತ್ತು ಸಂಭವಿಸಿದರೆ ಅವನು ಯಾರಲ್ಲಿ ವಿಶ್ವಾಸವನ್ನು ಮಾಡಬೇಕು? ಎಲೈ ಪಿತಾಮಹನೇ! ರಾಜನು ತನ್ನನ್ನು ಏಕೆ ದೃಢವಾಗಿ ರಕ್ಷಿಸಿಕೊಳ್ಳಬೇಕೆಂದು ನನಗೆ ಹೇಳು.
ದ್ವೈಧೀಭಾವೇ ಚ ಭೂತಾನಾಂ ಶಪಥಂ ಕೀದೃಶೋ ಭವೇತ್ |
ಅಧರ್ಮಸ್ಯ ಫಲಂ ಯಚ್ಚ ಶಪಥಸ್ಯ ವಿಲಂಘನೇ ||6||
ಇಬ್ಬರು ಪ್ರಜೆಗಳಿಗೆ ಕಲಹವುಂಟಾದಾಗ ಮಾಡುವ ಪ್ರಮಾಣರೂಪವಾದ ಶಪಥವು ಹೇಗಿರಬೇಕು? ಅಂತಹ ಶಪಥವನ್ನು ಮೀರಿದರೆ ಉಂಟಾಗುವ ಅಧರ್ಮದ ಫಲವೇನು?
ಸರ್ವಮೇತದ್ ಯಥಾತತ್ತ್ವಂ ವ್ಯವಹಾರಂ ಚ ತಾದೃಶಮ್ |
ಸಮಾಸವ್ಯಾಸಯೋಗೇನ ಕಥಯಸ್ವ ಪಿತಾಮಹ ||7||
ಎಲೈ ಪಿತಾಮಹನೇ! ಇವೆಲ್ಲವನ್ನೂ ಮತ್ತು ಅಂತಹ ಎಲ್ಲ ವ್ಯವಹಾರಗಳನ್ನೂ ಸಂಕ್ಷೇಪವಿಸ್ತಾರಗಳಿಂದ ನನಗೆ ಹೇಳಬೇಕು.
ಭೀಷ್ಮಃ
ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ |
ಬ್ರಾಹ್ಮಣೇಭ್ಯೋ ನಮಸ್ಕೃತ್ವಾ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ||8||
ಭೀಷ್ಮರು ಮಹತ್ತಾದ ಧರ್ಮಕ್ಕೆ ನಮಸ್ಕಾರ. ಸರ್ವಸಾಧಕನಾದ ಕೃಷ್ಣನಿಗೆ ನಮಸ್ಕಾರ. ಬ್ರಾಹ್ಮಣರನ್ನು ನಮಸ್ಕರಿಸಿ ಶಾಶ್ವತವಾದ ಧರ್ಮಗಳನ್ನು ಹೇಳುವೆನು.
ಅಕ್ರೋಧಃ ಸತ್ಯವಚನಂ ಸಂವಿಭಾಗಃ ಕ್ಷಮಾ ತಥಾ |
ಪ್ರಜನಃ ಸ್ವೇಷು ದಾರೇಷು ಶೌಚಮದ್ರೋಹ ಏವ ಚ ||9||
ಆರ್ಜವಂ ಭೃತ್ಯಭರಣಂ ನವೈತೇ ಸಾರ್ವವರ್ಣಿಕಾಃ |
ಬ್ರಾಹ್ಮಣಸ್ಯ ತು ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಕೇವಲಮ್ ||10||
ಅಕ್ರೋಧ, ಸತ್ಯವಚನ, ತನ್ನಲ್ಲಿರುವ ದ್ರವ್ಯವನ್ನು ಹಂಚಿಕೊಳ್ಳುವುದು, ಕ್ಷಮೆ, ತನ್ನ ಪತ್ನಿಯಲ್ಲಿ ಪುತ್ರರನ್ನು ಪಡೆಯುವುದು, ಶೌಚ, ಅದ್ರೋಹ, ನೇರತನ, ಸೇವಕರ ಪೋಷಣೆ ಈ ಒಂಭತ್ತು ಧರ್ಮಗಳು ಸರ್ವವರ್ಣದವರಿಗೂ ಸಮಾನವಾದ- ವುಗಳು. ಇನ್ನು ಬ್ರಾಹ್ಮಣರಿಗೆ ಮಾತ್ರ ಅಸಾಧಾರಣವಾದ ಧರ್ಮಗಳನ್ನು ನಿನಗೆ ಹೇಳುವೆನು.
ದಮಮೇವ ಮಹಾರಾಜ ಧರ್ಮಮಾಹುಃ ಪುರಾತನಮ್ |
ಸ್ವಾಧ್ಯಾಯೋಽಧ್ಯಾಪನಂ ಚೈವ ತತ್ರ ಕರ್ಮ ಸಮಾಪ್ಯತೇ ||11||
ಎಲೈ ಮಹಾರಾಜನೇ! ದಮವೇ (ಇಂದ್ರಿಯನಿಗ್ರಹವೇ) ಬ್ರಾಹ್ಮಣರಿಗೆ ಶ್ರೇಷ್ಠ- ವಾದ ಪ್ರಾಚೀನಧರ್ಮವೆಂದು ಜ್ಞಾನಿಗಳು ಹೇಳುತ್ತಾರೆ. ಅದರ ಜೊತೆಯಲ್ಲಿ ಅಧ್ಯಯನ ಮತ್ತು ಅಧ್ಯಾಪನ ಇಷ್ಟರಲ್ಲಿ ಬ್ರಾಹ್ಮಣನ ಕರ್ಮವು ಸಮಾಪ್ತಿಗೊಳ್ಳು- ತ್ತದೆ.
ತಂ ಚೇದ್ ವಿತ್ತಮುಪಾಗಚ್ಛೇದ್ ವರ್ತಮಾನಂ ಸ್ವಕರ್ಮಣಿ |
ಅಕುರ್ವಾಣಂ ವಿಕರ್ಮಾಣಿ ಶಾಂತಂ ಪ್ರಜ್ಞಾನತರ್ಪಿತಮ್ ||12||
ಕುರ್ವೀತಾಪತ್ಯಸಂತಾನಮಥೋ ದದ್ಯಾತ್ ಯಜೇತ ಚ |

ಸಂವಿಭಜ್ಯ ಹಿ ಭೋಕ್ತವ್ಯಂ ಧನಂ ಸದ್ಭಿರಿತೀಷ್ಯತೇ ॥13॥
ತನ್ನ ಕರ್ಮಗಳಲ್ಲಿ ತಾನು ನಿರತನಾಗಿ, ವಿರುದ್ಧಕರ್ಮಗಳನ್ನು ಮಾಡದೆ, ಶಾಂತನಾದ, ತನ್ನ ಜ್ಞಾನದಿಂದ ತೃಪ್ತನಾದ ಬ್ರಾಹ್ಮಣರಿಗೆ ವಿತ್ತವು ದೊರಕಿದರೆ ಪತ್ನಿಯಲ್ಲಿ ಅಪತ್ಯರನ್ನು ಪಡೆದು, ದಾನವನ್ನು ಮಾಡಬೇಕು ಮತ್ತು ಯಾಗವನ್ನು ಮಾಡಬೇಕು. ಸಜ್ಜನರಾದವರು ತಮ್ಮ ಧನವನ್ನು ಹಂಚಿಕೊಂಡು ಭೋಗಿಸಬೇಕು ಎಂದು ಹೇಳಲ್ಪಡುತ್ತದೆ.

ಪರಿನಿಷ್ಠಿತಕಾರ್ಯಸ್ತು ಸ್ವಾಧ್ಯಾಯೇನೈವ ಬ್ರಾಹ್ಮಣಃ |
ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥14॥
ಬ್ರಾಹ್ಮಣನು ತನ್ನ ಸ್ವಾಧ್ಯಾಯದಿಂದಲೇ ತನ್ನ ಎಲ್ಲಾ ಕಾರ್ಯವನ್ನು ಪೂರ್ಣ- ಗೊಳಿಸುವವನಾಗುತ್ತಾನೆ. ಉಳಿದುದನ್ನು ಮಾಡಲಿ ಅಥವಾ ಮಾಡದೆ ಇರಲಿ ಬ್ರಾಹ್ಮಣನು ಗಾಯತ್ರಿಯನ್ನು ಜಪಿಸಬೇಕು.

ಕ್ಷತ್ರಿಯಸ್ಯಾಪಿ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ |
ದದ್ಯಾದ್ ರಾಜಾ ನ ಯಾಚೇತ ಯಜೇತ ನತು ಯಾಜಯೇತ್ ॥15॥
ನಾಧ್ಯಾಪಯೇದಧೀಯೇತ ಪ್ರಜಾಶ್ಚ ಪರಿಪಾಲಯೇತ್ |
ನಿತ್ಯೋದ್ಯುಕ್ತೋ ದಸ್ಯುವಧೇ ರಣೇ ಕುರ್ಯಾತ್ ಪರಾಕ್ರಮಮ್ ॥16॥
ಎಲೈ ಭಾರತನೇ! ಕ್ಷತ್ರಿಯನ ಧರ್ಮಗಳನ್ನು ನಿನಗೆ ಹೇಳುವೆನು. ರಾಜನಾದ- ವನು ದಾನ ಮಾಡಬೇಕು. ಯಾಚಿಸಬಾರದು. ಯಾಗವನ್ನು ಮಾಡಬೇಕು. ಮಾಡಿಸಬಾರದು. ಅಧ್ಯಯನವನ್ನು ಮಾಡಬೇಕು. ಅಧ್ಯಾಪನವನ್ನು ಮಾಡ- ಬಾರದು. ಪ್ರಜೆಗಳನ್ನು ರಕ್ಷಿಸಬೇಕು. ದುಷ್ಟರ ವಧೆಯಲ್ಲಿ ನಿತ್ಯವೂ ಉದ್ಯಮಶೀಲ- ನಾಗಬೇಕು. ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿಸಬೇಕು.

ಯೇ ಚ ಕ್ರತುಭಿರೀಜಾನಾಃ ಶ್ರುತವಂತಶ್ಚ ಭೂಮಿಪಾಃ |
ಯ ಏವಾಹವಜೇತಾರಸ್ತ ಏಷಾಂ ಲೋಕಜಿತ್ತಮಾಃ ॥17॥
ಯಾವ ರಾಜರು ವಿದ್ಯೆಯನ್ನು ಸಂಪಾದಿಸಿ, ಯಜ್ಞಗಳನ್ನು ಆಚರಿಸುವರೋ ಅವರೇ ಯುದ್ಧಗಳಲ್ಲಿ ಗೆಲ್ಲುವವರು. ಅಂತಹವರು ಲೋಕವನ್ನು ಜಯಿಸಿದವರಲ್ಲಿ ಶ್ರೇಷ್ಠರಾದವರು.

ಅವಿಕ್ಷತೇನ ದೇಹೇನ ಸಮರಾದ್ ಯೋ ನಿವರ್ತತೇ |
ಕ್ಷತ್ರಿಯೋ ನಾಸ್ಯ ತತ್ ಕರ್ಮ ಪ್ರಶಂಸಂತಿ ಪುರಾವಿದಃ ॥18॥
ಕ್ಷತ್ರಿಯನಾದವನು ಗಾಯವಿಲ್ಲದ ದೇಹದಿಂದ ಯುದ್ಧದಿಂದ ಹಿಂದಿರುಗಿದರೆ ಅವನ ಕರ್ಮವನ್ನು ಪ್ರಾಚೀನರು ಪ್ರಶಂಸಿಸುವುದಿಲ್ಲ.

ವಧಂ ಹಿ ಕ್ಷತ್ರಬಂಧೂನಾಂ ಧರ್ಮಮಾಹುಃ ಪ್ರಧಾನತಃ |
ನಾಸ್ಯ ಕೃತ್ಯತಮಂ ಕಿಂಚಿದನ್ಯದ್ ದಸ್ಯುನಿಬರ್ಹಣಾತ್ ॥19॥
ಕ್ಷತ್ರಬಂಧುಗಳಿಗೆ ದುಷ್ಟರ ವಧೆಯು ಪ್ರಧಾನವಾದ ಧರ್ಮವೆಂದು ಹೇಳು- ತ್ತಾರೆ. ದುಷ್ಟವಿನಾಶಕ್ಕಿಂತಲೂ ಅಧಿಕವಾದ ಕ್ಷತ್ರಿಯನು ಮಾಡಬೇಕಾದ ಕಾರ್ಯವು ಯಾವುದೂ ಇಲ್ಲ.

ದಾನಮಧ್ಯಯನಂ ಯಜ್ಞೋ ಯೋಗಃ ಕ್ಷೇಮೋ ವಿಧೀಯತೇ |
ತಸ್ಮಾದ್ ರಾಜ್ಞಾ ವಿಶೇಷೇಣ ಯೋದ್ಧವ್ಯಂ ಧರ್ಮಮೀಪ್ಸತಾ ॥20॥
ದಾನ, ಅಧ್ಯಯನ ಮತ್ತು ಯಜ್ಞಗಳು ರಾಜರಿಗೆ ಯೋಗಕ್ಷೇಮವೆಂದು ಹೇಳ- ಲ್ಪಡುತ್ತದೆ. ಆದ್ದರಿಂದ ಧರ್ಮವನ್ನು ಬಯಸುವ ರಾಜನು ವಿಶೇಷವಾಗಿ ಯುದ್ಧವನ್ನು ಮಾಡಬೇಕು.

ಸ್ವೇಷು ಧರ್ಮೇಷ್ವವಸ್ಥಾಪ್ಯ ಪ್ರಜಾಃ ಸರ್ವಾ ಮಹೀಪತಿಃ |
ಧರ್ಮೇಣ ಸರ್ವಕೃತ್ಯಾನಿ ಸಮನಿಷ್ಠಾನಿ ಕಾರಯೇತ್ ॥21॥
ರಾಜನಾದವನು ಎಲ್ಲ ಪ್ರಜೆಗಳನ್ನೂ ಅವರವರ ಧರ್ಮಗಳಲ್ಲಿ ನಿಯೋಜಿಸಿ, ಎಲ್ಲ ಕಾರ್ಯಗಳನ್ನು ಸಮಾನಶ್ರದ್ಧೆಯಿಂದ ಅವರಿಂದ ಮಾಡಿಸಬೇಕು.

ಪರಿನಿಷ್ಠಿತಕಾರ್ಯಃ ಸ್ಯಾನ್ನೃಪತಿಃ ಪರಿಪಾಲನಾತ್ |
ಕುರ್ಯಾದನ್ಯನ್ನ ವಾ ಕುರ್ಯಾದೈಂದ್ರೋ ರಾಜನ್ಯ ಉಚ್ಯತೇ ॥22॥
ರಾಜನು ಪ್ರಜಾರಕ್ಷಣೆಯನ್ನು ಮಾಡುವುದರಿಂದ ತನ್ನ ಕಾರ್ಯವನ್ನು ಪೂರ್ಣ- ಗೊಳಿಸುವವನಾಗುತ್ತಾನೆ. ರಾಜನು ಇನ್ನೊಂದು ಕಾರ್ಯವನ್ನು ಮಾಡಲಿ ಅಥವಾ ಬಿಡಲಿ ರಕ್ಷಣೆಯನ್ನು ಮಾತ್ರ ಮಾಡಲೇ ಬೇಕು ಎಂದು ಹೇಳಲ್ಪಡುತ್ತದೆ.

ವೈಶ್ಯಸ್ಯಾಪೀಹ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ |
ದಾನಮಧ್ಯಯನಂ ಯಜ್ಞಃ ಶೌಚೇನ ಧನಸಂಚಯಃ ॥23॥
ಎಲೈ ಭಾರತನೇ! ವೈಶ್ಯನ ಧರ್ಮಗಳನ್ನು ನಿನಗೆ ಹೇಳುವೆನು. ದಾನ, ಅಧ್ಯ- ಯನ, ಯಜ್ಞ ಮತ್ತು ಶುಚಿಯಾಗಿ ಧನಸಂಚಯ - ಇವು ವೈಶ್ಯನ ಧರ್ಮಗಳು.

ಪಿತೃವತ್ ಪಾಲಯೇದ್ ವೈಶ್ಯೋ ಯುಕ್ತಃ ಸರ್ವಪಶೂನಿಹ |
ವಿಕರ್ಮ ತದ್ ಭವೇದನ್ಯತ್ ಕರ್ಮ ಯದ್ಯತ್ ಸಮಾಚರೇತ್ ॥24॥
ವೈಶ್ಯನು ಶ್ರದ್ಧೆಯಿಂದ ಎಲ್ಲ ಪಶುಗಳನ್ನೂ ತಂದೆಯಂತೆ ರಕ್ಷಿಸಬೇಕು. ಅದನ್ನು ಬಿಟ್ಟು, ಅವನು ಬೇರೆ ಏನನ್ನು ಮಾಡಿದರೂ ಅದು ಅವನಿಗೆ ವಿಕರ್ಮವೆನಿಸುತ್ತದೆ.

ರಕ್ಷಯಾ ಸ ಹಿ ತೇಷಾಂ ವೈ ಮಹತ್ ಸುಖಮವಾಪ್ನುಯಾತ್ |
ಪ್ರಜಾಪತಿರ್ಹಿ ವೈಶ್ಯಾಯ ಸೃಷ್ಟ್ವಾ ಪರಿದದೇ ಪ್ರಜಾಃ ॥25॥
ಪಶುಗಳನ್ನು ರಕ್ಷಣೆ ಮಾಡುವುದರಿಂದ ಅವನಿಗೆ ದೊಡ್ಡ ಸುಖವುಂಟಾಗುತ್ತದೆ. ಬ್ರಹ್ಮದೇವರು ಪ್ರಜೆಗಳನ್ನು (ಪಶುಗಳನ್ನು) ಸೃಷ್ಟಿಸಿ ಅವುಗಳನ್ನು ಪಾಲನೆಗಾಗಿ ವೈಶ್ಯನಿಗೆ ಕೊಟ್ಟರು.

ತಸ್ಯ ವೃತ್ತಿಂ ಪ್ರವಕ್ಷ್ಯಾಮಿ ಯಚ್ಚ ತಸ್ಯೋಪಜೀವನಮ್ |
ಷಣ್ಣಾಮೇಕಾಂ ಪಿಬೇದ್ ಧೇನುಂ ಶತಾಚ್ಚ ಮಿಥುನಂ ಹರೇತ್ ॥26॥
ಅವನ ವೃತ್ತಿಯನ್ನು ಮತ್ತು ಜೀವನೋಪಾಯವನ್ನು ಹೇಳುವೆನು. ಆರು ಹಸುಗಳನ್ನು ಪಾಲಿಸಿದರೆ ಅವನು ಒಂದು ಹಸುವಿನ ಕ್ಷೀರವನ್ನು ತನ್ನ ಜೀವನಕ್ಕಾಗಿ ಉಪಯೋಗಿಸಬಹುದು. ನೂರು ಹಸುಗಳನ್ನು ಪಾಲಿಸಿದರೆ ಒಂದು ಹಸು ಮತ್ತು ಒಂದು ವೃಷಭವನ್ನು ತನ್ನದಾಗಿ ಮಾಡಿಕೊಳ್ಳಬಹುದು.
ಲಯೇ ಚೇತ್ ಸಪ್ತಮೋ ಭಾಗಸ್ತಥಾ ಶೃಂಗೇ ಕಲಾ ಖುರೇ |
ಸಸ್ಯಾನಿ ಸರ್ವಬೀಜಾನಾಮೇಷಾಂ ಸಾಂವತ್ಸರೀ ಭೃತಿಃ ॥27॥
ಎರಡು ಮೂರು ಧೇನುಗಳು ಮೃತವಾದರೆ ವೈಶ್ಯನಿಗೆ ಜೀವನವೃತ್ತಿಯುಂಟಾ- ಗುವುದಿಲ್ಲವಾದ್ದರಿಂದ ರಾಜನು ವೈಶ್ಯನ ಆದಾಯದ ಏಳನೆಯ ಒಂದು ಭಾಗವನ್ನು ತೆಗೆದುಕೊಳ್ಳಬೇಕು. ಮತ್ತು ರಾಜನಿಗೆ ಕೊಂಬಿನ ಅಥವಾ ಗೊರಸಿನ ಚಿಹ್ನೆಗಳನ್ನು ತೋರಿಸಬೇಕು. ಕೃಷೀವಲರಿಗೆ ಕೃಷಿಯ ವಿನಾಶವುಂಟಾದರೆ ಒಂದು ಸಂವತ್ಸರಕ್ಕೆ ಆಗುವಷ್ಟು ಧಾನ್ಯವನ್ನು ಮತ್ತು ಅವರು ಬೆಳೆಯುವ ಸರ್ವಬೀಜಗಳನ್ನು ಅವರಿಗೆ ಕೊಡಬೇಕು.
ನ ಚ ವೈಶ್ಯಸ್ಯ ಕಾಮಃ ಸ್ಯಾನ್ನ ರಕ್ಷೇಯಂ ಪಶೂನಿತಿ |
ವೈಶ್ಯೇ ಚೇಚ್ಛತಿ ನಾನ್ಯೇನ ರಕ್ಷಿತವ್ಯಾಃ ಕಥಂಚನ ॥28॥
ವೈಶ್ಯನಾದವನು ತಾನು ಪಶುಗಳನ್ನು ರಕ್ಷಿಸುವುದಿಲ್ಲ ಎಂದು ಎಂದೂ ಬಯಸ- ಬಾರದು. ವೈಶ್ಯನು ಪಶುಗಳನ್ನು ರಕ್ಷಿಸಲು ಇಚ್ಛಿಸಿದರೆ ಇನ್ನೊಬ್ಬನು ರಕ್ಷಿಸಬಾರದು.
ಶೂದ್ರಸ್ಯಾಪಿ ಹಿ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ |
ಪ್ರಜಾಪತಿರ್ಹಿ ವರ್ಣಾನಾಂ ದಾಸಂ ಶೂದ್ರಮಕಲ್ಪಯತ್ ॥29॥
ಎಲೈ ಭಾರತನೇ! ಶೂದ್ರನ ಧರ್ಮವನ್ನು ನಿನಗೆ ಹೇಳುವೆನು. ಬ್ರಹ್ಮದೇವರು ಶೂದ್ರರನ್ನು ಉಳಿದವರ್ಣದವರ ದಾಸರನ್ನಾಗಿ ಕಲ್ಪಿಸಿದರು.
ತಸ್ಮಾಚ್ಛೂದ್ರಸ್ಯ ವರ್ಣಾನಾಂ ಪರಿಚರ್ಯಾ ವಿಧೀಯತೇ |
ತೇಷಾಂ ಶುಶ್ರೂಷಣಾಚ್ಚೈವ ಮಹತ್ ಸುಖಮವಾಪ್ನುಯಾತ್ ॥30॥
ಆದ್ದರಿಂದ ಶೂದ್ರನಿಗೆ ಉಳಿದ ವರ್ಣಗಳ ಪರಿಚರ್ಯವೇ ಧರ್ಮವೆಂದು ಹೇಳಲ್ಪಡುತ್ತದೆ. ಅವರ ಸೇವೆ ಮಾಡುವುದರಿಂದ ಅವನಿಗೆ ದೊಡ್ಡ ಸುಖ- ವುಂಟಾಗುವುದು.
ಶೂದ್ರ ಏತಾನ್ ಪರಿಚರೇತ್ ತ್ರೀನ್ ವರ್ಣಾನನಸೂಯಕಃ |
ಸಂಚಯಾಂಶ್ಚ ನ ಕುರ್ವೀತ ಜಾತು ಶೂದ್ರಃ ಕಥಂಚನ ॥31॥
ಶೂದ್ರನು ಅಸೂಯೆಪಡದೆ ಉಳಿದ ಮೂರು ವರ್ಣದವರನ್ನು ಪರಿಚರಿಸ- ಬೇಕು. ಶೂದ್ರನಾದವನು ಯಾವ ಕಾರಣದಿಂದಲೂ ಧನಸಂಚಯವನ್ನು ಮಾಡ- ಬಾರದು.
ಪಾಪೀಯಾನ್ ಹಿ ಧನಂ ಲಬ್ಧ್ವಾ ವಶೇ ಕುರ್ಯಾದ್ ಗರೀಯಸಃ |
ರಾಜ್ಞಾ ವಾ ಸಮನುಜ್ಞಾತಃ ಕಾಮಂ ಕುರ್ವೀತ ಧಾರ್ಮಿಕಃ ॥32॥
ಶೂದ್ರನು ಧನಸಂಚಯವನ್ನು ಮಾಡಿದರೆ ಧನಲಾಭದಿಂದ ಪಾಪಿಷ್ಠನಾಗಿ ತನಗಿಂತ ಉತ್ತಮರಾದವರನ್ನು ತನ್ನ ವಶದಲ್ಲಿ ಇಟ್ಟುಕೊಳ್ಳಬಹುದು. (ಆದ್ದರಿಂದ ಧನಸಂಚಯವನ್ನು ಮಾಡಬಾರದು) ಅಥವಾ ರಾಜನ ಅನುಮತಿಯನ್ನು ಪಡೆದು ತನಗೆ ಇಷ್ಟವಾದಂತೆ ಧಾರ್ಮಿಕವಾದ ಕಾರ್ಯಗಳನ್ನು ಮಾಡಬಹುದು.
ತಸ್ಯ ವೃತ್ತಿಂ ಪ್ರವಕ್ಷ್ಯಾಮಿ ಯಚ್ಚ ತಸ್ಯೋಪಜೀವನಮ್ |
ಅವಶ್ಯಭರಣೀಯೋ ಹಿ ವರ್ಣಾನಾಂ ಶೂದ್ರ ಉಚ್ಯತೇ ॥33॥
ಅವನ ಜೀವನ ವೃತ್ತಿಯನ್ನು ಮತ್ತು ಜೀವನೋಪಾಯವನ್ನು ನಿನಗೆ ಹೇಳು- ವೆನು. ಶೂದ್ರನಾದವನನ್ನು ಉಳಿದ ಮೂರು ವರ್ಣದವರು ಅವಶ್ಯವಾಗಿ ಪೋಷಿ- ಸಬೇಕು ಎಂದು ಹೇಳಲ್ಪಡುತ್ತದೆ.
ಛತ್ರಂ ವೇಷ್ಟನಮೌಶೀರಮುಪಾನದ್ ವ್ಯಂಜನಾನಿ ಚ |
ಯಾತಯಾಮಾನಿ ದೇಯಾನಿ ಶೂದ್ರಾಯ ಪರಿಚಾರಿಣೇ ॥34॥
ತಾವು ಉಪಯೋಗಿಸಿದ ಛತ್ರಿ, ಉಡುವ ವಸ್ತ್ರಗಳು, ಶಯನವಸ್ತ್ರಗಳು, ಪಾದರಕ್ಷೆಗಳು ಮತ್ತು ವ್ಯಂಜನಗಳು ಹಳೆಯದಾದ ಮೇಲೆ ತಮ್ಮನ್ನು ಪರಿಚರಿಸುವ ಶೂದ್ರನಿಗೆ ಅವುಗಳನ್ನು ಕೊಡಬೇಕು.
ಅಧಾರ್ಯಾಣಿ ವಿಶೀರ್ಣಾನಿ ವಸನಾನಿ ದ್ವಿಜಾತಿಭಿಃ |
ಶೂದ್ರಾಯೈವ ವಿಧೇಯಾನಿ ತಸ್ಯ ಧರ್ಮಧನಂ ಹಿ ತತ್ ॥35॥
ಮೂರು ವರ್ಣಗಳಿಗೆ ಸೇರಿದ ದ್ವಿಜರು ಹರಿದ ವಸ್ತ್ರಗಳನ್ನು ಧರಿಸಬಾರದು. ಅವುಗಳನ್ನು ಶೂದ್ರನಿಗೆ ಕೊಡಬೇಕು. ಅದು ಅವನ ಧರ್ಮಧನ.
ಯಶ್ಚ ಕಶ್ಚಿದ್ ದ್ವಿಜಾತೀನಾಂ ಶೂದ್ರಃ ಶುಶ್ರೂಷುರಾವ್ರಜೇತ್ |
ಕಲ್ಪ್ಯಾಂ ತಸ್ಯ ತು ತೇನಾಹುರ್ವೃತ್ತಿಂ ಧರ್ಮವಿದೋ ಜನಾಃ |
ದೇಯಃ ಪಿಂಡೋಽನಪೇತಾಯ ಭರ್ತವ್ಯೌ ವೃದ್ಧದುರ್ಬಲೌ ॥36॥
ಯಾವನಾದರೂ ಶೂದ್ರನು ದ್ವಿಜಾತಿಯವರ ಬಳಿಗೆ ಸೇವೆ ಮಾಡಲು ಬಯಸಿ ಬಂದರೆ, ಅವನಿಗೆ ಜೀವನೋಪಾಯವನ್ನು ಕಲ್ಪಿಸಿಕೊಡಬೇಕೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ. ಏಕಾಕಿಯಾದ ಅವನಿಗೆ ಭೋಜನವನ್ನು ಕೊಡಬೇಕು. ಅವನು ವೃದ್ಧನೂ ದುರ್ಬಲನೂ ಆದರೆ ಅವನನ್ನು ಪೋಷಿಸಬೇಕು.

ಶೂದ್ರೇಣ ಚ ನ ಹಾತವ್ಯೋ ಭರ್ತಾ ಕಸ್ಯಾಂಚಿದಾಪದಿ |
ಅತಿರೇಕೇಣ ಭರ್ತವ್ಯೋ ಭರ್ತಾ ದ್ರವ್ಯಪರಿಕ್ಷಯೇ |
ನಹಿ ಸ್ವಮಸ್ತಿ ಶೂದ್ರಸ್ಯ ಭರ್ತೃಹಾರ್ಯಧನೋ ಹ್ಯಸೌ ॥37॥
ತನ್ನ ಸ್ವಾಮಿಗೆ ಏನಾದರೂ ವಿಪತ್ತು ಸಂಭವಿಸಿದರೆ ಸೇವೆ ಮಾಡುವ ಶೂದ್ರನು ಅವನನ್ನು ಬಿಟ್ಟು ಹೋಗಬಾರದು. ತನ್ನ ಬಳಿ ಇರುವ ಧನದಿಂದ ಧನವನ್ನು ಕಳೆದುಕೊಂಡ ಸ್ವಾಮಿಯನ್ನು ರಕ್ಷಿಸಬೇಕು. ಶೂದ್ರನಿಗೆ ಸ್ವತಃ ಧನವೆಂಬುದಿಲ್ಲ. ಅವನ ಧನಕ್ಕೆ ಅವನ ಸ್ವಾಮಿಯೇ ಒಡೆಯನಾಗುತ್ತಾನೆ.
ಉಕ್ತಸ್ತ್ರಯಾಣಾಂ ವರ್ಣಾನಾಂ ಯಜ್ಞಸ್ತ್ರಯ್ಯೇವ ಭಾರತ |
ಸ್ವಾಹಾಕಾರನಮಸ್ಕಾರೌ ಮಂತ್ರಃ ಶೂದ್ರೇ ನ ವಿದ್ಯತೇ ॥38॥
ಎಲೈ ಭಾರತನೇ! ಮೂರು ವರ್ಣಗಳಿಗೂ ಯಜ್ಞವೂ ಮತ್ತು ತ್ರಯೀವಿದ್ಯೆ- ಯೂ ಹೇಳಲ್ಪಡುತ್ತದೆ. ಸ್ವಾಹಾ ಶಬ್ದಗಳು, ನಮಃ ಶಬ್ದಗಳು ಮತ್ತು ಮಂತ್ರಗಳು ಶೂದ್ರನಿಗೆ ಇರುವುದಿಲ್ಲ.
ತಸ್ಮಾಚ್ಛೂದ್ರಃ ಪಾಕಯಜ್ಞೈರ್ಯಜೇತಾವ್ರತವಾನ್ ಸ್ವಯಮ್ |
ಪೂರ್ಣಪಾತ್ರಮಯೀಮಾಹುಃ ಪಾಕಯಜ್ಞಸ್ಯ ದಕ್ಷಿಣಾಮ್ ॥39॥
ಆದ್ದರಿಂದ ಶೂದ್ರನು ವ್ರತವನ್ನು ಧರಿಸದಿರುವುದರಿಂದ ಸ್ವತಃ ಯಜ್ಞವನ್ನು ಮಾಡದೆ ತನ್ನ ಬಳಿ ಇರುವ ದ್ರವ್ಯದಿಂದ ಬ್ರಾಹ್ಮಣರಿಂದ ಪಾಕವನ್ನು ಮಾಡಿಸಿ, ಅದರಿಂದ ಯಜ್ಞವನ್ನು ಮಾಡಿಸಿ, ಅನ್ನದಿಂದ ಪೂರ್ಣವಾದ ಒಂದು ಪಾತ್ರೆಯನ್ನು ಪಾಕಯಜ್ಞದ ದಕ್ಷಿಣೆಯನ್ನಾಗಿ ಕೊಡಬೇಕು. (ಲಕ್ಷಾಲಂಕಾರ)
ಶೂದ್ರಃ ಪೈಜವನೋ ನಾಮ ಸಹಸ್ರಾಣಾಂ ಶತಂ ದದೌ |
ಐಂದ್ರಾಗ್ನೇನ ವಿಧಾನೇನ ದಕ್ಷಿಣಾಮಿತಿ ನಃ ಶ್ರುತಮ್ ॥40॥
ಪೈಜವನನೆಂಬ ಶೂದ್ರನು ಇಂದ್ರಾಗ್ನಿದೇವತಾಕವಾದ ಯಾಗವನ್ನು ಮಾಡಿಸಿ, ಒಂದು ಲಕ್ಷ ಪೂರ್ಣಪಾತ್ರೆಗಳನ್ನು ದಕ್ಷಿಣೆಯನ್ನಾಗಿ ಕೊಟ್ಟನು ಎಂದು ನಾವು ಕೇಳಿದ್ದೇವೆ.
ಅತೋ ಹಿ ಸರ್ವವರ್ಣಾನಾಂ ಶ್ರದ್ಧಾಯಜ್ಞೋ ವಿಧೀಯತೇ |
ದೈವತಂ ಹಿ ಮಹಚ್ಛ್ರದ್ಧಾ ಪವಿತ್ರಂ ಯಜತಾಂ ಚ ಯತ್ ॥41॥
ಆದ್ದರಿಂದ ಎಲ್ಲ ವರ್ಣದವರಿಗೂ ಶ್ರದ್ಧಾಯಜ್ಞವು ವಿಧಿಸಲ್ಪಡುತ್ತದೆ. ಯಾಗ- ವನ್ನು ಮಾಡುವ ಎಲ್ಲರಿಗೂ ಶ್ರದ್ಧೆ ಎಂಬುದೇ ಪವಿತ್ರವಾದ ದೊಡ್ಡದಾದ ದೇವತೆ.
ದೈವತಂ ಪರಮಂ ವಿಪ್ರಾಃ ಸ್ವೇನ ಸ್ವೇನ ಪರಸ್ಪರಮ್ |
ಅಯಜನ್ನಿಹ ಸತ್ರೈಸ್ತೇ ತೈಸ್ತೈಃ ಕಾಮೈಃ ಸನಾತನೈಃ ॥42॥
ಬ್ರಾಹ್ಮಣರು ಪರಮದೇವತೆಗಳು. ಅವರು ವೇದೋಕ್ತವಾದ ಕಾಮಗಳಿಂದ ಪರಸ್ಪರವಾಗಿ ಸಹಕರಿಸಿ ಇಲ್ಲಿ ಅನೇಕ ಸತ್ರಯಾಗಗಳನ್ನು ಮಾಡಿದರು.
ಸಂಸೃಷ್ಟಾ ಬ್ರಾಹ್ಮಣೈರೇವ ತ್ರಿಷು ವರ್ಣೇಷು ಸೃಷ್ಟಯಃ |
ದೇವಾನಾಮಪಿ ಯೇ ದೇವಾ ಯದ್ ಬ್ರೂಯುಸ್ತೇ ಪರಂ ಹಿ ತತ್ |
ತಸ್ಮಾದ್ ವರ್ಣೈಃ ಸರ್ವಯಜ್ಞಾಃ ಸಂಸೃಜ್ಯಂತೇ ನ ಕಾಮ್ಯಯಾ ॥43॥
ಉಳಿದ ಮೂರು ವರ್ಣಗಳಲ್ಲಿ ಜನಿಸಿದವರೂ ಸಹ ಬ್ರಾಹ್ಮಣರ ಸಂಬಂಧ- ವನ್ನು ಹೊಂದಿದ್ದಾರೆ. ದೇವತೆಗಳಿಗೂ ದೇವತೆಗಳೆನಿಸಿದ ಬ್ರಾಹ್ಮಣರು ಏನು ಹೇಳುವರೋ ಅದು ಶ್ರೇಷ್ಠವಾದುದು. ಆದ್ದರಿಂದ ನಾಲ್ಕು ವರ್ಣದವರಿಗೆ ಪರಸ್ಪರ ಸಂಬಂಧವಿರುವುದರಿಂದ ಎಲ್ಲ ಯಜ್ಞಗಳ ಫಲಗಳು ನಾಲ್ಕು ವರ್ಣದವರಿಂದಲೂ ಹೊಂದಲ್ಪಡುತ್ತವೆ. ಫಲಕಾಮನೆಯಿಂದ ಮಾಡಿದ ಯಜ್ಞಗಳ ಫಲವು ಮಾತ್ರ ಎಲ್ಲರಿಗೂ ದೊರೆಯುವುದಿಲ್ಲ.
ಋಗ್ಯಜುಃಸಾಮವಿತ್ ಪೂಜ್ಯೋ ನಿತ್ಯಂ ಸ್ಯಾದ್ ದೇವವದ್ ದ್ವಿಜಃ |
ಅನೃಗ್ಯಜುರಸಾಮಾ ತು ಪ್ರಾಜಾಪತ್ಯ ಉಪದ್ರವಃ ॥44॥
ಋಗ್ವೇದ ಯಜುರ್ವೇದ ಮತ್ತು ಸಾಮವೇದವನ್ನು ತಿಳಿದ ಬ್ರಾಹ್ಮಣನು ಯಾವಾಗಲೂ ದೇವತೆಯಂತೆ ಪೂಜಿಸಲ್ಪಡಬೇಕು. ಋಗಾದಿವೇದಗಳನ್ನು ಅಧ್ಯ- ಯನ ಮಾಡದ ಬ್ರಾಹ್ಮಣನು ಬ್ರಹ್ಮದೇವರು ಸೃಷ್ಟಿಸಿದ ಸಮಾಜದ ಉಪದ್ರವ- ವೆಂದು ತಿಳಿಯಬೇಕು.
ಯಜ್ಞೋ ಮನೀಷಯಾ ತಾತ ಸರ್ವವರ್ಣೇಷು ಭಾರತ |
ನಾಸ್ಯ ಯಜ್ಞಹನೋ ದೇವಾ ಈಹಂತೇ ನೇತರೇ ಜನಾಃ |
ತಸ್ಮಾತ್ ಸರ್ವೇಷು ವರ್ಣೇಷು ಶ್ರದ್ಧಾಯಜ್ಞೋ ವಿಧೀಯತೇ ॥45॥
ಎಲೈ ಭಾರತನೇ! ಪ್ರೀತಿಪಾತ್ರನೇ! ಯಜ್ಞವು ಎಲ್ಲ ವರ್ಣದವರಿಗೂ ಬುದ್ಧಿ- ಯಿಂದಲೇ ಉಂಟಾಗುತ್ತದೆ. ಅಂತಹ ಯಜ್ಞಕ್ಕೆ ದೇವತೆಗಳಾಗಲೀ ಅಥವಾ ಉಳಿದ ಜನರಾಗಲೀ ವಿಘ್ನವನ್ನುಂಟು ಮಾಡಿ ಯಜ್ಞವನ್ನು ನಾಶಪಡಿಸುವುದಿಲ್ಲ. ಆದ್ದರಿಂದ ಶ್ರದ್ಧಾಯಜ್ಞವೆಂಬುದು ಎಲ್ಲ ವರ್ಣದವರಿಗೂ ಹೇಳಲ್ಪಡುತ್ತದೆ.
ಸ್ವಂ ದೈವತಂ ಬ್ರಾಹ್ಮಣ ಸ್ವೇನ ನಿತ್ಯಂ
ಪರಾನ್ ವರ್ಣಾನಾಯಜನ್ನೇವಮಾಸೀತ್ |
ಅಧರೋ ವಿತಾನಸ್ತ್ವಥ ತತ್ರ ಸೃಷ್ಟಃ
ನ ಬ್ರಹ್ಮಣಸ್ತ್ರಿಷು ವರ್ಣೇಷು ರಾಜನ್ ॥46॥
ಬ್ರಾಹ್ಮಣನಾದವನು ತನ್ನ ದೇವತೆಯಾದ ನಾರಾಯಣನನ್ನು ತನ್ನ ದ್ರವ್ಯದಿಂದ ಮತ್ತು ಇನ್ನೊಂದು ವರ್ಣದವನ ದ್ರವ್ಯದಿಂದಲೂ ಹಿಂದೆ ಹೇಳಿದ ರೀತಿಯಲ್ಲಿ ಯಾಗವನ್ನು ಮಾಡಿ ತೃಪ್ತಿಪಡಿಸುತ್ತಿದ್ದನು. ಕ್ಷತ್ರಿಯ, ವೈಶ್ಯ, ಶೂದ್ರರಾದ ಅಧಮ ವರ್ಣಗಳ ವಿಸ್ತಾರವು

ಬ್ರಾಹ್ಮಣನನ್ನು ಆಶ್ರಯಿಸಿಕೊಂಡಿದೆ. ಎಲೈ ರಾಜನೇ! ಬ್ರಾಹ್ಮಣನು ಆ ಮೂರು ವರ್ಣಗಳನ್ನು ಆಶ್ರಯಿಸಿಕೊಂಡಿಲ್ಲ.
ತಸ್ಮಾದ್ ವರ್ಣಾ ಋಜವೋ ಜಾತಿಧರ್ಮಾಃ
ಸಂಸೃಜ್ಯಂತೇ ತಸ್ಯ ವಿಪಾಕ ಏಷಃ |
ಏಕಂ ಸಾಮ ಯಜುರೇಕಮೃಗೇಕಾ
ವಿಪ್ರಶ್ಚೈಕೋ ನಿಶ್ಚಯಸ್ತೇಷು ದೃಷ್ಟಃ ||47||
ಆದ್ದರಿಂದ ಎಲ್ಲ ವರ್ಣಗಳೂ ಮತ್ತು ನೇರವಾದ ಎಲ್ಲ ಜಾತಿಧರ್ಮಗಳೂ ಪರಸ್ಪರಸಂಬದ್ಧವಾಗಿವೆ. ಯಜ್ಞಾದಿ ಕ್ರಿಯೆಗಳು ಅದರ ಪರಿಣಾಮ. ಸಾಮವೇದವು ಒಂದೇ. ಯಜುರ್ವೇದವು ಒಂದೇ. ಋಗ್ವೇದವು ಒಂದೇ. ಬ್ರಾಹ್ಮಣಸಮೂಹವೂ ಒಂದೇ. ಅವುಗಳಲ್ಲಿರುವ ನಿಶ್ಚಯವೂ ಸಹ ಏಕರೂಪವಾಗಿರುವುದು ಕಂಡು ಬರುತ್ತದೆ.
ಅತ್ರ ಗಾಥಾ ಯಜ್ಞಗೀತಾಃ ಕೀರ್ತಯಂತಿ ಪುರಾವಿದಃ |
ವೈಖಾನಸಾನಾಂ ರಾಜೇಂದ್ರ ಮುನೀನಾಂ ಯಷ್ಟುಮಿಚ್ಛತಾಮ್||48||
ಎಲೈ ರಾಜೇಂದ್ರನೇ! ಯಜ್ಞವನ್ನು ಮಾಡಲು ಬಯಸಿದ ವೈಖಾನಸಮುನಿ- ಗಳು ಹಾಡಿದ ಯಜ್ಞಸಂಬಂಧಿಯಾದ ಗೀತೆಗಳನ್ನು ಪ್ರಾಚೀನ ಇತಿಹಾಸವನ್ನು ತಿಳಿದವರು ಹೇಳುತ್ತಾರೆ.
ಉದಿತೇಽನುದಿತೇ ವಾಪಿ ಶ್ರದ್ದಧಾನೋ ಜಿತೇಂದ್ರಿಯಃ |
ವಹ್ನಿಂ ಜುಹೋತಿ ಧರ್ಮೇಣ ಶ್ರದ್ಧಾ ವೈ ಕಾರಣಂ ಮಹತ್ ||49||
ಜಿತೇಂದ್ರಿಯನಾದವನು ಸೂರ್ಯೋದಯವಾದ ಮೇಲೆ ಅಥವಾ ಸೂರ್ಯೋದಯಕ್ಕಿಂತ ಮೊದಲೇ ಧರ್ಮದಿಂದ ವಹ್ನಿಯಲ್ಲಿ ಹೋಮ ಮಾಡು- ತ್ತಾನೆ. ಕಾಲಕ್ಕಿಂತ ಅಲ್ಲಿ ಶ್ರದ್ಧೆಯು ದೊಡ್ಡ ಕಾರಣವಾದುದು.
ಯತ್ ಸ್ಕನ್ನಮಸ್ಯ ತತ್ ಪೂರ್ವಂ ಯದಸ್ಕನ್ನಂ ತದುತ್ತರಮ್ |
ಬಹೂನಿ ಯಜ್ಞರೂಪಾಣಿ ನಾನಾಕರ್ಮಫಲಾನಿ ಚ ||50||
ಸೂರ್ಯನ ತೇಜಸ್ಸು ಅಗ್ನಿಯನ್ನು ಪ್ರವೇಶಿಸಿರುವಾಗ ಹೋಮವನ್ನು ಮಾಡು- ವುದು ಯಾವ ಶಾಖೆಗಳಿಗೆ ಇಷ್ಟವೋ ಅವರು `ಅನುದಿತೇ ಜುಹೋತಿ' ಎಂಬ ವಾಕ್ಯವನ್ನು ಆಧರಿಸಿ ಸೂರ್ಯೋದಯಕ್ಕಿಂತ ಮೊದಲು ಹೋಮವನ್ನು ಮಾಡು- ತ್ತಾರೆ. ಯಾವ ಶಾಖೆಯವರಿಗೆ ಪುನಃ ಅಗ್ನಿಯಿಂದ ಹೊರಬಂದು ಸೂರ್ಯನನ್ನು ಸೇರಿದ ತೇಜಸ್ಸು ಪ್ರಿಯವಾದುದೋ ಅವರು `ಉದಿತೇ ಜುಹೋತಿ' ಎಂಬ ವಾಕ್ಯವನ್ನನುಸರಿಸಿ ಸೂರ್ಯೋದಯವಾದ ಮೇಲೆ ಹೋಮವನ್ನು ಮಾಡುತ್ತಾರೆ. ಯಜ್ಞವಿಧಾನಗಳು ಅನೇಕವಾಗಿವೆ. ಅವುಗಳ ಫಲವೂ ಸಹ ನಾನಾವಿಧವಾಗಿದೆ. (ಲಕ್ಷ್ಮಾಲಂಕಾರ)
ತಾನಿ ಯಃ ಸಂವಿಜಾನಾತಿ ಜ್ಞಾನನಿಶ್ಚಯನಿಶ್ಚಿತಃ |
ದ್ವಿಜಾತಿಃ ಶ್ರದ್ಧಯೋಪೇತೋ ಸ ಯಷ್ಟುಂ ಪುರುಷೋಽರ್ಹತಿ ||51||
ಯಾವ ದ್ವಿಜನು ನಿಶ್ಚಿತವಾದ ಜ್ಞಾನವನ್ನು ಹೊಂದಿ, ಅವೆಲ್ಲವನ್ನೂ ತಿಳಿದು, ಶ್ರದ್ಧೆಯಿಂದ ಕೂಡಿರುತ್ತಾನೆಯೋ ಅವನೇ ಯಜ್ಞಮಾಡಲು ಅರ್ಹನಾದವನು.
ಸ್ತೇನೋ ವಾ ಯದಿ ವಾ ಪಾಪೋ ಯದಿ ವಾ ಪಾಪಕೃತ್ತಮಃ |
ಯಷ್ಟುಮಿಚ್ಛತಿ ಯಜ್ಞಂ ಯಃ ಸಾಧುಮೇವ ವದಂತಿ ತಮ್ ||52||
ಕಳ್ಳನಾಗಲೀ, ಅಥವಾ ಪಾಪವನ್ನುಮಾಡಿದವನಾಗಲೀ ಅಥವಾ ಪಾಪವನ್ನು ಮಾಡಿದವರಲ್ಲಿ ಅಗ್ರೇಸರನಾಗಲೀ ಯಜ್ಞವನ್ನು ಮಾಡಲು ಬಯಸಿದರೆ ಅವನನ್ನು ಸಜ್ಜನನೆಂದೇ ಹೇಳುತ್ತಾರೆ.
ಋಷಯಸ್ತಂ ಪ್ರಶಂಸಂತಿ ಸಾಧು ಚೈತದಸಂಶಯಮ್ |
ಸರ್ವಥಾ ಸರ್ವವರ್ಣೈರ್ಹಿ ಯಷ್ಟವ್ಯಮಿತಿ ನಿಶ್ಚಯಃ |
ನಹಿ ಯಜ್ಞಸಮಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ ||53||
ಋಷಿಗಳು ನಿಃಸಂಶಯವಾಗಿ ಒಳ್ಳೆಯದೆಂದು ಅವನನ್ನು ಪ್ರಶಂಸಿಸುತ್ತಾರೆ. ಸರ್ವಥಾ ಯಜ್ಞವನ್ನು ಮಾಡಬೇಕೆಂಬುದು ನಿಶ್ಚಯ. ಮೂರುಲೋಕಗಳಲ್ಲಿಯೂ ಯಜ್ಞಕ್ಕೆ ಸಮಾನವಾದುದು ಯಾವುದೂ ಇಲ್ಲ.
ತಸ್ಮಾದ್ ಯಷ್ಟವ್ಯಮಿತ್ಯಾಹುಃ ಪುರುಷೇಣಾನಸೂಯತಾ |
ಶ್ರದ್ಧಾಪವಿತ್ರಮಾಶ್ರಿತ್ಯ ಯಥಾಶಕ್ತಿ ಪ್ರಯಚ್ಛತಾ ||54||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಷಷ್ಟಿತಮೋಽಧ್ಯಾಯಃ ||61||
ಮನುಷ್ಯನಾದವನು ಅಸೂಯಾರಹಿತನಾಗಿ ಪವಿತ್ರವಾದ ಶ್ರದ್ಧೆಯನ್ನು ಹೊಂದಿ, ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು, ಯಾಗವನ್ನು ಮಾಡಬೇಕೆಂದು ಜ್ಞಾನಿಗಳು ಹೇಳುತ್ತಾರೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 61ನೆಯ ಅಧ್ಯಾಯವು ಮುಗಿಯಿತು.
0
62. ಅರವತ್ತೆರಡನೆಯ ಅಧ್ಯಾಯ
ಚತುರಾಶ್ರಮಧರ್ಮಗಳ ನಿರೂಪಣೆ
ಭೀಷ್ಮಃ
ಆಶ್ರಮಾಣಾಂ ಮಹಾಬಾಹೋ ಶೃಣು ಸತ್ಯಪರಾಕ್ರಮ |
ಚತುರ್ಣಾಂ ನಾಮಧೇಯಾನಿ ಕರ್ಮಾಣಿ ಚ ಯುಧಿಷ್ಠಿರ ||1||
ಭೀಷ್ಮರು ಮಹಾಬಾಹುವೇ! ಸತ್ಯಪರಾಕ್ರಮನೇ! ಯುಧಿಷ್ಠಿರನೇ! ನಾಲ್ಕು ಆಶ್ರಮಗಳ ಹೆಸರುಗಳನ್ನು ಮತ್ತು ಕರ್ಮಗಳನ್ನೂ

ಕೇಳುವವನಾಗು.
ವಾನಪ್ರಸ್ಥಂ ಭೈಕ್ಷಚರ್ಯಾಂ ಗಾರ್ಹಸ್ಥ್ಯಂ ಚ ಮಹಾಶ್ರಮಮ್ |
ಬ್ರಹ್ಮಚರ್ಯಾಶ್ರಮಂ ಪ್ರಾಹುಶ್ಚತುರ್ಥಂ ಬ್ರಾಹ್ಮಣೈರ್ವೃತಮ್ ॥2॥
ವಾನಪ್ರಸ್ಥ, ಸನ್ಯಾಸ, ಶ್ರೇಷ್ಠವಾದ ಗಾರ್ಹಸ್ಥ್ಯ, ಮತ್ತು ಬ್ರಹ್ಮಚರ್ಯಾ- ಶ್ರಮಗಳು ಬ್ರಾಹ್ಮಣರು ಸ್ವೀಕರಿಸುವ ಆಶ್ರಮಗಳೆಂದು ಹೇಳುತ್ತಾರೆ.
ಜಟಾಕರಣಸಂಸ್ಕಾರಂ ದ್ವಿಜಾತಿತತ್ವಮವಾಪ್ಯ ಚ |
ಆಧಾನಾದೀನಿ ಕರ್ಮಾಣಿ ಪ್ರಾಪ್ಯ ವೇದಮಧೀತ್ಯ ಚ ॥3॥
ಸದಾರೋ ವಾಪ್ಯದಾರೋ ವಾ ಆತ್ಮವಾನ್ ಸಂಯತೇಂದ್ರಿಯಃ |
ವಾನಪ್ರಸ್ಥಾಶ್ರಮಂ ಗಚ್ಛೇತ್ ಕೃತಕೃತ್ಯೋ ಗೃಹಾಶ್ರಮಾತ್ ॥4॥
ಚೂಡಾಕರ್ಮವನ್ನುಮಾಡಿಕೊಂಡು, ಅನಂತರ ಉಪನಯನದಿಂದ ದ್ವಿಜತ್ವ- ವನ್ನು ಹೊಂದಿ, ಅಗ್ನಿಕಾರ್ಯಗಳನ್ನುಮಾಡಿ, ವೇದಾಧ್ಯಯನವನ್ನು ಮಾಡಿ, ಗೃಹಸ್ಥಾ -ಶ್ರಮದಲ್ಲಿ ಕೃತಕೃತ್ಯನಾಗಿ, ಪತ್ನೀಸಹಿತನಾಗಿ ಅಥವಾ ಪತ್ನೀರಹಿತನಾಗಿ, ಇಂದ್ರಿಯ-ಜಯವುಳ್ಳವನಾಗಿ, ಧೈರ್ಯಶಾಲಿಯಾಗಿ, ವಾನಪ್ರಸ್ಥಾಶ್ರಮವನ್ನು ಹೊಂದಬೇಕು.
ತತ್ರಾರಣ್ಯಕಶಾಸ್ತ್ರಾಣಿ ಸಮಧೀತ್ಯ ಸ ಧರ್ಮವಿತ್ |
ಊರ್ಧ್ವರೇತಾಃ ಪ್ರವ್ರಜಿತ್ವಾ ಗಚ್ಛತ್ಯಕ್ಷರಸಾತ್ಮತಾಮ್ ॥5॥
ಅಲ್ಲಿಧರ್ಮಜ್ಞನಾದ ಅವನು ಆರಣ್ಯಕಶಾಸ್ತ್ರಗಳ ಅಧ್ಯಯನವನ್ನು ಮಾಡಿ, ಊರ್ಧ್ವರೇತಸ್ಕನಾಗಿ, ಸನ್ಯಾಸವನ್ನು ಸ್ವೀಕರಿಸಿ, ಪರಮಾತ್ಮನ ಸಾದೃಶ್ಯವನ್ನು ಹೊಂದುತ್ತಾನೆ.
ಏತಾನ್ಯೇವ ನಿಮಿತ್ತಾನಿ ಮುನೀನಾಮೂರ್ಧ್ವರೇತಸಾಮ್ |
ಕರ್ತವ್ಯಾನೀಹ ವಿಪ್ರೇಣ ರಾಜನ್ನಾದೌ ವಿಪಶ್ಚಿತಾ ॥6॥
ಎಲೈ ರಾಜನೇ! ಜ್ಞಾನಿಯಾದ ಬ್ರಾಹ್ಮಣನು ಊರ್ಧ್ವರೇತಸ್ಕರಾದ ಮುನಿಗಳ ಈ ಕರ್ಮಗಳನ್ನೇ ಮಾಡಬೇಕೆಂದು ಹೇಳಲ್ಪಡುತ್ತದೆ.
ಚರಿತಬ್ರಹ್ಮಚರ್ಯಸ್ಯ ಬ್ರಾಹ್ಮಣಸ್ಯ ವಿಶಾಂಪತೇ |
ಭೈಕ್ಷಚರ್ಯಾಸ್ವಧೀಕಾರಃ ಪ್ರಶಸ್ತ ಇಹ ಮೋಕ್ಷಿಣಃ ॥7॥
ಎಲೈ ರಾಜನೇ! ಬ್ರಹ್ಮಚರ್ಯಾಶ್ರಮವನ್ನು ಪೂರೈಸಿದ ಮುಮುಕ್ಷುವಾದ ಬ್ರಾಹ್ಮಣನಿಗೆ ಈ ಲೋಕದಲ್ಲಿ ಸನ್ಯಾಸಾಶ್ರಮದಲ್ಲಿ ಪ್ರಶಸ್ತವಾದ ಅಧಿಕಾರವುಂಟಾ- ಗುತ್ತದೆ.
ಯತ್ರಾಸ್ತಮಿತಶಾಯೀ ಸ್ಯಾನ್ನಿರಗ್ನಿರನಿಕೇತನಃ |
ಯಥೋಪಲಬ್ಧಜೀವೀ ಸ್ಯಾನ್ಮುನಿರ್ದಾಂತೋ ಜಿತೇಂದ್ರಿಯಃ ॥8॥
ಅಗ್ನಿಯನ್ನು ಹೊಂದದೆ, ನಿವಾಸವನ್ನು ಹೊಂದದೆ, ಸೂರ್ಯಾಸ್ತವಾಗುವ ಸಮಯದಲ್ಲಿ ಇದ್ದ ಸ್ಥಳದಲ್ಲಿ ಮಲಗಿ, ಸಹಜವಾಗಿ ದೊರೆತ ಆಹಾರದಿಂದ ಜಿತೇಂದ್ರಿಯನಾಗಿ, ಮುನಿಯಾಗಿ ಜೀವಿಸಬೇಕು.
ನಿರಾಶೀಃ ಸ್ಯಾತ್ ಸರ್ವಸಮೋ ನಿರ್ಭೋಗೋ ನಿರ್ವಿಕಾರವಾನ್ |
ವಿಪ್ರಃ ಕ್ಷೇಮಾಶ್ರಮಂ ಪ್ರಾಪ್ತೋ ಗಚ್ಛತ್ಯಕ್ಷರಸಾತ್ಮತಾಮ್ ॥9॥
ಯಾವ ಆಸೆಯನ್ನೂ ಮಾಡಬಾರದು. ಯಾವಾಗಲೂ ಮನಸ್ಸಿನ ಸಾಮ್ಯವನ್ನು ಹೊಂದಿರಬೇಕು. ನಿರ್ವಿಕಾರನಾಗಿ ಎಲ್ಲಾ ಭೋಗಗಳನ್ನೂ ತೊರೆಯಬೇಕು. ಹೀಗೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಬ್ರಾಹ್ಮಣನು ಅಕ್ಷರನಾದ ಪರಮಾತ್ಮನ ಸಾಮ್ಯವನ್ನು ಹೊಂದುತ್ತಾನೆ.
ಅಧೀತ್ಯ ವೇದಾನ್ ಕೃತಸರ್ವಕೃತ್ಯಃ
ಸಂತಾನಮುತ್ಪಾದ್ಯ ಸುಖಾನಿ ಭುಕ್ತ್ವಾ |
ಸಮಾಹಿತಃ ಪ್ರಚರೇದ್ ದುಶ್ಚರಂ ತಂ
ಗಾರ್ಹಸ್ಥ್ಯಧರ್ಮಂ ಮುನಿಧರ್ಮದೃಷ್ಟಮ್ ॥10॥
ವೇದಗಳನ್ನು ಅಧ್ಯಯನ ಮಾಡಿ, ಮಾತಾಪಿತೃಗಳಿಗೆ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಿ, ಸಂತಾನವನ್ನು ಪಡೆದು, ಸುಖಗಳನ್ನು ಭೋಗಿಸಿ, ಸಮಾಧಾನಚಿತ್ತನಾಗಿ ಮುನಿಗಳಿಂದ ದೃಷ್ಟವಾದ ದುಶ್ಚರವಾದ ಗಾರ್ಹಸ್ಥ್ಯಧರ್ಮ- ವನ್ನು ಆಚರಿಸಬೇಕು.
ಸ್ವದಾರತುಷ್ಟ ಋತುಕಾಲಗಾಮೀ
ನಿಯೋಗಸೇವೀ ನ ಶಠೋ ನ ಜಿಹ್ಮಃ |
ಮಿತಾಶನೋ ದೇವಪರಃ ಕೃತಜ್ಞಃ
ಸತ್ಯೋ ಮೃದುಶ್ಚಾನೃಶಂಸಃ ಕ್ಷಮಾವಾನ್ ॥11॥
ತನ್ನ ಪತ್ನಿಯಲ್ಲಿ ತೃಪ್ತನಾಗಿ, ಋತುಕಾಲದಲ್ಲಿ ಮಾತ್ರ ಗಮನವನ್ನು ಮಾಡುವ- ವನಾಗಿ, ಹಿರಿಯರ ಮಾತನ್ನು ಕೇಳುತ್ತಾ, ಶಾಠ್ಯವನ್ನು ಮತ್ತು ಕಪಟತೆಯನ್ನು ಬಿಟ್ಟು, ಅಲ್ಪಾಹಾರನಾಗಿ, ದೇವಧ್ಯಾನಪರನಾಗಿ, ಕೃತಜ್ಞನಾಗಿ, ಸತ್ಯವಚನನಾಗಿ, ಮೃದು- ವಾಗಿ, ಕ್ರೌರ್ಯವನ್ನು ತ್ಯಜಿಸಿ, ಕ್ಷಮೆಯಿಂದ ಕೂಡಿದವನಾಗಿರಬೇಕು.
ದಾಂತೋ ವಿಧೇಯೋ ಹವ್ಯಕವ್ಯೇಽಪ್ರಮತ್ತೋ
ಅನ್ನಸ್ಯ ದಾತಾ ಸತತಂ ದ್ವಿಜೇಭ್ಯಃ |
ಅಮತ್ಸರೀ ಸರ್ವಲಿಂಗಿಪ್ರದಾತಾ
ವೈತಾನನಿತ್ಯಶ್ಚ ಗೃಹಾಶ್ರಮೀ ಸ್ಯಾತ್ ॥12॥
ಇಂದ್ರಿಯನಿಗ್ರಹವುಳ್ಳವನಾಗಿ, ಹಿರಿಯರಿಗೆ ವಿಧೇಯನಾಗಿ, ಜಾಗರೂಕನಾಗಿ ಹವ್ಯಕವ್ಯಗಳನ್ನು ಮಾಡಿ, ಬ್ರಾಹ್ಮಣರಿಗೆ ಸತತವಾಗಿ

ಅನ್ನದಾನವನ್ನು ಮಾಡಬೇಕು. ಗೃಹಾಶ್ರಮಿಯಾದವನು ಮಾತ್ಸರ್ಯರಹಿತನಾಗಿ, ಸರ್ವಾಶ್ರಮದವರಿಗೂ ದಾನ- ವನ್ನು ಮಾಡುತ್ತಾ, ನಿತ್ಯವೂ ಯಜ್ಞಪರನಾಗಿರಬೇಕು.
ಅಥಾತ್ರ ನಾರಾಯಣಗೀತಮಾಹುಃ
ಮಹರ್ಷಯಸ್ತಾತ ಮಹಾನುಭಾವಾಃ |
ಮಹಾರ್ಥಮತ್ಯರ್ಥತಪಃಪ್ರಯುಕ್ತಂ
ತದುಚ್ಯಮಾನಂ ಹಿ ಮಯಾ ನಿಬೋಧ ॥13॥
ಎಲೈ ಪ್ರೀತಿಪಾತ್ರನೇ! ಈ ವಿಷಯದಲ್ಲಿ ಮಹಾನುಭಾವರಾದ ಮಹರ್ಷಿಗಳು ನಾರಾಯಣನಿಂದ ಹೇಳಲ್ಪಟ್ಟ ಮಹಾರ್ಥವುಳ್ಳ ಅತ್ಯಂತ ತಪಸ್ಸಿನಿಂದ ಉಂಟಾದ ಮಾತುಗಳನ್ನು ಹೇಳುತ್ತಾರೆ. ಅದನ್ನು ನನ್ನಿಂದ ಕೇಳು.
ಸತ್ಯಾರ್ಜವಂ ಚಾತಿಥಿಪೂಜನಂ ಚ
ಧರ್ಮಸ್ತಥಾಽರ್ಥಶ್ಚ ರತಿಶ್ಚ ದಾರೇ |
ನಿಷೇವಿತವ್ಯಾನಿ ಸುಖಾನಿ ಲೋಕೇ
ಹ್ಯಸ್ಮಿನ್ ಪರೇ ಚೈವ ಮತಂ ಮಮೈತತ್ ॥14॥
ಸತ್ಯವಚನ, ಆರ್ಜವ (ಮನೋವಾಕ್ಕಾಯಗಳಲ್ಲಿ ಕಪಟವಿಲ್ಲದಿರುವಿಕೆ), ಅತಿಥಿಪೂಜೆ, ಧರ್ಮಾರ್ಥಗಳ ಸಂಪಾದನೆ, ಪತ್ನಿಯಲ್ಲಿ ರತಿ ಮತ್ತು ಲೋಕದ ಸುಖಗಳು ಇವುಗಳನ್ನು ಸೇವಿಸಬೇಕು. ಅಂತಹವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಾಗಿರುತ್ತಾನೆ ಎಂಬುದು ನನ್ನ (ನಾರಾಯಣನ) ಅಭಿಪ್ರಾಯ.
ಭರಣಂ ಪುತ್ರದಾರಾಣಾಂ ವೇದಾನಾಂ ಪಾರಣಂ ತಥಾ |
ವಸತಾಮಾಶ್ರಮಂ ಶ್ರೇಷ್ಠಂ ವದಂತಿ ಪರಮರ್ಷಯಃ ॥15॥
ಶ್ರೇಷ್ಠವಾದ ಗೃಹಸ್ಥಾಶ್ರಮವನ್ನು ಸ್ವೀಕರಿಸುವವರಿಗೆ ಪತ್ನೀಪುತ್ರರ ರಕ್ಷಣೆ, ವೇದ- ಗಳ ಪಾರಾಯಣ ಇವುಗಳು ಶ್ರೇಷ್ಠವಾದ ಕರ್ತವ್ಯಗಳೆಂದು ಪರಮ ಋಷಿಗಳು ಹೇಳುತ್ತಾರೆ.
ಏವಂ ಹಿ ಯೋ ಬ್ರಾಹ್ಮಣೋ ಯಜ್ಞಶೀಲೋ
ಗಾರ್ಹಸ್ಥ್ಯಮಧ್ಯಾವಸತೇ ಯಥಾವತ್ |
ಗೃಹಸ್ಥವೃತ್ತಿಃ ಪ್ರವಿಶೋಧ್ಯ ಸಮ್ಯಕ್
ಸ್ವರ್ಗೇ ವಿಶುದ್ಧಂ ಫಲಮಾಪ್ನುತೇ ಸಃ ॥16॥
ಈ ರೀತಿಯಲ್ಲಿ ಯಾವ ಬ್ರಾಹ್ಮಣನು ಯಜ್ಞಶೀಲನಾಗಿ, ಗೃಹಸ್ಥಧರ್ಮಗಳನ್ನು ಶಾಸ್ತ್ರೋಕ್ತವಾಗಿ ಅನುಷ್ಠಾನ ಮಾಡುತ್ತಾನೆಯೋ ಅವನು ತನ್ನನ್ನು ಪವಿತ್ರೀಕರಿಸಿ- ಕೊಂಡು ಸ್ವರ್ಗದಲ್ಲಿ ವಿಶುದ್ಧವಾದ ಫಲವನ್ನು ಪಡೆಯುತ್ತಾನೆ.
ತಸ್ಯ ದೇಹಪರಿತ್ಯಾಗಾದಿಷ್ಟಾಃ ಕಾಮಾಕ್ಷಯಾ ಮತಾಃ |
ಆನಂತ್ಯಾಯೋಪತಿಷ್ಠಂತಿ ಸರ್ವತೋಽಕ್ಷಿಶಿರೋಮುಖಾಃ ॥17॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿಷಷ್ಟಿತಮೋಽಧ್ಯಾಯಃ ॥62॥
ಅವನು ದೇಹಪರಿತ್ಯಾಗವನ್ನು ಮಾಡಿದ ಮೇಲೆ ಅಕ್ಷಯವಾದ ಕಾಮ್ಯವಾದ ಫಲಗಳನ್ನು ಹೊಂದುತ್ತಾನೆ. ಆ ಕಾಮ್ಯಫಲಕ್ಕೆ ಅಭಿಮಾನಿಗಳಾದ ದೇವತೆಗಳು ಎಲ್ಲ ಕಡೆಗಳಲ್ಲಿಯೂ ಅಕ್ಷಿಶಿರೋಮುಖಗಳನ್ನು ಹೊಂದಿದವರಾಗಿ ಅವನಿಗೆ ಅನಂತ- ವಾದ ಸುಖವನ್ನು ಉಂಟುಮಾಡುತ್ತಾರೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 62ನೆಯ ಅಧ್ಯಾಯವು ಮುಗಿಯಿತು
0

63. ಅರವತ್ತಮೂರನೆಯ ಅಧ್ಯಾಯ
ಬ್ರಾಹ್ಮಣಧರ್ಮಕಥನ
ಭೀಷ್ಮಃ
ವಸನ್ನೇಕೋ ಜಪನ್ನೇಕಃ ಸರ್ಪನ್ನೇಕೋ ಯುಧಿಷ್ಠಿರ |
ಏಕಸ್ಮಿನ್ನೇವ ಆಚಾರ್ಯೇ ಶುಶ್ರೂಷುರ್ಮಲಪಂಕವಾನ್ ॥1॥
ಭೀಷ್ಮರು ಎಲೈ ಯುಧಿಷ್ಠಿರನೇ! ಬ್ರಹ್ಮಚಾರಿಯಾದವನು ಶರೀರದಲ್ಲಿ ಮಲ, ಪಂಕಗಳನ್ನು ಧರಿಸಿ ಒಬ್ಬನೇ ವಾಸ ಮಾಡುತ್ತಾ, ಒಬ್ಬನೇ ಜಪವನ್ನು ಮಾಡುತ್ತಾ, ಒಬ್ಬನೇ ಸಂಚರಿಸುತ್ತಾ, ಒಬ್ಬ ಗುರುವಿನ ಬಳಿಯಲ್ಲಿಯೇ ಸೇವೆಯನ್ನು ಮಾಡ- ಬೇಕು.
ಬ್ರಹ್ಮಚಾರೀ ವ್ರತೀ ನಿತ್ಯಂ ನಿತ್ಯಂ ದೀಕ್ಷಾಪರೋ ವಶೀ |
ಅವಧಾರ್ಯ ತಥಾ ವೇದಂ ಕೃತ್ಯಂ ಕುರ್ವನ್ ವಸೇತ್ ಸದಾ ॥2॥
ಬ್ರಹ್ಮಚಾರಿಯಾದವನು ನಿತ್ಯವೂ ವ್ರತವನ್ನು ಧರಿಸಿ, ನಿತ್ಯವೂ ದೀಕ್ಷಾಪರನಾಗಿ, ಗುರುಗಳಿಗೆ ಅಧೀನನಾಗಿದ್ದು, ವೇದಾಧ್ಯಯನವನ್ನು ಮಾಡಿ, ಉಳಿದ ಕಾರ್ಯ- ಗಳನ್ನು ಮಾಡುತ್ತಾ, ಗುರುವಿನ ಜೊತೆಯಲ್ಲಿ ವಾಸಿಸಬೇಕು.
ಶುಶ್ರೂಷಾಂ ಸತತಂ ಕುರ್ವನ್ ಗುರೋಃ ಸಂಪ್ರಣಮೇತ ಚ |
ಷಟ್ ಕರ್ಮಸ್ವನಿವೃತ್ತಶ್ಚ ನ ಪ್ರವೃತ್ತಶ್ಚ ಸರ್ವಶಃ ॥3॥
ಸತತವಾಗಿ ಗುರುಗಳ ಸೇವೆಯನ್ನು ಮಾಡುತ್ತಾ ಗುರುಗಳಿಗೆ ನಮಸ್ಕರಿಸಬೇಕು. ಷಟ್ಕರ್ಮಗಳಲ್ಲಿ ನಿರತನಾಗಿ ಬೇರೆ ಯಾವ ಕಾರ್ಯಗಳನ್ನೂ ಮಾಡಲು ತೊಡಗ- ಬಾರದು.

ನ ಚರತ್ಯಧಿಕಾರೇಣ ಸೇವತೇ ದ್ವಿಷತೋ ನ ಚ |
ಏಷೋಽಽಶ್ರಮಪದಸ್ತಾತ ಬ್ರಹ್ಮಚಾರಿಣ ಇಷ್ಯತೇ ॥4॥
ಯಾರಮೇಲೆಯೂ ತನ್ನ ಅಧಿಕಾರವನ್ನು ತೋರಿಸಬಾರದು. ಗುರುಗಳನ್ನು ದ್ವೇಷಿಸುವವರನ್ನು ಸೇವಿಸಬಾರದು. ಎಲೈ ಪ್ರೀತಿಪಾತ್ರನೇ! ಇದು ಬ್ರಹ್ಮಚರ್ಯಾ- ಶ್ರಮದ ಧರ್ಮವೆಂದು ಹೇಳಲ್ಪಡುತ್ತದೆ.
ಯುಧಿಷ್ಠಿರಃ
ಶಿವಾನ್ ಸರ್ವಾನ್ ಮಹೋದರ್ಕಾನಹಿಂಸ್ರಾನ್ ಲೋಕಸಮ್ಮತಾನ್ |
ಬ್ರೂಹಿ ಧರ್ಮಾನ್ ಸುಖೋಪಾಯಾನ್ ಮದ್ವಿಧಾನಾಂ ಸುಖಾವಹಾನ್ ॥
ಯುಧಿಷ್ಠಿರ ಮಂಗಳಕರವೂ, ಮಹಾಫಲಪ್ರದವೂ, ಅಹಿಂಸಾರೂಪವೂ, ಲೋಕಸಮ್ಮತವೂ, ಸುಖವಾಗಿ ಮಾಡಲು ಸಾಧ್ಯವಾದವೂ, ನನ್ನಂತಹವನಿಗೆ ಸುಖವನ್ನು ತಂದುಕೊಡುವಂತಹವೂ ಆದ ಎಲ್ಲಾ ಧರ್ಮಗಳನ್ನು ಹೇಳು.
ಭೀಷ್ಮಃ
ಬ್ರಾಹ್ಮಣಸ್ಯೇಹ ಚತ್ವಾರ ಆಶ್ರಮಾ ವಿಹಿತಾಃ ಪ್ರಭೋ |
ವರ್ಣಾಸ್ತಾನನುವರ್ತಂತೇ ತ್ರಯೋ ಭರತಸತ್ತಮ ॥6॥
ಭೀಷ್ಮರು ಎಲೈ ಪ್ರಭುವೇ! ಭರತಸತ್ತಮನೇ! ಬ್ರಾಹ್ಮಣರಿಗೆ ಈ ಲೋಕದಲ್ಲಿ ನಾಲ್ಕು ಆಶ್ರಮಗಳು ವಿಹಿತವಾಗಿವೆ. ಉಳಿದ ಮೂರು ವರ್ಣದವರು ಬ್ರಾಹ್ಮಣ- ನನ್ನು ಅನುಸರಿಸುತ್ತಾರೆ.
ಉಕ್ತಾನಿ ಕರ್ಮಾಣಿ ಬಹೂನಿ ರಾಜನ್
ಸ್ವರ್ಗ್ಯಾಣಿ ರಾಜನ್ಯಪರಾಯಣಾನಿ |
ನೇಮಾನಿ ದೃಷ್ಟಾಂತವಿಧೌ ಸ್ಮೃತಾನಿ
ಕ್ಷಾತ್ರೇ ಹಿ ಸರ್ವಂ ವಿಹಿತಂ ಯಥಾವತ್ ॥7॥
ಎಲೈ ರಾಜನೇ! ರಾಜರಿಗೆ ಸಂಬಂಧಿಸಿದ, ಬಹುವಿಧವಾದ, ಸ್ವರ್ಗಪ್ರದವಾದ ಕರ್ಮಗಳು ಹೇಳಲ್ಪಟ್ಟಿವೆ. ಇವುಗಳನ್ನು ಬ್ರಾಹ್ಮಣರು ಮಾಡಬೇಕೆಂದು ದೃಷ್ಟಾಂತ ರೀತಿಯಲ್ಲಿ ಇವು ಹೇಳಲ್ಪಟ್ಟವಲ್ಲ. ಇವೆಲ್ಲವೂ ಕ್ಷತ್ರಿಯರಿಗೆ ಮಾತ್ರ ಯಥಾವತ್ತಾಗಿ ವಿಹಿತವಾಗಿವೆ.
ಕ್ಷಾತ್ರಾಣಿ ವೈಶ್ಯಾನಿ ಚ ಸೇವಮಾನಃ
ಶೌದ್ರಾಣಿ ಕರ್ಮಾಣಿ ಚ ಬ್ರಾಹ್ಮಣಃ ಸನ್ |
ಅಸ್ಮಿನ್ ಲೋಕೇ ನಿಂದಿತೋ ಮಂದಚೇತಾಃ
ಪರೇ ಚ ಲೋಕೇ ನಿರಯಂ ಪ್ರಯಾತಿ ॥8॥
ಬ್ರಾಹ್ಮಣನಾಗಿ ಮಂದಮತಿಯುಳ್ಳವನಾಗಿ ಕ್ಷತ್ರಿಯರ ವೈಶ್ಯರ ಅಥವಾ ಶೂದ್ರರ ಕರ್ಮಗಳನ್ನು ಮಾಡುವವನು ಈ ಲೋಕದಲ್ಲಿ ನಿಂದಿತನಾಗುತ್ತಾನೆ. ಮತ್ತು ಪರ- ಲೋಕದಲ್ಲಿ ನರಕವನ್ನು ಹೊಂದುತ್ತಾನೆ.
ಯಾ ಸಂಜ್ಞಾ ವಿಹಿತಾ ಲೋಕೇ ದಾಸೇ ಶುನಿ ವೃಕೇ ಪಶೌ |
ವಿಕರ್ಮಣಿ ಸ್ಥಿತೇ ವಿಪ್ರೇ ತಾಂ ಸಂಜ್ಞಾಂ ಕುರು ಪಾಂಡವ ॥9॥
ಎಲೈ ಪಾಂಡವನೇ! ಲೋಕದಲ್ಲಿ ದಾಸನನ್ನು, ನಾಯಿಯನ್ನು, ತೋಳವನ್ನು, ಪಶುವನ್ನು ಯಾವ ಹೀನಶಬ್ದದಿಂದ ಕರೆಯುತ್ತಾರೆಯೋ ವಿಕರ್ಮನಿರತನಾದ ಬ್ರಾಹ್ಮಣನನ್ನು ಅದೇ ಶಬ್ದವುಳ್ಳವನೆಂದು ತಿಳಿ.
ಷಟ್‌ಕರ್ಮಸಂಪ್ರವೃತ್ತಸ್ಯ ಆಶ್ರಮೇಷು ಚತುರ್ಷ್ವಪಿ |
ಸರ್ವಧರ್ಮೋಪಪನ್ನಸ್ಯ ಸಂಭೂತಸ್ಯ ಕೃತಾತ್ಮನಃ ॥10॥
ಬ್ರಾಹ್ಮಣಸ್ಯ ವಿಶುದ್ಧಸ್ಯ ತಪಸ್ಯಭಿರತಸ್ಯ ಚ |
ನಿರಾಶಿಷೋ ವದಾನ್ಯಸ್ಯ ಲೋಕಾ ಹ್ಯಕ್ಷರಸಂಜ್ಞಿತಾಃ ॥11॥
ಷಟ್ಕರ್ಮಗಳಲ್ಲಿ ಪ್ರವೃತ್ತನಾದ, ಸರ್ವಧರ್ಮೋಪಪನ್ನನಾದ, ಕೃತಕೃತ್ಯನಾದ, ವಿಶುದ್ಧನಾದ, ತಪೋನಿಷ್ಠನಾದ, ಆಸೆಗಳನ್ನು ತೊರೆದು ಉದಾರಿಯಾದ ನಾಲ್ಕು ಆಶ್ರಮಗಳಿಗೂ ಸೇರಿದ ಬ್ರಾಹ್ಮಣನಿಗೆ ಅಕ್ಷರವೆಂಬ ಹೆಸರಿನ ಅಕ್ಷಯವಾದ ಲೋಕ- ಗಳಿವೆ.
ಯೋ ಯಸ್ಮಿನ್ ಕುರುತೇ ಕರ್ಮ ಯಾದೃಶಂ ಯೇನ ಯತ್ರ ಚ |
ತಾದೃಶಂ ತಾದೃಶೇನೈವ ಸಗುಣಂ ಪ್ರತಿಪದ್ಯತೇ ॥12॥
ಯಾವನು ಎಲ್ಲಿ ಹೇಗೆ ಎಂತಹ ಕರ್ಮವನ್ನು ಮಾಡುತ್ತಾನೆಯೋ, ಅಂತಹ ಕರ್ಮಕ್ಕೆ ಅನುಗುಣವಾದ ಅಂತಹ ಫಲವನ್ನೇ ಅವನು ಪಡೆಯುತ್ತಾನೆ.
ವೃದ್ಧ್ಯಾ ಕೃಷಿವಣಿಕ್ತ್ವೇನ ಜೀವಸಂಜೀವನೇನ ಚ |
ವೇತ್ತುಮರ್ಹಸಿ ರಾಜೇಂದ್ರ ಸ್ವಾಧ್ಯಾಯಗಣಿತಂ ಮಹತ್ ॥13॥
ಎಲೈ ರಾಜೇಂದ್ರನೇ! ವೈಶ್ಯನ ಸಂಪತ್ತಿನ ವೃದ್ಧಿಯಿಂದಲೂ, ಕೃಷಿವಾಣಿಜ್ಯ- ದಿಂದಲೂ, ಗೋರಕ್ಷಣದಿಂದಲೂ ಅವನು ಮಾಡಿರುವ ಶ್ರೇಷ್ಠವಾದ ವೇದಾಧ್ಯ- ಯನವನ್ನು ನೀನು ತಿಳಿಯುವವನಾಗಬೇಕು.
ಕಾಲಸಂಚೋದಿತಃ ಕಾಲೇ ಕಾಲಪರ್ಯಾಯನಿಶ್ಚಿತಃ |
ಉತ್ತಮಾಧಮಮಧ್ಯಾನಿ ಕರ್ಮಾಣಿ ಕುರುತೇಽವಶಃ ॥14॥
ಕಾಲನಿಯಾಮಕ ಪರಮಾತ್ಮನಿಂದ ಪ್ರೇರಿತನಾಗಿ, ಕಾಲಕ್ರಮದಲ್ಲಿ ಪಕ್ವವಾಗುವ ತನ್ನ ಕರ್ಮಗಳಿಗೆ ಅಧೀನನಾಗಿ ಆಯಾ ಕಾಲದಲ್ಲಿ ಜೀವನು ಅಸ್ವತಂತ್ರನಾಗಿ ಉತ್ತಮ, ಅಧಮ, ಮಧ್ಯಮಕರ್ಮಗಳನ್ನು ಮಾಡುತ್ತಾನೆ.
ಅಂತವಂತಿ ಪ್ರದಾನಾನಿ ಪುರಾ ಶ್ರೇಯಸ್ಕರಾಣಿ ಚ |
ಸ್ವಕರ್ಮನಿರತೋ ಲೋಕೋ ಹ್ಯಕ್ಷರಃ ಸರ್ವತೋಮುಖಃ ॥15॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಷಷ್ಟಿತಮೋಽಧ್ಯಾಯಃ ॥63॥
ಹಿಂದೆ ಹೇಳಿದ ಶ್ರೇಷ್ಠವಾದ ದಾನ ಮೊದಲಾದವುಗಳು ಅನಿತ್ಯವಾದ ಶ್ರೇಯಸ್ಸನ್ನುಂಟು ಮಾಡುತ್ತವೆ. ಆದರೆ ಸ್ವಕರ್ಮನಿರತನಾದವನು ಸರ್ವಸುಖಮಯ -ವಾದ ಶಾಶ್ವತವಾದ ಲೋಕವನ್ನು ಪಡೆಯುತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 63ನೇ ಅಧ್ಯಾಯವು ಮುಗಿಯಿತು.

## 64. ಅರವತ್ತನಾಲ್ಕನೆಯ ಅಧ್ಯಾಯ

### ಬ್ರಾಹ್ಮಣರಿಗೆ ನಿಂದ್ಯವಾದ ಕರ್ಮಗಳ ಮತ್ತು ಕ್ಷತ್ರಿಯಧರ್ಮಗಳ ನಿರೂಪ

ಯುಧಿಷ್ಠಿರಃ
ಜ್ಯಾಕರ್ಷಣಂ ಶತ್ರುನಿಬರ್ಹಣಂ ಚ
 ಕೃಷಿರ್ವಣಿಜ್ಯಾ ಪಶುಪಾಲನಂ ಚ |
ಶುಶ್ರೂಷಣಂ ಚಾಪಿ ತಥಾರ್ಥಹೇತೋ-
 ರಕಾರ್ಯಮೇತತ್ ಪರಮಂ ದ್ವಿಜಸ್ಯ ॥1॥
ಭೀಷ್ಮರು ಬ್ರಾಹ್ಮಣನಾದವನು ಶಸ್ತ್ರವಿದ್ಯೆಯನ್ನು ಅವಲಂಬಿಸುವುದು, ಶತ್ರು ಸಂಹಾರವನ್ನು ಮಾಡುವುದು, ಕೃಷಿ ವಾಣಿಜ್ಯ ಪಶುಪಾಲನೆಯನ್ನು ಮಾಡುವುದು, ಧನಕ್ಕಾಗಿ ಇನ್ನೊಬ್ಬರ ಸೇವೆಯನ್ನು ಮಾಡುವುದು ಇವುಗಳನ್ನು ಖಂಡಿತವಾಗಿ ಮಾಡಬಾರದು.
ಸೇವ್ಯಂ ತು ಬ್ರಹ್ಮ ಷಟ್ ಕರ್ಮ ಗೃಹಸ್ಥೇನ ಮನೀಷಿಣಾ |
ಕೃತಕೃತ್ಯಸ್ಯ ಚಾರಣ್ಯೇ ವಾಸೋ ವಿಪ್ರಸ್ಯ ಶಸ್ಯತೇ ॥2॥
ವಿವೇಕಿಯಾದ ಗೃಹಸ್ಥ ಬ್ರಾಹ್ಮಣನು ವೇದವನ್ನು ಅವಲಂಬಿಸಿ ಷಟ್ಕರ್ಮ- ನಿರತನಾಗಬೇಕು. ಗೃಹದಲ್ಲಿ ಕೃತಕೃತ್ಯನಾದ ಅವನಿಗೆ ಅರಣ್ಯವಾಸವು ಹೇಳಲ್ಪಡು- ತ್ತದೆ.
ರಾಜಪ್ರೈಷ್ಯಂ ಕೃಷಿಧನಂ ಜೀವನಂ ಚ ವಣಿಜ್ಯಯಾ |
ಕೌಲಟ್ಯಂ ಕೌಲಟೇಯತ್ವಂ ಕುಸೀದಂ ಚ ವಿವರ್ಜಯೇತ್ ॥3॥
ಬ್ರಾಹ್ಮಣನು ರಾಜಸೇವೆ, ಕೃಷಿಧನ, ವ್ಯಾಪಾರದಿಂದ ಜೀವನ, ವೇಶ್ಯಾಪತಿತ್ವ, ಭಿಕ್ಷುಕೀಪತಿತ್ವ, ಬಡ್ಡಿಯಿಂದ ಜೀವನ ಇವುಗಳನ್ನು ವರ್ಜಿಸಬೇಕು.
ಶೂದ್ರೋ ರಾಜನ್ ಭವತಿ ಬ್ರಹ್ಮಬಂಧುಃ
 ದುಶ್ಚಾರಿತ್ರ್ಯೋ ಯಶ್ಚ ಧರ್ಮಾದಪೇತಃ |
ವೃಷಲೀಪತಿಃ ಪಿಶುನೋ ನರ್ತಕಶ್ಚ
 ಗ್ರಾಮಪ್ರೈಷ್ಯೋ ಯಶ್ಚ ಭವೇದ್ ವಿಕರ್ಮಾ ॥4॥
ಎಲೈ ರಾಜನೇ! ದುಷ್ಟನಡತೆಯನ್ನು ಹೊಂದಿ, ಧರ್ಮದಿಂದ ದೂರ ಸರಿದ ಬ್ರಾಹ್ಮಣ, ವೃಷಲೀಪತಿ (ಶೂದ್ರಸ್ತ್ರೀಪತಿ) ಚಾಡಿಕೋರ, ನರ್ತಕ, ಗ್ರಾಮಸೇವಕ, ಅಥವಾ ವಿಕರ್ಮನಿರತನಾದ ಬ್ರಾಹ್ಮಣನು ಶೂದ್ರಸಮನಾಗುತ್ತಾನೆ.
ಜಪನ್ ವೇದಾನಜಪಂಶ್ಚಾಪಿ ರಾಜನ್
 ಸಮಃ ಶೂದ್ರೈರ್ದಾಸವಚ್ಚಾಪಿ ಭೋಜ್ಯಃ |
ಏತೇ ಸರ್ವೇ ಶೂದ್ರಸಮಾ ಭವಂತಿ
 ರಾಜನ್ನೇತಾನ್ ವರ್ಜಯೇದ್ ದೈವಕೃತ್ಯೇ ॥5॥
ಎಲೈ ರಾಜನೇ! ಅಂತಹ ಬ್ರಾಹ್ಮಣನು ವೇದಗಳನ್ನು ಜಪಮಾಡಲಿ ಅಥವಾ ಜಪ ಮಾಡದೇ ಇರಲಿ ಶೂದ್ರರಿಗೆ ಸಮನಾಗುತ್ತಾನೆ. ಅವನಿಗೆ ದಾಸನಿಗೆ ನೀಡು- ವಂತೆ ಅನ್ನವನ್ನು ನೀಡಬೇಕು. ಎಲೈ ರಾಜನೇ! ಇವರೆಲ್ಲರೂ ಶೂದ್ರಸಮರಾಗು- ತ್ತಾರೆ. ದೇವಕಾರ್ಯಗಳಲ್ಲಿ ಇವರನ್ನು ವರ್ಜಿಸಬೇಕು.
ನಿರ್ಮರ್ಯಾದೇ ವಾಕ್‌ಶಠೇ ಕ್ರೂರವೃತ್ತೌ
 ಹಿಂಸಾತ್ಮಕೇ ತ್ಯಕ್ತಧರ್ಮಸ್ವವೃತ್ತೇ |
ಹವ್ಯಂ ಕವ್ಯಂ ಯಾನಿ ಚಾನ್ಯಾನಿ ರಾಜನ್
 ದೇಯಾನ್ಯದೇಯಾನಿ ಭವಂತಿ ತಸ್ಮಿನ್ ॥6॥
ಎಲೈ ರಾಜನೇ! ಬ್ರಾಹ್ಮಣನಿಗೆ ಕೊಡಬೇಕಾದ ಹವ್ಯಕವ್ಯಗಳನ್ನು ಮರ್ಯಾ- ದೆಯನ್ನು ಮೀರಿದ, ಅಹಂಕಾರದಿಂದ ಮಾತನಾಡುವ, ಕ್ರೂರವಾದ ನಡತೆಯುಳ್ಳ, ಹಿಂಸಾಶೀಲನಾದ, ತನ್ನ ಧರ್ಮವನ್ನು ಮತ್ತು ನಡತೆಯನ್ನು ಬಿಟ್ಟ ಬ್ರಾಹ್ಮಣನಿಗೆ ಕೊಡಬಾರದು.
ತಸ್ಮಾದ್ ಧರ್ಮೋ ವಿಹಿತೋ ಬ್ರಾಹ್ಮಣಸ್ಯ
 ದಮಃ ಶೌಚಂ ಚಾರ್ಜವಂ ಚಾಪಿ ರಾಜನ್ |
ತಥಾ ವಿಪ್ರಸ್ಯಾಶ್ರಮಾಃ ಸರ್ವ ಏವ
 ಪುರಾ ರಾಜನ್ ಬ್ರಹ್ಮಣಾ ವೈ ನಿಸೃಷ್ಟಾಃ ॥7॥
ಎಲೈ ರಾಜನೇ! ಆದ್ದರಿಂದ ಇಂದ್ರಿಯನಿಗ್ರಹ, ಶೌಚ ಮತ್ತು ಆರ್ಜವಗಳು ಬ್ರಾಹ್ಮಣನ ಧರ್ಮಗಳೆಂದು ವಿಹಿತವಾಗಿವೆ. ರಾಜನೇ! ನಾಲ್ಕು ಆಶ್ರಮಗಳನ್ನೂ ಸಹ ಇಂತಹ ಧರ್ಮವಿಶಿಷ್ಟಗಳನ್ನಾಗಿ ಬ್ರಹ್ಮದೇವರು ಸೃಷ್ಟಿಸಿದ್ದಾರೆ.
ಯಃ ಸ್ಯಾದ್ ದಾಂತಃ ಸೋಮಪ ಆರ್ಯಶೀಲಃ
 ಸಾನುಕ್ರೋಶಃ ಸರ್ವಸಹೋ ನಿರಾಶೀಃ |

ಋಜುರ್ಮೃದುರನೃಶಂಸಃ ಕ್ಷಮಾವಾನ್
ಸ ವೈ ವಿಪ್ರೋ ನೇತರಃ ಪಾಪಕರ್ಮಾ ॥8॥
ಯಾವನು ಇಂದ್ರಿಯನಿಗ್ರಹವುಳ್ಳವನೋ, ಸೋಮಪಾನವನ್ನು ಮಾಡುವ- ವನೋ, ಉದಾತ್ತವಾದ ಶೀಲವುಳ್ಳವನೋ, ದಯಾಪರನೋ, ದ್ವಂದ್ವಸಹಿಷ್ಣು- ವೋ, ಆಶಾರಹಿತನೋ, ಋಜುವೋ, ಮೃದುವೋ, ಅಕ್ರೂರಿಯೋ, ಕ್ಷಮೆಯುಳ್ಳ- ವನೋ ಅವನೇ ಬ್ರಾಹ್ಮಣ. ಪಾಪಕರ್ಮವನ್ನು ಮಾಡುವವನು ಬ್ರಾಹ್ಮಣನಲ್ಲ.
ಶೂದ್ರಂ ವೈಶ್ಯಂ ರಾಜಪುತ್ರಂ ಚ ರಾಜನ್
ಲೋಕಾಃ ಸರ್ವೇ ಸಂಶ್ರಿತಾಃ ಧರ್ಮಕಾಮಾಃ |
ತಸ್ಮಾದ್ ವರ್ಣಾನ್ ಜಾತಿಧರ್ಮೇಷು ಸಕ್ತಾನ್
ಕೃತ್ವಾ ಬುದ್ಧ್ಯಾ ಶಾಧಿ ತಾನ್ ಪಾಂಡುಪುತ್ರ ॥9॥
ಎಲೈ ರಾಜನೇ! ಧರ್ಮವನ್ನು ಮಾಡಲು ಬಯಸುವವರೆಲ್ಲರೂ ಶೂದ್ರನನ್ನು, ವೈಶ್ಯನನ್ನು ಮತ್ತು ಕ್ಷತ್ರಿಯನನ್ನೂ ಆಶ್ರಯಿಸಿರುತ್ತಾರೆ. ಎಲೈ ಪಾಂಡುಪುತ್ರನೇ! ಆದ್ದರಿಂದ ಆಯಾ ವರ್ಣದವರು ತಮ್ಮ ತಮ್ಮ ಜಾತಿಧರ್ಮಗಳಲ್ಲಿ ನಿರತ- ರಾಗಿರುವಂತೆ ಮಾಡಿ, ನಿನ್ನ ಬುದ್ಧಿಯಿಂದ ಅವರನ್ನು ಪಾಲಿಸುವವನಾಗು.
ಲೋಕೇ ಚೇದಂ ಸರ್ವಲೋಕಸ್ಯ ನ ಸ್ಯಾತ್
ಚಾತುರ್ವರ್ಣ್ಯಂ ವೇದವಾದಾಶ್ಚ ನ ಸ್ಯುಃ |
ಸರ್ವಾಶ್ಚೇಜ್ಯಾಃ ಸರ್ವಲೋಕಕ್ರಿಯಾಶ್ಚ
ಸದ್ಯಃ ಸರ್ವೇ ಚಾಶ್ರಮಸ್ಥಾ ನ ವೈ ಸ್ಯುಃ ॥10॥
ಆಯಾ ವರ್ಣದವರು ತಮ್ಮ ಧರ್ಮಗಳನ್ನು ಪಾಲಿಸದಿದ್ದರೆ ಲೋಕದಲ್ಲಿ ಈ ಯಾವ ಧರ್ಮವೂ ಉಳಿಯಲಾರದು. ಚಾತುರ್ವರ್ಣ್ಯವ್ಯವಸ್ಥೆಯಾಗಲೀ, ವೇದ- ವಾದಗಳಾಗಲೀ ಇರಲಾರವು. ಎಲ್ಲ ಯಜ್ಞಗಳೂ ಅರ್ಚನೆಗಳೂ ಲೋಕದ ಎಲ್ಲಾ ಕ್ರಿಯೆಗಳೂ, ಆಶ್ರಮಗಳ ಎಲ್ಲಾ ಕ್ರಿಯೆಗಳೂ ತತ್ಕ್ಷಣದಲ್ಲೇ ನಾಶವನ್ನು ಹೊಂದು- ವವು.
ಯಶ್ಚ ತ್ರಯಾಣಾಂ ವರ್ಣಾನಾಮಿಚ್ಛೇದಾಶ್ರಮಸೇವನಮ್ |
ಚತುರಾಶ್ರಮದೃಷ್ಟಾಂಶ್ಚ ಧರ್ಮಾಂಸ್ತಾನ್ ಶೃಣು ಪಾಂಡವ ॥11॥
ಎಲೈ ಪಾಂಡವನೇ! ಕ್ಷತ್ರಿಯವೈಶ್ಯಶೂದ್ರರಲ್ಲಿ ಯಾವನು ತನಗೆ ವಿಹಿತವಾದ ಆಶ್ರಮವನ್ನು ಸೇವಿಸಲು ಬಯಸುತ್ತಾನೆಯೋ ಅಥವಾ ಬ್ರಾಹ್ಮಣನು ತನಗೆ ವಿಹಿತವಾದ ನಾಲ್ಕು ಆಶ್ರಮಗಳಲ್ಲಿ ಶಾಸ್ತ್ರದೃಷ್ಟವಾದ ಯಾವ ಧರ್ಮಗಳನ್ನು ಆಚರಿ- ಸಲು ಬಯಸುತ್ತಾನೆಯೋ ಆ ಧರ್ಮಗಳನ್ನು ಕೇಳುವವನಾಗು. (ಲಕ್ಷ್ಯಾಲಂಕಾರ).
ಶುಶ್ರೂಷಾಕೃತಕೃತ್ಯಸ್ಯ ಕೃತಸಂತಾನಕರ್ಮಣಃ |
ಅಭ್ಯನುಜ್ಞಾಪ್ಯ ರಾಜಾನಂ ಶೂದ್ರಸ್ಯ ಜಗತೀಪತೇ ॥12॥
ಕಲ್ಪಾಂತರಗತಸ್ಯಾಪಿ ದಶಧರ್ಮಗತಸ್ಯ ವಾ |
ಆಶ್ರಮಾ ವಿಹಿತಾಃ ಸರ್ವೇ ವರ್ಜಯಿತ್ವಾ ನಿರಾಶಿಷಮ್ ॥13॥
ಎಲೈ ಜಗತೀಪತಿಯೇ! ತ್ರಿವರ್ಣದವರ ಸೇವೆಯಿಂದ ಕೃತಕೃತ್ಯನಾದ, ಪುತ್ರರನ್ನು ಪಡೆದ ಶೂದ್ರನಾದವನು (ವೃದ್ಧನಾದವನು) ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಧರ್ಮ- ವನ್ನು ಬಿಟ್ಟು ಬೇರೆ ಸದ್ಧರ್ಮವನ್ನು ಆಶ್ರಯಿಸಲು ಬಯಸಿದರೆ ಅವನಿಗೆ ಯತ್ಯಾ- ಶ್ರಮವನ್ನು ಬಿಟ್ಟು ಉಳಿದ ಎಲ್ಲಾ ಆಶ್ರಮಗಳೂ ವಿಹಿತವಾಗುತ್ತವೆ.
ಭೈಕ್ಷಚರ್ಯಾಂ ನ ತು ಪ್ರಾಹುಸ್ತಸ್ಯ ತದ್ಧರ್ಮಚಾರಿಣಃ |
ತಥಾ ವೈಶ್ಯಸ್ಯ ರಾಜೇಂದ್ರ ರಾಜಪುತ್ರಸ್ಯ ಚೈವ ಹಿ ॥14॥
ಅವನಿಗೆ ಸನ್ಯಾಸಾಶ್ರಮವು ಎಂದೂ ಯುಕ್ತವಾದುದಲ್ಲವೆಂದು ಧರ್ಮಚಾರಿ- ಗಳು ಹೇಳುತ್ತಾರೆ. ಎಲೈ ರಾಜೇಂದ್ರನೇ! ಹಾಗೆಯೇ ವೈಶ್ಯನಿಗೂ ಮತ್ತು ಕ್ಷತ್ರಿಯ- ನಿಗೂ ಸಹ,
ಕೃತಕೃತ್ಯೋ ವಯೋಽತೀತೋ ರಾಜ್ಞಃ ಕೃತಪರಿಶ್ರಮಃ |
ವೈಶ್ಯೋ ಗಚ್ಛೇದನುಜ್ಞಾತೋ ನೃಪೇಣಾಶ್ರಮಮಂಡಲಮ್ ॥15॥
ತನ್ನ ವೃತ್ತಿಯಿಂದ ಕೃತಕೃತ್ಯನಾದವನು, ವಯಸ್ಸಾದವನು, ಜೀವನದಲ್ಲಿ ತನ್ನ ರಾಜನ ಸೇವೆಯನ್ನು ಮಾಡಿದವನಾದ ವೈಶ್ಯನು ರಾಜನಿಂದ ಅನುಮತಿಯನ್ನು ಪಡೆದು ಆಶ್ರಮಮಂಡಲಕ್ಕೆ ಹೋಗಬಹುದು.
ವೇದಾನಧೀತ್ಯ ಧರ್ಮೇಣ ರಾಜಶಾಸ್ತ್ರಾಣಿ ಚಾನಘ |
ಸಂತಾನಾದೀನಿ ಕರ್ಮಾಣಿ ಕೃತ್ವಾ ಸೋಮಂ ನಿಷೇವ್ಯ ಚ ॥16॥
ಪಾಲಯಿತ್ವಾ ಪ್ರಜಾಃ ಸರ್ವಾ ಧರ್ಮೇಣ ವದತಾಂವರ |
ರಾಜಸೂಯಾಶ್ವಮೇಧಾದೀನ್ ಮಖಾನನ್ಯಾಂಸ್ತಥೈವ ಚ ॥17॥
ಸಮಾನೀಯ ಯಥಾಪಾಠಂ ವಿಪ್ರೇಭ್ಯೋ ದತ್ತದಕ್ಷಿಣಃ |
ಸಂಗ್ರಾಮೇ ವಿಜಯಂ ಪ್ರಾಪ್ಯ ತಥಾಲ್ಪಂ ಯದಿ ವಾ ಬಹು ॥18॥
ಸ್ಥಾಪಯಿತ್ವಾ ಪ್ರಜಾಪಾಲಂ ಪುತ್ರಂ ರಾಜ್ಯೇ ಚ ಪಾಂಡವ |
ಅನ್ಯಗೋತ್ರಂ ಪ್ರಶಸ್ತಂ ವಾ ಕ್ಷತ್ರಿಯಂ ಕ್ಷತ್ರಿಯರ್ಷಭ ॥19॥
ಅರ್ಚಯಿತ್ವಾ ಪಿತೄನ್ ಸಮ್ಯಕ್ ಪಿತೃಯಜ್ಞೈರ್ಯಥಾವಿಧಿ |
ದೇವಾನ್ ಯಜ್ಞೈರ್ಋಷೀನ್ ವೇದೈರರ್ಚಿತ್ವಾ ಚೈವ ಯತ್ನತಃ ॥20॥
ಅಂತಕಾಲೇ ಚ ಸಂಪ್ರಾಪ್ತೇ ಯ ಇಚ್ಛೇದಾಶ್ರಮಾಂತರಮ್ |

ಆನುಪೂರ್ವ್ಯಾಶ್ರಮಾನ್ ರಾಜನ್ ಗತ್ವಾ ಸಿದ್ಧಿಮವಾಪ್ನುಯಾತ್ ॥21॥
ಎಲೈ ಅನಘನೇ! ಮಾತನಾಡುವವರಲ್ಲಿ ಶ್ರೇಷ್ಠನೇ! ಪಾಂಡವನೇ, ಕ್ಷತ್ರಿಯ- ಶ್ರೇಷ್ಠನೇ! ಕ್ಷತ್ರಿಯನಾದವನು ಧರ್ಮವಿಧಾನದಿಂದ ವೇದಗಳನ್ನು ರಾಜನೀತಿಶಾಸ್ತ್ರ- ಗಳನ್ನು ಅಧ್ಯಯನ ಮಾಡಿ, ಸಂತಾನಾದಿ ಕರ್ಮಗಳನ್ನು ಮಾಡಿ, ಸೋಮಪಾನ- ವನ್ನು ಮಾಡಿ, ಧರ್ಮದಿಂದ ಪ್ರಜೆಗಳನ್ನುರಕ್ಷಿಸಿ, ರಾಜಸೂಯಾಶ್ವಮೇಧ ಮೊದಲಾದ ಯಾಗಗಳನ್ನು ಶಾಸ್ತ್ರೋಕ್ತರೀತಿಯಲ್ಲಿ ಮಾಡಿ, ಬ್ರಾಹ್ಮಣರಿಗೆ ಭೂರಿ ದಕ್ಷಿಣೆಯನ್ನು ಕೊಟ್ಟು, ಯುದ್ಧದಲ್ಲಿ ವಿಜಯವನ್ನು ಸಂಪಾದಿಸಿ, ಅಲ್ಪವಾದ ಅಥವಾ ಬಹುವಾದ ಕೋಶವನ್ನು ಸಂಪಾದಿಸಿ, ರಾಜ್ಯದಲ್ಲಿ ತನ್ನ ಪುತ್ರನನ್ನಾಗಲೀ ಅಥವಾ ಬೇರೆಯ ಗೋತ್ರಕ್ಕೆ ಸೇರಿದ ಕ್ಷತ್ರಿಯನನ್ನಾಗಲೀ ರಾಜನನ್ನಾಗಿ ಸ್ಥಾಪಿಸಿ, ಶಾಸ್ತ್ರೋಕ್ತ- ರೀತಿಯಲ್ಲಿ ಪಿತೃಯಜ್ಞಗಳನ್ನು ಮಾಡಿ, ಪಿತೃಗಳನ್ನು ಚೆನ್ನಾಗಿ ಪೂಜಿಸಿ, ವೇದಗಳಿಂದ ಪ್ರಯತ್ನಪೂರ್ವಕವಾಗಿ ಋಷಿಗಳನ್ನೂ, ಯಜ್ಞಗಳಿಂದ ದೇವತೆಗಳನ್ನೂ ಪೂಜಿಸಿ ಸಂತೋಷಪಡಿಸಿ, ಅಂತಕಾಲವು ಪ್ರಾಪ್ತವಾದಾಗ ಬೇರೆಯ ಆಶ್ರಮವನ್ನು ಹೊಂದಲು ಬಯಸಿದರೆ ಅವನು ಪರಮಹಂಸಾಶ್ರಮವನ್ನು ಬಿಟ್ಟು ಉಳಿದ ಹಂಸಾದಿ ಆಶ್ರಮ- ವನ್ನು ಸ್ವೀಕರಿಸಬಹುದು. ಅದರಿಂದ ಅವನು ಸಿದ್ಧಿಯನ್ನು ಹೊಂದಿಯಾನು!
ರಾಜರ್ಷಿತ್ವೇನ ರಾಜೇಂದ್ರ ಭೈಕ್ಷಚರ್ಯಂ ನ ಸೇವಯಾ |
ಅಪೇತಗೃಹಧರ್ಮೋಽಪಿ ಚರೇಜ್ಜೀವಿತಕಾಮ್ಯಯಾ ॥22॥
ಎಲೈ ರಾಜೇಂದ್ರನೇ! ಅಂತಹವನು ಗೃಹಸ್ಥಧರ್ಮದಿಂದ ವಿಯುಕ್ತನಾಗಿದ್ದರೂ ಸಹ ಶರೀರಯಾತ್ರೆಯನ್ನು ಮುಂದುವರಿಸುವ ಉದ್ದೇಶದಿಂದ, ರಾಜರ್ಷಿಯಾದ ಕಾರಣದಿಂದ ಭೈಕ್ಷಚರ್ಯೆಯನ್ನು ಮಾಡಬಹುದು. ಆದರೆ ಇನ್ನೊಬ್ಬರ ಸೇವೆ- ಯಿಂದ ಜೀವನವನ್ನು ನಡೆಸಬಾರದು.
ನ ಚೈತನ್ನೈಷ್ಠಿಕಂ ಕರ್ಮ ತ್ರಯಾಣಾಂ ಭರತರ್ಷಭ |
ಚತುರ್ಣಾಂ ರಾಜಶಾರ್ದೂಲ ಪ್ರಾಹುರಾಶ್ರಮವಾಸಿನಾಮ್ ॥23॥
ಎಲೈ ರಾಜಶಾರ್ದೂಲನೇ! ಭರತಶ್ರೇಷ್ಠನೇ! ಬ್ರಾಹ್ಮಣಕ್ಷತ್ರಿಯವೈಶ್ಯರಿಗೂ ಅಥವಾ ಆಶ್ರಮವಾಸಿಗಳಾದ ಬ್ರಾಹ್ಮಣರಿಗೂ ಕೊನೆಯಲ್ಲಿ ಹೀಗೆಯೇ ಮಾಡ- ಬೇಕೆಂಬ ಕಡ್ಡಾಯವಿಲ್ಲ.
ಬಾಹ್ವಂ ಪತ್ಯಂ ಕ್ಷತ್ರಿಯೈರ್ಮಾನವಾನಾಂ
ಲೋಕಶ್ರೇಷ್ಠಂ ಧರ್ಮಮಾಸೇವಮಾನೈಃ |
ಸರ್ವೇ ಧರ್ಮಾಃ ಸೋಪಧರ್ಮಾಸ್ತ್ರಯಾಣಾಂ
ರಾಜ್ಞೋ ಧರ್ಮಾದಿತಿ ವೇದಾಚ್ಛೃಣೋಮಿ ॥24॥
ಲೋಕದಲ್ಲಿ ಶ್ರೇಷ್ಠವಾದ ಧರ್ಮವನ್ನು ಸೇವಿಸುವ ಕ್ಷತ್ರಿಯರಿಗೆ ಬಾಹು- ಸಂಬಂಧಿಯಾದ ಮತ್ತು ಪ್ರಜಾರಕ್ಷಣರೂಪವಾದ ಧರ್ಮವಿದೆ. ರಾಜನ ಧರ್ಮ- ದಿಂದ ಎಲ್ಲಾ ಧರ್ಮಗಳು ಮತ್ತು ಉಪಧರ್ಮಗಳು ಉಂಟಾಗುತ್ತವೆ ಎಂದು ನಾನು ವೇದದಿಂದ ತಿಳಿದಿದ್ದೇನೆ.
ಯಥಾ ರಾಜನ್ ಹಸ್ತಿಪದೇ ಪದಾನಿ
ಸಂಲೀಯಂತೇ ಸರ್ವಸತ್ತ್ವೋದ್ಭವಾನಿ |
ಏವಂ ಧರ್ಮಾನ್ ರಾಜಧರ್ಮೇಷು ಸರ್ವಾನ್
ಸರ್ವಾವಸ್ಥಂ ಸಂಪ್ರಲೀನಾನ್ ನಿಬೋಧ ॥25॥
ಎಲೈ ರಾಜನೇ! ಉಳಿದ ಎಲ್ಲಾ ಪ್ರಾಣಿಗಳ ಹೆಜ್ಜೆಗಳು ಆನೆಯ ಹೆಜ್ಜೆಯಲ್ಲಿ ಮುಳುಗಿಹೋಗುವಂತೆ, ಉಳಿದ ಸರ್ವಾವಸ್ಥೆಯನ್ನು ಹೊಂದಿದ ಎಲ್ಲ ಧರ್ಮ- ಗಳೂ ರಾಜಧರ್ಮಗಳಲ್ಲಿ ಮುಳುಗಿಹೋಗುತ್ತವೆ ಎಂದು ತಿಳಿ.
ಅಲ್ಪಾಶ್ರಯಾನಲ್ಪಫಲಾನ್ ವದಂತಿ
ಧರ್ಮಾನನ್ಯಾನ್ ಧರ್ಮವಿದೋ ಮನುಷ್ಯಾಃ |
ಮಹಾಶ್ರಯಂ ಬಹುಕಲ್ಯಾಣರೂಪಂ
ಕ್ಷಾತ್ರಂ ಧರ್ಮಂ ನೇತರಂ ಪ್ರಾಹುರಾರ್ಯಾಃ ॥26॥
ಧರ್ಮವನ್ನು ತಿಳಿದ ವಿವೇಕಿಗಳು ಉಳಿದ ಧರ್ಮಗಳು ಅಲ್ಪಸಂಬಂಧಿ- ಯಾದವು, ಮತ್ತು ಅಲ್ಪಫಲವನ್ನು ಕೊಡುವವು ಎಂದು ಹೇಳುತ್ತಾರೆ. ಕ್ಷತ್ರಿಯ ಧರ್ಮವು ಮಾತ್ರ ಶ್ರೇಷ್ಠರಾದವರನ್ನು ಆಶ್ರಯಿಸಿರುವುದು ಮತ್ತು ಬಹುಕಲ್ಯಾಣ- ರೂಪವಾದುದು; ಬೇರೆ ಧರ್ಮಗಳು ಹಾಗಲ್ಲ ಎಂದು ಆರ್ಯರು ಹೇಳುತ್ತಾರೆ.
ಸರ್ವೇ ಧರ್ಮಾ ರಾಜಧರ್ಮಪ್ರಧಾನಾಃ
ಸರ್ವೇ ಧರ್ಮಾ ಪಾಲ್ಯಮಾನಾ ಭವಂತಿ |
ಸರ್ವತ್ಯಾಗೋ ರಾಜಧರ್ಮೇಷು ರಾಜನ್
ತ್ಯಾಗೇ ಚಾಹುರ್ಧರ್ಮಮಗ್ರ್ಯಂ ಪುರಾಣಮ್ ॥27॥
ಎಲ್ಲ ಧರ್ಮಗಳೂ ರಾಜಧರ್ಮವನ್ನೇ ಪ್ರಧಾನವಾಗಿ ಆಶ್ರಯಿಸಿವೆ. ರಾಜ- ನಿಂದ ಪಾಲಿಸಲ್ಪಟ್ಟರೆ ಎಲ್ಲ ಧರ್ಮಾಚರಣೆಗಳೂ ನಡೆಯುತ್ತವೆ. ರಾಜನೇ! ಎಲ್ಲ ವಿಧವಾದ ತ್ಯಾಗವೂ ರಾಜಧರ್ಮಗಳಲ್ಲಿ ಅಡಕವಾಗಿವೆ. ತ್ಯಾಗವು ಪ್ರಾಚೀನವಾದ ಶ್ರೇಷ್ಠವಾದ ಧರ್ಮವೆಂದು ಹೇಳುತ್ತಾರೆ.
ಮಜ್ಜೇತ್ ತ್ರಯೀದಂಡನೀತೌ ಹತಾಯಾಂ
ಸರ್ವೇ ಧರ್ಮಾ ನ ಭವೇಯುರ್ವಿರುದ್ಧಾಃ |
ಸರ್ವೇ ಧರ್ಮಾಶ್ಚಾಶ್ರಮಾಣಾಂ ಗತಾಃ ಸ್ಯುಃ
ಕ್ಷಾತ್ರೇ ತ್ಯಕ್ತೇ ರಾಜಧರ್ಮೇ ಪುರಾಣೇ ॥28॥

ದಂಡನೀತಿಯು ಹತವಾದರೆ ವೇದವಿದ್ಯೆಯು ಮುಳುಗಿ ಹೋಗುತ್ತದೆ. ಎಲ್ಲ ಧರ್ಮಗಳೂ ವಿಶೇಷವಾಗಿ ಪ್ರತಿಬದ್ಧವಾಗಿ ಯಾವ ಧರ್ಮಾಚರಣೆಯೂ ನಡೆ- ಯಲಾರದು. ರಾಜನಾದವನು ಪುರಾತನವಾದ ರಾಜಧರ್ಮವನ್ನು ತ್ಯಜಿಸಿದರೆ ಎಲ್ಲ ಆಶ್ರಮಧರ್ಮಗಳೂ ನಶಿಸಿಹೋದಾವು!
ಸರ್ವೇ ತ್ಯಾಗಾ ರಾಜಧರ್ಮೇಷು ದೃಷ್ಟಾಃ
ಸರ್ವಾ ದೀಕ್ಷಾ ರಾಜಧರ್ಮೇಷು ಚೋಕ್ತಾಃ |
ಸರ್ವೇ ಯೋಗಾ ರಾಜಧರ್ಮೇಷು ಚೋಕ್ತಾಃ
ಸರ್ವೇ ಲೋಕಾ ರಾಜಧರ್ಮಾನ್ ಪ್ರವಿಷ್ಟಾಃ ||29||
ರಾಜಧರ್ಮಗಳಲ್ಲಿ ಎಲ್ಲವಿಧವಾದ ತ್ಯಾಗಗಳೂ ದೃಷ್ಟವಾಗಿವೆ. ರಾಜಧರ್ಮ- ಗಳಲ್ಲಿ ಎಲ್ಲ ವಿಧವಾದ ದೀಕ್ಷೆಗಳು ಹೇಳಲ್ಪಟ್ಟಿವೆ. ರಾಜಧರ್ಮಗಳಲ್ಲಿ ಎಲ್ಲ ವಿಧವಾದ ಯೋಗಗಳು ಹೇಳಲ್ಪಟ್ಟಿವೆ. ಎಲ್ಲ ಲೋಕಗಳೂ ರಾಜಧರ್ಮಗಳಲ್ಲಿ ಸೇರಿಕೊಂಡಿವೆ.
ಯಥಾ ಜೀವಾಃ ಪ್ರಾಕೃತೈರ್ಬಾಧ್ಯಮಾನಃ
ಧರ್ಮಾಶ್ರಿತಾನಾಮುಪಪೀಡನಾಯ |
ಏವಂ ಧರ್ಮಾನ್ ರಾಜಧರ್ಮೈರ್ವಿಯುಕ್ತಾಃ
ಸಂಚಿನ್ವಂತೋ ನಾದ್ರಿಯಂತೇ ಸ್ವಧರ್ಮಮ್ ||30||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಃಷಷ್ಟಿತಮೋಽಧ್ಯಾಯಃ ||64||
ಪ್ರಾಕೃತಜನರಿಂದ ಪಶುಪಕ್ಷಿಜೀವರು ಬಂಧಿಸಿ ಪೀಡಿಸಲ್ಪಟ್ಟರೆ ಧರ್ಮಿಷ್ಠರಾದ- ವರಿಗೆ ದುಃಖವುಂಟಾಗುತ್ತದೆ. ಅದರಂತೆ ಧರ್ಮವನ್ನು ಮಾಡಲು ಬಯಸುವವರು ರಾಜಧರ್ಮಗಳಿಂದ ವಿಯುಕ್ತರಾಗಿ ಆದರದಿಂದ ತಮ್ಮ ಧರ್ಮವನ್ನು ಆಚರಿಸ- ದಿದ್ದರೆ ಸಜ್ಜನರಿಗೆ ಖೇದವುಂಟಾಗುತ್ತದೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 64ನೆಯ ಅಧ್ಯಾಯವು ಮುಗಿಯಿತು.

## 65. ಅರವತ್ತೈದನೆಯ ಅಧ್ಯಾಯ

### ರಾಜಧರ್ಮಪ್ರಶಂಸಾರೂಪವಾದ ಇಂದ್ರಮಾಂಧಾತೃಸಂವಾದಕಥನ

ಭೀಷ್ಮಃ
ಚಾತುರಾಶ್ರಮ್ಯಧರ್ಮಾಶ್ಚ ಜಾತಿಧರ್ಮಾಶ್ಚ ಪಾಂಡವ |
ಲೋಕವೇದೋತ್ತರಾಶ್ಚೈವ ಕ್ಷಾತ್ರೇ ಧರ್ಮೇ ವ್ಯವಸ್ಥಿತಾಃ ||1||
ಭೀಷ್ಮರು ಎಲೈ ಪಾಂಡವನೇ! ನಾಲ್ಕು ಆಶ್ರಮದ ಧರ್ಮಗಳು, ನಾಲ್ಕು ಜಾತಿಧರ್ಮಗಳು, ಲೋಕದಲ್ಲಿ ಆಚರಣೆಯಲ್ಲಿರುವ ಮತ್ತು ವೇದೋಕ್ತವಾದ ಧರ್ಮಗಳೂ ಸಹ ಕ್ಷತ್ರಿಯಧರ್ಮದಲ್ಲಿ ನೆಲೆಗೊಂಡಿವೆ.
ಸರ್ವಾಣ್ಯೇತಾನಿ ಧರ್ಮಾಣಿ ಕ್ಷಾತ್ರೇ ಭರತಸತ್ತಮ |
ನಿರಾಶಿಷೋ ಜೀವಲೋಕಾಃ ಕ್ಷಾತ್ರೇ ಧರ್ಮೇಽವ್ಯವಸ್ಥಿತೇ ||2||
ಎಲೈ ಭರತಶ್ರೇಷ್ಠನೇ! ಈ ಎಲ್ಲ ಧರ್ಮಗಳೂ ಕ್ಷತ್ರಿಯಧರ್ಮದಲ್ಲಿ ಸೇರಿವೆ. ಅಂತಹ ಕ್ಷತ್ರಿಯಧರ್ಮವು ಅವ್ಯವಸ್ಥಿತವಾದರೆ ಜೀವಲೋಕವೆಲ್ಲವೂ ತಮ್ಮ ಆಸೆ- ಗಳನ್ನು ಬಿಡಬೇಕಾಗುತ್ತದೆ.
ಅಪ್ರತ್ಯಕ್ಷಂ ಬಹುದ್ವಾರಂ ಧರ್ಮಮಾಶ್ರಮವಾಸಿನಾಮ್ |
ಪ್ರದೂಷಯಂತಿ ತದ್ಭಾವಮಾಗಮೈರೇವ ಶಾಶ್ವತಮ್ ||3||
ಆಶ್ರಮವಾಸಿಗಳ ಧರ್ಮವು ಅಗೋಚರವಾದುದು ಮತ್ತು ಬಹುಮುಖ- ವಾದುದು. ಯಜ್ಞ, ಅಧ್ಯಯನ, ದಾನಾದಿಗಳ ಬಹುಪ್ರಕಾರವನ್ನು ಪ್ರತಿಪಾದಿಸುವ ವೇದಗಳಿಂದಲೇ ಶಾಶ್ವತವಾದ ಆ ಧರ್ಮದ ಇರುವಿಕೆಯು ತಿಳಿಯುತ್ತದೆ. ಅದನ್ನು ತಿಳಿಯದ ಜನರು ದೂಷಿಸುತ್ತಾರೆ.
ಅಪರೇ ವಚನೈಃ ಪುಣ್ಯೈರ್ವಾದಿನೋ ಲೋಕನಿಶ್ಚಯೇ |
ಅನಿಶ್ಚಯಜ್ಞಾ ಧರ್ಮಾಣಾಮದೃಷ್ಟಾಂತೇ ಪರೇ ರತಾಃ ||4||
ಇನ್ನು ಕೆಲವರು ಸ್ವತಃ ಧರ್ಮವನ್ನು ನಿಶ್ಚಯಿಸಲು ಸಾಧ್ಯವಾಗದೇ ವೇದಗ- ಳಿಂದಲೂ, ಸಜ್ಜನರ ವಚನಗಳಿಂದಲೂ ಲೋಕದಲ್ಲಿ ಮಾಡಬೇಕಾದ ಧರ್ಮ- ಗಳನ್ನು ನಿಶ್ಚಯಿಸಿ ಧರ್ಮದಲ್ಲಿ ರತರಾಗಿರುತ್ತಾರೆ. ಇನ್ನು ಕೆಲವರು ಲೋಕ- ದೃಷ್ಟಾಂತರಹಿತವಾದ ಸ್ವೇಚ್ಛಾಚಾರದಲ್ಲಿ ತೊಡಗುತ್ತಾರೆ.
ಪ್ರತ್ಯಕ್ಷಸುಖಭೂಯಿಷ್ಠಮಾತ್ಮಸಾಕ್ಷಿಕಮಚ್ಛಲಮ್ |
ಸರ್ವಲೋಕಹಿತಂ ಧರ್ಮಂ ಕ್ಷತ್ರಿಯೇಷು ಪ್ರತಿಷ್ಠಿತಮ್ ||5||
ಬಹಳವಾದ ಪ್ರತ್ಯಕ್ಷಫಲವನ್ನು ಕೊಡುವ, ಆತ್ಮಸಾಕ್ಷಿಕವಾದ, ಪರಿಶುದ್ಧವಾದ, ಸರ್ವಲೋಕಹಿತವಾದ ಧರ್ಮವು ಕ್ಷತ್ರಿಯರಲ್ಲಿ ಪ್ರತಿಷ್ಠಿತವಾಗಿದೆ.
ಧರ್ಮಾಶ್ರಮವ್ಯವಸಿನಾಂ ಬ್ರಾಹ್ಮಣಾನಾಂ ಯುಧಿಷ್ಠಿರ |
ಯಥಾ ತ್ರಯಾಣಾಂ ವರ್ಣಾನಾಂ ಸಂಖ್ಯಾತೋಪಶ್ರುತಿಃ ಪುರಾ |
ರಾಜಧರ್ಮೇಷ್ವನುಪಮಾ ಲೋಕ್ಯಾ ಸುಚರಿತೈರಿಹ ||6||
ಎಲೈ ಯುಧಿಷ್ಠಿರನೇ! ಆಶ್ರಮಧರ್ಮವನ್ನು ಅನುಷ್ಠಾನಮಾಡಲು ಬಯಸುವ ಮೂರುವರ್ಣಗಳು ಬ್ರಾಹ್ಮಣರ ಧರ್ಮಗಳಿಗೆ ಅಧೀನವಾಗಿ ನಡೆಯುತ್ತವೆ ಎಂದು ಹಿಂದೆ ಹೇಳಿದಂತೆ, ಒಳ್ಳೆಯ ನಡತೆಯಿಂದುಂಟಾಗುವ ಲೋಕಧರ್ಮಗಳೆಲ್ಲವೂ ರಾಜಧರ್ಮಗಳನ್ನು ಅಸದೃಶವಾಗಿ ಅವಲಂಬಿಸುತ್ತವೆ.

ಉದಾಹೃತಂ ತೇ ರಾಜೇಂದ್ರ ಯಥಾ ವಿಷ್ಣುಂ ಮಹೌಜಸಮ್ |
ಸರ್ವಭೂತೇಶ್ವರಂ ದೇವಂ ಪ್ರಭುಂ ನಾರಾಯಣಂ ಪುರಾ |
ಜಗ್ಮುಃ ಸುಬಹವಃ ಶೂರಾ ರಾಜಾನೋ ದಂಡನೀತಯೇ ॥7॥
ಎಲೈ ರಾಜೇಂದ್ರನೇ! ಹಿಂದೆ ಶೂರರಾದ ಅನೇಕರಾಜರು ದಂಡನೀತಿಯನ್ನು ತಿಳಿಯಲು ಹೇಗೆ ಮಹಾಸಾಮರ್ಥ್ಯಶಾಲಿಯೂ, ಸರ್ವಭೂತೇಶ್ವರನೂ, ಪ್ರಭು- ವೂ, ಸರ್ವವ್ಯಾಪ್ತನೂ ಆದ ನಾರಾಯಣನನ್ನು ಸಮೀಪಿಸಿದರೆಂದು ನಿನಗೆ ಹೇಳಿ- ದ್ದೇನೆ.
ಏಕೈಕಮಾತ್ಮನಃ ಕರ್ಮ ತುಲಯಿತ್ವಾಶ್ರಮೇ ಪುರಾ |
ರಾಜಾನಃ ಪರ್ಯುಪಾತಿಷ್ಠನ್ ದೃಷ್ಟಾಂತವಚನೇ ಸ್ಥಿತಾಃ ॥8॥
ಒಬ್ಬೊಬ್ಬ ರಾಜರೂ ಹಿಂದೆ ತಮ್ಮ ಆಶ್ರಮಧರ್ಮಗಳನ್ನು ಉಳಿದ ಧರ್ಮಗಳ ಜೊತೆಗೆ ಹೋಲಿಸುತ್ತಾ ವಿಷ್ಣುವಿನ ವಚನವನ್ನು ನಿರೀಕ್ಷಿಸುತ್ತಾ, ಅವನ ಉಪಾಸನೆ- ಯನ್ನು ಮಾಡಿದರು.
ಸಾಧ್ಯಾ ದೇವಾ ವಸವಶ್ಚಾಶ್ವಿನೌ ಚ
ರುದ್ರಾಶ್ಚ ವಿಶ್ವೇ ಮರುತಾಂ ಗಣಾಶ್ಚ |
ಸೃಷ್ಟಾಃ ಪುರಾ ಆದಿದೇವೇನ ದೇವಾ
ಕ್ಷಾತ್ರೇ ಧರ್ಮೇ ವರ್ತಯಂತೇ ಚ ಸಿದ್ಧಾಃ ॥9॥
ಹಿಂದೆ ಆದಿದೇವನಾದ ನಾರಾಯಣನಿಂದ ಸೃಷ್ಟರಾದ ಸಾಧ್ಯರು, ವಸುಗಳು, ಅಶ್ವಿನಿಗಳು, ರುದ್ರರು, ವಿಶ್ವೇದೇವತೆಗಳು, ಮರುದ್ಗಣಗಳು ಮತ್ತು ಸಿದ್ಧರು ಮುಂತಾದ ದೇವತೆಗಳು ಕ್ಷತ್ರಿಯಧರ್ಮವನ್ನು ಅನುಸರಿಸಿ ಚಾಲನೆ ಮಾಡುತ್ತಾರೆ.
ಅತ್ರ ತೇ ವರ್ತಯಿಷ್ಯಾಮಿ ಧರ್ಮಮರ್ಥವಿನಿಶ್ಚಯಮ್ |
ನಿರ್ಮರ್ಯಾದೇ ವರ್ತಮಾನೇ ದಾನವೈಕಾಯನೇ ಕೃತೇ |
ಬಭೂವ ರಾಜಾ ರಾಜೇಂದ್ರ ಮಾಂಧಾತಾ ನಾಮ ವೀರ್ಯವಾನ್ ॥10॥
ಈ ವಿಷಯದಲ್ಲಿ ನಾನು ನಿನಗೆ ಧರ್ಮಾರ್ಥನಿಶ್ಚಾಯಕವಾದ ಒಂದು ಸಂವಾದ -ವನ್ನು ಹೇಳುವೆನು. ಎಲೈ ರಾಜೇಂದ್ರನೇ! ಲೋಕದಲ್ಲಿ ದಾನವರೇ ಹೆಚ್ಚಾಗಿ ಎಲ್ಲ ಧರ್ಮದ ಎಲ್ಲೆಗಳು ಮೀರಲ್ಪಟ್ಟಾಗ ಮಾಂಧಾತನೆಂಬ ಪರಾಕ್ರಮಶಾಲಿಯಾದ ರಾಜನು ಜನಿಸಿದನು.
ಪುರಾ ವಸುಮತೀಪಾಲೋ ಯಜ್ಞಂ ಚಕ್ರೇ ದಿದೃಕ್ಷಯಾ |
ಅನಾದಿಮಧ್ಯನಿಧನಂ ದೇವಂ ನಾರಾಯಣಂ ಪ್ರಭುಮ್ ॥11॥
ಹಿಂದೆ ಆಗ ಭೂಪಾಲನಾದ ಅವನು ಅನಾದಿಮಧ್ಯನಿಧನನೂ, ಪ್ರಭುವೂ, ದೇವನೂ ಆದ ನಾರಾಯಣನನ್ನು ನೋಡಲು ಬಯಸಿ ಯಜ್ಞವನ್ನು ಮಾಡಿದನು.
ಸ ರಾಜಾ ರಾಜಶಾರ್ದೂಲ ಮಾಂಧಾತಾ ಪರಮೇಷ್ಠಿನಃ |
ಜಗ್ರಾಹ ಶಿರಸಾ ಪಾದೌ ಯಜ್ಞೇ ವಿಷ್ಣೋರ್ಮಹಾತ್ಮನಃ ॥12॥
ಎಲೈ ರಾಜಶಾರ್ದೂಲನೇ! ಆ ಮಾಂಧಾತೃರಾಜನು ಯಜ್ಞದಲ್ಲಿ ಸರ್ವೋ- ತ್ತಮನಾದ ಮಹಾತ್ಮನಾದ ವಿಷ್ಣುವಿನ ಪಾದಗಳನ್ನು ಶಿರಸಾ ನಮಸ್ಕರಿಸಿ ಧ್ಯಾನಿಸಿ- ದನು.
ದರ್ಶಯಾಮಾಸ ತಂ ವಿಷ್ಣೂ ರೂಪಮಾಸ್ಥಾಯ ವಾಸವಮ್ |
ಸ ಪಾರ್ಥಿವೈರ್ವೃತಃ ಸದ್ಭಿರರ್ಚಯಾಮಾಸ ತಂ ಪ್ರಭುಮ್ ॥13॥
ವಿಷ್ಣುವು ಇಂದ್ರನ ರೂಪವನ್ನು ಧರಿಸಿ ಇಂದ್ರನ ಅಂತರ್ಯಾಮಿಯಾಗಿ ಅವನಿಗೆ ದರ್ಶನವನ್ನು ನೀಡಿದನು. ಮಾಂಧಾತೃವು ಉಳಿದ ರಾಜರುಗಳ ಜೊತೆ- ಯಲ್ಲಿ ಸೇರಿ ಆ ಪ್ರಭುವನ್ನು ಪೂಜಿಸಿದನು.
ತಸ್ಯ ಪಾರ್ಥಿವಸಂಘಸ್ಯ ತಸ್ಯ ಚೈವ ಮಹಾತ್ಮನಃ |
ಸಂವಾದೋಽಯಂ ಮಹಾನಾಸೀದ್ ವಿಷ್ಣುಂ ಪ್ರತಿ ಮಹಾದ್ಯುತೇ ॥14॥
ಎಲೈ ಮಹಾದ್ಯುತಿಯೇ! ಆ ರಾಜಸಂಘಕ್ಕೂ ಮತ್ತು ಮಹಾತ್ಮನಾದ ಇಂದ್ರ- ಅಂತರ್ಯಾಮಿಯಾದ ವಿಷ್ಣುವಿಗೂ ವಿಷ್ಣುವಿನ ಸ್ವರೂಪದ ವಿಷಯದಲ್ಲಿ ದೊಡ್ಡ ಸಂವಾದ ಉಂಟಾಯಿತು.
ಇಂದ್ರಃ
ಕಿಮಿಷ್ಯತೇ ಧರ್ಮಭೃತಾಂ ವರಿಷ್ಠ
ಯದ್ ದ್ರಷ್ಟುಕಾಮೋಽಸಿ ತಮಪ್ರಮೇಯಮ್ |
ಅನಂತಮಾಯಾಮಿತಸತ್ತ್ವವೀರ್ಯಂ
ನಾರಾಯಣಂ ಹ್ಯಾದಿದೇವಂ ಪುರಾಣಮ್ ॥15॥
ಇಂದ್ರ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ಅಪ್ರಮೇಯನೂ, ಅನಂತಸಾಮ- ರ್ಥ್ಯೋಪೇತನೂ, ಅಮಿತಬಲಪರಾಕ್ರಮವುಳ್ಳವನೂ, ಪುರಾತನನೂ ಆದಿ- ದೇವನೂ ಆದ ನಾರಾಯಣನನ್ನು ನೋಡಲು ಇಚ್ಛಿಸುತ್ತಿದ್ದೀಯೆ. ಅವನಿಂದ ಏನನ್ನು ಬಯಸುತ್ತೀಯೆ?
ನಾಸೌ ದೇವೋ ವಿಶ್ವರೂಪೋ ಮಯಾಪಿ
ಶಕ್ಯೋ ದ್ರಷ್ಟುಂ ಬ್ರಹ್ಮಣಾ ವಾಪಿ ಸಾಕ್ಷಾತ್ |
ಯೇಽನ್ಯೇ ಕಾಮಾಸ್ತವ ರಾಜನ್ ಹೃದಿಸ್ಥಾ
ದಾಸ್ಯಾಮಿ ತಾಂಸ್ತ್ವಂ ಹಿ ಮರ್ತ್ಯೇಷು ರಾಜಾ ॥16॥
ವಿಶ್ವರೂಪನಾದ ಆ ದೇವನನ್ನು ನಾನಾಗಲೀ, ಸಾಕ್ಷಾತ್ ಬ್ರಹ್ಮದೇವರೇ ಆಗಲಿ ನೋಡಲಾರೆವು. ಎಲೈ ರಾಜನೇ! ನಿನ್ನ ಮನಸ್ಸಿನಲ್ಲಿರುವ ಕಾಮನೆಗಳನ್ನು ನಾನು ನಿನಗೆ ಕೊಡುವೆನು. ಏಕೆಂದರೆ, ನೀನು ಮನುಷ್ಯರಲ್ಲಿ ರಾಜನಾಗಿದ್ದೀಯೆ.

ಸತ್ಯೇ ಸ್ಥಿತೋ ಧರ್ಮಪರೋ ಜಿತೇಂದ್ರಿಯಃ
ಶೂರೋ ದೃಢಂ ಪ್ರೀತಿರತಃ ಸುರಾಣಾಮ್ |
ಬುದ್ಧ್ಯಾ ಭಕ್ತ್ಯಾ ಚೋತ್ತಮಶ್ರದ್ಧಯಾ ಚ
ತತಸ್ತೇಽಹಂ ದದ್ಮಿ ವರಂ ಯಥೇಷ್ಟಮ್ ॥17॥
ನೀನು ಸತ್ಯದಲ್ಲಿ ರತನಾಗಿ, ಧರ್ಮಪರನಾಗಿ, ಜಿತೇಂದ್ರಿಯನಾಗಿ, ಶೂರನಾ- ಗಿದ್ದೀಯೆ. ಅವುಗಳಿಂದಲೂ ನಿನ್ನ ಬುದ್ಧಿ, ಭಕ್ತಿ ಮತ್ತು ಉತ್ತಮಶ್ರದ್ಧೆಯಿಂದಲೂ ದೇವತೆಗಳಿಗೆ ನಿನ್ನ ಮೇಲೆ ದೃಢವಾದ ಪ್ರೀತಿಯಿದೆ. ಆದ್ದರಿಂದ ನಾನು ನಿನಗೆ ಅಭೀಷ್ಟವಾದ ವರವನ್ನು ಕೊಡುತ್ತೇನೆ.
ಮಾಂಧಾತಾ
ಅಸಂಶಯಂ ಭಗವನ್ನಾದಿದೇವಂ
ದ್ರಕ್ಷ್ಯಾಮ್ಯಹಂ ಶಿರಸಾಽಹಂ ಪ್ರಪದ್ಯೇ |
ತ್ಯಕ್ತ್ವಾ ಭೋಗಾನ್ ಧರ್ಮಕಾಮೋ ಹ್ಯರಣ್ಯಮ್
ಇಚ್ಛೇ ಗಂತುಂ ಸತ್ಪಥಂ ಲೋಕಜುಷ್ಟಮ್ ॥18॥
ಮಾಂಧಾತಾ ಪೂಜ್ಯನೇ! ನಾನು ನಿಸ್ಸಂಶಯವಾಗಿ ಆದಿದೇವನಾದ ನಾರಾ- ಯಣನನ್ನು ನೋಡಲು ಬಯಸುತ್ತೇನೆ. ನಾನು ಅವನಿಗೆ ಶಿರಸಾ ಶರಣಾ- ಗತನಾಗುತ್ತೇನೆ. ನಾನು ಎಲ್ಲ ಭೋಗಗಳನ್ನೂ ತೊರೆದು ಧರ್ಮದ ಉದ್ದೇಶ- ವುಳ್ಳವನಾಗಿ ಲೋಕದಲ್ಲಿ ಸಜ್ಜನರು ಅನುಸರಿಸುವ ಅರಣ್ಯವಾಸವನ್ನು ಮಾಡಲು ಬಯಸುತ್ತೇನೆ.
ಕ್ಷಾತ್ರಾದ್ ಧರ್ಮಾದ್ ವಿಪುಲಾದಪ್ರಮೇಯಾ-
ಲ್ಲೋಕಾಃ ಪ್ರಾಪ್ತಾಃ ಸ್ಥಾಪಿತಂ ಸ್ವಂ ಯಶಶ್ಚ |
ಧರ್ಮೋ ಯೋಽಸಾವಾದಿದೇವಾತ್ ಪ್ರವೃತ್ತೋ
ಲೋಕಜ್ಯೇಷ್ಠಸ್ತಂ ನ ಜಾನಾಮಿ ಕರ್ತುಮ್ ॥19॥
ಅಪ್ರಮೇಯವಾದ ವಿಪುಲವಾದ ಕ್ಷತ್ರಿಯಧರ್ಮದಿಂದ ನನಗೆ ಲೋಕಗಳು ಪ್ರಾಪ್ತವಾಗಿವೆ. ನನ್ನ ಕೀರ್ತಿಯನ್ನು ಸ್ಥಾಪಿಸಿದ್ದೇನೆ. ಆದರೆ ಆದಿದೇವನಾದ ನಾರಾಯಣನಿಂದ ಪ್ರವೃತ್ತವಾದ ಸರ್ವಶ್ರೇಷ್ಠವಾದ ಧರ್ಮವನ್ನು ಆಚರಿಸಲು ನಾನು ತಿಳಿದಿಲ್ಲ.
ಇಂದ್ರಃ
ಅಸೈನಿಕಾ ಧರ್ಮಪರಾಶ್ಚ ಧರ್ಮೇ
ಪರಾಂ ಗತಿಂ ನ ನಯಂತೇಽಮುತ್ರ |
ಕ್ಷಾತ್ರೋ ಧರ್ಮೋ ಹ್ಯಾದಿದೇವಾತ್ ಪ್ರವೃತ್ತಃ
ಪಶ್ಚಾದನ್ಯೇ ಶೇಷಭೂತಾಶ್ಚ ಧರ್ಮಾಃ ॥20॥
ಇಂದ್ರ ಧರ್ಮಪರರಾದ ರಾಜರು ಸೇನೆ ಮೊದಲಾದ ರಾಜ್ಯವನ್ನು ಬಿಟ್ಟು ಅರಣ್ಯಕ್ಕೆ ಹೋಗಿ ಧರ್ಮಾನುಷ್ಠಾನಮಾಡಿದರೂ ಅವರಿಗೆ ಪರಲೋಕದಲ್ಲಿ ಶ್ರೇಷ್ಠವಾದ ಗತಿಯಾಗುವುದಿಲ್ಲ. ಕ್ಷತ್ರಿಯಧರ್ಮವು ಆದಿದೇವನಾದ ನಾರಾಯಣ- ನಿಂದ ಪ್ರವೃತ್ತವಾದುದು. ಉಳಿದ ಧರ್ಮಗಳು ಅನಂತರ ರಾಜಧರ್ಮಕ್ಕೆ ಅಂಗವಾಗಿ ಪ್ರವೃತ್ತವಾದವು.
ಶೇಷಾಃ ಸೃಷ್ಟಾ ಹ್ಯಂತವಂತೋ ಹ್ಯನಂತಾಃ
ಸುಪ್ರಸ್ಥಾನಾಃ ಕ್ಷತ್ರಧರ್ಮಾ ವಿಶಿಷ್ಟಾಃ |
ಅಸ್ಮಿನ್ ಧರ್ಮೇ ಸರ್ವಧರ್ಮಾಃ ಪ್ರವಿಷ್ಟಾಃ
ತಸ್ಮಾದ್ ಧರ್ಮಂ ಶ್ರೇಷ್ಠಮಿಮಂ ವದಂತಿ ॥21॥
ಉಳಿದ ಧರ್ಮಗಳ ಫಲವು ಅಂತವುಳ್ಳದ್ದು. ಕ್ಷತ್ರಿಯಧರ್ಮವು ಅನೇಕ ಅಂಗಭೂತವಾದ ಧರ್ಮಗಳ ವಿಸ್ತಾರಕ್ಕೆ ಕಾರಣವಾಗಿದೆ. ಕ್ಷತ್ರಿಯ ಧರ್ಮದಲ್ಲಿ ಎಲ್ಲಾ ಧರ್ಮಗಳೂ ಅಂತರ್ಭೂತವಾಗಿವೆ. ಆದ್ದರಿಂದ ಅದನ್ನು ಶ್ರೇಷ್ಠವೆಂದು ಹೇಳುತ್ತಾರೆ.
ಕರ್ಮಣಾ ವೈ ಪುರಾ ದೇವಾ ಋಷಯಶ್ಚಾಮಿತೌಜಸಃ |
ತ್ರಾತಾಃ ಸರ್ವೇ ಪ್ರಸಾದ್ಯಾರೀನ್ ಕ್ಷತ್ರಧರ್ಮೇಣ ವಿಷ್ಣುನಾ ॥22॥
ಕ್ಷತ್ರಧರ್ಮವನ್ನು ಅನುಸರಿಸಿದ ವಿಷ್ಣುವು ಹಿಂದೆ ತನ್ನ ಕ್ರಿಯೆಯಿಂದ ಶತ್ರುಗಳನ್ನು ಸಂಹರಿಸಿ ಎಲ್ಲಾ ಋಷಿಗಳನ್ನೂ ಮತ್ತು ಅಮಿತಪರಾಕ್ರಮಿಗಳಾದ ದೇವತೆಗಳನ್ನೂ ರಕ್ಷಿಸಿದನು.
ಯದಿ ಹ್ಯಸೌ ಭಗವಾನ್ನಾಹನಿಷ್ಯದ್
ರಿಪೂನ್ ಸರ್ವಾನ್ ವಸುಮಾನಪ್ರಮೇಯಃ |
ನ ಚ ಬ್ರಹ್ಮಾ ನ ಚ ಲೋಕಾಧಿಕರ್ತಾ
ನ ಸದ್ಧರ್ಮಾ ನಾದಿಧರ್ಮಾ ಭವೇಯುಃ ॥23॥
ಶ್ರೀಮಂತನೂ, ಅಪ್ರಮೇಯನೂ ಆದ ಈ ಭಗವಂತನು ಎಲ್ಲಾ ಶತ್ರುಗಳನ್ನೂ ಸಂಹರಿಸದಿದ್ದರೆ ಲೋಕಾಧಿಪತಿಯಾದ ಬ್ರಹ್ಮನಾಗಲೀ ಸದ್ಧರ್ಮಗಳಾಗಲೀ ಅನಾದಿ ಧರ್ಮಗಳಾಗಲೀ ಉಳಿಯುತ್ತಿರಲಿಲ್ಲ.
ಇಮಾಮುರ್ವೀಂ ನ ಜಯೇದ್ ವಿಕ್ರಮೇಣ
ದೇವಶ್ರೇಷ್ಠೋಽಸೌ ಪುರಾ ಚೇದಮೇಯಃ |
ಚಾತುರ್ವರ್ಣ್ಯಂ ಚಾತುರಾಶ್ರಮ್ಯಧರ್ಮಾಃ
ಸರ್ವೇ ನ ಸ್ಯುರ್ಬ್ರಹ್ಮಣೋ ವೈ ವಿನಾಶಾತ್ ॥24॥
ದೇವಶ್ರೇಷ್ಠನೂ, ಅಪ್ರಮೇಯನೂ ಆದ ಇವನು ತನ್ನ ಪರಾಕ್ರಮದಿಂದ ಈ ಭೂಮಿಯನ್ನು ಜಯಿಸದಿದ್ದರೆ ವೇದಗಳು ನಾಶವನ್ನು

ಹೊಂದಿ ಎಲ್ಲಾ ಚಾತುರ್ವ- ರ್ಣ್ಯಧರ್ಮಗಳೂ, ಚಾತುರಾಶ್ರಮ್ಯಧರ್ಮಗಳೂ ವಿನಾಶವನ್ನು ಹೊಂದುತ್ತಿದ್ದವು.
ದೃಷ್ಟ್ವಾ ಧರ್ಮಾಃ ಶತಧಾ ಶಾಶ್ವತೇನ
ಕ್ಷಾತ್ರೇಣ ಧರ್ಮೇಣ ಪುನಃ ಪ್ರವೃತ್ತಾಃ |
ಯುಗೇ ಯುಗೇ ಹ್ಯಾದಿದೇವಾತ್ ಪ್ರವೃತ್ತಾಃ
ಲೋಕಜ್ಯೇಷ್ಠಂ ಕ್ಷತ್ರಧರ್ಮಂ ವದಂತಿ ||25||
ಶಾಶ್ವತನಾದ ಇವನು ಆಲೋಚಿಸಿದ ನೂರಾರು ಧರ್ಮಗಳನ್ನು ಇವನು ಕ್ಷಾತ್ರಧರ್ಮವನ್ನು ಅವಲಂಬಿಸಿ ಪುನಃ ಪ್ರವರ್ತಿಸಿದನು. ಪ್ರತಿಯೊಂದು ಯುಗದ- ಲ್ಲಿಯೂ ಆದಿದೇವನಿಂದ ಲೋಕಜ್ಯೇಷ್ಠವಾದ ಕ್ಷತ್ರಿಯ ಧರ್ಮವು ಪ್ರವೃತ್ತವಾಗು- ತ್ತದೆ ಎಂದು ಹೇಳುತ್ತಾರೆ.
ಆತ್ಮತ್ಯಾಗಃ ಸರ್ವಭೂತಾನುಕಂಪಾ
ಲೋಕಜ್ಞಾನಂ ಮೋಕ್ಷಣಂ ಪಾಲನಂ ಚ |
ವಿಷಣ್ಣಾನಾಂ ಮೋಕ್ಷಣಂ ಪೀಡಿತಾನಾಂ
ಕ್ಷಾತ್ರೇ ಧರ್ಮೇ ವಿದ್ಯತೇ ಪಾರ್ಥಿವಾನಾಮ್ ||26||
ದೇಹತ್ಯಾಗ, ಸರ್ವಭೂತಗಳಲ್ಲಿ ದಯೆ, ಲೋಕಜ್ಞಾನ, ಕಷ್ಟಗಳಿಂದ ಬಿಡಿಸು- ವುದು, ರಕ್ಷಣೆಯನ್ನು ಮಾಡುವುದು, ವಿಷಾದದಿಂದ ಪೀಡಿತರಾದವರಿಗೆ ವಿಷಾದ- ವನ್ನು ಪರಿಹಾರ ಮಾಡುವುದು. ಇವೆಲ್ಲವೂ ರಾಜರಿಗೆ ಇರುವ ಕ್ಷತ್ರಿಯಧರ್ಮದಲ್ಲಿ ಇವೆ.
ನಿರ್ಮರ್ಯಾದಾಃ ಕಾಮಮನ್ಯುಪ್ರವೃತ್ತಾ
ಭೀತಾ ರಾಜ್ಞೋ ನಾಧಿಗಚ್ಛಂತಿ ಪಾಪಮ್ |
ಶಿಷ್ಟಶ್ಚಾನ್ಯೇ ಸರ್ವಧರ್ಮೋಪಪನ್ನಾಃ
ಸಾಧ್ವಾಚಾರಾಃ ಸಾಧು ಧರ್ಮಂ ಚರಂತಿ ||27||
ಮರ್ಯಾದೆಯನ್ನು ಮೀರಿ, ಕಾಮಕ್ರೋಧಗಳಿಗೆ ವಶರಾಗಿ, ದುಷ್ಕಾರ್ಯ- ಗಳನ್ನು ಮಾಡುವವರೂ ಸಹ ರಾಜನಿಗೆ ಹೆದರಿ ದುಷ್ಕರ್ಮಗಳನ್ನು ಮಾಡುವುದನ್ನು ನಿಲ್ಲಿಸುತ್ತಾರೆ. ಉಳಿದ ಶಿಷ್ಟರಂತೂ ಎಲ್ಲ ಧರ್ಮಗಳಿಂದ ಕೂಡಿದವರಾಗಿ ಒಳ್ಳೆಯ ಆಚಾರವಂತರಾಗಿ ಒಳ್ಳೆಯ ಧರ್ಮವನ್ನೇ ಆಚರಿಸುತ್ತಾರೆ.
ಪುತ್ರವತ್ ಪರಿಪಾಲ್ಯಾನಿ ಲಿಂಗಧರ್ಮೇಣ ಪಾರ್ಥಿವೈಃ |
ಲೋಕೇ ಭೂತಾನಿ ಸರ್ವಾಣಿ ವಿಚರಂತಿ ನ ಸಂಶಯಃ ||28||
ರಾಜರು ತಮ್ಮ ಕ್ಷತ್ರಿಯಧರ್ಮದಿಂದ ಎಲ್ಲರನ್ನೂ ಪುತ್ರರಂತೆ ಪರಿಪಾಲಿಸ- ಬೇಕು. ಹಾಗೆ ಮಾಡಿದರೆ ಲೋಕದಲ್ಲಿ ಎಲ್ಲರೂ ನಿರ್ಭಯವಾಗಿ ಸಂಚರಿಸುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ.
ಸರ್ವಧರ್ಮಪರಂ ಕ್ಷತ್ರಂ ಲೋಕಜ್ಯೇಷ್ಠಂ ಸನಾತನಮ್ |
ಶಶ್ವದಕ್ಷರಪರ್ಯಂತಮಕ್ಷರಂ ಸರ್ವತೋಮುಖಮ್ ||29||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಷಷ್ಟಿತಮೋಽಧ್ಯಾಯಃ ||65||
ಕ್ಷತ್ರಿಯಧರ್ಮವು ಲೋಕದಲ್ಲಿ ಶ್ರೇಷ್ಠವಾದುದು. ಸನಾತನವಾದುದು ಮತ್ತು ಸರ್ವಧರ್ಮಕ್ಕಿಂತಲೂ ಉತ್ತಮವಾದುದು. ಶಾಶ್ವತವಾದುದು. ಅದು ಸರ್ವತೋ- ಮುಖವಾಗಿ ಅಂತ್ಯದಲ್ಲಿ ಅಕ್ಷರನಾದ ಪರಮಾತ್ಮನ ಪ್ರಾಪ್ತಿಯವರೆಗೂ ಕರೆದು- ಕೊಂಡು ಹೋಗುವಂತಹದು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 65ನೆಯ ಅಧ್ಯಾಯವು ಮುಗಿಯಿತು
0

66. ಅರವತ್ತಾರನೆಯ ಅಧ್ಯಾಯ
ಇಂದ್ರಮಾಂಧಾತೃಸಂವಾದಾನುವಾದ
ಇಂದ್ರಃ
ಏವಂವೀರ್ಯಃ ಸರ್ವಧರ್ಮೋಪಪನ್ನಃ
ಕ್ಷಾತ್ರಃ ಶ್ರೇಷ್ಠಃ ಸರ್ವಧರ್ಮೇಷು ಧರ್ಮಃ |
ಉತ್ಕೃಷ್ಟವ್ಯಾಃ ಕ್ಷತ್ರಿಯೈರೇಷ ಧರ್ಮಃ
ವಿಪರ್ಯಯೇ ಸ್ಯಾದಭಾವಃ ಪ್ರಜಾನಾಮ್ ||1||
ಇಂದ್ರ ಇಂತಹ ಸಾಮರ್ಥ್ಯವನ್ನು ಹೊಂದಿ ಸರ್ವಧರ್ಮಗಳಿಂದ ಕೂಡಿ- ರುವ ಕ್ಷತ್ರಿಯಧರ್ಮವು ಎಲ್ಲ ಧರ್ಮಗಳಲ್ಲಿಯೂ ಶ್ರೇಷ್ಠವಾದುದು. ಕ್ಷತ್ರಿಯರು ಈ ಧರ್ಮಗಳನ್ನು ಉತ್ಕರ್ಷಸ್ಥಿತಿಗೆ ಏರಿಸಬೇಕು. ಇಲ್ಲದಿದ್ದರೆ ಪ್ರಜೆಗಳ ನಾಶವುಂಟಾ- ದೀತು.
ಭುವಃ ಸಂಸ್ಕಾರಂ ರಾಜಸಂಸ್ಕಾರಯೋಗಮ್
ಅಭೈಕ್ಷಚರ್ಯಾ ಪಾಲನಂ ಚ ಪ್ರಜಾನಾಮ್ |
ವಿದ್ಯಾದ್ ರಾಜಾ ಸರ್ವಭೂತಾನುಕಂಪಾ
ದೇಹತ್ಯಾಗಂ ಚಾಹವೇ ಧರ್ಮಮಗ್ರ್ಯಮ್ ||2||
ಭೂಮಿಯ ಫಲವತ್ತತೆಯನ್ನು ಕಾಪಾಡುವುದು, ಕ್ಷತ್ರಿಯನಿಗೆ ಯೋಗ್ಯವಾದ ಸಂಸ್ಕಾರಗಳನ್ನು ಮಾಡುವುದು, ಭಿಕ್ಷೆಯನ್ನು ಬೇಡದಿರುವುದು, ಪ್ರಜಾಪಾಲನೆಯನ್ನು ಮಾಡುವುದು, ಸರ್ವಭೂತದಯೆ ಇವು ಕ್ಷತ್ರಿಯರ ಧರ್ಮಗಳು. ಯುದ್ಧದಲ್ಲಿ ದೇಹತ್ಯಾಗವನ್ನು ಮಾಡುವುದು ಕ್ಷತ್ರಿಯನಿಗೆ ಅತ್ಯಂತ ಶ್ರೇಷ್ಠವಾದ ಧರ್ಮವೆಂದು ತಿಳಿಯಬೇಕು.

ತ್ಯಾಗಂ ಶ್ರೇಷ್ಠಂ ಮುನಯೋ ವೈ ವದಂತಿ
ಸರ್ವಶ್ರೇಷ್ಠೋ ಯಃ ಶರೀರಂ ತ್ಯಜೇತ |
ನಿತ್ಯಂ ತ್ಯಕ್ತಂ ರಾಜಧರ್ಮೇಷು ಸರ್ವಂ
ಪ್ರತ್ಯಕ್ಷಂ ತೇ ಭೂಮಿಪಾಲಾಃ ಸದೈತೇ ॥3॥

ತ್ಯಾಗವು ಶ್ರೇಷ್ಠವಾದುದೆಂದು ಋಷಿಗಳು ಹೇಳುತ್ತಾರೆ. ಅದರಲ್ಲಿಯೂ (ಧರ್ಮಯುದ್ಧದಲ್ಲಿ) ಶರೀರತ್ಯಾಗವು ಅತ್ಯಂತಶ್ರೇಷ್ಠವಾದುದು. ರಾಜಧರ್ಮ- ಗಳಲ್ಲಿ ಪ್ರವೃತ್ತರಾದವರು ನಿತ್ಯವೂ ಎಲ್ಲವನ್ನೂ ತ್ಯಜಿಸಿರುತ್ತಾರೆ. ಅಂತಹ ಈ ರಾಜರು ನಿನ್ನ ಕಣ್ಣೆದುರಿಗೇ ಇದ್ದಾರೆ.

ಬಹುಶ್ರುತ್ಯಾ ಗುರುಶುಶ್ರೂಷಯಾ ವಾ
ಪರಸ್ಯ ವಾ ಸಂಹನನಾದ್ ವದಂತಿ |
ನಿತ್ಯಂ ಧರ್ಮಂ ಕ್ಷತ್ರಿಯೋ ಬ್ರಹ್ಮಚಾರೀ
ಚರೇದೇಕೋ ಹ್ಯಾಶ್ರಮಂ ಧರ್ಮಕಾಮಃ ॥4॥

ಬಹಳವಾಗಿ ಶ್ರವಣ ಮಾಡುವುದರಿಂದ, ಗುರುಶುಶ್ರೂಷೆಯಿಂದ ಮತ್ತು ಸಹಾಧ್ಯಾಯಿಗಳ ಜೊತೆಯಲ್ಲಿ ಚರ್ಚಿಸುವುದರಿಂದ ಧರ್ಮದ ಜ್ಞಾನವುಂಟಾ- ಗುತ್ತದೆ ಎಂದು ಹೇಳುತ್ತಾರೆ. ಧರ್ಮಕಾಮನೆಯುಳ್ಳ ಕ್ಷತ್ರಿಯ ಬ್ರಹ್ಮಚಾರಿಯು ಏಕಾಕಿಯಾಗಿ ತನ್ನ ಆಶ್ರಮಧರ್ಮಗಳನ್ನು ಅನುಷ್ಠಾನ ಮಾಡಬೇಕು.

ಸಾಮಾನ್ಯಾರ್ಥೇ ವ್ಯವಹಾರೇ ಪ್ರವೃತ್ತೇ
ಪ್ರಿಯಾಪ್ರಿಯೇ ವರ್ಜಯನ್ನೇವ ಯತ್ನಾತ್ |
ಚಾತುರ್ವರ್ಣ್ಯಸ್ಥಾಪನಾತ್ ಪಾಲನಾಚ್ಚ
ತೈಸ್ತೈರ್ಯೋಗೈರ್ನಿಯಮೈರೌರಸೈಶ್ಚ ॥5॥

ರಾಜ್ಯದ ಪ್ರಜೆಗಳ ಸಾಮಾನ್ಯ ವ್ಯವಹಾರಗಳಲ್ಲಿ ಪ್ರಿಯಾಪ್ರಿಯಗಳನ್ನು ಪ್ರಯತ್ನ -ಪೂರ್ವಕವಾಗಿ ವರ್ಜಿಸಿ (ಪಕ್ಷಪಾತವನ್ನು ಮಾಡದೇ), ಆಯಾ ಸ್ವಾಭಾವಿಕ ನಿಯಮಗಳಿಂದ ಉಪಾಯಗಳಿಂದ ಮತ್ತು ತನ್ನ ಸಾಮರ್ಥ್ಯದಿಂದ ಚಾತುರ್ವರ್ಣ್ಯ -ಧರ್ಮವನ್ನು ಸ್ಥಾಪನೆ ಮಾಡಿ ರಕ್ಷಣೆ ಮಾಡುವುದರಿಂದ (ಕ್ಷತ್ರಿಯಧರ್ಮವು ಶ್ರೇಷ್ಠವಾಗುತ್ತದೆ).

ಸರ್ವೋದ್ಯೋಗೈರಾಶ್ರಮಂ ಧರ್ಮಮಾಹುಃ
ಕ್ಷಾತ್ರಂ ಜ್ಯೇಷ್ಠಂ ಸರ್ವಧರ್ಮೋಪಪನ್ನಮ್ |
ಸ್ವಂ ಸ್ವಂ ಧರ್ಮಂ ಯೇ ನ ಚರಂತಿ ವರ್ಣಾಃ
ತಾಂಸ್ತಾನ್ ಧರ್ಮಾನಯಥಾವದ್ ವದಂತಿ ॥6॥

ಸರ್ವಪ್ರಯತ್ನದಿಂದಲೂ ಆಯಾ ಆಶ್ರಮಧರ್ಮಗಳನ್ನು ಪಾಲಿಸುವುದು ಧರ್ಮವೆಂದು ಹೇಳುತ್ತಾರೆ. ಸರ್ವಧರ್ಮಗಳಿಂದ ಕೂಡಿದ ಕ್ಷತ್ರಿಯಧರ್ಮವು ಅದರಲ್ಲಿ ಶ್ರೇಷ್ಠವಾದುದು. ಯಾವ ವರ್ಣದವರು ತಮ್ಮ ತಮ್ಮ ಧರ್ಮಗಳನ್ನು ಆಚರಿಸುವುದಿಲ್ಲವೋ ಅಂತಹವರಿಗೆ ಆಚರಿಸದ ಧರ್ಮಗಳು ವಿಪರೀತಫಲವನ್ನು ಕೊಡುತ್ತವೆ.

ನಿರ್ಮರ್ಯಾದೇ ನಿತ್ಯಮರ್ಥೇ ನಿವಿಷ್ಟಾನ್
ಆಹುಸ್ತಾನ್ ವೈ ಪಶುಭೂತಾನ್ ಮನುಷ್ಯಾನ್ |
ಯಥಾ ನೀತಿಂ ಗಮಯತ್ಯರ್ಥಯೋಗಾತ್
ಶ್ರೇಯಾಂಸ್ತಸ್ಮಾದಾಶ್ರಮಾತ್ ಕ್ಷತ್ರಧರ್ಮಃ ॥7॥

ಎಲ್ಲ ಮರ್ಯಾದೆಯನ್ನೂ ಮೀರಿ, ನಿತ್ಯವೂ ಧನಾರ್ಜನೆಯಲ್ಲಿಯೇ ನಿರತರಾದ ಮನುಷ್ಯರನ್ನು ಪಶುಗಳೆಂದು ಹೇಳುತ್ತಾರೆ. ಕ್ಷತ್ರಿಯಧರ್ಮವನ್ನು ಸರಿಯಾಗಿ ಪಾಲಿಸಿದರೆ ಅಂತಹವರನ್ನು ಧನಾದಿದಾನದಿಂದ ಸನ್ಮಾರ್ಗಕ್ಕೆ ತರುವು- ದರಿಂದ ಉಳಿದ ಎಲ್ಲಾ ಆಶ್ರಮಧರ್ಮಗಳಿಗಿಂತ ಕ್ಷತ್ರಿಯಧರ್ಮವು ಶ್ರೇಷ್ಠವಾ- ದುದು.

ತ್ರೈವಿದ್ಯಾನಾಂ ಯಾ ಗತಿರ್ಬ್ರಾಹ್ಮಣಾನಾಂ
ಯಥೈವೋಕ್ತೋಽಥಾಶ್ರಮೋ ಬ್ರಾಹ್ಮಣಾನಾಮ್ |
ಏತತ್ ಕರ್ಮ ಬ್ರಾಹ್ಮಣಸ್ಯಾಹುರಗ್ರ್ಯಮ್
ಅನ್ಯತ್ ಕುರ್ವನ್ ಶೂದ್ರವಚ್ಛಸ್ತ್ರವಧ್ಯಃ ॥8॥

ಮೂರು ವೇದಗಳನ್ನು ಅಧ್ಯಯನ ಮಾಡಿದ ಬ್ರಾಹ್ಮಣರಿಗೆ ಯಾವ ಯಜ್ಞಾದಿ ಆಚಾರವಿದೆಯೋ ಮತ್ತು ಬ್ರಾಹ್ಮಣರಿಗೆ ವೇದಗಳಲ್ಲಿ ಹೇಳಿದ ಯಾವ ಆಶ್ರಮ- ಧರ್ಮಗಳಿವೆಯೋ ಅವೇ ಬ್ರಾಹ್ಮಣರ ಶ್ರೇಷ್ಠವಾದ ಕರ್ತವ್ಯ ಕರ್ಮವು. ಬ್ರಾಹ್ಮಣನು ಅವುಗಳನ್ನು ಬಿಟ್ಟು ಬೇರೆ ಕರ್ಮವನ್ನು ಮಾಡಿದರೆ ಅವನು ಶೂದ್ರ- ನಂತೆ ಶಸ್ತ್ರದಿಂದ ವಧೆಗೆ ಅರ್ಹನಾಗುತ್ತಾನೆ.

ಚಾತುರಾಶ್ರಮ್ಯಧರ್ಮಾಶ್ಚ ವೇದಧರ್ಮಾಶ್ಚ ಪಾರ್ಥಿವ |
ಬ್ರಾಹ್ಮಣೇನಾನುಗಂತವ್ಯಾ ನಾನ್ಯೋ ವಿದ್ಯಾತ್ ಕಥಂಚನ ॥9॥

ಎಲೈ ರಾಜನೇ! ಚತುರಾಶ್ರಮಧರ್ಮಗಳನ್ನು ಮತ್ತು ವೇದಧರ್ಮಗಳನ್ನು ಬ್ರಾಹ್ಮಣನು ತಿಳಿದು ಅನುಸರಿಸಬೇಕು. ಬ್ರಾಹ್ಮಣನನ್ನು ಬಿಟ್ಟು ಅವುಗಳನ್ನು ಇನ್ನೊಬ್ಬನು ತಿಳಿಯಲಾರನು.

ಅನ್ಯಥಾ ವರ್ತಮಾನಸ್ಯ ನ ಸಾ ವೃತ್ತಿಃ ಪ್ರಕಲ್ಪ್ಯತೇ |
ಕರ್ಮಣಾ ವ್ಯಜ್ಯತೇ ಧರ್ಮೋ ಯಥಾ ಧರ್ಮಸ್ತಥೈವ ಸಃ ॥10॥

ಶಾಸ್ತ್ರೋಕ್ತಮಾರ್ಗಕ್ಕಿಂತ ಭಿನ್ನರೀತಿಯಲ್ಲಿ ನಡೆದುಕೊಳ್ಳುವ ಮನುಷ್ಯನಿಗೆ ಅವನ ವೃತ್ತಿಯು ಇರುವುದಿಲ್ಲ. ಅವನು ಮಾಡುವ ಕರ್ಮದಿಂದ ಅವನ ಧರ್ಮವು ತಿಳಿದು ಬರುತ್ತದೆ. ಮನುಷ್ಯನ ಧರ್ಮವು ಹೇಗೆ ಇರುತ್ತದೆಯೋ ಅವನ ಸ್ವಭಾವವೂ ಅಂತಹುದೇ ಆಗಿರುತ್ತದೆ.

ಯೋ ವಿಕರ್ಮಸ್ಥಿತೋ ವಿಪ್ರೋ ನ ಸ ಸನ್ಮಾನಮರ್ಹತಿ |
ಕರ್ಮಸ್ವನುಪಯುಂಜಾನಮವಿಶ್ವಾಸ್ಯಂ ಹಿ ತಂ ವಿದುಃ ॥11॥
ವಿಕರ್ಮನಿರತನಾದ ಬ್ರಾಹ್ಮಣನು ಸನ್ಮಾನಕ್ಕೆ ಯೋಗ್ಯನಾಗುವುದಿಲ್ಲ. ತನ್ನ ಕರ್ಮಗಳನ್ನು ಮಾಡದಿರುವ ಬ್ರಾಹ್ಮಣನು ವಿಶ್ವಾಸಕ್ಕೂ ಪಾತ್ರನಾಗುವುದಿಲ್ಲ ಎಂದು ಹೇಳುತ್ತಾರೆ.
ಏತೇ ಧರ್ಮಾಃ ಸರ್ವವರ್ಣಾಶ್ಚ ವೀರ್ಯೈ-
ರುತ್ಕೃಷ್ಟವ್ಯಾಃ ಕ್ಷತ್ರಿಯೈರೇಷ ಧರ್ಮಃ |
ತಸ್ಮಾಜ್ಜ್ಯೇಷ್ಠಾ ರಾಜಧರ್ಮಾ ನ ಚಾನ್ಯೇ
ವೀರ್ಯಜ್ಯೇಷ್ಠಾ ವೀರಧರ್ಮಾ ಮತಾ ಮೇ ॥12॥
ಈ ಧರ್ಮಗಳು ಮತ್ತು ಸರ್ವವರ್ಣಗಳೂ ವೀರರಾದ ಕ್ಷತ್ರಿಯರಿಂದಲೇ ಉನ್ನತಸ್ಥಿತಿಗೆ ತರಲ್ಪಡಬೇಕು. ಇದು ಕ್ಷತ್ರಿಯರ ಧರ್ಮ. ಆದ್ದರಿಂದ ರಾಜಧರ್ಮವೇ ಶ್ರೇಷ್ಠವಾದುದು. ಉಳಿದ ಧರ್ಮಗಳಲ್ಲ. ಪರಾಕ್ರಮದಿಂದ ಅನುಷ್ಠಾನಗೊಳಿಸ - ಬೇಕಾದ ಧರ್ಮವು ಶ್ರೇಷ್ಠವಾದ ಧರ್ಮವೆಂದು ನನ್ನ ಅಭಿಪ್ರಾಯ.
ಮಾಂಧಾತಾ
ಯವನಾಃ ಕಿರಾತಾಃ ಗಾಂಧಾರಾಶ್ಚೀನಾಃ ಶಬರಬರ್ಬರಾಃ |
ಶಕಾಸ್ತುಷಾರಾಃ ಕಹ್ವಾಶ್ಚ ಪಹ್ಲವಾಶ್ಚಾಂಧ್ರಮದ್ರಕಾಃ ॥13॥
ಓಢಾಃ ಪುಲಿಂದಾ ರಮಠಾಃ ಕಾಚಾ ಮ್ಲೇಚ್ಛಾಶ್ಚ ಸರ್ವಶಃ |
ಬ್ರಹ್ಮಕ್ಷತ್ರಪ್ರಸೂತಾಶ್ಚ ವೈಶ್ಯಾಃ ಶೂದ್ರಾಶ್ಚ ಮಾನವಾಃ ॥14॥
ಕಥಂ ಧರ್ಮಂ ಚರೇಯುಸ್ತೇ ಸರ್ವೇ ವಿಷಯವಾಸಿನಃ |
ಮದ್ವಿಧೈಶ್ಚ ಕಥಂ ಸ್ಥಾಪ್ಯಾಃ ಸರ್ವೇ ತೇ ದಸ್ಯುಜೀವಿನಃ ॥15॥
ಯವನರು, ಕಿರಾತರು, ಗಾಂಧಾರರು, ಚೀನರು, ಶಬರರು, ಬರ್ಬರರು, ಶಕರು, ತುಷಾರರು, ಕಹ್ವರು, ಪಹ್ಲವರು, ಆಂಧ್ರರು, ಮದ್ರಕರು, ಓಢರು, ಪುಲಿಂದರು, ರಮಠರು, ಕಾಚರು, ಎಲ್ಲಾ ಮ್ಲೇಚ್ಛರು, ಬ್ರಾಹ್ಮಣಕ್ಷತ್ರಿಯಪ್ರಸೂತ- ರಾದ ವೈಶ್ಯ, ಶೂದ್ರರು, ಮಾನವರು ಇವರೆಲ್ಲರೂ ನನ್ನ ರಾಜ್ಯದಲ್ಲಿ ವಾಸಿಸುತ್ತಾರೆ. ಇವರೆಲ್ಲರೂ ದಸ್ಯುಜೀವಿಗಳು. ಕಳ್ಳತನ, ದರೋಡೆಗಳಿಂದ ಜೀವಿಸುವವರು. ಇಂತಹವರನ್ನು ನನ್ನಂತಹವನು ಧರ್ಮಮಾರ್ಗದಲ್ಲಿ ಸ್ಥಾಪಿಸುವುದು ಹೇಗೆ?
ಏತದಿಚ್ಛಾಮ್ಯಹಂ ಶ್ರೋತುಂ ಭಗವಂಸ್ತದ್ ಬ್ರವೀಹಿ ಮೇ |
ತ್ವಂ ಬಂಧುಭೂತೋ ಹ್ಯಸ್ಮಾಕಂ ಕ್ಷತ್ರಿಯಾಣಾಂ ಸುರೇಶ್ವರ ॥16॥
ಪೂಜ್ಯನೇ! ನಾನು ಇದನ್ನು ತಿಳಿಯಲು ಬಯಸುತ್ತೇನೆ. ಅದನ್ನು ನನಗೆ ಹೇಳು. ಎಲೈ ಸುರೇಶ್ವರನೇ! ಕ್ಷತ್ರಿಯರಾದ ನಮಗೆ ನೀನು ಬಂಧುವಾದವನು.
ಇಂದ್ರಃ
ಮಾತಾಪಿತ್ರೋರ್ಹಿ ಕರ್ತವ್ಯಾ ಶುಶ್ರೂಷಾ ಸರ್ವದಸ್ಯುಭಿಃ |
ಆಚಾರ್ಯಗುರುಶುಶ್ರೂಷಾ ತಥೈವಾಶ್ರಮವಾಸಿನಾಮ್ ॥17॥
ಇಂದ್ರ ಎಲ್ಲ ದಸ್ಯುಗಳೂ ಸಹ ತಂದೆತಾಯಿಗಳ ಸೇವೆಯನ್ನು, ಆಚಾರ್ಯ ಗುರುಗಳ ಸೇವೆಯನ್ನು ಮತ್ತು ಆಶ್ರಮವಾಸಿಗಳ ಸೇವೆಯನ್ನು ಮಾಡಬೇಕು.
ಭೂಮಿಪಾನಾಂ ಚ ಶುಶ್ರೂಷಾ ಕರ್ತವ್ಯಾ ಸರ್ವದಸ್ಯುಭಿಃ |
ದೇಶಧರ್ಮಕ್ರಿಯಾಶ್ಚೈವ ತೇಷಾಂ ಧರ್ಮೋ ವಿಧೀಯತೇ ॥18॥
ಎಲ್ಲ ದಸ್ಯುಗಳು ತಾವು ವಾಸಿಸುವ ದೇಶದ ರಾಜನ ಸೇವೆಯನ್ನು ಮಾಡಬೇಕು. ಆಯಾ ದೇಶದ ಧರ್ಮಗಳು ಮತ್ತು ಕ್ರಿಯೆಗಳು ಅವರು ಆಚರಿಸಬೇಕಾದ ಧರ್ಮವೆಂದು ಹೇಳಲ್ಪಡುತ್ತವೆ.
ಪಿತೃಯಜ್ಞಾಸ್ತಥಾ ಕೂಪಾಃ ಪ್ರಪಾಶ್ಚ ಶಯನಾನಿ ಚ |
ದಾನಾನಿ ಚ ಯಥಾಕಾಲಂ ದ್ವಿಜೇಷು ದದ್ಯುರೇವ ತೇ ॥19॥
ಅವರೂ ಸಹ ಪಿತೃಯಜ್ಞಗಳನ್ನು ಮಾಡಬೇಕು. ಬಾವಿಗಳನ್ನು ತೋಡಿಸಿ, ಅರವಟ್ಟಿಗೆಗಳನ್ನು ಕಟ್ಟಿಸಿ, ಯೋಗ್ಯವಾದ ಕಾಲದಲ್ಲಿ ಬ್ರಾಹ್ಮಣರಿಗೆ ಶಯನಾದಿ ದಾನಗಳನ್ನು ಕೊಡಬೇಕು.
ಅಹಿಂಸಾ ಸತ್ಯಮಕ್ರೋಧೋ ವೃತ್ತಿದಾಯಾನುಪಾಲನಮ್ |
ಭರಣಂ ಪುತ್ರದಾರಾಣಾಂ ಶೌಚಮದ್ರೋಹ ಏವ ಚ ॥20॥
ಅಹಿಂಸೆ, ಸತ್ಯ, ಅಕ್ರೋಧ, ತಮ್ಮ ವೃತ್ತಿಯಿಂದ ಸಂಪಾದಿಸಿದ ಆಸ್ತಿಯ ಪಾಲನೆ, ಪತ್ನೀಪುತ್ರರ ಪೋಷಣೆ, ಶೌಚ, ಅದ್ರೋಹ ಇವುಗಳನ್ನು ಹೊಂದಿರಬೇಕು.
ದಕ್ಷಿಣಾ ಸರ್ವಯಜ್ಞಾನಾಂ ದಾತವ್ಯಾ ಭೂತಿಮಿಚ್ಛತಾ |
ಪಾಕಯಜ್ಞಾ ಮಹಾರ್ಹಾಶ್ಚ ದಾತವ್ಯಾಃ ಸರ್ವದಸ್ಯುಭಿಃ ॥21॥
ತಮ್ಮ ಏಳಿಗೆಯನ್ನು ಅಪೇಕ್ಷಿಸುವವರು ಎಲ್ಲ ಯಜ್ಞಗಳಲ್ಲಿಯೂ ದಕ್ಷಿಣೆಯನ್ನು ಕೊಡಬೇಕು. ಪಾಕಯಜ್ಞಗಳನ್ನು ಮಾಡಿಸಿ,ಅರ್ಹರಾದ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.
ಏತಾನ್ಯೇವಂಪ್ರಕಾರಾಣಿ ವಿಹಿತಾನಿ ಪುರಾನಘ |
ಸರ್ವಲೋಕಸ್ಯ ಕರ್ಮಾಣಿ ಕರ್ತವ್ಯಾನೀಹ ಪಾರ್ಥಿವ ॥22॥
ಎಲೈ ಅನಘನೇ! ಪಾರ್ಥಿವನೇ! ಸರ್ವಲೋಕಕ್ಕೆ ಇಂತಹ ವಿಧವಾದ ಕರ್ಮ- ಗಳು ಮಾಡಲ್ಪಡಬೇಕೆಂದು ವಿಹಿತವಾಗಿವೆ.

ಮಾಂಧಾತಾ
ದೃಶ್ಯಂತೇ ಮಾನುಷೇ ಲೋಕೇ ಸರ್ವವರ್ಣೇಷು ದಸ್ಯವಃ |
ಲಿಂಗಾಂತರೇ ವರ್ತಮಾನಾ ಆಶ್ರಮೇಷು ಚತುರ್ಷ್ವಪಿ ||23||
ಮಾಂಧಾತಾ ಮನುಷ್ಯಲೋಕದಲ್ಲಿ ಎಲ್ಲ ವರ್ಣಗಳಲ್ಲಿಯೂ ಮತ್ತು ಎಲ್ಲ ಆಶ್ರಮಗಳಲ್ಲಿಯೂ ಬೇರೆ ಬೇರೆ ಕಪಟವೇಷವನ್ನು ಧರಿಸಿದ ದಸ್ಯುಗಳು ಕಂಡು ಬರುತ್ತಾರೆ.
ಇಂದ್ರಃ
ವಿನಷ್ಟಾಯಾಂ ದಂಡನೀತೌ ರಾಜಧರ್ಮೇ ನಿರಾಕೃತೇ |
ಸಂಪ್ರಮುಹ್ಯಂತಿ ಭೂತಾನಿ ರಾಜದೌರಾತ್ಮ್ಯತೋ ನೃಪ ||24||
ಇಂದ್ರ ಎಲೈ ರಾಜನೇ! ದಂಡನೀತಿಯು ವಿನಷ್ಟವಾಗಿ ರಾಜಧರ್ಮವು ನಶಿಸಿ ಹೋದಾಗ ಅಥವಾ ರಾಜನೇ ದುಷ್ಟನಾದಾಗ ಕಾರ್ಯಾಕಾರ್ಯವಿಷಯದಲ್ಲಿ ಪ್ರಜೆಗಳಿಗೆ ಭ್ರಾಂತಿ ಉಂಟಾಗುತ್ತದೆ.
ಅಸಂಖ್ಯಾತಾ ಭವಿಷ್ಯಂತಿ ಭಿಕ್ಷವೋ ಲಿಂಗಿನಸ್ತಥಾ |
ಆಶ್ರಮಾಣಾಂ ವಿಕಲ್ಪಾಶ್ಚ ನಿವೃತ್ತೇಽಸ್ಮಿನ್ ಕೃತೇ ಯುಗೇ ||25||
ಭಿಕ್ಷುಗಳು ಮತ್ತು ಬೇರೆ ಬೇರೆ ಚಿಹ್ನೆಗಳನ್ನು ಧರಿಸಿದವರು ಅಸಂಖ್ಯಾತರಾಗು- ತ್ತಾರೆ. ಈ ಕೃತಯುಗವು ನಿವೃತ್ತವಾದ ಮೇಲೆ ಆಶ್ರಮಗಳೂ ಸಹ ಅನೇಕಪ್ರಕಾರ- ಗಳನ್ನು ತಾಳುತ್ತವೆ.
ಅಶೃಣ್ವಾನಾಃ ಪುರಾಣಾನಾಂ ಧರ್ಮಾಣಾಂ ಪ್ರವರಾ ಗತೀಃ |
ಉತ್ಪಥಂ ಪ್ರತಿಪತ್ಸ್ಯಂತೇ ಕಾಮಮನ್ಯುಸಮೀರಿತಾಃ ||26||
ಪುರಾಣಗಳನ್ನು ಕೇಳದೇ, ಧರ್ಮಗಳ ಶ್ರೇಷ್ಠಮಾರ್ಗದ ಗತಿಯನ್ನು ತಿಳಿ- ಯದೇ, ಕಾಮಕ್ರೋಧಪ್ರೇರಿತರಾಗಿ ಮನುಷ್ಯರು ದುರ್ಮಾರ್ಗವನ್ನು ಹಿಡಿಯು- ವರು.
ಯದಾ ನಿವರ್ತ್ಯತೇ ಪಾಪೋ ದಂಡನೀತ್ಯಾ ಮಹಾತ್ಮಭಿಃ |
ತದಾ ಧರ್ಮೋ ನ ಚಲತೇ ಸದ್ಭೂತಃ ಶಾಶ್ವತಃ ಪರಃ ||27||
ಮಹಾತ್ಮರಾದ ರಾಜರು ದಂಡನೀತಿಯಿಂದ ಪಾಪಿಗಳನ್ನು ದುರ್ಮಾರ್ಗದಿಂದ ಹಿಂದಿರುಗಿಸಿದರೆ ಆಗ ಶಾಶ್ವತವಾದ ಶ್ರೇಷ್ಠವಾದ ಸತ್ಯವಾದ ಧರ್ಮವು ನಿಶ್ಚಲವಾಗಿ ನಿಲ್ಲುತ್ತದೆ.
ಸರ್ವಲೋಕಗುರುಂ ಚೈವ ರಾಜಾನಂ ಯೋಽವಮನ್ಯತೇ |
ನ ತಸ್ಯ ದತ್ತಂ ನ ಹುತಂ ನ ಶ್ರಾದ್ಧಂ ಫಲತಿ ಕ್ವಚಿತ್ ||28||
ಯಾವನು ಸರ್ವಲೋಕಗುರುಪ್ರಾಯನಾದ ರಾಜನಿಗೆ ಅವಮಾನ ಮಾಡು- ತ್ತಾನೆಯೋ ಅವನು ಮಾಡಿದ ದಾನವಾಗಲೀ, ಹೋಮವಾಗಲೀ, ಶ್ರಾದ್ಧವಾಗಲೀ ಯಾವ ಫಲವನ್ನೂ ಕೊಡುವುದಿಲ್ಲ.
ಮಾನುಷಾಣಾಮಧಿಪತಿಂ ದೇವಭೂತಂ ಸನಾತನಮ್ |
ದೇವಾಶ್ಚ ಬಹು ಮನ್ಯಂತೇ ಧರ್ಮಕಾಮಂ ನರೇಶ್ವರಮ್ ||29||
ಮನುಷ್ಯನಿಗೆ ಅಧಿಪತಿಯಾದ, ದೇವತೆಯ ಸ್ಥಾನವನ್ನು ಹೊಂದಿದ, ಸನಾತನ- ನಾದ, ಧರ್ಮಕಾಮನಾದ, ರಾಜನನ್ನು ದೇವತೆಗಳೂ ಗೌರವಿಸುತ್ತಾರೆ.
ಪ್ರಜಾಪತಿರ್ಹಿ ಭಗವಾನ್ ಯಃ ಸರ್ವಮಸೃಜಜ್ಜಗತ್ |
ಸ ಪ್ರವೃತ್ತಿನಿವೃತ್ತ್ಯರ್ಥಂ ಧರ್ಮಾಣಾಂ ಕ್ಷತ್ರಮಿಚ್ಛತಿ ||30||
ಎಲ್ಲ ಜಗತ್ತನ್ನು ಸೃಷ್ಟಿಸಿದ, ಪೂಜ್ಯರಾದ, ಪ್ರಜಾಪತಿಗಳಾದ ಬ್ರಹ್ಮದೇವರು ಧರ್ಮಗಳ ಪ್ರವೃತ್ತಿ ಮತ್ತು ಅಧರ್ಮಗಳ ನಿವೃತ್ತಿಗಾಗಿ ಕ್ಷತ್ರಿಯರು ಇರಬೇಕೆಂದು ಬಯಸುತ್ತಾರೆ.
ಪ್ರವೃತ್ತಸ್ಯ ಹಿ ಧರ್ಮಸ್ಯ ಬುದ್ಧ್ಯಾ ಯಃ ಸ್ಮರತೇ ಗತಿಮ್ |
ಸ ಮೇ ಮಾನ್ಯಶ್ಚ ಪೂಜ್ಯಶ್ಚ ತತ್ರ ಕ್ಷತ್ರಂ ಪ್ರತಿಷ್ಠಿತಮ್ ||31||
ಯಾವನು ಲೋಕದ ಪ್ರವೃತ್ತಿಗಾಗಿ ತನ್ನ ಬುದ್ಧಿಯಿಂದ ಧರ್ಮದ ಗತಿಯನ್ನು ತಿಳಿಯುತ್ತಾನೆಯೋ ಅಂತಹವನು ನನಗೆ ಮಾನ್ಯನೂ ಪೂಜ್ಯನೂ ಆದವನು. ಆ ಸ್ಥಾನದಲ್ಲಿ ಕ್ಷತ್ರಿಯನಿರುತ್ತಾನೆ.
ಭೀಷ್ಮಃ
ಏವಮುಕತ್ವಾ ಸ ಭಗವಾನ್ ಮರುದ್ಗಣವೃತಃ ಪ್ರಭುಃ |
ಜಗಾಮ ಭವನಂ ವಿಷ್ಣೋರಕ್ಷರಂ ಪರಮಂ ಪದಮ್ ||32||
ಭೀಷ್ಮರು ಹೀಗೆ ಹೇಳಿ ಪೂಜ್ಯನೂ, ಮರುದ್ಗಣಗಳಿಂದ ಸಹಿತನಾದವನೂ, ಪ್ರಭುವೂ ಆದ ಇಂದ್ರಾಂತರ್ಯಾಮಿಯಾದ ವಿಷ್ಣುವು ತನ್ನ ಶಾಶ್ವತವಾದ ಪರಮ ಪದಕ್ಕೆ ಹೊರಟುಹೋದನು.
ಏವಂ ಪ್ರವರ್ತಿತೇ ಧರ್ಮೇ ಪುರಾ ಸುಚರಿತೇಽನಘ |
ಕಃ ಕ್ಷತ್ರಮವಮನ್ಯೇತ ಚೇತನಾವಾನ್ ಬಹುಶ್ರುತಃ ||33||
ಎಲೈ ಅನಘನೇ! ಹೀಗೆ ಹಿಂದೆ ಚೆನ್ನಾಗಿ ಆಚರಿಸಲ್ಪಡುತ್ತಿದ್ದ ಧರ್ಮವು ಭೂಮಿಯಲ್ಲಿ ಪ್ರವೃತ್ತವಾಗುವಂತೆ ಮಾಡುವ ಕ್ಷತ್ರಿಯನನ್ನು ವಿವೇಕಿಯಾದವನೂ ಬಹುಶ್ರುತನೂ ಆದ ಯಾವನು ಅವಮಾನ ಮಾಡಿಯಾನು?
ಅನ್ಯಾಯೇನ ಪ್ರವೃತ್ತಾನಿ ನಿವೃತ್ತಾನಿ ತಥೈವ ಚ |
ಅಂತರಾ ವಿಲಯಂ ಯಾಂತಿ ಯಥಾ ಪಥಿ ವಿಚಕ್ಷುಷಃ ||34||
ಅನ್ಯಾಯದಿಂದ ಉಂಟಾದ ಪ್ರವೃತ್ತಕರ್ಮಗಳಾಗಲೀ, ನಿವೃತ್ತಕರ್ಮಗಳಾಗಲೀ ಕುರುಡನು ಮಾರ್ಗದಲ್ಲಿ ನಾಶವನ್ನು ಹೊಂದುವಂತೆ

ಮಧ್ಯದಲ್ಲಿಯೇ ನಾಶವನ್ನು ಹೊಂದುತ್ತವೆ.
ಆದೌ ಪ್ರವರ್ತಿತೇ ಚಕ್ರೇ ತಥೈವಾದಿಪರಾಯಣೇ |
ವರ್ತಸ್ವ ಪುರುಷವ್ಯಾಘ್ರ ಸಂವಿಜಾನಾಮಿ ತೇಽನಘ ||35||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಷಷ್ಟಿತಮೋಽಧ್ಯಾಯಃ ||66||
ಎಲೈ ಪುರುಷವ್ಯಾಘ್ರನೇ! ಆದಿಕಾಲದಿಂದಲೂ ಶ್ರೇಷ್ಠವಾದ ಆಶ್ರಯವಾದ ಮತ್ತು ಪ್ರವೃತ್ತವಾದ ಈ ಧರ್ಮಚಕ್ರದಲ್ಲಿ ನೀನು ಇರುವವನಾಗು. ಅನಘನೇ! ನಾನು ನಿನ್ನನ್ನು ಚೆನ್ನಾಗಿ ತಿಳಿದಿದ್ದೇನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 66ನೇ ಅಧ್ಯಾಯವು ಮುಗಿಯಿತು
0
67. ಅರವತ್ತೇಳನೆಯ ಅಧ್ಯಾಯ
ರಾಜ್ಯಪಾಲನೆಯಿಂದ ಸರ್ವಾಶ್ರಮಧರ್ಮಫಲಪ್ರಾಪ್ತಿಕಥನ
ಯುಧಿಷ್ಠಿರಃ
ಶ್ರುತಾ ಮೇ ಕಥಿತಾಃ ಪೂರ್ವೈಶ್ಚತ್ವಾರೋ ಮಾನವಾಶ್ರಮಾಃ |
ವ್ಯಾಖ್ಯಾನಮೇಷಾಮಾಚಕ್ಷ್ವ ಪೃಚ್ಛತೋ ಮೇ ಪಿತಾಮಹ ||1||
ಯುಧಿಷ್ಠಿರ ನಾನು ಪ್ರಾಚೀನರು ಹೇಳಿದ ನಾಲ್ಕು (ಮಾನವಾ)ಆಶ್ರಮಗಳನ್ನು ಕೇಳಿದ್ದೇನೆ. ಪಿತಾಮಹನೇ! ಪ್ರಶ್ನೆಮಾಡುತ್ತಿರುವ ನನಗೆ ಅವುಗಳನ್ನು ವಿಸ್ತಾರವಾಗಿ ಹೇಳು.
ಭೀಷ್ಮಃ
ವಿದಿತಾಃ ಸರ್ವ ಏವೇಹ ಧರ್ಮಾಸ್ತವ ಯುಧಿಷ್ಠಿರ |
ಯಥಾ ಮಮ ಮಹಾಬಾಹೋ ವಿದಿತಾಃ ಸಾಧುಸಮ್ಮತಾಃ ||2||
ಭೀಷ್ಮರು ಎಲೈ ಯುಧಿಷ್ಠಿರನೇ! ಮಹಾಬಾಹುವೇ! ನನಗೆ ತಿಳಿದಿರುವಂತೆ ಸಾಧುಸಮ್ಮತವಾದ ಎಲ್ಲ ಧರ್ಮಗಳೂ ನಿನಗೆ ತಿಳಿದಿವೆ.
ಯತ್ತು ಲಿಂಗಾಂತರಗತಂ ಪೃಚ್ಛಸೇ ಮಾಂ ಯುಧಿಷ್ಠಿರ |
ಧರ್ಮಂ ಧರ್ಮಭೃತಾಂ ಶ್ರೇಷ್ಠ ತನ್ನಿಬೋಧ ನರಾಧಿಪ ||3||
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ನರಾಧಿಪನೇ! ಯುಧಿಷ್ಠಿರನೇ! ಬ್ರಹ್ಮ- ಚರ್ಯಾದಿ ಭಿನ್ನಭಿನ್ನ ಚಿಹ್ನೆಯನ್ನು ಧರಿಸಿದವರ ಧರ್ಮದ ಫಲವನ್ನು ಕೇಳುತ್ತಿರು- ವಿಯಷ್ಟೇ? ಅದನ್ನು ತಿಳಿಯುವವನಾಗು.
ಸರ್ವಾಣ್ಯೇತಾನಿ ಕೌಂತೇಯ ವಿದ್ಯಂತೇ ಮನುಜರ್ಷಭ |
ಸಾಧ್ವಾಚಾರಪ್ರವೃತ್ತಾನಾಂ ಚಾತುರಾಶ್ರಮ್ಯಕರ್ಮಣಾಮ್ ||4||
ಎಲೈ ಮನುಜಶ್ರೇಷ್ಠನೇ! ಚೆನ್ನಾಗಿ ರಾಜ್ಯಪರಿಪಾಲನೆಯನ್ನು ಮಾಡುವ ನಿನಗೆ, ಒಳ್ಳೆಯ ಆಚಾರಶೀಲರಾದ ಚತುರಾಶ್ರಮಕರ್ಮಿಗಳು ಮಾಡುವ ಎಲ್ಲ ಧರ್ಮಗಳ ಫಲವೂ ಉಂಟಾಗುತ್ತದೆ.
ಅಕಾಮದ್ವೇಷಯುಕ್ತಸ್ಯ ದಂಡನೀತ್ಯಾ ಯುಧಿಷ್ಠಿರ |
ಸಮೇಕ್ಷಿಣಶ್ಚ ಭೂತೇಷು ಭೈಕ್ಷಾಶ್ರಮಪದಂ ಭವೇತ್ ||5||
ಎಲೈ ಯುಧಿಷ್ಠಿರನೇ! ರಾಗದ್ವೇಷಗಳನ್ನು ತ್ಯಜಿಸಿ ದಂಡನೀತಿಯಿಂದ ಎಲ್ಲ ಪ್ರಜೆಗಳನ್ನೂ ಸಮಾನವಾಗಿ ನೋಡಿಕೊಳ್ಳುವವನಿಗೆ ಬ್ರಹ್ಮಚರ್ಯಾಶ್ರಮಫಲವು ದೊರೆಯುವುದು.
ವೇತ್ತ್ಯಾದಾನವಿಸರ್ಗಂ ಯೋ ನಿಗ್ರಹಾನುಗ್ರಹೌ ತಥಾ |
ಯಥೋಕ್ತವೃತ್ತೇರ್ವೀರಸ್ಯ ಕ್ಷೇಮಾಶ್ರಮಪದಂ ಭವೇತ್ ||6||
ಪ್ರಜೆಗಳಿಂದ ಧನವನ್ನು ಸ್ವೀಕಾರ ಮಾಡುವುದನ್ನು ಮತ್ತು ಪುನಃ ಅವರಿಗೆ ಕೊಡುವುದನ್ನು ಯಾವನು ತಿಳಿದಿದ್ದಾನೆಯೋ, ಯಾವನು ದುಷ್ಟರ ನಿಗ್ರಹವನ್ನು ಶಿಷ್ಟರ ಅನುಗ್ರಹವನ್ನು ಮಾಡುವನೋ ಅಂತಹ ಶಾಸೊತ್ರೀಕ್ತರೀತಿಯಲ್ಲಿ ನಡೆದು- ಕೊಳ್ಳುವ ವೀರನಿಗೆ ಗೃಹಸ್ಥಾಶ್ರಮಫಲವು ದೊರೆಯುತ್ತದೆ.
ಅರ್ಹಾನ್ ಪೂಜಯತೋ ನಿತ್ಯಂ ಸಂವಿಭಾಗೇನ ಪಾಂಡವ |
ಸರ್ವತಸ್ತಸ್ಯ ಕೌಂತೇಯ ಭೈಕ್ಷ್ಯಾಶ್ರಮಪದಂ ಭವೇತ್ ||7||
ಎಲೈ ಪಾಂಡವನೇ! ಕೌಂತೇಯನೇ! ನಿತ್ಯವೂ ತನ್ನಲ್ಲಿರುವ ದ್ರವ್ಯವನ್ನು ವಿಭಾಗ ಮಾಡಿ ಅರ್ಹನಾದವನನ್ನು ಪೂಜಿಸುವವನಿಗೆ ಬ್ರಹ್ಮಚರ್ಯಾಶ್ರಮಫಲವು ದೊರೆ- ಯುತ್ತದೆ.
ಜ್ಞಾತಿಸಂಬಂಧಿಮಿತ್ರಾಣಿ ವ್ಯಾಪನ್ನಾನಿ ಯುಧಿಷ್ಠಿರ |
ಸಮಭ್ಯುದ್ಧರಮಾಣಸ್ಯ ದೀಕ್ಷಾಶ್ರಮಪದಂ ಭವೇತ್ ||8||
ಎಲೈ ಯುಧಿಷ್ಠಿರನೇ! ವಿಪತ್ತಿಗೆ ಒಳಗಾದ ಜ್ಞಾತಿಸಂಬಂಧಿಮಿತ್ರರನ್ನು ವಿಪತ್ತಿ- ನಿಂದ ಉದ್ಧಾರ ಮಾಡುವವನಿಗೆ ಗೃಹಸ್ಥಾಶ್ರಮಫಲವು ದೊರೆಯುವುದು.
ಲೋಕಮುಖ್ಯೇಷು ಸತ್ಕಾರಂ ಲಿಂಗಮುಖ್ಯೇಷು ಚಾನಘ |
ಕುರ್ವತಸ್ತಸ್ಯ ಕೌಂತೇಯ ವನ್ಯಾಶ್ರಮಪದಂ ಭವೇತ್ ||9||
ವಾನಪ್ರಸ್ಥಾಶ್ರಮಧಾರಿಗಳಲ್ಲಿ ಮುಖ್ಯರಾದವರನ್ನು ಸತ್ಕರಿಸುವವನಿಗೆ ಎಲೈ ಕೌಂತೇಯನೇ! ವಾನಪ್ರಸ್ಥಾಶ್ರಮಫಲವು ದೊರೆಯುತ್ತದೆ.

ಆಹ್ನಿಕಂ ಭೂತಯಜ್ಞಾಂಶ್ಚ ಪಿತೃಯಜ್ಞಾಂಶ್ಚ ಮಾನುಷಾನ್ |

ಕುರ್ವತಃ ಪಾರ್ಥ ವಿಪುಲಾನ್ ಸತ್ಯಾಶ್ರಮಪದಂ ಭವೇತ್ ॥10॥
ಎಲ್ಲೈ ಪಾರ್ಥನೇ! ಆಹ್ನಿಕವನ್ನು ಭೂತಯಜ್ಞಗಳನ್ನು ಪಿತೃಯಜ್ಞಗಳನ್ನು ವಿಪುಲವಾದ ಮಾನುಷಯಜ್ಞಗಳನ್ನು ಮಾಡುವ ರಾಜನಿಗೆ ಯತ್ಯಾಶ್ರಮಫಲವು ದೊರೆಯುತ್ತದೆ.
ಸಂವಿಭಾಗೇನ ಭೂತಾನಾಮತಿಥೀನಾಂ ತಥಾರ್ಚನಾತ್ |
ದೈವಯಜ್ಞೈಶ್ಚ ರಾಜೇಂದ್ರ ವನ್ಯಾಶ್ರಮಪದಂ ಭವೇತ್ ॥11॥
ಎಲ್ಲರಿಗೂ ತನ್ನ ದ್ರವ್ಯವನ್ನು ಹಂಚಿ, ಅತಿಥಿಗಳನ್ನು ಅರ್ಚಿಸಿ, ದೇವಯಜ್ಞ- ಗಳನ್ನು ಮಾಡುವವನಿಗೆ ಎಲ್ಲೈ ರಾಜೇಂದ್ರನೇ! ವಾನಪ್ರಸ್ಥಾಶ್ರಮಫಲವು ದೊರೆ- ಯುತ್ತದೆ.
ಮರ್ದನಂ ಪರರಾಷ್ಟ್ರಾಣಾಂ ಶಿಷ್ಟಾರ್ಥಂ ಸತ್ಯವಿಕ್ರಮ |
ಕುರ್ವತಃ ಪುರುಷವ್ಯಾಘ್ರ ವನ್ಯಾಶ್ರಮಪದಂ ಭವೇತ್ ॥12॥
ಎಲ್ಲೈ ಪುರುಷವ್ಯಾಘ್ರನೇ! ಸತ್ಯವಿಕ್ರಮನೇ! ಪರರಾಷ್ಟ್ರದಲ್ಲಿರುವ ಶಿಷ್ಟರ ಹಿತಕ್ಕಾಗಿ ಪರರಾಷ್ಟ್ರವನ್ನು ಮರ್ದಿಸುವವನಿಗೆ ವಾನಪ್ರಸ್ಥಾಶ್ರಮಫಲವು ದೊರೆಯು- ತ್ತದೆ.
ಪಾಲನಾತ್ ಸರ್ವಭೂತಾನಾಂ ಸ್ವರಾಷ್ಟ್ರಪರಿಪಾಲನಾತ್ |
ದೀಕ್ಷಾ ಬಹುವಿಧಾ ರಾಜ್ಞೋ ವನ್ಯಾಶ್ರಮಪದಂ ಭವೇತ್ ॥13॥
ಎಲ್ಲ ಪ್ರಜೆಗಳನ್ನೂ ಪಾಲನೆ ಮಾಡಿ, ತನ್ನ ರಾಷ್ಟ್ರವನ್ನು ಪರಿಪಾಲನೆ ಮಾಡಿ, ಅನೇಕ ವಿಧವಾದ ದೀಕ್ಷೆಗಳನ್ನು ಧರಿಸಿದ ರಾಜನಿಗೆ ವಾನಪ್ರಸ್ಥಾಶ್ರಮಫಲವು ದೊರೆಯುತ್ತದೆ.
ವೇದಾಧ್ಯಯನನಿತ್ಯತ್ವಂ ಕ್ಷಮಾಥಾಚಾರ್ಯಪೂಜನಮ್ |
ತಥೋಪಾಧ್ಯಾಯಶುಶ್ರೂಷಾ ಬ್ರಹ್ಮಾಶ್ರಮಪದಂ ಭವೇತ್ ॥14॥
ನಿತ್ಯವೂ ವೇದಾಧ್ಯಯನವನ್ನು ಮಾಡಿ, ಕ್ಷಮೆಯನ್ನು ಹೊಂದಿ, ಆಚಾರ್ಯ- ರನ್ನು ಪೂಜಿಸಿ, ಗುರುಶುಶ್ರೂಷೆಯನ್ನು ಮಾಡುವ ರಾಜನಿಗೆ ಬ್ರಹ್ಮಚರ್ಯಾಶ್ರಮ- ಫಲವು ದೊರೆಯುತ್ತದೆ.
ಆಹ್ನಿಕಂ ಜಪಮಾನಸ್ಯ ದೇವಾನ್ ಪೂಜಯತಃ ಸದಾ |
ಧರ್ಮೇಣ ಪುರುಷವ್ಯಾಘ್ರ ಧರ್ಮಾಶ್ರಮಪದಂ ಭವೇತ್ ॥15॥
ಎಲ್ಲೈ ಪುರುಷವ್ಯಾಘ್ರನೇ! ಸದಾ ಮಂತ್ರಗಳನ್ನು ಜಪಿಸಿ, ದೇವತೆಗಳನ್ನು ಧರ್ಮದಿಂದ ಪೂಜಿಸುವ ರಾಜನಿಗೆ ಯತ್ಯಾಶ್ರಮಫಲವು ದೊರೆಯುತ್ತದೆ.
ಮೃತ್ಯುರ್ವಾ ರಕ್ಷಣಂ ವೇತಿ ಯಸ್ಯ ರಾಜ್ಞೋ ವಿನಿಶ್ಚಯಃ |
ಪ್ರಾಣದ್ಯೂತೇ ತತಸ್ತಸ್ಯ ಬ್ರಹ್ಮಾಶ್ರಮಪದಂ ಭವೇತ್ ॥16॥
ಯಾವನು ತನ್ನ ಮರಣ ಅಥವಾ ತನ್ನ ಪ್ರಜೆಗಳ ರಕ್ಷಣೆಯನ್ನು ನಿರ್ಧರಿಸಿ, ಪ್ರಾಣದ್ಯೂತವಿರುವ ಸಮರದಲ್ಲಿ ಭಾಗವಹಿಸುತ್ತಾನೆಯೋ ಅವನಿಗೆ ಬ್ರಹ್ಮ- ಚರ್ಯಾಶ್ರಮಫಲವು ದೊರೆಯುತ್ತದೆ.
ಅಜಿಹ್ಮಮಶಠಂ ಮಾರ್ಗಂ ಸೇವಮಾನಸ್ಯ ಭಾರತ |
ಸರ್ವದಾ ಸರ್ವಭೂತೇಷು ಬ್ರಹ್ಮಾಶ್ರಮಪದಂ ಭವೇತ್ ॥17॥
ಎಲ್ಲೈ ಭಾರತನೇ! ಎಲ್ಲ ಪ್ರಜೆಗಳ ವಿಷಯದಲ್ಲಿ ವಕ್ರವಲ್ಲದ ಶಾಠ್ಯವಿಲ್ಲದ ಮಾರ್ಗವನ್ನು ಸದಾ ಸೇವಿಸುವವನಿಗೆ ಬ್ರಹ್ಮಚರ್ಯಾಶ್ರಮಫಲವು ದೊರೆಯುತ್ತದೆ.
ವಾನಪ್ರಸ್ಥೇಷು ವಿಪ್ರೇಷು ತ್ರೈವಿದ್ಯೇಷು ಚ ಭಾರತ |
ಪ್ರಯಚ್ಛತೋಽರ್ಥಾನ್ ವಿಪುಲಾನ್ ವನ್ಯಾಶ್ರಮಪದಂ ಭವೇತ್ ॥18॥
ಎಲ್ಲೈ ಭಾರತನೇ! ವಾನಪ್ರಸ್ಥರಾದ ಬ್ರಾಹ್ಮಣರಿಗೆ ಮತ್ತು ವೇದವಿದ್ಯಾಸಂಪನ್ನ- ರಾದ ಬ್ರಾಹ್ಮಣರಿಗೆ ವಿಪುಲವಾದ ಧನವನ್ನು ದಾನ ಮಾಡುವವನಿಗೆ ವಾನಪ್ರಸ್ಥಾ- ಶ್ರಮಫಲವು ದೊರೆಯುತ್ತದೆ.
ಸರ್ವಭೂತೇಷ್ವನುಕ್ರೋಶಂ ಕುರ್ವತಸ್ತಸ್ಯ ಭಾರತ |
ಆನೃಶಂಸ್ಯಪ್ರವೃತ್ತಸ್ಯ ಸರ್ವಾವಸ್ಥಂ ಪದಂ ಭವೇತ್ ॥19॥
ಎಲ್ಲೈ ಭಾರತನೇ! ಎಲ್ಲ ಭೂತಗಳಲ್ಲಿಯೂ ದಯವನ್ನು ಹೊಂದಿ, ಮಾರ್ದ- ವದಿಂದ ನಡೆದುಕೊಳ್ಳುವವನಿಗೆ ಎಲ್ಲ ಆಶ್ರಮಗಳ ಧರ್ಮಗಳಿಂದ ಪಡೆಯಬಹು- ದಾದ ಸ್ಥಾನವು ದೊರೆಯುತ್ತದೆ.
ಬಾಲವೃದ್ಧೇಷು ಕೌರವ್ಯ ಸರ್ವಾವಸ್ಥಂ ಯುಧಿಷ್ಠಿರ |
ಅನುಕ್ರೋಶಂ ವಿದಧತಃ ಸರ್ವಾವಸ್ಥಂ ಪದಂ ಭವೇತ್ ॥20॥
ಎಲ್ಲೈ ಕೌರವ್ಯನೇ! ಯುಧಿಷ್ಠಿರನೇ! ಸರ್ವಕಾಲದಲ್ಲಿಯೂ ಬಾಲಕರಲ್ಲಿಯೂ ಮತ್ತು ವೃದ್ಧರಲ್ಲಿಯೂ ದಯೆಯನ್ನು ತೋರುವ ರಾಜನಿಗೆ ಸರ್ವಾಶ್ರಮಧರ್ಮಾ- ನುಷ್ಠಾನಗಳಿಂದ ಪ್ರಾಪ್ಯವಾದ ಸ್ಥಾನವು ದೊರೆಯುತ್ತದೆ.
ಬಲಾತ್ಕೃತೇಷು ಭೂತೇಷು ಪರಿತ್ರಾಣಂ ಕುರೂದ್ವಹ |
ಶರಣಾಗತೇಷು ಕೌರವ್ಯ ಕುರ್ವನ್ ಗಾರ್ಹಸ್ಥ್ಯಮಾವಸೇತ್ ॥21॥
ಎಲ್ಲೈ ಕುರೂದ್ವಹನೇ! ಕೌರವ್ಯನೇ! ಬಲಾತ್ಕಾರಕ್ಕೆ ಒಳಗಾದ ಪ್ರಜೆಗಳು ಶರಣಾಗತರಾದಾಗ ಅವರನ್ನು ರಕ್ಷಿಸುವವನು ಗೃಹಸ್ಥಾಶ್ರಮಫಲವನ್ನು ಪಡೆಯು- ತ್ತಾನೆ.
ಚರಾಚರಾಣಾಂ ಭೂತಾನಾಂ ರಕ್ಷಾಮಪಿ ಚ ಸರ್ವಶಃ |
ಯಥಾರ್ಹಪೂಜಾಂ ಚ ಸದಾ ಕುರ್ವನ್ ಗಾರ್ಹಸ್ಥ್ಯಮಾವಸೇತ್ ॥22॥
ಚಲಿಸುವ ಮತ್ತು ಚಲಿಸದಿರುವ ಪ್ರಾಣಿಗಳ ಸರ್ವಪ್ರಕಾರವಾದ ರಕ್ಷಣೆಯನ್ನು ಮತ್ತು ಯಥಾಯೋಗ್ಯವಾದ ಪೂಜೆಯನ್ನು

ಯಾವಾಗಲೂ ಮಾಡುವವನು ಗೃಹಸ್ಥಾಶ್ರಮಧರ್ಮಾನುಷ್ಠಾನದ ಫಲವನ್ನು ಹೊಂದುತ್ತಾನೆ.
ಜ್ಯೇಷ್ಠಾನುಜ್ಯೇಷ್ಠಪತ್ನೀನಾಂ ಭ್ರಾತೃಣಾಂ ಪುತ್ರನಪ್ತೃಣಾಮ್ |
ನಿಗ್ರಹಾನುಗ್ರಹೌ ಪಾರ್ಥ ಗಾರ್ಹಸ್ಥ್ಯಮಿತಿ ತತ್ ತಪಃ ||23||
ಎಲೈ ಪಾರ್ಥನೇ! ಅಣ್ಣತಮ್ಮಂದಿರ ಪತ್ನಿಯರ ಮತ್ತು ಸಹೋದರರ ಪುತ್ರ ಪೌತ್ರರ ನಿಗ್ರಹಾನುಗ್ರಹಗಳು ಗೃಹಸ್ಥಧರ್ಮವೆಂದು ಹೇಳಲ್ಪಡುತ್ತದೆ. ಅದು ಒಂದು ತಪಸ್ಸೇ.
ಸಾಧೂನಾಮರ್ಚನೀಯಾನಾಂ ಪ್ರಜಾಸು ವಿದಿತಾತ್ಮನಾಮ್ |
ಪಾಲನಂ ಪುರುಷವ್ಯಾಘ್ರ ಗೃಹಾಶ್ರಮಪದಂ ಭವೇತ್ ||24||
ಎಲೈ ಪುರುಷವ್ಯಾಘ್ರನೇ! ಪ್ರಜೆಗಳಲ್ಲಿ ಪೂಜಾರ್ಹರಾದ ಜ್ಞಾನಿಗಳಾದ ಸಜ್ಜನರನ್ನು ರಕ್ಷಿಸುವವನು ಗೃಹಸ್ಥಾಶ್ರಮಫಲವನ್ನು ಹೊಂದುತ್ತಾನೆ.
ಆಶ್ರಮಸ್ಥಾನಿ ಸರ್ವಾಣಿ ಯಸ್ತು ವೇಶ್ಮನಿ ಭಾರತ |
ಆದದೀತೇಹ ಭೋಜ್ಯೇನ ತದ್ ಗಾರ್ಹಸ್ಥ್ಯಂ ಯುಧಿಷ್ಠಿರ ||25||
ಎಲೈ ಯುಧಿಷ್ಠಿರನೇ! ಭಾರತನೇ! ಆಶ್ರಮದಲ್ಲಿರುವವರು ಭೋಜನವಿಷಯ- ದಲ್ಲಿ ಅನುಸರಿಸುವ ಎಲ್ಲಾ ನಿಯಮಗಳನ್ನೂ ಯಾರು ತನ್ನ ಮನೆಯಲ್ಲಿಯೇ ಅನುಷ್ಠಾನಮಾಡುತ್ತಾನೆಯೋ ಅದು ಒಳ್ಳೆಯ ಗಾರ್ಹಸ್ಥ್ಯ.
ಯಃ ಸ್ಥಿತಃ ಪುರುಷೋ ಧರ್ಮೇ ಧಾತ್ರಾ ಸೃಷ್ಟೇ ಯಥಾರ್ಥವತ್ |
ಆಶ್ರಮಾಣಾಂ ಸ ಸರ್ವೇಷಾಂ ಫಲಂ ಪ್ರಾಪ್ನೋತ್ಯನುತ್ತಮಮ್ ||26||
ಯಾವನು ತನಗೆ ಬ್ರಹ್ಮದೇವರು ವಿಧಾನ ಮಾಡಿದ ಧರ್ಮದಲ್ಲಿ ಯಥಾರ್ಥ- ವಾಗಿ ನಿಲ್ಲುತ್ತಾನೆಯೋ ಅವನು ಎಲ್ಲಾ ಆಶ್ರಮಗಳ ಉತ್ತಮವಾದ ಫಲವನ್ನು ಹೊಂದುತ್ತಾನೆ.
ಯಸ್ಮಿನ್ನ ನಶ್ಯಂತಿ ಗುಣಾಃ ಕೌಂತೇಯ ಪುರುಷೇ ಸದಾ |
ಆಶ್ರಮಸ್ಥಂ ತಮಪ್ಯಾಹುರ್ನರಶ್ರೇಷ್ಠಂ ಯುಧಿಷ್ಠಿರ ||27||
ಎಲೈ ಕೌಂತೇಯನೇ! ಯುಧಿಷ್ಠಿರನೇ! ಯಾವ ಪುರುಷನಲ್ಲಿ ಗುಣಗಳು ಎಂದಿಗೂ ನಾಶವನ್ನು ಹೊಂದುವುದಿಲ್ಲವೋ ಅಂತಹ ಶ್ರೇಷ್ಠಪುರುಷನನ್ನು ಆಶ್ರಮ- ವಾಸಿಯೆಂದೇ ಜ್ಞಾನಿಗಳು ಹೇಳುತ್ತಾರೆ.
ಸ್ಥಾನಮಾನಂ ವಯೋಮಾನಂ ಕುಲಮಾನಂ ತಥೈವ ಚ |
ಕುರ್ವನ್ ವಸತಿ ಸರ್ವೇಷು ಹ್ಯಾಶ್ರಮೇಷು ಯುಧಿಷ್ಠಿರ ||28||
ಎಲೈ ಯುಧಿಷ್ಠಿರನೇ! ಯಾವನು ಉನ್ನತಸ್ಥಾನಕ್ಕೆ, ವಯಸ್ಸಿಗೆ ಹಾಗೆಯೇ ಕುಲಕ್ಕೆ ಮರ್ಯಾದೆಯನ್ನು ಕೊಡುತ್ತಾನೆಯೋ ಅವನು ಸರ್ವಾಶ್ರಮಫಲವನ್ನು ಹೊಂದು- ತ್ತಾನೆ.
ದೇಶಧರ್ಮಾಂಶ್ಚ ಕೌಂತೇಯ ಕುಲಧರ್ಮಾಂಸ್ತಥೈವ ಚ |
ಪಾಲಯನ್ ಪುರುಷವ್ಯಾಘ್ರ ರಾಜಾ ಸರ್ವಾಶ್ರಮೀ ಭವೇತ್ ||29||
ಎಲೈ ಕೌಂತೇಯನೇ! ಪುರುಷವ್ಯಾಘ್ರನೇ! ದೇಶಧರ್ಮಗಳನ್ನು ಮತ್ತು ಕುಲ- ಧರ್ಮಗಳನ್ನು ಪಾಲಿಸುವ ರಾಜನು ಸರ್ವಾಶ್ರಮಫಲವನ್ನು ಹೊಂದುತ್ತಾನೆ.
ಕಾಲೇ ವಿಭೂತಿಂ ಭೂತಾನಾಮುಪಹಾರಾಂಸ್ತಥೈವ ಚ |
ಅರ್ಹಯನ್ ಪುರುಷವ್ಯಾಘ್ರ ಸಾಧೂನಾಮಾಶ್ರಮೇ ವಸೇತ್ ||30||
ಎಲೈ ಪುರುಷವ್ಯಾಘ್ರನೇ! ಯೋಗ್ಯವಾದ ಕಾಲದಲ್ಲಿ ಪ್ರಜೆಗಳಿಗೆ ಸಂಪತ್ತನ್ನೂ ಹಾಗೆಯೇ ಉಡುಗೊರೆಗಳನ್ನೂ ಕೊಟ್ಟು ಸನ್ಮಾನಿಸುವ ರಾಜನು ಯತ್ಯಾಶ್ರಮ- ಫಲವನ್ನು ಹೊಂದುತ್ತಾನೆ.
ದಶಧರ್ಮಗತಶ್ಚಾಪಿ ಯೋ ಧರ್ಮಂ ಪ್ರತ್ಯವೇಕ್ಷತೇ |
ಸರ್ವಲೋಕಸ್ಯ ಕೌಂತೇಯ ರಾಜಾ ಭವತಿ ಸೋಽಽಶ್ರಮೀ ||31||
ಎಲೈ ಕೌಂತೇಯನೇ! ಯಾವ ರಾಜನು ಸರ್ವಲೋಕಗಳ (ಸರ್ವಪ್ರಜೆಗಳ) ಮತ್ತು ವಿಶೇಷವಾಗಿ ವೃದ್ಧರಾದವರ ಧರ್ಮವನ್ನು ನೋಡಿಕೊಳ್ಳುತ್ತಾನೆಯೋ ಅವನು ಎಲ್ಲಾ ಆಶ್ರಮಗಳ ಫಲವನ್ನು ಪಡೆಯುತ್ತಾನೆ.
ಯೇ ಧರ್ಮಕುಶಲಾ ಲೋಕೇ ಧರ್ಮಂ ಕುರ್ವಂತಿ ಸಾಧವಃ |
ಪಾಲಿತಾ ಯಸ್ಯ ವಿಷಯೇ ಪಾದೋಽಂಶಸ್ತಸ್ಯ ಭೂಪತೇಃ ||32||
ಯಾವ ರಾಜನ ರಾಜ್ಯದಲ್ಲಿ ಧರ್ಮಕುಶಲರಾದ ಸಜ್ಜನರು ರಕ್ಷಿಸಲ್ಪಟ್ಟು, ಧರ್ಮಗಳನ್ನು ಆಚರಿಸುತ್ತಾರೆಯೋ ಆ ಧರ್ಮಗಳ ನಾಲ್ಕನೆಯ ಒಂದು ಭಾಗವು ರಾಜನಿಗೆ ಸೇರುತ್ತದೆ.
ಧರ್ಮಾರಾಮಾನ್ ಧರ್ಮಪರಾನ್ ಯೇ ನ ರಕ್ಷಂತಿ ಮಾನವಾನ್ |
ಪಾರ್ಥಿವಾಃ ಪುರುಷವ್ಯಾಘ್ರ ತೇಷಾಂ ಪಾಪಂ ಹರಂತಿ ತೇ ||33||
ಎಲೈ ಪುರುಷವ್ಯಾಘ್ರನೇ! ಯಾವ ರಾಜರು ಧರ್ಮದಲ್ಲಿಯೇ ಸಂತೋಷ- ಪಡುವ ಧರ್ಮಪರರಾದ ಪ್ರಜೆಗಳನ್ನು ರಕ್ಷಿಸುವುದಿಲ್ಲವೋ ಅಂತಹ ರಾಜರು ಆ ಪ್ರಜೆಗಳ ಪಾಪವನ್ನು ತಾವೇ ತೆಗೆದುಕೊಳ್ಳುತ್ತಾರೆ.
ಯೇ ಚ ರಕ್ಷಾಸಹಾಯಾಃ ಸ್ಯುಃ ಪಾರ್ಥಿವಾನಾಂ ಯುಧಿಷ್ಠಿರ |
ತೇ ಚೈವಾಂಶಹರಾಃ ಸರ್ವೇ ಧರ್ಮೇ ಪರಕೃತೇಽನಘ ||34||
ಎಲೈ ಯುಧಿಷ್ಠಿರನೇ! ಅನಘನೇ! ರಾಜನು ರಕ್ಷಣೆಯನ್ನು ಮಾಡುವಾಗ ಯಾರು ಅವನಿಗೆ ಸಹಾಯಕರಾಗಿರುತ್ತಾರೋ ಅವರೂ ಸಹ ಇನ್ನೊಬ್ಬರು ಮಾಡಿದ ಧರ್ಮದಲ್ಲಿ ಒಂದು ಭಾಗಕ್ಕೆ ಅರ್ಹರಾಗುತ್ತಾರೆ.
ಸರ್ವಾಶ್ರಮಪದೇ ಹ್ಯಾಹುರ್ಗಾರ್ಹಸ್ಥ್ಯಂ ದೀಪ್ತನಿರ್ಣಯಮ್ |

ಪಾವನಂ ಪುರುಷವ್ಯಾಘ್ರ ಯಂ ವಯಂ ಪರ್ಯುಪಾಸ್ಮಹೇ ॥35॥
ಎಲ್ಲೈ ಪುರುಷವ್ಯಾಘ್ರನೇ! ಎಲ್ಲ ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಪವಿತ್ರವಾ- ದುದು. ಮತ್ತು ಒಳ್ಳೆಯ ನಿರ್ಣಯಗಳನ್ನು ಹೊಂದಿರುವುದು ಎಂದು ಹೇಳುತ್ತಾರೆ. ನಾವು ಅಂತಹ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದೇವೆ.
ಆತ್ಮೋಪಮಸ್ತು ಭೂತೇಷು ಯೋ ವೈ ಭವತಿ ಮಾನವಃ |
ನ್ಯಸ್ತದಂಡೋ ಜಿತಕ್ರೋಧಃ ಸ ಪ್ರೇತ್ಯ ಲಭತೇ ಸುಖಮ್ ॥36॥
ಯಾವ ಮನುಷ್ಯನು ಎಲ್ಲ ಪ್ರಾಣಿಗಳನ್ನೂ ತನಗೆ ಸಮಾನವಾಗಿ ನೋಡಿ ಅವು- ಗಳಲ್ಲಿ ಕ್ರೋಧವನ್ನು ಮತ್ತು ದಂಡನೆಯನ್ನು ತ್ಯಜಿಸುತ್ತಾನೆಯೋ ಅವನು ಮರಣಾನಂತರದಲ್ಲಿ ಸುಖವನ್ನು ಹೊಂದುತ್ತಾನೆ.
ಧರ್ಮೋತ್ಥಿತಾ ಸತ್ತ್ವವೀರ್ಯಾ ಧರ್ಮಸೇತುವಟಾರಕಾ |
ತ್ಯಾಗವಾತಾಧ್ವಗಾ ಶೀಘ್ರಾ ನೌಸ್ತ್ವಾ ಸಂತಾರಯಿಷ್ಯತಿ ॥37॥
ಧರ್ಮದಿಂದ ಮೇಲೆ ತೇಲುವ, ಸದ್ಗುಣವೆಂಬ ಸಾಮರ್ಥ್ಯವುಳ್ಳ, ಧರ್ಮ- ಸೇತುವೆಂಬ ಹಗ್ಗಗಳಿಂದ ಬಿಗಿದ, ತ್ಯಾಗವೆಂಬ ವಾಯುಮಾರ್ಗದಲ್ಲಿ ಶೀಘ್ರವಾಗಿ ಸಂಚರಿಸುವ ನೌಕೆಯು ನಿನ್ನನ್ನು ಎಲ್ಲ ವಿಪತ್ತುಗಳಿಂದಲೂ ದಾಟಿಸುವುದು.
ಯದಾ ನಿವೃತ್ತಃ ಸರ್ವಸ್ಮಾತ್ ಕಾಮೋ ಯೋಽಸ್ಯ ಹೃದಿ ಸ್ಥಿತಃ |
ತದಾ ಭವತಿ ಸತ್ತ್ವಸ್ಥಸ್ತತೋ ಬ್ರಹ್ಮ ಸಮಶ್ನುತೇ ॥38॥
ಮನುಷ್ಯನ ಹೃದಯದಲ್ಲಿರುವ ಎಲ್ಲ ಆಸೆಗಳೂ ನಿವೃತ್ತವಾದ ಮೇಲೆ ಅವನು ಶುದ್ಧಾಂತಃಕರಣನಾಗುತ್ತಾನೆ. ಅನಂತರ ಬ್ರಹ್ಮಪ್ರಾಪ್ತಿಯನ್ನು ಪಡೆಯುತ್ತಾನೆ.
ಸುಪ್ರಸನ್ನಸ್ತು ಭಾವೇನ ಯೋಗೇನ ಚ ನರಾಧಿಪ |
ಧರ್ಮಂ ಪುರುಷಶಾರ್ದೂಲ ಪ್ರಾಪ್ಸ್ಯತೇ ಪಾಲನೇ ರತಃ ॥39॥
ಎಲ್ಲೈ ನರಾಧಿಪನೇ! ಪುರುಷಶಾರ್ದೂಲನೇ! ಯಾವ ರಾಜನು ಸುಪ್ರಸನ್ನವಾದ ಮನಸ್ಸಿನಿಂದ ಒಳ್ಳೆಯ ಉಪಾಯದಿಂದ ಪ್ರಜೆಗಳ ಪಾಲನೆಯಲ್ಲಿ ರತನಾಗಿರು- ತ್ತಾನೆಯೋ ಅವನು ಧರ್ಮವನ್ನು ಪಡೆಯುವನು.
ವೇದಾಧ್ಯಯನಶೀಲಾನಾಂ ವಿಪ್ರಾಣಾಂ ಸಾಧುಕರ್ಮಣಾಮ್ |
ಪಾಲನೇ ಯತ್ನಮಾತಿಷ್ಠ ಸರ್ವಲೋಕಸ್ಯ ಚಾನಘ ॥40॥
ಎಲ್ಲೈ ಅನಘನೇ! ವೇದಾಧ್ಯಯನಶೀಲರಾದ ಸತ್ಕರ್ಮವನ್ನು ಮಾಡುವ ವಿಪ್ರ- ರನ್ನು ಪಾಲನೆ ಮಾಡುವುದರಲ್ಲಿ ಮತ್ತು ಸರ್ವಪ್ರಜೆಗಳನ್ನು ಪಾಲನೆ ಮಾಡು- ವುದರಲ್ಲಿ ಪ್ರಯತ್ನವನ್ನು ಮಾಡುವವನಾಗು.
ವನೇ ಚರತಿ ಯೋ ಧರ್ಮಮಾಶ್ರಮೇಷು ಚ ಭಾರತ |
ರಕ್ಷಯಾ ತಚ್ಛತಗುಣಂ ಧರ್ಮಂ ಪ್ರಾಪ್ನೋತಿ ಪಾರ್ಥಿವಃ ॥41॥
ಎಲ್ಲೈ ಭಾರತನೇ! ಯಾವನು ಅರಣ್ಯದಲ್ಲಿ ವಾಸಮಾಡಿ ಆಶ್ರಮದಲ್ಲಿ ವಾಸ- ವನ್ನು ಮಾಡಿ ಯಾವ ಧರ್ಮವನ್ನು ಪಡೆಯುತ್ತಾನೆಯೋ ರಾಜನಾದವನು ಪ್ರಜೆಗಳ ರಕ್ಷಣೆಯನ್ನು ಮಾಡುವುದರಿಂದ ಅದರ ನೂರುಪಟ್ಟು ಧರ್ಮವನ್ನು ಪಡೆ- ಯುತ್ತಾನೆ.
ಏಷ ತೇ ವಿವಿಧೋ ಧರ್ಮಃ ಪಾಂಡವಶ್ರೇಷ್ಠ ಕೀರ್ತಿತಃ |
ಅನುತಿಷ್ಠ ತ್ವಮೇನಂ ವೈ ಪೂರ್ವೈರ್ದೃಷ್ಟಂ ಸನಾತನಮ್ ॥42॥
ಎಲ್ಲೈ ಪಾಂಡವಶ್ರೇಷ್ಠನೇ! ಈ ವಿವಿಧವಾದ ಧರ್ಮಗಳನ್ನು ನಿನಗೆ ಹೇಳಿದ್ದೇನೆ. ವೇದಪ್ರತಿಪಾದ್ಯವಾದ ಪೂರ್ವಜ್ಞಾನಿಗಳಿಂದ ದೃಷ್ಟವಾದ ಈ ಧರ್ಮಗಳನ್ನು ಅನು- ಷ್ಠಾನಮಾಡು.
ಚಾತುರಾಶ್ರಮ್ಯಮೇಕಾಗ್ರಃ ಚಾತುರ್ವರ್ಣ್ಯಂ ಚ ಪಾಂಡವ |
ಧರ್ಮಂ ಪುರುಷಶಾರ್ದೂಲ ಪ್ರಾಪ್ಸ್ಯಸೇ ಪಾಲನೇ ರತಃ ॥43॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತಷಷ್ಟಿತಮೋಽಧ್ಯಾಯಃ ॥67॥
ಎಲ್ಲೈ ಪಾಂಡವನೇ ಪುರುಷಶಾರ್ದೂಲನೇ! ಏಕಾಗ್ರತೆಯಿಂದ ಚತುರ್ವರ್ಣ- ಗಳನ್ನು, ಚತುರಾಶ್ರಮಗಳನ್ನು ಪಾಲಿಸುವುದರಲ್ಲಿ ನಿರತನಾಗಿ ನೀನು ಎಲ್ಲ ವರ್ಣ- ಗಳ ಮತ್ತು ಆಶ್ರಮಗಳ ಧರ್ಮಗಳ ಫಲವನ್ನು ಪಡೆಯುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 67ನೆಯ ಅಧ್ಯಾಯವು ಮುಗಿಯಿತು.
0

68. ಅರವತ್ತೆಂಟನೆಯ ಅಧ್ಯಾಯ
ರಾಜನ ಮಹತ್ವದ ಕಥನ
ಯುಧಿಷ್ಠಿರಃ
ಚಾತುರಾಶ್ರಮ್ಯ ಉಕ್ತೋಽತ್ರ ಚಾತುರ್ವರ್ಣ್ಯಸ್ತಥೈವ ಚ |
ರಾಷ್ಟ್ರಸ್ಯ ಯತ್ ಕೃತ್ಯತಮಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಚತುರಾಶ್ರಮಕ್ಕೆ ಸಂಬಂಧಿಸಿದ ಮತ್ತು ಚತುರ್ವರ್ಣಗಳಿಗೆ ಸಂಬಂಧಿಸಿದ ಧರ್ಮಗಳು ಹೇಳಲ್ಪಟ್ಟವು. ಎಲ್ಲೈ ಪಿತಾಮಹನೇ! ರಾಷ್ಟ್ರಕ್ಕೆ ಅವಶ್ಯಕ- ವಾಗಿ ಮಾಡಬೇಕಾದ ಕಾರ್ಯಗಳು ಯಾವುವೋ ಅವನ್ನು ನನಗೆ ಹೇಳು.
ಭೀಷ್ಮಃ
ರಾಷ್ಟ್ರಸ್ಯೈತತ್ ಕೃತ್ಯತಮಂ ರಾಜ್ಞ ಏವಾಭಿಷೇಚನಮ್ |

ಅನಿಂದ್ರಮಬಲಂ ರಾಷ್ಟ್ರಂ ದಸ್ಯವೋಽಭಿಭವಂತಿ ಚ ॥2॥
ಭೀಷ್ಮರು ರಾಷ್ಟ್ರಕ್ಕೆ ಅವಶ್ಯವಾಗಿ ಮಾಡಬೇಕಾದ ಕಾರ್ಯವೆಂದರೆ ರಾಜನ ಪಟ್ಟಾಭಿಷೇಕ. ನಾಯಕನಿಲ್ಲದ ದುರ್ಬಲವಾದ ರಾಷ್ಟ್ರವನ್ನು ದಸ್ಯುಗಳು ಕೊಳ್ಳೆ ಹೊಡೆಯುತ್ತಾರೆ.
ಅರಾಜಕೇಷು ರಾಷ್ಟ್ರೇಷು ಧರ್ಮೋ ನ ವ್ಯವತಿಷ್ಠತೇ |
ಪರಸ್ಪರಂ ಚ ಖಾದಂತಿ ಸರ್ವಥಾ ಧಿಗರಾಜಕಮ್ ॥3॥
ರಾಜನಿಲ್ಲದ ರಾಷ್ಟ್ರಗಳಲ್ಲಿ ಧರ್ಮವು ಉಳಿಯುವುದಿಲ್ಲ. ಪ್ರಜೆಗಳು ಒಬ್ಬರ- ನ್ನೊಬ್ಬರು ತಿನ್ನುತ್ತಾರೆ. ರಾಜನಿಲ್ಲದ ರಾಷ್ಟ್ರಕ್ಕೆ ಧಿಕ್ಕಾರವಿರಲಿ.
ಇಂದ್ರಮೇನಂ ಪ್ರವೃಣುತೇ ಯದ್ ರಾಜಾನಮಿತಿ ಶ್ರುತಿಃ |
ಯಥೈವೇಂದ್ರಸ್ತಥಾ ರಾಜಾ ಸಂಪೂಜ್ಯೋ ಭೂತಿಮಿಚ್ಛತಾ ॥4॥
ರಾಜನನ್ನು ಸ್ವೀಕರಿಸುವವನು ಇಂದ್ರನನ್ನೇ ಸ್ವೀಕರಿಸುತ್ತಾನೆ ಎಂದು ಶ್ರುತಿ ಇದೆ. ತನ್ನ ಕಲ್ಯಾಣವನ್ನು ಬಯಸುವವನು ಇಂದ್ರನನ್ನು ಪೂಜಿಸಿದಂತೆ ರಾಜನನ್ನು ಚೆನ್ನಾಗಿ ಪೂಜಿಸಬೇಕು.
ನಾರಾಜಕೇಷು ರಾಷ್ಟ್ರೇಷು ವಸ್ತವ್ಯಮಿತಿ ವೈದಿಕಮ್ |
ನಾರಾಜಕೇಷು ರಾಷ್ಟ್ರೇಷು ಹವ್ಯಮಗ್ನಿರ್ವಹತ್ಯಪಿ ॥5॥
ರಾಜನಿಲ್ಲದ ರಾಷ್ಟ್ರಗಳಲ್ಲಿ ವಾಸ ಮಾಡಬಾರದು ಎಂದು ವೇದದ ಆದೇಶ. ರಾಜನಿಲ್ಲದ ರಾಷ್ಟ್ರಗಳಲ್ಲಿ ಅಗ್ನಿಯು ಹವ್ಯವನ್ನು (ಹವಿಸ್ಸನ್ನು) ಸ್ವೀಕರಿಸಿ ದೇವತೆ- ಗಳಿಗೆ ತಲುಪಿಸುವುದಿಲ್ಲ.
ಅಥ ಚೇದಧಿವರ್ತೇತ ರಾಜ್ಯಾರ್ಥೀ ಬಲವತ್ತರಃ |
ಅರಾಜಕಾನಿ ರಾಷ್ಟ್ರಾಣಿ ಹತವೀರಾಣಿ ವಾ ಪುನಃ ॥6॥
ಪ್ರತ್ಯುದ್ಗಮ್ಯಾಭಿಪೂಜ್ಯಃ ಸ್ಯಾದೇತದತ್ರ ಸುಮಂತ್ರಿತಮ್ |
ನ ಹಿ ಪಾಪಾತ್ ಪಾಪತರಮಸ್ತಿ ಕಿಂಚಿದರಾಜಕಾತ್ ॥7॥
ರಾಜನಿಲ್ಲದ ವೀರರಿಲ್ಲದ ರಾಷ್ಟ್ರಗಳಲ್ಲಿ ಬಲಿಷ್ಠನಾದ ರಾಜ್ಯಾರ್ಥಿಯಾದ ಒಬ್ಬನು ಮೇಲೆದ್ದು ಅಧಿಕಾರವನ್ನು ವಹಿಸಿಕೊಂಡರೆ ಅವನನ್ನು ಪೂಜಿಸಬೇಕು. ಈ ವಿಷಯದಲ್ಲಿ ಇದು ಒಳ್ಳೆಯ ಆಲೋಚನೆಯಾಗುತ್ತದೆ. ಅರಾಜಕತೆಗಿಂತಲೂ ಹೆಚ್ಚಿನ ಪಾಪಕರವಾದುದು ಯಾವುದೂ ಇಲ್ಲ.
ಸ ಚೇತ್ ಸಮನುಪಶ್ಯೇತ ಸಮಗ್ರಂ ಕುಶಲಂ ಭವೇತ್ |
ಬಲವಾನ್ ಹಿ ಪ್ರಕುಪಿತಃ ಕುರ್ಯಾನ್ನಿಃಶೇಷತಾಮಪಿ ॥8॥
ಅವನು ಒಳ್ಳೆಯ ದೃಷ್ಟಿಯಿಂದ ನೋಡಿಕೊಂಡರೆ ಸಮಗ್ರವಾದ ಕುಶಲವಾ- ದೀತು. ಬಲಿಷ್ಠನಾಗಿ ಕೋಪಗೊಂಡರೆ ಎಲ್ಲವನ್ನೂ ನಿಃಶೇಷವಾಗಿ ನಾಶವನ್ನು ಮಾಡಿಯಾನು.
ಭೂಯಾಂಸಂ ಲಭತೇ ಕ್ಲೇಶಂ ಯಾ ಗೌರ್ಭವತಿ ದುರ್ದುಹಾ |
ಸುದುಹಾ ಯಾ ತು ಭವತಿ ನೈವ ತಾಂ ಕ್ಲೇಶಯಂತ್ಯುತ ॥9॥
ಹಾಲನ್ನು ಕರೆಯುವುದಕ್ಕೆ ತೊಂದರೆಯನ್ನು ಕೊಡುವ ಧೇನುವು ಬಹಳ ಕ್ಲೇಶ- ಗಳಿಗೆ ಗುರಿಯಾಗುತ್ತದೆ. ಸುಲಭವಾಗಿ ಹಾಲನ್ನು ಕೊಡುವ ಧೇನುವನ್ನು ಯಾರೂ ಕ್ಲೇಶಕ್ಕೆ ಒಳಪಡಿಸುವುದಿಲ್ಲ.
ಯದತಪ್ತಂ ಪ್ರಣಮತಿ ನ ತತ್ ಸಂತಾಪಯತ್ಯುತ |
ಯಚ್ಚ ಸ್ವಯಂ ನತಂ ದಾರು ನ ತತ್ ಸನ್ನಾಮಯಂತ್ಯಪಿ ॥10॥
ಅಗ್ನಿಯಲ್ಲಿ ಕಾಯಿಸದೆ ಬಾಗುವುದನ್ನು ಯಾರೂ ಕಾಯಿಸುವುದಿಲ್ಲ. ತಾನಾ- ಗಿಯೇ ಬಾಗಿದ ಮರವನ್ನು (ಬೆತ್ತವನ್ನು) ಯಾರೂ ಬಗ್ಗಿಸುವುದೂ ಇಲ್ಲ.
ಏತಯೋಪಮಯಾ ಧೀರಃ ಸನ್ನಮೇತ ಬಲೀಯಸೇ |
ಇಂದ್ರಾಯ ಸ ಪ್ರಣಮತೇ ನಮತೇ ಯೋ ಬಲೀಯಸೇ ॥11॥
ಧೀರನಾದವನು ಈ ದೃಷ್ಟಾಂತದಿಂದ ಬಲಿಷ್ಠನಾದವನಿಗೆ ಬಾಗಬೇಕು. ಯಾವನು ಬಲಿಷ್ಠನಾದವನಿಗೆ ನಮಸ್ಕಾರವನ್ನು ಮಾಡುತ್ತಾನೆಯೋ ಅವನು ಇಂದ್ರ- ನಿಗೆ ನಮಸ್ಕಾರವನ್ನು ಮಾಡುತ್ತಾನೆ.
ತಸ್ಮಾದ್ ರಾಜೈವ ಕರ್ತವ್ಯಃ ಸತತಂ ಭೂತಿಮಿಚ್ಛತಾ |
ನ ಧನಾರ್ಥೋ ನ ದಾರಾರ್ಥಸ್ತೇಷಾಂ ಯೇಷಾಮರಾಜಕಮ್ ॥12॥
ಆದ್ದರಿಂದ ತನ್ನ ಸತತವಾದ ಕಲ್ಯಾಣವನ್ನು ಅಪೇಕ್ಷಿಸುವವನು ಮೊದಲು ರಾಜನನ್ನು ಮಾಡಬೇಕು. ರಾಜನಿಲ್ಲದ ರಾಷ್ಟ್ರದಲ್ಲಿ ಧನದಿಂದಲಾಗಲೀ, ಪತ್ನಿ- ಯಿಂದಾಗಲೀ ಯಾವ ಪ್ರಯೋಜನವೂ ಇಲ್ಲ.
ಪ್ರೀಯತೇ ಹಿ ಹರನ್ ಪಾಪಃ ಪರವಿತ್ತಮರಾಜಕೇ |
ಯದಾಸ್ಯ ಉದ್ಧರಂತ್ಯನ್ಯೇ ತದಾ ರಾಜಾನಮಿಚ್ಛತಿ ॥13॥
ಅರಾಜಕವಾದ ರಾಷ್ಟ್ರದಲ್ಲಿ ಪಾಪಿಯಾದವನು ಇನ್ನೊಬ್ಬರ ಧನವನ್ನು ಅಪ- ಹರಿಸಿ ಸಂತೋಷಪಡುತ್ತಾನೆ. ಬೇರೆಯವರು ಅವನ ಧನವನ್ನು ಅಪಹರಿಸಿದಾಗ ಅವನೂ ರಾಜನನ್ನು ಬಯಸುತ್ತಾನೆ.
ಪಾಪಾ ಅಪಿ ತದಾ ಕ್ಷೇಮಂ ನ ಲಭಂತೇ ಕದಾಚನ |
ಏಕಸ್ಯ ಹಿ ದ್ವೌ ಹರತೋ ದ್ವಯೋಶ್ಚ ಬಹವೋಽಪರೇ ॥14॥
ರಾಜನಿಲ್ಲದಿದ್ದರೆ ಪಾಪಿಗಳಿಗೂ ಸಹ ಎಂದೂ ಕ್ಷೇಮವುಂಟಾಗುವುದಿಲ್ಲ. ಒಬ್ಬನ ಹಣವನ್ನು ಇಬ್ಬರು ಕದಿಯುತ್ತಾರೆ. ಇಬ್ಬರ ಹಣವನ್ನು ಬೇರೆ ಅನೇಕರು ಕದಿಯುತ್ತಾರೆ.

ಅದಾಸಃ ಕ್ರಿಯತೇ ದಾಸೋ ಹ್ರಿಯಂತೇ ಚ ಬಲಾತ್ ಸ್ತ್ರಿಯಃ |
ಏತಸ್ಮಾತ್ ಕಾರಣಾದ್ ದೇವಾಃ ಪ್ರಜಾಪಾಲಾನ್ ಪ್ರಚಕ್ರಿರೇ ॥15॥
ದಾಸನಲ್ಲದವನನ್ನು ದಾಸನನ್ನಾಗಿ ಮಾಡುತ್ತಾರೆ. ಬಲಾತ್ಕಾರದಿಂದ ಸ್ತ್ರೀಯರನ್ನು ಅಪಹರಿಸುತ್ತಾರೆ. ಈ ಕಾರಣದಿಂದ ದೇವತೆಗಳು ಪ್ರಜಾಪಾಲಕನಾದ ರಾಜನನ್ನು ಸೃಷ್ಟಿಸಿದರು.
ರಾಜಾ ಚೇನ್ನ ಭವೇಲ್ಲೋಕೇ ಪೃಥಿವ್ಯಾಂ ದಂಡಧಾರಕಃ |
ಶೂಲೇ ಮತ್ಸ್ಯಾನಿವಾಪಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥16॥
ಲೋಕದಲ್ಲಿ ದಂಡಧಾರಕನಾದ ರಾಜನಿಲ್ಲದಿದ್ದರೆ ಶೂಲದಲ್ಲಿ ಪೋಣಿಸಿದ ಮೀನುಗಳಂತೆ ಬಲಿಷ್ಠರಾದವರು ದುರ್ಬಲರಾದವರನ್ನು ಬೇಯಿಸಿಬಿಡುತ್ತಿದ್ದರು.
ಅರಾಜಕಾಃ ಪ್ರಜಾಃ ಪೂರ್ವಂ ವಿನೇಶುರಿತಿ ನಃ ಶ್ರುತಮ್ |
ಪರಸ್ಪರಂ ಭಕ್ಷಯಂತೋ ಮತ್ಸ್ಯಾ ಇವ ಜಲೇ ಕೃಶಾನ್ ॥17॥
ಅರಾಜಕರಾದ ಪ್ರಜೆಗಳು ಒಬ್ಬರನ್ನೊಬ್ಬರು ನೀರಿನಲ್ಲಿ ಸಣ್ಣಮೀನುಗಳನ್ನು ದೊಡ್ಡಮೀನುಗಳು ನುಂಗಿದಂತೆ ಹಿಂದೆ ಪರಸ್ಪರವಾಗಿ ಭಕ್ಷಿಸುತ್ತಾ ವಿನಾಶವನ್ನು ಹೊಂದಿದರು ಎಂದು ನಾವು ಕೇಳಿದ್ದೇವೆ.
ತಾಃ ಸಮೇತ್ಯ ತತಶ್ಚಕ್ರುಃ ಸಮಯಾನಿತಿ ನಃ ಶ್ರುತಮ್ |
ವಾಕ್ಕ್ರೂರೋ ದಂಡಪರುಷೋ ಯಶ್ಚ ಸ್ಯಾತ್ ಪಾರದಾರಿಕಃ |
ಯಶ್ಚ ನಃ ಸ್ವಮಥಾದದ್ಯಾತ್ ತ್ಯಾಜ್ಯಾ ನಸ್ತಾದೃಶಾ ಇತಿ ॥18॥
ಆಗ ಅವರೆಲ್ಲರೂ ಸೇರಿ ಒಂದು ಒಪ್ಪಂದವನ್ನು ಮಾಡಿಕೊಂಡರು ಎಂದು ಕೇಳಿದ್ದೇವೆ. ಯಾವನು ಕ್ರೂರವಾದ ಮಾತನ್ನಾಡಿ ಕ್ರೂರವಾದ ಶಿಕ್ಷೆಯನ್ನು ವಿಧಿ- ಸುತ್ತಾ, ಪರಸ್ತ್ರೀಯರಲ್ಲಿ ನಿರತನಾಗಿರುತ್ತಾನೆಯೋ, ಯಾವನು ನಮ್ಮಧನವನ್ನು ಅಪಹರಿಸುತ್ತಾನೆಯೋ ಅಂತಹವರನ್ನು ನಾವು ಪರಿತ್ಯಜಿಸಬೇಕು ಎಂದು ಒಪ್ಪಂದ- ವನ್ನು ಮಾಡಿಕೊಂಡರು.
ವಿಶ್ವಾಸನಾರ್ಥಂ ವರ್ಣಾನಾಂ ಸರ್ವೇಷಾಮವಿಶೇಷತಃ |
ತಾಸ್ತಥಾ ಸಮಯಂ ಕೃತ್ವಾ ಸಮಯೇನಾವತಸ್ಥಿರೇ ॥19॥
ಎಲ್ಲ ವರ್ಣದವರಿಗೂ ಸಮಾನವಾಗಿ ವಿಶ್ವಾಸವನ್ನು ಮೂಡಿಸುವುದಕ್ಕಾಗಿ ಅವರು ಅಂತಹ ಒಪ್ಪಂದವನ್ನು ಮಾಡಿಕೊಂಡು ಅದರಂತೆ ನಡೆದುಕೊಂಡರು.
ಸಹಿತಾಸ್ತಾಸ್ತದಾ ಜಗ್ಮುರಸುಖಾರ್ತಾಃ ಪಿತಾಮಹಮ್ |
ಅನೀಶ್ವರಾ ವಿನಶ್ಯಾಮೋ ಭಗವನ್ನೀಶ್ವರಂ ದಿಶ ॥20॥
ಯಂ ಪೂಜಯೇಮ ಸಂಭೂಯ ಯಶ್ಚ ನಃ ಪರಿಪಾಲಯೇತ್ |
ತಾಭ್ಯೋ ಮನುಂ ವ್ಯಾದಿದೇಶ ಮನುರ್ನಾಭಿನನಂದ ತಾಃ ॥21॥
ಅವರೆಲ್ಲರೂ ಆಗ ದುಃಖಭರಿತರಾಗಿ ಪಿತಾಮಹರಾದ ಬ್ರಹ್ಮದೇವರ ಬಳಿಗೆ ಒಟ್ಟಿಗೆ ಹೋಗಿ `ಪೂಜ್ಯನೇ! ಪ್ರಭುವಿಲ್ಲದೇ ನಾವು ವಿನಾಶವನ್ನು ಹೊಂದಿದ್ದೇವೆ. ನಾವೆಲ್ಲರೂ ಯಾರನ್ನು ಪೂಜಿಸಬಹುದೋ ಯಾರು ನಮ್ಮನ್ನು ರಕ್ಷಿಸುತ್ತಾನೆಯೋ ಅಂತಹ ಒಬ್ಬ ಪ್ರಭುವನ್ನು ಕೊಡು' ಎಂದು ಕೇಳಿದರು. ಬ್ರಹ್ಮದೇವರು ಅವರಿಗೆ ಮನುವನ್ನು ನೀಡಿದರು. ಆದರೆ ಮನುವು ಆ ಪ್ರಜೆಗಳನ್ನು ನೋಡಿ ಸಂತೋಷ ಪಡಲಿಲ್ಲ.
ಮನುಃ
ಬಿಭೇಮಿ ಕರ್ಮಣಃ ಕ್ರೂರಾದ್ ರಾಜ್ಯಂ ಹಿ ಭೃಶದುಷ್ಕರಮ್ |
ವಿಶೇಷತೋ ಮನುಷ್ಯೇಷು ಮಿಥ್ಯಾವೃತ್ತಿಷು ನಿತ್ಯದಾ ॥22॥
ಮನು ಈ ಕ್ರೂರಕರ್ಮಕ್ಕೆ ನಾನು ಹೆದರುತ್ತೇನೆ. ರಾಜ್ಯಪಾಲನೆಯು ಬಹಳ ಕಷ್ಟಕರವಾದುದು. ಅದರಲ್ಲಿಯೂ ನಿತ್ಯವೂ ಮಿಥ್ಯಾಚಾರಗಳನ್ನುಳ್ಳ ಮನುಷ್ಯರನ್ನು ಪಾಲಿಸುವುದು ಇನ್ನೂ ಕಷ್ಟವಾದುದು.
ಭೀಷ್ಮಃ
ತಮಬ್ರುವನ್ ಪ್ರಜಾ ಮಾ ಭೈಃ ಕರ್ಮಣ್ಯೈನೋ ಗಮಿಷ್ಯತಿ |
ಪಶೂನಾಮಧಿಪಂಚಾಶದ್ ಹಿರಣ್ಯಸ್ಯ ತಥೈವ ಚ |
ಧಾನ್ಯಸ್ಯ ದಶಮಂ ಭಾಗಂ ದಾಸ್ಯಾಮಃ ಕೋಶವರ್ಧನಮ್ ॥23॥
ಭೀಷ್ಮ ಆಗ ಪ್ರಜೆಗಳು ಅವನನ್ನು ಕುರಿತು `ನೀನು ಹೆದರಬೇಡ. ನಿನ್ನ ಕರ್ಮದಿಂದ ನಿನಗೆ ಪಾಪವು ಪರಿಹಾರವಾಗುವುದು. ನಿನ್ನ ಕೋಶವನ್ನು ಅಭಿವೃದ್ಧಿ- ಪಡಿಸುವುದಕ್ಕಾಗಿ ನಾವು ನಮ್ಮ ಪಶುಗಳ ಆದಾಯದ ಮತ್ತು ಹಿರಣ್ಯದ ಐವತ್ತನೆಯ ಒಂದು ಭಾಗವನ್ನು ಮತ್ತು ಧಾನ್ಯಗಳ ಹತ್ತನೆಯ ಒಂದು ಭಾಗವನ್ನು ನಿನಗೆ ಕೊಡುವೆವು.
ಕನ್ಯಾಂ ಮುಖ್ಯಾಂ ಚಾರುರೂಪಾಂ ವಿವಾಹೇಷೂದ್ಯತಾಸು ಚ |
ಮುಖ್ಯೇನ ಶಸ್ತ್ರಪತ್ರೇಣ ಯೇ ಮನುಷ್ಯಾಃ ಪ್ರಧಾನತಃ |
ಭವಂತಂ ತೇಽನುಯಾಸ್ಯಂತಿ ಮಹೇಂದ್ರಮಿವ ದೇವತಾಃ ॥24॥
ಶ್ರೇಷ್ಠಳಾದ ಸುಂದರಿಯಾದ ಕನ್ಯೆಯನ್ನು ವಿವಾಹ ಮಾಡಿಕೊಡುವೆವು. ಶ್ರೇಷ್ಠ- ವಾದ ಶಸ್ತ್ರಗಳನ್ನು ಮತ್ತು ವಾಹನಗಳನ್ನು ಹೊಂದಿದ ಪ್ರಧಾನರಾದ ಮನುಷ್ಯರು ದೇವತೆಗಳು ಮಹೇಂದ್ರನನ್ನು ಹಿಂಬಾಲಿಸುವಂತೆ ನಿನ್ನನ್ನು ಹಿಂಬಾಲಿಸುವರು.
ಸ ತ್ವಂ ಜಾತಬಲೋ ರಾಜನ್ ದುಷ್ಪ್ರಧರ್ಷಃ ಪ್ರತಾಪವಾನ್ |
ಸುಖೇ ಧಾಸ್ಯತಿ ನಃ ಸರ್ವಾನ್ ಕುಬೇರ ಇವ ನೈರ್ಋತಾನ್ ॥25॥
ಎಲೈ ರಾಜನೇ! ನೀನು ಬಲವನ್ನು ಹೊಂದಿದವನಾಗಿ, ಪ್ರತಾಪಶಾಲಿಯಾಗಿ, ಸೋಲಿಸಲು ಅಸಾಧ್ಯನಾಗಿ, ಕುಬೇರನು ನೈರ್ಋತರನ್ನು

ರಕ್ಷಿಸಿದಂತೆ ನಮ್ಮೆಲ್ಲರನ್ನೂ ಸುಖದಲ್ಲಿ ಇಡುವವನಾಗಬೇಕು.
ಯಂ ಚ ಧರ್ಮಂ ಚರಿಷ್ಯಂತಿ ಪ್ರಜಾ ರಾಜ್ಞಾ ಸುರಕ್ಷಿತಾಃ |
ಚತುರ್ಥಂ ತಸ್ಯ ಧರ್ಮಸ್ಯ ತ್ವತ್ಸಂಸ್ಥಂ ನೋ ಭವಿಷ್ಯತಿ ॥26॥
ರಾಜನಿಂದ ಸುರಕ್ಷಿತರಾದ ಪ್ರಜೆಗಳಾದ ನಾವು ಯಾವ ಧರ್ಮವನ್ನು ಆಚ- ರಿಸುತ್ತೇವೆಯೋ ಆ ಧರ್ಮದ ನಾಲ್ಕನೆಯ ಒಂದು ಭಾಗವು ನಿನಗೆ ಸೇರುವುದು.
ತೇನ ಧರ್ಮೇಣ ಮಹತಾ ಸುಖಲುಬ್ಧೇನ ಭಾವಿತಃ |
ಪಾಹ್ಯಸ್ಮಾನ್ ಸರ್ವತೋ ರಾಜನ್ ದೇವಾನಿವ ಶತಕ್ರತುಃ ॥27॥
ಎಲೈ ರಾಜನೇ! ಆ ದೊಡ್ಡ ಸುಖಪ್ರದವಾದ ಧರ್ಮದಿಂದ ಪರಿಶುದ್ಧನಾಗಿ ಇಂದ್ರನು ದೇವತೆಗಳನ್ನು ರಕ್ಷಿಸಿದಂತೆ ನಮ್ಮನ್ನು ಎಲ್ಲ ವಿಪತ್ತುಗಳಿಂದಲೂ ರಕ್ಷಿಸು- ವವನಾಗು.
ವಿಜಯಾಯಾಶು ನಿರ್ಯಾಹಿ ಪ್ರತಪನ್ ರಶ್ಮಿಮಾನಿವ |
ಮಾನಂ ವಿಧಮ ಶತ್ರೂಣಾಂ ಧರ್ಮೋ ಜಯತು ನಸ್ತದಾ ॥28॥
ತನ್ನ ಕಿರಣಗಳಿಂದ ಸುಡುವ ಸೂರ್ಯನಂತೆ ನೀನು ಶತ್ರುಗಳನ್ನು ಜಯಿಸಲು ಶೀಘ್ರವಾಗಿ ದಿಗ್ವಿಜಯಕ್ಕೆ ಹೊರಡುವವನಾಗು. ಶತ್ರುಗಳ ಅಹಂಕಾರವನ್ನು ನಾಶ- ಪಡಿಸು. ನಮ್ಮ ಧರ್ಮಕ್ಕೆ ಆಗ ಜಯವುಂಟಾಗಲಿ. (ಎಂದು ಹೇಳಿದರು)
ಸ ನಿರ್ಯಯೌ ಮಹಾತೇಜಾ ಬಲೇನ ಮಹತಾ ವೃತಃ |
ಮಹಾಭಿಜನಸಂಪನ್ನಸ್ತೇಜಸಾ ಪ್ರಜ್ವಲನ್ನಿವ ॥29॥
ಆಗ ಮಹಾತೇಜಸ್ವಿಯಾದ ಮನುವು ತೇಜಸ್ಸಿನಿಂದ ಬೆಳಗುವವನಂತೆ ಮಹಾ- ಭಿಜನಸಂಪನ್ನನಾಗಿ ದೊಡ್ಡ ಸೇನೆಯಿಂದ ಕೂಡಿಕೊಂಡು ವಿಜಯಕ್ಕೆ ಹೊರಟನು.
ತಸ್ಯ ತಾಂ ಮಹಿಮಾಂ ದೃಷ್ಟ್ವಾ ಮಹೇಂದ್ರಸ್ಯೇವ ದೇವತಾಃ |
ಅಪತತ್ರಸಿರೇ ಸರ್ವೇ ಸ್ವಧರ್ಮೇ ಚ ದಧುರ್ಮನಃ ॥30॥
ಮಹೇಂದ್ರನ ಮಹಿಮೆಯನ್ನು ನೋಡಿದ ದೇವತೆಗಳಂತೆ ಅವನ ಮಹಿಮೆ- ಯನ್ನು ನೋಡಿದ ಪ್ರಜೆಗಳೆಲ್ಲರೂ ಹೆದರಿ ತಮ್ಮ ತಮ್ಮ ಧರ್ಮಗಳಲ್ಲಿ ನಿರತರಾ- ದರು.
ತತೋ ಮಹೀಂ ಪರಿಯಯೌ ಪರ್ಜನ್ಯ ಇವ ವೃಷ್ಟಿಮಾನ್ |
ಶಮಯನ್ ಸರ್ವತಃ ಪಾಪಾನ್ ಸ್ವಕರ್ಮಸು ಚ ಯೋಜಯನ್ ॥31॥
ಆಗ ಮನುವು ಎಲ್ಲ ಕಡೆಗಳಲ್ಲಿಯೂ ಪಾಪಗಳನ್ನು ಶಾಂತಗೊಳಿಸುತ್ತಾ, ಅವರವರ ಕರ್ಮಗಳಲ್ಲಿ ನಿಯೋಜಿಸುತ್ತಾ ಮಳೆಯನ್ನು ಕರೆಯುವ ಪರ್ಜನ್ಯನಂತೆ ಭೂಮಿಯಲ್ಲಿ ಸಂಚರಿಸಿದನು.
ಏವಂ ಯೇ ಭೂತಿಮಿಚ್ಛೇಯುಃ ಪೃಥಿವ್ಯಾಂ ಮಾನವಾಃ ಕ್ವಚಿತ್ |
ಕುರ್ಯೂರ್ ರಾಜಾನಮೇವಾಗ್ರೇ ಪ್ರಜಾನುಗ್ರಹಕಾರಣಾತ್ ॥32॥
ಹೀಗೆ ತಮ್ಮ ಕಲ್ಯಾಣವನ್ನು ಬಯಸುವ ಮಾನವರು ಪ್ರಜೆಗಳಿಗೆ ಅನುಗ್ರಹವನ್ನು ಸಂಪಾದಿಸುವ ದೃಷ್ಟಿಯಿಂದ ಮೊದಲು ರಾಜನನ್ನೇ ಮಾಡಬೇಕು.
ನಮಸ್യೇಯುಶ್ಚ ತಂ ಭಕ್ತ್ಯಾ ಶಿಷ್ಯಾ ಇವ ಗುರುಂ ಸದಾ |
ದೇವಾ ಇವ ಸಹಸ್ರಾಕ್ಷಂ ಪ್ರಜಾ ರಾಜಾನಮಂತಿಕೇ ॥33॥
ಶಿಷ್ಯರು ಗುರುವಿಗೆ ಸದಾ ನಮಸ್ಕಾರ ಮಾಡುವಂತೆ ದೇವತೆಗಳು ಇಂದ್ರನಿಗೆ ನಮಸ್ಕಾರ ಮಾಡುವಂತೆ ಪ್ರಜೆಗಳು ಸಮೀಪದಿಂದ ಯಾವಾಗಲೂ ರಾಜನಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡಬೇಕು.
ಸತ್ಕೃತಂ ಸ್ವಜನೇನೇಹ ಪರೋಽಪಿ ಬಹು ಮನ್ಯತೇ |
ಸ್ವಜನೇನ ತ್ವವಜ್ಞಾತಂ ಪರೇ ಪರಿಭವಂತ್ಯುತ ॥34॥
ತನ್ನ ಜನರಿಂದ ಸತ್ಕೃತನಾದವನನ್ನು ಇನ್ನೊಬ್ಬನೂ ಗೌರವಿಸುತ್ತಾನೆ. ತನ್ನ ಜನ- ರಿಂದ ತಿರಸ್ಕರಿಸಲ್ಪಟ್ಟರೆ ಬೇರೆಯವರೂ ಅವನನ್ನು ಅವಮಾನಗೊಳಿಸುತ್ತಾರೆ.
ರಾಜ್ಞಃ ಪರೈಃ ಪರಿಭವಃ ಸರ್ವೇಷಾಮಸುಖಾವಹಃ |
ತಸ್ಮಾಚ್ಛಸ್ತ್ರಂ ಚ ಪತ್ರಂ ಚ ವಾಸಾಂಸ್ಯಾಭರಣಾನಿ ಚ ॥35॥
ಭೋಜನಾನ್ಯಥ ಪಾನಾನಿ ರಾಜ್ಞೇ ದದ್ಯುರ್ಗೃಹಾಣಿ ಚ |
ಆಸನಾನಿ ಚ ಶಯ್ಯಾಶ್ಚ ಸರ್ವೋಪಕರಣಾನಿ ಚ ॥36॥
ಬೇರೆಯವರಿಂದ ರಾಜನ ಪರಿಭವವು ಎಲ್ಲರಿಗೂ ದುಃಖವನ್ನು ತರುವಂತ- ಹದು. ಆದ್ದರಿಂದ ರಾಜನಿಗೆ ಆಯುಧಗಳನ್ನು, ವಾಹನಗಳನ್ನು, ಶ್ರೇಷ್ಠವಾದ ವಸತ್ರ- ಭರಣಗಳನ್ನು, ಭೋಜನಪಾನಗಳನ್ನು, ಗೃಹಗಳನ್ನು, ಆಸನಗಳನ್ನು, ಶಯನ- ಗಳನ್ನು, ಸರ್ವೋಪಕರಣಗಳನ್ನು ಕೊಡಬೇಕು.
ಗುಪ್ತಾತ್ಮಾ ಸ್ಯಾದ್ ದುರಾಧರ್ಷಃ ಸ್ಮಿತಪೂರ್ವಾಭಿಭಾಷಿತಾ |
ಆಭಾಷಿತಶ್ಚ ಮಧುರಂ ಪ್ರತಿಭಾಷೇತ ಮಾನವಾನ್ ॥37॥
ರಾಜನು ಯಾವಾಗಲೂ ತಾನು ರಕ್ಷಿತನಾಗಿದ್ದು, ಶತ್ರುಗಳಿಂದ ಸೋಲಿಸಲು ಅಸಾಧ್ಯನಾಗಿ, ಮಂದಹಾಸಪೂರ್ವಕವಾಗಿ ಮಾತನಾಡಬೇಕು. ಪ್ರಜೆಗಳು ಮಾತ- ನಾಡಿಸಿದಾಗ ಮಧುರವಾಗಿ ಅವರಿಗೆ ಉತ್ತರವನ್ನು ಕೊಡಬೇಕು.
ಕೃತಜ್ಞೋ ದೃಢಭಕ್ತಿಃ ಸ್ಯಾತ್ ಸಂವಿಭಾಗೀ ಜಿತೇಂದ್ರಿಯಃ |
ಈಕ್ಷಿತಃ ಪ್ರತಿವೀಕ್ಷೇತ ಮೃದು ಚರ್ಜು ಚ ವಲ್ಗು ಚ ॥38॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಷಷ್ಟಿತಮೋಽಧ್ಯಾಯಃ ॥68॥
ರಾಜನು ಕೃತಜ್ಞನೂ, ದೃಢವಾದ ಇಷ್ಟವುಳ್ಳವನೂ, ಜಿತೇಂದ್ರಿಯನೂ, ತನ್ನ ಸಂಪತ್ತನ್ನು ಹಂಚುವವನೂ ಆಗಿರಬೇಕು. ತನ್ನನ್ನು ನೋಡುವವರನ್ನು ಮೃದುವಾಗಿ ನೇರವಾಗಿ ಮತ್ತು ಸುಂದರವಾಗಿ ಪ್ರತಿಯಾಗಿ ನೋಡಬೇಕು.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 68ನೆಯ ಅಧ್ಯಾಯವು ಮುಗಿಯಿತು.
0
69. ಅರವತ್ತೊಂಬತ್ತನೆಯ ಅಧ್ಯಾಯ
ಬೃಹಸ್ಪತಿ ಮತ್ತು ವಸುಮನಸರ ಸಂವಾದದಲ್ಲಿ ರಾಜಧರ್ಮಗಳ ವರ್ಣನೆ
ಯುಧಿಷ್ಠಿರಃ
ಕಿಮಾಹುರ್ದೈವತಂ ವಿಪ್ರಾ ರಾಜಾನಂ ಭರತರ್ಷಭ |
ಮನುಷ್ಯಾಣಾಮಧಿಪತಿಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ! ಪಿತಾಮಹನೇ! ಮನುಷ್ಯರ ಅಧಿಪತಿ- ಯಾದ ರಾಜನನ್ನು ಬ್ರಾಹ್ಮಣರು ಏಕೆ ದೇವತೆ ಎಂಬುದಾಗಿ ಹೇಳುತ್ತಾರೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತಿಂ ವಸುಮನಾ ಯಥಾ ಪಪ್ರಚ್ಛ ಭಾರತ ॥2॥
ಭೀಷ್ಮರು ಎಲೈ ಭಾರತನೇ! ಈ ವಿಷಯದಲ್ಲಿಯೂ ಸಹ ವಸುಮನನು ಬೃಹಸ್ಪತಿಗಳನ್ನು ಪ್ರಶ್ನೆ ಮಾಡಿದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ರಾಜಾ ವಸುಮನಾ ನಾಮ ಕೌಸಲ್ಯೋ ಧೀಮತಾಂವರಃ |
ಮಹರ್ಷಿಂ ಪರಿಪಪ್ರಚ್ಛ ಕೃತಪ್ರಜ್ಞೋ(ಜ್ಞಂ) ಬೃಹಸ್ಪತಿಮ್ ॥3॥
ಕೋಸಲದೇಶದ ವಸುಮನನೆಂಬ ಮೇಧಾವಿಗಳಲ್ಲಿ ಶ್ರೇಷ್ಠನಾದ ರಾಜನು ಕೃತಪ್ರಜ್ಞರಾದ ಮಹರ್ಷಿಗಳಾದ ಬೃಹಸ್ಪತಿಗಳನ್ನು ಕುರಿತು ಪ್ರಶ್ನೆ ಮಾಡಿದನು.
ಸರ್ವಂ ವೈನಯಿಕಂ ಕೃತ್ವಾ ವಿನಯಜ್ಞೋ ಬೃಹಸ್ಪತೇಃ |
ದಕ್ಷಿಣಾನಂತರೋ ಭೂತ್ವಾ ಪ್ರಣಮ್ಯ ವಿಧಿಪೂರ್ವಕಮ್ ॥4॥
ವಿಧಿಂ ಪಪ್ರಚ್ಛ ರಾಜ್ಯಸ್ಯ ಸರ್ವಭೂತಹಿತೇ ರತಃ |
ಪ್ರಜಾನಾಂ ಹಿತಮನ್ವಿಚ್ಛನ್ ಧರ್ಮಮೂಲಂ ವಿಶಾಂಪತೇ ॥5॥
ಎಲೈ ರಾಜನೇ! ವಿನಯವನ್ನು ತೋರಿಸುವ ರೀತಿಯನ್ನು ತಿಳಿದ ಅವನು ಬೃಹಸ್ಪತಿಗಳಿಗೆ ವಿನಯವನ್ನು ತೋರಿಸಿ, ಬಹುದಕ್ಷಿಣೆಯನ್ನು ನೀಡಿ, ವಿಧಿಪೂರ್ವಕ- ವಾಗಿ ನಮಸ್ಕಾರವನ್ನು ಮಾಡಿ, ಪ್ರಜೆಗಳ ಧರ್ಮಮೂಲಕವಾದ ಹಿತವನ್ನು ಬಯಸಿ, ಸರ್ವಭೂತಹಿತದಲ್ಲಿ ರತನಾಗಿ ರಾಜ್ಯಪಾಲನೆಯ ಪ್ರಕಾರವನ್ನು ಪ್ರಶ್ನೆ ಮಾಡಿದನು.
ಕೇನ ಭೂತಾನಿ ವರ್ಧಂತೇ ಕ್ಷಯಂ ಗಚ್ಛಂತಿ ಕೇನ ಚ |
ಕಮರ್ಚಂತೋ ಮಹಾಪ್ರಾಜ್ಞ ಸುಖಮತ್ಯಂತಮಾಪ್ನುಯುಃ ॥6॥
ಏತನ್ಮೇ ಶಂಸ ದೇವರ್ಷೇ ಧರ್ಮಕಾಮಾರ್ಥಸಂಶಯಮ್ |
ಎಲೈ ಮಹಾಪ್ರಾಜ್ಞರೇ! ಜೀವರು (ಪ್ರಜೆಗಳು) ಯಾವುದರಿಂದ ಅಭಿವೃದ್ಧಿ- ಯನ್ನು ಹೊಂದುತ್ತಾರೆ? ಯಾವುದರಿಂದ ನಾಶವನ್ನು ಹೊಂದುತ್ತಾರೆ? ಯಾವನನ್ನು ಪೂಜಿಸಿ ಅತ್ಯಂತಸುಖವನ್ನು ಹೊಂದಿಯಾರು? ಎಲೈ ದೇವಋಷಿಗಳೇ! ಧರ್ಮ- ಕಾಮಾರ್ಥಗಳಿಗೆ ಸಂಬಂಧಿಸಿದ ನನ್ನ ಈ ಸಂಶಯವನ್ನು ಪರಿಹರಿಸಿ.
ಇತಿ ಪೃಷ್ಟೋ ಮಹಾರಾಜಾ ಕೌಸಲ್ಯೇನಾಮಿತೌಜಸಾ |
ರಾಜಸತ್ಕಾರಮವ್ಯಗ್ರಃ ಶಶಂಸಾಸ್ಮೈ ಬೃಹಸ್ಪತಿಃ ॥7॥
ಅಮಿತಪರಾಕ್ರಮಿಯಾದ ಕೋಸಲಾಧಿಪತಿಯಾದ ಮಹಾರಾಜನಿಂದ ಹೀಗೆ ಪ್ರಶ್ನೆ ಮಾಡಲ್ಪಟ್ಟ ಬೃಹಸ್ಪತಿಗಳು ಅವನಿಗೆ ಸಮಾಧಾನದಿಂದ ರಾಜನನ್ನು ಪೂಜಿಸು- ವುದಕ್ಕೆ ಕಾರಣವನ್ನು ತಿಳಿಸಿದರು.
ರಾಜಮೂಲೋ ಮಹಾರಾಜ ಧರ್ಮೋ ಲೋಕಸ್ಯ ಲಕ್ಷ್ಯತೇ |
ಪ್ರಜಾ ರಾಜಭಯಾದೇವ ನ ಖಾದಂತಿ ಪರಸ್ಪರಮ್ ॥8॥
ಎಲೈ ಮಹಾರಾಜನೇ! ಪ್ರಜೆಗಳ ಧರ್ಮವು ಲೋಕದಲ್ಲಿ ರಾಜನ ಮೂಲಕ- ವಾದುದು ಎಂದು ಕಂಡುಬರುತ್ತದೆ. ರಾಜನ ಭಯದಿಂದಲೇ ಪ್ರಜೆಗಳು ಒಬ್ಬರ- ನ್ನೊಬ್ಬರು ತಿನ್ನುವುದಿಲ್ಲ.
ರಾಜಾ ಹ್ಯೇವಾಖಿಲಂ ಲೋಕಂ ಸಮುದೀರ್ಣಂ ಸಮುತ್ಸುಕಮ್ |
ಪ್ರಸಾದಯತಿ ಧರ್ಮೇಣ ಪ್ರಸಾದ್ಯ ಚ ವಿರಾಜತೇ ॥9॥
ರಾಜನೇ ಸಮೃದ್ಧಿಯಿಂದ ಬೀಗಿದ ಉತ್ಸುಕರಾದ ಎಲ್ಲ ಪ್ರಜೆಗಳನ್ನೂ ಪ್ರಸನ್ನ- ಗೊಳಿಸುತ್ತಾನೆ ಮತ್ತು ಧರ್ಮದಿಂದ ಪ್ರಸನ್ನಗೊಳಿಸಿ ತಾನು ಪ್ರಕಾಶಿಸುತ್ತಾನೆ.
ಯಥಾ ಹ್ಯನುದಯೇ ರಾಜನ್ ಭೂತಾನಿ ಶಶಿಸೂರ್ಯಯೋಃ |
ಅಂಧೇ ತಮಸಿ ಮಜ್ಜೇಯುರಪಶ್ಯಂತಃ ಪರಸ್ಪರಮ್ ॥10॥
ಯಥಾ ಹ್ಯನುದಕೇ ಮತ್ಸ್ಯಾ ನಿರಾಕ್ರಂದೇ ವಿಹಂಗಮಾಃ |

ವಿಹರೇಯುರ್ಯಥಾಕಾಮಮಭಿಸೃತ್ಯ ಪುನಃ ಪುನಃ ॥11॥
ವಿಮಥ್ಯಾತಿಕ್ರಮೇರಂಶ್ಚ ವಿಷಹ್ಯಾಪಿ ಪರಸ್ಪರಮ್ |
ಅಭಾವಮಚಿರೇಣೈವ ಗಚ್ಛೇಯುರ್ನಾತ್ರ ಸಂಶಯಃ ॥12॥
ಏವಮೇವ ವಿನಾ ರಾಜ್ಞಾ ವಿನಶ್ಯೇಯುರಿಮಾಃ ಪ್ರಜಾಃ |
ಅಂಧೇ ತಮಸಿ ಮಜ್ಜೇಯುರಗೋಪಾಃ ಪಶವೋ ಯಥಾ ॥13॥
ಎಲೈ ರಾಜನೇ! ಚಂದ್ರಸೂರ್ಯರು ಉದಯಿಸದಿದ್ದಾಗ ಪ್ರಜೆಗಳು ಒಬ್ಬರ- ನ್ನೊಬ್ಬರು ಕಾಣದೆ ಹೇಗೆ ಕತ್ತಲೆಯಲ್ಲಿ ಮುಳುಗುತ್ತಾರೆಯೋ, ಹೇಗೆ ನೀರಿಲ್ಲದ ಸ್ಥಳದಲ್ಲಿ ಮತ್ಸ್ಯಗಳು ನಾಶವನ್ನು ಹೊಂದುತ್ತವೆಯೋ, ಹೇಗೆ ಹಿಂಸ್ರಪ್ರಾಣಿಗಳಿರುವ ಆಕಾಶದಲ್ಲಿ ಪಕ್ಷಿಗಳು ಪುನಃ ಪುನಃ ಒಂದನ್ನೊಂದು ಸಮೀಪಿಸಿ ವಿಹಾರಮಾಡಿ- ದರೂ ಪರಸ್ಪರವಾಗಿ ಆಕ್ರಮಿಸಿ ಇನ್ನೊಂದು ಪಕ್ಷಿಯ ಆಕ್ರಮಣವನ್ನು ತಡೆದು- ಕೊಂಡು ಶೀಘ್ರವಾಗಿ ನಿಃಸಂಶಯವಾಗಿ ನಾಶವನ್ನು ಹೊಂದುತ್ತವೆಯೋ, ಹೇಗೆ ಗೋಪಾಲಕನಿಲ್ಲದ ಪಶುಗಳು ಕತ್ತಲೆಯಲ್ಲಿ ಮುಳುಗುತ್ತವೆಯೋ ಅದರಂತೆ ರಾಜನಿಲ್ಲದ ಈ ಪ್ರಜೆಗಳು ನಾಶವನ್ನು ಹೊಂದಿಯಾರು!
ಹರೇಯುರ್ಬಲವಂತೋ ಹಿ ದುರ್ಬಲಾನಾಂ ಪರಿಗ್ರಹಾನ್ |
ಹನ್ಯುರ್ವ್ಯಾಯಚ್ಛಮಾನಾಶ್ಚ ಯದಿ ರಾಜಾ ನ ಪಾಲಯೇತ್ ॥14॥
ರಾಜನು ಪಾಲಿಸದಿದ್ದರೆ ಬಲಿಷ್ಠರಾದ ಪ್ರಜೆಗಳು ದುರ್ಬಲರ ಸ್ವತ್ತುಗಳನ್ನು ಅಪಹರಿಸಿಯಾರು! ಪರಾಕ್ರಮವನ್ನು ಆಶ್ರಯಿಸಿ ಕೊಂದಾರು!
ಯಾನಂ ವಸ್ತ್ರಮಲಂಕಾರಾನ್ ರತ್ನಾನಿ ವಿವಿಧಾನಿ ಚ |
ಹರೇಯುಃ ಸಹಸಾ ಪಾಪಾ ಯದಿ ರಾಜಾ ನ ಪಾಲಯೇತ್ ॥15॥
ರಾಜನು ರಕ್ಷಿಸದಿದ್ದರೆ ಪಾಪಿಗಳಾದವರು ವಾಹನ, ವಸ್ತ್ರ, ಅಲಂಕಾರಗಳು ವಿವಿಧವಾದ ರತ್ನಗಳು ಎಲ್ಲವನ್ನೂ ಬಲಾತ್ಕಾರದಿಂದ ಅಪಹರಿಸಿಯಾರು!
ಮಮೇದಮಿತಿ ಲೋಕೇಽಸ್ಮಿನ್ನ ಭವೇತ್ ಸಂಪರಿಗ್ರಹಃ |
ನ ದಾರಾ ನ ಚ ಪುತ್ರಃ ಸ್ಯಾನ್ನ ಧನಂ ನ ಪರಿಗ್ರಹಃ ॥16॥
ಲೋಕದಲ್ಲಿ ಇದು ನನ್ನದು ಎಂದು ಹೇಳುವ ಸ್ವತ್ತು ಅದು ಪತ್ನಿಯಾಗಲೀ, ಪುತ್ರನಾಗಲೀ, ಧನವಾಗಲೀ, ಉಳಿದ ಸಾಧನಗಳಾಗಲೀ ಯಾವದೂ ಇರಲಾರದು. ರಾಜನು ಪಾಲಿಸದಿದ್ದರೆ ಸರ್ವಲೋಪವುಂಟಾದೀತು!
ಮಾತರಂ ಪಿತರಂ ವೃದ್ಧಮಾಚಾರ್ಯಮತಿಥಿಂ ಗುರುಮ್ |
ಕ್ಲಿಶ್ನೀಯುರಪಿ ಹಿಂಸ್ಯುರ್ವಾ ಯದಿ ರಾಜಾ ನ ಪಾಲಯೇತ್ ॥17॥
ರಾಜನು ರಕ್ಷಿಸದಿದ್ದರೆ ತಂದೆಯನ್ನು, ತಾಯಿಯನ್ನು, ವೃದ್ಧನನ್ನು, ಆಚಾರ್ಯ -ನನ್ನು, ಅತಿಥಿಯನ್ನು, ಗುರುವನ್ನು ಕ್ಲೇಶಗೊಳಿಸಿಯಾರು! ಅಥವಾ ಕೊಂದಾರು!
ಪತೇದ್ ಬಹುವಿಧಂ ಶಸ್ತ್ರಂ ಬಹುಧಾ ಧರ್ಮಚಾರಿಷು |
ಅಧರ್ಮಃ ಪ್ರಗೃಹೀತಃ ಸ್ಯಾದ್ ಯದಿ ರಾಜಾ ನ ಪಾಲಯೇತ್ ॥18॥
ರಾಜನು ಪಾಲಿಸದಿದ್ದರೆ ಧರ್ಮಾಚರಣೆಯನ್ನು ಮಾಡುವವರ ಮೇಲೆ ಅನೇಕ ವಿಧವಾದ ಶಸ್ತ್ರಗಳು ಅನೇಕ ರೀತಿಯಲ್ಲಿ ಬಿದ್ದಾವು! ಅಧರ್ಮವು ಒಳ್ಳೆಯ ಸ್ವೀಕಾರ -ವನ್ನು ಪಡೆದೀತು!
ವಧಬಂಧಪರಿಕ್ಲೇಶೋ ನಿತ್ಯಮರ್ಥವತಾಂ ಭವೇತ್ |
ಮಮತ್ವಂ ಚ ನ ವಿಂದೇಯುರ್ಯದಿ ರಾಜಾ ನ ಪಾಲಯೇತ್ ॥19॥
ಧನವುಳ್ಳವರಿಗೆ ನಿತ್ಯವೂ ವಧೆ, ಬಂಧ ಪರಿಕ್ಲೇಶಗಳು ಉಂಟಾದಾವು. ರಾಜನು ಪಾಲಿಸದಿದ್ದರೆ ನನ್ನದು ಎಂದು ಹೇಳುವ ಯಾವ ಸ್ವತ್ತೂ ಉಳಿಯಲಾರದು.
ಅಂತಶ್ಚಾಕಾಶಮೇವ ಸ್ಯಾಲ್ಲೋಕೋಽಯಂ ದಸ್ಯುಸಾದ್ ಭವೇತ್ |
ಪತೇಚ್ಚ ನರಕಂ ಘೋರಂ ಯದಿ ರಾಜಾ ನ ಪಾಲಯೇತ್ ॥20॥
ಇಂತಹ ಅಪಚಾರಗಳಿಗೆ ಆಕಾಶವೇ ಎಲ್ಲೆಯಾದೀತು! ಈ ಲೋಕವು ದಸ್ಯುಗಳ ವಶವಾದೀತು! ರಾಜನು ಪಾಲಿಸದಿದ್ದರೆ ಇಲ್ಲಿಯೇ ಘೋರವಾದ ನರಕವುಂಟಾ- ದೀತು!
ನ ಯೋನಿದೋಷೋ ವರ್ತೇತ ನ ಕೃಷಿರ್ನ ವಣಿಕ್ಪಥಃ |
ಮಜ್ಜೇದ್ ಧರ್ಮಸ್ತ್ರಯೀ ನ ಸ್ಯಾದ್ ಯದಿ ರಾಜಾ ನ ಪಾಲಯೇತ್ ॥21॥
ರಾಜನು ಪಾಲಿಸದಿದ್ದರೆ ಯೋನಿದೋಷವೆಂಬುದೇ ಇರಲಾರದು. ಕೃಷಿ- ಯಾಗಲೀ ವಾಣಿಜ್ಯಮಾರ್ಗಗಳಾಗಲೀ ಇರಲಾರವು! ಧರ್ಮವು ನಶಿಸಿ ಹೋದೀತು! ಮೂರು ವೇದಗಳು ಇರಲಾರವು!
ನ ಯಜ್ಞಾಃ ಸಂಪ್ರವರ್ತೇರನ್ ವಿಧಿವತ್ ಸ್ವಾಪ್ತದಕ್ಷಿಣಾಃ |
ನ ವಿವಾಹಾಃ ಸಮಾಜೋ ವಾ ಯದಿ ರಾಜಾ ನ ಪಾಲಯೇತ್ ॥22॥
ಬಹಳ ದಕ್ಷಿಣೆಯನ್ನು ಕೊಟ್ಟು ವಿಧಿವತ್ತಾಗಿ ಮಾಡುವ ಯಜ್ಞಗಳು ನಡೆ- ಯಲಾರವು. ರಾಜನು ಪಾಲಿಸದಿದ್ದರೆ ವಿವಾಹಗಳಾಗಲೀ, ಸಭೆಗಳಾಗಲೀ ನಡೆಯ- ಲಾರವು.
ನ ವೃಷಾಃ ಸಂಪ್ರವರ್ತೇರನ್ನ ಮಥ್ಯೇರಂಶ್ಚ ಗರ್ಗರಾಃ |
ಘೋಷಾಃ ಪ್ರಣಾಶಂ ಗಚ್ಛೇಯುರ್ಯದಿ ರಾಜಾ ನ ಪಾಲಯೇತ್ ॥23॥
(ರಾಜನು ಪಾಲಿಸದಿದ್ದರೆ) ಹಳ್ಳಿಗಳಲ್ಲಿ ಹೋರಿಗಳು ಹಸುಗಳಲ್ಲಿ ಗರ್ಭಾಧಾನ ಮಾಡಲಾರವು. ಮೊಸರಿನ ಪಾತ್ರೆಗಳು ಕಡೆಯಲ್ಪಡಲಾರವು. ಗೋಪಾಲಕರ ಹಳ್ಳಿ- ಗಳು ನಾಶವನ್ನು ಹೊಂದಿಯಾವು!

ತ್ರಸ್ತಮುದ್ವಿಗ್ನಹೃದಯಂ ಹಾಹಾಭೂತಮಚೇತನಮ್ ।
ಕ್ಷಣೇನ ವಿನಶೇತ್ ಸರ್ವಂ ಯದಿ ರಾಜಾ ನ ಪಾಲಯೇತ್ ॥24॥
ರಾಜನು ಪಾಲಿಸದಿದ್ದರೆ ಎಲ್ಲವೂ ಒಂದು ಕ್ಷಣದಲ್ಲಿ ಮನಸ್ಸಿನ ಉದ್ವೇಗದಿಂದ ಕೂಡಿ ಹಾಹಾಕಾರವನ್ನು ಮಾಡಿ ಪ್ರಜ್ಞಾಶೂನ್ಯವಾಗಿ ನಶಿಸಿಹೋದೀತು!
ನ ಸಂವತ್ಸರಸತ್ರಾಣಿ ತಿಷ್ಠೇಯುರಕುತೋಭಯಾಃ ।
ವಿಧಿವದ್ ದಕ್ಷಿಣಾವಂತಿ ಯದಿ ರಾಜಾ ನ ಪಾಲಯೇತ್ ॥25॥
ರಾಜನು ಪಾಲಿಸದಿದ್ದರೆ ವಿಧಿಪೂರ್ವಕವಾಗಿ ದಕ್ಷಿಣಾಯುಕ್ತವಾಗಿ ಮಾಡುವ ಸಂವತ್ಸರಸತ್ರಗಳು ನಿರ್ಭಯವಾಗಿ ನಡೆಯಲಾರವು.
ಬ್ರಾಹ್ಮಣಾಶ್ಚತುರೋ ವೇದಾನ್ ನಾಧೀಯೇರಂಸ್ತಪಸ್ವಿನಃ ।
ವಿದ್ಯಾಸ್ನಾತಾಸ್ತಪಃ ಸ್ನಾತಾ ಯದಿ ರಾಜಾ ನ ಪಾಲಯೇತ್ ॥26॥
ರಾಜನು ಪಾಲಿಸದಿದ್ದರೆ ತಪಸ್ವಿಗಳೂ, ವಿದ್ಯಾಪಾರಂಗತರೂ, ತಪಃ ಪಾರಂ- ಗತರೂ ಆದ ಬ್ರಾಹ್ಮಣರು ನಾಲ್ಕುವೇದಗಳನ್ನು ಅಧ್ಯಯನ ಮಾಡಲಾರರು.
ಹಸ್ತಾಹಸ್ತಂ ಸ ಪರಿಮೃಶೇತ್ ಭಿದ್ಯೇರನ್ ಸರ್ವಸೇತವಃ ।
ಭಯಾರ್ತಂ ವಿದ್ರವೇತ್ ಸರ್ವಂ ಯದಿ ರಾಜಾ ನ ಪಾಲಯೇತ್ ॥27॥
ಮುಷ್ಟಾಮುಷ್ಟಿಕಲಹವು ಪ್ರಾರಂಭವಾದೀತು! ಎಲ್ಲ ಕಟ್ಟುಪಾಡುಗಳೂ ಭಗ್ನ- ವಾದಾವು! ರಾಜನು ಪಾಲಿಸದಿದ್ದರೆ ಭಯದಿಂದ ಹೆದರಿ ಎಲ್ಲವೂ ಓಡಿ- ಹೋದೀತು!
ನ ಲಭೇದ್ ಧರ್ಮಸಂಶ್ಲೇಷಂ ಹತವಿಗ್ರಹತೋ ಜನಃ ।
ಹರ್ತಾ ಸ್ವಸ್ವೇಂದ್ರಿಯೋ ಗಚ್ಛೇದ್ ಯದಿ ರಾಜಾ ನ ಪಾಲಯೇತ್ ॥28॥
ಮೋಹಕ್ಕೂ ಕಲಹಕ್ಕೂ ಸಿಲುಕಿದ ಜನರು ಧರ್ಮದ ಸಂಬಂಧವನ್ನೇ ಹೊಂದ- ಲಾರರು! ರಾಜನು ಪಾಲಿಸದಿದ್ದರೆ ಧನಾದಿಗಳ ಅಪಹಾರವನ್ನು ಮಾಡುವವನು ನಿಶ್ಚಿಂತೆಯಿಂದ ಹೋದಾನು!
ಅನಯಾಃ ಸಂಪ್ರವರ್ತೇರನ್ ಭವೇದ್ ವೈ ವರ್ಣಸಂಕರಃ ।
ದುರ್ಭಿಕ್ಷಮಾವಿಶೇದ್ ರಾಷ್ಟ್ರಂ ಯದಿ ರಾಜಾ ನ ಪಾಲಯೇತ್ ॥29॥
ರಾಜನು ಪಾಲಿಸದಿದ್ದರೆ ಅನ್ಯಾಯಗಳು ಉಂಟಾದಾವು. ವರ್ಣಸಂಕರವು ಉಂಟಾದೀತು! ರಾಜ್ಯಕ್ಕೆ ದುರ್ಭಿಕ್ಷವು ಬಂದೀತು!
ವಿವೃತ್ಯ ಹಿ ಯಥಾಕಾಮಂ ಗೃಹದ್ವಾರಾಣಿ ಶೇರತೇ ।
ಮನುಷ್ಯಾ ರಕ್ಷಿತಾ ರಾಜ್ಞಾ ಸಮಂತಾದಕುತೋಭಯಾಃ ॥30॥
ರಾಜನು ರಕ್ಷಿಸಿದರೆ ಪ್ರಜೆಗಳು ಎಲ್ಲ ಕಡೆಗಳಲ್ಲಿಯೂ ಮನೆಯ ಬಾಗಿಲನ್ನು ತೆರೆದು ತಮ್ಮ ಮನಸ್ಸಿಗೆ ಬಂದಂತೆ ನಿದ್ರೆಯನ್ನು ಮಾಡುತ್ತಾರೆ.
ನಾಕ್ರುಷ್ಟಂ ಸಹತೇ ಕಶ್ಚಿತ್ ಕುತೋ ಹಸ್ತಸ್ಯ ಲಂಘನಮ್ ।
ಯದಿ ರಾಜಾ ನ ಸಮ್ಯಗ್ ಗಾಂ ರಕ್ಷಯತ್ಯತಿಧಾರ್ಮಿಕಃ ।
ಯದಿ ರಾಜಾ ಮನುಷ್ಯೇಷು ತ್ರಾತಾ ಭವತಿ ಧಾರ್ಮಿಕಃ ॥31॥
ರಾಜನು ಅತಿಧಾರ್ಮಿಕನಾಗಿ ಭೂಮಿಯನ್ನು ರಕ್ಷಿಸದಿದ್ದರೆ ಒಬ್ಬನ ಮಾತನ್ನು ಇನ್ನೊಬ್ಬನು ಸಹಿಸಲಾರನು. ಪ್ರೀತಿಯ ಹಸ್ತಲಾಘವವು ಎಲ್ಲಿಂದ ಬರಬೇಕು. ರಾಜನು ಧಾರ್ಮಿಕನಾದರೆ ಮನುಷ್ಯರನ್ನು ರಕ್ಷಿಸುವನು.
ಸ್ತ್ರಿಯಶ್ಚಾಪುರುಷಾ ಮಾರ್ಗಂ ಸರ್ವಾಲಂಕಾರಭೂಷಿತಾಃ ।
ನಿರ್ಭಯಾಃ ಪ್ರತಿಪದ್ಯಂತೇ ಯದಾ ರಕ್ಷತಿ ಭೂಮಿಪಃ ॥32॥
ರಾಜನು ಧಾರ್ಮಿಕನಾಗಿ ಮನುಷ್ಯರನ್ನು ರಕ್ಷಿಸುವವನಾದರೆ ಸ್ತ್ರೀಯರು ಮತ್ತು ಪುರುಷರು ಸರ್ವಾಲಂಕಾರಭೂಷಿತರಾಗಿ ಮಾರ್ಗಗಳಲ್ಲಿ ನಿರ್ಭಯರಾಗಿ ಸಂಚ- ರಿಸುವರು.
ಧರ್ಮಮೇವ ಪ್ರಪದ್ಯಂತೇ ನ ಹಿಂಸಂತಿ ಪರಸ್ಪರಮ್ ।
ಅನುಗೃಹ್ಣಂತಿ ಚಾನ್ಯೋನ್ಯಂ ಯದಾ ರಕ್ಷತಿ ಭೂಮಿಪಃ ॥33॥
ರಾಜನು ರಕ್ಷಣೆ ಮಾಡುವ ಕಾಲದಲ್ಲಿ ಪ್ರಜೆಗಳು ಧರ್ಮವನ್ನೇ ಆಶ್ರಯಿಸು- ತ್ತಾರೆ. ಪರಸ್ಪರವಾಗಿ ಹಿಂಸಿಸುವುದಿಲ್ಲ. ಪರಸ್ಪರವಾಗಿ ಉಪಕಾರವನ್ನು ಮಾಡುತ್ತಾರೆ.
ಯಜಂತೇ ಚ ತ್ರಯೋ ವರ್ಣಾ ಮಹಾಯಜ್ಞೈಃ ಪೃಥಗ್ವಿಧೈಃ ।
ಯುಕ್ತಾಶ್ಚಾಧೀಯತೇ ಶಾಸ್ತ್ರಂ ಯದಾ ರಕ್ಷತಿ ಭೂಮಿಪಃ ॥34॥
ಬಹುವಿಧವಾದ ದೊಡ್ಡ ಯಜ್ಞಗಳಿಂದ ಮೂರು ವರ್ಣದವರೂ ಯಾಗ- ವನ್ನು ಮಾಡುತ್ತಾರೆ. ರಾಜನು ಭೂಮಿಯನ್ನು ರಕ್ಷಿಸುವಾಗ ಯೋಗ್ಯರಾದವರು ಶಾಸ್ತ್ರಾಧ್ಯಯನವನ್ನು ಮಾಡುತ್ತಾರೆ.
ವಾರ್ತಾಮೂಲೋ ಹ್ಯಯಂ ಲೋಕಸ್ತ್ರಯ್ಯಾ ವೈ ಧಾರ್ಯತೇ ಸದಾ ।
ತತ್ ಸರ್ವಂ ವರ್ತತೇ ಸಮ್ಯಗ್ ಯದಾ ರಕ್ಷತಿ ಭೂಮಿಪಃ ॥35॥
ವಾಣಿಜ್ಯಮೂಲವಾದ ಈ ಲೋಕವು ಮೂರು ವೇದಗಳಿಂದ ಧರಿಸಲ್ಪಡುತ್ತದೆ. ರಾಜನು ರಕ್ಷಿಸುವವನಾದರೆ ಅವೆಲ್ಲವೂ ಸರಿಯಾಗಿ ನಡೆಯುತ್ತದೆ.
ಯದಾ ರಾಜಾ ಧುರಂ ಶ್ರೇಷ್ಠಾಮಾದಾಯ ವಹತಿ ಪ್ರಜಾಃ ।
ಮಹತಾ ಬಲಯೋಗೇನ ತದಾ ಲೋಕಃ ಪ್ರಸೀದತಿ ॥36॥
ಯಾವಾಗ ರಾಜನು ಶ್ರೇಷ್ಠವಾದ ಭಾರವನ್ನು ಹೊತ್ತು, ದೊಡ್ಡ ಸೈನ್ಯದೊಂದಿಗೆ ಪ್ರಜೆಗಳ ರಕ್ಷಣೆಯ ಭಾರವನ್ನು ಹೊರುತ್ತಾನೆಯೋ

ಆಗ ಲೋಕವು ಪ್ರಸನ್ನ- ವಾಗುತ್ತದೆ.
ಯಸ್ಯಾಭಾವೇ ಚ ಭೂತಾನಾಮಭಾವಃ ಸ್ಯಾತ್ ಸಮಂತತಃ |
ಭಾವೇ ಚ ಭಾವೋ ನಿತ್ಯಃ ಸ್ಯಾತ್ ಕಸ್ತಂ ನ ಪ್ರತಿಪೂಜಯೇತ್ ॥37॥
ಯಾವನಿಲ್ಲದಿದ್ದರೆ ಎಲ್ಲ ಕಡೆಗಳಲ್ಲಿಯೂ ಎಲ್ಲ ಮನುಷ್ಯರು ಮತ್ತು ಪಶುಗಳು ನಾಶವನ್ನು ಹೊಂದುವವೋ, ಯಾವನಿದ್ದರೆ ನಿತ್ಯವೂ ಎಲ್ಲವೂ ಉಳಿಯುವವೋ ಅಂತಹ ರಾಜನನ್ನು ಯಾವನು ಪೂಜಿಸಲಾರ?
ತಸ್ಯ ಯೋ ವಹತೇ ಭಾರಂ ಸರ್ವಲೋಕಸುಖಾವಹಮ್ |
ತಿಷ್ಠನ್ ಪ್ರಿಯಹಿತೇ ರಾಜ್ಞ ಉಭೌ ಲೋಕಾವಿಮೌ ಜಯೇತ್ ॥38॥
ರಾಜನಿಗೆ ಪ್ರಿಯನೂ ಹಿತನೂ, ಆಗಿದ್ದು ರಾಜನು ಹೊರುವ, ಸರ್ವಲೋಕಕ್ಕೆ ಸುಖವನ್ನು ತಂದುಕೊಡುವ, ಭಾರದಲ್ಲಿ ಯಾವನು ಸಹಕಾರಿಯಾಗಿ ಭಾರವನ್ನು ಹೊರುತ್ತಾನೆಯೋ ಅವನೂ ಈ ಎರಡು ಲೋಕಗಳನ್ನು ಹೊಂದಿಯಾನು!
ಯಸ್ತಸ್ಯ ಪುರುಷಃ ಪಾಪಂ ಮನಸಾಪ್ಯನುಚಿಂತಯೇತ್ |
ಅಸಂಶಯಮಿಹ ಕ್ಲಿಷ್ಟಃ ಪ್ರೇತ್ಯಾಪಿ ನರಕಂ ಪತೇತ್ ॥39॥
ಯಾವ ಪುರುಷನು ಅಂತಹ ರಾಜನಿಗೆ ಮನಸ್ಸಿನಲ್ಲಿಯಾದರೂ ಪಾಪವನ್ನು ಚಿಂತಿಸುತ್ತಾನೆಯೋ ಅವನು ನಿಃಸಂಶಯವಾಗಿ ಇಲ್ಲಿ ಕ್ಲೇಶವನ್ನು ಹೊಂದಿ ಮರಣಾ- ನಂತರದಲ್ಲಿಯೂ ನರಕದಲ್ಲಿ ಬಿದ್ದಾನು?
ನ ಹಿ ಜಾತ್ವವಮಂತವ್ಯೋ ಮನುಷ್ಯ ಇತಿ ಭೂಮಿಪಃ |
ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥40॥
ರಾಜನನ್ನು ಮನುಷ್ಯನೆಂಬ ಭಾವನೆಯಿಂದ ಎಂದೂ ಅವಮಾನ ಮಾಡ- ಬಾರದು. ರಾಜನೆಂದರೆ ಮನುಷ್ಯರೂಪದಲ್ಲಿರುವ ದೊಡ್ಡ ದೇವತೆ ಎಂದು ತಿಳಿಯ -ಬೇಕು.
ಕುರುತೇ ಪಂಚ ರೂಪಾಣಿ ಕಾಲಯುಕ್ತಾನಿ ಯಃ ಸದಾ |
ಭವತ್ಯಗ್ನಿಸ್ತಥಾದಿತ್ಯೋ ಮೃತ್ಯುರ್ವೈಶ್ರವಣೋ ಯಮಃ ॥41॥
ರಾಜನು ಯಾವಾಗಲೂ ಆಯಾಕಾಲಕ್ಕೆ ತಕ್ಕಂತೆ ಐದು ರೂಪಗಳನ್ನು ಧರಿಸು- ತ್ತಾನೆ. ಅವನು ಅಗ್ನಿಯಾಗುತ್ತಾನೆ;
ಸೂರ್ಯನಾಗುತ್ತಾನೆ; ಮೃತ್ಯುವೂ, ಕುಬೇರನೂ, ಯಮನೂ ಆಗುತ್ತಾನೆ.
ಯದಾ ಹ್ಯಾಸೀದತಃ ಪಾಪಾನ್ ದಹತ್ಯುಗ್ರೇಣ ತೇಜಸಾ |
ಮಿಥ್ಯೋಪಚರಿತೋ ರಾಜಾ ತದಾ ಭವತಿ ಪಾವಕಃ ॥42॥
ಪಾಪಿಗಳಾದವರು ತನ್ನ ಸಮೀಪಕ್ಕೆ ಬಂದರೆ ಅವರನ್ನು ತನ್ನ ತೇಜಸ್ಸಿನಿಂದ ದಹಿಸುತ್ತಾನೆ. ಸುಳ್ಳಿನಿಂದ ವ್ಯವಹರಿಸಲ್ಪಟ್ಟಾಗ ರಾಜನು ಅಗ್ನಿಯಾಗುತ್ತಾನೆ.
ಯದಾ ಪಶ್ಯತಿ ಚಾರೇಣ ಸರ್ವಭೂತಾನಿ ಭೂಮಿಪಃ |
ಕ್ಷೇಮಂ ಚ ಕೃತ್ವಾ ವ್ರಜತಿ ತದಾ ಭವತಿ ಭಾಸ್ಕರಃ ॥43॥
ಯಾವಾಗ ರಾಜನಾದವನು ಚಾರರ ಮೂಲಕ ಎಲ್ಲ ಪ್ರಜೆಗಳನ್ನು ನೋಡಿ, ಕ್ಷೇಮವನ್ನು ಮಾಡಿ ಮುಂದೆ ಸಾಗುತ್ತಾನೆಯೋ ಆಗ ಅವನು ಸೂರ್ಯನಾಗು- ತ್ತಾನೆ.
ಅಶುಚೀಂಶ್ಚ ಯದಾ ಕ್ರುದ್ಧಃ ಕ್ಷಿಣೋತಿ ಶತಶೋ ನರಾನ್ |
ಸಪುತ್ರಪೌತ್ರಾನ್ ಸಾಮಾತ್ಯಾಂಸ್ತಥಾ ಭವತಿ ಸೋಽಂತಕಃ ॥44॥
ಅಶುಚಿಗಳಾದ ಜನರ ಮೇಲೆ ಕೋಪಗೊಂಡು ನೂರಾರು ಸಂಖ್ಯೆಯಲ್ಲಿ ಪುತ್ರಪೌತ್ರರಿಂದ ಮತ್ತು ಅಮಾತ್ಯರಿಂದ ಕೂಡಿದ ಅಂತಹ ನರರನ್ನು ಅಥವಾ ರಾಜರನ್ನು ನಾಶಮಾಡುವಾಗ ಅವನು ಮೃತ್ಯುವಾಗುತ್ತಾನೆ.
ಯದಾ ತ್ವಧಾರ್ಮಿಕಾನ್ ಸರ್ವಾಂಸ್ತೀಕ್ಷ್ಣೈರ್ದಂಡೈರ್ನಿಯಚ್ಛತಿ |
ಧಾರ್ಮಿಕಾಂಶ್ಚಾನುಗೃಹ್ಣಾತಿ ಭವತ್ಯಥ ಯಮಸ್ತಥಾ ॥45॥
ಯಾವಾಗ ಅಧಾರ್ಮಿಕರೆಲ್ಲರನ್ನೂ ತೀಕ್ಷ್ಣವಾದ ಶಿಕ್ಷೆಯಿಂದ ನಿಯಂತ್ರಿಸಿ, ಧಾರ್ಮಿಕರಿಗೆ ಅನುಗ್ರಹವನ್ನು ಮಾಡುತ್ತಾನೆಯೋ ಆಗ ಅವನು ಯಮನಾಗು- ತ್ತಾನೆ.
ಯದಾ ತು ಧನಧಾರಾಭಿಸ್ತರ್ಪಯತ್ಯುಪಕಾರಿಣಃ |
ಆಚ್ಛಿನತ್ತಿ ಚ ರತ್ನಾನಿ ವಿವಿಧಾನ್ಯಪಕಾರಿಣಾಮ್ ॥46॥
ಶ್ರಿಯಂ ದದಾತಿ ಕಸ್ಮೈಚಿತ್ ಕಸ್ಮಾಚ್ಚಿದಪಕರ್ಷತಿ |
ತದಾ ವೈಶ್ರವಣೋ ರಾಜನ್ಲೋಕೇ ಭವತಿ ಭೂಮಿಪಃ ॥47॥
ಯಾವಾಗ ಉಪಕಾರ ಮಾಡಿದವರಿಗೆ ಧನದ ಮಳೆಯನ್ನು ಸುರಿಸುತ್ತಾನೆಯೋ, ಅಪಕಾರವನ್ನು ಮಾಡಿದವರ ವಿವಿಧರತ್ನಗಳನ್ನು ಅವರಿಂದ ಸೆಳೆದುಕೊಳ್ಳು- ತ್ತಾನೆಯೋ, ಒಬ್ಬನಿಗೆ ಸಂಪತ್ತನ್ನುನೀಡಿ, ಇನ್ನೊಬ್ಬರಿಂದ ಸಂಪತ್ತನ್ನು ಕಸಿದುಕೊಳ್ಳು- ತ್ತಾನೆಯೋ ಎಲೈ ರಾಜನೇ! ಆಗ ರಾಜನು ಕುಬೇರನಾಗುತ್ತಾನೆ.
ನಾಸ್ಯಾಪವಾದೇ ಸ್ಥಾತವ್ಯಂ ದಕ್ಷೇಣಾಕ್ಲಿಷ್ಟಕರ್ಮಣಾ |
ಧರ್ಮ್ಯಮಾಕಾಂಕ್ಷತಾ ಲಾಭಮೀಶ್ವರಸ್ಯಾನಸೂಯತಾ ॥48॥
ದಕ್ಷನೂ, ಅಕ್ಲಿಷ್ಟಕಾರಿಯೂ, ಧರ್ಮವನ್ನು ಬಯಸುವವನೂ, ಅಸೂಯಾ- ರಹಿತನೂ, ರಾಜನ ಅನುಗ್ರಹವನ್ನು ಬಯಸುವವನೂ ಆದವನು ರಾಜನನ್ನು ನಿಂದಿಸುತ್ತಿರುವಾಗ ಅಲ್ಲಿ ನಿಲ್ಲಬಾರದು.
ನ ಹಿ ರಾಜ್ಞಃ ಪ್ರತೀಪಾನಿ ಕುರ್ವನ್ ಸುಖಮವಾಪ್ನುಯಾತ್ |
ಪುತ್ರೋಭ್ರಾತಾ ವಯಸ್ಯೋ ವಾ ಯದ್ಯಪ್ಯಾತ್ಮಸಮೋ ಭವೇತ್ ॥49॥

ರಾಜನಿಗೆ ವಿರೋಧಮಾಡುವವನು ಪುತ್ರನಾಗಲಿ, ಸಹೋದರನಾಗಲಿ, ಸ್ನೇಹಿತ -ನಾಗಲಿ, ರಾಜನಿಗೆ ಸಮಾನನಾದವನಾದವನೇ ಆಗಲಿ ಅವನಿಗೆ ಸುಖವುಂಟಾಗ- ಲಾರದು.
ಕುರ್ಯಾತ್ ಕೃಷ್ಣಗತಿಃ ಶೇಷಂ ಜ್ವಲಿತೋಽನಿಲಸಾರಥಿಃ |
ನ ತು ರಾಜ್ಞಾಽಭಿಪನ್ನಸ್ಯ ಶೇಷಂ ಕ್ವಚನ ವಿದ್ಯತೇ ॥50॥
ವಾಯುಸಹಾಯವುಳ್ಳ ಅಗ್ನಿಯು ಜ್ವಲಿಸಿದರೆ ಸ್ವಲ್ಪಭಾಗವನ್ನು ಉಳಿಸಬಹುದು. ಆದರೆ ರಾಜನಿಗೆ ವಿರೋಧಮಾಡಿದವರಿಗೆ ಅಲ್ಪಭಾಗವೂ ಉಳಿಯುವುದಿಲ್ಲ.
ತಸ್ಯ ಸರ್ವಾಣಿ ರಕ್ಷ್ಯಾಣಿ ದೂರತಃ ಪರಿವರ್ಜಯೇತ್ |
ಮೃತ್ಯೋರಿವ ಜುಗುಪ್ಸೇತ ರಾಜಸ್ವಹರಣಾನ್ನರಃ ॥51॥
ರಾಜನಿಗೆ ಸಂಬಂಧಿಸಿದ ಕೋಶ-ಧನಾದಿಗಳನ್ನು ದೂರದಿಂದಲೇ ಪರಿತ್ಯಜಿಸ- ಬೇಕು. ಮೃತ್ಯುವನ್ನು ನೋಡಿ ಹೆದರುವಂತೆ ರಾಜಸ್ವವನ್ನು ಅಪಹರಣಮಾಡುವವ- ರಿಂದ ಜುಗುಪ್ಸೆಗೊಂಡು ದೂರವಿರಬೇಕು.
ನಶ್ಯೇದವಿಮೃಶನ್ ಸದ್ಯೋ ಮೃಗಃ ಕೂಟಮಿವ ಸ್ಪೃಶನ್ |
ಆತ್ಮಸ್ವಮಿವ ಸಂರಕ್ಷೇದ್ ರಾಜಸ್ವಮಿಹ ಬುದ್ಧಿಮಾನ್ ॥52॥
ವಿಚಾರಮಾಡದೇ ರಾಜನ ಸ್ವತ್ತನ್ನು ಸ್ಪರ್ಶಿಸುವವನು ಕಪಟಯಂತ್ರವನ್ನು ಪ್ರವೇಶಿಸುವ ಮೃಗದಂತೆ ನಾಶವನ್ನು ಹೊಂದಿಯಾನು! ವಿವೇಕಿಯಾದವನು ರಾಜಸ್ವ -ವನ್ನು ತನ್ನ ಆಸ್ತಿಯಂತೆ ರಕ್ಷಿಸಬೇಕು.
ಮಹಾಂತಂ ನರಕಂ ಘೋರಮಪ್ರತಿಷ್ಠಮಚೇತಸಃ |
ಪತಂತಿ ಚಿರರಾತ್ರಾಯ ರಾಜವಿತ್ತಾಪಹಾರಿಣಃ ॥53॥
ರಾಜವಿತ್ತವನ್ನು ಅಪಹಾರಮಾಡುವವರು ದೊಡ್ಡ, ಘೋರವಾದ, ನೆಲೆ ಇಲ್ಲದ, ಪ್ರಜ್ಞಾನಾಶಕವಾದ ನರಕದಲ್ಲಿ ಬಹುಕಾಲದವರೆಗೆ ಬೀಳುತ್ತಾರೆ.
ರಾಜಾ ಭೋಜೋ ವಿರಾಟ್ ಸಮ್ರಾಟ್ ಕ್ಷತ್ರಿಯೋ ಭೂಪತಿರ್ನೃಪಃ |
ಯ ಏವಂ ಸ್ತೂಯತೇ ಶಬ್ದೈಃ ಕಸ್ತಂ ನಾರ್ಚಿತುಮಿಚ್ಛತಿ ॥54॥
ರಾಜನಾದವನು ಎಲ್ಲ ಜನರಿಗೂ ಸುಖವನ್ನು ಕೊಡುವುದರಿಂದ ಭೋಜ ಎನಿಸುವನು. ವಿಶೇಷವಾಗಿ ಪ್ರಕಾಶಿಸುವುದರಿಂದ ವಿರಾಟ್ ಎನಿಸುವನು. ಚೆನ್ನಾಗಿ ಪ್ರಕಾಶಿಸುವುದರಿಂದ ಸಮ್ರಾಟ್ ಎನಿಸುವನು. ಪ್ರಜೆಗಳನ್ನು ಉಂಟಾಗಬಹುದಾದ ಗಾಯಗಳಿಂದ ರಕ್ಷಿಸುವುದರಿಂದ ಕ್ಷತ್ರಿಯನೆನಿಸುವನು. ಭೂಮಿಗೆ ಒಡೆಯನಾ- ದವನು. ಪ್ರಜೆಗಳಿಗೆ ಒಡೆಯನಾದವನು. ಯಾವ ರಾಜನನ್ನು ಹೀಗೆ ಅನೇಕ ಶಬ್ದ- ಗಳಿಂದ ಸ್ತೋತ್ರ ಮಾಡುತ್ತಾರೆಯೋ ಅಂತಹವನನ್ನು ಪೂಜಿಸಲು ಯಾವನು ಬಯಸುವುದಿಲ್ಲ?
ತಸ್ಮಾದ್ ಬುಭೂಷುರ್ನಿಯತೋ ಜಿತಾತ್ಮಾ ಸಂಯತೇಂದ್ರಿಯಃ |
ಮೇಧಾವೀ ಸ್ಮೃತಿಮಾನ್ ದಕ್ಷಃ ಸಂಶ್ರಯೇತ ಮಹೀಪತಿಮ್ ॥55॥
ಆದ್ದರಿಂದ ತನ್ನ ಕಲ್ಯಾಣವನ್ನು ಬಯಸುವವನು ನಿಯಮದಿಂದ ಕೂಡಿ ಇಂದ್ರಿಯಜಯವನ್ನು ಹಾಗೂ ಮನೋಜಯವನ್ನು ಹೊಂದಿದವನಾಗಿ ಮೇಧಾವಿ- ಯಾಗಿ, ದಕ್ಷನಾಗಿ ಒಳ್ಳೆಯ ಸ್ಮೃತಿಯನ್ನು ಹೊಂದಿ ರಾಜನನ್ನು ಆಶ್ರಯಿಸಬೇಕು.
ಕೃತಜ್ಞಂ ಪ್ರಾಜ್ಞಮಕ್ಷುದ್ರಂ ದೃಢಭಕ್ತಿಂ ಜಿತೇಂದ್ರಿಯಮ್ |
ಧರ್ಮನಿತ್ಯಂ ಸ್ಥಿತಂ ಸ್ಥಿತ್ಯಾಂ ಮಂತ್ರಿಣಂ ಪೂಜಯೇನ್ನೃಪಃ ॥56॥
ರಾಜನಾದರೋ ಕೃತಜ್ಞನೂ, ಪ್ರಾಜ್ಞನೂ, ಕ್ಷುದ್ರತನವಿಲ್ಲದವನೂ, ತನ್ನಲ್ಲಿ ದೃಢಭಕ್ತಿಯುಳ್ಳವನೂ, ಜಿತೇಂದ್ರಿಯನೂ, ನಿತ್ಯವೂ ಧರ್ಮರತನೂ, ಒಳ್ಳೆಯ ಸ್ಥಿತಿವಂತನೂ ಆದ ಮಂತ್ರಿಯನ್ನು ಪೂಜಿಸಬೇಕು.
ದೃಢಭಕ್ತಿಂ ಕೃತಪ್ರಜ್ಞಂ ಧರ್ಮಜ್ಞಂ ಸಂಯತೇಂದ್ರಿಯಮ್ |
ಶೂರಮಕ್ಷುದ್ರಕರ್ಮಾಣಂ ಪ್ರಸಿದ್ಧಜನಮಾಶ್ರಯೇತ್ ॥57॥
ಮತ್ತು ದೃಢಭಕ್ತಿಯುಳ್ಳ, ಸ್ಥಿತಪ್ರಜ್ಞನಾದ, ಧರ್ಮಜ್ಞನಾದ, ಇಂದ್ರಿಯ ಜಯವುಳ್ಳ, ಉದಾರಕರ್ಮವನ್ನು ಮಾಡುವ, ಶೂರನಾದ, ಪ್ರಸಿದ್ಧನಾದ ಪ್ರಜೆಯನ್ನು(ಪ್ರಜೆಗಳನ್ನು) ಆಶ್ರಯಿಸಬೇಕು.
ರಾಜಾ ಪ್ರಗಲ್ಭಂ ಪುರುಷಂ ಕರೋತಿ
ರಾಜಾ ಕೃಶಂ ಬೃಂಹಯತೇ ಮನುಷ್ಯಮ್ |
ರಾಜಾಭಿಪನ್ನಸ್ಯ ಕುತಃ ಸುಖಾನಿ
ರಾಜಾಭ್ಯುಪೇತಂ ಸುಖಿನಂ ಕರೋತಿ ॥58॥
ರಾಜನು ಒಬ್ಬ ಸಾಮಾನ್ಯಪುರುಷನನ್ನು ವಿದ್ವಾಂಸನನ್ನಾಗಿ ಮಾಡುತ್ತಾನೆ. ಕೃಶ- ನಾದ ಪುರುಷನನ್ನು ಅಭಿವೃದ್ಧಿಪಡಿಸುತ್ತಾನೆ. ರಾಜನಿಗೆ ವಿರೋಧ ಮಾಡಿದರೆ ಸುಖವು ಎಲ್ಲಿಂದ ಬಂದೀತು? ರಾಜನು ತನ್ನನ್ನು ಆಶ್ರಯಿಸಿದವರನ್ನು ಸುಖಿಗಳನ್ನಾಗಿ ಮಾಡುತ್ತಾನೆ.
ರಾಜಾ ಪ್ರಜಾನಾಂ ಪ್ರಥಮಂ ಶರೀರಂ
ಪ್ರಜಾಶ್ಚ ರಾಜ್ಞೋಽಪ್ರತಿಮಂ ಶರೀರಮ್ |
ರಾಜ್ಞಾ ವಿಹೀನಾ ನ ಭವಂತಿ ದೇಶಾ
ದೇಶೈರ್ವಿಹೀನಾ ನ ನೃಪಾ ಭವಂತಿ ॥59॥
ರಾಜನು ಪ್ರಜೆಗಳಿಗೆ ಶ್ರೇಷ್ಠವಾದ ಶರೀರದಂತಿರುವವನು. ಪ್ರಜೆಗಳೂ ಸಹ ರಾಜನಿಗೆ ಅಸದೃಶವಾದ ಶರೀರದಂತೆ. ರಾಜನಿಲ್ಲದೆ ದೇಶಗಳು ಉಳಿಯುವುದಿಲ್ಲ. ದೇಶಗಳಿಲ್ಲದೆ ರಾಜನೂ ಉಳಿಯುವುದಿಲ್ಲ.
ನರಾಧಿಪಶ್ಚಾಪ್ಯನುಶಿಷ್ಯ ಮೇದಿನೀಂ
ದಮೇನ ಸತ್ಯೇನ ಚ ಸೌಹೃದೇನ |

ಮಹದ್ಭಿರಿಷ್ಟ್ವಾ ಕ್ರತುಭಿರ್ಮಹಾಯಶಾಃ
ತ್ರಿವಿಷ್ಟಪೇ ಸ್ಥಾನಮುಪೈತಿ ಸತ್ಕೃತಮ್ ॥60॥
ರಾಜರು ಭೂಮಿಯನ್ನು ಇಂದ್ರಿಯನಿಗ್ರಹದಿಂದಲೂ, ಸತ್ಯದಿಂದಲೂ ಮತ್ತು ಪ್ರೀತಿಯಿಂದಲೂ ಆಳಿ ಮಹಾಯಜ್ಞಗಳನ್ನು ಆಚರಿಸಿ, ಸ್ವರ್ಗಲೋಕದಲ್ಲಿ ಗೌರವ ಯುತವಾದ ಸ್ಥಾನವನ್ನು ಹೊಂದುತ್ತಾರೆ.
ಸ ಏವಮುಕ್ತೋ ಗುರುಣಾ ಕೌಸಲ್ಯೋ ರಾಜಸತ್ತಮಃ |
ಪ್ರಯತ್ನಾತ್ ಕೃತವಾನ್ ವೀರಃ ಪ್ರಜಾನಾಂ ಪರಿಪಾಲನಮ್ ॥61॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಸಪ್ತತಿತಮೋಽಧ್ಯಾಯಃ ॥69॥
ಬೃಹಸ್ಪತ್ಯಾಚಾರ್ಯರಿಂದ ಹೀಗೆ ಹೇಳಲ್ಪಟ್ಟ ಕೋಸಲಾಧಿಪತಿಯಾದ, ರಾಜ- ಶ್ರೇಷ್ಠನಾದ, ವೀರನಾದ ವಸುಮನನು ಪ್ರಜೆಗಳ ಪರಿಪಾಲನೆಯ ವಿಷಯದಲ್ಲಿ ಬಹಳ ಪ್ರಯತ್ನವನ್ನು ಮಾಡಿದನು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 69ನೆಯ ಅಧ್ಯಾಯವು ಮುಗಿಯಿತು.
0
70. ಎಪ್ಪತ್ತನೆಯ ಅಧ್ಯಾಯ
ಯುದ್ಧಕಾಲದಲ್ಲಿ ಮತ್ತು ಕ್ಷೇಮಕಾಲದಲ್ಲಿ ರಾಜವೃತ್ತಕಥನ
ಯುಧಿಷ್ಠಿರಃ
ಪಾರ್ಥಿವೇನ ವಿಶೇಷೇಣ ಕಿಂ ಕಾರ್ಯಮವಶಿಷ್ಯತೇ |
ಕಥಂ ರಕ್ಷ್ಯೋ ಜನಪದಃ ಕಥಂ ವಧ್ಯಾಶ್ಚ ಶತ್ರವಃ ॥1॥
ಕಥಂ ಚಾರಂ ಪ್ರಯುಂಜೀತ ವರ್ಣಾನ್ ವಿಶ್ವಾಸಯೇತ್ ಕಥಮ್ |
ಕಥಂ ಭೃತ್ಯಾನ್ ಕಥಂ ದಾರಾನ್ ಕಥಂ ಪುತ್ರಾಂಶ್ಚ ಭಾರತ ॥2॥
ಯುಧಿಷ್ಠಿರ ಎಲೈ ಭಾರತನೇ! ರಾಜನಾದವನು ವಿಶೇಷವಾಗಿ ಮಾಡಬೇಕಾದ ಕಾರ್ಯವು ಯಾವುದು? ರಾಜ್ಯವನ್ನು ಹೇಗೆ ರಕ್ಷಿಸಬೇಕು? ಮತ್ತು ಶತ್ರುಗಳನ್ನು ಹೇಗೆ ಸಂಹರಿಸಬೇಕು? ಚಾರರನ್ನು ಹೇಗೆ ನಿಯೋಜಿಸಬೇಕು? ನಾಲ್ಕು ವರ್ಣದ- ವರನ್ನು ಹೇಗೆ ವಿಶ್ವಾಸಪಾತ್ರರನ್ನಾಗಿ ಮಾಡಬೇಕು? ಭೃತ್ಯರನ್ನು, ಪತ್ನಿಯರನ್ನು ಮತ್ತು ಪುತ್ರರನ್ನು ಹೇಗೆ ನೋಡಿಕೊಳ್ಳಬೇಕು?
ಭೀಷ್ಮಃ
ರಾಜವೃತ್ತಂ ಮಹಾರಾಜ ಶೃಣುಷ್ವಾವಹಿತೋಽಖಿಲಮ್ |
ಯತ್ ಕಾರ್ಯಂ ಪಾರ್ಥಿವೇನಾದೌ ಪಾರ್ಥಿವಪ್ರಕೃತೇನ ವಾ ॥3॥
ಭೀಷ್ಮರು ಎಲೈ ಮಹಾರಾಜನೇ! ರಾಜನಾದವನು ಅಥವಾ ರಾಜನ ಸಪ್ತ- ಪ್ರಕೃತಿಗಳಲ್ಲಿ ಸೇರಿದ ಅಮಾತ್ಯಮೊದಲಾದವರು ಮೊದಲು ಏನು ಮಾಡಬೇಕೆಂಬ ರಾಜವೃತ್ತವನ್ನು ಸಮಗ್ರವಾಗಿ ಅವಧಾನದಿಂದ ಕೇಳು.
ಆತ್ಮಾ ಜೇಯಃ ಸದಾ ರಾಜ್ಞಾ ತತೋ ಜೇಯಾಶ್ಚ ಶತ್ರವಃ |
ಅಜಿತಾತ್ಮಾ ನರಪತಿರ್ವಿಜಯೇತ ಕಥಂ ಪರಾನ್ ॥4॥
ರಾಜನು ಮೊದಲು ತನ್ನನ್ನು ತಾನು ಜಯಿಸಿಕೊಳ್ಳಬೇಕು. ಅನಂತರ ಶತ್ರುವನ್ನು ಜಯಿಸಬೇಕು. ತನ್ನನ್ನೇ ಜಯಿಸಿಕೊಳ್ಳಲಾರದ ರಾಜನು ಇನ್ನೊಬ್ಬರನ್ನು ಹೇಗೆ ಜಯಿಸಿಯಾನು?
ಏತಾವಾನಾತ್ಮಜಿತಃ ಪಂಚವರ್ಗವಿನಿಗ್ರಹಃ |
ಜಿತೇಂದ್ರಿಯೋ ನರಪತಿರ್ಬಾಧಿತುಂ ಶಕ್ನುಯಾದರೀನ್ ॥5॥
ತನ್ನನ್ನು ತಾನು ಜಯಿಸುವುದು ಎಂದರೆ ಶಬ್ದಸ್ಪರ್ಶಾದಿಪಂಚವರ್ಗವನ್ನು ನಿಯಂತ್ರದಲ್ಲಿಟ್ಟುಕೊಳ್ಳುವುದು ಎಂದರ್ಥ. ಎಂದರೆ ಜಿತೇಂದ್ರಿಯನಾಗಿರಬೇಕು ಎಂದರ್ಥ. ಜಿತೇಂದ್ರಿಯನಾದ ರಾಜನು ಶತ್ರುಗಳನ್ನು ಬಾಧಿಸಲು ಸಮರ್ಥ- ನಾದಾನು!
ನ್ಯಸೇತ ಗುಲ್ಮಾನ್ ದುರ್ಗೇಷು ಸಂಧೌ ಚ ಕುರುನಂದನ |
ನಗರೋಪವನೇ ಚೈವ ಪುರೋದ್ಯಾನೇಷು ಚೈವ ಹ ॥6॥
ಸಂಸ್ಥಾನೇಷು ಚ ಸರ್ವೇಷು ಕುಟೇಷು ನಗರಸ್ಯ ಚ |
ಮಧ್ಯೇ ಚ ನರಶಾರ್ದೂಲ ತಥಾ ರಾಜನಿವೇಶನೇ ॥7॥
ಎಲೈ ಕುರುನಂದನನೇ! ಕೋಟೆಗಳಲ್ಲಿ, ಆಯಕಟ್ಟಿನ ಪ್ರದೇಶದಲ್ಲಿ, ನಗರದ ಬಾಹ್ಯವನಗಳಲ್ಲಿ, ನಗರದ ಒಳಗಿರುವ ಉದ್ಯಾನವನಗಳಲ್ಲಿ, ಎಲ್ಲ ಪ್ರಾಂತಗಳಲ್ಲಿ, ನಗರದ ಮಧ್ಯ ಮತ್ತು ಬೇರೆ ಬೇರೆ ಭಾಗಗಳಲ್ಲಿ, ಅರಮನೆಯಲ್ಲಿ, ಸೈನ್ಯದ ತುಕಡಿಗಳನ್ನು ನಿಯೋಜಿಸಬೇಕು.
ಪ್ರಣಧೀಂಶ್ಚ ತತಃ ಕುರ್ಯಾಜ್ಜಡಾಂಧಬಧಿರಾಕೃತೀನ್ |
ಪುಂಸಃ ಪರೀಕ್ಷಿತಾನ್ ಪ್ರಾಜ್ಞಾನ್ ಕ್ಷುತ್ಪಿಪಾಸಾತಪಕ್ಷಮಾನ್ ॥8॥
ಅನಂತರ ಪರೀಕ್ಷಿತರಾದ, ಪ್ರಾಜ್ಞರಾದ, ಹಸಿವು ನೀರಡಿಕೆ ಮತ್ತು ಬಿಸಿಲು- ಗಳನ್ನು ತಡೆಯಲು ಸಮರ್ಥರಾದ, ಜಡಾಂಧಬಧಿರರ ಆಕೃತಿಯನ್ನು ಧರಿಸಿದ ಗೂಢಚಾರರನ್ನು ನಿಯೋಜಿಸಬೇಕು.
ಅಮಾತ್ಯೇಷು ಚ ಸರ್ವೇಷು ಮಿತ್ರೇಷು ತ್ರಿವಿಧೇಷು ಚ |
ಪುತ್ರೇಷು ಚ ಮಹಾರಾಜ ಪ್ರಣಿದಧ್ಯಾತ್ ಸಮಾಹಿತಃ ॥9॥
ಎಲೈ ಮಹಾರಾಜನೇ! ಅಮಾತ್ಯರು, ಎಲ್ಲ ಸ್ನೇಹಿತರು, ಶತ್ರುಮಿತ್ರ ಉದಾ- ಸೀನರು, ಪುತ್ರರು ಎಲ್ಲರಲ್ಲಿಯೂ ಗೂಢಚಾರರನ್ನು ನಿಯಮಿಸಬೇಕು.

ಪುರೇ ಜನಪದೇ ಚೈವ ತಥಾ ಸಾಮಂತರಾಜಸು |
ಯಥಾ ನ ವಿದ್ಯುರನ್ಯೋನ್ಯಂ ಪ್ರಣಿಧೇಯಾಸ್ತಥಾ ಹಿ ತೇ ॥10॥
ಹಾಗೆಯೇ ರಾಜಧಾನಿಯಲ್ಲಿಯೂ, ಸಾಮಂತರಾಜರಲ್ಲಿಯೂ, ಬೇರೆ ಬೇರೆ ಭಾಗಗಳಲ್ಲಿಯೂ ಗೂಢಚಾರರು ಪರಸ್ಪರವಾಗಿ ತಿಳಿಯದಂತೆ ಅವರನ್ನು ನಿಯೋ- ಜಿಸಬೇಕು.
ಚಾರಾಂಶ್ಚ ವಿದ್ಯಾತ್ ಪ್ರಹಿತಾನ್ ಪರೇಣ ಭರತರ್ಷಭ |
ಆಪಣೇಷು ವಿಹಾರೇಷು ಸಮವಾಯೇಷು ಭಿಕ್ಷುಷು ॥11॥
ಆರಾಮೇಷು ತಥೋದ್ಯಾನೇ ಪಂಡಿತಾನಾಂ ಸಮಾಗಮೇ |
ವೇಶೇಷು ಚತ್ವರೇ ಚೈವ ಸಭಾಸ್ವಾವಸಥೇಷು ಚ ॥12॥
ಎಲೈ ಭರತರ್ಷಭನೇ! ಮಾರುಕಟ್ಟೆಗಳಲ್ಲಿ, ವಿಹಾರಸ್ಥಾನಗಳಲ್ಲಿ, ಜನಗಳ ಗುಂಪುಗಳಲ್ಲಿ, ಭಿಕ್ಷುಕರ ಸಮೂಹದಲ್ಲಿ, ಉದ್ಯಾನವನಗಳಲ್ಲಿ, ಉಪವನಗಳಲ್ಲಿ, ಪಂಡಿತರ ಸಮೂಹದಲ್ಲಿ, ವೇಶ್ಯಾವಾಟಿಕೆಗಳಲ್ಲಿ, ಸಭೆಗಳಲ್ಲಿ, ಮನೆಗಳಲ್ಲಿ ಮತ್ತು ಚತ್ವರಗಳಲ್ಲಿ ಪರರಾಜರು ನೇಮಿಸಿರಬಹುದಾದ ಗೂಢಚಾರರನ್ನು ತಿಳಿದುಕೊಳ್ಳ- ಬೇಕು.
ಏವಂ ವಿಹನ್ಯಾಚ್ಚಾರೇಣ ಪರಚಾರಂ ವಿಚಕ್ಷಣಃ |
ಚಾರೇಣ ವಿಹಿತಂ ಸರ್ವಂ ಹತಂ ಭವತಿ ಪಾಂಡವ ॥13॥
ವಿಚಕ್ಷಣನಾದವನು ಈ ರೀತಿಯಲ್ಲಿ ಇನ್ನೊಬ್ಬರ ಚಾರರನ್ನು ತನ್ನ ಚಾರರಿಂದ ನಾಶಗೊಳಿಸಬೇಕು. ಎಲೈ ಪಾಂಡವನೇ! ಚಾರರಿಂದ ಹತರಾದರೆ ಎಲ್ಲವೂ (ವಿರೋಧವೆಲ್ಲವೂ) ಹತವಾಗುತ್ತದೆ.
ಯದಾ ತು ಹೀನಂ ನೃಪತಿರ್ವಿದ್ಯಾದಾತ್ಮಾನಮಾತ್ಮನಾ |
ಅಮಾತ್ಯೈಃ ಸಹ ಸಮ್ಮಂತ್ರ್ಯ ಕುರ್ಯಾತ್ ಸಂಧಿಂ ಬಲೀಯಸಾ ॥14॥
ಯಾವಾಗ ರಾಜನು ಬಲಿಷ್ಠನಾದ ಶತ್ರುವಿಗಿಂತ ತಾನು ಹೀನನಾಗಿದ್ದೇನೆಂದು ಭಾವಿಸುವನೋ ಆಗ ಅಮಾತ್ಯರ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಿ ಬಲಿಷ್ಠರಾಜನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳಬೇಕು.
ವಿದ್ವಾಂಸಃ ಕ್ಷತ್ರಿಯಾ ವೈಶ್ಯಾ ಬ್ರಾಹ್ಮಣಾಶ್ಚ ಬಹುಶ್ರುತಾಃ |
ದಂಡನೀತೌ ತು ನಿಷ್ಪನ್ನಾ ಮಂತ್ರಿಣಃ ಪೃಥಿವೀಪತೇಃ ॥15॥
ವಿದ್ವಾಂಸರೂ, ಬಹುಶ್ರುತರೂ, ದಂಡನೀತಿಯಲ್ಲಿ ನಿಪುಣರೂ ಆದ ಬ್ರಾಹ್ಮಣರು. ಕ್ಷತ್ರಿಯರು ಮತ್ತು ವೈಶ್ಯರು ರಾಜನಿಗೆ ಮಂತ್ರಿಗಳಾಗುತ್ತಾರೆ.
ಪ್ರಷ್ಟವ್ಯೋ ಬ್ರಾಹ್ಮಣಃ ಪೂರ್ವಂ ನೀತಿಶಾಸ್ತ್ರಾರ್ಥತತ್ತ್ವವಿತ್ |
ಪಶ್ಚಾತ್ ಪೃಚ್ಛೇತ ಭೂಪಾಲಂ ಕ್ಷತ್ರಿಯಂ ನೀತಿಕೋವಿದಮ್ |
ವೈಶ್ಯಶೂದ್ರೌ ತಥಾ ಭೂಯಃ ಶಾಸ್ತ್ರಜ್ಞೌ ಹಿತಕಾರಿಣೌ ॥16॥
ಮಂತ್ರಾಲೋಚನೆಯ ಸಂದರ್ಭದಲ್ಲಿ ನೀತಿಶಾಸ್ತ್ರತತ್ವವನ್ನು ತಿಳಿದ ಬ್ರಾಹ್ಮಣ- ನನ್ನು ಮೊದಲು ಕೇಳಬೇಕು. ಅನಂತರ ನೀತಿಕೋವಿದನಾದ ಕ್ಷತ್ರಿಯನಾದ ರಾಜ- ನನ್ನು ಕೇಳಬೇಕು. ಅನಂತರ ಹಿತಕಾರಿಗಳಾದ ಶಾಸ್ತ್ರಜ್ಞರಾದ ವೈಶ್ಯಶೂದ್ರರನ್ನು ಪುನಃ ಕೇಳಬೇಕು.
ಅಜ್ಞಾಯಮಾನೇ ಹೀನತ್ವೇ ಕುರ್ಯಾತ್ ಸಂಧಿಂ ಪರೇಣ ವೈ |
ಲಿಪ್ಸುರ್ವಾ ಕಂಚಿದೇವಾರ್ಥಂ ತ್ವರಮಾಣೋ ವಿಚಕ್ಷಣಃ ॥17॥
ತನ್ನ ದೌರ್ಬಲ್ಯವು ಶತ್ರುವಿಗೆ ತಿಳಿಯುವುದಕ್ಕಿಂತ ಮೊದಲೇ ಅಥವಾ ಶತ್ರು - ರಾಜನಿಂದ ಏನಾದರೂ ಪ್ರಯೋಜನವನ್ನು ಪಡೆಯಬೇಕಾಗಿದ್ದಲ್ಲಿ ವಿಚಕ್ಷಣನಾದ- ವನು ಶತ್ರುವಿನ ಜೊತೆಯಲ್ಲಿ ಮೊದಲೇ ಸಂಧಿಯನ್ನು ಮಾಡಿಕೊಳ್ಳಬೇಕು.
ಗುಣವಂತೋ ಮಹೋತ್ಸಾಹಾ ಧರ್ಮಜ್ಞಾಃ ಸಾಧವಶ್ಚ ಯೇ |
ಸಂದಧೀತ ನೃಪಸ್ತೈಶ್ಚ ರಾಷ್ಟ್ರಂ ಧರ್ಮೇಣ ಪಾಲಯನ್ ॥18॥
ಧರ್ಮದಿಂದ ರಾಜ್ಯವನ್ನು ಪಾಲಿಸುವ ರಾಜನು, ತನ್ನ ದೌರ್ಬಲ್ಯಾದಿಗಳನ್ನು ಗಮನಿಸದೇ ಗುಣವಂತರೂ ಮಹೋತ್ಸಾಹಭರಿತರೂ ಧರ್ಮಜ್ಞರೂ ಸಾಧು- ಸ್ವಭಾವದವರೂ ಆದ ರಾಜರ ಜೊತೆಯಲ್ಲಿ ಯಾವಾಗಲೂ ಸಂಧಿಯನ್ನು ಮಾಡಿ- ಕೊಳ್ಳಬೇಕು.
ಉಚ್ಛಿದ್ಯಮಾನಮಾತ್ಮಾನಂ ಜ್ಞಾತ್ವಾ ರಾಜಾ ಮಹಾಮತಿಃ |
ಪೂರ್ವಾಪಕಾರಿಣೋ ಹನ್ಯಾಲ್ಲೋಕದ್ವಿಷ್ಟಾಂಶ್ಚ ಸರ್ವಶಃ ॥19॥
ಮಹಾಬುದ್ಧಿಯುಳ್ಳ ರಾಜನು ತನ್ನ ಪ್ರಾಣಕ್ಕೆ ಅಪಾಯವಿದೆಯೆಂದು ಗೂಢ- ಚಾರರ ಮೂಲಕ ತಿಳಿದ ತತ್ಕ್ಷಣ ಹಿಂದೆ ತನಗೆ ಅಪಕಾರಮಾಡಿದವರನ್ನು ಮತ್ತು ಪ್ರಜೆಗಳ ದ್ವೇಷಿಗಳನ್ನು ಸಂಪೂರ್ಣವಾಗಿ ನಾಶಗೊಳಿಸಬೇಕು.
ಯೋ ನೋಪಕರ್ತುಂ ಶಕ್ನೋತಿ ನಾಪಕರ್ತುಂ ಮಹೀಪತಿಃ |
ಅಶಕ್ಯರೂಪಶ್ಚೋದ್ಧರ್ತುಮುಪೇಕ್ಷ್ಯಸ್ತಾದೃಶೋ ಭವೇತ್ ॥20॥
ಯಾವ ರಾಜನು ಪ್ರಜೆಗಳಿಗೆ ಉಪಕಾರವನ್ನಾಗಲೀ ಅಥವಾ ಅಪಕಾರವನ್ನಾ- ಗಲೀ ಮಾಡಲು ಅಸಮರ್ಥನೋ ಮತ್ತು ತಿದ್ದಲು ಸಾಧ್ಯವಿಲ್ಲದವನೋ ಅಂತಹವನನ್ನು ಪ್ರಜೆಗಳು ಉಪೇಕ್ಷೆ ಮಾಡುತ್ತಾರೆ.
ಯಾತ್ರಾಯಾಂ ಯದಿ ವಿಜ್ಞಾತಮನಾಕ್ರಂದಮನಂತರಮ್ |
ವ್ಯಾಸಕ್ತಂ ಚ ಪ್ರಮತ್ತಂ ಚ ದುರ್ಬಲಂ ಚ ವಿಚಕ್ಷಣಃ ॥21॥
ಯಾತ್ರಾಮಾಜ್ಞಾಪಯೇದ್ ವೀರಃ ಕಲ್ಯಪುಷ್ಟಬಲಃ ಸುಖೀ |
ಪೂರ್ವಂ ಕೃತ್ವಾ ವಿಧಾನಂ ಚ ಯಾತ್ರಾಯಾಂ ನಗರೇ ತಥಾ |
ಅಂತಃಪುರೇ ಚ ರಾಷ್ಟ್ರೇ ಚ ಅಧ್ಯಕ್ಷೇಷು ಚ ಸರ್ವಶಃ ॥22॥

ತನ್ನ ಯುದ್ಧಯಾತ್ರೆಯು ಶತ್ರುವಿಗೆ ತಿಳಿದರೆ ಆಗ ಯೋಧರನ್ನು ಯುದ್ಧ- ಪ್ರಸಂಗವಿಲ್ಲದಂತೆ ಸುಮ್ಮನಾಗಿಸಬೇಕು. ವಿಚಕ್ಷಣನಾದ ರಾಜನು ತನ್ನ ಶತ್ರುವು ಬೇರೆಯ ಕಾರ್ಯದಲ್ಲಿ ನಿರತನಾಗಿದ್ದಾನೆಂದು, ಪ್ರಮಾದದಿಂದ ಕೂಡಿದ್ದಾನೆಂದು, ಅಥವಾ ದುರ್ಬಲನೆಂದು ತಿಳಿದಾಗ ತಾನು ಶ್ರೇಷ್ಠವಾದ, ಪುಷ್ಟವಾದ ಸೈನ್ಯವುಳ್ಳ- ವನಾಗಿ ವೀರನಾಗಿ, ಸುಖಿಯಾಗಿ ಯಾತ್ರೆಯನ್ನು ಆಜ್ಞಾಪಿಸಬೇಕು. ಅದಕ್ಕಿಂತ ಮೊದಲು ನಗರದಲ್ಲಿಯೂ, ಅಂತಃಪುರದಲ್ಲಿಯೂ, ರಾಷ್ಟ್ರದಲ್ಲಿಯೂ, ಪ್ರಧಾನ ಪುರುಷರಲ್ಲಿಯೂ ಸರ್ವರಕ್ಷಣೆಯ ವ್ಯವಸ್ಥೆಯನ್ನು ಮಾಡಿ ಅನಂತರ ಯಾತ್ರೆಯನ್ನು ಆಜ್ಞಾಪಿಸಬೇಕು.

ನ ಚ ವಶ್ಯೋ ಭವೇದಸ್ಯ ನೃಪೋ ಯದ್ಯಪಿ ವೀರ್ಯವಾನ್ |
ಹೀನಶ್ಚ ಬಲವೀರ್ಯಾಭ್ಯಾಂ ಕರ್ಶಯಂಸ್ತತ್ಪರೋ ವಸೇತ್ ॥23॥

ತನಗಿಂತ ಪರಾಕ್ರಮಶಾಲಿಯಾದ ರಾಜನು ತನಗೆ ವಶನಾಗದಿದ್ದರೂ, ಹೀನ- ನಾದ ರಾಜನು ತನ್ನ ಸಾಮರ್ಥ್ಯ ಮತ್ತು ಪರಾಕ್ರಮಗಳಿಂದ ಅವನನ್ನು ನಿಧಾನವಾಗಿ ಪೀಡಿಸುತ್ತಾ, ಅವನ ಜೊತೆಯಲ್ಲಿ ಸ್ನೇಹವನ್ನೇ ಹೊಂದಿ ಸಮಯವನ್ನು ನಿರೀಕ್ಷಿಸ- ಬೇಕು.

ರಾಷ್ಟ್ರಂ ಚ ಪೀಡಯೇತ್ ತಸ್ಯ ಶಸ್ತ್ರಾಗ್ನಿವಿಷಮೂರ್ಚ್ಛನೈಃ |
ಅಮಾತ್ಯವಲ್ಲಭಾನಾಂ ಚ ವಿವಾದಾಂಸ್ತಸ್ಯ ಕಾರಯೇತ್ |
ವರ್ಜನೀಯಂ ಸದಾ ಯುದ್ಧಂ ರಾಜ್ಯಕಾಮೇನ ಧೀಮತಾ ॥24॥

ಅಂತಹ ಶತ್ರುವಿನ ರಾಷ್ಟ್ರವನ್ನು ಶಸ್ತ್ರಾಗ್ನಿವಿಷಪ್ರಯೋಗಗಳಿಂದ ಪೀಡಿಸಬೇಕು. ಅವನ ಅಮಾತ್ಯರಿಗೂ ಮತ್ತು ಪ್ರಿಯರಾದವರಿಗೂ ವಿವಾದಗಳನ್ನು ಉಂಟು ಮಾಡಬೇಕು. ಮೇಧಾವಿಯಾದ, ರಾಜ್ಯವನ್ನು ಬಯಸುವ ರಾಜನು ಯುದ್ಧವನ್ನು ಯಾವಾಗಲೂ ವರ್ಜಿಸಬೇಕು.

ಉಪಾಯೈಸ್ತ್ರಿಭಿರಾದಾನಮರ್ಥಸ್ಯಾಹ ಬೃಹಸ್ಪತಿಃ |
ಸಾಂತ್ವೇನಾನುಪ್ರದಾನೇನ ಭೇದೇನ ಚ ನರಾಧಿಪ |
ಯಮರ್ಥಂ ಶಕ್ನುಯಾತ್ ಪ್ರಾಪ್ತುಂ ತೇನ ತುಷ್ಯೇದ್ಧಿ ಪಂಡಿತಃ ॥25॥

ಎಲೈ ರಾಜನೇ! ಬೃಹಸ್ಪತಿಗಳು ಸಾಮ, ದಾನ ಮತ್ತು ಭೇದ ಈ ಮೂರೂ ಉಪಾಯಗಳಿಂದ ಅರ್ಥದ ಸಂಪಾದನೆಯನ್ನು ಹೇಳಿದ್ದಾರೆ. ಈ ಮೂರು ಉಪಾಯ -ಗಳಿಂದ ಎಷ್ಟು ಧನವನ್ನು ಸಂಪಾದಿಸಲು ಸಾಧ್ಯವೋ ಅದರಿಂದ ವಿವೇಕಿಯಾದ- ವನು ತೃಪ್ತಿಪಡಬೇಕು.

ಆದದೀತ ಬಲಿಂ ಚೈವ ಪ್ರಜಾಭ್ಯಃ ಕುರುನಂದನ |
ಷಡ್ಭಾಗಮಮಿತಪ್ರಜ್ಞಸ್ತಾಸಾಮೇವಾಭಿಗುಪ್ತಯೇ ॥26॥

ಎಲೈ ಕುರುನಂದನನೇ! ಅಮಿತಪ್ರಜ್ಞೆಯುಳ್ಳ ರಾಜನು ಪ್ರಜೆಗಳ ಆದಾಯದ ಆರನೆಯ ಒಂದು ಭಾಗವನ್ನು ಪ್ರಜೆಗಳ ರಕ್ಷಣೆಗಾಗಿಯೇ ಅವರಿಂದ ಕರವಾಗಿ ತೆಗೆದುಕೊಳ್ಳಬೇಕು.

ದಶಾಧರ್ಮಗತೇಭ್ಯೋ ಯದ್ ವಸು ಬಹ್ವಲ್ಪಮೇವ ಚ |
ತಾನ್ನಾದದೀತ ಸಹಸಾ ಪೌರಾಣಾಂ ರಕ್ಷಣಾಯ ವೈ ॥27॥

ನಿಧಾನವಾಗಿ ತೈಲವನ್ನು ಎಳೆದು ಉರಿಯುವ ದೀಪದ ಬತ್ತಿಯಂತೆ ರಾಜನು ಪ್ರಜೆಗಳಿಂದ ಅಲ್ಪವಾದ ಅಥವಾ ಬಹುವಾದ ಧನವನ್ನು ಒಟ್ಟಿಗೆ ತೆಗೆದುಕೊಳ್ಳದೆ ಅವರ ರಕ್ಷಣೆಗಾಗಿಯೇ ನಿಧಾನವಾಗಿ ತೆಗೆದುಕೊಳ್ಳಬೇಕು.

ಯಥಾ ಪುತ್ರಸ್ತಥಾ ಪೌರಾ ದ್ರಷ್ಟವ್ಯಾಸ್ತೇ ನ ಸಂಶಯಃ |
ಭಕ್ತಿಶ್ಚೈಷಾಂ ಪ್ರಕರ್ತವ್ಯಾ ವ್ಯವಹಾರೇ ಪ್ರದರ್ಶಿತೇ ॥28॥

ರಾಜನು ಪ್ರಜೆಗಳನ್ನು ತನ್ನ ಪುತ್ರರಂತೆಯೇ ನೋಡಿಕೊಳ್ಳಬೇಕು ಎಂಬ ವಿಷಯದಲ್ಲಿ ಸಂಶಯವಿಲ್ಲ. ಕ್ರಯವಿಕ್ರಯಾದಿ ವ್ಯವಹಾರಗಳಲ್ಲಿ ಯಾರಲ್ಲಿಯೂ ಪಕ್ಷಪಾತವನ್ನು ಮಾಡಬಾರದು.

ಸುತಂ ಚ ಸ್ಥಾಪಯೇದ್ ರಾಜಾ ಪ್ರಾಜ್ಞಂ ಸರ್ವಾರ್ಥದರ್ಶಿನಮ್ |
ವ್ಯವಹಾರೇಷು ಸತತಂ ತತ್ರ ರಾಜ್ಯಂ ವ್ಯವಸ್ಥಿತಮ್ ॥29॥

ರಾಜನು ತನ್ನ ವ್ಯವಹಾರಗಳಲ್ಲಿ ಸರ್ವಾರ್ಥವನ್ನು ತಿಳಿದು ಪ್ರಾಜ್ಞನಾದ ತನ್ನ ಪುತ್ರನನ್ನು ಸತತವಾಗಿ ಸ್ಥಾಪಿಸಬೇಕು. ಏಕೆಂದರೆ, ರಾಜ್ಯವು ಮುಂದೆ ಅವನಲ್ಲಿಯೇ ಹೋಗುವುದಿದೆ.

ಆಕರೇ ಲವಣೇ ಶುಲ್ಕೇ ತರೇ ನಾಗವನೇ ತಥಾ |
ನ್ಯಸೇದಮಾತ್ಯಾನ್ ನೃಪತಿಃ ಸ್ವಾಪ್ತಾನ್ ವಾ ಪುರುಷಾನ್ ಹಿತಾನ್ ॥30॥

ಗಣಿಗಳಲ್ಲಿ, ಲವಣವನ್ನು ಉತ್ಪಾದಿಸುವ ಸ್ಥಳದಲ್ಲಿ, ತೆರಿಗೆಯನ್ನು ತೆಗೆದು- ಕೊಳ್ಳುವ ಸ್ಥಳದಲ್ಲಿ, ನದಿಗಳನ್ನು ದಾಟಿಸುವ ನೌಕಾದಿಸ್ಥಳಗಳಲ್ಲಿ, ಗಜಸೇನೆ- ಯಲ್ಲಿ ರಾಜನು ತನಗೆ ಆಪ್ತರೂ ಹಿತರೂ ಆದ ಪುರುಷರನ್ನು ಅಮಾತ್ಯರನ್ನಾಗಿ ನೇಮಿಸಬೇಕು.

ಸಮ್ಯಗ್ ದಂಡಧರೋ ನಿತ್ಯಂ ರಾಜಾ ಧರ್ಮಮವಾಪ್ನುಯಾತ್ |
ನೃಪಸ್ಯ ಸತತಂ ದಂಡಃ ಸಮ್ಯಗ್ ಧರ್ಮೇ ಪ್ರಶಸ್ಯತೇ ॥31॥

ಸರಿಯಾದ ರೀತಿಯಲ್ಲಿ ದಂಡವನ್ನು ನಿತ್ಯವೂ ವಿಧಿಸುವ ರಾಜನು ಧರ್ಮವನ್ನು ಗಳಿಸುತ್ತಾನೆ. ರಾಜನು ಸತತವಾಗಿ ದಂಡಧರನಾಗಿರುವುದು ಧರ್ಮಶಾಸ್ತ್ರದಲ್ಲಿ ಪ್ರಶಂಸಿಲ್ಪಡುತ್ತದೆ.

ವೇದವೇದಾಂಗವಿತ್ ಪ್ರಾಜ್ಞಃ ಸುತಪಸ್ವೀ ನೃಪೋ ಭವೇತ್ |
ದಾನಶೀಲಶ್ಚ ಸತತಂ ಯಜ್ಞಶೀಲಶ್ಚ ಭಾರತ ॥32॥

ಎಲೈ ಭಾರತನೇ! ರಾಜನು ವೇದವೇದಾಂಗತತ್ತ್ವಜ್ಞನೂ, ಪ್ರಾಜ್ಞನೂ, ಸತತ- ವಾಗಿ ತಪಸ್ವಿಯೂ, ದಾನಶೀಲನೂ ಮತ್ತು ಯಜ್ಞಶೀಲನೂ ಆಗಿರಬೇಕು.

ಏತೇ ಗುಣಾಃ ಸಮಸ್ತಾಃ ಸ್ಯುರ್ನೃಪಸ್ಯ ಸತತಂ ಸ್ಥಿರಾಃ |

ಕ್ರಿಯಾಲೋಪೇ ತು ನೃಪತೇಃ ಕುತಃ ಸ್ವರ್ಗಃ ಕುತೋ ಯಶಃ ॥33॥
ಈ ಎಲ್ಲ ಗುಣಗಳೂ ರಾಜನಲ್ಲಿ ಸ್ಥಿರವಾಗಿ, ಸತತವಾಗಿ ಇರಬೇಕು. ರಾಜನಿಗೆ ಕ್ರಿಯಾಲೋಪವುಂಟಾದರೆ ಅವನಿಗೆ ಸ್ವರ್ಗವಾಗಲೀ ಅಥವಾ ಈ ಲೋಕದಲ್ಲಿ ಕೀರ್ತಿಯಾಗಲೀ ಎಲ್ಲಿಂದ ಬಂದೀತು?
ಯದಾ ತು ಪೀಡಿತೋ ರಾಜಾ ಭವೇದ್ ರಾಜ್ಞಾ ಬಲೀಯಸಾ |
ತ್ರಿಧಾ ತ್ವಾಕೃಂದ್ಯ ಮಿತ್ರಾಣಿ ವಿಧಾನಮುಪಕಲ್ಪಯೇತ್ |
ತದಾಽಭಿಸಂಶ್ರಯೇದ್ ದುರ್ಗಂ ಬುದ್ಧಿಮಾನ್ ಪೃಥಿವೀಪತಿಃ ॥34॥
ರಾಜನು ಬಲಿಷ್ಠನಾದ ರಾಜನಿಂದ ಪೀಡಿತನಾದಾಗ ಮಿತ್ರರ ಜೊತೆಯಲ್ಲಿ ಮೂರು ಬಾರಿ ಮಂತ್ರಾಲೋಚನೆಯನ್ನು ಮಾಡಿ, ಮಾಡಬೇಕಾದ ವಿಧಿಯನ್ನು ನಿರ್ಧರಿಸಬೇಕು. ಬುದ್ಧಿವಂತನಾದ ರಾಜನು ಆಗ ಕೋಟೆಯನ್ನು ಆಶ್ರಯಿಸಬೇಕು.
ಘೋಷಾನ್ ನ್ಯಸೇತ ಮಾರ್ಗೇಷು ಗ್ರಾಮಾನುತ್ಥಾಪಯೇದಪಿ |
ಪ್ರವೇಶಯೇಚ್ಚ ತಾನ್ ಸರ್ವಾನ್ ಶಾಖಾನಗರಕೇಷ್ವಪಿ ॥35॥
ಶತ್ರುಗಳು ಬರುವ ಮಾರ್ಗದಲ್ಲಿ ಘೋಷಗಳನ್ನು (ಗೋಪಾಲರ ಹಳ್ಳಿಗಳನ್ನು) ನಿರ್ಮಿಸಬೇಕು. ಉಳಿದ ಗ್ರಾಮಗಳನ್ನು ಶೂನ್ಯಗೊಳಿಸಬೇಕು. ಆ ಗ್ರಾಮಸ್ಥರೆಲ್ಲ- ರನ್ನೂ ನಗರದ ಬಾಹ್ಯ ಉಪನಗರಗಳಲ್ಲಿ ನೆಲೆಸುವಂತೆ ಮಾಡಬೇಕು.
ಯೇ ಗುಪ್ತಾಶ್ಚೈವ ದುರ್ಗಾಶ್ಚ ದೇಶಾಸ್ತೇಷು ಪ್ರವೇಶಯೇತ್ |
ಧನಿನೋ ಬಲಮುಖ್ಯಾಂಶ್ಚ ಸಾಂತ್ವಯಿತ್ವಾ ಪುನಃ ಪುನಃ ॥36॥
ಶ್ರೀಮಂತರನ್ನು ಮತ್ತು ಸೇನಾನಾಯಕರನ್ನು ಪುನಃ ಪುನಃ ಸಮಾಧಾನಗೊಳಿಸಿ ರಕ್ಷಿತವಾದ ಕೋಟೆಗಳಲ್ಲಿಯೂ ಮತ್ತು ಬೇರೆ ದುರ್ಗಮವಾದ ಪ್ರದೇಶಗಳ- ಲ್ಲಿಯೂ ಪ್ರವೇಶಿಸುವಂತೆ ಮಾಡಬೇಕು.
ಸಸ್ಯಾಪಹಾರಂ ಕುರ್ಯಾಚ್ಚ ಸ್ವಯಮೇವ ನರಾಧಿಪಃ |
ಅಸಂಭವೇ ಪ್ರವೇಶಸ್ಯ ದಾಹಯೇದಗ್ನಿನಾ ಭೃಶಮ್ ॥37॥
ಶತ್ರುವಿನ ದೇಶದ ಸಸ್ಯಗಳ ವಿನಾಶವನ್ನು ತಾನು(ನೇ) ಮಾಡಿಸಬೇಕು. ಶತ್ರುಗಳ ದೇಶದಲ್ಲಿ ಪ್ರವೇಶಿಸಲು ಸಾಧ್ಯವಾಗದಿದ್ದರೆ ತನ್ನ ಚಾರರ ಮೂಲಕ ಶತ್ರುಗಳ ದೇಶದಲ್ಲಿ ಕಡಿದು ಶೇಖರಿಸಿಟ್ಟ ಬೆಳೆಗಳಿಗೆ ಬೆಂಕಿಯನ್ನು ಕೊಡಬೇಕು.
ಕ್ಷೇತ್ರಸ್ಥೇಷು ಚ ಸಸ್ಯೇಷು ಶತ್ರೋರುಪಜಪೇನ್ನರಾನ್ |
ವಿನಾಶಯೇದ್ ವಾ ಸರ್ವಸ್ವಂ ಬಲೇನಾಥ ಸ್ವಕೇನ ವೈ ॥38॥
ನದೀಷು ಮಾರ್ಗೇಷು ಸದಾ ಸಂಕ್ರಮಾನವಸಾದಯೇತ್ |
ಜಲಂ ನಿಸ್ರಾವಯೇತ್ ಸರ್ವಮನಿಸ್ರಾವ್ಯಂ ಚ ದೂಷಯೇತ್ ॥39॥
ಶತ್ರುವಿನ ಸಮೀಪಸ್ಥ ಜನರಲ್ಲಿ ಒಡಕ್ಕನ್ನುಂಟುಮಾಡಬೇಕು. ಅಥವಾ ತನ್ನ ಸೈನ್ಯದಿಂದ ಶತ್ರುವಿನ ಸರ್ವಸ್ವವನ್ನು ನಾಶಗೊಳಿಸಬೇಕು. ನದಿಗಳಲ್ಲಿ ಮತ್ತು ಮಾರ್ಗಗಳಲ್ಲಿರುವ ಸೇತುವೆಗಳನ್ನು ಭಗ್ನಗೊಳಿಸಬೇಕು. ಶೇಖರಿಸಿರುವ ಜಲವನ್ನು ಹೊರಗೆ ಹರಿಯುವಂತೆ ಮಾಡಬೇಕು. ಹೊರಗೆ ಹರಿಸಲಾಗದ ಜಲವನ್ನು ವಿಷಾದಿ- ಗಳಿಂದ ದೂಷಿಸಬೇಕು.
ತದಾತ್ವೇನಾಯತೀಭಿಶ್ಚ ನಿವಸೇದ್ ಭೂಮ್ಯನಂತರಮ್ |
ಪ್ರತೀಘಾತಃ ಪರಸ್ಯಾಜೌ ಯುದ್ಧಕಾಲೇಽಪ್ಯುಪಸ್ಥಿತೇ ॥40॥
ಆ ಕಾಲದಲ್ಲಿಯೂ ಮತ್ತು ಉತ್ತರಕಾಲದಲ್ಲಿಯೂ ದೇಶದ ಪ್ರಾಂತಭಾಗಕ್ಕೆ ಹೋಗದೆ ದೇಶದ ಮಧ್ಯದಲ್ಲಿಯೇ ವಾಸಿಸಬೇಕು. ಯುದ್ಧಕಾಲವು ಪ್ರಾಪ್ತವಾದಾಗ ಶತ್ರುವಿಗೆ ಪ್ರತಿಘಾತವನ್ನುಂಟು ಮಾಡಬೇಕು.
ದ್ರುಮಾಣಾಂ ಚಾಭಿತೋ ರಾಜಾ ಮೂಲಚ್ಛೇದಂ ಪ್ರಕಾರಯೇತ್ |
ಸರ್ವೇಷಾಂ ಕ್ಷುದ್ರವೃಕ್ಷಾಣಾಂ ಚೈತ್ಯವೃಕ್ಷಾನ್ ವಿವರ್ಜಯೇತ್ ॥41॥
ರಾಜನು ಸುತ್ತಲೂ ಇರುವ ಮರಗಳನ್ನು ಬುಡದಲ್ಲಿಯೇ ಕತ್ತರಿಸಬೇಕು. ಆದರೆ ಪೂಜಾವೃಕ್ಷಗಳನ್ನು ಮತ್ತು ದೇವಸ್ಥಾನದ ವೃಕ್ಷಗಳನ್ನು ಬಿಡಬೇಕು.
ಪ್ರವೃದ್ಧಾನಾಂ ಚ ವೃಕ್ಷಾಣಾಂ ಶಾಖಾಃ ಪ್ರಚ್ಛೇದಯೇತ್ ತಥಾ |
ಚೈತ್ಯಾನಾಂ ಸರ್ವಥಾ ವರ್ಜ್ಯಮಪಿ ಪತ್ರಸ್ಯ ಪಾತನಮ್ ॥42॥
ವೃಕ್ಷಗಳು ಬಹಳ ದೊಡ್ಡದಾಗಿದ್ದರೆ ಅವುಗಳ ಕೊಂಬೆಗಳನ್ನು ಮಾತ್ರ ಕತ್ತರಿಸ- ಬೇಕು. ಆದರೆ ಪೂಜಾವೃಕ್ಷದ ಒಂದು ಎಲೆಯನ್ನೂ ಕತ್ತರಿಸಬಾರದು.
ದೈವಾನಾಮಾಶ್ರಯಾಶ್ಚೈತ್ಯಾ ಯಕ್ಷರಾಕ್ಷಸಭೋಗಿನಾಮ್ |
ಪಿಶಾಚಪನ್ನಗಾನಾಂ ಚ ಗಂಧರ್ವಾಪ್ಸರಸಾಮಪಿ ॥43॥
ರೌದ್ರಾಣಾಂ ಚೈವ ಭೂತಾನಾಂ ತಸ್ಮಾತ್ ತಾನ್ ಪರಿವರ್ಜಯೇತ್ |
ಶ್ರೂಯತೇ ಹಿ ನಿಕುಂಭೇನ ಸೌದಾಸಸ್ಯ ಬಲಂ ಹತಮ್ |
ಮಹೇಶ್ವರಗಣೇಶೇನ ವಾರಾಣಸ್ಯಾಂ ನರಾಧಿಪ ॥44॥
ಚೈತ್ಯವೃಕ್ಷಗಳು ದೇವತೆಗಳಿಗೆ, ಯಕ್ಷರಿಗೆ, ರಾಕ್ಷಸರಿಗೆ, ಸರ್ಪಗಳಿಗೆ, ಪಿಶಾಚಿ- ಗಳಿಗೆ, ಗಂಧರ್ವಾಪ್ಸರಸರಿಗೆ, ಭಯಂಕರವಾದ ಭೂತಗಳಿಗೆ ಆಶ್ರಯವಾಗಿ- ರುತ್ತವೆ. ಆದ್ದರಿಂದ ಅವುಗಳನ್ನು ವರ್ಜಿಸಬೇಕು. ಎಲೈ ರಾಜನೇ! ಚೈತ್ಯವೃಕ್ಷವನ್ನು ಕತ್ತರಿಸಿದ ಕಾರಣದಿಂದಾಗಿ ಸೌದಾಸನ ಸೈನ್ಯವು ಮಹೇಶ್ವರನ ಗಣನಾಯಕನಾದ ನಿಕುಂಭನಿಂದ ವಾರಾಣಸಿಯಲ್ಲಿ ವಿನಾಶವನ್ನು ಹೊಂದಿತು ಎಂದು ನಾವು ಕೇಳಿ- ದ್ದೇವೆ.
ಪ್ರಖಂಡೀಃ ಕಾರಯೇದ್ ಸಮ್ಯಗಾಕಾಶಜನನೀಸ್ತಥಾ |
ಆಪೂರಯೇಚ್ಚ ಪರಿಖಾಂ ಸ್ಥಾಣುನಕ್ರಝಷಾಕುಲಾಃ ॥45॥

ಕೋಟೆಗಳಲ್ಲಿ ತುರ್ತುಪರಿಸ್ಥಿತಿಯಲ್ಲಿ ಹೊರಗೆ ಹೋಗಲು ಕಿಂಡಿಗಳನ್ನು ನಿರ್ಮಿಸಬೇಕು. ಮೀನು ಮೊಸಳೆಗಳಿಂದ ಕಂದಕಗಳನ್ನು ತುಂಬಬೇಕು. (ಕಲ್ಲು ಮತ್ತು ಮರಗಳಿಂದ ತುಂಬಬೇಕು).
ಸಂಕಟದ್ವಾರಕಾಣಿ ಸ್ಯುರುಚ್ಛ್ವಾಸಾರ್ಥೇ ಪುರಸ್ಯ ಹ |
ತೇಷಾಂ ಚ ದ್ವಾರವದ್ ಗುಪ್ತಿಃ ಕಾರ್ಯಾ ಸರ್ವಾತ್ಮನಾ ಭವೇತ್ ॥46॥
ಆಪತ್ತಿನ ಸಮಯದಲ್ಲಿ ನಗರದಿಂದ ಹೊರಗೆ ಹೋಗಲು ತುರ್ತುದ್ವಾರ- ಗಳನ್ನು ನಿರ್ಮಿಸಬೇಕು. ಮಹಾದ್ವಾರವನ್ನು ಕಾಯ್ದಂತೆಯೇ ಅಂತಹ ದ್ವಾರಗಳ ಬಳಿಯಲ್ಲಿಯೂ ಸಹ ಸರ್ವಾತ್ಮನಾ ರಕ್ಷಣಾಕಾರ್ಯವನ್ನು ಮಾಡಬೇಕು.
ದ್ವಾರೇಷು ಚ ಗುರೂಣ್ಯೇವ ಯಂತ್ರಾಣಿ ಸ್ಥಾಪಯೇತ್ ಸದಾ |
ಆರೋಪಯೇಚ್ಛತಘ್ನೀಶ್ಚ ಸ್ವಾಧೀನಾ ಏವ ಕಾರಯೇತ್ ॥50॥
ಎಲ್ಲ ದ್ವಾರಗಳಲ್ಲಿಯೂ ಭಾರವಾದ ಯಂತ್ರಗಳನ್ನು ಜೋಡಿಸಬೇಕು. ಶತಘ್ನೀ- ಗಳನ್ನು ಏರಿಸಿ ಅವುಗಳನ್ನು ಸ್ವಾಧೀನವಾಗಿಟ್ಟುಕೊಳ್ಳಬೇಕು.
ಕಾಷ್ಠಾನಿ ಚಾಭಿಹಾರ್ಯಾಣಿ ತಥಾ ಕೂಪಾಂಶ್ಚ ಖಾನಯೇತ್ |
ಸಂಶೋಧಯೇತ್ ತಥಾ ಕೂಪಾನ್ ಕೃತಾನ್ ಪೂರ್ವಂ ಪಯೋರ್ಥಿಭಿಃ ॥
ನಗರದ ಒಳಗೆ ಕಾಷ್ಠಗಳನ್ನು ಶೇಖರಿಸಬೇಕು. ಭಾವಿಗಳನ್ನು ತೋಡಿಸಬೇಕು. ಜಲಾರ್ಥಿಗಳು ಹಿಂದೆ ತೋಡಿಸಿ ಮುಚ್ಚಿಹೋದ ಭಾವಿಗಳನ್ನು ಶೋಧಿಸಬೇಕು.
ತೃಣಾಚ್ಛನ್ನಾನಿ ವೇಶ್ಮಾನಿ ಪಂಕೇನಾಪಿ ಪ್ರಲೇಪಯೇತ್ |
ನಿರ್ಹರೇಚ್ಚ ತೃಣಂ ಮಾಸೇ ಚೈತ್ರೇ ವಹ್ನಿಭಯಾತ್ ಪುರಃ ॥49॥
ಹುಲ್ಲಿನ ಛಾವಣಿಗಳಿರುವ ಮನೆಗಳನ್ನು ಕೆಸರಿನಿಂದಾದರೂ ಲೇಪಿಸಬೇಕು. ಪಟ್ಟಣಕ್ಕೆ ಉಂಟಾಗಬಹುದಾದ ವಹ್ನಿಯ ಭಯದಿಂದ ಚೈತ್ರಮಾಸದಲ್ಲಿ ಛಾವಣಿ- ಗಳ ಹುಲ್ಲನ್ನು ತೆಗೆಸಬೇಕು.
ನಕ್ತಮೇವ ಚ ಭಕ್ತಾನಿ ಪಾಚಯೇತ ನರಾಧಿಪಃ |
ನ ದಿವಾಽಗ್ನಿರ್ಜ್ವಲೇದ್ ಗೇಹೇ ವರ್ಜಯಿತ್ವಾಽಗ್ನಿಹೋತ್ರಿಕಮ್ ॥50॥
ರಾಜನಾದವನು ರಾತ್ರಿಯಲ್ಲಿಯೇ ಅಡಿಗೆಯನ್ನು ಮಾಡಿಸಬೇಕು. ಅಗ್ನಿ- ಹೋತ್ರದ ಅಗ್ನಿಯನ್ನು ಬಿಟ್ಟು ಬೇರೆ ಯಾವ ಅಗ್ನಿಯೂ ಹಗಲಿನಲ್ಲಿ ಮನೆಗಳಲ್ಲಿ ಜ್ವಲಿಸಬಾರದು.
ಸಂಭವೇ ಸತಿ ಶೈಲಾನಿ ಐಷ್ಟಕಾನಿ ಚ ಕಾರಯೇತ್ |
ಮೃನ್ಮಯಾನಿ ಚ ಕುರ್ವೀತ ಜ್ಞಾತ್ವಾ ದೇಶೇ ಬಲಾಬಲಮ್ ॥51॥
ದ್ರವ್ಯಾದಿಅನುಕೂಲವಿದ್ದರೆ ಕಲ್ಲುಗಳ, ಇಟ್ಟಿಗೆಗಳ ಅಥವಾ ಮಣ್ಣಿನ ಗೋಪುರ -ಗಳನ್ನು ಆ ಸ್ಥಳದ ಬಲಾಬಲಗಳನ್ನು ತಿಳಿದು ನಿರ್ಮಿಸಬೇಕು.
ಕರ್ಮಾರಾರಿಷ್ಟಶಾಲಾಸು ಜ್ವಲೇದಗ್ನಿಃ ಸಮಾಹಿತಃ |
ಗೃಹಾಣಿ ಚ ಪ್ರವಿಶ್ಯಾಥ ಪಿಧೇಯಃ ಸ್ಯಾದ್ಹುತಾಶನಃ ॥52॥
ಕಮ್ಮಾರನ ಮನೆಯಲ್ಲಿ ಮತ್ತು ಸೂತಿಕಾಗೃಹದಲ್ಲಿ ಅಗ್ನಿಯು ನಿರಾತಂಕವಾಗಿ ಜ್ವಲಿಸಬಹುದು. ಗೃಹಗಳನ್ನು ಪ್ರವೇಶಿಸಿದ ಮೇಲೆ ಒಳಗೆ ಅಗ್ನಿಯು ಉರಿಯುತ್ತಿದ್ದರೆ ಅದನ್ನು ಭಸ್ಮಾದಿಗಳಿಂದ ಮುಚ್ಚಬೇಕು.
ಮಹಾದಂಡಶ್ಚ ತಸ್ಯ ಸ್ಯಾದ್ ಯಸ್ಯಾಗ್ನಿರ್ವೈ ದಿವಾ ಭವೇತ್ |
ಪ್ರಘೋಷಯೇದಥೈವಂ ಚ ರಕ್ಷಣಾರ್ಥಂ ಪುರಸ್ಯ ವೈ ॥53॥
ಪುರವನ್ನು ರಕ್ಷಿಸುವುದಕ್ಕೋಸ್ಕರ ಹಗಲಿನಲ್ಲಿ ಯಾರು ಅಗ್ನಿಯನ್ನು ಉರಿಸು- ತ್ತಾರೆಯೋ ಅವರಿಗೆ ದೊಡ್ಡ ದಂಡವನ್ನು ವಿಧಿಸುತ್ತೇನೆ ಎಂದು ಘೋಷಣೆಯನ್ನು ಮಾಡಿಸಬೇಕು.
ಭಿಕ್ಷುಕಾಂಶ್ಚಾಕ್ರಿಕಾಂಶ್ಚೈವ ಕ್ಷೀಬೋನ್ಮತ್ತಾನ್ ಕುಶೀಲವಾನ್ |
ಬಾಹ್ಯಾನ್ ಕುರ್ಯಾನ್ನರಶ್ರೇಷ್ಠ ದೋಷಾಯ ಸ್ಯುರ್ಹಿ ತೇಽನ್ಯಥಾ ॥54॥
ಎಲೈ ನರಶ್ರೇಷ್ಠನೇ! (ಯುದ್ಧಕಾಲದಲ್ಲಿ) ಭಿಕ್ಷುಕರನ್ನು, ಜ್ಯೋತಿಷಕರನ್ನು, ಪಾನಮತ್ತರನ್ನು, ಹುಚ್ಚರನ್ನು, ನಟರನ್ನು ನಗರದಿಂದ ಹೊರಗೆ ಕಳುಹಿಸಬೇಕು. ಇಲ್ಲದಿದ್ದರೆ ದೋಷವುಂಟಾದೀತು.
ಚತ್ವರೇಷು ಚ ತೀರ್ಥೇಷು ಸಭಾಸ್ವಾವಸಥೇಷು ಚ |
ಯಥಾರ್ಹವರ್ಣಂ ಪ್ರಣಿಧಿಂ ಕುರ್ಯಾನ್ಮಾಯಾವಿಶಾರದಮ್ ॥55॥
ಚೌಕಗಳಲ್ಲಿ (ಚತುಷ್ಪಥಗಳಲ್ಲಿ), ತೀರ್ಥಗಳಲ್ಲಿ, ಸಭೆಗಳಲ್ಲಿ ಮತ್ತು ಗೃಹ- ಗಳಲ್ಲಿ ಮಾಯಾವಿಶಾರದರಾದ ಸಮಯಕ್ಕೆ ತಕ್ಕಂತೆ ಜಾತಿಯನ್ನು ಬದಲಾಯಿಸಿ- ಕೊಳ್ಳುವ ಗೂಢಚಾರರನ್ನು ನೇಮಿಸಬೇಕು (ಗೂಢಚಾರನು ಬ್ರಾಹ್ಮಣರಲ್ಲಿ ಬ್ರಾಹ್ಮಣನಂತೆಯೂ, ಕ್ಷತ್ರಿಯರಲ್ಲಿ ಕ್ಷತ್ರಿಯನಂತೆಯೂ, ವೈಶ್ಯರಲ್ಲಿ ವೈಶ್ಯರಂತೆಯೂ, ಶೂದ್ರನಲ್ಲಿ ಶೂದ್ರನಂತೆಯೂ ವರ್ತಿಸಬೇಕು. ಅದಕ್ಕಾಗಿ ಅವನು ಮಾಯಾ- ವಿಶಾರದನಾಗಿರಬೇಕು. ಅಂತಹ ಗೂಢಚಾರರಿಗೆ ಯಥಾರ್ಹವರ್ಣ ಎಂದು ಹೆಸರು ಲಕ್ಷಾಲಂಕಾರ).
ವಿಶಾಲಾನ್ ರಾಜಮಾರ್ಗಾಂಶ್ಚ ಕಾರಯೇತ ನರಾಧಿಪಃ |
ಪ್ರಪಾಶ್ಚ ವಿಪಣೀಶ್ಚೈವ ಯಥೋದ್ದೇಶಂ ಸಮಾದಿಶೇತ್ ॥56॥
ರಾಜನಾದವನು ವಿಶಾಲವಾದ ರಾಜಮಾರ್ಗಗಳನ್ನು, ಪಾನಶಾಲೆಗಳನ್ನು, ಅಂಗಡಿಯ ಸಾಲುಗಳನ್ನು ಯೋಗ್ಯವಾದ ಉನ್ನತ ಸ್ಥಳಗಳಲ್ಲಿ ನಿರ್ಮಿಸುವಂತೆ ಆದೇಶ ಕೊಡಬೇಕು.
ಭಾಂಡಾಗಾರಾಯುಧಾಗಾರಾನ್ ಧಾನ್ಯಾಗಾರಾಂಶ್ಚ ಸರ್ವಶಃ |
ಅಶ್ವಾಗಾರಾನ್ ಗಜಾಗಾರಾನ್ ಬಲಾಧಿಕರಣಾನಿ ಚ ॥57॥

ಪಾತ್ರೆಗಳ ಉಗ್ರಾಣ (ಅಶ್ವಾದಿವಾಹನಗಳ ಆಭರಣಗಳ ಉಗ್ರಾಣ), ಆಯುಧ -ಗಳ ಉಗ್ರಾಣ, ಧಾನ್ಯಗಳ ಉಗ್ರಾಣ, ಅಶ್ವಶಾಲೆಗಳು, ಗಜಶಾಲೆಗಳು, ಸೇನಾ- ನಿವೇಶಸ್ಥಳಗಳು ಇವುಗಳನ್ನು ಅನೇಕ ಕಡೆ ನಿರ್ಮಿಸಬೇಕು.
ಪರಿಖಾಶ್ಚೈವ ಕೌರವ್ಯ ಪ್ರತೋಲೀಃ ನಿಷ್ಕುಟಾನಿ ಚ |
ನ ಜಾತು ಕಶ್ಚಿತ್ ಪಶ್ಯೇತ್ ತು ಗುಹ್ಯಮೇತದ್ ಯುಧಿಷ್ಠಿರ ॥58॥
ಎಲೈ ಕೌರವ್ಯನೇ! ಯುಧಿಷ್ಠಿರನೇ! ಕಂದಕಗಳು, ರಥಮಾರ್ಗಗಳು, ಬಾಣ- ಪ್ರಯೋಗವನ್ನು ಅಭ್ಯಾಸ ಮಾಡುವ ರಂಧ್ರಗಳು ಇವುಗಳನ್ನು ರಾಜನು ಗೋಪ್ಯ- ವಾಗಿಡಬೇಕು. ಇವುಗಳನ್ನು ಯಾರೂ ನೋಡಬಾರದು.
ಅಥ ಸನ್ನಿಚಯಂ ಕುರ್ಯಾದ್ ರಾಜಾ ಪರಬಲಾರ್ದಿನಃ |
ತೈಲಂ ಮಧು ಘೃತಂ ಸಸ್ಯಮೌಷಧಾನಿ ಚ ಸರ್ವಶಃ ॥59॥
ಶತ್ರುಸೈನ್ಯದ ಪೀಡೆಗೆ ಒಳಗಾದ ರಾಜನು ತೈಲ, ಮಧು, ಘೃತ, ಸಸ್ಯ, ಎಲ್ಲ ರೀತಿಯ ಔಷಧಿಗಳು ಇವುಗಳ ಸಂಗ್ರಹವನ್ನು ಮಾಡಿರಬೇಕು.
ಅಂಗಾರಕುಶಮುಂಜಾನಾಂ ಪಲಾಶಶರಪರ್ಣಿನಾಮ್ |
ಯವಸೇಂಧನದಿಗ್ಧಾನಾಂ ಕಾರಯೇತ ಚ ಸಂಚಯಾನ್ ॥60॥
ಇದ್ದಿಲು, ಕುಶ, ಮುಂಜ ಎಂಬ ಹುಲ್ಲು, ಪಲಾಶಪತ್ರಗಳು, ಬಾಣಗಳು, ಉಪಯೋಗಿಸುವ ಪರ್ಣಗಳುಳ್ಳ ಲತೌಷಧಿಗಳು, ಗೋವುಗಳ ಆಹಾರ ಇವು- ಗಳನ್ನು ಸಂಗ್ರಹಿಸಿ ಅವುಗಳನ್ನು ಹುಲ್ಲುಗಳಿಂದ ಅಥವಾ ಕಟ್ಟಿಗೆಗಳಿಂದ ಮುಚ್ಚಬೇಕು.
ಆಯುಧಾನಾಂ ಚ ಸರ್ವೇಷಾಂ ಶಕ್ತ್ಯೃಷ್ಟಿಪ್ರಾಸವರ್ಮಣಾಮ್ |
ಸಂಚಯಾನೇವಮಾದೀನಾಂ ಕಾರಯೇತ ನರಾಧಿಪಃ ॥61॥
ರಾಜನು ಇದೇ ರೀತಿಯಲ್ಲಿ ಶಕ್ತಿ, ಋಷ್ಟಿ, ಪ್ರಾಸ ಮೊದಲಾದ ಎಲ್ಲಾ ಆಯುಧಗಳ ಮತ್ತು ಕವಚಗಳ ಸಂಗ್ರಹವನ್ನು ಮಾಡಿಸಬೇಕು.
ಔಷಧಾನಿ ಚ ಸರ್ವಾಣಿ ಮೂಲಾನಿ ಚ ಫಲಾನಿ ಚ |
ಚತುರ್ವಿಧಾಂಶ್ಚ ವೈದ್ಯಾನ್ ವೈ ಸಂಗೃಹ್ಣೀಯಾದ್ ವಿಶೇಷತಃ ॥62॥
ಎಲ್ಲ ಔಷಧಿಗಳನ್ನೂ, ಮೂಲಫಲಗಳನ್ನೂ, ವಿಶೇಷವಾಗಿ ಅಶ್ವವೈದ್ಯ ಗಜವೈದ್ಯ ನರವೈದ್ಯ ಮತ್ತು ಶಸ್ತ್ರವೈದ್ಯರನ್ನು ಸಂಗ್ರಹಿಸಬೇಕು.
ನಟಾಶ್ಚ ನರ್ತಕಾಶ್ಚೈವ ಮಲ್ಲಾ ಮಾಯಾವಿನಸ್ತಥಾ |
ಶೋಭಯೇಯುಃ ಪುರವರಂ ಮೋದಯೇಯುಶ್ಚ ಸರ್ವಶಃ ॥63॥
ನಟರೂ, ನರ್ತಕರೂ, ಜಟ್ಟಿಗಳೂ, ಮಾಯಾವಿಗಳೂ ಪುರಕ್ಕೆ ಶೋಭೆಯನ್ನು ತಂದು ಪ್ರಜೆಗಳನ್ನು ಎಲ್ಲ ರೀತಿಯಿಂದಲೂ ಸಂತೋಷಪಡಿಸುವಂತೆ ಮಾಡಬೇಕು.
ಯತಃ ಶಂಕಾ ಭವೇಚ್ಚಾಪಿ ಭೃತ್ಯತೋ ವಾಪಿ ಮಂತ್ರಿತಃ |
ಪೌರೇಭ್ಯೋ ನೃಪತೇರ್ವಾಪಿ ಸ್ವಾಧೀನಾನ್ ಕಾರಯೇತ ತಾನ್ ॥64॥
ಯಾರಿಂದ ಶಂಕೆಯುಂಟಾಗುತ್ತದೆಯೋ ಅವನು ಭೃತ್ಯನಾಗಲೀ, ಮಂತ್ರಿ- ಯಾಗಲೀ ಪ್ರಜೆಯಾಗಲೀ ಅಥವಾ ಸಾಮಂತರಾಜನೇ ಆಗಲಿ ಅವನನ್ನು ತನ್ನ
ಅಧೀನಕ್ಕೆ ತೆಗೆದುಕೊಂಡು ಬಂಧಿಸಬೇಕು.
ಕೃತೇ ಕರ್ಮಣಿ ರಾಜೇಂದ್ರ ಪೂಜಯೇದ್ ಧನಸಂಚಯೈಃ |
ಮಾನೇನ ಚ ಯಥಾರ್ಹೇಣ ಸಾಂತ್ವೇನ ವಿವಿಧೇನ ಚ ॥65॥
ಕಾರ್ಯವನ್ನು ಮಾಡಿದವನಿಗೆ ಧನಸಂಚಯವನ್ನು ಕೊಟ್ಟು ಅವನನ್ನು ಪೂಜಿಸ -ಬೇಕು. ಅವನಿಗೆ ಯೋಗ್ಯವಾದ ಸನ್ಮಾನವನ್ನು ಮತ್ತು ಅನೇಕ ವಿಧವಾದ ಸಾಂತ್ವನ (ಮಾತುಗಳನ್ನು) ನೀಡಬೇಕು.
ನಿರ್ವೇದಯಿತ್ವಾ ತು ಪರಂ ಹತ್ವಾ ವಾ ಕುರುನಂದನ |
ಗತಾನೃಣ್ಯೋ ಭವೇದ್ ರಾಜಾ ಯಥಾ ಶಾಸ್ತ್ರೇಷು ದರ್ಶಿತಮ್ ॥66॥
ಎಲೈ ಕುರುನಂದನನೇ! ಶತ್ರುವಿಗೆ ವೈರಾಗ್ಯಬರುವಂತೆ ಮಾಡಿ ಅಥವಾ ಅವನನ್ನು ಕೊಂದು ರಾಜನು ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ ಋಣಮುಕ್ತನಾಗ- ಬೇಕು.
ರಾಜ್ಞಾ ಸಪ್ತೈವ ರಕ್ಷ್ಯಾಣಿ ತಾನಿ ಚಾಪಿ ನಿಬೋಧ ಮೇ |
ಆತ್ಮಾಽಮಾತ್ಯಾಶ್ಚ ಕೋಶಶ್ಚ ದಂಡೋ ಮಿತ್ರಾಣಿ ಚೈವ ಹಿ ॥67॥
ತಥಾ ಜನಪದಶ್ಚೈವ ಪುರಂ ಚ ಕುರುನಂದನ |
ಏತತ್ ಸಪ್ತಾತ್ಮಕಂ ರಾಜ್ಯಂ ಪರಿಪಾಲ್ಯಂ ಪ್ರಯತ್ನತಃ ॥68॥
ರಾಜನು ಈ ಏಳುಪದಾರ್ಥಗಳನ್ನು ರಕ್ಷಿಸಬೇಕು. ಅವುಗಳನ್ನು ನನ್ನಿಂದ ಕೇಳು, ಎಲೈ ಕುರುನಂದನನೇ! ಅವು ತಾನು, ಅಮಾತ್ಯ, ಕೋಶ, ದಂಡ, ಮಿತ್ರರು, ಜನ- ಪದ(ದೇಶ) ಮತ್ತು ಪುರ (ರಾಜಧಾನಿ) - ಈ ಸಪ್ತಾಂಗಯುಕ್ತವಾದ ರಾಜ್ಯವನ್ನು ಪ್ರಯತ್ನಪೂರ್ವಕವಾಗಿ ಚೆನ್ನಾಗಿ ರಕ್ಷಿಸಬೇಕು.
ಷಾಡ್ಗುಣ್ಯಂ ಚ ತ್ರಿವರ್ಗಂ ಚ ತ್ರಿವರ್ಗಮಪರಂ ತಥಾ |
ಯೋ ವೇತ್ತಿ ಪುರುಷವ್ಯಾಘ್ರ ಸ ಭುನಕ್ತಿ ಮಹೀಮಿಮಾಮ್ ॥69॥
ಎಲೈ ಪುರುಷವ್ಯಾಘ್ರನೇ! ಯಾವನುಷಾಡ್ಗುಣ್ಯವನ್ನು, ತ್ರಿವರ್ಗವನ್ನು ಮತ್ತು ಇನ್ನೊಂದು ತ್ರಿವರ್ಗವನ್ನು ತಿಳಿದಿರುತ್ತಾನೆಯೋ ಅವನು ಈ ಭೂಮಿಯನ್ನು ಭೋಗಿಸುತ್ತಾನೆ.
ಷಾಡ್ಗುಣ್ಯಮಿತಿ ಯತ್ ಪ್ರೋಕ್ತಂ ತನ್ನಿಬೋಧ ಯುಧಿಷ್ಠಿರ |
ಸಂಧಾನಾಸನಮಿತ್ಯೇವ ಯಾತ್ರಾಸಂಧಾನಮೇವ ಚ ॥70॥

ವಿಗೃಹ್ಯಾಸನಮಿತ್ಯೇವ ಯಾತ್ರಾ ಸಂಪರಿಗೃಹ್ಯ ಚ |
ದ್ವೈಧೀಭಾವಸ್ತಥಾನ್ಯೇಷಾಂ ಸಂಶ್ರಯೋಽಥ ಪರಸ್ಯ ಚ ॥71॥
ಎಲೈ ಯುಧಿಷ್ಠಿರನೇ! ನಾನು ಷಾಡ್ಗುಣ್ಯವೆಂದು ಹೇಳಿದ ವಿಷಯವನ್ನು ಕೇಳು. ಸಂಧಾನಾಸನ (ಸಂಧಿಯ ಸಲುವಾಗಿ ತನ್ನ ಪಟ್ಟಣದಲ್ಲಿಯೇ ವಾಸವನ್ನು ಮಾಡು- ವುದು. ಇದು ಮಹಾಶಕ್ತಿವಂತನ ಗುಣ). ಯಾತ್ರಾಸಂಧಾನ (ಪರರಾಷ್ಟ್ರಕ್ಕೆ ಯಾತ್ರೆ- ಯನ್ನು ಮಾಡಿ ಸಂಧಿಯನ್ನು ಮಾಡಿಕೊಳ್ಳುವುದು), ವಿಗೃಹ್ಯಾಸನ (ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡಿ ಕೋಟೆಯ ಬಳಿ ಜಯ ದೊರೆಯುವವರೆಗೆ ಕುಳಿತಿರುವುದು), ಸಂಪರಿಗೃಹ್ಯ ಯಾತ್ರಾ (ಶತ್ರುವನ್ನು ಸೆರೆ ಹಿಡಿದು ತನ್ನ ಪಟ್ಟಣಕ್ಕೆ ಬರುವುದು), ದ್ವೈಧೀಭಾವ (ಶತ್ರುವಿನಲ್ಲಿ ಅವನ ಅಮಾತ್ಯಾದಿಗಳಲ್ಲಿ ಪರಸ್ಪರ- ವಿರೋಧವನ್ನುಂಟು ಮಾಡುವುದು), ಸಂಶ್ರಯ (ಶತ್ರುವು ಶರಣಾಗತನಾದರೆ ಅವನಿಗೆ ಒಳ್ಳೆಯ ಆಶ್ರಯವನ್ನು ನೀಡುವುದು) - ಇವು ಷಾಡ್ಗುಣ್ಯವೆನಿಸುತ್ತವೆ.
ತ್ರಿವರ್ಗಶ್ಚಾಪಿ ಯಃ ಪ್ರೋಕ್ತಸ್ತಮಿಹೈಕಮನಾಃ ಶೃಣು |
ಕ್ಷಯಃ ಸ್ಥಾನಂ ಚ ವೃದ್ಧಿಶ್ಚ ತ್ರಿವರ್ಗಮಪರಂ ತಥಾ ॥72॥
ನಾನು ತ್ರಿವರ್ಗವೆಂದು ಹೇಳಿದುದನ್ನು ಒಂದೇ ಮನಸ್ಸಿನಿಂದ ಕೇಳು. ಅವು ಕ್ಷಯ, ಸ್ಥಾನ ಮತ್ತು ವೃದ್ಧಿ ಎಂಬುವುಗಳು. ಇನ್ನೊಂದು ತ್ರಿವರ್ಗವನ್ನು ಕೇಳು.
ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗೋ ವೈ ಸನಾತನಃ |
ಮಂತ್ರಶ್ಚೈವ ಪ್ರಭಾವಶ್ಚ ಉತ್ಸಾಹಶ್ಚೈವ ತಾಂತ್ರಿಕಃ ॥73॥
ಧರ್ಮ, ಅರ್ಥ ಮತ್ತು ಕಾಮಗಳೆಂಬುದು ಸನಾತನವಾದ ಇನ್ನೊಂದು ತ್ರಿವರ್ಗ. ಮಂತ್ರ, ಪ್ರಭಾವ ಮತ್ತು ಉತ್ಸಾಹ ಎಂಬುವುಗಳು ರಾಜನೀತಿಗೆ ಸಂಬಂಧಿಸಿದ ಇನ್ನೊಂದು ತ್ರಿವರ್ಗ.
ಶಕ್ತಿತ್ರಯಂ ಸಮಾಖ್ಯಾತಂ ತ್ರಿವರ್ಗಸ್ಯ ಚ ತತ್ಪರಮ್ |
ಕಾರ್ಯಂ ಚ ಕಾರಣಂ ಚೈವ ಕರ್ತಾ ಚ ಪರಿಕೀರ್ತಿತಮ್ ॥74॥
ಈ ಕೊನೆಯ ತ್ರಿವರ್ಗವನ್ನು ಮಂತ್ರಶಕ್ತಿ, ಪ್ರಭುಶಕ್ತಿ ಮತ್ತು ಉತ್ಸಾಹಶಕ್ತಿ ಎಂದೂ ಕರೆಯುತ್ತಾರೆ. ಅದು ಮೊದಲಿನ ತ್ರಿವರ್ಗಕ್ಕಿಂತ ಶ್ರೇಷ್ಠವಾದುದು. ಕಾರ್ಯ, ಕಾರಣ ಮತ್ತು ಕರ್ತಾ ಎಂದು ಹೇಳಲ್ಪಡುವ ಇನ್ನೊಂದು ತ್ರಿವರ್ಗವೂ ಇದೆ.
ಏತತ್ ಪರತರಂ ವಿದ್ಯಾದ್ ತ್ರಿವರ್ಗಾದಪಿ ಭಾರತ |
ಸರ್ವೇಷಾಂ ಚ ಕ್ಷಯೇ ರಾಜನ್ ಯಸ್ತ್ರಿವರ್ಗಂ ಸನಾತನಮ್ ॥75॥
ಸತ್ತ್ವಂ ರಜಸ್ತಮಶ್ಚೈವ ತ್ರಿವರ್ಗಂ ಕಾರಣಂ ಸ್ಮೃತಮ್ |
ತೇನಾತ್ಯಂತವಿಮುಕ್ತಶ್ಚ ಮುಕ್ತಃ ಪುರುಷ ಇಷ್ಯತೇ ॥76॥
ಎಲೈ ಭಾರತನೇ! ಇದು ಹಿಂದಿನ ತ್ರಿವರ್ಗಕ್ಕಿಂತಲೂ ಶ್ರೇಷ್ಠವಾದುದು. ರಾಜನೇ! ಎಲ್ಲ ಕಾರ್ಯಗಳೂ ನಾಶವನ್ನು ಹೊಂದಿದ ಮೇಲೆ ಯಾವ ಸನಾತನ- ವಾದ ತ್ರಿವರ್ಗವು ಉಳಿಯುತ್ತದೆಯೋ ಅದು ಸತ್ತ್ವ, ರಜಸ್, ತಮೋಗುಣ- ರೂಪವಾದ ತ್ರಿವರ್ಗ. ಅದು ಎಲ್ಲದಕ್ಕೂ ಮೂಲಕಾರಣವಾದುದು. ಅದರಿಂದ ಸಂಪೂರ್ಣವಾಗಿ ಬಿಡುಗಡೆಯನ್ನು ಹೊಂದಿದ ಪುರುಷನು ಮುಕ್ತನೆನಿಸುತ್ತಾನೆ.
ಕಾರ್ಯಸ್ಯ ಸರ್ವಥಾ ನಾಶೋ ಮೋಕ್ಷ ಇತ್ಯಭಿಧೀಯತೇ |
ತೇನ ಮೋಕ್ಷಪರಶ್ಚೈವ ದೇವದೇವಃ ಪಿತಾಮಹಃ ॥77॥
ತುಷ್ಟ್ಯರ್ಥಸ್ಯ ತ್ರಿವರ್ಗಸ್ಯ ರಕ್ಷಾಮಾಹ ನರಾಧಿಪ |
ಜಗತೋ ಲೌಕಿಕೀ ಯಾತ್ರಾ ಯತ್ರ ನಿತ್ಯಂ ಪ್ರತಿಷ್ಠಿತಾ ॥78॥
ಎಲ್ಲ ಕಾರ್ಯಗಳ ಪೂರ್ಣನಾಶವು ಮೋಕ್ಷವೆಂದು ಹೇಳಲ್ಪಡುತ್ತದೆ. ಎಲೈ ನರಾಧಿಪನೇ! ಮುಮುಕ್ಷುಪರನಾದ ದೇವದೇವನಾದ, ಪಿತಾಮಹನಾದ ಬ್ರಹ್ಮ- ದೇವನು ಜಗತ್ತಿನ ತುಷ್ಟಿಗಾಗಿ ಇರುವ ತ್ರಿವರ್ಗವನ್ನು ರಕ್ಷಣೆ ಎಂದು ಹೇಳಿದ್ದಾನೆ. ಆ ರಕ್ಷಣೆಯಲ್ಲಿ ಜಗಿತ್ತಿನ ಲೌಕಿಕಯಾತ್ರೆಯು ನಿತ್ಯವೂ ಪ್ರತಿಷ್ಠಿತವಾಗಿದೆ.
ಧರ್ಮಶ್ಚಾರ್ಥಶ್ಚ ಕಾಮಶ್ಚ ಸೇವಿತವ್ಯೋಽಥ ಕಾಲತಃ |
ಧರ್ಮೇಣ ಹಿ ಮಹೀಪಾಲಶ್ಚಿರಂ ಪಾಲಯತೇ ಮಹೀಮ್ ॥79॥
ರಾಜನು ಧರ್ಮಾರ್ಥಕಾಮಗಳನ್ನು ಅವುಗಳಿಗೆ ಯೋಗ್ಯವಾದ ಕಾಲದಲ್ಲಿ ಸೇವಿಸಬೇಕು. ಧರ್ಮದಿಂದ ಆಳುವ ರಾಜನು ಬಹುಕಾಲ ಭೂಮಿಯನ್ನು ಆಳು- ತ್ತಾನೆ.
ಅಸ್ಮಿನ್ನರ್ಥೇ ಚ ಯೌ ಶ್ಲೋಕೌ ಗೀತಾವಂಗಿರಸಾ ಸ್ವಯಮ್ |
ಯಾದವೀಪುತ್ರ ಭದ್ರಂ ತೇ ಶ್ರೋತುಮರ್ಹಸಿ ತಾವಪಿ ॥80॥
ಈ ವಿಷಯದಲ್ಲಿ ಆಂಗಿರಸರಾದ ಬೃಹಸ್ಪತಿಗಳು ಎರಡು ಶ್ಲೋಕಗಳನ್ನು ತಾವೇ ಹಾಡಿದ್ದಾರೆ. ಎಲೈ ಕುಂತೀಪುತ್ರನೇ! ನಿನಗೆ ಮಂಗಳವಾಗಲಿ. ಆ ಶ್ಲೋಕಗಳನ್ನು ಕೇಳುವವನಾಗು.
ಕೃತ್ವಾ ಸರ್ವಾಣಿ ಕಾರ್ಯಾಣಿ ಸಮ್ಯಕ್ ಸಂಪಾಲ್ಯ ಮೇದಿನೀಮ್ |
ಪಾಲಯಿತ್ವಾ ಯಥಾ ಪೌರಾನ್ ಪರತ್ರ ಸುಖಮೇಧತೇ ॥81॥
ಭೂಮಿಯನ್ನು ಚೆನ್ನಾಗಿ ಪಾಲಿಸಿ, ಪ್ರಜೆಗಳನ್ನೂ ಚೆನ್ನಾಗಿ ಪಾಲಿಸಿ, ಎಲ್ಲಾ ಕಾರ್ಯಗಳನ್ನು ಮಾಡಿ ಪರಲೋಕದಲ್ಲಿ ಸುಖವನ್ನು ಹೊಂದುತ್ತಾನೆ.
ಕಿಂ ತಸ್ಯ ತಪಸಾ ರಾಜ್ಞಃ ಕಿಂಚ ತಸ್ಯಾಧ್ವರೈರಪಿ |
ಅಪಾಲಯಿತಾಃ ಪ್ರಜಾ ಯಸ್ಯ ಸರ್ವಾ ಧರ್ಮವಿನಾಕೃತಾಃ ॥82॥
ಯಾವನು ಪ್ರಜೆಗಳನ್ನು ಪಾಲಿಸದೇ ಎಲ್ಲ ಪ್ರಜೆಗಳೂ ಧರ್ಮಬಹಿಭೂರ್ತ- ರಾಗುತ್ತಾರೆಯೋ ಅಂತಹ ರಾಜನಿಗೆ ತಪಸ್ಸಿನಿಂದಾಗಲೀ, ಯಜ್ಞಗಳಿಂದಾಗಲೀ ಯಾವ ಫಲ ಉಂಟಾದೀತು?

ಶ್ಲೋಕಾಶ್ಚೋಶನಸಾ ಗೀತಾಸ್ತಾನ್ ನಿಬೋಧ ಯುಧಿಷ್ಠಿರ |
ದಂಡನೀತೇಶ್ಚ ತೇ ಮೂಲಂ ತ್ರಿವರ್ಗಸ್ಯ ಚ ಭೂಪತೇ ॥83॥
ಎಲೈ ಯುಧಿಷ್ಠಿರನೇ! ಶುಕ್ರಾಚಾರ್ಯರು ಗಾನ ಮಾಡಿದ ಶ್ಲೋಕಗಳನ್ನು ಕೇಳು. ಭೂಪತಿಯೇ! ದಂಡನೀತಿಗೂ ಮತ್ತು ತ್ರಿವರ್ಗಕ್ಕೂ ಆ ಶ್ಲೋಕಗಳು ಮೂಲಭೂತವಾದವುಗಳು.
ಭಾರ್ಗವಾಂಗಿರಸಂ ಕರ್ಮ ಷೋಡಶಾಂಗಂ ಚ ಯದ್ ಬಲಮ್ |
ವಿಷಹ್ಯತಾ ಚ ದೈವಂ ಚ ಪೌರುಷಂ ಚಾರ್ಥಸಿದ್ಧಯೇ ॥84॥
ಶುಕ್ರ ಮತ್ತು ಬೃಹಸ್ಪತಿಗಳಿಗೆ ಸಂಬಂಧಿಸಿದ ನೀತಿಗಳು, ರಾಜರಿಗೆ ಉಚಿತವಾದ ಕರ್ಮಗಳು, ಹದಿನಾರು ಅಂಗಗಳುಳ್ಳ ಬಲ ನಾಲ್ಕು ವಿಧವಾದ ಸೇನೆ, ಸಾಮಾದಿ ನಾಲ್ಕು ಉಪಾಯಗಳು, ಹಿಂದೆ ಹೇಳಿದ ಷಡ್ಗುಣಗಳು, ಸಮಯಾಸಮಯವಿಚಾರ, ಸಾಧ್ಯಾಸಾಧ್ಯವಿಚಾರ ಇವು ಹದಿನಾರು ಅಂಗಗಳು - ಶತ್ರುಗಳ ಉಪದ್ರವವನ್ನು ಸಹಿಸುವ ಯೋಗ್ಯತೆ, ದೈವಾನುಗ್ರಹ ಮತ್ತು ಪುರುಷಪ್ರಯತ್ನ ಇವು ಅರ್ಥಸಿದ್ಧಿಗೆ ಕಾರಣಗಳಾಗುತ್ತವೆ.
ಪ್ರಾಗುದಕ್ಪ್ರವಣಂ ದುರ್ಗಂ ಸಮಾಸಾದ್ಯ ಮಹೀಪತಿಃ |
ತ್ರಿವರ್ಗತ್ರಯಸಂಪೂರ್ಣಮುಪಾದಾಯ ಸಮುದ್ವಹೇತ್ ॥85॥
ರಾಜನು ಈಶಾನ್ಯದಿಕ್ಕಿನಲ್ಲಿ ಇಳಿಜಾರಾಗಿರುವ ಕೋಟೆಯನ್ನು ಆಶ್ರಯಿಸಿ, ಈ ಮೂರುವಿಧವಾದ ತ್ರಿವರ್ಗಗಳನ್ನು ಸಂಪೂರ್ಣವಾಗಿ ಸ್ವೀಕರಿಸಿ, ಅವುಗಳನ್ನು ಉದ್ಧರಿಸಬೇಕು.
ಷಟ್ಪಂಚ ಚ ವಿನಿರ್ಜಿತ್ಯ ದಶ ಚಾಷ್ಟೌ ಚ ಭೂಪತಿಮ್ |
ತ್ರಿವರ್ಗೈರ್ದಶಭಿರ್ಯುಕ್ತಃ ಸುರೈರಪಿ ನ ಜೀಯತೇ ॥86॥
ಕಾಮಾದಿ ಆರು ವೈರಿಗಳನ್ನು, ಭೂಮ್ಯಾದಿ ಪಂಚಮಹಾಭೂತಾತ್ಮಕವಾದ ದೇಹವನ್ನು, ಹತ್ತು ಇಂದ್ರಿಯಗಳನ್ನು, ಅಷ್ಟಮದಗಳನ್ನು ಜಯಿಸಿ, ಧರ್ಮ ಅರ್ಥ ಕಾಮಾದಿ ತ್ರಿವರ್ಗಗಳಿಂದಲೂ, ಅಮಾತ್ಯಾದಿ ಷಟ್ಕ, ಯಜ್ಞ ಅಧ್ಯಯನ ದಾನ ಪ್ರಜಾಪಾಲನ ಎಂಬ ಹತ್ತರಿಂದಲೂ ಯುಕ್ತನಾದ ರಾಜನು ದೇವತೆಗಳಿಂದಲೂ ಪರಾಭವವನ್ನು ಹೊಂದುವುದಿಲ್ಲ.
ನ ಬುದ್ಧಿಂ ಪರಿಗೃಹ್ಣೀತ ಸ್ತ್ರೀಣಾಂ ಮೂರ್ಖಜನಸ್ಯ ಚ |
ದೈವೋಪಹತಬುದ್ಧೀನಾಂ ಯೇ ಚ ವೇದೈರ್ವಿವರ್ಜಿತಾಃ ॥87॥
ನ ತೇಷಾಂ ಶೃಣುಯಾದ್ ರಾಜಾ ಬುದ್ಧಿಸ್ತೇಷಾಂ ಪರಾಙ್ಮುಖೀ |
ಸ್ತ್ರೀಪ್ರಧಾನಾನಿ ರಾಜ್ಯಾನಿ ವಿದ್ವದ್ಭಿರ್ವರ್ಜಿತಾನಿ ಚ ॥88॥
ಮೂರ್ಖಾಮಾತ್ಯಪ್ರತಪ್ತಾನಿ ಶುಷ್ಯಂತೇ ಜಲಬಿಂದುವತ್ |
ಸ್ತ್ರೀಯರಿಂದಲೂ, ಮೂರ್ಖಜನರಿಂದಲೂ, ದೈವದಿಂದ ಉಪಹತವಾದ ಬುದ್ಧಿಯುಳ್ಳವರಿಂದಲೂ, ವೇದಬಾಹಿರರಿಂದಲೂ ಉಪದೇಶವನ್ನು ಸ್ವೀಕರಿಸ- ಬಾರದು. ರಾಜನು ಅವರ ಹಿತವಚನವನ್ನು ಕೇಳಬಾರದು. ಅವರ ಬುದ್ಧಿಯು ಹಿತಕ್ಕೆ ಪರಾಙ್ಮುಖವಾಗಿರುತ್ತದೆ. ವಿವೇಕಿಗಳಾದವರು ಸ್ತ್ರೀಪ್ರಧಾನವಾದ ರಾಜ್ಯಗಳನ್ನು ವರ್ಜಿಸುತ್ತಾರೆ. ಮೂರ್ಖರಾದ ಅಮಾತ್ಯರಿಂದ ಉಪದ್ರವಕ್ಕೆ ಒಳಗಾದ ರಾಜ್ಯಗಳು ನೀರಿನ ಹನಿಗಳಂತೆ ಒಣಗಿ ಹೋಗುತ್ತವೆ.
ವಿದ್ವಾಂಸಃ ಪ್ರಥಿತಾ ಯೇ ಚ ಯೇ ಚಾಪ್ತಾಃ ಸರ್ವಕರ್ಮಸು ॥89॥
ಯುದ್ಧೇಷು ದೃಷ್ಟಕರ್ಮಾಣಸ್ತೇಷಾಂ ಚ ಶೃಣುಯಾನ್ನೃಪ |
ದೈವಂ ಪುರುಷಕಾರಂ ಚ ತ್ರಿವರ್ಗಂ ಚ ಸಮಾಶ್ರಿತಮ್ |
ದೈವತಾನಿ ಚ ವಿಪ್ರಾಂಶ್ಚ ಪ್ರಣಮ್ಯ ವಿಜಯೀ ಭವೇತ್ ॥90॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತತಿತಮೋಽಧ್ಯಾಯಃ ॥70॥
ಯಾರು ಪ್ರಸಿದ್ಧರಾದ ವಿದ್ವಾಂಸರೋ, ಯಾರು ಸರ್ವಕರ್ಮಗಳಲ್ಲಿ ಆಪ್ತರೋ, ಯಾರ ವಿಕ್ರಮವು ಯುದ್ಧಗಳಲ್ಲಿ ದೃಷ್ಟವಾಗಿದೆಯೋ ಅಂತಹವರ ಮಾತನ್ನು ಕೇಳಬೇಕು. ಎಲೈ ರಾಜನೇ! ದೈವವು ಪುರುಷಪ್ರಯತ್ನ ಮತ್ತು ತ್ರಿವರ್ಗಗಳನ್ನು ಅವಲಂಬಿಸಿದೆ. ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ನಮಸ್ಕರಿಸುವ ರಾಜನು ವಿಜಯಶಾಲಿಯಾಗುತ್ತಾನೆ.
ರಾಜಧರ್ಮಕನ್ನಡಾನುವಾದದಲ್ಲಿ 70ನೆಯ ಅಧ್ಯಾಯವು ಮುಗಿಯಿತು.
0
71. ಎಪ್ಪತ್ತೊಂದನೆಯ ಅಧ್ಯಾಯ
ಕೃತಾದಿಯುಗಗಳ ಗುಣನಿರೂಪಣೆ
ಯುಧಿಷ್ಠಿರಃ
ದಂಡನೀತಿಶ್ಚ ರಾಜಾ ಚ ಸಮಸ್ತೌ ತಾವುಭಾವಪಿ |
ಕಸ್ಯ ಕಿಂ ಕುರ್ವತಃ ಸಿದ್ಧ್ಯೈ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ದಂಡನೀತಿ ಮತ್ತು ರಾಜ ಇಬ್ಬರೂ ಸೇರಿ ಯಾರಿಗೆ ಯಾವ ಸಿದ್ಧಿಯನ್ನು ಉಂಟು ಮಾಡಿಕೊಳ್ಳುತ್ತಾರೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ಮಹಾಭಾಗ್ಯಂ ದಂಡನೀತ್ಯಾಃ ಸಾಧ್ಯಂ ಶಬ್ದೈಃ ಸಹೇತುಕೈಃ |
ಶೃಣು ಮೇ ಶಂಸತೋ ರಾಜನ್ ಯಥಾವದಿಹ ಭಾರತ ॥2॥
ಭೀಷ್ಮರು ದಂಡನೀತಿಯಿಂದ ಉಂಟಾಗುವ ಮಹಾಭಾಗ್ಯವನ್ನು ಯುಕ್ತಿ- ಸಹಿತವಾದ ಶಬ್ದಗಳಿಂದ ಸಾಧಿಸುತ್ತೇನೆ. ಎಲೈ ರಾಜನೇ!

ಭಾರತನೇ! ನಾನು ಹೇಳುವಂತೆ ಅದನ್ನು ಸರಿಯಾಗಿ ಕೇಳು.
ದಂಡನೀತಿಃ ಸ್ವಧರ್ಮೇಭ್ಯಶ್ಚಾತುರ್ವರ್ಣ್ಯಂ ನಿಯಚ್ಛತಿ |
ಪ್ರಯುಕ್ತಾ ಸ್ವಾಮಿನಾಽಸಮ್ಯಗಧರ್ಮೇಭ್ಯಶ್ಚ ಯಚ್ಛತಿ ॥3॥
ದಂಡನೀತಿಯು ನಾಲ್ಕು ವರ್ಣಗಳಿಗೆ ಸೇರಿದ ಪ್ರಜೆಗಳನ್ನು ಅವರವರ ಧರ್ಮದಲ್ಲಿ ನಿಯಂತ್ರಿಸುತ್ತದೆ. ರಾಜನು ದಂಡನೀತಿಯನ್ನು ತಪ್ಪಾಗಿ ಪ್ರಯೋಗಿಸಿ- ದರೆ ಆ ದಂಡನೀತಿಯು ಪ್ರಜೆಗಳನ್ನು ಅಧರ್ಮಗಳಿಗೆ ಕೊಟ್ಟು ಬಿಡುತ್ತದೆ.
ಚಾತುರ್ವರ್ಣ್ಯೇ ಸ್ವಧರ್ಮಸ್ಥೇ ಮರ್ಯಾದಾನಾಮಸಂಕರೇ |
ದಂಡನೀತಿಕೃತೇ ಕ್ಷೇಮೇ ಪ್ರಜಾನಾಮಕುತೋಭಯೇ ॥4॥
ಸೋಮೇ ಪ್ರಯತ್ನಂ ಕುರ್ವಂತಿ ತ್ರಯೋ ವರ್ಣಾ ಯಥಾವಿಧಿ |
ತಸ್ಮಾದ್ ದೇವಮನುಷ್ಯಾಣಾಂ ಸುಖಂ ವಿದ್ಧಿ ಸಮಾಹಿತಮ್ ॥5॥
ಚಾತುರ್ವರ್ಣ್ಯವು ತನ್ನ ಧರ್ಮದಲ್ಲಿ ನಿರತವಾಗಿ ಸಮಾಜದ ಮರ್ಯಾದೆ- ಗಳು ಕದಡಿಹೋಗದೇ ದಂಡನೀತಿಯಿಂದ ಕ್ಷೇಮವುಂಟಾಗಿ ಪ್ರಜೆಗಳು ನಿರ್ಭಯ- ವಾಗಿದ್ದರೆ ಮೂರುವರ್ಣದವರೂ ವಿಧಿಗನುಸಾರವಾಗಿ ಸೋಮಾದಿಯಾಗಗಳಲ್ಲಿ ಪ್ರಯತ್ನಪಡುತ್ತಾರೆ. ಅದರಲ್ಲಿ ದೇವತೆಗಳ ಮತ್ತು ಮನುಷ್ಯರ ಸುಖವು ಪ್ರತಿಷ್ಠಿತ- ವಾಗಿದೆ ಎಂಬುದನ್ನು ತಿಳಿ.
ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ |
ಇತಿ ತೇ ಸಂಶಯೋ ಮಾ ಭೂದ್ ರಾಜಾ ಕಾಲಸ್ಯ ಕಾರಣಮ್ ॥6॥
ಕಾಲವು ರಾಜನಿಗೆ ಕಾರಣವೇ ಅಥವಾ ರಾಜನೇ ಕಾಲಕ್ಕೆ ಕಾರಣನೇ ಎಂಬ ಸಂಶಯವು ನಿನಗೆ ಬೇಡ. ರಾಜನು ಕಾಲಕ್ಕೆ ಕಾರಣ.
ದಂಡನೀತ್ಯಾ ಯದಾ ರಾಜಾ ಸಮ್ಯಕ್ ಕಾರ್ತ್ಸ್ನ್ಯೇನ ವರ್ತತೇ |
ತದಾ ಕೃತಯುಗಂ ನಾಮ ಕಾಲಃ ಶ್ರೇಷ್ಠಃ ಪ್ರವರ್ತತೇ ॥7॥
ರಾಜನು ದಂಡನೀತಿಯನ್ನು ಪೂರ್ಣವಾಗಿ ಚೆನ್ನಾಗಿ ಪ್ರಯೋಗಿಸಿದರೆ ಆಗ ಕೃತಯುಗವೆಂಬ ಶ್ರೇಷ್ಠಕಾಲವು ಪ್ರವೃತ್ತವಾಗುತ್ತದೆ.
ಭವೇತ್ ಕೃತಯುಗೇ ಧರ್ಮೋ ನಾಧರ್ಮೋ ವಿದ್ಯತೇ ಕ್ವಚಿತ್ |
ಸರ್ವೇಷಾಮೇವ ವರ್ಣಾನಾಂ ನಾಧರ್ಮೇ ರಮತೇ ಮನಃ ॥8॥
ಕೃತಯುಗದಲ್ಲಿ ಧರ್ಮವೇ ಇರುತ್ತದೆ. ಎಲ್ಲಿಯೂ ಅಧರ್ಮವಿರುವುದಿಲ್ಲ. ಯಾವ ವರ್ಣದವರಿಗೂ ಮನಸ್ಸಿನಲ್ಲಿ ಅಧರ್ಮದಲ್ಲಿ ಅಭಿರುಚಿ ಉಂಟಾಗುವು- ದಿಲ್ಲ.
ಯೋಗಕ್ಷೇಮಾಃ ಪ್ರವರ್ತಂತೇ ಪ್ರಜಾನಾಂ ನಾತ್ರ ಸಂಶಯಃ |
ವೈದಿಕಾನಿ ಚ ಕರ್ಮಾಣಿ ಭವಂತ್ಯವಿಗುಣಾನ್ಯುತ ॥9॥
ಪ್ರಜೆಗಳಿಗೆ ಅಪೇಕ್ಷಿತವಾದ ಯೋಗಕ್ಷೇಮಗಳು ಉಂಟಾಗುತ್ತವೆ. ಇದರಲ್ಲಿ ಸಂಶಯವಿಲ್ಲ. ವೈದಿಕವಾದ ಕರ್ಮಗಳು ನಿರ್ದುಷ್ಟವಾಗಿ ನಡೆಯುತ್ತವೆ.
ಋತವಶ್ಚ ಸುಖಾಃ ಸರ್ವೇ ಭವಂತ್ಯುತ ನಿರಾಮಯಾಃ |
ಪ್ರಸೀದಂತಿ ನರಾಣಾಂ ಚ ಸ್ವರವರ್ಣಮನಾಂಸಿ ಚ ॥10॥
ಎಲ್ಲ ಋತುಗಳೂ ದೋಷರಹಿತವಾಗಿ ಸುಖಪ್ರದವಾಗಿರುತ್ತವೆ. ಮನುಷ್ಯರ ಸ್ವರವರ್ಣಮನಸ್ಸುಗಳು ಪ್ರಸನ್ನವಾಗಿರುತ್ತವೆ.
ವ್ಯಾಧಯೋ ನ ಭವಂತ್ಯತ್ರ ನಾಲ್ಪಾಯುರ್ದೃಶ್ಯತೇ ನರಃ |
ವಿಧವಾ ನ ಭವಂತ್ಯತ್ರ ನೃಶಂಸೋ ನಾಭಿಜಾಯತೇ ॥11॥
ಕೃತಯುಗದಲ್ಲಿ ವ್ಯಾಧಿಗಳಿರುವುದಿಲ್ಲ. ಮನುಷ್ಯರು ಅಲ್ಪಾಯುಷಿಗಳಾಗಿ ಕಂಡು ಬರುವುದಿಲ್ಲ. ವಿಧವೆಯರು ಇರುವುದಿಲ್ಲ. ಕ್ರೂರನಾದ ಪುರುಷನು ಜನಿಸು -ವುದಿಲ್ಲ.
ಅಕೃಷ್ಟಪಚ್ಯಾ ಪೃಥಿವೀ ಭವಂತ್ಯೋಷಧಯಸ್ತಥಾ |
ತ್ವಕ್ಪತ್ರಫಲಮೂಲಾನಿ ವೀರ್ಯವಂತಿ ಭವಂತಿ ಚ ॥12॥
ಭೂಮಿಯು ಕೃಷಿಯನ್ನು ಮಾಡದೆಯೇ ಫಲವನ್ನು ಕೊಡುತ್ತದೆ. ಓಷಧಿ- ವನಸ್ಪತಿಗಳು ತಾವಾಗಿಯೇ ಫಲವನ್ನು ಕೊಡುತ್ತವೆ. ತೊಗಟೆಗಳು, ಎಲೆಗಳು, ಫಲ- ಮೂಲಗಳು ಸಾರವತ್ತಾಗಿರುತ್ತವೆ.
ನಾಧರ್ಮೋ ವಿದ್ಯತೇ ತತ್ರ ಧರ್ಮ ಏವ ತು ಕೇವಲಃ |
ಇತಿ ಕಾರ್ತಯುಗಾನೇತಾನ್ ಗುಣಾನ್ ವಿದ್ಧಿ ಯುಧಿಷ್ಠಿರ ॥13॥
ಆಗ ಅಧರ್ಮವು ಇರುವುದಿಲ್ಲ. ಕೇವಲ ಧರ್ಮವೇ ಇರುತ್ತದೆ. ಎಲೈ ಯುಧಿ-ಷ್ಠಿರನೇ! ಇವುಗಳನ್ನು ಕೃತಯುಗದ ಗುಣಗಳೆಂದು ತಿಳಿ.
ದಂಡನೀತ್ಯಾ ಯದಾ ರಾಜಾ ತ್ರೀನಂಶಾನನುವರ್ತತೇ |
ಚತುರ್ಥಮಂಶಮುತ್ಸೃಜ್ಯ ತದಾ ತ್ರೇತಾ ಪ್ರವರ್ತತೇ ॥14॥
ರಾಜನು ದಂಡನೀತಿಯಲ್ಲಿ ನಾಲ್ಕನೆಯ ಒಂದಂಶವನ್ನು ಬಿಟ್ಟು ಮೂರು ಅಂಶಗಳನ್ನು ಮಾತ್ರ ಅನುಸರಿಸುವಾಗ ತ್ರೇತಾಯುಗವು ಪ್ರವೃತ್ತವಾಗುತ್ತದೆ.
ಅಧರ್ಮಸ್ಯ ಚತುರ್ಥಾಂಶಸ್ತ್ರೀನಂಶಾನನುವರ್ತತೇ |
ಕೃಷ್ಟಪಚ್ಯೈವ ಪೃಥಿವೀ ಭವಂತ್ಯೋಷಧಯಸ್ತಥಾ ॥15॥
ಅಧರ್ಮದ ನಾಲ್ಕನೆಯ ಅಂಶವು ಧರ್ಮದ ಮೂರು ಅಂಶಗಳನ್ನುಅನುಸರಿಸಿ ನಡೆಯುತ್ತದೆ. ಉತ್ತು, ಬಿತ್ತಿದರೆ ಮಾತ್ರ ಭೂಮಿಯು ಧಾನ್ಯವನ್ನು ಕೊಡುತ್ತದೆ. ಕೃಷಿ ಮಾಡಿದರೆ ಮಾತ್ರ ಓಷಧಿವನಸ್ಪತಿಗಳು ಫಲವನ್ನು ಕೊಡುತ್ತವೆ.
ಅರ್ಧಂ ತ್ಯಕ್ತ್ವಾ ಯದಾ ರಾಜಾ ನೀತ್ಯರ್ಧಮನುವರ್ತತೇ |
ತತಸ್ತು ದ್ವಾಪರಂ ನಾಮ ಸ ಕಾಲಃ ಸಂಪ್ರವರ್ತತೇ ॥16॥

ರಾಜನು ರಾಜನೀತಿಯ ಅರ್ಧಭಾಗವನ್ನು ತ್ಯಜಿಸಿ ಉಳಿದ ಅರ್ಧಭಾಗವನ್ನು ಮಾತ್ರ ಆಶ್ರಯಿಸಿದರೆ ಆಗ ದ್ವಾಪರ ಎಂಬ ಕಾಲವು ಪ್ರವೃತ್ತವಾಗುತ್ತದೆ.
ಅಶುಭಸ್ಯ ತದಾ ತ್ವರ್ಧಂ ದ್ವಾವಂಶಾವನುವರ್ತತೇ |
ಕೃಷ್ಟಪಚ್ಯೈವ ಪೃಥಿವೀ ಭವತ್ಯಲ್ಪಫಲಾ ತಥಾ ॥17॥
ಆಗ ಅಶುಭದ ಎರಡು ಅಂಶಗಳು ಮತ್ತು ಶುಭದ ಎರಡು ಅಂಶಗಳನ್ನು ಅನುಸರಿಸುತ್ತವೆ. ಕೃಷಿ ಮಾಡಿದರೆ ಮಾತ್ರ ಭೂಮಿಯು ಅಲ್ಪಫಲವನ್ನು ಕೊಡುತ್ತದೆ.
ದಂಡನೀತಿಂ ಪರಿತ್ಯಜ್ಯ ಯದಾ ಕಾರ್ತ್ಸ್ನ್ಯೇನ ಭೂಮಿಪಃ |
ಪ್ರಜಾಃ ಕ್ಲಿಶ್ನಾತ್ಯಯೋಗೇನ ಪ್ರವಿಶ್ಯತಿ ತದಾ ಕಲಿಃ ॥18॥
ರಾಜನು ದಂಡನೀತಿಯನ್ನು ಸಂಪೂರ್ಣವಾಗಿ ತ್ಯಜಿಸಿದರೆ ಪ್ರಜೆಗಳು ದುಃಖಕ್ಕೆ ಈಡಾಗುತ್ತಾರೆ. ಆಗ ಕಲಿಯುಗವು ಪ್ರವೇಶಮಾಡುತ್ತದೆ.
ಕಲಾವಧರ್ಮೋ ಭೂಯಿಷ್ಠಂ ಧರ್ಮೋ ಭವತಿ ತು ಕ್ವಚಿತ್ |
ಸರ್ವೇಷಾಮೇವ ವರ್ಣಾನಾಂ ಸ್ವಧರ್ಮಾಚ್ಚ್ಯವತೇ ಮನಃ ॥19॥
ಕಲಿಯುಗದಲ್ಲಿ ಅಧರ್ಮವೇ ಬಹಳವಾಗಿ ನಡೆಯುತ್ತದೆ. ಎಲ್ಲೋ ಒಂದೊಂದು ಕಡೆ ಧರ್ಮವು ನಡೆಯುತ್ತದೆ. ಎಲ್ಲ ವರ್ಣದವರಿಗೂ ತಮ್ಮ ಧರ್ಮ -ಗಳಿಂದ ಮನಸ್ಸು ಜಾರಿಹೋಗುತ್ತದೆ.
ಶೂದ್ರಾ ಭೈಕ್ಷೇಣ ಜೀವಂತಿ ಬ್ರಾಹ್ಮಣಾಃ ಪರಿಚರ್ಯಯಾ |
ಯೋಗಕ್ಷೇಮಸ್ಯ ನಾಶಶ್ಚ ವರ್ತತೇ ವರ್ಣಸಂಕರಃ ॥20॥
ಶೂದ್ರರು ಸನ್ಯಾಸಿಗಳಾಗಿ ಜೀವಿಸುತ್ತಾರೆ. ಬ್ರಾಹ್ಮಣರು ಸೇವೆಯನ್ನು ಮಾಡಿ- ಕೊಂಡು ಜೀವಿಸುತ್ತಾರೆ. ಪ್ರಜೆಗಳ ಯೋಗಕ್ಷೇಮವು ನಾಶವನ್ನು ಹೊಂದುತ್ತದೆ. ವರ್ಣಸಂಕರವುಂಟಾಗುತ್ತದೆ.
ವೈದಿಕಾನಿ ಚ ಕರ್ಮಾಣಿ ಭವಂತಿ ವಿಗುಣಾನ್ಯುತ |
ಋತವೋ ನಸುಖಾಃ ಸರ್ವೇ ಭವಂತ್ಯಾಮಯಿನಸ್ತಥಾ ॥21॥
ವೈದಿಕಕರ್ಮಗಳು ಗುಣರಹಿತವಾಗುತ್ತವೆ. ಋತುಗಳು ಸುಖಪ್ರದಗಳಾಗು- ವುದಿಲ್ಲ. ಪ್ರಜೆಗಳು ರೋಗಗ್ರಸ್ತರಾಗುತ್ತಾರೆ.
ಹ್ರಸಂತಿ ಚ ಮನುಷ್ಯಾಣಾಂ ಸ್ವರವರ್ಣಮನಾಂಸ್ಯುತ |
ವ್ಯಾಧಯಶ್ಚ ಭವಂತ್ಯತ್ರ ಮ್ರಿಯಂತೇ ಚಾಶತಾಯುಷಃ ॥22॥
ಪ್ರಜೆಗಳ ಸ್ವರ, ವರ್ಣ, ಮನಸ್ಸುಗಳು ಕುಗ್ಗಿಹೋಗುತ್ತವೆ. ವ್ಯಾಧಿಗಳು ಉಂಟಾ -ಗುತ್ತವೆ. ನೂರುವರ್ಷ ತುಂಬದೆಯೇ ಪ್ರಜೆಗಳು ಮರಣವನ್ನು ಹೊಂದುತ್ತಾರೆ.
ವಿಧವಾಶ್ಚ ಭವಂತ್ಯತ್ರ ನೃಶಂಸಾ ಜಾಯತೇ ಪ್ರಜಾ |
ಕ್ವಚಿದ್ ವರ್ಷತಿ ಪರ್ಜನ್ಯಃ ಕ್ವಚಿತ್ ಸಸ್ಯಂ ಪ್ರರೋಹತಿ ॥23॥
ನಾರಿಯರು ವಿಧವೆಯರಾಗುತ್ತಾರೆ. ಪ್ರಜೆಗಳು ಕ್ರೂರಿಗಳಾಗುತ್ತಾರೆ. ಪರ್ಜ- ನ್ಯನು ಕೆಲವು ಕಡೆ ಮಾತ್ರ ಮಳೆಯನ್ನು ಸುರಿಸುತ್ತಾನೆ. ಕೆಲವು ಕಡೆ ಮಾತ್ರ ಸಸ್ಯಗಳು ಬೆಳೆಯುತ್ತವೆ.
ರಸಾಃ ಸರ್ವೇ ಕ್ಷಯಂ ಯಾಂತಿ ಯದಾ ನೇಚ್ಛತಿ ಭೂಮಿಪಃ |
ಪ್ರಜಾಃ ಸಂರಕ್ಷಿತುಂ ಸಮ್ಯಗ್ ದಂಡನೀತಿಸಮನ್ವಿತಃ ॥24॥
ರಾಜನು ದಂಡನೀತಿಸಮನ್ವಿತನಾಗಿ ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಲು ಬಯಸ- ದಿದ್ದರೆ ಭೂಮಿಯ ಎಲ್ಲ ರಸಗಳೂ ನಾಶವನ್ನು ಹೊಂದುತ್ತವೆ.
ರಾಜಾ ಕೃತಯುಗಸ್ರಷ್ಟಾ ತ್ರೇತಾಯಾ ದ್ವಾಪರಸ್ಯ ಚ |
ಯುಗಸ್ಯ ಚ ಚತುರ್ಥಸ್ಯ ರಾಜಾ ಭವತಿ ಕಾರಣಮ್ ॥25॥
ರಾಜನೇ ಕೃತಯುಗವನ್ನು ಸೃಷ್ಟಿಸುವವನು. ತ್ರೇತಾಯುಗ, ದ್ವಾಪರಯುಗ ಮತ್ತು ನಾಲ್ಕನೆಯದಾದ ಕಲಿಯುಗಕ್ಕೂ ರಾಜನೇ ಕಾರಣನಾಗುತ್ತಾನೆ.
ಕೃತಸ್ಯ ಕರಣಾದ್ ರಾಜಾ ಸ್ವರ್ಗಮತ್ಯಂತಮಶ್ನುತೇ |
ತ್ರೇತಾಯಾಃ ಕರಣಾದ್ ರಾಜಾ ಸ್ವರ್ಗಂ ನಾತ್ಯಂತಮಶ್ನುತೇ ॥26॥
ಕೃತಯುಗವನ್ನು ಸೃಷ್ಟಿಮಾಡುವುದರಿಂದ ರಾಜನು ಅತಿಶಯವಾದ ಸ್ವರ್ಗವನ್ನು ಪಡೆಯುತ್ತಾನೆ. ತ್ರೇತಾಯುಗವನ್ನು ಸೃಷ್ಟಿಸಿದ ರಾಜನು ಸ್ವರ್ಗವನ್ನು ಪಡೆದರೂ ಅದರಲ್ಲಿ ಅಷ್ಟು ಅತಿಶಯವಿರುವುದಿಲ್ಲ.
ಪ್ರವರ್ತನಾದ್ ದ್ವಾಪರಸ್ಯ ಯಥಾಭಾಗಮುಪಾಶ್ನುತೇ |
ಕಲೇಃ ಪ್ರವರ್ತನಾದ್ ರಾಜಾ ಪಾಪಮತ್ಯಂತಮಶ್ನುತೇ ॥27॥
ದ್ವಾಪರಯುಗವನ್ನು ಪ್ರವರ್ತಿಸುವುದರಿಂದ ಧರ್ಮದ ಅರ್ಧಭಾಗಕ್ಕನು- ಗುಣವಾಗಿ ಅಷ್ಟೇ ಫಲವನ್ನು ಪಡೆಯುತ್ತಾನೆ. ಕಲಿಯುಗವನ್ನು ಪ್ರವರ್ತಿಸುವುದ- ರಿಂದ ರಾಜನು ಬಹಳ ಪಾಪವನ್ನು ಹೊಂದುತ್ತಾನೆ.
ತತೋ ವಸತಿ ದುಷ್ಕರ್ಮಾ ನರಕೇ ಶಾಶ್ವತೀಃ ಸಮಾಃ |
ಪ್ರಜಾನಾಂ ಕಲ್ಮಷೇ ಮಗ್ನೋಽಕೀರ್ತಿಂ ಪಾಪಂ ಚ ವಿಂದತಿ ॥28॥
ಅನೇಕದುಷ್ಕರ್ಮಗಳನ್ನು ಮಾಡಿ ಅನಂತರ ಶಾಶ್ವತವಾಗಿ ನರಕದಲ್ಲಿ ವಾಸ ಮಾಡುತ್ತಾನೆ. ಪ್ರಜೆಗಳ ದೋಷದಲ್ಲಿ ಮುಳುಗಿ ಹೋಗಿ ಅಕೀರ್ತಿಯನ್ನೂ ಮತ್ತು ಪಾಪವನ್ನೂ ಸಂಪಾದಿಸುತ್ತಾನೆ.
ದಂಡನೀತಿಂ ಪುರಸ್ಕೃತ್ಯ ಕ್ಷತ್ರಿಯೇಣ ವಿಜಾನತಾ |
ಲಿಪ್ಸಿತವ್ಯಮಲಬ್ಧಂ ಚ ಲಬ್ಧಂ ರಕ್ಷ್ಯಂ ಚ ಭಾರತ ॥29॥

ಎಲೈ ಭಾರತನೇ! ವಿವೇಕಿಯಾದ ಕ್ಷತ್ರಿಯನಾದವನು ದಂಡನೀತಿಯನ್ನು ಪುರಸ್ಕರಿಸಿ ಪಡೆಯದಿದ್ದುದನ್ನು ಪಡೆಯಬೇಕು ಮತ್ತು ಪಡೆದುದನ್ನು ರಕ್ಷಿಸಬೇಕು.
ಲೋಕಸ್ಯ ಸೀಮಂತಕರೀ ಮರ್ಯಾದಾ ಲೋಕಭಾವನೀ |
ಸಮ್ಯಙ್ನೀತಾ ದಂಡನೀತಿರ್ಯಥಾ ಮಾತಾ ಯಥಾ ಪಿತಾ ॥30॥
ಪ್ರಜೆಗಳಿಗೆ ಎಲ್ಲೆಯನ್ನು ಗುರುತಿಸುವ, ಲೋಕವನ್ನು ಶುದ್ಧಗೊಳಿಸುವ, ಚೆನ್ನಾಗಿ ಪ್ರಯೋಗಿಸಲ್ಪಟ್ಟ ದಂಡನೀತಿಯು ತಾಯಿಯಿದ್ದಂತೆ ಮತ್ತು ತಂದೆಯಿದ್ದಂತೆ.
ಯಸ್ಯಾಂ ಭವಂತಿ ಭೂತಾನಿ ತದ್ ವಿದ್ಧಿ ಭರತರ್ಷಭ |
ಏಷ ಏವ ಪರೋ ಧರ್ಮೋ ಯದ್ ರಾಜಾ ದಂಡನೀತಿಮಾನ್ ॥31॥
ಎಲೈ ಭರತರ್ಷಭನೇ! ಅಂತಹ ದಂಡನೀತಿಯ ಪ್ರಯೋಗವಿದ್ದಾಗ ಪ್ರಜೆಗಳು ವೈಭವವನ್ನು ಪಡೆಯುತ್ತಾರೆಂದು ತಿಳಿ. ರಾಜನಿಗೆ ದಂಡನೀತಿಯನ್ನು ಅನು- ಸರಿಸುವುದೇ ಶ್ರೇಷ್ಠವಾದ ಧರ್ಮ.
ತಸ್ಮಾತ್ ಕೌರವ್ಯ ಧರ್ಮೇಣ ಪ್ರಜಾಃ ಪಾಲಯ ನೀತಿಮಾನ್ |
ಏವಂವೃತ್ತಃ ಪ್ರಜಾ ರಕ್ಷನ್ ಸ್ವರ್ಗಂ ಜೇಷ್ಯಸಿ ದುರ್ಜಯಮ್ ॥32॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಸಪ್ತತಿತಮೋಽಧ್ಯಾಯಃ ॥71॥
ಎಲೈ ಕೌರವ್ಯನೇ! ಆದ್ದರಿಂದ ರಾಜನೀತಿಯನ್ನು ಅನುಷ್ಠಾನ ಮಾಡುವವನಾಗಿ ಪ್ರಜೆಗಳನ್ನು ಧರ್ಮದಿಂದ ಪಾಲಿಸು. ಇಂತಹ ನಡತೆಯಿಂದ ಪ್ರಜೆಗಳನ್ನು ರಕ್ಷಿಸುವ ನೀನು ದುರ್ಜಯವಾದ ಸ್ವರ್ಗವನ್ನು ಜಯಿಸುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 71ನೆಯ ಅಧ್ಯಾಯವು ಮುಗಿಯಿತು.
0

72. ಎಪ್ಪತ್ತೆರಡನೆಯ ಅಧ್ಯಾಯ
ರಾಜನಲ್ಲಿರಬೇಕಾದ ಗುಣಗಳು
ಯುಧಿಷ್ಠಿರಃ
ಕೇನ ವೃತ್ತೇನ ವೃತ್ತಜ್ಞ ವರ್ತಮಾನೋ ಮಹೀಪತಿಃ |
ಸುಖೇನಾರ್ಥಾನ್ ಸುಖೋದರ್ಕಾನಿಹ ಚ ಪ್ರೇತ್ಯ ಚಾಪ್ನುಯಾತ್ ॥1॥
ಯುಧಿಷ್ಠಿರ ಎಲೈ ನಡತೆಯನ್ನು ತಿಳಿದವನೇ! ಯಾವ ನಡತೆಯನ್ನು ಹೊಂದಿದ ರಾಜನು ಅನಾಯಾಸವಾಗಿ ಈ ಲೋಕದಲ್ಲಿ ಸುಖಫಲವನ್ನು ಕೊಡುವ ಅರ್ಥಗಳನ್ನೂ ಮತ್ತು ಪರಲೋಕದಲ್ಲಿ ಸುಖವನ್ನೂ ಹೊಂದಿಯಾನು?
ಭೀಷ್ಮಃ
ಇಯಂ ಗುಣಾನಾಂ ಷಟ್ತ್ರಿಂಶೀ ಷಟ್ತ್ರಿಂಶದ್ ಗುಣಸಂಯುತಾ |
ಯಾನ್ ಗುಣಾಂಸ್ತು ಗುಣೋಪೇತಃ ಕುರ್ವನ್ ಗುಣಮವಾಪ್ನುಯಾತ್ ॥2॥
ಭೀಷ್ಮರು ಇವು ಮೂವತ್ತಾರು ಶ್ರೇಷ್ಠವಾದ ಗುಣಗಳು. ಈ ಗುಣಗಳಿಂದ ವಿಶಿಷ್ಠನಾಗಿ ರಾಜನು ಕಾರ್ಯವನ್ನು ಮಾಡಿದರೆ ಒಳ್ಳೆಯ ಫಲವನ್ನು ಹೊಂದಿ- ಯಾನು!
ಚರೇದ್ ಧರ್ಮಾನಕಟುಕೋ ಮುಂಚೇತ್ ಸ್ನೇಹಂ ನ ನಾಸ್ತಿಕಃ |
ಅನೃಶಂಸಶ್ಚರೇದರ್ಥಂ ಚರೇತ್ ಕಾಮಮನುದ್ಧತಃ ॥3॥
ಉಗ್ರವಾಗಿ ಮಾತನ್ನಾಡದೇ ಧರ್ಮವನ್ನು ಆಚರಿಸಬೇಕು. ಸ್ನೇಹವನ್ನು ಹರಿ- ಯಲು ಬಿಡಬೇಕು. (ಸ್ನೇಹಶೀಲನಾಗಿರಬೇಕು). ನಾಸ್ತಿಕನಾಗಿರಬಾರದು. ಕ್ರೂರಿ- ಯಾಗದೇ ಅರ್ಥವನ್ನು ಸಂಪಾದಿಸಬೇಕು. ಅಹಂಕಾರ ಪಡದೇ ಕಾಮವನ್ನು ಭೋಗಿಸಬೇಕು.
ಪ್ರಿಯಂ ಬ್ರೂಯಾದಕೃಪಣಃ ಶೂರಃ ಸ್ಯಾದವಿಕತ್ಥನಃ |
ದಾತಾ ನಾಪಾತ್ರವರ್ಷೀ ಸ್ಯಾತ್ ಪ್ರಗಲ್ಭಃ ಸ್ಯಾದನಿಷ್ಠುರಃ ॥4॥
ಲೋಭಿಯಾಗದೇ ಪ್ರಿಯವಾಗಿ ಮಾತನಾಡಬೇಕು. ಶೂರನಾಗಿ ತನ್ನನ್ನು ತಾನು ಹೊಗಳಿಕೊಳ್ಳಬಾರದು. ಅಪಾತ್ರರಿಗೆ ದಾನಮಾಡದೇ ದಾನಿಯಾಗಬೇಕು. ನಿಷ್ಠುರ- ನಾಗಿರದೇ ವಿಚಕ್ಷಣನಾಗಿರಬೇಕು.
ಸಂದಧೀತ ನ ಚಾನಾರ್ಯೈರ್ವಿಗೃಹ್ಣೀಯಾನ್ನ ಬಂಧುಭಿಃ |
ನಾನಾಪ್ತೈಃ ಕಾರಯೇಚ್ಚಾರಂ ಕುರ್ಯಾತ್ ಕಾರ್ಯಮಪೀಡಯಾ ॥5॥
ದುಷ್ಟರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳಬಾರದು. ಬಂಧುಗಳ ಜೊತೆ ವಿರೋಧವನ್ನು ಮಾಡಿಕೊಳ್ಳಬಾರದು. ಆಪ್ತರಲ್ಲದವರಿಂದ ಯಾವ ಕಾರ್ಯವನ್ನೂ ಮಾಡಿಸಿಕೊಳ್ಳಬಾರದು. ಚಾರರಿಗೆ ಪೀಡೆಯುಂಟಾಗದಂತೆ ಕಾರ್ಯಗಳನ್ನು ಮಾಡಿಸಿಕೊಳ್ಳಬೇಕು.
ಅರ್ಥಾನ್ ಬ್ರೂಯಾನ್ನ ಚಾರೇಷು ಗುಣಾನ್ ಬ್ರೂಯಾನ್ನ ಚಾತ್ಮನಃ |
ಆದದ್ಯಾನ್ನ ಚ ಸಾಧುಭ್ಯೋ ನಾಸತ್ಪುರುಷಮಾಶ್ರಯೇತ್ ॥6॥
ಚಾರರಿಗೆ ತನ್ನ ಅಭಿಪ್ರಾಯಗಳನ್ನು ತಿಳಿಸಬಾರದು. ತನ್ನ ಗುಣಗಳನ್ನು ಹೇಳಿಕೊಳ್ಳಬಾರದು. ಸಜ್ಜನರಿಂದ ವಿತ್ತಾದಿಗಳನ್ನು ಸ್ವೀಕರಿಸಬಾರದು. ಅಸಜ್ಜನರನ್ನು ಆಶ್ರಯಿಸಬಾರದು.
ನಾಪರೀಕ್ಷ್ಯ ನಯೇದ್ ದಂಡಂ ನ ಚ ಮಂತ್ರಂ ಪ್ರಕಾಶಯೇತ್ |
ವಿಸೃಜೇನ್ನಚ ಲುಬ್ಧೇಭ್ಯೋ ವಿಶ್ವಸೇನ್ನಾಪಕಾರಿಷು ॥7॥

ಪರೀಕ್ಷೆಯನ್ನು ಮಾಡದೇ ಶಿಕ್ಷೆಯನ್ನು ವಿಧಿಸಬಾರದು. ಮಂತ್ರಾಲೋಚನೆ- ಯನ್ನು ಬಹಿರಂಗಪಡಿಸಬಾರದು. ಲೋಭಿಗಳಿಗೆ ಧನವನ್ನು ಕೊಡಬಾರದು. ಅಪಕಾರವನ್ನು ಮಾಡಿದವರನ್ನು ನಂಬಬಾರದು.
ಅನೀರ್ಷುರ್ಗುಪ್ತದಾರಃ ಸ್ಯಾಚ್ಚೋಕ್ಷಃ ಸ್ಯಾದಘೃಣೀ ನೃಪಃ |
ಸ್ತ್ರಿಯಂ ಸೇವೇತ ನಾತ್ಯರ್ಥಂ ಮೃಷ್ಟಂ ಭುಂಜೀತ ನಾಹಿತಮ್ ॥8॥
ರಾಜನು ಅಸೂಯಾರಹಿತನೂ, ತನ್ನ ಪತ್ನಿಯನ್ನು ರಕ್ಷಿಸುವವನೂ, ದಕ್ಷನೂ ಮತ್ತು ಅನ್ಯಾಯರೂಪವಾದ ದಯೆಯನ್ನು ಹೊಂದದವನೂ ಆಗಿರಬೇಕು. ಅತಿಯಾಗಿ ಸ್ತ್ರೀಲೋಲುಪನಾಗಿರಬಾರದು. ಮೃಷ್ಟಾನ್ನವನ್ನು ಭುಂಜಿಸಬೇಕು. ಅಹಿತ- ವಾದುದನ್ನು ಭುಂಜಿಸಬಾರದು.
ಅಸ್ತಬ್ಧಃ ಪೂಜಯೇನ್ಮಾನ್ಯಾನ್ ಗುರೂನ್ ಸೇವೇದಮಾಯಯಾ |
ಅರ್ಚೇದ್ ದೇವಾನ್ನ ದಂಭೇನ ಶ್ರಿಯಮಿಚ್ಚೇದಕುತ್ಸಿತಾಮ್ ॥9॥
ಅಹಂಕಾರವಿಲ್ಲದೇ ಮಾನ್ಯರನ್ನು ಪೂಜಿಸಬೇಕು. ಕಪಟವಿಲ್ಲದೇ ಗುರುಗಳ ಸೇವೆಯನ್ನು ಮಾಡಬೇಕು. ದಂಭತನವನ್ನು ಬಿಟ್ಟು ದೇವತೆಗಳನ್ನು ಅರ್ಚಿಸಬೇಕು. ಕೆಟ್ಟ ಸಂಪತ್ತನ್ನು ಅಪೇಕ್ಷಿಸಬಾರದು.
ಸೇವೇತ ಪ್ರಣಯಂ ಹಿತ್ವಾ ದಕ್ಷಃ ಸ್ಯಾನ್ನ ತ್ವಕಾಲವಿತ್ |
ಸಾಂತ್ವಯೇನ್ನಚ ಭೋಗಾರ್ಥಮನುಗೃಹ್ಣನ್ನ ಚಾಕ್ಷಿಪೇತ್ ॥10॥
ಪಕ್ಷಪಾತವನ್ನು ಬಿಟ್ಟು ರಾಜನೀತಿಯನ್ನು ಅನುಷ್ಠಾನ ಮಾಡಬೇಕು. ದಕ್ಷತೆ- ಯಿಂದ ಕೂಡಿರಬೇಕು. ಕಾಲಜ್ಞಾನವನ್ನು ಹೊಂದಿರಬೇಕು. ತನ್ನ ಭೋಗಾರ್ಥವಾಗಿ ಸಮಾಧಾನದ ಮಾತುಗಳನ್ನಾಡಬಾರದು. ಇನ್ನೊಬ್ಬರಿಗೆ ಅನುಗ್ರಹವನ್ನು ಮಾಡುತ್ತಾ ನಿಂದಿಸಬಾರದು. (ನಿಂದಿಸುತ್ತಾ ಅನುಗ್ರಹವನ್ನು ಮಾಡಬಾರದು).
ಪ್ರಹರೇನ್ನ ತ್ವವಿಜ್ಞಾಯ ಹತ್ವಾ ಶತ್ರೂನ್ನ ಶೇಷಯೇತ್ |
ಕ್ರೋಧಂ ಕುರ್ಯಾನ್ನ ಚಾಕಸ್ಮಾನ್ಮೃದುಃ ಸ್ಯಾನ್ನಾಪಕಾರಿಷು ॥11॥
ಚೆನ್ನಾಗಿ ಪರೀಕ್ಷಿಸದೇ ಪ್ರಹಾರವನ್ನು ಮಾಡಬಾರದು. ಶತ್ರುಗಳ ಮೇಲೆ ಪ್ರಹಾರವನ್ನು ಮಾಡಿದರೆ ಯಾರನ್ನೂ ಉಳಿಸಬಾರದು. ನಿಷ್ಕಾರಣವಾಗಿ ಕೋಪ- ವನ್ನು ಮಾಡಬಾರದು. ಅಪಕಾರವನ್ನು ಮಾಡಿದವರ ವಿಷಯದಲ್ಲಿ ಮೃದುವಾಗಿ- ರಬಾರದು.
ಏವಂ ಚರಸ್ವ ರಾಜ್ಯಸ್ಥೋ ಯದಿ ಶ್ರೇಯ ಇಹೇಚ್ಛಸಿ |
ಅತೋಽನ್ಯಥಾ ನರಪತಿರ್ಭಯಮೃಚ್ಛತ್ಯನುತ್ತಮಮ್ ॥12॥
ನೀನು ರಾಜ್ಯದಲ್ಲಿದ್ದವನಾಗಿ ಶ್ರೇಯಸ್ಸನ್ನು ಬಯಸುವವನಾದರೆ ಈ ರೀತಿ ನಡೆದುಕೋ. ಬೇರೆ ರೀತಿಯಲ್ಲಿ ನಡೆದುಕೊಂಡ ರಾಜನು ಉತ್ತಮವಾದ ಭಯ- ವನ್ನು ಹೊಂದುತ್ತಾನೆ.
ಇತಿ ಸರ್ವಾನ್ ಗುಣಾನೇತಾನ್ ಯಥೋಕ್ತಾನ್ ಯೋಽನುವರ್ತತೇ |
ಅನುಭೂಯೇಹ ಭದ್ರಾಣಿ ಪ್ರೇತ್ಯ ಸ್ವರ್ಗೇ ಮಹೀಯತೇ ॥13॥
ಹೀಗೆ ನಾನು ಹೇಳಿದ ಈ ಎಲ್ಲ ಗುಣಗಳನ್ನೂ ಯಾವನು ಅನುಸರಿಸು- ತ್ತಾನೆಯೋ ಅವನು ಈ ಲೋಕದಲ್ಲಿ ಶುಭವನ್ನು ಅನುಭವಿಸಿ, ಮರಣವನ್ನು ಹೊಂದಿ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ವೈಶಂಪಾಯನಃ
ಇದಂ ವಚಃ ಶಾಂತನವಸ್ಯ ಶುಶ್ರುವಾನ್
ಯುಧಿಷ್ಠಿರಃ ಪಾಂಡವಮುಖ್ಯಸಂವೃತಃ |
ತದಾ ವವಂದೇ ಚ ಪಿತಾಮಹಂ ನೃಪೋ
ಯಥೋಕ್ತಮೇತಚ್ಚ ಚಕಾರ ಬುದ್ಧಿಮಾನ್ ॥14॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಾಸಪ್ತತಿತಮೋಽಧ್ಯಾಯಃ ॥72॥
ವೈಶಂಪಾಯನರು ಹೀಗೆ ಶಂತನುಪುತ್ರರಾದ ಭೀಷ್ಮರ ವಚನಗಳನ್ನು ಪಾಂಡವಮುಖ್ಯರ ಜೊತೆಯಲ್ಲಿ ಯುಧಿಷ್ಠಿರನು ಕೇಳಿದನು. ಆಗ ಮೇಧಾವಿಯಾದ ರಾಜನು ಪಿತಾಮಹರಾದ ಭೀಷ್ಮರಿಗೆ ನಮಸ್ಕರಿಸಿ ಅವರು ಹೇಳಿದಂತೆಯೇ ಮಾಡಿದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 72ನೆಯ ಅಧ್ಯಾಯವು ಮುಗಿಯಿತು
0

73. ಎಪ್ಪತ್ತಮೂರನೆಯ ಅಧ್ಯಾಯ
ರಾಜನ ಕರ್ತವ್ಯಗಳ ಕಥನ
ಯುಧಿಷ್ಠಿರಃ
ಕಥಂ ರಾಜಾ ಪ್ರಜಾ ರಕ್ಷನ್ ನಾಧಿಬಂಧೇನ ಯುಜ್ಯತೇ |
ಧರ್ಮೇ ಚ ನಾಪರಾಧ್ನೋತಿ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ಪ್ರಜೆಗಳನ್ನು ರಕ್ಷಿಸುವ ರಾಜನು ಹೇಗೆ ಮಹಾವ್ಯಥೆಯನ್ನು (ಚಿಂತೆಯನ್ನು) ಹೊಂದುವನಾಗುವುದಿಲ್ಲ ಮತ್ತು ಧರ್ಮದ ವಿಷಯದಲ್ಲೂ ಅಪರಾಧ ಮಾಡುವುದಿಲ್ಲ - ಎಂಬುದನ್ನು ನನಗೆ ಹೇಳು.
ಭೀಷ್ಮಃ
ಸಮಾಸೇನೈವ ತೇ ತಾತ ಧರ್ಮಾನ್ ವಕ್ಷ್ಯಾಮಿ ನಿಶ್ಚಿತಾನ್ |
ವಿಸ್ತರೇಣ ಹಿ ಧರ್ಮಾಣಾಂ ನ ಜಾತ್ವಂತಮವಾಪ್ನುಯಾತ್ ॥2॥

ಭೀಷ್ಮರು  ಪ್ರೀತಿಪಾತ್ರನೇ! ಅಂತಹ ನಿಶ್ಚಿತವಾದ ಧರ್ಮಗಳನ್ನು ಪ್ರಶ್ನೆ- ಮಾಡುವ ನಿನಗೆ ಸಂಕ್ಷೇಪವಾಗಿ ಹೇಳುವೆನು. ಧರ್ಮಗಳನ್ನು ವಿಸ್ತಾರವಾಗಿ ಹೇಳಿ- ದರೆ ಅದಕ್ಕೆ ಕೊನೆಯೇ ದೊರೆಯಲಾರದು.
ಧರ್ಮನಿಷ್ಠಾನ್ ಶ್ರುತವತೋ ವೇದವ್ರತಸಮಾಹಿತಾನ್ |
ಅರ್ಚಿತಾನ್ ವಾಸಯೇಥಾಸ್ತ್ವಂ ಗೃಹೇ ಗುಣವತೋ ದ್ವಿಜಾನ್   ॥3॥
ಧರ್ಮನಿಷ್ಠರೂ, ವಿದ್ಯಾಸಂಪನ್ನರೂ, ವೇದವ್ರತನಿಷ್ಠರೂ, ಮಾನ್ಯರೂ, ಗುಣ- ವಂತರೂ ಆದ ಬ್ರಾಹ್ಮಣರನ್ನು ನಿನ್ನ ಮನೆಯಲ್ಲಿ ವಾಸಮಾಡಿಸಿಕೋ.
ಪ್ರತ್ಯುತ್ಥಾಯೋಪಸಂಗೃಹ್ಯ ಚರಣಾವಭಿವಾದ್ಯ ಚ |
ಅಥ ಸರ್ವಾಣಿ ಕುರ್ವೀಥಾಃ ಕಾರ್ಯಾಣಿ ಸಪುರೋಹಿತಃ           ॥4॥
ಪ್ರಾತಃಕಾಲದಲ್ಲಿ ಎದ್ದು ಅವರ ಸಮೀಪಕ್ಕೆ ಹೋಗಿ ಅವರ ಚರಣಗಳಿಗೆ ನಮಸ್ಕರಿಸಿ ಅನಂತರ ಎಲ್ಲ ಕಾರ್ಯಗಳನ್ನೂ ಪುರೋಹಿತನ ಜೊತೆಯಲ್ಲಿ ಮಾಡು.
ಧರ್ಮಕಾರ್ಯಾಣಿ ನಿರ್ವರ್ತ್ಯ ಮಂಗಲಾನಿ ಪ್ರಯುಜ್ಯ ಚ |
ಬ್ರಾಹ್ಮಣಾನ್ ವಾಚಯೇಥಾಸ್ತ್ವಮರ್ಥಸಿದ್ಧಿಜಯಾಶಿಷಃ           ॥5॥
ಮಂಗಳವಾದ ಧರ್ಮಕಾರ್ಯಗಳನ್ನು ನೆರವೇರಿಸಿ, ಮಂಗಳಗಳನ್ನು ಎಸಗಿ, ಬ್ರಾಹ್ಮಣರಿಂದ ನಿನ್ನ ಅರ್ಥಸಿದ್ಧಿಯ ಮತ್ತು ಜಯದ ಆಶೀರ್ವಾದಗಳನ್ನು ಪಡೆಯುವವನಾಗು.
ಆರ್ಜವೇನ ಚ ಸಂಪನ್ನೋ ಧೃತ್ಯಾ ಬುದ್ಧ್ಯಾ ಚ ಭಾರತ |
ಅರ್ಥಾರ್ಥಂ ಪ್ರತಿಗೃಹ್ಣೀಯಾತ್ ಕಾಮಕ್ರೋಧೌ ಚ ವರ್ಜಯೇತ್              ॥6॥
ಎಲೈ ಭಾರತನೇ! ಋಜುತನದಿಂದಲೂ ಧೈರ್ಯ ಮತ್ತು ಬುದ್ಧಿಗಳಿಂದಲೂ ಕೂಡಿದವನಾಗಿ ಕಾಮಕ್ರೋಧಗಳನ್ನು ವರ್ಜಿಸಿ ಅರ್ಥಪ್ರಾಪ್ತಿಗಾಗಿ ಪ್ರಯತ್ನಪಡು.
ಕಾಮಕ್ರೋಧೌ ಪುರಸ್ಕೃತ್ಯ ಯೋಽರ್ಥಂ ರಾಜಾನುತಿಷ್ಠತಿ |
ನ ಸ ಧರ್ಮಂ ನ ಚಾಪ್ಯರ್ಥಂ ಪರಿಗೃಹ್ಣಾತಿ ಬಾಲಿಶಃ            ॥7॥
ಯಾವ ರಾಜನು ಕಾಮಕ್ರೋಧಗಳನ್ನು ಮುಂದೆ ಮಾಡಿಕೊಂಡು, ಅರ್ಥಾ- ರ್ಥವಾಗಿ ಪ್ರಯತ್ನಪಡುತ್ತಾನೆಯೋ ಬಾಲಿಶನಾದ ಅವನು ಧರ್ಮವನ್ನಾಗಲೀ ಅರ್ಥವನ್ನಾಗಲೀ ಸಂಪಾದಿಸುವುದಿಲ್ಲ.
ಮಾ ಸ್ಮ ಲುಬ್ಧಾಂಶ್ಚ ಮೂರ್ಖಾಂಶ್ಚ ಕಾಮೇ ಚಾರ್ಥೇಷು ಯೂಯುಜಃ |
ಅಲುಬ್ಧಾನ್ ಬುದ್ಧಿಸಂಪನ್ನಾನ್ ಸರ್ವಕರ್ಮಸು ಯೋಜಯೇತ್              ॥8॥
ಲೋಭಿಗಳನ್ನೂ ಮತ್ತು ಮೂರ್ಖರನ್ನೂ ಯಾವ ಕಾರ್ಯದಲ್ಲಿಯೂ ನಿಯೋಜಿಸಬೇಡ. ಎಲ್ಲ ಕಾರ್ಯಗಳಲ್ಲಿಯೂ ಲೋಭಿಗಳಲ್ಲದ ಮೇಧಾವಿಗಳನ್ನು ನಿಯೋಜಿಸು.
ಮೂರ್ಖೋ ಹ್ಯಧಿಕೃತೋಽರ್ಥೇಷು ಕಾರ್ಯಾಣಾಮವಿಶಾರದಃ |
ಪ್ರಜಾಃ ಕ್ಲಿಶ್ನಾತ್ಯಯೋಗೇನ ಕಾಮದ್ವೇಷಸಮನ್ವಿತಃ ॥9॥
ಕಾರ್ಯವನ್ನು ತಿಳಿಯದ ಮೂರ್ಖನನ್ನು ಅಧಿಕಾರದಲ್ಲಿ ನಿಯೋಜಿಸಿದರೆ ಕಾಮದ್ವೇಷಗಳಿಂದ ಕೂಡಿದ ಅವನು ಅನ್ಯಾಯದ ಮಾರ್ಗದಲ್ಲಿ ಪ್ರಜೆಗಳನ್ನು ಪೀಡಿಸುತ್ತಾನೆ.
ಬಲಿಷಷ್ಠೇನ ಶುಲ್ಕೇನ ದಂಡೇನಾಥಾಪರಾಧಿನಮ್ |
ಶಸ್ತ್ರಭೀತೇನ ಲಿಪ್ಸೇಥಾ ವೇತನೇನ ಧನಾಗಮಮ್  ॥10॥
ಅಪರಾಧವನ್ನು ಮಾಡಿದವನಿಗೆ ಅವನ ಆದಾಯದ ಆರನೆಯ ಒಂದು ಭಾಗ- ವನ್ನು ದಂಡವಾಗಿ ತೆಗೆದುಕೊಂಡು, ಸೇವಕನು ಅಪರಾಧವನ್ನು ಮಾಡಿದರೆ ಶಸ್ತ್ರ- ಭೀತನಾದ ಅವನ ವೇತನವನ್ನು ಹಿಡಿದು ಧನವನ್ನು ಸಂಪಾದಿಸಲು ಪ್ರಯತ್ನಿಸ- ಬೇಕು.
ದಾಪಯಿತ್ವಾ ಕರಂ ಧರ್ಮ್ಯಂ ರಾಷ್ಟ್ರಂ ನಿತ್ಯಂ ಯಥಾವಿಧಿ |
ಅಶೇಷಾನ್ ಕಲ್ಪಯೇದ್ ರಾಜಾ ಯೋಗಕ್ಷೇಮಾನತಂದ್ರಿತಃ       ॥11॥
ರಾಷ್ಟ್ರಕ್ಕೆ ಸಲ್ಲಬೇಕಾದ ಧಾರ್ಮಿಕವಾದ ಕರ(ಕಂದಾಯ)ವನ್ನು ಶಾಸ್ತ್ರರೀತಿ- ಯಿಂದ ಪ್ರಜೆಗಳು ಕೊಡುವಂತೆ ಮಾಡಿ ರಾಜನು ಯಾವ ಆಲಸ್ಯವೂ ಇಲ್ಲದೆ ಅವರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು.
ಗೋಪಾಯಿತಾರಂ ದಾತಾರಂ ಧರ್ಮನಿತ್ಯಮತಂದ್ರಿತಮ್ |
ಅಕಾಮದ್ವೇಷಸಂಯುಕ್ತಮನುರಜ್ಯಂತಿ ಮಾನವಾಃ            ॥12॥
ತಮ್ಮನ್ನು ರಕ್ಷಿಸುವ ಮತ್ತು ತಮಗೆ ಎಲ್ಲವನ್ನೂ ಆಲಸ್ಯವಿಲ್ಲದೇ ಕಲ್ಪಿಸಿಕೊಡುವ ಕಾಮದ್ವೇಷರಹಿತನಾದ ರಾಜನಲ್ಲಿ ಪ್ರಜೆಗಳು ಪ್ರೀತಿಯುಳ್ಳವರಾಗುತ್ತಾರೆ.
ಮಾ ಸ್ಮಾಧರ್ಮೇಣ ಲಾಭೇನ ಲಿಪ್ಸೇಥಾಸ್ತ್ವಂ ಧನಾಗಮಮ್ |
ಧರ್ಮಾರ್ಥಾವಧ್ರುವೌ ತಸ್ಯ ಯೋಽಪಶಾಸ್ತ್ರಪರೋ ಭವೇತ್    ॥13॥
ನೀನು ಅಧರ್ಮದಿಂದ ಧನವನ್ನು ಸಂಪಾದಿಸಲು ಎಂದೂ ಬಯಸಬೇಡ. ಶಾಸ್ತ್ರವಿರುದ್ಧವಾಗಿ ನಡೆದುಕೊಳ್ಳುವ ರಾಜನ ಧರ್ಮ ಮತ್ತು ಅರ್ಥಗಳು ಅನಿತ್ಯ- ವಾದವುಗಳು.
ಅಪಶಾಸ್ತ್ರಪರೋ ರಾಜಾ ಸಂಚಯಾನ್ ನಾಧಿಗಚ್ಛತಿ |
ಅಸ್ಥಾನೇ ಚಾಸ್ಯ ತದ್ ವಿತ್ತಂ ಸರ್ವಮೇವ ವಿನಶ್ಯತಿ            ॥14॥
ಶಾಸ್ತ್ರವಿರುದ್ಧವಾಗಿ ನಡೆದುಕೊಳ್ಳುವ ರಾಜನು ಧನಸಂಚಯವನ್ನು ಹೊಂದು- ವುದಿಲ್ಲ. ಅಲ್ಲದೇ ಅವನು ಸಂಪಾದಿಸಿದ ಧನವೂ ಸಹ ಅಪಮಾರ್ಗದಲ್ಲಿ ನಾಶ- ವನ್ನು ಹೊಂದುತ್ತದೆ.

ಅರ್ಥಮೂಲೋಽಪಹಿಂಸಾಂ ಚ ಕುರುತೇ ಸ್ವಯಮಾತ್ಮನಃ |
ಕರೈರಶಾಸ್ತ್ರದೃಷ್ಟೈರ್ಹಿ ಮೋಹಾತ್ ಸಂಪೀಡಯನ್ ಪ್ರಜಾಃ ॥15॥
ಧನಸಂಪಾದನೆಯಲ್ಲಿಯೇ ಆಸಕ್ತನಾದ ರಾಜನು ಲೋಭಮೋಹಗಳಿಂದ ಪ್ರಜೆ -ಗಳನ್ನು ಅನ್ಯಾಯವಾದ ಕರಗಳನ್ನು ಹೇರಿ ಪೀಡಿಸಿ ತನ್ನ ಹಿಂಸೆಯನ್ನೇ(ನಾಶವನ್ನೇ) ತಂದುಕೊಳ್ಳುತ್ತಾನೆ.
ಊಧಶ್ಛಿಂದ್ಯಾದ್ಧಿ ಯೋ ಧೇನ್ವಾಃ ಕ್ಷೀರಾರ್ಥೀ ನ ಲಭೇತ್ ಪಯಃ |
ಏವಂ ರಾಷ್ಟ್ರಮಯೋಗೇನ ಪೀಡಿತಂ ನ ವಿವರ್ಧತೇ ॥16॥
ಕ್ಷೀರಾರ್ಥಿಯಾದ ಯಾವನು ಹಸುವಿನ ಕೆಚ್ಚಲನ್ನೇ ಕತ್ತರಿಸಿದರೆ ಹಾಲನ್ನು ಪಡೆದಾನು? ಈ ರೀತಿಯಲ್ಲಿ ಅನುಪಾಯದಿಂದ ರಾಷ್ಟ್ರವನ್ನು ಪೀಡಿಸಿದರೆ ಆ ರಾಷ್ಟ್ರವು ವೃದ್ಧಿಯನ್ನು ಪಡೆಯುವುದಿಲ್ಲ.
ಯೋ ಹಿ ದೋಗ್ಧ್ರೀಮುಪಾಸ್ತೇ ತು ಸ ನಿತ್ಯಂ ಲಭತೇ ಪಯಃ |
ಏವಂ ರಾಷ್ಟ್ರಮುಪಾಯೇನ ಭುಂಜಾನೋ ಲಭತೇ ಫಲಮ್ ॥17॥
ಯಾವನು ಹಾಲು ಕೊಡುವ ಹಸುವನ್ನು ಸೇವಿಸುತ್ತಾನೆಯೋ ಅವನು ನಿತ್ಯವೂ ಹಾಲನ್ನು ಪಡೆಯುತ್ತಾನೆ. ಅದೇ ರೀತಿ ಉಪಾಯದಿಂದ ರಾಷ್ಟ್ರವನ್ನು ಭೋಗಿಸು- ವವನು ರಾಷ್ಟ್ರದ ಫಲವನ್ನು ಪಡೆಯುತ್ತಾನೆ.
ಅಥ ರಾಷ್ಟ್ರಮುಪಾಯೇನ ಭುಜ್ಯಮಾನಂ ಸುರಕ್ಷಿತಮ್ |
ಜನಯತ್ಯತುಲಾಂ ನಿತ್ಯಂ ಕೋಶವೃದ್ಧಿಂ ಯುಧಿಷ್ಠಿರ ॥18॥
ಆಗ ಶಾಸ್ತ್ರರೀತಿಯಿಂದ ಭೋಗಿಸಲ್ಪಡುವ, ತನ್ನನ್ನು ಸುರಕ್ಷಿತವಾಗಿ ಇಟ್ಟ ರಾಷ್ಟ್ರವು ಎಲೈ ಯುಧಿಷ್ಠಿರನೇ! ನಿತ್ಯವೂ ಆ ರಾಜನಿಗೆ ಅಸದೃಶವಾದ ಕೋಶವೃದ್ಧಿ- ಯನ್ನು ಉಂಟು ಮಾಡುತ್ತದೆ.
ದೋಗ್ಧ್ರಿ ಧಾನ್ಯಂ ಹಿರಣ್ಯಂ ಚ ಪ್ರಜಾ ರಾಜ್ಞಿ ಸುರಕ್ಷಿತಾ |
ನಿತ್ಯಂ ಸ್ವೇಭ್ಯಃ ಪರೇಭ್ಯಶ್ಚ ತೃಪ್ತಾ ಮಾತಾ ಯಥಾ ಪಯಃ ॥19॥
ನಿತ್ಯವೂ ತನ್ನವರಿಂದಲೂ ಮತ್ತು ಪರರಿಂದಲೂ ತೃಪ್ತಳಾದ ತಾಯಿಯು ಶಿಶುವಿಗೆ ಹಾಲನ್ನು ಸುರಿಸಿದಂತೆ ರಾಜನಿಂದ ಸುರಕ್ಷಿತವಾದ ರಾಷ್ಟ್ರವು (ರಾಷ್ಟ್ರದ ಪ್ರಜೆಗಳು) ರಾಜನ ಮೇಲೆ ಧಾನ್ಯದ ಮತ್ತು ಹಿರಣ್ಯದ ಮಳೆಯನ್ನು ಸುರಿಸುತ್ತಾರೆ.
ಮಾಲಾಕಾರೋಪಮೋ ರಾಜನ್ ಭವ ಮಾಂಗಾರಿಕೋಪಮಃ |
ಯಥಾ ಯುಕ್ತಶ್ಚಿರಂ ರಾಷ್ಟ್ರಂ ಭೋಕ್ತುಂ ಶಕ್ಯಸಿ ಪಾಲಯನ್ ॥20॥
ಎಲೈ ರಾಜನೇ! ನೀನು ಪುಷ್ಪಮಾಲೆಯನ್ನು ಕಟ್ಟುವವನಿಗೆ ಸದೃಶನಾಗಿರು. ಇದ್ದಿಲನ್ನು ಮಾಡುವವನಿಗೆ ಸದೃಶನಾಗಿರಬೇಡ. ಹಾಗಿದ್ದರೆ ಮಾತ್ರ ರಾಜ್ಯವನ್ನು ರಕ್ಷಿಸುತ್ತಾ ಬಹುಕಾಲ ಶುಭವನ್ನು ಭೋಗಿಸಲು ಸಮರ್ಥನಾಗುವಿ.
ಪರಚಕ್ರಾಭಿಯಾನೇನ ಯದಿ ತೇ ಸ್ಯಾದ್ ಧನಕ್ಷಯಃ |
ಅಥ ಸಾಮ್ನೈವ ಲಿಪ್ಸೇಥಾ ಧನಮಬ್ರಾಹ್ಮಣೇಷು ಯತ್ ॥21॥
ಶತ್ರುಗಳ ಮೇಲೆ ದಂಡೆತ್ತಿ ಹೋಗುವುದರಿಂದ ಧನಕ್ಷಯವುಂಟಾಗುವುದೆಂಬ ಚಿಂತೆಯಿದ್ದರೆ ಒಳ್ಳೆಯ ಮಾತುಗಳಿಂದ (ಸಾಮೋಪಾಯದಿಂದ) ಬ್ರಾಹ್ಮಣರಲ್ಲ- ದವರಿಂದ ಧನವನ್ನು ಪಡೆಯಲು ಪ್ರಯತ್ನಿಸು.
ಮಾ ಸ್ಮ ತೇ ಬ್ರಾಹ್ಮಣಂ ದೃಷ್ಟ್ವಾ ಧನಸ್ಥಂ ಪ್ರಚಲೇನ್ಮನಃ |
ಅಂತ್ಯಾಯಾಮಪ್ಯವಸ್ಥಾಯಾಂ ಕಿಮು ಸ್ಫೀತಸ್ಯ ಭಾರತ ॥22॥
ಅಂತ್ಯಾವಸ್ಥೆಯಲ್ಲಿಯೂ (ದಾರಿದ್ರ್ಯಾವಸ್ಥೆಯಲ್ಲಿಯೂ) ಶ್ರೀಮಂತನಾದ ಬ್ರಾಹ್ಮಣನನ್ನು ನೋಡಿ ನಿನ್ನ ಮನಸ್ಸು ವಿಚಲಿತವಾಗದಿರಲಿ. ಎಲೈ ಭಾರತನೇ! ಇನ್ನು ಸಮೃದ್ಧನಾದ ರಾಜನ ಮನಸ್ಸು ವಿಚಲಿತವಾಗುವುದು ಹೇಗೆ?
ಧನಾನಿ ತೇಭ್ಯೋ ದದ್ಯಾಸ್ತ್ವಂ ಯಥಾಶಕ್ತಿ ಯಥಾರ್ಹತಃ |
ಸಾಂತ್ವಯನ್ ಪರಿರಕ್ಷಂಶ್ಚ ಸ್ವರ್ಗಮಾಪ್ಸ್ಯಸಿ ದುರ್ಜಯಮ್ ॥23॥
ಅಂತಹ ಬ್ರಾಹ್ಮಣರಿಗೆ ಅವರ ಯೋಗ್ಯತೆಯನ್ನು ಮತ್ತು ಶಕ್ತಿಯನ್ನು ನೋಡಿ ಧನವನ್ನು ಕೊಡುವವನಾಗು. ಅವರನ್ನು ಸಮಾಧಾನ ಮಾಡುವವನಾಗಿ ಚೆನ್ನಾಗಿ ರಕ್ಷಣೆಯನ್ನು ಮಾಡಿದರೆ ನೀನು ದುರ್ಜಯವಾದ ಸ್ವರ್ಗವನ್ನು ಹೊಂದುವಿ.
ಏವಂ ಧರ್ಮೇಣ ವೃತ್ತೇನ ಪ್ರಜಾಸ್ತ್ವಂ ಪರಿಪಾಲಯನ್ |
ಸ್ವಂತಂ ಪುಣ್ಯಂ ಯಶೋವಂತಂ ಪ್ರಾಪ್ಸ್ಯಸೇ ಕುರುನಂದನ ॥24॥
ಎಲೈ ಕುರುನಂದನನೇ! ಈ ರೀತಿಯಲ್ಲಿ ನೀನು ಧರ್ಮದ ನಡತೆಯಿಂದ ಕೂಡಿದವನಾಗಿ ಪ್ರಜೆಗಳನ್ನು ಪಾಲಿಸುತ್ತಾ ಕೀರ್ತಿಯುತವಾದ ಸುಖೋದಕವಾದ ಪುಣ್ಯವನ್ನು ಸಂಪಾದಿಸುವಿ.
ಧರ್ಮೇಣ ವ್ಯವಹಾರೇಣ ಪ್ರಜಾಃ ಪಾಲಯ ಪಾಂಡವ |
ಯುಧಿಷ್ಠಿರ ತಥಾ ಯುಕ್ತೋ ನಾಧಿಬಂಧೇನ ಯೋಕ್ಷ್ಯಸೇ ॥25॥
ಎಲೈ ಪಾಂಡವನೇ! ಧರ್ಮಯುಕ್ತವಾದ ವ್ಯವಹಾರದಿಂದ ಪ್ರಜೆಗಳನ್ನು ಪಾಲಿಸು. ಯುಧಿಷ್ಠಿರನೇ! ಹಾಗೆ ಮಾಡಿದರೆ ನೀನು ಚಿಂತೆಯ ಬಂಧನಕ್ಕೆ ಈಡಾ- ಗುವುದಿಲ್ಲ.
ಏಷ ಏವ ಪರೋ ಧರ್ಮೋ ಯದ್ ರಾಜಾ ರಕ್ಷತೇ ಪ್ರಜಾಃ |
ಭೂತಾನಾಂ ಹಿ ಪರಂ ಧರ್ಮಂ ರಕ್ಷಣಂ ಚ ಪರಾ ದಯಾ ॥26॥
ಪ್ರಜೆಗಳನ್ನು ರಕ್ಷಣೆ ಮಾಡುವುದೇ ರಾಜನ ಪರಮ ಧರ್ಮ. ಭೂತಗಳಿಗೆ (ಪ್ರಜೆಗಳಿಗೆ) ರಕ್ಷಣೆ ಮತ್ತು ದಯವೇ ಅಪೇಕ್ಷಿತವಾದ ಪರಮಧರ್ಮ.
ತಸ್ಮಾದೇವ ಪರಂ ಧರ್ಮಂ ಮನ್ಯಂತೇ ಧರ್ಮಕೋವಿದಾಃ |
ಯದ್ ರಾಜಾ ರಕ್ಷಣೇ ಯುಕ್ತೋ ಭೂತೇಷು ಕುರುತೇ ದಯಾಮ್ ॥27॥

ಆದ್ದರಿಂದ ರಾಜನು ಪ್ರಜೆಗಳ ರಕ್ಷಣೆಯನ್ನು ಮಾಡಿ ಎಲ್ಲ ಭೂತಗಳಲ್ಲಿ ದಯೆಯನ್ನು ತೋರಿಸುವುದೇ ಪರಮಧರ್ಮವೆಂದು ಧರ್ಮಕೋವಿದರು ತಿಳಿಯುತ್ತಾರೆ.
ಯದಹ್ನಾ ಕುರುತೇ ಪಾಪಮರಕ್ಷನ್ ಭಯತಃ ಪ್ರಜಾಃ |
ರಾಜಾ ವರ್ಷಸಹಸ್ರೇಣ ತಸ್ಯಾಂತಮಧಿಗಚ್ಛತಿ ||28||
ಪ್ರಜೆಗಳನ್ನು ಒಂದು ದಿನದಲ್ಲಿ ಭಯಗಳಿಂದ ರಕ್ಷಿಸದೇ ರಾಜನು ಏನು ಪಾಪವನ್ನು ಮಾಡುತ್ತಾನೆಯೋ ಅದರ ಫಲವನ್ನು ಸಹಸ್ರವರ್ಷಗಳವರೆಗೆ ಅನು- ಭವಿಸುತ್ತಾನೆ.
ಯದಹ್ನಾ ಕುರುತೇ ಪುಣ್ಯಂ ಪ್ರಜಾ ಧರ್ಮೇಣ ಪಾಲಯನ್ |
ದಶ ವರ್ಷಸಹಸ್ರಾಣಿ ತಸ್ಯ ಭುಂಕ್ತೇ ಫಲಂ ದಿವಿ ||29||
ಪ್ರಜೆಗಳನ್ನು ಒಂದು ದಿನ ರಕ್ಷಿಸುವ ರಾಜನು ಆ ಪುಣ್ಯದಿಂದ ಸ್ವರ್ಗದಲ್ಲಿ ಹತ್ತುಸಹಸ್ರವರ್ಷಗಳ ಕಾಲ ಅದರ ಶುಭಫಲವನ್ನು ಅನುಭವಿಸುತ್ತಾನೆ.
ಸ್ವಿಷ್ಟಃ ಸ್ವಧೀತಃ ಸುತಪಾ ಲೋಕಾನ್ ಜಯತಿ ಯಾವತಃ |
ಕ್ಷಣೇನ ತಾನವಾಪ್ನೋತಿ ಪ್ರಜಾ ಧರ್ಮೇಣ ಪಾಲಯನ್ ||30||
ರಾಜನು ಪ್ರಜೆಗಳನ್ನು ಧರ್ಮದಿಂದ ಪಾಲಿಸಿದರೆ ಒಳ್ಳೆಯ ಯಾಗವನ್ನು ಮಾಡಿ, ಒಳ್ಳೆಯ ಅಧ್ಯಯನವನ್ನು ಮಾಡಿ, ಒಳ್ಳೆಯ ತಪಸ್ಸನ್ನು ಮಾಡಿದವನು ಎಷ್ಟು ಲೋಕಗಳನ್ನು ಜಯಿಸುತ್ತಾನೋ ಅಷ್ಟು ಲೋಕಗಳನ್ನು ರಾಜನು ಒಂದೇ ಕ್ಷಣದಲ್ಲಿ ಜಯಿಸುತ್ತಾನೆ.
ಏವಂಧರ್ಮಂ ಪ್ರಯತ್ನೇನ ಕೌಂತೇಯ ಪರಿಪಾಲಯನ್ |
ಇಹ ಪುಣ್ಯಫಲಂ ಲಬ್ಧ್ವಾ ನಾಧಿಬಂಧೇನ ಯೋಕ್ಷ್ಯಸೇ ||31||
ಎಲೈ ಕೌಂತೇಯನೇ! ಹೀಗೆ ಪ್ರಯತ್ನಪಟ್ಟು ಧರ್ಮವನ್ನು ಪಾಲಿಸುವವನು ಈ ಲೋಕದಲ್ಲಿ ಪುಣ್ಯಫಲವನ್ನು ಹೊಂದಿ ಚಿಂತೆಗಳಿಂದ ದೂರನಾಗುತ್ತಾನೆ. (ನೀನೂ ಸಹ ಹೀಗೆ ಮಾಡಿದರೆ ಚಿಂತೆಗಳಿಂದ ದೂರನಾಗುವಿ)
ಸ್ವರ್ಗಲೋಕೇ ಚ ಮಹತೀಂ ಶ್ರಿಯಂ ಪ್ರಾಪ್ಸ್ಯಸಿ ಪಾಂಡವ |
ಅಸಂಭವಶ್ಚ ಧರ್ಮಾಣಾಮೀದೃಶಾನಾಮರಾಜಸು |
ತಸ್ಮಾದ್ ರಾಜೈವ ನಾನ್ಯೋಽಸ್ತಿ ಯೋ ಮಹತ್ ಫಲಮಾಪ್ನುಯಾತ್ ||32||
ಎಲೈ ಪಾಂಡವನೇ! ಸ್ವರ್ಗಲೋಕದಲ್ಲಿಯೂ ಕೂಡ ದೊಡ್ಡ ಸಂಪತ್ತನ್ನು ಪಡೆಯುವಿ. ಇಂತಹ ಧರ್ಮಾನುಷ್ಠಾನವು ರಾಜರಲ್ಲದವರಿಂದ ಮಾಡಲು ಅಸಾಧ್ಯ -ವಾದುದು. ಆದ್ದರಿಂದ ರಾಜನೇ ಮಹಾಫಲವನ್ನು ಪಡೆದಾನೆಯೇ ಹೊರತು ಇನ್ನೊಬ್ಬನು ಪಡೆಯಲಾರ.
ಸ ರಾಜ್ಯಮೃದ್ಧಿಮತ್ ಪ್ರಾಪ್ಯ ಧರ್ಮೇಣ ಪರಿಪಾಲಯನ್ |
ಇಂದ್ರಂ ತರ್ಪಯ ಸೋಮೇನ ಕಾಮೈಶ್ಚ ಸುಹೃದೋ ಜನಾನ್ ||33||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿಸಪ್ತತಿತಮೋಽಧ್ಯಾಯಃ ||73||
ಅಂತಹ ನೀನು ಸಂಪದ್ಯುಕ್ತವಾದ ರಾಜ್ಯವನ್ನು ಪಡೆದು, ಧರ್ಮದಿಂದ ಅದನ್ನು ಪರಿಪಾಲಿಸಿ, ಸೋಮರಸದಿಂದ ಇಂದ್ರನನ್ನೂ ಕಾಮ್ಯವಸ್ತುಗಳಿಂದ ಸುಹೃಜ್ಜನರನ್ನೂ ತೃಪ್ತಿಪಡಿಸು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 73ನೆಯ ಅಧ್ಯಾಯವು ಮುಗಿಯಿತು.
0

74. ಎಪ್ಪತ್ತನಾಲ್ಕನೆಯ ಅಧ್ಯಾಯ
ಬ್ರಾಹ್ಮಣನ ಶ್ರೇಷ್ಠತ್ವ ಕಥನ. ಐಲ-ವಾಯುಸಂವಾದ
ಯುಧಿಷ್ಠಿರಃ
ಕೀದೃಶೋ ಬ್ರಾಹ್ಮಣೋ ರಾಜ್ಞಾ ಕಾರ್ಯಾಕಾರ್ಯವಿಚಾರಣೇ |
ಕ್ಷಮಃ ಕರ್ತುಂ ಸಮರ್ಥೋ ವಾ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಪಿತಾಮಹನೇ! ರಾಜನು ಎಂತಹ ಬ್ರಾಹ್ಮಣನನ್ನು ಕಾರ್ಯಾ- ಕಾರ್ಯವಿಚಾರಣೆಯಲ್ಲಿ ಅಧಿಕೃತನನ್ನಾಗಿ ಮಾಡಲು ಶಕ್ತನಾಗುತ್ತಾನೆ ಎಂದು ನನಗೆ ಹೇಳು.
ಭೀಷ್ಮಃ
ಯ ಏವ ತು ಸತೋ ರಕ್ಷೇದಸತಶ್ಚ ನಿಬರ್ಹಯೇತ್ |
ಸ ಏವ ರಾಜ್ಞಾ ಕರ್ತವ್ಯೋ ರಾಜನ್ ರಾಜಪುರೋಹಿತಃ ||2||
ಭೀಷ್ಮರು ಎಲೈ ರಾಜನೇ! ಯಾವನು ಸಜ್ಜನರನ್ನು ರಕ್ಷಿಸುತ್ತಾನೆಯೋ, ದುಷ್ಟರನ್ನು ವಿನಾಶಗೊಳಿಸುತ್ತಾನೆಯೋ ಅಂತಹವನನ್ನೇ ರಾಜನು ರಾಜಪುರೋಹಿತ -ನನ್ನಾಗಿ ಮಾಡಬೇಕು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪುರೂರವಸ ಐಲಸ್ಯ ಸಂವಾದಂ ಮಾತರಿಶ್ವನಃ ||3||
ಈ ವಿಷಯದಲ್ಲಿಯೂ ಸಹ ಇಲಾಪುತ್ರನಾದ ಪುರೂರವನ ಮತ್ತು ವಾಯು- ವಿನ ಸಂವಾದರೂಪವಾದ ಈ ಪ್ರಾಚೀನವಾದ ಇತಿಹಾಸವನ್ನು ಹೇಳುತ್ತಾರೆ.

ಐಲಃ
ಕುತಃಸ್ವಿದ್ ಬ್ರಾಹ್ಮಣೋ ಜಾತೋ ವರ್ಣಾಶ್ಚಾಪಿ ಕುತಸ್ತ್ರಯಃ |
ಕಸ್ಮಾಚ್ಚ ಭವತಿ ಶ್ರೇಯಾನೇತದ್ ವಾಯೋ ವಿಚಕ್ಷ್ವ ಮೇ ||4||
ಐಲ ಬ್ರಾಹ್ಮಣನು ಹೇಗೆ ಹುಟ್ಟಿದನು? ಉಳಿದ ಮೂರುವರ್ಣಗಳೂ ಹೇಗೆ ಹುಟ್ಟಿದವು? ವಾಯುವೇ! ಬ್ರಾಹ್ಮಣನು ಹೇಗೆ ಶ್ರೇಷ್ಠನಾಗುತ್ತಾನೆ ಎಂಬುದನ್ನು ನನಗೆ ಹೇಳು.
ವಾಯುಃ
ಬ್ರಹ್ಮಣೋ ಮುಖತಃ ಸೃಷ್ಟೋ ಬ್ರಾಹ್ಮಣೋ ರಾಜಸತ್ತಮ |
ಬಾಹುಭ್ಯಾಂ ಕ್ಷತ್ರಿಯಃ ಸೃಷ್ಟ ಊರುಭ್ಯಾಂ ವೈಶ್ಯ ಉಚ್ಯತೇ ||5||
ಎಲೈ ರಾಜಶ್ರೇಷ್ಠನೇ! ಬ್ರಹ್ಮನ ಮುಖದಿಂದ ಬ್ರಾಹ್ಮಣನು ಜನಿಸಿದನು. ಬಾಹು -ಗಳಿಂದ ಕ್ಷತ್ರಿಯರು. ಮತ್ತು ಊರುಗಳಿಂದ ವೈಶ್ಯರು ಜನಿಸಿದರು ಎಂದು ಹೇಳ- ಲ್ಪಡುತ್ತದೆ.
ವರ್ಣಾನಾಂ ಪರಿಚರ್ಯಾರ್ಥಂ ತ್ರಯಾಣಾಂ ಪುರುಷರ್ಷಭ |
ವರ್ಣಶ್ಚತುರ್ಥಃ ಪಶ್ಚಾತ್ ತು ಪದ್ಭ್ಯಾಂ ಶೂದ್ರೋ ವಿನಿರ್ಮಿತಃ ||6||
ಎಲೈ ಪುರುಷರ್ಷಭನೇ! ಈ ವರ್ಣಗಳ ಪರಿಚರ್ಯೆಗಾಗಿ ನಾಲ್ಕನೆಯ ವರ್ಣದವನಾದ ಶೂದ್ರನು ಅನಂತರ ಬ್ರಹ್ಮದೇವರ ಪಾದಗಳಿಂದ ಸೃಷ್ಟಿಸಲ್ಪಟ್ಟನು.
ಬ್ರಾಹ್ಮಣೋ ಜಾತಮಾತ್ರಸ್ತು ಪೃಥಿವೀಮಧ್ಯಜಾಯತ |
ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ ||7||
ಬ್ರಾಹ್ಮಣನು ಹುಟ್ಟಿದ ತತ್ಕ್ಷಣವೇ ಭೂಮಿಯಲ್ಲಿ ಶ್ರೇಷ್ಠನಾದನು. ಅವನು ಧರ್ಮದ ರಕ್ಷಣೆಯ ಸಲುವಾಗಿ ಎಲ್ಲ ಜೀವರಿಗೂ ಪ್ರಭುವಾದನು.
ಸರ್ವಸ್ವಂ ಬ್ರಾಹ್ಮಣಸ್ಯೇದಂ ಯತ್ ಕಿಂಚಿದಿಹ ದೃಶ್ಯತೇ |
ಧರ್ಮಯುಕ್ತಂ ಪ್ರಶಸ್ತಂ ಚ ಜಗತ್ಯಸ್ಮಿನ್ ನೃಪಾತ್ಮಜ ||8||
ಎಲೈ ರಾಜಕುಮಾರನೇ! ಈ ಜಗತ್ತಿನಲ್ಲಿ ಧರ್ಮಯುಕ್ತವಾದ ಮತ್ತು ಪ್ರಶಸ್ತ ವಾದ ಯಾವ ಯಾವ ಸ್ವತ್ತುಗಳು ಕಂಡುಬರುತ್ತವೆಯೋ ಅವೆಲ್ಲವೂ ಬ್ರಾಹ್ಮಣನಿಗೇ ಸೇರಿದುದು.
ತತಃ ಪೃಥಿವ್ಯಾ ಗೋಪ್ತಾರಂ ಕ್ಷತ್ರಿಯಂ ದಂಡಧಾರಿಣಮ್ |
ದ್ವಿತೀಯಂ ವರ್ಣಮಕರೋತ್ ಪ್ರಜಾನಾಮನುಗುಪ್ತಯೇ ||9||
ಅನಂತರ ಭೂಮಿಯ ರಕ್ಷಕನಾಗಿ, ದಂಡಧಾರಿಯಾಗಿ ಪ್ರಜೆಗಳನ್ನು ರಕ್ಷಿಸಲು ಎರಡನೆಯ ಕ್ಷತ್ರಿಯವರ್ಣವು ಸೃಷ್ಟಿಸಲ್ಪಟ್ಟಿತು.
ವೈಶ್ಯಸ್ತು ಧನಧಾನ್ಯೇನ ತ್ರೀನ್ ವರ್ಣಾನ್ ಬಿಭೃಯಾದಿಮಾನ್ |
ಶೂದ್ರೋ ಹ್ಯೇನಾನ್ ಪರಿಚರೇದಿತಿ ಬ್ರಹ್ಮಾನುಶಾಸನಮ್ ||10||
ವೈಶ್ಯನು ಧನಧಾನ್ಯಗಳಿಂದ ಈ ಮೂರು ವರ್ಣಗಳನ್ನೂ ಪೋಷಿಸಬೇಕು. ಶೂದ್ರನು ಈ ಮೂರು ವರ್ಣಗಳನ್ನೂ ಪರಿಚರಿಸಬೇಕು ಎಂಬುದು ಬ್ರಹ್ಮದೇವರ ಶಾಸನ.
ಐಲಃ
ದ್ವಿಜಸ್ಯ ಕ್ಷತ್ರಬಂಧೋರ್ವಾ ಕಸ್ಯೇಯಂ ಪೃಥಿವೀ ಭವೇತ್ |
ಧರ್ಮತಃ ಸಹ ವಿತ್ತೇನ ಸಮ್ಯಗ್ ವಾಯೋ ಪ್ರಚಕ್ಷ್ವ ಮೇ ||11||
ಐಲ ಎಲೈ ವಾಯುವೇ! ವಿತ್ತಸಹಿತವಾದ ಈ ಭೂಮಿಯು ಧರ್ಮದಿಂದ ಬ್ರಾಹ್ಮಣನಿಗೆ ಸೇರುತ್ತದೆಯೋ ಅಥವಾ ಕ್ಷತ್ರಿಯನಿಗೆ ಸೇರುತ್ತದೆಯೋ ಎಂಬು- ದನ್ನು ನನಗೆ ಸರಿಯಾಗಿ ಹೇಳು.
ವಾಯುಃ
ವಿಪ್ರಸ್ಯ ಸರ್ವಮೇವೈತದ್ ಯತ್ಕಿಂಚಿಜ್ಜಗತೀಗತಮ್ |
ಜ್ಯೇಷ್ಠೇನಾಭಿಜನೇನೇಹ ತದ್ ಧರ್ಮಕುಶಲಾ ವಿದುಃ ||12||
ವಾಯು ಈ ಜಗತ್ತಿನಲ್ಲಿರುವ ಎಲ್ಲವೂ ಜ್ಯೇಷ್ಠಜನ್ಮವನ್ನು ಪಡೆದ ಬ್ರಾಹ್ಮಣ -ನಿಗೇ ಸೇರಿದುದು ಎಂದು ಧರ್ಮಕುಶಲರು ತಿಳಿಯುತ್ತಾರೆ.
ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ |
ಗುರುರ್ಹಿ ಸರ್ವವರ್ಣಾನಾಂ ಜ್ಯೇಷ್ಠಃ ಶ್ರೇಷ್ಠಶ್ಚ ವೈ ದ್ವಿಜಃ ||13||
ಬ್ರಾಹ್ಮಣನು ತನ್ನ ಸ್ವತ್ತನ್ನೇ ಭುಂಜಿಸುತ್ತಾನೆ. ತನ್ನ ಭೂಮಿಯಲ್ಲೇ ವಾಸ ಮಾಡುತ್ತಾನೆ. ತನ್ನ ಧನವನ್ನೇ ದಾನ ಮಾಡುತ್ತಾನೆ. ಏಕೆಂದರೆ ಬ್ರಾಹ್ಮಣನು ಎಲ್ಲ ವರ್ಣಗಳಿಗೂ ಗುರು ಮತ್ತು ವಯಸ್ಸಿನಿಂದ ಜ್ಯೇಷ್ಠನಾದವನು ಮತ್ತು ಗುಣಗಳಿಂದ ಶ್ರೇಷ್ಠನಾದವನು.
ಪತ್ಯಭಾವೇ ಯಥಾ ಸ್ತ್ರೀ ಹಿ ದೇವರಂ ಕುರುತೇ ಪತಿಮ್ |
ಆನಂತರ್ಯಾತ್ ತಥಾ ಕ್ಷತ್ರಂ ಪೃಥಿವೀ ಕುರುತೇ ಪತಿಮ್ ||14||
ಪತಿಯು ಇಲ್ಲದಿದ್ದರೆ ನಾರಿಯು ಹೇಗೆ ಅನಂತರದ ಮೈದುನನನ್ನು ಪತಿ- ಯನ್ನಾಗಿ ಮಾಡಿಕೊಳ್ಳುತ್ತಾಳೆಯೋ ಅದರಂತೆ ಭೂಮಿಯು ಕ್ಷತ್ರಿಯನನ್ನು ಪತಿ- ಯನ್ನಾಗಿ ಮಾಡಿಕೊಳ್ಳುತ್ತದೆ.
ಏಷ ತೇ ಪ್ರಥಮಃ ಕಲ್ಪ ಆಪದ್ಯನ್ಯೋ ಭವೇದತಃ |
ಯದಿ ಸ್ವರ್ಗೇ ಪರಂ ಸ್ಥಾನಂ ಧರ್ಮತಃ ಪರಿಮಾರ್ಗಸಿ ||15||
ನೀನು ಧರ್ಮದಿಂದ ಸ್ವರ್ಗದಲ್ಲಿ ಶ್ರೇಷ್ಠಸ್ಥಾನವನ್ನು ಬಯಸುವುದಾದರೆ ಇದು ಶ್ರೇಷ್ಠವಾದ ಕಲ್ಪ. ಆಪತ್ತಿನಲ್ಲಿ ಇದಕ್ಕಿಂತ ಭಿನ್ನವಾದ

ವಿಧಾನವಿದೆ.
ಯಃ ಕಶ್ಚಿದ್ ವಿಜಯೇದ್ ಭೂಮಿಂ ಬ್ರಾಹ್ಮಣಾಯ ನಿವೇದಯೇತ್ |
ಶ್ರುತವೃತ್ತೋಪಪನ್ನಾಯ ಧರ್ಮಜ್ಞಾಯ ತಪಸ್ವಿನೇ ||16||
(ಅದೇನೆಂದರೆ) ಯಾವನು ಭೂಮಿಯನ್ನು ಗೆದ್ದರೂ ಅದನ್ನು ಧರ್ಮಜ್ಞನೂ ತಪಸ್ವಿಯೂ ವಿದ್ಯಾಶೀಲತೆಯನ್ನು ಹೊಂದಿದವನೂ ಆದ ಬ್ರಾಹ್ಮಣನಿಗೆ ನಿವೇದಿಸ- ಬೇಕು.
ಸ್ವಧರ್ಮಪರಿತೃಪ್ತಾಯ ಯೋ ನ ವಿತ್ತಪರೋ ಭವೇತ್ |
ಯೋ ರಾಜಾನಂ ನಯೇದ್ ಬುದ್ಧ್ಯಾ ಸರ್ವತಃ ಪರಿಪೂರ್ಣಯಾ ||17||
ಯಾವ ಬ್ರಾಹ್ಮಣನು ವಿತ್ತದ ಆಸೆಯನ್ನು ಹೊಂದಿರುವುದಿಲ್ಲವೋ, ತನ್ನ ಧರ್ಮಾಚರಣೆಯಿಂದ ತೃಪ್ತನಾಗಿರುತ್ತಾನೆಯೋ, ತನ್ನ ಪರಿಪೂರ್ಣವಾದ ಬುದ್ಧಿ- ಯಿಂದ ರಾಜನನ್ನು ಸನ್ಮಾರ್ಗದಲ್ಲಿ ನಡೆಸುತ್ತಾನೆಯೋ (ಅಂತಹ ಬ್ರಾಹ್ಮಣನಿಗೆ ನಿವೇದಿಸಬೇಕು).
ಬ್ರಾಹ್ಮಣೋ ಹಿ ಕುಲೇ ಜಾತಃ ಕೃತಪ್ರಜ್ಞೋ ವಿನೀತವಾಕ್ |
ಶ್ರೇಯೋ ನಯತಿ ರಾಜಾನಂ ಬ್ರುವಂಶ್ಚಿತ್ರಾಂ ಸರಸ್ವತೀಮ್ ||18||
ಬ್ರಾಹ್ಮಣನಾದರೂ ಒಳ್ಳೆಯ ಕುಲದಲ್ಲಿ ಜನಿಸಿದವನಾಗಿ, ವಿವೇಕವನ್ನು ಹೊಂದಿ -ದವನಾಗಿ, ವಿನೀತವಾದ ವಾಕ್ಯವನ್ನು ಹೊಂದಿ, ವಿಚಿತ್ರವಾದ ಕಥೆಗಳನ್ನು ಹೇಳಿ ರಾಜನನ್ನು ಶ್ರೇಯಸ್ಸಿನ ಮಾರ್ಗದಲ್ಲಿ ನಡೆಸುತ್ತಾನೆ.
ರಾಜಾ ಚರತಿ ಯಂ ಧರ್ಮಂ ಬ್ರಾಹ್ಮಣೇನ ನಿದರ್ಶಿತಮ್ |
ಶುಶ್ರೂಷುರನಹಂವಾದೀ ಕ್ಷತ್ರಧರ್ಮವ್ರತೇ ಸ್ಥಿತಃ ||19||
ತಾವತಾ ಸ ಕೃತಪ್ರಜ್ಞಶ್ಚಿರಂ ಯಶಸಿ ತಿಷ್ಠತಿ |
ತಸ್ಯ ಧರ್ಮಸ್ಯ ಸರ್ವಸ್ಯ ಭಾಗೀ ರಾಜಪುರೋಹಿತಃ ||20||
ಕ್ಷತ್ರಿಯಧರ್ಮದಲ್ಲಿ ರತನಾದ ರಾಜನು ಬ್ರಾಹ್ಮಣನ ಮಾತನ್ನು ಕೇಳಿ ಅಹಂ- ಕಾರರಹಿತನಾಗಿ ಬ್ರಾಹ್ಮಣನು ತೋರಿಸಿದಂತೆ ಧರ್ಮಾಚರಣೆಯನ್ನು ಮಾಡಿದರೆ ಅವನು ಅಷ್ಟರಿಂದಲೇ ಕೃತಕೃತ್ಯನಾಗಿ ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆ. ರಾಜಪುರೋಹಿತನು ರಾಜನು ಆಚರಿಸಿದ ಎಲ್ಲ ಧರ್ಮಗಳ ಫಲದ ಒಂದು ಅಂಶಕ್ಕೆ ಭಾಗಿಯಾಗುತ್ತಾನೆ.
ಏವಮೇವ ಪ್ರಜಾಃ ಸರ್ವಾ ರಾಜಾನಮಭಿಸಂಶ್ರಿತಾಃ |
ಬ್ರಾಹ್ಮಣಂ ಚ ಸುವಿದ್ವಾಂಸಃ ರಾಜಶಾಸ್ತ್ರವಿಪಶ್ಚಿತಮ್ |
ಸಮ್ಯಗ್ವೃತ್ತಾಃ ಸ್ವಧರ್ಮಸ್ಥಾ ನ ಕುತಶ್ಚಿದ್ ಭಯಾನ್ವಿತಾಃ ||21||
ಈ ರೀತಿಯಲ್ಲಿ ಎಲ್ಲ ಪ್ರಜೆಗಳೂ ರಾಜನನ್ನು ಆಶ್ರಯಿಸಿರುತ್ತಾರೆ. ಒಳ್ಳೆಯ ನಡತೆಯುಳ್ಳ, ಸ್ವಧರ್ಮನಿಷ್ಠರಾದ, ನಿರ್ಭಯರಾದ ವಿದ್ವಾಂಸರಾದವರು ರಾಜ- ಶಾಸ್ತ್ರವನ್ನು ತಿಳಿದ ಬ್ರಾಹ್ಮಣನನ್ನು ಆಶ್ರಯಿಸಿರುತ್ತಾರೆ.
ರಾಷ್ಟ್ರೇ ಚರಂತಿ ಯಂ ಧರ್ಮಂ ರಾಜ್ಞಾ ಸಾಧ್ವಭಿರಕ್ಷಿತಾಃ |
ಚತುರ್ಥಂ ತಸ್ಯ ಧರ್ಮಸ್ಯ ರಾಜಾ ಭಾಗಂ ಸ ವಿಂದತಿ ||22||
ರಾಜನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ ಪ್ರಜೆಗಳು ರಾಷ್ಟ್ರದಲ್ಲಿ ಯಾವ ಧರ್ಮವನ್ನು ಆಚರಿಸುತ್ತಾರೆಯೋ ರಾಜನು ಆ ಧರ್ಮದ ಫಲದ ನಾಲ್ಕನೆಯ ಒಂದು ಭಾಗವನ್ನು ಪಡೆಯುತ್ತಾನೆ.
ದೇವಾ ಮನುಷ್ಯಾಃ ಪಿತರೋ ಗಂಧರ್ವೋರಗರಾಕ್ಷಸಾಃ |
ಯಜ್ಞಮೇವೋಪಜೀವಂತಿ ನಾಸ್ತಿ ಚೇಷ್ಟಮರಾಜಕೇ ||23||
ದೇವತೆಗಳು, ಮನುಷ್ಯರು, ಪಿತೃಗಳು, ಗಂಧರ್ವೋರಗರಾಕ್ಷಸರು ಇವರು ಯಜ್ಞವನ್ನು ಉಪಜೀವಿಸುತ್ತಾರೆ. ರಾಜನಿಲ್ಲದ ದೇಶದಲ್ಲಿ ಯಜ್ಞಾದಿಗಳು ನಡೆಯು- ವುದಿಲ್ಲ.
ಇತೋ ದತ್ತೇನ ಜೀವಂತಿ ದೇವತಾಃ ಪಿತರಸ್ತಥಾ |
ರಾಜನ್ಯೇವಾಸ್ಯ ಧರ್ಮಸ್ಯ ಯೋಗಕ್ಷೇಮಃ ಪ್ರತಿಷ್ಠಿತಃ ||24||
ಭೂಮಿಯಲ್ಲಿ ಕೊಟ್ಟ ಹವಿರಾದಿಗಳಿಂದ ದೇವತೆಗಳು ಮತ್ತು ಪಿತೃಗಳು ಜೀವಿ- ಸುತ್ತಾರೆ. ಆದ್ದರಿಂದ ಈ ಧರ್ಮದ ಯೋಗಕ್ಷೇಮವು ರಾಜನನ್ನೇ ಆಶ್ರಯಿಸಿದೆ.
ಛಾಯಾಯಾಮಪ್ಸು ವಾಯೌ ಚ ಸುಖಮುಷ್ಣೇಽಧಿಗಚ್ಛತಿ |
ಅಗ್ನೌ ವಾಸಸಿ ಸೂರ್ಯೇ ಚ ಸುಖಂ ಶೀತೇಽಧಿಗಚ್ಛತಿ ||25||
ಉಷ್ಣಕಾಲದಲ್ಲಿ ನೆರಳಿನಲ್ಲಿಯೂ, ನೀರಿನಲ್ಲಿಯೂ ಮತ್ತು ತಂಗಾಳಿಯಲ್ಲಿ- ಯೂ ಸುಖವನ್ನು ಪಡೆಯುತ್ತಾರೆ. ಶೀತಕಾಲದಲ್ಲಿ ಅಗ್ನಿಯಿಂದಲೂ, ವಸ್ತ್ರದಿಂದಲೂ ಸೂರ್ಯನಿಂದಲೂ ಪ್ರಜೆಗಳು ಸುಖವನ್ನು ಪಡೆಯುತ್ತಾರೆ.
ಶಬ್ದೇ ಸ್ಪರ್ಶೇ ರಸೇ ರೂಪೇ ಗಂಧೇ ಚ ರಮತೇ ಮನಃ |
ತೇಷು ಭೋಗೇಷು ಸರ್ವೇಷು ನ ಭೀತೋ ಲಭತೇ ಸುಖಮ್ ||26||
ಪ್ರಜೆಗಳ ಮನಸ್ಸು ಶಬ್ದ ಸ್ಪರ್ಶ ರೂಪ ರಸ ಗಂಧಗಳಲ್ಲಿ ಸಂತೋಷ ಪಡುತ್ತದೆ. ಆದರೆ ಭಯವನ್ನು ಹೊಂದಿದವರು ಈ ಎಲ್ಲಾ ಭೋಗಗಳಿಂದ ಸುಖವನ್ನು ಹೊಂದುವುದಿಲ್ಲ.
ಅಭಯಸ್ಯೈವ ಯೋ ದಾತಾ ತಸ್ಯೈವ ಸುಮಹತ್ ಫಲಮ್ |
ನಹಿ ಪ್ರಾಣಸಮಂ ದಾನಂ ತ್ರಿಷು ಲೋಕೇಷು ವಿದ್ಯತೇ ||27||
ಅಂತಹ ಪರಿಸ್ಥಿತಿಯಲ್ಲಿ ಯಾವನು ಅಭಯವನ್ನುಕೊಡುತ್ತಾನೆಯೋ ಅವನಿಗೆ ಮಹಾಫಲವು ಉಂಟಾಗುತ್ತದೆ. ಪ್ರಾಣದಾನಕ್ಕೆ ಸಮನಾದ ದಾನವು ಮೂರು ಲೋಕಗಳಲ್ಲಿ ಬೇರೆ ಯಾವುದೂ ಇಲ್ಲವಷ್ಟೇ?
ಇಂದ್ರೋ ರಾಜಾ ಯಮೋ ರಾಜಾ ಧರ್ಮೋ ರಾಜಾ ತಥೈವ ಚ |

ರಾಜಾ ಬಿಭರ್ತಿ ರೂಪಾಣಿ ರಾಜ್ಞಾ ಸರ್ವಮಿದಂ ಧೃತಮ್ ॥28॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುಃಸಪ್ತತಿತಮೋಽಧ್ಯಾಯಃ ॥74॥
ರಾಜನೇ ಇಂದ್ರ. ರಾಜನೇ ಯಮ. ಹಾಗೆಯೇ ರಾಜನೇ ಧರ್ಮ. (ಹೀಗೆ) ರಾಜನು ಅನೇಕರೂಪಗಳನ್ನು ಧರಿಸುತ್ತಾನೆ. ರಾಜನು ಇದೆಲ್ಲವನ್ನೂ (ರಾಷ್ಟ್ರವನ್ನು) ಧರಿಸಿರುತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 74ನೆಯ ಅಧ್ಯಾಯವು ಮುಗಿಯಿತು
0

75. ಎಪ್ಪತ್ತೈದನೆಯ ಅಧ್ಯಾಯ
ರಾಜಪುರೋಹಿತನ ಲಕ್ಷಣ; ಐಲ-ಕಾಶ್ಯಪಸಂವಾದಾನುವಾದ
ಯುಧಿಷ್ಠಿರಃ
ರಾಜ್ಞಾ ಪುರೋಹಿತಃ ಕಾರ್ಯಃ ಕೀದೃಶೋ ವರ್ಣತೋ ಭವೇತ್ |
ಪುರೋಧಾ ಯಾದೃಶಃ ಕಾರ್ಯಃ ಕಥಯಸ್ವ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ರಾಜನು ನಿಯೋಜಿಸುವ ಪುರೋಹಿತನ ಬಣ್ಣವು ಹೇಗಿರಬೇಕು. ಪುರೋಹಿತನು ಎಂತಹವನಾಗಿರಬೇಕು ಎಂಬುದನ್ನು ನನಗೆ ಹೇಳು.
ಭೀಷ್ಮಃ
ಗೌರೋ ವಾ ಲೋಹಿತೋ ವಾಪಿ ಶ್ಯಾಮೋ ವಾ ನೀರುಜಃ ಸುಖೀ |
ಅಕ್ರೋಧನೋ ನ ಚಪಲಃ ಸರ್ವತಶ್ಚ ಜಿತೇಂದ್ರಿಯಃ ॥2॥
ಭೀಷ್ಮರು ಬಿಳಿಯ ಬಣ್ಣದವನಾಗಲೀ, ಕೆಂಪು ಬಣ್ಣದವನಾಗಲೀ, ಕಂದು ಬಣ್ಣದವನಾಗಲೀ ಆಗಿರಬಹುದು.
ಕಡುಕಪ್ಪುಬಣ್ಣದವನನ್ನು ಪುರೋಹಿತನನ್ನಾಗಿ ಮಾಡಬಾರದು. ಪುರೋಹಿತನು ನೀರೋಗಿಯೂ, ಅಕ್ರೋಧಪರನೂ, ಚಂಚಲ-ಸ್ವಭಾವವಿಲ್ಲದವನೂ, ಜಿತೇಂದ್ರಿಯನೂ ಮತ್ತು ಸುಖಶೀಲನೂ ಆಗಿರಬೇಕು.
ರಾಜ್ಞಾ ಪುರೋಹಿತಃ ಕಾರ್ಯೋ ಭವೇತ್ ವಿದ್ವಾನ್ ಬಹುಶ್ರುತಃ |
ಉಭೌ ಸಮೀಕ್ಷ್ಯ ಧರ್ಮಾರ್ಥಾವಪ್ರಮೇಯಾವನಂತರಮ್ ॥3॥
ರಾಜನು ಅಪ್ರಮೇಯಗಳಾದ ಧರ್ಮಾರ್ಥಕಾಮಗಳೆರಡನ್ನೂ ನೋಡಿ, ಅನಂತರ ಬಹುಶ್ರುತನಾದ ವಿದ್ವಾಂಸನನ್ನು ಪುರೋಹಿತನನ್ನಾಗಿ ಮಾಡಬೇಕು.
ಧರ್ಮಾತ್ಮಾ ಧರ್ಮವಿದ್ ಯೇಷಾಂ ರಾಜ್ಞಾಂ ರಾಜನ್ ಪುರೋಹಿತಃ |
ತೇಷಾಮರ್ಥಶ್ಚ ಕಾಮಶ್ಚ ಧರ್ಮಶ್ಚೇತಿ ವಿನಿಶ್ಚಯಃ ॥4॥
ಎಲೈ ರಾಜನೇ! ರಾಜನ ಪುರೋಹಿತನು ಧರ್ಮಾತ್ಮನೂ ಧರ್ಮಜ್ಞನೂ ಆಗಿದ್ದರೆ ಅಂತಹ ರಾಜನಿಗೆ ಧರ್ಮಾರ್ಥಕಾಮಗಳು ಉಂಟಾಗುತ್ತವೆ ಎಂಬುದು ನಿಶ್ಚಿತವು.
ಶ್ಲೋಕಾಶ್ಚೋಶನಸಾ ಗೀತಾಸ್ತಾನ್ ನಿಬೋಧ ಯುಧಿಷ್ಠಿರ |
ಉಚ್ಚಿಷ್ಟಃ ಸ ಭವೇದ್ ರಾಜಾ ಯಸ್ಯ ನಾಸ್ತಿ ಪುರೋಹಿತಃ ॥5॥
ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿ ಶುಕ್ರಾಚಾರ್ಯರು ಹಾಡಿದ ಶ್ಲೋಕಗಳನ್ನು ಕೇಳು ಯಾವ ರಾಜನಿಗೆ ಪುರೋಹಿತನಿರುವುದಿಲ್ಲವೋ ಅವನು ಉಚ್ಚಿಷ್ಟನಾಗುತ್ತಾನೆ.
ರಕ್ಷಸಾಮಸುರಾಣಾಂ ಚ ಪಿಶಾಚೋರಗಪಕ್ಷಿಣಾಮ್ |
ಶತ್ರೂಣಾಂ ಚ ಭವೇದ್ ವಧ್ಯೋ ಯಸ್ಯ ನಾಸ್ತಿ ಪುರೋಹಿತಃ ॥6॥
ಯಾವ ರಾಜನಿಗೆ ಪುರೋಹಿತನಿಲ್ಲವೋ ಅವನು ರಾಕ್ಷಸರಿಂದಲೂ, ಅಸುರ- ರಿಂದಲೂ, ಪಿಶಾಚಸರ್ಪಪಕ್ಷಿಗಳಿಂದಲೂ ಮತ್ತು ಶತ್ರುಗಳಿಂದಲೂ ವಧ್ಯನಾಗು- ತ್ತಾನೆ.
ಬ್ರಹ್ಮತ್ವಂ ಸರ್ವಯಜ್ಞೇಷು ಕುರ್ವೀಥಾಥರ್ವಣೋ ದ್ವಿಜಃ |
ರಾಜ್ಞಾಶ್ಚಾಥರ್ವವೇದೇನ ಸರ್ವಕರ್ಮಾಣಿ ಕಾರಯೇತ್ ॥7॥
ರಾಜನ ಎಲ್ಲ ಯಜ್ಞಗಳಲ್ಲಿ ಅಥರ್ವಣವೇದಜ್ಞನಾದ ಬ್ರಾಹ್ಮಣನೇ ಬ್ರಹ್ಮ- ಸ್ಥಾನವನ್ನು ಹೊಂದಬೇಕು. ರಾಜನಿಗೆ ಎಲ್ಲ ಕರ್ಮಗಳನ್ನೂ ಅಥರ್ವವೇದದಿಂದ ಮಾಡಿಸಬೇಕು.
ಭೂಯೋ ಗೃಹ್ಯಾಣಿ ಸತತಂ ಮಹೋತ್ಪಾತಾನ್ಯಥಾನಿ ಚ |
ಇಷ್ಟಾಮಂಗಲಯುಕ್ತಾನಿ ತಥಾಽಂತಃಪುರಿಕಾಣೀ ಚ ॥8॥
ಗೀತನೃತ್ತಾಧಿಕಾರೇಷು ಸಾಮಂತೇಷು ಮಹೀಪತೇಃ |
ಕರ್ತವ್ಯಂ ಕರಣೀಯಂ ವೈ ವೈಶ್ವದೇವಬಲಿಸ್ತಥಾ ॥9॥
ಮನೆಯಲ್ಲಿ ಸಂಭವಿಸುವ ಭೋಜನಸಮಯದ ದೀಪನಾಶಾದಿ ಅಮಂಗಳ- ಗಳು, ಬಾಹ್ಯವಾದ ಉಲ್ಕಾಪಾತಾದಿ ಅಮಂಗಳಗಳು, ಸುಹೃದರಿಗೆ ಉಂಟಾಗುವ ಅಮಂಗಳಗಳು, ಹಾಗೆಯೇ ರಾಜಧಾನಿಯೊಳಗೆ ಉಂಟಾಗುವ ಅಮಂಗಳಗಳು, ಗೀತನೃತ್ಯಾದಿ ಸ್ಥಳಗಳಲ್ಲಿ ಆಗುವ ಅಮಂಗಳಗಳು, ರಾಜನ ಸಾಮಂತರಾಜರುಗಳಿಗೆ ಆಗುವ ಅಮಂಗಳಗಳು ಇವುಗಳನ್ನು ಗಮನಿಸಿ ಪುರೋಹಿತನು ವೈಶ್ವದೇವ, ಬಲಿ ಮೊದಲಾದ ಪ್ರಾಯಶ್ಚಿತ್ತಗಳನ್ನು ಮಾಡುವವನಾಗಿರಬೇಕು.
ಪಕ್ಷಸಂಧಿಷು ಕುರ್ವೀತ ಮಹಾಶಾಂತಿಂ ಪುರೋಹಿತಃ |

ರೌದ್ರಹೋಮಸಹಸ್ರಂ ಚ ಸ್ವಸ್ಯ ರಾಜ್ಞಃ ಪ್ರಿಯಂ ಹಿತಮ್ ॥10॥
ಪಕ್ಷಸಂಧಿಗಳಾದ ಹುಣ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ರಾಜನಿಗೂ ಮತ್ತು ತನಗೂ ಹಿತಕಾರಕವಾದ ಸಹಸ್ರಾಹುತಿಗಳಿಂದ ಕೂಡಿದ ರುದ್ರದೇವತಾಕವಾದ ಹೋಮವನ್ನು ಪುರೋಹಿತನು ಮಾಡಬೇಕು.
ರಾಜ್ಞಃ ಪಾಪಮಲಾಃ ಸಪ್ತ ಯಾನ್ ನುತ್ಸ್ಯತಿ ಪುರೋಹಿತಃ।
ಅಮಾತ್ಯಾಶ್ಚ ಕುಕರ್ಮಾಣೋ ಮಂತ್ರಿಣಶ್ಚಾಪ್ಯುಪೇಕ್ಷಕಾಃ ॥11॥
ಚೌರ್ಯಮವ್ಯವಹಾರಶ್ಚ ವ್ಯವಹಾರೋಪಸೇವನಮ್।
ಅದಂಡ್ಯದಂಡನಂ ಚೈವ ದಂಡ್ಯಾನಾಂ ಚಾಪ್ಯದಂಡನಮ್ ॥12॥
ಹಿಂಸಾ ಚಾನ್ಯತ್ರ ಸಂಗ್ರಾಮಾದ್ ರಾಜ್ಞಶ್ಚ ಮಲ ಉಚ್ಯತೇ।
ಕುಭೃತ್ಯೈಸ್ತು ಪ್ರಜಾನಾಶಃ ಸಪ್ತಮಸ್ತು ಮಹಾಮಲಃ ॥13॥
ರಾಜನಿಗೆ ಏಳು ಪಾಪಮಲಗಳಿರುತ್ತವೆ. ಅವುಗಳನ್ನು ಪುರೋಹಿತನು ನಾಶ- ಗೊಳಿಸುವನು. ಏಳು ಮಲಗಳೆಂದರೆ ಕೆಟ್ಟ ಕೆಲಸವನ್ನು ಮಾಡುವ ಮತ್ತು ಮಂತ್ರಾ- ಲೋಚನೆಯ ಸಮಯದಲ್ಲಿ ಉಪೇಕ್ಷೆಯನ್ನು ಮಾಡುವ ಮಂತ್ರಿಗಳು; ಚೌರ್ಯ, ಅವ್ಯವಹಾರ, ವೈಶ್ಯನಂತೆ ಕ್ರಯವಿಕ್ರಯಾದಿ ವ್ಯವಹಾರವನ್ನು ಸೇವಿಸುವುದು, ಶಿಕ್ಷಾ ಅನರ್ಹರಿಗೆ ಶಿಕ್ಷೆಯನ್ನು ಕೊಡುವುದು, ಶಿಕ್ಷಾರ್ಹರಿಗೆ ಶಿಕ್ಷೆಯನ್ನು ಕೊಡದಿರುವುದು, ಯುದ್ಧವನ್ನು ಬಿಟ್ಟು ಬೇರೆಯ ಸ್ಥಳದಲ್ಲಿ ಹಿಂಸೆಯನ್ನು ಮಾಡುವುದು. ಇವುಗಳು ರಾಜನ ಮಲಗಳೆಂದು ಹೇಳಲ್ಪಡುತ್ತವೆ. ಕೆಟ್ಟ ಭೃತ್ಯರಿಂದ ಪ್ರಜೆಗಳ ನಾಶವು ರಾಜನ ಏಳನೆಯ ದೊಡ್ಡ ಮಲವೆನಿಸುತ್ತದೆ.
ರೌದ್ರೈರ್ಹೋಮೈರ್ಮಹಾಶಾಂತ್ಯಾ ಧೃತಕಂಬಲಕರ್ಮಣಾ।
ಭೃಗ್ವಂಗಿರೋ ವಿಧಿಜ್ಞೋ ವೈ ಪುರೋಧಾ ನಿರ್ಣುದೇ ಮಲಾತ್ ॥14॥
ರುದ್ರದೇವತಾಕವಾದ ಹೋಮಗಳಿಂದಲೂ, ಮಹಾ ಶಾಂತಿಯಿಂದಲೂ, ಶುಕ್ರಬೃಹಸ್ಪತಿಗಳ ವಿಧಾನವನ್ನು ತಿಳಿದ ಪುರೋಹಿತನು ಧೃತಕಂಬಲಕರ್ಮ- ದಿಂದಲೂ ಆ ಮಲವನ್ನು ನಾಶಗೊಳಿಸಬೇಕು.
ಏತಾನ್ ಹಿತ್ವಾ ದಿವಂ ಯಾತಿ ರಾಜಾ ಸಪ್ತ ಮಹಾಮಲಾನ್।
ಸಾಮಾತ್ಯಃ ಸಪುರೋಧಾಶ್ಚ ಪ್ರಜಾನಾಂ ಪಾಲನೇ ರತಃ ॥15॥
ಪ್ರಜಾಪಾಲನೆಯಲ್ಲಿ ರತನಾದ ರಾಜನು ಈ ಸಪ್ತಮಹಾಮಲಗಳನ್ನು ತೊರೆದು ಅಮಾತ್ಯ ಹಾಗೂ ಪುರೋಹಿತನ ಜೊತೆಯಲ್ಲಿ ಸ್ವರ್ಗಕ್ಕೆ ಹೋಗುತ್ತಾನೆ.
ಏತಸ್ಮಿನ್ನೇವ ಕೌರವ್ಯ ಪೌರೋಹಿತ್ಯೇ ಮಹಾಮತೇ।
ಶ್ಲೋಕಾನಾಹ ಮಹೇಂದ್ರಸ್ಯ ಗುರುರ್ದೇವೋ ಬೃಹಸ್ಪತಿಃ ॥16॥
ತಾನ್ ನಿಬೋಧ ಮಹೀಪಾಲ ಮಹಾಭಾಗ ಹಿತಾನ್ ಶುಭಾನ್।
ಎಲೈ ಕೌರವ್ಯನೇ! ಮಹಾಮತಿಯೇ! ಇದೇ ಪೌರೋಹಿತ್ಯದ ವಿಷಯದಲ್ಲಿ ದೇವತೆಗಳ ಗುರುಗಳಾದ ಬೃಹಸ್ಪತಿಗಳು ಶ್ಲೋಕಗಳನ್ನು ಹೇಳಿದ್ದಾರೆ. ಎಲೈ ರಾಜನೇ! ಮಹಾಭಾಗನೇ! ಅಂತಹ ಹಿತವಾದ ಮತ್ತು ಶುಭವಾದ ಶ್ಲೋಕಗಳನ್ನು ಕೇಳು.
ಋಗ್ವೇದೇ ಸಾಮವೇದೇ ಚ ಯಜುರ್ವೇದೇ ಚ ವಾಜಿನಾಮ್ ॥17॥
ನ ನಿರ್ದಿಷ್ಟಾನಿ ಕರ್ಮಾಣಿ ತ್ರಿಷು ಸ್ಥಾನೇಷು ಭೂಭೃತಾಮ್।
ಶಾಂತಿಕಂ ಪೌಷ್ಟಿಕಂ ಚೈವ ಅರಿಷ್ಟಾನಾಂ ಚ ಶಾತನಮ್ ॥18॥
ಋಗ್ವೇದ, ಸಾಮವೇದ ಮತ್ತು ಯಜುರ್ವೇದದ ಈ ಮೂರರಲ್ಲಿ ವಾಜ- ಸನೇಯಶಾಖೆಗಳಲ್ಲಿ ಹೇಳಲ್ಪಟ್ಟ ರಾಜರ ಶಾಂತಿಕ, ಪೌಷ್ಟಿಕ ಮತ್ತು ಅರಿಷ್ಟ- ನಿವಾರಕವಾದ ಅಭಿಚಾರಾದಿಕರ್ಮಗಳು ಹೇಳಲ್ಪಟ್ಟಿಲ್ಲ. ಆದರೆ(ಅತಃ) ರಾಜ- ಪುರೋಹಿತನು ವಾಜಸನೇಯಶಾಖೆಯವನೇ ಆಗಿರಬೇಕು.
ಶಬ್ದಿತಾ ಯಾಜ್ಞವಲ್ಕ್ಯೇನ ಯಜ್ಞಾ ಆಹವಮೀಹತಾ।
ಪ್ರಶಿಷ್ಟಾನಾಂ ವರಿಷ್ಠೇನ ಬ್ರಹ್ಮಣಃ ಸಮ್ಮತೇ ವಿಭೋಃ ॥19॥
ಮಾಧ್ಯಂದಿನಶಾಖಾಪ್ರವರ್ತಕರಾದ ಶ್ರೇಷ್ಠರಾದ ಯಾಜ್ಞವಲ್ಕ್ಯರು ಯುದ್ಧವನ್ನು ಬಯಸುವ ರಾಜನಿಗೆ ಮಾಡಬೇಕಾದ ಶಾಂತಿಕ, ಪೌಷ್ಟಿಕ ಮತ್ತು ಆಭಿಚಾರಿಕಾದಿ ಕರ್ಮಗಳನ್ನು ಬ್ರಹ್ಮದೇವರ ಸಮ್ಮತಿಗೆ ಅನುಗುಣವಾಗಿ ಹೇಳಿದ್ದಾರೆ. (ರಾಜನು ತನ್ನ ಪಾಪಗಳನ್ನು ಮತ್ತು ಕಷ್ಟಗಳನ್ನು ಪರಿಹರಿಸಿಕೊಳ್ಳಲು ಮಾಡುವ ಹೋಮಗಳು ಶಾಂತಿಕ ಹೋಮಗಳು; ತನಗೂ ಮತ್ತು ತನ್ನ ರಾಜ್ಯಕ್ಕೂ ಕ್ಷೇಮಲಾಭಗಳನ್ನುಂಟು ಮಾಡುವ ಕರ್ಮಗಳು ಪೌಷ್ಟಿಕಗಳು; ಶತ್ರುನಿಗ್ರಹಕಾರ್ಯಮಾಡುವ ಹೋಮಾದಿ ಕರ್ಮಗಳು ಆಭಿಚಾರಿಕ ಎಂದು ಹೇಳಲ್ಪಡುತ್ತವೆ).
ಬಹ್ವೃಚಂ ಸಾಮಗಂ ಚೈವ ವಾಜಿನಂ ಚ ವಿವರ್ಜಯೇತ್।
ಬಹ್ವೃಚೋ ರಾಷ್ಟ್ರನಾಶಾಯ ರಾಜನಾಶಾಯ ಸಾಮಗಃ।
ಅಧ್ವರ್ಯುರ್ಬಲನಾಶಾಯ ಪ್ರೋಕ್ತಾ ವಾಜಸನೇಯಕಾಃ ॥20॥
ಋಗ್ವೇದಿಯಾದ ಯಜುರ್ವೇದಿಯಾದ ಅಥವಾ ಸಾಮವೇದಿಯಾದ ಪುರೋ -ಹಿತನನ್ನು ವರ್ಜಿಸಬೇಕು. ಋಗ್ವೇದಿಯು ಪುರೋಹಿತನಾದರೆ ರಾಷ್ಟ್ರನಾಶ- ವಾಗುತ್ತದೆ. ಸಾಮವೇದಿಯು ಪುರೋಹಿತನಾದರೆ ರಾಜನೇ ನಾಶಹೊಂದುತ್ತಾನೆ. ಯಜುರ್ವೇದಿಯು ಪುರೋಹಿತನಾದರೆ ಸೈನ್ಯವು ನಾಶವನ್ನು ಹೊಂದುತ್ತದೆ. ಆದ್ದರಿಂದ ಮಾಧ್ಯಂದಿನಶಾಖೆಯಾದ ವಾಜಸನೇಯಶಾಖೆಯವನೇ ಪುರೋಹಿತ- ನಾಗಬೇಕು.
ಅಬ್ರಾಹ್ಮಣೇಷು ವರ್ಣೇಷು ಮಂತ್ರಾನ್ ವಾಜಸನೇಯಕಮ್।
ಶಾಂತಿಕೇ ಪೌಷ್ಟಿಕೇ ಚೈವ ನಿತ್ಯಂ ಕರ್ಮಣಿ ವರ್ಜಯೇತ್ ॥21॥
ಬ್ರಾಹ್ಮಣೇತರವರ್ಣಗಳಿಗೆ ಶಾಂತಿಕ ಮತ್ತು ಪೌಷ್ಟಿಕಕರ್ಮಗಳನ್ನು ಮಾಡು- ವಾಗ ನಿತ್ಯವೂ ವಾಜಸನೇಯಶಾಖೆಯ ಮಂತ್ರಗಳನ್ನು

ವರ್ಜಿಸಬೇಕು.
ಬ್ರಾಹ್ಮಣಸ್ಯ ಮಹೀಪಸ್ಯ ಸರ್ವಥಾ ನ ವಿರೋಧಿನಃ |
ವೇದಾಶ್ಚತ್ವಾರ ಇತ್ಯೇತೇ ಬಾಹ್ಮಣಾ ಯೇ ಚ ತದ್ ವಿದುಃ ॥22॥
ಪೌರೋಹಿತ್ಯೇ ಪ್ರಮಾಣಂ ತು ಬ್ರಾಹ್ಮಣಶ್ಚ ಮಹೀಪತೇಃ |
ಜಾತ್ಯಾ ನ ಕ್ಷತ್ರಿಯಃ ಪ್ರೋಕ್ತಃ ಕ್ರೂರಃ ಪ್ರಾಣಂ ಕರೋತಿ ಯಃ ॥23॥
ನಾಲ್ಕುವೇದಗಳು ಬ್ರಾಹ್ಮಣನಿಗಾಗಲೀ, ರಾಜನಿಗಾಗಲೀ ವಿರೋಧಿಗಳಲ್ಲ ಎಂಬುದನ್ನು ಬ್ರಾಹ್ಮಣರು ತಿಳಿದಿದ್ದಾರೆ. ರಾಜನಿಗೆ ಪೌರೋಹಿತ್ಯವಿಷಯದಲ್ಲಿ ಬ್ರಾಹ್ಮಣನ ವಚನವೇ ಪ್ರಮಾಣವಾಗುತ್ತದೆ. ಯಾವನು ದುಷ್ಟರಿಗೆ ಕ್ರೂರನಾಗಿದ್ದು, ಸಜ್ಜನರ ಪ್ರಾಣವನ್ನು ರಕ್ಷಿಸುತ್ತಾನೆಯೋ ಅವನು ಜಾತಿಯಿಂದ ಕ್ಷತ್ರಿಯನಾಗದಿ- ದ್ದರೂ ಕರ್ಮದಿಂದ ಕ್ಷತ್ರಿಯ ಎಂದೇ ಕರೆಯಲ್ಪಡುತ್ತಾನೆ.
ಚಾತುರ್ವರ್ಣ್ಯಬಹಿಷ್ಕ್ರೋಽಪಿ ಸ ಏವ ಕ್ಷತ್ರಿಯಃ ಸ್ಮೃತಃ |
ಭಾರ್ಗವಾಂಗಿರಸೈರ್ಮಂತ್ರೈಸ್ತೇಷಾಂ ಕರ್ಮ ವಿಧೀಯತೇ ॥24॥
ಅಂತಹ ನಾಲ್ಕು ವರ್ಣಬಾಹ್ಯರಾದ ಕ್ಷತ್ರಿಯರಿಗೆ ಶುಕ್ರಬೃಹಸ್ಪತಿಗಳ ಮಂತ್ರ- ದಿಂದ ಕರ್ಮಗಳು ವಿಧಿಸಲ್ಪಡುತ್ತವೆ.
ವೈತಾನಂ ಕರ್ಮ ಯಚ್ಚೈವ ಗಾರ್ಹ್ಯಂ ಕರ್ಮ ಚ ಯತ್ ಸ್ಮೃತಮ್ |
ದ್ವಿಜಾತೀನಾಂ ತ್ರಯಾಣಾಂ ತು ಸರ್ವಕರ್ಮ ವಿಧೀಯತೇ ॥25॥
ಮೂರು ವರ್ಣದ ದ್ವಿಜರಿಗೂ ಯಜ್ಞಸಂಬಂಧಿಯಾದ ಕರ್ಮಗಳು ಗೃಹ- ಸಂಬಂಧಿಯಾದ ಎಲ್ಲ ಕರ್ಮಗಳೂ ವಿಧಿಸಲ್ಪಡುತ್ತವೆ.
ರಾಜಶಬ್ದಪ್ರವೃತ್ತಾನಾಂ ಹಿತಾರ್ಥಂ ತ್ರೀಣಿ ಕಾರಯೇತ್ |
ಶಾಂತಿಕಂ ಪೌಷ್ಟಿಕಂ ಚೈವ ತಥಾಽಭಿಚರಣಂ ಚ ಯತ್ ॥26॥
ರಾಜಶಬ್ದವನ್ನು ಹೊಂದಿದವರಿಗೆ ಅವರ ಹಿತಕ್ಕಾಗಿ (ಅವರು ಕ್ಷತ್ರಿಯರಾಗಲೀ ಅಥವಾ ವರ್ಣಬಾಹ್ಯರಾಗಲೀ) ಶಾಂತಿಕ ಪೌಷ್ಟಿಕ ಮತ್ತು ಅಭಿಚರಣ ಕರ್ಮಗಳನ್ನು ಮಾಡಿಸಬೇಕು.
ಅಗ್ನಿಷ್ಟೋಮಮುಖ್ಯೈರ್ಯಜ್ಞೈರ್ದೂಷಿತಾ ಭೂಪಕರ್ಮಭಿಃ |
ನ ಸಮ್ಯಕ್ ಫಲಮೃಚ್ಛಂತಿ ಯೇ ಯಜಂತಿ ದ್ವಿಜಾತಯಃ ॥27॥
ಪೌರೋಹಿತ್ಯಂ ತು ಕುರ್ವಾಣಾ ನಾಸಂಯಾಸ್ಯಂತಿ ಭೂಭೃತಾಮ್ |
ಯಜ್ಞಕರ್ಮಾಣಿ ಕುರ್ವಾಣಾ ಋತ್ವಿಜಸ್ತು ವಿರೋಧಿನಃ ॥28॥
ಅಂತಹ ವರ್ಣಬಾಹ್ಯರಿಗೆ ರಾಜನಿಗೆ ಉಚಿತವಾದ ಅಗ್ನಿಷ್ಟೋಮಾದಿ ಯಾಗ- ಗಳನ್ನು ಮಾಡಿಸುವ ಬ್ರಾಹ್ಮಣರು ಆ ಕರ್ಮದೋಷದಿಂದ ಒಳ್ಳೆಯ ಫಲವನ್ನು ಪಡೆಯುವುದಿಲ್ಲ. ಪೌರೋಹಿತ್ಯವನ್ನು ಮಾಡುವ ಬ್ರಾಹ್ಮಣರು ರಾಜರಿಗೆ ಅನು- ಕೂಲವಾಗಿರುತ್ತಾರೆ. ಆದರೆ ಅಗ್ನಿಷ್ಟೋಮಾದಿ ಅಗ್ನಿಕರ್ಮಗಳನ್ನು ಮಾಡಿಸುವ ದ್ವಿಜರು ರಾಜನಿಗೆ ವಿರೋಧಿಗಳಾಗುತ್ತಾರೆ.
ಬ್ರಹ್ಮಕ್ಷತ್ರವಿಶಃ  ಸರ್ವೇ ಪೌರೋಹಿತ್ಯೇ ವಿವರ್ಜಿತಾಃ |
ತದಭಾವೇ ಚ ಪಾರಕ್ಯಂ ನಿರ್ದಿಷ್ಟಂ ರಾಜಕರ್ಮಸು ॥29॥
ಋಷಿಣಾ ಯಾಜ್ಞವಲ್ಕ್ಯೇನ ತತ್ ತಥಾ ನ ತದನ್ಯಥಾ |
ವಾಜಸನೇಯಶಾಖೆಯನ್ನು ತಿಳಿಯದ ಬ್ರಾಹ್ಮಣ, ಕ್ಷತ್ರಿಯ ವೈಶ್ಯರು ರಾಜ- ಪೌರೋಹಿತ್ಯದಿಂದ ಹೊರಗೆ ಉಳಿಯುತ್ತಾರೆ. ರಾಜಪುರೋಹಿತನಿಲ್ಲದಿದ್ದರೂ ರಾಜನು ಮಾಡುವ ಸತ್ಕರ್ಮಗಳಿಗೆ ಪರಲೋಕದಲ್ಲಿ ಫಲವು ದೊರಕುತ್ತದೆ. ಋಷಿಗಳಾದ ಯಾಜ್ಞವಲ್ಕ್ಯರು ಅದು ಇದೇ ರೀತಿ, ಬೇರೆ ರೀತಿಯಲ್ಲ ಎಂದು ಸ್ಥಾಪಿಸಿದ್ದಾರೆ.
ಭಾರ್ಗವಾಂಗಿರಸೇ ವೇದೇ ಕೃತವಿದ್ಯಃ ಷಡಂಗವಿತ್ ॥30॥
ಯಜ್ಞಕರ್ಮವಿಧಿಜ್ಞಸ್ತು ವಿಧಿಜ್ಞಃ ಪೌಷ್ಟಿಕೇಷು ಚ |
ಅಷ್ಟಾದಶವಿಕಲ್ಪಾನಾಂ ವಿಧಿಜ್ಞಃ ಶಾಂತಿಕರ್ಮಣಾಮ್ ॥31॥
ಸರ್ವರೋಗವಿಹೀನಶ್ಚ ಸಂಯತಃ ಸಂಯತೇಂದ್ರಿಯಃ ॥32॥
ಶುಕ್ರಬೃಹಸ್ಪತಿಗಳ ಶಾಸ್ತ್ರವನ್ನು ಬಲ್ಲವನೂ, ಷಡಂಗರಾಜವಿದ್ಯೆಯನ್ನು ಬಲ್ಲ- ವನೂ, ಯಜ್ಞಕರ್ಮದ ವಿಧಿಯನ್ನು ಬಲ್ಲವನೂ, ಪೌಷ್ಟಿಕಕರ್ಮಗಳ ವಿಧಿಯನ್ನು ಬಲ್ಲವನೂ, ಶಾಂತಿಕರ್ಮಗಳ ಅಷ್ಟಾದಶಪ್ರಭೇದಗಳನ್ನು ಬಲ್ಲವನೂ, ಸರ್ವ- ರೋಗರಹಿತನೂ, ಜಿತೇಂದ್ರಿಯನೂ, ಗಂಭೀರನೂ ಆದವನನ್ನು ಪುರೋಹಿತನ- ನ್ನಾಗಿ ಮಾಡಬೇಕು.
ಶ್ವಿತ್ರಕುಷ್ಠಕ್ಷಯಕ್ಷೀಣೈರ್ಗ್ರಹಾಪಸ್ಮಾರದೂಷಿತೈಃ |
ಅಶಸ್ತೈರ್ವಾತದುಷ್ಟೈಶ್ಚ ದೂರಸ್ಥೈಃ ಸಂವದೇನ್ನೃಪಃ |
ರೋಗಿಣಂ ಋತ್ವಿಜಂ ಚೈವ ವರ್ಜಯೇಚ್ಚ ಪುರೋಹಿತಮ್ ॥33॥
ರಾಜನು ಶ್ವಿತ್ರ, ಕುಷ್ಠ, ಕ್ಷಯ, ಗ್ರಹಪೀಡೆ, ಅಪಸ್ಮಾರ ಇವುಗಳಿಂದ ದೂಷಿತ- ರಾದವರ ಜೊತೆಯಲ್ಲಿ, ಅಪ್ರಶಸ್ತರಾದ ಜನರ ಜೊತೆಯಲ್ಲಿ ಮತ್ತು ವಾತ- ದೋಷಯುಕ್ತರಾದ ಜನರ ಜೊತೆಯಲ್ಲಿ ಮಾತನಾಡುವಾಗ ಅವರನ್ನು ದೂರದಲ್ಲಿ ನಿಲ್ಲಿಸಿ ಮಾತನಾಡಬೇಕು. ರಾಜನು ರೋಗಿಯಾದ ಋತ್ವಿಜನನ್ನು ಮತ್ತು ಪುರೋ- ಹಿತನನ್ನು ವರ್ಜಿಸಬೇಕು.
ನ ಚಾನ್ಯಸ್ಯ ಕೃತಂ ಯೇನ ಪೌರೋಹಿತ್ಯಂ ಕದಾಚನ |
ಯಸ್ಯ ಯಾಜ್ಯೋ ಮೃತಶ್ಚೈವ ಭ್ರಷ್ಟಃ ಪ್ರವ್ರಜಿತೋ ಯಥಾ ॥34॥
ಯುದ್ಧೇ ಪರಾಜಿತಶ್ಚೈವ ಸರ್ವಾಂಸ್ತಾನ್ ವರ್ಜಯೇನ್ನೃಪಃ |
ಇನ್ನೊಬ್ಬ ರಾಜನಿಗೆ ಯಾವಾಗಲಾದರೂ ಪೌರೋಹಿತ್ಯವನ್ನು ಮಾಡಿದವನನ್ನು ಯಾವನು ರಾಜನಿಗೆ ಪೌರೋಹಿತ್ಯವನ್ನು ಮಾಡಿದ ಮೇಲೆ ರಾಜನು ಮೃತನಾಗಿ- ದ್ದಾನೆಯೋ ಅಂತಹವನನ್ನು, ಭ್ರಷ್ಟನನ್ನು, ಸನ್ಯಾಸಿಯನ್ನು, ಯುದ್ಧದಲ್ಲಿ ಪರಾ- ಜಿತನಾದವನನ್ನು ಪೌರೋಹಿತ್ಯಕರ್ಮದಲ್ಲಿ ರಾಜನು ವರ್ಜಿಸಬೇಕು.

ನಕ್ಷತ್ರಸ್ಯಾನುಕೂಲ್ಯೇನ ಯಸ್ಮಿನ್ ಜಾತೋ ಜನೇಶ್ವರಃ ॥35॥
ರಾಜಶಾಸ್ತ್ರವಿನೀತಶ್ಚ ಶ್ರೇಯಾನ್ ರಾಜ್ಞಃ ಪುರೋಹಿತಃ।
ಯಾವನು ಪುರೋಹಿತನಾಗಿದ್ದಾಗ ಒಳ್ಳೆಯ ನಕ್ಷತ್ರದಲ್ಲಿ ತಾನು ರಾಜನಾ- ದನೋ, ಯಾವನು ರಾಜ್ಯಶಾಸ್ತ್ರದಲ್ಲಿ ನಿಪುಣನೋ ಅಂತಹ ಪುರೋಹಿತನು ರಾಜನಿಗೆ ಶ್ರೇಯಸ್ಕರನಾದವನು.
ಅಧನ್ಯಾನಾಂ ನಿಮಿತ್ತಾನಾಮುತ್ಪಾತಾನಾಮಥಾರ್ಥವಿತ್ ॥36॥
ಶತ್ರುಪಕ್ಷಕ್ಷಯಜ್ಞಶ್ಚ ಶ್ರೇಯಾನ್ ರಾಜ್ಞಃ ಪುರೋಹಿತಃ।
ಅಮಂಗಳ ಸೂಚನೆಗಳ ಮತ್ತು ಉತ್ಪಾತಗಳ ಅರ್ಥಗಳನ್ನು ತಿಳಿಯುವ, ಶತ್ರುಪಕ್ಷವನ್ನು ನಾಶಮಾಡುವ ವಿಧಾನವನ್ನು ತಿಳಿಯುವ ಪುರೋಹಿತನು ರಾಜನಿಗೆ ಶ್ರೇಯಸ್ಕರನಾದವನು.
ವಾಜಿನಂ ತದಭಾವೇ ಚ ಚಾರಕಾಧ್ವರ್ಯಕಾ ಅಪಿ ॥37॥
ಬಹ್ವೃಚಂ ಸಾಮಗಂ ಚೈವ ನೀತಶಾಸ್ತ್ರಕೃತಶ್ರಮಾನ್।
ಕೃತಿನೋಽಥರ್ವಣೋ ವೇದೇ ಸ್ಥಾಪಯೇತ್ ತು ಪುರೋಹಿತಾನ್ ॥38॥
ವಾಜಸನೇಯ ಶಾಖೆಯನ್ನು ತಿಳಿದ ಬ್ರಾಹ್ಮಣನು ಸಿಗದಿದ್ದರೆ ರಾಜನೀತಿ- ಶಾಸ್ತ್ರವನ್ನು ಅಭ್ಯಾಸ ಮಾಡಿದ, ಯಜ್ಞವನ್ನು ಪ್ರವರ್ತಿಸುವ ಯಜುರ್ವೇದಿಯನ್ನು ಋಗ್ವೇದಿಯನ್ನು ಸಾಮವೇದಿಯನ್ನು ಅಥರ್ವವೇದಿಯನ್ನು ಪುರೋಹಿತನನ್ನಾಗಿ ಮಾಡಬಹುದು.
ಹಿಂಸಾಂಗಾ ಯೇ ಚ ನಿರ್ದಿಷ್ಟಾ ಮಂತ್ರಾ ವೈತಾನಿಕೈರ್ದ್ವಿಜೈಃ।
ನ ತಾನುಚ್ಚಾರಯೇತ್ ಪ್ರಾಜ್ಞಃ ಕ್ಷಾತ್ರಧರ್ಮವಿರೋಧಿನಃ ॥39॥
ಯಾಗವನ್ನು ಮಾಡಿಸುವ ಬ್ರಾಹ್ಮಣರು ಮಾರಣಾದಿ ಹಿಂಸಾಜನಕವಾದ ಮಂತ್ರವೆಂದು ಯಾವುದನ್ನು ನಿರ್ದೇಶಿಸಿರುತ್ತಾರೆಯೋ ಅವು ಕ್ಷತ್ರಿಯ ಧರ್ಮಕ್ಕೆ ವಿರೋಧಿಗಳಾದವು. ಪ್ರಾಜ್ಞನಾದ ಪುರೋಹಿತನು ಅವುಗಳನ್ನು ಉಚ್ಚರಿಸಬಾರದು.
ಪ್ರಜಾಗುಣಾಃ ಪುರೋಧಾಶ್ಚ ಪುರೋಹಿತಗುಣಾಃ ಪ್ರಜಾಃ।
ರಾಜಾ ಚೈವಂಗುಣೋ ಯೇಷಾಂ ಕುಶಲಂ ತೇಷು ಸರ್ವಶಃ ॥40॥
ಎಲ್ಲಿ ಪ್ರಜೆಗಳ ಗುಣವು ಪುರೋಹಿತನಿಗೂ, ಪುರೋಹಿತನ ಗುಣಗಳು ಪ್ರಜೆಗಳಿಗೂ ಉಂಟಾಗುತ್ತವೆಯೋ ಮತ್ತು ರಾಜನೂ ಅಂತಹ ಗುಣವುಳ್ಳವನಾಗಿ- ರುತ್ತಾನೆಯೋ ಅಲ್ಲಿ ಎಲ್ಲರಿಗೂ ಕುಶಲವುಂಟಾಗುತ್ತದೆ.
ಉಭೌ ಪ್ರಜಾ ವರ್ಧಯತೋ ದೇವಾನ್ ಪೂರ್ವಾನ್ ಪರಾನ್ ಪಿತೄನ್।
ಯೌ ಸಮೇಯಾವಸ್ಥಿತೌ ಧರ್ಮೇ ಶ್ರದ್ಧೇಯೌ ಸುತಪಸ್ವಿನೌ ॥41॥
ರಾಜಾ ಮತ್ತು ಪುರೋಹಿತರಿಬ್ಬರೂ ಶ್ರದ್ಧಾಯುಕ್ತರಾಗಿ, ಒಳ್ಳೆಯ ತಪಸ್ವಿಗಳಾಗಿ ಮಿಲಿತರಾಗಿ ಧರ್ಮಾಚರಣೆಯನ್ನು ಮಾಡಿದರೆ ಅವರು ದೇವತೆಗಳನ್ನೂ, ಪೂರ್ವ ಪಿತೃಗಳನ್ನೂ ಸಂತೋಷಪಡಿಸುತ್ತಾರೆ. ಮತ್ತು ಪ್ರಜೆಗಳ ಸಂತತಿಯನ್ನೂ ಅಭಿವೃದ್ಧಿ ಪಡಿಸುತ್ತಾರೆ.
ಪರಸ್ಪರಸ್ಯ ಸುಹೃದೌ ಸಮ್ಮತೌ ಸಮಚೇತಸೌ।
ಬ್ರಹ್ಮಕ್ಷತ್ರಸ್ಯ ಸಮ್ಮಾನಾತ್ ಪ್ರಜಾಃ ಸುಖಮವಾಪ್ನುಯುಃ ॥42॥
ಅವರಿಬ್ಬರೂ ಪರಸ್ಪರ ಸುಹೃದರಾಗಿ, ಪ್ರಜೆಗಳಿಗೆ ಸಮ್ಮತರಾಗಿ, ಸಮಾನದೃಷ್ಟಿ- ಯುಳ್ಳವರಾಗಿ, ಬ್ರಾಹ್ಮಣ ಮತ್ತು ಕ್ಷತ್ರಿಯರನ್ನು ಸಮ್ಮಾನ ಮಾಡುವುದರಿಂದ ಪ್ರಜೆ- ಗಳು ಸುಖವನ್ನು ಪಡೆಯುವರು.
ವಿಮಾನನಾತ್ ತಯೋರೇವ ಪ್ರಜಾ ನಶ್ಯೇಯುರೇವ ಹ।
ಬ್ರಹ್ಮಕ್ಷತ್ರಂ ಹಿ ಸರ್ವೇಷಾಂ ಧರ್ಮಾಣಾಂ ಮೂಲಮುಚ್ಯತೇ ॥43॥
ಬ್ರಾಹ್ಮಣಕ್ಷತ್ರಿಯರನ್ನು ಅವಮಾನಗೊಳಿಸಿದರೆ ಪ್ರಜೆಗಳು ನಾಶವನ್ನೇ ಹೊಂದು -ತ್ತಾರೆ. ಏಕೆಂದರೆ ಬ್ರಾಹ್ಮಣಕ್ಷತ್ರಿಯರ ಸಮುದಾಯವು ಎಲ್ಲ ಧರ್ಮಗಳಿಗೂ ಮೂಲವೆಂದು ಹೇಳಲ್ಪಡುತ್ತದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್।
ಐಲಕಶ್ಯಪಸಂವಾದಂ ತಂ ನಿಬೋಧ ಯುಧಿಷ್ಠಿರ ॥44॥
ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಪುರೂರವನಿಗೂ ಕಶ್ಯಪರಿಗೂ ನಡೆದ ಸಂವಾದವನ್ನು ಹೇಳುತ್ತಾರೆ. ಅದನ್ನು ಕೇಳು.
ಐಲಃ
ಯದಾ ಹಿ ಬ್ರಹ್ಮ ಪ್ರಜಹಾತಿ ಕ್ಷತ್ರಂ
ಕ್ಷತ್ರಂ ಯದಾ ವಾ ಪ್ರಜಹಾತಿ ಬ್ರಹ್ಮ।
ಅನ್ವಗ್ ಬಲಂ ದಸ್ಯವಸ್ತದ್ ಭಜಂತೇಽ-
ಬಲ್ಯಂ ತಥಾ ತತ್ರ ವಿಯಂತಿ ಸಂತಃ ॥45॥
ಐಲ ಬ್ರಾಹ್ಮಣರು ಕ್ಷತ್ರಿಯನನ್ನು ತೊರೆದರೆ ಅಥವಾ ಕ್ಷತ್ರಿಯನೇ ಬ್ರಾಹ್ಮಣ- ರನ್ನು ತೊರೆದರೆ ಉತ್ತಮವಾದ ಬಲವು ಇವೆರಡರಲ್ಲಿ ಯಾವುದರಲ್ಲಿ ಇರುತ್ತದೆ? ಹಾಗೆಯೇ ಆಗ ದುರ್ಬಲತೆಯನ್ನು ಯಾರು ಧರಿಸುತ್ತಾರೆ?
ಕಶ್ಯಪಃ
ವ್ಯೃದ್ಧಂ ರಾಷ್ಟ್ರಂ ಭವತಿ ಕ್ಷತ್ರಿಯಸ್ಯ
ಬ್ರಹ್ಮ ಕ್ಷತ್ರಂ ಯತ್ರ ವಿರುದ್ಧ್ಯತೇ ಹ।
ಅನ್ವಗ್ ಬಲಂ ದಸ್ಯವಸ್ತದ್ ಭಜಂತೇ
ಅಬಲ್ಯಂ ತಥಾ ತತ್ರ ವಿಯಂತಿ ಸಂತಃ ॥46॥
ಬ್ರಾಹ್ಮಣ ಕ್ಷತ್ರಿಯರಿಗೆ ವಿರೋಧವುಂಟಾದರೆ ಕ್ಷತ್ರಿಯನ ರಾಷ್ಟ್ರವು ಸಮೃದ್ಧಿ- ಯನ್ನು ಕಳೆದುಕೊಳ್ಳುತ್ತದೆ. ದಸ್ಯುಗಳು ಅಧಿಕಬಲವುಳ್ಳವರಾಗುತ್ತಾರೆ. ಸಜ್ಜನರ ಬಲವು ಕಡಿಮೆಯಾಗುತ್ತದೆ.

ನೈಷಾಮುಕ್ಷಾ ವರ್ಧತೇ ನೋತ ಉಸ್ರಾ
ನ ಗರ್ಗರೀ ಮಥ್ಯತೇ ನೋ ಯಜಂತೇ |
ನೈಷಾಂ ಪುತ್ರಾ ವೇದಮಧೀಯತೇ ಚ
ಯದಾ ಬ್ರಹ್ಮ ಕ್ಷತ್ರಿಯಾ ಸಂತ್ಯಜಂತಿ ||47||
ಕ್ಷತ್ರಿಯರು ಬ್ರಾಹ್ಮಣರನ್ನು ತ್ಯಜಿಸಿದಾಗ ಅಂತಹ ರಾಜ್ಯದಲ್ಲಿ ಹೋರಿಗಳು ಅಭಿವೃದ್ಧಿಯನ್ನು ಮಾಡುವುದಿಲ್ಲ. ಧೇನುಗಳು ಹಾಲು ಕರೆಯುವುದಿಲ್ಲ. ಮೊಸರಿನ ಪಾತ್ರೆಗಳು ಮಥಿಸಲ್ಪಡುವುದಿಲ್ಲ. ಯಜ್ಞಗಳು ನಡೆಯುವುದಿಲ್ಲ. ಬ್ರಾಹ್ಮಣರ ಪುತ್ರರು ವೇದಾಧ್ಯಯನವನ್ನು ಮಾಡುವುದಿಲ್ಲ.
ನೈಷಾಮುಕ್ಷಾ ವರ್ಧತೇ ಜಾತು ಗೇಹೇ
ನಾಧೀಯತೇ ಸುಪ್ರಜಾ ನೋ ಯಜಂತೇ |
ಅಪಧ್ವಸ್ತಾ ದಸ್ಯುಭೂತಾ ಭವಂತಿ
ಯೇ ಬ್ರಾಹ್ಮಣಾಃ ಕ್ಷತ್ರಿಯಾನ್ ಸಂತ್ಯಜಂತಿ ||48||
ಅಲ್ಲಿ ಎತ್ತುಗಳು ಅಭಿವೃದ್ಧಿಯನ್ನು ಹೊಂದುವುದಿಲ್ಲ. ಒಳ್ಳೆಯ ವಂಶದ ಪ್ರಜೆ- ಗಳು ಅಧ್ಯಯನ ಮಾಡುವುದಿಲ್ಲ. ಯಾಗವನ್ನು ಮಾಡುವುದಿಲ್ಲ. ಬ್ರಾಹ್ಮಣರು ಕ್ಷತ್ರಿಯರನ್ನು ತ್ಯಾಗ ಮಾಡಿದರೆ ಪ್ರಜೆಗಳು ಧರ್ಮಮಾರ್ಗದಿಂದ ಧ್ವಸ್ತರಾಗಿ ದಸ್ಯು- ಗಳಂತೆ ಆಗುತ್ತಾರೆ.
ಏತೌ ಹಿ ನಿತ್ಯಸಂಯುಕ್ತಾವಿತರೇತರಧಾರಣೇ |
ಕ್ಷತ್ರಂ ಹಿ ಬ್ರಹ್ಮಣೋ ಯೋನಿರ್ಯೋನಿಃ ಕ್ಷತ್ರಸ್ಯ ಚ ದ್ವಿಜಾಃ ||49||
ಇವೆರಡು ವರ್ಣಗಳೂ ಪರಸ್ಪರಧಾರಣೆಗಾಗಿ ಯಾವಾಗಲೂ ಜೊತೆಗೂಡಿವೆ. ಕ್ಷತ್ರಿಯಯೋನಿಯು ಬ್ರಾಹ್ಮಣಯೋನಿಗೆ ಮೂಲವಾದದು. ಬ್ರಾಹ್ಮಣಯೋನಿಯು ಕ್ಷತ್ರಿಯಯೋನಿಗೆ ಮೂಲವಾದುದು.
ಉಭಾವೇತೌ ನಿತ್ಯಮಭಿಪ್ರಪನ್ನೌ
ಸಂಪ್ರಾಪತುರ್ಮಹತೀಂ ಶ್ರೀಪ್ರತಿಷ್ಠಾಮ್ |
ತಯೋಃ ಸಂಧಿರ್ಭಿದ್ಯತೇ ಚೇತ್ ಪುರಾಣಃ
ತತಃ ಸರ್ವಂ ಭವತಿ ಹಿ ಸಂಪ್ರಮೂಢಮ್ ||50||
ಇವೆರಡು ವರ್ಣಗಳೂ ಪರಸ್ಪರ ಸೌಹಾರ್ದದಿಂದ ಇದ್ದು, ದೊಡ್ಡ ಸಂಪತ್ತನ್ನು ಮತ್ತು ಪ್ರತಿಷ್ಠೆಯನ್ನೂ ಪಡೆದವು. ಪ್ರಾಚೀನಕಾಲದಿಂದ ಬಂದ ಅವರ ಸೌಹಾರ್ದ- ವು ಭಿನ್ನವಾದರೆ ಎಲ್ಲವೂ ಮೋಹವಶವಾಗುತ್ತದೆ.
ನಾತ್ರ ಪ್ಲವಂ ಲಭತೇ ಪಾರಗಾಮೀ
ಮಹಾಗಾಧೇ ನೌರಿವ ಸಂಪ್ರಣುನ್ನಾ |
ಚಾತುರ್ವರ್ಣ್ಯಂ ಭವತಿ ಚ ಸಂಪ್ರಮೂಢಂ
ತತಃ ಪ್ರಜಾಃ ಕ್ಷಯಸಂಸ್ಥಾ ಭವಂತಿ ||51||
ಅಂತಹ ಸ್ಥಳದಲ್ಲಿ ದೊಡ್ಡ ಸಮುದ್ರದಲ್ಲಿ ವಾಯುವಿನಿಂದ ಹೊಡೆಯಲ್ಪಡುವ ನೌಕೆಯಂತೆ ಕಾರ್ಯವನ್ನು ಆರಂಭಿಸಿದ ಯಾವುದೂ ಅಂತವನ್ನು ತಲಪುವುದಿಲ್ಲ. ಚಾತುರ್ವರ್ಣ್ಯದವರು ಬಹಳ ಮೂಢರಾಗುತ್ತಾರೆ. ಅನಂತರ ಪ್ರಜೆಗಳು ಕ್ಷಯವನ್ನು ಹೊಂದುತ್ತಾರೆ.
ಬ್ರಹ್ಮವೃಕ್ಷೋ ರಕ್ಷ್ಯಮಾಣೋ ಮಧು ಹೇಮ ಚ ವರ್ಷತಿ |
ಅರಕ್ಷ್ಯಮಾಣಃ ಸತತಮಶ್ರು ಪಾಪಂ ಚ ವರ್ಷತಿ ||52||
ಬ್ರಹ್ಮವೆಂಬ ವೃಕ್ಷವು ಚೆನ್ನಾಗಿ ರಕ್ಷಿಸಲ್ಪಟ್ಟರೆ ಸುಖಸಂಪತ್ತುಗಳನ್ನು ಮಳೆಗರೆ- ಯುತ್ತದೆ. ರಕ್ಷಿಸದಿದ್ದರೆ ಸತತವಾಗಿ ಕಣ್ಣೀರಿನ ಮತ್ತು ಪಾಪಗಳ ಮಳೆಯನ್ನು ಸುರಿಸುತ್ತದೆ.
ಅಬ್ರಹ್ಮಚಾರೀ ಚರಣಾದಪೇತೋ
ಯದಾ ಬ್ರಹ್ಮಾಬ್ರಹ್ಮಣಿ ತ್ರಾಣಮಿಚ್ಛೇತ್ |
ಉತ್ಪಾದವತ್ ವರ್ಷತಿ ತತ್ರ ದೇವಃ
ತತ್ರಾಭೀಕ್ಷ್ಣಂ ದುಷ್ಪ್ರಭಾಶ್ಚಾವಿಶಂತಿ ||53||
ಯಾವಾಗ ಬ್ರಾಹ್ಮಣನು ಕ್ಷತ್ರಿಯನಿಂದ ರಕ್ಷಣೆಯನ್ನು ಬಯಸುವುದಿಲ್ಲವೋ ಅವನು ಬ್ರಾಹ್ಮಣಾಚಾರಹೀನನಾದ ಕ್ಷತ್ರಿಯನಾಗುತ್ತಾನೆ. ಅಲ್ಲಿ ದೇವರು ಉತ್ಪಾತ- ಗಳನ್ನು ಸೃಷ್ಟಿಸುತ್ತಾನೆ. ಅದರಿಂದ ಎಲ್ಲ ಕಡೆಯಲ್ಲಿ ದುಷ್ಪ್ರಭೆಯು ಆವರಿಸುತ್ತದೆ.
ಸ್ತ್ರಿಯಂ ಹತ್ವಾ ಬ್ರಾಹ್ಮಣಂ ವಾಪಿ ಪಾಪಃ
ಸಭಾಯಾಂ ಯತ್ರ ಲಭತೇಽನುವಾದಮ್ |
ರಾಜ್ಞಃ ಸಕಾಶೇ ನ ಬಿಭೇತಿ ಚಾಪಿ
ತತೋ ಭಯಂ ಜಾಯತೇ ಕ್ಷತ್ರಿಯಸ್ಯ ||54||
ಎಲ್ಲಿ ಪಾಪಿಯಾದವನು ಸ್ತ್ರೀಯರನ್ನು ಅಥವಾ ಬ್ರಾಹ್ಮಣರನ್ನು ಕೊಂದು ಸಭೆಯಲ್ಲಿ ರಾಜನ ಭಯವಿಲ್ಲದೇ ಹೊಗಳಿಕೆಯ ಮಾತುಗಳನ್ನು ಕೇಳುತ್ತಾನೆಯೋ ಆಗ ಅಲ್ಲಿ ಕ್ಷತ್ರಿಯನಿಗೆ ಭಯವುಂಟಾಗುತ್ತದೆ.
ಪಾಪೈಃ ಪಾಪೇ ಕ್ರಿಯಮಾಣೇಽತಿವೇಲಂ
ತತೋ ರುದ್ರೋ ಜಾಯತೇ ದೇವ ಏಷಃ |
ಪಾಪೈಃ ಪಾಪಾ ಸಂಜನಯಂತಿ ರುದ್ರಂ
ತತಃ ಸರ್ವಾನ್ ಸಾಧ್ವಸಾಧೂನ್ ಹಿನಸ್ತಿ ||55||

ಪಾಪಿಗಳು ಬಹಳ ಪಾಪಕಾರ್ಯವನ್ನು ಮಾಡಿದರೆ ರೋಗಪರಿಹಾರಕನಾದ ಈ ನಾರಾಯಣನು ಕೋಪಗೊಳ್ಳುತ್ತಾನೆ. ಪಾಪವನ್ನು ಮಾಡುವ ಪಾಪಿಗಳು ಅವನಿಗೆ ಕೋಪವನ್ನುಂಟುಮಾಡಿದಾಗ ಅವನು ಎಲ್ಲಾ ದುಷ್ಟರನ್ನೂ ಸಂಹಾರ ಮಾಡುತ್ತಾನೆ. (ಲಕ್ಷ್ಮಾಲಂಕಾರ)

ಐಲಃ

ಕುತೋ ರುದ್ರಃ ಕೀದೃಶೋ ವಾಪಿ ರುದ್ರಃ
ಸತ್ತ್ವೈಃ ಸತ್ತ್ವಂ ದೃಶ್ಯತೇ ವಧ್ಯಮಾನಮ್ |
ಏತದ್ ವಿದ್ವನ್ ಕಶ್ಯಪ ಮೇ ಪ್ರಚಕ್ಷ್ವ
ಯತೋ ರುದ್ರೋ ಜಾಯತೇ ದೇವ ಏಷಃ ॥56॥

ಐಲ ಈ ರುದ್ರನು ಎಲ್ಲಿಯವನು ಮತ್ತು ಎಂತಹವನು? ಪ್ರಜೆಗಳಿಂದ ಪ್ರಜೆಗಳು ವಧಿಸಲ್ಪಡುವುದು ಮಾತ್ರ ಕಾಣುವುದಷ್ಟೇ? ಎಲೈ ವಿದ್ವಾಂಸರಾದ ಕಶ್ಯಪರೇ! ಈ ರುದ್ರನೆನಿಸುವ ನಾರಾಯಣನು ಹೇಗೆ ಅಭಿವ್ಯಕ್ತನಾಗುವನೆಂದು ನನಗೆ ಹೇಳಿ.

ಕಶ್ಯಪಃ

ಆತ್ಮಾ ರುದ್ರೋ ಹೃದಯೇ ಮಾನವಾನಾಂ
ಸ್ವಂ ಸ್ವಂ ದೇಹಂ ಪರದೇಹಂ ಚ ಹಂತಿ |
ವಾತೋತ್ಪಾತೈಃ ಸದೃಶಂ ರುದ್ರಮಾಶು-
ರ್ದಾವೈರ್ಜೀಮೂತೈಃ ಸದೃಶಂ ರೂಪಮಸ್ಯ ॥57॥

ಕಶ್ಯಪರು ಈ ರುದ್ರನು ಸರ್ವರ ಅಂತರ್ಯಾಮಿ. ಮಾನವರ ಹೃದಯದಲ್ಲಿ ಇರುತ್ತಾನೆ. ತನಗೆ ಆಶ್ರಯವಾದ ಆ ದೇಹವನ್ನೂ ಮತ್ತು ತನಗೆ ಆಶ್ರಯವಾದ ಇನ್ನೊಂದು ದೇಹವನ್ನೂ ನಾಶ ಮಾಡುತ್ತಾನೆ. ಅವನು ಬಿರುಗಾಳಿಗೆ ಮತ್ತು ಉತ್ಪಾತಗಳಿಗೆ ಸದೃಶನಾದವನು. ಅವನ ರೂಪವು ದಾವಾಗ್ನಿಯ ಮತ್ತು ಮೋಡ- ಗಳ ರೂಪವನ್ನು ಹೋಲುತ್ತದೆ.
ವಾಯುವಿನಂತೆ ಸರ್ವತ್ರ ವ್ಯಾಪ್ತನಾಗಿರುತ್ತಾನೆ. ರೂಪೋಪದ್ರವಕಾರಿಗಳಾದ ದೈತ್ಯರನ್ನು ದಾವಾಗ್ನಿಯಂತೆ ನಾಶಗೊಳಿಸುತ್ತಾನೆ. ಜಗತ್ತಿನ ಉಗ್ರತೆಯನ್ನು ಶಮನ ಮಾಡುವ ಇಂದ್ರಾದಿ ದೇವತೆಗಳಲ್ಲಿ ಇದ್ದು ಮೋಡವು ಮಳೆಯನ್ನು ಸುರಿಸಿದಂತೆ ಬಾಣಗಳ ಮಳೆಯನ್ನು ಸುರಿಸಿ ಅವರಿಗೆ ದೈತ್ಯದಮನಶಕ್ತಿಯನ್ನು ಕೊಡುತ್ತಾನೆ. (ಲಕ್ಷ್ಮಾಲಂಕಾರ)

ಐಲಃ

ನ ವೈ ವಾತಂ ಪರಿವೃಣೋತಿ ಕಶ್ಚಿ-
ನ್ನ ಜೀಮೂತೋ ವರ್ಷತಿ ನೈವ ದಾವಃ |
ತಥಾಽಯುಕ್ತೋ ದೃಶ್ಯತೇ ಮಾನವೇಷು
ಕಾಮದ್ವೇಷಾದ್ ಬದ್ಧ್ಯತೇ ಮುಚ್ಯತೇ ಚ ॥58॥

ಐಲ ಯಾರೂ ಅಂತಹ ಬಿರುಗಾಳಿಯಂತಹ ವಾಯುವನ್ನು ಕಾಣುವುದಿಲ್ಲ. ಅಂತಹ ಮೋಡವು ಮಳೆಯನ್ನು ಸುರಿಸುವುದಿಲ್ಲ. ದಾವಾಗ್ನಿಯು ಕಂಡು ಬರು- ವುದಿಲ್ಲ. ರಾಗದ್ವೇಷಗಳಿಂದ ಜೀವರು ಬಂಧನಕ್ಕೆ ಮತ್ತು ಮೋಕ್ಷಕ್ಕೆ ಒಳಗಾಗು- ತ್ತಾರೆ. ನೀವು ಹೇಳಿದುದು ಮನುಷ್ಯರಲ್ಲಿ ಅಯುಕ್ತವಾಗಿ ಕಾಣುತ್ತದೆ.

ಕಶ್ಯಪಃ

ಯಥೈವ ಗೇಹೇ ಜಾತವೇದಾಃ ಪ್ರದೀಪ್ತಃ
ಕೃತ್ಸ್ನಂ ಗ್ರಾಮಂ ಪ್ರದಹೇತ್ ಸ ತ್ವರಾವಾನ್ |
ವಿಮೋಹನಂ ಕುರುತೇ ದೇವ ಏಷಃ
ತತಃ ಸರ್ವಂ ಸ್ಪೃಶ್ಯತೇ ಪುಣ್ಯಪಾಪೈಃ ॥59॥

ಕಶ್ಯಪರು ಹೇಗೆ ಮನೆಯಲ್ಲಿ ಜನಿಸಿದ ದೀಪ್ತವಾದ ಅಗ್ನಿಯು ಶೀಘ್ರವಾಗಿ ಸಮಸ್ತಗ್ರಾಮವನ್ನು ಸುಡುತ್ತದೆಯೋ ಅದರಂತೆ ದೇವನಾದ ನಾರಾಯಣನು ಜೀವರಿಗೆ ಮೋಹವನ್ನು ಉಂಟು ಮಾಡುತ್ತಾನೆ. ಅದರಿಂದ ಪರಮಾತ್ಮನಿಂದಲೇ ಎಲ್ಲರೂ ಪುಣ್ಯಪಾಪಗಳ ಸಂಬಂಧವನ್ನು ಪಡೆಯುತ್ತಾರೆ. ನಾನು ಕೇವಲ ದೃಷ್ಟಾಂತ- ರೂಪವಾಗಿ ವಾಯು ಮತ್ತು ದಾವಾಗ್ನಿಗಳನ್ನು ಹೇಳಿದೆನು.

ಐಲಃ

ಯದಿ ದಂಡಃ ಸ್ಪೃಶ್ಯತೇ ಪುಣ್ಯಪಾಪೈಃ
ಪಾಪೈಃ ಪಾಪೇ ಕ್ರಿಯಮಾಣೇಽವಿಶೇಷಾತ್ |
ಕಸ್ಯ ಹೇತೋಃ ಸುಕೃತಂ ನಾಮ ಕುರ್ಯಾದ್
ದುಷ್ಕೃತಂ ವಾ ಕಸ್ಯ ಹೇತೋರ್ನ ಕುರ್ಯಾತ್ ॥60॥

ಐಲ ಪಾಪಿಗಳು ಪಾಪವನ್ನು ಮಾಡಿದರೆ ಅವಿಶೇಷವಾಗಿ ಪುಣ್ಯಪಾಪ- ಗಳರೆಡನ್ನು ಮಾಡಿದವರಿಗೆ ದಂಡದಿಂದ ಶಿಕ್ಷೆ ಉಂಟಾಗುವುದಾದರೆ ಪುಣ್ಯವನ್ನು ಏಕೆ ಮಾಡಬೇಕು? ಪಾಪವನ್ನಾದರೂ ಏಕೆ ಬಿಡಬೇಕು? (ಪಾಪಮಿಶ್ರಿತವಾದ ಪುಣ್ಯವು ಅಪ್ರಯೋಜಕವಾದ್ದರಿಂದ ಪಾಪಮಿಶ್ರಿತವಲ್ಲದ ಕೇವಲ ಪುಣ್ಯವು ಹೇಗೆ ಉಂಟಾ- ಗುತ್ತದೆಂಬುದು ಪ್ರಶ್ನೆಯ ಅಭಿಪ್ರಾಯ - ಲಕ್ಷ್ಮಾಲಂಕಾರ)

ಕಶ್ಯಪಃ

ಅಸಂತ್ಯಾಗಾತ್ ಪಾಪಕೃತಾಮಪಾಪಾಂ-
ಸ್ತುಲ್ಯೋ ದಂಡಃ ಸ್ಪೃಶ್ಯತೇ ಮಿಶ್ರಭಾವಾತ್ |
ಶುಷ್ಕೇಣಾರ್ದ್ರಂ ದಹ್ಯತೇ ಮಿಶ್ರಭಾವಾ-

ನ್ನ ಮಿಶ್ರಃ ಸ್ಯಾತ್ ಪಾಪಕೃದ್ಭಿಃ ಕಥಂಚಿತ್ ॥61॥
ಕಶ್ಯಪರು ಅಸಜ್ಜನರ ಜೊತೆಯಲ್ಲಿ ಬೆರೆಯುವುದರಿಂದ ಪಾಪವನ್ನು ಮಾಡದವರಿಗೂ ಪಾಪಿಗಳ ದರ್ಶನಸ್ಪರ್ಶನಾದಿಗಳಿಂದ ಕ್ಷಣಕ್ಷಣದಲ್ಲಿ ಪಾಪವು ಉಂಟಾಗಿಯೇ ಆಗುತ್ತದೆ. ಆದ್ದರಿಂದ ಅವರಿಗೆ ಪುಣ್ಯವು ವ್ಯರ್ಥವಾಗುತ್ತದೆ. ಆದ್ದ- ರಿಂದ ಪುಣ್ಯವನ್ನು ಸಂಪಾದಿಸಲು ಬಯಸುವವರು ದುರ್ಜನಸಂಗವನ್ನೇ ಬಿಡಬೇಕು ಎಂಬ ಅಭಿಪ್ರಾಯದಿಂದ ಈ ಶ್ಲೋಕವು ಹೊರಟಿದೆ. ಪಾಪಿಗಳ ಸಹವಾಸವನ್ನು ಬಿಡದಿರುವುದರಿಂದ ಅವರ ಜೊತೆಯಲ್ಲಿ ಮಿಶ್ರಣ- ವನ್ನು ಹೊಂದಿದ ಕಾರಣದಿಂದ ಪಾಪವನ್ನು ಮಾಡದವರಿಗೂ ಸಮಾನವಾದ ದಂಡವುಂಟಾಗುತ್ತದೆ. ಒಣಕಟ್ಟಿಗೆಯ ಜೊತೆಯಲ್ಲಿ ಬೆರೆತ ಹಸಿಯ ಕಟ್ಟಿಗೆಯೂ ಉರಿಯುತ್ತದೆ. ಆದ್ದರಿಂದ ಪಾಪಿಗಳ ಜೊತೆಯಲ್ಲಿ ಯಾವಾಗಲೂ ಮಿಶ್ರಣವನ್ನು ಹೊಂದಬಾರದು.
ಐಲಃ
ಸಾಧ್ವಸಾಧೂನ್ ಧಾರಯತೀಹ ಭೂಮಿಃ
ಸಾಧ್ವಸಾಧೂಂಸ್ತಾಪಯತೀಹ ಸೂರ್ಯಃ |
ಸಾಧ್ವಸಾಧೂನ್ ವಾತಯತೀಹ ವಾಯು-
ರಾಪಸ್ತಥಾ ಸಾಧ್ವಸಾಧೂನ್ ವಹಂತಿ ॥62॥
ಐಲ ಭೂಮಿಯು ಸಜ್ಜನರನ್ನೂ ಮತ್ತು ಅಸಜ್ಜನರನ್ನೂ ಧರಿಸುತ್ತದೆ. ಸೂರ್ಯನು ಸಜ್ಜನರಿಗೂ ಮತ್ತು ಅಸಜ್ಜನರಿಗೂ ಶಾಖವನ್ನು ಕೊಡುತ್ತಾನೆ. ವಾಯುವು ಸಜ್ಜನರ ಮೇಲೂ ಮತ್ತುಅಸಜ್ಜನರ ಮೇಲೂ ಬೀಸುತ್ತದೆ. ಜಲವು ಸಜ್ಜನರಿಗೂ ಮತ್ತು ಅಸಜ್ಜನರಿಗೂ ಹರಿಯುತ್ತದೆ. (ಪಾಪಿಷ್ಠರ ಸಹವಾಸದಿಂದ ಪುಣ್ಯಾತ್ಮರಿಗೂ ಹಾನಿಯುಂಟಾಗುವುದಾದರೆ ಭೂಮ್ಯಾದಿಗಳು ಏಕೆ ಪಾಪಿಷ್ಠರನ್ನು ಧರಿಸುತ್ತವೆ ಎಂಬುದು ಪ್ರಶ್ನೆಯ ಅಭಿಪ್ರಾಯ)
ಕಶ್ಯಪಃ
ಏವಮಸ್ಮಿನ್ ವರ್ತತೇ ಲೋಕ ಏವ
ನಾಮುತ್ರೈವಂ ವರ್ತತೇ ರಾಜಪುತ್ರ |
ಪ್ರೇತ್ಯೈತಯೋರಂತರವಾನ್ ವಿಶೇಷೋ
ಯೋ ವೈ ಪುಣ್ಯಂ ಚರತೇ ಯಶ್ಚ ಪಾಪಮ್ ॥63॥
ಕಶ್ಯಪರು ಎಲೈ ರಾಜಪುತ್ರನೇ! ಈ ಲೋಕದಲ್ಲಿ ಹೀಗೆಯೇ ನಡೆಯುತ್ತದೆ. ಆದರೆ ಪರಲೋಕದಲ್ಲಿ ಹೀಗೆ ನಡೆಯುವುದಿಲ್ಲ. ಮರಣಾನಂತರದಲ್ಲಿ ಪುಣ್ಯವನ್ನು ಮಾಡಿದವನಿಗೂ ಮತ್ತು ಪಾಪವನ್ನು ಮಾಡಿದವನಿಗೂ ವಿಶೇಷವಾದ ವ್ಯತ್ಯಾಸ- ವಿರುತ್ತದೆ.
ಪುಣ್ಯಸ್ಯ ಲೋಕೋ ಮಧುಮಾನ್ ಘೃತಾರ್ಚಿ-
ರ್ಹಿರಣ್ಯಜ್ಯೋತಿರಮೃತಸ್ಯ ನಾಭಿಃ |
ತತ್ರ ಪ್ರೇತ್ಯ ಮೋದತೇ ಪುಣ್ಯಕಾರೀ
ನ ತತ್ರ ಮೃತ್ಯುರ್ನ ಜರಾ ನೋತ ದುಃಖಮ್ ॥64॥
ಪುಣ್ಯದಿಂದ ಸಂಪಾದಿಸಲ್ಪಡುವ ಲೋಕವು ಸುಖಮಯವೂ, ಸತತಪ್ರಕಾಶ- ದಿಂದ ಕೂಡಿರುವುದೂ, ಸುವರ್ಣಮಯವಾದ ಜ್ಯೋತಿಯುಳ್ಳದ್ದೂ, ಅಮೃತಕ್ಕೆ ಆಶ್ರಯವೂ ಆಗಿರುತ್ತದೆ. ಪುಣ್ಯವನ್ನು ಮಾಡಿದವನು ಮರಣಾನಂತರದಲ್ಲಿ ಅಲ್ಲಿ ಸಂತೋಷ ಪಡೆಯುತ್ತಾನೆ. ಅಲ್ಲಿ ಮೃತ್ಯುವಾಗಲೀ ಮುಪ್ಪಾಗಲೀ ದುಃಖವಾಗಲೀ ಇರುವುದಿಲ್ಲ. (ಇದು ಮೋಕ್ಷದ ವರ್ಣನೆ - ಲಕ್ಷ್ಯಾಲಂಕಾರ)
ಪಾಪಸ್ಯ ಲೋಕೋ ನಿರಯೋಽಪ್ರಕಾಶೋ
ನಿತ್ಯದುಃಖಂ ಶೋಕಭೂಯಿಷ್ಠಮೇವ |
ತತ್ರಾತ್ಮಾನಂ ಶೋಚತೇ ಪಾಪಕರ್ಮಾ
ಬಹ್ವೀಃ ಸಮಾಃ ಪ್ರಪತನ್ನಪ್ರತಿಷ್ಠಾಃ ॥65॥
ಪಾಪದಿಂದ ಸಂಪಾದಿಸಲ್ಪಡುವ ಲೋಕವು ನರಕರೂಪವಾದದ್ದು. ಕತ್ತಲೆ ರೂಪವಾಗಿರುತ್ತದೆ. ನಿತ್ಯದುಃಖ ಮತ್ತು ಶೋಕಪೂರ್ಣವಾಗಿರುತ್ತದೆ. ಪಾಪ- ಕರ್ಮವನ್ನು ಮಾಡಿದವನು ಅಲ್ಲಿ ಯಾವ ನೆಲೆಯೂ ಇಲ್ಲದೇ ಅನೇಕಾನೇಕ ವರ್ಷಗಳ ಕಾಲ ಶೋಕಪಡುತ್ತಾನೆ. (ಇದು ಅಂಧಂತಮಸ್ಸಿನ ವರ್ಣನೆ - ಲಕ್ಷ್ಯಾ- ಲಂಕಾರ).
ಮಿಥೋ ಭೇದಾದ್ ಬ್ರಾಹ್ಮಣಕ್ಷತ್ರಿಯಾಣಾಂ
ಪ್ರಜಾ ದುಃಖಂ ದುಃಸಹಂ ಚಾವಿಶಂತಿ |
ಏವಂ ಜ್ಞಾತ್ವಾ ಕಾರ್ಯ ಏವೇಹ ನಿತ್ಯಂ
ಪುರೋಹಿತೋ ನೈಕವಿದ್ಯೋ ನೃಪೇಣ ॥66॥
ಬ್ರಾಹ್ಮಣಕ್ಷತ್ರಿಯರಿಗೆ ಪರಸ್ಪರ ಭೇದವುಂಟಾದರೆ ಪ್ರಜೆಗಳು ದುಃಸಹವಾದ ದುಃಖವನ್ನು ಹೊಂದುತ್ತಾರೆ. ಇದನ್ನು ತಿಳಿದು ಯಾವಾಗಲೂ ರಾಜನಾದವನು ಅನೇಕ ವಿದ್ಯೆಗಳನ್ನು ಬಲ್ಲವನನ್ನೇ ಪುರೋಹಿತನನ್ನಾಗಿ ಮಾಡಬೇಕು.
ತಂ ಚೈವಾನ್ವಭಿಷಿಂಚೇತ ತಥಾ ಧರ್ಮೋ ವಿಧೀಯತೇ |
ಅಗ್ರ್ಯೋ ಹಿ ಬ್ರಾಹ್ಮಣಃ ಪ್ರೋಕ್ತಃ ಸರ್ವಸ್ಯೈವೇಹ ಧರ್ಮತಃ ॥67॥
ಅಂತಹವನನ್ನು ಪುರೋಹಿತನ ಸ್ಥಾನದಲ್ಲಿ ಅನುಕೂಲವಾಗಿ ಅಭಿಷೇಕ ಮಾಡ- ಬೇಕು. ಹಾಗೆ ಮಾಡುವುದು ಧರ್ಮವನ್ನು ಅಭಿವೃದ್ಧಿಪಡಿಸುತ್ತದೆ. ಧರ್ಮದ ದೃಷ್ಟಿ- ಯಿಂದ ಬ್ರಾಹ್ಮಣನು ಎಲ್ಲರಿಗಿಂತ ಶ್ರೇಷ್ಠನೆಂದು ಹೇಳಲ್ಪಡುತ್ತಾನೆ.
ಪೂರ್ವಂ ಹಿ ಬ್ರಾಹ್ಮಣಾಃ ಸೃಷ್ಟಾ ಇತಿ ಧರ್ಮವಿದೋ ವಿದುಃ |
ಜ್ಯೇಷ್ಠೇನಾಭಿಜನೇನಾಸ್ಯ ಪ್ರಾಪ್ತಂ ಸರ್ವಂ ಯದುತ್ತಮಮ್ ॥68॥
ಬ್ರಾಹ್ಮಣನು ಮೊದಲು ಸೃಷ್ಟನಾದವನು ಎಂದು ಧರ್ಮಜ್ಞರು ಹೇಳುತ್ತಾರೆ. ಜ್ಯೇಷ್ಠವಾದ ಜನ್ಮದಿಂದ ಬ್ರಾಹ್ಮಣನು

ಭೂಮಿಯಲ್ಲಿರುವ ಉತ್ತಮವಾದುದೆಲ್ಲ- ವನ್ನೂ ಪಡೆಯುತ್ತಾನೆ.
ತಸ್ಮಾನ್ಮಾನ್ಯಾಶ್ಚ ಪೂಜ್ಯಶ್ಚ ಬ್ರಾಹ್ಮಣಃ ಪ್ರಸೃತಾಗ್ರಭುಕ್ |
ಸರ್ವಂ ಶ್ರೇಷ್ಠಂ ವರಿಷ್ಠಂ ಚ ನಿವೇದ್ಯಂ ತಸ್ಯ ಧರ್ಮತಃ ॥69॥
ಆದ್ದರಿಂದ ಘೃತ ಮಧು ಮೊದಲಾದವುಗಳ ಅಗ್ರಭೋಜಿಯಾದ ಬ್ರಾಹ್ಮಣನು ಮಾನ್ಯನೂ ಪೂಜ್ಯನೂ ಆದವನು. ಶ್ರೇಷ್ಠವಾದ ಮತ್ತು ಉತ್ತಮವಾದ ಎಲ್ಲ ವಸ್ತುಗಳನ್ನೂ ಧರ್ಮದ ದೃಷ್ಟಿಯಿಂದ ಅವನಿಗೆ ನಿವೇದಿಸಬೇಕು.
ಅವಶ್ಯಮೇತತ್ ಕರ್ತವ್ಯಂ ರಾಜ್ಞಾ ಬಲವತಾಽಪಿ ಹಿ |
ಬ್ರಹ್ಮ ವರ್ಧಯತಿ ಕ್ಷತ್ರಂ ಕ್ಷತ್ರತೋ ಬ್ರಹ್ಮ ವರ್ಧತೇ |
ರಾಜ್ಞಃ ಸರ್ವಸ್ಯ ಚಾನ್ಯಸ್ಯ ಸ್ವಾಮೀ ರಾಜಪುರೋಹಿತಃ ॥70॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಸಪ್ತತಿತಮೋಽಧ್ಯಾಯಃ ॥75॥
ರಾಜನು ಬಲಿಷ್ಠನಾದರೂ ಅವಶ್ಯವಾಗಿ ಇದನ್ನು ಮಾಡಲೇ ಬೇಕು. ಬ್ರಹ್ಮ- ಕುಲವು ಕ್ಷತ್ರಿಯಕುಲವನ್ನು ಅಭಿವೃದ್ಧಿ ಪಡಿಸುತ್ತದೆ. ಕ್ಷತ್ರಿಯಕುಲವು ಬ್ರಹ್ಮಕುಲವನ್ನು ಅಭಿವೃದ್ಧಿ ಪಡಿಸುತ್ತದೆ. ರಾಜನ ಉಳಿದ ಎಲ್ಲ ವಸ್ತುಗಳಿಗೂ ರಾಜಪುರೋಹಿತನು ಸ್ವಾಮಿಯಾಗುತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 75ನೆಯ ಅಧ್ಯಾಯವು ಮುಗಿಯಿತು
0

76. ಎಪ್ಪತ್ತಾರನೆಯ ಅಧ್ಯಾಯ
ಮುಚುಕುಂದಚರಿತಕಥನ, ಕ್ಷತ್ರಿಯನ ಬ್ರಹ್ಮಾಧೀನತ್ವಸಮರ್ಥನ
ಯುಧಿಷ್ಠಿರಃ
ಬ್ರಹ್ಮಕ್ಷತ್ರಸ್ಯ ಸಾಮರ್ಥ್ಯಂ ಕಥಿತಂ ತೇ ಪಿತಾಮಹ |
ಪುರೋಹಿತಪ್ರಭಾವಶ್ಚ ಲಕ್ಷಣಂ ಚ ಪುರೋಧಸಃ ॥1॥
ಇದಾನೀಂ ಶ್ರೋತುಮಿಚ್ಛಾಮಿ ಬ್ರಹ್ಮಕ್ಷತ್ರವಿನಿರ್ಣಯಮ್ |
ಬ್ರಹ್ಮಕ್ಷತ್ರಂ ಹಿ ಸರ್ವಸ್ಯ ಕಾರಣಂ ಜಗತಃ ಪರಮ್ |
ಯೋಗಕ್ಷೇಮೋ ಹಿ ರಾಷ್ಟ್ರಸ್ಯ ತಾಭ್ಯಾಮಾಯತ್ತ ಏವ ಹಿ ॥2॥
ಯುಧಿಷ್ಠಿರ ಪಿತಾಮಹನೇ! ನೀವು ಬ್ರಾಹ್ಮಣ ಮತ್ತು ಕ್ಷತ್ರಿಯರ ಸಾಮ- ರ್ಥ್ಯವನ್ನು ಪುರೋಹಿತರ ಪ್ರಭಾವ ಮತ್ತು ಲಕ್ಷಣಗಳನ್ನು ಹೇಳಿದ್ದೀರಿ. ಈಗ ಬ್ರಾಹ್ಮಣರ ಮತ್ತು ಕ್ಷತ್ರಿಯರ ಬಲಾಬಲಗಳ ನಿರ್ಣಯವನ್ನು ತಿಳಿಯಲು ಇಚ್ಛೆ ಪಡುತ್ತೇನೆ. ಜಗತ್ತಿಗೆ ಬ್ರಾಹ್ಮಣಕ್ಷತ್ರಿಯಸಮುದಾಯವು ಎಲ್ಲದಕ್ಕೂ ಶ್ರೇಷ್ಠವಾದ ಕಾರಣವಾಗಿದೆ. ರಾಷ್ಟ್ರದ ಯೋಗಕ್ಷೇಮಗಳು ಅವರಿಬ್ಬರನ್ನು ಅವಲಂಬಿಸಿವೆಯಷ್ಟೆ.
ಭೀಷ್ಮಃ
ಯೋಗಕ್ಷೇಮೋ ಹಿ ರಾಷ್ಟ್ರಸ್ಯ ರಾಜನ್ಯಾಯತ್ತ ಉಚ್ಯತೇ |
ಯೋಗಕ್ಷೇಮಶ್ಚ ರಾಜ್ಞೋಽಪಿ ಸಮಾಯತ್ತಃ ಪುರೋಹಿತೇ ॥3॥
ಯತ್ರಾದೃಷ್ಟಂ ಭಯಂ ಬ್ರಹ್ಮ ಪ್ರಜಾನಾಂ ಶಮಯತ್ಯುತ |
ದೃಷ್ಟಂ ಚ ರಾಜಾ ಬಾಹುಭ್ಯಾಂ ತದ್ ರಾಷ್ಟ್ರಂ ಸುಖಮೇಧತೇ ॥4॥
ಭೀಷ್ಮರು ರಾಷ್ಟ್ರದ ಯೋಗಕ್ಷೇಮವು ರಾಜನನ್ನು ಅವಲಂಬಿಸಿದೆ ಎಂದು ಹೇಳಲ್ಪಡುತ್ತದೆ. ರಾಜನ ಯೋಗಕ್ಷೇಮವಾದರೋ ಪುರೋಹಿತನನ್ನು ಅವಲಂಬಿ- ಸಿರುತ್ತದೆ. ಎಲ್ಲಿ ಬ್ರಾಹ್ಮಣರು ಪ್ರಜೆಗಳ ಭೂತಪ್ರೇತಾದಿಭಯಗಳನ್ನು ಪರಿಹಾರ ಮಾಡುತ್ತಾರೋ ದೃಷ್ಟವಾದ ಭಯಗಳನ್ನು ರಾಜನು ಬಾಹುಬಲದಿಂದ ಪರಿಹಾರ ಮಾಡುತ್ತಾನೆಯೋ ಅಲ್ಲಿ ರಾಷ್ಟ್ರವು ಸುಖವನ್ನು ಹೊಂದುತ್ತದೆ.
ಅತ್ರಾಪ್ಯುದಾರಹಂತೀಮಮಿತಿಹಾಸಂ ಪುರಾತನಮ್ |
ಮುಚುಕುಂದಸ್ಯ ಸಂವಾದಂ ರಾಜ್ಞೋ ವೈಶ್ರವಣಸ್ಯ ಚ ॥5॥
ಈ ವಿಷಯದಲ್ಲಿಯೂ ಸಹ ಮುಚುಕುಂದನ ಮತ್ತು ರಾಜನಾದ ಕುಬೇರನ ಸಂವಾದರೂಪವಾದ ಈ ಇತಿಹಾಸವನ್ನು ಹೇಳುತ್ತಾರೆ.
ಮುಚುಕುಂದೋ ವಿಜಿತ್ಯೇಮಾಂ ಪೃಥಿವೀಂ ಪೃಥಿವೀಪತಿಃ |
ಜಿಜ್ಞಾಸಮಾನಃ ಸ್ವಬಲಮಭ್ಯಯಾದಲಕಾಧಿಪಮ್ ॥6॥
ರಾಜನಾದ ಮುಚುಕುಂದನು ಈ ಭೂಮಿಯನ್ನು ಗೆದ್ದು ತನ್ನ ಬಲವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಅಲಕಾಧಿಪತಿಯಾದ ಕುಬೇರನ ಮೇಲೆ ದಂಡೆತ್ತಿ ಹೋದನು.
ತತೋ ವೈಶ್ರವಣೋ ರಾಜಾ ರಕ್ಷಾಂಸಿ ಸಮವಾಸೃಜತ್ |
ತೇ ಬಲಾನ್ಯವಮೃದ್ನಂತಃ ಪ್ರಾಚರಂಸ್ತಸ್ಯ ನೈರ್ಋತಾಃ ॥7॥
ರಾಜನಾದ ಕುಬೇರನು ರಾಕ್ಷಸರನ್ನು ನಿಯೋಜಿಸಿದನು. ಆ ರಾಕ್ಷಸರು ಮುಚು- ಕುಂದನ ಸೈನ್ಯದಲ್ಲಿ ಸಂಚರಿಸುತ್ತಾ, ಆ ಸೈನ್ಯವನ್ನು ನಾಶಗೊಳಿಸಿದರು.
ಸ ಹನ್ಯಮಾನೇ ಸೈನ್ಯೇ ಸ್ವೇ ಮುಚುಕುಂದೋ ನರಾಧಿಪಃ |
ಗರ್ಹಯಾಮಾಸ ವಿದ್ವಾಂಸಂ ಪುರೋಹಿತಮರಿಂದಮಃ ॥8॥
ತನ್ನ ಸೈನ್ಯವು ನಾಶವನ್ನು ಹೊಂದುತ್ತಿರಲು ಅರಿಂದಮನಾದ ಮುಚುಕುಂದ ರಾಜನು ವಿದ್ವಾಂಸನಾದ ತನ್ನ ಪುರೋಹಿತನನ್ನು

ನಿಂದಿಸಿದನು.
ತತ ಉಗ್ರಂ ತಪಸ್ತಪ್ತ್ವಾ ವಸಿಷ್ಠೋ ಬ್ರಹ್ಮವಿತ್ತಮಃ |
ರಕ್ಷಾಂಸ್ಯಪಾವಧೀತ್ ತತ್ರ ಪಂಥಾನಂ ಚಾಪ್ಯವಿಂದತ ॥9॥
ಆಗ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ವಸಿಷ್ಠರು ಉಗ್ರವಾದ ತಪಸ್ಸನ್ನು ಮಾಡಿ, ರಾಕ್ಷಸರನ್ನು ಸಂಹರಿಸಿ, ಅಲ್ಲಿ ಮಾರ್ಗವನ್ನು ಮಾಡಿಕೊಟ್ಟರು.
ತತೋ ವೈಶ್ರವಣೋ ರಾಜಾ ಮುಚುಕುಂದಮಗರ್ಹಯತ್ |
ವಧ್ಯಮಾನೇಷು ಸೈನ್ಯೇಷು ವಚನಂ ಚೇದಮಬ್ರವೀತ್ ॥10॥
ತನ್ನ ಸೈನ್ಯವು ವಧಿಸಲ್ಪಡುತ್ತಿರಲು ರಾಜನಾದ ಕುಬೇರನು ಮುಚುಕುಂದನನ್ನು ನಿಂದಿಸಿ ಈ ಮಾತನ್ನು ಆಡಿದನು.
ತ್ವತ್ತೋ ಹಿ ಬಲಿನಃ ಪೂರ್ವೇ ರಾಜಾನಃ ಸಪುರೋಹಿತಾಃ |
ನ ಚೈವಂ ಸಮವರ್ತಂಸ್ತೇ ಯಥಾ ತ್ವಮಿಹ ವರ್ತಸೇ ॥11॥
ತೇ ಖಲ್ವಪಿ ಕೃತಾಸ್ತ್ರಾಶ್ಚ ಬಲವಂತಶ್ಚ ಭೂಮಿಪಾಃ |
ಆಗಮ್ಯ ಪರ್ಯುಪಾಸಂತೇ ಮಾಮೀಶಂ ಸುಖದುಃಖಯೋಃ ॥12॥
ನಿನಗಿಂತ ಪೂರ್ವಿಕರಾದ ಪುರೋಹಿತಸಹಿತರಾಜರು ನಿನಗಿಂತ ಬಲಿಷ್ಠರಾ- ಗಿದ್ದರು. ಅವರು ನೀನು ಈಗ ನಡೆದುಕೊಳ್ಳುತ್ತಿರುವಂತೆ ನಡೆದುಕೊಳ್ಳಲಿಲ್ಲ. ಆ ರಾಜರು ಅಸ್ತ್ರವಿದ್ಯೆಯನ್ನು ಹೊಂದಿ ಬಲಿಷ್ಠರಾಗಿದ್ದರು. ನನ್ನ ಬಳಿಗೆ ಬಂದು ಸುಖ- ದುಃಖಗಳಿಗೆ ಒಡೆಯನಾದ ನನ್ನನ್ನು ಉಪಾಸನೆ ಮಾಡುತ್ತಿದ್ದರು.
ಯದ್ಯಸ್ತಿ ಬಾಹುವೀರ್ಯಂ ತೇ ತದ್ ದರ್ಶಯಿತುಮರ್ಹಸಿ |
ಕಿಂ ಬ್ರಾಹ್ಮಣಬಲೇನ ತ್ವಮತಿಮಾತ್ರಂ ಪ್ರವರ್ತಸೇ ॥13॥
ನಿನಗೆ ಬಾಹುಬಲವಿದ್ದರೆ ಅದನ್ನು ತೋರಿಸು; ಬ್ರಾಹ್ಮಣರ ಬಲವನ್ನು ಆಶ್ರಯಿಸಿ ಏಕೆ ಬಹಳವಾಗಿ ಪ್ರವೃತ್ತಿಯನ್ನು ಮಾಡುತ್ತಿದ್ದೀಯೆ? (ಎಂದು ಕೇಳಿದನು)
ಮುಚುಕುಂದಸ್ತತಃ ಕ್ರುದ್ಧಃ ಪ್ರತ್ಯುವಾಚ ಧನೇಶ್ವರಮ್ |
ನ್ಯಾಯಪೂರ್ವಮಸಂರಬ್ಧಮಸಂಭ್ರಾಂತಮಿದಂ ವಚಃ ॥14॥
ಆಗ ಕೋಪಗೊಂಡ ಮುಚುಕುಂದನು ಧನೇಶ್ವರನನ್ನು ಕುರಿತು ನ್ಯಾಯಸಹಿತ- ವಾದ ಶಾಂತವಾದ ಭ್ರಾಂತವಲ್ಲದ ಈ ಮಾತನ್ನು ಉತ್ತರರೂಪವಾಗಿ ಹೇಳಿದನು.
ಬ್ರಹ್ಮಕ್ಷತ್ರಮಿದಂ ಸೃಷ್ಟಮೇಕಯೋನಿ ಸ್ವಯಂಭುವಾ |
ಪೃಥಗ್ ಬಲವಿಧಾನಂ ಚ ತಲ್ಲೋಕಂ ಪರಿರಕ್ಷತಿ ॥15॥
ಬ್ರಹ್ಮದೇವರು ಬ್ರಾಹ್ಮಣ ಮತ್ತು ಕ್ಷತ್ರಿಯರನ್ನು ಒಂದೇ ಯೋನಿಯವರನ್ನಾಗಿ ಸೃಷ್ಟಿಮಾಡಿದ್ದಾರೆ. ಅವರ ಬಲಗಳು ಬೇರೆ ಬೇರೆ ರೀತಿಯವು. ಆ ಬಲವು ಲೋಕ- ವನ್ನು ರಕ್ಷಿಸುತ್ತವೆ.
ತಪೋಮಂತ್ರಬಲಂ ನಿತ್ಯಂ ಬ್ರಾಹ್ಮಣೇಷು ಪ್ರತಿಷ್ಠಿತಮ್ |
ಅಸ್ತ್ರಬಾಹುಬಲಂ ನಿತ್ಯಂ ಕ್ಷತ್ರಿಯೇಷು ಪ್ರತಿಷ್ಠಿತಮ್ ॥16॥
ಬ್ರಾಹ್ಮಣರಲ್ಲಿ ನಿತ್ಯವೂ ತಪಸ್ಸು ಮತ್ತು ಮಂತ್ರಬಲವು ಪ್ರತಿಷ್ಠಿತವಾಗಿದೆ. ಕ್ಷತ್ರಿಯರಲ್ಲಿ ಅಸ್ತ್ರಬಲ ಮತ್ತು ಬಾಹುಬಲಗಳು ಪ್ರತಿಷ್ಠಿತವಾಗಿವೆ.
ತಾಭ್ಯಾಂ ಸಂಭೂಯ ಕರ್ತವ್ಯಂ ಪ್ರಜಾನಾಂ ಪರಿಪಾಲನಮ್ |
ತಥಾ ಚ ಮಾಂ ಪ್ರವರ್ತಂತಂ ಗರ್ಹಯಸ್ಯಲಕಾಧಿಪ ॥17॥
ಅವರಿಬ್ಬರೂ ಸೇರಿ ಪ್ರಜೆಗಳ ಪಾಲನೆಯನ್ನು ಮಾಡಬೇಕು. ಎಲೈ ಅಲಕಾಧಿ- ಪತಿಯೇ! ಆ ರೀತಿಯಲ್ಲಿ ಪ್ರವೃತ್ತನಾದ ನನ್ನನ್ನು ಏಕೆ ನಿಂದಿಸುತ್ತಿರುವೆ? (ಎಂದು ಕೇಳಿದನು.)
ತತೋಽಬ್ರವೀತ್ ವೈಶ್ರವಣೋ ರಾಜಾನಂ ಸಪುರೋಹಿತಮ್ |
ನಾಹಂ ರಾಜ್ಯಮನಿರ್ದಿಷ್ಟಂ ಕಸ್ಮೈಚಿದ್ ವಿದಧಾಮ್ಯುತ ॥18॥
ಆಗ ಕುಬೇರನು ಪುರೋಹಿತಸಹಿತನಾದ ಆ ರಾಜನನ್ನು ಕುರಿತು ಹೇಳಿದನು ನಾನು ಯಾರಿಗೆ ಎಷ್ಟು ನಿರ್ದಿಷ್ಟವಾಗಿದೆಯೋ ಅಷ್ಟೇ ರಾಜ್ಯವನ್ನು ಕೊಡುವೆನು. ಅದಕ್ಕಿಂತ ಅಧಿಕವಾಗಿ ಕೊಡುವುದಿಲ್ಲ.
ನಾಚ್ಛಿಂದೇ ಚಾಪಿ ನಿರ್ದಿಷ್ಟಮಿತಿ ಜಾನೀಹಿ ಪಾರ್ಥಿವ |
ಪ್ರಶಾಧಿ ಪೃಥಿವೀಂ ವೀರ ಮದ್ದತ್ತಾಮಖಿಲಾಮಿಮಾಮ್ ॥19॥
ನಿರ್ದಿಷ್ಟವಾದುದನ್ನು ನಾನು ಕಡಿಮೆಯೂ ಮಾಡುವುದಿಲ್ಲ ಎಂದು ತಿಳಿಯು- ವವನಾಗು. ಎಲೈ ರಾಜನೇ! ವೀರನೇ! ನಾನು ನೀಡಿದ ಅಖಿಲವಾದ ಈ ಭೂಮಿ- ಯನ್ನು ಆಳುವವನಾಗು.
ಮುಚುಕುಂದಃ
ನಾಹಂ ರಾಜ್ಯಂ ಭವದ್ದತ್ತಂ ಭೋಕ್ತುಮಿಚ್ಛಾಮಿ ಪಾರ್ಥಿವ |
ಬಾಹುವೀರ್ಯಾರ್ಜಿತಂ ರಾಜ್ಯಮಶ್ನೀಯಾಮಿತಿ ಕಾಮಯೇ ॥20॥
ಮುಚುಕುಂದ ಎಲೈ ರಾಜನೇ! ನೀನು ನೀಡಿದ ರಾಜ್ಯವನ್ನು ನಾನು ಭೋಗಿಸಲು ಬಯಸುವುದಿಲ್ಲ. ನನ್ನ ಬಾಹುಬಲದಿಂದ ಸಂಪಾದಿಸಿದ ರಾಜ್ಯವನ್ನೇ ನಾನು ಭೋಗಿಸಬೇಕೆಂದು ಆಶಿಸುತ್ತೇನೆ.
ಭೀಷ್ಮಃ
ತತೋ ವೈಶ್ರವಣೋ ರಾಜಾ ವಿಸ್ಮಯಂ ಪರಮಂ ಯಯೌ |

ಕ್ಷತ್ರಧರ್ಮೇ ಸ್ಥಿತಂ ದೃಷ್ಟ್ವಾ ಮುಚುಕುಂದಮಸಂಭ್ರಮಮ್ ॥21॥
ಭೀಷ್ಮರು ಆಗ ಮುಚುಕುಂದನು ಯಾವ ಭ್ರಾಂತಿಯಿಲ್ಲದೇ ಕ್ಷತ್ರಿಯ ಧರ್ಮ -ದಲ್ಲಿ ನಿರತನಾಗಿರುವುದನ್ನು ನೋಡಿ ರಾಜನಾದ ಕುಬೇರನು ಬಹಳ ವಿಸ್ಮಯವನ್ನು ಹೊಂದಿದನು.
ತತೋ ರಾಜಾ ಮುಚುಕುಂದಃ ಸೋಽನ್ವಶಾಸದ್ ವಸುಂಧರಾಮ್ ।
ಬಾಹುವೀರ್ಯಾರ್ಜಿತಾಂ ಸಮ್ಯಕ್ ಕ್ಷತ್ರಧರ್ಮಮನುವ್ರತಃ ॥22॥
ಅನಂತರ ರಾಜನಾದ ಮುಚುಕುಂದನು ಕ್ಷತ್ರಿಯಧರ್ಮವನ್ನು ಪಾಲಿಸುವವ- ನಾಗಿ ಬಾಹುವೀರ್ಯದಿಂದ ಸಂಪಾದಿಸಿದ ಭೂಮಿಯನ್ನು ಚೆನ್ನಾಗಿ ಆಳಿದನು.
ಏವಂ ಯೋ ಬ್ರಹ್ಮವಿದ್ ರಾಜಾ ಬ್ರಹ್ಮಪೂರ್ವಂ ಪ್ರವರ್ತತೇ ।
ಜಯತ್ಯವಿಜಿತಾಮುರ್ವೀಂ ಯಶಶ್ಚ ಮಹದಶ್ನುತೇ ॥23॥
ಹೀಗೆ ಯಾವ ರಾಜನು ಬ್ರಾಹ್ಮಣರ ಸಾಮರ್ಥ್ಯವನ್ನು ತಿಳಿದು ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಪ್ರವೃತ್ತಿಮಾಡುತ್ತಾನೆಯೋ ಅವನು ಜಯಿಸದಿದ್ದ ಭೂಮಿ- ಯನ್ನೂ ಜಯಿಸುತ್ತಾನೆ. ದೊಡ್ಡ ಕೀರ್ತಿಯನ್ನು ಪಡೆಯುತ್ತಾನೆ.
ನಿತ್ಯೋದಕೋ ಬ್ರಾಹ್ಮಣಃ ಸ್ಯಾನ್ನಿತ್ಯಶಸ್ತ್ರಶ್ಚ ಕ್ಷತ್ರಿಯಃ ।
ತಯೋರ್ಹಿ ಸರ್ವಮಾಯತ್ತಂ ಯತ್ಕಿಂಚಿಜ್ಜಗತೀಗತಮ್ ॥24॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ಸಪ್ತತಿತಮೋಽಧ್ಯಾಯಃ ॥76॥
ಬ್ರಾಹ್ಮಣನು ನಿತ್ಯವೂ ಜಪ ತರ್ಪಣಶೀಲನಾಗಬೇಕು. ಕ್ಷತ್ರಿಯನು ನಿತ್ಯವೂ ಶಸ್ತ್ರಶೀಲನಾಗಬೇಕು. ಈ ಭೂಮಿಯಲ್ಲಿರುವ ಎಲ್ಲವೂ ಅವರಿಬ್ಬರನ್ನು ಅವಲಂಬಿ- ಸಿದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 76ನೆಯ ಅಧ್ಯಾಯವು ಮುಗಿಯಿತು
0
77. ಸಪ್ತಸಪ್ತತಿತಮೋಽಧ್ಯಾಯಃ
ಯುಧಿಷ್ಠಿರನನ್ನು ಕುರಿತು ರಾಜ್ಯಸ್ವೀಕಾರವು ಧರ್ಮವೆಂದು ಪ್ರತಿಪಾದನೆ
ಯುಧಿಷ್ಠಿರಃ
ಯಯಾ ವೃತ್ತ್ಯಾ ಮಹೀಪಾಲೋ ವಿವರ್ಧಯತಿ ಮಾನವಾನ್ ।
ಪುಣ್ಯಾಂಶ್ಚ ಲೋಕಾನ್ ಜಯತಿ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ರಾಜನು ಯಾವ ನಡತೆಯಿಂದ ಪ್ರಜೆಗಳಿಗೆ ಅಭಿವೃದ್ಧಿಯನ್ನು ಮಾಡಿ ಪುಣ್ಯಲೋಕಗಳನ್ನು ಪಡೆಯುತ್ತಾನೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ದಾನಶೀಲೋ ಭವೇದ್ ರಾಜಾ ಯಜ್ಞಶೀಲಶ್ಚ ಭಾರತ ।
ಉಪವಾಸತಪಃಶೀಲಃ ಪ್ರಜಾನಾಂ ಪಾಲನೇ ರತಃ ॥2॥
ಭೀಷ್ಮರು ಭಾರತನೇ! ಪ್ರಜೆಗಳ ಪಾಲನೆಯಲ್ಲಿ ರತನಾದ ರಾಜನು ದಾನಶೀಲನಾಗಿರಬೇಕು. ಯಜ್ಞಶೀಲನಾಗಿರಬೇಕು. ಉಪವಾಸ-ತಪಃಶೀಲನಾಗಿರ- ಬೇಕು.
ಸರ್ವಾಶ್ಚೈವ ಪ್ರಜಾ ನಿತ್ಯಂ ರಾಜಾ ಧರ್ಮೇಣ ಪಾಲಯೇತ್ ।
ಉತ್ಥಾನೇನ ಪ್ರದಾನೇನ ಪೂಜಯೇಚ್ಚೈವ ಧಾರ್ಮಿಕಾನ್ ॥3॥
ರಾಜನು ಎಲ್ಲಾ ಪ್ರಜೆಗಳನ್ನೂ ಧರ್ಮದಿಂದ ಪಾಲಿಸಬೇಕು. ಧಾರ್ಮಿಕರು ಬಂದಾಗ ಎದ್ದು ಅವರಿಗೆ ದಾನವನ್ನು ನೀಡಿ ಅವರನ್ನು ಪೂಜಿಸಬೇಕು.
ರಾಜ್ಞಾ ಹಿ ಪೂಜಿತೋ ಧರ್ಮಸ್ತತಃ ಸರ್ವತ್ರ ಪೂಜ್ಯತೇ ।
ಯದ್ಯದಾಚರತೇ ರಾಜಾ ತತ್ ಪ್ರಜಾನಾಂ ಹಿ ರೋಚತೇ ॥4॥
ರಾಜನಿಂದ ಪೂಜಿಸಲ್ಪಡುವ ಧರ್ಮವು ಅನಂತರ ಎಲ್ಲರಿಂದಲೂ ಪೂಜಿಸಲ್ಪ- ಡುತ್ತದೆ. ರಾಜನು ಮಾಡುವುದೆಲ್ಲವೂ ಪ್ರಜೆಗಳಿಗೆ ಇಷ್ಟವಾಗುತ್ತದೆ.
ನಿತ್ಯಮುದ್ಯತದಂಡಶ್ಚ ಭವೇನ್ಮೃತ್ಯುರಿವಾರಿಷು ।
ನಿಹನ್ಯಾತ್ ಸರ್ವತೋ ದಸ್ಯೂನ್ನ ಕಾಮಾತ್ ಕಸ್ಯಚಿತ್ ಕ್ಷಮೇತ್ ॥5॥
ಉದ್ಯತದಂಡನಾಗಿ ಶತ್ರುಗಳ ವಿಷಯದಲ್ಲಿ ಮೃತ್ಯುವಿನಂತಿರಬೇಕು. ದಸ್ಯು- ಗಳನ್ನು ಸರ್ವತ್ರ ನಾಶಗೊಳಿಸಬೇಕು. ಪಕ್ಷಪಾತವನ್ನು ಮಾಡಿ ಯಾರಿಗೂ ಕ್ಷಮೆ- ಯನ್ನು ನೀಡಬಾರದು.
ಯಂ ಹಿ ಧರ್ಮಂ ಚರಂತೀಹ ಪ್ರಜಾ ರಾಜ್ಞಾ ಸುರಕ್ಷಿತಾಃ ।
ಚತುರ್ಥಂ ತಸ್ಯ ಧರ್ಮಸ್ಯ ರಾಜಾ ಭಾರತ ವಿಂದತಿ ॥6॥
ರಾಜನಿಂದ ಸುರಕ್ಷಿತರಾದ ಪ್ರಜೆಗಳು ಈ ಲೋಕದಲ್ಲಿ ಯಾವ ಧರ್ಮವನ್ನು ಮಾಡುತ್ತಾರೆಯೋ, ಎಲೈ ಭಾರತನೇ! ರಾಜನು ಆ ಧರ್ಮದ ನಾಲ್ಕನೆಯ ಒಂದು ಭಾಗದ ಫಲವನ್ನು ಹೊಂದುತ್ತಾನೆ.
ಯದಧೀತೇ ಯದ್ ಯಜತೇ ಯದ್ ದದಾತಿ ಯದರ್ಚತಿ ।
ರಾಜಾ ಚತುರ್ಥಭಾಕ್ ತಸ್ಯ ಪ್ರಜಾ ಧರ್ಮೇಣ ಪಾಲಯನ್ ॥7॥
ಪ್ರಜೆಗಳನ್ನು ಧರ್ಮದಿಂದ ಪಾಲಿಸುವ ರಾಜನು ಪ್ರಜೆಗಳು ಮಾಡಿದ ಅಧ್ಯಯನದ, ಯಾಗದ, ದಾನದ, ಪೂಜೆಯ ಫಲದ ನಾಲ್ಕನೆಯ

ಒಂದು ಅಂಶ- ವನ್ನು ಪಡೆಯುತ್ತಾನೆ.
ಯದ್ ರಾಷ್ಟ್ರೇಽಕುಶಲಂ ಕಿಂಚಿದ್ ರಾಜ್ಞೋಽರಕ್ಷಯತಃ ಪ್ರಜಾಃ |
ಚತುರ್ಥಂ ತಸ್ಯ ಪಾಪಸ್ಯ ರಾಜಾ ಭಾರತ ವಿಂದತಿ |
ಅಪ್ಯಾಹುಃ ಸರ್ವಮೇವೇತಿ ಭೂಯೋಽರ್ಧಮಿತಿ ನಿಶ್ಚಯಃ ॥8॥
ಪ್ರಜೆಗಳನ್ನು ರಕ್ಷಿಸದ ರಾಜನ ರಾಷ್ಟ್ರದಲ್ಲಿ ಯಾವ ಅನ್ಯಾಯವು ನಡೆಯು- ತ್ತದೆಯೋ ಎಲೈ ಭಾರತನೇ! ರಾಜನು ಆ ಪಾಪದ ನಾಲ್ಕನೆಯ ಒಂದು ಭಾಗಕ್ಕೆ ಭಾಗಿಯಾಗುತ್ತಾನೆ. ಕೆಲವರು ಪೂರ್ಣವಾಗಿಯೇ ಭಾಗಿಯಾಗುವನೆಂದು ಹೇಳು- ತ್ತಾರೆ. ಆದರೆ ಆ ಪಾಪದ ಅರ್ಧಭಾಗಕ್ಕೆ ಭಾಗಿಯಾಗುವನೆಂಬುದು ನಿಶ್ಚಿತವಾ- ದುದು.
ಕರ್ಮಣಃ ಪೃಥಿವೀಪಾಲ ನೃಶಂಸೋಽನೃತವಾಗಪಿ |
ತಾದೃಶಾತ್ ಕಿಲ್ಬಿಷಾತ್ ರಾಜಾ ಶೃಣು ಯೇನ ಪ್ರಮುಚ್ಯತೇ ॥9॥
ಎಲೈ ರಾಜನೇ! ಕ್ರೂರಿಯೂ ಅನೃತವಚನನೂ ಆದ ರಾಜನು ಅಂತಹ ಪಾಪ- ಕರ್ಮದಿಂದ ನಿರ್ಮುಕ್ತನಾಗುವ ಬಗೆಯನ್ನು ಹೇಳು.
ಪ್ರತ್ಯಾಹರ್ತುಮಶಕ್ಯಂ ಸ್ಯಾದ್ ಧನಂ ಚೋರೈರ್ಹೃತಂ ಯದಿ |
ಸ್ವಕೋಶಾತ್ ತತ್ ಪ್ರದೇಯಂ ಸ್ಯಾದಶಕ್ತೇನೋಪಜೀವತಾ ॥10॥
ಪ್ರಜೆಗಳ ಧನವು ಅಪಹರಿಸಲ್ಪಟ್ಟಾಗ ರಾಜನು ಅದನ್ನು ಹಿಂದೆ ಪಡೆಯಲು ಸಾಧ್ಯವಾಗದಿದ್ದರೆ ಪ್ರಜೆಗಳ ಕರವನ್ನು ಉಪಜೀವಿಸುವ ರಾಜನು ತನ್ನ ಕೋಶದಿಂದ ಆ ಧನವನ್ನು ಪ್ರಜೆಗಳಿಗೆ ಕೊಡಬೇಕು.
ಸರ್ವವರ್ಣೈಃ ಸದಾ ರಕ್ಷ್ಯಂ ಬ್ರಹ್ಮಸ್ವಂ ಬ್ರಾಹ್ಮಣಾಸ್ತಥಾ |
ನ ಸ್ಥೇಯಂ ವಿಷಯೇ ತೇಷು ಯೋಽಪಕುರ್ಯಾದ್ ದ್ವಿಜಾತಿಷು ॥11॥
ಎಲ್ಲ ವರ್ಣದವರೂ ಬ್ರಾಹ್ಮಣರನ್ನೂ ಮತ್ತು ಬ್ರಾಹ್ಮಣರ ಸ್ವತ್ತನ್ನೂ ಸಂರ- ಕ್ಷಿಸಬೇಕು. ಬ್ರಾಹ್ಮಣರಿಗೆ ಅಪಕಾರವನ್ನು ಮಾಡುವ ರಾಜನ ದೇಶದಲ್ಲಿ ವಾಸಿಸ- ಬಾರದು.
ಬ್ರಹ್ಮಸ್ವೇ ರಕ್ಷ್ಯಮಾಣೇ ಹಿ ಸರ್ವಂ ಭವತಿ ರಕ್ಷಿತಮ್ |
ತೇಷಾಂ ಪ್ರಸಾದೇ ನಿರ್ವೃತ್ತೇ ಕೃತಕೃತ್ಯೋ ಭವೇನ್ನೃಪಃ ॥12॥
ಬ್ರಹ್ಮಸ್ವವು ರಕ್ಷಿತವಾದರೆ ಎಲ್ಲವೂ ರಕ್ಷಿತವಾಗುತ್ತದೆ. ಬ್ರಾಹ್ಮಣರು ಪ್ರಸನ್ನರಾದರೆ ರಾಜನು ಕೃತಕೃತ್ಯನಾಗುತ್ತಾನೆ.
ಪರ್ಜನ್ಯಮಿವ ಭೂತಾನಿ ಮಹಾದ್ರುಮಮಿವ ದ್ವಿಜಾಃ |
ನರಾಸ್ತಮುಪಜೀವಂತಿ ನೃಪಂ ಸರ್ವಾರ್ಥಸಾಧಕಮ್ ॥13॥
ಎಲ್ಲ ಪ್ರಾಣಿಗಳೂ ಮತ್ತು ಸಸ್ಯಗಳೂ ಮಳೆಯನ್ನು ಉಪಜೀವಿಸುವಂತೆ, ಪಕ್ಷಿಗಳು ಮಹಾವೃಕ್ಷವನ್ನು ಉಪಜೀವಿಸುವಂತೆ ಮನುಷ್ಯರು ಸರ್ವಾರ್ಥಸಾಧಕನಾದ ರಾಜನನ್ನು ಉಪಜೀವಿಸುತ್ತಾರೆ.
ನಹಿ ಕಾಮಾತ್ಮನಾ ರಾಜ್ಞಾ ಸತತಂ ಶಠಬುದ್ಧಿನಾ |
ನೃಶಂಸೇನಾತಿಲುಬ್ಧೇನ ಶಕ್ಯಾಃ ಪಾಲಯಿತುಂ ಪ್ರಜಾಃ ॥14॥
ಕಾಮಾತ್ಮನೂ, ಶಾಠ್ಯಬುದ್ಧಿಯುಳ್ಳವನೂ, ಕ್ರೂರಿಯೂ, ಲೋಭಿಯೂ ಆದ ರಾಜನಿಂದ ಪ್ರಜಾಪಾಲನೆಯು ಸಾಧ್ಯವಿಲ್ಲ.
ಯುಧಿಷ್ಠಿರಃ
ನಾಹಂ ಶಾಸ್ತುಂ ಸುಖಾನ್ವೇಷೀ ರಾಜ್ಯಮಿಚ್ಛಾಮ್ಯಪಿ ಕ್ಷಣಮ್ |
ಧರ್ಮಾರ್ಥಂ ರೋಚಯೇ ರಾಜ್ಯಂ ಧರ್ಮಶ್ಚಾತ್ರ ನ ವಿದ್ಯತೇ ॥15॥
ಯುಧಿಷ್ಠಿರ  ನಾನು ಸುಖವನ್ನು ಪಡೆಯಲು ಬಯಸಿ ರಾಜ್ಯವನ್ನು ಪಾಲನೆ ಮಾಡಲು ಒಂದು ಕ್ಷಣವೂ ಇಚ್ಛಿಸುವುದಿಲ್ಲ. ಧರ್ಮದ ಸಲುವಾಗಿ ರಾಜ್ಯವನ್ನು ಆಶಿಸಬೇಕು. ಆದರೆ ರಾಜ್ಯಪಾಲನೆಯಲ್ಲಿ ಧರ್ಮವಿಲ್ಲ.
ತದಲಂ ಮಮ ರಾಜ್ಯೇನ ಯತ್ರ ಧರ್ಮೋ ನ ವಿದ್ಯತೇ |
ವನಮೇವ ಗಮಿಷ್ಯಾಮಿ ತಸ್ಮಾದ್ ಧರ್ಮಚಿಕೀರ್ಷಯಾ ॥16॥
ಧರ್ಮವಿಲ್ಲದಿರುವ ರಾಜ್ಯಪಾಲನೆಯು ನನಗೆ ಬೇಡ. ಆದ್ದರಿಂದ ಧರ್ಮಾ- ಚರಣೆಯನ್ನು ಬಯಸಿ ನಾನು ಕಾಡಿಗೇ ಹೋಗುವೆನು.
ತತ್ರ ಮೇಧ್ಯೇಷ್ವರಣ್ಯೇಷು ನ್ಯಸ್ತದಂಡೋ ಜಿತೇಂದ್ರಿಯಃ |
ಧರ್ಮಮಾರಾಧಯಿಷ್ಯಾಮಿ ಮುನಿರ್ಮೂಲಫಲಾಶನಃ ॥17॥
ಪವಿತ್ರವಾದ ಅರಣ್ಯಗಳಲ್ಲಿ ಎಲ್ಲ ದಂಡವನ್ನೂ ತ್ಯಜಿಸಿ, ಜಿತೇಂದ್ರಿಯನಾಗಿ, ಮೂಲಫಲ ಆಹಾರವುಳ್ಳವನಾಗಿ ಧರ್ಮವನ್ನು ಆರಾಧಿಸುವೆನು.
ಭೀಷ್ಮಃ
ವೇದಾಹಂ ತವ ಯಾ ಬುದ್ಧಿರಾನೃಶಂಸ್ಯಗುಣೈವ ಸಾ |
ನ ಚ ಶುದ್ಧಾನೃಶಂಸ್ಯೇನ ಶಕ್ಯಂ ಮಹದುಪಾಸಿತುಮ್ ॥18॥
ಭೀಷ್ಮರು  ನಿನ್ನ ಬುದ್ಧಿಯನ್ನು ನಾನು ತಿಳಿದಿದ್ದೇನೆ. ಅದು ನಿನ್ನ ಮಾರ್ದವ ಗುಣ. ಶುದ್ಧ ಮಾರ್ದವಗುಣದಿಂದ ದೊಡ್ಡದನ್ನು ಸಂಪಾದಿಸಲು ಸಾಧ್ಯವಿಲ್ಲ.
ಅಪಿ ತು ತ್ವಾ ಮೃದುಂ ದಾಂತಮನ್ಯಾಯ್ಯಮತಿಧಾರ್ಮಿಕಮ್ |
ಕ್ಲೀಬಂ ಧರ್ಮಘೃಣಾಯುಕ್ತಂ ನ ಲೋಕೋ ಬಹು ಮನ್ಯತೇ ॥19॥
ಕ್ಷತ್ರಿಯಧರ್ಮದಿಂದ ರಹಿತನಾಗಿ, ಅತಿಧಾರ್ಮಿಕನಾಗಿ, ಮೃದುವಾಗಿ, ಇಂದ್ರಿಯನಿಗ್ರಹವುಳ್ಳವನಾಗಿ, ಧರ್ಮದ ಆಸೆಯಿಂದ ನಪುಂಸಕನಂತಿರುವ ನಿನ್ನನ್ನು ಲೋಕವು ಗೌರವಿಸುವುದಿಲ್ಲ. (ಲಕ್ಷ್ಯಾಲಂಕಾರ)
ರಾಜಧರ್ಮಾನವೇಕ್ಷಸ್ವ ಪಿತೃಪೈತಮಹೋಚಿತಾನ್ |

ನೈತದ್ ರಾಜ್ಞಾಮಥೋ ವೃತ್ತಂ ಯಥಾ ತ್ವಂ ಸ್ಥಾತುಮಿಚ್ಛಸಿ ॥20॥
ಪಿತೃಪಿತಾಮಹರು ಅನುಸರಿಸಿದ ರಾಜಧರ್ಮಗಳನ್ನು ನೋಡು; ನೀನು ಹೇಗೆ ಮಾಡಬೇಕೆಂದು ಬಯಸುತ್ತೀಯೋ ಅದು ರಾಜರ ನಡತೆಯಲ್ಲ.
ನ ಹಿ ವೈಕ್ಲವ್ಯಸಂಸೃಷ್ಟಮಾನೃಶಂಸ್ಯಮಿಹಾಸ್ಥಿತಃ।
ಪ್ರಜಾಪಾಲನಸಂಭೂತಂ ಪ್ರಾಪ್ತಾ ಧರ್ಮಫಲಂ ಹ್ಯಸಿ ॥21॥
ಮನಸ್ಸಿನಲ್ಲಿ ಭಯಗ್ರಸ್ತನಾಗಿ ಮಾರ್ದವವನ್ನು ಹೊಂದಿದ ರಾಜನಾದ ನೀನು ಪ್ರಜಾಪಾಲನೆಯಿಂದ ಉಂಟಾಗುವ ಧರ್ಮಫಲವನ್ನು ಹೊಂದುವುದಿಲ್ಲ.
ನ ಹ್ಯೇತಾಮಾಶಿಷಂ ಪಾಂಡುರ್ನ ಚ ಕುಂತ್ಯನ್ವಯಾಚತ।
ನ ಚೈತಾಂ ಪ್ರಾಜ್ಞತಾಂ ತಾತ ಯಯಾ ಚರಸಿ ಮೇಧಯಾ ॥22॥
ಪಾಂಡುವಾಗಲೀ, ಅಥವಾ ಕುಂತಿಯಾಗಲೀ ಇಂತಹ ಒಂದು ಆಶಂಸನೆಯನ್ನು ಮಾಡಲಿಲ್ಲ. ಎಲೈ ಪ್ರೀತಿಪಾತ್ರನೇ! ನೀನು ನಿನ್ನ ಬುದ್ಧಿಯಿಂದ ಏನು ಮಾಡಲು ನಿರ್ಧರಿಸಿದ್ದೀಯೋ ಅದು ವಿವೇಕವಲ್ಲ. (ಅದನ್ನೂ ಪಾಂಡುಕುಂತಿಯರು ಆಶಿಸ- ಲಿಲ್ಲ).
ಶೌರ್ಯಂ ಬಲಂ ಚ ಸತ್ತ್ವಂ ಚ ಪಿತಾ ತವ ಸದಾಬ್ರುವೀತ್।
ಮಾಹಾತ್ಮ್ಯಂ ಬಲಮೌದಾರ್ಯಂ ತವ ಕುಂತ್ಯನ್ವಯಾಚತ ॥23॥
ನಿನ್ನ ತಂದೆಯು ಶೌರ್ಯ, ಬಲ ಮತ್ತು ಧೈರ್ಯಗಳನ್ನು ಯಾವಾಗಲೂ ಹೇಳುತ್ತಿದ್ದನು. ಕುಂತಿಯು ಮಾಹಾತ್ಮ್ಯವನ್ನು, ಬಲವನ್ನು ಮತ್ತು ಔದಾರ್ಯವನ್ನು ಬೇಡುತ್ತಿದ್ದಳು.
ನಿತ್ಯಂ ಸ್ವಾಹಾ ಸ್ವಧಾ ನಿತ್ಯಮುಭೇ ಮಾನುಷದೈವತೇ।
ಪುತ್ರೇಷ್ವಾಶಾಸತೇ ನಿತ್ಯಂ ಪಿತರೋ ದೈವತಾನಿ ಚ ॥24॥
ಪಿತೃಗಳು ಮತ್ತು ದೇವತೆಗಳು ತಮ್ಮ ಪುತ್ರರಲ್ಲಿ ಯಾವಾಗಲೂ ದೇವತಾ- ಸಂಬಂಧಿಯಾದ ಸ್ವಾಹಾಕಾರಗಳನ್ನು ಪಿತೃಸಂಬಂಧಿಯಾದ ಸ್ವಧಾಕಾರಗಳನ್ನು ಆಶಿಸುತ್ತಾರೆ.
ದಾನಮಧ್ಯಯನಂ ಯಜ್ಞಃ ಪ್ರಜಾನಾಂ ಪರಿಪಾಲನಮ್।
ಧರ್ಮಮೇತಮಧರ್ಮಂ ವಾ ಜನ್ಮನೈವಾಭ್ಯಜಾಯಥಾಃ ॥25॥
ದಾನ, ಅಧ್ಯಯನ, ಯಜ್ಞ, ಪ್ರಜಾಪಲನೆ ಇವು ಧರ್ಮವಾಗಲೀ ಅಥವಾ ಅಧರ್ಮವಾಗಲೀ ನೀನು ಜನ್ಮದಿಂದಲೇ ಅದನ್ನು ಪಡೆದು ಹುಟ್ಟಿದ್ದೀಯೆ.
ಕಾಲೇ ಧುರಿ ನಿಯುಕ್ತಾನಾಂ ವಹತಾಂ ಭಾರ ಆಹಿತೇ।
ಸೀದತಾಮಪಿ ಕೌಂತೇಯ ನ ಕೀರ್ತಿರವಸೀದತಿ ॥26॥
ಎಲೈ ಕೌಂತೇಯನೇ! ಭಾರವನ್ನು ಹೊತ್ತು ನಡೆಯುವ ರಾಜರು ಕಾಲಕ್ರಮ- ದಲ್ಲಿ ನಾಶವನ್ನು ಹೊಂದಿದರೂ ಅವರ ಕೀರ್ತಿಯು ನಾಶವನ್ನು ಹೊಂದುವುದಿಲ್ಲ.
ಸಮಂತತೋ ವಿನಿಯತೋ ವಹತ್ಯಸ್ಖಲಿತೋ ಹಿ ಯಃ।
ನಿರ್ದೋಷಕರ್ಮವಚನಾತ್ ಸಿದ್ಧಿಃ ಕರ್ಮಣ ಏವ ಸಾ ॥27॥
ಎಲ್ಲ ರೀತಿಯಿಂದಲೂ ನಿಯಮಬದ್ಧನಾಗಿ ಎಡವದೇ ಅಂತಹ ಪ್ರಜಾ- ಪಾಲನೆಯ ಭಾರವನ್ನು ಹೊತ್ತು ನಡೆಯುವ ರಾಜನು ಶತ್ರುಶಿಕ್ಷಣಾದಿಗಳು ನಿರ್ದೋಷವಾದವುಗಳು ಎಂಬ ವಚನದ ಬಲದಿಂದ ತಾನು ಮಾಡುವ ಆ ಕರ್ಮ- ದಿಂದ ಸಿದ್ಧಿಯನ್ನು ಪಡೆಯುತ್ತಾನೆ.
ನೈಕಾಂತವಿನಿಪಾತೇನ ವಿಚಚಾರೇಹ ಕಶ್ಚನ।
ಧರ್ಮೀ ಗೃಹೀ ವಾ ರಾಜಾ ವಾ ಬ್ರಹ್ಮಚಾರ್ಯಥ ವಾ ಪುನಃ ॥28॥
ಧರ್ಮವನ್ನು ಆಚರಿಸುವ ರಾಜನಾಗಲೀ, ಗೃಹಸ್ಥನಾಗಲೀ ಅಥವಾ ಬ್ರಹ್ಮಚಾರಿ -ಯಾಗಲೀ ಒಂದೇ ಕಾರ್ಯವನ್ನು ಮಾಡುತ್ತಾ ಮರಣದವರೆಗೂ ಹಠದಿಂದ ಅದರಲ್ಲಿಯೇ ಉಳಿದಿರುವುದಿಲ್ಲ.
ಅಲ್ಪಂ ತು ಸಾಧುಭೂಯಿಷ್ಠಂ ಯತ್ ಕರ್ಮೋದಾರಮೇವ ತತ್।
ಕೃತಮೇವಾಕೃತಾಚ್ಛ್ರೇಯೋ ನ ಪಾಪೀಯೋಽಸ್ತ್ಯಕರ್ಮಣಃ ॥29॥
ಸತ್ಫಲವನ್ನು ಕೊಡುವ ಉದಾರವಾದ ಕರ್ಮವು ಅಲ್ಪವಾದರೂ ಕರ್ಮವನ್ನು ಮಾಡದಿರುವುದಕ್ಕಿಂತ ಅದು ಶ್ರೇಷ್ಠವಾದುದು. ಕರ್ಮವನ್ನು ಮಾಡದಿರುವುದಕ್ಕಿಂತ ಪಾಪತರವಾದುದು ಇನ್ನೊಂದು ಇಲ್ಲ.
ಯದಾ ಕುಲೀನೋ ಧರ್ಮಜ್ಞಃ ಪ್ರಾಪ್ನೋತ್ಯೈಶ್ವರ್ಯಮುತ್ತಮಮ್।
ಯೋಗಕ್ಷೇಮಸ್ತದಾ ರಾಜನ್ ಕುಶಲಾಯೈವ ಕಲ್ಪತೇ ॥30॥
ಎಲೈ ರಾಜನೇ! ಕುಲೀನನೂ ಧರ್ಮಜ್ಞನೂ ಆದ ರಾಜನು ಒಳ್ಳೆಯ ಐಶ್ವ- ರ್ಯವನ್ನು ಪಡೆದರೆ ಆಗ ಪ್ರಜೆಗಳ ಯೋಗಕ್ಷೇಮವೆಲ್ಲವೂ ಕುಶಲವೇ ಆಗುತ್ತವೆ.
ದಾನೇನಾನ್ಯಂ ಬಲೇನಾನ್ಯಮನ್ಯಂ ಸೂನೃತಯಾ ಗಿರಾ।
ಸರ್ವತಃ ಪರಿಗೃಹ್ಣೀಯಾತ್ ರಾಜ್ಯಂ ಪ್ರಾಪ್ಯೇಹ ಧಾರ್ಮಿಕಃ ॥31॥
ಧಾರ್ಮಿಕನಾದ ರಾಜನು ರಾಜ್ಯವನ್ನು ಪಡೆದು ಕೆಲವರನ್ನು ದಾನದಿಂದಲೂ, ಕೆಲವರನ್ನು ಬಲದಿಂದಲೂ, ಕೆಲವರನ್ನು ಒಳ್ಳೆಯ ಮಾತುಗಳಿಂದಲೂ ಎಲ್ಲ ಕಡೆಗಳಿಂದಲೂ ಸಂಗ್ರಹಿಸಬೇಕು.
ಯೇ ಹಿ ವೈದ್ಯಾಃ ಕುಲೇ ಜಾತಾ ಅವೃತ್ತಿಭಯಪೀಡಿತಾಃ।
ಪ್ರಾಪ್ಯತೃಪ್ತಾಃ ಪ್ರತಿಷ್ಠಂತಿ ಧರ್ಮಃ ಕೋಽಭ್ಯಧಿಕಸ್ತತಃ ॥32॥

ಸತ್ಕುಲದಲ್ಲಿ ಪ್ರಸೂತರಾದ ಜೀವನೋಪಾಯವಿಲ್ಲದೆ ಭಯದಿಂದ ಪೀಡಿತ- ರಾದ ವಿದ್ಯಾವಂತರು ಎಲ್ಲಿ ತಾವು ಪಡೆಯಬೇಕಾದುದನ್ನು ಯದೃಚ್ಛಯಾ ಪಡೆದು ತೃಪ್ತರಾಗಿರುತ್ತಾರೆಯೋ ರಾಜನಿಗೆ ಅದಕ್ಕಿಂತ ದೊಡ್ಡ ಧರ್ಮವು ಯಾವುದು?

ಯುಧಿಷ್ಠಿರಃ

ಕಿಂ ತತಃ ಪರಮಂ ಸ್ವರ್ಗ್ಯಂ ಕಾ ತತಃ ಪ್ರೀತಿರುತ್ತಮಾ |
ಕಿಂ ತತಃ ಪರಮೈಶ್ವರ್ಯಂ ಬ್ರೂಹಿ ಮೇ ಯದಿ ಮನ್ಯಸೇ ॥33॥

ಯುಧಿಷ್ಠಿರ ವೈರಾಗ್ಯಕ್ಕಿಂತಲೂ ಸ್ವರ್ಗಸಾಧಕವಾದುದು ಯಾವುದು? ವೈರಾಗ್ಯಕ್ಕಿಂತಲೂ ಸುಖ(ಪ್ರೀತಿ)ಜನಕವಾದುದು ಯಾವುದು? ವೈರಾಗ್ಯಕ್ಕಿಂತಲೂ ದೊಡ್ಡ ಐಶ್ವರ್ಯವ್ಯಾವುದು? ಅಂತಹದು ಏನಾದರೂ ಇದ್ದರೆ ನನಗೆ ಹೇಳು?

ಭೀಷ್ಮಃ

ಯಸ್ಮಿನ್ ಪ್ರತಿಷ್ಠಿತಾಃ ಸಮ್ಯಕ್ ಕ್ಷೇಮಂ ವಿಂದಂತಿ ತತ್ಕ್ಷಣಮ್ |
ಸ ಸ್ವರ್ಗಜಿತ್ತಮೋಽಸ್ಮಾಕಂ ಸತ್ಯಮೇತದ್ ಬ್ರವೀಮಿ ತೇ ॥34॥

ಭೀಷ್ಮರು ಯಾವನು ರಾಜ್ಯಪಾಲನೆಯನ್ನು ಮಾಡಿದರೆ ಪ್ರಜೆಗಳು ತಮ್ಮ ಭಯವನ್ನು ಕಳೆದುಕೊಂಡು ತತ್ಕ್ಷಣದಲ್ಲಿಯೇ ಕ್ಷೇಮವನ್ನು ಹೊಂದುತ್ತಾರೆಯೋ ಅಂತಹ ರಾಜನು ನನ್ನ ದೃಷ್ಟಿಯಲ್ಲಿ ಸ್ವರ್ಗವನ್ನು ಜಯಿಸಿದವರಲ್ಲಿ ಅತ್ಯಂತ ಶ್ರೇಷ್ಠ- ನಾದವನು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.

ತ್ವಮೇವ ಪ್ರೀತಿಮಾಂಸ್ತಸ್ಮಾತ್ ಕುರೂಣಾಂ ಕುರುಸತ್ತಮ |
ಭವ ರಾಜಾ ಜಯ ಸ್ವರ್ಗಂ ಸತೋ ರಕ್ಷಾಸತೋ ಜಹಿ ॥35॥

ಎಲೈ ಕುರುಸತ್ತಮನೇ! ನೀನೇ ಸಂತೋಷದಿಂದ ಕುರುಗಳಿಗೆ ರಾಜನಾಗು. ಸ್ವರ್ಗವನ್ನು ಜಯಿಸು. ಸಜ್ಜನರನ್ನು ರಕ್ಷಿಸು. ದುಷ್ಟರನ್ನು ವಿನಾಶಗೊಳಿಸು.

ಅನು ತ್ವಾ ತಾತ ಜೀವಂತು ಸುಹೃದಃ ಸಾಧುಭಿಃ ಸಹ |
ಪರ್ಜನ್ಯಮಿವ ಭೂತಾನಿ ಸ್ವಾದುದ್ರುಮಮಿವಾಂಡಜಾಃ ॥36॥

ಎಲೈ ಪ್ರೀತಿಪಾತ್ರನೇ! ಎಲ್ಲ ಪ್ರಾಣಿಗಳು ಮತ್ತು ಸಸ್ಯಗಳು ಪರ್ಜನ್ಯನನ್ನು ಉಪಜೀವಿಸುವಂತೆ, ಪಕ್ಷಿಗಳು ಒಳ್ಳೆಯ ಹಣ್ಣಿನ ಮರವನ್ನು ಉಪಜೀವಿಸುವಂತೆ, ಸುಹೃಜ್ಜನರು ಮತ್ತು ಸಜ್ಜನರು ನಿನ್ನನ್ನು ಉಪಜೀವಿಸಲಿ.

ಧೃಷ್ಟಂ ಶೂರಂ ಪ್ರಹರ್ತಾರಮನೃಶಂಸಂ ಜಿತೇಂದ್ರಿಯಮ್ |
ವತ್ಸಲಂ ಸಂವಿಭಕ್ತಾರಮನು ಜೀವಂತು ತ್ವಾಂ ಜನಾಃ ॥37॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತಸಪ್ತತಿತಮೋಽಧ್ಯಾಯಃ ॥77॥

ಧೈರ್ಯಶಾಲಿಯೂ, ಶೂರನೂ, ದುಷ್ಟರನ್ನು ಶಿಕ್ಷಿಸುವವನೂ, ಮೃದುವೂ, ಜಿತೇಂದ್ರಿಯನೂ, ಪ್ರಜಾವತ್ಸಲನೂ, ಐಶ್ವರ್ಯವನ್ನು ಪ್ರಜೆಗಳಿಗೆ ಹಂಚಿ ಭೋಗಿ- ಸುವವನೂ ಆದ ನಿನ್ನನ್ನು ಪ್ರಜೆಗಳು ಉಪಜೀವಿಸಲಿ.

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 77ನೆಯ ಅಧ್ಯಾಯವು ಮುಗಿಯಿತು

0

## 78. ಎಪ್ಪತ್ತೆಂಟನೆಯ ಅಧ್ಯಾಯ

### ಬ್ರಾಹ್ಮಣರ ಪ್ರಭೇದಕಥನ

ಯುಧಿಷ್ಠಿರಃ

ಸ್ವಕರ್ಮಣ್ಯಪರೇ ಯುಕ್ತಾಸ್ತಥೈವಾನ್ಯೇ ವಿಕರ್ಮಣಿ |
ತೇಷಾಂ ವಿಶೇಷಮಾಚಕ್ಷ್ವ ಬ್ರಾಹ್ಮಣಾನಾಂ ಪಿತಾಮಹ ॥1॥

ಯುಧಿಷ್ಠಿರ ಪಿತಾಮಹನೇ ಕೆಲವರು ಬ್ರಾಹ್ಮಣರು ಸ್ವಕರ್ಮದಲ್ಲಿಯೂ, ಇನ್ನು ಕೆಲವರು ವಿಕರ್ಮದಲ್ಲಿಯೂ ನಿರತರಾಗಿರುತ್ತಾರೆ. ಅಂತಹ ಬ್ರಾಹ್ಮಣರ ವಿಶೇಷವನ್ನು ಹೇಳು.

ಭೀಷ್ಮಃ

ವಿದ್ಯಾಲಕ್ಷಣಸಂಪನ್ನಾಃ ಸರ್ವತ್ರಾಮ್ನಾಯದರ್ಶಿನಃ |
ಏತೇ ಬ್ರಹ್ಮಸಮಾ ರಾಜನ್ ಬ್ರಾಹ್ಮಣಾಃ ಪರಿಕೀರ್ತಿತಾಃ ॥2॥

ಭೀಷ್ಮರು ಎಲೈ ರಾಜನೇ! ವಿದ್ಯಾಲಕ್ಷಣಸಂಪನ್ನರಾಗಿ, ಸರ್ವತ್ರ ವೇದಗಳನ್ನು ಪ್ರದರ್ಶಿಸುವ ಬ್ರಾಹ್ಮಣರು ಬ್ರಹ್ಮಸಮರು ಎಂದು ಹೇಳಲ್ಪಡುತ್ತಾರೆ.

ಋಗ್ಯಜುಃಸಾಮಸಂಪನ್ನಾಃ ಸ್ವೇಷು ಕರ್ಮಸ್ವವಸ್ಥಿತಾಃ |
ಏತೇ ದೇವಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥3॥

ಋಗ್ಯಜುಃಸಾಮವೇದಸಂಪನ್ನರಾಗಿ ತಮ್ಮ ಕರ್ಮಗಳಲ್ಲಿ ನಿರತರಾದ ಬ್ರಾಹ್ಮಣ- ರು ಎಲೈ ರಾಜನೇ! ದೇವಸಮರಾಗುತ್ತಾರೆ.

ಋತ್ವಿಕ್ ಪುರೋಹಿತೋ ಮಂತ್ರೀ ದೂತೋಽಥಾರ್ಥಾನುಶಾಸಕಃ |
ಏತೇ ಕ್ಷತ್ರಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥4॥

ಎಲೈ ರಾಜನೇ! ಋತ್ವಿಕ್, ಪುರೋಹಿತ, ಮಂತ್ರಿ, ದೂತ ಹಾಗೂ ರಾಜನ ಅನುಶಾಸನವನ್ನು ನೆರವೇರಿಸುವವನು ಇವರು ಬ್ರಾಹ್ಮಣರಲ್ಲಿ ಕ್ಷತ್ರಿಯಸಮಾನ- ರಾಗುತ್ತಾರೆ.

ಅಶ್ವಾರೋಹಾ ಗಜಾರೋಹಾ ರಥಿನೋಽಥ ಪದಾತಯಃ |
ಏತೇ ವೈಶ್ಯಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥5॥

ಎಲೈ ರಾಜನೇ! ಅಶ್ವಾರೋಹಿಗಳು, ಗಜಾರೋಹಿಗಳು, ರಥಿಕರು, ಪದಾತಿಗಳು ಇವರು ಬ್ರಾಹ್ಮಣರಲ್ಲಿ ವೈಶ್ಯಸಮರಾಗುತ್ತಾರೆ.
ಜನ್ಮಕರ್ಮವಿಹೀನಾ ಯೇ ಕದರ್ಯಾ ಬ್ರಹ್ಮಬಂಧವಃ |
ಏತೇ ಶೂದ್ರಸಮಾ ರಾಜನ್ ಬ್ರಾಹ್ಮಣಾನಾಂ ಭವಂತ್ಯುತ ॥6॥
ಎಲೈ ರಾಜನೇ! ಜಾತಿಕರ್ಮರಹಿತರಾಗಿ ಕೃಪಣರಾಗಿ ಇರುವ ಬ್ರಹ್ಮಬಂಧುಗಳು ಬ್ರಾಹ್ಮಣರಲ್ಲಿ ಶೂದ್ರಸಮರಾಗುತ್ತಾರೆ.
ಅಶ್ರೋತ್ರಿಯಾಃ ಸರ್ವ ಏವ ಸರ್ವೇ ಚಾನಾಹಿತಾಗ್ನಯಃ |
ತಾನ್ ಸರ್ವಾನ್ ಧಾರ್ಮಿಕೋ ರಾಜಾ ಬಲಿಂ ವಿಷ್ಟಿಂ ಚ ಕಾರಯೇತ್ ॥7
ಧಾರ್ಮಿಕನಾದ ರಾಜನು ಶ್ರೋತ್ರಿಯರಲ್ಲದ, ಆಹಿತಾಗ್ನಿಗಳಲ್ಲದ ಎಲ್ಲ ಬ್ರಾಹ್ಮಣರಿಂದಲೂ ಕಪ್ಪವನ್ನು ಮತ್ತು ಬಿಟ್ಟಿ ಕೆಲಸವನ್ನು ತೆಗೆದುಕೊಳ್ಳಬೇಕು.
ಆಹ್ವಾಯಕಾ ದೇವಲಕಾ ನಾಕ್ಷತ್ರಾ ಗ್ರಾಮಯಾಜಕಾಃ |
ಏತೇ ಬ್ರಾಹ್ಮಣಚಂಡಾಲಾ ಮಹಾಪಥಿಕಪಂಚಮಾಃ ॥8॥
ಇನ್ನೊಬ್ಬರನ್ನು ಕರೆಯುವವರು, ಸಂಬಳ ತೆಗೆದುಕೊಂಡು ದೇವಸ್ಥಾನದಲ್ಲಿ ಪೂಜೆಯನ್ನು ಮಾಡುವವರು, ಜ್ಯೋತಿಷ್ಕರು, ಗ್ರಾಮಪುರೋಹಿತರು ಮತ್ತು ಮಹಾಪಥದಲ್ಲಿ ಹೋಗುವವರು (ಸಮುದ್ರಯಾನ ಮತ್ತು ವಿಮಾನಯಾನವನ್ನು ಮಾಡುವವರು?) ಇವರು ಬ್ರಾಹ್ಮಣಚಂಡಾಲರು.
ಏತೇಭ್ಯೋ ಬಲಿಮಾದದ್ಯಾದ್ ಹೀನಕೋಶೋ ಮಹೀಪತಿಃ |
ಋತೇ ಬ್ರಹ್ಮಸಮೇಭ್ಯಶ್ಚ ದೇವಕಲ್ಪೇಭ್ಯ ಏವ ಚ ॥9॥
ಅಲ್ಪಕೋಶವುಳ್ಳ ರಾಜನು ಬ್ರಹ್ಮಸಮರನ್ನು ಮತ್ತು ದೇವಸಮರನ್ನು ಬಿಟ್ಟು ಉಳಿದ ಈ ಬ್ರಾಹ್ಮಣರಿಂದ ಕಪ್ಪವನ್ನು ತೆಗೆದುಕೊಳ್ಳಬೇಕು.
ಅಬ್ರಾಹ್ಮಣಾನಾಂ ವಿತ್ತಸ್ಯ ಸ್ವಾಮೀ ರಾಜೇತಿ ವೈದಿಕಮ್ |
ಬ್ರಾಹ್ಮಣಾನಾಂ ಚ ಯೇ ಕೇಚಿದ್ ವಿಕರ್ಮಸ್ಥಾ ಭವಂತ್ಯುತ ॥10॥
ಬ್ರಾಹ್ಮಣರಲ್ಲದವರ ಧನಕ್ಕೆ ರಾಜನೇ ಒಡೆಯನೆಂಬುದು ವೇದದ ಶಾಸನ. ಬ್ರಾಹ್ಮಣರಲ್ಲಿಯೇ ಯಾವ ಕೆಲವರು ವಿಕರ್ಮಸ್ಥರಾಗುತ್ತಾರೆಯೋ ಅವರ ಧನಕ್ಕೂ ರಾಜನೇ ಒಡೆಯನಾಗುತ್ತಾನೆ.
ವಿಕರ್ಮಸ್ಥಾಸ್ತು ನೋಪೇಕ್ಷ್ಯಾ ಜಾತು ರಾಜ್ಞಾ ಕಥಂಚನ |
ಪಥಿಕಃ ಸಂವಿಭಜ್ಯಶ್ಚ ಧರ್ಮಾನುಗ್ರಹಕಾರಣಾತ್ ॥11॥
ವಿಕರ್ಮಸ್ಥರಾದ ಯಾರನ್ನೂ ರಾಜನು ಯಾವರೀತಿಯಿಂದಲೂ ಉದಾಸೀನ- ಮಾಡಬಾರದು. ವಾಣಿಜ್ಯಸ್ಥಳಗಳಲ್ಲಿ ತೆರಿಗೆಯನ್ನು ರಾಜನ ಪರವಾಗಿ ತೆಗೆದು- ಕೊಳ್ಳುವ ಬ್ರಾಹ್ಮಣನು ಧರ್ಮಾನುಗ್ರಹಕಾರಣದಿಂದ ಅದರಲ್ಲಿ ಒಂದು ಭಾಗಕ್ಕೆ ಅರ್ಹನಾಗುತ್ತಾನೆ. (ಲಕ್ಷ್ಮಾಲಂಕಾರ)
ಯಸ್ಯ ಸ್ಮ ವಿಷಯೇ ರಾಜ್ಞಃ ಸ್ತೇನೋ ಭವತಿ ವೈ ದ್ವಿಜಃ |
ರಾಜ್ಞ ಏವಾಪರಾಧಂ ತಂ ಮನ್ಯಂತೇ ತದ್ವಿದೋ ಜನಾಃ ॥12॥
ಯಾವ ರಾಜನ ರಾಷ್ಟ್ರದಲ್ಲಿ ಬ್ರಾಹ್ಮಣನು ಕಳ್ಳನಾಗುತ್ತಾನೋ ಅದನ್ನು ಜನರು ರಾಜನ ಅಪರಾಧವೆಂದೇ ತಿಳಿಯುತ್ತಾರೆ.
ಅವೃತ್ತ್ಯಾ ಯೋ ಭವೇತ್ ಸ್ತೇನೋ ವೇದವಿತ್ ಸ್ನಾತಕಸ್ತಥಾ |
ರಾಜನ್ ಸ ರಾಜ್ಞಾ ಭರ್ತವ್ಯ ಇತಿ ಧರ್ಮವಿದೋ ವಿದುಃ ॥13॥
ವೇದವಿದ್ಯಾಪಾರಂಗತನಾಗಿ, ಸ್ನಾತಕನಾಗಿ ಯಾವ ಬ್ರಾಹ್ಮಣನು ಜೀವನೋ- ಪಾಯವಿಲ್ಲದೇ ಕಳ್ಳನಾಗುತ್ತಾನೆಯೋ ಎಲೈ ರಾಜನೇ! ಅವನನ್ನು ರಾಜನು ಪೋಷಿಸ -ಬೇಕು ಎಂದು ಧರ್ಮಜ್ಞರು ತಿಳಿಯುತ್ತಾರೆ.
ಸ ಚೇನ್ನೋಪರಿವರ್ತೇತ ಕೃತವೃತ್ತಿಃ ಪರಂತಪ |
ತತೋ ನಿರ್ವಾಸನೀಯಃ ಸ್ಯಾತ್ ತಸ್ಮಾದ್ ದೇಶಾತ್ ಸಬಾಂಧವಃ ॥14॥
ಎಲೈ ಪರಂತಪನೇ! ಜೀವನೋಪಾಯವನ್ನು ಕಲ್ಪಿಸಿದರೂ ಅವನು ತನ್ನ ಹಿಂದಿನ ವೃತ್ತಿಯನ್ನು ಬಿಡದಿದ್ದರೆ ಆಗ ಅವನನ್ನು ಬಂಧುಸಹಿತನಾಗಿ ಆ ದೇಶದಿಂದ ಹೊರಗೆ ಕಳುಹಿಸಬೇಕು.
ಯಜ್ಞಃ ಶ್ರುತಮಪೈಶುನ್ಯಮಹಿಂಸಾತಿಥಿಪೂಜನಮ್ |
ದಮಃ ಸತ್ಯಂ ತಪೋ ದಾನಮೇತದ್ ಬ್ರಾಹ್ಮಣಲಕ್ಷಣಮ್ ॥15॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಸಪ್ತತಿತಮೋಽಧ್ಯಾಯಃ ॥78॥
ಯಜ್ಞ, ವಿದ್ಯೆ, ಚಾಡಿಹೇಳದಿರುವಿಕೆ, ಅಹಿಂಸೆ, ಅತಿಥಿಪೂಜೆ, ಇಂದ್ರಿಯ- ನಿಗ್ರಹ, ಸತ್ಯವಚನ, ತಪಸ್ಸು ಮತ್ತು ದಾನ ಇವುಗಳು ಬ್ರಾಹ್ಮಣನ ಲಕ್ಷಣಗಳು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 78ನೆಯ ಅಧ್ಯಾಯ ಮುಗಿಯಿತು.
0
79. ಎಪ್ಪತ್ತೊಂಬತ್ತನೆಯ ಅಧ್ಯಾಯ
ಕೇಕಯರಾಜ-ರಾಕ್ಷಸಸಂವಾದದಲ್ಲಿ ಪ್ರಜೆಗಳ ಧರ್ಮಕಥನ
ಯುಧಿಷ್ಠಿರಃ
ಕೇಷಾಂ ರಾಜಾ ಪ್ರಭವತಿ ವಿತ್ತಸ್ಯ ಭರತರ್ಷಭ |
ಕಯಾ ಚ ವೃತ್ತ್ಯಾ ವರ್ತೇತ ತನ್ಮೇ ಬ್ರೂಹಿ ಪಿತಾಮಹ ॥1॥

ಯುಧಿಷ್ಠಿರ- ಎಲೈ ಭರತರ್ಷಭನೇ! ಯಾರ ವಿತ್ತದ ಮೇಲೆ ರಾಜನಿಗೆ ಅಧಿ- ಕಾರವಿರುತ್ತದೆ. ರಾಜನು ಎಂತಹ ನಡತೆಯಿಂದ ಜೀವಿಸಬೇಕು ಎಂಬುದನ್ನು ನನಗೆ ಹೇಳು.
ಭೀಷ್ಮಃ
ಅಬ್ರಾಹ್ಮಣಾನಾಂ ವಿತ್ತಸ್ಯ ಸ್ವಾಮೀ ರಾಜೇತಿ ವೈದಿಕಮ್ |
ಬ್ರಾಹ್ಮಣಾನಾಂ ಚ ಯೇ ಕೇಚಿದ್ ವಿಕರ್ಮಸ್ಥಾ ಭವಂತ್ಯುತ ॥2॥
ಭೀಷ್ಮರು ಬ್ರಾಹ್ಮಣರಲ್ಲದವರ ವಿತ್ತಕ್ಕೆ ರಾಜನು ಒಡೆಯನೆಂಬುದು ವೇದಾ- ನುಶಾಸನ. ವಿಕರ್ಮಸ್ಥರಾದ ಬ್ರಾಹ್ಮಣರ ವಿತ್ತಕ್ಕೂ ಅವನು ಒಡೆಯನಾಗುತ್ತಾನೆ.
ವಿಕರ್ಮಸ್ಥಾಶ್ಚ ನೋಪೇಕ್ಷ್ಯಾ ವಿಪ್ರಾ ರಾಜ್ಞಾ ಕಥಂಚನ |
ಇತಿ ರಾಜ್ಞಾಂ ಪುರಾವೃತ್ತಮಭಿಜಲ್ಪಂತಿ ಸಾಧವಃ ॥3॥
ರಾಜನು ವಿಕರ್ಮಸ್ಥರಾದ ಬ್ರಾಹ್ಮಣರನ್ನು ಉಪೇಕ್ಷೆ ಮಾಡಬಾರದು. ಇದು ಪ್ರಾಚೀನರಾಜರ ನಡತೆಯೆಂದು ಸಜ್ಜನರು ಹೇಳುತ್ತಾರೆ.
ಯಸ್ಯ ಸ್ಮ ವಿಷಯೇ ರಾಜ್ಞಃ ಸ್ತೇನೋ ಭವತಿ ವೈ ದ್ವಿಜಃ |
ರಾಜ್ಞ ಏವಾಪರಾಧಂ ತಂ ಮನ್ಯಂತೇ ಕಿಲ್ಬಿಷಂ ನೃಪ ॥4॥
ಯಾವ ರಾಜನ ರಾಜ್ಯದಲ್ಲಿ ಬ್ರಾಹ್ಮಣನು ಕಳ್ಳನಾಗುತ್ತಾನೆಯೋ ಆ ದೋಷ- ವನ್ನು ರಾಜನ ದೋಷವೆಂದೇ ಹೇಳುತ್ತಾರೆ.
ಅಭಿಶಸ್ತಮಿವಾತ್ಮಾನಂ ಮನ್ಯಂತೇ ತೇನ ಕರ್ಮಣಾ |
ತಸ್ಮಾದ್ ರಾಜರ್ಷಯಃ ಸರ್ವೇ ಬ್ರಾಹ್ಮಣಾನನ್ವಪಾಲಯನ್ ॥5॥
ಅಂತಹ ದೋಷದಿಂದ ರಾಜನು ತನ್ನನ್ನೇ ನಿಂದಿತನನ್ನಾಗಿ ಭಾವಿಸುತ್ತಾನೆ. ಆದರಿಂದ ಎಲ್ಲ ರಾಜರ್ಷಿಗಳೂ ಬ್ರಾಹ್ಮಣರನ್ನು ಚೆನ್ನಾಗಿ ಪಾಲಿಸಿದರು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ಕೇಕಯರಾಜೇನ ಹ್ರಿಯಮಾಣೇನ ರಕ್ಷಸಾ ॥6॥
ಈ ವಿಷಯದಲ್ಲಿಯೂ ಸಹ ರಾಕ್ಷಸನಿಂದ ಅಪಹರಿಸಲ್ಪಡುತ್ತಿದ್ದ ಕೇಕಯ ರಾಜನಿಗೂ ಮತ್ತು ರಾಕ್ಷಸನಿಗೂ ನಡೆದ ಸಂವಾದರೂಪವಾದ ಈ ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ.
ಕೇಕಯಾನಾಮಧಿಪತಿಂ ರಕ್ಷೋ ಜಗ್ರಾಹ ದಾರುಣಮ್ |
ಸ್ವಾಧ್ಯಾಯೇನಾನ್ವಿತಂ ರಾಜನ್ನರಣ್ಯೇ ಸಂಶಿತವ್ರತಮ್ ॥7॥
ಎಲೈ ರಾಜನೇ! ಸ್ವಾಧ್ಯಾಯಶೀಲನಾದ ಒಳ್ಳೆಯ ವ್ರತಧಾರಿಯಾದ ಕೇಕಯ ರಾಜನನ್ನು ಕಾಡಿನಲ್ಲಿ ಒಬ್ಬ ರಾಕ್ಷಸನು ಹಿಡಿದು ಅವನ ಮನಸ್ಸನ್ನು ಪ್ರವೇಶಿಸಿದನು.
ರಾಜಾ
ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪಃ |
ನಾನಾಹಿತಾಗ್ನಿರ್ನಾಯಜ್ವಾ ಮಾ ಮಮಾಂತರಮಾವಿಶಃ ॥8॥
ರಾಜ ನನ್ನ ರಾಜ್ಯದಲ್ಲಿ ಕಳ್ಳರಿಲ್ಲ, ಕೃಪಣರಿಲ್ಲ, ಮದ್ಯಪಾನಿಗಳಿಲ್ಲ, ಅಗ್ನ್ಯಾ- ಧಾನ ಮಾಡದವರಿಲ್ಲ, ಯಾಗವನ್ನು ಮಾಡಿದವರಿಲ್ಲ ಆದ್ದರಿಂದ ನನ್ನ ಒಳಗೆ ಪ್ರವೇಶಿಸಬೇಡ.
ನ ಚ ಮೇ ಬ್ರಾಹ್ಮಣೋಽವಿದ್ವಾನ್ ನಾವ್ರತೀ ನಾಪ್ಯಸೋಮಪಃ |
ನಾನಾಹಿತಾಗ್ನಿರ್ವಿಷಯೇ ಮಾ ಮಮಾಂತರಮಾವಿಶಃ ॥9॥
ನನ್ನ ರಾಜ್ಯದಲ್ಲಿ ವಿದ್ವಾಂಸನಲ್ಲದ, ವ್ರತಧಾರಿಯಲ್ಲದ, ಸೋಮಪಾನವನ್ನು ಮಾಡದ, ಅಗ್ನ್ಯಾಧಾನವನ್ನು ಮಾಡದ ಯಾವ ಬ್ರಾಹ್ಮಣನೂ ಇಲ್ಲ. ನನ್ನೊಳಗೆ ಪ್ರವೇಶಿಸಬೇಡ.
ನಾನಾಪ್ತದಕ್ಷಿಣೈರ್ಯಜ್ಞೈರ್ಯಜಂತೇ ವಿಷಯೇ ಮಮ |
ಅಧೀತೇ ನಾವ್ರತೀ ಕಶ್ಚಿನ್ಮಾ ಮಮಾಂತರಮಾವಿಶಃ ॥10॥
ನನ್ನ ರಾಜ್ಯದಲ್ಲಿ ಭೂರಿದಕ್ಷಿಣೆಗಳನ್ನು ಕೊಡದೇ ಯಜ್ಞಗಳನ್ನು ಮಾಡು- ವುದಿಲ್ಲ. ಎಲ್ಲರೂ ಅಧ್ಯಯನವನ್ನು ಮಾಡುತ್ತಾರೆ. ವ್ರತವನ್ನು ಧರಿಸದವನು ಯಾವನೂ ಇಲ್ಲ. ನನ್ನೊಳಗೆ ಪ್ರವೇಶಿಸಬೇಡ.
ಅಧೀಯತೇಽಧ್ಯಾಪಯಂತಿ ಯಜಂತೇ ಯಾಜಯಂತಿ ಚ |
ದದತಿ ಪ್ರತಿಗೃಹ್ಣಂತಿ ಷಟ್ಸು ಕರ್ಮಸ್ವವಸ್ಥಿತಾಃ ॥11॥
ಬ್ರಾಹ್ಮಣರು ಅಧ್ಯಯನ-ಅಧ್ಯಾಪನ, ಯಜನ-ಯಾಜನ, ದಾನ-ಪ್ರತಿಗ್ರಹ ಈ ಆರು ಕರ್ಮಗಳಲ್ಲಿ ನಿರತರಾಗಿದ್ದಾರೆ.
ಪೂಜಿತಾಃ ಸಂವಿಭಕ್ತಾಶ್ಚ ಮೃದವಃ ಸತ್ಯವಾದಿನಃ |
ಬ್ರಾಹ್ಮಣಾ ಯೇ ಸ್ವಕರ್ಮಸ್ಥಾ ಮಾ ಮಮಾಂತರಮಾವಿಶಃ ॥12॥
ಬ್ರಾಹ್ಮಣರು ನನ್ನಿಂದ ಪೂಜಿಸಲ್ಪಟ್ಟು, ಯಥಾಯೋಗ್ಯವಾಗಿ ನನ್ನ ಧನವನ್ನು ಸ್ವೀಕರಿಸಿ, ಋಜುಗಳೂ ಸತ್ಯವಾದಿಗಳೂ ಆಗಿ ತಮ್ಮ ಕರ್ಮಗಳಲ್ಲಿ ನಿರತರಾಗಿದ್ದಾರೆ. ನನ್ನೊಳಗೆ ಪ್ರವೇಶಿಸಬೇಡ.
ನ ಯಾಚಂತೇ ಪ್ರಯಚ್ಛಂತಿ ಸತ್ಯಧರ್ಮವಿಶಾರದಾಃ |
ನಾಧ್ಯಾಪಯಂತ್ಯಧೀಯಂತೇ ಯಜಂತೇ ನ ಚ ಯಾಜಕಾಃ ॥13॥
ಬ್ರಾಹ್ಮಣಾನ್ ಪರಿರಕ್ಷಂತಿ ಸಂಗ್ರಾಮೇಷ್ವಪಲಾಯಿನಃ |
ಕ್ಷತ್ರಿಯಾ ಮೇ ಸ್ವಕರ್ಮಸ್ಥಾ ಮಾ ಮಮಾಂತರಮಾವಿಶಃ ॥14॥
ಕ್ಷತ್ರಿಯರು ಯಾಚಿಸುವುದಿಲ್ಲ; ದಾನವನ್ನು ಕೊಡುತ್ತಾರೆ. ಸತ್ಯಧರ್ಮವಿಶಾ- ರದರು. ಅಧ್ಯಯನ ಮಾಡುತ್ತಾರೆ. ಅಧ್ಯಾಪನವನ್ನು

ಮಾಡುವುದಿಲ್ಲ. ಯಾಗವನ್ನು ಮಾಡುತ್ತಾರೆ. ಮಾಡಿಸುವುದಿಲ್ಲ. ಬ್ರಾಹ್ಮಣರನ್ನು ರಕ್ಷಿಸುತ್ತಾರೆ. ಯುದ್ಧದಿಂದ ಹಿಮ್ಮೆಟ್ಟುವುದಿಲ್ಲ. ಸ್ವಕರ್ಮನಿರತರಾಗಿದ್ದಾರೆ. ನನ್ನೊಳಗೆ ಪ್ರವೇಶಿಸಬೇಡ.
ಕೃಷಿಗೋರಕ್ಷವಾಣಿಜ್ಯಮುಪಜೀವಂತ್ಯಮಾಯಯಾ |
ಅಪ್ರಮತ್ತಾಃ ಕ್ರಿಯಾವಂತಃ ಸುವ್ರತಾಃ ಸತ್ಯವಾದಿನಃ ॥15॥
ಸಂವಿಭಾಗಂ ದಮಂ ಶೌಚಂ ಸೌಹೃದಂ ಚ ವ್ಯಪಾಶ್ರಿತಾಃ |
ಮಮ ವೈಶ್ಯಾಃ ಸ್ವಕರ್ಮಸ್ಥಾಃ ಮಾ ಮಮಾಂತರಮಾವಿಶಃ ॥16॥
ನನ್ನ ದೇಶದ ವೈಶ್ಯರು ಕೃಷಿ, ಗೋರಕ್ಷಣೆ, ವಾಣಿಜ್ಯಗಳನ್ನು ನಿಷ್ಕಪಟವಾಗಿ ಉಪಜೀವಿಸುತ್ತಾರೆ. ಜಾಗರೂಕರಾಗಿ ಸತ್ಕರ್ಮಗಳನ್ನು ಮಾಡುತ್ತಾರೆ. ಒಳ್ಳೆಯ ವ್ರತಗಳನ್ನು ಹೊಂದಿದ್ದಾರೆ, ಸತ್ಯವಾದಿಗಳಾಗಿದ್ದಾರೆ. ಸಂವಿಭಾಗ, ಇಂದ್ರಿಯನಿಗ್ರಹ, ಶೌಚ, ಸೌಹಾರ್ದಗಳನ್ನು ಆಶ್ರಯಿಸಿದ್ದಾರೆ. ಸ್ವಕರ್ಮನಿರತರಾಗಿದ್ದಾರೆ. ನನ್ನೊಳಗೆ ಪ್ರವೇಶಿಸಬೇಡ.
ತ್ರೀನ್ ವರ್ಣಾನನುತಿಷ್ಠಂತಿ ಯಥಾವದನಸೂಯಕಾಃ |
ಮಮ ಶೂದ್ರಾಃ ಸ್ವಕರ್ಮಸ್ಥಾ ಮಾ ಮಮಾಂತರಮಾವಿಶಃ ॥17॥
ನನ್ನ ದೇಶದಲ್ಲಿ ಶೂದ್ರರು ಅಸೂಯೆಯಿಲ್ಲದೇ ಮೂರು ವರ್ಣದವರನ್ನೂ ಚೆನ್ನಾಗಿ ಅನುಸರಿಸುತ್ತಾರೆ. ನನ್ನೊಳಗೆ ಪ್ರವೇಶಿಸಬೇಡ.
ಕೃಪಣಾನಾಥವೃದ್ಧಾನಾಂ ದುರ್ಬಲಾತುರಯೋಷಿತಾಮ್ |
ಸಂವಿಭಕ್ತಾಸ್ಮಿ ಸರ್ವೇಷಾಂ ಮಾ ಮಮಾಂತರಮಾವಿಶಃ ॥18॥
ನಾನು ಕೃಪಣರಿಗೂ, ಅನಾಥರಿಗೂ, ವೃದ್ಧರಿಗೂ, ದುರ್ಬಲರಿಗೂ, ರೋಗಿ- ಗಳಿಗೂ ಮತ್ತು ಸ್ತ್ರೀಯರಿಗೂ ನನ್ನ ಐಶ್ವರ್ಯವನ್ನು ಹಂಚುತ್ತೇನೆ. ನನ್ನೊಳಗೆ ಪ್ರವೇಶಿಸಬೇಡ.
ಕುಲದೇಶಾದಿಧರ್ಮಾಣಾಂ ಪ್ರಥಿತಾನಾಂ ಯಥಾವಿಧಿ |
ಅವ್ಯುಚ್ಛೇತ್ತಾಸ್ಮಿ ಸರ್ವೇಷಾಂ ಮಾ ಮಮಾಂತರಮಾವಿಶಃ ॥19॥
ಪ್ರಸಿದ್ಧವಾದ ಕುಲಧರ್ಮಗಳನ್ನು, ದೇಶಧರ್ಮಗಳನ್ನು, ವಿಧಿಗೆ ಅನು- ಗುಣವಾಗಿ ಲೋಪಗೊಳಿಸದೇ ಪ್ರವರ್ತಿಸುತ್ತೇನೆ. ನನ್ನೊಳಗೆ ಪ್ರವೇಶಿಸಬೇಡ.
ತಪಸ್ವಿನೋ ಮೇ ವಿಷಯೇ ಪೂಜಿತಾಃ ಪರಿಪಾಲಿತಾಃ |
ಸಂವಿಭಕ್ತಾಶ್ಚ ಸತ್ಕೃತ್ಯ ಮಾ ಮಮಾಂತರಮಾವಿಶಃ ॥20॥
ನನ್ನ ದೇಶದಲ್ಲಿರುವ ತಪಸ್ವಿಗಳು ಸತ್ಕೃತರಾಗಿ, ರಕ್ಷಿತರಾಗಿ ನನ್ನ ಐಶ್ವರ್ಯವನ್ನು ಹಂಚಿಕೊಳ್ಳುತ್ತಾರೆ. ನನ್ನೊಳಗೆ ಪ್ರವೇಶಿಸಬೇಡ.
ನಾಸಂವಿಭಜ್ಯ ಭೋಕ್ತಾಸ್ಮಿ ನ ವಿಶಾಮಿ ಪರಸ್ತ್ರಿಯಮ್ |
ಸ್ವತಂತ್ರೋ ಜಾತು ನ ಕ್ರೀಡೇ ಮಾ ಮಮಾಂತರಮಾವಿಶಃ ॥21॥
ಇನ್ನೊಬ್ಬರಿಗೆ ಕೊಡದೇ ನಾನು ಏನನ್ನೂ ಭೋಗಿಸುವುದಿಲ್ಲ; ಪರಸ್ತ್ರೀಯರ ಸಂಬಂಧವನ್ನು ಮಾಡುವುದಿಲ್ಲ. ಒಬ್ಬನೇ ಯಾವ ಕ್ರೀಡೆಯನ್ನೂ ಮಾಡುವುದಿಲ್ಲ. ನನ್ನೊಳಗೆ ಪ್ರವೇಶಿಸಬೇಡ.
ನಾಬ್ರಹ್ಮಚಾರೀ ಭಿಕ್ಷಾವಾನ್ ಭಿಕ್ಷುರ್ವಾಽಬ್ರಹ್ಮಚಾರಿಕಃ |
ಅನೃತ್ವಿಜಂ ಹುತಂ ನಾಸ್ತಿ ಮಾ ಮಮಾಂತರಮಾವಿಶಃ ॥22॥
ನನ್ನ ರಾಜ್ಯದಲ್ಲಿ ಬ್ರಹ್ಮಚಾರಿಯಲ್ಲದವನು ಭಿಕ್ಷೆಯನ್ನು ಬೇಡುವುದಿಲ್ಲ; ಬ್ರಹ್ಮಚಾರಿಯಲ್ಲದ ಸನ್ಯಾಸಿಯೂ ಇಲ್ಲ. ಋತ್ವಿಜರಿಲ್ಲದೇ ಯಾವ ಹೋಮವೂ ನಡೆಯುವುದಿಲ್ಲ. ನನ್ನೊಳಗೆ ಪ್ರವೇಶಿಸಬೇಡ.
ನಾವಜಾನಾಮ್ಯಹಂ ವೃದ್ಧಾನ್ನ ವೈದ್ಯಾನ್ನ ತಪಸ್ವಿನಃ |
ರಾಷ್ಟ್ರೇ ಸ್ವಪತಿ ಜಾಗರ್ಮಿ ಮಾ ಮಮಾಂತರಮಾವಿಶಃ ॥23॥
ನಾನು ವೃದ್ಧರನ್ನೂ, ವಿದ್ಯಾವಂತರನ್ನೂ, ತಪಸ್ವಿಗಳನ್ನೂ ಅವಮಾನಗೊಳಿಸು- ವುದಿಲ್ಲ. ರಾಷ್ಟ್ರವು ನಿದ್ರಿಸುವಾಗ ನಾನು ಎಚ್ಚರದಿಂದಿರುತ್ತೇನೆ. ನನ್ನೊಳಗೆ ಪ್ರವೇಶಿ- ಸಬೇಡ.
ಶುಕ್ಲಕರ್ಮಾಸ್ಮಿ ಸರ್ವತ್ರ ನ ದುರ್ಗತಿಭಯಂ ಮಮ |
ಧರ್ಮಚಾರೀ ಗೃಹಸ್ಥಶ್ಚ ಮಾ ಮಮಾಂತರಮಾವಿಶಃ ॥24॥
ನಾನು ಎಲ್ಲ ಕಡೆಗಳಲ್ಲಿಯೂ ಶುದ್ಧವಾದ ಕರ್ಮವನ್ನೇ ಮಾಡಿದ್ದೇನೆ. ನನಗೆ ದುರ್ಗತಿಯ ಭಯವಿಲ್ಲ. ನಾನು ಬ್ರಹ್ಮಚಾರಿಯಾದ ಗೃಹಸ್ಥನಾಗಿದ್ದೇನೆ. ನನ್ನೊಳಗೆ ಪ್ರವೇಶಿಸಬೇಡ.
ವೇದಾಧ್ಯಯನಸಂಪನ್ನಸ್ತಪಸ್ವೀ ಸರ್ವಧರ್ಮವಿತ್ |
ಸ್ವಾಮೀ ಸರ್ವಸ್ಯ ರಾಜ್ಯಸ್ಯ ಶ್ರೀಮಾನ್ ಮಮ ಪುರೋಹಿತಃ ॥25॥
ನನ್ನ ಪುರೋಹಿತನು ವೇದಾಧ್ಯಯನಸಂಪನ್ನನಾದವನು, ತಪಸ್ವಿಯಾದವನು, ಸರ್ವಧರ್ಮವನ್ನೂ ತಿಳಿದವನು, ಎಲ್ಲ ರಾಜ್ಯಕ್ಕೂ ಸ್ವಾಮಿಯಾದವನು ಮತ್ತು ಸಂಪದ್ಯುಕ್ತನಾದವನು.
ದಾನೇನ ದಿವ್ಯಾನಭಿವಾಂಛಾಮಿ ಲೋಕಾನ್
ಸತ್ಯೇನಾಥೋ ಬ್ರಾಹ್ಮಣಾನಾಂ ಚ ಗುಪ್ತ್ಯಾ |
ಶುಶ್ರೂಷಯಾ ಚಾಪಿ ಗುರೂನುಪೈಮಿ
ನ ಮೇ ಭಯಂ ವಿದ್ಯತೇ ರಾಕ್ಷಸೇಭ್ಯಃ ॥26॥
ನಾನು ದಾನದಿಂದಲೂ, ಸತ್ಯವಚನದಿಂದಲೂ ಮತ್ತು ಬ್ರಾಹ್ಮಣರ ರಕ್ಷೆ- ಯಿಂದಲೂ ದಿವ್ಯಲೋಕಗಳನ್ನು ಪಡೆಯಲು ಬಯಸುತ್ತೇನೆ. ನಾನು ಹಿರಿಯರ ಸೇವೆಯನ್ನು ಮಾಡುತ್ತೇನೆ. ನನಗೆ ರಾಕ್ಷಸರಿಂದ ಭಯವಿಲ್ಲ.
ನ ಮೇ ರಾಷ್ಟ್ರೇ ವಿಧವಾ ಬ್ರಹ್ಮಬಂಧುಃ

ನ ಬ್ರಾಹ್ಮಣಃ ಕೃಪಣೋ ನೋತ ಚೋರಃ |
ನ ಪಾರಜಾಯೀ ನ ಚ ಪಾಪಕರ್ಮಾ
ನ ಮೇ ಭಯಂ ವಿದ್ಯತೇ ರಾಕ್ಷಸೇಭ್ಯಃ ॥27॥
ನನ್ನ ರಾಜ್ಯದಲ್ಲಿ ವಿಧವೆಯರಿಲ್ಲ; ಬ್ರಹ್ಮಬಂಧುಗಳಿಲ್ಲ; ಕೃಪಣರಾದ ಅಥವಾ ಚೋರನಾದ ಬ್ರಾಹ್ಮಣನಿಲ್ಲ; ಪರಸ್ತ್ರೀಸಂಗವನ್ನು ಮಾಡುವವನಿಲ್ಲ; ಪಾಪಕರ್ಮ- ಗಳನ್ನು ಮಾಡುವವನಿಲ್ಲ. ನನಗೆ ರಾಕ್ಷಸರಿಂದ ಭಯವಿಲ್ಲ.
ನ ಮೇ ಶಸ್ತ್ರೈರನಿರ್ಭಿನ್ನಮಂಗೇ ದ್ವ್ಯಂಗುಲಮಂತರಮ್ |
ಧರ್ಮಾರ್ಥಂ ಯುದ್ಧ್ಯಮಾನಸ್ಯ ಮಾ ಮಮಾಂತರಮಾವಿಶಃ ॥28॥
ಧರ್ಮಯುದ್ಧವನ್ನು ಮಾಡುವ ನನಗೆ ದೇಹದಲ್ಲಿ ಶಸ್ತ್ರದಿಂದ ವ್ರಣಗೊಳ್ಳದ ಎರಡು ಅಂಗುಲಪ್ರದೇಶವೂ ಇಲ್ಲ. ನನ್ನೊಳಗೆ ಪ್ರವೇಶಿಸಬೇಡ.
ಗೋಬ್ರಾಹ್ಮಣೇ ಚ ಯಜ್ಞೇ ಚ ನಿತ್ಯಂ ಸ್ವಸ್ತ್ಯಯನಂ ಮಮ |
ಆಶಾಸತೇ ಜನಾ ರಾಷ್ಟ್ರೇ ಮಾ ಮಮಾಂತರಮಾವಿಶಃ ॥29॥
ನನ್ನ ರಾಷ್ಟ್ರದ ಪ್ರಜೆಗಳು ಯಜ್ಞಗಳಲ್ಲಿ ಮತ್ತು ಗೋಬ್ರಾಹ್ಮಣಸಮುದಾಯ- ದಲ್ಲಿ ನನಗೆ ನಿತ್ಯವೂ ಶುಭವನ್ನು ಹಾರೈಸುತ್ತಾರೆ. ನನ್ನೊಳಗೆ ಪ್ರವೇಶಿಸಬೇಡ.
ನಾರೀಣಾಂ ವ್ಯಭಿಚಾರಾಚ್ಚ ಅನ್ಯಾಯಾಚ್ಚ ಮಹೀಕ್ಷಿತಾಮ್ |
ವಿಪ್ರಾಣಾಂ ಕರ್ಮದೋಷಾಚ್ಚ ಪ್ರಜಾನಾಂ ಜಾಯತೇ ಭಯಮ್ ॥30॥
ಪ್ರಜೆಗಳಿಗೆ ನಾರಿಯರ ವ್ಯಭಿಚಾರದಿಂದಲೂ, ರಾಜರ ಅನ್ಯಾಯದಿಂದಲೂ, ವಿಪ್ರರ ಕರ್ಮದೋಷದಿಂದಲೂ ಭಯವುಂಟಾಗುತ್ತದೆ.
ಅವೃಷ್ಟಿರ್ಮಾರಕೋ ರೋಗಃ ಸತತಂ ಕ್ಷುದ್ಭಯಾನಿ ಚ |
ವಿಗ್ರಹಶ್ಚ ಸದಾ ತಸ್ಮಿನ್ ದೇಶೇ ಭವತಿ ದಾರುಣೇ ॥31॥
ಅಂತಹ ದಾರುಣವಾದ ದೇಶದಲ್ಲಿ ಅನಾವೃಷ್ಟಿ, ಮಾರಕರೋಗಗಳು, ಸತತವಾಗಿ ಹಸಿವಿನ ಭಯ, ಕಲಹಗಳು ಯಾವಾಗಲೂ ಇರುತ್ತವೆ.
ಯಕ್ಷರಕ್ಷಃಪಿಶಾಚೇಭ್ಯೋ ನಾಸುರೇಭ್ಯಃ ಕಥಂಚನ |
ಭಯಮುತ್ಪದ್ಯತೇ ತತ್ರ ಯತ್ರ ವಿಪ್ರಾಃ ಸುಸಂಯತಾಃ ॥32॥
ಎಲ್ಲಿ ವಿಪ್ರರು ಸಂಯಮಶೀಲರಾಗಿರುತ್ತಾರೆಯೋ ಅಲ್ಲಿ ಯಕ್ಷರಾಕ್ಷಸ- ಪಿಶಾಚಿಗಳಿಂದಾಗಲೀ, ಅಸುರರಿಂದಾಗಲೀ ಯಾವ ರೀತಿಯಿಂದಲೂ ಭಯ- ವುಂಟಾಗುವುದಿಲ್ಲ.
ಗಂಧರ್ವಾಪ್ಸರಸಃ ಸಿದ್ಧಾಃ ಪನ್ನಗಾಶ್ಚ ಸರೀಸೃಪಾಃ |
ಮಾನವಾನ್ನ ಜಿಘಾಂಸಂತಿ ಯತ್ರ ನಾರ್ಯಃ ಪತಿವ್ರತಾಃ ॥33॥
ಎಲ್ಲಿನಾರಿಯರು ಪತಿವ್ರತೆಯರಾಗಿರುತ್ತಾರೆಯೋ ಅಲ್ಲಿ ಗಂಧರ್ವಾಪ್ಸರೆಯ- ರಾಗಲೀ, ಸಿದ್ಧರಾಗಲೀ, ಸರ್ಪಗಳಾಗಲೀ ಮಾನವರನ್ನು ಕೊಲ್ಲಲು ಬಯಸು- ವುದಿಲ್ಲ.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಯತ್ರ ಶೂದ್ರಾಶ್ಚ ಧಾರ್ಮಿಕಾಃ |
ನಾನಾವೃಷ್ಟಿಭಯಂ ತತ್ರ ನ ದುರ್ಭಿಕ್ಷಂ ನ ವಿಭ್ರಮಃ ॥34॥
ಯಾವ ರಾಷ್ಟ್ರದಲ್ಲಿ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರೆಲ್ಲರೂ ಧಾರ್ಮಿಕರಾಗಿರು- ತ್ತಾರೆಯೋ ಅಲ್ಲಿ ಅನಾವೃಷ್ಟಿಭಯವಾಗಲೀ, ದುರ್ಭಿಕ್ಷವಾಗಲೀ, ಉನ್ಮಾದಾದಿ ರೋಗಗಳಾಗಲೀ ಇರುವುದಿಲ್ಲ.
ಧಾರ್ಮಿಕೋ ಯತ್ರ ಭೂಪಾಲೋ ನ ತತ್ರಾಸ್ತಿ ಪರಾಭವಃ |
ಉತ್ಪಾತಾ ನ ಚ ದೃಶ್ಯಂತೇ ನ ದಿವ್ಯಾ ನ ಚ ಮಾನುಷಾಃ ॥35॥
ರಾಜನು ಧಾರ್ಮಿಕನಾಗಿದ್ದ ಸ್ಥಳದಲ್ಲಿ ಪರಾಭವವುಂಟಾಗುವುದಿಲ್ಲ. ದಿವ್ಯವಾದ ಅಥವಾ ಮಾನುಷವಾದ ಅಪಶಕುನಗಳು ಅಲ್ಲಿ ಕಂಡುಬರುವುದಿಲ್ಲ.
ರಾಕ್ಷಸಃ
ಯಸ್ಮಾತ್ ಸರ್ವಾಸ್ವವಸ್ಥಾಸು ಧರ್ಮಮೇವಾನ್ವವೇಕ್ಷಸೇ |
ತಸ್ಮಾತ್ ಪ್ರಾಪ್ನುಹಿ ಕೈಕೇಯ ಗೃಹಾನ್ ಸ್ವಸ್ತಿ ವ್ರಜಾಮ್ಯಹಮ್ ॥36॥
ರಾಕ್ಷಸ ಎಲೈ ಕೇಕಯನೇ! ಯಾವ ಕಾರಣದಿಂದ ಎಲ್ಲ ಅವಸ್ಥೆಗಳಲ್ಲೂ ಧರ್ಮವನ್ನೇ ನೀನು ಯೋಚಿಸುತ್ತಿದ್ದೀಯೋ ಆದ್ದರಿಂದ ಸುಖವಾಗಿ ಮನೆಗೆ ಹೋಗು. ನಾನು ನನ್ನ ದಾರಿಯಲ್ಲಿ ಹೋಗುತ್ತೇನೆ.
ಯೇಷಾಂ ಗೋಬ್ರಾಹ್ಮಣಾ ರಕ್ಷ್ಯಾಃ ಪ್ರಜಾ ರಕ್ಷ್ಯಾಶ್ಚ ಕೇಕಯ |
ನ ರಕ್ಷೋಭ್ಯೋ ಭಯಂ ತೇಷಾಂ ಕುತ ಏವ ತು ಮಾನುಷಾತ್ ॥37॥
ಎಲೈ ಕೇಕಯನೇ! ಯಾರು ಗೋಬ್ರಾಹ್ಮಣರನ್ನು ಮತ್ತು ಪ್ರಜೆಗಳನ್ನು ರಕ್ಷಿಸು- ತ್ತಾರೆಯೋ ಅವರಿಗೆ ರಾಕ್ಷಸರ ಭಯವಿಲ್ಲ. ಇನ್ನು ಮನುಷ್ಯರಿಂದ ಭಯವು ಎಲ್ಲಿಂದ ಬಂದೀತು?
ಯೇಷಾಂ ಪುರೋಗಮಾ ವಿಪ್ರಾ ಯೇಷಾಂ ಬ್ರಹ್ಮಬಲಂ ಬಲಮ್ |
ಪ್ರಿಯಾತಿಥ್ಯಾಸ್ತಥಾ ದಾರಾಸ್ತೇ ವೈ ಸ್ವರ್ಗಜಿತೋ ನರಾಃ ॥38॥
ಯಾರಿಗೆ ಬ್ರಾಹ್ಮಣರೇ ಪುರಸ್ಸರರೋ, ಯಾರಿಗೆ ಬ್ರಾಹ್ಮಣಬಲವೇ ಬಲವೋ, ಯಾರು ಅತಿಥಿಪ್ರಿಯರೋ ಮತ್ತು ತಮ್ಮ ಪತ್ನಿಯರಿಗೆ ಪ್ರಿಯರೋ ಅಂತಹ ಮನುಷ್ಯರು ಸ್ವರ್ಗವನ್ನು ಜಯಿಸಿದವರು.
ಭೀಷ್ಮಃ

ತಸ್ಮಾದ್ ದ್ವಿಜಾತೀನ್ ರಕ್ಷೇತ ತೇ ಹಿ ರಕ್ಷಂತಿ ರಕ್ಷಿತಾಃ |
ಆಶೀರೇಷಾಂ ಭವೇದ್ ರಾಜ್ಞಾಂ ರಾಷ್ಟ್ರಂ ಸಮ್ಯಕ್ ಪ್ರವರ್ಧತೇ ||39||
ಭೀಷ್ಮರು ಆದ್ದರಿಂದ ಬ್ರಾಹ್ಮಣರನ್ನು ರಕ್ಷಿಸಬೇಕು. ಅವರನ್ನು ರಕ್ಷಿಸಿದರೆ ಅವರು ನಿನ್ನನ್ನು ರಕ್ಷಿಸುತ್ತಾರೆ. ರಾಜನಿಗೆ ತನ್ನ ರಾಷ್ಟ್ರವು ಸರಿಯಾಗಿ ಪ್ರವೃದ್ಧಿಯನ್ನು ಹೊಂದಲಿ ಎಂಬ ಆಸೆಯು ಇರಬೇಕು.
ತಸ್ಮಾದ್ ರಾಜ್ಞಾ ವಿಶೇಷೇಣ ವಿಕರ್ಮಸ್ಥಾ ದ್ವಿಜಾತಯಃ |
ನಿಯಮ್ಯಾಃ ಸಂವಿಭಜ್ಯಾಶ್ಚ ಪ್ರಜಾನುಗ್ರಹಕಾರಣಾತ್ ||40||
ಆದ್ದರಿಂದ ರಾಜನಾದವನು ಪ್ರಜೆಗಳನ್ನು ಅನುಗ್ರಹಿಸುವ ದೃಷ್ಟಿಯಿಂದ ವಿ- ಕರ್ಮಸ್ಥರಾದ ಬ್ರಾಹ್ಮಣರನ್ನು ನಿಯಂತ್ರಿಸಿ, ಅವರಿಗೂ ಯೋಗ್ಯವಾದ ಧನಾದಿ- ಗಳನ್ನು ಕೊಡಬೇಕು.
ಯ ಏವಂ ವರ್ತತೇ ರಾಜಾ ಪೌರಜಾನಪದೇಷ್ವಿಹ |
ಅನುಭೂಯೇಹ ಭದ್ರಾಣಿ ಪ್ರಾಪ್ನೋತೀಂದ್ರಸಲೋಕತಾಮ್ ||41||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಾಶೀತಿತಮೋಽಧ್ಯಾಯಃ ||79||
ಯಾವ ರಾಜನು ರಾಜಧಾನಿಯಲ್ಲಿರುವ ಪೌರರ ಮತ್ತು ಜಾನಪದರ (ದೇಶದಲ್ಲಿ ವಾಸಿಸುವವರ ವಿಷಯಗಳಲ್ಲಿ) ಇಲ್ಲಿ ಹೀಗೆ ನಡೆದುಕೊಳ್ಳುತ್ತಾನೆಯೋ ಅವನು ಇಲ್ಲಿ ಶುಭಗಳನ್ನು ಅನುಭವಿಸಿ ಇಂದ್ರನ ಸಮಾನಲೋಕವನ್ನು ಪಡೆಯು- ತ್ತಾನೆ.
ರಾಜಧರ್ಮಪರ್ವದ ಕನ್ನಡಾನುವಾದದಲ್ಲಿ 79ನೆಯ ಅಧ್ಯಾಯವು ಮುಗಿಯಿತು.
0

80. ಎಂಬತ್ತನೆಯ ಅಧ್ಯಾಯ
ಬ್ರಾಹ್ಮಣಾದಿಗಳ ಆಪದ್ಧರ್ಮಕಥನ

ಯುಧಿಷ್ಠಿರಃ
ವ್ಯಾಖ್ಯಾತಾ ಕ್ಷತ್ರಧರ್ಮೇಣ ವೃತ್ತಿರಾಪತ್ಸು ಭಾರತ |
ಕಥಂಚಿದ್ ವೈಶ್ಯಧರ್ಮೇಣ ಜೀವೇದ್ ವಾ ಬ್ರಾಹ್ಮಣೋ ನ ವಾ ||1||
ಯುಧಿಷ್ಠಿರ ಎಲೈ ಭಾರತನೇ! ಬ್ರಾಹ್ಮಣನು ಆಪತ್ತು ಬಂದಾಗ ಕ್ಷತ್ರಿಯ- ಧರ್ಮದಿಂದ ವರ್ತಿಸಬೇಕು ಎಂದು ಶಾಸ್ತ್ರದಲ್ಲಿ ಹೇಳಲಾಯಿತು. ಬ್ರಾಹ್ಮಣನು ಯಾವುದಾದರೂ ಸಂದರ್ಭದಲ್ಲಿ ವೈಶ್ಯಧರ್ಮದಿಂದ ಜೀವಿಸಬಹುದೇ ಇಲ್ಲವೇ?
ಭೀಷ್ಮಃ
ಅಶಕ್ತಃ ಕ್ಷತ್ರಧರ್ಮೇಣ ವೈಶ್ಯಧರ್ಮೇಣ ವರ್ತಯೇತ್ |
ಕೃಷಿಗೋರಕ್ಷಮಾಸ್ಥಾಯ ವ್ಯಸನೇ ವೃತ್ತಿಸಂಕ್ಷಯೇ ||2||
ಭೀಷ್ಮರು ರಾಷ್ಟ್ರಕ್ಕೆ ವ್ಯಸನವುಂಟಾದಾಗ ಅಥವಾ ತನಗೆ ಜೀವನೋಪಾಯ- ವಿಲ್ಲದಿದ್ದಾಗ ಕ್ಷತ್ರಿಯಧರ್ಮದಿಂದ ಜೀವಿಸಲು ಸಾಧ್ಯವಿಲ್ಲದಿದ್ದರೆ ಕೃಷಿ ಗೋ- ರಕ್ಷಣೆಗಳನ್ನು ಆಶ್ರಯಿಸಿ ವೈಶ್ಯಧರ್ಮದಿಂದ ಜೀವಿಸಬೇಕು.
ಯುಧಿಷ್ಠಿರಃ
ಕಾನಿ ಪಣ್ಯಾನಿ ವಿಕ್ರೀಣನ್ ಸ್ವರ್ಗಲೋಕಾನ್ನ ಹೀಯತೇ |
ಬ್ರಾಹ್ಮಣೋ ವೈಶ್ಯಧರ್ಮೇಣ ವರ್ತಯನ್ ಭರತರ್ಷಭ ||3||
ಯುಧಿಷ್ಠಿರ ಎಲೈ ಭರತರ್ಷಭನೇ! ವೈಶ್ಯಧರ್ಮದಿಂದ ಜೀವಿಸುವ ಬ್ರಾಹ್ಮಣನು ಎಂತಹ ವಸ್ತುಗಳನ್ನು ಮಾರಿದರೆ ಸ್ವರ್ಗಲೋಕದಿಂದ ಚ್ಯುತನಾಗುವು- ದಿಲ್ಲ.
ಭೀಷ್ಮಃ
ಸುರಾ ಲವಣಮಿತ್ಯೇವ ತಿಲಾನ್ ಕೇಸರಿಣಃ ಪಶೂನ್ |
ವೃಷಭಾನ್ ಮಧು ಮಾಂಸಂ ಚ ಕೃತಾನ್ನಂ ಚ ಯುಧಿಷ್ಠಿರ ||4||
ಸರ್ವಾಸ್ವವಸ್ಥಾಸ್ವೇತಾನಿ ಬ್ರಾಹ್ಮಣಃ ಪರಿವರ್ಜಯೇತ್ |
ಏತೇಷಾಂ ವಿಕ್ರಯಾತ್ ತಾತ ಬ್ರಾಹ್ಮಣೋ ನರಕಂ ವ್ರಜೇತ್ ||5||
ಭೀಷ್ಮರು ಯುಧಿಷ್ಠಿರನೇ! ಮದ್ಯ, ಲವಣ, ಎಳ್ಳು, ರೋಮವಿರುವ ಪಶುಗಳು, ಎತ್ತುಗಳು, ಜೇನುತುಪ್ಪ, ಮಾಂಸ ಹಾಗೂ ಸಿದ್ಧವಾದ ಅನ್ನ ಇವುಗಳನ್ನು ಮಾರುವುದನ್ನು ಬ್ರಾಹ್ಮಣನು ಎಲ್ಲಾ ಅವಸ್ಥೆಗಳಲ್ಲೂ ವರ್ಜಿಸಬೇಕು. ಎಲೈ ಪ್ರೀತಿ- ಪಾತ್ರನೇ! ಇವುಗಳನ್ನು ಮಾರುವುದರಿಂದ ಬ್ರಾಹ್ಮಣನು ನರಕಕ್ಕೆ ಹೋಗುತ್ತಾನೆ.
ಅಜೋಽಗ್ನಿರ್ವರುಣೋ ಮೇಷಃ ಸೂರ್ಯೋಽಶ್ವಃ ಪೃಥಿವೀ ವಿರಾಟ್ |
ಧೇನುರ್ಯಜ್ಞಶ್ಚ ಸೋಮಶ್ಚ ನ ವಿಕ್ರೇಯಾಃ ಕಥಂಚನ ||6||
ಆಡಿನಲ್ಲಿ ಅಗ್ನಿಯ ಸನ್ನಿಧಾನ; ಹೋತದಲ್ಲಿ ವರುಣನ ಸನ್ನಿಧಾನ; ಅಶ್ವದಲ್ಲಿ ಸೂರ್ಯನ ಸನ್ನಿಧಾನ; ಪೃಥಿವಿಯಲ್ಲಿ ಬ್ರಹ್ಮನ ಸನ್ನಿಧಾನ; ಧೇನುವಿನಲ್ಲಿ ಯಜ್ಞ ಮತ್ತು ಸೋಮಗಳ ಸನ್ನಿಧಾನವಿದೆ. ಆದ್ದರಿಂದ ಅವುಗಳನ್ನು ಯಾವ ಕಾರಣ- ದಿಂದಲೂ ಮಾರಬಾರದು.
ಪಕ್ವೇನಾಮಸ್ಯ ನಿಮಯಂ ನ ಪ್ರಶಂಸಂತಿ ಸಾಧವಃ |
ನಿಮಯೇತ್ ಪಕ್ವಮಾಮೇನ ಭೋಜನಾರ್ಥಾಯ ಭಾರತ ||7||

ಪಕ್ವಪದಾರ್ಥವನ್ನು ಕೊಟ್ಟು ಹಸಿಯ ಪದಾರ್ಥಗಳನ್ನು ತೆಗೆದುಕೊಳ್ಳುವುದನ್ನು ಸಜ್ಜನರು ಪ್ರಶಂಸಿಸುವುದಿಲ್ಲ. ಎಲೈ ಭಾರತನೇ! ಭೋಜನದ ಸಲುವಾಗಿ ಹಸಿಯ ಪದಾರ್ಥವನ್ನು ಕೊಟ್ಟು ಪಕ್ವವಾದ ಪದಾರ್ಥವನ್ನು ತೆಗೆದುಕೊಳ್ಳಬಹುದು.
ವಯಂ ಸಿದ್ಧಮಶಿಷ್ಯಾಮೋ ಭವಾನ್ ಸಾಧಯತಾಮಿದಮ್ |
ಏವಂ ಸಮೀಕ್ಷ್ಯ ನಿಮಯನ್ ನಾಧರ್ಮೋಽಸ್ತಿ ಕದಾಚನ ॥8॥
ನಾವು ಸಿದ್ಧವಾದ ಅನ್ನವನ್ನು ಸ್ವೀಕರಿಸುತ್ತೇವೆ. ನೀವು ಇದರಿಂದ ಅನ್ನವನ್ನು ಸಿದ್ಧಪಡಿಸಿ ಸ್ವೀಕರಿಸಿ ಎಂದು ಹಸಿಯ ಪದಾರ್ಥವನ್ನು ಕೊಡಬಹುದು - ಈ ರೀತಿಯಲ್ಲಿ ವಿನಿಮಯವನ್ನು ಮಾಡಿಕೊಂಡರೆ ಅದರಲ್ಲಿ ಎಂದೂ ಅಧರ್ಮ- ವಿರುವುದಿಲ್ಲ.
ಅತ್ರ ತೇ ವರ್ತಯಿಷ್ಯಾಮಿ ಯಥಾ ಧರ್ಮಃ ಪುರಾತನಃ |
ವ್ಯವಹಾರಪ್ರವೃತ್ತಾನಾಂ ತನ್ನಿಬೋಧ ಯುಧಿಷ್ಠಿರ ॥9॥
ಎಲೈ ಯುಧಿಷ್ಠಿರನೇ! ವ್ಯವಹಾರದಲ್ಲಿ ಪ್ರವೃತ್ತರಾದವರಿಗೆ ಹಿಂದೆ ಧರ್ಮವು ಹೇಗಿದ್ದಿತು ಎಂದು ನಾನು ನಿನಗೆ ಹೇಳುವೆನು. ಅದನ್ನು ಕೇಳು.
ಭವತೇಽಹಂ ದದಾನೀದಂ ಭವಾನೇತತ್ ಪ್ರಯಚ್ಛತು |
ರುಚಿತೇ ವರ್ತತೇ ಧರ್ಮೋ ನ ಬಲಾತ್ ಸಂಪ್ರವರ್ತಿತೇ ॥10॥
`ನಾನು ಇದನ್ನು ನಿನಗೆ ಕೊಡುತ್ತೇನೆ; ಇದನ್ನು ನೀನು ನನಗೆ ಕೊಡು' ಹೀಗೆ ಪರಸ್ಪರಸಮ್ಮತಿಯಿಂದ ಮಾಡಿದ ವಿನಿಮಯವ್ಯವಹಾರದಲ್ಲಿ ಧರ್ಮವಿದೆ. ಬಲಾ- ತ್ಕಾರದಿಂದ ನಡೆಯುವುದರಲ್ಲಿ ಧರ್ಮವಿಲ್ಲ.
ಇತ್ಯೇವಂ ಸಂಪ್ರವರ್ತಂತ ವ್ಯವಹಾರಾಃ ಪುರಾತನಾಃ |
ಋಷೀಣಾಮಿತರೇಷಾಂ ಚ ಸಾಧು ಚೇದಮಸಂಶಯಮ್ ॥11॥
ಪುರಾತನಕಾಲದಲ್ಲಿ ಈ ರೀತಿಯ ವ್ಯವಹಾರವು ನಡೆಯುತ್ತಿದ್ದಿತು. ಇಂತಹ ವ್ಯವಹಾರವು ಋಷಿಗಳಿಗೂ ಮತ್ತು ಇತರರಿಗೂ ಬಹಳ ಸಮ್ಮತವಾದವು ಎಂಬು- ದರಲ್ಲಿ ಸಂಶಯವಿಲ್ಲ.
ಯುಧಿಷ್ಠಿರಃ
ಅಥ ತಾತ ಯದಾ ಸರ್ವಾಃ ಶಸ್ತ್ರಮಾದದತೇ ಪ್ರಜಾಃ |
ವ್ಯುತ್ಕ್ರಾಮಂತಿ ಸ್ವಧರ್ಮೇಭ್ಯಃ ಕ್ಷತ್ರಸ್ಯ ಕ್ಷೀಯತೇ ಬಲಮ್ ॥12॥
ರಾಜಾ ತ್ರಾತಾ ನ ಲೋಕೇ ಸ್ಯಾತ್ ಕಿಂ ತದಾ ಸ್ಯಾತ್ ಪರಾಯಣಮ್ |
ಏತನ್ಮೇ ಸಂಶಯಂ ಬ್ರೂಹಿ ವಿಸ್ತರೇಣ ಪಿತಾಮಹ ॥13॥
ಯುಧಿಷ್ಠಿರ ಎಲೈ ಪ್ರೀತಿಪಾತ್ರನೇ! ಕ್ಷತ್ರಿಯರ ಬಲವು ಕ್ಷೀಣಿಸಿ, ಅವರು ತಮ್ಮ ಧರ್ಮದಿಂದ ಚ್ಯುತರಾಗಿ ಯಾವಾಗ ಎಲ್ಲ ಪ್ರಜೆಗಳೂ ಶಸ್ತ್ರವನ್ನು ಹಿಡಿಯು- ತ್ತಾರೆಯೋ ಲೋಕವನ್ನು ರಕ್ಷಿಸುವ ರಾಜನು ಇರುವುದಿಲ್ಲವೋ ಆಗ ಲೋಕಕ್ಕೆ ಯಾವುದು ಆಶ್ರಯವಾಗುತ್ತದೆ? ಪಿತಾಮಹನೇ! ಈ ನನ್ನ ಸಂಶಯವನ್ನು ವಿಸ್ತಾರ- ವಾಗಿ ಪರಿಹರಿಸು.
ಭೀಷ್ಮಃ
ದಾನೇನ ತಪಸಾ ಯಜ್ಞೈರದ್ರೋಹೇಣ ದಮೇನ ಚ |
ಬ್ರಾಹ್ಮಣಪ್ರಮುಖಾ ವರ್ಣಾಃ ಕ್ಷೇಮಮಿಚ್ಛೇಯುರಾತ್ಮನಃ ॥14॥
ಭೀಷ್ಮರು ಬ್ರಾಹ್ಮಣಪ್ರಮುಖವಾದ ವರ್ಣಗಳು ದಾನದಿಂದ, ತಪಸ್ಸಿನಿಂದ, ಯಜ್ಞಗಳಿಂದ, ಅದ್ರೋಹದಿಂದ ಮತ್ತು ಇಂದ್ರಿಯನಿಗ್ರಹದಿಂದ ತಮ್ಮ ಕ್ಷೇಮವನ್ನು ಬಯಸುತ್ತವೆ.
ತೇಷಾಂ ಯೇ ವೇದಬಲಿನಸ್ತ ಉತ್ಥಾಯ ಸಮಂತತಃ |
ರಾಜ್ಞೋ ಬಲಂ ವರ್ಧಯೇಯುರ್ಮಹೇಂದ್ರಸ್ಯೇವ ದೇವತಾಃ ॥15॥
ಅವರಲ್ಲಿ ಯಾರು ವೇದಬಲವುಳ್ಳವರೋ ಅವರು ಎಲ್ಲ ಕಡೆಗಳಿಂದಲೂ ಎದ್ದು ದೇವತೆಗಳು ಇಂದ್ರನ ಬಲವನ್ನು ಅಭಿವೃದ್ಧಿಪಡಿಸಿದಂತೆ ರಾಜನ ಬಲವನ್ನು ಅಭಿವೃದ್ಧಿಪಡಿಸಬೇಕು.
ರಾಜ್ಞೋ ಹಿ ಕ್ಷೀಯಮಾಣಸ್ಯ ಬ್ರಹ್ಮೈವಾಹುಃ ಪರಾಯಣಮ್ |
ತಸ್ಮಾದ್ ಬ್ರಹ್ಮಬಲೇನೈವ ಸಮುತ್ಥೇಯಂ ವಿಜಾನತಾ ॥16॥
ದುರ್ಬಲನಾಗುತ್ತಿರುವ ರಾಜನಿಗೆ ಬ್ರಾಹ್ಮಣರೇ ಶ್ರೇಷ್ಠವಾದ ಆಶ್ರಯ. ಆದ್ದರಿಂದ ವಿವೇಕಿಯಾದವನು ಬ್ರಹ್ಮಬಲದಿಂದಲೇ ಪುನಃ ಮೇಲೆ ಬರಬೇಕು.
ಯದಾ ತು ವಿಜಯೀ ರಾಜಾ ಕ್ಷೇಮಂ ರಾಷ್ಟ್ರೇಽಭಿಸಂದಧೇತ್ |
ತದಾ ವರ್ಣಾ ಯಥಾಧರ್ಮಮಾವಿಶೇಯುಃ ಸ್ವಕರ್ಮಸು ॥17॥
ಯಾವಾಗ ರಾಜನು ವಿಜಯವನ್ನು ಹೊಂದಿ, ರಾಷ್ಟ್ರದಲ್ಲಿ ಕ್ಷೇಮವನ್ನು ಉಂಟು ಮಾಡುವನೋ ಆಗ ವರ್ಣಗಳು ತಮ್ಮ ತಮ್ಮ ಧರ್ಮಗಳಿಗೆ ಅನುಸಾರವಾಗಿ ತಮ್ಮ ತಮ್ಮ ಕರ್ಮಗಳಲ್ಲಿ ನಿರತವಾದಾವು!
ಉನ್ಮರ್ಯಾದೇ ಪ್ರವೃತ್ತೇ ತು ದಸ್ಯುಭಿಃ ಸಂಕರೇ ಕೃತೇ |
ಸರ್ವೇ ವರ್ಣಾ ನ ದುಷ್ಯೇಯುಃ ಶಸ್ತ್ರವಂತೋ ಯುಧಿಷ್ಠಿರ ॥18॥
ಎಲೈ ಯುಧಿಷ್ಠಿರನೇ! ದಸ್ಯುಗಳು ಮರ್ಯಾದೆಯನ್ನು ಮೀರಿ ಪ್ರವೃತ್ತರಾದಾಗ ಧರ್ಮಸಂಕರಗಳನ್ನು ಮಾಡಿದಾಗ ಎಲ್ಲ ವರ್ಣದವರೂ ಶಸ್ತ್ರವನ್ನು ಹಿಡಿದರೆ ದೋಷವಿಲ್ಲ.
ಯುಧಿಷ್ಠಿರಃ
ಅಥ ಚೇತ್ ಸರ್ವತಃ ಕ್ಷತ್ರಂ ಪ್ರದುಷ್ಯೇದ್ ಬ್ರಾಹ್ಮಣಾನ್ ಪ್ರತಿ |
ಕಸ್ತಸ್ಯ ಬ್ರಾಹ್ಮಣಸ್ತ್ರಾತಾ ಕೋ ಧರ್ಮಃ ಕಿಂ ಪರಾಯಣಮ್ ॥19॥

ಯುಧಿಷ್ಠಿರ  ಒಂದು ಪಕ್ಷ ಎಲ್ಲ  ಕ್ಷತ್ರಿಯರೂ ಬ್ರಾಹ್ಮಣರಿಗೆ ವಿರುದ್ಧವಾಗಿ ನಡೆದುಕೊಂಡರೆ ಆಗ ಬ್ರಾಹ್ಮಣರನ್ನು ರಕ್ಷಿಸುವವನು ಯಾವನು? ಆಗ ಯಾವುದು ಧರ್ಮ? ಯಾವುದು ಆಶ್ರಯವಾಗುತ್ತದೆ?
ಭೀಷ್ಮಃ
ತಪಸಾ ಬ್ರಹ್ಮಚರ್ಯೇಣ ಶಸ್ತ್ರೇಣ ಚ ಬಲೇನ ಚ |
ಅಮಾಯಯಾ ಮಾಯಯಾ ಚ ನಿಯಂತವ್ಯಂ ತದಾ ಭವೇತ್  ॥20॥
ಭೀಷ್ಮರು  ಆಗ ತಪಸ್ಸಿನಿಂದಲೂ, ಬ್ರಹ್ಮಚರ್ಯೆಯಿಂದಲೂ, ಶಸ್ತ್ರದಿಂದಲೂ, ಬಲದಿಂದಲೂ, ನಿಷ್ಕಪಟವಾದ ಉಪಾಯಗಳಿಂದಲೂ, ಕಪಟೋಪಾಯಗ- ಳಿಂದಲೂ ಕ್ಷತ್ರಿಯರನ್ನು ನಿಯಂತ್ರಿಸಬೇಕು.
ಕ್ಷತ್ರಿಯಸ್ಯಾತಿವೃತ್ತಸ್ಯ ಬ್ರಾಹ್ಮಣೇಷು ವಿಶೇಷತಃ |
ಬ್ರಹ್ಮೈವ ಸನ್ನಿಯಂತೃ ಸ್ಯಾತ್ ಕ್ಷತ್ರಂ ಹಿ ಬ್ರಹ್ಮಸಂಭವಮ್       ॥21॥
ಕ್ಷತ್ರಿಯರು ತಮ್ಮ ಎಲ್ಲೆಯನ್ನು ಮೀರಿ ನಡೆದರೆ ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರಿಗೆ ಅಪಚಾರವನ್ನು ಮಾಡಿದರೆ ಬ್ರಾಹ್ಮಣಜಾತಿಯೇ ಅವರನ್ನು ನಿಯಂತ್ರಿ- ಸಬೇಕು. ಏಕೆಂದರೆ, ಕ್ಷತ್ರಿಯರು ಬ್ರಾಹ್ಮಣಜಾತಿಯಿಂದ ಹುಟ್ಟಿದವರು.
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ |
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ          ॥22॥
ಜಲದಿಂದ ಅಗ್ನಿ, ಬ್ರಾಹ್ಮಣರಿಂದ ಕ್ಷತ್ರಿಯರು, ಶಿಲೆಯಿಂದ ಲೋಹ ಉತ್ಪನ್ನ- ವಾಗಿವೆ. ಉಳಿದ ಎಲ್ಲ ಕಡೆ ಇರುವ ಅವುಗಳ ಸಾಮರ್ಥ್ಯವು ತಮ್ಮ ಮೂಲ ಕಾರಣಗಳಲ್ಲಿ ನಾಶವನ್ನು ಹೊಂದುತ್ತದೆ.
ಯದಾ ಛಿನತ್ತ್ಯಯೋಽಶ್ಮಾನಮಗ್ನಿಶ್ಚಾಪೋಽಭಿಪದ್ಯತೇ |
ಕ್ಷತ್ರಂ ಚ ಬ್ರಾಹ್ಮಣಂ ದ್ವೇಷ್ಟಿ ತದಾ ಶಾಮ್ಯಂತಿ ತೇ ತ್ರಯಃ       ॥23॥
ಕಬ್ಬಿಣವು ಕಲ್ಲನ್ನು ಭೇದಿಸಿದರೆ, ಅಗ್ನಿಯು ಜಲವನ್ನು ಪ್ರವೇಶಿಸಿದರೆ, ಕ್ಷತ್ರಿಯನು ಬ್ರಾಹ್ಮಣನನ್ನು ದ್ವೇಷಿಸಿದರೆ ಆಗ ಆ ಮೂವರೂ ನಾಶವನ್ನು ಹೊಂದುತ್ತಾರೆ.
ತಸ್ಮಾದ್ ಬ್ರಹ್ಮಣಿ ಶಾಮ್ಯಂತಿ ಕ್ಷತ್ರಿಯಾಣಾಂ ಯುಧಿಷ್ಠಿರ |
ಸಮುದೀರ್ಣಾನ್ಯಜೇಯಾನಿ ತೇಜಾಂಸಿ ಚ ಬಲಾನಿ ಚ             ॥24॥
ಎಲೈ ಯುಧಿಷ್ಠಿರನೇ! ಆದ್ದರಿಂದ ಕ್ಷತ್ರಿಯರ ಉನ್ನತವಾದ ತೇಜಸ್ಸು ಮತ್ತು ಬಲಗಳು ಬ್ರಾಹ್ಮಣರಲ್ಲಿ ನಾಶವನ್ನು ಹೊಂದುತ್ತವೆ.
ಬ್ರಹ್ಮವೀರ್ಯೇ ಮೃದೂಭೂತೇ ಕ್ಷತ್ರವೀರ್ಯೇ ಚ ದುರ್ಬಲೇ |
ದುಷ್ಟೇಷು ಸರ್ವವರ್ಣೇಷು ಬ್ರಾಹ್ಮಣಾನ್ ಪ್ರತಿ ಸರ್ವಶಃ          ॥25॥
ಯೇ ತತ್ರ ಯುದ್ಧಂ ಕುರ್ವಂತಿ ತ್ಯಕ್ತ್ವಾ  ಜೀವಿತಮಾತ್ಮನಃ |
ಬ್ರಾಹ್ಮಣಾನ್ ಪರಿರಕ್ಷಂತೋ ಧರ್ಮಮಾತ್ಮಾನಮೇವ ಚ          ॥26॥
ಮನಸ್ವಿನೋ ಮನ್ಯುಮಂತಃ ಪುಣ್ಯಲೋಕಾ ಭವಂತಿ ತೇ |
ಬ್ರಾಹ್ಮಣಾರ್ಥಂ ಹಿ ಸರ್ವೇಷಾಂ ಶಸ್ತ್ರಗ್ರಹಣಮಿಷ್ಯತೇ            ॥27॥
ಬ್ರಹ್ಮಸಾಮರ್ಥ್ಯವು ಮೃದುವಾಗಿ, ಕ್ಷತ್ರಿಯಸಾಮರ್ಥ್ಯವು ದುರ್ಬಲವಾಗಿ ಎಲ್ಲ ವರ್ಣದವರೂ ಬ್ರಾಹ್ಮಣರಿಗೆ ವಿರೋಧಿಗಳಾಗಿ ಇರುವ ಸಂದರ್ಭದಲ್ಲಿ ಯಾರು ತಮ್ಮ ಜೀವಿತದ ಹಂಗನ್ನು ತೊರೆದು ಬ್ರಾಹ್ಮಣರನ್ನು ತಮ್ಮನ್ನು ಮತ್ತು ಧರ್ಮವನ್ನು ರಕ್ಷಿಸುತ್ತಾ ಯುದ್ಧವನ್ನು ಮಾಡುತ್ತಾರೆಯೋ ಅಂತಹ ಧೈರ್ಯಶಾಲಿಗಳೂ ಕೋಪ- ವುಳ್ಳವರೂ ಆದವರು ಪುಣ್ಯಲೋಕವನ್ನು ಪಡೆಯುತ್ತಾರೆ. ಬ್ರಾಹ್ಮಣರ ರಕ್ಷಣೆಯ ಸಲುವಾಗಿ ಎಲ್ಲರೂ ಶಸ್ತ್ರಗ್ರಹಣವನ್ನು ಮಾಡಬೇಕೆಂದು ಹೇಳಲ್ಪಡುತ್ತದೆ.
ಅತಿ ಸ್ವಿಷ್ಟಸ್ವಧೀತಾನಾಂ ಲೋಕಾನತಿ ತಪಸ್ವಿನಾಮ್ |
ಅನಾಶಕಾಗ್ನ್ಯೋರ್ವಿಶತಾಂ ಶೂರಾ ಯಾಂತಿ ಪರಾಂ ಗತಿಮ್  |
ಏವಮೇವಾತ್ಮನಸ್ತ್ಯಾಗಾನ್ನಾನ್ಯಂ ಧರ್ಮಂ ವಿದುರ್ಜನಾಃ         ॥28॥
ಶೂರರಾದವರು ಯಾಗ ಮತ್ತು ಅಧ್ಯಯನ ಮಾಡಿದವರಿಗಿಂತಲೂ ಉತ್ತಮ- ವಾದ ಲೋಕಗಳನ್ನು ತಪಸ್ವಿಗಳಿಗಿಂತಲೂ ಉತ್ತಮವಾದ ಲೋಕಗಳನ್ನು ಉಪವಾಸ ಮತ್ತು ಯಾಗಗಳನ್ನು ಮಾಡಿದವರಿಗಿಂತಲೂ ಉತ್ತಮವಾದ ಲೋಕಗಳನ್ನು ಪಡೆಯುತ್ತಾರೆ. ಬ್ರಾಹ್ಮಣರ ಸಲುವಾಗಿ ಆತ್ಮತ್ಯಾಗವನ್ನು ಮಾಡುವುದಕ್ಕಿಂತಲೂ ದೊಡ್ಡದಾದ ಇನ್ನೊಂದು ಧರ್ಮವಿಲ್ಲವೆಂದು ವಿವೇಕಿಗಳು ತಿಳಿಯುತ್ತಾರೆ.
ತೇಭ್ಯೋ ನಮಶ್ಚ  ಭದ್ರಂ ಚ ಯೇ ಶರೀರಾಣಿ ಜುಹ್ವತಿ |
ಬ್ರಹ್ಮದ್ವಿಷೋ ನಿಯಚ್ಛಂತಸ್ತೇಷಾಂ ನೋಽಸ್ತು ಸಲೋಕತಾ |
ಬ್ರಹ್ಮಲೋಕಜಿತಃ ಸ್ವರ್ಗ್ಯಾನ್ ವೀರಾಂಸ್ತಾನ್ ಮನುರಬ್ರವೀತ್  ॥29॥
ನಿಮಗೆ ಮಂಗಳವಾಗಲಿ, ಯಾರು ಅದಕ್ಕಾಗಿ ತಮ್ಮ ಶರೀರವನ್ನು ಹೋಮ ಮಾಡುತ್ತಾರೆಯೋ ಅವರಿಗೆ ನನ್ನ ನಮಸ್ಕಾರ. ಬ್ರಾಹ್ಮಣದ್ವೇಷವನ್ನು ಮಾಡುವ- ವರನ್ನು ನಿಯಂತ್ರಿಸುವವರಿಗೆ ಯಾವ ಲೋಕಗಳು ಉಂಟಾಗುತ್ತವೆಯೋ ನಮಗೂ ಆ ಲೋಕಗಳು ಉಂಟಾಗಲಿ. ಅಂತಹ ವೀರರು ಬ್ರಹ್ಮಲೋಕವನ್ನು ಜಯಿಸಿ ಸ್ವರ್ಗದಲ್ಲಿ ವಾಸಿಸುವವರು ಎಂದು ಮನುವು ಹೇಳಿದ್ದಾನೆ.
ಯಥಾಶ್ವಮೇಧಾವಭೃಥೇ ಸ್ನಾತಾಃ ಪೂತಾ ಭವಂತ್ಯುತ |
ದುಷ್ಕೃತಃ  ಸುಕೃತಶ್ಚೈವ ತಥಾ ಶಸ್ತ್ರಹತಾ ರಣೇ     ॥30॥
ಅಶ್ವಮೇಧಯಾಗದ ಅವಭೃಥಸ್ನಾನವನ್ನು ಮಾಡಿದವರು ಹೇಗೆ ಪವಿತ್ರರಾಗು- ತ್ತಾರೆಯೋ ಅದರಂತೆ ದುಷ್ಕರ್ಮವನ್ನು ಮಾಡಿದವರಾಗಲೀ, ಸತ್ಕರ್ಮವನ್ನು ಮಾಡಿದವರಾಗಲೀ ಯುದ್ಧದಲ್ಲಿ  ಶಸ್ತ್ರದಿಂದ ಹತರಾದರೆ ಪವಿತ್ರರಾಗುತ್ತಾರೆ.
ಭವತ್ಯಧರ್ಮೋ ಧರ್ಮೋ ಹಿ ಧರ್ಮಾಧರ್ಮಾವುಭಾವಪಿ |

ಕಾರಣಾದ್ ದೇಶಕಾಲಸ್ಯ ದೇಶಕಾಲಃ ಸ ತಾದೃಶಃ ॥31॥
ದೇಶಕಾಲಗಳ ನಿಮಿತ್ತದಿಂದ ಅಧರ್ಮವು ಧರ್ಮವೂ ಧರ್ಮವು ಅ- ಧರ್ಮವೂ ಆಗುತ್ತದೆ. ದೇಶಕಾಲಗಳ ಪ್ರಭಾವವು ಅಂತಹದು.
ಮೈತ್ರಾಃ ಕ್ರೂರಾಣಿ ಕುರ್ವಂತೋ ಜಯಂತಿ ಸ್ವರ್ಗಮುತ್ತಮಮ್ |
ಧರ್ಮ್ಯಾಃ ಪಾಪಾನಿ ಕುರ್ವಂತೋ ಗಚ್ಛಂತಿ ಪರಮಾಂ ಗತಿಮ್ ॥32॥
ಮೊದಲು ಸರ್ವಜನಮಿತ್ರರಾದವರು ದೇವಬ್ರಾಹ್ಮಣರ ಸಲುವಾಗಿ ಭರ್ತ್ಸನ ತಾಡನಾದಿಗಳನ್ನು ಮಾಡಿದರೆ ಅವರು ಉತ್ತಮಸ್ವರ್ಗವನ್ನೇ ಪಡೆಯುತ್ತಾರೆ. ತಮ್ಮ ಧರ್ಮದಲ್ಲಿ ಇರುವವರು ದೇವಬ್ರಾಹ್ಮಣರ ಸಲುವಾಗಿ ದುಷ್ಟಹನನಾದಿ ಕರ್ಮ- ಗಳನ್ನು ಮಾಡಿದರೂ ಅದರಿಂದ ಅವರು ಶ್ರೇಷ್ಠವಾದ ಗತಿಯನ್ನೇ ಹೊಂದುತ್ತಾರೆ. ಬ್ರಾಹ್ಮಣೋಪದ್ರವಕಾಲದಲ್ಲಿ ಧರ್ಮವು ಅಧರ್ಮವಾಯಿತು. ಬ್ರಾಹ್ಮಣರ ಉಪ- ದ್ರವವನ್ನು ಮಾಡುವ ವ್ಯಕ್ತಿಯಲ್ಲಿ ಸ್ನೇಹವನ್ನು ಮಾಡಿದರೆ ಅದು ಅಧರ್ಮ- ವಾಯಿತು ಎಂದು ಅಭಿಪ್ರಾಯ ಲಕ್ಷಾಲಂಕಾರ.
ಬ್ರಾಹ್ಮಣಸ್ತ್ರಿಷು ಕಾಲೇಷು ಶಸ್ತ್ರಂ ಗೃಹ್ಣನ್ನ ದುಷ್ಯತಿ |
ಆತ್ಮತ್ರಾಣೇ ವರ್ಣದೋಷೇ ದುರ್ಗಸ್ಯ ನಿಯಮೇಷು ಚ ॥33॥
ತನ್ನನ್ನು ರಕ್ಷಿಸಿಕೊಳ್ಳಲು ಅಥವಾ ಬ್ರಾಹ್ಮಣರಿಗೆ ವಿಪತ್ತು ಒದಗಿದಾಗ ಅಥವಾ ದುರ್ಗದ ನಿಯಮಗಳಂತೆ (ಸರ್ವಸ್ವಹರಣಕಾಲದಲ್ಲಿ) ಈ ಮೂರು ಸಮಯ- ಗಳಲ್ಲಿ ಶಸ್ತ್ರವನ್ನು ಹಿಡಿಯುವ ಬ್ರಾಹ್ಮಣನು ದೋಷಕ್ಕೆ ಒಳಗಾಗುವುದಿಲ್ಲ.
ಯುಧಿಷ್ಠಿರಃ
ಅಭ್ಯುತ್ಥಿತೇ ದಸ್ಯುಬಲೇ ಕ್ಷತ್ರಾರ್ಥೇ ವರ್ಣಸಂಕರೇ |
ಸಂಪ್ರಮೂಢೇಷು ವರ್ಣೇಷು ಯದ್ಯನ್ಯೋಽಭಿಭವೇದ್ ಬಲೀ ॥34॥
ಬ್ರಾಹ್ಮಣೋ ಯದಿ ವಾ ವೈಶ್ಯಃ ಶೂದ್ರೋ ವಾ ರಾಜಸತ್ತಮ |
ದಸ್ಯುಭ್ಯೋಽಥ ಪ್ರಜಾ ರಕ್ಷೇದ್ ದಂಡಂ ಧರ್ಮೇಣ ಧಾರಯನ್ ॥35॥
ಕಾರ್ಯಂ ಕುರ್ಯಾನ್ನ ವಾ ಕುರ್ಯಾತ್ ಸಂವಾರ್ಯೋ ವಾ ಭವೇನ್ನ ವಾ |
ತಸ್ಮಾಚ್ಛಸ್ತ್ರಂ ಗ್ರಹೀತವ್ಯಮನ್ಯತ್ರ ಕ್ಷತ್ರಬಂಧುತಃ ॥36॥
ಯುಧಿಷ್ಠಿರ ಕ್ಷತ್ರಿಯರ ವಿರುದ್ಧವಾಗಿ ದಸ್ಯುಬಲವು ಉನ್ನದ್ಧವಾದಾಗ ವರ್ಣ -ಸಂಕರವುಂಟಾಗಿ ಎಲ್ಲ ವರ್ಣದವರೂ ದಿಗ್ಭ್ರಾಂತರಾದಾಗ ಬ್ರಾಹ್ಮಣನಾಗಲೀ, ವೈಶ್ಯನಾಗಲೀ ಅಥವಾ ಶೂದ್ರನಾಗಲೀ ಬಲಿಷ್ಠನಾದ ಇನ್ನೊಬ್ಬನು ದಂಡವನ್ನು ಧರ್ಮದಿಂದ ಪ್ರಯೋಗಿಸುತ್ತಾ ದಸ್ಯುಗಳಿಂದ ಪ್ರಜೆಗಳನ್ನು ರಕ್ಷಿಸಿದರೆ ಅವನು ಕ್ಷತ್ರಿಯನ ಬೇರೆ ಕಾರ್ಯವನ್ನು ಮಾಡಲಿ ಅಥವಾ ಬಿಡಲಿ ಅವನನ್ನು ತಡೆಯಬೇಕೇ ಬೇಡವೇ? ಅವನು ಕ್ಷತ್ರಿಯನಲ್ಲದಿದ್ದರೆ ಅವನಿಂದ ಶಸ್ತ್ರವನ್ನು ಕಸಿದುಕೊಳ್ಳಬೇಕೇ ಬೇಡವೇ?
ಭೀಷ್ಮಃ
ಅಪಾರೇ ಯೋ ಭವೇತ್ ಪಾರಮಪ್ಲವೇ ಯಃ ಪ್ಲವೋ ಭವೇತ್ |
ಶೂದ್ರೋ ವಾ ಯದಿ ವಾಪ್ಯನ್ಯಃ ಸರ್ವಥಾ ಮಾನಮರ್ಹತಿ ॥37॥
ಭೀಷ್ಮರು ಶೂದ್ರನಾಗಲೀ ಅಥವಾ ಇನ್ನೊಬ್ಬನಾಗಲೀ ದಡವಿಲ್ಲದ ಕಡೆಯಲ್ಲಿ ದಡವಾದರೆ, ನೌಕೆಯಿಲ್ಲದ ಸ್ಥಳದಲ್ಲಿ ನೌಕೆಯಾದರೆ ಅವನು ಸರ್ವಥಾ ಸಮ್ಮಾನಕ್ಕೆ ಅರ್ಹನಾಗುತ್ತಾನೆ.
ಯಮಾಶ್ರಿತ್ಯ ನರಾ ರಾಜನ್ ವರ್ತಯೇಯುರ್ಯಥಾಸುಖಮ್ |
ಅನಾಥಾಃ ಪಾಲ್ಯಮಾನಾ ವೈ ದಸ್ಯುಭಿಃ ಪರಿಪೀಡಿತಾಃ ॥38॥
ತಮೇವ ಪೂಜಯೇರಂಸ್ತೇ ಪ್ರೀತ್ಯಾ ಸ್ವಮಿವ ಬಾಂಧವಮ್ |
ಮಹದ್ ಹ್ಯಭೀಕ್ಷ್ಣಂ ಕೌರವ್ಯ ಕರ್ತಾ ಸನ್ಮಾನಮರ್ಹತಿ ॥39॥
ಎಲೈ ರಾಜನೇ! ಅನಾಥರಾದ ದಸ್ಯುಗಳಿಂದ ಪೀಡಿತರಾದ ಯಾವ ಜನರು ಯಾವನಿಂದ ಪಾಲಿಸಲ್ಪಟ್ಟು ಯಾವನನ್ನು ಆಶ್ರಯಿಸಿ ಸುಖದಿಂದ ಜೀವಿಸು- ತ್ತಾರೆಯೋ ಅವನನ್ನೇ ತಮ್ಮ ಬಂಧುವಿನಂತೆ ಪ್ರೀತಿಯಿಂದ ಪೂಜಿಸುತ್ತಾರೆ. ಎಲೈ ಕೌರವ್ಯನೇ! ಅಂತಹ ಕಾರ್ಯವನ್ನು ಮಾಡುವವನು ಸತತವಾಗಿ ದೊಡ್ಡ ಸನ್ಮಾನಕ್ಕೆ ಅರ್ಹನಾಗುತ್ತಾನೆ.
ಕಿಮುಕ್ಷ್ಣಾಽವಹತಾ ಕೃತ್ಯಂ ಕಿಂ ಧೇನ್ವಾ ಚಾಪ್ಯದುಗ್ಧಯಾ |
ವಂಧ್ಯಯಾ ಭಾರ್ಯಯಾ ಕೋಽರ್ಥಃ ಕೋಽರ್ಥೋ ರಾಜ್ಞಾಪ್ಯರಕ್ಷತಾ ॥
ಭಾರವನ್ನು ಹೊರದ ಎತ್ತಿನಿಂದಾಗಲೀ, ಹಾಲನ್ನು ಕೊಡದ ಹಸುವಿನಿಂದಾ- ಗಲೀ, ವಂಧ್ಯೆಯಾದ ಪತ್ನಿಯಿಂದಾಗಲೀ ಏನು ಪ್ರಯೋಜನ? ಹಾಗೆಯೇ ರಕ್ಷಿಸದಿರುವ ರಾಜನಿಂದಲಾದರೂ ಏನು ಪ್ರಯೋಜನ?
ಯಥಾ ದಾರುಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ |
ಯಥಾ ಹ್ಯನೇತ್ರಃ ಶಕಟಃ ಪಥಿ ಕ್ಷೇತ್ರಂ ಯಥೋಷರಮ್ ॥41॥
ಏವಂ ಬ್ರಹ್ಮಾನಧೀಯಾನಂ ರಾಜಾ ಯಶ್ಚ ನ ರಕ್ಷಿತಾ |
ನ ವರ್ಷತಿ ಚ ಯೋ ಮೇಘಃ ಸರ್ವ ಏತೇ ನಿರರ್ಥಕಾಃ ॥42॥
ಕಟ್ಟಿಗೆಯ ಆನೆಯಂತೆ, ಚರ್ಮಮಯವಾದ ಮೃಗದಂತೆ, ದಾರಿಯಲ್ಲಿರುವ ನಾಯಕನಿಲ್ಲದ ಶಕಟದಂತೆ, ಬಿತ್ತಿದುದು ಬೆಳೆಯದಿರುವ ಮರುಭೂಮಿಯಂತೆ, ವೇದಾಧ್ಯಯನವನ್ನು ಮಾಡದ ಬ್ರಾಹ್ಮಣನಂತೆ, ಮಳೆಯನ್ನು ಸುರಿಸದಿರುವ ಮೇಘದಂತೆ ರಕ್ಷಣೆಯನ್ನು ಮಾಡದಿರುವ ರಾಜನಿಂದ ಏನು ಪ್ರಯೋಜನ? ಇವರೆಲ್ಲರೂ ನಿರರ್ಥಕರಾದವರು.
ನಿತ್ಯಂ ಯಸ್ತು ಸತೋ ರಕ್ಷೇದಸತಶ್ಚ ನಿಬರ್ಹಯೇತ್ |
ಸ ಏವ ರಾಜಾ ಕರ್ತವ್ಯಸ್ತೇನ ಸರ್ವಮಿದಂ ಧೃತಮ್ ॥43॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ

ಶಾಂತಿಪರ್ವಣಿ ರಾಜಧರ್ಮೇ ಅಶೀತಿತಮೋಽಧ್ಯಾಯಃ ॥80॥
ಆದ್ದರಿಂದ ಯಾವನು ನಿತ್ಯವೂ ಅಸಜ್ಜನರನ್ನು ವಿನಾಶಗೊಳಿಸಿ ಸಜ್ಜನರನ್ನು ರಕ್ಷಿಸುತ್ತಾನೆಯೋ ಅವನನ್ನೇ ರಾಜನನ್ನಾಗಿ ಮಾಡಬೇಕು. ಅವನು ಈ ರಾಜ್ಯವೆಲ್ಲ- ವನ್ನೂ ಧರಿಸುತ್ತಾನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 80ನೆಯ ಅಧ್ಯಾಯವು ಮುಗಿಯಿತು.
0
81. ಎಂಬತ್ತೊಂದನೆಯ ಅಧ್ಯಾಯ
ಋತ್ವಿಗ್ಲಕ್ಷಣಾದಿ ಕಥನ
ಯುಧಿಷ್ಠಿರಃ
ಕ್ವಸಮುತ್ಥಾಃ ಕಥಂಶೀಲಾಃ ಋತ್ವಿಜಃ ಸ್ಯುಃ ಪಿತಾಮಹ |
ಕಥಂವಿಧಾಶ್ಚ ರಾಜೇಂದ್ರ ತದ್ ಬ್ರೂಹಿ ವದತಾಂವರ ॥1॥
ಯುಧಿಷ್ಠಿರ ಪಿತಾಮಹನೇ! ಋತ್ವಿಜರು ಹೇಗೆ ಉತ್ಪನ್ನರಾದರು? ಅವರ ಸ್ವಭಾವವು ಹೇಗಿರಬೇಕು? ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ರಾಜೇಂದ್ರನೇ! ಅವರ ರೀತಿಯು ಹೇಗಿರಬೇಕು ಎಂದು ನನಗೆ ಹೇಳು.
ಭೀಷ್ಮಃ
ಪ್ರತಿಕರ್ಮ ಪುರಾಚಾರ ಋತ್ವಿಜಾಂ ಸ್ಮ ವಿಧೀಯತೇ |
ಆದೌ ಛಂದಾಂಸಿ ವಿಜ್ಞಾಯ ದ್ವಿಜಾನಾಂ ಶ್ರುತಮೇವ ಚ ॥2॥
ಭೀಷ್ಮರು ಋತ್ವಿಜರು ಪ್ರತಿಕರ್ಮದಲ್ಲಿಯೂ ಹಿಂದಿನಿಂದ ಬಂದ ಆಚಾರ- ವನ್ನು ನಡೆಸಿಕೊಂಡು ಬರಬೇಕು. ಮೊದಲು ವೇದಾಧ್ಯಯನವನ್ನು ಮಾಡಿ ಬ್ರಾಹ್ಮಣರಿಂದ ಜ್ಞಾನವನ್ನು ಸಂಪಾದಿಸಬೇಕು.
ಯೇ ತ್ವೇಕರತಯೋ ನಿತ್ಯಂ ಧೀರಾ ನಾಪ್ರಿಯವಾದಿನಃ |
ಪರಸ್ಪರಸ್ಯ ಸುಹೃದಃ ಸಮ್ಮತಾಃ ಸಮದರ್ಶಿನಃ ॥3॥
ಯೇಷ್ವಾನೃಶಂಸ್ಯಂ ಸತ್ಯಂ ಚಾಪ್ಯಹಿಂಸಾ ತಪ ಆರ್ಜವಮ್ |
ಅದ್ರೋಹೋ ನಾಭಿಮಾನಶ್ಚ ಹ್ರೀಸ್ತಿತಿಕ್ಷಾ ದಮಃ ಶಮಃ ॥4॥
ಹ್ರೀಮಾನ್ ಸತ್ಯಧೃತಿರ್ದಾಂತೋ ಭೂತಾನಾಮವಿಹಿಂಸಕಃ |
ಅಕಾಮದ್ವೇಷಸಂಯುಕ್ತಸ್ತ್ರಿಭಿಃ ಶುಕ್ಲೈಃ ಸಮನ್ವಿತಃ ॥5॥
ಅಹಿಂಸಕೋ ಜ್ಞಾನತೃಪ್ತಃ ಸ ಬ್ರಹ್ಮಾಸನಮರ್ಹತಿ |
ಏತೇ ಮಹರ್ತ್ವಿಜಸ್ತಾತ ಸರ್ವೇ ಮಾನ್ಯಾ ಯಥಾತಥಮ್ ॥6॥
ಯಾರು ಒಂದೇ ರೀತಿಯ ಅಭಿರುಚಿಯುಳ್ಳವರಾಗಿರುತ್ತಾರೋ, ಯಾವಾ- ಗಲೂ ಧೀರರೋ, ಅಪ್ರಿಯವಾಗಿ ಮಾತನಾಡುವುದಿಲ್ಲವೋ, ಪರಸ್ಪರ ಸುಹೃದರೋ, ಪರಸ್ಪರವಾಗಿ ಸಮ್ಮತರೋ, ಸಮಾನವಾದ ದೃಷ್ಟಿಯುಳ್ಳವರೋ, ಯಾರಲ್ಲಿ ದಯೆ, ಸತ್ಯ, ಅಹಿಂಸಾ, ತಪಸ್ಸು, ಆರ್ಜವ, ಅದ್ರೋಹ, ಅನಹಂಕಾರ, ನಾಚಿಕೆ, ಸಹಿಷ್ಣುತೆ, ಶಮ, ದಮ, ಸತ್ಯವಾದ ಧೈರ್ಯ, ಭೂತದಯೆ, ಕಾಮದ್ವೇಷ ರಾಹಿತ್ಯ, ಮೂರು ವೇದಗಳ ಅಧ್ಯಯನ, ಜ್ಞಾನದಿಂದ ತೃಪ್ತಿ ಇರುತ್ತವೆಯೋ ಅಂತಹವರು ಬ್ರಹ್ಮಾಸನದಲ್ಲಿ ಕುಳಿತುಕೊಳ್ಳಲು ಅರ್ಹರಾಗುತ್ತಾರೆ. ಎಲೈ ಪ್ರೀತಿ- ಪಾತ್ರನೇ! ಮಹಾ ಋತ್ವಿಜರಾದ ಇವರೆಲ್ಲರೂ ಚೆನ್ನಾಗಿ ಮಾನ್ಯರಾದವರು.
ಯುಧಿಷ್ಠಿರಃ
ಯದಿದಂ ವೇದವಚನಂ ದಕ್ಷಿಣಾಸು ವಿಧೀಯತೇ |
ಇದಂ ದೇಯಮಿದಂ ದೇಯಂ ನ ಕ್ವಚಿದ್ ವ್ಯವತಿಷ್ಠತೇ ॥7॥
ಯುಧಿಷ್ಠಿರ ವೇದಗಳಲ್ಲಿ ಇದನ್ನು ಕೊಡಬೇಕು, ಇದನ್ನು ಕೊಡಬೇಕು ಎಂದೇನು ವಚನವಿದೆಯೋ ಅದು ಎಲ್ಲಿಯೂ ಪರ್ಯವಸಾನವನ್ನು ಹೊಂದು- ವುದಿಲ್ಲ.
ನೇದಂ ಪ್ರತಿಧನಂ ಶಾಸ್ತ್ರಮಾಪದ್ಧರ್ಮಾಶ್ಚ ಶಾಸ್ತ್ರತಃ |
ಆಜ್ಞಾ ಶಾಸ್ತ್ರಸ್ಯ ಘೋರೇಯಂ ನ ಶಕ್ತಿಂ ಸಮವೇಕ್ಷತೇ ॥8॥
ಯಜಮಾನನ ಬಳಿಯಿರುವ ಧನವನ್ನು ನೋಡಿ ದಕ್ಷಿಣಾಶಾಸ್ತ್ರವು ಪ್ರವೃತ್ತವಾ- ಗುವುದಿಲ್ಲ. ದಕ್ಷಿಣೆಯನ್ನು ಹೇಳಿದ ಕಡೆಯಲ್ಲಿ ಶಾಸ್ತ್ರದಲ್ಲಿ ಆಪದ್ಧರ್ಮಗಳನ್ನು ಹೇಳಿಲ್ಲ. ಶಾಸ್ತ್ರದ ಘೋರವಾದ ಈ ಆಜ್ಞೆಯು ಯಜಮಾನನ ಶಕ್ತಿಯನ್ನು ಗಮನಿಸುವುದಿಲ್ಲ.
ಶ್ರದ್ಧಾಮಾರಭ್ಯ ಯಷ್ಟವ್ಯಮಿತ್ಯೇಷಾ ವೈದಿಕೀ ಶ್ರುತಿಃ |
ಮಿಥ್ಯೋಪೇತಸ್ಯ ಯಜ್ಞಸ್ಯ ಕಿಮು ಶ್ರದ್ಧಾ ಕರಿಷ್ಯತಿ ॥9॥
ಶ್ರದ್ಧೆಯಿಂದ ಯಜ್ಞವನ್ನು ಮಾಡಬೇಕೆಂಬುದು ವೇದಾನುಶಾಸನ. ಇಷ್ಟು ದಕ್ಷಿಣೆಯನ್ನು ಕೊಡುತ್ತೇನೆಂದು ಸಂಕಲ್ಪಮಾಡಿ ಅದನ್ನು ಕೊಡಲಾರದೇ ಯಜ್ಞ- ವನ್ನು ಮುಗಿಸಿದರೆ ಆಗ ಶ್ರದ್ಧೆಯಿಂದ ಏನಾಗುತ್ತದೆ?
ಭೀಷ್ಮಃ
ನ ವೇದಾನಾಂ ಪರಿಭವಾನ್ನ ಶಾಠ್ಯೇನ ನ ಮಾಯಯಾ |
ಕಶ್ಚಿನ್ಮಹದವಾಪ್ನೋತಿ ಮಾ ತೇ ಭೂದ್ ಬುದ್ಧಿರೀದೃಶೀ ॥10॥
ಭೀಷ್ಮರು ವೇದಗಳನ್ನು ನಿಂದಿಸುವುದರಿಂದಲಾಗಲೀ, ಶಾಠ್ಯದಿಂದಾಗಲೀ, ಕಪಟದಿಂದಾಗಲೀ ಯಾರೂ ಯಾವ ದೊಡ್ಡದನ್ನೂ ಸಂಪಾದಿಸುವುದಿಲ್ಲ. ಆದ್ದ- ರಿಂದ ನಿನ್ನ ಬುದ್ಧಿಯು ಹೀಗಿರುವುದು ಬೇಡ.
ಯಜ್ಞಾಂಗಂ ದಕ್ಷಿಣಾಸ್ತಾತ ವೇದಾನಾಂ ಪರಿಬೃಂಹಣಮ್ |
ನ ಮಂತ್ರಾ ದಕ್ಷಿಣಾಹೀನಾಸ್ತಾರಯಂತಿ ಕಥಂಚನ ॥11॥

ಪ್ರೀತಿಪಾತ್ರನೇ! ದಕ್ಷಿಣೆಯು ಯಜ್ಞಾಂಗವಾದುದು. ಅದರಿಂದ ವೇದಗಳು ವಿಸ್ತಾರವನ್ನು ಹೊಂದುತ್ತವೆ. ದಕ್ಷಿಣಾರಹಿತವಾದ ಮಂತ್ರಗಳು ಯಾವ ರೀತಿ- ಯಿಂದಲೂ ಆಪತ್ತಿನಿಂದ ದಾಟಿಸುವುದಿಲ್ಲ.
ಶಕ್ತಿಸ್ತು ಪೂರ್ಣಪಾತ್ರೇಣ ಸಮ್ಮಿತಾ ನಾವಮಾ ಭವೇತ್ |
ಅವಶ್ಯಂ ತಾತ ಯಷ್ಟವ್ಯಂ ತ್ರಿಭಿರ್ವರ್ಣೈರ್ಯಥಾವಿಧಿ ॥12॥
ಪೂರ್ಣಪಾತ್ರರೂಪವಾದ ದಕ್ಷಿಣೆಯು ಶಕ್ತಿಯನ್ನು ನೋಡಿ ಹೇಳಲ್ಪಟ್ಟಿದೆ. ದಕ್ಷಿಣೆಯು ಅದಕ್ಕಿಂತಲೂ ಕಡಿಮೆಯಾಗಬಾರದು. ಪ್ರೀತಿಪಾತ್ರನೇ! ಮೂರು ವರ್ಣದವರೂ ವಿಧಿಗೆ ಅನುಸಾರವಾಗಿ ಅವಶ್ಯವಾಗಿ ಯಾಗವನ್ನು ಮಾಡಬೇಕು.
ಆಗ್ನೇಯಸ್ಥಾಲಿಪಾಕಪ್ರಕರಣದಲ್ಲಿ `ವೃಷಭವನ್ನು ದಾನ ಮಾಡಬೇಕು' ಅಥವಾ ಪೂರ್ಣಪಾತ್ರವನ್ನು ದಾನ ಮಾಡಬೇಕು' ಎಂದಿದೆ. ಪೂರ್ಣಪಾತ್ರವೆಂದರೆ 108, ಅಥವಾ 8 ಅಥವಾ 4 ಪೂರ್ಣಮುಷ್ಟಿಧಾನ್ಯಗಳಿಂದ ತುಂಬಿದ ಪಾತ್ರೆ. ವೃಷಭ- ವನ್ನು ದಾನ ಮಾಡಬೇಕು ಎಂದು ಹೇಳಿದ ಸ್ಥಳದಲ್ಲಿಯೇ ಯಜಮಾನನ ಅಶಕ್ತಿ- ಯನ್ನು ಗಮನಿಸಿ ಪೂರ್ಣಪಾತ್ರೆಯ ದಾನವನ್ನು ಹೇಳಿದೆ. ಅದರಿಂದ ವೇದವು ಯಜಮಾನನ ಶಕ್ತಿಯನ್ನು ಗಮನಿಸುವುದಿಲ್ಲ ಎಂದು ನೀನು ಹೇಳಿದುದು ಸರಿ- ಯಲ್ಲ. ಹಾಗೆ ಹೇಳಿ ವೇದಕ್ಕೆ ಅವಮಾನವನ್ನು ಮಾಡಬಾರದು ಎಂದು ಅಭಿಪ್ರಾಯ ಲಕ್ಷ್ಮಾಲಂಕಾರ.
ಸೋಮೋ ರಾಜಾ ಬ್ರಾಹ್ಮಣಾನಾಮಿತ್ಯೇಷಾ ವೈದಿಕೀ ಶ್ರುತಿಃ |
ತಂ ಚ ವಿಕ್ರೇತುಮಿಚ್ಛಂತಿ ನ ವೃಥಾವೃತ್ತಿರಿಷ್ಯತೇ |
ತೇನ ಕ್ರೀತೇನ ಧರ್ಮೇಣ ತತೋ ಯಜ್ಞಃ ಪ್ರವರ್ತತೇ ॥13॥
ಬ್ರಾಹ್ಮಣರಿಗೆ ಸೋಮಾಭಿಮಾನಿಯಾದ ಚಂದ್ರನು ರಾಜ ಎಂಬುದು ವೇದ- ವಚನ. ಯಾಗದಲ್ಲಿ ಆ ಸೋಮರಸವನ್ನು ಕೊಂಡುಕೊಳ್ಳಲು ಯೋಗ್ಯವಾದ ದ್ರವ್ಯವನ್ನು ಕೊಡದೇ ಮಿತ್ರಾದಿಗಳ ಮನೆಯಿಂದ ತಂದ ಸೋಮರಸದಲ್ಲಿ ಯಾಗವನ್ನು ಮಾಡಬಾರದು. ಧರ್ಮದಿಂದ ಕ್ರಯವನ್ನು ಕೊಟ್ಟು ತಂದ ಸೋಮ- ರಸದಿಂದಲೇ ಯಜ್ಞವನ್ನು ಮಾಡಬೇಕು.
ಇತ್ಯೇವಂ ಧರ್ಮತಃ ಖ್ಯಾತಮೃಷಿಭಿರ್ಧರ್ಮವಾದಿಭಿಃ |
ಪುಮಾನ್ ಯಜ್ಞಶ್ಚ ಸೋಮಶ್ಚ ನ್ಯಾಯವೃತ್ತೋ ಯಥಾ ಭವೇತ್ |
ಅನ್ಯಾಯವೃತ್ತಃ ಪುರುಷೋ ನ ಪರಸ್ಯ ನ ಚಾತ್ಮನಃ॥14॥
ಹೀಗೆ ಧರ್ಮವಾದಿಗಳಾದ ಋಷಿಗಳು ಧರ್ಮದ ದೃಷ್ಟಿಯಿಂದ ಹೇಳಿದ್ದಾರೆ. ಯಜಮಾನನೂ, ಯಜ್ಞವೂ, ಸೋಮವೂ ನ್ಯಾಯದಿಂದ ಕೂಡಿರಬೇಕು. ಅನ್ಯಾಯದಿಂದ ಕೂಡಿದ ಮನುಷ್ಯನು ತನಗಾಗಲೀ ಇನ್ನೊಬ್ಬನಿಗಾಗಲೀ ಯಾವ ಪ್ರಯೋಜನಕ್ಕೂ ಬಾರದವನು.
ಶರೀರಂ ಯಜ್ಞಪಾತ್ರಾಣಿ ಇತ್ಯೇಷಾ ಶ್ರೂಯತೇ ಶ್ರುತಿಃ |
ತಾನಿ ಸಮ್ಯಕ್ ಪ್ರಣೀತಾನಿ ಬ್ರಾಹ್ಮಣಾನಾಂ ಮಹಾತ್ಮನಾಮ್ ॥15॥
ಶರೀರವೇ ಯಜ್ಞಪಾತ್ರೆಯು ಎಂಬ ಶ್ರುತಿಯು ಕೇಳಿ ಬರುತ್ತದೆ. ಮಹಾತ್ಮರಾದ ಬ್ರಾಹ್ಮಣರು ಆ ಯಜ್ಞಪಾತ್ರೆಗಳನ್ನು ಸದಾಚಾರಸಂಪತ್ತಿನಿಂದ ಚೆನ್ನಾಗಿ ಇಟ್ಟುಕೊಂಡಿ -ರುತ್ತಾರೆ.
ಬೆನ್ನು ವೇದಿ, ರೋಮಗಳು ದರ್ಭೆಗಳು, ಜಿಹ್ವೆಯು ಸ್ರುಕ್ ಸ್ರುವಗಳು, ಎಂಬ ವೇದವಚನದಿಂದ ಶರೀರವೇ ಯಜ್ಞಪಾತ್ರೆ ಎಂದು ಹೇಳಲಾಗಿದೆ. - ಲಕ್ಷ್ಮಾಲಂಕಾರ.
ತಪೋ ಯಜ್ಞಾದಪಿ ಶ್ರೇಷ್ಠಮಿತ್ಯೇಷಾ ಪರಮಾ ಶ್ರುತಿಃ |
ತತ್ ತೇ ತಪಃ ಪ್ರವಕ್ಷ್ಯಾಮಿ ವಿದ್ವಂಸ್ತದಪಿ ಮೇ ಶೃಣು ॥16॥
ತಪಸ್ಸು ಯಜ್ಞಕ್ಕಿಂತಲೂ ಶ್ರೇಷ್ಠವಾದುದು ಎಂದೂ ಶ್ರೇಷ್ಠವಾದ ಶ್ರುತಿಯಿದೆ. ಎಲೈ ವಿದ್ವಾಂಸನೇ! ಅಂತಹ ತಪಸ್ಸನ್ನು ಹೇಳುವೆನು. ಅದನ್ನು ನನ್ನಿಂದ ಕೇಳು.
ಅಹಿಂಸಾ ಸತ್ಯವಚನಮಾನೃಶಂಸ್ಯಂ ದಮೋ ಘೃಣಾ |
ಏತತ್ ತಪೋ ವಿದುರ್ಧೀರಾ ನ ಶರೀರಸ್ಯ ಶೋಷಣಮ್ ॥17॥
ಅಹಿಂಸೆ, ಸತ್ಯವಚನ, ಅಸ್ತೇಯ, ದಯಾ, ದಮ, ಅಕ್ರೌರ್ಯ ಇವುಗಳನ್ನು ಧೀರರು ತಪಸ್ಸೆಂದು ತಿಳಿಯುತ್ತಾರೆ. ಶರೀರಶೋಷಣೆಯನ್ನು ಮಾಡುವುದು ತಪಸ್ಸಲ್ಲ.
ಅಪ್ರಾಮಾಣ್ಯಂ ಚ ವೇದಾನಾಂ ಶಾಸ್ತ್ರಾಣಾಂ ಚಾತಿಲಂಘನಮ್ |
ಅವ್ಯವಸ್ಥಾ ಚ ಸರ್ವತ್ರ ತದ್ ವೈ ನಾಶನಮಾತ್ಮನಃ ॥18॥
ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು, ಶಾಸ್ತ್ರಗಳನ್ನು ಮೀರುವುದು, ಎಲ್ಲ ಕಾರ್ಯಗಳನ್ನು ಅವ್ಯವಸ್ಥೆಯಿಂದ ಮಾಡುವುದು ಇವೇ ಆ ವ್ಯಕ್ತಿಯ ನಾಶಕ್ಕೆ ಕಾರಣಗಳಾಗುತ್ತವೆ.
ನಿಬೋಧ ದಶಹೋತೄಣಾಂ ವಿಧಾನಂ ಪಾರ್ಥ ಯಾದೃಶಮ್ |
ಚಿತ್ತಂ ಸ್ರುಕ್ ಚಿತ್ತಮಾಜ್ಯಂ ಚ ಪವಿತ್ರಂ ಜ್ಞಾನಮುತ್ತಮಮ್ ॥19॥
ಎಲೈ ಪಾರ್ಥನೇ! ಹತ್ತು ಹೋತೃಗಳನ್ನು ವೇದವು ಯಾವ ರೀತಿಯಲ್ಲಿ ವಿಧಾನ ಮಾಡಿದೆ ಎಂಬುದನ್ನು ತಿಳಿಯುವವನಾಗು. ಚಿತ್ತ, ಸ್ರುಕ್, ಚಿತ್ತ, ಆಜ್ಯ, ಪವಿತ್ರ, ಜ್ಞಾನ, ಶೂದ್ರಾದಿ ಸ್ಪರ್ಶಾಭಾವ, ಕುಟಿಲತೆಯ ಅಭಾವ, ದೇಶ ಮತ್ತು ಕಾಲಗಳು ಆ ಹತ್ತು ಹೋತ್ರಗಳು.
ಸರ್ವಂ ಜಿಹ್ಮಂ ಮೃತ್ಯುಪದಮಾರ್ಜವಂ ಬ್ರಹ್ಮಣಃ ಪದಮ್ |
ಏತಾವಾನ್ ಜ್ಞಾನವಿಷಯಃ ಕಿಂ ಪ್ರಲಾಪಃ ಕರಿಷ್ಯತಿ ॥20॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಾಶೀತಿತಮೋಽಧ್ಯಾಯಃ ॥81॥
ಕಪಟದಿಂದ ಕೂಡಿದುದೆಲ್ಲವೂ ಮೃತ್ಯುಪದವಾಚ್ಯವಾದುದು. ಆರ್ಜವವು ಬ್ರಹ್ಮಪದದಿಂದ ವಾಚ್ಯವಾದುದು. ಇದೇ ಜ್ಞಾನದ ಸಾರ. ಹೆಚ್ಚು ಮಾತನಾಡಿ ಏನು ಪ್ರಯೋಜನ?

ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 81ನೆಯ ಅಧ್ಯಾಯವು ಮುಗಿಯಿತು.
0
82. ಎಂಬತ್ತೆರಡನೆಯ ಅಧ್ಯಾಯ
ಅಮಾತ್ಯ ಮತ್ತು ಜ್ಞಾತಿಗಳ ಸ್ವರೂಪಕಥನ
ಯುಧಿಷ್ಠಿರಃ
ಯದಪ್ಯಲ್ಪತರಂ ಕರ್ಮ ತದಪ್ಯೇಕೇನ ದುಷ್ಕರಮ್ |
ಪುರುಷೇಣಾಸಹಾಯೇನ ಕಿಮು ರಾಜ್ಯಂ ಪಿತಾಮಹ ॥1॥
ಕಿಂಶೀಲಃ ಕಿಂಸಮಾಚಾರಃ ರಾಜ್ಞೋಽರ್ಥಸಚಿವೋ ಭವೇತ್ |
ಕೀದೃಶೇ ವಿಶ್ವಸೇದ್ ರಾಜಾ ಕೀದೃಶೇ ನಾಪಿ ವಿಶ್ವಸೇತ್ ॥2॥
ಯುಧಿಷ್ಠಿರ ಪಿತಾಮಹನೇ! ಒಂದು ಸಣ್ಣಕಾರ್ಯವನ್ನೂ ಸಹ ಸಹಾಯ- ವಿಲ್ಲದೇ ಒಬ್ಬನೇ ಮಾಡಲು ಸಾಧ್ಯವಾಗುವುದಿಲ್ಲ. ಇನ್ನು ರಾಜ್ಯವನ್ನು ಸಹಾಯ- ವಿಲ್ಲದೇ ಪಾಲಿಸುವುದು ಹೇಗೆ? ಆದ್ದರಿಂದ ರಾಜನ ಅರ್ಥಸಚಿವನಾದವನು ಎಂತಹ ಸ್ವಭಾವವನ್ನು ಹೊಂದಿರಬೇಕು? ಎಂತಹ ಆಚಾರವನ್ನು ಹೊಂದಿರ- ಬೇಕು? ರಾಜನು ಯಾರಲ್ಲಿ ವಿಶ್ವಾಸವನ್ನು ಮಾಡಬೇಕು, ಯಾರಲ್ಲಿ ವಿಶ್ವಾಸವನ್ನು ಮಾಡಬಾರದು?
ಭೀಷ್ಮ
ಚತುರ್ವಿಧಾನಿ ಮಿತ್ರಾಣಿ ರಾಜ್ಞಾಂ ರಾಜನ್ ಭವಂತ್ಯುತ |
ಸಹಾರ್ಥೋ ಭಜಮಾನಶ್ಚ ಸಹಜಃ ಕೃತ್ರಿಮಸ್ತಥಾ ॥3॥
ಭೀಷ್ಮರು ರಾಜನೇ ರಾಜನಿಗೆ ಸಹಾರ್ಥ, ಭಜಮಾನ, ಸಹಜ, ಮತ್ತು ಕೃತ್ರಿಮ ಎಂದು ನಾಲ್ಕುವಿಧವಾದ ಮಿತ್ರರಿರುತ್ತಾರೆ. ಸಹಾರ್ಥ ಎಂದರೆ ಒಂದೇ ಗ್ರಾಮಕ್ಕೆ ನಡೆದುಕೊಂಡು ಹೋಗುವ ಇಬ್ಬರಿಗೆ ಉಂಟಾಗುವ ಮೈತ್ರಿ. ಭಜಮಾನ ಎಂದರೆ ತನ್ನ ಪ್ರಯೋಜನಕ್ಕಾಗಿ ರಾಜನನ್ನು ಸೇವಿಸುವವನು. ರಾಜನ ಶರೀರಸಂಬಂಧಿಯಾದವನು ಸಹಜ. ಸಂಬಳಕ್ಕೆ ಇಟ್ಟು- ಕೊಂಡವನು ಕೃತ್ರಿಮ ಲಕ್ಷಾಲಂಕಾರ.
ಧರ್ಮಾತ್ಮಾ ಪಂಚಮಂ ಮಿತ್ರಂ ಸ ತು ನೈಕಸ್ಯ ನ ದ್ವಯೋಃ |
ಯತೋ ಧರ್ಮಸ್ತತೋ ವಾ ಸ್ಯಾದ್ ಧರ್ಮಸ್ಥೋ ವಾ ತತೋ ಭವೇತ್ ॥
ಧರ್ಮಾತ್ಮನಾದವನು ಐದನೆಯ ಮಿತ್ರ. ಅವನು ಒಬ್ಬನಿಗೆ ಅಥವಾ ಇಬ್ಬರಿಗೆ ಮಿತ್ರನಲ್ಲ. ಎಲ್ಲರಿಗೂ ಮಿತ್ರನಾದವನು. ಎಲ್ಲಿ ಧರ್ಮವಿದೆಯೋ ಅವನನ್ನು ರಾಜನು ಮಿತ್ರನನ್ನಾಗಿ ಮಾಡಿಕೊಳ್ಳಬೇಕು. ಆ ಧರ್ಮಾತ್ಮನ ಸಂಬಂಧದಿಂದ ಇನ್ನೊಬ್ಬನೂ ಧರ್ಮಸ್ಥನಾದಾನು!
ಯಸ್ತಸ್ಯಾರ್ಥೋ ನ ರೋಚೇತ ನ ತಂ ತಸ್ಯ ಪ್ರಕಾಶಯೇತ್ |
ಮಿತ್ರಾಣಾಂ ಪ್ರಕೃತಿರ್ನಾಸ್ತಿ ತ್ವಮಿತ್ರಾಣಾಂ ಚ ಭಾರತ |
ಉಪಕಾರಾದ್ ಭವೇನ್ಮಿತ್ರಮಪಕಾರಾದ್ ಭವೇದರಿಃ ॥5॥
ಯಾರಿಗೆ ತನ್ನ ಅಭಿಪ್ರಾಯವು ಹಿಡಿಸುವುದಿಲ್ಲವೋ ಅವರಿಗೆ ಅದನ್ನು ಹೇಳ- ಬಾರದು. ಎಲೈ ಭಾರತನೇ! ಮಿತ್ರನಿಗಾಗಲೀ, ಶತ್ರುಗಳಿಗಾಗಲೀ, ಒಂದು ಸ್ವಭಾವ- ವೆಂಬುದು ಇಲ್ಲ. ಉಪಕಾರದಿಂದ ಮಿತ್ರರಾಗುತ್ತಾರೆ. ಅಪಕಾರದಿಂದ ಶತ್ರುಗಳಾ- ಗುತ್ತಾರೆ.
ಯಸ್ಯೈವ ಹಿ ಮನುಷ್ಯಸ್ಯ ನರೋ ಮರಣಮಿಚ್ಛತಿ |
ತಸ್ಯ ಪರ್ಯಾಗತೇ ಕಾಲೇ ಪುನರ್ಜೀವಿತಮಿಚ್ಛತಿ |
ಧರ್ಮಾಧರ್ಮೇಣ ರಾಜಾನಶ್ಚರಂತಿ ವಿಜಿಗೀಷವಃ ॥6॥
ಯಾವ ಮನುಷ್ಯನಿಗೆ ಒಬ್ಬನು ಮರಣವನ್ನು ಬಯಸುತ್ತಾನೆಯೋ ಅದೇ ಮನುಷ್ಯನು ಕಾಲಕ್ರಮದಲ್ಲಿ ಪುನಃ ಅದೇ ವ್ಯಕ್ತಿಯ ಜೀವನವನ್ನು ಬಯಸುತ್ತಾನೆ. ಧರ್ಮರಕ್ಷಣೆಯ ಅಧರ್ಮಶಿಕ್ಷಣೆಯ ನಿಮಿತ್ತದಿಂದಾಗಿ ಜಯವನ್ನು ಹೊಂದಲು ಬಯಸುವ ರಾಜರು ಪ್ರವೃತ್ತಿಯನ್ನು ಮಾಡುತ್ತಾರೆ.
ಚತುರ್ಣಾಂ ಮಧ್ಯಮೌ ಶ್ರೇಷ್ಠೌ ನಿತ್ಯಂ ಶಂಕ್ಯೌ ತಥಾಪರೌ |
ಸರ್ವೈರ್ನಿತ್ಯಂ ಶಂಕಿತವ್ಯಂ ಪ್ರತ್ಯಕ್ಷಂ ಕಾರ್ಯಮಾತ್ಮನಃ ॥7॥
ನಾಲ್ಕು ಜನ ಮಿತ್ರರ ಮಧ್ಯೆ ಮಧ್ಯದ ಇಬ್ಬರು ಶ್ರೇಷ್ಠರಾದವರು. ಉಳಿದ ಇಬ್ಬರನ್ನು ಯಾವಾಗಲೂ ಶಂಕಿಸಬೇಕು. ಯಾವ ಕಾರ್ಯವು ತನಗೆ ಮಾತ್ರ ಸಾಕ್ಷಿಸಿದ್ಧವಾಗಿದೆಯೋ ಅದನ್ನು ಎಲ್ಲರನ್ನೂ ಶಂಕಿಸಿ ಯಾರಿಗೂ ಹೇಳಬಾರದು. (ಲಕ್ಷಾಲಂಕಾರ)
ನಹಿ ರಾಜ್ಞಾ ಪ್ರಮಾದೋ ವೈ ಕರ್ತವ್ಯೋ ಮಿತ್ರರಕ್ಷಣೇ |
ಪ್ರಮಾದಿನಂ ಹಿ ರಾಜಾನಂ ಲೋಕಾಃ ಪರಿಭವಂತ್ಯುತ ॥8॥
ರಾಜನು ಮಿತ್ರರಕ್ಷಣೆಯ ವಿಷಯದಲ್ಲಿ ಪ್ರಮಾದವನ್ನು ಮಾಡಬಾರದು. ಪ್ರಮಾದಶೀಲನಾದ ರಾಜನನ್ನು ಪ್ರಜೆಗಳು ಅವಮಾನಗೊಳಿಸುತ್ತಾರೆ.
ಅಸಾಧುಃ ಸಾಧುತಾಮೇತಿ ಸಾಧುರ್ಭವತಿ ದಾರುಣಃ |
ಅರಿಶ್ಚ ಮಿತ್ರಂ ಭವತಿ ಮಿತ್ರಂ ಚಾಪಿ ಪ್ರದುಷ್ಯತಿ ॥9॥
ಅನಿತ್ಯಚಿತ್ತಃ ಪುರುಷಸ್ತಸ್ಮಿನ್ ಕೋ ಜಾತು ವಿಶ್ವಸೇತ್ |
ತಸ್ಮಾತ್ ಪ್ರಧಾನಂ ಯತ್ ಕಾರ್ಯಂ ಪ್ರತ್ಯಕ್ಷಂ ತತ್ ಸಮಾಚರೇತ್ ॥10॥
ಅಸಾಧುವು ಸಾಧುವಾಗುತ್ತಾನೆ. ಸಾಧುವು ಕ್ರೂರನಾಗುತ್ತಾನೆ. ಶತ್ರುವು ಮಿತ್ರ- ನಾಗುತ್ತಾನೆ. ಮಿತ್ರನು ದುಷ್ಟನಾಗುತ್ತಾನೆ. ಪುರುಷನ ಮನಸ್ಸು ಚಂಚಲವಾದುದು. ಅವನಲ್ಲಿ ಯಾರು ವಿಶ್ವಾಸಮಾಡಿಯಾರು? ಆದ್ದರಿಂದ ದಂಡಯಾತ್ರೆಯೇ ಮೊದ- ಲಾದ ಪ್ರಧಾನ

ಕಾರ್ಯಗಳನ್ನು ಪ್ರತ್ಯಕ್ಷವಾಗಿಯೇ ಮಾಡಬೇಕು. (ಲಕ್ಷ್ಮಾಲಂಕಾರ)
ಏಕಾಂತೇನ ಹಿ ವಿಶ್ವಾಸಃ ಕೃತ್ಸ್ನೋ ಧರ್ಮಾರ್ಥನಾಶಕಃ |
ಅವಿಶ್ವಾಸಶ್ಚ ಸರ್ವತ್ರ ಮೃತ್ಯುನಾ ನ ವಿಶಿಷ್ಯತೇ ॥11॥
ಒಂದು ವ್ಯಕ್ತಿಯಲ್ಲಿ ಯಾವಾಗಲೂ ವಿಶ್ವಾಸವನ್ನು ಮಾಡುವುದು ಧರ್ಮಾ- ರ್ಥಗಳನ್ನು ಸಮಗ್ರವಾಗಿ ನಾಶಮಾಡುವಂತಹದು. ಯಾವಾಗಲೂ ಅವಿಶ್ವಾಸವನ್ನು ಮಾಡುವುದು ಮೃತ್ಯುವಿಗಿಂತ ಬೇರೆಯಲ್ಲ.
ಅಕಾಲಮೃತ್ಯುರ್ವಿಶ್ವಾಸೋ ವಿಶ್ವಸನ್ ಹಿ ವಿಪದ್ಯತೇ |
ಯಸ್ಮಿನ್ ಕರೋತಿ ವಿಶ್ವಾಸಮಿಚ್ಛಾತಸ್ತಸ್ಯ ಜೀವತಿ ॥12॥
ವಿಶ್ವಾಸವೆಂಬುದು ಅಕಾಲಮೃತ್ಯುಪ್ರದವಾದುದು. ವಿಶ್ವಾಸವನ್ನು ಮಾಡುವ- ವನು ವಿಪತ್ತಿಗೆ ಒಳಗಾಗುತ್ತಾನಷ್ಟೇ! ಯಾವನಲ್ಲಿ ವಿಶ್ವಾಸ ಮಾಡುತ್ತಾನೆಯೋ ಅವನ ಇಚ್ಛೆಯಿಂದ ರಾಜನು (ಇನ್ನೊಬ್ಬನು) ಜೀವಿಸುತ್ತಾನೆ.
ತಸ್ಮಾದ್ ವಿಶ್ವಸಿತವ್ಯಂ ಚ ಶಂಕಿತವ್ಯಂ ಚ ಕೇಷುಚಿತ್ |
ಏಷಾ ನೀತಿಗತಿಸ್ತಾತ ಲಕ್ಷ್ಮೀಶ್ಚೈವ ಸನಾತನೀ ॥13॥
ಆದ್ದರಿಂದ ಕೆಲವರಲ್ಲಿ ವಿಶ್ವಾಸ ಮಾಡಬೇಕು. ಕೆಲವರಲ್ಲಿ ವಿಶ್ವಾಸವನ್ನು ಮಾಡದೇ ಅವರನ್ನು ಶಂಕಿಸಬೇಕು. ಪ್ರೀತಿಪಾತ್ರನೇ! ಇದು ನೀತಿಯ ಮಾರ್ಗ. ಸನಾತನವಾದ ಸಂಪತ್ತಿಗೆ ಕಾರಣವಾದುದು.
ಯಂ ಮನ್ಯೇತ ಮಮಾಭಾವಾದಿಮಮರ್ಥಾಗಮಃ ಸ್ಪೃಶೇತ್ |
ನಿತ್ಯಂ ತಸ್ಮಾಚ್ಛಂಕಿತವ್ಯಮಮಿತ್ರಂ ತಂ ವಿದುರ್ಬುಧಾಃ ॥14॥
ನಾನಿಲ್ಲದಿದ್ದರೆ ನನ್ನ ಎಲ್ಲ ಸಂಪತ್ತೂ ಇವನಲ್ಲಿ ಸೇರುತ್ತದೆ ಎಂದು ಯಾವನನ್ನು ತಿಳಿಯುತ್ತಾನೆಯೋ ಅವನನ್ನು ಯಾವಾಗಲೂ ಶಂಕಿಸಬೇಕು. ವಿವೇಕಿಗಳು ಅಂತಹ- ವನನ್ನು ಶತ್ರುವೆಂದು ಹೇಳುತ್ತಾರೆ.
ಯಸ್ಯ ಕ್ಷೇತ್ರಾದಪ್ಯುದಕಂ ಕ್ಷೇತ್ರಮನ್ಯಸ್ಯ ಗಚ್ಛತಿ |
ನ ತತ್ರಾನಿಚ್ಛತಸ್ತಸ್ಯ ಭಿದ್ಯೇರನ್ ಸರ್ವಸೇತವಃ ॥15॥
ತಥೈವಾತ್ಯುದಕಾದ್ ಭೀತಸ್ತಸ್ಯ ಭೇದನಮಿಚ್ಛತಿ |
ಯಮೇವಂಲಕ್ಷಣಂ ವಿದ್ಯಾತ್ ತಮಮಿತ್ರಂ ವಿದುರ್ಬುಧಾಃ ॥16॥
ಯಃ ಸಮೃದ್ಧ್ಯಾ ನ ತುಷ್ಯೇತ ಕ್ಷಯೇ ದೀನತರೋ ಭವೇತ್ |
ಏತದುತ್ತಮಮಿತ್ರಸ್ಯ ನಿಮಿತ್ತಮಭಿಚಕ್ಷತೇ ॥17॥
ಯಾವನ ಭೂಮಿಯಿಂದ ಇನ್ನೊಬ್ಬನ ಭೂಮಿಗೆ ನೀರು ಹರಿಯುತ್ತದೆಯೋ ಅಲ್ಲಿಯೂ ಸಹ ಮೇಲಿನ ಭೂಮಿಯವನು ಇಷ್ಟಪಡದಿದ್ದರೆ ಕಟ್ಟೆಗಳನ್ನು ಒಡೆದು ಕೆಳಗಿನ ಭೂಮಿಯವನಿಗೆ ನೀರು ಹರಿಯುವುದಿಲ್ಲ. ಮೊದಲನೆಯವನ ಕ್ಷೇತ್ರದಲ್ಲಿ ಬಹಳ ಜಲಪ್ರವಾಹ ಉಂಟಾದರೆ ತನ್ನ ಕ್ಷೇತ್ರದ ನಾಶದ ಭಯದಿಂದ ಅವನು ಕಟ್ಟೆಗಳನ್ನು ಒಡೆದು ಇನ್ನೊಬ್ಬನ ಕ್ಷೇತ್ರಕ್ಕೆ ಅದೂ ಹಾಳಾಗಲಿ ಎಂಬ ಅಭಿಪ್ರಾಯ- ದಿಂದ ನೀರನ್ನು ಬಿಡುತ್ತಾನೆ. ಅಂತಹ ಸ್ವಭಾವವುಳ್ಳವನನ್ನು ವಿವೇಕಿಗಳು ಶತ್ರುವೆಂದು ತಿಳಿಯುತ್ತಾರೆ. ಯಾವನು ಇನ್ನೊಬ್ಬನ ಸಮೃದ್ಧಿಯಿಂದ ತೃಪ್ತನಾಗುವುದಿಲ್ಲವೋ ಕ್ಷಯವುಂಟಾದರೆ ಬಹಳ ದೀನನಾಗುತ್ತಾನೆಯೋ ಅದು ಉತ್ತಮಮಿತ್ರನ ಲಕ್ಷಣ- ವೆಂದು ಹೇಳಲ್ಪಡುತ್ತದೆ.
ಯಂ ಮನ್ಯೇತ ಮಮಾಭಾವಾದಸ್ಯಾಭಾವೋ ಭವೇದಿತಿ |
ತಸ್ಮಿನ್ ಕುರ್ವೀತ ವಿಶ್ವಾಸಂ ಯಥಾ ಪಿತರಿ ವೈ ತಥಾ ॥18॥
ಯಾವನ ವಿಷಯದಲ್ಲಿ ನಾನು ಇಲ್ಲದಿದ್ದರೆ ಇವನೂ ಇರುವುದಿಲ್ಲ ಎಂದು ತಿಳಿಯುತ್ತಾನೆಯೋ ಅಂತಹ ವ್ಯಕ್ತಿಯಲ್ಲಿ ಪುತ್ರನು ತಂದೆಯಲ್ಲಿ ವಿಶ್ವಾಸ ಮಾಡಿ- ದಂತೆ ವಿಶ್ವಾಸವನ್ನು ಮಾಡಬೇಕು.
ತಂ ಶಕ್ತ್ಯಾ ವರ್ಧಮಾನಶ್ಚ ಸರ್ವತಃ ಪರಿಬೃಂಹಯೇತ್ |
ನಿತ್ಯಂ ಕ್ಷತಾದ್ ವಾರಯತಿ ಯೋ ಧರ್ಮೇಷ್ವಪಿ ಕರ್ಮಸು ॥19॥
ಯಾವನು ನಿತ್ಯವೂ ತನ್ನನ್ನು ವ್ರಣಗಳಿಂದ (ನಷ್ಟಗಳಿಂದ) ವಾರಣೆ ಮಾಡು- ತ್ತಾನೆಯೋ ಧರ್ಮಕಾರ್ಯಗಳಲ್ಲೂ ಸಹಾಯವಾಗಿರುತ್ತಾನೆಯೋ ಅಂತಹವನನ್ನು ತಾನು ಶಕ್ತಿಯಿಂದ ಬೆಳೆದಂತೆ ಸರ್ವಪ್ರಕಾರದಿಂದ ಬೆಳೆಸಬೇಕು.
ಕ್ಷತಾದ್ ಭೀತಂ ವಿಜಾನೀಯಾದುತ್ತಮಂ ಮಿತ್ರಲಕ್ಷಣಮ್ |
ಯೇ ತಸ್ಯ ಕ್ಷತಮಿಚ್ಛಂತಿ ತೇ ತಸ್ಯ ರಿಪವಃ ಸ್ಮೃತಾಃ ॥20॥
ಯಾವನು ಮಿತ್ರನ ಕೇಡಿಗೆ ಹೆದರುತ್ತಾನೆಯೋ ಅವನೇ ಉತ್ತಮನಾದ ಮಿತ್ರ. ಯಾರು ಅವನಿಗೆ ಕೇಡನ್ನು ಬಯಸುತ್ತಾರೆಯೋ ಅವರು ಶತ್ರುಗಳೆಂದು ಹೇಳಲ್ಪಡುತ್ತಾರೆ.
ವ್ಯಸನಾನ್ನಿತ್ಯಭೀತೋಽಸೌ ಸಮೃದ್ಧ್ಯಾಮೇವ ತೃಪ್ಯತೇ |
ಯತ್ ಸ್ಯಾದೇವಂವಿಧಂ ಮಿತ್ರಂ ತದಾತ್ಮಸಮಮುಚ್ಯತೇ ॥21॥
ಯಾವನು ಇನ್ನೊಬ್ಬನಿಗೆ ಉಂಟಾಗಬಹುದಾದ ವ್ಯಸನದಿಂದ ನಿತ್ಯವೂ ಹೆದರಿ ಸಮೃದ್ಧಿಯಲ್ಲಿ ಮಾತ್ರ ತೃಪ್ತಿಪಡುತ್ತಾನೆಯೋ ಅಂತಹವನನ್ನು ಆತ್ಮಸಮನಾದ ಮಿತ್ರ ಎಂದು ಕರೆಯುತ್ತಾರೆ.
ರೂಪವರ್ಣಸ್ವರೋಪೇತಸ್ತಿತಿಕ್ಷುರನಸೂಯಕಃ |
ಕುಲೀನಃ ಶೀಲಸಂಪನ್ನಃ ಸ ತೇ ಸ್ಯಾತ್ ಪ್ರತ್ಯನಂತರಃ ॥22॥
(ಇನ್ನು ಅಮಾತ್ಯರ ಸ್ವರೂಪವು ಹೇಳಲ್ಪಡುತ್ತದೆ) ಎಲೈ ಯುಧಿಷ್ಠಿರನೇ! ಯಾವನು ರೂಪವರ್ಣಸ್ವರದಿಂದ ಕೂಡಿದವನಾಗಿ, ಕಷ್ಟಸಹಿಷ್ಣುವಾಗಿ, ಅಸೂಯಾರಹಿತನಾಗಿ, ಒಳ್ಳೆಯ ಕುಲದಲ್ಲಿ ಜನಿಸಿ ಶೀಲಸಂಪನ್ನನಾಗಿರುತ್ತಾನೆಯೋ ಅವನು ನಿನ್ನ ಅಮಾತ್ಯನಾಗಲಿ.

ಮೇಧಾವೀ ಸ್ಮೃತಿಮಾನ್ ದಕ್ಷಃ ಪ್ರಕೃತ್ಯಾ ಚಾನೃಶಂಸವಾನ್ |
ಯೋ ಮಾನಿತೋಽಮಾನಿತೋ ವಾ ನ ಸಂದೂಷ್ಯೇತ್ ಕದಾಚನ ॥23॥
ಮೇಧಾವಿಯೂ, ಸ್ಮೃತಿವಂತನೂ, ದಕ್ಷನೂ, ಸ್ವಭಾವದಿಂದಲೇ ದಯಾ- ಪರನೂ, ಸನ್ಮಾನವನ್ನು ಮಾಡಿದರೂ ಅಥವಾ ಅವಮಾನವನ್ನು ಮಾಡಿದರೂ ಎಂದೂ ದೂಷಿಸದಿದ್ದವನು ನಿನ್ನ ಅಮಾತ್ಯನಾಗಲಿ.
ಋತ್ವಿಗ್ ವಾ ಯದಿ ವಾಚಾರ್ಯಃ ಸಖಾ ವಾತ್ಯಂತಸಂಸ್ತುತಃ |
ಗೃಹೇ ವಸೇದಮಾತ್ಯಸ್ತೇ ಯಃ ಸ್ಯಾತ್ ಪರಮಪೂಜಿತಃ ॥24॥
ಋತ್ವಿಜನಾಗಲೀ ಅಥವಾ ಆಚಾರ್ಯನಾಗಲೀ ಅಥವಾ ಅತ್ಯಂತಸಂಬದ್ಧನಾದ ಮಿತ್ರನಾಗಲೀ ಅಥವಾ ಪರಮಪೂಜಿತನಾದ ಅಮಾತ್ಯನಾಗಲೀ ಅವನು ನಿನ್ನ ಮನೆಯಲ್ಲಿ ವಾಸಿಸಲಿ.
ಸ ತೇ ವಿದ್ಯಾತ್ ಪರಂ ಮಂತ್ರಂ ಪ್ರಕೃತಿಂ ಚಾರ್ಥಧರ್ಮಯೋಃ |
ವಿಶ್ವಾಸಸ್ತೇ ಭವೇತ್ ತತ್ರ ಯಥಾ ಪಿತರಿ ವೈ ತಥಾ ॥25॥
ಅವರು ಅರ್ಥ ಮತ್ತು ಧರ್ಮಗಳ ವಿಷಯದಲ್ಲಿ ನಿನ್ನ ಮಂತ್ರಾಲೋಚನೆ- ಯನ್ನು ಮತ್ತು ಸ್ವಭಾವವನ್ನು ತಿಳಿಯಬೇಕು. ಅವರಲ್ಲಿ ನೀನು ತಂದೆಯಲ್ಲಿ ಮಾಡಿದಂತೆ ವಿಶ್ವಾಸವನ್ನು ಮಾಡಬೇಕು.
ನೈವ ದ್ವೌ ನ ತ್ರಯಃ ಕಾರ್ಯಾ ನ ಮೃಷ್ಯೇರನ್ ಪರಸ್ಪರಮ್ |
ಏಕಾರ್ಥಾದಿಹ ಭೂತಾನಾಂ ಭೇದೋ ಭವತಿ ಸರ್ವಥಾ ॥26॥
ಇಬ್ಬರನ್ನು ಅಥವಾ ಮೂವರನ್ನು ಅಮಾತ್ಯರನ್ನಾಗಿ ಮಾಡಬಾರದು. ಅವರು ಪರಸ್ಪರವಾಗಿ ಸಹಿಸುವುದಿಲ್ಲ. ಎಲ್ಲರೂ ಒಂದೇ ಕಾರ್ಯವನ್ನು ಮಾಡಲು ಹೊರಟಾಗ ಅವರಲ್ಲಿ ಸರ್ವಥಾ ವಿರೋಧವುಂಟಾಗುತ್ತದೆ.
ಕೀರ್ತಿಪ್ರದಾನೋ ಯಶ್ಚ ಸ್ಯಾದ್ ಯಶ್ಚ ಸ್ಯಾತ್ ಸಮಯೇ ಸ್ಥಿತಃ |
ಸಮರ್ಥಾನ್ ಯಶ್ಚ ನ ದ್ವೇಷ್ಟಿ ಸಮರ್ಥಾನ್ ಕುರುತೇ ಚ ಯಃ ॥27॥
ಯೋ ನ ಕಾಮಾದ್ ಭಯಾಲ್ಲೋಭಾತ್ ಕ್ರೋಧಾದ್ ವಾ
ಧರ್ಮಮುತ್ಸೃಜೇತ್ |
ದಕ್ಷಃ ಪರ್ಯಾಪ್ತವಚನಃ ಸ ತೇ ಸ್ಯಾತ್ ಪ್ರತ್ಯನಂತರಃ ॥28॥
ಯಾವನು ನಿನಗೆ ಕೀರ್ತಿಯನ್ನು ಉಂಟುಮಾಡುತ್ತಾನೆಯೋ, ಯಾವನು ಕಟ್ಟಳೆಯಂತೆ ನಡೆದುಕೊಳ್ಳುತ್ತಾನೆಯೋ, ಯಾವನು ಸಮರ್ಥರನ್ನು ದ್ವೇಷಿಸುವು- ದಿಲ್ಲವೋ, ಅಶಕ್ತರನ್ನು ಸಮರ್ಥರನ್ನಾಗಿ ಮಾಡುತ್ತಾನೆಯೋ, ಯಾವನು ಕಾಮ- ದಿಂದಲಾಗಲೀ ಕ್ರೋಧದಿಂದಾಗಲೀ ಭಯದಿಂದಾಗಲೀ ಲೋಭದಿಂದಾಗಲೀ ಧರ್ಮವನ್ನು ತ್ಯಜಿಸುವುದಿಲ್ಲವೋ ಅಂತಹ ದಕ್ಷನು ಒಳ್ಳೆಯ ಮಾತನಾಡುವವನು ಆದವನು ನಿನಗೆ ಅಮಾತ್ಯನಾಗಲಿ.
ಶೂರಶ್ಚಾರ್ಯಶ್ಚ ವಿದ್ವಾಂಶ್ಚ ಪ್ರತಿಪತ್ತಿವಿಶಾರದಃ |
ಕುಲೀನಃ ಶೀಲಸಂಪನ್ನಸ್ತಿತಿಕ್ಷುರನಸೂಯಕಃ ॥29॥
ಏತೇ ಹ್ಯಮಾತ್ಯಾಃ ಕರ್ತವ್ಯಾಃ ಸರ್ವಕರ್ಮಸ್ವವಸ್ಥಿತಾಃ |
ಪೂಜಿತಾಃ ಸಂವಿಭಕ್ತಾಶ್ಚ ಸುಸಹಾಯಾಃ ಸ್ವನುಷ್ಠಿತಾಃ ॥30॥
ಶೂರರೂ, ಉದಾರವಾದ ನಡತೆಯುಳ್ಳವರೂ, ವಿದ್ವಾಂಸರೂ, ಶೀಘ್ರವಾಗಿ ತಿಳಿದುಕೊಳ್ಳುವುದರಲ್ಲಿ ಸಮರ್ಥರಾದವರೂ, ಸತ್ಕುಲದಲ್ಲಿ ಜನಿಸಿದವರೂ, ಶೀಲ- ಸಂಪನ್ನರೂ, ಕಷ್ಟ ಸಹಿಷ್ಣುಗಳೂ, ಅಸೂಯಾರಹಿತರೂ ಆದವರನ್ನು ಸರ್ವ- ಕರ್ಮಗಳಲ್ಲಿ ಅಮಾತ್ಯರನ್ನಾಗಿ ಮಾಡಬೇಕು. ಅವರು ಪೂಜಿತರಾಗಿ ರಾಜನ ಸಂಪತ್ತನ್ನು ಹಂಚಿಕೊಂಡು ಒಳ್ಳೆಯ ಸಹಾಯದಿಂದ ಕೂಡಿದವರಾಗಿ ಒಳ್ಳೆಯ ಕಾರ್ಯಾನುಷ್ಠಾನವನ್ನು ಮಾಡುವಂತೆ ಮಾಡಬೇಕು.
ಕೃತ್ಸ್ನಮೇತೇ ವಿನಿಕ್ಷಿಪ್ತಾಃ ಪ್ರತಿರೂಪೇಷು ಕರ್ಮಸು |
ಯುಕ್ತಾ ಮಹತ್ಸು ಕಾರ್ಯೇಷು ಶ್ರೇಯಾಂಸ್ಯುತ್ಪಾದಯಂತಿ ಚ ॥31॥
ಅವರೆಲ್ಲರನ್ನೂ ಅವರವರಿಗೆ ಯೋಗ್ಯವಾದ ಕಾರ್ಯಗಳಲ್ಲಿ ನಿಯೋಜಿ- ಸಬೇಕು. (ಒಂದೇ ಕಾರ್ಯದಲ್ಲಿ ಅನೇಕರನ್ನು ನಿಯೋಜಿಸಬಾರದು). ದೊಡ್ಡ ಕಾರ್ಯಗಳಲ್ಲಿ ನಿಯೋಜಿಸಲ್ಪಟ್ಟರೆ ಅವರು ರಾಜನಿಗೆ ಶ್ರೇಯಸ್ಸನ್ನು ಉಂಟು ಮಾಡುವರು.
ಏತೇ ಕರ್ಮಾಣಿ ಕುರ್ವಂತಿ ಸ್ಪರ್ಧಮಾನಾ ಮಿಥಃ ಸದಾ |
ಅನುತಿಷ್ಠಂತಿ ಚೈವಾರ್ಥಾನಾಚಕ್ಷಾಣಾಃ ಪರಸ್ಪರಮ್ ॥32॥
ಅಂತಹವರು ಪರಸ್ಪರವಾಗಿ ಸ್ಪರ್ಧೆ ಮಾಡುತ್ತಾ ಕಾರ್ಯಗಳನ್ನು ಮಾಡುವರು. ಪರಸ್ಪರವಾಗಿ ಮಾತನಾಡಿಕೊಂಡು ತಮಗೆ ಒಪ್ಪಿಸಿದ ಕಾರ್ಯಗಳನ್ನು ಅನುಷ್ಠಾನಕ್ಕೆ ತರುವರು.
ಜ್ಞಾತಿಭ್ಯೋ ಬಿಭಿಯಾಚ್ಚೈವ ಮೃತ್ಯೋರಿವ ಯತಃ ಸದಾ |
ಉಪರಾಜೇವ ರಾಜರ್ಧಿಂ ಜ್ಞಾತಿರ್ನ ಸಹತೇ ಸದಾ ॥33॥
(ಇನ್ನು ಜ್ಞಾತಿಗಳ ಸ್ವರೂಪವನ್ನು ಹೇಳುತ್ತಾರೆ) ರಾಜನು ಮೃತ್ಯುವಿಗೆ ಹೆದರಿ- ದಂತೆ ದುಷ್ಟ ಜ್ಞಾತಿಗಳಿಗೆ ಯಾವಾಗಲೂ ಹೆದರಬೇಕು. ಸಾಮಂತರಾಜನು ರಾಜನ ಸಮೃದ್ಧಿಯನ್ನು ನೋಡಿ ಸಹಿಸದಂತೆ ಜ್ಞಾತಿಯು ರಾಜನ ಸಮೃದ್ಧಿಯನ್ನು ಸಹಿಸು- ವುದಿಲ್ಲ.
ಋಜೋರ್ಮೃದೋರ್ವದಾನ್ಯಸ್ಯ ಹ್ರೀಮತಃ ಸತ್ಯವಾದಿನಃ |
ನಾನ್ಯೋ ಜ್ಞಾತೇರ್ಮಹಾಬಾಹೋ ವಿನಾಶಮಭಿನಂದತಿ ॥34॥
ಎಲೈ ಮಹಾಬಾಹುವೇ! ಋಜುವೂ, ಮೃದುವೂ, ಉದಾರಿಯೂ, ನಾಚಿಕೆ- ಯುಳ್ಳವನೂ, ಸತ್ಯವಾದಿಯೂ ಆದ ರಾಜನಿಗೆ ಜ್ಞಾತಿಯನ್ನು ಬಿಟ್ಟು ಬೇರೆ ಯಾವನೂ ವಿನಾಶವನ್ನು ಬಯಸುವುದಿಲ್ಲ.
ಅಜ್ಞಾತಿತಾ ನಾತಿಸುಖಾ ಜ್ಞಾತಯೋಪಿ ಸುಖಾವಹಾಃ |

ಅಜ್ಞಾತಿಮಂತಂ ಪುರುಷಂ ಪರೇ ಪರಿಭವಂತ್ಯುತ ॥35॥
ಜ್ಞಾತಿಗಳು ಇಲ್ಲದಿರುವುದೇ ದೊಡ್ಡ ಸುಖವಲ್ಲ. ಜ್ಞಾತಿಗಳು ದೊಡ್ಡ ಸುಖವನ್ನು ಉಂಟುಮಾಡಲು ಸಮರ್ಥರು. ಜ್ಞಾತಿಗಳು ಇಲ್ಲದಿರುವ ಪುರುಷನನ್ನು ಶತ್ರುಗಳು (ಅಥವಾ ಬೇರೆಯವರು) ಸೋಲಿಸುತ್ತಾರೆ.
ನಿಕೃತಸ್ಯ ನರೈರನ್ಯೈರ್ಜ್ಞಾತಿರೇವ ಪರಾಯಣಮ್ ।
ನಾನ್ಯೈರ್ನಿಕಾರಂ ಸಹತೇ ಜ್ಞಾತೇರ್ಜ್ಞಾತಿಃ ಕದಾಚನ ॥36॥
ಇನ್ನೊಬ್ಬರಿಂದ ಅವಮಾನಕ್ಕೊಳಗಾದರೆ ಆಗ ಜ್ಞಾತಿಯೇ ಶ್ರೇಷ್ಠನಾದ ಆಶ್ರಯ- ನಾಗುತ್ತಾನೆ. ಜ್ಞಾತಿಯಾದವನು ತನ್ನ ಜ್ಞಾತಿಗೆ ಇನ್ನೊಬ್ಬನಿಂದಾಗುವ ಅವಮಾನವನ್ನು ಎಂದೂ ಸಹಿಸುವುದಿಲ್ಲ.
ಆತ್ಮಾನಮೇವ ಜಾನಾತಿ ನಿಕೃತಂ ಬಾಂಧವೈರಪಿ ।
ತೇಷು ಸಂತಿ ಗುಣಾಶ್ಚೈವ ನೈರ್ಗುಣ್ಯಂ ಚೈವ ಲಕ್ಷ್ಯತೇ ॥37॥
ಬಾಂಧವರು ಜ್ಞಾತಿಗೆ ಅವಮಾನವನ್ನು ಮಾಡಿದರೂ ಅದು ತನಗೇ ಆದ ಅವಮಾನವೆಂದು ತಿಳಿಯುತ್ತಾನೆ. ಜ್ಞಾತಿಗಳಲ್ಲಿ ಗುಣಗಳೂ ಇವೆ. ದೋಷಗಳೂ ಕಂಡುಬರುತ್ತವೆ.
ನಾಜ್ಞಾತಿರನುಗೃಹ್ಣಾತಿ ನಾಜ್ಞಾತಿರ್ದಿಗ್ಧಮಸ್ಯತಿ ।
ಉಭಯಂ ಜ್ಞಾತಿಲೋಕೇಷು ದೃಶ್ಯತೇ ಸಾಧ್ವಸಾಧು ಚ ॥38॥
ಜ್ಞಾತಿಯಲ್ಲದವನು ಅನುಗ್ರಹವನ್ನೂ ಮಾಡುವುದಿಲ್ಲ. ಜ್ಞಾತಿಯಲ್ಲದವನು ದ್ರೋಹವನ್ನೂ ಮಾಡುವುದಿಲ್ಲ. (ವಿಷದ ಬಾಣವನ್ನು ಪ್ರಯೋಗಿಸುವುದಿಲ್ಲ) ಜ್ಞಾತಿ ಸಮೂಹದಲ್ಲಿ ಒಳ್ಳೆಯದು ಮತ್ತು ಕೆಟ್ಟುದು ಎರಡೂ ಕಂಡು ಬರುತ್ತದೆ.
ತಾನ್ ಮಾನಯೇತ್ ಪೂಜಯೇಚ್ಚ ನಿತ್ಯಂ ವಾಚಾ ಚ ಕರ್ಮಣಾ ।
ಕುರ್ಯಾಚ್ಚ ಪ್ರಿಯಮೇತೇಭ್ಯೋ ನಾಪ್ರಿಯಂ ಕಿಂಚಿದಾಚರೇತ್ ॥39॥
ಜ್ಞಾತಿಗಳನ್ನು ಮಾತಿನಿಂದಲೂ, ಕ್ರಿಯೆಯಿಂದಲೂ ನಿತ್ಯವೂ ಸನ್ಮಾನಿಸಬೇಕು; ಪೂಜಿಸಬೇಕು. ಅವರಿಗೆ ಪ್ರಿಯವನ್ನುಂಟುಮಾಡಬೇಕು. ಸ್ವಲ್ಪವೂ ಅಪ್ರಿಯವನ್ನು ಮಾಡಬಾರದು.
ವಿಶ್ವಸ್ತವದವಿಶ್ವಸ್ತಸ್ತೇಷು ವರ್ತೇತ ಸರ್ವದಾ ।
ನಹಿ ದೋಷೋ ಗುಣೋ ವೇತಿ ನಿರೂಪ್ಯಸ್ತೇಷು ದೃಶ್ಯತೇ ॥40॥
ಅವರಲ್ಲಿ ಪೂರ್ಣವಿಶ್ವಾಸವನ್ನು ಮಾಡದೇ ವಿಶ್ವಾಸವನ್ನು ಮಾಡಿದವನಂತೆ ನಡೆದುಕೊಳ್ಳಬೇಕು. ಅವರಲ್ಲಿ ಹೇಳಬಹುದಾದ ಗುಣವೆಂಬುದಾಗಲೀ, ದೋಷ- ವೆಂಬುದಾಗಲೀ ಕಂಡು ಬರುವುದಿಲ್ಲ.
ತಸ್ಯೈವಂ ವರ್ತಮಾನಸ್ಯ ಪುರುಷಸ್ಯಾಪ್ರಮಾದಿನಃ ।
ಅಮಿತ್ರಾಃ ಸಂಪ್ರಸೀದಂತಿ ತಥಾ ಮಿತ್ರೀಭವಂತ್ಯಪಿ ॥41॥
ಈ ರೀತಿಯಲ್ಲಿ ಪ್ರಮಾದರಹಿತನಾಗಿ ನಡೆದುಕೊಳ್ಳುವ ರಾಜರಿಗೆ ಶತ್ರುಗಳು ಪ್ರಸನ್ನರಾಗಿ ಮಿತ್ರರಾಗುತ್ತಾರೆ.
ಯ ಏವಂ ವರ್ತತೇ ನಿತ್ಯಂ ಜ್ಞಾತಿಸಂಬಂಧಿಮಂಡಲೇ ।
ಮಿತ್ರೇಷ್ವಮಿತ್ರೇಽಪ್ಯೈಶ್ವರ್ಯೇ ಚಿರಂ ಯಶಸಿ ತಿಷ್ಠತಿ ॥42॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವ್ಯಶೀತಿತಮೋಽಧ್ಯಾಯಃ ॥82॥
ಜ್ಞಾತಿ ಮತ್ತು ಸಂಬಂಧಿಗಳ ಸಮೂಹದಲ್ಲಿ ಮಿತ್ರಾಮಿತ್ರರ ವಿಷಯದಲ್ಲಿ ಯಾವನು ಹೀಗೆ ನಡೆದುಕೊಳ್ಳುತ್ತಾನೆಯೋ ಅವನು ಬಹುಕಾಲ ಐಶ್ವರ್ಯವನ್ನು ಮತ್ತು ಕೀರ್ತಿಯನ್ನು ಪಡೆಯುತ್ತಾನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 82ನೆಯ ಅಧ್ಯಾಯವು ಮುಗಿಯಿತು.
* * * * * *

॥ ಶ್ರೀಮಧ್ವೇಶಾರ್ಪಣಮಸ್ತು ॥

ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ
ಶ್ರೀಮನ್ಮಹಾಭಾರತೇ ಶಾಂತಿಪರ್ವ
ರಾಜಧರ್ಮಪರ್ವ
83. ಎಂಬತ್ತಮೂರನೆಯ ಅಧ್ಯಾಯ
ಜ್ಞಾತಿಸಂಬಂಧಿಗಳ ಸ್ವಭಾವದ ವಿಷಯದಲ್ಲಿ ಕೃಷ್ಣ-ನಾರದರ ಸಂವಾದ
ಯುಧಿಷ್ಠಿರಃ
ಏವಮಗ್ರಾಹ್ಯಕೇ ತಸ್ಮಿನ್ ಜ್ಞಾತಿಸಂಬಂಧಿಮಂಡಲೇ ।
ಮಿತ್ರೇಷ್ವಮಿತ್ರೇಷ್ವಪಿ ಚ ಕಥಂ ಭಾವೋ ವಿಭಾವ್ಯತೇ ॥1॥
ಯುಧಿಷ್ಠಿರ ಈ ರೀತಿಯಲ್ಲಿ ಜ್ಞಾತಿಗಳ ಮತ್ತು ಸಂಬಂಧಿಗಳ ಸಮೂಹವು ಬಹಳವಿಶ್ವಾಸಕ್ಕೆ ಯೋಗ್ಯವಲ್ಲದಿರುವಾಗ ಮಿತ್ರರನ್ನು ಮತ್ತು ಶತ್ರುಗಳನ್ನು ಹೇಗೆ ಸುಧಾರಿಸುವುದು?
ಭೀಷ್ಮಃ

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವಾಸುದೇವಸ್ಯ ಸಂವಾದಂ ಸುರರ್ಷೇರ್ನಾರದಸ್ಯ ಚ ॥2॥
ಭೀಷ್ಮರು ಈ ವಿಷಯದಲ್ಲಿಯೂ ಕೃಷ್ಣನಿಗೂ ಮತ್ತು ದೇವರ್ಷಿಗಳಾದ ನಾರದರಿಗೂ ನಡೆದ ಪ್ರಾಚೀನವಾದ ಈ ಇತಿಹಾಸವನ್ನು ಹೇಳುತ್ತಾರೆ.
ಶ್ರೀವಾಸುದೇವಃ
ನಾಸುಹೃತ್ ಪರಮಂ ಮಂತ್ರಂ ನಾರದಾರ್ಹತಿ ವೇದಿತುಮ್ |
ಅಪಂಡಿತೋ ವಾಪಿ ಸುಹೃತ್ ಪಂಡಿತೋ ವಾಪಿ ನಾತ್ಮವಾನ್ ॥3॥
ಶ್ರೀವಾಸುದೇವ ನಾರದರೇ! ಸುಹೃಜ್ಜನನಲ್ಲದವನು ರಾಜನ ಮಂತ್ರಾಲೋ- ಚನೆಯನ್ನು ತಿಳಿಯಲು ಯೋಗ್ಯನಲ್ಲ. ಸುಹೃಜ್ಜನನು ಅಪಂಡಿತನಾದರೂ ಪಂಡಿತ- ನಾಗಿ ಒಳ್ಳೆಯ ಮನಸ್ಸನ್ನು ಹೊಂದಿಲ್ಲದಿದ್ದರೂ ರಾಜನ ಮಂತ್ರವನ್ನು ತಿಳಿಯ- ಬಾರದು.
ಸ ತೇ ಸೌಹೃದಮಾಸ್ಥಾಯ ಕಿಂಚಿದ್ ವಕ್ಷ್ಯಾಮಿ ನಾರದ |
ಕೃತ್ಸ್ನಾಂ ಚ ಬುದ್ಧಿಂ ಸಂಪ್ರೇಕ್ಷ್ಯ ಸಂಪೃಚ್ಛೇ ತ್ರಿದಿವಂಗಮ ॥4॥
ಎಲೈ ನಾರದರೇ! ತ್ರಿಲೋಕಸಂಚಾರಿಗಳೇ! ನಿಮ್ಮಲ್ಲಿ ವಿಶ್ವಾಸದಿಂದ ನಿಮ್ಮ ಪೂರ್ಣವಾದ ಬುದ್ಧಿಯನ್ನು ಗಮನಿಸಿ ನಿಮ್ಮಲ್ಲಿ ಸ್ವಲ್ಪ ಮಾತನಾಡುವೆನು.
ದಾಸ್ಯಮೈಶ್ವರ್ಯವಾದೇನ ಜ್ಞಾತೀನಾಂ ವೈ ಕರೋಮ್ಯಹಮ್ |
ಅರ್ಧಭೋಕ್ತಾಸ್ಮಿ ಭೋಗಾನಾಂ ವಾಗ್ದುರುಕ್ತಾನಿ ಚ ಕ್ಷಮೇ ॥5॥
ನಾನು ಐಶ್ವರ್ಯವನ್ನು ಹೊಂದಿದವನಾದರೂ ಜ್ಞಾತಿಗಳ ದಾಸ್ಯವನ್ನು ಮಾಡು- ತ್ತೇನೆ. ಭೋಗಗಳನ್ನು ಅರ್ಧಮಾತ್ರ ಭೋಗಿಸುತ್ತೇನೆ. ಜ್ಞಾತಿಗಳ ದುರ್ವಚನಗಳನ್ನು ಕ್ಷಮಿಸುತ್ತೇನೆ.
ಅರಣೀಮಗ್ನಿಕಾಮೋ ವಾ ಮಥ್ನಾತಿ ಹೃದಯಂ ಮಮ |
ವಾಚಾ ದುರುಕ್ತಂ ದೇವರ್ಷೇ ತನ್ಮೇ ದಹತಿ ನಿತ್ಯದಾ ॥6॥
ಎಲೈ ದೇವರ್ಷಿಯೇ! ಜ್ಞಾತಿಗಳ ದುರ್ವಚನಗಳು ಅಗ್ನಿಕಾಮನಾದವನು ಅರಣಿಯನ್ನು ಮಥನ ಮಾಡಿದಂತೆ ನನ್ನ ಹೃದಯವನ್ನು ಮಥನ ಮಾಡುತ್ತವೆ. ಅವು ಯಾವಾಗಲೂ ನನಗೆ ತಾಪವನ್ನು ಕೊಡುತ್ತವೆ.
ಬಲಂ ಸಂಕರ್ಷಣೇ ನಿತ್ಯಂ ಸೌಕುಮಾರ್ಯಂ ಪುನರ್ಗದೇ |
ರೂಪೇಣ ಮತ್ತಃ ಪ್ರದ್ಯುಮ್ನಃ ಸೋऽಸಹಾಯೋऽಸ್ಮಿ ನಾರದ ॥7॥
ಬಲರಾಮನಲ್ಲಿ ನಿತ್ಯವೂ ಬಲವಿದೆ. ಗದನಲ್ಲಿ ಸೌಕುಮಾರ್ಯವಿದೆ. ರೂಪ- ದಲ್ಲಿ ನನಗಿಂತ ಪ್ರದ್ಯುಮ್ನನು ಅಧಿಕನಾದವನು. ನಾರದರೇ! ಅಂತಹ ನಾನು ಅಸಹಾಯನಾಗಿದ್ದೇನೆ.
ಅನ್ಯೇ ಹಿ ಸುಮಹಾಭಾಗಾ ಬಲವಂತೋ ದುರಾಸದಾಃ |
ನಿತ್ಯೋತ್ಥಾನೇನ ಸಂಪನ್ನಾ ನಾರದಾಂಧಕವೃಷ್ಣಯಃ ॥8॥
ಎಲೈ ನಾರದರೇ! ಜ್ಞಾತಿಗಳಲ್ಲಿ ಉಳಿದ ಮಹಾನುಭಾವರು ಬಲಿಷ್ಠರೂ ಮತ್ತು ಸಮೀಪಿಸಲು ಅಸಾಧ್ಯರೂ ಆಗಿದ್ದಾರೆ. ಅಂಧಕವೃಷ್ಣಿಗಳು ನಿತ್ಯವೂ ಉದ್ಯಮಶೀಲ- ರಾಗಿದ್ದಾರೆ.
ಯಸ್ಯ ನ ಸ್ಯುರ್ನ ವೈ ಸ ಸ್ಯಾದ್ ಯಸ್ಯ ಸ್ಯುಃ ಕೃತ್ಸ್ನಮೇವ ತತ್ |
ದ್ವಯೋರೇವ ಪ್ರಚಲತೋರ್ನಿತ್ಯಂ ವೃಣೋಮ್ಯೇಕತರಂ ನ ಚ ॥9॥
ಯಾರಿಗೆ ಜ್ಞಾತಿಗಳು ಇರುವುದಿಲ್ಲವೋ ಅವನು ಹೇಗೆ ಸುಖಿಯಾದಾನು? ಯಾರಿಗೆ ಜ್ಞಾತಿಗಳು ಇರುತ್ತಾರೆಯೋ ಅವನೂ ಸಹ ಹೇಗೆ ಪೂರ್ಣ ಸುಖಿ- ಯಾದಾನು? ಇಬ್ಬರು ಜ್ಞಾತಿಗಳು ಕೋಪದಿಂದ ಚಲಿಸುತ್ತಿದ್ದರೆ ನಾವು ಅವರಲ್ಲಿ ಯಾರ ಪಕ್ಷವನ್ನೂ ವಹಿಸುವುದಿಲ್ಲ.
ಸ್ಯಾತಾಂ ಯಸ್ಯಾಹುಕಾಕ್ರೂರೌ ಕಿನ್ನು ದುಃಖತರಂ ತತಃ |
ಯಸ್ಯ ವಾಪಿ ನ ತೌ ಸ್ಯಾತಾಂ ಕಿನ್ನು ದುಃಖತರಂ ತತಃ ॥10॥
ಯಾರಿಗೆ ಆಹುಕ, ಅಕ್ರೂರರು ಜ್ಞಾತಿಗಳಾಗಿರುತ್ತಾರೆಯೋ ಅವರಿಗೆ ಅದಕ್ಕಿಂತ ದುಃಖತರವಾದುದು ಯಾವುದು? ಯಾರಿಗೆ ಅಂತಹವರು ಜ್ಞಾತಿಗಳಾಗಿರುವುದಿ- ಲ್ಲವೋ ಅದಕ್ಕಿಂತಲೂ ದುಃಖತರವಾದುದು ಯಾವುದು?
ಸೋऽಹಂ ಕಿತವಮಾತೇವ ದ್ವಯೋರಪಿ ಮಹಾಮುನೇ |
ನೈಕಸ್ಯ ಜಯಮಾಶಾಸೇ ದ್ವಿತೀಯಸ್ಯ ಪರಾಜಯಮ್ ॥11॥
ಎಲೈ ಮಹಾಮುನಿಯೇ! ಆದ್ದರಿಂದ ನಾನು ದ್ಯೂತಮಾಡುವ ಎರಡು ಮಕ್ಕಳ ತಾಯಿಯಂತೆ ಒಬ್ಬನಿಗೆ ಜಯವನ್ನಾಗಲೀ, ಇನ್ನೊಬ್ಬನಿಗೆ ಪರಾಜಯವನ್ನಾಗಲೀ ಆಶಿಸುವುದಿಲ್ಲ.
ಮಮೈವಂ ಕ್ಲಿಶ್ಯಮಾನಸ್ಯ ನಾರದೋಭಯತಃ ಸದಾ |
ವಕ್ತುಮರ್ಹಸಿ ಯಚ್ಛ್ರೇಯೋ ಜ್ಞಾತೀನಾಮಾತ್ಮನಸ್ತಥಾ ॥12॥
ನಾರದರೇ! ಹೀಗೆ ಎರಡು ರೀತಿಯಿಂದಲೂ ಕ್ಲೇಶಪಡುತ್ತಿರುವ ನನಗೆ ನನಗೂ ಮತ್ತು ಜ್ಞಾತಿಗಳಿಗೂ ಯಾವುದು ಶ್ರೇಯಸ್ಕರವಾದುದು ಎಂಬುದನ್ನು ನೀವು ಹೇಳಬೇಕು.
ನಾರದಃ
ಆಪದೋ ದ್ವಿವಿಧಾಃ ಕೃಷ್ಣ ಬಾಹ್ಯಾಶ್ಚಾಭ್ಯಂತರಾಶ್ಚ ಹ |
ಪ್ರಾದುರ್ಭವಂತಿ ವಾರ್ಷ್ಣೇಯ ಸ್ವಕೃತಾ ಯದಿ ವಾऽನ್ಯತಃ ॥13॥
ನಾರದರು ಎಲೈ ಕೃಷ್ಣನೇ! ಆಪತ್ತುಗಳು ಹೊರಗಿನಿಂದ ಬಂದವು ಮತ್ತು ಒಳಗಿನಿಂದ ಬಂದವು ಎಂದು ಎರಡು ವಿಧವಾದವು ಉಂಟಾಗುತ್ತವೆ. ಎಲೈ ವಾರ್ಷ್ಣೇಯನೇ! ಅವು ತನ್ನಿಂದಲಾಗಲೀ ಅಥವಾ ಬೇರೆಯವರಿಂದಾಗಲೀ ಉಂಟಾ -ಗುತ್ತವೆ.

ಸೇಯಮಾಭ್ಯಂತರಾ ತುಭ್ಯಮಾಪತ್ ಕೃಚ್ಛ್ರಾ ಸ್ವಕರ್ಮಜಾ |
ಅಕ್ರೂರಭೋಜಪ್ರಭವಾಃ ಸರ್ವೇ ಹ್ಯೇತೇ ತದನ್ವಯಾಃ ॥14॥
ನಿನಗೆ ಒಳಗಿನವರಿಂದ ಉಂಟಾಗಿರುವ ಆಪತ್ತು ನಿನ್ನ ಕರ್ಮದಿಂದಲೇ ಉಂಟಾದುದು. ಅಕ್ರೂರ, ಭೋಜ ಇವರ ಪರಿವರಾದವರೆಲ್ಲರೂ ನಿನ್ನ ಕರ್ಮ- ಗಳಿಗೆ(ಕಾರ್ಯಗಳಿಗೆ) ಅನುಸಾರವಾಗಿಯೇ ವರ್ತಿಸುತ್ತಾರೆ.
ಅರ್ಥಹೇತೋರ್ಹಿ ಕಾಮಾದ್ವಾ ದ್ವಾರಾ ಬೀಭತ್ಸಯಾಪಿ ವಾ |
ಆತ್ಮನಾ ಪ್ರಾಪ್ತಮೈಶ್ವರ್ಯಮನ್ಯತ್ರ ಪ್ರತಿಪಾದಿತಮ್ ॥15॥
ಧನದ ಕಾರಣದಿಂದಾಗಲೀ ಇಚ್ಛಾಪೂರ್ವಕವಾಗಿಯೇ ಆಗಲಿ ಅಥವಾ ಭಯದಿಂದಾಗಲೀ ನೀನು ಸಂಪಾದಿಸಿದ ಐಶ್ವರ್ಯವನ್ನು ಬೇರೆಯವರಿಗೆ ಕೊಟ್ಟಿ- ದ್ದೀಯೆ.
ಕೃತಮೂಲಮಿದಾನೀಂ ತಜ್ಜ್ಞಾತಿವೃದ್ಧಂ ಸಹಾಯವತ್ |
ನ ಶಕ್ಯಂ ಪುನರಾದಾತುಂ ವಾಂತಮನ್ನಮಿವ ತ್ವಯಾ ॥16॥
ನೀನೇ ಮೂಲನಾಗಿ ಕೊಟ್ಟ ಆ ಐಶ್ವರ್ಯವು ಈಗ ಜ್ಞಾತಿಗಳಲ್ಲಿ ಬೆಳೆದು ಸಹಾಯವುಳ್ಳದ್ದಾಗಿದೆ. ವಾಂತಿಮಾಡಿದ ಅನ್ನವನ್ನು ಪುನಃ ತೆಗೆದುಕೊಳ್ಳಲು ಸಾಧ್ಯ- ವಿಲ್ಲದಂತೆ ಆ ಐಶ್ವರ್ಯವನ್ನು ಪುನಃ ಹಿಂತೆಗೆದುಕೊಳ್ಳಲು ಸಾಧ್ಯವಿಲ್ಲ.
ಬಭ್ರೂಗ್ರಸೇನಯೋ ರಾಜ್ಯಂ ನಾಪ್ತುಂ ಶಕ್ಯಂ ಕಥಂಚನ |
ಜ್ಞಾತಿಭೇದಭಯಾತ್ ಕೃಷ್ಣ ತ್ವಯಾ ಚಾಪಿ ವಿಶೇಷತಃ ॥17॥
ಜ್ಞಾತಿಗಳಲ್ಲಿ ವಿರೋಧವುಂಟಾಗುವ ಭಯದಿಂದ ಬಭ್ರು, ಉಗ್ರಸೇನರ ರಾಜ್ಯವನ್ನು ವಿಶೇಷವಾಗಿ ನಿನ್ನಿಂದಲೂ ಪುನಃ ಪಡೆಯುವುದು ಸಾಧ್ಯವಿಲ್ಲ.
ತಚ್ಚೇತ್ ಸಿದ್ಧ್ಯೇತ್ ಪ್ರಯತ್ನೇನ ಕೃತ್ವಾ ಕರ್ಮ ಸುದುಷ್ಕರಮ್ |
ಮಹತ್ ಕ್ಷಯಂ ವ್ಯಯಂ ವಾ ಸ್ಯಾದ್ ವಿನಾಶೋ ವಾ ಪುನರ್ಭವೇತ್ ॥18
ಪ್ರಯತ್ನದಿಂದ ದುಷ್ಕರವಾದ ಕರ್ಮವನ್ನು ಮಾಡಿ ಅದನ್ನು ಸಾಧಿಸಿದರೆ ದೊಡ್ಡ ಧನವ್ಯಯವು ಮತ್ತು ದೇಹನಾಶವು ಉಂಟಾದೀತು.
ಅನಾಯಸೇನ ಶಸ್ತ್ರೇಣ ಮೃದುನಾ ಹೃದಯಚ್ಛಿದಾ |
ಜಿಹ್ವಾಮುದ್ಧರ ಸರ್ವೇಷಾಂ ಪರಿಮೃಜ್ಯಾನುಮೃಜ್ಯ ಚ ॥19॥
ಕಬ್ಬಿಣದಿಂದ ಮಾಡದ ಮೃದುವಾದ ಹೃದಯಭೇದಕವಾದ ಶಸ್ತ್ರದಿಂದ ಜ್ಞಾತಿ- ಗಳ ನಾಲಿಗೆಯಲ್ಲಿ ಸವರಿ ಸವರಿ ಅದನ್ನು ಕತ್ತರಿಸಬೇಕು.
ವಾಸುದೇವಃ
ಅನಾಯಸಂ ಮುನೇ ಶಸ್ತ್ರಂ ಮೃದು ವಿದ್ಯಾಮಹಂ ಕಥಮ್ |
ಯೇನೈಷಾಮುದ್ಧರೇ ಜಿಹ್ವಾಂ ಪರಿಮೃಜ್ಯಾನುಮೃಜ್ಯ ಚ ॥20॥
ವಾಸುದೇವ ಕಬ್ಬಿಣದಿಂದ ಮಾಡದ ಮೃದುವಾದ ಶಸ್ತ್ರವನ್ನು ಎಲೈ ಮುನಿಯೇ! ನಾನು ಹೇಗೆ ತಿಳಿಯಲಿ? ಯಾವುದರಿಂದ ಜ್ಞಾತಿಗಳ ನಾಲಿಗೆಯನ್ನು ಸವರಿ ಉದ್ಧರಿಸಬಹುದೋ ಅಂತಹ ಶಸ್ತ್ರವನ್ನು ಹೇಗೆ ತಿಳಿಯಲಿ?
ನಾರದಃ
ಶಕ್ತ್ಯಾನ್ನದಾನಂ ಸತತಂ ತಿತಿಕ್ಷಾ ದಮ ಆರ್ಜವಮ್ |
ಯಥಾರ್ಹಪ್ರತಿಪೂಜಾ ಚ ಶಸ್ತ್ರಮೇತದನಾಯಸಮ್ ॥21॥
ನಾರದರು ಸತತವಾಗಿ ಶಕ್ತಿಯಿದ್ದಷ್ಟು ಅನ್ನದಾನ, ತಿತಿಕ್ಷಾ, ಇಂದ್ರಿಯನಿಗ್ರಹ, ಆರ್ಜವ, ಅವರವರ ಯೋಗ್ಯತೆಗೆ ಅನುಗುಣವಾಗಿ ಅವರ ಪೂಜೆ ಇದು ಕಬ್ಬಿಣ- ದಿಂದ ಮಾಡದ ಶಸ್ತ್ರ.
ಜ್ಞಾತೀನಾಂ ವಕ್ತುಕಾಮಾನಾಂ ಕಟೂನಿ ಚ ಲಘೂನಿ ಚ |
ಗಿರಾ ತ್ವಂ ಹೃದಯಂ ವಾಚಂ ಶಮಯಸ್ವ ಮನಾಂಸಿ ಚ ॥22॥
ಕಟುವಾಗಿ ಮತ್ತು ಶೀಘ್ರವಾಗಿ ಮಾತನಾಡಲು ಬಯಸುವ ಜ್ಞಾತಿಗಳ ಮನಸ್ಸನ್ನು ಮತ್ತು ಮಾತನ್ನು ನೀನು ಒಳ್ಳೆಯ ಮಾತುಗಳಿಂದ ಶಮನಗೊಳಿಸು.
ನಾಮಹಾಪುರುಷಃ ಕಶ್ಚಿನ್ನಾನಾತ್ಮಾ ನಾಸಹಾಯವಾನ್ |
ಮಹತೀಂ ಧುರಮಾದತ್ತೇ ತಾಮುದ್ಯಮ್ಯೋರಸಾ ವಹ ॥23॥
ಮಹಾಪುರುಷನಲ್ಲದವನು, ಮನೋಜಯವಿಲ್ಲದವನು, ಸಹಾಯರಹಿತ- ನಾದವನು ದೊಡ್ಡ ಭಾರವನ್ನು ಹೊತ್ತು ಸಾಗುವುದಿಲ್ಲ. ನೀನು ಆ ದೊಡ್ಡ ಭಾರ- ವನ್ನು ಎದೆಯ ಮೇಲೆ ಹೊರುವವನಾಗು.
ಸರ್ವ ಏವ ಗುರುಂ ಭಾರಮನಡ್ವಾನ್ ವಹತೇ ಸಮೇ |
ದುರ್ಗೇ ಪ್ರತೀಕಃ ಸುಗವೋ ಭಾರಂ ವಹತಿ ದುರ್ವಹಮ್ ॥24॥
ಸಮತಟ್ಟಾದ ಪ್ರದೇಶದಲ್ಲಿ ಎಲ್ಲ ಎತ್ತುಗಳೂ ಗುರುವಾದ ಭಾರವನ್ನು ಹೊರು- ತ್ತವೆ. ಆದರೆ ಒಳ್ಳೆಯ ಹಸುವಿನಿಂದ ಹುಟ್ಟಿದ ಎತ್ತುಮಾತ್ರ ದುರ್ಗಮವಾದ ಪ್ರದೇಶಗಳಲ್ಲಿ ಹೊರಲು ಅಸಾಧ್ಯವಾದ ಭಾರಗಳನ್ನು ಹೊರುತ್ತದೆ.
ಭೇದಾದ್ ವಿನಾಶಃ ಸಂಘಾನಾಂ ಸಂಘಮುಖ್ಯೋಽಸಿ ಕೇಶವ |
ಯಥಾ ತ್ವಾಂ ಪ್ರಾಪ್ಯ ನೋತ್ಸೀದೇದಯಂ ಸಂಘಸ್ತಥಾ ಕುರು ॥25॥
ಎಲೈ ಕೇಶವನೇ! ನೀನು ನಿನ್ನ ಸಮೂಹದಲ್ಲಿ ಪ್ರಧಾನನಾಗಿದ್ದೀಯೆ. ವಿರೋಧವುಂಟಾದರೆ ಸಮೂಹವು ನಾಶವನ್ನು ಹೊಂದುತ್ತದೆ. ನಿನ್ನನ್ನು ಪ್ರಧಾನ- ನನ್ನಾಗಿ ಹೊಂದಿ ಈ ಸಮೂಹವು ನಾಶಹೊಂದದಿರುವಂತೆ ಮಾಡು.

ನಾನ್ಯತ್ರ ಬುದ್ಧಿಕ್ಷಾಂತಿಭ್ಯಾಂ ನಾನ್ಯತ್ರೇಂದ್ರಿಯನಿಗ್ರಹಾತ್ |
ನಾನ್ಯತ್ರ ಧನಸಂತ್ಯಾಗಾದ್ ಗಣಃ ಪ್ರಾಜ್ಞೇಽವತಿಷ್ಠತೇ ॥26॥
ಬುದ್ಧಿ ಮತ್ತು ಕ್ಷಮೆಗಳಿಲ್ಲದಿದ್ದರೆ, ಇಂದ್ರಿಯನಿಗ್ರಹವಿಲ್ಲದಿದ್ದರೆ, ಧನತ್ಯಾಗವನ್ನು ಮಾಡದಿದ್ದರೆ ಜ್ಞಾತಿಗಳ ಸಮೂಹವು ಪ್ರಾಜ್ಞನ ಜೊತೆಯಲ್ಲಿ ನಿಲ್ಲುವುದಿಲ್ಲ.
ಧನ್ಯಂ ಯಶಸ್ಯಮಾಯುಷ್ಯಂ ಸ್ವಪಕ್ಷೋದ್ಭಾವನಂ ಶುಭಮ್ |
ಜ್ಞಾತೀನಾಮವಿನಾಶಃ ಸ್ಯಾದ್ ಯಥಾ ಕೃಷ್ಣ ತಥಾ ಕುರು ॥27॥
ಎಲೈ ಕೃಷ್ಣನೇ! ಜ್ಞಾತಿಗಳಿಗೆ ಧನಪ್ರದವೂ, ಯಶಃಪ್ರದವೂ, ಆಯುಷ್ಯಪ್ರದವೂ, ಶುಭವಾದ ಉನ್ನತಿಯೂ, ಅವಿನಾಶವೂ ಉಂಟಾಗುವಂತೆ ಮಾಡು.
ಆಯತ್ಯಾಂ ಚ ತದಾತ್ವೇ ಚ ನ ತೇಽಸ್ತ್ಯವಿದಿತಂ ಪ್ರಭೋ |
ಷಾಡ್ಗುಣ್ಯಸ್ಯ ವಿಧಾನೇನ ಯಾತ್ರಾಯಾನವಿಧೌ ತಥಾ ॥28॥
ಎಲೈ ಪ್ರಭುವೇ! ವರ್ತಮಾನಕಾಲದಲ್ಲಾಗಲೀ ಅಥವಾ ಭವಿಷ್ಯತ್ಕಾಲದ- ಲ್ಲಾಗಲೀ ರಾಜನ ಷಾಡ್ಗುಣ್ಯವಿಷಯದಲ್ಲಿ ಆಗಲೀ, ಯಾತ್ರಾಯಾನಾದಿ ವಿಷಯ- ಗಳಲ್ಲಾಗಲೀ ನೀನು ತಿಳಿಯದಿರುವುದು ಯಾವುದೂ ಇಲ್ಲ.
ಮಾಧವಾಃ ಕುಕುರಾ ಭೋಜಾಃ ಸರ್ವೇ ಚಾಂಧಕವೃಷ್ಣಯಃ |
ತ್ವಯ್ಯಾಸಕ್ತಾ ಮಹಾಬಾಹೋ ಲೋಕಾ ಲೋಕೇಶ್ವರಾಶ್ಚ ಯೇ ॥29॥
ಎಲೈ ಮಹಾಬಾಹುವೇ! ಮಾಧವರು, ಕುಕುರರು, ಭೋಜರು ಮತ್ತು ಎಲ್ಲಾ ಅಂಧಕವೃಷ್ಣಿಗಳು ಮತ್ತು ಲೋಕಗಳು ಮತ್ತು ಲೋಕೇಶ್ವರರೂ ಸಹ ನಿನ್ನನ್ನು ಆಶ್ರಯಿಸಿದ್ದಾರೆ.
ಉಪಾಸತೇ ಹಿ ತ್ವದ್ಬುದ್ಧಿಮೃಷಯಶ್ಚಾಪಿ ಮಾಧವ |
ತ್ವಂ ಗುರುಃ ಸರ್ವಭೂತಾನಾಂ ಜಾನೀಷೇ ತ್ವಂ ಗತಾಗತಮ್ |
ತ್ವಾಮಾಸಾದ್ಯ ಯದುಶ್ರೇಷ್ಠಮೇಧಂತೇ ಜ್ಞಾತಿನಃ ಸುಖಮ್ ॥30॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರ್ಯಶೀತಿತಮೋಽಧ್ಯಾಯಃ ॥83॥
ಎಲೈ ಮಾಧವನೇ! ಋಷಿಗಳು ನಿನ್ನ ಬುದ್ಧಿಯನ್ನು ಉಪಾಸನೆ ಮಾಡುತ್ತಾರೆ. ಸರ್ವಜೀವರಿಗೂ ನೀನೇ ಗುರು. ನೀನು ಭೂತಭವಿಷ್ಯತ್ತೆಲ್ಲವನ್ನೂ ತಿಳಿದಿದ್ದೀಯೆ. ಯದುಶ್ರೇಷ್ಠನಾದ ನಿನ್ನನ್ನು ಹೊಂದಿ ಜ್ಞಾತಿಗಳು ಸುಖವನ್ನು ಪಡೆಯುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 83ನೆಯ ಅಧ್ಯಾಯವು ಮುಗಿಯಿತು.
0
84. ಎಂಬತ್ತನಾಲ್ಕನೆಯ ಅಧ್ಯಾಯ
ಅಮಾತ್ಯಪರೀಕ್ಷೆಯ ವಿಷಯದಲ್ಲಿ ಕಾಲಕವೃಕ್ಷೀಯೋಪಾಖ್ಯಾನ
ಭೀಷ್ಮಃ
ಏಷಾ ಪ್ರಥಮತೋ ವೃತ್ತಿರ್ದ್ವಿತೀಯಾಂ ಶೃಣು ಭಾರತ |
ಯ ಕಶ್ಚಿಜ್ಜನಯೇದರ್ಥಂ ರಾಜ್ಞಾ ರಕ್ಷ್ಯಃ ಸ ಮಾನವಃ ॥1॥
ಭೀಷ್ಮರು ಎಲೈ ಭಾರತನೇ! ಇದು ಮೊದಲು ಮಾಡಬೇಕಾದ ಕೆಲಸ. ಎರಡನೆಯ ಕಾರ್ಯವನ್ನು ಹೇಳುತ್ತೇನೆ. ರಾಜನಿಗೆ ಯಾವನು ಅರ್ಥವೃದ್ಧಿಯನ್ನು ಉಂಟು ಮಾಡುತ್ತಾನೆಯೋ ಅವನು ರಾಜನಿಂದ ರಕ್ಷಿಸಲ್ಪಡಬೇಕು.
ಹ್ರಿಯಮಾಣಮಮಾತ್ಯೇನ ಭೃತೋ ವಾ ಯದಿ ವಾಽಭೃತಃ |
ಯೋ ರಾಜಕೋಶಂ ನಶ್ಯಂತಮಾಚಕ್ಷೀತ ಯುಧಿಷ್ಠಿರ ॥2॥
ಶ್ರೋತವ್ಯಂ ತಸ್ಯ ಚ ರಹೋ ರಕ್ಷ್ಯಶ್ಚಾಮಾತ್ಯತೋ ಭವೇತ್ |
ಅಮಾತ್ಯಾಶ್ಚಾಪಹರ್ತಾರಃ ಭೂಯಿಷ್ಠಂ ಘ್ನಂತಿ ಭಾರತ ॥3॥
ರಾಜನ ನೌಕರನಾಗಲೀ ಅಥವಾ ನಗರವಾಸಿಯಾಗಲೀ ಯಾವನಾದರೂ ಅಮಾತ್ಯನು ರಾಜಕೋಶವನ್ನು ಅಪಹರಿಸುತ್ತಿದ್ದಾನೆ ಎಂದು ಹೇಳಿದರೆ ಅವನ ಮಾತನ್ನು ರಹಸ್ಯವಾಗಿ ಕೇಳಬೇಕು. ಅವನನ್ನು ಅಮಾತ್ಯನಿಂದ ರಕ್ಷಿಸಬೇಕು. ಎಲೈ ಭಾರತನೇ! ಯುಧಿಷ್ಠಿರನೇ! ರಾಜಕೋಶವನ್ನು ಲೂಟಿ ಮಾಡುವ ಅಮಾತ್ಯರು ಬಹಳವಾಗಿ ರಾಜ್ಯವನ್ನು ನಾಶ ಮಾಡುತ್ತಾರೆ.
ರಾಜಕೋಶಸ್ಯ ಗೋಪ್ತಾರೋ ರಾಜಕೋಶವಿಲೋಪಕಾಃ |
ಸಮೇತ್ಯ ಸರ್ವೇ ಬಾಧಂತೇ ಸ ವಿನಶ್ಯತ್ಯರಕ್ಷಿತಃ ॥4॥
ಅಮಾತ್ಯರು ರಾಜಕೋಶವನ್ನು ರಕ್ಷಿಸುವವರು; ಆದರೆ ಉದಾಸೀನ ಮಾಡಿ ಅವರೇ ರಾಜಕೋಶವನ್ನು ನಾಶ ಮಾಡುತ್ತಾರೆ. (ರಾಜಕೋಶದ ಕಾವಲುಗಾರರು ಮತ್ತು ರಾಜಕೋಶದ ಅಪಹರಣಕಾರರು ಇಬ್ಬರೂ ಸೇರಿ ರಾಜಕೋಶವನ್ನು ನಾಶ ಮಾಡುತ್ತಾರೆ) ಎಲ್ಲ ಅಮಾತ್ಯರೂ ಸೇರಿ ರಾಜನನ್ನು ಬಾಧಿಸುತ್ತಾರೆ. ರಾಜಕೋಶವು ರಕ್ಷಣೆಯಿಲ್ಲದೆ ನಾಶವನ್ನು ಹೊಂದುತ್ತದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮುನಿಃ ಕಾಲಕವೃಕ್ಷೀಯಃ ಕೌಸಲ್ಯಂ ಯದುವಾಚ ಹ ॥5॥
ಈ ವಿಷಯದಲ್ಲಿಯೂ ಸಹ ಕೋಸಲರಾಜನಿಗೂ ಮತ್ತು ಕಾಲಕವೃಕ್ಷೀಯ ಋಷಿಗೂ ನಡೆದ ಸಂವಾದರೂಪವಾದ ಪುರಾತನವಾದ ಈ ಇತಿಹಾಸವನ್ನು ಹೇಳು- ತ್ತಾರೆ.
ಕೋಸಲಾನಾಮಾಧಿಪತ್ಯಂ ಸಂಪ್ರಾಪ್ತೇ ಕ್ಷೇಮದರ್ಶಿನಿ |
ಮುನಿಃ ಕಾಲಕವೃಕ್ಷೀಯ ಆಜಗಾಮೇತಿ ನಃ ಶ್ರುತಮ್ ॥6॥

ಕ್ಷೇಮದರ್ಶಿ ಎಂಬ ರಾಜನು ಕೋಸಲದೇಶದ ರಾಜನಾಗಿದ್ದಾಗ ಕಾಲಕ- ವೃಕ್ಷೀಯ ಎಂಬ ಋಷಿಯು ಅಲ್ಲಿಗೆ ಬಂದನು ಎಂದು ನಾವು ಕೇಳಿದ್ದೇವೆ.
ಸ ಕಾಕಂ ಪಂಜರೇ ಬದ್ಧ್ವಾ ವಿಷಯಂ ಕ್ಷೇಮದರ್ಶಿನಃ |
ಪೂರ್ವಂ ಪರ್ಯಚರದ್ ಯುಕ್ತಃ ಪ್ರವೃತ್ತ್ಯರ್ಥೀ ಪುನಃ ಪುನಃ ॥7॥
ಅವನು ಕ್ಷೇಮದರ್ಶಿಯ ಬಳಿಗೆ ಬರುವುದಕ್ಕಿಂತ ಮೊದಲು ಪಂಜರದಲ್ಲಿ ಒಂದು ಕಾಗೆಯನ್ನು ಇಟ್ಟು ನಗರದಲ್ಲಿ ಅಲ್ಲಲ್ಲಿ ತಿರುಗಾಡಿ ಅಮಾತ್ಯಾದಿಗಳ ಪ್ರವೃತ್ತಿ- ಯನ್ನು ತಿಳಿದುಕೊಂಡನು.
ಅಧೀಯೇ ವಾಯಸೀಂ ವಿದ್ಯಾಂ ಶಂಸಂತಿ ಮಮ ವಾಯಸಾಃ |
ಅನಾಗತಮತೀತಂ ಚ ಯಚ್ಚ ಸಂಪ್ರತಿ ವರ್ತತೇ ॥8॥
ಇತಿ ರಾಷ್ಟ್ರೇ ಪರಿಪತನ್ ಬಹುಶಃ ಪುರುಷೈಃ ಸಹ |
ಸರ್ವೇಷಾಂ ರಾಜಯುಕ್ತಾನಾಂ ದುಷ್ಕೃತಂ ಪರಿಪೃಷ್ಟವಾನ್ ॥9॥
ನಾನು ವಾಯಸವಿದ್ಯೆಯನ್ನು ಅಭ್ಯಾಸ ಮಾಡುತ್ತಿದ್ದೇನೆ. ವಾಯಸಗಳು ನನಗೆ ಭೂತ, ಭವಿಷ್ಯತ್ ವರ್ತಮಾನವೆಲ್ಲವನ್ನೂ ಹೇಳುತ್ತವೆ ಎಂದು ಹೇಳುತ್ತಾ ರಾಷ್ಟ್ರ- ದಲ್ಲಿ ಬಹಳವಾಗಿ ತಿರುಗಾಡಿ ಅನೇಕಪುರುಷರನ್ನು ನೋಡಿ ರಾಜನಿಂದ ನಿಯುಕ್ತ- ರಾದ ಎಲ್ಲರ ದುಷ್ಕಾರ್ಯಗಳನ್ನು ಕೇಳಿ ತಿಳಿದುಕೊಂಡನು.
ಸ ಬುದ್ಧ್ವಾ ತಸ್ಯ ರಾಷ್ಟ್ರಸ್ಯ ವ್ಯವಸಾರಂ ಹಿ ಸರ್ವಶಃ |
ರಾಜಯುಕ್ತಾಪಚಾರಾಂಶ್ಚ ಸರ್ವಾನ್ ಬುದ್ಧ್ವಾ ತತಸ್ತತಃ ॥10॥
ತಮೇವ ಕಾಕಮಾದಾಯ ರಾಜಾನಂ ದ್ರಷ್ಟುಮಾಗತಮ್ |
ಸರ್ವಜ್ಞೋಽಸ್ಮೀತಿ ವಚನಂ ಬ್ರುವಾಣಃ ಸಂಶಿತವ್ರತಃ ॥11॥
ಅವನು ಆ ರಾಷ್ಟ್ರವು ಅವನತಿಯನ್ನು ಹೊಂದುತ್ತಿರುವುದನ್ನು ತಿಳಿದು ರಾಜ- ನಿಂದ ಕಾರ್ಯಗಳಲ್ಲಿ ನಿಯಮಿತರಾದ ಎಲ್ಲರ ಅಪಚಾರಗಳನ್ನು ಕೇಳಿ ನಾನು ಸರ್ವಜ್ಞನು ಎಂದು ಹೇಳುತ್ತಾ ಒಳ್ಳೆಯ ವ್ರತಧಾರಿಯಾದ ಅವನು ಅದೇ ಕಾಗೆ- ಯನ್ನು ತೆಗೆದುಕೊಂಡು ರಾಜನನ್ನು ನೋಡಲು ಬಂದನು.
ಸ ಸ್ಮ ಕೌಸಲ್ಯಮಾಗಮ್ಯ ರಾಜಾಮಾತ್ಯಮಲಂಕೃತಮ್ |
ಪ್ರಾಹ ಕಾಕಸ್ಯ ವಚನಾದಮುತ್ರೇದಂ ತ್ವಯಾ ಕೃತಮ್ ॥12॥
ಅವನು ಕೋಸಲರಾಜನ ಸಭೆಗೆ ಬಂದು ಅಲಂಕೃತನಾದ ರಾಜಾಮಾತ್ಯನನ್ನು ಕುರಿತು ನನ್ನ ಕಾಗೆಯು ಹೇಳುತ್ತಿದೆ. ನೀನು ಇಂತಹ ಸ್ಥಳದಲ್ಲಿ ಇಂತಹ ಅಪ- ಚಾರವನ್ನು ಮಾಡಿದ್ದೀಯೆ ಎಂದು ಹೇಳಿದನು.
ಅಸೌ ಚಾಸೌ ಚ ಜಾನೀತೇ ರಾಜಕೋಶಸ್ತ್ವಯಾ ಹೃತಃ |
ಏವಮಾಖ್ಯಾತಿ ಕಾಕೋಽಯಂ ತಚ್ಛೀಘ್ರಮನುಗಮ್ಯತಾಮ್ ॥13॥
ಈ ವಿಷಯವನ್ನು ಇಂತಹವರು ಇಂತಹವರು ತಿಳಿದಿದ್ದಾರೆ. ಈ ರಾಜ- ಕೋಶವನ್ನು ಅಪಹರಿಸಿದ್ದೀಯೆ. ಹೀಗೆ ಈ ಕಾಗೆಯು ಹೇಳುತ್ತಿದೆ. ಅದನ್ನು ಒಪ್ಪಿಕೋ. (ಎಂದು ಹೇಳಿದನು)
ತಥಾನ್ಯಾನಪಿ ಸ ಪ್ರಾಹ ರಾಜಕೋಶಹರಾನ್ ಸದಾ |
ನ ಚಾಸ್ಯ ವಚನಂ ಕಿಂಚಿದನೃತಂ ಶ್ರೂಯತೇ ಕ್ವಚಿತ್ ॥14॥
ಹಾಗೆಯೇ ರಾಜಕೋಶವನ್ನು ಅಪಹಾರಮಾಡಿದ ಉಳಿದವರ ವಿಷಯದ- ಲ್ಲಿಯೂ ಹೇಳಿದನು. ಅವನ ಯಾವ ಮಾತೂ ಸುಳ್ಳಾಗಿರುವುದು ಕಂಡುಬರಲಿಲ್ಲ.
ತೇನ ವಿಪ್ರಕೃತಾಃ ಸರ್ವೇ ರಾಜಯುಕ್ತಾಃ ಕುರೂದ್ವಹ |
ತಮತಿಕ್ರಮ್ಯ ಸುಪ್ತಸ್ಯ ನಿಶಿ ಕಾಕಮಪೋಥಯನ್ ॥15॥
ಎಲೈ ಕುರೂದ್ವಹನೇ! ಹೀಗೆ ಅವನಿಂದ ಅಪಚಾರಕ್ಕೆ ಒಳಗಾದ ರಾಜಸೇವಕರು ರಾತ್ರಿಯಲ್ಲಿ ಅವನು ಮಲಗಿದ್ದಾಗ ಅವನನ್ನು ಮೀರಿ ಅವನ ಕಾಗೆಯನ್ನು ಕೊಂದರು.
ವಾಯಸಂ ತು ವಿನಿರ್ಭಿನ್ನಂ ದೃಷ್ಟ್ವಾ ಬಾಣೇನ ಪಂಜರೇ |
ಪೂರ್ವಾಹ್ಣೇ ಬ್ರಾಹ್ಮಣೋ ವಾಕ್ಯಂ ಕ್ಷೇಮದರ್ಶಿನಮಬ್ರವೀತ್ ॥16॥
ಪಂಜರದಲ್ಲಿದ್ದ ಕಾಗೆಯು ಬಾಣದಿಂದ ಹತವಾದುದನ್ನು ನೋಡಿ, ಆ ಬ್ರಾಹ್ಮಣನು ಪ್ರಾತಃಕಾಲದಲ್ಲಿ ಕ್ಷೇಮದರ್ಶಿಯನ್ನು ಕುರಿತು ಹೇಳಿದನು.
ರಾಜಂಸ್ತ್ವಾಮಭಯಂ ಯಾಚೇ ಪ್ರಭುಂ ಪ್ರಾಣಧನೇಶ್ವರಮ್ |
ಅನುಜ್ಞಾತಸ್ತ್ವಯಾ ಬ್ರೂಯಾಂ ವಚನಂ ತ್ವತ್ಪುರೋ ಹಿತಮ್ ॥17॥
ಎಲೈ ರಾಜನೇ! ಪ್ರಭುವೂ ಪ್ರಾಣಧನೇಶ್ವರನೂ ಆದ ನಿನ್ನನ್ನು ಅಭಯವನ್ನು ಯಾಚಿಸುತ್ತಿದ್ದೇನೆ. ನೀನು ಅನುಮತಿಯನ್ನು ಕೊಟ್ಟರೆ ನಿನ್ನ ಎದುರಿಗೆ ನಿನಗೆ ಹಿತವಚನವನ್ನು ಹೇಳುವೆನು.
ಮಿತ್ರಾರ್ಥಮಭಿಸಂತಪ್ತೋ ಭಕ್ತ್ಯಾ ಸರ್ವಾತ್ಮನಾ ಗತಃ |
ಅಯಂ ತವಾರ್ಥೋ ಹ್ರಿಯತೇ ಯೋ ಬ್ರೂಯಾದಕ್ಷಮಾನ್ವಿತಃ ॥18॥
ನನ್ನ ಮಿತ್ರನಾದ ನಿನ್ನ ವಿಷಯದಲ್ಲಿ ಮನಸ್ಸಿನಲ್ಲಿ ತಾಪವನ್ನು ಹೊಂದಿ, ನಿನ್ನ ಮೇಲಿನ ಸ್ನೇಹದಿಂದ ಬಂದಿದ್ದೇನೆ. ನಿನ್ನ ಅರ್ಥಸಾಧಕನಾದ ಬ್ರಾಹ್ಮಣನಾದ ಈ ನನ್ನನ್ನು ಮಂತ್ರಿಗಳು ಅಪಹರಿಸಲು ಯತ್ನಿಸುತ್ತಿದ್ದಾರೆ.
ಸಂಬುಬೋಧಯಿಷುರ್ಮಿತ್ರಂ ಸದಶ್ವಮಿವ ಸಾರಥಿಃ |
ಅತಿಮನ್ಯುಪ್ರಸಕ್ತೋ ಹಿ ಪ್ರಸಜ್ಯ ಹಿತಕಾರಣಮ್ ॥19॥

ತಥಾವಿಧಸ್ಯ ಸುಹೃದಃ ಕ್ಷಂತವ್ಯಂ ಸಂವಿಜಾನತಾ |
ಐಶ್ವರ್ಯಮಿಚ್ಛತಾ ನಿತ್ಯಂ ಪುರುಷೇಣ ಬುಭೂಷತಾ ॥20॥
ಸಾರಥಿಯು ಸದಶ್ವವನ್ನು ಎಚ್ಚರಿಸುವಂತೆ ನಿನ್ನ ಹಿತವನ್ನು ಆಲೋಚಿಸಿ, ನಿನ- ಗಾಗಿರುವ ಅಪಚಾರದಿಂದ ಬಹಳ ಕೋಪಗೊಂಡು, ನಿತ್ಯವೂ ನಿನ್ನ ಅಭಿವೃದ್ಧಿಯನ್ನು ಇಚ್ಛಿಸಿ ಮಾತನಾಡುತ್ತೇನೆ. ತಿಳಿದವನೂ ಶ್ರೇಯೋಕಾಂಕ್ಷಿಯೂ ಆದ ನೀನು ಅಂತಹ ಸ್ನೇಹಿತನ ಮಾತನ್ನು ಕ್ಷಮಿಸಬೇಕು. (ಎಂದು ಹೇಳಿದನು)
ತಂ ರಾಜಾ ಪ್ರತ್ಯುವಾಚೇದಂ ಯನ್ಮಾಂ ಕಿಂಚಿದ್ ಭವಾನ್ ವದೇತ್ |
ಕಸ್ಮಾದಹಂ ನ ಕ್ಷಮೇಯಮಾಕಾಂಕ್ಷನ್ನಾತ್ಮನೋ ಹಿತಮ್ ॥21॥
ರಾಜನು ಅವನನ್ನು ಕುರಿತು ನನ್ನ ಹಿತವನ್ನು ಬಯಸುವ ನೀನು ಹೇಳುವ ಮಾತನ್ನು ನಾನು (ಅದನ್ನು) ಹೇಗೆ ಕ್ಷಮಿಸದಿರಲಿ ಎಂದು ಹೇಳಿದನು.
ಬ್ರಾಹ್ಮಣ ಪ್ರತಿಜಾನೀಹಿ ಪ್ರಬ್ರೂಹಿ ಯದಿ ಚೇಚ್ಛಸಿ |
ಕರಿಷ್ಯಾಮಿ ಹಿ ತೇ ವಾಕ್ಯಂ ಯದ್ಯನ್ಮಾಂ ವಿಪ್ರ ವಕ್ಷ್ಯಸಿ ॥22॥
ಬ್ರಾಹ್ಮಣನೇ! ಪ್ರತಿಜ್ಞೆಯನ್ನು ಮಾಡುತ್ತೇನೆ. ನೀನು ಬಯಸಿದುದನ್ನು ಹೇಳು. ಎಲೈ ಬ್ರಾಹ್ಮಣನೇ! ನೀನು ಹೇಳಿದಂತೆಯೇ ನಾನು ನಡೆದುಕೊಳ್ಳುವೆನು.
ಮುನಿಃ
ಜ್ಞಾತ್ವಾ ನಯಾನಪಾಯಾಂಶ್ಚ ಭೃತ್ಯತಸ್ತೇ ಭಯಾನಿ ಚ |
ಭಕ್ತ್ಯಾ ವೃತ್ತಿಂ ಸಮಾಖ್ಯಾತುಂ ಭವತೋಽಂತಿಕಮಾಗಮಮ್ ॥23॥
ಮುನಿ ನಿನ್ನ ರಾಜ್ಯದಲ್ಲಿ ನಿನ್ನ ಭೃತ್ಯರಿಂದ ನಡೆಯುವ ನ್ಯಾಯಾನ್ಯಾಯಗಳನ್ನು ಮತ್ತು ನಿನಗೆ ಉಂಟಾಗಿರುವ ಭಯವನ್ನು ತಿಳಿದು ನಿನ್ನ ಮೇಲಿನ ಸ್ನೇಹದಿಂದ ಅದನ್ನು ನಿನಗೆ ತಿಳಿಸಲು ನಿನ್ನ ಸಮೀಪಕ್ಕೆ ಬಂದಿದ್ದೇನೆ.
ಪ್ರಾಗೇವೋಕ್ತಶ್ಚ ದೋಷೋಽಯಮಾಚಾರ್ಯೈರ್ನೃಪಸೇವಿತಮ್ |
ಅಗತಾ ಕುಗತಿರ್ಹ್ಯೇಷಾ ಯಾ ರಾಜ್ಞಾ ಸಹ ಜೀವಿಕಾ ॥24॥
ಆಚಾರ್ಯರು ರಾಜನ ಸೇವೆಯನ್ನು ಮಾಡುವವರಿಗೆ ಈ ದೋಷವಿರುತ್ತದೆ ಎಂದು ಮೊದಲೇ ಹೇಳಿದ್ದಾರೆ. ರಾಜನ ಜೊತೆಯಲ್ಲಿ ಜೀವನ ಮಾಡುವವರಿಗೆ ಯಾರಿಂದಲೂ ತಿಳಿಯಲಾರದ ಇಂತಹ ದುರ್ಗತಿ ಉಂಟಾಗುತ್ತದೆ.
ಆಶೀವಿಷೈಶ್ಚ ತಸ್ಯಾಹುಃ ಸಂಗತಂ ಯಸ್ಯ ರಾಜಭಿಃ |
ಬಹುಮಿತ್ರಾಶ್ಚ ರಾಜಾನೋ ಬಹ್ವಮಿತ್ರಾಸ್ತಥೈವ ಚ ॥25॥
ರಾಜನ ಸಹವಾಸವು ಸರ್ಪದ ಸಹವಾಸವೆಂದು ಹೇಳುತ್ತಾರೆ. ರಾಜನಿಗೆ ಅನೇಕ ಮಿತ್ರರೂ ಅನೇಕ ಶತ್ರುಗಳೂ ಇರುತ್ತಾರೆ.
ತೇಭ್ಯಃ ಸರ್ವೇಭ್ಯ ಏವಾಹುರ್ಭಯಂ ರಾಜೋಪಸೇವಿತಮ್ |
ಅಥೈಷಾಮೇಕತೋ ರಾಜನ್ ಮುಹೂರ್ತಾದೇವ ಭೀರ್ಭವೇತ್ ॥26॥
ರಾಜಸೇವಕರಾದವರಿಗೆ ಅವರೆಲ್ಲರಿಂದಲೂ ಭಯವಿರುತ್ತದೆ. ಎಲೈ ರಾಜನೇ! ಅವರಲ್ಲಿ ಒಬ್ಬನೂ ಸಹ ಒಂದೇ ಮುಹೂರ್ತದಲ್ಲಿ ಭಯವನ್ನುಂಟು ಮಾಡ- ಬಹುದು.
ನೈಕಾಂತೇನಾಪ್ರಮಾದೋ ಹಿ ಕರ್ತುಂ ಶಕ್ಯೋ ಮಹೀಪತೌ |
ನ ತು ಪ್ರಮಾದಃ ಕರ್ತವ್ಯಃ ಕಥಂಚಿದ್ ಗತಿಮಿಚ್ಛತಾ ॥27॥
ರಾಜನ ಸೇವೆಯಲ್ಲಿರುವವನು ಎಂದೂ ಎಚ್ಚರ ತಪ್ಪಿ ನಡೆದುಕೊಳ್ಳಬಾರದು. ತನ್ನ ಶುಭಗತಿಯನ್ನು ಬಯಸುವವನು ನಿಯಮೇನ ಪ್ರಮಾದವನ್ನು ಮಾಡ- ಬಾರದು.
ಪ್ರಮಾದಾದ್ಧಿ ಸ್ಖಲೇದ್ ರಾಜಾ ಸ್ಖಲಿತೇ ನಾಸ್ತಿ ಜೀವಿತಮ್ |
ಅಗ್ನಿಂ ದೀಪ್ತಮಿವಾಸೀದೇದ್ ರಾಜಾನಮುಪಶಿಕ್ಷಿತಃ ॥28॥
ಪ್ರಮಾದವನ್ನು ಮಾಡಿದರೆ ರಾಜನು ಒಂದು ತಪ್ಪನ್ನು ಮಾಡಬಹುದು. ರಾಜನು ತಪ್ಪನ್ನು ಮಾಡಿದರೆ ಸೇವಕನ ಜೀವಿತವೇ ಉಳಿಯಲಾರದು. ವಿದ್ಯಾ- ವಂತನಾದವನು ಉರಿಯುವ ಅಗ್ನಿಯ ಬಳಿಗೆ ಹೋದಂತೆ ರಾಜನ ಬಳಿಗೆ ಹೋಗ- ಬೇಕು.
ಆಶೀವಿಷಮಿವ ಕ್ರುದ್ಧಂ ಪ್ರಭುಂ ಪ್ರಾಣಧನೇಶ್ವರಮ್ |
ಯತ್ನೇನೋಪಚರೇನ್ನಿತ್ಯಂ ನಾಹಮಸ್ಮೀತಿ ಮಾನವಃ ॥29॥
ಪ್ರಭುವೂ, ಪ್ರಾಣಧನೇಶ್ವರನೂ ಆದ ರಾಜನನ್ನು ಕೋಪಗೊಂಡ ಸರ್ಪದಂತೆ ಮನುಷ್ಯನು ನಾನು ಉಳಿಯುವುದಿಲ್ಲ ಎಂದು ತಿಳಿದೇ ಪ್ರಯತ್ನಪೂರ್ವಕವಾಗಿ ಉಪಚರಿಸಬೇಕು.
ದುರ್ವ್ಯಾಹತಾಚ್ಛಂಕಮಾನೋ ದುಷ್ಕೃತಾದ್ ದುರಧಿಷ್ಠಿತಾತ್ |
ದುರಾಸಿತಾದ್ ದುರ್ವ್ರಜಿತಾದಿಂಗಿತಾದಂಗಚೇಷ್ಟಿತಾತ್ ॥30॥
ದುರ್ವಚನಗಳಿಂದ ಶಂಕಿಸುತ್ತಾ, ದುಷ್ಕಾರ್ಯಗಳಿಂದಲೂ ಅಯೋಗ್ಯ- ಸ್ಥಾನದಲ್ಲಿ ನಿಲ್ಲುವುದರಿಂದಲೂ ಕೂಡುವುದರಿಂದಲೂ ನಡೆಯುವುದರಿಂದಲೂ ಇಂಗಿತಗಳಿಂದಲೂ ಅಂಗಚೇಷ್ಟೆಗಳಿಂದಲೂ ತನ್ನನ್ನು ರಕ್ಷಿಸಿಕೊಳ್ಳಬೇಕು.
ದೇವತೇವ ಹಿ ಸರ್ವಾರ್ಥಾನ್ ಕುರ್ಯಾದ್ ರಾಜಾ ಪ್ರಸಾದಿತಃ |
ವೈಶ್ವಾನರ ಇವ ಕ್ರುದ್ಧಃ ಸಮೂಲಮಪಿ ನಿರ್ದಹೇತ್ |
ಇತಿ ರಾಜನ್ ಮಯಃ ಪ್ರಾಹ ವರ್ತತೇ ಚ ತಥೈವ ತತ್ ॥31॥
ರಾಜನು ಪ್ರಸನ್ನನಾದರೆ ದೇವತೆಯಂತೆ ಎಲ್ಲಾ ಅರ್ಥವನ್ನೂ ಕೊಡುತ್ತಾನೆ. ಕೋಪಗೊಂಡರೆ ಅಗ್ನಿಯಂತೆ ಮೂಲಸಹಿತವಾಗಿ ಸುಟ್ಟುಬಿಡುತ್ತಾನೆ. ಎಲೈ ರಾಜನೇ! ಮಯನು ಹೀಗೆ ಹೇಳಿದ್ದಾನೆ. ಅದು ಹಾಗೆಯೇ ಸರಿ.

ಅಥ ಭೂಯಾಂಸಮೇವಾರ್ಥಂ ಕರಿಷ್ಯಾಮಿ ಪುನಃಪುನಃ |
ದದಾತ್ಯಸ್ಮದ್ವಿಧೋಽಮಾತ್ಯೋ ಬುದ್ಧಿಸಾಹಾಯ್ಯಮಾಪದಿ ॥32॥
ನಿನಗೆ ಇದಕ್ಕಿಂತ ಹೆಚ್ಚಿನ ಹಿತವನ್ನು ಪುನಃ ಪುನಃ ಮಾಡುತ್ತೇನೆ. ನನ್ನಂತಹ ಅಮಾತ್ಯರು ಆಪತ್ಕಾಲದಲ್ಲಿ ರಾಜನಿಗೆ ಬುದ್ಧಿಸಹಾಯವನ್ನು ನೀಡುತ್ತಾರೆ.
ವಾಯಸಶ್ಚೈವ ಮೇ ರಾಜನ್ನಂತಕಾಯಾಭಿಸಂಹಿತಃ |
ನ ಚ ಮೇಽತ್ರ ಭವಾನ್ ಗರ್ಹ್ಯೋ ನ ಚ ಯೇಷಾಂ ಭವಾನ್ ಪ್ರಿಯಃ |
ಹಿತಾಹಿತಾಂಸ್ತು ಬುದ್ಧ್ಯೇಥಾ ಮಾ ಪರೋಕ್ಷಮತಿರ್ಭವ ॥33॥
ಎಲೈ ರಾಜನೇ! ನನ್ನ ಕಾಗೆಯು ಯಮಲೋಕಕ್ಕೆ ಕಳುಹಿಸಲ್ಪಟ್ಟಿತು. ಅದಕ್ಕಾಗಿ ನಾನು ನಿನ್ನನ್ನಾಗಲೀ, ನೀನು ಯಾರಿಗೆ ಪ್ರಿಯನೋ ಅವರನ್ನಾಗಲೀ ನಿಂದಿಸು- ವುದಿಲ್ಲ. ಹಿತಾಹಿತಗಳನ್ನು ತಿಳಿದುಕೋ. ಕಣ್ಣುಮುಚ್ಚಿ ಕುಳಿತಿರಬೇಡ.
ಯೇ ತ್ವಾದಾನಪರಾ ಏವ ವಸಂತಿ ಭವತೋ ಗೃಹೇ |
ಅಭೂತಿಕಾಮಾ ಭೂತಾನಾಂ ತಾದೃಶೈರ್ಮೇಽಭಿಸಂಹಿತಮ್ ॥34॥
ಯಾರು ನಿನ್ನ ಮನೆಯಲ್ಲೇ ವಾಸ ಮಾಡಿ, ನಿನ್ನ ಅನ್ಯೈಶ್ವರ್ಯವನ್ನು ಬಯಸಿ, ನಿನ್ನ ಹಣವನ್ನು ಅಪಹರಿಸುತ್ತಿದ್ದಾರೆಯೋ ಅಂತಹವರಿಂದ ನನ್ನ ಕಾಗೆಯು ಕೊಲ್ಲಲ್ಪಟ್ಟಿತು.
ಯೇ ವಾ ಭವದ್ವಿನಾಶೇನ ರಾಜ್ಯಮಿಚ್ಛಂತ್ಯನಂತರಮ್ |
ಆಂತರೈರಭಿಸಂಧಾಯ ರಾಜನ್ ಸಿಧ್ಯಂತಿ ನಾನ್ಯಥಾ ॥35॥
ಎಲೈ ರಾಜನೇ! ಯಾರು ಒಳಗಿನವರ ಜೊತೆಯಲ್ಲಿ ಸಂಧಾನ ಮಾಡಿ, ನಿನ್ನನ್ನು ವಿನಾಶ ಮಾಡಿ, ನಿನ್ನ ಅನಂತರದಲ್ಲಿ ರಾಜ್ಯವನ್ನು ಬಯಸುತ್ತಾರೆಯೋ (ಅವರಿಂದ ಅಂತಹ ಕೆಲಸವು ಮಾಡಲ್ಪಟ್ಟಿತು). ಆದರೆ ಅವರಿಗೆ ಆ ರೀತಿ ಸಿದ್ಧಿಸುವುದಿಲ್ಲ.
ತೇಷಾಮಹಂ ಭಯಾದ್ ರಾಜನ್ ಗಮಿಷ್ಯಾಮ್ಯನ್ಯಮಾಶ್ರಮಮ್ |
ತೈರ್ಹಿ ಮೇ ಸಂಧಿತೋ ಬಾಣಃ ಕಾಕೇ ನಿಪತಿತಃ ಪ್ರಭೋ ॥36॥
ಎಲೈ ರಾಜನೇ! ಅವರ ಭಯದಿಂದ ನಾನು ಇನ್ನೊಂದು ಆಶ್ರಮಕ್ಕೆ ಹೋಗು- ವೆನು. ಎಲೈ ಪ್ರಭುವೇ! ಅವರು ನನ್ನ ಮೇಲೆ ಪ್ರಯೋಗಿಸಿದ ಬಾಣವು ಕಾಗೆಯ ಮೇಲೆ ಬಿದ್ದಿತು.
ಛದ್ಮನಾ ಮಮ ಕಾಕಶ್ಚ ಗಮಿತೋ ಯಮಸಾದನಮ್ |
ದೃಷ್ಟಂ ಹ್ಯೇತನ್ಮಯಾ ರಾಜಂಸ್ತಪೋದೀರ್ಘೇಣ ಚಕ್ಷುಷಾ ॥37॥
ಎಲೈ ರಾಜನೇ! ನನ್ನ ಕಾಗೆಯು ಮೋಸದಿಂದ ಕೊಲ್ಲಲ್ಪಟ್ಟಿತು. ಇದನ್ನು ನಾನು ತಪಸ್ಸಿನಿಂದ ಕೂಡಿದ ನನ್ನ ಚಕ್ಷುಸ್ಸಿನಿಂದ ನೋಡಿದ್ದೇನೆ.
ಬಹುನಕ್ರಝಷಗ್ರಾಹಾಂ ತಿಮಿಂಗಿಲಗಣಾಯುತಾಮ್ |
ಕಾಕೇನ ಬಾಲಿಶೇನೇಮಾಮತಾರ್ಷಂ ತ್ವಾಮಹಂ ನದೀಮ್ ॥38॥
ಸ್ಥಾಣ್ವಶ್ಮಕಂಟಕವತೀಂ ವ್ಯಾಘ್ರಸಿಂಹಗಜಾಕುಲಾಮ್ |
ದುರಾಸದಾಂ ದುಷ್ಪ್ರವೇಶಾಂ ಗುಹಾಂ ಹೈಮವತೀಮಿವ ॥39॥
ಅನೇಕ ಮೀನು ಮೊಸಳೆಗಳು ಇರುವ, ತಿಮಿಂಗಿಲಗಣಗಳಿಂದ ಕೂಡಿರುವ, ಬಂಡೆಗಳು ಸಣ್ಣಕಲ್ಲುಗಳು ಮತ್ತು ಮುಳ್ಳುಗಳಿಂದ ಕೂಡಿರುವ, ಸಿಂಹವ್ಯಾಘ್ರ ಗಜಗಳಿಂದ ಕೂಡಿರುವ, ಸಮೀಪಿಸಲು ಮತ್ತು ಪ್ರವೇಶಿಸಲು ಅಸಾಧ್ಯವಾದ ಹಿಮಾಲಯಪರ್ವತದ ಗುಹೆಯಂತಿರುವ, ನದಿಯಂತಿರುವ ರಾಜನಾದ ನಿನ್ನನ್ನು ನಾನು ಬಡಪಾಯಿಯಾದ ಕಾಗೆಯಿಂದ ದಾಟಿದ್ದೇನೆ.
ಅಗ್ನಿನಾ ತಾಮಸಂ ದುರ್ಗಂ ನೌಭಿರಾಪ್ಯಂ ಚ ಗಮ್ಯತೇ |
ರಾಜದುರ್ಗಾವತರಣೇ ನೋಪಾಯಂ ಪಂಡಿತಾ ವಿದುಃ ॥40॥
ಕತ್ತಲಿರುವ ಕೋಟೆಯನ್ನು ಅಗ್ನಿಯಿಂದಲೂ, ಜಲಮಯವಾದ ಕೋಟೆಯನ್ನು ನೌಕೆಯಿಂದಲೂ ಸಮೀಪಿಸಬಹುದು. ಆದರೆ ರಾಜನೆಂಬ ಕೋಟೆಯನ್ನು ಪ್ರವೇಶಿ- ಸಲು ಯಾವ ಉಪಾಯವೂ ಪಂಡಿತರಿಗೆ ತಿಳಿದಿಲ್ಲ.
ಗಹನಂ ಭವತೋ ರಾಜ್ಯಮಂಧಕಾರಂ ತಮೋವೃತಮ್ |
ನೇಹ ವಿಶ್ವಸಿತುಂ ಶಕ್ಯಂ ಭವತಾಪಿ ಕುತೋ ಮಯಾ ॥41॥
ನಿನ್ನ ರಾಜ್ಯವು ಕತ್ತಲಿನಿಂದ ಕೂಡಿದ ದೊಡ್ಡ ಕಾಡಾಗಿದೆ. ಇಲ್ಲಿ ನೀನೂ ಸಹ ವಿಶ್ವಾಸದಿಂದ ಇರಲಾರೆ. ಇನ್ನು ನಾನು ಹೇಗೆ ವಿಶ್ವಾಸದಿಂದ ಇರುವೆನು?
ಅತೋ ನಾಯಂ ಶುಭೋ ವಾಸಸ್ತುಲ್ಯೇ ಸದಸತೀ ಇಹ |
ವಧೋ ಹ್ಯೇವಾತ್ರ ಸುಕೃತೋ ದುಷ್ಕೃತೇ ನ ಚ ಸಂಶಯಃ ॥42॥
ಆದ್ದರಿಂದ ಇಲ್ಲಿ ವಾಸ ಮಾಡುವುದು ಶುಭವಲ್ಲ. ಇಲ್ಲಿ ಸದಸತ್ಕಾರ್ಯಗಳು ಸಮಾನವಾಗಿವೆ. ಒಳ್ಳೆಯ ಕಾರ್ಯವನ್ನು ಮಾಡಿದವನಿಗೆ ವಧೆಯೇ ಉಂಟಾಗು- ತ್ತಿದೆ. ದುಷ್ಕಾರ್ಯವನ್ನು ಮಾಡಿದವನಿಗೆ ವಧೆಯುಂಟಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.
ನ್ಯಾಯತೋ ದುಷ್ಕೃತೇ ಘಾತಃ ಸುಕೃತೇ ಸ್ಯಾತ್ ಕಥಂ ವಧಃ |
ನೇಹ ಯುಕ್ತಂ ಚಿರಂ ಸ್ಥಾತುಂ ಜವೇನಾತೋ ವ್ರಜೇದ್ ಬುಧಃ ॥43॥
ನ್ಯಾಯವಾಗಿ ನೋಡಿದರೆ ದುಷ್ಕಾರ್ಯವನ್ನು ಮಾಡಿದವನಿಗೆ ವಧೆಯಾಗ- ಬೇಕು. ಸತ್ಕಾರ್ಯವನ್ನು ಮಾಡಿದವನಿಗೆ ಹೇಗೆ ವಧೆಯಾದೀತು? ಇಲ್ಲಿ ಬಹಳಕಾಲ ನಿಲ್ಲುವುದು ಯೋಗ್ಯವಲ್ಲ. ಆದ್ದರಿಂದ ವಿವೇಕಿಯಾದವನು ಶೀಘ್ರವಾಗಿ ಹೊರಟು -ಹೋಗಬೇಕು.
ಸೀತಾ ನಾಮ ನದೀ ರಾಜನ್ ಪ್ಲವೋ ಯಸ್ಯಾಂ ನಿಮಜ್ಜತಿ |
ತಥೋಪಮಾಮಿಮಾಂ ಮನ್ಯೇ ವಾಗುರಾಂ ಸರ್ವಘಾತಿನೀಮ್ ॥44॥

ಎಲೈ ರಾಜನೇ! ಸೀತಾ ಎಂಬ ನದಿಯಿದೆ. ಅದರಲ್ಲಿ ದೋಣಿಗಳು ಮುಳು- ಗುತ್ತವೆ. ನಿನ್ನ ರಾಜ್ಯವು ಅದರಂತೆ ಸರ್ವಘಾತುಕವಾದ ಬಲೆಯಂತೆ ಇದೆ ಎಂದು ನಾನು ತಿಳಿಯುತ್ತೇನೆ.
ಮಧುಪ್ರಪಾತೋ ಹಿ ಭವಾನ್ ಭೋಜನಂ ವಿಷಸಂಯುತಮ್ |
ಅಸತಾಮಿವ ತೇ ಭಾವೋ ವರ್ತತೇ ನ ಸತಾಮಿವ |
ಆಶೀವಿಷೈಃ ಪರಿವೃತಃ ಕೂಪಸ್ತ್ವಮಿವ ಪಾರ್ಥಿವ ॥45॥
ನೀನು ಮಧುಪ್ರಪಾತದಂತೆ ಇದ್ದೀಯೆ. ನಿನ್ನ ಭೋಜನವು ವಿಷಸಂಯುತ- ವಾಗಿದೆ. ನಿನ್ನಅಭಿಪ್ರಾಯವು ಅಸಜ್ಜನರ ಅಭಿಪ್ರಾಯದಂತೆ ಇದೆಯೇ ಹೊರತು ಸಜ್ಜನರ ಅಭಿಪ್ರಾಯದಂತೆ ಇಲ್ಲ. ಎಲೈ ರಾಜನೇ! ನೀನು ಸರ್ಪಗಳಿಂದ ಸುತ್ತು- ವರಿಯಲ್ಪಟ್ಟ ಕೂಪದಂತೆ ಇದ್ದೀಯೆ.
ದುರ್ಗತೀರ್ಥಾ ಬೃಹತ್ಕೂಲಾ ಕರೀರೀವೇತ್ರಸಂಯುತಾ |
ನದೀ ಮಧುರಪಾನೀಯಾ ಯಥಾ ರಾಜಂಸ್ತಥಾ ಭವಾನ್ |
ಶ್ವಗೃಧ್ರಗೋಮಾಯುಯುತೋ ರಾಜಹಂಸಸಮೋ ಹ್ಯಸಿ ॥46॥
ಪಡೆಯಲು ಅಸಾಧ್ಯವಾದ ಜಲ, ದೊಡ್ಡ ದಡ, ಬೆತ್ತ ಮೊದಲಾದ ಗಿಡ- ಗಂಟೆಗಳ ಪೊದೆ, ಮಧುರವಾದ ಜಲವಿರುವ ನದಿಯಂತೆ ನೀನು ಇದ್ದೀಯೆ. ಎಲೈ ರಾಜನೇ! ನೀನು ನಾಯಿ, ನರಿ ಮತ್ತು ಹದ್ದುಗಳಿಂದ ಸುತ್ತುವರಿಯಲ್ಪಟ್ಟ ರಾಜ- ಹಂಸಕ್ಕೆ ಸಮನಾಗಿದ್ದೀಯೆ.
ಯಥಾಶ್ರಿತ್ಯ ಮಹಾವೃಕ್ಷಂ ಕಕ್ಷಃ ಸಂವರ್ಧತೇ ಮಹಾನ್ |
ತತಸ್ತಂ ಸಂವೃಣೋತ್ಯೇವ ತಮತೀತ್ಯ ಚ ವರ್ಧತೇ ॥47॥
ತೇನೈವೋಪೇಂಧನೋ ನೂನಂ ದಾವೋ ದಹತಿ ದಾರುಣಃ |
ತಥೋಪಮಾ ಹ್ಯಮಾತ್ಯಾಸ್ತೇ ರಾಜಂಸ್ತಾನ್ ಪರಿಶೋಧಯ ॥48॥
ಹೇಗೆ ಪೊದೆಗಳು ದೊಡ್ಡ ವೃಕ್ಷವನ್ನು ಆಶ್ರಯಿಸಿ ಚೆನ್ನಾಗಿ ಬೆಳೆದು ಅದನ್ನು ಅವರಿಸಿ ಅದಕ್ಕಿಂತ ಮೇಲೆ ಬೆಳೆಯುತ್ತವೆಯೋ, ವೃಕ್ಷಕ್ಕೆ ಬೆಂಕಿಯು ತಗುಲಿದಾಗ ಇವು ಸೌದೆಗಳಾಗಿ ದಾವವಾಗಿ ಮಹಾವೃಕ್ಷವನ್ನು ದಹಿಸುತ್ತವೆಯೋ ಎಲೈ ರಾಜನೇ! ನಿನ್ನ ಅಮಾತ್ಯರು ಆ ರೀತಿಯಲ್ಲಿದ್ದಾರೆ. ಅವರನ್ನು ಚೆನ್ನಾಗಿ ಶೋಧಿಸು.
ಭವತ್ಯೈವ ಕೃತಾ ರಾಜನ್ ಭವತಾ ಪರಿಪಾಲಿತಾಃ |
ಭವಂತಂ ಪರ್ಯವಜ್ಞಾಯ ಜಿಘಾಂಸಂತಿ ಭವತ್ಪ್ರಿಯಮ್ ॥49॥
ಎಲೈ ರಾಜನೇ! ನೀನೇ ನೇಮಿಸಿದವರು, ನಿನ್ನಿಂದಲೇ ರಕ್ಷಿತರಾದವರು ಅಂತಹವರು ನಿನ್ನನ್ನು ತಿರಸ್ಕರಿಸಿ ನಿನಗೆ ಪ್ರಿಯರಾದವರನ್ನು ಕೊಲ್ಲಲು ಬಯಸುತ್ತಾರೆ.
ಉಷಿತಂ ಶಂಕಮಾನೇನ ಪ್ರಮಾದಂ ಪರಿರಕ್ಷತಾ |
ಅಂತಃಸರ್ಪ ಇವಾಗಾರೇ ವೀರಪತ್ನ್ಯಾ ಇವಾಲಯೇ |
ಶೀಲಂ ಜಿಜ್ಞಾಸಮಾನೇನ ರಾಜ್ಞಶ್ಚ ಸಹಜೀವಿನಾ ॥50॥
ನಿನ್ನ ಶೀಲವನ್ನು ತಿಳಿದುಕೊಳ್ಳಲು ಬಯಸಿ, ಯಾವ ಪ್ರಮಾದವನ್ನೂ ಮಾಡ- ದಂತೆ ಸರ್ಪವಿರುವ ಮನೆಯಲ್ಲಿ ಜೀವಿಸಿದಂತೆ, ವೀರಪತ್ನಿಯ ಮನೆಯಲ್ಲಿ ಜೀವಿಸಿ- ದಂತೆ ನಿನ್ನ ಜೊತೆಯಲ್ಲಿ ಜೀವಿಸಿದೆ.
ಕಚ್ಚಿಜ್ಜಿತೇಂದ್ರಿಯೋ ರಾಜಾ ಕಚ್ಚಿದಸ್ಯಾಂತರಾ ಜಿತಾಃ |
ಕಚ್ಚಿದೇಷಾಂ ಪ್ರಿಯೋ ರಾಜಾ ಕಚ್ಚಿದ್ ರಾಜ್ಞಃ ಪ್ರಿಯಾ ಪ್ರಜಾಃ ॥51॥
ಜಿಜ್ಞಾಸುರಿಹ ಸಂಪ್ರಾಪ್ತಸ್ತವಾಹಂ ರಾಜಸತ್ತಮ |
ತಸ್ಯ ಮೇ ರೋಚತೇ ರಾಜನ್ ಕ್ಷುಧಿತಸ್ಯೇವ ಭೋಜನಮ್ ॥52॥
ರಾಜನು ಜಿತೇಂದ್ರಿಯನಾಗಿದ್ದಾನೆಯೇ. ಅವನ ಒಳಗಿನ ಜನರು ಜಿತರಾಗಿ- ದ್ದಾರೆಯೇ, ರಾಜನು ಅವರಿಗೆ ಪ್ರಿಯನಾಗಿದ್ದಾನೆಯೇ, ಪ್ರಜೆಗಳು ಅವನಿಗೆ ಪ್ರಿಯ- ರಾಗಿದ್ದಾರೆಯೇ, ಎಲೈ ರಾಜಶ್ರೇಷ್ಠನೇ! ಇವುಗಳನ್ನು ತಿಳಿದುಕೊಳ್ಳಲು ನಾನು ನಿನ್ನ ಸಮೀಪಕ್ಕೆ ಬಂದೆ. ರಾಜನೇ! ನಿನ್ನ ಸ್ವಭಾವವು ಹಸಿದವನಿಗೆ ಭೋಜನವು ಇಷ್ಟ- ವಾಗುವಂತೆ ನನಗೆ ಇಷ್ಟವಾಗುತ್ತದೆ.
ಅಮಾತ್ಯಾ ಮೇ ನ ರೋಚಂತೇ ವಿತೃಷ್ಣಸ್ಯ ಯಥೋದಕಮ್ |
ಭವತೋಽರ್ಥಕೃದಿತ್ಯೇವ ಮಯಿ ದೋಷೋ ಹಿ ತೈಃ ಕೃತಃ |
ವಿದ್ಯತೇ ಕಾರಣಂ ನಾನ್ಯದಿತಿ ಮೇ ನಾತ್ರ ಸಂಶಯಃ ॥53॥
ನಿನ್ನ ಅಮಾತ್ಯರು ಮಾತ್ರ ಬಾಯಾರಿಕೆಯಿಲ್ಲದವನಿಗೆ ನೀರು ಇಷ್ಟವಾಗದಂತೆ ನನಗೆ ಇಷ್ಟವಾಗುವುದಿಲ್ಲ. ನಿನಗೆ ಹಿತಕಾರಿಯಾದವನು ಎಂಬ ಒಂದೇ ಕಾರಣಕ್ಕಾಗಿ ಅವರು ನನಗೆ ಅಪಚಾರವನ್ನು ಮಾಡಿದ್ದಾರೆ. ಬೇರೆ ಯಾವುದೂ ಕಾರಣವಿಲ್ಲ ಎಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ.
ನ ಹಿ ತೇಷಾಮಹಂ ದ್ರುಗ್ಧಸ್ತತ್ ತೇಷಾಂ ದೋಷವದ್ ಗತಮ್ |
ಅರೇರ್ಹಿ ದುರ್ಹೃದಾದ್ ಭೇಯಂ ಭಗ್ನಪೃಷ್ಠಾದಿವೋರಗಾತ್ ॥54॥
ನಾನು ಅವರಿಗೆ ಯಾವ ದ್ರೋಹವನ್ನೂ ಮಾಡಿಲ್ಲ. ಅವರು ಅದನ್ನೂ ದೋಷವೆಂದು ಎಣಿಸುತ್ತಾರೆ. ಕೆಟ್ಟಮನಸ್ಸುಳ್ಳ ಶತ್ರುವಿನಿಂದ ಸೊಂಟವು ಮುರಿದ ಹಾವಿಗೆ ಹೆದರಿದಂತೆ ಹೆದರಬೇಕು.
ರಾಜಾ
ಭೂಯಸೋ ಪರಿಬರ್ಹೇಣ ಸತ್ಕಾರೇಣ ಚ ಭೂಯಸಾ |
ಪೂಜಿತೋ ಬ್ರಾಹ್ಮಣಶ್ರೇಷ್ಠ ಭೂಯೋ ವಸ ಗೃಹೇ ಮಮ ॥55॥
ರಾಜ ಎಲೈ ಬ್ರಾಹ್ಮಣಶ್ರೇಷ್ಠನೇ! ಇನ್ನೂ ಹೆಚ್ಚಿನ ಉಡುಗೊರೆಗಳಿಂದ ಇನ್ನೂ ಹೆಚ್ಚಿನ ಸತ್ಕಾರಗಳಿಂದ ಪೂಜಿತನಾಗಿ ನನ್ನ

ಮನೆಯಲ್ಲಿ ಇನ್ನೂ ವಾಸ ಮಾಡು.
ಯೇ ತ್ವಾ ಬ್ರಾಹ್ಮಣ ನೇಚ್ಛಂತಿ ನ ತೇ ವತ್ಸ್ಯಂತಿ ಮೇ ಗೃಹೇ |
ಭವತ್ಯೈವ ಹಿ ತಜ್ಜ್ಞೇಯಂ ಯದಿದಾನೀಮನಂತರಮ್ ॥56॥
ಎಲೈ ಬ್ರಾಹ್ಮಣನೇ! ಯಾರು ನಿನ್ನನ್ನು ಬಯಸುವುದಿಲ್ಲವೋ ಅವರು ನನ್ನ ಮನೆಯಲ್ಲಿ ವಾಸಿಸುವುದಿಲ್ಲ. ನಾನು ಈಗ ಮುಂದೆ ಏನು ಮಾಡಬೇಕೆಂಬುದನ್ನು ನೀನೇ ತಿಳಿದು ಹೇಳಬೇಕು.
ಯಥಾ ಸ್ಯಾದ್ ದುಷ್ಕೃತೋ ದಂಡೋ ಯಥಾ ಚ ಸುಕೃತಂ ಕೃತಮ್ |
ತಥಾ ಸಮೀಕ್ಷ್ಯ ಭಗವನ್ ಶ್ರೇಯಸೇ ವಿನಿಯುಂಕ್ಷ್ವ ಮಾಮ್ ॥57॥
ಹೇಗೆ ದುಷ್ಕರ್ಮಿಗಳಿಗೆ ದಂಡವು ಉಂಟಾಗುತ್ತದೆಯೋ, ಹೇಗೆ ಒಳ್ಳೆಯ ಕಾರ್ಯವನ್ನು ಮಾಡಿದಂತಾಗುತ್ತದೆಯೋ, ಪೂಜ್ಯನೇ ಹಾಗೆ ವಿಚಾರ ಮಾಡಿ, ನನ್ನನ್ನು ಶ್ರೇಯೋಮಾರ್ಗದಲ್ಲಿ ಸ್ಥಾಪಿಸುವವನಾಗು.
ಮುನಿಃ
ಅದರ್ಶಯನ್ನಿಮಂ ದೋಷಮೇಕೈಕಂ ದುರ್ಬಲಂ ಕುರು |
ತತಃ ಕಾರಣಮಾಜ್ಞಾಯ ಪುರುಷಂ ಪುರುಷಂ ಜಹಿ ॥58॥
ಮುನಿ ಈ ದೋಷವನ್ನು ನಿನಗೆ ತೋರಿಸಿದ್ದೇನೆ. ಒಬ್ಬೊಬ್ಬನನ್ನೂ ದುರ್ಬಲ- ನನ್ನಾಗಿ ಮಾಡು. ಅನಂತರ ಕಾರಣವನ್ನು ತಿಳಿದು ಒಬ್ಬೊಬ್ಬ ಪುರುಷನನ್ನೂ ದೂರ- ಮಾಡು.
ಏಕದೋಷಾ ಹಿ ಬಹವೋ ಮೃದ್ನೀಯುರಪಿ ಕಂಟಕಾನ್ |
ಮಂತ್ರಭೇದಭಯಾದ್ ರಾಜಂಸ್ತಸ್ಮಾದೇತದ್ ಬ್ರವೀಮಿ ತೇ ॥59॥
ಒಂದೇ ದೋಷವಿರುವ ಅನೇಕ ಜನರು ಸೇರಿದರೆ ಅವರು ಒಟ್ಟಾಗಿ ಕಂಟಕ- ಗಳನ್ನು ತುಳಿದು ನಾಶ ಮಾಡಬಹುದು. ರಾಜನೇ ಮಂತ್ರಭೇದಭಯದಿಂದ ನಾನು ಇದನ್ನು ನಿನಗೆ ಹೇಳುತ್ತಿದ್ದೇನೆ.
ಅರ್ಥೇ ಸರ್ವಂ ಜಗದ್ ದ್ವಂದ್ವಮರ್ಥೇನ ಚ ನಿಬದ್ಧ್ಯತೇ |
ಅರ್ಥೇ ದರ್ಪೋ ಮನುಷ್ಯಾಣಾಂ ತಸ್ಮಾದರ್ಥಂ ವಿರೇಚಯ ॥60॥
ಜಗತ್ತಿನ ಎಲ್ಲ ಕಲಹಗಳು ಅರ್ಥದಿಂದ ಉಂಟಾಗುತ್ತವೆ. ಅರ್ಥದಿಂದ ಎಲ್ಲರೂ ಬದ್ಧರಾಗುತ್ತಾರೆ. ಅರ್ಥವು ಮನುಷ್ಯರಿಗೆ ದರ್ಪವನ್ನುಂಟು ಮಾಡುತ್ತದೆ. ಆದ್ದರಿಂದ ದುಷ್ಟರಾದ ಅಮಾತ್ಯರು ಅರ್ಥಹೀನರಾಗುವಂತೆ ಮಾಡು.
ಏಕೇನೈಕಸ್ಯ ದೋಷೇಣ ತದ್ವಿರುದ್ಧಂ ಪ್ರಚೋದಯ |
ಸ ತಸ್ಯ ದೋಷಾನುದ್ಭಾವ್ಯ ತಸ್ಯಾರ್ಥಂ ಗ್ರಾಹಯಿಷ್ಯತಿ ॥61॥
ಒಂದು ದೋಷವಿರುವ ಒಬ್ಬನ ಮೇಲೆ ಅವನಿಗೆ ವಿರುದ್ಧನಾದವನನ್ನು ಪ್ರಚೋದಿಸು. ಅವನು ಅವನ ಬೇರೆ ದೋಷಗಳನ್ನು ಹೊರಗೆಳೆದು ರಾಜನು ಅವನ ಅರ್ಥವನ್ನು ತೆಗೆದುಕೊಳ್ಳುವಂತೆ ಮಾಡುವನು.
ಸಾಮಪೂರ್ವಂ ಚ ಕೇಷಾಂಚಿದ್ ಭೇದೇನ ಚ ಪರಸ್ಪರಮ್ |
ವೈರಂ ಕಾರಯ ಭೂಪಾಲ ಪಶ್ಚಾದ್ ದಂಡಂ ಪ್ರಯೋಜಯ ॥62॥
ಎಲೈ ರಾಜನೇ! ಕೆಲವರಿಗೆ ಸಾಮದಿಂದ, ಕೆಲವರಿಗೆ ಭೇದದಿಂದ ವೈರವನ್ನು ಉಂಟುಮಾಡು. ಅನಂತರ ದಂಡವನ್ನು ಪ್ರಯೋಗಿಸು.
ಬಿಲ್ವೇನ ಚ ಯಥಾ ಬಿಲ್ವಮಾಕಾರಂ ಛಾದ್ಯ ಬುದ್ಧಿಮಾನ್ |
ಅಶುದ್ಧಂ ಸಚಿವಂ ರಾಜನ್ನಶುದ್ಧೇನೈವ ನಾಶಯ ॥63॥
ಬಿಲ್ವಫಲದಿಂದ ಬಿಲ್ವಫಲವನ್ನು ನಾಶಮಾಡಿದಂತೆ ಬುದ್ಧಿವಂತನಾದ ನೀನು ನಿನ್ನ ಅಭಿಪ್ರಾಯವನ್ನು ಮರೆಮಾಡಿ ಅಶುದ್ಧನಾದ ಸಚಿವನನ್ನು ಅಶುದ್ಧನಾದ ಸಚಿವ- ನಿಂದಲೇ ನಾಶಮಾಡು.
ವಯಂ ತು ಬ್ರಾಹ್ಮಣಾ ರಾಜನ್ ಮೃದುದಂಡಾಃ ಕೃಪಾಲವಃ |
ಸ್ವಸ್ತಿ ಚೇಚ್ಛಾಮಿ ಭವತಃ ಪರೇಷಾಂ ಚ ಯಥಾತ್ಮನಃ ॥64॥
ಎಲೈ ರಾಜನೇ! ನಾವು ಬ್ರಾಹ್ಮಣರು; ಕೃಪಾಳುಗಳು ಮತ್ತು ಮೃದುವಾದ ದಂಡವುಳ್ಳವರು. ನಿನಗೂ ಉಳಿದವರಿಗೂ ನನ್ನಂತೆಯೇ ಕ್ಷೇಮವನ್ನು ಬಯಸು- ತ್ತೇನೆ.
ರಾಜನ್ನಾತ್ಮಾನಮಾಚಕ್ಷೇ ಸಂಬಂಧೀ ಭವತೋ ಹ್ಯಹಮ್ |
ಮುನಿಃ ಕಾಲಕವೃಕ್ಷೀಯ ಇತ್ಯೇವಮಭಿಸಂಜ್ಞಿತಃ ॥65॥
ರಾಜನೇ! ನಿನಗೆ ನಾನು ಯಾರೆಂದು ತಿಳಿಸುತ್ತೇನೆ. ನಾನು ನಿನ್ನ ಸಂಬಂಧಿ- ಯಾದ ಕಾಲಕವೃಕ್ಷೀಯ ಎಂಬ ಹೆಸರಿನ ಮುನಿ.
ಪಿತುಃ ಸಖಾ ಚ ಭವತಃ ಸಮ್ಮತಃ ಸತ್ಯಸಂಗರಃ |
ವ್ಯಾಪನ್ನೇ ಭವತೋ ರಾಜ್ಯೇ ರಾಜನ್ ಪಿತರಿ ಸಂಸ್ಥಿತೇ ॥66॥
ಸರ್ವಕಾಮಾನ್ ಪರಿತ್ಯಜ್ಯ ತಪಸ್ತಪ್ತಂ ತದಾ ಮಯಾ |
ಸ್ನೇಹಾತ್ ತ್ವಾಂ ಪ್ರಬ್ರವೀಮ್ಯೇತನ್ಮಾ ಭೂಯೋ ವಿಭ್ರಮೇದಿತಿ ॥67॥
ನಿನ್ನ ತಂದೆಯ ಸ್ನೇಹಿತ. ಸತ್ಯಸಂಗರನೆಂದು ಎಲ್ಲರಿಗೂ ಸಮ್ಮತನಾದವನು. ನಿನ್ನ ತಂದೆಯು ಮರಣವನ್ನು ಹೊಂದಿ ನಿನ್ನ ರಾಜ್ಯವು ವಿಪತ್ತಿಗೆ ಒಳಗಾದಾಗ ನಾನು ಎಲ್ಲ ಕಾಮಗಳನ್ನೂ ತ್ಯಜಿಸಿ ತಪಸ್ಸನ್ನು ಆಚರಿಸಿದೆ. ನಿನ್ನ ಮೇಲಿನ ಸ್ನೇಹದಿಂದ ಇನ್ನೊಮ್ಮೆ ನೀನು ಪ್ರಮಾದವನ್ನು ಮಾಡಬಾರದು ಎಂದು ಭಾವಿಸಿ ನಿನಗೆ ಹೇಳುತ್ತಿದ್ದೇನೆ.
ಉಭೇ ದೃಷ್ಟ್ವಾ ದುಃಖಸುಖೇ ರಾಜ್ಯಂ ಪ್ರಾಪ್ಯ ಯದೃಚ್ಛಯಾ |
ರಾಜ್ಯೇನಾಮಾತ್ಯಸಂಸ್ಥೇನ ಕಥಂ ರಾಜನ್ ಪ್ರಮಾದ್ಯಸಿ ॥68॥
ರಾಜನೇ! ಸುಖದುಃಖಗಳೆರಡನ್ನೂ ನೋಡಿ, ಭಗವದಿಚ್ಛೆಯಿಂದ ರಾಜ್ಯವನ್ನು ಪಡೆದು, ರಾಜ್ಯವು ಅಮಾತ್ಯರ ಕೈಯ್ಯಲ್ಲಿ ಇರುವಾಗ

ನೀನು ಹೇಗೆ ಪ್ರಮಾದವನ್ನು ಮಾಡುವಿ?
ಭೀಷ್ಮ:
ತತೋ ರಾಜಕುಲೇ ನಂದೀ ಸಂಜಜ್ಞೇ ಭೂಯಸೀ ಪುನಃ |
ಪುರೋಹಿತಕುಲೇ ಚೈವ ಸಂಪ್ರಾಪ್ತೇ ಬ್ರಾಹ್ಮಣರ್ಷಭೇ ॥69॥
ಆಗ ಅಂತಹ ಬ್ರಾಹ್ಮಣರ್ಷಭನು ಸಂಪ್ರಾಪ್ತನಾದಾಗ ರಾಜಕುಲದಲ್ಲಿಯೂ ಮತ್ತು ಪುರೋಹಿತಕುಲದಲ್ಲಿಯೂ ದೊಡ್ಡ ಅನಂದದ ಶಬ್ಧವು ಉಂಟಾಯಿತು.
ಏಕಚ್ಛತ್ರಾಂ ಮಹೀಂ ಕೃತ್ವಾ ಕೌಸಲ್ಯಾಯ ಯಶಸ್ವಿನೇ |
ಮುನಿಃ ಕಾಲಕವೃಕ್ಷೀಯ ಈಜೇ ಕ್ರತುಭಿರುತ್ತಮೈಃ ॥70॥
ಕಾಲಕವೃಕ್ಷೀಯ ಮುನಿಯು ಯಶಸ್ವಿಯಾದ ಕೌಸಲ್ಯನಿಗೆ ಏಕಚ್ಛತ್ರವಾದ ಮಹಿಯನ್ನು ಸಂಪಾದಿಸಿಕೊಟ್ಟು ಉತ್ತಮವಾದ ಯಜ್ಞಗಳಿಂದ ಯಾಗವನ್ನು ಮಾಡಿ- ಸಿದನು.
ಹಿತಂ ತದ್ ವಚನಂ ಶ್ರುತ್ವಾ ಕೌಸಲ್ಯೋಽನ್ವಶಸನ್ಮಹೀಮ್ |
ತಥಾಚ ಕೃತವಾನ್ ರಾಜಾ ಯಥೋಕ್ತಂ ತೇನ ಭಾರತ ॥71॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರಶೀತಿತಮೋಽಧ್ಯಾಯಃ ॥84॥
ಅವನ ಹಿತವಚನಗಳನ್ನು ಕೇಳಿ ಕೌಸಲ್ಯನು ಭೂಮಿಯನ್ನು ಆಳಿದನು. ಎಲೈ ಭಾರತನೇ! ರಾಜನು ಅವನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 84ನೆಯಅಧ್ಯಾಯವು ಮುಗಿಯಿತು.

## 85. ಎಂಬತ್ತೈದನೆಯ ಅಧ್ಯಾಯ

### ಮಂತ್ರಿಮೊದಲಾದವರ ಲಕ್ಷಣಕಥನ

ಯುಧಿಷ್ಠಿರಃ
ಸಭಾಸದಸಹಾಯಾಶ್ಚ ಸುಹೃದಶ್ಚ ವಿಶಾಂಪತೇ |
ಪರಿಚ್ಛದಾಸ್ತಥಾಮಾತ್ಯಾಃ ಕೀದೃಶಾಃ ಸ್ಯುಃ ಪಿತಾಮಹ ॥1॥
ಎಲೈ ಪಿತಾಮಹನೇ! ಸಭಾಸದರು, ಸಹಾಯಕರು, ಸುಹೃಜ್ಜನರು, ಪರಿ- ವಾರವು, ಅಮಾತ್ಯರು ಎಂತಹವರಾಗಿರಬೇಕು?
ಭೀಷ್ಮ:
ಹ್ರೀನಿಷೇಧಾಃ ಸದಾ ಸಂತಃ ಸತ್ಯಾರ್ಜವಸಮನ್ವಿತಾಃ |
ಶಕ್ತಾಃ ಕಥಯಿತುಂ ಸಮ್ಯಕ್ ತೇ ತವ ಸ್ಯುಃ ಸಭಾಸದಃ ॥2॥
ಭೀಷ್ಮರು ಕೆಟ್ಟ ಕೆಲಸವನ್ನು ಮಾಡುವುದಕ್ಕೆ ನಾಚುವವರಾಗಿ, ಸದಾ ಸಜ್ಜನರಾಗಿ, ಸತ್ಯಾರ್ಜವಯುಕ್ತರಾಗಿ, ಚೆನ್ನಾಗಿ ಮಾತನಾಡಲು ಬರುವವರು ನಿನ್ನ ಸಭಾಸದರಾಗಲಿ.
ಅತ್ಯಾಢ್ಯಾಂಶ್ಚಾತಿಶೂರಾಂಶ್ಚ ಬ್ರಾಹ್ಮಣಾಂಶ್ಚ ಬಹುಶ್ರುತಾನ್ |
ಸುಸಂತುಷ್ಟಾಂಶ್ಚ ಕೌಂತೇಯ ಮಹೋತ್ಸಾಹಾಂಶ್ಚ ಕರ್ಮಸು ॥3॥
ಏತಾನ್ ಸಹಾಯಾನ್ ಲಿಪ್ಸೇಥಾಃ ಸರ್ವಾಸ್ವಾಪತ್ಸು ಭಾರತ |
ಕುಲೀನಃ ಪೂಜಿತೋ ನಿತ್ಯಂ ನಹಿ ಶಕ್ತಿಂ ನಿಗೂಹತಿ ॥4॥
ಬಹಳವಾಗಿ ಧನಾಢ್ಯರಾದವರನ್ನು, ಅತಿ ಶೂರರನ್ನು, ಬಹುಶ್ರುತರಾದ ಬ್ರಾಹ್ಮಣರನ್ನು, ಮಹೋತ್ಸಾಹವನ್ನು ಹೊಂದಿ ಒಳ್ಳೆಯ ಸಂತೋಷದಿಂದಿರು- ವವರನ್ನು, ಎಲೈ ಕೌಂತೇಯನೇ! ನಿನ್ನ ಕರ್ಮಗಳಲ್ಲಿ ಸಹಾಯಕರನ್ನಾಗಿ ಬಯಸು- ವವನಾಗು. ಎಲೈ ಭಾರತನೇ! ಕುಲೀನನಾಗಿ ಸತ್ಕರಿಸಲ್ಪಟ್ಟವನು ಯಾವ ಆಪತ್ತಿ- ನಲ್ಲಿಯೂ ತನ್ನ ಶಕ್ತಿಯನ್ನು ಮುಚ್ಚಿಡುವುದಿಲ್ಲ.
ಪ್ರಸನ್ನಂ ಹ್ಯಪ್ರಸನ್ನಂ ವಾ ಪೀಡಿತಂ ಹೃತಮೇವ ವಾ |
ಆವರ್ತಯತಿ ಭೂಯಿಷ್ಠಂ ಸ ಏಕೋ ಹ್ಯನುಪಾಲಿತಃ ॥5॥
ಅಂತಹ ಒಬ್ಬನು ಚೆನ್ನಾಗಿ ರಕ್ಷಿಸಲ್ಪಟ್ಟರೆ ಪ್ರಸನ್ನನಾದ ಅಥವಾ ಅಪ್ರಸನ್ನನಾದ ಇನ್ನೊಬ್ಬರನ್ನು ಹಿಂದಿರುಗಿಸುತ್ತಾನೆ. ಪೀಡಿತವಾದ ಅಥವಾ ಅಪಹೃತವಾದ ಧನವನ್ನು ಹಿಂದಿರುಗಿಸುತ್ತಾನೆ.
ಕುಲೀನಾ ದೇಶಜಾಃ ಪ್ರಾಜ್ಞಾ ರೂಪವಂತೋ ಬಹುಶ್ರುತಾಃ |
ಪ್ರಗಲ್ಭಾಶ್ಚಾನುರಕ್ತಾಶ್ಚ ತೇ ತವ ಸ್ಯುಃ ಪರಿಚ್ಛದಾಃ ॥6॥
ಕುಲೀನರು, ಒಳ್ಳೆಯ ದೇಶದಲ್ಲಿ ಜನಿಸಿದವರು,ಪ್ರಾಜ್ಞರು, ರೂಪವಂತರು, ಬಹುಶ್ರುತರು, ವಿದ್ವಾಂಸರು, ನಿನ್ನಲ್ಲಿ ಪ್ರೀತಿಯುಳ್ಳವರು ಆದವರು ನಿನಗೆ ಪರಿ- ವಾರವಾಗಲಿ.
ದೌಷ್ಕುಲೇಯಾಶ್ಚ ಲುಬ್ಧಾಶ್ಚ ನೃಶಂಸಾ ನಿರಪತ್ರಪಾಃ |
ತೇ ತ್ವಾಂ ತಾತ ನಿಷೇವೇಯುರ್ಯಾವದಾರ್ದ್ರಕಪಾಣಯಃ ॥7॥
ಪ್ರೀತಿಪಾತ್ರನೇ! ದುಷ್ಕುಲದಲ್ಲಿ ಜನಿಸಿದವರು, ಲೋಭಿಗಳು, ಕ್ರೂರಿಗಳು, ನಾಚಿಕೆಗೆಟ್ಟವರು, ದಾನವನ್ನು ಸ್ವೀಕರಿಸಿದ ಹಸ್ತವು ಒದ್ದೆಯಾಗಿರುವವರೆಗೆ ಮಾತ್ರ ನಿನ್ನ ಸೇವೆಯನ್ನು ಮಾಡುವವರು ನಿನ್ನ ಪರಿವಾರದಲ್ಲಿ ಇಲ್ಲದಿರಲಿ.
ಅರ್ಥಮಾನಾರ್ಘ್ಯಸತ್ಕಾರೈರ್ಭೋಗೈರುಚ್ಚಾವಚೈಃ ಪ್ರಿಯಾನ್ |
ಯಾನರ್ಥಭಾಜೋ ಮನ್ಯೇಥಾಸ್ತೇ ಸ್ಯುಃ ಸುಖಭಾಗಿನಃ ॥8॥
ಅರ್ಥ-ಮಾನಗಳನ್ನು, ಅರ್ಘ್ಯ-ಸತ್ಕಾರಗಳನ್ನು, ಪ್ರಿಯವಾದ ಶ್ರೇಷ್ಠವಾದ ಭೋಗಗಳನ್ನು ಕೊಟ್ಟು ಯಾರು ಅಂತಹ ಸಂಪತ್ತಿಗೆ

ಯೋಗ್ಯರೆಂದು ಭಾವಿಸು- ತ್ತೀಯೋ ಅಂತಹವರು ನಿನ್ನ ಸುಖದಲ್ಲಿ ಭಾಗಿಗಳಾಗುತ್ತಾರೆ.
ಅಭಿನ್ನವೃತ್ತಾ ವಿದ್ವಾಂಸಃ ಸದ್ವೃತ್ತಾಶ್ಚರಿತವ್ರತಾಃ |
ನ ತ್ವಾ ನಿತ್ಯಾರ್ಥಿನೋ ಜಹ್ಯುರಕ್ಷುದ್ರಾಃ ಸತ್ಯವಾದಿನಃ ॥9॥
ಒಂದೇ ವಿಧವಾದ ನಡತೆಯುಳ್ಳ, ಸನ್ನಡತೆಯುಳ್ಳ, ವ್ರತಗಳನ್ನು ಆಚರಿಸುವ, ಮೋಕ್ಷಾಭಿಲಾಷಿಗಳಾದ, ಸತ್ಯವಾದಿಗಳಾದ, ಕ್ಷುದ್ರರಲ್ಲದ ವಿದ್ವಾಂಸರು ನಿನ್ನನ್ನು ಎಂದೂ ಬಿಡಲಾರರು.
ಅನಾರ್ಯಾ ಯೇ ನ ಜಾನಂತಿ ಸಮಯಂ ಮಂದಚೇತಸಃ |
ತೇಭ್ಯಃ ಪ್ರತಿಜುಗುಪ್ಸೇಥಾ ಜಾನೀಯಾಃ ಸಮಯಚ್ಯುತಾನ್ ॥10॥
ಅನಾರ್ಯರಾದ ಯಾರು ಮಂದಬುದ್ಧಿಯುಳ್ಳವರಾಗಿ ರಾಜನ ಸಮಯವನ್ನು ತಿಳಿಯುವುದಿಲ್ಲವೋ ಅವರ ವಿಷಯದಲ್ಲಿ ನೀನು ಅಸಹ್ಯ ಪಡಬೇಕು. ಅವರು ಸಮಯಜ್ಞಾನಶೂನ್ಯರು ಎಂದು ತಿಳಿಯಬೇಕು.
ನೈಕಮಿಚ್ಛೇದ್ ಗಣಂ ಹಿತ್ವಾ ಸ್ಯಾಚ್ಚೇದನ್ಯತರಗ್ರಹಃ |
ಯಸ್ತ್ವೇಕೋ ಬಹುಭಿಃ ಶ್ರೇಯಾನ್ ಕಾಮಂ ತೇನ ಗಣಂ ತ್ಯಜೇತ್ ॥11॥
ಒಬ್ಬರನ್ನು ಅಥವಾ ಒಂದು ಗಣವನ್ನು ಸ್ವೀಕರಿಸಬೇಕಾಗಿ ಬಂದಾಗ ಗಣವನ್ನು ಬಿಟ್ಟು ಒಬ್ಬನನ್ನು ಸ್ವೀಕರಿಸಬಾರದು. ಆದರೆ ಅಂತಹ ಒಬ್ಬನು ಸಮಗ್ರವಾದ ಗಣ- ಕ್ಕಿಂತಲೂ ಶ್ರೇಷ್ಠನಾದರೆ ಆಗ ಗಣವನ್ನು ಬಿಡಬೇಕು.
ಶ್ರೇಯಸೋ ಲಕ್ಷಣಂ ಹ್ಯೇತದ್ ವಿಕ್ರಮೋ ಯಸ್ಯ ದೃಶ್ಯತೇ |
ಕೀರ್ತಿಪ್ರಧಾನೋ ಯಶ್ಚ ಸ್ಯಾತ್ ಸಮಯೇ ಯಶ್ಚ ತಿಷ್ಠತಿ ॥12॥
ಸಮರ್ಥಾನ್ ಪೂಜಯೇದ್ ಯಶ್ಚ ನಾಸ್ಪರ್ಧ್ಯೈಃ ಸ್ಪರ್ಧತೇ ಚ ಯಃ |
ನ ಚ ಕಾಮಾದ್ ಭಯಾತ್ ಕ್ರೋಧಾಲ್ಲೋಭಾದ್
ವಾ ಧರ್ಮಮುತ್ಸೃಜೇತ್ ॥13॥
ಅಮಾನೀ ಸತ್ಯವಾಕ್ ಶಕ್ತೋ ಜಿತಾತ್ಮಾ ಮಾನ್ಯಮಾನಿತಾ |
ಸ ತೇ ಮಂತ್ರಸಹಾಯಃ ಸ್ಯಾತ್ ಸರ್ವಾವಸ್ಥಂ ಪರೀಕ್ಷತಃ ॥14॥
ಇದು ಶ್ರೇಯಸ್ಸಿನ ಲಕ್ಷಣ. ಎಲ್ಲಿ ವಿಕ್ರಮವು ಕಾಣುತ್ತದೆಯೋ, ಯಾವನು ಕೀರ್ತಿಪ್ರಧಾನನೋ, ಯಾವನು ಮಾಡಿಕೊಂಡ ಒಪ್ಪಂದದಂತೆ ನಡೆದುಕೊಳ್ಳು- ತ್ತಾನೆಯೋ, ಸಮರ್ಥರನ್ನು ಪೂಜಿಸುತ್ತಾನೆಯೋ, ಸ್ಪರ್ಧಿಸಲು ಯೋಗ್ಯರಲ್ಲದವರ ಜೊತೆಯಲ್ಲಿ ಸ್ಪರ್ಧಿಸುವುದಿಲ್ಲವೋ, ಕಾಮದಿಂದಾಗಲೀ ಭಯದಿಂದಾಗಲೀ ಕ್ರೋಧದಿಂದಾಗಲೀ ಲೋಭದಿಂದಾಗಲೀ ಧರ್ಮವನ್ನು ಬಿಡುವುದಿಲ್ಲವೋ, ನಿರಹಂಕಾರಿಯಾಗಿ ಸತ್ಯವಚನನಾಗಿ ಸಮರ್ಥನಾಗಿ ಜಿತಮನಸ್ಕನಾಗಿ ಮಾನ್ಯರನ್ನು ಸತ್ಕರಿಸುವವನಾಗಿ ಇರುತ್ತಾನೆಯೋ ಅಂತಹವನು ಸರ್ವಾವಸ್ಥೆಯಲ್ಲಿಯೂ ನಿನಗೆ ಮಂತ್ರಸಹಾಯನಾಗಲಿ.
ಕುಲೀನಃ ಸತ್ಯಸಂಪನ್ನಸ್ತಿತಿಕ್ಷುರ್ದಕ್ಷ ಆತ್ಮವಾನ್ |
ಶೂರಃ ಕೃತಜ್ಞಃ ಸತ್ಯಶ್ಚ ಶ್ರೇಯಸಃ ಪಾರ್ಥ ಲಕ್ಷಣಮ್ ॥15॥
ಎಲೈ ಪಾರ್ಥನೇ! ಸತ್ಕುಲದಲ್ಲಿ ಜನ್ಮ, ಸತ್ಯಸಂಕಲ್ಪತೆ, ದ್ವಂದ್ವಸಹಿಷ್ಣುತೆ, ದಕ್ಷತೆ, ಮನೋಜಯ, ಶೌರ್ಯ, ಕೃತಜ್ಞತೆ ಇವು ಶ್ರೇಯಸ್ಸಿನ ಲಕ್ಷಣಗಳು.
ತಸ್ಯೈವಂ ವರ್ತಮಾನಸ್ಯ ಪುರುಷಸ್ಯ ವಿಜಾನತಃ |
ಅಮಿತ್ರಾಃ ಸಂಪ್ರಸೀದಂತಿ ತತೋ ಮಿತ್ರೀಭವಂತ್ಯಪಿ ॥16॥
ರಾಜನು ಜ್ಞಾನಪೂರ್ವಕವಾಗಿ ಹೀಗೆ ನಡೆದುಕೊಂಡರೆ ಶತ್ರುಗಳೂ ಪ್ರಸನ್ನರಾಗಿ ಅನಂತರ ಮಿತ್ರರಾಗುತ್ತಾರೆ.
ಅತ ಊರ್ಧ್ವಮಮಾತ್ಯಾನಾಂ ಪರೀಕ್ಷೇತ ಗುಣಾಗುಣಾನ್ |
ಸಂಯಮಾತ್ಮಾ ಕೃತಪ್ರಜ್ಞೋ ಭೂತಿಕಾಮಶ್ಚ ಭೂಮಿಪಃ ॥17॥
ಇನ್ನು ಮುಂದೆ ಮನೋನಿಗ್ರಹವುಳ್ಳವನೂ, ಕೃತಪ್ರಜ್ಞನೂ, ಐಶ್ವರ್ಯ- ಕಾಮನೂ ಆದ ರಾಜನು ಅಮಾತ್ಯರ ಗುಣದೋಷಗಳನ್ನು ಪರೀಕ್ಷಿಸಬೇಕು.
ಸಂಬದ್ಧಾಃ ಪುರುಷೈರಾಪ್ತೈರಭಿಜಾತೈಃ ಸ್ವದೇಶಜೈಃ |
ಅಹಾರ್ಯೈರವ್ಯಭೀಚಾರೈಃ ಸರ್ವತಃ ಸುಪರೀಕ್ಷಿತೈಃ॥18॥
ಯೋಧಾಃ ಸೌವಾಸ್ತಥಾ ಪೌಲಾಸ್ತಥೈವಾನ್ಯೇಽಪ್ಯವಸ್ಕೃತಾಃ |
ಕರ್ತವ್ಯಾ ಭೂತಿಕಾಮೇನ ಪುರುಷೇಣ ಬುಭೂಷತಾ ॥19॥
ಆಪ್ತಪುರುಷರ ಸಂಬಂಧವನ್ನು ಹೊಂದಿ, ಸತ್ಕುಲದಲ್ಲಿ ಸ್ವದೇಶದಲ್ಲಿ ಜನಿಸಿ, ಶತ್ರುಗಳಿಂದ ಹಾರಿಸಲ್ಪಡಲು ಅಸಾಧ್ಯರಾಗಿ, ಸತತವಾಗಿ ನಿಷ್ಠೆಯನ್ನು ಹೊಂದಿ, ಎಲ್ಲ ರೀತಿಯಲ್ಲೂ ಚೆನ್ನಾಗಿ ಪರೀಕ್ಷಿತರಾದ, ಸೌವರು, ಪೌಲರು ಮತ್ತು ತಿರ- ಸ್ಕೃತರಾದವರು ಇವರನ್ನು ಭೂತಿಕಾಮನಾದ ರಾಜನು ಯೋಧರನ್ನಾಗಿ ಮಾಡ- ಬೇಕು.
ಯೇಷಾಂ ವೈನಯಿಕೀ ಬುದ್ಧಿಃ ಪ್ರಕೃತಾ ಚೈವ ಶೋಭನಾ |
ತೇಜೋ ಧೈರ್ಯಂ ಕ್ಷಮಾ ಶೌಚಮನುರಾಗಃ ಸ್ಥಿತಿರ್ಧೃತಿಃ ॥20॥
ಪರೀಕ್ಷಿತಗುಣಾನ್ ನಿತ್ಯಂ ಪ್ರೌಢಭಾವಾನ್ ಧುರಂಧರಾನ್ |
ಪಂಚೋಪಧಾವ್ಯತೀತಾಂಶ್ಚ ಕುರ್ಯಾದ್ ರಾಜಾऽರ್ಥಕಾರಿಣಃ ॥21॥
ಯಾರಿಗೆ ವಿನಯಬುದ್ಧಿ ಇರುತ್ತದೆಯೋ ಮತ್ತುಪ್ರಕೃತವಾದ ಕಾರ್ಯಗಳಲ್ಲಿ ಶೋಭನವಾದ ಬುದ್ಧಿಯಿರುತ್ತದೆಯೋ, ತೇಜಸ್ಸು-ಧೈರ್ಯ-ಕ್ಷಮೆ-ಶೌಚ-ಅನು- ರಾಗ-ಸ್ಥೈರ್ಯ ಮತ್ತು ಧೈರ್ಯಗಳಿರುತ್ತವೆಯೋ, ಅಂತಹ ಗುಣಗಳುಳ್ಳ ಪ್ರೌಢ ಅಭಿಪ್ರಾಯವುಳ್ಳವರನ್ನು, ಭಾರವನ್ನು ಹೊರಲು ಸಮರ್ಥರಾದವರನ್ನು ನಿತ್ಯವೂ ಅವರ ಗುಣಗಳನ್ನು ಪರೀಕ್ಷೆ ಮಾಡಿ, ಎಲ್ಲಾ

ಕಪಟವನ್ನೂ ಮೀರಿದ ಅಂತಹ ಐದು ಜನರನ್ನು ರಾಜನು ಅರ್ಥಸಾಧಕರಾದ ಮಂತ್ರಿಗಳನ್ನಾಗಿ ಮಾಡಬೇಕು.
ಪರ್ಯಾಪ್ತವಚನಾನ್ ವೀರಾನ್ ಪ್ರತಿಪತ್ತಿವಿಶಾರದಾನ್ |
ಕುಲೀನಾನ್ ಸತ್ಯಸಂಪನ್ನಾನಿಂಗಿತಜ್ಞಾನನಿಷ್ಠುರಾನ್ ॥22॥
ದೇಶಕಾಲವಿಧಾನಜ್ಞಾನ್ ಭರ್ತೃಕಾರ್ಯಹಿತೈಷಿಣಃ |
ನಿತ್ಯಮರ್ಥೇಷು ಸರ್ವೇಷು ರಾಜಾ ಕುರ್ವೀತ ಮಂತ್ರಿಣಃ ॥23॥
ಚೆನ್ನಾಗಿ ಮಾತನಾಡಲು ಬರುವ, ವೀರರಾದ, ಶೀಘ್ರವಾಗಿ ತಿಳಿದುಕೊಳ್ಳುವ, ಕುಲೀನರಾದ, ಸತ್ಯಸಂಪನ್ನರಾದ, ಇಂಗಿತಜ್ಞರಾದ, ನಿಷ್ಠುರರಲ್ಲದ ದೇಶಕಾಲ- ವಿಧಾನಗಳನ್ನು ತಿಳಿದ, ಸ್ವಾಮಿಯ ಕಾರ್ಯದಲ್ಲಿ ಮತ್ತು ಹಿತದಲ್ಲಿ ಆಸೆಯುಳ್ಳ ಮಂತ್ರಿಗಳನ್ನು ರಾಜನು ಯಾವಾಗಲೂ ಸರ್ವಕಾರ್ಯಗಳಲ್ಲಿ ನಿಯೋಜಿಸಬೇಕು.
ಹೀನತೇಜಾ ಹ್ಯಸಂತುಷ್ಟೋ ನೈವ ಜಾತು ವ್ಯವಸ್ಯತಿ |
ಅವಶ್ಯಂ ಜನಯತ್ಯೇವ ಸರ್ವಕರ್ಮಸು ಸಂಶಯಾನ್ ॥24॥
ತೇಜೋಹೀನನಾದವನು ಮತ್ತು ಅತೃಪ್ತನಾದವನು ಯಾವ ಕಾರ್ಯವನ್ನೂ ಮಾಡುವುದಿಲ್ಲ. ಎಲ್ಲ ಕರ್ಮಗಳಲ್ಲಿಯೂ ಅವಶ್ಯವಾಗಿ ಸಂಶಯವನ್ನೇ ಉಂಟು- ಮಾಡುತ್ತಾನೆ.
ಏವಮಲ್ಪಶ್ರುತೋ ಮಂತ್ರೀ ಕಲ್ಯಾಣಾಭಿಜನೋಽಪ್ಯುತ |
ಧರ್ಮಾರ್ಥಕಾಮಯುಕ್ತೋಽಪಿ ನಾಲಂ ಮಂತ್ರಂ ಪರೀಕ್ಷಿತುಮ್ ॥25॥
ಇದೇ ರೀತಿಯಲ್ಲಿ ಅಲ್ಪಶ್ರುತನಾದ ಮಂತ್ರಿಯು ಒಳ್ಳೆಯ ಕುಲದಲ್ಲಿ ಜನಿಸಿ- ದ್ದರೂ, ಧರ್ಮಾರ್ಥಕಾಮಯುಕ್ತನಾದರೂ ಅವನು ಮಂತ್ರವನ್ನು ಪರೀಕ್ಷಿಸಲು ಸಮರ್ಥನಲ್ಲ.
ತಥೈವಾನಭಿಜಾತೋಽಪಿ ಕಾಮಮಸ್ತು ಬಹುಶ್ರುತಃ |
ಅನಾಯಕ ಇವಾಚಕ್ಷುರ್ಮುಹ್ಯತ್ಯೂಹ್ಯೇಷು ಕರ್ಮಸು ॥26॥
ಅದರಂತೆಯೇ ಸತ್ಕುಲದಲ್ಲಿ ಜನಿಸದವನು, ಬೇಕಾದಂತೆ ಬಹುಶ್ರುತನಾದರೂ ಅನಾಯಕನಂತೆ ಚಕ್ಷುಹೀನನಂತೆ ಆಲೋಚನೆ ಮಾಡಬೇಕಾದ ಕಾರ್ಯಗಳಲ್ಲಿ ಮೋಹಕ್ಕೆ ಒಳಗಾಗುತ್ತಾನೆ.
ಯೋ ವಾ ಹ್ಯಸ್ಥಿರಸಂಕಲ್ಪೋ ಬುದ್ಧಿಮಾನಾಗತಾಗಮಃ |
ಉಪಾಯಜ್ಞೋಽಪಿ ನಾಲಂ ಸ ಕರ್ಮ ಯಾಪಯಿತುಂ ಚಿರಮ್ ॥27॥
ಯಾವನು ಚಂಚಲಸಂಕಲ್ಪವುಳ್ಳವನೋ ಅಂತಹವನು ಬುದ್ಧಿವಂತನಾದರೂ, ಶಾಸ್ತ್ರಜ್ಞನಾದರೂ, ಉಪಾಯಜ್ಞನಾದರೂ ಒಂದು ಕಾರ್ಯವನ್ನು ಕೊನೆಯ- ವರೆಗೂ ಸಾಧಿಸಲು ಸಮರ್ಥನಲ್ಲ.
ಕೇವಲಾತ್ ಪುನರಾಚಾರಾತ್ ಕರ್ಮಣಾಂ ನೋಪಪದ್ಯತೇ |
ಪರಿಮರ್ಶೋ ವಿಶೇಷಾಣಾಮಶ್ರುತಸ್ಯೇಹ ದುರ್ಮತೇಃ ॥28॥
ದುರ್ಮತಿಯಾಗಿ, ಶಾಸ್ತ್ರಶ್ರವಣರಹಿತನಾದ ರಾಜನು ಕೇವಲ ಮಂತ್ರಿಪುರುಷ- ರಿಂದ ಕರ್ಮಗಳ ವಿಶೇಷವನ್ನು ಪರಾಮರ್ಶೆ ಮಾಡಲು ಅಸಮರ್ಥನಾಗುತ್ತಾನೆ. (ರಾಜನು ಅತಿಮೂರ್ಖನಾದರೆ ಮಂತ್ರಿಗಳ ಮಾತನ್ನು ಕೇಳುವುದಿಲ್ಲ ಎಂದು ಅಭಿ- ಪ್ರಾಯ - ಲಕ್ಷಾಲಂಕಾರ).
ಮಂತ್ರಿಣ್ಯನನುರಕ್ತೇ ತು ವಿಶ್ವಾಸೋ ನ ಹಿ ವಿದ್ಯತೇ |
ತಸ್ಮಾದನನುರಕ್ತಾಯ ನೈವ ಮಂತ್ರಂ ಪ್ರಕಾಶಯೇತ್ ॥29॥
ಮಂತ್ರಿಗೆ ರಾಜನಲ್ಲಿ ಅನುರಾಗವಿಲ್ಲದಿದ್ದರೆ ರಾಜನು ಅವನಲ್ಲಿ ವಿಶ್ವಾಸವನ್ನು ಮಾಡಬಾರದು. ಆದ್ದರಿಂದ ಅನುರಾಗವಿಲ್ಲದವನಿಗೆ ರಾಜನು ತನ್ನ ಮಂತ್ರವನ್ನು ಪ್ರಕಾಶಿಸಬಾರದು.
ವ್ಯಥಯೇದ್ಧಿ ಸ ರಾಜಾನಂ ಮಂತ್ರಿಭಿಃ ಸಹಿತೋಽನೃಜುಃ |
ಮಾರುತೋಪಹತಾಚ್ಛಿದ್ರೈಃ ಪ್ರವಿಶ್ಯಾಗ್ನಿರಿವ ದ್ರುಮಮ್ ॥30॥
ಅಂತಹ ವಕ್ರಸ್ವಭಾವದವನು ಉಳಿದ ಮಂತ್ರಿಗಳ ಜೊತೆಯಲ್ಲಿ ಸೇರಿ ವೃಕ್ಷ- ಚ್ಛಿದ್ರದಿಂದ ಪ್ರವೇಶಿಸಿದ ಅಗ್ನಿಯು ವೃಕ್ಷವನ್ನೇ ದಹಿಸುವಂತೆ ರಾಜನನ್ನು ವ್ಯಥೆಗೊಳಿ- ಸುತ್ತಾನೆ.
ಸಂಕ್ರುದ್ಧ್ಯತ್ಯೇಕದಾ ಸ್ವಾಮೀ ಸ್ಥಾನಾಚ್ಚೈವಾಪಕರ್ಷತಿ |
ವಾಚಾ ಕ್ಷಿಪತಿ ಸಂರಬ್ಧಸ್ತತಃ ಪಶ್ಚಾತ್ ಪ್ರಸೀದತಿ ॥31॥
ಸ್ವಾಮಿಯಾದವನು ಒಮ್ಮೆ ಕ್ರುದ್ಧನಾಗುತ್ತಾನೆ. ಸ್ಥಾನದಿಂದ ತೆಗೆಯುತ್ತಾನೆ. ಕೋಪಗೊಂಡು ಮಾತಿನಿಂದ ನಿಂದಿಸುತ್ತಾನೆ. ಅನಂತರ ಪ್ರಸನ್ನನಾಗುತ್ತಾನೆ.
ತಾನಿ ತಾನ್ಯನುರಕ್ತೇನ ಶಕ್ಯಾನ್ಯನುತಿತಿಕ್ಷಿತುಮ್ |
ಮಂತ್ರಿಣಾಂ ಚ ಭವೇದ್ ಕ್ರೋಧೋ ವಿಸ್ಫೂರ್ಜಿತಮಿವಾಶನೇಃ ॥32॥
ಅನುರಕ್ತನಾದವನು ಅವೆಲ್ಲವನ್ನೂ ಸಹಿಸಲು ಸಮರ್ಥನಾಗುತ್ತಾನೆ. ಮಂತ್ರಿಗಳ ಕ್ರೋಧವೂ ಸಹ ಸಿಡಿಲಿನ ಆರ್ಭಟದಂತೆ ಇರುತ್ತದೆ.
ಯಸ್ತು ಸಂಹರತೇ ತಾನಿ ಭರ್ತುಃ ಪ್ರಿಯಚಿಕೀರ್ಷಯಾ |
ಸಮಾನಸುಖದುಃಖಂ ತಂ ಪೃಚ್ಛೇದರ್ಥೇಷು ಮಾನವಮ್ ॥33॥
ಯಾವ ಮಂತ್ರಿಯು ಸ್ವಾಮಿಗೆ ಪ್ರಿಯವನ್ನು ಮಾಡಲು ಬಯಸಿ ಅಂತಹ ಕ್ರೋಧವನ್ನು ತಡೆದುಕೊಳ್ಳುತ್ತಾನೆಯೋ, ಸಮಾನಸುಖದುಃಖನಾದ ಅಂತಹ ಮಂತ್ರಿಯನ್ನು ಅರ್ಥಗಳಲ್ಲಿ ಪ್ರಶ್ನಿಸಬೇಕು.
ಅನೃಜುಸ್ತ್ವನುರಕ್ತೋಽಪಿ ಸಂಪನ್ನಶ್ಚೇತರೈರ್ಗುಣೈಃ |
ರಾಜ್ಞಃ ಪ್ರಜ್ಞಾನಯುಕ್ತೋಽಪಿ ನ ಮಂತ್ರಂ ಶ್ರೋತುಮರ್ಹತಿ ॥34॥

ವಕ್ರನಾದವನು ರಾಜನಲ್ಲಿ ಅನುರಾಗವನ್ನು ಹೊಂದಿದ್ದರೂ, ಇತರ ಗುಣ- ಗಳಿಂದ ಕೂಡಿದ್ದರೂ, ರಾಜನನ್ನು ಚೆನ್ನಾಗಿ ತಿಳಿದಿದ್ದರೂ ಅವನು ಮಂತ್ರವನ್ನು ಕೇಳಲು ಅರ್ಹನಲ್ಲ.

ಯೋಽಮಿತ್ರೈಃ ಸಹ ಸಂಬದ್ಧೋ ನ ಪೌರಾನ್ ಬಹು ಮನ್ಯತೇ |
ಸ ಸುಹೃತ್ ತಾದೃಶೋ ರಾಜ್ಞೋ ನ ಮಂತ್ರಂ ಶ್ರೋತುಮರ್ಹತಿ ||35||
ಯಾವನು ರಾಜನ ಸುಹೃಜ್ಜನನಾದರೂ ಶತ್ರುಗಳ ಜೊತೆಯಲ್ಲಿ ಸಂಬದ್ಧನಾಗಿ, ಪೌರರನ್ನು ಗೌರವಿಸುವುದಿಲ್ಲವೋ ಅವನೂ ಸಹ ಮಂತ್ರವನ್ನು ಕೇಳಲು ಅನರ್ಹ- ನಾದವನು

ಅವಿದ್ವಾನಶುಚಿಃ ಸ್ತಬ್ಧಃ ಶತ್ರುಸೇವೀ ವಿಕತ್ಥನಃ |
ಸ ಸುಹೃತ್ ಕ್ರೋಧನೋ ಲುಬ್ಧೋ ನ ಮಂತ್ರಂ ಶ್ರೋತುಮರ್ಹತಿ ||36||
ವಿದ್ಯೆಯಿಲ್ಲದವನು, ಅಶುಚಿಯಾದವನು, ಅಹಂಕಾರಿಯಾದವನು, ಶತ್ರು- ಗಳನ್ನು ಸೇವಿಸುವವನು, ತನ್ನನ್ನು ತಾನು ಹೊಗಳಿಕೊಳ್ಳುವವನು, ಕ್ರೋಧಶೀಲ- ನಾದವನು, ಲೋಭಿಯಾದವನು ಸುಹೃಜ್ಜನನಾದರೂ ಮಂತ್ರವನ್ನು ಕೇಳಲು ಅರ್ಹನಲ್ಲ.

ಆಗಂತುಃ ಸಾನುರಕ್ತೋಽಪಿ ಕಾಮಮಸ್ತು ಬಹುಶ್ರುತಃ |
ಸತ್ಕೃತಃ ಸಂವಿಭಕ್ತೋ ವಾ ನ ಮಂತ್ರಂ ಶ್ರೋತುಮರ್ಹತಿ ||37||
ಆಗಂತುಕನಾದವನು ಅನುರಾಗವನ್ನು ಹೊಂದಿದ್ದರೂ, ಬಹುಶ್ರುತನಾದರೂ, ಸತ್ಕರಿಸಲ್ಪಟ್ಟು ಐಶ್ವರ್ಯವನ್ನು ಪಡೆದರೂ ಮಂತ್ರಶ್ರವಣಕ್ಕೆ ಅರ್ಹನಲ್ಲ.

ಯಸ್ತ್ವಲ್ಪೇನಾಪಿ ಕಾರ್ಯೇಣ ಸಕೃದಾಕಾರಿತೋ ಭವೇತ್ |
ಪುನರನ್ಯೈರ್ಗುಣೈರ್ಯುಕ್ತೋ ನ ಮಂತ್ರಂ ಶ್ರೋತುಮರ್ಹತಿ ||38||
ಯಾವನು ಅಲ್ಪಕಾರ್ಯಕ್ಕಾಗಿ ರಾಜನಿಂದ ಒಮ್ಮೆ ಆಹ್ವಾನಿಸಲ್ಪಟ್ಟ ಕಾರಣದಿಂದ ರಾಜನನ್ನು ಯಾಚನೆ ಮಾಡಲು ಪ್ರಾರಂಭಿಸುತ್ತಾನೆಯೋ ಅವನು ಬೇರೆಯ ಗುಣಗಳಿಂದ ಕೂಡಿದ್ದರೂ ಮಂತ್ರಶ್ರವಣಕ್ಕೆ ಅರ್ಹನಲ್ಲ.

ಕೃತಪ್ರಜ್ಞಶ್ಚ ಮೇಧಾವೀ ಬುಧೋ ಜಾನಪದಃ ಶುಚಿಃ |
ಸರ್ವಕರ್ಮಸು ಯಃ ಶುದ್ಧಃ ಸ ಮಂತ್ರಂ ಶ್ರೋತುಮರ್ಹತಿ ||39||
ಕೃತಪ್ರಜ್ಞನೂ, ಮೇಧಾವಿಯೂ, ವಿದ್ವಾಂಸನೂ, ಅದೇ ದೇಶದಲ್ಲಿ ಜನಿಸಿ- ದವನೂ, ಶುಚಿಯೂ, ಸರ್ವಕರ್ಮಗಳಲ್ಲಿಯೂ ಶುದ್ಧನಾದವನೂ ಆದ ಪುರು- ಷನು ಮಂತ್ರವನ್ನು ಕೇಳಲು ಅರ್ಹನಾಗುತ್ತಾನೆ.

ಜ್ಞಾನವಿಜ್ಞಾನಸಂಪನ್ನಃ ಪ್ರಕೃತಿಜ್ಞಃ ಪರಾತ್ಮನೋಃ |
ಸುಹೃದಾತ್ಮಸಮೋ ರಾಜ್ಞಃ ಸ ಮಂತ್ರಂ ಶ್ರೋತುಮರ್ಹತಿ ||40||
ಜ್ಞಾನವಿಜ್ಞಾನಸಂಪನ್ನನಾಗಿ, ತನ್ನ ಮತ್ತು ಪರರ ಸ್ವಭಾವವನ್ನು ತಿಳಿದು ರಾಜನಿಗೆ ಸುಹೃಜ್ಜನನಾಗಿ, ರಾಜನಿಗೆ ಆತ್ಮಸಮನಾಗಿರುವವನು ಮಂತ್ರವನ್ನು ಕೇಳಲು ಅರ್ಹ- ನಾಗುತ್ತಾನೆ.

ಸತ್ಯವಾಕ್ ಶೀಲಸಂಪನ್ನೋ ಗಂಭೀರಃ ಸತ್ರಪೋ ಮೃದುಃ |
ಪಿತೃಪೈತಾಮಹೋ ಯಃ ಸ್ಯಾತ್ ಸ ಮಂತ್ರಂ ಶ್ರೋತುಮರ್ಹತಿ ||41||
ಸತ್ಯವಚನನೂ, ಶೀಲಸಂಪನ್ನನೂ, ಎಲ್ಲವನ್ನೂ ಮಾತನಾಡದೇ ಗಂಭೀರ- ನಾಗಿರುವವನು, ನಾಚಿಕೆಯಿಂದ ಕೂಡಿದವನೂ, ಮೃದುವೂ, ಪಿತೃಪಿತಾಮಹರ ಮಾರ್ಗವನ್ನು ಅನುಸರಿಸುವವನೂ ಆದವನು ಮಂತ್ರಶ್ರವಣಕ್ಕೆ ಅರ್ಹನಾಗುತ್ತಾನೆ.

ಸಂತುಷ್ಟಃ ಸಮ್ಮತಃ ಸತ್ಯಃ ಶೌಟೀರೋ ದ್ವೇಷ್ಯಪಾವಕಃ |
ಮಂತ್ರವಿತ್ ಕಾಲವಿಚ್ಛೂರಃ ಸ ಮಂತ್ರಂ ಶ್ರೋತುಮರ್ಹತಿ ||42||
ತಾನು ಸಂತೃಪ್ತನಾಗಿ, ಪ್ರಜೆಗಳಿಗೆ ಸಮ್ಮತನಾಗಿ, ಸತ್ಯವಚನನಾಗಿ, ನಿಪುಣನಾಗಿ, ಶತ್ರುವಿಗೆ ಅಗ್ನಿಯಂತೆ ಇದ್ದು ಮಂತ್ರವನ್ನು ಮತ್ತು ಕಾಲವನ್ನು ತಿಳಿದ ಶೂರನು ಮಂತ್ರವನ್ನು ಕೇಳಲು ಅರ್ಹನಾಗುತ್ತಾನೆ.

ಸರ್ವಲೋಕಮಿಮಂ ಶಕ್ತಃ ಸಾಂತ್ವೇನ ಕುರುತೇ ವಶೇ |
ತಸ್ಮೈ ಮಂತ್ರಃ ಪ್ರಯೋಕ್ತವ್ಯೋ ದಂಡಮಾಧಿತ್ಸತಾ ನೃಪ ||43||
ಸಮರ್ಥನಾದವನು ಎಲ್ಲ ಪ್ರಜೆಗಳನ್ನೂ ಸಾಂತ್ವವಚನಗಳಿಂದಲೇ ವಶಪಡಿಸಿ- ಕೊಳ್ಳುತ್ತಾನೆ. ಎಲೈ ರಾಜನೇ! ದಂಡಧಾರಿಯಾದ ರಾಜನು ಅಂತಹವನಿಗೆ ಮಂತ್ರವನ್ನು ಹೇಳಬೇಕು.

ಪೌರಜಾನಪದಾ ಯಸ್ಮಿನ್ ವಿಶ್ವಾಸಂ ಧರ್ಮತೋ ಗತಾಃ |
ಯೋದ್ಧಾ ನಯವಿಪಶ್ಚಿಚ್ಚ ಸ ಮಂತ್ರಂಶ್ರೋತುಮರ್ಹತಿ ||44||
ಪೌರಜಾನಪದರು ಯಾವನಲ್ಲಿ ಧರ್ಮದಿಂದ ವಿಶ್ವಾಸವನ್ನು ಮಾಡು- ತ್ತಾರೆಯೋ, ಯಾವನು ಯುದ್ಧಮಾಡಲು ಬಲ್ಲವನೋ, ರಾಜನೀತಿಯನ್ನು ತಿಳಿದ- ವನೋ ಅಂತಹವನು ಮಂತ್ರವನ್ನು ಕೇಳಲು ಅರ್ಹನಾಗುತ್ತಾನೆ.

ತಸ್ಮಾತ್ ಸರ್ವೈರ್ಗುಣೈರೇತೈರುಪಪನ್ನಾಃ ಸುಪೂಜಿತಾಃ |
ಮಂತ್ರಿಣಃ ಪ್ರಕೃತಿಜ್ಞಾಃ ಸ್ಯುಸ್ತ್ರ್ಯವರಾ ಮಹದೀಪ್ಸವಃ ||45||
ಆದ್ದರಿಂದ ಇಂತಹ ಎಲ್ಲ ಗುಣಗಳಿಂದಲೂ ಸಂಪನ್ನರಾದ, ಚೆನ್ನಾಗಿ ಪೂಜಿಸ- ಲ್ಪಡುವ, ದೊಡ್ಡ ಕಾರ್ಯವನ್ನು ಸಾಧಿಸಲು ಬಯಸುವ, ಪ್ರಜೆಗಳ ಸ್ವಭಾವವನ್ನು ತಿಳಿದ ಮಂತ್ರಿಗಳನ್ನು ಮೂರುಜನರಿಗೆ ಕಡಿಮೆಯಿಲ್ಲದಂತೆ ನೇಮಿಸಬೇಕು.

ಸ್ವಾಸು ಪ್ರಕೃತಿಷು ಛಿದ್ರಂ ಲಕ್ಷಯೇರನ್ ಪರಸ್ಯ ಚ |
ಮಂತ್ರಿಣೋ ಮಂತ್ರಮೂಲಂ ಹಿ ರಾಜ್ಞೋ ರಾಷ್ಟ್ರಂ ವಿವರ್ಧತೇ ||46||
ಮಂತ್ರಿಗಳು ತಮ್ಮ ಪ್ರಜೆಗಳಲ್ಲಿ ಇರುವ ದೋಷವನ್ನು ಶತ್ರುಪಕ್ಷದಲ್ಲಿರುವ ನ್ಯೂನತೆಗಳನ್ನು ಗಮನಿಸಬೇಕು. ಮಂತ್ರಮೂಲವಾದ ರಾಷ್ಟ್ರವೇ ಅಭಿವೃದ್ಧಿಯನ್ನು ಹೊಂದುವುದಷ್ಟೇ?

ನಾಸ್ಯ ಛಿದ್ರಂ ಪರಃ ಪಶ್ಯೇಚ್ಛಿದ್ರೇಷು ಪರಮನ್ವಿಯಾತ್ |
ಗೂಹೇತ್ ಕೂರ್ಮ ಇವಾಂಗಾನಿ ರಕ್ಷೇದ್ ವಿವರಮಾತ್ಮನಃ ॥47॥
ತನ್ನ ನ್ಯೂನತೆಯನ್ನು ಶತ್ರುವು ನೋಡಬಾರದು. ಶತ್ರುಗಳ ನ್ಯೂನತೆಯಲ್ಲಿ ಅವರನ್ನು ಆಕ್ರಮಿಸಬೇಕು. ಆಮೆಯು ತನ್ನ ಅಂಗಗಳನ್ನು ಮುಚ್ಚಿಕೊಳ್ಳುವಂತೆ ತನ್ನ ದೋಷಗಳನ್ನು ಮುಚ್ಚಿಕೊಳ್ಳಬೇಕು.
ಮಂತ್ರಗೂಢಾ ಹಿ ರಾಜ್ಯಸ್ಯ ಮಂತ್ರಿಣೋ ಯೇ ಮನೀಷಿಣಃ |
ಮಂತ್ರಸಂಹನನೋ ರಾಜಾ ಮಂತ್ರಾಂಗಾನೀತರೋ ಜನಃ ॥48॥
ವಿವೇಕಿಗಳಾದ ಮಂತ್ರಿಗಳು ರಾಜ್ಯದ ಹಿತಕ್ಕಾಗಿ ಗೂಢವಾದ ಮಂತ್ರವನ್ನು ಹೊಂದಿರುತ್ತಾರೆ. ರಾಜನು ಮಂತ್ರಶರೀರವೇ ಆಗಿರುತ್ತಾನೆ. ಉಳಿದ ಜನರು ಮಂತ್ರದ ಅಂಗಗಳಾಗಿರುತ್ತಾರೆ.
ರಾಜ್ಯಂ ಪ್ರಣಿಧಿಮೂಲಂ ಹಿ ಮಂತ್ರಸಾರಂ ಪ್ರಚಕ್ಷತೇ |
ಸ್ವಾಮಿನಂ ತ್ವನುವರ್ತಂತಿ ವೃತ್ತ್ಯರ್ಥಮಿಹ ಮಂತ್ರಿಣಃ ॥49॥
ರಾಜ್ಯವು ಚಾರರನ್ನು ಮೂಲವಾಗಿ ಮತ್ತು ಮಂತ್ರವನ್ನು ಬಲವಾಗಿ ಹೊಂದಿ- ರುವುದು ಎಂದು ಹೇಳುತ್ತಾರೆ. ಮಂತ್ರಿಗಳು ತಮ್ಮ ಜೀವನೋಪಾಯದ ಸಲುವಾಗಿ ಇಲ್ಲಿ ಸ್ವಾಮಿಯಾದ ರಾಜನನ್ನು ಅನುಸರಿಸುತ್ತಾರೆ.
ಸ ವಿನೀಯ ಮದಕ್ರೋಧೌ ಮಾನಮೀರ್ಷ್ಯಾಂ ಚ ನಿರ್ವೃತಃ |
ನಿತ್ಯಂ ಪಂಚೋಪಧಾತೀತೈರ್ಮಂತ್ರಯೇತ್ ಸಹ ಮಂತ್ರಿಭಿಃ ॥50॥
ರಾಜನು ಮದಕ್ರೋಧಗಳನ್ನು ಅಹಂಕಾರ ಈರ್ಷ್ಯೆಗಳನ್ನು ತ್ಯಜಿಸಿ, ಸಂತುಷ್ಟ- ಚಿತ್ತನಾಗಿ ನಿತ್ಯವೂ ಆಮಿಷದಿಂದ ದೂರವಾದ ಐದು ಮಂತ್ರಿಗಳ ಜೊತೆಯಲ್ಲಿ ಮಂತ್ರಾಲೋಚನೆಯನ್ನು ಮಾಡಬೇಕು.
ತೇಷಾಂ ತ್ರಯಾಣಾಂ ತ್ರಿವಿಧಂ ವಿಮರ್ಶ್ಯಂ
ಬುಧ್ಯೇತ ಚಿತ್ತಂ ವಿನಿವೇಶ್ಯ ತತ್ರ|
ಸ್ವನಿಶ್ಚಯಂ ತಂ ಪರನಿಶ್ಚಯಂ ಚ
ವಿನೇದಯೇದುತ್ತರಮಂತ್ರಕಾಲೇ ॥51॥
ಅವರಲ್ಲಿ ವಿಮರ್ಶೆ ಮಾಡಿ, ಮೂರು ಮಂತ್ರಿಗಳ ಅಭಿಪ್ರಾಯವನ್ನು ತಿಳಿದು, ತನ್ನ ನಿಶ್ಚಯವನ್ನು ಅವರ ನಿಶ್ಚಯವನ್ನು ಪರೀಕ್ಷಿಸಿ ಮುಂದಿನ ಮಂತ್ರಾಲೋಚನೆಯ ಕಾಲದಲ್ಲಿ ಅದನ್ನು ಹೇಳಬೇಕು.
ಧರ್ಮಾರ್ಥಕಾಮಜ್ಞಮುಪೇತ್ಯ ಪೃಚ್ಛೇದ್
ಯುಕ್ತೋ ಗುರುಂ ಬ್ರಾಹ್ಮಣಮುತ್ತರಾರ್ಥಮ್ |
ನಿಷ್ಠಾ ಕೃತಾ ತೇನ ಯದಾ ಸಹ ಸ್ಯಾತ್
ತಂ ತತ್ರ ಮಾರ್ಗಂ ಪ್ರಣಯೇದಸಕ್ತಮ್ ॥52॥
ಧರ್ಮಾರ್ಥಕಾಮಗಳನ್ನು ತಿಳಿದ ಗುರುವಾದ ಬ್ರಾಹ್ಮಣನನ್ನು ಸಮೀಪಿಸಿ ತನ್ನ ಸಂಶಯಗಳಿಗೆ ಪರಿಹಾರವನ್ನು ಕೇಳಬೇಕು. ಅವನು ತೋರಿಸಿದ ಮಾರ್ಗದಲ್ಲಿ ಉಳಿದವರನ್ನು ನಡೆಸಬೇಕು.
ಏವಂ ಸದಾ ಮಂತ್ರಯಿತವ್ಯಮಾಹು-
ರ್ಯೇ ಮಂತ್ರತತ್ತ್ವಾರ್ಥವಿನಿಶ್ಚಯಜ್ಞಾಃ |
ತಸ್ಮಾತ್ ತ್ವಮೇವಂ ಪ್ರಣಯೇಃ ಸದೈವ
ಮಂತ್ರಂ ಪ್ರಜಾಸಂಗ್ರಹಣೇ ಸಮರ್ಥಮ್ ॥53॥
ಮಂತ್ರತತ್ತ್ವಾರ್ಥವನ್ನು ತಿಳಿದ ಜ್ಞಾನಿಗಳು ಯಾವಾಗಲೂ ಹೀಗೆ ಮಂತ್ರಾ- ಲೋಚನೆಯನ್ನು ಮಾಡಬೇಕೆಂದು ಹೇಳುತ್ತಾರೆ. ಆದ್ದರಿಂದ ನೀನೂ ಸಹ ಪ್ರಜಾ- ಸಂಗ್ರಹದಲ್ಲಿ ಸಮರ್ಥವಾದ ಇಂತಹ ಮಂತ್ರಾಲೋಚನೆಯನ್ನು ಯಾವಾಗಲೂ ಮಾಡುವವನಾಗು.
ನ ವಾಮನಾಃ ಕುಬ್ಜಕೃಶಾ ನ ಖಂಜಾ
ನಾಂಧಾ ಜಡಾಃ ಸ್ತ್ರೀ ನ ನಪುಂಸಕಂ ಚ |
ನ ಚಾತ್ರ ತಿರ್ಯಙ್ ನ ಪುರೋ ನ ಪಶ್ಚಾತ್
ನೋರ್ಧ್ವಂ ನ ಚಾಧಃ ಪ್ರಚರೇತ ಕಶ್ಚಿತ್ ॥54॥
ಮಂತ್ರಾಲೋಚನೆಯ ಸ್ಥಳದಲ್ಲಿ ವಾಮನರಾಗಲೀ, ಕುಬ್ಜರಾಗಲೀ, ಕೃಶ- ರಾಗಲೀ, ಕುಂಟರಾಗಲೀ, ಕುರುಡರಾಗಲೀ, ಜಡರಾಗಲೀ, ಸ್ತ್ರೀಯಾಗಲೀ, ನಪುಂಸಕರಾಗಲೀ ಇರಬಾರದು. ಹಿಂಭಾಗದಲ್ಲಿ ಅಥವಾ ಮುಂಭಾಗದಲ್ಲಿ ಮೇಲೆ ಅಥವಾ ಕೆಳಗೆ ಯಾವ ಪ್ರಾಣಿಯೂ ತಿರುಗಾಡಬಾರದು.
ಆರುಹ್ಯ ವಾತಾಯನಮೇವ ಶೂನ್ಯಂ
ಸ್ಥೂಲಂ ಪ್ರಕಾಶಂ ಕುಶಕಾಶಹೀನಮ್ |
ವಾಗಂಗದೋಷಾನ್ ಪರಿಹೃತ್ಯ ಮಂತ್ರಂ
ಸಮ್ಮಂತ್ರಯೇತ್ ಕಾರ್ಯಮಹೀನಕಾಲಮ್ ॥55॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಾಶೀತಿತಮೋಽಧ್ಯಾಯಃ ॥85॥
ನಿರ್ಜನವಾದ ಚೆನ್ನಾಗಿ ಗಾಳಿಯಾಡುವ ಒಳ್ಳೆಯ ಬೆಳಕಿರುವ, ಕುಶಕಾಶ- ರಹಿತವಾದ ಪ್ರದೇಶವನ್ನು ಏರಿ, ವಾಗ್ದೋಷಗಳನ್ನು ಅಂಗದೋಷಗಳನ್ನು ಪರಿಹರಿಸಿ ಸಂದರ್ಭ ಒದಗಿದಾಗ ಶೀಘ್ರವಾಗಿ ಮಂತ್ರಾಲೋಚನೆಯನ್ನು ಮಾಡಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 85ನೆಯ ಅಧ್ಯಾಯವು ಮುಗಿಯಿತು.

0
86. ಎಂಬತ್ತಾರನೆಯ ಅಧ್ಯಾಯ
ಸಾಂತ್ವವಿಷಯದಲ್ಲಿ ಇಂದ್ರಬೃಹಸ್ಪತಿಗಳ ಸಂವಾದ
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತೇಶ್ಚ ಸಂವಾದಂ ಶಕ್ರಸ್ಯ ಚ ಯುಧಿಷ್ಠಿರ ॥1॥
ಭೀಷ್ಮರು ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಇಂದ್ರಬೃಹಸ್ಪತಿಗಳ ನಡುವೆ ನಡೆದ ಪುರಾತನವಾದ ಈ ಸಂವಾದವನ್ನು ಹೇಳುತ್ತಾರೆ.
ಶಕ್ರಃ
ಕಿಂಸ್ವಿದೇಕಪದಂ ಬ್ರಹ್ಮನ್ ಪುರುಷಃ ಸಮ್ಯಗಾಚರನ್ |
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ॥2॥
ಶಕ್ರ ಬ್ರಾಹ್ಮಣರೇ! ಯಾವ ಒಂದು ಪದದಿಂದ ಹೇಳಲ್ಪಡುವ ವಸ್ತುವನ್ನು ಪುರುಷನು ಚೆನ್ನಾಗಿ ಆಚರಿಸಿದರೆ ಎಲ್ಲ ಪ್ರಜೆಗಳಿಗೂ ಪ್ರಮಾಣಭೂತನಾಗಿ ಕೀರ್ತಿ- ಯನ್ನು ಪಡೆದಾನು?
ಬೃಹಸ್ಪತಿಃ
ಸಾಂತ್ವಮೇಕಪದಂ ಶಕ್ರ ಪುರುಷಃ ಸಮ್ಯಗಾಚರನ್ |
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ॥3॥
ಬೃಹಸ್ಪತಿಗಳು ಇಂದ್ರನೇ! ಅಂತಹ ಒಂದು ಪದದಿಂದ ಹೇಳಲ್ಪಡುವುದು ಸಾಂತ್ವ. ಅದನ್ನು ಚೆನ್ನಾಗಿ ಆಚರಿಸುವವನು ಸರ್ವಭೂತಗಳಿಗೂ ಪ್ರಮಾಣನಾಗಿ ಕೀರ್ತಿಯನ್ನು ಪಡೆಯುತ್ತಾನೆ.
ಏತದೇಕಪದಂ ಶಕ್ರ ಸರ್ವಲೋಕಸುಖಾವಹಮ್ |
ಆಚರನ್ ಸರ್ವಭೂತೇಷು ಪ್ರಿಯೋ ಭವತಿ ಸರ್ವದಾ ॥4॥
ಇಂದ್ರನೇ! ಸರ್ವಲೋಕಕ್ಕೆ ಸುಖವನ್ನು ತಂದುಕೊಡುವಂತಹದು ಇದೊಂದೇ ಪದ. ಎಲ್ಲ ಪ್ರಜೆಗಳಲ್ಲಿಯೂ ಇದನ್ನು ಆಚರಿಸುವವನು ಯಾವಾಗಲೂ ಪ್ರಜೆಗಳಿಗೆ ಪ್ರಿಯನಾಗುತ್ತಾನೆ.
ಯೋ ಹಿ ನಾಭಾಷತೇ ಕಿಂಚಿತ್ ಸತತಂ ಭ್ರುಕುಟೀಮುಖಃ |
ದ್ವೇಷ್ಯೋ ಭವತಿ ಭೂತಾನಾಂ ಸ ಸಾಂತ್ವಮಿಹ ನಾಚರನ್ ॥5॥
ಯಾವನು ಸತತವಾಗಿ ಹುಬ್ಬುಗಳನ್ನು ಗಂಟಿಕ್ಕಿ, ಯಾರ ಜೊತೆಯಲ್ಲಿಯೂ ಮಾತನಾಡದೆ, ಸಾಂತ್ವವಚನವನ್ನು ಹೇಳುವುದಿಲ್ಲವೋ ಅವನು ಜನರಿಂದ ದ್ವೇಷ್ಯ- ನಾಗುತ್ತಾನೆ.
ಯಸ್ತು ಪೂರ್ವಮಭಿಪ್ರೇಕ್ಷ್ಯ ಪೂರ್ವಮೇವಾಭಿಭಾಷತೇ |
ಸ್ಮಿತಪೂರ್ವಾಭಿಭಾಷೀ ಚ ತಸ್ಯ ಲೋಕಃ ಪ್ರಸೀದತಿ ॥6॥
ಯಾವನು ಮೊದಲೇ ನೋಡಿ, ಮೊದಲೇ ಮಂದಹಾಸಪೂರ್ವಕವಾಗಿ ಮಾತನಾಡುತ್ತಾನೆಯೋ ಅವನಿಗೆ ಜನರು ಪ್ರಸನ್ನರಾಗುತ್ತಾರೆ.
ದಾನಮೇವ ಹಿ ಸರ್ವತ್ರ ಸಾಂತ್ವೇನಾನಭಿಜಲ್ಪಿತಮ್ |
ನ ಪ್ರೀಣಯತಿ ಭೂತಾನಿ ನಿರ್ವ್ಯಂಜನಮಿವಾಶನಮ್ ॥7॥
ದಾನವೇ ಎಲ್ಲ ಕಡೆಗಳಲ್ಲಿಯೂ ಸಾಂತ್ವದ ಜೊತೆಯಲ್ಲಿ ಸೇರಬೇಕು. ಸಾಂತ್ವ- ವಚನವಿಲ್ಲದ ದಾನವು ವ್ಯಂಜನವಿಲ್ಲದ ಭೋಜನದಂತೆ ಯಾರಿಗೂ ಸುಖವನ್ನು ಕೊಡುವುದಿಲ್ಲ.
ಅದಾತಾ ಹ್ಯಪಿ ಭೂತಾನಾಂ ಮಧುರಾಮೀರಯನ್ ಗಿರಮ್ |
ಸರ್ವಲೋಕಮಿಮಂ ಶಕ್ರ ಸಾಂತ್ವೇನ ಕುರುತೇ ವಶೇ ॥8॥
ಯಾರಿಗೂ ಏನನ್ನೂ ಕೊಡದಿದ್ದರೂ ಎಲೈ ಶಕ್ರನೇ! ಮಧುರವಾದ ಮಾತ- ನ್ನಾಡುವವನು ಈ ಎಲ್ಲ ಲೋಕವನ್ನೂ ಸಾಂತ್ವದಿಂದ ವಶಪಡಿಸಿಕೊಳ್ಳುತ್ತಾನೆ.
ತಸ್ಮಾತ್ ಸಾಂತ್ವಂ ಪ್ರಯೋಕ್ತವ್ಯಂ ದಂಡಮಾಧಿತ್ಸತಾಮಿಹ |
ಫಲಂ ಚ ಜನಯತ್ಯೇವಂ ನ ಚಾಸ್ಯೋದ್ವಿಜತೇ ಜನಃ ॥9॥
ಆದ್ದರಿಂದ ದಂಡಧಾರಿಯಾದವನು ಸಾಂತ್ವವನ್ನು ಪ್ರಯೋಗಿಸಬೇಕು. ಅದು ಇಂತಹ ಫಲವನ್ನು ಉಂಟುಮಾಡುತ್ತದೆ ಮತ್ತು ಪ್ರಜೆಗಳು ಅಂತಹವನಿಗೆ ಹೆದರುವುದಿಲ್ಲ.
ಸುಕೃತಸ್ಯ ಹಿ ಸಾಂತ್ವಸ್ಯ ಶ್ಲಕ್ಷ್ಣಸ್ಯ ಮಧುರಸ್ಯ ಚ |
ಸಮ್ಯಗಾಸೇವ್ಯಮಾನಸ್ಯ ತುಲ್ಯಂ ಜಾತು ನ ವಿದ್ಯತೇ ॥10॥
ಚೆನ್ನಾಗಿ ಅನುಷ್ಠಾನ ಮಾಡಿದ, ಮಧುರವಾದ, ಸೂಕ್ಷ್ಮವಾದ ಸಾಂತ್ವವನ್ನು ಪ್ರಯೋಗಿಸುವವನಿಗೆ ಅದಕ್ಕೆ ಸಮಾನವಾದುದು ಬೇರೆ ಯಾವುದೂ ಇಲ್ಲ.
ಭೀಷ್ಮಃ
ಇತ್ಯುಕ್ತಃ ಕೃತವಾನ್ ಸರ್ವಂ ತಥಾ ಶಕ್ರಃ ಪುರೋಧಸಾ |
ತಥಾ ತ್ವಮಪಿ ಕೌಂತೇಯ ಸಮ್ಯಗೇತತ್ ಸಮಾಚರ ॥11॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಡಶೀತಿತಮೋಽಧ್ಯಾಯಃ ॥86॥

ಭೀಷ್ಮರು ಹೀಗೆ ಇಂದ್ರನು ಪುರೋಹಿತರಾದ ಬೃಹಸ್ಪತಿಗಳಿಂದ ಹೇಳಲ್ಪಟ್ಟು ಎಲ್ಲವನ್ನೂ ಹಾಗೆಯೇ ಮಾಡಿದನು. ಎಲೈ ಕೌಂತೇಯನೇ! ನೀನೂ ಸಹ ಇದನ್ನು ಚೆನ್ನಾಗಿ ಆಚರಿಸುವವನಾಗು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 86ನೆಯ ಅಧ್ಯಾಯವು ಮುಗಿಯಿತು.
87. ಎಂಬತ್ತೇಳನೆಯ ಅಧ್ಯಾಯ
ಅಮಾತ್ಯಾದಿಲಕ್ಷಣಕಥನ
ಯುಧಿಷ್ಠಿರಃ
ಕಥಂಸ್ವಿದಿಹ ರಾಜೇಂದ್ರ ಪಾಲಯನ್ ಪಾರ್ಥಿವಃ ಪ್ರಜಾಃ |
ಪ್ರೈತಿ ಧರ್ಮಂ ವಿಶೇಷೇಣ ಕೀರ್ತಿಮಾಪ್ನೋತಿ ಶಾಶ್ವತೀಮ್ ॥1॥
ಯುಧಿಷ್ಠಿರ ಎಲೈ ರಾಜೇಂದ್ರನೇ! ರಾಜನು ಪ್ರಜೆಗಳನ್ನು ಹೇಗೆ ಪಾಲಿಸುತ್ತಾ, ಧರ್ಮವನ್ನು ಮತ್ತು ಶಾಶ್ವತವಾದ ವಿಶೇಷವಾದ ಕೀರ್ತಿಯನ್ನು ಪಡೆಯುತ್ತಾನೆ.
ಭೀಷ್ಮಃ
ವ್ಯವಹಾರೇಣ ಶುದ್ಧೇನ ಪ್ರಜಪಾಲನತತ್ಪರಃ |
ಪ್ರಾಪ್ಯ ಧರ್ಮಂ ಚ ಕೀರ್ತಿಂ ಚ ಲೋಕಾವಾಪ್ನೋತ್ಯುಭೌ ಶುಚಿಃ ॥2॥
ಭೀಷ್ಮರು ಪ್ರಜಾಪಾಲನತತ್ಪರನಾದ ರಾಜನು ಶುದ್ಧವ್ಯವಹಾರದಿಂದ ಧರ್ಮ- ವನ್ನೂ ಕೀರ್ತಿಯನ್ನೂ ಪಡೆದು ಶುಚಿಯಾಗಿ ಎರಡು ಲೋಕಗಳನ್ನೂ ಹೊಂದು- ತ್ತಾನೆ.
ಯುಧಿಷ್ಠಿರಃ
ಕೀದೃಶಂ ವ್ಯವಹಾರಂ ತು ಕೈಶ್ಚ ವ್ಯವಹರೇನ್ನೃಪಃ |
ಏತತ್ಪೃಷ್ಟೋ ಮಹಾಪ್ರಾಜ್ಞ ಯಥಾವದ್ ವಕ್ತುಮರ್ಹಸಿ ॥3॥
ಯುಧಿಷ್ಠಿರ ಎಂತಹ ವ್ಯವಹಾರವನ್ನು ರಾಜನು ಯಾರ ಜೊತೆಯಲ್ಲಿ ಮಾಡಬೇಕು? ಎಲೈ ಮಹಾಪ್ರಾಜ್ಞನೇ! ಈ ನನ್ನ ಪ್ರಶ್ನೆಗೆ ಸರಿಯಾಗಿ ಉತ್ತರವನ್ನು ಹೇಳಬೇಕು.
ಯೇ ಚೈತೇ ಪೂರ್ವಕಥಿತಾ ಗುಣಾಸ್ತೇ ಪುರುಷಂ ಪ್ರತಿ |
ನೈಕಸ್ಮಿನ್ ಪುರುಷೇ ಹ್ಯೇತೇ ವಿದ್ಯಂತ ಇತಿ ಮೇ ಮತಿಃ ॥4॥
ಪುರುಷನಲ್ಲಿರಬೇಕೆಂದು ಹೇಳಿದ ಈ ಗುಣಗಳು ಒಬ್ಬ ಪುರುಷನಲ್ಲಿ ಇರು- ವುದಿಲ್ಲ ಎಂದು ನನ್ನ ಅಭಿಪ್ರಾಯ.
ಭೀಷ್ಮಃ
ಏತಮೇತನ್ಮಹಾಪ್ರಾಜ್ಞ ಯಥಾ ವದಸಿ ಬುದ್ಧಿಮಾನ್ |
ದುರ್ಲಭಃ ಪುರುಷಃ ಕಶ್ಚಿದೇಭಿರ್ಗುಣಗಣೈರ್ಯುತಃ ॥5॥
ಭೀಷ್ಮರು ಎಲೈ ಮಹಾಪ್ರಾಜ್ಞನೇ! ಮೇಧಾವಿಯೇ ನೀನು ಹೇಳಿದಂತೆಯೇ ಸರಿ. ಇಂತಹ ಗುಣಗಳಿಂದ ಕೂಡಿದ ಮನುಷ್ಯನು ದುರ್ಲಭನಾದವನು.
ಕಿಂತು ಸಂಕ್ಷೇಪತಃ ಶೀಲಂ ಪ್ರಯತ್ನೇ ನೇಹ ದುರ್ಲಭಮ್ |
ವಕ್ಷ್ಯಾಮಿ ತು ಯಥಾಮಾತ್ಯಾನ್ ಯಾದೃಶಾಂಶ್ಚ ಕರಿಷ್ಯಸಿ ॥6॥
ಆದರೆ ಪ್ರಯತ್ನಪಟ್ಟರೆ ಸಂಕ್ಷೇಪವಾಗಿ ಶೀಲವುಳ್ಳ ಪುರುಷನು ದುರ್ಲಭನಲ್ಲ. ನೀನು ಎಂತಹ ಅಮಾತ್ಯರನ್ನು ಸಂಪಾದಿಸಬೇಕೆಂದು ನಾನು ನಿನಗೆ ಹೇಳುವೆನು.
ಚತುರೋ ಬ್ರಾಹ್ಮಣಾನ್ ವೈದ್ಯಾನ್ ಪ್ರಗಲ್ಭಾನ್ ಸಾತ್ವಿಕಾನ್ ಶುಚೀನ್ |
ಕ್ಷತ್ರಿಯಾಂಶ್ಚ ತಥಾ ಚಾಷ್ಟೌ ಬಲಿನಃ ಶಸ್ತ್ರಪಾಣಿನಃ ॥7॥
ವಿದ್ಯಾವಂತರೂ ಕುಶಲರೂ ಸಾತ್ವಿಕರೂ ಶುಚಿಗಳೂ ಆದ ನಾಲ್ಕು ಬ್ರಾಹ್ಮಣರು, ಬಲಿಷ್ಠರೂ ಶಸ್ತ್ರಪಾಣಿಗಳೂ ಆದ ಎಂಟು ಕ್ಷತ್ರಿಯರು.
ವೈಶ್ಯಾನ್ ವಿತ್ತೇನ ಸಂಪನ್ನಾನೇಕವಿಂಶತಿ ಸಂಖ್ಯಯಾ |
ತ್ರೀಂಶ್ಚ ಶೂದ್ರಾನ್ ವಿನೀತಾಂಶ್ಚ ಶುಚೀನ್ ಕರ್ಮಣಿ ಪೂರ್ವಕೇ ॥8॥
ಧನಾಢ್ಯರಾದ ಇಪ್ಪತ್ತೊಂದು ವೈಶ್ಯರು, ಮತ್ತುಶುಚಿಗಳೂ ವಿನೀತರೂ ಆದ ಮೂರು ಶೂದ್ರರನ್ನು ಸೇರಿಸಿ ಕರ್ಮವನ್ನು ಮಾಡುವುದಕ್ಕಿಂತ ಮೊದಲು ಒಂದು ಮಂಡಲವನ್ನು ರಚಿಸಬೇಕು.
ಅಷ್ಟಾಭಿಶ್ಚ ಗುಣೈರ್ಯುಕ್ತಃ ಸೂತಃ ಪೌರಾಣಿಕೋ ಭವೇತ್ |
ಪಂಚಾಶದ್ವರ್ಷವಯಸಂ ಪ್ರಗಲ್ಭಮನಸೂಯಕಮ್ ॥9॥
ಪುರಾಣವನ್ನು ಹೇಳುವ ಸೂತನು ಎಂಟುಗುಣಗಳಿಂದ ಕೂಡಿದ್ದು ಐವತ್ತು ವರ್ಷವಯಸ್ಸಿನವನೂ ಅಸೂಯಾರಹಿತನೂ ವಿದಗ್ಧನೂ ಆಗಿರಬೇಕು. (ಪೌರಾ- ಣಿಕಸೂತನಿಗೆ ಇರಬೇಕಾದ ಎಂಟುಗುಣಗಳೆಂದರೆ ಶುಶ್ರೂಷೆ, ಶ್ರವಣ, ಗ್ರಹಣ, ಧಾರಣ, ಊಹ, ಅಪೋಹನ, ವಿಜ್ಞಾನ ಮತ್ತು ತತ್ತ್ವಜ್ಞಾನ).
ಮತಿಸ್ಮೃತಿಸಮಾಯುಕ್ತಂ ವಿನೀತಂ ಸಮದರ್ಶನಮ್ |
ಕಲ್ಪಯೇದ್ ವದಮಾನಾನಾಂ ಶಕ್ತಮರ್ಥೇಷ್ವಲೋಲುಪಮ್ ॥10॥
ಸ್ಮರಣಶಕ್ತಿ, ಒಳ್ಳೆಯ ಬುದ್ಧಿ, ವಿನಯ, ಸಮದೃಷ್ಟಿ, ಮಾತನಾಡುವ ಸಾಮರ್ಥ್ಯ, ಧನಲೋಭವಿಲ್ಲದಿರುವಿಕೆ ಇವುಗಳನ್ನು ನೋಡಿ ಪೌರಾಣಿಕಸೂತ- ನನ್ನು ನಿಯಮಿಸಬೇಕು.
ವಿವರ್ಜಿತಾನಾಂ ವ್ಯಸನೈಃ ಸುಘೋರೈಃ ಸಪ್ತಭಿರ್ಭೃಶಮ್ |

ಅಷ್ಟಾನಾಂ ಮಂತ್ರಿಣಾಂ ಮಧ್ಯೇ ಮಂತ್ರಂ ರಾಜೋಪಧಾರಯೇತ್ ॥11॥
ಏಳು ಘೋರವ್ಯಸನಗಳಿಂದ ರಹಿತರಾದ ಎಂಟು ಮಂತ್ರಿಗಳ ಮಧ್ಯದಲ್ಲಿ ರಾಜನು ಮಂತ್ರಾಲೋಚನೆಯನ್ನು ಮಾಡಬೇಕು. (ಮಂತ್ರಿಗಳ ಏಳು ವ್ಯಸನ- ವೆಂದರೆ ಬೇಟೆ, ಜೂಜು, ಸ್ತ್ರೀಸಹವಾಸ, ಮದ್ಯಪಾನ, ಕ್ರೂರದಂಡ, ಕಠಿಣವಾದ ಮಾತು ಮತ್ತು ಅರ್ಥದೂಷಣ).
ತತಃ ಸಂಪ್ರೇಷಯೇದ್ ರಾಷ್ಟ್ರೇ ರಾಷ್ಟ್ರೀಯಾಯ ಚ ದರ್ಶಯೇತ್ |
ಅನೇನ ವ್ಯವಹಾರೇಣ ದ್ರಷ್ಟವ್ಯಾಸ್ತೇ ಪ್ರಜಾಃ ಸದಾ ॥12॥
ಅನಂತರ ಆ ವಿಷಯವನ್ನು ರಾಷ್ಟ್ರಕ್ಕೂ ಮತ್ತು ರಾಜನ ಬಂಧುಗಳಿಗೂ ತಿಳಿಸಬೇಕು. ಇಂತಹ ವ್ಯವಹಾರದಿಂದ ನೀನು ಯಾವಾಗಲೂ ಪ್ರಜೆಗಳನ್ನು ನೋಡಿ -ಕೊಳ್ಳಬೇಕು.
ನ ಚಾಪಿ ಗೂಢಂ ಕಾರ್ಯಂ ತೇ ಗ್ರಾಹ್ಯಂ ಕಾರ್ಯೋಪಘಾತಕಮ್ |
ಕಾರ್ಯೇ ಖಲು ವಿಪನ್ನೇ ತ್ವಾಂ ಸೋಽಧರ್ಮಸ್ತಾಂಶ್ಚ ಪೀಡಯೇತ್ ॥13॥
ಯಾವ ಕಾರ್ಯವನ್ನೂ ಗೂಢವಾಗಿ ಮಾಡಬಾರದು. ಮಾಡಲಿರುವ ಕಾರ್ಯಕ್ಕೆ ವಿರೋಧಿಯಾದ ಯಾವುದನ್ನೂ ಮಾಡಬಾರದು. ಕಾರ್ಯವು ಕೆಟ್ಟು- ಹೋದರೆ ನಿನಗೂ ಮತ್ತು ಮಂತ್ರಿಗಳಿಗೂ ಅಧರ್ಮದ ಪೀಡೆಯುಂಟಾದೀತು!
ವಿದ್ರವೇಚ್ಚೈವ ರಾಷ್ಟ್ರಂ ತೇ ಶ್ಯೇನಾತ್ ಪಕ್ಷಿಗಣಾ ಇವ |
ಪರಿಸ್ರವೇಚ್ಚ ಸತತಂ ನೌರ್ವಿಶೀರ್ಣೇವ ಸಾಗರೇ ॥14॥
ಹದ್ದಿಗೆ ಹೆದರಿ ಪಕ್ಷಿಗಳ ಸಮೂಹವು ಓಡಿಹೋದಂತೆ ನಿನ್ನ ರಾಷ್ಟ್ರವು ಓಡಿ ಹೋದೀತು! ಸಾಗರದಲ್ಲಿ ಒಡೆದ ನೌಕೆಯಂತೆ ಸತತವಾಗಿ ಪರಿಸ್ರವಣವನ್ನು ಹೊಂದೀತು!
ಪ್ರಜಾಃ ಪಾಲಯತೋಽಸಮ್ಯಗಧರ್ಮೇಣೇಹ ಭೂಪತೇಃ |
ಹಾರ್ದಂ ಭಯಂ ಸಂಭವತಿ ಸ್ವರ್ಗಶ್ಚಾಸ್ಯ ವಿರುಧ್ಯತೇ ॥15॥
ಅಧರ್ಮದಿಂದ ಪ್ರಜೆಗಳನ್ನು ಪಾಲಿಸುವ ರಾಜನಿಗೆ ಹೃದಯದಲ್ಲಿ ಭಯ- ವುಂಟಾಗುತ್ತದೆ. ಮತ್ತು ಸ್ವರ್ಗವು ದೂರವಾಗುತ್ತದೆ.
ಅಥ ಯೋಽಧರ್ಮತಃ ಪಾತಿ ರಾಜಾಽಮಾತ್ಯೋಽಥ ವಾತ್ಮಜಃ |
ಧರ್ಮಾಸನೇ ನಿಯುಕ್ತಃ ಸನ್ ಧರ್ಮಮೂಲಂ ನರರ್ಷಭ ॥16॥
ಕಾರ್ಯೇಷ್ವಧಿಕೃತಾಃ ಸಮ್ಯಗಕುರ್ವಂತೋ ನೃಪಾನುಗಾಃ |
ಆತ್ಮಾನಂ ಪುರತಃ ಕೃತ್ವಾ ಯಾಂತ್ಯಧಃ ಸಹಪಾರ್ಥಿವಾಃ ॥17॥
ಎಲೈ ನರರ್ಷಭನೇ! ರಾಜನಾಗಲೀ ಅಥವಾ ಧರ್ಮಾಸನದಲ್ಲಿ ನಿಯುಕ್ತರಾದ ಕಾರ್ಯಗಳಲ್ಲಿ ಅಧಿಕೃತರಾದ ಅಮಾತ್ಯ, ರಾಜಪುತ್ರ ಅಥವಾ ರಾಜಾನು- ಯಾಯಿಗಳಾಗಲೀ ಅಧರ್ಮದಿಂದ ಪ್ರಜೆಗಳನ್ನು ಪಾಲಿಸಿದರೆ ಅವರು ರಾಜನನ್ನೂ ಎಳೆದುಕೊಂಡು ಅಧಃಪತನವನ್ನು ಹೊಂದುತ್ತಾರೆ.
ಬಲಾತ್ಕೃತಾನಾಂ ಬಲಿಭಿಃ ಕೃಪಣಂ ಬಹು ಜಲ್ಪತಾಮ್ |
ನಾಥೋ ವೈ ಭೂಮಿಪೋ ನಿತ್ಯಮನಾಥಾನಾಂ ನೃಣಾಂ ಭವೇತ್ ॥18॥
ಬಲಿಷ್ಠರಿಂದ ಬಲಾತ್ಕಾರಕ್ಕೆ ಒಳಗಾಗಿ ಕರುಣಾಜನಕವಾಗಿ ಬಹಳವಾಗಿ ಗೋಳಾಡುವ ಅನಾಥರಾದ ಮನುಷ್ಯರಿಗೆ ರಾಜನೇ ನಿತ್ಯವೂ ನಾಥನಾದವನು.
ತತಃ ಸಾಕ್ಷಿಬಲಂ ಸಾಧು ದ್ವೈತವಾದೇ ಕೃತಂ ಭವೇತ್ |
ಅಸಾಕ್ಷಿಕಮನಾಥಂ ವಾ ಪರೀಕ್ಷ್ಯಂ ತದ್ ವಿಶೇಷತಃ ॥19॥
ಹಾಗೆಯೇ ವಿವಾದಗಳು ಬಂದಾಗ ಸಾಕ್ಷಿಗಳ ಬಲವನ್ನು ಚೆನ್ನಾಗಿ ವಿಮರ್ಶೆ ಮಾಡದೇ, ಸಾಕ್ಷಿಯಿಲ್ಲದ ಸ್ಥಳದ ನಾಥರೂ ಇಲ್ಲದ ಸ್ಥಳದ ವಿವಾದವಚನಗಳನ್ನು ವಿಶೇಷವಾಗಿ ಪರೀಕ್ಷೆ ಮಾಡಬೇಕು.
ಅಪರಾಧಾನುರೂಪಂ ಚ ದಂಡಂ ಪಾಪೇಷು ಪಾತಯೇತ್ |
ಉದ್ವೇಜಯೇದ್ ಧನೈರ್ಋದ್ಧಾನ್ ದರಿದ್ರಾನ್ ವಧಬಂಧನೈಃ ॥20॥
ಅಪರಾಧವನ್ನು ಮಾಡಿದವರಲ್ಲಿ ಅಪರಾಧಕ್ಕೆ ಅನುಗುಣವಾಗಿ ಶಿಕ್ಷೆಯನ್ನು ವಿಧಿ-ಸಬೇಕು. ಶ್ರೀಮಂತರನ್ನು ಧನದ ವಿಷಯದಲ್ಲಿ ಉದ್ವೇಗಗೊಳಿಸಬೇಕು. ದರಿದ್ರ- ರನ್ನು ವಧೆ ಮತ್ತು ಬಂಧನಗಳಿಂದ ಶಿಕ್ಷಿಸಬೇಕು.
ವಿನಯೈರಪಿ ದುರ್ವೃತ್ತಾನ್ ಪ್ರಹಾರೈರಪಿ ಪಾರ್ಥಿವಃ |
ಸಾಂತ್ವೇನೋಪಪ್ರದಾನೇನ ಶಿಷ್ಟಾಂಶ್ಚ ಪರಿಪಾಲಯೇತ್ ॥21॥
ರಾಜನು ದುರ್ನಡತೆಯುಳ್ಳವರನ್ನು ಪ್ರಹಾರದಿಂದಾದರೂ ದಾರಿಗೆ ತರಬೇಕು. ಸಜ್ಜನರಾದವರನ್ನು ಸಾಂತ್ವವಚನಗಳಿಂದ ಮತ್ತು ಉಪಪನ್ನವಾದ ವಸ್ತುಗಳ ದಾನದಿಂದ ಪರಿಪಾಲಿಸಬೇಕು.
ರಾಜ್ಞೋ ವಧಂ ಚಿಕೀರ್ಷೇದ್ ಯಸ್ತಸ್ಯ ಚಿತ್ರೋ ವಧೋ ಭವೇತ್ |
ಆದೀಪಕಸ್ಯ ಸ್ತೇನಸ್ಯ ವರ್ಣಸಂಕರಕಸ್ಯ ಚ ॥22॥
ರಾಜನ ವಧೆಯನ್ನು ಮಾಡಲು ಬಯಸುವವನಿಗೆ, ಗೃಹಗಳಿಗೆ ಅಗ್ನಿಯನ್ನು ಕೊಡುವವನಿಗೆ, ಕಳ್ಳನಿಗೆ, ವರ್ಣಸಂಕರವನ್ನು ಮಾಡುವವನಿಗೆ ಚಿತ್ರವಧೆಯನ್ನು ಮಾಡಿಸಬೇಕು.
ಸಮ್ಯಕ್ ಪ್ರಣಯತೋ ದಂಡಂ ಭೂಮಿಪಸ್ಯ ವಿಶಾಂಪತೇ |
ಯುಕ್ತಸ್ಯ ವಾ ನಾಸ್ತ್ಯಧರ್ಮೋ ಧರ್ಮ ಏವೇಹ ಶಾಶ್ವತಃ ॥23॥
ಎಲೈ ರಾಜನೇ! ಸರಿಯಾದ ರೀತಿಯಲ್ಲಿ ದಂಡಪ್ರಯೋಗವನ್ನು ಮಾಡುವ ರಾಜನಿಗೆ ಅಧರ್ಮವು ಉಂಟಾಗುವುದಿಲ್ಲ. ಇಲ್ಲಿ ಶಾಶ್ವತವಾದ ಧರ್ಮವೇ ಉಂಟಾಗುತ್ತದೆ.

ಕಾಮಕಾರೇಣ ದಂಡಂ ತು ಯಃ ಕುರ್ಯಾದವಿಚಕ್ಷಣಃ |
ಸ ಇಹಾಕೀರ್ತಿಸಂಯುಕ್ತೋ ಮೃತೋ ನರಕಮಾಪ್ನುಯಾತ್ ॥24॥
ಆದರೆ ಯಾವನು ಅಕುಶಲನಾಗಿ, ತನ್ನ ಮನಸ್ಸಿಗೆ ಬಂದಂತೆ ದಂಡವನ್ನು ವಿಧಿ- ಸುತ್ತಾನೆಯೋ ಅವನು ಈ ಲೋಕದಲ್ಲಿ ಅಕೀರ್ತಿಯನ್ನು ಹೊಂದಿ, ಮೃತನಾಗಿ ನರಕವನ್ನು ಸೇರುತ್ತಾನೆ.
ನ ಪರಸ್ಯ ಶ್ರವಾದೇವ ಪರೇಷಾಂ ದಂಡಮರ್ಪಯೇತ್ |
ಆಗಮಾನುಗಮಂ ಕೃತ್ವಾ ಬಧ್ನೀಯಾನ್ಮೋಕ್ಷಯೇತ ವಾ ॥25॥
ಕೇವಲ ಇನ್ನೊಬ್ಬರ ಮಾತನ್ನು ಕೇಳಿ ಯಾರಿಗೂ ದಂಡವನ್ನು ವಿಧಿಸಬಾರದು. ಅಂತಹ ದೂರುಗಳನ್ನು ಶಾಸ್ತ್ರಗಳ ಒರೆಗೆ ಹಚ್ಚಿ, ಆರೋಪಿಯನ್ನು ಬಂಧಿಸಬೇಕು ಅಥವಾ ಬಿಡುಗಡೆ ಮಾಡಬೇಕು.
ನ ತು ಹನ್ಯಾನ್ನೃಪೋ ಜಾತು ದೂತಂ ಕಸ್ಯಾಂಚಿದಾಪದಿ |
ದೂತಸ್ಯ ಹಂತಾ ನಿರಯಮಾವಿಶೇತ್ ಸಚಿವೈಃ ಸಹ ॥26॥
ರಾಜನು ಯಾವ ಆಪತ್ತಿನಲ್ಲಿಯೂ ದೂತನನ್ನು ಕೊಲ್ಲಬಾರದು. ದೂತನನ್ನು ಕೊಲ್ಲುವ ರಾಜನು ಸಚಿವರ ಜೊತೆಯಲ್ಲಿ ನರಕಕ್ಕೆ ಹೋಗುತ್ತಾನೆ.
ಯಥೋಕ್ತವಾದಿನಂ ದೂತಂ ಕ್ಷತ್ರಧರ್ಮರತೋ ನೃಪಃ |
ಯೋ ಹನ್ಯಾದ್ ಪಿತರಸ್ತಸ್ಯ ಭ್ರೂಣಹತ್ಯಾಮವಾಪ್ನುಯುಃ ॥27॥
ಕ್ಷತ್ರಿಯಧರ್ಮದಲ್ಲಿ ರತನಾದ ರಾಜನು ತನ್ನ ಸ್ವಾಮಿಯು ಹೇಳಿದಂತೆ ಸಂದೇಶವನ್ನು ತಲುಪಿಸುವ ದೂತನನ್ನು ಕೊಂದರೆ ರಾಜನ ತಂದೆತಾಯಿಗಳು ಭ್ರೂಣಹತ್ಯಾದೋಷಕ್ಕೆ ಗುರಿಯಾಗುತ್ತಾರೆ.
ಕುಲೀನಃ ಶೀಲಸಂಪನ್ನೋ ವಾಗ್ಮೀ ದಕ್ಷಃ ಪ್ರಿಯಂವದಃ |
ಯಥೋಕ್ತವಾದೀ ಸ್ಮೃತಿಮಾನ್ ದೂತಃ ಸ್ಯಾತ್ ಸಪ್ತಭಿರ್ಗುಣೈಃ ॥28॥
ಒಳ್ಳೆಯ ಕುಲದಲ್ಲಿಜನಿಸಿದವನೂ, ಶೀಲಸಂಪನ್ನನೂ, ವಾಗ್ಮಿಯೂ, ದಕ್ಷನೂ, ಪ್ರಿಯವಾದ ಮಾತನ್ನಾಡುವವನೂ, ಒಳ್ಳೆಯ ಸ್ಮೃತಿಯನ್ನುಳ್ಳವನೂ, ಸಂದೇಶವನ್ನು ಸರಿಯಾಗಿ ಹೇಳುವವನೂ ಆದ ಈ ಏಳು ಗುಣಗಳಿಂದ ಕೂಡಿದವನು ದೂತ- ನಾಗುತ್ತಾನೆ.
ಏತೈರೇವ ಗುಣೈರ್ಯುಕ್ತಃ ಪ್ರತೀಹಾರೋಽಸ್ಯ ರಕ್ಷಿತಾ |
ಶಿರೋರಕ್ಷಶ್ಚ ಭವತಿ ಗುಣೈರೇತೈಃ ಸಮನ್ವಿತಃ ॥29॥
ದ್ವಾರಪಾಲಕನಾಗಿ ರಕ್ಷಣೆಯನ್ನು ಮಾಡುವವನೂ ಸಹ ಇವೇ ಗುಣಗಳಿಂದ ಕೂಡಿರಬೇಕು. ಅಂಗರಕ್ಷಕನೂ ಸಹ ಈ ಗುಣಗಳಿಂದ ಕೂಡಿರಬೇಕು.
ಧರ್ಮಾರ್ಥಶಾಸ್ತ್ರತತ್ವಜ್ಞಃ ಸಂಧಿವಿಗ್ರಹಕೋವಿದಃ |
ಮತಿಮಾನ್ ಧೃತಿಮಾನ್ ಧೀಮಾನ್ ರಹಸ್ಯವಿನಿಗೂಹಿತಾ ॥30॥
ಕುಲೀನಃ ಸತ್ಯಸಂಪನ್ನಃ ಶಕ್ತೋಽಮಾತ್ಯಃ ಪ್ರಶಂಸಿತಃ |
ಧರ್ಮಾರ್ಥಶಾಸ್ತ್ರತತ್ತ್ವಜ್ಞನೂ, ಸಂಧಿ-ವಿಗ್ರಹಗಳಲ್ಲಿ ಕೋವಿದನೂ, ಒಳ್ಳೆಯ ಬುದ್ದಿಯನ್ನೂ ಧೈರ್ಯವನ್ನೂ ಹೊಂದಿದವನೂ, ಮೇಧಾವಿಯೂ, ರಹಸ್ಯವನ್ನು ಮುಚ್ಚಿಡುವವನೂ, ಸತ್ಕುಲಪ್ರಸೂತನೂ, ಸತ್ಯಸಂಪನ್ನನೂ, ಸಮರ್ಥನೂ ಆದ ಅಮಾತ್ಯನು ಪ್ರಶಂಸಿಸಲ್ಪಡುತ್ತಾನೆ.
ಏತೈರೇವ ಗುಣೈರ್ಯುಕ್ತಸ್ತಥಾ ಸೇನಾಪತಿರ್ಭವೇತ್॥31॥
ವ್ಯೂಹಯಂತ್ರಾಯುಧೀಯಾನಾಂ ತತ್ತ್ವಜ್ಞೋ ವಿಕ್ರಮಾನ್ವಿತಃ |
ವರ್ಷಶೀತೋಷ್ಣವಾತಾನಾಂ ಸಹಿಷ್ಣುಃ ಪರರಂಧ್ರವಿತ್ ॥32॥
ಹಾಗೆಯೇ ಸೇನಾಪತಿಯೂ ಸಹ ಈ ಗುಣಗಳಿಂದಲೇ ಕೂಡಿದವನಾಗಿರ- ಬೇಕು. ಜೊತೆಗೆ ವ್ಯೂಹಗಳ, ಯಂತ್ರಗಳ ಮತ್ತು ಆಯುಧಗಳ ತತ್ತ್ವಗಳನ್ನು ತಿಳಿದಿರಬೇಕು. ಪರಾಕ್ರಮಶಾಲಿಯಾಗಿರಬೇಕು. ಶೀತೋಷ್ಣವಾತವರ್ಷಗಳನ್ನು ಸಹಿ- ಸುವವನಾಗಿರಬೇಕು. ಶತ್ರುವಿನ ದೌರ್ಬಲ್ಯವನ್ನು ತಿಳಿಯುವವನಾಗಿರಬೇಕು.
ವಿಶ್ವಾಸಯೇತ್ ಪರಾಂಶ್ಚೈವ ವಿಶ್ವಸೇನ್ನ ತು ಕಸ್ಯಚಿತ್ |
ಪುತ್ರೇಷ್ವಪಿ ಹಿ ರಾಜೇಂದ್ರ ವಿಶ್ವಾಸೋ ನ ಪ್ರಶಸ್ಯತೇ ॥33॥
ರಾಜನು ಇನ್ನೊಬ್ಬರು ತನ್ನಲ್ಲಿ ವಿಶ್ವಾಸ ಮಾಡುವಂತೆ ಮಾಡಬೇಕು. ತಾನು ಯಾರನ್ನೂ ನಂಬಬಾರದು. ಎಲೈ ರಾಜೇಂದ್ರನೇ! ಪುತ್ರರಲ್ಲಿ ವಿಶ್ವಾಸ ಮಾಡು- ವುದೂ ಸಹ ರಾಜನಿಗೆ ಪ್ರಶಸ್ತವಲ್ಲ.
ಏತಚ್ಚಾಸ್ತ್ರಾರ್ಥತತ್ತ್ವಂ ತು ತವಾಖ್ಯಾತಂ ಮಯಾಽನಘ |
ಅವಿಶ್ವಾಸೋ ನರೇಂದ್ರಾಣಾಂ ಗುಹ್ಯಂ ಪರಮಮುಚ್ಯತೇ ॥33॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಸಪ್ತಾಶೀತಿತಮೋಽಧ್ಯಾಯಃ ॥87॥
ಎಲೈ ಅನಘನೇ! ಈ ಶಾಸ್ತ್ರಾರ್ಥತತ್ವವನ್ನು ನಾನು ನಿನಗೆ ಹೇಳಿದ್ದೇನೆ. ರಾಜರಿಗೆ ಅವಿಶ್ವಾಸವು ಪರಮಗುಹ್ಯವಾದ ತತ್ತ್ವವೆಂದು ಹೇಳಲ್ಪಡುತ್ತದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 87ನೆಯ ಅಧ್ಯಾಯವು ಮುಗಿಯಿತು
0

88. ಎಂಬತ್ತೆಂಟನೆಯ ಅಧ್ಯಾಯ

ಪುರಲಕ್ಷಣಾದಿ ಕಥನ
ಯುಧಿಷ್ಠಿರಃ
ಕಥಂವಿಧಂ ಪುರಂ ರಾಜಾ ಸ್ವಯಮಾವಸ್ತುಮರ್ಹತಿ |
ಕೃತಂ ವಾ ಕಾರಯಿತ್ವಾ ವಾ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ರಾಜನು ಮೊದಲೇ ಸಿದ್ಧವಾದ ಅಥವಾ ತಾನು ಹೊಸದಾಗಿ ಸಿದ್ಧಪಡಿಸುವ ಎಂತಹ ಪುರದಲ್ಲಿ ವಾಸ ಮಾಡಬೇಕು ಎಂದು ನನಗೆ ಹೇಳು.
ಭೀಷ್ಮಃ
ಯತ್ರ ಕೌಂತೇಯ ವಸ್ತವ್ಯಂ ಸಪುತ್ರಭ್ರಾತೃಬಂಧುನಾ |
ನ್ಯಾಯ್ಯಂ ತತ್ರ ಪರಿಪ್ರಷ್ಟುಂ ಗುಪ್ತಿಂ ವೃತ್ತಿಂ ಚ ಭಾರತ ॥2॥
ಭೀಷ್ಮರು ಕೌಂತೇಯನೇ! ಭಾರತನೇ! ರಾಜನು ಪುತ್ರಭ್ರಾತೃಬಂಧು- ಸಹಿತನಾಗಿ ಎಲ್ಲಿ ವಾಸ ಮಾಡಬೇಕೋ ಅಲ್ಲಿಯ ರಕ್ಷಣೆ ಮತ್ತು ಜೀವನಕ್ರಮವು ಹೇಗಿರಬೇಕು ಎಂದು ನೀನು ಕೇಳುವುದು ನ್ಯಾಯವಾಗಿದೆ.
ತಸ್ಮಾತ್ ತೇ ವರ್ತಯಿಷ್ಯಾಮಿ ದುರ್ಗಕರ್ಮ ವಿಶೇಷತಃ |
ಶ್ರುತ್ವಾ ತಥಾ ವಿಧಾತವ್ಯಮನುಷ್ಠೇಯಂ ಚ ಯತ್ನತಃ ॥3॥
ಆದುದರಿಂದ ನಿನಗೆ ದುರ್ಗವನ್ನು ಮಾಡುವ ರೀತಿಯನ್ನು ವಿಶೇಷವಾಗಿ ಹೇಳುವೆನು. ಅದನ್ನು ಕೇಳಿ ಹಾಗೆಯೇ ಮಾಡಿಸಿ ಪ್ರಯತ್ನಪೂರ್ವಕವಾಗಿ ಅನುಷ್ಠಾನ ಮಾಡಬೇಕು.
ಷಡ್ವಿಧಂ ದುರ್ಗಮಾಸ್ಥಾಯ ಪುರಾಣ್ಯಥ ನಿವೇಶಯೇತ್ |
ಸರ್ವಸಂಪತ್ಪ್ರಧಾನಂ ಯದ್ ಬಾಹುಲ್ಯಂ ವಾಪಿ ಸಂಭವೇತ್ ॥4॥
ಆರುವಿಧವಾದ ದುರ್ಗಗಳನ್ನು ನಿರ್ಮಿಸಿ, ಸರ್ವಸಂಪತ್ ಪ್ರಧಾನವಾದ ವಿಸ್ತಾರವಾದ ಪ್ರದೇಶದಲ್ಲಿ ಪುರಗಳನ್ನು ನಿರ್ಮಿಸಬೇಕು.
ಧನ್ವದುರ್ಗಂ ಮಹೀದುರ್ಗಂ ಗಿರಿದುರ್ಗಂ ತಥೈವ ಚ |
ಮನುಷ್ಯದುರ್ಗಮಬ್ದುರ್ಗಂ ವನದುರ್ಗಂ ಚ ತಾನಿ ಷಟ್ ॥5॥
ಧನ್ವದುರ್ಗ(ಪುರದ ಸುತ್ತಲೂ ಹೊರಭಾಗದಲ್ಲಿ ಮರುಭೂಮಿಯಿರು- ವುದು), ಮಹೀದುರ್ಗ (ಕೋಟೆ ಕೊತ್ತಲುಗಳನ್ನು ನಿರ್ಮಿಸುವುದು), ಗಿರಿದುರ್ಗ (ಸುತ್ತಲೂ ಪರ್ವತವಿರುವ ಪ್ರದೇಶದಲ್ಲಿ ನಿರ್ಮಿಸುವುದು), ಮನುಷ್ಯದುರ್ಗ (ಬಹಳ ಸೈನಿಕರನ್ನು ರಕ್ಷಣೆಗಾಗಿ ಹೊಂದಿರುವುದು), ಜಲದುರ್ಗ (ಕಂದಕಗಳನ್ನು ನಿರ್ಮಿಸುವುದು), ವನದುರ್ಗ (ಅರಣ್ಯಗಳನ್ನು ನಿರ್ಮಿಸುವುದು) ಇವು ಆ ಆರು ವಿಧವಾದ ದುರ್ಗಗಳು.
ಯತ್ ಪುರಂ ದುರ್ಗಸಂಪನ್ನಂ ಧಾನ್ಯಾಯುಧಸಮನ್ವಿತಮ್ |
ದೃಢಪ್ರಾಕಾರಪರಿಖಂ ಹಸ್ತ್ಯಶ್ವರಥಸಂಕುಲಮ್ ॥6॥
ವಿದ್ವಾಂಸಃ ಶಿಲ್ಪಿನೋ ಯತ್ರ ನಿಚಯಾಶ್ಚ ಸುಸಂಚಿತಾಃ |
ಧಾರ್ಮಿಕಾಶ್ಚ ಜನೋ ಯತ್ರ ದಾಕ್ಷ್ಯಮುತ್ತಮಮಾಸ್ಥಿತಾಃ ॥7॥
ಊರ್ಜಸ್ವಿನರನಾಗಾಶ್ವಂ ಚತ್ವಾರಾಪಣಶೋಭಿತಮ್ |
ಪ್ರಸಿದ್ಧವ್ಯವಹಾರಂ ಚ ಪ್ರಶಾಂತಮಕುತೋಭಯಮ್ ॥8॥
ಸುಪ್ರಭಂ ಸಸುನಾದಂ ಚ ಸುಪ್ರಶಸ್ತನಿವೇಶನಮ್ |
ಶೂರಾಢ್ಯಜನಸಂಪನ್ನಂ ಬ್ರಹ್ಮಘೋಷಾನುನಾದಿತಮ್ ॥9॥
ಸಮಾಜೋತ್ಸವಸಂಪನ್ನಂ ಸದಾ ಪೂಜಿತದೈವತಮ್ |
ವಶ್ಯಾಮಾತ್ಯಬಲೋ ರಾಜಾ ತತ್ಪುರಂ ಸ್ವಯಮಾವಸೇತ್ ॥10॥
ಯಾವ ಪಟ್ಟಣವು ದುರ್ಗಗಳಿಂದಲೂ, ಧನಧಾನ್ಯ ಆಯುಧಗಳಿಂದಲೂ, ದೃಢವಾದ ಕೋಟೆ ಮತ್ತು ಕಂದಕಗಳಿಂದಲೂ ಕೂಡಿದುದಾಗಿ ಗಜ, ಅಶ್ವ, ರಥಗಳಿಂದ ನಿಬಿಡವಾಗಿರುತ್ತದೆಯೋ, ಎಲ್ಲಿ ವಿದ್ವಾಂಸರು ಕುಶಲಕರ್ಮಿಗಳು ಮತ್ತು ಧಾನ್ಯಾದಿಗಳು ಚೆನ್ನಾಗಿ ಸಂಗ್ರಹವಾಗಿರುತ್ತವೆಯೋ, ಎಲ್ಲಿ ಜನರು ಧಾರ್ಮಿಕರಾಗಿ ಉತ್ತಮವಾದ ದಕ್ಷತೆಯನ್ನು ಹೊಂದಿರುತ್ತಾರೆಯೋ, ಬಲಿಷ್ಠವಾದ ನರ-ಆನೆ-ಅಶ್ವಗಳು ಇರುತ್ತವೆಯೋ, ಚತುಷ್ಪಥ ಮತ್ತು ಅಂಗಡಿ ಬೀದಿಗಳಿಂದ ಶೋಭಿತವಾಗಿರುತ್ತದೆಯೋ, ಕ್ರಯವಿಕ್ರಯಾದಿ ವ್ಯವಹಾರಗಳಿಗೆ ಅನುಕೂಲ- ವಾಗಿರುತ್ತದೆಯೋ, ನಿರ್ಭಯವಾಗಿರುತ್ತದೆಯೋ, ಪ್ರಶಾಂತವಾಗಿರುತ್ತದೆಯೋ, ಒಳ್ಳೆಯ ಬೆಳಕು ಒಳ್ಳೆಯ ಶಬ್ದಗಳು ಒಳ್ಳೆಯ ಮನೆಗಳಿಂದ ಕೂಡಿರುತ್ತದೆಯೋ, ಶೂರರೂ ಆಢ್ಯರೂ ಆದ ಜನರಿಂದ ತುಂಬಿರುತ್ತದೆಯೋ, ವೇದಘೋಷ- ವಿರುತ್ತದೆಯೋ ಅಂತಹ ಪಟ್ಟಣದಲ್ಲಿ ತನ್ನ ವಶದಲ್ಲಿ ಅಮಾತ್ಯ ಮತ್ತು ಸೈನಿಕರನ್ನು ಇಟ್ಟುಕೊಂಡ ರಾಜನು ವಾಸ ಮಾಡಬೇಕು.
ತತ್ರ ಕೋಶಂ ಬಲಂ ಮಿತ್ರಂ ವ್ಯವಹಾರಂ ಚ ವರ್ಧಯೇತ್ |
ಪುರೇ ಜನಪದೇ ಚೈವ ಸರ್ವದೋಷಾನ್ ನಿವರ್ತಯೇತ್ ॥11॥
ಅಲ್ಲಿ ಕೋಶ, ಸೈನ್ಯ, ಮಿತ್ರ ಮತ್ತು ಕ್ರಯವಿಕ್ರಯಾದಿ ವ್ಯವಹಾರಗಳನ್ನು ಅಭಿವೃದ್ಧಿಪಡಿಸಬೇಕು. ರಾಜಧಾನಿಯಲ್ಲಿ ಮತ್ತು ರಾಜ್ಯದಲ್ಲಿ ಉಂಟಾಗುವ ಎಲ್ಲ ದೋಷಗಳನ್ನೂ ಪರಿಹರಿಸಬೇಕು.
ಭಾಂಡಾಗಾರಾಯುಧಾಗಾರಾನ್ ಪ್ರಯತ್ನೇನಾಭಿವರ್ಧಯೇತ್ |
ನಿಚಯಾನ್ ವರ್ಧಯೇತ್ ಸರ್ವಾಂಸ್ತಥಾ ಯಂತ್ರಗದಾಗದಾನ್ ॥12॥
ಅಶ್ವಸಲಕರಣೆಗಳ ಆಗಾರವನ್ನು ಮತ್ತು ಆಯುಧಾಗಾರವನ್ನು ಪ್ರಯತ್ನ- ಪೂರ್ವಕವಾಗಿ ಅಭಿವೃದ್ಧಿ ಪಡಿಸಬೇಕು. ಹಾಗೆಯೇ ಯಂತ್ರಗಳ ಆಯುಧಗಳ ಮತ್ತು ಔಷಧಿಗಳ ಸಂಚಯವನ್ನು ಅಭಿವೃದ್ಧಿಪಡಿಸಬೇಕು.

ಕಾಷ್ಠಲೋಹತುಷಾಂಗಾರದಾರುಶೃಂಗಾಸ್ಥಿವೈಣವಾನ್ |
ಮಜ್ಜಾಸ್ನೇಹವಸಾಕ್ಷೌದ್ರಮೌಷಧಗ್ರಾಮಮೇವ ಚ ॥13॥
ಶಣಂ ಸರ್ಜರಸಂ ಧಾನ್ಯಮಾಯುಧಾನಿ ಶರಾಂಸ್ತಥಾ |
ಚರ್ಮ ಸ್ನಾಯು ತಥಾ ವೇತ್ರಂ ಮುಂಜಬಲ್ವಜಧನ್ವನಾನ್ ॥14॥
ಕಟ್ಟಿಗೆಗಳು, ಲೋಹಗಳು, ಹೊಟ್ಟು, ಇದ್ದಿಲು, ಗೃಹನಿರ್ಮಾಣಕ್ಕೆ ಉಪ- ಯೋಗಿಸುವ ಮರಗಳು, ಕೊಂಬುಗಳು, ಮೂಳೆಗಳು, ಬಿದಿರು, ಮಜ್ಜೆ, ತೈಲ, ವಸ, ಜೇನುತುಪ್ಪ, ಔಷಧಸಮೂಹಗಳು, ಸೆಣಬು, ಬೇಗ ಉರಿಯುವ ಸರ್ಜರಸ, ಧಾನ್ಯಗಳು, ಆಯುಧಗಳು, ಬಾಣಗಳು, ಚರ್ಮ, ಸ್ನಾಯುಗಳು, ಬೆತ್ತಗಳು, ಮುಂಜ ಹುಲ್ಲು ಮತ್ತು ಕರಡಿ ಹುಲ್ಲುಗಳು ಇವುಗಳನ್ನು ಸಂಗ್ರಹಿಸಬೇಕು.
ಆಶಯಾಶ್ಚೋದಪಾನಾಶ್ಚ ಪ್ರಭೂತಸಲಿಲಾಕರಾಃ |
ನಿರೋದ್ಧವ್ಯಾಃ ಸದಾ ರಾಜ್ಞಾ ಕ್ಷೀರಿಣಶ್ಚ ಮಹೀರುಹಾಃ ॥15॥
ಜಲಾಶಯಗಳು, ಭಾವಿಗಳು, ದೊಡ್ಡ ದೊಡ್ಡ ಸರೋವರಗಳು, ಹಾಲಿನಂತಹ ದ್ರವವನ್ನು ಸುರಿಸುವ ವೃಕ್ಷಗಳು ಇವುಗಳನ್ನು ರಾಜನು ಯಾವಾಗಲೂ ರಕ್ಷಿಸಬೇಕು.
ಸತ್ಕೃತಾಶ್ಚ ಪ್ರಯತ್ನೇನ ಆಚಾರ್ಯರ್ತ್ವಿಕ್‌ಪುರೋಹಿತಾಃ |
ಮಹೇಷ್ವಾಸಾಃ ಸ್ಥಪತಯಃ ಸಾಂವತ್ಸರಚಿಕಿತ್ಸಕಾಃ ॥16॥
ಪ್ರಾಜ್ಞಾ ಮೇಧಾವಿನೋ ದಾಂತಾ ದಕ್ಷಾಃ ಶೂರಾ ಬಹುಶ್ರುತಾಃ |
ಕುಲೀನಾಃ ಸತ್ತ್ವಸಂಪನ್ನಾ ಯುಕ್ತಾಃ ಸರ್ವೇಷು ಕರ್ಮಸು ॥17॥
ಆಚಾರ್ಯ ಋತ್ವಿಕ್ ಪುರೋಹಿತರು, ಮಹಾಧನುರ್ಧಾರಿಗಳು, ಬಡಗಿಗಳು, ಜ್ಯೋತಿಷ್ಕರು, ವೈದ್ಯರು, ಪ್ರಾಜ್ಞರು, ಮೇಧಾವಿಗಳು, ಇಂದ್ರಿಯನಿಗ್ರಹವುಳ್ಳವರು, ದಕ್ಷರು, ಶೂರರು, ಬಹುಶ್ರುತರು, ಸತ್ಕುಲಪ್ರಸೂತರು, ಧೈರ್ಯಶಾಲಿಗಳು ಆದವರನ್ನು ಎಲ್ಲ ಕಾರ್ಯಗಳಲ್ಲಿ ನಿಯೋಜಿಸಿ, ಪ್ರಯತ್ನಪೂರ್ವಕವಾಗಿ ಅವರಿಗೆ ಸತ್ಕಾರವನ್ನು ಮಾಡಬೇಕು.
ಪೂಜಯೇದ್ ಧಾರ್ಮಿಕಾನ್ ರಾಜಾ ನಿಗೃಹ್ಣೀಯಾದಧಾರ್ಮಿಕಾನ್ |
ನಿಯುಂಜ್ಯಾಚ್ಚ ಪ್ರಯತ್ನೇನ ಸರ್ವವರ್ಣಾನ್ ಸ್ವಕರ್ಮಸು ॥18॥
ರಾಜನು ಧಾರ್ಮಿಕರನ್ನು ಪೂಜಿಸಬೇಕು. ಅಧಾರ್ಮಿಕರನ್ನು ನಿಗ್ರಹಿಸಬೇಕು. ಎಲ್ಲ ವರ್ಣದವರೂ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿರುವಂತೆ ನಿಯೋ- ಜಿಸಬೇಕು.
ಬಾಹ್ಯಮಾಭ್ಯಂತರಂ ಚೈವ ಪೌರಜಾನಪದಂ ಜನಮ್ |
ಚಾರೈಃ ಸುವಿದಿತಂ ಕೃತ್ವಾ ತತಃ ಕರ್ಮ ಪ್ರಯೋಜಯೇತ್ ॥19॥
ಅರಮನೆಯ ಹೊರಗೆ ಮತ್ತುಒಳಗೆ ಇರುವವರನ್ನು ರಾಜಧಾನಿಯಲ್ಲಿ ಮತ್ತು ರಾಷ್ಟ್ರದಲ್ಲಿರುವವರನ್ನು ಚಾರರ ಮೂಲಕವಾಗಿ ಚೆನ್ನಾಗಿ ತಿಳಿದು ಅನಂತರ ಕಾರ್ಯಗಳನ್ನು ಮಾಡಿಸಬೇಕು.
ಚಾರಾನ್ ಮಂತ್ರಂ ಚ ಕೋಶಂ ಚ ಮಂತ್ರಂ ಚೈವ ವಿಶೇಷತಃ |
ಅನುತಿಷ್ಠೇತ್ ಸ್ವಯಂ ರಾಜಾ ಸರ್ವಂ ಹ್ಯತ್ರ ಪ್ರತಿಷ್ಠಿತಮ್ ॥20॥
ಚಾರರು, ಮಂತ್ರಗಳು ಮತ್ತು ಕೋಶ ಅದರಲ್ಲಿಯೂ ವಿಶೇಷವಾಗಿ ಮಂತ್ರ- ಗಳು ಇವನ್ನು ರಾಜ ಸ್ವತಃ ನೋಡಿಕೊಳ್ಳಬೇಕು. ಏಕೆಂದರೆ ರಾಜ್ಯದ ಹಿತವೆಲ್ಲವೂ ಅಲ್ಲಿಯೇ ಪ್ರತಿಷ್ಠಿತವಾಗಿದೆ.
ಉದಾಸೀನಾರಿಮಿತ್ರಾಣಾಂ ಸರ್ವಮೇವ ಚಿಕೀರ್ಷಿತಮ್ |
ಪುರೇ ಜನಪದೇ ಚೈವ ಜ್ಞಾತವ್ಯಂ ಚಾರಚಕ್ಷುಷಾ ॥21॥
ಪುರದಲ್ಲಿ ಮತ್ತು ಜನಪದದಲ್ಲಿ ಶತ್ರು-ಮಿತ್ರ-ಉದಾಸೀನರು ಮಾಡಲು ಅಪೇಕ್ಷಿಸಿರುವ ಸರ್ವಕಾರ್ಯಗಳನ್ನು ಚಾರರ ಮೂಲಕವಾಗಿ ತಿಳಿಯಬೇಕು.
ತತಸ್ತಥಾ ವಿಧಾತವ್ಯಂ ಸರ್ವಮೇವಾಪ್ರಮಾದತಃ |
ಭಕ್ತಾನ್ ಪೂಜಯತಾ ನಿತ್ಯಂ ದ್ವಿಷತಶ್ಚ ನಿಗೃಹ್ಣತಾ ॥22॥
ಅನಂತರ ಅದಕ್ಕೆ ಅನುಗುಣವಾಗಿ ಎಚ್ಚರಿಕೆಯಿಂದ ತನ್ನಲ್ಲಿ ನಿಷ್ಠೆಯುಳ್ಳವರನ್ನು ಪೂಜಿಸುತ್ತಾ, ತನ್ನ ಶತ್ರುಗಳನ್ನು ನಿಗ್ರಹಿಸುತ್ತಾ ಎಲ್ಲವನ್ನೂ ಪ್ರಯೋಜಿಸಬೇಕು.
ಯಷ್ಟವ್ಯಂ ಕ್ರತುಭಿರ್ನಿತ್ಯಂ ದಾತವ್ಯಂ ಚಾಪ್ಯಪೀಡಯಾ |
ಪ್ರಜಾನಾಂ ರಕ್ಷಣಂ ಕಾರ್ಯಂ ನ ಕಾರ್ಯಂ ಕರ್ಮ ಗರ್ಹಿತಮ್ ॥23॥
ನಿತ್ಯವೂ ಯಾಗಗಳನ್ನು ಮಾಡಬೇಕು. ಪ್ರಜೆಗಳನ್ನು ಪೀಡಿಸದೇ ದಾನವನ್ನು ಮಾಡಬೇಕು. ಪ್ರಜೆಗಳ ರಕ್ಷಣೆಯನ್ನು ಮಾಡಬೇಕು. ನಿಂದ್ಯವಾದ ಯಾವ ಕರ್ಮ- ಗಳನ್ನೂ ಮಾಡಬಾರದು.
ಕೃಪಣಾನಾಥವೃದ್ಧಾನಾಂ ವಿಧವಾನಾಂ ಚ ಯೋಷಿತಾಮ್ |
ಯೋಗಕ್ಷೇಮಂ ಚ ವೃತ್ತಿಂ ಚ ನಿತ್ಯಮೇವ ಪ್ರಕಲ್ಪಯೇತ್ ॥24॥
ಕೃಪಣರು, ಅನಾಥರು, ವೃದ್ಧರು, ವಿಧವಾಸ್ತ್ರೀಯರು ಇವರ ಯೋಗಕ್ಷೇಮ- ವನ್ನು ತಿಳಿದು ಸತತವಾಗಿ ಜೀವನೋಪಾಯವನ್ನು ಕಲ್ಪಿಸಬೇಕು.
ಆಶ್ರಮೇಷು ಯಥಾಕಾಲಂ ಚೇಲಭಾಜನಭೋಜನಮ್ |
ಸದೈವೋಪಹರೇತ್ ರಾಜಾ ಸತ್ಕೃತ್ಯಾನವಮನ್ಯ ಚ ॥25॥
ರಾಜನು ಆಶ್ರಮಗಳಲ್ಲಿ ಆಯಾ ಕಾಲಕ್ಕೆ ಅನುಗುಣವಾಗಿ ಕಂಬಳಿ ಮೊದಲಾದ ಚೇಲವನ್ನು, ಕಮಂಡಲು ಮೊದಲಾದ ಪಾತ್ರೆಗಳನ್ನು ಮತ್ತು ಭೋಜನಸಾಮಗ್ರಿ- ಯನ್ನು ಆಶ್ರಮವಾಸಿಗಳನ್ನು ಸತ್ಕರಿಸಿ, ಅವಮಾನ ಮಾಡದೇ ಯಾವಾಗಲೂ ಒದಗಿಸಬೇಕು.

ಆತ್ಮಾನಂ ಸರ್ವಕಾರ್ಯಾಣಿ ತಾಪಸೇ ರಾಜ್ಯಮೇವ ಚ |
ನಿವೇದಯೇತ್ ಪ್ರಯತ್ನೇನ ತಿಷ್ಠೇತ್ ಪ್ರಹ್ವಶ್ಚ ಸರ್ವದಾ ||26||
ಆಶ್ರಮವಾಸಿಯಾದ ತಪಸ್ವಿಗೆ ತನ್ನನ್ನು, ತನ್ನ ರಾಜ್ಯವನ್ನು, ತಾನು ಮಾಡುವ ಎಲ್ಲ ಕಾರ್ಯಗಳನ್ನು ನಿವೇದಿಸಬೇಕು. ಪ್ರಯತ್ನಪೂರ್ವಕವಾಗಿ ಅವನ ಬಳಿಯಲ್ಲಿ ಯಾವಾಗಲೂ ವಿನಯದಿಂದ ಇರಬೇಕು.
ಸರ್ವಾರ್ಥತ್ಯಾಗಿನಂ ರಾಜಾ ಕುಲೇ ಜಾತಂ ಬಹುಶ್ರುತಮ್ |
ಪೂಜಯೇತ್ ತಾದೃಶಂ ದೃಷ್ಟ್ವಾ ಶಯನಾಸನಭೋಜನೈಃ ||27||
ಸತ್ಕುಲದಲ್ಲಿ ಜನಿಸಿ, ವಿದ್ಯಾವಂತನಾಗಿ, ಸರ್ವಾರ್ಥತ್ಯಾಗವನ್ನು ಮಾಡಿ, ಸನ್ಯಾಸಿಯಾದವನನ್ನು ನೋಡಿ ರಾಜನು ಅವನನ್ನು ಶಯನಾಸನಭೋಜನಗಳಿಂದ ಪೂಜಿಸಬೇಕು.
ತಸ್ಮಿನ್ ಕುರ್ವೀತ ವಿಶ್ವಾಸಂ ರಾಜಾ ಕಸ್ಯಾಂಚಿದಾಪದಿ |
ತಾಪಸೇಷು ಹಿ ವಿಶ್ವಾಸಮಪಿ ಕುರ್ವಂತಿ ದಸ್ಯವಃ ||28||
ಆಪತ್ತು ಒದಗಿದಾಗ ರಾಜನು ಅಂತಹ ತಪಸ್ವಿಯಲ್ಲಿ ವಿಶ್ವಾಸವನ್ನು ಮಾಡ- ಬೇಕು. ಏಕೆಂದರೆ ದಸ್ಯುಗಳೂ ಸಹ ತಾಪಸರಲ್ಲಿ ವಿಶ್ವಾಸವನ್ನು ಮಾಡುತ್ತಾರೆ.
ತಸ್ಮಿನ್ ನಿಧೀನಾದಧೀತ ಪ್ರಜ್ಞಾಂ ಪರ್ಯಾದದೀತ ಚ |
ನ ಚಾಪ್ಯಭೀಕ್ಷ್ಣಂ ಸೇವೇತ ಭೃಶಂ ವಾ ಪ್ರತಿಪೂಜಯೇತ್ ||29||
ಆಪತ್ಕಾಲದಲ್ಲಿ ತನ್ನ ಬಳಿಯಿರುವ ನಿಧಿಯನ್ನು ತಪಸ್ವಿಯ ಬಳಿಯಲ್ಲಿ ಇಟ್ಟು ಅವನಿಂದ ವಿವೇಕವನ್ನು ಸಂಗ್ರಹಿಸಬೇಕು. ಪುನಃ ಪುನಃ ತಾಪಸರ ಬಳಿಗೆ ಹೋಗ- ಬಾರದು. ಮತ್ತು ಎಲ್ಲರಿಗೂ ತಿಳಿಯುವಂತೆ ಬಹಳವಾಗಿ ಪೂಜೆಯನ್ನೂ ಮಾಡ- ಬಾರದು.
ಅನ್ಯಃ ಕಾರ್ಯಃ ಸ್ವರಾಷ್ಟ್ರೇಷು ಪರರಾಷ್ಟ್ರೇಷು ಚಾಪರಃ |
ಅಟವೀಷ್ವಪರಃ ಕಾರ್ಯಃ ಸಾಮಂತನಗರೇಷು ಚ ||30||
ರಾಜನು ತನ್ನ ರಾಷ್ಟ್ರದಲ್ಲಿ ಬೇರೆಯ ಕಾರ್ಯವನ್ನು ಮಾಡಬೇಕು; ಪರರಾಷ್ಟ್ರ- ಗಳಲ್ಲಿ ಬೇರೆಯ ಕಾರ್ಯ; ಅಡವಿಗಳಲ್ಲಿ ಬೇರೆಯ ಕಾರ್ಯ ಮತ್ತು ಸಾಮಂತ- ರಾಜರ ನಗರಗಳಲ್ಲಿ ಬೇರೆಯ ಕಾರ್ಯವನ್ನು ಮಾಡಬೇಕು.
ತೇಷು ಸತ್ಕಾರಸಂಸ್ಕಾರಾನ್ ಸಂವಿಭಾಗಾಂಶ್ಚ ಕಾರಯೇತ್ |
ಪರರಾಷ್ಟ್ರಾಟವೀಸ್ಥೇಷು ಯಥಾ ಸ್ವವಿಷಯೇ ತಥಾ ||31||
ಪರರಾಷ್ಟ್ರಗಳಲ್ಲಿ ಮತ್ತು ಅಡವಿಗಳಲ್ಲಿ ಕಾರ್ಯವನ್ನು ಮಾಡುವವರಿಗೆ ತನ್ನ ರಾಜ್ಯದಲ್ಲಿ ಕಾರ್ಯವನ್ನು ಮಾಡುವವರಂತೆಯೇ ಸತ್ಕಾರವನ್ನು, ಸಂಸ್ಕಾರಗಳನ್ನು ಮತ್ತು ಧನಾದಿದಾನವನ್ನು ಮಾಡಬೇಕು.
ತೇ ಕಸ್ಯಾಂಚಿದವಸ್ಥಾಯಾಂ ಶರಣಂ ಶರಣಾರ್ಥಿನೇ |
ರಾಜ್ಞೇ ದದ್ಯುರ್ಯಥಾಕಾಮಂ ತಾಪಸಾಃ ಸಂಶಿತವ್ರತಾಃ ||32||
ಒಳ್ಳೆಯ ವ್ರತಧಾರಿಗಳಾದ ತಾಪಸರು ರಾಜನಿಗೆ ಯಾವಾಗಲಾದರೂ ಒಂದು ಆಪತ್ತು ಒದಗಿ ಅವನು ಶರಣಾರ್ಥಿಯಾಗಿ ಬಂದಾಗ ಅವನಿಗೆ ಆಶ್ರಯವನ್ನು ಕೊಡುವರು.
ಏಷ ತೇ ಲಕ್ಷಣೋದ್ದೇಶಃ ಸಂಕ್ಷೇಪೇಣ ಪ್ರಕೀರ್ತಿತಃ |
ಯಾದೃಶಂ ನಗರಂ ರಾಜಾ ಸ್ವಯಮಾವಸ್ತುಮರ್ಹತಿ ||33||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಾಶೀತಿತಮೋಽಧ್ಯಾಯಃ ||88||
ರಾಜನು ಎಂತಹ ನಗರದಲ್ಲಿ ವಾಸಮಾಡಬೇಕೆಂಬ ವಿಷಯದಲ್ಲಿ ನಿನಗೆ ಸಂಕ್ಷೇಪವಾಗಿ ನಗರದ ಲಕ್ಷಣಗಳನ್ನು ಹೇಳಿದ್ದೇನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 88ನೆಯ ಅಧ್ಯಾಯವು ಮುಗಿಯಿತು.

## 89. ಎಂಬತ್ತೊಂಬತ್ತನೆಯ ಅಧ್ಯಾಯ

### ರಾಷ್ಟ್ರದ ರಕ್ಷಣೆಯ ಪ್ರಕಾರ ಕಥನ

ಯುಧಿಷ್ಠಿರಃ
ರಾಷ್ಟ್ರಗುಪ್ತಿಂ ಚ ಮೇ ರಾಜನ್ ರಾಷ್ಟ್ರಸ್ಯೈವ ಚ ಸಂಗ್ರಹಮ್ |
ಸಮ್ಯಗ್ ಜಿಜ್ಞಾಸಮಾನಾಯ ಪ್ರಬ್ರೂಹಿ ಭರತರ್ಷಭ ||1||
ಯುಧಿಷ್ಠಿರ ಎಲೈ ಭರತರ್ಷಭನೇ! ರಾಷ್ಟ್ರದ ರಕ್ಷಣೆಯ ಪ್ರಕಾರವನ್ನು ಮತ್ತು ರಾಷ್ಟ್ರವನ್ನು ಚೆನ್ನಾಗಿ ವಶದಲ್ಲಿಟ್ಟುಕೊಳ್ಳುವ ಪ್ರಕಾರವನ್ನು ತಿಳಿಯಲು ಬಯಸುವ ನನಗೆ ಅದನ್ನು ಚೆನ್ನಾಗಿ ಹೇಳು.
ಭೀಷ್ಮಃ
ರಾಷ್ಟ್ರಗುಪ್ತಿಂ ಚ ತೇ ಸಮ್ಯಗ್ ರಾಷ್ಟ್ರಸ್ಯೈವ ಚ ಸಂಗ್ರಹಮ್ |
ಹಂತ ಸರ್ವಂ ಪ್ರವಕ್ಷ್ಯಾಮಿ ತತ್ ತ್ವಮೇಕಮನಾಃ ಶೃಣು ||2||
ಭೀಷ್ಮರು ಸಂತೋಷ. ರಾಷ್ಟ್ರದ ರಕ್ಷಣೆ ಮತ್ತು ಚೆನ್ನಾಗಿ ರಾಷ್ಟ್ರದ ಸಂಗ್ರಹ ಇದೆಲ್ಲವನ್ನೂ ಹೇಳುವೆನು. ಅದನ್ನು ಒಂದೇ ಮನಸ್ಸಿನಿಂದ ಕೇಳು.
ಗ್ರಾಮಸ್ಯಾಧಿಪತಿಃ ಕಾರ್ಯೋ ದಶಗ್ರಾಮ್ಯಸ್ತಥಾಪರಃ |
ದ್ವಿಗುಣಾಯಾಃ ಶತಸ್ಯೈವಂ ಸಹಸ್ರಸ್ಯ ಚ ಕಾರಯೇತ್ ||3||
ಒಂದು ಗ್ರಾಮಕ್ಕೆ ಒಬ್ಬ ಅಧಿಪತಿಯನ್ನು ಮಾಡಬೇಕು. ಹತ್ತುಗ್ರಾಮಗಳಿಗೆ ಇನ್ನೊಬ್ಬ ಅಧಿಪತಿಯನ್ನು ಮಾಡಬೇಕು. ಹೀಗೆ ಇಪ್ಪತ್ತು ಗ್ರಾಮಗಳಿಗೆ, ನೂರು ಗ್ರಾಮಗಳಿಗೆ, ಸಹಸ್ರಗ್ರಾಮಗಳಿಗೆ ಒಬ್ಬೊಬ್ಬ ಅಧಿಪತಿಯನ್ನು ಮಾಡಬೇಕು.

ಗ್ರಾಮೇ ಯಾನ್ ಗ್ರಾಮದೋಷಾಂಶ್ಚ ಗ್ರಾಮಿಕಃ ಪ್ರತಿಭಾವಯೇತ್ |
ತಾನ್ ಬ್ರೂಯಾದ್ ದಶಪಾಯಾಸೌ ಸ ತು ವಿಂಶತಿಪಾಯ ವೈ ॥4॥
ಒಂದು ಗ್ರಾಮದ ಅಧಿಪತಿಯು ತನ್ನ ಗ್ರಾಮದಲ್ಲಿ ಯಾವ ದೋಷಗಳನ್ನು ಗಮನಿಸುತ್ತಾನೆಯೋ ಅವನು ಅದನ್ನು ದಶಗ್ರಾಮಾಧಿಪತಿಗೆ ಹೇಳಬೇಕು. ದಶ- ಗ್ರಾಮಾಧಿಪತಿಯು ಅದನ್ನು ಇಪ್ಪತ್ತು ಗ್ರಾಮಗಳ ಅಧಿಪತಿಗೆ ಹೇಳಬೇಕು.
ಸೋಽಪಿ ವಿಂಶತ್ಯಧಿಪತಿರ್ವೃತ್ತಂ ಜಾನಪದೇ ಜನೇ |
ಗ್ರಾಮಾಣಾಂ ಶತಪಾಲಾಯ ಸರ್ವಮೇವ ನಿವೇದಯೇತ್ ॥5॥
ಇಪ್ಪತ್ತು ಗ್ರಾಮಗಳ ಅಧಿಪತಿಯೂ ಸಹ ಗ್ರಾಮದ ಪರಿಸ್ಥಿತಿಯೆಲ್ಲವನ್ನೂ ನೂರು ಗ್ರಾಮಗಳ ಅಧಿಪತಿಗೆ ಹೇಳಬೇಕು.
ಯಾನಿ ಗ್ರಾಮೀಣಭೋಜ್ಯಾನಿ ಗ್ರಾಮಿಕಸ್ತಾನುಪಾಶ್ನುಯಾತ್ |
ದಶಪಸ್ತೇನ ಭರ್ತವ್ಯಸ್ತೇನಾಪಿ ದ್ವಿಗುಣಾಧಿಕಃ ॥6॥
ಗ್ರಾಮದಲ್ಲಿ ಬೆಳೆಯುವ ಆಹಾರಧಾನ್ಯಗಳನ್ನು ಆಯಾ ಗ್ರಾಮದವರು ಉಪ- ಯೋಗಿಸಬೇಕು. ಮತ್ತು ಅದರ ಒಂದು ಭಾಗವನ್ನು ಹತ್ತುಗ್ರಾಮಗಳ ಅಧಿ- ಪತಿಗೂ, ಇಪ್ಪತ್ತು ಗ್ರಾಮಗಳ ಅಧಿಪತಿಗೂ ಅವರ ಪೋಷಣೆಗಾಗಿ ಕೊಡಬೇಕು.
ಗ್ರಾಮಂ ಗ್ರಾಮಶತಾಧ್ಯಕ್ಷೋ ಭೋಕ್ತುಮರ್ಹತಿ ಸತ್ಕೃತಃ |
ಮಹಾಂತಂ ಭರತಶ್ರೇಷ್ಠ ಸುಸ್ಫೀತಜನಸಂಕುಲಮ್ |
ತತ್ರ ಹ್ಯನೇಕಪಾಯತ್ತಂ ರಾಜ್ಞೋ ಭವತಿ ಭಾರತ ॥7॥
ನೂರು ಗ್ರಾಮಗಳ ಅಧಿಪತಿಯು ಸಮೃದ್ಧವಾದ ಒಂದು ಒಳ್ಳೆಯ ಗ್ರಾಮದ ಪೂರ್ಣವಾದ ಆದಾಯವನ್ನು ತೆಗೆದುಕೊಳ್ಳಲು ಅರ್ಹನಾಗುತ್ತಾನೆ. ಅದರಿಂದ ರಾಜನಿಗೆ ಒಂದು ಗ್ರಾಮದಿಂದ ಬರುವ ಆದಾಯವು ಎಲೈ ಭರತಶ್ರೇಷ್ಠನೇ! ಗ್ರಾಮಾಧಿಪತಿ, ದಶಗ್ರಾಮಾಧಿಪತಿ, ವಿಂಶತಿಗ್ರಾಮಾಧಿಪತಿ ಮೊದಲಾದ ಅನೇಕ- ರನ್ನು ಅವಲಂಬಿಸಿರುತ್ತದೆ.
ಶಾಖಾನಗರಮರ್ಹಸ್ತು ಸಹಸ್ರಪತಿರುತ್ತಮಮ್ |
ಧಾನ್ಯಹೈರಣ್ಯಭೋಗೇನ ಭೋಕ್ತುಂ ರಾಷ್ಟ್ರೀಯ ಉದ್ಯತಃ ॥8॥
ಸಹಸ್ರಗ್ರಾಮಾಧಿಪತಿಯು ಶ್ರೇಷ್ಠವಾದ ಒಂದು ಶಾಖಾನಗರದ ಉತ್ಪತ್ತಿಯನ್ನು ಭೋಗಿಸಲು ಅರ್ಹನಾಗುತ್ತಾನೆ. ರಾಜನ ಭಾವಮೈದುನ ಮೊದಲಾದವರೂ ಸಹ ಅಂತಹ ಆದಾಯದಿಂದ ಬರುವ ಧಾನ್ಯವನ್ನು ಮತ್ತು ಸುವರ್ಣವನ್ನು ಭೋಗಿಸಲು ಅರ್ಹರಾಗುತ್ತಾರೆ.
ಯಥಾ ಯದ್ ಗ್ರಾಮಕೃತ್ಯಂ ಸ್ಯಾದ್ ಗ್ರಾಮಿಕೃತ್ಯಂ ಚ ತೇ ಸ್ವಯಮ್ |
ಧರ್ಮಜ್ಞಃ ಸಚಿವಃ ಕಶ್ಚಿತ್ ತತ್ ಪ್ರಪಶ್ಯೇದತಂದ್ರಿತಃ ॥9॥
ಹಾಗೆಯೇ ಒಂದು ಗ್ರಾಮಕ್ಕೆ ಮಾಡಬೇಕಾದ ಕಾರ್ಯವನ್ನು ಮತ್ತು ಗ್ರಾಮಸ್ಥ -ರಿಗೆ ಮಾಡಬೇಕಾದ ಕಾರ್ಯವನ್ನು ಧರ್ಮಜ್ಞನಾದ ಒಬ್ಬ ಸಚಿವನು ಆಲಸ್ಯ- ವಿಲ್ಲದೇ ಸ್ವತಃ ನೋಡಿಕೊಳ್ಳಬೇಕು.
ನಗರೇ ನಗರೇ ಚ ಸ್ಯಾದೇಕಃ ಸರ್ವಾರ್ಥಚಿಂತಕಃ |
ಉಚ್ಚೈಃಸ್ಥಾನೇಽಘೋರರೂಪೋ ನಕ್ಷತ್ರಾಣಾಮಿವ ಗ್ರಹಃ |
ಭವೇತ್ ಸ ತಾನ್ ಪರಿಕ್ರಾಮೇತ್ ಸರ್ವಾನೇವ ಸದಾ ಸ್ವಯಮ್ ॥10॥
ಒಂದೊಂದು ಗ್ರಾಮದಲ್ಲಿಯೂ ಎಲ್ಲ ವಿಷಯಗಳನ್ನು ನೋಡಿಕೊಳ್ಳುವ ಒಬ್ಬೊಬ್ಬ ಅಧಿಕಾರಿ ಇರಬೇಕು. ಅವನು ಉಚ್ಚಸ್ಥಾನದಲ್ಲಿದ್ದು, ಶಾಂತರೂಪವನ್ನು ಹೊಂದಿದ್ದು, ನಕ್ಷತ್ರಗಳ ಮಧ್ಯೆ ಇರುವ ಗ್ರಹದಂತೆ ಇರಬೇಕು. ಅವನು ನಗರ- ವೆಲ್ಲವನ್ನೂ ತಾನೇ ಸಂಚರಿಸಿ, ವಿಷಯಗಳನ್ನು ತಿಳಿದುಕೊಳ್ಳಬೇಕು.
ತೇಷಾಂ ವೃತ್ತಂ ಪರಿಣಯೇತ್ ಕ್ವಚಿದ್ ರಾಷ್ಟ್ರೇಷು ತಚ್ಚರಃ |
ಜಿಘಾಂಸವಃ ಪಾಪಕಾಮಾ ಪರಸ್ವಾದಾಯಿನಃ ಶಠಾಃ |
ರಕ್ಷಾಮ್ಯಧಿಕೃತಾ ನಾಮ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥11॥
ರಾಜನ ಗೂಢಚಾರನು ಅಂತಹವರ ನಡತೆಯನ್ನೆಲ್ಲ ರಾಜನಿಗೆ ತಿಳಿಸಬೇಕು. ರಕ್ಷಣಾಧಿಕಾರಿಗಳಲ್ಲಿ ಕೆಲವರು ಪಾಪಬುದ್ಧಿಯುಳ್ಳವರೂ, ಇನ್ನೊಬ್ಬರ ಸ್ವತ್ತನ್ನು ಅಪಹರಿಸುವವರೂ, ಶಠರೂ ಮತ್ತು ಪ್ರಜೆಗಳನ್ನು ಕೊಲ್ಲಲು ಬಯಸುವವರೂ ಇರುತ್ತಾರೆ. ಅಂತಹವರಿಂದ ಉಳಿದ ಪ್ರಜೆಗಳನ್ನು ರಕ್ಷಿಸಬೇಕು.
ವಿಕ್ರಯಂ ಕ್ರಮಮಧ್ವಾನಂ ಭಕ್ತಂ ಚ ಸಪರಿವ್ಯಯಮ್ |
ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ವಣಿಜಃ ಕಾರಯೇತ್ ಕರಾನ್ ॥12॥
ವ್ಯಾಪಾರವನ್ನು ಮಾಡುವ ವೈಶ್ಯರಿಗೆ ಅವರ ಕ್ರಯವಿಕ್ರಯಗಳನ್ನು, ಅವರು ಸಂಚರಿಸಬೇಕಾದ ಮಾರ್ಗವನ್ನು, ಅವರ ಯೋಗಕ್ಷೇಮವನ್ನು ಮತ್ತು ಅವಶ್ಯಕತೆ- ಯನ್ನು ನೋಡಿ ಕರವನ್ನು ವಿಧಿಸಬೇಕು.
ಉತ್ಪತ್ತಿಂ ದಾನವೃತ್ತಿಂ ಚ ಶಿಲ್ಪಂ ಸಂಪ್ರೇಕ್ಷ್ಯ ಚಾಸಕೃತ್ |
ಶಿಲ್ಪಂ ಪ್ರತಿ ಕರಾನೇವ ಶಿಲ್ಪಿನಃ ಪ್ರತಿ ಕಾರಯೇತ್ ॥13॥
ಕುಶಲಕರ್ಮಿಗಳಿಗೆ ಅವರ ಉತ್ಪತ್ತಿ, ದಾನ, ಕೌಶಲ ಇವುಗಳನ್ನು ಅನೇಕ ಬಾರಿ ನೋಡಿ ಅವರ ಕೌಶಲಕ್ಕೆ ಅನುಕೂಲವಾದ ಕರಗಳನ್ನು ವಿಧಿಸಬೇಕು.
ಉಚ್ಚಾವಚಕರಾ ನ್ಯಾಯ್ಯಾಃ ಪೂರ್ವರಾಜ್ಞಾಂ ಯುಧಿಷ್ಠಿರ |
ಯಥಾ ಯಥಾ ನ ಹೀಯೇರಂಸ್ತಥಾ ಕುರ್ಯಾನ್ಮಹೀಪತಿಃ ॥14॥
ಎಲೈ ಯುಧಿಷ್ಠಿರನೇ! ರಾಜ್ಯದಲ್ಲಿ ತೆರಿಗೆಗಳು ಹೆಚ್ಚು ಕಡಿಮೆ ಇರುವುದು ನ್ಯಾಯವಾಗಿದೆ. ಅದು ಪೂರ್ವರಾಜರಿಗೂ ಸಮ್ಮತವಾಗಿದ್ದಿತು. ಎಲ್ಲ ಪ್ರಜೆಗಳಿಗೂ ಒಂದೇ ವಿಧವಾದ ತೆರಿಗೆ ಅಲ್ಲ. ರಾಜನು ಪ್ರಜೆಗಳಿಗೆ ವಿನಾಶವುಂಟಾಗದಂತೆ ತೆರಿಗೆ- ಯನ್ನು

ವಿಧಿಸಬೇಕು.
ಫಲಂ ಕರ್ಮ ಚ ಸಂಪ್ರೇಕ್ಷ್ಯ ತತಃ ಸರ್ವಂ ಪ್ರಕಲ್ಪಯೇತ್ |
ಫಲಂ ಕರ್ಮ ಚ ನಿರ್ಹೇತುಂ ನ ಕಶ್ಚಿತ್ ಸಂಪ್ರವರ್ತಯೇತ್ ॥15॥
ಪ್ರಜೆಗಳ ಕರ್ಮ ಮತ್ತು ಅದರಿಂದ ಅವರಿಗೆ ಉಂಟಾಗುವ ಫಲ ಇವುಗಳನ್ನು ಚೆನ್ನಾಗಿ ನೋಡಿ ತೆರಿಗೆಗಳನ್ನು ಕಲ್ಪಿಸಬೇಕು. ಅವರ ಫಲಕ್ಕೆ ಅನುಕೂಲವಾದ ಉಚಿತವಾದ ದ್ರವ್ಯದಾನವನ್ನು ಮಾಡದೇ ತೆರಿಗೆಗಳನ್ನು ವಿಧಿಸಬಾರದು. (ವಣಿಜ- ರಿಗೆ ಅಥವಾ ವೈಶ್ಯರಿಗೆ ಅವರ ವ್ಯಾಪಾರಕ್ಕೆ ಅನುಕೂಲ ಮಾಡಿಕೊಡಲು ರಾಜನು ದ್ರವ್ಯದಾನವನ್ನು ಮಾಡಿರಬೇಕು).
ಯಥಾ ರಾಜಾ ಚ ಕರ್ತಾ ಚ ಸ್ಯಾತಾಂ ಕರ್ಮಣಿ ಭಾಗಿನೌ |
ಸಮವೇಕ್ಷ್ಯ ತಥಾ ರಾಜ್ಞಾ ಪ್ರಣೇಯಾಃ ಸತತಂ ಕರಾಃ ॥16॥
ಅಂತಹ ವಾಣಿಜ್ಯಾದಿಗಳಿಂದ ಉಂಟಾದ ಫಲದಲ್ಲಿ ರಾಜನೂ ಆ ವ್ಯಾಪಾರ- ವನ್ನು ಮಾಡಿದ ವರ್ತಕನೂ ಭಾಗಿಗಳಾಗುವಂತೆ ನೋಡಿಕೊಂಡು, ರಾಜನು ತೆರಿಗೆಗಳನ್ನು ವಿಧಿಸಬೇಕು.
ನೋಚ್ಛಿಂದ್ಯಾದಾತ್ಮನೋ ಮೂಲಂ ಪರೇಷಾಂ ವಾಪಿ ತೃಷ್ಣಯಾ |
ಈಹಾದ್ವಾರಾಣಿ ಸಂರುದ್ಧ್ಯ ರಾಜಾ ಸಂಪ್ರೀತಿದರ್ಶನಃ ॥17॥
ವರ್ತಕರು ಮಾಡುವ ವ್ಯಾಪಾರಾದಿಕಾರ್ಯಗಳ ದ್ವಾರವನ್ನು ಮುಚ್ಚಿ ರಾಜನು ಆಸೆಯಿಂದ ತನ್ನ ಮೂಲವನ್ನು ಮತ್ತು ಇನ್ನೊಬ್ಬರ ಮೂಲವನ್ನು ನಾಶ ಮಾಡ- ಬಾರದು. ಪ್ರಜೆಗಳಿಗೆ ರಾಜನಲ್ಲಿ ಪ್ರೀತಿಯಿದ್ದರೆ ಮಾತ್ರ ಅವನ ದರ್ಶನವನ್ನು ಮಾಡುತ್ತಾರೆ.
ಪ್ರದ್ವಿಷಂತಿ ಪರಿಖ್ಯಾತಂ ರಾಜಾನಮತಿಖಾದಿನಮ್ |
ಪ್ರದ್ವಿಷ್ಟಸ್ಯ ಕುತಃ ಶ್ರೇಯಃ ಸಂಪ್ರಿಯೋ ಲಭತೇ ಪ್ರಿಯಮ್ ॥18॥
ಬಹಳ ತೆರಿಗೆಯನ್ನು ಸ್ವೀಕರಿಸಿ ಉಪಯೋಗಿಸುವವನು ಎಂದು ಪ್ರಸಿದ್ಧನಾದ ರಾಜನನ್ನು ಪ್ರಜೆಗಳು ಬಹಳವಾಗಿ ದ್ವೇಷಿಸುತ್ತಾರೆ. ಪ್ರಜೆಗಳ ದ್ವೇಷಕ್ಕೆ ವಿಷಯನಾದ ರಾಜನಿಗೆ ಎಲ್ಲಿಂದ ಶ್ರೇಯಸ್ಸು ಉಂಟಾದೀತು? ಪ್ರಜೆಗಳಿಗೆ ಪ್ರಿಯನಾದವನು ಮಾತ್ರ ತನ್ನ ಪ್ರಿಯವನ್ನು ಸಂಪಾದಿಸುತ್ತಾನೆ.
ವತ್ಸೌಪಮ್ಯೇನ ದೋಗ್ಧವ್ಯಂ ರಾಷ್ಟ್ರಮಕ್ಷೀಣಬುದ್ಧಿನಾ |
ಭೃತೋ ವತ್ಸೋ ಜಾತಬಲಃ ಪೀಡಾಂ ಸಹತಿ ಭಾರತ ॥19॥
ಒಳ್ಳೆಯ ಬುದ್ಧಿಯುಳ್ಳ ರಾಜನು ರಾಷ್ಟ್ರವನ್ನು ಕರುವಿನಂತೆ ಹಾಲು ಕರೆಯ- ಬೇಕು. ಎಲೈ ಭಾರತನೇ! ಚೆನ್ನಾಗಿ ಹಾಲು ಕುಡಿದ ಕರುವು ಬಲವನ್ನು ಹೊಂದಿ ಭಾರವನ್ನು ಹೊರುವಾಗ ಉಂಟಾಗುವ ಪೀಡೆಯನ್ನು ಸಹಿಸಲು ಸಮರ್ಥವಾಗು- ತ್ತದೆ.
ನ ಕರ್ಮ ಕುರುತೇ ವತ್ಸೋ ಭೃಶದುಗ್ಧೋ ಯುಧಿಷ್ಠಿರ |
ರಾಷ್ಟ್ರಮಪ್ಯತಿದುಗ್ಧಂ ಹಿ ನ ಕರ್ಮ ಕುರುತೇ ಮಹತ್ ॥20॥
ಯುಧಿಷ್ಠಿರನೇ! ಬಹಳ ಹಾಲನ್ನು ಕುಡಿದ ಕರುವು ಯಾವ ಕೆಲಸವನ್ನೂ ಮಾಡುವುದಿಲ್ಲ. ಅಜೀರ್ಣದಿಂದ ರೋಗಗ್ರಸ್ತವಾಗುತ್ತದೆ. ಅಥವಾ ಮರಣವನ್ನು ಹೊಂದುತ್ತದೆ. ಹಾಗೆಯೇ ರಾಷ್ಟ್ರವನ್ನು ಬಹಳವಾಗಿ ಕರೆಯುವ ರಾಜನು ಮುಂದೆ ಪ್ರಜೆಗಳಿಂದ ದ್ರವ್ಯಾದಾನರೂಪವಾದ ಕರ್ಮವನ್ನಾಗಲೀ ಪ್ರಜಾಪಾಲನರೂಪವಾದ ಕರ್ಮವನ್ನಾಗಲೀ ಮಾಡಲು ಅಸಮರ್ಥನಾಗುತ್ತಾನೆ.
(-ಲಕ್ಷ್ಮಾಲಂಕಾರ)
ಯೋ ರಾಷ್ಟ್ರಮನುಗೃಹ್ಣಾತಿ ಪರಿಗೃಹ್ಯ ಸ್ವಯಂ ನೃಪಃ |
ಸಂಜಾತಮುಪಜೀವನ್ ಸ ಲಭತೇ ಸುಮಹತ್ ಫಲಮ್ ॥21॥
ಯಾವ ರಾಜನು ಪ್ರಜೆಗಳಿಂದ ತೆರಿಗೆಯನ್ನು ತೆಗೆದುಕೊಂಡು, ನ್ಯಾಯವಾಗಿ ತನಗೆ ದೊರಕಿದುದರಲ್ಲಿ ಜೀವಿಸಿ ಪ್ರಜೆಗಳಿಗೆ ಅನುಗ್ರಹವನ್ನು ಮಾಡುತ್ತಾನೆಯೋ ಅವನು ಶ್ರೇಷ್ಠವಾದ ಫಲವನ್ನು ಪಡೆಯುತ್ತಾನೆ.
ಆಪದರ್ಥಂ ಚ ನಿರ್ಯಾತಂ ರಾಜಾನ ಇಹ ಚಿನ್ವತೇ |
ರಾಷ್ಟ್ರಂ ಚ ಕೋಶಭೂತಂ ಸ್ಯಾತ್ ಕೋಶೋ ವೇಶ್ಮಗತಸ್ತಥಾ ॥22॥
ಪ್ರಜೆಗಳಿಂದ ಪಡೆದ ಧನವು ಆಪತ್ಕಾಲಕ್ಕಾಗಿ ಇರಬೇಕು ಎಂದು ಬಯಸಿ ರಾಜರು ಸಂಗ್ರಹಿಸುತ್ತಾರೆ. ರಾಜರಿಗೆ ರಾಷ್ಟ್ರವೇ ಕೋಶ. ಅಂತಹ ಕೋಶವು ಪ್ರಜೆಗಳ ಮನೆಗಳಲ್ಲಿರುತ್ತದೆ (ಎಂದು ರಾಜನು ತಿಳಿಯಬೇಕು).
ಪೌರಜಾನಪದಾನ್ ಸರ್ವಾನ್ ಸಂಶ್ರಿತೋಪಾಶ್ರಿತಾಂಸ್ತಥಾ |
ಯಥಾಶಕ್ತ್ಯನುಕಂಪೇತ ಸರ್ವಾನಭ್ಯಂತರಾನಪಿ ॥23॥
ಬಾಹ್ಯಂ ಜನಂ ಭೋಜಯಿತ್ವಾ ಭೋಕ್ತವ್ಯಂ ಮಧ್ಯಮಂ ಸುಖಮ್ |
ಏವಂ ನ ಸಂಪ್ರಕುಪ್ಯಂತೇ ಜನಾಃ ಸುಖಿತದುಃಖಿತಾಃ ॥24॥
ಪೌರಜಾನಪದರನ್ನು ತನ್ನನ್ನು ಆಶ್ರಯಿಸಿದವರನ್ನು ಮತ್ತು ಅವರನ್ನು ಆಶ್ರಯಿಸಿದವರನ್ನು, ತನ್ನ ಅರಮನೆಯ ಒಳಗಿನ ಜನರನ್ನು, ಹೊರಗಿನ ಜನರನ್ನು ತನ್ನ ಶಕ್ತಿ ಇದ್ದಷ್ಟು ಅನುಕಂಪದಿಂದ ಸುಖಪಡಿಸಿ (ಭೋಗಿಸುವಂತೆ ಮಾಡಿ) ರಾಜನು ಸರ್ವೋತ್ತಮವಲ್ಲದ, ಹೀನವಲ್ಲದ ಮಧ್ಯಮವಾದ ಸುಖವನ್ನು ಭೋಗಿಸಬೇಕು. ಹಾಗೆ ಮಾಡಿದರೆ ತೆರಿಗೆಗಳನ್ನು ತೆಗೆದುಕೊಳ್ಳುವ ರಾಜನಿಂದ ಹೆಚ್ಚು ಸುಖವನ್ನು ಪಡೆಯುವ ಪ್ರಜೆಗಳು ರಾಜನ ಮೇಲೆ ಕೋಪಗೊಳ್ಳುವುದಿಲ್ಲ.
ಪ್ರಾಗೇವ ತು ಕರಾದಾನಮನುಭಾಷ್ಯ ಪುನಃ ಪುನಃ |
ಸನ್ನಿಪತ್ಯ ಸ್ವವಿಷಯೇ ಭಯಂ ರಾಷ್ಟ್ರೇ ಪ್ರದರ್ಶಯೇತ್ ॥25॥
ಹೆಚ್ಚಿನ ತೆರಿಗೆಗಳನ್ನು ವಿಧಿಸುವುದಕ್ಕೆ ಮೊದಲೇ ತನ್ನ ರಾಜ್ಯದಲ್ಲಿ ಪುನಃ ಪುನಃ ಸಂಚರಿಸಿ, ರಾಷ್ಟ್ರದಲ್ಲಿ ಉಂಟಾಗಿರುವ ಭಯವನ್ನು ವರ್ಣಿಸಿ ಪ್ರದರ್ಶಿಸಬೇಕು.
ಇಯಮಾಪತ್ ಸಮುತ್ಪನ್ನಾ ಪರಚಕ್ರಭಯಂ ಮಹತ್ |

ಅಪಿ ನಾಂತಾಯ ಕಲ್ಪೇತ ವೇಣೋರಿವ ಫಲಾಗಮಃ ॥26॥
ಇಂತಹ ಆಪತ್ತು ಬಂದೊದಗಿದೆ; ಶತ್ರುಗಳ ಭಯವು ಅಧಿಕವಾಗಿದೆ. ಬಿದಿರು ವೃಕ್ಷದಲ್ಲಿ ಫಲವು ಬಂದಂತೆ ಈ ಆಪತ್ತು ನಮ್ಮ ವಿನಾಶಕ್ಕೆ ಕಾರಣವಾಗಲಿದೆ.
ಅರಯೋ ಮೇ ಸಮುತ್ಥಾಯ ಬಹುಭಿರ್ದಸ್ಯುಭಿಃ ಸಹ |
ಇದಮಾತ್ಮವಧಾಯೈವ ರಾಷ್ಟ್ರಮಿಚ್ಛಂತಿ ಬಾಧಿತುಮ್ ॥27॥
ನನ್ನ ಶತ್ರುಗಳು ಅನೇಕ ದಸ್ಯುಗಳ ಜೊತೆ ಸೇರಿಕೊಂಡು ತಮ್ಮ ಆತ್ಮವಿನಾಶ- ಕ್ಕಾಗಿಯೇ ನಮ್ಮ ರಾಷ್ಟ್ರವನ್ನು ಪೀಡಿಸಲು ಬಯಸುತ್ತಿದ್ದಾರೆ.
ಅಸ್ಯಾಮಾಪದಿ ಘೋರಾಯಾಂ ಸಂಪ್ರಾಪ್ತೇ ದಾರುಣೇ ಭಯೇ |
ಪರಿತ್ರಾಣಾಯ ಭವತಾಂ ಪ್ರಾರ್ಥಯಿಷ್ಯೇ ಧನಾನಿ ವಃ ॥28॥
ಇಂತಹ ಘೋರವಾದ ಆಪತ್ತಿನಲ್ಲಿ ದಾರುಣವಾದ ಭಯವು ಉಂಟಾಗಿ- ರುವಾಗ ನಿಮ್ಮನ್ನು ರಕ್ಷಿಸುವುದಕ್ಕಾಗಿ ನಿಮ್ಮ ಧನವನ್ನು ಕೇಳುತ್ತಿದ್ದೇನೆ.
ಪ್ರತಿದಾಸ್ಯೇ ಚ ಭವತಾಂ ಸರ್ವಂ ಚಾಹಂ ಭಯಕ್ಷಯೇ |
ನಾರಯಃ ಪ್ರತಿದಾಸ್ಯಂತಿ ಯದ್ ಹರೇಯುರ್ಬಲಾದಿತಃ ॥29॥
ಭಯವು ಪರಿಹಾರವಾದ ಮೇಲೆ ನಿಮ್ಮ ಧನವನ್ನೆಲ್ಲಾ ನಿಮಗೇ ಹಿಂದಿರುಗಿ- ಸುತ್ತೇನೆ. ಹಾಗಲ್ಲದೇ ಶತ್ರುಗಳು ಧನವನ್ನು ದೋಚಿಕೊಂಡು ಹೋದರೆ ಅವರು ಧನವನ್ನು ಹಿಂದೆ ಕೊಡುವುದಿಲ್ಲವಷ್ಟೇ!
ಕಳತ್ರಮಾದಿತಃ ಕೃತ್ವಾ ನಶ್ಯೇತ್ ಸ್ವಂ ಸ್ವಯಮೇವ ಹಿ |
ಅಪಿ ಚೇತ್ ಪುತ್ರದಾರಾರ್ಥಮರ್ಥಸಂಚಯ ಇಷ್ಯತೇ ॥30॥
ಹೆಂಡತಿ ಮತ್ತು ಮಕ್ಕಳ ಸಲುವಾಗಿ ಎಲ್ಲರೂ ಧನಸಂಚಯವನ್ನು ಬಯಸು- ತ್ತಾರೆ. ನಿಮ್ಮ ರಕ್ಷಣೆಯನ್ನು ಮಾಡದಿದ್ದರೆ ನಿಮ್ಮ ಪತ್ನಿ, ಸ್ವತ್ತುಗಳು, ನೀವೂ ಸಹ ನಾಶವನ್ನು ಹೊಂದುವಿರಿ.
ನಂದಾಮಿ ವಃ ಪ್ರಭಾವೇನ ಪುತ್ರಾಣಾಮಿವ ಚೋದಯೇ |
ಯಥಾಶಕ್ತ್ಯನುಗೃಹ್ಣಾಮಿ ರಾಷ್ಟ್ರಸ್ಯಾಪೀಡಯಾ ಚ ವಃ ॥31॥
ಪುತ್ರರ ಅಭ್ಯುದಯವನ್ನು ನೋಡಿ ಸಂತೋಷಪಡುವಂತೆ ನಿಮ್ಮ ಪ್ರಭಾವ- ದಿಂದ ನಾನು ಸಂತೋಷದಿಂದಿದ್ದೇನೆ. ಭಯವು ಪರಿಹಾರವಾದಮೇಲೆ ರಾಷ್ಟ್ರವನ್ನು ಮತ್ತು ನಿಮ್ಮನ್ನು ಪೀಡಿಸದೇ ನನ್ನ ಶಕ್ತಿ ಇದ್ದಷ್ಟು ನಿಮಗೆ ಅನುಗ್ರಹವನ್ನು ಮಾಡು- ತ್ತೇನೆ.
ಆಪತ್ಸ್ವೇವ ಚ ವೋಢವ್ಯಂ ಭವದ್ಭಿಃ ಪುಂಗವೈರಿವ |
ನ ವಃ ಪ್ರಿಯತರಂ ಕಾರ್ಯಂ ಧನಂ ಕಸ್ಯಾಂಚಿದಾಪದಿ ॥32॥
ನೀವು ಒಳ್ಳೆಯ ಎತ್ತುಗಳಂತೆ ಆಪತ್ತಿನಲ್ಲಿ ನನ್ನ ಭಾರವನ್ನು ಹೊರಬೇಕಾಗಿದೆ. ನೀವು ನಿಮ್ಮ ಧನದಿಂದ ಈ ಆಪತ್ತಿನಲ್ಲಿ ಸಹಾಯ ಮಾಡುವುದಕ್ಕಿಂತ ಹೆಚ್ಚಿನ ಪ್ರಿಯವಾದ ಕಾರ್ಯವನ್ನು ಮಾಡಲಾರಿರಿ.
ಇತಿ ವಾಚಾ ಮಧುರಯಾ ಶ್ಲಕ್ಷ್ಣಯಾ ಸೋಪಚಾರಯಾ |
ಸ್ವರಶ್ಮೀನಭ್ಯವಸೃಜೇದ್ ಯುಗಮಾದಾಯ ಕಾಲವಿತ್ ॥33॥
ಹೀಗೆ ಮಧುರವಾದ, ಉಪಚಾರಸಹಿತವಾದ, ನಿಪುಣವಾದ ಮಾತುಗಳನ್ನು ಆಡುತ್ತಾ ಕಾಲವನ್ನು ತಿಳಿದ ರಾಜನು ತಾನು ನೊಗದ ಮೇಲೆ ಕುಳಿತು ತನ್ನ ತೆರಿಗೆಯ ಪಾಶಗಳನ್ನು ಪ್ರಜೆಗಳ ಮೇಲೆ ಹಾಕಬೇಕು.
ಪ್ರಚಾರಂ ಭೃತ್ಯಭರಣಂ ವ್ಯಯಂ ಗೋಗ್ರಾಮತೋ ಭಯಮ್ |
ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ಗೋಮಿನಃ ಕಾರಯೇತ್ ಕರಾನ್ ॥34॥
ಗೋಸ್ವಾಮಿಗಳಾದ ವೈಶ್ಯರಿಗೆ ಅವರು ಮಾಡುವ ಸಂಚಾರವನ್ನು ಅವರ ಸೇವಕರ ಪೋಷಣೆಯನ್ನು ವ್ಯಯವನ್ನು ಗೋಸಮೂಹಗಳಲ್ಲಿ ಉಂಟಾಗುವ ಭಯವನ್ನು ಯೋಗಕ್ಷೇಮವನ್ನು ನೋಡಿ ತೆರಿಗೆಯನ್ನು ವಿಧಿಸಬೇಕು.
ಉಪೇಕ್ಷಿತಾ ಹಿ ನಶ್ಯೇಯುರ್ಗೋಮಿನೋಽರಣ್ಯವಾಸಿನಃ |
ತಸ್ಮಾತ್ ತೇಷು ವಿಶೇಷೇಣ ಮೃದುಪೂರ್ವಂ ಸಮಾಚರೇತ್ ॥35॥
ಅರಣ್ಯದಲ್ಲಿ ವಾಸಿಸುವ ಗೋಸ್ವಾಮಿಗಳು ಉದಾಸೀನವನ್ನು ಮಾಡಿದರೆ ನಾಶವನ್ನು ಹೊಂದಬಹುದು. ಆದ್ದರಿಂದ ಅವರ ವಿಷಯದಲ್ಲಿ ಬಹಳ ಮೃದುವಾಗಿ ನಡೆದುಕೊಳ್ಳಬೇಕು.
ಸಾಂತ್ವನಂ ರಕ್ಷಣಂ ದಾನಮವಸ್ಥಾ ಚಾಪ್ಯಭೀಕ್ಷ್ಣಶಃ |
ಗೋಮಿನಾಂ ಪಾರ್ಥ ಕರ್ತವ್ಯಂ ಸಂವಿಭಾಗಾಃ ಪ್ರಿಯಾಣಿ ಚ ॥36॥
ಎಲೈ ಪಾರ್ಥನೇ! ಅವರ ಸಾಂತ್ವನ, ರಕ್ಷಣೆ, ದಾನ, ಸತತವಾಗಿ ಅವರ ವ್ಯವಹಾರಕ್ಕೆ ಅನುಕೂಲತೆಯನ್ನು ಕಲ್ಪಿಸುವುದು, ಅವರಿಗೆ ಪ್ರಿಯವನ್ನು ಉಂಟು ಮಾಡುವುದು, ಬಂದ ಆದಾಯದಲ್ಲಿ ಅವರಿಗೆ ಯೋಗ್ಯಭಾಗವನ್ನು ಕೊಡುವುದು ಹೀಗೆ ಗೋಪಾಲಕರನ್ನು ಯಾವಾಗಲೂ ನೋಡಿಕೊಳ್ಳಬೇಕು.
ಅಜಸ್ರಮುಪಯೋಕ್ತವ್ಯಂ ಫಲಂ ಗೋಮಿಷು ಸರ್ವತಃ |
ಪ್ರಭಾವಯತಿ ರಾಷ್ಟ್ರಂ ಚ ವ್ಯವಹಾರಂ ಕೃಷಿಂ ತಥಾ ॥37॥
ಗೋಸ್ವಾಮಿಗಳಿಂದುಂಟಾದ ಫಲವನ್ನು ಸತತವಾಗಿ ಉಪಯೋಗಿಸಬೇಕು. ಅದರಿಂದ ರಾಷ್ಟ್ರವೂ ವ್ಯವಹಾರವೂ ಮತ್ತು ಕೃಷಿಯೂ ಅಭಿವೃದ್ಧಿಯನ್ನು ಹೊಂದು- ತ್ತದೆ.
ತಸ್ಮಾದ್ ಗೋಮಿಷು ಯತ್ನೇನ ಪ್ರೀತಿಂ ಕುರ್ಯಾದ್ ವಿಚಕ್ಷಣಃ |
ದಯಾವಾನಪ್ರಮತ್ತಶ್ಚ ಕರಾನ್ ಸಂಪ್ರಣಯನ್ ಮೃದೂನ್ ॥38॥

ಆದ್ದರಿಂದ ಗೋಸ್ವಾಮಿಗಳಾದ ವೈಶ್ಯರಿಗೆ ವಿವೇಕಿಯಾದ ರಾಜನು ಸುಲಭ- ವಾದ ತೆರಿಗೆಗಳನ್ನು ಹಾಕಿ, ಅವರಲ್ಲಿ ದಯೆಯನ್ನು ಹೊಂದಿ, ಪ್ರಯತ್ನಪೂರ್ವಕ- ವಾಗಿ ಆಲಸ್ಯವಿಲ್ಲದೇ ಪ್ರೀತಿಯನ್ನು ಮಾಡಬೇಕು.
ಸರ್ವತ್ರ ಕ್ಷೇಮಚರಣಂ ಸುಲಭಂ ತಾತ ಗೋಮಿಭಿಃ |
ನ ಹ್ಯತಃ ಸದೃಶಂ ಕಿಂಚಿದ್ ಧನಮಸ್ತಿ ಯುಧಿಷ್ಠಿರ ||39||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನನವತಿತಮೋಽಧ್ಯಾಯಃ ||89||
ಎಲೈ ಪ್ರೀತಿಪಾತ್ರನೇ! ಗೋಪಾಲನೆಯನ್ನು ಮಾಡುವವರು ಎಲ್ಲ ಕಡೆಗಳ- ಲ್ಲಿಯೂ ಸುಲಭವಾಗಿ ಕ್ಷೇಮವನ್ನುಂಟುಮಾಡಬಲ್ಲರು. ಎಲೈ ಯುಧಿಷ್ಠಿರನೇ! ರಾಷ್ಟ್ರಕ್ಕೆ ಗೋಧನಕ್ಕೆ ಸದೃಶವಾದ ಧನವು ಇನ್ನೊಂದು ಇರುವುದಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 89ನೆಯ ಅಧ್ಯಾಯವು ಮುಗಿಯಿತು.
0
90. ತೊಂಬತ್ತನೆಯ ಅಧ್ಯಾಯ
ಪ್ರಜೆಗಳಿಂದ ತೆರಿಗೆಯನ್ನು ಸಂಗ್ರಹಿಸುವ ಪ್ರಕಾರ ಕಥನ
ಯುಧಿಷ್ಠಿರಃ
ಯದಾ ರಾಜಾ ಸಮರ್ಥೋಽಪಿ ಕೋಶಾರ್ಥೀ ಸ್ಯಾನ್ಮಹಾಮತೇ |
ಕಥಂ ಪ್ರವರ್ತೇತ ತದಾ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಪಿತಾಮಹನೇ! ಮಹಾಮತಿಯೇ! ರಾಜನು ಸಮರ್ಥನಾಗಿ- ದ್ದರೂ ಕೋಶವನ್ನು ವೃದ್ಧಿಪಡಿಸಲು ಇಚ್ಛೆ ಮಾಡಿದರೆ ಅವನು ಹೇಗೆ ಪ್ರವೃತ್ತನಾಗ- ಬೇಕೆಂದು ನನಗೆ ಹೇಳು.
ಭೀಷ್ಮಃ
ಯಥಾದೇಶಂ ಯಥಾಕಾಲಮಪಿ ಚೈವ ಯಥಾಬಲಮ್ |
ಅನುಶಿಷ್ಯಾತ್ ಪ್ರಜಾ ರಾಜಾ ಧರ್ಮಾರ್ಥೀ ತದ್ಧಿತೇ ರತಃ ||2||
ಭೀಷ್ಮರು ರಾಜನು ಧರ್ಮಾರ್ಥಿಯಾಗಿ ಪ್ರಜೆಗಳ ಹಿತದಲ್ಲಿ ರತನಾಗಿ ದೇಶಕಾಲಗಳಿಗೆ ಅನುಗುಣವಾಗಿ ಮತ್ತು ತನ್ನ ಶಕ್ತಿಗೆ ಅನುಗುಣವಾಗಿ ಪ್ರಜೆಗಳನ್ನು ಪಾಲಿಸಬೇಕು.
ಯಥಾ ತಾಸಾಂ ಚ ಮನ್ಯೇತ ಶ್ರೇಯ ಆತ್ಮನ ಏವ ಚ |
ತಥಾ ಧರ್ಮ್ಯಾಣಿ ಸರ್ವಾಣಿ ರಾಜಾ ರಾಷ್ಟ್ರೇ ಪ್ರವರ್ತಯೇತ್ ||3||
ತನಗೂ ಮತ್ತು ಪ್ರಜೆಗಳಿಗೂ ಯಾವುದು ಶ್ರೇಯಸ್ಕರವೆಂದು ಭಾವಿಸು- ತ್ತಾನೆಯೋ ಅಂತಹ ಧರ್ಮಕಾರ್ಯಗಳನ್ನು ರಾಜನು ರಾಜ್ಯದಲ್ಲಿ ಪ್ರವರ್ತಿಸ- ಬೇಕು.
ಮಧುದೋಹಂ ದುಹೇದ್ ರಾಷ್ಟ್ರಂ ಭ್ರಮರಾನ್ನ ವಿಪಾತಯೇತ್ |
ವತ್ಸಾಪೇಕ್ಷೀ ದುಹೇಚ್ಚೈವ ಸ್ತನಾಂಶ್ಚ ನ ವಿಕುಟ್ಟಯೇತ್ ||4||
ಜೇನುತುಪ್ಪವನ್ನು ಮಾತ್ರ ಸಂಗ್ರಹಿಸಬೇಕು; ಜೇನುಹುಳುಗಳನ್ನು ಕೊಲ್ಲ- ಬಾರದು. ಕರುವಿನ ಕ್ಷೇಮವನ್ನು ಬಯಸಿ ಹಾಲು ಕರೆಯಬೇಕು. ಹಸುವಿನ ಮೊಲೆ- ಗಳನ್ನು ಘಾಸಿಗೊಳಿಸಬಾರದು.
ಜಲೌಕಾವತ್ ಪಿಬೇತ್ ರಾಷ್ಟ್ರಂ ಮೃದುನೈವ ನರಾಧಿಪ |
ವ್ಯಾಘ್ರೀವ ಚ ಹರೇತ್ ಪುತ್ರಮದಷ್ಟ್ವಾ ಮಾ ಪತೇದಿತಿ ||5||
ಎಲೈ ರಾಜನೇ! ರಾಜನು ರಾಜ್ಯದಿಂದ ತೆರಿಗೆಯನ್ನು ಜಿಗಣೆಯಂತೆ (ಪ್ರಜೆಗಳಿಗೆ ನೋವನ್ನು ಉಂಟುಮಾಡದಂತೆ) ಸಂಗ್ರಹಿಸಬೇಕು. ಹೆಣ್ಣುಹುಲಿಯು ತನ್ನ ಮರಿ- ಯನ್ನು ಕಚ್ಚದೇ ಬೀಳದಿರಲಿ ಎಂದು ಬಾಯಲ್ಲಿ ಹಿಡಿದುಕೊಂಡು ಹೋಗುವಂತೆ ಪ್ರಜೆಗಳನ್ನು ಮುಂದೆ ನಡೆಸಬೇಕು.
ಅಲ್ಪೇನಾಲ್ಪೇನ ದೇಯೇನ ವರ್ಧಮಾನಂ ಪ್ರದಾಪಯೇತ್ |
ತತೋ ಭೂಯಸ್ತತೋ ಭೂಯಃ ಕಾಮಂ ವೃದ್ಧಿಂ ಸಮಾಚರೇತ್ ||6||
ವಾಣಿಜ್ಯದಲ್ಲಿ ಅಭಿವೃದ್ಧಿಯನ್ನು ಹೊಂದುತ್ತಿರುವವನಿಗೆ ಸ್ವಲ್ಪಸ್ವಲ್ಪವಾಗಿ ತೆರಿಗೆ- ಯನ್ನು ಏರಿಸಿ ಕೊಡುವಂತೆ ಮಾಡಬೇಕು. ಅನಂತರ ಅವರು ಬೆಳೆದಂತೆ ಬೆಳೆದಂತೆ ಕ್ರಮವಾಗಿ ಅದನ್ನು ಹೆಚ್ಚಿಸಿಕೊಂಡು ಹೋಗಬೇಕು.
ದಮಯನ್ನಿವ ದಮ್ಯಾನಾಂ ಶಶ್ವದ್ ಭಾರಂ ಪ್ರವರ್ಧಯೇತ್ |
ಮೃದುಪೂರ್ವಂ ಪ್ರಯತ್ನೇನ ಪಾಶಾನಭ್ಯವಹಾರಯೇತ್ ||7||
ಪ್ರಾಣಿಗಳನ್ನು ಪಳಗಿಸುವವನಂತೆ ತೆರಿಗೆಯ ಭಾರವನ್ನು ಕ್ರಮವಾಗಿ ಹೆಚ್ಚಿಸಿ- ಕೊಂಡು ಹೋಗಬೇಕು. ಪ್ರಯತ್ನಪೂರ್ವಕವಾಗಿ ಮೃದುವಾಗಿಯೇ ತೆರಿಗೆಯ ಪಾಶಗಳನ್ನು ಅವರಿಗೆ ಹಾಕಬೇಕು.
ಸಕೃತ್ ಪಾಶಾವಕೀರ್ಣಾಸ್ತೇ ಭವಿಷ್ಯಂತಿ ಹಿ ದುರ್ದಮಾಃ |
ಉಚಿತೇನೈವ ಭೋಕ್ತವ್ಯಾಸ್ತೇ ಭವಿಷ್ಯಂತಿ ಯತ್ನತಃ ||8||
ಒಂದು ಸಲ ಅವರು ಪಾಶಗಳಿಂದ ಮುಕ್ತರಾದರೆ ಪುನಃ ಬಗ್ಗಿಸಲು ಅಸಾಧ್ಯ- ರಾಗುತ್ತಾರೆ. ಆದ್ದರಿಂದ ಯೋಗ್ಯವಾದ ತೆರಿಗೆಗಳನ್ನು ಪ್ರಯತ್ನಪೂರ್ವಕವಾಗಿ ಹಾಕಿ ಅವರ ಧನವನ್ನು ಭೋಗಿಸಬೇಕು.
ತಸ್ಮಾತ್ ಸರ್ವಸಮಾರಂಭೋ ದುರ್ಲಭಃ ಪುರುಷಂ ಪ್ರತಿ |
ಯಥಾ ಮುಖ್ಯಾನ್ ಸಾಂತ್ವಯಿತ್ವಾ ಭೋಕ್ತವ್ಯ ಇತರೋ ಜನಃ ||9||
ಒಬ್ಬೊಬ್ಬ ಪುರುಷನನ್ನೂ ಕರೆದು ಅವನನ್ನು ಸಮಾಧಾನಪಡಿಸಿ ಎಲ್ಲ ಕಾರ್ಯ- ವನ್ನೂ ಆರಂಭಿಸುವುದು ಅಸಾಧ್ಯವಾದುದು.

ಆದ್ದರಿಂದ ಮುಖ್ಯವಾದವರನ್ನು ಕರೆಸಿ ಸಮಾಧಾನ ಮಾಡಿ ಅವರಿಗೆ ತೆರಿಗೆಗಳನ್ನು ವಿಧಿಸಿ ಅವರಂತೆ ಇತರ ಜನಗಳಿಗೂ ವಿಧಿಸಿ, ಭೋಗಿಸಬೇಕು.
ತತಸ್ತಾನ್ ಭೋಜಯಿತ್ವಾಥ ಪರಸ್ಪರವಿವಕ್ಷಿತಾನ್ |
ಭುಂಜೀತ ಸಾಂತ್ವಯಿತ್ವೈವ ಯಥಾಸುಖಮಯತ್ನತಃ ॥10॥
ಅನಂತರ ಪರಸ್ಪರವಾಗಿ ಮಾತನಾಡಲು ಅಪೇಕ್ಷಿಸುವ ಅಂತಹ ಮುಖ್ಯ- ರಾದವರನ್ನು ಕರೆಸಿ, ಅವರನ್ನು ಸಮಾಧಾನ ಪಡಿಸಿ, ಭೋಜನಾದಿಗಳನ್ನು ನೀಡಿ, ತನಗೆ ಬರಬೇಕಾದ ಅಂಶವನ್ನು ಅನಾಯಾಸವಾಗಿ ಸುಖವಾಗಿ ಭೋಗಿಸಬೇಕು.
ನ ಚಾಸ್ಥಾನೇ ನ ಚಾಕಾಲೇ ಕರಾನೇಭ್ಯೋಽನುಪಾತಯೇತ್ |
ಆನುಪೂರ್ವ್ಯೇಣ ಸಾಂತ್ವೇನ ಯಥಾಕಾಲಂ ಯಥಾವಿಧಿ ॥11॥
ಅನುಚಿತವಾಗಿ ಮತ್ತು ಅಕಾಲದಲ್ಲಿ ಅವರಿಗೆ ತೆರಿಗೆಗಳನ್ನು ಹೇರಬಾರದು. ಉಚಿತವಾದ ಕಾಲದಲ್ಲಿ ವಿಧಿಗೆ ಅನುಗುಣವಾಗಿ ಸಮಾಧಾನಮಾತುಗಳಿಂದ ಕ್ರಮವಾಗಿ ತೆರಿಗೆಯನ್ನು ವಿಧಿಸಬೇಕು.
ಉಪಾಯಾನ್ ಪ್ರಬ್ರುವೀಮ್ಯೇತಾನ್ನ ಮೇ ಮಾಯಾ ವಿವಕ್ಷಿತಾ |
ಅನುಪಾಯೇನ ದಮಯನ್ ಪ್ರಕೋಪಯತಿ ವಾಜಿನಃ ॥12॥
ನಾನು ನಿನಗೆ ಉಪಾಯಗಳನ್ನು ಹೇಳುತ್ತಿದ್ದೇನೆ. ಕಪಟವನ್ನು ಮಾಡಬೇಕೆಂ- ಬುದು ನನ್ನ ಅಭಿಪ್ರಾಯವಲ್ಲ. ಉಪಾಯವನ್ನು ಬಿಟ್ಟು ಪಳಗಿಸಲು ಪ್ರಾರಂಭಿಸಿದರೆ ಅಶ್ವಗಳು ಕೋಪಗೊಳ್ಳುತ್ತವೆ.
ಪಾನಾಗಾರಾಣಿ ವೇಶ್ಯಾಶ್ಚ ವೇಶ್ಯಪ್ರಾಪಣಿಕಾಸ್ತಥಾ |
ಕುಶೀಲವಾಃ ಸಕಿತವಾ ಯೇ ಚಾನ್ಯೇ ಕೇಚಿದೀದೃಶಾಃ ॥13॥
ನಿಯಮ್ಯಾಃ ಸರ್ವ ಏವೈತೇ ಯೇ ರಾಷ್ಟ್ರಸ್ಯೋಪಘಾತಕಾಃ |
ಏತೇ ರಾಷ್ಟ್ರೇ ಹಿ ತಿಷ್ಠಂತೋ ಬಾಧಂತೇ ಭದ್ರಿಕಾಃ ಪ್ರಜಾಃ ॥14॥
ಪಾನಾಗಾರವನ್ನು ನಡೆಸುವವರು, ವೇಶ್ಯೆಯರು, ವೇಶ್ಯೆಯರ ದಳ್ಳಾಳಿಗಳು, ನಟರು, ಜೂಜುಕೋರರು ಮತ್ತು ಇವರಿಗೆ ಸದೃಶರಾದವರು ಇವರೆಲ್ಲರೂ ರಾಷ್ಟ್ರವನ್ನು ನಾಶಮಾಡುವವರು. ಇವರೆಲ್ಲರನ್ನೂ ನಿಯಂತ್ರಿಸಬೇಕು. ಇವರು ರಾಷ್ಟ್ರದಲ್ಲಿದ್ದರೆ ಸಾಧುಗಳಾದ ಪ್ರಜೆಗಳನ್ನು ಪೀಡಿಸುತ್ತಾರೆ.
ನ ಕೇನಚಿದ್ ಯಾಚಿತವ್ಯಃ ಕಶ್ಚಿತ್ ಕಿಂಚಿದನಾಪದಿ |
ಇತಿ ವ್ಯವಸ್ಥಾ ಭೂತಾನಾಂ ಪುರಸ್ತಾನ್ಮನುನಾ ಕೃತಾ ॥15॥
``ಆಪತ್ತು ಇಲ್ಲದಿದ್ದಾಗ ಯಾರೂ ಯಾರನ್ನೂ ಏನನ್ನೂ ಬೇಡಬಾರದು'' ಎಂಬ ವ್ಯವಸ್ಥೆಯನ್ನು ಮನುಷ್ಯರಿಗೆ ಮನುವು ಹಿಂದೆಯೇ ಮಾಡಿದ್ದಾನೆ.
ಸರ್ವೇ ತಥಾ ನ ಜೀವೇಯುರ್ನ ಕುರ್ಯುಃ ಕರ್ಮ ಚೇದಿಹ |
ಸರ್ವ ಏವ ತ್ರಯೋ ಲೋಕಾ ನ ಭವೇಯುರಸಂಶಯಮ್ ॥16॥
ಈ ಲೋಕದಲ್ಲಿ ಕರ್ಮವನ್ನು ಮಾಡದಿದ್ದರೆ ಯಾರೂ ಜೀವಿಸಲಾರರು. ಮೂರು ಲೋಕಗಳೂ ನಿಃಸಂಶಯವಾಗಿ ನಷ್ಟವಾದಾವು!
ಪ್ರಭುರ್ನಿಯಮನೇ ರಾಜಾ ಯ ಏತಾನ್ನ ನಿಯಚ್ಛತಿ |
ಭುಂಕ್ತೇ ಸ ತಸ್ಯ ಪಾಪಸ್ಯ ಚತುರ್ಭಾಗಮಿತಿ ಶ್ರುತಿಃ ॥17॥
ಪ್ರಭುವೂ ನಿಯಮವನ್ನು ಮಾಡಬೇಕಾದವನೂ ಆದ ರಾಜನು ಇವರನ್ನು ನಿಯಂತ್ರಿಸದಿದ್ದರೆ, ಇವರನ್ನು ನಿಯಮಿಸದೆ ಯಾವ ಕರ್ಮವನ್ನೂ ಮಾಡದ ಅವನು ಆ ಪಾಪದ ನಾಲ್ಕನೇ ಒಂದು ಭಾಗವನ್ನು ಅನುಭವಿಸುತ್ತಾನೆ ಎಂದು ಶ್ರುತಿ ಇದೆ. ಹಾಗೆಯೇ ಪ್ರಜೆಗಳು ಮಾಡಿದ ಧರ್ಮದ ನಾಲ್ಕನೆಯ ಒಂದು ಭಾಗವನ್ನೂ ರಾಜನು ಭೋಗಿಸುತ್ತಾನೆ.
ಸ್ಥಾನಾನ್ಯೇತಾನಿ ಸಂಗಮ್ಯ ಪ್ರಸಂಗೋ ಭೂತಿನಾಶನಃ |
ಕಾಮಪ್ರಸಕ್ತಃ ಪುರುಷಃ ಕಿಮಕಾರ್ಯಂ ವಿವರ್ಜಯೇತ್ ॥18॥
ಪಾನಾಗಾರ, ವೇಶ್ಯಾವಾಟಿಕೆ ಮೊದಲಾದ ಈ ಸ್ಥಾನಗಳಿಗೆ ಹೋಗಿ ಅಲ್ಲಿ ಆಸಕ್ತನಾಗುವುದು ಮನುಷ್ಯನ ಐಶ್ವರ್ಯವನ್ನು ನಾಶಗೊಳಿಸುತ್ತದೆ. ಕಾಮಾಸಕ್ತನಾದ ಪುರುಷನು ಯಾವ ಅಕಾರ್ಯವನ್ನು ಮಾಡದೇ ಬಿಡುತ್ತಾನೆ?
ಆಪದ್ಯೇವ ತು ಯಾಚೇರನ್ ಯೇಷಾಂ ನಾಸ್ತಿ ಪರಿಗ್ರಹಃ |
ದಾತವ್ಯಂ ಧರ್ಮತಸ್ತೇಭ್ಯಸ್ತ್ವನುಕ್ರೋಶಾದ್ ಭಯಾನ್ನ ತು ॥19॥
ಯಾರ ಬಳಿ ಏನೂ ಇಲ್ಲವೋ ಅವರು ಆಪತ್ತಿನಲ್ಲಿ ಮಾತ್ರ ಯಾಚಿಸಬೇಕು. ಅವರಿಗೆ ದಯೆಯಿಂದಲೇ ಧರ್ಮದ ದೃಷ್ಟಿಯಿಂದ ದಾನವನ್ನು ಮಾಡಬೇಕು. ಭಯ -ದಿಂದ ದಾನಮಾಡಬಾರದು.
ಮಾ ತೇ ರಾಷ್ಟ್ರೇ ಯಾಚನಕಾ ಮಾ ತೇ ಭೂಯುಶ್ಚ ದಸ್ಯವಃ |
ಇಷ್ಟಾದಾತಾರ ಏವೈತೇ ನೈತೇ ಭೂತಸ್ಯ ಭಾವಕಾಃ ॥20॥
ಎಲೈ ರಾಜನೇ! ನಿನ್ನ ರಾಷ್ಟ್ರದಲ್ಲಿ ಬೇಡುವವರು ಮತ್ತು ದಸ್ಯುಗಳು ಇಲ್ಲದಿರಲಿ. ಇಂತಹವರು ಪ್ರಜೆಗಳಿಗೆ ಇಷ್ಟವಾದುದನ್ನು ತೆಗೆದುಕೊಳ್ಳುವವರೇ ಹೊರತು ಇರುವುದನ್ನು ಅಭಿವೃದ್ಧಿ ಪಡಿಸುವವರಲ್ಲ.
ಯೇ ಭೂತಾನ್ಯನುಗೃಹ್ಣಂತಿ ವರ್ಧಯಂತಿ ಚ ಯೇ ಪ್ರಜಾಃ |
ತೇ ತೇ ರಾಷ್ಟ್ರೇ ಪ್ರವರ್ತಂತಾಂ ಮಾ ಭೂತಾನಾಮಭಾವಕಾಃ ॥21॥
ಯಾರು ಪ್ರಜೆಗಳಿಗೆ ಅನುಗ್ರಹಮಾಡಿ ಅವರನ್ನು ಅಭಿವೃದ್ಧಿಪಡಿಸುತ್ತಾರೆಯೋ ಅಂತಹವರು ನಿನ್ನ ರಾಷ್ಟ್ರದಲ್ಲಿರಲಿ. ಪ್ರಜೆಗಳ ನಾಶವನ್ನು ಮಾಡುವವರು ನಿನ್ನ ರಾಷ್ಟ್ರದಲ್ಲಿರುವುದು ಬೇಡ.
ದಂಡ್ಯಾಸ್ತೇ ಚ ಮಹಾರಾಜ ಧನಾದಾನಪ್ರಯೋಜನಾಃ |

ಪ್ರಯೋಗಂ ಕಾರಯೇಯುಸ್ತಾನ್ ಯಥಾ ಬಲಿಕರಾಂಸ್ತಥಾ ॥22॥
ಎಲೈ ಮಹಾರಾಜನೇ! ರಾಜನಿಂದ ನಿಯುಕ್ತರಾದ ಅಧಿಕಾರಿಗಳಾಗಿ ಪ್ರಜೆ- ಗಳಿಂದ ಹೆಚ್ಚು ಧನವನ್ನು ತೆಗೆದುಕೊಳ್ಳುವವರು ಶಿಕ್ಷೆಗೆ ಅರ್ಹರಾದವರು. ನಿನ್ನ ನಿಷ್ಠಾವಂತ ಅಧಿಕಾರಿಗಳಿಂದ ಪ್ರಯೋಗವನ್ನು ಮಾಡಿಸಿ ಅಂತಹ ಅಪ್ರಾಮಾಣಿಕ ಅಧಿಕಾರಿಗಳು ತೆರಿಗೆಯನ್ನು ಕೊಡುವಂತೆ ಮಾಡಬೇಕು.
ಕೃಷಿಗೋರಕ್ಷ್ಯವಾಣಿಜ್ಯಂ ಯಚ್ಚಾನ್ಯತ್ ಕಿಂಚಿದೀದೃಶಮ್ |
ಪುರುಷೈಃ ಕಾರಯೇತ್ ಕರ್ಮ ಬಹುಭಿಃ ಸಹ ಕರ್ಮಿಭಿಃ ॥23॥
ಕೃಷಿ, ಗೋರಕ್ಷ್ಯ, ವಾಣಿಜ್ಯ ಮತ್ತು ಇಂತಹ ಕಾರ್ಯಗಳನ್ನು ಅನೇಕ ಪುರುಷ- ರಿಂದ ಒಟ್ಟಾಗಿ ಮಾಡಿಸಬೇಕು.
ನ ರಕ್ಷ್ಯೇಚ್ಚೇತ್ ಕೃಷಿಗೋರಕ್ಷಂ ವಾಣಿಜ್ಯಂ ಚಾಪ್ಯನುಷ್ಠಿತಃ |
ಸಂಶಯಂ ಲಭತೇ ಕಿಂಚಿತ್ ತೇನ ರಾಜಾ ವಿಗರ್ಹ್ಯತೇ ॥24॥
ರಾಜನು ಇವರಿಗೆ ಅನುಕೂಲನಾಗಿದ್ದು, ಕೃಷಿ ಗೋರಕ್ಷಣೆ ವಾಣಿಜ್ಯಗಳನ್ನು ರಕ್ಷಣೆ ಮಾಡದಿದ್ದರೆ ರಾಜನು ಇದ್ದಾನೋ ಇಲ್ಲವೋ ಎಂಬ ಸಂಶಯಕ್ಕೆ ಗುರಿಯಾ- ಗುತ್ತಾನೆ. ಅದರಿಂದ ಅವನು ನಿಂದೆಗೆ ಒಳಗಾಗುತ್ತಾನೆ.
ಧನಿನಃ ಪೂಜಯೇನ್ನಿತ್ಯಂ ಯಾನಾಚ್ಛಾದನಭೋಜನೈಃ |
ವಕ್ತವ್ಯಾಶ್ಚಾನುಗೃಹ್ಣೀಧ್ವಂ ಪ್ರಜಾಃ ಸಹ ಮಯೇತಿ ಹ ॥25॥
ಧನಾಢ್ಯರಾದವರನ್ನು ವಾಹನವಸ್ತ್ರಭೋಜನಗಳನ್ನು ನೀಡಿ ನಿತ್ಯವೂ ಪೂಜಿಸ- ಬೇಕು. `ನೀವು ಪ್ರಜೆಗಳಿಗೂ ಮತ್ತು ನನಗೂ ಅನುಗ್ರಹವನ್ನು ಮಾಡಿ' ಎಂದು ಅವರಿಗೆ ಹೇಳಬೇಕು.
ಅಂಗಮೇತನ್ಮಹದ್ ರಾಜ್ಞಾಂ ಧನಿನೋ ನಾಮ ಭಾರತ |
ಕಕುದಃ ಸರ್ವಭೂತಾನಾಂ ಧನಸ್ಥೋ ನಾತ್ರ ಸಂಶಯಃ ॥26॥
ಎಲೈ ಭಾರತನೇ! ಧನಾಢ್ಯರಾದವರು ರಾಜನಿಗೆ ಪ್ರಧಾನವಾದ ಅಂಗ. ಧನಾಢ್ಯರಾದವರು ಎಲ್ಲ ಪ್ರಜೆಗಳಲ್ಲಿ ಶಿಖರಪ್ರಾಯರಾದವರು ಎಂಬುದರಲ್ಲಿ ಸಂಶಯವಿಲ್ಲ.
ಪ್ರಾಜ್ಞಃ ಶೂರೋ ಧನಸ್ಥಶ್ಚ ಸ್ವಾಮೀ ಧಾರ್ಮಿಕ ಏವ ಚ |
ತಪಸ್ವೀ ಸತ್ಯವಾದೀ ಚ ಬುದ್ಧಿಮಾಂಶ್ಚಾಭಿರಕ್ಷತಿ ॥27॥
ಪ್ರಾಜ್ಞ, ಶೂರ, ಧನಾಢ್ಯ, ಪ್ರಭು, ಧಾರ್ಮಿಕ, ತಪಸ್ವಿ, ಸತ್ಯವಾದಿ, ಮೇಧಾವಿ - ಇವರು ರಾಷ್ಟ್ರವನ್ನು ರಕ್ಷಿಸುತ್ತಾರೆ.
ತಸ್ಮಾದೇತೇಷು ಸರ್ವೇಷು ಪ್ರೀತಿಮಾನ್ ಭವ ಪಾರ್ಥಿವ |
ಸತ್ಯಮಾರ್ಜವಮಕ್ರೋಧಮಾನೃಶಂಸ್ಯಂ ಚ ಪಾಲಯ ॥28॥
ಎಲೈ ರಾಜನೇ! ಆದ್ದರಿಂದ ಇಂತಹ ಎಲ್ಲರಲ್ಲಿಯೂ ಪ್ರೀತಿಯುಳ್ಳವನಾಗು. ಸತ್ಯ, ಆರ್ಜವ, ಅಕ್ರೋಧ ಮತ್ತು ಮಾರ್ದವಗಳನ್ನು ಪಾಲಿಸು.
ಏವಂ ದಂಡಂ ಚ ಕೋಶಂ ಚ ಮಿತ್ರಂ ಭೂಮಿಂ ಚ ಲಪ್ಸ್ಯಸೇ |
ಸತ್ಯಾರ್ಜವಪರೋ ರಾಜನ್ ಮಿತ್ರಕೋಶಸಮನ್ವಿತಃ ॥29॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ನವತಿತಮೋಽಧ್ಯಾಯಃ ॥90॥
ಎಲೈ ರಾಜನೇ! ಸತ್ಯ ಮತ್ತು ಋಜುತನದಿಂದ ಕೂಡಿ ನೀನು ಹೀಗೆ ಮಾಡಿದರೆ ದಂಡವನ್ನು, ಕೋಶವನ್ನು, ಮಿತ್ರರನ್ನು ಮತ್ತು ಭೂಮಿಯನ್ನು ಪಡೆಯುವಿ. ಮಿತ್ರರಿಂದ ಮತ್ತು ಕೋಶದಿಂದ ಯುಕ್ತನಾಗುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 90ನೆಯ ಅಧ್ಯಾಯ ಮುಗಿಯಿತು.
0
91. ತೊಂಬತ್ತೊಂದನೆಯ ಅಧ್ಯಾಯ
ಪುನಃ ರಾಜನೀತಿ ಕಥನ
ಭೀಷ್ಮಃ
ವನಸ್ಪತೀನ್ ಭಕ್ಷ್ಯಫಲಾನ್ನ ಛಿಂದ್ಯುರ್ವಿಷಯೇ ತವ |
ಬ್ರಾಹ್ಮಣಾನಾಂ ಮೂಲಫಲಂ ಧರ್ಮ್ಯಮಾಹುರ್ಮನೀಷಿಣಃ ॥1॥
ಭೀಷ್ಮರು ಫಲವನ್ನು ಕೊಡುವ ವನಸ್ಪತಿಗಳನ್ನು ನಿನ್ನ ರಾಜ್ಯದಲ್ಲಿ ಯಾರೂ ಕತ್ತರಿಸದಿರಲಿ. ಬ್ರಾಹ್ಮಣರಿಗೆ ಫಲಮೂಲಗಳು ಧಾರ್ಮಿಕವಾದ ಆಹಾರವೆಂದು ಜ್ಞಾನಿಗಳು ಹೇಳುತ್ತಾರೆ.
ಬ್ರಾಹ್ಮಣೇಭ್ಯೋಽತಿರಿಕ್ತಂ ಚ ಭುಂಜೀರನ್ನಿತರೇ ಜನಾಃ |
ನ ಬ್ರಾಹ್ಮಣೋಪರೋಧೇನ ಹರೇದನ್ಯಃ ಕಥಂಚನ ॥2॥
ಬ್ರಾಹ್ಮಣರು ಉಪಯೋಗಿಸಿ ಉಳಿದುದನ್ನು ಇತರ ಜನರು ಉಪಯೋಗಿಸ- ಬೇಕು. ಬ್ರಾಹ್ಮಣರಿಗೆ ತೊಂದರೆಯನ್ನು ಮಾಡಿ ಬೇರೆ ಯಾವನೂ ಫಲಮೂಲ- ಗಳನ್ನು ತೆಗೆದುಕೊಳ್ಳಬಾರದು.
ವಿಪ್ರಶ್ಚೇತ್ ತ್ಯಾಗಮಾತಿಷ್ಠೇದಾಖ್ಯಾಯಾವೃತ್ತಿಕರ್ಶಿತಃ |
ಪರಿಕಲ್ಪ್ಯೋಽಸ್ಯ ವೃತ್ತಿಃ ಸ್ಯಾತ್ ಸದಾರಸ್ಯ ನರಾಧಿಪ ॥3॥
ಬ್ರಾಹ್ಮಣನು ತನ್ನ ಜೀವನೋಪಾಯವಿಲ್ಲದ ಕಾರಣದಿಂದ ಕರ್ಶಿತನಾಗಿ ದೇಶ- ತ್ಯಾಗವನ್ನು ಮಾಡಲು ಬಯಸಿದರೆ ಎಲೈ ರಾಜನೇ! ಪತ್ನೀಸಹಿತನಾದ ಅವನಿಗೆ ಜೀವನೋಪಾಯವನ್ನು ಕಲ್ಪಿಸಬೇಕು.
ಸ ಚೇನ್ನೋ ಪರಿವರ್ತೇತ ವಾಚ್ಯೋ ಬ್ರಾಹ್ಮಣಸಂಸದಿ |

ಕಸ್ಮಿನ್ನಿದಾನೀಂ ಮರ್ಯಾದಾಮಯಂ ಲೋಕಃ ಕರಿಷ್ಯತಿ ॥4॥
ಆದರೂ ಅವನು ತನ್ನ ನಿರ್ಧಾರವನ್ನು ಬದಲಾಯಿಸದಿದ್ದರೆ ಬ್ರಾಹ್ಮಣರ ಸಭೆಯಲ್ಲಿ ಅವನನ್ನು ಕುರಿತು ನಿನ್ನಂತಹವರು ದೇಶತ್ಯಾಗವನ್ನು ಮಾಡಿದರೆ ಈಗ ಪ್ರಜೆಗಳು ಯಾರನ್ನು ರಕ್ಷಿಸುವರು ಎಂದು ಹೇಳಬೇಕು.
ಅಸಂಶಯಂ ನಿವರ್ತೇತ ನ ಚೇದ್ ವಕ್ಷ್ಯತ್ಯತಃ ಪರಮ್ |
ಪೂರ್ವಂ ಪರೋಕ್ಷಂ ಕರ್ತವ್ಯಮೇತತ್ ಕೌಂತೇಯ ಶಾಸನಮ್ ॥5॥
ರಾಜನು ಹೀಗೆ ಮೃದುವಾಗಿ ಹೇಳಿದರೆ ಅವನು ದೇಶತ್ಯಾಗಮಾಡುವುದನ್ನು ಬಿಡುತ್ತಾನೆ. ಎಲೈ ಕೌಂತೇಯನೇ! ಮೊದಲು ಈ ರೀತಿಯಾಗಿ ತನ್ನ ಅಭಿಪ್ರಾಯ- ವನ್ನು ಇನ್ನೊಬ್ಬರಿಂದ ಹೇಳಿಸಬೇಕು.
ಆಹುರೇತಜ್ಜನಾ ಬ್ರಹ್ಮನ್ ನ ಚೈತದ್ ಶ್ರದ್ದಧಾಮ್ಯಹಮ್ |
ನಿಮಂತ್ರ್ಯಶ್ಚ ಭವೇದ್ ಭೋಗೈರವೃತ್ತ್ಯಾ ಚೇತ್ ತದಾಚರೇತ್ ॥6॥
ಅನಂತರ ಜೀವನೋಪಾಯವಿಲ್ಲದೇ ಅವನು ಹಾಗೆ ಮಾಡುತ್ತಿದ್ದರೆ, ಅವನನ್ನು ಆಮಂತ್ರಿಸಿ ಭೋಗಗಳನ್ನು ನೀಡಿ ಜನರು ಹೀಗೆ ಹೇಳುತ್ತಿದ್ದಾರೆ ಎಲೈ ಬ್ರಾಹ್ಮಣನೇ! ಆದರೆ ಅದರಲ್ಲಿ ನನಗೆ ನಂಬಿಕೆಯಿಲ್ಲ ಎಂದು ಹೇಳಬೇಕು. (ಅದರಿಂದ ಬ್ರಾಹ್ಮಣನು ದೇಶತ್ಯಾಗದ ನಿರ್ಧಾರವನ್ನು ಬಿಡಬಹುದು).
ಕೃಷಿಗೋರಕ್ಷ್ಯವಾಣಿಜ್ಯಂ ಲೋಕಾನಾಮಿಹ ಜೀವನಮ್ |
ಊರ್ಧ್ವಂ ಚೈವ ತ್ರಯೀ ವಿದ್ಯಾ ಸಾ ಭೂತಾನ್ ಭಾವಯತ್ಯುತ ॥7॥
ಕೃಷಿಗೋರಕ್ಷ್ಯವಾಣಿಜ್ಯಗಳು ಪ್ರಜೆಗಳ ಜೀವನೋಪಾಯ. ಇವುಗಳಿಗಿಂತ ಮಿಗಿಲಾದುದು ವೇದವಿದ್ಯೆ. ಅದು ಪ್ರಜೆಗಳನ್ನು ಪರಿಶುದ್ಧಗೊಳಿಸುತ್ತದೆ.
ತಸ್ಯಾಂ ವೈ ವರ್ತಮಾನಾಯಾಂ ಯೇ ಸ್ಯುಸ್ತತ್ಪರಿಪಂಥಿನಃ |
ದಸ್ಯವಸ್ತದ್ವಧಾಯೇಹ ಬ್ರಹ್ಮಾ ಕ್ಷತ್ರಮಥಾಸೃಜತ್ ॥8॥
ಅಂತಹ ವೇದವಿದ್ಯೆಯು ಪ್ರಸಕ್ತವಾಗಿರುವಾಗ ಅದಕ್ಕೆ ವಿರೋಧಿಗಳಾದ ದಸ್ಯು- ಗಳು ಯಾರಿದ್ದಾರೋ ಅವರ ವಧೆಗಾಗಿ ಬ್ರಹ್ಮದೇವರು ಕ್ಷತ್ರಿಯರನ್ನು ಸೃಷ್ಟಿಸಿದರು.
ಶತ್ರೂನ್ ಜಹಿ ಪ್ರಜಾ ರಕ್ಷ ಯಜಸ್ವ ಕ್ರತುಭಿರ್ನೃಪ |
ಯುದ್ಧ್ಯಸ್ವ ಸಮರೇ ವೀರೋ ಭೂತ್ವಾ ಕೌರವನಂದನ ॥9॥
ಎಲೈ ರಾಜನೇ! ಕೌರವನಂದನನೇ! ಶತ್ರುಗಳನ್ನು ಜಯಿಸು. ಪ್ರಜೆಗಳನ್ನು ರಕ್ಷಿಸು. ಯಾಗಗಳನ್ನು ಮಾಡು. ವೀರನಾಗಿ ಯುದ್ಧವನ್ನು ಮಾಡು.
ಸಂರಕ್ಷ್ಯಾನ್ ಪಾಲಯೇದ್ ರಾಜಾ ಯಃ ಸ ರಾಜಾರ್ಯಕೃತ್ತಮಃ |
ಯೇ ಕೇಚಿತ್ ತಾನ್ ನ ರಕ್ಷ್ಯಂತಿ ತೈರಥೋರ್ ನಾಸ್ತಿ ಕಶ್ಚನ ॥10॥
ಶ್ರೇಷ್ಠವಾದ ಕಾರ್ಯವನ್ನು ಮಾಡುವವರಲ್ಲಿ ಶ್ರೇಷ್ಠನಾದ ರಾಜನು ರಕ್ಷಿಸಲ್ಪಡ- ಬೇಕಾದವರನ್ನು ಸಂರಕ್ಷಿಸಬೇಕು. ಯಾವ ರಾಜರು ಅವರನ್ನು ರಕ್ಷಿಸುವುದಿಲ್ಲವೋ ಅವರಿಂದ ಯಾವ ಪ್ರಯೋಜನವೂ ಇಲ್ಲ.
ಸದೈವ ರಾಜ್ಞಾ ಯೋದ್ಧವ್ಯಂ ಸರ್ವಲೋಕಾದ್ ಯುಧಿಷ್ಠಿರ |
ತಸ್ಮಾದ್ ಹೇತೋರ್ಹಿ ಭುಂಜೀತ ಮನುಷ್ಯಾನೇವ ಮಾನವಃ ॥11॥
ಎಲೈ ಯುಧಿಷ್ಠಿರನೇ! ಸರ್ವಲೋಕದ ಹಿತಕ್ಕಾಗಿ ರಾಜನು ಸದಾ ಯುದ್ಧ- ಸನ್ನದ್ಧನಾಗಿರಬೇಕು. ಆ ಕಾರಣದಿಂದ ರಾಜನು ಸೈನಿಕರನ್ನು ಪಾಲಿಸಬೇಕು.
ಅಂತರೇಭ್ಯಃ ಪರಾನ್ ರಕ್ಷನ್ ಪರೇಭ್ಯಃ ಪುನರಂತರಾನ್ |
ಪರಾನ್ ಪರೇಭ್ಯಃ ಸ್ವಾನ್ ಸ್ವೇಭ್ಯಃ ಸರ್ವಾನ್ ಪಾಲಯ ನಿತ್ಯದಾ ॥12॥
ಒಳಗಿನವರನ್ನು ಹೊರಗಿನವರಿಂದಲೂ, ಹೊರಗಿನವರನ್ನು ಒಳಗಿನವ- ರಿಂದಲೂ, ಹೊರಗಿನವರನ್ನು ಹೊರಗಿನವರಿಂದಲೂ, ಒಳಗಿನವರನ್ನು ಒಳಗಿನವ- ರಿಂದಲೂ ಎಲ್ಲರನ್ನೂ ನಿತ್ಯವೂ ಪಾಲಿಸುವವನಾಗು.
ಆತ್ಮಾನಂ ಸರ್ವತೋ ರಕ್ಷನ್ ರಾಜಾ ರಕ್ಷೇತ ಮೇದಿನೀಮ್ |
ಆತ್ಮಮೂಲಮಿದಂ ಸರ್ವಮಾಹುರ್ಹಿ ವಿದುಷೋ ಜನಾಃ ॥13॥
ರಾಜನು ತನ್ನನ್ನು ರಕ್ಷಿಸಿಕೊಂಡು ಭೂಮಿಯನ್ನು ರಕ್ಷಿಸಬೇಕು. ಎಲ್ಲ ಕಾರ್ಯ- ವೂ ಆತ್ಮಮೂಲವಾದುದೆಂದು ವಿದ್ವಾಂಸರು ಹೇಳುತ್ತಾರೆ.
ಕಿಂ ಛಿದ್ರಂ ಕೋಽನುಷಂಗೋ ಮೇ ಕಿಂ ವಾಸ್ತ್ಯವಿನಿಪಾತಿತಮ್ |
ಕುತೋ ಮಾಮಾಸ್ರವೇದ್ ದೋಷ ಇತಿ ನಿತ್ಯಂ ವಿಚಿಂತಯೇತ್ ॥14॥
ನನ್ನ ದೋಷವೇನು? ನನ್ನ ದುರಾಸಕ್ತಿ ಏನು? ನಾನು ಪರಿಹಾರಮಾಡದಿರುವ ಪ್ರತಿಬಂಧಕವೇನು? ದೋಷವು ನನ್ನ ಕಡೆಗೆ ಎಲ್ಲಿಂದ ಹರಿದು ಬರುತ್ತದೆ ಎಂದು ನಿತ್ಯವೂ ಚಿಂತಿಸಬೇಕು.
ಗುಪ್ತೈಶ್ಚಾರೈರನುಮತೈಃ ಪೃಥಿವೀಮನುಚಾರಯೇತ್ |
ಸುನೀತಂ ಯದಿ ಮೇ ವೃತ್ತಂ ಪ್ರಶಂಸಂತಿ ನವಾ ಪುನಃ |
ಕಚ್ಚಿದ್ ರೋಚೇಜ್ಜನಪದೇ ಕಚ್ಚಿದ್ ರಾಷ್ಟ್ರೇ ಚ ಮೇ ಯಶಃ ॥15॥
ಗುಪ್ತವಾದ ಮತ್ತು ಸಮ್ಮತರಾದ ಗೂಢಚಾರರಿಂದ ರಾಷ್ಟ್ರದಲ್ಲಿ ಸಂಚಾರವನ್ನು ಮಾಡಿಸಿ ತನ್ನ ರಾಜನೀತಿಯು ಚೆನ್ನಾಗಿದೆಯೇ ಇಲ್ಲವೇ ಪ್ರಜೆಗಳು ಪ್ರಶಂಸಿಸು- ತ್ತಾರೆಯೇ ಇಲ್ಲವೇ, ರಾಷ್ಟ್ರದಲ್ಲಿ ಇಷ್ಟಪಡುತ್ತಾರೆಯೇ ಇಲ್ಲವೇ, ರಾಷ್ಟ್ರದಲ್ಲಿ ನನ್ನ ಕೀರ್ತಿಯು ಇದೆಯೇ ಇಲ್ಲವೇ ಎಂದು ತಿಳಿದುಕೊಳ್ಳಬೇಕು.

ಧರ್ಮಜ್ಞಾನಾಂ ಧೃತಿಮತಾಂ ಸಂಗ್ರಾಮೇಷ್ವಪಲಾಯಿನಾಮ್ |
ರಾಷ್ಟ್ರಂ ಚ ಯೇಽನುಜೀವಂತಿ ಯೇ ಚ ರಾಜ್ಞೋಽನುಜೀವಿನಃ ॥16॥
ಧರ್ಮಜ್ಞರೂ, ಧೈರ್ಯಶಾಲಿಗಳೂ, ಯುದ್ಧದಲ್ಲಿ ಹಿಮ್ಮೆಟ್ಟದವರೂ ಆದವ- ರಲ್ಲಿ ಯಾರು ರಾಷ್ಟ್ರವನ್ನು ಉಪಜೀವಿಸಿಕೊಂಡಿದ್ದಾರೆ. ಯಾರು ರಾಜನನ್ನು ಉಪಜೀವಿಸುತ್ತಾರೆ ಎಂಬುದನ್ನೂ ಚಾರರಿಂದ ತಿಳಿಯಬೇಕು.
ಅಮಾತ್ಯಾನಾಂ ಚ ಸರ್ವೇಷಾಂ ಮಧ್ಯಸ್ಥಾನಾಂ ಚ ಸರ್ವಶಃ |
ಯೇ ಚ ತ್ವಾಭಿಪ್ರಶಂಸೇಯುರ್ನಿಂದೇಯುರಥ ವಾ ಪುನಃ |
ಸರ್ವಾನ್ ಸುಪರಿಣೀತಾಂಸ್ತಾನ್ ಕಾರಯೇತ ಯುಧಿಷ್ಠಿರ ॥17॥
ಎಲೈ ಯುಧಿಷ್ಠಿರನೇ! ಎಲ್ಲ ಅಮಾತ್ಯರಲ್ಲಿ ಮತ್ತು ಮಧ್ಯಸ್ಥರಲ್ಲಿ ಯಾರು ನಿನ್ನನ್ನು ಪ್ರಶಂಸೆ ಮಾಡುತ್ತಾರೆಯೋ, ಅಥವಾ ನಿಂದಿಸುತ್ತಾರೆಯೋ ಅವರೆಲ್ಲರನ್ನೂ ಸರಿಯಾದ ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕು.
ಏಕಾಂತೇನ ಹಿ ಸರ್ವೇಷಾಂ ನ ಶಕ್ಯಂ ತಾತ ರೋಚಿತುಮ್ |
ಮಿತ್ರಾಮಿತ್ರಮಥೋ ಮಧ್ಯಂ ಸರ್ವಭೂತೇಷು ಭಾರತ ॥18॥
ಎಲೈ ಪ್ರೀತಿಪಾತ್ರನೇ! ನಿಯಮೇನ ಎಲ್ಲರನ್ನೂ ಸಂತೋಷಪಡಿಸುವುದು ಸಾಧ್ಯವಿಲ್ಲ. ಎಲೈ ಭಾರತನೇ! ಎಲ್ಲರಿಗೂ ಶತ್ರುಮಿತ್ರ ಉದಾಸೀನರು ಇರುತ್ತಾರೆ.
ಯುಧಿಷ್ಠಿರಃ
ತುಲ್ಯಬಾಹುಬಲಾನಾಂ ಚ ತುಲ್ಯಾನಾಂ ಚ ಗುಣೈರಪಿ |
ಕಥಂ ಸ್ಯಾದಧಿಕಃ ಕಶ್ಚಿತ್ ಸ ತು ಭುಂಜೀತ ಮಾನವಾನ್ ॥19॥
ಯುಧಿಷ್ಠಿರ ಸಮಾನವಾದ ಬಾಹುಬಲವನ್ನು, ಸಮಾನವಾದ ಗುಣವನ್ನು ಹೊಂದಿದವರಲ್ಲಿ ಒಬ್ಬನು ಹೇಗೆ ಅಧಿಕನಾಗಿ ಉಳಿದ ಮಾನವರನ್ನು ಪಾಲಿಸು- ತ್ತಾನೆ?
ಭೀಷ್ಮಃ
ಯೇ ಚರಾ ಹ್ಯಚರಾನದ್ಯುರದಂಷ್ಟ್ರಾನ್ ದಂಷ್ಟ್ರಿಣಸ್ತಥಾ |
ಆಶೀವಿಷಾ ಇವ ಕ್ರುದ್ಧಾ ಭುಜಗಾ ಭುಜಗಾನಿವ ॥20॥
ಭೀಷ್ಮರು ಚಲಿಸುವ ಪ್ರಾಣಿಗಳು ಚಲಿಸದಿರುವ ಪ್ರಾಣಿಗಳನ್ನು ತಿನ್ನುತ್ತವೆ. ಕೋರೆದಾಡೆ ಇರುವ ಪ್ರಾಣಿಗಳು ಕೋರೆದಾಡೆ ಇಲ್ಲದಿರುವ ಪ್ರಾಣಿಗಳನ್ನು ತಿನ್ನು- ತ್ತವೆ. ದೃಷ್ಟಿವಿಷವುಳ್ಳ ಸರ್ಪಗಳು ಸರ್ಪಗಳನ್ನೇ ತಿನ್ನುತ್ತವೆ. (ಅದರಂತೆ ಪ್ರಬಲನಾ- ದವನು ದುರ್ಬಲರನ್ನು ತಿನ್ನುತ್ತಾನೆ/ಪಾಲಿಸುತ್ತಾನೆ).
ಏತೇಭ್ಯಶ್ಚಾಪ್ರಮತ್ತಃ ಸ್ಯಾತ್ ಸದಾ ಯತ್ತೋ ಯುಧಿಷ್ಠಿರ |
ಭಾರುಂಡಸದೃಶಾ ಹ್ಯೇತೇ ನಿಪತಂತಿ ಪ್ರಮಾದ್ಯತಃ ॥21॥
ಎಲೈ ಯುಧಿಷ್ಠಿರನೇ! ಅಂತಹ ಪ್ರಬಲರಾದವರ ವಿಷಯದಲ್ಲಿ ಯಾವಾಗಲೂ ಜಾಗರೂಕನಾಗಿರಬೇಕು. ರಾಜನು ಪ್ರಮಾದವನ್ನು ಮಾಡಿದರೆ ಭೇರುಂಡಪಕ್ಷಿ- ಯಂತೆ ಅವರು ರಾಜನ ಮೇಲೆ ಎರಗುತ್ತಾರೆ.
ಕಚ್ಚಿತ್ ತೇ ವಣಿಜೋ ರಾಷ್ಟ್ರೇ ನೋದ್ವಿಜಂತೇ ಕರಾರ್ದಿತಾಃ |
ಕ್ರೀಣಂತೋ ಬಹು ವಾಲ್ಪೇನ ಕಾಂತಾರಕೃತನಿಶ್ಚಯಾಃ ॥22॥
ನಿನ್ನ ರಾಜ್ಯದಲ್ಲಿ ವರ್ತಕರು ಅಲ್ಪವ್ಯಾಪಾರವನ್ನು ಮಾಡಲಿ ಅಥವಾ ಬಹಳ ವ್ಯಾಪಾರವನ್ನು ಮಾಡಲಿ ನಿನ್ನ ತೆರಿಗೆಗಳಿಂದ ಪೀಡಿತರಾಗಿ ವೈರಾಗ್ಯವನ್ನು ಹೊಂದಿ ಕಾಡಿನಲ್ಲಿ ವಾಸಮಾಡುವುದೇ ಒಳ್ಳೆಯದು ಎಂಬ ನಿಶ್ಚಯವನ್ನು ಹೊಂದುವುದಿಲ್ಲ- ವಷ್ಟೇ?
ಕಚ್ಚಿತ್ ಕೃಷಿಕರಾ ರಾಷ್ಟ್ರಂ ನ ಜಹತ್ಯತಿಪೀಡಿತಾಃ |
ಯೇ ವಹಂತಿ ಧುರಂ ರಾಜ್ಞಾಂ ಸಂಭರಂತೀತರಾನಪಿ ॥23॥
ರಾಜನ ಕಾರ್ಯವನ್ನು ಹೊರುವ ಎಲ್ಲ ಪ್ರಜೆಗಳನ್ನು ಪೋಷಿಸುವ ಕೃಷೀವಲರು ನಿನ್ನ ರಾಜ್ಯದಲ್ಲಿ ಬಹಳ ಪೀಡಿತರಾಗಿ ರಾಜ್ಯತ್ಯಾಗವನ್ನು ಮಾಡಲು ಬಯಸುವು- ದಿಲ್ಲವಷ್ಟೇ!
ಇತೋ ದತ್ತೇನ ಜೀವಂತಿ ದೇವಾಃ ಪಿತೃಗಣಾಸ್ತಥಾ |
ಮನುಷ್ಯೋರಗರಕ್ಷಾಂಸಿ ವಯಾಂಸಿ ಪಶವಸ್ತಥಾ ॥24॥
ದೇವತೆಗಳು, ಪಿತೃಗಣಗಳು, ಮನುಷ್ಯೋರಗರಾಕ್ಷಸರು, ಪಶುಪಕ್ಷಿಗಳು ಇಲ್ಲಿ ಮಾಡಿದ ದಾನದಿಂದ ಜೀವಿಸುತ್ತಾರೆ.
ಏಷಾ ತೇ ರಾಷ್ಟ್ರವೃತ್ತಿಶ್ಚ ರಾಷ್ಟ್ರಗುಪ್ತಿಶ್ಚ ಭಾರತ |
ಏತಮೇವಾರ್ಥಮಾಶ್ರಿತ್ಯ ಭೂಯೋ ವಕ್ಷ್ಯಾಮಿ ಪಾಂಡವ ॥25॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕನವತಿತಮೋಽಧ್ಯಾಯಃ ॥91॥
ಎಲೈ ಭಾರತನೇ! ಇದು ನಿನ್ನ ರಾಷ್ಟ್ರವೃತ್ತಿಯ ಮತ್ತು ರಾಷ್ಟ್ರರಕ್ಷಣೆಯ ಕ್ರಮ. ಎಲೈ ಪಾಂಡವನೇ! ಇದೇ ವಿಷಯವನ್ನಾಧರಿಸಿ ನಾನು ಇನ್ನೂ ನಿನಗೆ ಹೇಳುವೆನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 91ನೆಯ ಅಧ್ಯಾಯವು ಮುಗಿಯಿತು.
0
92. ತೊಂಬತ್ತೆರಡನೆಯ ಅಧ್ಯಾಯ
ಉಚಥ್ಯಮಾಂಧಾತೃಸಂವಾದಾನುವಾದ
ಭೀಷ್ಮಃ

ಯಾನಂಗಿರಾಃ ಕ್ಷತ್ರಧರ್ಮಾನುಚಥ್ಯೋ ಬ್ರಹ್ಮವಿತ್ತಮಃ |
ಮಾಂಧಾತ್ರೇ ಯೌವನಾಶ್ವಾಯ ಪ್ರೀತಮಾನಭ್ಯಭಾಷತ ॥1॥
ಸ ಯಥಾನುಶಶಾಸೈನಮುಚಥ್ಯೋ ಬ್ರಹ್ಮವಿತ್ತಮಃ |
ತತ್ ತೇ ಸರ್ವಂ ಪ್ರವಕ್ಷ್ಯಾಮಿ ನಿಖಿಲೇನ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಅಂಗಿರಸಗೋತ್ರೋತ್ಪನ್ನರಾದ ಬ್ರಹ್ಮ- ಜ್ಞಾನಿಗಳಲ್ಲಿ ಶ್ರೇಷ್ಠರಾದ ಉಚಥ್ಯರು ಯುವನಾಶ್ವನ ಪುತ್ರರಾದ ಮಾಂಧಾತೃವಿಗೆ ಯಾವ ಕ್ಷತ್ರಿಯ ಧರ್ಮಗಳನ್ನು ಪ್ರೀತಿಯಿಂದ ಹೇಳಿದರೋ ಅವರು ಅವನಿಗೆ ಹೇಗೆ ಅನುಶಾಸನವನ್ನು ಮಾಡಿದರೋ ಅದನ್ನು ನಿನಗೆ ಪೂರ್ಣವಾಗಿ ಹೇಳುವೆನು.
ಉಚಥ್ಯಃ
ಧರ್ಮಾಯ ರಾಜಾ ಭವತಿ ನ ಕಾಮಕರಣಾಯ ತು |
ಮಾಂಧಾತರೇವಂ ಜಾನೀಹಿ ರಾಜಾ ಲೋಕಸ್ಯ ರಕ್ಷಿತಾ ॥3॥
ಉಚಥ್ಯರು ಎಲೈ ಮಾಂಧಾತನೇ! ರಾಜನು ಧರ್ಮಸಂಪಾದನೆಗಾಗಿ ಇರು- ತ್ತಾನೆ. ಹೊರತು ಕಾಮಭೋಗಕ್ಕಾಗಿ ಅಲ್ಲ. ರಾಜನು ಲೋಕವನ್ನು ರಕ್ಷಿಸುವವನು ಎಂದು ತಿಳಿ.
ರಾಜಾ ಚರತಿ ವೈ ಧರ್ಮಂ ದೇವತ್ವಾಯೈವ ಗಚ್ಛತಿ |
ನ ಚೇದ್ ಧರ್ಮಂ ಸ ಚರತಿ ನರಕಾಯೈವ ಗಚ್ಛತಿ ॥4॥
ರಾಜನು ಧರ್ಮವನ್ನು ಆಚರಿಸುತ್ತಾನೆ. ಮತ್ತು ಅದರಿಂದ ದೇವತ್ವವನ್ನೇ ಹೊಂದುತ್ತಾನೆ. ಅವನು ಧರ್ಮವನ್ನು ಆಚರಿಸದಿದ್ದರೆ ನರಕವನ್ನೇ ಹೊಂದುತ್ತಾನೆ.
ಧರ್ಮೇ ತಿಷ್ಠಂತಿ ಭೂತಾನಿ ಧರ್ಮೋ ರಾಜನಿ ತಿಷ್ಠತಿ |
ತಂ ರಾಜಾ ಸಾಧು ಯಃ ಶಾಸ್ತಿ ಸ ರಾಜಾ ಪೃಥಿವೀಪತಿಃ ॥5॥
ಎಲ್ಲ ಪ್ರಜೆಗಳೂ ಧರ್ಮವನ್ನು ಆಶ್ರಯಿಸಿಕೊಂಡಿದ್ದಾರೆ. ಧರ್ಮವು ರಾಜನನ್ನು ಆಶ್ರಯಿಸಿರುತ್ತದೆ. ಯಾವ ರಾಜನು ಆ ಧರ್ಮವನ್ನು ಚೆನ್ನಾಗಿ ಪಾಲಿಸುತ್ತಾನೋ ಅವನೇ ಪೃಥಿವೀಪತಿ.
ರಾಜಾ ಪರಮಧರ್ಮಾತ್ಮಾ ಲಕ್ಷ್ಮೀವಾನ್ ಪಾಪ ಉಚ್ಯತೇ |
ದೇವಾಶ್ಚ ಗರ್ಹಾಂ ಗಚ್ಛಂತಿ ಧರ್ಮೋ ನಾಸ್ತೀತಿ ಚೋಚ್ಯತೇ ॥6॥
ಆದರೆ ರಾಜನು ಅಧರ್ಮಿಷ್ಠನಾಗಿ ಸಂಪದ್ಯುಕ್ತನಾದರೆ ಅವನನ್ನು ಪಾಪ ಎಂದು ಕರೆಯುತ್ತಾರೆ. ದೇವತೆಗಳು ಅವನನ್ನು ನಿಂದಿಸುತ್ತಾರೆ. ಅವನ ರಾಜ್ಯದಲ್ಲಿ ಧರ್ಮ- ವಿಲ್ಲವೆಂದು ಹೇಳಲ್ಪಡುತ್ತದೆ.
ಸ್ವಧರ್ಮೇ ವರ್ತಮಾನಾನಾಮರ್ಥಸಿದ್ಧಿಃ ಪ್ರದೃಶ್ಯತೇ |
ತದೇವ ಮಂಗಲಂ ಸರ್ವಂ ಲೋಕಃ ಸಮನುವರ್ತತೇ ॥7॥
ಸ್ವಧರ್ಮದಲ್ಲಿ ಇರುವವರಿಗೆ ಲೋಕದಲ್ಲಿ ಅರ್ಥಸಿದ್ಧಿಯು ಕಂಡು ಬರುತ್ತದೆ. ಅದೇ ಮಂಗಳವಾದುದು. ಅದನ್ನು ಎಲ್ಲ ಲೋಕವೂ ಅನುಸರಿಸುತ್ತದೆ.
ಉಚ್ಛಿದ್ಯತೇ ಧರ್ಮವೃತ್ತಮಧರ್ಮೋ ವರ್ತತೇ ಮಹಾನ್ |
ಭಯಮಾಹುರ್ದಿವಾರಾತ್ರಂ ಯದಾ ಪಾಪೋ ನ ವಾರ್ಯತೇ ॥8॥
ಪಾಪವನ್ನು ತಡೆಯದಿದ್ದರೆ ಧರ್ಮದ ನಡತೆಯು ನಾಶವನ್ನು ಹೊಂದುತ್ತದೆ. ದೊಡ್ಡ ಅಧರ್ಮವುಂಟಾಗುತ್ತದೆ. ಹಗಲೂ ರಾತ್ರಿಯೂ ಭಯವುಂಟಾಗುತ್ತದೆ ಎಂದು ಹೇಳುತ್ತಾರೆ.
ಮಮೇದಮಿತಿ ನೇದಂ ಚ ಸಾಧೂನಾಂ ತಾತ ಧರ್ಮತಃ |
ನೈವ ವ್ಯವಸ್ಥಾ ಭವತಿ ಯದಾ ಪಾಪೋ ನ ವಾರ್ಯತೇ ॥9॥
ಪಾಪವನ್ನು ತಡೆಯದಿದ್ದಾಗ `ಇದು ನನ್ನದು ಇದು ನನ್ನದಲ್ಲ' ಎಂಬ ಸಜ್ಜನರ ಧರ್ಮಮೂಲವಾದ ವ್ಯವಸ್ಥೆಯು ಇರುವುದಿಲ್ಲ.
ನೈವ ಭಾರ್ಯಾ ನ ಪಶವೋ ನ ಕ್ಷೇತ್ರಂ ನ ನಿವೇಶನಮ್ |
ಸಂದೃಶ್ಯೇತ ಮನುಷ್ಯಾಣಾಂ ಯದಾ ಪಾಪಬಲಂ ಭವೇತ್ ॥10॥
ಪಾಪವು ಬಲಿಷ್ಠವಾದರೆ ಮನುಷ್ಯರಿಗೆ ಪತ್ನಿಯಾಗಲೀ, ಪಶುಗಳಾಗಲೀ, ಕ್ಷೇತ್ರವಾಗಲೀ, ನಿವೇಶನವಾಗಲೀ ಯಾವುದೂ ಕಂಡುಬರುವುದಿಲ್ಲ.
ದೇವಾ ಪೂಜಾಂ ನ ಜಾನಂತಿ ನ ಸ್ವಧಾಂ ಪಿತರಸ್ತಥಾ |
ನ ಪೂಜ್ಯಂತೇ ಹ್ಯತಿಥಯೋ ಯದಾ ಪಾಪೋ ನ ವಾರ್ಯತೇ ॥11॥
ಪಾಪಕರ್ಮವನ್ನು ತಡೆಯದಿದ್ದರೆ ದೇವತೆಗಳಿಗೆ ಪೂಜೆಯು ಸಲ್ಲುವುದಿಲ್ಲ. ಪಿತೃಗಳಿಗೆ ಸ್ವಧಾಕಾರವಿಲ್ಲ. ಅತಿಥಿಗಳು ಪೂಜಿಸಲ್ಪಡುವುದಿಲ್ಲ.
ನ ವೇದಾನನುವರ್ತಂತಿ ವ್ರತವಂತೋ ದ್ವಿಜಾತಯಃ |
ನ ಯಜ್ಞಾಂಸ್ತನ್ವತೇ ವಿಪ್ರಾ ಯದಾ ಪಾಪೋ ನ ವಾರ್ಯತೇ ॥12॥
ಪಾಪಕರ್ಮವನ್ನು ತಡೆಯದಿದ್ದರೆ ವ್ರತನಿಷ್ಠರಾದ ಬ್ರಾಹ್ಮಣರು ವೇದಾ- ಧ್ಯಯನವನ್ನು ಮಾಡುವುದಿಲ್ಲ. ಯಜ್ಞಗಳನ್ನು ಮಾಡುವುದಿಲ್ಲ.
ವೃದ್ಧಾನಾಮಿವ ಸತ್ವಾನಾಂ ಮನೋ ಭವತಿ ವಿಹ್ವಲಮ್ |
ಮನುಷ್ಯಾಣಾಂ ಮಹಾರಾಜ ಯದಾ ಪಾಪೋ ನ ವಾರ್ಯತೇ ॥13॥
ಎಲೈ ಮಹಾರಾಜನೇ! ಪಾಪಕರ್ಮವನ್ನು ತಡೆಯದಿದ್ದರೆ ಮನುಷ್ಯನ ಮನಸ್ಸು ಮುದಿಪ್ರಾಣಿಗಳ (ಮುದುಕರ) ಮನಸ್ಸಿನಂತೆ ಭಯಕ್ಕೆ

ಒಳಗಾಗುತ್ತದೆ.
ಉಭೌ ಲೋಕಾವಭಿಪ್ರೇಕ್ಷ್ಯ ರಾಜಾನಮೃಷಯಃ ಸ್ವಯಮ್ |
ಮುನಯೋಽಥ ಮಹದ್ಭೂತಮಯಂ ಧರ್ಮೋ ಭವಿಷ್ಯತಿ ||14||
ಋಷಿಗಳು ಎರಡು ಲೋಕಗಳ ಹಿತವನ್ನು ಗಮನಿಸಿ, ರಾಜನೆಂಬ ಮಹದ್- ಭೂತವು ಧಾರಕನಾಗುತ್ತಾನೆಂದು ತಿಳಿದು ರಾಜನನ್ನು ಸೃಷ್ಟಿಸಿದರು.
ಯಸ್ಮಿನ್ ಧರ್ಮೋ ವಿರಾಜೇತ ತಂ ರಾಜಾನಂ ಪ್ರಚಕ್ಷತೇ |
ಯಸ್ಮಿನ್ ವಿಲೀಯತೇ ಧರ್ಮಸ್ತಂ ದೇವಾ ವೃಷಲಂ ವಿದುಃ ||15||
ಯಾವನಲ್ಲಿ ಧರ್ಮವು ವಿರಾಜಿಸುತ್ತದೆಯೋ ಅವನನ್ನು ರಾಜನೆಂದು ಕರೆ- ಯುತ್ತಾರೆ. ಯಾವನಿಂದ ಧರ್ಮವು ನಾಶ ಹೊಂದುತ್ತದೆಯೋ ಅವನನ್ನು ದೇವತೆ- ಗಳು ವೃಷಲನೆಂದು ತಿಳಿಯುತ್ತಾರೆ.
ವೃಷೋ ಹಿ ಭಗವಾನ್ ಧರ್ಮೋ ಯಸ್ತಸ್ಯ ಕುರುತೇ ಹ್ಯಲಮ್ |
ವೃಷಲಂ ತಂ ವಿದುರ್ದೇವಾಸ್ತಸ್ಮಾದ್ ಧರ್ಮಂ ನ ಲೋಪಯೇತ್ ||16||
ವೃಷ ಎಂದರೆ ಪೂಜ್ಯವಾದ ಧರ್ಮ. ಅದಕ್ಕೆ ಅಲಂ ಎಂದರೆ ಸಮಾಪ್ತಿಯನ್ನು ಯಾವನು ಮಾಡುತ್ತಾನೆಯೋ ಅವನನ್ನು ದೇವತೆಗಳು ವೃಷಲ ಎಂದು ಕರೆಯು- ತ್ತಾರೆ. ಆದ್ದರಿಂದ ಧರ್ಮಲೋಪವನ್ನು ಮಾಡಬಾರದು.
ಧರ್ಮೇ ವರ್ಧತಿ ವರ್ಧಂತಿ ಸರ್ವಭೂತಾನಿ ಸರ್ವದಾ |
ತಸ್ಮಿನ್ ಹ್ರಸತಿ ಹೀಯಂತೇ ತಸ್ಮಾದ್ ಧರ್ಮಂ ಪ್ರವರ್ಧಯೇತ್ ||17||
ಧರ್ಮವು ಅಭಿವೃದ್ಧಿಯನ್ನು ಹೊಂದಿದರೆ ಎಲ್ಲ ಪ್ರಾಣಿಗಳೂ ಯಾವಾಗಲೂ ಅಭಿವೃದ್ಧಿಯನ್ನು ಹೊಂದುತ್ತಾರೆ. ಧರ್ಮವು ಹ್ರಾಸಗೊಂಡರೆ ಎಲ್ಲರೂ ಅವನತಿ- ಯನ್ನು ಹೊಂದುತ್ತಾರೆ. ಆದ್ದರಿಂದ ಧರ್ಮವನ್ನು ಅಭಿವೃದ್ಧಿಪಡಿಸಬೇಕು.
ಧನಾನಿ ಸೌತಿ ಧರ್ಮಸ್ತು ಧಾರಣಾದ್ ವೇತಿ ನಿಶ್ಚಯಃ |
ಅಕಾರ್ಯಾಣಾಂ ಮನುಷ್ಯೇಂದ್ರ ಸ ಸೀಮಾಂತಕರಃ ಸ್ಮೃತಃ ||18||
ಧರ್ಮವು ಜಗತ್ತನ್ನು ಧರಿಸುವ ಕಾರಣದಿಂದ ಧನವನ್ನು ಸುರಿಸುತ್ತದೆ ಎಂಬುದು ನಿಶ್ಚಯವಾದುದು. ಎಲೈ ಮನುಷ್ಯೇಂದ್ರನೇ! ಧರ್ಮವು ಅಕಾರ್ಯ- ಗಳಿಗೆ ಒಂದು ಎಲ್ಲೆಯನ್ನು ಹಾಕುವುದು ಎಂದು ಹೇಳಲ್ಪಡುತ್ತದೆ.
ಪ್ರಭವಾರ್ಥಂ ಹಿ ಭೂತಾನಾಂ ಧರ್ಮಃ ಸೃಷ್ಟಃ ಸ್ವಯಂಭುವಾ |
ತಸ್ಮಾತ್ ಪ್ರವರ್ಧಯೇದ್ ಧರ್ಮಂ ಪ್ರಜಾನುಗ್ರಹಕಾರಣಾತ್ ||19||
ಬ್ರಹ್ಮದೇವರು ಪ್ರಜೆಗಳ ಏಳಿಗೆಗಾಗಿ ಧರ್ಮವನ್ನು ಸೃಷ್ಟಿಮಾಡಿದರು. ಆದ್ದರಿಂದ ಪ್ರಜೆಗಳಿಗೆ ಅನುಗ್ರಹ ಮಾಡುವ ದೃಷ್ಟಿಯಿಂದ ಧರ್ಮವನ್ನು ಬೆಳೆಸಬೇಕು.
ತಸ್ಮಾದ್ಧಿ ರಾಜಶಾರ್ದೂಲ ಧರ್ಮಃ ಶ್ರೇಷ್ಠ ಇತಿ ಸ್ಮೃತಃ |
ಸ ರಾಜಾ ಯಃ ಪ್ರಜಾಃ ಶಾಸ್ತಿ ಸಾಧುಕೃತ್ ಪುರುಷರ್ಷಭಃ ||20||
ಎಲೈ ರಾಜಶಾರ್ದೂಲನೇ! ಆ ಕಾರಣದಿಂದ ಧರ್ಮವು ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಯಾವನು ಪ್ರಜೆಗಳನ್ನು ಅನುಶಾಸನಮಾಡಿ ಸಾಧುಕರ್ಮವನ್ನು ಮಾಡುತ್ತಾನೆಯೋ ಅಂತಹ ಪುರುಷಶ್ರೇಷ್ಠನೇ ರಾಜನಾಗುವನು.
ಕಾಮಕ್ರೋಧಾವನಾದೃತ್ಯ ಧರ್ಮಮೇವಾನುಪಾಲಯೇತ್ |
ಧರ್ಮಃ ಶ್ರೇಯಸ್ಕರತಮೋ ರಾಜ್ಞಾಂ ಭರತಸತ್ತಮ ||21||
ಎಲೈ ಭರತಸತ್ತಮನೇ! ಕಾಮಕ್ರೋಧಗಳನ್ನು ದೂರಮಾಡಿ, ಧರ್ಮವನ್ನೇ ಅನುಸರಿಸಬೇಕು. ರಾಜರಿಗೆ ಧರ್ಮವು ಅತ್ಯಂತ ಶ್ರೇಯಸ್ಕರವಾದುದು.
ಧರ್ಮಸ್ಯ ಬ್ರಾಹ್ಮಣಾ ಯೋನಿಸ್ತಸ್ಮಾತ್ ತಾನ್ ಪೂಜಯೇತ್ ಸದಾ |
ಬ್ರಾಹ್ಮಣಾನಾಂ ಚ ಮಾಂಧಾತಃ ಕಾಮಾನ್ ಕುರ್ಯಾದಮತ್ಸರೀ ||22||
ಬ್ರಾಹ್ಮಣರು ಧರ್ಮಕ್ಕೆ ಮೂಲರಾದವರು. ಆದ್ದರಿಂದ ಬ್ರಾಹ್ಮಣರನ್ನು ಯಾವಾಗಲೂ ಪೂಜಿಸಬೇಕು. ಎಲೈ ಮಾಂಧಾತೃವೇ! ಬ್ರಾಹ್ಮಣರ ಆಸೆಗಳನ್ನು ಮಾತ್ಸರ್ಯವಿಲ್ಲದೇ ಪೂರೈಸಬೇಕು.
ತೇಷಾಂ ಹ್ಯಕಾಮಕರಣಾದ್ ರಾಜ್ಞಃ ಸಂಜಾಯತೇ ಭಯಮ್ |
ಮಿತ್ರಾಣಿ ಚ ನ ವರ್ಧಂತೇ ತಥಾಮಿತ್ರೀಭವಂತ್ಯಪಿ ||23||
ಅವರ ಆಸೆಯನ್ನು ಈಡೇರಿಸದಿರುವುದರಿಂದ ರಾಜನಿಗೆ ಭಯವುಂಟಾಗುತ್ತದೆ. ಮಿತ್ರರು ಬೆಳೆಯುವುದಿಲ್ಲ; ಮತ್ತು ಮಿತ್ರರು ಶತ್ರುಗಳಾಗುತ್ತಾರೆ.
ಬ್ರಾಹ್ಮಣಾನ್ ವೈ ತದಾಸೂಯಾದ್ ಯದಾ ವೈರೋಚನೋ ಬಲಿಃ |
ಅಥಾಸ್ಮಾಚ್ಛ್ರೀರಪಾಕ್ರಾಮದ್ ಯಾಽಸ್ಮಿನ್ನಾಸೀತ್ ಪ್ರತಾಪಿನೀ ||24||
ವಿರೋಚನನ ಪುತ್ರನಾದ ಬಲಿಯು ಬ್ರಾಹ್ಮಣರನ್ನು ನೋಡಿ ಅಸೂಯೆ- ಪಟ್ಟಾಗ ಶತ್ರುಗಳಿಗೆ ತಾಪವನ್ನುಂಟುಮಾಡುವ ಅವನ ಸಂಪತ್ತು ಅವನಿಂದ ಹೊರಟುಹೋಯಿತು.
ತತಸ್ತಸ್ಮಾದಪಾಕ್ರಮ್ಯ ಸಾಽಗಚ್ಛದ್ ಪಾಕಶಾಸನಮ್ |
ಅಥ ಸೋಽನ್ವತಪತ್ ಪಶ್ಚಾಚ್ಛ್ರಿಯಂ ದೃಷ್ಟ್ವಾ ಪುರಂದರೇ ||25||
ಅವನನ್ನು ತ್ಯಜಿಸಿದ ಸಂಪತ್ತು ಪಾಕಶಾಸನನಾದ ಇಂದ್ರನನ್ನು ಸೇರಿತು. ಆಗ ಪುರಂದರನಾದ ಇಂದ್ರನಲ್ಲಿ ಸಂಪತ್ತನ್ನು ನೋಡಿದ ಬಲಿಯು ಪಶ್ಚಾತ್ತಾಪಪಟ್ಟನು.
ಏತತ್ ಫಲಮಸೂಯಾಯಾ ಅಭಿಮಾನಸ್ಯ ಚಾಭಿಭೋ |

ತಸ್ಮಾದ್ ಬುದ್ಧ್ಯಸ್ವ ಮಾಂಧಾತರ್ಮಾ ತ್ವಾ ಜಹ್ಯಾತ್ ಪ್ರತಾಪಿನೀ ॥26॥
ಎಲೈ ಶತ್ರುಗಳನ್ನು ಸೋಲಿಸುವವನೇ! ಇದು ಅಸೂಯೆ ಮತ್ತು ಅಹಂಕಾರದ ಫಲ. ಆದ್ದರಿಂದ ತಿಳಿದುಕೋ! ಎಲೈ ಮಾಂಧಾತೃವೇ! ಶತ್ರುಗಳಿಗೆ ತಾಪವನ್ನು ಕೊಡುವ ನಿನ್ನ ಸಂಪತ್ತು ನಿನ್ನನ್ನು ತ್ಯಜಿಸದಿರಲಿ.
ದರ್ಪೋ ನಾಮ ಶ್ರಿಯಃ ಪುತ್ರೋ ಜಜ್ಞೇಽಧರ್ಮಾದಿತಿ ಶ್ರುತಿಃ |
ತೇನ ದೇವಾಸುರಾ ರಾಜನ್ ನೀತಾಃ ಸುಬಹುಶೋ ವಶಮ್ ॥27॥
`ದರ್ಪ ಎಂಬುದು ಸಂಪತ್ತಿನ ಪುತ್ರನಾಗಿ ಅಧರ್ಮದಿಂದ ಜನಿಸಿತು' ಎಂದು ನಾವು ಕೇಳಿದ್ದೇವೆ. ಎಲೈ ರಾಜನೇ! ದೇವತೆಗಳು ಮತ್ತು ಅಸುರರು ಅನೇಕಬಾರಿ ಆ ದರ್ಪದ ವಶರಾಗಿದ್ದಾರೆ.
ರಾಜರ್ಷಯಶ್ಚ ಬಹವಸ್ತಸ್ಮಾದ್ ಬುದ್ಧ್ಯಸ್ವ ಪಾರ್ಥಿವ |
ರಾಜಾ ಭವತಿ ತಂ ಜಿತ್ವಾ ದಾಸಸ್ತೇನ ಪರಾಜಿತಃ ॥28॥
ಅನೇಕ ರಾಜರ್ಷಿಗಳು ದರ್ಪದ ವಶವಾಗಿದ್ದಾರೆ. ಆದ್ದರಿಂದ ಎಲೈ ರಾಜನೇ! ಆ ದರ್ಪವನ್ನು ಗೆದ್ದವನು ರಾಜನಾಗುತ್ತಾನೆ. ದರ್ಪಕ್ಕೆ ಸೋತವನು ದಾಸನಾಗು- ತ್ತಾನೆ.
ಸ ಯಥಾ ದರ್ಪಸಹಿತಮಧರ್ಮಂ ನಾನುಸೇವಸೇ |
ತಥಾ ವರ್ತಸ್ವ ಮಾಂಧಾತಶ್ಚಿರಂ ಚೇತ್ ಸ್ಥಾತುಮಿಚ್ಛಸಿ ॥29॥
ಎಲೈ ಮಾಂಧಾತೃವೇ! ನೀನು ಬಹುಕಾಲ ರಾಜ್ಯವನ್ನು ಆಳಲು ಬಯಿಸಿದರೆ ದರ್ಪಸಹಿತವಾದ ಅಧರ್ಮವನ್ನು ಸೇವಿಸದಂತೆ ನಡೆದುಕೋ.
ಮತ್ತಾತ್ ಪ್ರಮತ್ತಾತ್ ಪೌಗಂಡಾದುನ್ಮತ್ತಾಚ್ಚ ವಿಶೇಷತಃ |
ಕದಭ್ಯಾಶಾದುದಾವರ್ತಾದಹಿತಾನಾಂ ಚ ಸೇವನಾತ್ ॥30॥
ನಿಗೃಹೀತಾದಮಾತ್ಯಾಚ್ಚ ಸ್ತ್ರೀಭ್ಯಶ್ಚೈವ ವಿಶೇಷತಃ |
ಪರ್ವತಾದ್ ವಿಷಮಾದ್ ದುರ್ಗಾದ್ಧಸ್ತಿನೋಽಶ್ವಾತ್ ಸರೀಸೃಪಾತ್ ॥31॥
ಏತೇಭ್ಯೋ ನಿತ್ಯಯತ್ತಃ ಸ್ಯಾನ್ನಕ್ತಂಚರ್ಯಾಂ ಚ ವರ್ಜಯೇತ್ |
ಅತ್ಯಾಯಂ ಚಾತಿಮಾನಂ ಚ ದಂಭಂ ಕ್ರೋಧಂ ಚ ವರ್ಜಯೇತ್ ॥32॥
ಪಾನಮತ್ತರು, ಹುಚ್ಚರು, ಅಂಗವಿಕಲರು, ಪ್ರಮಾದಕ್ಕೆ ಒಳಗಾಗುವವರು, ದುರ್ಜನರ ಸಹವಾಸ, ನೀರಿನ ಸುಳಿಗಳು, ಅಹಿತರ ಸೇವೆ, ಕಾರಾಗೃಹವಾಸವನ್ನು ಅನುಭವಿಸಿದವರು, ಅಮಾತ್ಯರು, ವಿಶೇಷವಾಗಿ ಸ್ತ್ರೀಯರು, ಪರ್ವತಗಳು, ವಿಷಮವಾದ ದುರ್ಗಗಳು, ಗಜಗಳು, ಅಶ್ವಗಳು, ಸರ್ಪಗಳು ಇವುಗಳ ವಿಷಯದಲ್ಲಿ ನಿತ್ಯವೂ ಜಾಗರೂಕನಾಗಿರಬೇಕು. ರಾತ್ರಿಯ ಸಂಚಾರವನ್ನು ವರ್ಜಿ- ಸಬೇಕು. ಬಹಳ ಆದಾಯವನ್ನು, ಬಹಳ ಅಹಂಕಾರವನ್ನು, ಡಂಭವನ್ನು ಮತ್ತು ಕ್ರೋಧವನ್ನು ವರ್ಜಿಸಬೇಕು.
ಅವಿಜ್ಞಾತಾಸು ಚ ಸ್ತ್ರೀಷು ಕ್ಲೀಬಾಸು ಸ್ವೈರಿಣೀಷು ಚ |
ಪರಭಾರ್ಯಾಸು ಕನ್ಯಾಸು ನಾಚರೇನ್ಮೈಥುನಂ ನೃಪಃ ॥33॥
ಅಪರಿಚಿತರಾದ ಸ್ತ್ರೀಯರು, ನಪುಂಸಕರು, ವೇಶ್ಯೆಯರು, ಪರಪತ್ನಿಯರು, ಕನ್ಯೆಯರು ಇವರ ಜೊತೆಯಲ್ಲಿ ರಾಜನು ಮೈಥುನವನ್ನು ಮಾಡಬಾರದು.
ಕುಲೇಷು ಪಾಪರಕ್ಷಾಂಸಿ ಜಾಯಂತೇ ವರ್ಣಸಂಕರಾತ್ |
ಅಪುಮಾಂಸೋಽಂಗಹೀನಾಶ್ಚ ಸ್ಥೂಲಜಿಹ್ವಾ ವಿಚೇತಸಃ ॥34॥
ಹಾಗೆ ಮಾಡಿದರೆ ವರ್ಣಸಾಂಕರ್ಯದಿಂದ ಪಾಪಿಗಳಾದ ರಾಕ್ಷಸರು, ನಪುಂಸಕರು, ಅಂಗಹೀನರು, ಸ್ಥೂಲಜಿಹ್ವೆಯುಳ್ಳವರು, ಬುದ್ಧಿಮಂದರು ಜನಿಸು- ತ್ತಾರೆ.
ಏತೇ ಚಾನ್ಯೇ ಚ ಜಾಯಂತೇ ಯದಾ ರಾಜಾ ಪ್ರಮಾದ್ಯತಿ |
ತಸ್ಮಾದ್ ರಾಜ್ಞಾ ವಿಶೇಷೇಣ ವರ್ತಿತವ್ಯಂ ಪ್ರಜಾಹಿತೇ ॥35॥
ರಾಜನು ಪ್ರಮಾದವನ್ನು ಮಾಡಿದರೆ ಇಂತಹವರು ಮತ್ತು ಇಂತಹ ಅನೇಕರು ಜನಿಸುತ್ತಾರೆ. ಆದ್ದರಿಂದ ರಾಜನು ವಿಶೇಷವಾಗಿ ಪ್ರಜೆಗಳ ಹಿತದಲ್ಲಿ ಆಸಕ್ತನಾಗಿ- ರಬೇಕು.
ಕ್ಷತ್ರಿಯಸ್ಯ ಪ್ರಮತ್ತಸ್ಯ ದೋಷಃ ಸಂಜಾಯತೇ ಮಹಾನ್ |
ಅಧರ್ಮಾಃ ಸಂಪ್ರವರ್ತಂತೇ ಪ್ರಜಾಸಂಕರಕಾರಕಾಃ ॥36॥
ರಾಜನು ಪ್ರಮಾದಕ್ಕೆ ಒಳಗಾದರೆ ದೊಡ್ಡ ದೋಷವುಂಟಾಗುತ್ತದೆ. ಪ್ರಜೆಗಳಲ್ಲಿ ಸಾಂಕರ್ಯವನ್ನುಂಟುಮಾಡುವ ಅಧರ್ಮಗಳು ಬೆಳೆಯುತ್ತವೆ.
ಅಶೀತೇ ವಿದ್ಯತೇ ಶೀತಂ ಶೀತೇ ಶೀತಂ ನ ವಿದ್ಯತೇ |
ಅವೃಷ್ಟಿರತಿವೃಷ್ಟಿಶ್ಚ ವ್ಯಾಧಿಶ್ಚಾವಿಶತಿ ಪ್ರಜಾಃ ॥37॥
ಉಷ್ಣಕಾಲದಲ್ಲಿ ಶೀತವುಂಟಾಗುತ್ತದೆ. ಶೀತಕಾಲದಲ್ಲಿ ಶೀತವುಂಟಾಗುವುದಿಲ್ಲ. ಅವೃಷ್ಟಿ, ಅತಿವೃಷ್ಟಿ, ವ್ಯಾಧಿಗಳು ಇವುಗಳು ಪ್ರಜೆಗಳನ್ನು ಆವರಿಸುತ್ತವೆ.
ನಕ್ಷತ್ರಾಣ್ಯುಪತಿಷ್ಠಂತಿ ಗ್ರಹಾ ಘೋರಾಸ್ತಥಾ ಗತೇ |
ಉತ್ಪಾತಾಶ್ಚಾತ್ರ ದೃಶ್ಯಂತೇ ಬಹವೋ ರಾಜನಾಶನಾಃ ॥38॥
ನಕ್ಷತ್ರಗಳು ಎದುರಾಗಿ ನಿಲ್ಲುತ್ತವೆ. ಗ್ರಹಗಳು ತಮ್ಮ ಗತಿಯಲ್ಲಿ ಘೋರವಾಗು- ತ್ತವೆ. ರಾಜನಾಶವನ್ನು ಸೂಚಿಸುವ ಅನೇಕ ಅಪಶಕುನಗಳು ಇಲ್ಲಿ ಕಂಡುಬರುತ್ತವೆ.
ಅರಕ್ಷಿತಾತ್ಮಾ ಯೋ ರಾಜಾ ಪ್ರಜಾಶ್ಚಾಪಿ ನ ರಕ್ಷತಿ |

ಪ್ರಜಾಶ್ಚ ತಸ್ಯಕ್ಷೀಯಂತೇ ತಾಶ್ಚ ಸೋಽನು ವಿನಶ್ಯತಿ ॥39॥
ಯಾವ ರಾಜನು ತನ್ನನ್ನು ರಕ್ಷಿಸಿಕೊಳ್ಳುವುದಿಲ್ಲವೋ ಅವನು ಪ್ರಜೆಗಳನ್ನೂ ರಕ್ಷಿಸುವುದಿಲ್ಲ. ಅವನ ಪ್ರಜೆಗಳು ನಾಶವನ್ನು ಹೊಂದುತ್ತಾರೆ. ಅನಂತರ ರಾಜನೂ ನಾಶವನ್ನು ಹೊಂದುತ್ತಾನೆ.
ದ್ವಾವಾದದಾತೇ ಹ್ಯೇಕಸ್ವಂ ದ್ವಯೋಶ್ಚ ಬಹವೋಽಪರೇ।
ಕುಮಾರ್ಯಃ ಸಂಪ್ರಲುಪ್ಯಂತೇ ತದಾಹುರ್ನೃಪದೂಷಣಮ್ ॥40॥
ಒಬ್ಬನ ಸ್ವತ್ತನ್ನು ಇಬ್ಬರು ಅಪಹರಿಸುತ್ತಾರೆ. ಆ ಇಬ್ಬರ ಸ್ವತ್ತನ್ನು ಬೇರೆ ಅನೇಕ ಜನರು ಅಪಹರಿಸುತ್ತಾರೆ. ಕುಮಾರಿಯರನ್ನು ಕೆಡಿಸುತ್ತಾರೆ. ಇದೆಲ್ಲಾ ರಾಜನ ದೋಷವೆಂದು ಹೇಳಲ್ಪಡುತ್ತದೆ.
ಮಮೈತದಿತಿ ನೈಕಸ್ಯ ಮನುಷ್ಯೇಷ್ವವತಿಷ್ಠತೇ।
ತ್ಯಕ್ತ್ವಾ ಧರ್ಮಂ ಯದಾ ರಾಜಾ ಪ್ರಮಾದಮನುತಿಷ್ಠತಿ ॥41॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಿನವತಿತಮೋಽಧ್ಯಾಯಃ ॥92॥
ರಾಜನು ಧರ್ಮವನ್ನು ಬಿಟ್ಟು ಪ್ರಮಾದಕ್ಕೆ ಒಳಗಾದರೆ ಯಾವ ಮನುಷ್ಯನಿಗೂ ಇದು ನನ್ನದು ಎಂಬ ಭಾವನೆಯು ಉಳಿಯುವುದಿಲ್ಲ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 92ನೆಯ ಅಧ್ಯಾಯವು ಮುಗಿಯಿತು
0

## 93. ತೊಂಬತ್ತಮೂರನೆಯ ಅಧ್ಯಾಯ

### ಉಚಥ್ಯಮಾಂಧಾತೃಸಂವಾದಾನುವಾದ

ಉಚಥ್ಯಃ
ಕಾಲವರ್ಷೀ ಚ ಪರ್ಜನ್ಯೋ ಧರ್ಮಚಾರೀ ಚ ಪಾರ್ಥಿವಃ।
ಸಂಪದ್ ಯದೈಷಾ ಭವತಿ ಸಾ ಬಿಭರ್ತಿ ಸುಖಂ ಪ್ರಜಾಃ ॥1॥
ಉಚಥ್ಯರು ಸಕಾಲದಲ್ಲಿ ಮಳೆಯನ್ನು ಕೊಡುವ ಪರ್ಜನ್ಯ ಮತ್ತು ಧರ್ಮ- ಚಾರಿಯಾದ ರಾಜ ಇಂತಹ ಸಂಪತ್ತು ಉಂಟಾದರೆ ಈ ಸಂಪತ್ತು ಪ್ರಜೆಗಳನ್ನು ಸುಖವಾಗಿ ಪೋಷಿಸುತ್ತದೆ.
ಯೋ ನ ಜಾನಾತಿ ನಿರ್ಹಂತುಂ ವಸ್ತ್ರಾಣಾಂ ರಜಕೋ ಮಲಮ್।
ರಕ್ತಾನಿ ವಾ ಶೋಧಯಿತುಂ ಯಥಾ ನಾಸ್ತಿ ತಥೈವ ಸಃ ॥2॥
ಯಾವ ರಜಕನು ವಸ್ತ್ರಗಳ ಕೊಳೆಯನ್ನಾಗಲೀ ಬಣ್ಣವನ್ನಾಗಲೀ ಶೋಧಿಸಲು ತಿಳಿದಿಲ್ಲವೋ ಅವನು ಇದ್ದರೂ ಇಲ್ಲದಂತೆಯೇ ಸರಿ.
ಏವಮೇವ ದ್ವಿಜೇಂದ್ರಾಣಾಂ ಕ್ಷತ್ರಿಯಾಣಾಂ ವಿಶಾಮಪಿ।
ಶೂದ್ರಾಶ್ಚತುರ್ಣಾಂ ವರ್ಣಾನಾಂ ನಾನಾಕರ್ಮಸ್ವವಸ್ಥಿತಾಃ ॥3॥
ಅದರಂತೆಯೇ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ನಾಲ್ಕುವರ್ಣಗಳ ನಾನಾ ಕರ್ಮಗಳಲ್ಲಿ ನಿಯುಕ್ತರಾದ ಶೂದ್ರರೂ ಸಹ -
ಕರ್ಮ ಶೂದ್ರೇ ಕೃಷಿರ್ವೈಶ್ಯೇ ದಂಡನೀತಿಶ್ಚ ರಾಜನಿ।
ಬ್ರಹ್ಮಚರ್ಯಂ ತಪೋ ಮಂತ್ರಾಃ ಸತ್ಯಂ ಚಾಪಿ ದ್ವಿಜಾತಿಷು ॥4॥
ಶೂದ್ರನಲ್ಲಿ ಕರ್ಮ, ವೈಶ್ಯನಲ್ಲಿ ಕೃಷಿ, ರಾಜನಲ್ಲಿ ದಂಡನೀತಿ, ಬ್ರಾಹ್ಮಣರಲ್ಲಿ ಬ್ರಹ್ಮಚರ್ಯ, ತಪಸ್ಸು, ಮಂತ್ರ ಮತ್ತು ಸತ್ಯಗಳು ಇರಬೇಕಾದುದು.
ತೇಷಾಂ ಯಃ ಕ್ಷತ್ರಿಯೋ ವೇದ ವಸ್ತ್ರಾಣಾಮಿವ ಶೋಧನಮ್।
ಶೀಲದೋಷಾನ್ ವಿನಿರ್ಹಂತುಂ ಸ ಪಿತಾ ಸ ಪ್ರಜಾಪತಿಃ ॥5॥
ಅವರಲ್ಲಿ ರಜಕನು ವಸ್ತ್ರಗಳನ್ನು ಶೋಧಿಸಿದಂತೆ ಯಾವ ಕ್ಷತ್ರಿಯನು ಪ್ರಜೆಗಳ ಶೀಲದೋಷಗಳನ್ನು ಪರಿಹರಿಸಲು ತಿಳಿದಿರುತ್ತಾನೆಯೋ ಅವನೇ ತಂದೆ ಅವನೇ ಪ್ರಜಾಪತಿ.
ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚ ಭರತರ್ಷಭ।
ರಾಜವೃತ್ತಾನಿ ಸರ್ವಾಣಿ ರಾಜೈವ ಯುಗಮುಚ್ಯತೇ ॥6॥
ಎಲೈ ಭರತರ್ಷಭನೇ! ಕೃತ, ತ್ರೇತಾ, ದ್ವಾಪರ ಮತ್ತು ಕಲಿಯೆಲ್ಲವೂ ರಾಜನ ನಡತೆಯನ್ನೇ ಅವಲಂಬಿಸಿದೆ. ಆದ್ದರಿಂದ ರಾಜನನ್ನೇ ಯುಗವೆಂದು ಹೇಳುತ್ತಾರೆ.
ಚಾತುರ್ವರ್ಣ್ಯಂ ತಥಾ ವೇದಾಶ್ಚಾತುರಾಶ್ರಮ್ಯಮೇವ ಚ।
ಸರ್ವಂ ಪ್ರಮುಹ್ಯತೇ ಹ್ಯೇತದ್ ಯದಾ ರಾಜಾ ಪ್ರಮಾದ್ಯತಿ ॥7॥
ರಾಜನು ಪ್ರಮಾದಕ್ಕೆ ಒಳಗಾದರೆ ನಾಲ್ಕುವರ್ಣಗಳ ಧರ್ಮಗಳು, ನಾಲ್ಕು ಆಶ್ರಮಗಳ ಧರ್ಮಗಳು, ವೇದಗಳು ಎಲ್ಲವೂ ಅವನತಿಯನ್ನು ಹೊಂದುತ್ತವೆ.
ಅಗ್ನಿತ್ರೇತಾ ತ್ರಯೀ ವಿದ್ಯಾ ಯಜ್ಞಾಶ್ಚ ಸಹದಕ್ಷಿಣಾಃ।
ಸರ್ವ ಏವ ಪ್ರಮಾದ್ಯಂತಿ ಯದಾ ರಾಜಾ ಪ್ರಮಾದ್ಯತಿ ॥8॥
ರಾಜನು ಪ್ರಮಾದಕ್ಕೆ ಒಳಗಾದಾಗ ತ್ರೇತಾಗ್ನಿಗಳು, ಮೂರು ವೇದಗಳ ವಿದ್ಯೆ, ದಕ್ಷಿಣಾಯುತವಾದ ಯಜ್ಞಗಳು ಎಲ್ಲವೂ ನಾಶವನ್ನು ಹೊಂದುತ್ತವೆ.
ರಾಜೈವ ಕರ್ತಾಭೂತಾನಾಂ ರಾಜೈವ ಚ ವಿನಾಶಕಃ।
ಧರ್ಮಾತ್ಮಾ ಯಃ ಸ ಕರ್ತಾ ಸ್ಯಾದಧರ್ಮಾತ್ಮಾ ವಿನಾಶಕಃ ॥9॥

ಪ್ರಜೆಗಳಿಗೆ ಶ್ರೇಯಸ್ಸನ್ನು ಉಂಟುಮಾಡುವವನು ರಾಜನೇ. ವಿನಾಶವನ್ನು ಉಂಟುಮಾಡುವವನೂ ರಾಜನೇ. ಧರ್ಮಾತ್ಮನಾದ ರಾಜನು ಶ್ರೇಯಸ್ಕರನಾಗು- ತ್ತಾನೆ. ಅಧರ್ಮಾತ್ಮನಾದವನು ವಿನಾಶಕನಾಗುತ್ತಾನೆ.

ರಾಜ್ಞೋ ಭಾರ್ಯಾಶ್ಚ ಪುತ್ರಾಶ್ಚ ಬಾಂಧವಾಃ ಸುಹೃದಸ್ತಥಾ |
ಸಮೇತ್ಯ ಸರ್ವೇ ಶೋಚಂತಿ ಯದಾ ರಾಜಾ ಪ್ರಮಾದ್ಯತಿ ॥10॥

ರಾಜನು ಪ್ರಮಾದಕ್ಕೆ ಒಳಗಾದರೆ ರಾಜನ ಭಾರ್ಯೆಯರು, ಪುತ್ರರು, ಬಾಂಧವರು, ಸುಹೃಜ್ಜನರು ಎಲ್ಲರೂ ಒಟ್ಟಾಗಿ ಶೋಕಪಡುತ್ತಾರೆ.

ಹಸ್ತಿನೋಽಶ್ವಾಶ್ಚ ಗಾವಶ್ಚಾಪ್ಯುಷ್ಟ್ರಾಶ್ವತರಗರ್ದಭಾಃ |
ಅಧರ್ಮವೃತ್ತೇ ನೃಪತೌ ಸರ್ವೇ ಸೀದಂತಿ ಪಾರ್ಥಿವ ॥11॥

ಎಲೈ ಪಾರ್ಥಿವನೇ! ಆನೆಗಳು, ಅಶ್ವಗಳು, ಗೋವುಗಳು, ಒಂಟೆಗಳು, ಹೇಸರ -ಗತ್ತೆಗಳು, ಕತ್ತೆಗಳು ಎಲ್ಲವೂ ರಾಜನು ಅಧರ್ಮಶೀಲನಾದರೆ ಅವನತಿಯನ್ನು ಹೊಂದುತ್ತವೆ.

ಯಚ್ಚ ಭೂತಂ ಸಂಭಜತೇ ಭೂತಾ ಯೇ ಚ ತದನ್ವಯಾಃ |
ಅಧರ್ಮಸ್ಥೇ ಹಿ ನೃಪತೌ ಸರ್ವೇ ಸೀದಂತಿ ಪಾರ್ಥಿವ ॥12॥

ಎಲೈ ರಾಜನೇ! ರಾಜನು ಅಧರ್ಮಸ್ಥನಾದರೆ ರಾಜನನ್ನು ಆಶ್ರಯಿಸಿರುವ ಪ್ರಾಣಿಗಳು ಮತ್ತು ರಾಜನನ್ನು ಅನುಸರಿಸುವವರೆಲ್ಲರೂ ಅವನತಿಯನ್ನು ಹೊಂದು- ತ್ತಾರೆ.

ದುರ್ಬಲಾರ್ಥಂ ಬಲಂ ಸೃಷ್ಟಂ ಧಾತ್ರಾ ಮಾಂಧಾತರುಚ್ಯತೇ |
ಅಬಲಂ ತನ್ಮಹದ್ಭೂತಂ ಯಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥13॥

ಎಲೈ ಮಾಂಧಾತನೇ! ದುರ್ಬಲರನ್ನು ರಕ್ಷಣೆ ಮಾಡುವುದಕ್ಕಾಗಿ ಬ್ರಹ್ಮದೇವರು ಬಲವನ್ನು ಸೃಷ್ಟಿಮಾಡಿದ್ದಾರೆ. ದುರ್ಬಲವರ್ಗವು ಬಹಳ ದೊಡ್ಡದಾದುದು ಮತ್ತು ಎಲ್ಲವೂ ಅದರಲ್ಲಿ ಆಶ್ರಿತವಾಗಿದೆ.

ದುರ್ಬಲಸ್ಯ ಹಿ ಯಚ್ಚಕ್ಷುರ್ಮುನೇರಾಶೀವಿಷಸ್ಯ ಚ |
ಅವಿಷಹ್ಯತಮಂ ಮನ್ಯೇ ಮಾ ಸ್ಮ ದುರ್ಬಲಮಾಸದಃ ॥14॥

ದುರ್ಬಲನ, ಋಷಿಯ ಮತ್ತು ಸರ್ಪದ ದೃಷ್ಟಿಯು ಸಹಿಸಲು ಅಸಾಧ್ಯವಾ- ದುದು ಎಂದು ತಿಳಿಯುತ್ತೇನೆ. ದುರ್ಬಲನ ಸಮೀಪಕ್ಕೆ ಹೋಗಬೇಡ.

ದುರ್ಬಲಾಂಸ್ತಾತ ಬುದ್ಧ್ಯೇಥಾ ನಿತ್ಯಮೇವಾವಿಮಾನಿತಾನ್ |
ಮಾ ತ್ವಾಂ ದುರ್ಬಲಚಕ್ಷೂಂಷಿ ಪ್ರದಹೇಯುಃ ಸಬಾಂಧವಮ್ ॥15॥

ಎಲೈ ಪ್ರೀತಿಪಾತ್ರನೇ! ದುರ್ಬಲರಿಗೆ ಅವಮಾನವಾಗದಂತೆ ಯಾವಾಗಲೂ ನೋಡಿಕೊಳ್ಳುವವನಾಗು. ದುರ್ಬಲರ ಕಣ್ಣುಗಳು ನಿನ್ನನ್ನು ಬಾಂಧವರ ಜೊತೆ- ಯಲ್ಲಿ ಸುಡದಿರಲಿ.

ನ ಹಿ ದುರ್ಬಲದಗ್ಧಸ್ಯ ಕುಲೇ ಕಿಂಚಿತ್ ಪ್ರರೋಹತಿ |
ಆಮೂಲಂ ನಿರ್ದಹತ್ಯೇವ ಮಾ ಸ್ಮ ದುರ್ಬಲಮಾಸದಃ ॥16॥

ದುರ್ಬಲರ ದೃಷ್ಟಿಯಿಂದ ದಗ್ಧವಾದ ಕುಲದಲ್ಲಿ ಯಾವುದೂ ಬೆಳೆಯು- ವುದಿಲ್ಲ. ಆ ದೃಷ್ಟಿಯು ಮೂಲಸಹಿತವಾಗಿ ಎಲ್ಲವನ್ನೂ ಸುಟ್ಟೇ ಸುಡುತ್ತದೆ. ದುರ್ಬಲರ ಸಮೀಪಕ್ಕೆ ಹೋಗಬೇಡ.

ಅಬಲಂ ವೈ ಬಲಾಚ್ಛ್ರೇಯೋ ಯಚ್ಚಾತಿಬಲವದ್ ಬಲಮ್ |
ಬಲಸ್ಯಾಬಲದಗ್ಧಸ್ಯ ನ ಕಿಂಚಿದವಶಿಷ್ಯತೇ ॥17॥

ಅಬಲವರ್ಗವು ಬಲವನ್ನು ಹೊಂದಿದವರಿಗಿಂತ ಶ್ರೇಷ್ಠವಾದುದು. ಅದು ಬಹಳ ಬಲವನ್ನು ಹೊಂದಿದವರಿಗಿಂತಲೂ ಶ್ರೇಷ್ಠವಾದುದು. ಅಬಲರಿಂದ ಬಲವು ದಗ್ಧ- ವಾದರೆ ಅದರಲ್ಲಿ ಯಾವುದೂ ಉಳಿಯುವುದಿಲ್ಲ.

ವಿಮಾನಿತೋ ಹತೋತ್ಕ್ರುಷ್ಟಸ್ತ್ರಾತಾರಂ ಚೇನ್ನ ವಿಂದತಿ |
ಅಮಾನುಷಕೃತಸ್ತತ್ರ ದಂಡೋ ಹಂತಿ ನರಾಧಿಪಮ್ ॥18॥

ಅವಮಾನಿತನಾದವನು, ಪ್ರಹಾರಕ್ಕೆ ಸಿಲುಕಿದವನು, ನಿಂದಿಸಲ್ಪಡುವವನು ರಕ್ಷಕನನ್ನು ಪಡೆಯದಿದ್ದರೆ ಅಲ್ಲಿ ರಾಜನನ್ನು ದೈವಕೃತವಾದ ದಂಡವು ನಾಶ- ಗೊಳಿಸುತ್ತದೆ.

ಮಾ ಸ್ಮ ತಾತ ಬಲಸ್ಥಾನ್ ವೈ ಯುಂಜೀಥಾ ದುರ್ಬಲಂ ಜನಮ್ |
ಮಾ ತ್ವಾ ದುರ್ಬಲಚಕ್ಷೂಂಷಿ ಧಕ್ಷ್ಯಂತ್ವಗ್ನಿರಿವಾಶ್ರಯಮ್ ॥19॥

ಎಲೈ ಪ್ರೀತಿಪಾತ್ರನೇ! ಬಲವುಳ್ಳವರ ಜೊತೆಯಲ್ಲಿ ಸೇರು. ದುರ್ಬಲಜನರ ಸಮೀಪಕ್ಕೆ ಹೋಗಬೇಡ. ಅಗ್ನಿಯು ತನ್ನ ಆಶ್ರಯವನ್ನು ಸುಟ್ಟಂತೆ ದುರ್ಬಲರ ಕಣ್ಣುಗಳು ನಿನ್ನನ್ನು ಸುಡದಿರಲಿ. (ಲಕ್ಷ್ಯಾಲಂಕಾರ)

ಯಾನಿ ಮಿಥ್ಯಾಭಿಶಸ್ತಾನಾಂ ಪತಂತ್ಯಶ್ರೂಣಿ ರೋದತಾಮ್ |
ತಾನಿ ಪುತ್ರಾನ್ ಪಶೂನ್ ಘ್ನಂತಿ ತೇಷಾಂ ಮಿಥ್ಯಾಭಿಶಾಸನಾತ್ ॥20॥

ಮಿಥ್ಯಾರೋಪಕ್ಕೆ ಒಳಗಾಗಿ ಅಳುವವರ ಕಣ್ಣಿನಿಂದ ಯಾವ ಕಣ್ಣೀರಿನ ಹನಿಗಳು ಬೀಳುತ್ತವೆಯೋ ಅವು ಮಿಥ್ಯಾರೋಪವನ್ನು ಹೊರಸಿದವರ ಪುತ್ರರನ್ನು ಮತ್ತು ಪಶುಗಳನ್ನು ಕೊಲ್ಲುತ್ತವೆ.

ಯದಿ ನಾತ್ಮನಿ ಪುತ್ರೇಷು ನ ಚೇತ್ ಪೌತ್ರೇಷು ನಪ್ತೃಷು |
ನಹಿ ಪಾಪಂ ಕೃತಂ ಕರ್ಮ ಸದ್ಯಃ ಫಲತಿ ಗೌರಿವ ॥21॥

ಒಂದು ಪಕ್ಷ ತನಗೆ ದುಷ್ಫಲವನ್ನು ಕೊಡದಿದ್ದರೆ ಅದು ಮಕ್ಕಳಿಗೋ, ಮೊಮ್ಮಕ್ಕಳಿಗೋ ದುಷ್ಫಲವನ್ನು ಕೊಡುತ್ತದೆ. ಮಾಡಿದ ಪಾಪಕರ್ಮವು ಭೂಮಿ- ಯಂತೆ ತತ್ಕ್ಷಣದಲ್ಲಿಯೇ ಫಲವನ್ನು ಕೊಡುವುದಿಲ್ಲ. (ಭೂಮಿಯಲ್ಲಿ ಬೀಜವನ್ನು ಬಿತ್ತಿದರೆ ಎಷ್ಟೋ ಸಮಯದ ನಂತರ ಫಲವನ್ನು ಕೊಡುತ್ತದೆ. ಅದರಂತೆಯೇ ಪಾಪಕರ್ಮವು ಪಾಕಗೊಂಡಮೇಲೆ ಫಲವನ್ನು ಕೊಡುತ್ತದೆ).

ಯತ್ರಾಬಲೋ ವಧ್ಯಮಾನಸತ್ರಾತಾರಂ ನಾಧಿಗಚ್ಛತಿ |
ಮಹಾನ್ ದೈವಕೃತಸ್ತತ್ರ ದಂಡಃ ಪತತಿ ದಾರುಣಃ ॥22॥
ಅಬಲನಾದವನು ಪೀಡಿಸಲ್ಪಟ್ಟು ರಕ್ಷಕನನ್ನು ಪಡೆಯದಿದ್ದರೆ ಅಲ್ಲಿ ರಾಜನ ಮೇಲೆ ದೈವಕೃತವಾದ ದಾರುಣವಾದ ದೊಡ್ಡದಂಡವು ಎರಗುತ್ತದೆ.
ಯುಕ್ತಾ ಯದಾ ಜಾನಪದಾ ಭಿಕ್ಷಂತೇ ಬ್ರಾಹ್ಮಣಾ ಇವ |
ಅಭೀಕ್ಷ್ಣಂ ಭಿಕ್ಷುರೂಪೇಣ ರಾಜಾನಂ ಘ್ನಂತಿ ತಾದೃಶಾಃ ॥23॥
ಯೋಗ್ಯವಾದ ನಡತೆಯುಳ್ಳ ಜಾನಪದರು (ಪ್ರಜೆಗಳು) ಬ್ರಾಹ್ಮಣರಂತೆ ಸತತವಾಗಿ ಭಿಕ್ಷೆಯನ್ನು ಬೇಡಲು ಪ್ರಾರಂಭಿಸಿದರೆ ಅಂತಹವರು ರಾಜನನ್ನು ಕೊಲ್ಲುತ್ತಾರೆ.
ರಾಜ್ಞೋ ಯದಾ ಜನಪದೇ ಬಹವೋ ರಾಜಪೂರುಷಾಃ |
ಅನಯೇನೋಪವರ್ತಂತೇ ತದ್ ರಾಜ್ಞಃ ಕಿಲ್ಬಿಷಂ ಮಹತ್ ॥24॥
ರಾಜನ ಅನೇಕ ಅಧಿಕಾರಿಗಳು ರಾಜ್ಯದಲ್ಲಿ ಅನ್ಯಾಯದಿಂದ ವರ್ತಿಸಲು ಪ್ರಾರಂಭಿಸಿದರೆ ಅದು ರಾಜನದೇ ದೊಡ್ಡ ದೋಷ.
ಯದಾ ಯುಕ್ತಾ ನಯಂತ್ಯರ್ಥಾನ್ ಕಾಮಾದರ್ಥವಶೇನ ವಾ |
ಕೃಪಣಂ ಯಾಚಮಾನಾನಾಂ ತದ್ ರಾಜ್ಞೋ ವೈಶಸಂ ಮಹತ್ ॥25॥
ರಾಜನಿಂದ ನಿಯುಕ್ತರಾದ ಅಧಿಕಾರಿಗಳು ಪ್ರಜೆಗಳು ಕಾರ್ಪಣ್ಯದಿಂದ ಬೇಡು- ತ್ತಿದ್ದರೂ ಅವರ ಧನವನ್ನು ತಮ್ಮ ಮನಸ್ಸಿಗೆ ಬಂದಂತೆ ಅಥವಾ ಲೋಭದಿಂದ ದೋಚುತ್ತಿದ್ದರೆ ಅದು ರಾಜನಿಂದಲೇ ಉಂಟಾದ ದೊಡ್ಡ ಹಿಂಸೆ.
ಮಹಾವೃಕ್ಷೋ ಜಾಯತೇ ವರ್ಧತೇ ಚ
ತಂ ಚೈವ ಭೂತಾನಿ ಸಮಾಶ್ರಯಂತಿ |
ಯದಾ ವೃಕ್ಷಶ್ಛಿದ್ಯತೇ ದಹ್ಯತೇ ವಾ
ತದಾಶ್ರಯಾ ಅನಿಕೇತಾ ಭವಂತಿ ॥26॥
ದೊಡ್ಡ ವೃಕ್ಷವು ಬೆಳೆದು ಅಭಿವೃದ್ಧಿಯನ್ನು ಹೊಂದುತ್ತದೆ. ಅನೇಕ ಪ್ರಾಣಿಗಳು ಅದನ್ನು ಆಶ್ರಯಿಸುತ್ತವೆ. ಆ ವೃಕ್ಷವು ಕಡಿಯಲ್ಪಟ್ಟಾಗ ಅಥವಾ ಸುಡಲ್ಪಟ್ಟಾಗ ಅದನ್ನು ಆಶ್ರಯಿಸಿದ ಪ್ರಾಣಿಗಳೆಲ್ಲವೂ ಆಶ್ರಯ(ತಮ್ಮ ನಿವಾಸ)ವನ್ನು ಕಳೆದುಕೊಳ್ಳುತ್ತವೆ.

ಯದಾ ರಾಷ್ಟ್ರೇ ಧರ್ಮಮಗ್ರ್ಯಂ ಚರಂತಿ
ಸಂಸ್ಕಾರಂ ವಾ ರಾಜಗುಣಂ ಬ್ರುವಾಣಾಃ |
ತೈರೇವಾಧರ್ಮಶ್ಚರಿತೋ ಧರ್ಮಮೋಹಾತ್
ತೂರ್ಣಂ ದಹ್ಯಾತ್ ಸುಕೃತಂ ದುಷ್ಕೃತಂ ಚ ॥27॥
ಪ್ರಜೆಗಳು ರಾಜನ ಗುಣವೆಂದು ಹೇಳುತ್ತಾ ರಾಷ್ಟ್ರದಲ್ಲಿ ಯಾವಾಗ ಮೊದಲು ಶ್ರೇಷ್ಠವಾದ ಧರ್ಮಗಳನ್ನು ಮತ್ತು ಸಂಸ್ಕಾರಗಳನ್ನು ಆಚರಿಸುತ್ತಾ, ಅನಂತರ ಧರ್ಮಮೋಹದಿಂದ ಅವರೇ ಅಧರ್ಮವನ್ನು ಆಚರಿಸಿದರೆ ಅನಂತರ ಆಚರಿಸಿದ ಅಧರ್ಮವು ಮೊದಲು ಆಚರಿಸಿದ ಧರ್ಮವನ್ನು ಶೀಘ್ರವಾಗಿ ಸುಟ್ಟುಬಿಡುತ್ತದೆ. (ಲಕ್ಷಾಲಂಕಾರ)
ಯತ್ರ ಪಾಪಾ ಜ್ಞಾಯಮಾನಾಶ್ಚರಂತಿ
ಸಭಾಂ ಕಲಿರ್ವಿಂದತಿ ತತ್ರ ರಾಜ್ಞಃ |
ಯದಾ ರಾಜಾ ಶಾಸ್ತಿ ನರಾನ್ ನ ಶಕ್ತ್ಯಾ
ನ ತದ್ ರಾಜ್ಯಂ ವರ್ಧತೇ ಭೂಮಿಪಾಲ ॥28॥
ಎಲ್ಲಿ ಪಾಪಗಳಿಂದ ಪ್ರಸಿದ್ಧರಾದವರು ನಿಃಶಂಕೆಯಿಂದ ತಿರುಗಾಡುತ್ತಾರೋ ಅಲ್ಲಿ ಕಲಿಯು ರಾಜಸಭೆಯನ್ನು ಪ್ರವೇಶಿಸುತ್ತಾನೆ. ರಾಜನು ಅಪರಾಧಿಗಳನ್ನು ತನ್ನ ಶಕ್ತಿಗೆ ಅನುಗುಣವಾಗಿ ಶಿಕ್ಷಿಸದಿದ್ದಾಗ ಎಲೈ ರಾಜನೇ! ಆ ರಾಜ್ಯವು ಅಭಿವೃದ್ಧಿಯನ್ನು ಹೊಂದುವುದಿಲ್ಲ.
ಯಶ್ಚಾಮಾತ್ಯಂ ಮಾನಯಿತ್ವಾ ಯಥಾರ್ಹಂ
ಮಂತ್ರೇ ಚ ಯುದ್ಧೇ ಚ ನೃಪೋ ನಿಯುಂಜ್ಯಾತ್ |
ಪ್ರವರ್ಧತೇ ತಸ್ಯ ರಾಷ್ಟ್ರಂ ನೃಪಸ್ಯ
ಭುಂಕ್ತೇ ಮಹೀಂ ಚಾಪ್ಯಖಿಲಾಂ ಚಿರಾಯ ॥29॥
ಯಾವ ರಾಜ್ಯದಲ್ಲಿ ರಾಜನು ಮಂತ್ರಿಯನ್ನು ಯಥಾಯೋಗ್ಯವಾಗಿ ಸನ್ಮಾನಿಸಿ ಮಂತ್ರದಲ್ಲಿಯೂ ಮತ್ತು ಯುದ್ಧದಲ್ಲಿಯೂ ನಿಯೋಜಿಸುತ್ತಾನೆಯೋ ಅಂತಹ ರಾಜನ ರಾಷ್ಟ್ರವು ಅಭಿವೃದ್ಧಿಯನ್ನು ಹೊಂದುತ್ತದೆ. ಮತ್ತು ಆ ರಾಜನು ಬಹು- ಕಾಲದವರೆಗೆ ಭೂಮಿಯನ್ನು ಭೋಗಿಸುತ್ತಾನೆ.
ಅತ್ರಾಪಿ ಸುಕೃತಂ ಕರ್ಮ ವಾಚಂ ಚೈವ ಸುಭಾಷಿತಮ್ |
ಸಮೀಕ್ಷ್ಯ ಪೂಜಯನ್ ರಾಜಾ ಧರ್ಮಂ ಪ್ರಾಪ್ನೋತ್ಯನುತ್ತಮಮ್ ॥30॥
ಇಲ್ಲಿಯೂ ಸಹ ಒಳ್ಳೆಯ ಕರ್ಮಗಳನ್ನು ಮಾಡಿದವರನ್ನು ಮತ್ತು ಒಳ್ಳೆಯ ಮಾತನಾಡುವವರನ್ನು ನೋಡಿ ಪೂಜಿಸುವ ರಾಜನು ಶ್ರೇಷ್ಠವಾದ ಧರ್ಮವನ್ನು ಪಡೆಯುವನು.
ಸಂವಿಭಜ್ಯ ಯದಾ ಭುಂಕ್ತೇ ನ ಚಾನ್ಯಾನವಮನ್ಯತೇ |
ನಿಹಂತಿ ಬಲಿನಂ ದೃಪ್ತಂ ಸ ರಾಜ್ಞೋ ಧರ್ಮ ಉಚ್ಯತೇ ॥31॥
ತನ್ನ ಐಶ್ವರ್ಯವನ್ನು ಪ್ರಜೆಗಳಿಗೆ ಹಂಚಿ ಭೋಗಿಸುವುದು, ಇನ್ನೊಬ್ಬರಿಗೆ ಅವಮಾನವನ್ನು ಮಾಡದಿರುವುದು, ಬಲಿಷ್ಠನೂ

ಅಹಂಕಾರಿಯೂ ಆದವನನ್ನು ವಿನಾಶ ಮಾಡುವುದು ರಾಜನ ಧರ್ಮವೆನಿಸುತ್ತದೆ.
ಸ ವಿಭಜ್ಯ ಯದಾ ಭುಂಕ್ತೇ ನೃಪತಿರ್ದುರ್ಬಲಾನ್ ನರಾನ್ |
ತದಾ ಭವಂತಿ ಬಲಿನಃ ಸ ರಾಜ್ಞೋ ಧರ್ಮ ಉಚ್ಯತೇ ||32||
ರಾಜನು ದುರ್ಬಲರಿಗೆ ತನ್ನ ಐಶ್ವರ್ಯವನ್ನು ಹಂಚಿ ಭೋಗಿಸಿದರೆ ದುರ್ಬ- ಲರು ಪ್ರಬಲರಾಗುತ್ತಾರೆ. ಅದು ರಾಜನ ಧರ್ಮವೆನಿಸುತ್ತದೆ.
ತ್ರಾಯತೇ ಹಿ ಯದಾ ಸರ್ವಂ ವಾಚಾ ಕಾಯೇನ ಕರ್ಮಣಾ |
ಪುತ್ರಸ್ಯಾಪಿ ನ ಮೃಷ್ಯೇಚ್ಚ ಸ ರಾಜ್ಞೋ ಧರ್ಮ ಉಚ್ಯತೇ ||33||
ಎಲ್ಲವನ್ನೂ ಮಾತಿನಿಂದಲೂ, ಶರೀರದಿಂದಲೂ ಮತ್ತು ಕರ್ಮದಿಂದಲೂ ರಕ್ಷಿಸುವುದು ಅಪರಾಧ ಮಾಡಿದ ಪುತ್ರನನ್ನೂ ನೋಡಿ ಸಹಿಸದಿರುವುದು ರಾಜನ ಧರ್ಮವೆನಿಸುತ್ತದೆ.
ಯದಾ ರಕ್ಷತಿ ರಾಷ್ಟ್ರಾಣಿ ಯದಾ ದಸ್ಯೂನಪೋಹತಿ |
ಯದಾ ಜಯತಿ ಸಂಗ್ರಾಮೇ ಸ ರಾಜ್ಞೋ ಧರ್ಮ ಉಚ್ಯತೇ ||34||
ರಾಷ್ಟ್ರವನ್ನು ರಕ್ಷಿಸುವುದು, ದಸ್ಯುಗಳನ್ನು ವಿನಾಶಗೊಳಿಸುವುದು, ಯುದ್ಧದಲ್ಲಿ ಜಯಗಳಿಸುವುದು ರಾಜನ ಧರ್ಮವೆನಿಸುತ್ತದೆ.
ಪಾಪಮಾಚರತೋ ಯತ್ರ ಕರ್ಮಣಾ ವ್ಯಾಹೃತೇನ ವಾ |
ಪ್ರಿಯಸ್ಯಾಪಿ ನ ಮೃಷ್ಯೇತ ಸ ರಾಜ್ಞೋ ಧರ್ಮ ಉಚ್ಯತೇ ||35||
ಕರ್ಮದಿಂದಾಗಲೀ ಅಥವಾ ಮಾತಿನಿಂದಾಗಲೀ ಪಾಪಕಾರ್ಯವನ್ನು ಮಾಡಿ- ದವನು ಪ್ರಿಯವ್ಯಕ್ತಿಯಾದರೂ ಅವನನ್ನು ಸಹಿಸದಿರುವುದು ರಾಜನ ಧರ್ಮವೆನಿ- ಸುತ್ತದೆ.
ಯದಾ ಶಾರಣಿಕಾನ್ ರಾಜಾ ಪುತ್ರವತ್ ಪರಿರಕ್ಷತಿ |
ಭಿನತ್ತಿ ನ ಚ ಮರ್ಯಾದಾಂ ಸ ರಾಜ್ಞೋ ಧರ್ಮ ಉಚ್ಯತೇ ||36||
ಶರಣಾಗತರಾದವರನ್ನು ಪುತ್ರರಂತೆ ರಕ್ಷಿಸುವುದು ಮತ್ತು ಧರ್ಮದ ಎಲ್ಲೆ- ಯನ್ನು ಮೀರದಿರುವುದು ರಾಜನ ಧರ್ಮವೆನಿಸುತ್ತದೆ.
ಯದಾಪ್ತದಕ್ಷಿಣೈರ್ಯಜ್ಞೈರ್ಯಜತೇ ಶ್ರದ್ಧಯಾಽನ್ವಿತಃ |
ಕಾಮದ್ವೇಷಾವನಾದೃತ್ಯ ಸ ರಾಜ್ಞೋ ಧರ್ಮ ಉಚ್ಯತೇ ||37||
ರಾಗದ್ವೇಷಗಳನ್ನು ತ್ಯಜಿಸಿ ಶ್ರದ್ಧೆಯಿಂದ ಪೂರ್ಣದಕ್ಷಿಣೆಯನ್ನು ಕೊಟ್ಟು ಯಜ್ಞ- ಗಳನ್ನು ಮಾಡುವುದು ರಾಜನ ಧರ್ಮವೆನಿಸುತ್ತದೆ.

ಕೃಪಣಾನಾಥವೃದ್ಧಾನಾಂ ಯದಾಶ್ರು ವ್ಯಪಮಾರ್ಷ್ಟಿ ವೈ |
ಹರ್ಷಂ ಸಂಜನಯನ್ ನೃಣಾಂ ಸ ರಾಜ್ಞೋ ಧರ್ಮ ಉಚ್ಯತೇ ||38||
ಕೃಪಣರು ಅನಾಥರು, ವೃದ್ಧರೂ ಆದವರ ಕಣ್ಣೀರನ್ನು ಒರೆಸಿ ಪ್ರಜೆಗಳಿಗೆ ಸಂತೋಷವನ್ನು ಉಂಟುಮಾಡುವುದು ರಾಜನ ಧರ್ಮವೆನಿಸುತ್ತದೆ.
ವಿವರ್ಧಯತಿ ಮಿತ್ರಾಣಿ ತಥಾರೀಂಶ್ಚಾಪಕರ್ಷತಿ |
ಸಂಪೂಜಯತಿ ಸಾಧೂಂಶ್ಚ ಸ ರಾಜ್ಞೋ ಧರ್ಮ ಉಚ್ಯತೇ ||39||
ಮಿತ್ರರನ್ನು ಅಭಿವೃದ್ಧಿಪಡಿಸುವುದು, ಹಾಗೆಯೇ ಶತ್ರುಗಳನ್ನು ಅಪಕರ್ಷಣ- ಗೊಳಿಸುವುದು ಮತ್ತು ಸಜ್ಜನರನ್ನು ಪೂಜಿಸುವುದು ರಾಜನ ಧರ್ಮವೆಂದು ಹೇಳಲ್ಪಡುತ್ತದೆ.
ಸತ್ಯಂ ಪಾಲಯತಿ ಪ್ರೀತ್ಯಾ ನಿತ್ಯಂ ಭೂಮಿಂ ಪ್ರಯಚ್ಛತಿ |
ಪೂಜಯತ್ಯತಿಥೀನ್ ಭೃತ್ಯಾನ್ ಸ ರಾಜ್ಞೋ ಧರ್ಮ ಉಚ್ಯತೇ ||40||
ಸತ್ಯವನ್ನು ಸಂತೋಷದಿಂದ ಪಾಲಿಸುವುದು, ನಿತ್ಯವೂ ಭೂದಾನವನ್ನು ಮಾಡು- ವುದು, ಅತಿಥಿಗಳನ್ನು ಮತ್ತು ಭೃತ್ಯರನ್ನು ಪೂಜಿಸುವುದು ರಾಜನ ಧರ್ಮವೆನಿಸುತ್ತದೆ.
ನಿಗ್ರಹಾನುಗ್ರಹೌ ಚೋಭೌ ಯತ್ರ ಸ್ಯಾತಾಂ ಪ್ರತಿಷ್ಠಿತೌ |
ಅಸ್ಮಿಂಲ್ಲೋಕೇ ಪರೇ ಚೈವ ರಾಜಾ ತತ್ ಪ್ರಾಪ್ನುತೇ ಫಲಮ್ ||41||
ಯಾವ ರಾಜನಲ್ಲಿ ದುಷ್ಟರ ನಿಗ್ರಹ ಮತ್ತು ಶಿಷ್ಟರ ಅನುಗ್ರಹ ಎರಡೂ ಪ್ರತಿ- ಷ್ಠಿತವಾಗಿರುತ್ತವೆಯೋ ಆ ರಾಜನು ಈ ಲೋಕದಲ್ಲಿಯೂ ಮತ್ತು ಪರಲೋಕ- ದಲ್ಲಿಯೂ ಶುಭಫಲವನ್ನು ಹೊಂದುತ್ತಾನೆ.
ಯಮೋ ರಾಜಾ ಧಾರ್ಮಿಕಾಣಾಂ ಮಾಂಧಾತಃ ಪರಮೇಶ್ವರಃ |
ಸಂಯಚ್ಛನ್ ಭವತಿ ಪ್ರಾಣಾನ್ನ ಸಂಯಚ್ಛಂಸ್ತು ಪಾಪಕಃ ||42||
ಎಲೈ ಮಾಂಧಾತೃವೇ! ರಾಜನು ಯಮನಂತೆ ಸಜ್ಜನರಿಗೆ ಪ್ರಾಣದಾನವನ್ನು ಮಾಡಿದರೆ ಧಾರ್ಮಿಕರ ದೃಷ್ಟಿಯಲ್ಲಿ ಅವನು ಪರಮೇಶ್ವರನೆನಿಸುತ್ತಾನೆ. ಹಾಗೆ ಮಾಡದಿದ್ದರೆ ಅವನು ಪಾಪಿಯಾಗುತ್ತಾನೆ.
ಋತ್ವಿಕ್ಪುರೋಹಿತಾಚಾರ್ಯಾನ್ ಸತ್ಕೃತ್ಯಾನವಮನ್ಯ ಚ |
ಯದಾ ಸಮ್ಯಕ್ ಪ್ರಗೃಹ್ಣಾತಿ ಸ ರಾಜ್ಞೋ ಧರ್ಮ ಉಚ್ಯತೇ ||43||
ಋತ್ವಿಕ್, ಪುರೋಹಿತ ಮತ್ತು ಆಚಾರ್ಯರನ್ನು ಸನ್ಮಾನಿಸಿ, ಅವಮಾನ ಮಾಡದೇ ಸರಿಯಾಗಿ ಸ್ವೀಕರಿಸುವುದು ರಾಜನ ಧರ್ಮವೆನಿಸುತ್ತದೆ.
ಯಮೋ ಯಚ್ಛತಿ ಭೂತಾನಿ ಸರ್ವಾಣ್ಯೇವಾವಿಶೇಷತಃ |
ತಸ್ಯ ರಾಜ್ಞಾಽನುಕರ್ತವ್ಯಂ ಯಂತವ್ಯಾ ವಿಧಿವತ್ ಪ್ರಜಾಃ ||44||
ಯಮನು ಎಲ್ಲ ಜೀವರನ್ನೂ ಒಂದೇ ರೀತಿಯಲ್ಲಿ ನಿಯಂತ್ರಿಸುತ್ತಾನೆ. ರಾಜನು ಯಮನನ್ನು ಅನುಸರಿಸಬೇಕು. ಎಲ್ಲ ಪ್ರಜೆಗಳನ್ನೂ

ಶಾಸ್ತ್ರರೀತಿಯಲ್ಲಿ ನಿಯಂತ್ರಿಸ- ಬೇಕು.
ಸಹಸ್ರಾಕ್ಷೇಣ ರಾಜಾ ಹಿ ಸರ್ವ ಏವೋಪಮೀಯತೇ |
ಸ ಪಶ್ಯತಿ ಹಿ ಯಂ ಧರ್ಮಂ ಸ ಧರ್ಮಃ ಪುರುಷರ್ಷಭ ॥45॥
ರಾಜನನ್ನು ಎಲ್ಲರೂ ಸಹಸ್ರಾಕ್ಷನಿಗೆ ಹೋಲಿಸುತ್ತಾರೆ. ಎಲೈ ಪುರುಷಶ್ರೇಷ್ಠನೇ! ಅವನು ಯಾವುದನ್ನು ಧರ್ಮವೆಂದು ತಿಳಿಯುತ್ತಾನೆಯೋ ಅದು ಧರ್ಮ- ವಾಗುತ್ತದೆ.
ಅಪ್ರಮಾದೇನ ಶಿಕ್ಷೇಥಾಃ ಕ್ಷಮಾಂ ಬುದ್ಧಿಂ ಧೃತಿಂ ಮತಿಮ್ |
ಭೂತಾನಾಂ ಸತ್ತ್ವಜಿಜ್ಞಾಸಾಂ ಸಾಧ್ವಸಾಧು ಚ ಸರ್ವದಾ ॥46॥
ಕ್ಷಮೆ, ಸದ್ಬುದ್ಧಿ, ಧೈರ್ಯ, ಸ್ಮೃತಿ, ಪ್ರಜೆಗಳ ಬಲಾಬಲಜಿಜ್ಞಾಸೆ, ಸಜ್ಜನರ ಮತ್ತು ಅಸಜ್ಜನರ ಜಿಜ್ಞಾಸೆ ಇವುಗಳನ್ನು ಯಾವಾಗಲೂ ಎಚ್ಚರಿಕೆಯಿಂದ ಮಾಡ- ಬೇಕು.
ಸಂಗ್ರಹಃ ಸರ್ವಭೂತಾನಾಂ ದಾನಂ ಚ ಮಧುರಾ ಚ ವಾಕ್ |
ಪೌರಜಾನಪದಾಶ್ಚೈವ ಗೋಪ್ತವ್ಯಾಃ ಸ್ವಾ ಯಥಾ ಪ್ರಜಾಃ ॥47॥
ಎಲ್ಲ ಪ್ರಜೆಗಳನ್ನೂ ಸಂಗ್ರಹಿಸಬೇಕು, ದಾನ ಮಾಡಬೇಕು, ಮಧುರವಾಗಿ ಮಾತನಾಡಬೇಕು. ಪೌರಜಾನಪದರನ್ನು ತನ್ನ ಮಕ್ಕಳಂತೆ ರಕ್ಷಿಸಬೇಕು.
ನ ಜಾತ್ವದಕ್ಷೋ ನೃಪತಿಃ ಪ್ರಜಾಃ ಶಕ್ನೋತಿ ರಕ್ಷಿತುಮ್ |
ಭಾರೋ ಹಿ ಸುಮಹಾಂಸ್ತಾತ ರಾಜ್ಯಂ ನಾಮ ಸುದುಷ್ಕರಮ್ ॥48॥
ಅದಕ್ಷನಾದ ರಾಜನು ಪ್ರಜೆಗಳನ್ನು ರಕ್ಷಿಸಲು ಎಂದೂ ಸಮರ್ಥನಾಗುವುದಿಲ್ಲ. ಎಲೈ ಪ್ರೀತಿಪಾತ್ರನೇ! ಏಕೆಂದರೆ, ರಾಜ್ಯವು ಹೊರಲು ಕಷ್ಟಸಾಧ್ಯವಾದ ದೊಡ್ಡ ಭಾರ.
ತದ್ ದಂಡವನ್ನೃಪಃ ಪ್ರಾಜ್ಞಃ ಶೂರಃ ಶಕ್ನೋತಿ ರಕ್ಷಿತುಮ್ |
ನ ಹಿ ಶಕ್ಯಮದಂಡೇನ ಕ್ಲೀಬೇನಾಬುದ್ಧಿನಾಪಿ ವಾ ॥49॥
ದಂಡನೀತಿಯನ್ನು ತಿಳಿದ ಪ್ರಾಜ್ಞನೂ, ಶೂರನೂ ಆದ ರಾಜನು ರಕ್ಷಿಸಲು ಸಮರ್ಥನಾಗುತ್ತಾನೆ. ದಂಡನೀತಿಯನ್ನು ತಿಳಿಯದ ಶೂರನಲ್ಲದ ಬುದ್ಧಿಹೀನನಾದ ರಾಜನಿಂದ ಪ್ರಜೆಗಳ ರಕ್ಷಣೆಯು ಸಾಧ್ಯವಿಲ್ಲ.
ಅಭಿರೂಪೈಃ ಕುಲೇ ಜಾತೈರ್ದಕ್ಷೈರ್ಭಕ್ತೈರ್ಬಹುಶ್ರುತೈಃ |
ಸರ್ವಾ ಬುದ್ಧೀಃ ಪರೀಕ್ಷೇಥಾಸ್ತಾಪಸಾಶ್ರಮಿಣಾಮಪಿ ॥50॥
ಸತ್ಕುಲಪ್ರಸೂತರಾದ, ಯೋಗ್ಯವಾದ ರೂಪವನ್ನು ಹೊಂದಿದ, ದಕ್ಷರಾದ, ಬಹುಶ್ರುತರಾದ, ಅನುರಕ್ತರಾದ ಅಧಿಕಾರಿಗಳಿಂದ ಆಶ್ರಮವಾಸಿಗಳ ಮತ್ತು ತಾಪಸರ ಬುದ್ಧಿಗಳನ್ನೂ ಸೇರಿ ಎಲ್ಲರ ಬುದ್ಧಿಗಳನ್ನೂ ಪರೀಕ್ಷಿಸಬೇಕು.
ತತಸ್ತ್ವಂ ಸರ್ವಭೂತಾನಾಂ ಧರ್ಮಂ ವೇತ್ಸ್ಯಸಿ ವೈ ಪರಮ್ |
ಸ್ವದೇಶೇ ಪರದೇಶೇ ವಾ ನ ತೇ ಧರ್ಮೋ ವಿನಶ್ಯತಿ ॥51॥
ಆಗ ನೀನು ಎಲ್ಲ ಪ್ರಜೆಗಳ ಶ್ರೇಷ್ಠವಾದ ಧರ್ಮವನ್ನು ತಿಳಿಯುವಿ. ಸ್ವದೇಶದ- ಲ್ಲಾಗಲೀ ಹೊರದೇಶದಲ್ಲಾಗಲೀ ನಿನ್ನ ಧರ್ಮವು ವಿನಾಶವನ್ನು ಹೊಂದುವುದಿಲ್ಲ.
ಧರ್ಮೇ ಚಾರ್ಥೇ ಚ ಕಾಮೇ ಚ ಧರ್ಮ ಏವೋತ್ತರೋ ಭವೇತ್ |
ಅಸ್ಮಿಂಲ್ಲೋಕೇ ಪರೇ ಚೈವ ಧರ್ಮವಿತ್ ಸುಖಮೇಧತೇ ॥52॥
ಧರ್ಮಾರ್ಥಕಾಮಗಳಲ್ಲಿ ಧರ್ಮವೇ ಶ್ರೇಷ್ಠವಾದುದು; ಧರ್ಮವನ್ನು ಸಂಪಾ- ದಿಸುವವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಹೊಂದು- ತ್ತಾನೆ.
ತ್ಯಜಂತಿ ದಾರಾನ್ ಪ್ರಾಣಾಂಶ್ಚ ಮನುಷ್ಯಾಃ ಪ್ರತಿಪೂಜಿತಾಃ ॥53॥
ಪ್ರಜೆಗಳನ್ನು ಸರಿಯಾಗಿ ಪೂಜಿಸಿದರೆ ಅವರು ರಾಜನ ಸಲುವಾಗಿ ಪತ್ನಿಯ- ರನ್ನೂ, ಪ್ರಾಣವನ್ನೂ ತೊರೆಯುತ್ತಾರೆ.
ಅಪ್ರಮಾದಶ್ಚ ಶೌಚಂ ಚ ತಾತ ಭೂತಿಕರಂ ಮಹತ್ |
ಏತೇಭ್ಯಶ್ಚೈವ ಮಾಂಧಾತಃ ಸತತಂ ಮಾ ಪ್ರಮಾದಿಥಾಃ ॥54॥
ಎಲೈ ಪ್ರೀತಿಪಾತ್ರನೇ! ಅಪ್ರಮಾದ ಮತ್ತು ಶೌಚ ಇವು ಏಳಿಗೆಗೆ ದೊಡ್ಡ ಕಾರಣವಾದವುಗಳು. ಎಲೈ ಮಾಂಧಾತೃವೇ! ಇವುಗಳ ವಿಷಯದಲ್ಲಿ ಎಂದೂ ಪ್ರಮಾದವನ್ನು ಮಾಡಬೇಡ.
ಅಪ್ರಮತ್ತೋ ಭವೇದ್ ರಾಜಾ ಛಿದ್ರದರ್ಶೀ ಪರಾತ್ಮನೋಃ |
ನಾಸ್ಯ ಚ್ಛಿದ್ರಂ ಪರಃ ಪಶ್ಯೇಚ್ಛಿದ್ರೇಷು ಪರಮನ್ವಿಯಾತ್ ॥55॥
ರಾಜನು ಯಾವಾಗಲೂ ಎಚ್ಚರಿಕೆಯಿಂದಿದ್ದು, ಶತ್ರುಗಳ ಮತ್ತು ತನ್ನ ದೌರ್ಬಲ್ಯವನ್ನು ಗಮನಿಸಬೇಕು. ತನ್ನ ದೌರ್ಬಲ್ಯಗಳು ಇನ್ನೊಬ್ಬರಿಗೆ ತಿಳಿಯದಂತೆ ಶತ್ರುವಿನ ದೌರ್ಬಲ್ಯವನ್ನು ಗಮನಿಸಿ ಅವನ ಮೇಲೆ ಎರಗಬೇಕು.
ಏತದ್ ವೃತ್ತಂ ವಾಸವಸ್ಯ ಯಮಸ್ಯ ವರುಣಸ್ಯ ಚ |
ರಾಜರ್ಷೀಣಾಂ ಮಹಾರಾಜ ವೃತ್ತಂ ರಾಜರ್ಷಿಸೇವಿತಮ್ ॥56॥
ಎಲೈ ಮಹಾರಾಜನೇ! ಇದು ಇಂದ್ರನ, ಯಮನ, ವರುಣನ ಮತ್ತು ರಾಜರ್ಷಿಗಳ ನಡವಳಿಕೆ. ಈ ನಡವಳಿಕೆಯು ರಾಜರ್ಷಿಗಳಿಂದ ಸೇವಿತವಾದುದು.
ತತ್ ಕುರುಷ್ವ ಮಹಾರಾಜ ವೃತ್ತಂ ರಾಜರ್ಷಿಸೇವಿತಮ್ |
ಆತಿಷ್ಠ ದಿವ್ಯಂ ಪಂಥಾನಮಹ್ನಾಯ ಭರತರ್ಷಭ ॥57॥
ಎಲೈ ಮಹಾರಾಜನೇ! ರಾಜರ್ಷಿಗಳಿಂದ ಸೇವಿತವಾದ ಅಂತಹ ನಡತೆಯನ್ನು ಹೊಂದಿ, ಎಲೈ ಭರತರ್ಷಭನೇ ನಿಶ್ಚಯವಾಗಿ

ದಿವ್ಯಮಾರ್ಗದಲ್ಲಿ ಹೋಗುವವ- ನಾಗು.
ಧರ್ಮವೃತ್ತಂ ಹಿ ರಾಜಾನಂ ಪ್ರೇತ್ಯ ಚೇಹ ಚ ಭಾರತ |
ದೇವರ್ಷಿಪಿತೃಗಂಧರ್ವಾಃ ಕೀರ್ತಯಂತ್ಯಮಿತೌಜಸಃ ॥58॥
ಎಲೈ ಭಾರತನೇ! ಧರ್ಮವನ್ನು ಅನುಸರಿಸುವ ರಾಜನನ್ನು ಈ ಲೋಕ- ದಲ್ಲಿಯೂ ಮತ್ತು ಪರಲೋಕದಲ್ಲಿಯೂ ಅಮಿತಪರಾಕ್ರಮಿಗಳಾದ ದೇವರ್ಷಿ- ಪಿತೃ-ಗಂಧರ್ವರು ಕೀರ್ತಿಸುತ್ತಾರೆ.
ಸ ಏವಮುಕ್ತೋ ಮಾಂಧಾತಾ ತೇನೋಚಥ್ಯೇನ ಭಾರತ |
ಕೃತವಾನವಿಶಂಕಸ್ತದೇಕಃ ಪ್ರಾಪ ಚ ಮೇದಿನೀಮ್ ॥59॥
ಎಲೈ ಭಾರತನೇ! ಉಚಥ್ಯರಿಂದ ಹೀಗೆ ಹೇಳಲ್ಪಟ್ಟ ಮಾಂಧಾತೃವು ನಿಃಶಂಕೆ- ಯಿಂದ ಹಾಗೆಯೇ ಮಾಡಿ ಒಬ್ಬನೇ ಸಮಗ್ರವಾದ ಭೂಮಿಯನ್ನು ಪಡೆದನು.
ಭವಾನಪಿ ತಥಾ ಸಮ್ಯಕ್ ಮಾಂಧಾತೇವ ಮಹೀಪತಿಃ |
ಧರ್ಮಂ ಕೃತ್ವಾ ಮಹೀಂ ರಕ್ಷನ್ ಸ್ವರ್ಗೇ ಸ್ಥಾನಮವಾಪ್ಸ್ಯಸಿ ॥60॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಿನವತಿತಮೋಽಧ್ಯಾಯಃ ॥93॥
ನೀನೂ ಸಹ ಮಾಂಧಾತೃರಾಜನಂತೆ ಧರ್ಮವನ್ನು ಚೆನ್ನಾಗಿ ಆಚರಿಸಿ, ಭೂಮಿ- ಯನ್ನು ಚೆನ್ನಾಗಿ ರಕ್ಷಿಸಿ, ಸ್ವರ್ಗದಲ್ಲಿ ಸ್ಥಾನವನ್ನು ಹೊಂದುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 93ನೆಯ ಅಧ್ಯಾಯವು ಮುಗಿಯಿತು.
0
94. ತೊಂಬತ್ತನಾಲ್ಕನೆಯ ಅಧ್ಯಾಯ
ವಾಮದೇವವಸುಮನಸ್ ಸಂವಾದದಲ್ಲಿ ರಾಜಧರ್ಮಕಥನ
ಯುಧಿಷ್ಠಿರಃ
ಕಥಂ ಧರ್ಮೇ ಸ್ಥಾತುಮಿಚ್ಛನ್ ರಾಜಾ ವರ್ತೇತ ಧಾರ್ಮಿಕಃ |
ಪೃಚ್ಛಾಮಿ ತ್ವಾ ಕುರುಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ಕುರುಶ್ರೇಷ್ಠನೇ! ಧರ್ಮದಲ್ಲಿ ಇರಲು ಬಯಸುವ ಧಾರ್ಮಿಕನಾದ ರಾಜನು ಹೇಗೆ ನಡೆದುಕೊಳ್ಳಬೇಕೆಂದು ನಿನ್ನನ್ನು ಕೇಳುತ್ತಿದ್ದೇನೆ. ಅದನ್ನು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೀತಂ ದೃಷ್ಟಾರ್ಥತತ್ತ್ವೇನ ವಾಮದೇವೇನ ಧೀಮತಾ ॥2॥
ಭೀಷ್ಮರು ಈ ವಿಷಯದಲ್ಲಿಯೂ ಸಹ ಸರ್ವಜ್ಞರೂ ಮೇಧಾವಿಗಳೂ ಆದ ವಾಮದೇವ ಋಷಿಗಳು ಹಾಡಿದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ರಾಜಾ ವಸುಮನಾ ನಾಮ ಕೌಸಲ್ಯೋ ಬಲವಾನ್ ಶುಚಿಃ |
ಮಹರ್ಷಿಂ ಪರಿಪಪ್ರಚ್ಛ ವಾಮದೇವಂ ಯಶಸ್ವಿನಮ್ ॥3॥
ಕೋಸಲದೇಶದ ರಾಜನಾದ, ಬಲಿಷ್ಠನೂ, ಶುಚಿಯೂ ಆದ ವಸುಮನನು ಕೀರ್ತಿಶಾಲಿಗಳಾದ ವಾಮದೇವಮಹರ್ಷಿಗಳನ್ನು ಪ್ರಶ್ನೆ ಮಾಡಿದನು.
ಧರ್ಮಾರ್ಥಸಹಿತಂ ವಾಕ್ಯಂ ಭಗವನ್ನನುಶಾಧಿ ಮಾಮ್ |
ಯೇನ ವೃತ್ತೇನ ವೈ ತಿಷ್ಠನ್ ನ ಚ್ಯವೇಯಂ ಸ್ವಧರ್ಮತಃ ॥4॥
ಪೂಜ್ಯರೇ! ಧರ್ಮಾರ್ಥಸಹಿತವಾದ ವಚನಗಳನ್ನು ನನಗೆ ಉಪದೇಶ ಮಾಡಿ. ಎಂತಹ ನಡತೆಯನ್ನು ಅಡವಳಿಸಿಕೊಂಡರೆ ನಾನು ನನ್ನ ಧರ್ಮದಿಂದ ಚ್ಯುತ- ನಾಗುವುದಿಲ್ಲವೋ ಅಂತಹ ಮಾತನ್ನು ಹೇಳಿರಿ. (ಎಂದು ಕೇಳಿದನು).
ತಮಬ್ರವೀದ್ ವಾಮದೇವಸ್ತಪಸ್ವೀ ಜಪತಾಂವರಃ |
ಹೇಮವರ್ಣಂ ಸುಖಾಸೀನಂ ಯಯಾತಿಮಿವ ನಾಹುಷಮ್ ॥5॥
ಆಗ ತಪಸ್ವಿಗಳೂ ಜಪವನ್ನು ಮಾಡುವವರಲ್ಲಿ ಶ್ರೇಷ್ಠರೂ ಆದ ವಾಮ- ದೇವರು ನಹುಷಪುತ್ರನಾದ ಯಯಾತಿಯಂತೆ ಸುವರ್ಣವರ್ಣನಾಗಿ ಸುಖಾಸೀನ- ನಾಗಿದ್ದ ಅವನನ್ನು ಕುರಿತು ಹೇಳಿದರು.
ಧರ್ಮಮೇವಾನುವರ್ತಸ್ವ ನ ಧರ್ಮಾದ್ ವಿದ್ಯತೇ ಪರಮ್ |
ಧರ್ಮೇ ಸ್ಥಿತಾ ಹಿ ರಾಜಾನೋ ಜಯಂತಿ ಪೃಥಿವೀಮಿಮಾಮ್ ॥6॥
ಧರ್ಮವನ್ನೇ ಅನುಸರಿಸು, ಧರ್ಮಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಧರ್ಮವನ್ನು ಆಚರಿಸುವ ರಾಜರು ಈ ಭೂಮಿಯನ್ನು ಗೆಲ್ಲುತ್ತಾರೆ.
ಅರ್ಥಸಿದ್ಧೇಃ ಪರಂ ಧರ್ಮಂ ಮನ್ಯತೇ ಯೋ ಮಹೀಪತಿಃ |
ಋತಾಂ ಚ ಕುರುತೇ ಬುದ್ಧಿಂ ಸ ಧರ್ಮೇಣ ವಿರೋಚತೇ ॥7॥
ಅರ್ಥಸಿದ್ಧಿಗಿಂತಲೂ ಧರ್ಮಸಿದ್ಧಿಯೇ ಶ್ರೇಷ್ಠವೆಂದು ಯಾವ ರಾಜನು ತಿಳಿ- ಯುತ್ತಾನೆಯೋ ಅಂತಹ ಸತ್ಯವಾದ ಬುದ್ಧಿಯನ್ನು ಹೊಂದಿದ ರಾಜನು ಧರ್ಮ- ದಿಂದ ವಿರಾಜಿಸುತ್ತಾನೆ.
ಅಧರ್ಮದರ್ಶೀ ಯೋ ರಾಜಾ ಬಲಾದೇವ ಪ್ರವರ್ತತೇ |

ಕ್ಷಿಪ್ರಮೇವಾಪಯಾತೋಽಸ್ಮಾದುಭೌ ಪ್ರಥಮಮಧ್ಯಮೌ ॥8॥
ಧರ್ಮಜ್ಞಾನವಿಲ್ಲದೇ ಯಾವ ರಾಜನು ಕೇವಲ ಬಲದಿಂದಲೇ ಪ್ರವೃತ್ತಿಯನ್ನು ಮಾಡುತ್ತಾನೆಯೋ ಅವನು ಶೀಘ್ರವಾಗಿ ಧರ್ಮವನ್ನೂ ಮತ್ತು ಮಧ್ಯಮವಾದ ಅರ್ಥಕಾಮಗಳನ್ನೂ ಕಳೆದುಕೊಳ್ಳುತ್ತಾನೆ.
ಅಸತ್ಪಾಪಿಷ್ಠಸಚಿವೋ ವಧ್ಯೋ ಲೋಕಸ್ಯ ಧರ್ಮಹಾ |
ಸಹೈವ ಪರಿವಾರೇಣ ಕ್ಷಿಪ್ರಮೇವಾವಸೀದತಿ ॥9॥
ದುರ್ಜನನೂ ಪಾಪಿಷ್ಠನೂ ಧರ್ಮಘಾತಕನೂ ಆದ ಸಚಿವನು (ಸಚಿವನನ್ನು ಹೊಂದಿದ ರಾಜನು) ಲೋಕದಲ್ಲಿ ವಧ್ಯನಾಗುತ್ತಾನೆ. ಅವನು ಪರಿವಾರಸಹಿತನಾಗಿ ಶೀಘ್ರವಾಗಿ ನಾಶವನ್ನು ಹೊಂದುತ್ತಾನೆ.
ಅರ್ಥಾನಾಮನನುಷ್ಠಾತಾ ಕಾಮಚಾರೀ ವಿಕತ್ಥನಃ |
ಅಪಿ ಸರ್ವಾಂ ಮಹೀಂ ಲಬ್ಧ್ವಾ ಕ್ಷಿಪ್ರಮೇವ ವಿನಶ್ಯತಿ ॥10॥
ಪ್ರಜೆಗಳ ಅರ್ಥಗಳನ್ನು ಅನುಷ್ಠಾನ ಮಾಡದ ಕಾಮಚಾರಿಯೂ, ತನ್ನನ್ನೇ ತಾನು ಹೊಗಳಿಕೊಳ್ಳುವವನೂ ಆದ ರಾಜನು ಸಮಗ್ರವಾದ ಭೂಮಿಯನ್ನು ಪಡೆ- ದರೂ ಕ್ಷಿಪ್ರವಾಗಿ ನಾಶವನ್ನು ಹೊಂದುತ್ತಾನೆ.
ಅಥಾದದಾನಃ ಕಲ್ಯಾಣಮನಸೂಯುರ್ಜಿತೇಂದ್ರಿಯಃ |
ವರ್ಧತೇ ಮತಿಮಾನ್ ರಾಜಾ ಸ್ರೋತೋಭಿರಿವ ಸಾಗರಃ ॥11॥
ಹಾಗಲ್ಲದೇ ಇನ್ನೊಬ್ಬರ ಹಿತವಚನವನ್ನು ಕೇಳಿ, ಜಿತೇಂದ್ರಿಯನಾಗಿ, ಅಸೂಯಾ -ರಹಿತನಾಗಿ ಶುಭವನ್ನು ಆಚರಿಸುವ ಬುದ್ಧಿವಂತನಾದ ರಾಜನು ನದಿಗಳ ಪ್ರವಾಹ- ದಿಂದ ಸಾಗರವು ಉಕ್ಕುವಂತೆ ಅಭಿವೃದ್ಧಿಯನ್ನು ಪಡೆಯುತ್ತಾನೆ.
ನ ಪೂರ್ಣೋಽಸ್ಮೀತಿ ಮನ್ಯೇತ ಧರ್ಮತಃ ಕಾಮತೋಽರ್ಥತಃ |
ಬುದ್ಧಿತೋ ಮಿತ್ರತಶ್ಚಾಪಿ ಸತತಂ ವಸುಧಾಧಿಪಃ ॥12॥
ರಾಜನು ಧರ್ಮದಿಂದಾಗಲೀ, ಕಾಮದಿಂದಾಗಲೀ, ಅರ್ಥದಿಂದಾಗಲೀ, ಬುದ್ಧಿ -ಯಿಂದಾಗಲೀ, ಮಿತ್ರರಿಂದಾಗಲೀ ನಾನು ಪರಿಪೂರ್ಣನಾಗಿದ್ದೇನೆಂದು ಎಂದೂ ಚಿಂತಿಸಬಾರದು.
ಏತೇಷ್ವೇವ ಹಿ ಸರ್ವೇಷು ಲೋಕಯಾತ್ರಾ ಪ್ರತಿಷ್ಠಿತಾ |
ಏತಾನಿ ಶೃಣ್ವನ್ ಲಭತೇ ಯಶಃ ಕೀರ್ತಿಂ ಶ್ರಿಯಃ ಪ್ರಜಾಃ ॥13॥
ಇವುಗಳಲ್ಲಿಯೇ ಲೋಕಯಾತ್ರೆಯು ಪ್ರತಿಷ್ಠಿತವಾಗಿದೆ. ಇವುಗಳನ್ನು ಕೇಳಿ ಅದರಂತೆ ನಡೆದುಕೊಳ್ಳುವ ರಾಜನು ಈ ಲೋಕದಲ್ಲಿ ಯಶಸ್ಸನ್ನೂ, ಸಂಪತ್ತನ್ನೂ, ಪ್ರಜೆಗಳನ್ನೂ ಪರಲೋಕದಲ್ಲಿ ಕೀರ್ತಿಯನ್ನೂ ಪಡೆಯುತ್ತಾನೆ.
ಏವಂ ಯೋ ಧರ್ಮಸಂರಂಭೀ ಧರ್ಮಾರ್ಥಪರಿಚಿಂತಕಃ |
ಅರ್ಥಾನ್ ಸಮೀಕ್ಷ್ಯಾರಭತೇ ಸ ಧ್ರುವಂ ಮಹದಶ್ನುತೇ ॥14॥
ಈ ರೀತಿಯಲ್ಲಿ ಧರ್ಮದಲ್ಲಿ ಹಠವುಳ್ಳವನಾಗಿ ಧರ್ಮಾರ್ಥಗಳನ್ನು ಚೆನ್ನಾಗಿ ಚಿಂತಿಸಿ ಅರ್ಥಗಳನ್ನು ವಿಮರ್ಶಿಸಿ ಆರಂಭಿಸುವನು ನಿಶ್ಚಿತವಾಗಿ ದೊಡ್ಡದನ್ನು ಸಾಧಿ-ಸುತ್ತಾನೆ.
ಅದಾತಾ ಹ್ಯನತಿಸ್ನೇಹೋ ದಂಡೇನಾವರ್ತಯನ್ ಪ್ರಜಾಃ |
ಸಾಹಸಪ್ರಕೃತೀ ರಾಜಾ ಕ್ಷಿಪ್ರಮೇವ ವಿನಶ್ಯತಿ ॥15॥
ದಾನವನ್ನು ಮಾಡದ, ಪ್ರಜೆಗಳಲ್ಲಿ ಬಹಳ ಸ್ನೇಹವನ್ನು ಹೊಂದದ, ಪ್ರಜೆಗಳಿಗೆ ದಂಡವನ್ನು ವಿಧಿಸುವ ಸಾಹಸಪ್ರಕೃತಿಯ ರಾಜನು ಶೀಘ್ರವಾಗಿ ವಿನಾಶವನ್ನು ಹೊಂದುತ್ತಾನೆ.
ಅಥ ಪಾಪಂ ಕೃತಂ ಬುದ್ಧ್ಯಾ ನ ಚ ಪಶ್ಯತ್ಯಬುದ್ಧಿಮಾನ್ |
ಅಕೀರ್ತ್ಯಾಪಿ ಸಮಾಯುಕ್ತೋ ಮೃತೋ ನರಕಮಶ್ನುತೇ ॥16॥
ಅಲ್ಲದೇ ಪಾಪವನ್ನು ಮಾಡಿ, ತನ್ನ ಬುದ್ಧಿಯಿಂದ ವಿಮರ್ಶಿಸಿ ಇದು ಪಾಪ- ವೆಂದು ತಿಳಿಯದ ಬುದ್ಧಿಹೀನನಾದ ರಾಜನು ಅಪಕೀರ್ತಿಯಿಂದಲೂ ಕೂಡಿದ- ವನಾಗಿ ಮೃತನಾಗಿ ನರಕವನ್ನು ಹೊಂದುತ್ತಾನೆ.
ಅಥ ಮಾನಯಿತುರ್ದಾತುಃ ಶುಕ್ಲಸ್ಯ ರಸವೇದಿನಃ |
ವ್ಯಸನಂ ಸ್ವಮಿವೋತ್ಪನ್ನಂ ವಿಜಿಘಾಂಸಂತಿ ಮಾನವಾಃ ॥17॥
ಇನ್ನು ಪ್ರಜೆಗಳನ್ನು ಸನ್ಮಾನಿಸುವ, ಪ್ರಜೆಗಳಿಗೆ ದಾನವನ್ನು ಮಾಡುವ, ಶುದ್ಧನಾದ, ಸಾರಗ್ರಾಹಿಯಾದ ರಾಜನಿಗೆ ಉಂಟಾಗುವ ವ್ಯಸನವನ್ನು ಪ್ರಜೆಗಳು ತಮ್ಮ ವ್ಯಸನವೆಂದೇ ತಿಳಿದು ಅದನ್ನು ಪರಿಹರಿಸಲು ಬಯಸುತ್ತಾರೆ.
ಯಸ್ಯ ನಾಸ್ತಿ ಗುರುರ್ಧರ್ಮೇ ನ ಚಾನ್ಯಾನನುಪೃಚ್ಛತಿ |
ಸುಖತಂತ್ರೋಽರ್ಥಲಾಭೇಷು ನ ಚಿರಂ ಮಹದಶ್ನುತೇ ॥18॥
ಯಾವನಿಗೆ ಧರ್ಮವನ್ನು ಉಪದೇಶಿಸುವ ಗುರುವಿಲ್ಲವೋ, ಅಥವಾ ಅವನು ಇನ್ನೊಬ್ಬರನ್ನು ಕೇಳುವುದಿಲ್ಲವೋ, ಸುಖದಿಂದ ಪ್ರೇರಿತನಾಗಿ ಅರ್ಥಲಾಭದಲ್ಲಿ ಆಸಕ್ತನಾಗಿರುತ್ತಾನೆಯೋ ಅವನು ಬಹಳಕಾಲ ಯಾವ ದೊಡ್ಡದನ್ನೂ ಅನು- ಭವಿಸುವುದಿಲ್ಲ.
ಗುರುಪ್ರಧಾನೋ ಧರ್ಮೇಷು ಸ್ವಯಮರ್ಥಾನ್ವವೇಕ್ಷಿತಾ |
ಧರ್ಮಪ್ರಧಾನೋ ಲೋಕೇಷು ಸುಚಿರಂ ಮಹದಶ್ನುತೇ ॥19॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರ್ನವತಿತಮೋಽಧ್ಯಾಯಃ ॥94॥
ಧರ್ಮದ ವಿಷಯದಲ್ಲಿ ಗುರುಗಳ ಉಪದೇಶವನ್ನು ಪ್ರಧಾನವಾಗಿ ಹೊಂದಿ, ಅರ್ಥಗಳನ್ನು ತಾನೇ ಪರೀಕ್ಷಿಸಿ, ಧರ್ಮಪ್ರಧಾನನಾದ ರಾಜನು ಲೋಕದಲ್ಲಿ ಬಹುಕಾಲ ಶ್ರೇಷ್ಠವಾದುದನ್ನು ಪಡೆಯುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 94ನೆಯ ಅಧ್ಯಾಯವು ಮುಗಿಯಿತು.

0

95. ತೊಂಬತ್ತೈದನೆಯ ಅಧ್ಯಾಯ
ವಾಮದೇವವಸುಮನಸ್ ಸಂವಾದ
ವಾಮದೇವಃ
ಯತ್ರಾಧರ್ಮಂ ಪ್ರಣಯತೇ ದುರ್ಬಲೇ ಬಲವತ್ತರಃ |
ತಾಂ ವೃತ್ತಿಮುಪಜೀವಂತಿ ಯೇ ಭವಂತಿ ತದನ್ವಯಾಃ ||1||
ರಾಜಾನಮನುವರ್ತಂತೇ ತಂ ಪಾಪಾಭಿಪ್ರವರ್ತಕಮ್ |
ಅವಿನೀತಮನುಷ್ಯಂ ತತ್ ಕ್ಷಿಪ್ರಂ ರಾಷ್ಟ್ರಂ ವಿನಶ್ಯತಿ ||2||
ವಾಮದೇವ ಎಲ್ಲಿ ಬಲಿಷ್ಠನಾದ ರಾಜನು ದುರ್ಬಲನಾದವನ ಮೇಲೆ ಅಧರ್ಮವನ್ನು ಪ್ರಯೋಗಿಸುತ್ತಾನೆಯೋ ಮತ್ತು ರಾಜಕುಲಕ್ಕೆ ಸೇರಿದವರು ಅದೇ ನಡತೆಯನ್ನು ಉಪಜೀವಿಸುತ್ತಾರೆಯೋ ಮತ್ತು ಪ್ರಜೆಗಳು ಪಾಪಪ್ರವರ್ತಕನಾದ ರಾಜನನ್ನು ಅನುಸರಿಸುತ್ತಾರೆಯೋ ಅಂತಹ ಅವಿನೀತರಾದ ಮನುಷ್ಯರಿಗಿರುವ ರಾಷ್ಟ್ರವು ಶೀಘ್ರವಾಗಿ ವಿನಾಶವನ್ನು ಹೊಂದುತ್ತದೆ.
ಯದ್ವೃತ್ತಿಮುಪಜೀವಂತಿ ಪ್ರಕೃತಿಸ್ಥಸ್ಯ ಮಾನವಾಃ |
ತದೇವ ವಿಷಮಸ್ಥಸ್ಯ ಸ್ವಜನೋಽಪಿ ನ ಮೃಷ್ಯತೇ ||3||
ಮನುಷ್ಯರು ಸಂವೃದ್ಧನಾದವನ ಯಾವ ನಡತೆಯನ್ನು ಉಪಜೀವಿಸಿಕೊಂಡು ಬದುಕುತ್ತಾರೆಯೋ ಆ ವ್ಯಕ್ತಿಯು ವಿಷಮಸನ್ನಿವೇಶಕ್ಕೆ ಒಳಗಾದಾಗ ಅದೇ ಮಾನವರು ಮತ್ತು ಸ್ವಜನರು ಅದೇ ನಡತೆಯನ್ನು ಸಹಿಸುವುದಿಲ್ಲ.
ಸಾಹಸಪ್ರಕೃತಿರ್ಯತ್ರ ಕುರುತೇ ಕಿಂಚಿದುಲ್ಬಣಮ್ |
ಅಶಾಸ್ತ್ರಲಕ್ಷಣೋ ರಾಜಾ ಕ್ಷಿಪ್ರಮೇವ ವಿನಶ್ಯತಿ ||4||
ವಿಚಾರಮಾಡದೇ ಕಾರ್ಯವನ್ನು ಮಾಡುವ ರಾಜನು ಶಾಸ್ತ್ರವಿಹಿತವಲ್ಲದ ಒಂದು ಉಲ್ಬಣವಾದ ಕಾರ್ಯವನ್ನು ಮಾಡಿದರೆ ತತ್ಕ್ಷಣ ನಾಶವನ್ನು ಹೊಂದು- ತ್ತಾನೆ.
ಯೋಽತ್ಯಂತಾಚರಿತಾಂ ವೃತ್ತಿಂ ಕ್ಷತ್ರಿಯೋ ನಾನುವರ್ತತೇ |
ಜಿತಾನಾಮಜಿತಾನಾಂ ಚ ಕ್ಷತ್ರಧರ್ಮಾದಪೈತಿ ಸಃ ||5||
ಯಾವ ರಾಜನು ಯುದ್ಧದಲ್ಲಿ ಜಿತರಾದವರ ಮತ್ತು ಜಿತರಾಗದವರ ವಿಷಯದಲ್ಲಿ ಹಿಂದಿನಿಂದ ನಡೆಸಿಕೊಂಡು ಬಂದ ವೃತ್ತಿಯನ್ನು ಅನುಸರಿಸುವು- ದಿಲ್ಲವೋ ಅವನು ಕ್ಷತ್ರಿಯಧರ್ಮದಿಂದ ದೂರನಾಗುತ್ತಾನೆ.
ದ್ವಿಷಂತಂ ಕೃತಕಲ್ಯಾಣಂ ಗೃಹೀತ್ವಾ ನೃಪತೀ ರಣೇ |
ಯೋ ನ ಮಾನಯತೇ ದ್ವೇಷಾತ್ ಕ್ಷತ್ರಧರ್ಮಾದಪೈತಿ ಸಃ ||6||
ತನ್ನ ರಾಜ್ಯದಲ್ಲಿ ಪ್ರಜೆಗಳಿಗೆ ಶುಭವನ್ನು ಮಾಡಿದ ಶತ್ರುರಾಜನನ್ನು ಯುದ್ಧದಲ್ಲಿ ಸೆರೆ ಹಿಡಿದು ಯಾವ ರಾಜನು ದ್ವೇಷದಿಂದ ಅವನನ್ನು ಸತ್ಕರಿಸುವುದಿಲ್ಲವೋ ಅವನು ಕ್ಷತ್ರಿಯಧರ್ಮದಿಂದ ಚ್ಯುತನಾಗುತ್ತಾನೆ.
ಶಕ್ತಃ ಸ್ಯಾತ್ ಸುಮುಖೋ ರಾಜಾ ಕುರ್ಯಾತ್ ಕಾರುಣ್ಯಮಾಪದಿ |
ಪ್ರಿಯೋ ಭವತಿ ಭೂತಾನಾಂ ನ ಚ ವಿಭ್ರಶ್ಯತೇ ಶ್ರಿಯಃ ||7||
ಶಕ್ತನಾದ ರಾಜನು ಪ್ರಸನ್ನಮುಖನಾಗಿರಬೇಕು. ಆಪತ್ತಿನಲ್ಲಿ ಕರುಣೆಯನ್ನು ತೋರಿಸಬೇಕು. ಹಾಗೆ ಮಾಡಿದರೆ ಪ್ರಜೆಗಳಿಗೆ ಪ್ರಿಯನಾಗುತ್ತಾನೆ. ಮತ್ತು ಸಂಪತ್ತಿ- ನಿಂದ ಚ್ಯುತನಾಗುವುದಿಲ್ಲ.
ಅಪ್ರಿಯಂ ಯಸ್ಯ ಕುರ್ವೀತ ಭೂಯಸ್ತಸ್ಯ ಪ್ರಿಯಂ ಚರೇತ್ |
ನಚಿರೇಣ ಪ್ರಿಯಃ ಸ ಸ್ಯಾದ್ ಯೋಽಪ್ರಿಯಃ ಪ್ರಿಯಮಾಚರೇತ್ ||8||
ರಾಜನು ಹಿಂದೆ ಯಾವನಿಗಾದರೂ ಅಪ್ರಿಯವನ್ನು ಮಾಡಿದ್ದರೆ ಪುನಃ ಒಂದು ಒಳ್ಳೆಯ ಸಂದರ್ಭದಲ್ಲಿ ಅವನಿಗೆ ಪ್ರಿಯವನ್ನು ಮಾಡಬೇಕು. ಅಪ್ರಿಯನಿಗೂ ಪ್ರಿಯವನ್ನು ಮಾಡುವ ರಾಜನು ಶೀಘ್ರವಾಗಿ ಅವನಿಗೂ ಪ್ರಿಯನಾಗುತ್ತಾನೆ.
ಮೃಷಾವಾದಂ ಪರಿಹರೇತ್ ಕುರ್ಯಾತ್ ಪ್ರಿಯಮಯಾಚಿತಃ |
ನ ಚ ಕಾಮಾನ್ನ ಸಂರಂಭಾನ್ನ ದ್ವೇಷಾದ್ ಧರ್ಮಮುತ್ಸೃಜೇತ್ ||9||
ರಾಜನು ಸುಳ್ಳಾದ ಆಶ್ವಾಸನೆಗಳನ್ನು ಕೊಡುವುದನ್ನು ವರ್ಜಿಸಬೇಕು. ಪ್ರಾರ್ಥಿ -ತನಾಗದಿದ್ದರೂ ತಾನೇ ತಿಳಿದು ಪ್ರಜೆಗಳಿಗೆ ಹಿತವನ್ನು ಮಾಡಬೇಕು. ಕಾಮ- ದಿಂದಾಗಲೀ, ಕ್ರೋಧದಿಂದಾಗಲೀ, ದ್ವೇಷದಿಂದಾಗಲೀ ಧರ್ಮವನ್ನು ಬಿಡಬಾರದು.
ನಾಪತ್ರಪೇತ ಪ್ರಶ್ನೇಷು ನಾಭಿಭವ್ಯಾಂ ಗಿರಂ ಸೃಜೇತ್ |
ನ ತ್ವರೇತ ನ ಚಾಸೂಯೇತ್ ತಥಾ ಸಂಗೃಹ್ಯತೇ ಪರಃ ||10||
ಪ್ರಶ್ನೆಯನ್ನು ಕೇಳಿದರೆ ಹಿಂಜರಿಯಬಾರದು. ಇನ್ನೊಬ್ಬರು ನಿರಾಕರಿಸುವಂತಹ ಮಾತುಗಳನ್ನಾಡಬಾರದು. ತ್ವರೆಯಿಂದ ಏನನ್ನೂ ಮಾಡಬಾರದು. ಯಾರಲ್ಲೂ ಅಸೂಯೆಯನ್ನು ಮಾಡಬಾರದು. ಹಾಗೆ ಮಾಡಿದರೆ ಪರನು ರಾಜನಿಗೆ ವಶ- ನಾಗುತ್ತಾನೆ.
ಪ್ರಿಯೇ ನಾತಿಭೃಶಂ ಹೃಷ್ಯೇದಪ್ರಿಯೇ ನ ಚ ಸಂಜ್ವರೇತ್ |
ನ ಮುಹ್ಯೇತದರ್ಥಕೃಚ್ಛ್ರೇಷು ಪ್ರಜಾಹಿತಮನುಸ್ಮರನ್ ||11||
ಪ್ರಿಯವುಂಟಾದಾಗ ಬಹಳವಾಗಿ ಸಂತೋಷಪಡಬಾರದು. ಅಪ್ರಿಯವುಂಟಾ- ದಾಗ ವಿಹ್ವಲನಾಗಬಾರದು. ಕಷ್ಟಸಂದರ್ಭಗಳಲ್ಲಿ ಪ್ರಮಾದಕ್ಕೆ ಒಳಗಾಗಬಾರದು. ಪ್ರಜೆಗಳ ಹಿತವನ್ನು ಯಾವಾಗಲೂ ಚಿಂತಿಸಬೇಕು.
ಯಃ ಪ್ರಿಯಂ ಕುರುತೇ ನಿತ್ಯಂ ಗುಣತೋ ವಸುಧಾಧಿಪಃ |
ತಸ್ಯ ಕರ್ಮಾಣಿ ಸಿದ್ಧ್ಯಂತಿ ನ ಚ ಸಂತ್ಯಜ್ಯತೇ ಶ್ರಿಯಾ ||12||

ಯಾವ ರಾಜನು ತನ್ನ ಗುಣಗಳಿಂದ ಪ್ರಜೆಗಳಿಗೆ ನಿತ್ಯವೂ ಪ್ರಿಯವನ್ನು ಮಾಡುತ್ತಾನೆಯೋ ಅವನ ಕಾರ್ಯಗಳು ಸಿದ್ಧಿಸುತ್ತವೆ. ಮತ್ತು ಅವನು ಸಂಪತ್ತಿ- ನಿಂದ ಚ್ಯುತನಾಗುವುದಿಲ್ಲ.
ನಿವೃತ್ತಂ ಪ್ರತಿಕೂಲೇಭ್ಯೋ ವರ್ತಮಾನಮನುಪ್ರಿಯೇ |
ಭಕ್ತಂ ಭಜೇತ ನೃಪತಿಸ್ತದ್ ವೈ ವೃತ್ತಂ ಸತಾಮಿಹ ॥13॥
ತನಗೆ ಪ್ರತಿಕೂಲವನ್ನು ಮಾಡದೇ ತನ್ನ ಪ್ರಿಯದಲ್ಲಿ ನಿರತನಾದ ಅನುರಕ್ತನಾದ ವ್ಯಕ್ತಿಯನ್ನು ರಾಜನು ಆದರಿಸಬೇಕು. ಅದೇ ಸಜ್ಜನರ ನಡೆವಳಿಕೆ.
ಅಪ್ರಕೀರ್ಣೇಂದ್ರಿಯಂ ಪ್ರಾಜ್ಞಮತ್ಯಂತಾನುಗತಂ ಶುಚಿಮ್ |
ಶಕ್ತಂ ಚೈವಾನುರಕ್ತಂ ಚ ಯುಂಜ್ಯಾನ್ಮಹತಿ ಕರ್ಮಣಿ ॥14॥
ಇಂದ್ರಿಯಲೋಲುಪನಲ್ಲದ, ಪ್ರಾಜ್ಞನಾದ, ಅತ್ಯಂತವಾಗಿ ಹಿಂಬಾಲಿಸುವ, ಶುಚಿಯಾದ, ಸಮರ್ಥನಾದ, ಅನುರಾಗವುಳ್ಳ ಪುರುಷನನ್ನು ದೊಡ್ಡ ಕಾರ್ಯದಲ್ಲಿ ನಿಯೋಜಿಸಬೇಕು.
ಏವಮೇವ ಗುಣೈರ್ಯುಕ್ತೋ ಯೋ ನ ರಜ್ಯತಿ ಭೂಮಿಪಮ್ |
ಭರ್ತುರರ್ಥೇಷ್ವಸೂಯಂತಂ ನ ತಂ ಯುಂಜೀತ ಕರ್ಮಣಿ ॥15॥
ಇಂತಹ ಗುಣಗಳನ್ನು ಹೊಂದಿದ್ದರೂ ಯಾವನಿಗೆ ರಾಜನಲ್ಲಿ ಅನುರಾಗ- ವಿಲ್ಲವೋ ರಾಜನ ಸಂಪತ್ತಿನಲ್ಲಿ ಅಸೂಯೆಯನ್ನು ಪಡುತ್ತಾನೆಯೋ ಅಂತಹವನನ್ನು ಕಾರ್ಯಗಳಲ್ಲಿ ನಿಯೋಜಿಸಬಾರದು.
ಮೂಢಮೈಂದ್ರಿಯಕಂ ಲುಬ್ಧಮನಾರ್ಯಚರಿತಂ ಶಠಮ್ |
ಅನತೀತೋಪಧಂ ಹಿಂಸ್ರಂ ದುರ್ಬುದ್ಧಿಮಬಹುಶ್ರುತಮ್ ॥16॥
ತ್ಯಕ್ತೋಪಾಂತಂ ಮದ್ಯಹತಂ ದ್ಯೂತಸ್ತ್ರೀಮೃಗಯಾಪರಮ್ |
ಕಾರ್ಯೇ ಮಹತಿ ಯೋ ಯುಂಜ್ಯಾದ್ ಹೀಯತೇ ಸ ನೃಪಃ ಶ್ರಿಯಃ ॥17॥
ಮೂಢನೂ, ಇಂದ್ರಿಯಲೋಲುಪನೂ, ಲೋಭಿಯೂ, ಅಸಭ್ಯನಡೆವಳಿಕೆ- ಯುಳ್ಳವನೂ, ಶಠನೂ, ವಂಚಕನೂ, ಹಿಂಸಕನೂ, ದುರ್ಬುದ್ಧಿಯೂ, ಬಹು- ಶ್ರುತನಲ್ಲದವನೂ, ರಾಜನ ಸಾಮೀಪ್ಯವನ್ನು ತೊರೆದವನೂ, ಮದ್ಯಪಾನರತನೂ, ದ್ಯೂತ ಸ್ತ್ರೀ ಮತ್ತು ಬೇಟೆಗಳಲ್ಲಿ ರತನಾದವನೂ ಆದವನನ್ನು ರಾಜನು ದೊಡ್ಡ ಕಾರ್ಯಗಳಲ್ಲಿ ನಿಯೋಜಿಸಿದರೆ ತನ್ನ ಸಂಪತ್ತಿನಿಂದ ಚ್ಯುತನಾಗುತ್ತಾನೆ.
ರಕ್ಷಿತಾತ್ಮಾ ತು ಯೋ ರಾಜಾ ರಕ್ಷ್ಯಾನ್ ಯಶ್ಚಾನುರಕ್ಷತಿ |
ಪ್ರಜಾಶ್ಚ ತಸ್ಯ ವರ್ಧಂತೇ ಧ್ರುವಂ ಚ ಮಹದಶ್ನುತೇ ॥18॥
ಯಾವ ರಾಜನು ತನ್ನನ್ನು ರಕ್ಷಿಸಿಕೊಂಡು ರಕ್ಷಿಸಲ್ಪಡಬೇಕಾದ ಪ್ರಜೆಗಳನ್ನು ರಕ್ಷಿಸುತ್ತಾನೆಯೋ ಅವನ ಪ್ರಜೆಗಳು ಅಭಿವೃದ್ಧಿಯನ್ನು ಹೊಂದುತ್ತಾರೆ. ಅವನು ನಿಶ್ಚಯವಾಗಿ ದೊಡ್ಡ ಕಾರ್ಯವನ್ನು ಸಾಧಿಸುತ್ತಾನೆ.
ಯೇ ಕೇಚಿದ್ ಭೂಮಿಪತಯಸ್ತಾನ್ ಸರ್ವಾನನ್ವವೇಕ್ಷಯೇತ್ |
ಸುಹೃದ್ಭಿರನಭಿಖ್ಯಾತೈಸ್ತೇನ ರಾಜಾ ನ ರಿಷ್ಯತೇ ॥19॥
ಸುತ್ತಮುತ್ತಲೂ ಯಾವ ರಾಜರಿದ್ದಾರೆಯೋ ಅಂತಹವರನ್ನು ಅವರಿಗೆ ತಿಳಿ- ಯದಂತೆ ತನ್ನ ಸುಹೃಜ್ಜನರಿಂದ ಅವರ ನಡೆವಳಿಕೆಯನ್ನು ನೋಡಿಕೊಂಡಿರಬೇಕು. ಅಂತಹ ರಾಜನು ಅವನತಿಯನ್ನು ಹೊಂದುವುದಿಲ್ಲ.
ಅಪಕೃತ್ಯ ಬಲಸ್ಥಸ್ಯ ದೂರಸ್ಥೋಽಸ್ಮೀತಿ ನಾಶ್ವಸೇತ್ |
ಶ್ಯೇನಾನುಚರಿತೈರ್ಹ್ಯೇತೇ ನಿಪತಂತಿ ಪ್ರಮಾದ್ಯತಃ ॥20॥
ಬಲಿಷ್ಠನಾದವನಿಗೆ ಅಪಕಾರವನ್ನು ಮಾಡಿ ನಾನು ದೂರದಲ್ಲಿದ್ದೇನೆಂದು ಸಮಾಧಾನದಿಂದಿರಬಾರದು. ಅಂತಹವರು ರಾಜನು ಎಚ್ಚರ ತಪ್ಪಿದರೆ ಹದ್ದುಗಳಂತೆ ಮೇಲೆರಗುತ್ತಾರೆ.
ದೃಢಮೂಲಸ್ತ್ವದುಷ್ಟಾತ್ಮಾ ವಿದಿತ್ವಾ ಬಲಮಾತ್ಮನಃ |
ಅಬಲಾನಭಿಯುಂಜೀತ ನ ತು ಯೇ ಬಲವತ್ತರಾಃ ॥21॥
ತನ್ನ ಮೂಲವನ್ನು ಭದ್ರಮಾಡಿಕೊಂಡು, ದುಷ್ಟಸ್ವಭಾವವನ್ನು ಹೊಂದದೆ ತನ್ನ ಸಾಮರ್ಥ್ಯವನ್ನು ತಿಳಿದುಕೊಂಡು ದುರ್ಬಲನಾದವನ ಮೇಲೆ ದಂಡೆತ್ತಿ ಹೋಗ- ಬೇಕು. ತನಗಿಂತ ಬಲಿಷ್ಠರ ಮೇಲೆ ದಂಡೆತ್ತಿ ಹೋಗಬಾರದು.
ವಿಕ್ರಮೇಣ ಮಹೀಂ ಲಬ್ಧ್ವಾ ಪ್ರಜಾ ಧರ್ಮೇಣ ಪಾಲಯನ್ |
ಆಹವೇ ನಿಧನಂ ಕುರ್ಯಾದ್ ರಾಜಾ ಧರ್ಮಪರಾಯಣಃ ॥22॥
ಧರ್ಮಪರಾಯಣನಾದ ರಾಜನು ಪರಾಕ್ರಮದಿಂದ ಭೂಮಿಯನ್ನು ಸಂಪಾದಿಸಿ, ಪ್ರಜೆಗಳನ್ನು ಧರ್ಮದಿಂದ ಸಂಪಾದಿಸಿ, ಯುದ್ಧದಲ್ಲಿ ಶತ್ರುಗಳನ್ನು ಕೊಂದು ತಾನು ಯುದ್ಧದಲ್ಲಿ ಮೃತನಾಗಬೇಕು.
ಮರಣಾಂತಮಿದಂ ಸರ್ವಂ ನೇಹ ಕಿಂಚಿದನಾಮಯಮ್ |
ತಸ್ಮಾದ್ ಧರ್ಮೇ ಸ್ಥಿತೋ ರಾಜಾ ಪ್ರಜಾ ಧರ್ಮೇಣ ಪಾಲಯೇತ್ ॥23॥
ಎಲ್ಲವೂ ಮರಣದಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿ ದೋಷವಿಲ್ಲದಿರುವ ವಸ್ತು ಯಾವುದೂ ಇಲ್ಲ. ಆದ್ದರಿಂದ ರಾಜನು ಧರ್ಮದಲ್ಲಿ ನೆಲೆಸಿ ಪ್ರಜೆಗಳನ್ನು ಧರ್ಮ- ದಿಂದ ಪಾಲಿಸಬೇಕು.
ರಕ್ಷಾಧಿಕರಣಂ ಯುದ್ಧಂ ತಥಾ ಧರ್ಮಾನುಶಾಸನಮ್ |
ಮಂತ್ರಚಿಂತಾ ಸುಖಂ ಕಾಲೇ ಪಂಚಭಿರ್ವರ್ಧತೇ ಮಹೀ ॥24॥
ರಕ್ಷಣೆಯ ಸ್ಥಾನಗಳು, ಯುದ್ಧ, ಧರ್ಮಪಾಲನೆ, ಮಂತ್ರಾಲೋಚನೆ ಮತ್ತು ಪ್ರಜೆಗಳಿಗೆ ಯೋಗ್ಯವಾದ ಕಾಲದಲ್ಲಿ ಸಾಮರ್ಥ್ಯವಿದ್ದಷ್ಟು ಸುಖವನ್ನುಂಟುಮಾಡು- ವುದು ಈ ಐದರಿಂದ ರಾಜ್ಯವು ಅಭಿವೃದ್ಧಿಯನ್ನು ಹೊಂದುತ್ತದೆ.
ಏತಾನಿ ಯಸ್ಯ ಗುಪ್ತಾನಿ ಸ ರಾಜಾ ರಾಜಸತ್ತಮಃ |

ಸತತಂ ವರ್ತಮಾನೋಽತ್ರ ರಾಜಾ ಭುಂಕ್ತೇ ಮಹೀಮಿಮಾಮ್ ॥25॥
ಯಾವ ರಾಜನಿಗೆ ಇವುಗಳೆಲ್ಲವೂ ಗುಪ್ತವಾಗಿರುತ್ತವೆಯೋ ಅವನು ಶ್ರೇಷ್ಠನಾದ ರಾಜನಾದವನು. ಈ ಐದರಲ್ಲಿ ಸತತವಾಗಿ ನಿರತನಾದ ರಾಜನು ಈ ಭೂಮಿಯನ್ನು ಭೋಗಿಸುತ್ತಾನೆ.
ನೈತಾನ್ಯೇಕೇನ ಶಕ್ಯಾನಿ ಸಾತತ್ಯೇನಾನ್ವವೇಕ್ಷಿತುಮ್ |
ಏತೇಷ್ವಾಪ್ತಾನ್ ಪ್ರತಿಷ್ಠಾಪ್ಯ ರಾಜಾ ಭುಂಕ್ತೇ ಮಹೀಂ ಚಿರಮ್ ॥26॥
ಇವೆಲ್ಲವನ್ನೂ ಒಬ್ಬನೇ ಸತತವಾಗಿ ನೋಡಿಕೊಳ್ಳುವುದು ಸಾಧ್ಯವಿಲ್ಲ. ಈ ಕಾರ್ಯಗಳಲ್ಲಿ ಆಪ್ತರನ್ನು ನಿಯೋಜಿಸಿ, ರಾಜನು ಬಹುಕಾಲದವರೆಗೆ ಭೂಮಿ- ಯನ್ನು ಭೋಗಿಸುತ್ತಾನೆ.
ದಾತಾರಂ ಸಂವಿಭಕ್ತಾರಂ ಮಾರ್ದವೋಪಗತಂ ಶುಚಿಮ್ |
ಅಸಂತ್ಯಕ್ತಮನುಷ್ಯಂ ಚ ತಂ ಜನಾಃ ಕುರ್ವತೇ ಪ್ರಿಯಮ್ ॥27॥
ದಾನವನ್ನು ಮಾಡುವ, ಪ್ರಜೆಗಳಿಗೆ ತನ್ನ ಐಶ್ವರ್ಯವನ್ನು ಹಂಚುವ, ಮೃದು- ವಾದ, ಶುಚಿಯಾದ, ಆಶ್ರಯಿಸಿದವರನ್ನು ತ್ಯಜಿಸದಿರುವ ರಾಜನನ್ನು ಜನರು ಪ್ರೀತಿಸುತ್ತಾರೆ.
ಯಸ್ತು ನಿಶ್ರೇಯಸಂ ಜ್ಞಾತ್ವಾ ಜ್ಞಾನಂ ತತ್ ಪ್ರತಿಪದ್ಯತೇ |
ಆತ್ಮನೋ ಮತಮುತ್ಸೃಜ್ಯ ತಂ ಲೋಕೋಽನುವಿಧೀಯತೇ ॥28॥
ಯಾವನು ಒಳ್ಳೆಯ ಜ್ಞಾನವನ್ನು ಸಂಪಾದಿಸಿ, ತನ್ನ ಹಿತವನ್ನಾದರೂ ತ್ಯಜಿಸಿ, ರಾಜ್ಯಕ್ಕೆ ಶ್ರೇಯಸ್ಸನ್ನು ಉಂಟು ಮಾಡುತ್ತಾನೆಯೋ ಲೋಕವು ಅವನನ್ನು ಅನು- ಸರಿಸುತ್ತದೆ.
ಯೋಽರ್ಥಕಾಮಸ್ಯ ವಚನಂ ಪ್ರಾತಿಕೂಲ್ಯಾನ್ನ ಮೃಷ್ಯತೇ |
ಶೃಣೋತಿ ಪ್ರತಿಕೂಲಾನಿ ವಿಮನಾ ನಚಿರಾದಿವ ॥29॥
ಅಗ್ರಾಮ್ಯಚರಿತಾಂ ಬುದ್ಧಿಮತ್ಯಂತಂ ಯೋ ನ ಬುದ್ಧ್ಯತೇ |
ಜಿತಾನಾಮಜಿತಾನಾಂ ಚ ಕ್ಷತ್ರಧರ್ಮಾದಪೈತಿ ಸಃ ॥30॥
ಯಾವನು ತನ್ನ ಹಿತವನ್ನು ಬಯಸುವವನ ಮಾತುಗಳನ್ನು ಆ ಕಾಲದಲ್ಲಿ ಪ್ರತಿಕೂಲವಾಗಿದೆ ಎಂಬ ಕಾರಣದಿಂದ ಕೇಳಿ ಸಹಿಸುವುದಿಲ್ಲವೋ, ತನಗೆ ಪ್ರತಿಕೂಲವಾದ ತತ್ಕಾಲದಲ್ಲಿ ಹಿತವಾದ ಮಾತುಗಳನ್ನು ಕೇಳುತ್ತಾನೆಯೋ, ಪುರ- ವಾಸಿಗಳ ಉದಾತ್ತವಾದ ಬುದ್ಧಿಯನ್ನು ಯಾವನು ತಿಳಿಯುವುದಿಲ್ಲವೋ, ಪರಾ- ಜಿತರ ಮತ್ತು ಇತರರ ವಿಷಯದಲ್ಲಿ ಯಾವನು ಸರಿಯಾಗಿ ನಡೆದುಕೊಳ್ಳುವು- ದಿಲ್ಲವೋ ಅವನು ಕ್ಷತ್ರಿಯಧರ್ಮದಿಂದ ಚ್ಯುತನಾಗುತ್ತಾನೆ.
ಮುಖ್ಯಾನಮಾತ್ಯಾನ್ ಯೋ ಹಿತ್ವಾ ನಿಹೀನಾನ್ ಕುರುತೇ ಪ್ರಿಯಾನ್ |
ಸ ವೈ ವ್ಯಸನಮಾಸಾದ್ಯ ಗಾಧಮಾರ್ತೋ ನ ವಿಂದತಿ ॥31॥
ಯಾವ ರಾಜನು ಮುಖ್ಯರಾದ ಅಮಾತ್ಯರನ್ನು ಬಿಟ್ಟು ಹೀನರಾದವರನ್ನು ಪ್ರಿಯರನ್ನಾಗಿ ಮಾಡಿಕೊಳ್ಳುತ್ತಾನೆಯೋ ಅವನು ವ್ಯಸನಗಳಿಗೆ ಸಿಲುಕಿ ಯಾವ ನೆಲೆಯನ್ನೂ ಹೊಂದುವುದಿಲ್ಲ.
ಯಃ ಕಲ್ಯಾಣಗುಣಾನ್ ಜ್ಞಾತೀನ್ ದ್ವೇಷಾನ್ನೈವಾಭಿಮನ್ಯತೇ |
ಅದೃಢಾತ್ಮಾ ದೃಢಕ್ರೋಧೋ ನಾಸ್ಯಾರ್ಥೋ ರಮತೇಽಂತಿಕೇ ॥32॥
ಯಾವನು ಚಂಚಲಚಿತ್ತನಾಗಿ, ದೃಢವಾದ ಕೋಪವುಳ್ಳವನಾಗಿ, ಒಳ್ಳೆಯ ಗುಣವನ್ನು ಹೊಂದಿದ ಜ್ಞಾತಿಗಳನ್ನು ದ್ವೇಷದಿಂದ ಸತ್ಕರಿಸುವುದಿಲ್ಲವೋ ಅವನಲ್ಲಿ ಸಂಪತ್ತು ಸಂತೋಷಪಡುವುದಿಲ್ಲ.
ಅಥ ಯೋ ಗುಣಸಂಪನ್ನಾನ್ ಹೃದಯಸ್ಯಾಪ್ರಿಯಾನಪಿ |
ಪ್ರಿಯೇಣ ಕುರುತೇ ವಶ್ಯಾಂಶ್ಚಿರಂ ಯಶಸಿ ತಿಷ್ಠತಿ ॥33॥
ಹಾಗಲ್ಲದೇ ಯಾವನು ಗುಣಸಂಪನ್ನರಾದವರು ತನ್ನ ಮನಸ್ಸಿಗೆ ಅಪ್ರಿಯ- ರಾಗಿದ್ದರೂ ಅವರಿಗೆ ಪ್ರಿಯವನ್ನು ಮಾಡಿ ವಶಪಡಿಸಿಕೊಳ್ಳುತ್ತಾನೆಯೋ ಅಂತಹ- ವನು ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆ.
ನಾಕಾಲೇ ಪ್ರಣಯೇದರ್ಥಾನ್ನಾಪ್ರಿಯೇ ಜಾತು ಸಂಜ್ವರೇತ್ |
ಪ್ರಿಯೇ ನಾತಿಭೃಶಂ ಹೃಷ್ಯೇದ್ ಯುಜ್ಯೇತಾರೋಗ್ಯಕರ್ಮಣಿ ॥34॥
ಅಕಾಲದಲ್ಲಿ ಧನಸಂಗ್ರಹವನ್ನು ಮಾಡಬಾರದು. ಅಪ್ರಿಯವುಂಟಾದಾಗ ವಿಹ್ವಲನಾಗಬಾರದು. ಪ್ರಿಯವುಂಟಾದಾಗ ಬಹಳ ಸಂತೋಷಪಡಬಾರದು. ತನ್ನ ದೇಹದ ಆರೋಗ್ಯವನ್ನು ರಕ್ಷಿಸುವುದರಲ್ಲಿ ನಿರತನಾಗಿರಬೇಕು.
ಕೇ ಚಾನುರಕ್ತಾ ರಾಜಾನಃ ಕೇ ಭಯಾತ್ ಸಮುಪಾಶ್ರಿತಾಃ |
ಮಧ್ಯಸ್ಥದೋಷಾಃ ಕೇ ಚೈಷಾಮಿತಿ ನಿತ್ಯಂ ವಿಚಿಂತಯೇತ್ ॥35॥
ನನ್ನಲ್ಲಿ ಅನುರಾಗ ಹೊಂದಿರುವ ರಾಜರು ಯಾರು? ಭಯದಿಂದ ನನ್ನನ್ನು ಆಶ್ರಯಿಸಿರುವವರು ಯಾರು? ಅವರಲ್ಲಿ ತಟಸ್ಥರಾದವರು ಯಾರು? ಅವರ ದೋಷಗಳೇನು? ಎಂದು ನಿತ್ಯವೂ ಚಿಂತಿಸಬೇಕು.
ನ ಜಾತು ಬಲವಾನ್ ಭೂತ್ವಾ ದುರ್ಬಲೇ ವಿಶ್ವಸೇತ್ ಕ್ವಚಿತ್ |
ಭಾರುಂಡಸದೃಶಾ ಹ್ಯೇತೇ ನಿಪತಂತಿ ಪ್ರಮಾದ್ಯತಃ ॥36॥
ತಾನು ಬಲಿಷ್ಠನಾಗಿದ್ದೇನೆಂದು ತಿಳಿದು ದುರ್ಬಲರು ನನಗೆ ಅಪಾಯಕಾರಿ- ಗಳಲ್ಲವೆಂಬ ವಿಶ್ವಾಸದಿಂದ ಇರಬಾರದು. ಅಂತಹವರು ಭೇರುಂಡಪಕ್ಷಿಗೆ ಸದೃಶ- ರಾದವರು. ಪ್ರಮಾದ ಮಾಡಿದರೆ ರಾಜನ ಮೇಲೆ ಎರಗುತ್ತಾರೆ.
ಅಪಿ ಸರ್ವೈರ್ಗುಣೈರ್ಯುಕ್ತಂ ಭರ್ತಾರಂ ಪ್ರಿಯವಾದಿನಮ್ |
ಅಭಿದ್ರುಹ್ಯತಿ ಪಾಪಾತ್ಮಾ ನ ತಸ್ಮಾದ್ ವಿಶ್ವಸೇಜ್ಜನಾನ್ ॥37॥
ತಮ್ಮ ಸ್ವಾಮಿಯು ಎಲ್ಲ ಗುಣಗಳಿಂದ ಕೂಡಿದ್ದರೂ ಪ್ರಿಯವಚನನಾಗಿದ್ದರೂ ಪಾಪಾತ್ಮನಾದವನು ಅವನಿಗೆ ದ್ರೋಹವನ್ನು

ಮಾಡುತ್ತಾನೆ. ಆದ್ದರಿಂದ ಅಂತಹ ಜನರಲ್ಲಿ ವಿಶ್ವಾಸವನ್ನು ಮಾಡಬಾರದು.
ಏತಾಂ ರಾಜೋಪನಿಷದಂ ಯಯಾತಿಃ ಸ್ಮಾಹ ನಾಹುಷಃ |
ಮನುಷ್ಯವಿಜಯೇ ಯುಕ್ತೋ ಹಂತಿ ಶತ್ರೂನನುತ್ತಮಾನ್ ॥38॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚನವತಿತಮೋಽಧ್ಯಾಯಃ ॥95॥
ನಹುಷಪುತ್ರನಾದ ಯಯಾತಿಯು ಹೇಳಿದ ರಾಜರಹಸ್ಯಗಳನ್ನು ತಿಳಿದು ಅದನ್ನು ಅನುಷ್ಠಾನ ಮಾಡುವ ಮನುಷ್ಯವಿಜಯದಲ್ಲಿ ನಿರತನಾದ ರಾಜನು ತನ್ನ ಶ್ರೇಷ್ಠರಾದ ಶತ್ರುಗಳನ್ನು ವಿನಾಶಗೊಳಿಸುತ್ತಾನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 95ನೆಯ ಅಧ್ಯಾಯವು ಮುಗಿಯಿತು
0
96. ತೊಂಬತ್ತಾರನೆಯ ಅಧ್ಯಾಯ
ವಾಮದೇವವಸುಮನಸ್ ಸಂವಾದ
ವಾಮದೇವಃ
ಅಯುದ್ಧೇನೈವ ವಿಜಯಂ ವರ್ಧಯೇದ್ ವಸುಧಾಧಿಪಃ |
ಜಘನ್ಯಮಾಹುರ್ವಿಜಯಂ ಯೋ ಯುದ್ಧೇನ ನರಾಧಿಪ ॥1॥
ವಾಮದೇವ ಎಲೈ ನರಾಧಿಪನೇ! ರಾಜನು ಯುದ್ಧವನ್ನು ಮಾಡದೆಯೇ ವಿಜಯವನ್ನು ಸಂಪಾದಿಸಬೇಕು. ಯುದ್ಧದಿಂದ ಸಂಪಾದಿಸಿದ ವಿಜಯವು ಹೀನ- ವಾದುದೆಂದು ಹೇಳುತ್ತಾರೆ.
ನ ಚಾಪ್ಯಲಬ್ಧೇ ಲಿಪ್ಸೇತ ಮೂಲೇ ನಾತಿದೃಢೇ ಸತಿ |
ನ ಹಿ ದುರ್ಬಲಮೂಲಸ್ಯ ರಾಜ್ಞೋ ಲಾಭೋ ವಿಧೀಯತೇ ॥2॥
ತನ್ನ ಮೂಲವು (ಅತಿ)ದೃಢವಿಲ್ಲದಿದ್ದಾಗ ತಾನು ಪಡೆಯದಿದ್ದುದನ್ನು ಪಡೆ- ಯಲು ಆಸೆ ಪಡಬಾರದು. ರಾಜನ ಮೂಲವು ದುರ್ಬಲವಾಗಿದ್ದಾಗ ಅವನಿಗೆ ಯಾವ ಲಾಭವೂ ಉಂಟಾಗುವುದಿಲ್ಲ.
ಯಸ್ಯ ಸ್ಫೀತೋ ಜನಪದಃ ಸಂಪನ್ನಃ ಪ್ರಿಯರಾಜಕಃ |
ಸಂತುಷ್ಟಪುಷ್ಟಸಚಿವೋ ದೃಢಮೂಲಃ ಸ ಪಾರ್ಥಿವಃ ॥3॥
ಯಾವ ರಾಜನ ದೇಶವು ಸಮೃದ್ಧಿಯಿಂದ ಕೂಡಿರುತ್ತದೆಯೋ, ಸಂಪತ್ತಿನಿಂದ ಕೂಡಿರುತ್ತದೆಯೋ, ರಾಜ್ಯದಲ್ಲಿ ಪ್ರಜೆಗಳು ಪ್ರಿಯರಾಗಿರುತ್ತಾರೆಯೋ, ಸಚಿವರು ಸಂತೋಷ ಮತ್ತು ಪುಷ್ಟಿಗಳಿಂದ ಕೂಡಿರುತ್ತಾರೆಯೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ.
ಯಸ್ಯ ಯೋಧಾಃ ಸುಸಂತುಷ್ಟಾಃ ಸಾಂತ್ವಿತಾಃ ಸೂಪವಾಸಿತಾಃ |
ಅಲ್ಪೇನಾಪಿ ಸ ದಂಡೇನ ಮಹೀಂ ಜಯತಿ ಭೂಮಿಪಃ ॥4॥
ಯಾವ ರಾಜನು ತನ್ನ ಯೋಧರನ್ನು ತನ್ನ ಸಮೀಪದಲ್ಲಿ ಇರಿಸಿಕೊಂಡು, ಅವರಿಗೆ ಸಾಂತ್ವನವನ್ನು ಹೇಳಿ ಸಂತೋಷಪಡಿಸುತ್ತಾನೆಯೋ ಅಂತಹ ರಾಜನು ಅಲ್ಪಸೈನ್ಯದಿಂದಲೇ ಭೂಮಿಯನ್ನು ಜಯಿಸುತ್ತಾನೆ.
ಪೌರಜಾನಪದಾ ಯಸ್ಯ ಸ್ವನುರಕ್ತಾಃ ಸುಪೂಜಿತಾಃ |
ಸಧನಾ ಧಾನ್ಯವಂತಶ್ಚ ದೃಢಮೂಲಃ ಸ ಪಾರ್ಥಿವಃ ॥5॥
ಯಾವ ರಾಜನ ಪೌರರು ಮತ್ತು ಜಾನಪದರು ರಾಜನಿಂದ ಚೆನ್ನಾಗಿ ಪೂಜಿತ- ರಾಗಿ ರಾಜನಲ್ಲಿ ಬಹಳ ಅನುರಕ್ತರಾಗಿ ಧನಧಾನ್ಯದಿಂದ ಕೂಡಿರುತ್ತಾರೆಯೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ.
ರಾಷ್ಟ್ರಕರ್ಮಕರಾ ಹ್ಯೇತೇ ರಾಷ್ಟ್ರಸ್ಯ ಚ ವಿರೋಧಿನಃ |
ದುರ್ವಿನೀತಾ ವಿನೀತಾಶ್ಚ ಸರ್ವೇ ಸಾಧ್ಯಾಃ ಪ್ರಯತ್ನತಃ ॥6॥
ಚಂಡಾಲಮ್ಲೇಚ್ಛಜಾತ್ಯಾಶ್ಚ ಪಾಷಂಡಾಶ್ಚ ವಿಕರ್ಮಿಣಃ |
ಬಲಿನಶ್ಚಾಶ್ರಮಾಶ್ಚೈವ ತಥಾ ಗಾಯಕನರ್ತಕಾಃ ॥7॥
ಪೌರಜಾನಪದರು ವಿನೀತರಾದರೆ ರಾಷ್ಟ್ರದ ಏಳಿಗೆಯನ್ನುಂಟು ಮಾಡುತ್ತಾರೆ. ದುರ್ವಿನೀತರಾದರೆ ರಾಷ್ಟ್ರದ ವಿರೋಧಿಗಳಾಗುತ್ತಾರೆ. ಚಂಡಾಲರು ಮ್ಲೇಚ್ಛ- ಜಾತಿಯವರು, ಪಾಷಂಡರು, ದುಷ್ಕರ್ಮಗಳನ್ನು ಮಾಡುವವರು, ಬಲಿಷ್ಠರಾ- ದವರು, ಆಶ್ರಮವಾಸಿಗಳು, ಗಾಯಕರು, ನರ್ತಕರು ಇವರೆಲ್ಲರನ್ನೂ ರಾಜನು ಪ್ರಯತ್ನಪೂರ್ವಕವಾಗಿ ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳಬೇಕು.
ಪ್ರಭಾವಕಾಲಾವಧಿಕೌ ಯದಾ ಮನ್ಯೇತ ಚಾತ್ಮನಃ |
ತದಾ ಲಿಪ್ಸೇತ ಮೇಧಾವೀ ಪರಭೂಮಿಂ ಧನಾನ್ಯುತ ॥8॥
ತನ್ನ ಸಾಮರ್ಥ್ಯ ಮತ್ತು ಕಾಲ ಎರಡೂ ಶ್ರೇಷ್ಠವಾಗಿದೆಯೆಂದು ತಿಳಿದಾಗ ಮೇಧಾವಿಯಾದ ರಾಜನು ಶತ್ರುರಾಜರ ಭೂಮಿಯನ್ನು ಮತ್ತು ಧನವನ್ನೂ ಪಡೆ- ಯಲು ಪ್ರಯತ್ನಿಸಬೇಕು.
ಭೋಗೇಷ್ವದಯಮಾನಸ್ಯ ಭೂತೇಷು ಚ ದಯಾವತಃ |
ವರ್ಧತೇ ತ್ವರಮಾಣಸ್ಯ ವಿಷಯೋ ರಕ್ಷಿತಾತ್ಮನಃ ॥9॥
ಭೋಗಗಳಲ್ಲಿ ಆಸಕ್ತನಾಗದೇ, ಎಲ್ಲ ಪ್ರಜೆಗಳಲ್ಲಿ ದಯೆಯನ್ನು ತೋರಿಸಿ, ತನ್ನನ್ನು ರಕ್ಷಿಸಿಕೊಂಡು, ಶೀಘ್ರವಾಗಿ ಕಾರ್ಯವನ್ನು ಮಾಡುವವನ ದೇಶವು ಅಭಿವೃದ್ಧಿಯನ್ನು ಹೊಂದುತ್ತದೆ.
ತಕ್ಷತ್ಯಾತ್ಮಾನಮೇವೈಷ ವನಂ ಪರಶುನಾ ಯಥಾ |
ಯಃ ಸಮ್ಯಗ್ ವರ್ತಮಾನೇಷು ಸ್ವೇಷು ಮಿಥ್ಯಾ ಪ್ರವರ್ತತೇ ॥10॥

ಯಾವ ರಾಜನು ಸರಿಯಾಗಿ ನಡೆದುಕೊಳ್ಳುವ ತನ್ನ ಪ್ರಜೆಗಳಲ್ಲಿ ಸುಳ್ಳಿನಿಂದ ವರ್ತಿಸುತ್ತಾನೆಯೋ ಅವನು ಕೊಡಲಿಯಿಂದ ಕಾಡನ್ನು ಕಡಿದಂತೆ ತನ್ನನ್ನು ತಾನೇ ಕಡಿದುಕೊಳ್ಳುತ್ತಾನೆ.
ನ ವೈ ದ್ವಿಷಂತಃ ಕ್ಷೀಯಂತೇ ರಾಜ್ಞೋ ನಿತ್ಯಮಪಿ ಘ್ನತಃ |
ಕ್ರೋಧಂ ನಿಯಂತುಂ ಯೋ ವೇದ ತಸ್ಯ ದ್ವೇಷ್ಟಾ ನ ವಿದ್ಯತೇ ॥11॥
ನಿತ್ಯವೂ ಪ್ರಜೆಗಳನ್ನು ಹಿಂಸಿಸುವ ರಾಜನಿಗೆ ದ್ವೇಷಿಗಳ ಸಂಖ್ಯೆಯು ಕಡಿಮೆ- ಯಾಗುವುದಿಲ್ಲ. ಯಾವ ರಾಜನು ತನ್ನ ಕ್ರೋಧವನ್ನು ನಿಯಂತ್ರಿಸಿಕೊಳ್ಳಲು ತಿಳಿದಿ- ರುತ್ತಾನೆಯೋ ಅವನಿಗೆ ದ್ವೇಷಿಯು ಇರುವುದಿಲ್ಲ.
ಯದಾರ್ಯಜನವಿದ್ವಿಷ್ಟಂ ಕರ್ಮ ತನ್ನಾಚರೇದ್ ಬುಧಃ |
ಯತ್ ಕಲ್ಯಾಣಮಭಿಧ್ಯಾಯೇತ್ ತತ್ರಾತ್ಮಾನಂ ನಿಯೋಜಯೇತ್ ॥12॥
ಯಾವುದು ಆರ್ಯಜನರಿಂದ ನಿಂದಿತವಾದುದೋ ವಿವೇಕಿಯಾದವನು ಅಂತಹ ಕಾರ್ಯವನ್ನು ಮಾಡಬಾರದು. ಯಾವುದು ಶುಭಕರ್ಮವೆಂದು ತೋರು- ತ್ತದೆಯೋ ಅಂತಹ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು.
ನೈನಮನ್ಯೇಽವಜಾನಂತಿ ನಾತ್ಮನಾ ಪರಿತಪ್ಯತೇ |
ಕೃತ್ಯಶೇಷೇಣ ಯೋ ರಾಜಾ ಸುಖಾನ್ಯನುಬುಭೂಷತಿ ॥13॥
ಯಾವ ರಾಜನು ಎಲ್ಲಾ ಕಾರ್ಯಗಳನ್ನು ಮಾಡಿ ಸುಖವನ್ನು ಅನುಭವಿಸಲು ಬಯಸುತ್ತಾನೆಯೋ ಅಂತಹ ರಾಜನು ತಾನೂ ಪಶ್ಚಾತ್ತಾಪ ಪಡುವುದಿಲ್ಲ. ಪ್ರಜೆ- ಗಳೂ ಅವನನ್ನು ಅವಮಾನ ಮಾಡುವುದಿಲ್ಲ.
ಇದಂ ವೃತ್ತಂ ಮನುಷ್ಯೇಷು ವರ್ತತೇ ಯೋ ಮಹೀಪತಿಃ |
ಉಭೌ ಲೋಕೌ ವಿನಿರ್ಜಿತ್ಯ ವಿಜಯೇ ಸಂಪ್ರತಿತಿಷ್ಠತೇ ॥14॥
ಯಾವ ರಾಜನು ಪ್ರಜೆಗಳಲ್ಲಿ ಇಂತಹ ನಡತೆಯನ್ನು ಪ್ರವರ್ತಿಸುತ್ತಾನೆಯೋ, ಅಂತಹವನು ಇಹಲೋಕ ಮತ್ತು ಪರಲೋಕಗಳನ್ನು ಗೆದ್ದು ವಿಜಯದಲ್ಲಿ ಪ್ರತಿ- ಷ್ಠಿತನಾಗುತ್ತಾನೆ.
ಭೀಷ್ಮಃ
ಇತ್ಯುಕ್ತೋ ವಾಮದೇವೇನ ಸರ್ವಂ ತತ್ ಕೃತವಾನ್ ನೃಪಃ |
ತಥಾ ಕುರ್ವಂಸ್ತ್ವಮಪ್ಯೇತೌ ಲೋಕೌ ಜೇತಾ ನ ಸಂಶಯಃ ॥15॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಣ್ಣವತಿತಮೋಽಧ್ಯಾಯಃ ॥96॥
ಭೀಷ್ಮರು ಹೀಗೆ ವಾಮದೇವಋಷಿಗಳಿಂದ ಹೇಳಲ್ಪಟ್ಟ ವಸುಮನಸ್ ರಾಜನು ಎಲ್ಲವನ್ನೂ ಹಾಗೆಯೇ ಮಾಡಿದನು. ನೀನೂ ಸಹ ಹಾಗೆಯೇ ಮಾಡಿ ಎರಡು ಲೋಕಗಳನ್ನೂ ಜಯಿಸುವುದರಲ್ಲಿ ಸಂಶಯವಿಲ್ಲ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 96ನೆಯ ಅಧ್ಯಾಯವು ಮುಗಿಯಿತು.
0
97. ತೊಂಬತ್ತೇಳನೆಯ ಅಧ್ಯಾಯ
ಯುಧಿಷ್ಠಿರಃ
ಅಥ ಯೋ ವಿಜಿಗೀಷೇತ ಕ್ಷತ್ರಿಯಃ ಕ್ಷತ್ರಿಯಂ ಯುಧಿ |
ಕಸ್ತಸ್ಯ ಧರ್ಮ್ಯೋ ವಿಜಯ ಏತತ್ ಪೃಷ್ಟೋ ಬ್ರವೀಹಿ ಮೇ ॥1॥
ಯುಧಿಷ್ಠಿರ ಒಬ್ಬ ಕ್ಷತ್ರಿಯನು ಇನ್ನೊಬ್ಬ ಕ್ಷತ್ರಿಯನನ್ನು ಯುದ್ಧದಲ್ಲಿ ಗೆಲ್ಲಲು ಬಯಸಿದರೆ ಧರ್ಮಾನುಗುಣವಾದ ವಿಜಯವು ಯಾವುದು ಎಂಬ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳು.
ಭೀಷ್ಮಃ
ಸಸಹಾಯೋಽಸಹಾಯೋ ವಾ ರಾಷ್ಟ್ರಮಾಗಮ್ಯ ಭೂಮಿಪಃ |
ಬ್ರೂಯಾದಹಂ ವೋ ರಾಜೇತಿ ರಕ್ಷಿಷ್ಯಾಮಿ ಚ ವಃ ಸದಾ ॥2॥
ಭೀಷ್ಮರು ಸಹಾಯಸಹಿತನಾಗಲೀ ಸಹಾಯರಹಿತನಾಗಲೀ ರಾಜನು ಪರರಾಷ್ಟ್ರಕ್ಕೆ ಬಂದು ನಾನು ನಿಮ್ಮ ರಾಜ, ಯಾವಾಗಲೂ ನಿಮ್ಮನ್ನು ರಕ್ಷಿಸುವೆನು ಎಂದು ಹೇಳಬೇಕು.
ಮಮ ಧರ್ಮ್ಯಂ ಬಲಿಂ ದತ್ತ ಕಿಂ ವಾ ಮಾಂ ಪ್ರತಿಪತ್ಸ್ಯಥ |
ತೇ ಚೇತ್ ತಮಾಗತಂ ತತ್ರ ವೃಣುಯುಃ ಕುಶಲಂ ಭವೇತ್ ॥3॥
ನನಗೆ ನ್ಯಾಯಯುಕ್ತವಾದ ಕಪ್ಪವನ್ನು ಕೊಡಿ; ನನ್ನನ್ನು ಹೇಗೆ ಭಾವಿಸುತ್ತೀರಿ ಎಂದು ಕೇಳಬೇಕು. ಅಲ್ಲಿಗೆ ಬಂದ ರಾಜನನ್ನು ಅವರು ಸ್ವೀಕರಿಸಿದರೆ ಎಲ್ಲವೂ ಕ್ಷೇಮವಾಗುತ್ತದೆ.
ತೇ ಚೇದಕ್ಷತ್ರಿಯಾಃ ಸಂತೋ ವಿರುಧ್ಯೇಯುಃ ಕಥಂಚನ |
ಸರ್ವೋಪಾಯೈರ್ನಿಯಂತವ್ಯಾ ವಿಕರ್ಮಸ್ಥಾ ನರಾಧಿಪ ॥4॥
ಎಲೈ ನರಾಧಿಪನೇ! ಅವರು ಕ್ಷತ್ರಿಯಧರ್ಮವನ್ನು ತಿಳಿಯದೇ ವಿರೋಧವನ್ನು ಮಾಡಿದರೆ ಎಲ್ಲ ಉಪಾಯಗಳಿಂದಲೂ ವಿಕರ್ಮಸ್ಥರಾದ ಅವರನ್ನು ನಿಯಂತ್ರಿಸ- ಬೇಕು.
ಅಶಕ್ತಂ ಕ್ಷತ್ರಿಯಂ ಮತ್ವಾ ಶಸ್ತ್ರಂ ಗೃಹ್ಣಾತ್ಯಥಾಪರಃ |
ತ್ರಾಣಾಯಾಪ್ಯಸಮರ್ಥಂ ತಂ ಮನ್ಯಮಾನಮತೀವ ಚ ॥5॥
ಆ ಕ್ಷತ್ರಿಯನು ತನ್ನ ರಾಜ್ಯವನ್ನು ರಕ್ಷಣೆ ಮಾಡಲು ಅಸಮರ್ಥನಾಗಿ ಅಶಕ್ತ- ನಾಗಿದ್ದಾನೆಂದು ತಿಳಿದು ಇನ್ನೊಬ್ಬ ಕ್ಷತ್ರಿಯನು ಅವನ ವಿರುದ್ಧವಾಗಿ ಶಸ್ತ್ರವನ್ನು ಹಿಡಿಯುತ್ತಾನೆ.

ಯುಧಿಷ್ಠಿರಃ
ಅಥ ಯಃ ಕ್ಷತ್ರಿಯೋ ರಾಜಾ ಕ್ಷತ್ರಿಯಂ ಪ್ರತ್ಯುಪಾವ್ರಜೇತ್ |
ಕಥಂ ಸ ಪ್ರತಿಯೋದ್ಧವ್ಯಸ್ತನ್ಮೇ ಬ್ರೂಹಿ ಪಿತಾಮಹ ||6||
ಯುಧಿಷ್ಠಿರ ಒಬ್ಬ ಕ್ಷತ್ರಿಯರಾಜನು ಇನ್ನೊಬ್ಬ ಕ್ಷತ್ರಿಯರಾಜನ ಜೊತೆಯಲ್ಲಿ ಯುದ್ಧವನ್ನು ಮಾಡಬೇಕಾದರೆ, ಎಲೈ ಪಿತಾಮಹನೇ! ಹೇಗೆ ಯುದ್ಧವನ್ನು ಮಾಡ- ಬೇಕೆಂದು ಹೇಳು.
ಭೀಷ್ಮಃ
ನಾಸನ್ನದ್ಧೋ ನಾಕವಚೋ ಯೋದ್ಧವ್ಯಃ ಕ್ಷತ್ರಿಯೋ ರಣೇ |
ಏಕ ಏಕೇನ ವಾಚ್ಯಶ್ಚ ವಿಸೃಜಸ್ವ ಕ್ಷಿಪಾಮಿ ಚ ||7||
ಭೀಷ್ಮರು ಶಸತ್ರುದಿ ಸನ್ನಾಹವಿಲ್ಲದೇ ಕವಚವನ್ನು ಧರಿಸದೇ ಕ್ಷತ್ರಿಯನು ಯುದ್ಧ ಮಾಡಬಾರದು. ಒಬ್ಬನು ಶತ್ರುವಾದ ಒಬ್ಬನನ್ನು ಕುರಿತು ನನಗೆ ಬಾಣಪ್ರಯೋಗ ವನ್ನು ಮಾಡು; ನಾನು ನಿನಗೆ ಪ್ರಹಾರ ಮಾಡುತ್ತೇನೆ ಎಂದು ಹೇಳಬೇಕು.
ಸ ಚೇತ್ ಸನ್ನದ್ಧ ಆಗಚ್ಛೇತ್ ಸನ್ನದ್ಧವ್ಯಂ ತತೋ ಭವೇತ್ |
ಸ ಚೇತ್ ಸಸೈನ್ಯ ಆಗಚ್ಛೇತ್ ಸಸೈನ್ಯಸ್ತಮಥಾಹ್ವಯೇತ್ ||8||
ಶತ್ರುವು ಸನ್ನದ್ಧನಾಗಿಯೇ ಬಂದ ಅನಂತರ ತಾನೂ ಸನ್ನದ್ಧನಾಗಬೇಕು. ಶತ್ರುವು ಸೈನ್ಯಸಹಿತನಾಗಿ ಬಂದರೆ ತಾನೂ ಸೈನ್ಯಸಹಿತನಾಗಿ ಅವನನ್ನು ಆಹ್ವಾನಿಸಬೇಕು.
ಸ ಚೇನ್ನಿಕೃತ್ಯಾ ಯುದ್ಧ್ಯೇತ ನಿಕೃತ್ಯಾ ತಂ ಪ್ರಯೋಧಯೇತ್ |
ಅಥ ಚೇದ್ ಧರ್ಮತೋ ಯುದ್ಧ್ಯೇದ್ ಧರ್ಮೇಣೈವ ನಿವಾರಯೇತ್ ||9
ಅವನು ಮೋಸದಿಂದ ಯುದ್ಧಮಾಡಿದರೆ ಮೋಸದಿಂದಲೇ ಅವನ ಜೊತೆ- ಯಲ್ಲಿ ಯುದ್ಧಮಾಡಬೇಕು. ಅದನ್ನು ಬಿಟ್ಟು ಧರ್ಮಯುದ್ಧವನ್ನು ಮಾಡಿದರೆ ಧರ್ಮಯುದ್ಧದಿಂದಲೇ ಅವನನ್ನು ತಡೆಯಬೇಕು.
ನಾಶ್ವೇನ ರಥಿನಂ ಯಾಯಾದುದಿಯಾದ್ ರಥಿನಂ ರಥೀ |
ವ್ಯಸನೇ ನ ಪ್ರಹರ್ತವ್ಯಂ ನ ಭೀತಾಯ ಜಿತಾಯ ಚ ||10||
ಅಶ್ವದಿಂದ ರಥಿಕನ ಮೇಲೆ ಎರಗಬಾರದು; ರಥಿಕನು ರಥಿಕನ ಮೇಲೆ ಹೋಗಬೇಕು. ಸಂಕಟಕ್ಕೆ ಒಳಗಾದ ಭೀತನಾದ ಪರಾಜಿತನಾದ ಶತ್ರುವಿಗೆ ಪ್ರಹಾರ ಮಾಡಬಾರದು.
ನೇಷುರ್ಲಿಪ್ತೋ ನ ಕರ್ಣೀ ಸ್ಯಾದಸತಾಮೇತದಾಯುಧಮ್ |
ಜಯಾರ್ಥಮೇವ ಯೋದ್ಧವ್ಯಂ ನ ಕ್ರುದ್ಧ್ಯೇದಜಿಘಾಂಸತಃ ||11||
ವಿಷಲಿಪ್ತವಾದ ಬಾಣಗಳನ್ನು, ಮೋಸದ ಬಾಣಗಳನ್ನು ಉಪಯೋಗಿಸ- ಬಾರದು. ಇದು ಅಸಜ್ಜನರ ಆಯುಧ. ಜಯವನ್ನು ಪಡೆಯುವ ಸಲುವಾಗಿಯೇ ಯುದ್ಧವನ್ನು ಮಾಡಬೇಕು. ಪ್ರಹಾರವನ್ನು ಮಾಡದಿರುವವನ ಮೇಲೆ ಕೋಪ- ಗೊಳ್ಳಬಾರದು.
ನಾಸ್ತ್ಯೇಕಸ್ಯ ಗಜೋ ಯುದ್ಧೇ ಗಜಶ್ಚೈಕಸ್ಯ ವಿದ್ಯತೇ |
ನ ಪದಾತಿರ್ಗಜಂ ಯುದ್ಧ್ಯೇನ್ನ ಗಜೇನ ಪದಾತಿನಮ್ ||12||
ಹಸ್ತಿನಾ ಯೋಧಯೇನ್ನಾಗಂ ಕದಾಚಿಚ್ಛಿಕ್ಷಿತೋ ಹಯಮ್ |
ದಿವ್ಯಾಸ್ತ್ರಬಲಸಂಪನ್ನಃ ಕಾಮಂ ಯುದ್ಧ್ಯೇತ ಸರ್ವದಾ ||13||
ನಾಗೇ ಭೂಮೌ ಸಮೇ ಚೈವ ರಥೇನಾಶ್ವೇನ ವಾ ಪುನಃ |
ರಾಮರಾವಣಯೋರ್ಯುದ್ಧೇ ಹರಯೋ ವೈ ಪದಾತಯಃ ||14||
ಲಕ್ಷ್ಮಣಶ್ಚ ಮಹಾಭಾಗಸ್ತಥಾ ರಾಜನ್ ವಿಭೀಷಣಃ |
ಒಬ್ಬನೇ ಯುದ್ಧವನ್ನು ಮಾಡುವಾಗ ಗಜಾರೋಹಿಯಾಗಿ ಯುದ್ಧವನ್ನು ಮಾಡಬಾರದು. ಪದಾತಿಯು ಗಜಾರೋಹಿಯ ಜೊತೆಯಲ್ಲಿ ಯುದ್ಧವನ್ನು ಮಾಡ -ಬಾರದು. ಗಜಾರೋಹಿಯು ಪದಾತಿಯ ಜೊತೆಯಲ್ಲಿ ಯುದ್ಧವನ್ನು ಮಾಡ- ಬಾರದು. ಗಜಾರೋಹಿಯು ಗಜಾರೋಹಿಯ ಜೊತೆಯಲ್ಲಿಯೇ ಯುದ್ಧವನ್ನು ಮಾಡಬೇಕು. ಚೆನ್ನಾಗಿ ಯುದ್ಧಶಿಕ್ಷಿತನಾಗಿದ್ದರೆ ಅಶ್ವಾರೋಹಿಯ ಜೊತೆಯಲ್ಲೂ ಯುದ್ಧವನ್ನು ಮಾಡಬಹುದು. ದಿವ್ಯಾಸ್ತ್ರಬಲದಿಂದ ಕೂಡಿದವನು ಮಾತ್ರ ತನ್ನ ಇಷ್ಟಬಂದಂತೆ (ತಾನು ಪದಾತಿಯಾಗಿದ್ದರೂ) ಅಶ್ವಾರೋಹಿಯ ಜೊತೆಯ- ಲ್ಲಾಗಲೀ ಸಮವಾದ ಭೂಮಿಯಲ್ಲಾಗಲೀ ರಥಿಕನ ಜೊತೆಯಲ್ಲಾಗಲೀ ಅಶ್ವಾರೋಹಿಯ ಜೊತೆಯಲ್ಲಾಗಲೀ ಯುದ್ಧವನ್ನು ಮಾಡಬಹುದು. ರಾಮ- ರಾವಣರ ಯುದ್ಧದಲ್ಲಿ ಕಪಿಗಳೂ, ಮಹಾನುಭಾವನಾದ ಲಕ್ಷ್ಮಣನೂ ಮತ್ತು ವಿಭೀಷಣನೂ ಪದಾತಿಗಳಾಗಿದ್ದರು.
ರಾವಣಸ್ಯಾಂತಕಾಲೇ ಚ ರಥೇನೈಂದ್ರೇಣ ರಾಘವಃ |
ನಿಜಘಾನ ದುರಾಚಾರಂ ರಾವಣಂ ಪಾಪಕಾರಿಣಮ್ ||15||
ರಾವಣನ ಅವಸಾನಕಾಲದಲ್ಲಿ ರಾಮನು ಇಂದ್ರನು ಕಳುಹಿಸಿದ ರಥದಲ್ಲಿ ಕುಳಿತು ದುರಾಚಾರಿಯೂ ಪಾಪಕರ್ಮವನ್ನು ಮಾಡುವವನೂ ಆದ ರಾವಣನನ್ನು ಸಂಹರಿಸಿದನು.
ದಿವ್ಯಾಸ್ತ್ರಬಲಸಂಪನ್ನೇ ಸರ್ವಮೇತದ್ ವಿಧೀಯತೇ |
ದೇವಾಸುರೇಷು ಯುದ್ಧೇಷು ದೃಷ್ಟಮೇತತ್ ಪುರಾತನೇ ||16||
ದಿವ್ಯಾಸ್ತ್ರಬಲದಿಂದ ಕೂಡಿದವನಿಗೆ ಎಲ್ಲವೂ ವಿಹಿತವಾಗುತ್ತದೆ. ಇಂತಹ ಪ್ರಸಂಗಗಳು ಪುರಾತನವಾದ ದೇವಾಸುರಯುದ್ಧಗಳಲ್ಲಿ ಕಂಡುಬರುತ್ತವೆ.
ಸಾಧೂನಾಂ ತು ಮಿಥೋ ಭೇದಾತ್ ಸಾಧುಶ್ಚೇದ್ ವ್ಯಸನೀ ಭವೇತ್ |
ಸವ್ರಣೋ ನಾಭಿಹಂತವ್ಯೋ ನಾನಪತ್ಯಃ ಕಥಂಚನ ||17||

ಇಬ್ಬರು ಸತ್ಪುರುಷರು ಯುದ್ಧಮಾಡುವಾಗ ಒಬ್ಬ ಸತ್ಪುರುಷನು ಸಂಕಷ್ಟಕ್ಕೆ ಸಿಲುಕಿದರೆ ಅಥವಾ ಗಾಯಗೊಂಡರೆ ಅವನಿಗೆ ಪ್ರಹಾರವನ್ನು ಮಾಡಬಾರದು. ಪುತ್ರನಿಲ್ಲದವನಿಗೂ ಪ್ರಹಾರವನ್ನು ಮಾಡಬಾರದು.
ಭಗ್ನಶಸ್ತ್ರೋ ವಿಪನ್ನಾಶ್ವಶ್ಛಿನ್ನಜ್ಯೋ ಹತವಾಹನಃ |
ಚಿಕಿತ್ಸ್ಯಃ ಸ್ಯಾತ್ ಸ್ವವಿಷಯೇ ಪ್ರಾಪ್ಯೋ ವಾ ಸ್ವಗೃಹಾನ್ ಭವೇತ್ |
ನಿರ್ವ್ರಣೋಽಪಿ ಚ ಮೋಕ್ತವ್ಯ ಏಷ ಧರ್ಮಃ ಸನಾತನಃ ॥18॥
ಶಸ್ತ್ರವನ್ನು ಮುರಿದುಕೊಂಡವನು, ವಿಪತ್ತಿಗೆ ಒಳಗಾದ ಅಶ್ವವುಳ್ಳವನು, ಕತ್ತರಿಸಿದ ಹೆದೆಯುಳ್ಳವನು, ಮೃತವಾದ ವಾಹನವುಳ್ಳವನು ಅಂತಹವರನ್ನು ತನ್ನ ರಾಜ್ಯದಲ್ಲಿ ಚಿಕಿತ್ಸೆ ಮಾಡಬೇಕು. ಅಥವಾ ಅವನ ಮನೆಗೆ ಹಿಂದಿರುಗಿಸಬೇಕು. ಅವನ ದೇಹದಲ್ಲಿ ಗಾಯವಿಲ್ಲದಿದ್ದರೂ ಅವನನ್ನು ಕಳುಹಿಸಿಕೊಡಬೇಕು. ಇದು ಸನಾತನವಾದ ಧರ್ಮ.
ತಸ್ಮಾದ್ ಧರ್ಮೇಣ ಯೋದ್ಧವ್ಯಂ ಮನುಃ ಸ್ವಾಯಂಭುವೋಽಬ್ರವೀತ್ |
ಸತ್ಸು ನಿತ್ಯಂ ಸತಾಂ ಧರ್ಮಸ್ತಮಾಸ್ಥಾಯ ನ ನಾಶಯೇತ್ ॥19॥
ಆದ್ದರಿಂದ ಸಜ್ಜನರ ಜೊತೆಯಲ್ಲಿ ಯುದ್ಧವನ್ನು ಮಾಡುವಾಗ ಧರ್ಮ- ದಿಂದಲೇ ಯುದ್ಧವನ್ನು ಮಾಡಬೇಕೆಂದು ಸ್ವಾಯಂಭುವಮನುವು ಹೇಳಿದ್ದಾನೆ. ಧರ್ಮವನ್ನು ಅವಲಂಬಿಸಿದವನು ಧರ್ಮವನ್ನು ನಾಶಮಾಡಬಾರದು.
ಯೋ ವೈ ಜಯತ್ಯಧರ್ಮೇಣ ಕ್ಷತ್ರಿಯೋ ಧರ್ಮಸಂಗರಃ |
ಆತ್ಮಾನಮಾತ್ಮನಾ ಹಂತಿ ಪಾಪೋ ನಿಕೃತಿಜೀವನಃ ॥20॥
ಯಾವ ಕ್ಷತ್ರಿಯನು ಧರ್ಮಯುದ್ಧದಲ್ಲಿ ಅಧರ್ಮದಿಂದ ಜಯಿಸುತ್ತಾನೆಯೋ ಅವನು ಪಾಪಿಯೂ, ಹೀನಜೀವನನೂ ಆಗಿ ತನ್ನನ್ನು ತಾನೇ ಕೊಂದುಕೊಳ್ಳುತ್ತಾನೆ.
ಕರ್ಮ ಚೈತದಸಾಧೂನಾಮಸಾಧುಂ ಸಾಧುನಾ ಜಯೇತ್ |
ಧರ್ಮೇಣ ನಿಧನಂ ಶ್ರೇಯೋ ನ ಜಯಃ ಪಾಪಕರ್ಮಣಾ ॥21॥
ಅಂತಹದು ಅಸಜ್ಜನರ ಕಾರ್ಯ. ಅಸಾಧುವನ್ನೂ ಸನ್ಮಾರ್ಗದಿಂದಲೇ ಜಯಿ- ಸಬೇಕು. ಧರ್ಮದಿಂದ ಮರಣವಾದರೂ ಲೇಸು. ಪಾಪಕರ್ಮದಿಂದ ಗಳಿಸಿದ ಜಯವು ಶೋಭಿಸುವುದಿಲ್ಲ.
ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿ ಗೌರಿವ |
ಮೂಲಾನ್ಯಸ್ಯ ಪ್ರಶಾಖಾಶ್ಚ ದಹನ್ ಸಮನುಗಚ್ಛತಿ॥22॥
ಎಲೈ ರಾಜನೇ! ಆಚರಿಸಿದ ಅಧರ್ಮವು ಭೂಮಿಯಂತೆ ತತ್ಕ್ಷಣದಲ್ಲಿಯೇ ಫಲವನ್ನು ಕೊಡುವುದಿಲ್ಲ. ಪಾಪಾಚಾರಿಯಾದವನ ಮೂಲವನ್ನು ಅವನ ಶಾಖೆಗಳನ್ನು (ಸಂತತಿಯನ್ನು) ಸುಡುತ್ತಾ ಎಲ್ಲ ಕಡೆಯಲ್ಲಿಯೂ ವ್ಯಾಪಿಸುತ್ತದೆ.
ಪಾಪೇನ ಕರ್ಮಣಾ ವಿತ್ತಂ ಲಬ್ಧ್ವಾ ಪಾಪಃ ಪ್ರಹೃಷ್ಯತಿ |
ಸ ವರ್ಧಮಾನಃ ಸ್ತೇಯೇನ ಪಾಪಃ ಪಾಪೇ ಪ್ರಸಜ್ಜತಿ ॥23॥
ಪಾಪಿಯು ಪಾಪಕರ್ಮದಿಂದ ಧನವನ್ನು ಗಳಿಸಿ ಸಂತೋಷಪಡುತ್ತಾನೆ. ಅವನು ಕಳ್ಳತನದಿಂದ ಅಭಿವೃದ್ಧಿಯನ್ನು ಹೊಂದುತ್ತಾ ಪಾಪದಲ್ಲಿಯೇ ನಿರತ- ನಾಗುತ್ತಾನೆ.
ನ ಧರ್ಮೋಽಸ್ತೀತಿ ಮನ್ವಾನಃ ಶುಚೀನವಹಸನ್ನಿವ |
ಅಶ್ರದ್ಧಧಾನಭಾವಾಚ್ಚ ವಿನಾಶಮುಪಗಚ್ಛತಿ ॥24॥
ಧರ್ಮವು ಇಲ್ಲ ಎಂದು ತಿಳಿಯುತ್ತಾ ಶುದ್ಧರಾದವರನ್ನು ಅಪಹಾಸ್ಯ ಮಾಡು- ತ್ತಾನೆ. ಧರ್ಮದಲ್ಲಿ ಶ್ರದ್ಧೆಯಿಲ್ಲದ ಅವನು ವಿನಾಶವನ್ನು ಹೊಂದುತ್ತಾನೆ.
ಸ ಬದ್ಧೋ ವಾರುಣೈಃ ಪಾಶೈರಮರ್ತ್ಯ ಇವ ಮನ್ಯತೇ |
ಮಹಾದೃತಿರಿವಾಧ್ಮಾತಾ ಸ್ವಕೃತೇನ ವಿವರ್ಧತೇ ॥25॥
ತನ್ನ ಪಾಪಕರ್ಮಗಳಿಂದ ಅವನು ವರುಣಪಾಶಗಳಿಂದ ಬಂಧಿಸಲ್ಪಡುತ್ತಾನೆ. ಅದನ್ನು ತಿಳಿಯದೇ ಅವನು ಗಾಳಿಯು ತುಂಬಿದ ದೊಡ್ಡ ತಿದಿಯಂತೆ ತನ್ನ ಕರ್ಮದಿಂದ ತಾನು ಅಭಿವೃದ್ಧಿಯನ್ನು ಹೊಂದುತ್ತಿದ್ದೇನೆ ಎಂದು ತಿಳಿಯುತ್ತಾನೆ.
ತತಃ ಸಮೂಲೋ ಹ್ರಿಯತೇ ನದೀಕೂಲಾದಿವ ದ್ರುಮಃ |
ಅಥೈನಮಭಿನಂದಂತಿ ಭಿನ್ನಂ ಕುಂಭಮಿವಾಶ್ಮನಿ |
ತಸ್ಮಾದ್ ಧರ್ಮೇಣ ವಿಜಯಂ ಕಾಮಂ ಲಿಪ್ಸೇತ ಭೂಮಿಪಃ ॥26॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತನವತಿತಮೋಽಧ್ಯಾಯಃ ॥97॥
ಅನಂತರ ನದಿಯ ದಡದಲ್ಲಿರುವ ವೃಕ್ಷದಂತೆ ಅವನು ಬುಡಸಹಿತವಾಗಿ ಸೆಳೆದೊಯ್ಯಲ್ಪಡುತ್ತಾನೆ. ಆಗ ಕಲ್ಲಿನ ಮೇಲೆ ಒಡೆದ ಮಡಕೆಯಂತೆ ಇರುವ ಅವನನ್ನು ನೋಡಿ ಸಜ್ಜನರು ಸಂತೋಷಪಡುತ್ತಾರೆ. ಆದ್ದರಿಂದ ರಾಜನಾದವನು ಧರ್ಮದಿಂದಲೇ ವಿಜಯವನ್ನು ಪಡೆಯಲು ಆಶಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 97ನೆಯ ಅಧ್ಯಾಯವು ಮುಗಿಯಿತು.
0

98. ತೊಂಬತ್ತೆಂಟನೆಯ ಅಧ್ಯಾಯ
ಯುದ್ಧಧರ್ಮಕಥನ
ಭೀಷ್ಮಃ

ನಾಧರ್ಮೇಣ ಮಹೀಂ ಜೇತುಂ ಲಿಪ್ಸೇತ ಜಗತೀಪತಿಃ |
ಅಧರ್ಮವಿಜಯಂ ಲಬ್ಧ್ವಾ ಕೋಽನುಮನ್ಯೇತ ಭೂಮಿಪಃ ॥1॥
ಭೀಷ್ಮರು ರಾಜನು ಅಧರ್ಮದಿಂದ ಭೂಮಿಯನ್ನು ಜಯಿಸಲು ಬಯಸ- ಬಾರದು. ಅಧರ್ಮದಿಂದ ವಿಜಯವನ್ನು ಪಡೆದವನು ತನ್ನನ್ನು ಹೇಗೆ ಭೂಮಿ- ಪಾಲನೆಂದು ಕರೆದುಕೊಳ್ಳುತ್ತಾನೆ.
ಅಧರ್ಮಯುಕ್ತೋ ವಿಜಯೋ ಹ್ಯಧ್ರುವೋಽಸ್ವರ್ಗ್ಯ ಏವ ಚ |
ಸಾದಯತ್ಯೇಷ ರಾಜಾನಂ ಮಹೀಂ ಚ ಭರತರ್ಷಭ ॥2॥
ಅಧರ್ಮದಿಂದ ಸಂಪಾದಿಸಿದ ವಿಜಯವು ಅಸ್ಥಿರವಾದುದು ಮತ್ತು ಸ್ವರ್ಗ- ಪ್ರದವಾದುದಲ್ಲ. ಎಲೈ ಭರತರ್ಷಭನೇ! ರಾಜನನ್ನು ಮತ್ತು ಅವನ ಭೂಮಿಯನ್ನು ನಾಶಮಾಡುತ್ತದೆ.
ವಿಶೀರ್ಣಕವಚಂ ಚೈವ ತವಾಸ್ಮೀತಿ ಚ ವಾದಿನಮ್ |
ಕೃತಾಂಜಲಿಂ ನ್ಯಸ್ತಶಸ್ತ್ರಂ ಗೃಹೀತ್ವಾ ನ ವಿಹಿಂಸಯೇತ್ ॥3॥
ಕವಚವು ಹರಿದುಹೋದವನನ್ನು, ನಾನು ನಿನ್ನ ದಾಸನಾಗಿದ್ದೇನೆ ಎಂದು ಹೇಳಿದವನನ್ನು, ಕೈಮುಗಿದವನನ್ನು, ಶಸ್ತ್ರತ್ಯಾಗವನ್ನು ಮಾಡಿದವನನ್ನು ಹಿಡಿದು ಹಿಂಸಿಸಬಾರದು.
ಬಲೇನ ವರ್ಜಿತೋ ಯಶ್ಚ ನ ತಂ ಯುದ್ಧ್ಯೇತ ಭೂಮಿಪಃ |
ಸಂವತ್ಸರಂ ವಿಪ್ರಣಯೇತ್ ತಸ್ಮಾಜ್ಜಾತಃ ಪುನರ್ಭವೇತ್ ॥4॥
ದುರ್ಬಲನಾದವನು ವೈರವನ್ನು ಮಾಡಿದರೆ ಒಂದು ಸಂವತ್ಸರದವರೆಗೆ ಅವನ ಜೊತೆ ಯುದ್ಧವನ್ನು ಮಾಡಬಾರದು. ಅಲ್ಲಿಯವರೆಗೆ ವಿವಿಧಪ್ರಕಾರಗಳಿಂದ ಅವ- ನಲ್ಲಿ ಸ್ನೇಹವನ್ನು ಮಾಡಬೇಕು. ಪುನಃ ಅವನನ್ನು ಪರೀಕ್ಷಿಸಿ ತನ್ನ ಪಾದಾಕ್ರಾಂತ- ನನ್ನಾಗಿ ಮಾಡಿಕೊಳ್ಳಬೇಕು. (ಲಕ್ಷ್ಮಾಲಂಕಾರ)
ನಾರ್ವಾಕ್ ಸಂವತ್ಸರಾತ್ ಕನ್ಯಾ ಸ್ಪ್ರಷ್ಟವ್ಯಾ ವಿಕ್ರಮಾಹೃತಾ |
ಏವಮೇವ ಧನಂ ಸರ್ವಂ ಯಚ್ಚಾನ್ಯತ್ ಸಹಸಾಹೃತಮ್ ॥5॥
ಯುದ್ಧದಲ್ಲಿ ಜಯಿಸಿದ ಕನ್ಯೆಯರನ್ನು ಒಂದು ವರ್ಷದವರೆಗೆ ಸ್ಪರ್ಶಿಸ- ಬಾರದು. ಜಯಿಸಿ ತಂದ ಧನದ ವಿಷಯದಲ್ಲಿಯೂ ಉಳಿದ ಸ್ವತ್ತುಗಳ ವಿಷಯ- ದಲ್ಲಿಯೂ ಹೀಗೆಯೇ ನಡೆದುಕೊಳ್ಳಬೇಕು.
ನ ತು ವಧ್ಯೇ ಧನಂ ತಿಷ್ಠೇತ್ ಪಿಬೇಯುರ್ಬ್ರಾಹ್ಮಣಾಃ ಪಯಃ |
ಯುಂಜೀರನ್ ವಾಪ್ಯನಡುಹಃ ಕ್ಷಂತವ್ಯಂ ವಾ ತದಾ ಭವೇತ್ ॥6॥
ವೈಶ್ಯನು ಅಪರಾಧವನ್ನು ಮಾಡಿದರೆ ಅವನ ಧನವನ್ನು ಕಸಿದುಕೊಳ್ಳಬೇಕು. ಹೊರತು ಅವನನ್ನು ಕೊಲ್ಲಬಾರದು. ಅವನ ಬಳಿ ಗೋವುಗಳಿದ್ದರೆ ಅದನ್ನು ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು. ವೈಶ್ಯನು ಅಲ್ಪಾಪರಾಧವನ್ನು ಮಾಡಿದರೆ ಅವನನ್ನು ಕ್ಷಮಿಸಿ ಅವನ ಎತ್ತುಗಳನ್ನು ಅವನೇ ಉಪಯೋಗಿಸುವಂತೆ ಮಾಡ- ಬೇಕು. ಸ್ಥೂಲಾಪರಾಧವನ್ನು ಮಾಡಿದರೆ ದೇಶದಿಂದ ಗಡೀಪಾರು ಮಾಡಬೇಕು. (ಲಕ್ಷ್ಮಾಲಂಕಾರ)
ರಾಜ್ಞಾ ರಾಜೈವ ಯೋದ್ಧವ್ಯಸ್ತಥಾ ಧರ್ಮೋ ವಿಧೀಯತೇ |
ನಾನ್ಯೋ ರಾಜಾನಮಭ್ಯಸ್ಯೇದರಾಜನ್ಯಃ ಕಥಂಚನ ॥7॥
ರಾಜನು ರಾಜನ ಜೊತೆಯಲ್ಲಿಯೇ ಯುದ್ಧವನ್ನು ಮಾಡಬೇಕು. ಇದು ಧರ್ಮವೆಂದು ಹೇಳಲ್ಪಡುತ್ತದೆ. ರಾಜನಲ್ಲದವನು ರಾಜನ ಜೊತೆಯಲ್ಲಿ ಯಾವ ಕಾರಣದಿಂದಲೂ ಯುದ್ಧಕ್ಕೆ ಹೋಗಬಾರದು.
ಅನೀಕಯೋಃ ಸಂಹತಯೋರ್ಯದೀಯಾದ್ ಬ್ರಾಹ್ಮಣೋಽಂತರಾ |
ಶಾಂತಿಮಿಚ್ಛನ್ನುಭಯತೋ ನ ಯೋದ್ಧವ್ಯಂ ತದಾ ಭವೇತ್ |
ಮರ್ಯಾದಾಂ ಶಾಶ್ವತೀಂ ಭಿಂದ್ಯಾದ್ ಬ್ರಾಹ್ಮಣಂ
ಯೋಽಭಿಲಂಘಯೇತ್ ॥8॥
ಎರಡು ಸೈನ್ಯಗಳು ಯುದ್ಧಕ್ಕೆ ಸನ್ನದ್ಧವಾಗಿ ಎದುರಾಗಿ ನಿಂತಿರುವಾಗ ಮಧ್ಯೆ ಒಬ್ಬ ಬ್ರಾಹ್ಮಣನು ಶಾಂತಿಯನ್ನು ಬಯಸಿ ನಡೆದರೆ ಆಗ ಯುದ್ಧವನ್ನು ಮಾಡ- ಬಾರದು. ಆ ಬ್ರಾಹ್ಮಣನ ಅಭಿಪ್ರಾಯವನ್ನು ಮೀರುವವನು ಶಾಶ್ವತವಾದ ಧರ್ಮದ ಎಲ್ಲೆಯನ್ನು ಮೀರುತ್ತಾನೆ.
ಅಥ ಚೇಲ್ಲಂಘಯೇದೇನಾಂ ಮರ್ಯಾದಾಂ ಕ್ಷತ್ರಿಯಬ್ರುವಃ |
ಅಸಂಖ್ಯೇಯಸ್ತದೂರ್ಧ್ವಂ ಸ್ಯಾದನಾದೇಯಶ್ಚ ಸಂಸದಿ ॥9॥
ಒಂದು ಪಕ್ಷ ಕ್ಷತ್ರಿಯನಾದವನು ಅಂತಹ ಎಲ್ಲೆಯನ್ನು ಮೀರಿದರೆ ಅವನನ್ನು ರಾಜರ ಗಣನೆಯಲ್ಲಿ ಪರಿಗಣಿಸಬಾರದು. ಮತ್ತು ಸಭೆಯಲ್ಲಿ ಅವನನ್ನು ಸ್ವೀಕರಿಸ- ಬಾರದು.
ಯಾ ತು ಧರ್ಮವಿಲೋಪೇನ ಮರ್ಯಾದಾಭೇದನೇನ ಚ |
ತಾಂ ವೃತ್ತಿಂ ನಾನುವರ್ತೇತ ವಿಜಿಗೀಷುರ್ಮಹೀಪತಿಃ |
ಧರ್ಮಲಬ್ಧಾದ್ಧಿ ವಿಜಯಾತ್ ಕೋ ಲಾಭೋಽಭ್ಯಧಿಕೋ ಭವೇತ್ ॥10॥
ಜಯವನ್ನು ಬಯಸುವ ರಾಜನು ಧರ್ಮವಿರೋಧದಿಂದಾಗಲೀ ಅಥವಾ ಮರ್ಯಾದಾಭಂಗದಿಂದಾಗಲೀ ಅಂತಹ ಜಯವನ್ನು ಸಾಧಿಸಬಾರದು. ಧರ್ಮ- ದಿಂದ ಸಂಪಾದಿಸಿದ ವಿಜಯಕ್ಕಿಂತಲೂ ಯಾವುದು ಅಧಿಕವಾದೀತು?
ಸಹಸಾ ನ್ಯಾಯಭೂತಾನಿ ಕ್ಷಿಪ್ರಮೇವ ಪ್ರಸಾದಯೇತ್ |
ಸಾಂತ್ವೇನ ಭೋಗದಾನೇನ ಸ ರಾಜ್ಞಾಂ ಪರಮೋ ನಯಃ ॥11॥
ನ್ಯಾಯದಿಂದ ನಡೆದುಕೊಳ್ಳುವ ಪ್ರಜೆಗಳನ್ನು ಶೀಘ್ರವಾಗಿ ಸಾಂತ್ವವಚನ- ಗಳಿಂದಲೂ ಭೋಗಸಾಮಗ್ರಿಗಳ ದಾನದಿಂದಲೂ

ಪ್ರಸನ್ನಗೊಳಿಸಬೇಕು. ಅದು ಶ್ರೇಷ್ಠವಾದ ರಾಜನೀತಿ.
ಭುಜ್ಯಮಾನಾ ಹ್ಯಭೋಗೇನ ಸ್ವರಾಷ್ಟ್ರಾದಭಿತಾಪಿತಾಃ |
ಅಮಿತ್ರಾನ್ ಪರ್ಯುಪಾಸೀರನ್ ವ್ಯಸನೌಘಪ್ರತೀಕ್ಷಿಣಃ ॥12॥
ಹಿಂದೆ ಭೋಗದಿಂದ ಕೂಡಿದ್ದ ಪ್ರಜೆಗಳು ರಾಜನ ಉಪದ್ರವದಿಂದ ಭೋಗ- ರಹಿತರಾಗಿ ರಾಜನಿಂದ ತನ್ನ ರಾಷ್ಟ್ರದಲ್ಲಿ ಪೀಡಿತರಾದರೆ ವ್ಯಸನಗಳ ಸಮೂಹವನ್ನೇ ಅವರು ಮುಂದೆ ನಿರೀಕ್ಷಿಸುತ್ತಾ ಆ ರಾಜನ ಶತ್ರುಗಳ ಜೊತೆಯಲ್ಲಿ ಹೋದಾರು!
ಅಮಿತ್ರೋಪಗ್ರಹಂ ಚಾಸ್ಯ ತೇ ಕುರ್ಯುಃ ಕ್ಷಿಪ್ರಮಾಪದಿ |
ಸಂದುಷ್ಟಾಃ ಸರ್ವತೋ ರಾಜನ್ ರಾಜವ್ಯಸನಕಾಂಕ್ಷಿಣಃ ॥13॥
ಎಲೈ ರಾಜನೇ! ಅವರಲ್ಲಿ ದುಷ್ಟರಾದ ಪ್ರಜೆಗಳು ರಾಜನ ವ್ಯಸನವನ್ನೇ ಬಯ- ಸುತ್ತಾ ಈ ರಾಜನ ಆಪತ್ತಿನಲ್ಲಿ ಶತ್ರುರಾಜರಿಂದ ಅವರು ಶೀಘ್ರವಾಗಿ ಪರಾಜಿತನಾ- ಗುವಂತೆ ಮಾಡಬಹುದು.
ನಾಮಿತ್ರೋ ವಿನಿಕರ್ತವ್ಯೋ ನಾತಿಚ್ಛೇದ್ಯಃ ಕಥಂಚನ |
ಜೀವಿತಂ ಹ್ಯಪ್ಯತಿಚ್ಛಿನ್ನಃ ಸಂತ್ಯಜತ್ಯೇಕದಾ ನರಃ ॥14॥
ಶತ್ರುವಿಗೆ ಅಪಕಾರವನ್ನು ಮಾಡಬಾರದು. ಸಂಪೂರ್ಣನಾಶವನ್ನೂ ಮಾಡ- ಬಾರದು. ಶತ್ರುವು ಸಂಪೂರ್ಣನಷ್ಟವನ್ನು ಹೊಂದಿದರೆ ಒಮ್ಮೊಮ್ಮೆ ಜೀವಿತವನ್ನೂ ತೊರೆಯಬಹುದು.
ಅಲ್ಪೇನಾಪಿ ಹಿ ಸಂಯುಕ್ತಸ್ತುಷ್ಯತ್ಯೇವಾಪರಾಧಿಕಃ |
ಶುದ್ಧಂ ಜೀವಿತಮೇವಾಪಿ ತಾದೃಶೋ ಬಹು ಮನ್ಯತೇ ॥15॥
ಅಪರಾಧವನ್ನು ಮಾಡಿದವನಿಗೆ ಸ್ವಲ್ಪ ಉಪಕಾರವನ್ನು ಮಾಡಿದರೂ ಅವನು ಸಂತುಷ್ಟನಾಗುತ್ತಾನೆ. ಅನಂತರ ಅವನು ಶುದ್ಧಜೀವನವೇ ಶ್ರೇಷ್ಠವೆಂದು ಭಾವಿಸ- ಬಹುದು.
ಯಸ್ಯ ಸ್ಫೀತೋ ಜನಪದಃ ಸಂಪನ್ನಃ ಪ್ರಿಯರಾಜಕಃ |
ಸಂತುಷ್ಟಭೃತ್ಯಸಚಿವೋ ದೃಢಮೂಲಃ ಸ ಪಾರ್ಥಿವಃ ॥16॥
ಯಾವ ರಾಜನ ರಾಜ್ಯವು ಧಾನ್ಯಸಮೃದ್ಧವಾದ ಜನಪದದಿಂದ ಕೂಡಿ, ರಾಜನಿಗೆ ಪ್ರಿಯರಾದ ಪ್ರಜೆಗಳಿಂದ ಕೂಡಿ, ಸಂತುಷ್ಟರಾದ ಭೃತ್ಯರಿಂದ ಮತ್ತು ಸಚಿವರಿಂದ ಕೂಡಿರುತ್ತದೆಯೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ.
ಋತ್ವಿಕ್‌ಪುರೋಹಿತಾಚಾರ್ಯಾ ಯೇ ಚಾನ್ಯೇ ಶ್ರುತಸಮ್ಮತಾಃ |
ಪೂಜಾರ್ಹಾಃ ಪೂಜಿತಾ ಯಸ್ಯ ಸ ವೈ ಲೋಕಜಿದುಚ್ಯತೇ ॥17॥
ಜ್ಞಾನಿಗಳಿಗೆ ಸಮ್ಮತರಾದ ಪೂಜಾರ್ಹರಾದ ಋತ್ವಿಕ್ ಪುರೋಹಿತ ಆಚಾ- ರ್ಯರು ಯಾವನಿಂದ ಪೂಜಿಸಲ್ಪಡುತ್ತಾರೆಯೋ ಅವನು ಲೋಕವನ್ನು ಜಯಿಸಿದ- ವನು ಎಂದು ಹೇಳಲ್ಪಡುತ್ತಾನೆ.
ಏತೇನೈವ ಚ ವೃತ್ತೇನ ಮಹೀಂ ಪ್ರಾಪ ಸುರೋತ್ತಮಃ |
ಅನ್ಯೇಪಿ ಚೈವ ವಿಜಯಂ ವಿಜಿಗೀಷಂತಿ ಪಾರ್ಥಿವಾಃ ॥18॥
ದೇವಶ್ರೇಷ್ಠನಾದ ಇಂದ್ರನು ಇಂತಹದೇ ನಡತೆಯಿಂದ ರಾಜ್ಯವನ್ನು ಪಡೆದನು. ಉಳಿದ ರಾಜರೂ ಸಹ ಇದೇ ರೀತಿಯಲ್ಲಿ ವಿಜಯವನ್ನು ಪಡೆಯಲು ಬಯ- ಸುತ್ತಾರೆ.
ಭೂಮಿವರ್ಜಂ ಧನಂ ರಾಜಾ ಜಿತ್ವಾ ರಾಜನ್ ಮಹಾಹವೇ |
ಅಪಿ ಚಾನ್ನೌಷಧೀಃ ಶಶ್ವದಾಜಹಾರ ಪ್ರತರ್ದನಃ ॥19॥
ಎಲೈ ರಾಜನೇ! ಪ್ರತರ್ದನನು ದೊಡ್ಡ ಯುದ್ಧದಲ್ಲಿ ಭೂಮಿಯನ್ನು ಬಿಟ್ಟು ಉಳಿದ ಎಲ್ಲಾ ಧನವನ್ನೂ ಗೆದ್ದು, ಅನ್ನೌಷಧಿಗಳನ್ನು ಸತತವಾಗಿ ತೆಗೆದುಕೊಳ್ಳು- ತ್ತಿದ್ದನು.
ಅಗ್ನಿಹೋತ್ರಾಗ್ನಿಶೇಷಂ ಚ ಹವಿರ್ಭೋಜನಮೇವ ಚ |
ಆಜಹಾರ ದಿವೋದಾಸಃ ತತೋ ವಿಪ್ರಕೃತೋಭವತ್ ॥20॥
ದಿವೋದಾಸನು ಅಗ್ನಿಹೋತ್ರದ ಶೇಷವನ್ನು ಮತ್ತು ಹವಿರ್ಭೋಜನವನ್ನು ತೆಗೆದುಕೊಂಡು ಬಂದನು. ಅದರಿಂದ ಅವನು ಪ್ರಜೆಗಳಿಂದ ತಿರಸ್ಕೃತನಾದನು.
ಸರಾಜಕಾಣಿ ರಾಷ್ಟ್ರಾಣಿ ನಾಭಾಗೋ ದಕ್ಷಿಣಾಂ ದದೌ |
ಅನ್ಯತ್ರ ಶ್ರೋತ್ರಿಯಾರ್ಥಾಚ್ಚ ತಾಪಸಸ್ವಾಚ್ಚ ಭಾರತ ॥21॥
ಎಲೈ ಭಾರತನೇ! ನಾಭಾಗನು ರಾಜರಿಂದ ಕೂಡಿದ ರಾಷ್ಟ್ರಗಳನ್ನು, ಬ್ರಾಹ್ಮಣ ಸ್ವತ್ತನ್ನು ಮತ್ತು ತಾಪಸಸ್ವತ್ತನ್ನು ಬಿಟ್ಟು, ದಕ್ಷಿಣೆಯಾಗಿ ನೀಡಿದನು.
ಉಚ್ಚಾವಚಾನಿ ವೃತ್ತಾನಿ ಧರ್ಮಜ್ಞಾನಾಂ ಯುಧಿಷ್ಠಿರ |
ಆಸನ್ ರಾಜ್ಞಾಂ ಪುರಾಣಾನಾಂ ಸರ್ವಂ ತನ್ಮಮ ರೋಚತೇ ॥22॥
ಎಲೈ ಯುಧಿಷ್ಠಿರನೇ! ಧರ್ಮಜ್ಞರಾದ ರಾಜರ ನಡತೆಗಳು ಹೀಗೆ ಸ್ವಲ್ಪ ಹೆಚ್ಚು ಕಡಿಮೆಯಾಗಿರುತ್ತವೆ. ಪ್ರಾಚೀನರಾಜರಿಗೆ ಅಂತಹ ನಡವಳಿಕೆ ಇದ್ದಿತು. ಅವೆಲ್ಲವೂ ನನಗೆ ಇಷ್ಟವಾಗುತ್ತದೆ.
ಸರ್ವವಿದ್ಯಾತಿರೇಕಾದ್ ವಾ ಜಯಮಿಚ್ಛೇನ್ಮಹೀಪತಿಃ |
ನ ಮಾಯಯಾ ನ ದಂಭೇನ ಸ ಇಚ್ಛೇದ್ ಭೂತಿಮಾತ್ಮನಃ ॥23॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟನವತಿತಮೋಽಧ್ಯಾಯಃ ॥98॥
ಅಥವಾ ರಾಜನು ಎಲ್ಲ ವಿದ್ಯೆಗಳಲ್ಲೂ ಅತಿಶಯವಾಗಿ ಪಾರಂಗತನಾಗಿ ಆ ಬಲದಿಂದ ಜಯಿಸಲು ಇಚ್ಛಿಸಬೇಕು. ಕಪಟದಿಂದಾಗಲೀ,

ಡಂಭದಿಂದಾಗಲೀ, ತನ್ನ ಶ್ರೀಮಂತಿಕೆಯನ್ನು ಬಯಸಬಾರದು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 98ನೆಯ ಅಧ್ಯಾಯವು ಮುಗಿಯಿತು.
0

99. ತೊಂಬತ್ತೊಂಬತ್ತನೆಯ ಅಧ್ಯಾಯ
ಯುದ್ಧದ ಧಾರ್ಮಿಕತ್ವಕಥನ
ಯುಧಿಷ್ಠಿರಃ
ಕ್ಷತ್ರಧರ್ಮಾನ್ನ ಪಾಪೀಯಾನ್ ಧರ್ಮೋಽಸ್ತಿ ಭರತರ್ಷಭ |
ಅಭಿಯಾನೇ ಚ ಯುದ್ಧೇ ಚ ರಾಜಾ ಹಂತಿ ಮಹಾಜನಮ್ ||1||
ಅಥ ಸ್ಮ ಕರ್ಮಣಾ ಯೇನ ಲೋಕಾನ್ ಜಯತಿ ಪಾರ್ಥಿವಃ |
ವಿದ್ವನ್ ಜಿಜ್ಞಾಸಮಾನಾಯ ಪ್ರಬ್ರೂಹಿ ಭರತರ್ಷಭ ||2||
ಯುಧಿಷ್ಠಿರ ಎಲ್ಲೈ ಭರತರ್ಷಭನೇ! ಕ್ಷತ್ರಧರ್ಮಕ್ಕಿಂತ ಪಾಪಕರವಾದ ಧರ್ಮವು ಇನ್ನೊಂದಿಲ್ಲ. ರಾಜನು ದಂಡೆತ್ತಿ ಹೋಗುವಾಗಲೂ ಮತ್ತು ಯುದ್ಧದ- ಲ್ಲಿಯೂ ಮಹಾಜನರನ್ನು ಕೊಲ್ಲುತ್ತಾನೆ. ಎಲ್ಲೈ ಭರತರ್ಷಭನೇ! ವಿದ್ವಾಂಸನೇ! ಅಂತಹ ರಾಜನು ಯಾವ ಕರ್ಮದಿಂದ ಸ್ವರ್ಗಾದಿಲೋಕಗಳನ್ನು ಜಯಿಸುತ್ತಾನೆ ಎಂದು ನಿನ್ನನ್ನು ಕೇಳುತ್ತಿರುವ ನನಗೆ ಉತ್ತರವನ್ನು ಹೇಳು.
ಭೀಷ್ಮಃ
ನಿಗ್ರಹೇಣ ಚ ಪಾಪಾನಾಂ ಸಾಧೂನಾಂ ಪ್ರಗ್ರಹೇಣ ಚ |
ಯಜ್ಞೈರ್ದಾನೈಶ್ಚ ರಾಜಾನೋ ಭವಂತಿ ಶುಚಯೋಽಮಲಾಃ ||3||
ಭೀಷ್ಮರು ಪಾಪವನ್ನು ಮಾಡುವವರನ್ನು ನಿಗ್ರಹಿಸುವುದರಿಂದ ಮತ್ತು ಸಜ್ಜನರನ್ನು ಅನುಗ್ರಹಿಸುವುದರಿಂದ ಮತ್ತು ಯಜ್ಞದಾನಗಳಿಂದ ರಾಜರು ಶುಚಿ- ಗಳೂ ನಿರ್ಮಲರೂ ಆಗುತ್ತಾರೆ.
ಉಪರುಂಧಂತಿ ರಾಜಾನೋ ಭೂತಾನಿ ವಿಜಯಾರ್ಥಿನಃ |
ತ ಏವ ವಿಜಯಂ ಪ್ರಾಪ್ಯ ವರ್ಧಯಂತಿ ಪುನಃ ಪ್ರಜಾಃ ||4||
ವಿಜಯವನ್ನು ಬಯಸುವ ರಾಜರು ತಮ್ಮ ಪ್ರಜೆಗಳಿಗೆ (ಧನಸಂಗ್ರಹದಿಂದ) ಉಪದ್ರವವನ್ನು ಕೊಡುತ್ತಾರೆ. ಅದೇ ರಾಜರು ವಿಜಯವನ್ನು ಪಡೆದ ಮೇಲೆ ಪ್ರಜೆಗಳನ್ನು ಪುನಃ ಸಮೃದ್ಧಿಗೊಳಿಸುತ್ತಾರೆ.
ಅಪವಿದ್ಧ್ಯಂತಿ ಪಾಪಾನಿ ದಾನಯಜ್ಞತಪೋಬಲೈಃ |
ಅನುಗ್ರಹೇಣ ಭೂತಾನಾಂ ಪುಣ್ಯಮೇಷಾಂ ಪ್ರವರ್ಧತೇ ||5||
ತಾವು ಮಾಡಿದ ಪಾಪಗಳನ್ನು ದಾನ ಯಜ್ಞ ಮತ್ತು ತಪಸ್ಸುಗಳ ಬಲದಿಂದ ನಿವಾರಿಸಿಕೊಳ್ಳುತ್ತಾರೆ. ಪ್ರಜೆಗಳಿಗೆ ಅನುಗ್ರಹವನ್ನು ಮಾಡುವುದರಿಂದ ಅವರಿಗೆ ಪುಣ್ಯವೃದ್ಧಿಯಾಗುತ್ತದೆ.
ಯಥೈವ ಕ್ಷೇತ್ರನಿರ್ದಾತಾ ನಿರ್ದನ್ ವೈ ಕ್ಷೇತ್ರಮೇಕದಾ |
ಹಿನಸ್ತಿ ಧಾನ್ಯಂ ಕಕ್ಷಂ ವಾ ನ ಚ ಧಾನ್ಯಂ ವಿನಶ್ಯತಿ ||6||
ಹೇಗೆ ಕ್ಷೇತ್ರಕ್ಕೆ ಅಗ್ನಿಯನ್ನು ಕೊಡುವವನು ಒಮ್ಮೆ ಧಾನ್ಯವು ಬೆಳೆಯಲು ಯೋಗ್ಯವಾದ ಕ್ಷೇತ್ರಕ್ಕೆ ಹಿಂಸೆಯನ್ನು ಕೊಡುತ್ತಾನೆ. ಆದರೆ ಪುನಃ ಅಲ್ಲಿ ಬೆಳೆಯುವ ಧಾನ್ಯಕ್ಕೆ ವಿನಾಶವನ್ನು ಉಂಟುಮಾಡುವುದಿಲ್ಲ.
ಏವಂ ಶಸತ್ರಣಿ ಮುಂಚಂತೋ ಘ್ನಂತಿ ವಧ್ಯಾನನೇಕಧಾ |
ತಸ್ಯೈಷಾ ನಿಷ್ಕೃತಿಃ ಕೃತ್ಸ್ನಾ ಭೂತಾನಾಂ ಭಾವನಂ ಪುನಃ ||7||
ಹೀಗೆಯೇ ಶಸ್ತ್ರಪ್ರಯೋಗವನ್ನು ಮಾಡುವವರು ವಧೆಗೆ ಯೋಗ್ಯರಾದ ಅನೇಕರನ್ನು ಅನೇಕರೀತಿಯಲ್ಲಿ ಕೊಲ್ಲುತ್ತಾರೆ. ಆ ಪಾಪದ ಸಮಗ್ರಪ್ರಾಯಶ್ಚಿತ್ತ- ವೆಂದರೆ ಪುನಃ ಪ್ರಜೆಗಳನ್ನು ಸಮೃದ್ಧಿಗೊಳಿಸುವುದು.
ಯೋ ಭೂತಾನಿ ಸದಾಽನರ್ಥಾದ್ ವಧಾತ್ ಕ್ಲೇಶಾಚ್ಚ ರಕ್ಷತಿ |
ದಸ್ಯುಭ್ಯಃ ಪ್ರಾಣದಾನಾತ್ ಸ ಧನದಃ ಸುಖದೋ ವಿರಾಟ್ ||8||
ಯಾವನು ಪ್ರಜೆಗಳನ್ನು ಅನರ್ಥಗಳಿಂದಲೂ, ವಧೆಯಿಂದಲೂ, ಕ್ಲೇಶ- ದಿಂದಲೂ, ದಸ್ಯುಗಳಿಂದಲೂ ರಕ್ಷಿಸಿ ಪ್ರಾಣದಾನವನ್ನು ಮಾಡುತ್ತಾನೆಯೋ ಅವನೇ ಧನವನ್ನು ಮತ್ತು ಸುಖವನ್ನು ಕೊಡುವ ಬ್ರಹ್ಮದೇವ.
ಸ ಸರ್ವಯಜ್ಞೈರೀಜಾನೋ ರಾಜಾಥಾಭಯದಕ್ಷಿಣೈಃ |
ಅನುಭೂಯೇಹ ಭದ್ರಾಣಿ ಪ್ರಾಪ್ನೋತೀಂದ್ರಸಲೋಕತಾಮ್ ||9||
ಪ್ರಜೆಗಳಿಗೆ ಅಭಯರೂಪವಾದ ದಕ್ಷಿಣೆಯನ್ನು ಕೊಟ್ಟು, ಸರ್ವಯಜ್ಞಗಳನ್ನು ಆಚರಿಸುವ ರಾಜನು ಇಲ್ಲಿ ಶುಭಗಳನ್ನು ಅನುಭವಿಸಿ, ಪರಲೋಕದಲ್ಲಿ ಇಂದ್ರನ ಸಾಲೋಕ್ಯವನ್ನು ಪಡೆಯುತ್ತಾನೆ.
ಬ್ರಾಹ್ಮಣಾರ್ಥೇ ಸಮುತ್ಪನ್ನೇ ಯೋಽಭಿನಿಃಸೃತ್ಯ ಯುದ್ಧ್ಯತೇ |
ಆತ್ಮಾನಂ ಯೂಪಮುಚ್ಛ್ರಿತ್ಯ ಸ ಯಜ್ಞೋಽನಂತದಕ್ಷಿಣಃ ||10||
ಬ್ರಾಹ್ಮಣನ ಕಾರ್ಯವಾಗಬೇಕಾದಾಗ ಯಾವನು ಹೊರಗೆ ಬಂದು ತನ್ನನ್ನೇ ಎತ್ತಿದ ಯೂಪವನ್ನಾಗಿ ಮಾಡಿ ಯುದ್ಧವನ್ನು ಮಾಡುತ್ತಾನೆಯೋ ಆ ಯುದ್ಧವು ಅನಂತದಕ್ಷಿಣೆಯುಳ್ಳ ಯಜ್ಞರೂಪವಾದುದು.
ಅಭೀತೋ ವಿಕಿರನ್ ಶತ್ರೂನ್ ಪ್ರತಿಗೃಹ್ಣನ್ ಶರಾಂಸ್ತಥಾ |
ನ ತಸ್ಮಾತ್ ತ್ರಿದಶಾಃ ಶ್ರೇಯೋ ಭುವಿ ಪಶ್ಯಂತಿ ಕಿಂಚನ ||11||
ನಿರ್ಭೀತನಾಗಿ ಶತ್ರುಗಳ ಮೇಲೆ ಬಾಣಗಳನ್ನು ಸುರಿಸುತ್ತಾ, ತನ್ನ ಶರೀರದಲ್ಲಿ ಶತ್ರುಗಳ ಬಾಣವನ್ನು ಹಾಗೆಯೇ ಸ್ವೀಕರಿಸುವುದಕ್ಕಿಂತ

ಕ್ಷತ್ರಿಯನಿಗೆ ಭೂಮಿಯಲ್ಲಿ ಶ್ರೇಯಸ್ಕರವಾದುದು ಯಾವುದೂ ಇಲ್ಲವೆಂದು ದೇವತೆಗಳು ತಿಳಿಯುತ್ತಾರೆ.
ತಸ್ಯ ಯಾವಂತಿ ಶಸಶ್ತ್ರಣಿ ತ್ವಚಂ ಭಿಂದಂತಿ ಸಂಯುಗೇ |
ತಾವತಃ ಸೋಽಶ್ನುತೇ ಲೋಕಾನ್ ಸರ್ವಕಾಮದುಹೋಽಕ್ಷಯಾನ್ ॥12
ಯುದ್ಧದಲ್ಲಿ ಎಷ್ಟು ಶಸ್ತ್ರಗಳು ಅವನ ಚರ್ಮವನ್ನು ಭೇದಿಸುತ್ತವೆಯೋ ಸರ್ವ- ಕಾಮವನ್ನು ಕೊಡುವ ಅಕ್ಷಯವಾದ ಅಷ್ಟು ಲೋಕಗಳನ್ನು ಅವನು ಹೊಂದುತ್ತಾನೆ.
ಯದಸ್ಯ ರುಧಿರಂ ಗಾತ್ರಾದಾವೇಧೇಭ್ಯಃ ಪ್ರವರ್ತತೇ |
ಸ ಹ ತೇನೈವ ರಕ್ತೇನ ಸರ್ವಪಾಪೈಃ ಪ್ರಮುಚ್ಯತೇ ॥13॥
ಯಾವ ರಕ್ತವು ಅವನ ಶರೀರವ್ರಣಗಳಿಂದ ಹರಿಯುತ್ತದೆಯೋ ಅವನು ಅದೇ ರಕ್ತಸ್ರಾವದಿಂದ ಸರ್ವಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಯಾನಿ ದುಃಖಾನಿ ಸಹತೇ ವ್ರಣಾನಾಮಭಿತಾಪನೇ |
ನ ತತೋಽಸ್ತಿ ತಪೋ ಭೂಯ ಇತಿ ಧರ್ಮವಿದೋ ವಿದುಃ ॥14॥
ವ್ರಣಗಳು ಉರಿಯುವಾಗ ಉಂಟಾಗುವ ಯಾವ ದುಃಖಗಳನ್ನು ಸಹಿಸು- ತ್ತಾನೆಯೋ, ಅವನಿಗೆ ಅದಕ್ಕಿಂತ ದೊಡ್ಡ ತಪಸ್ಸಿಲ್ಲವೆಂದು ಧರ್ಮಜ್ಞರು ತಿಳಿಯು- ತ್ತಾರೆ.
ಪೃಷ್ಠತೋ ಭೀರವಃ ಸಂಖೇ ವರ್ತಂತೇಽಧಮಪೂರುಷಾಃ |
ಶೂರಾಚ್ಛರಣಮಿಚ್ಛಂತಃ ಪರ್ಜನ್ಯಾದಿವ ಜೀವನಮ್ ॥15॥
ಭೀರು(ಹೇಡಿ)ಗಳಾದ ಅಧಮಪುರುಷರು ಪರ್ಜನ್ಯನಿಂದ ಜೀವನವನ್ನು ಬಯಸಿದಂತೆ ಶೂರನಿಂದ ರಕ್ಷಣೆಯನ್ನು ಬಯಸಿ ರಣರಂಗದಲ್ಲಿ ಶೂರನ ಹಿಂದೆಯೇ ಇರುತ್ತಾರೆ.
ಯದಿ ಶೂರಂ ತಥಾ ಕ್ಷೇಮೇ ಪ್ರತೀಕ್ಷೇರನ್ ಯಥಾ ಭಯೇ |
ಪ್ರತಿ ಶೂರಂ ಜನಾಃ ಕುರ್ಯುರ್ನಚ ತದ್ ವರ್ತತೇ ತಥಾ ॥16॥
ಅಶಕ್ತಪುರುಷರು ಭಯಕಾಲದಲ್ಲಿ ಶೂರನನ್ನು ಬಯಸುವಂತೆ ಕ್ಷೇಮಕಾಲ- ದಲ್ಲಿಯೂ ಒಬ್ಬ ಶೂರನನ್ನು ನಿರೀಕ್ಷಿಸಬೇಕಾದೀತು. ಆದರೆ ಅವರು ಹಾಗೆ ಮಾಡುವುದಿಲ್ಲ. ಏಕೆಂದರೆ ಒಮ್ಮೆ ಉಂಟಾದ ಭಯವು ಹಾಗೆಯೇ ಉಳಿಯುವು- ದಿಲ್ಲ.
ಯದಿ ತೇ ಕೃತಮಾಜ್ಞಾಯ ನಮಸ್ಕುರ್ಯುಃ ಸದೈವ ತಮ್ |
ಯುಕ್ತಂ ನ್ಯಾಯ್ಯಂ ಚ ಕುರ್ಯುಸ್ತೇ ನ ಚ ತದ್ ವರ್ತತೇ ತಥಾ ॥17॥
ಶೂರನು ತಮಗೆ ಮಾಡಿದ ಉಪಕಾರವನ್ನು ಸ್ಮರಿಸಿ, ಅವರು ಯಾವಾಗಲೂ ಅವನಿಗೆ ನಮಸ್ಕರಿಸಿದರೆ ಅದು ನ್ಯಾಯವೂ ಮತ್ತು ಯುಕ್ತವೂ ಆದೀತು! ಆದರೆ ಅವರು ಹಾಗೆ ಮಾಡುವುದಿಲ್ಲ.
ಪುರುಷಾಣಾಂ ಸಮಾನಾನಾಂ ದೃಶ್ಯತೇ ಮಹದಂತರಮ್ |
ಸಂಗ್ರಾಮೇಽನೀಕವೇಲಾಯಾಮುತ್ಕ್ರುಷ್ಟೇಽಭಿಪತತ್ಸು ಚ ॥18॥
ಒಂದೇ ರೀತಿಯಿಲ್ಲಿ ಕಾಣುವ ಪುರುಷರಲ್ಲಿ ಯುದ್ಧದಲ್ಲಿ ಸೈನ್ಯದಲ್ಲಿ ಶತ್ರುಗಳು ಸಿಂಹಗರ್ಜನೆಯಿಂದ ಮೇಲೆರೆಗುತ್ತಿರುವಾಗ ದೊಡ್ಡ ವ್ಯತ್ಯಾಸವು ಕಂಡು ಬರುತ್ತದೆ.
ಪತತ್ಯಭಿಮುಖಃ ಶೂರಃ ಪರಾನ್ ಭೀರುಃ ಪಲಾಯತೇ |
ಆಸ್ಥಾಯಾಸ್ವರ್ಗ್ಯಮಧ್ವಾನಂ ಸಹಾಯಾನ್ ವಿಷಮೇ ತ್ಯಜನ್ ॥19॥
ಶೂರನು ಶತ್ರುಗಳ ಮೇಲೆ ಅಭಿಮುಖನಾಗಿ ಎರಗುತ್ತಾನೆ. ಹೇಡಿಯಾದವನು ಅಸ್ವರ್ಗ್ಯವಾದ ಮಾರ್ಗವನ್ನು ಆಶ್ರಯಿಸಿ ಸಂಕಟಪರಿಸ್ಥಿತಿಯಲ್ಲಿ ಸಹಾಯಕರನ್ನು ಬಿಟ್ಟು ಪಲಾಯನ ಮಾಡುತ್ತಾನೆ.
ಮಾ ಸ್ಮ ತಾಂಸ್ತಾದೃಶಾಂಸ್ತಾತ ಜನಿಷ್ಠಾಃ ಪುರುಷಾಧಮಾನ್ |
ಯೇ ಸಹಾಯಾನ್ ರಣೇ ಹಿತ್ವಾ ಸ್ವಸ್ತಿಮಂತೋ ಗೃಹಾನ್ ಯಯುಃ ॥20॥
ಎಲೈ ಪ್ರೀತಿಪಾತ್ರನೇ! ಯಾರು ತಮ್ಮ ಸಹಾಯಕರನ್ನು ಯುದ್ಧಭೂಮಿಯಲ್ಲಿ ಬಿಟ್ಟು, ತಾವು ಕ್ಷೇಮವಾಗಿ ಮನೆಗೆ ತೆರಳುತ್ತಾರೋ ಅಂತಹ ಪುರುಷಾಧಮರನ್ನು ನಿನ್ನ ವಂಶದಲ್ಲಿ ಸೃಷ್ಟಿಸಬೇಡ.
ಅಸ್ವಸ್ತಿ ತೇಭ್ಯಃ ಕುರ್ವಂತಿ ದೇವಾ ಇಂದ್ರಪುರೋಗಮಾಃ |
ತ್ಯಾಗೇನ ಯಃ ಸಹಾಯಾನಾಂ ಸ್ವಾನ್ ಪ್ರಾಣಾಂಸಶ್ತ್ರತುಮಿಚ್ಛತಿ ॥21॥
ತನ್ನ ಸಹಾಯಕರನ್ನು ತ್ಯಜಿಸಿ ಯಾವನು ತನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳು- ತ್ತಾನೆಯೋ ಅವನಿಗೆ ಇಂದ್ರನೇ ಮೊದಲಾದ ದೇವತೆಗಳು ಅಶುಭವನ್ನು ಉಂಟು- ಮಾಡುತ್ತಾರೆ.
ತಂ ಹನ್ಯುಃ ಕಾಷ್ಠಲೋಷ್ಟೈರ್ವಾ ದಹೇಯುರ್ವಾ ಕಟಾಗ್ನಿನಾ |
ಪಶುವನ್ಮಾರಯೇಯುರ್ವಾ ಕ್ಷತ್ರಿಯಾ ಯೇ ಸ್ಯುರೀದೃಶಾಃ ॥22॥
ಮೊದಲು ಹೇಳಿದ ವೀರರಾದ ಕ್ಷತ್ರಿಯರು ಅವನನ್ನು ಕಾಷ್ಠಲೋಷ್ಠಗಳಿಂದ ಹೊಡೆದಾರು! ಚಿತಾಗ್ನಿಯಿಂದ ಸುಟ್ಟಾರು! ಅಥವಾ ಪಶುಗಳಂತೆ ಕೊಂದಾರು!
ಅಧರ್ಮಃ ಕ್ಷತ್ರಿಯಸ್ಯೈಷ ಯಚ್ಛಯ್ಯಾಮರಣಂ ಭವೇತ್ |
ವಿಸೃಜನ್ ಶ್ಲೇಷ್ಮಪಿತ್ತಾನಿ ಕೃಪಣಂ ಪರಿದೇವನಮ್ ॥23॥
ಕ್ಷತ್ರಿಯನಾದವನಿಗೆ ಹಾಸಿಗೆಯಲ್ಲಿ ಮಲಗಿ, ಶ್ಲೇಷ್ಮಾದಿಗಳನ್ನು ಉಗುಳುತ್ತಾ, ಕರುಣಾಜನಕವಾಗಿ ಗೋಳಾಡುತ್ತಾ ಮರಣವನ್ನು ಹೊಂದುವುದು ಅಧರ್ಮ- ವಾದುದು.
ಅವಿಕ್ಷತೇನ ದೇಹೇನ ಪ್ರಲಯಂ ಯೋಽಧಿಗಚ್ಛತಿ |

ಕ್ಷತ್ರಿಯೋ ನಾಸ್ಯ ತತ್ ಕರ್ಮ ಪ್ರಶಂಸಂತಿ ಪುರಾವಿದಃ ॥24॥
ಯಾವ ಕ್ಷತ್ರಿಯನು ಗಾಯವಿಲ್ಲದ ದೇಹದಿಂದ ಮರಣವನ್ನು ಹೊಂದು- ತ್ತಾನೆಯೋ ಅವನ ಆ ಕರ್ಮವನ್ನು ಪ್ರಾಚೀನರು ಪ್ರಶಂಸಿಸುವುದಿಲ್ಲ.
ನ ಗೃಹೇ ಮರಣಂ ತಾತ ಕ್ಷತ್ರಿಯಾಣಾಂ ಪ್ರಶಸ್ಯತೇ |
ಶೌಂಡೀರಾಣಾಮಶೌಂಡೀರ್ಯಮಧರ್ಮ್ಯಂ ಕೃಪಣಂ ಚ ತತ್ ॥25॥
ಎಲೈ ಪ್ರೀತಿಪಾತ್ರನೇ! ಕ್ಷತ್ರಿಯರಿಗೆ ಗೃಹದಲ್ಲಿ ಮರಣವು ಪ್ರಶಸ್ತವಲ್ಲ. ಯುದ್ಧ- ಕುಶಲರಾದವರಿಗೆ ಅಕೌಶಲವು ಅಧರ್ಮಪ್ರದವಾದುದು ಮತ್ತು ದರಿದ್ರವಾದುದು.
ಇದಂ ದುಃಖಮಹೋ ಕಷ್ಟಂ ಪಾಪೀಯಮಿತಿ ನಿಷ್ಟನನ್ |
ಪ್ರತಿಧ್ವಸ್ತಮುಖಃ ಪೂತಿರಮಾತ್ಯಾನ್ ಬಹು ಶೋಚಯನ್ ॥26॥
ಅರೋಗಾಣಾಂ ಸ್ಪೃಹಯತೇ ಮುಹುರ್ಮೃತ್ಯುಮಪೀಚ್ಛತಿ |
ವೀರೋ ದೃಪ್ತೋಽಭಿಮಾನೀ ಚ ನೇದೃಶಂ ಮೃತ್ಯುಮರ್ಹತಿ ॥27॥
ಅಯ್ಯೋ ಎಂಥಾ ಕಷ್ಟ! ಎಂಥಾ ಪಾಪಸ್ಥಿತಿಯ ಅವಸ್ಥೆ ಉಂಟಾಯಿತು! ಎಂದು ಗಟ್ಟಿಯಾಗಿ ಗೋಳಾಡುತ್ತಾ, ಮುಖದ ಕಾಂತಿಯನ್ನು ಕಳೆದುಕೊಂಡು, ದುರ್ಗಂಧ -ವನ್ನು ಸೂಸುತ್ತಾ, ಕಳೆದು ಹೋದ ಅಮಾತ್ಯರನ್ನು ಸ್ಮರಿಸಿ ಬಹಳವಾಗಿ ಶೋಕ- ಪಡುತ್ತಾ, ಮತ್ತೆ ಮತ್ತೆ ಆರೋಗ್ಯವನ್ನು ಅನಂತರ ಮೃತ್ಯುವನ್ನು ಬಯಸುವವನ ಮರಣಕ್ಕೆ ಸದೃಶವಾದ ಮೃತ್ಯುವನ್ನು ಆತ್ಮಾಭಿಮಾನವುಳ್ಳ ವೀರನಾದವನು ಹೊಂದಲು ಅನರ್ಹನಾದವನು.
ರಣೇಷು ಕದನಂ ಕೃತ್ವಾ ಜ್ಞಾತಿಭಿಃ ಪರಿವಾರಿತಃ |
ತೀಕ್ಷ್ಣೈಃ ಶಸ್ತ್ರೈಃ ಸುವಿಕ್ಲಿಷ್ಟಃ ಕ್ಷತ್ರಿಯೋ ಮೃತ್ಯುಮರ್ಹತಿ ॥28॥
ಕ್ಷತ್ರಿಯನು ಜ್ಞಾತಿಗಳಿಂದ ಪರಿವಾರಿತನಾಗಿ ರಣರಂಗದಲ್ಲಿ ಹೋರಾಡಿ ತೀಕ್ಷ್ಣ- ವಾದ ಶಸ್ತ್ರಗಳಿಂದ ಗಾಯಗೊಂಡು ಮರಣವನ್ನು ಹೊಂದುವುದಕ್ಕೆ ಅರ್ಹನಾದ- ವನು.
ಶೂರೋ ಹಿ ಸತ್ಯಮನ್ಯುಭ್ಯಾಮಾವಿಷ್ಟೋ ಯುದ್ಧ್ಯತೇ ಭೃಶಮ್ |
ಕೃತ್ಯಮಾನಾನಿ ಗಾತ್ರಾಣಿ ಪರೈರ್ನೈವಾವಬುದ್ಧ್ಯತೇ॥29॥
ಶೂರನಾದವನು ಸತ್ಯ ಮತ್ತುಕೋಪಗಳಿಂದ ಆವಿಷ್ಟನಾಗಿ ತೀವ್ರವಾಗಿ ಯುದ್ಧ ಮಾಡುತ್ತಾನೆ. ಶತ್ರುಗಳ ಶಸ್ತ್ರಗಳಿಂದ ಕತ್ತರಿಸಲ್ಪಡುತ್ತಿರುವ ತನ್ನ ದೇಹವನ್ನು ಅವನು ಗಮನಿಸುವುದೇ ಇಲ್ಲ.
ಸ ಸಂಖ್ಯೇ ನಿಧನಂ ಪ್ರಾಪ್ಯ ಪ್ರಶಸ್ತಂ ಲೋಕಪೂಜಿತಮ್ |
ಸ್ವಧರ್ಮಂ ವಿಪುಲಂ ಪ್ರಾಪ್ಯ ಶಕ್ರಸ್ಯೈತಿ ಸಲೋಕತಾಮ್ ॥30॥
ಅವನು ಯುದ್ಧದಲ್ಲಿ ಲೋಕಪೂಜಿತವಾದ ಪ್ರಶಸ್ತವಾದ ಮರಣವನ್ನು ಹೊಂದಿ, ವಿಪುಲವಾದ ಸ್ವಧರ್ಮವನ್ನು ಸಂಪಾದಿಸಿ, ಇಂದ್ರನ ಸಾಲೋಕ್ಯವನ್ನು ಪಡೆಯು- ತ್ತಾನೆ.
ಸರ್ವೋ ಯೋಧಃ ಪರಂ ತ್ಯಕ್ತುಮಾವಿಷ್ಟಸ್ತ್ಯಕ್ತಜೀವಿತಃ |
ಪ್ರಾಪ್ನೋತೀಂದ್ರಸ್ಯ ಸಾಲೋಕ್ಯಂ ಶೂರಃ ಪೃಷ್ಠಮದರ್ಶಯನ್ ॥31॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನಶತತಮೋಽಧ್ಯಾಯಃ ॥99॥
ಶೂರನಾದವನು ಶತ್ರುಗಳಿಗೆ ತನ್ನ ಬೆನ್ನನ್ನು ತೋರಿಸದೇ, ಸರ್ವೋಪಾಯ- ಗಳಿಂದ ರಣರಂಗದಲ್ಲಿ ಮುಂಭಾಗದಲ್ಲಿಯೇ ನಿಂತು, ತನ್ನ ಜೀವಿತದ ಹಂಗನ್ನು ತೊರೆದು, ಯುದ್ಧವನ್ನು ಮಾಡಿ ಮರಣವನ್ನು ಹೊಂದಿ ಇಂದ್ರನ ಸಾಲೋಕ್ಯವನ್ನು ಪಡೆಯುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 99ನೆಯ ಅಧ್ಯಾಯವು ಮುಗಿಯಿತು.
0

100. ನೂರನೆಯ ಅಧ್ಯಾಯ
ಇಂದ್ರಾಂಬರೀಷಸಂವಾದಾನುವಾದ; ಸೇನಾಪತಿಯಾದ ಸುದೇವನ ಸ್ವರ್ಗವೈಭವ
ಯುಧಿಷ್ಠಿರಃ
ಕೇ ಲೋಕಾ ಯುದ್ಧ್ಯಮಾನಾನಾಂ ಶೂರಾಣಾಮನಿವರ್ತಿನಾಮ್ |
ಭವಂತಿ ನಿಧನಂ ಪ್ರಾಪ್ಯ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ಶೂರರಾಗಿ ಯುದ್ಧವನ್ನು ಮಾಡುತ್ತಾ ಹಿಮ್ಮೆಟ್ಟದೇ ನಿಧನವನ್ನು ಹೊಂದುವವರಿಗೆ ಯಾವ ಲೋಕಗಳು ಲಭಿಸುತ್ತವೆ ಎಂದು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಂಬರೀಷಸ್ಯ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಅಂಬರೀಷ- ನಿಗೂ ಮತ್ತು ಇಂದ್ರನಿಗೂ ನಡೆದ ಸಂವಾದರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಅಂಬರೀಷೋ ಹಿ ನಾಭಾಗಃ ಸ್ವರ್ಗಂ ಗತ್ವಾ ಸುದುರ್ಲಭಮ್ |
ದದರ್ಶ ಸುರಲೋಕಸ್ಥಂ ಶಕ್ರೇಣ ಸಚಿವಂ ಸಹ ॥3॥

ಸರ್ವತೇಜೋಮಯಂ ದಿವ್ಯಂ ವಿಮಾನವರಮಾಸ್ಥಿತಮ್ |
ಉಪರ್ಯುಪರಿ ಗಚ್ಛಂತಂ ಸ್ವಂ ವೈ ಸೇನಾಪತಿಂ ಪ್ರಭುಮ್ ||4||
ನಾಭಾಗಪುತ್ರನಾದ ಅಂಬರೀಷನು ಅತ್ಯಂತ ದುರ್ಲಭವಾದ ಸ್ವರ್ಗಕ್ಕೆ ಹೋಗಿ ಸ್ವರ್ಗಲೋಕದಲ್ಲಿ ಇಂದ್ರನ ಜೊತೆಯಲ್ಲಿ ಇದ್ದ ಪ್ರಕಾಶಮಾನವಾದ ದಿವ್ಯವಾದ ವಿಮಾನದಲ್ಲಿ ಕುಳಿತಿದ್ದ ಮೇಲೆ ಮೇಲೆ ಹೋಗುತ್ತಿದ್ದಂತಹ ಪ್ರಭುವಾದ ತನ್ನ ಸೇನಾಪತಿಯನ್ನು ನೋಡಿದನು.
ಸ ದೃಷ್ಟ್ವೋಪರಿ ಗಚ್ಛಂತಂ ಸೇನಾಪತಿಮುದಾರಧೀಃ |
ಋದ್ಧಿಂ ದೃಷ್ಟ್ವಾ ಸುದೇವಸ್ಯ ವಿಸ್ಮಿತಃ ಪ್ರಾಹ ವಾಸವಮ್ ||5||
ಉದಾರಬುದ್ಧಿಯುಳ್ಳ ಅಂಬರೀಷನು ಸುದೇವನ ವೈಭವವನ್ನೂ ಅವನು ತನಗಿಂತ ಮೇಲೆ ಹೋಗುತ್ತಿದ್ದುದನ್ನೂ ನೋಡಿ ವಿಸ್ಮಿತನಾಗಿ ಇಂದ್ರನನ್ನು ಕುರಿತು ಹೇಳಿದನು.
ಸಾಗರಾಂತಾಂ ಮಹೀಂ ಕೃತ್ಸ್ನಾಮನುಶಿಷ್ಯ ಯಥಾವಿಧಿ |
ಚಾತುರ್ವರ್ಣ್ಯೇ ಯಥಾಶಾಸ್ತ್ರಂ ಪ್ರವೃತ್ತೋ ಧರ್ಮಕಾಮ್ಯಯಾ ||6||
ನಾನು ಸಾಗರಾಂತವಾದ ಸಮಗ್ರವಾದ ಭೂಮಿಯನ್ನು ಶಾಸೊತ್ರೇಕ್ತರೀತಿಯಲ್ಲಿ ಪಾಲಿಸಿ, ಚಾತುರ್ವರ್ಣ್ಯದವರನ್ನು ಶಾಸೊತ್ರೇಕ್ತರೀತಿಯಲ್ಲಿಯೇ ಅವರ ಧರ್ಮದಲ್ಲಿ ತೊಡಗಿಸಿ, ಧರ್ಮವನ್ನು ಬಯಸಿ ಪ್ರವೃತ್ತನಾದೆನು.
ಬ್ರಹ್ಮಚರ್ಯೇಣ ಘೋರೇಣ ಆಚಾರ್ಯಕುಲಸೇವಯಾ |
ವೇದಾನಧೀತ್ಯ ಧರ್ಮೇಣ ರಾಜಶಾಸ್ತ್ರಂ ಚ ಕೇವಲಮ್ ||7||
ಅತಿಥೀನನ್ನಪಾನೇನ ಪಿತೄಂಶ್ಚ ಸ್ವಧಯಾ ತಥಾ |
ಋಷೀನ್ ಸ್ವಾಧ್ಯಾಯದೀಕ್ಷಾಭಿರ್ದೇವಾನ್ ಯಜ್ಞೈರನುತ್ತಮೈಃ ||8||
ಕ್ಷತ್ರಧರ್ಮೇ ಸ್ಥಿತೋ ಭೂತ್ವಾ ಯಥಾಶಾಸ್ತ್ರಂ ಯಥಾವಿಧಿ |
ಉದೀಕ್ಷಮಾಣಃ ಪೃತನಾಂ ಜಯಾಮಿ ಯುಧಿ ವಾಸವ ||9||
ಎಲೈ ವಾಸವನೇ! ಗುರುಕುಲದಲ್ಲಿ ಘೋರವಾದ ಬ್ರಹ್ಮಚರ್ಯದಿಂದ ಆಚಾರ್ಯಸೇವೆಯನ್ನು ಮಾಡಿ, ಧರ್ಮದಿಂದಲೇ ವೇದಾಧ್ಯಯನವನ್ನು ಮಾಡಿ, ರಾಜನೀತಿಶಾಸ್ತ್ರವನ್ನು ಅಧ್ಯಯನ ಮಾಡಿ, ಅತಿಥಿಗಳನ್ನು ಅನ್ನಪಾನಗಳಿಂದಲೂ, ಪಿತೃಗಳನ್ನು ಸ್ವಧೆಯಿಂದಲೂ, ಋಷಿಗಳನ್ನು ಸ್ವಾಧ್ಯಾಯ-ದೀಕ್ಷೆಗಳಿಂದಲೂ, ದೇವತೆ -ಗಳನ್ನು ಶ್ರೇಷ್ಠವಾದ ಯಜ್ಞಗಳಿಂದಲೂ ತೃಪ್ತಿಪಡಿಸಿ, ಶಾಸ್ತ್ರವಿಧಿಗಳಂತೆ ಕ್ಷತ್ರಿಯ- ಧರ್ಮದಲ್ಲೇ ನಿರತನಾಗಿ, ಸೈನ್ಯದ ಮೇಲ್ವಿಚಾರಣೆಯನ್ನು ಮಾಡಿಕೊಂಡು, ಯುದ್ಧದಲ್ಲಿ ಜಯಶೀಲನಾಗಿರುವೆನು.
ದೇವರಾಜ ಸುದೇವೋಽಯಂ ಮಮ ಸೇನಾಪತಿಃ ಪುರಾ |
ಆಸೀದ್ ಯೋಧಃ ಪ್ರಶಾಂತಾತ್ಮಾ ಸೋಽಯಂ ಕಸ್ಮಾದತೀವ ಮಾಮ್ ||10
ಎಲೈ ದೇವರಾಜನೇ! ಈ ಸುದೇವನು ಹಿಂದೆ ನನ್ನ ಸೇನಾಪತಿಯಾಗಿದ್ದವನು. ಪ್ರಶಾಂತಮನಸ್ಸುಳ್ಳ ಒಬ್ಬ ಯೋಧನಾಗಿದ್ದನು. ಅಂತಹವನು ಏಕೆ ನನ್ನನ್ನೂ ಮೀರಿ- ದ್ದಾನೆ?
ನಾನೇನ ಕ್ರತುಭಿರ್ಮುಖ್ಯೈರಿಷ್ಟಂ ನೈವ ದ್ವಿಜಾತಯಃ |
ತರ್ಪಿತಾ ವಿಧಿವಚ್ಚಕ್ರ ಸೋಽಯಂ ಕಸ್ಮಾದತೀವ ಮೇ ||11||
ಅವನು ಶ್ರೇಷ್ಠವಾದ ಕ್ರತು(ಯಜ್ಞ)ಗಳನ್ನು ಮಾಡಿದವನಲ್ಲ. ವಿಧಿವತ್ತಾಗಿ ಬ್ರಾಹ್ಮಣರನ್ನು ತೃಪ್ತಿಪಡಿಸಿದವನಲ್ಲ. ಎಲೈ ಇಂದ್ರನೇ! ಅಂತಹ ಇವನು ಏಕೆ ನನ್ನ ಮೇಲಿದ್ದಾನೆ?
ಇಂದ್ರಃ
ಯದನೇನ ಕೃತಂ ಕರ್ಮ ಪ್ರತ್ಯಕ್ಷಂ ತೇ ಮಹೀಪತೇ |
ಪುರಾ ಪಾಲಯತಃ ಸಮ್ಯಕ್ ಪೃಥಿವೀಂ ಧರ್ಮತೋ ನೃಪ ||12||
ಇಂದ್ರ ಎಲೈ ರಾಜನೇ! ನೀನು ಹಿಂದೆ ಭೂಮಿಯನ್ನು ಧರ್ಮದಿಂದ ಚೆನ್ನಾಗಿ ಆಳುತ್ತಿದ್ದಾಗ ನಿನ್ನ ಎದುರಿಗೆ ಇವನು ಎಂತಹ ಕರ್ಮವನ್ನು ಮಾಡಿದನೆಂದು ಕೇಳು.
ಶತ್ರವೋ ನಿರ್ಜಿತಾಃ ಸರ್ವೇ ಯೇ ತವಾಹಿತಕಾರಿಣಃ |
ಸಂಯಮೋ ವಿಷಮಶ್ಚೈವ ಸುಯಮಶ್ಚ ಮಹಾಬಲಃ ||13||
ರಾಕ್ಷಸಾ ದುರ್ಜಯಾ ಲೋಕೇ ತ್ರಯಸ್ತೇ ಯುದ್ಧದುರ್ಮದಾಃ |
ಪುತ್ರಾಸ್ತೇ ಶತಶೃಂಗಸ್ಯ ರಾಕ್ಷಸಸ್ಯ ಮಹೀಪತೇಃ ||14||
ನಿನಗೆ ಅಹಿತವನ್ನು ಉಂಟುಮಾಡುವ ಶತ್ರುಗಳಾದ ರಾಕ್ಷಸಾಧಿಪತಿಯಾದ ಶತಶೃಂಗನ ಪುತ್ರರಾದ ಮಹಾಬಲರಾದ ಯುದ್ಧದುರ್ಮದರಾದ ದುರ್ಜಯರಾದ ಸಂಯಮ, ವಿಷಮ ಮತ್ತು ಸುಯಮ ಎಂಬ ಮೂರು ರಾಕ್ಷಸರು ಇವನಿಂದ ಕೊಲ್ಲಲ್ಪಟ್ಟರು. (ಲಕ್ಷಾಲಂಕಾರ)
ತಥಾ ತಸ್ಮಿನ್ ಶುಭೇ ಕಾಲೇ ಯಜ್ಞೇ ಯಜ್ಞಂ ವಿತನ್ವತಃ |
ಅಶ್ವಮೇಧಂ ಮಹಾಯಾಗಂ ದೇವಾನಾಂ ಹಿತಕಾಮ್ಯಯಾ ||15||
ತಸ್ಯ ತೇ ಖಲು ವಿಘ್ನಾರ್ಥಮಾಗತಾ ರಾಕ್ಷಸಾಸ್ತ್ರಯಃ |
ಕೋಟೀಶತಪರೀವಾರಾಂ ರಾಕ್ಷಸಾನಾಂ ಮಹಾಚಮೂಮ್ ||16||
ಹಾಗೆಯೇ ಶುಭಕಾಲದಲ್ಲಿ ದೇವತೆಗಳನ್ನು ಸಂತೋಷಪಡಿಸುವ ಉದ್ದೇಶದಿಂದ ಅಶ್ವಮೇಧಮಹಾಯಾಗವನ್ನು ಮಾಡುತ್ತಿದ್ದ ನಿನ್ನ ಯಜ್ಞಕ್ಕೆ ವಿಘ್ನವನ್ನು ಉಂಟು ಮಾಡಲು ನೂರುಕೋಟಿ ಪರಿಮಿತವಾದ ರಾಕ್ಷಸರ ದೊಡ್ಡ ಸೈನ್ಯವನ್ನು ತೆಗೆದು- ಕೊಂಡು ಆ

ಮೂವರು ಬಂದರು.
ಪರಿಗೃಹ್ಯ ತತಃ ಸರ್ವಾಃ ಪ್ರಜಾ ಬಂದೀಕೃತಾಸ್ತವ |
ವಿಹ್ವಲಾಶ್ಚ ಪ್ರಜಾಃ ಸರ್ವಾಃ ಸರ್ವೇ ಚ ತವ ಸೈನಿಕಾಃ |
ನಿರಾಕೃತಸ್ತಯಾ ಚಾಸೀತ್ ಸುದೇವಃ ಸೈನ್ಯನಾಯಕಃ ॥17॥
ಅವರು ನಿನ್ನ ಪ್ರಜೆಗಳೆಲ್ಲರನ್ನೂ ಹಿಡಿದು ಬಂದಿಗಳನ್ನಾಗಿ ಮಾಡಿಕೊಂಡರು. ಎಲ್ಲ ಪ್ರಜೆಗಳೂ ಮತ್ತು ನಿನ್ನ ಸೈನಿಕರು ವಿಹ್ವಲರಾದರು. ನಿನ್ನ ಸೇನಾಪತಿಯಾದ ಸುದೇವನು ಆ ರಾಕ್ಷಸಸೇನೆಯಿಂದ ಪರಾಜಿತನಾದನು.
ತತ್ರಾಮಾತ್ಯವಚಃ ಶ್ರುತ್ವಾ ನಿರಸ್ತಃ ಸರ್ವಕರ್ಮಸು |
ಶ್ರುತ್ವಾ ತೇಷಾಂ ವಚೋ ಭೂಯಃ ಸೋಪಧಂ ವಸುಧಾಧಿಪ ॥18॥
ಸರ್ವಸೈನ್ಯಸಮಾಯುಕ್ತಃ ಸುದೇವಃ ಪ್ರಹಿತಸ್ತ್ವಯಾ |
ರಾಕ್ಷಸಾನಾಂ ವಧಾರ್ಥಾಯ ದುರ್ಜಯಾನಾಂ ನರಾಧಿಪ ॥19॥
ಆಗ ಅಮಾತ್ಯರ ಮಾತುಗಳನ್ನು ಕೇಳಿ ನೀನು ಸುದೇವನನ್ನು ಎಲ್ಲ ಕರ್ಮ- ಗಳಿಂದಲೂ ಬಹಿಷ್ಕರಿಸಿದೆ. ಎಲೈ ರಾಜನೇ ಪುನಃ ಅಮಾತ್ಯರ ಮಾತಿನಂತೆ ನೀನು ಸುದೇವನನ್ನು ಸರ್ವಸೈನ್ಯಸಮಾಯುಕ್ತನಾಗಿ ಯುದ್ಧಕ್ಕೆ ಕಳುಹಿಸಿದೆ. ಎಲೈ ರಾಜನೇ! ದುರ್ಜಯರಾದ ರಾಕ್ಷಸರ ವಧೆಗಾಗಿ ನೀನು ಅವನನ್ನು ಕಳುಹಿಸಿದೆ.
ನಾಜಿತ್ವಾ ರಾಕ್ಷಸೀಂ ಸೇನಾಂ ಪುನರಾಗಮನಂ ತವ |
ಬಂದಾನ್ಮೋಕ್ಷಮಕೃತ್ವಾ ಚ ನ ಚಾಗಮನಮಿಷ್ಯತೇ ॥20॥
`ರಾಕ್ಷಸಸೇನೆಯನ್ನು ಸೋಲಿಸದೇ ಬಂದೀಕೃತರಾದ ನನ್ನ ಪ್ರಜೆಗಳನ್ನು ಬಿಡುಗಡೆ ಮಾಡದೇ ನೀನು ಹಿಂದಿರುಗಕೂಡದು' (ಎಂದು ಅವನಿಗೆ ಹೇಳಿದೆ).
ಸುದೇವಸ್ತದ್ವಚಃ ಶ್ರುತ್ವಾ ಪ್ರಸ್ಥಾನಮಕರೋನ್ನೃಪ |
ಸಂಪ್ರಾಪ್ತಶ್ಚ ಸ ತಂ ದೇಶಂ ಯತ್ರ ಬಂದೀಕೃತಾಃ ಪ್ರಜಾಃ ॥21॥
ಎಲೈ ರಾಜನೇ! ಸುದೇವನು ಆ ಮಾತನ್ನು ಕೇಳಿ ಹೊರಟು ಸೆರೆ ಹಿಡಿಯಲ್ಪಟ್ಟ ಪ್ರಜೆಗಳಿದ್ದ ಆ ಸ್ಥಳಕ್ಕೆ ಬಂದನು.
ಪಶ್ಯತಿ ಸ್ಮ ಚಮೂರ್ಜೇತುಮಪಿ ಸೇಂದ್ರೈಃ ಸುರಾಸುರೈಃ |
ನಾಂಬರೀಷಃ ಕಲಾಮೇಕಾಮೇಷಾಂ ಕ್ಷಪಯಿತುಂ ಕ್ಷಮಃ |
ದಿವ್ಯಾಸ್ತ್ರಬಲಭೂಯಿಷ್ಠಃ ಕಿಮಂಗಃ ಪುನರೀದೃಶಃ ॥22॥
ಸೇನಾಪತಿಯಾದ ಸುದೇವನು ರಾಕ್ಷಸರ ಮಹಾಘೋರವಾದ ಮಹಾಸೈನ್ಯ- ವನ್ನು ನೋಡಿ ಚಿಂತಿಸಿದನು. ಇಂದ್ರಸಹಿತರಾದ ಸುರಾಸುರರಿಂದಲೂ ಈ ಸೈನ್ಯ- ವನ್ನು ಗೆಲ್ಲಲು ಸಾಧ್ಯವಿಲ್ಲ. ದಿವ್ಯಾಸ್ತ್ರಬಲಸಂಪನ್ನನಾದ ಅಂಬರೀಷನು ಈ ಸೈನ್ಯದ ಒಂದು ಭಾಗವನ್ನೂ ವಿನಾಶ ಮಾಡಲಾರ. ಇನ್ನು ಅವನ ಸಹಾಯಕನಾದ ನನ್ನಿಂದ ಇಂತಹ ಸೈನ್ಯವು ಹೇಗೆ ಸೋಲಿಸಲ್ಪಡುತ್ತದೆ?
ತತಃ ಸೇನಾಂ ಪುನಃ ಸರ್ವಾಂ ಪ್ರೇಷಯಾಮಾಸ ಪಾರ್ಥಿವ |
ಯಚ್ಚ ತ್ವಂ ವಿಜಿತಃ ಸರ್ವೈಮಂತ್ರಿಭಿಃ ಸೋಪಧೈಃ ಸಹ ॥24॥
ಎಲೈ ರಾಜನೇ! ಅನಂತರ ಎಲ್ಲ ಮಂತ್ರಿಗಳೂ ಸೇರಿ ಪುನಃ ಹೆಚ್ಚಿನ ಸೈನ್ಯವನ್ನು ಕಳುಹಿಸಿದರು. ಆಗ ಸೇನೆಯ ಜೊತೆಯಲ್ಲಿ ನೀನೂ ಪರಾಜಿತನಾದೆ.
ತತೋ ರುದ್ರಂ ಮಹಾದೇವಂ ಪ್ರಪನ್ನೋ ಜಗತಃ ಪತಿಮ್ |
ಶ್ಮಶಾನನಿಲಯಂ ದೇವಂ ತುಷ್ಟಾವ ವೃಷಭಧ್ವಜಮ್ ॥25॥
ಸ್ತುತ್ವಾ ಶಸ್ತ್ರಂ ಸಮಾದಾಯ ಸ್ವಶಿರಶ್ಛೇತ್ತುಮುದ್ಯತಃ ॥26॥
ಆಗ ಸುದೇವನು ಜಗತ್ಪತಿಯೂ, ಮಹಾದೇವನೂ, ಶ್ಮಶಾನವಾಸಿಯೂ ವೃಷಭಧ್ವಜನೂ ಆದ ಶಂಕರನಿಗೆ ಶರಣಾಗತನಾಗಿ ಅವನ ಸ್ತೋತ್ರವನ್ನು ಮಾಡಿ- ದನು. ಸ್ತೋತ್ರವನ್ನು ಮಾಡಿ ಶಸ್ತ್ರವನ್ನು ತೆಗೆದುಕೊಂಡು ತನ್ನ ಶಿರಸ್ಸನ್ನು ಕತ್ತರಿಸಿ- ಕೊಳ್ಳಲು ಉದ್ಯುಕ್ತನಾದನು.
ಕಾರುಣ್ಯಾದ್ ದೇವದೇವೇನ ಗೃಹೀತಸ್ತಸ್ಯ ದಕ್ಷಿಣಃ |
ಸ ಪಾಣಿಃ ಸಹ ಶಸ್ತ್ರೇಣ ದೃಷ್ಟ್ವಾ ಚೇದಮುವಾಚ ಹ ॥27॥
ದೇವದೇವನಾದ ಶಂಕರನು ಕರುಣೆಯಿಂದ ಅದನ್ನು ನೋಡಿ ಶಸ್ತ್ರಸಹಿತವಾದ ಅವನ ಬಲಗೈಯ್ಯನ್ನು ಹಿಡಿದು ಹೀಗೆ ಮಾತನಾಡಿದನಷ್ಟೇ!
ಕಿಮಿದಂ ಸಾಹಸಂ ಪುತ್ರ ಕರ್ತುಕಾಮೋ ವದಸ್ವ ಮೇ |
ಸ ಉವಾಚ ಮಹಾದೇವಂ ಶಿರಸಾ ತ್ವವನೀಂ ಗತಃ ॥28॥
ಎಲೈ ಪುತ್ರನೇ! ಇದೇನು ಸಾಹಸವನ್ನು ಮಾಡಲು ಹೊರಟಿರುವೆ ಎಂದು ನನಗೆ ಹೇಳು. (ಎಂದು ಹೇಳಿದನು). ಸುದೇವನು ಮಹಾದೇವನಿಗೆ ಭೂಮಿಯ ಮೇಲೆ ಶಿರಸಾ ನಮಸ್ಕಾರವನ್ನು ಮಾಡಿ ಹೇಳಿದನು.
ಭಗವನ್ ವಾಹಿನೀಮೇನಾಂ ರಾಕ್ಷಸಾನಾಂ ಸುರೇಶ್ವರ |
ಅಶಕ್ತೋಽಹಂ ರಣೇ ಜೇತುಂ ತಸ್ಮಾತ್ ತ್ಯಕ್ಷ್ಯಾಮಿ ಜೀವಿತಮ್ |
ಗತಿರ್ಭವ ಮಹಾದೇವ ಮಮಾರ್ತಸ್ಯ ಜಗತ್ಪತೇ ॥29॥
ಭಗವಂತನೇ! ಸುರೇಶ್ವರನೇ! ಈ ರಾಕ್ಷಸರ ಸೈನ್ಯವನ್ನು ಯುದ್ಧದಲ್ಲಿ ಗೆಲ್ಲಲು ನಾನು ಅಸಮರ್ಥನಾಗಿದ್ದೇನೆ. ಆದ್ದರಿಂದ ಪ್ರಾಣವನ್ನು ಬಿಡುವೆನು. ಜಗತ್ಪತಿಯೇ! ಮಹಾದೇವನೇ! ಆರ್ತನಾದ ನನಗೆ ಗತಿಯಾಗು.
ನಾಗಂತವ್ಯಮಜಿತ್ವಾ ಚ ಮಾಮಾಹ ಜಗತೀಪತಿಃ|

ಅಂಬರೀಷೋ ಮಹಾದೇವ ಕ್ಷಾರಿತಃ ಸಚಿವೈಃ ಸಹ ॥30॥
ಮಹಾದೇವ! ಜಗತ್ಪತಿಯಾದ ಅಂಬರೀಷನು ಸಚಿವರ ಮಾತುಗಳಿಂದ ಪ್ರಭಾ- ವಿತನಾಗಿ ರಾಕ್ಷಸಸೈನ್ಯವನ್ನು ಗೆಲ್ಲದೇ ಹಿಂದಕ್ಕೆ ಬರಬಾರದೆಂದು ನನಗೆ ಹೇಳಿದ್ದಾನೆ (ಎಂದು ಹೇಳಿದನು).
ತಮುವಾಚ ಮಹಾದೇವಃ ಸುದೇವಂ ಪತಿತಂ ಕ್ಷಿತೌ |
ಅಧೋಮುಖಂ ಮಹಾತ್ಮಾನಂ ಸತತತ್ವನಾಂ ಹಿತಕಾಮ್ಯಯಾ ॥31॥
ಭೂಮಿಯ ಮೇಲೆ ಬಿದ್ದು ಅಧೋಮುಖನಾಗಿ ನಮಸ್ಕಾರವನ್ನು ಮಾಡಿ ಪ್ರಜೆಗಳ ಹಿತವನ್ನು ಬಯಸುತ್ತಿದ್ದ ಮಹಾತ್ಮನಾದ ಸುದೇವನನ್ನು ಕುರಿತು ಮಹಾ- ದೇವನು ಹೇಳಿದನು.
ಧನುರ್ವೇದಂ ಸಮಾಹೂಯ ಸಗಣಂ ಸಹವಿಗ್ರಹಮ್ |
ರಥನಾಗಾಶ್ವಕಲಿಲಂ ದಿವ್ಯಾಸ್ತ್ರಸಮಲಂಕೃತಮ್ ॥32॥
ರಥಂ ಚ ಸುಮಹಾಭಾಗಂ ಯೇನ ತತ್ ತ್ರಿಪುರಂ ಹತಮ್ |
ಧನುಃ ಪಿನಾಕಂ ಖಡ್ಗಂ ಚ ರೌದ್ರಮಸ್ತ್ರಂ ಚ ಶಂಕರಃ |
ನಿಜಘಾನಾಸುರಾನ್ ಸರ್ವಾನ್ ಯೇನ ದೇವಸ್ತ್ರಿಯಂಬಕಃ ॥33॥
ಉವಾಚ ಚ ಮಹಾದೇವಃ ಸುದೇವಂ ವಾಹಿನೀಪತಿಮ್ |
ರಥಾದಸ್ಮಾತ್ ಸುದೇವ ತ್ವಂ ದುರ್ಜಯಃ ಸ ಸುರಾಸುರೈಃ ॥34॥
ಮಹಾದೇವನು ಶರೀರವನ್ನು ಧರಿಸಿದ ಅಂಗಸಹಿತವಾದ ಧನುರ್ವೇದವನ್ನು ಕರೆದು ರಥಗಜಾಶ್ವಗಳಿಂದ ಕೂಡಿದ ದಿವ್ಯಾಸ್ತ್ರಗಳಿಂದ ಅಲಂಕೃತವಾದ ತ್ರಿಪುರಾ- ಸುರರನ್ನು ಸಂಹಾರಮಾಡಿದ ರಥವನ್ನೂ, ಪಿನಾಕಧನುಸ್ಸನ್ನೂ, ಖಡ್ಗವನ್ನೂ, ಯಾವ ತನ್ನ ಅಸ್ತ್ರದಿಂದ ತ್ರ್ಯಂಬಕನಾದ ಶಂಕರನು ಎಲ್ಲ ಅಸುರರನ್ನು ಸಂಹರಿಸಿ- ದನೋ ಅಂತಹ ಅಸ್ತ್ರವನ್ನೂ ಸುದೇವನಿಗೆ ಕೊಟ್ಟು, ಸೇನಾಪತಿಯಾದ ಸುದೇವ- ನನ್ನು ಕುರಿತು ``ಎಲೈ ಸುದೇವನೇ! ಇಂತಹ ಸಲಕರಣೆಗಳಿಂದ ಕೂಡಿದ ರಥದಿಂದ ಯುದ್ಧವನ್ನು ಮಾಡಿದರೆ ನೀನು ದೇವಾಸುರರಿಂದಲೂ ದುರ್ಜನಾಗುವಿ''.
ಮಾಯಯಾ ಮೋಹಿತೋ ಭೂಮೌ ನ ಪದಂ ಕರ್ತುಮರ್ಹಸಿ |
ರಥಸ್ಥಸ್ತ್ರಿದಶಾನ್ ಸರ್ವಾನ್ ಜೇಷ್ಯಸಿ ತ್ವಂ ಸದಾನವಾನ್ ॥35॥
ಪ್ರಮಾದಕ್ಕೆ ಒಳಗಾಗಿ ಭೂಮಿಯ ಮೇಲೆ ಕಾಲಿಡಬೇಡ. ಈ ರಥದಲ್ಲಿ ಕುಳಿತು ಯುದ್ಧವನ್ನು ಮಾಡಿದರೆ ನೀನು ಎಲ್ಲಾ ದೇವತೆಗಳನ್ನೂ ಮತ್ತು ದಾನವರನ್ನೂ ಗೆಲ್ಲುವಿ.
ರಾಕ್ಷಸಾಶ್ಚ ಪಿಶಾಚಾಶ್ಚ ನ ಶಕ್ತಾ ದ್ರಷ್ಟುಮೀದೃಶಮ್ |
ರಥಂ ಸೂರ್ಯಸಹಸ್ರಾಭಂ ಕಿಮು ಯೋದ್ಧುಂ ತ್ವಯಾ ಸಹ ॥36॥
ರಾಕ್ಷಸರು ಮತ್ತು ಪಿಶಾಚಿಗಳು ಸಹಸ್ರಸೂರ್ಯರ ಪ್ರಭೆಯುಳ್ಳ ಈ ರಥವನ್ನು ನೋಡಲೂ ಸಹ ಸಾಧ್ಯವಿಲ್ಲ. ಇನ್ನು ನಿನ್ನ ಜೊತೆಯಲ್ಲಿ ಹೇಗೆ ಯುದ್ಧವನ್ನು ಮಾಡಿ ಯಾರು? (ಎಂದು ಹೇಳಿದನು)
ಸ ಜಿತ್ವಾ ರಾಕ್ಷಸಾನ್ ಸರ್ವಾನ್ ಕೃತ್ವಾ ಬಂದೀವಿಮೋಕ್ಷಣಮ್ |
ಘಾತಯಿತ್ವಾ ಚ ತಾನ್ ಸರ್ವಾನ್ ಬಾಹುಯುದ್ಧೇ ತ್ವಯಂ ಹತಃ |
ವಿಷಮಂ ಪ್ರಾಪ್ಯ ಭೂಪಾಲ ವಿಷಮಶ್ಚ ನಿಪಾತಿತಃ ॥37॥
ಸುದೇವನಾದರೋ ರಾಕ್ಷಸರೆಲ್ಲರನ್ನೂ ಗೆದ್ದು, ಬಂದೀಕೃತರಾದ ಪ್ರಜೆಗಳನ್ನು ವಿಮೋಚನೆಗೊಳಿಸಿ, ತನ್ನ ಸೈನ್ಯದಿಂದ ಆ ರಾಕ್ಷಸರೆಲ್ಲರನ್ನೂ ಕೊಲ್ಲಿಸಿ, ಬಾಹು- ಯುದ್ಧದಲ್ಲಿ ವಿಷಮನೆಂಬ ರಾಕ್ಷಸನನ್ನು ಭೂಮಿಯಲ್ಲಿ ಕೆಡವಿ ಅವನನ್ನೂ ಕೊಂದು ತಾನೂ ಹತನಾದನು.
ಏತಸ್ಯ ವಿತತಸ್ತಾತ ಸುದೇವಸ್ಯ ಬಭೂವ ಹ |
ಸಂಗ್ರಾಮಯಜ್ಞಃ ಸುಮಹಾನ್ ಯಶ್ಚಾನ್ಯೋ ಯುದ್ಧ್ಯತೇ ನರಃ ॥38॥
ಎಲೈ ಪ್ರೀತಿಪಾತ್ರನೇ! ಈ ಸುದೇವನ ಸಂಗ್ರಾಮಯಜ್ಞವು ಬಹಳ ದೊಡ್ಡದಾಗಿ ಮತ್ತು ವಿಸ್ತಾರವಾಗಿ ನಡೆಯಿತು. ಬೇರೆ ಯಾವ ಮನುಷ್ಯನು ಯುದ್ಧವನ್ನು ಮಾಡಿ- ದರೂ ಹಾಗೆಯೇ ನಡೆಯುತ್ತದೆ.
ಸನ್ನದ್ಧೋ ದೀಕ್ಷಿತಃ ಸರ್ವೋ ಯೋಧಃ ಪ್ರಾಪ್ಯ ಚಮೂಮುಖಮ್ |
ಯುದ್ಧಯಜ್ಞಾಧಿಕಾರಸ್ಥೋ ಭವತೀತಿ ವಿನಿಶ್ಚಯಃ ॥39॥
ಶಸ್ತ್ರಸನ್ನದ್ಧನಾಗಿ ಯುದ್ಧದೀಕ್ಷೆಯನ್ನು ಪಡೆದ ಪ್ರತಿಯೊಬ್ಬ ಯೋಧನೂ ಸೇನಾಮುಖವನ್ನು ತಲುಪಿ ಯುದ್ಧಯಜ್ಞದಲ್ಲಿ ಅಧಿಕಾರಿಯಾಗುತ್ತಾನೆ ಎಂಬುದು ಅತ್ಯಂತ ನಿಶ್ಚಿತವಾದುದು. (ಎಂದು ಹೇಳಿದನು)
ಅಂಬರೀಷಃ
ಕಾನಿ ಯಜ್ಞೇ ಹವೀಂಷ್ಯತ್ರ ಕಿಮಾಜ್ಯಂ ಕಾ ಚ ದಕ್ಷಿಣಾ |
ಋತ್ವಿಜಶ್ಚಾತ್ರ ಕೇ ಪ್ರೋಕ್ತಾಸ್ತನ್ಮೇ ಬ್ರೂಹಿ ಶತಕ್ರತೋ ॥40॥
ಅಂಬರೀಷ ಈ ಯಜ್ಞದಲ್ಲಿ ಹವಿಸ್ಸು ಯಾವುದು? ಆಜ್ಯವು ಯಾವುದು? ದಕ್ಷಿಣೆಯು ಯಾವುದು? ಋತ್ವಿಜರು ಯಾರು? ಎಲೈ ಇಂದ್ರನೇ! ಇದನ್ನು ನನಗೆ ಹೇಳು.
ಇಂದ್ರಃ
ಋತ್ವಿಜಃ ಕುಂಜರಾಸ್ತತ್ರ ವಾಜಿನೋಽಧ್ವರ್ಯವಸ್ತಥಾ |
ಹವೀಂಷಿ ಪರಮಾಂಸಾನಿ ರುಧಿರಂ ತ್ವಾಜ್ಯಮೇವ ಚ ॥41॥
ಇಂದ್ರ ಆ ಯಜ್ಞದಲ್ಲಿ ಗಜಗಳು ಋತ್ವಿಜರು. ಅಶ್ವಗಳು ಅಧ್ವರ್ಯುಗಳು. ಶತ್ರುಗಳ ಮಾಂಸವು ಹವಿಸ್ಸು. ಮತ್ತು ರಕ್ತವು ಆಜ್ಯ.

ಸೃಗಾಲಗೃಧ್ರಕಾಕೋಲಾಃ ಸದಸ್ಯಾಸ್ತತ್ರ ಸತ್ರಿಣಃ |
ಆಜ್ಯಶೇಷಂ ಪಿಬಂತ್ಯೇತೇ ಹವಿಃ ಪ್ರಾಶ್ನಂತಿ ಚಾಧ್ವರೇ ||42||
ನರಿ, ಹದ್ದು, ಕಾಗೆ, ಗೂಬೆಗಳು ಯಜ್ಞದಲ್ಲಿರುವ ಸದಸ್ಯರು. ಇವರು ಆಜ್ಯ- ಶೇಷವನ್ನು ಪಾನ ಮಾಡುತ್ತಾರೆ. ಯಜ್ಞದಲ್ಲಿ ಹವಿಸ್ಸನ್ನು ತಿನ್ನುತ್ತಾರೆ.
ಪ್ರಾಸತೋಮರಸಂಘಾತಾಃ ಖಡ್ಗಶಕ್ತಿಪರಶ್ವಧಾಃ |
ಜ್ವಲಂತೋ ನಿಶಿತಾಃ ಪೀತಾಃ ಸ್ರುಚಸ್ತಸ್ಯಾಥ ಸತ್ರಿಣಃ ||43||
ಪ್ರಕಾಶಿಸುವ ಹರಿತವಾದ ನೀರನ್ನು ಕುಡಿಸಿ ಹದಮಾಡಿದ ಪ್ರಾಸತೋಮರಗಳ ಸಮೂಹಗಳು, ಖಡ್ಗಶಕ್ತಿಪರಶುಗಳು ವೀರನ ಆ ಯಜ್ಞದಲ್ಲಿ ಸ್ರುಕ್ಕುಗಳು.
ಚಾಪವೇಗಾಯತಸ್ತೀಕ್ಷ್ಣಃ ಪರಕಾಯಾವದಾರಣಃ|
ಋಜುಃ ಸುನಿಶಿತಃ ಪೀತಃ ಸಾಯಕೋಽಸ್ಯ ಸ್ರುವೋ ಮಹಾನ್ ||44||
ಬಿಲ್ಲಿನ ವೇಗದಿಂದ ಹೊರಹೊಮ್ಮುವ ತೀಕ್ಷ್ಣವಾದ, ಶತ್ರುಶರೀರಭೇದಕವಾದ, ನೇರವಾದ, ಹರಿತವಾದ, ನೀರುಕುಡಿಸಿದ ಬಾಣವು ಅಲ್ಲಿ ದೊಡ್ಡ ಸ್ರುವ.
ದ್ವೀಪಿಚರ್ಮಾವನದ್ಧಶ್ಚ  ನಾಗದಂತಕೃತತ್ಸರುಃ |
ಹಸ್ತಿಹಸ್ತಗತಃ ಖಡ್ಗಃ ಸ್ಫ್ಯೋ ಭವೇತ್ ತಸ್ಯ ಸಂಯುಗೇ ||45||
ಆನೆಯ ದಂತದಿಂದ ಮಾಡಿದ ಹಿಡಿಯನ್ನು ಹೊಂದಿ, ವ್ಯಾಘ್ರಚರ್ಮದಿಂದ ಸುತ್ತಲ್ಪಟ್ಟಿರುವ, ಗಜಾರೋಹಿಯ ಹಸ್ತದಲ್ಲಿರುವ ಖಡ್ಗವು ಆ ಯುದ್ಧರೂಪವಾದ ಯಜ್ಞದಲ್ಲಿ ಸ್ಫ್ಯ ಎಂಬ ಖದಿರವೃಕ್ಷದ ಆಯುಧವಿಶೇಷ.
ಜ್ವಲಿತೈರ್ನಿಶಿತೈಃ ಪೀತೈಃ ಪ್ರಾಸಶಕ್ತಿಪರಶ್ವಧೈಃ |
ಶೈಕ್ಯಾಯಸಮಯೈಸ್ತೀಕ್ಷ್ಣೈರಭಿಘಾತೋ ಭವೇದ್ ವಸು ||46||
ಪ್ರಕಾಶಿಸುವ, ಹರಿತವಾದ, ನೀರನ್ನು ಕುಡಿಸಿ ಹದಮಾಡಿದ, ಪೂರ್ಣವಾಗಿ ಕಬ್ಬಿಣದಿಂದ ಮಾಡಿದ, ತೀಕ್ಷ್ಣವಾದ ಪ್ರಾಸಶಕ್ತಿಪರಶುಗಳ ಪ್ರಹಾರವು ಧನವಾಗು- ತ್ತದೆ.
ಆವೇಗಾದ್ ಯತ್ತು ರುಧಿರಂ ಸಂಗ್ರಾಮೇ ಸ್ಯಂದತೇ ಭುವಿ |
ಸಾಽಸ್ಯ ಪೂರ್ಣಾಹುತಿರ್ಹೋತ್ರೇ ಸಮೃದ್ಧಾ ಸರ್ವಕಾಮಧುಕ್ ||47||
ಯುದ್ಧದಲ್ಲಿ ಭೂಮಿಯ ಮೇಲೆ ವೇಗದಿಂದ ಹರಿಯುವ ರಕ್ತದ ನದಿಯು ಆ ಯಜ್ಞದ ಪೂರ್ಣಾಹುತಿ. ಅದು ಹೋತೃವಿಗೆ ಸಮೃದ್ಧವಾದ ಸರ್ವಫಲವನ್ನೂ ಕೊಡುವಂತಹದು.
ಛಿಂಧಿ ಭಿಂಧೀತಿ ಯಸ್ಯೈತಚ್ಛ್ರೂಯತೇ ವಾಹಿನೀಮುಖೇ |
ಸಾಮಾನಿ ಸಾಮಗಾಸ್ತಸ್ಯ ಗಾಯಂತಿ ಯಮಸಾದನೇ ||48||
ಯುದ್ಧದಲ್ಲಿ ಸೇನಾಮುಖದಲ್ಲಿ ಕೇಳಿಬರುವ `ಹೊಡೆ, ಕತ್ತರಿಸು' ಮೊದಲಾದ ಶಬ್ದಗಳು ಸಾಮಗಳು. ಅದನ್ನು ಹೇಳುವ ಯೋಧರು ಯುದ್ಧದಲ್ಲಿ ಸಾಮ- ಗಾಯನವನ್ನು ಮಾಡುವವರು. (ಲಕ್ಷ್ಯಾಲಂಕಾರ)
ಹವಿರ್ಧಾನಂ ತು ತಸ್ಯಾಹುಃ ಪರೇಷಾಂ ವಾಹಿನೀಮುಖಮ್ |
ಕುಂಜರಾಣಾಂ ಹಯಾನಾಂ ಚ ವರ್ಮಿಣಾಂ ಚ ಸಮುಚ್ಚಯಃ ||49||
ಅಗ್ನಿಃ ಶ್ಯೇನಚಿತೋ ನಾಮ ತಸ್ಯ ಯಜ್ಞೇ ವಿಧೀಯತೇ |
ಶತ್ರುಸೈನ್ಯದ ಮುಂಭಾಗವು ಹವಿರ್ಧಾನ ಎಂದು ಹೇಳಲ್ಪಡುತ್ತದೆ. ಗಜಗಳ ಅಶ್ವಗಳ ಕವಚಧಾರಿಯೋಧರ ಸಮೂಹವು ಆ ಯಜ್ಞದಲ್ಲಿ ಶ್ಯೇನಚಿತ ಎಂಬ ಅಗ್ನಿಯೆಂದು ಹೇಳಲ್ಪಡುತ್ತದೆ.
ಉತ್ತಿಷ್ಠತಿ ಕಬಂಧೋಽತ್ರ ಸಹಸ್ರೇ ನಿಹತೇ ತು ಯಃ |
ಸ ಯೂಪಸ್ತಸ್ಯ ಶೂರಸ್ಯ ಖಾದಿರೋಽಷ್ಟಾಶ್ರಿರುಚ್ಯತೇ ||50||
ಸಹಸ್ರಯೋಧರು ಹತರಾದಾಗ ಯಾವ ಶೂರನ ಮುಂಡ ಮೇಲೇಳು- ತ್ತದೆಯೋ ಅದು ಖದಿರವೃಕ್ಷದ ಎಂಟು ಮೂಲೆಗಳಿರುವ ಯೂಪ.
ಇಹೋಪಹೂತಂ ಕ್ರೋಶಂತಿ ಕುಂಜರಾ ಅಂಕುಶೇರಿತಾಃ |
ವ್ಯಾಘುಷ್ಟತಳನಾದೇನ ವಷಟ್ಕಾರೇಣ ಪಾರ್ಥಿವ |
ಉದ್ಗಾತಾ ತತ್ರ ಸಂಗ್ರಾಮೇ ತ್ರಿಸಾಮಾ ದುಂದುಭಿಃ ಸ್ಮೃತಃ ||51||
ಈ ಯುದ್ಧದಲ್ಲಿ ಅಂಕುಶದಿಂದ ಪ್ರೇರೇಪಿಸಲ್ಪಟ್ಟ ಗಜಗಳ ಗರ್ಜನೆಯು ದೇವತಾಹ್ವಾನ. ಎಲೈ ರಾಜನೇ! ಗಟ್ಟಿಯಾಗಿ ಹೊಡೆದ ಚಪ್ಪಾಳೆಯು ವಷಟ್ಕಾರ. ದುಂದುಭಿಯು ಅಲ್ಲಿ ಮೂರು ಸಾಮಗಳನ್ನು ಗಾನ ಮಾಡುವ ಉದ್ಗಾತೃವೆಂದು ಹೇಳಲ್ಪಡುತ್ತದೆ.
ಬ್ರಹ್ಮಸ್ವೇ ಹ್ರಿಯಮಾಣೇ ಯಃ ಪ್ರಿಯಾಂ ಯುದ್ಧೇ ತನುಂ ತ್ಯಜೇತ್ |
ಆತ್ಮಾನಂ ಯೂಪಮುಚ್ಛ್ರಿತ್ಯ ಸ ಯಜ್ಞೋಽನಂತದಕ್ಷಿಣಃ ||52||
ಬ್ರಾಹ್ಮಣನ ಸ್ವತ್ತು ಅಪಹಾರವಾದಾಗ ಯಾವನು ಯುದ್ಧಮಾಡಿ ತನ್ನನ್ನೇ ಯೂಪವಾಗಿಸಿಕೊಂಡು ಎತ್ತಿ ತನಗೆ ಪ್ರಿಯವಾದ ಶರೀರವನ್ನು ತ್ಯಜಿಸುತ್ತಾನೆಯೋ ಅದು ಅನಂತದಕ್ಷಿಣೆಯುಳ್ಳ ಯಜ್ಞ.
ಭರ್ತುರರ್ಥೇ ತು ಯಃ ಶೂರೋ ವಿಕ್ರಮೇದ್ ವಾಹಿನೀಮುಖೇ |
ಭಯಾನ್ನ ಚ ನಿವರ್ತೇತ ತಸ್ಯ ಲೋಕಾ ಯಥಾ ಮಮ ||53||
ತನ್ನ ಪ್ರಭುವಿನ ಸಲುವಾಗಿ ಯಾವ ಶೂರನು ರಣರಂಗದಲ್ಲಿ ವಿಕ್ರಮವನ್ನು ತೋರಿಸುವನೋ, ಭಯದಿಂದ ಹಿಂದಿರುಗುವುದಿಲ್ಲವೋ ಅವನಿಗೆ ಲಭ್ಯವಾಗುವ ಲೋಕಗಳು ನನ್ನ ಲೋಕಗಳಂತೆಯೇ ಇರುತ್ತವೆ.

ನೀಲಚಂದ್ರಾಕೃತೈಃ ಖಡ್ಗೈರ್ಬಾಹುಭಿಃ ಪರಿಘೋಪಮೈಃ |
ಯಸ್ಯ ವೇದಿರುಪಸ್ತೀರ್ಣಾ ತಸ್ಯ ಲೋಕಾ ಯಥಾ ಮಮ ॥54॥
ನೀಲಮಣಿ ಮತ್ತು ಚಂದ್ರಚಿಹ್ನೆಗಳಿಂದ ಅಲಂಕೃತವಾದ ಖಡ್ಗಸಹಿತವಾದ ಒನಕೆ -ಯಂತಹ ಶತ್ರುಗಳ ಬಾಹುಗಳಿಂದ ಯಾವನ ರಣಭೂಮಿಯು ಹರಡಲ್ಪಡು- ತ್ತದೆಯೋ ಅವನ ಲೋಕಗಳು ನನ್ನ ಲೋಕಗಳಂತೆಯೇ.
ಯಸ್ತು ನಾವೇಕ್ಷತೇ ಕಂಚಿತ್ ಸಹಾಯಂ ವಿಜಯೇ ಸ್ಥಿತಃ |
ವಿಗಾಹ್ಯ ವಾಹಿನೀಮಧ್ಯಂ ತಸ್ಯ ಲೋಕಾ ಯಥಾ ಮಮ ॥55॥
ಯಾವನು ವಿಜಯದಲ್ಲಿ ನಿರತನಾಗಿ ಯಾವ ಸಹಾಯವನ್ನೂ ನಿರೀಕ್ಷಿಸದೇ ಶತ್ರುಸೈನ್ಯಮಧ್ಯವನ್ನು ಪ್ರವೇಶಿಸುತ್ತಾನೆಯೋ ಅವನ ಲೋಕಗಳು ನನ್ನ ಲೋಕಗ- ಳಂತೆಯೇ.
ಯಸ್ಯ ತೋಮರಸಂಘಾಟಾ ಭೇರೀಮಂಡೂಕಕಚ್ಛಪಾ |
ವೀರಾಸ್ಥಿಶರ್ಕರಾ ದುರ್ಗಾ ಮಾಂಸಶೋಣಿತಕರ್ದಮಾ ॥56॥
ಅಸಿಚರ್ಮಪ್ಲವಾ ಸಿಂಧುಃ ಕೇಶಶೈವಲಶಾದ್ವಲಾ |
ಅಶ್ವನಾಗರಥೈಶ್ಚೈವ ಸಂಭಿನ್ನೈಃ ಕೃತಸಂಕ್ರಮಾ ॥57॥
ಪತಾಕಾಧ್ವಜವಾನೀರಾ ಹತವಾಹನವಾಹಿನೀ |
ಶೋಣಿತೋದಾ ಸುಸಂಪೂರ್ಣಾ ದುಸ್ತರಾ ಪಾರಗೈರ್ನರೈಃ ॥58॥
ಹತನಾಗಮಹಾನಕ್ರಾ ಪರಲೋಕವಹಾಶಿವಾ |
ಋಷ್ಟಿಖಡ್ಗಧ್ವಜಾನೂಕಾ ಗೃಧ್ರಕಂಕವಡಪ್ಲವಾ ॥59॥
ಪುರುಷಾದಾನುಚರಿತಾ ಭೀರೂಣಾಂ ಕಶ್ಮಲಾವಹಾ |
ನದೀ ಯೋಧಮಹಾಯಜ್ಞೇ ತದಸ್ಯಾವಭೃಥಂ ಸ್ಮೃತಮ್ ॥60॥
ಯಾವ ಯೋಧನ ಯುದ್ಧರೂಪವಾದ ಮಹಾಯಜ್ಞದಲ್ಲಿ ತೋಮರ- ಗಳೆಂಬ ದೊಡ್ಡ ಕಲ್ಲುಗಳಿಂದ ಕೂಡಿದ, ಭೇರಿಗಳೆಂಬ ಮಂಡೂಕ ಮತ್ತು ಆಮೆಗಳಿಂದ ಕೂಡಿದ, ವೀರರ ಅಸ್ಥಿಗಳೆಂಬ ಮರಳುಗಳಿಂದ ಕೂಡಿದ, ದಾಟಲು ಅಸಾಧ್ಯವಾದ ರಕ್ತಮಾಂಸಗಳೆಂಬ ಕೆಸರಿನಿಂದ ಕೂಡಿದ, ಖಡ್ಗಚರ್ಮಗಳೆಂಬ ದೋಣಿಗಳನ್ನು ಹೊಂದಿದ, ಯೋಧರ ತಲೆಕೂದಲುಗಳೆಂಬ ಶೈವಲದಿಂದ ಮೃದುವಾದ, ಕತ್ತರಿಸಲ್ಪಟ್ಟ ಅಶ್ವಗಜರಥಗಳ ಭಾಗಗಳಿಂದ ಮಿಶ್ರಿತವಾದ, ಪತಾಕೆಗಳು ಮತ್ತು ಧ್ವಜಗಳು ಎಂಬ ಬೆತ್ತದ ಮರಗಳುಳ್ಳ, ಹತವಾದ ಅಶ್ವಾದಿವಾಹನಗಳನ್ನು ಸೆಳೆದೊಯ್ಯುವ, ರಕ್ತಜಲದಿಂದ ಸಂಪೂರ್ಣವಾಗಿ ಕೂಡಿದ, ದಡದಲ್ಲಿರುವ ನರರು ದಾಟಲು ಸಾಧ್ಯವಾಗದ, ಹತವಾದ ಆನೆಗಳೆಂಬ ದೊಡ್ಡ ಮೊಸಳೆಗಳಿಂದ ಕೂಡಿದ, ಪರಲೋಕದ ಎಡೆಗೆ ಹರಿಯುವ, ನೋಡಲು ಅಮಂಗಳವಾದ, ಋಷ್ಟಿಗಳು ಖಡ್ಗಗಳು ಧ್ವಜಗಳೆಂಬ ಶಿಲೆಗಳಿಂದ ಕೂಡಿದ, ಹದ್ದು-ಕಾಗೆ-ಕಂಕ ಮೊದಲಾದ ಸಣ್ಣದೋಣಿಗಳಿಂದ ಕೂಡಿದ, ರಾಕ್ಷಸರಿಂದ ಸಂಚರಿಸಲ್ಪಡುವ, ಭೀರುಗಳಿಗೆ ಹೆದರಿಕೆಯನ್ನುಂಟು ಮಾಡುವ ನದಿಯು ಹರಿಯುತ್ತದೆಯೋ ಅದು ಅವಭೃಥ- ಸ್ನಾನವೆಂದು ಹೇಳಲ್ಪಡುತ್ತದೆ.
ವೇದೀ ಯಸ್ಯ ತ್ವಮಿತ್ರಾಣಾಂ ಶಿರೋಭಿರವಕೀರ್ಯತೇ |
ಅಶ್ವಸ್ಕಂಧೈರ್ಗಜಸ್ಕಂಧೈಸ್ತಸ್ಯ ಲೋಕಾ ಯಥಾ ಮಮ ॥61॥
ಯಾವ ಯೋಧನ ರಣವೇದಿಕೆಯು ಶತ್ರುಗಳ ತಲೆಬುರುಡೆಗಳಿಂದಲೂ, ಅಶ್ವಸ್ಕಂಧಗಳಿಂದಲೂ, ಗಜಸ್ಕಂಧಗಳಿಂದಲೂ ಹರಡಲ್ಪಡುತ್ತದೆಯೋ ಅವನು ಪಡೆಯುವ ಲೋಕಗಳು ನನ್ನ ಲೋಕಗಳಂತೆಯೇ.
ಪತ್ನೀಶಾಲಾ ಕೃತಾ ಯಸ್ಯ ಪರೇಷಾಂ ವಾಹಿನೀಮುಖಮ್ |
ಹವಿರ್ಧಾನಂ ಸ್ವವಾಹಿನ್ಯಸ್ತದಸ್ಯಾಹುರ್ಮನೀಷಿಣಃ ॥62॥
ಯಾವನಿಗೆ ಶತ್ರುಸೈನ್ಯದ ಮುಂಭಾಗವು ಪತ್ನೀಶಾಲೆಯೋ ಅವನಿಗೆ ಜ್ಞಾನಿಗಳು ತನ್ನ ಸೈನ್ಯವು ಹವಿರ್ಧಾನವೆಂದು ಹೇಳುತ್ತಾರೆ.
ಸದಸ್ಯೋತ್ತರಯೋಧಾಗ್ನಿರಾಗ್ನೀಧ್ರಸ್ಯೋತ್ತರಾಂ ದಿಶಮ್ |
ಶತ್ರುಸೇನಾಕಲತ್ರಸ್ಯ ಸರ್ವಲೋಕಾನದೂರತಃ ॥63॥
ಸದಸ್ಯರ ಉತ್ತರದಲ್ಲಿರುವ ಯೋಧರೆಂಬ ಅಗ್ನಿಯೇನಿದೆಯೋ ಅದು ಆಗ್ನೀಧ್ರನ ಉತ್ತರದಿಕ್ಕಿನಲ್ಲಿ ಶತ್ರುಸೇನೆಯನ್ನು ಭಾರ್ಯೆಯಾಗಿ ಹೊಂದಿದ ಯೋಧ- ನಿಗೆ ಅವನು ಪಡೆಯುವ ಸರ್ವಲೋಕಗಳಿಗೆ ಸಮೀಪದಲ್ಲಿರುವಂತಹದು.
ಯದಾ ತೂಭಯತೋ ವ್ಯೂಹೋ ಭವತ್ಯಾಕಾಶಮಗ್ರತಃ |
ಸಾಽಸ್ಯ ವೇದೀ ತಥಾ ಯಜ್ಞೇ ಯಸ್ಯ ವೇದಾಸ್ತ್ರಯೋಽಗ್ನಯಃ ॥64॥
ಯಾವಾಗ ಎರಡು ಕಡೆಗಳಲ್ಲಿಯೂ ಸೈನ್ಯವು ಸೇರಿ ಅದರ ಮಧ್ಯದಲ್ಲಿ ಯೋಧನ ಮುಂಭಾಗದಲ್ಲಿ ಅವಕಾಶವು ಇರುವುದೋ ಅದು ಅವನ ವೇದಿ. ಆ ಯಜ್ಞದಲ್ಲಿ ಧನುರ್ವೇದವು ಮೂರು ಅಗ್ನಿಗಳು.
ಯಸ್ತು ಯೋಧಃ ಪರಾವೃತಃ ಸಂತ್ರಸ್ತೋ ಹನ್ಯತೇ ಪರೈಃ |
ಅಪ್ರತಿಷ್ಠಂ ಸ ನರಕಂ ಯಾತಿ ನಾಸ್ತ್ಯತ್ರ ಸಂಶಯಃ ॥65॥
ಯಾವ ಯೋಧನು ಯುದ್ಧಕ್ಕೆ ಹೆದರಿ ಹಿಂದಿರುಗುತ್ತಾ ಶತ್ರುಗಳಿಂದ ಕೊಲ್ಲ- ಲ್ಪಡುತ್ತಾನೆಯೋ ಅಂತಹವನು ನೆಲೆಯಿಲ್ಲದ ನರಕವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ಯಸ್ಯ ಶೋಣಿತವೇಗೇನ ನದೀ ಸ್ಯಾತ್ ಸಮಭಿಪ್ಲುತಾ |
ಕೇಶಮಾಂಸಾಸ್ಥಿಸಂಕೀರ್ಣಾ ಸ ಗಚ್ಛೇತ್ ಪರಮಾಂ ಗತಿಮ್ ॥66॥
ಯುದ್ಧದಲ್ಲಿ ಮೊದಲೇ ಹರಿಯುವ ಕೇಶ-ಮಾಂಸ-ಅಸ್ಥಿಗಳಿಂದ ಕೂಡಿದ ನದಿಯು ಯಾವನ ರಕ್ತದಿಂದ ಬೆರೆತು ವೇಗವಾಗಿ ಹರಿಯುತ್ತದೆಯೋ ಅಂತಹ- ವನು ಶ್ರೇಷ್ಠವಾದ ಗತಿಯನ್ನು ಹೊಂದುವನು.

ಯಸ್ತು ಸೇನಾಪತಿಂ ಹತ್ವಾ ತದ್ಯಾನಮಧಿರೋಹತಿ |
ಸ ವಿಷ್ಣುವಿಕ್ರಮಕ್ರಾಮೀ ಬೃಹಸ್ಪತಿಸಮಃ ಕ್ರತುಃ ॥67॥
ಯಾವನು ಶತ್ರುಸೇನಾಪತಿಯನ್ನು ಕೊಂದು ಅವನ ರಥವನ್ನು ಏರುತ್ತಾನೆಯೋ ಅವನು ವಿಷ್ಣುವಿನ ವಿಕ್ರಮಕ್ಕೆ ಸಮನಾದ ವಿಕ್ರಮವುಳ್ಳವನು. ಅವನು ಮಾಡುವ ಯಜ್ಞವು ಬೃಹಸ್ಪತಿಯಜ್ಞಕ್ಕೆ ಸಮಾನವಾದುದು.
ನಾಯಕಂ ವಾ ಪ್ರಮಾಣಂ ವಾ ಯೋ ವಾ ಸ್ಯಾತ್ ತತ್ರ ಪೂಜಿತಃ |
ಜೀವಗ್ರಾಹಂ ನಿಗೃಹ್ಣಾತಿ ತಸ್ಯ ಲೋಕಾ ಯಥಾ ಮಮ ॥68॥
ಯಾವನು ಶತ್ರುಸೈನ್ಯದ ನಾಯಕನನ್ನಾಗಲೀ, ಅಥವಾ ಪೂಜಿತನಾದ ಮುಖ್ಯ- ವ್ಯಕ್ತಿಯನ್ನಾಗಲೀ ಜೀವಸಹಿತವಾಗಿ ಸೆರೆ ಹಿಡಿಯುತ್ತಾನೆಯೋ ಅವನ ಲೋಕಗಳು ನನ್ನ ಲೋಕಗಳಂತೆಯೇ.
ಆಹವೇ ನಿಹತಂ ಶೂರಂ ನ ಶೋಚೇತ ಕದಾಚನ |
ಅಶೋಚ್ಯೋ ಹಿ ಹತಃ ಶೂರಃ ಸ್ವರ್ಗಲೋಕೇ ಮಹೀಯತೇ ॥69॥
ಯುದ್ಧದಲ್ಲಿ ನಿಹತನಾದ ಶೂರನ ವಿಷಯದಲ್ಲಿ ಎಂದೂ ಶೋಕಪಡ- ಬಾರದು. ಏಕೆಂದರೆ, ಹತನಾದ ಶೂರನು ಸ್ವರ್ಗಲೋಕದಲ್ಲಿ ಸಂತೋಷದಿಂದ ಇರುತ್ತಾನೆ.
ನ ಹ್ಯನ್ನಂ ನೋದಕಂ ತಸ್ಯ ನ ಸ್ನಾನಂ ನಾಪ್ಯಶೌಚಕಮ್ |
ಹತಸ್ಯ ಕರ್ತುಮಿಚ್ಛಂತಿ ತಸ್ಯ ಲೋಕಾನ್ ಶೃಣುಷ್ವ ಮೇ ॥70॥
ಅಂತಹ ವೀರನಿಗೆ ಬಂಧುಗಳು ಅನ್ನದಾನವನ್ನಾಗಲೀ, ಉದಕಕ್ರಿಯೆಯ- ನ್ನಾಗಲೀ, ಸ್ನಾನವನ್ನಾಗಲೀ, ಆಶೌಚಾಚರಣೆಯನ್ನಾಗಲೀ ಮಾಡಲು ಇಷ್ಟಪಡು- ವುದಿಲ್ಲ. ಅಂತಹ ವೀರನಿಗೆ ದೊರೆಯುವ ಲೋಕಗಳನ್ನು ನನ್ನಿಂದ ಕೇಳು.
ವರಾಪ್ಸರಃಸಹಸ್ರಾಣಿ ಶೂರಮಾಯೋಧನೇ ಹತಮ್ |
ತ್ವರಮಾಣಾ ಹಿ ಧಾವಂತಿ ಮಮ ಭರ್ತಾ ಭವೇದಿತಿ ॥71॥
ಯುದ್ಧದಲ್ಲಿ ಹತನಾದ ಶೂರನ ಬಳಿಗೆ ಶ್ರೇಷ್ಠರಾದ ಸಹಸ್ರ ಅಪ್ಸರೆಯರು ನನ್ನ ಪತಿಯಾಗು ಎಂದು ಹೇಳುತ್ತಾ ಓಡಿ ಬರುತ್ತಾರೆ.
ಏತತ್ ತಪಶ್ಚ ಪುಣ್ಯಂ ಚ ಧರ್ಮಶ್ಚೈವ ಸನಾತನಃ |
ಚತ್ವಾರಶ್ಚಾಶ್ರಮಾಸ್ತಸ್ಯ ಯೋ ಯುದ್ಧೇ ನ ಪಲಾಯತೇ ॥72॥
ಯುದ್ಧದಲ್ಲಿ ಪಲಾಯನವನ್ನು ಮಾಡದಿರುವುದು ತಪಸ್ಸು, ಪುಣ್ಯಪ್ರದ, ಸನಾತನವಾದ ಧರ್ಮ. ಮತ್ತು ನಾಲ್ಕು ಆಶ್ರಮದ ಧರ್ಮಾಚರಣೆ.
ವೃದ್ಧಬಾಲೌ ನ ಹಂತವ್ಯೌ ನೈವ ಸ್ತ್ರೀ ನ ಚ ವೈ ದ್ವಿಜಃ |
ತೃಣಪೂರ್ಣಮುಖಶ್ಚೈವ ತವಾಸ್ಮೀತಿ ಚ ಯೋ ವದೇತ್ ॥73॥
ವೃದ್ಧರನ್ನು ಮತ್ತು ಬಾಲಕರನ್ನು ಹಾಗೆಯೇ ಸ್ತ್ರೀಯರನ್ನು ಮತ್ತು ಬ್ರಾಹ್ಮಣರನ್ನು ಕೊಲ್ಲಬಾರದು. ಹಾಗೆಯೇ ಬಾಯಿಯಲ್ಲಿ ತೃಣವನ್ನಿಟ್ಟುಕೊಂಡು ನಾನು ನಿನ್ನ ದಾಸ- ನೆಂದು ಹೇಳುವವನನ್ನೂ ಕೊಲ್ಲಬಾರದು.
ಅಹಂ ವೃತ್ರಂ ಬಲಂ ಪಾಕಂ ಶತಮಾಯಂ ವಿರೋಚನಮ್ |
ದುರಾವಾರ್ಯಂ ಚ ನಮುಚಿಂ ನೈಕಮಾಯಂ ಚ ಶಂಬರಮ್ ॥74॥
ವಿಪ್ರಚಿತ್ತಿಂ ಚ ದೈತೇಯಂ ದನೋಃ ಪುತ್ರಾಂಶ್ಚ ಸರ್ವಶಃ |
ಪ್ರಹ್ಲಾದಂ ಚ ನಿಹತ್ಯಾಜೌ ತತೋ ದೇವಾಧಿಪೋಽಭವಮ್ ॥75॥
ನಾನು ವೃತ್ರನನ್ನೂ, ಬಲನನ್ನೂ, ಪಾಕನನ್ನೂ, ನೂರು ಮಾಯೆಗಳುಳ್ಳ ವಿರೋಚನನನ್ನೂ, ನಿವಾರಿಸಲು ಅಸಾಧ್ಯನಾದ ನಮುಚಿಯನ್ನೂ, ಅನೇಕ ಮಾಯೆಗಳನ್ನು ಹೊಂದಿದ ಶಂಬರನನ್ನೂ, ದಿತಿಪುತ್ರನಾದ ವಿಪ್ರಚಿತ್ತಿಯನ್ನೂ, ದನುಪುತ್ರರೆಲ್ಲರನ್ನೂ ಮತ್ತು ಪ್ರಹ್ಲಾದನನ್ನೂ ಯುದ್ಧದಲ್ಲಿ ಜಯಿಸಿ ಅನಂತರ ದೇವರಾಜನಾದೆನು.
ಭೀಷ್ಮಃ
ಇತ್ಯೇತಚ್ಛಕ್ರವಚನಂ ನಿಶಮ್ಯ ಪ್ರತಿಗೃಹ್ಯ ಚ |
ಯೋಧಾನಾಮಾತ್ಮನಃ ಸಿದ್ಧಿಮಂಬರೀಷೋಽಭಿಪನ್ನವಾನ್ ॥76॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಶತತಮೋಽಧ್ಯಾಯಃ ॥100॥
ಭೀಷ್ಮರು ಅಂಬರೀಷನು ಇಂದ್ರನ ಈ ಮಾತುಗಳನ್ನು ಕೇಳಿ ಸ್ವೀಕರಿಸಿ ಯೋಧರು ಮತ್ತು ತಾನೂ ಪಡೆಯುವ ಸಿದ್ಧಿಯನ್ನು ಪಡೆದನು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 100ನೆಯ ಅಧ್ಯಾಯವು ಮುಗಿಯಿತು.
0
101. ನೂರೊಂದನೆಯ ಅಧ್ಯಾಯ
ತನ್ನ ಸೈನಿಕರಿಗೆ ಸ್ವರ್ಗನರಕಗಳನ್ನು ತೋರಿಸಿ ಜನಕರಾಜನಿಂದ ಯುದ್ಧಕ್ಕೆ ಪ್ರೋತ್ಸಾಹ
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪ್ರತರ್ದನೋ ಮೈಥಿಲಶ್ಚ ಸಂಗ್ರಾಮಂ ಯತ್ರ ಚಕ್ರತುಃ ॥1॥
ಭೀಷ್ಮರು ಪ್ರತರ್ದನನು ಮತ್ತು ಮಿಥಿಲಾಧಿಪತಿಯಾದ ಜನಕನು ಯುದ್ಧ- ವನ್ನು ಮಾಡಿದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.

ಯಥೋಪವೃತ್ತೇ ಸಂಗ್ರಾಮೇ ಜನಕೋ ಮೈಥಿಲೋ ಯಥಾ |
ಯೋಧಾನುದ್ಧರ್ಷಯಾಮಾಸ ತನ್ನಿಬೋಧ ಯುಧಿಷ್ಠಿರ ॥2॥
ಎಲೈ ಯುಧಿಷ್ಠಿರನೇ! ಯುದ್ಧವು ಯಥಾಸ್ಥಿತಿಯಲ್ಲಿ ನಡೆಯುತ್ತಿರುವಾಗ ಮಿಥಿಲಾಧಿಪತಿಯಾದ ಜನಕನು ಹೇಗೆ ತನ್ನ ಯೋಧರನ್ನು ಪ್ರೋತ್ಸಾಹಗೊಳಿಸಿದ- ನೆಂದು ತಿಳಿ.
ಜನಕೋ ಮೈಥಿಲೋ ರಾಜಾ ಮಹಾತ್ಮಾ ಸರ್ವತತ್ತ್ವವಿತ್ |
ಯೋಧಾನ್ ಸ್ವಾನ್ ದರ್ಶಯಾಮಾಸ ಸ್ವರ್ಗಂ ನರಕಮೇವ ಚ ॥3॥
ಮಹಾತ್ಮನೂ, ಸರ್ವತತ್ತ್ವವೇತ್ತನೂ, ಮಿಥಿಲಾಧಿಪತಿಯೂ ಆದ ಜನಕನು ತನ್ನ ಯೋಧರಿಗೆ ಸ್ವರ್ಗ ಮತ್ತು ನರಕಗಳನ್ನು ತೋರಿಸಿದನು.
ಅಭೀತಾನಾಮಿಮೇ ಲೋಕಾ ಭಾಸ್ವಂತೋ ಹಂತ ಪಶ್ಯತ |
ಪೂರ್ಣಾ ಗಂಧರ್ವಕನ್ಯಾಭಿಃ ಸರ್ವಕಾಮದುಹೋಽಕ್ಷಯಾಃ ॥4॥
ನಿರ್ಭಯವಾಗಿ ಯುದ್ಧವನ್ನು ಮಾಡುವವರಿಗೆ ಪ್ರಕಾಶಮಾನವಾದ ಗಂಧರ್ವ -ಕನ್ಯೆಯರಿಂದ ಪೂರ್ಣವಾದ ಸರ್ವಕಾಮಗಳನ್ನು ಕೊಡುವ ಅಕ್ಷಯವಾದ ಈ ಲೋಕಗಳಿವೆ. ಸಂತೋಷದಿಂದ ನೋಡಿ.
ಇಮೇ ಪಲಾಯಮಾನಾನಾಂ ನರಕಾಃ ಪ್ರತ್ಯುಪಸ್ಥಿತಾಃ |
ಅಕೀರ್ತಿಃ ಶಾಶ್ವತೀ ಚೈವ ಪತಿತವ್ಯಮನಂತರಮ್ ॥5॥
ಯುದ್ಧದಿಂದ ಓಡುವವರಿಗೆ ಈ ನರಕಲೋಕಗಳು ಸಿದ್ಧವಾಗಿವೆ. ಇಲ್ಲಿ ಶಾಶ್ವತ- ವಾದ ಅಪಕೀರ್ತಿಯನ್ನು ಪಡೆದು ಅನಂತರ ಇಂತಹ ಲೋಕಗಳಲ್ಲಿ ಬೀಳಬೇಕು.
ತಾನ್ ದೃಷ್ಟ್ವಾರೀನ್ ವಿಜಯತೋ ಭೂತ್ವಾ ಸಂತ್ಯಾಗಬುದ್ಧಯಃ |
ನರಕಸ್ಯಾಪ್ರತಿಷ್ಠಸ್ಯ ಮಾ ಭೂತ ವಶವರ್ತಿನಃ ॥6॥
ನೀವು ನೆಲೆಯಿಲ್ಲದ ನರಕದ ವಶವರ್ತಿಗಳಾಗಬೇಡಿ. ಜಯಿಸುತ್ತಿರುವ ಶತ್ರುಗಳನ್ನು ನೋಡಿ ಪ್ರಾಣತ್ಯಾಗವನ್ನು ನಿಶ್ಚಯಿಸಿ ಯುದ್ಧವನ್ನು ಮಾಡಿ.
ತ್ಯಾಗಮೂಲಂ ಹಿ ಶೂರಾಣಾಂ ಸ್ವರ್ಗದ್ವಾರಮನುತ್ತಮಮ್ |
ಇತ್ಯುಕ್ತಾಸ್ತೇ ನೃಪತಿನಾ ಯೋಧಾಃ ಪರಪುರಂಜಯ ॥7॥
ವ್ಯಜಯಂತ ರಣೇ ಶತ್ರೂನ್ ಹರ್ಷಯಂತೋ ಜನೇಶ್ವರಮ್ |
ತಸ್ಮಾದಾತ್ಮವತಾ ನಿತ್ಯಂ ಸ್ಥಾತವ್ಯಂ ರಣಮೂರ್ಧನಿ ॥8॥
ಶೂರನಿಗೆ ತ್ಯಾಗಮೂಲಕವಾಗಿ ಸ್ವರ್ಗದ್ವಾರವು ತೆರೆದಿರುತ್ತದೆ. ಎಲೈ ಶತ್ರು- ಪುರಂಜಯನೇ! ಹೀಗೆ ರಾಜನಿಂದ ಹೇಳಲ್ಪಟ್ಟ ಆ ಯೋಧರು ರಾಜನಿಗೆ ಸಂತೋಷ -ವನ್ನುಂಟುಮಾಡುತ್ತಾ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದರು. ಆದ್ದರಿಂದ ರಣ- ರಂಗದಲ್ಲಿ ಯಾವಾಗಲೂ ಧೈರ್ಯದಿಂದ ನಿಲ್ಲಬೇಕು.
ಗಜಾನಾಂ ರಥಿನೋ ಮಧ್ಯೇ ರಥಾನಾಮನು ಸಾದಿನಃ |
ಸಾದಿನಾಮಂತರಾ ಸ್ಥಾಪ್ಯಂ ಪದಾತಮಿಹ ದಂಸಿತಮ್ ॥9॥
ಗಜಗಳ ಮತ್ತು ರಥಗಳ ಮಧ್ಯದಲ್ಲಿ, ರಥಗಳ ಮತ್ತು ಅಶ್ವಾರೋಹಿಗಳ ಮಧ್ಯದಲ್ಲಿ, ಮತ್ತು ಅಶ್ವಾರೋಹಿಗಳ ಮಧ್ಯದಲ್ಲಿ ಶಸ್ತ್ರಕವಚಸನ್ನದ್ಧವಾದ ಪದಾತಿಗಳ ಬಲವನ್ನು ನಿಲ್ಲಿಸಬೇಕು.
ಯ ಏವಂ ವ್ಯೂಹತೇ ರಾಜಾ ಸ ನಿತ್ಯಂ ಜಯತೇ ದ್ವಿಷಃ |
ತಸ್ಮಾದೇವಂ ವಿಧಾತವ್ಯಂ ನಿತ್ಯಮೇವ ಯುಧಿಷ್ಠಿರ ॥10॥
ಯಾವ ರಾಜನು ಹೀಗೆ ವ್ಯೂಹವನ್ನು ರಚಿಸುತ್ತಾನೆಯೋ ಅವನು ಯಾವಾ- ಗಲೂ ಶತ್ರುಗಳನ್ನು ಜಯಿಸುತ್ತಾನೆ. ಎಲೈ ಯುಧಿಷ್ಠಿರನೇ! ಆದ್ದರಿಂದ ಯಾವಾ- ಗಲೂ ಹೀಗೆಯೇ ಮಾಡಬೇಕು.
ಸರ್ವೇ ಸುಕೃತಮಿಚ್ಛಂತಃ ಸುಯುದ್ಧೇನಾತಿಮನ್ಯವಃ |
ಕ್ಷೋಭಯೇಯುರನೀಕಾನಿ ಸಾಗರಂ ಮಕರಾ ಇವ ॥11॥
ಬಹಳ ಕೋಪದಿಂದ ಒಳ್ಳೆಯ ಯುದ್ಧವನ್ನು ಮಾಡಿ ಪುಣ್ಯವನ್ನು ಗಳಿಸಲು ಬಯಸುವ ಎಲ್ಲರೂ ಮೊಸಳೆಗಳು ಸಾಗರವನ್ನು ಕಲಕಿದಂತೆ ಶತ್ರುಸೈನ್ಯವನ್ನು ಕಲಕುವರು.
ಹರ್ಷಯೇಯುರ್ವಿಷಣ್ಣಾಂಶ್ಚ ವ್ಯವಸ್ಥಾಪ್ಯ ಪರಸ್ಪರಮ್ |
ಜಿತಾಂ ಚ ಭೂಮಿಂ ರಕ್ಷೇತ ಭಗ್ನಾನ್ ನಾತ್ಯನುಸಾರಯೇತ್ ॥12॥
ಪರಸ್ಪರವಾಗಿ ನಿಲ್ಲುವಂತೆ ಮಾಡುತ್ತಾ ವಿಷಾದಕ್ಕೆ ಒಳಗಾದವರನ್ನು ಉತ್ಸಾಹ- ಗೊಳಿಸುವರು. ರಾಜನು ಜಿತವಾದ ಭೂಮಿಯನ್ನು ರಕ್ಷಿಸಬೇಕು. ಪಲಾಯನ ಮಾಡುವ ಶತ್ರುಯೋಧರನ್ನು ಬಹಳವಾಗಿ ಹಿಂಬಾಲಿಸಬಾರದು.
ಪುನರಾವರ್ತಮಾನಾನಾಂ ನಿರಾಶಾನಾಂ ಚ ಜೀವಿತೇ |
ನ ವೇಗಃ ಸುಸಹೋ ರಾಜಂಸ್ತಸ್ಮಾನ್ನಾತ್ಯನುಸಾರಯೇತ್ ॥13॥
ತಮ್ಮ ಜೀವನದಲ್ಲಿ ಆಸೆಯನ್ನು ತೊರೆದು ಅವರು ಹಿಂದಿರುಗಿ ಬಂದರೆ ಎಲೈ ರಾಜನೇ! ಅವರ ವೇಗವು ಸಹಿಸಲು ಅಸಾಧ್ಯವಾಗಿರುತ್ತದೆ. ಆದ್ದರಿಂದ ಅವರನ್ನು ಬಹಳ ಹಿಂಬಾಲಿಸಬಾರದು.
ನ ಹಿ ಪ್ರಹರ್ತುಮಿಚ್ಛಂತಿ ಶೂರಾ ಪ್ರಾದ್ರವತಾಂ ಭಯಾತ್ |
ತಸ್ಮಾತ್ ಪಲಾಯಮಾನಾನಾಂ ಕುರ್ಯಾನ್ನಾತ್ಯನುಸಾರಣಮ್ ॥14॥
ಅಲ್ಲದೇ ಭಯದಿಂದ ಪಲಾಯನ ಮಾಡುವವರ ಮೇಲೆ ಶೂರರು ಪ್ರಹಾರ- ವನ್ನು ಮಾಡಲು ಬಯಸುವುದಿಲ್ಲ. ಆದ್ದರಿಂದಲೂ

ಪಲಾಯನ ಮಾಡುವವರನ್ನು ಬಹಳ ಹಿಂಬಾಲಿಸಬಾರದು.
ಚರಾಣಾಮಚರಾ ಹ್ಯನ್ನಮದಂಷ್ಟ್ರಾ ದಂಷ್ಟ್ರಿಣಾಮಪಿ |
ಅಪಾಣಯಃ ಪಾಣಿಮತಾಮನ್ನಂ ಶೂರಸ್ಯ ಕಾತರಾಃ ||15||
ಚಲಿಸುವ ಪ್ರಾಣಿಗಳಿಗೆ ಚಲಿಸದಿರುವ ಪ್ರಾಣಿಗಳು ಆಹಾರವಾಗುತ್ತವೆ; ಕೋರೆ- ದಾಡೆಯುಳ್ಳ ಪ್ರಾಣಿಗಳಿಗೆ ಕೋರೆದಾಡೆ ಇರದ ಪ್ರಾಣಿಗಳು, ಹಸ್ತವುಳ್ಳ ಪ್ರಾಣಿಗಳಿಗೆ ಹಸ್ತವಿಲ್ಲದ ಪ್ರಾಣಿಗಳು, ಶೂರರಿಗೆ ಭಯಗ್ರಸ್ತರು ಆಹಾರವಾಗುತ್ತಾರೆ.
ಸಮಾನಪೃಷ್ಠೋದರಪಾಣಿಪಾದಾಃ
ಪಶ್ಚಾಚ್ಛೂರಂ ಭೀರವೋಽನುವ್ರಜಂತಿ |
ಅತೋ ಭಯಾರ್ತಾಃ ಪ್ರಣಿಪತ್ಯ ಭೂಯಃ |
ಕೃತ್ವಾ ಽಂಜಲೀನುಪತಿಷ್ಠಂತಿ ಶೂರಾನ್ ||16||
ಸಮಾನವಾದ ಬೆನ್ನು, ಉದರ, ಪಾಣಿ, ಪಾದಗಳನ್ನು ಹೊಂದಿದ್ದರೂ ಹೇಡಿ- ಗಳು ಶೂರನ ಹಿಂದೆಯೇ ನಡೆದು ಹೋಗುತ್ತಾರೆ. ಮತ್ತು ಭಯಾರ್ತರಾಗಿ ಪುನಃ ಶೂರರಿಗೆ ಕೈಗಳನ್ನು ಮುಗಿದು ನಮಸ್ಕಾರವನ್ನು ಮಾಡಿ ಅವರನ್ನು ಸ್ತೋತ್ರ ಮಾಡುತ್ತಾರೆ.
ಶೂರಬಾಹುಷು ಲೋಕೋಽಯಂ ಲಂಬತೇ ಪುತ್ರವತ್ ಸದಾ |
ತಸ್ಮಾತ್ ಸರ್ವಾಸ್ವವಸ್ಥಾಸು ಶೂರಃ ಸಮ್ಮಾನಮರ್ಹತಿ ||17||
ಈ ಲೋಕವು ತಂದೆಯ ಬಾಹುವಿನಲ್ಲಿರುವ ಮಗನಂತೆ ಶೂರರ ಬಾಹು- ಗಳಲ್ಲಿ ಆಶ್ರಯವನ್ನು ಹೊಂದಿದೆ. ಆದ್ದರಿಂದ ಎಲ್ಲಾ ಕಾಲಗಳಲ್ಲಿಯೂ ಶೂರನು ಸಮ್ಮಾನಕ್ಕೆ ಅರ್ಹರಾಗುತ್ತಾರೆ.
ನ ಹಿ ಶೌರ್ಯಾತ್ ಪರಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ |
ಶೂರಃ ಸರ್ವಂ ಪಾಲಯತಿ ಸರ್ವಂ ಶೂರೇ ಪ್ರತಿಷ್ಠಿತಮ್ ||18||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕಾಧಿಕಶತತಮೋಽಧ್ಯಾಯಃ ||101||
ಶೌರ್ಯಕ್ಕಿಂತ ಅಧಿಕವಾದುದು ಮೂರು ಲೋಕಗಳಲ್ಲಿ ಯಾವುದೂ ಇಲ್ಲ; ಶೂರನು ಎಲ್ಲವನ್ನೂ ರಕ್ಷಿಸುತ್ತಾನೆ. ಎಲ್ಲವೂ ಶೂರನನ್ನು ಆಶ್ರಯಿಸಿದೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 101ನೆಯ ಅಧ್ಯಾಯವು ಮುಗಿಯಿತು.
0
102. ನೂರ ಎರಡನೆಯ ಅಧ್ಯಾಯ
ಯುದ್ಧಪ್ರಕಾರಾದಿಕಥನ
ಯುಧಿಷ್ಠಿರಃ
ಯಥಾ ಜಯಾರ್ಥಿನಃ ಸೇನಾಂ ನಯಂತಿ ಭರತರ್ಷಭ |
ಈಷದ್ ಧರ್ಮಂ ಪ್ರಪೀಡ್ಯಾಪಿ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲೈ ಭರತರ್ಷಭನೇ! ಪಿತಾಮಹನೇ! ಜಯಾರ್ಥಿಯಾದ ರಾಜನು ಧರ್ಮಕ್ಕೆ ಸ್ವಲ್ಪ ಪೀಡೆಯುಂಟಾದರೂ ಹೇಗೆ ಸೈನ್ಯವನ್ನು ಮುಂದೆ ತೆಗೆದುಕೊಂಡು ಹೋಗುತ್ತಾನೆಂದು ನನಗೆ ಹೇಳು.
ಭೀಷ್ಮಃ
ಸತ್ಯೇನ ಹಿ ಸ್ಥಿತಾ ಧರ್ಮಾ ಉಪಪತ್ತ್ಯಾ ತಥಾಪರೇ |
ಸಾಧ್ವಾಚಾರತಯಾ ಕೇಚಿತ್ ತಥೈವೌಪಾಯಿಕಾ ಅಪಿ |
ಉಪಾಯಧರ್ಮಾನ್ ವಕ್ಷ್ಯಾಮಿ ಸಿದ್ಧಾರ್ಥಾನರ್ಥಧರ್ಮಯೋಃ ||2||
ಭೀಷ್ಮರು ಕೆಲವು ಧರ್ಮಗಳು ಸತ್ಯದಲ್ಲಿ ನೆಲೆಸಿವೆ. ಇನ್ನು ಕೆಲವು ಧರ್ಮ- ಗಳು ಯುಕ್ತಿಯಿಂದ ಸಿದ್ಧವಾಗುತ್ತವೆ. ಇನ್ನು ಕೆಲವು ಧರ್ಮಗಳು ಶಿಷ್ಟಾಚಾರದಿಂದ ದೊರೆಯುತ್ತವೆ. ಇನ್ನು ಕೆಲವು ಧರ್ಮಗಳು ತತ್ಕಾಲದ ಉಪಾಯಗಳನ್ನು (ಅನು- ಕೂಲತೆಗಳನ್ನು) ಅನುಸರಿಸಿರುತ್ತವೆ. ಅರ್ಥಧರ್ಮಗಳ ವಿಷಯದಲ್ಲಿ ಸಿದ್ಧವಾದ ಅಂತಹ ಉಪಾಯಧರ್ಮಗಳನ್ನು ಹೇಳುವೆನು.
ನಿರ್ಮರ್ಯಾದಾ ದಸ್ಯವಸ್ತು ಭವಂತಿ ಪರಿಪಂಥಿನಃ |
ತೇಷಾಂ ಪ್ರತಿವಿಘಾತಾರ್ಥಂ ಪ್ರವಕ್ಷ್ಯಾಮ್ಯಥ ನೈಗಮಮ್ |
ಕಾರ್ಯಾಣಾಂ ಸಂಪ್ರಸಿದ್ಧ್ಯರ್ಥಂ ತಾನುಪಾಯಾನ್ ನಿಬೋಧ ಮೇ ||3||
ಎಲ್ಲ ಎಲ್ಲೆಯನ್ನು ಮೀರಿದ ದಸ್ಯುಗಳು ಯಾವಾಗಲೂ ವಿರೋಧಿಗಳಾಗಿರು- ತ್ತಾರೆ. ಅವರನ್ನು ಪ್ರತಿಘಾತಮಾಡಿ ಕಾರ್ಯಸಿದ್ಧಿಯನ್ನು ಪಡೆಯಲು ಶಾಸ್ತ್ರಸಿದ್ಧವಾದ ಆ ಉಪಾಯಗಳನ್ನು ನೀನು ನನ್ನಿಂದ ತಿಳಿ.
ಉಭೇ ಪ್ರಜ್ಞೇ ವೇದಿತವ್ಯೇ ಋಜ್ವೀ ವಕ್ರಾ ಚ ಭಾರತ |
ಜಾನನ್ ವಕ್ರಾಂ ನ ಸೇವೇತ ಪ್ರತಿಬಾಧೇತ ಚಾಗತಾಮ್ ||4||
ಎಲೈ ಭಾರತನೇ! ಋಜುಬುದ್ಧಿ ಮತ್ತು ವಕ್ರಬುದ್ಧಿ ಎರಡನ್ನೂ ತಿಳಿದು, ವಕ್ರ- ಬುದ್ಧಿಯನ್ನು ಆಶ್ರಯಿಸಬಾರದು. ಶತ್ರುಗಳು ಪ್ರಯೋಗಿಸಿದ ವಕ್ರಬುದ್ಧಿಯನ್ನು
ಬಾಧಿಸಬೇಕು.
ಅಮಿತ್ರಾ ಏವ ರಾಜಾನಂ ಭೇದೇನೋಪಚರಂತ್ಯುತ |
ತಾನ್ ರಾಜಾ ನಿಕೃತಾನ್ ಜಾನನ್ ಯಥಾಮಿತ್ರಾನ್ ಪ್ರಬಾಧತೇ ||5||
ಶತ್ರುಗಳಾದವರೇ ರಾಜನನ್ನು ಭೇದೋಪಾಯಗಳಿಂದ ಉಪಚರಿಸುತ್ತಾರೆ. ರಾಜನು ಅವರ ಮೋಸದ ಬುದ್ಧಿಯನ್ನು ತಿಳಿದು

ಶತ್ರುಗಳಂತೆ (ತನ್ನ ರಾಜ್ಯದಲ್ಲಿ- ರುವ ಅವರನ್ನು) ಬಾಧಿಸಬೇಕು.
ಗಜಾನಾಂ ಪಾರ್ಶ್ವಚರ್ಮಾಣಿ ಗೋವೃಷಾಜಗರಾಣಿ ಚ |
ಶಲ್ಯಕಂಟಕಲೋಹಾನಿ ತನುತ್ರಾಣಿ ಮತಾನಿ ಚ ॥6॥
ಶಿತಪೀತಾನಿ ಶಸತ್ರಣಿ ಸನ್ನಾಹಾಃ ಪೀತಲೋಹಿತಾಃ |
ನಾನಾರಂಜನರಕ್ತಾಃ ಸ್ಯುಃ ಪತಾಕಾಃ ಕೇತವಶ್ಚ ತೇ ॥7॥
ಋಷ್ಟಯಸ್ತೋಮರಾಃ ಖಡ್ಗಾ ನಿಶಿತಾಶ್ಚ ಪರಶ್ವಧಾಃ |
ಫಲಕಾನ್ಯಥ ಚರ್ಮಾಣಿ ಪ್ರತಿಕಲ್ಪ್ಯಾನ್ಯನೇಕಶಃ |
ಅಭಿನೀತಾನಿ ಶಸತ್ರಣಿ ಯೋಧಾಶ್ಚ ಕೃತನಿಶ್ರಮಾಃ ॥8॥
ಗಜಗಳ ಪಾರ್ಶ್ವಚರ್ಮಗಳಿಂದ, ವೃಷಭಗಳ ಮತ್ತು ಹೆಬ್ಬಾವುಗಳ ಚರ್ಮ- ಗಳಿಂದ ಕವಚಗಳನ್ನು ನಿರ್ಮಿಸುವುದು ಶ್ರೇಷ್ಠವಾದುದು. ಶಲ್ಯ(ಈಟಿಗಳು) ಲೋಹದ ಮುಳ್ಳುಗಳು, ಉಳಿದ ಲೋಹಗಳು, ನಿಶಿತವಾದ ಹಾಗೂ ನೀರು ಕುಡಿಸಿದ ಶಸ್ತ್ರಗಳು, ನೀರು ಕುಡಿಸಿ ಹದ ಮಾಡಿದ ಕವಚಗಳು, ಪತಾಕೆಗಳು ಮತ್ತು ಬಾವುಟಗಳು, ಅನೇಕ ಕೆಂಪುಬಣ್ಣಗಳಿಂದ ಕೂಡಿರಬೇಕು; ಋಷ್ಟಿಗಳು, ತೋಮರ- ಗಳು, ನಿಶಿತವಾದ ಖಡ್ಗಗಳು, ಪರಶುಗಳು, ಫಲಕಗಳು, ಗುರಾಣಿಗಳು ಇವುಗಳನ್ನು ಬಹುಸಂಖ್ಯೆಯಲ್ಲಿ ಸಿದ್ಧಪಡಿಸಬೇಕು. ಶಸ್ತ್ರಗಳು ಯಾವಾಗಲೂ ಉಪಯೋಗಿಸು- ವುದಕ್ಕೆ ಯೋಗ್ಯವಾಗಿರಬೇಕು. ಮತ್ತು ಯೋಧರು ಶಸ್ತ್ರಗಳ ಉಪಯೋಗದಲ್ಲಿ ಪರಿಶ್ರಮವನ್ನು ಹೊಂದಿದವರಾಗಬೇಕು.
ಚೈತ್ರ್ಯಾಂ ವಾ ಮಾರ್ಗಶೀರ್ಷ್ಯಾಂ ವಾ ಸೇನಾಯೋಗಃ ಪ್ರಶಸ್ಯತೇ |
ಪಕ್ವಸಸ್ಯಾ ಹಿ ಪೃಥಿವೀ ಭವತ್ಯಂಬುವತೀ ತಥಾ ॥9॥
ನೈವಾತಿಶೀತೋ ನಾತ್ಯುಷ್ಣಃ ಕಾಲೋ ಭವತಿ ಭಾರತ |
ಚೈತ್ರಪೂರ್ಣಿಮೆ ಅಥವಾ ಮಾರ್ಗಶೀರ್ಷಪೂರ್ಣಿಮೆಯಂದು ದಂಡೆತ್ತಿ ಹೋಗುವುದು ಪ್ರಶಸ್ತವಾದುದು. ಆಗ ಭೂಮಿಯಲ್ಲಿ ಸಸ್ಯಗಳು ಪಕ್ವವಾಗಿರುತ್ತವೆ. ಮತ್ತು ಜಲವೂ ಸಮೃದ್ಧವಾಗಿರುತ್ತದೆ. ಎಲೈ ಭಾರತನೇ! ಆ ಕಾಲದಲ್ಲಿ ಬಹಳ ಉಷ್ಣತೆಯಾಗಲೀ ಬಹಳ ಶೈತ್ಯವಾಗಲೀ ಇರುವುದಿಲ್ಲ.
ತಸ್ಮಾದ್ ತದಾ ಯೋಧಯೇತ ಪರೇಷಾಂ ವ್ಯಸನೇಷು ವಾ |
ಏತೇಷು ಯೋಗಾಃ ಸೇನಾಯಾಃ ಪ್ರಶಸ್ತಾಃ ಪರಬಾಧನೇ ॥10॥
ಆದ್ದರಿಂದ ಆ ಕಾಲದಲ್ಲಿ ಯುದ್ಧಕ್ಕಾಗಿ ಹೊರಡಬೇಕು. ಅಥವಾ ಶತ್ರುಗಳ ವ್ಯಸನಕಾಲವನ್ನು ತಿಳಿದು ಆಗ ಯುದ್ಧವನ್ನು ಮಾಡಬೇಕು. ಇಂತಹ ದೇಶ-ಕಾಲಗಳ ಅನುಕೂಲವಿರುವಾಗ ಸೇನೆಯ ಉದ್ಯೋಗವು ಶತ್ರುವನ್ನು ಬಾಧಿಸುವುದಕ್ಕೆ ಪ್ರಶಸ್ತ- ವಾಗಿರುತ್ತದೆ.
ಜಲವಾಂಸ್ತೃಣವಾನ್ ಮಾರ್ಗಃ ಸಮೋ ಗಮ್ಯಃ ಪ್ರಶಸ್ಯತೇ |
ಚಾರೈರ್ಹಿ ವಿಹಿತಾಭ್ಯಾಸಃ ಕುಶಲೈರ್ವನಗೋಚರೈಃ॥11॥
ನ ಹ್ಯರಣ್ಯಾನಿ ಶಕ್ಯಂತೇ ಗಂತುಂ ಮೃಗಗಣೈರಿವ |
ಸೈನ್ಯವು ಹೋಗುವ ಮಾರ್ಗವು ಸಮತಟ್ಟಾಗಿದ್ದು, ತೃಣಜಲಗಳಿಂದ ಕೂಡಿದ್ದು, ನಿಪುಣರಾದ ವನವಾಸಿಗಳಿಂದ ಮತ್ತು ಚಾರರುಗಳಿಂದ ಚೆನ್ನಾಗಿ ಪರಿಚಿತವಾಗಿರಬೇಕು. ಅರಣ್ಯಮಾರ್ಗದಲ್ಲಿ ಮೃಗಸಮೂಹಗಳಂತೆ ಸಂಚರಿಸಲು ಸಾಧ್ಯವಿಲ್ಲ.
ತಸ್ಮಾತ್ ಸರ್ವಾಸು ಸೇನಾಸು ಯೋಜಯಂತಿ ಜಯಾರ್ಥಿನಃ |
ಅಗ್ರತಃ ಪುರುಷಾನೀಕಂ ಶಕ್ತಂ ಭಕ್ತಂ ಕುಲೋದ್ಗತಮ್ ॥12॥
ಆದ್ದರಿಂದ ಜಯಾರ್ಥಿಗಳಾದವರು ಎಲ್ಲ ಸೇನಾಪ್ರಸ್ಥಾನದಲ್ಲಿ ಮುಂಭಾಗದಲ್ಲಿ ಸತ್ಕುಲಪ್ರಸೂತರಾದ ಸಮರ್ಥರಾದ ಅನುರಾಗವುಳ್ಳ ಪುರುಷಸಮೂಹವನ್ನು ನಿಯೋಜಿಸುತ್ತಾರೆ.
ಆವಾಸಸ್ತೋಯವಾನ್ ದುರ್ಗಃ ಪರ್ಯಾಕಾಶಃ ಪ್ರಶಸ್ಯತೇ |
ಪರೇಷಾಮುಪಸರ್ಗಾಣಾಂ ಪ್ರತಿಷೇಧಸ್ತಥಾ ಭವೇತ್ ॥13॥
ಸೈನ್ಯವು ಬೀಡುಬಿಡುವ ಸ್ಥಾನವು ಕೋಟೆಯಂತೆ ಸುತ್ತಲೂ ಮರಗಿಡಗಳಿಲ್ಲದೇ ಅವಕಾಶವನ್ನು ಹೊಂದಿರುವುದು ಪ್ರಶಸ್ತವಾಗುತ್ತದೆ. ಹಾಗೆ ಮಾಡಿದರೆ ಶತ್ರುಗಳು ಮಾಡುವ ಉಪದ್ರವಗಳನ್ನು ನಿವಾರಿಸಲು ಅನುಕೂಲವಾಗುತ್ತದೆ.
ಆಕಾಶಂ ತು ವನಾಭ್ಯಾಶೇ ಮನ್ಯಂತೇ ಗುಣವತ್ತರಮ್ |
ಬಹುಭಿರ್ಗುಣಜಾತೈಸ್ತು ಯೇ ಯುದ್ಧಕುಶಲಾ ಜನಾಃ ॥14॥
ಅರಣ್ಯದ ಸಮೀಪದಲ್ಲಿ ಸುತ್ತಲೂ ಅವಕಾಶವಿರುವ ಪ್ರದೇಶದಲ್ಲಿ ಸೈನ್ಯವು ಬೀಡು ಬಿಡುವುದು ಅನೇಕ ಗುಣಗಳಿಂದ ಕೂಡಿರುವುದೆಂದು ಯುದ್ಧಕುಶಲರಾದ ಜನರು ತಿಳಿಯುತ್ತಾರೆ.
ಉಪನ್ಯಾಸಾವತರಣಂ ಪದಾತೀನಾಂ ಚ ಗೂಹನಮ್ |
ಅಥ ಶತ್ರುಪ್ರತೀಘಾತಮಾಪದರ್ಥಂ ಪರಾಯಣಮ್ ॥15॥
ನಾಲ್ಕು ದಿಕ್ಕುಗಳಲ್ಲಿಯೂ ರಕ್ಷಕಭಟರನ್ನು ನಿಯಮಿಸಿ, ಸೇನೆಯು ಬೀಡು ಬಿಡುವಂತೆ ಮಾಡಿ, ಪದಾತಿಗಳನ್ನು ಗೂಹನ ಮಾಡಬೇಕು. ಮತ್ತು ಶತ್ರುಗಳ ಮೇಲೆ ಎರಗಲು ಶತ್ರುಗಳಿಗೆ ಆಪತ್ತು ಒದಗುವವರೆಗೆ ನಿರೀಕ್ಷಿಸಿ ಅನಂತರ ಶತ್ರುಗಳ ಮೇಲೆ ದಾಳಿ ಮಾಡಬೇಕು.
ಸಪ್ತರ್ಷೀನ್ ಪೃಷ್ಠತಃ ಕೃತ್ವಾ ಯುದ್ಧ್ಯೇರನ್ನಚಲಾ ಇವ |
ಅನೇನ ವಿಧಿನಾ ರಾಜನ್ ಜಿಗೀಷೇತಾಪಿ ದುರ್ಜಯಾನ್ ॥16॥
ಸಪ್ತರ್ಷಿಮಂಡಲವನ್ನು ಹಿಂದೆ ಮಾಡಿಕೊಂಡು ಸ್ಥಿರವಾಗಿ ಯುದ್ಧವನ್ನು ಮಾಡ- ಬೇಕು. ಎಲೈ ರಾಜನೇ! ಈ ವಿಧಾನದಿಂದ ಜಯಿಸಲು ಕಷ್ಟಸಾಧ್ಯರಾದವರನ್ನೂ ಗೆಲ್ಲಬಹುದು.

ಯತೋ ವಾಯುರ್ಯತಃ ಸೂರ್ಯೋ ಯತಃ ಶುಕ್ರಸ್ತತೋ ಜಯಃ |
ಪೂರ್ವಂ ಪೂರ್ವಂ ಜ್ಯಾಯ ಏಷಾಂ ಸನ್ನಿಪಾತೇ ಯುಧಿಷ್ಠಿರ ॥17॥
ಯಾವ ಸೈನ್ಯಕ್ಕೆ ಹಿಂದಿನಿಂದ ವಾಯುವು ಬೀಸುತ್ತದೆಯೋ, ಸೂರ್ಯ ಅಥವಾ ಶುಕ್ರರು ಹಿಂದೆ ಇರುತ್ತಾರೋ ಅವರಿಗೆ ಜಯವಾಗುತ್ತದೆ. ಎಲೈ ಯುಧಿಷ್ಠಿರನೇ! ಈ ಮೂರರ ಸಮೂಹದಲ್ಲಿ ಹಿಂದಿನದು ಮುಂದಿನದಕ್ಕಿಂತ ಶ್ರೇಷ್ಠವಾದುದು.
ಅಕರ್ದಮಾಮನುದಕಾಮಮರ್ಯಾದಾಮಲೋಷ್ಟಕಾಮ್ |
ಅಶ್ವಭೂಮಿಂ ಪ್ರಶಂಸಂತಿ ಯೇ ಯುದ್ಧಕುಶಲಾ ಜನಾಃ ॥18॥
ಯುದ್ಧಕುಶಲರಾದ ಜನರು ಕೆಸರಿಲ್ಲದ, ಅಲ್ಲಲ್ಲಿ ನೀರಿಲ್ಲದ, ಮಣ್ಣಿನ ಹೆಂಟೆ- ಗಳಿಲ್ಲದ ವಿಸ್ತಾರವಾದ ಅಶ್ವಭೂಮಿಯನ್ನು ಪ್ರಶಂಸೆ ಮಾಡುತ್ತಾರೆ.
ಸಮಾ ನಿರುದಕಾಕಾಶಾ ರಥಭೂಮಿಃ ಪ್ರಶಸ್ಯತೇ |
ನೀಚದ್ರುಮಾ ಮಹಾಕಕ್ಷಾ ಸೋದಕಾ ಹಸ್ತಿಯೋಧಿನಾಮ್ ॥19॥
ಸಮವಾದ, ಮಧ್ಯೆ ಮಧ್ಯೆ ನೀರು ಮತ್ತು ಗುಂಡಿಗಳಿಲ್ಲದ ರಥಭೂಮಿಯು ಪ್ರಶಸ್ತವಾಗುತ್ತದೆ. ಗಜಯೋಧಿಗಳಿಗೆ ಸಣ್ಣವೃಕ್ಷಗಳು, ದೊಡ್ಡ ಪೊದೆಗಳು ಮತ್ತು ಜಲವೂ ಇರುವ ಪ್ರದೇಶವು ಪ್ರಶಸ್ತವಾಗುತ್ತದೆ.
ಬಹುದುರ್ಗಾ ಮಹಾವೃಕ್ಷಾ ವೇತ್ರವೇಣುಭಿರಾಸ್ತೃತಾ |
ಪದಾತೀನಾಂ ಕ್ಷಮಾ ಭೂಮಿಃ ಪರ್ವತೋಪವನಾನಿ ಚ ॥20॥
ಅನೇಕ ಕೋಟೆಗಳು (ರಕ್ಷಣಾಸ್ಥಾನಗಳು), ದೊಡ್ಡ ವೃಕ್ಷಗಳು, ಬಿದುರು ಬೆತ್ತ ಮೊದಲಾದವುಗಳಿಂದ ತುಂಬಿದ ಭೂಮಿಯು, ಪರ್ವತಗಳು ಮತ್ತು ಉಪ- ವನಗಳು ಪದಾತಿಗಳಿಗೆ ಯೋಗ್ಯವಾದ ಭೂಮಿಯಾಗುತ್ತದೆ.
ಪದಾತಿಬಹುಲಾ ಸೇನಾ ದೃಢಾ ಭವತಿ ಭಾರತ |
ರಥಾಶ್ವಬಹುಲಾ ಸೇನಾ ಸುದಿನೇಷು ಚ ಶಸ್ಯತೇ ॥21॥
ಎಲೈ ಭಾರತನೇ! ಪದಾತಿಗಳನ್ನು ಬಹುಸಂಖ್ಯೆಯಲ್ಲಿ ಹೊಂದಿರುವ ಸೈನ್ಯವು ದೃಢವಾಗುತ್ತದೆ. ರಥಾಶ್ವಗಳು ಪ್ರಧಾನವಾಗಿರುವ ಸೈನ್ಯವು ಹೇಮಂತ, ಶಿಶಿರ, ವಸಂತ ಋತುವಿನ ದಿನಗಳಲ್ಲಿ ಪ್ರಶಸ್ತವಾಗುತ್ತದೆ.
ಪದಾತಿನಾಗಬಹುಲಾ ಪ್ರಾವೃಟ್ಕಾಲೇ ಪ್ರಶಸ್ಯತೇ |
ಗುಣಾನೇತಾನ್ ಪ್ರಸಂಖ್ಯಾಯ ದೇಶಕಾಲೌ ಪ್ರಯೋಜಯೇತ್ ॥22॥
ಪದಾತಿಗಳು ಮತ್ತು ಗಜಗಳು ಪ್ರಧಾನವಾಗಿರುವ ಸೈನ್ಯಕ್ಕೆ ಮಳೆಗಾಲವು ಪ್ರಶಸ್ತವಾಗುತ್ತದೆ. ದೇಶಕಾಲಗಳ ಈ ಗುಣಗಳನ್ನು ಎಣಿಸಿ ಸೈನ್ಯದ ನಡೆಯನ್ನು ನಿಯೋಜಿಸಬೇಕು.
ಏವಂ ಸಂಚಿಂತ್ಯ ಯೋ ಯಾತಿ ತಿಥಿನಕ್ಷತ್ರಪೂಜಿತಃ |
ವಿಜಯಂ ಲಭತೇ ನಿತ್ಯಂ ಸೇನಾಂ ಸಮ್ಯಕ್ ಪ್ರಯೋಜಯನ್ ॥23॥
ಯಾವನು ಹೀಗೆ ಚಿಂತಿಸಿ, ತಿಥಿನಕ್ಷತ್ರಗಳ ಆನುಕೂಲ್ಯವನ್ನು ಹೊಂದಿ, ಸೈನ್ಯ- ವನ್ನು ಚೆನ್ನಾಗಿ ನಿಯೋಜಿಸಿ ಮುಂದೆ ಸಾಗುತ್ತಾನೋ ಅವನು ಯಾವಾಗಲೂ ಜಯವನ್ನು ಹೊಂದುತ್ತಾನೆ.
ಪ್ರಸುಪ್ತಾಂಸ್ತೃಷಿತಾನ್ ಶ್ರಾಂತಾನ್ ಪ್ರಕೀರ್ಣಾನ್ ನಾಭಿಘಾತಯೇತ್ |
ಮೋಕ್ಷೇ ಪ್ರಯಾಣೇ ಚಲನೇ ಯಾನಭೋಜನಕಾಲಯೋಃ |
ಸಂಧಿಕ್ಷಿಪ್ತಾನತಿಕ್ಷಿಪ್ತಾನ್ ವಿಹತಾನ್ ಪ್ರತನೂಕೃತಾನ್ ॥24॥
ಅವಶ್ರದ್ಧಾನ್ ಕೃತಾರಂಭಾನುಪನ್ಯಾಸಪ್ರತಾಪಿತಾನ್ |
ಬಹಿಶ್ಚರಾನುಪನ್ಯಾಸಾನ್ ಕೃತವೇಶ್ಮಾನುಸಾರಿಣಃ ॥25॥
ನಿದ್ದೆ ಮಾಡುವವರು, ಬಾಯಾರಿದವರು, ದಣಿದವರು, ಚದುರಿ ಹೋದವರು ಇವರನ್ನು ಸೇನೆಯು ಯುದ್ಧವನ್ನು ನಿಲ್ಲಿಸಿರುವ ಕಾಲದಲ್ಲಾಗಲೀ ಪ್ರಯಾಣದ ಕಾಲದಲ್ಲಾಗಲೀ ಅಥವಾ ಅವರು ಪಲಾಯನ ಮಾಡುವಾಗಲಾಗಲೀ ಅವರ ಪಾನಭೋಜನಕಾಲಗಳಲ್ಲಾಗಲೀ ಹೊಡೆಯಬಾರದು. ಬಹಳ ತಿರಸ್ಕೃತರಾದವರು, `ಈದಿನ ನನಗೆ ಬಹಳ ಕೆಲಸವಿದೆ ನಾಳೆಯ ದಿವಸ ಯುದ್ಧವನ್ನು ಮಾಡುತ್ತೇನೆ' ಎಂದು ಹೇಳುವವರು, ಗಾಯಗೊಂಡವರು, ಹೆಚ್ಚಿನ ಸೈನ್ಯವು ಹಿಂದೆ ಹೋಗಿ ರಣರಂಗದಲ್ಲಿ ಕೆಲವರು ಮಾತ್ರ ಉಳಿದವರು, ಯುದ್ಧದ ಉತ್ಸಾಹವನ್ನು ಕಳೆದು- ಕೊಂಡವರು, ಕಾರ್ಯಾಂತರವನ್ನು ಮಾಡುವವರು, ಸಮೀಪದವರು ಹತರಾದು- ದರಿಂದ ಮೂರ್ಛೆ ಹೊಂದಿದವರು, ಸಂಧ್ಯಾವಂದನಾದಿನಿತ್ಯಕಾರ್ಯಗಳಿಗಾಗಿ ಹೊರಗೆ ಹೋದವರು, ಆಯುಧವನ್ನು ಕೆಳಗಿಟ್ಟವರು, ಸೇನಾಬಿಡಾರದ ಕಡೆಗೆ ಹೋಗುವವರು ಇಂತಹ ಯಾರನ್ನೂ ಹೊಡೆಯಬಾರದು.
ಪಾರಂಪರ್ಯಾಗತೇ ದ್ವಾರೇ ಯೇ ಕೇಚಿದನುವರ್ತಿನಃ |
ಪರಿಚರ್ಯಾವರೋದ್ಧಾರೋ ಯೇ ಚ ಕೇಚನ ವಲ್ಗಿನಃ ॥26॥
ಅನೀಕಂ ಯೇ ಪ್ರಭಿಂದಂತಿ ಭಿನ್ನಂ ಯೇ ಸ್ಥಗಯಂತಿ ಚ |
ಸಮಾನಾಶನಪಾನಾಸ್ತೇ ಕಾರ್ಯಾ ದ್ವಿಗುಣವೇತನಾಃ ॥27॥
ಪರಂಪರಾಗತವಾದ ಸೇನಾಮುಖದಲ್ಲಿ ನಿಂತು ಚೆನ್ನಾಗಿ ಮಾತನಾಡಿ ಶತ್ರುಗಳ ಪ್ರವೇಶವನ್ನು ತಡೆಯುವ ಯಾವ ಯೋಧರಿದ್ದಾರೆಯೋ ಯಾರು ಶತ್ರುಗಳ ಸೈನ್ಯವನ್ನು ಭೇದಿಸುತ್ತಾರೆಯೋ ಭಿನ್ನವಾದ ತಮ್ಮ ಸೈನ್ಯವನ್ನು ನಿಲ್ಲಿಸುತ್ತಾರೆಯೋ ಅವರು ಮೊದಲು ಉಳಿದವರಿಗೆ ಸಮಾನವಾದ ಅಶನಪಾನಗಳನ್ನು ಸ್ವೀಕರಿಸು- ತ್ತಿದ್ದರೂ ಅವರ ವೇತನವನ್ನು ದ್ವಿಗುಣಗೊಳಿಸಬೇಕು.
ಜಾತಿಗೋತ್ರಂ ಚ ವಿಜ್ಞಾಯ ಕರ್ಮ ಚಾನುತ್ತಮಂ ಶುಭಮ್ |
ಸಮಾನದೇಹರಕ್ಷಾರ್ಥೇ ಕಾರ್ಯಾ ದ್ವಿಗುಣವೇತನಾ |
ತ್ರಿಗುಣಂ ಚತುರ್ಗುಣಂ ಚೈವ ವೇತನಂ ತೇಷು ಕಾರಯೇತ್ ॥28॥

ಅವರ ಜಾತಿ-ಗೋತ್ರಗಳನ್ನು ತಿಳಿದು, ಅವರ ಶ್ರೇಷ್ಠವಾದ ಕರ್ಮಗಳನ್ನು ತಿಳಿದು ಸಮಾನವಾದ ಕುಟುಂಬಾದಿ ರಕ್ಷಣೆಗಾಗಿ ಅವರ ಸಂಬಳವನ್ನು ಎರಡು- ಪಟ್ಟು ಅಥವಾ ಮೂರುಪಟ್ಟು ಅಥವಾ ನಾಲ್ಕುಪಟ್ಟು ಹೆಚ್ಚಿಸಬೇಕು.

ದಶಾಧಿಪತಯಃ ಕಾರ್ಯಾಃ ಶತಾಧಿಪತಯಸ್ತಥಾ |
ತೇಷಾಂ ಸಹಸ್ರಾಧಿಪತಿಂ ಕುರ್ಯಾಚ್ಛೂರಮತಂದ್ರಿತಮ್ ॥29॥

ಹತ್ತುಜನಯೋಧರಿಗೆ ಒಬ್ಬ ಅಧಿಪತಿಯನ್ನು ಮಾಡಬೇಕು. ನೂರು ಜನರಿಗೆ ಒಬ್ಬ ಅಧಿಪತಿಯನ್ನು ಮಾಡಬೇಕು. ಹಾಗೆಯೇ ಸಹಸ್ರಯೋಧರಿಗೆ ಆಲಸ್ಯ- ರಹಿತನೂ ಶೂರನೂ ಆದ ಒಬ್ಬನನ್ನು ಅಧಿಪತಿಯನ್ನಾಗಿ ಮಾಡಬೇಕು.

ಯಥಾಮುಖ್ಯಾಃ ಸನ್ನಿಪತ್ಯ ವಕ್ತವ್ಯಾಃ ಸಂಶಯಾಮಹೇ |
ಯಥಾ ಜಯಾರ್ಥಂ ಸಂಗ್ರಾಮೇ ನ ಜಹ್ಯಾಮ ಪರಸ್ಪರಮ್ ॥30॥
ಇಹೈವ ತೇ ನಿವರ್ತಂತಾಂ ಯೇ ನಃ ಕೇಚನ ಭೀರವಃ |
ನ ಘಾತಯೇಯುಃ ಪ್ರದರಂ ಕುರ್ವಾಣಾಸ್ತುಮುಲೇ ಸತಿ |
ನ ಸನ್ನಿಪಾತೇ ಪ್ರದರಂ ವಧಂ ವಾ ಕುರ್ಯುರೀದೃಶಾಃ ॥31॥

ತನ್ನ ಸೇನೆಯಲ್ಲಿ ಮುಖ್ಯರಾದವರನ್ನು ಸಂಧಿಸಿ ಹೀಗೆ ಮಾತನಾಡಬೇಕು `ಯುದ್ಧದಲ್ಲಿ ಜಯದ ವಿಷಯದಲ್ಲಿ ನಮಗೆ ಸಂಶಯವುಂಟಾಗಿದೆ. ನಾವು ಒಬ್ಬರ- ನ್ನೊಬ್ಬರು ಬಿಡುವುದು ಬೇಡ. ನಮ್ಮಲ್ಲಿ ಯಾರಾದರೂ ಭೀರುಗಳಿದ್ದರೆ ಅವರು ಇಲ್ಲಿಯೇ ಹಿಂದಿರುಗಲಿ. ಹೆದರಿದವರು ತೀವ್ರವಾದ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲಲಾರರು. ಅಂತಹವರು ಶತ್ರುಗಳು ಎರಗಿದಾಗ ಅವರಿಗೆ ಭಯವನ್ನಾಗಲೀ, ವಧೆಯನ್ನಾಗಲೀ ಉಂಟುಮಾಡಲಾರರು.

ಆತ್ಮಾನಂ ಚ ಸ್ವಪಕ್ಷಂ ಚ ಪಲಾಯನ್ ಹಂತಿ ಸಂಯುಗೇ |
ದ್ರವ್ಯನಾಶೋ ವಧೋಽಕೀರ್ತಿರಯಶಶ್ಚ ಪಲಾಯನೇ ॥32॥

ಯುದ್ಧವನ್ನು ಬಿಟ್ಟು ಓಡುವವನು ತನ್ನನ್ನೂ ತನ್ನ ಪಕ್ಷವನ್ನೂ ನಾಶಗೊಳಿಸು- ತ್ತಾನೆ. ಪಲಾಯನ ಮಾಡಿದರೆ ದ್ರವ್ಯನಾಶ, ವಧೆ, ಈ ಲೋಕದಲ್ಲಿ ಅಕೀರ್ತಿ, ಪರಲೋಕದಲ್ಲಿ ಯಶೋಹಾನಿ ಉಂಟಾಗುತ್ತದೆ (ಎಂದು ಹೇಳಬೇಕು).

ಅಮನೋಜ್ಞಾಸುಖಾ ವಾಚಃ ಪುರುಷಸ್ಯ ಪಲಾಯತಃ |
ಪ್ರತಿಸ್ಪಂಧೌಷ್ಠದಂತಶ್ಚ ನ್ಯಸ್ತಸರ್ವಾಯುಧಸ್ಯ ಚ ॥33॥

ಪಲಾಯನ ಮಾಡುವ ಪುರುಷನು ಮನೋಹರವಲ್ಲದ ದುಃಖಕರವಾದ ಮಾತುಗಳನ್ನು ಆಡುತ್ತಾನೆ. ಅವನ ತುಟಿಗಳು ಮತ್ತು ದಂತಗಳು ಅದುರುತ್ತವೆ. ಅವನು ಎಲ್ಲಾ ಆಯುಧಗಳನ್ನೂ ಕೆಳಗಿಡುತ್ತಾನೆ.

ಹಿತ್ವಾ ಪಲಾಯಮಾನಸ್ಯ ಸಹಾಯಾನ್ ಪ್ರಾಣಸಂಶಯೇ |
ಅಮಿತ್ರೈರನುಬದ್ಧಸ್ಯ ದ್ವಿಷತಾಮಸ್ತು ನಸ್ತಥಾ ॥34॥

ಪ್ರಾಣಸಂಶಯವುಂಟಾದಾಗ, ತನ್ನ ಸಹಾಯಕರನ್ನು ಬಿಟ್ಟು ಓಡುವವನ ಪರಿಸ್ಥಿತಿಯು ಓಡುತ್ತಾ ಶತ್ರುಗಳಿಂದ ಹಿಂಬಾಲಿಸಲ್ಪಡುವವನ ಪರಿಸ್ಥಿತಿಯು ನಮ್ಮ ಶತ್ರುಗಳಿಗಾಗಲಿ (ನಮಗೆ ಬೇಡ).

ಮನುಷ್ಯಾಪಶದಾ ಹ್ಯೇತೇ ಯೇ ಭವಂತಿ ಪರಾಙ್ಮುಖಾಃ |
ರಾಶಿವರ್ಧನಮಾತ್ರಾಸ್ತೇ ನೈವ ತೇ ಪ್ರೇತ್ಯ ನೋ ಇಹ ॥35॥

ಯುದ್ಧಕ್ಕೆ ವಿಮುಖರಾಗಿ ಓಡುವವರು ನೀಚರಾದ ಮನುಷ್ಯರು. ಅವರು ಪಾಚಕರು ಅನ್ನದ ರಾಶಿಯನ್ನು ಹೆಚ್ಚು ಮಾಡುವುದಕ್ಕೆ ಮಾತ್ರ ನಿಮಿತ್ತರಾದವರು. ಅವರಿಗೆ ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಸ್ಥಾನವಿಲ್ಲ.

ಅಮಿತ್ರಾ ಹೃಷ್ಟಮನಸಃ ಪ್ರತ್ಯುದ್ಯಾಂತಿ ಪಲಾಯಿನಮ್ |
ಜಯಿನಂ ಸುಹೃದಸ್ತಾತ ವಂದನೈರ್ಮಂಗಲೇನ ಚ ॥36॥

ಪಲಾಯನ ಮಾಡುವವನನ್ನು ನೋಡಿ ಶತ್ರುಗಳು ಸಂತೋಷದಿಂದ ಕೂಡಿ ಮೇಲೆರಗುತ್ತಾರೆ. ಎಲೈ ಪ್ರೀತಿಪಾತ್ರನೇ! ಜಯಶಾಲಿಯಾದವನನ್ನು ಸುಹೃಜ್ಜನರು ನಮಸ್ಕಾರಗಳಿಂದಲೂ, ಮಂಗಲಪದಾರ್ಥಗಳಿಂದಲೂ ಪೂಜಿಸುತ್ತಾರೆ.

ಯಸ್ಯ ಸ್ಮ ವ್ಯಸನೇ ರಾಜನ್ನನುಮೋದಂತಿ ಶತ್ರವಃ |
ತದಸಹ್ಯತರಂ ದುಃಖಮಹಂ ಮನ್ಯೇ ವಧಾದಪಿ ॥37॥

ಎಲೈ ರಾಜನೇ! ಯಾವನಿಗೆ ವ್ಯಸನವುಂಟಾದಾಗ ಶತ್ರುಗಳು ಸಂತೋಷ ಪಡುತ್ತಾರೆಯೋ ವ್ಯಸನಕ್ಕೀಡಾದ ಆ ರಾಜನ ಅವಸ್ಥೆಯು ಮರಣಕ್ಕಿಂತ ಹೆಚ್ಚು ದುಃಖಕರವಾದುದು ಮತ್ತು ಸಹಿಸಲು ಅಸಾಧ್ಯವಾದುದು ಎಂದು ತಿಳಿಯುತ್ತೇನೆ.

ಶ್ರಿಯಂ ಜಾನೀತ ಧರ್ಮಸ್ಯ ಮೂಲಂ ಸರ್ವಸುಖಸ್ಯ ಚ |
ಸಾ ಭೀರೂನವಜಾನಾತಿ ಶೂರಸ್ತಾಮಧಿಗಚ್ಛತಿ ॥38॥

ಧರ್ಮಕ್ಕೂ ಮತ್ತು ಎಲ್ಲ ಸುಖಕ್ಕೂ ಸಂಪತ್ತು ಮೂಲವಾದುದು ಎಂದು ತಿಳಿಯಿರಿ. ಆ ಸಂಪತ್ತು ಹೇಡಿಯನ್ನು ತಿರಸ್ಕರಿಸಿ ಶೂರನನ್ನು ಸೇರುತ್ತದೆ.

ತೇ ವಯಂ ಸ್ವರ್ಗಮಿಚ್ಛಂತಃ ಸಂಗ್ರಾಮೇ ತ್ಯಕ್ತಜೀವಿತಾಃ |
ಜಯಂತೋ ವಧ್ಯಮಾನಾ ವಾ ಪ್ರಾಪ್ತುಮರ್ಹಾಮ ಸದ್ಗತಿಮ್ ॥39॥

ಅಂತಹ ನಾವು ಸ್ವರ್ಗವನ್ನು ಬಯಸುತ್ತಾ ಯುದ್ಧದಲ್ಲಿ ಜೀವದ ಹಂಗನ್ನು ತೊರೆದು ಜಯವನ್ನು ಪಡೆದು ಅಥವಾ ಹತರಾಗಿ ಸದ್ಗತಿಯನ್ನು ಹೊಂದೋಣ (ಎಂದು ಹೇಳಬೇಕು).

ಏವಂ ಸಂಶಪ್ತಶಪಥಾಃ ಸಮಭಿತ್ಯಕ್ತಜೀವಿತಾಃ |
ಅಮಿತ್ರವಾಹಿನೀಂ ವೀರಾಃ ಸಂಪ್ರಗಾಹಂತ್ಯಭೀರವಃ ॥40॥

ಹೀಗೆ ಶಪಥವನ್ನು ಮಾಡಿ ಜೀವನದ ಹಂಗನ್ನು ತೊರೆದು ವೀರರು ನಿರ್ಭ- ಯರಾಗಿ ಶತ್ರುಸೈನ್ಯವನ್ನು ಪ್ರವೇಶಿಸುತ್ತಾರೆ.

ಅಗ್ರತಃ ಪುರುಷಾನೀಕಮಸಿಚರ್ಮವತಾಂ ಭವೇತ್ |
ಪೃಷ್ಠತಃ ಶಕಟಾನೀಕಂ ಕಲತ್ರಂ ಮಧ್ಯತಸ್ತಥಾ ॥41॥
ಸೈನ್ಯದ ಮುಂಭಾಗದಲ್ಲಿ ಖಡ್ಗಚರ್ಮಗಳನ್ನು ಹಿಡಿದ ಪದಾತಿಗಳ ಸಮೂಹವು, ಹಿಂಭಾಗದಲ್ಲಿ ರಥಗಳು, ಮಧ್ಯಭಾಗದಲ್ಲಿ ಧಾವನೋತ್ಸುಕವಾದ ಸೈನ್ಯವನ್ನು ರಕ್ಷಿಸುವ ಸೇನಾಪತಿಗಳು ಇರಬೇಕು- (ಲಕ್ಷ್ಯಾಲಂಕಾರ)
ಪರೇಷಾಂ ಪ್ರತಿಘಾತಾರ್ಥಂ ಪದಾತೀನಾಂ ಚ ಗೂಹನಮ್ |
ಅಪಿ ಹ್ಯಸ್ಮಿನ್ ಪರೇ ಗೃಧ್ರಾ ಭವೇಯುರ್ಯೇ ಪುರೋಗಮಾಃ ॥42॥
ಶತ್ರುಗಳ ಪ್ರತಿಘಾತಕ್ಕಾಗಿ ಇರುವ ಪದಾತಿಗಳನ್ನು ರಕ್ಷಿಸಬೇಕು. ಶತ್ರುಸೈನ್ಯದ ಮುಂಭಾಗದಲ್ಲಿರುವವರು ಅಂತಹ ಪದಾತಿಗಳನ್ನು ವಶಪಡಿಸಿಕೊಳ್ಳಲು ಬಯಸ- ಬಹುದು.
ಯೇ ಪುರಸ್ತಾದಭಿಮತಾಃ ಸತ್ತ್ವಂತೋ ಹಿ ಮನಸ್ವಿನಃ |
ತೇ ಪೂರ್ವಮಭಿವರ್ತೇರಂಸ್ತಾನ್ ಅನ್ವಗಿತರೇ ಜನಾಃ ॥43॥
ಯಾರಿಗೆ ಅಧಿಕವಾದ ಬಲ ಮತ್ತು ಧೈರ್ಯಗಳಿವೆಯೋ ಅವರು ಸೇನೆಯ ಮುಂಭಾಗದಲ್ಲಿರಬೇಕು. ಉಳಿದ ಯೋಧರು ಅವರನ್ನು ಅನುಸರಿಸಬೇಕು.
ಅಪಿ ಚೋದ್ಧರ್ಷಣಂ ಕಾರ್ಯಂ ಭೀರೂಣಾಮಪಿ ಯತ್ನತಃ |
ಸ್ಕಂಧದರ್ಶನಮಾತ್ರಂ ತು ತಿಷ್ಠೇಯುರ್ವಾ ಸಮೀಪತಃ ॥44॥
ಭಯಗ್ರಸ್ತರಾದವರಿಗೂ ಪ್ರಯತ್ನಪಟ್ಟು ಉತ್ತೇಜನವನ್ನು ನೀಡಬೇಕು. ಶತ್ರುಗಳ ಸೈನ್ಯದ ಒಂದು ಭಾಗವನ್ನು ನೋಡುವವರೆಗೂ ಅವರ ಜೊತೆಯಲ್ಲಿ ಇರಬೇಕು.
ಸಂಹತಾನ್ ಯೋಧಯೇದಲ್ಪಾನ್ ಕಾಮಂ ವಿಸ್ತಾರಯೇದ್ ಬಹೂನ್ |
ಸೂಚೀಮುಖಮನೀಕಂ ಸ್ಯಾದಲ್ಪಾನಾಂ ಬಹುಭಿಃ ಸಹ ॥45॥
ತನ್ನ ಸೈನ್ಯವು ಅಲ್ಪವಾಗಿದ್ದರೆ ಸೂಚೀಮುಖವ್ಯೂಹವನ್ನು ಮಾಡಿ ಅವರನ್ನು ಒಟ್ಟಿಗೆ ಸೇರಿಸಿ ಯುದ್ಧವನ್ನು ಮಾಡಬೇಕು. ಸೈನ್ಯವು ದೊಡ್ಡದಾಗಿದ್ದರೆ ಅವರನ್ನು ನಮ್ಮ ಇಚ್ಛೆಗೆ ತಕ್ಕಂತೆ ವಿಸ್ತಾರಮಾಡಿ ಯುದ್ಧವನ್ನು ಮಾಡಬೇಕು. ಅಲ್ಪರು ಅನೇಕರ ಜೊತೆ ಯುದ್ಧವನ್ನು ಮಾಡುವಾಗ ಸೂಚೀಮುಖವ್ಯೂಹವನ್ನು ರಚಿಸಬೇಕೆಂದು ಹೇಳುತ್ತಾರೆ.
ಸನ್ನಿಕೃಷ್ಟೇ ನಿಕೃಷ್ಟೇ ವಾ ಸತ್ಯಂ ವಾ ಯದಿ ವಾಽನೃತಮ್ |
ಪ್ರಗೃಹ್ಯ ಬಾಹೂನ್ ಕ್ರೋಶೇತ ಭಗ್ನಾ ಭಗ್ನಾಃ ಪರಾ ಇತಿ ॥46॥
ಸಮೀಪದಲ್ಲಾಗಲೀ ದೂರದಲ್ಲಾಗಲೀ ಈ ಮಾತು ಸತ್ಯವಾಗಲೀ ಅಥವಾ ಸುಳ್ಳಾಗಲೀ ಬಾಹುಗಳನ್ನು ಎತ್ತಿ ``ಶತ್ರುಗಳು ಭಗ್ನರಾಗಿದ್ದಾರೆ, ಭಗ್ನರಾಗಿದ್ದಾರೆ'' ಎಂದು ಕಿರುಚಬೇಕು.
ಆಗತಂ ನೋ ಮಿತ್ರಬಲಂ ಪ್ರಹರಧ್ವಮಭೀತವತ್ |
ಶಬ್ದವಂತೋಽನುಧಾವೇಯುಃ ಕುರ್ವಂತೋ ಭೈರವಂ ರವಮ್ ॥47॥
`ನಮ್ಮ ಮಿತ್ರಸೈನ್ಯವು ಬಂದಿದೆ; ನಿರ್ಭಯವಾಗಿ ಪ್ರಹಾರ ಮಾಡಿ' ಎಂದು ಹೇಳುತ್ತಾ ಭೈರವನಾದವನ್ನು ಮಾಡುತ್ತಾ ಯೋಧರ ಹಿಂದೆ ಓಡಬೇಕು.
ಕ್ಷ್ವೇಡಾಃ ಕಿಲಕಿಲಾಃ ಶಂಖಾಃ ಕ್ರಕಚಾ ಗೋವಿಷಾಣಿಕಾನ್ |
ಭೇರೀಮೃದಂಗಪಣವಾನ್ ನಾದಯೇಯುಶ್ಚ ಕುಂಜರಾನ್ ॥48॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವ್ಯಧಿಕಶತತಮೋಽಧ್ಯಾಯಃ ॥102॥
ಯುದ್ಧದ ಸಿಂಹನಾದಗಳು, ಕಿಲಕಿಲಶಬ್ದಗಳು ಇವುಗಳನ್ನು ಮಾಡಬೇಕು. ಶಂಖ, ಕ್ರಕಚ, ಗೋವಿಷಾಣ, ಭೇರಿ, ಮೃದಂಗ, ಪಣವಗಳನ್ನು ಮೊಳಗಿಸಬೇಕು. ಗಜಗಳು ಬೃಂಹಣವನ್ನು ಮಾಡುವಂತೆ ಮಾಡಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 102ನೆಯ ಅಧ್ಯಾಯವು ಮುಗಿಯಿತು.
0

103. ನೂರಮೂರನೆಯ ಅಧ್ಯಾಯ
ಯೋಧರ ಯುದ್ಧಪ್ರಕಾರಾದಿ ಕಥನ
ಯುಧಿಷ್ಠಿರಃ
ಕಿಂಶೀಲಾಃ ಕಿಂಸಮುತ್ಥಾನಾಃ ಕಥಂರೂಪಾಶ್ಚ ಭಾರತ |
ಕಿಂಸನ್ನಾಹಾಃ ಕಥಂಶಸ್ತ್ರಾ ಜನಾಃ ಸ್ಯುಃ ಸಂಯುಗೇ ನೃಪ ॥1॥
ಯುಧಿಷ್ಠಿರ ಎಲೈ ಭಾರತನೇ! ಯೋಧರ ನಡತೆ ಅವರ ಆಚಾರ ಅವರ ರೂಪಗಳು ಹೇಗಿರಬೇಕು? ಎಲೈ ರಾಜನೇ! ಅವರ ಸನ್ನಾಹ ಶಸ್ತ್ರಗಳು ಯುದ್ಧದಲ್ಲಿ ಹೇಗಿರಬೇಕು?
ಭೀಷ್ಮಃ
ಯಥಾಽಚರಿತಮೇವಾತ್ರ ಶಸ್ತ್ರಪತ್ರಂ ವಿಧೀಯತೇ |
ಆಚಾರಾದೇವ ಪುರುಷಸ್ತಥಾ ಕರ್ಮಸು ವರ್ತತೇ ॥2॥
ಭೀಷ್ಮರು ಅವರವರ ದೇಶಾಚಾರಕ್ಕೆ ತಕ್ಕಂತೆ ಶಸ್ತ್ರಗಳು ಮತ್ತು ವಾಹನಗಳು ವಿಹಿತವಾಗುತ್ತವೆ. ಯೋಧಪುರುಷನು ತನ್ನ ದೇಶಾಚಾರದಂತೆಯೇ ಯುದ್ಧಕರ್ಮ- ದಲ್ಲಿ ಪ್ರವೃತ್ತನಾಗುತ್ತಾನೆ.

ಗಾಂಧಾರಾಃ ಸಿಂಧುಸೌವೀರಾ ನಖರಪ್ರಾಸಯೋಧಿನಃ |
ಆಭೀರವಃ ಸುಬಲಿನಸ್ತದ್ಬಲಂ ಸರ್ವಪಾರಗಮ್ ॥3॥
ಗಾಂಧಾರರು ಮತ್ತು ಸಿಂಧುಸೌವೀರರು ನಖರ ಮತ್ತು ಪ್ರಾಸಗಳಿಂದ ಯುದ್ಧವನ್ನು ಮಾಡುವವರು. ಆಭೀರರು ಬಲಿಷ್ಠರಾದವರು. ಅವರು ಸರ್ವಶಸ್ತ್ರ- ಗಳಲ್ಲಿಯೂ ಪಾರಂಗತರು.
ಸರ್ವಶಸ್ತ್ರೇಷು ಕುಶಲಾಃ ಸತ್ತ್ವವಂತೋ ಹ್ಯುಶೀನರಾಃ |
ಪ್ರಾಚ್ಯಾ ಮಾತಂಗಯುದ್ಧೇಷು ಕುಶಲಾಃ ಶಠಯೋಧಿನಃ ॥4॥
ಉಶೀನರರು ಎಲ್ಲ ಶಸ್ತ್ರಗಳಲ್ಲಿಯೂ ಕುಶಲರು ಮತ್ತು ಬಲಶಾಲಿಗಳು. ಪ್ರಾಚ್ಯರು (ಪೂರ್ವದಿಕ್ಕಿನವರು) ಗಜಯುದ್ಧಗಳಲ್ಲಿ ಕುಶಲರು ಮತ್ತು ಹಠದಿಂದ ಯುದ್ಧವನ್ನು ಮಾಡುವವರು.
ತಥಾ ಯವನಕಾಂಭೋಜಾ ಮಥುರಾಮಭಿತಶ್ಚ ಯೇ |
ಏತೇ ನಿಯುದ್ಧಕುಶಲಾ ದಾಕ್ಷಿಣಾತ್ಯಾಸಿಚರ್ಮಿಣಃ ॥5॥
ಹಾಗೆಯೇ ಯವನರು ಕಾಂಭೋಜರು ಮತ್ತು ಮಧುರೆಯ ಸಮೀಪದವರು - ಇವರು ಬಾಹುಯುದ್ಧದಲ್ಲಿ ಕುಶಲರು. ದಾಕ್ಷಿಣಾತ್ಯರು ಖಡ್ಗಚರ್ಮಯುದ್ಧದಲ್ಲಿ ಕುಶಲರು.
ಸರ್ವತ್ರ ಶೂರಾ ಜಾಯಂತೇ ಮಹಾಸತ್ತ್ವಾ ಮಹಾಬಲಾಃ |
ಪ್ರಾಯ ಏಷ ಸಮುದ್ದಿಷ್ಟೋ ಲಕ್ಷಣಾನಿ ತು ಮೇ ಶೃಣು ॥6॥
ಮಹಾಧೈರ್ಯ ಮತ್ತು ಮಹಾಬಲವುಳ್ಳ ಶೂರರು ಎಲ್ಲ ದೇಶಗಳಲ್ಲಿಯೂ ಜನಿಸುತ್ತಾರೆ. ಅವರಲ್ಲಿ ಸ್ಥೂಲವಾಗಿ ಕಾಣುವ ಮುಖ್ಯಲಕ್ಷಣಗಳನ್ನು ನನ್ನಿಂದ ಕೇಳುವವನಾಗು.
ಸಿಂಹಶಾರ್ದೂಲವಾಙ್ನೇತ್ರಾಃ ಸಿಂಹಶಾರ್ದೂಲಗಾಮಿನಃ |
ಪಾರಾವತಕುಳಿಂಗಾಕ್ಷಾಃ ಸರ್ವೇ ಶೂರಾಃ ಪ್ರಮಾಥಿನಃ ॥7॥
ಸಿಂಹಶಾರ್ದೂಲಸ್ವರವನ್ನು ಹೊಂದಿದ, ಸಿಂಹಶಾರ್ದೂಲನಡಿಗೆಯನ್ನು ಹೊಂದಿದ ಪಾರಿವಾಳ ಮತ್ತು ಕುಳಿಂಗಪಕ್ಷಿಗಳ ಕಣ್ಣುಗಳಂತೆ ಕಣ್ಣುಳ್ಳ ಎಲ್ಲ ಶೂರರೂ ಶತ್ರುಪಕ್ಷವನ್ನು ಕಲಕಾಡುವವರು.
ಮೃಗಸ್ವರಾ ದ್ವೀಪಿನೇತ್ರಾ ಋಷಭಾಕ್ಷಾಸ್ತಥಾಪರೇ |
ಪ್ರವಾದಿನಃ ಸುಚಂಡಾಶ್ಚ ಕ್ರೋಧಿನಃ ಕಿನ್ನರೀಸ್ವನಾಃ ॥8॥
ಇನ್ನು ಕೆಲವರು ಜಿಂಕೆಯ ಸ್ವರವನ್ನು, ಚಿರತೆಯ ಕಣ್ಣುಗಳನ್ನು, ಅಥವಾ ವೃಷಭನೇತ್ರಗಳನ್ನು, ಕಿನ್ನರೀ ವಾದ್ಯಸ್ವರವನ್ನು ಹೊಂದಿ ಕ್ರೋಧಶೀಲರೂ ಉಗ್ರರೂ ಮತ್ತು ಉಚ್ಛಘೋಷವನ್ನೂ ಮಾಡುವವರೂ ಆಗಿರುತ್ತಾರೆ.
ಮೇಘಸ್ವನಾಃ ಕ್ರುದ್ಧಮುಖಾಃ ಕೇಚಿತ್ ಕಳಭನಿಸ್ವನಾಃ |
ಜಿಹ್ಮನಾಸಾನುಜಂಘಾಶ್ಚ ದೂರಗಾ ದೂರಪಾತಿನಃ ॥9॥
ಕೆಲವರು ಮೇಘಗಂಭೀರನಾದವನ್ನು ಹೊಂದಿ, ಕೋಪಗೊಂಡ ಮುಖವನ್ನು ಹೊಂದಿ, ಒಂಟೆಯ (ಅಥವಾ ಮರಿಆನೆಯ) ಸ್ವರವನ್ನು ಹೊಂದಿರುತ್ತಾರೆ. ವಕ್ರವಾದ ನಾಸಿಕೆ ಮತ್ತು ಜಂಗಳನ್ನು ಹೊಂದಿರುವ ಅವರು ದೂರದವರೆಗೂ ಹೋಗಬಲ್ಲರು ಮತ್ತು ಅವರ ಬಾಣಗಳು ಬಹಳ ದೂರ ಸಾಗುತ್ತವೆ.
ಬಿಡಾಲಕುಬ್ಜಾಸ್ತನವಸ್ತನುಕೇಶಾಸ್ತನುತ್ವಚಃ |
ಶೂರಾಶ್ಚಪಲಚಿತ್ತಾಶ್ಚ ತೇ ಭವಂತಿ ದುರಾಸದಾಃ ॥10॥
ಬೆಕ್ಕಿನಂತೆ ಕುಳ್ಳರಾದವರು, ಕೃಶರಾದವರು, ಮೃದುವಾದ ಕೇಶ ಮತ್ತು ಚರ್ಮ- ವನ್ನು ಹೊಂದಿದವರು, ಶೂರರಾದವರು, ರಣರಂಗವನ್ನು ಬಿಟ್ಟು ಓಡದವರು  ಅವರ ಸಮೀಪಕ್ಕೆ ಹೋಗುವುದು ಕಷ್ಟಸಾಧ್ಯವಾದುದು.
ಗೋಧಾನಿಮೀಲಿತಾಃ ಕೇಚಿನ್ಮೃದುಪ್ರಕೃತಯೋಽಪಿ ಚ |
ತುರಂಗಗತಿನಿರ್ಘೋಷಾಸ್ತೇ ನರಾಃ ಪಾರಯಿಷ್ಣವಃ॥11॥
ಉಡದ ಮುಚ್ಚಿದ ಕಣ್ಣುಗಳಂತೆ ಕಣ್ಣುಗಳನ್ನು ಹೊಂದಿದ, ಮೃದುಸ್ವಭಾವದ ಕೆಲವರು ಅಶ್ವವೇಗವನ್ನೂ, ಅಶ್ವಘೋಷವನ್ನೂ ಹೊಂದಿರುತ್ತಾರೆ. ಅವರು ಯುದ್ಧದ ಕೊನೆಯನ್ನು ತಲುಪುವವರು.
ಸುಸಂಹತಾಃ ಪ್ರತನವೋ ವ್ಯೂಢೋರಸ್ಕಾಃ ಸುಸಂಸ್ಥಿತಾಃ |
ಪ್ರವಾದಿತೇನ ನೃತ್ಯಂತಿ ಹೃಷ್ಯಂತಿ ಕಲಹೇಷು ಚ ॥12॥
ಗಂಭೀರಾಕ್ಷಾ ನಿಃಸೃತಾಕ್ಷಾಃ ಪಿಂಗಲಾ ಭ್ರುಕುಟೀಮುಖಾಃ |
ನಕುಲಾಕ್ಷಾಸ್ತಥಾ ಚೈವ ಸರ್ವೇ ಶೂರಾಸ್ತನುತ್ಯಜಃ ॥13॥
ಗಟ್ಟಿಯಾದ ಮೈಕಟ್ಟು, ಕೃಶವಾದ ದೇಹ, ವಿಸ್ತಾರವಾದ ಎದೆಗಳನ್ನು ಹೊಂದಿ- ದವರು ವಾದ್ಯಗಳ ಧ್ವನಿಯನ್ನು ಕೇಳಿ ನರ್ತನವನ್ನು ಮಾಡುತ್ತಾರೆ ಮತ್ತು ಯುದ್ಧ- ಗಳಲ್ಲಿ ಸಂತೋಷಪಡುತ್ತಾರೆ. ಆಳವಾದ ಕಣ್ಣುಗಳನ್ನು ಹೊಂದಿ ಅಥವಾ ಉಬ್ಬಿದ ಕಣ್ಣುಗಳನ್ನು ಹೊಂದಿ, ಕಂದು ಬಣ್ಣವನ್ನು ಹೊಂದಿ, ಹುಬ್ಬು ಗಂಟಿಕ್ಕಿದ ಮುಖ- ವುಳ್ಳವರಾದವರು, ಮುಂಗುಸಿಯ ಕಣ್ಣುಳ್ಳವರು ಎಲ್ಲರೂ ಯುದ್ಧದಲ್ಲಿ ಶರೀರವನ್ನು ತ್ಯಾಗಮಾಡುವ ಶೂರರು.
ಜಿಹ್ಮಾಕ್ಷಾಃ ಪ್ರಲಲಾಟಾಶ್ಚ ನಿರ್ಮಾಂಸಹನವೋಽಪಿ ಚ |
ವಕ್ರಬಾಹ್ವಂಸನಾಸಾಕ್ಷಾಃ ಕೃಶಾ ಧಮನಿಸಂತತಾಃ ॥14॥
ಪ್ರವಿಶಂತ್ಯತಿವೇಗೇನ ಸಂಪರಾಯೇಽಭ್ಯುಪಸ್ಥಿತೇ |
ವಾರಣಾ ಇವ ಸಮ್ಮತ್ತಾಸ್ತೇ ಭವಂತಿ ದುರಾಸದಾಃ ॥15॥
ವಕ್ರವಾದ ಕಣ್ಣು, ವಿಸ್ತಾರವಾದ ಹಣೆ, ಮಾಂಸರಹಿತವಾದ ಗಲ್ಲ, ವಕ್ರವಾದ ಬಾಹುಭುಜನಾಸಿಕ ಮತ್ತು ಕಣ್ಣುಗಳು, ಕೃಶತೆ, ನರಗಳು

ಎದ್ದು ಕಾಣುವುದು- ಇಂತಹವರು ಯುದ್ದವು ಉಪಸ್ಥಿತವಾದಾಗ ಅತಿವೇಗದಿಂದ ಶತ್ರುಸೈನ್ಯವನ್ನು ಪ್ರವೇಶಿಸುತ್ತಾರೆ. ಮದಿಸಿದ ಆನೆಗಳಂತೆ ಅವರು ಶತ್ರುಗಳಿಗೆ ದುರಾಸದರಾಗುತ್ತಾರೆ.
ದೀಪ್ತಸ್ಫುಟಿತಕೇಶಾಂತಾಃ ಸ್ಥೂಲಪಾರ್ಶ್ವಹನೂಮುಖಾಃ |
ಉನ್ನತಾಂಸಾ ಪೃಥುಗ್ರೀವಾ ವಿಕಟಾಃ ಸ್ಥೂಲಪಿಂಡಿಕಾಃ ॥16॥
ಉದ್ವೃತ್ತಾಶ್ಚೈವ ಸುಗ್ರೀವಾ ವಿನತಾ ವಿಹಗಾ ಇವ |
ಪಿಂಡಶೀರ್ಷಾಹಿವಕತ್ರಶ್ಚ ವೃಷದಂಶಮುಖಾ ಇವ ॥17॥
ಉಗ್ರಸ್ವನಾ ಮನ್ಯುಮಂತೋ ಯುದ್ಧೇಷ್ವಾರಾವಸಾರಿಣಃ |
ಅಧರ್ಮಜ್ಞಾವಲಿಪ್ತಾಶ್ಚ ಘೋರಾ ರೌದ್ರಪ್ರದರ್ಶಿನಃ ॥18॥
ಹೊಳೆಯುವ ಮತ್ತು ತುದಿಯಲ್ಲಿ ಒಡೆದ ತಲೆಕೂದಲನ್ನು ಉಳ್ಳವರು, ಪಕ್ಕೆ ಹನು ಮತ್ತು ಮುಖಗಳು ಸ್ಥೂಲವಾಗಿರುವವರು, ಉನ್ನತವಾದ ಎದೆ ವಿಸ್ತಾರವಾದ ಕತ್ತು ಮತ್ತು ಸ್ಥೂಲವಾದ ದೇಹವನ್ನು ಹೊಂದಿದವರು, ಮೇಲ್ಮುಖವಾಗಿ ಅಥವಾ ಉದ್ಧಟರಾಗಿ ಒಳ್ಳೆಯ ಕತ್ತನ್ನು ಹೊಂದಿದವರು, ಎತ್ತರವಾಗಿ ಬಾಗಿ ಪಕ್ಷಿಗಳಂತೆ ಇರುವವರು, ಗುಂಡಾದ ಶಿರಸ್ಸು ಮತ್ತು ಸರ್ಪದ ತಲೆಗಳಂತೆ ತಲೆ ಉಳ್ಳವರು, ವೃಷಭದಂತಹ ಮುಖವುಳ್ಳವರು, ಉಗ್ರವಾದ ಸ್ವರವುಳ್ಳವರು, ಕೋಪವನ್ನು ಹೊಂದಿದವರು, ಯುದ್ಧದಲ್ಲಿ ಗರ್ಜಿಸುತ್ತಾ ಮುಂದೆ ಸಾಗುವವರು ಇವರೆಲ್ಲರೂ ಅಧರ್ಮಜ್ಞರು, ಅಹಂಕಾರಿಗಳು, ಘೋರರು ಮತ್ತು ಭಯಂಕರ ಕಾರ್ಯವನ್ನು ತೋರಿಸುವವರು.
ತ್ಯಕ್ತಾತ್ಮಾನಃ ಸರ್ವ ಏತ ಉದ್ವಗ್ರಾ ಹ್ಯನಿವರ್ತಿನಃ |
ಪುರಸ್ಕಾರ್ಯಾಃ ಸದಾ ಸೈನ್ಯೇ ಹನ್ಯಂತೇ ಘ್ನಂತಿ ಚಾಪಿ ತೇ ॥19॥
ಇವರೆಲ್ಲರೂ ಪ್ರಾಣವನ್ನು ತ್ಯಜಿಸಿ ಯುದ್ಧವನ್ನು ಮಾಡುವವರು. ರಣರಂಗ- ದಲ್ಲಿ ಹಿಮ್ಮೆಟ್ಟದವರು ಮತ್ತು ಯುದ್ಧದಲ್ಲಿ ಶ್ರೇಷ್ಠರಾದವರು. ಇವರನ್ನು ಸೈನ್ಯದಲ್ಲಿ ಯಾವಾಗಲೂ ಪುರಸ್ಕರಿಸಬೇಕು. ಇವರು ಶತ್ರುಗಳನ್ನು ಕೊಲ್ಲುತ್ತಾರೆ ಮತ್ತು ತಾವೂ ಹತರಾಗುತ್ತಾರೆ.
ಅಧಾರ್ಮಿಕಾ ಭಿನ್ನವೃತ್ತಾಃ ಸಾಧ್ವೇವೈಷಾಂ ಪರಾಭವಃ |
ಏವಮೇವ ಪ್ರಕುಪ್ಯಂತಿ ರಾಜ್ಞೋಽಪ್ಯೇತೇ ಹ್ಯಭೀಕ್ಷ್ಣಶಃ ॥20॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರ್ಯಧಿಕಶತತಮೋಽಧ್ಯಾಯಃ ॥103॥
ಅಧಾರ್ಮಿಕರು, ಭಿನ್ನವಾದ ನಡತೆಯುಳ್ಳವರೂ ಆದವರಿಗೆ ಸೋಲು ನ್ಯಾಯವಾದುದೇ ಆಗಿದೆ. ಅಂತಹವರು ರಾಜನ ಮೇಲೆಯೂ ಸತತವಾಗಿ ಕಾರಣ- ವಿಲ್ಲದೇ ಕೋಪಗೊಳ್ಳುತ್ತಾರೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 103ನೆಯ ಅಧ್ಯಾಯವು ಮುಗಿಯಿತು
0
104. ನೂರನಾಲ್ಕನೆಯ ಅಧ್ಯಾಯ
ಸೇನೆಯ ಜಯಚಿಹ್ನೆಗಳ ಮತ್ತು ರಾಜನೀತಿಯ ಕಥನ
ಯುಧಿಷ್ಠಿರಃ
ಜೈತ್ರ್ಯಾ ವಾ ಕಾನಿ ರೂಪಾಣಿ ಭವಂತಿ ಪುರುಷರ್ಷಭ |
ಪೃತನಾಯಾಃ ಪ್ರಶಸ್ತಾನಿ ತಾನೀಹೇಚ್ಛಾಮಿ ವೇದಿತುಮ್ ॥1॥
ಯುಧಿಷ್ಠಿರ ಎಲೈ ಪುರುಷಶ್ರೇಷ್ಠನೇ! ಜಯಶೀಲವಾದ ಸೈನ್ಯಕ್ಕೆ ಯಾವ ಪ್ರಶಸ್ತವಾದ ಸೂಚನೆಗಳು ಉಂಟಾಗುತ್ತವೆಂದು ನಾನು ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಜೈತ್ರ್ಯಾ ವಾ ಯಾನಿ ರೂಪಾಣಿ ಭವಂತಿ ಪುರುಷರ್ಷಭ |
ಪೃಥನಾಯಾಃ ಪ್ರಶಸ್ತಾನಿ ತಾನಿ ವಕ್ಷ್ಯಾಮಿ ಸರ್ವಶಃ ॥2॥
ಭೀಷ್ಮರು ಎಲೈ ಪುರುಷಶ್ರೇಷ್ಠನೇ! ಜಯಶೀಲವಾದ ಸೈನ್ಯಕ್ಕೆ ಎಂತಹ ಶುಭಸೂಚನೆಗಳು ಉಂಟಾಗುತ್ತವೆಯೋ ಅವುಗಳೆಲ್ಲವನ್ನೂ ನಾನು ಹೇಳುವೆನು.
ದೈವಂ ಪೂರ್ವಂ ವಿಕುರುತೇ ಮಾನುಷೇ ಕಾಲಚೋದಿತೇ |
ತದ್ ವಿದ್ವಾಂಸೋಽನುಪಶ್ಯಂತಿ ಜ್ಞಾನದೀರ್ಘೇಣ ಚಕ್ಷುಷಾ ॥3॥
ಮನುಷ್ಯರು ಕಾಲಚೋದಿತರಾದಾಗ ಮೊದಲು ದೈವವು ವಿಕೋಪಗೊಳ್ಳು- ತ್ತದೆ. ಅದನ್ನು ದೀರ್ಘದೃಷ್ಟಿಯುಳ್ಳ ವಿದ್ವಾಂಸರು ತಮ್ಮ ಜ್ಞಾನದೃಷ್ಟಿಯಿಂದ ನೋಡುತ್ತಾರೆ.
ಪ್ರಾಯಶ್ಚಿತ್ತವಿಧಿಂ ಚಾತ್ರ ಜಪಹೋಮಾಂಶ್ಚ ತದ್ವಿದಃ |
ಮಂಗಲಾನಿ ಚ ಕುರ್ವಂತಃ ಶಮಯಂತ್ಯಹಿತಾನ್ಯಪಿ ॥4॥
ಆಗ ಅದನ್ನು ತಿಳಿದವರು ಪ್ರಾಯಶ್ಚಿತ್ತವಿಧಿಗಳನ್ನು, ಜಪಹೋಮಗಳನ್ನು, ಮಂಗಳಗಳನ್ನೂ ಮಾಡಿ ಅಶುಭವನ್ನು ಶಮನಗೊಳಿಸುತ್ತಾರೆ.
ಉದೀರ್ಣಮನಸೋ ಯೋಧಾ ವಾಹನಾನಿ ಚ ಭಾರತ |
ಯಸ್ಯಾಂ ಭವಂತಿ ಸೇನಾಯಾಂ ಧ್ರುವಂ ತಸ್ಯಾಂ ಜಯೋ ವದೇತ್ ॥5॥
ಎಲೈ ಭಾರತನೇ! ಯಾವ ಸೈನ್ಯದಲ್ಲಿ ಯೋಧರು ಮತ್ತು ವಾಹನಗಳು ಸಂತೋಷದಿಂದ ಉಬ್ಬಿದ ಮನಸ್ಸುಳ್ಳವರಾಗುತ್ತಾರೆಯೋ ಆ

ಸೈನ್ಯಕ್ಕೆ ನಿಶ್ಚಯವಾಗಿ ಜಯವುಂಟಾಗುವುದು.
ಅನ್ವೇನಾಂ ವಾಯವೋ ವಾಂತಿ ತಥೈವೇಂದ್ರಧನೂಂಷಿ ಚ |
ಅನುಪ್ಲವಂತೇ ಮೇಘಾಶ್ಚ ತಥಾದಿತ್ಯಸ್ಯ ರಶ್ಮಯಃ ॥6॥
ಅವರಿಗೆ ಹಿಂಭಾಗದಿಂದ ವಾಯುವು ಬೀಸುವುದು. ಕಾಮನಬಿಲ್ಲು ಹಿಂಭಾಗ- ದಲ್ಲಿರುವುದು. ಮೇಘಗಳು ಮತ್ತು ಸೂರ್ಯರಶ್ಮಿಗಳು ಅವರನ್ನು ಹಿಂಬಾಲಿ- ಸುವವು.
ಗೋಮಾಯವಶ್ಚಾನುಲೋಮಾ ವಡಾ ಗೃಧ್ರಾಶ್ಚ ಸರ್ವಶಃ |
ಆಚರೇಯುರ್ಯದಾ ಸೇನಾಂ ತದಾ ಸಿದ್ಧಿರನುತ್ತಮಾ ॥7॥
ನರಿಗಳು, ಬಕಗಳು, ಹದ್ದುಗಳು ಎಲ್ಲವೂ ಅನುಕೂಲವಾಗಿದ್ದು ಸೈನ್ಯದ ಮೇಲೆ ತಿರುಗಾಡುವವು. ಆಗ ಒಳ್ಳೆಯ ಸಿದ್ಧಿಯುಂಟಾಗುವುದು.

ಪ್ರಸನ್ನಭಾಃ ಪಾವಕ ಊರ್ಧ್ವರಶ್ಮಿಃ
ಪ್ರದಕ್ಷಿಣಾವರ್ತಶಿಖೋ ವಿಧೂಮಃ |
ಪುಣ್ಯಾ ಗಂಧಾಶ್ಚಾಹುತೀನಾಂ ಪ್ರವಾಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ॥8॥
ಅಗ್ನಿಯ ಕಾಂತಿಯು ಪ್ರಸನ್ನವಾಗಿದ್ದು, ಊರ್ಧ್ವಕಿರಣಗಳನ್ನು ಹೊಂದಿದ್ದು, ಪ್ರದಕ್ಷಿಣಾಕಾರದ ದ್ವಾರಗಳನ್ನು ಹೊಂದಿ ಧೂಮರಹಿತವಾಗಿರುತ್ತದೆ. ಆಹುತಿಗಳ ದಿವ್ಯಗಂಧವು ಬೀಸಿ ಬರುತ್ತದೆ. ಇದು ಮುಂದೆ ಉಂಟಾಗಲಿರುವ ಜಯದ ಸೂಚನೆ ಎಂದು ಹೇಳುತ್ತಾರೆ.
ಗಂಭೀರಶಬ್ದಾಶ್ಚ ಮಹಾಸ್ವನಾಶ್ಚ
ಶಂಖಾಶ್ಚ ಭೇರ್ಯಶ್ಚ ನದಂತಿ ಯತ್ರ |
ಯುಯುತ್ಸವಃ ಸಂಪ್ರತೀತಾ ಭವಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ॥9॥
ಶಂಖಭೇರಿಗಳು ಗಂಭೀರವಾದ ಮತ್ತು ದೊಡ್ಡದಾದ ಶಬ್ದವನ್ನುಂಟು- ಮಾಡುತ್ತವೆ. ಯೋಧರು ಯುದ್ಧಮಾಡುವ ಆಸೆಯನ್ನು ಹೊಂದಿ ಸಂತೋಷದಿಂದ ಕೂಡಿರುತ್ತಾರೆ. ಇದು ಮುಂದೆ ಉಂಟಾಗಲಿರುವ ಜಯದ ಲಕ್ಷಣವೆಂದು ಹೇಳು- ತ್ತಾರೆ.
ಇಷ್ಟಾ ಮೃಗಾಃ ಪೃಷ್ಠತೋ ವಾಮತಶ್ಚ
ಸಂಪ್ರಸ್ಥಿತಾನಾಂ ಚ ಗಮಿಷ್ಯತಾಂ ಚ |
ಜಿಘಾಂಸತಾಂ ದಕ್ಷಿಣಾಃ ಸಿದ್ಧಿಮಾಹು-
ರ್ಯೇ ತ್ವಗ್ರತಸ್ತೇ ಪ್ರತಿಷೇಧಯಂತಿ ॥10॥
ಯುದ್ಧಕ್ಕೆ ಹೊರಡುವುದಕ್ಕಿಂತ ಮುಂಚೆ ಅಥವಾ ಹೊರಟಮೇಲೆ ಇಷ್ಟವಾದ ಮೃಗಗಳು ಹಿಂದಿನಿಂದಲೂ ಮತ್ತು ಎಡಗಡೆಯಿಂದಲೂ ಬರುತ್ತವೆ. ಯುದ್ಧವನ್ನು ಮಾಡುವಾಗ ಬಲಭಾಗದಲ್ಲಿ ಬಂದರೆ ಅದರಿಂದ ಜಯಸಿದ್ಧಿಯನ್ನು ಹೇಳುತ್ತಾರೆ. ಮುಂಭಾಗದಲ್ಲಿ ಬರುವ ಮೃಗಗಳು ಜಯವನ್ನು ಪ್ರತಿಷೇಧಿಸುತ್ತವೆ.
ಮಂಗಲ್ಯಶಬ್ದಾಃ ಶಕುನಾ ವದಂತಿ
ಹಂಸಾಃ ಕ್ರೌಂಚಾ ಶತಪತ್ರಾಶ್ಚ ಭಾಸಾಃ |
ಹೃಷ್ಟಾ ಯೋಧಾಃ ಸತ್ತ್ವವಂತೋ ಭವಂತಿ
ಜಯಸ್ಯೈತದ್ ಭಾವಿನೋ ರೂಪಮಾಹುಃ ॥11॥
ಹಂಸ, ಕ್ರೌಂಚ, ಶತಪತ್ರ (ಮರಕುಟುಕನ ಹಕ್ಕಿ), ಭಾಸಪಕ್ಷಿಗಳು ಮಂಗಳ- ಶಬ್ದವನ್ನು ಉಚ್ಚರಿಸುತ್ತವೆ. ಸಂತೋಷದಿಂದ ಕೂಡಿದ ಯೋಧರು ಧೈರ್ಯಶಾಲಿ- ಗಳಾಗಿರುತ್ತಾರೆ. ಇದು ಮುಂದೆ ಉಂಟಾಗಲಿರುವ ಜಯದ ಸೂಚನೆಯೆಂದು ಹೇಳುತ್ತಾರೆ.
ಶಸ್ತ್ರೈಃ ಪತ್ರೈಃ ಕವಚೈಃ ಕೇತುಭಿಶ್ಚ
ಸುಭಾನುಭಿರ್ಮುಖವರ್ಣೈಶ್ಚ ಯೂನಾಮ್ |
ಭ್ರಾಜಿಷ್ಮತೀ ದುಷ್ಪ್ರತೀಪ್ರೇಕ್ಷಣೀಯಾ
ಯೇಷಾಂ ಚಮೂಸ್ತೇಽಭಿಭವಂತಿ ಶತ್ರೂನ್ ॥12॥
ಯಾರ ಸೈನ್ಯದಲ್ಲಿ ಶಸ್ತ್ರಗಳು, ವಾಹನಗಳು, ಕವಚಗಳು, ಧ್ವಜಗಳು ಮತ್ತು ಯುವಕರ ಮುಖವರ್ಣವು ಪ್ರಕಾಶಮಾನವಾಗಿರುತ್ತವೆಯೋ; ಶತ್ರುಗಳಿಗೆ ನೋಡಲು ಅಸಾಧ್ಯವಾಗಿರುತ್ತವೆಯೋ ಅಂತಹ ಸೈನ್ಯವು ಶತ್ರುಗಳನ್ನು ಪರಾಭವ- ಗೊಳಿಸುತ್ತದೆ.
ಶುಶ್ರೂಷವಶ್ಚಾನಭಿಮಾನಿನಶ್ಚ
ಪರಸ್ಪರಂ ಸೌಹೃದಮಾಸ್ಥಿತಾಶ್ಚ |
ಯೇಷಾಂ ಯೋಧಾಃ ಶೌಚಮನುಷ್ಠಿತಾಶ್ಚ
ಜಯಸ್ಯೈತದ್ ಭಾವಿನೋ ರೂಪಮಾಹುಃ ॥13॥
ಯಾರ ಯೋಧರು ಪರಸ್ಪರ ಮಾತನ್ನು ಕೇಳುವವರೋ, ನಿರಹಂಕಾರಿಗಳೋ, ಪರಸ್ಪರವಾಗಿ ಸ್ನೇಹದಿಂದಿರುತ್ತಾರೆಯೋ, ಶೌಚಾನುಷ್ಠಾನಪರರೋ ಅದು ಮುಂದೆ ಬರಲಿರುವ ಜಯದ ಸೂಚನೆಯೆಂದು ಹೇಳುತ್ತಾರೆ.
ಶಬ್ದಾಃ ಸ್ಪರ್ಶಾಸ್ತಥಾ ಗಂಧಾ ವಿಚರಂತಿ ಮನಃಪ್ರಿಯಾಃ |
ಧೈರ್ಯಂ ಚಾವಿಶತೇ ಯೋಧಾನ್ ವಿಜಯಸ್ಯ ಮುಖಂ ತು ತತ್ ॥14॥

ಮನಃಪ್ರಿಯವಾದ ಶಬ್ದಸ್ಪರ್ಶಗಂಧಗಳು ಎಲ್ಲೆಡೆಯೂ ಸಂಚರಿಸುತ್ತವೆ. ಯೋಧರಲ್ಲಿ ಧೈರ್ಯವು ಹೆಚ್ಚುತ್ತದೆ. ಇದು ವಿಜಯದ ಮುನ್ಸೂಚನೆ.
ಶಬ್ದೋ ವಾಮೇ ಪ್ರವಿಷ್ಟಸ್ಯ ದಕ್ಷಿಣಃ ಪ್ರವಿವಿಕ್ಷತಃ |
ಪಶ್ಚಾತ್ ಸಂರೋಧಯತ್ಯರ್ಥಂ ಪುರಸ್ತಾತ್ ಪ್ರತಿಷೇಧತಿ ॥15॥
ರಣಭೂಮಿಯನ್ನು ಪ್ರವೇಶಿಸಲು ಬಯಸುವವನಿಗೆ ಬಲಭಾಗದಲ್ಲಿ, ರಣರಂಗವನ್ನು ಪ್ರವೇಶಿಸಿದವನಿಗೆ ಎಡಭಾಗದಲ್ಲಿ ಮತ್ತು ಯುದ್ಧಮಾಡುವವನಿಗೆ ಹಿಂಬದಿಯಿಂದ ಬರುವ ಶಬ್ದಗಳು ಜಯಸಿದ್ಧಿಯನ್ನು ಸೂಚಿಸುತ್ತವೆ. ಮುಂದಿನಿಂದ ಬರುವ ಶಬ್ದಗಳು ಜಯವನ್ನು ಪ್ರತಿಷೇಧಿಸುತ್ತವೆ.
ಸಂಭೃತ್ಯ ಮಹತೀಂ ಸೇನಾಂ ಚತುರಂಗಾಂ ಯುಧಿಷ್ಠಿರಃ |
ಸಾಮ್ನೈವಾವರ್ತನೇ ಪೂರ್ವಂ ಪ್ರಯತೇಥಾಸ್ತತೋ ಯುಧಿ ॥16॥
ಎಲೈ ಯುಧಿಷ್ಠಿರನೇ! ದೊಡ್ಡದಾದ ಚತುರಂಗಸೈನ್ಯವನ್ನು ಜಮಾಯಿಸಿ ಸಾಮೋಪಾಯದಿಂದಲೇ ಮೊದಲು ಪ್ರವೃತ್ತಿಯನ್ನು ಮಾಡಬೇಕು. ಅದು ಫಲಿಸ- ದಿದ್ದರೆ ಕೊನೆಯಲ್ಲಿ ಯುದ್ಧವನ್ನು ಮಾಡಬೇಕು.
ಜಘನ್ಯ ಏಷ ವಿಜಯೋ ಯದ್ ಯುದ್ಧಂ ನಾಮ ಭಾರತ |
ಯಾದೃಚ್ಛಿಕೋ ಯುಧಿ ಜಯೋ ದೈವೋ ವೇತಿ ವಿಚಾರಣಮ್ ॥17॥
ಎಲೈ ಭಾರತನೇ! ಯುದ್ಧದಿಂದ ಸಂಪಾದಿಸಿದ ವಿಜಯವು ಹೀನವಾದುದು. ಯುದ್ಧದಲ್ಲಿ ಜಯವು ಆಕಸ್ಮಿಕವೋ ಅಥವಾ ದೈವವನ್ನು ಅವಲಂಬಿಸಿದೆಯೋ ಎಂದು ವಿಚಾರಮಾಡಬೇಕಾಗುವುದು.
ಅಪಾಮಿವ ಮಹಾವೇಗಸ್ತ್ರಸ್ತಾ ಮೃಗಗಣಾ ಇವ |
ದುರ್ನಿವಾರ್ಯತಮಾ ಚೈವ ಪ್ರಭಗ್ನಾ ಮಹತೀ ಚಮೂಃ ॥18॥
ಭಗ್ನಗೊಂಡ ದೊಡ್ಡ ಸೈನ್ಯವು ದೊಡ್ಡ ಜಲಪ್ರವಾಹದಂತೆ ಅಥವಾ ಹೆದರಿದ ಮೃಗಗಣಗಳಂತೆ ತಡೆದು ನಿಲ್ಲಿಸಲು ಅಸಾಧ್ಯವಾದುದು.
ಭಗ್ನಾ ಇತ್ಯೇವ ಭಜ್ಯಂತೇ ವಿದ್ವಾಂಸೋಽಪಿ ನ ಕಾರಣಮ್ |
ಉದಾರಸಾರಾ ಮಹತೀ ರುರುಸಂಘೋಪಮಾ ಚಮೂಃ ॥19॥
ಸೈನ್ಯವು ಭಗ್ನವಾಗಿದೆ ಎಂಬ ವಾರ್ತೆಯಿಂದಲೇ ಪುನಃ ಭಗ್ನವಾಗುತ್ತದೆ. ಶ್ರೇಷ್ಠವಾದ ಬಲವುಳ್ಳ ದೊಡ್ಡದಾದ ಸೈನ್ಯವೂ ಸಹ ರುರುಗಳ ಸಮೂಹದಂತೆ ಭಗ್ನವಾಗುತ್ತದೆ. ಯುದ್ಧಕುಶಲರೂ ಸಹ ಅದನ್ನು ತಡೆದು ನಿಲ್ಲಿಸಲು ಸಾಧ್ಯವಿಲ್ಲ.
ಪರಸ್ಪರಜ್ಞಾಃ ಸಂಹೃಷ್ಟಾಸ್ತ್ಯಕ್ತಪ್ರಾಣಾಃ ಸುನಿಶ್ಚಯಾಃ |
ಅಪಿ ಪಂಚಾಶತಿಃ ಶೂರಾ ಮೃದ್ನಂತಿ ಪರವಾಹಿನೀಮ್ ॥20॥
ಪರಸ್ಪರ ಮನಸ್ಸನ್ನು ತಿಳಿದ ಸಂತೋಷಗೊಂಡ, ತಮ್ಮ ಪ್ರಾಣವನ್ನು ತ್ಯಜಿಸಲು ಸಿದ್ಧರಾದ, ಯುದ್ಧದಲ್ಲಿ ದೃಢನಿಶ್ಚಯವುಳ್ಳ ಐವತ್ತು ಮಂದಿ ಶೂರರು ದೊಡ್ಡ ಶತ್ರುಸೇನೆಯನ್ನು ವಿನಾಶಗೊಳಿಸಬಲ್ಲರು.
ಅಥವಾ ಪಂಚ ಷಟ್ ಸಪ್ತ ಸಹಿತಾಃ ಕೃತನಿಶ್ಚಯಾಃ |
ಕುಲೀನಾಃ ಪೂಜಿತಾಃ ಸಮ್ಯಗ್ ವಿಜಯಂತೀಹ ಶಾತ್ರವಾನ್ ॥21॥
ಅಥವಾ ದೃಢನಿರ್ಧಾರವುಳ್ಳ, ಒಗ್ಗಟ್ಟಿನಿಂದ ಕೂಡಿದ, ಸತ್ಕುಲಪ್ರಸೂತರಾದ, ಸತ್ಕೃತರಾದ ಐದು, ಆರು, ಏಳು ವೀರರು ಶತ್ರುಗಳನ್ನು ಚೆನ್ನಾಗಿ ಸೋಲಿಸಬಲ್ಲರು.
ಸನ್ನಿಪಾತೋ ನ ಮಂತವ್ಯಃ ಶಕ್ಯೇ ಸತಿ ಕಥಂಚನ |
ಸಾಂತ್ವಭೇದಪ್ರದಾನಾನಾಂ ಯುದ್ಧಮುತ್ತರಮುಚ್ಯತೇ ॥22॥
ಸಾಮಭೇದದಾನಗಳಿಂದ ಅರ್ಥವನ್ನು ಸಾಧಿಸಲು ಸಾಧ್ಯವಾದರೆ ಸಂಘರ್ಷ- ವನ್ನು ಮಾಡಬೇಕೆಂದು ಯಾವರೀತಿಯಿಂದಲೂ ಯೋಚಿಸಬಾರದು. ಯುದ್ಧವು ಕೊನೆಯ ಉಪಾಯವೆಂದು ಹೇಳಲ್ಪಡುತ್ತದೆ.
ಸಂಸರ್ಪಣಾದ್ಧಿ ಸೇನಾಯಾ ಭಯಂ ಭೀರೂನ್ ಪ್ರಬಾಧತೇ |
ವಜ್ರಾದಿವ ಪ್ರಜ್ವಲಿತಾದಿಯಂ ಕ್ವ ನು ಪತಿಷ್ಯತಿ ॥23॥
ಸೈನ್ಯದ ಚಲನೆಯಿಂದ ಭೀರುಗಳಿಗೆ ಜ್ವಲಿಸುವ ವಜ್ರಾಯುಧದಿಂದ ಉಂಟಾ- ಗುವಂತೆ ಇದು ಎಲ್ಲಿ ಎರಗುವುದೋ ಎಂಬ ಭಯವು ಕಾಡುತ್ತದೆ.
ಅಭಿಪ್ರಯತಾಂ ಸಮಿತಿಂ ಜ್ಞಾತ್ವಾ ಯೇ ಪ್ರತಿಯಾಂತ್ಯಥ |
ತೇಷಾಂ ಸ್ಪಂದಂತಿ ಗಾತ್ರಾಣಿ ಯೋಧಾನಾಂ ವಿಷಯಸ್ಯ ಚ ॥24॥
ಸೈನ್ಯವು ಹೊರಟಿದೆಯೆಂದು ತಿಳಿದು ಯಾವ ಶತ್ರುಗಳು ಎದುರಾಗಿ ಬರು- ತ್ತಾರೆಯೋ ಅವರ ಯೋಧರ ಶರೀರವೂ ಮತ್ತು ದೇಶವೂ ಸಹ ನಡುಗುತ್ತದೆ.
ವಿಜಯಾದ್ ವ್ಯಥತೇ ರಾಜನ್ ಸರ್ವಃ ಸಸ್ಥಾಸ್ನುಜಂಗಮಃ |
ಶಸ್ತ್ರಪ್ರತಾಪತಪ್ತಾನಾಂ ಮಜ್ಜಾ ಸೀದತಿ ದೇಹಿನಾಮ್ ॥25॥
ಎಲೈ ರಾಜನೇ! ವಿರುದ್ಧಪಕ್ಷದ ಜಯದಿಂದ ಸ್ಥಾವರಜಂಗಮಾತ್ಮಕವಾದ ಪ್ರಾಣಿಗಳಿಗೆ ವ್ಯಥೆಯುಂಟಾಗುತ್ತದೆ. ಶಸ್ತ್ರಪ್ರತಾಪಕ್ಕೆ ಸಿಲುಕಿದವರ ಮಜ್ಜೆಯು ನಾಶವನ್ನು ಹೊಂದುತ್ತದೆ. (ಲಕ್ಷಾಲಂಕಾರ)
ತೇಷಾಂ ಸಾಂತ್ವಂ ಕ್ರೂರಮಿಶ್ರಂ ಪ್ರಣೇತವ್ಯಂ ಪುನಃಪುನಃ |
ಸಂಪೀಡ್ಯಮಾನಾ ಹಿ ಪರೇ ಯೋಗಮಾಯಾಂತಿ ಸರ್ವಶಃ ॥26॥
ಅವರಿಗೆ ಪುನಃ ಪುನಃ ಕ್ರೂರಮಿಶ್ರಿತವಾದ ಸಾಂತ್ವವಚನವನ್ನು ಹೇಳಬೇಕು. ಹಾಗಲ್ಲದೇ ಹೆಚ್ಚಾಗಿ ಪೀಡಿಸಿದರೆ ಶತ್ರುಗಳು ಇವನ

ಬೇರೆಯ ಶತ್ರುಗಳ ಜೊತೆ- ಯಲ್ಲಿ ಸೇರುತ್ತಾರೆ.
ಆಂತರಾಣಾಂ ಚ ಭೇದಾರ್ಥಂ ಚಾರಾನಭ್ಯವಚಾರಯೇತ್ |
ಯಶ್ಚ ತಸ್ಮಾತ್ ಪರೋ ರಾಜಾ ತೇನ ಸಂಧಿಃ ಪ್ರಶಸ್ಯತೇ ॥27॥
ಶತ್ರುಪಕ್ಷದ ಒಳಗಿನ ಜನರ ಭೇದಾರ್ಥವಾಗಿ ಗೂಢಚಾರರನ್ನು ನಿಯಮಿಸ- ಬೇಕು. ತನಗಿಂತ ಬಲಿಷ್ಠನಾದ ರಾಜನ ಜೊತೆಯಲ್ಲಿ ಸಂಧಿಯನ್ನು ಮಾಡಿಕೊಳ್ಳು- ವುದು ಪ್ರಶಸ್ತವಾದುದು.
ನಹಿ ತಸ್ಯಾನ್ಯಥಾ ಪೀಡಾ ಶಕ್ಯಾ ಕರ್ತುಂ ತಥಾವಿಧಾ |
ಯಥಾ ಸಾರ್ಧಮಮಿತ್ರೇಣ ಸರ್ವತಃ ಪ್ರತಿಬಾಧನಮ್ ॥28॥
ಅವನ ಶತ್ರುಗಳ ಜೊತೆಯಲ್ಲಿ ಸೇರಿ ಅವನನ್ನು ಪೀಡಿಸುವುದನ್ನು ಬಿಟ್ಟು, ಬೇರೆಯ ವಿಧಾನದಿಂದ ಅವನನ್ನು ಪೀಡಿಸಲು ಸಾಧ್ಯವಿಲ್ಲ.
ಕ್ಷಮಾ ವೈ ಸಾಧ್ವಮಾಯಾನಾಂ ನಹಿ ಸಾಧ್ವಕ್ಷಮಾ ಸದಾ |
ಕ್ಷಮಾಯಾಶ್ಚಾಕ್ಷಮಾಯಾಶ್ಚ ವಿದ್ಧಿ ಪಾರ್ಥ ಪ್ರಯೋಜನಮ್ ॥29॥
ಸಾಧುವಿಗೆ ಕ್ಷಮೆಯನ್ನು ತೋರಿಸದೆ ಯಾವಾಗಲೂ ಕ್ಷಮಿಸದಿರುವುದು ಸಾಧುವಲ್ಲ. ಎಲೈ ಪಾರ್ಥನೇ! ಕ್ಷಮೆ ಮತ್ತು ಅಕ್ಷಮೆಗಳ ಪ್ರಯೋಜನವನ್ನು ನೀನು ತಿಳಿಯಬೇಕು.
ವಿಜಿತ್ಯ ಕ್ಷಮಮಾಣಸ್ಯ ಯಶೋ ರಾಜ್ಞೋ ವಿವರ್ಧತೇ |
ಮಹಾಪರಾಧೇ ಹ್ಯಪ್ಯಸ್ಮಿನ್ ವಿಶ್ವಸಂತ್ಯಪಿ ಶತ್ರವಃ ॥30॥
ಶತ್ರುವನ್ನು ಜಯಿಸಿ ಕ್ಷಮಿಸುವ ರಾಜನ ಯಶಸ್ಸು ಹೆಚ್ಚುತ್ತದೆ. ಅವನು ಮಹಾ- ಪರಾಧವನ್ನು ಮಾಡಿದ್ದರೂ ಶತ್ರುಗಳು ಅವನಲ್ಲಿ ವಿಶ್ವಾಸವನ್ನು ಮಾಡುತ್ತಾರೆ.
ಮನ್ಯಂತೇ ಕರ್ಶಯಿತ್ವಾ ತು ಕ್ಷಮಾ ಸಾಧ್ವೀತಿ ಶಾಂಬರಾಃ |
ಅಸಂತಪ್ತಂ ತು ಯದ್ ದಾರು ಪ್ರತ್ಯೇತಿ ಪ್ರಕೃತಿಂ ಪುನಃ ॥31॥
ಶಾಂಬರರು ಮೊದಲು ದುಃಖಕ್ಕೆ ಈಡು ಮಾಡಿ ಅನಂತರ ಕ್ಷಮಿಸುವುದು ಒಳ್ಳೆಯದು ಎಂದು ತಿಳಿಯುತ್ತಾರೆ. ಕಾಯಿಸದಿದ್ದ ಮರವು ಮೊದಲಿನ ಸ್ಥಿತಿಗೆ ಬರುತ್ತದೆ. (ಎಂದು ಅವರ ವಾದ)
ನೈತತ್ ಪ್ರಶಂಸಂತ್ಯಾಚಾರ್ಯಾ ನ ಚೈತತ್ ಸಾಧು ದರ್ಶನಮ್ |
ಅಕ್ರೋಧೇನಾವಿನಾಶೇನ ನಿಯಂತವ್ಯಾಃ ಸ್ವಪುತ್ರವತ್ ॥32॥
ಆದರೆ ಆಚಾರ್ಯರು ಇದನ್ನು ಪ್ರಶಂಸಿಸುವುದಿಲ್ಲ. ಇದು ಸರಿಯಾದ ನೀತಿ- ಯಲ್ಲ. ವಿನಾಶವನ್ನು ಮಾಡದೇ ಕ್ರೋಧವನ್ನು ಮಾಡದೇ ಶತ್ರುಗಳನ್ನು ತನ್ನ ಮಕ್ಕ- ಳಂತೆ ನಿಯಂತ್ರಿಸಬೇಕು.
ದ್ವೇಷ್ಯೋ ಭವತಿ ಭೂತಾನಾಮುಗ್ರೋ ರಾಜಾ ಯುಧಿಷ್ಠಿರ |
ಮೃದುಮಪ್ಯವಮನ್ಯಂತೇ ತಸ್ಮಾದುಭಯಭಾಗ್ ಭವೇತ್ ॥33॥
ಎಲೈ ಯುಧಿಷ್ಠಿರನೇ! ಉಗ್ರನಾದ ರಾಜನು ಎಲ್ಲರಿಗೂ ದ್ವೇಷವಿಷಯನಾಗು- ತ್ತಾನೆ. ಮೃದುವು ಅವಮಾನಿತವಾಗುತ್ತಾನೆ. ಆದ್ದರಿಂದ ಉಗ್ರತೆಯನ್ನು, ಮಾರ್ದ- ವವನ್ನು ಎರಡನ್ನೂ ಹೊಂದಬೇಕು.
ಪ್ರಹರಿಷ್ಯನ್ ಪ್ರಿಯಂ ಬ್ರೂಯಾತ್ ಪ್ರಹರನ್ನಪಿ ಭಾರತ |
ಪ್ರಹೃತ್ಯ ಚ ಪ್ರಿಯಂ ಬ್ರೂಯಾಚ್ಛೋಚನ್ನಿವ ರುದನ್ನಿವ ॥34॥
ಮುಂದೆ ಪ್ರಹಾರವನ್ನು ಮಾಡುವುದಿದ್ದರೂ ಪ್ರಿಯವನ್ನು ಮಾತನಾಡಬೇಕು. ಪ್ರಹಾರವನ್ನು ಮಾಡುತ್ತಾ ಪ್ರಿಯವನ್ನು ಮಾತನಾಡಬೇಕು. ಪ್ರಹಾರವನ್ನು ಮಾಡುತ್ತಾ ಶೋಕಿಸುವವನಂತೆ ಪ್ರಿಯವನ್ನು ಮಾತನಾಡಬೇಕು.
ನ ಮೇ ಪ್ರಿಯಂ ಯನ್ನಿಹತಾಃ ಸಂಗ್ರಾಮೇ ಮಾಮಕೈರ್ನರೈಃ |
ನ ಚ ಕುರ್ವಂತಿ ಮೇ ವಾಕ್ಯಮುಚ್ಯಮಾನಂ ಪುನಃ ಪುನಃ ॥35॥
ಅಹೋ ಜೀವಿತಮಾಕಾಂಕ್ಷೇನ್ನೇದೃಶೋ ವಧಮರ್ಹತಿ |
ಸುದುರ್ಲಭಾಃ ಸುಪುರುಷಾಃ ಸಂಗ್ರಾಮೇಷ್ವಪಲಾಯಿನಃ ॥36॥
ಕೃತಂ ಮಮಾಪ್ರಿಯಂ ತೇನ ಯೇನಾಯಂ ನಿಹತೋ ಮೃಧೇ |
ಇತಿ ವಾಚಾ ವದನ್ ಹಂತ್ರೂನ್ ಪೂಜಯೇತ ರಹೋಗತಃ ॥37॥
``ಶತ್ರುಪಕ್ಷದ ಈ ಯೋಧರು ನನ್ನವರಿಂದ ಯುದ್ಧದಲ್ಲಿ ಹತರಾಗುವುದು ನನಗೆ ಪ್ರಿಯವಲ್ಲ. ನನ್ನ ಯೋಧರು ಪುನಃ ಪುನಃ ನಾನು ಹೇಳಿದರೂ ನನ್ನ ಮಾತನ್ನು ಕೇಳುವುದಿಲ್ಲ. ಅಯ್ಯೋ ಇಂತಹವರು ಜೀವಿಸಿರಬೇಕು. ಇಂತಹವರು ವಧೆಗೆ ಯೋಗ್ಯರಲ್ಲ. ಯುದ್ಧದಲ್ಲಿ ಹಿಮ್ಮೆಟ್ಟದಿರುವ ಸತ್ಪುರುಷರು ಬಹಳ ದುರ್ಲಭ- ರಾದವರು. ಯಾವ ನನ್ನ ಯೋಧನು ಇವನನ್ನು ಕೊಂದಿದ್ದಾನೆಯೋ ಅವನು ನನಗೆ ಅಪ್ರಿಯವನ್ನು ಮಾಡಿದ್ದಾನೆ'' ಹೀಗೆ ಮಾತನಾಡುತ್ತಾ ವಧೆಯನ್ನು ಮಾಡಿದವರನ್ನು ರಹಸ್ಯದಲ್ಲಿ ಸತ್ಕರಿಸಬೇಕು.
ಹಂತ್ರೂಣಾಂ ಚ ಹತಾನಾಂ ಚ ಪೂಜಾಂ ಕುರ್ಯಾದ್ ಯಥಾರ್ಥತಃ |
ಕ್ರೋಶೇದ್ ಬಾಹುಂ ಪ್ರಗೃಹ್ಯಾಪಿ ಚಿಕೀರ್ಷನ್ ಜನಸಂಗ್ರಹಮ್ ॥38॥
ವಧೆ ಮಾಡಿದವರನ್ನು ಮತ್ತು ಮೃತರಾದವರನ್ನು ಯಥಾಯೋಗ್ಯವಾಗಿ ಪೂಜಿಸಬೇಕು. ಜನಸಂಗ್ರಹವನ್ನು ಮಾಡುವ ದೃಷ್ಟಿಯಿಂದ ಬಾಹುಗಳನ್ನು ಎತ್ತಿ ಕಿರುಚಬೇಕು.
ಏವಂ ಸರ್ವಾಸ್ವವಸ್ಥಾಸು ಸಾಂತ್ವಪೂರ್ವಂ ಸಮಾಚರನ್ |
ಪ್ರಿಯೋ ಭವತಿ ಭೂತಾನಾಂ ಧರ್ಮಜ್ಞೋ ವೀತಭೀರ್ನೃಪಃ ॥39॥
ಹೀಗೆ ಎಲ್ಲ ಅವಸ್ಥೆಗಳಲ್ಲಿಯೂ ಸಾಂತ್ವಪೂರ್ವಕವಾಗಿಯೇ ವರ್ತಿಸುವ ಧರ್ಮಜ್ಞನಾದ ರಾಜನು ಎಲ್ಲರಿಗೂ ಪ್ರಿಯನೂ ಮತ್ತು

ವೀತಭಯನೂ ಆಗುವನು.
ವಿಶ್ವಾಸಂ ಚಾತ್ರ ಗಚ್ಚಂತಿ ಸರ್ವಭೂತಾನಿ ಭಾರತ |
ವಿಶ್ವಸ್ತಃ ಶಕ್ಯತೇ ಭೋಕ್ತುಂ ಯಥಾಕಾಮಮುಪಸ್ಥಿತಃ ||40||
ಎಲ್ಲೈ ಭಾರತನೇ! ಅಂತಹ ರಾಜನಲ್ಲಿ ಎಲ್ಲರೂ ವಿಶ್ವಾಸವನ್ನು ಮಾಡುತ್ತಾರೆ. ಪ್ರಜೆಗಳಲ್ಲಿ ವಿಶ್ವಾಸವನ್ನು ಹೊಂದಿದ ರಾಜನು ಭೂಮಿಯನ್ನು ತನ್ನ ಇಚ್ಛೆಗೆ ಅನುಗುಣವಾಗಿ ಭೋಗಿಸಲು ಸಮರ್ಥನಾಗುತ್ತಾನೆ.
ತಸ್ಮಾದ್ ವಿಶ್ವಾಸಯೇದ್ ರಾಜಾ ಸರ್ವಭೂತಾನ್ಯಮಾಯಯಾ |
ಸರ್ವತಃ ಪರಿರಕ್ಷೇಚ್ಚ ಯೋ ಮಹೀಂ ಭೋಕ್ತುಮಿಚ್ಛತಿ ||41||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರಧಿಕಶತತಮೋಽಧ್ಯಾಯಃ ||104||
ಆದ್ದರಿಂದ ಯಾವ ರಾಜನು ಭೂಮಿಯನ್ನು ಭೋಗಿಸಲು ಇಚ್ಛಿಸುತ್ತಾನೆಯೋ ಅವನು ತನ್ನನ್ನು ಎಲ್ಲ ರೀತಿಯಲ್ಲಿಯೂ ರಕ್ಷಿಸಿಕೊಂಡು ಸರ್ವಜೀವರನ್ನು ನಿಷ್ಕಪಟ- ವೃತ್ತಿಯಿಂದ ತನ್ನಲ್ಲಿ ವಿಶ್ವಾಸ ಹೊಂದುವಂತೆ ಮಾಡಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 104ನೆಯ ಅಧ್ಯಾಯವು ಮುಗಿಯಿತು.
0
105. ನೂರ ಐದನೆಯ ಅಧ್ಯಾಯ
ಶತ್ರುಜಯಸಂಪಾದಕ ಇಂದ್ರಬೃಹಸ್ಪತಿಸಂವಾದಾನುವಾದ
ಯುಧಿಷ್ಠಿರಃ
ಕಥಂ ಮೃದೌ ಕಥಂ ತೀಕ್ಷ್ಣೇ ಮಹಾಪಕ್ಷೇ ಚ ಪಾರ್ಥಿವ |
ಅರೌ ವರ್ತೇತ ನೃಪತಿಸ್ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲ್ಲೈ ರಾಜನೇ! ಪಿತಾಮಹನೇ! ಮೃದುವಾದ ತೀಕ್ಷ್ಣವಾದ ಮಹಾಸೈನ್ಯವುಳ್ಳ ಶತ್ರುವಿನ ವಿಷಯದಲ್ಲಿ ರಾಜನು ಹೇಗೆ ನಡೆದುಕೊಳ್ಳಬೇಕೆಂದು ನನಗೆ ಹೇಳು
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತೇಶ್ಚ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ||2||
ಭೀಷ್ಮರು ಎಲ್ಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಇಂದ್ರನಿಗೂ ಮತ್ತು ಬೃಹಸ್ಪತಿಗೂ ನಡೆದ ಸಂವಾದರೂಪವಾದ ಪ್ರಾಚೀನವಾದ ಈ ಇತಿಹಾಸ- ವನ್ನು ಹೇಳುತ್ತಾರೆ.
ಬೃಹಸ್ಪತಿಂ ದೇವಪತಿರಭಿವಾದ್ಯ ಕೃತಾಂಜಲಿಃ |
ಉಪಸಂಗಮ್ಯ ಪಪ್ರಚ್ಛ ವಾಸವಃ ಪರವೀರಹಾ ||3||
ದೇವಪತಿಯೂ ಪರವೀರಘಾತಕನೂ ಆದ ಇಂದ್ರನು ಬೃಹಸ್ಪತಿಗಳನ್ನು ಸಮೀ- ಪಿಸಿ ಕೈಮುಗಿದು ಪ್ರಶ್ನೆ ಮಾಡಿದನು.
ಅಹಿತೇಷು ಕಥಂ ಬ್ರಹ್ಮನ್ ವರ್ತಯೇಯಮತಂದ್ರಿತಃ |
ಅಸಮುಚ್ಛಿದ್ಯ ಚೈವೇನಾನ್ ನಿಯಚ್ಛೇಯಮುಪಾಯತಃ ||4||
ಎಲ್ಲೈ ಬ್ರಾಹ್ಮಣರೇ! ಶತ್ರುಗಳ ವಿಷಯದಲ್ಲಿ ಎಚ್ಚರಿಕೆಯಿಂದ ಹೇಗೆ ನಡೆದು- ಕೊಳ್ಳಲಿ? ಅವರನ್ನು ಸಂಪೂರ್ಣವಾಗಿ ನಾಶಮಾಡದೇ ಉಪಾಯದಿಂದ ನಿಯಂತ್ರಿಸುವ ಬಗೆ ಹೇಗೆ?
ಸೇನಯೋರ್ವ್ಯತಿಷಂಗೇಣ ಜಯಃ ಸಾಧಾರಣೋ ಭವೇತ್ |
ಕಿಂ ಕುರ್ವಾಣಂ ನ ಮಾಂ ಜಹ್ಯಾಜ್ಜ್ವಲಿತಾ ಶ್ರೀಃ ಪ್ರತಾಪಿನೀ ||5||
ಸೇನಾಕಾರ್ಯಾಚರಣೆಯಿಂದ ಉಂಟಾಗುವ ಜಯವು ಉಭಯಸಾಧಾರಣ- ವಾಗಿರುತ್ತದೆ. ನಾನು ಏನನ್ನು ಮಾಡಿದರೆ ಶತ್ರುತಾಪಕವಾದ ಜ್ವಲಿಸುವ ಈ ಸಂಪತ್ತು ನನ್ನನ್ನು ಬಿಟ್ಟು ಹೋಗಲಾರದು? (ಎಂದು ಹೇಳಿದನು).
ತತೋ ಧರ್ಮಾರ್ಥಕಾಮಾನಾಂ ಕುಶಲಃ ಪ್ರತಿಮಾನವಾನ್ |
ರಾಜಧರ್ಮವಿಧಾನಜ್ಞಃ ಪ್ರತ್ಯುವಾಚ ಪುರಂದರಮ್ ||6||
ಆಗ ಧರ್ಮಾರ್ಥಕಾಮಗಳಲ್ಲಿ ಕುಶಲರೂ, ಪ್ರಮಾಣಜ್ಞರೂ, ರಾಜಧರ್ಮ- ವಿಧಾನಗಳನ್ನು ತಿಳಿದವರೂ ಆದ ಬೃಹಸ್ಪತಿಗಳು ಇಂದ್ರನಿಗೆ ಉತ್ತರವನ್ನು ಕೊಟ್ಟರು.
ನ ಜಾತು ಕಲಹೇನೇಚ್ಛೇನ್ನಿಯಂತುಮಪಕಾರಿಣಃ |
ಬಾಲಸಂಸೇವಿತಂ ಹ್ಯೇತದ್ ಯದಮರ್ಷೋ ಯದಕ್ಷಮಾ |
ನ ಶತ್ರುರ್ವಿವೃತಃ ಕಾರ್ಯೋ ವಧಮಸ್ಯಾಭಿಕಾಂಕ್ಷತಾ ||7||
ಅಪಕಾರಿಗಳನ್ನು ಎಂದೂ ಕಲಹವನ್ನು ಮಾಡಿ ನಿಯಂತ್ರಿಸಲು ಬಯಸ- ಬಾರದು. ಕ್ರೋಧ ಮತ್ತು ಅಸಹನೆ ಎಂಬುದು ಬಾಲಕರಿಂದ ಸೇವಿತವಾದ ಮಾರ್ಗ. ಶತ್ರುವಿನ ವಧೆಯನ್ನು ಅಪೇಕ್ಷಿಸುವವನು ಶತ್ರುವಿಗೆ ಅದು ತಿಳಿಯದಂತೆ ವ್ಯವಹರಿಸಬೇಕು.
ಕ್ರೋಧಂ ಬಲಮಮರ್ಷಂ ಚ ನಿಯಮ್ಯಾತ್ಮಜಮಾತ್ಮನಿ |
ಅಮಿತ್ರಮುಪಸೇವೇತ ವಿಶ್ವಸ್ತವದವಿಶ್ವಸನ್ ||8||
ತನ್ನಲ್ಲಿ ಉಂಟಾದ ಕ್ರೋಧ, ಅಸಹನೆಗಳನ್ನು ತನ್ನಲ್ಲಿಯೇ ನಿಯಂತ್ರಿಸಿ ಶತ್ರುವಿನಲ್ಲಿ ವಿಶ್ವಾಸ ಮಾಡದೇ ವಿಶ್ವಾಸ ಮಾಡುವವನಂತೆ ಅವನನ್ನು ಸೇವಿಸಬೇಕು.
ಪ್ರಿಯಮೇವ ವದೇನ್ನಿತ್ಯಂ ನಾಪ್ರಿಯಂ ಕಿಂಚಿದಾಚರೇತ್ |

ವಿರಮೇಚ್ಛುಷ್ಕವೈರೇಭ್ಯಃ ಕಂಠಾಯಾಸಂ ಚ ವರ್ಜಯೇತ್ ॥9॥
ಅವನಿಗೆ ಪ್ರಿಯವನ್ನೇ ಮಾತನಾಡಬೇಕು. ಅಪ್ರಿಯವಾದ ಏನನ್ನೂ ಮಾಡ- ಬಾರದು. ವ್ಯರ್ಥಕಲಹಗಳನ್ನೂ ಮತ್ತು ಕಂಠಶೋಷಣೆಗಳನ್ನೂ ವರ್ಜಿಸಬೇಕು.
ಯಥಾ ವೈತಂಸಿಕೋ ಯುಕ್ತೋ ದ್ವಿಜಾನಾಂ ಸದೃಶಸ್ವನಃ |
ತಾನ್ ದ್ವಿಜಾನ್ ಕುರುತೇ ವಶ್ಯಾಂಸ್ತಥಾ ಯುಕ್ತೋ ಮಹೀಪತಿಃ ॥10॥
ಹಕ್ಕಿಗಳನ್ನು ಹಿಡಿಯುವವನು ಹೇಗೆ ಹಕ್ಕಿಯ ಸ್ವರದಿಂದಲೇ ಕೂಡಿದವನಾಗಿ ಅವುಗಳನ್ನು ವಶಪಡಿಸಿಕೊಳ್ಳುತ್ತಾನೆಯೋ ರಾಜನು ಅದರಂತೆ ಮಾಡಬೇಕು.
ವಶಂ ಚೋಪನಯೇಚ್ಛತ್ರೂನ್ ನಿಹನ್ಯಾಚ್ಚ ಪುರಂದರ |
ನ ನಿತ್ಯಂ ಪರಿಭೂಯಾರೀನ್ ಸುಖಂ ಸ್ವಪಿತಿ ವಾಸವ |
ಜಾಗರ್ತ್ಯೇವ ಚ ದುಷ್ಟಾತ್ಮಾ ಸಂಕರೇಽಗ್ನಿರಿವೋತ್ಥಿತಃ ॥11॥
ಎಲೈ ಪುರಂದರನೇ! ಶತ್ರುಗಳನ್ನು ವಶಪಡಿಸಿಕೊಂಡು ಅನಂತರ ಕೊಲ್ಲಬೇಕು. ಎಲೈ ಇಂದ್ರನೇ! ಶತ್ರುಗಳನ್ನು ಯುದ್ಧದಲ್ಲಿ ಸೋಲಿಸಿದವನು ಎಂದೂ ಸುಖವಾಗಿ ನಿದ್ರಿಸುವುದಿಲ್ಲ. ದುಷ್ಟನಾದ ಶತ್ರುವು ತಿಪ್ಪೆಯಲ್ಲಿನ ಅಗ್ನಿಯಂತೆ ಯಾವಾಗಲೂ ಎಚ್ಚರಿಕೆಯಿಂದಿರುತ್ತಾನೆ.
ನ ಸನ್ನಿಪಾತಃ ಕರ್ತವ್ಯಃ ಸಾಮಾನ್ಯೇ ವಿಜಯೇ ಸತಿ |
ವಿಶ್ವಾಸ್ಯೈವೋಪಸನ್ನಾರ್ಯ್ಯೋ ವಶೇ ಕೃತ್ವಾ ರಿಪುಃ ಪ್ರಭೋ ॥12॥
ಜಯವು ಉಭಯಸಾಧಾರಣವಾಗಬಹುದಾದಾಗ ಸಂಘರ್ಷವನ್ನು ಮಾಡ- ಬಾರದು. ಎಲೈ ಪ್ರಭುವೇ! ಶತ್ರುವನ್ನು ವಿಶ್ವಾಸಗೊಳಿಸಿ ವಶಪಡಿಸಿಕೊಂಡು ಅನಂತರ ಅವನನ್ನು ಬಗ್ಗಿಸಬೇಕು.
ಸಂಪ್ರಧಾರ್ಯ ಸಹಾಮಾತ್ಯೈರ್ಮಂತ್ರವಿದ್ಭಿರ್ಮಹಾತ್ಮಭಿಃ |
ಉಪೇಕ್ಷ್ಯಮಾಣೋಽವಜ್ಞಾತೋ ಹೃದಯೇನಾಪರಾಜಿತಃ ॥13॥
ಶತ್ರುವಿನಿಂದ ಅವಮಾನಕ್ಕೆ ಒಳಗಾದರೂ, ಉಪೇಕ್ಷೆಗೆ ಒಳಗಾದರೂ ರಾಜನು ಮನಸ್ಸಿನಲ್ಲಿ ಧೈರ್ಯವನ್ನು ಕಳೆದುಕೊಳ್ಳದೇ ಅಪರಾಜಿತನಾಗಿ ಮಹಾತ್ಮರೂ, ಮಂತ್ರವೇತ್ತರೂ ಆದ ಅಮಾತ್ಯರ ಜೊತೆಯಲ್ಲಿ ಚರ್ಚೆಯನ್ನು ಮಾಡಿ ವ್ಯವಹರಿಸ- ಬೇಕು.
ಅಥಾಸ್ಯ ಪ್ರಹರೇತ್ ಕಾಲೇ ಕಿಂಚಿದ್ ವಿಚಲಿತೇ ಪದೇ |
ದಂಡಂ ಚ ದೂಷಯೇದಸ್ಯ ಪುರುಷೈರಾಪ್ತಕಾರಿಭಿಃ ॥14॥
ಅನಂತರ ಶತ್ರುವು ಒಂದು ತಪ್ಪು ಹೆಜ್ಜೆಯನ್ನು ಇಟ್ಟಾಗ, ಯೋಗ್ಯವಾದ ಆ ಕಾಲದಲ್ಲಿ ಅವನ ಮೇಲೆ ಎರಗಬೇಕು. ಆಪ್ತಕಾರಿಗಳಾದ ಭಟರಿಂದ ಅವನ ಸೈನ್ಯ- ವನ್ನು ದೂಷಿಸಬೇಕು.
ಆದಿಮಧ್ಯಾವಸಾನಜ್ಞಃ ಪ್ರಚ್ಛನ್ನಂ ಚ ವಿಚಾರಯೇತ್ |
ಬಲಾನಿ ದೂಷಯೇದಸ್ಯ ಜಾನಂಶ್ಚೈವ ಪ್ರಮಾಣತಃ ॥15॥
ಭೇದೇನೋಪಪ್ರದಾನೇನ ಸಂಸೃಜನ್ನೌಷಧೈಸ್ತಥಾ |
ನ ತ್ವೇವ ಖಲು ಸಂಸರ್ಗಂ ರೋಚಯೇದರಿಭಿಃ ಸಹ ॥16॥
ಮಾಡಬೇಕಾದ ಕಾರ್ಯದ ಆದಿ-ಮಧ್ಯಾಂತ್ಯಗಳನ್ನು ಯಾರಿಗೂ ತಿಳಿಯದಂತೆ ವಿಚಾರ ಮಾಡಬೇಕು. ಅವನ ಸೈನ್ಯದ ಪ್ರಮಾಣವನ್ನು ತಿಳಿದು ಅದನ್ನು ಭೇದೋ- ಪಾಯದಿಂದಲೂ ದಾನೋಪಾಯದಿಂದಲೂ ಔಷಧಪ್ರಯೋಗಗಳಿಂದಲೂ ದೂಷಿಸಬೇಕು. ಶತ್ರುಗಳ ಜೊತೆಯಲ್ಲಿ ಯಾವಾಗಲೂ ಸಂಘರ್ಷವನ್ನು ಬಯಸ- ಬಾರದು
ದೀರ್ಘಕಾಲಮಪಿ ಕ್ಷಾಂತ್ವಾ ವಿಹನ್ಯಾದೇವ ಶಾತ್ರವಾನ್ |
ಕಾಲಕಾಂಕ್ಷೀ ಯಾಪಯೇಚ್ಚ ಯಥಾ ವಿಸ್ರಂಭಮಾಪ್ನುಯುಃ ॥17॥
ದೀರ್ಘಕಾಲದವರೆಗೂ ಕ್ಷಮಿಸಿ ಅನಂತರ ಶತ್ರುಗಳನ್ನು ಕೊಲ್ಲಬೇಕು. ಕಾಲ- ವನ್ನು ನಿರೀಕ್ಷಿಸುವವನು ಶತ್ರುಗಳು ತನ್ನಲ್ಲಿ ವಿಶ್ವಾಸವನ್ನು ತಾಳುವವರೆಗೆ ಕಾಲವನ್ನು ಕಳೆಯಬೇಕು.
ನ ಸದ್ಯೋಽರೀನ್ ವಿನಿರ್ಹನ್ಯಾದ್ ದೃಷ್ಟಸ್ಯೋ ವಿಜಯೋ ಧ್ರುವಃ |
ನ ಯಃ ಶಲ್ಯಂ ಘಟ್ಟಯತಿ ನವಂ ಚ ಕುರುತೇ ವ್ರಣಮ್ ॥18॥
ತನಗೆ ನಿಶ್ಚಯವಾಗಿ ವಿಜಯವುಂಟಾಗುತ್ತದೆ ಎಂದು ತಿಳಿದು ಶತ್ರುವಿನ ಮೇಲೆ ದಾಳಿ ಮಾಡಬೇಕು. ಸುಮ್ಮನೇ ತತ್ಕ್ಷಣದಲ್ಲಿ ದಾಳಿ ಮಾಡಬಾರದು. ಶತ್ರುವನ್ನು ಕೊಲ್ಲದೇ ದಾಳಿಯನ್ನು ಮಾಡಿದರೆ ಈಟಿಯಿಂದ ಇರಿದು ಇನ್ನೊಂದು ಹೊಸ ವ್ರಣವನ್ನು ಮಾಡಿದಂತೆ. (ಆಗ ಶತ್ರುವು ಇನ್ನೂ ವಿರೋಧಿಯಾಗುತ್ತಾನೆ).
ಪ್ರಾಪ್ತೇ ಚ ಪ್ರಹರೇತ್ ಕಾಲೇ ನ ಸ ಸಂವರ್ತತೇ ಪುನಃ |
ಹಂತುಕಾಮಸ್ಯ ದೇವೇಂದ್ರ ಪುರುಷಸ್ಯ ರಿಪುಂ ಪ್ರತಿ ॥19॥
ಯಃ ಕಾಲೋ ಹಿ ವ್ಯತಿಕ್ರಾಮೇತ್ ಪುರುಷಂ ಕಾಲಕಾಂಕ್ಷಿಣಮ್ |
ದುರ್ಲಭಃ ಸ ಪುನಃ ಕಾಲಃ ಕಾಲಧರ್ಮಚಿಕೀರ್ಷುಣಾ ॥20॥
ಯೋಗ್ಯವಾದ ಕಾಲವು ಪ್ರಾಪ್ತವಾದಾಗ ಶತ್ರುವು ಪುನಃ ಹಿಂದಿರುಗದಂತೆ ಅವನಿಗೆ ಪ್ರಹಾರವನ್ನು ಮಾಡಬೇಕು. ಎಲೈ ದೇವೇಂದ್ರನೇ! ಶತ್ರುವನ್ನು ಕೊಲ್ಲಲು ಬಯಸಿದ ರಾಜನು ಕಾಲವನ್ನು ನಿರೀಕ್ಷಿಸುತ್ತಾ ಯೋಗ್ಯವಾದ ಆ ಕಾಲವು ಒದಗಿದಾಗ ಅದನ್ನು ಉಪಯೋಗಿಸಿಕೊಳ್ಳದೇ ಕಾಲವು ಅತಿಕ್ರಾಂತವಾದರೆ ಅಂತಹ ಕರ್ಮವನ್ನು ಮಾಡಲು ಅಪೇಕ್ಷಿಸಿದ ರಾಜನಿಗೆ ಇನ್ನೊಮ್ಮೆ ಅಂತಹ ಕಾಲವು ದೊರೆಯಲಾರದು.
ಔರ್ಜಸ್ತ್ಯಂ ವಿಜಯೇದೇವಂ ಸಂಗೃಹ್ಣನ್ ಸಾಧುಸಮ್ಮತಾನ್ |

ಕಾಲೇನ ಸಾಧಯೇನ್ನಿತ್ಯಂ ನಾಪ್ರಾಪ್ತೇಽಭಿನಿಪೀಡಯೇತ್ ॥21॥
ಸಜ್ಜನರಾದವರನ್ನು ಸಂಗ್ರಹಿಸಿ ಬಲಿಷ್ಠನಾದ ಶತ್ರುವನ್ನು ಹೀಗೆ ಜಯಿಸಬೇಕು. ಯೋಗ್ಯವಾದ ಕಾಲದಲ್ಲಿ ಕಾರ್ಯವನ್ನು ಸಾಧಿಸಬೇಕು. ಅಂತಹ ಕಾಲವು ಪ್ರಾಪ್ತವಾಗದಿದ್ದಾಗ ಶತ್ರುವನ್ನು ಪೀಡಿಸಬಾರದು.
ವಿಹಾಯ ಕಾಮಂ ಕ್ರೋಧಂ ಚ ತಥಾಽಹಂಕಾರಮೇವ ಚ |
ಯುಕ್ತೋ ವಿವರಮನ್ವಿಚ್ಛೇದಹಿತಾನಾಂ ಪುರಂದರ ॥22॥
ಎಲೈ ಪುರಂದರನೇ! ಕಾಮಕ್ರೋಧಾಹಂಕಾರಗಳನ್ನು ಬಿಟ್ಟು ಎಚ್ಚರಿಕೆಯಿಂದಿದ್ದು ಶತ್ರುಗಳ ಛಿದ್ರವನ್ನು ಅನ್ವೇಷಣೆ ಮಾಡಬೇಕು.
ಮಾರ್ದವಂ ದಂಡ ಆಲಸ್ಯಂ ಪ್ರಮಾದಶ್ಚ ಸುರೋತ್ತಮ |
ಮಾಯಾಶ್ಚ ವಿವಿಧಾಃ ಶಕ್ರ ಸಾದಯಂತ್ಯವಿಚಕ್ಷಣಮ್ ॥23॥
ಎಲೈ ಸುರೋತ್ತಮನೇ! ಇಂದ್ರನೇ! ಮೃದುತನ, ದಂಡ, ಆಲಸ್ಯ ಮತ್ತು ಪ್ರಮಾದಗಳು ಮತ್ತು ವಿವಿಧವಾದ ಕಪಟಗಳು ಅವಿವೇಕಿಯನ್ನು ಕೊಲ್ಲುತ್ತವೆ.
ನಿಹತ್ಯೈತಾನಿ ಚತ್ವಾರಿ ಮಾಯಾಂ ಪ್ರತಿವಿಧಾಯ ಚ |
ತತಃ ಶಕ್ನೋತಿ ಶತ್ರೂಣಾಂ ಪ್ರಹರ್ತುಮವಿಚಾರಯನ್ ॥24॥
ಮಾರ್ದವ, ದಂಡ, ಆಲಸ್ಯ ಮತ್ತು ಪ್ರಮಾದ ಈ ನಾಲ್ಕನ್ನು ಪರಿತ್ಯಜಿಸಿ ಶತ್ರುವಿನ ಮಾಯೆಗೆ ಪ್ರತಿಮಾಯೆಯನ್ನು ಮಾಡಿ ರಾಜನು ಬೇರೆ ಏನನ್ನೂ ವಿಚಾರ ಮಾಡದೇ ಶತ್ರುಗಳ ಮೇಲೆ ಪ್ರಹಾರ ಮಾಡಲು ಶಕ್ತನಾಗುತ್ತಾನೆ.
ಯದ್ಯೈವೈಕೇನ ಶಕ್ಯೇತ ಗುಹ್ಯಂ ಕರ್ತುಂ ತದಾಚರೇತ್ |
ಯಚ್ಛಂತಿ ಸಚಿವಾ ಗುಹ್ಯಂ ಮಿಥೋ ವಿದ್ರಾವಯಂತ್ಯಪಿ ॥25॥
ಒಬ್ಬನೇ ಮಾಡಲು ಸಾಧ್ಯವಾಗುವ ಕೆಲಸವನ್ನು ಗುಪ್ತವಾಗಿಯೇ ಮಾಡಬೇಕು. ಸಚಿವರು ಪರಸ್ಪರವಾಗಿ ಮಾತನಾಡಿಕೊಂಡು ಅಂತಹ ಗುಪ್ತವಾದ ಸಲಹೆಯನ್ನು ಕೊಡುತ್ತಾರೆ.
ಅಶಕ್ಯಮಿತಿ ಕೃತ್ವಾ ವಾ ತತೋಽನ್ಯೈಃ ಸಂವಿದಂ ಚರೇತ್ |
ಬ್ರಹ್ಮದಂಡಮದೃಷ್ಟೇಷು ದೃಷ್ಟೇಷು ಚತುರಂಗಿಣೀಮ್ ॥26॥
ಒಬ್ಬರಿಂದ ಮಾಡಲು ಸಾಧ್ಯವಾಗದಿದ್ದರೆ ಮಾತ್ರ ಬೇರೆಯವರ ಜೊತೆಯಲ್ಲಿ ವಿಚಾರ ಮಾಡಬೇಕು. ಕಣ್ಣಿಗೆ ಕಾಣದ ಪ್ರತಿರೋಧಗಳಿಗೆ ಬ್ರಾಹ್ಮಣರಿಂದ ಶಾಂತಿ- ಹೋಮಾದಿಗಳನ್ನೂ ಕಣ್ಣಿಗೆ ಕಾಣುವಂತೆ ಪ್ರತಿರೋಧ ಮಾಡುವವರಿಗೆ ಚತು- ರಂಗಸೈನ್ಯವನ್ನೂ ನಿಯೋಜಿಸಬೇಕು.
ಭೇದಂ ಚ ಪ್ರಥಮಂ ಯುಂಜ್ಯಾತ್ ತೂಷ್ಣೀಂ ದಂಡಂ ತಥೈವ ಚ |
ಕಾಲೇ ಪ್ರಯೋಜಯೇದ್ ರಾಜಾ ತಸ್ಮಿಂಸ್ತಸ್ಮಿಂಸ್ತದಾ ತದಾ ॥27॥
ಮೊದಲು ಭೇದೋಪಾಯವನ್ನು ಪ್ರಯೋಗಿಸಬೇಕು (ಶತ್ರುವಿಗೂ ಅವನ ಮಿತ್ರರಿಗೂ ವಿರೋಧವುಂಟಾಗುವಂತೆ ಮಾಡಬೇಕು). ಅನಂತರ ಮಾತನಾಡದೇ ಯೋಗ್ಯವಾದ ಕಾಲದಲ್ಲಿ ದಂಡಪ್ರಯೋಗವನ್ನು ಮಾಡಬೇಕು. ರಾಜನು ಆಯಾ ಉಪಾಯಗಳಿಗೆ ಯೋಗ್ಯವಾದ ಕಾಲದಲ್ಲಿ ಆಯಾ ಉಪಾಯಗಳನ್ನು ಮಾಡಬೇಕು.
ಪ್ರಣಿಪಾತಂ ಚ ಗಚ್ಛೇತ ಕಾಲೇ ಶತ್ರೋರ್ಬಲೀಯಸಃ |
ಯುಕ್ತೋಽಸ್ಯ ವಧಮನ್ವಿಚ್ಛೇದಪ್ರಮತ್ತಃ ಪ್ರಮಾದ್ಯತಃ ॥28॥
ಶತ್ರುವು ಬಲಿಷ್ಠನಾದರೆ ಅವನಿಗೆ ಒಂದು ಕಾಲದಲ್ಲಿ ಪ್ರಣಾಮವನ್ನು ಮಾಡ- ಬೇಕು. ಅವನ ಜೊತೆಯಲ್ಲಿ ಕೂಡಿದ್ದರೂ ಎಚ್ಚರಿಕೆಯಲ್ಲಿದ್ದು ಅವನು ಪ್ರಮಾದ- ವನ್ನು ಮಾಡಿದಾಗ ಅವನ ವಧೆಯನ್ನು ಮಾಡಲು ಬಯಸಬೇಕು.
ಪ್ರಣಿಪಾತೇನ ದಾನೇನ ವಾಚಾ ಮಧುರಯಾ ಬ್ರುವನ್ |
ಅಮಿತ್ರಮುಪಸೇವೇತ ನ ತು ಜಾತು ವಿಶಂಕಯೇತ್ ॥29॥
ಪ್ರಣಾಮ, ದಾನ, ಮತ್ತು ಮಧುರವಾದ ಮಾತುಗಳಿಂದ ಶತ್ರುವನ್ನು ಸೇವಿಸ- ಬೇಕು. ಅವನು ಎಂದೂ ನಿನ್ನನ್ನು ಶಂಕಿಸುವಂತೆ ಮಾಡಬಾರದು.
ಸ್ಥಾನಾನಿ ಶಂಕಿತಾನಾಂ ಚ ನಿತ್ಯಮೇವ ವಿವರ್ಜಯೇತ್ |
ನ ಚ ತೇಷ್ವಾಶ್ವಸೇದ್ ದ್ರುಗ್ಧ್ವಾ ಜಾಗ್ರತೀಹ ನಿರಾಕೃತಾಃ ॥30॥
ಶಂಕಿತರ ಸ್ಥಾನಗಳನ್ನು ಯಾವಾಗಲೂ ವರ್ಜಿಸಬೇಕು. ಒಮ್ಮೆ ಅವರಿಗೆ ದ್ರೋಹವನ್ನು ಮಾಡಿದ ರಾಜನು ಅವರಲ್ಲಿ ವಿಶ್ವಾಸವನ್ನು ಮಾಡಬಾರದು. ದ್ರೋಹಕ್ಕೆ ಒಳಗಾದವರು ಯಾವಾಗಲೂ ಎಚ್ಚರಿಕೆಯಿಂದಿರುತ್ತಾರೆ.
ನ ಹ್ಯತೋ ದುಷ್ಕರಂ ಕರ್ಮ ಕಿಂಚಿದಸ್ತಿ ಸುರೋತ್ತಮ |
ಯಥಾ ವಿವಿಧವೃತ್ತಾನಾಮೈಶ್ವರ್ಯಮಮರಾಧಿಪ ॥31॥
ಎಲೈ ಸುರೋತ್ತಮನೇ! ಅಮರಾಧಿಪನೇ! ವಿವಿಧಶೀಲಗಳನ್ನು ಹೊಂದಿದ ಪುರುಷನನ್ನು ನಿಯಂತ್ರಿಸುವುದಕ್ಕಿಂತ ದೊಡ್ಡ ದುಷ್ಕರವಾದ ಕಾರ್ಯವಿಲ್ಲ.
ತಥಾ ವಿವಿಧಶೀಲಾನಾಮಪಿ ಸಂಭವ ಉಚ್ಯತೇ |
ಯತೇತ ಯೋಗಮಾಸ್ಥಾಯ ಮಿತ್ರಾಮಿತ್ರಾನವಾರಯನ್ ॥32॥
ಹಾಗೆಯೇ ವಿವಿಧಶೀಲವುಳ್ಳ ಜನರ ಜೊತೆಯಲ್ಲಿ ವ್ಯವಹರಿಸುವುದು ದುಷ್ಕರ ವಾದುದು. ಶತ್ರುಮಿತ್ರರನ್ನು ಯಾರನ್ನೂ ತ್ಯಜಿಸದೇ ಉಪಾಯದಿಂದ ಪ್ರಯತ್ನವನ್ನು ಮಾಡಬೇಕು.
ಮೃದುಮಪ್ಯವಮನ್ಯಂತೇ ತೀಕ್ಷ್ಣಾದುದ್ವಿಜತೇ ಜನಃ |
ಮಾ ತೀಕ್ಷ್ಣೋ ಮಾ ಮೃದುರ್ಭೂಸ್ತ್ವಂ ತೀಕ್ಷ್ಣೋ ಭವ ಮೃದುರ್ಭವ ॥33॥

ಮೃದುವಾದವನನ್ನು ಪ್ರಜೆಗಳು ಅವಮಾನಗೊಳಿಸುತ್ತಾರೆ. ತೀಕ್ಷ್ಣನಾದವನನ್ನು ನೋಡಿ ಹೆದರುತ್ತಾರೆ. ನೀನು ತೀಕ್ಷ್ಣನೂ ಆಗಬೇಡ. ಮೃದುವೂ ಆಗಬೇಡ. ತೀಕ್ಷ್ಣನೂ ಆಗು ಮೃದುವೂ ಆಗು.

ಯಥಾ ವಪ್ರೋ ವೇಧವತಿ ಸರ್ವತಃ ಸಂಪ್ಲುತೋದಕೇ |
ನಿತ್ಯಂ ವಿದಾರಣಾದ್ ಬಾಧಸ್ತಥಾ ರಾಜ್ಯಂ ಪ್ರಮಾದ್ಯತಃ ॥34॥

ಹೇಗೆ ನೀರಿನಿಂದ ಸುತ್ತುವರೆಯಲ್ಪಟ್ಟ ಕೋಟೆಯ ಗೋಡೆಯ ಬಿರುಕಿನಿಂದ ನಿತ್ಯವೂ ಒಡೆದು ಹೋಗುವ ಭಯವಿರುತ್ತದೆಯೋ ರಾಜ್ಯವು ಎಚ್ಚರ ತಪ್ಪಿದರೆ ಅದರಂತೆ ಆಗುತ್ತದೆ.

ನ ಬಹೂನಭಿಯುಂಜೀತ ಯೌಗಪದ್ಯೇನ ಶಾತ್ರವಾನ್ |
ಸಾಮ್ನಾ ದಾನೇನ ಭೇದೇನ ದಂಡೇನ ಚ ಪುರಂದರ ॥35॥

ಎಲೈ ಪುರಂದರನೇ! ಅನೇಕಶತ್ರುಗಳ ಜೊತೆ ಒಂದೇ ಕಾಲದಲ್ಲಿ ಸಾಮ- ದಿಂದಾಗಲೀ, ದಾನದಿಂದಾಗಲೀ, ಭೇದದಿಂದಾಗಲೀ, ದಂಡದಿಂದಾಗಲೀ ವ್ಯವ- ಹರಿಸಬೇಡ.

ಏಕೈಕಮೇಷಾಂ ನಿಷ್ಪಿಂಷನ್ ಶಿಷ್ಟೇಷು ನಿಪುಣಂ ಚರೇತ್ |
ನ ಚ ಶಕ್ತೋಽಪಿ ಮೇಧಾವೀ ಸರ್ವಾನೇವಾರಭೇನ್ನೃಪಃ ॥36॥

ಅವರಲ್ಲಿ ಒಬ್ಬೊಬ್ಬರನ್ನು ವಿನಾಶಗೊಳಿಸುತ್ತಾ, ಉಳಿದವರ ವಿಷಯದಲ್ಲಿ ನಿಪುಣತೆಯಿಂದ ವ್ಯವಹರಿಸಬೇಕು. ರಾಜನು ಸಮರ್ಥನಾದರೂ ಮೇಧಾವಿ- ಯಾದರೂ ಎಲ್ಲರ ಜೊತೆಯಲ್ಲಿಯೂ ಒಟ್ಟಿಗೆ ವ್ಯವಹರಿಸಬಾರದು.

ಯದಾ ಸ್ಯಾನ್ಮಹತೀ ಸೇನಾ ಹಯನಾಗರಥಾಕುಲಾ |
ಪದಾತಿಯಂತ್ರಬಹುಲಾ ಸ್ವನುರಕ್ತಾ ಪತಾಕಿನೀ ॥37॥
ಯದಾ ಬಹುವಿಧಾಂ ವೃದ್ಧಿಂ ಮನ್ಯತೇ ಪ್ರತಿಲೋಮತಃ |
ತದಾ ವಿವೃತ್ಯ ಪ್ರಹರೇದ್ ಅರೀಣಾಮವಿಚಾರಯನ್ ॥38॥

ಹಯಗಜರಥಗಳಿಂದ ನಿಬಿಡವಾದ, ಪದಾತಿ ಮತ್ತು ಯಂತ್ರಗಳ ಬಾಹುಲ್ಯ- ದಿಂದ ಕೂಡಿದ, ಬಹಳ ಅನುರಕ್ತವಾದ, ದೊಡ್ಡ ಸೈನ್ಯವಿದ್ದರೆ ಶತ್ರುಗಳಿಗಿಂತ ತನ್ನ ಬಲವು ಸಮೃದ್ಧಿ ಹಾಗೂ ಅಧಿಕವಾಗಿದೆಯೆಂದು ಭಾವಿಸಿದರೆ ಆಗ ಮಾತ್ರ ಬೇರೆ ಏನೂ ವಿಚಾರಮಾಡದೇ ಸ್ಪಷ್ಟವಾಗಿ ಶತ್ರುಗಳ ಮೇಲೆ ಎರಗಬೇಕು.

ನ ಸಾಮ ದಂಡೋಪನಿಷತ್ ಪ್ರಶಸ್ಯತೇ
ನ ಮಾರ್ದವಂ ಶತ್ರುಷು ಯಾತ್ರಿಕಂ ಸದಾ |
ನ ಸಸ್ಯಘಾತೋ ನ ಚ ಸಂಕರಕ್ರಿಯಾ
ನ ಚಾಸ್ಯ ಭೂಯಃ ಪ್ರಕೃತೇರ್ವಿಚಾರಣಾ ॥39॥

ಯಾವಾಗಲೂ ಸಾಮವಾಗಲೀ ಅಥವಾ ದಂಡವಾಗಲೀ ಅಥವಾ ಮೃದುತನ- ವಾಗಲೀ ಅಥವಾ ಶತ್ರುಗಳ ಮೇಲೆ ಎರಗುವುದಾಗಲೀ ಶೋಭಿಸುವುದಿಲ್ಲ. ಶತ್ರುಗಳ ಸಸ್ಯಗಳನ್ನು ನಾಶಮಾಡುವುದಾಗಲೀ, ಜಲಾಶಯಗಳನ್ನು ವಿಷದಿಂದ ದೂಷಿಸುವುದಾಗಲೀ, ಶತ್ರುರಾಜನ ಸಪ್ತಪ್ರಕೃತಿಗಳನ್ನು ಯಾವಾಗಲೂ ವಿಮರ್ಶೆ ಮಾಡುವುದಾಗಲೀ ಶೋಭಿಸುವುದಿಲ್ಲ.

ಮಾಯಾವಿಭೇದಾನುಪಸರ್ಜನಾನಿ
ಪಾಪಂ ತಥೈವ ಸ್ಪಶಸಂಪ್ರಯೋಗಾತ್ |
ಆಪ್ತೈರ್ಮನುಷ್ಯೈರುಪಚಾರಯೇತ
ಪುರೇಷು ರಾಷ್ಟ್ರೇಷು ಚ ಸಂಪ್ರಯುಕ್ತಾನ್ ॥40॥

ತನ್ನ ಗೂಢಚಾರರನ್ನು ಶತ್ರುವಿನ ಪಟ್ಟಣಗಳಲ್ಲಿಯೂ ಮತ್ತು ರಾಷ್ಟ್ರದಲ್ಲಿಯೂ ಪ್ರಯೋಗಿಸಿ ಅಂತಹ ಆಪ್ತಮನುಷ್ಯರಿಂದ ಶತ್ರುರಾಜ್ಯದಲ್ಲಿ ಮಾಯೆ, ಕಪಟಗಳು, ಧನದ ಅವಿತರಣೆಯು ಮತ್ತು ಪಾಪಕಾರ್ಯಗಳು ಆಗುವಂತೆ ನೋಡಿಕೊಳ್ಳ- ಬೇಕು.

ಪುರಾಪಿ ಚೈಷಾಮನುಸೃತ್ಯ ಭೂಮಿಪಾಃ
ಪುರೇಷು ಭೋಗಾನ್ ನಿಖಿಲಾನಿಹಾಜಯನ್ |
ಪುರೇಷು ನೀತಿಂ ವಿಹಿತಾಂ ಯಥಾವಿಧಿ
ಪ್ರಯೋಜಯಂತೋ ಬಲವೃತ್ರಸೂದನ ॥41॥

ಎಲೈ ಬಲವೃತ್ರಸೂದನನೇ! ಹಿಂದಿನ ಕಾಲದಲ್ಲಿಯೂ ಸಹ ರಾಜನು ಶತ್ರುಗಳ ಪಟ್ಟಣಗಳಲ್ಲಿ ಶಾಸ್ತ್ರೋಕ್ತರೀತಿಯಲ್ಲಿ ಇಂತಹ ನೀತಿಗಳನ್ನು ಪ್ರಯೋಗಿಸಿ, ಆ ಪಟ್ಟಣಗಳಲ್ಲಿದ್ದ ಅಖಿಲಭೋಗಗಳನ್ನು ಜಯಿಸಿದರು.

ಪ್ರದಾಯ ಗೂಢಾನಿ ವಸೂನಿ ನಾಮ
ಪ್ರಚ್ಛಿದ್ಯ ಭೋಗಾನವಧಾಯ ಚ ಸ್ವಾನ್ |
ದುಷ್ಟಾಃ ಸ್ವದೋಷೈರಿತಿ ಕೀರ್ತಯಿತ್ವಾ
ಪುರೇಷು ರಾಷ್ಟ್ರೇಷು ಚ ಯೋಜಯಂತಿ ॥42॥

ತನ್ನ ಅಮಾತ್ಯಾದಿಗಳಿಗೆ ರಹಸ್ಯವಾಗಿ ಧನವನ್ನು ನೀಡಿ, ಅವರಿಗೆ ಕೊಡುತ್ತಿದ್ದ ಭೋಗಸಾಮಗ್ರಿಗಳನ್ನು ಎಲ್ಲರಿಗೂ ತಿಳಿಯುವಂತೆ ನಿಲ್ಲಿಸಿ, `ಇವರು ತಮ್ಮ ದೋಷಗಳಿಂದಲೇ ದುಷ್ಟರಾದವರು, ಆದ್ದರಿಂದ ನನ್ನನ್ನು ಬಿಡುತ್ತಿದ್ದಾರೆ' ಎಂದುಘೋಷಿಸಿ ಶತ್ರುಗಳ ಪಟ್ಟಣಗಳಲ್ಲಿಯೂ ರಾಷ್ಟ್ರಗಳಲ್ಲಿಯೂ ಅವರನ್ನು ನಿಯೋ- ಜಿಸಬೇಕು.

ತಥೈವ ಚಾನ್ಯೈರಪಿ ಶಾಸ್ತ್ರವೇದಿಭಿಃ
ಸ್ವಲಂಕೃತೈಃ ಶಾಸ್ತ್ರವಿಧಾನದೃಷ್ಟಿಭಿಃ |
ಸುಶಿಕ್ಷಿತೈರ್ಭಾಷ್ಯಕಥಾವಿಶಾರದೈಃ

ಪರೇಷು ಕೃತ್ಯಾನುಪಧಾರಯಸ್ವ ॥43॥
ಹಾಗೆಯೇ ಶಾಸ್ತ್ರಜ್ಞರಾದ, ಅಲಂಕೃತರಾದ, ಶಾಸ್ತ್ರವಿಹಿತವಾದ ದೃಷ್ಟಿಯುಳ್ಳ, ಸುಶಿಕ್ಷಿತರಾದ, ವಾಗ್ಮಿಗಳಾದ ಜನರನ್ನು ನಿಯೋಜಿಸಿ ಶತ್ರುದೇಶದ ಕಾರ್ಯಗಳನ್ನು ತಿಳಿದುಕೊಳ್ಳಬೇಕು.
ಇಂದ್ರಃ
ಕಾನಿ ಲಿಂಗಾನಿ ದುಷ್ಟಸ್ಯ ಭವಂತಿ ದ್ವಿಜಸತ್ತಮ |
ಕಥಂ ದುಷ್ಟಂ ವಿಜಾನೀಯಾದೇತತ್ ಪೃಷ್ಟೋ ಬ್ರುವೀಹಿ ಮೇ ॥44॥
ಇಂದ್ರ ಎಲೈ ದ್ವಿಜಶ್ರೇಷ್ಠರೇ! ದುಷ್ಟರ ಚಿಹ್ನೆಗಳು ಯಾವುವು? ದುಷ್ಟರನ್ನು ತಿಳಿಯುವ ಬಗೆ ಹೇಗೆ ಎಂಬ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿ.
ಬೃಹಸ್ಪತಿಃ
ಪರೋಕ್ಷಮಗುಣಾನಾಹ ಸದ್ಗುಣಾನಭ್ಯಸೂಯತಿ |
ಪರೈರ್ವಾ ಕೀರ್ತ್ಯಮಾನೇಷು ತೂಷ್ಣೀಮಾಸ್ತೇ ಪರಾಙ್ಮುಖಃ ॥45॥
ಬೃಹಸ್ಪತಿಗಳು ದುಷ್ಟನು ಪರೋಕ್ಷದಲ್ಲಿ ನಿಂದಿಸುತ್ತಾನೆ. ಸದ್ಗುಣಗಳನ್ನು ಹೇಳಿದರೆ ಅಸೂಯೆಪಡುತ್ತಾನೆ. ಬೇರೆಯವರು ಆ ವ್ಯಕ್ತಿಯ ಗುಣಗಳನ್ನು ಹೇಳಿದರೆ ಮುಖವನ್ನು ತಿರುಗಿಸಿ ಮೌನವಾಗಿರುತ್ತಾನೆ.
ತೂಷ್ಣೀಂಭಾವೇಽಪಿ ವಿಜ್ಞೇಯಂ ನ ಚೇದ್ ಭವತಿ ದಾರಣಮ್ |
ನಿಃಶ್ವಾಸಮೋಷ್ಠಸಂದಂಶಂ ಶಿರಸಶ್ಚ ಪ್ರಕಂಪಯನ್ ॥46॥
ಅವನು ಸುಮ್ಮನಿದ್ದರೂ, ತುಟಿಗಳನ್ನು ಬಿಡಿಸಿ ಮಾತನಾಡದಿದ್ದರೂ, ನಿಃ- ಶ್ವಾಸದಿಂದ, ತುಟಿಗಳನ್ನು ಕಚ್ಚುವುದರಿಂದ ಮತ್ತು ತಲೆಯನ್ನು ಅಲ್ಲಾಡಿಸುವುದ- ರಿಂದ ಅವನ ಮನಸ್ಸಿನ ಅಭಿಪ್ರಾಯವು ತಿಳಿದುಬರುತ್ತದೆ.
ಕರೋತ್ಯಭೀಕ್ಷ್ಣಂ ಸಂಸೃಷ್ಟಮಸಂಸೃಷ್ಟಶ್ಚ ಭಾಷತೇ |
ಅದೃಷ್ಟಿತೋ ವಿಕುರುತೇ ದೃಷ್ಟ್ವಾ ವಾ ನಾಭಿಭಾಷತೇ ॥47॥
ಪುನಃ ಪುನಃ ನೋಡಲು ಬರುತ್ತಾನೆ. ಮಾತನಾಡಿಸದಿದ್ದರೂ ಮಾತನಾಡಿಸು- ತ್ತಾನೆ. ಎದುರಿಗೆ ಸಿಕ್ಕಿದಾಗ ದೃಷ್ಟಿಯನ್ನು ಬೇರೆಡೆ ತಿರುಗಿಸುತ್ತಾನೆ. ಅಥವಾ ನೋಡಿ- ದರೂ ಮಾತನಾಡುವುದಿಲ್ಲ.
ಪೃಥಗೇತ್ಯ ಸಮಶ್ನಾತಿ ನೇದಮದ್ಯ ಯಥಾವಿಧಿ |
ಆಸನೇ ಶಯನೇ ಯಾನೇ ಭಾವಾ ಲಕ್ಷ್ಯಾ ವಿಶೇಷತಃ ॥48॥
ಒಬ್ಬನೇ ಬಂದು ಊಟ ಮಾಡುತ್ತಾನೆ. ಭೋಜನವು ಹಿಂದಿನಂತೆ ಚೆನ್ನಾಗಿಲ್ಲ ಎಂದು ಹೇಳುತ್ತಾನೆ. ಕೂಡುವುದರಲ್ಲಿ ಮಲಗುವುದರಲ್ಲಿ ನಡೆಯುವುದರಲ್ಲಿ ಅವನ ಭಾವನೆಗಳನ್ನು ಗಮನಿಸಬೇಕು.
ಆರ್ತಿರಾರ್ತೇ ಪ್ರಿಯೇ ಪ್ರೀತಿರೇತಾವನ್ಮಿತ್ರಲಕ್ಷಣಮ್ |
ವಿಪರೀತಂ ತು ಬೋದ್ಧವ್ಯಮರಿಲಕ್ಷಣಮೇವ ತತ್ ॥49॥
ಇನ್ನೊಬ್ಬನು ದುಃಖಗೊಂಡಾಗ ದುಃಖಗೊಳ್ಳುವುದು, ಇನ್ನೊಬ್ಬನು ಸಂತೋಷ -ಗೊಂಡಾಗ ಸಂತೋಷಗೊಳ್ಳುವುದು ಮಿತ್ರನ ಲಕ್ಷಣ. ಶತ್ರುಗಳ ಲಕ್ಷಣವು ಇದಕ್ಕೆ ವಿರುದ್ಧವಾದುದೆಂದು ತಿಳಿಯಬೇಕು.
ಏತಾನ್ಯೇವಂ ಯಥೋಕ್ತಾನಿ ಬುದ್ಧ್ಯೇಥಾಸ್ತ್ರಿದಶಾಧಿಪ|
ಪುರುಷಾಣಾಂ ಪ್ರದುಷ್ಟಾನಾಂ ಸ್ವಭಾವೋ ಬಲವತ್ತರಃ ॥50॥
ಎಲೈ ದೇವರಾಜನೇ! ನಾನು ಹೇಳಿದ ಈ ಲಕ್ಷಣಗಳನ್ನು ಈ ರೀತಿಯಲ್ಲಿ ತಿಳಿದುಕೊಳ್ಳಬೇಕು. ದುಷ್ಟಪುರುಷರ ಸ್ವಭಾವವು ಬಹಳ ಬಲಿಷ್ಠವಾಗಿರುತ್ತದೆ.
ಇತಿ ದುಷ್ಟಸ್ಯ ವಿಜ್ಞಾನಮುಕ್ತಂ ತೇ ಸುರಸತ್ತಮ |
ನಿಶಾಮ್ಯ ಶಾಸ್ತ್ರತತತ್ತ್ವಾರ್ಥಂ ಯಥಾವದಮರೇಶ್ವರ ॥51॥
ಎಲೈ ಸುರೋತ್ತಮನೇ! ಅಮರೇಶ್ವರನೇ! ನಾನು ಶಾಸ್ತ್ರತತತ್ತ್ವಾರ್ಥವನ್ನು ತಿಳಿದು ನಿನಗೆ ಯಥಾರ್ಥವಾಗಿ ದುಷ್ಟರ ಲಕ್ಷಣಗಳನ್ನು ಹೇಳಿದ್ದೇನೆ.
ಭೀಷ್ಮಃ
ಸ ತದ್ವಚಃ ಶತ್ರುನಿಬರ್ಹಣೇ ರತ-
ಸ್ತಥಾ ಚಕಾರಾವಿತಥಂ ಬೃಹಸ್ಪತೇಃ |
ಚಚಾರ ಕಾಲೇ ವಿಜಯಾಯ ಚಾರಿಹಾ
ವಶಂ ಚ ಶತ್ರೂನನಯತ್ ಪುರಂದರಃ ॥52॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚಾಧಿಕಶತತಮೋಽಧ್ಯಾಯಃ ॥105॥
ಭೀಷ್ಮರು ಶತ್ರುವಿನಾಶದಲ್ಲಿ ರತನಾದ ಇಂದ್ರನು ಬೃಹಸ್ಪತಿಗಳ ಆ ಮಾತುಗಳನ್ನು ಕೇಳಿ, ಅದನ್ನು ವ್ಯರ್ಥವನ್ನು ಮಾಡದೇ ನಡೆದುಕೊಂಡನು. ಶತ್ರುಸೂದನನಾದ ಪುರಂದರನು ಯೋಗ್ಯವಾದ ಕಾಲದಲ್ಲಿ ವಿಜಯಯಾತ್ರೆಯನ್ನು ಮಾಡಿ ಶತ್ರುಗಳನ್ನು ವಶಪಡಿಸಿಕೊಂಡನು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 105ನೆಯ ಅಧ್ಯಾಯವು ಮುಗಿಯಿತು.
0
106. ನೂರ ಆರನೆಯ ಅಧ್ಯಾಯ

ಕೌಸಲ್ಯ-ಕಾಲಕವೃಕ್ಷೀಯಸಂವಾದ; ಎಲ್ಲರನ್ನೂ ಕಳೆದುಕೊಂಡ ರಾಜನು ಜೀವಿಸುವ ರೀತಿ
ಯುಧಿಷ್ಠಿರಃ
ಧಾರ್ಮಿಕೋಽರ್ಥಾನಸಂಪ್ರಾಪ್ಯ ರಾಜಾಽಮಾತ್ಯೈಃ ಪ್ರಬಾಧಿತಃ |
ಚ್ಯುತಃ ಕೋಶಾಚ್ಚ ದಂಡಾಚ್ಚ ಸುಖಮಿಚ್ಛನ್ ಕಥಂ ಚರೇತ್ ॥1॥
ಯುಧಿಷ್ಠಿರ ಧಾರ್ಮಿಕನಾದ ರಾಜನು ಅಮಾತ್ಯರಿಂದ ಬಾಧಿತನಾಗಿ, ತನ್ನ ಕಾರ್ಯಗಳು ಸಿದ್ಧಿಸದೇ, ಕೋಶದಿಂದಲೂ ಸೈನ್ಯದಿಂದಲೂ ಚ್ಯುತನಾಗಿ ಸುಖವನ್ನು ಬಯಸಿದರೆ ಹೇಗೆ ನಡೆದುಕೊಳ್ಳಬೇಕು?
ಭೀಷ್ಮಃ
ಅತ್ರಾಯಂ ಕ್ಷೇಮದರ್ಶೀಯಮಿತಿಹಾಸೋಽನುಗೀಯತೇ |
ತತ್ ತೇಽಹಂ ಸಂಪ್ರವಕ್ಷ್ಯಾಮಿ ತನ್ನಿಬೋಧ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿ ಕ್ಷೇಮದರ್ಶ ಮಹಾ- ರಾಜನ ಒಂದು ಇತಿಹಾಸವನ್ನು ಹೇಳುತ್ತಾರೆ. ನಾನು ಅದನ್ನು ನಿನಗೆ ಹೇಳುವೆನು. ಅದನ್ನು ಕೇಳು.
ಕ್ಷೇಮದರ್ಶಂ ನೃಪಸುತಂ ಯತ್ರ ಕ್ಷೀಣಬಲಂ ಪುರಾ |
ಮುನಿಃ ಕಾಲಕವೃಕ್ಷೀಯ ಆಜಗಾಮೇತಿ ನಃ ಶ್ರುತಮ್ |
ತಂ ಪಪ್ರಚ್ಛೋಪಸಂಗೃಹ್ಯ ಕೃಚ್ಛ್ರಾಮಾಪದಮಾಸ್ಥಿತಃ ॥3॥
ಹಿಂದೆ ದುರ್ಬಲನಾದ ಕ್ಷೇಮದರ್ಶ ರಾಜಕುಮಾರನ ಬಳಿಗೆ ಕಾಲಕವೃಕ್ಷೀಯ ಎಂಬ ಮುನಿಯು ಬಂದನೆಂದು ನಾವು ಕೇಳಿದ್ದೇವೆ. ಬಹಳಕಷ್ಟಕ್ಕೆ ಸಿಲುಕಿದ ಕ್ಷೇಮ- ದರ್ಶನು ಅವನನ್ನು ಸಮೀಪಿಸಿ ಪ್ರಶ್ನೆಮಾಡಿದನು.
ಅರ್ಥೇಷು ಭಾಗೀ ಪುರುಷ ಈಹಮಾನಃ ಪುನಃ ಪುನಃ |
ಅಲಬ್ಧ್ವಾ ಮದ್ವಿಧೋ ರಾಜ್ಯಂ ಬ್ರಹ್ಮನ್ ಕಿಂ ಕರ್ತುಮರ್ಹತಿ ॥4॥
ಎಲೈ ಬ್ರಾಹ್ಮಣರೇ! ಪುನಃ ಪುನಃ ಪ್ರಯತ್ನವನ್ನು ಮಾಡಿ ಅರ್ಥವನ್ನು ಸಂಪಾದಿ- ಸಲು ಪ್ರಯತ್ನಿಸಿ ಅಂತಹ ಅರ್ಥವನ್ನು ರಾಜ್ಯವನ್ನು ಪಡೆಯದ ನನ್ನಂತಹವನು ಏನು ಮಾಡಬೇಕು?
ಅನ್ಯತ್ರ ಮರಣಾತ್ ಸ್ತೇಯಾದನ್ಯತ್ರ ಪರಸಂಶ್ರಯಾತ್ |
ಕ್ಷುದ್ರಾದನ್ಯತ್ರ ಚಾಚಾರಾತ್ ತನ್ಮಮಾಚಕ್ಷ್ವ ಸತ್ತಮ ॥5॥
ಎಲೈ ಸಜ್ಜನರಲ್ಲಿ ಶ್ರೇಷ್ಠರೇ! ಮರಣವನ್ನು ಬಿಟ್ಟು ಇನ್ನೊಬ್ಬರನ್ನು ಆಶ್ರಯಿಸು- ವುದನ್ನು ಬಿಟ್ಟು, ಕಳ್ಳತನವನ್ನು ಮಾಡುವುದನ್ನು ಬಿಟ್ಟು, ಬೇರೆ ಯಾವ ಕ್ಷುದ್ರಾ- ಚಾರವನ್ನು ಮಾಡುವುದನ್ನೂ ಬಿಟ್ಟು ಏನು ಮಾಡಬೇಕೆಂಬುದನ್ನು ನನಗೆ ತಿಳಿಸಿ.
ವ್ಯಾಧಿನಾ ಚಾಭಿಪನ್ನಸ್ಯ ಮಾನಸೇನೇತರೇಣ ವಾ |
ಬಹುಶ್ರುತಃ ಕೃತಪ್ರಜ್ಞಸ್ತ್ವದ್ವಿಧಃ ಶರಣಂ ವ್ರಜೇತ್ ॥6॥
ಮಾನಸವಾದ ಅಥವಾ ದೈಹಿಕವಾದ ವ್ಯಾಧಿಗೆ ತುತ್ತಾದವನಿಗೆ ಬಹುಶ್ರುತರೂ ಕೃತಪ್ರಜ್ಞರೂ (ಬುದ್ಧಿಶಾಲಿಗಳೂ) ಆದ ನಿಮ್ಮಂತಹವರು ಆಶ್ರಯರಾಗುತ್ತಾರೆ.
ನಿರ್ವಿದ್ಯ ಹಿ ನರಃ ಕಾಮಾನ್ನಿಯಮ್ಯ ಸುಖಮೇಧತೇ |
ತ್ಯಕ್ತ್ವಾ ಪ್ರೀತಿಂ ಚ ಶೋಕಂ ಚ ಲಬ್ಧ್ವಾ ಬುದ್ಧಿಮಯಂ ವಸು ॥7॥
ಮನುಷ್ಯನು ವೈರಾಗ್ಯವನ್ನು ಹೊಂದಿ, ತನ್ನ ಆಸೆಗಳನ್ನು ನಿಯಂತ್ರಿಸಿ, ಹರ್ಷ- ಶೋಕಗಳನ್ನು ತ್ಯಜಿಸಿ, ಬುದ್ಧಿರೂಪವಾದ ಸಂಪತ್ತನ್ನು ಹೊಂದಿ ಸುಖಪಡುತ್ತಾನೆ.
ಸುಖಮರ್ಥಾಶ್ರಯಂ ಯೇಷಾಮನುಶೋಚಾಮಿ ತಾನಹಮ್ |
ಮಮ ಹ್ಯರ್ಥಾಃ ಸುಬಹವೋ ನಷ್ಟಾಃ ಸ್ವಪ್ನ ಇವಾಗತಾಃ ॥8॥
ಸುಖವು ಸಂಪತ್ತನ್ನು ಅವಲಂಬಿಸಿದೆ ಎಂದು ತಿಳಿಯುವವರನ್ನು ಕುರಿತು ನಾನು ಕನಿಕರಪಡುತ್ತೇನೆ. ನನ್ನ ಅಪಾರವಾದ ಸಂಪತ್ತು ಸ್ವಪ್ನದಂತೆ ಹೊರಟು ಹೋಯಿತು.
ದುಷ್ಕರಂ ಬತ ಕುರ್ವಂತಿ ಮಹತೋಽರ್ಥಾಂಸ್ತ್ಯಜಂತಿ ಯೇ |
ವಯಂ ತ್ವೇನಾನ್ ಪರಿತ್ಯಕ್ತುಮಸತೋಽಪಿ ನ ಶಕ್ನುಮಃ ॥9॥
ಮಹಾತ್ಮರು ಮಹಾಸಂಪತ್ತನ್ನು ತೊರೆದು ದುಷ್ಕರವಾದ ಕಾರ್ಯವನ್ನು ಮಾಡುತ್ತಾರೆ. ನಾವು ಅರ್ಥವನ್ನು ದುಷ್ಟವೆಂದು ತಿಳಿದಿದ್ದರೂ ಅದನ್ನು ತ್ಯಜಿಸಲು ಶಕ್ತರಾಗಿಲ್ಲ.
ಇಮಾಮವಸ್ಥಾಂ ಸಂಪ್ರಾಪ್ತಂ ದೀನಮಾರ್ತಂ ಶ್ರಿಯಶ್ಚ್ಯುತಮ್ |
ಯದನ್ಯತ್ ಸುಖಮಸ್ತೀಹ ತದ್ ಬ್ರಹ್ಮನ್ ಅನುಶಾಧಿ ಮಾಮ್ ॥10॥
ಎಲೈ ಬ್ರಾಹ್ಮಣರೇ! ಇಂತಹ ದುರವಸ್ಥೆಯನ್ನು ಹೊಂದಿ, ದೀನನೂ ಆರ್ತನೂ ಸಂಪತ್ತಿನಿಂದ ಹೀನನೂ ಆದ ನನಗೆ ಬೇರೆ ಯಾವ ಸುಖಸಾಧನವಿದೆಯೆಂದು ನೀವು ಉಪದೇಶಿಸಿ.
ಕೌಸಲ್ಯೇನೈವಮುಕ್ತಸ್ತು ರಾಜಪುತ್ರೇಣ ಧೀಮತಾ |
ಮುನಿಃ ಕಾಲಕವೃಕ್ಷೀಯಃ ಪ್ರತ್ಯುವಾಚ ಮಹಾದ್ಯುತಿಃ ॥11॥
ಮೇಧಾವಿಯಾದ ಕೋಸಲರಾಜಕುಮಾರನಿಂದ ಹೀಗೆ ಹೇಳಲ್ಪಟ್ಟ ಮಹಾ ತೇಜಸ್ಸುಳ್ಳ ಕಾಲಕವೃಕ್ಷೀಯ ಮುನಿಯು ಉತ್ತರವನ್ನು ಕೊಟ್ಟನು.
ಪುರಸ್ತಾದೇವ ತೇ ಬುದ್ಧಿರಿಯಂ ಕಾರ್ಯಾ ವಿಜಾನತಃ |
ಅನಿತ್ಯಂ ಸರ್ವಮೇವೇದಮಹಂ ಚ ಮಮ ಚಾಸ್ತಿ ಯತ್ ॥12॥

ಯತ್ಕಿಂಚಿನ್ಮನ್ಯಸೇಽಸ್ತೀತಿ ಸರ್ವಂ ನಾಸ್ತೀತಿ ವಿದ್ಧಿ ತತ್ |
ಏವಂ ನ ವ್ಯಥತೇ ಪ್ರಾಜ್ಞಃ ಕೃಚ್ಛ್ರಾಮಪ್ಯಾಪದಂ ಗತಃ ॥13॥
`ನನ್ನ ಬಳಿ ಏನಿದೆಯೋ ಇದೆಲ್ಲವೂ ಅನಿತ್ಯವಾದುದು' ಎಂದು ಬುದ್ಧಿವಂತ- ನಾದ ನೀನು ಮೊದಲೇ ತಿಳಿಯಬೇಕು. ಯಾವ ಯಾವುದು ಇದೆಯೋ ಅದೆಲ್ಲವೂ ಇಲ್ಲವೆಂದು ತಿಳಿ. ಹಾಗೆ ಮಾಡಿದರೆ ದುರವಸ್ಥೆಯನ್ನು ಹೊಂದಿದರೂ ಪ್ರಾಜ್ಞನು ವ್ಯಥೆ ಪಡುವುದಿಲ್ಲ.
ಯದ್ಧಿ ಭೂತಂ ಭವಿಷ್ಯಚ್ಚ ಧ್ರುವಂ ತನ್ನ ಭವಿಷ್ಯತಿ |
ಏವಂ ವಿದಿತವೇದ್ಯಸ್ತ್ವಮನರ್ಥೇಭ್ಯಃ ಪ್ರಮೋಕ್ಷ್ಯಸೇ ॥14॥
ಯಾವುದು ಇದೆಯೋ, ಯಾವುದು ಮುಂದೆ ಉಂಟಾಗುವುದೋ ಖಂಡಿತ- ವಾಗಿ ಅದು ಉಳಿಯುವುದಿಲ್ಲ. ಈ ರೀತಿಯಲ್ಲಿ ತಿಳಿದರೆ ನೀನು ಅನರ್ಥಗಳಿಂದ ಬಿಡುಗಡೆಯನ್ನು ಹೊಂದುವಿ.
ಯಚ್ಚ ಪೂರ್ವಂ ಸಮಾಹಾರೇ ಯಚ್ಚ ಪೂರ್ವತರೇ ಪರೇ |
ಸರ್ವಂ ತನ್ನಾಸ್ತಿ ತಚ್ಚೈವ ತಜ್ಜ್ಞಾತ್ವಾ ಕೋಽನುಸಂಜ್ವರೇತ್ ॥15॥
ಜನಸಮುದಾಯದಲ್ಲಿ ಈಗ ಏನಿದೆಯೋ, ಹಿಂದಿನ ಜನಸಮುದಾಯದಲ್ಲಿ ಏನಿದ್ದಿತೋ, ಮುಂದಿನ ಜನಸಮುದಾಯದಲ್ಲಿ ಏನಿರುವುದೋ ಅದು ಯಾವುದೂ ಉಳಿಯುವುದಿಲ್ಲ ಎಂದು ತಿಳಿದ ಯಾವನು ವ್ಯಥೆಪಡುತ್ತಾನೆ?
ಭೂತ್ವಾ ಚ ನ ಭವತ್ಯೇತದಭೂತ್ವಾ ಚ ಭವತ್ಯಪಿ |
ಶೋಕೇ ನ ಹ್ಯಸ್ತಿ ಸಾಮರ್ಥ್ಯಂ ಶೋಕಂ ಕುರ್ಯಾತ್ ಕಥಂ ನರಃ ॥16॥
ಕೆಲವಸ್ತುಗಳು ಜೊತೆಯಲ್ಲಿದ್ದವು ನಾಶವನ್ನು ಹೊಂದುತ್ತವೆ. ಇನ್ನು ಕೆಲವು ವಸ್ತುಗಳು ಮೊದಲು ಇಲ್ಲದೇ ಅನಂತರ ಬರುತ್ತವೆ. ಶೋಕ ಮಾಡುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಇದನ್ನು ತಿಳಿದ ಮನುಷ್ಯನು ಹೇಗೆ ಶೋಕವನ್ನು ಮಾಡಿಯಾನು?
ಕ್ವ ನು ತೇಽದ್ಯ ಪಿತಾ ರಾಜನ್ ಕ್ವ ನು ತೇಽದ್ಯ ಪಿತಾಮಹಃ |
ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯಂತಿ ತೇಽಪಿ ಚ ॥17॥
ಎಲೈ ರಾಜನೇ! ಈಗ ನಿನ್ನ ತಂದೆಯು ಎಲ್ಲಿ? ಈಗ ನಿನ್ನ ತಾತನು ಎಲ್ಲಿ? ನೀನು ಅವರನ್ನು ನೋಡುತ್ತಿಲ್ಲ. ಅವರೂ ನಿನ್ನನ್ನು ನೋಡುತ್ತಿಲ್ಲ.
ಆತ್ಮನೋಽಧ್ರುವತಾಂ ಪಶ್ಯಂಸ್ತಾಸ್ತ್ವಂ ಕಿಮನುಶೋಚಸಿ |
ಬುದ್ಧ್ಯಾ ಚೈವಾನುಬುದ್ಧ್ಯಸ್ವ ಧ್ರುವಂ ಹಿ ನ ಭವಿಷ್ಯಸಿ ॥18॥
ನಿನ್ನ ಅನಿತ್ಯತ್ವವನ್ನು ತಿಳಿದ ನೀನು ಅವರನ್ನು ಕುರಿತು ಏಕೆ ಶೋಕಪಡು- ತ್ತಿದ್ದೀಯೆ? ಒಳ್ಳೆಯ ಬುದ್ಧಿಯನ್ನು ಹೊಂದು. ಖಂಡಿತವಾಗಿ ನೀನೂ ಇರುವು- ದಿಲ್ಲ.
ಅಹಂ ಚ ತ್ವಂ ಚ ನೃಪತೇ ಶತ್ರವಃ ಸುಹೃದಶ್ಚ ತೇ |
ಅವಶ್ಯಂ ನ ಭವಿಷ್ಯಾಮಃ ಸರ್ವಂ ಚ ನ ಭವಿಷ್ಯತಿ ॥19॥
ಎಲೈ ರಾಜನೇ! ನಾನು, ನೀನು, ನಿನ್ನ ಶತ್ರುಗಳು, ನಿನ್ನ ಸುಹೃಜ್ಜನರು ಅವಶ್ಯವಾಗಿ ನಾಶವನ್ನು ಹೊಂದುತ್ತೇವೆ. ಯಾವುದೂ ಉಳಿಯುವುದಿಲ್ಲ.
ಯೇ ತು ವಿಂಶತಿವರ್ಷಾ ವೈ ತ್ರಿಂಶದ್ವರ್ಷಾಶ್ಚ ಮಾನವಾಃ |
ಅರ್ವಾಗೇವ ಹಿ ತೇ ಸರ್ವೇ ಮರಿಷ್ಯಂತಿ ಶರಚ್ಛತಾತ್ ॥20॥
ಇಪ್ಪತ್ತು ವರ್ಷದ, ಮೂವತ್ತು ವರ್ಷದ ಮನುಷ್ಯರೂ ಸಹ ನೂರು ವರ್ಷಗಳಿಗಿಂತ ಮೊದಲೇ ಮರಣವನ್ನು ಹೊಂದುತ್ತಾರೆ.
ಅಪಿ ಚೇನ್ಮಹತೋ ವಿತ್ತಾದ್ ವಿಪ್ರಮುಚ್ಯೇತ ಪೂರುಷಃ |
ನೈತನ್ಮಮೇತಿ ತನ್ಮತ್ವಾ ಕುರ್ವೀತ ಪ್ರಿಯಮಾತ್ಮನಃ ॥21॥
ಮನುಷ್ಯನು ದೊಡ್ಡ ಸಂಪತ್ತನ್ನು ಕಳೆದುಕೊಂಡರೂ ಇದು ನನ್ನದಲ್ಲ ಎಂದು ತಿಳಿದು ಬುದ್ಧಿಯಿಂದ ತನಗೆ ಪ್ರಿಯವನ್ನು ಮಾಡಿಕೊಳ್ಳಬೇಕು.
ಅನಾಗತಂ ಯನ್ನ ಮಮೇತಿ ವಿದ್ಯಾ-
ದತಿಕ್ರಾಂತಂ ಯನ್ನ ಮಮೇತಿ ವಿದ್ಯಾತ್ |
ದಿಷ್ಟಂ ಬಲೀಯ ಇತಿ ಮನ್ಯಮಾನಾಃ
ತೇ ಪಂಡಿತಾಸ್ತತ್ ಸತಾಂ ವೃತ್ತಮಾಹುಃ ॥22॥
ಇನ್ನೂ ಪ್ರಾಪ್ತವಾಗದಿರುವುದು ನನ್ನದಲ್ಲ ಎಂದು ತಿಳಿಯಬೇಕು. ಕಳೆದು ಹೋದುದು ನನ್ನದಲ್ಲ ಎಂದು ತಿಳಿಯಬೇಕು. ಯಾರು ವಿಧಿಯು ಪ್ರಬಲವಾದುದು ಎಂದು ತಿಳಿಯುತ್ತಾರೋ ಅವರು ಪಂಡಿತರು. ಅದು ಸಜ್ಜನರ ನಡತೆಯೆಂದು ಹೇಳುತ್ತಾರೆ.
ಅನಾಢ್ಯಾಶ್ಚಾಪಿ ಜೀವಂತಿ ರಾಜ್ಯಂ ಚಾಪ್ಯನುಶಾಸತೇ |
ಬುದ್ಧಿಪೌರುಷಸಂಪನ್ನಾಸ್ತ್ವಯಾ ತುಲ್ಯಾಧಿಕಾ ಜನಾಃ ॥23॥
ಲೋಕದಲ್ಲಿ ಬುದ್ಧಿಪೌರುಷಸಂಪನ್ನರಾದ ನಿನಗೆ ಸಮಾನರಾದ ಅಥವಾ ನಿನಗಿಂತ ಅಧಿಕರಾದ ಜನರು ಧನಾಢ್ಯರಲ್ಲದಿದ್ದರೂ ಬದುಕುತ್ತಾರೆ ಮತ್ತು ರಾಜ್ಯ- ವನ್ನು ಆಳುತ್ತಾರೆ.
ನ ಚ ತ್ವಮಿವ ಶೋಚಂತಿ ತಸ್ಮಾತ್ ತ್ವಮಪಿ ಮಾ ಶುಚಃ |
ಕಿನ್ನು ತ್ವಂ ತೈರ್ನ ವೈ ಶ್ರೇಯಾಂಸ್ತುಲ್ಯೋ ವಾ ಬುದ್ಧಿಪೌರುಷೈಃ ॥24॥
ಅವರು ನಿನ್ನಂತೆ ಶೋಕಪಡುವುದಿಲ್ಲ. ಆದ್ದರಿಂದ ನೀನೂ ಶೋಕಪಡಬೇಡ. ಬುದ್ಧಿಪೌರುಷಗಳ ದೃಷ್ಟಿಯಿಂದ ನೀನು ಅವರಿಗೆ ಸಮಾನನಾದವನಲ್ಲವೇ? ಅಥವಾ ಅಧಿಕನಾದವನಲ್ಲವೇ?

ರಾಜಪುತ್ರಃ
ಯಾದೃಚ್ಛಿಕಂ ಮಮಾಸೀತ್ ತದ್ ರಾಜ್ಯಮಿತ್ಯೇವ ಚಿಂತಯೇ |
ಹ್ರಿಯತೇ ಸರ್ವಮೇವೇದಂ ಕಾಲೇನ ಮಹತಾ ದ್ವಿಜ ॥25॥
ತಸ್ಯೈವಂ ಹ್ರಿಯಮಾಣಸ್ಯ ಸ್ರೋತಸೇವ ತಪೋಧನ |
ಫಲಮೇತತ್ ಪ್ರಪಶ್ಯಾಮಿ ಯಥಾಲಬ್ಧೇನ ವರ್ತಯೇ ॥26॥
ರಾಜಪುತ್ರ ನನಗೆ ದೊರೆತ ರಾಜ್ಯವು ಅಕಸ್ಮಾತ್ತಾಗಿ ದೊರೆಯಿತು ಎಂದೇ ತಿಳಿಯುತ್ತೇನೆ. ಎಲೈ ಬ್ರಾಹ್ಮಣರೇ! ಮಹತ್ತಾದ ಕಾಲವು ಇದೆಲ್ಲವನ್ನೂ ಸೆಳೆ- ದೊಯ್ಯುತ್ತದೆ. ಎಲೈ ತಪೋಧನರೇ! ನನಗೆ ಒದಗಿರುವ ದುರವಸ್ಥೆಯು ನದಿಯ ಪ್ರವಾಹದಂತೆ ಸೆಳೆದೊಯ್ಯುವ ಕಾಲದ ಫಲವೆಂದು ತಿಳಿಯುತ್ತೇನೆ. ಇದ್ದುದರ- ಲ್ಲಿಯೇ ಜೀವನವನ್ನು ಮಾಡುತ್ತೇನೆ.
ಮುನಿಃ
ಅನಾಗತಮತೀತಂ ಚ ಯಥಾತಥ್ಯವಿನಿಶ್ಚಯಾತ್ |
ನಾನುಶೋಚಸಿ ಕೌಸಲ್ಯ ಸರ್ವಾರ್ಥೇಷು ತಥಾ ಭವ ॥27॥
ಮುನಿಗಳು ಎಲೈ ಕೌಸಲ್ಯನೇ! ಅನಾಗತವಾದ ಅಥವಾ ಅತೀತವಾದ ವಸ್ತು- ಗಳ ಸರಿಯಾದ ಸ್ವರೂಪವನ್ನು ತಿಳಿದರೆ ನೀನು ಶೋಕಪಡುವುದಿಲ್ಲ. ಎಲ್ಲ ವಿಷಯಗಳಲ್ಲಿಯೂ ಹಾಗೆಯೇ ಇರು.
ಅವಾಪ್ಯಾನ್ ಕಾಮಯ ಸ್ವಾರ್ಥಾನ್ ನಾನವಾಪ್ಯಾನ್ ಕದಾಚನ |
ಪ್ರತ್ಯುತ್ಪನ್ನಾನನುಭವನ್ ಮಾ ಶುಚಸ್ತ್ವಮನಾಗತಾಮ್ ॥28॥
ಪಡೆಯಬಹುದಾದ ವಸ್ತುಗಳನ್ನು ಆಶಿಸು; ಪಡೆಯಲಾರದ ವಸ್ತುಗಳನ್ನು ಎಂದೂ ಆಶಿಸಬೇಡ. ಸದ್ಯದಲ್ಲಿ ಸಮೀಪದಲ್ಲಿರುವ ವಸ್ತುಗಳನ್ನು ಭೋಗಿಸುತ್ತಾ ಪಡೆಯದಿರುವ ವಸ್ತುಗಳ ವಿಷಯದಲ್ಲಿ ಶೋಕಪಡಬೇಡ.
ಯಥಾಲಬ್ಧೋಪಪನ್ನಾರ್ಥಸ್ತಥಾ ಕೌಸಲ್ಯ ರಂಸ್ಯಸೇ |
ಕಚ್ಚಿಚ್ಛುದ್ಧಸ್ವಭಾವೇನ ಶ್ರಿಯಾ ಹೀನೋ ನ ಶೋಚಸಿ ॥29॥
ಎಲೈ ಕೌಸಲ್ಯನೇ! ಸಹಜವಾಗಿ ದೊರೆತವಸ್ತುಗಳಿಂದ ನೀನು ಸುಖವನ್ನು ಪಡುವವನಾಗು. ಸಂಪತ್ತಿನಿಂದ ಹೀನನಾದ ನೀನು ಶುದ್ಧಸ್ವಭಾವವನ್ನು ಹೊಂದಿ ಶೋಕವನ್ನು ತ್ಯಜಿಸು.
ಪುರಸ್ತಾದ್ ಭೂತಪೂರ್ವತ್ವಾದ್ ವೀತಭಾಗ್ಯೋಽಪಿ ದುರ್ಮತಿಃ |
ಧಾತಾರಂ ಗರ್ಹತೇ ನಿತ್ಯಂ ಲಬ್ಧಾರ್ಥಶ್ಚ ನ ಮೃಷ್ಯತೇ ॥30॥
ಮುಂದೆ ಬರುವ ದಾರಿದ್ರ್ಯಾದಿಗಳು ಹಿಂದೆ ಮಾಡಿದ ದುಷ್ಕೃತಾದಿಗಳ ಫಲ- ವೆಂದು ತಿಳಿಯದೇ ದುರ್ಮತಿಯಾದವನು ಭಾಗ್ಯವನ್ನು ಕಳೆದುಕೊಂಡಾಗ ಯಾವಾಗಲೂ ವಿಧಿಯನ್ನು ನಿಂದಿಸುತ್ತಾನೆ. ಸಂಪತ್ತನ್ನು ಪಡೆದರೂ ಇದು ಸಾಲದು ಎಂದು ತಿಳಿದು ಸಹನೆಯನ್ನು ಕಳೆದುಕೊಳ್ಳುತ್ತಾನೆ.
ಅನರ್ಹಾನಪಿ ಚೈವಾನ್ಯಾನ್ ಮನ್ಯತೇ ಶ್ರೀಮತೋ ಜನಾನ್ |
ಏತಸ್ಮಾತ್ ಕಾರಣಾದೇತತ್ ದುಃಖಂ ಭೂಯೋಽನುವರ್ತತೇ ॥31॥
ಅನರ್ಹರಾದ ಬೇರೆಯವರೂ ಸಹ ಶ್ರೀಮಂತರಾಗಿದ್ದಾರೆ ಎಂದು ನೀನು ತಿಳಿಯುತ್ತಿದ್ದೀಯೆ. ಈ ಕಾರಣದಿಂದ ನಿನ್ನ ದುಃಖವು ಇನ್ನೂ ಮುಂದುವರಿಯು- ತ್ತಿದೆ.
ಈರ್ಷ್ಯಾತಿಚ್ಛೇದಸಂಪನ್ನಾ ರಾಜನ್ ಪುರುಷಮಾನಿನಃ |
ಕಚ್ಚಿತ್ತ್ವಂ ನ ತಥಾ ಪ್ರಾಜ್ಞ ಮತ್ಸರೀ ಕೋಸಲಾಧಿಪ ॥32॥
ಎಲೈ ರಾಜ್ಯನೇ! ತಮ್ಮನ್ನು ಶ್ರೇಷ್ಠಪುರುಷರೆಂದು ತಿಳಿದುಕೊಳ್ಳುವವರು ಅಸೂಯೆ ಮತ್ತು ಅತಿವ್ಯಥೆಗಳಿಂದ ಕೂಡಿರುತ್ತಾರೆ. ಎಲೈ ಪ್ರಾಜ್ಞನೇ! ಕೋಸಲಾಧಿ-ಪತಿಯೇ! ನೀನು ಅವರಂತೆ ಮಾತ್ಸರ್ಯವನ್ನು ಹೊಂದಿಲ್ಲವಷ್ಟೇ?
ಸಹಸ್ವ ಶ್ರಿಯಮನ್ಯೇಷಾಂ ಯದ್ಯಪಿ ತ್ವಯಿ ನಾಸ್ತಿ ಸಾ |
ಅನ್ಯತ್ರಾಪಿ ಸತೀಂ ಲಕ್ಷ್ಮೀಂ ಕುಶಲಾ ಭುಂಜತೇ ಜನಾಃ |
ಅಭಿವಿಷ್ಯಂದತೇ ಶ್ರೀರ್ಹಿ ಸತ್ಯಪಿ ದ್ವಿಷತೋ ಜನಾತ್ ॥33॥
ನಿನ್ನಲ್ಲಿ ಸಂಪತ್ತಿಲ್ಲದಿದ್ದರೂ ಇನ್ನೊಬ್ಬರ ಸಂಪತ್ತನ್ನು ನೋಡಿ ಸಹಿಸಿಕೋ. ನಿಪುಣರಾದ ಜನರು ಇನ್ನೊಬ್ಬರ ಬಳಿ ಇರುವ ಸಂಪತ್ತನ್ನು ಭೋಗಿಸುತ್ತಾರೆ. ಸಂಪತ್ತು ಇದ್ದರೂ ಸಹ ಇನ್ನೊಬ್ಬರನ್ನು ದ್ವೇಷಿಸುವ ಮನುಷ್ಯನಿಂದ ಅದು ಹರಿದು ಹೋಗುತ್ತದೆ.
ಶ್ರಿಯಂ ಚ ಪುತ್ರಪೌತ್ರಂ ಚ ಮನುಷ್ಯಾ ಧರ್ಮಚಾರಿಣಃ |
ತ್ಯಾಗಧರ್ಮವಿದೋ ವೀರಾಃ ಸ್ವಯಮೇವ ತ್ಯಜಂತ್ಯುತ ॥34॥
ತ್ಯಾಗಧರ್ಮವನ್ನು ತಿಳಿದ, ಧರ್ಮಚಾರಿಗಳಾದ, ವೀರರಾದ ಮನುಷ್ಯರು ತಾವಾಗಿಯೇ ಸಂಪತ್ತನ್ನೂ ಪುತ್ರಪೌತ್ರರನ್ನೂ ತ್ಯಜಿಸುತ್ತಾರೆ.
ಬಹು ಸಂಕಸುಕಂ ದೃಷ್ಟ್ವಾ ವಿವಿತ್ಸಾಸಾಧನೇನ ಚ |
ತಥಾನ್ಯೇ ಸಂತ್ಯಜಂತ್ಯೇವಂ ಮತ್ವಾ ಪರಮದುರ್ಲಭಮ್ ॥35॥
ಸಂಪತ್ತಿನ ಸಾಧನೆಯು ಬಹಳ ಕಷ್ಟದಿಂದ ಕೂಡಿದೆ ಎಂದು ತಿಳಿದ ಕೆಲವರು ಅದು ಬಹಳ ದುರ್ಲಭವಾದುದೆಂದು ತಿಳಿದು ಸಂಪತ್ತಿನ ಆಸೆಯನ್ನೇ ತ್ಯಜಿಸುತ್ತಾರೆ.
ತ್ವಂ ಪುನಃ ಪ್ರಾಜ್ಞರೂಪಃ ಸನ್ ಕೃಪಣಂ ಪರಿತಪ್ಯಸೇ |
ಅಕಾಮ್ಯಾನ್ ಕಾಮಯಾನೋಽರ್ಥಾನ್ ಪರಾಚೀನಾನುಪದ್ರುತಾನ್ 36
ನೀನು ಪ್ರಾಜ್ಞನಾಗಿದ್ದರೂ ಆಸೆಪಡಬಾರದ, ಪರಾಧೀನವಾದ, ಉಪದ್ರವಕ್ಕೆ ಒಳಗಾದ ವಸ್ತುಗಳಲ್ಲಿ ಆಸೆಯನ್ನು ಮಾಡುತ್ತಾ ಶೋಚನೀಯನಾಗಿ ಪರಿತಾಪ ಪಡುತ್ತಿದ್ದೀಯೆ.

ತಾಂ ಬುದ್ಧಿಮನುವಿಜ್ಞಾಯ ತ್ವಮೇವೈನಾನ್ ಪರಿತ್ಯಜ |
ಅನರ್ಥಾಂಶ್ಚಾರ್ಥರೂಪೇಣ ಅರ್ಥಾಂಶ್ಚಾನರ್ಥರೂಪತಃ ॥37॥
ಅಂತಹ ಬುದ್ಧಿಯನ್ನು ಹೊಂದಿ ನೀನೇ ಅಂತಹ ಅರ್ಥಗಳನ್ನು ಪರಿತ್ಯಜಿಸು. ಅರ್ಥಗಳು ಅನರ್ಥರೂಪದಲ್ಲಿಯೂ ಅನರ್ಥಗಳು ಅರ್ಥರೂಪದಲ್ಲಿಯೂ ತೋರುತ್ತವೆ. ಅವುಗಳನ್ನು ಪರಿತ್ಯಜಿಸು.
ಅರ್ಥಾಯೈವ ಹಿ ಕೇಷಾಂಚಿದ್ ಧನನಾಶೋ ಭವತ್ಯುತ |
ಅನಿತ್ಯಂ ತಂ ಸುಖಂ ಮತ್ವಾ ಶ್ರಿಯಮನ್ಯೇ ನ ಲಿಪ್ಸತೇ ॥38॥
ಧನನಾಶವು ಕೆಲವರಿಗೆ ದೊಡ್ಡ ಪ್ರಯೋಜನವನ್ನೇ ಉಂಟುಮಾಡುತ್ತದೆ. ಸಂಪತ್ತಿನಿಂದ ಉಂಟಾಗುವ ಸುಖವು ಅನಿತ್ಯವೆಂದು ತಿಳಿದು ಇನ್ನು ಕೆಲವರು ಸಂಪತ್ತನ್ನೇ ಬಯಸುವುದಿಲ್ಲ.
ರಮಮಾಣಃ ಶ್ರಿಯಾ ಕಶ್ಚಿನ್ನಾನ್ಯಚ್ಛ್ರೇಯೋಽಭಿಮನ್ಯತೇ |
ತಥಾ ತಸ್ಯೇಹಮಾನಸ್ಯ ಸಮಾರಂಭೋ ವಿನಶ್ಯತಿ ॥39॥
ಸಂಪತ್ತಿನಿಂದ ಸುಖಭೋಗದಲ್ಲಿರುವವನು ಅದಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲವೆಂದು ತಿಳಿಯುತ್ತಾನೆ. ಅಂತಹ ಕಾರ್ಯಗಳಲ್ಲಿ ತೊಡಗಿರುವ ಅವನಿಗೆ ಅವನ ಪ್ರಯತ್ನಗಳು ವಿಫಲವಾಗುತ್ತವೆ.
ಕೃಚ್ಛ್ರಾಲ್ಲಬ್ಧಮಭಿಪ್ರೇತಂ ಯದಾ ಕೌಸಲ್ಯ ನಶ್ಯತಿ |
ತದಾ ನಿರ್ವಿದ್ಯತೇ ಸೋಽರ್ಥಾತ್ ಪರಿಭಗ್ನಕ್ರಮೋ ನರಃ ॥40॥
ಎಲೈ ಕೌಸಲ್ಯನೇ! ಆಸೆಪಟ್ಟು ಕಷ್ಟಪಟ್ಟು ಸಂಪಾದಿಸಿದ ವಸ್ತುವು ನಾಶವನ್ನು ಹೊಂದಿದಾಗ ತನ್ನ ಪ್ರಯತ್ನವು ತಲೆಕೆಳಗಾಗಿ ಮನುಷ್ಯನು ಸಂಪತ್ತಿನ ಮೇಲೆ ವೈರಾಗ್ಯವನ್ನು ಹೊಂದುತ್ತಾನೆ.
ಧರ್ಮಮೇಕೇಽಭಿಪದ್ಯಂತೇ ಕಲ್ಯಾಣಾಭಿರತಾ ನರಾಃ |
ಪರತ್ರ ಸುಖಮಿಚ್ಛಂತೋ ನಿರ್ವಿದ್ಯೇಯುಶ್ಚ ಲೌಕಿಕಾತ್ ॥41॥
ತಮ್ಮ ಕಲ್ಯಾಣದಲ್ಲಿ ಆಸಕ್ತರಾದ ಕೆಲವರು ಧರ್ಮಮಾರ್ಗವನ್ನು ಆಶ್ರಯಿ- ಸುತ್ತಾರೆ. ಪರಲೋಕದಲ್ಲಿ ಸುಖವನ್ನು ಬಯಸುತ್ತಾ ಲೋಕದ ಪರಿಶ್ರಮದಿಂದ ಹಿಂದೆಗೆಯುತ್ತಾರೆ.
ಜೀವಿತಂ ಸಂತ್ಯಜಂತ್ಯೇಕೇ ಧನಲೋಭಪರಾ ನರಾಃ |
ನ ಜೀವಿತಾರ್ಥಂ ಮನ್ಯಂತೇ ಪುರುಷಾ ಹಿ ಧನಾದೃತೇ ॥42॥
ಧನಲೋಭವುಳ್ಳ ಕೆಲವರು ಜೀವಿತವನ್ನೇ ತೊರೆಯುತ್ತಾರೆ. ಅಂತಹ ಪುರುಷರು ಧನವಿಲ್ಲದೆ ಜೀವಿಸುವುದರಲ್ಲಿ ಯಾವ ಪ್ರಯೋಜನವೂ ಇಲ್ಲವೆಂದು ತಿಳಿಯುತ್ತಾರೆ.
ಪಶ್ಯ ತೇಷಾಂ ಕೃಪಣತಾಂ ಪಶ್ಯ ತೇಷಾಮಬುದ್ಧಿತಾಮ್ |
ಅಧ್ರುವೇ ಜೀವಿತೇ ಮೋಹಾದರ್ಥತೃಷ್ಣಾಮುಪಾಶ್ರಿತಾಃ ॥43॥
ಅವರ ಕಾರ್ಪಣ್ಯವನ್ನು ಮತ್ತು ಬುದ್ಧಿಗೇಡಿತನವನ್ನು ನೋಡು. ಅನಿತ್ಯವಾದ ಜೀವನದಲ್ಲಿ ಮೋಹದಿಂದ ಸಂಪತ್ತಿನ ಆಸೆಗೆ ಸಿಲುಕಿದ್ದಾರೆ.
ಸಂಚಯೇ ಚ ವಿನಾಶಾಂತೇ ಮರಣಾಂತೇ ಚ ಜೀವಿತೇ |
ಸಂಯೋಗೇ ವಿಪ್ರಯೋಗಾಂತೇ ಕೋ ನು ವಿಪ್ರಣಯೇನ್ಮನಃ ॥44॥
ನಾಶವನ್ನು ಹೊಂದಲಿರುವ ಧನಸಂಗ್ರಹದಲ್ಲಿ, ಮರಣವನ್ನು ಹೊಂದಿರುವ ಜೀವನದಲ್ಲಿ, ವಿಯೋಗವನ್ನು ಹೊಂದಲಿರುವ ಸಂಯೋಗದಲ್ಲಿ ಯಾವನು ತಾನೇ ಮನಸ್ಸನ್ನು ಇಟ್ಟಾನು?
ಧನಂ ವಾ ಪುರುಷಂ ರಾಜನ್ ಪುರುಷೋ ವಾ ಪುನರ್ಧನಮ್ |
ಅವಶ್ಯಂ ಪ್ರಜಹಾತ್ಯೇತತ್ ತದ್ ವಿದ್ವಾನ್ ಕೋಽನುಸಂಜ್ವರೇತ್ ॥45॥
ರಾಜನೇ! ಧನವು ಪುರುಷನನ್ನಾಗಲೀ ಅಥವಾ ಪುರುಷನೇ ಧನವನ್ನಾಗಲೀ ಅವಶ್ಯವಾಗಿ ಬಿಡುತ್ತಾನೆ. ಇದನ್ನು ತಿಳಿದ ಯಾವನು ವ್ಯಥೆಪಟ್ಟಾನು?
ಅನ್ಯತ್ರೋಪನತಾ ಹ್ಯಾಪತ್ ಪುರುಷಂ ತೋಷಯತ್ಯುತ |
ತೇನ ಶಾಂತಿಂ ಸ ಲಭತೇ ನಾಹಮೇವೇತಿ ಕಾರಣಾತ್ ॥46॥
ಇನ್ನೊಬ್ಬನಿಗೆ ಆಪತ್ತು ಉಂಟಾದಾಗ ಪುರುಷನಿಗೆ ಸಂತೋಷವಾಗುತ್ತದೆ. ನಾನೊಬ್ಬನೇ ಆಪತ್ತಿಗೆ ಸಿಲುಕಿದವನಲ್ಲ ಎಂಬ ಕಾರಣದಿಂದ ಅವನು ಸಮಾಧಾನ- ವನ್ನು ಪಡೆಯುತ್ತಾನೆ.
ಅನ್ಯೇಷಾಮಪಿ ನಶ್ಯಂತಿ ಸುಹೃದಶ್ಚ ಧನಾನಿ ಚ |
ಪಶ್ಯ ಬುದ್ಧ್ಯಾ ಮನುಷ್ಯಾಣಾಂ ತುಲ್ಯಮಾಪದಮಾತ್ಮನಃ |
ಬೇರೆಯವರಿಗೂ ಸುಹೃಜ್ಜನರೂ ಮತ್ತು ಧನವೂ ನಾಶವನ್ನು ಹೊಂದುತ್ತವೆ. ನಿನಗೆ ಸಮಾನರಾದ ಮನುಷ್ಯರಿಗೆ ಉಂಟಾಗುವ ಆಪತ್ತುಗಳನ್ನು ನೀನು ಬುದ್ಧಿಯಿಂದ ನೋಡು.
ನಿಯಚ್ಛ ಯಚ್ಛ ಸಂಯಚ್ಛ ಇಂದ್ರಿಯಾಣಿ ಮನೋ ಗಿರಮ್ ॥47॥
ಪ್ರತಿಷಿದ್ಧಾನಿ ಚಾಪ್ಯೇಷು ದುರ್ಲಭೇಷ್ವಹಿತೇಷು ಚ |
ದುರ್ಲಭವಾದ, ಅಹಿತವಾದ, ಇಂದ್ರಿಯಮನೋವಚನಕಾರ್ಯಗಳಲ್ಲಿ ನಿಷಿದ್ಧ -ವಾದ ಅಗಮ್ಯಾಗಮನಾದಿಗಳಿಂದ ಇಂದ್ರಿಯವನ್ನು ನಿಯಂತ್ರಿಸು. ಮನಸ್ಸನ್ನು ಸಂಯಮಗೊಳಿಸು. ಮಾತನ್ನು ನಿಯಂತ್ರಿಸು.
ಪ್ರತಿಕೃಷ್ಟೇಷು ಭಾವೇಷು ವ್ಯತಿಕೃಷ್ಟೇಷ್ವಸಂಭವೇ |
ಪ್ರಜ್ಞಾನತೃಪ್ತೋ ವಿಕ್ರಾಂತಸ್ತ್ವದ್ವಿಧೋ ನಾನುಶೋಚತಿ ॥48॥

ಪಡೆಯಲು ಅಸಾಧ್ಯವಾದ ಸಂಪತ್ತು ನಾಶಹೊಂದಿದಾಗ ನಿನ್ನಂತಹವನು ಜ್ಞಾನದಿಂದ ತೃಪ್ತಿಯನ್ನು ಹೊಂದಿ ಧೈರ್ಯದಿಂದಿರಬೇಕು. ಶೋಕಪಡಬಾರದು.
ಅಲ್ಪಮಿಚ್ಛನ್ನಚಪಲೋ ಮೃದುರ್ದಾಂತಃ ಸುಸಂಯತಃ |
ಬ್ರಹ್ಮಚರ್ಯೋಪಪನ್ನಶ್ಚ ತ್ವದ್ವಿಧೋ ನೈವ ಮುಹ್ಯತಿ ॥49॥
ಚಂಚಲನಲ್ಲದೇ ಮೃದುವೂ, ದಾಂತನೂ, ಆತ್ಮನಿಗ್ರಹವುಳ್ಳವನೂ, ಬ್ರಹ್ಮ- ಚರ್ಯದಿಂದ ಕೂಡಿದವನೂ ಆದ ನಿನ್ನಂತಹವನು ಅಲ್ಪವನ್ನೇ ಬಯಸುತ್ತಾ ಮೋಹಕ್ಕೆ ಒಳಗಾಗಬಾರದು.
ನ ತ್ವೇವ ಜಾಲ್ಮೀಂ ಕಾಪಾಲೀಂ ವೃತ್ತಿಮೇಷಿತುಮರ್ಹತಿ |
ನೃಶಂಸವೃತ್ತಿಂ ಪಾಪಿಷ್ಠಾಂ ದುಃಖಾಂ ಕಾಪುರುಷೋಚಿತಾಮ್ ॥50॥
ಕಪಟವೃತ್ತಿಯನ್ನಾಗಲೀ, ಭಿಕ್ಷಾವೃತ್ತಿಯನ್ನಾಗಲೀ, ಕ್ರೂರವೃತ್ತಿಯನ್ನಾಗಲೀ, ದುಷ್ಟಪುರುಷರಿಗೆ ಉಚಿತವಾದ ದುಃಖಕರವಾದ ಪಾಪಿಷ್ಠವಾದ ವೃತ್ತಿಯನ್ನಾಗಲೀ ಎಂದೂ ಆಶಿಸಬಾರದು.
ಅಪಿ ಮೂಲಫಲಾಜೀವೋ ರಮಸ್ವೈಕೋ ಮಹಾವನೇ |
ವಾಗ್ಯತಃ ಸಂಗೃಹೀತಾತ್ಮಾ ಸರ್ವಭೂತದಯಾನ್ವಿತಃ ॥51॥
ಮಾತನ್ನು ನಿಯಂತ್ರಿಸಿ, ಮನೋಜಯವನ್ನು ಹೊಂದಿ, ಸರ್ವಭೂತದಯೆ- ಯಿಂದ ಕೂಡಿದವನಾಗಿ ದೊಡ್ಡ ಅರಣ್ಯದಲ್ಲಿ ಮೂಲಫಲಗಳನ್ನು ಸೇವಿಸಿ- ಯಾದರೂ ಒಬ್ಬನೇ ಸಂತೋಷದಿಂದಿರು.
ಸದೃಶಂ ಪಂಡಿತಸ್ಯೈತದೀಷಾದಂತೇನ ದಂತಿನಾ |
ಯದೇಕೋ ರಮತೇಽರಣ್ಯೇ ಯಚ್ಚಾಪ್ಯಲ್ಪೇನ ತುಷ್ಯತಿ ॥52॥
ಇದು ಪಂಡಿತನಿಗೆ ಯೋಗ್ಯವಾದುದು. ಬಹಳ ದೊಡ್ಡದಾದ ದಂತವನ್ನು ಹೊಂದಿದ್ದರೂ ಆನೆಯು ಏಕಾಕಿಯಾಗಿ ಅರಣ್ಯದಲ್ಲಿ ದೊರೆಯುವ ಅಲ್ಪವಸ್ತು- ಗಳಿಂದ ಸಂತೋಷಪಡುತ್ತದೆ.
ಮಹಾಹ್ರದಃ ಸಂಕ್ಷುಭಿತ ಆತ್ಮನೈವ ಪ್ರಸೀದತಿ |
ಏತದೇವಂಗತಸ್ಯಾಹಂ ಸುಖಂ ಪಶ್ಯಾಮಿ ಕೇವಲಮ್ ॥53॥
ಕ್ಷೋಭೆಗೊಂಡ ದೊಡ್ಡ ಸರೋವರವು ತಾನಾಗಿಯೇ ಪ್ರಸನ್ನವಾಗುತ್ತದೆ. ಅದೇ ರೀತಿಯಲ್ಲಿ ವಿತ್ತವನ್ನು ಕಳೆದುಕೊಂಡವನಿಗೂ ನಾನು ಕೇವಲ ಸುಖವನ್ನೇ ಕಾಣು- ತ್ತೇನೆ.
ಅಸಂಭವೇ ಶ್ರಿಯೋ ರಾಜನ್ ಹೀನಸ್ಯ ಸಚಿವಾದಿಭಿಃ |
ದೈವೇ ಪ್ರತಿನಿವಿಷ್ಟೇ ಚ ಕಿಂ ಶ್ರೇಯೋ ಮನ್ಯತೇ ಭವಾನ್ ॥54॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಡಧಿಕಶತತಮೋಽಧ್ಯಾಯಃ ॥106॥
ಎಲೈ ರಾಜನೇ! ಸಂಪತ್ತನ್ನು ಪಡೆಯುವುದು ಅಸಾಧ್ಯವಾದಾಗ, ಸಚಿವಾದಿಗಳು ಇಲ್ಲದಿರುವಾಗ, ದೈವವು ಪ್ರತಿಕೂಲವಾಗಿರುವಾಗ ನೀನು ಬೇರೆ ಯಾವ ಶ್ರೇಯಸ್ಸನ್ನು ಬಯಸುವಿ?
ರಾಜಧರ್ಮಪರ್ವಕನ್ನಡಾನುವಾದದಲ್ಲಿ 106ನೆಯ ಅಧ್ಯಾಯವು ಮುಗಿಯಿತು
0
107. ನೂರ ಏಳನೆಯ ಅಧ್ಯಾಯ
ಶತ್ರುಜಯೋಪಾಯವಿಷಯದಲ್ಲಿ ಕೌಸಲ್ಯನಿಗೆ ಕಾಲಕವೃಕ್ಷೀಯ ಉಪದೇಶ
ಮುನಿಃ
ಅಥ ಚೈತದ್ ಪೌರುಷಂ ಕಿಂಚಿತ್ ಕ್ಷತ್ರಿಯಾತ್ಮನಿ ಪಶ್ಯಸಿ |
ಬ್ರವೀಮಿ ಹಂತ ತೇ ನೀತಿಂ ರಾಜ್ಯಸ್ಯ ಪ್ರತಿಪತ್ತಯೇ ॥1॥
ತಾಂ ಚೇಚ್ಛಕ್ಷ್ಯಸ್ಯನುಷ್ಠಾತುಂ ಕರ್ಮ ಚೈವ ಕರಿಷ್ಯಸಿ |
ಶೃಣು ಸರ್ವಮಶೇಷೇಣ ಯತ್ ತ್ವಾ ವಕ್ಷ್ಯಾಮಿ ತತ್ತ್ವತಃ ॥2॥
ಮುನಿಗಳು ಅಥವಾ ಎಲೈ ಕ್ಷತ್ರಿಯನೇ! ನೀನು ಪೌರುಷವನ್ನೇನಾದರೂ ಹೊಂದಿರುವುದಾದರೆ ಸಂತೋಷ! ರಾಜ್ಯವನ್ನು ಸಂಪಾದಿಸುವ ನೀತಿಯನ್ನು ಹೇಳು- ತ್ತೇನೆ. ಅದನ್ನು ಅನುಷ್ಠಾನಮಾಡಲು ಸಮರ್ಥನಾಗಿ ಅನುಷ್ಠಾನಮಾಡುವುದಾದರೆ ಹೇಳುತ್ತೇನೆ. ನಾನು ನಿನಗೆ ಹೇಳುವುದನ್ನು ಸಮಗ್ರವಾಗಿ ಕೇಳು.
ಆಚರಿಷ್ಯಸಿ ಚೇತ್ ಕರ್ಮ ಮಹತೋಽರ್ಥಾನವಾಪ್ಸ್ಯಸಿ |
ರಾಜ್ಯಂ ರಾಜ್ಯಸ್ಯ ಮಂತ್ರಂ ವಾ ಮಹತೀಂ ವಾ ಪುನಃ ಶ್ರಿಯಮ್ |
ಯದ್ಯೇತದ್ ರೋಚತೇ ರಾಜನ್ ಪುನರ್ಬ್ರೂಹಿ ಬ್ರವೀಮಿ ತೇ ॥3॥
ನಾನು ಹೇಳಿದ ಕಾರ್ಯವನ್ನು ಮಾಡಿದರೆ ಶ್ರೇಷ್ಠವಾದ ಅರ್ಥವನ್ನು ಹೊಂದುವಿ. ರಾಜ್ಯವಾಗಲೀ, ರಾಜ್ಯದ ಮಂತ್ರಾಲೋಚನೆಯಾಗಲೀ, ಮಹತ್ತಾದ ಸಂಪತ್ತಾಗಲೀ ನಿನಗೆ ಇಷ್ಟವಾಗುವುದಾದರೆ ಎಲೈ ರಾಜನೇ! ನನಗೆ ಹೇಳು. ಅದನ್ನೂ ಸಂಪಾದಿಸುವ ಉಪಾಯವನ್ನು ನಿನಗೆ ಹೇಳುತ್ತೇನೆ.
ರಾಜಪುತ್ರಃ
ಬ್ರವೀತು ಭಗವಾನ್ ನೀತಿಮುಪಪನ್ನೋಽಸ್ಮ್ಯಹಂ ಪ್ರಭೋ |
ಅಮೋಘಮಿದಮದ್ಯಾಸ್ತು ತ್ವಯಾ ಸಹ ಸಮಾಗತಮ್ ॥4॥
ರಾಜಪುತ್ರ ಪ್ರಭುಗಳೇ! ಪೂಜ್ಯರಾದ ನೀವು ನನಗೆ ಅದನ್ನು ಹೇಳಬೇಕು. ನಾನು ನಿಮಗೆ ಶರಣಾಗತನಾಗಿದ್ದೇನೆ. ಈ ದಿನ ನಿಮ್ಮ ಈ

ಸಮಾಗಮವು ವ್ಯರ್ಥ- ವಾಗದಿರಲಿ.
ಮುನಿಃ
ಹಿತ್ವಾ ಸ್ತಂಭಂ ಚ ಮಾನಂ ಚ ಕ್ರೋಧಹರ್ಷೌ ಭಯಂ ತಥಾ |
ಪ್ರತ್ಯಮಿತ್ರಂ ನಿಷೇವಸ್ವ ಪ್ರಣಿಪತ್ಯ ಕೃತಾಂಜಲಿಃ ॥5॥
ಮುನಿಗಳು ದರ್ಪವನ್ನು ಅಹಂಕಾರವನ್ನು, ಕ್ರೋಧಹರ್ಷಗಳನ್ನು, ಭಯ- ವನ್ನು ತ್ಯಜಿಸಿ, ಶತ್ರುವಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ಅವನನ್ನು ಸೇವಿಸು.
ತಮುತ್ತಮೇನ ಶೌಚೇನ ಕರ್ಮಣಾ ಚಾಭಿರಾಧಯ |
ದಾತುಮರ್ಹತಿ ತೇ ವೃತ್ತಿಂ ವೈದೇಹಃ ಸತ್ಯಸಂಗರಃ ॥6॥
ಅವನನ್ನು ಉತ್ತಮವಾದ ಶೌಚದಿಂದಲೂ ಕರ್ಮದಿಂದಲೂ ಆರಾಧಿಸು. ಸತ್ಯ- ಸಂಗರನಾದ ಜನಕನು ನಿನಗೆ ಜೀವನೋಪಾಯವನ್ನು ಕಲ್ಪಿಸಿಕೊಡಲು ಸಮರ್ಥ- ನಾಗಿದ್ದಾನೆ.
ಪ್ರಮಾಣಂ ಸರ್ವಭೂತೇಷು ಪ್ರಗ್ರಹಂ ಚ ಗಮಿಷ್ಯಸಿ |
ತತಃ ಸಹಾಯಾನ್ ಸೋತ್ಸಾಹಾನ್ ಲಪ್ಸ್ಯಸೇಽವ್ಯಸನಾನ್ ಶುಚೀನ್ ॥7॥
ನೀನು ಎಲ್ಲ ಪ್ರಜೆಗಳಿಂದ ಪೂಜ್ಯನಾಗುವಿ. ಮತ್ತು ಸ್ವೀಕರಿಸಲ್ಪಡುವಿ. ಅನಂತರ ಶುಚಿಗಳಾದ, ಚಟಗಳಿಲ್ಲದ, ಉತ್ಸಾಹಭರಿತರಾದ ಸಹಾಯಕರನ್ನು ಪಡೆಯುವಿ.
ವರ್ತಮಾನಃ ಸ್ವಶಾಸ್ತ್ರೇ ವೈ ಸಂಯತಾತ್ಮಾ ಜಿತೇಂದ್ರಿಯಃ |
ಅಭ್ಯುದ್ಧರತಿ ಚಾತ್ಮಾನಂ ಪ್ರಸಾದಯತಿ ಚ ಪ್ರಜಾಃ ॥8॥
ತನ್ನ ರಾಜ್ಯದಲ್ಲಿಯೇ ಜಿತಮನಸ್ಕನಾಗಿ ಜಿತೇಂದ್ರಿಯನಾಗಿ ಇದ್ದು ರಾಜನು ತನ್ನನ್ನು ಉದ್ಧರಿಸಿಕೊಳ್ಳುತ್ತಾನೆ. ಮತ್ತು ಪ್ರಜೆಗಳನ್ನು ಸಂತೋಷಪಡಿಸುತ್ತಾನೆ.
ತೇನೈವ ತ್ವಂ ಧೃತಿಮತಾ ಶ್ರೀಮತಾ ಚಾಭಿಸತ್ಕೃತಃ |
ಪ್ರಮಾಣಂ ಸರ್ವಭೂತೇಷು ಗತ್ವಾ ಪ್ರಗ್ರಹಣಂ ಮಹತ್ ॥9॥
ತತಃ ಸುಹೃದ್ಬಲಂ ಲಬ್ಧ್ವಾ ಮಂತ್ರಯಿತ್ವಾ ಸುಮಂತ್ರಿತಮ್ |
ಅಂತರೈರ್ಭೇದಯಿತ್ವಾಽರೀನ್ ಬಿಲ್ವಂ ಬಿಲ್ವೇನ ಶಾತಯ |
ಪರೈರ್ವಾ ಸಂವಿದಂ ಕೃತ್ವಾ ಬಲಮಪ್ಯಸ್ಯ ಘಾತಯ ॥10॥
ಧೈರ್ಯಶಾಲಿಯೂ ಸಂಪದ್ಯುಕ್ತನೂ ಆದ ಅವನಿಂದಲೇ ನೀನು ಪೂಜಿತನಾಗಿ ಎಲ್ಲ ಪ್ರಜೆಗಳಿಗೂ ಪೂಜ್ಯನಾಗಿ ಎಲ್ಲರಿಂದಲೂ ಸ್ವೀಕರಿಸಲ್ಪಡುವಿ. ಅನಂತರ ಸುಹೃಜ್ಜನರ ಬಲವನ್ನು ಪಡೆದು, ಒಳ್ಳೆಯ ಮಂತ್ರಾಲೋಚನೆಯನ್ನು ಮಾಡಿ, ಶತ್ರುಗಳ ಒಳಗಿನವರಿಂದಲೇ ಬಿಲ್ವಫಲವನ್ನು ಬಿಲ್ವಫಲದಿಂದ ಹೊಡೆದಂತೆ ಶತ್ರು- ಗಳನ್ನು ನಾಶಗೊಳಿಸು. ಅಥವಾ ಅವನ ಶತ್ರುಗಳ ಜೊತೆಯಲ್ಲಿ ಸಂಭಾಷಣೆಯನ್ನು ಮಾಡಿ ಅವನ ಸೈನ್ಯವನ್ನು ವಿನಾಶಗೊಳಿಸು.
ಅಲಭ್ಯಾ ಯೇ ಶುಭಾ ಭಾವಾಃ ಸ್ತ್ರಿಯಶ್ಚಾಚ್ಛಾದನಾನಿ ಚ |
ಶಯ್ಯಾಸನಾನಿ ಯಾನಾನಿ ಮಹಾರ್ಹಾಣಿ ಗೃಹಾಣಿ ಚ ॥11॥
ಪಕ್ಷಿಣೋ ಮೃಗಜಾತಾನಿ ರಸಾ ಗಂಧಾಃ ಫಲಾನಿ ಚ |
ತೇಷ್ವೇವ ಸಜ್ಜಯೇಥಾಸ್ತ್ವಂ ಯಥಾ ನಶ್ಯೇತ್ ಸ್ವಯಂ ಪರಃ ॥12॥
ಶುಭವಾದ ವಸ್ತುಗಳು, ಸುಂದರಿಯರು, ಒಳ್ಳೆಯ ವಸ್ತ್ರಗಳು, ಶಯ್ಯಾಸನ- ಯಾನಗಳು, ಬೆಲೆಬಾಳುವ ಗೃಹಗಳು, ಪಕ್ಷಿಗಳು, ಮೃಗಗಳು, ರಸಗಂಧಗಳು, ಫಲಗಳು ಇವೆಲ್ಲವೂ ದುರ್ಲಭವಾದವು. ಅವನನ್ನು ಅವುಗಳಲ್ಲಿಯೇ ಆಸಕ್ತನಾ- ಗಿರುವಂತೆ ಮಾಡಿ ಅವನು ತಾನೇ ನಾಶವನ್ನು ಹೊಂದುವಂತೆ ಮಾಡು.
ಯದ್ಯೇವ ಪ್ರತಿಷೇದ್ಧವ್ಯೋ ಯದ್ಯುಪೇಕ್ಷಣಮರ್ಹತಿ |
ನ ಜಾತು ವಿವೃತಃ ಕಾರ್ಯಃ ಶತ್ರುರ್ವಿನಯಮಿಚ್ಛತಾ ॥13॥
ಶತ್ರುವನ್ನು ಯುದ್ಧದಲ್ಲಿ ಎದುರಿಸಬೇಕಾದರೆ ಅಥವಾ ಉಪೇಕ್ಷೆ ಮಾಡ- ಬೇಕಾದರೆ ಶತ್ರುವನ್ನು ಬಗ್ಗಿಸಲು ಬಯಸುವವನು ಅದನ್ನು ಗೌಪ್ಯವಾಗಿ ಮಾಡ- ಬೇಕು.
ವಸಸ್ವ ಪರಮಾಮಿತ್ರಂ ವಿಷಯೇ ಪ್ರಾಜ್ಞಸಮ್ಮತೇ |
ಭಜಸ್ವ ಶ್ವೇತಕಾಕೀಯೈರ್ಮಿಥ್ಯಾಧರ್ಮಮನರ್ಥಕೈಃ ॥14॥
ದೊಡ್ಡ ವೈರಿಯಾದವನನ್ನು ಪ್ರಾಜ್ಞಸಮ್ಮತವಾದ ವಿಷಯಗಳನ್ನು ಭೋಗಿ- ಸುವಂತೆ ಮಾಡಬೇಕು. ಅವನಿಗೆ ಅನರ್ಥಪ್ರಾಪಕವಾದ ಅನುಕೂಲವಾದ ಮಾತು- ಗಳನ್ನು ಆಡಬೇಕು.
ಆರಂಭಾಶ್ಚಾಸ್ಯ ಮಹತೋ ದುಷ್ಕರಾಂಸ್ತ್ವಂ ಪ್ರಯೋಜಯ |
ನದೀವಚ್ಚ ವಿರೋಧೇಽಸ್ಯ ಬಲವದ್ಭಿರ್ವಿರುದ್ಧ್ಯತಾಮ್ ॥15॥
ಅವನು ದುಷ್ಕರವಾದ ದೊಡ್ಡ ಕಾರ್ಯವನ್ನು ಮಾಡುವಂತೆ ಅವನನ್ನು ಪ್ರೇರಿಸಬೇಕು. ಬಲಿಷ್ಠರಾಜರ ಜೊತೆಯಲ್ಲಿ ವಿರೋಧವನ್ನು ಮಾಡುವಂತೆ ಮಾಡ- ಬೇಕು. ಆಗ ಬಲವಾದ ವಿರೋಧವನ್ನು ಮಾಡಿದರೆ ನದಿಯು ಪಾರ್ಶ್ವದಲ್ಲಿ ಹರಿದುಹೋಗುವಂತೆ ಅವನ ಸಂಪತ್ತು ಹರಿದು ಹೋಗುತ್ತದೆ.
ಉದ್ಯಾನಾನಿ ಮಹಾರ್ಹಾಣಿ ಶಯನಾನ್ಯಾಸನಾನಿ ಚ |
ಪ್ರತಿಭೋಗಸುಖೇನೈವ ಕೋಶಮಸ್ಯ ವಿರೇಚಯ ॥16॥
ಅವನಿಂದ ಭೋಗಸುಖಕ್ಕಾಗಿ ಬೆಲೆಬಾಳುವ ಉದ್ಯಾನಗಳನ್ನು, ಶಯನಾಸನ- ಗಳನ್ನು ಅವನು ನಿರ್ಮಿಸುವಂತೆ ಮಾಡಿ ಅವನ

ಕೋಶವನ್ನು ಬರಿದುಮಾಡು.
ಯಜ್ಞದಾನಪ್ರಶಂಸಾಽಸ್ಮೈ ಬ್ರಾಹ್ಮಣೇಷ್ವನುವರ್ಣ್ಯತಾಮ್ |
ತೇ ತ್ವತ್ಪ್ರಿಯಂ ಕರಿಷ್ಯಂತಿ ತಂ ಛೇತ್ಸ್ಯಂತಿ ವೃಕಾ ಇವ ॥17॥
ಬ್ರಾಹ್ಮಣರಲ್ಲಿ ಅವನ ಯಜ್ಞದಾನಗಳನ್ನು ಪ್ರಶಂಸೆ ಮಾಡು. ಅವರು ನಿನಗೆ ಪ್ರಿಯವನ್ನು ಮಾಡಿ, ತೋಳಗಳಂತೆ ಅವನನ್ನು (ಅವನ ಸಂಪತ್ತನ್ನು) ಹರಿದು ಹಾಕುತ್ತಾರೆ.
ಅಸಂಶಯಂ ಪುಣ್ಯಶೀಲಃ ಪ್ರಾಪ್ನೋತಿ ಪರಮಾಂ ಗತಿಮ್ |
ತ್ರಿವಿಷ್ಟಪೇ ಪುಣ್ಯತಮಂ ಸ್ಥಾನಂ ಪ್ರಾಪ್ನೋತಿ ಪಾರ್ಥಿವಃ |
ಕೋಶಕ್ಷಯೇ ತ್ವಮಿತ್ರಾಣಾಂ ವಶಂ ಕೌಸಲ್ಯ ಗಚ್ಛತಿ ॥18॥
ಪುಣ್ಯಶೀಲನಾದ ರಾಜನು ನಿಃಸಂಶಯವಾಗಿ ಶ್ರೇಷ್ಠಗತಿಯನ್ನು ಸ್ವರ್ಗದಲ್ಲಿ ಉನ್ನತಸ್ಥಾನವನ್ನು ಪಡೆಯುತ್ತಾನೆ. ಆದರೆ ಎಲ್ಲೈ ಕೌಸಲ್ಯನೇ! ಕೋಶವು ಬರಿದಾದಾಗ ಶತ್ರುಗಳಿಗೆ ವಶನಾಗುತ್ತಾನೆ.
ಉಭಯತ್ರ ಪ್ರಸಕ್ತಸ್ಯ ಧರ್ಮೇ ಚಾಧರ್ಮ ಏವ ಚ |
ಮೂಲಂ ಫಲಾರ್ಥಮುಚ್ಛಿದ್ಯೇತ್ ತೇನ ನಂದಂತಿ ಶತ್ರವಃ ॥19॥
ಧರ್ಮ ಮತ್ತು ಅಧರ್ಮಗಳು ಎರಡಲ್ಲಿಯೂ ಪ್ರಸಕ್ತನಾದವನಿಗೆ ಅದರಿಂದ ಅವನ ಮೂಲಭೂತವಾದ ಕೋಶವು ನಾಶವನ್ನು ಹೊಂದುತ್ತದೆ. ಅದರಿಂದ ಶತ್ರುಗಳು ಸಂತೋಷಪಡುತ್ತಾರೆ.
ನಿಂದ್ಯಾಸ್ಯ ಮಾನುಷಂ ಕರ್ಮ ದೈವಮಸ್ಯೋಪವರ್ಣಯ |
ಅಸಂಶಯಂ ದೈವಪರಃ ಕ್ಷಿಪ್ರಮೇವ ವಿನಶ್ಯತಿ ॥20॥
ಅವನ ಮಾನುಷಕರ್ಮಗಳನ್ನು ನಿಂದಿಸಿ, ಅವನಿಗೆ ದೈವಪ್ರೀತಿಕರವಾದ ಕರ್ಮಗಳನ್ನು ವರ್ಣಿಸು. ದೈವಪರನಾದ ರಾಜನು ನಿಃಸಂಶಯವಾಗಿ ಶೀಘ್ರವಾಗಿ ವಿನಾಶವನ್ನು ಹೊಂದುತ್ತಾನೆ.
ಯಾಜಯೈನಂ ವಿಶ್ವಜಿತಾ ಸರ್ವಸ್ವೇನ ವಿಯುಜ್ಯತಾಮ್ |
ತತೋ ಗಚ್ಛತ್ವಸಿದ್ಧಾರ್ಥಃ ಭಿಕ್ಷಮಾಣೋ ಮಹಾಜನಮ್ ॥21॥
ಅವನಿಂದ ವಿಶ್ವಜಿತ್ ಯಾಗವನ್ನು ಮಾಡಿಸಿ ಸರ್ವಸ್ವದಕ್ಷಿಣೆಯನ್ನು ಕೊಡಿಸು. ಅವನ ಸರ್ವಸಂಪತ್ತೂ ವಿಯೋಗವನ್ನು ಹೊಂದಲಿ. ಅನಂತರ ಅವನು ಇಷ್ಟಾರ್ಥವು ನೆರವೇರದೇ ಪ್ರಜೆಗಳ ಎದುರಿಗೆ ಹೋಗಿ ಭಿಕ್ಷೆಯನ್ನು ಬೇಡಲಿ.
ತ್ಯಾಗಧರ್ಮವಿದಂ ಮುಂಡಂ ಕಂಚಿದಸ್ಯೋಪವರ್ಣಯ |
ಅಪಿ ತ್ಯಾಗಂ ಬುಭೂಷೇತ ಕಚ್ಚಿದ್ ಗಚ್ಛೇದನಾಶ್ರಯಮ್ ॥22॥
ಅಥವಾ ತ್ಯಾಗಧರ್ಮವನ್ನು ತಿಳಿದ ಒಬ್ಬ ಸನ್ಯಾಸಿಯನ್ನು ಅವನಿಗೆ ವರ್ಣಿಸು. (ಪರಿಚಯಿಸು). ಅವನು ತ್ಯಾಗಧರ್ಮದಲ್ಲಿ ಆಸಕ್ತನಾಗಿ ಆಶ್ರಯರಹಿತನಾಗಲಿ.
ಸಿದ್ಧೇನೌಷಧಯೋಗೇನ ಸರ್ವಶತ್ರುವಿನಾಶಿನಾ |
ನಾಗಾನಶ್ವಾನ್ ಮನುಷ್ಯಾಂಶ್ಚ ಕೃತಕೈರುಪಘಾತಯ ॥23॥
ಮೋಸಮಾಡುವ ಜನರನ್ನು ನಿಯೋಜಿಸಿ ಸರ್ವಶತ್ರುವಿನಾಶಕವಾದ ಶಾಸ್ತ್ರ- ಸಿದ್ಧವಾದ ಔಷಧಪ್ರಯೋಗಗಳಿಂದ ಅವನ ಅಶ್ವಗಳನ್ನು ಮತ್ತು ಗಜಗಳನ್ನು ನಾಶ- ಪಡಿಸು.
ಏತೇ ಚಾನ್ಯೇ ಚ ಬಹವೋ ದಂಭಯೋಗಾಃ ಸುನಿಶ್ಚಿತಾಃ |
ಶಕ್ಯಾ ವಿಷಹತಾ ಕರ್ತುಂ ನ ಕ್ಲೀಬೇನ ನೃಪಾತ್ಮಜ ॥24॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ಸಪ್ತಾಧಿಕಶತತಮೋಽಧ್ಯಾಯಃ ॥107॥
ಎಲ್ಲೈ ರಾಜಕುಮಾರನೇ! ಮೋಸದಿಂದ ಮಾಡುವ ಉಪಾಯಗಳು ಇವೂ ಮತ್ತು ಇನ್ನೂ ಅನೇಕವೂ ಶಾಸ್ತ್ರದಲ್ಲಿ ನಿಶ್ಚಿತವಾಗಿವೆ. ಅವುಗಳನ್ನು ಮಾಡಲು ಸಾಧ್ಯವಾದರೆ ಮಾಡಬಹುದು. ಹೇಡಿಯಾದವನು ಮಾಡಲಾರ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 107ನೆಯ ಅಧ್ಯಾಯವು ಮುಗಿಯಿತು
0
108. ನೂರ ಎಂಟನೆಯ ಅಧ್ಯಾಯ
ಕಾಲಕವೃಕ್ಷೀಯಮುನಿಯ ಆದೇಶದಂತೆ ಕೋಸಲರಾಜನ ರಾಜ್ಯಪ್ರಾಪ್ತಿ
ರಾಜಪುತ್ರಃ
ನ ನಿಕೃತ್ಯಾ ನ ದಂಭೇನ ಬ್ರಹ್ಮನ್ನಿಚ್ಛಾಮಿ ಜೀವಿತುಮ್ |
ನಾಧರ್ಮಯುಕ್ತಾನಿಚ್ಛೇಯಮರ್ಥಾನ್ ಸುಮಹತೋಽಪ್ಯಹಮ್ ॥1॥
ರಾಜಪುತ್ರ ಎಲ್ಲೈ ಬ್ರಾಹ್ಮಣರೇ! ನಾನು ಡಂಭದಿಂದಾಗಲೀ ಮೋಸದಿಂದಾ- ಗಲೀ ಜೀವಿಸಲು ಬಯಸುವುದಿಲ್ಲ.
ಅಧರ್ಮಮೂಲವಾದ ವಸ್ತು ಎಷ್ಟೇ ದೊಡ್ಡ- ದಾದರೂ ಅದನ್ನು ನಾನು ಬಯಸುವುದಿಲ್ಲ.
ಪುರಸ್ತಾದೇವ ಭಗವನ್ ಮಯ್ಯೆತದಪವರ್ಜಿತಮ್ |
ಯೇನ ಮಾಂ ನಾಭಿಶಂಕೇತ ಯದ್ವಾ ಕೃತ್ಸ್ನಂ ಹಿತಂ ಭವೇತ್ ॥2॥
ಎಲ್ಲೈ ಪೂಜ್ಯರೇ! ನಾನು ಅಂತಹ ಮಾರ್ಗವನ್ನು ಮೊದಲೇ ಬಿಟ್ಟಿದ್ದೇನೆ. ಏನು ಮಾಡಿದರೆ ಪ್ರಜೆಗಳು ನನ್ನನ್ನು ಶಂಕಿಸುವುದಿಲ್ಲವೋ ಸಮಗ್ರವಾದ ಹಿತವುಂಟಾಗು- ತ್ತದೆಯೋ ಅದನ್ನು ಮಾತ್ರ ಮಾಡುತ್ತೇನೆ.
ಆನೃಶಂಸ್ಯೇನ ಧರ್ಮೇಣ ಲೋಕೇ ಹ್ಯಸ್ಮಿನ್ ಜಿಜೀವಿಷುಃ |

ನಾಹಮೇತದಲಂ ಕರ್ತುಂ ನೈತನ್ಮಯ್ಯುಪಪದ್ಯತೇ ॥3॥
ಮಾರ್ದವಯುಕ್ತವಾದ ಧರ್ಮದಿಂದ ಈ ಲೋಕದಲ್ಲಿ ಜೀವಿಸಲು ಇಷ್ಟ ಪಡುತ್ತೇನೆ. ನೀವು ಹೇಳಿದ ಕಾರ್ಯಗಳನ್ನು ನಾನು ಮಾಡಲಾರೆ. ಅದು ನನಗೆ ಹೊಂದುವುದಿಲ್ಲ.
ಮುನಿಃ
ಉಪಪನ್ನಸ್ತ್ವಮೇತೇನ ಯಥಾ ಕ್ಷತ್ರಿಯ ಭಾಷಸೇ |
ಪ್ರಕೃತ್ಯಾ ಹ್ಯುಪಪನ್ನೋಽಸಿ ಬುದ್ಧ್ಯಾ ಚಾದ್ಭುತದರ್ಶನ ॥4॥
ಮುನಿಗಳು ಎಲೈ ಕ್ಷತ್ರಿಯನೇ! ನೀನು ಮಾತನಾಡುವ ರೀತಿಯು ನಿನಗೆ ಯೋಗ್ಯವಾಗಿಯೇ ಇದೆ. ಎಲೈ ಅದ್ಭುತದರ್ಶನನೇ! ನೀನು ಸ್ವಾಭಾವಿಕವಾಗಿಯೇ ಸದ್ಬುದ್ಧಿಯನ್ನು ಹೊಂದಿದ್ದೀಯೆ.
ಉಭಯೋರೇವ ವಾಮರ್ಥೇ ಯತಿಷ್ಯೇ ತವ ತಸ್ಯ ಚ |
ಸಂಶ್ಲೇಷಂ ವಾ ಕರಿಷ್ಯಾಮಿ ಶಾಶ್ವತಂ ಹ್ಯನಪಾಯಿನಮ್ ॥5॥
ನಿಮ್ಮಿಬ್ಬರ ಎಂದರೆ, ನಿನ್ನ ಮತ್ತು ವೈದೇಹರಾಜನ ಹಿತಕ್ಕಾಗಿ ನಾನು ಪ್ರಯತ್ನ ಪಡುವೆನು. ಶಾಶ್ವತವಾದ ಕಡಿದು ಹೋಗದ ಸ್ನೇಹಸಂಬಂಧವನ್ನಾದರೂ ಉಂಟು ಮಾಡುವೆನು.
ತ್ವಾದೃಶಂ ಹಿ ಕುಲೇ ಜಾತಮನೃಶಂಸಂ ಬಹುಶ್ರುತಮ್ |
ಅಮಾತ್ಯಂ ಕೋ ನ ಕುರ್ವೀತ ರಾಜ್ಯಪ್ರಣಯಕೋವಿದಮ್ ॥6॥
ನಿನ್ನಂತಹ ಸತ್ಕುಲಪ್ರಸೂತನಾದ, ಮೃದುವಾದ, ಬಹುಶ್ರುತನಾದ, ರಾಜ್ಯನೀತಿ- ವಿಶಾರದನಾದವನನ್ನು ಯಾವನು ತಾನೇ ಮಂತ್ರಿಯಾಗಿ ಮಾಡಿಕೊಳ್ಳುವುದಿಲ್ಲ?
ಯಸ್ತ್ವಂ ಪ್ರವ್ರಾಜಿತೋ ರಾಜ್ಯಾದ್ ವ್ಯಸನಂ ಚೋತ್ತಮಂ ಗತಃ |
ಆನೃಶಂಸ್ಯೇನ ವೃತ್ತೇನ ಕ್ಷತ್ರಿಯೇಚ್ಛಸಿ ಜೀವಿತುಮ್ ॥7॥
ಏಕೆಂದರೆ ನೀನು ರಾಜ್ಯವು ಬಿಟ್ಟು ಹೋಗಿ ದೊಡ್ಡದಾದ ವ್ಯಸನವನ್ನು ಹೊಂದಿದರೂ ಮೃದುವಾದ ನಡತೆಯಿಂದ ಜೀವಿಸಲು ಬಯಸುತ್ತೀಯೆ.
ಆಗಂತಾ ಮದ್ಗೃಹಂ ತಾತ ವೈದೇಹಃ ಸತ್ಯಸಂಗರಃ |
ಯಥಾಹಂ ತಂ ನಿಯೋಕ್ಷ್ಯಾಮಿ ತತ್ ಕರಿಷ್ಯತ್ಯಸಂಶಯಮ್ ॥8॥
ಎಲೈ ಪ್ರೀತಿಪಾತ್ರನೇ! ಸತ್ಯಸಂಗರನಾದ ವಿದೇಹರಾಜನು ನನ್ನ ಆಶ್ರಮಕ್ಕೆ ಬರುವನು. ನಾನು ಅವನಿಗೆ ನಿದೇಶವನ್ನು ನೀಡಿದಂತೆ ಅವನು ನಿಃಸಂಶಯವಾಗಿ ಮಾಡುವನು.
ಭೀಷ್ಮಃ
ತತ ಆಹೂಯ ವೈದೇಹಂ ಮುನಿರ್ವಚನಮಬ್ರವೀತ್ |
ಅಯಂ ರಾಜಕುಲೇ ಜಾತೋ ವಿದಿತಾಭ್ಯಂತರೋ ಮಮ ॥9॥
ಭೀಷ್ಮರು ಅನಂತರ ಮುನಿಯು ವಿದೇಹರಾಜನನ್ನು ಕರೆಸಿ, ಅವನ ಜೊತೆ- ಯಲ್ಲಿ ಮಾತನಾಡಿದನು. `ಇವನು (ಕೋಸಲರಾಜಕುಮಾರನು) ರಾಜಕುಲದಲ್ಲಿ ಜನಿಸಿದವನು. ಅವನ ಒಳಗಿನ ವಿಷಯವೆಲ್ಲವೂ ನನಗೆ ತಿಳಿದಿದೆ..'
ಆದರ್ಶ ಇವ ಶುದ್ಧಾತ್ಮಾ ಶಾರದಶ್ಚಂದ್ರಮಾ ಇವ |
ನಾಸ್ಮಿನ್ ಪಶ್ಯಾಮಿ ವೃಜಿನಂ ಸರ್ವತೋ ಮೇ ಪರೀಕ್ಷಿತಃ ॥10॥
`ಕನ್ನಡಿಯಂತೆ ಶರತ್ಕಾಲದ ಚಂದ್ರನಂತೆ ಶುದ್ಧವಾದ ಮನಸ್ಸನ್ನು ಹೊಂದಿದ್ದಾನೆ. ಎಲ್ಲ ರೀತಿಯಿಂದ ಪರೀಕ್ಷೆ ಮಾಡಿದರೂ ನಾನು ಅವನಲ್ಲಿ ಒಂದು ದೋಷವನ್ನೂ ಕಾಣುವುದಿಲ್ಲ'.
ತೇನ ತೇ ಸಂಧಿರೇವಾಸ್ತು ವಿಶ್ವಸಾಸ್ಮಿನ್ ಯಥಾ ಮಯಿ |
ನ ರಾಜ್ಯಮನಮಾತ್ಯೇನ ಶಕ್ಯಂ ಶಾಸ್ತುಮಮಿತ್ರಹನ್ ॥11॥
`ಅವನ ಜೊತೆಯಲ್ಲಿ ನಿನಗೆ ಸಂಧಿಯುಂಟಾಗಲಿ, ನನ್ನಲ್ಲಿ ವಿಶ್ವಾಸ ಮಾಡಿ- ದಂತೆ ಅವನಲ್ಲಿಯೂ ವಿಶ್ವಾಸವನ್ನು ಮಾಡು. ಎಲೈ ಶತ್ರುನಾಶಕನೇ! ಅಮಾತ್ಯ- ನಿಲ್ಲದೇ ರಾಜ್ಯವನ್ನು ಪಾಲನೆ ಮಾಡುವುದು ಸಾಧ್ಯವಿಲ್ಲ'.
ಅಮಾತ್ಯಃ ಶೂರ ಏವ ಸ್ಯಾದ್ ಬುದ್ಧಿಸಂಪನ್ನ ಏವ ಚ |
ತಸ್ಮಾಚ್ಚೈವ ಭಯಂ ರಾಜ್ಞಃ ಪಶ್ಯ ರಾಜ್ಯಸ್ಯ ಯೋಜನಮ್ |
ಧರ್ಮಾತ್ಮಾನಂ ಕ್ವಚಿಲ್ಲೋಕೇ ನಾನ್ಯಾಸ್ತಿ ಗತಿರೀದೃಶೀ ॥12॥
ಅಮಾತ್ಯನು ಶೂರನೂ ಮೇಧಾವಿಯೂ ಆಗಿರಬೇಕು. ಶೂರನಿಂದಲೇ ಮತ್ತು ಮೇಧಾವಿಗಳಿಂದಲೇ ರಾಜನಿಗೆ ಭಯವುಂಟಾಗುತ್ತದೆ. ರಾಜ್ಯದ ವಿಧಾನ- ವನ್ನು ನೋಡು. ಧರ್ಮಾತ್ಮರಾದವರಿಗೆ ಲೋಕದಲ್ಲಿ ಅಂತಹ ಅಮಾತ್ಯನನ್ನು ಹೊಂದದೇ ಬೇರೆ ಮಾರ್ಗವಿಲ್ಲ.
ಕೃತಾತ್ಮಾ ರಾಜಪುತ್ರೋಽಯಂ ಸತಾಂ ಮಾರ್ಗಮನುಷ್ಠಿತಃ |
ಸುಸಂಗೃಹೀತಸ್ತ್ವೇವೈಷ ತ್ವಯಾ ಧರ್ಮಪುರೋಗಮಃ |
ಸಂಸೇವ್ಯಮಾನಃ ಪುತ್ರಸ್ತೇ ಗೃಹ್ಣೀಯಾದ್ ವದತೋ ಗುಣಾನ್ ॥13॥
ಈ ರಾಜಕುಮಾರನು ಒಳ್ಳೆಯ ಮನಸ್ಸನ್ನು ಹೊಂದಿದವನು. ಸನ್ಮಾರ್ಗದಲ್ಲಿ ನಡೆಯುವವನು. ಧರ್ಮಪ್ರಧಾನನಾದ ಇವನನ್ನು ನೀನು ಚೆನ್ನಾಗಿ ಸಂಗ್ರಹಿಸಿ ಅವನನ್ನು ಸೇವಿಸಿದರೆ ನಿನ್ನ ಪುತ್ರನು ಅವನಿಂದ ಒಳ್ಳೆಯ ಗುಣಗಳನ್ನು ಸಂಪಾದಿಸಿ- ಯಾನು!
ಯದ್ಯಯಂ ಪ್ರತಿಯುದ್ಧ್ಯೇತ್ ತ್ವಾಂ ಸ್ವಕರ್ಮ ಕ್ಷತ್ರಿಯಸ್ಯ ತತ್ |
ಜಿಗೀಷಮಾಣಸ್ತ್ವಂ ಯುದ್ಧೇ ಪಿತೃಪೈತಾಮಹೇ ಪದೇ ॥14॥
ತ್ವಂ ಚಾಪಿ ಪ್ರತಿಯುದ್ಧ್ಯೇಥಾ ವಿಜಿಗೀಷುವ್ರತೇ ಸ್ಥಿತಃ |

ಅಯುದ್ಧ್ವೈವ ನಿಯೋಗಾನ್ಮೇ ವಶೇ ವೈದೇಹ ತೇ ಸ್ಥಿತಃ ॥15॥
ನೀನು ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ಕ್ಷತ್ರಿಯಧರ್ಮವನ್ನು ಅನುಸರಿಸಿ ಪಿತೃಪಿತಾಮಹರ ಮಾರ್ಗದಲ್ಲಿ ನಡೆದು ಅವನು ನಿನ್ನನ್ನು ಯುದ್ಧದಲ್ಲಿ ಜಯಿಸಲು ಬಯಸಬಹುದು. ನೀನೂ ಸಹ ಅಂತಹ ಜಯದ ಇಚ್ಛೆಯ ವ್ರತದಲ್ಲಿಯೇ ಇರುವವನಾಗಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಬಹುದು. ಆದರೆ ಎಲೈ ವೈದೇಹನೇ! ಅವನು ಯುದ್ಧವನ್ನು ಮಾಡದೆಯೇ ನನ್ನ ಮಾತಿನಂತೆ ನಿನ್ನ ವಶವಾಗಿದ್ದಾನೆ.
ಸ ತ್ವಂ ಧರ್ಮಮವೇಕ್ಷಸ್ವ ತ್ಯಕ್ತ್ವಾಽಧರ್ಮಮಸಾಂಪ್ರತಮ್ |
ನ ಹಿ ಕಾಮಾನ್ನ ಚ ದ್ರೋಹಾತ್ ಸ್ವಧರ್ಮಂ ಹಾತುಮರ್ಹಸಿ ॥16॥
ಅಂತಹ ನೀನು ಅಯೋಗ್ಯವಾದ ಅಧರ್ಮವನ್ನು ತ್ಯಜಿಸಿ ಧರ್ಮವನ್ನು ನೋಡು. ಕಾಮದಿಂದಾಗಲೀ ಅಥವಾ ದ್ರೋಹವನ್ನು ಮಾಡುವ ಉದ್ದೇಶ- ದಿಂದಾಗಲೀ ನಿನ್ನ ಸ್ವಧರ್ಮವನ್ನು ಬಿಡಬೇಡ.
ನೈವ ನಿತ್ಯಂ ಜಯಸ್ತಾತ ನೈವ ನಿತ್ಯಂ ಪರಾಜಯಃ |
ತಸ್ಮಾದ್ ಭೋಜಯಿತವ್ಯಶ್ಚ ಭೋಕ್ತವ್ಯಶ್ಚ ಪರೋ ಜನಃ ॥17॥
ಎಲೈ ಪ್ರೀತಿಪಾತ್ರನೇ! ಜಯವೂ ನಿತ್ಯವಲ್ಲ. (ನಿಯಮೇನ ಸಿಗುವುದಲ್ಲ). ಪರಾಜಯವೂ ನಿತ್ಯವಲ್ಲ. ಆದ್ದರಿಂದ ಇನ್ನೊಬ್ಬನನ್ನು (ಶತ್ರುವನ್ನು) ಒಳ್ಳೆಯ ಭೋಗಯುಕ್ತನನ್ನಾಗಿ ಮಾಡಬೇಕು. ತಾನೂ ಒಳ್ಳೆಯ ಭೋಗಯುಕ್ತನಾಗಿರಬೇಕು.
ಆತ್ಮನ್ಯೇವ ಹಿ ಸಂದೃಶ್ಯಾವುಭೌ ಜಯಪರಾಜಯೌ |
ನಿಃಶೇಷಕಾರಿಣಾಂ ತಾತ ನಿಃಶೇಷಕರಣಾದ್ ಭಯಮ್ ॥18॥
ಜಯಪರಾಜಯಗಳೆರಡನ್ನೂ ತನ್ನಲ್ಲಿಯೇ ನೋಡಿಕೊಳ್ಳಬೇಕು. ಎಲೈ ಪ್ರೀತಿಪಾತ್ರನೇ! ಶತ್ರುವನ್ನು ನಿರ್ಮೂಲಗೊಳಿಸುವವರಿಗೆ ತಮ್ಮನ್ನು ಇನ್ನೊಬ್ಬರು ನಿರ್ಮೂಲಗೊಳಿಸಬಹುದು ಎಂಬ ಭಯವು ಯಾವಾಗಲೂ ಇರುತ್ತದೆ. (ಎಂದು ಹೇಳಿದರು)
ಇತ್ಯುಕ್ತಃ ಪ್ರತ್ಯುವಾಚೇದಂ ವಚನಂ ಬ್ರಾಹ್ಮಣರ್ಷಭಮ್ |
ಅಭಿಪೂಜ್ಯಾಭಿಸತ್ಕೃತ್ಯ ಪೂಜಾರ್ಹಮನುಮಾನ್ಯ ಚ ॥19॥
ಹೀಗೆ ಹೇಳಲ್ಪಟ್ಟ ವಿದೇಹನು ಬ್ರಾಹ್ಮಣಶ್ರೇಷ್ಠರಾದ ಆ ಮುನಿಯನ್ನು ಸತ್ಕರಿಸಿ, ಪೂಜಿಸಿ, ಪೂಜಾರ್ಹರಾದ ಅವರ ಮಾತನ್ನು ಸಮ್ಮತಿಸಿ ಪ್ರತ್ಯುತ್ತರವನ್ನು ನೀಡಿದನು.
ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾದ್ ಬಹುಶ್ರುತಃ |
ಶ್ರೇಯಸ್ಕಾಮೋ ಯಥಾ ಬ್ರೂಯಾದುಭಯೋರ್ಯತ್ ಕ್ಷಮಂ ಭವೇತ್ ॥
ತಥಾ ವಚನಮುಕ್ತೋಽಸ್ಮಿ ಕರಿಷ್ಯಾಮಿ ಚ ತತ್ ತಥಾ |
ಏತದ್ಧಿ ಪರಮಂ ಶ್ರೇಯೋ ನ ಮೇಽತ್ರಾಸ್ತಿ ವಿಚಾರಣಾ ॥21॥
ಮಹಾಪ್ರಾಜ್ಞನಾದವನು ಏನು ಹೇಳಬಹುದೋ, ಬಹುಶ್ರುತನಾದವನು ಏನು ಹೇಳಬಹುದೋ, ಶ್ರೇಯಸ್ಕಾಮನಾದವನು ಇಬ್ಬರಿಗೂ ಏನು ಹೇಳಬಹುದೋ ಅಂತಹ ಮಾತುಗಳನ್ನು ನೀವು ನನಗೆ ಹೇಳಿದ್ದೀರಿ. ನಾನು ಹಾಗೆಯೇ ನಡೆದು- ಕೊಳ್ಳುವೆನು. ಹಾಗೆ ನಡೆದುಕೊಳ್ಳುವುದು ನನಗೆ ಪರಮಶ್ರೇಯಸ್ಕರ. ಇದರಲ್ಲಿ ನಾನು ಯಾವ ವಿಚಾರವನ್ನೂ ಮಾಡುವುದಿಲ್ಲ. (ಎಂದು ಹೇಳಿದನು).
ತತಃ ಕೌಸಲ್ಯಮಾಹೂಯ ವೈದೇಹೋ ವಾಕ್ಯಮಬ್ರವೀತ್ |
ಧರ್ಮತೋ ನೀತಿತಶ್ಚೈವ ಬಲೇನ ಚ ಜಿತೋ ಮಯಾ ॥22॥
ಅನಂತರ ಕೌಸಲ್ಯನನ್ನು ಕರೆದು ಜನಕನು ಮಾತನಾಡಿದನು. ನೀನು ಧರ್ಮ- ದಿಂದಲೂ ರಾಜನೀತಿಯಿಂದಲೂ ಸೈನ್ಯದಿಂದಲೂ ನನ್ನಿಂದ ಪರಾಜಿತನಾಗಿದ್ದೀಯೆ.
ಸೋಽಹಂ ತ್ವಯಾ ತ್ವಾತ್ಮಗುಣೈರ್ಜಿತಃ ಪಾರ್ಥಿವಸತ್ತಮ |
ಆತ್ಮಾನಮನವಜ್ಞಾಯ ಜಿತವದ್ ವರ್ತತಾಂ ಭವಾನ್ ॥23॥
ಎಲೈ ರಾಜಶ್ರೇಷ್ಠನೇ! ನಾನು ನಿನ್ನ ಗುಣಗಳಿಂದ ನಿನ್ನಿಂದ ಪರಾಜಿತನಾಗಿದ್ದೇನೆ. ನಿನ್ನನ್ನು ನೀನು ಹೀನನೆಂದು ತಿಳಿದುಕೊಳ್ಳದೇ ಪರಾಜಿತನಾದವನಂತೆ ನನ್ನ ಜೊತೆ- ಯಲ್ಲಿ ಇರು.
ನಾವಮನ್ಯೇ ಚ ತೇ ಬುದ್ಧಿಂ ನಾವಮನ್ಯೇ ಚ ಪೌರುಷಮ್ |
ನಾವಮನ್ಯೇ ಜಯಾಮೀತಿ ಜಿತವದ್ ವರ್ತತಾಂ ಭವಾನ್ ॥24॥
ನಾನು ನಿನ್ನ ಬುದ್ಧಿಯನ್ನು ತಿರಸ್ಕರಿಸುವುದಿಲ್ಲ; ನಿನ್ನ ಪೌರುಷವನ್ನು ಅವಮಾನ -ಗೊಳಿಸುವುದಿಲ್ಲ. ನಾನು ಜಯಿಸಿದ್ದೇನೆ ಎಂದು ನಿನ್ನನ್ನು ಅವಮಾನ ಮಾಡು- ವುದಿಲ್ಲ. ಪರಾಜಿತನಾದವನಂತೆ ಇರು.
ಯಥಾವತ್ ಪೂಜಿತೋ ರಾಜನ್ ಗೃಹಂ ಗಂತಾಸಿ ಮೇ ಗೃಹಾತ್ |
ತತಃ ಸಂಪೂಜ್ಯ ತೌ ವಿಪ್ರಂ ವಿಶ್ವಸ್ತೌ ಜಗ್ಮತುರ್ಗೃಹಾನ್ ॥25॥
ಎಲೈ ರಾಜನೇ! ವಿಧಿಗೆ ಅನುಗುಣವಾಗಿ ನನ್ನಿಂದ ಪೂಜಿತನಾಗಿ ನೀನು ನಿನ್ನ ಮನೆಗೆ ಹಿಂದಿರುಗುವಿ. (ಎಂದು ಹೇಳಿದನು). ಅನಂತರ ಅವರಿಬ್ಬರೂ ಆ ಬ್ರಾಹ್ಮಣರನ್ನು ಪೂಜಿಸಿ ಮನೆಗಳಿಗೆ ಹೋದರು.
ವೈದೇಹಸ್ತ್ವಥ ಕೌಸಲ್ಯಂ ಪ್ರವೇಶ್ಯ ಗೃಹಮಂಜಸಾ |
ಪಾದ್ಯಾರ್ಘ್ಯಮಧುಪರ್ಕೈಸ್ತಂ ಪೂಜಾರ್ಹಂ ಪ್ರತ್ಯಪೂಜಯತ್ ॥26॥
ವೈದೇಹನು ಕೋಸಲರಾಜಕುಮಾರನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಪಾದ್ಯ, ಅರ್ಘ್ಯ, ಮಧುಪರ್ಕಗಳನ್ನು ಚೆನ್ನಾಗಿ ನೀಡಿ ಪೂಜಾರ್ಹನಾದ ಅವನನ್ನು ಪೂಜಿಸಿದನು.
ದದೌ ದುಹಿತರಂ ಚಾಸ್ಮೈ ರತ್ನಾನಿ ವಿವಿಧಾನಿ ಚ |
ಏಷ ರಾಜ್ಞಾಂ ಪರೋ ಧರ್ಮಃ ಸಹ್ಯೌ ಜಯಪರಾಜಯೌ ॥27॥

ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟಾಧಿಕಶತತಮೋಽಧ್ಯಾಯಃ ॥108॥
ತನ್ನ ಮಗಳನ್ನೂ ಅವನಿಗೆ ಕೊಟ್ಟನು. ವಿಧವಿಧವಾದ ರತ್ನಗಳನ್ನು ಕೊಟ್ಟನು. ಇದು ರಾಜರ ಶ್ರೇಷ್ಠವಾದ ಧರ್ಮ.
ಜಯಪರಾಜಯಗಳನ್ನು ಸಹಿಸಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 108ನೆಯ ಅಧ್ಯಾಯವು ಮುಗಿಯಿತು.
0
109. ನೂರ ಒಂಭತ್ತನೆಯ ಅಧ್ಯಾಯ
ಚತುರಂಗಾದಿಗಣಗಳ ನಡತೆ
ಯುಧಿಷ್ಠಿರಃ
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ |
ಧರ್ಮವೃತ್ತಶ್ಚ ವೃತ್ತಿಶ್ಚ ವೃತ್ತ್ಯುಪಾಯಫಲಾನಿ ಚ ॥1॥
ಎಲೈ ಪರಂತಪನೇ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಧರ್ಮದ ನಡವಳಿಕೆಯನ್ನು, ಜೀವನೋಪಾಯವನ್ನು ಸಂಪಾದಿಸುವ ಕ್ರಮ ಮತ್ತು ಫಲಗಳನ್ನು ಹೇಳಿದ್ದೀಯೆ.
ರಾಜ್ಞಾಂ ವೃತ್ತಂ ಚ ಕೋಶಶ್ಚ ಕೋಶಸಂಜನನಂ ಮಹತ್ |
ಅಮಾತ್ಯಗುಣವೃದ್ಧಿಶ್ಚ ಪ್ರಕೃತೀನಾಂ ಚ ವರ್ಧನಮ್ ॥2॥
ರಾಜರ ನಡತೆ, ಕೋಶ, ಕೋಶದ ಅಭಿವೃದ್ಧಿ, ಅಮಾತ್ಯರ ಗುಣ, ವೃದ್ಧಿ, ಪ್ರಜೆಗಳ ಅಭಿವೃದ್ಧಿ -
ಷಾಡ್ಗುಣ್ಯಗುಣಕಲ್ಪಶ್ಚ ಸೇನಾನೀತಿಸ್ತಥೈವ ಚ |
ದುಷ್ಟಸ್ಯ ಚ ಪರಿಜ್ಞಾನಮದುಷ್ಟಸ್ಯ ಚ ಲಕ್ಷಣಮ್ ॥3॥
ಷಾಡ್ಗುಣ್ಯಗಳ ನಿರೂಪಣೆ, ಸೇನೆಯ ನೀತಿ, ದುಷ್ಟರನ್ನು ತಿಳಿಯುವ ಕ್ರಮ, ಅದುಷ್ಟರ ಲಕ್ಷಣ -
ಸಮಹೀನಾಧಿಕಾನಾಂ ಚ ಯಥಾವಲ್ಲಕ್ಷಣೋಚ್ಚಯಃ |
ಮಧ್ಯಮಸ್ಯ ಚ ತುಷ್ಟ್ಯರ್ಥಂ ಯಥಾ ಸ್ಥೇಯಂ ವಿವರ್ಧತಾ ॥4॥
ಸಮರ, ಅಧಮರ ಮತ್ತು ಉತ್ತಮರ ಯಥಾರ್ಥವಾದ ಲಕ್ಷಣಸಮೂಹ- ಗಳು, ಮಧ್ಯಮರ ಸಂತೋಷಕ್ಕಾಗಿ ಅಭಿವೃದ್ಧಿಯನ್ನು ಹೊಂದುವ ರಾಜನು ಅನುಸರಿಸಬೇಕಾದ ಕ್ರಮ,
ಕ್ಷೀಣಸಂಗ್ರಹವೃತ್ತಿಶ್ಚ ಯಥಾವತ್ ಸಂಪ್ರಕೀರ್ತಿತಾ |
ಲಘುನಾಽಽದೇಶರೂಪೇಣ ಗ್ರಂಥಯೋಗೇನ ಭಾರತ ॥5॥
ಎಲೈ ಭಾರತನೇ! ದುರ್ಬಲನಾದ ರಾಜನನ್ನು ಸಂಗ್ರಹಿಸುವ ರೀತಿ ಇವೆಲ್ಲವನ್ನೂ ಲಘುವಾದ ಉಪದೇಶದಿಂದ ಗ್ರಂಥಗಳಿಗೆ ಅನುಸಾರವಾಗಿ ಹೇಳಿದ್ದೀಯೆ.
ವಿಜಿಗೀಷೋಸ್ತಥಾ ವೃತ್ತಮುಕ್ತಂ ಚೈವ ತಥೈವ ತೇ |
ಗಣಾನಾಂ ವೃತ್ತಿಮಿಚ್ಛಾಮಿ ಶ್ರೋತುಂ ಮತಿಮತಾಂವರ ॥6॥
ಜಯವನ್ನು ಬಯಸುವ ರಾಜನ ನಡತೆಯನ್ನು ನೀವು ಹೇಳಿದ್ದೀಯೆ. ಎಲೈ ಬುದ್ಧಿವಂತರಲ್ಲಿ ಶ್ರೇಷ್ಠನೇ! ಈಗ ಗಣಗಳ (ಚತುರಂಗಾದಿಗಣಗಳ) ನಡತೆಯನ್ನು ಕೇಳಲು ಬಯಸುತ್ತೇನೆ.
ಯಥಾ ಗಣಾಃ ಪ್ರವರ್ಧಂತೇ ನ ಭಿದ್ಯಂತೇ ಚ ಭಾರತ |
ಅರೀನ್ ಹಿ ವಿಜಿಗೀಷಂತೇ ಸುಹೃದಃ ಪ್ರಾಪ್ನುವಂತಿ ಚ ॥7॥
ಎಲೈ ಭಾರತನೇ! ಗಣಗಳು ಹೇಗೆ ಅಭಿವೃದ್ಧಿಯನ್ನು ಹೊಂದುತ್ತವೆ. ಹೇಗೆ ಭೇದವನ್ನು ಹೊಂದುವುದಿಲ್ಲ. ಹೇಗೆ ಶತ್ರುಗಳನ್ನು ಗೆಲ್ಲಲು ಬಯಸುತ್ತವೆ. ಮತ್ತು ಸುಹೃಜ್ಜನರನ್ನು ಸಂಪಾದಿಸುತ್ತವೆ (ಎಂದು ಕೇಳಲು ಬಯಸುತ್ತೇನೆ).
ಭೇದಮೂಲೋ ವಿನಾಶೋ ಹಿ ಗಣಾನಾಮುಪಲಕ್ಷಯೇ |
ಮಂತ್ರಸಂವರಣಂ ದುಃಖಂ ಬಹೂನಾಮಿತಿ ಮೇ ಮತಿಃ ॥8॥
ಗಣಗಳ ವಿನಾಶವು ಆಂತರಿಕಭೇದಮೂಲವಾದುದು ಎಂದು ನಾನು ತಿಳಿ- ಯುತ್ತೇನೆ. ಗಣಗಳಲ್ಲಿ ಅನೇಕರು ಇರುವಾಗ ಮಂತ್ರವನ್ನು ಮುಚ್ಚಿಡುವುದು
ದುಃಖಕರವಾದ ಕಾರ್ಯವೆಂದು ನನ್ನ ಅಭಿಪ್ರಾಯ.
ಏತದಿಚ್ಛಾಮ್ಯಹಂ ಶ್ರೋತುಂ ನಿಖಿಲೇನ ಪರಂತಪ |
ಯಥಾ ಚ ತೇ ನ ಭಿದ್ಯೇರಂಸ್ತಚ್ಚ ಮೇ ಬ್ರೂಹಿ ಪಾರ್ಥಿವ ॥9॥
ಎಲೈ ಪರಂತಪನೇ! ಇವೆಲ್ಲವನ್ನೂ ನಾನು ಸಂಪೂರ್ಣವಾಗಿ ಕೇಳಲು ಬಯಸುತ್ತೇನೆ. ಎಲೈ ಪಾರ್ಥಿವನೇ! ಗಣಗಳು ಹೇಗೆ ಒಡೆದು ಹೋಗುವುದಿಲ್ಲ ಎಂಬುದನ್ನು ನನಗೆ ಹೇಳು.
ಭೀಷ್ಮಃ
ಗಣಾನಾಂ ಚ ಕುಲಾನಾಂ ಚ ರಾಜ್ಞಾಂ ಚ ಭರತರ್ಷಭ |
ವೈರಸಂದೀಪನಾವೇತೌ ಲೋಭಾಮರ್ಷೌ ಜನಾಧಿಪ ॥10॥
ಭೀಷ್ಮರು ಎಲೈ ಭರತರ್ಷಭನೇ! ರಾಜನೇ! ಗಣಗಳಿಗೆ ಕುಲಗಳಿಗೆ ಮತ್ತು ರಾಜರಿಗೆ ವೈರವನ್ನು ಹಚ್ಚುವಂತಹವುಗಳು ಲೋಭ ಮತ್ತು ಕ್ರೋಧ ಇವೆರಡು.
ಲೋಭಮೇಕೋ ಹಿ ವೃಣುತೇ ತತೋಽಮರ್ಷಮನಂತರಮ್ |

ತೌ ಕ್ಷಯವ್ಯಯಸಂಯುಕ್ತಾವನ್ಯೋನ್ಯಜನಿತಾಶ್ರಯೌ ॥11॥
ಒಬ್ಬನು ಲೋಭವನ್ನು ಆಶ್ರಯಿಸುತ್ತಾನೆ. ಅನಂತರ (ಲೋಭವನ್ನು ಆಶ್ರಯಿಸಿ ಬಯಸಿದ ವಸ್ತುವು ದೊರೆಯದಿದ್ದರೆ) ಕ್ರೋಧವನ್ನು ಆಶ್ರಯಿಸುತ್ತಾನೆ. ಲೋಭ ಮತ್ತು ಕ್ರೋಧಗಳು ಕ್ಷಯ ಮತ್ತು ವ್ಯಯಗಳಿಂದ ಕೂಡಿ, ಪರಸ್ಪರವಾಗಿ ಆಶ್ರಯ- ವಾಗುತ್ತವೆ.
ಚಾರಮಂತ್ರಬಲಾದಾನೈಃ ಸಾಮದಾನವಿಭೇದನೈಃ |
ಕ್ಷಯವ್ಯಯಭಯೋಪಾಯೈಃ ಕರ್ಶಯಂತೀತರೇತರಮ್ ॥12॥
ರಾಜರು ಚಾರರ ಮತ್ತು ಮಂತ್ರಗಳ ಬಲವನ್ನು ದುರ್ಬಲಗೊಳಿಸಿ ಕ್ಷಯವ್ಯಯ -ಭಯಗಳಿಂದ ಕೂಡಿದ ಸಾಮದಾನಭೇದೋಪಾಯಗಳಿಂದ ಪರಸ್ಪರವಾಗಿ ಹಿಂಸಿಸುತ್ತಾರೆ.
ತತ್ರ ದಾನೇನ ಭಿದ್ಯಂತೇ ಗಣಾಃ ಸಂಘಾತವೃತ್ತಯಃ|
ಭಿನ್ನಾ ವಿಮನಸಃ ಸರ್ವೇ ಗಚ್ಛಂತ್ಯರಿವಶಂ ಭಯಾತ್ ॥13॥
ಅವುಗಳಲ್ಲಿ ಒಟ್ಟಿಗೆ ನಡೆದುಕೊಳ್ಳುವ ಗಣಗಳು ದಾನದಿಂದ ಭಿನ್ನವಾಗುತ್ತವೆ. ಭಿನ್ನವಾದವರೆಲ್ಲರೂ ಗಣಕಾರ್ಯದಲ್ಲಿ ವಿಮುಖರಾಗಿ ಭಯದಿಂದ ಶತ್ರುಗಳಿಗೆ ವಶರಾಗುತ್ತಾರೆ.
ಭೇದಾದ್ ಗಣಾ ವಿನಶ್ಯಂತಿ ಭಿನ್ನಾಃ ಸೂಪಜಪಾಃ ಪರೈಃ |
ತಸ್ಮಾತ್ ಸಂಘಾತಯೋಗೇಷು ಪ್ರಯತೇರನ್ ಗಣಾಃ ಸದಾ ॥14॥
ಭೇದದಿಂದ ಗಣಗಳು ನಾಶ ಹೊಂದುತ್ತವೆ. ಭೇದೋಪಾಯಕ್ಕೆ ಸಿಲುಕಿದವರು ಶತ್ರುಗಳಿಂದ ಬೇರೆ ದಾರಿಗೆ ಒಳ್ಳೆಯ ಮಾತುಗಳಿಂದ ಎಳೆಯಲ್ಪಡುತ್ತಾರೆ. ಆದ್ದರಿಂದ ಗಣಗಳು ಯಾವಾಗಲೂ ಒಟ್ಟಿಗೇ ಇರುವುದಕ್ಕೆ ಪ್ರಯತ್ನವನ್ನು ಮಾಡಬೇಕು.
ಅರ್ಥಾ ಹ್ಯೇವಾಧಿಗಮ್ಯಂತೇ ಸಂಘಾತಬಲಪೌರುಷಾತ್ |
ಬಾಹ್ಯಾಶ್ಚ ಮೈತ್ರೀಂ ಕುರ್ವಂತಿ ತೇಷು ಸಂಘಾತವೃತ್ತಿಷು ॥15॥
ಗಣಗಳು ಒಟ್ಟಿಗಿದ್ದರೆ ಗಣಗಳ ಬಲ ಮತ್ತು ಪೌರುಷಗಳಿಂದ ಅರ್ಥಪ್ರಾಪ್ತಿ- ಯಾಗುತ್ತದೆ. ಗಣಗಳ ಹೊರಗಿದ್ದವರು ಗಣಗಳ ಜೊತೆಯಲ್ಲಿ ಸ್ನೇಹವನ್ನು ಮಾಡುತ್ತಾರೆ.
ಜ್ಞಾನವೃದ್ಧಾನ್ ಪ್ರಶಂಸಂತಃ ಶುಶ್ರೂಷಂತಃ ಪರಸ್ಪರಮ್ |
ವಿನಿವೃತ್ತಾಭಿ(ನು)ಸಂಘಾತಾಃ ಸುಖಮೇಧಂತಿ ಸರ್ವಶಃ ॥16॥
ಜ್ಞಾನವೃದ್ಧರನ್ನು ಸೇವಿಸುತ್ತಾ, ಅವರ ಮಾತುಗಳನ್ನು ಕೇಳುತ್ತಾ, ಪರಸ್ಪರವಾಗಿ ಸಂಘರ್ಷವನ್ನು ತ್ಯಜಿಸಿ ಗಣಗಳು ಎಲ್ಲ ರೀತಿಯಿಂದಲೂ ಸುಖವನ್ನು ಹೊಂದುತ್ತವೆ.
ಧರ್ಮಿಷ್ಠಾನ್ ವ್ಯವಹಾರಾಂಶ್ಚ ಸ್ಥಾಪಯಂತಶ್ಚ ಶಾಸ್ತ್ರತಃ |
ಯಥಾವತ್ ಸಂಪ್ರವರ್ತಂತೋ ವಿವರ್ಧಂತೇ ಗಣೋತ್ತಮಾಃ ॥17॥
ಧರ್ಮಾನುಗುಣವಾದ (ವ್ಯವಹಾರಾಂಶ್ಚ) ಶಾಸ್ತ್ರಕ್ಕೆ ಅನುಗುಣವಾಗಿ ಸ್ಥಾಪಿಸುತ್ತಾ ಸರಿಯಾದ ರೀತಿಯಲ್ಲಿ ಪ್ರವೃತ್ತಿಯನ್ನು ಮಾಡುತ್ತಾ, ಗಣಗಳಲ್ಲಿ ಶ್ರೇಷ್ಠರಾದವರು ಗಣಗಳನ್ನು ಅಭಿವೃದ್ಧಿ ಪಡಿಸುತ್ತಾರೆ.
ಪುತ್ರಾನ್ ಭ್ರಾತೄನ್ ನಿಗೃಹ್ಣಂತೋ ವಿನಯೇ ಚ ಸದಾ ರತಾಃ |
ವಿನೀತಾಂಶ್ಚ ಪ್ರಗೃಹ್ಣಂತೋ ವಿವರ್ಧಂತೇ ಗಣೋತ್ತಮಾಃ ॥18॥
ಪುತ್ರರನ್ನು ಸಹೋದರರರನ್ನುನಿಗ್ರಹಿಸುತ್ತಾ, ಸದಾ ವಿನಯಶೀಲರಾಗಿ ವಿನೀತ- ರಾದವರನ್ನು ಸಂಗ್ರಹಿಸುತ್ತಾ ಉತ್ತಮವಾದ ಗಣಗಳು ಅಭಿವೃದ್ಧಿಯನ್ನು ಹೊಂದು- ತ್ತವೆ.
ಚಾರಮಂತ್ರವಿಧಾನೇಷು ಕೋಶಸನ್ನಿಚಯೇಷು ಚ |
ನಿತ್ಯಯುಕ್ತಾ ಮಹಾಬಾಹೋ ವರ್ಧಂತೇ ಸರ್ವತೋ ಗಣಾಃ ॥19॥
ಎಲೈ ಮಹಾಬಾಹುವೇ! ಚಾರಮಂತ್ರವಿಧಿಗಳಲ್ಲಿಯೂ ಕೋಶಾಭಿವೃದ್ಧಿ- ಯಲ್ಲಿಯೂ ನಿತ್ಯವೂ ರತವಾದ ಗಣಗಳು ಎಲ್ಲ ರೀತಿಯಲ್ಲಿಯೂ ಬೆಳಯುತ್ತವೆ.
ಪ್ರಾಜ್ಞಾನ್ ಶೂರಾನ್ ಮಹೋತ್ಸಾಹಾನ್ ಕರ್ಮಸು ಸ್ಥಿರಪೌರುಷಾನ್ |
ಮಾನಯಂತಃ ಸದಾ ಯುಕ್ತಾ ವಿವರ್ಧಂತೇ ಗಣಾ ನೃಪ ॥20॥
ಎಲೈ ರಾಜನೇ! ಪ್ರಾಜ್ಞರನ್ನೂ, ಶೂರರನ್ನೂ, ಮಹೋತ್ಸಾಹವುಳ್ಳವರನ್ನೂ, ಕರ್ಮಗಳಲ್ಲಿ ಸ್ಥಿರವಾದ ಪೌರುಷವುಳ್ಳವರನ್ನೂ ಸನ್ಮಾನಿಸುತ್ತಾ ಸದಾ ಯುಕ್ತಗಳಾಗಿ ಗಣಗಳು ಬೆಳೆಯುತ್ತವೆ.
ದ್ರವ್ಯವಂತಶ್ಚ ಶೂರಾಶ್ಚ ಶಸ್ತ್ರಜ್ಞಾಃ ಶಾಸ್ತ್ರಪಾರಗಾಃ |
ಕೃಚ್ಛ್ರಾಸ್ವಾಪತ್ಸು ಸಮ್ಮೂಢಾನ್ ಗಣಾನುತ್ತಾರಯಂತಿ ತೇ ॥21॥
ದ್ರವ್ಯವಂತರೂ, ಶೂರರೂ, ಶಸ್ತ್ರಜ್ಞರೂ, ಶಾಸ್ತ್ರಪಾರಂಗತರೂ ಆದವರು ಪ್ರಮಾದಕ್ಕೆ ಒಳಗಾದ ಗಣಗಳನ್ನು ಕಷ್ಟಕರವಾದ ಆಪತ್ತುಗಳಿಂದ ದಾಟಿಸುತ್ತಾರೆ.
ಕ್ರೋಧೋ ಭೇದೋ ಭಯೋ ದಂಡಃ ಕರ್ಶನಂ ನಿಗ್ರಹೋ ವಧಃ |
ನಯತ್ಯರಿವಶಂ ಸದ್ಯೋ ಗಣಾನ್ ಭರತಸತ್ತಮ ॥22॥
ಎಲೈ ಭರತಶ್ರೇಷ್ಠನೇ! ಕ್ರೋಧ, ಭೇದ, ಭಯ, ದಂಡ, ಹಿಂಸೆ, ನಿಗ್ರಹ ಮತ್ತು ವಧೆಗಳು ಗಣಗಳನ್ನು ತತ್ಕ್ಷಣದಲ್ಲಿಯೇ ಶತ್ರುವಶವನ್ನಾಗಿ ಮಾಡುತ್ತವೆ.
ತಸ್ಮಾನ್ಮಾನಯಿತವ್ಯಾಸ್ತೇ ಗಣಮುಖ್ಯಾಃ ಪ್ರಧಾನತಃ |
ಲೋಕಯಾತ್ರಾ ಸಮಾಯತ್ತಾ ಭೂಯಸೀ ತೇಷು ಪಾರ್ಥಿವ ॥23॥
ಆದ್ದರಿಂದ ಗಣಗಳಲ್ಲಿ ಮುಖ್ಯರಾದವರನ್ನು ಪ್ರಯತ್ನಪೂರ್ವಕವಾಗಿ ಸನ್ಮಾನಿಸ- ಬೇಕು. ಎಲೈ ರಾಜನೇ! ಲೋಕಯಾತ್ರೆಯು

ಬಹಳವಾಗಿ ಅವರನ್ನೇ ಅವಲಂಬಿಸಿದೆ.
ಮಂತ್ರಗುಪ್ತಿಃ ಪ್ರಧಾನೇಷು ಚಾರಶ್ಚಾಮಿತ್ರಕರ್ಶನ |
ನ ಗಣಾಃ ಕೃತ್ಸ್ನಶೋ ಮಂತ್ರಂ ಶ್ರೋತುಮರ್ಹಂತಿ ಭಾರತ ॥24॥
ಎಲೈ ಶತ್ರುಕರ್ಶನನೇ! ಮಂತ್ರದ ರಕ್ಷಣೆ ಮತ್ತು ಚಾರರ ನಿಯೋಜನೆ ಇವು ಪ್ರಧಾನರಾದವರನ್ನೇ ಆಶ್ರಯಿಸಿರುತ್ತದೆ.
ಗಣಮುಖ್ಯೈಸ್ತು ಸಂಭೂಯ ಕಾರ್ಯಂ ಗಣಹಿತಂ ಮಿಥಃ |
ಪೃಥಗ್ಗಣಸ್ಯ ಭಿನ್ನಸ್ಯ ವಿಮತಸ್ಯ ತತೋಽನ್ಯಥಾ |
ಅರ್ಥಾಃ ಪ್ರತ್ಯವಸೀದಂತಿ ತಥಾಽನರ್ಥಾ ಭವಂತಿ ಚ ॥25॥
ಎಲೈ ಭಾರತನೇ! ಗಣಗಳಲ್ಲಿ ಇದ್ದವರೆಲ್ಲರೂ ಮಂತ್ರವನ್ನು ತಿಳಿಯಲು ಅರ್ಹರಲ್ಲ. ಇಲ್ಲದಿದ್ದರೆ ಅರ್ಥವು ನಾಶವನ್ನು ಹೊಂದುತ್ತದೆ.
ಮತ್ತು ಅನರ್ಥವು ಉಂಟಾಗುತ್ತದೆ.
ತೇಷಾಮನ್ಯೋನ್ಯಭಿನ್ನಾನಾಂ ಸ್ವಶಕ್ತಿಮನುತಿಷ್ಠತಾಮ್ |
ನಿಗ್ರಹಃ ಪಂಡಿತೈಃ ಕಾರ್ಯಃ ಕ್ಷಿಪ್ರಮೇವ ಪ್ರಧಾನತಃ ॥26॥
ಪರಸ್ಪರವಾಗಿ ಭಿನ್ನರಾಗಿ, ತಮ್ಮ ಶಕ್ತಿಯಿಂದ ಕಾರ್ಯವನ್ನು ಮಾಡುವ ಗಣದ ವ್ಯಕ್ತಿಗಳನ್ನು ಪಂಡಿತರು ತತ್ಕಣದಲ್ಲಿಯೇ
ಪ್ರಧಾನರನ್ನು ಆರಂಭಿಸಿ ನಿಗ್ರಹವನ್ನು ಮಾಡಬೇಕು.
ಕುಲೇಷು ಕಲಹಾ ಜಾತಾಃ ಕುಲವೃದ್ಧೈರುಪೇಕ್ಷಿತಾಃ |
ಗೋತ್ರಸ್ಯ ನಾಶಂ ಕುರ್ವಂತಿ ಗಣಸಂಭೇದಕಾರಕಮ್ ॥27॥
ಕುಲಗಳಲ್ಲಿ ಕಲಹಗಳುಂಟಾಗಿ ಕುಲವೃದ್ಧರು ಅದನ್ನು ಉಪೇಕ್ಷಿಸಿದರೆ ಆ ಕಲಹಗಳು ಗೋತ್ರನಾಶವನ್ನೇ ಮಾಡುತ್ತವೆ. ಅದು ಪುನಃ
ಗಣದ ಭೇದವನ್ನು ಉಂಟುಮಾಡುತ್ತದೆ.
ಆಭ್ಯಂತರಂ ಭಯಂ ರಕ್ಷ್ಯಂ ಸುರಕ್ಷ್ಯಂ ಬಾಹ್ಯತೋ ಭಯಮ್ |
ಆಭ್ಯಂತರಾದ್ ಭಯಂ ಜಾತಂ ಸದ್ಯೋ ಮೂಲಂ ನಿಕೃಂತತಿ ॥28॥
ಒಳಗಿನಿಂದುಂಟಾಗುವ ಭಯವನ್ನು ಪರಿಹರಿಸಬೇಕು. ಹೊರಗಿನಿಂದ ಉಂಟಾ -ಗುವ ಭಯವನ್ನು ಇನ್ನೂ ಚೆನ್ನಾಗಿ ಪರಿಹರಿಸಬೇಕು.
ಒಳಗಿನವರಿಂದಲೇ ಭಯ- ವುಂಟಾದರೆ ಅದು ತತ್ಕಣವೇ ಮೂಲವನ್ನೇ ನಾಶಮಾಡುತ್ತದೆ.
ಅಕಸ್ಮಾತ್ ಕ್ರೋಧಲೋಭಾದ್ ವಾ ಮೋಹಾದ್ ವಾಪಿ ಸ್ವಭಾವಜಾತ್ |
ಅನ್ಯೋನ್ಯಂ ನಾಭಿಭಾಷಂತೇ ತತ್ಪರಾಭಾವಲಕ್ಷಣಮ್ ॥29॥
ಗಣಗಳಲ್ಲಿದ್ದವರು ಅಕಸ್ಮಾತ್ತಾಗಲೀ, ಕ್ರೋಧಲೋಭಗಳಿಂದಾಗಲೀ, ಸ್ವಾಭಾ- ವಿಕವಾದ ಮೋಹದಿಂದಾಗಲೀ ಪರಸ್ಪರವಾಗಿ
ಮಾತನಾಡದಿದ್ದರೆ ಅದು ಪರಾ- ಭವದ ಲಕ್ಷಣ.
ಜಾತ್ಯಾ ಚ ಸದೃಶಾಃ ಸರ್ವೇ ಕುಲೇನ ಸದೃಶಾಸ್ತಥಾ |
ನ ತು ಶೌರ್ಯೇಣ ಬುದ್ಧ್ಯಾ ವಾ ರೂಪದ್ರವ್ಯೇಣ ವಾ ಪುನಃ ॥30॥
ಎಲ್ಲರೂ ಜಾತಿಯಿಂದಲೂ, ಕುಲದಿಂದಲೂ ಸದೃಶರಾಗಿರುತ್ತಾರೆ. ಆದರೆ ಶೌರ್ಯದಿಂದಾಗಲೀ, ಬುದ್ಧಿಯಿಂದಾಗಲೀ,
ರೂಪಸಂಪತ್ತಿನಿಂದಾಗಲೀ ಸದೃಶ- ರಾಗಿರುವುದಿಲ್ಲ.
ಭೇದಾಚ್ಚೈವ ಪ್ರಮಾದಾಚ್ಚ ನಾಮ್ಯಂತೇ ರಿಪುಭಿರ್ಗಣಾಃ |
ತಸ್ಮಾತ್ ಸಂಘಾತಮೇವಾಹುರ್ಗಣಾನಾಂ ಶರಣಂ ಮಹತ್ ॥31॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ನವಾಧಿಕಶತತಮೋಽಧ್ಯಾಯಃ ॥109॥
ಗಣಗಳಲ್ಲಿ ಉಂಟಾಗುವ ಭೇದದಿಂದಲೂ ಮತ್ತು ಪ್ರಮಾದದಿಂದಲೂ ಶತ್ರುಗಳು ಗಣಗಳನ್ನು ಬಗ್ಗಿಸುತ್ತಾರೆ. ಆದ್ದರಿಂದ ಒಡೆಯದೇ
ಒಟ್ಟಿಗಿರುವುದೇ ಗಣ- ಗಳಿಗೆ ದೊಡ್ಡ ಆಶ್ರಯವಾದುದು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 109ನೆಯ ಅಧ್ಯಾಯ ಮುಗಿಯಿತು
0
110. ನೂರಹತ್ತನೆಯ ಅಧ್ಯಾಯ
ಪಿತೃಮಾತೃಗುರುಮಹಿಮಾಕಥನ
ಯುಧಿಷ್ಠಿರಃ
ಮಹಾನಯಂ ಧರ್ಮಪಥೋ ಬಹುಶಾಖಶ್ಚ ಭಾರತ |
ಕಿಂಸ್ವಿದೇವೇಹ ಧರ್ಮಾಣಾಮನುಷ್ಠೇಯತಮಂ ಮತಮ್ ॥1॥
ಕಿಂ ಕಾರ್ಯಂ ಸರ್ವಧರ್ಮಾಣಾಂ ಗರೀಯೋ ಭವತೋ ಮತಮ್ |
ಯಥಾಯಂ ಪುರುಷೋ ಧರ್ಮಮಿಹ ಚ ಪ್ರೇತ್ಯ ಚಾಪ್ನುಯಾತ್ ॥2॥
ಯುಧಿಷ್ಠಿರ ಎಲೈ ಭಾರತನೇ! ಈ ಧರ್ಮಮಾರ್ಗವು ಬಹಳ ವಿಸ್ತಾರವಾ- ದುದು. ಮತ್ತು ಅನೇಕ ಕವಲುಗಳಿಂದ ಕೂಡಿದುದು. ಈ
ಧರ್ಮಗಳಲ್ಲಿ ಅನುಷ್ಠಾನ ಮಾಡಬೇಕಾದ ಶ್ರೇಷ್ಠವಾದ ಧರ್ಮವು ಯಾವುದೆಂದು ನಿನ್ನ ಅಭಿಪ್ರಾಯ? ಯಾವ ಕಾರ್ಯವು
ಸರ್ವಧರ್ಮಗಳಿಗಿಂತ ಗುರುತರವಾದುದೆಂದು ನಿನ್ನ ಅಭಿಪ್ರಾಯ? ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ ಪುರುಷನು ಈ
ಲೋಕದಲ್ಲಿಯೂ ಪರಲೋಕದಲ್ಲಿಯೂ ಧರ್ಮವನ್ನು ಬಯಸುತ್ತಾನೆಯೋ (ಅಂತಹ ಕಾರ್ಯವನ್ನು ಹೇಳು)
ಭೀಷ್ಮಃ
ಮಾತಾಪಿತ್ರೋರ್ಗುರೂಣಾಂ ಚ ಪೂಜಾ ಬಹುಮತಾ ಮಮ |

ಅತ್ರ ಯುಕ್ತೋ ನರೋ ಲೋಕಾನ್ ಯಶಶ್ಚ ಮಹದಶ್ನುತೇ ॥3॥
ಭೀಷ್ಮರು ತಂದೆ ತಾಯಿಯರ ಮತ್ತು ಗುರುಗಳ ಪೂಜೆಯು ಶ್ರೇಷ್ಠವಾ- ದುದು ಎಂದು ನನ್ನ ಅಭಿಪ್ರಾಯ. ಇವುಗಳಲ್ಲಿ ನಿರತನಾದ ಮನುಷ್ಯನು ಅಪಾರ- ವಾದ ಕೀರ್ತಿಯನ್ನೂ ಮತ್ತು ಶುಭಲೋಕಗಳನ್ನೂ ಹೊಂದುತ್ತಾನೆ.
ಯದೇತೇ ಹ್ಯಭಿಜಾನೀಯುಃ ಕರ್ಮ ತಾತ ಸುಪೂಜಿತಾಃ |
ಧರ್ಮ್ಯಂ ಧರ್ಮವಿರುದ್ಧಂ ವಾ ತತ್ ಕರ್ತವ್ಯಂ ಯುಧಿಷ್ಠಿರ ॥4॥
ಎಲೈ ಪ್ರೀತಿಪಾತ್ರನೇ! ಯುಧಿಷ್ಠಿರನೇ! ಚೆನ್ನಾಗಿ ಪೂಜಿತರಾದ ಈ ಮೂವರು ಏನನ್ನು ಹೇಳುತ್ತಾರೆಯೋ ಅದು ಧರ್ಮವಾಗಿರಲಿ ಧರ್ಮವಿರುದ್ಧವಾಗಿರಲಿ ಅದನ್ನು ಮಾಡಬೇಕು.
ನ ತೈರನಭ್ಯನುಜ್ಞಾತೋ ಧರ್ಮಮನ್ಯಂ ಪ್ರಕಲ್ಪಯೇತ್ |
ಯಮೇತೇಽಭ್ಯನುಜಾನೀಯುಃ ಸ ಧರ್ಮ ಇತಿ ನಿಶ್ಚಯಃ ॥5॥
ಅವರ ಅನುಮತಿಯನ್ನು ಪಡೆಯದೇ ಬೇರೆ ಧರ್ಮವನ್ನು ಆಚರಿಸಬಾರದು. ಯಾವುದಕ್ಕೆ ಅವರು ಅನುಮತಿಯನ್ನು ಕೊಡುತ್ತಾರೋ ಅದು ಧರ್ಮ ಎಂಬುದು ನಿಶ್ಚಿತವಾದುದು.
ಏತ ಏವ ತ್ರಯೋ ಲೋಕಾ ಏತ ಏವಾಶ್ರಮಾಸ್ತ್ರಯಃ |
ಏತ ಏವ ತ್ರಯೋ ವೇದಾ ಏತ ಏವ ತ್ರಯೋಽಗ್ನಯಃ ॥6॥
ಇವರೇ ಮೂರು ಲೋಕಗಳು, ಮೂರು ಆಶ್ರಮಗಳು, ಮೂರು ವೇದಗಳು, ಮೂರು ಅಗ್ನಿಗಳು.
ಪಿತಾ ಹ್ಯಗ್ನಿರ್ಗಾರ್ಹಪತ್ಯೋ ಮಾತಾಽಗ್ನಿರ್ದಕ್ಷಿಣಃ ಸ್ಮೃತಃ |
ಗುರುರಾಹವನೀಯಸ್ತು ಸಾಽಗ್ನಿತ್ರೇತಾ ಗರೀಯಸೀ ॥7॥
ತಂದೆಯು ಗಾರ್ಹಪತ್ಯಾಗ್ನಿ, ತಾಯಿಯು ದಕ್ಷಿಣಾಗ್ನಿ, ಗುರುವು ಆಹವನೀ- ಯಾಗ್ನಿ - ಈ ತ್ರೇತಾಗ್ನಿಯು ಬಹಳ ಗರಿಷ್ಠವಾದುದು.
ತ್ರಿಷ್ವಪ್ರಮಾದ್ಯನ್ನೇತೇಷು ತ್ರೀನ್ ಲೋಕಾನವಜೇಷ್ಯಸಿ |
ಪಿತೃವೃತ್ತ್ಯಾ ತ್ವಿಮಂ ಲೋಕಂ ಮಾತೃವೃತ್ತ್ಯಾ ತಥಾಽಪರಮ್ |
ಬ್ರಹ್ಮಲೋಕಂ ಗುರೋರ್ವೃತ್ತ್ಯಾ ನಿತ್ಯಮೇವ ಚರಿಷ್ಯಸಿ ॥8॥
ಈ ಮೂವರ ವಿಷಯದಲ್ಲಿ ಎಚ್ಚರಿಕೆಯಿಂದ ನಡೆದುಕೊಂಡರೆ ನೀನು ಮೂರು ಲೋಕಗಳನ್ನೂ ಜಯಿಸುವಿ. ತಂದೆಯ ಸೇವೆಯಿಂದ ಈ ಲೋಕವನ್ನೂ, ತಾಯಿಯ ಸೇವೆಯಿಂದ ಪರಲೋಕವನ್ನೂ, ಗುರುವಿನ ಸೇವೆಯಿಂದ ಬ್ರಹ್ಮ- ಲೋಕವನ್ನು ಪಡೆದು ಅಲ್ಲಿ ಯಾವಾಗಲೂ ಸಂಚರಿಸುವಿ.
ಸಮ್ಯಗೇತೇಷು ವರ್ತಸ್ವ ತ್ರಿಷು ಲೋಕೇಷು ಭಾರತ |
ಯಶಃ ಪ್ರಾಪ್ಸ್ಯಸಿ ಭದ್ರಂ ತೇ ಧರ್ಮಂ ಚ ಸುಮಹಾಫಲಮ್ ॥9॥
ಎಲೈ ಭಾರತನೇ! ಈ ಮೂರು ಲೋಕಗಳ ಪ್ರಾಪಕರಾದ ಇವರಲ್ಲಿ ಸರಿಯಾಗಿ ನಡೆದುಕೋ. ನಿನಗೆ ಮಂಗಳವಾಗಲಿ. ಕೀರ್ತಿಯನ್ನೂ ಮತ್ತು ಮಹಾಫಲವುಳ್ಳ ಧರ್ಮವನ್ನೂ ಪಡೆಯುವಿ.
ನೈತಾನತಿಶಯೇಜ್ಜಾತು ನಾಶ್ನೀಯಾನ್ನ ಚ ದೂಷಯೇತ್ |
ನಿತ್ಯಂ ಪರಿಚರೇಚ್ಚೈವ ತದ್ ವೈ ಸುಕೃತಮುತ್ತಮಮ್ |
ಕೀರ್ತಿಂ ಪುಣ್ಯಂ ಯಶೋ ಲೋಕಾನ್ ಪ್ರಾಪ್ಸ್ಯಸೇ ಚ ಜನಾಧಿಪ ॥10॥
ಇವರನ್ನು ಯಾವಾಗಲೂ ಮೀರಬಾರದು. ಅವರಿಗಿಂತ ಮೊದಲು ಭೋಜನ- ವನ್ನು ಮಾಡಬಾರದು. ನಿತ್ಯವೂ ಅವರ ಸೇವೆಯನ್ನು ಮಾಡಬೇಕು. ಅದೇ ಶ್ರೇಷ್ಠ- ವಾದ ಪುಣ್ಯಕಾರ್ಯ. ಎಲೈ ಜನಾಧಿಪನೇ! ಹಾಗೆ ಮಾಡಿದರೆ ನೀನು ಈ ಲೋಕ- ದಲ್ಲಿ ಕೀರ್ತಿಯನ್ನೂ ಪರಲೋಕದಲ್ಲಿ ಯಶಸ್ಸನ್ನೂ ಪುಣ್ಯವನ್ನೂ ಪಡೆಯುವಿ.
ಸರ್ವೇ ತಸ್ಯಾದೃತಾ ಲೋಕಾ ಯಸ್ಯೈತೇ ತ್ರಯ ಆದೃತಾಃ |
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥11॥
ಈ ಮೂವರೂ ಯಾವನಿಂದ ಆದರಿಸಲ್ಪಡುತ್ತಾರೆಯೋ ಅವರಿಂದ ಎಲ್ಲ ಲೋಕಗಳೂ ಆದರಿಸಲ್ಪಡುತ್ತವೆ. ಈ ಮೂವರನ್ನು ಅದರಿಸದವನು ಮಾಡಿದ ಎಲ್ಲಾ ಕಾರ್ಯಗಳೂ ನಿಷ್ಫಲವಾಗುತ್ತವೆ.
ನೈವಾಯಂ ನ ಪರೋ ಲೋಕಸ್ತಸ್ಯ ಚೈವ ಪರಂತಪ |
ಅಮಾನಿತಾ ನಿತ್ಯಮೇವ ಯಸ್ಯೈತೇ ಗುರವಸ್ತ್ರಯಃ ॥12॥
ಎಲೈ ಪರಂತಪನೇ! ಯಾವನಿಂದ ಗುರುಗಳಾದ ಈ ಮೂವರು ಸನ್ಮಾನಿಸ- ಲ್ಪಡುವುದಿಲ್ಲವೋ ಅವನಿಗೆ ಈ ಲೋಕವೂ ಇಲ್ಲ; ಪರಲೋಕವೂ ಇಲ್ಲ.
ನ ಚಾಸ್ಮಿನ್ನ ಪರೇ ಲೋಕೇ ಯಶಸ್ತಸ್ಯ ಪ್ರಕಾಶತೇ |
ನ ಚಾನ್ಯದಪಿ ಕಲ್ಯಾಣಂ ಪಾರತ್ರಂ ಸಮುದಾಹೃತಮ್ ॥13॥
ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಅವನ ಕೀರ್ತಿಯು ಪ್ರಕಾಶಿ- ಸುವುದಿಲ್ಲ. ಮತ್ತು ಪರಲೋಕದಲ್ಲಿ ಅವನಿಗೆ ಬೇರೆ ಯಾವ ಶುಭವೂ ಉಂಟಾಗು- ವುದಿಲ್ಲ.
ಏಭ್ಯ ಏವಾಸ್ಮಿ ಯತ್ಸರ್ವಂ ಕೃತ್ವಾ ಯದ್ ವಿಸೃಜಾಮ್ಯಹಮ್ |
ತದಾಸೀನ್ಮೇ ಶತಗುಣಂ ಸಹಸ್ರಗುಣಮೇವ ಚ |
ತಸ್ಮಾನ್ಮೇ ಸಂಪ್ರಕಾಶಂತೇ ತ್ರಯೋ ಲೋಕಾ ಯುಧಿಷ್ಠಿರ ॥14॥
ನಾನು ಈ ಮೂವರ ಸೇವೆಯಿಂದಲೇ ಅಭಿವೃದ್ಧನಾಗಿದ್ದೇನೆ. ಇವರ ಉಪ- ದೇಶದಿಂದಲೇ ಎಲ್ಲ ಪುಣ್ಯಕಾರ್ಯಗಳನ್ನು ಮಾಡಿ ಪಾಪವನ್ನು ತ್ಯಜಿಸಿದ್ದೇನೆ. ಇವರ ಸಲುವಾಗಿಯೇ ಎಲ್ಲ ಹಿತವನ್ನೂ ಮಾಡಿ ಊರ್ಧ್ವರೇತಸ್ಕನಾಗಿ ರಾಜ್ಯವನ್ನು ತ್ಯಜಿಸಿದ್ದೇನೆ. ಎಲೈ

ಯುಧಿಷ್ಠಿರನೇ! ಅದರಿಂದ ಆ ಪುಣ್ಯವು ನೂರು ಪಟ್ಟು, ಸಾವಿರಪಟ್ಟು ಅಧಿಕವಾಗಿದೆ. ಲಕ್ಷಾಲಂಕಾರ
ದಶೈವ ತು ಸದಾಚಾರ್ಯಃ ಶ್ರೋತ್ರಿಯಾನತಿರಿಚ್ಯತೇ |
ದಶಾಚಾರ್ಯಾನುಪಾಧ್ಯಾಯ ಉಪಾಧ್ಯಾಯಾನ್ ಪಿತಾ ದಶ ॥15॥
ಆಚಾರ್ಯನು ಹತ್ತು ಶ್ರೋತ್ರಿಯರಿಗಿಂತಲೂ ಶ್ರೇಷ್ಠನಾದವನು. ಉಪಾ- ಧ್ಯಾಯನು ಹತ್ತು ಆಚಾರ್ಯರನ್ನು ಮೀರಿಸಿದವನು. ತಂದೆಯು ಹತ್ತು ಉಪಾ- ಧ್ಯಾಯರನ್ನು ಮೀರಿಸಿದವನು.
ಪಿತ್ರೂನ್ ದಶ ತು ಮಾತೈಕಾ ಸರ್ವಾಂ ವಾ ಪೃಥಿವೀಮಪಿ |
ಗುರುತ್ವೇನಾಭಿಭವತಿ ನಾಸ್ತಿ ಮಾತೃಸಮೋ ಗುರುಃ |
ಗುರುರ್ಗರೀಯಾನ್ ಪಿತೃತೋ ಮಾತೃತಶ್ಚೇತಿ ಮೇ ಮತಿಃ ॥16॥
ತಾಯಿಯೊಬ್ಬಳೇ ಹತ್ತು ತಂದೆಗಳನ್ನು ಮೀರಿದವಳು. ಅಥವಾ ಸಮಗ್ರವಾದ ಭೂಮಿಯನ್ನೂ ಮೀರಿದವಳು. ಅವಳು ತನ್ನ ಗುರುತ್ವದಿಂದ ಎಲ್ಲರನ್ನೂ ಹಿಂದೆ ಹಾಕುತ್ತಾಳೆ. ತಾಯಿಗೆ ಸಮಾನವಾದ ಗುರುವಿಲ್ಲ. ವಿದ್ಯೋಪದೇಶವನ್ನು ಮಾಡುವ ಗುರುವು ತಂದೆಗಿಂತಲೂ ಮತ್ತು ತಾಯಿಗಿಂತಲೂ ಶ್ರೇಷ್ಠನಾದವನೆಂದು ನನ್ನ ಅಭಿಪ್ರಾಯ.
ಉಭೌ ಹಿ ಮಾತಾಪಿತರೌ ಜನ್ಮನ್ಯೇವೋಪಯುಜ್ಯತಃ |
ಶರೀರಮೇತೌ ಸೃಜತಃ ಪಿತಾ ಮಾತಾ ಚ ಭಾರತ |
ಆಚಾರ್ಯಶಿಷ್ಟಾ ಯಾ ಜಾತಿಃ ಸಾ ದಿವ್ಯಾ ಸಾಽಜರಾಮರಾ ॥17॥
ತಂದೆ ತಾಯಿಗಳಿಬ್ಬರೂ ಪುರುಷನ ಜನ್ಮದಲ್ಲಿ ಮಾತ್ರ ಉಪಯುಕ್ತರಾಗುತ್ತಾರೆ. ಎಲೈ ಭಾರತನೇ! ಈ ತಂದೆತಾಯಿಗಳು ಪುರುಷನ ಶರೀರವನ್ನು ಸೃಷ್ಟಿಸುತ್ತಾರೆ. ಆದರೆ ಆಚಾರ್ಯನಿಂದ ಉಂಟಾದ ಜನ್ಮವು ದಿವ್ಯವಾದುದು ಮತ್ತು ಅಜರಾಮರವಾ- ದುದು.
ಅವಧ್ಯಾ ಹಿ ಸದಾ ಮಾತಾ ಪಿತಾ ಚಾಪ್ಯಪಕಾರಿಣೌ |
ನ ಸ ದುಷ್ಯತಿ ತತ್ ಕೃತ್ವಾ ನ ಚ ತೇ ದೂಷಯಂತಿ ತಮ್ |
ಧರ್ಮಾಯ ಯತಮಾನಾನಾಂ ಪಿತೃದೇವಾಃ ಸಹರ್ಷಿಭಿಃ ॥18॥
ತಂದೆ ತಾಯಿಗಳು ಅಪಕಾರವನ್ನು ಮಾಡಿದರೂ ಅವರನ್ನು ಹೊಡೆಯ- ಬಾರದು. ಅವರು ಹೇಳಿದ ಕಾರ್ಯವನ್ನು ಮಾಡಿ ಅವರಿಗೆ ಹಿತವನ್ನು ಮಾಡು- ವುದರಲ್ಲಿ ಯಾವ ದೋಷವೂ ಇಲ್ಲ. ಅವರು ಅವನಿಗೆ ದೋಷವನ್ನುಂಟು ಮಾಡುವುದಿಲ್ಲ. ಧರ್ಮಕ್ಕಾಗಿ ಪ್ರಯತ್ನಪಡುವವನಿಗೆ ಪಿತೃದೇವತೆಗಳು ಋಷಿಗಳ ಜೊತೆಯಲ್ಲಿ ಸಹಾಯ ಮಾಡುತ್ತಾರೆ.
ಯ ಆವೃಣೋತ್ಯವಿತಥೇನ ಕರ್ಣಾ-
ವೃತಂ ಬ್ರುವನ್ನಮೃತಂ ಸಂಪ್ರಯಚ್ಛನ್ |
ತಂ ವೈ ಮನ್ಯೇ ಪಿತರಂ ಮಾತರಂ ಚ
ತಸ್ಮೈ ನ ದ್ರುಹ್ಯೇತ್ ಕೃತಮಸ್ಯ ಜಾನನ್ ॥19॥
ಯಾವ ಗುರುವು ಸತ್ಯವಾದ ಉಪದೇಶವನ್ನು ಮಾಡಿ, ಅಮೃತಪ್ರದಾನವನ್ನು ಮಾಡಿ ಕಿವಿಗಳನ್ನು ತುಂಬುತ್ತಾನೆಯೋ ಅವನೇ ತಂದೆ ಮತ್ತು ತಾಯಿಯೆಂದು ತಿಳಿಯುತ್ತೇನೆ. ಅವನು ಮಾಡಿದ ಉಪಕಾರವನ್ನು ತಿಳಿದವನು ಎಂದೂ ಅವನಿಗೆ ದ್ರೋಹವನ್ನು ಮಾಡಬಾರದು.
ವಿದ್ಯಾಂ ಶ್ರುತ್ವಾಯೇ ಗುರುಂ ನಾದ್ರಿಯಂತೇ
ಪ್ರತ್ಯಾಪನ್ನಾ ಮನಸಾ ಕರ್ಮಣಾ ವಾ |
ಯಥೈವ ತೇ ಗುರುಭಿರ್ಭಾವನೀಯಾ-
ಸ್ತಥಾ ತೇಷಾಂ ಗುರವೋಽಪ್ಯರ್ಚನೀಯಾಃ ॥20॥
ಗುರುವಿನಿಂದ ವಿದ್ಯೆಯನ್ನು ಪಡೆದು ಯಾರು ಮನಸ್ಸಿನಿಂದಾಗಲೀ ಕರ್ಮ- ದಿಂದಾಗಲೀ ಅವನಿಗೆ ಆದರವನ್ನು ಮಾಡುವುದಿಲ್ಲವೋ ಅವರು ಹೆಜ್ಜೆ ಹೆಜ್ಜೆಗೆ ಆಪತ್ತಿಗೆ ಸಿಲುಕುತ್ತಾರೆ. ಪುರುಷರು ತಮ್ಮನ್ನು ಹೇಗೆ ಶುಭದೃಷ್ಟಿಯಿಂದ ನೋಡ- ಬಯಸುತ್ತಾರೆಯೋ ಹಾಗೆ ಶಿಷ್ಯರೂ ಸಹ ಗುರುಗಳನ್ನು ಶುಭದೃಷ್ಟಿಯಿಂದ ಅರ್ಚಿಸಬೇಕು.
ತಸ್ಮಾತ್ ಪೂಜಯಿತವ್ಯಾಶ್ಚ ಸಂವಿಭಜ್ಯಾಶ್ಚ ಯತ್ನತಃ |
ಗುರವೋಽರ್ಚಯಿತವ್ಯಾಶ್ಚ ಪುರಾಣಂ ಧರ್ಮಮಿಚ್ಛತಾ ॥21॥
ಆದ್ದರಿಂದ ಗುರುಗಳಿಗೆ ತಮ್ಮ ಸಂಪತ್ತನ್ನು ಹಂಚಿ ಪೂಜಿಸಬೇಕು. ಪ್ರಾಚೀನ- ವಾದ ಧರ್ಮವನ್ನು ಬಯಸುವವನು ಗುರುಗಳನ್ನು ಅರ್ಚಿಸಬೇಕು.
ಯೇನ ಪ್ರೀತಾಶ್ಚ ಪಿತರಸ್ತೇನ ಪ್ರೀತಃ ಪಿತಾಮಹಃ |
ಪ್ರೀಣಾತಿ ಮಾತರಂ ಯೇನ ಪೃಥಿವೀ ತೇನ ಪೂಜಿತಾ ॥22॥
ಯಾವನು ತಂದೆಯನ್ನು ಪ್ರಸನ್ನಗೊಳಿಸುತ್ತಾನೆಯೋ ಅದರಿಂದ ಅವನು ಪಿತಾಮಹನನ್ನು ಸಂತೋಷಗೊಳಿಸುತ್ತಾನೆ. ಯಾವನು ತಾಯಿಯನ್ನು ಸಂತೋಷ- ಗೊಳಿಸುತ್ತಾನೆಯೋ ಅವನು ಪೃಥಿವಿಯನ್ನೇ ಪೂಜಿಸುತ್ತಾನೆ.
ಯೇನ ಪ್ರೀಣಾತ್ಯುಪಾಧ್ಯಾಯಂ ತೇನ ಸ್ಯಾದ್ ಬ್ರಹ್ಮ ಪೂಜಿತಮ್ |
ಮಾತೃತಃ ಪಿತೃತಶ್ಚೈವ ತಸ್ಮಾತ್ ಪೂಜ್ಯತಮೋ ಗುರುಃ |
ಋಷಯಶ್ಚ ಹಿ ದೇವಾಶ್ಚ ಪ್ರೀಯಂತೇ ಪಿತೃಭಿಃ ಸಹ ॥23॥
ಯಾವನು ಆಚಾರ್ಯನನ್ನು ಪೂಜಿಸುತ್ತಾನೆಯೋ ಅವನು ಬ್ರಹ್ಮನನ್ನೇ ಪೂಜಿ- ಸುತ್ತಾನೆ. ಆದ್ದರಿಂದ ಗುರುವು ತಂದೆಗಿಂತಲೂ, ತಾಯಿಗಿಂತಲೂ ಅತ್ಯಂತ ಪೂಜ್ಯ- ನಾದವನು. ಋಷಿಗಳು ಮತ್ತು ದೇವತೆಗಳು ಪಿತೃಗಳ ಜೊತೆಯಲ್ಲಿ ಗುರುಪೂಜೆ- ಯನ್ನು ಮಾಡಿದವನ ಮೇಲೆ ಪ್ರಸನ್ನರಾಗುತ್ತಾರೆ.

ನ ಕೇನಚನ ವೃತ್ತೇನ ಹ್ಯವಜ್ಞೇಯೋ ಗುರುರ್ಭವೇತ್ |
ನ ಚ ಮಾತಾ ನ ಚ ಪಿತಾ ತಾದೃಶೋ ಯಾದೃಶೋ ಗುರುಃ ॥24॥
ಯಾವ ನಡತೆಯಿಂದಲೂ ಗುರುವಿಗೆ ಅವಮಾನ ಮಾಡಬಾರದು. ಗುರುವಿನ ಮಹಿಮೆಯಂತಹದೋ ತಾಯಿಯ ಅಥವಾ ತಂದೆಯ ಮಹಿಮೆಯು ಅಂತಹು- ದಲ್ಲ.
ನ ತೇಽವಮಾನಮರ್ಹಂತಿ ನ ಚ ತೇ ದೂಷಯಂತಿ ತಮ್ |
ಗುರೂಣಾಮೇವ ಸತ್ಕಾರಂ ವಿದುರ್ದೇವಾಃ ಸಹರ್ಷಿಭಿಃ ॥25॥
ಅವರು ಅವಮಾನಕ್ಕೆ ಅರ್ಹರಲ್ಲ. ಅವರು ಆ ಪುರುಷನನ್ನು ದೂಷಿಸುವುದಿಲ್ಲ. ದೇವತೆಗಳು ಮತ್ತು ಋಷಿಗಳು ಗುರುಗಳ ಸತ್ಕಾರವನ್ನೇ ದೊಡ್ಡ ಧರ್ಮವೆಂದು ತಿಳಿಯುತ್ತಾರೆ.
ಉಪಾಧ್ಯಾಯಂ ಪಿತರಂ ಮಾತರಂ ಚ
ಯೇಽಭಿದ್ರುಹ್ಯಂತಿ ಮನಸಾ ಕರ್ಮಣಾ ವಾ |
ತೇಷಾಂ ಪಾಪಂ ಭ್ರೂಣಹತ್ಯಾವಿಶಿಷ್ಟಂ
ತಸ್ಮಾನ್ನಾನ್ಯಃ ಪಾಪಕೃದಸ್ತಿ ಲೋಕೇ ॥26॥
ಯಾರು ಉಪಾಧ್ಯಾಯನನ್ನಾಗಲೀ ತಂದೆತಾಯಿಗಳನ್ನಾಗಲೀ ಮನಸ್ಸಿನಿಂದ ಅಥವಾ ಕ್ರಿಯೆಯಿಂದ ದ್ರೋಹಕ್ಕೆ ಒಳಪಡಿಸುತ್ತಾರೆಯೋ ಅವರಿಗೆ ಭ್ರೂಣಹತ್ಯೆ- ಗಿಂತಲೂ ಅಧಿಕವಾದ ಪಾಪವು ಉಂಟಾಗುತ್ತದೆ. ಲೋಕದಲ್ಲಿ ಅವನಿಗಿಂತ ಹೆಚ್ಚು ಪಾಪವನ್ನು ಮಾಡಿದವನು ಇರುವುದಿಲ್ಲ.
ಮಿತ್ರದ್ರುಹಃ ಕೃತಘ್ನಸ್ಯ ಸ್ತ್ರೀಘ್ನಸ್ಯ ಪಿಶುನಸ್ಯ ಚ |
ಚತುರ್ಣಾಂ ವಯಮೇತೇಷಾಂ ನಿಷ್ಕೃತಿಂ ನಾನುಶುಶ್ರುಮಃ ॥17॥
ಮಿತ್ರದ್ರೋಹ, ಕೃತಘ್ನತೆ, ಸ್ತ್ರೀಹತ್ಯೆ, ಚಾಡಿಯನ್ನು ಹೇಳುವುದು ಈ ನಾಲ್ಕು ಪಾಪಗಳಿಗೆ ನಾವು ಪ್ರಾಯಶ್ಚಿತ್ತವನ್ನು ಕೇಳಿಲ್ಲ.
ಏತತ್ ಸರ್ವಮತಿದೇಶೇನ ಸೃಷ್ಟಂ
ಯತ್ ಕರ್ತವ್ಯಂ ಪುರುಷೇಣೇಹ ಲೋಕೇ |
ಏತಚ್ಛ್ರೇಯೋ ನಾನ್ಯದಸ್ಮಾದ್ ವಿಶಿಷ್ಟಂ
ಸರ್ವಾನ್ ಧರ್ಮಾನನುಸೃತ್ಯೈತದುಕ್ತಮ್ ॥28॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದಶಾಧಿಕಶತತಮೋಽಧ್ಯಾಯಃ ॥110॥
ಮನುಷ್ಯನು ಈ ಲೋಕದಲ್ಲಿ ಏನು ಮಾಡಬೇಕೆಂಬ ಇದೆಲ್ಲವನ್ನೂ ಶಾಸ್ತ್ರದ ಆದೇಶಕ್ಕೆ ಅನುಸಾರವಾಗಿ ಹೇಳಿದ್ದೇನೆ. ಇದೇ ಶ್ರೇಯಸ್ಕರವಾದುದು. ಇದಕ್ಕಿಂತ ದೊಡ್ಡ ಶ್ರೇಯಸ್ಕರವಾದುದು ಇನ್ನೊಂದಿಲ್ಲ. ಎಲ್ಲ ಧರ್ಮಗಳನ್ನೂ ಅನುಸರಿಸಿ ನಾನು ಈ ವಿಷಯವನ್ನು ನಿನಗೆ ಹೇಳಿದ್ದೇನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 110ನೆಯ ಅಧ್ಯಾಯವು ಮುಗಿಯಿತು.
0

111. ನೂರಹನ್ನೊಂದನೆಯ ಅಧ್ಯಾಯ
ಸತ್ಯಾನೃತವಿವೇಚನೆ
ಯುಧಿಷ್ಠಿರಃ
ಕಥಂ ಧರ್ಮೇ ಸ್ಥಾತುಮಿಚ್ಛನ್ ನರೋ ವರ್ತೇತ ಭಾರತ |
ವಿದ್ವನ್ ಜಿಜ್ಞಾಸಮಾನಾಯ ಪ್ರಬ್ರೂಹಿ ಭರತರ್ಷಭ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ! ಧರ್ಮದಲ್ಲಿಯೇ ಇರಬೇಕೆಂದು ಬಯಸುವ ಮನುಷ್ಯನು ಹೇಗೆ ನಡೆದುಕೊಳ್ಳಬೇಕು? ಇದನ್ನು ನನಗೆ ಹೇಳು.
ಸತ್ಯಂ ಚೈವಾನೃತಂ ಚೋಭೇ ಲೋಕಾನಾವೃತ್ಯ ತಿಷ್ಠತಃ |
ತಯೋಃ ಕಿಮಾಚರೇದ್ ರಾಜನ್ ಪುರುಷೋ ಧರ್ಮನಿಶ್ಚಿತಃ ॥2॥
ಎಲೈ ರಾಜನೇ! ಲೋಕವನ್ನು ಸತ್ಯ ಮತ್ತು ಅನೃತಗಳೆರಡೂ ಆವರಿಸಿ ನಿಂತಿವೆ. ಧರ್ಮನಿಶ್ಚಯವನ್ನುಳ್ಳ ಪುರುಷನು ಅವುಗಳಲ್ಲಿ ಯಾವುದನ್ನು ಮಾಡಬೇಕು?
ಕಿಂಸ್ವಿತ್ ಸತ್ಯಂ ಕಿಮನೃತಂ ಕಿಂಸ್ವಿದ್ ಧರ್ಮ್ಯಂ ಸನಾತನಮ್ |
ಕಸ್ಮಿನ್ ಕಾಲೇ ವದೇತ್ ಸತ್ಯಂ ಕಸ್ಮಿನ್ ಕಾಲೇಽನೃತಂ ವದೇತ್ ॥3॥
ಸತ್ಯವು ಯಾವುದು? ಅನೃತವು ಯಾವುದು? ಸನಾತನಧರ್ಮ ಯಾವುದು? ಯಾವ ಕಾಲದಲ್ಲಿ ಸತ್ಯವನ್ನು ನುಡಿಯಬೇಕು? ಯಾವ ಕಾಲದಲ್ಲಿ ಅನೃತವನ್ನು ನುಡಿಯಬೇಕು?
ಭೀಷ್ಮಃ
ಸತ್ಯಸ್ಯ ವಚನಂ ಸಾಧು ನ ಸತ್ಯಾದ್ ವಿದ್ಯತೇ ಪರಮ್ |
ಯದ್ ಭೂಲೋಕೇ ಸುದುರ್ಜ್ಞಾತಂ ತತ್ ತೇ ವಕ್ಷ್ಯಾಮಿ ಭಾರತ ॥4॥
ಭೀಷ್ಮರು ಸತ್ಯವನ್ನು ಮಾತನಾಡುವುದು ಒಳ್ಳೆಯದು (ಸುಲಭ); ಸತ್ಯಕ್ಕಿಂತ ಶ್ರೇಷ್ಠವಾದುದು ಇಲ್ಲ. ಎಲೈ ಭಾರತನೇ! ಭೂಲೋಕದಲ್ಲಿ ಯಾವುದು ಅತ್ಯಂತ ದುರ್ಜ್ಞೇಯವೋ ಅದನ್ನು ನಾನು ನಿನಗೆ ಹೇಳುವೆನು.

ಭವೇತ್ ಸತ್ಯಂ ನ ವಕ್ತವ್ಯಂ ವಕ್ತವ್ಯಮನೃತಂ ಭವೇತ್ |
ಯತ್ರಾನೃತಂ ಭವೇತ್ ಸತ್ಯಂ ಸತ್ಯಂ ವಾಪ್ಯನೃತಂ ಭವೇತ್ ॥5॥
ಎಲ್ಲಿ ಸತ್ಯವೇ ಅನೃತವಾಗುತ್ತದೆಯೋ, ಅಥವಾ ಅನೃತವೇ ಸತ್ಯವಾಗು- ತ್ತದೆಯೋ ಅಂತಹ ಕಡೆಯಲ್ಲಿ ಸತ್ಯವನ್ನು ಹೇಳಬಾರದು. ಅನೃತವನ್ನೇ ಹೇಳಬೇಕು.
ತಾದೃಶೇ ಮುಹ್ಯತೇ ಬಾಲೋ ಯತ್ರ ಸತ್ಯಮನಿಶ್ಚಿತಮ್ |
ಸತ್ಯಾನೃತೇ ವಿನಿಶ್ಚಿತ್ಯ ತತೋ ಭವತಿ ಧರ್ಮವಿತ್ ॥6॥
ಸತ್ಯವು ಅನುಷ್ಠಿತವಾದ ಅಂತಹ ಸ್ಥಳದಲ್ಲಿ ಬಾಲಕನು ಮೋಹಕ್ಕೆ ಒಳಗಾಗು- ತ್ತಾನೆ. ಸತ್ಯಾನೃತಗಳನ್ನು ನಿಶ್ಚಯಿಸಿದವನು ಧರ್ಮಜ್ಞನಾಗುತ್ತಾನೆ.
ಅಪ್ಯನಾರ್ಯೋಽಕೃತಪ್ರಜ್ಞಃ ಪುರುಷೋಽಪಿ ಸುದಾರುಣಃ |
ಸುಮಹತ್ ಪ್ರಾಪ್ನುಯಾತ್ ಪುಣ್ಯಂ ಬಲಾಕೋಽಂಧವಧಾದಿವ ॥7॥
ಅನಾರ್ಯನೂ, ಸುಶಿಕ್ಷಿತಪ್ರಜ್ಞೆಯಿಲ್ಲದವನೂ, ಕ್ರೂರಿಯೂ ಆದ ಪುರುಷನೂ ಸಹ ಬಲಾಕನೆಂಬ ಬೇಡನು ಅಂಧಪ್ರಾಣಿಯನ್ನು ಕೊಂದು ಸಂಪಾದಿಸಿದಂತೆ ದೊಡ್ಡ ಪುಣ್ಯವನ್ನು ಸಂಪಾದಿಸಿಯಾನು! (ಇದು ಕರ್ಣಪರ್ವದಲ್ಲಿ ಬರುವ ಕಥೆ - ಒಂದು ಕುರುಡಾದ ಮೃಗವು ಉಳಿದ ಪ್ರಾಣಿಗಳನ್ನೆಲ್ಲ ಅವುಗಳ ವಾಸನೆಯಿಂದಲೇ ತಿಳಿದು ಅವುಗಳನ್ನು ಕೊಲ್ಲುತ್ತಿದ್ದಿತು. ಬಲಾಕನೆಂಬ ವ್ಯಾಧನು ಆ ಕುರುಡುಪ್ರಾಣಿಯನ್ನು ಕೊಂದು ಉಳಿದ ಪ್ರಾಣಿಗಳಿಗೆ ಕ್ಷೇಮವನ್ನುಂಟುಮಾಡಿದನು.).
ಕಿಮಾಶ್ಚರ್ಯಂ ಚ ಯನ್ಮೂಢೋ ಧರ್ಮಕಾಮೋಽಪ್ಯಧರ್ಮವಿತ್ |
ಸುಮಹತ್ ಪ್ರಾಪ್ನುಯಾತ್ ಪುಣ್ಯಂ ಗಂಗಾಯಾಮಿವ ಕೌಶಿಕಃ ॥8॥
ಧರ್ಮವನ್ನು ಬಯಸುವವನು ಮೂಢನಾಗಿ ಅಧರ್ಮವನ್ನು ಸಂಪಾದಿಸುವು- ದರಲ್ಲಿ ಆಶ್ಚರ್ಯವಿಲ್ಲ. ಹಾಗೆಯೇ ಕ್ರೂರಿಯಾದವನೂ ಸಹ ಗಂಗಾತೀರದಲ್ಲಿನ ಗೂಬೆಯಂತೆ ದೊಡ್ಡ ಪುಣ್ಯವನ್ನು ಪಡೆದಾನು! (ಇದೂ ಕರ್ಣಪರ್ವದಲ್ಲಿ ಬರುವ ಕಥೆ ಗಂಗಾತೀರದಲ್ಲಿ ಒಂದು ವಿಷಸರ್ಪವು ತನ್ನ ಮೊಟ್ಟೆಗಳನ್ನು ಇಟ್ಟಿದ್ದಿತು. ಒಂದು ಗೂಬೆಯು ಅಲ್ಲಿಗೆ ಬಂದು ಆ ಮೊಟ್ಟೆಗಳನ್ನು ತಿಂದು ಅವುಗಳಿಂದ ಉಂಟಾಗಬಹುದಾಗಿದ್ದ ಅಪಾಯವನ್ನು ತಪ್ಪಿಸಿತು).
ತಾದೃಶೋಽಯಮನುಪ್ರಶ್ನೋ ಯತ್ರ ಧರ್ಮಃ ಸುದುರ್ವಚಃ |
ದುಷ್ಕರಃ ಪ್ರತಿಸಂಖ್ಯಾತುಂ ತರ್ಕೇಣಾತ್ರ ವ್ಯವಸ್ಯತಿ ॥9॥
ಎಲ್ಲಿ ಧರ್ಮವನ್ನು ತಿಳಿಯುವುದು ಕಷ್ಟವಾಗುತ್ತದೆಯೋ ಅಂತಹ ಸ್ಥಳದಲ್ಲಿ ನೀನು ಪ್ರಶ್ನೆಯನ್ನು ಮಾಡಿದ್ದೀಯೆ. ಇದು ಧರ್ಮ ಇದು ಅಧರ್ಮ ಎಂದು ಪಟ್ಟಿ ಮಾಡುವುದು ಸಾಧ್ಯವಿಲ್ಲ. ವಿಮರ್ಶೆ ಮಾಡಿ ಯಾವುದು ಧರ್ಮ ಯಾವುದು ಅಧರ್ಮ ಎಂದು ತಿಳಿಯಬೇಕು.
ಪ್ರಭವಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ |
ಯತ್ ಸ್ಯಾದಹಿಂಸಾಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥10॥
ಮನುಷ್ಯನ ಏಳಿಗೆಗಾಗಿ ಶಾಸ್ತ್ರಗಳಲ್ಲಿ ಧರ್ಮವು ಹೇಳಲ್ಪಟ್ಟಿದೆ. ಯಾವುದು ಅಹಿಂಸಾಯುಕ್ತವಾದುದೋ ಅದು ಧರ್ಮ ಎಂಬುದು ನಿಶ್ಚಿತವಾದುದು.
ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ |
ಯತ್ ಸ್ಯಾದಹಿಂಸಾಯುಕ್ತಶ್ಚ ಸ ಧರ್ಮ ಇತಿ ನಿಶ್ಚಯಃ ॥11॥
ಅಹಿಂಸಾ ಸತ್ಯಮಕ್ರೋಧಸ್ತಪೋ ದಾನಂ ದಮೋ ಮತಿಃ |
ಅನಸೂಯಾಪ್ಯಮಾತ್ಸರ್ಯಮನೀರ್ಷ್ಯಾ ಶೀಲಮೇವ ಚ ॥12॥
ಏಷ ಧರ್ಮಃ ಕುರುಶ್ರೇಷ್ಠ ಕಥಿತಃ ಪರಮೇಷ್ಠಿನಾ |
ಬ್ರಹ್ಮಣಾ ದೇವದೇವೇನ ಅಯಂ ಚೈವ ಸನಾತನಃ ॥13॥
ಅಹಿಂಸೆ, ಸತ್ಯ, ಅಕ್ರೋಧ, ತಪಸ್ಸು, ದಾನ, ದಮ, ಜ್ಞಾನ, ಅಸೂಯಾ- ರಾಹಿತ್ಯ, ಅಮಾತ್ಸರ್ಯ, ಶೀಲ ಎಲೈ ಕುರುಶ್ರೇಷ್ಠನೇ! ಇವು ದೇವ-
ದೇವನೂ ಪರಮೇಷ್ಠಿಯೂ ಆದ ಬ್ರಹ್ಮನಿಂದ ಹೇಳಲ್ಪಟ್ಟಿವೆ. ಇದು ಸನಾತನವಾದ ಧರ್ಮ.
ಅಸ್ಮಿನ್ ಧರ್ಮೇ ಸ್ಥಿತೋ ರಾಜನ್ ನರೋ ಭದ್ರಾಣಿ ಪಶ್ಯತಿ |
ಶ್ರೌತೋ ವಧಾತ್ಮಕೋ ಧರ್ಮ ಅಹಿಂಸಾ ಪಾರಮಾರ್ಥಿಕಃ ॥14॥
ಎಲೈ ರಾಜನೇ! ಈ ಧರ್ಮದಲ್ಲಿ ವ್ಯವಸ್ಥಿತನಾದವನು ಶುಭವನ್ನು ಕಾಣುತ್ತಾನೆ. ಅಹಿಂಸೆಯು ಶ್ರೇಷ್ಠವಾದ ಧರ್ಮ. ಆದರೂ ಶ್ರುತಿಯಲ್ಲಿ ಯಜ್ಞಗಳಲ್ಲಿ ಹೇಳಿದ ಪ್ರಾಣಿವಧೆಯು ಧರ್ಮವಾಗುತ್ತದೆ.
ಧಾರಣಾದ್ ಧರ್ಮ ಇತ್ಯಾಹುರ್ಧರ್ಮೇಣ ವಿಧೃತಾಃ ಪ್ರಜಾಃ |
ಯತ್ ಸ್ಯಾದ್ ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥15॥
ಧಾರಣೆಯನ್ನು ಮಾಡುವುದು ಧರ್ಮ ಎಂದು ಹೇಳುತ್ತಾರೆ. ಧರ್ಮದಿಂದಲೇ ಎಲ್ಲಾ ಪ್ರಜೆಗಳೂ ಧರಿಸಲ್ಪಟ್ಟಿದ್ದಾರೆ. ಯಾವುದು ಜಗತ್ತಿನ ಧಾರಣೆಗೆ ಪ್ರಯೋ- ಜಕವೋ ಅದು ಧರ್ಮವೆಂಬುದಾಗಿ ನಿಶ್ಚಿತವಾದುದು.
ಶ್ರುತಿರ್ಧರ್ಮ ಇತಿ ಹ್ಯೇಕೇ ನೇತ್ಯಾಹುರಪರೇ ಜನಾಃ |
ನ ತು ತತ್ಪ್ರತ್ಯಸೂಯಾಮೋ ನ ಹಿ ಸರ್ವಂ ವಿಧೀಯತೇ ॥16॥
ಶ್ರುತಿಯಲ್ಲಿ ಹೇಳಿದುದು ಧರ್ಮ ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಹಾಗಲ್ಲ ಎಂದು ಹೇಳುತ್ತಾರೆ. ನಾನು ಇಬ್ಬರನ್ನೂ ನಿರಾಕರಿಸುವುದಿಲ್ಲ. ಏಕೆಂದರೆ ಶ್ರುತಿಯಲ್ಲಿ ಎಲ್ಲವೂ ಹೇಳಲ್ಪಟ್ಟಿರುವುದಿಲ್ಲ.
ಯೇಽನ್ಯಾಯೇನ ಜಿಹೀರ್ಷಂತೋ ಧನಮಿಚ್ಛಂತಿ ಕರ್ಹಿಚಿತ್ |

ತೇಭ್ಯಸ್ತನ್ನ ತದಾಖ್ಯೇಯಂ ಸ ಧರ್ಮ ಇತಿ ನಿಶ್ಚಯಃ ॥17॥
ಯಾವನು ಅನ್ಯಾಯದಿಂದ ಇನ್ನೊಬ್ಬರ ಧನವನ್ನು ಅಪಹಾರ ಮಾಡುತ್ತಾ ಧನವನ್ನು ಬಯಸುತ್ತಾನೆಯೋ ಅವನಿಗೆ ನನ್ನ ಬಳಿ ಧನವಿಲ್ಲ ಎಂದು ಹೇಳಬೇಕು. ಆ ವಚನವು ಅನೃತವಾದರೂ ಧರ್ಮವೆಂಬುದು ನಿಶ್ಚಿತವಾದುದು.
ಅಕೂಜನೇನ ಚೇನ್ಮೋಕ್ಷೋ ನಾತ್ರ ಕೂಜೇತ್ ಕಥಂಚನ |
ಅವಶ್ಯಂ ಕೂಜಿತವ್ಯೇ ವಾ ಶಂಕೇರನ್ ವಾಪ್ಯಕೂಜನಾತ್ ॥18॥
ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ವಿಚಾರಿತಮ್ |
ಯಃ ಪಾಪೈಃ ಸಹ ಸಂಬಂಧಾನ್ಮುಚ್ಯತೇ ಶಪಥಾದಪಿ ॥19॥
ಚೋರರು ಬಂದು ಧನಿಕನೆಲ್ಲಿ ಎಂದು ಕೇಳಿದಾಗ ಮಾತನಾಡದೇ ಸುಮ್ಮ- ನಿದ್ದರೆ ಕಳ್ಳರಿಂದ ಬಿಡುಗಡೆ ಹೊಂದುವುದಾದರೆ ಏನೂ ಮಾತನಾಡದೇ ಮೌನವಾಗಿರಬೇಕು. ಮಾತನಾಡದಿದ್ದರೆ ಕಳ್ಳರು (ಚೋರರು) ಶಂಕಿಸುತ್ತಾರೆ ಎಂದು ತಿಳಿದು ಮಾತನಾಡಲೇ ಬೇಕಾದರೆ ಧನಿಕನು ಹಣವನ್ನು ಬೇರೆ ಕಡೆ ಇಟ್ಟಿದ್ದಾನೆಂದು ಅಥವಾ ಧನಿಕನ ಬಳಿ ಈಗ ಹಣವೇ ಇಲ್ಲವೆಂದು ಹೇಳಬೇಕು. ಅಲ್ಲಿ ಸತ್ಯವನ್ನು ಹೇಳುವುದಕ್ಕಿಂತ ಸುಳ್ಳನ್ನು ಹೇಳುವುದೇ ಶ್ರೇಯಸ್ಕರವೆಂದು ನಿಶ್ಚಿತವಾದುದು. ಕಾಡಿನಲ್ಲಿ ಹಣಕ್ಕಾಗಿ ಕಳ್ಳರಿಂದ ಹಿಡಿಯಲ್ಪಟ್ಟಾಗ ನನ್ನನ್ನು ಬಿಟ್ಟು ಬಿಡು. ಅನಂತರ ಧನವನ್ನು ಕೊಡುತ್ತೇನೆ ಎಂದು ಶಪಥಮಾಡಿ ಹೇಳಬೇಕು. ಅನಂತರ ಆ ಧನವನ್ನು ಕೊಡದಿದ್ದರೂ ಆ ಶಪಥವು ಅನೃತವಚನದೋಷಕ್ಕೆ ಗುರಿಯಾಗುವುದಿಲ್ಲ ಲಕ್ಷಾಲಂಕಾರ.
ಅಶಕ್ಯೋಽಸೌ ವರ್ಧಯೇಚ್ಚೇತ್ ಕುರ್ಯಾದೇವಾವಿಚಾರಯನ್ |
ಅಬುದ್ಧ್ಯಾಽನುಸರೇದ್ ದೋಷಂ ಶ್ರೇಯಸ್ತತ್ರಾನೃತಂ ಭವೇತ್ ॥20॥
ಪಾಪಿಗಳಿಗೆ ಧನವನ್ನು ಕೊಟ್ಟರೆ ತನ್ನ ಶರೀರಕ್ಕೆ ಬಾಧೆಯಿಲ್ಲದಂತಾಗುತ್ತದೆ ಎಂದಾದರೆ ಪಾಪಿಷ್ಠರಿಗೂ ದ್ರವ್ಯವನ್ನು ಕೊಡಬೇಕು. ಅದು ಪುಣ್ಯವನ್ನೇ ಹೆಚ್ಚಿಸು- ತ್ತದೆ. ದೋಷದಿಂದ ಉಂಟಾಗುವ ಧನಾಪಹಾರಾದಿದೋಷಗಳನ್ನು ಮನಸ್ಸಿಗೆ ತಂದುಕೊಳ್ಳದೇ ಅವರನ್ನು ಅನುಸರಿಸಬೇಕು. ಪಾಪವೆಂಬ ನಿಶ್ಚಯವನ್ನು ಹೊಂದಿ ಚೋರರ ಭಯದಿಂದ ಅನೃತವನ್ನು ಹೇಳಿದರೂ ಅದು ದೋಷವಾಗುವುದಿಲ್ಲ ಲಕ್ಷಾಲಂಕಾರ.
ನ ಸ್ತೇನೈಃ ಸಹ ಸಂಬಂಧಾನ್ಮುಚ್ಯತೇ ಶಪಥಾದಪಿ |
ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ಹಿ ಧಾರಣಾ ॥21॥
ಚೋರರ ಕೈಯಲ್ಲಿ ಸಿಲುಕಿದಾಗ ಸತ್ಯಶಪಥವನ್ನು ಮಾಡಿದರೂ ಅವರಿಂದ ಬಿಡುಗಡೆ ದೊರೆಯದಿದ್ದರೆ ಅಲ್ಲಿ ಸತ್ಯಕ್ಕಿಂತಲೂ ಸುಳ್ಳನ್ನು ಹೇಳುವುದೇ ಶ್ರೇಷ್ಠವೆಂದು ನಿಶ್ಚಿತವಾದುದು.
ನ ಚ ತೇಭ್ಯೋ ಧನಂ ದೇಯಂ ಶಕ್ಯೇ ಸತಿ ಕಥಂಚನ |
ಪಾಪೇಭ್ಯೋ ಹಿ ಧನಂ ದತ್ತಂ ದಾತಾರಮಪಿ ಪೀಡಯೇತ್ ॥22॥
ಸಾಧ್ಯವಾದರೆ ಚೋರರಿಗೆ ಧನವನ್ನು ಕೊಡಬಾರದು. ಪಾಪಿಗಳಿಗೆ ಕೊಟ್ಟ ಧನವು ಕೊಟ್ಟವನನ್ನು ಪೀಡಿಸುತ್ತದೆ.
ಸ್ವಶರೀರೋಪರೋಧೇನ ಧನಮಾದಾತುಮಿಚ್ಛತಃ |
ಸತ್ಯಸಂಪ್ರತಿಪತ್ತ್ಯರ್ಥಂ ಯೇ ಬ್ರೂಯುಃ ಸಾಕ್ಷಿಣಃ ಕ್ವಚಿತ್ |
ಅನುಕತ್ವ ತತ್ರ ತದ್ ವಾಚ್ಯಂ ಸರ್ವೇ ತೇಽನೃತವಾದಿನಃ ॥23॥
ತನ್ನವರ ಬಂಧನಾದಿಗಳನ್ನು ಮಾಡಿ ಧನವನ್ನು ಅಪಹರಿಸಲು ಬಂದ ಚೋರ- ರನ್ನು ಕುರಿತು ಅವರು(ರಿಗೆ) ನನಗೆ ಧನವಿಲ್ಲ ಎಂಬ ವಿಷಯದಲ್ಲಿ ಇವರೆಲ್ಲರೂ ಸಾಕ್ಷಿಗಳು ಎಂದು ಹೇಳಬೇಕು. ಅವರೆಲ್ಲರೂ ಹೌದು ಎಂದು ಹೇಳಬೇಕು. ಇಲ್ಲದಿದ್ದರೆ (ಸುಮ್ಮನಿದ್ದರೆ) ಅವರಿಗೆಲ್ಲಾ ಅನೃತವಚನದೋಷವು ಬರುವುದು ಲಕ್ಷಾಲಂಕಾರ.
ಪ್ರಾಣಾತ್ಯಯೇ ವಿವಾಹೇ ಚ ವಕ್ತವ್ಯಮನೃತಂ ಭವೇತ್ |
ಅರ್ಥಸ್ಯ ರಕ್ಷಣಾರ್ಥಾಯ ಪರೇಷಾಂ ಧರ್ಮಕಾರಣಾತ್ |
ಪರೇಷಾಂ ಧರ್ಮಮಾಕಾಂಕ್ಷನ್ ನೀಚಃ ಸ್ಯಾದ್ ಧರ್ಮಭಿಕ್ಷುಕಃ ॥24॥
ಪ್ರಾಣಸಂಕಟಕಾಲದಲ್ಲಿ (ಪ್ರಾಣವನ್ನು ಉಳಿಸಲು) ಮತ್ತು ವಿವಾಹ- ಸಂದರ್ಭದಲ್ಲಿ (ವಿವಾಹವನ್ನು ಸಂಘಟಿಸಲು) ಅನೃತವನ್ನು ಹೇಳಬಹುದು. ಧರ್ಮಕ್ಕಾಗಿ ತೆಗೆದಿಟ್ಟ ಇನ್ನೊಬ್ಬರ ಧನವನ್ನು ರಕ್ಷಿಸುವುದಕ್ಕಾಗಿಯೂ ಅನೃತವನ್ನು ಹೇಳಬಹುದು. ಆದರೆ ಇನ್ನೊಬ್ಬರಿಗೆ ಧರ್ಮವುಂಟಾಗಲಿ ಎಂಬ ಅಭಿಪ್ರಾಯದಿಂದ ಧನವನ್ನು ತೆಗೆದುಕೊಂಡು ಧರ್ಮಾನುಷ್ಠಾನ ಮಾಡಿ ಅದನ್ನು ಮಾರುವ ನೀಚನು ಧರ್ಮಭಿಕ್ಷುಕ ಎನಿಸುತ್ತಾನೆ.
ಪ್ರತಿಶ್ರುತ್ಯ ತು ದಾತವ್ಯಂ ಸ್ವಕಾರ್ಯಶ್ಚೇದ್ ಬಲಾತ್ಕೃತಃ |
ಧನಬಲದಿಂದ ಇನ್ನೊಬ್ಬನಿಂದ ಕಾರ್ಯವನ್ನು ಮಾಡಿಸಿಕೊಂಡವನು ಮೊದಲು ವಾಗ್ದಾನ ಮಾಡಿದ ಧನವನ್ನು ಕೊಡಬೇಕು. ಇನ್ನೊಬ್ಬನ ಕೈಯ್ಯಲ್ಲಿ ದುಡಿಸಿ- ಕೊಂಡವನು ಅವನಿಗೆ ಯೋಗ್ಯವಾದ ಧನವನ್ನು ಮೊದಲು ಮಾತನಾಡಿದಂತೆ ಕೊಡಬೇಕು ಎಂದು ಅಭಿಪ್ರಾಯ.
ಯಃ ಕಶ್ಚಿದ್ ಧರ್ಮಸಮಯಾತ್ ಪ್ರಚ್ಯುತೋಽಧರ್ಮಮಾಸ್ಥಿತಃ ॥25॥
ಶಠಃ ಸ್ವಧರ್ಮಮುತ್ಸೃಜ್ಯ ತಮಿಚ್ಛೇದುಪಜೀವಿತುಮ್ |
ಸರ್ವೋಪಾಯೈರ್ನಿಯಂತವ್ಯಃ ಪಾಪೋ ನಿಕೃತಿಜೀವನಃ ॥26॥
ಯಾವನು ಧರ್ಮಮಾರ್ಗವನ್ನು ಬಿಟ್ಟು ಅಧರ್ಮಮಾರ್ಗವನ್ನು ಆಶ್ರಯಿಸು- ತ್ತಾನೆಯೋ ಅವನು ತನ್ನ ಧರ್ಮವನ್ನು ಬಿಟ್ಟು ತನ್ನ ಜೀವನೋಪಾಯಕ್ಕಾಗಿ ಇನ್ನೊಬ್ಬನಿಗಾಗಿ ಧರ್ಮವನ್ನು ಆಚರಿಸುವುದಿದ್ದರೆ ಅವನನ್ನು ಸರ್ವೋಪಾಯ- ಗಳಿಂದಲೂ ನಿಯಂತ್ರಿಸಬೇಕು. ಅಂತಹವನು ಪಾಪಿಯಾದವನು ಮತ್ತು ನೀಚ ಜೀವನವನ್ನು ಮಾಡುವವನು. (ತಾನೂ ಧರ್ಮಾಚರಣೆಯನ್ನು ಮಾಡಿ ಇನ್ನೊಬ್ಬ- ನಿಗಾಗಿಯೂ ಧರ್ಮಾಚರಣೆಯನ್ನು ಮಾಡಬಹುದು. ತನಗೆ ಮಂತ್ರಾದಿಗಳು ತಿಳಿದಿವೆ ಎಂಬ ಕಾರಣದಿಂದ ತಾನು

ಭ್ರಷ್ಟನಾದರೂ ಇನ್ನೊಬ್ಬನಿಗಾಗಿ ಮಾಡುವ- ವನು ನೀಚನಾದವನು ಎಂದು ಅಭಿಪ್ರಾಯ).
ಧನಮಿತ್ಯೇವ ಪಾಪಾನಾಂ ಸರ್ವೇಷಾಮಿಹ ನಿಶ್ಚಯಃ |
ಯೇಽವಿಷಹ್ಯಾ ಹ್ಯಸಂಭೋಜ್ಯಾ ನಿಕೃತ್ಯಾ ಪತನಂ ಗತಾಃ ॥27॥
ಯಾರು ಸಹಿಸಲು ಅಸಾಧ್ಯರಾಗಿ ಮೋಸಗಾರರಾಗಿ ಪತನವನ್ನು ಹೊಂದಿ- ರುತ್ತಾರೆಯೋ ಅಂತಹ ಪಾಪಿಗಳಿಗೆಲ್ಲರಿಗೂ ಧನವನ್ನು ಸಂಪಾದಿಸಿದರೆ ಆಯಿತು ಅದು ಹೇಗಾದರೂ ಬರಲಿ ಎಂಬ ನಿಶ್ಚಯವಿರುತ್ತದೆ.
ಚ್ಯುತಾ ದೇವಮನುಷ್ಯೇಭ್ಯೋ ಯಥಾ ಪ್ರೇತಾಸ್ತಥೈವ ತೇ |
ಧನಾದಾನಾದ್ ದುಃಖತರಂ ಜೀವಿತಾದ್ ವಿಪ್ರಯೋಜನಮ್ ॥28॥
ಅವರು ದೇವಲೋಕದಿಂದಲೂ ಮತ್ತು ಮನುಷ್ಯಲೋಕದಿಂದಲೂ ಚ್ಯುತ- ರಾಗಿ ಪ್ರೇತಗಳಂತೆ ಇರುತ್ತಾರೆ. ಧನಾಪಹಾರಕ್ಕಿಂತ ದುಃಖಕರವಾದುದು ವಧೆ.
ಅಯಂ ವೋ ರೋಚತಾಂ ಧರ್ಮ ಇತಿ ವಾಚ್ಯಃ ಪ್ರಯತ್ನತಃ |
ನ ಕಶ್ಚಿದಸ್ತಿ ಪಾಪಾನಾಂ ಧರ್ಮ ಇತ್ಯೇಷ ನಿಶ್ಚಯಃ ॥29॥
ಪಾಪಿಗಳಿಗೆ ಯಾವ ಧರ್ಮವೂ ಇಲ್ಲ ಎಂಬುದು ನಿಶ್ಚಿತವಾದುದು. ಆದರೂ ಪ್ರಯತ್ನಪಟ್ಟು ನೀವು ಈ ಧರ್ಮವನ್ನು ಆಶ್ರಯಿಸಿ ಎಂದು ಅವರಿಗೆ ಹೇಳಬೇಕು.
ತಥಾಗತಂ ಚ ಯೋ ಹನ್ಯಾನ್ನಾಸೌ ಪಾಪೇನ ಲಿಪ್ಯತೇ |
ಸ್ವಕರ್ಮಣಾ ಹತಂ ಹಂತಿ ಹತ ಏವ ಸ ಹನ್ಯತೇ |
ತೇಷು ಯಃ ಸಮಯಂ ಕಶ್ಚಿತ್ ಕುರ್ವೀತ ಹತಬುದ್ಧಿಷು ॥30॥
ಅಂತಹ ಪಾಪಿಗಳನ್ನು ಯಾವನು (ಯಾವ ರಾಜನು) ಕೊಲ್ಲುತ್ತಾನೆಯೋ ಅಂತಹವನಿಗೆ ಪಾಪಲೇಪವು ಉಂಟಾಗುವುದಿಲ್ಲ. ಏಕೆಂದರೆ, ತನ್ನ ನೀಚಕರ್ಮ- ದಿಂದ ಮೊದಲೇ ಹತನಾದ ಅವನನ್ನು ಇವನು ಕೊಂದಿರುತ್ತಾನೆ. ಕೆಲವರು ಒಟ್ಟಿಗೆ ಸೇರಿ ನಾವು ಈ ಅಧರ್ಮಿಗೆ ಶಿಕ್ಷೆಯನ್ನು ಮಾಡಲು ಅವಕಾಶ ಕೊಡುವುದಿಲ್ಲ ಎಂದು ನಿಶ್ಚಯವನ್ನು ಮಾಡಿಕೊಂಡರೆ ಅಂತಹ ದುರ್ಬುದ್ಧಿಯುಳ್ಳವರು ಪಾಪಿಗಳೇ ಸರಿ. (ಅಂತಹ ದುರ್ಬುದ್ಧಿಯುಳ್ಳ ಪಾಪಿಗಳನ್ನು ಕೊಲ್ಲುವ ಪ್ರತಿಜ್ಞೆಯನ್ನು ಮಾಡುವವರು ಧರ್ಮಾತ್ಮರಾದವರು).
ಯಥಾ ಕಾಕಶ್ಚ ಗೃಧ್ರಶ್ಚ ತಥೈವೋಪಧಿಜೀವಿನಃ |
ಊರ್ಧ್ವಂ ದೇಹವಿಮೋಕ್ಷಾಂತೇ ಭವಂತ್ಯೇತಾಸು ಯೋನಿಷು ॥31॥
ಕಳ್ಳರು ಕಾಗೆಗಳಂತೆ ಮತ್ತು ಗೂಬೆಗಳಂತೆ ಇರುವವರು. ಅವರು ದೇಹ- ತ್ಯಾಗವನ್ನು ಮಾಡಿದ ಮೇಲೆ ಆ ಯೋನಿಗಳಲ್ಲಿಯೇ ಜನಿಸುತ್ತಾರೆ.
ಯಸ್ಮಿನ್ ಯಥಾ ವರ್ತತೇ ಯೋ ಮನುಷ್ಯ-
ಸ್ತಸ್ಮಿಂಸ್ತಥಾ ವರ್ತಿತವ್ಯಂ ಸ ಧರ್ಮಃ |
ಮಾಯಾಚಾರೋ ಮಾಯಯಾ ವರ್ತಿತವ್ಯಃ
ಸಾಧ್ವಾಚಾರಃ ಸಾಧುನಾ ಪ್ರತ್ಯುದೇಯಃ ॥32॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕದಶಾಧಿಕಶತತಮೋಽಧ್ಯಾಯಃ ॥111॥
ಯಾವನು ತನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಾನೆಯೋ ಅವನ ವಿಷಯದಲ್ಲಿ ಹಾಗೆಯೇ ನಡೆದುಕೊಳ್ಳುವುದು ಧರ್ಮ. ಕಪಟವನ್ನು ಮಾಡುವವನ ಜೊತೆಯಲ್ಲಿ ಕಪಟದಿಂದಲೇ ನಡೆದುಕೊಳ್ಳಬೇಕು. ಒಳ್ಳೆಯ ರೀತಿ ನಡೆದುಕೊಳ್ಳು- ವವನ ಜೊತೆಯಲ್ಲಿ ಒಳ್ಳೆಯ ರೀತಿಯಿಂದಲೇ ನಡೆದುಕೊಳ್ಳಬೇಕು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 111ನೆಯ ಅಧ್ಯಾಯವು ಮುಗಿಯಿತು.
0

112. ನೂರಹನ್ನೆರಡನೆಯ ಅಧ್ಯಾಯ
ಕಷ್ಟಗಳನ್ನು ದಾಟುವ ಉಪಾಯಕಥನ

ಯುಧಿಷ್ಠಿರಃ
ಕ್ಲಿಶ್ಯಮಾನೇಷು ಭೂತೇಷು ತೈಸ್ತೈರ್ಭಾವೈಸ್ತತಸ್ತತಃ |
ದುರ್ಗಾಣ್ಯತಿತರೇದ್ ಯೇನ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ! ಬೇರೆ ಬೇರೆ ಕಾರಣಗಳಿಂದ ಎಲ್ಲ ಮಾನವರೂ ಕ್ಲೇಶಕ್ಕೆ ಒಳಗಾಗಿರುವಾಗ ಯಾವುದರಿಂದ ಅಂತಹ ಕಷ್ಟವನ್ನು ದಾಟುತ್ತಾರೆ ಎಂದು ನನಗೆ ಹೇಳು.
ಭೀಷ್ಮಃ
ಆಶ್ರಮೇಷು ಯಥೋಕ್ತೇಷು ಯಥೋಕ್ತಂ ಯೇ ದ್ವಿಜಾತಯಃ |
ವರ್ತಂತೇ ಸಂಯತಾತ್ಮಾನೋ ದುರ್ಗಾಣ್ಯತಿತರಂತಿ ತೇ ॥2॥
ಭೀಷ್ಮರು ಯಾವ ಬ್ರಾಹ್ಮಣರು ವೇದಾ(ಶಾಸ್ತ್ರಾ)ನುಸಾರಿಯಾದ ಆಶ್ರಮ- ಗಳಲ್ಲಿ ಶಾಸ್ತ್ರರೀತಿಯಲ್ಲಿ ಸಂಯಮದಿಂದ ವಾಸಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.

ಯೇ ದಂಭಾನ್ನ ಜಪಂತಿ ಸ್ಮ ಯೇಷಾಂ ವೃತ್ತಿಶ್ಚ ಸಂಯತಾ |
ವಿಷಯಾಂಶ್ಚ ನಿಗೃಹ್ಣಂತಿ ದುರ್ಗಾಣ್ಯತಿತರಂತಿ ತೇ ||3||
ಯಾರು ಡಂಭದಿಂದ ಜಪವನ್ನು ಮಾಡುವುದಿಲ್ಲವೋ (ಪ್ರಾಮಾಣಿಕವಾಗಿ ಜಪವನ್ನುಮಾಡುತ್ತಾರೆಯೋ) ಯಾರ ಜೀವನ ರೀತಿಯು ಸಂಯಮದಿಂದ ಕೂಡಿ- ರುತ್ತದೆಯೋ, ಯಾರು ಇಂದ್ರಿಯಗಳನ್ನು ವಿಷಯಗಳಿಂದ ನಿಗ್ರಹಿಸುತ್ತಾರೆಯೋ ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ವಾಸಯಂತ್ಯತಿಥೀನ್ ನಿತ್ಯಂ ನಿತ್ಯಂ ಯೇ ಚಾನಸೂಯಕಾಃ |
ನಿತ್ಯಂ ಸ್ವಾಧ್ಯಾಯಶೀಲಾಶ್ಚ ದುರ್ಗಾಣ್ಯತಿತರಂತಿ ತೇ ||4||
ಯಾರು ಮನೆಯಲ್ಲಿ ಅತಿಥಿಗಳನ್ನು ವಾಸಿಸುವಂತೆ ಮಾಡುತ್ತಾರೆಯೋ, ನಿತ್ಯವೂ ಅಸೂಯಾರಹಿತರಾಗಿರುತ್ತಾರೆಯೋ, ನಿತ್ಯವೂ ಸ್ವಾಧ್ಯಾಯಶೀಲರಾಗಿ- ರುತ್ತಾರೆಯೋ ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ಮಾತಾಪಿತ್ರೋಶ್ಚ ಯೇ ವೃತ್ತಿಂ ವರ್ತಂತೇ ಧರ್ಮಕೋವಿದಾಃ |
ವರ್ಜಯಂತಿ ದಿವಾಸ್ವಪ್ನಂ ದುರ್ಗಾಣ್ಯತಿತರಂತಿ ತೇ ||5||
ಧರ್ಮಕೋವಿದರಾದ ಯಾರು ತಂದೆತಾಯಿಗಳ ಸೇವೆಯನ್ನು ಮಾಡು- ತ್ತಾರೋ, ದಿವಾಸ್ವಾಪವನ್ನು ಪರಿತ್ಯಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಸ್ವೇಷು ದಾರೇಷು ವರ್ತಂತೇ ನ್ಯಾಯವೃತ್ತಿಷ್ವೃತಾವೃತೌ |
ಅಗ್ನಿಹೋತ್ರಪರಾಃ ಸಂತೋ ದುರ್ಗಾಣ್ಯತಿತರಂತಿ ತೇ ||6||
ಯಾರು ನ್ಯಾಯವಾದ ನಡತೆಯನ್ನು ಹೊಂದಿದ ತಮ್ಮ ಪತ್ನಿಯರಲ್ಲಿ ಋತು- ಗಾಮಿಗಳಾಗಿರುತ್ತಾರೆಯೋ,
ಅಗ್ನಿಹೋತ್ರಪರರಾಗಿರುತ್ತಾರೆಯೋ ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ಯೇ ನ ಲೋಭಾನ್ನಯಂತ್ಯರ್ಥಾನ್ ರಾಜಾನೋ ರಜಸಾವೃತಾಃ |
ವಿಷಯಾನ್ ಪರಿರಕ್ಷಂತೋ ದುರ್ಗಾಣ್ಯತಿತರಂತಿ ತೇ ||7||
ಯಾವ ರಾಜರು ಆಸೆಗೆ ಒಳಗಾಗಿ ಲೋಭದಿಂದ ಪ್ರಜೆಗಳ ಧನವನ್ನು ಸಂಗ್ರಹಿಸದೆ ದೇಶವನ್ನು ರಕ್ಷಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಆಹವೇಷು ಚ ಯೇ ಶೂರಾಸ್ತ್ಯಕ್ತ್ವಾ ಮರಣಜಂ ಭಯಮ್ |
ಧರ್ಮೇಣ ಜಯಮಿಚ್ಛಂತೋ ದುರ್ಗಾಣ್ಯತಿತರಂತಿ ತೇ ||8||
ಯಾರು ಯುದ್ಧದಲ್ಲಿ ಶೂರರೋ ಮರಣಭಯವನ್ನು ತ್ಯಜಿಸಿ ಧರ್ಮ- ಯುದ್ಧದಿಂದ ಜಯವನ್ನು ಬಯಸುವರೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಪಾಪಾನಿ ನ ಕುರ್ವಂತಿ ಕರ್ಮಣಾ ಮನಸಾ ಗಿರಾ |
ನಿಕ್ಷಿಪ್ತದಂಡಾ ಭೂತೇಷು ದುರ್ಗಾಣ್ಯತಿತರಂತಿ ತೇ ||9||
ಯಾರು ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ, ಕರ್ಮದಿಂದಾಗಲೀ ಪಾಪವನ್ನು ಮಾಡುವುದಿಲ್ಲವೋ ಪ್ರಾಣಿಗಳಿಗೆ ಹಿಂಸೆಯನ್ನುಂಟುಮಾಡುವುದಿ- ಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ವದಂತೀಹ ಸತ್ಯಾನಿ ಪ್ರಾಣತ್ಯಾಗೇಪ್ಯುಪಸ್ಥಿತೇ |
ಪ್ರಮಾಣಭೂತಾ ಭೂತಾನಾಂ ದುರ್ಗಾಣ್ಯತಿತರಂತಿ ತೇ ||10||
ಯಾರು ಪ್ರಾಣತ್ಯಾಗವು ಸನ್ನಿಹಿತವಾದರೂ ಸತ್ಯವನ್ನೇ ನುಡಿಯುತ್ತಾರೆಯೋ, ಎಲ್ಲಾ ಜೀವರಿಗೂ ಆದರ್ಶಪ್ರಾಯರಾಗಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಅನಧ್ಯಾಯೇಷು ಯೇ ವಿಪ್ರಾಃ ಸ್ವಾಧ್ಯಾಯಂ ನೈವ ಕುರ್ವತೇ |
ತಪೋನಿತ್ಯಾಃ ಸುಮನಸಃ ದುರ್ಗಾಣ್ಯತಿತರಂತಿ ತೇ ||11||
ಯಾವ ವಿಪ್ರರು ಅನಧ್ಯಯನಕಾಲದಲ್ಲಿ ವೇದಾಧ್ಯಯನವನ್ನು ಮಾಡದೇ ತಪಸ್ಸಿನಲ್ಲಿ ನಿರತರಾಗಿ ಒಳ್ಳೆಯ ಮನಸ್ಸನ್ನು ಹೊಂದಿರುತ್ತಾರೆಯೋ ಅವರು ಕಷ್ಟ- ಗಳನ್ನು ದಾಟುತ್ತಾರೆ.
ಕರ್ಮಾಣ್ಯಕುಹಕಾರ್ಥಾನಿ ಯೇಷಾಂ ವಾಚಶ್ಚ ಸೂನೃತಾಃ |
ಯೇಷಾಮರ್ಥಾಶ್ಚ ಸಾಧ್ವರ್ಥಾ ದುರ್ಗಾಣ್ಯತಿತರಂತಿ ತೇ ||12||
ಯಾರ ಕಾರ್ಯಗಳು ಕುಹಕದಿಂದ ಕೂಡಿರುವುದಿಲ್ಲವೋ, ಯಾರ ವಚನಗಳು ಮೃದುವಾಗಿರುತ್ತವೆಯೋ, ಯಾರ ಧನವು ಸಜ್ಜನರ ಸಲುವಾಗಿ ಇರುತ್ತದೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ತಪಶ್ಚ ತಪಸ್ಯಂತಿ ಕೌಮಾರಬ್ರಹ್ಮಚಾರಿಣಃ |
ವಿದ್ಯಾವೇದವ್ರತಸ್ನಾತಾ ದುರ್ಗಾಣ್ಯತಿತರಂತಿ ತೇ ||13||
ಯಾರು ಕೌಮಾರ ಬ್ರಹ್ಮಚಾರಿಗಳಾಗಿ ವಿದ್ಯಾ,ವೇದ, ವ್ರತಸ್ನಾತರಾಗಿ ತಪಸ್ಸನ್ನು ಮಾಡುತ್ತಾರೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಚ ಸಂಶಾಂತರಜಸಃ ಸಂಶಾಂತತಮಸಶ್ಚ ಯೇ |
ಸತ್ವೇ ಸ್ಥಿತಾ ಮಹಾತ್ಮಾನೋ ದುರ್ಗಾಣ್ಯತಿತರಂತಿ ತೇ ||14||
ಯಾವ ಮಹಾತ್ಮರು ರಜೋಗುಣತಮೋಗುಣಗಳಿಂದ ದೂರರಾಗಿ ಸತ್ವ- ಗುಣವನ್ನು ಆಶ್ರಯಿಸಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇಷಾಂ ನ ಕಶ್ಚಿತ್ ತ್ರಸತಿ ತ್ರಸಂತಿ ನ ಚ ಕಸ್ಯಚಿತ್ |
ಯೇಷಾಮಾತ್ಮಸಮೋ ಲೋಕೋ ದುರ್ಗಾಣ್ಯತಿತರಂತಿ ತೇ ||15||

ಯಾರಿಗೆ ಯಾವೊಬ್ಬನೂ ಹೆದರುವುದಿಲ್ಲವೋ, ಯಾರು ಯಾವನಿಗೂ ಹೆದರುವುದಿಲ್ಲವೋ, ಯಾರಿಗೆ ಎಲ್ಲ ಜನರೂ ತಮ್ಮ ಸಮಾನರೋ, ಅವರು ಕಷ್ಟಗಳನ್ನು ದಾಟುತ್ತಾರೆ.
ಪರಶ್ರಿಯಾ ನ ತಪ್ಯಂತೇ ಯೇ ಸಂತಃ ಪುರುಷರ್ಷಭಾಃ |
ಗ್ರಾಮ್ಯಾದನ್ನಾನ್ನಿವೃತ್ತಾಶ್ಚ ದುರ್ಗಾಣ್ಯತಿತರಂತಿ ತೇ ॥16॥
ಯಾವ ಪುರುಷಶ್ರೇಷ್ಠರಾದ ಸಜ್ಜನರು ಇನ್ನೊಬ್ಬರ ಸಂಪತ್ತನ್ನು ನೋಡಿ ತಾಪ ಪಡುವುದಿಲ್ಲವೋ, ಗ್ರಾಮ್ಯಭೋಗಗಳಿಂದ ನಿವೃತ್ತರಾಗಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಸರ್ವಾನ್ ದೇವಾನ್ ನಮಸ್ಯಂತಿ ಸರ್ವಾನ್ ಧರ್ಮಾಂಶ್ಚ ಶೃಣ್ವತೇ |
ಯೇ ಶ್ರದ್ದಧಾನಾ ದಾಂತಾಶ್ಚ ದುರ್ಗಾಣ್ಯತಿತರಂತಿ ತೇ ॥17॥
ಯಾರು ಎಲ್ಲ ದೇವತೆಗಳಿಗೂ ನಮಸ್ಕಾರವನ್ನು ಮಾಡುತ್ತಾರೆಯೋ, ಎಲ್ಲ ಧರ್ಮಗಳನ್ನೂ ಕೇಳುತ್ತಾರೆಯೋ, ಶ್ರದ್ಧೆಯಿಂದ ಕೂಡಿ ಇಂದ್ರಿಯನಿಗ್ರಹವನ್ನು ಹೊಂದಿರುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ನ ಮಾನಿತಮಿಚ್ಛಂತಿ ಮಾನಯಂತಿ ಚ ಯೇ ಪರಮ್ |
ಮಾನ್ಯಮಾನಾ ನ ಮನ್ಯಂತೇ ದುರ್ಗಾಣ್ಯತಿತರಂತಿ ತೇ ॥18॥
ಯಾರು ಸನ್ಮಾನವನ್ನು ಬಯಸುವುದಿಲ್ಲವೋ, ಇನ್ನೊಬ್ಬರಿಗೆ ಸನ್ಮಾನವನ್ನು ಮಾಡುತ್ತಾರೆಯೋ, ಅಥವಾ ತಮಗೆ ಸನ್ಮಾನವನ್ನು ಮಾಡಿದರೂ ಅಹಂಕಾರ ಪಡುವುದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಶ್ರಾದ್ಧಾನಿ ಚ ಕುರ್ವಂತಿ ತಿಥ್ಯಾಂ ತಿಥ್ಯಾಂ ಪ್ರಜಾರ್ಥಿನಃ |
ಸುವಿಶುದ್ಧೇನ ಮನಸಾ ದುರ್ಗಾಣ್ಯತಿತರಂತಿ ತೇ ॥19॥
ಯಾರು ಸಂತತಿಯನ್ನು ಬಯಸಿ ತಿಥಿ ತಿಥಿಗಳಲ್ಲಿ ಒಳ್ಳೆಯ ಮನಸ್ಸಿನಿಂದ ಶ್ರಾದ್ಧಗಳನ್ನು ಮಾಡುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ಕ್ರೋಧಂ ನೈವ ಕುರ್ವಂತಿ ಕ್ರುದ್ಧಾನ್ ಸಂಶಮಯಂತಿ ಚ |
ನ ಚ ಕುಪ್ಯಂತಿ ಭೃತ್ಯೇಭ್ಯೋ ದುರ್ಗಾಣ್ಯತಿತರಂತಿ ತೇ ॥20॥
ಯಾರು ಕೋಪವನ್ನು ಮಾಡುವುದಿಲ್ಲವೋ, ಕೋಪಗೊಂಡವರನ್ನು ಸಮಾ- ಧಾನಪಡಿಸುತ್ತಾರೋ, ಸೇವಕರ ಮೇಲೆ ಕೋಪಗೊಳ್ಳುವುದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಮಧು ಮಾಂಸಂ ಚ ಯೇ ನಿತ್ಯಂ ವರ್ಜಯಂತೀಹ ಮಾನವಾಃ |
ಜನ್ಮಪ್ರಭೃತಿ ಮದ್ಯಂ ಚ ದುರ್ಗಾಣ್ಯತಿತರಂತಿ ತೇ ॥21॥
ಯಾವ ಮನುಷ್ಯರು ಇಲ್ಲಿ ಯಾವಾಗಲೂ ಮಧು ಮಾಂಸಗಳನ್ನು ವರ್ಜಿಸು- ತ್ತಾರೆಯೋ ಹುಟ್ಟಿದಾಗಿನಿಂದಲೂ ಮದ್ಯವನ್ನು ವರ್ಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯಾತ್ರಾರ್ಥಂ ಭೋಜನಂ ಯೇಷಾಂ ಸಂತಾನಾರ್ಥಂ ಚ ಮೈಥುನಮ್ |
ವಾಕ್‌ಸತ್ಯವಚನಾರ್ಥಾಯ ದುರ್ಗಾಣ್ಯತಿತರಂತಿ ತೇ ॥22॥
ಯಾರಿಗೆ ಭೋಜನವು ಶರೀರರಕ್ಷಣೆಯ ಸಲುವಾಗಿ ಇರುತ್ತದೆಯೋ, ಮೈಥುನವು ಸಂತಾನದ ಸಲುವಾಗಿ ಇರುತ್ತದೆಯೋ, ವಾಗಿಂದ್ರಿಯವು ಸತ್ಯವನ್ನು ನುಡಿಯುವುದಕ್ಕಾಗಿ ಇರುತ್ತದೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಈಶ್ವರಂ ಸರ್ವಭೂತಾನಾಂ ಜಗತಃ ಪ್ರಭವಾಪ್ಯಯಮ್ |
ಭಕ್ತಾ ನಾರಾಯಣಂ ದೇವಂ ದುರ್ಗಾಣ್ಯತಿತರಂತಿ ತೇ ॥23॥
ಸರ್ವ ಜೀವರಿಗೂ ಪ್ರಭುವಾದ ಜಗತ್ತಿನ ಸೃಷ್ಟಿಸಂಹಾರಗಳಿಗೆ ಕಾರಣನಾದ ದೇವನಾದ ನಾರಾಯಣನನ್ನು ಯಾರು ಭಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯ ಏಷ ರಕ್ತಪದ್ಮಾಕ್ಷಃ ಪೀತವಾಸಾ ಮಹಾಭುಜಃ |
ಸುಹೃದ್ ಭ್ರಾತಾ ಚ ಮಿತ್ರಂ ಚ ಸಂಬಂಧೀ ಚ ತವಾಚ್ಯುತಃ ॥24॥
ಯ ಇಮಾನ್ ಸಕಲಾನ್ ಲೋಕಾಂಶ್ಚರ್ಮವತ್ ಪರಿವೇಷ್ಟಯೇತ್ |
ಇಚ್ಛನ್ ಪ್ರಭುರಚಿಂತ್ಯಾತ್ಮಾ ಗೋವಿಂದಃ ಪುರುಷೋತ್ತಮಃ ॥25॥
ಸ್ಥಿತಃ ಪ್ರಿಯಹಿತೇ ಜಿಷ್ಣೋಃ ಸ ಏವ ಪುರುಷರ್ಷಭಃ |
ರಾಜಂಸ್ತವ ಯದುಶ್ರೇಷ್ಠೋ ವೈಕುಂಠಃ ಪುರುಷೋತ್ತಮಃ ॥26॥
ಎಲೈ ರಾಜನೇ! ಈ ರಕ್ತಪದ್ಮಾಕ್ಷನೂ, ಪೀತಾಂಬರಧಾರಿಯೂ, ಮಹಾ- ಭುಜನೂ, ನಿನಗೆ ಸುಹೃಜ್ಜನನೂ, ಭ್ರಾತೃವೂ, ಮಿತ್ರನೂ, ಸಂಬಂಧಿಯೂ ಆದ ಅಚ್ಯುತನು ಏನಿದ್ದಾನೆಯೋ, ಯಾವ ಇವನು ಎಲ್ಲ ಲೋಕಗಳನ್ನೂ ಬಯಸಿದರೆ ಚರ್ಮದಂತೆ ಸುತ್ತಿಬಿಡಲು ಶಕ್ತನಾಗಿದ್ದಾನೆಯೋ, ಅಂತಹ ಪ್ರಭುವೂ ಅಚಿಂತ್ಯ- ಸ್ವರೂಪನೂ ಗೋವಿಂದನೂ ಪುರುಷಶ್ರೇಷ್ಠನೂ ಅರ್ಜುನನ ಪ್ರಿಯ ಹಿತಗಳಲ್ಲಿ ರತನಾದವನೂ, ಯದುಶ್ರೇಷ್ಠನೂ, ವೈಕುಂಠನಾಮಕನೂ ಪುರುಷೋತ್ತಮನೂ ಆದ -
ಯ ಏನಂ ಸಂಶ್ರಯಂತೀಹ ಭಕ್ತ್ಯಾ ನಾರಾಯಣಂ ಹರಿಮ್ |
ತೇ ತರಂತೀಹ ದುರ್ಗಾಣಿ ನ ಮೇಽತ್ರಾಸ್ತಿ ವಿಚಾರಣಾ ॥27॥
ಅಂತಹ ಈ ಪಾಪಪರಿಹಾರಕನಾದ ನಾರಾಯಣನನ್ನು ಭಕ್ತಿಯಿಂದ ಆಶ್ರಯಿಸಿದವರು ಇಲ್ಲಿ ಎಲ್ಲ ಕಷ್ಟಗಳನ್ನೂ ದಾಟುತ್ತಾರೆ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಅಸ್ಮಿನ್ನರ್ಪಿತಕರ್ಮಾಣಃ ಸರ್ವಭಾವೇನ ಭಾರತ |
ಕೃಷ್ಣೇ ಕಮಲಪತ್ರಾಕ್ಷೇ ದುರ್ಗಾಣ್ಯತಿತರಂತಿ ತೇ |

ಎಲೈ ಭಾರತನೇ! ಸರ್ವಭಾವಗಳಿಂದಲೂ ಕಮಲದಳಾಯತಾಕ್ಷನಾದ ಕೃಷ್ಣನಲ್ಲಿ ತಮ್ಮ ಕರ್ಮಗಳನ್ನು ಅರ್ಪಿಸಿದವರು ಕಷ್ಟಗಳನ್ನು ದಾಟುತ್ತಾರೆ.
ಲೋಕರಕ್ಷಾರ್ಥಮುತ್ಪನ್ನಮದಿತ್ಯಾಂ ಕಶ್ಯಪಾತ್ಮಜಮ್ ॥28॥
ದೇವಮಿಂದ್ರಂ ನ ಪಶ್ಯಂತಿ ದುರ್ಗಾಣ್ಯತಿತರಂತಿ ತೇ |
ಲೋಕರಕ್ಷಾರ್ಥವಾಗಿ ಕಶ್ಯಪರಿಂದ ಅದಿತಿಯಲ್ಲಿ ಅವತರಿಸಿದ ಇವನನ್ನು ಇಂದ್ರನಿಗೂ ದೇವನಾದವನೆಂದು ಯಾರು ತಿಳಿಯುತ್ತಾರೆಯೋ, ಅಣ್ಣನಾದ ಕಾರಣದಿಂದ ದೇವೇಂದ್ರನು ಕೃಷ್ಣನಿಗಿಂತ ಶ್ರೇಷ್ಠನೆಂದು ಯಾರು ತಿಳಿಯುವು- ದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ ಲಕ್ಷಾಲಂಕಾರ.
ಬ್ರಹ್ಮಾಣಂ ಲೋಕಕರ್ತಾರಂ ಯೇ ನ ಪಶ್ಯಂತಿ ತತ್ಪತಿಮ್ ॥29॥
ಯಷ್ಟವ್ಯಂ ಕ್ರತುಭಿರ್ದೇವ ದುರ್ಗಾಣ್ಯತಿತರಂತಿ ತೇ |
ಯಾರು ಲೋಕಕರ್ತೃವೂ, ಯಜ್ಞಗಳಲ್ಲಿ ಯಷ್ಟವ್ಯನೂ ಆದ ಬ್ರಹ್ಮನನ್ನು ಕೃಷ್ಣನ ಸ್ವಾಮಿಯೆಂದು ತಿಳಿಯುವುದಿಲ್ಲವೋ ಅವರು ಕಷ್ಟಗಳನ್ನು ದಾಟುತ್ತಾರೆ.
ಯೇ ವಿಷ್ಣುಮಿಂದ್ರಂ ಶಂಭುಂ ಚ ಬ್ರಹ್ಮಾಣಂ ಲೋಕಪೂಜಿತಮ್ ॥30॥
ಸ್ತುವಂತಿ ವೈದಿಕೈಃ ಸ್ತೋತ್ರೈರ್ದೇವದೇವಂ ಮಹೇಶ್ವರಮ್ |
ತಮರ್ಚಯಂತಿ ಯೇ ಶಶ್ವದ್ ದುರ್ಗಾಣ್ಯತಿತರಂತಿ ತೇ ॥31॥
ದೇವದೇವನೂ, ಮಹೇಶ್ವರನೂ ಆದ ವಿಷ್ಣುವನ್ನು ವೈದಿಕಸ್ತೋತ್ರಗಳಿಂದ ಇಂದ್ರನೆಂದು ಶಂಭುವೆಂದು ಲೋಕಪೂಜಿತನಾದ ಬ್ರಹ್ಮನೆಂದು ಯಾರು ಸ್ತೋತ್ರ ಮಾಡುತ್ತಾರೆಯೋ ಇಂದ್ರ ಬ್ರಹ್ಮ ಶಂಭು ಮೊದಲಾದ ಶಬ್ದಗಳಿಂದ ವಿಷ್ಣುವೇ ವಾಚ್ಯನೆಂದು ತಿಳಿದು ಯಜ್ಞಗಳಲ್ಲಿ ಅವನನ್ನು ಪೂಜಿಸುತ್ತಾರೆಯೋ ಅವರು ಕಷ್ಟಗಳನ್ನು ದಾಟುತ್ತಾರೆ.
ದುರ್ಗಾತಿತರಣಂ ಯೇ ಚ ಪಠಂತಿ ಶ್ರಾವಯಂತಿ ಚ |
ಪಾಠಯಂತಿ ಚ ವಿಪ್ರೇಭ್ಯೋ ದುರ್ಗಾಣ್ಯತಿತರಂತಿ ತೇ ॥32॥
ದುರ್ಗಾತಿತರಣವೆಂಬ ಈ ಅಧ್ಯಾಯವನ್ನು ಯಾರು ಪಾರಾಯಣ ಮಾಡು- ತ್ತಾರೆಯೋ ಇನ್ನೊಬ್ಬರಿಗೆ ಶ್ರವಣ ಮಾಡಿಸುತ್ತಾರೆಯೋ ಮತ್ತು ಬ್ರಾಹ್ಮಣರಿಗೆ ಪಾಠ ಮಾಡುತ್ತಾರರೆಯೋ,ಅಂತಹವರು ಕಷ್ಟಗಳನ್ನು ದಾಟುತ್ತಾರೆ.
ಇತಿ ಕೃತ್ಯಸಮುದ್ದೇಶಃ ಕೀರ್ತಿತಸ್ತೇ ಮಯಾಽನಘ |
ಸಂತರೇದ್ ಯೇನ ದುರ್ಗಾಣಿ ಪರತ್ರೇಹ ಚ ಮಾನವಃ ॥33॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ದ್ವಾದಶಾಧಿಕಶತತಮೋಽಧ್ಯಾಯಃ ॥112॥
ಎಲೈ ಅನಘನೇ! ಯಾವ ಕಾರ್ಯವನ್ನು ಮಾಡಿದರೆ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಮನುಷ್ಯನು ಕಷ್ಟಗಳನ್ನು ದಾಟುತ್ತಾನೆಯೋ ಅಂತಹ ಮಾಡಬೇಕಾದ ಕಾರ್ಯಗಳ ಸಮೂಹವನ್ನೇ ನಿನಗೆ ಹೇಳಿದ್ದೇನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 112ನೆಯ ಅಧ್ಯಾಯವು ಮುಗಿಯಿತು.
0
113. ನೂರ ಹದಿಮೂರನೆಯ ಅಧ್ಯಾಯ
ಪರೀಕ್ಷೆಯಿಂದ ಸ್ವಭಾವನಿರ್ಣಯವಿಷಯದಲ್ಲಿ ವ್ಯಾಘ್ರಗೋಮಾಯು ಕಥೆ
ಯುಧಿಷ್ಠಿರಃ
ಅಸೌಮ್ಯಾಃ ಸೌಮ್ಯರೂಪೇಣ ಸೌಮ್ಯಾಶ್ಚಾಸೌಮ್ಯದರ್ಶಿನಃ |
ಈದೃಶಾನ್ ಪುರುಷಾಂಸ್ತಾತ ಕಥಂ ವಿದ್ಯಾಮಹೇ ವಯಮ್ ॥1॥
ಯುಧಿಷ್ಠಿರ ಎಲೈ ಪ್ರೀತಿಪಾತ್ರನೇ ಕ್ರೂರರಾದವರು ಸೌಮ್ಯರೂಪದಿಂದಲೂ, ಸೌಮ್ಯರಾದವರು ಕ್ರೂರರೂಪದಿಂದಲೂ ಕಾಣಿಸುತ್ತಾರೆ. ಇಂತಹವರನ್ನು ನಾವು ತಿಳಿಯುವ ಬಗೆ ಹೇಗೆ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವ್ಯಾಘ್ರಗೋಮಾಯುಸಂವಾದಂ ತಂ ನಿಬೋಧ ಯುಧಿಷ್ಠಿರ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ! ಈ ವಿಷಯದಲ್ಲಿಯೂ ಸಹ ಒಂದು ಹುಲಿ ಮತ್ತು ನರಿಗಳಿಗೆ ನಡೆದ ಸಂವಾದರೂಪವಾದ ಈ ಇತಿಹಾಸವನ್ನು ಹೇಳುತ್ತಾರೆ. ಅದನ್ನು ಕೇಳು.
ಪುರೀಕಾಯಾಂ ಪುರಿ ಪುರಾ ಶ್ರೀಮತ್ಯಾಂ ಪೌರಿಕೋ ನೃಪಃ |
ಪರಹಿಂಸಾರುಚಿಃ ಕ್ರೂರೋ ಬಭೂವ ಪುರುಷಾಧಮಃ ॥3॥
ಪುರೀಕಾ ಎಂಬ ಸಂಪದ್ಯುಕ್ತವಾದ ಪಟ್ಟಣದಲ್ಲಿ ಪೌರಿಕನೆಂಬ ರಾಜನಿದ್ದನು. ಪುರುಷಾಧಮನಾದ ಅವನು ಕ್ರೂರನಾಗಿ ಪರಹಿಂಸೆಯಲ್ಲಿಯೇ ಅಭಿರುಚಿಯುಳ್ಳ- ವನಾಗಿದ್ದನು.
ಸ ತ್ವಾಯುಷಿ ಪರಿಕ್ಷೀಣೇ ಜಗಾಮಾನೀಪ್ಸಿತಾಂ ಗತಿಮ್ |
ಗೋಮಾಯುತ್ವಂ ಚ ಸಂಪ್ರಾಪ್ತೋ ದೂಷಿತಃ ಪೂರ್ವಕರ್ಮಣಾ ॥4॥
ಆಯುಸ್ಸು ಮುಗಿಯುತ್ತಿರಲು ಅವನು ದುರ್ಗತಿಯನ್ನು ಹೊಂದಿ, ಪೂರ್ವ- ಕರ್ಮದೋಷದಿಂದ ನರಿಯಾಗಿ ಜನಿಸಿದನು.
ಸಂಸ್ಮೃತ್ಯ ಪೂರ್ವಜಾತಿಂ ಸ ನಿರ್ವೇದಂ ಪರಮಂ ಗತಃ |
ನ ಭಕ್ಷಯತಿ ಮಾಂಸಾನಿ ಪರೈರುಪಹೃತಾನ್ಯಪಿ ॥5॥

ಪೂರ್ವಜನ್ಮಸ್ಮರಣೆಯನ್ನು ಹೊಂದಿದ ಅವನು ಬಹಳ ಬೇಸರಗೊಂಡನು. ಇನ್ನೊಬ್ಬರು ತಂದುಕೊಟ್ಟ ಮಾಂಸವನ್ನೂ ತಿನ್ನುತ್ತಿರಲಿಲ್ಲ.
ಅಹಿಂಸ್ರಃ ಸರ್ವಭೂತೇಷು ಸತ್ಯವಾಕ್ ಸುದೃಢವ್ರತಃ |
ಚಕಾರ ಚ ಯಥಾಕಾಲಮಾಹಾರಂ ಪತಿತೈಃ ಫಲೈಃ ||6||
ಯಾವ ಪ್ರಾಣಿಯನ್ನೂ ಹಿಂಸಿಸದೇ ಸತ್ಯವಚನನಾಗಿ ದೃಢವಾದ ವ್ರತವನ್ನು ಧರಿಸಿ ಆಯಾ ಕಾಲದಲ್ಲಿ ಭೂಮಿಯ ಮೇಲೆ ಬಿದ್ದ ಫಲಗಳಿಂದ ಜೀವನವನ್ನು ಮಾಡಿದನು.
ಶ್ಮಶಾನೇ ತಸ್ಯ ಚಾವಾಸೋ ಗೋಮಾಯೋಃ ಸಮ್ಮತೋಽಭವತ್ |
ಜನ್ಮಭೂಮ್ಯನುರೋಧಾಚ್ಚ ನಾನ್ಯದ್ ವಾಸಮರೋಚಯತ್ ||7||
ಆ ನರಿಗೆ ಸ್ಮಶಾನವಾಸವು ಪ್ರಿಯವಾಗಿದ್ದಿತು. ಅದು ಅಲ್ಲಿಯೇ ಹುಟ್ಟಿದು- ದರಿಂದ ಬೇರೆ ಕಡೆಯಲ್ಲಿ ವಾಸವನ್ನು ಮಾಡಲು ಬಯಸಲಿಲ್ಲ.
ತಸ್ಯ ಶೌಚಮಮೃಷ್ಯಂತಃ ಸರ್ವೇ ತೇ ಸಹಜಾತಯಃ |
ಚಾಲಯಂತಿ ಸ್ಮ ತಾಂ ಬುದ್ಧಿಂ ವಚನೈಃ ಪ್ರಶ್ರಯೋತ್ತರೈಃ ||8||
ಅವನ ಶೀಲವನ್ನು ಸಹಿಸದ ಅವನ ಜಾತಿಯ ಉಳಿದ ನರಿಗಳು ವಿನಯ- ಪೂರ್ವಕವಾದ ಮಾತುಗಳಿಂದ ಅವನ ಬುದ್ಧಿಯನ್ನು ಕೆಡಿಸಲು ಪ್ರಯತ್ನಪಟ್ಟವು.
ವಸನ್ ಪಿತೃವನೇ ರೌದ್ರೇ ಶೌಚಂ ಲಪ್ಸಿತುಮಿಚ್ಛಸಿ |
ಇಯಂ ವಿಪ್ರತಿಪತ್ತಿಸ್ತೇ ಯದಾ ತ್ವಂ ಪಿಶಿತಾಶನಃ ||9||
ಘೋರವಾದ ಸ್ಮಶಾನದಲ್ಲಿ ವಾಸ ಮಾಡಿ, ಶುಚಿಯಾಗಿರಲು ಬಯಸುತ್ತಿ- ದ್ದೀಯೆ. ಮಾಂಸಾಹಾರಿಯಾದ ನಿನಗೆ ಇದು ವಿರುದ್ಧವಾದ ವರ್ತನೆ.
ತತ್ ಸಮೋ ವಾ ಭವಾಸ್ಮಾಭಿರ್ಭಕ್ಷ್ಯಾನ್ ದಾಸ್ಯಾಮಹೇ ವಯಮ್ |
ಭುಂಕ್ಷ್ವ ಶೌಚಂ ಪರಿತ್ಯಜ್ಯ ಯದ್ಧಿ ಭುಕ್ತಂ ತದಸ್ತಿ ತೇ ||10||
ಆದ್ದರಿಂದ ನಮ್ಮಂತೆಯೇ ಇರುವವನಾಗು. ನಾವು ನಿನಗೆ ಆಹಾರವನ್ನು ಒದಗಿಸುವೆವು. ಈ ಶೌಚವನ್ನು ಪರಿತ್ಯಜಿಸಿ ನಿನ್ನ ಜಾತಿಗೆ ಯಾವ ಆಹಾರವಿದೆಯೋ ಅದು ನಿನಗೂ ಇರಲಿ - (ಎಂದು ಹೇಳಿದವು).
ಇತಿ ತೇಷಾಂ ವಚಃ ಶ್ರುತ್ವಾ ಪ್ರತ್ಯುವಾಚ ಸಮಾಹಿತಃ |
ಮಧುರೈಃ ಪ್ರಶ್ರಿತೈರ್ವಾಕ್ಯೈರ್ಹೇತುಮದ್ಭಿರನಿಷ್ಠುರೈಃ ||11||
ಅವುಗಳ ಈ ಮಾತನ್ನು ಕೇಳಿ ರಾಜನರಿಯು ಸಮಾಧಾನದಿಂದ ಮಧುರವಾದ ವಿನಯಪೂರ್ವಕವಾದ ಯುಕ್ತಿಯುಕ್ತವಾದ ನಿಷ್ಠುರವಲ್ಲದ ಮಾತುಗಳಿಂದ ಉತ್ತರ- ವನ್ನು ಕೊಟ್ಟಿತು.
ಅಪ್ರಮಾಣಂ ಪ್ರಸೂತಿರ್ಮೇ ಶೀಲತಃ ಕ್ರಿಯತೇ ಕುಲಮ್ |
ಪ್ರಾರ್ಥಯಿಷ್ಯೇ ತು ತತ್ ಕರ್ಮ ಯೇನ ವಿಸ್ತೀರ್ಯತೇ ಯಶಃ ||12||
ನಾನು ಎಲ್ಲಿ ಹುಟ್ಟಿದೆನೆಂಬುದು ಅಪ್ರಯೋಜಕವಾದುದು. ಶೀಲದಿಂದ ಕುಲವುಂಟಾಗುತ್ತದೆ. ಏನನ್ನು ಮಾಡಿದರೆ ಕೀರ್ತಿಯು ವಿಸ್ತಾರವಾಗುವುದೋ ಅಂತಹ ಕರ್ಮವನ್ನು ಮಾಡಲು ಬಯಸುತ್ತೇನೆ.
ಶ್ಮಶಾನೇ ಯದಿ ವಾಸೋ ಮೇ ಸಮಾಧಿರ್ಮೇ ನಿಶಮ್ಯತಾಮ್ |
ಆತ್ಮಾ ಫಲತಿ ಕರ್ಮಾಣಿ ನಾಶ್ರಮೋ ಧರ್ಮಲಕ್ಷಣಮ್ ||13||
ನಾನು ಸ್ಮಶಾನದಲ್ಲಿ ವಾಸ ಮಾಡುವುದಕ್ಕೆ ನನ್ನ ಸಮರ್ಥನೆಯನ್ನು ಕೇಳಿ. ಆಶ್ರಮವು ಧರ್ಮಕ್ಕೆ ಕಾರಣವಲ್ಲ. ಕರ್ಮವನ್ನು ಮಾಡುವವನು ಮತ್ತು ಅನು- ಭವಿಸುವವನು ಜೀವ.
ಆಶ್ರಮೇ ಯೋ ದ್ವಿಜಂ ಹನ್ಯಾದ್ ಗಾಂ ವಾ ದದ್ಯಾದನಾಶ್ರಮೇ |
ಕಿನ್ನು ತತ್ ಪಾತಕಂ ನ ಸ್ಯಾತ್ ತದ್ವಾ ದತ್ತಂ ವೃಥಾ ಭವೇತ್ ||14||
ಆಶ್ರಮದಲ್ಲಿ ಒಬ್ಬ ಬ್ರಾಹ್ಮಣನನ್ನು ಕೊಂದರೆ ಅದು ಪಾತಕವಾಗುವುದಿಲ್ಲವೇ? ಆಶ್ರಮವಲ್ಲದ ಸ್ಥಳದಲ್ಲಿ ಗೋದಾನವನ್ನು ಮಾಡಿದರೆ ಅದು ವ್ಯರ್ಥವಾಗುವುದೇ?
ಭವಂತಃ ಸರ್ವಲೋಭೇನ ಕೇವಲಂ ಭಕ್ಷಣೇ ರತಾಃ |
ಅನುಬಂಧೇ ತು ಯೇ ದೋಷಾಸ್ತಾನ್ ನ ಪಶ್ಯಂತಿ ಮೋಹಿತಾಃ ||15||
ನೀವು ಎಲ್ಲವನ್ನೂ ಆಸೆ ಪಡುತ್ತಾ ಕೇವಲ ಭೋಜನದಲ್ಲಿ ನಿರತರಾಗಿದ್ದೀರಿ. ಮೋಹಕ್ಕೆ ಒಳಗಾದ ನೀವು ಅದರ ಪರಿಣಾಮವಾದ ದೋಷಗಳನ್ನು ಕಾಣುತ್ತಿಲ್ಲ.
ಅಪ್ರತ್ಯಯಕೃತಾಂ ಗರ್ಹ್ಯಾಮರ್ಥಾಪನಯದೂಷಿತಾಮ್ |
ಇಹ ಚಾಮುತ್ರ ಚಾನಿಷ್ಟಾಂ ತಸ್ಮಾದ್ ವೃತ್ತಿಂ ನ ರೋಚಯೇ ||16||
ನೀವು ಅನುಸರಿಸುತ್ತಿರುವ ವೃತ್ತಿಯು ಅಜ್ಞಾನಮೂಲಕವಾದುದು, ನಿಂದನೀಯವಾದುದು, ದ್ರವ್ಯನಾಶಕವಾದುದು, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅನಿಷ್ಟವನ್ನು ಉಂಟುಮಾಡುವಂತಹದು. ಆದ್ದರಿಂದ ಅದನ್ನು ನಾನು ಬಯಸುವುದಿಲ್ಲ (ಎಂದು ಹೇಳಿತು).
ತಂ ಶುಚಿಂ ಪಂಡಿತಂ ಮತ್ವಾ ಶಾರ್ದೂಲಃ ಖ್ಯಾತವಿಕ್ರಮಃ |
ಕೃತ್ವಾಽಽತ್ಮಸದೃಶಾಂ ಪೂಜಾಂ ಸಾಚಿವ್ಯೇಽವರ್ಧಯತ್ ಸ್ವಯಮ್ ||17||
ಪ್ರಸಿದ್ಧವಾದ ಪರಾಕ್ರಮವುಳ್ಳ ಆ ವ್ಯಾಘ್ರವು ಶುಚಿಯಾದ ಆ ನರಿಯನ್ನು ವಿದ್ವಾಂಸನೆಂದು ತಿಳಿದು ತನಗೆ ಅನುಗುಣವಾದ

ಪೂಜೆಯನ್ನು ಮಾಡಿ ತಾನೇ ಆ ನರಿಗೆ ಸಚಿವಪದವಿಯನ್ನು ಕೊಟ್ಟು ಬೆಳೆಸಿತು.
ಸೌಮ್ಯ ವಿಜ್ಞಾತರೂಪಸ್ತ್ವಂ ಗಚ್ಛ ಯಾತ್ರಾಂ ಮಯಾ ಸಹ |
ಪ್ರಿಯಂತಾಮೀಪ್ಸಿತಾ ಭೋಗಾಃ ಪರಿಹಾರ್ಯಾಶ್ಚ ಪುಷ್ಕಳಾಃ ॥18॥
ಎಲೈ ಸೌಮ್ಯನೇ! ನಿನ್ನ ಸ್ವಭಾವವು ತಿಳಿದಿದೆ. ನನ್ನ ಜೊತೆಯಲ್ಲಿ ಸಂಚಾರ ಮಾಡು. ಇಷ್ಟವಾದ ಭೋಗಗಳನ್ನು ಅನುಭವಿಸು. ಹೆಚ್ಚಿನ ವಸ್ತುಗಳು ನಿನಗೆ ಬೇಡವಾದರೆ ಅವುಗಳನ್ನು ಬಿಟ್ಟುಬಿಡು.
ತೀಕ್ಷ್ಣಾ ವಯಮಿತಿ ಖ್ಯಾತಾ ಭವಂತಂ ಜ್ಞಾಪಯಾಮಹೇ |
ಮೃದುಪೂರ್ವಂ ಘಾತಿನಸ್ತೇ ಶ್ರೇಯಶ್ಚಾಧಿಗಮಿಷ್ಯತಿ ॥19॥
ನಾವುಕ್ರೂರರಾದವರು ಎಂದು ಪ್ರಸಿದ್ಧರಾಗಿದ್ದೇವೆ ಎಂದು ನಿನಗೆ ಜ್ಞಾಪಿಸು- ತ್ತಿದ್ದೇನೆ. ನೀನು ಮಾರ್ದವದಿಂದ ವರ್ತಿಸಿ ಪ್ರಾಣಿಗಳನ್ನು ಕೊಂದರೆ ನಿನಗೆ ಶ್ರೇಯಸ್ಸು ಲಭಿಸುವುದು (ಎಂದು ಹೇಳಿತು).
ಅಥ ಸಂಪೂಜ್ಯ ತದ್ ವಾಕ್ಯಂ ಮೃಗೇಂದ್ರಸ್ಯ ಮಹಾತ್ಮನಃ |
ಗೋಮಾಯುಃ ಪ್ರಶ್ರಿತಂ ವಾಕ್ಯಂ ಬಭಾಷೇ ಕಿಂಚಿದಾನತಃ ॥20॥
ಅನಂತರ ನರಿಯು ಮಹಾತ್ಮನಾದ ಆ ಮೃಗೇಂದ್ರನ ಮಾತನ್ನು ಪೂಜಿಸಿ, ತಲೆಯನ್ನು ಬಗ್ಗಿಸಿ, ವಿನಯಪೂರ್ವಕವಾದ ಮಾತನ್ನಾಡಿತು.
ಸದೃಶಂ ಮೃಗರಾಜೈತತ್ ತವ ವಾಕ್ಯಂ ಮದಂತರೇ |
ಯತ್ ಸಹಾಯಾನ್ಮೃಗಯಸೇ ಧರ್ಮಾರ್ಥಕುಶಲಾನ್ ಶುಚೀನ್ ॥21॥
ಎಲೈ ಮೃಗರಾಜನೇ! ಧರ್ಮಾರ್ಥಕುಶಲರೂ ಶುಚಿಗಳೂ ಆದವರ ಸಹಾಯವನ್ನು ಬಯಸಿ ನನ್ನ ವಿಷಯದಲ್ಲಿ ನೀನು ಹೇಳಿದ ಮಾತುಗಳು ನಿನಗೆ ಯೋಗ್ಯವಾಗಿಯೇ ಇವೆ.
ನ ಶಕ್ಯಮನಮಾತ್ಯೇನ ಮಹತ್ತ್ವಮನುಶಾಸಿತುಮ್ |
ದುಷ್ಟಾಮಾತ್ಯೇನ ವಾ ವೀರ ಶರೀರಪರಿಪಂಥಿನಾ ॥22॥
ಅಮಾತ್ಯನಿಲ್ಲದೇ ದೊಡ್ಡ ರಾಜ್ಯವನ್ನು ಆಳುವುದು ಸಾಧ್ಯವಿಲ್ಲ. ಎಲೈ ವೀರನೇ ತನ್ನ ಶರೀರಕ್ಕೆ ವಿರೋಧವನ್ನು ಮಾಡುವ ದುಷ್ಟ ಅಮಾತ್ಯನ ಸಹಾಯದಿಂದಲೂ ದೊಡ್ಡರಾಜ್ಯವನ್ನು ಆಳಲು ಸಾಧ್ಯವಿಲ್ಲ.
ಸಹಾಯಾನುರಕ್ತಾಂಸ್ತು ಯತೇತಾನುಪಸಂಹಿತಾನ್ |
ಪರಸ್ಪರಮಸಂಘುಷ್ಟಾನ್ ವಿಜಿಗೀಷೂನಲೋಲುಪಾನ್ ॥23॥
ಪರಸ್ಪರ ಗುಂಪುಗೂಡದ ಇಂದ್ರಿಯಲೋಲುಪರಲ್ಲದ, ಸ್ವಾಮಿಯ ಹಿತವನ್ನು ಬಯಸುವ, ಅನುರಾಗವುಳ್ಳ, ನಿಷ್ಕಪಟರಾದ ಸಹಾಯಕರನ್ನು ಪಡೆಯಲು ಪ್ರಯತ್ನಿಸಬೇಕು.
ತಾನತೀತೋಪಧಾನ್ ಪ್ರಾಜ್ಞಾನ್ ಹಿತೇ ಯುಕ್ತಾನ್ ನ ತು ಪ್ರಿಯೇ |
ಪೂಜಯೇಥಾ ಮಹಾಭಾಗಾನ್ ಯಥಾಚಾರ್ಯಾನ್ ಯಥಾ ಪಿತೄನ್ ॥
ನಿಷ್ಕಪಟರಾದ ಪ್ರಾಜ್ಞರಾದ ನಿನ್ನ ಹಿತದಲ್ಲಿ ನಿರತರಾದ ತಮ್ಮ ಪ್ರಿಯದಲ್ಲಿ ನಿರತರಾಗದ ಮಹಾನುಭಾವರನ್ನು ನೀನು ಗುರುಗಳನ್ನು ಪೂಜಿಸುವಂತೆ ತಂದೆಯನ್ನು ಪೂಜಿಸುವಂತೆ ಪೂಜಿಸಬೇಕು.
ನ ತ್ವೇವಂ ಮಮ ಸಂತೋಷಾದ್ ರೋಚತೇಽನ್ಯನ್ಮೃಗಾಧಿಪ |
ನ ಕಾಮಯೇ ಸುಖಾನ್ ಭೋಗಾನೈಶ್ವರ್ಯಂ ವಾ ತ್ವದಾಶ್ರಯಮ್ ॥25
ಆದರೆ ಎಲೈ ಮೃಗಾಧಿಪನೇ! ನನಗೆ ಆತ್ಮತೃಪ್ತಿಪೂರ್ವಕವಾಗಿ ಇದು ಯಾವುದೂ ರುಚಿಸುವುದಿಲ್ಲ. ನಿನ್ನನ್ನು ಆಶ್ರಯಿಸಿದ ಸುಖಗಳನ್ನಾಗಲೀ, ಭೋಗ- ಗಳನ್ನಾಗಲೀ, ಐಶ್ವರ್ಯವನ್ನಾಗಲೀ ನಾನು ಬಯಸುವುದಿಲ್ಲ.
ನ ಯೋಕ್ಷ್ಯತಿ ಹಿ ಮೇ ಶೀಲಂ ತವ ಭೃತ್ಯೈಃ ಪುರಾತನೈಃ |
ತೇ ತ್ವಾಂ ವಿಭೇದಯಿಷ್ಯಂತಿ ದುಃಶೀಲಾಶ್ಚ ಮದಂತರೇ ॥26॥
ನಿನ್ನ ಹಿಂದಿನ ಭೃತ್ಯರಿಗೂ ಮತ್ತು ನನ್ನ ಸ್ವಭಾವಕ್ಕೂ ಸರಿ ಹೊಂದುವುದಿಲ್ಲ. ದುಷ್ಟಸ್ವಭಾವವುಳ್ಳ ಅವರು ನನ್ನ ವಿಷಯದಲ್ಲಿ ನಿನಗೆ ಭೇದಬುದ್ಧಿಯನ್ನು ಉಂಟು ಮಾಡುತ್ತಾರೆ. (ನಮ್ಮ ಮೈತ್ರಿಯನ್ನು ನಾಶಗೊಳಿಸುತ್ತಾರೆ).
ಸಂಶ್ರಯಃ ಶ್ಲಾಘನೀಯಸ್ತ್ವಮನ್ಯೇಷಾಮಪಿ ಭಾಸ್ವತಾಮ್ |
ಕೃತಾತ್ಮಾ ಸುಮಹಾಭಾಗಃ ಪಾಪಕೇಷ್ವಪ್ಯದಾರುಣಃ ॥27॥
ನೀನು ಒಳ್ಳೆಯ ಮನಸ್ಸುಳ್ಳವನು; ಮಹಾನುಭಾವನಾದವನು; ಅಪರಾಧ ಮಾಡಿದವರಲ್ಲಿಯೂ ದಯೆಯಿಂದ ವರ್ತಿಸುವವನು. ಬೇರೆಯ ಬಲಿಷ್ಠಪ್ರಾಣಿ- ಗಳಿಗೂ ನಿನ್ನನ್ನು ಆಶ್ರಯಿಸುವುದು ಪ್ರಶಂಸನೀಯವಾಗುತ್ತದೆ.
ದೀರ್ಘದರ್ಶೀ ಮಹೋತ್ಸಾಹಃ ಸ್ಥೂಲಲಕ್ಷ್ಯೋ ಮಹಾಬಲಃ |
ಕೃತೀ ಚಾಮೋಘಕರ್ತಾಸಿ ಭಾವ್ಯೈಶ್ಚ ಸಮಲಂಕೃತಃ ॥28॥
ನೀನು ದೀರ್ಘದೃಷ್ಟಿಯುಳ್ಳವನು; ಬಹಳ ಉತ್ಸಾಹವುಳ್ಳವನು; ಬಹುಪ್ರದ- ನಾದವನು, ಮಹಾಬಲವುಳ್ಳವನು, ನಿಪುಣನಾದವನು, ವ್ಯರ್ಥವಲ್ಲದ ಕಾರ್ಯ- ವನ್ನು ಮಾಡುವವನು. ಶುಭಫಲಗಳಿಂದ ಕೂಡಿರುವವನು.
ಕಿಂತು ಸ್ವೇನಾಸ್ಮಿ ಸಂತುಷ್ಟೋ ದುಃಖಾ ವೃತ್ತಿರನುಷ್ಠಿತಾ |
ಸೇವಾಯಾಶ್ಚಾಪಿ ನಾಭಿಜ್ಞಃ ಸ್ವಚ್ಛಂದೇನ ವನೇಚರಃ ॥29॥
ಆದರೆ ನಾನು ನನ್ನ ಪಾಡಿಗೆ ತೃಪ್ತಿಯಿಂದ ಇದ್ದೇನೆ. ಸಂತೋಷದಿಂದಲೇ ಈ ದುಃಖಕರವಾದ ಜೀವನವೃತ್ತಿಯನ್ನು ಅನುಸರಿಸುತ್ತಿದ್ದೇನೆ. ನನ್ನ ಮನಸ್ಸಿಗೆ ಬಂದಂತೆ ಕಾಡಿನಲ್ಲಿ ತಿರುಗುವ ನಾನು ಸ್ವಾಮಿಗೆ ಸೇವೆಯನ್ನು ಮಾಡುವ ಪ್ರಕಾರವನ್ನು ತಿಳಿದವನಲ್ಲ.

ರಾಜೋಪಕ್ರೋಶದೋಷಾಶ್ಚ ಸರ್ವೇ ಸಂಶ್ರಯವಾಸಿನಾಮ್ |
ವನಚರ್ಯಾ ಚ ನಿಃಸಂಗಾ ನಿರ್ಭಯಾ ನಿರವಗ್ರಹಾ ॥30॥
ರಾಜನನ್ನು ಆಶ್ರಯಿಸಿ ಇರುವವರೆಲ್ಲರಿಗೂ ರಾಜನಿಗೆ ಉಂಟಾಗಬಹುದಾದ ಕ್ರೋಧದಿಂದ ಉಂಟಾಗುವ ಪರಿಣಾಮದ ದೋಷಗಳು ಇದ್ದೇ ಇರುತ್ತವೆ. ಕಾಡಿನಲ್ಲಿ ಸಂಚರಿಸುವುದಾದರೂ ನಿರ್ಭಯವಾದುದು, ಪ್ರತಿರೋಧರಹಿತ- ವಾದುದು ಮತ್ತು ನಿಃಸಂಗವಾದುದು.
ನೃಪೇಣಾಹೂಯಮಾನಸ್ಯ ಯತ್ ತಿಷ್ಠತಿ ಭಯಂ ಹೃದಿ |
ನ ತತ್ ತಿಷ್ಠತಿ ತುಷ್ಟಾನಾಂ ವನೇ ಮೂಲಫಲಾಶಿನಾಮ್ ॥31॥
ರಾಜನಿಂದ ಆಹ್ವಾನ ಮಾಡಲ್ಪಟ್ಟವನಿಗೆ ಮನಸ್ಸಿನಲ್ಲಿ ಯಾವ ಭಯವಿರು- ತ್ತದೆಯೋ ಅದು ಕಾಡಿನಲ್ಲಿ ಮೂಲಫಲಗಳನ್ನು ತಿಂದು ಸಂತೃಪ್ತರಾದವರಿಗೆ ಇರುವುದಿಲ್ಲ.
ಪಾನೀಯಂ ವಾ ನಿರಾಯಾಸಂ ಸ್ವಾದ್ವನ್ನಂ ವಾ ಭಯೋತ್ತರಮ್ |
ವಿಚಾರ್ಯ ಖಲು ಪಶ್ಯಾಮಿ ತತ್ ಸುಖಂ ಯತ್ರ ನಿರ್ವೃತಿಃ ॥32॥
ಒಂದು ಕಡೆ ನಿರಾಯಾಸವಾದ ನೀರು ಮಾತ್ರ. ಇನ್ನೊಂದು ಕಡೆ ಭಯದಿಂದ ಕೂಡಿದ ರುಚಿಕರವಾದ ಅನ್ನ. ಇವೆರಡನ್ನೂ ವಿಚಾರ ಮಾಡಿದರೆ ಎಲ್ಲಿ ನಿರಾಯಾಸವಿರುತ್ತದೆಯೋ ಅದೇ ಸುಖವೆಂದು ಭಾವಿಸುತ್ತೇನೆ.
ಅಪರಾಧೈರ್ನ ತಾವಂತೋ ಭೃತ್ಯಾಃ ಶಿಷ್ಟಾ ನರಾಧಿಪೈಃ |
ಉಪಘಾತೈರ್ಯಥಾ ಭೃತ್ಯಾ ದೂಷಿತಾ ನಿಧನಂ ಗತಾಃ ॥33॥
ರಾಜನ ಕೋಪದಿಂದ ದೂಷಿತರಾಗಿ ಎಷ್ಟು ಸೇವಕರು ಮೃತರಾಗುತ್ತಾರೆಯೋ ಅಷ್ಟು ಸೇವಕರು ರಾಜನಿಗೆ ಅಪರಾಧವನ್ನು ಮಾಡಿ ಮೃತರಾಗುವುದಿಲ್ಲ.
ಯದಿ ತ್ವೇತನ್ಮಯಾ ಕಾರ್ಯಂ ಮೃಗೇಂದ್ರ ಯದಿ ಮನ್ಯಸೇ |
ಸಮಯಂ ಕೃತಮಿಚ್ಛಾಮಿ ವರ್ತಿತವ್ಯಂ ಯಥಾ ಮಯಿ ॥34॥
ಎಲೈ ಮೃಗೇಂದ್ರನೇ! ನಿನ್ನ ಸಾಚಿವ್ಯವನ್ನು ನಾನುಮಾಡಲೇಬೇಕೆಂದು ನೀನು ತಿಳಿದರೆ ನೀನು ನನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ವಿಷಯದಲ್ಲಿ ಒಂದು ನಿಬಂಧನೆಯನ್ನು ಮಾಡುವೆನು.
ಮದೀಯಾ ಮಾನನೀಯಾಸ್ತೇ ಶ್ರೋತವ್ಯಂ ಚ ಹಿತಂ ವಚಃ |
ಕಲ್ಪಿತಾ ಯಾ ಚ ತೇ ವೃತ್ತಿಃ ಸಾ ಭವೇತ್ ತವ ಸುಸ್ಥಿರಾ ॥35॥
ನನ್ನವರನ್ನು ನೀನು ಸನ್ಮಾನಿಸಬೇಕು. ಹಿತವಚನಗಳನ್ನು ಕೇಳಬೇಕು. ನಿನಗೆ ಯಾವ ಜೀವನೋಪಾಯವು ಕಲ್ಪಿತವಾಗಿದೆಯೋ ಅದೇ ನಿನಗೆ ಇರಲಿ. (ಆ ವಿಷಯದಲ್ಲಿ ನನಗೆ ಬಲಾತ್ಕಾರವನ್ನು ಮಾಡಬಾರದು).
ನ ಮಂತ್ರಯೇಯಮನ್ಯೈಸ್ತೇ ಸಚಿವೈಃ ಸಹ ಕರ್ಹಿಚಿತ್ |
ನೀತಿಮಂತಃ ಪರೀಪ್ಸಂತೋ ವೃಥಾ ಬ್ರೂಯುಃ ಪರೇ ಮಯಿ ॥36॥
ನಾನು ನಿನ್ನ ಉಳಿದ ಮಂತ್ರಿಗಳ ಜೊತೆಯಲ್ಲಿ ಯಾವ ಕಾರಣದಿಂದಲೂ ಮಂತ್ರಾಲೋಚನೆಯನ್ನು ಮಾಡುವುದಿಲ್ಲ. ನನ್ನ ಒಳಗಿನ ವಿಷಯಗಳನ್ನು ವಿಚಾರ ಮಾಡುತ್ತಾ ಅವರು ನನ್ನ ವಿಷಯದಲ್ಲಿ ನಿನ್ನ ಬಳಿ ಸುಳ್ಳು ಮಾತುಗಳನ್ನು ಹೇಳಬಹುದು.
ಏಕ ಏಕೇನ ಸಂಗಮ್ಯ ರಹೋ ಬ್ರೂಯಾಂ ಹಿತಂ ತವ |
ನ ಚ ತೇ ಜ್ಞಾತಿಕಾರ್ಯೇಷು ಪ್ರಷ್ಟವ್ಯೋಽಹಂ ಹಿತಾಹಿತೇ ॥37॥
ನಾನೊಬ್ಬನೇ ನಿನ್ನೊಬ್ಬನ ಜೊತೆಯಲ್ಲಿ ಸೇರಿ ರಹಸ್ಯವಾಗಿ ನಿನ್ನ ಹಿತವನ್ನು ಹೇಳುವೆನು. ನಿನ್ನ ಜ್ಞಾತಿಗಳ ಹಿತಾಹಿತವಿಷಯದಲ್ಲಿ ನೀನು ನನ್ನನ್ನು ಪ್ರಶ್ನಿಸಬಾರದು.
ಮಯಾ ಸಮ್ಮಂತ್ರ್ಯ ಪಶ್ಚಾಚ್ಚ ನ ಹಿಂಸ್ಯಾಃ ಸಚಿವಾಸ್ತ್ವಯಾ |
ಮದೀಯಾನಾಂ ಚ ಕುಪಿತೋ ಮಾ ತ್ವಂ ದಂಡಂ ನಿಪಾತಯೇಃ ॥38॥
ನನ್ನ ಜೊತೆಯಲ್ಲಿ ಮಂತ್ರರಹಸ್ಯವನ್ನು ಮಾಡಿ ಅನಂತರ ನಿನ್ನ ಉಳಿದ ಸಚಿವರನ್ನು ಹಿಂಸಿಸಬಾರದು. ನನ್ನವರ ಮೇಲೆ ಕೋಪಗೊಂಡು ನೀನು ಶಿಕ್ಷೆಯನ್ನು ವಿಧಿಸಬಾರದು (ಎಂದು ಹೇಳಿತು).
ಏವಮಸ್ತ್ವಿತಿ ತೇನಾಸೌ ಮೃಗೇಂದ್ರೇಣಾಭಿಪೂಜಿತಃ |
ಪ್ರಾಪ್ತವಾನ್ ಮತಿಸಾಚಿವ್ಯಂ ಗೋಮಾಯುರ್ವ್ಯಾಘ್ರಯೋನಿತಃ॥39॥
ಮೃಗೇಂದ್ರನು ಹಾಗೆಯೇ ಆಗಲಿ ಎಂದು ಹೇಳಿ ಆ ನರಿಯನ್ನು ಪೂಜಿಸಿದನು. ನರಿಯು ಆ ವ್ಯಾಘ್ರಕುಮಾರನ ಸಚಿವಪದವಿಯನ್ನು ಹೊಂದಿತು.
ತಂ ತಥಾ ಸತ್ಕೃತಂ ದೃಷ್ಟ್ವಾ ಯುಜ್ಯಮಾನಂ ಚ ಕರ್ಮಣಿ |
ಪ್ರಾದ್ವಿಷನ್ ಕೃತಸಂಘಾತಾಃ ಪೂರ್ವಭೃತ್ಯಾ ಮುಹುರ್ಮುಹುಃ ॥40॥
ಆ ನರಿಯು ಹಾಗೆ ಪೂಜಿತವಾದುದನ್ನು ನೋಡಿ ಮತ್ತು ರಾಜಕಾರ್ಯಗಳಲ್ಲಿ ಭಾಗವಹಿಸುವುದನ್ನು ನೋಡಿ ಆ ಮೃಗರಾಜನ ಮೊದಲನೆಯ ಸೇವಕರೆಲ್ಲರೂ ಮತ್ತೆ ಮತ್ತೆ ಗುಂಪುಗೂಡಿ ಆ ನರಿಯನ್ನು ದ್ವೇಷಿಸಲು ಪ್ರಾರಂಭಿಸಿದವು.
ಮಿತ್ರಬುದ್ಧ್ಯಾ ಚ ಗೋಮಾಯುಂ ಸಾಂತ್ವಯಿತ್ವಾ ಪ್ರವೇಶ್ಯ ಚ |
ದೋಷೇಷು ಸಮತಾಂ ನೇತುಮೈಚ್ಛನ್ನಶುಭಬುದ್ಧಯಃ ॥41॥
ದುಷ್ಟಬುದ್ಧಿಯುಳ್ಳ ಆ ನರಿಗಳು ಮಿತ್ರಬುದ್ಧಿಯಿಂದ ಆ ನರಿಯನ್ನು ತಮ್ಮ ಗುಂಪಿಗೆ ಸೇರಿಸಿಕೊಂಡು ಸಮಾಧಾನ ಮಾಡಿ ತಮ್ಮ ದೋಷಗಳನ್ನು ಆ ನರಿಗೂ ಉಂಟುಮಾಡಲು ಪ್ರಯತ್ನಿಸಿದವು.
ಅನ್ಯಥಾಭ್ಯುಚಿತಾಃ ಪೂರ್ವಂ ಪರದ್ರವ್ಯಾಪಹಾರಿಣಃ |
ಅಶಕ್ತಾಃ ಕಿಂಚಿದಾದಾತುಂ ದ್ರವ್ಯಂ ಗೋಮಾಯುಯಂತ್ರಿತಾಃ ॥42॥

ಹಿಂದೆ ಪರದ್ರವ್ಯಗಳನ್ನು ಅಪಹರಿಸಿ ಬೇರೆ ರೀತಿಯಲ್ಲಿ ಜೀವನ ಮಾಡಿದ ಅವು ಈಗ ರಾಜ-ನರಿಯ ನಿಯಂತ್ರಣಕ್ಕೆ ಒಳಪಟ್ಟು ಬೇರೆಯವರ ದ್ರವ್ಯವನ್ನು ಅಪಹರಿಸಲು ಸಾಧ್ಯವಾಗಲಿಲ್ಲ.
ವ್ಯುತ್ಥಾನಂ ಚಾತ್ರ ಕಾಂಕ್ಷದ್ಭಿಃ ಕಥಾಭಿಃ ಪ್ರವಿಲೋಭ್ಯತೇ |
ನ ಚಾಪಿ ಸ ಮಹಾಪ್ರಾಜ್ಞಸ್ತಸ್ಮಾದ್ ಧೈರ್ಯಾಚ್ಚಚಾಲ ಹ |
ಅಥಾಸ್ಯ ಸಮಯಂ ಕೃತ್ವಾ ವಿನಾಶಾಯ ಸ್ಥಿತಾಃ ಪರೇ ॥44॥
ಆ ರಾಜನರಿಯನ್ನು ಅಲ್ಲಿಂದ ಎಬ್ಬಿಸಲು ಬಯಸಿದ ಅವು ಬೇರೆ ಬೇರೆ ಕಥೆಗಳನ್ನು ಹೇಳಿ ಅದನ್ನು ಲೋಭಗೊಳಿಸಲು ಪ್ರಯತ್ನಿಸಿದವು. ಬಹಳ ಧನವನ್ನು ನೀಡಿ ಅದರ ಬುದ್ಧಿಯನ್ನು ಕೆಡಿಸಲು ಪ್ರಯತ್ನಪಟ್ಟವು. ಮಹಾಪ್ರಾಜ್ಞನಾದ ಆ ರಾಜನರಿಯು ಮಾತ್ರ ತನ್ನ ಧೈರ್ಯವನ್ನು ಬಿಟ್ಟು ಅಲುಗಾಡಲಿಲ್ಲ. ಉಳಿದ ಸೇವಕರು ಆ ನರಿಯನ್ನು ವಿನಾಶಮಾಡುವುದಾಗಿ ನಿಶ್ಚಯಿಸಿ ಪ್ರತಿಜ್ಞೆಯನ್ನು ಮಾಡಿದವು.
ಈಪ್ಸಿತಂ ಚ ಮೃಗೇಂದ್ರಸ್ಯ ಮಾಂಸಂ ಯತ್ ತತ್ರ ಸಂಸ್ಕೃತಮ್ |
ಅಪನೀಯ ಸ್ವಯಂ ತದ್ಧಿ ತೈರ್ನ್ಯಸ್ತಂ ತಸ್ಯ ವೇಶ್ಮನಿ ॥45॥
ಮೃಗೇಂದ್ರನಿಗೆ ಇಷ್ಟವಾದ ಪಕ್ವವಾದ ಮಾಂಸವನ್ನು ತಾವೇ ತೆಗೆದು ಆ ರಾಜನರಿಯ ಗೃಹದಲ್ಲಿ ಇಟ್ಟವು.
ಯದರ್ಥಂ ಚಾಪ್ಯಪಹೃತಂ ಯೇನ ಯಚ್ಚೈವ ಮಂತ್ರಿತಮ್ |
ತಸ್ಯ ತದ್ ವಿದಿತಂ ಸರ್ವಂ ಕಾರಣಾರ್ಥಂ ಚ ಮರ್ಷಿತಮ್ ॥46॥
ರಾಜನರಿಗೆ ಉಳಿದವರು ಮಾಡಿದ ಮಂತ್ರಾಲೋಚನೆಯನ್ನು, ಮಾಂಸವನ್ನು ತೆಗೆದವರು ಯಾರು? ತೆಗೆದ ಉದ್ದೇಶವೇನು? ಎಂದು ಎಲ್ಲವೂ ತಿಳಿದಿದ್ದರೂ ಅದು ಒಂದು ಕಾರಣದಿಂದ ಕ್ಷಮಿಸಿ ಸುಮ್ಮನಿದ್ದಿತು.
ಸಮಯೋಽಯಂ ಕೃತಸ್ತೇನ ಸಾಚಿವ್ಯಮುಪಗಚ್ಛತಾ |
ನೋಪಘಾತಸ್ತ್ವಯಾ ಕಾರ್ಯೋ ರಾಜನ್ ಮೈತ್ರೀಮಿಹೇಚ್ಛತಾ ॥47॥
ಸಚಿವಪದವಿಯನ್ನು ಒಪ್ಪಿಕೊಳ್ಳುವಾಗ `ಎಲೈ ರಾಜನೇ! ನನ್ನ ಜೊತೆಯಲ್ಲಿ ಸ್ನೇಹವನ್ನು ಬಯಸುವ ನೀನು ನನ್ನನ್ನು ಹಿಂಸಿಸಬಾರದು' ಎಂದು ನಿಬಂಧನೆಯನ್ನು ಮಾಡಿಕೊಂಡಿದ್ದಿತು.
ಭೋಜನೇ ಚೋಪಹರ್ತವ್ಯೇ ತನ್ಮಾಂಸಂ ನ ಸ್ಮ ದೃಶ್ಯತೇ |
ಮೃಗರಾಜೇನ ಚಾಜ್ಞಪ್ತಂ ಮೃಗ್ಯತಾಂ ಚೋರ ಇತ್ಯುತ ॥48॥
ಮೃಗರಾಜನಿಗೆ ಭೋಜನವನ್ನು ತಲುಪಿಸಬೇಕಾದಾಗ ಆ ಮಾಂಸವು ಕಂಡು ಬರಲಿಲ್ಲ. ಮೃಗರಾಜನು ಕಳ್ಳನು ಯಾರೆಂದು ಹುಡುಕಿ ಎಂದು ಆಜ್ಞೆಯನ್ನು ಮಾಡಿದನು.
ಕೃತಕೈಶ್ಚಾಪಿ ತನ್ಮಾಂಸಂ ಮೃಗೇಂದ್ರಾಯೋಪವರ್ಣಿತಮ್ |
ಸಚಿವೇನೋಪನೀತಂ ತೇ ವಿದುಷಾ ಪ್ರಾಜ್ಞಮಾನಿನಾ ॥49॥
ಕಪಟವನ್ನು ಮಾಡಿದ ಅವನ ಸೇವಕರೆಲ್ಲರೂ ವಿದ್ವಾಂಸನೂ, ಪ್ರಾಜ್ಞನೂ ಆದ ನಿನ್ನ ಸಚಿವನಿಂದ ಆ ಮಾಂಸವು ಅಪಹೃತವಾಗಿದೆ ಎಂದು ಮೃಗೇಂದ್ರನಿಗೆ ತಿಳಿಸಿದರು.
ಸರೋಷಸ್ತ್ವಥ ಶಾರ್ದೂಲಃ ಶ್ರುತ್ವಾ ಗೋಮಾಯುಚಾಪಲಮ್ |
ಬಭೂವಾಮರ್ಷಿತೋ ರಾಜಾ ವಧಂ ಚಾಸ್ಯಾಭ್ಯರೋಚಯತ್ ॥50॥
ಆ ಹುಲಿಯು ನರಿಯ ಚಪಲತೆಯನ್ನು ಕೇಳಿ, ರೋಷದಿಂದ ಕೂಡಿ, ಅದರ ವಧೆಯನ್ನು ಬಯಸಿತು.
ಛಿದ್ರಂ ತು ತಸ್ಯ ತದ್ ದೃಷ್ಟ್ವಾ ಪ್ರೋಚುಸ್ತೇ ಪೂರ್ವಮಂತ್ರಿಣಃ |
ಸರ್ವೇಷಾಮೇವ ಸೋಽಸ್ಮಾಕಂ ವೃತ್ತಿಭಂಗೇಷು ವರ್ತತೇ ॥51॥
ಮೃಗರಾಜನ ಆ ಛಿದ್ರವನ್ನು ನೋಡಿ ಪೂರ್ವಮಂತ್ರಿಗಳು ಹೀಗೆ ಮಾತ- ನಾಡಿದವು. ಈ ರಾಜನರಿಯು ನಮ್ಮೆಲ್ಲರ ಜೀವನೋಪಾಯವನ್ನು ಭಗ್ನ- ಗೊಳಿಸುವುದರಲ್ಲಿ ನಿರತವಾಗಿದೆ.
ಇದಂ ಚಾಸ್ಯೇದೃಶಂ ಕರ್ಮ ವಾಲ್ಲಭ್ಯೇನ ತು ರಕ್ಷ್ಯತೇ |
ಶ್ರುತಶ್ಚ ಸ್ವಾಮಿನಾ ಪೂರ್ವಂ ಯಾದೃಶೋ ನೈಷ ತಾದೃಶಃ ॥52॥
ಅದು ಮಾಡುವ ಇಂತಹ ಕರ್ಮಗಳನ್ನು ನೀನು ಪ್ರೀತಿಯಿಂದ ರಕ್ಷಿಸುತ್ತಿದ್ದೀಯೆ. ಸ್ವಾಮಿಯಾದ ನೀನು ಅವನ ವಿಷಯದಲ್ಲಿ ಹಿಂದೆ ಹೇಗೆ ಕೇಳಿದ್ದೀಯೋ ಅವನು ಅಂತಹ ಸ್ವಭಾವದವನಲ್ಲ.
ವಾಙ್ಮಾತ್ರೇಣೈವ ಧರ್ಮಿಷ್ಠಃ ಸ್ವಭಾವೇನ ತು ದಾರುಣಃ |
ಧರ್ಮಚ್ಛದ್ಮಾ ಹ್ಯಯಂ ಪಾಪೋ ವೃಥಾಚಾರಪರಿಗ್ರಹಃ |
ಕಾರ್ಯಾರ್ಥಂ ಭೋಜನಾದ್ಯೇಷು ವ್ರತೇಷು ಕೃತವಾನ್ ಶ್ರಮಮ್ ॥53॥
ಮಾತಿನಲ್ಲಿ ಮಾತ್ರ ಧರ್ಮಿಷ್ಠನಾಗಿದ್ದಾನೆ. ಸ್ವಭಾವ ಮಾತ್ರ ದಾರುಣವಾದುದು. ಈ ಪಾಪಿಯು ಧರ್ಮದ ನಾಟಕವನ್ನು ಆಡುವವನು. ಸುಳ್ಳಾದ ಆಚಾರವನ್ನು ತೋರಿಸುತ್ತಾನೆ. ತನ್ನ ಭೋಜನಾದಿಗಳನ್ನು ದೊರಕಿಸಿಕೊಳ್ಳುವ ಸಲುವಾಗಿ ಇಂತಹ ವ್ರತಗಳನ್ನು ಧರಿಸಿದ್ದಾನೆ.
ಯದಿ ವಿಪ್ರತ್ಯಯೋ ಹ್ಯೇಷ ತದಿದಂ ದರ್ಶಯಾಮ ತೇ |
ತನ್ಮಾಂಸಂ ಚೈವ ಗೋಮಾಯೋಸ್ತತ್ಕ್ಷಣಾತ್ ತೈಸ್ತು ಢೌಕಿತಮ್ ॥54॥
ನಿನಗೆ ನಮ್ಮಲ್ಲಿ ವಿಶ್ವಾಸವಿಲ್ಲದಿದ್ದರೆ ಅದನ್ನು ಈಗ ತೋರಿಸುತ್ತೇವೆ ಎಂದು ಹೇಳಿ ಆ ಕ್ಷಣದಲ್ಲಿ ರಾಜನರಿಯ ಗೃಹದಿಂದ ಮಾಂಸವನ್ನು ತಂದು ಮೃಗರಾಜನ ಮುಂದೆ ಇಟ್ಟವು.
ಮಾಂಸಾಪನಯನಂ ಜ್ಞಾತ್ವಾ ವ್ಯಾಘ್ರುಸ್ತೇಷಾಂ ತು ತದ್ವಚಃ |

ಆಜ್ಞಾಪಯಾಮಾಸ ತದಾ ಗೋಮಾಯುರ್ವಧ್ಯತಾಮಿತಿ ॥55॥
ಹುಲಿಯು ಅವರ ಮಾತುಗಳನ್ನು ಕೇಳಿ ನರಿಯೇ ಮಾಂಸವನ್ನು ಅಪಹರಿಸಿ- ರುವುದು ಎಂದು ನಿಶ್ಚಯಿಸಿ `ನರಿಯನ್ನು ಕೊಲ್ಲಿ!' ಎಂದು ಆಜ್ಞೆ ಮಾಡಿತು.
ಶಾರ್ದೂಲವಚನಂ ಶ್ರುತ್ವಾ ಶಾರ್ದೂಲಜನನೀ ತತಃ।
ಮೃಗರಾಜಂ ಹಿತೈರ್ವಾಕ್ಯೈಃ ಸಂಬೋಧಯಿತುಮಾಗಮತ್ ॥56॥
ವ್ಯಾಘ್ರನ ಮಾತುಗಳನ್ನು ಕೇಳಿ ವ್ಯಾಘ್ರನ ತಾಯಿಯು ಮೃಗರಾಜನನ್ನು ಹಿತ- ವಾಕ್ಯಗಳಿಂದ ಎಚ್ಚರಿಸಲು ಆಗ ಅಲ್ಲಿಗೆ ಬಂದಿತು.
ಪುತ್ರ ನೈತತ್ ತ್ವಯಾ ಗ್ರಾಹ್ಯಂ ಕಪಟಾರಂಭಸಂವೃತಮ್।
ಕರ್ಮಸಂಘರ್ಷಜೈರ್ದೋಷೈರ್ದುಷ್ಯತ್ಯಶುಚಿಭಿಃ ಶುಚಿಃ ॥57॥
ಎಲೈ ಪುತ್ರನೇ! ನಿನ್ನ ಉಳಿದ ಸೇವಕರು ಹೇಳುವ ಮಾತು ಕಪಟದಿಂದ ಕೂಡಿದೆ. ಅದನ್ನು ನೀನು ಸ್ವೀಕರಿಸಬಾರದು. ತಮ್ಮ ಕಾರ್ಯಕ್ಕೆ ವಿರೋಧವುಂಟಾದ ಕಾರಣ ಅಶುಚಿಗಳಾದ ಅವರು ಶುಚಿಯನ್ನು ದೂಷಿಸುತ್ತಿದ್ದಾರೆ.
ನೋಚ್ಛ್ರಿತಂ ಸಹತೇ ಕಶ್ಚಿತ್ ಪ್ರಕ್ರಿಯಾ ವೈರಕಾರಿಕಾ।
ಶುಚೇರಪಿ ಹಿ ಯುಕ್ತಸ್ಯ ದೋಷ ಏವ ನಿಪಾತ್ಯತೇ ॥58॥
ಇನ್ನೊಬ್ಬರ ಉನ್ನತಿಯನ್ನು ಸಹಿಸುವುದಿಲ್ಲ. ಇದು ನಿನಗೂ ಮತ್ತು ಆ ರಾಜನರಿಗೂ ವೈರವನ್ನು ಉಂಟುಮಾಡುವ ಪ್ರಕ್ರಿಯೆಯಾಗಿದೆ. ಶುಚಿಯಾಗಿದ್ದ- ವನಿಗೂ ದೋಷವು ಆರೋಪಿಸಲ್ಪಡುತ್ತಿದೆ.
ಲುಬ್ಧಾನಾಂ ಶುಚಯೋ ದ್ವೇಷ್ಯಾಃ ಕಾತರಾಣಾಂ ತರಸ್ವಿನಃ।
ಮೂರ್ಖಾಣಾಂ ಪಂಡಿತಾ ದ್ವೇಷ್ಯಾ ದರಿದ್ರಾಣಾಂ ಮಹಾಧನಾಃ।
ಅಧಾರ್ಮಿಕಾಣಾಂ ಧರ್ಮಿಷ್ಠಾ ವಿರೂಪಾಣಾಂ ಸುರೂಪಕಾಃ ॥59॥
ಲೋಭಿಗಳಿಗೆ ಶುಚಿಗಳು ದ್ವೇಷ್ಯರಾದವರು. ಹೇಡಿಗಳಿಗೆ ವಿವೇಕಶಾಲಿಗಳಾದ ವೀರರು ದ್ವೇಷ್ಯರು. ಮೂರ್ಖರಿಗೆ ಪಂಡಿತರು ದ್ವೇಷ್ಯರು. ದರಿದ್ರರಿಗೆ ಶ್ರೀಮಂತರು ದ್ವೇಷ್ಯರು. ಅಧಾರ್ಮಿಕರಿಗೆ ಧರ್ಮಿಷ್ಠರು ದ್ವೇಷ್ಯರು. ರೂಪಹೀನರಿಗೆ ರೂಪ- ವಂತರು ದ್ವೇಷ್ಯರು.
ಮುನೇರಪಿ ವನಸ್ಥಸ್ಯ ಸ್ವಾನಿ ಕರ್ಮಾಣಿ ಕುರ್ವತಃ।
ಉತ್ಪದ್ಯಂತೇ ತ್ರಯಃ ಪಕ್ಷಾಃ ಮಿತ್ರೋದಾಸೀನಶತ್ರವಃ ॥60॥
ಕಾಡಿನಲ್ಲಿ ವಾಸಿಸಿ, ತನ್ನ ಕರ್ಮಗಳನ್ನು ತಾನು ಮಾಡಿಕೊಂಡಿರುವ ಮುನಿಗೂ ಮಿತ್ರರು ಶತ್ರುಗಳು ಮತ್ತು ಉದಾಸೀನರು ಎಂಬ ಮೂರು ಪಕ್ಷಗಳು ಉಂಟಾ- ಗುತ್ತವೆ.
ಬಹವಃ ಪಂಡಿತಾಃ ಲುಬ್ಧಾಃ ಸರ್ವೇ ಮಾಯೋಪಜೀವಿನಃ।
ಕುರ್ಯುರ್ದೋಷಮದೋಷಸ್ಯ ಬೃಹಸ್ಪತಿಮತೇರಪಿ ॥61॥
ಅನೇಕ ಪಂಡಿತರು ಲೋಭಿಗಳಾಗಿರುತ್ತಾರೆ. ಕಪಟದಿಂದ ಜೀವನವನ್ನು ಮಾಡುತ್ತಾರೆ. ಬೃಹಸ್ಪತಿಮತಿಯನ್ನು ಹೊಂದಿ ನಿರ್ದೋಷನಾದವನಿಗೂ ದೋಷಾ- ರೋಪಣೆಯನ್ನು ಮಾಡುತ್ತಾರೆ.
ಶೂನ್ಯಾತ್ ತಚ್ಚ ಗೃಹಾನ್ಮಾಂಸಂ ಯದದ್ಯಾಪಹೃತಂ ತವ।
ನೇಚ್ಛತೇ ದೀಯಮಾನಂ ಚ ಸಾಧು ತಾವದ್ ವಿಮೃಶ್ಯತಾಮ್ ॥62॥
ಶೂನ್ಯವಾಗಿದ್ದ ನಿನ್ನ ಗೃಹದಿಂದ ಮಾಂಸವು ಅಪಹರಿಸಲ್ಪಟ್ಟಿದೆ. ಇನ್ನೊಂದು ಕಡೆ ಮಾಂಸವನ್ನು ನೀಡಿದರೂ ಅವನು ಮಾಂಸವನ್ನು ತೆಗೆದುಕೊಳ್ಳಲು ಬಯಸುತ್ತಿಲ್ಲ. ಈ ವಿಷಯವನ್ನು ಚೆನ್ನಾಗಿ ವಿಚಾರಮಾಡು.
ಅಸತ್ಯಾಃ ಸತ್ಯಸಂಕಾಶಾಃ ಸತ್ಯಾಶ್ಚಾಸತ್ಯದರ್ಶಿನಃ।
ದೃಶ್ಯಂತೇ ವಿವಿಧಾ ಭಾವಾಸ್ತೇಷು ಯುಕ್ತಂ ಪರೀಕ್ಷಣಮ್ ॥63॥
ಅಸತ್ಯವನ್ನು ನುಡಿಯುವವರು ಸತ್ಯವಾದಿಗಳಂತೆಯೂ, ಸತ್ಯವನ್ನು ನುಡಿಯುವವರು ಅಸತ್ಯವಾದಿಗಳಂತೆಯೂ ಕಂಡು ಬರುತ್ತಾರೆ. ಅವರಲ್ಲಿ ಅನೇಕ ಅಭಿಪ್ರಾಯಗಳಿರುತ್ತವೆ. ಅದರಲ್ಲಿ ಯುಕ್ತವಾದುದು ಯಾವುದು ಎಂದು ಪರೀಕ್ಷಿಸಬೇಕು.
ತಳವದ್ ದೃಶ್ಯತೇ ವ್ಯೋಮ ಖದ್ಯೋತೋ ಹವ್ಯವಾಡಿವ।
ನ ಚೈವಾಸ್ತಿ ತಳಂ ವ್ಯೋಮ್ನಿ ನ ಖದ್ಯೋತೇ ಹುತಾಶನಃ ॥64॥
ಆಕಾಶವು ಭೂತಳದಂತೆ ಕಾಣುತ್ತದೆ. ಮಿಣುಕುಹುಳುವು ಅಗ್ನಿಯಂತೆ ಕಾಣು- ತ್ತದೆ. ಆದರೆ ಆಕಾಶದಲ್ಲಿ ಭೂಮಿಯಾಗಲೀ, ಮಿಣುಕುಹುಳುವಿನಲ್ಲಿ ಅಗ್ನಿ- ಯಾಗಲೀ ಇಲ್ಲ.
ತಸ್ಮಾತ್ ಪ್ರತ್ಯಕ್ಷದೃಷ್ಟೋಽಪಿ ಯುಕ್ತೋ ಹ್ಯರ್ಥಃ ಪರೀಕ್ಷಿತುಮ್।
ಪರೀಕ್ಷ್ಯ ಜ್ಞಾಪಯನ್ ಹ್ಯರ್ಥಾನ್ನ ಪಶ್ಚಾತ್ ಪರಿತಪ್ಯತೇ ॥65॥
ಆದ್ದರಿಂದ ಪ್ರತ್ಯಕ್ಷದೃಷ್ಟವಾದರೂ ಆ ವಿಷಯವನ್ನು ಪರೀಕ್ಷಿಸುವುದು ಯೋಗ್ಯ- ವಾದುದು. ಪರೀಕ್ಷೆಯನ್ನು ಮಾಡಿ ವಿಷಯವನ್ನು ತಿಳಿಯುವವನು ಪಶ್ಚಾತ್ತಾಪ ಪಡುವುದಿಲ್ಲ.
ನ ದುಷ್ಕರಮಿದಂ ಪುತ್ರ ಯತ್ ಪ್ರಭುರ್ಘಾತಯೇತ್ ಪರಮ್।
ಶ್ಲಾಘನೀಯಾ ಚ ವರ್ಯಾ ಚ ಲೋಕೇ ಪ್ರಭವತಾಂ ಕ್ಷಮಾ ॥66॥
ಎಲೈ ಪುತ್ರನೇ! ಪ್ರಭುವಾದವನು ಇನ್ನೊಬ್ಬನನ್ನು ಕೊಲ್ಲಿಸುವುದು ದುಷ್ಕರ- ವಾದುದಲ್ಲ. ಆದರೆ ಪ್ರಭುತ್ವವಿದ್ದವರು ಕ್ಷಮಿಸುವುದು ಲೋಕದಲ್ಲಿ ಶ್ಲಾಘನೀಯ- ವಾದುದು ಮತ್ತು ಅಪೇಕ್ಷಿತವಾದುದು.
ಸ್ಥಾಪಿತೋಽಯಂ ಪುತ್ರ ತ್ವಯಾ ಸಾಮಂತೇಷ್ವಪಿ ವಿಶ್ರುತಃ।
ದುಃಖೇನಾಸಾದ್ಯತೇ ಚಾತ್ರ ಧಾರ್ಯತಾಮೇಷ ತೇ ಸುಹೃತ್ ॥67॥
ಎಲೈ ಪುತ್ರನೇ! ನೀನು ಅವನನ್ನು ಸಚಿವಪದವಿಯಲ್ಲಿ ಸ್ಥಾಪಿಸಿದ್ದೀಯೆ. ನಿನ್ನ ಸಾಮಂತರಲ್ಲಿಯೂ ಅವನು ಖ್ಯಾತನಾಗಿದ್ದಾನೆ.

ಅವನು ದುಃಖದಿಂದ ಈ ಕಡೆ ಬರುತ್ತಿದ್ದಾನೆ. ಈ ಸುಹೃಜ್ಜನನನ್ನು ನಿನ್ನ ಬಳಿಯಲ್ಲಿ ಇರಿಸಿಕೋ.
ದೂಷಿತಂ ಪರದೋಷೈರ್ಹಿ ಗೃಹ್ಣೀತೇ ಯೋऽನ್ಯಥಾ ಶುಚಿಮ್ |
ಸ್ವಯಂ ಸನ್ ದೂಷಿತಾಮಾತ್ಯಃ ಕ್ಷಿಪ್ರಮೇವ ವಿನಶ್ಯತಿ ॥68॥
ಶುಚಿಯಾದವನು ಪರದೋಷಗಳಿಂದ ದೂಷಿಸಲ್ಪಟ್ಟರೆ ಅದನ್ನು ಹಾಗೆಯೇ ಗ್ರಹಿಸುವವನು ಸ್ವತಃ ಸಜ್ಜನನಾದರೂ ದುಷ್ಟರಾದ ಸಚಿವರನ್ನುಳ್ಳವನು ಶೀಘ್ರವಾಗಿ ವಿನಾಶವನ್ನು ಹೊಂದುತ್ತಾನೆ.
ತಸ್ಮಾದಥಾರಿಸಂಘಾತಾದ್ ಗೋಮಾಯೋಃ ಕಶ್ಚಿದಾಗತಃ |
ಧರ್ಮಾತ್ಮಾ ತೇನ ಚಾಖ್ಯಾತಂ ಯಥೈತದ್ ಕಪಟಂ ಕೃತಮ್ ॥69॥
ಆ ನರಿಯ ಸಮೂಹದಿಂದ ಧರ್ಮಾತ್ಮನಾದ ಒಂದು ನರಿಯು ಬಂದು ನನಗೆ ಈ ಕಪಟವನ್ನು ಹೀಗೆ ಆಚರಿಸಿದ್ದಾರೆ ಎಂಬ ವಿಷಯವನ್ನು ಹೇಳಿತು.
ತತೋ ವಿಜ್ಞಾತಚಾರಿತ್ರಃ ಸತ್ಕೃತ್ಯ ಚ ವಿಮೋಕ್ಷಿತಃ |
ಪರಿಷ್ವಕ್ತಶ್ಚ ಸಸ್ನೇಹಂ ಮೃಗೇಂದ್ರೇಣ ಪುನಃ ಪುನಃ ॥70॥
ಆಗ ರಾಜನರಿಯ ಸ್ವಭಾವವನ್ನು ತಿಳಿದ ಮೃಗರಾಜನು ಅದನ್ನು ಸತ್ಕರಿಸಿ, ದೋಷಾರೋಪದಿಂದ ಬಿಡುಗಡೆಗೊಳಿಸಿ, ಪುನಃ ಪುನಃ ಸ್ನೇಹಪೂರ್ವಕವಾಗಿ ಆಲಿಂಗಿಸಿದನು.
ಅನುಜ್ಞಾಪ್ಯ ಮೃಗೇಂದ್ರಂ ತು ಗೋಮಾಯುರ್ನೀತಿಶಾಸ್ತ್ರವಿತ್ |
ತೇನಾಮರ್ಷೇಣ ಸಂತಪ್ತಃ ಪ್ರಾಯಮಾಸಿತುಮೈಕ್ಷತ ॥71॥
ನೀತಿಶಾಸ್ತ್ರವನ್ನು ತಿಳಿದ ಆ ರಾಜನರಿಯು ಮೃಗೇಂದ್ರನ ಅನುಮತಿಯನ್ನು ಪಡೆದು, ಮೃಗೇಂದ್ರನ ಕೋಪದಿಂದ ತಪ್ತವಾಗಿ ಪ್ರಾಯೋಪವೇಶವನ್ನು ಮಾಡಲು ಬಯಸಿತು.
ಶಾರ್ದೂಲಸ್ತತ್ರ ಗೋಮಾಯುಂ ಸ್ನೇಹಾತ್ ಪ್ರಸ್ರುತಲೋಚನಃ |
ಅವಾರಯತ್ ಸ ಧರ್ಮಿಷ್ಠಂ ಪೂಜಯಾ ಪ್ರತಿಪೂಜಯತ್ ॥72॥
ಆಗ ಆ ವ್ಯಾಘ್ರವು ಸ್ನೇಹದಿಂದ ಅಳುತ್ತಾ ಧರ್ಮಿಷ್ಠವಾದ ಆ ನರಿಯನ್ನು ತಡೆದು ಅದನ್ನು ಪೂಜಿಸಿತು.
ತಂ ಸ ಗೋಮಾಯುರಾಲೋಕ್ಯ ಸ್ನೇಹಾದಾಗತಸಂಭ್ರಮಮ್ |
ಬಭಾಷೇ ಪ್ರಣತೋ ವಾಕ್ಯಂ ಬಾಷ್ಪಗದ್ಗದಯಾ ಗಿರಾ ॥73॥
ಸ್ನೇಹದಿಂದ ಆ ವ್ಯಾಘ್ರನಿಗೆ ಉಂಟಾದ ಗಾಬರಿಯನ್ನು ನೋಡಿ ಆ ನರಿಯು ಅದನ್ನು ನಮಸ್ಕರಿಸಿ ಬಾಷ್ಪಗದ್ಗದವಾದ ಕಂಠದಿಂದ ಮಾತನಾಡಿತು.
ಪೂಜಿತೋऽಹಂ ತ್ವಯಾ ಪೂರ್ವಂ ಪಶ್ಚಾಚ್ಚೈವ ವಿಮಾನಿತಃ |
ಪರೇಷಾಮಾಸ್ಪದಂ ನೀತೋ ವಸ್ತುಂ ನಾರ್ಹಾಮ್ಯಹಂ ತ್ವಯಿ ॥74॥
ನೀನು ನನ್ನನ್ನು ಮೊದಲು ಪೂಜಿಸಿ, ಅನಂತರ ಅವಮಾನಗೊಳಿಸಿದೆ. ನಾನು ಇನ್ನೊಬ್ಬರ ದೋಷಾರೋಪಣೆಗೆ ಗುರಿಯಾಗುವಂತೆ ಮಾಡಿದೆ. ನಾನು ನಿನ್ನ ಜೊತೆಯಲ್ಲಿ ವಾಸಿಸುವುದು ಯೋಗ್ಯವಲ್ಲ.
ಸ್ವಸಂತುಷ್ಟಾಶ್ಚ್ಯುತಾಃ ಸ್ಥಾನಾನ್ಮಾನಾತ್ ಪ್ರತ್ಯವರೋಪಿತಾಃ |
ಸ್ವಯಂ ಚೋಪಹೃತಾ ಭೃತ್ಯಾ ಯೇ ಚಾಪ್ಯುಪಹೃತಾಃ ಪರೈಃ ॥75॥
ಪರಿಕ್ಷೀಣಾಶ್ಚ ಲುಬ್ಧಾಶ್ಚ ಕ್ರೂರಾಃ ಕಾರಾಭಿತಾಪಿತಾಃ |
ಹೃತಸ್ವಾ ಮಾನಿನೋ ಯೇ ಚ ತ್ಯಕ್ತೋಪಾತ್ತಾ ಮಹೇಚ್ಛವಃ ॥76॥
ಸಂತಾಪಿತಾಶ್ಚ ಯೇ ಕೇಚಿದ್ ವ್ಯಸನೌಘಪ್ರತೀಕ್ಷಿಣಃ |
ಅಂತರ್ಹಿತಾಃ ಸ್ವೋಪಹೃತಾಃ ಸರ್ವೇ ತೇ ಪರಸಾಧನಾಃ ॥77॥
ಬಹಳ ಅಸಂತುಷ್ಟರಾದ, ತಮ್ಮ ಸ್ಥಾನದಿಂದ ಚ್ಯುತರಾದ, ಮಾನದಿಂದ ಚ್ಯುತರಾದ, ತಾನಾಗಿಯೇ ಸಂಪಾದಿಸಿದ ಅಥವಾ ಬೇರೆಯವರು ನೀಡಿದ, ಕ್ಷೀಣರೂ ಲೋಭಿಗಳೂ ಕ್ರೂರರೂ ಕಾರಾಗೃಹದಲ್ಲಿ ಹಾಕಲ್ಪಟ್ಟವರು ಸರ್ವಸ್ವವೂ ರಾಜನಿಂದ ದೋಚಲ್ಪಟ್ಟವರು, ಆತ್ಮಾಭಿಮಾನವುಳ್ಳವರು, ತಮ್ಮ ಉತ್ಸವದ ಆಸೆ ಉಳ್ಳವರು. ಒಮ್ಮೆ ಸೇವೆಯಿಂದ ಚ್ಯುತಿಗೊಳಿಸಲ್ಪಟ್ಟು ಪುನಃ ಸೇವೆಗೆ ತೆಗೆದುಕೊಂಡವರು, ಹಿಂದೆ ಸಂತಾಪಕ್ಕೆ ಒಳಗಾದವರು. ವ್ಯಸನಗಳ ಸಮೂಹವನ್ನೇ ನೋಡುವವರು, ಮರೆಯಲ್ಲಿ ಕೆಲಸ ಮಾಡುವ ಇಂತಹ ಎಲ್ಲರೂ ಇನ್ನೊಬ್ಬರ ಕಾರ್ಯವನ್ನು ಸಾಧಿಸುತ್ತಾರೆ. ತಮ್ಮ ಸ್ವಾಮಿಯ ಕಾರ್ಯವನ್ನು ಸಾಧಿಸುವುದಿಲ್ಲ.
ಅವಮಾನೇನ ಯುಕ್ತಸ್ಯ ಸ್ಥಾಪಿತಸ್ಯ ಚ ಮೇ ಪುನಃ |
ಕಥಂ ಯಾಸ್ಯಸಿ ವಿಶ್ವಾಸಮಹಮೇಷ್ಯಾಮಿ ವಾ ಪುನಃ ॥78॥
ಅವಮಾನದಿಂದ ಕೂಡಿ ಪುನಃ ಸ್ಥಾಪಿತನಾದ ನನ್ನಲ್ಲಿ ನೀನು ಹೇಗೆ ವಿಶ್ವಾಸವನ್ನು ಹೊಂದುವಿ? ಅಥವಾ ನಾನಾದರೂ ನಿನ್ನ ಬಳಿ ಪುನಃ ಹೇಗೆ ಬರುವೆ?
ಸಮರ್ಥ ಇತಿ ಸಂಗೃಹ್ಯ ಸ್ಥಾಪಯಿತ್ವಾ ಪರೀಕ್ಷ್ಯ ಚ |
ಕೃತಂ ಚ ಸಮಯಂ ಭಿತ್ತ್ವಾ ತ್ವಯಾऽಹಮವಮಾನಿನಃ ॥79॥
ನಾನು ಸಮರ್ಥನಾದವನೆಂದು ತಿಳಿದು ನನ್ನನ್ನು ಸಂಗ್ರಹಿಸಿ, ಪರೀಕ್ಷಿಸಿ, ಸಚಿವಸ್ಥಾನದಲ್ಲಿಟ್ಟು, ಮಾಡಿಕೊಂಡ ಒಪ್ಪಂದವನ್ನು ಮುರಿದು ನೀನು ನನಗೆ ಅವಮಾನವನ್ನು ಮಾಡಿದ್ದೀಯೆ.
ಪ್ರಥಮಂ ಯಃ ಸಮಾಖ್ಯಾತಃ ಶೀಲವಾನಿತಿ ಸಂಸದಿ |
ನ ವಾಚ್ಯಂ ತಸ್ಯ ವೈಗುಣ್ಯಂ ಪ್ರತಿಜ್ಞಾಂ ಪರಿರಕ್ಷತಾ ॥80॥
ಮೊದಲು ಸಭೆಯಲ್ಲಿ ಇವನು ಶೀಲವಂತನೆಂದು ಘೋಷಿಸಿದ ಮೇಲೆ ತನ್ನ ಪ್ರತಿಜ್ಞೆಯನ್ನು ರಕ್ಷಿಸಿಕೊಳ್ಳುವವನು ಅವನಲ್ಲಿ

ದೋಷವುಂಟಾದರೂ ಅದನ್ನು ಹೇಳಬಾರದು.
ಏವಂ ಚಾವಮತಸ್ಯೇಹ ವಿಶ್ವಾಸಂ ಕಿಂ ಪ್ರಯಾಸ್ಯಸಿ |
ತ್ವಯಿ ಚೈವ ಹ್ಯವಿಶ್ವಾಸೇ ಮಮೋದ್ವೇಗೋ ಭವಿಷ್ಯತಿ ॥81॥
ಹೀಗೆ ಅವಮಾನಕ್ಕೆ ಒಳಗಾದ ನನ್ನಲ್ಲಿ ನೀನು ಹೇಗೆ ವಿಶ್ವಾಸವನ್ನು ಮಾಡುವಿ? ನಿನಗೆ ನನ್ನಲ್ಲಿ ವಿಶ್ವಾಸವಿಲ್ಲದಿದ್ದರೆ ನನಗೂ ಉದ್ವೇಗವುಂಟಾಗುವುದು.
ಶಂಕಿತಸ್ತ್ವದಹಂ ಭೀತಃ ಪರೇ ಛಿದ್ರಾನುದರ್ಶಿನಃ |
ಅಸ್ನಿಗ್ಧಾಶ್ಚೈವ ದುಸ್ತೋಷಾಃ ಕರ್ಮ ಚೈತದ್ ಬಹುಚ್ಛಲಮ್ ॥82॥
ನಾನು ನಿನ್ನಿಂದ ಶಂಕಿಸಲ್ಪಟ್ಟಿದ್ದೇನೆ. ಉಳಿದ ನಿನ್ನ ಸೇವಕರು ನನ್ನ ದೋಷವನ್ನು ಹುಡುಕಲು ಪ್ರಯತ್ನಿಸುತ್ತಿದ್ದಾರೆ. ಅವರು ಸ್ನೇಹಶೂನ್ಯರಾದವರು ಮತ್ತು ಸಂತೋಷ ಪಡಿಸಲು ಅಸಾಧ್ಯರಾದವರು. ನಿನ್ನ ಸಚಿವಸ್ಥಾನವು ಬಹಳ ದೋಷಗಳಿಂದ ಕೂಡಿದೆ.
ದುಃಖೇನ ಶ್ಲಿಷ್ಯತೇ ಭಿನ್ನಂ ಶ್ಲಿಷ್ಟಂ ದುಃಖೇ ನ ಭಿದ್ಯತೇ |
ಭಿನ್ನಶ್ಲಿಷ್ಟಾ ತು ಯಾ ಪ್ರೀತಿರ್ನ ಸಾ ಸ್ನೇಹೇನ ವರ್ತತೇ ॥83॥
ಒಡೆದು ಹೋದ ವಸ್ತುವನ್ನು ಬಹಳ ಕಷ್ಟಪಟ್ಟು ಪುನಃ ಕೂಡಿಸಬೇಕು. ನಿಜ- ವಾಗಿ ಸಂಬದ್ಧವಾದ ವಸ್ತುವು/ಸ್ನೇಹಿತರು ಕಷ್ಟ ಒದಗಿದಾಗ ಭಿನ್ನರಾಗುವುದಿಲ್ಲ. ಮೊದಲು ಭಿನ್ನವಾಗಿ ಅನಂತರ ಒಂದು ಗೂಡಿಸಿದ ವಸ್ತುವಿನಲ್ಲಿ ಇರುವ ಪ್ರೀತಿಯು ಸ್ನೇಹಪೂರ್ವಕವಾಗಿ ಇರುವುದಿಲ್ಲ.
ಕಶ್ಚಿದೇವ ಹಿತೇ ಭರ್ತುಃ ದೃಶ್ಯತೇ ನ ಪರಾತ್ಮನಃ |
ಕಾರ್ಯಾಪೇಕ್ಷಾ ಹಿ ವರ್ತಂತೇ ಭಾವಾಃ ಸ್ನಿಗ್ಧಾಸ್ತು ದುರ್ಲಭಾಃ ॥84॥
ಯಾವನೋ ಒಬ್ಬನು ಮಾತ್ರ ಸ್ವಾಮಿಯ ಹಿತದಲ್ಲಿ ರತನಾಗಿರುವುದು ಕಂಡು ಬರುತ್ತದೆ. ಇನ್ನೊಬ್ಬರ ಹಿತದಲ್ಲಿ ಆಸಕ್ತನಾದವನು ಸ್ವಾಮಿಯ ಹಿತದಲ್ಲಿ ಆಸಕ್ತನಾಗಿ ರುವುದಿಲ್ಲ. ಪ್ರತಿಯೊಬ್ಬರಿಗೂ ಸ್ವಾರ್ಥವಿರುತ್ತದೆ. ನಿಜವಾದ ಸ್ನೇಹವಿರುವ ಜನರು (ವಸ್ತುಗಳು) ದುರ್ಲಭರಾದವರು.
ಸುದುಃಖಂ ಪುರುಷಜ್ಞಾನಂ ಚಿತ್ತಂ ಹ್ಯೇಷಾಂ ಚಲಾಚಲಮ್ |
ಸಮರ್ಥೋ ವಾಪ್ಯಶಕ್ತೋ ವಾ ಶತೇಷ್ವೇಕೋಽಧಿಗಮ್ಯತೇ ॥85॥
ಪುರುಷರ ಸ್ವಭಾವವನ್ನು ತಿಳಿಯುವುದು ಬಹಳ ಕಷ್ಟಸಾಧ್ಯವಾದುದು. ಅವರ ಮನಸ್ಸು ಚಂಚಲವಾಗಿರುತ್ತದೆ. ಅವನು ಸಮರ್ಥನಾಗಿರಲಿ ಅಥವಾ ಅಸಮರ್ಥ- ನಾಗಿರಲಿ ನೂರರಲ್ಲಿ ಒಬ್ಬನನ್ನು ಮಾತ್ರ ಸರಿಯಾಗಿ ತಿಳಿಯಬಹುದು.
ಅಕಸ್ಮಾತ್ ಪ್ರಕ್ರಿಯಾ ನೃಣಾಮಕಸ್ಮಾಚ್ಚಾಪಕರ್ಷಣಮ್ |
ಶುಭಾಶುಭೇ ಮಹತ್ತ್ವಂ ಚ ಪ್ರಕರ್ತುಂ ಬುದ್ಧಿಲಾಘವಾತ್ ॥86॥
ಇದ್ದಕ್ಕಿದ್ದಂತೆಯೇ ಮನುಷ್ಯರಿಗೆ ಒಂದು ಕಾರ್ಯವು ಉಪಕ್ರಮಗೊಳ್ಳುತ್ತದೆ. ಇದ್ದಕ್ಕಿದ್ದಂತೆಯೇ ನಿಂತು ಹೋಗುತ್ತದೆ. ಒಬ್ಬನಿಗೆ ಶುಭವನ್ನು ಉಂಟುಮಾಡುವುದು, ಅಶುಭವನ್ನು ಉಂಟುಮಾಡುವುದು, ಮಹತ್ವವನ್ನು ಉಂಟುಮಾಡವುದು ಇವೆಲ್ಲವೂ ಬುದ್ಧಿದೋಷದಿಂದ ಉಂಟಾಗುವಂತಹವುಗಳು. (ಆದ್ದರಿಂದ ಅನಿತ್ಯ- ವಾದವುಗಳು).
ಏವಂ ಬಹುವಿಧಂ ಸಾಂತ್ವಮುಕ್ತತ್ವ ಧರ್ಮಾರ್ಥಹೇತುಮತ್ |
ಪ್ರಸಾದಯಿತ್ವಾ ರಾಜಾನಂ ಗೋಮಾಯುರ್ವನಮಭ್ಯಗಾತ್ ॥87॥
ಹೀಗೆ ಧರ್ಮಾರ್ಥಯುಕ್ತವಾದ ಯುಕ್ತಿಯುಕ್ತವಾದ ಅನೇಕ ವಿಧವಾದ ಸಮಾಧಾನವಚನಗಳನ್ನು ಹೇಳಿ, ಮೃಗರಾಜನನ್ನು ಪ್ರಸನ್ನಗೊಳಿಸಿ ರಾಜನರಿಯು ಕಾಡಿಗೆ ಹೊರಟು ಹೋಯಿತು.
ಅಗೃಹ್ಯಾನುನಯಂ ತಸ್ಯ ಮೃಗೇಂದ್ರಸ್ಯ ಸ ಬುದ್ಧಿಮಾನ್ |
ಗೋಮಾಯುಃ ಪ್ರಾಯಮಾಸೀನಸ್ತ್ಯಕತ್ವ ದೇಹಂ ದಿವಂ ಯಯೌ ॥88॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಯೋದಶಾಧಿಕಶತತಮೋಽಧ್ಯಾಯಃ ॥113॥
ಮೃಗೇಂದ್ರನ ಒಲಿಸುವ ಮಾತುಗಳನ್ನು ಕೇಳದೇ ಮೇಧಾವಿಯಾದ ಆ ನರಿಯು ಪ್ರಾಯೋಪವೇಶವನ್ನು ಮಾಡಿ ದೇಹವನ್ನು ತ್ಯಜಿಸಿ ಸ್ವರ್ಗಕ್ಕೆ ಹೋಯಿತು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 113ನೆಯ ಅಧ್ಯಾಯವು ಮುಗಿಯಿತು.
0

114. ನೂರಹದಿನಾಲ್ಕನೆಯ ಅಧ್ಯಾಯ
ಆಲಸ್ಯದಿಂದ ಉಂಟಾಗುವ ಅನರ್ಥದ ವಿಷಯದಲ್ಲಿ ಒಂಟೆಯ ಕಥೆ
ಯುಧಿಷ್ಠಿರಃ
ಕಿಂ ಪಾರ್ಥಿವೇನ ಕರ್ತವ್ಯಂ ಕಿಂಚ ಕೃತ್ವಾ ಸುಖೀ ಭವೇತ್ |
ತನ್ಮಮಾಚಕ್ಷ್ವ ತತ್ತ್ವೇನ ಸರ್ವಂ ಧರ್ಮಭೃತಾಂವರ ॥1॥
ಯುಧಿಷ್ಠಿರ ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ರಾಜನು ಏನು ಮಾಡಬೇಕು? ಏನು ಮಾಡಿದರೆ ಸುಖಿಯಾಗಿರುತ್ತಾನೆ ಎಂಬುದೆಲ್ಲವನ್ನೂ ನನಗೆ ಸರಿಯಾಗಿ ಹೇಳು.
ಭೀಷ್ಮಃ
ಹಂತ ತೇಽಹಂ ಪ್ರವಕ್ಷ್ಯಾಮಿ ಶೃಣು ಕಾರ್ಯೈಕನಿಶ್ಚಯಮ್ |

ಯಥಾ ರಾಜ್ಞೇಹ ಕರ್ತವ್ಯಂ ಯಚ್ಚ ಕೃತ್ವಾ ಸುಖೀ ಭವೇತ್ ॥2॥
ಭೀಷ್ಮರು ಸಂತೋಷ! ರಾಜನು ಇಲ್ಲಿ ಹೇಗೆ ನಡೆದುಕೊಳ್ಳಬೇಕು? ಏನು ಮಾಡಿದರೆ ಸುಖಿಯಾಗುತ್ತಾನೆ ಎಂದು ಕಾರ್ಯನಿಶ್ಚಯವನ್ನು ನಿನಗೆ ಹೇಳುವೆನು ಅದನ್ನು ಕೇಳು.
ನ ತ್ವೇವಂ ವರ್ತಿತವ್ಯಂ ಸ್ಮ ಯಥೇದಮನುಶುಶ್ರುಮಃ |
ಉಷ್ಟ್ರಸ್ಯ ಸುಮಹದ್ ವೃತ್ತಂ ತನ್ನಿಬೋಧ ಯುಧಿಷ್ಠಿರ ॥3॥
ನಾವು ಕೇಳಿದ ಒಂಟೆಯ ಕಥೆಯಂತೆ ನೀನು ನಡೆದುಕೊಳ್ಳಬಾರದು. ಎಲೈ ಯುಧಿಷ್ಠಿರನೇ! ಒಂಟೆಯ ಒಂದು ದೊಡ್ಡ ಕಥೆಯನ್ನು ಕೇಳು.
ಜಾತಿಸ್ಮರೋ ಮಹಾನುಷ್ಟ್ರಃ ಪ್ರಾಜಾಪತ್ಯಯುಗೋದ್ಭವಃ |
ತಪಃ ಸುಮಹದಾತಿಷ್ಠದರಣ್ಯೇ ಸಂಶಿತವ್ರತಃ ॥4॥
ಕೃತಯುಗದಲ್ಲಿ ಪೂರ್ವಜನ್ಮದ ಸ್ಮರಣೆಯುಳ್ಳ ಒಂದು ದೊಡ್ಡ ಒಂಟೆಯು ವ್ರತವನ್ನು ಧರಿಸಿ, ಅರಣ್ಯದಲ್ಲಿ ದೊಡ್ಡ ತಪಸ್ಸನ್ನು ಮಾಡಿತು.
ತಪಸಸ್ತಸ್ಯ ಚಾಂತೇ ವೈ ಪ್ರೀತಿಮಾನಭವತ್ ಪ್ರಭುಃ |
ವರೇಣ ಚ್ಛಂದಯಾಮಾಸ ತತಶ್ಚೈನಂ ಪಿತಾಮಹಃ ॥5॥
ತಪಸ್ಸಿನ ಅಂತ್ಯದಲ್ಲಿ ಪ್ರಸನ್ನರಾದ ಪ್ರಭುಗಳಾದ ಬ್ರಹ್ಮದೇವರು ಆ ಒಂಟೆಗೆ ವರವನ್ನು ಕೇಳುವಂತೆ ಹೇಳಿದರು.
ಉಷ್ಟ್ರಃ
ಭಗವಂಸ್ತ್ವತ್ಪ್ರಸಾದಾನ್ಮೇ ದೀರ್ಘಾ ಗ್ರೀವಾ ಭವೇದಿಯಮ್ |
ಯೋಜನಾನಾಂ ಶತಂ ಸಾಗ್ರಂ ಯಾ ಗಚ್ಛೇಚ್ಚರಿತುಂ ವಿಭೋ ॥6॥
ಒಂಟೆ ಎಲೈ ಪೂಜ್ಯನೇ! ನಿನ್ನ ಅನುಗ್ರಹದಿಂದ ನನ್ನ ಈ ಕತ್ತು ದೀರ್ಘವಾಗಲಿ. ಎಲೈ ವಿಭುವೇ! ಭಕ್ಷಿಸುವುದಕ್ಕಾಗಿ ನನ್ನ ಈ ಕತ್ತು ನೂರು ಯೋಜನಗಳಿಗಿಂತ ಹೆಚ್ಚು ದೂರವೂ ಹೋಗುವಂತಾಗಲಿ.
ಭೀಷ್ಮಃ
ಏವಮಸ್ತ್ವಿತಿ ಚೋಕ್ತಃ ಸ ವರದೇನ ಮಹಾತ್ಮನಾ |
ಪ್ರತಿಲಭ್ಯ ವರಂ ಶ್ರೇಷ್ಠಂ ಯಯಾವುಷ್ಟ್ರಃ ಸ್ವಕಂ ವನಮ್ ॥7॥
ಭೀಷ್ಮರು ವರಪ್ರದರಾದ ಮಹಾತ್ಮರಾದ ಬ್ರಹ್ಮದೇವರು ಹಾಗೆಯೇ ಆಗಲಿ ಎಂದು ಹೇಳಿದರು. ಶ್ರೇಷ್ಠವಾದ ವರವನ್ನು ಪಡೆದು ಒಂಟೆಯು ತನ್ನ ಕಾಡಿಗೆ ಹೊರಟು ಹೋಯಿತು.
ಸ ಚಕಾರ ತದಾಽಽಲಸ್ಯಂ ವರದಾನಾತ್ ಸ ದುರ್ಮತಿಃ |
ನ ಚೈಚ್ಛಚ್ಚರಿತುಂ ಗಂತುಂ ದುರಾತ್ಮಾ ಕಾಲಮೋಹಿತಃ ॥8॥
ದುರ್ಮತಿಯಾದ ಆ ಒಂಟೆಯು ವರದಾನದ ಬಲದಿಂದ ಆಲಸ್ಯವನ್ನು ಮಾಡಿತು. ಕಾಲಮೋಹಿತವಾದ ದುಷ್ಟಮನಸ್ಸುಳ್ಳ ಆ ಒಂಟೆಯು ಆಹಾರವನ್ನು ಭಕ್ಷಿಸಲು ಹೊರಗೆ ಹೋಗಲು ಬಯಸಲಿಲ್ಲ.
ಸ ಕದಾಚಿತ್ ಪ್ರಸಾರ್ಯೈವಂ ತಾಂ ಗ್ರೀವಾಂ ಶತಯೋಜನಾಮ್ |
ಚಚಾರ ಶ್ರಾಂತಹೃದಯೋ ವಾತಶ್ಚಾಗಾತ್ ತತೋ ಮಹಾನ್ ॥9॥
ದೀರ್ಘಕಾಲದ ಉಪವಾಸದಿಂದ ಬಳಲಿದ ಆ ಒಂಟೆಯು ಒಮ್ಮೆ ತನ್ನ ಕತ್ತನ್ನು ನೂರು ಯೋಜನ ಉದ್ದ ಮಾಡಿ ಸಂಚರಿಸಿತು. ಆಗ ದೊಡ್ಡ ಬಿರುಗಾಳಿಯು ಉಂಟಾಯಿತು.
ಸ ಗುಹಾಯಾಂ ಶಿರೋಗ್ರೀವಂ ನಿಧಾಯ ಪಶುರಾತ್ಮನಃ |
ಆಸ್ತಾಥ ವರ್ಷಮಭ್ಯಾಗಾತ್ ಸುಮಹತ್ ಪ್ಲಾವಯಜ್ಜಗತ್ ॥10॥
ಆ ಪಶುವು ತನ್ನ ತಲೆಯನ್ನು ಮತ್ತು ಕತ್ತನ್ನು ಒಂದು ಗುಹೆಯೊಳಗೆ ಇಟ್ಟು- ಕೊಂಡಿತು. ಆಗ ಪ್ರಪಂಚವನ್ನೇ ಕೊಚ್ಚಿ ಹಾಕುವಂತಹ ದೊಡ್ಡ ಮಳೆಯು ಉಂಟಾಯಿತು.
ಅಥ ಶೀತಪರೀತಾಂಗೋ ಜಂಬುಕಃ ಕ್ಷುಚ್ಛ್ರಮಾನ್ವಿತಃ |
ಸದಾರಸ್ತಾಂ ಗುಹಾಮಾಶು ಪ್ರವಿವೇಶ ಜಲಾರ್ದಿತಃ ॥11॥
ಆಗ ಹಸಿವಿನಿಂದ ಬಳಲಿ ಶೀತದಿಂದ ನಡುಗುತ್ತಿದ್ದ ಒಂದು ನರಿಯು ಜ್ವರ- ದಿಂದ ಪೀಡಿತವಾಗಿ ತನ್ನ ಪತ್ನೀಸಹಿತವಾಗಿ ಶೀಘ್ರವಾಗಿ ಆ ಗುಹೆಯನ್ನು ಪ್ರವೇಶಿ- ಸಿತು.
ಸ ದೃಷ್ಟ್ವಾ ಮಾಂಸಜೀವೀ ತು ಸುಭೃಶಂ ಕ್ಷುಚ್ಛ್ರಮಾನ್ವಿತಃ |
ಅಭಕ್ಷಯತ್ ತತೋ ಗ್ರೀವಾಮುಷ್ಟ್ರಸ್ಯ ಭರತರ್ಷಭ ॥12॥
ಬಹಳವಾಗಿ ಹಸಿದು ಬಳಲಿದ ಮಾಂಸಜೀವಿಯಾದ ಆ ನರಿಯು ಎಲೈ ಭರತ- ರ್ಷಭನೇ! ಆ ಒಂಟೆಯ ಕತ್ತನ್ನು ನೋಡಿ ಅದನ್ನು ತಿಂದುಹಾಕಿತು.
ಯದಾ ತ್ವಬುದ್ಧ್ಯತಾತ್ಮಾನಂ ಭಕ್ಷ್ಯಮಾಣಂ ಸ ವೈ ಪಶುಃ |
ತದಾ ಸಂಕೋಚನೇ ಯತ್ನಮಕರೋದ್ ಭೃಶದುಃಖಿತಃ ॥13॥
ಒಂಟೆಗೆ ತಾನು ತಿನ್ನಲ್ಪಡುತ್ತಿದ್ದೇನೆ ಎಂದು ತಿಳಿದಾಗ ಅದು ಬಹಳ ದುಃಖದಿಂದ ಕೂಡಿ ತನ್ನ ಕತ್ತನ್ನು ಹಿಂದಕ್ಕೆ ಎಳೆದುಕೊಳ್ಳಲು ಪ್ರಯತ್ನಮಾಡಿತು.
ಯಾವದೂರ್ಧ್ವಮಧಶ್ಚೈವ ಗ್ರೀವಾಂ ಸಂಕ್ಷಿಪತೇ ಪಶುಃ |
ತಾವತ್ ತೇನ ಸದಾರೇಣ ಜಂಬುಕೇನ ಸ ಭಕ್ಷಿತಃ ॥14॥

ಮೇಲ್ಭಾಗವಿದ್ದ ಗುಹೆಯಿಂದ ತನ್ನ ಕತ್ತನ್ನು ಅರ್ಧಭಾಗ ಎಳೆದುಕೊಳ್ಳುವಷ್ಟರಲ್ಲಿ ಪತ್ನೀಸಹಿತವಾದ ಆ ನರಿಯು ಅದನ್ನು ತಿಂದುಬಿಟ್ಟಿತು.
ಸ ಹತ್ವಾ ಭಕ್ಷಯಿತ್ವಾ ಚ ಉಷ್ಟ್ರಂ ತಂ ಜಂಬುಕಸ್ತದಾ |
ವಿಗತೇ ವಾತವರ್ಷೇ ಚ ನಿಶ್ಚಕ್ರಾಮ ಗುಹಾಮುಖಾತ್ ॥15॥
ಆ ನರಿಯು ಆ ಒಂಟೆಯನ್ನು ಕೊಂದು ತಿಂದು ಮಳೆಗಾಳಿಯು ನಿಲ್ಲುತ್ತಿರಲು ಗುಹೆಯ ಮುಂಭಾಗದಿಂದ ಹೊರಟುಹೋಯಿತು.
ಏವಂ ದುರ್ಬುದ್ಧಿನಾ ಪ್ರಾಪ್ತಮುಷ್ಟ್ರೇಣ ನಿಧನಂ ತದಾ |
ಆಲಸ್ಯಕರಣಾತ್ ಪಶ್ಯ ಮಹದ್ ದೋಷಮುಪಾಗತಮ್ ॥16॥
ಹೀಗೆ ದುರ್ಬುದ್ಧಿಯುಳ್ಳ ಒಂಟೆಯು ಆಗ ನಿಧನವನ್ನು ಹೊಂದಿತು. ಕತ್ತನ್ನು ಚಾಚುವುದರಲ್ಲಿ ಮತ್ತು ಹಿಂದೆ ತೆಗೆದುಕೊಳ್ಳುವುದರಲ್ಲಿ ಆಲಸ್ಯವನ್ನು ಮಾಡಿದ ಒಂಟೆಗೆ ಎಂತಹ ದೋಷವುಂಟಾಯಿತೆಂಬುದನ್ನು ನೋಡು.
ತ್ವಮಪ್ಯೇತಂ ವಿಧಿಂ ತ್ಯಕ್ತ್ವಾ ಯೋಗೇನ ನಿಯತೇಂದ್ರಿಯಃ |
ವರ್ತಸ್ವ ಬುದ್ಧಿಮೂಲಂ ಹಿ ವಿಜಯಂ ಮನುರಬ್ರವೀತ್ ॥17॥
ನೀನೂ ಸಹ ಒಂಟೆಯ ಈ ನೀತಿಯನ್ನು ತ್ಯಜಿಸಿ, ಯೋಗಾರೂಢನಾಗಿ, ಇಂದ್ರಿಯಜಯವನ್ನು ಹೊಂದಿ ಇರುವವನಾಗು. ವಿಜಯಕ್ಕೆ ಬುದ್ಧಿಯೇ ಮೂಲ- ವೆಂದು ಮನುವು ಹೇಳಿದ್ದಾನೆ.
ಬುದ್ಧಿಶ್ರೇಷ್ಠಾನಿ ಕರ್ಮಾಣಿ ಬಾಹುಮಧ್ಯಾನಿ ಭಾರತ |
ತಾನಿ ಜಂಘಾಜಘನ್ಯಾನಿ ಭಾರಪ್ರತ್ಯವರಾಣಿ ಚ ॥18॥
ಎಲೈ ಭಾರತನೇ! ಬುದ್ಧಿಯ ಬಲದಿಂದ ಮಾಡುವ ಕರ್ಮಗಳು ಶ್ರೇಷ್ಠವಾದವು. ಬಾಹುಬಲದಿಂದ ಮಾಡುವ ಕರ್ಮಗಳು ಮಧ್ಯಮವಾದವುಗಳು. ಜಘಾಬಲದಿಂದ ಮಾಡುವ ಸೇವಾವೃತ್ತಿರೂಪವಾದ ಕರ್ಮಗಳು ನೀಚವಾದವುಗಳು. ಭಾರವನ್ನು ಹೊರುವಂತಹ ಕರ್ಮಗಳು ಅತಿನೀಚವಾದವುಗಳು (ಲಕ್ಷ್ಮಾಲಂಕಾರ).
ರಾಜ್ಯಂ ತಿಷ್ಠತಿ ದಕ್ಷಸ್ಯ ಸಂಗೃಹೀತೇಂದ್ರಿಯಸ್ಯ ಚ |
ಗುಪ್ತಮಂತ್ರಶ್ರುತವತಃ ಸುಸಹಾಯಸ್ಯ ಚಾನಘ ॥19॥
ಎಲೈ ಅನಘನೇ! ದಕ್ಷನೂ ಇಂದ್ರಿಯಜಯವುಳ್ಳವನೂ ಮಂತ್ರರಕ್ಷಣೆಯನ್ನು ಮಾಡಿಕೊಳ್ಳುವವನೂ ವಿದ್ಯಾವಂತನೂ ಒಳ್ಳೆಯ ಸಹಾಯವುಳ್ಳವನೂ ಆದ ರಾಜನಲ್ಲಿ ರಾಜ್ಯವು ನಿಲ್ಲುತ್ತದೆ.
ಪರೀಕ್ಷ್ಯಕಾರಿಣೋಽರ್ಥಾಶ್ಚ ತಿಷ್ಠಂತೀಹ ಯುಧಿಷ್ಠಿರ |
ಸಹಾಯಯುಕ್ತೇನ ಮಹೀ ಕೃತ್ಸ್ನಾ ಶಕ್ಯಾ ಪ್ರಶಾಸಿತುಮ್ ॥20॥
ಎಲೈ ಯುಧಿಷ್ಠಿರನೇ! ಪರೀಕ್ಷಿಸಿ ಕಾರ್ಯವನ್ನು ಮಾಡುವವನಿಗೆ ಇಲ್ಲಿ ಅರ್ಥ- ಸಿದ್ಧಿಯಾಗುತ್ತದೆ. ಸಹಾಯಯುಕ್ತನಾದ ರಾಜನು ಸಮಗ್ರವಾದ ಭೂಮಿಯನ್ನು ಆಳಲು ಸಮರ್ಥನಾಗುತ್ತಾನೆ.
ಇದಂ ಹಿ ಸದ್ಭಿಃ ಕಥಿತಂ ವಿಧಿಜ್ಞೈಃ ಪುರಾ ಮಹೇಂದ್ರಪ್ರತಿಮಪ್ರಭಾವ |
ಮಯಾಪಿ ಚೋಕ್ತಂ ತವ ಶಾಸ್ತ್ರದೃಷ್ಟ್ಯಾ ತ್ವಮತ್ರ ಯುಕ್ತಃ ಪ್ರಚರಸ್ವ ರಾಜನ್ ॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರ್ದಶಾಧಿಕಶತತಮೋಽಧ್ಯಾಯಃ ॥114॥
ಎಲೈ ಮಹೇಂದ್ರನಿಗೆ ಸದೃಶವಾದ ಸಾಮರ್ಥ್ಯವುಳ್ಳವನೇ! ಈ ವಿಷಯವನ್ನು ಹಿಂದೆ ರಾಜನೀತಿಯನ್ನು ತಿಳಿದ ಸಜ್ಜನರು ಹೇಳಿದ್ದಾರೆ. ಶಾಸ್ತ್ರದೃಷ್ಟಿಯಿಂದ ನಾನು ನಿನಗೆ ಹೇಳಿದ್ದೇನೆ. ಎಲೈ ರಾಜನೇ! ಇದರಲ್ಲಿ ಯುಕ್ತವಾದುದನ್ನು ಮಾಡುವವ- ನಾಗು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 114ನೆಯ ಅಧ್ಯಾಯವು ಮುಗಿಯಿತು
0
115. ನೂರಹದಿನೈದನೆಯ ಅಧ್ಯಾಯ
ಗಂಗಾಸಾಗರಸಂವಾದಾನುವಾದದಿಂದ ಬಲಿಷ್ಠನಾದ ಶತ್ರುವಿನ ವಿಷಯದಲ್ಲಿ ನಡೆದುಕೊಳ್ಳಬೇಕಾದ ರೀತಿಯ ಕಥನ
ಯುಧಿಷ್ಠಿರಃ
ರಾಜಾ ರಾಜ್ಯಮನುಪ್ರಾಪ್ಯ ದುರ್ಬಲೋ ಭರತರ್ಷಭ |
ಅಮಿತ್ರಸ್ಯಾತಿವೃದ್ಧಸ್ಯ ಕಥಂ ತಿಷ್ಠೇದಸಾಧನಃ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ! ದುರ್ಬಲನಾದ ರಾಜನು ರಾಜ್ಯವನ್ನು ಪಡೆದು ಅತಿಬಲಿಷ್ಠನಾದ ಶತ್ರುವಿನ ಮುಂದೆ ಸಾಧನರಹಿತನಾಗಿ ಹೇಗೆ ನಿಲ್ಲುತ್ತಾನೆ? (ನಡೆದುಕೊಳ್ಳುತ್ತಾನೆ?)
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸರಿತಾಂ ಚೈವ ಸಂವಾದಂ ಸಾಗರಸ್ಯ ಚ ಭಾರತ ॥2॥
ಭೀಷ್ಮರು ಎಲೈ ಭಾರತನೇ! ಈ ವಿಷಯದಲ್ಲೂ ಸಹ ಸಾಗರಕ್ಕೂ ಮತ್ತು ನದಿಗಳಿಗೂ ನಡೆದ ಸಂವಾದರೂಪವಾದ ಈ ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ.
ಸುರಾರಿನಿಲಯಃ ಶಶ್ವತ್ ಸಾಗರಃ ಸರಿತಾಂಪತಿಃ |
ಪಪ್ರಚ್ಛ ಸರಿತಃ ಸರ್ವಾಃ ಸಂಶಯಂ ಜಾತಮಾತ್ಮನಃ ॥3॥
ಯಾವಾಗಲೂ ನಾರಾಯಣನಿಗೆ ಆಶ್ರಯನೂ ಸರಿತ್ಪತಿಯೂ ಆದ ಸಾಗರನು ತನಗೆ ಉಂಟಾದ ಸಂಶಯವನ್ನು ಎಲ್ಲಾ ನದಿಗಳ ಮುಂದೆ ಕೇಳಿದನು.

ಸಮೂಲಶಾಖಾನ್ ಪಶ್ಯಾಮಿ ನಿಹತಾನ್ ಕ್ವಾಥಿನೋ ದ್ರುಮಾನ್ |
ಯುಷ್ಮಾಭಿರಿಹ ಪೂರ್ಣಾಭಿರನ್ಯಾಂಸ್ತತ್ರ ನ ವೇತಸಮ್ ॥4॥
ಪೂರ್ಣರಾದ ನೀವು ಮೂಲ ಮತ್ತು ಶಾಖೆಗಳಿಂದ ಸಹಿತವಾದ ಕ್ಷೀರವನ್ನು ಸ್ರವಿಸುವ ವೃಕ್ಷಗಳನ್ನೂ ಬೇರೆ ವೃಕ್ಷಗಳನ್ನೂ ಸೆಳೆದುಕೊಂಡು ಹೋಗುತ್ತೀರಿ. ಆದರೆ ಬೆತ್ತದ ಪೊದೆಯನ್ನು ಸೆಳೆದುಕೊಂಡು ಹೋಗುವುದಿಲ್ಲ.
ಅಕಾಯಶ್ಚಾಲ್ಪಸಾರಶ್ಚ ವೇತಸಃ ಕೂಲಜಶ್ಚ ವಃ |
ಅವಜ್ಞಾಯ ನಶಕ್ಯೋ ವಾ ಕಿಂಚಿದ್ ವಾ ತೇನ ವಃ ಕೃತಮ್ ॥5॥
ಬೆತ್ತವು ಅಲ್ಪಶರೀರವನ್ನು ಮತ್ತು ಅಲ್ಪಬಲವನ್ನೂ ಹೊಂದಿ, ನಿಮ್ಮ ತೀರ- ದಲ್ಲಿಯೇ ಇದೆ. ನಿಮ್ಮನ್ನು ತಿರಸ್ಕರಿಸಿ ಅದು ನಿಲ್ಲಲು ಸಾಧ್ಯವಿಲ್ಲ. ಅಥವಾ ಅದು ನಿಮಗೆ ಏನಾದರೂ ಉಪಕಾರವನ್ನು ಮಾಡಿದೆಯೇ?
ತದಹಂ ಶ್ರೋತುಮಿಚ್ಛಾಮಿ ಸರ್ವಾಸಾಮೇವ ವೋ ಮತಮ್ |
ಯಥಾ ಕೂಲಾನಿ ಚೇಮಾನಿ ಭಿತ್ವಾ ನಾನೀಯತೇ ವಶಮ್ ॥6॥
ಹೇಗೆ ತೀರಗಳನ್ನು ಭೇದಿಸಿ ಬೆತ್ತವನ್ನು ವಶಪಡಿಸಿಕೊಳ್ಳುವುದಿಲ್ಲ ಎಂಬ ವಿಷಯದಲ್ಲಿ ನಿಮ್ಮೆಲ್ಲರ ಅಭಿಪ್ರಾಯವನ್ನು ಕೇಳಲು ಬಯಸುತ್ತೇನೆ. (ಎಂದು ಹೇಳಿದನು).
ತತಃ ಪ್ರಾಹ ನದೀ ಗಂಗಾ ವಾಕ್ಯಮುತ್ತರಮರ್ಥವತ್ |
ಹೇತುಮದ್ ಗ್ರಾಹಕಂ ಚೈವ ಸಾಗರಂ ಸರಿತಾಂಪತಿಮ್ ॥7॥
ಆಗ ಗಂಗಾನದಿಯು ಸರಿತ್ಪತಿಯಾದ ಸಾಗರನನ್ನು ಕುರಿತು ಅರ್ಥಪೂರ್ಣ- ವಾದ ಯುಕ್ತಿಯುಕ್ತವಾದ ಕೇಳುವವರಲ್ಲಿ ಗುಣಗಳನ್ನು ಉಂಟುಮಾಡುವ ಉತ್ತರವನ್ನು ಹೇಳಿದಳು.
ತಿಷ್ಠಂತ್ಯೇತೇ ಯಥಾಸ್ಥಾನಂ ನಗಾ ಹ್ಯೇಕನಿಕೇತನಾಃ |
ತತಸ್ತ್ಯಜಂತಿ ತತ್ ಸ್ಥಾನಂ ಪ್ರಾತಿಲೋಮ್ಯಾದಚೇತಸಃ ॥8॥
ವೇತಸೋ ವೇಗಮಾಯಾಂತಂ ದೃಷ್ಟ್ವಾ ನಮತಿ ನೇತರಃ |
ಸ ಚ ವೇಗೇಽಭ್ಯತಿಕ್ರಾಂತೇ ಸ್ಥಾನಮಾಸಾದ್ಯ ತಿಷ್ಠತಿ ॥9॥
ನಮ್ಮ ತೀರದಲ್ಲಿರುವ ಈ ದೊಡ್ಡ ವೃಕ್ಷಗಳು ಒಂದೇ ಸ್ಥಾನದಲ್ಲಿ ನಿಲ್ಲುತ್ತವೆ. ಆದ್ದರಿಂದ ಬುದ್ಧಿಯಿಲ್ಲದ ಅವು ಆ ಸ್ಥಾನವನ್ನು ತ್ಯಜಿಸುತ್ತವೆ. ಬೆತ್ತವಾದರೋ ಇದಕ್ಕೆ ವಿರುದ್ಧವಾಗಿ ನದಿಯ ವೇಗವು ಬರುವುದನ್ನು ಗಮನಿಸಿ ಬಾಗುತ್ತದೆ. ಉಳಿದ ವೃಕ್ಷಗಳು ಬಾಗುವುದಿಲ್ಲ. ವೇಗವು ಹೊರಟು ಹೋದ ಮೇಲೆ ಬೆತ್ತವು ತನ್ನ ಮೊದಲಸ್ಥಾನದಲ್ಲಿಯೇ ನಿಲ್ಲುತ್ತದೆ.
ಕಾಲಜ್ಞಃ ಸಮಯಜ್ಞಶ್ಚ ಸದಾ ವಶ್ಯಶ್ಚ ಯೋ ದ್ರುಮಃ |
ಅನುಲೋಮಸ್ತಥಾಽಸ್ತಬ್ಧಸ್ತೇನ ನಾತ್ಯೇತಿ ವೇತಸಃ ॥10॥
ಬಾಗುವ ಕಾಲವನ್ನು ಪುನಃ ಏಳುವ ಕಾಲವನ್ನು ತಿಳಿದು ಸದಾ ಪ್ರವಾಹಕ್ಕೆ ವಶವಾದ ಬೆತ್ತವು ಅಹಂಕಾರವಿಲ್ಲದೇ ಪ್ರವಾಹಕ್ಕೆ ಅನುಕೂಲವಾಗಿರುತ್ತದೆ. ಆದ್ದರಿಂದ ಅದು ವಿನಾಶವನ್ನು ಹೊಂದುವುದಿಲ್ಲ.
ಮಾರುತೋದಕವೇಗೇನ ಯೇ ನಮಂತ್ಯುನ್ನಮಂತಿ ಚ |
ಔಷಧ್ಯಃ ಪಾದಪಾ ಗುಲ್ಮಾ ನ ತೇ ಯಾಂತಿ ಪರಾಭವಮ್ ॥11॥
ಗಾಳಿ ಮತ್ತು ಉದಕಗಳ ವೇಗಗಳಿಗೆ ಸಿಲುಕಿ ಯಾವ ಓಷಧಿಗಳು ವೃಕ್ಷಗಳು ಪೊದೆಗಳು ಬಗ್ಗಿ ಅನಂತರ ಏಳುತ್ತವೆಯೋ ಅವು ಪರಾಭವವನ್ನು ಹೊಂದು- ವುದಿಲ್ಲ.
ಯೋ ಹಿ ಶತ್ರೋರ್ವಿವೃದ್ಧಸ್ಯ ಪ್ರಭೋರ್ವಧವಿನಾಶನೇ |
ಪೂರ್ವಂ ನ ಸಹತೇ ವೇಗಂ ಕ್ಷಿಪ್ರಮೇವ ಸ ನಶ್ಯತಿ ॥12॥
ಯಾವನು ಅಭಿವೃದ್ಧನಾದ ಪ್ರಭುವಾದ ಶತ್ರುವು ಉಂಟು ಮಾಡಿದ ವಧೆ ಮತ್ತು ವಿನಾಶಗಳ ವೇಗವನ್ನು ಮೊದಲು ಸಹಿಸುವುದಿಲ್ಲವೋ ಅವನು ಶೀಘ್ರವಾಗಿ ನಾಶವನ್ನು ಹೊಂದುತ್ತಾನೆ.
ಸಾರಾಸಾರಂ ಬಲಂ ವೀರ್ಯಮಾತ್ಮನೋ ದ್ವಿಷತಶ್ಚ ಯಃ |
ಜಾನನ್ ವಿಚರತಿ ಪ್ರಾಜ್ಞೋ ನ ಸ ಯಾತಿ ಪರಾಭವಮ್ ॥13॥
ತನ್ನ ಮತ್ತು ಶತ್ರುಗಳ ಬಲಾಬಲಗಳನ್ನು ಸಾರಾಸಾರವನ್ನು ತಿಳಿದು ವರ್ತಿಸುವ ಪ್ರಾಜ್ಞನಾದವನು ಪರಾಭವವನ್ನು ಹೊಂದುವುದಿಲ್ಲ.
ಏವಮೇವ ಯದಾ ವಿದ್ವಾನ್ ಮನ್ಯೇತಾತಿಬಲಂ ರಿಪುಮ್ |
ಸಂಶ್ರಯೇದ್ ವೈತಸೀಂ ವೃತ್ತಿಮೇವಂ ಪ್ರಜ್ಞಾನಲಕ್ಷಣಮ್ ॥14॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚದಶಾಧಿಕಶತತಮೋಽಧ್ಯಾಯಃ ॥115॥
ಇದೇ ರೀತಿಯಲ್ಲಿ ವಿವೇಕಿಯಾದವನು ಶತ್ರುವು ತನಗಿಂತ ಬಹಳಬಲಿಷ್ಠ- ನಾಗಿದ್ದಾನೆಂದು ತಿಳಿದಾಗ ಬೆತ್ತದ ನಡತೆಯನ್ನು ಆಶ್ರಯಿಸಬೇಕು. ಇದು ವಿವೇಕದ ಲಕ್ಷಣ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 115ನೆಯ ಅಧ್ಯಾಯವು ಮುಗಿಯಿತು
0

116. ನೂರಹದಿನಾರನೆಯ ಅಧ್ಯಾಯ
ಸಭೆಯಲ್ಲಿ ದುಷ್ಟಪುರುಷರು ನಿಂದಿಸಿದರೆ ಸಹನೆಯ ಕಥನ

ಯುಧಿಷ್ಠಿರಃ
ವಿದ್ವಾನ್ ಮೂಢಪ್ರಗಲ್ಭೇನ ಮೃದುಸ್ತೀಕ್ಷ್ಣೇನ ಭಾರತ |
ಆಕ್ರುಶ್ಯಮಾನಃ ಸದಸಿ ಕಥಂ ಕುರ್ಯಾದರಿಂದಮ ॥1॥
ಯುಧಿಷ್ಠಿರ ಎಲ್ಯೆ ಭಾರತನೇ! ಅರಿಂದಮನೇ! ಮೃದುವೂ ವಿದ್ವಾಂಸನೂ ಆದ ಮನುಷ್ಯನು ಸಭೆಯಲ್ಲಿ ಮೂಢನೂ ವಾಚಾಲನೂ ಮತ್ತು ಉಗ್ರನೂ ಆದ ದುಷ್ಟನಿಂದ ನಿಂದಿಸಲ್ಪಡುವಾಗ ಏನು ಮಾಡಬೇಕು?
ಭೀಷ್ಮಃ
ಶ್ರೂಯತಾಂ ಪೃಥಿವೀಪಾಲ ಯಥೈಷೋಽರ್ಥೋಽನುಗೀಯತೇ |
ಸದಾ ಸುಚೇತಾಃ ಸಹತೇ ನರಸ್ಯೇಹಾಲ್ಪಚೇತಸಃ ॥2॥
ಎಲೈ ಪೃಥಿವೀಪಾಲನೇ! ಒಳ್ಳೆಯ ಮನಸ್ಸುಳ್ಳವನು ಅಲ್ಪಬುದ್ಧಿಯ ನರನು ಅವನನ್ನು ನಿಂದಿಸುವಾಗ ಸಹನೆ ಮಾಡಬೇಕೆಂಬ (ಈ) ವಿಷಯವು ಹೇಗೆ ಹೇಳಲ್ಪಡುತ್ತದೆ ಎಂಬುದನ್ನು ಕೇಳು.
ಅರುಷ್ಯನ್ ಕ್ರುಶ್ಯಮಾನಸ್ಯ ಸುಕೃತಂ ನಾಮ ವಿಂದತಿ |
ದುಷ್ಕೃತಂ ಚಾತ್ಮನೋಽಮರ್ಷೀ ರುಷ್ಯತ್ಯೇವಾಪಮಾರ್ಷ್ಟಿ ವೈ ॥3॥
ದುಷ್ಟನು ನಿಂದಿಸುತ್ತಿದ್ದರೆ ಕೋಪಗೊಳ್ಳದ ಸತ್ಪುರುಷನು ಪುಣ್ಯವನ್ನು ಹೊಂದುತ್ತಾನೆ. ಮತ್ತು ತನ್ನ ಸಹನೆಯ ಗುಣದಿಂದ ತನ್ನ ಪಾಪವನ್ನೆಲ್ಲ ನಿಂದಿಸು- ವವನಿಗೆ ಕೊಟ್ಟು ತೊಳೆದು ಬಿಡುತ್ತಾನೆ.
ಟಿಟ್ಟಿಭಂ ತಮುಪೇಕ್ಷೇತ ವಾಶಮಾನಮಿವಾತುರಮ್ |
ಲೋಕವಿದ್ವೇಷಮಾಪನ್ನೋ ನಿಷ್ಫಲಂ ಪ್ರತಿಪದ್ಯತೇ ॥4॥
ಕಿರುಚುವ ಹಕ್ಕಿಯಂತೆ, ನರಳುವ ರೋಗಿಯಂತೆ ಇರುವ ಅವನನ್ನು ಉಪೇಕ್ಷಿಸಬೇಕು. ಅವನು ಲೋಕವಿದ್ವೇಷಕ್ಕೆ ಪಾತ್ರನಾಗುತ್ತಾನೆ. ಅವನ ನಿಂದೆಯ ಮಾತುಗಳಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲ.
ಇತಿ ಸಂಶ್ಲಾಘತೇ ನಿತ್ಯಂ ತೇನ ಪಾಪೇನ ಕರ್ಮಣಾ |
ಇದಮುಕ್ತೋ ಮಯಾ ಕಶ್ಚಿತ್ ಸಮ್ಮತೋ ಜನಸಂಸದಿ |
ಸ ತತ್ರ ವ್ರೀಡಿತಃ ಶುಷ್ಕೋ ಮೃತಕಲ್ಪೋಽವತಿಷ್ಠತಿ ॥5॥
ದುಷ್ಟನಾದವನು ``ನಾನು ದೊಡ್ಡ ಸಭೆಯಲ್ಲಿ ಪ್ರಾಜ್ಞಸಮ್ಮತನಾದ ಒಬ್ಬನನ್ನು ಈ ರೀತಿಯಲ್ಲಿ ನಿಂದಿಸಿದೆ. ಅವನು ನಾಚಿಕೆಯಿಂದ ಮುಖವನ್ನು ಒಣಗಿಸಿಕೊಂಡು ಸತ್ತವನಂತೆ ಸುಮ್ಮನಿದ್ದನು'' ಎಂದು ತನ್ನ ಪಾಪಕರ್ಮವನ್ನು ತಾನೇ ಹೊಗಳಿ- ಕೊಳ್ಳುತ್ತಾನೆ.
ಶ್ಲಾಘನ್ನಶ್ಲಾಘನೀಯೇನ ಕರ್ಮಣಾ ನಿರಪತ್ರಪಃ |
ಉಪೇಕ್ಷಿತವ್ಯೋ ದಾಂತೇನ ತಾದೃಶಃ ಪುರುಷಾಧಮಃ ॥6॥
ಶ್ಲಾಘನೀಯವಲ್ಲದ ಕರ್ಮದಿಂದ ತನ್ನನ್ನು ಹೊಗಳಿಕೊಳ್ಳುವ ನಾಚಿಕೆಗೆಟ್ಟ ಅಂತಹ ಪುರುಷಾಧಮನನ್ನು ದಾಂತನಾದವನು ಉಪೇಕ್ಷೆ ಮಾಡಬೇಕು.
ಯದ್ಯದ್ ಬ್ರೂಯಾದಲ್ಪಮತಿಸ್ತತ್ ತದಸ್ಯ ಸಹೇತ್ ಸದಾ |
ಪ್ರಾಕೃತೋ ಹಿ ಪ್ರಶಂಸನ್ ವಾ ನಿಂದನ್ ವಾ ಕಿಂ ಕರಿಷ್ಯತಿ |
ವನೇ ಕಾಕ ಇವಾಬುದ್ಧಿರ್ವಾಶಮಾನೋ ನಿರರ್ಥಕಮ್ ॥7॥
ಅಲ್ಪಮತಿಯು ಏನೇನನ್ನು ಹೇಳುತ್ತಾನೋ ಅದೆಲ್ಲವನ್ನೂ ಸದಾ ಸಹಿಸಬೇಕು. ಅಂತಹ ಬುದ್ಧಿಶೂನ್ಯನು ಪ್ರಶಂಸೆಯನ್ನು ಅಥವಾ ನಿಂದೆಯನ್ನು ಮಾಡಿ ಏನು ಮಾಡುವನು? ಕಾಡಿನಲ್ಲಿರುವ ಕಾಗೆಯಂತೆ ವ್ಯರ್ಥವಾಗಿ ಕಿರುಚುತ್ತಾ ಇರುತ್ತಾನೆ.
ಯದಿ ವಾಗ್ಭಿಃ ಪ್ರಯೋಗಃ ಸ್ಯಾತ್ ಪ್ರಯೋಗೇ ಪಾಪಕರ್ಮಣಃ |
ವಾಗೇವಾರ್ಥೋ ಭವೇತ್ ತಸ್ಯ ನ ಹ್ಯೇವಾರ್ಥೋ ಜಿಘಾಂಸತಃ ॥8॥
ಪಾಪಕರ್ಮವುಳ್ಳವನ ಜೊತೆಯಲ್ಲಿ ಸಮಾಗಮವಾದಾಗ ಅವನು ತನ್ನ ವಚನಗಳಿಂದ ನಿಂದಿಸಲು ಪ್ರಾರಂಭಿಸಿದರೆ ಅವನು ಮಾತನಾಡುವುದೇ ಅವನಿಗೆ ಪ್ರಯೋಜನ. ಸಜ್ಜನನನ್ನು ಹಿಂಸಿಸಲು ಬಯಸುವ ಅವನಿಗೆ ಬೇರೆ ಯಾವ ಪ್ರಯೋಜನವೂ ಇಲ್ಲ.
ನಿಷೇಕಂ ವಿಪರೀತಂ ಸ ವ್ಯಾಚಷ್ಟೇ ವೃತ್ತಚೇಷ್ಟಯಾ |
ಮಯೂರ ಇವ ಕೋಪೇನ ನೃತ್ತಂ ಸಂದರ್ಶಯನ್ನಿವ ॥9॥
ದುರ್ಜನನು ತನ್ನಲ್ಲಿ ಒಳ್ಳೆಯ ನಡತೆ ಇದೆಯೆಂದು ತೋರಿಸಿಕೊಳ್ಳುತ್ತಾ, ಸಜ್ಜನನು ಆಡಿದ ಅಮೃತದಂತಹ ಪ್ರಿಯವಾದ ಮಾತುಗಳನ್ನು ವಿಪರೀತವಾಗಿ ವ್ಯಾಖ್ಯಾನ ಮಾಡುತ್ತಾನೆ. ಕೋಪದಿಂದ ವಿಪರೀತವಾಗಿ ವ್ಯಾಖ್ಯಾನಮಾಡುತ್ತಾನೆ.
ಕೋಪೇನ ಎಂಬ ಪದಕ್ಕೆ ಕೌಪೀನವೆಂಬ ಪಾಠಾಂತರವಿದೆ. ನೃತ್ಯವನ್ನು ಮಾಡುವ ನವಿಲು ತಾನು ಚೆನ್ನಾಗಿದ್ದೇನೆ ಎಂದು ಭಾವಿಸಿದರೂ ತೋರಿಸಬಾರದ ತನ್ನ ಅಂಗವನ್ನು ಹೇಗೆ ತೋರಿಸುತ್ತದೆಯೋ ಅದರಂತೆ ದುರ್ಜನನು ತಾನು ಒಳ್ಳೆಯ ಕಾರ್ಯವನ್ನು ಮಾಡುತ್ತಿದ್ದೇನೆಂದು ತೋರಿಸಿಕೊಂಡರೂ ಅವನ ದುರ್ಗುಣಗಳು ಎಲ್ಲರಿಗೂ ತಿಳಿಯುತ್ತವೆ.
ಯಸ್ಯಾವಾಚ್ಯಂ ನ ಲೋಕೇಽಸ್ತಿ ನಾಕಾರ್ಯಂ ವಾಪಿ ಕಿಂಚನ |
ವಾಚಂ ತೇನ ನ ಸಂದಧ್ಯಾಚ್ಛುಚಿಃ ಸಂಕ್ಲಿಷ್ಟಕರ್ಮಣಾ ॥10॥
ಯಾವನಿಗೆ ಲೋಕದಲ್ಲಿ ಮಾತನಾಡಬಾರದ ಒಂದು ಶಬ್ದವೂಇಲ್ಲವೋ, ಮಾಡಲಾರದ ಒಂದು ಕಾರ್ಯವೂ ಇಲ್ಲವೋ ಅಂತಹ ದುಷ್ಟಕರ್ಮವನ್ನು ಮಾಡುವವನ ಜೊತೆಯಲ್ಲಿ ಶುಚಿಯಾದವನು ಮಾತನಾಡಬಾರದು.
ಪ್ರತ್ಯಕ್ಷಂ ಗುಣವಾದೀ ಯಃ ಪರೋಕ್ಷಂ ತು ವಿನಿಂದಕಃ |
ಸ ಮಾನವಃ ಶ್ವವಲ್ಲೋಕೇ ನಷ್ಟಲೋಕಪರಾಯಣಃ ॥11॥
ಯಾವ ಮನುಷ್ಯನು ಎದುರಿಗೆ ಗುಣಗಳನ್ನು ಹೇಳಿ ಹೊಗಳಿ ಹಿಂದೆ ನಿಂದಿಸು- ತ್ತಾನೆಯೋ ಅವನು ನಾಯಿಯಂತೆ ಲೋಕವನ್ನೂ

ಆಶ್ರಯವನ್ನೂ ಕಳೆದುಕೊಂಡ- ವನು.
ತಾದೃಗ್ ಜನಶತಸ್ಯಾಪಿ ಯದ್ ದದಾತಿ ಜುಹೋತಿ ಚ |
ಪರೋಕ್ಷೇಣಾಪವಾದೇನ ತನ್ನಾಶಯತಿ ಸ ಕ್ಷಣಾತ್ ||12||
ಅಂತಹ ದುಷ್ಟನು ನೂರು ಜನರಿಗೆ ದಾನವನ್ನು ಮಾಡಿ ಹೋಮವನ್ನು ಮಾಡಿದರೂ ಅವನು ಪರೋಕ್ಷವಾಗಿ ಮಾಡಿದ ಅಪವಾದಗಳಿಂದ ಅದೆಲ್ಲವನ್ನೂ ಒಂದೇ ಕ್ಷಣದಲ್ಲಿ ನಾಶಪಡಿಸುತ್ತಾನೆ.
ತಸ್ಮಾತ್ ಪ್ರಾಜ್ಞೋ ನರಃ ಸದ್ಯಸ್ತಾದೃಶಂ ಪಾಪಚೇತಸಮ್ |
ವರ್ಜಯೇತ್ ಸಾಧುಭಿರ್ವರ್ಜ್ಯಂ ಸಾರಮೇಯಾಮಿಷಂ ಯಥಾ ||13||
ಆದ್ದರಿಂದ ಪ್ರಾಜ್ಞನಾದವನು ಸಜ್ಜನರಿಂದ ವರ್ಜಿಸಬೇಕಾದ ಅಂತಹ ಪಾಪ- ಮನಸ್ಸುಳ್ಳವನನ್ನು ನಾಯಿಯ ಮಾಂಸದಂತೆ ವರ್ಜಿಸಬೇಕು.
ಪರಿವಾದಂ ಬ್ರುವಾಣೋ ಹಿ ದುರಾತ್ಮಾ ವೈ ಮಹಾತ್ಮನೇ |
ಪ್ರಕಾಶಯತಿ ದೋಷಾನ್ ಸ್ವಾನ್ ಸರ್ಪಃ ಫಣಮಿವೋಚ್ಛ್ರಿತಮ್ ||14||
ಮಹಾತ್ಮನ ಕುರಿತು ನಿಂದೆಯ ಮಾತುಗಳನ್ನಾಡುವ ದುರಾತ್ಮನು ಸರ್ಪವು ತನ್ನ ಹೆಡೆಯನ್ನು ಬಿಚ್ಚಿ ತೋರಿಸಿದಂತೆ ತನ್ನ ದೋಷಗಳನ್ನೇ ತೋರಿಸಿಕೊಳ್ಳುತ್ತಾನೆ.
ತಂ ಸ್ವಕರ್ಮಾಣಿ ಕುರ್ವಾಣಂ ಪ್ರತಿಕರ್ತುಂ ಯ ಇಚ್ಛತಿ |
ಭಸ್ಮಕೂಟ ಇವಾಬುದ್ಧಿಃ ಖರೋ ರಜಸಿ ಮಜ್ಜತಿ ||15||
ತನ್ನ ಕರ್ಮದಲ್ಲಿ ನಿರತನಾದ ಸಜ್ಜನನಿಗೆ ಅಪಕಾರವನ್ನು ಮಾಡಲು ಯಾವನು ಇಚ್ಛಿಸುತ್ತಾನೆಯೋ ಅಂತಹ ದುರ್ಬುದ್ಧಿಯುಳ್ಳ ಮನುಷ್ಯನು ಬೂದಿಯ ರಾಶಿಯಲ್ಲಿ ಹೊರಳುವ ಕತ್ತೆಯಂತೆ ಇರುತ್ತಾನೆ.
ಮನುಷ್ಯಶಾಲಾವೃಕಮಪ್ರಶಾಂತಂ
ಜನಾಪವಾದೇ ಸತತಂ ನಿವಿಷ್ಟಮ್ |
ಮಾತಂಗಮುನ್ಮತ್ತಮಿವೋನ್ನದಂತಂ
ತ್ಯಜೇತ ತಂ ಶ್ವಾನಮಿವಾತಿರೌದ್ರಮ್ ||16||
ಶಾಂತವಾದ ಮನಸ್ಸನ್ನು ಹೊಂದದಿರುವ ಸತತವಾಗಿ ಜನಗಳನ್ನು ನಿಂದಿಸು- ವುದರಲ್ಲಿ ನಿರತನಾದ ಮದಿಸಿದ ಆನೆಯಂತೆ ಗರ್ಜಿಸುವಅಂತಹ ಮನುಷ್ಯ ತೋಳನನ್ನು ಭಯಂಕರವಾದ ನಾಯಿಯನ್ನು ತ್ಯಜಿಸುವಂತೆ ತ್ಯಜಿಸಬೇಕು.
ಅಧೀರಜುಷ್ಟೇ ಪಥಿ ವರ್ತಮಾನಂ
ದಮಾದಪೇತಂ ವಿನಯಾಚ್ಚ ಪಾಪಮ್ |
ಅರಿವ್ರತಂ ನಿತ್ಯಮಭೂತಿಕಾಮಂ
ಧಿಗಸ್ತು ತಂ ಪಾಪಮತಿಂ ಮನುಷ್ಯಮ್ ||17||
ಅಸಜ್ಜನರ ಮಾರ್ಗದಲ್ಲಿರುವ, ದಮ ಮತ್ತು ವಿನಯಗಳಿಂದ ರಹಿತನಾದ, ಶತ್ರುವ್ರತವನ್ನು ಧರಿಸಿದ, ನಿತ್ಯವೂ ಇನ್ನೊಬ್ಬನಿಗೆ ಅಶುಭವನ್ನು ಕೋರುವ, ಪಾಪಮತಿಯುಳ್ಳ ಅಂತಹ ಮನುಷ್ಯನಿಗೆ ಧಿಕ್ಕಾರವಿರಲಿ.
ಪ್ರತ್ಯುಚ್ಯಮಾನಸ್ತು ಹಿ ಭೂಯ ಏಭಿ-
ರ್ನಿಶಾಮ್ಯ ಮಾ ಭೂಸ್ತ್ವಮಥಾರ್ತರೂಪಃ |
ಉಚ್ಚಸ್ಯ ನೀಚೇನ ಹಿ ಸಂಪ್ರಯೋಗಂ
ವಿಗರ್ಹಯಂತಿ ಸ್ಥಿರಬುದ್ಧಯೋ ಯೇ ||18||
ಅಂತಹ ದುರ್ಜನರಿಂದ ನಿಂದಿಸಲ್ಪಡುವವನನ್ನು ನೋಡಿ, ಸ್ಥಿತಬುದ್ಧಿಯುಳ್ಳ ಸಜ್ಜನರು ನಿಂದಿಸಲ್ಪಡುವ ಪುರುಷನನ್ನು ಕುರಿತು ಅವನ ಮಾತುಗಳನ್ನು ಕೇಳಿ ನೀನು ಆರ್ತನಾಗಬೇಡ. ಶ್ರೇಷ್ಠನಾದವನು ನೀಚಪುರುಷನ ಸಹವಾಸವನ್ನು ಹೊಂದು- ವುದನ್ನು ದೊಡ್ಡವರು ನಿಂದಿಸುತ್ತಾರೆ.
ಕ್ರುದ್ಧೋ ದಶೇದ್ ವಾಪಿ ಚ ತಾಡಯೇದ್ ವಾ
ಸ ಪಾಂಸುಭಿರ್ವಾಪಕಿರೇತ್ ತುಷೈರ್ವಾ |
ವಿವೃತ್ಯ ದಂತಾಂಶ್ಚ ವಿಭೀಷಯೇದ್ ವಾ
ಸಿದ್ಧಂ ಹಿ ಮೂರ್ಖೇ ಕುಪಿತೇ ನೃಶಂಸೇ ||19||
ಕೋಪಗೊಂಡ ದುರ್ಜನನು ಕಚ್ಚಬಹುದು. ಅಥವಾ ಹೊಡೆಯಬಹುದು. ಅಥವಾ ಒಂದು ಹಿಡಿ ಮಣ್ಣನ್ನಾಗಲೀ ಹೊಟ್ಟನ್ನಾಗಲೀ ತೆಗೆದುಕೊಂಡು ಎರೆಚ- ಬಹುದು. ಅಥವಾ ಹಲ್ಲುಗಳನ್ನು ತೋರಿಸಿ ಹೆದರಿಸಬಹುದು. ಕೋಪಗೊಂಡ- ವನೂ ಕ್ರೂರಿಯೂ ಆದ ಮೂರ್ಖನಲ್ಲಿ ಇವೆಲ್ಲ ನಡತೆಯು ಸಿದ್ಧವಾದವುಗಳು.
ವಿಗರ್ಹಣಾಂ ಪರಮದುರಾತ್ಮನಾ ಕೃತಾಂ
ಸಹೇತ ಯಃ ಸಂಸದಿ ದುರ್ಜನಾನ್ನರಃ |
ಪಠೇದಿದಂ ಚಾಪಿ ನಿದರ್ಶನಂ ಸದಾ
ನ ವಾಙ್ಮಯಂ ಸ ಲಭತೇ ಕಿಂಚಿದಪ್ರಿಯಮ್ ||20||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷೋಡಶಾಧಿಕಶತತಮೋಽಧ್ಯಾಯಃ ||116||
ಪರಮದುಷ್ಟಾತ್ಮನು ಸಭೆಯಲ್ಲಿ ಮಾಡಿದ ನಿಂದೆಯ ಮಾತುಗಳನ್ನು ಯಾವನು ಸಹಿಸುತ್ತಾನೆಯೋ ನಾನು ಹೇಳಿದ ಈ

ದೃಷ್ಟಾಂತಗಳನ್ನು ಯಾವನು ಪಠಿಸುತ್ತಾನೋ ಅವನು ಮಾತುಗಳಿಂದ ಯಾವ ಅಪ್ರಿಯವನ್ನೂ ಹೊಂದುವುದಿಲ್ಲ.
0
117. ನೂರಹದಿನೇಳನೆಯ ಅಧ್ಯಾಯ
ರಾಜರಿಗೆ ಸಹಾಯಸಂಪಾದನೆಯ ಅವಶ್ಯಕತೆ
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸಂಶಯೋ ಮೇ ಮಹಾನಯಮ್ |
ಸ ಚ್ಛೇತ್ತವ್ಯಸ್ತ್ವಯಾ ರಾಜನ್ ಭವಾನ್ ಕುಲಕರೋ ಹಿ ನಃ ॥1॥
ಎಲೈ ಮಹಾಪ್ರಾಜ್ಞನೇ ಪಿತಾಮಹನೇ! ನನಗೆ ಒಂದು ದೊಡ್ಡ ಸಂಶಯವಿದೆ. ನೀನು ಅದನ್ನು ಪರಿಹರಿಸಬೇಕು. ನೀನೇ ನಮ್ಮ ವಂಶಕರನಷ್ಟೇ!.
ಪುರುಷಾಣಾಮಯಂ ತಾತ ದುರ್ವೃತ್ತಾನಾಂ ದುರಾತ್ಮನಾಮ್ |
ಕಥಿತೋ ವಾಕ್ಯಸಂಚಾರಸ್ತತೋ ವಿಜ್ಞಾಪಯಾಮಿ ತೇ ॥2॥
ಎಲೈ ಪ್ರೀತಿಪಾತ್ರನೇ! ದುರ್ನಡತೆಯುಳ್ಳ ಪುರುಷರು ಹೇಗೆ ಮಾತನಾಡು- ತ್ತಾರೆಂದು ನನಗೆ ಹೇಳಿದೆ. ಅದರಿಂದ ಈ ಪ್ರಶ್ನೆಯನ್ನು ಮಾಡುತ್ತಿದ್ದೇನೆ.
ಯದ್ ಹಿತಂ ರಾಜ್ಯತಂತ್ರಸ್ಯ ಕುಲಸ್ಯ ಚ ಸುಖೋದಯಮ್ |
ಆಯತ್ಯಾಂ ಚ ತದಾತ್ವೇ ಚ ಕ್ಷೇಮವೃದ್ಧಿಕರಂ ಚ ಯತ್ ॥3॥
ಪುತ್ರಪೌತ್ರಾಭಿರಾಮಂ ಚ ರಾಷ್ಟ್ರವೃದ್ಧಿಕರಂ ಚ ಯತ್ |
ಅನ್ನಪಾನೇ ಶರೀರೇ ಚ ಹಿತಂ ಯತ್ ತದ್ ಬ್ರವೀಹಿ ಮೇ ॥4॥
ರಾಜ್ಯತಂತ್ರಕ್ಕೆ ಯಾವುದು ಹಿತವೋ, ಕುಲಕ್ಕೆ ಯಾವುದು ಸುಖವನ್ನು ಉಂಟು ಮಾಡುತ್ತದೆಯೋ, ತತ್ಕಾಲದಲ್ಲಿ ಮತ್ತು ಭವಿಷ್ಯತ್ಕಾಲದಲ್ಲಿ ಯಾವುದು ಕ್ಷೇಮವನ್ನು ಹಾಗೂ ವೃದ್ಧಿಯನ್ನು ಉಂಟು ಮಾಡುತ್ತದೆಯೋ, ಪುತ್ರಪೌತ್ರರಿಗೆ ಸುಖಕರವಾ- ಗಿದೆಯೋ, ರಾಷ್ಟ್ರಕ್ಕೆ ವೃದ್ಧಿಯನ್ನು ಉಂಟು ಮಡುತ್ತದೆಯೋ, ಅನ್ನಪಾನಗಳ ವಿಷಯದಲ್ಲಿ ಹಾಗೂ ಶರೀರದ ವಿಷಯದಲ್ಲಿ ಹಿತವಾಗಿರುತ್ತದೆಯೋ ಅಂತಹ ವಿಷಯವನ್ನು ನನಗೆ ಹೇಳು.
ಅಭಿಷಿಕ್ತೋ ಹಿ ಯೋ ರಾಜಾ ರಾಜ್ಯಸ್ಥೋ ಮಿತ್ರಸಂವೃತಃ |
ಅಸುಹೃತ್ಸಮುಪೇತೋ ವಾ ಸ ಕಥಂ ರಂಜಯೇತ್ ಪ್ರಜಾಃ ॥5॥
ರಾಜನು ಪಟ್ಟಾಭಿಷಿಕ್ತನಾಗಿ ಮಿತ್ರರ ಜೊತೆಯಲ್ಲಿ ರಾಜ್ಯದಲ್ಲಿ ನೆಲೆಸಿದವನಾಗಿ ಅಥವಾ ಅಸುಹೃಜ್ಜನರಿಂದ ಕೂಡಿದವನಾಗಿ ಹೇಗೆ ಪ್ರಜೆಗಳನ್ನು ರಂಜಿಸಬೇಕು?
ಯೋ ಹ್ಯಸತ್ಪ್ರಗ್ರಹರತಿಃ ಸ್ನೇಹರಾಗಬಲಾತ್ಕೃತಃ |
ಇಂದ್ರಿಯಾಣಾಮನೀಶತ್ವಾದಸಜ್ಜನಬುಭೂಷಕಃ ॥6॥
ತಸ್ಯ ಭೃತ್ಯಾ ವಿಗುಣತಾಂ ಯಾಂತಿ ಸರ್ವೇ ಕುಲೋದ್ಗತಾಃ |
ನ ಚ ಭೃತ್ಯಫಲೈರರ್ಥೈಃ ಸ ರಾಜಾ ಸಂಪ್ರಯುಜ್ಯತೇ ॥7॥
ಯಾವನು ಸ್ನೇಹರಾಗಗಳಿಗೆ ವಶನಾಗಿ ಸುಹೃಜ್ಜನರಲ್ಲದವರನ್ನು ಸ್ವೀಕರಿಸುವು- ದರಲ್ಲಿಯೇ ನಿರತನೋ, ಇಂದ್ರಿಯಗಳ ಮೇಲೆ ನಿಯಂತ್ರಣವಿಲ್ಲದಿರುವುದರಿಂದ ಅಸಜ್ಜನರಿಗೆ ಹಿತವನ್ನು ಮಾಡುತ್ತಾನೆಯೋ ಅಂತಹವನ ಭೃತ್ಯರು ಒಳ್ಳೆಯ ಕುಲ- ದಿಂದ ಬಂದಿದ್ದರೂ ಎಲ್ಲರೂ ಗುಣಹೀನರಾಗುತ್ತಾರೆ. ಅಂತಹ ರಾಜನು ಭೃತ್ಯರಿಂದ ಯಾವ ಪ್ರಯೋಜನವನ್ನೂ ಪಡೆಯುವುದಿಲ್ಲ.
ಏತಾನ್ ಮೇ ಸಂಶಯಸ್ಥಸ್ಯ ರಾಜಧರ್ಮಾನ್ ಸುದುರ್ಲಭಾನ್ |
ಬೃಹಸ್ಪತಿಸಮೋ ಬುದ್ಧ್ಯಾ ಭವಾನ್ ಶಂಸಿತುಮರ್ಹತಿ ॥8॥
ಸುದುರ್ಲಭವಾದ ರಾಜಧರ್ಮಗಳ ವಿಷಯದಲ್ಲಿ ನನಗೆ ಇರುವ ಈ ಸಂಶಯವನ್ನು ಬೃಹಸ್ಪತಿಸಮನಾದ ನೀನು ನಿನ್ನ ಬುದ್ಧಿಯಿಂದ ಪರಿಹರಿಸಬೇಕು.
ಶಂಸಿತಾ ಪುರುಷವ್ಯಾಘ್ರ ತ್ವಂ ನಃ ಕುಲಹಿತೇ ರತಃ |
ಕ್ಷತ್ತಾ ಚೈವ ಪಟುಪ್ರಜ್ಞೋ ಯೋ ನಃ ಶಂಸತಿ ಸರ್ವದಾ ॥9॥
ಎಲೈ ಪುರುಷವ್ಯಾಘ್ರನೇ! ನಮ್ಮ ಕುಲಹಿತದಲ್ಲಿ ನಿರತನಾದ ನೀನು ನಮಗೆ ಇಂತಹ ಉಪದೇಶವನ್ನು ಮಾಡುವವನು. ಮತ್ತು ಪಟುವಾದ ಜ್ಞಾನವನ್ನು ಹೊಂದಿದ ವಿದುರನೂ ಸಹ ಯಾವಾಗಲೂ ಉಪದೇಶಿಸುತ್ತಾನೆ.
ತ್ವತ್ತಃ ಕುಲಹಿತಂ ವಾಕ್ಯಂ ಶ್ರುತ್ವಾ ರಾಜ್ಯಹಿತೋದಯಮ್ |
ಅಮೃತಸ್ಯಾವ್ಯಯಸ್ಯೇವ ತೃಪ್ತಃ ಸ್ವಪ್ಸ್ಯಾಮ್ಯಹಂ ಸುಖಮ್ ॥10॥
ನಿನ್ನಿಂದ ಕುಲಕ್ಕೆ ಹಿತವೂ ಮತ್ತು ರಾಜ್ಯಕ್ಕೆ ಹಿತವನ್ನು ಉಂಟುಮಾಡುವುದೂ ಆದ ಮಾತುಗಳನ್ನು ಕೇಳಿ ಅಮೃತವನ್ನು ಪಾನ ಮಾಡಿದವನಂತೆ ತೃಪ್ತನಾಗಿ ನಾನು ನಿದ್ರಿಸುವೆನು.
ಕೀದೃಶಾಃ ಸನ್ನಿಕರ್ಷಸ್ಥಾ ಭೃತ್ಯಾಃ ಸ್ಯುರ್ವಾ ಗುಣಾನ್ವಿತಾಃ |
ಕೀದೃಶೈಃ ಕಿಂಕುಲೀನೈರ್ವಾ ಸಹ ಯಾತ್ರಾ ವಿಧೀಯತೇ ॥11॥
ರಾಜನ ಸಮೀಪದಲ್ಲಿರುವ ಭೃತ್ಯರು ಎಂತಹವರು ಮತ್ತು ಎಂತಹ ಗುಣದಿಂದ ಕೂಡಿದವರಾಗಿರಬೇಕು? ರಾಜನ ಜೊತೆಯಲ್ಲಿ ಸಂಚರಿಸುವವರು ಎಂತಹವರು ಮತ್ತು ಎಂತಹ ಕುಲೀನರಾಗಿರಬೇಕು?
ನ ಹ್ಯೇಕೋ ಭೃತ್ಯರಹಿತೋ ರಾಜಾ ಭವತಿ ರಕ್ಷಿತಾ |
ರಾಜ್ಯಂ ಚೇದಂ ಜನಃ ಸರ್ವಸ್ತತ್ಕುಲೀನೋಽಭಿಶಾಸತಿ ॥12॥

ಭೃತ್ಯರಿಲ್ಲದೇ ರಾಜನೊಬ್ಬನೇ ಈ ರಾಜ್ಯವನ್ನೂ ಸರ್ವಜನರನ್ನೂ ಕುಲೀನ- ನಾದ ರಾಜನು ರಕ್ಷಿಸಲು ಸಾಧ್ಯವಿಲ್ಲ.
ನ ಚ ಪ್ರಶಾಸ್ತುಂ ರಾಜ್ಯಂ ಹಿ ಶಕ್ಯಮೇಕೇನ ಭಾರತ |
ಅಸಹಾಯವತಾ ತಾತ ನೈವಾರ್ಥಾಃ ಕೇಚಿದಪ್ಯುತ |
ಲಬ್ಧುಂ ಲಬ್ಧ್ವಾ ಚಾಪಿ ಸದಾ ರಕ್ಷಿತುಂ ಭರತರ್ಷಭ ॥13॥
ಎಲೈ ಭಾರತನೇ! ಸಹಾಯವಿಲ್ಲದೇ ಒಬ್ಬನೇ ರಾಜ್ಯವನ್ನು ಆಳಲು ಸಾಧ್ಯವಿಲ್ಲ. ಮತ್ತು ಸಹಾಯವಿಲ್ಲದೇ ಯಾವುದನ್ನಾದರೂ ಸಂಪಾದಿಸಲು ಅಥವಾ ಸಂಪಾ- ದಿಸಿದುದನ್ನು ಸದಾ ರಕ್ಷಿಸಲೂ ಸಾಧ್ಯವಿಲ್ಲ.
ಭೀಷ್ಮ:
ಯಸ್ಯ ಭೃತ್ಯಜನಃ ಸರ್ವೋ ಜ್ಞಾನವಿಜ್ಞಾನಕೋವಿದಃ |
ಹಿತೈಷೀ ಕುಲಜಃ ಸ್ನಿಗ್ಧಃ ಸ ರಾಜ್ಯಫಲಮಶ್ನುತೇ ॥14॥
ಭೀಷ್ಮರು ಯಾವನ ಭೃತ್ಯಜನರೆಲ್ಲರೂ ಜ್ಞಾನವಿಜ್ಞಾನ ಕೋವಿದರಾಗಿ- ರುತ್ತಾರೆಯೋ ಸತ್ಕುಲದಿಂದ ಬಂದು ರಾಜನ ಹಿತೈಷಿಗಳಾಗಿ ರಾಜನಲ್ಲಿ ಸ್ನೇಹವುಳ್ಳ- ವರಾಗಿರುತ್ತಾರೆಯೋ, ಅಂತಹ ರಾಜನು ರಾಜ್ಯಫಲವನ್ನು ಹೊಂದುವನು.
ಮಂತ್ರಿಣೋ ಯಸ್ಯ ಕುಲಜಾ ಅಸಂಹಾರ್ಯಾ ಸಹೋಷಿತಾಃ |
ನೃಪತೇರ್ಮತಿದಾಃ ಸಂತಿ ಸಂಬಂಧಜ್ಞಾನಕೋವಿದಾಃ ॥15॥
ಅನಾಗತವಿಧಾತಾರಃ ಕಾಲಜ್ಞಾನವಿಶಾರದಾಃ |
ಅತಿಕ್ರಾಂತಮಶೋಚಂತಃ ಸ ರಾಜ್ಯಫಲಮಶ್ನುತೇ ॥16॥
ಯಾವನ ಮಂತ್ರಿಗಳು ಒಳ್ಳೆಯ ಕುಲದಲ್ಲಿ ಬಂದವರಾಗಿ, ಇನ್ನೊಬ್ಬರಿಂದ ಭೇದಿಸಲು ಸಾಧ್ಯವಿಲ್ಲದವರಾಗಿ, ರಾಜನ ಜೊತೆಯಲ್ಲಿ ವಾಸಿಸಿ, ರಾಜನಿಗೆ ಒಳ್ಳೆಯ ಉಪದೇಶವನ್ನು ನೀಡಿ, ಯಾರ ಜೊತೆಯಲ್ಲಿ ಸಂಬಂಧವನ್ನು ಮಾಡಬೇಕು ಯಾರ ಜೊತೆಯಲ್ಲಿ ಸಂಬಂಧವನ್ನು ಮಾಡಬಾರದು ಎಂದು ಚೆನ್ನಾಗಿ ತಿಳಿದವರಾಗಿ, ಕಾಲಜ್ಞಾನದಲ್ಲಿ ವಿಶಾರದರಾಗಿ, ಕಳೆದುಹೋದುದನ್ನು ಕುರಿತು ಶೋಕಪಡದೇ ಮುಂದೆ ಆಗಬೇಕಾದುದನ್ನು ಸಾಧಿಸುತ್ತಾರೆಯೋ ಅಂತಹ ರಾಜನು ರಾಜ್ಯಫಲವನ್ನು ಹೊಂದುತ್ತಾನೆ.
ಸಮದುಃಖಸುಖಾ ಯಸ್ಯ ಸಹಾಯಾಃ ಸತ್ಯಕಾರಿಣಃ |
ಅರ್ಥಚಿಂತಾಪರಾ ಯಸ್ಯ ಸ ರಾಜ್ಯಫಲಮಶ್ನುತೇ ॥17॥
ಯಾವ ರಾಜನ ಭೃತ್ಯರು ಹಿತವಾದ ಕಾರ್ಯಗಳನ್ನೇ ಮಾಡುತ್ತಾ ರಾಜನ ಸುಖದುಃಖಗಳಲ್ಲಿ ಸಮಭಾಗಿಗಳಾಗಿ ರಾಜನ ಸಮೃದ್ಧಿಯನ್ನು ಚಿಂತಿಸುವರೋ ಅಂತಹ ರಾಜನು ರಾಜ್ಯಫಲವನ್ನು ಹೊಂದುವನು.
ಯಸ್ಯ ನಾರ್ತೋ ಜನಪದಃ ಸನ್ನಿಕರ್ಷಗತಃ ಸದಾ |
ಅಕ್ಷುದ್ರಃ ಸತ್ಪಥಾಲಂಬೀ ಸ ರಾಜ್ಯಫಲಭಾಗ್ ಭವೇತ್ ॥18॥
ಯಾವ ರಾಜನಿಗೆ ಸಮೀಪದಲ್ಲಿರುವ ಪ್ರಜೆಗಳು ಆರ್ತರಾಗಿರುವುದಿಲ್ಲವೋ, ಕ್ಷುದ್ರರಾಗಿರುವುದಿಲ್ಲವೋ, ಸನ್ಮಾರ್ಗದಲ್ಲಿ ನಡೆಯುವರೋ ಅಂತಹ ರಾಜನು ರಾಜ್ಯಫಲವನ್ನು ಹೊಂದುವನು.
ಕೋಶಾಕ್ಷಪಟಲಂ ಯಸ್ಯ ಕೋಶವೃದ್ಧಿಕರೈರ್ಜನೈಃ |
ಆಪ್ತೈಸ್ತುಷ್ಟೈಶ್ಚ ಸತತಂ ಧಾರ್ಯತೇ ಸ ನೃಪೋತ್ತಮಃ ॥19॥
ಯಾವ ರಾಜನ ಕೋಶವು (ಬೊಕ್ಕಸವು) ಕೋಶವನ್ನು ಅಭಿವೃದ್ಧಿಗೊಳಿಸು- ವುದರಲ್ಲಿ ನಿರತರಾದ ತೃಪ್ತರಾದ ಆಪ್ತರಾದ ಜನರಿಂದ ನೋಡಲ್ಪಡುತ್ತದೆಯೋ ಅಂತಹವನು ಶ್ರೇಷ್ಠರಾಜನಾಗುತ್ತಾನೆ.
ಕೋಷ್ಠಾಗಾರಮಸಂಹಾರ್ಯೈರಾಪ್ತೈಃ ಸಂಚಯತತ್ಪರೈಃ |
ಪಾತ್ರಭೂತೈರಲುಬ್ಧೈಶ್ಚ ಪಾಲ್ಯಮಾನಂ ಗುಣೀ ಭವೇತ್ ॥20॥
ಯಾವ ರಾಜನ ಉಗ್ರಾಣಗಳು ಇನ್ನೊಬ್ಬರಿಂದ ರಾಜನಿಂದ ಬೇರ್ಪಡಿಸಲಾಗದ ಆಪ್ತರಾದ ಉಗ್ರಾಣವನ್ನು ಅಭಿವೃದ್ಧಿಪಡಿಸುವುದರಲ್ಲಿ ನಿರತರಾದ ಸತ್ಪಾತ್ರರಾದ ಲೋಭಿಗಳಲ್ಲದ ಸೇವಕರಿಂದ ರಕ್ಷಿಸಲ್ಪಡುತ್ತದೆಯೋ ಆ ರಾಜನು ಗುಣವಂತನಾಗುತ್ತಾನೆ.
ವ್ಯವಹಾರಶ್ಚ ನಗರೇ ಯಸ್ಯ ಕರ್ಮಫಲೋದಯಃ |
ದೃಶ್ಯತೇ ಶಂಖಲಿಖಿತಃ ಸ ಧರ್ಮಫಲಭಾಗ್ ಭವೇತ್ ॥21॥
ಯಾವನ ರಾಜ್ಯದಲ್ಲಿ ಕ್ರಯವಿಕ್ರಯಾದಿ ವ್ಯವಹಾರಗಳು ಯೋಗ್ಯವಾದ ಫಲವನ್ನು ಕೊಡುತ್ತವೆಯೋ, ಶಂಖಲಿಖಿತರಿಗೆ ಅನುಗುಣವಾದ ವ್ಯವಹಾರವು ಕಂಡು ಬರುತ್ತದೆಯೋ ಅಂತಹ ರಾಜನು ಧರ್ಮಫಲವನ್ನು ಪಡೆಯುತ್ತಾನೆ.
ಸಂಗೃಹೀತಮನುಷ್ಯಶ್ಚ ಯೋ ರಾಜಾ ರಾಜಧರ್ಮವಿತ್ |
ಷಡ್ವರ್ಗಂ ಪ್ರತಿಗೃಹ್ಣನ್ ಸ ಧರ್ಮಾತ್ ಫಲಮುಪಾಶ್ನುತೇ ॥22॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತದಶಾಧಿಕಶತತಮೋಽಧ್ಯಾಯಃ ॥117॥
ಒಳ್ಳೆಯ ಸೇವಕರನ್ನು ಸಂಗ್ರಹಿಸಿ ರಾಜಧರ್ಮವನ್ನು ತಿಳಿದ ಯಾವ ರಾಜನು ಷಡ್ವರ್ಗವನ್ನು ಅನುಷ್ಠಾನ ಮಾಡುತ್ತಾನೆಯೋ ಅವನು ಧರ್ಮದ ಫಲವನ್ನು ಹೊಂದುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 117ನೆಯ ಅಧ್ಯಾಯ ಮುಗಿಯಿತು
0
118. ನೂರಹದಿನೆಂಟನೆಯ ಅಧ್ಯಾಯ
ಮುನಿಯಿಂದ ನಾಯಿಯ ರೂಪಾಂತರಕರಣ ಮತ್ತು ಪುನಃ ಶ್ವಾನಕರಣ
ಯುಧಿಷ್ಠಿರಃ

ನ ಸಂತಿ ಕುಲಜಾ ಯತ್ರ ಸಹಾಯಾಃ ಪಾರ್ಥಿವಸ್ಯ ತು |
ಅಕುಲೀನಾಶ್ಚ ಕರ್ತವ್ಯಾ ನ ವಾ ಭಾರತಸತ್ತಮ ॥1॥
ಯುಧಿಷ್ಠಿರ ಎಲೈ ಭರತಸತ್ತಮನೇ! ರಾಜನಿಗೆ ಕುಲಜರಾದವರು ಸಹಾಯಕರಿಲ್ಲದಿದ್ದರೆ ಅಕುಲೀನರನ್ನು ಸಹಾಯಕರಾಗಿ ತೆಗೆದುಕೊಳ್ಳಬಹುದೇ ಬೇಡವೇ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಿದರ್ಶನಕರಂ ಲೋಕೇ ಸಜ್ಜನಾಚರಿತಂ ಸದಾ ॥2॥
ಭೀಷ್ಮರು ಈ ವಿಷಯದಲ್ಲಿಯೂ ಸಜ್ಜನನಾದ ಮುನಿಯು ಆಚರಿಸಿದ ದೃಷ್ಟಾಂತರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಅಸ್ಯೈವಾರ್ಥಸ್ಯ ಸದೃಶಂ ಯಚ್ಛ್ರುತಂ ಮೇ ತಪೋವನೇ |
ಜಾಮದಗ್ನ್ಯಸ್ಯ ರಾಮಸ್ಯ ಯದುಕ್ತಮೃಷಿಸತ್ತಮೈಃ ॥3॥
ನೀನು ಕೇಳಿದ ಪ್ರಶ್ನೆಗೆ ಸದೃಶವಾದ ಒಂದು ವಿಷಯವನ್ನು ನಾನು ತಪೋವನ- ದಲ್ಲಿ ಜಮದಗ್ನಿಪುತ್ರರಾದ ಪರಶುರಾಮರ ಆಶ್ರಮದಲ್ಲಿ ಋಷಿಶ್ರೇಷ್ಠರಿಂದ ಹೇಳಿದ ಒಂದು ಕಥೆಯನ್ನು ಕೇಳಿದ್ದೇನೆ.
ವನೇ ಮಹತಿ ಕಸ್ಮಿಂಶ್ಚಿದಮನುಷ್ಯನಿಷೇವಿತೇ |
ಋಷಿರ್ಮೂಲಫಲಾಹಾರೋ ನಿಯತೋ ನಿಯತೇಂದ್ರಿಯಃ ॥4॥
ದೀಕ್ಷಾದಮಪರಃ ಶಾಂತಃ ಸ್ವಾಧ್ಯಾಯಪರಮಃ ಶುಚಿಃ |
ಉಪವಾಸವಿಶುದ್ಧಾತ್ಮಾ ಸತತಂ ಸತ್ಪಥೇ ಸ್ಥಿತಃ ॥5॥
ನಿರ್ಜನವಾದ ಒಂದು ದೊಡ್ಡ ವನದಲ್ಲಿ ಮೂಲಫಲಾಹಾರನೂ, ನಿಯಮ- ಬದ್ಧನೂ, ಜಿತೇಂದ್ರಿಯನೂ, ದೀಕ್ಷಾಪರನೂ, ಶಾಂತನೂ, ಸ್ವಾಧ್ಯಾಯನಿರತನೂ, ಶುಚಿಯೂ, ಉಪವಾಸದಿಂದ ವಿಶುದ್ಧವಾದ ಶರೀರವುಳ್ಳವನೂ ಯಾವಾಗಲೂ ಸನ್ಮಾರ್ಗದಲ್ಲಿ ಇರುವವನೂ ಆದ ಒಬ್ಬ ಋಷಿಯು ಇದ್ದನು.
ತಸ್ಯ ಸಂದೃಶ್ಯ ಸದ್ಭಾವಮುಪವಿಷ್ಟಸ್ಯ ಧೀಮತಃ |
ಸರ್ವಸತ್ತ್ವಾಃ ಸಮೀಪಸ್ಥಾ ಭವಂತಿ ವನಚಾರಿಣಃ ॥6॥
ಮೇಧಾವಿಯಾದ ಅವನ ಒಳ್ಳೆಯತನವನ್ನು ನೋಡಿ ವನಚಾರಿಗಳಾದ ಎಲ್ಲ ಪ್ರಾಣಿಗಳೂ ಅವನ ಸಮೀಪದಲ್ಲಿರುತ್ತಿದ್ದವು.
ಸಿಂಹವ್ಯಾಘ್ರಾಃ ಸಶರಭಾ ಮತ್ತಾಶ್ಚೈವ ಮಹಾಗಜಾಃ |
ದ್ವೀಪಿನಃ ಖಡ್ಗಭಲ್ಲೂಕಾ ಯೇ ಚಾನ್ಯೇ ಭೀಮದರ್ಶನಾಃ ॥7॥
ಸಿಂಹವ್ಯಾಘ್ರಗಳು, ಶರಭಗಳು, ಮದ್ದಾನೆಗಳು, ಚಿರತೆಗಳು, ಖಡ್ಗಮೃಗಗಳು, ಕರಡಿಗಳು ಇನ್ನೂ ಅನೇಕ ಭಯಂಕರಪ್ರಾಣಿಗಳೂ ಬರುತ್ತಿದ್ದವು.
ತೇ ಸುಖಪ್ರಶ್ನದಾಃ ಸರ್ವೇ ಭವಂತಿ ಕ್ಷತಜಾಶನಾಃ |
ತಸ್ಯರ್ಷೇಃ ಶಿಷ್ಯವಚ್ಚೈವ ನ್ಯಗ್ಭೂತಾಃ ಪ್ರಿಯಕಾರಿಣಃ ॥8॥
ಮಾಂಸಾಹಾರಿಗಳಾದ ಆ ಪ್ರಾಣಿಗಳೆಲ್ಲವೂ ಮುನಿಯ ಸಮೀಪಕ್ಕೆ ಬಂದು ಕುಶಲಪ್ರಶ್ನೆಯನ್ನು ಮಾಡಿ ಅವನಿಗೆ ಪ್ರಿಯವನ್ನು ಮಾಡಿ ಆ ಋಷಿಯ ಶಿಷ್ಯರಂತೆ ವಿನಯದಿಂದ ಬಾಗಿರುತ್ತಿದ್ದವು.
ದತ್ತ್ವಾ ಚ ತೇ ಸುಖಪ್ರಶ್ನಂ ಸರ್ವೇ ಯಾಂತಿ ಯಥಾಗತಮ್ |
ಗ್ರಾಮ್ಯಸ್ತ್ವೇಕಃ ಪಶುಸ್ತತ್ರ ನಾಜಹಾತ್ ಸ ಮಹಾಮುನಿಮ್ ॥9॥
ಅವೆಲ್ಲವೂ ಕುಶಲಪ್ರಶ್ನೆಯನ್ನು ಮಾಡಿ ಬಂದ ದಾರಿಯಲ್ಲಿಯೇ ಹಿಂದಿರು- ಗುತ್ತಿದ್ದವು. ಆದರೆ ಒಂದು ನಾಯಿಯು ಮಾತ್ರ ಆ ಮಹಾಮುನಿಯನ್ನು ಬಿಡು- ತ್ತಿರಲಿಲ್ಲ.
ಭಕ್ತೋಽನುರಕ್ತಃ ಸತತಮುಪವಾಸಕೃಶೋಽಬಲಃ |
ಫಲಮೂಲೋತ್ಕರಾಹಾರಃ ಶಾಂತಃ ಶಿಷ್ಟಾಕೃತಿರ್ಯಥಾ ॥10॥
ಆ ನಾಯಿಯು ಆ ಋಷಿಯಲ್ಲಿ ಭಕ್ತಿಯನ್ನು ಹೊಂದಿ, ಅನುರಾಗವನ್ನು ಹೊಂದಿ, ಸತತೋಪವಾಸದಿಂದ ಕೃಶವಾಗಿ, ದುರ್ಬಲವಾಗಿ, ಫಲಮೂಲಗಳನ್ನು ಮತ್ತು ಎಸೆದ ಆಹಾರವನ್ನು ಸ್ವೀಕರಿಸುತ್ತಾ, ಶಾಂತವಾಗಿ, ಶಿಷ್ಟರಂತೆ ಇರುತ್ತಿದ್ದಿತು.
ತಸ್ಯರ್ಷೇರುಪವಿಷ್ಟಸ್ಯ ಪಾದಮೂಲೇ ಮಹಾಮುನೇಃ |
ಮನುಷ್ಯವದ್ ಗತೋ ಭಾವಃ ಸ್ನೇಹಬದ್ಧೋಽಭವದ್ ಭೃಶಮ್ ॥11॥
ಆ ಮಹಾಮುನಿಯಾದ ಋಷಿಯು ಕುಳಿತುಕೊಂಡಾಗ ಅವನ ಪಾದಮೂಲ- ದಲ್ಲಿ ಮನುಷ್ಯರಂತೆ ಸ್ನೇಹಭಾವದಿಂದ ಕುಳಿತಿರುತ್ತಿದ್ದಿತು.
ತತೋಽಭ್ಯಯಾನ್ಮಹಾವೀರ್ಯೋ ದ್ವೀಪೀ ಕ್ಷತಜಭೋಜನಃ |
ಶ್ವಾರ್ಥಮತ್ಯಂತಸಂದುಷ್ಟಃ ಕ್ರೂರಃ ಕಾಲ ಇವಾಂತಕಃ ॥12॥
ಅನಂತರ ಒಮ್ಮೆ ಅಲ್ಲಿ ರಕ್ತಾಹಾರಸೇವಿಯಾದ, ಮಹಾಪರಾಕ್ರಮಿಯಾದ ಒಂದು ಚಿರತೆಯು ಬಂದಿತು. ಕ್ರೂರಿಯೂ, ಯಮನಂತೆ ಇರುವುದೂ, ದುಷ್ಟವೂ ಆದ ಆ ಚಿರತೆಯು ನಾಯಿಯನ್ನು ಹಿಡಿಯುವ ಸಲುವಾಗಿ ಬಂದಿತು.
ಲೇಲಿಹ್ಯಮಾನಸ್ತೃಷಿತಃ ಪುಚ್ಛಾಸ್ಫೋಟನತತ್ಪರಃ |
ವ್ಯಾದಿತಾಸ್ಯಃ ಕ್ಷುಧಾಭಗ್ನಃ ಪ್ರಾರ್ಥಯಾನಸ್ತದಾಮಿಷಮ್ ॥13॥
ಬಾಯಾರಿಕೆಯಿಂದ ತನ್ನ ಕಟಬಾಯಿಗಳನ್ನು ಸವರಿಕೊಂಡು, ಬಾಲವನ್ನು ಬಡಿಯುತ್ತಾ, ಮುಖವನ್ನು ತೆರೆದು, ಹಸಿವೆಯಿಂದ

ಬಳಲಿ, ನಾಯಿಯ ಮಾಂಸ- ವನ್ನು ಆಶಿಸುತ್ತಾ ಸಮೀಪಕ್ಕೆ ಬಂದಿತು.
ತಂ ದೃಷ್ಟ್ವಾ ಕ್ರೂರಮಾಯಾಂತಂ ಜೀವಿತಾರ್ಥೀ ನರಾಧಿಪ |
ಪ್ರೋವಾಚ ಶ್ವಾ ಮುನಿಂ ತತ್ರ ಯತ್ ತಚ್ಛೃಣು ಮಹಾಮತೇ ॥14॥
ಎಲೈ ನರಾಧಿಪನೇ! ಕ್ರೂರ ಮೃಗವು ತನ್ನ ಬಳಿ ಬರುತ್ತಿರುವುದನ್ನು ನೋಡಿ, ಜೀವಿತಾರ್ಥಿಯಾದ ಆ ನಾಯಿಯು ಆ ಋಷಿಯನ್ನು ಕುರಿತು ಏನು ಹೇಳಿತೆಂಬು- ದನ್ನು ಎಲೈ ಮಹಾಮತಿಯೇ! ನನ್ನಿಂದ ಕೇಳು.
ಶ್ವಾಶತ್ರುರ್ಭಗವನ್ನತ್ರ ದ್ವೀಪೀ ಮಾಂ ಹಂತುಮಿಚ್ಛತಿ |
ತ್ವತ್ಪ್ರಸಾದಾದ್ ಭಯಂ ನ ಸ್ಯಾತ್ ತಸ್ಮಾನ್ಮಮ ಮಹಾಮುನೇ ॥15॥
ಎಲೈ ಪೂಜ್ಯನೇ! ನಾಯಿಗಳಿಗೆ ಶತ್ರುವಾದ ಈ ಚಿರತೆಯು ನನ್ನನ್ನು ಕೊಲ್ಲಲು ಬಯಸುತ್ತಿದೆ. ಎಲೈ ಮಹಾಮುನಿಯೇ! ನಿನ್ನ ಅನುಗ್ರಹದಿಂದ ನನಗೆ ಆ ಚಿರತೆ- ಯಿಂದ ಭಯವುಂಟಾಗುವುದು ಬೇಡ.
ಮುನಿಃ
ನ ಭಯಂ ದ್ವೀಪಿನಃ ಕಾರ್ಯಂ ಮೃತ್ಯುತಸ್ತೇ ಕಥಂಚನ |
ಏಷ ಶ್ವರೂಪರಹಿತೋ ದ್ವೀಪೀ ಭವಸಿ ಪುತ್ರಕ ॥16॥
ಮುನಿ ಚಿರತೆಯಿಂದ ಮರಣವುಂಟಾಗುವುದೆಂಬ ಭಯವು ನಿನಗೆ ಬೇಡ. ಎಲೈ ಪುತ್ರನೇ! ನೀನು ನಾಯಿಯ ರೂಪವನ್ನು ತ್ಯಜಿಸಿ, ಚಿರತೆಯ ರೂಪವನ್ನು ಹೊಂದಿದವನಾಗುವಿ.
ಭೀಷ್ಮಃ
ತತಃ ಶ್ವಾ ದ್ವೀಪಿತಾಂ ನೀತೋ ಜಾಂಬೂನದನಿಭಾಕೃತಿಃ |
ಚಿತ್ರಾಂಗೋ ವಿಸ್ಫುರದ್‌ದಂಷ್ಟ್ರೋ (ಹೃಷ್ಟೋ) ವನೇ ವಸತಿ ನಿರ್ಭಯಃ 17
ಭೀಷ್ಮರು ಆಗ ಆ ನಾಯಿಯು ಚಿನ್ನದ ಬಣ್ಣದ ಒಂದು ಚಿರತೆಯಾಗಿ ಮಾಡಲ್ಪಟ್ಟಿತು. ಅದು ಚಿತ್ರಿತವಾದ ಅಂಗಗಳಿಂದ ಶೋಭಿಸುತ್ತಾ ಆ ಕಾಡಿನಲ್ಲಿ ನಿರ್ಭಯವಾಗಿ ಸಂತೋಷದಿಂದ ವಾಸ ಮಾಡಿತು.
ತಂ ದೃಷ್ಟ್ವಾ ಸ ಪುನರ್ದ್ವೀಪೀ ಆತ್ಮನಃ ಸುಭೃಶಂ ಶುಭಮ್ |
ಅವಿರುದ್ಧಸ್ತತಸ್ತಸ್ಯ ಕ್ಷಣೇನ ಸಮಪದ್ಯತ ॥18॥
ತನ್ನ ಕಡೆಗೆ ಬರುತ್ತಿದ್ದ ಚಿರತೆಯು ತನಗೆ ಸದೃಶವಾದ ಇನ್ನೊಂದು ಒಳ್ಳೆಯ ಚಿರತೆಯನ್ನು ನೋಡಿ ಒಂದು ಕ್ಷಣದಲ್ಲಿಯೇ ಅದರ ವಿರೋಧವನ್ನು ತ್ಯಜಿಸಿತು.
ತತೋಽಭ್ಯಯಾನ್ಮಹಾರೌದ್ರೋ ವ್ಯಾದಿತಾಸ್ಯಃ ಕ್ಷುಧಾನ್ವಿತಃ |
ದ್ವೀಪಿನಂ ಲೇಲಿಹದ್‌ವಕ್ತ್ರೋ ವ್ಯಾಘ್ರೋ ರುಧಿರಲಾಲಸಃ ॥19॥
ಅನಂತರ ಅಲ್ಲಿಗೆ ಮಹಾಭಯಂಕರವೂ, ಹಸಿವೆಯಿಂದ ಕೂಡಿದುದೂ, ರಕ್ತಪ್ರಿಯವೂ ಆದ ಒಂದು ಮಹಾವ್ಯಾಘ್ರವು ಬಾಯನ್ನು ತೆರೆದು ಕಟಬಾಯಿಗಳನ್ನು ಸವರುತ್ತಾ ಅಲ್ಲಿಗೆ ಬಂದಿತು.
ವ್ಯಾಘ್ರಂ ದೃಷ್ಟ್ವಾ ಕ್ಷುಧಾಭಗ್ನಂ ದಂಷ್ಟ್ರಿಣಂ ವನಗೋಚರಮ್ |
ದ್ವೀಪೀ ಜೀವಿತರಕ್ಷಾರ್ಥಮೃಷಿಂ ಶರಣಮೇಯಿವಾನ್ ॥20॥
ಹಸಿವಿನಿಂದ ಬಳಲಿದ ವನಸಂಚಾರಿಯಾದ, ಪ್ರಶಸ್ತವಾದ ಕೋರೆದಾಡೆಗಳನ್ನು ಹೊಂದಿದ ಆ ವ್ಯಾಘ್ರವನ್ನು ನೋಡಿ ಚಿರತೆಯು ತನ್ನ ಜೀವನವನ್ನು (ಅಥವಾ ಪ್ರಾಣಗಳನ್ನು) ರಕ್ಷಿಸಿಕೊಳ್ಳಲು ಋಷಿಯನ್ನು ಶರಣು ಹೊಂದಿತು.
ತತಃ ಸಂವಾಸಜಂ ಸ್ನೇಹಮೃಷಿಣಾ ಕುರ್ವತಾ ಸದಾ |
ಸ ದ್ವೀಪೀ ವ್ಯಾಘ್ರತಾಂ ನೀತೋ ರಿಪುಭಿರ್ಬಲವತ್ತರಃ |
ತತೋ ದೃಷ್ಟ್ವಾ ಸ ಶಾರ್ದೂಲೋ ನಾಭ್ಯಹಂಸ್ತಂ ವಿಶಾಂಪತೇ ॥21॥
ಆಗ ಸಹವಾಸಪ್ರಯುಕ್ತವಾಗಿ ಸ್ನೇಹವನ್ನು ಮಾಡುವ ಋಷಿಯು ಆ ಚಿರತೆ- ಯನ್ನು ಅದರ ಶತ್ರುಗಳಾದ ವ್ಯಾಘ್ರಗಳಿಗಿಂತ ಬಲಿಷ್ಠವಾದ ಇನ್ನೊಂದು ವ್ಯಾಘ್ರ- ವನ್ನಾಗಿ ಮಾಡಿದನು. ಎಲೈ ರಾಜನೇ! ಮೊದಲು ಬರುತ್ತಿದ್ದ ವ್ಯಾಘ್ರವು ಆ ವ್ಯಾಘ್ರ- ವನ್ನು ನೋಡಿ ಅದನ್ನು ಕೊಲ್ಲಲಿಲ್ಲ.
ಸ ತು ಶ್ವಾ ವ್ಯಾಘ್ರತಾಂ ಪ್ರಾಪ್ಯ ಬಲವಾನ್ ಪಿಶಿತಾಶನಃ |
ನ ಮೂಲಫಲಭೋಗೇಷು ಸ್ಪೃಹಾಮಪ್ಯಕರೋತ್ ತದಾ ॥22॥
ಆ ನಾಯಿಯಾದರೋ ವ್ಯಾಘ್ರವಾಗಿ ಪರಿವರ್ತನೆ ಹೊಂದಿ ಬಲಿಷ್ಠವಾಗಿ ಮಾಂಸಾಹಾರಿಯಾಗಿ ಫಲಮೂಲಗಳಲ್ಲಿ ಅಪೇಕ್ಷೆಯನ್ನು ತೊರೆಯಿತು.
ಯಥಾ ಮೃಗಪತಿರ್ನಿತ್ಯಂ ಪ್ರಕಾಂಕ್ಷತಿ ವನೌಕಸಃ |
ತಥೈವ ಸ ಮಹಾರಾಜ ವ್ಯಾಘ್ರಃ ಸಮಭವತ್ ತದಾ ॥23॥
ಮೃಗರಾಜನು ನಿತ್ಯವೂ ವನಚಾರಿ ಪ್ರಾಣಿಗಳನ್ನು ಬಯಸುವಂತೆ ಎಲೈ ಮಹಾರಾಜನೇ! ಆ ವ್ಯಾಘ್ರವು ಅದೇ ರೀತಿಯಲ್ಲಿ ಆಯಿತು.
ವ್ಯಾಘ್ರಸ್ತೂಟಜಮೂಲಸ್ಥಸ್ತೃಪ್ತಃ ಸುಪ್ತೋ ಹತೈರ್ಮೃಗೈಃ |
ನಾಗಶ್ಚಾಗಾತ್ ತಮುದ್ದೇಶಂ ಮತ್ತೋ ಮೇಘ ಇವೋತ್ಥಿತಃ ॥24॥
ಆ ವ್ಯಾಘ್ರವಾದರೋ ಮೃಗಗಳನ್ನು ಕೊಂದು, ಅವುಗಳ ಮಾಂಸದಿಂದ ತೃಪ್ತವಾಗಿ ಪರ್ಣಶಾಲೆಯ ಬಳಿಯಲ್ಲಿ ಮಲಗಿದ್ದಿತು. ಆಗ ಒಂದು ಮದ್ದಾನೆಯು ದೊಡ್ಡ ಮೋಡದಂತೆ ಆ ಪ್ರದೇಶಕ್ಕೆ ಬಂದಿತು.
ಪ್ರಭಿನ್ನಕರಟಃ ಪ್ರಾಂಶುಃ ಪದ್ಮೀ ವಿತತಮಸ್ತಕಃ |
ಸುವಿಷಾಣೋ ಮಹಾಕಾಯೋ ಮೇಘಗಂಭೀರನಿಸ್ವನಃ ॥25॥

ಅದು ಎತ್ತರವಾಗಿದ್ದು ವಿಸ್ತಾರವಾದ ಶಿರಸ್ಸನ್ನು ಹೊಂದಿದ್ದು, ಒಳ್ಳೆಯ ದಂತಗಳನ್ನು, ದೊಡ್ಡ ಶರೀರವನ್ನು, ಮೇಘಗಂಭೀರವಾದ ನಾದವನ್ನೂ ಹೊಂದಿ, ಗಂಡಸ್ಥಳದಿಂದ ಮದವನ್ನು ಸುರಿಸುತ್ತಿದ್ದಿತು.
ತಂ ದೃಷ್ಟ್ವಾ ಕುಂಜರಂ ಮತ್ತಮಾಯಾಂತಂ ಮದಗರ್ವಿತಮ್ |
ವ್ಯಾಘ್ರೋ ಹಸ್ತಿಭಯಾತ್ ತ್ರಸ್ತಸ್ತಮೃಷಿಂ ಶರಣಂ ಯಯೌ ॥26॥
ಮದಭರಿತವಾದ ಮದ್ದಾನೆಯು ತನ್ನೆಡೆಗೆ ಬರುತ್ತಿರುವುದನ್ನು ನೋಡಿ ವ್ಯಾಘ್ರವು ಅದರ ಭಯದಿಂದ ಋಷಿಗೆ ಶರಣುಹೊಂದಿತು.
ತತೋಽನಯತ್ ಕುಂಜರತಾಂ ತಂ ವ್ಯಾಘ್ರಮೃಷಿಸತ್ತಮಃ |
ಮಹಾಮೇಘೋಪಮಂ ದೃಷ್ಟ್ವಾ ತಂ ಸ ಭೀತೋಽಭವದ್ ಗಜಃ ॥27॥
ಆ ಋಷಿಶ್ರೇಷ್ಠನು ಆಗ ಅದನ್ನು ಒಂದು ಗಜವನ್ನಾಗಿ ಮಾಡಿದನು. ದೊಡ್ಡ ಮೇಘದಂತಿರುವ ಈ ಗಜವನ್ನು ನೋಡಿ ಮೊದಲು ಬಂದ ಗಜವು ಭಯದಿಂದ ಹೊರಟು ಹೋಯಿತು.
ತತಃ ಕಮಲಷಂಡಾನಿ ಶಲ್ಯಕೀಗಹನಾನಿ ಚ |
ವ್ಯಚರತ್ ಸ ಮುದಾ ಯುಕ್ತಃ ಪದ್ಮರೇಣುವಿಭೂಷಿತಃ ॥28॥
ಅನಂತರ ಆ ಆನೆಯು ಕಮಲನಾಳಗಳನ್ನು ಶಲ್ಯಕೀಪಕ್ಷಿಗಳು ಗೂಡುಕಟ್ಟುವ ಜೊಂಡುಗಳನ್ನು ಸಂತೋಷದಿಂದ ತಿನ್ನುತ್ತಾ ಪದ್ಮರೇಣುಗಳಿಂದ ಭೂಷಿತವಾಗಿ ತಿರುಗಾಡಿತು.
ಕದಾಚಿದ್ ರಮಮಾಣಸ್ಯ ಹಸ್ತಿನಃ ಸುಸುಖಂ ತದಾ |
ಋಷೇಸ್ತಸ್ಯೋಟಜಸ್ಥಸ್ಯ ಕಾಲೋಽಗಚ್ಛನ್ನಿಶಾನಿಶಮ್ ॥29॥
ಹೀಗೆ ಋಷಿಗಳ ಪರ್ಣಶಾಲೆಯ ಸಮೀಪದಲ್ಲಿ ಸುಖವಾಗಿ ಕಾಲವನ್ನು ಕಳೆಯುತ್ತಿದ್ದ ಆ ಗಜಕ್ಕೆ ಎಷ್ಟೋ ರಾತ್ರಿಗಳು ಕಳೆದವು.
ಅಥಾಜಗಾಮ ತಂ ದೇಶಂ ಕೇಸರೀ ಕೇಸರಾರುಣಃ |
ಗಿರಿಕಂದರಜೋ ಭೀಮಃ ಸಿಂಹೋ ನಾಗಕುಲಾಂತಕಃ ॥30॥
ಅನಂತರ ಒಮ್ಮೆ ಗಜಕುಲವೈರಿಯಾದ ಅರುಣಬಣ್ಣದ ಕೇಸರಗಳನ್ನು ಹೊಂದಿದ ಗಿರಿಗುಹೆಯಲ್ಲಿ ವಾಸಿಸುವ ಒಂದು ಭಯಂಕರವಾದ ಸಿಂಹವು ಅಲ್ಲಿಗೆ ಬಂದಿತು.
ತಂ ದೃಷ್ಟ್ವಾ ಸಿಂಹಮಾಯಾಂತಂ ನಾಗಃ ಸಿಂಹಭಯಾಕುಲಃ |
ಋಷಿಂ ಶರಣಮಾಪೇದೇ ವೇಪಮಾನೋ ಭಯಾತುರಃ ॥31॥
ಬರುತ್ತಿದ್ದ ಸಿಂಹವನ್ನು ನೋಡಿದ ಆನೆಯು ಸಿಂಹದ ಭಯದಿಂದ ವ್ಯಾಕುಲ- ವಾಗಿ ನಡುಗುತ್ತಾ ಭಯಾತುರವಾಗಿ ಋಷಿಗೆ ಶರಣಾಗತವಾಯಿತು.
ತತಃ ಸ ಸಿಂಹತಾಂ ನೀತೋ ನಾಗೇಂದ್ರೋ ಮುನಿನಾ ತದಾ |
ವನ್ಯಂ ನಾಗಣಯತ್ ಸಿಂಹಂ ತುಲ್ಯಜಾತಿಸಮನ್ವಯಾತ್ ॥32॥
ಆಗ ಆ ಋಷಿಯು ಆ ನಾಗವನ್ನು ಸಿಂಹವನ್ನಾಗಿ ಮಾಡಿದನು. ಆ ಸಿಂಹವು ತನ್ನದೇ ಜಾತಿಯ ವನಸಿಂಹಗಳನ್ನು ಪರಿಗಣಿಸಲೇ ಇಲ್ಲ.
ದೃಷ್ಟ್ವಾ ಚ ಸೋಽನಶತ್ ಸಿಂಹೋ ವನ್ಯೋ ಭೀಸನ್ನವಾಗ್ಬಲಃ |
ಸ ಚಾಶ್ರಮೇಽವಸತ್ ಸಿಂಹಸ್ತಸ್ಮಿನ್ನೇವ ವನೇ ಸುಖೀ ॥33॥
ಈ ಹೊಸಸಿಂಹವನ್ನು ನೋಡಿದ ಇನ್ನೊಂದು ವನಸಿಂಹವು ಭಯದಿಂದ ವಾಗ್ಬಲವು ಉಡುಗಿಹೋಗಿ ನಾಶವನ್ನು ಹೊಂದಿತು. ಈ ಸಿಂಹವಾದರೋ ಅದೇ ಆಶ್ರಮದಲ್ಲಿ ಸುಖವಾಗಿ ವಾಸಮಾಡಿತು.
ನ ತ್ವನ್ಯೇ ಕ್ಷುದ್ರಪಶವಸ್ತಪೋವನನಿವಾಸಿನಃ |
ವ್ಯದೃಶ್ಯಂತ ಭಯತ್ರಸ್ತಾ ಜೀವಿತಾಕಾಂಕ್ಷಿಣಃ ಸದಾ ॥34॥
(ತಪೋ)ವನದಲ್ಲಿ ವಾಸಿಸುವ ಕ್ಷುದ್ರಪಶುಗಳು ತಮ್ಮ ಜೀವಿತವನ್ನು ಬಯಸಿ ಭಯದಿಂದ ಕೂಡಿದವುಗಳಾಗಿ ಅಲ್ಲಿ ಕಂಡುಬರಲೇ ಇಲ್ಲ.
ಕದಾಚಿದ್ ಕಾಲಯೋಗೇನ ಸರ್ವಪ್ರಾಣಿವಿಹಿಂಸಕಃ |
ಬಲವಾನ್ ಕ್ಷತಜಾಹಾರೋ ನಾನಾಸತ್ತ್ವಭಯಂಕರಃ ॥35॥
ಅಷ್ಟಪಾದೋಽರ್ಧನಯನಃ ಶರಭೋ ವನಗೋಚರಃ |
ತಂ ಸಿಂಹಂ ಹಂತುಮಾಗಚ್ಛನ್ ಮುನೇಸ್ತಸ್ಯ ನಿವೇಶನಮ್ ॥36॥
ಅನಂತರ ಕಾಲಕ್ರಮದಲ್ಲಿ ಒಮ್ಮೆ ಸರ್ವಪ್ರಾಣಿಗಳನ್ನೂ ಕೊಲ್ಲುವ ಬಲಿಷ್ಠವಾದ ರಕ್ತಾಹಾರಿಯಾದ ಎಲ್ಲ ಪ್ರಾಣಿಗಳಿಗೂ ಭಯವನ್ನುಂಟು ಮಾಡುವ ಎಂಟು ಪಾದ- ಗಳನ್ನೂ ಮತ್ತು ನಾಲ್ಕು ಕಣ್ಣುಗಳನ್ನೂ ಹೊಂದಿದ ವನವಾಸಿಯಾದ ಒಂದು ಶರಭವು ಆ ಸಿಂಹವನ್ನು ಕೊಲ್ಲಲು ಆ ಮುನಿಯ ಆಶ್ರಮದ ಬಳಿಗೆ ಬಂದಿತು.
ತಂ ಮುನಿಃ ಶರಭಂ ಚಕ್ರೇ ಬಲೋತ್ಕಟಮರಿಂದಮ |
ತತಃ ಸ ಶರಭೋ ವನ್ಯೋ ಮುನೇಃ ಶರಭಮಗ್ರತಃ |
ದೃಷ್ಟ್ವಾ ಬಲಿನಮತ್ಯುಗ್ರಂ ದ್ರುತಂ ಸಂಪ್ರಾದ್ರವದ್ ಭಯಾತ್ ॥37॥
ಎಲೈ ಅರಿಂದಮನೇ! ಮುನಿಯು ಆಗ ಆ ಸಿಂಹವನ್ನು ಬಲೋತ್ಕಟವಾದ ಶರಭವನ್ನಾಗಿ ಮಾಡಿದನು. ಆಗ ಮೊದಲು ಬಂದ ಕಾಡಿನ ಶರಭವು ತನ್ನ ಮುಂಭಾಗದಲ್ಲಿ ತನಗಿಂತ ಬಲಿಷ್ಠವೂ ಉಗ್ರವೂ ಆದ ಆ ಋಷಿಯ ಶರಭವನ್ನು ನೋಡಿ ಭಯದಿಂದ ಬೇಗ ಓಡಿಹೋಯಿತು.
ಸ ಏವಂ ಶರಭಸ್ಥಾನೇ ನ್ಯಸ್ತೋ ವೈ ಮುನಿನಾ ತದಾ |
ಮುನೇಃ ಪಾರ್ಶ್ವಗತೋ ನಿತ್ಯಂ ಶಾರಭ್ಯಂ ಸುಖಮಾಪ್ತವಾನ್ ॥38॥

ಹೀಗೆ ಶರಭರೂಪವನ್ನು ಹೊಂದಿದ ಆ ಗಜವು ಮುನಿಯ ಪಾರ್ಶ್ವದಲ್ಲಿ ವಾಸಿಸಿ ನಿತ್ಯವೂ ಶರಭಕ್ಕೆ ಯೋಗ್ಯವಾದ ಸುಖವನ್ನು ಹೊಂದಿತು.
ತತಃ ಶರಭಸಂತ್ರಸ್ತಾಃ ಸರ್ವೇ ಮೃಗಗಣಾ ವನಾತ್ |
ದಿಶಃ ಸಂಪ್ರಾದ್ರುವನ್ ರಾಜನ್ ಭಯಾಜ್ಜೀವಿತಕಾಂಕ್ಷಿಣಃ ॥39॥
ಆಗ ಎಲೈ ರಾಜನೇ! ಶರಭವನ್ನು ನೋಡಿ ಹೆದರಿದ ಆ ಕಾಡಿನ ಮೃಗ- ಸಮೂಹಗಳೆಲ್ಲವೂ ತಮ್ಮ ಜೀವಿತವನ್ನು ಉಳಿಸಿಕೊಳ್ಳಲು ಅಲ್ಲಿಂದ ದಿಕ್ಕು ದೆಸೆಯಿಲ್ಲದೇ ಓಡಿಹೋದವು.
ಶರಭೋಽಪ್ಯತಿಸಂದುಷ್ಟೋ ನಿತ್ಯಂ ಪ್ರಾಣಿವಧೇ ರತಃ |
ಫಲಮೂಲಾಶನಂ ಶಾಂತಂ ನೈಚ್ಛತ್ ಸ ಪಿಶಿತಾಶನಃ ॥40॥
ಈ ಶರಭವಾದರೂ ಅತ್ಯಂತ ದುಷ್ಟವಾಗಿ ಮಾಂಸಾಹಾರಿಯಾಗಿ ನಿತ್ಯವೂ ಪ್ರಾಣಿವಧೆಯಲ್ಲಿಯೇ ರತವಾಗಿ ಶಾಂತವಾದ ಫಲಮೂಲಗಳ ಭೋಜನವನ್ನು ಬಯಸಲಿಲ್ಲ.
ತತೋ ರುಧಿರತರ್ಷೇಣ ಬಲಿನಾ ಶರಭೋಽನ್ವಿತಃ |
ಇಯೇಷ ತಂ ಮುನಿಂ ಹಂತುಮಕೃತಜ್ಞಃ ಶ್ವಯೋನಿಜಃ ॥41॥
ಅನಂತರ ನಾಯಿಯೋನಿಯಿಂದ ಹುಟ್ಟಿಬಂದ ಕೃತಘ್ನತೆಯುಳ್ಳ ಆ ಶರಭವು ಬಲವಾದ ರಕ್ತಪಿಪಾಸೆಯಿಂದ ಕೂಡಿ ಆ ಮುನಿಯನ್ನೇ ಕೊಲ್ಲಲು ಬಯಸಿತು.
ಚಿಂತಯಾಮಾಸ ಚ ತದಾ ಶರಭಃ ಶ್ವಾನಪೂರ್ವಕಃ |
ಅಸ್ಯ ಪ್ರಭಾವಾತ್ ಸಂಪ್ರಾಪ್ತೋ ವಾಙ್ಮಾತ್ರೇಣ ತು ಕೇವಲಮ್ ॥42॥
ಶರಭತ್ವಂ ಸುದುಷ್ಪ್ರಾಪಂ ಸರ್ವಭೂತಭಯಂಕರಮ್ |
ಮೊದಲು ನಾಯಿಯಾಗಿದ್ದ ಆ ಶರಭವು ಹೀಗೆ ಚಿಂತಿಸಿತು. ಕೇವಲ ಅವನ ಮಾತಿನಿಂದ ಮತ್ತು ಅವನ ಪ್ರಭಾವದಿಂದ ನಾನು ಸರ್ವಭೂತಭಯಂಕರವಾದ ಪಡೆಯಲು ಕಷ್ಟಸಾಧ್ಯವಾದ ಶರಭಶರೀರವನ್ನು ಪಡೆದಿದ್ದೇನೆ.
ಅನ್ಯೇಽಪ್ಯತ್ರ ಭಯತ್ರಸ್ತಾ ಮೃಗಾಃ ಪಕ್ಷಿಗಣಾಸ್ತಥಾ ॥43॥
ತೇಷಾಮಪಿ ಕದಾಚಿಚ್ಚ ಶರಭತ್ವಂ ಪ್ರಯಚ್ಛತಿ |
ಸರ್ವಸತೊತ್ತ್ವೇತ್ತಮೇ ಲೋಕೇ ಬಲಂ ಯತ್ರ ಪ್ರತಿಷ್ಠಿತಮ್ ॥44॥
ಈ ವನದಲ್ಲಿ ಭಯಗೊಂಡ ಇನ್ನೂ ಅನೇಕ ಮೃಗಗಳೂ ಪಕ್ಷಿಸಮೂಹಗಳೂ ಇವೆ. ಈ ಮುನಿಯು ಸರ್ವಪ್ರಾಣಿಗಳಿಂದ ಕೂಡಿದ ಈ ಲೋಕದಲ್ಲಿ ಎಲ್ಲಿ ಮಹಾಬಲವಿದೆಯೋ ಅಂತಹ ಶರಭತ್ವವನ್ನು ಅವುಗಳಿಗೂ ಕೊಡಬಹುದು.
ಪಕ್ಷಿಣಾಮಪ್ಯಯಂ ದದ್ಯಾತ್ ಕದಾಚಿದ್ ಗಾರುಡಂ ಬಲಮ್ |
ಯಾವದನ್ಯತ್ರ ಸಂಪ್ರೀತಃ ಕಾರುಣ್ಯಂ ಚ ಸಮಾಶ್ರಿತಃ ॥45॥
ಸ ದದಾತಿ ಬಲಂ ತುಷ್ಟಂ ಸತ್ತ್ವಸ್ಯಾನ್ಯಸ್ಯ ಕಸ್ಯಚಿತ್ |
ತಾವದೇನಮಹಂ ವಿಪ್ರಂ ವಧಿಷ್ಯಾಮಿ ಚ ಶೀಘ್ರತಃ |
ಸ್ಥಾತುಂ ಮಯಾ ಶಕ್ಯಮಿಹ ಮುನಿಘಾತಾನ್ನ ಸಂಶಯಃ ॥46॥
ಪಕ್ಷಿಗಳಿಗೂ ಇವನು ಗರುಡನಷ್ಟು ಬಲವನ್ನು ಕೊಡಬಹುದು. ಇವನು ಪ್ರೀತಿಯಿಂದ ಮತ್ತುಕರುಣೆಯಿಂದ ಉಳಿದ ಪ್ರಾಣಿಗಳಿಗೆ ಅಂತಹ ಬಲವನ್ನು ಕೊಡುವುದಕ್ಕಿಂತ ಮೊದಲೇ ನಾನುಶೀಘ್ರವಾಗಿ ಈ ಮುನಿಯನ್ನು ಕೊಂದು- ಬಿಡುವೆನು. ಮುನಿಯನ್ನು ಕೊಂದರೂ ನಾನು ಈ ವನದಲ್ಲಿ ವಾಸಿಸ ಬಹುದು ಎಂಬುದರಲ್ಲಿ ಸಂಶಯವಿಲ್ಲ. (ಎಂದು ಚಿಂತಿಸಿತು)
ತತಸ್ತೇನ ತಪಃಶಕ್ತ್ಯಾ ವಿದಿತೋ ಜ್ಞಾನಚಕ್ಷುಷಾ |
ವಿಜ್ಞಾಯ ಚ ಮಹಾಪ್ರಾಜ್ಞೋ ಮುನಿಃ ಶ್ವಾನಂ ತಮುಕ್ತವಾನ್ ॥47॥
ಆಗ ಮುನಿಯು ತನ್ನ ಜ್ಞಾನಚಕ್ಷುಸ್ಸಿನಿಂದ ಮತ್ತು ತಪಃಶಕ್ತಿಯಿಂದ ಆ ಶರಭದ ಚಿಂತನೆಯ ವಿಷಯವನ್ನು ತಿಳಿದನು. ಅದನ್ನು ತಿಳಿದ ಮಹಾಪ್ರಾಜ್ಞನಾದ ಆ ಮುನಿಯು ಆ ಶ್ವಾನವನ್ನು ಕುರಿತು ಹೇಳಿದನು.
ಮುನಿಃ
ಅಹಮಗ್ನಿಪ್ರಭೋ ನಾಮ ಮುನಿರ್ಭೃಗುಕುಲಾನ್ವಯಃ |
ಮನಸಾ ನಿರ್ದಹೇ ಸರ್ವಂ ಜಗತ್ ಸಂಧಾರಯಾಮಿ ಚ ॥48॥
ನಾನು ಭೃಗುಕುಲದಲ್ಲಿ ಜನಿಸಿದ ಅಗ್ನಿಪ್ರಭ ಎಂಬ ಮುನಿ. ನಾನು ನನ್ನ ಮನಸ್ಸಿನಿಂದಲೇ ಎಲ್ಲ ಜಗತ್ತನ್ನೂ ಸುಡುತ್ತೇನೆ ಅಥವಾ ಉಳಿಸುತ್ತೇನೆ.
ಮಮ ವಶ್ಯಂ ಜಗತ್ ಸರ್ವಂ ದೇವಾನ್ ವರ್ಜ್ಯಂ ಚರಾಚರಮ್ |
ಸಂತಿ ದೇವಾಶ್ಚ ಮೇ ಭೀತಾಃ ಸ್ವಧರ್ಮಂ ನ ತ್ಯಜಂತಿ ಯೇ |
ಸ್ವಧರ್ಮಾಚ್ಚಾಲಿತಾನ್ ಸರ್ವಾನ್ ವಾಙ್ಮಾತ್ರೇಣೈವ ನಿರ್ದಹೇ ॥49॥
ದೇವತೆಗಳನ್ನು ಬಿಟ್ಟು ಉಳಿದ ಚರಾಚರವಾದ ಜಗತ್ತೆಲ್ಲವೂ ನನ್ನ ಅಧೀನ- ವಾದುದು. ತಮ್ಮ ಧರ್ಮವನ್ನು ಆಚರಿಸುವ ದೇವತೆಗಳೂ ನನಗೆ ಹೆದರುತ್ತಾರೆ. ತಮ್ಮ ಧರ್ಮವನ್ನು ತ್ಯಜಿಸಿದ ಎಲ್ಲರನ್ನೂ ನಾನು ಕೇವಲ ಮಾತಿನಿಂದಲೇ ಸುಟ್ಟು- ಬಿಡುತ್ತೇನೆ.
ಕಿಮಂಗ ತ್ವಂ ಮಯಾಽನೇನ ಶರಭತ್ವಮನಾಮಯಮ್ |
ಕ್ರೂರಃ ಸ ಸರ್ವಭೂತೇಷು ಹೀನಶ್ಚಾಶುಚಿರೇವ ಚ ॥50॥
ಎಲೈ ಪ್ರೀತಿಪಾತ್ರನೇ! ಹೀನನೂ, ಅಶುಚಿಯೂ ಆದ ನೀನು ಈ ನನ್ನಿಂದ ಸರ್ವಭೂತಗಳಲ್ಲಿ ಕ್ರೂರವಾದ ಶರಭಶರೀರವನ್ನು ಹೊಂದಿದೆ.

ಶ್ವಾ ತ್ವಂ ದ್ವೀಪಿತ್ವಮಾಪನ್ನೋ ದ್ವೀಪೀ ವ್ಯಾಘ್ರತ್ವಮಾಗತಃ |
ವ್ಯಾಘ್ರೋ ನಾಗೋ ಮದಪಟುರ್ನಾಗಃ ಸಿಂಹತ್ವಮಾಪ್ತವಾನ್ ॥51॥
ನಾಯಿಯಾಗಿದ್ದ ನೀನು ಚಿರತೆಯಾದೆ; ಚಿರತೆಯಾಗಿದ್ದ ನೀನು ವ್ಯಾಘ್ರನಾದೆ; ವ್ಯಾಘ್ರವಾಗಿದ್ದವನು ಮದಗಜವಾದೆ; ಮದಗಜವಾಗಿದ್ದವನು ಸಿಂಹತ್ವವನ್ನು ಹೊಂದಿದೆ.
ಸಿಂಹೋಽತಿಬಲಸಂಯುಕ್ತೋ ಭೂಯಃ ಶರಭತಾಂ ಗತಃ |
ಮಯಾ ಸ್ನೇಹಪರೀತೇನ ನ ವಿಮೃಷ್ಟಃ ಕುಲಾನ್ವಯಃ ॥52॥
ಸಿಂಹವು ಅತಿಬಲದಿಂದ ಕೂಡಿದ ಶರಭನಾದೆ. ಸ್ನೇಹದಿಂದ ಕೂಡಿದ ನಾನು ನಿನಗೆ ಇದೆಲ್ಲವನ್ನೂ ಮಾಡಿದೆ. ಆದರೆ ನಿನ್ನ ಮೊದಲಿನ ಕುಲದ ಬುದ್ಧಿಯನ್ನು ನಾನು ಚಿಂತಿಸಲಿಲ್ಲ.
ಯಸ್ಮಾದೇವಮಪಾಪಂ ಮಾಂ ಪಾಪ ಹಿಂಸಿತುಮಿಚ್ಛತಿ |
ತಸ್ಮಾತ್ ಸ್ವಯೋನಿಮಾಪನ್ನಃ ಶ್ವೈವ ತ್ವಂ ಹಿ ಭವಿಷ್ಯತಿ ॥53॥
ನಿರಪರಾಧಿಯಾದ ನನಗೆ ಎಲೈ ಪಾಪಿಯೇ! ಹಿಂಸೆ ಮಾಡಲು ನೀನು ಬಯಸುವುದರಿಂದ ನೀನು ನಿನ್ನ ಮೊದಲಿನ ಯೋನಿಗೇ ಹೋಗಿ ನಾಯಿಯೇ ಆಗುವಿ.
ತತೋ ಮುನಿಜನದ್ವೇಷಾದ್ ದುಷ್ಟಾತ್ಮಾ ಶ್ವಾಕೃತೋಽಬುಧಃ |
ಋಷಿಣಾ ಶರಭಃ ಶಪ್ತಃ ಸ್ವಂ ರೂಪಂ ಪುನರಾಪ್ತವಾನ್ ॥54॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಾಂತಿಪರ್ವಣಿ ರಾಜಧರ್ಮೇ ಅಷ್ಟಾದಶಾಧಿಕಶತತಮೋಽಧ್ಯಾಯಃ ॥118॥
ಅನಂತರ ಮುನಿಯನ್ನು ದ್ವೇಷಮಾಡಿದ ಕಾರಣದಿಂದ ಅವಿವೇಕಿಯೂ ದುಷ್ಟವೂ ಆದ ಆ ಶರಭವು ನಾಯಿಯಾಯಿತು. ಋಷಿಯ ಶಾಪಕ್ಕೆ ಒಳಗಾದ ಶರಭವು ತನ್ನ ಮೊದಲಿನ ರೂಪವನ್ನು ಹೊಂದಿತು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 118ನೆಯ ಅಧ್ಯಾಯವು ಮುಗಿಯಿತು
0
119. ನೂರಹತ್ತೊಂಬತ್ತನೆಯ ಅಧ್ಯಾಯ
ಸಚಿವ, ರಾಜ ಮತ್ತು ಯೋಧರ ಲಕ್ಷಣಕಥನ
ಭೀಷ್ಮಃ
ಸ ಶ್ವಾ ಪ್ರಕೃತಿಮಾಪನ್ನಃ ಪರಂ ದೈನ್ಯಮುಪಾಗಮತ್ |
ಋಷಿಣಾ ಹುಂಕೃತಃ ಪಾಪಸ್ತಪೋವನಬಹಿಷ್ಕೃತಃ ॥1॥
ಭೀಷ್ಮರು ಆ ನಾಯಿಯು ತನ್ನ ಮೊದಲ ಸ್ವಭಾವವನ್ನು ಹೊಂದಿ ಬಹಳ ದೈನ್ಯವನ್ನು ಹೊಂದಿತು. ಋಷಿಯಿಂದ ಹುಂಕರಿಸಲ್ಪಟ್ಟ ಆ ಪಾಪಿಯು ತಪೋವನ- ದಿಂದ ಹೊರಗೆ ಹೋಯಿತು.
ಏವಂ ರಾಜ್ಞಾ ಮತಿಮತಾ ವಿದಿತ್ವಾ ಶೀಲಶೌಚತಾಮ್ |
ಆರ್ಜವಂ ಪ್ರಕೃತಿಂ ಸತ್ತ್ವಂ ಕುಲಂ ವೃತ್ತಂ ಶ್ರುತಂ ದಮಮ್ ॥2॥
ಅನುಕ್ರೋಶಂ ಬಲಂ ವೀರ್ಯಂ ಭಾವಂ ಸಂಪ್ರಶಮಂ ಕ್ಷಮಾಮ್ |
ಭೃತ್ಯಾ ಯೇ ಯತ್ರ ಯೋಗ್ಯಾಃ ಸ್ಯುಸ್ತತ್ರ ಸ್ಥಾಪ್ಯಾಃ ಸುಶಿಕ್ಷಿತಾಃ ॥3॥
ಹೀಗೆ ಮೇಧಾವಿಯಾದ ರಾಜನು ಮನುಷ್ಯರ ಶೀಲ, ಶೌಚ, ನೇರವಾದ ನಡತೆ, ಸ್ವಭಾವ, ಧೈರ್ಯ, ಕುಲ, ವಿದ್ಯೆ, ಇಂದ್ರಿಯಜಯ, ದಯೆ, ಬಲ, ಪರಾ- ಕ್ರಮ, ಶಾಂತಿ, ಕ್ಷಮೆ,ಭಕ್ತಿ - ಇವುಗಳನ್ನು ತಿಳಿದು ಯಾವ ಸೇವಕರು ಎಲ್ಲಿ ಯೋಗ್ಯರೋ ಅಲ್ಲಿ ಅಂತಹ ಸುಶಿಕ್ಷಿತಸೇವಕರನ್ನು ನಿಯೋಜಿಸಬೇಕು.
ನಾಪರೀಕ್ಷ್ಯ ಮಹೀಪಾಲಃ ಪ್ರಕರ್ತುಂ ಭೃತ್ಯಮರ್ಹತಿ |
ಅಕುಲೀನನರಾಕೀರ್ಣೋ ನ ರಾಜಾ ಸುಖಮೇಧತೇ ॥4॥
ರಾಜನು ಪರೀಕ್ಷಿಸದೇ ಭೃತ್ಯರನ್ನು ನಿಯಮಿಸಬಾರದು. ಅಕುಲೀನರಾದ ಸೇವಕರಿಂದ ತುಂಬಿದ ರಾಜನು ಸುಖವನ್ನು ಹೊಂದುವುದಿಲ್ಲ.
ಕುಲಜಃ ಪ್ರಾಕೃತೋ ರಾಜ್ಞಾ ತತ್ಕುಲೀನತಯಾ ಸದಾ |
ನ ಪಾಪೇ ಕುರುತೇ ಬುದ್ಧಿಂ ನಿಂದ್ಯಮಾನೋಽಪ್ಯನಾಗಸಿ ॥5॥
ಸತ್ಕುಲಪ್ರಸೂತನಾದವನು ಒಳ್ಳೆಯ ಕುಲದಿಂದ ಬಂದ ಕಾರಣದಿಂದ ಅವನು ಅಪರಾಧಮಾಡದೆಯೇ ರಾಜನಿಂದ ನಿಂದಿಸಲ್ಪಟ್ಟರೂ ರಾಜನ ವಿಷಯದಲ್ಲಿ ಕೆಟ್ಟ ಬುದ್ಧಿಯನ್ನು ಹೊಂದುವುದಿಲ್ಲ. ರಾಜನು ಅಂತಹವನನ್ನು ತನ್ನ ಸಪ್ತಪ್ರಕೃತಿಗಳಲ್ಲಿ ನಿಯೋಜಿಸಬೇಕು.
ಅಕುಲೀನಸ್ತು ಪುರುಷಃ ಪ್ರಾಕೃತಃ ಸಾಧುಸಂಕ್ಷಯಾತ್ |
ದುರ್ಲಭೈಶ್ವರ್ಯತಾಂ ಪ್ರಾಪ್ತೋ ನಿಂದಿತಃ ಶತ್ರುತಾಂ ವ್ರಜೇತ್ ॥6॥
ರಾಜನು ಸಜ್ಜನರು ದೊರೆಯದ ಕಾರಣ ಅಕುಲೀನರನ್ನು ಸೇವಕರನ್ನಾಗಿ ನಿಯೋಜಿಸಿದರೆ ದುರ್ಲಭವಾದ ಐಶ್ವರ್ಯದಿಂದ ಹೊಂದಿಸಲ್ಪಟ್ಟರೂ ರಾಜನಿಂದ ನಿಂದಿತನಾದರೆ ರಾಜನ ಶತ್ರುವಾದಾನು.
ಕಾಕಃ ಶ್ವಾನೋಽಕುಲೀನಶ್ಚ ಬಿಡಾಲಃ ಸರ್ಪ ಏವ ಚ |
ಅಕುಲೀನಾ ಚ ಯಾ ನಾರೀ ತುಲ್ಯಾಸ್ತೇ ಪರಿಕೀರ್ತಿತಾಃ ॥7॥
ಕಾಗೆ, ನಾಯಿ, ಬೆಕ್ಕು, ಸರ್ಪ, ಅಕುಲೀನಳಾದ ನಾರಿ ಎಲ್ಲರೂ ಸಮಾನ- ರಾದವರು ಎಂದು ಹೇಳಲ್ಪಡುತ್ತಾರೆ.

ಲೋಕಪಾಲಾಃ ಸದೋದ್ವಿಗ್ನಾಃ ಪಶ್ಯಂತ್ಯಕುಲಜಾನ್ ಯಥಾ |
ನಾರೀಂ ವಾ ಪುರುಷಂ ವಾಽಥ ಶೀಲಂ ತತ್ರಾಪಿ ಕಾರಣಮ್ ॥8॥
ರಾಜರು ದುಷ್ಕುಲದಿಂದ ಬಂದ ಸೇವಕರನ್ನು ನೋಡಿ ಅವರು ನಾರಿಯರಾಗಿ- ರಲಿ ಅಥವಾ ಪುರುಷರಾಗಿರಲಿ ಯಾವಾಗಲೂ ಭಯಪಡುತ್ತಾರೆ. ಅದಕ್ಕೆ ಆ ಭೃತ್ಯರ ಶೀಲವೇ ಕಾರಣ.
ದುಷ್ಕುಲೀನಾ ಚ ಯಾ ಸ್ತ್ರೀ ಸ್ಯಾದ್ ದುಷ್ಕುಲೀನಶ್ಚ ಯಃ ಪುಮಾನ್ |
ಅಹಿಂಸಾಶೀಲಸಂಯೋಗಾದ್ ಧರ್ಮಶ್ಚಾಕುಲತಾಂ ವ್ರಜೇತ್ ॥9॥
ದುಷ್ಕುಲೀನರಾದ ನಾರಿಯನ್ನಾಗಲೀ ಪುರುಷರನ್ನಾಗಲೀ ನೇಮಿಸಿದರೆ ರಾಜ- ಧರ್ಮವು ಆಕುಲತೆಯನ್ನು ಹೊಂದುತ್ತದೆ.
ಧರ್ಮಂ ಪ್ರತಿ ಮಹಾರಾಜ ಶ್ಲೋಕಾನಾಹ ಬೃಹಸ್ಪತಿಃ |
ಶೃಣು ಸರ್ವಾನ್ ಮಹೀಪಾಲ ಹೃದಿ ತಾಂಶ್ಚ ಕರಿಷ್ಯಸಿ ॥10॥
ಎಲೈ ಮಹಾರಾಜನೇ! ಧರ್ಮದ ವಿಷಯದಲ್ಲಿ ಬೃಹಸ್ಪತಿಗಳು ಶ್ಲೋಕಗಳನ್ನು ಹೇಳಿದ್ದಾರೆ. ಎಲೈ ಮಹೀಪಾಲನೇ! ಅವುಗಳನ್ನು ಕೇಳಿ ಮನಸ್ಸಿನಲ್ಲಿ ಧರಿಸು.
ಅಸಿತಂ ಸಿತಕರ್ಮಾಣಂ ತಥಾ ಜಾತಂ ತಪಸ್ವಿನಮ್ |
ವೃತ್ತಸ್ಥಮಪಿ ಚಂಡಾಲಂ ತಂ ದೇವಾ ಬ್ರಾಹ್ಮಣಂ ವಿದುಃ ॥11॥
ಮನಸ್ಸಿನಲ್ಲಿ ಬಂಧನರಹಿತನೂ ಬಾಹ್ಯದಲ್ಲಿ ಸ್ರುಕ್ಚಂದನಧಾರಣಾದಿಸತ್ಕರ್ಮ -ವನ್ನು ಮಾಡುವವನೂ ತಪಸ್ವಿಯೂ ಆದ ಪ್ರಾಕೃತಜನದಂತಿರುವವನು ಒಳ್ಳೆಯ ನಡತೆಯನ್ನು ಹೊಂದಿರುವವನಾದರೆ ಅಂತಹ ಚಂಡಾಲನನ್ನೂ ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.
ಯದಿ ಘಾತಯತೇ ಕಶ್ಚಿತ್ ಪಾಪಸತ್ತ್ವಂ ಪ್ರಜಾಹಿತಃ |
ಸರ್ವಸತ್ತ್ವಹಿತಾರ್ಥಾಯ ನ ತೇನಾಸೌ ವಿಹಿಂಸಕಃ ॥12॥
ಸರ್ವಪ್ರಾಣಿಗಳ ಹಿತಕ್ಕಾಗಿ ಪ್ರಜಾಹಿತದಲ್ಲಿ ರತನಾದ ಒಬ್ಬನು ಕ್ರೂರಪ್ರಾಣಿ- ಯನ್ನು ಕೊಂದರೂ ಅವನು ಅದರಿಂದ ಹಿಂಸಕನೆನಿಸಿಕೊಳ್ಳುವುದಿಲ್ಲ.
ದ್ವೀಪಿನಂ ಶರಭಂ ಸಿಂಹಂ ವ್ಯಾಘ್ರಂ ಕುಂಜರಮೇವ ಚ |
ಮಹಿಷಂ ಚ ವರಾಹಂ ಚ ಸೂಕರಂ ಶ್ವಾನಪನ್ನಗಾನ್ ॥13॥
ಗೋಬ್ರಾಹ್ಮಣಹಿತಾರ್ಥಾಯ ಬಾಲಸ್ತ್ರೀರಕ್ಷಣಾಯ ಚ |
ವೃದ್ಧಾತುರಪರಿತ್ರಾಣೇ ಯೋ ಹಿನಸ್ತಿ ಸ ಧರ್ಮವಿತ್ ॥14॥
ಗೋಬ್ರಾಹ್ಮಣರ ಹಿತಕ್ಕಾಗಿ ಬಾಲರ ಮತ್ತು ಸ್ತ್ರೀಯರ ರಕ್ಷಣೆಗಾಗಿ, ವೃದ್ಧರ ಮತ್ತು ರೋಗಿಗಳ ರಕ್ಷಣೆಗಾಗಿ ಯಾವನು ಚಿರತೆಯನ್ನಾಗಲೀ, ಶರಭವನ್ನಾಗಲೀ, ಸಿಂಹವ್ಯಾಘ್ರಗಜಗಳನ್ನಾಗಲೀ, ಮಹಿಷವರಾಹಗಳನ್ನಾಗಲೀ, ಶ್ವಾನಸರ್ಪಗಳನ್ನಾಗಲೀ ಕೊಲ್ಲುತ್ತಾನೆಯೋ ಅವನು ಧರ್ಮಗಳನ್ನು ತಿಳಿದವನು.
ಬ್ರಾಹ್ಮಣಃ ಪಾಪಕರ್ಮಾ ಚ ಮ್ಲೇಚ್ಛೋ ವಾ ಧಾರ್ಮಿಕಃ ಶುಚಿಃ |
ಶ್ರೇಯಾಂಸ್ತತ್ರ ಭವೇನ್ಮ್ಲೇಚ್ಛೋ ಬ್ರಾಹ್ಮಣಃ ಪಾಪಕೃತ್ತಮಃ ॥15॥
ಪಾಪಕರ್ಮವನ್ನು ಮಾಡುವ ಬ್ರಾಹ್ಮಣ ಮತ್ತು ಧಾರ್ಮಿಕನೂ ಶುಚಿಯೂ ಆದ ಒಬ್ಬ ಮ್ಲೇಚ್ಛ ಇವರಿಬ್ಬರಲ್ಲಿ ಮ್ಲೇಚ್ಛನು ಶ್ರೇಷ್ಠನಾದವನು; ಬ್ರಾಹ್ಮಣನು ಪಾಪಿಗಳಲ್ಲಿ ಅಗ್ರಗಣ್ಯನಾದವನು.
ದುಷ್ಕುಲೀನಃ ಕುಲೀನೋ ವಾ ಯಃ ಕಶ್ಚಿಚ್ಛೀಲವಾನ್ ನರಃ |
ಪ್ರಕೃತಿಂ ತಸ್ಯ ವಿಜ್ಞಾಯ ಸ್ಥಿರಾಂ ವಾ ಯದಿ ವಾಽಸ್ಥಿರಾಮ್ ॥16॥
ಶೀಲಂ ವಾಽನುತ್ತಮಂ ಕರ್ಮ ಕುರ್ಯಾದ್ ರಾಜ್ಞಾ ಸಮಾಹಿತಃ |
ನಿಯುಂಜೀತ ಮಹೀಪಾಲೋ ದುರ್ವೃತ್ತಂ ಪಾಪಕರ್ಮಸು ॥17॥
ದುಷ್ಕುಲೀನನಾಗಲೀ ಅಥವಾ ಕುಲೀನನಾಗಲೀ ಯಾವನು ಒಳ್ಳೆಯ ಶೀಲವನ್ನು ಹೊಂದಿರುವಂತೆ ಕಾಣುತ್ತಾನೆಯೋ ರಾಜನು ಅವನಲ್ಲಿ ಕಾಣುವ ಶೀಲವು ಸ್ವಾಭಾವಿಕವೋ ಅಸ್ವಾಭಾವಿಕವೋ ಎಂದು ತಿಳಿದು ರಾಜನು ಅವನನ್ನು ತನ್ನ ಸೇವಾಕರ್ಮದಲ್ಲಿ ತೊಡಗಿಸಿದರೆ ಅವನು ಶ್ರೇಷ್ಠವಾದ ಕರ್ಮವನ್ನು ಮಾಡುವನು. ದುರ್ನಡತೆಯುಳ್ಳವನನ್ನು ಪಾಪಕರ್ಮಗಳಲ್ಲಿ ನಿಯೋಜಿಸಬೇಕು.
ಕುಲೀನಂ ಶಿಕ್ಷಿತಂ ಪ್ರಾಜ್ಞಂ ಜ್ಞಾನವಿಜ್ಞಾನಕೋವಿದಮ್ |
ಸರ್ವಶಾಸ್ತ್ರಾರ್ಥತತ್ತ್ವಜ್ಞಂ ಸಹಿಷ್ಣುಂ ದೇಶಜಂ ತಥಾ ॥18॥
ಕೃತಜ್ಞಂ ಬಲವಂತಂ ಚ ಕ್ಷಾಂತಂ ದಾಂತಂ ಜಿತೇಂದ್ರಿಯಮ್ |
ಅಲುಬ್ಧಂ ಲಬ್ಧಸಂತುಷ್ಟಂ ಸ್ವಾಮಿಮಿತ್ರಬುಭೂಷಕಮ್ ॥19॥
ಸಚಿವಂ ದೇಶಕಾಲಜ್ಞಂ ಸರ್ವಸಂಗ್ರಹಣೇ ರತಮ್ |
ಸಂಸ್ಕೃತಂ ಯುಕ್ತವಚನಂ ಹಿತೈಷಿಣಮತಂದ್ರಿತಮ್ ॥20॥
ಯುಕ್ತಾಚಾರಂ ಸ್ವವಿಷಯೇ ಸಂಧಿವಿಗ್ರಹಕೋವಿದಮ್ |
ಶಸ್ತಂ ತ್ರಿವರ್ಗವೇತ್ತಾರಂ ಪೌರಜಾನಪದಪ್ರಿಯಮ್ ॥21॥
ಸೇನಾವ್ಯೂಹನತತ್ತ್ವಜ್ಞಂ ಬಲಹರ್ಷಣಕೋವಿದಮ್ |
ಇಂಗಿತಾಕಾರತತ್ತ್ವಜ್ಞಂ ಯಾತ್ರಾಸೇನಾವಿಶಾರದಮ್ ॥22॥
ಹಸ್ತಿಶಿಕ್ಷಾಶ್ವತತ್ತ್ವಜ್ಞಮಹಂಕಾರವಿವರ್ಜಿತಮ್ |
ಪ್ರಗಲ್ಭಂ ದಕ್ಷಿಣಂ ದಾಂತಂ ಬಲಿನಂ ಯಕ್ತಮಂತ್ರಿಣಮ್ ॥23॥

ಚೌಕ್ಷಂ ಚೌಕ್ಷಜನಾಕೀರ್ಣಂ ಸುವೇಷಂ ಸುಖದರ್ಶನಮ್ |
ನಾಯಕಂ ನೀತಿಕುಶಲಂ ಗುಣೈ ಷಡ್ಭಿಃ ಸಮನ್ವಿತಮ್ ॥24॥
ಅಸ್ತಬ್ಧಂ ಪ್ರಶ್ರಿತಂ ಶ್ಲಕ್ಷ್ಣಂ ಮೃದುವಾದಿನಮೇವ ಚ |
ಧೀರಂ ಶೂರಂ ಮಹರ್ದ್ಧಿಂ ಚ ದೇಶಕಾಲೋಪಪಾದಕಮ್ ॥25॥
ಸಚಿವಂ ಯಃ ಪ್ರಕುರುತೇ ನಚೈನಮವಮನ್ಯತೇ |
ತಸ್ಯ ವಿಸ್ತೀರ್ಯತೇ ರಾಜ್ಯಂ ಜ್ಯೋತ್ಸ್ನಾ ಗ್ರಹಪತೇರಿವ ॥26॥
ಕುಲೀನನೂ, ಶಿಕ್ಷಿತನೂ, ಪ್ರಾಜ್ಞನೂ, ಜ್ಞಾನವಿಜ್ಞಾನಕೋವಿದನೂ, ಸರ್ವಶಾಸ್ತ್ರಾರ್ಥತತ್ವವನ್ನು ತಿಳಿದವನೂ, ಸಹನಶೀಲನೂ, ತನ್ನ ದೇಶದವನೂ, ಕೃತಜ್ಞನೂ, ಬಲಿಷ್ಠನೂ, ಕ್ಷಮೆಯುಳ್ಳವನೂ, ಜಿತೇಂದ್ರಿಯನೂ, ಲೋಭ- ರಹಿತನೂ, ಲಬ್ಧವಾದುದರಲ್ಲೇ ತೃಪ್ತಿ ಪಡುವವನೂ, ಸ್ವಾಮಿಗೂ ಮತ್ತು ಮಿತ್ರರಿಗೂ ಶುಭವನ್ನುಂಟು ಮಾಡುವವನೂ, ದೇಶಕಾಲಗಳನ್ನು ತಿಳಿದವನೂ, ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವನೂ, ಸುಸಂಸ್ಕೃತನಾದವನೂ, ಯೋಗ್ಯ- ವಾದ ಮಾತನ್ನಾಡುವವನೂ, ರಾಜನ ಹಿತವನ್ನು ಬಯಸುವವನೂ, ಆಲಸ್ಯ- ರಹಿತನೂ, ಯೋಗ್ಯವಾದ ಆಚಾರವುಳ್ಳವನೂ, ಸಂಧಿವಿಗ್ರಹಾದಿಗಳನ್ನು ತಿಳಿದ- ವನೂ, ಪ್ರಶಸ್ತನಾದವನೂ, ಧರ್ಮಾರ್ಥಕಾಮಗಳನ್ನು ತಿಳಿದವನೂ, ಪೌರಜಾನ- ಪದಪ್ರಿಯನೂ, ಸೇನಾವ್ಯೂಹಗಳನ್ನು ಮಾಡುವುದನ್ನು ತಿಳಿದವನೂ, ಸೈನ್ಯವನ್ನು ಉತ್ಸಾಹಪಡಿಸುವುದನ್ನು ತಿಳಿದವನೂ, ಇಂಗಿತಜ್ಞನೂ, ಸೇನಾಯಾತ್ರೆಯಲ್ಲಿ ವಿಶಾರದನೂ, ಹಸ್ತಿಶಿಕ್ಷಾಶಾಸ್ತ್ರವನ್ನು ತಿಳಿದವನೂ, ಅಶ್ವಶಾಸ್ತ್ರವನ್ನು ತಿಳಿದವನೂ, ಅಹಂಕಾರವಿಲ್ಲದವನೂ, ವಾಗ್ಮಿಯೂ, ಸಂಕೋಚಸ್ವಭಾವದವನೂ, ಬಲಿಷ್ಠನೂ, ಒಳ್ಳೆಯ ಸಲಹೆಯನ್ನು ನೀಡುವವನೂ, ದಕ್ಷನೂ, ದಕ್ಷಜನರಿಂದ ಕೂಡಿದವನೂ, ಒಳ್ಳೆಯ ವೇಷವನ್ನು ಧರಿಸಿದವನೂ, ನೋಡಲು ಸುಂದರನಾಗಿರುವವನೂ, ನಾಯಕನೂ, ನೀತಿಕುಶಲನೂ, ರಾಜನೀತಿಯ ಆರುಗುಣಗಳನ್ನು ತಿಳಿದವನೂ, ಅನಹಂಕಾರಿಯೂ, ವಿನಯಶೀಲನೂ, ನಿಪುಣನೂ, ಮೃದುವಾಗಿ ಮಾತನಾಡು- ವವನೂ, ಧೀರನೂ, ಶೂರನೂ, ಐಶ್ವರ್ಯೋಪೇತನೂ, ದೇಶಕಾಲಗುಣಗಳನ್ನು ಪ್ರತಿಪಾದಿಸುವವನೂ ಆದ ಪುರುಷನನ್ನು ಸಚಿವನನ್ನಾಗಿ ಮಾಡಿಕೊಂಡು ಅವನಿಗೆ ಅವಮಾನವನ್ನು ಮಾಡದಿದ್ದರೆ ಆ ರಾಜನ ರಾಜ್ಯವು ಚಂದ್ರನ ಬೆಳದಿಂಗಳಿನಂತೆ ವಿಸ್ತಾರವನ್ನು ಹೊಂದುತ್ತದೆ.
ಏತೈರೇವ ಗುಣೈರ್ಯುಕ್ತೋ ರಾಜಾ ಶಾಸ್ತ್ರವಿಶಾರದಃ |
ಏಷ್ಟವ್ಯೋ ಧರ್ಮಪರಮಃ ಪ್ರಜಾಪಾಲನತತ್ಪರಃ ॥27॥
ಇವೇ ಗುಣಗಳಿಂದ ಕೂಡಿದ, ಶಾಸ್ತ್ರವಿಶಾರದನಾದ, ಧರ್ಮರತನಾದ, ಪ್ರಜಾಪಾಲನತತ್ಪರನಾದ ರಾಜನನ್ನು ಪ್ರಜೆಗಳು ಬಯಸಬೇಕು.

ಧೀರೋ ಮರ್ಷೀ ಶುಚಿಃ ಶೀಘ್ರಃ ಕಾಲೇ ಪುರುಷಕಾರವಿತ್ |
ಶುಶ್ರೂಷುಃ ಶ್ರುತವಾನ್ ಶ್ರೋತಾ ಊಹಾಪೋಹವಿಶಾರದಃ ॥28॥
ಮೇಧಾವೀ ಧಾರಣಾಯುಕ್ತೋ ಯಥಾನ್ಯಾಯೋಪಪಾದಕಃ |
ದಾಂತಃ ಸದಾ ಪ್ರಿಯಾಭಾಷೀ ಕ್ಷಮಾವಾಂಶ್ಚ ವಿಪರ್ಯಯೇ ॥29॥
ನಾತಿಚ್ಛೇತ್ತಾ ಸ್ವಯಂಕಾರೀ ಶ್ರದ್ಧಾಲುಃ ಸುಖದರ್ಶನಃ |
ಆರ್ತಹಸ್ತಪ್ರದೋ ನಿತ್ಯಮಾಪ್ತಾಮಾತ್ಯೋ ನಯೇ ರತಃ ॥30॥
ನಾಹಂವಾದೀ ನನಿರ್ದ್ವಂದ್ವೋ ನ ಯತ್ಕಿಂಚಿನಕಾರಕಃ |
ಕೃತೇ ಕರ್ಮಣ್ಯಮೋಘಾನಾಂ ಕರ್ತಾ ಭೃತ್ಯಜನಪ್ರಿಯಃ ॥31॥
ಸಂಗೃಹೀತಜನೋಽಸ್ತಬ್ಧಃ ಪ್ರಸನ್ನವದನಃ ಸದಾ |
ದಾತಾ ಭೃತ್ಯಜನಾಜೀವೀ ನಕ್ರೋಧೀ ಸುಮಹಾಮನಾಃ ॥32॥
ಯುಕ್ತದಂಡೋ ನ ನಿರ್ದಂಡೋ ಧರ್ಮಕಾರ್ಯಾನುಶಾಸನಃ |
ಚಾರನೇತ್ರಃ ಪ್ರಜಾವೇಕ್ಷೀ ಧರ್ಮಾರ್ಥಕುಶಲಃ ಸದಾ ॥33॥
ರಾಜಾ ಗುಣಶತಾಕೀರ್ಣ ಏಷ್ಟವ್ಯಸ್ತಾದೃಶೋ ಭವೇತ್ |
ಧೀರನೂ, ಸಹನೆಯುಳ್ಳವನೂ, ಶುಚಿಯೂ, ಶೀಘ್ರವಾಗಿ ಕಾರ್ಯವನ್ನು ಮಾಡುವವನೂ, ಯೋಗ್ಯವಾದ ಕಾಲದಲ್ಲಿ ಪ್ರಯತ್ನವನ್ನು ಮಾಡುವುದನ್ನು ತಿಳಿದವನೂ, ಹಿರಿಯರ ಮಾತನ್ನು ಕೇಳುವವನೂ, ವಿದ್ಯಾವಂತನೂ, ಹಿರಿಯರ ಸೇವೆಯನ್ನು ಮಾಡುವವನೂ, ಊಹಾಪೋಹಗಳಲ್ಲಿ ವಿಶಾರದನೂ, ಮೇಧಾವಿಯೂ, ಧಾರಣಾಶಕ್ತಿಯುಳ್ಳವನೂ, ನ್ಯಾಯವಾದುದನ್ನು ಮಾಡು- ವವನೂ, ಇಂದ್ರಿಯನಿಗ್ರಹವುಳ್ಳವನೂ, ಸದಾ ಪ್ರಿಯಭಾಷಿಯೂ, ವಿರೋಧವನ್ನು ಮಾಡಿದರೂ ಕ್ಷಮಿಸುವವನೂ, ಅಪರಾಧಿಗಳನ್ನು ಸಂಪೂರ್ಣವಾಗಿ ನಾಶಮಾಡು- ವವನೂ, ಸ್ವತಃ ತಾನೇ ಕಾರ್ಯವನ್ನು ಮಾಡುವವನೂ, ಶ್ರದ್ಧಾಳುವೂ, ನೋಡಲು ಸುಂದರನೂ, ಆರ್ತರಿಗೆ ಸಹಾಯಹಸ್ತವನ್ನು ನೀಡುವವನೂ, ಆಪ್ತರಾದ ಅಮಾತ್ಯರನ್ನು ಹೊಂದಿದವನೂ, ರಾಜನೀತಿಯಲ್ಲಿ ರತನಾದವನೂ, ಅಹಂಕಾರದ ಮಾತನ್ನು ಆಡದವನೂ, ಉದಾಸೀನವಾದ ಕಾರ್ಯಗಳನ್ನು ಮಾಡದವನೂ, ಒಳ್ಳೆಯ ಕಾರ್ಯವನ್ನು ಮಾಡಿದ ಸೇವಕರಿಗೆ ಹೆಚ್ಚಿನ ವೇತನವನ್ನು ಕೊಡುವವನೂ, ಭೃತ್ಯಜನರಿಗೆ ಪ್ರಿಯನಾದವನೂ, ಪ್ರಜೆಗಳನ್ನು ಸಂಗ್ರಹಿಸುವ ಸಾಮರ್ಥ್ಯವುಳ್ಳವನೂ, ದುರಹಂಕಾರವಿಲ್ಲದವನೂ, ಸದಾ ಪ್ರಸನ್ನಮುಖನಾದವನೂ, ದಾನವನ್ನು ಕೊಡು- ವವನೂ, ಭೃತ್ಯಜನರನ್ನು ಸಂತೋಷದಿಂದ ಜೀವಿಸುವಂತೆ ಮಾಡುವವನೂ, ಕ್ರೋಧರಹಿತನೂ, ಉದಾರವಾದ ಮನಸ್ಸುಳ್ಳವನೂ, ಯೋಗ್ಯವಾದ ದಂಡವನ್ನು ವಿಧಿಸುವವನೂ, ಯೋಗ್ಯದಂಡವನ್ನೇ ವಿಧಿಸುವವನೂ, ಎಲ್ಲವನ್ನೂ ಕ್ಷಮಿಸದಿ- ರುವವನೂ, ಧರ್ಮಕಾರ್ಯಗಳನ್ನು ಆದೇಶಿಸುವವನೂ, ಚಾರರೆಂಬ ಚಕ್ಷುಸ್ಸನ್ನು ಹೊಂದಿರುವವನೂ, ಪ್ರಜೆಗಳ ಹಿತವನ್ನು ನೋಡುವವನೂ, ಯಾವಾಗಲೂ ಧರ್ಮಾರ್ಥಕುಶಲನಾದವನೂ ಆಗಿ ಇಂತಹ ನೂರಾರು ಗುಣಗಳಿಂದ ಕೂಡಿದ ರಾಜನನ್ನು ಪ್ರಜೆಗಳು ಅಪೇಕ್ಷಿಸಬೇಕು.

ಯೋಧಾಶ್ಚೈವ ಮನುಷ್ಯೇಂದ್ರ ಸರ್ವೈರ್ಗುಣಗಣೈರ್ವೃತಃ ॥34॥
ಅನ್ವೇಷ್ಟವ್ಯಾಃ ಸುಪುರುಷಾಃ ಸಹಾಯಾ ರಾಜ್ಯಧಾರಣೇ |
ನ ವಿಮಾನಯಿತವ್ಯಾಸ್ತೇ ರಾಜ್ಞಾ ವೃದ್ಧಿಮಭೀಪ್ಸತಾ ॥35॥
ಎಲೈ ಮನುಷ್ಯೇಂದ್ರನೇ! ಸರ್ವಗುಣಗಳಿಂದ ಕೂಡಿದ ಒಳ್ಳೆಯ ಸ್ವಭಾವವುಳ್ಳ ಯೋಧರನ್ನು ಹುಡುಕಿ ರಾಜ್ಯವನ್ನು ರಕ್ಷಿಸುವ ವಿಷಯದಲ್ಲಿ ಅವರನ್ನು ಸಹಾಯಕರನ್ನಾಗಿ ತೆಗೆದುಕೊಳ್ಳಬೇಕು. ತನ್ನ ಅಭಿವೃದ್ಧಿಯನ್ನು ಬಯಸುವ ರಾಜನು ಯೋಧರಿಗೆ ಅವಮಾನ ಮಾಡಬಾರದು.
ಯೋಧಾಃ ಸಮರಶೌಂಡೀರಾಃ ಕೃತಜ್ಞಾಃ ಶಾಸ್ತ್ರಕೋವಿದಾಃ |
ಧರ್ಮಶಾಸ್ತ್ರಸಮಾಯುಕ್ತಾಃ ಪದಾತಿಜನಸಂವೃತಾಃ ॥36॥
ಅರ್ಥಮಾನವಿವೃದ್ಧಾಶ್ಚ ರಥಚರ್ಯಾವಿಶಾರದಾಃ |
ಇಷ್ವಸ್ತ್ರಕುಶಲಾ ಯಸ್ಯ ತಸ್ಯೇಯಂ ನೃಪತೇರ್ಮಹೀ ॥37॥
ಯಾವ ರಾಜನ ಯೋಧರು ಯುದ್ಧನಿಪುಣರೋ ಕೃತಜ್ಞರೋ, ಶಾಸ್ತ್ರಕೋವಿ- ದರೋ, ಧರ್ಮಶಾಸ್ತ್ರಸಮಾಯುಕ್ತರೋ, ಪದಾತಿಗಳಿಂದ ಕೂಡಿದವರೋ, ರಾಜನಿಂದ ಧನ ಮಾನಗಳನ್ನುಪಡೆದು ಅಭಿವೃದ್ಧಿ ಹೊಂದಿದವರೋ, ರಥವನ್ನು ನಡೆಸುವುದರಲ್ಲಿ ವಿಶಾರದರೋ, ಆಯುಧಗಳನ್ನು ಉಪಯೋಗಿಸುವುದರಲ್ಲಿ ಕುಶಲರೋ - ಈ ಭೂಮಿಯುಅಂತಹ ರಾಜನಿಗೆ ಸೇರುತ್ತದೆ.
ಜ್ಞಾತೀನಾಮನವಜ್ಞಾನಂ ಭೃತ್ಯೇಷ್ವಶಠತಾ ತಥಾ |
ನೈಪುಣಂ ಚಾರ್ಥಚರ್ಯಾಸು ಯಸ್ಯೈತೇ ತಸ್ಯ ಸಾ ಮಹೀ ॥38॥
ಯಾವ ರಾಜನು ಜ್ಞಾತಿಗಳಿಗೆ ಅವಮಾನ ಮಾಡುವುದಿಲ್ಲವೋ, ಭೃತ್ಯರಿಗೆ ದುರಹಂಕಾರವನ್ನು ತೋರಿಸುವುದಿಲ್ಲವೋ, ಅರ್ಥಕಾರ್ಯಗಳಲ್ಲಿ ನಿಪುಣನಾಗಿ- ರುತ್ತಾನೆಯೋ ಈ ಭೂಮಿಯು ಅವನಿಗೆ ಸೇರುತ್ತದೆ.
ಆಲಸ್ಯಂ ಚೈವ ನಿದ್ರಾ ಚ ವ್ಯಸನಾನ್ಯತಿಹಾಸ್ಯತಾ |
ಯಸ್ಯೈತಾನಿ ನ ವಿದ್ಯಂತೇ ತಸ್ಯೈವ ಸುಚಿರಂ ಮಹೀ ॥39॥
ಆಲಸ್ಯ, ನಿದ್ರೆ, ದುಶ್ಚಟಗಳು, ಅತಿಹಾಸ್ಯ- ಇವುಗಳು ಯಾವನಿಗೆ ಇರುವು- ದಿಲ್ಲವೋ ಅಂತಹ ರಾಜನ ಬಳಿಯಲ್ಲಿ ಭೂಮಿಯು ಬಹುಕಾಲ ಇರುತ್ತದೆ.
ನೀತಿವರ್ತ್ಮಾನುಸರಣಂ ನಿತ್ಯಮುತ್ಥಾನಮೇವ ಚ |
ರಿಪೂಣಾಮನವಜ್ಞಾನಂ ತಸ್ಯೇಯಂ ಸುಚಿರಂ ಮಹೀ ॥40॥
ನೀತಿಮಾರ್ಗದ ಅನುಸರಣೆ, ನಿತ್ಯವೂ ಉದ್ಯಮಶೀಲತೆ, ಶತ್ರುಗಳನ್ನು ಉಪೇ- ಕ್ಷಿಸದಿರುವುದು ಈ ಗುಣಗಳು ಯಾರಲ್ಲಿರುತ್ತವೆಯೋ ಅವನ ಬಳಿ ಈ ಭೂಮಿಯು ಬಹುಕಾಲ ಇರುತ್ತದೆ.
ಉತ್ಥಾನಂ ಚೈವ ದೈವಂ ಚ ತಯೋರ್ನಾನಾತ್ವಮೇವ ಚ |
ಮನುನಾ ವರ್ಣಿತಂ ಪೂರ್ವಂ ವಕ್ಷ್ಯೇ ಶೃಣು ತದೇವ ಹಿ ॥41॥
ಉದ್ಯಮಶೀಲತೆ ಮತ್ತು ದೈವ ಇವುಗಳ ಪ್ರಭೇದಗಳನ್ನು ಮನುವು ಹಿಂದೆಯೇ ವರ್ಣಿಸಿದ್ದಾನೆ. ಅದನ್ನೇ ನಾನು ಹೇಳುವೆನು ಕೇಳು.
ಉತ್ಥಾನಂ ಹಿ ನರೇಂದ್ರಾಣಾಂ ಬೃಹಸ್ಪತಿರಭಾಷತ |
ನಯಾನಯವಿಧಾನಜ್ಞಃ ಸದಾ ಭವ ಕುರೂದ್ವಹ ॥42॥
ನಯಾನಯವಿಧಾನಗಳನ್ನು ತಿಳಿದ ಬೃಹಸ್ಪತಿಗಳು ನರೇಂದ್ರರಿಗೆ ಉದ್ಯಮ- ಶೀಲತೆಯೇ ಪ್ರಧಾನವಾದುದೆಂದು ಹೇಳಿದ್ದಾರೆ. ಎಲೈ ಕುರೂದ್ವಹನೇ! ಸದಾ ಉದ್ಯಮಶೀಲನಾಗು.
ದುಹೃರ್ದಾಂ ಛಿದ್ರದರ್ಶೀ ಯಃ ಸುಹೃದಾಮುಪಕಾರವಾನ್ |
ವಿಶೇಷವಿಚ್ಚ ಭೃತ್ಯಾನಾಂ ಸ ರಾಜ್ಯಫಲಮಶ್ನುತೇ ॥43॥
ಯಾವನು ಶತ್ರುಗಳ ದೌರ್ಬಲ್ಯವನ್ನು ಕಾಣುತ್ತಾನೆಯೋ, ಸುಹೃಜ್ಜನರಿಗೆ ಉಪಕಾರವನ್ನು ಮಾಡುತ್ತಾನೆಯೋ, ಭೃತ್ಯರ ವಿಶೇಷಯೋಗ್ಯತೆಗಳನ್ನು ತಿಳಿದಿರು- ತ್ತಾನೆಯೋ ಅವನು ರಾಜ್ಯದ ಫಲವನ್ನು ಭೋಗಿಸುತ್ತಾನೆ.
ಸರ್ವಸಂಗ್ರಹಣೇ ಯುಕ್ತೋ ನೃಪೋ ಭವತಿ ಯಃ ಸದಾ |
ಉತ್ಥಾನಶೀಲೋ ಮಂತ್ರಾಢ್ಯೋ ಸ ರಾಜಾ ರಾಜಸತ್ತಮಃ ॥44॥
ಎಲ್ಲ ಪ್ರಜೆಗಳನ್ನೂ ಸಂಗ್ರಹಿಸುವುದರಲ್ಲಿ ಯಾವ ರಾಜನು ಸದಾ ನಿರತನಾಗಿ ಉದ್ಯಮಶೀಲನೂ ಮಂತ್ರಾಲೋಚನ ತತ್ಪರನೂ ಆಗಿರುತ್ತಾನೆಯೋ ಆ ರಾಜನು ರಾಜಶ್ರೇಷ್ಠನಾದವನು.
ಶಕ್ಯಾ ಚಾಶ್ವಸಹಸ್ರೇಣ ವೀರಾರೋಹೇಣ ಭಾರತ |
ಸಂಗೃಹೀತಮನುಷ್ಯೇಣ ಕೃತ್ಸ್ನಾ ಜೇತುಂ ವಸುಂಧರಾ ॥45॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ॥119॥
ಎಲೈ ಭಾರತನೇ! ವೀರರಾದ ಅಶ್ವಾರೋಹಿಗಳಿಂದ ಕೂಡಿದ ಒಂದು ಸಹಸ್ರ ಅಶ್ವಗಳಿಂದ ಚೆನ್ನಾಗಿ ಸಂಪಾದಿಸಿದ ಒಬ್ಬ ಸೇನಾನಾಯಕನ ಮೂಲಕವಾಗಿ ಈ ಭೂಮಿಯನ್ನು ಗೆಲ್ಲುವುದು ಸಾಧ್ಯವಾಗುತ್ತದೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 119ನೆಯ ಅಧ್ಯಾಯವು ಮುಗಿಯಿತು
0
120. ನೂರಇಪ್ಪತ್ತನೆಯ ಅಧ್ಯಾಯ
ಭೃತ್ಯರನ್ನು ಅವರವರಿಗೆ ಯೋಗ್ಯಸ್ಥಾನದಲ್ಲಿ ನಿಯೋಜಿಸುವ ರಾಜನೀತಿ

ಭೀಷ್ಮಃ
ಏವಂ ಶುಭಾನ್ ಸಮಾನ್ ಭೃತ್ಯಾನ್ ಸ್ವಸ್ಥಾನೇ ಯೋ ನರಾಧಿಪಃ |
ನಿಯೋಜಯತಿ ಕೃತ್ಯೇಷು ಸ ರಾಜ್ಯಫಲಮಶ್ನುತೇ ॥1॥
ಭೀಷ್ಮರು ಹೀಗೆ ಯಾವ ರಾಜನು ಶುಭರೂ, ಸಮಾಧಾನವುಳ್ಳವರೂ ಆದ ಭೃತ್ಯರನ್ನು ಅವರಿಗೆ ಯೋಗ್ಯವಾದ ಕಾರ್ಯಗಳಲ್ಲಿ ನಿಯೋಜಿಸುತ್ತಾನೆಯೋ ಅವನು ರಾಜ್ಯಫಲವನ್ನು ಪಡೆಯುತ್ತಾನೆ.
ನ ಶ್ವಾ ಸ್ವಸ್ಥಾನಮುತ್ಕ್ರಮ್ಯ ಪ್ರಮಾಣಮಭಿ ಸತ್ಕೃತಃ |
ಆರೋಪ್ಯಃ ಶ್ವಾ ಸ್ವಕಾತ್ ಸ್ಥಾನಾದುತ್ಕ್ರಮ್ಯಾನ್ಯತ್ ಪ್ರಪದ್ಯತೇ ॥2॥
ನಾಯಿಯನ್ನು ಮೇಲೇರಿಸಿ ಪೂಜೆ ಮಾಡಿದರೂ ಅದು ಗ್ರಾಹ್ಯವಾಗುವುದಿಲ್ಲ. ನಾಯಿಯನ್ನು ಮೇಲೇರಿಸಿದರೆ ಅದು ತನ್ನ ಸ್ಥಾನವನ್ನುಬಿಟ್ಟು ಬೇರೆ ಕಾರ್ಯವನ್ನೇ ಮಾಡುತ್ತದೆ.
ಸ್ವಜಾತಿಗುಣಸಂಪನ್ನಾಃ ಸ್ವೇಷು ಕರ್ಮಸ್ವವಸ್ಥಿತಾಃ |
ಪ್ರಕರ್ತವ್ಯಾ ಬುಧಾ ಭೃತ್ಯಾ ನಾಸ್ಥಾನೇ ಪ್ರಕ್ರಿಯಾ ಕ್ಷಮಾ ॥3॥
ತಮ್ಮ ಜಾತಿಗುಣಗಳಿಂದ ಸಂಪನ್ನರೂ, ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾದವರೂ ಆದ ಬುಧರನ್ನು ಭೃತ್ಯರನ್ನಾಗಿ ಮಾಡಬೇಕು. ಒಂದು ಸ್ಥಾನದಲ್ಲಿ ಅದಕ್ಕೆ ಅಯೋಗ್ಯರಾದವರನ್ನು ನಿಯಮಿಸುವುದು ಸರಿಯಲ್ಲ.
ಅನುರೂಪಾಣಿ ಕರ್ಮಾಣಿ ಭೃತ್ಯೇಭ್ಯೋ ಯಃ ಪ್ರಯಚ್ಛತಿ |
ಸ ಭೃತ್ಯಗುಣಸಂಪನ್ನಂ ರಾಜಾ ಫಲಮುಪಾಶ್ನುತೇ ॥4॥
ಯಾವನು ಭೃತ್ಯರಿಗೆ ಅವರಿಗೆ ಅನುರೂಪವಾದ ಕಾರ್ಯಗಳನ್ನು ಕೊಡು- ತ್ತಾನೆಯೋ ಅಂತಹ ರಾಜನು ಭೃತ್ಯಗುಣದಿಂದ ಕೂಡಿದ ಫಲವನ್ನು ಅನುಭವಿಸು- ತ್ತಾನೆ.
ಶರಭಃ ಶರಭಸ್ಥಾನೇ ಸಿಂಹಃ ಸಿಂಹ ಇವೋರ್ಜಿತಃ |
ವ್ಯಾಘ್ರೋ ವ್ಯಾಘ್ರ ಇವ ಸ್ಥಾಪ್ಯೋ ದ್ವೀಪೀ ದ್ವೀಪೀ ಯಥಾ ತಥಾ ॥5॥
ಶರಭವನ್ನು ಶರಭಸ್ಥಾನದಲ್ಲಿಯೂ, ಬಲಿಷ್ಠವಾದ ಸಿಂಹವನ್ನು ಸಿಂಹಸ್ಥಾನ- ದಲ್ಲಿಯೂ ವ್ಯಾಘ್ರವನ್ನು ವ್ಯಾಘ್ರಸ್ಥಾನದಲ್ಲಿಯೂ ಚಿರತೆಯನ್ನು ಚಿರತೆಯ ಸ್ಥಾನ- ದಲ್ಲಿಯೂ ಹಾಗೆಯೇ ಇಡಬೇಕು.
ಕರ್ಮಸ್ವಿಹಾನುರೂಪೇಣ ನ್ಯಸ್ಯಾ ಭೃತ್ಯಾ ಯಥಾವಿಧಿ |
ಪ್ರತಿಲೋಮಂ ನ ಭೃತ್ಯಾಸ್ತೇ ಸ್ಥಾಪ್ಯಾಃ ಕರ್ಮಫಲೈಷಿಣಾ ॥6॥
ರಾಜನು ಭೃತ್ಯರನ್ನು ಅವರಿಗೆ ಅನುರೂಪವಾದ ಕರ್ಮದಲ್ಲಿಯೇ ಶಾಸ್ತ್ರಕ್ಕೆ ಅನುಸಾರಿಯಾಗಿ ಇಡಬೇಕು. ಕರ್ಮದ ಫಲವನ್ನು ಬಯಸುವ ರಾಜನು ಅದಕ್ಕೆ ವಿರುದ್ಧವಾಗಿ ಇಡಬಾರದು.
ಯಃ ಪ್ರಮಾಣಮತಿಕ್ರಮ್ಯ ಪ್ರತಿಲೋಮಂ ನರಾಧಿಪಃ |
ಭೃತ್ಯಾನ್ ಸ್ಥಾಪಯತೇಽಬುದ್ಧಿರ್ನ ಸ ರಂಜಯತೇ ಪ್ರಜಾಃ ॥7॥
ಯಾವ ರಾಜನು ಬುದ್ಧಿಹೀನನಾಗಿ ರಾಜನೀತಿಶಾಸ್ತ್ರವನ್ನು ಅತಿಕ್ರಮಿಸಿ ಭೃತ್ಯರನ್ನು ತನ್ನ ಸಮೀಪದಲ್ಲಿ ಇರಿಸಿಕೊಳ್ಳುತ್ತಾನೆಯೋ ಅವನು ಪ್ರಜೆಗಳನ್ನು ಸಂತೋಷ- ಪಡಿಸುವುದಿಲ್ಲ.
ನ ಬಾಲಿಶಾ ನ ಚ ಕ್ಷುದ್ರಾ ನ ಚಾಪ್ರತಿಮಿತೇಂದ್ರಿಯಾಃ |
ನಾಕುಲೀನಾ ನರಾಃ ಪಾರ್ಶ್ವೇ ಸ್ಥಾಪ್ಯಾ ರಾಜ್ಞಾ ಹಿತೈಷಿಣಾ ॥8॥
ತನ್ನ ಹಿತೈಷಿಯಾದ ರಾಜನು ಬಾಲಿಶರನ್ನಾಗಲೀ ಕ್ಷುದ್ರರನ್ನಾಗಲೀ, ಇಂದ್ರಿಯ- ಲೋಲುಪರನ್ನಾಗಲೀ, ಅಕುಲೀನರನ್ನಾಗಲೀ ತನ್ನ ಸಮೀಪದಲ್ಲಿಟ್ಟುಕೊಳ್ಳಬಾರದು.
ಸಾಧವಃ ಕುಶಲಾಃ ಶೂರಾ ಜ್ಞಾನವಂತೋಽನಸೂಯಕಾಃ |
ಅಕ್ಷುದ್ರಾಃ ಶುಚಯೋ ದಕ್ಷಾ ನರಾಃ ಸ್ಯುಃ ಪಾರಿಪಾರ್ಶ್ವಕಾಃ ॥9॥
ಸಾಧುಗಳೂ ಕುಶಲರೂ ಶೂರರೂ ಜ್ಞಾನವಂತರೂ ಅಸೂಯಾರಹಿತರೂ ಕ್ಷುದ್ರರಲ್ಲದವರೂ, ಶುಚಿಗಳೂ, ದಕ್ಷರೂ ಆದ ನರರು ರಾಜನ ಪಾರ್ಶ್ವವರ್ತಿ- ಗಳಾಗಿರಬೇಕು.
ನ್ಯಗ್ಭೂತಾಸ್ತತ್ಪರಾಃ ಕ್ಷಾಂತಾಶ್ಚೌಕ್ಷಾಃ ಪ್ರಕೃತಿಜಾಃ ಶುಭಾಃ |
ಸ್ವೇ ಸ್ವೇ ಸ್ಥಾನೇಽಪರಿಕ್ರುಷ್ಟಾಸ್ತೇ ಸ್ಯೂ ರಾಜ್ಞೋ ಬಹಿಶ್ಚರಾಃ ॥10॥
ರಾಜನಿಗೆ ಬಾಗಿ ನಡೆದುಕೊಂಡು ರಾಜಕಾರ್ಯತತ್ಪರರಾಗಿ,ಕ್ಷಮಾವಂತರೂ, ದಕ್ಷರೂ, ತಮ್ಮ ದೇಶದವರೂ,ಶುಭರೂ, ತಮ್ಮ ತಮ್ಮ ಸ್ಥಾನಗಳಿಂದ ಕೆಳಗೆ ಎಳೆಯಲ್ಪಡದವರೂ ಆದವರು ರಾಜನಿಗೆ ಬಾಹ್ಯಚರರಾಗುತ್ತಾರೆ. (ದೂರದಲ್ಲಿ ಕೆಲಸ ಮಾಡುವ ಸೇವಕರಾಗುತ್ತಾರೆ.)
ಸಿಂಹಸ್ಯ ಸತತಂ ಪಾರ್ಶ್ವೇ ಸಿಂಹ ಏವ ಜನೋ ಭವೇತ್ |
ಅಸಿಂಹಃ ಸಿಂಹಸಹಿತಃ ಸಿಂಹವಲ್ಲಭತೇ ಫಲಮ್ ॥11॥
ಸಿಂಹದ ಪಾರ್ಶ್ವದಲ್ಲಿ ಸತತವೂ ಸಿಂಹವೇ ಇರಬೇಕು. ಸಿಂಹವಲ್ಲದುದು ಸಿಂಹದ ಜೊತೆಯಲ್ಲಿದ್ದರೆ ಅದಕ್ಕೆ ಸಿಂಹದಂತೆ ಫಲವುಂಟಾಗುತ್ತದೆ.
ಯಸ್ತು ಸಿಂಹಃ ಶ್ವಭಿಃ ಕೀರ್ಣಃ ಸಿಂಹಕರ್ಮಫಲೇ ರತಃ |
ನ ಸ ಸಿಂಹಫಲಂ ಭೋಕ್ತುಂ ಶಕ್ತಃ ಶ್ವಭಿರುಪಾಸಿತಃ ॥12॥
ಯಾವ ಸಿಂಹವು ನಾಯಿಗಳಿಂದ ಪರಿವೃತವಾಗಿ ಸಿಂಹಕರ್ಮದ ಫಲವನ್ನು ಆಶಿಸುತ್ತದೆಯೋ ನಾಯಿಗಳಿಂದ ಸೇವಿತವಾದ ಅದು ಸಿಂಹಕರ್ಮದ ಫಲವನ್ನು ಭೋಗಿಸಲು ಸಮರ್ಥವಾಗುವುದಿಲ್ಲ.

ಏವಮೇತೈರ್ಮನುಷ್ಯೇಂದ್ರ ಶೂರೈಃ ಪ್ರಾಜ್ಞೈರ್ಬಹುಶ್ರುತೈಃ |
ಕುಲೀನೈಃ ಸಹ ಶಕ್ಯೇತ ಕೃತ್ಸ್ನಾ ಜೇತುಂ ವಸುಂಧರಾ ||13||
ಎಲೈ ಮನುಷ್ಯೇಂದ್ರನೇ! ಅದೇ ರೀತಿಯಲ್ಲಿ ಶೂರರೂ ಪ್ರಾಜ್ಞರೂ ವಿದ್ಯಾ- ವಂತರೂ ಕುಲೀನರೂ ಆದ ಇಂತಹ ಸೇವಕರಿಂದ ಸಮಗ್ರವಾದ ಭೂಮಿಯನ್ನು ಜಯಿಸಲು ಸಾಧ್ಯ.
ನಾವೈದ್ಯೋ ನಾನೃಜುಃ ಪಾರ್ಶ್ವೇ ನಾವಿದ್ಯೋ ನಾಮಹಾಧನಃ |
ಸಂಗ್ರಾಹ್ಯೋ ವಸುಧಾಪಾಲೈರ್ಭೃತ್ಯೋ ಭೃತ್ಯವತಾಂವರ ||14||
ಎಲೈ ಸೇವಕರನ್ನು ಹೊಂದಿದವರಲ್ಲಿ ಶ್ರೇಷ್ಠನಾದವನೇ! ರಾಜರು ವೇದವಿದ್ಯೆ ರಹಿತನಲ್ಲದ, ವಕ್ರನಲ್ಲದ, ಅವಿದ್ಯಾವಂತನಲ್ಲದ, ದರಿದ್ರನಲ್ಲದ ಭೃತ್ಯನನ್ನು ಸಂಗ್ರಹಿಸಬೇಕು.
ಬಾಣವದ್ ವಿಸ್ಸೃತಾ ಯಾಂತಿ ಸ್ವಾಮಿಕಾರ್ಯಪರಾ ಜನಾಃ |
ಯೇ ಭೃತ್ಯಾಃ ಪಾರ್ಥಿವಹಿತಾಸ್ತೇಷಾಂ ಸಾಂತ್ವಂ ಪ್ರಯೋಜಯೇತ್ ||15||
ಯಾವ ಭೃತ್ಯರು ರಾಜನ ಆದೇಶವನ್ನು ಹೊಂದಿ, ಸ್ವಾಮಿಕಾರ್ಯತತ್ಪರರಾಗಿ ಬಾಣದಂತೆ ಹೊರಡುತ್ತಾರೋ, ಅಂತಹ ರಾಜನೀತಿಯಲ್ಲಿ ಆಸಕ್ತರಾದವರಿಗೆ ಸಾಂತ್ವವಚನಗಳನ್ನು ಹೇಳಬೇಕು.
ಕೋಶಶ್ಚ ಸತತಂ ರಕ್ಷ್ಯೋ ಯತ್ನಮಾಸ್ಥಾಯ ರಾಜಭಿಃ |
ಕೋಶಮೂಲಾ ಹಿ ರಾಜಾನಃ ಕೋಶವೃದ್ಧಿಕರೋ ಭವ ||16||
ರಾಜನು ಪ್ರಯತ್ನಪೂರ್ವಕವಾಗಿ ತನ್ನ ಕೋಶವನ್ನು ಸತತವಾಗಿ ರಕ್ಷಿಸಿಕೊಳ್ಳ- ಬೇಕು. ರಾಜರ ಬಲವು ಕೋಶದಲ್ಲಿ ಅಡಗಿದೆ. ಆದ್ದರಿಂದ ಕೋಶವೃದ್ಧಿಯನ್ನು ಮಾಡುವವನಾಗು.
ಕೋಷ್ಠಾಗಾರಂ ಚ ತೇ ನಿತ್ಯಂ ಸ್ಫೀತಂ ಧಾನ್ಯೈಃ ಸುಸಂಚಿತಮ್ |
ಸದಾಽಸ್ತು ಸತ್ಸು ಸನ್ನ್ಯಸ್ತಂ ಧನಧಾನ್ಯಪರೋ ಭವ ||17||
ನಿನ್ನ ಉಗ್ರಾಣಗಳೆಲ್ಲವೂ ನಿತ್ಯವೂ ಸಂಗ್ರಹಿಸಿದ ಧಾನ್ಯಗಳಿಂದ ತುಂಬಿರಲಿ. ಸಜ್ಜನರಿಗೆ ಅದರ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ಕೊಡು. ಧನ ಧಾನ್ಯವನ್ನು ಸಂಗ್ರಹಿಸುವುದರಲ್ಲಿ ನಿರತನಾಗು.
ನಿತ್ಯಯುಕ್ತಾಶ್ಚ ತೇ ಭೃತ್ಯಾ ಭವಂತು ರಣಕೋವಿದಾಃ |
ವಾಜಿನಾಂ ಚ ಪ್ರಯೋಗೇಷು ವೈಶಾರದ್ಯಮಿಹೇಷ್ಯತೇ ||18||
ಭೃತ್ಯರು ನಿತ್ಯವೂ ತಮ್ಮ ಕಾರ್ಯದಲ್ಲಿ ತೊಡಗಿದವರೂ, ರಣಕೋವಿದರೂ, ಅಶ್ವವಿದ್ಯೆಗಳಲ್ಲಿ ವಿಶಾರದರೂ ಆಗಿರಬೇಕು.
ಜ್ಞಾತಿಬಂಧುಜನಾವೇಕ್ಷೀ ಮಿತ್ರಸಂಬಂಧಿಸಂವೃತಃ |
ಪೌರಕಾರ್ಯಹಿತಾನ್ವೇಷೀ ಭವ ಕೌರವನಂದನ ||19||
ಎಲೈ ಕೌರವನಂದನನೇ! ನೀನು ಜ್ಞಾತಿಗಳ ಮತ್ತು ಬಂಧುಗಳ ಹಿತವನ್ನು ನೋಡುತ್ತಾ ಮಿತ್ರರು ಮತ್ತು ಸಂಬಂಧಿಗಳಿಂದಲೂ ಪರಿವೃತನಾಗಿ ಯೋಚಿಸಿ ಪ್ರಜೆಗಳಿಗೆ ಹಿತವಾದ ಕಾರ್ಯವನ್ನು ಮಾಡುವವನಾಗು.
ಏಷಾ ತೇ ನೈಷ್ಠಿಕೀ ಬುದ್ಧಿಃ ಪ್ರಜ್ಞಾ ಚಾಭಿಹಿತಾ ಮಯಾ |
ಶ್ವಾ ತೇ ನಿದರ್ಶನಂ ತಾತ ಕಿಂ ಭೂಯಃ ಶ್ರೋತುಮಿಚ್ಛಸಿ ||20||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ವಿಂಶತ್ಯಧಿಕಶತತಮೋಽಧ್ಯಾಯಃ ||120||
ನಾನು ನಿನಗೆ ಶಾಸ್ತ್ರನಿಷ್ಠವಾದ ಬುದ್ಧಿಯನ್ನು ಮತ್ತು ವಿವೇಕವನ್ನು ಉಪದೇಶಿಸಿ- ದ್ದೇನೆ. ಎಲೈ ಪ್ರೀತಿಪಾತ್ರನೇ! ಆ ನಾಯಿಯು ನಿನಗೆ ಒಳ್ಳೆಯ ನಿದರ್ಶನ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 120ನೆಯ ಅಧ್ಯಾಯವು ಮುಗಿಯಿತು.
0
121. ನೂರಇಪ್ಪತ್ತೊಂದನೆಯ ಅಧ್ಯಾಯ
ಪ್ರಜಾಪಾಲನಕಥನ
ಯುಧಿಷ್ಠಿರಃ
ರಾಜವೃತ್ತಾನ್ಯನೇಕಾನಿ ತ್ವಯಾ ಪ್ರೋಕ್ತಾನಿ ಭಾರತ |
ಪೂರ್ವೈಃ ಪೂರ್ವನಿಯುಕ್ತಾನಿ ರಾಜಧರ್ಮಾರ್ಥವೇದಿನಃ ||1||
ಯುಧಿಷ್ಠಿರ ಎಲೈ ಭಾರತನೇ! ನೀನು ರಾಜಧರ್ಮವನ್ನು ತಿಳಿದ ಪೂರ್ವ- ರಾಜರುಗಳು ಅನುಸರಿಸಿದ ಅನೇಕ ರಾಜಧರ್ಮಗಳನ್ನು ಹೇಳಿದ್ದೀಯೆ.
ತದೇವ ವಿಸ್ತರೇಣೋಕ್ತಂ ಪೂರ್ವೈರ್ದೃಷ್ಟಂ ಸತಾಂ ಮತಮ್ |
ಪ್ರಣೇಯಂ ರಾಜಧರ್ಮಾಣಾಂ ಪ್ರಬ್ರೂಹಿ ಭರತರ್ಷಭ ||2||
ಎಲೈ ಭರತರ್ಷಭನೇ! ಪೂರ್ವರಾಜರಿಂದ ದೃಷ್ಟವಾದ ಸಜ್ಜನರಿಂದ ಸಮ್ಮತ- ವಾದ ಇನ್ನೂ ಹೆಚ್ಚು ತಿಳಿಯಲು ಯೋಗ್ಯವಾದ ಅದೇ ರಾಜಧರ್ಮಗಳನ್ನು ವಿಸ್ತಾರ -ವಾಗಿ ಹೇಳು.
ಭೀಷ್ಮಃ
ರಕ್ಷಣಂ ಸರ್ವಭೂತಾನಾಮಿತಿ ಕ್ಷತ್ರೇ ಪರಂ ಮತಮ್ |
ತದ್ ಯಥಾ ರಕ್ಷಣಂ ಕುರ್ಯಾತ್ ತಥಾ ಶೃಣು ಮಹೀಪತೇ ||3||
ಭೀಷ್ಮ - ಸರ್ವಪ್ರಾಣಿಗಳ ರಕ್ಷಣೆಯು ಕ್ಷತ್ರಿಯನಿಗೆ ಶ್ರೇಷ್ಠವಾದ ಧರ್ಮವೆಂದು ಹೇಳಲ್ಪಡುತ್ತದೆ. ಎಲೈ ರಾಜನೇ! ಆ ರಕ್ಷಣೆಯನ್ನು ಹೇಗೆ

ಮಾಡಬೇಕೆಂದು ಕೇಳು.
ಯಥಾ ಬರ್ಹಾಣಿ ಚಿತ್ರಾಣಿ ಬಿಭರ್ತಿ ಭುಜಗಾಶನಃ |
ತಥಾ ಬಹುವಿಧಂ ರಾಜಾ ರೂಪಂ ಕುರ್ವೀತ ಧರ್ಮವಿತ್ ॥4॥
ಹೇಗೆ ನವಿಲು ಅನೇಕ ಬಣ್ಣದ ನವಿಲುಗರಿಗಳನ್ನು ಧರಿಸಿರುತ್ತದೆಯೋ ಹಾಗೆಯೇ ಧರ್ಮಜ್ಞನಾದ ರಾಜನು ಬಹುವಿಧವಾದ ರೂಪಗಳನ್ನು ಧರಿಸಬೇಕು.
ತೈಕ್ಷ್ಣ್ಯಂ ಜಿಹ್ಮತ್ವಮಾದಾಂತ್ಯಂ ಸತ್ಯಮಾರ್ಜವಮೇವ ಚ |
ಮಧ್ಯಸ್ಥಃ ಸತ್ತ್ವಮಾತಿಷ್ಠಂಸ್ತಥಾ ವೈ ಸುಖಮೃಚ್ಛತಿ ॥5॥
ತೀಕ್ಷ್ಣತ್ವ, ಕುಟಿಲತೆ, ಉಗ್ರತ್ವ, ಸತ್ಯ, ಆರ್ಜವ, ತಟಸ್ಥತೆ, ಧೈರ್ಯ ಇವುಗಳನ್ನು ಹೊಂದುವವನು ಸುಖವನ್ನು ಪಡೆಯುತ್ತಾನೆ.
ಯಸ್ಮಿನ್ನರ್ಥೇ ಹಿತಂ ಯತ್ ಸ್ಯಾತ್ ತದ್ವರ್ಣಂ ರೂಪಮಾವಿಶೇತ್ |
ಬಹುರೂಪಸ್ಯ ರಾಜ್ಞೋ ಹಿ ಸೂಕ್ಷ್ಮೋಽಪ್ಯರ್ಥೋ ನ ಸೀದತಿ ॥6॥
ಯಾವ ಕಾರ್ಯವನ್ನು ಮಾಡುವಾಗ ಯಾವ ಬಣ್ಣದ ರೂಪವನ್ನು ಧರಿಸಬೇಕೋ ಅಂತಹ ರೂಪವನ್ನು ಧರಿಸುವ ಬಹುರೂಪವುಳ್ಳ ರಾಜನಿಗೆ ಒಂದು ಸಣ್ಣ ಅರ್ಥವೂ ನಾಶವನ್ನು ಹೊಂದುವುದಿಲ್ಲ.
ನಿತ್ಯಂ ರಕ್ಷಿತಮಂತ್ರಃ ಸ್ಯಾದ್ ಯಥಾರೂಪಂ ಶಿರಃ ಶಿಖೀ |
ಶ್ಲಕ್ಷ್ಣಾಕ್ಷರತನುಃ ಶ್ರೀಮಾನ್ ಭವೇಚ್ಛಾಸ್ತ್ರವಿಶಾರದಃ ॥7॥
ರಾಜನ ಮಂತ್ರಾಲೋಚನೆಯು ನಿತ್ಯವೂ ರಕ್ಷಿತವಾಗಿರಬೇಕು. ಕಾರ್ಯಕ್ಕೆ ಅಪೇಕ್ಷಿತವಾದ ಶಿರಸ್ಸನ್ನೂ ಶಿಖೆಗಳನ್ನೂ ಧರಿಸಿರಬೇಕು. - ಕೆಲವು ಬಾರಿ ತಲೆಯನ್ನು ಎತ್ತಿತೋರಿಸಿಕೊಳ್ಳಬೇಕು. ಕೆಲವು ಬಾರಿ ಕತ್ತನ್ನು ತಗ್ಗಿಸಿ ಮುಚ್ಚಿಕೊಳ್ಳಬೇಕು. ನಿಪುಣವಾಗಿ ಮಾತನಾಡುವ ಶರೀರವನ್ನೂ ಕಾಂತಿಯನ್ನೂ ಹೊಂದಿ ಶಾಸ್ತ್ರವಿಶಾ- ರದನಾಗಿರಬೇಕು. ಲಕ್ಷ್ಯಾಲಂಕಾರ.
ಆಪದ್ದ್ವಾರೇಷು ಯತ್ತಃ ಸ್ಯಾಜ್ಜಲಪ್ರಸ್ರವಣೇಷ್ವಿವ |
ಶೈಲಂ ವರ್ಷೋದಕಾನೀವ ದ್ವಿಜಾನ್ ಸಿದ್ಧಾಂತಮಾಶ್ರಯೇತ್ ॥8॥
ಆಪತ್ತು ಉಂಟಾಗುವ ಸ್ಥಳಗಳಲ್ಲಿ ಜಲಪ್ರವಾಹಗಳಲ್ಲಿ ಇರುವಂತೆ ಪ್ರಯತ್ನ ಪೂರ್ವಕವಾಗಿ ಎಚ್ಚರಿಕೆಯಿಂದಿರಬೇಕು. ಮಳೆಯ ನೀರುಗಳು ಪರ್ವತವನ್ನು ಆಶ್ರಯಿಸಿದಂತೆ ಸಿದ್ಧರಾದ ದ್ವಿಜರನ್ನು ಆಶ್ರಯಿಸಬೇಕು.
ಅರ್ಥಕಾಮಃ ಶಿಖಾಂ ರಾಜಾ ಕುರ್ಯಾದ್ ಧರ್ಮಧ್ವಜೋಪಮಾಮ್ |
ನಿತ್ಯಮುದ್ಯತದಂಡಃ ಸ್ಯಾದಾಚರೇಚ್ಚಾಪ್ರಮಾದತಃ ॥9॥
ಅರ್ಥವನ್ನು ಸಂಪಾದಿಸಲು ಬಯಸುವವನು ಧರ್ಮಧ್ವಜದಂತಹ ಶೌರ್ಯ- ಶಿಖೆಯನ್ನು ತೋರಿಸಬೇಕು. ನಿತ್ಯವೂ ಅಪರಾಧಿಗಳಲ್ಲಿ ದಂಡಧಾರಣಶೀಲ- ನಾಗಬೇಕು. ಯಾವಾಗಲೂ ಎಚ್ಚರ ತಪ್ಪಬಾರದು.
ಲೋಕೇ ಚಾಯವ್ಯಯೌ ದೃಷ್ಟ್ವಾ ಬೃಹದ್ವೃಕ್ಷ ಇವ ಸ್ರವನ್ |
ಆಜ್ಞಾವಾನ್ ಸ್ಯಾತ್ ಸ್ವಯೂಥ್ಯೇಷು ಭೌಮಾನಿ ಚರಣೈಃ ಕ್ಷಿಪೇತ್ ॥10॥
ತನ್ನ ಆಯವ್ಯಯಗಳನ್ನು ನೋಡಿ ದೊಡ್ಡ ವೃಕ್ಷದಂತಿರಬೇಕು. ವಟಾದಿ ವೃಕ್ಷವು ಬಹುರಸಸಂಗ್ರಹವಾದರೆ ತಾನು ಬಹಳ ರಸವನ್ನು ಸುರಿಸುತ್ತದೆ. ಇಲ್ಲದಿದ್ದರೆ ಅಲ್ಪ ರಸವನ್ನು ಸುರಿಸುತ್ತದೆ. ಹಾಗೆಯೇ ರಾಜನು ತನ್ನ ಆಯವ್ಯಯಗಳನ್ನು ನೋಡಿಕೊಂಡು ಪ್ರಜೆಗಳಿಗೆ ಧನವನ್ನು ಸುರಿಸುವ ವಿಷಯದಲ್ಲಿ ಆಜ್ಞೆಯನ್ನು ಮಾಡುವವನಾಗಬೇಕು. ಮಹಾವೃಕ್ಷವು ತನ್ನ ಬೇರುಗಳಿಂದ ಭೂಮಿಯನ್ನು ಆಕ್ರಮಿಸಿದಂತೆ ರಾಜನು ಭೂಮಿಯನ್ನು ಸಂಚಾರಮಾಡಿ ಕ್ರಮವಾಗಿ ಸಂಪಾದಿಸ- ಬೇಕು. (ಲಕ್ಷ್ಯಾಲಂಕಾರ)
ಜಾತಪಕ್ಷಃ ಪರಿಸ್ಪಂದೇದ್ ರಕ್ಷೇದ್ ವೈಕಲ್ಯಮಾತ್ಮನಃ ॥11॥
ಸಹಾಯವು ದೊರೆತ ಮೇಲೆ ರಾಜನು ಸಂಚರಿಸಬೇಕು. ಸಹಾಯವು ಸಿದ್ಧಿಸುವವರೆಗೆ ತನ್ನ ದೌರ್ಬಲ್ಯವನ್ನು ರಹಸ್ಯವಾಗಿ ಇಟ್ಟುಕೊಳ್ಳಬೇಕು.
ದೋಷಾನ್ ವಿವೃಣುಯಾಚ್ಛತ್ರೋಃ ಪರಪಕ್ಷಾನ್ ವಿಧೂನಯೇತ್ |
ಕಾನನೇಷ್ವಿವ ಪುಷ್ಪಾಣಿ ಬಹೂನರ್ಥಾನ್ ಸಮಾಚರೇತ್ ॥12॥
ಶತ್ರುವಿನ ದೋಷಗಳನ್ನು ಪ್ರಕಟಗೊಳಿಸಬೇಕು. ಶತ್ರುಪಕ್ಷಗಳನ್ನು ಕಂಪನ- ಗೊಳಿಸಬೇಕು. ಅರಣ್ಯಪುಷ್ಪಗಳಂತೆ ಅನೇಕ ಅರ್ಥಗಳನ್ನು ಸಾಧಿಸಲು ಸಂಚಾರವನ್ನು ಮಾಡಬೇಕು.
ಉಚ್ಛ್ರಿತಾನಾಶ್ರಯೇತ್ ಸ್ಫೀತಾನ್ ನರೇಂದ್ರಾನಚಲೋಪಮಾನ್ |
ಶ್ರಯೇಚ್ಛಾಯಾಮವಿಜ್ಞಾತಾಂ ಗುಪ್ತಂ ಶರಣಮಾಶ್ರಯೇತ್ ॥13॥
ಉನ್ನತರೂ, ಶುದ್ಧರೂ ಪರ್ವತದಂತೆ ಇರುವವರೂ ಆದ ರಾಜರನ್ನು ಆಶ್ರ- ಯಿಸಬೇಕು. ಇನ್ನೊಬ್ಬರಿಗೆ ತಿಳಿಯದಂತೆ ಛಾಯೆಯನ್ನು ಆಶ್ರಯಿಸಬೇಕು. ಎಂದರೆ ತನ್ನ ವಾಸಸ್ಥಾನವು ಗುಪ್ತವಾಗಿರಬೇಕು.
ಪ್ರಾವೃಷೀವಾಸಿತಗ್ರೀವೋ ಮಜ್ಜೇತ ನಿಶಿ ನಿರ್ಜನೇ |
ಮಾಯೂರೇಣ ಗುಣೇನೈವ ಸ್ತ್ರೀಭಿಶ್ಚಾಲಕ್ಷಿತಶ್ಚರೇತ್ |
ನ ಜಹ್ಯಾಚ್ಚ ತನುತ್ರಾಣಂ ರಕ್ಷೇದಾತ್ಮಾನಮಾತ್ಮನಾ ॥14॥
ಮಳೆಗಾಲದಲ್ಲಿ ನವಿಲಿನಂತೆ ನಿರ್ಜನವಾದ ಪ್ರದೇಶದಲ್ಲಿ ರಾತ್ರಿಯಲ್ಲಿ ಅಭ್ಯಂಗವನ್ನು ಮಾಡಬೇಕು. ನವಿಲಿನಂತೆಯೇ ಇನ್ನೊಬ್ಬರಿಗೆ ತಿಳಿಯದಂತೆ ಸ್ತ್ರೀಯರ ಜೊತೆಯಲ್ಲಿ ವಿಹರಿಸಬೇಕು. ನವಿಲು ತನ್ನ ಕವಚದಂತಿರುವ ನವಿಲುಗರಿಯನ್ನು ಎಂದೂ ಬಿಡದಂತೆ ತನ್ನನ್ನು ತಾನೇ ರಕ್ಷಿಸಿಕೊಳ್ಳಬೇಕು. (ಲಕ್ಷ್ಯಾಲಂಕಾರ)
ಚಾರಭೂಮಿಷ್ವಭಿಮತಾನ್ ಪಾಶಾಂಶ್ಚ ಪರಿವರ್ಜಯೇತ್ |
ಪ್ರಸ್ಥಾಪಯೇದ್ ವಾ ತಾಂ ಭೂಮಿಂ ಪ್ರವಿಶೇದ್ ಗಹನೇ ಪುನಃ ॥15॥

ಸಂಚಾರಮಾಡುವ ಭೂಮಿಗಳಲ್ಲಿ ಶತ್ರುಗಳು ಹಾಕಿರಬಹುದಾದ ಬಲಗಳ ರೂಪವಾದ ಪಾಶಗಳನ್ನು ಪರಿತ್ಯಜಿಸಬೇಕು. (ಶತ್ರುಗಳಿಂದ ಬಂಧನಕ್ಕೆ ಒಳಗಾ- ಗುವುದನ್ನು ತಪ್ಪಿಸಿಕೊಳ್ಳಬೇಕು). ಎಲ್ಲಿ ಅಪಾಯವಿಲ್ಲವೋ ಅಂತಹ ಭೂಮಿಯಲ್ಲಿ ಮಾತ್ರ ಸಂಚರಿಸಬೇಕು. ಅಂತಹ ಭೂಮಿಯಿಲ್ಲದಿದ್ದರೆ ಅರಣ್ಯವನ್ನು ಪ್ರವೇಶಿಸ- ಬೇಕು (ಲಕ್ಷ್ಮಾಲಂಕಾರ).
ಹನ್ಯಾತ್ ತಾನ್ ವಿಷಧರಾನ್ ಯೇ ಜಿಹ್ಮಗತಯೋಽಹಿತಾಃ |
ನಾಶಯೇದ್ ಪರಬರ್ಹಾಣಿ ಸನ್ನಿವಾಸಾನ್ ನಿವಾಸಯೇತ್ ॥16॥
ವಿಷವನ್ನು ಧರಿಸಿದ ಕುಟಿಲಗತಿಗಳಾದ ಸರ್ಪಗಳಂತಿರುವ ಶತ್ರುಗಳನ್ನು ಸಂಹರಿಸಬೇಕು. ನವಿಲುಗರಿಯ ಸ್ಥಾನದಲ್ಲಿರುವ ಅವರ ಅಂಗರಕ್ಷಕಾದಿ ಪರಿವಾರ- ವನ್ನು ನಾಶಗೊಳಿಸಬೇಕು. ತನ್ನ ಜೊತೆಯಲ್ಲಿ ಇರಲು ಯೋಗ್ಯರಾದವರನ್ನು ತನ್ನ ಜೊತೆಯಲ್ಲಿ ಇಟ್ಟುಕೊಳ್ಳಬೇಕು.
ಸದಾ ಬರ್ಹಿನಿಭಃ ಕಾಮಂ ಪ್ರಸಕ್ತಿಕೃತಮಾಚರೇತ್ |
ಸರ್ವತಶ್ಚಾದದೇತ್ ಪ್ರಜ್ಞಾಂ ಪತಂಗಾನ್ ಗಹನೇಷ್ವಿವ |
ಏವಂ ಮಯೂರವದ್ ರಾಜಾ ಸ್ವರಾಷ್ಟ್ರಂ ಪರಿಪಾಲಯೇತ್ ॥17॥
ಮಯೂರದಂತೆ ಸಮೀಪದಲ್ಲಿ ಸುಲಭವಾಗಿ ದೊರೆಯುವ ಕಾಮವನ್ನು ಮಾತ್ರ ಅನುಭವಿಸಬೇಕು. ಕಾಡಿನಲ್ಲಿ ಪತಂಗಗಳನ್ನು ಹಿಡಿದಂತೆ ಪ್ರಜ್ಞೆಯನ್ನು ಮಾತ್ರ ಎಲ್ಲ ಕಡೆಗಳಿಂದಲೂ ಸಂಪಾದಿಸಬೇಕು. ಹೀಗೆ ನವಿಲಿನಂತೆ ನಡೆದುಕೊಳ್ಳುವ ರಾಜನು ತನ್ನ ರಾಷ್ಟ್ರವನ್ನು ರಕ್ಷಿಸುವನು.
ಆತ್ಮವೃದ್ಧಿಕರೀಂ ನೀತಿಂ ವಿದಧೀತ ವಿಚಕ್ಷಣಃ |
ಆತ್ಮಸಂಯಮನಂ ಬುದ್ಧ್ಯಾ ಪರಬುದ್ಧ್ಯಾ ವಿಚಾರಣಾ |
ಬುದ್ಧ್ಯಾ ಚಾತ್ಮಗುಣಪ್ರಾಪ್ತಿರೇತಚ್ಛಾಸ್ತ್ರನಿದರ್ಶನಮ್ ॥18॥
ವಿಚಕ್ಷಣನಾದ ರಾಜನು ತನಗೆ ವೃದ್ಧಿಯುಂಟಾಗುವ ನೀತಿಯನ್ನು ಅನುಸರಿಸ- ಬೇಕು. ತನ್ನ ಬುದ್ಧಿಯಿಂದ ತನ್ನನ್ನು ನಿಯಂತ್ರಿಸಿಕೊಂಡು ಅಮಾತ್ಯಾದಿ ಪರಬುದ್ಧಿ- ಯಿಂದ ವಿಚಾರಣೆಯನ್ನು ಮಾಡಬೇಕು. ವಿಮರ್ಶೆಯಿಂದ ಆತ್ಮಗುಣ ಪ್ರಾಪ್ತಿಯಾ- ಗುತ್ತದೆ ಎಂಬುದು ಶಾಸ್ತ್ರದ ಆದೇಶವಾಗಿದೆ.
ಪರಂ ಚಾಶ್ವಾಸಯೇತ್ ಸಾಮ್ನಾ ಸ್ವಶಕ್ತಿಂ ಚೋಪಲಕ್ಷಯೇತ್ |
ಆತ್ಮನಃ ಪರಿಮರ್ಶೇನ ಬುದ್ಧಿಂ ಬುದ್ಧ್ಯಾ ವಿಚಾರಯೇತ್ |
ಸಾಂತ್ವಯೋಗಮತಿಃ ಪ್ರಾಜ್ಞಃ ಕಾರ್ಯಾಕಾರ್ಯವಿಚಾರಕಃ ॥19॥
ಒಳ್ಳೆಯ ಮಾತುಗಳಿಂದ (ಸಾಮೋಪಾಯಗಳಿಂದ) ಇನ್ನೊಬ್ಬನು ತನ್ನಲ್ಲಿ ವಿಶ್ವಾಸವಿಡುವಂತೆ ಮಾಡಬೇಕು. ತನ್ನ ಶಕ್ತಿಯನ್ನು ತಾನು ಗಮನಿಸಬೇಕು. ತನ್ನನ್ನು ತಾನು ಪರಾಮರ್ಶೆಮಾಡಿಕೊಂಡು ಪರರ ಬುದ್ಧಿಯನ್ನು ತನ್ನ ಬುದ್ಧಿಯಿಂದ ವಿಚಾರಿಸಿ ತಿಳಿದು ಪ್ರಾಜ್ಞನಾದ ರಾಜನು ಸಾಮೋಪಾಯದಲ್ಲಿ ಬುದ್ಧಿಯನ್ನಿಟ್ಟು ಯಾವುದು ಕಾರ್ಯ ಯಾವುದು ಅಕಾರ್ಯ ಎಂದು ವಿಚಾರ ಮಾಡಬೇಕು.
ನಿಗೂಢಬುದ್ಧಿರ್ಧೀರಃ ಸ್ಯಾದ್ ವಕ್ತವ್ಯೋ ವಕ್ಷ್ಯತೇ ತಥಾ |
ಸನ್ನಿಕೃಷ್ಟಾಂ ಕಥಾಂ ಪ್ರಾಜ್ಞೋ ಯದಿ ಬುದ್ಧ್ಯಾ ಬೃಹಸ್ಪತಿಃ |
ಸ್ವಭಾವಮೇಷ್ಯತೇ ತಪ್ತಂ ಕೃಷ್ಣಾಯಸಮಿವೋದಕೇ ॥20॥
ಧೀರನಾದ ರಾಜನು ತನ್ನ ಬುದ್ಧಿಯನ್ನು ಬಹಿರಂಗ ಪಡಿಸಬಾರದು. ಎಷ್ಟು ಹೇಳಬೇಕೋ ಅಷ್ಟನ್ನು ಮಾತನಾಡಬೇಕು. ಬುದ್ಧಿಯಿಂದ ಬೃಹಸ್ಪತಿಗೆ ಸಮನಾ- ಗಿದ್ದರೂ ಪ್ರಾಕೃತವಾದ ಜನರು ಮಾತನಾಡುವಂತೆ ಮಾತನಾಡಿದರೆ ಅದು ಅವನ ಸ್ವಭಾವವೆಂದೇ ತಿಳಿಯಬೇಕು. ಕಾದ ಕಬ್ಬಿಣವನ್ನು ನೀರಿನಲ್ಲಿ ಹಾಕಿದರೆ ಅದು ಮೊದಲಿನಂತೆ ಕಪ್ಪಾಗಿಯೂ ತಣ್ಣಗೂ ಆಗುವುದಷ್ಟೇ!
ಅನುಯುಂಜೀತ ಕೃತ್ಯಾನಿ ಸರ್ವಾಣ್ಯೇವ ಮಹೀಪತಿಃ |
ಆಗಮೈರುಪದಿಷ್ಟಾನಿ ಸ್ವಸ್ಯ ಚೈವ ಪರಸ್ಯ ಚ ॥21॥
ರಾಜನಾದವನು ಶಾಸ್ತ್ರೋಪದಿಷ್ಟವಾದ, ತಾನು ಮಾಡಬೇಕಾದ ಮತ್ತು ಶತ್ರು- ಗಳು ಮಾಡುವ ಎಲ್ಲ ಕಾರ್ಯಗಳನ್ನೂ ಮಂತ್ರಿಗಳ ಜೊತೆಯಲ್ಲಿ ಪ್ರಶ್ನೆ ಮಾಡಿ ವಿಚಾರ ಮಾಡಬೇಕು.
ಮೃದುಶೀಲಂ ತಥಾ ಪ್ರಾಜ್ಞಂ ಶೂರಂ ಚಾರ್ಥವಿಶಾರದಮ್ |
ಸ್ವಕರ್ಮಣಿ ನಿಯುಂಜೀತ ಯೇ ಚಾನ್ಯೇ ಚ ಬಲಾಧಿಕಾಃ ॥22॥
ಮೃದುಸ್ವಭಾವವುಳ್ಳವನೂ, ಪ್ರಾಜ್ಞನೂ, ಶೂರನೂ, ಅರ್ಥವಿಶಾರದನೂ ಆದ ಸೇವಕನನ್ನೂ ಮತ್ತು ಬಲಿಷ್ಠರಾದವರನ್ನೂ ತನ್ನ ಕರ್ಮಗಳಲ್ಲಿ ನಿಯೋಜಿಸ- ಬೇಕು.
ಅಥ ದೃಷ್ಟಾನಿ ಯುಕ್ತಾನಿ ಸ್ವಾನುರೂಪೇಷು ಕರ್ಮಸು |
ಸರ್ವಾಂಸ್ತಾನನುವರ್ತೇತ ಸ್ವರಾಂಸ್ತಂತ್ರೀರಿವಾಯತಾ ॥23॥
ಶಾಸ್ತ್ರದೃಷ್ಟವಾದ ಮತ್ತು ಯುಕ್ತಿಯುಕ್ತವಾದ ಕರ್ಮಗಳಲ್ಲಿ ತನಗೆ ಅನುರೂಪ- ರಾದ ಅಧಿಕಾರಿಗಳನ್ನು ನಿಯಮಿಸಬೇಕು. ತಂತಿಯು ಸ್ವರಗಳನ್ನು ಅನುಸರಿಸುವಂತೆ ರಾಜನು ಅವರೆಲ್ಲರನ್ನೂ ಅನುಸರಿಸಿ ನಡೆಯಬೇಕು.
ಧರ್ಮಾಣಾಮವಿರೋಧೇನ ಸರ್ವೇಷಾಂ ಪ್ರಿಯಮಾಚರೇತ್ |
ಮಮಾಯಮಿತಿ ರಾಜಾ ಯಃ ಸ ಪರ್ವತ ಇವಾಚಲಃ ॥24॥
ಧರ್ಮಕ್ಕೆ ವಿರೋಧ ಬರದಂತೆ ಎಲ್ಲರಿಗೂ ಪ್ರಿಯವನ್ನುಂಟುಮಾಡಬೇಕು. ಪ್ರಜೆಗಳನ್ನು ನನ್ನವರು ಎಂದು ತಿಳಿಯುವ ರಾಜನು ಪರ್ವತದಂತೆ ಸ್ಥಿರವಾಗಿರುತ್ತಾನೆ.
ವ್ಯವಸಾಯಂ ಸಮಾಧಾಯ ಸೂರ್ಯೋ ರಶ್ಮಿಮಿವಾಯತಾಮ್ |

ಧರ್ಮಮೇವಾಭಿರಕ್ಷೇತ ಕೃತ್ವಾ ತುಲ್ಯೇ ಪ್ರಿಯಾಪ್ರಿಯೇ ॥25॥
ಸೂರ್ಯನು ತನ್ನ ದೀರ್ಘವಾದ ರಶ್ಮಿಯಿಂದ ಪ್ರಿಯಾಪ್ರಿಯಗಳೆಲ್ಲವನ್ನೂ ಮುಟ್ಟುವಂತೆ ಪ್ರಯತ್ನವನ್ನು ಮುಂದಿಟ್ಟುಕೊಂಡು ಪ್ರಿಯಾಪ್ರಿಯಗಳನ್ನು ಸಮಾನ- ವಾಗಿ ಎಣಿಸಿ ಧರ್ಮವನ್ನೇ ರಕ್ಷಿಸಬೇಕು.
ಕುಲಪ್ರಕೃತಿದೇಶಾನಾಂ ಧರ್ಮಜ್ಞಾನ್ ಮೃದುಭಾಷಿಣಃ |
ಮಧ್ಯೇ ವಯಸಿ ನಿರ್ದೋಷಾನ್ ಹಿತೇ ಯುಕ್ತಾನ್ ಜಿತೇಂದ್ರಿಯಾನ್ ॥26
ಅಲುಬ್ಧಾನ್ ಶಿಕ್ಷಿತಾನ್ ದಾಂತಾನ್ ಧರ್ಮೇಷು ಪರಿನಿಷ್ಠಿತಾನ್ |
ಸ್ಥಾಪಯೇತ್ ಸರ್ವಕಾರ್ಯೇಷು ರಾಜಾ ಧರ್ಮಾರ್ಥರಕ್ಷಿಣಃ ॥27॥
ಕುಲಧರ್ಮಗಳನ್ನು ಸ್ವಭಾವಧರ್ಮಗಳನ್ನು ಮತ್ತುದೇಶಧರ್ಮಗಳನ್ನು ತಿಳಿದ, ಮೃದುಭಾಷಿಗಳಾದ, ಮಧ್ಯವಯಸ್ಸಿನಲ್ಲಿರುವ, ದೋಷದೂರರಾದ ಜಿತೇಂದ್ರಿ- ಯರಾದ, ರಾಜನ ಹಿತದಲ್ಲಿ ಆಸಕ್ತರಾದ, ಲೋಭಿಗಳಲ್ಲದ, ಸುಶಿಕ್ಷಿತರಾದ, ಇಂದ್ರಿಯನಿಗ್ರಹವುಳ್ಳ, ಧರ್ಮದಲ್ಲಿ ಪರಿನಿಷ್ಠಿತರಾದ, ಅಧಿಕಾರಿಗಳನ್ನು ಧರ್ಮ- ರಕ್ಷಕರನ್ನಾಗಿ ಮತ್ತುಅರ್ಥರಕ್ಷಕರನ್ನಾಗಿ ಎಲ್ಲ ಕಾರ್ಯಗಳಲ್ಲಿಯೂ ಸ್ಥಾಪಿಸಬೇಕು.
ಏತೇನೈವ ಪ್ರಕಾರೇಣ ಕೃತ್ಯಾನಾಮಾಗತಿಂ ಗತಿಮ್ |
ಯುಕ್ತಃ ಸಮನುತಿಷ್ಠೇತ ತುಷ್ಟಶ್ಚಾರೈರುಪಸ್ಕೃತಃ ॥28॥
ಇದೇ ರೀತಿಯಿಂದ ಕಾರ್ಯಗಳ ಆದ ಅಥವಾ ಹೋದ ಗತಿಯನ್ನು ಚಾರರ ಮೂಲಕವಾಗಿ ಎಲ್ಲವನ್ನೂ ತಿಳಿದು ಎಚ್ಚರಿಕೆಯಿಂದ ಕೂಡಿದವನಾಗಿ ಸಂತೋಷ- ದಿಂದ ಅನುಷ್ಠಾನ ಮಾಡಬೇಕು.
ಅಮೋಘಕ್ರೋಧಹರ್ಷಸ್ಯ ಸ್ವಯಂ ಕೃತ್ಯಾನ್ವವೇಕ್ಷಿಣಃ |
ಆತ್ಮಪ್ರತ್ಯಯಕೋಶಸ್ಯ ವಸುದೈವ ವಸುಂಧರಾ ॥29॥
ಯಾವ ರಾಜನ ಕ್ರೋಧ ಮತ್ತು ಹರ್ಷಗಳು ವ್ಯರ್ಥವಲ್ಲವೋ, ಯಾವ ರಾಜನು ಸ್ವತಃ ಎಲ್ಲ ಕಾರ್ಯಗಳ ಮೇಲ್ವಿಚಾರಣೆಯನ್ನು ಮಾಡುತ್ತಾನೆಯೋ ಮತ್ತು ತನ್ನನ್ನೇ ತಾನು ನಂಬುತ್ತಾನೆಯೋ (ಆತ್ಮವಿಶ್ವಾಸವೇ ಅವನಿಗೆ ಕೋಶವಾಗಿದೆಯೋ) ಅವನಿಗೆ ಭೂಮಿಯು ಐಶ್ವರ್ಯವನ್ನೇ ಕೊಡುತ್ತದೆ.
ವ್ಯಕ್ತಶ್ಚಾನುಗ್ರಹೋ ಯಸ್ಯ ಯಥಾರ್ಥಶ್ಚಾಪಿ ನಿಗ್ರಹಃ |
ಗುಪ್ತಾತ್ಮಾ ಗುಪ್ತರಾಷ್ಟ್ರಶ್ಚ ಸ ರಾಜಾ ರಾಜಧರ್ಮವಿತ್ ॥30॥
ಯಾವನ ಅನುಗ್ರಹವು ಪ್ರಜೆಗಳ ದೃಷ್ಟಿಗೆ ಗೋಚರವಾಗುತ್ತದೆಯೋ, ನಿಗ್ರಹವೂ ಅಪರಾಧಕ್ಕೆ ಅನುಗುಣವಾಗಿ ಪ್ರಜೆಗಳಿಗೆ ಗೋಚರವಾಗುತ್ತದೆಯೋ ಅಂತಹ ತನ್ನನ್ನು ರಕ್ಷಿಸಿಕೊಂಡು ರಾಷ್ಟ್ರವನ್ನೂ ರಕ್ಷಿಸುವ ರಾಜನು ರಾಜಧರ್ಮವನ್ನು ತಿಳಿದವನು.
ನಿತ್ಯಂ ರಾಷ್ಟ್ರಮವೇಕ್ಷೇತ ಗೋಭಿಃ ಸೂರ್ಯ ಇವೋತ್ಪತನ್ |
ಚಾರಾಂಶ್ಚಾನುಚರಾನ್ ವಿದ್ಯಾತ್ ತಥಾ ಬುದ್ಧ್ಯಾ ನ ಸಂಜ್ವರೇತ್ ॥31॥
ಉದಯಿಸುವ ಸೂರ್ಯನು ತನ್ನ ಕಿರಣಗಳಿಂದ ಎಲ್ಲವನ್ನೂ ನೋಡುವಂತೆ ನಿತ್ಯವೂ ರಾಷ್ಟ್ರವನ್ನು ನೋಡಿಕೊಳ್ಳಬೇಕು. ಚಾರರನ್ನು ಅವರ ಅನುಚರರನ್ನು ತಿಳಿದುಕೊಳ್ಳಬೇಕು. ಮನಸ್ಸಿನಲ್ಲಿ ವಿಹ್ವಲನಾಗಬಾರದು.
ಕಾಲಪ್ರಾಪ್ತಮುಪಾದದ್ಯಾನ್ನಾರ್ಥಂ ರಾಜಾ ಪ್ರಸೂಚಯೇತ್ |
ಅಹನ್ಯಹನಿ ಸಂದುಹ್ಯಾನ್ಮಹೀಂ ಗಾಮಿವ ಬುದ್ಧಿಮಾನ್ ॥32॥
ಆಯಾ ಕಾಲದಲ್ಲಿ ದೊರೆಯುವ ವಸ್ತುಗಳನ್ನು ಸಂಗ್ರಹಿಸಬೇಕು. ರಾಜನು ತಾನು ಮಾಡಲಿರುವ ಕಾರ್ಯವನ್ನು ಮೊದಲೇ ಸೂಚಿಸಬಾರದು. ವಿವೇಕಿ- ಯಾದವನು ನಿತ್ಯವೂ ಹಸುವಿನಿಂದ ಹಾಲು ಕರೆಯುವಂತೆ ರಾಜನು ಭೂಮಿ- ಯಿಂದ ಪ್ರತಿದಿನವೂ ಯೋಗ್ಯವಾದುದನ್ನು ಸಂಪಾದಿಸಬೇಕು.
ಯಥಾ ಕ್ರಮೇಣ ಪುಷ್ಪೇಭ್ಯಶ್ಚಿನೋತಿ ಮಧು ಷಟ್ಪದಃ |
ತಥಾ ದ್ರವ್ಯಮುಪಾದಾಯ ರಾಜಾ ಕುರ್ವೀತ ಸಂಚಯಮ್ ॥33॥
ದುಂಬಿಯು ಹೂಗಳಿಂದ ಕ್ರಮವಾಗಿ ಸ್ವಲ್ಪ ಸ್ವಲ್ಪ ಮಕರಂದವನ್ನು ಸಂಗ್ರಹಿ- ಸುವಂತೆ ರಾಜನು ಪ್ರಜೆಗಳಿಂದ ಸ್ವಲ್ಪಸ್ವಲ್ಪವಾಗಿ ದ್ರವ್ಯವನ್ನು ಸಂಗ್ರಹಿಸಿ ಅದನ್ನು ಬೆಳೆಸಬೇಕು.
ಯದಿ ಗುಪ್ತಾವಶಿಷ್ಟಂ ಸ್ಯಾತ್ ತದ್ವಿತಂ ಧರ್ಮಕಾಮಯೋಃ |
ಸಂಚಯಾನುವಿಸರ್ಗೀ ಸ್ಯಾದ್ ರಾಜಾ ಶಾಸ್ತ್ರವಿದಾತ್ಮವಾನ್ ॥34॥
ತಾನು ಸಂಗ್ರಹಿಸಿದ ಕೋಶವು ಧರ್ಮ ಕಾಮಗಳಿಗೆ ಉಪಯೋಗಿಸಿ ಗುಪ್ತವಾಗಿ ಇಟ್ಟುದದಕ್ಕಿಂತಲೂ ಅಧಿಕವಾದರೆ ಅದನ್ನು ಶಾಸ್ತ್ರವನ್ನು ತಿಳಿದ ಧೈರ್ಯಶಾಲಿಯಾದ ರಾಜನು ಸಂಚಯಕ್ಕನುಗುಣವಾಗಿ ಪ್ರಜೆಗಳಿಗೆ ದಾನ ಮಾಡಬೇಕು.
ನಾಲ್ಪಮರ್ಥಂ ಪರಿಭವೇನ್ನಾವಮನ್ಯೇತ ಶಾತ್ರವಾನ್ |
ಬುದ್ಧ್ಯಾವಬುದ್ಧ್ಯೇದಾತ್ಮಾನಂ ನ ಚಾಬುದ್ಧಿಷು ವಿಶ್ವಸೇತ್ ॥35॥
ಅಲ್ಪವಾದ ಧನವನ್ನು ತಿರಸ್ಕರಿಸಬಾರದು. ಶತ್ರುಗಳನ್ನು ಉಪೇಕ್ಷೆ ಮಾಡ- ಬಾರದು. ತನ್ನನ್ನೇ ತನ್ನ ಬುದ್ಧಿಯಿಂದ ಪರೀಕ್ಷಿಸಿಕೊಳ್ಳಬೇಕು. ಬುದ್ಧಿಹೀನರಾದವರಲ್ಲಿ ವಿಶ್ವಾಸ ಮಾಡಬಾರದು.
ಧೃತಿರ್ದಾಕ್ಷ್ಯಂ ಸಂಯಮೋ ಬುದ್ಧಿರಗ್ರ್ಯಾ
ಧೈರ್ಯಂ ಶೌರ್ಯಂ ದೇಶಕಾಲೋಽಪ್ರಮಾದಃ |
ಸ್ವಲ್ಪಸ್ಯ ವಾ ಮಹತೋ ವಾಪಿ ವೃದ್ಧೌ
ಧನಸ್ಯೈತಾನ್ಯಷ್ಟ ಸಮಿಂಧನಾನಿ ॥36॥
ಧೈರ್ಯ, ದಕ್ಷತೆ, ಸಂಯಮ, ಶ್ರೇಷ್ಠವಾದ ಬುದ್ಧಿ, ಧೈರ್ಯ, ಶೌರ್ಯ, ದೇಶಕಾಲಾನುಕೂಲತೆ, ಅಪ್ರಮಾದ ಈ ಎಂಟು ಗುಣಗಳು ಸ್ವಲ್ಪ

ಧನವನ್ನು ಅಥವಾ ಮಹಾಧನವನ್ನು ವೃದ್ಧಿಮಾಡುವುದಕ್ಕೆ ಬೇಕಾದ ಶ್ರೇಷ್ಠವಾದ ಸಾಧನಗಳು.
ಅಗ್ನಿಸ್ತೋಕೋ ವರ್ಧತೇ ಹ್ಯಾಜ್ಯಸಿಕ್ತೋ
ಬೀಜಂ ಚೈಕಂ ಬಹುಸಾಹಸ್ರಮೇತಿ |
ಕ್ಷಯೋದಯೌ ವಿಪುಲೌ ಸನ್ನಿಶಾಮ್ಯ
ತಸ್ಮಾದಲ್ಪಂ ನಾವಮನ್ಯೇತ ವಿದ್ವಾನ್ ॥37॥
ಅಲ್ಪವಾದ ಅಗ್ನಿಯು ಆಜ್ಯಸಿಕ್ತವಾಗಿ ಬೆಳೆಯುತ್ತದೆ. ಭೂಮಿಯಲ್ಲಿ ನೆಟ್ಟ ಒಂದು ಬೀಜವು ಅನೇಕಸಹಸ್ರ ಬೀಜಗಳಾಗುತ್ತವೆ. ಸಣ್ಣಪದಾರ್ಥದಿಂದುಂಟಾಗುವ ಅಭಿ- ವೃದ್ಧಿ ಮತ್ತು ಅವನತಿಗಳು ವಿಪುಲವಾದವುಗಳು ಎಂದು ಚೆನ್ನಾಗಿ ತಿಳಿದು ವಿದ್ವಾಂಸ-ನಾದವನು ಅಲ್ಪವಾದುದನ್ನು ಉಪೇಕ್ಷಿಸಬಾರದು.
ಬಾಲೋಽಬಾಲಃ ಸ್ಥವಿರೋ ವಾ ರಿಪುರ್ಯಃ
ಸದಾ ಪ್ರಮತ್ತಂ ಪುರುಷಂ ನಿಹನ್ಯಾತ್ |
ಕಾಲೇನಾನ್ಯಸ್ತಸ್ಯ ಮೂಲಂ ಹರೇತ
ಕಾಲಜ್ಞಾತಾ ಪಾರ್ಥಿವಾನಾಂ ವರಿಷ್ಠಃ ॥38॥
ಪ್ರಮತ್ತನಾದ ಶತ್ರುವು ಬಾಲನಾಗಲೀ, ಯುವಕನಾಗಲೀ, ವೃದ್ಧನಾಗಲೀ ಅವನನ್ನು ಸಂಹರಿಸಬೇಕು. ಇಲ್ಲದಿದ್ದರೆ ಅವನು ಅವನಿಗೆ ಯೋಗ್ಯವಾದ ಕಾಲದಲ್ಲಿ ಈ ರಾಜನ ಮೂಲವನ್ನೇ ನಾಶ ಮಾಡಬಹುದು. ಆಯಾ ಕಾರ್ಯವನ್ನು ಮಾಡಲು ಯೋಗ್ಯವಾದ ಕಾಲವನ್ನು ತಿಳಿದ ರಾಜನು ರಾಜರಲ್ಲಿ ಶ್ರೇಷ್ಠನಾದವನಾಗುತ್ತಾನೆ.
ಹರೇತ್ ಕೀರ್ತಿಂ ಧರ್ಮಮಸ್ಯೋಪರುಂಧ್ಯಾದ್
ಅರ್ಥೇ ವಿಘ್ನಂ ವೀರ್ಯಮಸ್ಯೋಪಹನ್ಯಾತ್ |
ರಿಪುರ್ದ್ವೇಷ್ಟಾ ದುರ್ಬಲೋ ವಾ ಬಲೀ ವಾ
ತಸ್ಮಾಚ್ಛತ್ರೌ ನೈವ ಬಿಭ್ಯೇದ್ ಯತಾತ್ಮಾ ॥39॥
ಶತ್ರುವಿನ ಕೀರ್ತಿಯನ್ನು ವಿನಾಶಗೊಳಿಸಬೇಕು. ಅವನ ಧರ್ಮಕ್ಕೆ ಅಡ್ಡಿಯನ್ನು ಮಾಡಬೇಕು. ಅವನ ಅರ್ಥಕ್ಕೆ ವಿಘ್ನವನ್ನುಂಟುಮಾಡಬೇಕು. ಅವನ ಪರಾಕ್ರಮ- ವನ್ನು ನಾಶಗೊಳಿಸಬೇಕು. ದ್ವೇಷವನ್ನು ಮಾಡುವ ಶತ್ರುವು ದುರ್ಬಲನಾಗಿರಲಿ ಅಥವಾ ಪ್ರಬಲನಾಗಿರಲಿ ಪ್ರಯತ್ನಶೀಲನಾದ ರಾಜನು ಅವನಿಗೆ ಹೆದರಬಾರದು.
ಕ್ಷಯೇ ಶತ್ರೋಃ ಸಂಚಯಂ ಪಾಲನಂ ಚಾ-
ಪ್ಯುಭೌ ಬುದ್ಧ್ಯಾ ಸಹಿತೌ ಸರ್ವಕಾಮೌ |
ಅತಶ್ಚಾನ್ಯನ್ಮತಿಮಾನ್ ಸಂದಧೀತ
ತಸ್ಮಾದ್ ರಾಜಾ ಬುದ್ಧಿಮಂತಂ ಶ್ರಯೇತ ॥40॥
ಶತ್ರುವು ನಾಶವನ್ನು ಹೊಂದಿದಾಗ ಅವನ ಕೋಶದಲ್ಲಿರುವ ಧನವನ್ನು ಸಂಗ್ರಹಿಸಬೇಕು. ಮತ್ತು ರಾಜಕುಮಾರನನ್ನು ಆ ದೇಶದಲ್ಲಿಯೇ ರಕ್ಷಿಸಬೇಕು. ಇವೆರಡನ್ನೂ ಬುದ್ಧಿಯಿಂದ ವಿಚಾರಮಾಡಿದರೆ ಇವು ಸರ್ವಕಾಮಪ್ರದವಾಗುತ್ತವೆ. ಶತ್ರುಕುಮಾರನು ದುರ್ಜನನಾಗಿದ್ದರೆ ಅವನ ಬಂಧನ, ಸಜ್ಜನನಾಗಿದ್ದರೆ ಅವನ ಪಾಲನೆ ಎಂಬ ವಿವೇಕವನ್ನು ಹೊಂದಲು ಬುದ್ಧಿಯಿಂದ ವಿಮರ್ಶೆಯು ಅವಶ್ಯಕ. ಬಂಧನ ಮತ್ತು ರಕ್ಷಣೆಗಳ ಮಧ್ಯದಲ್ಲಿ ಯಾವುದಾದರೂ ಒಂದನ್ನು ಅನುಷ್ಠಾನ ಮಾಡಬೇಕು. ಆದ್ದರಿಂದ ರಾಜನು ಬುದ್ಧಿವಂತನನ್ನು ಆಶ್ರಯಿಸಬೇಕು. (ಲಕ್ಷ್ಯಾಲಂಕಾರ)
ಬುದ್ಧಿರ್ದೀಪ್ತಾ ಬಲವಂತಂ ಹಿನಸ್ತಿ
ಬಲಂ ಬುದ್ಧ್ಯಾ ವರ್ಧತೇ ಪಾಲ್ಯಮಾನಮ್ |
ಶತ್ರುರ್ಬುದ್ಧ್ಯಾ ಸೀದತೇ ವರ್ಧಮಾನೋ
ಬುದ್ಧೇಃ ಪಶ್ಚಾತ್ ಕರ್ಮ ಯತ್ ತತ್ ಪ್ರಶಸ್ತಮ್ ॥41॥
ಕ್ರೂರವಾದ ಬುದ್ಧಿಯು ಬಲಿಷ್ಠನಾದ ತನ್ನನ್ನು ನಾಶಪಡಿಸುತ್ತದೆ. ಬುದ್ಧಿಯಿಂದ ರಕ್ಷಿಸಲ್ಪಡುವ ತನ್ನ ಸೈನ್ಯವು ಅಭಿವೃದ್ಧಿಯನ್ನು ಹೊಂದುತ್ತದೆ. ಸರಿಯಾದ ಬುದ್ಧಿಯನ್ನು ಉಪಯೋಗಿಸಿದರೆ ಏಳಿಗೆಯನ್ನು ಹೊಂದುತ್ತಿರುವ ಶತ್ರುವು ಅವನತಿಯನ್ನು ಹೊಂದುತ್ತಾನೆ. ಆದ್ದರಿಂದ ಬುದ್ಧಿಯು ಪ್ರಶಸ್ತವಾದುದು ಅನಂತರ ಅದಕ್ಕೆ ಅನು- ಗುಣವಾದ ಕರ್ಮವು ಪ್ರಶಸ್ತವಾದುದು.
ಸರ್ವಾನ್ ಕಾಮಾನ್ ಕಾಮಯಾನೋ ಹಿ ಧೀರಃ
ಸತ್ತ್ವೇನಾಲ್ಪೇನಾಪ್ನುತೇ ಹೀನದೇಹಃ |
ಯಥಾತ್ಮಾನಂ ಪ್ರಾರ್ಥಯತೇಽರ್ಥ್ಯಮಾನೈಃ
ಶ್ರೇಯಃಪಾತ್ರಂ ಪೂರಯತೇ ಹ್ಯನಲ್ಪಮ್ ॥42॥
ದೋಷರಹಿತನಾದ ಧೀರನಾದ ರಾಜನು ತನ್ನ ಎಲ್ಲ ಕಾಮಗಳನ್ನೂ ಅಲ್ಪ- ಪ್ರಯತ್ನದಿಂದಲೇ ಪಡೆಯುತ್ತಾನೆ. ಸರ್ವಸಂಪನ್ನನಾಗಿದ್ದರೂ ಪ್ರಜೆಗಳಿಂದ ಅರ್ಘ- ಮಾನಗಳಿಂದ ತಾನು ಪೂಜಿಸಲ್ಪಡಬೇಕೆಂದು ಬಯಸುವ ರಾಜನು ಅನಲ್ಪವಾದ ತನ್ನ ಶ್ರೇಯಃಪಾತ್ರೆಯನ್ನು ಪೂರಣಗೊಳಿಸುವುದಿಲ್ಲ(?). ಅಂತಹ ದುರಾಸೆಯುಳ್ಳ ರಾಜನು ಶ್ರೇಯಸ್ಸನ್ನು ಹೊಂದುವುದಿಲ್ಲ.
ತಸ್ಮಾದ್ ರಾಜಾ ಪ್ರಗೃಹೀತಃ ಪ್ರಜಾಸು
ಮೂಲಂ ಲಕ್ಷ್ಮ್ಯಾಃ ಸರ್ವತೋಽಭ್ಯಾದದೀತ |
ದೀರ್ಘಂ ಕಾಲಮಪಿ ಸಂಪೀಡ್ಯಮಾನೋ
ವಿದ್ಯುತ್ಸಂಪಾತಮಪಿ ನೋ ನಿರ್ಜಿತಃ ಸ್ಯಾತ್ ॥43॥
ಆದ್ದರಿಂದ ಪ್ರಜೆಗಳಿಂದ ಸ್ವೀಕೃತನಾದ ರಾಜನು ಸಂಪತ್ತಿಗೆ ಮೂಲವಾದ ಧನ ವನ್ನು ಪ್ರಜೆಗಳಿಂದ ಎಲ್ಲ ಕಡೆಗಳಿಂದಲೂ

ಸಂಗ್ರಹಿಸಬೇಕು. ಅಂತಹ ರಾಜನು ಸಿಡಿಲುಬಡಿದಂತಹ ಅನರ್ಥಕ್ಕೆ ದೀರ್ಘಕಾಲದವರೆಗೆ ಒಳಗಾದರೂ ಪರಾಜಿತ- ನಾಗುವುದಿಲ್ಲ.
(ಮಿಂಚಿನಂತಹ ಐಶ್ವರ್ಯವನ್ನು ಹೊಂದಿದರೂ ಪರಾಜಿತನಾಗು- ವುದಿಲ್ಲ - ಲಕ್ಷಾಲಂಕಾರ)
ವಿದ್ಯಾ ತಪೋ ವಾ ವಿಪುಲಂ ಧನಂ ವಾ
ಸರ್ವಮೇತದ್ ವ್ಯವಸಾಯೇನ ಶಕ್ಯಮ್ |
ಬ್ರಹ್ಮ ಯತ್ತಂ ನಿವಸತಿ ದೇಹವತ್ಸು
ತಸ್ಮಾದ್ ವಿದ್ಯಾದ್ ವ್ಯವಸಾಯಂ ಪ್ರಭೂತಮ್ ॥44॥
ವಿದ್ಯೆಯಾಗಲೀ, ತಪಸ್ಸಾಗಲೀ, ವಿಪುಲವಾದ ಧನವಾಗಲೀ ಎಲ್ಲವೂ ಪ್ರಯತ್ನ ದಿಂದ ಲಭ್ಯವಾಗುತ್ತದೆ. ಜೀವರಲ್ಲಿ ಪ್ರಯತ್ನರೂಪನಾದ ಪರಬ್ರಹ್ಮನು ನೆಲೆಸಿದ್ದಾನೆ. ಆದ್ದರಿಂದ ಪ್ರಯತ್ನವು ಶ್ರೇಷ್ಠವಾದುದೆಂದು ತಿಳಿಯಬೇಕು.
ಯತ್ರಾಸತೇ ಮತಿಮಂತೋ ಮನಸ್ವಿನಃ
ಶಕ್ರೋ ವಿಷ್ಣುರ್ಯತ್ರ ಸರಸ್ವತೀ ಚ |
ವಸಂತಿ ಭೂತಾನಿ ಚ ಯತ್ರ ನಿತ್ಯಂ
ತಸ್ಮಾದ್ ವಿದ್ವಾನ್ ನಾವಮನ್ಯೇತ ದೇಹಮ್ ॥45॥
ಯಾವ ದೇಹದಲ್ಲಿ ಮೇಧಾವಿಗಳೂ, ಧೈರ್ಯಶಾಲಿಗಳೂ ಆದ ಇಂದ್ರ, ವಿಷ್ಣು, ಸರಸ್ವತಿಯರು ಮತ್ತು ಎಲ್ಲಾ ಭೂತಗಳೂ ನಿತ್ಯವೂ ನೆಲೆಸಿರುವರೋ ಆ ಕಾರಣದಿಂದ ಆ ದೇಹವನ್ನು ವಿದ್ವಾಂಸನಾದವನು ಅವಮಾನಗೊಳಿಸಬಾರದು.
ಲುಬ್ಧಂ ಹನ್ಯಾತ್ ಸಂಪ್ರದಾನೇನ ನಿತ್ಯಂ
ಲುಬ್ಧಸ್ತೃಪ್ತಿಂ ಪರವಿತ್ತಸ್ಯ ನೈತಿ |
ಸರ್ವೋ ಲುಬ್ಧಃ ಕರ್ಮಗುಣೋಪಭೋಗೇ
ಯೋಽರ್ಥೈರ್ಹೀನೋ ಧರ್ಮಕಾಮೌ ಜಹಾತಿ ॥46॥
ಲೋಭಿಯಾದವನಿಗೆ ಧನವನ್ನು ನೀಡಿಯೇ ಅವನನ್ನು ಜಯಿಸಬೇಕು. ಲೋಭಿ ಯಾದವನು ಇನ್ನೊಬ್ಬರ ವಿತ್ತವು ಎಷ್ಟು ಬಂದರೂ ತೃಪ್ತಿಯನ್ನು ಹೊಂದುವುದಿಲ್ಲ. ಎಲ್ಲರಿಗೂ ಸತ್ಕರ್ಮದಿಂದ ಉಂಟಾದ ಗುಣಗಳ ಭೋಗದಲ್ಲಿ ಆಸೆಯಿರುತ್ತದೆ. ಅರ್ಥಹೀನನಾದವನು ಧರ್ಮವನ್ನೂ, ಕಾಮವನ್ನೂ ಕಳೆದುಕೊಳ್ಳುತ್ತಾನೆ. (ಧರ್ಮಾಚರಣೆಯನ್ನೂ ಮಾಡಲಾರ, ಕಾಮಭೋಗವನ್ನೂ ಮಾಡಲಾರ).
ಧನಂ ಭೋಜ್ಯಂ ಪುತ್ರದಾರಂ ಸಮೃದ್ಧಿಂ
ಸರ್ವೋ ಲುಬ್ಧಃ ಪ್ರಾರ್ಥಯತೇ ಪರೇಷಾಮ್ |
ಲುಬ್ಧೇ ದೋಷಾಃ ಸಂಭವಂತೀಹ ಸರ್ವೇ
ತಸ್ಮಾದ್ ರಾಜಾ ನ ಪ್ರಗೃಹ್ಣೀತ ಲುಬ್ಧಾನ್ ॥47॥
ಲೋಭಿಯಾದವನು ಇನ್ನೊಬ್ಬರ ಧನ ಭೋಜ್ಯವಸ್ತುಗಳು, ಪತ್ನೀಪುತ್ರರು, ಸಮೃದ್ಧಿ ಎಲ್ಲವನ್ನೂ ಅಪೇಕ್ಷಿಸುತ್ತಾನೆ. ಅವನಲ್ಲಿ ಎಲ್ಲ ದೋಷಗಳೂ ಉಂಟಾಗುತ್ತವೆ. ಆದ್ದರಿಂದ ರಾಜನು ಲೋಭಿಗಳನ್ನು ಹತ್ತಿರ ಸೇರಿಸಬಾರದು.
ಸಂದರ್ಶನೇ ಸತ್ಪುರುಷಂ ಜಘನ್ಯಮಪಿ ಚೋದಯೇತ್ |
ಆರಂಭಾನ್ ದ್ವಿಷತಾಂ ಪ್ರಾಜ್ಞಃ ಸರ್ವಾನರ್ಥಾಂಸ್ತು ಸೂದಯೇತ್ ॥48॥
ಅಲ್ಪನಾದ ಸತ್ಪುರುಷನಿಗೂ ಸಂದರ್ಶನವನ್ನು ಕೊಡುವುದಕ್ಕಾಗಿ ಒಳಗೆ ಬಿಡುವಂತೆ ದ್ವಾರಪಾಲಕರಿಗೆ ಸೂಚನೆಯನ್ನು ನೀಡಬೇಕು. ಪ್ರಾಜ್ಞನಾದ ರಾಜನು ಶತ್ರುಗಳ ಸರ್ವೋಪಕ್ರಮಗಳನ್ನು ಮತ್ತು ಸರ್ವಾರ್ಥಗಳನ್ನು ನಾಶಗೊಳಿಸಬೇಕು. - (ಲಕ್ಷಾಲಂಕಾರ)
ಧರ್ಮಾನ್ವಿತೇಷು ವಿಜ್ಞಾತೋ ಮಂತ್ರೀ ಗುಪ್ತಶ್ಚ ಪಾಂಡವ |
ಆಪ್ತೋ ರಾಜನ್ ಕುಲೀನಶ್ಚ ಪರ್ಯಾಪ್ತೋ ರಾಜ್ಯಸಂಗ್ರಹೇ ॥49॥
ಎಲೈ ಪಾಂಡವನೇ! ಧರ್ಮಸಂಬದ್ಧಕಾರ್ಯಗಳ ಜ್ಞಾನವುಳ್ಳ, ಸ್ವತಃ ರಕ್ಷಿತ- ನಾದ, ಆಪ್ತನೂ, ಕುಲೀನನೂ ಆದ ಮಂತ್ರಿಯು ರಾಜ್ಯವನ್ನು ಚೆನ್ನಾಗಿ ನೋಡಿ- ಕೊಳ್ಳಲು ಸಮರ್ಥನಾಗುತ್ತಾನೆ.
ವಿಧಿಪ್ರವೃತ್ತಾನ್ ನರದೇವಧರ್ಮಾನ್
ಉಕ್ತಾನ್ ಸಮಾಸೇನ ನಿಬೋಧ ಬುದ್ಧ್ಯಾ |
ಇಮಾನ್ ವಿದಧ್ಯಾದ್ ವ್ಯತಿಸೃತ್ಯ ಯೋಽಸೌ
ರಾಜಾ ಮಹೀಂ ಪಾಲಯಿತುಂ ಸ ಶಕ್ತಃ ॥50॥
ನಾನು ಸಂಕ್ಷೇಪವಾಗಿ ಹೇಳಿದ ಶಾಸ್ತ್ರಗಳಲ್ಲಿ ಪ್ರವೃತ್ತವಾದ ರಾಜಧರ್ಮಗಳನ್ನು ಬುದ್ಧಿಯಿಂದ ತಿಳಿದುಕೋ. ಯಾವ ರಾಜನು ಇವುಗಳನ್ನು ಅನುಸರಿಸಿ ಕಾರ್ಯವನ್ನು ಮಾಡುತ್ತನೆಯೋ ಅವನು ಭೂಮಿಯನ್ನು ಆಳಲು ಸಮರ್ಥನಾಗುತ್ತಾನೆ.
ಅನೀತಿಜಂ ಯದ್ಯವಿಧಾನಜಂ ಸುಖಂ
ಹಠಪ್ರಣೀತಂ ವಿವಿಧಂ ಪ್ರದೃಶ್ಯತೇ |
ನ ವಿದ್ಯತೇ ತಸ್ಯ ಗತಿರ್ಮಹೀಪತೇ-
ರ್ನ ವಿದ್ಯತೇ ರಾಷ್ಟ್ರಜಮುತ್ತಮಂ ಸುಖಮ್ ॥51॥
ಯಾವ ರಾಜನು ಅನೈತಿಕವಾದ, ಶಾಸ್ತ್ರಸಮ್ಮತವಲ್ಲದ, ಹಠದಿಂದ ಸಂಪಾದಿಸಿದ ವಿವಿಧಸುಖಗಳಲ್ಲಿ ಪ್ರವೃತ್ತನಾಗುತ್ತಾನೆಯೋ ಅಂತಹ ರಾಜನಿಗೆ ಶ್ರೇಷ್ಠವಾದ ಬುದ್ಧಿ (ಪರಗತಿ) ಇರುವುದಿಲ್ಲ. ರಾಷ್ಟ್ರದಿಂದ ಪ್ರಜೆಗಳಿಗಾಗಲೀ ತನಗಾಗಲೀ ಉಂಟಾಗುವ ಸುಖವೂ ಇರುವುದಿಲ್ಲ.
ಧನೈರ್ವಿಶಿಷ್ಟಾನ್ ಮತಿಶೀಲಪೂಜಿತಾನ್
ಗುಣೋಪಪನ್ನಾನ್ ಯುಧಿ ದೃಷ್ಟವಿಕ್ರಮಾನ್ |

ಗುಣೇಷು ದೃಷ್ಟಾನಚಿರಾದಿಹಾತ್ಮವಾನ್
ಸತೋಽಭಿಸಂಧಾಯ ನಿಹಂತಿ ಶಾತ್ರವಾನ್ ॥52॥
ಧನವಂತರಾದ, ಸದ್ಬುದ್ಧಿ ಮತ್ತುಶೀಲಗಳಿಂದ ಪೂಜಿತರಾದ, ಗುಣವಂತರಾದ, ಯುದ್ಧದಲ್ಲಿ ದೃಢವಿಕ್ರಮರಾದ, ಸಜ್ಜನರನ್ನು ಜೊತೆಯಲ್ಲಿರಿಸಿಕೊಂಡು ಅವರ ಜೊತೆಯಲ್ಲಿ ಚಿಂತನೆಯನ್ನು ಮಾಡಿ ಧೈರ್ಯಶಾಲಿಯಾದ ರಾಜನು ಶತ್ರುಗಳನ್ನು ಗೆಲ್ಲುತ್ತಾನೆ.
ಪಶ್ಯೇದುಪಾಯಾನ್ ವಿವಿಧೈಃ ಕ್ರಿಯಾಪಥೈ-
ರ್ನ ಚಾನುಪಾಯೇನ ಮತಿಂ ನಿವೇಶಯೇತ್ ।
ಶ್ರಿಯಂ ವಿಶಿಷ್ಟಾಂ ವಿಪುಲಂ ಯಶೋ ಧನಂ
ನ ದೋಷದರ್ಶೀ ಪುರುಷಃ ಸಮಶ್ನುತೇ ॥53॥
ವಿವಿಧಕ್ರಿಯಾ ಮಾರ್ಗಗಳಿಂದ ಶತ್ರುವನ್ನು ಸೋಲಿಸುವ ಉಪಾಯಗಳನ್ನು ನೋಡಬೇಕು. ಉಪಾಯವಲ್ಲದ ರೀತಿಯಲ್ಲಿ ಯೋಚಿಸಬಾರದು. ತಪ್ಪಾಗಿ ಯೋಚಿಸುವ ಪುರುಷನು ವಿಪುಲವಾದ ಸಂಪತ್ತನ್ನಾಗಲೀ, ಕೀರ್ತಿಯನ್ನಾಗಲೀ, ಧನವನ್ನಾಗಲೀ ಗಳಿಸುವುದಿಲ್ಲ.
ಪ್ರೀತಿಪ್ರವೃತ್ತಂ ವಿನಿವರ್ತನಂ ಚ
ಸುಹೃತ್ಸು ವಿಜ್ಞಾಯ ನಿವರ್ತ್ಯ ಚೋಭಯಮ್ ।
ಯದೇವ ಮಿತ್ರಂ ಗುರುಭಾರಮಾವಹೇತ್
ತದೇವ ಸುಸ್ನಿಗ್ಧಮುದಾಹರೇದ್ ಬುಧಃ ॥54॥
ಪ್ರೀತಿಯಿಂದ ರಾಜನ ಕಾರ್ಯದಲ್ಲಿ ಪ್ರವೃತ್ತಿ ಮತ್ತು ರಾಜನಿಗೆ ಒದಗ- ಬಹುದಾದ ಅಪಾಯದಿಂದ ನಿವೃತ್ತಿ ಇವೆರಡನ್ನೂ ಸುಹೃಜ್ಜನರಿಂದ ಮಾಡಿಸಿ ಅದರಲ್ಲಿ ಯಾರು ಹೆಚ್ಚಿನ ಭಾರವನ್ನು ಹೊರುತ್ತಾನೆಯೋ (ಹೆಚ್ಚಿನ ಜವಾಬ್ದಾರಿ- ಯನ್ನು ಹೊರುತ್ತಾನೆಯೋ) ಅಂತಹವನನ್ನು ಸ್ನೇಹಯುಕ್ತನಾದ ಮಿತ್ರನೆಂದು ರಾಜನು ಉದಾಹರಿಸಬೇಕು. (ಹೇಳಬೇಕು) (ಲಕ್ಷಾಲಂಕಾರ)
ಏತಾನ್ ಮಯೋಕ್ತಾಂಸ್ತವ ರಾಜಧರ್ಮಾನ್
ನೃಣಾಂ ಚ ಗುಪ್ತೌ ಮತಿಮಾದಧತ್ಸ್ವ ।
ಅವಾಪ್ಸ್ಯಸೇ ಪುಣ್ಯಫಲಂ ಸುಖೇನ
ಸರ್ವೋ ಹಿ ಲೋಕೋತ್ತಮಧರ್ಮಮೂಲಃ ॥55॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕವಿಂಶತ್ಯಧಿಕಶತತಮೋಽಧ್ಯಾಯಃ ॥121॥
ನಾನು ನಿನಗೆ ಹೇಳಿದ ಈ ರಾಜಧರ್ಮಗಳನ್ನು ತಿಳಿದು ಪ್ರಜೆಗಳನ್ನು ರಕ್ಷಿಸುವುದರಲ್ಲಿ ಬುದ್ಧಿಯನ್ನು ನಿಯೋಜಿಸು. ನೀನು ಸುಖವಾಗಿ ಪುಣ್ಯಫಲವನ್ನು ಗಳಿಸುವಿ. ಎಲ್ಲ ಲೋಕಗಳೂ ಶ್ರೇಷ್ಠವಾದ ಧರ್ಮಮೂಲಗಳಾದವುಗಳು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 120ನೇ ಅಧ್ಯಾಯವು ಮುಗಿಯಿತು.
0

122. ನೂರಇಪ್ಪತ್ತೆರಡನೆಯ ಅಧ್ಯಾಯ
ದಂಡಸ್ವರೂಪಕಥನ
ಯುಧಿಷ್ಠಿರಃ
ಅಯಂ ಪಿತಾಮಹೇನೋಕ್ತೋ ರಾಜಧರ್ಮಃ ಸನಾತನಃ ।
ಈಶ್ವರಶ್ಚ ಮಹಾದಂಡೋ ದಂಡೇ ಸರ್ವಂ ಪ್ರತಿಷ್ಠಿತಮ್ ॥1॥
ಯುಧಿಷ್ಠಿರ ಈ ಸನಾತನವಾದ ರಾಜಧರ್ಮವು ಪಿತಾಮಹರಾದ ಬ್ರಹ್ಮ- ದೇವರಿಂದ ಹೇಳಲ್ಪಟ್ಟಿದೆ. ಈಶ್ವರನೇ ಮಹಾದಂಡಸ್ವರೂಪನಾದವನು. ಎಲ್ಲವೂ ದಂಡವನ್ನವಲಂಬಿಸಿದೆ.
ದೇವತಾನಾಮೃಷೀಣಾಂ ಚ ಪಿತೄಣಾಂ ಚ ಮಹಾತ್ಮನಾಮ್ ।
ಯಕ್ಷರಕ್ಷಃಪಿಶಾಚಾನಾಂ ಮರ್ತ್ಯಾನಾಂ ಚ ವಿಶೇಷತಃ ॥2॥
ಸರ್ವೇಷಾಂ ಪ್ರಾಣಿನಾಂ ಲೋಕೇ ತಿರ್ಯಕ್ಷ್ವಪಿ ನಿವಾಸಿನಾಮ್ ।
ಸರ್ವವ್ಯಾಪೀ ಮಹಾತೇಜಾ ದಂಡಃ ಶ್ರೇಯಾನಿತಿ ಪ್ರಭೋ ॥3॥
ಇತ್ಯೇತದುಕ್ತಂ ಭವತಾ ದಂಡೇನೈವ ಚರಾಚರಮ್ ।
ದೃಶ್ಯತೇ ಲೋಕಮಾಸಕ್ತಂ ಸಸುರಾಸುರಮಾನುಷಮ್ ॥4॥
ಎಲೈ ಪ್ರಭುವೇ! ದೇವತೆಗಳು, ಋಷಿಗಳು, ಪಿತೃಗಳು, ಮಹಾತ್ಮರು, ಯಕ್ಷರಕ್ಷ- ಪಿಶಾಚಿಗಳು, ವಿಶೇಷವಾಗಿ ಮನುಷ್ಯರು, ಲೋಕದಲ್ಲಿರುವ ಎಲ್ಲಾ ಪ್ರಾಣಿಗಳು - ಇವರೆಲ್ಲರನ್ನೂ ಮಹಾತೇಜಸ್ಸುಳ್ಳ ಶ್ರೇಷ್ಠವಾದ ದಂಡವು ವ್ಯಾಪಿಸಿಕೊಂಡಿದೆ - ಎಂದು ಹೇಳಿದ್ದೀಯೆ. ಚರಾಚರವಾದ ಸುರಾಸುರಮನುಷ್ಯರಿಂದ ಸಹಿತವಾದ ಲೋಕವು ದಂಡವನ್ನು ಅವಲಂಬಿಸಿಕೊಂಡಿದೆ ಎಂದು ಹೇಳಿದ್ದೀಯೆ.
ಏತದಿಚ್ಛಾಮ್ಯಹಂ ಜ್ಞಾತುಂ ತತ್ತ್ವೇನ ಭರತರ್ಷಭ ।
ಕೋ ದಂಡಃ ಕೀದೃಶೋ ದಂಡಃ ಕಿಂರೂಪಃ ಕಿಂಪರಾಯಣಃ ॥5॥
ಕಿಮಾತ್ಮಕಃ ಕಥಂಭೂತಃ ಕತಿ ಮೂರ್ತಿಃ ಕಥಂ ಪ್ರಭುಃ ।
ಜಾಗರ್ತಿ ಸ ಕಥಂ ದಂಡಃ ಪ್ರಜಾಸ್ವವಹಿತಾತ್ಮಕಃ ॥6॥

ಎಲೈ ಭರತರ್ಷಭನೇ! ಇದನ್ನು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ. ದಂಡವೆಂದರೆ ಏನು? ಅದು ಎಂತಹದು, ಅದರ ರೂಪವೇನು? ಅದು ಯಾರನ್ನು ಆಶ್ರಯಿಸಿರುತ್ತದೆ? ಅದರ ಮೂಲವೇನು? ಅದಕ್ಕೆ ಎಷ್ಟು ರೂಪಗಳಿವೆ? ಅದು ಹೇಗೆ ಪ್ರಭುತ್ವವನ್ನು ಸ್ಥಾಪಿಸುತ್ತದೆ? ಪ್ರಜೆಗಳಿಗೆ ಅಹಿತರೂಪವಾಗಿರುವ ಆ ದಂಡವು ಹೇಗೆ ಜಾಗರೂಕವಾಗಿರುತ್ತದೆ?
ಕಶ್ಚ ಪೂರ್ವಾಪರಮಿದಂ ಜಾಗರ್ತಿ ಪರಿಪಾಲಯನ್ |
ಕಶ್ಚ ವಿಜ್ಞಾಯತೇ ಪೂರ್ವಂ ಕೋಽಪರೋ ದಂಡಸಂಜ್ಞಿತಃ |
ಕಿಂಸಂಸ್ಥಶ್ಚ ಭವೇದ್ ದಂಡಃ ಕಾ ಚಾಸ್ಯ ಗತಿರಿಷ್ಯತೇ ॥7॥
ದಂಡಕ್ಕಿಂತ ಮೊದಲು ಮತ್ತು ಅನಂತರ ಈ ಜಗತ್ತನ್ನು ಪರಿಪಾಲಿಸುತ್ತಾ ಎಚ್ಚರಿಕೆಯಿಂದ ಇರುವವನು ಯಾರು? ದಂಡಕ್ಕೆ ಮೊದಲು ಏನು ಹೆಸರಿದ್ದಿತು? ಅನಂತರ ಅದಕ್ಕೆ ಬರುವ ಹೆಸರೇನು? ದಂಡವು ಯಾರನ್ನು ಆಶ್ರಯಿಸಿರುತ್ತದೆ? ಅದರ ಗತಿಯೇನು?
ಭೀಷ್ಮಃ
ಶೃಣು ಕೌರವ್ಯ ಯೋ ದಂಡೋ ವ್ಯವಹಾರ್ಯೋ ಯಥಾ ಚ ಸಃ |
ಯಸ್ಮಿನ್ ಹಿ ಸರ್ವಮಾಯತ್ತಂ ಸ ದಂಡ ಇಹ ಕೇವಲಃ ॥8॥
ಭೀಷ್ಮರು ಎಲೈ ಕೌರವ್ಯನೇ! ದಂಡವೆಂದರೆ ಯಾವುದು. ಅದರ ಜೊತೆಯಲ್ಲಿ ಹೇಗೆ ವ್ಯವಹರಿಸಬೇಕೆಂಬುದನ್ನು ಕೇಳು. ಈ ಜಗತ್ತೆಲ್ಲವೂ ಯಾವುದನ್ನು ಅವ- ಲಂಬಿಸಿಕೊಂಡಿದೆಯೋ ಅದು ಶ್ರೇಷ್ಠವಾದ ದಂಡ.
ಧರ್ಮಸ್ಯಾರ್ಥೇ ಮಹೀಪಾಲ ವ್ಯವಹಾರ ಇತೀಷ್ಯತೇ |
ತಸ್ಯ ಲೋಪಃ ಕಥಂ ನ ಸ್ಯಾಲ್ಲೋಕೇಷ್ವವಹಿತಾತ್ಮನಃ |
ಇತ್ಯರ್ಥಂ ವ್ಯವಹಾರಸ್ಯ ವ್ಯವಹಾರತ್ವಮಿಷ್ಯತೇ ॥9॥
ಏಕಾಗ್ರಚಿತ್ತವುಳ್ಳ ಮನುಷ್ಯನಿಗೆ ಲೋಕದಲ್ಲಿ ಧರ್ಮಲೋಪವಾಗಬಾರದು ಎಂಬ ಉದ್ದೇಶದಿಂದ ಎಂತಹ ವಿಚಾರವು ಉಂಟಾಗುತ್ತದೆಯೋ ಅದಕ್ಕೆ ವ್ಯವಹಾರ ಎಂದು ಹೆಸರು (ಲಕ್ಷ್ಯಾಲಂಕಾರ).
ಅಪಿ ಚೈತತ್ ಪುರಾ ರಾಜನ್ ಮನುನಾ ಪ್ರೋಕ್ತಮಾದಿತಃ |
ಸುಪ್ರಣೀತೇನ ದಂಡೇನ ಪ್ರಿಯಾಪ್ರಿಯಸಮಾತ್ಮನಾ |
ಪ್ರಜಾ ರಕ್ಷತಿ ಯಃ ಸಮ್ಯಗ್ ಧರ್ಮ ಏವ ಸ ಕೇವಲಃ ॥10॥
ಎಲೈ ರಾಜನೇ! ಇದನ್ನು ಮೊದಲು ಮನುಷ್ಯಲೋಕದಲ್ಲಿ ಮನುವು ಹೇಳಿದನು. ಪ್ರಿಯಾಪ್ರಿಯಗಳನ್ನು ಪಕ್ಷಪಾತವಿಲ್ಲದೆ ನೋಡಿ ಯಾರು ದಂಡವನ್ನು ಚೆನ್ನಾಗಿ ಪ್ರಯೋಗಿಸಿ ಪ್ರಜೆಗಳನ್ನು ರಕ್ಷಿಸುತ್ತಾನೆಯೋ ಅದು ಶ್ರೇಷ್ಠವಾದ ಧರ್ಮ.
ಅಥೋಕ್ತಮೇತದ್ ವಚನಂ ಪ್ರಾಗೇವ ಮನುನಾ ಪುರಾ |
ಜನ್ಮ ಚೋಕ್ತಂ ವಸಿಷ್ಠೇನ ಬ್ರಹ್ಮಣೋ ವಚನಂ ಮಹತ್ ॥11॥
ದಂಡ ಎಂಬ ವಚನವು ಹಿಂದೆ ಮನುವಿನಿಂದಲೇ ಹೇಳಲ್ಪಟ್ಟಿತು. ದಂಡದ ಜನ್ಮವು ವಸಿಷ್ಠರಿಂದ ಹೇಳಲ್ಪಟ್ಟಿತು. ಈ ವಿಷಯದಲ್ಲಿ ಬ್ರಹ್ಮದೇವರ ಶ್ರೇಷ್ಠವಾದ ವಚನವು ಇದೆ.
ಪ್ರಾಗಿದಂ ವಚನಂ ಪ್ರೋಕ್ತಮತಃ ಪ್ರಾಗ್ವಚನಂ ವಿದುಃ |
ವ್ಯವಹಾರಸ್ಯ ಚಾಖ್ಯಾನಾದ್ ವ್ಯವಹಾರ ಇಹೋಚ್ಯತೇ ॥12॥
ದಂಡವನ್ನು ಮೊದಲು ಹೇಳಿದ ಕಾರಣ ಇದಕ್ಕೆ ಪ್ರಾಗ್ವಚನವೆಂಬ ಹೆಸರು ಎಂದು ಜ್ಞಾನಿಗಳು ತಿಳಿಯುತ್ತಾರೆ. ಜಗತ್ತಿನ ವ್ಯವಹಾರವನ್ನು ಸ್ಪಷ್ಟಪಡಿಸುವುದರಿಂದ ಇದಕ್ಕೆ ವ್ಯವಹಾರ ಎಂದು ಹೆಸರು.
ದಂಡಾತ್ ತ್ರಿವರ್ಗಃ ಸತತಂ ಸುಪ್ರಣೀತಾತ್ ಪ್ರವರ್ತತೇ |
ದೈವಂ ಹಿ ಪರಮೋ ದಂಡೋ ರೂಪತೋಽಗ್ನಿರಿವೋಚ್ಛಿಖಃ ॥13॥
ನೀಲೋತ್ಪಲದಲಶ್ಯಾಮಶ್ಚತುರ್ದಂಷ್ಟ್ರಶ್ಚತುರ್ಭುಜಃ |
ಅಷ್ಟಪಾನ್ನೈಕನಯನಃ ಶಂಕುಕರ್ಣೋರ್ಧ್ವರೋಮವಾನ್ ॥14॥
ಜಟೀ ದ್ವಿಜಿಹ್ವಸ್ತಾಮ್ರಾಸ್ಯೋ ಮೃಗರಾಜತನುಚ್ಛದಃ |
ಏತದ್ ರೂಪಂ ಬಿಭರ್ತ್ಯುಗ್ರಂ ದಂಡೋ ನಿತ್ಯಂ ದುರಾವರಃ ॥15॥
ಚೆನ್ನಾಗಿ ಪ್ರಯೋಗಿಸಿದ ದಂಡದಿಂದ ಧರ್ಮಾರ್ಥಕಾಮಗಳು ಪ್ರವೃತ್ತವಾಗು- ತ್ತವೆ. ದೈವವೇ (ಈಶ್ವರನೇ) ಸರ್ವೋತ್ತಮವಾದ ದಂಡ. ಅವನ ರೂಪವು ಊರ್ಧ್ವಶಿಖೆಯನ್ನು ಹೊಂದಿದ ಅಗ್ನಿಯಂತೆ. ಅವನು ನೀಲೋತ್ಪಲದಲಶ್ಯಾಮ. ನಾಲ್ಕು ದಂಷ್ಟ್ರಗಳನ್ನೂ, ನಾಲ್ಕು ಭುಜಗಳನ್ನೂ, ಎಂಟು ಪಾದಗಳನ್ನೂ, ಅನೇಕ ನೇತ್ರಗಳನ್ನೂ, ಶಂಕುವಿನ ಆಕಾರದ ಕಿವಿಯನ್ನೂ, ಊಧ್ವರೂಪವನ್ನೂ ಹೊಂದಿ ರುವವನು, ಜಟೆಯನ್ನು ಧರಿಸಿರುವವನು, ಎರಡುನಾಲಿಗೆ ಉಳ್ಳವನು, ಕೆಂಪಾದ ಮುಖವುಳ್ಳವನು, ಸಿಂಹದ ಬಣ್ಣದ ರೋಮಗಳನ್ನು ಹೊಂದಿದವನು. ನಿವಾರಿಸಲು ಅಸಾಧ್ಯವಾದ ಉಗ್ರವಾದ ಈಶ್ವರರೂಪವಾದ ದಂಡವು ಇಂತಹ ರೂಪವನ್ನು ಧರಿಸಿರುತ್ತದೆ.
ಅಸಿರ್ಗದಾ ಧನುಃ ಶಕ್ತಿಸ್ತ್ರಿಶೂಲಂ ಮುದ್ಗರಃ ಶರಃ |
ಮುಸಲಂ ಪರಶುಶ್ಚಕ್ರಂ ಪ್ರಾಸೋ ದಂಡರ್ಷ್ಟಿತೋಮರಾಃ ॥16॥
ಸರ್ವಪ್ರಹರಣೀಯಾನಿ ಸಂತಿ ಯಾನೀಹ ಕಾನಿಚಿತ್ |
ದಂಡ ಏವ ಹಿ ಸರ್ವಾತ್ಮಾ ಲೋಕೇ ಚರತಿ ಮೂರ್ತಿಮಾನ್ ॥17॥
ಖಡ್ಗ, ಗದೆ, ಧನುಸ್ಸು, ಶಕ್ತಿ, ತ್ರಿಶೂಲ, ಒನಕೆ, ಬಾಣ, ಮುದ್ಗರ, ಕೊಡಲಿ, ಚಕ್ರ, ಈಟಿ, ದಂಡ, ಋಷ್ಟಿ, ತೋಮರ ಮತ್ತು ಇಂತಹ ಇನ್ನೂ ಅನೇಕ ಆಯುಧಗಳು ಏನಿವೆಯೋ ಅವೆಲ್ಲಾ ದಂಡದ ಮೂರ್ತಿಗಳು. ಅಂತಹ ವಿಗ್ರಹ- ದಿಂದ ಸರ್ವವ್ಯಾಪಿಯಾದ ದಂಡವು ಲೋಕದಲ್ಲಿ ಸಂಚರಿಸುತ್ತದೆ.
ಭಿಂದಂಶ್ಛಿಂದನ್ ರುಜನ್ ಕೃಂತನ್ ದಾರಯನ್ ಪಾಟಯಂಸ್ತಥಾ |

ಘಾತಯನ್ನಭಿಧಾವಂಶ್ಚ ದಂಡ ಏವ ಚರತ್ಯುತ ॥18॥
ಹೊಡೆಯುತ್ತಾ, ಕತ್ತರಿಸುತ್ತಾ, ಹಿಂಸಿಸುತ್ತಾ, ಸೀಳುತ್ತಾ, ಪಾಲುಗಳನ್ನಾಗಿ ಮಾಡುತ್ತಾ, ಕೊಲ್ಲುತ್ತಾ ಈ ದಂಡವು ಓಡುತ್ತಾ ಸಂಚರಿಸುತ್ತದೆ.
ಅಸಿರ್ವಿಶಸನೋ ಧರ್ಮಸ್ತೀಕ್ಷ್ಣವರ್ತ್ಮಾ ದುರಾಸದಃ |
ಶ್ರೀಗರ್ಭೋ ವಿಜಯಃ ಶಾಸ್ತಾ ವ್ಯವಹಾರಃ ಪ್ರಜಾಗರಃ ॥19॥
ಶಾಸ್ತ್ರಂ ಬ್ರಾಹ್ಮಣಮಂತ್ರಶ್ಚ ಶಾಸ್ತಾ ಪ್ರಾಗ್ವಚನಂ ಗತಃ |
ಧರ್ಮಪಾಲೋಽಕ್ಷರೋ ದೇವಃ ಸತ್ಯಗೋ ನಿತ್ಯಗೋ ಗ್ರಹಃ ॥20॥
ಅಸಂಗೋ ರುದ್ರತನಯೋ ಮನುರ್ಜ್ಯೇಷ್ಠಃ ಶಿವಂಕರಃ |
ನಾಮಾನ್ಯೇತಾನಿ ದಂಡಸ್ಯ ಕೀರ್ತಿತಾನಿ ಯುಧಿಷ್ಠಿರ ॥21॥
ಅಸಿ, ವಿಶಸನ, ಧರ್ಮ, ತೀಕ್ಷ್ಣವರ್ತ್ಮಾ, ದುರಾಸದ, ಶ್ರೀಗರ್ಭ, ವಿಜಯ, ಶಾಸ್ತಾ, ವ್ಯವಹಾರ, ಪ್ರಜಾಗರ, ಶಾಸ್ತ್ರ, ಬ್ರಾಹ್ಮಣಮಂತ್ರ, ಪ್ರಾಗ್ವಚನ, ಧರ್ಮಪಾಲ, ಅಕ್ಷರ, ದೇವ, ಸತ್ಯಗ, ನಿತ್ಯಗ, ಗ್ರಹ, ಅಸಂಗ, ರುದ್ರತನಯ, ಮನುರ್ಜ್ಯೇಷ್ಠ, ಶಿವಂಕರ - ಎಲೈ ಯುಧಿಷ್ಠಿರನೇ! ಇವೆಲ್ಲಾ ದಂಡದ ನಾಮಗಳೆಂದು ಹೇಳಲ್ಪಡುತ್ತವೆ.
ದಂಡೋ ಹಿ ಭಗವಾನ್ ವಿಷ್ಣುರ್ಯಜ್ಞೋ ನಾರಾಯಣಃ ಪ್ರಭುಃ |
ಶಶ್ವದ್ರೂಪಂ ಮಹದ್ ಬಿಭ್ರನ್ ಮಹಾಪುರುಷ ಉಚ್ಯತೇ ॥22॥
ದಂಡವೆಂದರೆ ಯಜನೀಯನೂ, ಪ್ರಭುವೂ, ಭಗವಂತನೂ ಆದ ವ್ಯಾಪ್ತನಾದ ನಾರಾಯಣನೇ. ಅವನು ಯಾವಾಗಲೂ ದೊಡ್ಡ ರೂಪವನ್ನು ಧರಿಸಿ ಮಹಾಪುರುಷನೆಂದು ಕರೆಯಲ್ಪಡುತ್ತಾನೆ.
ಯಥೋಕ್ತಾ ಬ್ರಹ್ಮಕಲ್ಪೇತಿ ಲಕ್ಷ್ಮೀರ್ನೀತಿಃ ಸರಸ್ವತೀ |
ದಂಡನೀತಿರ್ಜಗದ್ಧಾತ್ರೀ ದಂಡೋ ಹಿ ವಿಷ್ಣುವಿಗ್ರಹಃ ॥23॥
ದಂಡವನ್ನು ಬ್ರಹ್ಮಕಲ್ಪ(ವೇದಕಲ್ಪನಾ), ಲಕ್ಷ್ಮೀ, ನೀತಿ, ಸರಸ್ವತೀ, ದಂಡನೀತಿ, ಜಗದ್ಧಾತ್ರಿ ಎಂದೂ ಕರೆಯುತ್ತಾರೆ. ದಂಡವು ವಿಷ್ಣುವಿಗ್ರಹರೂಪವಾದುದು.
ಅರ್ಥಾನರ್ಥೌ ಸುಖಂ ದುಃಖಂ ಧರ್ಮಾಧರ್ಮೌ ಬಲಾಬಲೇ |
ದೌರ್ಭಾಗ್ಯಂ ಭಾಗಧೇಯಂ ಚ ಪುಣ್ಯಾಪುಣ್ಯೇ ಗುಣಾಗುಣೌ ॥24॥
ಕಾಮಾಕಾಮಾವೃತುರ್ಮಾಸಃ ಶರ್ವರೀ ದಿವಸಃ ಕ್ಷಣಃ |
ಅಪ್ರಸಾದಃ ಪ್ರಸಾದಶ್ಚ ಹರ್ಷಃ ಕ್ರೋಧಃ ಶಮೋ ದಮಃ ॥25॥
ದೈವಂ ಪುರುಷಕಾರಶ್ಚ ಮೋಕ್ಷಾಮೋಕ್ಷೌ ಭಯಾಭಯೇ |
ಹಿಂಸಾಹಿಂಸೇ ತಪೋ ರಾಜ್ಞಃ ಸಂಯಮೋಽಥ ವಿಷಾವಿಷಮ್ ॥26॥
ಅಂತಶ್ಚಾದಿಶ್ಚ ಮಧ್ಯಂ ಚ ಕೃತ್ಯಾನಾಂ ಚ ಪ್ರಪಂಚನಮ್ |
ಮದಃ ಪ್ರಮಾದೋ ದರ್ಪಶ್ಚ ದಂಭೋ ಧೈರ್ಯಂ ನಯಾನಯೌ ॥27॥
ಅರ್ಥ-ಅನರ್ಥಗಳು, ಸುಖ-ದುಃಖಗಳು, ಧರ್ಮಾಧರ್ಮಗಳು, ಶರೀರ- ಬಲಾಬಲಗಳು, ದೌರ್ಭಾಗ್ಯ ಸೌಭಾಗ್ಯಗಳು, ಪುಣ್ಯಪಾಪಗಳು, ಗುಣದೋಷಗಳು, ಕಾಮ-ಅಕಾಮಗಳು, ಋತುಮಾಸರಾತ್ರಿದಿವಸಕ್ಷಣಗಳು, ಪ್ರಸನ್ನತೆ ಅಪ್ರಸನ್ನತೆಗಳು, ಹರ್ಷಕ್ರೋಧಶಮದಮಗಳು, ದೈವಪುರುಷಪ್ರಯತ್ನಗಳು, ಮೋಕ್ಷಬಂಧನಗಳು, ಅಹಿಂಸೆಹಿಂಸೆಗಳು, ತಪಸ್ಸು, ರಾಜನಿಂದುಂಟಾಗುವ ಸಂಯಮ, ವಿಷ-ಅವಿಷಗಳು, ಆದಿಮಧ್ಯಾಂತಗಳು, ಕಾರ್ಯಗಳ ವಿಸ್ತಾರಗಳು, ಮದಪ್ರಮಾದದರ್ಪದಂಭ- ಧೈರ್ಯ ನೀತಿ-ಅನೀತಿಗಳು,
ಅಶಕ್ತಿಃ ಶಕ್ತಿರಿತ್ಯೇವ ಮಾನಸ್ತಂಭೌ ವ್ಯಯಾವ್ಯಯೌ |
ವಿನಯಶ್ಚ ವಿಸರ್ಗಶ್ಚ ಕಾಲಾಕಾಲೌ ಚ ಭಾರತ ॥28॥
ಅನೃತಂ ಜ್ಞಾಜ್ಞತಾ ಸತ್ಯಂ ಶ್ರದ್ಧಾಶ್ರದ್ಧೇ ತಥೈವ ಚ |
ಕ್ಲೀಬತಾ ವ್ಯವಸಾಯಶ್ಚ ಲಾಭಾಲಾಭೌ ಜಯಾಜಯೌ ॥29॥
ತೀಕ್ಷ್ಣತಾ ಮೃದುತಾ ಮೃತ್ಯುರಾಗಮಾನಾಗಮೌ ತಥಾ |
ವಿರಾದ್ಧಿಶ್ಚೈವ ರಾದ್ಧಿಶ್ಚ ಕಾರ್ಯಾಕಾರ್ಯೇ ಬಲಾಬಲೇ ॥30॥
ಅಸೂಯಾ ಚಾನಸೂಯಾ ಚ ಧರ್ಮಾಧರ್ಮೌ ತಥೈವ ಚ |
ಅಪತ್ರಪಾನಪತ್ರಪೇ ಹ್ರೀಶ್ಚ ಸಂಪದ್ ವಿಪಚ್ಚ ಹ ॥31॥
ತೇಜಃ ಕರ್ಮಣಿ ಪಾಂಡಿತ್ಯಂ ವಾಕ್‌ಶಕ್ತಿಸ್ತತ್ತ್ವಬುದ್ಧಿತಾ |
ಏವಂ ದಂಡಸ್ಯ ಕೌರವ್ಯ ಲೋಕೇಽಸ್ಮಿನ್ ಬಹುರೂಪತಾ ॥32॥
ಶಕ್ತಿ-ಅಶಕ್ತಿಗಳು, ಮಾನ-ಅಹಂಕಾರಗಳು, ವ್ಯಯ-ಆದಾಯಗಳು, ವಿನಯ- ವಿಸರ್ಗ-ಕಾಲ-ಅಕಾಲಗಳು, ಸತ್ಯಾನೃತಗಳು, ಜ್ಞಾನಾಜ್ಞಾನಗಳು, ಶ್ರದ್ಧೆ-ಅಶ್ರದ್ಧೆಗಳು, ಆಲಸ್ಯ ಮತ್ತು ಪ್ರಯತ್ನಶೀಲತೆಗಳು, ಲಾಭಾಲಾಭಗಳು, ಜಯ-ಪರಾಜಯಗಳು, ತೀಕ್ಷ್ಣತೆ ಮೃದುತ್ವಗಳು, ಮೃತ್ಯು, ಆಗಮ-ಅನಾಗಮಗಳು, ಸಮೃದ್ಧಿ ಮತ್ತು ದಾರಿದ್ರ್ಯಗಳು, ಕಾರ್ಯಾಕಾರ್ಯಗಳು, ಮನೋಬಲದೌರ್ಬಲ್ಯಗಳು, ಅಸೂಯಾ ಅನಸೂಯಗಳು, ಧರ್ಮಾಧರ್ಮಗಳು, ನಾಚಿಕೆ ಮತ್ತು ನಾಚಿಕೆಗೇಡಿತನಗಳು, ಸಂಪತ್ತು ಮತ್ತು ವಿಪತ್ತುಗಳು, ತೇಜಸ್ಸು, ಕರ್ಮದಲ್ಲಿಕುಶಲತೆ, ವಾಕ್‌ಶಕ್ತಿ, ತತ್ತ್ವಜ್ಞಾನ ಎಲೈ ಕೌರವ್ಯನೇ! ಹೀಗೆ ಈ ಲೋಕದಲ್ಲಿ ದಂಡವು ಅನೇಕರೂಪ- ಗಳನ್ನು ಧರಿಸಿದೆ.
ಇಲ್ಲಿ ಅರ್ಥಸುಖಧರ್ಮ ಮೊದಲಾದವುಗಳು ಅಹಂಕಾರಕಾರಣವಾದುದ- ರಿಂದ ದಂಡವೆನಿಸುತ್ತವೆ. ಋತುಮಾಸರಾತ್ರ್ಯಾದಿಗಳು ವಿಷಯಾಭಿಲಾಷೆಯನ್ನು ಉಂಟುಮಾಡುವುದರಿಂದ ದಂಡವೆನಿಸುತ್ತವೆ. - (ಲಕ್ಷಾಲಂಕಾರ)

ನ ಸ್ಯಾದ್ ಯದೀಹ ದಂಡೋ ವೈ ಪ್ರಮಥೇಯುಃ ಪರಸ್ಪರಮ್ |
ಭಯಾದ್ ದಂಡಸ್ಯ ಚಾನ್ಯೋನ್ಯಂ ಘ್ನಂತಿ ನೈವ ಯುಧಿಷ್ಠಿರ ॥33॥
ಈ ಲೋಕದಲ್ಲಿ ದಂಡವಿರದಿದ್ದರೆ ಮನುಷ್ಯರು ಪರಸ್ಪರವಾಗಿ ಹಿಂಸಿಸುತ್ತಿದ್ದರು. ಎಲೈ ಯುಧಿಷ್ಠಿರನೇ! ದಂಡದ ಭಯದಿಂದಲೇ ಮನುಷ್ಯರು ಪರಸ್ಪರವಾಗಿ ಕೊಲ್ಲುವುದಿಲ್ಲ.
ದಂಡೇನ ರಕ್ಷ್ಯಮಾಣಾ ಹಿ ರಾಜನ್ನಹರಹಃ ಪ್ರಜಾಃ |
ರಾಜಾನಂ ವರ್ಧಯಂತೀಹ ತಸ್ಮಾದ್ ದಂಡಃ ಪರಾಯಣಮ್ ॥34॥
ದಂಡದಿಂದ ರಕ್ಷಿಸಲ್ಪಡುವ ಪ್ರಜೆಗಳು ಪ್ರತಿನಿತ್ಯವೂ ರಾಜನನ್ನು ಅಭಿವೃದ್ಧಿ- ಪಡಿಸುತ್ತಾರೆ. ಆದ್ದರಿಂದ ದಂಡವು ಶ್ರೇಷ್ಠವಾದ ಅವಲಂಬನ.
ವ್ಯವಸ್ಥಾಪಯತಿ ಕ್ಷಿಪ್ರಮಿಮಂ ಲೋಕಂ ನರೇಶ್ವರ |
ಸತ್ಯೇ ವ್ಯವಸ್ಥಿತೋ ಧರ್ಮೋ ಬ್ರಾಹ್ಮಣೇಷ್ವವತಿಷ್ಠತೇ ॥35॥
ಎಲೈ ನರೇಶ್ವರನೇ! ದಂಡವು ಶೀಘ್ರವಾಗಿ ಈ ಲೋಕದಲ್ಲಿ ವ್ಯವಸ್ಥೆಯನ್ನು ಉಂಟುಮಾಡುತ್ತದೆ. ಸತ್ಯದಲ್ಲಿ ನೆಲೆಗೊಂಡ ಧರ್ಮವು ಬ್ರಾಹ್ಮಣರನ್ನು ಆಶ್ರಯಿಸಿದೆ.
ಧರ್ಮಯುಕ್ತಾ ದ್ವಿಜಾಃ ಶ್ರೇಷ್ಠಾ ವೇದಯುಕ್ತಾ ಭವಂತಿ ಚ |
ಬಭೂವ ಯಜ್ಞೋ ವೇದೇಭ್ಯೋ ಯಜ್ಞಃ ಪ್ರೀಣಾತಿ ದೇವತಾಃ ॥36॥
ಧರ್ಮಯುಕ್ತರಾದ ಶ್ರೇಷ್ಠರಾದ ಬ್ರಾಹ್ಮಣರು ವೇದಾಧ್ಯಯನಸಂಪನ್ನರಾಗಿರು- ತ್ತಾರೆ. ಯಜ್ಞವು ವೇದಗಳಿಂದ ನೆರವೇರಿಸಲ್ಪಡುತ್ತದೆ. ಅದು ದೇವತೆಗಳನ್ನು ಸಂತೋಷಪಡಿಸುತ್ತದೆ.
ಪ್ರೀತಾಶ್ಚ ದೇವತಾ ನಿತ್ಯಮಿಂದ್ರೇ ಪರಿದದತ್ಯುತ |
ಅನ್ನಂ ದದಾತಿ ಶಕ್ರಶ್ಚಾಪ್ಯನುಗೃಹ್ಣನ್ನಿಮಾಃ ಪ್ರಜಾಃ ॥37॥
ಪ್ರೀತರಾದ ದೇವತೆಗಳು ಪ್ರಜೆಗಳ ಯೋಗಕ್ಷೇಮವನ್ನು ನಿತ್ಯವೂ ಇಂದ್ರನಿಗೆ ವಹಿಸುತ್ತಾರೆ. ಇಂದ್ರನು ಈ ಪ್ರಜೆಗಳಿಗೆ ಅನುಗ್ರಹವನ್ನು ಮಾಡುವವನಾಗಿ ಅನ್ನವನ್ನು ಕೊಡುತ್ತಾನೆ.
ಪ್ರಾಣಾಶ್ಚ ಸರ್ವಭೂತಾನಾಂ ನಿತ್ಯಮನ್ನೇ ಪ್ರತಿಷ್ಠಿತಾಃ |
ತಸ್ಮಾತ್ ಪ್ರಜಾಃ ಪ್ರತಿಷ್ಠಂತೇ ದಂಡೋ ಜಾಗರ್ತಿ ತಾಸು ಚ ॥38॥
ಎಲ್ಲ ಜೀವರ ಪ್ರಾಣಗಳೂ ಯಾವಾಗಲೂ ಅನ್ನದಲ್ಲಿ ಪ್ರತಿಷ್ಠಿತವಾಗಿವೆ. ಅನ್ನದ ಬಲದಿಂದ ಪ್ರಜೆಗಳು ಕಾರ್ಯಗಳನ್ನು ಮಾಡುತ್ತಾರೆ. ದಂಡವು ಆ ಪ್ರಜೆಗಳ ವಿಷಯದಲ್ಲಿ ಎಚ್ಚರಿಕೆಯಿಂದಿರುತ್ತದೆ.
ಏವಂಪ್ರಯೋಜನಶ್ಚೈವ ದಂಡಃ ಕ್ಷತ್ರಿಯತಾಂ ಗತಃ |
ರಕ್ಷನ್ ಪ್ರಜಾಃ ಪ್ರಜಾಗರ್ತಿ ನಿತ್ಯಂ ಸುವಿಹಿತೋಽಕ್ಷರಃ ॥39॥
ಇಂತಹ ಪ್ರಯೋಜನವುಳ್ಳ ದಂಡವು ಕ್ಷತ್ರಿಯರೂಪವನ್ನು ಧರಿಸಿತು. ಅದು ನಿತ್ಯವೂ ಚೆನ್ನಾಗಿ ಪ್ರಯೋಗಿಸಲ್ಪಟ್ಟು, ನಾಶವನ್ನು ಹೊಂದದೆ, ಪ್ರಜೆಗಳನ್ನು ರಕ್ಷಿಸುತ್ತಾ ಜಾಗರೂಕವಾಗಿರುತ್ತದೆ.
ಈಶ್ವರಃ ಪುರುಷಃ ಪ್ರಾಣಃ ಸತ್ತ್ವಂ ವಿತ್ತಂ ಪ್ರಜಾಪತಿಃ |
ಭೂತಾತ್ಮಾ ಜೀವ ಇತ್ಯೇವ ನಾಮಭಿಃ ಪ್ರೋಚ್ಯತೇಽಷ್ಟಭಿಃ ॥40॥
ದಂಡವು ಈಶ್ವರ, ಪುರುಷ, ಪ್ರಾಣ, ಸತ್ವ, ವಿತ್ತ, ಪ್ರಜಾಪತಿ, ಭೂತಾತ್ಮಾ ಮತ್ತು ಜೀವ ಎಂಬ ಎಂಟುನಾಮಗಳಿಂದ ಹೇಳಲ್ಪಡುತ್ತದೆ.
ಅದದದ್ ದಂಡ ಏವಾಸ್ಮೈ ಧ್ರುವಮೈಶ್ವರ್ಯಮೇವ ಚ |
ಬಲಂ ನಯಂಶ್ಚ ಸಂಯುಕ್ತೈಃ ಸದಾ ಪಂಚವಿಧಾತ್ಮಕಮ್ ॥41॥
ರಾಜನಿಗೆ ದಂಡವೇ ಶಾಶ್ವತವಾದ ಐಶ್ವರ್ಯವನ್ನು ಕೊಡುತ್ತದೆ. ಸಂಯುಕ್ತರಾ- ದವರಿಂದ ಬಲವನ್ನು ನಡೆಸುತ್ತಾ ಯಾವಾಗಲೂ ಪಂಚವಿಧವಾಗಿರುತ್ತದೆ.
ಕುಲಬಾಹುಧನಾಮಾತ್ಯಾಃ ಪ್ರಜ್ಞಾ ಚೋಕ್ತಾ ಬಲಾನಿ ಚ |
ಆಹಾರ್ಯಂ ಚಾಷ್ಟಕೈರ್ದ್ರವ್ಯೈರ್ಬಲಮನ್ಯದ್ ಯುಧಿಷ್ಠಿರ ॥42॥
ಕುಲಬಲ, ಬಾಹುಬಲ, ಧನಬಲ, ಅಮಾತ್ಯಬಲ ಮತ್ತು ಪ್ರಜ್ಞಾಬಲಗಳೆಂಬವು ಆ ಐದು ವಿಧಗಳು. ಎಲೈ ಯುಧಿಷ್ಠಿರನೇ! ಎಂಟು ದ್ರವ್ಯಗಳಿಂದ ಸಂಪಾದಿಸ- ಬೇಕಾದ ಬಲವು ಬೇರೆಯೇ ಇದೆ.
ಹಸ್ತಿನೋಽಶ್ವಾ ರಥಾಃ ಪತ್ತಿರ್ನಾವೋ ವಿಷ್ಟಿಸ್ತಥೈವ ಚ |
ದೈಶಿಕಾಶ್ಚಾರಕಾಶ್ಚೈವ ತದಷ್ಟಾಂಗಂ ಬಲಂ ಸ್ಮೃತಮ್ ॥43॥
ಗಜಗಳು, ಅಶ್ವಗಳು, ರಥಗಳು, ಪದಾತಿಗಳು, ನೌಕೆಗಳು, ಅಪರಾಧಿಗಳಾಗಿ ಬಿಟ್ಟಿ ದುಡಿಯುವವರು, ಉಪಾಧ್ಯಾಯರು ಮತ್ತು ಚಾರರು ಎಂಬ ಎಂಟು ಅವ- ಯವಗಳಿಂದ ಕೂಡಿದುದು ಇನ್ನೊಂದು (ಬಾಹ್ಯವಾದ) ಬಲ.
ಅಥವಾಂಗಸ್ಯ ಯೋಕ್ತಾ ಸ್ಯಾದ್ ಹಸ್ತಿನೋ ರಥಸಾರಥೀ |
ಅಶ್ವಾರೋಹಾಃ ಪದಾತಾಶ್ಚ ಮಂತ್ರಿಣೋ ರಸದಾಶ್ಚ ಯೇ ॥44॥
ತನ್ನ ಶರೀರದಂತಿರುವ ಸೇನೆಯನ್ನು ನಿಯಂತ್ರಿಸುವ ಸೇನಾಪತಿ, ಆರೋಹಿ- ಗಳಿಂದ ಸಹಿತವಾದ ಗಜಗಳು, ಸಾರಥಿಯಿಂದ ಸಹಿತವಾದ ರಥಗಳು, ಅಶ್ವಾ- ರೋಹಿಗಳಿಂದ ಸಹಿತವಾದ ಅಶ್ವಗಳು, ಪದಾತಿಗಳು, ಮಂತ್ರಿಗಳು ಮತ್ತು ಮನುಷ್ಯರ ಮತ್ತು ಪ್ರಾಣಿಗಳ ವೈದ್ಯರು - ಇವು ಏಳು ಸೈನ್ಯದ (ಸಪ್ತಾಂಗಗಳಿಗೆ) ಮೂಲಭೂತವಾದ ಮಧ್ಯದೇಹ(ಪ್ರಕೃತಿ)ವೆನಿಸುತ್ತದೆ ಲಕ್ಷಾಲಂಕಾರ.
ಭಿಕ್ಷುಕಾಃ ಪ್ರಾಡ್ವಿವಾಕಾಶ್ಚ ಮೌಹೂರ್ತಾ ದೈವಚಿಂತಕಾಃ |
ಕೋಶೋ ಮಿತ್ರಾಣಿ ಧಾನ್ಯಂ ಚ ಸರ್ವೋಪಕರಣಾನಿ ಚ ॥45॥

ಬಹುವೇಷವನ್ನು ಧರಿಸುವ ಚಾರರು, ಕ್ರಯವಿಕ್ರಯಾದಿವ್ಯವಹಾರವನ್ನು ನೋಡುವ ವೈಶ್ಯಾದಿಗಳು, ಯುದ್ಧಕಾಲಕ್ಕೆ ಮುಹೂರ್ತವನ್ನು ಇಟ್ಟುಕೊಡುವವರು, ಜಾತಕಾದಿಗಳನ್ನು ಬರೆಯುವುದರಲ್ಲಿ ಕುಶಲರು, ಕೋಶ, ಮಿತ್ರರು, ಧಾನ್ಯಮತ್ತು ಎಲ್ಲಾ ಆಯುಧಾದಿ ಉಪಕರಣಗಳು (ಇವು ಎಂಟು ದ್ರವ್ಯಗಳು)  ಲಕ್ಷ್ಮಾಲಂಕಾರ.
ಸಪ್ತಪ್ರಕೃತಿ ಚಾಷ್ಟಾಂಗಂ ಶರೀರಮಿಹ ಯದ್ ವಿದುಃ |
ರಾಜ್ಯಸ್ಯ ದಂಡ ಏವಾಂಗಂ ದಂಡಃ ಪ್ರಭವ ಏವ ಚ ॥46॥
ರಾಜ್ಯಕ್ಕೆ ಹಿಂದೆ ಹೇಳಿದ ಏಳು ದ್ರವ್ಯಗಳು ಮಧ್ಯದೇಹಭೂತವಾದವು ಮತ್ತು ಅನಂತರ ಹೇಳಿದ ಎಂಟು ಅಂಗಭೂತವಾದವುಗಳು. ಇವು ಸೇರಿ ರಾಜ್ಯದ ಶರೀರವಾಗುತ್ತದೆ ಎಂದು ತಿಳಿಯುತ್ತಾರೆ. ದಂಡವು ರಾಜ್ಯದ ಇನ್ನೊಂದು ಅಂಗ. ರಾಜ್ಯದ ಸಮೃದ್ಧಿಯು ದಂಡಕ್ಕೆ ಅಧೀನವಾದುದು
ಈಶ್ವರೇಣ ಪ್ರಸನ್ನೇನ ಧಾರಣೇ ಕ್ಷತ್ರಿಯಸ್ಯ ಹಿ |
ದಂಡೋ ದತ್ತಃ ಸಮಾನಾತ್ಮಾ ದಂಡೋ ಹೀದಂ ಸನಾತನಮ್ |
ರಾಜ್ಞಾಂ ಪೂಜ್ಯತಮೋ ನಾನ್ಯೋ ಯಥಾಧರ್ಮಪ್ರದರ್ಶನಃ ॥47॥
ಪ್ರಸನ್ನನಾದ ಈಶ್ವರನು ಕ್ಷತ್ರಿಯನಿಗೆ ರಾಜನಿಗೆ ಧಾರಣೆಯನ್ನು ಮಾಡುವ ಸಲುವಾಗಿ ತನಗೆ ಸದೃಶವಾದ ಸಾಮರ್ಥ್ಯವುಳ್ಳ ದಂಡವನ್ನು ನೀಡಿದನು. ಈ ದಂಡವು ಸನಾತನವಾದುದು. ರಾಜರಿಂದ ಅತ್ಯಂತಪೂಜ್ಯವಾದುದು. ದಂಡವು ಧರ್ಮವನ್ನು ಪ್ರದರ್ಶಿಸುವಂತೆ ಧರ್ಮವನ್ನು ಪ್ರದರ್ಶಿಸುವುದು ಇನ್ನೊಂದು ಇರುವುದಿಲ್ಲ.
ಬ್ರಹ್ಮಣಾ ಲೋಕರಕ್ಷಾರ್ಥಂ ಸ್ವಧರ್ಮಸ್ಥಾಪನಾಯ ಚ |
ಭರ್ತೃಪ್ರತ್ಯಯ ಉತ್ಪನ್ನೋ ವ್ಯವಹಾರಸ್ತಥಾಪರಃ |
ತಸ್ಮಾದ್ ಯಃ ಸ ಹಿತೋ ದೃಷ್ಟೋ ಭರ್ತೃಪ್ರತ್ಯಯಲಕ್ಷಣಃ ॥48॥
ಬ್ರಹ್ಮದೇವರು ಲೋಕರಕ್ಷಣೆ ಮತ್ತು ತಮ್ಮ ಧರ್ಮದ ಸ್ಥಾಪನೆಗಾಗಿ ಭರ್ತೃ- ಪ್ರತ್ಯಯ ಮತ್ತು ವ್ಯವಹಾರಗಳನ್ನು ಸೃಷ್ಟಿಸಿದರು. ಆದ್ದರಿಂದ ಭರ್ತೃಪ್ರತ್ಯಯರೂಪ- ವಾದ ದಂಡವು ಲೋಕಕ್ಕೆ ಹಿತವಾಗಿ ಕಂಡುಬಂದಿದೆ.
ವ್ಯವಹಾರಸ್ತು ವೇದಾತ್ಮಾ ವೇದಪ್ರತ್ಯಯ ಉಚ್ಯತೇ |
ಮೌಲಶ್ಚ ನರಶಾರ್ದೂಲ ಶಾಸ್ತ್ರೋಕ್ತಶ್ಚ ತಥಾಪರಃ ॥49॥
ವ್ಯವಹಾರವು ವೇದರೂಪವಾದುದು. ಅದಕ್ಕೆ ವೇದಪ್ರತ್ಯಯವೆಂದು ಹೆಸರು. ಎಲೈ ರಾಜನೇ! ಈ ವ್ಯವಹಾರವು ಮೌಲ ಮತ್ತು ಶಾಸ್ತ್ರೋಕ್ತ ಎಂದು ಎರಡು ವಿಧವಾಗಿದೆ.
ಉಕ್ತೋ ಯಶ್ಚಾಪಿ ದಂಡೋಽಸೌ ಭರ್ತೃಪ್ರತ್ಯಯಲಕ್ಷಣಃ |
ಜ್ಞೇಯೋ ನಃ ಸ ನರೇಂದ್ರಸ್ಥೋ ದಂಡಪ್ರತ್ಯಯ ಏವ ಚ ॥50॥
ನಾವು ಭರ್ತೃಪ್ರತ್ಯಯರೂಪವಾದ ದಂಡವನ್ನು ಏನು ಹೇಳಿದೆವೋ ಅದು ರಾಜನಲ್ಲಿರುವ ದಂಡಪ್ರತ್ಯಯರೂಪವಾದುದು ಎಂದು ತಿಳಿಯಬೇಕು.
ದಂಡಪ್ರತ್ಯಯದೃಷ್ಟೋಽಪಿ ವ್ಯವಹಾರಾತ್ಮಕಃ ಸ್ಮೃತಃ |
ವ್ಯವಹಾರಃ ಸ್ಮೃತೋ ಯಶ್ಚ ಸ ವೇದವಿಷಯಾತ್ಮಕಃ ॥51॥
ದಂಡವು ರಾಜನ ಮೇಲಿನ ವಿಶ್ವಾಸದಿಂದ ಪ್ರವೃತ್ತವಾದರೂ ಅದು ವ್ಯವಹಾರರೂಪವಾದುದು ಎಂದು ಹೇಳಲ್ಪಡುತ್ತದೆ. ಯಾವುದು ವ್ಯವಹಾರವೋ ಅದು ವೇದವಿಷಯವಾದುದು.
ಯಶ್ಚ  ವೇದಪ್ರಸೂನಾತ್ಮಾ  ಸ ಧರ್ಮೋ ಗುಣದರ್ಶಕಃ |
ಧರ್ಮಪ್ರತ್ಯಯ ಉತ್ಪನ್ನೋ ಯಥಾಧರ್ಮಃ ಕೃತಾತ್ಮಭಿಃ ॥52॥
ಯಾವುದು ವೇದವಿಷಯವಾಗಿ ವೇದದಿಂದ ತನ್ನ ಸ್ವರೂಪವನ್ನು ಪಡೆಯುತ್ತದೆಯೋ ಅದು ಧರ್ಮ. ಅದು ಗುಣಗಳನ್ನು ತೋರಿಸುವಂತಹದು. ಜ್ಞಾನಿಗಳಿಂದ ಹೀಗೆ ಧರ್ಮಕ್ಕೆ ಅನುಗುಣವಾಗಿ ಧರ್ಮಪ್ರತ್ಯಯವು ಉಂಟಾಯಿತು.
ವ್ಯವಹಾರಃ ಪ್ರಜಾಗೋಪ್ತಾ ಬ್ರಹ್ಮದಿಷ್ಟೋ ಯುಧಿಷ್ಠಿರ |
ತ್ರೀನ್ ಧಾರಯತಿ ಲೋಕಾನ್ ವೈ ಸತ್ಯಾತ್ಮಾ ಭೂತಿವರ್ಧನಃ ॥53॥
ಎಲೈ ಯುಧಿಷ್ಠಿರನೇ! ಬ್ರಹ್ಮದೇವರು ಹೇಳಿದ ವ್ಯವಹಾರವು ಪ್ರಜೆಗಳನ್ನು ರಕ್ಷಿಸುತ್ತದೆ. ಅದು ಮೂರು ಲೋಕಗಳನ್ನೂ ಧರಿಸುತ್ತದೆ. ಸತ್ಯಸ್ವರೂಪವಾದುದು ಮತ್ತು ಐಶ್ವರ್ಯಪ್ರದವಾದುದು.
ಯಶ್ಚ  ದಂಡಃ ಸ ದೃಷ್ಟೋ ನೋ ವ್ಯವಹಾರಃ ಸನಾತನಃ |
ವ್ಯವಹಾರಶ್ಚ ಯೋ ದೃಷ್ಟಃ ಸ ಧರ್ಮ ಇತಿ ನಃ ಶ್ರುತಃ |
ಯಶ್ಚ ವೇದಃ ಸ ವೈ ಧರ್ಮೋ ಯಶ್ಚ ಧರ್ಮಃ ಸ ಸತ್ಪಥಃ ॥54॥
ನಾವು ಯಾವ ದಂಡವನ್ನು ನೋಡಿದೆವೋ ಅದು ಸನಾತನವಾದ ವ್ಯವಹಾರ. ಯಾವ ವ್ಯವಹಾರವನ್ನು ಉಲ್ಲೇಖಿಸಿದೆವೋ ಅದು ಧರ್ಮ ಎಂದು ನಾವು ಕೇಳಿದ್ದೇವೆ. ಯಾವುದು ವೇದೋಕ್ತವೋ ಅದೇ ಧರ್ಮ. ಯಾವುದು ಧರ್ಮವೋ ಅದು ಸನ್ಮಾರ್ಗ.
ಬ್ರಹ್ಮಾ ಪ್ರಜಾಪತಿಃ ಪೂರ್ವಂ ಬಭೂವಾಥ ಪಿತಾಮಹಃ |
ಲೋಕಾನಾಂ ಸ ಹಿ ಸರ್ವೇಷಾಂ ಸಸುರಾಸುರರಕ್ಷಸಾಮ್ |
ಸಮನುಷ್ಯೋರಗವತಾಂ ಕರ್ತಾ ಚೈವ ಸ ಭೂತಕೃತ್ ॥55॥
ಹಿಂದೆ ಪಿತಾಮಹರೂ ಪ್ರಜಾಪತಿಗಳೂ ಆದ ಬ್ರಹ್ಮದೇವರು ಇದ್ದರು. ಅವರು ಸುರಾಸುರರಾಕ್ಷಸರಿಂದ ಸಹಿತವಾದ ಮನುಷ್ಯೋರಗಗಳಿಂದ ಸಹಿತವಾದ ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಸಿದರು.
ತತೋ ನೋ ವ್ಯವಹಾರೋಽಯಂ ಭರ್ತೃಪ್ರತ್ಯಯಲಕ್ಷಣಃ |

ತಸ್ಮಾದಿದಮವೋಚಾಮ ವ್ಯವಹಾರನಿದರ್ಶನಮ್ ॥56॥
ಅವರಿಂದ ನಮಗೆ ಈ ಭರ್ತೃಪ್ರತ್ಯಯರೂಪವಾದ ವ್ಯವಹಾರವು ದೊರೆ- ಯಿತು. ಆದ್ದರಿಂದ ಈ ವ್ಯವಹಾರವಿವರಣೆಯನ್ನು ನಾನು ಹೇಳಿದೆನು.
ಮಾತಾ ಪಿತಾ ಚ ಭ್ರಾತಾ ಚ ಭಾರ್ಯಾ ಚಾಥ ಪುರೋಹಿತಃ |
ನಾದಂಡ್ಯೋ ವಿದ್ಯತೇ ರಾಜ್ಞಾಂ ಯಃ ಸ್ವಧರ್ಮೇ ನ ತಿಷ್ಠತಿ ॥57॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥122॥
ತಮ್ಮ ಧರ್ಮವನ್ನು ಮೀರುವ ತಂದೆಯಾಗಲೀ ತಾಯಿಯಾಗಲೀ ಸಹೋದರನಾಗಲೀ, ಪತ್ನಿಯಾಗಲೀ ಅಥವಾ ಪುರೋಹಿತನಾಗಲೀ ರಾಜನ ದಂಡಕ್ಕೆ ವಿಷಯರಾಗದವರು ಯಾರೂ ಇರುವುದಿಲ್ಲ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 122ನೇ ಅಧ್ಯಾಯವು ಮುಗಿಯಿತು.
0
123. ನೂರಇಪ್ಪತ್ತಮೂರನೆಯ ಅಧ್ಯಾಯ
ವಸುಹೋಮಮಾಂಧಾತೃಸಂವಾದ; ದಂಡೋತ್ಪತ್ತಿ ಮತ್ತು ಅದರ ಪ್ರಚಾರ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಂಗೇಷು ರಾಜಾ ದ್ಯುತಿಮಾನ್ ವಸುಹೋಮ ಇತಿ ಶ್ರುತಃ ॥1॥
ಭೀಷ್ಮರು ಈ ವಿಷಯದಲ್ಲಿಯೂ ಸಹ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ. ಅಂಗದೇಶದಲ್ಲಿ ಕಾಂತಿಯುಕ್ತನಾದ ವಸುಹೋಮನೆಂಬ ರಾಜನಿದ್ದನು.
ಸ ರಾಜಾ ಧರ್ಮನಿತ್ಯಃ ಸನ್ ಸಹ ಪತ್ನ್ಯಾ ಮಹಾತಪಾಃ |
ಮುಂಜಪೃಷ್ಠಂ ಜಗಾಮಾಥ ದೇವರ್ಷಿಗಣಸೇವಿತಮ್ ॥2॥
ನಿತ್ಯವೂ ಧರ್ಮಪರನೂ, ಮಹಾತಪಸ್ವಿಯೂ ಆದ ಆ ರಾಜನು ಪತ್ನಿಯ ಜೊತೆಯಲ್ಲಿ ದೇವರ್ಷಿಗಣಸೇವಿತವಾದ ಮುಂಜಪೃಷ್ಠ ಪ್ರದೇಶಕ್ಕೆ ಹೋದನು.
ತತ್ರ ಶೃಂಗೇ ಹಿಮವತೋ ಮೇರೌ ಕನಕಪರ್ವತೇ |
ಯತ್ರ ಮುಂಜವಟೇ ರಾಮೋ ಜಟಾಹರಣಮಾದಿಶತ್ ॥3॥
ಸುವರ್ಣಪರ್ವತವಾದ ಮೇರುವಿನ ಶೃಂಗದಲ್ಲಿ ಹಿಮಾಲಯದಲ್ಲಿ ಮುಂಜ- ವಟವೃಕ್ಷದ ಬಳಿಯಲ್ಲಿ ಪರಶುರಾಮರು ತಮ್ಮ ಜಟೆಯನ್ನು ಬಿಚ್ಚಲು ಆದೇಶಿಸಿದ್ದರು. (ಸುವರ್ಣಪರ್ವತವಾದ ಮೇರುವಿನಿಂದ ಒಂದು ಪರ್ವತವನ್ನು ತಂದು ಹಿಮಾ- ಲಯದಲ್ಲಿ ಇರಿಸಲಾಗಿದೆ - ಲಕ್ಷಾಲಂಕಾರ)
ತದಾಪ್ರಭೃತಿ ರಾಜೇಂದ್ರ ಋಷಿಭಿಃ ಸಂಶಿತವ್ರತೈಃ |
ಮುಂಜಪೃಷ್ಠ ಇತಿ ಪ್ರೋಕ್ತಃ ಸ ದೇಶೋ ರುದ್ರಸೇವಿತಃ ॥4॥
ಎಲೈ ರಾಜನೇ! ಆಗಿನಿಂದ ಆರಂಭಿಸಿ, ವ್ರತಧಾರಿಗಳಾದ ಋಷಿಗಳು ಆ ಪ್ರದೇಶವನ್ನು ಮುಂಜಪೃಷ್ಠ ಎಂದು ಕರೆಯುತ್ತಾರೆ. ಅಲ್ಲಿ ಯಾವಾಗಲೂ ರುದ್ರ- ದೇವರ ಸನ್ನಿಧಾನವಿದೆ.
ಸ ತತ್ರ ಬಹುಭಿರ್ಯುಕ್ತಃ ಸದಾ ಶ್ರುತಿಮಯೈರ್ಗುಣೈಃ |
ಬ್ರಾಹ್ಮಣಾನಾಮನುಮತೋ ದೇವರ್ಷಿಸದೃಶೋಽಭವತ್ ॥5॥
ಅಲ್ಲಿ ವಸುಹೋಮನು ವೇದಗಳು ಹೇಳಿದ ಅನೇಕಗುಣಗಳಿಂದ ಕೂಡಿದ- ವನಾಗಿ, ಬ್ರಾಹ್ಮಣರಿಗೆ ಸಮ್ಮತನಾಗಿ, ದೇವರ್ಷಿಸದೃಶನಾದನು.
ತಂ ಕದಾಚಿದದೀನಾತ್ಮಾ ಸಖಾ ಶಕ್ರಸ್ಯ ಮಾನಿತಃ |
ಅಭ್ಯಾಗಚ್ಛನ್ಮಹೀಪಾಲೋ ಮಾಂಧಾತಾ ಶತ್ರುಕರ್ಶನಃ ॥6॥
ಒಮ್ಮೆ ಇಂದ್ರನಿಂದ ಸನ್ಮಾನಿತನಾದ, ಶತ್ರುಕರ್ಶನನಾದ, ಇಂದ್ರನ ಸ್ನೇಹಿತನಾದ, ಅದೀನನಾದ ಮಾಂಧಾತೃರಾಜನು ಅಲ್ಲಿಗೆ ಬಂದನು.
ಸೋಽಭಿಸೃತ್ಯ ತು ಮಾಂಧಾತಾ ವಸುಹೋಮಂ ನರಾಧಿಪಮ್ |
ದೃಷ್ಟ್ವಾ ಪ್ರಕೃಷ್ಟಂ ತಪಸಾ ವಿನಯೇನಾಭ್ಯತಿಷ್ಠತ ॥7॥
ಮಾಂಧಾತೃವು ವಸುಹೋಮರಾಜನನ್ನು ಸಮೀಪಿಸಿ,ಅವನ ಶ್ರೇಷ್ಠವಾದ ತಪಸ್ಸನ್ನು ನೋಡಿ, ವಿನಯದಿಂದ ನಿಂತನು.
ವಸುಹೋಮೋಽಪಿ ರಾಜ್ಞೋ ವೈ ಗಾಮರ್ಘ್ಯಂ ಚ ನ್ಯವೇದಯತ್ |
ಸಪ್ತಾಂಗಸ್ಯ ಚ ರಾಜ್ಯಸ್ಯ ಪಪ್ರಚ್ಛ ಕುಶಲಂ ತದಾ ॥8॥
ವಸುಹೋಮನೂ ಸಹ ರಾಜನಿಗೆ ಗೋದಾನವನ್ನು ಮಾಡಿ, ಅರ್ಘ್ಯವನ್ನು ನೀಡಿದನು. ಮತ್ತು ಸಪ್ತಾಂಗಯುತವಾದ ರಾಜ್ಯದ ಕುಶಲಪ್ರಶ್ನೆಯನ್ನು ಮಾಡಿದನು.
ಸದ್ಭಿರಾಚರಿತಂ ಪೂರ್ವಂ ಯಥಾವದನುಯಾಯಿನಮ್ |
ಅಪೃಚ್ಛದ್ ವಸುಹೋಮಸ್ತಂ ರಾಜನ್ ಕಿಂ ಕರವಾಣಿ ತೇ ॥9॥
ಸಜ್ಜನರು ಆಚರಿಸಿದ ಮಾರ್ಗವನ್ನು ಯಥಾವತ್ತಾಗಿ ಅನುಸರಿಸುವ ಮಾಂಧಾತೃ -ವನ್ನು ಕುರಿತು ವಸುಹೋಮನು ರಾಜನೇ! ನಿನಗೆ ಏನು ಮಾಡಲಿ ಎಂದು ಕೇಳಿದನು.

ಸೋಽಬ್ರವೀದ್ ಪರಮಪ್ರೀತೋ ಮಾಂಧಾತಾ ರಾಜಸತ್ತಮಮ್ |
ವಸುಹೋಮಂ ಮಹಾಪ್ರಾಜ್ಞಮಾಸೀನಂ ಕುರುನಂದನ ॥10॥
ಎಲೈ ಕುರುನಂದನನೇ! ಪರಮಸಂತುಷ್ಟನಾದ ಮಾಂಧಾತೃವು ಆಸೀನನಾದ ರಾಜಶ್ರೇಷ್ಠನೂ, ಮಹಾಪ್ರಾಜ್ಞನೂ ಆದ ವಸುಹೋಮನನ್ನು ಕುರಿತು ಹೇಳಿದನು.
ಬೃಹಸ್ಪತೇರ್ಮತಂ ರಾಜನ್ನಧೀತಂ ಸಕಲಂ ತ್ವಯಾ |
ತಥೈವೌಶನಸಂ ಶಾಸ್ತ್ರಂ ವಿಜ್ಞಾತಂ ತೇ ನರಾಧಿಪ ॥11॥
ಎಲೈ ರಾಜನೇ! ನೀನು ಬೃಹಸ್ಪತಿಗಳಿಗೆ ಅಭಿಮತವಾದ ಶಾಸ್ತ್ರವನ್ನು ಪೂರ್ಣವಾಗಿ ಅಧ್ಯಯನ ಮಾಡಿದ್ದೀಯೆ. ಹಾಗೆಯೇ ಎಲೈ ನರಾಧಿಪನೇ! ಶುಕ್ರಾಚಾರ್ಯರ ಶಾಸ್ತ್ರವನ್ನೂ ತಿಳಿದಿದ್ದೀಯೆ.
ತದಹಂ ಶ್ರೋತುಮಿಚ್ಛಾಮಿ ದಂಡ ಉತ್ಪದ್ಯತೇ ಕಥಮ್ |
ಕಿಂ ವಾಪಿ ಪೂರ್ವಂ ಜಾಗರ್ತಿ ಕಿಂವಾ ಪರಮಮುಚ್ಯತೇ ॥12॥
ಅದನ್ನು ನಾನು ಕೇಳಲು ಬಯಸುತ್ತೇನೆ. ದಂಡವು ಹೇಗೆ ಉತ್ಪನ್ನವಾಗುತ್ತದೆ? ದಂಡೋತ್ಪತ್ತಿಗಿಂತಲೂ ಮೊದಲು ಯಾವುದು ಪ್ರಜೆಗಳ ರಕ್ಷಣಾಕಾರ್ಯದಲ್ಲಿ ಜಾಗರೂಕವಾಗಿದ್ದಿತು? ಅದರಲ್ಲಿ ಯಾವುದು ಶ್ರೇಷ್ಠವಾದುದು?
ಕಥಂ ಕ್ಷತ್ರಿಯಸಂಸ್ಥಶ್ಚ ದಂಡಃ ಸಂಪ್ರತ್ಯವಸ್ಥಿತಃ |
ಬ್ರೂಹಿ ಮೇ ಸುಮಹಾಪ್ರಾಜ್ಞ ದದಾಮ್ಯಾಚಾರ್ಯವೇತನಮ್ ॥13॥
ದಂಡವು ಈಗ ಹೇಗೆ ಕ್ಷತ್ರಿಯರ ಹಸ್ತಕ್ಕೆ ಬಂದಿದೆ? ಎಲೈ ಮಹಾಪ್ರಾಜ್ಞನೇ! ನನಗೆ ಇವೆಲ್ಲವನ್ನೂ ಹೇಳು. ನಾನು ಗುರುದಕ್ಷಿಣೆಯನ್ನು ಕೊಡುತ್ತೇನೆ.
ವಸುಹೋಮಃ
ಶೃಣು ರಾಜನ್ ಯಥಾ ದಂಡಃ ಸಂಭೂತೋ ಲೋಕಸಂಗ್ರಹಃ |
ಪ್ರಜಾವಿನಯರಕ್ಷಾರ್ಥಂ ಧರ್ಮಸ್ಯಾತ್ಮಾ ಸನಾತನಃ ॥14॥
ವಸುಹೋಮ ಎಲೈ ರಾಜನೇ! ಲೋಕಸಂಗ್ರಹವನ್ನು ಮಾಡುವ, ಪ್ರಜೆಗಳಲ್ಲಿ ವಿನಯವನ್ನು ರಕ್ಷಿಸುವ, ಧರ್ಮಸ್ವರೂಪವಾದ, ಸನಾತನವಾದ ದಂಡವು ಹೇಗೆ ಉತ್ಪನ್ನವಾಯಿತೆಂದು ಕೇಳು.
ಬ್ರಹ್ಮಾ ಯಿಯಕ್ಷುರ್ಭಗವಾನ್ ಸರ್ವಲೋಕಪಿತಾಮಹಃ |
ಋತ್ವಿಜಂ ನಾತ್ಮನಾ ತುಲ್ಯಂ ದದರ್ಶೇತಿ ಹಿ ನಃ ಶ್ರುತಮ್ ॥15॥
ಯಜ್ಞವನ್ನು ಮಾಡಲು ಬಯಸಿದ, ಪೂಜ್ಯರಾದ ಸರ್ವಲೋಕಪಿತಾಮಹರಾದ ಬ್ರಹ್ಮದೇವರು ತಮಗೆ ಸದೃಶನಾದ ಋತ್ವಿಜನನ್ನು ಕಾಣಲಿಲ್ಲ ಎಂದು ನಾವು ಕೇಳಿದ್ದೇವೆ.
ಸ ಗರ್ಭಂ ಶಿರಸಾ ದೇವೋ ವರ್ಷಪೂಗಾನಧಾರಯತ್ |
ಪೂರ್ಣೇ ವರ್ಷಸಹಸ್ರೇ ತು ಸ ಗರ್ಭಃ ಕ್ಷುವತೋಽಪತತ್ ॥16॥
ಅವರು ಆಗ ಎಷ್ಟೋ ವರ್ಷಗಳ ಕಾಲ ಒಂದು ಗರ್ಭವನ್ನು ಶಿರಸ್ಸಿನಲ್ಲಿ ಧಾರಣ ಮಾಡಿದರು. ಒಂದು ಸಹಸ್ರ ವರ್ಷಗಳು ಕಳೆದ ಮೇಲೆ ಅವರು ಸೀನಿದಾಗ ಆ ಗರ್ಭವು ಕೆಳಗೆ ಬಿದ್ದಿತು.
ಸ ಕ್ಷುಪೋ ನಾಮ ಸಂಭೂತಃ ಪ್ರಜಾಪತಿರರಿಂದಮ |
ಋತ್ವಿಗಾಸೀತ್ ತದಾ ರಾಜನ್ ಯಜ್ಞೇ ತಸ್ಯ ಮಹಾತ್ಮನಃ ॥17॥
ಎಲೈ ಅರಿಂದಮನೇ! ಆ ಗರ್ಭವು ಕ್ಷುಪ ಎಂಬ ಹೆಸರಿನ ಪ್ರಜಾಪತಿ- ಯಾಯಿತು. ಕ್ಷುಪನು ಮಹಾತ್ಮರಾದ ಬ್ರಹ್ಮದೇವರ ಯಜ್ಞದಲ್ಲಿ ಋತ್ವಿಜನಾದನು.
ತಸ್ಮಿನ್ ಪ್ರವೃತ್ತೇ ಸತ್ರೇ ತು ಬ್ರಹ್ಮಣಃ ಪಾರ್ಥಿವರ್ಷಭ |
ಹೃಷ್ಟರೂಪಪ್ರಚಾರತ್ವಾದ್ ದಂಡಃ ಸೋಽಂತರ್ಹಿತೋಽಭವತ್ ॥18॥
ಎಲೈ ಪಾರ್ಥಿವಶ್ರೇಷ್ಠನೇ! ಬ್ರಹ್ಮದೇವರ ಯಜ್ಞವು ನಡೆಯುತ್ತಿದ್ದಾಗ, ಬ್ರಹ್ಮದೇವರು ಸಂತೋಷಗೊಂಡು ಯಜ್ಞನಿರತನಾದುದರಿಂದ (ಪ್ರಜಾನಿಯಮನ- ಕಾರ್ಯರಹಿತರಾದುದರಿಂದ) ಆ ದಂಡವು ಅಂತರ್ಧಾನವನ್ನು ಹೊಂದಿತು.
ತಸ್ಮಿನ್ನಂತರ್ಹಿತೇ ಚಾಥ ಪ್ರಜಾನಾಂ ಸಂಕರೋಽಭವತ್ |
ನೈವ ಕಾರ್ಯಂ ನ ಚಾಕಾರ್ಯಂ ಭೋಜ್ಯಾಭೋಜ್ಯಂ ನ ವಿದ್ಯತೇ ॥19॥
ದಂಡವು ಅಂತರ್ಧಾನ ಹೊಂದುತ್ತಿರಲು ಪ್ರಜೆಗಳಲ್ಲಿ ಸಾಂಕರ್ಯವುಂಟಾ- ಯಿತು. ಕಾರ್ಯಾಕಾರ್ಯವಿಭಾಗವಾಗಲೀ ಭೋಜ್ಯಾಭೋಜ್ಯವಿಭಾಗವಾಗಲೀ ಇರಲಿಲ್ಲ.
ಪೇಯಾಪೇಯಂ ಕುತಃ ಸಿದ್ಧಿರ್ಹಿಂಸಂತಿ ಚ ಪರಸ್ಪರಮ್ |
ಗಮ್ಯಾಗಮ್ಯಂ ತದಾ ನಾಸೀತ್ ಪರಸ್ವಂ ಸ್ವಂ ಚ ವೈ ಸಮಮ್ ॥20॥
ಪೇಯಾಪೇಯವಿಭಾಗವು ಎಲ್ಲಿ ಸಿದ್ಧವಾದೀತು? ಪ್ರಜೆಗಳು ಪರಸ್ಪರವಾಗಿ ಹಿಂಸಿಸಿದರು. ಆಗ ಗಮ್ಯಾಗಮ್ಯವಿಭಾಗವಿರಲಿಲ್ಲ. ಪರಸ್ವತ್ತು ತನ್ನ ಸ್ವತ್ತಿಗೆ ಸಮನಾ- ಗಿದ್ದಿತು.
ಪರಸ್ಪರಂ ವಿಲುಂಪಂತೇ ಸಾರಮೇಯಾ ಇವಾಮಿಷಮ್ |
ಅಬಲಂ ಬಲಿನೋ ಜಘ್ನುರ್ನಿರ್ಮರ್ಯಾದಮವರ್ತತ ॥21॥
ನಾಯಿಗಳು ಮಾಂಸವನ್ನು ಲೂಟಿಮಾಡುವಂತೆ ಪರಸ್ಪರವಾಗಿ ಲೂಟಿ ಮಾಡಿ- ದರು. ಬಲಿಷ್ಠರು ದುರ್ಬಲರನ್ನು ಕೊಂದರು. ಯಾವ ಕಟ್ಟುಪಾಡೂ ಇರಲಿಲ್ಲ.
ತತಃ ಪಿತಾಮಹೋ ವಿಷ್ಣುಂ ಭಗವಂತಂ ಸನಾತನಮ್ |

ಸಂಪೂಜ್ಯ ವರದಂ ದೇವಂ ಮಹಾದೇವಮಥಾಬ್ರುವೀತ್ ॥22॥
ಆಗ ಪಿತಾಮಹರಾದ ಬ್ರಹ್ಮದೇವರು ಭಗವಂತನೂ, ಸನಾತನನೂ, ವರಪ್ರದನೂ, ಮಹಾದೇವನೂ ಆದ ವಿಷ್ಣುವನ್ನು ಚೆನ್ನಾಗಿ ಪೂಜಿಸಿ ಅನಂತರ ಮಾತ -ನಾಡಿದನು.
ಸ್ವಯಂ ವಿಷ್ಣುಃ ಸದಾ ಕ್ಲೃಪ್ತೋ ಧರ್ಮಸ್ಯ ಪರಿರಕ್ಷಣೇ |
ತ್ವಂ ಹಿ ಸರ್ವವಿಧಾನಜ್ಞಃ ಸತ್ವಾನಾಂ ತ್ವಂ ಗತಿಃ ಪುರಾ ॥23॥
ವಿಷ್ಣುವಾದ ನೀನೇ ಯಾವಾಗಲೂ ಧರ್ಮದ ರಕ್ಷಣೆಯಲ್ಲಿ ಕ್ಲೃಪ್ತನಾಗಿದ್ದೀಯೆ. ನೀನು ಎಲ್ಲಾ ಪ್ರಕಾರಗಳನ್ನೂ ತಿಳಿದವನು. ಮೊದಲಿನಿಂದಲೂ ಎಲ್ಲ ಜೀವರಿಗೂ ನೀನೇ ಗತಿಯಾದವನು.
ಅತ್ರ ಸಾಧ್ವನುಕಂಪಾಂ ವೈ ಕರ್ತುಮರ್ಹಸಿ ಕೇವಲಮ್ |
ಸಂಕರೋ ನ ಭವೇದತ್ರ ಯಥಾ ವೈ ತದ್ ವಿಧೀಯತಾಮ್ ॥24॥
ಈಗ ನೀನು ಶುದ್ಧವಾದ ಅನುಕಂಪವನ್ನು ಮಾಡಬೇಕಾಗಿದೆ. ಪ್ರಜೆಗಳಲ್ಲಿ ಸಂಕರವುಂಟಾಗದಂತೆ ಮಾಡಬೇಕು. (ಎಂದು ಪ್ರಾರ್ಥಿಸಿದರು)
ತತಃ ಸ ಭಗವಾನ್ ಧ್ಯಾತ್ವಾ  ಚಿರಂ ಶೂಲಜಟಾಧರಃ |
ದೇವದೇವೋ ಮಹಾದೇವಃ ಕಾರಣಂ ಜಗತಃ ಪರಮ್ ॥25॥
ಬ್ರಹ್ಮವಿಷ್ಣ್ವಿಂದ್ರಸಹಿತಃ ಸರ್ವೈಶ್ಚ ಸ ಸುರಾಸುರೈಃ |
ಲೋಕಸಂಧಾರಣಾರ್ಥಂ ಚ ಲೋಕಸಂಕರನಾಶನಮ್ |
ಆತ್ಮಾನಮಾತ್ಮನಾ ದಂಡಮಸೃಜದ್ ದೇವಸತ್ತಮಃ ॥26॥
ಅನಂತರ ಶೂಲಜಟಾಧರನಾದ, ಮಹಾದೇವನಾದ, ದೇವದೇವನಾದ, ಜಗತ್ತಿಗೆ ಮೂಲಕಾರಣನಾದ ಶಂಕರನು (ಶಂಕರನ ಅಂತರ್ಯಾಮಿಯಾದ ಹರಿಯು) ಬ್ರಹ್ಮ, ವಿಷ್ಣು (ವಿಷ್ಣುವಿನ ಇನ್ನೊಂದು ರೂಪ) ಇಂದ್ರಸಹಿತನಾಗಿ ಎಲ್ಲ ಸುರಾಸುರರಿಂದಲೂ ಸಹಿತನಾಗಿ ಲೋಕವನ್ನು ಚೆನ್ನಾಗಿ ಧರಿಸಿ ಲೋಕ- ಸಾಂಕರ್ಯವನ್ನು ನಾಶ ಮಾಡುವುದಕ್ಕಾಗಿ ದೇವಶ್ರೇಷ್ಠನಾದ ಅವನು ತನ್ನನ್ನೇ ದಂಡರೂಪವಾಗಿ ಸೃಷ್ಟಿಸಿಕೊಂಡನು.
ತಸ್ಮಾಚ್ಚ  ಧರ್ಮಚರಣಾಂ ನೀತಿಂ ದೇವೀಂ ಸರಸ್ವತೀಮ್ |
ಅಸೃಜದ್ ದಂಡನೀತಿಃ ಸಾ ತ್ರಿಷು ಲೋಕೇಷು ವಿಶ್ರುತಾ ॥27॥
ಅದರಿಂದ ಸರಸ್ವತಿಯಿಂದ ಅಭಿಮನ್ಯವಾದ ಧರ್ಮಾಚರಣೆಯ ನೀತಿಯನ್ನು ಸೃಷ್ಟಿಸಿದನು. ದಂಡನೀತಿಯೆಂದು ಹೆಸರು ಪಡೆದ ಆ ನೀತಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ.
ಯಥಾಽಸೌ ನೀಯತೇ ದಂಡಃ ಸತತಂ ಪಾಪಕಾರಿಷು |
ದಂಡಸ್ಯ ನಯನಾತ್ ಸಾ ಹಿ ದಂಡನೀತಿರಿಹೋಚ್ಯತೇ ॥28॥
ಅಪರಾಧಿಗಳಲ್ಲಿ ದಂಡವನ್ನು ಉಂಟು ಮಾಡುವುದರಿಂದ ಆ ನೀತಿಗೆ ದಂಡನೀತಿಯೆಂದು ಹೆಸರು.
ಭೂಯಃ ಸ ಭಗವಾನ್ ಧ್ಯಾತ್ವಾ  ಚಿರಂ ಶೂಲಧರಃ ಪ್ರಭುಃ |
ಅಸೃಜತ್ ಸರ್ವಶಾಸ್ತ್ರಾಣಿ ಮಹಾದೇವೋ ಮಹೇಶ್ವರಃ ॥29॥
ಅನಂತರ ಪೂಜ್ಯನಾದ, ಶೂಲಧರನಾದ, ಮಹಾದೇವನಾದ ಮಹೇಶ್ವರನು ಪುನಃ ಬಹಳಕಾಲ ಚಿಂತಿಸಿ ಸರ್ವಶಾಸ್ತ್ರಗಳನ್ನೂ ಸೃಷ್ಟಿಸಿದನು.
ದಂಡನೀತೇಃ ಪ್ರಯೋಗಾರ್ಥಂ ಪ್ರಮಾಣಾನಿ ಚ ಸರ್ವಶಃ |
ವಿದ್ಯಾಶ್ಚತಸ್ರಃ ಕೂಟಸ್ಥಾಸ್ತಾಸಾಂ ಭೇದವಿಕಲ್ಪನಾಃ ॥30॥
ದಂಡನೀತಿಯ ಪ್ರಯೋಗಕ್ಕಾಗಿ ಎಲ್ಲಾ ಪ್ರಮಾಣಗಳನ್ನೂ ನಾಲ್ಕು ನಿರ್ವಿ- ಕಾರವಿದ್ಯೆಗಳನ್ನೂ, ಅವುಗಳ ಪ್ರಭೇದಗಳನ್ನೂ ಸೃಷ್ಟಿಸಿದನು.
ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ |
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ ॥31॥
ಅವು ನಾಲ್ಕು ವೇದಗಳು, ಆರು ವೇದಾಂಗಗಳು,ಮೀಮಾಂಸಾ, ನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಎಂದು ಹದಿನಾಲ್ಕು ವಿದ್ಯಾಸ್ಥಾನಗಳಾಗಿವೆ.
ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತಿ ತೇ ತ್ರಯಃ |
ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ತು ॥32॥
ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಮತ್ತು ನಾಲ್ಕನೆಯ ಅರ್ಥಶಾಸ್ತ್ರವನ್ನು ಸೇರಿಸಿ ಒಟ್ಟು ಹದಿನೆಂಟು ವಿದ್ಯೆಗಳಾಗುತ್ತವೆ.
ದಶ ಚಾಷ್ಟೌ ಚ ವಿಖ್ಯಾತಾ ಏತಾ ಧರ್ಮಸ್ಯ ಸಂಹಿತಾಃ |
ಏತಾಸಾಮೇವ ವಿದ್ಯಾನಾಂ ವ್ಯಾಸಮಾಹ ಮಹೇಶ್ವರಃ ॥33॥
ಇವು ಧರ್ಮಸಂಹಿತೆಗಳೆಂದು ಪ್ರಸಿದ್ಧವಾದ ಹದಿನೆಂಟು ವಿದ್ಯೆಗಳು. ಈ ವಿದ್ಯೆಗಳ ವಿಸ್ತಾರವನ್ನೇ ಮಹೇಶ್ವರನಾದ ವಿಷ್ಣುವು ಹೇಳಿದನು.  ಇಲ್ಲಿಯೇ ಮುಂದೆ ರುದ್ರನಿಗೆ ಈಶ್ವರನನ್ನು ಪ್ರಭುವನ್ನಾಗಿ ಮಾಡಿದನು ಎಂದು ಹೇಳಿರುವುದರಿಂದ ಶಿವನು ಶಿವನನ್ನು ಸೃಷ್ಟಿಮಾಡಲು ಸಾಧ್ಯವಿಲ್ಲವಾದುದರಿಂದ ಮಹೇಶ್ವರನೆಂದರೆ ಶಿವಾಂತರ್ಯಾಮಿಯಾದ ವಿಷ್ಣುವೆಂದೇ ತಿಳಿಯಬೇಕು - (ಲಕ್ಷಾಲಂಕಾರ)
ಶತಾನಿ ತ್ರೀಣಿ ಶಾಸ್ತ್ರಾಣಾಂ ಮಹಾತಂತ್ರಾಣಿ ಸಪ್ತತಿಮ್ |
ವ್ಯಾಸ ಏವ ತು ವಿದ್ಯಾನಾಂ ಮಹಾದೇವೇನ ಕೀರ್ತಿತಃ ॥34॥

ಮಹಾದೇವನಾದ ವಿಷ್ಣುವು ಮುನ್ನೂರು ಶಾಸ್ತ್ರಗಳನ್ನೂ ಎಪ್ಪತ್ತು ಮಹಾತಂತ್ರ- ಗಳನ್ನೂ ರಚಿಸಿ ವಿದ್ಯೆಗಳ ವಿಸ್ತಾರವನ್ನು ಹೇಳಿದ್ದಾನೆ.
ತಂತ್ರಂ ಪಾಶುಪತಂ ನಾಮ ಪಂಚರಾತ್ರಂ ಚ ವಿಶ್ರುತಮ್ |
ಯೋಗಶಾಸ್ತ್ರಂ ಚ ಸಾಂಖ್ಯಂ ಚ ತಂತ್ರಂ ಲೋಕಾಯತಂ ತಥಾ ||35||
ತಂತ್ರಂ ಬ್ರಹ್ಮತುಲಾ ನಾಮ ತರ್ಕವಿದ್ಯಾ ದಿವೌಕಸಾಮ್ |
ಸುಖದುಃಖಾರ್ತಜಿಜ್ಞಾಸಾ ಕಾರಣಂ ಚೇತಿ ವಿಶ್ರುತಮ್ ||36||
ಪಾಶುಪತತಂತ್ರ, ಪ್ರಖ್ಯಾತವಾದ ಪಂಚರಾತ್ರ, ಯೋಗಶಾಸ್ತ್ರ, ಸಾಂಖ್ಯಶಾಸ್ತ್ರ, ಚಾರ್ವಾಕತಂತ್ರ, ಬ್ರಹ್ಮತುಲಾತಂತ್ರ, ದೇವತೆಗಳ ತರ್ಕವಿದ್ಯಾ, ಸುಖದುಃಖಾರ್ಥ- ಜಿಜ್ಞಾಸಾ, ಪ್ರಖ್ಯಾತವಾದ ಸುಖವಿದ್ಯಾಕಾರಣ ಎಂಬ ಶಾಸ್ತ್ರಗಳನ್ನು ರಚಿಸಿದನು.
ತರ್ಕವಿದ್ಯಾಸ್ತಥಾ ಚಾಷ್ಟೌ ಸ ಚೋಕ್ತೋ ನ್ಯಾಯವಿಸ್ತರಃ |
ದಶ ಚಾಷ್ಟೌ ಚ ವಿಜ್ಞೇಯಾಃ ಪೌರಾಣಾ ಯಜ್ಞಸಂಹಿತಾಃ ||37||
ಎಂಟು ತರ್ಕವಿದ್ಯೆಗಳನ್ನು ರಚಿಸಿದನು. ಅದಕ್ಕೆ ನ್ಯಾಯವಿಸ್ತರವೆಂದು ಹೆಸರು. ಯಜ್ಞಕ್ಕೆ ಸಂಬಂಧಿಸಿದ ಪುರಾಣಸಂಹಿತೆಗಳು ಹದಿನೆಂಟು ಎಂದು ತಿಳಿಯಬೇಕು.
ಪುರಾಣಾಶ್ಚ ಪ್ರಣೀತಾಶ್ಚ ತಾವದೇವೇಹ ಸಂಹಿತಾಃ |
ಧರ್ಮಶಾಸ್ತ್ರಾಣಿ ತದ್ವಚ್ಚ ಏಕಾರ್ಥಾನಿ ಚ ನಾನ್ಯಥಾ ||38||
ಅಷ್ಟೇ ಪುರಾಣಸಂಹಿತೆಗಳನ್ನು ರಚಿಸಿದನು. ಅದರಂತೆಯೇ ಸಮಾನಾರ್ಥಕ- ವಾದ ಪರಸ್ಪರವಿರೋಧವಿಲ್ಲದ ಧರ್ಮಶಾಸ್ತ್ರಗಳನ್ನು ರಚಿಸಿದನು.
ಏಕಾರ್ಥಾನಿ ಪುರಾಣಾನಿ ವೇದಾಶ್ಚೈಕಾರ್ಥಸಂಹಿತಾಃ |
ನಾನಾರ್ಥಾನಿ ಚ ಸರ್ವಾಣಿ ತತಃ ಶಾಸ್ತ್ರಾಣಿ ಶಂಕರಃ ||39||
ಪ್ರೋವಾಚ ಭಗವಾನ್ ದೇವಃ ಕಾಲಜ್ಞಾನಾನಿ ಯಾನಿ ಚ |
ಚತುಃಷಷ್ಟಿಪ್ರಮಾಣಾನಿ ಆಯುರ್ವೇದಂ ಚ ಸೋತ್ತರಮ್ ||40||
ಪುರಾಣಗಳೆಲ್ಲವೂ ಒಂದೇ ಅರ್ಥವನ್ನು ಹೇಳುತ್ತವೆ. ವೇದಗಳಿಗೂ ಒಂದೇ ಅರ್ಥದಲ್ಲಿ ತಾತ್ಪರ್ಯವಿದೆ. ಉಳಿದ ಶಾಸ್ತ್ರಗಳು ಭಿನ್ನಭಿನ್ನಾರ್ಥಗಳನ್ನು ಹೊಂದಿವೆ. ಪೂಜ್ಯನಾದ ಶಂಕರದೇವನು ಅವುಗಳನ್ನು ಮತ್ತು ಕಾಲಜ್ಞಾನವನ್ನು, ಅರವತ್ತನಾಲ್ಕು ಪ್ರಮಾಣಗಳನ್ನು ಮತ್ತು ಶ್ರೇಷ್ಠವಾದ ಆಯುರ್ವೇದವನ್ನು ರಚಿಸಿದನು.
ಅಷ್ಟಾದಶವಿಕಲ್ಪಾಂ ತಾಂ ದಂಡನೀತಿಂ ಚ ಶಾಶ್ವತೀಮ್ |
ಗಾಂಧರ್ವಮಿತಿಹಾಸಂ ಚ ನಾನಾವಿಸ್ತರಮುಕ್ತವಾನ್ ||41||
ಹದಿನೆಂಟು ಪ್ರಭೇದಗಳಿಂದ ಕೂಡಿದ ಶಾಶ್ವತವಾದ ದಂಡನೀತಿಶಾಸ್ತ್ರವನ್ನು, ಗಾಂಧರ್ವಶಾಸ್ತ್ರವನ್ನು ಮತ್ತು ಇತಿಹಾಸವನ್ನು ಬಹಳವಿಸ್ತಾರವಾಗಿ ಹೇಳಿದನು.
ಇತ್ಯೇತಾಃ ಶಂಕರಪ್ರೋಕ್ತಾ ವಿದ್ಯಾಃ ಶಬ್ದಾರ್ಥಸಂಹಿತಾಃ |
ಪುನರ್ಭೇದಸಹಸ್ರಂ ತು ತಾಸಾಮೇವ ತು ವಿಸ್ತರಃ ||42||
ಋಷಿಭಿರ್ದೇವಗಂಧರ್ವೈಃ ಸವಿಕಲ್ಪಃ ಸವಿಸ್ತರಃ |
ಶಶ್ವದಭ್ಯಸ್ಯತೇ ಲೋಕೇ ವೇದ ಏವ ತು ಸರ್ವಶಃ ||43||
ಇವುಗಳು ಶಂಕರನಿಂದ ಹೇಳಲ್ಪಟ್ಟ ಶಬ್ದಾರ್ಥಗಳನ್ನೊಳಗೊಂಡ ವಿದ್ಯೆಗಳು. ಪುನಃ ಋಷಿಗಳು ಮತ್ತು ದೇವಗಂಧರ್ವರು ಅವುಗಳಲ್ಲಿ ಸಹಸ್ರಾರು ಪ್ರಭೇದಗಳನ್ನು ಮಾಡಿದರು. ಆ ಎಲ್ಲ ಪ್ರಭೇದಗಳು ವಿಸ್ತಾರವಾಗಿ ಲೋಕದಲ್ಲಿ ಅಧ್ಯಯನ ಮಾಡಲ್ಪಡುತ್ತವೆ. ಅವೆಲ್ಲವೂ ವೇದಗಳೇ.
ವೇದಾಶ್ಚತಸ್ರಃ ಸಂಕ್ಷಿಪ್ತಾ ವೇದವಾದಾಶ್ಚ ತೇ ಸ್ಮೃತಾಃ |
ಏತಾಸಾಂ ಪಾರಗೋ ಯಶ್ಚ ಸ ಚೋಕ್ತೋ ವೇದಪಾರಗಃ ||44||
ಅವು ಸಂಕ್ಷಿಪ್ತವಾದ ನಾಲ್ಕು ವೇದಗಳು. ಅವುಗಳಿಗೆ ವೇದವಾದಗಳೆಂದು ಹೆಸರು. ಇವುಗಳನ್ನೆಲ್ಲಾ ತಿಳಿದವನು ವೇದಪಾರಗನೆನಿಸುತ್ತಾನೆ.
ವೇದಾನಾಂ ಪಾರಗೋ ರುದ್ರೋ ವಿಷ್ಣುರಿಂದ್ರೋ ಬೃಹಸ್ಪತಿಃ |
ಶಕ್ರಃ ಸ್ವಾಯಂಭುವಶ್ಚೈವ ಮನುಃ ಪರಮಧರ್ಮವಿತ್ ||45||
ಬ್ರಹ್ಮಾ ಚ ಪರಮೋ ದೇವಃ ಸದಾ ಸರ್ವೈಃ ಸುರಾಸುರೈಃ |
ಸರ್ವಸ್ಯಾನುಗ್ರಹಾಚ್ಚೈವ ವ್ಯಾಸೋ ವೈ ವೇದಪಾರಗಃ ||46||
ವೇದಪಾರಂಗತರಾದವರೆಂದರೆ ರುದ್ರ, ವಿಷ್ಣು, ಇಂದ್ರ, ಬೃಹಸ್ಪತಿ, ಶಕ್ರ, ಪರಮಧರ್ಮಜ್ಞನಾದ ಸ್ವಾಯಂಭುವಮನು, ಸಕಲಸುರಾಸುರರಿಂದ ಕೂಡದ ಶ್ರೇಷ್ಠರಾದ ಬ್ರಹ್ಮದೇವರು, ಸರ್ವಾನುಗ್ರಹ ಮಾಡುವುದರಿಂದ ವೇದವ್ಯಾಸರು - ಇವರು ವೇದಪಾರಗರು.
ಭೀಷ್ಮಃ
ಅಹಂ ಶಾಂತನವೋ ಭೀಷ್ಮಃ ಪ್ರಸಾದಾನ್ಮಾಧವಸ್ಯ ಚ |
ಶಂಕರಸ್ಯ ಪ್ರಸಾದಾಚ್ಚ ಬ್ರಹ್ಮಣಶ್ಚ ಕುರೂದ್ವಹ |
ವೇದಪಾರಗ ಇತ್ಯುಕ್ತೋ ಯಾಜ್ಞವಲ್ಕ್ಯಶ್ಚ ಸರ್ವಶಃ ||47||
ಭೀಷ್ಮರು ಮಾಧವನ ಅನುಗ್ರಹದಿಂದ, ಶಂಕರನ ಮತ್ತು ಬ್ರಹ್ಮದೇವರ ಅನುಗ್ರಹದಿಂದ ಎಲೈ ಕುರೂದ್ವಹನೇ! ಶಂತನುವಿನ

ಪುತ್ರನಾದ ಭೀಷ್ಮನಾದ ನಾನು ವೇದಪಾರಗನೆಂದು ಹೇಳಲ್ಪಡುತ್ತೇನೆ. ಯಾಜ್ಞವಲ್ಕ್ಯರೂ ವೇದಪಾರಗರೆಂದು ಹೇಳಲ್ಪಡುತ್ತಾರೆ.
ಕಲ್ಪೇ ಕಲ್ಪೇ ಮಹಾಭಾಗೈರ್ಋಷಿಭಿಸ್ತತ್ತ್ವದರ್ಶಿಭಿಃ |
ಋಷಿಪುತ್ರೈರ್ಋಷಿಗಣೈರ್ಭಿದ್ಯಂತೇ ಮಿಶ್ರಕೈರಪಿ ॥48॥
ಪ್ರತಿಯೊಂದು ಕಲ್ಪದಲ್ಲಿಯೂ ಮಹಾನುಭಾವರೂ ತತ್ವದರ್ಶಿಗಳೂ ಆದ ಋಷಿಗಳಿಂದಲೂ ಋಷಿಪುತ್ರರಿಂದಲೂ
ಋಷಿಸಮೂಹಗಳಿಂದಲೂ ಈ ವೇದ- ಗಳೂ ಒಬ್ಬೊಬ್ಬರಿಂದ ಮತ್ತು ಸಮೂಹದಿಂದ ಶಾಖೆಗಳಾಗಿ ಒಡೆಯುತ್ತವೆ.
ಶಿವೇನ ಬ್ರಹ್ಮಣಾ ಚೈವ ವಿಷ್ಣುನಾ ಚ ವಿಕಲ್ಪಿತಾಃ |
ಆದಿಕಲ್ಪೇ ಪುನಶ್ಚೈವ ಭಿದ್ಯಂತೇ ಸಾಧುಭಿಃ ಪುನಃ ॥49॥
ಆದಿಕಲ್ಪದಲ್ಲಿ ಶಿವನಿಂದಲೂ, ಬ್ರಹ್ಮನಿಂದಲೂ, ವಿಷ್ಣುವಿನಿಂದಲೂ ಕವಲು- ಗಳಾಗಿ ಒಡೆದ ಈ ವೇದಗಳು ಪುನಃ ಸಜ್ಜನರಿಂದ
ಕವಲುಗಳಾಗಿ ಒಡೆಯಲ್ಪಡುತ್ತವೆ.
ಇದಾನೀಮಪಿ ವಿದ್ವದ್ಭಿರ್ಭಿದ್ಯಂತೇ ಚ ವಿಕಲ್ಪಕೈಃ |
ಪೂರ್ವಜನ್ಮಾನುಸಾರೇಣ ಬಹುಧೇಯಂ ಸರಸ್ವತೀ ॥50॥
ಈಗಲೂ ಸಹ ವಿದ್ವಾಂಸರು ಅನೇಕಶಾಖೆಗಳಾಗಿ ಒಡೆಯುತ್ತಾರೆ. ಮೊದಲಿನ ತನ್ನ ಜನ್ಮಕ್ಕೆ ಅನುಸಾರವಾಗಿ ಈ ವೇದವಾಙ್ಮಯವು
ಬಹುಪ್ರಕಾರವಾಗಿ ಹಬ್ಬಿದೆ.
ತತಃ ಸ ಭಗವಾನ್ ಧ್ಯಾತ್ವಾ ತದಾ ಶೂಲವರಾಯುಧಃ |
ತಸ್ಯ ತಸ್ಯ ನಿಕಾಯಸ್ಯ ಚಕಾರೈಕೈಕಮೀಶ್ವರಮ್ ॥51॥
ಅನಂತರ ಶೂಲವರಾಯುಧನಾದ ಭಗವಂತನಾದ ವಿಷ್ಣುವು ಆಯಾ ಗುಂಪು- ಗಳಿಗೆ ಒಬ್ಬೊಬ್ಬ ಅಧಿಪತಿಯನ್ನಾಗಿ ಮಾಡಿದನು.
ಇಲ್ಲಿ ಶೂಲವರಾಯುಧನೆಂದರೆ ಶೂಲಕ್ಕಿಂತಲೂ ಶ್ರೇಷ್ಠವಾದ ಚಕ್ರಾಯುಧ ಎಂದರ್ಥ. ಶೂಲವರಾಯುಧನಾದವನು
ಶಿವಾಂತರ್ಯಾಮಿಯಾದ ವಿಷ್ಣುವೇ ಎಂದು ತಿಳಿಯಬೇಕು ಇಲ್ಲದಿದ್ದರೆ ಇದೇ ಅಧ್ಯಾಯದಲ್ಲಿ ಉಪಕ್ರಮದಿಂದ ಇರುವ ಱತತಃ
ಪಿತಾಮಹೋ ವಿಷ್ಣುಂಱ ಎಂಬ ಇದೇ ಅಧ್ಯಾಯದ 22ನೆಯ ಶ್ಲೋಕ- ದಿಂದಲೂ ಱಸ್ವಯಂ ವಿಷ್ಣುಃ ಸದಾ ಕ್ಲೃಪ್ತಃಱ ಎಂಬ 23ನೆಯ
ಶ್ಲೋಕದಿಂದಲೂ ವಿರೋಧವುಂಟಾಗುತ್ತದೆ ಲಕ್ಷಾಲಂಕಾರ.
ದೇವಾನಾಮೀಶ್ವರಂ ಚಕ್ರೇ ದೇವಂ ದಶಶತೇಕ್ಷಣಮ್ |
ಯಮಂ ವೈವಸ್ವತಂ ಚಾಪಿ ಪಿತೄಣಾಮಕರೋತ್ ಪತಿಮ್ ॥52॥
ದೇವತೆಗಳಿಗೆ ಸಹಸ್ರಾಕ್ಷನಾದ ಇಂದ್ರನನ್ನು ಒಡೆಯನನ್ನಾಗಿ ಮಾಡಿದನು. ಪಿತೃಗಳಿಗೆ ಸೂರ್ಯಪುತ್ರನಾದ ಯಮನನ್ನು ಪತಿಯನ್ನಾಗಿ
ಮಾಡಿನು.
ಧನಾನಾಂ ರಕ್ಷಸಾಂ ಚಾಪಿ ಕುಬೇರಮಪಿ ಚೇಶ್ವರಮ್ |
ಪರ್ವತಾನಾಂ ಪತಿಂ ಮೇರುಂ ಸರಿತಾಂ ಚ ಮಹೋದಧಿಮ್ ॥53॥
ಕೋಶಗಳಿಗೆ ಮತ್ತು ರಾಕ್ಷಸರಿಗೆ ಕುಬೇರನನ್ನೂ, ಪರ್ವತಗಳಿಗೆ ಮೇರು- ವನ್ನೂ, ಜಲಾಶಯಗಳಿಗೆ ಸಮುದ್ರವನ್ನೂ ಅಧಿಪತಿಯನ್ನಾಗಿ
ಮಾಡಿದನು.
ಅಪಾಂ ರಾಜ್ಯೇ ಸುರಾಣಾಂ ಚ ವಿದಧೇ ವರುಣಂ ಪ್ರಭುಮ್ |
ಮೃತ್ಯುಂ ಪ್ರಾಣೇಶ್ವರಮಥೋ ತೇಜಸಾಂ ಚ ಹುತಾಶನಮ್ ॥54॥
ಜಲಸಾಮ್ರಾಜ್ಯದಲ್ಲಿ ಮತ್ತು ದೇವತೆಗಳಿಗೆ ವರುಣನನ್ನೂ, ಪ್ರಾಣಗಳಿಗೆ ಮೃತ್ಯುವನ್ನೂ, ತೇಜಸ್ಸುಗಳಿಗೆ ಅಗ್ನಿಯನ್ನೂ ಪ್ರಭುವನ್ನಾಗಿ
ಮಾಡಿದನು.
ರುದ್ರಾಣಾಮಪಿ ಚೇಶಾನಂ ಗೋಪ್ತಾರಂ ವಿದಧೇ ಪ್ರಭುಃ |
ಮಹಾತ್ಮಾನಂ ಮಹಾದೇವಂ ವಿಶಾಲಾಕ್ಷಂ ಸನಾತನಮ್ ॥55॥
ರುದ್ರರಿಗೆ ಮಹಾತ್ಮನೂ, ವಿಶಾಲಾಕ್ಷನೂ, ಸನಾತನನೂ, ಮಹಾದೇವನೂ ಆದ ಈಶ್ವರನನ್ನು ಒಡೆಯನನ್ನಾಗಿ ಮಾಡಿದನು.
ವಸಿಷ್ಠಮೀಶಂ ವಿಪ್ರಾಣಾಂ ವಸೂನಾಂ ಜಾತವೇದಸಮ್ |
ತೇಜಸಾಂ ಭಾಸ್ಕರಂ ಚಕ್ರೇ ನಕ್ಷತ್ರಾಣಾಂ ನಿಶಾಕರಮ್ ॥56॥
ವಿಪ್ರರಿಗೆ ವಸಿಷ್ಠರನ್ನೂ, ವಸುಗಳಿಗೆ ಅಗ್ನಿಯನ್ನೂ, ತೇಜಸ್ಸುಗಳಿಗೆ ಸೂರ್ಯನನ್ನೂ, ನಕ್ಷತ್ರಗಳಿಗೆ ಚಂದ್ರನನ್ನೂ ಅಧಿಪತಿಯನ್ನಾಗಿ
ಮಾಡಿದನು.
ವೀರುಧಾಮಂಶುಮಂತಂ ಚ ಭೂತಾನಾಂ ಚ ಪ್ರಭುಂ ವರಮ್ |
ಕುಮಾರಂ ದ್ವಾದಶಭುಜಂ ಸ್ಕಂದಂ ರಾಜಾನಮಾದಿಶತ್ ॥57॥
ವೃಕ್ಷಗಳಿಗೆ ಮತ್ತು ಭೂತಗಳಿಗೆ ಕಿರಣಸಹಿತನಾದ ಚಂದ್ರನನ್ನು ಅಧಿಪತಿಯನ್ನಾಗಿ ಮಾಡಿದನು. ದ್ವಾದಶಭುಜವುಳ್ಳ
ಸನತ್ಕುಮಾರನಾದ ಕುಮಾರನನ್ನು ರಾಜನನ್ನಾಗಿ (ಸೇನಾಪತಿಯನ್ನಾಗಿ) ಮಾಡಿದನು.
ಕಾಲಂ ಸರ್ವೇಶಮಕರೋತ್ ಸಂಹಾರವಿನಯಾತ್ಮಕಮ್ |
ಮೃತ್ಯೋಶ್ಚತುರ್ವಿಭಾಗಸ್ಯ ದುಃಖಸ್ಯ ಚ ಸುಖಸ್ಯ ಚ ॥58॥
ಸಂಹಾರನಿಯಾಮಕವಾದ ಕಾಲವನ್ನು ಸರ್ವಪ್ರಭುವನ್ನಾಗಿ ಮಾಡಿದನು. ನಾಲ್ಕು ವಿಧವಾದ ಮೃತ್ಯುವಿಗೂ, ಸುಖದುಃಖಗಳಿಗೂ
ಕಾಲವನ್ನೇ ಸರ್ವೇಶನನ್ನಾಗಿ ಮಾಡಿದನು.
ಈಶ್ವರೋ ದೇವದೇವಸ್ತು ರಾಜರಾಜೋ ಧನಾಧಿಪಃ |
ಸರ್ವೇಷಾಮೇವ ರುದ್ರಾಣಾಂ ಶೂಲಪಾಣಿರಿತಿ ಶ್ರುತಿಃ ॥59॥
ದೇವದೇವನೂ ರಾಜರಾಜನೂ ಆದ ಕುಬೇರನು ಸುಖಕ್ಕೂ ಈಶ್ವರನಾದವನು ಎಲ್ಲ ರುದ್ರರಿಗೆ ಶೂಲಪಾಣಿಯು ಒಡೆಯನಾದವನು

ಎಂದು ಕೇಳಿದ್ದೇವೆ.
ತಮೇನಂ ಬ್ರಹ್ಮಣಃ ಪುತ್ರಮನುಜಾತಂ ಕ್ಷುಪಂ ದದೌ |
ಪ್ರಜಾನಾಮಧಿಪಂ ಶ್ರೇಷ್ಠಂ ಸರ್ವಧರ್ಮಭೃತಾಮಪಿ ॥60॥
ಈ ದಂಡನೀತಿಯನ್ನು ಬ್ರಹ್ಮದೇವರ ಕಿರಿಯ ಪುತ್ರನೂ ಪ್ರಜಾಪತಿಯೂ, ಧರ್ಮಿಷ್ಠನೂ ಆದ ಕ್ಷುಪನಿಗೆ ಕೊಡಬೇಕೆಂದು ಉದ್ದೇಶಿಸಿ ಶಂಕರನಿಗೆ ಕೊಟ್ಟನು. (ಲಕ್ಷ್ಯಾಲಂಕಾರ)
ಮಹಾದೇವಸ್ತತಸ್ತಸ್ಮಿನ್ ವೃತ್ತೇ ಯಜ್ಞೇ ಯಥಾವಿಧಿ |
ದಂಡಂ ಧರ್ಮಸ್ಯ ಗೋಪ್ತಾರಂ ವಿಷ್ಣವೇ ಸತ್ಕೃತಂ ದದೌ ॥61॥
ಆ ಯಜ್ಞವು ವಿಧಿವತ್ತಾಗಿ ಮುಗಿಯುತ್ತಿರಲು ಮಹಾದೇವನು ಧರ್ಮರಕ್ಷಕ- ವಾದ ಆ ದಂಡವನ್ನು ಪೂಜಿಸಿ ವಿಷ್ಣುವಿಗೆ ಕೊಟ್ಟನು.
ಈಶ್ವರಶ್ಚೇತನಃ ಕರ್ತಾ ಪುರುಷಃ ಕಾರಣಂ ಶಿವಃ |
ವಿಷ್ಣುರ್ಬ್ರಹ್ಮಾ ಶಶೀ ಸೂರ್ಯಃ ಶಕ್ರೋ ದೇವಾಶ್ಚ ಸಾನ್ವಯಾಃ ॥62॥
ಜ್ಞಾನಾತ್ಮಕಃ ಶಿವೋ ಶೇಷ ಏತೇಷಾಮಪಿ ಕಾರಣಮ್ |
ಸೃಜತೇ ಗ್ರಸತೇ ಚೈವ ತಮೋಭೂತಮಿದಂ ಯಥಾ |
ಅಪ್ರಜ್ಞಾತಂ ಜಗತ್ ಸರ್ವಂ ತದಾ ಹ್ಯೇಕೋ ಮಹೇಶ್ವರಃ ॥63॥
ಈಶ್ವರ, ಚೇತನ, ಕರ್ತೃಗಳು, ಕಾರಣ, ಶಿವ, ವಿಷ್ಣು, ಬ್ರಹ್ಮಾ, ಚಂದ್ರ, ಸೂರ್ಯ, ಇಂದ್ರ, ದೇವತೆಗಳು,ಅವರ ಸಂತತಿ, ಜ್ಞಾನಾತ್ಮಕರಾದ ಶಿವ,ಶೇಷ, ಇವರೆಲ್ಲರಿಗೂ ಕಾರಣನಾದ, ಈ ಜಗತ್ತು ಕತ್ತಲಿನಿಂದ ಗ್ರಸ್ತವಾಗಿ ಕಾಣದಿದ್ದಾಗ ಯಾವ ಒಬ್ಬನೇ ಮಹೇಶ್ವರನಾದವನು ಸೃಷ್ಟಿಮಾಡಿ ಕೊನೆಯಲ್ಲಿ ಸಂಹಾರ ಮಾಡುತ್ತಾನೆಯೋ, ಅಂತಹ ವಿಷ್ಣುವಿಗೆ ಶಂಕರನು ನೀಡಿದನು.
ವಿಷ್ಣುರಂಗಿರಸೇ ಪ್ರಾದಾದಂಗಿರಾ ಮುನಿಸತ್ತಮಃ |
ಪ್ರಾದಾದಿಂದ್ರಮರೀಚಿಭ್ಯಾಂ ಮರೀಚಿರ್ಭೃಗವೇ ದದೌ ॥64॥
ವಿಷ್ಣುವು ಅದನ್ನು ಅಂಗಿರಸರಿಗೆ ಕೊಟ್ಟನು. ಮುನಿಶ್ರೇಷ್ಠರಾದ ಅಂಗಿರಸರು ಇಂದ್ರ, ಮರೀಚಿಗಳಿಗೆ ಕೊಟ್ಟರು. ಮರೀಚಿಗಳು ಭೃಗುವಿಗೆ ಕೊಟ್ಟರು.
ಭೃಗುರ್ದದಾವೃಷಿಭ್ಯಸ್ತು ತಂ ದಂಡಂ ಧರ್ಮಸಂಹಿತಮ್ |
ಋಷಯೋ ಲೋಕಪಾಲೇಭ್ಯೋ ಲೋಕಪಾಲಾಃ ಕ್ಷುಪಾಯ ಚ ॥65॥
ಭೃಗುಗಳು ಋಷಿಗಳಿಗೆ ಧರ್ಮಸಂಹಿತಾರೂಪವಾದ ಆ ದಂಡವನ್ನು ಕೊಟ್ಟರು. ಋಷಿಗಳು ಲೋಕಪಾಲಕರಿಗೂ ಲೋಕಪಾಲರು ಕ್ಷುಪನಿಗೂ ಕೊಟ್ಟರು. (ಹೀಗೆ ಅದು ವಿಷ್ಣುವಿನಿಂದ ಕ್ಷುಪನಿಗೆ ತಲುಪಿತು)
ಕ್ಷುಪಸ್ತು ಮನವೇ ಪ್ರಾದಾದಾದಿತ್ಯತನಯಾಯ ಚ |
ಪುತ್ರೇಭ್ಯಃ ಶ್ರಾದ್ಧದೇವಸ್ತು ಸೂಕ್ಷ್ಮಧರ್ಮಾರ್ಥಕಾರಣಾತ್ |
ತಂ ದದೌ ಸೂರ್ಯಪುತ್ರಸ್ತು ಮನುರ್ವೈ ರಕ್ಷಣಾತ್ಮಕಮ್ ॥66॥
ಕ್ಷುಪನು ಸೂರ್ಯಪುತ್ರನಾದ ಶ್ರಾದ್ಧದೇವ ಮನುವಿಗೆ ಕೊಟ್ಟನು. ಶ್ರಾದ್ಧದೇವನು ಸೂಕ್ಷ್ಮವಾದ ಧರ್ಮಾರ್ಥಗಳನ್ನು ತಿಳಿಯುವ ಉದ್ದೇಶದಿಂದ ರಕ್ಷಣಾರೂಪವಾದ ಆ ಶಾಸ್ತ್ರವನ್ನು ತನ್ನ ಪುತ್ರರಿಗೆ ಕೊಟ್ಟನು.
ವಿಭಜ್ಯ ದಂಡಃ ಕರ್ತವ್ಯೋ ಧರ್ಮೇಣ ನ ಯದೃಚ್ಛಯಾ |
ದುಷ್ಟಾನಾಂ ನಿಗ್ರಹೋ ದಂಡೋ ಹಿರಣ್ಯಂ ಬಾಹ್ಯತಃ ಕ್ರಿಯಾ ॥67॥
ವಿಭಾಗ ಮಾಡಿ ಧರ್ಮದಿಂದ ದಂಡವನ್ನು ಪ್ರಯೋಗಿಸಬೇಕು. ಮನಸ್ಸಿಗೆ ಬಂದಂತೆ ಪ್ರಯೋಗಿಸಬಾರದು. ಹಿರಣ್ಯದಾನ, ವಿತ್ತದ ಆದಾನ ಇವು ಬಾಹ್ಯ- ಕ್ರಿಯೆಗಳು. ದುಷ್ಟರಿಗೆ ಬಲದಿಂದ ಅವರನ್ನು ಬಂಧಿಸಬೇಕು. (ಕಾರಾಗೃಹದಲ್ಲಿ ಇಡ- ಬೇಕು)
ವ್ಯಂಗತ್ವಂ ಚ ಶರೀರಸ್ಯ ವಧೋ ವಾ ನಾಲ್ಪಕಾರಣಾತ್ |
ಶರೀರಪೀಡಾಸ್ತಾಸ್ತಾಸ್ತು ದೇಹತ್ಯಾಗೋ ವಿವಾಸನಮ್ ॥68॥
ಅಲ್ಪಾಪರಾಧದ ಕಾರಣದಿಂದ ಅಂಗಹೀನತೆಯನ್ನಾಗಲೀ ವಧೆಯನ್ನಾಗಲೀ ಮಾಡಬಾರದು. ಆದನ್ನು ಬಿಟ್ಟು ಬೇರೆ ಬೇರೆ ಶರೀರಪೀಡೆಗಳನ್ನು ಮಾಡಬಹುದು. ಮಹಾಪರಾಧಗಳನ್ನು ಮಾಡಿದಾಗ ವಧೆಯನ್ನಾಗಲೀ, ದೇಶದಿಂದ ಗಡೀಪಾರ- ನ್ನಾಗಲೀ ಮಾಡಬಹುದು.
ಆನುಪೂರ್ವ್ಯಾ ಚ ದಂಡೋಽಸೌ ಪ್ರಜಾ ಜಾಗರ್ತಿ ಪಾಲಯನ್ |
ಇಂದ್ರೋ ಜಾಗರ್ತಿ ಭಗವಾನಿಂದ್ರಾದಗ್ನಿರ್ವಿಭಾವಸುಃ ॥69॥
ಈ ದಂಡವು ಅನುಕ್ರಮವಾಗಿ ಪ್ರಜೆಗಳನ್ನು ಪಾಲಿಸುತ್ತಾ ಎಚ್ಚರದಿಂದಿದೆ. ಪೂಜ್ಯನಾದ ಇಂದ್ರನು ಜಾಗರೂಕನಾಗಿದ್ದಾನೆ. ಇಂದ್ರನಿಂದ ಅಗ್ನಿಯು ಜಾಗರೂಕ- ನಾಗಿದ್ದಾನೆ.
ಅಗ್ನೇರ್ಜಾಗರ್ತಿ ವರುಣೋ ವರುಣಾಚ್ಚ ಪ್ರಜಾಪತಿಃ |
ಪ್ರಜಾಪತೇಸ್ತತೋ ಧರ್ಮೋ ಜಾಗರ್ತಿ ವಿನಯಾತ್ಮಕಃ ॥70॥
ಅಗ್ನಿಯಿಂದ ವರುಣನು ಜಾಗರೂಕನಾಗಿದ್ದಾನೆ. ವರುಣನಿಂದ ಪ್ರಜಾಪತಿಯು ಜಾಗರೂಕನಾಗಿದ್ದಾನೆ. ಪ್ರಜಾಪತಿಯಿಂದ ಎಲ್ಲರನ್ನೂ ದಮನಗೊಳಿಸುವ ಯಮನು ಜಾಗರೂಕನಾಗಿದ್ದಾನೆ.
ಧರ್ಮಾಚ್ಚ ಬ್ರಹ್ಮಣಃ ಪುತ್ರೋ ವ್ಯವಸಾಯಃ ಸನಾತನಃ |
ವ್ಯವಸಾಯಾತ್ ತತಸ್ತೇಜೋ ಜಾಗರ್ತಿ ಪರಿಪಾಲಯನ್ ॥71॥
ಧರ್ಮದಿಂದ ಬ್ರಹ್ಮಪುತ್ರನಾದ ಸನಾತನವಾದ ಉದ್ಯಮ(ವ್ಯವಸಾಯ)ವೂ, ವ್ಯವಸಾಯದಿಂದ ತೇಜಸ್ಸೂ ಜಗತ್ತನ್ನು ಪಾಲಿಸುತ್ತಾ ಜಾಗರೂಕವಾಗಿದೆ.

ಔಷಧ್ಯಸ್ತೇಜಸಸ್ತಸ್ಮಾದೋಷಧಿಭ್ಯಶ್ಚ ಪರ್ವತಾಃ |
ಪರ್ವತೇಭ್ಯಶ್ಚ ಜಾಗರ್ತಿ ರಸೋ ರಸಗುಣಾತ್ ತಥಾ ॥72॥
ತೇಜಸ್ಸಿನಿಂದ ಓಷಧಿಗಳೂ, ಓಷಧಿಗಳಿಂದ ಪರ್ವತಗಳೂ, ಪರ್ವತಗಳಿಂದ ರಸಗಳೂ ರಸಗುಣಗಳೂ ಜಾಗೃತವಾಗಿವೆ.
ಜಾಗರ್ತಿ ನಿರ್ಋತಿರ್ದೇವೀ ಜ್ಯೋತೀಂಷಿ ನಿವೃತೇರಪಿ |
ವೇದಾಃ ಪ್ರತಿಷ್ಠಾ ಜ್ಯೋತಿರ್ಭ್ಯಸ್ತತೋ ಹಯಶಿರಾಃ ಪ್ರಭುಃ ॥73॥
ರಸಗುಣಗಳಿಂದ ನಿರ್ಋತಿದೇವಿಯು ಜಾಗರೂಕಳಾಗಿದ್ದಾಳೆ. ನಿರ್ಋತಿಯಿಂದ ಜ್ಯೋತಿಸ್ಸುಗಳು ಜಾಗರೂಕವಾಗಿವೆ.
ಜ್ಯೋತಿಸ್ಸುಗಳಿಂದ ಜಗತ್ತಿನ ಪ್ರತಿಷ್ಠೆಗೆ ಕಾರಣವಾದ ವೇದಗಳೂ ಮತ್ತು ಹಯಗ್ರೀವಪ್ರಭುವೂ ಜಾಗೃತವಾಗಿದ್ದಾರೆ.
ಬ್ರಹ್ಮಾ ಪಿತಾಮಹಸ್ತಸ್ಮಾಜ್ಜಾಗರ್ತಿ ಪ್ರಭುರವ್ಯಯಃ |
ಪಿತಾಮಹಾನ್ಮಹಾದೇವೋ ಜಾಗರ್ತಿ ಭಗವಾನ್ ಶಿವಃ ॥74॥
ಹಯಗ್ರೀವದೇವರಿಂದ ಪ್ರಭುವೂಅವ್ಯಯರೂ ಆದ ಬ್ರಹ್ಮದೇವರು ಜಾಗೃತರಾಗಿದ್ದಾರೆ. ಬ್ರಹ್ಮದೇವರಿಂದ ಮಹಾದೇವನೂ ಪೂಜ್ಯನೂ ಆದ ಶಿವನು ಜಾಗರೂಕನಾಗಿದ್ದಾನೆ.
ವಿಶ್ವೇದೇವಾಃ ಶಿವಾಚ್ಚಾಪಿ ವಿಶ್ವೇಭ್ಯಶ್ಚ ತಥರ್ಷಯಃ |
ಋಷಿಭ್ಯೋ ಭಗವಾನ್ ಸೋಮಃ ಸೋಮಾದ್ ದೇವಾಃ ಸನಾತನಾಃ ॥75
ಶಿವನಿಂದ ವಿಶ್ವೇದೇವತೆಗಳೂ, ವಿಶ್ವೇದೇವತೆಗಳಿಂದ ಋಷಿಗಳೂ, ಋಷಿ- ಗಳಿಂದ ಪೂಜ್ಯನಾದ ಚಂದ್ರನೂ, ಚಂದ್ರನಿಂದ ವೇದಪ್ರತಿಪಾದ್ಯದೇವತೆಗಳೂ ಜಾಗರೂಕರಾಗಿದ್ದಾರೆ.
ದೇವೇಭ್ಯೋ ಬ್ರಾಹ್ಮಣಾ ಲೋಕೇ ಜಾಗ್ರತೀತ್ಯುಪಧಾರಯ |
ಬ್ರಾಹ್ಮಣೇಭ್ಯಶ್ಚ ರಾಜನ್ಯಾ ಲೋಕಾನ್ ರಕ್ಷಂತಿ ಧರ್ಮತಃ |
ಸ್ಥಾವರಂ ಜಂಗಮಂ ಚೈವ ಕ್ಷತ್ರಿಯೇಭ್ಯಃ ಸನಾತನಮ್ ॥76॥
ಅಂತಹ ದೇವತೆಗಳಿಂದ ಈ ಲೋಕದಲ್ಲಿ ಬ್ರಾಹ್ಮಣರು ಜಾಗರೂಕರಾಗಿ ದ್ದಾರೆಂದು ತಿಳಿಯುವವನಾಗು. ಬ್ರಾಹ್ಮಣರಿಂದ ಕ್ಷತ್ರಿಯರು (ಆ ದಂಡವನ್ನು ಪಡೆದು) ಲೋಕಗಳನ್ನು ಧರ್ಮದಿಂದ ರಕ್ಷಿಸುತ್ತಾರೆ. ಕ್ಷತ್ರಿಯರಿಂದ ಸನಾತನವಾದ ಸ್ಥಾವರಜಂಗಮರೂಪವಾದ ಪ್ರಜೆಗಳು ಜಾಗರೂಕರಾಗಿದ್ದಾರೆ.
ಪ್ರಜಾ ಜಾಗ್ರತಿ ಲೋಕೇಽಸ್ಮಿನ್ ದಂಡೋ ಜಾಗರ್ತಿ ತಾಸು ಚ |
ಸರ್ವಸಂಕ್ಷೇಪಕೋ ದಂಡಃ ಪಿತಾಮಹಸಮಃ ಪ್ರಭುಃ ॥77॥
ಈ ಲೋಕದಲ್ಲಿ ಪ್ರಜೆಗಳು ಜಾಗರೂಕರಾಗಿದ್ದಾರೆ. ಆ ಪ್ರಜೆಗಳಲ್ಲಿ ದಂಡವು ಜಾಗರೂಕವಾಗಿದೆ. ಸರ್ವಸಂಹಾರಕವಾದ ದಂಡವು ಬ್ರಹ್ಮದೇವರಿಗೆ ಸಮವಾದ ಪ್ರಭುವಾಗಿದೆ.
ಜಾಗರ್ತಿ ಕಾಲಃ ಪೂರ್ವಂ ಚ ಮಧ್ಯೇ ಚಾಂತೇ ಚ ಭಾರತೇ |
ಈಶ್ವರಃ ಸರ್ವಲೋಕಸ್ಯ ಮಹಾದೇವಃ ಪ್ರಜಾಪತಿಃ ॥78॥
ದೇವದೇವಃ ಶಿವಃ ಶರ್ವೋ ಜಾಗರ್ತಿ ಸತತಂ ಪ್ರಭುಃ |
ಕಪರ್ದೀ ಶಂಕರೋ ರುದ್ರೋ ಭವಃ ಸ್ಥಾಣುರುಮಾಪತಿಃ ॥79॥
ಭಾರತವರ್ಷದಲ್ಲಿ ಆದಿಮಧ್ಯಾಂತಗಳಲ್ಲಿ ಕಾಲವು ಜಾಗರೂಕವಾಗಿದೆ. ದೇವದೇವನೂ, ಮಹಾದೇವನೂ, ಸರ್ವಲೋಕೇಶ್ವರನೂ, ಪ್ರಜಾಪತಿಯೂ, ಶಿವನೂ, ಶರ್ವನೂ, ಕಪರ್ದಿಯೂ, ಶಂಕರನೂ, ರುದ್ರನೂ,ಭವನೂ, ಸ್ಥಾಣುವೂ ಆದ ಉಮಾಪತಿಯು ಸತತವಾಗಿ ಜಾಗರೂಕನಾಗಿರುತ್ತಾನೆ.
ಇತ್ಯೇಷ ದಂಡೋ ವಿಖ್ಯಾತ ಆದೌ ಮಧ್ಯೇ ತಥಾವರೇ |
ಭೂಮಿಪಾಲೋ ಯಥಾನ್ಯಾಯಂ ವರ್ತೇತಾನೇನ ಧರ್ಮವಿತ್ ॥80॥
ಈ ರೀತಿಯಲ್ಲಿ ದಂಡವು ಆದಿಮಧ್ಯಾಂತಗಳಲ್ಲಿ ವಿಖ್ಯಾತವಾಗಿದೆ. ಧರ್ಮ- ಜ್ಞಾನವುಳ್ಳ ಭೂಮಿಪಾಲನು ಈ ದಂಡವನ್ನು ನ್ಯಾಯಕ್ಕೆ ಅನುಗುಣವಾಗಿ ಪ್ರಯೋ- ಗಿಸಬೇಕು.
ಭೀಷ್ಮಃ
ಇತೀದಂ ವಸುಹೋಮಸ್ಯ ಶೃಣುಯಾದ್ ಯೋ ಮತಂ ನರಃ |
ಶ್ರುತ್ವಾ ಚ ಸಮ್ಯಗ್ ವರ್ತೇತ ಸ ಕಾಮಾನಾಪ್ನುಯಾನ್ನೃಪಃ ॥81॥
ಭೀಷ್ಮರು - ಈ ವಸುಹೋಮನ ಅಭಿಪ್ರಾಯವನ್ನು ಯಾವ ಮನುಷ್ಯನಾಗಲೀ ರಾಜನಾಗಲೀ ಶ್ರವಣ ಮಾಡಿ ಅದರಂತೆ ನಡೆದುಕೊಳ್ಳುತ್ತಾನೆಯೋ ಅವನು ತನ್ನ ಕಾಮಗಳನ್ನು ಹೊಂದುತ್ತಾನೆ.
ಇತಿ ಮೇ ಸರ್ವಮಾಖ್ಯಾತಂ ಯೋ ದಂಡೋ ಮನುಜರ್ಷಭ |
ನಿಯಂತಾ ಸರ್ವಲೋಕಸ್ಯ ಧರ್ಮಾಕ್ರಾಂತಸ್ಯ ಭಾರತ ॥82॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ॥123॥
ಎಲೈ ಮನುಜರ್ಷಭನೇ! ಭಾರತನೇ! ಈ ರೀತಿಯಲ್ಲಿ ನಿನಗೆ ಧರ್ಮಾಕ್ರಾಂತ- ವಾದ ಸರ್ವಲೋಕವನ್ನು ನಿಯಂತ್ರಿಸುವ ದಂಡವನ್ನು ಹೇಳಿದ್ದೇನೆ.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 123ನೆಯ ಅಧ್ಯಾಯವು ಮುಗಿಯಿತು
0
124. ನೂರಇಪ್ಪತ್ತನಾಲ್ಕನೆಯ ಅಧ್ಯಾಯ

ಕಾಮಂದ ಅರಿಷ್ಟಸಂವಾದ | ಧರ್ಮತ್ಯಾಗಿಗಳಿಗೆ ಪ್ರಾಯಶ್ಚಿತ್ತಕಥನ
ಯುಧಿಷ್ಠಿರಃ
ತಾತ ಧರ್ಮಾರ್ಥಕಾಮಾನಾಂ ಶ್ರೋತುಮಿಚ್ಛಾಮಿ ನಿಶ್ಚಯಮ್ |
ಲೋಕಯಾತ್ರಾ ಹಿ ಕಾರ್ತ್ಸ್ನ್ಯೇನ ತ್ರಿಷ್ವೇತೇಷು ಪ್ರತಿಷ್ಠಿತಾ ॥1॥
ಧರ್ಮಾರ್ಥಕಾಮಾಃ ಕಿಂಮೂಲಾಸ್ತ್ರಯಾಣಾಂ ಪ್ರಭವಶ್ಚ ಕಃ |
ಅನ್ಯೋನ್ಯಂ ಚಾನುಷಜ್ಜಂತೇ ವರ್ತಂತೇ ಚ ಪೃಥಕ್ ಪೃಥಕ್ ॥2॥
ಯುಧಿಷ್ಠಿರ ಪ್ರೀತಿಪಾತ್ರನೇ! ಧರ್ಮಾರ್ಥಕಾಮಗಳ ನಿರ್ಧಾರವನ್ನು ಕೇಳಲು ಬಯಸುತ್ತೇನೆ. ಲೋಕಯಾತ್ರೆ ಎಲ್ಲವೂ ಪೂರ್ಣವಾಗಿ ಈ ಮೂರರಲ್ಲಿಯೇ ನೆಲೆಸಿದೆ. ಧರ್ಮಾರ್ಥಕಾಮಗಳಿಗೆ ಮೂಲಕಾರಣವು ಯಾವುದು? ಅವುಗಳ ಉತ್ಪತ್ತಿ ಸ್ಥಾನವು ಯಾವುದು? ಅವುಗಳು ಪರಸ್ಪರ ಸಂಬದ್ಧವಾಗಿರುತ್ತವೆ. ಭಿನ್ನ ಭಿನ್ನವಾಗಿಯೂ ಇರುತ್ತವೆ.
ಭೀಷ್ಮಃ
ಯದಾ ತೇ ಸ್ಯುಃ ಸುಮನಸೋ ಲೋಕಸಂಸ್ಥಾರ್ಥನಿಶ್ಚಯೇ |
ಕಾಲಪ್ರಭವಸಂಸ್ಥಾಸು ಸಜ್ಜಂತೇ ಚ ತ್ರಯಸ್ತದಾ ॥3॥
ಭೀಷ್ಮರು ಲೋಕದಲ್ಲಿ ಜನರು ಶುದ್ಧಮನಸ್ಕರಾಗಿ, ಧರ್ಮಾರ್ಥಗಳನ್ನು ಸಂಪಾದಿಸಲು ಬಯಸಿದರೆ ಆಗ ಧರ್ಮಾರ್ಥಕಾಮಗಳು ಕಾಲದಿಂದ ಉತ್ಪತ್ತಿ ಮತ್ತು ವಿನಾಶಗಳನ್ನು ಹೊಂದುವ ಪ್ರಜೆಗಳಲ್ಲಿ ನೆಲೆಗೊಳ್ಳುತ್ತವೆ.
ಧರ್ಮಮೂಲಸ್ತು ದೇಹೋಽರ್ಥಃ ಕಾಮೋಽರ್ಥಫಲಮುಚ್ಯತೇ |
ಸಂಕಲ್ಪಮೂಲಾಸ್ತೇ ಸರ್ವೇ ಸಂಕಲ್ಪೋ ವಿಷಯಾತ್ಮಕಃ ॥4॥
ದೇಹವೆಂಬ ವಸ್ತುವು ಹಿಂದೆ ಮಾಡಿದ ಧರ್ಮಮೂಲವಾದುದು. ಮುಂದೆ ಮಾಡುವ ಧರ್ಮಕ್ಕೆ ಕಾರಣವಾಗುತ್ತದೆ.
ಅರ್ಥಶಬ್ದವಾಚ್ಯವಾದ ಫಲವು ಕಾಮಕ್ಕೆ ಮೂಲವಾದುದು. ಇವೆಲ್ಲವೂ ಸಂಕಲ್ಪವನ್ನು ಮೂಲವಾಗಿ ಹೊಂದಿರುವಂತಹವು.
ಸಂಕಲ್ಪವು ವಿಷಯದಲ್ಲಿ ಹರಡಿದೆ.
ವಿಷಯಾಶ್ಚೈವ ಕಾರ್ತ್ಸ್ನ್ಯೇನ ಸರ್ವ ಆಹಾರಸಿದ್ಧಯೇ |
ಮೂಲಮೇತತ್ ತ್ರಿವರ್ಗಸ್ಯ ನಿವೃತ್ತಿರ್ಮೋಕ್ಷ ಉಚ್ಯತೇ ॥5॥
ವಿಷಯಗಳೆಲ್ಲವೂ ಪೂರ್ಣವಾಗಿ ಭೋಗಾರ್ಥವಾಗಿಯೇ ಇವೆ. ಈ ವಿಷಯ- ಭೋಗವು ತ್ರಿವರ್ಗಕ್ಕೆ ಮೂಲವಾದುದು. ಇಂತಹ ವಿಷಯಗಳ ಭೋಗನಿವೃತ್ತಿ- ಯನ್ನು ಮೋಕ್ಷವೆಂದು ಕರೆಯುತ್ತಾರೆ.
ಧರ್ಮಃ ಶರೀರಸಂಗುಪ್ತಿರ್ಧರ್ಮಾರ್ಥಂ ಚಾರ್ಥ ಇಷ್ಯತೇ |
ಕಾಮೋ ರತಿಫಲಶ್ಚಾತ್ರ ಸರ್ವ ಏತೇ ರಜಸ್ವಲಾಃ |
ಸನ್ನಿಕೃಷ್ಟಾಂಶ್ಚರೇದೇನಾನ್ ನ ಚೈನಾನ್ ಮನಸಾ ತ್ಯಜೇತ್ ॥6॥
ಶರೀರರಕ್ಷಣೆಯು ಧರ್ಮ. ಧರ್ಮಾರ್ಜನೆಯ ಸಲುವಾಗಿ ಅರ್ಥವು ಅಪೇಕ್ಷಿಸಲ್ಪಡುತ್ತದೆ. ಕಾಮವು ಸುಖರೂಪವಾದ ಫಲವನ್ನು ಹೊಂದಿರುವಂತಹದು. ಇವೆಲ್ಲವೂ ರಜೋಗುಣವಿಕಾರಗಳು. ಇವುಗಳು ಸನ್ನಿಹಿತವಾದಾಗ ಆಚರಿಸಬೇಕು. ಮನಸ್ಸಿನಿಂದ ಇವುಗಳನ್ನು ತ್ಯಜಿಸಬಾರದು.
ವಿಯುಕ್ತಸ್ತಪಸಾ ಸರ್ವಾನ್ ಧರ್ಮಾದೀನ್ ಕಾಮನೈಷ್ಠಿಕಾನ್ |
ಶ್ರೇಷ್ಠಬುದ್ಧಿಸ್ತ್ರಿವರ್ಗಸ್ಯ ಯದಯಂ ಪ್ರಾಪ್ನುಯಾತ್ ಕ್ಷಣಾತ್ ॥7॥
ಮನುಷ್ಯನು ತ್ರಿವರ್ಗದಿಂದ ಯಾವ ಫಲವನ್ನು ಪಡೆಯುತ್ತಾನೆಯೋ ಅದನ್ನು ಶ್ರೇಷ್ಠಬುದ್ಧಿಯುಳ್ಳವನು ತಪಸ್ಸಿನಿಂದ ವಿಷಯವಿರಕ್ತನಾಗಿ ಒಂದು ಕ್ಷಣದಲ್ಲಿ ಪಡೆ- ಯುತ್ತಾನೆ.
ಬುದ್ಧ್ಯಾ ಬುದ್ಧಿರಿಹಾರ್ಥೇಷು ತದಜ್ಞಾನನಿಕೃಷ್ಟಯಾ ॥8॥
ಅವಿವೇಕದಿಂದ ಸೆಳೆಯಲ್ಪಟ್ಟ ಬುದ್ಧಿಯಿಂದ ಈ ಲೋಕದಲ್ಲಿ ಅರ್ಥಗಳಲ್ಲಿ (ಭೋಗಪದಾರ್ಥಗಳಲ್ಲಿ) ಬುದ್ಧಿಯುಂಟಾಗುತ್ತದೆ.
ಅರ್ಥಾರ್ಥಮನ್ಯದ್ ಭವತಿ ವಿಪರೀತಮಥಾಪರಮ್ |
ಅನರ್ಥಾರ್ಥಮವಾಪ್ಯಾರ್ಥಮನ್ಯತ್ರಾದ್ಯೋಪಕಾರಕಮ್ ॥9॥
ಅರ್ಥಾರ್ಥವಾಗಿ ಇನ್ನೊಂದಿದೆ ಎಂದು ಕೆಲವರ ಅಭಿಪ್ರಾಯ. ಅದಕ್ಕೆ ವಿಪ- ರೀತವಾಗಿ ಅರ್ಥವು ಇನ್ನೊಂದರ ಸಲುವಾಗಿದೆ ಎಂದು ಇನ್ನೊಂದು ಅಭಿಪ್ರಾಯ. ಅನರ್ಥಪ್ರಯೋಜನವುಳ್ಳ ಅರ್ಥವನ್ನು ಸಂಪಾದಿಸಿದರೆ ಅದು ಆದ್ಯಪುರುಷಾರ್ಥ- ವಾದ ಧರ್ಮವನ್ನು ಬಿಟ್ಟು, ಅರ್ಥಕಾಮಗಳಲ್ಲಿಯೇ ಉಪಯುಕ್ತವಾಗುತ್ತದೆ.
ಅಪ(ವ)ಧ್ಯಾನಮಲೋ ಧರ್ಮೋ ಮಲೋಽರ್ಥಸ್ಯ ನಿಗೂಹನಮ್ |
ಸಂಪ್ರಮೋದಮಲಃ ಕಾಮೋ ಭೂಯಃ ಸ್ವಗುಣವರ್ಜಿತಃ ॥10॥
ಧರ್ಮದ ಮಲವು ಅನಾದರ. ಅರ್ಥದ ಮಲವು ಮುಚ್ಚಿಡುವುದು. ಕಾಮದ ಮಲವು ಅತಿಯಾದ ಪ್ರಮೋದ. ಇವೆಲ್ಲವೂ ಮನಸ್ಸಹಿತವಾದುದರಿಂದ ತಮ್ಮ ಗುಣಗಳಿಂದ ರಹಿತವಾದವುಗಳು.
ಅತ್ರಾಪ್ಯುದಹರಂತೀಮಮಿತಿಹಾಸಂ ಪುರಾತನಮ್ |
ಕಾಮಂದಸ್ಯ ಚ ಸಂವಾದಮಂಗಾರಿಷ್ಠಸ್ಯ ಚೋಭಯೋಃ ॥11॥
ಎಲೈ ಪ್ರೀತಿಪಾತ್ರನೇ! ಈ ವಿಷಯದಲ್ಲಿಯೂ ಕಾಮಂದ ಮತ್ತು ಅರಿಷ್ಟ ಇವರಿಬ್ಬರ ಸಂವಾದರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಕಾಮಂದಮೃಷಿಮಾಸೀನಮಭಿವಾದ್ಯ ನರಾಧಿಪಃ |
ಅಂಗಾರಿಷ್ಠೋಽಥ ಪಪ್ರಚ್ಛ ಕೃತ್ವಾ ಸಮಯಪರ್ಯಯಮ್ ॥12॥

ರಾಜನಾದ ಅಂಗಾರಿಷ್ಟನು ಸಮಯವು ಪ್ರಶಸ್ತವಾಗಿದೆಯೆಂದು ತಿಳಿದು ಆಸೀನ -ರಾಗಿದ್ದ ಕಾಮಂದಋಷಿಗಳಿಗೆ ನಮಸ್ಕಾರವನ್ನು ಮಾಡಿ ಪ್ರಶ್ನೆಯನ್ನು ಮಾಡಿದನು.
ಯಃ ಪಾಪಂ ಕುರುತೇ ರಾಜಾ ಕಾಮಮೋಹಬಲಾತ್ಕೃತಃ |
ಪ್ರತ್ಯಾಸನ್ನಸ್ಯ ತಸ್ಯರ್ಷೇ ಕಿಂ ಸ್ಯಾತ್ ಪಾಪಪ್ರಣಾಶನಮ್ ॥13॥
ಎಲೈ ಋಷಿಯೇ! ಯಾವ ರಾಜನು ಕಾಮಮೋಹಗಳಿಗೆ ವಶನಾಗಿ ಪಾಪವನ್ನು ಮಾಡುತ್ತಾನೆಯೋ ಆ ಕ್ಷಣದಲ್ಲಿ ಮಾಡಿದ ಪಾಪಗಳಿಗೆ ಪರಿಹಾರಕವಾದುದು ಯಾವುದು?
ಅಧರ್ಮಂ ಧರ್ಮ ಇತಿ ಹ ಯೋಽಜ್ಞಾನಾದಾಚರೇದಿಹ |
ತಂ ಚಾಪಿ ಪ್ರಥಿತಂ ಲೋಕೇ ಕಥಂ ರಾಜಾ ನಿವರ್ತಯೇತ್ ॥14॥
ಸಮಾಜದಲ್ಲಿ ಪ್ರಸಿದ್ಧನಾದ ಯಾವನು ಅಜ್ಞಾನದಿಂದ ಅಧರ್ಮವನ್ನು ಧರ್ಮವೆಂದು ತಿಳಿದು ಅದನ್ನು ಆಚರಿಸುತ್ತಾನೆಯೋ ಅವನನ್ನು ನಿವರ್ತಿಸುವ ಬಗೆ ಹೇಗೆ?
ಕಾಮಂದಃ
ಯೋ ಧರ್ಮಾರ್ಥೌ ಸಮುತ್ಸೃಜ್ಯ ಕಾಮಮೇವಾನುವರ್ತತೇ |
ಸ ಧರ್ಮಾರ್ಥಪರಿತ್ಯಾಗಾತ್ ಪ್ರಜ್ಞಾನಾಶಮಿಹಾರ್ಚ್ಛತಿ ॥15॥
ಪ್ರಜ್ಞಾಪ್ರಣಾಶಕೋ ಮೋಹಸ್ತಥಾ ಧರ್ಮಾರ್ಥನಾಶಕಃ |
ತಸ್ಮಾನ್ನಾಸ್ತಿಕತಾ ಚೈವ ದುರಾಚಾರಶ್ಚ ಜಾಯತೇ ॥16॥
ಕಾಮಂದ ಯಾವನು ಧರ್ಮಾರ್ಥಗಳನ್ನು ತ್ಯಜಿಸಿ ಕಾಮವನ್ನೇ ಹಿಂಬಾಲಿ- ಸುತ್ತಾನೆಯೋ ಅವನು ಧಮಾರ್ಥಗಳನ್ನು ತ್ಯಾಗ ಮಾಡಿದ ಕಾರಣದಿಂದ ಪ್ರಜ್ಞಾನಾಶವನ್ನು ಹೊಂದುತ್ತಾನೆ. ಮೋಹವು (ಮಿಥ್ಯಾಜ್ಞಾನವು) ಪ್ರಜ್ಞಾನಾಶಕ- ವಾದುದು ಮತ್ತು ಧರ್ಮಾರ್ಥನಾಶಕವಾದುದು. ಆ ಮೋಹದಿಂದ ನಾಸ್ತಿಕತೆಯೂ ಮತ್ತು ದುರಾಚಾರವೂ ಉಂಟಾಗುತ್ತದೆ.
ದುರಾಚಾರಾನ್ ಯದಾ ರಾಜಾ ಪ್ರದುಷ್ಟಾನ್ನ ನಿಯಚ್ಛತಿ |
ತಸ್ಮಾದುದ್ವಿಜತೇ ಲೋಕಃ ಸರ್ಪಾದ್ ವೇಶ್ಮಗತಾದಿವ ॥17॥
ರಾಜನು ಯಾವಾಗ ದುರಾಚಾರಿಗಳಾದ ದುಷ್ಟರನ್ನು ನಿಯಂತ್ರಿಸುವುದಿಲ್ಲವೋ ಆಗ ಜನರು ಮನೆಯನ್ನು ಪ್ರವೇಶಿಸಿದ ಸರ್ಪದಂತೆ ಆ ರಾಜನಿಗೆ ಹೆದರುತ್ತಾರೆ.
ತಂ ಪ್ರಜಾ ನಾನುವರ್ತಂತೇ ಬ್ರಾಹ್ಮಣಾ ನ ಚ ಸಾಧವಃ |
ತತಃ ಸಂಕ್ಷಯಮಾಪ್ನೋತಿ ತಥಾಽಪಧ್ವಸ್ತ ಏವ ಚ ॥18॥
ಆ ರಾಜನನ್ನು ಪ್ರಜೆಗಳಾಗಲೀ ಬ್ರಾಹ್ಮಣರಾಗಲೀ ಸಜ್ಜನರಾಗಲೀ ಅನು- ಸರಿಸುವುದಿಲ್ಲ. ಸಜ್ಜನರಿಂದ ಹಾಗೆ ಧಿಕ್ಕೃತನಾದ ಅವನು ವಿನಾಶವನ್ನು ಹೊಂದು- ತ್ತಾನೆ.
ಅಪಧ್ವಸ್ತಸ್ತ್ವಮತೋ ದುಃಖಂ ಜೀವತಿ ಜೀವಿತಮ್ |
ಜೀವೇಚ್ಚ ಯದಪಧ್ವಸ್ತಸ್ತಚ್ಛುದ್ಧಂ ಮರಣಂ ಭವೇತ್ ॥19॥
ಅಪಧ್ವಸ್ತ ಎಂದರೆ ಸಜ್ಜನರಿಂದ ಧಿಕ್ಕೃತನಾದವನು ಎಂದು ಅರ್ಥ. ಅಂತಹವನು ದುಃಖದಿಂದ ಜೀವಿಸುತ್ತಾನೆ. ಅಂತಹವನ ಜೀವನವು ಶುದ್ಧಮರಣವೇ ಆದೀತು.
ಅತ್ರೈತದಾಹುರಾಚಾರ್ಯಾಃ ಪಾಪಸ್ಯ ಪರಿಬರ್ಹಣಮ್ |
ಸೇವಿತವ್ಯಾ ತ್ರಯೀ ವಿದ್ಯಾ ಸತ್ಕಾರೋ ಬ್ರಾಹ್ಮಣೇಷು ಚ ॥20॥
ಪಾಪನಾಶನವಿಷಯದಲ್ಲಿ ಆಚಾರ್ಯರು ಹೀಗೆ ಹೇಳುತ್ತಾರೆ. ಮೂರು ವೇದಗಳ ವಿದ್ಯೆಯನ್ನು ಆಶ್ರಯಿಸಬೇಕು. ಮತ್ತು ಬ್ರಾಹ್ಮಣರಿಗೆ ಸತ್ಕಾರವನ್ನು ಮಾಡಬೇಕು.
ಮಹಾಮನಾ ಭವೇದ್ ಧರ್ಮೇ ವಿವಹೇಚ್ಚ ಮಹಾಕುಲೇ |
ಬ್ರಾಹ್ಮಣಾಂಶ್ಚಾಪಿ ಸೇವೇತ ಕ್ಷಮಾಯುಕ್ತಾನ್ ಮನಸ್ವಿನಃ ॥21॥
ಧರ್ಮದಲ್ಲಿ ಮನಸ್ಸುಳ್ಳವನಾಗಿರಬೇಕು. ಮಹಾಕುಲದ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕು. ಕ್ಷಮಾಶೀಲರೂ ಜಿತಮನಸ್ಕರೂ ಆದ ಬ್ರಾಹ್ಮಣರ ಸೇವೆಯನ್ನು ಮಾಡಬೇಕು.
ಜಪೇದುದಕಶೀಲಃ ಸ್ಯಾತ್ ಸುಮುಖೋ ನಾನ್ಯದಾಸ್ಥಿತಃ |
ಧರ್ಮಾನ್ವಿತಾನ್ ಸಂಪ್ರವಿಶೇದ್ ಬಹಿಃ ಕೃತ್ವೈವ ದುಷ್ಕೃತೀನ್ ॥22॥
ಜಪವನ್ನು ಮಾಡಬೇಕು. ಸ್ನಾನಪರನಾಗಿರಬೇಕು. ಪ್ರಸನ್ನಮುಖನಾಗಿರಬೇಕು. ದುಷ್ಕಾರ್ಯಗಳನ್ನು ಮಾಡಬಾರದು. ದುಷ್ಟರನ್ನು ದೂರಮಾಡಬೇಕು ಮತ್ತು ಧಾರ್ಮಿಕರ ಸಹವಾಸದಲ್ಲಿರಬೇಕು.
ಪ್ರಸಾದಯೇನ್ಮಧುರಯಾ ವಾಚಾಪ್ಯಥ ಚ ಕರ್ಮಣಾ |
ಇತ್ಯಸ್ಮೀತಿ ವದೇನ್ನಿತ್ಯಂ ಪರೇಷಾಂ ಕೀರ್ತಯನ್ ಗುಣಾನ್ ॥23॥
ಮಧುರವಾದ ಮಾತುಗಳಿಂದ ಮತ್ತು ಕ್ರಿಯೆಯಿಂದ ದೊಡ್ಡವರನ್ನು ಪ್ರಸನ್ನ- ಗೊಳಿಸಬೇಕು. ಇನ್ನೊಬ್ಬರ ಗುಣಗಳನ್ನು ಹೊಗಳುತ್ತಾ ನಾನು ಮಾತ್ರ ಹೀಗಿದ್ದೇನೆ ಎಂದು ತನ್ನ ದೋಷಗಳನ್ನು ಹೇಳಿಕೊಳ್ಳಬೇಕು.
ಅಪಾಪೋ ಹ್ಯೇವಮಾಚಾರಃ ಕ್ಷಿಪ್ರಂ ಬಹುಮತೋ ಭವೇತ್ |
ಪಾಪಾನ್ಯಪಿ ಚ ಕೃಚ್ಛ್ರಾಣಿ ಶಮಯೇನ್ನಾತ್ರ ಸಂಶಯಃ ॥24॥
ಹೊಸದಾಗಿ ಪಾಪವನ್ನು ಮಾಡದೇ ಇಂತಹ ಆಚಾರವುಳ್ಳವನು ಶೀಘ್ರವಾಗಿ ಸಜ್ಜನರಿಗೆ ಸಮ್ಮತನಾಗುತ್ತಾನೆ. ತಾನು ಮಾಡಿದ ಪಾಪಗಳನ್ನು ತನಗೆ ಒದಗಿದ ಕಷ್ಟಗಳನ್ನು ಅವನು ನಾಶ ಮಾಡುವುದರಲ್ಲಿ ಸಂಶಯವಿಲ್ಲ.

ಗುರವೋಽಪಿ ಪರಂ ಧರ್ಮಂ ಯದ್ ಬ್ರೂಯುಸ್ತತ್ ತಥಾ ಕುರು |
ಗುರೂಣಾಂ ಹಿ ಪ್ರಸಾದಾದ್ಧಿ ಶ್ರೇಯಃ ಪರಮವಾಪ್ಸ್ಯಸಿ ||25||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ||124||
ಗುರುಗಳು ಯಾವ ಶ್ರೇಷ್ಠವಾದ ಧರ್ಮವನ್ನು ಹೇಳುತ್ತಾರೆಯೋ ಅದನ್ನೂ ಸಹ ಮಾಡುವವನಾಗು. ಗುರುಗಳ ಅನುಗ್ರಹದಿಂದಲೇ ಶ್ರೇಷ್ಠವಾದ ಶ್ರೇಯಸ್ಸನ್ನು ಹೊಂದುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 124ನೆಯ ಅಧ್ಯಾಯವು ಮುಗಿಯಿತು
0
125. ನೂರಇಪ್ಪತ್ತೈದನೆಯ ಅಧ್ಯಾಯ
ಧೃತರಾಷ್ಟ್ರದುರ್ಯೋಧನಸಂವಾದ; ಶೀಲಕ್ಕೆ ಧರ್ಮಾದಿಕಾರಣತ್ವಕಥನ
ಯುಧಿಷ್ಠಿರಃ
ಇಮೇ ಜನಾ ನರಶ್ರೇಷ್ಠ ಪ್ರಶಂಸಂತಿ ಸದಾ ಭುವಿ |
ಧರ್ಮಸ್ಯ ಶೀಲಮೇವಾದೌ ತತೋ ಮೇ ಸಂಶಯೋ ಮಹಾನ್ ||1||
ಎಲೈ ನರಶ್ರೇಷ್ಠನೇ! ಭೂಮಿಯಲ್ಲಿ ಈ ಜನರು ಧರ್ಮಕ್ಕಿಂತಲೂ ಮೊದಲು ಶೀಲವನ್ನು ಪ್ರಶಂಸೆ ಮಾಡುತ್ತಾರೆ. ಅದರಿಂದ ನನಗೆ ದೊಡ್ಡ ಸಂಶಯವುಂಟಾಗಿದೆ.
ಯದಿ ತಚ್ಛಕ್ಯಮಸ್ಮಾಭಿರ್ಜ್ಞಾತುಂ ಧರ್ಮಭೃತಾಂವರ |
ಶ್ರೋತುಮಿಚ್ಛಾಮಿ ತತ್ ಸರ್ವಂ ಯಥೈತದುಪಲಭ್ಯತೇ ||2||
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ! ಅದನ್ನು ನಮಗೆ ಕೇಳಲು ಸಾಧ್ಯವಾದರೆ ಇದು ಹೇಗೆ ತಿಳಿಯಲ್ಪಡುತ್ತದೆ ಎಂದು ಇಚ್ಛಿಸುತ್ತೇನೆ.
ಕಥಂ ನು ಪ್ರಾಪ್ಯತೇ ಶೀಲಂ ಶ್ರೋತುಮಿಚ್ಛಾಮಿ ಭಾರತ |
ಕಿಂ ಲಕ್ಷಣಂ ಚ ತತ್ ಪ್ರೋಕ್ತಂ ಬ್ರೂಹಿ ಮೇ ವದತಾಂವರ ||3||
ಎಲೈ ಭಾರತನೇ! ಶೀಲವನ್ನು ಹೇಗೆ ಸಂಪಾದಿಸುವುದು ಎಂದು ಕೇಳಲು ಬಯಸುತ್ತೇನೆ. ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ! ಶೀಲದ ಲಕ್ಷಣವೇನೆಂದು ಹೇಳು.
ಭೀಷ್ಮಃ
ಪುರಾ ದುರ್ಯೋಧನೇನೇಹ ಧೃತರಾಷ್ಟ್ರಾಯ ಮಾನದ |
ಆಖ್ಯಾತಂ ತಪ್ಯಮಾನೇನ ಶ್ರಿಯಂ ದೃಷ್ಟ್ವಾ ತವಾಗತಮ್ ||4||
ಭೀಷ್ಮರು ಎಲೈ ಮಾನದನೇ! ಹಿಂದೆ ನಿನ್ನ ಐಶ್ವರ್ಯವನ್ನು ನೋಡಿ ಅಸೂಯೆ ಪಡುತ್ತಿದ್ದ ದುರ್ಯೋಧನನು ಧೃತರಾಷ್ಟ್ರನನ್ನು ಕುರಿತು ಹೇಳಿದನು.
ಇಂದ್ರಪ್ರಸ್ಥೇ ಮಹಾರಾಜ ತವ ಸಭ್ರಾತೃಕಸ್ಯ ಹ |
ಸಭಾಯಾಂ ಚಾವಹಸನಂ ತತ್ ಸರ್ವಂ ಶೃಣು ಭಾರತ ||5||
ಎಲೈ ಭಾರತನೇ! ಮಹಾರಾಜನೇ! ಇಂದ್ರಪ್ರಸ್ಥದಲ್ಲಿ ನಿನ್ನ ತಮ್ಮಂದಿರ ಜೊತೆ- ಯಲ್ಲಿ ನೀನು ಕುಳಿತಿದ್ದಾಗ ಸಭೆಯಲ್ಲಿ ಉಂಟಾದ ಅಪಹಾಸ್ಯವನ್ನು ಹೇಳಿದನು. ಅದೆಲ್ಲವನ್ನೂ ಕೇಳು.
ಭವತಸ್ತಾಂ ಸಭಾಂ ದೃಷ್ಟ್ವಾ ಸಮೃದ್ಧಿಂ ಚಾಪ್ಯನುತ್ತಮಾಮ್ |
ದುರ್ಯೋಧನಸ್ತದಾಸೀನಃ ಸರ್ವಂ ಪಿತ್ರೇ ನ್ಯವೇದಯತ್ ||6||
ನಿನ್ನ ಸಭೆಯನ್ನು ಮತ್ತು ಶ್ರೇಷ್ಠವಾದ ಸಮೃದ್ಧಿಯನ್ನು ನೋಡಿ ಆಗ ದುರ್ಯೋಧನನು ಕುಳಿತುಕೊಂಡು ಎಲ್ಲವನ್ನೂ ತಂದೆಗೆ ನಿವೇದಿಸಿದನು.
ಶ್ರುತ್ವಾ ಚ ಧೃತರಾಷ್ಟ್ರೋಽಪಿ ದುರ್ಯೋಧನವಚಸ್ತದಾ |
ಅಬ್ರವೀತ್ ಕರ್ಣಸಹಿತಂ ದುರ್ಯೋಧನಮಿದಂ ವಚಃ ||7||
ಆಗ ಧೃತರಾಷ್ಟ್ರನಾದರೋ ದುರ್ಯೋಧನನ ಮಾತುಗಳನ್ನು ಕೇಳಿ ಕರ್ಣ- ಸಹಿತನಾದ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು.
ಕಿಮರ್ಥಂ ತಪ್ಯಸೇ ಪುತ್ರ ಶ್ರೋತುಮಿಚ್ಛಾಮಿ ತತ್ತ್ವತಃ |
ಶ್ರುತ್ವಾ ತ್ವಾಮನುನೇಷ್ಯಾಮಿ ಯದಿ ಸಮ್ಯಗ್ ಭವಿಷ್ಯಸಿ ||8||
ಎಲೈ ಪುತ್ರನೇ! ಏತಕ್ಕೆ ತಾಪಪಡುತ್ತಿದ್ದೀಯೆ ಎಂದು ನಾನು ಸರಿಯಾಗಿ ಕೇಳಲು ಬಯಸುತ್ತೇನೆ. ಅದನ್ನು ಕೇಳಿ ನಿನಗೆ ಸಮಾಧಾನದ ವಚನವನ್ನು ಹೇಳುತ್ತೇನೆ. ಅದರಿಂದ ನೀನು ಸರಿಯಾಗಬಹುದು.
ಯಥಾ ತ್ವಂ ಮಹದೈಶ್ವರ್ಯಂ ಪ್ರಾಪ್ತಃ ಪರಪುರಂಜಯ |
ಕಿಂಕರಾ ಭ್ರಾತರಃ ಸರ್ವೇ ಮಿತ್ರಾಃ ಸಂಬಂಧಿನಸ್ತಥಾ ||9||
ಆಚ್ಛಾದಯಸಿ ಪ್ರಾವಾರಾನಶ್ನಾಸಿ ಪಿಶಿತೋದನಮ್ |
ಆಜಾನೇಯಾ ವಹಂತಿ ತ್ವಾಂ ಕಸ್ಮಾಚ್ಛೋಚಸಿ ಪುತ್ರಕ ||10||
ಎಲೈ ಪರಪುರಂಜಯನೇ! ನೀನೂ ಸಹ ಮಹದೈಶ್ವರ್ಯವನ್ನು, ಕಿಂಕರರನ್ನು, ಸಹೋದರರರನ್ನು, ಮಿತ್ರಸಂಬಂಧಿಕರನ್ನೂ ಪಡೆದಿದ್ದೀಯೆ. ಒಳ್ಳೆಯ ವಸ್ತ್ರಗಳನ್ನು ಉಡುತ್ತೀಯೆ, ಮಾಂಸಭೋಜನವನ್ನು ಮಾಡುತ್ತೀಯೆ. ಜಾತಿಯ ಕುದುರೆಗಳು ನಿನ್ನನ್ನು ಎಳೆಯುತ್ತವೆ. ಎಲೈ ಪುತ್ರನೇ! ಏಕೆ ಶೋಕಪಡುತ್ತೀಯೆ?

ದುರ್ಯೋಧನಃ
ದಶ ತಾನಿ ಸಹಸ್ರಾಣಿ ಸ್ನಾತಕಾನಾಂ ಮಹಾತ್ಮನಾಮ್ |
ಭುಂಜತೇ ರುಗ್ಮಪಾತ್ರೀಷು ಯುಧಿಷ್ಠಿರನಿವೇಶನೇ ॥11॥
ದುರ್ಯೋಧನ ಯುಧಿಷ್ಠಿರನ ಮನೆಯಲ್ಲಿ ಮಹಾತ್ಮರಾದ ಹತ್ತು ಸಹಸ್ರ- ಸ್ನಾತಕರು ಚಿನ್ನದ ಪಾತ್ರೆಗಳಲ್ಲಿ ಭೋಜನ ಮಾಡುತ್ತಾರೆ.
ದೃಷ್ಟ್ವಾ ಚ ತಾಂ ಸಭಾಂ ದಿವ್ಯಾಂ ದಿವ್ಯಪುಷ್ಪಫಲಾನ್ವಿತಾಮ್ |
ಅಶ್ವಾಂಸ್ತಿತ್ತಿರಿಕಲ್ಮಾಷಾನ್ ರತ್ನಾನಿ ವಿವಿಧಾನಿ ಚ ॥12॥
ದೃಷ್ಟ್ವಾ ತಾಂ ಪಾಂಡವೇಯಾನಾಮೃದ್ಧಿಮಿಂದ್ರೋಪಮಾಂ ಶುಭಾಮ್ |
ಅಮಿತ್ರಾಣಾಂ ಸುಮಹತೀಮನುಶೋಚಾಮಿ ಮಾನದ ॥13॥
ಎಲೈ ಮಾನದನೇ! ದಿವ್ಯಪುಷ್ಪಫಲಯುಕ್ತವಾದ ದಿವ್ಯವಾದ ಆ ಸಭೆಯನ್ನು, ಚಕೋರಪಕ್ಷಿಯ ಬಣ್ಣದ ಮತ್ತು ಬಿಳಿ ಕಪ್ಪುಮಿಶ್ರಿತಬಣ್ಣದ ಕುದುರೆಗಳನ್ನು ವಿವಿಧ- ವಾದ ರತ್ನಗಳನ್ನು, ನನ್ನ ಶತ್ರುಗಳಾದ ಪಾಂಡುಪುತ್ರರ ಇಂದ್ರನ ಸಂಪತ್ತಿಗೆ ಸಮವಾದ ಶುಭವಾದ ಆ ಮಹಾಸಮೃದ್ಧಿಯನ್ನು ನೋಡಿ ನಾನು ಶೋಕ ಪಡುತ್ತಿ- ದ್ದೇನೆ.
ಧೃತರಾಷ್ಟ್ರಃ
ಯದೀಚ್ಛಸಿ ಶ್ರಿಯಂ ತಾತ ಯಾದೃಶೀ ತಾಂ ಯುಧಿಷ್ಠಿರೇ |
ವಿಶಿಷ್ಟಾಂ ವಾ ನರವ್ಯಾಘ್ರ ಶೀಲವಾನ್ ಭವ ಪುತ್ರಕ ॥14॥
ಧೃತರಾಷ್ಟ್ರ ಎಲೈ ಪ್ರೀತಿಪಾತ್ರನೇ! ಪುತ್ರನೇ! ನೀನು ಯುಧಿಷ್ಠಿರನಲ್ಲಿ- ರುವಂತಹ ಸಂಪತ್ತನ್ನು ಅಥವಾ ಅದಕ್ಕಿಂತ ಶ್ರೇಷ್ಠವಾದ ಸಂಪತ್ತನ್ನು ಅಪೇಕ್ಷಿಸು- ವುದಾದರೆ ಎಲೈ ನರವ್ಯಾಘ್ರನೇ! ಶೀಲವಂತನಾಗು.
ಶೀಲೇನ ಹಿ ತ್ರಯೋ ಲೋಕಾಃ ಶಕ್ಯಾ ಜೇತುಂ ನ ಸಂಶಯಃ |
ನ ಹಿ ಕಿಂಚಿದಸಾಧ್ಯಂ ವೈ ಲೋಕೇ ಶೀಲವತಾಂ ಭವೇತ್ ॥15॥
ಶೀಲದಿಂದ ಮೂರು ಲೋಕಗಳನ್ನು ಗೆಲ್ಲಲು ಸಾಧ್ಯ ಎಂಬುದರಲ್ಲಿ ಸಂಶಯ- ವಿಲ್ಲ. ಲೋಕದಲ್ಲಿ ಶೀಲವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ.
ಏಕರಾತ್ರೇಣ ಮಾಂಧಾತಾ ತ್ರ್ಯಹೇಣ ಜನಮೇಜಯಃ |
ಸಪ್ತರಾತ್ರೇಣ ನಾಭಾಗಃ ಪೃಥಿವೀಂ ಪ್ರತಿಪೇದಿವಾನ್ ॥16॥
ಮಾಂಧಾತೃವು ಒಂದೇ ರಾತ್ರಿಯಲ್ಲಿಯೂ, ಜನಮೇಜಯನು ಮೂರುದಿನ- ದಲ್ಲಿಯೂ, ನಾಭಾಗನು ಏಳು ರಾತ್ರಿಯಲ್ಲಿಯೂ ಭೂಮಿಯನ್ನು ಪಡೆದರು (ಜಯಿಸಿದರು).
ಏತೇ ಹಿ ಪಾರ್ಥಿವಾಃ ಸರ್ವೇ ಶೀಲವಂತೋ ದಮಾನ್ವಿತಾಃ |
ಅತಸ್ತೇಷಾಂ ಗುಣಕ್ರೀತಾ ವಸುಧಾ ಸ್ವಯಮಾಗಮತ್ ॥17॥
ಈ ರಾಜರೆಲ್ಲರೂ ಶೀಲವಂತರು ಮತ್ತು ಇಂದ್ರಿಯನಿಗ್ರಹವುಳ್ಳವರು. ಆದ್ದ- ರಿಂದ ಅವರ ಗುಣಗಳಿಂದ ಕ್ರೀತಳಾದ ಭೂಮಿಯು ತಾನಾಗಿಯೇ ಅವರ ಬಳಿಗೆ ಬಂದಿತು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಾರದೇನ ಪುರಾ ಪ್ರೋಕ್ತಂ ಶೀಲಮಾಶ್ರಿತ್ಯ ಭಾರತ ॥18॥
ಎಲೈ ಭಾರತನೇ! ಈ ಶೀಲದ ವಿಷಯದಲ್ಲಿ ನಾರದರು ಹಿಂದೆ ಹೇಳಿದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಪ್ರಹ್ಲಾದೇನ ಹೃತಂ ರಾಜ್ಯಂ ಮಹೇಂದ್ರಸ್ಯ ಮಹಾತ್ಮನಃ |
ಶೀಲಮಾಶ್ರಿತ್ಯ ದೈತ್ಯೇನ ತ್ರೈಲೋಕ್ಯಂ ಚ ವಶೀಕೃತಮ್ ॥19॥
ಮಹಾತ್ಮನಾದ ಪ್ರಹ್ಲಾದನು ಶೀಲವನ್ನು ಆಶ್ರಯಿಸಿ ಮಹೇಂದ್ರನ ರಾಜ್ಯವನ್ನು ಅಪಹರಿಸಿದನು. ಮತ್ತು ದೈತ್ಯನಾದ ಅವನು ಮೂರು ಲೋಕಗಳನ್ನೂ ವಶಪಡಿಸಿ- ಕೊಂಡನು.
ತತೋ ಬೃಹಸ್ಪತಿಂ ಶಕ್ರಃ ಪ್ರಾಂಜಲಿಃ ಸಮುಪಸ್ಥಿತಃ |
ಉವಾಚ ಚ ಮಹಾಪ್ರಾಜ್ಞಃ ಶ್ರೇಯ ಇಚ್ಛಾಮಿ ವೇದಿತುಮ್ ॥20॥
ಆಗ ಮಹಾಪ್ರಾಜ್ಞನಾದ ಇಂದ್ರನು ಬೃಹಸ್ಪತಿಗಳ ಸಮೀಪಕ್ಕೆ ಹೋಗಿ ಕೈಗಳನ್ನು ಮುಗಿದು, ನಾನು ಶ್ರೇಯಃಸಾಧನವನ್ನು ತಿಳಿಯಲು ಬಯಸುತ್ತೇನೆ ಎಂದು ಹೇಳಿದನು.
ತತೋ ಬೃಹಸ್ಪತಿಸ್ತಸ್ಮೈ ಜ್ಞಾನಂ ನೈಶ್ರೇಯಸಂ ಪರಮ್ |
ಕಥಯಾಮಾಸ ಭಗವಾನ್ ದೇವೇಂದ್ರಾಯ ಕುರೂದ್ವಹ ॥21॥
ಎಲೈ ಕುರೂದ್ವಹನೇ! ಆಗ ಪೂಜ್ಯರಾದ ಬೃಹಸ್ಪತಿಗಳು ದೇವೇಂದ್ರನಿಗೆ ಅಂತಹ ಶ್ರೇಯಃಸಾಧನವಾದ ಜ್ಞಾನವನ್ನು ಉಪದೇಶಿಸಿದರು.
ಏತಾವಚ್ಛ್ರೇಯ ಇತ್ಯೇವ ಬೃಹಸ್ಪತಿರಭಾಷತ |
ಇಂದ್ರಸ್ತು ಭೂಯಃ ಪಪ್ರಚ್ಛ ಕ್ವ ವಿಶೇಷೋ ಭವೇದಿತಿ ॥22॥
ಶ್ರೇಯಸ್ಸಾಧನವಾದುದು ಇಷ್ಟು ಎಂದು ಬೃಹಸ್ಪತಿಗಳು ಹೇಳಿದರು. ಪುನಃ ಇಂದ್ರನು ಪುನಃ ತಿಳಿಯಬೇಕಾದ ಇನ್ನೂ ಏನಾದರೂ ವಿಶೇಷವಿದೆಯೇ ಎಂದು ಬೃಹಸ್ಪತಿಗಳನ್ನು ಕುರಿತು ಕೇಳಿದನು.
ಬೃಹಸ್ಪತಿಃ
ವಿಶೇಷೋಽಸ್ತಿ ಮಹಾಂಸ್ತಾತ ಭಾರ್ಗವಸ್ಯ ಮಹಾತ್ಮನಃ |
ತತ್ರಾಗಮಯ ಭದ್ರಂ ತೇ ಭೂಯ ಏವ ಪುರಂದರ ॥23॥
ಪ್ರೀತಪಾತ್ರನೇ! ಮಹಾತ್ಮರಾದ ಶುಕ್ರಾಚಾರ್ಯರ ಬಳಿ ತಿಳಿಯಬೇಕಾದ ಇನ್ನೂ ವಿಶೇಷವಿದೆ. ಪುರಂದರನೇ! ನಿನಗೆ ಮಂಗಳವಾಗಲಿ.

ಅಲ್ಲಿಗೆ ಹೋಗಿ ಆ ಜ್ಞಾನ- ವನ್ನು ಸಂಪಾದಿಸು.
ಧೃತರಾಷ್ಟ್ರಃ
ಆತ್ಮನಸ್ತು ತತಃ ಶ್ರೇಯೋ ಭಾರ್ಗವಾತ್ ಸುಮಹಾಯಶಾಃ |
ಜ್ಞಾನಮಾಗಮತ್ ಪ್ರೀತ್ಯಾ ಪುನಃ ಸ ಪರಮದ್ಯುತಿಃ ||24||
ಧೃತರಾಷ್ಟ್ರ - ಮಹಾಯಶಸ್ವಿಯೂ ಪರಮಕಾಂತಿಯುಳ್ಳವನೂ ಆದ ಇಂದ್ರನು ಪುನಃ ಶುಕ್ರಾಚಾರ್ಯರ ಬಳಿಗೆ ಹೋಗಿ ತನ್ನ ಶ್ರೇಯಃಸಾಧನವಾದ ಜ್ಞಾನವನ್ನು ಪ್ರೀತಿಯಿಂದ ಅವರಿಂದ ಸಂಪಾದಿಸಿದನು.
ತೇನಾಪಿ ಸಮನುಜ್ಞಾತೋ ಭಾರ್ಗವೇಣ ಮಹಾತ್ಮನಾ |
ಶ್ರೇಯೋಽಸ್ತೀತಿ ಪುನರ್ಭೂಯಃ ಶುಕ್ರಮಾಹ ಶತಕ್ರತುಃ ||25||
ಮಹಾತ್ಮರಾದ ಶುಕ್ರಾಚಾರ್ಯರು ಉಪದೇಶವನ್ನು ಮಾಡಿ, ಹೊರಡಲು ಅನುಮತಿಯನ್ನು ಕೊಟ್ಟ ಮೇಲೆ ಇಂದ್ರನು ಶುಕ್ರಾಚಾರ್ಯರನ್ನು ಕುರಿತು ಇನ್ನೂ ಏನಾದರೂ ತಿಳಿಯಬೇಕಾದ ಶ್ರೇಯಸ್ಸಾಧನವಿದೆಯೇ ಎಂದು ಕೇಳಿದನು.
ಭಾರ್ಗವಸತ್ತ್ವಹ ಧರ್ಮಜ್ಞಃ ಪ್ರಹ್ಲಾದಸ್ಯ ಮಹಾತ್ಮನಃ |
ಜ್ಞಾನಮಸ್ತಿ ವಿಶೇಷೇಣ ತತೋ ಹೃಷ್ಟಶ್ಚ ಸೋಽಭವತ್ ||26||
ಧರ್ಮಜ್ಞರಾದ ಶುಕ್ರಾಚಾರ್ಯರು ಮಹಾತ್ಮನಾದ ಪ್ರಹ್ಲಾದನಲ್ಲಿ ಇನ್ನೂ ವಿಶೇಷಜ್ಞಾನವಿದೆ ಎಂದು ಹೇಳಿದರು. ಅದನ್ನು ಕೇಳಿದ ಇಂದ್ರನು ಸಂತುಷ್ಟನಾದನು.
ಸ ತತೋ ಬ್ರಾಹ್ಮಣೋ ಭೂತ್ವಾ ಪ್ರಹ್ಲಾದಂ ಪಾಕಶಾಸನಃ |
ಸೃತ್ವಾ ಪ್ರೋವಾಚ ಮೇಧಾವೀ ಶ್ರೇಯ ಇಚ್ಛಾಮಿ ವೇದಿತುಮ್ ||27||
ಅನಂತರ ಪಾಕಶಾಸನನಾದ ಇಂದ್ರನು ಒಬ್ಬ ಬ್ರಾಹ್ಮಣನ ವೇಷವನ್ನು ಧರಿಸಿ ಪ್ರಹ್ಲಾದನನ್ನು ಸಮೀಪಿಸಿ ಮೇಧಾವಿಯಾದ ಅವನು ಶ್ರೇಯಸ್ಸನ್ನು ತಿಳಿಯಲು ಬಯಸುತ್ತೇನೆ ಎಂದು ಹೇಳಿದನು.
ಪ್ರಹ್ಲಾದಸ್ತ್ವಬ್ರವೀದ್ ವಿಪ್ರಂ ಕ್ಷಣೋ ನಾಸ್ತಿ ದ್ವಿಜರ್ಷಭ |
ತ್ರೈಲೋಕ್ಯರಾಜ್ಯೇ ಸಕ್ತಸ್ಯ ತತೋ ನೋಪದಿಶಾಮಿ ತೇ ||28||
ಪ್ರಹ್ಲಾದನು ಆ ಬ್ರಾಹ್ಮಣನನ್ನು ಕುರಿತು ಎಲೈ ಬ್ರಾಹ್ಮಣಶ್ರೇಷ್ಠನೇ! ಮೂರು ಲೋಕದ ರಾಜ್ಯಭಾರದಲ್ಲಿ ಆಸಕ್ತನಾದ ನನಗೆ ಈಗ ಸಮಯವಿಲ್ಲ. ಆದ್ದರಿಂದ ನಿನಗೆ ಉಪದೇಶವನ್ನು ಮಾಡುವುದಿಲ್ಲ ಎಂದು ಹೇಳಿದನು.
ಬ್ರಾಹ್ಮಣಸ್ತ್ವಬ್ರವೀದ್ ವಾಕ್ಯಂ ಕಸ್ಮಿನ್ ಕಾಲೇ ಕ್ಷಣೋ ಭವೇತ್ |
ತತೋಪದಿಷ್ಟಮಿಚ್ಛಾಮಿ ಯದ್ಯತ್ ಕಾರ್ಯಾಂತರಂ ಭವೇತ್ ||29||
ಬ್ರಾಹ್ಮಣನು ಅವನನ್ನು ಕುರಿತು ನಿನಗೆ ಬೇರೆ ಕಾರ್ಯಗಳು ಮುಗಿದು ಯಾವಾಗ ಸಮಯವುಂಟಾಗುತ್ತದೋ ಆಗಲೇ ನಿನ್ನ ಉಪದೇಶವನ್ನು ಕೇಳುತ್ತೇನೆ ಎಂದು ಹೇಳಿದನು.
ತತಃ ಪ್ರೀತೋಽಭವದ್ ರಾಜಾ ಪ್ರಹ್ಲಾದೋ ಬ್ರಹ್ಮವಾದಿನೇ |
ತಥೇತ್ಯುಕತ್ವಾ ಶುಭೇ ಕಾಲೇ ಜ್ಞಾನತತ್ತ್ವಂ ದದೌ ತದಾ ||30||
ಆಗ ರಾಜನಾದ ಪ್ರಹ್ಲಾದನು ಬ್ರಾಹ್ಮಣನಿಗೆ ಪ್ರಸನ್ನನಾದನು. ಹಾಗೆಯೇ ಆಗಲೆಂದು ಹೇಳಿ ಒಂದು ಶುಭಕಾಲದಲ್ಲಿ ಅವನಿಗೆ ಜ್ಞಾನವನ್ನು ಉಪದೇಶ ಮಾಡಿದನು.
ಬ್ರಾಹ್ಮಣೋಽಪಿ ಯಥಾನ್ಯಾಯಂ ಗುರುವೃತ್ತಿಮನುತ್ತಮಾಮ್ |
ಚಕಾರ ಸರ್ವಭಾವೇನ ಯದ್ವತ್ ಸ ಮನಸೇಚ್ಛತಿ ||31||
ಬ್ರಾಹ್ಮಣನೂ ಸಹ ನ್ಯಾಯವಾದ ರೀತಿಯಲ್ಲಿ ಪ್ರಹ್ಲಾದನ ಮನಸ್ಸಿಗೆ ಇಷ್ಟವಾಗುವ ರೀತಿಯಲ್ಲಿ ಸರ್ವಪ್ರಕಾರದಿಂದ ಶ್ರೇಷ್ಠವಾದ ಗುರುಸೇವೆಯನ್ನು ಮಾಡಿದನು.
ಪೃಷ್ಟಶ್ಚ ತೇನ ಬಹುಶಃ ಪ್ರಾಪ್ತಂ ಕಥಮರಿಂದಮ |
ತ್ರೈಲೋಕ್ಯರಾಜ್ಯಂ ಧರ್ಮಜ್ಞ ಕಾರಣಂ ತದ್ ಬ್ರವೀಹಿ ಮೇ ||32||
ಅವನು ಅನೇಕಬಾರಿ ಪ್ರಹ್ಲಾದನನ್ನು ಕುರಿತು ಎಲೈ ಅರಿಂದಮನೇ! ಧರ್ಮಜ್ಞನೇ! ನಿನಗೆ ತ್ರೈಲೋಕ್ಯರಾಜ್ಯವು ಹೇಗ ಲಭಿಸಿತು? ನನಗೆ ಅದರ ಕಾರಣವನ್ನು ಹೇಳು - ಎಂದು ಕೇಳಿದನು.
ಪ್ರಹ್ಲಾದಃ
ನಾಸೂಯಾಮಿ ದ್ವಿಜಶ್ರೇಷ್ಠ ರಾಜಾಸ್ಮೀತಿ ಕದಾಚನ |
ಕಾವ್ಯಾನಿ ವದತಾಂ ತಾತ ಸಂಯಚ್ಛಾಮಿ ವಹಾಮಿ ಚ ||33||
ಪ್ರಹ್ಲಾದ ಎಲೈ ದ್ವಿಜಶ್ರೇಷ್ಠನೇ! ನಾನು ರಾಜನಾಗಿದ್ದೇನೆ ಎಂದು ತಿಳಿದು ನಾನು ಯಾರನ್ನೂ ಅಸೂಯೆ ಮಾಡುವುದಿಲ್ಲ; ನನಗೆ ಇಷ್ಟವಾದ ವಿಷಯಗಳನ್ನು ಹೇಳುವವರಿಗೆ ನಾನು ಬಹಳ ದಾನವನ್ನು ಕೊಡುತ್ತೇನೆ ಮತ್ತು ಅವರ ಮಾತನ್ನು ನಡೆಸುತ್ತೇನೆ.
ತೇ ವಿಸ್ರಬ್ಧಾಃ ಪ್ರಭಾಷಂತೇ ಸಂಯಚ್ಛಂತಿ ಚ ಮಾಂ ಸದಾ |
ತೇಷು ಕಾರ್ಯಪಥೇ ಸಕ್ತಂ ಶುಶ್ರೂಷುಮನಸೂಯಕಮ್ ||34||
ಧರ್ಮಾತ್ಮಾನಂ ಜಿತಕ್ರೋಧಂ ಸಂಯತಂ ಸಂಯತೇಂದ್ರಿಯಮ್ |
ಸಮಾಚಿನ್ವಂತಿ ಶಾಸ್ತಾರಃ ಕ್ಷೌದ್ರಂ ಮಧ್ವಿವ ಮಕ್ಷಿಕಾಃ ||35||
ಅವರು ಬಹಳವಿಶ್ವಾಸದಿಂದ ಮಾತನಾಡಿ ನನ್ನನ್ನು ಯಾವಾಗಲೂ ನಿಯಂತ್ರಿ- ಸುತ್ತಾರೆ. ಅವರು ಉಪದೇಶಿಸಿದ ಕಾರ್ಯಮಾರ್ಗದಲ್ಲಿ ಆಸಕ್ತನಾದ ಶುಶ್ರೂಷಾ- ಪರನೂ, ಅಸೂಯಾರಹಿತನೂ, ಧರ್ಮಾತ್ಮನೂ, ಕ್ರೋಧವನ್ನು ಜಯಿಸಿದವನೂ, ಇಂದ್ರಿಯಸಂಯಮವನ್ನು, ಮತ್ತು ಮನಃಸಂಯಮವನ್ನು ಹೊಂದಿದವನೂ ಆದ ನನ್ನನ್ನು ರಾಜರು ಜೇನುಹುಳುಗಳು ಜೇನನ್ನು

ಸಂಗ್ರಹಿಸುವಂತೆ ಸಂಗ್ರಹಿಸುತ್ತಾರೆ.
ಸೋಽಹಂ ವಾಚಾ ಪ್ರಹೃಷ್ಟಾನಾಂ ರಸಾನಾಮವಲೇಹಿತಾ |
ಸ್ವಜಾತ್ಯಾನಧಿತಿಷ್ಠಾಮಿ ನಕ್ಷತ್ರಾಣೀವ ಚಂದ್ರಮಾಃ ||36||
ಅಂತಹ ನಾನು ಸಂತೋಷದಿಂದುಪದೇಶಮಾಡುವವರ ವಾಗ್ರಸವನ್ನು ಸವಿದು ಚಂದ್ರನು ನಕ್ಷತ್ರಗಳ ಮೇಲೆ ಇರುವಂತೆ ನನ್ನ ಜಾತಿಯವರ ಮೇಲೆ ಇದ್ದೇನೆ. (ನನ್ನ ಜಾತಿಯವರಲ್ಲಿ ಶ್ರೇಷ್ಠನಾಗಿದ್ದೇನೆ).
ಏತತ್ ಪೃಥಿವ್ಯಾಮಮೃತಮೇತಚ್ಚಕ್ಷುರನುತ್ತಮಮ್ |
ಯದ್ ಬ್ರಾಹ್ಮಣಮುಖೇ ಕವ್ಯಮೇತಚ್ಛ್ರುತ್ವಾ ಪ್ರವರ್ತತೇ ||37||
ಬ್ರಾಹ್ಮಣ ಮುಖದಿಂದ ಬಂದ ಉಪದೇಶವನ್ನು ಕೇಳಿ ಪ್ರಯತ್ನಿಸುವುದು ಭೂಮಿಯಲ್ಲಿ ಅಮೃತಪ್ರಾಯವಾದುದು ಮತ್ತು ಶ್ರೇಷ್ಠವಾದ ಚಕ್ಷುಸ್ಸಿನಂತೆ ಇರು- ವಂತಹದು. (ಜ್ಞಾನಪ್ರದವಾದುದು)
ಧೃತರಾಷ್ಟ್ರಃ
ಏತಾವಚ್ಛ್ರೇಯ ಇತ್ಯಾಹ ಪ್ರಹ್ಲಾದೋ ಬ್ರಹ್ಮವಾದಿನಮ್ |
ಶುಶ್ರೂಷಿತಸ್ತೇನ ತದಾ ದೈತ್ಯೇಂದ್ರೋ ವಾಕ್ಯಮಬ್ರವೀತ್ ||38||
ಧೃತರಾಷ್ಟ್ರ, ಆ ಬ್ರಾಹ್ಮಣನನ್ನು ಕುರಿತು ಪ್ರಹ್ಲಾದನು ಶ್ರೇಯಃಸಾಧನವೆಂದರೆ ಇಷ್ಟು ಎಂದು ಹೇಳಿದನು. ಅವನ ಸೇವೆಯನ್ನು ಸ್ವೀಕರಿಸಿ ದೈತ್ಯೇಂದ್ರನಾದ ಪ್ರಹ್ಲಾದನು ಪುನಃ ಮಾತನಾಡಿದನು.
ಯಥಾವದ್ ಗುರುವೃತ್ತ್ಯಾ ತೇ ಪ್ರೀತೋಽಸ್ಮಿ ದ್ವಿಜಸತ್ತಮ |
ವರಂ ವೃಣೀಷ್ವ ಭದ್ರಂ ತೇ ಪ್ರದಾತಾಸ್ಮಿ ನ ಸಂಶಯಃ ||39||
ಎಲೈ ದ್ವಿಜಶ್ರೇಷ್ಠನೇ! ನಿನ್ನ ಶಾಸ್ತ್ರೋಕ್ತರೀತಿಯಿಂದಿರುವ ಗುರುವೃತ್ತಿಯಿಂದ ಸಂತೋಷಗೊಂಡಿದ್ದೇನೆ. ನಿನಗೆ ಮಂಗಳವಾಗಲಿ. ವರವನ್ನು ಕೇಳು. ನಾನು ಅದನ್ನು ನಿಃಸಂಶಯವಾಗಿ ಕೊಡುವೆನು.
ಕೃತಮಿತ್ಯೇವ ದೈತ್ಯೇಂದ್ರಮುವಾಚ ಸ ಚ ವೈ ದ್ವಿಜಃ |
ಪ್ರಹ್ಲಾದಸ್ತ್ವಬ್ರವೀತ್ ಪ್ರೀತೋ ಗೃಹ್ಯತಾಂ ವರಮಿತ್ಯುತ ||40||
ಆ ಬ್ರಾಹ್ಮಣನು ದೈತ್ಯೇಂದ್ರನನ್ನು ಕುರಿತು ವರವು ಬೇಡ ಎಂದೇ ಹೇಳಿದನು. ಪ್ರಹ್ಲಾದನು ಪ್ರಸನ್ನನಾಗಿ ಪುನಃ ವರವನ್ನು ಕೇಳು ಎಂದು ಹೇಳಿದನು.
ಬ್ರಾಹ್ಮಣಃ
ಯದಿ ರಾಜನ್ ಪ್ರಸನ್ನಸ್ತ್ವಂ ಮಮ ಚೇಚ್ಛಸಿ ಚೇದ್ಧಿತಮ್ |
ಭವತಃ ಶೀಲಮಿಚ್ಛಾಮಿ ಪ್ರಾಪ್ತುಮೇಷ ವರೋ ಮಮ ||41||
ಎಲೈ ರಾಜನೇ! ನೀನು ಪ್ರಸನ್ನನಾಗಿ ನನ್ನ ಹಿತವನ್ನು ಬಯಸುವುದಾದರೆ ನಿನ್ನ ಶೀಲವನ್ನು ಪಡೆಯಲು ಬಯಸುತ್ತೇನೆ. ಇದೇ ನಾನು ಕೇಳುವ ವರ.
ಧೃತರಾಷ್ಟ್ರಃ
ತತಃ ಪ್ರೀತಶ್ಚ ದೈತ್ಯೇಂದ್ರೋ ಭಯಂ ಚಾಸ್ಯಾಭವನ್ಮಹತ್ |
ವರೇ ಪ್ರದಿಷ್ಟೇ ವಿಪ್ರೇಣ ನಾಲ್ಪತೇಜಾಯಮಿತ್ಯುತ ||42||
ಧೃತರಾಷ್ಟ್ರ, ಆಗ ದೈತ್ಯೇಂದ್ರನು ಸಂತೋಷಗೊಂಡನು. ಆದರೆ ವರವನ್ನು ತೆಗೆದುಕೊಂಡ ಈ ಬ್ರಾಹ್ಮಣನು ಅಲ್ಪ ತೇಜಸ್ಸಿನವನಲ್ಲ ಎಂದು ಅವನು ದೊಡ್ಡ ಭಯವನ್ನು ಹೊಂದಿದನು.
ಏವಮಸ್ತಿತ್ವತಿ ತಂ ಪ್ರಾಹ ಪ್ರಹ್ಲಾದೋ ವಿಸ್ಮಿತಸ್ತದಾ |
ಉಪಾಕೃತ್ಯ ತು ವಿಪ್ರಾಯ ವರಂ ದುಃಖಾನ್ವಿತೋಽಭವತ್ ||43||
ಪ್ರಹ್ಲಾದನು ವಿಸ್ಮಯಗೊಂಡು ಹಾಗೆಯೇ ಆಗಲಿ ಎಂದು ಹೇಳಿದನು. ಬ್ರಾಹ್ಮಣನಿಗೆ ವರವನ್ನು ನೀಡಿ ದುಃಖಾನ್ವಿತನಾದನು.
ದತ್ತೇ ವರೇ ಗತೇ ವಿಪ್ರೇ ಚಿಂತಾಽಽಸೀನ್ಮಹತೀ ತತಃ |
ಪ್ರಹ್ಲಾದಸ್ಯ ಮಹಾರಾಜ ನಿಶ್ಚಯಂ ನ ಚ ಜಗ್ಮಿವಾನ್ ||44||
ಎಲೈ ಮಹಾರಾಜನೇ! ಬ್ರಾಹ್ಮಣನು ವರವನ್ನು ಪಡೆದು ಹೊರಟು ಹೋದ- ಮೇಲೆ ಪ್ರಹ್ಲಾದನಿಗೆ ದೊಡ್ಡ ಚಿಂತೆಯುಂಟಾಯಿತು. ಏನೂ ನಿಶ್ಚಯ ಮಾಡ- ಲಾಗಲಿಲ್ಲ.
ತಸ್ಯ ಚಿಂತಯತಸ್ತಾತ ಛಾಯಾಭೂತಂ ಮಹಾದ್ಯುತೇ |
ತೇಜೋ ವಿಗ್ರಹವತ್ ತಾತ ಶರೀರಮಜಹಾತ್ ತದಾ ||45||
ಹೀಗೆ ಚಿಂತಿಸುತ್ತಿದ್ದ ಪ್ರಹ್ಲಾದನ ಶರೀರದಿಂದ ಎಲೈ ಮಹಾದ್ಯುತಿಯೇ! ಪ್ರಹ್ಲಾದನ ಶರೀರದ ಆಕಾರವನ್ನು ಧರಿಸಿದ ತೇಜೋರೂಪವಾದ ಇನ್ನೊಂದು ಶರೀರವು ಹೊರಬಂದಿತು.
ತಮಪೃಚ್ಛನ್ಮಹಾಕಾಯಂ ಪ್ರಹ್ಲಾದಃ ಕೋ ಭವಾನಿತಿ |
ಪ್ರತ್ಯಾಹ ನನು ಶೀಲೋಽಸ್ಮಿ ತ್ಯಕ್ತೋ ಗಚ್ಛಾಮ್ಯಹಂ ತ್ವಯಾ ||46||
ಈ ಮಹಾಶರೀರವನ್ನು ಕುರಿತು ಪ್ರಹ್ಲಾದನು ನೀನು ಯಾರು? ಎಂದು ಕೇಳಿದನು. ಆ ವ್ಯಕ್ತಿಯು ಜನಾನು ಶೀಲ. ನೀನು ತ್ಯಜಿಸಿದುದರಿಂದ ನಾನು ಹೋಗುತ್ತಿದ್ದೇನೆಬಿ ಎಂದು ಉತ್ತರವನ್ನು ನೀಡಿದನು.
ತಸ್ಮಿನ್ ದ್ವಿಜವರೇ ರಾಜನ್ ವತ್ಸ್ಯಾಮ್ಯಹಮನಿಂದಿತಮ್ |
ಯೋಽಸೌ ಶಿಷ್ಯತ್ವಮಾಗಮ್ಯ ತ್ವಯಿ ನಿತ್ಯಂ ಸಮಾಹಿತಃ |
ಇತ್ಯುಕ್ತ್ವಽಂತರ್ಹಿತಂ ತದ್ ವೈ ಶಕ್ರಂ ಚಾನ್ವವಿಶತ್ ಪ್ರಭೋ ||47||

ಎಲೈ ರಾಜನೇ! ಯಾವ ಬ್ರಾಹ್ಮಣಶ್ರೇಷ್ಠನು ನಿನ್ನ ಶಿಷ್ಯತ್ವವನ್ನು ವಹಿಸಿ, ನಿತ್ಯವೂ ನಿನ್ನ ಸೇವೆಯನ್ನು ಮಾಡಿದನೋ ಅಂತಹ ಅನಿಂದಿತನಾದ ಬ್ರಾಹ್ಮಣನಲ್ಲಿ ನಾನು ವಾಸವನ್ನು ಮಾಡುವೆನು ಎಂದು ಹೇಳಿ ಅಂತರ್ಧಾನವನ್ನು ಹೊಂದಿ ಇಂದ್ರನನ್ನು ಪ್ರವೇಶಿಸಿತು.
ತಸ್ಮಿಂಸ್ತೇಜಸಿ ಯಾತೇ ತು ತಾದೃಗ್ರೂಪಸ್ತತೋಽಪರಃ |
ಶರೀರಾನ್ನಿಃಸೃತಸ್ತಸ್ಯ ಕೋ ಭವಾನಿತಿ ಚಾಬ್ರವೀತ್ ॥48॥
ಆ ತೇಜಸ್ಸು ಹೊರಟು ಹೋದ ಮೇಲೆ ಅದೇ ಆಕಾರದ ಇನ್ನೊಂದು ವಿಗ್ರಹವು ಪ್ರಹ್ಲಾದನ ಶರೀರದಿಂದ ಹೊರಗೆ ಬಂದಿತು. ಪ್ರಹ್ಲಾದನು ನೀನು ಯಾರು ಎಂದು ಕೇಳಿದನು.
ಧರ್ಮಂ ಪ್ರಹ್ಲಾದ ಮಾಂ ವಿದ್ಧಿ ಯತ್ರಾಸೌ ದ್ವಿಜಸತ್ತಮಃ |
ತತ್ರ ಯಾಸ್ಯಾಮಿ ದೈತ್ಯೇಂದ್ರ ಯತಃ ಶೀಲಂ ತತೋ ಹ್ಯಹಮ್ ॥49॥
ಎಲೈ ಪ್ರಹ್ಲಾದನೇ! ನನ್ನನ್ನು ಧರ್ಮವೆಂದು ತಿಳಿ. ನಾನು ಆ ದ್ವಿಜಶ್ರೇಷ್ಠನು ಎಲ್ಲಿರುವನೋ ಅಲ್ಲಿಗೆ ಹೋಗುವೆನು. ಎಲೈ ದೈತ್ಯೇಂದ್ರನೇ! ಎಲ್ಲಿ ಶೀಲವಿರುತ್ತದೆಯೋ ಅಲ್ಲಿ ನಾನಿರುತ್ತೇನೆ. (ಎಂದು ಹೇಳಿತು).
ತತೋಽಪರೋ ಮಹಾರಾಜ ಪ್ರಜ್ವಲನ್ನಿವ ತೇಜಸಾ |
ಶರೀರಾನ್ನಿಃಸೃತಸ್ತಸ್ಯ ಪ್ರಹ್ಲಾದಸ್ಯ ಮಹಾತ್ಮನಃ ॥50॥
ಎಲೈ ಮಹಾರಾಜನೇ! ಅನಂತರ ತನ್ನ ತೇಜಸ್ಸಿನಿಂದ ಜ್ವಲಿಸುತ್ತಿದ್ದ ಇನ್ನೊಂದು ವಿಗ್ರಹವು ಮಹಾತ್ಮನಾದ ಪ್ರಹ್ಲಾದನ ಶರೀರದಿಂದ ಹೊರಬಂದಿತು.
ಕೋ ಭವಾನಿತಿ ಪೃಷ್ಟಶ್ಚ ತಮಾಹ ಸ ಮಹಾದ್ಯುತಿಃ |
ಸತ್ಯಮಸ್ಮ್ಯಸುರೇಂದ್ರಾಗ್ರ್ಯ ಯಾಸ್ಯೇಽಹಂ ಧರ್ಮಮನ್ವಿಹ ॥51॥
ನೀನು ಯಾರು ಎಂದು ಕೇಳಲ್ಪಟ್ಟ ಆ ಮಹಾತೇಜಸ್ಸು ಅವನನ್ನು ಕುರಿತು ಎಲೈ ಅಸುರಶ್ರೇಷ್ಠನೇ ನಾನು ಸತ್ಯ. ನಾನು ಈ ಲೋಕದಲ್ಲಿ ಧರ್ಮವನ್ನು ಹಿಂಬಾಲಿಸಿ ಹೋಗುವೆನು (ಎಂದು ಹೇಳಿತು.)
ತಸ್ಮಿನ್ನನುಗತೇ ಧರ್ಮಂ ಪುರುಷೇ ಪುರುಷೋಽಪರಃ |
ನಿಶ್ಚಕ್ರಾಮ ತತಸ್ತಸ್ಮಾತ್ ಪೃಷ್ಟಶ್ಚಾಹ ಮಹಾತ್ಮನಾ |
ವೃತ್ತಂ ಪ್ರಹ್ಲಾದ ಮಾಂ ವಿದ್ಧಿ ಯತಃ ಸತ್ಯಂ ತತೋ ಹ್ಯಹಮ್ ॥52॥
ಆ ಧರ್ಮಪುರುಷನು ಹೋದ ಮೇಲೆ ಇನ್ನೊಬ್ಬ ಪುರುಷನು ಪ್ರಹ್ಲಾದನ ದೇಹದಿಂದ ಹೊರಗೆ ಬಂದನು. ಮಹಾತ್ಮನಾದ ಪ್ರಹ್ಲಾದನಿಂದ ನೀನು ಯಾರು ಎಂದು ಕೇಳಲ್ಪಟ್ಟು, ಎಲೈ ಪ್ರಹ್ಲಾದನೇ ನನ್ನನ್ನು ವೃತ್ತ (ಒಳ್ಳೆಯ ನಡತೆ) ಎಂದು ತಿಳಿ. ಎಲ್ಲಿ ಸತ್ಯವಿರುತ್ತದೆಯೋ ಅಲ್ಲಿ ನಾನಿರುತ್ತೇನೆ (ಎಂದು ಹೇಳಿದನು).
ತಸ್ಮಿನ್ ಗತೇ ಮಹಾಶ್ವೇತಃ ಶರೀರಾತ್ ತಸ್ಯ ನಿರ್ಯಯೌ |
ಪೃಷ್ಟಶ್ಚಾಹ ಬಲಂ ವಿದ್ಧಿ ಯತೋ ವೃತ್ತಮಹಂ ತತಃ |
ಇತ್ಯುಕ್ತ್ವಾ ಚ ಯಯೌ ತತ್ರ ಯತೋ ವೃತ್ತಂ ನರಾಧಿಪ ॥53॥
ಎಲೈ ನರಾಧಿಪನೇ! ವೃತ್ತವು ಹೊರಟು ಹೋದ ಮೇಲೆ ಮಹಾಶ್ವೇತವರ್ಣದ ಇನ್ನೊಬ್ಬ ಪುರುಷನು ಬಂದನು. ಹಾಗೆಯೇ ಪ್ರಶ್ನೆ ಮಾಡಲ್ಪಟ್ಟ ಅವನು ನನ್ನನ್ನು ಬಲವೆಂದು ತಿಳಿ. ಎಲ್ಲಿ ವೃತ್ತವಿರುತ್ತದೆಯೋ ಅಲ್ಲಿ ನಾನಿರುತ್ತೇನೆ ಎಂದು ಹೇಳಿ ವೃತ್ತವನ್ನು ಹಿಂಬಾಲಿಸಿ ಹೊರಟು ಹೋದನು.
ತತಃ ಪ್ರಭಾಮಯೀ ದೇವೀ ಶರೀರಾತ್ ತಸ್ಯ ನಿರ್ಯಯೌ |
ತಾಮಪೃಚ್ಛದ್ ಸ ದೈತ್ಯೇಂದ್ರಃ ಸಾ ಶ್ರೀರಿತ್ಯೇವಮಬ್ರವೀತ್ ॥54॥
ಅನಂತರ ತೇಜೋಮಯಿಯಾದ ಒಬ್ಬ ವನಿತೆಯು ಅವನ ಶರೀರದಿಂದ ಹೊರಬಂದಳು. ದೈತ್ಯೇಂದ್ರನು ಅವಳನ್ನು ಕುರಿತು ನೀನು ಯಾರು ಎಂದು ಕೇಳಿ- ದನು. ಅವಳು ನಾನು ಸಂಪತ್ತು ಎಂದು ಹೇಳಿದಳು.
ಉಷಿತಾಸ್ಮಿ ಸುಖಂ ವೀರ ತ್ವಯಿ ಸತ್ಯಪರಾಕ್ರಮೇ |
ತ್ವಯಾ ತ್ಯಕ್ತಾ ಗಮಿಷ್ಯಾಮಿ ಬಲಂ ಯತ್ರ ತತೋ ಹ್ಯಹಮ್ ॥55॥
ಎಲೈ ವೀರನೇ! ಸತ್ಯಪರಾಕ್ರಮನಾದ ನಿನ್ನಲ್ಲಿ ನಾನು ಸುಖವಾಗಿ ವಾಸಿಸುತ್ತಿ- ದ್ದೆನು. ನೀನು ತ್ಯಜಿಸಿದ ಕಾರಣದಿಂದ ಎಲ್ಲಿ ಬಲವಿದೆಯೋ ಅಲ್ಲಿಗೆ ನಾನು ಹೋಗುವೆನು (ಎಂದು ಹೇಳಿದಳು.).
ತತೋ ಭಯಂ ಪ್ರಾದುರಾಸೀತ್ ಪ್ರಹ್ಲಾದಸ್ಯ ಮಹಾತ್ಮನಃ |
ಅಪೃಚ್ಛತ ಚ ತಾಂ ಭೂಯಃ ಕ್ವ ಯಾಸಿ ಕಮಲಾಲಯೇ ॥56॥
ತ್ವಂ ಹಿ ಸತ್ಯವ್ರತಾ ದೇವೀ ಲೋಕಸ್ಯ ಪರಮೇಶ್ವರೀ |
ಕಶ್ಚಾಸೌ ಬ್ರಾಹ್ಮಣಶ್ರೇಷ್ಠಸ್ತತ್ತ್ವಮಿಚ್ಛಾಮಿ ವೇದಿತುಮ್ ॥57॥
ಆಗ ಮಹಾತ್ಮನಾದ ಪ್ರಹ್ಲಾದನಿಗೆ ಭಯವುಂಟಾಯಿತು. ಆ ದೇವಿಯನ್ನು ಕುರಿತು ಎಲೌ ಕಮಲಾಲಯೇ! ಎಲ್ಲಿಗೆ ಹೋಗುತ್ತೀಯೆ; ಎಲೌ ದೇವಿಯೇ! ನೀನು ಸತ್ಯವ್ರತಳಾದವಳು. ಮತ್ತು ಲೋಕಕ್ಕೆ ಪ್ರಭುವಾದವಳು. ನನ್ನ ಬಳಿ ಇದ್ದ ಆ ಬ್ರಾಹ್ಮಣಶ್ರೇಷ್ಠನು ಯಾರು ಎಂದು ಕೇಳಲು ಬಯಸುತ್ತೇನೆ ಎಂದು ಹೇಳಿದನು.
ಶ್ರೀಃ
ಸ ಶಕ್ರೋ ಬ್ರಹ್ಮಚಾರೀ ಚ ಯಸ್ತ್ವಯಾ ಚೋಪಶಿಕ್ಷಿತಃ |
ತ್ರೈಲೋಕ್ಯೇ ತು ಯದೈಶ್ವರ್ಯಂ ತತ್ ತೇನಾಪಹೃತಂ ಪ್ರಭೋ ॥58॥
ಶ್ರೀಃ ನಿನ್ನಲ್ಲಿ ವಾಸ ಮಾಡಿ ನಿನ್ನಿಂದ ವಿದ್ಯೆಯನ್ನು ಗಳಿಸಿದ ಆ ಬ್ರಹ್ಮಚಾರಿಯು ಇಂದ್ರ. ಎಲೈ ಪ್ರಭುವೇ! ನಿನ್ನಲ್ಲಿದ್ದ ಮೂರು

ಲೋಕದ ಐಶ್ವರ್ಯವು ಅವನಿಂದ ಅಪಹೃತವಾಯಿತು.
ಶೀಲೇನ ಹಿ ತ್ವಯಾ ಲೋಕಾಃ ಸರ್ವೇ ಧರ್ಮಜ್ಞ ನಿರ್ಜಿತಾಃ |
ತದ್ ವಿಜ್ಞಾಯ ಮಹೇಂದ್ರೇಣ ತವ ಶೀಲಂ ಹೃತಂ ಪ್ರಭೋ ॥59॥
ಎಲೈ ಧರ್ಮಜ್ಞನೇ! ನೀನು ಶೀಲದಿಂದ ಎಲ್ಲ ಲೋಕಗಳನ್ನೂ ಜಯಿಸಿದ್ದಿ. ಎಲೈ ಪ್ರಭುವೇ! ಅದನ್ನು ತಿಳಿದ ದೇವೇಂದ್ರನು ನಿನ್ನ ಶೀಲವನ್ನು ಅಪಹರಿಸಿದನು.
ಧರ್ಮಃ ಸತ್ಯಂ ತಥಾ ವೃತ್ತಂ ಬಲಂ ಚೈವ ತಥಾ ಹ್ಯಹಮ್ |
ಶೀಲಮೂಲಾ ಮಹಾಪ್ರಾಜ್ಞ ಸದಾ ನಾಸ್ತ್ಯತ್ರ ಸಂಶಯಃ ॥60॥
ಎಲೈ ಮಹಾಪ್ರಾಜ್ಞನೇ! ಧರ್ಮ, ಸತ್ಯ, ವೃತ್ತ, ಬಲ ಹಾಗೂ ನಾನು ಎಲ್ಲರೂ ಯಾವಾಗಲೂ ಶೀಲಮೂಲರಾದವರು. ಈ ವಿಷಯದಲ್ಲಿ ಸಂಶಯವಿಲ್ಲ.
ಭೀಷ್ಮಃ
ಏವಮುಕತ್ವ ಗತಾ ತು ಶ್ರೀಸ್ತೇ ಚ ಸರ್ವೇ ಯುಧಿಷ್ಠಿರ |
ದುರ್ಯೋಧನಸ್ತು ಪಿತರಂ ಭೂಯ ಏವಾಬ್ರವೀದಿದಮ್ ॥61॥
ಶೀಲಸ್ಯ ತತ್ತ್ವಮಿಚ್ಛಾಮಿ ವೇತ್ತುಂ ಕೌರವನಂದನ |
ಪ್ರಾಪ್ಯತೇ ಚ ಯಥಾ ಶೀಲಂ ತಮುಪಾಯಂ ವದಸ್ವ ಮೇ ॥62॥
ಭೀಷ್ಮರು ಎಲೈ ಯುಧಿಷ್ಠಿರನೇ! ಹೀಗೆ ಹೇಳಿ ಲಕ್ಷ್ಮಿಯು ಮತ್ತು ಅವರೆ- ಲ್ಲರೂ ಹೊರಟುಹೋದರು. ದುರ್ಯೋಧನನು ತಂದೆಯನ್ನು ಕುರಿತು ಪುನಃ ಎಲೈ ಕೌರವನಂದನನೇ! ಶೀಲದ ತತ್ತ್ವವನ್ನು ತಿಳಿಯಲು ಬಯಸುತ್ತೇನೆ. ಶೀಲವನ್ನು ಹೇಗೆ ಸಂಪಾದಿಸುವುದು? ಆ ಉಪಾಯವನ್ನು ನನಗೆ ಹೇಳು ಎಂದು ಕೇಳಿದನು.
ಧೃತರಾಷ್ಟ್ರಃ
ಸೋಪಾಯಂ ಪೂರ್ವಮುದ್ದಿಷ್ಟಂ ಪ್ರಹ್ಲಾದೇನ ಮಹಾತ್ಮನಾ |
ಸಂಕ್ಷೇಪತಸ್ತು ಶೀಲಸ್ಯ ಶೃಣು ಪ್ರಾಪ್ತಿಂ ನರಾಧಿಪ ॥63॥
ಧೃತರಾಷ್ಟ್ರ ಮಹಾತ್ಮನಾದ ಪ್ರಹ್ಲಾದನು ಹಿಂದೆ ಹೇಳಿದ ಉಪಾಯಸಹಿತ- ವಾಗಿ ಶೀಲವನ್ನು ಸಂಪಾದಿಸುವ ರೀತಿಯನ್ನು ಸಂಕ್ಷೇಪವಾಗಿ ಕೇಳು.
ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ |
ಅನುಗ್ರಹಶ್ಚ ದಾನಂ ಚ ಶೀಲಮೇತತ್ ಪ್ರಶಸ್ಯತೇ ॥64॥
ಕರ್ಮದಿಂದಾಗಲೀ ಮನಸ್ಸಿನಿಂದಾಗಲೀ ಮಾತಿನಿಂದಾಗಲೀ ಯಾವ ಪ್ರಾಣಿಗೂ ದ್ರೋಹವನ್ನು ಮಾಡದಿರುವುದು. ಎಲ್ಲರನ್ನೂ ಅನುಗ್ರಹಿಸುವುದು ಮತ್ತು ದಾನ- ವನ್ನು ಮಾಡುವುದು ಶೀಲವೆಂದು ಪ್ರಶಂಸಿಸಲ್ಪಡುತ್ತದೆ.
ಯದನ್ಯೇಷಾಂ ಹಿತಂ ನ ಸ್ಯಾದಾತ್ಮನಃ ಕರ್ಮ ಪೌರುಷಮ್ |
ಅಪತ್ರಪೇತ ವಾ ಯೇನ ನ ತತ್ ಕುರ್ಯಾತ್ ಕಥಂಚನ ॥65॥
ತನ್ನ ಯಾವ ಪೌರುಷಕಾರ್ಯದಿಂದ ಇನ್ನೊಬ್ಬನಿಗೆ ಹಿತವಾಗುವುದಿಲ್ಲವೋ ಅಂತಹ ಕಾರ್ಯವನ್ನು ಮಾಡಲು ನಾಚಿಕೊಂಡು ಆ ಕಾರ್ಯವನ್ನು ಸರ್ವಥಾ ಮಾಡಬಾರದು.
ತತ್ತು ಕರ್ಮ ತಥಾ ಕುರ್ಯಾದ್ ಯೇನ ಶ್ಲಾಘೇತ ಸಂಸದಿ |
ಏತಚ್ಛೀಲಂ ಸಮಾಸೇನ ಕಥಿತಂ ಕುರುಸತ್ತಮ ॥66॥
ಎಲೈ ಕುರುಶ್ರೇಷ್ಠನೇ! ಯಾವ ಕರ್ಮವನ್ನು ಮಾಡಿದರೆ ಸಭೆಯಲ್ಲಿ ಅವನಿಗೆ ಪ್ರಶಂಸೆ ಉಂಟಾಗುತ್ತದೆಯೋ ಅಂತಹ ಕರ್ಮವನ್ನು ಮಾಡಬೇಕು. ಇದು ಸಂಕ್ಷೇಪ -ವಾಗಿ ಈ ಶೀಲವನ್ನು ನಿನಗೆ ಹೇಳಿದ್ದೇನೆ.
ಯದಪ್ಯಶೀಲಾ ನೃಪತೇ ಪ್ರಾಪ್ನುವಂತಿ ಕ್ವಚಿಚ್ಛ್ರಿಯಮ್ |
ನ ಭುಂಜತೇ ಚಿರಂ ತಾತ ಸಮೂಲಾಶ್ಚ ಪತಂತಿ ತೇ ॥67॥
ಎಲೈ ರಾಜನೇ! ಯದ್ಯಪಿ ಶೀಲವಿಲ್ಲದ ರಾಜರೂ ಸಹ ಒಮ್ಮೊಮ್ಮೆ ಸಂಪತ್ತನ್ನು ಪಡೆಯುತ್ತಾರೆ. ಆದರೆ ಎಲೈ ಪ್ರೀತಿಪಾತ್ರನೇ ಅವರು ಬಹುಕಾಲ ಅದನ್ನು ಭೋಗಿಸುವುದಿಲ್ಲ. ಮತ್ತು ಮೂಲಸಹಿತರಾಗಿ ಪತನವನ್ನು ಹೊಂದುತ್ತಾರೆ.
ಏತದ್ ವಿದಿತ್ವಾ ತತ್ತ್ವೇನ ಶೀಲವಾನ್ ಭವ ಪುತ್ರಕ |
ಯದೀಚ್ಛಸಿ ಶ್ರಿಯಂ ತಾತ ಸುವಿಶಿಷ್ಟಾಂ ಯುಧಿಷ್ಠಿರಾತ್ ॥68॥
ಎಲೈ ಪುತ್ರನೇ! ಪ್ರೀತಿಪಾತ್ರನೇ! ಯುಧಿಷ್ಠಿರನ ಬಳಿ ಇರುವುದಕ್ಕಿಂತ ದೊಡ್ಡ ಸಂಪತ್ತನ್ನು ನೀನು ಬಯಸುವುದಾದರೆ ನನ್ನ ಈ ಮಾತುಗಳನ್ನು ಚೆನ್ನಾಗಿ ತಿಳಿದು ಶೀಲವಂತನಾಗು.
ಭೀಷ್ಮಃ
ಏತತ್ ಕಥಿತವಾನ್ ಪುತ್ರೇ ಧೃತರಾಷ್ಟ್ರೋ ನರಾಧಿಪಃ |
ಏತತ್ ಕುರುಷ್ವ ಕೌಂತೇಯ ತತಃ ಪ್ರಾಪ್ಸ್ಯಸಿ ತತ್ಫಲಮ್ ॥69॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಪಂಚವಿಂಶತ್ಯಧಿಕಶತತಮೋಽಧ್ಯಾಯಃ ॥125॥
ಭೀಷ್ಮರು ಧೃತರಾಷ್ಟ್ರರಾಜನು ಈ ವಿಷಯವನ್ನು ಪುತ್ರನಾದ ದುರ್ಯೋ- ಧನನಿಗೆ ಹೇಳಿದನು. ಎಲೈ ಕೌಂತೇಯನೇ! ನೀನು ಅದನ್ನು ಅನುಸರಿಸು. ಅದರಿಂದ ಆ ಫಲವನ್ನು ಹೊಂದುವಿ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 125ನೆಯ ಅಧ್ಯಾಯವು ಮುಗಿಯಿತು.

126. ನೂರಇಪ್ಪತ್ತಾರನೆಯ ಅಧ್ಯಾಯ
ಋಷಭಸುಮಿತ್ರಸಂವಾದ; ಆಸೆಯಿಂದ ಸುಮಿತ್ರನ ಮೃಗಾನುಧಾವನ.
ಯುಧಿಷ್ಠಿರಃ
ಶೀಲಂ ಪ್ರಧಾನಂ ಪುರುಷೇ ಕಥಿತಂ ತೇ ಪಿತಾಮಹ |
ಕಥಮಾಶಾ ಸಮುತ್ಪನ್ನಾ ಯಾ ಚ ಸಾ ತದ್ ವದಸ್ವ ಮೇ ॥1॥
ಯುಧಿಷ್ಠಿರ ಎಲೈ ಪಿತಾಮಹನೇ! ಪುರುಷರಲ್ಲಿ ಶೀಲವು ಪ್ರಧಾನವಾದುದು ಎಂದು ನೀನು ಹೇಳಿದ್ದೀಯೆ. ಆಸೆಯು ಹೇಗೆ ಉತ್ಪನ್ನವಾಯಿತು ಮತ್ತು ನನಗೆ ಅದರ ಸ್ವರೂಪಗಳನ್ನು ಹೇಳು.
ಸಂಶಯೋ ಮೇ ಮಹಾನೇಷ ಸಮುತ್ಪನ್ನಃ ಪಿತಾಮಹ |
ಛೇತ್ತಾ ಚ ತಸ್ಯ ನಾನ್ಯೋಽಸ್ತಿ ತ್ವತ್ತಃ ಪರಪುರಂಜಯ ॥2॥
ಎಲೈ ಪಿತಾಮಹನೇ! ಈ ವಿಷಯದಲ್ಲಿ ನನಗೆ ದೊಡ್ಡ ಸಂಶಯವುಂಟಾಗಿದೆ. ಎಲೈ ಪರಪುರಂಜಯನೇ! ಆ ಸಂಶಯವನ್ನು ಪರಿಹರಿಸುವವರು ನಿನ್ನನ್ನು ಬಿಟ್ಟು ಬೇರೆ ಯಾರೂ ಇಲ್ಲ.
ಪಿತಾಮಹಾಶಾ ಮಹತೀ ಮಮಾಸೀದ್ಧಿ ಸುಯೋಧನೇ |
ಪ್ರಾಪ್ತೇ ಯುದ್ಧೇ ತು ತದ್ ಯುಕ್ತಂ ತತ್ಕರ್ತಾऽಯಮಿತಿ ಪ್ರಭೋ ॥3॥
ಎಲೈ ಪಿತಾಮಹನೇ! ಪ್ರಭುವೇ! ಯುದ್ಧವು ಪ್ರಾರಂಭವಾದಾಗ ಸುಯೋ- ಧನನು ಯುದ್ಧದಲ್ಲಿ ಯುಕ್ತವಾದುದನ್ನೇ ಮಾಡುವನು ಎಂದು ನನಗೆ ದೊಡ್ಡ ಆಸೆಯಿದ್ದಿತು.
ಸರ್ವಸ್ಯಾಶಾ ಸುಮಹತೀ ಪುರುಷಸ್ಯೋಪಜಾಯತೇ |
ತಸ್ಯಾಂ ವಿಹನ್ಯಮಾನಾಯಾಂ ದುಃಖೋ ಮೃತ್ಯುರಸಂಶಯಮ್ ॥4॥
ಎಲ್ಲ ಜೀವರಿಗೂ ಆಸೆಯು ಬಹಳ ದೊಡ್ಡದಾಗಿ ಉಂಟಾಗುತ್ತದೆ. ಆಸೆಯು ಭಗ್ನವಾದರೆ ದುಃಖವೂ ಕೆಲವೊಮ್ಮೆ ಮರಣವೂ ನಿಃಸಂಶಯವಾಗಿ ಉಂಟಾಗುತ್ತದೆ.
ಸೋಽಹಂ ಹತಾಶೋ ದುರ್ಬುದ್ಧಿಃ ಕೃತಸ್ತೇನ ದುರಾತ್ಮನಾ |
ಧಾರ್ತರಾಷ್ಟ್ರೇಣ ರಾಜೇಂದ್ರ ಪಶ್ಯ ಮಂದಾತ್ಮತಾಂ ಮಮ ॥5॥
ದುಷ್ಟನಾದ ಸುಯೋಧನನು ದುರ್ಬುದ್ಧಿಯುಳ್ಳ ನನ್ನ ಆಸೆಯ ಭಂಗವನ್ನು ಮಾಡಿದನು. ಎಲೈ ರಾಜೇಂದ್ರನೇ! ನಾನು ಎಷ್ಟು ಜ್ಞಾನಶೂನ್ಯನೆಂದು ನೋಡು.
ಆಶಾಂ ಮಹತ್ತರಾಂ ಮನ್ಯೇ ಪರ್ವತಾದಪಿ ಸದ್ರುಮಾತ್ |
ಆಕಾಶಾದಪಿ ವಾ ರಾಜನ್ನಪ್ರಮೇಯೈವ ವಾ ಪುನಃ ॥6॥
ಆಸೆಯು ವೃಕ್ಷದಿಂದ ಕೂಡಿರುವ ಪರ್ವತಗಳಿಗಿಂತಲೂ ಅಥವಾ ಆಕಾಶ- ಕ್ಕಿಂತಲೂ ಎತ್ತರವಾದುದೆಂದು ನಾನು ತಿಳಿಯುತ್ತೇನೆ. ಅಥವಾ ಅದು ನಾವು ತಿಳಿಯ -ಲಾರದಷ್ಟು ಎತ್ತರವನ್ನು ಹೊಂದಿದೆ.
ಏಷಾ ಚೈವ ಕುರುಶ್ರೇಷ್ಠ ದುರ್ವಿಚಿಂತ್ಯಾ ಸುದುರ್ಲಭಾ |
ದುರ್ಲಭತ್ವಾಚ್ಚ ಪಶ್ಯಾಮಿ ಕಿಮನ್ಯದ್ ದುರ್ಲಭಂ ತತಃ ॥7॥
ಎಲೈ ಕುರುಶ್ರೇಷ್ಠನೇ! ಆಸೆಯನ್ನು ಚಿಂತಿಸುವುದು ಕಷ್ಟಕರವಾದುದು. ಮತ್ತು ಆಸೆಯನ್ನು ಜಯಿಸುವುದು ಬಹಳ ಕಷ್ಟದ ಕಾರ್ಯ. ಆಸೆಯನ್ನು ಜಯಿಸುವುದು ಕಷ್ಟವಾದುದರಿಂದಲೇ ಅದಕ್ಕಿಂತ ಕಷ್ಟಕರವಾದ ಕಾರ್ಯವು ಯಾವುದು ಎಂದು ನಾನು ಚಿಂತಿಸುತ್ತಿದ್ದೇನೆ.
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಯುಧಿಷ್ಠಿರ ನಿಬೋಧ ತತ್ |
ಇತಿಹಾಸಂ ಸುಮಿತ್ರಸ್ಯ ನಿರ್ವೃತ್ತಮೃಷಭಸ್ಯ ಚ ॥8॥
ಭೀಷ್ಮರು ಎಲೈ ಯುಧಿಷ್ಠಿರನೇ! ನಿನಗೆ ಈ ವಿಷಯದಲ್ಲಿ ವೃಷಭ ಎಂಬ ಋಷಿಗೂ ಸುಮಿತ್ರ ಎಂಬ ರಾಜನಿಗೂ ಸಂಬಂಧಿಸಿ ನಡೆದ ಒಂದು ಇತಿಹಾಸವನ್ನು ಹೇಳುವೆನು.ಅದನ್ನು ಕೇಳು.
ಸುಮಿತ್ರೋ ನಾಮ ರಾಜರ್ಷಿರ್ಹೈಹಯೋ ಮೃಗಯಾಂ ಗತಃ |
ಸಸಾರ ಸ ಮೃಗಂ ವಿದ್ಧ್ವಾ ಬಾಣೇನ ನತಪರ್ವಣಾ ॥9॥
ಸುಮಿತ್ರನೆಂಬ ಹೈಹಯಕುಲದ ರಾಜರ್ಷಿಯು ಬೇಟೆಗೆ ಹೊರಟನು. ಅವನು ಬಾಗಿದ ತುದಿಯುಳ್ಳ ಬಾಣದಿಂದ ಒಂದು ಮೃಗವನ್ನು ಹೊಡೆದು ಅದನ್ನು ಹಿಂಬಾಲಿಸಿದನು.
ಸ ಮೃಗೋ ಬಾಣಮಾದಾಯ ಯಯಾವಮಿತವಿಕ್ರಮಃ |
ಸ ಚ ರಾಜಾ ಬಲೀ ತೂರ್ಣಂ ಸಸಾರ ಮೃಗಮಂತಿಕಾತ್ ॥10॥
ಬಹಳಪರಾಕ್ರಮಶಾಲಿಯಾಗಿದ್ದ ಆ ಮೃಗವು ಆ ಬಾಣವು ನೆಟ್ಟಂತೆಯೇ ಹೊರಟು ಹೋಯಿತು. ಬಲಿಷ್ಠನಾದ ರಾಜನೂ ಸಹ ಮೃಗಕ್ಕೆ ಬಹಳ ಸಮೀಪದಿಂದಲೇ ಅದನ್ನು ಹಿಂಬಾಲಿಸಿದನು.
ತತೋ ನಿಮ್ನಂ ಸ್ಥಲಂ ಚೈವ ಸ ಮೃಗೋಽದ್ರವದಾಶುಗಃ |
ಮುಹೂರ್ತಮೇವ ರಾಜೇಂದ್ರ ಸಮೇನ ಸ ಪಥಮಾಗಮತ್ ॥11॥
ಅನಂತರ ವೇಗವಾಗಿ ಸಾಗುವ ಆ ಮೃಗವು ಉಬ್ಬು ತಗ್ಗುಗಳನ್ನು ದಾಟುತ್ತಾ ಓಡಿಹೋಯಿತು. ಎಲೈ ರಾಜೇಂದ್ರನೇ! ಒಂದು ಮುಹೂರ್ತದ ವರೆಗೆ ಮಾತ್ರ ಅದು ಸಮತಟ್ಟಾದ ದಾರಿಯಲ್ಲಿ ನಡೆದಿತ್ತು.
ತತಃ ಸ ರಾಜಾ ತಾರುಣ್ಯಾದೌರಸೇನ ಬಲೇನ ಚ |

ಸಸಾರ ಬಾಣಾಸನಭೃತ್ ಸಖಡ್ಗೋ ಹಂಸವತ್ ತದಾ ॥12॥
ಆಗ ಆ ರಾಜನು ತನ್ನ ತಾರುಣ್ಯದಿಂದಲೂ ಬಲದಿಂದಲೂ ಕೂಡಿದವನಾಗಿ ಧನುಸ್ಸನ್ನೂ ಖಡ್ಗವನ್ನೂ ಹಿಡಿದು ಹಂಸದಂತೆ ಆ ಮೃಗವನ್ನು ಹಿಂಬಾಲಿಸಿದನು.
ತೀರ್ತ್ವಾ ನದಾನ್ ನದೀಶ್ಚೈವ ಪಲ್ವಲಾನಿ ವನಾನಿ ಚ |
ಅತಿಕ್ರಮ್ಯಾಭ್ಯತಿಕ್ರಮ್ಯ ಸಸಾರೈವ ವನೇ ಚರನ್ ॥13॥
ಆ ಮೃಗವಾದರೋ ನದಿಗಳನ್ನೂ, ನದಗಳನ್ನೂ, ಜೌಗುಪ್ರದೇಶಗಳನ್ನೂ, ಕಾಡುಗಳನ್ನೂ ದಾಟಿ ದಾಟಿ ಕಾಡಿನಲ್ಲಿ ಮುಂದೆ ಸಾಗಿತು.
ಸ ತು ಕಾಮಾನ್ಮೃಗೋ ರಾಜನ್ನಾಸಾದ್ಯಾಸಾದ್ಯ ತಂ ನೃಪಮ್ |
ಪುನರಭ್ಯೇತಿ ಜವನೋ ಜವೇನ ಮಹತಾ ತತಃ ॥14॥
ಎಲೈ ರಾಜನೇ! ಆ ಮೃಗವು ತನ್ನ ಇಚ್ಛೆಯಿಂದಲೇ ರಾಜನ ಸಮೀಪದಲ್ಲಿ ಸಿಲುಕಿ ಸಿಲುಕಿ ಪುನಃ ಬಹಳ ವೇಗದಿಂದ ಅಲ್ಲಿಂದ ಮುಂದಕ್ಕೆ ಓಡುತ್ತಿದ್ದಿತು.
ಸ ತಸ್ಯ ಬಾಣೈರ್ಬಹುಭಿಃ ಸಮಭ್ಯಸ್ತೋ ವನೇಚರಃ |
ಪ್ರಕ್ರೀಡನ್ನಿವ ರಾಜೇಂದ್ರ ಪುನರಭ್ಯೇತಿ ಚಾಂತಿಕಮ್ ॥15॥
ಆ ರಾಜನು ಆ ವನಚರಪ್ರಾಣಿಗೆ ಅನೇಕ ಬಾಣಗಳಿಂದ ಹೊಡೆದರೂ ಎಲೈ ರಾಜೇಂದ್ರನೇ! ಅದು ಆಟ ಆಡುವಂತೆ ಪುನಃ ರಾಜನಿಗೆ ಸಮೀಪದಲ್ಲಿ ಬರುತ್ತಿ- ದ್ದಿತು.
ಪುನಶ್ಚ ಜವಮಾಸ್ಥಾಯ ಜವನೋ ಮೃಗಯೂಥಪಃ |
ಅತೀತ್ಯಾತೀತ್ಯ ರಾಜೇಂದ್ರ ಪುನರಭ್ಯೇತಿ ಚಾಂತಿಕಮ್ ॥16॥
ಎಲೈ ರಾಜೇಂದ್ರನೇ! ವೇಗಶಾಲಿಯಾದ ಆ ಮೃಗರಾಜನು ಪುನಃ ವೇಗವನ್ನು ಹೊಂದಿ ದೂರ ದೂರ ಹೋಗಿ ಪುನಃ ರಾಜನ ಸಮೀಪಕ್ಕೆ ಬರುತ್ತಿದ್ದಿತು.
ತಸ್ಯ ಮರ್ಮಚ್ಛಿದಂ ಘೋರಂ ಸುಮಿತ್ರೋಽಮಿತ್ರಕರ್ಶನಃ |
ಸಮಾದಾಯ ಶರಶ್ರೇಷ್ಠಂ ಕಾರ್ಮುಕಾನ್ನಿರವಾಸೃಜತ್ ॥17॥
ಶತ್ರುಕರ್ಶನನಾದ ಸುಮಿತ್ರನು ಮರ್ಮಭೇದಿಯಾದ ಒಂದು ಶ್ರೇಷ್ಠ ಬಾಣ- ವನ್ನು ತೆಗೆದುಕೊಂಡು ಬಿಲ್ಲಿನಲ್ಲಿ ಹೂಡಿ ಪ್ರಯೋಗಿಸಿದನು.
ತತೋ ಗವ್ಯೂತಿಮಾತ್ರೇಣ ಮೃಗಯೂಥಪಯೂಥಪಃ |
ತಸ್ಯ ಬಾಣಪಥಂ ತ್ಯಕ್ತ್ವಾ ತಸ್ಥಿವಾನ್ ಪ್ರಹಸನ್ನಿವ ॥18॥
ಆಗ ಆ ಮೃಗರಾಜನು ಒಂದು ಗಾವುದ ದೂರದಲ್ಲಿ ಆ ಬಾಣದ ಮಾರ್ಗವನ್ನು ತಪ್ಪಿಸಿ ನಗುವವನಂತೆ ನಿಂತುಕೊಂಡಿತು.
ತಸ್ಮಿನ್ ನಿಪತಿತೇ ಬಾಣೇ ಭೂಮೌ ಪ್ರಜ್ವಲಿತೇ ತತಃ |
ಪ್ರವಿವೇಶ ಮಹಾರಣ್ಯಂ ಮೃಗೋ ರಾಜಾಽಪ್ಯಥಾದ್ರವತ್ ॥19॥
ಆ ಜ್ವಲಿಸುವ ಬಾಣವು ಭೂಮಿಯ ಮೇಲೆ ಬೀಳುತ್ತಿರಲು ಮೃಗವು ಮಹಾ- ರಣ್ಯವನ್ನು ಪ್ರವೇಶಿಸಿತು. ರಾಜನು ಪುನಃ ಅದರ ಹಿಂದೆ ಓಡಿದನು.
ಪ್ರವಿಶ್ಯ ತು ಮಹಾರಣ್ಯಂ ತಾಪಸಾನಾಮಥಾಶ್ರಮಮ್ |
ಆಸಸಾದ ತತೋ ರಾಜಾ ಶ್ರಾಂತಶ್ಚೋಪಾವಿಶತ್ ಪುನಃ ॥20॥
ಅರಣ್ಯವನ್ನು ಪ್ರವೇಶಿಸಿದ ರಾಜನು ಒಂದು ಋಷ್ಯಾಶ್ರಮವನ್ನು ತಲುಪಿ ದಣಿದು ಅಲ್ಲಿ ಕುಳಿತುಕೊಂಡನು.
ತಂ ಕಾರ್ಮುಕಧರಂ ದೃಷ್ಟ್ವಾ ಶ್ರಮಾರ್ತಂ ಕ್ಷುಧಿತಂ ತದಾ |
ಸಮೇತ್ಯ ಋಷಯಸ್ತಸ್ಮಿನ್ ಪೂಜಾಂ ಚಕ್ರುರ್ಯಥಾವಿಧಿ ॥21॥
ಬಿಲ್ಲನ್ನು ಧರಿಸಿ, ಹಸಿವು ಮತ್ತು ಶ್ರಮಗಳಿಂದ ಬಳಲಿದ ಅವನನ್ನು ನೋಡಿ ಅಲ್ಲಿನ ಋಷಿಗಳು ಒಟ್ಟಾಗಿ ಬಂದು ಅವನನ್ನು ವಿಧಿವತ್ತಾಗಿ ಪೂಜಿಸಿದರು.
ಋಷಯೋ ರಾಜಶಾರ್ದೂಲಮಪೃಚ್ಛನ್ ಸ್ವಂ ಪ್ರಯೋಜನಮ್ |
ಕೇನ ಭದ್ರಮುಖಾರ್ಥೇನ ಸಂಪ್ರಾಪ್ತೋಽಸಿ ತಪೋವನಮ್ ॥22॥
ಋಷಿಗಳು ಆ ರಾಜಶಾರ್ದೂಲನನ್ನು ಕುರಿತು ಎಲೈ ಭದ್ರಮುಖನೇ! ಯಾವ ಉದ್ದೇಶದಿಂದ ತಪೋವನಕ್ಕೆ ಬಂದಿದ್ದೀಯೆ ಎಂದು ಅವನ ತಪೋವನಪ್ರವೇಶದ ಉದ್ದೇಶವನ್ನು ಕೇಳಿದರು.
ಪದಾತಿರ್ಬದ್ಧನಿಸ್ತ್ರಿಂಶೋ ಧನ್ವೀ ಬಾಣೀ ನರೇಶ್ವರ |
ಏತದಿಚ್ಛಾಮ ವಿಜ್ಞಾತುಂ ಕುತಃ ಪ್ರಾಪ್ತೋಽಸಿ ಮಾನದ |
ಕಸ್ಮಿನ್ ಕುಲೇ ಹಿ ಜಾತಸ್ತ್ವಂ ಕಿನ್ನಾಮಾಸಿ ಬ್ರವೀಹಿ ನಃ ॥23॥
ಎಲೈ ಮಾನದನೇ! ಖಡ್ಗವನ್ನು ಬಿಗಿದುಕೊಂಡು, ಧನುರ್ಬಾಣಗಳನ್ನು ಧರಿಸಿ, ಪದಾತಿಯಾಗಿ ಬಂದಿದ್ದೀಯೆ. ಎಲೈ ನರೇಶ್ವರನೇ! ನೀನು ಎಲ್ಲಿಂದ ಬಂದಿರುವಿ. ಯಾವ ಕುಲದಲ್ಲಿ ಜನಿಸಿದ್ದೀಯೆ. ನಿನ್ನ ಹೆಸರೇನು ಎಂದು ತಿಳಿದುಕೊಳ್ಳಲು ಬಯಸುತ್ತೇವೆ. ಅದನ್ನು ನಮಗೆ ಹೇಳು.
ತತಃ ಸ ರಾಜಾ ಸರ್ವೇಭ್ಯೋ ದ್ವಿಜೇಭ್ಯಃ ಪುರುಷರ್ಷಭ |
ಆಚಖ್ಯೌ ತದ್ ಯಥಾನ್ಯಾಯಂ ಪರಿಚರ್ಯಾಂ ಚ ಭಾರತ ॥24॥
ಎಲೈ ಪುರುಷರ್ಷಭನೇ! ಆಗ ಆ ರಾಜನು ಎಲ್ಲ ಋಷಿಗಳಿಗೂ ವಿಧಿವತ್ತಾಗಿ ತನ್ನ ಪರಿಚರ್ಯವನ್ನು ಮತ್ತು ತಾನು ಆಶ್ರಮಕ್ಕೆ ಬಂದ ಉದ್ದೇಶವನ್ನು ಹೇಳಿದನು.

ಹೈಹಯಾನಾಂ ಕುಲೇ ಜಾತಃ ಸುಮಿತ್ರೋ ಮಿತ್ರನಂದನಃ |
ಚರಾಮಿ ಮೃಗಯೂಥಾನಿ ನಿಘ್ನನ್ ಬಾಣೈಃ ಸಹಸ್ರಶಃ |
ಬಲೇನ ಮಹತಾ ಗುಪ್ತಃ ಸಾಮಾತ್ಯಃ ಸಾವರೋಧನಃ ॥25॥
ನಾನು ಹೈಹಯಕುಲದಲ್ಲಿ ಜನಿಸಿದ ಮಿತ್ರನೆಂಬ ರಾಜನ ಮಗನಾದ ಸುಮಿತ್ರ- ನೆಂಬುವನು. ನನ್ನ ಸಹಸ್ರಾರು ಬಾಣಗಳಿಂದ ಮೃಗಸಮೂಹಗಳನ್ನು ಕೊಲ್ಲುತ್ತಾ ದೊಡ್ಡ ಸೈನ್ಯದಿಂದ ರಕ್ಷಿತನಾಗಿ ಅಮಾತ್ಯ ಮತ್ತು ಪರಿವಾರದೊಡನೆ ಸಂಚರಿಸು- ತ್ತಿದ್ದೇನೆ.
ಮೃಗಸ್ತು ವಿದ್ಧೋ ಬಾಣೇನ ಮಯಾ ಸರತಿ ಶಲ್ಯವಾನ್ |
ತಂ ದ್ರವಂತಮನು ಪ್ರಾಪ್ತೋ ವನಮೇತದ್ ಯದೃಚ್ಛಯಾ |
ಭವತ್ಸಕಾಶೇ ನಷ್ಟಶ್ರೀರ್ಹತಾಶಃ ಶ್ರಮಕರ್ಶಿತಃ ॥26॥
ಒಂದು ಮೃಗವು ನನ್ನಿಂದ ಬಾಣದಿಂದ ಹೊಡೆಯಲ್ಪಟ್ಟು ಆ ಬಾಣವು ನಾಟಿದಂತೆಯೇ ಮುಂದೆ ಹೋಗುತ್ತಿದೆ. ಓಡುವ ಅದನ್ನು ಹಿಂಬಾಲಿಸುತ್ತಾ ನನ್ನ ಆಸೆಯನ್ನೂ ಕಾಂತಿಯನ್ನೂ ಕಳೆದುಕೊಂಡು ಶ್ರಮಕರ್ಶಿತನಾಗಿ ಅಕಸ್ಮಾತ್ತಾಗಿ ಈ ಕಾಡಿನಲ್ಲಿ ನಿಮ್ಮ ಬಳಿಗೆ ಬಂದಿದ್ದೇನೆ.
ಕಿಂ ನು ದುಃಖಮತೋಽನ್ಯದ್ ವೈ ಯದಹಂ ಶ್ರಮಕರ್ಶಿತಃ |
ಭವತಾಮಾಶ್ರಮಂ ಪ್ರಾಪ್ತೋ ಹತಾಶೋ ನಷ್ಟಲಕ್ಷಣಃ ॥27॥
ನಾನು ನನ್ನ ಆಸೆಯನ್ನು ಮತ್ತು ನನ್ನ ರಾಜಚಿಹ್ನೆಗಳನ್ನು ಕಳೆದುಕೊಂಡು ಶ್ರಮದಿಂದಪೀಡಿತನಾಗಿ ನಿಮ್ಮ ಆಶ್ರಮವನ್ನು ಸೇರಿದುದಕ್ಕಿಂತ ಬೇರೆ ದುಃಖಕರ- ವಾದುದು ಯಾವದಿದೆ?
ನ ರಾಜಲಕ್ಷಣತ್ಯಾಗೋ ನ ಪುರಸ್ಯ ತಪೋಧನಾಃ |
ದುಃಖಂ ಕರೋತಿ ತತ್ ತೀವ್ರಂ ಯಥಾಶಾ ವಿಹತಾ ಮಮ ॥28॥
ಎಲೈ ತಪೋಧನರೇ! ರಾಜಚಿಹ್ನೆಯ ತ್ಯಾಗವಾಗಲೀ, ರಾಜಧಾನಿಯ ತ್ಯಾಗ- ವಾಗಲೀ, ನನಗೆ ನನ್ನ ಆಶಾಭಂಗವು ಉಂಟುಮಾಡಿದ ತೀವ್ರವಾದ ದುಃಖವನ್ನು ಉಂಟುಮಾಡುವುದಿಲ್ಲ.
ಹಿಮವಾನ್ ವಾ ಮಹಾಶೈಲಃ ಸಮುದ್ರೋ ವಾ ಮಹೋದಧಿಃ |
ಮಹತ್ತ್ವಾನ್ನಾನ್ವಪದ್ಯೇತಾಂ ರೋದಸ್ಯೋರಂತರಂ ಯಥಾ |
ಆಶಾಯಾಸ್ತಪಸಿಶ್ರೇಷ್ಠಾಸ್ತಥಾ ನಾಂತಮಹಂ ಗತಃ ॥29॥
ಹಿಮಾಲಯ ಮಹಾಪರ್ವತವಾಗಲೀ, ಮಹಾಜಲಾಶಯವಾದ ಸಮುದ್ರ- ವಾಗಲೀ, ತಮ್ಮ ಮಹತ್ವದಿಂದ ಭೂಮಿ ಅಂತರಿಕ್ಷಗಳ ಮಧ್ಯಭಾಗವನ್ನು ಹೇಗೆ ತುಂಬುವುದಿಲ್ಲವೋ, ಎಲೈ ತಪೋನಿಷ್ಠರೇ! ಹಾಗೆ ನನ್ನ ಆಸೆಯ ಅಂತವನ್ನು ನಾನು ತಲುಪಿಲ್ಲ.
ಭವತಾಂ ವಿದಿತಂ ಸರ್ವಂ ಸರ್ವಜ್ಞಾ ಹಿ ತಪೋಧನಾಃ |
ಭವಂತಃ ಸುಮಹಾಭಾಗಾಸ್ತಸ್ಮಾತ್ ಪ್ರಕ್ಷ್ಯಾಮಿ ಸಂಶಯಮ್ ॥30॥
ನೀವು ಎಲ್ಲವನ್ನೂ ತಿಳಿದಿದ್ದೀರಿ. ಏಕೆಂದರೆ ನೀವು ತಪೋಧನರಾದ ಸರ್ವಜ್ಞರು. ಮತ್ತು ಮಹಾನುಭಾವರು. ಆದ್ದರಿಂದ ನನ್ನ ಸಂಶಯವನ್ನು ಕೇಳುತ್ತಿದ್ದೇನೆ.
ಆಶಾವಾನ್ ಪುರುಷೋ ಯಃ ಸ್ಯಾದಂತರಿಕ್ಷಮಥಾಪಿ ವಾ |
ಕಿನ್ನು ಜ್ಯಾಯಸ್ತರಂ ಲೋಕೇ ಮಹತ್ತ್ವೇ ಪ್ರತಿಭಾತಿ ವಃ |
ಏತದಿಚ್ಛಾಮಿ ತತ್ತ್ವೇನ ಶ್ರೋತುಂ ಕಿಮಿಹ ದುರ್ಲಭಮ್ ॥31॥
ಯದಿ ಗುಹ್ಯಂ ತಪೋನಿತ್ಯಾ ಮಾಂ ಬ್ರೂತೇಹ ಮಾಚಿರಮ್ |
ನ ಹಿ ಗುಹ್ಯಮತಃ ಶ್ರೋತುಮಿಚ್ಛಾಮಿ ದ್ವಿಜಪುಂಗವಾಃ ॥32॥
ಪುರುಷನ ಆಸೆ ಒಂದು ಕಡೆ; ಮತ್ತು ಅಂತರಿಕ್ಷವು ಇನ್ನೊಂದು ಕಡೆ. ಇವು- ಗಳಲ್ಲಿ ಮಹತ್ವದಿಂದ ದೊಡ್ಡದು ಯಾವುದೆಂದು ನೀವು ತಿಳಿಯುತ್ತೀರಿ? ಇದನ್ನು ಸರಿಯಾಗಿ ಕೇಳಲು ನಾನು ಬಯಸುತ್ತೇನೆ. ಇಲ್ಲಿ ಬಂದಿರುವ ನನಗೆ ದುರ್ಲಭ- ವಾದುದು ಯಾವುದಿದೆ? ಎಲೈ ತಪೋನಿತ್ಯರೇ ಅದು ರಹಸ್ಯವಲ್ಲದಿದ್ದರೆ ಅದನ್ನು ಶೀಘ್ರವಾಗಿ ನನಗೆ ಹೇಳಿ. ಎಲೈ ದ್ವಿಜಪುಂಗವರೇ! ಗುಹ್ಯವಾಗಿದ್ದರೆ ನಾನು ಅದನ್ನು ಕೇಳಲು ಬಯಸುವುದಿಲ್ಲ.
ಭವತ್ ತಪೋವಿಘಾತೋ ವಾ ಯೇನ ಸ್ಯಾದ್ ವಿರಮೇ ತತಃ |
ಯದಿ ವಾಸ್ತಿ ಕಥಾಯೋಗೋ ಯೋಽಯಂ ಪ್ರಶ್ನೋ ಮಯೇರಿತಃ ॥33॥
ಅಥವಾ ನಿಮ್ಮ ತಪಸ್ಸಿಗೆ ಭಂಗವುಂಟಾಗುವುದಾದರೂ ನಾನು ನನ್ನ ಪ್ರಶ್ನೆಯಿಂದ ಹಿಂದೆ ಸರಿಯುತ್ತೇನೆ. ನಾನು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡುವ ಸಾಧ್ಯತೆ ಇದ್ದರೆ ಮಾತ್ರ ಉತ್ತರವನ್ನು ಹೇಳಿ.
ಏತತ್ ಕಾರಣಸಾಮಗ್ರ್ಯಂ ಶ್ರೋತುಮಿಚ್ಛಾಮಿ ತತ್ತ್ವತಃ |
ಭವಂತೋ ಹಿ ತಪೋ ನಿತ್ಯಾ ಬ್ರೂಯುರೇತತ್ ಸಮಾಹಿತಾಃ ॥34॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಷಟ್‌ವಿಂಶತ್ಯಧಿಕಶತತಮೋಽಧ್ಯಾಯಃ ॥126॥
ಆಸೆಗೆ (ಮತ್ತು ಆಸೆಯ ಜಯಕ್ಕೆ) ಸಮಗ್ರವಾದ ಕಾರಣವನ್ನು ನಾನು ಕೇಳಲು ಬಯಸುತ್ತೇನೆ. ತಪೋನಿರತರಾದ ನೀವು ಸಮಾಧಾನದಿಂದ ಇದಕ್ಕೆ ಉತ್ತರವನ್ನು ಹೇಳಬಹುದು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 126ನೆಯ ಅಧ್ಯಾಯವು ಮುಗಿಯಿತು.
0
127. ನೂರಇಪ್ಪತ್ತೇಳನೆಯ ಅಧ್ಯಾಯ

ಬದರಿಕಾಶ್ರಮದಲ್ಲಿ ವೃಷಭತನು ಸಂವಾದ ವೀರದ್ಯುಮ್ನಪ್ರಶ್ನೆ
ಭೀಷ್ಮಃ
ತತಸ್ತೇಷಾಂ ಸಮಸ್ತಾನಾಮೃಷೀಣಾಮೃಷಿಸತ್ತಮಃ |
ಋಷಭೋ ನಾಮ ವಿಪ್ರರ್ಷಿಃ ಸ್ಮಯನ್ನಿವ ತತೋಽಬ್ರವೀತ್ ॥1॥
ಭೀಷ್ಮರು ಆಗ ಅಲ್ಲಿ ಸೇರಿದ ಋಷಿಗಳಲ್ಲಿ ಋಷಭ ಎಂಬ ವಿಪ್ರರ್ಷಿಯು ನಗುತ್ತಾ ಮಾತನಾಡಿದನು.
ಪುರಾಹಂ ರಾಜಶಾರ್ದೂಲ ತೀರ್ಥಾನ್ಯನುಚರನ್ ಪ್ರಭೋ |
ಸಮಾಸಾದಿತವಾನ್ ದಿವ್ಯಂ ನರನಾರಾಯಣಾಶ್ರಮಮ್ ॥2॥
ಎಲೈ ರಾಜಶಾರ್ದೂಲನೇ! ಪ್ರಭುವೇ! ನಾನು ಹಿಂದೆ ತೀರ್ಥಯಾತ್ರೆಯನ್ನು ಮಾಡುತ್ತಾ ದಿವ್ಯವಾದ ನರನಾರಾಯಣಾಶ್ರಮಕ್ಕೆ ಬಂದೆನು.
ಯತ್ರ ಸಾ ಬದರೀ ರಮ್ಯಾ ಹ್ರದೋ ವೈಹಾಯಸಸ್ತಥಾ |
ಯತ್ರ ಚಾಶ್ವಶಿರಾ ರಾಜನ್ ವೇದಾನ್ ಪಠತಿ ಶಾಶ್ವತಾನ್ ॥3॥
ತಸ್ಮಿನ್ ಸರಸಿ ಕೃತ್ವಾಹಂ ವಿಧಿವತ್ ತರ್ಪಣಂ ಪುರಾ |
ಪಿತೄಣಾಂ ದೇವತಾನಾಂ ಚ ತತೋಽಽಶ್ರಮಮಿಯಾಂ ತದಾ ॥4॥
ಎಲ್ಲಿ ಮನೋಹರವಾದ ಬದರೀವೃಕ್ಷವಿದೆಯೋ, ಹಾಗೆಯೇ ವೈಹಾಯಸ ಕುಂಡವಿದೆಯೋ, ಎಲ್ಲಿ ಹಯಗ್ರೀವದೇವರು ಶಾಶ್ವತಗಳಾದ ವೇದಗಳನ್ನು ಪಠಿಸುತ್ತಾರೆಯೋ, ಅಲ್ಲಿಗೆ ಬಂದು ಆ ಸರೋವರದಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೆ ಮತ್ತು ದೇವತೆಗಳಿಗೆ ವಿಧಿವತ್ತಾಗಿ ತರ್ಪಣವನ್ನು ಕೊಟ್ಟು ಅನಂತರ ಈ ಆಶ್ರಮವನ್ನು ಪ್ರವೇಶಿಸಿದೆನು.
ರೇಮಾತೇ ಯತ್ರ ತೌ ನಿತ್ಯಂ ನರನಾರಾಯಣಾವೃಷೀ |
ಅದೂರಾದಾಶ್ರಮಂ ಕಶ್ಚಿದ್ ವಾಸಾರ್ಥಮಗಮಂ ತತಃ ॥5॥
ಎಲ್ಲಿ ನರನಾರಾಯಣಋಷಿಗಳು ನಿತ್ಯವೂ ವಾಸಮಾಡುತ್ತಾರೆಯೋ ಅಲ್ಲಿಂದ ಸ್ವಲ್ಪದೂರದಲ್ಲಿ ನನ್ನ ವಾಸಕ್ಕಾಗಿ ಒಂದು ಆಶ್ರಮಕ್ಕೆ ಹೋದೆನು.
ತತಶ್ಚೀರಾಜಿನಧರಂ ಕೃಶಮುಚ್ಚಮತೀವ ಚ |
ಅದ್ರಾಕ್ಷಮೃಷಿಮಾಯಾಂತಂ ತನುಂ ನಾಮ ತಪೋನಿಧಿಮ್ ॥6॥
ಅಲ್ಲಿ ಕೃಷ್ಣಾಜಿನ ಮತ್ತು ನಾರುಮಡಿಯನ್ನುಟ್ಟ ಕೃಶನಾದ ಅತ್ಯಂತ ಎತ್ತರನಾದ ತನು ಎಂಬ ಹೆಸರಿನ ತಪೋನಿಧಿಯಾದ ಋಷಿಯು ಅಲ್ಲಿಗೆ ಬರುವುದನ್ನು ನೋಡಿ- ದೆನು.
ಅನ್ಯೈರ್ನರೈರ್ಮಹಾಬಾಹೋ ವಪುಷಾಽಷ್ಟಗುಣಾನ್ವಿತಮ್ |
ಕೃಶತಾ ಚಾಪಿ ರಾಜರ್ಷೇ ನ ದೃಷ್ಟಾ ತಾದೃಶೀ ಕ್ವಚಿತ್ ॥7॥
ಎಲೈ ಮಹಾಬಾಹುವೇ! ಅವನ ಎತ್ತರವು ಉಳಿದ ಮನುಷ್ಯರ ಎತ್ತರಕ್ಕಿಂತ ಎಂಟುಪಟ್ಟು ಅಧಿಕವಾಗಿದ್ದಿತು. ಎಲೈ ರಾಜರ್ಷಿಯೇ! ಅಂತಹ ದೇಹದ ಕೃಶತೆಯನ್ನು ನಾನು ಎಂದೂ ನೋಡಿರಲಿಲ್ಲ.
ಶರೀರಮಪಿ ರಾಜೇಂದ್ರ ತನು ಕಾನಿಷ್ಠಿಕಾಸಮಮ್ |
ಗ್ರೀವಾ ಬಾಹೂ ತಥಾ ಪಾದೌ ಕೇಶಾಶ್ಚಾದ್ಭುತದರ್ಶನಾಃ ॥8॥
ಎಲೈ ರಾಜೇಂದ್ರನೇ! ಅವನ ಶರೀರವು ಒಂದು ಕಿರುಬೆರಳಿನ ಗಾತ್ರದಷ್ಟಿದ್ದಿತು. ಕತ್ತು ಬಾಹುಗಳು ಪಾದಗಳು ಕೇಶಗಳು ಎಲ್ಲವೂ ಅದಕ್ಕೆ ಅನುಗುಣವಾಗಿ ಅದ್ಭುತ- ವಾಗಿದ್ದವು.
ಶಿರಃ ಕಾಯಾನುರೂಪಂ ಚ ಕರ್ಣೌ ನೇತ್ರೇ ತಥೈವ ಚ |
ತಸ್ಯ ವಾಕ್ ಚೈವ ಚೇಷ್ಟಾ ಚ ಸಾಮಾನ್ಯೇ ರಾಜಸತ್ತಮ ॥9॥
ಅವನ ಶಿರಸ್ಸು, ಕರ್ಣಗಳು ಮತ್ತು ನೇತ್ರಗಳು ಅವನ ದೇಹಕ್ಕೆ ಅನುಗುಣ- ವಾಗಿದ್ದವು. ಎಲೈ ರಾಜಶ್ರೇಷ್ಠನೇ! ಅವನ ಮಾತು ಮತ್ತು ಚೇಷ್ಟೆಗಳು ಮಾತ್ರ ಉಳಿದ ಸಾಮಾನ್ಯಜನರಂತೆ ಇದ್ದವು.
ದೃಷ್ಟ್ವಾಽಹಂ ತಂ ಕೃಶಂ ವಿಪ್ರಂ ಭೀತಃ ಪರಮದುರ್ಮನಾಃ |
ಪಾದೌ ತಸ್ಯಾಭಿವಾದ್ಯಾಥ ಸ್ಥಿತಃ ಪ್ರಾಂಜಲಿರಗ್ರತಃ ॥10॥
ನಾನು ಆ ಬ್ರಾಹ್ಮಣನನ್ನು ನೋಡಿ, ಬಹಳ ಭಯಗೊಂಡು, ಬೇಸರವನ್ನು ಹೊಂದಿ, ಅವನಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದು ಎದುರಿಗೆ ನಿಂತು- ಕೊಂಡೆನು.
ನಿವೇದ್ಯ ನಾಮ ಗೋತ್ರಂ ಚ ಪಿತರಂ ಚ ನರರ್ಷಭ |
ಪ್ರದಿಷ್ಟೇ ಚಾಸನೇ ತೇನ ಶನೈರಹಮುಪಾವಿಶಮ್ ॥11॥
ಎಲೈ ನರರ್ಷಭನೇ ನನ್ನ ನಾಮಗೋತ್ರಗಳನ್ನು ತಂದೆಯ ಹೆಸರನ್ನು ಅವನಿಗೆ ನಿವೇದಿಸಿ ಅವನು ಸೂಚಿಸಿದ ಆಸನದಲ್ಲಿ ನಿಧಾನವಾಗಿ ಕುಳಿತುಕೊಂಡೆನು.
ತತಃ ಸ ಕಥಯಾಮಾಸ ಕಥಾ ಧರ್ಮಾರ್ಥಸಂಹಿತಾಃ |
ಋಷಿಮಧ್ಯೇ ಮಹಾರಾಜ ತತ್ರ ಧರ್ಮಭೃತಾಂವರಃ॥12॥
ಎಲೈ ಮಹಾರಾಜನೇ! ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಋಷಿಗಳ ಮಧ್ಯದಲ್ಲಿ ಧರ್ಮಾರ್ಥಗಳಿಗೆ ಸಂಬಂಧಿಸಿದ ಅನೇಕ ಕಥೆಗಳನ್ನು ಹೇಳಿದನು.
ತಸ್ಮಿಂಸ್ತು ಕಥಯತ್ಯೇವ ರಾಜಾ ರಾಜೀವಲೋಚನಃ |
ಉಪಾಯಾದ್ ಜವನೈರಶ್ವೈಃ ಸಬಲಃ ಸಾವರೋಧನಃ ॥13॥

ಅವನು ಕಥೆಯನ್ನು ಹೇಳುತ್ತಿರುವಾಗಲೇ ರಾಜೀವಲೋಚನನಾದ ತನ್ನ ಸೈನ್ಯ ಮತ್ತು ಪರಿವಾರದಿಂದ ಸಹಿತನಾದ ಒಬ್ಬ ರಾಜನು ವೇಗಶಾಲಿಗಳಾದ ಅಶ್ವಗಳಿಂದ ಅಲ್ಲಿಗೆ ಬಂದನು.
ಸ್ಮರನ್ ಪುತ್ರಮರಣ್ಯೇ ವೈ ನಷ್ಟಂ ಪರಮದುರ್ಮನಾಃ |
ಭೂರಿದ್ಯುಮ್ನಪಿತಾ ಧೀಮಾನ್ ರಘುಶ್ರೇಷ್ಠೋ ಮಹಾಯಶಾಃ ॥14॥
ಮಹಾಕೀರ್ತಿವಂತನೂ, ಮೇಧಾವಿಯೂ, ರಘುವಂಶದಲ್ಲಿ ಶ್ರೇಷ್ಠನೂ, ಭೂರಿದ್ಯುಮ್ನ ಎಂಬ ರಾಜಕುಮಾರನ ತಂದೆಯೂ ಆದ ಅವನು ಕಳೆದು ಹೋದ ತನ್ನ ಪುತ್ರನನ್ನು ಅರಣ್ಯದಲ್ಲಿ ಹುಡುಕುತ್ತಾ ಪರಮದುಃಖದಿಂದ ಕೂಡಿದವನಾಗಿ ಅಲ್ಲಿಗೆ ಬಂದನು.
ಇಹ ದ್ರಕ್ಷ್ಯಾಮಿ ತಂ ಪುತ್ರಂ ದ್ರಕ್ಷ್ಯಾಮೀಹೇತಿ ಪಾರ್ಥಿವಃ |
ಏವಮಾಶಾಕೃತೋ ರಾಜಂಶ್ಚರನ್ ವನಮಿದಂ ಪುರಾ ॥15॥
ನಾನು ಇಲ್ಲಿ ನನ್ನ ಪುತ್ರನನ್ನು ನೋಡುವೆನು; ಇಲ್ಲಿ ನನ್ನ ಪುತ್ರನನ್ನು ನೋಡು- ವೆನು ಎಂದು ಆಸೆಯನ್ನು ಮಾಡುತ್ತಾ ಎಲೈ ರಾಜನೇ! ಈ ವನವನ್ನೆಲ್ಲಾ ಸಂಚರಿ- ಸುತ್ತಾ ಬಂದನು.
ದುರ್ಲಭಃ ಸ ಮಯಾ ದ್ರಷ್ಟುಂ ನೂನಂ ಪರಮಧಾರ್ಮಿಕಃ |
ಏಕಃ ಪುತ್ರೋ ಮಹಾರಣ್ಯೇ ನಷ್ಟ ಇತ್ಯಸಕೃತ್ ತದಾ ॥16॥
ಪರಮಧಾರ್ಮಿಕನಾದ ನನ್ನ ಪುತ್ರನನ್ನು ನೋಡುವುದು ದುರ್ಲಭವಾಗ- ಬಹುದು. ನನಗಿದ್ದ ಒಬ್ಬನೇ ಪುತ್ರನು ದೊಡ್ಡ ಕಾಡಿನಲ್ಲಿ ನಾಶವನ್ನು ಹೊಂದಿದ್ದಾನೆ ಎಂದು ಪುನಃ ಪುನಃ ಹೇಳುತ್ತಿದ್ದನು.
ದುರ್ಲಭಃ ಸ ಮಯಾ ದ್ರಷ್ಟುಮಾಶಾ ಚ ಮಹತೀ ಮಮ |
ತಯಾ ಪರೀತಗಾತ್ರೋಽಹಂ ಮುಮೂರ್ಷುರ್ನಾತ್ರ ಸಂಶಯಃ ॥17॥
ಅವನನ್ನು ನಾನು ಇನ್ನೊಮ್ಮೆ ನೋಡಲು ಸಾಧ್ಯವಾಗಲಾರದು. ನನ್ನ ಆಸೆ- ಯಾದರೋ ಬಹಳ ಬಲವಾಗಿದೆ. ಆ ಆಸೆಯಿಂದ ತುಂಬಿದ ಶರೀರವುಳ್ಳ ನಾನು ಇಲ್ಲಿಯೇ ಮರಣ ಹೊಂದುವುದರಲ್ಲಿ ಸಂಶಯವಿಲ್ಲ. (ಎಂದು ಹೇಳಿದನು).
ಏತಚ್ಛ್ರುತ್ವಾ ಸ ಭಗವಾಂಸ್ತನುರ್ಮುನಿವರೋತ್ತಮಃ |
ಅವಾಕ್‌ಶಿರಾ ಧ್ಯಾನಪರೋ ಮುಹೂರ್ತಮಿವ ತಸ್ಥಿವಾನ್ ॥18॥
ಇದನ್ನು ಕೇಳಿದ ಪೂಜ್ಯನಾದ ಮುನಿಶ್ರೇಷ್ಠನಾದ ತನುವು ತಲೆಯನ್ನು ತಗ್ಗಿಸಿ ಒಂದು ಮುಹೂರ್ತದ ಕಾಲ ಧ್ಯಾನಪರನಾಗಿ ಕುಳಿತನು.

ತಮನುಧ್ಯಾಂತಮಾಲಕ್ಷ್ಯ ರಾಜಾ ಪರಮದುರ್ಮನಾಃ |
ಉವಾಚ ವಾಕ್ಯಂ ದೀನಾತ್ಮಾ ಮಂದಂ ಮಂದಮಿವಾಸಕೃತ್ ॥19॥
ಧ್ಯಾನಪರನಾದ ಅವನನ್ನು ಗಮನಿಸಿ ಪರಮವ್ಯಥೆಗೊಂಡ ರಾಜನು ದೀನನಾಗಿ ಮೆಲ್ಲ ಮೆಲ್ಲನೆ ಪುನಃ ಪುನಃ ಈ ಮಾತನ್ನು ಹೇಳಿದನು.
ದುರ್ಲಭಂ ಕಿನ್ನು ವಿಪ್ರರ್ಷೇ ಆಶಾಯಾಶ್ಚೈವ ಕಿಂ ಭವೇತ್ |
ಬ್ರವೀತು ಭಗವಾನೇತದ್ ಯದಿ ಗುಹ್ಯಂ ನ ತನ್ಮಯಿ ॥20॥
ಎಲೈ ವಿಪ್ರರ್ಷಿಯೇ! ಲೋಕದಲ್ಲಿ ದುರ್ಲಭವಾದುದು ಯಾವುದು? ಆಸೆ- ಯಿಂದ ಏನಾದೀತು? ಇದು ರಹಸ್ಯವಲ್ಲದಿದ್ದರೆ ಪೂಜ್ಯನಾದ ನೀನು ನನಗೆ ಹೇಳ- ಬೇಕು? (ಎಂದು ಹೇಳಿದನು).
ಮಹರ್ಷಿರ್ಭಗವಾಂಸ್ತೇನ ಪೂರ್ವಮಾಸೀದ್ ವಿಮಾನಿತಃ |
ಬಾಲಿಶಾಂ ಬುದ್ಧಿಮಾಸ್ಥಾಯ ಮಂದಭಾಗ್ಯತಯಾಽಽತ್ಮನಃ ॥21॥
ಪೂಜ್ಯನಾದ ಮಹರ್ಷಿಯು ಹಿಂದೆ ಅಲ್ಪಭಾಗ್ಯನಾಗಿದ್ದ ಕಾರಣ ಅವನ ಬಳಿಗೆ ಹೋಗಿ ಆ ರಾಜನ ಬಾಲಿಶಬುದ್ಧಿಯಿಂದ ಅವಮಾನಗೊಳಿಸಲ್ಪಟ್ಟಿದ್ದನು.
ಅರ್ಥಯನ್ ಕಲಶಂ ರಾಜನ್ ಕಾಂಚನಂ ವಲ್ಕಲಾನಿ ಚ |
ನಿರ್ವಿಣ್ಣಃ ಸ ತು ವಿಪ್ರರ್ಷಿರ್ನಿರಾಶಃ ಸಮಪದ್ಯತ ॥22॥
ಕಮಂಡಲು, ನಾರುಮಡಿ, ಅಲ್ಪದ್ರವ್ಯವನ್ನು ಬೇಡಲು ಹೋದ ಆ ವಿಪ್ರರ್ಷಿಯು ಅವಮಾನಿತನಾದ ಕಾರಣದಿಂದ ಬೇಸರ ಹೊಂದಿ ನಿರಾಶನಾಗಿದ್ದನು.
ಏವಮುಕತ್ವ್ಽಭಿವಾದ್ಯಾಥ ತಮೃಷಿಂ ಲೋಕಪೂಜಿತಮ್ |
ಶ್ರಾಂತೋ ನ್ಯಷೀದದ್ ಧರ್ಮಾತ್ಮಾ ಯಥಾ ತ್ವಂ ನರಸತ್ತಮ ॥23॥
ಆ ರಾಜನು ಲೋಕಪೂಜಿತನಾದ ಋಷಿಯನ್ನು ಕುರಿತು ಹೀಗೆ ಹೇಳಿ ನೀನು ಕುಳಿತಂತೆಯೇ ಧರ್ಮಾತ್ಮನಾದ ಅವನು ದಣಿದು ಕುಳಿತನು.
ಅರ್ಘ್ಯಂ ತತಃ ಸಮಾನೀಯ ಪಾದ್ಯಂ ಚೈವ ಮಹಾನೃಷಿಃ |
ಆರಣ್ಯಕೇನ ವಿಧಿನಾ ರಾಜ್ಞೇ ಸರ್ವಂ ನ್ಯವೇದಯತ್ ॥24॥
ಆ ಮಹರ್ಷಿಯು ಅರ್ಘ್ಯಪಾದ್ಯಗಳನ್ನು ನೀಡಿ ವನವಾಸವಿಧಾನದಿಂದ ರಾಜ- ನಿಗೆ ಎಲ್ಲವನ್ನೂ ನಿವೇದಿಸಿದನು.
ತತಸ್ತೇ ಮುನಯಃ ಸರ್ವೇ ಪರಿವಾರ್ಯ ನರರ್ಷಭಮ್ |
ಉಪಾವಿಶನ್ ಪುರಸ್ಕೃತ್ಯ ಸಪ್ತರ್ಷಯ ಇವ ಧ್ರುವಮ್ ॥25॥
ಅನಂತರ ಆ ಎಲ್ಲ ಋಷಿಗಳೂ ಸಪ್ತರ್ಷಿಗಳು ಧ್ರುವನನ್ನು ಸುತ್ತುವರಿದಂತೆ ಆ ರಾಜನನ್ನು ಸುತ್ತುವರಿದು ಕುಳಿತರು.
ಅಪೃಚ್ಛಂಶ್ಚೈವ ತೇ ತತ್ರ ರಾಜಾನಮಪರಾಜಿತಮ್ |
ಪ್ರಯೋಜನಮಿದಂ ಸರ್ವಮಾಶ್ರಮಸ್ಯ ಪ್ರವೇಶನಮ್ ॥26॥

ಅವರೆಲ್ಲರೂ ಅಪರಾಜಿತನಾದ ಆ ರಾಜನನ್ನು ಕುರಿತು ಆಶ್ರಮಕ್ಕೆ ಬಂದ ಉದ್ದೇಶವೆಲ್ಲವನ್ನೂ ಕೇಳಿದರು.
ರಾಜಾ
ವೀರದ್ಯುಮ್ನ ಇತಿ ಖ್ಯಾತೋ ರಾಜಾಹಂ ದಿಕ್ಷು ವಿಶ್ರುತಃ |
ಭೂರಿದ್ಯುಮ್ನಂ ಸುತಂ ನಷ್ಟಮನ್ವೇಷ್ಟುಂ ವನಮಾಗತಃ ॥27॥
ರಾಜ ನಾನು ವೀರದ್ಯುಮ್ನನೆಂಬ ರಾಜ. ಎಲ್ಲ ದಿಕ್ಕುಗಳಲ್ಲಿಯೂ ಪ್ರಖ್ಯಾತ- ನಾಗಿದ್ದೇನೆ. ಭೂರಿದ್ಯುಮ್ನನೆಂಬ ನನ್ನ ಪುತ್ರನು ನಷ್ಟನಾಗಿದ್ದಾನೆ. ಅವನನ್ನು ಹುಡು- ಕಲು ನಾನು ಕಾಡಿಗೆ ಬಂದಿದ್ದೇನೆ.
ಏಕಪುತ್ರಃ ಸ ವಿಪ್ರಾಗ್ರ್ಯ ಬಾಲ ಏವ ಚ ಸೋಽನಘ |
ನ ದೃಶ್ಯತೇ ವನೇ ಚಾಸ್ಮಿಂಸ್ತಮನ್ವೇಷ್ಟುಂ ಚರಾಮ್ಯಹಮ್ ॥28॥
ಎಲೈ ಅನಘನೇ! ವಿಪ್ರಶ್ರೇಷ್ಠನೇ! ನನಗೆ ಅವನೊಬ್ಬನೇ ಪುತ್ರ. ಇನ್ನೂ ಬಾಲಕ. ಈ ಕಾಡಿನಲ್ಲಿ ಅವನು ಕಂಡುಬರುತ್ತಿಲ್ಲ. ಅವನನ್ನು ಹುಡುಕಲು ನಾನು ತಿರುಗು- ತ್ತಿದ್ದೇನೆ.
ಋಷಭಃ
ಏವಮುಕ್ತೇ ತು ವಚನೇ ರಾಜ್ಞಾ ಮುನಿರಧೋಮುಖಃ |
ತೂಷ್ಣೀಮೇವಾಭವತ್ ತತ್ರ ನ ಚ ಪ್ರತ್ಯುಕ್ತವಾನ್ ನೃಪಮ್ ॥29॥
ಋಷಭ ರಾಜನು ಹೀಗೆ ಮಾತನಾಡುತ್ತಿರಲು ಆ ಋಷಿಯು ತಲೆ ತಗ್ಗಿಸಿ ಕುಳಿತು ಮೌನವನ್ನು ವಹಿಸಿದನು. ರಾಜನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.
ಸ ಹಿ ತೇನ ಪುರಾ ವಿಪ್ರೋ ರಾಜ್ಞಾ ನಾತ್ಯರ್ಥಮಾನಿತಃ |
ಆಶಾಕೃತಂ ಚ ರಾಜೇಂದ್ರ ತಪೋ ದೀರ್ಘಂ ಸಮಾಸ್ಥಿತಃ ॥30॥
ಆ ಋಷಿಯಾದರೋ ಹಿಂದೆ ಅದೇ ರಾಜನಿಂದ ಬಹಳ ಸನ್ಮಾನಿತನಾಗದೇ ಎಲೈ ರಾಜೇಂದ್ರನೇ! ಆಶಾಭಂಗವನ್ನು ಹೊಂದಿ, ದೀರ್ಘವಾದ ತಪಸ್ಸನ್ನು ಆಶ್ರಯಿಸಿದ- ವನು.
ಪ್ರತಿಗ್ರಹಮಹಂ ರಾಜ್ಞಾಂ ನ ಕರಿಷ್ಯೇ ಕಥಂಚನ |
ಅನ್ಯೇಷಾಂ ಚೈವ ವರ್ಣಾನಾಮಿತಿ ಕೃತ್ವಾ ಧಿಯಂ ತದಾ ॥31॥
ನಾನು ರಾಜನಿಂದಾಗಲೀ ಅಥವಾ ಬೇರೆಯವರಿಂದಾಗಲೀ ಯಾವ ಕಾರಣ- ದಿಂದಲೂ ಯಾವ ಪ್ರತಿಗ್ರಹವನ್ನೂ ಮಾಡುವುದಿಲ್ಲ ಎಂದು ಬುದ್ಧಿಯಿಂದ ನಿಶ್ಚಯಿಸಿ ಆಗ (ತಪೋನಿಷ್ಠನಾದನು) -
ಆಶಾ ಹಿ ಪುರುಷಂ ಬಾಲಂ ಲಾಲಾಪಯತಿ ತಸ್ಥುಷೀ |
ತಾಮಹಂ ವ್ಯಪನೇಷ್ಯಾಮಿ ಇತಿ ಕೃತ್ವಾ ವ್ಯವಸ್ಥಿತಃ ॥32॥
ಆಸೆಯಾದರೋ ಬಾಲಿಶನಾದ ಪುರುಷನನ್ನು ತಾನು ಸ್ಥಿರವಾಗಿ ನಿಂತು ವಿಲಾಪಿಸುವಂತೆ ಮಾಡುತ್ತದೆ. ಅಂತಹ ಆಸೆಯನ್ನು ನಾನು ತ್ಯಜಿಸಿದ್ದೇನೆ ಎಂದು ನಿಶ್ಚಯಿಸಿ ತಪಸ್ಸಿನಲ್ಲಿ ಸ್ಥಿರವಾಗಿದ್ದನು.
ರಾಜಾ
ಆಶಾಯಾಃ ಕಿಂ ಕೃಶತ್ವಂ ಚ ಕಿಂ ಚೇಹ ಭುವಿ ದುರ್ಲಭಮ್ |
ಬ್ರವೀತು ಭಗವಾನೇತತ್ ತ್ವಂ ಹಿ ಧರ್ಮಾರ್ಥದರ್ಶಿವಾನ್ ॥33॥
ರಾಜ ಆಸೆಯನ್ನು ಕೃಶವಾಗಿ ಮಾಡುವ ಉಪಾಯವೇನು? ಈ ಭೂಮಿ- ಯಲ್ಲಿ ದುರ್ಲಭವಾದುದು ಯಾವುದು? ಪೂಜ್ಯನಾದ ನೀನು ಇದನ್ನು ನನಗೆ ಹೇಳಬೇಕು. ನೀನು ಧಮಾರ್ಥತತ್ವವನ್ನು ತಿಳಿದವನಷ್ಟೇ? - (ಲಕ್ಷಾಲಂಕಾರ)
ಋಷಭಃ
ತತಃ ಸಂಸ್ಮೃತ್ಯ ತತ್ ಸರ್ವಂ ಸ್ಮಾರಯಿಷ್ಯನ್ನಿವಾಬ್ರವೀತ್ |
ರಾಜಾನಂ ಭಗವಾನ್ವಿಪ್ರಸ್ತತಃ ಕೃಶತನುಸ್ತನುಃ ॥34॥
ಋಷಭ ಅನಂತರ ಹಿಂದಿನ ಎಲ್ಲವನ್ನೂ ಸ್ಮರಿಸಿಕೊಂಡು ರಾಜನಿಗೆ ಸ್ಮರಣೆಗೆ ತರುವವನಾಗಿ ಪೂಜ್ಯನಾದ ಕೃಶಶರೀರನಾದ ಬ್ರಾಹ್ಮಣನಾದ ತನುವು ಮಾತನಾಡಿ- ದನು.
ಕೃಶತ್ವೇನ ಸಮಂ ರಾಜನ್ನಾಶಾಯಾ ವಿದ್ಯತೇ ನ ಚ |
ತಸ್ಯ ವೈ ದುರ್ಲಭತ್ವಾತ್ ತು ಪ್ರಾರ್ಥಿತಾಃ ಪಾರ್ಥಿವಾ ಮಯಾ ॥35॥
ಎಲೈ ರಾಜನೇ! ಆಸೆಯನ್ನು ಕೃಶವನ್ನಾಗಿ ಮಾಡುವುದರಿಂದ ಉಂಟಾಗುವ ಸುಖಕ್ಕೆ ಸಮನಾದ ಸುಖವು ಇಲ್ಲ. ಆಸೆಯನ್ನು ಕೃಶವನ್ನಾಗಿ ಮಾಡುವುದು ದುರ್ಲಭವಾದುದರಿಂದ ನಾನು ಅನೇಕರಾಜರನ್ನು ಪ್ರಾರ್ಥಿಸಿದೆನು (ಲಕ್ಷಾಲಂಕಾರ).
ರಾಜಾ
ಕೃಶಾಕೃಶೇ ಮಯಾ ಬ್ರಹ್ಮನ್ ಗೃಹೀತೇ ವಚನಾತ್ ತವ |
ದುರ್ಲಭತ್ವಂ ಚ ತಸ್ಯೈವ ವೇದವಾಕ್ಯಮಿವ ದ್ವಿಜ ॥36॥
ರಾಜ ಫಲವು ದೊರಕುವುದಿಲ್ಲವೆಂದು ತಿಳಿದು ಯಾವ ಆಸೆಯು ಭಗ್ನವಾ- ಗುತ್ತದೆಯೋ ಅದು ಕೃಶವಾದ ಆಸೆ. ಫಲಪ್ರಾಪ್ತಿ ಉಂಟಾಗುವುದೆಂದು ತಿಳಿದು ಯಾವ ಆಸೆಯು ಭಗ್ನವಾಗುವುದಿಲ್ಲವೋ ಅದು ಕೃಶವಲ್ಲದ ಆಸೆ. ಎಲೈ ಬ್ರಾಹ್ಮಣನೇ! ನಿನ್ನ ಮಾತಿನಂತೆ ಕೃಶಾಕೃಶ ಆಸೆಗಳನ್ನು ತಿಳಿದೆನು. ಆಸೆಯನ್ನು ಕೃಶ ಮಾಡುವುದು ದುರ್ಲಭವೆಂದು ವೇದವಾಕ್ಯದಂತಿರುವ ನಿನ್ನ ವಾಕ್ಯದಿಂದ ತಿಳಿದೆನು.
ಸಂಶಯಸ್ತು ಮಹಾಪ್ರಾಜ್ಞ ಸಂಜಾತೋ ಹೃದಯೇ ಮಮ |
ತನ್ಮೇ ಸತ್ತಮ ತತ್ತ್ವೇನ ವಕ್ತುಮರ್ಹಸಿ ಪೃಚ್ಛತಃ ॥37॥

ಎಲೈ ಸಜ್ಜನರಲ್ಲಿ ಶ್ರೇಷ್ಠನೇ! ಮಹಾಪ್ರಾಜ್ಞನೇ! ಆದರೆ ನನ್ನ ಮನಸ್ಸಿನಲ್ಲಿ ಒಂದು ಸಂಶಯವುಂಟಾಗಿದೆ. ಅದನ್ನು ಕೇಳುವ ನೀನು ಸರಿಯಾದ ಉತ್ತರವನ್ನು ನೀಡಬೇಕು.
ತ್ವತ್ತಃ ಕೃಶತರಂ ಕಿನ್ನು ಬ್ರವೀತು ಭಗವಾನಿದಮ್ |
ಯದಿ ಗುಹ್ಯಂ ನ ತೇ ವಿಪ್ರ ಲೋಕೇऽಸ್ಮಿನ್ ಕಿಂ ನು ದುರ್ಲಭಮ್ ॥38॥
ನಿನಗಿಂತಲೂ ಕೃಶವಾದುದು ಯಾವುದೆಂದು ಬುದ್ಧಿಯಿಂದ ವಿಮರ್ಶೆ ಮಾಡಿ ಪೂಜ್ಯನಾದ ನೀನು ಹೇಳಬೇಕು. ಇದು ಗುಹ್ಯವಲ್ಲದಿದ್ದರೆ ಎಲೈ ಬ್ರಾಹ್ಮಣನೇ! ಈ ಲೋಕದಲ್ಲಿ ಯಾವುದು ದುರ್ಲಭವಾದುದೆಂದು ಹೇಳಬೇಕು.
ಕೃಶತನುಃ
ದುರ್ಲಭೋऽಪ್ಯಥ ವಾ ನಾಸ್ತಿ ಯೋऽರ್ಥೀ ಧೃತಿಮವಾಪ್ನುಯಾತ್ |
ಸುದುರ್ಲಭತರಸ್ತಾತ ಯೋऽರ್ಥಿನಂ ನಾವಮನ್ಯತೇ ॥39॥
ಕೃಶತನು ಆಸೆಯನ್ನು ಹೊಂದಿ ಅನಂತರ ಆಸೆಯನ್ನು ಬಿಟ್ಟು ಧೈರ್ಯವನ್ನು ತಂದುಕೊಳ್ಳುವವನು ದುರ್ಲಭನಾದವನು ಅಥವಾ ಇಲ್ಲವೇ ಇಲ್ಲ ಎಂದು ಹೇಳ- ಬೇಕು. ಎಲೈ ಪ್ರೀತಿಪಾತ್ರನೇ! ಆಸೆಯಿಂದ ಬೇಡುವವನನ್ನು ಅವಮಾನ ಪಡಿಸದಿ- ರುವುದು ಅದಕ್ಕಿಂತಲೂ ದುರ್ಲಭವಾದುದು.
ಸತ್ಕೃತ್ಯ ನೋಪಕುರುತೇ ಪರಂ ಶಕ್ತ್ಯಾ ಯಥಾರ್ಹತಃ |
ಸಕ್ತಾ ಯಾ ಸರ್ವಭೂತೇಷು ಸಾऽऽಶಾ ಕೃಶತರೀ ಮಯಾ ॥40॥
ನೀನು ನನ್ನನ್ನು ಸತ್ಕರಿಸಿ ನಿನ್ನ ಶಕ್ತಿಗೆ ಮತ್ತು ನನ್ನ ಅರ್ಹತೆಗೆ ಅನುಗುಣವಾಗಿ ಉಪಕಾರವನ್ನು ಮಾಡದಿದ್ದರೆ ಎಲ್ಲ ವಿಷಯಗಳಲ್ಲಿ ಹರಡಿದ ನನ್ನ ಆಸೆಯು (ಭಗ್ನವಾಗಿ) ನನಗಿಂತ ಕೃಶವಾಗುತ್ತದೆ.
ಕೃತ್ನೇಷು ಚ ಯಾ ಸಕ್ತಾ ನೃಶಂಸೇಷ್ವಲಸೇಷು ಚ |
ಅಪಕಾರಿಷು ಯಾ ಸಕ್ತಾ ಸಾऽऽಶಾ ಕೃಶತರೀ ಮಯಾ ॥41॥
ಕೃತಘ್ನರಲ್ಲಿ, ಕ್ರೂರಿಗಳಲ್ಲಿ, ಸೋಮಾರಿಗಳಲ್ಲಿ, ಅಪಕಾರಿಗಳಲ್ಲಿ ಮಾಡಿದ ಆಸೆಯು ಫಲವು ದೊರೆಯದಿರುವುದರಿಂದ ನನಗಿಂತ ಕೃಶವಾಗುತ್ತದೆ.
ಏಕಪುತ್ರಃ ಪಿತಾ ಪುತ್ರೇ ನಷ್ಟೇ ವಾ ಪ್ರೋಷಿತೇ ತಥಾ |
ಪ್ರವೃತ್ತಿಂ ಯೋ ನ ಜಾನಾತಿ ಸಾऽऽಶಾ ಕೃಶತರೀ ಮಯಾ ॥42॥
ಏಕಪುತ್ರನನ್ನು ಹೊಂದಿದ ತಂದೆಯು ಆ ಪುತ್ರನು ನಷ್ಟವಾಗಿ, ಅಥವಾ ದೇಶಾಂತರಕ್ಕೆ ಹೋಗಿ ಅವನ ವಾರ್ತೆಯು ತಿಳಿಯದಿದ್ದರೆ ಆಗ ಪುತ್ರನ ವಿಷಯ- ದಲ್ಲಿ ಅವನ ಆಸೆಯು ನನಗಿಂತಲೂ ಕೃಶವಾಗುತ್ತದೆ.
ಪ್ರಸವೇ ಚೈವ ನಾರೀಣಾಂ ವೃದ್ಧಾನಾಂ ಪುತ್ರಕಾರಿತಾ |
ತಥಾ ನರೇಂದ್ರ ಧನಿನಾಮಾಶಾ ಕೃಶತರೀ ಮಯಾ ॥43॥
ವೃದ್ಧರಾದ ನಾರಿಯರು ಮಕ್ಕಳನ್ನು ಪಡೆದರೆ ಪುತ್ರನನ್ನು ಪಡೆಯಬೇಕೆಂಬ ಆಸೆಯು, ಎಲೈ ನರೇಂದ್ರನೇ! ಧನಿಕನಿಗೆ ಇನ್ನೂ ಧನವನ್ನು ಗಳಿಸಬೇಕೆಂಬ ಆಸೆಯು ನನಗಿಂತಲೂ ಕೃಶವಾಗುತ್ತದೆ - ಲಕ್ಷ್ಯಾಲಂಕಾರ.
ಪ್ರದಾನಕಾಂಕ್ಷಿಣೀನಾಂ ಚ ಕನ್ಯಾನಾಂ ವಯಸಿ ಸ್ಥಿತೇ |
ಶ್ರುತ್ವಾ ಕಥಾಸ್ತಥಾऽಯುಕ್ತಾ ಸಾಶಾ ಕೃಶತರಿ ಮಯಾ ॥44॥
ತಮ್ಮ ವಿವಾಹವನ್ನು ಬಯಸುವ ವಯಸ್ಸಿಗೆ ಬಂದ ಕನ್ಯೆಯರಿಗೆ ತಮ್ಮ ವಿವಾಹದ ವಿಷಯದಲ್ಲಿ ಮರಣ ಮೊದಲಾದ ಅಯುಕ್ತವಾದ ಮಾತುಗಳನ್ನು ಕೇಳಿದರೆ ವಿವಾಹದ ಅವರ ಆಸೆಯು ನನಗಿಂತಲೂ ಕೃಶವಾಗುತ್ತದೆ.
ಋಷಭಃ
ಏತಚ್ಛ್ರುತ್ವಾ ತತೋ ರಾಜನ್ ಸ ರಾಜಾ ಸಾವರೋಧನಃ |
ಸಂಸ್ಪೃಶ್ಯ ಪಾದೌ ಶಿರಸಾ ನಿಪಪಾತ ದ್ವಿಜರ್ಷಭೇ ॥45॥
ಋಷಭ ಎಲೈ ರಾಜನೇ ಈ ಮಾತುಗಳನ್ನು ಕೇಳಿ ರಾಜನು ತನ್ನ ಪರಿವಾರ ಸಹಿತನಾಗಿ ಆ ಋಷಿಯ ಪಾದಗಳಿಗೆ ಶಿರಸಾ ನಮಸ್ಕರಿಸಿ ದ್ವಿಜಶ್ರೇಷ್ಠನ ಪಾದಗಳಲ್ಲಿ ಬಿದ್ದನು.
ರಾಜಾ
ಪ್ರಸಾದಯೇ ತ್ವಾ ಭಗವನ್ ಪುತ್ರೇಣೇಚ್ಛಾಮಿ ಸಂಗತಿಮ್ |
ವೃಣೀಷ್ವ ಚ ವರಂ ವಿಪ್ರ ಯಮಿಚ್ಛಸಿ ಯಥಾವಿಧಿ ॥46॥
ರಾಜ ಎಲೈ ಪೂಜ್ಯನೇ! ನೀನು ಪ್ರಸನ್ನನಾಗು. ನನ್ನ ಪುತ್ರನ ಜೊತೆಯಲ್ಲಿ ಸಂಗಮವನ್ನು ಬಯಸುತ್ತೇನೆ. ಎಲೈ ವಿಪ್ರನೇ! ನೀನು ಬಯಸುವ ವರವನ್ನು ವಿಧಿಪ್ರಕಾರವಾಗಿ ಕೇಳು.
ಋಷಭಃ
ಅಬ್ರವೀಚ್ಚ ಹಿ ತಂ ವಾಕ್ಯಂ ರಾಜಾ ರಾಜೀವಲೋಚನಃ |
ಸತ್ಯಮೇತದಸಂದೇಹಂ ತ್ವಯೋಕ್ತಂ ನಾಸ್ತ್ಯತೋ ಮೃಷಾ ॥47॥
ಋಷಭ ರಾಜೀವಲೋಚನನಾದ ರಾಜನು ಅವನನ್ನು ಕುರಿತು ನೀನು ಹೇಳಿದ ಮಾತುಗಳೆಲ್ಲವೂ ಸತ್ಯವಾದವುಗಳು. ಆಸೆಯನ್ನು ಕೃಶವನ್ನಾಗಿ ಮಾಡುವ ವಿಷಯದಲ್ಲಿ ನೀನು ಹೇಳಿದ ಯಾವ ಮಾತೂ ಸುಳ್ಳಲ್ಲ ಎಂದು ಹೇಳಿದನು.
ತತಃ ಪ್ರಹಸ್ಯ ಭಗವಾಂಸ್ತನುರ್ಧರ್ಮಭೃತಾಂ ವರಃ |
ಪುತ್ರಮಸ್ಯಾನಯತ್ ಕ್ಷಿಪ್ರಂ ತಪಸಾ ಚ ಶ್ರುತೇನ ಚ ॥48॥
ಅನಂತರ ಪೂಜ್ಯನೂ, ಧರ್ಮಿಷ್ಠರಲ್ಲಿ ಶ್ರೇಷ್ಠನೂ ಆದ ಆ ವಿಪ್ರನು ನಕ್ಕು ತನ್ನ ತಪಸ್ಸು ವಿದ್ಯೆಗಳ ಬಲದಿಂದ ಶೀಘ್ರವಾಗಿ ಅವನ

ಪುತ್ರನನ್ನು ಕರೆದುಕೊಂಡು ಬಂದನು.
ತಂ ಸಮಾನಾಯ್ಯ ಪುತ್ರಂ ತು ತದೋಪಾಲಭ್ಯ ಪಾರ್ಥಿವಮ್ |
ಆತ್ಮಾನಂ ದರ್ಶಯಾಮಾಸ ಧರ್ಮಂ ಧರ್ಮಭೃತಾಂ ವರಃ ॥49॥
ಪುತ್ರನನ್ನು ಕರೆದುಕೊಂಡು ಬಂದು, ರಾಜನನ್ನು ನೋಡಿ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಧರ್ಮರೂಪನಾದ ತನ್ನನ್ನು ತೋರಿಸಿದನು.
ಸಂದರ್ಶಯಿತ್ವಾ ಚಾತ್ಮಾನಂ ದಿವ್ಯಮದ್ಭುತದರ್ಶನಮ್ |
ವಿಪಾಪ್ಮಾ ವಿಗತಕ್ರೋಧಶ್ಚಚಾರ ವನಮಂತಿಕಾತ್ ॥50॥
ತನ್ನ ದಿವ್ಯವಾದ ಮತ್ತು ಅದ್ಭುತವಾದ ದರ್ಶನವನ್ನು ನೀಡಿ ಪಾಪಗಳಿಂದಲೂ ಮತ್ತು ಕ್ರೋಧಗಳಿಂದಲೂ ರಹಿತನಾದ ಅವನು ವನದಲ್ಲಿಯೇ ಸಂಚಾರ ಮಾಡಿ- ದನು.
ಏತದ್ ದೃಷ್ಟಂ ಮಯಾ ರಾಜಂಸ್ತತಶ್ಚ ವಚನಂ ಶ್ರುತಮ್ |
ಆಶಾಮಪನಯಸ್ವಾಶು ತತಃ ಕೃಶತರೀಮಿಮಾಮ್ ॥51॥
ಎಲೈ ರಾಜನೇ! ನಾನು ಇದನ್ನು ನೋಡಿದೆನು ಮತ್ತು ಆ ಮಾತುಗಳನ್ನು ಕೇಳಿದೆನು. ಮೃಗವು ದೊರೆಯದಿರುವುದರಿಂದ ಕೃಶವನ್ನು ಮಾಡಲು ಯೋಗ್ಯವಾದ ಆ ನಿನ್ನ ಆಸೆಯನ್ನು ಶೀಘ್ರವಾಗಿ ಬಿಟ್ಟುಬಿಡು. ಲಕ್ಷ್ಮಾಲಂಕಾರ.
ಆಸೆಯನ್ನು ಬಿಡುವುದು ಕಷ್ಟಸಾಧ್ಯವಾದುದರಿಂದ ಆಶಾಖಂಡನವೇ ದುರ್ಲಭ -ವಾದುದು. ವಿವೇಕಿಗಳಾದವರು ಆಸೆಯನ್ನು ಖಂಡಿಸಬೇಕಾದ ರೀತಿಯೆಂದರೆ ಆಶಿಸುವ ವಸ್ತುವಿನ ಅಪ್ರಾಪ್ತಿಯೇ ಎಂದು ಅಧ್ಯಾಯದ ತಾತ್ಪರ್ಯವನ್ನು ತಿಳಿಯ- ಬೇಕು ಲಕ್ಷ್ಮಾಲಂಕಾರ.
ಭೀಷ್ಮಃ
ಸ ತತೋಽಕ್ತೋ ಮಹಾರಾಜ ಋಷಭೇಣ ಮಹಾತ್ಮನಾ |
ಸುಮಿತ್ರೋಽಪನಯತ್ ಕ್ಷಿಪ್ರಮಾಶಾಂ ಕೃಶತರೀಂ ತದಾ ॥52॥
ಭೀಷ್ಮರು ಎಲೈ ಮಹಾರಾಜನೇ! ಮಹಾತ್ಮನಾದ ಋಷಭನಿಂದ ಹೀಗೆ ಹೇಳಲ್ಪಟ್ಟ ಸುಮಿತ್ರನು ಕ್ಷಿಪ್ರವಾಗಿ ಮೃಗದ ವಿಷಯದಲ್ಲಿ ಇದ್ದ ತನ್ನ ಆಸೆಯನ್ನು ಕೃಶವನ್ನಾಗಿ ಮಾಡಿ ತೊರೆದನು.
ಏವಂ ತ್ವಮಪಿ ಕೌಂತೇಯ ಶ್ರುತ್ವಾ ವಾಣೀಮಿಮಾಂ ಮಮ |
ಸ್ಥಿರೋ ಭವ ಯಥಾ ರಾಜನ್ ಹಿಮವಾನಚಲೋತ್ತಮಃ ॥53॥
ಎಲೈ ಕೌಂತೇಯನೇ! ನೀನೂ ಸಹ ಈ ನನ್ನ ಮಾತನ್ನು ಕೇಳಿ ಆಸೆಯನ್ನು ತೊರೆದು ಹಿಮಾಲಯ ಪರ್ವತದಂತೆ ಸ್ಥಿರವಾಗಿರು.
ತ್ವಂ ಹಿ ದ್ರಷ್ಟಾ ಚ ಶ್ರೋತಾ ಚ ಕೃಚ್ಛ್ರೇಷ್ವರ್ಥಕೃತೇಷ್ವಿಹ |
ಶ್ರುತ್ವಾ ಮಮ ಮಹಾರಾಜ ನ ಸಂತಪ್ತುಮಿಹಾರ್ಹಸಿ ॥53॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥127॥
ನೀನು ಅರ್ಥದ ವಿಷಯದಲ್ಲಿ ಉಂಟಾಗುವ ಕಷ್ಟಗಳನ್ನು ನೋಡಿದ್ದೀಯೆ ಮತ್ತು ಕೇಳಿದ್ದೀಯೆ. ಎಲೈ ಮಹಾರಾಜನೇ! ನನ್ನ ಮಾತುಗಳನ್ನು ಕೇಳಿ ಸಂತಾಪವನ್ನು ಬಿಡುವವನಾಗಬೇಕು.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 127ನೆಯ ಅಧ್ಯಾಯವು ಮುಗಿಯಿತು
0
128. ನೂರಇಪ್ಪತ್ತೆಂಟನೆಯ ಅಧ್ಯಾಯ
ಮಾತಾಪಿತೃಸೇವೆಯಿಂದ ಅವರ ಋಣಮೋಚನ ಕಥನ
ಯುಧಿಷ್ಠಿರಃ
ನಾಮೃತಸ್ಯೇವ ಪರ್ಯಾಪ್ತಿರ್ಮಮಾಸ್ತಿ ಬ್ರುವತಿ ತ್ವಯಿ |
ತಸ್ಮಾತ್ ಕಥಯ ಭೂಯಸ್ತ್ವಂ ಧರ್ಮಮೇವ ಪಿತಾಮಹ ॥1॥
ಯುಧಿಷ್ಠಿರ ನಿನ್ನ ಮಾತುಗಳನ್ನು ಕೇಳಿ ಅಮೃತಪಾನವನ್ನು ಮಾಡಿದವನಂತೆ ನನಗೆ ತೃಪ್ತಿಯೇ ಆಗುತ್ತಿಲ್ಲ. ಆದ್ದರಿಂದ ಎಲೈ ಪಿತಾಮಹನೇ! ಪುನಃ ಧರ್ಮವನ್ನೇ ಉಪದೇಶಿಸುವವನಾಗು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೌತಮಸ್ಯ ಚ ಸಂವಾದಂ ಯಮಸ್ಯ ಚ ಮಹಾತ್ಮನಃ ॥2॥
ಈ ವಿಷಯದಲ್ಲಿಯೂ ಮಹಾತ್ಮನಾದ ಯಮನಿಗೂ ಮತ್ತು ಗೌತಮರಿಗೂ ನಡೆದ ಸಂವಾದರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಪಾರಿಯಾತ್ರಗಿರಿಂ ಪ್ರಾಪ್ಯ ಗೌತಮಸ್ಯಾಶ್ರಮೋ ಮಹಾನ್ |
ಉವಾಸ ಗೌತಮೋ ಯತ್ರ ಕಾಲಂ ತದಪಿ ಮೇ ಶೃಣು ॥3॥
ಪಾರಿಯಾತ್ರಪರ್ವತದ ಬಳಿ ಗೌತಮರ ದೊಡ್ಡ ಆಶ್ರಮವಿದೆ. ಅಲ್ಲಿ ಗೌತಮರು ಎಷ್ಟು ಕಾಲ ವಾಸಿಸಿದರು ಎಂಬುದನ್ನು ಕೇಳು.
ಷಷ್ಟಿಂ ವರ್ಷಸಹಸ್ರಾಣಿ ಸೋಽತಪ್ಯದ್ ಗೌತಮಸ್ತಪಃ |
ತಮುಗ್ರತಪಸಂ ಯುಕ್ತಂ ತಪಸಾ ಭಾವಿತಂ ಮುನಿಮ್ ॥4॥
ಉಪಯಾತೋ ನರವ್ಯಾಘ್ರ ಲೋಕಪಾಲೋ ಯಮಸ್ತದಾ |

ತಮಪಶ್ಯತ್ ಸುತಪಸಮೃಷಿಂ ವೈ ಗೌತಮಂ ಮುನಿಮ್ ॥5॥
ಅಲ್ಲಿ ಗೌತಮರು ಅರವತ್ತು ಸಹಸ್ರ ವರ್ಷಗಳ ಕಾಲ ಉಗ್ರತಪಸ್ಸನ್ನು ಆಚರಿಸಿದರು. ಎಲೈ ನರವ್ಯಾಘ್ರನೇ! ಉಗ್ರತಪಸ್ಸನ್ನು ಮಾಡಿ ತಪಸ್ಸಿನಿಂದ ಪರಿಶುದ್ಧ- ರಾದ ಆ ಮುನಿಗಳ ಬಳಿಗೆ ಲೋಕಪಾಲಕನಾದ ಯಮನು ಬಂದನು. ಯಮನು ಒಳ್ಳೆಯ ತಪಸ್ಸನ್ನು ಮಾಡಿದ ಗೌತಮ ಋಷಿಗಳನ್ನು ನೋಡಿದನು.
ಸ ತಂ ವಿದಿತ್ವಾ ಬ್ರಹ್ಮರ್ಷಿರ್ಯಮಮಾಗತಮೋಜಸಾ |
ಪ್ರಾಂಜಲಿಃ ಪ್ರಯತೋ ಭೂತ್ವಾ ಉಪಸೃಪ್ತಸ್ತಪೋಧನಃ ॥6॥
ಬ್ರಹ್ಮರ್ಷಿಗಳಾದ ತಪೋಧನರಾದ ಗೌತಮರು ತಮ್ಮ ತಪಃಶಕ್ತಿಯಿಂದ ಬಂದವನು ಯಮನೆಂದು ತಿಳಿದು ಕೈಗಳನ್ನು ಮುಗಿದು ವಿನಯದಿಂದ ಅವನನ್ನು ಸಮೀಪಿಸಿದರು.
ತಂ ಧರ್ಮರಾಜೋ ದೃಷ್ಟ್ವೈವ ನಮಸ್ಕೃತ್ಯ ನರರ್ಷಭಮ್ |
ನ್ಯಮಂತ್ರಯತ ಧರ್ಮೇಣ ಕ್ರಿಯತಾಂ ಕಿಮಿತಿ ಬ್ರುವನ್ ॥7॥
ಯಮಧರ್ಮರಾಜನು ಆ ನರಶ್ರೇಷ್ಠನನ್ನು ನೋಡಿದ ತತ್ಕ್ಷಣವೇ ನಮಸ್ಕಾರ ಮಾಡಿ ಅವರನ್ನು ಧರ್ಮಕ್ಕೆ ಅನುಸಾರವಾಗಿ ಆಮಂತ್ರಿಸಿ ನಾನು ಏನು ಉಪಕಾರ- ವನ್ನು ಮಾಡಲಿ ಎಂದು ಕೇಳಿದನು.
ಗೌತಮಃ
ಮಾತಾಪಿತೃಭ್ಯಾಮಾನೃಣ್ಯಂ ಕಿಂ ಕೃತ್ವಾ  ಸಮವಾಪ್ನುಯಾತ್ |
ಕಥಂ ಚ ಲೋಕಾನಶ್ನಾತಿ ಪುರುಷೋ ದುರ್ಲಭಾನ್ ಶುಭಾನ್ ॥8॥
ಗೌತಮರು  ಮನುಷ್ಯನು ಏನು ಮಾಡಿದರೆ ಮಾತಾಪಿತೃಗಳ ಋಣವನ್ನು ತೀರಿಸುತ್ತಾನೆ? ಮತ್ತು ದುರ್ಲಭವಾದ ಶುಭಲೋಕಗಳನ್ನು ಹೇಗೆ ಅನುಭವಿಸು- ತ್ತಾನೆ?
ಯಮಃ
ತಪಃಶೌಚವತಾ ನಿತ್ಯಂ ಸತ್ಯಧರ್ಮರತೇನ ಚ |
ಮಾತಾಪಿತ್ರೋರಹರಹಃ ಪೂಜನಂ ಕಾರ್ಯಮಂಜಸಾ ॥9॥
ಯಮ  ನಿತ್ಯವೂ ತಪಃಶೌಚಗಳನ್ನು ಆಚರಿಸಿ, ಸತ್ಯಮತ್ತುಧರ್ಮಗಳಲ್ಲಿ ರತನಾಗಿ ಪ್ರತಿನಿತ್ಯವೂ ಚೆನ್ನಾಗಿ ತಂದೆ ತಾಯಿಗಳ ಪೂಜೆಯನ್ನು ಮಾಡಬೇಕು.
ಅಶ್ವಮೇಧೈಶ್ಚ ಯಷ್ಟವ್ಯಂ ಬಹುಭಿಃ ಸ್ವಾಪ್ತದಕ್ಷಿಣೈಃ |
ತೇನ ಲೋಕಾನುಪಾಶ್ನಾತಿ ಪುರುಷೋಽದ್ಭುತದರ್ಶನಾನ್ ॥10॥
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಅಷ್ಟವಿಂಶತ್ಯಧಿಕಶತತಮೋಽಧ್ಯಾಯಃ ॥128॥
ಬಹುದಕ್ಷಿಣೆಗಳಿಂದ ಕೂಡಿದ ಅನೇಕ ಅಶ್ವಮೇಧಯಾಗಗಳನ್ನು ಮಾಡಬೇಕು. ಅದರಿಂದ ಪುರುಷನು ಅದ್ಭುತವಾಗಿ ಕಾಣುವ ಶುಭಲೋಕಗಳನ್ನು ಹೊಂದುತ್ತಾನೆ.
ರಾಜಧರ್ಮಪರ್ವ ಕನ್ನಡಾನುವಾದದಲ್ಲಿ 129ನೆಯ ಅಧ್ಯಾಯವುಮುಗಿಯಿತು.
0
129. ನೂರಇಪ್ಪತ್ತೊಂಬತ್ತನೆಯ ಅಧ್ಯಾಯ
ರಾಜನ ಕೋಶವೃದ್ಧಿರೂಪವಾದ ಆಪದ್ಧರ್ಮಕಥನ
ಯುಧಿಷ್ಠಿರಃ
ಮಿತ್ರೈಃ ಪ್ರಹೀಯಮಾಣಸ್ಯ ಬಹ್ವಮಿತ್ರಸ್ಯ ಕಾ ಗತಿಃ |
ರಾಜ್ಞಃ ಸಂಕೀರ್ಣಕೋಶಸ್ಯ ಬಲಹೀನಸ್ಯ ಭಾರತ ॥1॥
ದುಷ್ಟಾಮಾತ್ಯಸಹಾಯಸ್ಯ ಸ್ರುತಮಂತ್ರಸ್ಯ ಸರ್ವತಃ |
ರಾಜ್ಯಾತ್ ಪ್ರಚ್ಯವಮಾನಸ್ಯ ಗತಿಮನ್ಯಾಮಪಶ್ಯತಃ ॥2॥
ಪರಚಕ್ರಾಭಿಯಾತಸ್ಯ ದುರ್ಬಲಸ್ಯ ಬಲೀಯಸಾ |
ಅಸಂವಿಹಿತರಾಷ್ಟ್ರಸ್ಯ ದೇಶಕಾಲಾವಜಾನತಃ ॥3॥
ಅಪ್ರಾಪ್ಯಂ ಚ ಭವೇತ್ ಸಾಂತ್ವಂ ಭೇದೋ ವಾಽಪ್ಯತಿಪೀಡನಾತ್ |
ಜೀವಿತಂ ಚಾರ್ಥಹೇತೋರ್ವಾ ತತ್ರ ಕಿಂ ಸುಕೃತಂ ಭವೇತ್ ॥4॥
ಯುಧಿಷ್ಠಿರ  ಎಲೈ ಭಾರತನೇ! ಮಿತ್ರರನ್ನು ಕಳೆದುಕೊಂಡು ಬಹಳ ಶತ್ರುಗಳನ್ನು ಸಂಪಾದಿಸಿ ಕೋಶವನ್ನೂ ಬಲವನ್ನೂ ಕಳೆದುಕೊಂಡ ರಾಜನಿಗೆ ಯಾವ ಗತಿ? ದುಷ್ಟ ಅಮಾತ್ಯರನ್ನು ಹೊಂದಿ ತನ್ನ ಮಂತ್ರಾಲೋಚನೆಯು ಸೋರಿಹೋಗಿ ಬೇರೆ ಗತಿಯನ್ನು ಕಾಣದೇ ರಾಜ್ಯವನ್ನು ಕಳೆದುಕೊಳ್ಳಲಿರುವ, ಪ್ರಬಲನಾದ ಶತ್ರುವಿನ ಆಕ್ರಮಣಕ್ಕೆ ಒಳಗಾದ, ರಾಷ್ಟ್ರವನ್ನು ಸರಿಯಾಗಿ ರಕ್ಷಿಸದ,  ದೇಶಕಾಲಗಳ ಜ್ಞಾನವಿಲ್ಲದ ದುರ್ಬಲನಾದ ರಾಜನಿಗೆ ಏನು ಗತಿ?
ಧನಸಂಗ್ರಹಕ್ಕಾಗಿ ಪ್ರಜೆಗಳನ್ನು ಅತಿಯಾಗಿ ಪೀಡಿಸುವುದರಿಂದ ಸಾಮೋಪಾಯ -ವಾಗಲೀ ಭೇದೋಪಾಯವಾಗಲೀ ಹೊಂದಲು ಯೋಗ್ಯವಾಗುವುದಿಲ್ಲ. ಆಗ ರಾಜನು ಅರ್ಥವನ್ನು (ಧನವನ್ನು) ಸಂಗ್ರಹಿಸುವುದಕ್ಕಾಗಿ ಬದುಕಬೇಕೇ? ಅಥವಾ ಏನು ಮಾಡಿದರೆ ಒಳ್ಳೆಯದಾಗುತ್ತದೆ?
ಭೀಷ್ಮಃ
ಗುಹ್ಯಂ ಮಾ ಧರ್ಮಮಪ್ರಾಕ್ಷೀರತೀವ ಭರತರ್ಷಭ |

ಅಪೃಷ್ಟೋ ನೋತ್ಸಹೇ ವಕ್ತುಂ ಧರ್ಮಮೇನಂ ಯುಧಿಷ್ಠಿರ ॥5॥
ಭೀಷ್ಮರು ಎಲೈ ಭರತರ್ಷಭನೇ! ಅತ್ಯಂತ ರಹಸ್ಯವಾದ ಧರ್ಮವನ್ನು ಪ್ರಶ್ನೆ ಮಾಡುತ್ತಿದ್ದೀಯೆ. ಎಲೈ ಯುಧಿಷ್ಠಿರನೇ! ನೀನು ಕೇಳಿರದಿದ್ದರೆ ನಾನು ಇದಕ್ಕೆ ಉತ್ತರ -ವನ್ನು ಹೇಳುತ್ತಿರಲಿಲ್ಲ.
ಧರ್ಮೋ ಹ್ಯಣೀಯಾನ್ ವಚನಾದ್ ಬುದ್ಧೇಶ್ಚ ಭರತರ್ಷಭ |
ಶ್ರುತ್ವೋಪಾಸ್ಯ ಸದಾಚಾರೈಃ ಸಾಧುರ್ಭವತಿ ಸ ಕ್ವಚಿತ್ ॥6॥
ಎಲೈ ಭರತರ್ಷಭನೇ! ಧರ್ಮವು ಮಾತಿಗಿಂತಲೂ ಮತ್ತು ಬುದ್ಧಿಗಿಂತಲೂ ಬಹಳ ಸೂಕ್ಷ್ಮವಾದುದು. ಧರ್ಮವನ್ನು ಕೇಳಿ, ಅನುಷ್ಠಾನ ಮಾಡಿ, ಸದಾಚಾರ- ಸಂಪನ್ನನಾದವನು ಸಜ್ಜನನಾಗುತ್ತಾನೆ. ಅಂತಹವರು ವಿರಳ.
ಧರ್ಮವಚನಕ್ಕಿಂತಲೂ ಧರ್ಮಬುದ್ಧಿಗಿಂತಲೂ ಧರ್ಮಾಚರಣೆಯೇ ಸೂಕ್ಷ್ಮ -ವಾದುದು (ಶ್ರೇಷ್ಠವಾದುದು). ಬಾಯಿಯಿಂದ ಧರ್ಮದ ಮಾತನಾಡಬಹುದು. ಮನಸ್ಸಿನಿಂದ ಧರ್ಮವನ್ನು ಸ್ಮರಿಸಬಹುದು ಆದರೆ ಧರ್ಮವನ್ನು ಆಚರಿಸುವುದು ಕಷ್ಟ ಎಂದು ಅಭಿಪ್ರಾಯ ಲಕ್ಷ್ಯಾಲಂಕಾರ
ಕರ್ಮಣಾ ಬುದ್ಧಿಪೂರ್ವೇಣ ಭವತ್ಯಾದ್ಯೋ ನ ವಾ ಪುನಃ |
ತಾದೃಶೋಽಯಮನುಪ್ರಶ್ನಃ ಸ ವ್ಯವಸ್ಯಸ್ತ್ವಯಾ ಧಿಯಾ ॥7॥
ಆದಿಕಾಲೀನವಾದ ಧರ್ಮವು ಬುದ್ಧಿಯಿಂದ ವಿಮರ್ಶೆ ಮಾಡಲ್ಪಡುತ್ತಿದ್ದಿತು ಅಥವಾ ತ್ಯಜಿಸಲ್ಪಡುತ್ತಿದ್ದಿತು. ನೀನು ಮಾಡಿರುವ ಪ್ರಶ್ನೆ ಅಂತಹದು. ಅದು ನೀನು ಬುದ್ಧಿಯಿಂದ ವಿಮರ್ಶೆ ಮಾಡಬೇಕು.
ಉಪಾಯಂ ಧರ್ಮಬಹುಲಂ ಯಾತ್ರಾರ್ಥಂ ಶೃಣು ಭಾರತ |
ನಾಹಮೇತಾದೃಶಂ ಧರ್ಮಂ ಬುಭೂಷೇ ಧರ್ಮಕಾರಣಾತ್ |
ದುಃಖಾದಾನ ಇಹಾಢ್ಯೇಷು ಸ್ಯಾತ್ ತು ಪಶ್ಚಾತ್ ಕ್ಷಮೋ ಮತಃ ॥8॥
ಎಲೈ ಭಾರತನೇ! ರಾಜ್ಯದ ಯಾತ್ರಾರ್ಥವಾಗಿ (ರಾಜ್ಯವನ್ನು ನಡೆಸುವುದಕ್ಕಾಗಿ) ಧರ್ಮವು ಹೆಚ್ಚಾಗಿರುವ (ಸ್ವಲ್ಪ ಅಧರ್ಮವೂ ಇರುವ) ಉಪಾಯವನ್ನು ಕೇಳು. ಧರ್ಮವನ್ನು ಸಂಪಾದಿಸುವ ಸಲುವಾಗಿ ನಾನು ಇಂತಹ ಉಪಾಯವನ್ನು ಆಶ್ರಯಿಸಲಾರೆ. ರಾಜನು ಆಪತ್ಕಾಲದಲ್ಲಿ ಧನಾಢ್ಯರಿಂದ ಅವರಿಗೆ ಹಿಂಸೆಯಾದರೂ ಧನವನ್ನು ಸಂಗ್ರಹಿಸಬೇಕು.ಅನಂತರ ಒಳ್ಳೆಯ ಕಾಲ ಬಂದಾಗ ಅವರನ್ನು ಕ್ಷಮಿಸ- ಬೇಕು ಎಂಬುದು ಅಭಿಪ್ರಾಯ.
ಅನುಗಮ್ಯ ಮತೀನಾಂ ಚ ಸರ್ವಾಸಾಮೇವ ನಿಶ್ಚಯಃ |
ಯಥಾ ಯಥಾ ಹಿ ಪುರುಷೋ ನಿತ್ಯಂ ಶಾಸ್ತ್ರಮವೇಕ್ಷತೇ |
ತಥಾ ತಥಾ ವಿಜಾನಾತಿ ವಿಜ್ಞಾನಂ ಚಾಸ್ಯ ರೋಚತೇ ॥9॥
ಎಲ್ಲ ಬುದ್ಧಿಗಳನ್ನು ಒಂದುಗೂಡಿಸಿ ಒಂದು ನಿಶ್ಚಯಕ್ಕೆ ಬರಬೇಕು. ಮನುಷ್ಯನು ಸದಾ ಶಾಸ್ತ್ರವನ್ನು ನೋಡಿದಂತೆಲ್ಲಾ ಅವನಿಗೆ ವಿಜ್ಞಾನವುಂಟಾಗುತ್ತದೆ. ಆ ವಿಜ್ಞಾನ- ವಾದರೋ ಅವನಿಗೆ ರುಚಿಸುತ್ತದೆ.
ಅವಿಜ್ಞಾನಾದಯೋಗಶ್ಚ ಪುರುಷಸ್ಯೋಪಜಾಯತೇ |
ವಿಜ್ಞಾನಾದಪಿ ಯೋಗಶ್ಚ ಯೋಗೋ ಭೂತಿಕರಃ ಪುನಃ ॥10॥
ಅಂತಹ ಜ್ಞಾನವಿಲ್ಲದ ಮನುಷ್ಯರಿಗೆ ಆಪತ್ಕಾಲದಲ್ಲಿ ಪಾರಾಗುವ ಉಪಾಯವೇ ಉಂಟಾಗುವುದಿಲ್ಲ. ಆದರೆ ವಿಜ್ಞಾನದಿಂದ ಅಂತಹ ಉಪಾಯವು ತಿಳಿಯುತ್ತದೆ. ಆ ಉಪಾಯವು ಪುನಃ ಐಶ್ವರ್ಯವನ್ನು ತಂದುಕೊಡುತ್ತದೆ.
ಅಶಂಕಮಾನೋ ವಚನಮನಸೂಯುರಿದಂ ಶೃಣು |
ರಾಜ್ಞಃ ಕೋಶಕ್ಷಯಾದೇವ ಜಾಯತೇ ಬಲಸಂಕ್ಷಯಃ ॥11॥
ನನ್ನ ಮಾತನ್ನು ಶಂಕಿಸದೇ ಅಸೂಯೆ ಪಡದೆ ಕೇಳುವವನಾಗು. ರಾಜನಿಗೆ ಕೋಶಕ್ಷಯದಿಂದಲೇ ಬಲದ ಕ್ಷಯವುಂಟಾಗುತ್ತದೆ.
ಕೋಶಂ ಸಂಜನಯೇದ್ ರಾಜಾ ನಿರ್ಜಲೇಭ್ಯೋ ಯಥಾ ಜಲಮ್ |
ಕಾಲಂ ಪ್ರಾಪ್ಯಾನುಗೃಹ್ಣೀಯಾದೇಷ ಧರ್ಮೋಽತ್ರ ಸಾಂಪ್ರತಮ್ |
ಉಪಾಯಧರ್ಮಂ ಪ್ರಾಪ್ಯೈನಂ ಪೂರ್ವೈರಾಚರಿತಂ ಜನೈಃ ॥12॥
ಎತ್ತರದ ದುರ್ಗಾದಿ ಸ್ಥಳಗಳಿಗಾಗಿ ನೀರನ್ನು ಉತ್ಪಾದಿಸಿದಂತೆ ರಾಜನು ಕೋಶ- ವನ್ನು ವೃದ್ಧಿಪಡಿಸಬೇಕು. ಯೋಗ್ಯವಾದ ಕಾಲದಲ್ಲಿ ಯಾರಿಂದ ಧನವನ್ನು ಸಂಗ್ರಹಿ- ಸಿದೆಯೋ ಅವರಿಗೆ ಅನುಗ್ರಹವನ್ನು ಮಾಡಬೇಕು. ಇದು ಇಂತಹ ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮ. ಈ ಉಪಾಯವನ್ನು ಹಿಂದಿನ ರಾಜರೂ ಆಚರಿಸಿದರು. ಅಂತಹ ಉಪಾಯವನ್ನು ಆಚರಿಸಬೇಕು.
ಅನ್ಯೋ ಧರ್ಮಃ ಸಮರ್ಥಾನಾಮಾಪತ್ಸ್ವನ್ಯಶ್ಚ ಭಾರತ ॥13॥
ಎಲೈ ಭಾರತನೇ! ಸಾಮರ್ಥ್ಯವಿದ್ದಾಗ ಬೇರೆಯ ಧರ್ಮವನ್ನೂ ಆಪತ್ತಿನಲ್ಲಿ ಬೇರೆಯ ಧರ್ಮವನ್ನೂ ಆಚರಿಸಬೇಕಾಗುತ್ತದೆ.
ಪ್ರಾಕ್ ಕಾರ್ಯಃ ಪ್ರೋಚ್ಯತೇ ಧರ್ಮೋ ವೃತ್ತಿರ್ಧರ್ಮಾದ್ ಗರೀಯಸೀ |
ಧರ್ಮಂ ಪ್ರಾಪ್ಯ ನ್ಯಾಯವೃತ್ತಿಮಬಲೀಯಾನ್ನ ವಿಂದತಿ ॥14॥
ಧರ್ಮವನ್ನು ಮೊದಲು ಮಾಡಬೇಕೆಂದು ಹೇಳಲಾಗುತ್ತದೆ. ಆದರೆ ದೇಹ- ಧಾರಣೆಯು ಧರ್ಮಕ್ಕಿಂತಲೂ ದೊಡ್ಡದು. (ಶರೀರವೇ ಮೊದಲನೆಯ ಧರ್ಮ- ಸಾಧನವಷ್ಟೆ!) ಧರ್ಮವನ್ನು ಮಾಡಿದವನು (ಆ ಧರ್ಮವು ಸ್ವಲ್ಪ ಅಧರ್ಮದಿಂದ ಕೂಡಿದ್ದರೂ) ಬಲಿಷ್ಠನಾಗುವುದಿಲ್ಲ ಎಂಬುವುದಿಲ್ಲ. ಸ್ವರ್ಗವನ್ನು ಹೊಂದುವುದಿಲ್ಲ ಎಂಬುದಿಲ್ಲ - (ಲಕ್ಷ್ಯಾಲಂಕಾರ)
ಯಸ್ಮಾದ್ ಧನಸ್ಯೋಪಪತ್ತಿರೇಕಾಂತೇನ ನ ವಿದ್ಯತೇ |
ತಸ್ಮಾದಾಪದ್ಯಧರ್ಮೋಽಪಿ ಶ್ರೂಯತೇ ಧರ್ಮಲಕ್ಷಣಃ ॥15॥
ಧರ್ಮದಿಂದಲೇ ಧನಸಂಗ್ರಹವು ಆಗುವುದು ಎಂಬ ನಿಯಮವಿಲ್ಲದಿರುವು- ದರಿಂದ ಆಪತ್ಕಾಲದಲ್ಲಿ ಅಧರ್ಮವೂ ಕೂಡ ಧರ್ಮವೆಂದು ಹೇಳಲ್ಪಡುತ್ತದೆ.

ಅಧರ್ಮೋ ಜಾಯತೇ ತಸ್ಮಿನ್ನಿತಿ ವೈ ಕವಯೋ ವಿದುಃ |
ಅನಂತರಃ ಕ್ಷತ್ರಿಯಸ್ಯ ಇತಿ ವೈ ವಿಚಿಕಿತ್ಸಸೇ ॥16॥
ಆಪತ್ತಿಲ್ಲದ ಕಾಲದಲ್ಲಿ ಹಾಗೆ ಮಾಡಿದರೆ ಅಧರ್ಮವುಂಟಾಗುತ್ತದೆ ಎಂದು ಜ್ಞಾನಿಗಳು ಹೇಳುತ್ತಾರೆ. ಆದರೆ ಕ್ಷತ್ರಿಯನಿಗೆ ಅದು ಅಪರಿಹಾರ್ಯ ಎಂಬ ಕಾರಣದಿಂದ ವಿಚಾರಮಾಡಲ್ಪಡುತ್ತದೆ.
ಯಥಾಸ್ಯ ಧರ್ಮೋ ನ ಗ್ಲಾಯೇನ್ನೇಯಾಚ್ಛತ್ರುವಶಂ ಯಥಾ |
ತತ್ ಕರ್ತವ್ಯಮಿಹೇತ್ಯಾಹುರ್ನಾತ್ಮಾನಮವಸಾದಯೇತ್ ॥17॥
ತನ್ನ ಧರ್ಮವು ಲೋಪವಾಗದಂತೆ ತಾನು ಶತ್ರುವಶವಾಗದಂತೆ ರಾಜನು ತನ್ನನ್ನು ರಕ್ಷಿಸಿಕೊಳ್ಳಬೇಕು ಎಂದು ಹೇಳುತ್ತಾರೆ. ರಾಜನು ಆತ್ಮನಾಶವನ್ನು ತಂದು- ಕೊಳ್ಳಬಾರದು.
ಸರ್ವಾತ್ಮನೈವ ಧರ್ಮಸ್ಯ ನ ಪರಸ್ಯ ನ ಚಾತ್ಮನಃ |
ಸರ್ವೋಪಾಯೈರುಜ್ಜಿಹೀರ್ಷೇದಾತ್ಮಾನಮಿತಿ ನಿಶ್ಚಯಃ ॥18॥
ಸರ್ವರೀತಿಯಿಂದಲೂ ಧರ್ಮವನ್ನು ಆಚರಿಸುವುದಕ್ಕಾಗಿಯೇ ಸರ್ವೋ- ಪಾಯಗಳಿಂದಲೂ ತನ್ನನ್ನು ರಕ್ಷಿಸಿಕೊಳ್ಳಬೇಕು. ತನ್ನ ಹೊಟ್ಟೆಯನ್ನು ತುಂಬಿಕೊಳ್ಳು- ವುದಕ್ಕಾಗಲೀ ಅಥವಾ ಇನ್ನೊಬ್ಬರ ಹೊಟ್ಟೆಯನ್ನು ತುಂಬುವುದಕ್ಕಾಗಲೀ ಅಲ್ಲ ಎಂಬುದು ನಿಶ್ಚಿತವಾದುದು ಲಕ್ಷಾಲಂಕಾರ.
ತತ್ರ ಧರ್ಮವಿದಾಂ ತಾತ ನಿಶ್ಚಯೋ ಧರ್ಮನೈಪುಣಮ್ |
ಉದ್ಯಮೋ ನೈಪುಣಂ ಕ್ಷಾತ್ರೇ ಬಾಹುವೀರ್ಯಾದಿತಿ ಶ್ರುತಿಃ ॥19॥
ಎಲೈ ಪ್ರೀತಿಪಾತ್ರನೇ! ಕ್ಷತ್ರಿಯಧರ್ಮದಲ್ಲಿ ನಾನು ಇದನ್ನು ಮಾಡುತ್ತೇನೆಂಬ ನಿಯಮವು ಧರ್ಮದ ಮೊದಲನೆಯ ನಿಪುಣತೆ. ಬಾಹುಪರಾಕ್ರಮದಿಂದ ಪ್ರಯತ್ನವನ್ನು ಮಾಡುವುದು ಎರಡನೆಯ ನಿಪುಣತೆ ಎಂದು ಧರ್ಮವನ್ನು ತಿಳಿದ- ವರು ಹೇಳುತ್ತಾರೆ.
ಕ್ಷತ್ರಿಯೋ ವೃತ್ತಿಸಂರೋಧೇ ಕಸ್ಮಾನ್ನಾದಾತುಮರ್ಹತಿ |
ಅನ್ಯತ್ರ ತಾಪಸಸ್ವಾಚ್ಚ ಬ್ರಾಹ್ಮಣಸ್ವಾಚ್ಚ ಭಾರತ ॥20॥
ಕ್ಷತ್ರಿಯನಿಗೆ ಅವನ ಜೀವನ ವೃತ್ತಿಯೇ ಕಷ್ಟಕ್ಕೆ ಸಿಲುಕಿದಾಗ ಎಲೈ ಭಾರತನೇ! ಅವನು ತಪಸ್ವಿಗಳನ್ನು ಬಿಟ್ಟು, ಬ್ರಾಹ್ಮಣರನ್ನು ಬಿಟ್ಟು ಉಳಿದವರಿಂದ ಏಕೆ ಧನವನ್ನು ಸಂಗ್ರಹಿಸಬಾರದು?
ಯಥಾ ವೈ ಬ್ರಾಹ್ಮಣಃ ಸೀದನ್ನಯಾಜ್ಯಮಿತಿ ಯಾಜಯೇತ್ |
ಅಭೋಜ್ಯಾನ್ನಾನಿ ಚಾಶ್ನೀಯಾತ್ ತಥೇದಂ ನಾತ್ರ ಸಂಶಯಃ ॥21॥
ಬ್ರಾಹ್ಮಣನು ಕಷ್ಟಕ್ಕೆ ಸಿಲುಕಿದಾಗ ಅಯಾಜ್ಯರಿಗೂ ಯಾಗವನ್ನು ಮಾಡಿಸಿದಂತೆ ಅಭೋಜ್ಯಾನ್ನವನ್ನು ಭಕ್ಷಿಸುವಂತೆ ಈ ಆಪದ್ಧರ್ಮವು ಇದೆ ಎಂಬುದರಲ್ಲಿ ಸಂಶಯವಿಲ್ಲ.
ಪೀಡಿತಸ್ಯ ಕಿಮದ್ವಾರಮುತ್ಪಥೋ ನಿಧೃತಸ್ಯ ವಾ |
ಅದ್ವಾರತಃ ಪ್ರದ್ರವತಿ ಯದಾ ಭವತಿ ಪೀಡಿತಃ ॥22॥
ಪೀಡಿತನಾದವನಿಗೆ ಯಾವುದು ಸರಿಯಾದ ದ್ವಾರವಲ್ಲವೆನಿಸುತ್ತದೆ? ಬಂಧನಕ್ಕೆ ಸಿಲುಕಿ ಬಿಡಿಸಿಕೊಳ್ಳುವವನಿಗೆ ಯಾವುದು ಸರಿಯಾದ ಮಾರ್ಗವೆನಿಸುವುದಿಲ್ಲ? ಪೀಡಿತನಾದವನು ದ್ವಾರವಲ್ಲದ ಕಡೆಯಿಂದಲೇ ಓಡಿಹೋಗುತ್ತಾನೆ.
ತಸ್ಯ ಕೋಶಬಲಜ್ಯಾನ್ಯಾ ಸರ್ವಲೋಕಪರಾಭವಃ |
ಭೈಕ್ಷಚರ್ಯಾ ನ ವಿಹಿತಾ ನ ಚ ವಿಟ್-ಶೂದ್ರಜೀವಿಕಾ ॥23॥
ರಾಜನ ಕೋಶಬಲಗಳು ಕ್ಷೀಣವಾದರೆ ಸರ್ವಪ್ರಜೆಗಳು ಪರಾಭವವನ್ನು ಹೊಂದುತ್ತಾರೆ. ಭಿಕ್ಷಾವೃತ್ತಿಯಾಗಲೀ, ವೈಶ್ಯಶೂದ್ರರ ಜೀವನವಾಗಲೀ ರಾಜನಿಗೆ ವಿಹಿತವಾದುದಲ್ಲ.
ಸ್ವಧರ್ಮಾನಂತರಾ ವೃತ್ತಿರ್ಯಾ ಅನ್ಯಾಽನುಪಜೀವತಃ |
ಅರ್ಹತಃ ಪ್ರಥಮಂ ಕಲ್ಪಮನುಕಲ್ಪೇನ ಜೀವನಮ್ ॥24॥
ಸರ್ವಥಾ ಉಪಜೀವನ ರಹಿತನಾದ ಕ್ಷತ್ರಿಯನಿಗೆ ಸ್ವಧರ್ಮಾನಂತರದ ವೃತ್ತಿ ಎಂದರೆ ವೈಶ್ಯವೃತ್ತಿಯು ವಿಹಿತವಾಗುತ್ತದೆ. ಯೋಗ್ಯನಾದವನಿಗೆ (ಸಮರ್ಥನಾ- ದವನಿಗೆ) ತಮ್ಮ ತಮ್ಮ ಧರ್ಮದಲ್ಲಿನ ವೃತ್ತಿಯೇ ಶ್ರೇಷ್ಠವಾದ ಪಕ್ಷ. ಸಾಮರ್ಥ್ಯವಿಲ್ಲ -ದಿದ್ದಾಗ ಎರಡನೆಯ ಕಲ್ಪದಿಂದ ಜೀವಿಸಬಹುದು.
ಆಪದ್ಗತೇನ ಧರ್ಮಾಣಾಮನುಕಲ್ಪೇನ ಜೀವಿತುಮ್ |
ತಜ್ಜೀವನಂ ಬ್ರಾಹ್ಮಣೇಷು ದುಷ್ಟಂ ವೃತ್ತಿಪರಿಕ್ಷಯೇ ॥25॥
ಧರ್ಮಸಂಕಟಕ್ಕೆ ಸಿಲುಕಿದ ಮನುಷ್ಯನು ಪ್ರಥಮಕಲ್ಪವನ್ನು ಬಿಟ್ಟು,ಅನಂತರ ಪಕ್ಷದಿಂದ ಜೀವಿಸಲು ಸಾಧ್ಯವಾಗುತ್ತದೆ. ಜೀವನೋಪಾಯವನ್ನು ಕಳೆದುಕೊಂಡ ಬ್ರಾಹ್ಮಣರಲ್ಲಿ ಅಂತಹ ಜೀವನವು ದೃಷ್ಟವಾಗಿದೆ.
ಕ್ಷತ್ರಿಯೇ ಸಂಶಯಃ ಕಃ ಸ್ಯಾದಿತ್ಯೇತನ್ನಿಶ್ಚಿತಂ ಸದಾ |
ಆದದೀತ ವಿಶಿಷ್ಟೇಭ್ಯೋ ನಾವಸೀದೇತ್ ಕಥಂಚನ ॥26॥
ಹಾಗಾದರೆ ಕ್ಷತ್ರಿಯರ ವಿಷಯದಲ್ಲಿ ಏನು ಸಂಶಯ? ಹೀಗೆ ಯಾವಾಗಲೂ ನಿಶ್ಚಯಿಸಲ್ಪಟ್ಟಿದೆ. ಧನಾಢ್ಯರಿಂದ ಧನವನ್ನು ಸಂಗ್ರಹಿಸಬೇಕು. ರಾಜನು ಯಾವ ರೀತಿ -ಯಲ್ಲಿಯೂ ನಾಶವನ್ನು ಹೊಂದಬಾರದು.
ದಾತಾರಂ ರಕ್ಷಿತಾರಂ ಚ ಪ್ರಜಾನಾಂ ಕ್ಷತ್ರಿಯಂ ವಿದುಃ |
ತಸ್ಮಾತ್ ಸಂರಕ್ಷತಾ ಕಾರ್ಯಮಾದಾನಂ ಕ್ಷತ್ರಬಂಧುನಾ ॥27॥
ಪ್ರಜೆಗಳಿಂದ ಧನವನ್ನು ತೆಗೆದುಕೊಂಡು ಅವರನ್ನು ರಕ್ಷಿಸುವವನನ್ನು ಕ್ಷತ್ರಿಯ- ನೆಂದು ಹೇಳುತ್ತಾರೆ. ಆದ್ದರಿಂದ ರಕ್ಷಣೆಯನ್ನು ಮಾಡುವ ಕ್ಷತ್ರಿಯನು ಅವಶ್ಯವಾಗಿ ಧನವನ್ನು ಸಂಗ್ರಹಿಸಬೇಕಾಗುತ್ತದೆ.

ಅನ್ಯತ್ರ ರಾಜನ್ ಹಿಂಸಾಯಾ ವೃತ್ತಿರ್ನೇಹಾಸ್ತಿ ಕಸ್ಯಚಿತ್ |
ಅಪ್ಯರಣ್ಯಸಮುತ್ಥಸ್ಯ ಏಕಸ್ಯ ಚರತೋ ಮುನೇಃ ॥28॥
ಎಲೈ ರಾಜನೇ! ಹಿಂಸೆಯನ್ನು ಬಿಟ್ಟು ಈ ಜಗತ್ತಿನಲ್ಲಿ ಯಾವ ಪ್ರಾಣಿಯೂ ಜೀವಿಸುವುದಿಲ್ಲ. ಅರಣ್ಯವಾಸವನ್ನು ಮಾಡಿ ಒಬ್ಬನೇ ವಾಸಿಸುವ ಮುನಿಗೂ ಧಾನ್ಯಾದಿ ಹಿಂಸೆಯೂ ಮತ್ತು ಅರಣ್ಯಮೃಗಗಳ ಹಿಂಸೆಯೂ ಅನಿವಾರ್ಯ- ವಾಗುತ್ತದೆ.
ನ ಶಂಖಲಿಖಿತಾಂ ವೃತ್ತಿಂ ಶಕ್ಯಮಾಸ್ಥಾಯ ಜೀವಿತುಮ್ |
ವಿಶೇಷತಃ ಕುರುಶ್ರೇಷ್ಠ ಪ್ರಜಾಪಾಲನಮೀಪ್ಸತಾ ॥29॥
ಎಲೈ ಕುರುಶ್ರೇಷ್ಠನೇ! ಹಣೆಯಲ್ಲಿ ಬರೆದಂತಾಗುತ್ತದೆ ಎಂದು ಬದುಕಿರಲು ಸಾಧ್ಯವಿಲ್ಲ. ಅದರಲ್ಲೂ ವಿಶೇಷವಾಗಿ ಪ್ರಜಾಪಾಲನೆಯನ್ನು ಮಾಡಲು ಬಯಸು- ವವನು ಆ ರೀತಿಯಲ್ಲಿ ಬದುಕಲು ಸಾಧ್ಯವಿಲ್ಲ - ಲಕ್ಷ್ಮಾಲಂಕಾರ.
ಪರಸ್ಪರಾಭಿಸಂರಕ್ಷ್ಯಾ ರಾಜ್ಞಾ ರಾಷ್ಟ್ರೇಣ ಚಾಪದಿ |
ನಿತ್ಯಮೇವೇಹ ಕರ್ತವ್ಯಾ ಏಷ ಧರ್ಮಃ ಸನಾತನಃ ॥30॥
ಆಪತ್ತು ಒದಗಿದ ಎಲ್ಲ ಸಂದರ್ಭದಲ್ಲಿಯೂ ರಾಜ ಮತ್ತು ರಾಷ್ಟ್ರ ಇವು ಪರಸ್ಪರವಾಗಿ ರಕ್ಷಿಸಬೇಕು ಎಂಬುದು ಸನಾತನವಾದ ಧರ್ಮ.
ರಾಜಾ ರಾಷ್ಟ್ರಂ ಯಥಾಪತ್ಸು ದ್ರವ್ಯೌಘೈಃ ಪರಿರಕ್ಷತಿ |
ರಾಷ್ಟ್ರೇಣ ರಾಜಾ ವ್ಯಸನೇ ಪರಿರಕ್ಷ್ಯಸ್ತಥಾ ಭವೇತ್ ॥31॥
ಆಪತ್ಕಾಲದಲ್ಲಿ ರಾಜನು ರಾಷ್ಟ್ರವನ್ನು ಧನಪ್ರವಾಹದಿಂದ ರಕ್ಷಿಸುವಂತೆ, ರಾಜನು ಆಪತ್ತಿಗೆ ಸಿಲುಕಿದಾಗ ರಾಷ್ಟ್ರವೂ ಕೂಡ ಅವನನ್ನು ಹಾಗೆಯೇ ರಕ್ಷಿಸಬೇಕು.
ಕೋಶಂ ದಂಡಂ ಬಲಂ ಮಿತ್ರಂ ಯದನ್ಯದಪಿ ಸಂಚಿತಮ್ |
ನ ಕುರ್ವೀತಾಂತರಂ ರಾಷ್ಟ್ರೇ ರಾಜಾ ಪರಿಗತೇ ಕ್ಷುಧಾ |
ಬೀಜಂ ಭಕ್ತೇನ ಸಂಪಾದ್ಯಮಿತಿ ಧರ್ಮವಿದೋ ವಿದುಃ ॥32॥
ರಾಷ್ಟ್ರವು ಹಸಿವಿನಿಂದ ಬಳಲುವಾಗ ತನ್ನ ಕೋಶ, ದಂಡ, ಬಲ, ಮಿತ್ರರು, ಸಂಚಿತವಾದ ಬೇರೆ ಯಾವುದೇ ವಸ್ತು, ಯಾವುದನ್ನೂ ಉಪಯೋಗಿಸಲು ತಡ ಮಾಡಬಾರದು. ಧರ್ಮಬೀಜವನ್ನು ಅನ್ನದಿಂದ ಸಂಪಾದಿಸಬೇಕೆಂಬುದು ಧರ್ಮ- ವನ್ನು ತಿಳಿದವರು ಹೇಳುವ ಮಾತು.
ಅತ್ರೈತಚ್ಛಂಬರಸ್ಯಾಹುರ್ಮಹಾಮಾಯಸ್ಯ ದರ್ಶನಮ್ ॥33॥
ವಿತ್ತಸ್ಯ ಜೀವಿತಂ ರಾಜ್ಞೋ ರಾಷ್ಟ್ರೇ ಯಸ್ಯಾವಸೀದತಿ |
ಅವೃತ್ತ್ಯಾಂತ್ಯಮನುಷ್ಯೋಽಪಿ ಯೋ ವೈ ವೇದ ಶಿಬೇರ್ವಚಃ ॥34॥
ರಾಷ್ಟ್ರವು ಅವನತಿಗೆ ಒಳಗಾದಾಗ ರಾಜನು ಧನವನ್ನೇ ಆಶಿಸಬೇಕು. ಅವಸಾನ- ವನ್ನು ಹೊಂದಬಾರದು. ಅನಂತರ ಪ್ರಜಾಪಾಲನವನ್ನು ಮಾಡಬೇಕು ಎಂಬುವ ವಿಷಯದಲ್ಲಿ ಮಹಾಮಾಯೆಗಳನ್ನು ಹೊಂದಿದ ಶಂಬರನ ಚರಿತ್ರೆಯು ನಿದರ್ಶನ- ವಾಗಿದೆ.
ರಾಷ್ಟ್ರವು ಆಪತ್ತಿಗೆ ಒಳಗಾದಾಗ ಸಮಾಜದ ಅಂತ್ಯಮನುಷ್ಯನೂ ಜೀವನೋ- ಪಾಯವನ್ನು ಹೊಂದದಿರುವಾಗ ಶಿಬಿಯ ವಚನವನ್ನು ತಿಳಿದವನು ವಿತ್ತಕ್ಕಾಗಿಯೇ ಪ್ರಯತ್ನಪಡಬೇಕು. ನಾಶವನ್ನು ಹೊಂದಬಾರದು ಧನಪ್ರಾಪ್ತಿಯ ಅನಂತರ ಪ್ರಜಾ- ಪಾಲನವನ್ನು ಮಾಡಬೇಕು ಎಂಬುವ ವಿಷಯದಲ್ಲಿ ಮಹಾಮಾಯೆಗಳನ್ನು ಹೊಂದಿದ ಶಂಬರನ ಚರಿತ್ರೆಯು ನಿದರ್ಶನವಾಗಿದೆ.
ರಾಜ್ಞಃ ಕೋಶಬಲಂ ಮೂಲಂ ಕೋಶಮೂಲಂ ಪುನರ್ಬಲಮ್ |
ತನ್ಮೂಲಂ ಸರ್ವಧರ್ಮಾಣಾಂ ಧರ್ಮಮೂಲಾಃ ಪುನಃ ಪ್ರಜಾಃ ॥35॥
ರಾಜನಿಗೆ ಕೋಶಬಲವು ಮೂಲವಾದುದು. ಮತ್ತು ರಾಜನ ಬಲವು ಕೋಶ- ಮೂಲವಾದುದು. ರಾಜನ ಬಲವು ಎಲ್ಲ ಧರ್ಮಗಳಿಗೂ ಮೂಲವಾದುದು. ಎಲ್ಲ ಪ್ರಜೆಗಳಿಗೂ ಧರ್ಮವು ಮೂಲವಾದುದು.
ನಾನ್ಯಾನಪೀಡಯಿತ್ವೇಹ ಕೋಶಃ ಶಕ್ಯಃ ಕುತೋ ಬಲಮ್ |
ತದರ್ಥೇ ಪೀಡಯಿತ್ವಾ ಚ ದೋಷಂ ನ ಪ್ರಾಪ್ತುಮರ್ಹತಿ ॥36॥
ಇನ್ನೊಬ್ಬರಿಗೆ ಪೀಡೆಯನ್ನು ಮಾಡದೇ ಕೋಶವನ್ನು ಸಂಪಾದಿಸಲು ಸಾಧ್ಯವಿಲ್ಲ. ಇನ್ನು ಕೋಶಮೂಲವಾದ ಬಲವು ಎಲ್ಲಿಂದ ಬಂದೀತು? ಕೋಶಕ್ಕಾಗಿ ಪೀಡಿಸಿ- ದರೂ ಸಹ ರಾಜನು ದೋಷವನ್ನು ಹೊಂದುವುದಿಲ್ಲ.
ಅಕಾರ್ಯಮಪಿ ಕಾರ್ಯಾರ್ಥಂ ಕ್ರಿಯತೇ ಯಜ್ಞಕರ್ಮಸು |
ಏತಸ್ಮಾತ್ ಕಾರಣಾದ್ ರಾಜಾ ನ ದೋಷಂ ಪ್ರಾಪ್ತುಮರ್ಹತಿ ॥37॥
ಯಜ್ಞಗಳಲ್ಲಿ ಅಕಾರ್ಯವಾದ ಪ್ರಾಣಿಹಿಂಸೆಯನ್ನು ಸ್ವರ್ಗಾರ್ಥವಾಗಿ ಮಾಡು- ತ್ತಾರೆ. ಆ ಕಾರಣದಿಂದ ಒಳ್ಳೆಯ ಉದ್ದೇಶದಿಂದ ಕೆಟ್ಟ ಕಾರ್ಯವನ್ನು ಮಾಡಿದರೂ ದೋಷವಾಗುವುದಿಲ್ಲ.
ಅರ್ಥಾರ್ಥಮನ್ಯದ್ ಭವತಿ ವಿಪರೀತಮಥಾಪರಮ್ |
ಅನರ್ಥಾರ್ಥಮಥಾಪ್ಯನ್ಯತ್ ತತ್ ಸರ್ವಂ ಹ್ಯರ್ಥಕಾರಣಮ್ |
ಏವಂ ಬುದ್ಧ್ಯಾ ಸಂಪ್ರಪಶ್ಯೇನ್ಮೇಧಾವೀ ಕಾರ್ಯನಿಶ್ಚಯಮ್ ॥38॥
ಅರ್ಥಸಂಪಾದನೆಯ ಸಲುವಾಗಿ ಶುಭವಾದ ಉಪಾಯವು ಮತ್ತು ಅಶುಭ- ವಾದ ಉಪಾಯವು ಉಂಟಾಗುತ್ತದೆ. ಇಲ್ಲದಿದ್ದರೆ ರಾಷ್ಟ್ರಾದಿಗಳು ನಿಷ್ಪ್ರಯೋಜನ- ವಾಗುತ್ತವೆ. ಆದ್ದರಿಂದ ಸರ್ವವೂ ಅರ್ಥಕಾರಣವಾಗುತ್ತದೆ. ಮೇಧಾವಿಯಾದವನು ಹೀಗೆ ತನ್ನ ಬುದ್ಧಿಯಿಂದ ನಿಶ್ಚಯಿಸಿ ಕಾರ್ಯವನ್ನು ಮಾಡಬೇಕು - ಲಕ್ಷ್ಮಾಲಂಕಾರ.
ಯಜ್ಞಾರ್ಥಮನ್ಯದ್ ಭವತಿ ಯಜ್ಞಾದ್ಯರ್ಥಸ್ತಥಾ ಪರಃ |

ಯಜ್ಞಶ್ಚಾರ್ಥಾರ್ಥಮೇವೈತತ್ ತತ್ ಸರ್ವಂ ಯಜ್ಞಸಾಧನಮ್ ॥39॥
ಸಂಗ್ರಹಿಸಿದ ಧನಧಾನ್ಯಾದಿಗಳು ಯಜ್ಞದ ಸಲುವಾಗಿ ಇರುತ್ತವೆ. ಯಜ್ಞವು ಪರಲೋಕದ ಸಲುವಾಗಿ ಇದೆ. ಆದರೆ ಯಜ್ಞದಿಂದ ಪರ್ಜನ್ಯನುಉಂಟಾಗುತ್ತಾನೆ. ಪರ್ಜನ್ಯದಿಂದ ಅನ್ನವು ಉಂಟಾಗುತ್ತದೆ ಎಂಬ ವಚನದಂತೆ ಯಜ್ಞದಿಂದ ಅನ್ನವು ಉಂಟಾಗುವುದರಿಂದ ಈ ಲೋಕದಲ್ಲಿ ಯಜ್ಞವು ಅಂತತಃ ಅನ್ನದ ಸಲುವಾಗಿಯೇ ಇದೆ. ಆದ್ದರಿಂದ ಎಲ್ಲವೂ ಯಜ್ಞದ ಸಾಧನವಾಗುತ್ತದೆ. (ಅದರಂತೆ ಒಳ್ಳೆಯ ಉದ್ದೇಶದಿಂದ ಮಾಡಿದ ಶುಭಾಶುಭಉಪಾಯಗಳು ಶುಭಕ್ಕೇ ಸಾಧನೆಯಾಗು- ತ್ತವೆ.) ಲಕ್ಷಾಲಂಕಾರ.
ಉಪಮಾಮತ್ರ ವಕ್ಷ್ಯಾಮಿ ಧರ್ಮತತ್ತ್ವಪ್ರಕಾಶಿನೀಮ್ |
ಯೂಪಂ ಛಿಂದಂತಿ ಯಜ್ಞಾರ್ಥಂ ತತ್ರ ಯೇ ಪರಿಪಂಥಿನಃ ॥40॥
ದ್ರುಮಾಃ ಕೇಚನ ಸಾಮಂತಾ ಧ್ರುವಂ ಛಿಂದಂತಿ ತಾನಪಿ |
ತೇ ಚಾಪಿ ನಿಪತಂತೋಽನ್ಯಾನ್ ನಿಘ್ನಂತಿ ಚ ವನಸ್ಪತೀನ್ ॥41॥
ಧರ್ಮತತ್ವವನ್ನು ಚೆನ್ನಾಗಿ ತಿಳಿಸುವ ಒಂದು ದೃಷ್ಟಾಂತವನ್ನು ಈ ವಿಷಯದಲ್ಲಿ ಹೇಳುವೆನು. (ಇನ್ನೊಬ್ಬರನ್ನು ಪೀಡಿಸದೇ ಕೋಶವನ್ನು ಸಂಪಾದಿಸಲು ಸಾಧ್ಯವಿಲ್ಲ ಎಂಬ ವಿಷಯದಲ್ಲಿ ಈ ದೃಷ್ಟಾಂತವನ್ನು ಹೇಳುವೆನು). ಯಜ್ಞವನ್ನು ಮಾಡುವ ಸಲುವಾಗಿ ಯೂಪವನ್ನು ಕತ್ತರಿಸುತ್ತಾರೆ. (ಒಂದು ವೃಕ್ಷವನ್ನು ಕಡಿದು ಯೂಪವನ್ನು ಮಾಡುತ್ತಾರೆ). ಯೂಪವನ್ನು ಮಾಡುವುದರ ಸಲುವಾಗಿ ಅದಕ್ಕೆ ತೊಂದರೆಯನ್ನು ಮಾಡುವ ಸುತ್ತಲೂ ಬೆಳೆದಿರುವ ಮರಗಳನ್ನು ಅವಶ್ಯವಾಗಿ ಕತ್ತರಿಸುತ್ತಾರೆ. ಆ ಮರಗಳು ಬೀಳುತ್ತಾ ಬೇರೆ ಮರಗಳನ್ನು ಉರುಳಿಸುತ್ತವೆ.
ಏವಂ ಕೋಶಸ್ಯ ಮಹತೋ ಯೇ ನರಾಃ ಪರಿಪಂಥಿನಃ |
ತಾನಹತ್ವಾ ನ ಪಶ್ಯಾಮಿ ಸಿದ್ಧಿಮತ್ರ ಪರಂತಪ ॥42॥
ಹೀಗೆ ಯಾವ ಮನುಷ್ಯರು ರಾಜನ ದೊಡ್ಡಕೋಶಕ್ಕೆ ವಿರೋಧಿಗಳೋ ಎಲೈ ಪರಂತಪನೇ! ಅವರನ್ನು ಕೊಲ್ಲದೇ ನಾನು ಕೋಶಸಿದ್ಧಿಯನ್ನು ಕಾಣುವುದಿಲ್ಲ.
ಧನೇನ ಜಯತೇ ಲೋಕಾವುಭೌ ಪರಮಿಮಂ ತಥಾ |
ಸತ್ಯಂ ಚ ಧರ್ಮವಚನಂ ಯಥಾ ನಾಸ್ತ್ಯಧನಸ್ತಥಾ ॥43॥
ಧನದಿಂದ ಈ ಲೋಕವನ್ನೂ, ಪರಲೋಕವನ್ನೂ, ಸತ್ಯವಚನವನ್ನೂ, ಧರ್ಮವಚನವನ್ನೂ ಎಲ್ಲವನ್ನೂ ಸಂಪಾದಿಸುತ್ತಾನೆ. ನಿರ್ಧನನಾದ ಮನುಷ್ಯನು ಇದ್ದರೂ ಇಲ್ಲದಂತೆಯೇ ಸರಿ.
ಸರ್ವೋಪಾಯೈರಾದದೀತ ಧನಂ ಯಜ್ಞಪ್ರಯೋಜನಮ್ |
ನ ತುಲ್ಯದೋಷಃ ಸ್ಯಾದೇವಂ ಕಾರ್ಯಾಕಾರ್ಯೇಷು ಭಾರತ ॥44॥
ಯಜ್ಞಕ್ಕೆ ಕಾರಣವಾದ ಧನವನ್ನು ಸರ್ವೋಪಾಯಗಳಿಂದಲೂ ಸಂಗ್ರಹಿಸ- ಬೇಕು. ಎಲೈ ಭಾರತನೇ! ಹಾಗೆ ಮಾಡಿದರೆ ಕಾರ್ಯಾಕಾರ್ಯಗಳಲ್ಲಿ ಸಮಾನ- ದೋಷವುಂಟಾಗುವುದಿಲ್ಲ. ಯೂಪದ ಸಲುವಾಗಿ ಅನೇಕ ಮರಗಳನ್ನು ಉರು- ಳಿಸುವಾಗ ಶ್ರೇಷ್ಠವಾದ ಕಾರ್ಯದ ಸಲುವಾಗಿ ಅಕಾರ್ಯವನ್ನು ಮಾಡಿದರೂ ಕೇವಲ ಅಕಾರ್ಯವನ್ನು ಮಾಡಿದ ದೋಷಕ್ಕೆ ಸಮಾನವಾದ ದೋಷವು ಉಂಟಾ- ಗುವುದಿಲ್ಲ. ಅದರಂತೆ ಧನಸಂಗ್ರಹಲ್ಲಿಯೂ ಅಕಾರ್ಯಮಿಶ್ರಿತವಾದ ಕಾರ್ಯ- ವನ್ನು ಮಾಡಿದರೆ ದೋಷವುಂಟಾಗುವುದಿಲ್ಲ. - (ಲಕ್ಷಾಲಂಕಾರ)
ನೋಭೌ ಸಂಭವತೋ ರಾಜನ್ ಕಥಂಚಿದಪಿ ಭಾರತ |
ನ ಹ್ಯರಣ್ಯೇಷು ಪಶ್ಯಾಮಿ ಧನವೃದ್ಧಾನಹಂ ಕ್ವಚಿತ್ ॥45॥
ಎಲೈ ರಾಜನೇ! ಶುಭಕಾರ್ಯವನ್ನುಮಾಡಿದಾಗ ದೋಷ ಮತ್ತು ಗುಣ ಎರಡೂ ಉಂಟಾಗುವುದಿಲ್ಲ. ಅರಣ್ಯದಲ್ಲಿ ನಾನು ಯಾವರೀತಿಯಿಂದಲೂ ಧನ- ವೃದ್ಧಿಯನ್ನು ಕಾಣಲಾರೆ. ಸಮುದ್ರದ ನೀರಿನಲ್ಲಿ ಸ್ವಲ್ಪ ಇಂಗನ್ನು ಹಾಕಿದರೆ ಹೇಗೆ ಇಂಗಿನಪರಿಮಳವು ಬರುವುದಿಲ್ಲವೋ ಅದರಂತೆ ಬಹುತರಪುಣ್ಯಕ್ಕೆ ಅನುಕೂಲ- ವಾದ ಸ್ವಲ್ಪ ಪಾಪದಿಂದ ಬೆರೆತ ಕರ್ಮವು ಪುಣ್ಯಕರವೇ ಆಗುತ್ತದೆ. ಅದರಲ್ಲಿ ದೋಷವಿಲ್ಲ ಎಂಬುದು ಅಭಿಪ್ರಾಯ ಲಕ್ಷಾಲಂಕಾರ.
ಯದಿದಂ ದೃಶ್ಯತೇ ವಿತ್ತಂ ಪೃಥಿವ್ಯಾಮಿಹ ಕಿಂಚನ |
ಮಮೇದಂ ಸ್ಯಾನ್ಮಮೇದಂ ಸ್ಯಾದಿತ್ಯಯಂ ಕಾಂಕ್ಷತೇ ಜನಃ ॥46॥
ಈ ಭೂಮಿಯಲ್ಲಿ ಯಾವ ಅಲ್ಪವಾದ ವಿತ್ತವು ಕಂಡುಬರುತ್ತದೆಯೋ ಟಅದು ನನಗೆ ಇರಲಿ, ನನಗೆ ಇರಲಿಟ ಎಂದು ಜನರು ಬಯಸುತ್ತಾರೆ.
ನ ಚ ರಾಜ್ಯಸಮೋ ಧರ್ಮಃ ಕಶ್ಚಿದಸ್ತಿ ಪರಂತಪ |
ಧರ್ಮಃ ಸಂಶಬ್ದಿತೋ ರಾಜ್ಞಾಮಾಪದರ್ಥಮತೋಽನ್ಯಥಾ ॥47॥
ಎಲೈ ಪರಂತಪನೇ! ರಾಜ್ಯಪಾಲನೆಗೆ ಸಮನಾದ ಧರ್ಮವಿಲ್ಲ. ರಾಜರಿಗೆ ಪ್ರಜಾಪಾಲನರೂಪವಾದ ರಾಜ್ಯಧರ್ಮವು ಸಮೀಚೀನವಾದ ಧರ್ಮ ಎಂದು ಹೇಳಲ್ಪಡುತ್ತದೆ. ಆಪತ್ಕಾಲದಲ್ಲಿ ಪ್ರಜಾಪೀಡೆಯಿಂದ ಧನವನ್ನು ಸಂಗ್ರಹಿಸುವುದು ಅಧರ್ಮವಾದರೂ ಸಮೀಚೀನವಾದ ಧರ್ಮವೆಂದು ಹೇಳಲ್ಪಡುತ್ತದೆ ಲಕ್ಷಾ- ಲಂಕಾರ.
ದಾನೇನ ಕರ್ಮಣಾ ಚಾನ್ಯೇ ತಪಸಾಽನ್ಯೇ ತಪಸ್ವಿನಃ |
ಬುದ್ಧ್ಯಾ ದಾಕ್ಷ್ಯೇಣ ಚಾಪ್ಯನ್ಯೇ ಚಿನ್ವಂತಿ ಧನಸಂಚಯಾನ್ ॥48॥
ತಪಸ್ವಿಗಳಾದವರು ದಾನದಿಂದ ಕರ್ಮದಿಂದ ಇನ್ನು ಕೆಲವರು ತಪಸ್ಸಿನಿಂದ ಇನ್ನುಕೆಲವರು ಬುದ್ಧಿಯಿಂದ, ಇನ್ನು ಕೆಲವರು ದಕ್ಷತೆಯಿಂದ ಧನಸಂಗ್ರಹವನ್ನು ಮಾಡುತ್ತಾರೆ.
ಸರ್ವಂ ಧನವತಃ ಪ್ರಾಪ್ಯಂ ಸರ್ವಂ ತರತಿ ಕೋಶವಾನ್ |

ಕೋಶಾದ್ ಧರ್ಮಶ್ಚ ಕಾಮಶ್ಚ  ಪರೋ ಲೋಕಸ್ತಥಾಪ್ಯಯಮ್ |
ತಂ ಚ ಧರ್ಮೇಣ ಲಿಪ್ಸೇತ ನಾಧರ್ಮೇಣ ಕದಾಚನ ||49||
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶಾಂತಿಪರ್ವಣಿ ರಾಜಧರ್ಮೇ ಏಕೋನತ್ರಿಂಶತ್ಯಧಿಕಶತತಮೋಽಧ್ಯಾಯಃ ||129||
|| ಸಮಾಪ್ತಂ ರಾಜಧರ್ಮಪರ್ವ ||
ಧನವುಳ್ಳವನು ಎಲ್ಲವನ್ನೂ ಸಂಪಾದಿಸುತ್ತಾನೆ. ಕೋಶವುಳ್ಳವನು ಎಲ್ಲ ಕಷ್ಟಗಳನ್ನೂ ದಾಟುತ್ತಾನೆ. ಕೋಶದಿಂದ ಧರ್ಮ, ಕಾಮ, ಪರಲೋಕ, ಈ ಲೋಕ ಎಲ್ಲವೂ ಸಿದ್ಧಿಸುತ್ತವೆ. ಕೋಶವನ್ನಾದರೂ ಧರ್ಮದಿಂದ ಪಡೆಯಲು ಪ್ರಯತ್ನಿಸ- ಬೇಕು. ಅಧರ್ಮದಿಂದ ಪಡೆಯಲು ಬಯಸಬಾರದು.
ರಾಜಧರ್ಮಪರ್ವಕನ್ನಡಾನುವಾದದಲ್ಲಿ 129ನೇ ಅಧ್ಯಾಯವು ಮುಗಿಯಿತು
ರಾಜಧರ್ಮಪರ್ವವೂ ಮುಗಿಯಿತು
0

|| ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ||
ಮಹಾಭಾರತ
ಅನುಶಾಸನ ಪರ್ವ
1. ದಾನ-ಧರ್ಮ ಪರ್ವ
ಒಂದನೆಯ ಅಧ್ಯಾಯ
ಮೃತ್ಯು-ಗೌತಮ್ಯಾದಿ ಸಂವಾದ
ಯುಧಿಷ್ಠಿರಃ
ಶಮೋ ಬಹುವಿಧಾಕಾರಃ ಸೂಕ್ಷ್ಮ ಉಕ್ತಃ ಪಿತಾಮಹ |
ನ ತು ಮೇ ಹೃದಯೇ ಶಾಂತಿರಸ್ತಿ ಕೃತ್ವೇದಮೀದೃಶಮ್ ||1||
ಯುಧಿಷ್ಠಿರ ಎಲ್ಲೈ ಪಿತಾಮಹನೇ, ನೀನು ಅನೇಕ ರೀತಿಯಾದ ಸೂಕ್ಷ್ಮವಾದ ಮನಶ್ಶಾಂತಿಯ ಸಾಧನಗಳನ್ನು ಹೇಳಿದ್ದೀಯೆ. ಆದರೆ ಇಂತಹ ಅಪರಾಧವನ್ನು ಮಾಡಿದ ನನ್ನ ಮನಸ್ಸಿಗೆ ಶಾಂತಿಯುಂಟಾಗುತ್ತಿಲ್ಲ.
ಅಸ್ಮಿನ್ನರ್ಥೇ ಬಹುವಿಧಾ ಶಾಂತಿರುಕ್ತಾ ತ್ವಯಾಽನಘ |
ಸ್ವಕೃತಸ್ಯ ನ ಶಾಂತಿಃ ಸ್ಯಾಚ್ಛಮಾದ್ ಬಹುವಿಧಾದಪಿ ||2||
ಎಲ್ಲೈ ಅನಘನೇ, ಈ ವಿಷಯದಲ್ಲಿ ನೀನು ಅನೇಕ ವಿಧವಾದ ಶಾಂತಿ ಪ್ರಕಾರಗಳನ್ನು ಹೇಳಿದ್ದೀಯೆ. ಇಷ್ಟು ವಿಧವಾದ ಶಾಂತಿಸಾಧನ ಪ್ರಕಾರಗಳನ್ನು ಹೇಳಿದ್ದರೂ ನಾನು ಮಾಡಿದ ಕಾರ್ಯದ ನಿಮಿತ್ತದಿಂದಾಗಿ ನನಗೆ ಶಾಂತಿ ಉಂಟಾಗುತ್ತಿಲ್ಲ.
ಶರಾಚಿತಶರೀರಂ ಹಿ ತೀವ್ರವ್ರಣಮುದೀಕ್ಷ್ಯ ಚ |
ಶರ್ಮ ನೋಪಲಭೇ ವೀರ ದುಷ್ಕೃತಾನ್ಯೇವ ಚಿಂತಯನ್ ||3||
ಎಲ್ಲೈ ವೀರನೇ, ಬಾಣಗಳು ನೆಟ್ಟ ಶರೀರವನ್ನು ಹೊಂದಿ, ಎಲ್ಲ ಕಡೆಯಲ್ಲಿಯೂ ಗಾಯಗೊಂಡಿರುವ ನಿನ್ನನ್ನು ನೋಡಿ, ನನ್ನ ದುಷ್ಕರ್ಮವನ್ನೇ ಸ್ಮರಿಸುತ್ತಾ ನಾನು ಸಮಾಧಾನವನ್ನೇ ಹೊಂದುತ್ತಿಲ್ಲ.
ರುಧಿರೇಣಾವಸಿಕ್ತಾಂಗಂ ಪ್ರಸ್ರವಂತಂ ಯಥಾಽಚಲಮ್ |
ತ್ವಾಂ ದೃಷ್ಟ್ವಾ ಪುರುಷವ್ಯಾಘ್ರ ಸೀದೇ ವರ್ಷಾಸ್ವಿವಾಂಬುಜಮ್ ||4||
ಎಲ್ಲೈ ಪುರುಷವ್ಯಾಘ್ರನೇ, ಗೈರಿಕಾದಿ ಧಾತುವನ್ನು ಸ್ರವಿಸುವ ಪರ್ವತದಂತೆ ರಕ್ತವನ್ನು ಸ್ರವಿಸುತ್ತಿರುವ ಅವಯವವುಳ್ಳ ನಿನ್ನನ್ನು ನೋಡಿ ಮಳೆಗಾಲದಲ್ಲಿ ಕಮಲವು ಮುದುಡಿ ಹೋಗುವಂತೆ ನನ್ನ ಮನಸ್ಸು ಮುದುಡಿ ಹೋಗುತ್ತಿದೆ.
ಇತಃ ಕಷ್ಟತರಂ ಕಿಂ ನು ಮತ್ಕೃತೇ ಯತ್ ಪಿತಾಮಹಃ |
ಇಮಾಮವಸ್ಥಾಂ ಗಮಿತಃ ಪ್ರತ್ಯಮಿತ್ರೈ ರಣಾಜಿರೇ |
ತಥೈವಾನ್ಯೇ ನೃಪತಯಃ ಸಹಪುತ್ರಾಃ ಸಬಾಂಧವಾಃ ||5||
ನನ್ನ ನಿಮಿತ್ತದಿಂದಾಗಿ ನಮ್ಮ ಪಿತಾಮಹನಾದ ನೀನು ರಣರಂಗದಲ್ಲಿ ಶತ್ರುಗಳಿಂದ ಇಂತಹ ಅವಸ್ಥೆಯನ್ನು ಹೊಂದುವಂತೆ ಮಾಡಲ್ಪಟ್ಟುದುದಕ್ಕಿಂತ ಕಷ್ಟತರವಾದುದು ಇನ್ನು ಯಾವುದಿದೆ? ಹಾಗೆಯೇ, ಇನ್ನೂ ಅನೇಕ ರಾಜರು ತಮ್ಮ ಪುತ್ರರು ಮತ್ತು ಬಂಧುಗಳೊಡನೆ ಇಂತಹ ಅವಸ್ಥೆಯನ್ನೇ ಹೊಂದಿದ್ದಾರೆ.
ವಯಂ ಹಿ ಧಾರ್ತರಾಷ್ಟ್ರಾಶ್ಚ ಕಾಲಮನ್ಯುವಶಾನುಗಾಃ |
ಕೃತ್ವಾ ಚ ನಿಂದಿತಂ ಕರ್ಮ ಪ್ರಾಪ್ಸ್ಯಾಮಃ ಕಾಂ ಗತಿಂ ಪುನಃ ||6||
ಕಾಲಕ್ಕೆ ಮತ್ತು ಕೋಪಕ್ಕೆ ವಶರಾದ ನಾವು ಮತ್ತು ದುರ್ಯೋಧನಾದಿಗಳು ಇಂತಹ ನಿಂದಿತವಾದ ಕರ್ಮವನ್ನು ಮಾಡಿ ಯಾವ ಗತಿಯನ್ನು ಹೊಂದುವೆವು?
ಅಹಂ ತವ ಹ್ಯಂತಕರಃ ಸುಹೃದ್ವಧಕರಸ್ತಥಾ |
ನ ಶಾಂತಿಮಧಿಗಚ್ಛಾಮಿ ಪಶ್ಯಂಸ್ತ್ವಾಂ ದುಃಖಿತಂ ಕ್ಷಿತೌ ||7||
ನಿಮಗೆ ಇಂತಹ ವಿನಾಶವನ್ನು ತಂದುಕೊಟ್ಟವನೂ, ಸುಹೃದರ ವಧೆಯನ್ನು ಮಾಡಿದ ನಾನು ಭೂಮಿಯ ಮೇಲೆ ದುಃಖಪಡುತ್ತಿರುವ ನಿನ್ನನ್ನು ನೋಡಿ ಸಮಾಧಾನವನ್ನೇ ಹೊಂದುತ್ತಿಲ್ಲ.
ದುರ್ಯೋಧನೋ ಹಿ ಸಮರೇ ಸಹಸೈನ್ಯಃ ಸಹಾನುಜಃ |

ನಿಹತಃ ಕ್ಷತ್ರಧರ್ಮೇಽಸ್ಮಿನ್ ದುರಾತ್ಮಾ ಕುಲಪಾಂಸನಃ ॥8॥
ದುಷ್ಟನೂ ಮತ್ತು ಕುಲನಾಶಕನೂ ಆದ ದುರ್ಯೋಧನನು ತನ್ನ ತಮ್ಮಂದಿರಿಂದಲೂ ಮತ್ತು ಸೈನ್ಯದಿಂದಲೂ ಸಹಿತನಾಗಿ ಕ್ಷತ್ರಿಯಧರ್ಮವನ್ನು ಅನುಸರಿಸಿದ ನಮ್ಮಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು.
ನ ಸ ಪಶ್ಯತಿ ದುಷ್ಟಾತ್ಮಾ ತ್ವಾಮದ್ಯ ಪತಿತಂ ಕ್ಷಿತೌ |
ಅತಃ ಶ್ರೇಯೋ ಮೃತಂ ಮನ್ಯೇ ನೇಹ ಜೀವಿತಮಾತ್ಮನಃ ॥9॥
ದುಷ್ಟಾತ್ಮನಾದ ಅವನು ನೀನು ಈ ದಿನ ಭೂಮಿಯ ಮೇಲೆ ಮಲಗಿರುವುದನ್ನು ನೋಡುತ್ತಿಲ್ಲ. ಆದ್ದರಿಂದ ನಾನು ಬದುಕಿರುವುದಕ್ಕಿಂತಲೂ ನನಗೆ ಮರಣವೇ ಶ್ರೇಷ್ಠವಾಗಿರುತ್ತಿದ್ದಿತೆಂದು ಭಾವಿಸುತ್ತೇನೆ.
ಅಹಂ ಹಿ ಸಮರೇ ವೀರ ಗಮಿತಃ ಶತ್ರುಭಿಃ ಕ್ಷಯಮ್ |
ಅಭವಿಷ್ಯಂ ಯದಿ ಪುರಾ ಸಹ ಭ್ರಾತೃಭಿರಚ್ಯುತ ॥10॥
ನ ತ್ವಾಮೇವಂ ಸುದುಃಖಾರ್ತಮದ್ರಾಕ್ಷಂ ಸಾಯಕಾರ್ದಿತಮ್ |
ನೂನಂ ಹಿ ಪಾಪಕರ್ಮಾಣೋ ಧಾತ್ರಾ ಸೃಷ್ಟಾಃ ವಯಂ ನೃಪ ॥11॥
ಎಲೈ ವೀರನೇ, ನನ್ನನ್ನು ಮತ್ತು ನನ್ನ ತಮ್ಮಂದಿರನ್ನು ಯುದ್ಧದಲ್ಲಿ ಶತ್ರುಗಳು ಮೊದಲೇ ವಿನಾಶಗೊಳಿಸಿದ್ದರೆ ಬಾಣಗಳಿಂದ ಪೀಡಿತರಾಗಿ ಈ ರೀತಿಯಲ್ಲಿ ಬಹಳ ದುಃಖಪಡುತ್ತಿರುವ ನಿನ್ನನ್ನು ನೋಡುತ್ತಿರಲಿಲ್ಲ. ಎಲೈ ರಾಜನೇ, ಪಾಪಕರ್ಮವನ್ನು ಮಾಡುವುದಕ್ಕಾಗಿಯೇ ಬ್ರಹ್ಮನು ನಮ್ಮನ್ನು ಸೃಷ್ಟಿಸಿದ್ದಾನೆ.
ಅನ್ಯಸ್ಮಿನ್ನಪಿ ಲೋಕೇ ಹಿ ಯಥಾ ಮುಚ್ಯೇಮ ಕಿಲ್ಬಿಷಾತ್ |
ತಥಾ ಪ್ರಶಾಧಿ ಮಾಂ ರಾಜನ್ ಮಮ ಚೇದಿಚ್ಛಸಿ ಪ್ರಿಯಮ್ ॥12॥
ಎಲೈ ರಾಜನೇ, ನನಗೆ ಪ್ರಿಯವನ್ನು ಮಾಡಲು ಬಯಸುವುದಾದರೆ ಪರಲೋಕದಲ್ಲಾದರೂ ನಾವು ಈ ಕಿಲ್ಬಿಷದಿಂದ ಪಾರಾಗುವ ಉಪಾಯವನ್ನು ಹೇಳು.
ಭೀಷ್ಮಃ
ಪರತಂತ್ರಂ ಕಥಂ ಹೇತುಮಾತ್ಮಾನಮನುಪಶ್ಯಸಿ |
ಕರ್ಮಣ್ಯಸ್ಮಿನ್ ಮಹಾಭಾಗ ಸೂಕ್ಷ್ಮಂ ಹ್ಯೇತದತೀಂದ್ರಿಯಮ್ ॥13॥
ಭೀಷ್ಮರು ಎಲೈ ಮಹಾಭಾಗನೇ, ಸೂಕ್ಷ್ಮವೂ ಮತ್ತು ಅತೀಂದ್ರಿಯವೂ ಆದ ಈ ಕರ್ಮದ ವಿಷಯದಲ್ಲಿ (ಕ್ಷತ್ರಿಯಧರ್ಮದ ವಿಷಯದಲ್ಲಿ) ಪರತಂತ್ರನಾದ ನೀನು ನಿನ್ನನ್ನು ಹೇಗೆ ಕಾರಣನೆಂದು ತಿಳಿಯುತ್ತೀಯೆ?
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಂವಾದಂ ಮೃತ್ಯುಗೌತಮ್ಯೋಃ ಕಾಲಲುಬ್ಧಕಪನ್ನಗೈಃ ॥14॥
ಈ ವಿಷಯದಲ್ಲಿ ಹಿಂದೆ ನಡೆದ ಮೃತ್ಯು-ಗೌತಮೀ-ಕಾಲ-ವ್ಯಾಧ ಮತ್ತು ಸರ್ಪಗಳ ಸಂವಾದರೂಪದ ಈ ಒಂದು ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.
ಗೌತಮೀ ನಾಮ ಕೌಂತೇಯ ಸ್ಥವಿರಾ ಶಮಸಂಯುತಾ |
ಸರ್ಪೇಣ ದಷ್ಟಂ ಸ್ವಂ ಪುತ್ರಮಪಶ್ಯದ್ ಗತಚೇತನಮ್ ॥15॥
ಎಲೈ ಕೌಂತೇಯನೇ, ವೃದ್ಧಳೂ, ಶಾಂತಿಯುಕ್ತಳೂ ಆದ ಗೌತಮಿಯೆಂಬ ವನಿತೆಯು ಸರ್ಪದಿಂದ ಕಡಿಯಲ್ಪಟ್ಟು ಮೃತನಾದ ತನ್ನ ಪುತ್ರನನ್ನು ನೋಡಿದಳು.
ಅಥ ತಂ ಸ್ನಾಯುಪಾಶೇನ ಬದ್ಧ್ವಾ ಸರ್ಪಮಮರ್ಷಿತಃ |
ಲುಬ್ಧಕೋಽರ್ಜುನಕೋ ನಾಮ ಗೌತಮ್ಯಾಃ ಸಮುಪಾನಯತ್ ॥16॥
ಅನಂತರ ಅರ್ಜುನಕನೆಂಬ ಬೇಡನು ಕೋಪಗೊಂಡು ಆ ಸರ್ಪವನ್ನು ಹಗ್ಗದ ಬಲೆಯಿಂದ ಕಟ್ಟಿ ಗೌತಮಿಯ ಬಳಿಗೆ ತೆಗೆದುಕೊಂಡು ಬಂದನು.
ತಾಂ ಚಾಬ್ರವೀದಯಂ ತೇ ಸ ಪುತ್ರಹಾ ಪನ್ನಗಾಧಮಃ |
ಬ್ರೂಹಿ ಕ್ಷಿಪ್ರಂ ಮಹಾಭಾಗೇ ವಧ್ಯತಾಂ ಕೇನ ಹೇತುನಾ ॥17॥
ಅಗ್ನೌ ಪ್ರಕ್ಷಿಪ್ಯತಾಮೇಷ ಚ್ಛಿದ್ಯತಾಂ ಖಂಡಶೋ ಯಥಾ |
ನ ಹ್ಯಯಂ ಬಾಲಹಾ ಪಾಪಶ್ಚಿರಂ ಜೀವಿತುಮರ್ಹತಿ ॥18॥
ಅವನು ಅವಳನ್ನು ಕುರಿತು- `ಈ ಸರ್ಪಾಧಮನೇ ನಿನ್ನ ಪುತ್ರನನ್ನು ಕೊಂದವನು. ಎಲೈ ಮಹಾನುಭಾವಳೇ, ಇವನನ್ನು ಯಾವ ರೀತಿಯಲ್ಲಿ ಕೊಲ್ಲಬೇಕೆಂದು ಹೇಳು. ಅಗ್ನಿಯಲ್ಲಿ ಹಾಕಲೇ ಅಥವಾ ಕಣಕಣವಾಗಿ ಕತ್ತರಿಸಲೇ? ಬಾಲಹತ್ಯೆಯನ್ನು ಮಾಡಿದ ಈ ಪಾಪಿಯು ಬಹುಕಾಲ ಬದುಕಿರಬಾರದು'.
ಗೌತಮೀ
ವಿಸೃಜೈನಮಬುದ್ಧಿಸ್ತ್ವಂ ನ ವಧ್ಯೋಽರ್ಜುನಕ ತ್ವಯಾ |
ಕೋ ಹ್ಯಾತ್ಮಾನಂ ಗುರುಂ ಕುರ್ಯಾತ್ ಪ್ರಾಪ್ತವ್ಯೇ ಸತಿ ಚಿಂತಯನ್ ॥
ಗೌತಮಿ ಎಲೈ ಅರ್ಜುನಕನೇ, ನಿನಗೆ ಬುದ್ಧಿಯಿಲ್ಲ. ಈ ಸರ್ಪವನ್ನು ಬಿಟ್ಟುಬಿಡು. ನಡೆಯಬೇಕಾದ ಕಾರ್ಯವು ನಡೆದಾಗ ಇಂತಹ ಸಂದರ್ಭದಲ್ಲಿ ಯಾರು ಇವನನ್ನು ಕೊಲ್ಲುವಂತೆ ಉಪದೇಶ ಮಾಡುತ್ತಾರೆ? (ಲಕ್ಷ್ಯಾಲಂಕಾರ)
ಪ್ಲವಂತೇ ಧರ್ಮಲಘವೋ ಲೋಕೇಽಂಭಸಿ ಯಥಾ ಪ್ಲವಾಃ |
ಮಜ್ಜಂತಿ ಪಾಪಗುರವಃ ಶಸ್ತ್ರಂ ಸ್ಕನ್ನಮಿವೋದಕೇ ॥20॥
ಧರ್ಮವನ್ನು ಆಚರಿಸಿ ಲಘುವಾದವರು (ಹಗುರವಾದವರು) ನೀರಿನಲ್ಲಿ ನೌಕೆಗಳಂತೆ ತೇಲಿ ಸಂಸಾರವನ್ನು ದಾಟುತ್ತಾರೆ. ಪಾಪವನ್ನು

ಮಾಡಿ ಭಾರಭೂತರಾದವರು ನೀರಿನಲ್ಲಿ ಹಾಕಿದ ಕಬ್ಬಿಣದ ಶಸ್ತ್ರದಂತೆ ಮುಳುಗುತ್ತಾರೆ.
ನ ಚಾಮೃತ್ಯುರ್ಭವಿತಾ ವೈ ಹತೇಽಸ್ಮಿನ್
 ಕೋ ವಾತ್ಯಯಃ ಸ್ಯಾದಹತೇಽಸ್ಮಿನ್ ಜನಸ್ಯ |
ಅಸ್ಯೋತ್ಸಂಗೇ ಪ್ರಾಣಮುಕ್ತಸ್ಯ ಜಂತೋಃ
 ಮೃತ್ಯೋರ್ಲೋಕಂ ಕೋ ನು ಗಚ್ಛೇದನಂತಃ ॥21॥
ಈ ಸರ್ಪವನ್ನು ಕೊಂದರೆ ನನ್ನ ಪುತ್ರನು ಜೀವಸಹಿತನಾಗಿ ಬರುವುದಿಲ್ಲ. ಇವನನ್ನು (ಈ ಸರ್ಪವನ್ನು) ಕೊಲ್ಲದಿದ್ದರೆ ಆಗುವ ಹಾನಿ ಏನು? ಪ್ರಾಣವನ್ನು ಕಳೆದುಕೊಂಡು ನನ್ನ ತೊಡೆಯ ಮೇಲೆ ಮಲಗಿರುವ ಈ ನನ್ನ ಪುತ್ರನನ್ನು ಜೀವ ಸಹಿತವಾಗಿ ಮೃತ್ಯುಲೋಕಕ್ಕೆ ಹೋಗಿ ಯಾವನು ಹಿಂದಕ್ಕೆ ತರುತ್ತಾನೆ?
ಲುಬ್ಧಕಃ
ಜಾನಾಮ್ಯೇವಂ ನೇಹ ಗುಣಾಗುಣಜ್ಞಾಃ
 ಸರ್ವೇರ್ತಿಯುಕ್ತಾ ಗುರವೋ ವೈ ಭವಂತಿ |
ಸ್ವಸ್ಥಸ್ಯೈತೇ ತೂಪದೇಶಾ ಭವಂತಿ
 ತಸ್ಮಾತ್ ಕ್ಷುದ್ರಂ ಸರ್ಪಮೇನಂ ಹನಿಷ್ಯೇ ॥22॥
ವ್ಯಾಧ ಈ ವಿಷಯವನ್ನು ನಾನು ತಿಳಿದಿದ್ದೇನೆ. ದುಃಖದಿಂದ ಕೂಡಿದವರು ಗುಣ-ದೋಷಗಳನ್ನು ಎಣಿಸುವುದಿಲ್ಲ. ಅವರು ತಮ್ಮ ದುಃಖಕ್ಕೆ ಕಾರಣನಾದವನನ್ನು ಕೊಲ್ಲು ಎಂದೇ ಉಪದೇಶ ಮಾಡುತ್ತಾರೆ. ದುಃಖವನ್ನು ಅನುಭವಿಸದವರು ನಿನ್ನಂತೆ ಉಪದೇಶ ಮಾಡುತ್ತಾರೆ. ಆದ್ದರಿಂದ ಕ್ಷುದ್ರವಾದ ಈ ಸರ್ಪವನ್ನು ಕೊಲ್ಲುವೆನು.
ಸಮೀಪ್ಸಂತಃ ಕಾಲಯೋಗಂ ತ್ಯಜಂತಿ
 ಸದ್ಯಃ ಶುಚಂ ತ್ವರ್ಥವಿದಸ್ತ್ಯಜಂತಿ |
ಶ್ರೇಯಃಕ್ಷಯಃ ಶೋಚತಾಂ ನಿತ್ಯಶೋ ಹಿ
 ತಸ್ಮಾತ್ತ್ಯಾಜ್ಯಂ ಜಹಿ ಶೋಕಂ ಹತೇಽಸ್ಮಿನ್ ॥23॥
ಕೆಲವರು ಮುಂದೆ ಶುಭವನ್ನು ಬಯಸಿ ಯೋಗ್ಯವಾದ ಕಾಲದಲ್ಲಿ ಮಾಡಬೇಕಾದ ಇಂತಹ ವಧೆ ಮೊದಲಾದ ಕಾರ್ಯವನ್ನು ಪರಿತ್ಯಜಿಸುತ್ತಾರೆ. ಇನ್ನು ಕೆಲವರು ತಮ್ಮ ಅರ್ಥದ ಲಾಭವನ್ನು ಹೊಂದಿ (ಉದ್ದೇಶವನ್ನು ಪೂರೈಸಿಕೊಂಡು) ತಕ್ಷಣ ತಮ್ಮ ದುಃಖವನ್ನು ಕಳೆದುಕೊಳ್ಳುತ್ತಾರೆ. ಯಾವಾಗಲೂ ಶೋಕವನ್ನು ಪಡುವವರಿಗೆ ಶ್ರೇಯಸ್ಸಿನ ಹಾನಿಯುಂಟಾಗುತ್ತದೆ. ಆದ್ದರಿಂದ ಈ ಸರ್ಪವನ್ನು ಕೊಂದರೆ ನಿನಗೆ ಉಂಟಾಗುವ ಶೋಕವನ್ನು ಪರಿತ್ಯಜಿಸು.
ಗೌತಮೀ
ನ ಚೈವಾರ್ತಿರ್ವಿದ್ಯತೇಽಸ್ಮದ್ವಿಧಾನಾಂ
 ಧರ್ಮಾರಾಮಃ ಸತತಂ ಸಜ್ಜನೋ ಹಿ |
ನಿತ್ಯಾಯಸ್ತೋ ಬಾಲಜನೋ ನ ಚಾನ್ಯೋ
 ಧರ್ಮೋ ಹ್ಯೇಷ ಪ್ರಭವಾಮ್ಯಸ್ಯ ನಾಹಮ್ ॥24॥
ಗೌತಮೀ ನಮ್ಮಂತಹವರಿಗೆ ದುಃಖವಿರುವುದಿಲ್ಲ. ಸಜ್ಜನನಾದವನು ಧರ್ಮವನ್ನು ಆಚರಿಸಿ ಯಾವಾಗಲೂ ಸುಖದಿಂದಲೇ ಇರುತ್ತಾನೆ. ಉಳಿದ ಬಾಲಕರಂತಹ ಜನರು ಯಾವಾಗಲೂ ಕೋಪಗೊಳ್ಳುತ್ತಾರೆ. ಇದು ಸನಾತನವಾದ ಧರ್ಮ. ಆದ್ದರಿಂದ ಸರ್ಪವನ್ನು ಕೊಲ್ಲು ಎಂದು ನಾನು ಹೇಳುವುದಿಲ್ಲ.
ನ ಬ್ರಾಹ್ಮಣಾನಾಂ ಕೋಪೋಽಸ್ತಿ ಕುತಃ ಕೋಪಾಚ್ಚ ಯಾತನಾ |
ಮಾರ್ದವಾತ್ ಕ್ಷಮ್ಯತಾಂ ಸಾಧೋ ಮುಚ್ಯತಾಮೇಷ ಪನ್ನಗಃ ॥25॥
ಬ್ರಾಹ್ಮಣರಿಗೆ ಕೋಪವಿರುವುದಿಲ್ಲ. ಇನ್ನು ಕೋಪವಿಲ್ಲದಿರುವುದರಿಂದ ಕೋಪದಿಂದ ಇನ್ನೊಬ್ಬರಿಗೆ ಕೊಡುವ ಯಾತನೆಯು ಎಲ್ಲಿಂದ ಬರಬೇಕು? ಎಲೈ ಸಜ್ಜನನೇ, ಮನಸ್ಸಿನಲ್ಲಿ ಮಾರ್ದವವನ್ನು ತಂದುಕೊಂಡು ಈ ಸರ್ಪವನ್ನು ಕ್ಷಮಿಸು. ಈ ಸರ್ಪವನ್ನು ಬಿಟ್ಟುಬಿಡು.
ಲುಬ್ಧಕಃ
ಹಿತ್ವಾ ಲಾಭಂ ಶ್ರೇಯ ಏವಾವ್ಯಯಂ ಸ್ಯಾತ್
 ಸದ್ಯೋ ಲಾಭೋ ಬಲವದ್ಭಿಃ ಪ್ರಶಸ್ತಃ |
ಕಾಲಾಲ್ಲಾಭೋ ಯಸ್ತು ಸದ್ಯೋ ಭವೇತ
 ಹತೇ ಶ್ರೇಯಃ ಕುತ್ಸಿತೇ ತ್ವೀದೃಶೇ ಸ್ಯಾತ್ ॥26॥
ವ್ಯಾಧ ದುರ್ಬಲನಾದವನು ಸದ್ಯದಲ್ಲಿ ದೊರೆಯುವ ಲಾಭವನ್ನು ಬಿಟ್ಟು ಅವ್ಯಯವಾದ ಶ್ರೇಯಸ್ಸನ್ನು ಹೊಂದುತ್ತಾನೆ. ಈ ಲೋಕದ ಸುಖವನ್ನು ಅವನು ಪಡೆಯುವುದಿಲ್ಲ. ತಕ್ಷಣದಲ್ಲಿ ದೊರೆಯುವ ಲಾಭವು ಬಲಿಷ್ಠರಿಂದ ಪ್ರಶಂಸಿಸಲ್ಪಡುತ್ತಿಲ್ಲ. ವಿಳಂಬದಿಂದ ಉಂಟಾಗುವ ಲಾಭವು ತಕ್ಷಣದಲ್ಲಿಯೇ ದೊರೆಯುತ್ತದೆ. ಅದು ಸಜ್ಜನರ ಲಾಭ. ಇಂತಹ ಕೆಟ್ಟ ಸರ್ಪವು ಕೊಲ್ಲಲ್ಪಟ್ಟರೆ ಶ್ರೇಯಸ್ಸೇ ಉಂಟಾಗುತ್ತದೆ.
ಗೌತಮೀ
ಕಾಽರ್ಥಪ್ರಾಪ್ತಿರ್ಗೃಹ್ಯ ಶತ್ರುಂ ನಿಹತ್ಯ
 ಕಾ ವಾ ಶಾಂತಿಃ ಪ್ರಾಪ್ಯ ಶತ್ರುಂ ನಮುಕತ್ವ |
ಕಸ್ಮಾತ್ಸೌಮ್ಯ ಭುಜಗೇ ನ ಕ್ಷಮೇಯಂ
 ಮೋಕ್ಷಂ ವಾ ಕಿಂ ಕಾರಣಂ ನಾಸ್ಯ ಕುರ್ಯಾಮ್ ॥27॥

ಗೌತಮೀ ಶತ್ರುವನ್ನು ಹಿಡಿದು ಅವನನ್ನು ಕೊಂದರೆ ಉಂಟಾಗುವ ಲಾಭವೇನು? ಅಂತಹ ಶತ್ರುವನ್ನು ಬಿಡುಗಡೆಗೊಳಿಸದಿದ್ದರೆ ಯಾವ ಶಾಂತಿಯು ಉಂಟಾದೀತು? ಎಲೈ ಸೌಮ್ಯನೇ, ಈ ಸರ್ಪವನ್ನು ನಾನು ಕ್ಷಮಿಸದಿರುವುದಕ್ಕೆ ಏನು ಕಾರಣವಿದೆ? ಅಥವಾ ಬಿಡುಗಡೆ ಮಾಡದಿರುವುದಕ್ಕೂ ಏನು ಕಾರಣವಿದೆ?
ಲುಬ್ಧಕಃ
ಅಸ್ಮಾದೇಕಸ್ಮಾದ್ ಬಹವೋ ರಕ್ಷಿತವ್ಯಾ
ನೈಕೋ ಬಹುಭ್ಯೋ ಗೌತಮಿ ರಕ್ಷಿತವ್ಯಃ |
ಕೃತಾಗಸಂ ಧರ್ಮವಿದಸ್ತ್ಯಜಂತಿ
ಸರೀಸೃಪಂ ಪಾಪಮಿಮಂ ಜಹಿ ತ್ವಮ್ ॥28॥
ವ್ಯಾಧ ಎಲೌ ಗೌತಮಿಯೇ, ಈ ಸರ್ಪದಿಂದ ಅನೇಕ ಜನರನ್ನು ರಕ್ಷಿಸಬೇಕಾಗಿದೆ. ಅನೇಕ ಜನರಿಗೆ ಪ್ರಾಣಾಪಾಯವನ್ನುಂಟು ಮಾಡುವ ಈ ಒಂದು ಸರ್ಪವನ್ನು ರಕ್ಷಿಸಬಾರದು. ಧರ್ಮವನ್ನು ತಿಳಿದವರು ಪಾಪವನ್ನು ಮಾಡಿದವನನ್ನು ಪರಿತ್ಯಜಿಸುತ್ತಾರೆ. ಆದ್ದರಿಂದ ಈ ಪಾಪಿಯಾದ ಸರ್ಪವನ್ನು ಕೊಲ್ಲುತ್ತೇನೆ.
ಗೌತಮೀ
ನಾಸ್ಮಿನ್ ಹತೇ ಪನ್ನಗೇ ಪುತ್ರಕೋ ಮೇ
ಸಂಪ್ರಾಪ್ಸ್ಯತೇ ಲುಬ್ಧಕ ಜೀವಿತಂ ವೈ |
ಗುಣಂ ಚಾನ್ಯಂ ನಾಸ್ಯ ವಧೇ ಪ್ರಪಶ್ಯೇ
ತಸ್ಮಾತ್ ಸರ್ಪಂ ಲುಬ್ಧಕ ಮುಂಚ ಚೈನಮ್ ॥29॥
ಗೌತಮೀ ಎಲೈ ಬೇಡನೇ, ಈ ಸರ್ಪವನ್ನು ಕೊಂದರೆ ನನ್ನ ಪುತ್ರನು ಹಿಂದಿರುಗಿ ಬರುವುದಿಲ್ಲ. ಈ ಸರ್ಪವನ್ನು ಕೊಲ್ಲುವುದರಲ್ಲಿ ನಾನು ಯಾವ ಗುಣವನ್ನೂ ಕಾಣುವುದಿಲ್ಲ. ಆದ್ದರಿಂದ ಈ ಸರ್ಪವನ್ನು ಬಿಟ್ಟುಬಿಡು.
ಲುಬ್ಧಕಃ
ವೃತ್ರಂ ಹತ್ವಾ ದೇವರಾಟ್ ಸ್ವರ್ಗಭಾಗ್ ವೈ
ಯಜ್ಞಂ ಹತ್ವಾ ಭಾಗಮವಾಪ ಚೈವ |
ಶೂಲೀ ದೇವೋ ದೇವವೃತ್ತಂ ಕುರು ತ್ವಂ
ತಸ್ಮಾತ್ ಸರ್ಪಂ ಜಹಿ ಮಾ ಭೂದ್ ವಿಶಂಕಾ ॥30॥
ವ್ಯಾಧ ದೇವರಾಜನಾದ ಇಂದ್ರನು ವೃತ್ರನನ್ನು ಕೊಂದು ಸ್ವರ್ಗಾಧಿಪತಿಯಾದನು. ತ್ರಿಶೂಲಿಯಾದ ದೇವನಾದ ಶಿವನೂ ದಕ್ಷಯಜ್ಞವನ್ನು ಭಗ್ನಗೊಳಿಸಿ ಯಜ್ಞಭಾಗವನ್ನು ಸಂಪಾದಿಸಿದನು. ನೀನು ದೇವತೆಗಳ ನಡತೆಯನ್ನು ಅನುಸರಿಸುವವಳಾಗು. ಆದ್ದರಿಂದ ಈ ಸರ್ಪವನ್ನು ಕೊಲ್ಲು (ಕೊಲ್ಲು ಎಂದು ನನಗೆ ಆಜ್ಞೆ ಮಾಡು). ಯಾವ ಸಂಶಯವನ್ನೂ ಪಡಬೇಡ.
ಭೀಷ್ಮಃ
ಅಸಕೃತ್ ಪ್ರೋಚ್ಯಮಾನಾಪಿ ಗೌತಮೀ ಭುಜಗಂ ಪ್ರತಿ |
ಲುಬ್ಧಕೇನ ಮಹಾಭಾಗಾ ಪಾಪೇ ನೈವಾಕರೋನ್ಮತಿಮ್ ॥31॥
ಭೀಷ್ಮರು ಮಹಾನುಭಾವಳಾದ ಗೌತಮಿಯು ಸರ್ಪದ ವಿಷಯದಲ್ಲಿ ವ್ಯಾಧನು ಹೀಗೆ ಅನೇಕ ಬಾರಿ ಹೇಳಿದರೂ ಅದನ್ನು ಕೊಲ್ಲುವ ಪಾಪದ ಬುದ್ಧಿಯನ್ನು ಮಾಡಲಿಲ್ಲ.
ಈಷದುಚ್ಛ್ವಸಮಾನಸ್ತು ಕೃಚ್ಛ್ರಾತ್ ಸಂಸ್ತಭ್ಯ ಪನ್ನಗಃ |
ಉತ್ಸಸರ್ಜ ಗಿರಂ ಮಂದಾಂ ಮಾನುಷೀಂ ಪಾಶಪೀಡಿತಃ ॥32॥
ಆ ಸರ್ಪವು ಸ್ವಲ್ಪ ಸಮಾಧಾನದ ನಿಟ್ಟುಸಿರನ್ನು ಬಿಟ್ಟು, ಹಗ್ಗದಿಂದ ಬಿಗಿದ ಕಾರಣದಿಂದ ಕಷ್ಟಪಡುತ್ತಾ ಹಾಗೆಯೇ ಸುಧಾರಿಸಿಕೊಂಡು ಮನುಷ್ಯರ ವಾಣಿಯಲ್ಲಿ ನಿಧಾನವಾಗಿ ಮಾತನಾಡಿತು.
ಕೋ ನ್ವರ್ಜುನಕ ದೋಷೋಽತ್ರ ವಿದ್ಯತೇ ಮಮ ಬಾಲಕೇ |
ಅಸ್ವತಂತ್ರಂ ಹಿ ಮಾಂ ಮೃತ್ಯುರ್ವಿವಶಂ ಸಮಚೂಚುದತ್ ॥33॥
ಎಲೈ ಅರ್ಜುನಕನೇ, ಈ ಬಾಲಕನ ವಿಷಯದಲ್ಲಿ ನನ್ನ ಅಪರಾಧವು ಏನಿದೆ? ಅಸ್ವತಂತ್ರನಾಗಿ ವಿವಶನಾದ ನನ್ನನ್ನು ಮೃತ್ಯುವು ಆ ರೀತಿಯಲ್ಲಿ ಪ್ರೇರಿಸಿತು.
ತಸ್ಯಾಹಂ ವಚನಾದ್ ದಷ್ಟೋ ನ ಕೋಪೇನ ನ ಕಾಮ್ಯಯಾ |
ನ ತತ್ರ ಕಿಲ್ಬಿಷಂ ಲುಬ್ಧ ವಿದ್ಯತೇ ಮಮ ಬಾಲಿಶ ॥34॥
ಮೃತ್ಯುವಿನ ವಚನದಂತೆ ನಾನು ಈ ಬಾಲಕನನ್ನು ಕಡಿದೆ. ಕೋಪದಿಂದಾಗಲೀ ಅಥವಾ ನನ್ನ ಸ್ವಂತ ಇಚ್ಛೆಯಿಂದಾಗಲೀ ಕಡಿಯಲಿಲ್ಲ. ಎಲೈ ಬೇಡನೇ, ಬಾಲಿಶನೇ, ಇದರಲ್ಲಿ ನನ್ನ ಅಪರಾಧವು ಏನಿದೆ?
ಲುಬ್ಧಕಃ
ಯದ್ಯನ್ಯವಶಗೇನೇದಂ ಕೃತಂ ತೇ ಪನ್ನಗಾಶುಭಮ್ |
ಕಾರಣಂ ವೈ ತ್ವಮಪ್ಯತ್ರ ತಸ್ಮಾತ್ ತ್ವಮಪಿ ಕಿಲ್ಬಿಷೀ ॥35॥
ವ್ಯಾಧ ಎಲೈ ಸರ್ಪವೇ, ಇನ್ನೊಬ್ಬರಿಗೆ ವಶವಾಗಿ ನೀನು ಈ ಕಾರ್ಯವನ್ನು ಮಾಡಿದ್ದರೆ ಈ ಕಾರ್ಯವನ್ನು ಎಸಗಲು ನೀನೂ ಕಾರಣನಾದವನು. ಆದ್ದರಿಂದ ನೀನೂ ಅಪರಾಧಿಯಾಗುವಿ.
ಮೃತ್ಪಾತ್ರಸ್ಯ ಕ್ರಿಯಾಯಾಂ ಹಿ ದಂಡಚಕ್ರಾದಯೋ ಯಥಾ |
ಕಾರಣತ್ವೇ ಪ್ರಕಲ್ಪ್ಯಂತೇ ತಥಾ ತ್ವಮಪಿ ಪನ್ನಗ ॥36॥

ಮಣ್ಣಿನ ಪಾತ್ರೆಯನ್ನು ಮಾಡುವಾಗ ಕುಂಬಾರನಲ್ಲದೆ ದಂಡಚಕ್ರಾದಿಗಳು ಹೇಗೆ ಕಾರಣವಾಗುತ್ತವೆಯೋ, ಎಲೈ ಸರ್ಪವೇ, ಅದರಂತೆ ನೀನೂ ಕಾರಣನಾಗಿದ್ದೀಯೆ.
ಕಿಲ್ಬಿಷೀ ಚಾಪಿ ಮೇ ವಧ್ಯಃ ಕಿಲ್ಬಿಷೀ ಚಾಸಿ ಪನ್ನಗ |
ಆತ್ಮಾನಂ ಕಾರಣಂ ಹ್ಯತ್ರ ಸಮಾಖ್ಯಾಸಿ ಭುಜಂಗಮ ||37||
ಎಲೈ ಸರ್ಪವೇ, ಅಪರಾಧವನ್ನು ಮಾಡಿದವನು ನನ್ನಿಂದ ವಧ್ಯನಾಗುತ್ತಾನೆ. ನೀನಾದರೂ ಅಪರಾಧವನ್ನು ಮಾಡಿದವನು. ಏಕೆಂದರೆ ಎಲೈ ಸರ್ಪವೇ, ನಾನು ಕಡಿದೆನು ಎಂದು ನೀನು ಹೇಳುತ್ತಿದ್ದೀಯಷ್ಟೆ?
ಸರ್ಪಃ
ಸರ್ವ ಏತೇ ಹ್ಯಸ್ವವಶಾ ದಂಡಚಕ್ರಾದಯೋ ಯಥಾ |
ತಥಾಹಮಪಿ ತಸ್ಮಾನ್ಮೇ ನೈಷ ಹೇತುರ್ಮತಸ್ತವ ||38||
ಸರ್ಪ ಈ ದಂಡ-ಚಕ್ರಾದಿಗಳೆಲ್ಲವೂ ಅಸ್ವತಂತ್ರವಾದವುಗಳು. ಆದ್ದರಿಂದ ಅವುಗಳಿಗೆ ಹೇಗೆ ದೋಷವಿಲ್ಲವೋ, ಅದರಂತೆ ನನಗೂ ಸಹ ಈ ವಿಷಯದಲ್ಲಿ ದೋಷವಿಲ್ಲ.
ಅಥ ವಾ ಮತಮೇತತ್ ತೇ ತೇಽಪ್ಯನ್ಯೋನ್ಯಪ್ರಯೋಜಕಾಃ |
ಕಾರ್ಯಕಾರಣಸಂದೇಹೋ ಭವತ್ಯನ್ಯೋನ್ಯಚೋದನಾತ್ ||39||
ಅಥವಾ ದಂಡ-ಚಕ್ರಾದಿಗಳು ಪರಸ್ಪರವಾಗಿ ಕಾರ್ಯವನ್ನು ಕುರಿತು ಪ್ರಯೋಜಕಗಳಾಗುತ್ತವೆ ಎಂದು ನೀನು ಹೇಳುವುದಾದರೆ ಪರಸ್ಪರ ಪ್ರೇರಣೆ ಮಾಡಿದುದರಿಂದ ಯಾವುದು ಕಾರಣ, ಯಾವುದು ಕಾರಣವಲ್ಲ ಎಂಬ ಸಂದೇಹ ಉಂಟಾಗುತ್ತದೆ.
ಏವಂ ಸತಿ ನ ದೋಷೋ ಮೇ ನಾಸ್ಮಿ ವಧ್ಯೋ ನ ಕಿಲ್ಬಿಷೀ |
ಕಿಲ್ಬಿಷಂ ಮನ್ಯಸೇ ಹಿ ತ್ವಂ ವಧ್ಯಮೇವಂ ಪ್ರಭಾಷಸೇ ||40||
ಆದ್ದರಿಂದ ನನಗೆ ದೋಷವಿಲ್ಲ. ನಾನು ಅಪರಾಧವನ್ನು ಮಾಡಿಲ್ಲ. ನೀನು ಮಾತ್ರ ನಾನು ಅಪರಾಧವನ್ನು ಮಾಡಿದ್ದೇನೆ, ಆದ್ದರಿಂದ ವಧ್ಯನಾಗುತ್ತೇನೆ ಎಂದು ಹೇಳುತ್ತಿದ್ದೀಯೆ.
ಲುಬ್ಧಕಃ
ಕಾರಣಂ ಯದಿ ನ ಸ್ಯಾದ್ವೈ ನ ಕರ್ತಾ ಸ್ಯಾಸ್ತ್ವಮಪ್ಯುತ |
ವಿನಾಶೇ ಕಾರಣಂ ತ್ವಂ ಚ ತಸ್ಮಾದ್ ವಧ್ಯೋಽಸಿ ಮೇ ಮತಃ ||41||
ವ್ಯಾಧ ಒಂದು ಕ್ರಿಯೆಯನ್ನು ಕುರಿತು ಸ್ವತಂತ್ರವಾದ ಕಾರಣವು ಇಲ್ಲವೆಂದಾದರೆ ಆಗ ನೀನು ಕರ್ತೃವಾಗುತ್ತಿರಲಿಲ್ಲ. `ಸ್ವತಂತ್ರಃ ಕರ್ತಾ' ಎಂದು ಸ್ಮೃತಿಯಿದೆಯಷ್ಟೆ? ಆದ್ದರಿಂದ ನೀನೂ ಸಹ ವಿಶೇಷ ಕಾರಣನಲ್ಲದಿದ್ದರೂ ದಂಡ-ಚಕ್ರಾದಿಗಳಂತೆ ಸಾಮಾನ್ಯಕಾರಣನಾದವನು. ಆದ್ದರಿಂದ ನನ್ನ ಅಭಿಪ್ರಾಯದಲ್ಲಿ ವಧ್ಯನಾದವನು. (ಲಕ್ಷಾಲಂಕಾರ).
ಅಸತ್ಯಪಿಕೃತೇ ಕಾರ್ಯೇ ನೇಹ ಪನ್ನಗ ಲಿಪ್ಯತೇ |
ತಸ್ಮಾತ್ತ್ವಂ ನಾತ್ರ ಹೇತುಃ ಸ್ಯಾದ್ ವಧ್ಯಃ ಕಿಂ ಬಹು ಭಾಷಸೇ ||42||
ಎಲೈ ಸರ್ಪವೇ, ನೀನೊಬ್ಬನೇ ಮಾಡಿದ ದಂಶನರೂಪವಾದ ಕಾರ್ಯವಿಲ್ಲದಿದ್ದರೆ ನೀನೂ ಅಪರಾಧಿಯಾಗುತ್ತಿರಲಿಲ್ಲ. ಆಗ ನೀನು ಈ ಮರಣಕ್ಕೆ ಕಾರಣನೂ ಆಗುತ್ತಿರಲಿಲ್ಲ. ವಧ್ಯನಾದ ನೀನು ಏಕೆ ಬಹಳವಾಗಿ ಮಾತನಾಡುತ್ತಿದ್ದೀಯೆ?
ಕಾರ್ಯಾಭಾವೇ ಕ್ರಿಯಾ ನ ಸ್ಯಾತ್ಸತ್ಯಸತ್ಯಪಿ ಕಾರಣೇ |
ಸ ಮೇ ತ್ವಮತ್ರ ಹೇತೌ ಮೇ ವಾಚ್ಯೋ ಹೇತುರ್ವಿಶೇಷತಃ ||43||
ಕಾರಣವು ಇದ್ದರೂ ಅಥವಾ ಇಲ್ಲದಿದ್ದರೂ ಕಾರಣದ ವ್ಯಾಪಾರವಿಲ್ಲದಿದ್ದರೆ ಕಾರ್ಯವು ಉಂಟಾಗುವುದಿಲ್ಲ. ಅನೇಕ ಕಾರಣವಿರುವ ಈ ಬ್ರಹ್ಮವಧೆ ರೂಪ ಕಾರ್ಯದಲ್ಲಿ ನೀನು ಪ್ರತ್ಯಕ್ಷವಾಗಿ ದಂಶನವನ್ನು ಮಾಡಿರುವುದರಿಂದ ವಿಶೇಷ ಕಾರಣನಾಗಿದ್ದೀಯೆ.
ಸರ್ಪಃ
ಯದ್ಯಹಂ ಕಾರಣತ್ವೇನ ಮತೋ ಲುಬ್ಧಕ ತತ್ತ್ವತಃ |
ಅನ್ಯಃ ಪ್ರಯೋಕ್ತಾ ಸ್ಯಾದತ್ರ ಕಿಲ್ಬಿಷೀ ಜಂತುನಾಶನೇ ||44||
ಸರ್ಪ ಎಲೈ ವ್ಯಾಧನೇ, ನೀನು ನನ್ನನ್ನು ಬ್ರಹ್ಮವಧೆಗೆ ಕಾರಣವೆಂದು ಹೇಳುವುದಾದರೆ ಅಲ್ಲಲ್ಲಿ ಪ್ರಾಣಿಗಳು ಸಹಜವಾಗಿ ಮರಣವನ್ನು ಹೊಂದುವಾಗ ಬೇರೆ ಇನ್ನೊಬ್ಬನನ್ನು ಕಾರಣನೆಂದು ಹೇಳಬೇಕಾದೀತು.
ಲುಬ್ಧಕಃ
ವಧ್ಯಸ್ತ್ವಂ ಮಮ ದುರ್ಬುದ್ಧೇ ಬಾಲಘಾತೀ ನೃಶಂಸಕೃತ್ |
ಭಾಷಸೇ ಕಿಂ ಪುನಸ್ತ್ವಂ ತು ವಧ್ಯಃ ಸನ್ ಪನ್ನಗಾಧಮ ||45||
ವ್ಯಾಧ ಎಲೈ ದುರ್ಬುದ್ಧಿಯೇ, ಬಾಲಹತ್ಯೆ ರೂಪವಾದ ಕ್ರೂರಕರ್ಮವನ್ನು ಮಾಡಿದ ನೀನು ನನ್ನಿಂದ ವಧ್ಯನಾದವನು. ಎಲೈ ಪನ್ನಗಾಧಮನೇ, ವಧ್ಯನಾದ ನೀನು ಏಕೆ ಬಹಳ ಮಾತನಾಡುತ್ತಿದ್ದೀಯೆ?
ಸರ್ಪಃ
ಯಥಾ ಹವೀಂಷಿ ಜುಹ್ವಾನಾ ಅಗ್ನೌ ವೈ ಲುಬ್ಧಕರ್ತ್ವಿಜಃ |
ನ ಫಲಂ ಪ್ರಾಪ್ನುವಂತ್ಯತ್ರ ಫಲಯೋಗಾತ್ ತಥಾ ಹ್ಯಹಮ್ ||46||
ಸರ್ಪ ಎಲೈ ಬೇಡನೇ, ಅಗ್ನಿಯಲ್ಲಿ ಹೋಮವನ್ನು ಮಾಡುವ ಋತ್ವಿಜರು ಸ್ವರ್ಗರೂಪವಾದ ಫಲವನ್ನು ಪಡೆಯುವುದಿಲ್ಲ. ಯಜಮಾನನು ಸ್ವರ್ಗವನ್ನು ಪಡೆಯುತ್ತಾನೆ. ನಾನೂ ಸಹ ಅವನಂತೆ.
ಭೀಷ್ಮಃ
ತಥಾ ಬ್ರುವತಿ ತಸ್ಮಿಂಸ್ತು ಪನ್ನಗೇ ಮೃತ್ಯುಚೋದಿತೇ |

ಆಜಗಾಮ ತತೋ ಮೃತ್ಯುಃ ಪನ್ನಗಂ ಚಾಬ್ರವೀದಿದಮ್ ॥47॥
ಭೀಷ್ಮರು ಮೃತ್ಯುಚೋದಿತವಾದ ಆ ಸರ್ಪವು ಹಾಗೆ ಮಾತನಾಡುತ್ತಿರಲು ಆಗ ಅಲ್ಲಿಗೆ ಮೃತ್ಯುವು (ಮೃತ್ಯುದೇವತೆ) ಬಂದು ಸರ್ಪವನ್ನು ಕುರಿತು ಮಾತನಾಡಿದನು.
ಕಾಲೇನಾಹಂ ಪ್ರಣುದಿತಃ ಪನ್ನಗ ತ್ವಾಮಚೂಚುದಮ್ |
ವಿನಾಶಹೇತುರ್ನಾಸ್ಯ ತ್ವಮಹಂ ವಾ ಪ್ರಾಣಿನಃ ಶಿಶೋಃ ॥48॥
ಎಲೈ ಸರ್ಪವೇ, ಕಾಲದಿಂದ ಪ್ರೇರಿತನಾಗಿ ನಾನು ನಿನಗೆ ಪ್ರಚೋದನೆಯನ್ನು ಮಾಡಿದೆ. ಈ ಶಿಶುವಿನ ಮರಣವನ್ನು ಕುರಿತು ನಾನಾಗಲೀ ಅಥವಾ ನೀನಾಗಲೀ ಕಾರಣರಲ್ಲ.
ಯಥಾ ವಾಯುರ್ಬಲೋಪೇತೋ ವಿಕರ್ಷತಿ ಜಲಪ್ರದಾನ್ |
ತದ್ವಜ್ಜಲದವಚ್ಚಾಹಂ ಕಾಲಸ್ಯಾಹಂ ವಶಾನುಗಃ ॥49॥
ಹೇಗೆ ಪ್ರಬಲವಾದ ವಾಯುವು ಮೋಡಗಳನ್ನು ಎಳೆದುಕೊಂಡು ಹೋಗುತ್ತದೆಯೋ ಅದರಂತೆ ನಾನು ಆ ಮೋಡದಂತೆ ಕಾಲಕ್ಕೆ ವಶನಾದವನು.
ಸಾತ್ತಿತ್ವಕಾ ರಾಜಸಾಶ್ಚೈವ ತಾಮಸಾಶ್ಚೈವ ಕೇಚನ |
ಭಾವಾಃ ಕಾಲಾತ್ಮಕಾಃ ಸರ್ವೇ ಪ್ರವರ್ತಂತೇ ಹಿ ಜಂತುಷು ॥50॥
ಪ್ರಾಣಿಗಳಲ್ಲಿ ಉಂಟಾಗುವ ಸಾತ್ವಿಕ, ರಾಜಸ, ತಾಮಸ ಅಭಿಪ್ರಾಯಗಳು ಏನಿವೆಯೋ ಅವೆಲ್ಲವೂ ಕಾಲಕ್ಕೆ ಅಧೀನವಾದವುಗಳು.
ಜಂಗಮಾಃ ಸ್ಥಾವರಾಶ್ಚೈವ ದಿವಿ ವಾ ಯದಿ ವಾ ಭುವಿ |
ಸರ್ವೇ ಕಾಲಾತ್ಮಕಾಃ ಸರ್ಪ ಕಾಲಾತ್ಮಕಮಿದಂ ಜಗತ್ ॥51॥
ಎಲೈ ಸರ್ಪವೇ, ದೇವಲೋಕದಲ್ಲಿ ಅಥವಾ ಭೂಲೋಕದಲ್ಲಿ ಇರುವ ಸ್ಥಾವರ-ಜಂಗಮ ಪ್ರಾಣಿಗಳು ಎಲ್ಲವೂ ಕಾಲಕ್ಕೆ ವಶವಾದವುಗಳು. ಈ ಜಗತ್ತೇ ಕಾಲಕ್ಕೆ ವಶವಾಗಿದೆ.
ಪ್ರವೃತ್ತಯಶ್ಚ ಯಾ ಲೋಕೇ ತಥೈವ ಚ ನಿವೃತ್ತಯಃ |
ತಾಸಾಂ ಪ್ರಕೃತಯೋ ಯಾಶ್ಚ ಸರ್ವಂ ಕಾಲಾತ್ಮಕಂ ಸ್ಮೃತಮ್ ॥52॥
ಈ ಜಗತ್ತಿನಲ್ಲಿರುವ ಪ್ರವೃತ್ತಿಗಳು, ನಿವೃತ್ತಿಗಳು ಮತ್ತು ಅವುಗಳ ಸ್ವಭಾವಗಳು ಎಲ್ಲವೂ ಕಾಲಕ್ಕೆ ಅಧೀನವೆಂದು ಹೇಳಲ್ಪಡುತ್ತವೆ.
ಆದಿತ್ಯಶ್ಚಂದ್ರಮಾ ವಿಷ್ಣುರಾಪೋ ವಾಯುಃ ಶತಕ್ರತುಃ |
ಅಗ್ನಿಃ ಖಂ ಪೃಥಿವೀ ಮಿತ್ರ ಓಷಧ್ಯೋ ಮರುತೋ ದಿಶಃ ॥53॥
ಸರಿತಃ ಸಾಗರಾಶ್ಚೈವ ಭಾವಾಭಾವೌ ಚ ಪನ್ನಗ |
ಸರ್ವೇ ಕಾಲೇನ ಸೃಜ್ಯಂತೇ ಹ್ರಿಯಂತೇ ಚ ತಥಾ ಪುನಃ ॥54॥
ಸೂರ್ಯ, ಚಂದ್ರ, ವಿಷ್ಣು, ಜಲ, ವಾಯು, ಇಂದ್ರ, ಅಗ್ನಿ, ಆಕಾಶ, ಪೃಥಿವಿ, ಮಿತ್ರ, ಓಷಧಿಗಳು, ಮರುತ್ತುಗಳು, ದಿಕ್ಕುಗಳು, ನದಿಗಳು, ಸಾಗರಗಳು, ಶುಭಾಶುಭಗಳು- ಎಲೈ ಸರ್ಪವೇ, ಎಲ್ಲವೂ ಕಾಲದಿಂದ ಸೃಷ್ಟಿಸಲ್ಪಡುತ್ತವೆ, ಕಾಲದಿಂದಲೇ ವಿನಾಶಗೊಳಿಸಲ್ಪಡುತ್ತವೆ.
ಏವಂ ಜ್ಞಾತ್ವಾ ಕಥಂ ಮಾಂ ತ್ವಂ ಸದೋಷಂ ಸರ್ಪ ಮನ್ಯಸೇ |
ಅಥ ಚೈವಂಗತೇ ದೋಷೋ ಮಯಿ ತ್ವಮಪಿ ದೋಷವಾನ್ ॥55॥
ಎಲೈ ಸರ್ಪವೇ, ಹೀಗಿರುವಾಗ ನೀನು ನನ್ನಲ್ಲಿ ಹೇಗೆ ದೋಷವನ್ನು ಎಣಿಸುತ್ತೀಯೆ? ಹೀಗಿದ್ದರೂ ನಾನು ದೋಷಿಯಾಗುವುದಾದರೆ ನೀನೂ ಸಹ ದೋಷಿಯಾಗುವಿ.
ಸರ್ಪಃ
ನಿರ್ದೋಷಂ ದೋಷವಂತಂ ವಾ ನ ತ್ವಾ ಮೃತ್ಯೋ ಬ್ರವೀಮ್ಯಹಮ್ |
ತ್ವಯಾಹಂ ಚೋದಿತ ಇತಿ ಬ್ರವೀಮ್ಯೇತಾವದೇವ ತು ॥56॥
ಸರ್ಪ ಎಲೈ ಮೃತ್ಯುವೇ, ನಾನು ನಿನ್ನನ್ನು ನಿರ್ದೋಷಿ ಎಂದಾಗಲೀ ಅಥವಾ ದೋಷಿ ಎಂದಾಗಲೀ ಹೇಳುತ್ತಿಲ್ಲ. ನಾನು ನಿನ್ನಿಂದ ಪ್ರೇರಿಸಲ್ಪಟ್ಟೆನು ಎಂದಿಷ್ಟು ಮಾತ್ರ ಹೇಳುತ್ತಿದ್ದೇನೆ.
ಯದಿ ಕಾಲೇ ತು ದೋಷೋಽಸ್ತಿ ಯದಿ ತತ್ರಾಪಿ ನೇಷ್ಯತೇ |
ದೋಷೋ ನೈವ ಪರೀಕ್ಷ್ಯೋ ಮೇ ನ ಹ್ಯತ್ರಾಧಿಕೃತಾ ವಯಮ್ ॥57॥
ಕಾಲದಲ್ಲಿಯೂ ದೋಷವಿದ್ದರೆ ಅಥವಾ ಇಲ್ಲದಿದ್ದರೆ ಆಗ ದೋಷಪರೀಕ್ಷೆಗೆ ಹೋಗಬಾರದು.ದೋಷದ ಚಿಂತೆಯನ್ನು ಮಾಡಲು ನಾವು ಅಧಿಕಾರಿಗಳಲ್ಲ.
ನಿರ್ಮೋಕ್ಷಸ್ತ್ವಸ್ಯ ದೋಷಸ್ಯ ಮಯಾ ಕಾರ್ಯೋ ಯಥಾ ತಥಾ |
ಮೃತ್ಯೋ ವಿದೋಷಃ ಸ್ಯಾಮೇವ ಯಥಾ ತನ್ಮೇ ಪ್ರಯೋಜನಮ್ ॥
ಎಲೈ ಮೃತ್ಯುವೇ, ನಾನು ಈ ದೋಷದಿಂದ ಹೇಗಾದರೂ ನಿವೃತ್ತಿಯನ್ನು ಹೊಂದಬೇಕು. ಅದು ನನಗೆ ಪ್ರಯೋಜನ.
ಭೀಷ್ಮಃ
ಸರ್ಪೋಽಥಾರ್ಜುನಕಂ ಪ್ರಾಹ ಶ್ರುತಂ ತೇ ಮೃತ್ಯುಭಾಷಿತಮ್ |
ನಾನಾಗಸಂ ಮಾಂ ಪಾಶೇನ ಸಂತಾಪಯಿತುಮರ್ಹಸಿ ॥59॥
ಭೀಷ್ಮರು ಆಗ ಸರ್ಪವು ಅರ್ಜುನಕನನ್ನು ಕುರಿತು, ಮೃತ್ಯುವಿನ ಮಾತನ್ನು ನೀನು ಕೇಳಿದೆ. ನಿರಪರಾಧಿಯಾದ ನನ್ನನ್ನು ಹಗ್ಗದಿಂದ ಬಿಗಿದು ಪೀಡಿಸಬೇಡ ಎಂದು ಹೇಳಿತು.
ಲುಬ್ಧಕಃ
ಮೃತ್ಯೋಃ ಶ್ರುತಂ ಮೇ ವಚನಂ ತವ ಚೈವ ಭುಜಂಗಮ |

ನೈವ ತಾವದ್ ವಿದೋಷತ್ವಂ ಭವತಿ ತ್ವಯಿ ಪನ್ನಗ ॥60॥
ವ್ಯಾಧ ಎಲೈ ಸರ್ಪವೇ, ನಾನು ಮೃತ್ಯುವಿನ ಮಾತುಗಳನ್ನು ಮತ್ತು ನಿನ್ನ ಮಾತನ್ನು ಕೇಳಿದೆ. ಎಲೈ ಸರ್ಪವೇ, ಆದರೂ ನೀನು ನಿರಪರಾಧಿಯಾಗುವುದಿಲ್ಲ.
ಮೃತ್ಯುಸ್ತ್ವಂ ಚೈವ ಹೇತುರ್ಹಿ ಜಂತೋರಸ್ಯ ವಿನಾಶನೇ |
ಉಭಯಂ ಕಾರಣಂ ಮನ್ಯೇ ನ ಕಾರಣಮಕಾರಣಮ್ ॥61॥
ಈ ಬಾಲಕನ ಮರಣವನ್ನು ಕುರಿತು ಮೃತ್ಯು ಮತ್ತು ನೀನು ಇಬ್ಬರೂ ಕಾರಣರಾದವರು ಎಂದು ನಾನು ತಿಳಿಯುತ್ತೇನೆ. ಕಾರಣವಿಲ್ಲದೆ ಒಂದು ಕಾರ್ಯವು ಉಂಟಾಗುವುದಿಲ್ಲ. ಕಾರಣವನ್ನು ಕಾರಣವಲ್ಲ ಎಂದು ಹೇಳಲು ಆಗುವುದಿಲ್ಲ.
ಮೃತ್ಯುಂ ತ್ವಧಿಗಮಿಷ್ಯಾಮಿ ಧ್ರುವಂ ದುಃಖಕರಂ ಸತಾಮ್ |
ತ್ವಾಂ ಚೈವಾಹಂ ವಧಿಷ್ಯಾಮಿ ಪಾಪಂ ಪಾಪಸ್ಯ ಕಾರಣಮ್ ॥62॥
ಮೃತ್ಯುವನ್ನು ಸಜ್ಜನರಿಗೆ ನಿಶ್ಚಿತವಾಗಿ ದುಃಖವನ್ನು ಕೊಡುವವನು ಎಂದು ತಿಳಿಯುತ್ತೇನೆ. ಈ ಪಾಪಕಾರ್ಯಕ್ಕೆ ಕಾರಣನಾದ ನಿನ್ನನ್ನು ಮಾತ್ರ ನಾನು ಕೊಲ್ಲುತ್ತೇನೆ.
ಮೃತ್ಯುಃ
ವಿವಶೌ ಕಾಲವಶಗಾವಾವಾಂ ತದ್ದಿಷ್ಟಕಾರಿಣೌ |
ನಾವಾಂ ದೋಷೇಣ ಮಂತವ್ಯೌ ಯದಿ ಸಮ್ಯಕ್ ಪ್ರಪಶ್ಯಸಿ ॥63॥
ಮೃತ್ಯು ಕಾಲವಶರಾದ ನಾವಿಬ್ಬರೂ ಅದೃಷ್ಟಪ್ರೇರಿತರಾದವರು. ನಿನಗೆ ಸರಿಯಾದ ಜ್ಞಾನವಿದ್ದರೆ ನಮ್ಮನ್ನು ದೋಷಿಗಳೆಂದು ಎಣಿಸಬಾರದು.
ಲುಬ್ಧಕಃ
ಯುವಾಮುಭೌ ಕಾಲವಶೌ ಯದಿ ವೈ ಮೃತ್ಯುಪನ್ನಗೌ |
ಹರ್ಷಕ್ರೋಧೌ ಕಥಂ ಸ್ಯಾತಾಮೇತದಿಚ್ಛಾಮಿ ವೇದಿತುಮ್ ॥64॥
ವ್ಯಾಧ ಎಲೈ ಮೃತ್ಯು-ಸರ್ಪಗಳೇ, ನೀವಿಬ್ಬರೂ ಕಾಲವಶರಾದರೆ ಪ್ರಾಣಿಗಳಿಗೆ ಉಂಟಾಗುವ ಹರ್ಷ-ಕ್ರೋಧಗಳಿಗೆ ಏನು ಕಾರಣವೆಂದು ತಿಳಿಯಲು ಬಯಸುತ್ತೇನೆ.
ಮೃತ್ಯುಃ
ಯಾಃ ಕಾಶ್ಚಿದಿಹ ಚೇಷ್ಟಾಃ ಸ್ಯುಃ ಸರ್ವಾಃ ಕಾಲವಶಾನುಗಾಃ |
ಪೂರ್ವಮೇವೈತದುಕ್ತಂ ಹಿ ಮಯಾ ಲುಬ್ಧಕ ಕಾಲತಃ ॥65॥
ಮೃತ್ಯು ಎಲೈ ಬೇಡನೇ, ಪ್ರಾಣಿಗಳಿಗೆ ಇಲ್ಲಿ ಯಾವ ಭಾವವುಂಟಾಗುತ್ತದೆಯೋ ಅವೆಲ್ಲವೂ ಕಾಲವಶವಾದವುಗಳು ಎಂದು ನಾನು ಮೊದಲೇ ಈ ವಿಷಯವನ್ನು ಹೇಳಿದ್ದೇನೆ.
ತಸ್ಮಾದುಭೌ ಕಾಲವಶಾವಾವಾಂ ತದ್ದಿಷ್ಟಕಾರಿಣೌ |
ನಾವಾಂ ದೋಷೇಣ ಗಂತವ್ಯೌ ತ್ವಯಾ ಲುಬ್ಧಕ ಕರ್ಹಿಚಿತ್ ॥66॥
ಆದ್ದರಿಂದ ಕಾಲಕ್ಕೆ ವಶರಾದ, ಕಾಲದ ಪ್ರೇರಣೆಯಂತೆ ಕಾರ್ಯವನ್ನು ಮಾಡುವ ನಮ್ಮಿಬ್ಬರನ್ನೂ ಎಲೈ ಅರ್ಜುನಕನೇ, ನೀನು ಯಾವ ಕಾರಣದಿಂದಲೂ ಅಪರಾಧಿಗಳೆಂದು ಎಣಿಸಬಾರದು.
ಭೀಷ್ಮಃ
ಅಥೋಪಗಮ್ಯ ಕಾಲಸ್ತು ತಸ್ಮಿನ್ ಧರ್ಮಾರ್ಥಸಂಶಯೇ |
ಅಬ್ರವೀತ್ ಪನ್ನಗಂ ಮೃತ್ಯುಂ ಲುಬ್ಧಮರ್ಜುನಕಂ ಚ ತಮ್ ॥67॥
ಭೀಷ್ಮರು ಆಗ ಧರ್ಮಾರ್ಥಗಳ ಸಂಶಯವು ಉಂಟಾಗುತ್ತಿರುವಾಗ ಕಾಲದೇವತೆಯು ಸ್ವತಃ ಬಂದು ಸರ್ಪವನ್ನೂ, ಮೃತ್ಯುವನ್ನೂ ಮತ್ತು ಬೇಡನಾದ ಅರ್ಜುನಕನನ್ನೂ ಕುರಿತು ಮಾತನಾಡಿದನು.
ಕಾಲಃ
ನೈವಾಹಂ ನಾಪ್ಯಯಂ ಮೃತ್ಯುರ್ನಾಯಂ ಲುಬ್ಧಕ ಪನ್ನಗಃ |
ಕಿಲ್ಬಿಷೀ ಜಂತುಮರಣೇ ನ ವಯಂ ಹಿ ಪ್ರಯೋಜಕಾಃ ॥68॥
ಕಾಲ ಎಲೈ ಬೇಡನೇ, ನಾನಾಗಲೀ, ಈ ಮೃತ್ಯುವಾಗಲೀ, ಈ ಬೇಡನಾಗಲೀ ಅಥವಾ ಈ ಸರ್ಪವಾಗಲೀ, ಈ ಬಾಲಕನ ಮರಣವನ್ನು ಕುರಿತು ಅಪರಾಧಿಗಳಲ್ಲ. ಏಕೆಂದರೆ ನಾವು ಈ ಮರಣಕ್ಕೆ ಪ್ರಯೋಜಕರಲ್ಲ.
ಅಕರೋದ್ ಯದಯಂ ಕರ್ಮ ತನ್ನೋಽರ್ಜುನಕ ಚೋದಕಮ್ |
ಪ್ರಣಾಶಹೇತುರ್ನಾನ್ಯೋಽಸ್ಯ ವಧ್ಯತೇಽಯಂ ಸ್ವಕರ್ಮಣಾ ॥69॥
ಎಲೈ ಅರ್ಜುನಕನೇ, ಈ ಬಾಲಕನು ಹಿಂದೆ ಯಾವ ಕರ್ಮವನ್ನು ಮಾಡಿದ್ದಾನೆಯೋ ಅದು ನಮಗೆ ಪ್ರಚೋದಕವಾದುದು. ಅದನ್ನು ಬಿಟ್ಟು ಅವನ ಮರಣಕ್ಕೆ ಬೇರೆ ಕಾರಣವಿಲ್ಲ. ಬಾಲಕನು ತನ್ನ ಕರ್ಮದಿಂದಲೇ ಮರಣವನ್ನು ಹೊಂದಿದ್ದಾನೆ.
ಯದನೇನ ಕೃತಂ ಕರ್ಮ ತೇನಾಯಂ ನಿಧನಂ ಗತಃ |
ವಿನಾಶಹೇತುಃ ಕರ್ಮಾಸ್ಯ ಸರ್ವೇ ಕರ್ಮವಶಾ ವಯಮ್ ॥70॥
ಇವನು ಮಾಡಿದ ಕರ್ಮದಿಂದ ನಿಧನವನ್ನು ಹೊಂದಿದನು. ಇವನ ವಿನಾಶವನ್ನು ಕುರಿತು ಕರ್ಮವೇ ಕಾರಣ. ಎಲ್ಲರೂ ಕರ್ಮವಶರಾದವರು.
ಕರ್ಮದಾಯಾದವಾಲ್ಲೋಕಃ ಕರ್ಮಸಂಬಂಧಲಕ್ಷಣಃ |
ಕರ್ಮಾಣಿ ಚೋದಯಂತೀಹ ಯಥಾನ್ಯೋನ್ಯಂ ತಥಾ ವಯಮ್ ॥

ಪ್ರಾಣಿಯು ಜನಿಸುವಾಗ ಕರ್ಮಗಳನ್ನು ತೆಗೆದುಕೊಂಡೇ ಹುಟ್ಟುತ್ತಾನೆ. ಕರ್ಮಸಂಬಂಧವು ಯಾವಾಗಲೂ ಅವನಿಗೆ ಇದ್ದೇ ಇದೆ. ಆ ಕರ್ಮಗಳು ಅವನಿಗೆ ಪರಸ್ಪರವಾಗಿ ಪ್ರಚೋದಿಸುತ್ತವೆ. ಅದರಂತೆ ನಾವೂ ಸಹ.
ಯಥಾ ಮೃತ್ಪಿಂಡತಃ ಕರ್ತಾ ಕುರುತೇ ಯದ್ಯದಿಚ್ಛತಿ |
ಏವಮಾತ್ಮಕೃತಂ ಕರ್ಮ ಮಾನವಃ ಪ್ರತಿಪದ್ಯತೇ ॥72॥
ಹೇಗೆ ಕುಂಬಾರನು ಮಣ್ಣಿನ ಮುದ್ದೆಯಿಂದ ತನಗಿಷ್ಟವಾದ ಬೇರೆ ಬೇರೆ ಆಕಾರಗಳನ್ನು ಸೃಷ್ಟಿಸುತ್ತಾನೆಯೋ ಅದರಂತೆ ಮನುಷ್ಯನೂ ಸಹ ತಾನು ಮಾಡಿದ ಕರ್ಮಗಳಿಂದ ಬೇರೆ ಬೇರೆ ಆಕಾರಗಳನ್ನು ತಾಳುತ್ತಾನೆ.
ಯಥಾ ಛಾಯಾತಪೌ ನಿತ್ಯಂ ಸುಸಂಬದ್ಧೌ ನಿರಂತರಮ್ |
ತಥಾ ಕರ್ಮ ಚ ಕರ್ತಾ ಚ ಸಂಬದ್ಧಾವಾತ್ಮಕರ್ಮಭಿಃ ॥73॥
ಹೇಗೆ ನೆರಳು ಮತ್ತು ಬಿಸಿಲು ನಿರಂತರವಾಗಿ ಸಂಬಂಧವನ್ನು ಹೊಂದಿರುತ್ತವೆಯೋ ಹಾಗೆಯೇ ಕರ್ತೃವಾದ ಜೀವನೂ ಮತ್ತು ಅವನ ಕರ್ಮವೂ ನಿರಂತರವಾಗಿ ಸಂಬಂಧವನ್ನು ಹೊಂದಿರುತ್ತವೆ.
ಏವಂ ನಾಹಂ ನ ವೈ ಮೃತ್ಯುರ್ನ ಸರ್ಪೋ ನ ತಥಾ ಭವಾನ್ |
ನ ಚೇಯಂ ಬ್ರಾಹ್ಮಣೀ ವೃದ್ಧಾ ಶಿಶುರೇವಾತ್ರ ಕಾರಣಮ್ ॥74॥
ಆದ್ದರಿಂದ ನಾನಾಗಲೀ, ಮೃತ್ಯುವಾಗಲೀ, ಸರ್ಪವಾಗಲೀ, ನೀನಾಗಲೀ ಅಥವಾ ವೃದ್ಧಬ್ರಾಹ್ಮಣಿಯಾಗಲೀ ಕಾರಣರಲ್ಲ. ತನ್ನ ಮರಣವನ್ನು ಕುರಿತು ಈ ಶಿಶುವೇ ಕಾರಣ.
ತಸ್ಮಿಂಸ್ತಥಾ ಬ್ರುವಾಣೇ ತು ಬ್ರಾಹ್ಮಣೀ ಗೌತಮೀ ನೃಪ |
ಸ್ವಕರ್ಮಪ್ರತ್ಯಯಾಲ್ಲೋಕಾನ್ ಮತ್ವಾಽರ್ಜುನಕಮಬ್ರವೀತ್ ॥75॥
ಎಲೈ ರಾಜನೇ, ಕಾಲದೇವತೆಯು ಹಾಗೆ ಹೇಳುತ್ತಿರಲು ಬ್ರಾಹ್ಮಣಿಯಾದ ಗೌತಮಿಯು, ಪ್ರಾಣಿಗಳು ತಮ್ಮ ಕರ್ಮಗಳಿಂದ ಸಂಪಾದಿಸಿದ ಸುಖ-ದುಃಖಗಳನ್ನು ಹೊಂದುತ್ತಾರೆಂದು ತಿಳಿದು, ಅರ್ಜುನಕನನ್ನು ಕುರಿತು ಹೇಳಿದಳು.
ನೈವ ಕಾಲೋ ನ ಭುಜಗೋ ನ ಮೃತ್ಯುರಿಹ ಕಾರಣಮ್ |
ಸ್ವಕರ್ಮಭಿರಯಂ ಬಾಲಃ ಕಾಲೇನ ನಿಧನಂ ಗತಃ ॥76॥
ಕಾಲವಾಗಲೀ, ಸರ್ಪವಾಗಲೀ, ಮೃತ್ಯುವಾಗಲೀ ಈ ಮರಣವನ್ನು ಕುರಿತು ಕಾರಣರಲ್ಲ. ಈ ಬಾಲಕನು ತಾನು ಮಾಡಿದ ಕರ್ಮದಿಂದಾಗಿ ಅನುರೂಪವಾದ ಕಾಲದಲ್ಲಿ ನಿಧನವನ್ನು ಹೊಂದಿದ್ದಾನೆ.
ಮಯಾ ಚ ತತ್ಕೃತಂ ಕರ್ಮ ಯೇನಾಯಂ ಮೇ ಸುತೋ ಹತಃ |
ಯಾತು ಕಾಲಸ್ತಥಾ ಮೃತ್ಯುರ್ಮುಂಚಾರ್ಜುನಕ ಪನ್ನಗಮ್ ॥77॥
ನಾನೂ ಸಹ ಪುತ್ರನನ್ನು ಕಳೆದುಕೊಳ್ಳುವಂತಹ ದುಷ್ಕರ್ಮವನ್ನು ಮಾಡಿದ್ದೇನೆ. ಈ ಕಾಲವೂ ಮತ್ತು ಮೃತ್ಯುವೂ ತಮ್ಮ ಮಾರ್ಗವನ್ನು ಹಿಡಿದು ಹೋಗಲಿ. ಎಲೈ ಅರ್ಜುನಕನೇ, ಸರ್ಪವನ್ನು ಬಿಟ್ಟುಬಿಡು.
ಭೀಷ್ಮಃ
ತತೋ ಯಥಾಗತಂ ಜಗ್ಮುರ್ಮೃತ್ಯುಃ ಕಾಲೋಽಥ ಪನ್ನಗಃ |
ಅಭೂದ್ ವಿರೋಷೋಽರ್ಜುನಕೋ ವಿಶೋಕಾ ಚೈವ ಗೌತಮೀ ॥78॥
ಭೀಷ್ಮರು ಆಗ ಮೃತ್ಯು-ಕಾಲ ಮತ್ತು ಸರ್ಪಗಳು ಬಂದಂತೆಯೇ ಹೊರಟು ಹೋದವು. ಅರ್ಜುನಕನು ರೋಷವನ್ನು ಕಳೆದುಕೊಂಡು ಶಾಂತನಾದನು. ಗೌತಮಿಯೂ ಶೋಕರಹಿತಳಾದಳು.
ಏತಚ್ಛ್ರುತ್ವಾ ಶಮಂ ಗಚ್ಛ ಮಾ ಭೂಶ್ಚಿಂತಾಪರೋ ನೃಪ |
ಸ್ವಕರ್ಮಪ್ರತ್ಯಯಾಲ್ಲೋಕಾಂಸ್ತ್ರೀನ್ ವಿದ್ಧಿ ಮನುಜರ್ಷಭ ॥79॥
ಎಲೈ ರಾಜನೇ, ಇದನ್ನು ಕೇಳಿ ಶಾಂತಿಯನ್ನು ಹೊಂದು. ಚಿಂತೆಯನ್ನು ಮಾಡಬೇಡ. ಎಲೈ ಮನುಜರ್ಷಭನೇ, ಮೂರುಲೋಕಗಳೂ ಸಹ ಜೀವರು ತಮ್ಮ ಕರ್ಮಗಳಿಂದ ಸಂಪಾದನೆ ಮಾಡಿದವುಗಳು ಎಂದು ತಿಳಿ.
ನ ತು ತ್ವಯಾ ಕೃತಂ ಪಾರ್ಥ ನಾಪಿ ದುರ್ಯೋಧನೇನ ವೈ |
ಕಾಲೇನ ತತ್ಕೃತಂ ವಿದ್ಧಿ ವಿಹತಾ ಯೇನ ಪಾರ್ಥಿವಾಃ ॥80॥
ಎಲೈ ಪಾರ್ಥನೇ, ಇಷ್ಟುಮಂದಿ ರಾಜರು ಮೃತರಾದುದಕ್ಕೆ ನೀನಾಗಲೀ ಅಥವಾ ದುರ್ಯೋಧನನಾಗಲೀ ಕಾರಣರಲ್ಲ. ಅದು ಕಾಲದಿಂದ ಉಂಟಾದುದೆಂದು ತಿಳಿ.
ವೈಶಂಪಾಯನಃ
ಇತ್ಯೇತದ್ವಚನಂ ಶ್ರುತ್ವಾ ಬಭೂವ ವಿಗತಜ್ವರಃ |
ಯುಧಿಷ್ಠಿರೋ ಮಹಾತೇಜಾಃ ಪಪ್ರಚ್ಛೇದಂ ಸ್ವಧರ್ಮವಿತ್ ॥81॥
ವೈಶಂಪಾಯನ ಮಹಾತೇಜಸ್ವಿಯಾದ ಯುಧಿಷ್ಠಿರನು ಈ ಮಾತುಗಳನ್ನು ಕೇಳಿ, ತನ್ನ ಧರ್ಮವನ್ನು ತಿಳಿದು, ಚಿಂತೆಯನ್ನು ಬಿಟ್ಟು ಈ ಪ್ರಶ್ನೆಯನ್ನು ಮಾಡಿದನು.
॥ ಇತಿ ಶ್ರೀಮಹಾಭಾರತೇ ಆನುಶಾಸನಿಕಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಸುದರ್ಶನೋಪಾಖ್ಯಾನ
ಯುಧಿಷ್ಠಿರಃ

ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಶ್ರುತಂ ಮೇ ಮಹದಾಖ್ಯಾನಮಿದಂ ಮತಿಮತಾಂ ವರ ||1||
ಯುಧಿಷ್ಠಿರ ಮಹಾಪ್ರಾಜ್ಞನಾದ, ಸರ್ವಶಾಸ್ತ್ರವಿಶಾರದನಾದ, ಮೇಧಾವಿಗಳಲ್ಲಿ ಶ್ರೇಷ್ಠನಾದ ಪಿತಾಮಹನೇ, ಈ ಶ್ರೇಷ್ಠವಾದ ಆಖ್ಯಾನವನ್ನು ನಾನು ತಿಳಿದೆನು.
ಭೂಯಸ್ತು ಶ್ರೋತುಮಿಚ್ಛಾಮಿ ಧರ್ಮಾರ್ಥಸಹಿತಂ ನೃಪ |
ಕಥ್ಯಮಾನಂ ತ್ವಯಾ ಕಿಂಚಿತ್ ತನ್ಮೇ ವ್ಯಾಖ್ಯಾತುಮರ್ಹಸಿ ||2||
ಎಲೈ ರಾಜನೇ, ಪುನಃ ನಿನ್ನಿಂದ ಧರ್ಮಾರ್ಥಸಹಿತವಾದ ಒಂದು ಪ್ರಶ್ನೆಯನ್ನು ಕೇಳಲು ಬಯಸುತ್ತೇನೆ. ಅದಕ್ಕೆ ನೀನು ನನಗೆ ಉತ್ತರವನ್ನು ಹೇಳಬೇಕು.
ಕೇನ ಮೃತ್ಯುರ್ಗೃಹಸ್ಥೇನ ಧರ್ಮಮಾಶ್ರಿತ್ಯ ನಿರ್ಜಿತಃ |
ಇತ್ಯೇತತ್ ಸರ್ವಮಾಚಕ್ಷ್ವ ತತ್ತ್ವೇನ ಭರತರ್ಷಭ ||3||
ಎಲೈ ಭರತಶ್ರೇಷ್ಠರೇ, ಯಾವ ಗೃಹಸ್ಥನಿಂದ ಗೃಹಸ್ಥಾಶ್ರಮ ಧರ್ಮವನ್ನು ಆಶ್ರಯಿಸಿ ಮೃತ್ಯುವು ಗೆಲ್ಲಲ್ಪಟ್ಟಿತು ಎಂಬುದೆಲ್ಲವನ್ನೂ ನನಗೆ ಹೇಳಿ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಥಾ ಮೃತ್ಯುರ್ಗೃಹಸ್ಥೇನ ಧರ್ಮಮಾಶ್ರಿತ್ಯ ನಿರ್ಜಿತಃ ||4||
ಭೀಷ್ಮ ಗೃಹಸ್ಥನು ಧರ್ಮವನ್ನು ಆಶ್ರಯಿಸಿ, ಮೃತ್ಯುವನ್ನು ಜಯಿಸಿದ ವಿಷಯದಲ್ಲಿ ಈ ಪುರಾತನವಾದ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.
ಮನೋಃ ಪ್ರಜಾಪತೇ ರಾಜನ್ನಿಕ್ಷ್ವಾಕುರಭವತ್ ಸುತಃ |
ತಸ್ಯ ಪುತ್ರಶತಂ ಜಜ್ಞೇ ನೃಪತೇಃ ಸೂರ್ಯವರ್ಚಸಃ ||5||
ಎಲೈ ರಾಜನೇ, ಪ್ರಜಾಪತಿಯಾದ ಮನುವಿಗೆ ಇಕ್ಷ್ವಾಕುವು ಪುತ್ರನಾಗಿ ಜನಿಸಿದನು. ಸೂರ್ಯನ ವರ್ಚಸ್ಸನ್ನು ಹೊಂದಿದ ರಾಜನಿಗೆ ನೂರುಪುತ್ರರು ಜನಿಸಿದರು.
ದಶಮಸ್ತಸ್ಯ ಪುತ್ರಸ್ತು ದಶಾಶ್ವೋ ನಾಮ ಭಾರತ |
ಮಾಹಿಷ್ಮತ್ಯಾಮಭೂದ್ ರಾಜಾ ಧರ್ಮಾತ್ಮಾ ಸತ್ಯವಿಕ್ರಮಃ ||6||
ಎಲೈ ಭಾರತನೇ, ಆ ರಾಜನ ಹತ್ತನೆಯ ಪುತ್ರನಾದ ದಶಾಶ್ವನು ಧರ್ಮಾತ್ಮನೂ, ಒಳ್ಳೆಯ ಪರಾಕ್ರಮಿಯೂ ಆಗಿದ್ದು ಮಾಹಿಷ್ಮತಿಯಲ್ಲಿ ರಾಜನಾದನು.
ದಶಾಶ್ವಸ್ಯ ಸುತಸ್ತ್ವಾಸೀದ್ ರಾಜಾ ಪರಮಧಾರ್ಮಿಕಃ |
ಸತ್ಯೇ ತಪಸಿ ದಾನೇ ಚ ಯಸ್ಯ ನಿತ್ಯಂ ರತಂ ಮನಃ ||7||
ಮದಿರಾಶ್ವ ಇತಿ ಖ್ಯಾತಃ ಪೃಥಿವ್ಯಾಂ ಪೃಥಿವೀಪತಿಃ |
ಧನುರ್ವೇದೇ ಚ ವೇದೇ ಚ ಯಸ್ಯ ನಿತ್ಯಂ ರತಂ ಮನಃ ||8||
ದಶಾಶ್ವನಿಗೆ ಪರಮಧಾರ್ಮಿಕನಾದ ಮದಿರಾಶ್ವನೆಂಬ ಪುತ್ರನು ಜನಿಸಿ, ಅವನು ರಾಜನಾದನು. ಅವನ ಮನಸ್ಸು ಯಾವಾಗಲೂ ಸತ್ಯದಲ್ಲಿಯೂ, ತಪಸ್ಸಿನಲ್ಲಿಯೂ ಮತ್ತು ದಾನದಲ್ಲಿಯೂ ರತವಾಗಿರುತ್ತಿದ್ದಿತು. ಮದಿರಾಶ್ವನೆಂದು ಪ್ರಖ್ಯಾತನಾದ ಆ ರಾಜನು ಧನುರ್ವೇದದಲ್ಲಿಯೂ ಮತ್ತು ವೇದದಲ್ಲಿಯೂ ಯಾವಾಗಲೂ ನಿರತನಾಗಿರುತ್ತಿದ್ದನು.
ಮದಿರಾಶ್ವಸ್ಯ ಪುತ್ರಸ್ತು ದ್ಯುತಿಮಾನ್ನಾಮ ಪಾರ್ಥಿವಃ |
ಮಹಾಭಾಗೋ ಮಹಾತೇಜಾ ಮಹಾಸತ್ತ್ವೋ ಮಹಾಬಲಃ ||9||
ಪುತ್ರೋ ದ್ಯುತಿಮತಸ್ತ್ವಾಸೀತ್ ಸುವೀರೋ ನಾಮ ಪಾರ್ಥಿವಃ |
ಧರ್ಮಾತ್ಮಾ ಕೋಶವಾಂಶ್ಚಾಪಿ ದೇವರಾಜ ಇವಾಪರಃ ||10||
ಮದಿರಾಶ್ವನ ಪುತ್ರನಾದರೂ ದ್ಯುತಿಮಾನ್ ಎಂಬ ರಾಜ. ಅವನು ಮಹಾನುಭಾವ, ಮಹಾತೇಜಸ್ವಿ, ಮಹಾಧೈರ್ಯ ಮತ್ತು ಮಹಾಬಲಗಳನ್ನು ಹೊಂದಿದವನು. ದ್ಯುತಿಮಂತನಿಗೆ ಸುವೀರನೆಂಬ ಪುತ್ರನು ಜನಿಸಿ ರಾಜನಾದನು. ಅವನು ಧರ್ಮಾತ್ಮನೂ, ಸಂಪದ್ಭರಿತನೂ ಆಗಿದ್ದು ಎರಡನೆಯ ಇಂದ್ರನಂತೆ ಇದ್ದನು.
ಸುವೀರಸ್ಯ ತು ಪುತ್ರೋಽಭೂತ್ ಸರ್ವಯುದ್ಧೇಷು ದುರ್ಜಯಃ |
ದುರ್ಜಯೇತ್ಯಭಿವಿಖ್ಯಾತಃ ಸರ್ವಶಾಸ್ತ್ರವಿಶಾರದಃ ||11||
ಸುವೀರನಿಗೆ ಎಲ್ಲ ಯುದ್ಧಗಳಲ್ಲಿಯೂ ದುರ್ಜಯನಾದ ದುರ್ಜಯನೆಂಬ ಹೆಸರಿನಿಂದಲೇ ಪ್ರಸಿದ್ಧನಾದ ಪುತ್ರನು ಜನಿಸಿದನು. ಅವನು ಸರ್ವಶಾಸ್ತ್ರಗಳಲ್ಲಿ ವಿಶಾರದನಾಗಿದ್ದನು.
ದುರ್ಜಯಸ್ಯೇಂದ್ರವಪುಷಃ ಪುತ್ರೋಽಗ್ನಿಸದೃಶದ್ಯುತಿಃ |
ದುರ್ಯೋಧನೋ ನಾಮ ಮಹಾನ್ ರಾಜಾಽಽಸೀದ್ ರಾಜಸತ್ತಮ ||
ಎಲೈ ರಾಜಶ್ರೇಷ್ಠನೇ, ಇಂದ್ರನಿಗೆ ಸಮಾನವಾದ ಕಾಂತಿಯುಳ್ಳ ದುರ್ಜಯನಿಗೆ ಅಗ್ನಿಗೆ ಸದೃಶವಾದ ವರ್ಚಸ್ಸನ್ನು ಹೊಂದಿದ ದುರ್ಯೋಧನನೆಂಬ ದೊಡ್ಡ ರಾಜನು ಪುತ್ರನಾಗಿ ಜನಿಸಿದನು.
ತಸ್ಯೇಂದ್ರಸಮವೀರ್ಯಸ್ಯ ಸಂಗ್ರಾಮೇಷ್ವನಿವರ್ತಿನಃ |
ವಿಷಯಶ್ಚ ಪ್ರತಾಪಶ್ಚ ತುಲ್ಯಮೇವಾಭ್ಯವರ್ತತ ||13||
ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ಯುದ್ಧದಲ್ಲಿ ಹಿಮ್ಮೆಟ್ಟದಿರುವ ಅವನ ರಾಜ್ಯವೂ ಮತ್ತು ಪ್ರತಾಪವೂ ಸಮಾನವಾಗಿ

ಉಜ್ವಲವಾಗಿಯೇ ಇದ್ದಿತು.
ಅಂತರ್ಧನೈಶ್ಚ ಬಹುಭಿಃ ಸರತ್ನೈಶ್ಚ ಪೃಥಗ್ವಿಧೈಃ |
ನಗರಂ ವಿಷಯಶ್ಚಾಸ್ಯ ಪ್ರತಿಪೂರ್ಣಂ ತದಾಽಭವತ್ ||14||
ಭೂಮಿಯೊಳಗಿರುವ ನಾನಾ ವಿಧವಾದ ರತ್ನಸಹಿತವಾದ ಧನಗಳಿಂದ ಅವನ ರಾಜ್ಯವೂ ಮತ್ತು ರಾಜಧಾನಿಯೂ ಪರಿಪೂರ್ಣವಾಗಿದ್ದಿತು.
ನ ತಸ್ಯ ವಿಷಯೇ ಚಾಭೂತ್ ಕೃಪಣೋ ನಾಪಿ ದುರ್ಗತಃ |
ವ್ಯಾಧಿತೋ ವಾ ಕೃಶೋ ವಾಪಿ ತಸ್ಮಿನ್ನಾಭೂನ್ನರಃ ಕ್ವಚಿತ್ ||15||
ಅವನ ರಾಜ್ಯದಲ್ಲಿ ಜಿಪುಣನಾಗಲೀ, ದರಿದ್ರನಾಗಲೀ, ವ್ಯಾಧಿಗ್ರಸ್ಥನಾಗಲೀ, ಕೃಶನಾಗಲೀ ಆದ ಒಬ್ಬ ಮನುಷ್ಯನೂ ಇರಲಿಲ್ಲ.
ಸುದಕ್ಷಿಣೋ ಮಧುರವಾಗನಸೂಯುರ್ಜಿತೇಂದ್ರಿಯಃ |
ಧರ್ಮಾತ್ಮಾ ಚಾನೃಶಂಸಶ್ಚ ವಿಕ್ರಾಂತೋಽಥಾವಿಕತ್ಥನಃ ||16||
ದುರ್ಯೋಧನ ರಾಜನು ಒಳ್ಳೆಯ ದಕ್ಷಿಣೆಯನ್ನು ಕೊಡುವವನೂ, ಮಧುರವಾಗಿ ಮಾತನಾಡುವವನೂ, ಅಸೂಯಾ ರಹಿತನೂ, ಜಿತೇಂದ್ರಿಯನೂ, ಧರ್ಮಾತ್ಮನೂ, ಮೃದುಸ್ವಭಾವದವನೂ, ಪರಾಕ್ರಮಿಯೂ ಮತ್ತು ತನ್ನನ್ನು ಹೊಗಳಿಕೊಳ್ಳದವನೂ ಆಗಿದ್ದನು.
ಯಜ್ವಾ ವದಾನ್ಯೋ ಮೇಧಾವೀ ಬ್ರಹ್ಮಣ್ಯಃ ಸತ್ಯಸಂಗರಃ |
ನ ಚಾವಮಂತಾ ದಾತಾ ಚ ವೇದವೇದಾಂಗಪಾರಗಃ ||17||
ಅವನು ಯಾಗವನ್ನು ಮಾಡುವವನೂ, ಉದಾರಿಯೂ, ಮೇಧಾವಿಯೂ, ಬ್ರಾಹ್ಮಣ ವತ್ಸಲನೂ, ಸತ್ಯಸಂಧನೂ, ವೇದವೇದಾಂಗ ಪಾರಂಗತನೂ, ದಾತೃವೂ ಆಗಿದ್ದನು. ಯಾರಿಗೂ ಅವಮಾನವನ್ನು ಮಾಡುತ್ತಿರಲಿಲ್ಲ.
ತಂ ನರ್ಮದಾ ದೇವನದೀ ಪುಣ್ಯಾ ಶೀತಜಲಾ ಶಿವಾ |
ಚಕಮೇ ಪುರುಷಶ್ರೇಷ್ಠಂ ಸ್ವೇನ ಭಾವೇನ ಭಾರತ ||18||
ಎಲ್ಲೈ ಭಾರತನೇ, ಪುರುಷಶ್ರೇಷ್ಠನಾದ ಅವನನ್ನು ಮಂಗಳವಾದ ಮತ್ತು ಶೀತಲವಾದ, ಪವಿತ್ರವಾದ ಜಲವನ್ನು ಹೊಂದಿದ ದೇವನದಿಯಾದ ನರ್ಮದೆಯು ಪ್ರೀತಿಯಿಂದ ವರಿಸಿದಳು.
ತಸ್ಯ ಜಜ್ಞೇ ತದಾ ನದ್ಯಾಂ ಕನ್ಯಾ ರಾಜೀವಲೋಚನಾ |
ನಾಮ್ನಾ ಸುದರ್ಶನಾ ರಾಜನ್ ರೂಪೇಣ ಚ ಸುದರ್ಶನಾ ||19||
ಎಲ್ಲೈ ರಾಜನೇ, ಅವನಿಗೆ ಆ ನದಿಯಲ್ಲಿ ಕಮಲನೇತ್ರೆಯಾದ ಸುದರ್ಶನೆ ಎಂಬ ಕನ್ಯೆಯು ಜನಿಸಿದಳು. ಎಲ್ಲೈ ರಾಜನೇ, ಹೆಸರಿಗೆ ತಕ್ಕಂತೆ ಅವಳು ರೂಪದಿಂದಲೂ ಸುದರ್ಶನಳಾಗಿದ್ದಳು.
ತಾದೃಗ್ರೂಪಾ ನ ನಾರೀಷು ಭೂತಪೂರ್ವಾ ಯುಧಿಷ್ಠಿರ |
ದುರ್ಯೋಧನಸುತಾ ಯಾದೃಗಭವದ್ ವರವರ್ಣಿನೀ ||20||
ತಾಮಗ್ನಿಶ್ಚಕಮೇ ಸಾಕ್ಷಾದ್ ರಾಜಕನ್ಯಾಂ ಸುದರ್ಶನಾಮ್ ||21||
ಎಲ್ಲೈ ಯುಧಿಷ್ಠಿರನೇ, ದುರ್ಯೋಧನಪುತ್ರಿಯಾದ ಅವಳು ಎಂತಹ ಸುಂದರಿಯಾಗಿದ್ದಳೋ ಅಂತಹ ಸೌಂದರ್ಯಭರಿತಳಾದ ವನಿತೆಯು ಹಿಂದೆ ಯಾರೂ ಇರಲಿಲ್ಲ. ಸುಂದರಿಯಾದ ಆ ರಾಜಕನ್ಯೆಯನ್ನು ಸಾಕ್ಷಾತ್ ಅಗ್ನಿಯು ಬಯಸಿದನು.
ಸಾ ಚಾಗ್ನಿಶರಣೇ ರಾಜ್ಞಃ ಶಿಶ್ರೂಷಾಕೃತನಿಶ್ಚಯಾ |
ನಿಯುಕ್ತಾ ಪಿತೃಸಂದೇಶಾದಾರಿರಾಧಯಿಷುಃ ಶಿಖಿಮ್ ||22||
ತಂದೆಯಾದ ರಾಜನ ಅಪ್ಪಣೆಯಂತೆ ಅವಳು ಅಗ್ನಿಗೃಹದಲ್ಲಿ ಅಗ್ನಿಯ ಸೇವೆಯನ್ನು ಮಾಡಲು ನಿಯುಕ್ತಳಾಗಿ ಅಗ್ನಿಯನ್ನು ಸಂತೋಷಪಡಿಸಲು ಬಯಸಿದಳು.
ತಸ್ಯಾ ಮನೋರಮಂ ರೂಪಂ ದೃಷ್ಟ್ವಾ ದೇವೋ ಹುತಾಶನಃ |
ಮನ್ಮಥೇನ ಸಮಾವಿಷ್ಟಃ ಪತ್ನೀತ್ವೇ ಯತತೇ ಮಿಥಃ ||23||
ಅವಳ ಮನೋರಮವಾದ ರೂಪವನ್ನು ನೋಡಿದ ಅಗ್ನಿದೇವನು ಕಾಮದಿಂದ ಆವಿಷ್ಟನಾಗಿ ಅವಳನ್ನು ಪತ್ನಿಯಾಗಿ ಪಡೆಯಲು ಪ್ರಯತ್ನಿಸಿದನು.
ಅಗ್ನಿಃ
ಭಜ ಮಾಮನವದ್ಯಾಂಗೇ ಕಾಮಾತ್ ಕಮಲಲೋಚನೇ |
ರಂಭೋರು ಮೃಗಶಾಬಾಕ್ಷಿ ಪೂರ್ಣಚಂದ್ರನಿಭಾನನೇ ||24||
ಎಲ್ಲೈ ನಿರ್ದುಷ್ಟವಾದ ಅವಯವವುಳ್ಳವಳೇ, ಕಮಲಲೋಚನೆಯೇ, ಬಾಳೆಯ ಗಿಡದಂತಹ ತೊಡೆಯುಳ್ಳವಳೇ, ಜಿಂಕೆಯ ಕಣ್ಣುಗಳಂತಹ ಕಣ್ಣುಳ್ಳವಳೇ, ಪೂರ್ಣಚಂದ್ರನಂತಹ ಮುಖವುಳ್ಳವಳೇ ಕಾಮದಿಂದ ನನ್ನನ್ನು ಸೇವಿಸುವವಳಾಗು.
ತವೇದಂ ಪದ್ಮಪತ್ರಾಕ್ಷಂ ಮುಖಂ ದೃಷ್ಟ್ವಾ ಮನೋಹರಮ್ |
ಭ್ರೂಲತಾಲಲಿತಂ ಕಾಂತಮನಂಗೋ ಬಾಧತೇ ಹಿ ಮಾಮ್ ||25||
ಪದ್ಮದಳದಂತಿರುವ ಕಣ್ಣುಗಳಿಂದ ಕೂಡಿದ ನಿನ್ನ ಈ ಮುಖವನ್ನು ನೋಡಿ ಮನೋಹರವಾದ ಭ್ರೂಲತೆಗಳನ್ನು ನೋಡಿ ನನಗೆ ಮನ್ಮಥನ ಬಾಧೆಯುಂಟಾಗುತ್ತಿದೆ.
ಲಲಾಟಂ ಚಂದ್ರಲೇಖಾಭಂ ಶಿರೋರುಹವಿಭೂಷಿತಮ್ |
ದೃಷ್ಟ್ವಾ ತೇ ಪತ್ರಲೇಖಾಂಕಮನಂಗೋ ಬಾಧತೇ ಭೃಶಮ್ ||26||
ಚಂದ್ರಲೇಖೆಯಂತಿರುವ ಶಿರಸ್ಸಿನ ಕೇಶಗಳಿಂದ ವಿಭೂಷಿತವಾದ, ಪತ್ರಲೇಖದ ಚಿಹ್ನೆಯನ್ನು ಧರಿಸಿರುವ ನಿನ್ನ ಲಲಾಟವನ್ನು (ಹಣೆ) ನೋಡಿದ ನನ್ನನ್ನು ಮನ್ಮಥನು ಬಾಧಿಸುತ್ತಿದ್ದಾನೆ.

ಬಾಲಾತಪೇನಾಕುಲಿತಂ ಸಸ್ವೇದಪುಲಕೋದ್ಗಮಮ್ |
ಬಿಂಬಾಧರೋಷ್ಠಂ ವದನಂ ವಿಬುದ್ಧಮಿವ ಪಂಕಜಮ್ ॥27॥
ಅತೀವ ಚಾರುವಿಭ್ರಾಂತಂ ಮುದಮಾವಹತೇ ಮಮ |
ದಂತಪ್ರಾಕಾರನಿಯತಾ ವಾಣೀ ತವ ಸುರಕ್ಷಿತಾ ॥28॥
ಎಳೆಯ ಸೂರ್ಯನ ಕಿರಣಗಳಿಂದ ವ್ಯಾಕುಲಗೊಂಡ ಬೆವರಿನ ಹನಿಗಳಿಂದ ಮತ್ತು ರೋಮಾಂಚನಗಳಿಂದ ಕೂಡಿದ, ತೊಂಡೆಯಂತಿರುವ ತುಟಿಯಿಂದ ಕೂಡಿದ ನಿನ್ನ ಮುಖವು ಅರಳಿದ ಪದ್ಮದಂತಿದೆ. ಅತ್ಯಂತ ಸುಂದರವಾಗಿ ಚಲಿಸುತ್ತಿರುವ ಈ ನಿನ್ನ ಮುಖವು ನನಗೆ ಸಂತೋಷವನ್ನುಂಟು ಮಾಡುತ್ತಿದೆ. ದಂತಪಂಕ್ತಿಯಿಂದ ನಿಯಮಿಸಲ್ಪಟ್ಟ ನಿನ್ನ ಮಾತುಗಳು ಸುರಕ್ಷಿತವಾಗಿವೆ.
ತಾಮ್ರಪಲ್ಲವಸಂಕಾಶಾ ಜಿಹ್ವೇಯಂ ತೇ ಮನೋಹರಾ |
ಸಮಾಃ ಸ್ನಿಗ್ಧಾಃ ಸುಜಾತಾಶ್ಚ ಸಹಿತಾಶ್ಚ ದ್ವಿಜಾಸ್ತವ ॥29॥
ನಿನ್ನ ಈ ನಾಲಿಗೆಯು ತಾಮ್ರದ ಚಿಗುರಿನಂತೆ ಮನೋಹರವಾಗಿದೆ. ನಿನ್ನ ದಂತಗಳು ಚೆನ್ನಾಗಿ ಬೆಳೆದು ಸಮವಾಗಿ ಒಂದಕ್ಕೊಂದು ಸೇರಿಕೊಂಡಿವೆ.
ದ್ವಿಜಪ್ರಿಯೇ ಪ್ರಸೀದಸ್ವ ಭಜ ಮಾಂ ಸುಭಗಾ ಹ್ಯಸಿ |
ಮನೋಜ್ಞಂ ಸುಕೃತಾಪಾಂಗಂ ಮುಖಂ ತವ ಮನೋಹರಮ್ ॥30॥
ಎಲೌ ದ್ವಿಜಪ್ರಿಯೆಯೇ, ಪ್ರಸನ್ನಳಾಗು. ನೀನು ಸುಂದರಿಯಾಗಿದ್ದೀಯೆ. ನನ್ನನ್ನು ಭಜಿಸು. ಮನೋಹರವೂ, ಒಳ್ಳೆಯ ಕಡೆಗಣ್ಣಿನ ನೋಟವುಳ್ಳದೂ ಆದ ನಿನ್ನ ಮುಖವು ಮನೋಜ್ಞವಾಗಿದೆ.
ಸ್ತನೌ ತೇ ಸಹಿತೌ ಭೀರು ಹಾರಾಭರಣಭೂಷಿತೌ |
ಪಕ್ವಬಿಲ್ವಪ್ರತೀಕಾಶೌ ಕರ್ಕಶೌ ಸಂಗಮಕ್ಷಮೌ |
ಗಂಭೀರನಾಭಿಸುಭಗೇ ಭಜ ಮಾಂ ವರವರ್ಣಿನಿ ॥31॥
ಎಲೌ ಭೀರುವೇ, ಹಾರಾಭರಣ ಭೂಷಿತವಾದ ನಿನ್ನ ಸ್ತನಗಳು ಜೊತೆಗೂಡಿ ಪಕ್ವವಾದ ಬಿಲ್ವಫಲದಂತೆ ಗಟ್ಟಿಯಾಗಿದ್ದು ಸಂಗಮವನ್ನು ಸಹಿಸುವವುಗಳಾಗಿವೆ. ಎಲೌ ಗಂಭೀರ ನಾಭಿಯುಳ್ಳ ಸುಂದರಿಯೇ ನನ್ನನ್ನು ಭಜಿಸು.
ಭೀಷ್ಮಃ
ಸೈವಮುಕ್ತಾ ವಿರಹಿತೇ ಪಾವಕೇನ ಮಹಾತ್ಮನಾ |
ಈಷದಾಕಂಪಿತಹೃದಯಾ ವ್ರೀಡಿತಾ ವಾಕ್ಯಮಬ್ರವೀತ್ ॥32॥
ಭೀಷ್ಮ ಏಕಾಂತದಲ್ಲಿ ಮಹಾತ್ಮನಾದ ಅಗ್ನಿಯಿಂದ ಹೀಗೆ ಹೇಳಲ್ಪಟ್ಟ ಅವಳು ಮನಸ್ಸಿನಲ್ಲಿ ಸ್ವಲ್ಪ ನಡುಗುತ್ತಾ ನಾಚಿಕೆಯಿಂದ ಮಾತನಾಡಿದಳು.
ನನು ನಾಮ ಕುಲೀನಾನಾಂ ಕನ್ಯಕಾನಾಂ ವಿಶೇಷತಃ |
ಮಾತಾ ಪಿತಾ ಪ್ರಭವತಃ ಪ್ರದಾನೇ ಬಾಂಧವಾಶ್ಚ ಯೇ ॥33॥
ಕುಲೀನಳಾದ ಕನ್ಯೆಯರಿಗೆ ವಿಶೇಷವಾಗಿ ತಂದೆ-ತಾಯಿಗಳು ಮತ್ತು ಬಂಧುಗಳು ದಾನವನ್ನು ಮಾಡುವುದರಲ್ಲಿ ಅಧಿಕಾರವುಳ್ಳವರಷ್ಟೆ?
ಪಾಣಿಗ್ರಹಣಮಂತ್ರೈಶ್ಚ ಹುತೇ ಚೈವ ವಿಭಾವಸೌ |
ಸತಾಂ ಮಧ್ಯೇ ನಿವಿಷ್ಟಾಯಾಃ ಕನ್ಯಾಯಾಃ ಶರಣಂ ಪತಿಃ |
ಸಾಹಂ ನಾತ್ಮವಶಾ ದೇವ ಪಿತರಂ ವರಯಸ್ವ ಮೇ ॥34॥
ಪಾಣಿಗ್ರಹಣ ಮಂತ್ರಗಳಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿ, ಸಜ್ಜನರ ಮಧ್ಯದಲ್ಲಿ ಧಾರೆಯೆರೆದು ಕೊಡಲ್ಪಟ್ಟ ಕನ್ಯೆಗೆ ಪತಿಯೇ ಸರ್ವಾಶ್ರಯನಾದವನು. ಎಲೈ ದೇವನೇ, ನಾನು ಸ್ವತಂತ್ರಳಲ್ಲ. ನನಗಾಗಿ ನನ್ನ ತಂದೆಯನ್ನು ಕೇಳು.
ಅಥ ನಾತಿಚಿರಾತ್ ಕಾಲಾದ್ ರಾಜಾ ದುರ್ಯೋಧನಃ ಕಿಲ |
ಯಜ್ಞಸಂಭಾರನಿಪುಣಾನ್ ಮಂತ್ರೀನಾಹೂಯ ಚೋಕ್ತವಾನ್ |
ಯಜ್ಞಂ ಯಕ್ಷ್ಯೇಽಹಮಿತಿ ವೈ ಸಂಭಾರಾಃ ಸಂಭ್ರಿಯಂತು ಮೇ ॥35॥
ಅನಂತರ ಸ್ವಲ್ಪ ಕಾಲದಲ್ಲಿಯೇ ರಾಜನಾದ ದುರ್ಯೋಧನನು ಯಜ್ಞವನ್ನು ಮಾಡಲು ಬಯಸಿ ಯಜ್ಞಸಾಮಗ್ರಿಗಳನ್ನು ಸಂಪಾದಿಸುವುದರಲ್ಲಿ ನಿಪುಣರಾದ ಮಂತ್ರಿಗಳನ್ನು ಕರೆಸಿ, ನಾನು ಯಜ್ಞವನ್ನು ಮಾಡುವೆನು ನೀವು ಎಲ್ಲಾ ಸಾಮಗ್ರಿಗಳನ್ನೂ ಸಂಪಾದಿಸಿ ಎಂದು ಹೇಳಿದನು.
ತತಃ ಸಮಾಹಿತಸ್ತಸ್ಯ ಯಜ್ಞೋ ಬ್ರಾಹ್ಮಣಸತ್ತಮೈಃ |
ವಿಪ್ರರೂಪೀ ಹುತವಹೋ ನೃಪಂ ಕನ್ಯಾಮಯಾಚತ |
ನ ತು ರಾಜಾ ಪ್ರದಾನಾಯ ತಸ್ಮೈ ಭಾವಮಕಲ್ಪಯತ್ ॥36॥
ಆಗ ಶ್ರೇಷ್ಠರಾದ ಬ್ರಾಹ್ಮಣರು ಅವನ ಯಜ್ಞವನ್ನು ನೆರವೇರಿಸುತ್ತಿರಲು ಅಗ್ನಿಯು ಬ್ರಾಹ್ಮಣರೂಪವನ್ನು ಧರಿಸಿ ಬಂದು, ರಾಜನ ಹತ್ತಿರ ಕನ್ಯೆಯ ಯಾಚನೆಯನ್ನು ಮಾಡಿದನು. ಆಗ ರಾಜನು ಅವನಿಗೆ ಕನ್ಯೆಯನ್ನು ಕೊಡಲು ಮನಸ್ಸು ಮಾಡಲಿಲ್ಲ.
ದರಿದ್ರಶ್ಚಾಸವರ್ಣಶ್ಚ ಮಮಾಯಮಿತಿ ಪಾರ್ಥಿವಃ |
ನ ದಿತ್ಸತಿ ಸುತಾಂ ತಸ್ಮೈ ತಾಂ ವಿಪ್ರಾಯ ಸುದರ್ಶನಾಮ್ ॥37॥
ಇವನು ದರಿದ್ರನಾದವನು ಮತ್ತು ನಮ್ಮ ವರ್ಣದವನಲ್ಲ ಎಂದು ಭಾವಿಸಿ ರಾಜನು ಆ ಬ್ರಾಹ್ಮಣನಿಗೆ ತನ್ನ ಮಗಳಾದ ಸುದರ್ಶನೆಯನ್ನು ಕೊಡಲು ಬಯಸಲಿಲ್ಲ.
ಅಥ ದೀಕ್ಷಾಮುಪೇತಸ್ಯ ಯಜ್ಞಂ ತಸ್ಯ ಮಹಾತ್ಮನಃ |

ಆಹಿತೋ ಹವನಾರ್ಥಾಯ ವೇದ್ಯಾಮಗ್ನಿಃ ಪ್ರಣಶ್ಯತ ॥38॥
ಅನಂತರ ಆ ಮಹಾತ್ಮನಾದ ರಾಜನು ಯಜ್ಞದೀಕ್ಷೆಯನ್ನು ಹೊಂದಿ, ಹವನವನ್ನು ಮಾಡಲು ವೇದಿಯಲ್ಲಿ ಸ್ಥಾಪಿಸಿದ ಅಗ್ನಿಯು ನಾಶವನ್ನು ಹೊಂದಿದನು (ಹೊಂದಿತು).
ತತಃ ಸ ಭೀತೋ ನೃಪತಿರ್ಭೃಶಂ ಪ್ರವ್ಯಥಿತೇಂದ್ರಿಯಃ।
ಮಂತ್ರಿಣೋ ಬ್ರಾಹ್ಮಣಾಂಶ್ಚೈವ ಪಪ್ರಚ್ಛ ಕಿಮಿದಂ ಭವೇತ್।
ಯಜ್ಞೇ ಸಮಿದ್ಧೋ ಭಗವಾನ್ ನಷ್ಟೋ ಮೇ ಹವ್ಯವಾಹನಃ ॥39॥
ಆಗ ಬಹಳ ಭಯಗೊಂಡ ರಾಜನು ಬಹಳ ವ್ಯಥೆಯಿಂದ ಕೂಡಿದವನಾಗಿ ಮಂತ್ರಿಗಳನ್ನು ಮತ್ತು ಬ್ರಾಹ್ಮಣರನ್ನು ಕುರಿತು, ಇದೇನು, ನನ್ನ ಯಜ್ಞದಲ್ಲಿ ಜ್ವಲಿಸುತ್ತಿದ್ದ ಪೂಜ್ಯನಾದ ಅಗ್ನಿಯು ನಷ್ಟನಾಗಿದ್ದಾನೆ ಎಂದು ಕೇಳಿದನು.
ಸಮ್ಮಂತ್ರಕುಶಲೈಸ್ತೈಸ್ತು ಬ್ರಾಹ್ಮಣೈರ್ವೇದಪಾರಗೈಃ।
ಅಮಾನುಷೋ ವಿಕಾರೋಽಯಮಿತಿ ತೈರೇವ ಬೋಧಿತಮ್ ॥40॥
ಮಂತ್ರಕುಶಲರೂ, ವೇದಪಾರಂಗತರೂ ಆದ ಆ ಬ್ರಾಹ್ಮಣರು ಇದು ಮನುಷ್ಯರ ಕಲ್ಪನೆಯನ್ನು ಮೀರಿದ ಘಟನೆ ಎಂದು ಅವನಿಗೆ ತಿಳಿಸಿದರು.
ಧರ್ಮವಿಘ್ನಕರಂ ವೀರ ನೈತತ್ ತ್ವಯ್ಯುಪಪದ್ಯತೇ।
ಸ್ತೂಯತಾಂ ಭಗವಾನ್ ವಹ್ನಿಃ ಬ್ರಾಹ್ಮಣೈರ್ವೇದಪಾರಗೈಃ ॥41॥
ಋತ್ವಿಗ್ಭಿರ್ಮಂತ್ರಕುಶಲೈರ್ಗೀಯತಾಂ ವೈ ಹುತಾಶನಃ।
ಅಥ ಋಕ್ಸಾಮಯಜುಷಾಂ ಬ್ರಾಹ್ಮಣೈರ್ವೇದಪಾರಗೈಃ ॥42॥
ಎಲೈ ವೀರನೇ, ಅಗ್ನಿಯ ಅದರ್ಶನವು ಧರ್ಮವಿಘ್ನವನ್ನು ಮಾಡುವಂತಹದು. ನಿನ್ನಂತಹವನಿಗೆ ಹೀಗೆ ಆಗಬಾರದು. ವೇದಪಾರಂಗತರಾದ ಬ್ರಾಹ್ಮಣರಿಂದ ಪೂಜ್ಯನಾದ ಅಗ್ನಿಯನ್ನು ಸ್ತೋತ್ರ ಮಾಡಿಸು ಅಥವಾ ಮಂತ್ರಕುಶಲರಾದ ಋತ್ವಿಜರು ಅಗ್ನಿಯನ್ನು ಕರೆತರಲಿ.
ವೇದತತ್ತ್ವಾರ್ಥಕುಶಲೈಸ್ತತಃ ಸೋಮಪುರಸ್ಕೃತೈಃ।
ಗುಹ್ಯೇಷು ನಾಮಧೇಯೇಷು ಕೀರ್ತ್ಯಮಾನೇಷು ಪಾವಕಃ ॥43॥
ಅನಂತರ ಋಗ್-ಯಜುಸ್-ಸಾಮ ವೇದಪಾರಂಗತರಾದ ವೇದಾರ್ಥವನ್ನು ತಿಳಿದವರಲ್ಲಿ ಕುಶಲರಾದ ಬ್ರಾಹ್ಮಣಶ್ರೇಷ್ಠರು ಸೋಮರಸವನ್ನು ಮುಂದೆ ಮಾಡಿಕೊಂಡು ಅಗ್ನಿಯ ಗುಹ್ಯನಾಮಗಳಿಂದ ಅಗ್ನಿಯನ್ನು ಆಹ್ವಾನಿಸಿದರು.
ತತೋ ದುರ್ಯೋಧನೋ ರಾಜಾ ವಾಕ್ಯಮಾಹರ್ತ್ವಿಜಸ್ತದಾ।
ದುಷ್ಕೃತಂ ಮಮ ಕಿಂ ನು ಸ್ಯಾದ್ ಭವತಾಂ ವಾ ದ್ವಿಜರ್ಷಭಾಃ।
ಯೇನ ನಾಶಂ ಜಗಾಮಾಗ್ನಿಃ ಕೃತಂ ಕುಪುರುಷೇಷ್ವಿವ ॥44॥
ನ ಹ್ಯಲ್ಪಂ ದುಷ್ಕೃತಂ ನೋಽಸ್ತಿ ಯೇನಾಗ್ನಿರ್ನಾಶಮಾಗತಃ।
ಭವತಾಂ ವಾಥ ವಾ ಮಹ್ಯಂ ತತ್ತ್ವೇನೈತದ್ ವಿಮೃಶ್ಯತಾಮ್ ॥45॥
ಆಗ ರಾಜನಾದ ದುರ್ಯೋಧನನು ಋತ್ವಿಜರನ್ನು ಕುರಿತು ಕೆಟ್ಟ ಪುರುಷನು ಆಹ್ವಾನಿಸಿದ ಅಗ್ನಿಯು ನಾಶಹೊಂದುವಂತೆ ನಾನು ಆಹ್ವಾನಿಸಿದ ಅಗ್ನಿಯು ನಾಶವನ್ನು ಹೊಂದುವುದಕ್ಕೆ ನನ್ನ ಅಥವಾ ನಿಮ್ಮ ಅಪರಾಧವು ಕೇವಲ ಅಲ್ಪವಾಗಿರಲಾರದು. ಇದನ್ನು ಸರಿಯಾಗಿ ವಿಮರ್ಶೆ ಮಾಡಿ (ಎಂದು ಹೇಳಿದನು).
ಏತದ್ ರಾಜ್ಞೋ ವಚಃ ಶ್ರುತ್ವಾ ವಿಪ್ರಾಸ್ತೇ ಭರತರ್ಷಭ।
ನಿಯತಾ ವಾಗ್ಯತಾಶ್ಚೈವ ಪಾವಕಂ ಶರಣಂ ಯಯುಃ ॥46॥
ಎಲೈ ಭರತಶ್ರೇಷ್ಠನೇ, ರಾಜನ ಈ ಮಾತುಗಳನ್ನು ಕೇಳಿ ಆ ಬ್ರಾಹ್ಮಣರು ಮೌನವನ್ನು ವಹಿಸಿ, ಮನೋನಿಗ್ರಹವನ್ನು ಹೊಂದಿದವರಾಗಿ ಅಗ್ನಿಗೆ ಶರಣಾಗತರಾದರು.
ತಾನ್ ದರ್ಶಯಾಮಾಸ ತದಾ ಭಗವಾನ್ ಹವ್ಯವಾಹನಃ।
ಸ್ವಂ ರೂಪಂ ದೀಪ್ತಿಮತ್ ಕೃತ್ವಾ ಶರದರ್ಕಸಮದ್ಯುತಿಃ ॥47॥
ಆಗ ಶರತ್ಕಾಲದ ಸೂರ್ಯನಂತೆ ಪ್ರಭೆಯುಳ್ಳ ಪೂಜ್ಯನಾದ ಅಗ್ನಿಯು ಪ್ರಕಾಶಮಾನವಾದ ತನ್ನ ರೂಪವನ್ನು ಅವರಿಗೆ ತೋರಿಸಿದನು.
ತತೋ ಮಹಾತ್ಮಾ ತಾನಾಹ ದಹನೋ ಬ್ರಾಹ್ಮಣರ್ಷಭಾನ್।
ವರಯಾಮ್ಯಾತ್ಮನೋಽರ್ಥಾಯ ದುರ್ಯೋಧನಸುತಾಮಿತಿ ॥48॥
ಅನಂತರ ಮಹಾತ್ಮನಾದ ಅಗ್ನಿಯು ಆ ಬ್ರಾಹ್ಮಣಶ್ರೇಷ್ಠರನ್ನು ಕುರಿತು ದುರ್ಯೋಧನನ ಪುತ್ರಿಯನ್ನು ನಾನು ನನಗಾಗಿ ವರಿಸುತ್ತೇನೆ ಎಂದು ಹೇಳಿದನು.
ತತಸ್ತೇ ಕಾಲ್ಯಮುತ್ಥಾಯ ತಸ್ಮೈ ರಾಜ್ಞೇ ನ್ಯವೇದಯನ್।
ಬ್ರಾಹ್ಮಣಾ ವಿಸ್ಮಿತಾಃ ಸರ್ವೇ ಯದುಕ್ತಂ ಚಿತ್ರಭಾನುನಾ ॥49॥
ಅನಂತರ ಆ ಬ್ರಾಹ್ಮಣರು ವಿಸ್ಮಿತರಾಗಿ ಪ್ರಾತಃಕಾಲದಲ್ಲಿ ಎದ್ದು ರಾಜನಿಗೆ ಅಗ್ನಿಯ ಮಾತನ್ನು ನಿವೇದಿಸಿದರು.
ತತಃ ಸ ರಾಜಾ ತಚ್ಛ್ರುತ್ವಾ ವಚನಂ ಬ್ರಹ್ಮವಾದಿನಾಮ್।
ಅವಾಪ್ಯ ಪರಮಂ ಹರ್ಷಂ ತಥೇತಿ ಪ್ರಾಹ ಬುದ್ಧಿಮಾನ್ ॥50॥
ಆಗ ಆ ಮೇಧಾವಿಯಾದ ರಾಜನು ಬ್ರಾಹ್ಮಣರ ಆ ಮಾತನ್ನು ಕೇಳಿ ಬಹಳ ಸಂತೋಷಗೊಂಡು ಹಾಗೆಯೇ ಆಗಲಿ ಎಂದು ಹೇಳಿದನು.
ಪ್ರಾಯಾಚತ ನೃಪಃ ಶುಲ್ಕಂ ಭಗವಂತಂ ವಿಭಾವಸುಮ್।

ನಿತ್ಯಂ ಸಾನ್ನಿಧ್ಯಮಿಹ ತೇ ಚಿತ್ರಭಾನೋ ಭವೇದಿತಿ |
ತಮಾಹ ಭಗವಾನಗ್ನಿರೇವಮಸ್ತ್ವಿತಿ ಪಾರ್ಥಿವಮ್ ||51||
ರಾಜನು ಪೂಜ್ಯನಾದ ಅಗ್ನಿಯನ್ನು ಕುರಿತು `ಎಲೈ ಅಗ್ನಿಯೇ, ನೀನು ಈ ಮಾಹಿಷ್ಮತೀ ನಗರದಲ್ಲಿ ನಿತ್ಯವೂ ಸನ್ನಿಹಿತನಾಗಿರಬೇಕು. ಇದನ್ನು ನಾನು ಕನ್ಯಾಶುಲ್ಕವಾಗಿ ಬೇಡುತ್ತೇನೆ' ಎಂದು ಹೇಳಿದನು. ಪೂಜ್ಯನಾದ ಅಗ್ನಿಯು ರಾಜನನ್ನು ಕುರಿತು `ಹಾಗೆಯೇ ಆಗಲಿ' ಎಂದು ಹೇಳಿದನು.
ತತಃ ಸಾನ್ನಿಧ್ಯಮದ್ಯಾಪಿ ಮಾಹಿಷ್ಮತ್ಯಾಂ ವಿಭಾವಸೋಃ |
ದೃಷ್ಟಂ ಹಿ ಸಹದೇವೇನ ದಿಶೋ ವಿಜಯತಾ ತದಾ ||52||
ಆದ್ದರಿಂದ ಈಗಲೂ ಸಹ ಮಾಹಿಷ್ಮತೀ ನಗರದಲ್ಲಿ ಅಗ್ನಿದೇವನ ಸನ್ನಿಧಾನವಿದೆ. ದಿಗ್ವಿಜಯಕ್ಕೆ ಹೋದಾಗ ಸಹದೇವನು ಅಗ್ನಿಯನ್ನು ನೋಡಿದನಷ್ಟೆ?
ತತಸ್ತಾಂ ಸಮಲಂಕೃತ್ಯ ಕನ್ಯಾಮಹತವಾಸಸಮ್ |
ದದೌ ದುರ್ಯೋಧನೋ ರಾಜಾ ಪಾವಕಾಯ ಮಹಾತ್ಮನೇ ||53||
ಅನಂತರ ಆ ಕನ್ಯೆಗೆ ಖಂಡಿಸದ ವಸ್ತ್ರಗಳನ್ನು ಉಡಿಸಿ, ಆಭರಣಗಳಿಂದ ಅಲಂಕರಿಸಿ, ರಾಜನಾದ ದುರ್ಯೋಧನನು ಅವಳನ್ನು ಮಹಾತ್ಮನಾದ ಅಗ್ನಿಗೆ ದಾನ ಮಾಡಿದನು.
ಪ್ರತಿಜಗ್ರಾಹ ಚಾಗ್ನಿಸ್ತಾಂ ರಾಜಪುತ್ರೀಂ ಸುದರ್ಶನಾಮ್ |
ವಿಧಿನಾ ವೇದದೃಷ್ಟೇನ ವಸೋರ್ಧಾರಾಮಿವಾಧ್ವರೇ ||54||
ಅಗ್ನಿಯು ಯಜ್ಞದಲ್ಲಿ ಘೃತದ ಧಾರೆಯನ್ನು ಸ್ವೀಕರಿಸುವಂತೆ, ವೇದವಿಧಿಗೆ ಅನುಗುಣವಾಗಿ ಸುಂದರಿಯಾದ, ರಾಜಕುಮಾರಿಯಾದ ಸುದರ್ಶನೆಯನ್ನು ಸ್ವೀಕರಿಸಿದನು.
ತಸ್ಯಾ ರೂಪೇಣ ಶೀಲೇನ ಕುಲೇನ ವಪುಷಾ ಶ್ರಿಯಾ |
ಅಭವತ್ ಪ್ರೀತಿಮಾನಗ್ನಿರ್ಗರ್ಭಂ ತಸ್ಯಾಂ ಸಮಾದಧೇ ||55||
ಅವಳ ರೂಪದಿಂದಲೂ, ಶೀಲದಿಂದಲೂ, ಕುಲದಿಂದಲೂ, ದೇಹದ ಕಾಂತಿಯಿಂದಲೂ ಸಂತೋಷಗೊಂಡ ಅಗ್ನಿಯು ಅವಳಲ್ಲಿ ಗರ್ಭಾಧಾನವನ್ನು ಮಾಡಿದನು.
ತಸ್ಯಾಂ ಸಮಭವತ್ ಪುತ್ರೋ ನಾಮ್ನಾಗ್ನೇಯಃ ಸುದರ್ಶನಃ |
ಶಿಶುರೇವಾಧ್ಯಗಾತ್ ಸರ್ವಂ ಸ ಚ ಬ್ರಹ್ಮ ಸನಾತನಮ್ |
ಸುದರ್ಶನಸ್ತು ರೂಪೇಣ ಪೂರ್ಣೇಂದುಸದೃಶೋಪಮಃ ||56||
ಅವಳಲ್ಲಿ ಅಗ್ನಿಪುತ್ರನಾದ ಸುದರ್ಶನನೆಂಬ ಕುಮಾರನು ಜನಿಸಿದನು. ಅವನು ಶಿಶುವಾಗಿದ್ದಾಗಲೇ ಸಮಗ್ರವಾದ ಸನಾತನವಾದ ವೇದವನ್ನು ಅಧ್ಯಯನ ಮಾಡಿದನು ಮತ್ತು ಅವನು ರೂಪದಲ್ಲಿ ಪೂರ್ಣಚಂದ್ರನಂತೆ ಇದ್ದನು.
ಅಥೌಘವಾನ್ ನಾಮ ನೃಪೋ ನೃಗಸ್ಯಾಸೀತ್ ಪಿತಾಮಹಃ |
ತಸ್ಯಾಪ್ಯೋಘವತೀ ಕನ್ಯಾ ಪುತ್ರಶ್ಚೌಘರಥೋಽಭವತ್ ||57||
ಇನ್ನು ನೃಗ ಮಹಾರಾಜನಿಗೆ ಓಘವಾನ್ ಎಂಬ ಪಿತಾಮಹನಿದ್ದನು. ಅವನಿಗೂ ಸಹ ಓಘವತಿ ಎಂಬ ಕನ್ಯೆಯೂ ಓಘರಥನೆಂಬ ಪುತ್ರನೂ ಜನಿಸಿದನು.
ತಾಮೋಘವಾನ್ ದದೌ ತಸ್ಮೈ ಸ್ವಯಮೋಘವತೀಂ ಸುತಾಮ್ |
ಸುದರ್ಶನಾಯ ವಿದುಷೇ ಭಾರ್ಯಾರ್ಥೇ ದೇವರೂಪಿಣೀಮ್ ||58||
ಓಘವಾನ್ ರಾಜನು ಸ್ವತಃ ಓಘವತೀ ಎಂಬ ದೇವತೆಗಳ ಸೌಂದರ್ಯವನ್ನು ಹೊಂದಿದ್ದ ತನ್ನ ಪುತ್ರಿಯನ್ನು ಸುದರ್ಶನನಿಗೆ ತಾನಾಗಿಯೇ (ಸ್ವಯಂವರವಿಲ್ಲದೆ) ಪತ್ನಿಯಾಗಿ ನೀಡಿದನು.
ಸ ಗೃಹಸ್ಥಾಶ್ರಮರತಸ್ತಯಾ ಸಹ ಸುದರ್ಶನಃ |
ಕುರುಕ್ಷೇತ್ರೇಽವಸದ್ ರಾಜನ್ನೋಘವತ್ಯಾ ಸಮನ್ವಿತಃ ||59||
ಎಲೈ ರಾಜನೇ, ಸುದರ್ಶನನಾದರೂ ಗೃಹಸ್ಥಾಶ್ರಮಧರ್ಮದಲ್ಲಿ ನಿರತನಾಗಿ, ಓಘವತಿಯ ಜೊತೆಯಲ್ಲಿ ಕುರುಕ್ಷೇತ್ರದಲ್ಲಿ ವಾಸಮಾಡಿದನು.
ಗೃಹಸ್ಥಶ್ಚಾವಜೇಷ್ಯಾಮಿ ಮೃತ್ಯುಮಿತ್ಯೇವ ಸ ಪ್ರಭೋ |
ಪ್ರತಿಜ್ಞಾಮಕರೋದ್ ಧೀಮಾನ್ ದೀಪ್ತತೇಜಾ ವಿಶಾಂಪತೇ ||60||
ಎಲೈ ಪ್ರಭುವೇ, ರಾಜನೇ, ಪ್ರಕಾಶಮಾನವಾದ ತೇಜಸ್ಸನ್ನು ಹೊಂದಿದ, ಮೇಧಾವಿಯಾದ ಅವನು, ನಾನು ಗೃಹಸ್ಥಾಶ್ರಮದಲ್ಲಿಯೇ ಇದ್ದು ಮೃತ್ಯುವನ್ನು ಗೆಲ್ಲುವೆನು ಎಂದು ಪ್ರತಿಜ್ಞೆಯನ್ನು ಮಾಡಿದನು.
ತಾಮಥೌಘವತೀಂ ರಾಜನ್ ಸ ಪಾವಕಸುತೋಽಬ್ರವೀತ್ |
ಅತಿಥೇಃ ಪ್ರತಿಕೂಲಂ ತೇ ನ ಕರ್ತವ್ಯಂ ಕಥಂಚನ ||61||
ಎಲೈ ರಾಜನೇ, ಅನಂತರ ಅಗ್ನಿಪುತ್ರನಾದ ಅವನು ಓಘವತಿಯನ್ನು ಕುರಿತು `ನೀನು ಎಂದೂ ಯಾವ ಕಾರಣದಿಂದಲೂ ಅತಿಥಿಗಳಿಗೆ ಪ್ರತಿಕೂಲವಾಗಿ ನಡೆದುಕೊಳ್ಳಬಾರದು.
ಯೇನ ಯೇನ ಚ ತುಷ್ಯೇತ ನಿತ್ಯಮೇವ ಸದಾಽತಿಥಿಃ |
ಅಪ್ಯಾತ್ಮನಃ ಪ್ರದಾನೇನ ನ ತೇ ಕಾರ್ಯಾ ವಿಚಾರಣಾ ||62||
ಅತಿಥಿಯು ಯಾವುದರಿಂದ ಸಂತೋಷಪಡುತ್ತಾನೆಯೋ, ಅದು ಬೇಕಾದರೆ ನಿನ್ನನ್ನೇ ಕೊಟ್ಟುಕೊಳ್ಳುವುದಾಗಲಿ, ಅದನ್ನು ನೀನು ಮಾಡಬೇಕು. ಈ ವಿಷಯದಲ್ಲಿ ಸಂಶಯಪಡಬಾರದು.

ಏತದ್ ವ್ರತಂ ಮಮ ಸದಾ ಹೃದಿ ಸಂಪರಿವರ್ತತೇ |
ಗೃಹಸ್ಥಾನಾಂ ಹಿ ಸುಶ್ರೋಣಿ ನಾತಿಥೇರ್ವಿದ್ಯತೇ ಪರಮ್ ॥63॥
ಇದು ನನ್ನ ಮನಸ್ಸಿನಲ್ಲಿ ಯಾವಾಗಲೂ ನೆಲೆಸಿರುವ ವ್ರತ. ಎಲೌ ಸುಂದರಿಯೇ, ಗೃಹಸ್ಥರಿಗೆ ಅತಿಥಿಗಳಿಗಿಂತಲೂ ದೊಡ್ಡ ವಸ್ತುವು ಯಾವುದೂ ಇಲ್ಲ.
ಪ್ರಮಾಣಂ ಯದಿ ವಾಮೋರು ವಚನಂ ಮಮ ಶೋಭನೇ |
ಇದಂ ವಚನಮವ್ಯಗ್ರಾ ಹೃದಿ ತ್ವಂ ಧಾರಯೇಃ ಸದಾ ॥64॥
ಎಲೌ ವಾಮೋರುವೇ, ಶುಭಳಾದವಳೇ, ನನ್ನ ಮಾತು ನಿನಗೆ ಪ್ರಮಾಣ ಆಗುವುದಾದರೆ ಈ ಮಾತನ್ನು ನೀನು ಎಚ್ಚರಿಕೆಯಿಂದ ಯಾವಾಗಲೂ ಮನಸ್ಸಿನಲ್ಲಿ ಧರಿಸಬೇಕು.
ನಿಷ್ಕ್ರಾಂತೇ ಮಯಿ ಕಲ್ಯಾಣಿ ತಥಾ ಸನ್ನಿಹಿತೇಽನಘೇ |
ಅತಿಥಿರ್ನಾವಮಂತವ್ಯಃ ಪ್ರಮಾಣಂ ಯದ್ಯಹಂ ತವ ॥65॥
ಎಲೌ ಕಲ್ಯಾಣಿಯೇ, ನನ್ನ ಮಾತಿನಲ್ಲಿ ನಿನಗೆ ಗೌರವವಿದ್ದರೆ ನಾನು ಮನೆಯಿಂದ ಹೊರಗೆ ಹೋದಾಗ ಪೂಜ್ಯನಾದ ಅತಿಥಿಯು ಬಂದರೆ ಎಲೌ ನಿರ್ದುಷ್ಟಳಾದವಳೇ, ಅವನಿಗೆ ಎಂದೂ ಅವಮಾನವನ್ನು ಮಾಡಬಾರದು' ಎಂದು ಹೇಳಿದನು.
ತಮಬ್ರವೀದೋಘವತೀ ಯತಾ ಮೂರ್ಧ್ನಿ ಕೃತಾಂಜಲಿಃ |
ನ ಮೇ ತ್ವದ್ವಚನಾತ್ ಕಿಂಚಿದಕರ್ತವ್ಯಂ ಕಥಂಚನ ॥66॥
ಓಘವತಿಯು ತಲೆಯ ಮೇಲೆ ಕೈಗಳನ್ನು ಜೋಡಿಸಿ, ಸಂಯಮವುಳ್ಳವಳಾಗಿ, `ನಿನ್ನ ಮಾತಿನಂತೆ ನಾನು ಮಾಡಬಾರದುದು ಯಾವುದೂ ಇಲ್ಲ' ಎಂದು ಹೇಳಿದಳು.
ಜಿಗೀಷಮಾಣಂ ತು ಗೃಹೇ ತದಾ ಮೃತ್ಯುಃ ಸುದರ್ಶನಮ್ |
ಪೃಷ್ಠತೋಽನ್ವಗಮದ್ ರಾಜನ್ ರಂಧ್ರಾನ್ವೇಷೀ ತದಾ ಸದಾ ॥67॥
ಎಲೈ ರಾಜನೇ, ಗೃಹಸ್ಥಾಶ್ರಮದಲ್ಲಿಯೇ ಇದ್ದು ಮೃತ್ಯುವನ್ನು ಜಯಿಸಲು ಬಯಸಿದ ಸುದರ್ಶನನನ್ನು ನೋಡಿ ಮೃತ್ಯುವು, ಅವನಲ್ಲಿ ಒಂದು ದೋಷವನ್ನು ಹುಡುಕಲು ಬಯಸಿ ಅವನನ್ನು ಯಾವಾಗಲೂ ಹಿಂಬಾಲಿಸಿದನು.
ಇಧ್ಮಾರ್ಥಂ ತು ಗತೇ ತಸ್ಮಿನ್ನಗ್ನಿಪುತ್ರೇ ಸುದರ್ಶನೇ |
ಅತಿಥಿರ್ಬ್ರಾಹ್ಮಣಃ ಶ್ರೀಮಾಂಸ್ತಾಮಾಹೌಘವತೀಂ ತದಾ ॥68॥
ಅಗ್ನಿಪುತ್ರನಾದ ಸುದರ್ಶನನು ಕಟ್ಟಿಗೆಯನ್ನು ತರಲು ಕಾಡಿಗೆ ಹೋದಾಗ ಕಾಂತಿಯುಕ್ತನಾದ ಬ್ರಾಹ್ಮಣನಾದ ಅತಿಥಿಯಾಗಿ ಬಂದು ಓಘವತಿಯನ್ನು ಕುರಿತು ಹೇಳಿದನು.
ಆತಿಥ್ಯಂ ದತ್ತಮಿಚ್ಛಾಮಿ ತ್ವಯಾಽಽದ್ಯ ವರವರ್ಣಿನಿ |
ಪ್ರಮಾಣಂ ಯದಿ ಧರ್ಮಸ್ತೇ ಗೃಹಸ್ಥಾಶ್ರಮಸಮ್ಮತಃ ॥69॥
ಎಲೌ ಸುಂದರಿಯೇ, ಗೃಹಸ್ಥಾಶ್ರಮಧರ್ಮವು ನಿನ್ನಿಂದ ಗೌರವಿಸಲ್ಪಡುವುದಾದರೆ ನಾನು ನಿನ್ನಿಂದ ಆತಿಥ್ಯವನ್ನು ಸ್ವೀಕರಿಸಲು ಬಯಸುತ್ತೇನೆ ಎಂದು ಹೇಳಿದನು.
ಇತ್ಯುಕ್ತಾ ತೇನ ವಿಪ್ರೇಣ ರಾಜಪುತ್ರೀ ಯಶಸ್ವಿನೀ |
ವಿಧಿನಾ ಪ್ರತಿಜಗ್ರಾಹ ವೇದೋಕ್ತೇನ ವಿಶಾಂಪತೇ ॥70॥
ಎಲೈ ರಾಜನೇ, ಆ ಬ್ರಾಹ್ಮಣನಿಂದ ಹೀಗೆ ಹೇಳಲ್ಪಟ್ಟ, ಕೀರ್ತಿವಂತಳಾದ ಆ ರಾಜಕುಮಾರಿಯು ವೇದೋಕ್ತವಿಧಿಯಿಂದ ಅವನನ್ನು ಸ್ವೀಕರಿಸಿದಳು.
ಆಸನಂ ಚೈವ ಪಾದ್ಯಂ ಚ ತಸ್ಮೈ ದತ್ತ್ವಾ ದ್ವಿಜಾತಯೇ |
ಪ್ರೋವಾಚೌಘವತೀ ವಿಪ್ರಂ ಕೇನಾರ್ಥಃ ಕಿಂ ದದಾಮಿ ತೇ ॥71॥
ಓಘವತಿಯು ಆ ಬ್ರಾಹ್ಮಣನಿಗೆ ಆಸನವನ್ನೂ ಮತ್ತು ಪಾದ್ಯವನ್ನೂ ನೀಡಿ, ಯಾವ ಉದ್ದೇಶದಿಂದ ಬಂದಿದ್ದೀರಿ, ನಿಮಗೇನು ಕೊಡಲಿ ಎಂದು ಕೇಳಿದಳು.
ತಾಮಬ್ರವೀತ್ ತತೋ ವಿಪ್ರೋ ರಾಜಪುತ್ರೀಂ ಸುದರ್ಶನಾಮ್ |
ತ್ವಯಾ ಮಮಾರ್ಥಃ ಕಲ್ಯಾಣಿ ನಿರ್ವಿಶಂಕೈತದಾಚರ ॥72॥
ಆಗ ಆ ಬ್ರಾಹ್ಮಣನು ರಾಜಪುತ್ರಿಯಾದ ಸುದರ್ಶನೆಯನ್ನು ಕುರಿತು, ಎಲೌ ಕಲ್ಯಾಣಿಯೇ, ನನಗೆ ನಿನ್ನಿಂದಲೇ ಕಾರ್ಯವಾಗಬೇಕಾಗಿದೆ. ಯಾವ ಸಂಕೋಚವೂ ಇಲ್ಲದೆ ಅದನ್ನು ನಡೆಸಿಕೊಡು ಎಂದು ಹೇಳಿದನು.
ಯದಿ ಪ್ರಮಾಣಂ ಧರ್ಮಸ್ತೇ ಗೃಹಸ್ಥಾಶ್ರಮಸಮ್ಮತಃ |
ಪ್ರದಾನೇನಾತ್ಮನೋ ರಾಜ್ಞಿ ಕರ್ತುಮರ್ಹಸಿ ಮೇ ಪ್ರಿಯಮ್ ॥73॥
ಎಲೌ ರಾಜಕುಮಾರಿಯೇ, ಗೃಹಸ್ಥಾಶ್ರಮಧರ್ಮವು ನಿನಗೆ ಪ್ರಮಾಣ ಆಗುವುದಾದರೆ ನಿನ್ನನ್ನೇ ನನಗೆ ನೀಡಿ ನನಗೆ ಪ್ರಿಯವನ್ನುಂಟು ಮಾಡಬೇಕು (ಎಂದು ಹೇಳಿದನು).
ತಯಾ ಸಂಛಂದ್ಯಮಾನೋಽನ್ಯೈರೀಪ್ಸಿತೈರ್ನೃಪಕನ್ಯಯಾ |
ನಾನ್ಯಮಾತ್ಮಪ್ರದಾನಾತ್ ಸ ತಸ್ಯಾ ವವ್ರೇ ವರಂ ದ್ವಿಜಃ ॥74॥
ರಾಜಕುಮಾರಿಯು ಬೇರೆ ಬೇರೆ ಅಭೀಷ್ಟವಾದ ವರಗಳನ್ನು ಸೂಚಿಸಿದರೂ ಆ ಬ್ರಾಹ್ಮಣನು ಅವಳ ಆತ್ಮಪ್ರದಾನವನ್ನು ಬಿಟ್ಟು ಬೇರೆ ಯಾವುದನ್ನೂ ಸ್ವೀಕರಿಸಲು ಒಪ್ಪಲಿಲ್ಲ.
ಸಾ ತು ರಾಜಸುತಾ ಸ್ಮೃತ್ವಾ ಭರ್ತುರ್ವಚನಮಾದಿತಃ |
ತಥೇತಿ ಲಜ್ಜಮಾನಾ ಸಾ ತಮುವಾಚ ದ್ವಿಜರ್ಷಭಮ್ ॥75॥

ಆ ರಾಜಕುಮಾರಿಯಾದರೂ ಪತಿಯು ಮೊದಲೇ ಆಡಿದ ಮಾತುಗಳನ್ನು ಸ್ಮರಿಸಿ ಆ ಬ್ರಾಹ್ಮಣಶ್ರೇಷ್ಠನನ್ನು ಕುರಿತು ನಾಚಿಕೆಯಿಂದ `ಹಾಗೆಯೇ ಆಗಲಿ' ಎಂದು ಹೇಳಿದಳು.
ತತೋ ರಹಸಿ ವಿಪ್ರರ್ಷಿಃ ಸಾ ಚೈವೋಪವಿವೇಶ ಹ |
ಸಂಸ್ಮೃತ್ಯ ಭರ್ತುರ್ವಚನಂ ಗೃಹಸ್ಥಾಶ್ರಮಕಾಂಕ್ಷಿಣಃ ॥76॥
ಗೃಹಸ್ಥಾಶ್ರಮಧರ್ಮದ ಅನುಷ್ಠಾನವನ್ನು ಬಯಸಿದ ತನ್ನ ಪತಿಯ ಮಾತುಗಳನ್ನು ಸ್ಮರಿಸಿ, ಅವಳು ಆ ವಿಪ್ರರ್ಷಿಯ ಜೊತೆಯಲ್ಲಿ ಏಕಾಂತದಲ್ಲಿ ಕುಳಿತಳು.
ಅಥೇಧ್ಮಾನ್ ಸಮುಪಾದಾಯ ಸ ಪಾವಕಿರುಪಾಗಮತ್ |
ಮೃತ್ಯುನಾ ರೌದ್ರಭಾವೇನ ನಿತ್ಯಂ ಬಂಧುರಿವಾನ್ವಿತಃ ॥77॥
ಆ ವೇಳೆಗೆ ಅಗ್ನಿಪುತ್ರನಾದ ಸುದರ್ಶನನು ಕಟ್ಟಿಗೆಗಳನ್ನು ತೆಗೆದುಕೊಂಡು ರೌದ್ರಭಾವವನ್ನು ತಾಳಿದ ಮೃತ್ಯುವಿನಿಂದ ಯಾವಾಗಲೂ ಹಿಂಬಾಲಿಸಲ್ಪಟ್ಟವನಾಗಿ ಆಶ್ರಮಕ್ಕೆ ಬಂದನು.
ತತಸ್ತ್ವಾಶ್ರಮಮಾಗಮ್ಯ ಸ ಪಾವಕಸುತಸ್ತದಾ |
ತಾಮಾಜುಹಾವೌಘವತೀಂ ಕ್ವಾಸಿ ಯಾತೇತಿ ಚಾಸಕೃತ್ ॥78॥
ಆಶ್ರಮಕ್ಕೆ ಹಿಂದಿರುಗಿದ ಆ ಅಗ್ನಿಪುತ್ರನು ಆಗ ಆ ಓಘವತಿಯನ್ನು ಕುರಿತು ಎಲ್ಲಿದ್ದೀಯೆ? ಎಲ್ಲಿಗೆ ಹೋಗಿದ್ದೀಯೆ? ಎಂದು ಅನೇಕ ಬಾರಿ ಕರೆದನು.
ತಸ್ಮೈ ಪ್ರತಿವಚಃ ಸಾ ತು ಭರ್ತ್ರೇ ನ ಪ್ರದದೌ ತದಾ |
ಕರಾಭ್ಯಾಂ ತೇನ ವಿಪ್ರೇಣ ಸ್ಪೃಷ್ಟಾ ಭರ್ತೃವ್ರತಾ ಸತೀ ॥79॥
ವಿಪ್ರನು ಹಸ್ತವನ್ನು ಸ್ಪರ್ಶ ಮಾಡಿದ ಕಾರಣದಿಂದ ಪತಿವ್ರತೆಯಾದ ಆ ಓಘವತಿಯು ಆಗ ತನ್ನ ಪತಿಗೆ ಪ್ರತ್ಯುತ್ತರವನ್ನು ನೀಡಲಿಲ್ಲ.
ಉಚ್ಛಿಷ್ಟಾಸ್ಮೀತಿ ಮನ್ವಾನಾ ಲಜ್ಜಿತಾ ಭರ್ತುರೇವ ಚ |
ತೂಷ್ಣೀಂಭೂತಾಭವತ್ ಸಾಧ್ವೀ ನ ಚೋವಾಚಾಥ ಕಿಂಚನ ॥80॥
ತಾನು ಮೈಲಿಗೆಯಾಗಿದ್ದೇನೆ ಎಂದು ತಿಳಿದ ಆ ಸಾಧ್ವಿಯು ನಾಚಿಕೆಯಿಂದ ಕೂಡಿದವಳಾಗಿ ಪತಿಯು ಕರೆದರೂ ಮೌನವನ್ನು ವಹಿಸಿದಳು.
ಅಥ ತಾಂ ಪುನರೇವೇದಂ ಪ್ರೋವಾಚ ಸ ಸುದರ್ಶನಃ |
ಕ್ವ ಸಾ ಸಾಧ್ವೀ ಕ್ವ ಸಾ ಯಾತಾ ಗರೀಯಃ ಕಿಮತೋ ಮಮ ॥81॥
ಅನಂತರ ಸುದರ್ಶನನು ಪುನಃ ಆ ಸಾಧ್ವಿಯನ್ನು ಕುರಿತು ಆ ಸಾಧ್ವಿಯು ಎಲ್ಲಿದ್ದಾಳೆ? ಎಲ್ಲಿ ಹೋಗಿದ್ದಾಳೆ? ಇದಕ್ಕಿಂತ ದೊಡ್ಡಕಾರ್ಯವು ನನಗೆ ಏನಿದೆ? ಎಂದು ಹೇಳಿದನು.
ಪತಿವ್ರತಾ ಸತ್ಯಶೀಲಾ ನಿತ್ಯಂ ಚೈವಾರ್ಜವೇ ರತಾ |
ಕಥಂ ನ ಪ್ರತ್ಯುದೇತ್ಯದ್ಯ ಸ್ಮಯಮಾನಾ ಯಥಾ ಪುರಾ ॥82॥
ಪತಿವ್ರತೆಯಾದವಳೂ, ಸತ್ಯಶೀಲಳಾದವಳೂ, ಯಾವಾಗಲೂ ನೇರವಾದ ಸ್ವಭಾವವನ್ನು ಹೊಂದಿದವಳೂ ಆದ ಅವಳು ಮೊದಲಿನಂತೆ ಏಕೆ ಎದುರಿಗೆ ಬರುತ್ತಿಲ್ಲ? ಎಂದು ಹೇಳಿದನು.
ಉಟಜಸ್ಥಸ್ತು ತಂ ವಿಪ್ರಃ ಪ್ರತ್ಯುವಾಚ ಸುದರ್ಶನಮ್ |
ಅತಿಥಿಂ ವಿದ್ಧಿ ಸಂಪ್ರಾಪ್ತಂ ಪಾವಕೇ ಬ್ರಾಹ್ಮಣಂ ಚ ಮಾಮ್ ॥83॥
ಪರ್ಣಶಾಲೆಯಲ್ಲಿದ್ದ ಆ ವಿಪ್ರನು ಆಗ ಸುದರ್ಶನನನ್ನು ಕುರಿತು `ಎಲೈ ಅಗ್ನಿಪುತ್ರನೇ, ನನ್ನನ್ನು ಅತಿಥಿಯಾಗಿ ಬಂದಿರುವ ಬ್ರಾಹ್ಮಣನೆಂದು ತಿಳಿ' ಎಂದು ಹೇಳಿದನು.
ಅನಯಾ ಛಂದ್ಯಮಾನೋಽಹಂ ಭಾರ್ಯಯಾ ತವ ಸತ್ತಮ |
ತೈಸ್ತೈರತಿಥಿಸತ್ಕಾರೈರಾರ್ಜವೇಽಸ್ಯಾ ಶ್ರಿತಂ ಮನಃ ॥84॥
ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ಈ ನಿನ್ನ ಪತ್ನಿಯು ಅನೇಕ ರೀತಿಯ ಅತಿಥಿ ಸತ್ಕಾರಗಳಿಂದ ನನ್ನನ್ನು ಸಂತೋಷಪಡಿಸುತ್ತಿದ್ದುದನ್ನು ನೋಡಿ ಅವಳ ಆರ್ಜವದಲ್ಲಿ (ಸರಳತೆ) ನನ್ನ ಮನಸ್ಸು ನೆಲೆಸಿತು.
ಅನೇನ ವಿಧಿನಾ ಸೇಯಂ ಮಾಮರ್ಚತಿ ಶುಭಾನನಾ |
ಅನುರೂಪಂ ಯದತ್ರಾದ್ಯ ತದ್ ಭವಾನ್ ವಕ್ತುಮರ್ಹತಿ ॥85॥
ಶುಭಮುಖವುಳ್ಳ ಈ ಸುಂದರಿಯು ಈ ಪ್ರಕಾರದಿಂದ ನನ್ನನ್ನು ಪೂಜಿಸುತ್ತಿದ್ದಾಳೆ. ಈ ವಿಷಯದಲ್ಲಿ ಯಾವುದು ಅನುಗುಣವಾದುದು ಎಂದು ನೀನು ಹೇಳಬೇಕು.
ಕೂಟಮುದ್ಗರಹಸ್ತಸ್ತು ಮೃತ್ಯುಸ್ತಂ ವೈ ಸಮನ್ವಯಾತ್ |
ಹೀನಪ್ರತಿಜ್ಞಮತ್ರೈನಂ ವಧಿಷ್ಯಾಮೀತಿ ಚಿಂತಯನ್ ॥86॥
ಮೃತ್ಯುವು ಕೈಯಲ್ಲಿ ಹಾರೆ, ಶೂಲಗಳನ್ನು ಹಿಡಿದುಕೊಂಡು, ಈಗ ಇವನ ಪ್ರತಿಜ್ಞೆಯು ಭಗ್ನವಾಗುವುದು, ಇವನನ್ನು ಕೊಲ್ಲುವೆನು ಎಂದು ಚಿಂತಿಸುತ್ತಾ ಸುದರ್ಶನನನ್ನು ಹಿಂಬಾಲಿಸಿದನು.
ಸುದರ್ಶನಸ್ತು ಮನಸಾ ಕರ್ಮಣಾ ಚಕ್ಷುಷಾ ಗಿರಾ |
ತ್ಯಕ್ತೇರ್ಷ್ಯಸ್ತ್ಯಕ್ತಮನ್ಯುಶ್ಚ ಸ್ಮಯಮಾನೋಽಬ್ರವೀದಿದಮ್ ॥87॥
ತನ್ನ ಮನಸ್ಸಿನಿಂದಲೂ, ಕ್ರಿಯೆಯಿಂದಲೂ, ದೃಷ್ಟಿಯಿಂದಲೂ, ಮಾತಿನಿಂದಲೂ ಅಸೂಯೆಯನ್ನು ತ್ಯಜಿಸಿದ್ದ ಸುದರ್ಶನನು ಕೋಪಗೊಳ್ಳದೆ, ನಗುತ್ತಾ ಈ ಮಾತನ್ನು ಆಡಿದನು.
ಸುರತಂ ತೇಽಸ್ತು ವಿಪ್ರಾಗ್ರ್ಯ ಪ್ರೀತಿರ್ಹಿ ಪರಮಾ ಮಮ |

ಗೃಹಸ್ಥಸ್ಯ ಹಿ ಧರ್ಮೋಽಗ್ರ್ಯಃ ಸಂಪ್ರಾಪ್ತಾತಿಥಿಪೂಜನಮ್ ॥88॥
ಎಲೈ ಬ್ರಾಹ್ಮಣಶ್ರೇಷ್ಠನೇ, ನನ್ನ ಪತ್ನಿಯ ಜೊತೆಯಲ್ಲಿ ನಿನಗೆ ಒಳ್ಳೆಯ ಸಮಾಗಮವಾಗಲಿ. ಅದು ನನಗೆ ಬಹಳ ಪ್ರೀತಿಕರವಾದುದು. ಮನೆಗೆ ಬಂದ ಅತಿಥಿಯನ್ನು ಪೂಜಿಸುವುದು ಗೃಹಸ್ಥನ ಶ್ರೇಷ್ಠವಾದ ಧರ್ಮ.
ಅತಿಥಿಃ ಪೂಜಿತೋ ಯಸ್ಯ ಗೃಹಸ್ಥಸ್ಯ ತು ಗಚ್ಛತಿ |
ನಾನ್ಯಸ್ತಸ್ಮಾತ್ ಪರೋ ಧರ್ಮ ಇತಿ ಪ್ರಾಹುರ್ಮನೀಷಿಣಃ ॥89॥
ಯಾವ ಗೃಹಸ್ಥನ ಮನೆಗೆ ಅತಿಥಿಯು ಬಂದು ಪೂಜಿತನಾಗಿ ಹೋಗುತ್ತಾನೆಯೋ ಅಂತಹ ಅತಿಥಿಪೂಜೆಗಿಂತ ಶ್ರೇಷ್ಠವಾದ ಧರ್ಮವು ಇನ್ನೊಂದು ಇಲ್ಲವೆಂದು ಜ್ಞಾನಿಗಳು ಹೇಳುತ್ತಾರೆ.
ಪ್ರಾಣಾ ಹಿ ಮಮ ದಾರಾಶ್ಚ ಯಚ್ಚಾನ್ಯದ್ ವಿದ್ಯತೇ ವಸು |
ಅತಿಥಿಭ್ಯೋ ಮಯಾ ದೇಯಮಿತಿ ಮೇ ವ್ರತಮಾಹಿತಮ್ ॥90॥
ನನ್ನ ಪ್ರಾಣಗಳು, ನನ್ನ ಪತ್ನಿ ಮತ್ತು ಈ ಮನೆಯಲ್ಲಿರುವ ಯಾವುದೇ ವಸ್ತು ಇವನ್ನು ಅತಿಥಿಗಳಿಗೆ ಕೊಡಬೇಕೆಂಬುದು ನಾನು ಧರಿಸಿರುವ ವ್ರತ.
ನಿಃಸಂದಿಗ್ಧಂ ಮಯಾ ವಾಕ್ಯಮೇತತ್ ತೇ ಸಮುದಾಹೃತಮ್ |
ತೇನಾಹಂ ವಿಪ್ರ ಸತ್ಯೇನ ಸ್ವಯಮಾತ್ಮಾನಮಾಲಭೇ ॥91॥
ಎಲೈ ಬ್ರಾಹ್ಮಣನೇ, ಯಾವ ಸಂಶಯವೂ ಇಲ್ಲದೆ ನಾನು ನಿನಗೆ ಈ ಮಾತನ್ನು ಆಡುತ್ತಿದ್ದೇನೆ. ನನ್ನ ಮೇಲೆ ಆಣೆಯನ್ನು ಮಾಡಿ ಶಪಥವನ್ನು ಮಾಡಿ ಹೇಳುತ್ತಿದ್ದೇನೆ.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಬುದ್ಧಿರಾತ್ಮಾ ಮನಃ ಕಾಲೋ ದಿಶಶ್ಚೈವ ತಥಾ ದಶ ॥92॥
ನಿತ್ಯಮೇತೇ ಹಿ ಪಶ್ಯಂತಿ ದೇಹಿನಾಂ ದೇಹಸಂಶ್ರಯಾತ್ |
ಸುಕೃತಂ ದುಷ್ಕೃತಂ ವಾಪಿ ಕರ್ಮ ಧರ್ಮಭೃತಾಂ ವರ ॥93॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಪೃಥಿವಿ, ವಾಯು, ಆಕಾಶ, ಜಲ, ಜ್ಯೋತಿಸ್ಸು, ಬುದ್ಧಿ, ಆತ್ಮ, ಮನಸ್ಸು, ಕಾಲ ಮತ್ತು ದಿಕ್ಕುಗಳು - ಈ ಹತ್ತು ಜೀವರ ದೇಹವನ್ನು ಆಶ್ರಯಿಸಿಕೊಂಡು, ನಿತ್ಯವೂ ಅವರು ಮಾಡುವ ಶುಭಾಶುಭ ಕರ್ಮಗಳನ್ನು ನೋಡುತ್ತವೆ.
ಯಥೈಷಾ ನಾನೃತಾ ವಾಣೀ ಮಯಾಽದ್ಯ ಸಮುದಾಹೃತಾ |
ತೇನ ಸತ್ಯೇನ ಮಾಂ ದೇವಾಃ ಪಾಲಯಂತು ದಹಂತು ವಾ ॥94॥
ನಾನು ಆಡಿದ ಈ ಮಾತು ಸತ್ಯವಾಗಿದ್ದರೆ ಆ ಸತ್ಯದಿಂದ ದೇವತೆಗಳು ನನ್ನನ್ನು ಪಾಲಿಸಲಿ ಅಥವಾ ಮಿಥ್ಯೆಯಾಗಿದ್ದರೆ ನನ್ನನ್ನು ದಹಿಸಲಿ.
ತತೋ ನಾದಃ ಸಮಭವದ್ ದಿಕ್ಷು ಸರ್ವಾಸು ಭಾರತ |
ಅಸಕೃತ್ ಸತ್ಯಮಿತ್ಯೇವ ನೈತನ್ಮಿಥ್ಯೇತಿ ಸರ್ವಶಃ ॥95॥
ಎಲೈ ಭಾರತನೇ, ಆಗ ಎಲ್ಲ ದಿಕ್ಕುಗಳಿಂದಲೂ ಈ ಮಾತು ಸತ್ಯವಾದುದು, ಸುಳ್ಳಲ್ಲ ಎಂಬ ಶಬ್ದವು ಅನೇಕ ಬಾರಿ ಕೇಳಿಬಂದಿತು.
ಉಟಜಾತ್ ತು ತತಸ್ತಸ್ಮಾನ್ನಿಶ್ಚಕ್ರಾಮ ಸ ವೈ ದ್ವಿಜಃ |
ವಪುಷಾ ಖಂ ಚ ಭೂಮಿಂ ಚ ವ್ಯಾಪ್ಯ ವಾಯುರಿವೋದ್ಯತಃ ॥96॥
ಆಗ ಆ ಬ್ರಾಹ್ಮಣನು ತನ್ನ ದೇಹದ ಕಾಂತಿಯಿಂದ ಉದ್ಯತವಾಯುವಿನಂತೆ ಭೂಮಿ ಮತ್ತು ಅಂತರಿಕ್ಷಗಳನ್ನು ವ್ಯಾಪಿಸುತ್ತಾ ಪರ್ಣಶಾಲೆಯಿಂದ ಹೊರಬಂದನು.
ಸ್ವರೇಣ ವಿಪ್ರಃ ಶೈಕ್ಷೇಣ ತ್ರೀನ್‌ಲೋಕಾನನುನಾದಯನ್ |
ಉವಾಚ ಚೈನಂ ಧರ್ಮಜ್ಞಂ ಪೂರ್ವಮಾಮಂತ್ರ್ಯ ನಾಮತಃ ॥97॥
ಆ ಬ್ರಾಹ್ಮಣನು ಶಿಕ್ಷಾಶಾಸ್ತ್ರಕ್ಕೆ ಅನುಗುಣವಾದ ತನ್ನ ಸ್ವರದಿಂದ ಮೂರು ಲೋಕಗಳನ್ನೂ ಪ್ರತಿಧ್ವನಿಸುತ್ತಾ ಧರ್ಮಜ್ಞನಾದ ಸುದರ್ಶನನನ್ನು ಮೊದಲು ಹೆಸರಿನಿಂದ ಕರೆದು ಮಾತನಾಡಿದನು.
ಧರ್ಮೋಽಹಮಸ್ಮಿ ಭದ್ರಂ ತೇ ಜಿಜ್ಞಾಸಾರ್ಥಂ ತವಾನಘ |
ಪ್ರಾಪ್ತಃ ಸತ್ಯಂ ಚ ತೇ ಜ್ಞಾತ್ವಾ ಪ್ರೀತಿರ್ಮೇ ಪರಮಾ ತ್ವಯಿ ॥98॥
ಎಲೈ ನಿರ್ದುಷ್ಟನಾದವನೇ, ನಿನಗೆ ಮಂಗಳವಾಗಲಿ. ನಾನು ಧರ್ಮ. ನಿನ್ನನ್ನು ಪರೀಕ್ಷಿಸಲು ಬಂದಿದ್ದೆನು. ನಿನ್ನ ಸತ್ಯವನ್ನು ನೋಡಿ ನನಗೆ ನಿನ್ನಲ್ಲಿ ಬಹಳ ಪ್ರೀತಿ ಉಂಟಾಗಿದೆ.
ವಿಜಿತಶ್ಚ ತ್ವಯಾ ಮೃತ್ಯುರ್ಯೋಽಯಂ ತ್ವಾಮನುಗಚ್ಛತಿ |
ರಂಧ್ರಾನ್ವೇಷೀ ತವ ಸದಾ ತ್ವಯಾ ಧೃತ್ಯಾ ವಶೀಕೃತಃ ॥99॥
ನಿನ್ನನ್ನು ಯಾವಾಗಲೂ ಹಿಂಬಾಲಿಸುವ ಈ ಮೃತ್ಯುವನ್ನು ನೀನು ಗೆದ್ದಿದ್ದೀಯೆ. ನಿನ್ನ ಧೈರ್ಯದಿಂದ ಮೃತ್ಯುವನ್ನು ವಶಪಡಿಸಿಕೊಂಡಿದ್ದೀಯೆ.
ನ ಚಾಸ್ತಿ ಶಕ್ತಿಸ್ತ್ರೈಲೋಕ್ಯೇ ಕಸ್ಯಚಿತ್ ಪುರುಷೋತ್ತಮ |
ಪತಿವ್ರತಾಮಿಮಾಂ ಸಾಧ್ವೀಂ ತವೋದ್ವೀಕ್ಷಿತುಮಪ್ಯುತ ॥100॥
ಎಲೈ ಪುರುಷಶ್ರೇಷ್ಠನೇ, ಪತಿವ್ರತೆಯಾದ ಈ ನಿನ್ನ ಭಾರ್ಯೆಯನ್ನು ಕಣ್ಣಿನಿಂದ ನೋಡಲೂ ಸಹ ಮೂರುಲೋಕಗಳಲ್ಲಿ ಯಾರಿಗೂ ಶಕ್ತಿಯಿಲ್ಲ.
ರಕ್ಷಿತಾ ತ್ವದ್ಗುಣೈರೇಷಾ ಪತಿವ್ರತಗುಣೈಸ್ತಥಾ |
ಅಧೃಷ್ಯಾ ಯದಿಯಂ ಬ್ರೂಯಾತ್ ತಥಾ ತನ್ನಾನ್ಯಥಾ ಭವೇತ್ ॥101॥

ನಿನ್ನ ಗುಣಗಳಿಂದಲೂ ಮತ್ತು ಪತಿವ್ರತೆಯಾದ ಅವಳ ಗುಣಗಳಿಂದಲೂ ರಕ್ಷಿತಳಾದ ಅವಳು ಯಾರಿಂದಲೂ ಘಾಸಿಗೊಳಿಸಲ್ಪಡಲಾರಳು. ಅವಳು ಏನು ನುಡಿಯುತ್ತಾಳೆಯೋ ಅದು ಬೇರೆ ರೀತಿಯಾಗಲಾರದು.
ಏಷಾ ಹಿ ತಪಸಾ ಸ್ವೇನ ಸಂಯುಕ್ತಾ ಬ್ರಹ್ಮವಾದಿನೀ |
ಪಾವನಾರ್ಥಂ ಚ ಲೋಕಸ್ಯ ಸರಿಚ್ಛ್ರೇಷ್ಠಾ ಭವಿಷ್ಯತಿ ॥102॥
ಬ್ರಹ್ಮಜ್ಞಾನಿಯಾದ ಇವಳು ತನ್ನ ತಪಸ್ಸಿನಿಂದ ಕೂಡಿದವಳಾಗಿ ಈ ಲೋಕವನ್ನು ಪವಿತ್ರೀಕರಿಸಲು ಶ್ರೇಷ್ಠವಾದ ನದಿಯಾಗುವಳು.
ಅರ್ಧೇನೌಘವತೀ ನಾಮ ತ್ವಾಮರ್ಧೇನಾನುಯಾಸ್ಯತಿ |
ಶರೀರೇಣ ಮಹಾಭಾಗಾ ಯೋಗೋ ಹ್ಯಸ್ಯಾ ವಶೇ ಸ್ಥಿತಃ ॥103॥
ಈ ಮಹಾನುಭಾವಳು ತನ್ನ ಶರೀರದ ಅರ್ಧಭಾಗದಿಂದ ಓಘವತೀ ಎಂಬ ನದಿಯಾಗಿ, ಉಳಿದ ಅರ್ಧಭಾಗದಿಂದ ನಿನ್ನನ್ನು ಹಿಂಬಾಲಿಸುವಳು. ಅಂತಹ ಯೋಗವು ಅವಳಿಗೆ ವಶವಾಗಿದೆ.
ಅನಯಾ ಸಹ ಲೋಕಾಂಶ್ಚ ಗಂತಾಸಿ ತಪಸಾಽರ್ಜಿತಾನ್ |
ಯತ್ರ ನಾವೃತ್ತಿಮಭ್ಯೇತಿ ಶಾಶ್ವತಾನ್ ತಾನ್ ಸನಾತನಾನ್ ॥104॥
ನೀನು ನಿನ್ನ ತಪಸ್ಸಿನಿಂದ ಸಂಪಾದಿಸಿದ, ಪುನರಾವರ್ತಿ ಇಲ್ಲದ ಶಾಶ್ವತವಾದ ಸನಾತನ ಲೋಕಗಳಿಗೆ ಇವಳ ಜೊತೆಯಲ್ಲಿಯೇ ಹೋಗುವೆ.
ಅನೇನೈವ ಚ ದೇಹೇನ ಲೋಕಾಂಸ್ತ್ವಮಭಿಪತ್ಸ್ಯಸೇ |
ನಿರ್ಜಿತಶ್ಚ ತ್ವಯಾ ಮೃತ್ಯುರೈಶ್ವರ್ಯಂ ಚ ತವೋತ್ತಮಮ್ ॥105॥
ಈ ದೇಹದಿಂದಲೇ ನೀನು ಅಂತಹ ಲೋಕಗಳನ್ನು ಹೊಂದುವೆ. ನೀನು ಮೃತ್ಯುವನ್ನು ಗೆದ್ದಿದ್ದೀಯೆ. ನಿನ್ನ ಸಾಮರ್ಥ್ಯವು ಅತ್ಯಂತ ಶ್ರೇಷ್ಠವಾದುದು.
ಪಂಚ ಭೂತಾನ್ಯತಿಕ್ರಾಂತಃ ಸ್ವವೀರ್ಯಾಚ್ಚ ಮನೋಭವಃ |
ಗೃಹಸ್ಥಧರ್ಮೇಣಾನೇನ ಕಾಮಕ್ರೋಧೌ ತ್ವಯಾ ಜಿತೌ ॥106॥
ನೀನು ನಿನ್ನ ಈ ಗೃಹಸ್ಥಧರ್ಮದಿಂದ ಪಂಚಭೂತಗಳನ್ನು ಮೀರಿದ್ದೀಯೆ. ನಿನ್ನ ಸಾಮರ್ಥ್ಯದಿಂದ ಮನ್ಮಥನನ್ನು ಜಯಿಸಿದ್ದೀಯೆ. ಕಾಮ-ಕ್ರೋಧಗಳು ನಿನ್ನಿಂದ ಜಿತವಾಗಿವೆ.
ಸ್ನೇಹೋ ರಾಗಶ್ಚ ತಂದ್ರೀ ಚ ಮೋಹೋ ದ್ರೋಹಶ್ಚ ಪಂಚಮಃ |
ತವ ಶುಶ್ರೂಷಯಾ ರಾಜನ್ ರಾಜಪುತ್ರ್ಯಾ ವಿನಿರ್ಜಿತಾಃ ॥107॥
ಎಲೈ ರಾಜನೇ, ನಿನ್ನ ಸೇವೆಯನ್ನು ಮಾಡಿ ಈ ರಾಜಕುಮಾರಿಯು ಉಳಿದ ವಿಷಯಗಳಲ್ಲಿ ಸ್ನೇಹವನ್ನು ಮತ್ತು ಒಳ್ಳೆಯ ವಿಷಯಗಳಲ್ಲಿ ಆಲಸ್ಯ-ಮೋಹ- ದ್ರೋಹಗಳನ್ನು ತೊರೆದಿದ್ದಾಳೆ.
ಭೀಷ್ಮಃ
ಶುಕ್ಲಾನಾಂ ತು ಸಹಸ್ರೇಣ ವಾಜಿನಾಂ ರಥಮುತ್ತಮಮ್ |
ಯುಕ್ತಂ ಪ್ರಗೃಹ್ಯ ಭಗವಾನ್ ಯಮಃ ಸದ್ಯೋ ಜಗಾಮ ತಮ್ ॥
ಮೃತ್ಯುರಾತ್ಮಾ ಚ ಲೋಕಾಶ್ಚ ಜಿತಾ ಭೂತಾನಿ ಪಂಚ ಚ |
ಬುದ್ಧಿಃ ಕಾಲೋ ಮನೋ ವ್ಯೋಮ ಕಾಮಕ್ರೋಧೌ ತಥೈವ ಚ ॥109॥
ಭೀಷ್ಮ ಆಗ ಯಮದೇವರು ಶ್ವೇತವರ್ಣದ ಸಹಸ್ರ ಅಶ್ವಗಳಿಂದ ಕೂಡಿದ ರಥವನ್ನು ತೆಗೆದುಕೊಂಡು ತಕ್ಷಣ ಅಲ್ಲಿಗೆ ಬಂದರು. ಮೃತ್ಯು-ಆತ್ಮ-ಲೋಕಗಳು- ಪಂಚಭೂತಗಳು ಎಲ್ಲವೂ ಸುದರ್ಶನನಿಂದ ಜಿತವಾದವು. ಬುದ್ಧಿ, ಕಾಲ, ಮನಸ್ಸು, ಆಕಾಶ, ಕಾಮ-ಕ್ರೋಧಗಳು ಹಾಗೆಯೇ ಜಿತವಾದವು.
ತಸ್ಮಾದ್ ಗೃಹಾಶ್ರಮಸ್ಥಸ್ಯ ನಾನ್ಯದ್ ದೈವತಮಸ್ತಿ ವೈ |
ಋತೇಽತಿಥಿಂ ನರವ್ಯಾಘ್ರ ಮನಸೈತದ್ ವಿಚಾರಯ ॥110॥
ಎಲೈ ನರಶ್ರೇಷ್ಠನೇ, ಆದ್ದರಿಂದ ಗೃಹಸ್ಥನಾದವನಿಗೆ ಅತಿಥಿಯನ್ನು ಬಿಟ್ಟು ಬೇರೆ ದೇವತೆ ಇಲ್ಲ. ಇದನ್ನು ಮನಸ್ಸಿನಲ್ಲಿ ಧರಿಸುವವನಾಗು.
ಅತಿಥಿಃ ಪೂಜಿತೋ ಯಸ್ಯ ಧ್ಯಾಯತೇ ಮನಸಾ ಶುಭಮ್ |
ನ ತತ್ ಕ್ರತುಶತೇನಾಪಿ ತುಲ್ಯಮಾಹುರ್ಮನೀಷಿಣಃ ॥111॥
ಅತಿಥಿಯು ಪೂಜಿತನಾಗಿ, ಪ್ರಸನ್ನನಾಗಿ ಯಾವ ಶುಭವನ್ನು ಹಾರೈಸುತ್ತಾನೆಯೋ ಅದನ್ನು ನೂರು ಯಾಗಗಳಿಂದಲೂ ಸಂಪಾದಿಸಲು ಸಾಧ್ಯವಿಲ್ಲವೆಂದು ಜ್ಞಾನಿಗಳು ಹೇಳುತ್ತಾರೆ.
ಪಾತ್ರಂ ತ್ವತಿಥಿಮಾಸಾದ್ಯ ಶೀಲಾಢ್ಯಂ ಯೋ ನ ಪೂಜಯೇತ್ |
ಸ ದತ್ತ್ವಾ ಸುಕೃತಂ ತಸ್ಯ ಕ್ಷಪಯೇತ ಹ್ಯನರ್ಚಿತಃ ॥112॥
ಗುಣವಂತನಾದ, ಸತ್ಪಾತ್ರನಾದ ಅತಿಥಿಯು ಮನೆಗೆ ಬಂದರೂ ಯಾವನು ಪೂಜಿಸುವುದಿಲ್ಲವೋ ಅವನು ತನ್ನ ಪುಣ್ಯವನ್ನೆಲ್ಲಾ ಅತಿಥಿಗೆ ಕೊಟ್ಟು ಎಲ್ಲವನ್ನೂ ಕಳೆದುಕೊಳ್ಳುತ್ತಾನೆ.
ಏತತ್ ತೇ ಕಥಿತಂ ಪುತ್ರ ಮಯಾಽಽಖ್ಯಾನಮನುತ್ತಮಮ್ |
ಯಥಾ ಹಿ ವಿಜಿತೋ ಮೃತ್ಯುರ್ಗೃಹಸ್ಥೇನ ಪುರಾಽಭವತ್ ॥113॥
ಎಲೈ ಪುತ್ರನೇ, ಹಿಂದೆ ಗೃಹಸ್ಥನಾದವನು ಮೃತ್ಯುವನ್ನು ಹೇಗೆ ಜಯಿಸಿದನು ಎಂಬ ವಿಷಯದಲ್ಲಿ ಶ್ರೇಷ್ಠವಾದ ಈ ಆಖ್ಯಾನವನ್ನು ನಿನಗೆ ಹೇಳಿದ್ದೇನೆ.
ಧನ್ಯಂ ಯಶಸ್ಯಮಾಯುಷ್ಯಮಿದಮಾಖ್ಯಾನಮುತ್ತಮಮ್ |

ಬುಭೂಷತಾಽಭಿಮಂತವ್ಯಂ ಸರ್ವದುಶ್ಚರಿತಾಪಹಮ್ ॥114॥
ಈ ಶ್ರೇಷ್ಠವಾದ ಆಖ್ಯಾನವು ಧನಪ್ರದವಾದುದು, ಕೀರ್ತಿಕರವಾದುದು, ಆಯುರ್ವೃದ್ಧಿಕರವಾದುದು. ಸರ್ವಪಾಪಗಳನ್ನು ಪರಿಹಾರ ಮಾಡುವಂತಹದು. ತಮಗೆ ಶುಭವನ್ನು ಬಯಸುವವರು ಇದನ್ನು ಮನನ ಮಾಡಬೇಕು.
ಯ ಇದಂ ಕಥಯೇದ್ ವಿದ್ವಾನಹನ್ಯಹನಿ ಭಾರತ |
ಸುದರ್ಶನಸ್ಯ ಚರಿತಂ ಪುಣ್ಯಾನ್‌ಲೋಕಾನವಾಪ್ನುಯಾತ್ ॥115॥
ಎಲೈ ಭಾರತನೇ, ಯಾವ ವಿದ್ವಾಂಸನು ಸುದರ್ಶನನ ಈ ಪವಿತ್ರವಾದ ಆಖ್ಯಾನವನ್ನು ಹೇಳುತ್ತಾನೆಯೋ ಅವನು ಪುಣ್ಯಲೋಕಗಳನ್ನು ಹೊಂದುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಯುಧಿಷ್ಠಿರನಿಂದ ಭೀಷ್ಮರನ್ನು ಕುರಿತು ವಿಶ್ವಾಮಿತ್ರರ
ಬ್ರಾಹ್ಮಣಪ್ರಾಪ್ತಿ ಪ್ರಕಾರದ ಪ್ರಶ್ನೆ.
ಯುಧಿಷ್ಠಿರಃ
ಬ್ರಾಹ್ಮಣ್ಯಂ ಯದಿ ದುಷ್ಪ್ರಾಪಂ ತ್ರಿಭಿರ್ವರ್ಣೈರ್ನರಾಧಿಪ |
ಕಥಂ ಪ್ರಾಪ್ತಂ ಮಹಾರಾಜ ಕ್ಷತ್ರಿಯೇಣ ಮಹಾತ್ಮನಾ ॥1॥
ವಿಶ್ವಾಮಿತ್ರೇಣ ಧರ್ಮಾತ್ಮನ್ ಬ್ರಾಹ್ಮಣತ್ವಂ ನರರ್ಷಭ |
ಶ್ರೋತುಮಿಚ್ಛಾಮಿ ತತ್ತ್ವೇನ ತನ್ಮೇ ಬ್ರೂಹಿ ಪಿತಾಮಹ ॥2॥
ಯುಧಿಷ್ಠಿರ ಎಲೈ ನರಾಧಿಪನೇ, ಉಳಿದ ಮೂರುವರ್ಣದವರಿಂದ ಬ್ರಾಹ್ಮಣ್ಯವನ್ನು ಹೊಂದುವುದು ಅಸಾಧ್ಯವಾದರೆ, ಎಲೈ ಮಹಾರಾಜನೇ, ಕ್ಷತ್ರಿಯನಾದ ಮಹಾತ್ಮನಾದ ವಿಶ್ವಾಮಿತ್ರನು ಹೇಗೆ ಬ್ರಾಹ್ಮಣ್ಯವನ್ನು ಹೊಂದಿದನು? ಎಲೈ ಧರ್ಮಾತ್ಮನೇ, ನರಶ್ರೇಷ್ಠನೇ, ಪಿತಾಮಹನೇ, ಈ ವಿಷಯವನ್ನು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ. ಅದನ್ನು ನನಗೆ ಹೇಳು.
ತೇನ ಹ್ಯಮಿತವೀರ್ಯೇಣ ವಸಿಷ್ಠಸ್ಯ ಮಹಾತ್ಮನಃ |
ಹತಂ ಪುತ್ರಶತಂ ಸದ್ಯಸ್ತಪಸಾ ಪ್ರಪಿತಾಮಹ ॥3॥
ಎಲೈ ಪ್ರಪಿತಾಮಹನೇ, ಅಮಿತಪರಾಕ್ರಮಿಗಳಾದ ವಿಶ್ವಾಮಿತ್ರರು ಮಹಾತ್ಮರಾದ ವಸಿಷ್ಠರ ನೂರು ಪುತ್ರರನ್ನು ತಮ್ಮ ತಪಸ್ಸಿನ ಪ್ರಭಾವದಿಂದ ತಕ್ಷಣದಲ್ಲಿಯೇ ಕೊಂದರು.
ಯಾತುಧಾನಾಶ್ಚ ಬಹವೋ ರಾಕ್ಷಸಾಸ್ತಿಗ್ಮತೇಜಸಃ |
ಮನ್ಯುನಾವಿಷ್ಟದೇಹೇನ ಸೃಷ್ಟಾಃ ಕಾಲಾಂತಕೋಪಮಾಃ ॥4॥
ವಿಶ್ವಾಮಿತ್ರರು ಕೋಪಕ್ಕೆ ವಶರಾಗಿ ತಮ್ಮ ದೇಹದಿಂದ ಕಾಲಾಂತಕನಿಗೆ ಸದೃಶವಾದ ಕ್ರೂರ ಪರಾಕ್ರಮಿಗಳಾದ ಅನೇಕ ರಾಕ್ಷಸರನ್ನೂ ಮತ್ತು ಯಾತುರ್ಧಾನರನ್ನೂ ಸೃಷ್ಟಿಸಿದರು.
ಮಹಾನ್ ಕುಶಿಕವಂಶಶ್ಚ ಬ್ರಹ್ಮರ್ಷಿಶತಸಂಕುಲಃ |
ಸ್ಥಾಪಿತೋ ನರಲೋಕೇಽಸ್ಮಿನ್ ವಿದ್ವಾನ್ ಬ್ರಾಹ್ಮಣಸತ್ಕೃತಃ ॥5॥
ಕುಶಿಕವಂಶವು ನೂರಾರು ಬ್ರಹ್ಮರ್ಷಿಗಳಿಂದ ಕೂಡಿದ ದೊಡ್ಡ ವಂಶ. ಜ್ಞಾನಪೂರ್ಣವಾದ ಬ್ರಾಹ್ಮಣರಿಂದ ಸತ್ಕೃತವಾದ ಅಂತಹ ವಂಶವನ್ನು ವಿಶ್ವಾಮಿತ್ರರು ಭೂಲೋಕದಲ್ಲಿ ಸ್ಥಾಪಿಸಿದರು.
ಋಚೀಕಸ್ಯಾತ್ಮಜಶ್ಚೈವ ಶುನಃಶೇಪೋ ಮಹಾತಪಾಃ |
ವಿಮೋಕ್ಷಿತೋ ಮಹಾಸತ್ರಾತ್ ಪಶುತಾಮಭ್ಯುಪಾಗತಃ ॥6॥
ಋಚೀಕರ ಪುತ್ರರಾದ, ಮಹಾತಪಸ್ವಿಗಳಾದ ಶುನಶ್ಶೇಪರು ಹರಿಶ್ಚಂದ್ರನ ಮಹಾಯಾಗದಲ್ಲಿ ಪುತ್ರತ್ವವನ್ನು ಹೊಂದಿ ವಿಶ್ವಾಮಿತ್ರರಿಂದ ಬಿಡುಗಡೆಗೊಳಿಸಲ್ಪಟ್ಟರು.
ಹರಿಶ್ಚಂದ್ರಕ್ರತೌ ದೇವಾಂಸ್ತೋಷಯಿತ್ವಾಽಽತ್ಮತೇಜಸಾ |
ಪುತ್ರತಾಮನುಸಂಪ್ರಾಪ್ತೋ ವಿಶ್ವಾಮಿತ್ರಸ್ಯ ಧೀಮತಃ ॥7॥
ಹರಿಶ್ಚಂದ್ರನ ಯಾಗದಲ್ಲಿ ಶುನಶ್ಶೇಪರು ತಮ್ಮ ಸಾಮರ್ಥ್ಯದಿಂದ ದೇವತೆಗಳನ್ನು ಸ್ತೋತ್ರ ಮಾಡಿ, ಸಂತೋಷಪಡಿಸಿ ಮೇಧಾವಿಗಳಾದ ವಿಶ್ವಾಮಿತ್ರರ ಪುತ್ರತ್ವವನ್ನು ಹೊಂದಿದರು.
ನಾಭಿವಾದಯತೇ ಜ್ಯೇಷ್ಠಂ ದೇವರಾತಂ ನರಾಧಿಪ |
ಪುತ್ರಾಃ ಪಂಚಾಶತಶ್ಚಾಪಿ ಶಪ್ತಾಃ ಶ್ವಪಚತಾಂ ಗತಾಃ ॥8॥
ಎಲೈ ನರಾಧಿಪನೇ, ವಿಶ್ವಾಮಿತ್ರರ ಜ್ಯೇಷ್ಠಪುತ್ರನು ದೇವರಾತನಾದ ಶುನಶ್ಶೇಪನನ್ನು ಅಣ್ಣನೆಂದು ಅಂಗೀಕರಿಸದೆ ನಮಸ್ಕರಿಸದಿದ್ದಾಗ ಅವನು ತನ್ನ ಉಳಿದ ನಲವತ್ತೊಂಬತ್ತು ತಮ್ಮಂದಿರ ಜೊತೆಯಲ್ಲಿ ವಿಶ್ವಾಮಿತ್ರರ ಶಾಪಕ್ಕೆ ಒಳಗಾಗಿ ಚಂಡಾಲನಾದನು.
ತ್ರಿಶಂಕುರ್ಬಂಧುಸಂತ್ಯಕ್ತ ಐಕ್ಷ್ವಾಕಃ ಪ್ರೀತಿಪೂರ್ವಕಮ್ |
ಅವಾಕ್ಶಿರಾ ದಿವಂ ನೀತೋ ದಕ್ಷಿಣಾಮಾಶ್ರಿತೋ ದಿಶಮ್ ॥9॥
ಇಕ್ಷ್ವಾಕು ವಂಶದಲ್ಲಿ ಜನಿಸಿದ ತ್ರಿಶಂಕುವು ಬಂಧುಗಳಿಂದ ಪರಿತ್ಯಜಿಸಲ್ಪಟ್ಟರೂ ವಿಶ್ವಾಮಿತ್ರರಿಂದ ಪ್ರೀತಿಪೂರ್ವಕವಾಗಿ ಸ್ವರ್ಗಕ್ಕೆ ಕಳುಹಿಸಲ್ಪಟ್ಟು, ಅವನು ಈಗಲೂ ದಕ್ಷಿಣದಿಕ್ಕಿನಲ್ಲಿ ಆಕಾಶದಲ್ಲಿ ತಲೆಕೆಳಗಾಗಿ ನಿಂತಿದ್ದಾನೆ.
ವಿಶ್ವಾಮಿತ್ರಸ್ಯ ವಿಪುಲಾ ನದೀ ರಾಜರ್ಷಿಸೇವಿತಾ |

ಕೌಶಿಕೀತಿ ಶಿವಾ ಪುಣ್ಯಾ ಬ್ರಹ್ಮರ್ಷಿಗಣಸೇವಿತಾ ॥10॥
ವಿಶ್ವಾಮಿತ್ರರು ಸೃಷ್ಟಿಸಿದ, ರಾಜರ್ಷಿಗಳಿಂದ ಸೇವಿತವಾದ ಕೌಶಿಕೀ ಎಂಬ ವಿಸ್ತಾರವಾದ ನದಿಯು ಪವಿತ್ರವಾದ ಜಲದಿಂದ ಕೂಡಿ ಪುಣ್ಯಪ್ರದವಾಗಿ ಬ್ರಹ್ಮರ್ಷಿ ಗಣದಿಂದಲೂ ಸೇವಿತವಾಗಿದೆ.
ತಪೋವಿಘ್ನಕರೀ ಚೈವ ಪಂಚಚೂಡಾ ಸುಸಮ್ಮತಾ |
ರಂಭಾ ನಾಮಾಪ್ಸರಾಃ ಶಾಪಾದ್ ಯಸ್ಯ ಶೈಲತ್ವಮಾಗತಾ ॥11॥
ಅವರ ತಪಸ್ಸಿಗೆ ವಿಘ್ನವನ್ನು ಮಾಡಲು ಬಂದ ಪಂಚಚೂಡಗಳುಳ್ಳ, ಪ್ರಸಿದ್ಧಳಾದ ರಂಭೆ ಎಂಬ ಅಪ್ಸರೆಯು ಅವರ ಶಾಪಕ್ಕೆ ಒಳಗಾಗಿ ಪರ್ವತವಾದಳು.
ತಥೈವಾಸ್ಯ ಭಯಾದ್ ಬದ್ಧ್ವಾ ವಸಿಷ್ಠಃ ಸಲಿಲೇ ಪುರಾ |
ಆತ್ಮಾನಂ ಮಜ್ಜಯಾಮಾಸ ವಿಪಾಶಃ ಪುನರುತ್ಥಿತಃ ॥12॥
ಹಾಗೆಯೇ ಅವರಿಗೆ ಹೆದರಿದ ವಸಿಷ್ಠರು ತಮ್ಮನ್ನು ಪಾಶಗಳಿಂದ ಕಟ್ಟಿಕೊಂಡು ನದಿಯಲ್ಲಿ ಮುಳುಗಿ ಪಾಶಗಳನ್ನು ಕಳೆದುಕೊಂಡು ಮೇಲೆದ್ದರು.
ತದಾಪ್ರಭೃತಿ ಪುಣ್ಯಾ ಹಿ ವಿಪಾಶಾಽಭೂನ್ಮಹಾನದೀ |
ವಿಖ್ಯಾತಾ ಕರ್ಮಣಾ ತೇನ ವಸಿಷ್ಠಸ್ಯ ಮಹಾತ್ಮನಃ ॥13॥
ಆಗಿನಿಂದಲೂ ಪ್ರಾರಂಭಿಸಿ ಆ ಮಹಾನದಿಯು ಮಹಾತ್ಮರಾದ ವಸಿಷ್ಠರ ಆ ಕರ್ಮದಿಂದ ವಿಪಾಶಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿ ಪುಣ್ಯಪ್ರದವಾಗಿದೆ.
ವಾಗ್ಭಿಶ್ಚ ಭಗವಾನ್ ಯೇನ ದೇವಸೇನಾಗ್ರಗಃ ಪ್ರಭುಃ |
ಸ್ತುತಃ ಪ್ರೀತಮನಾಶ್ಚಾಸೀಚ್ಛಾಪಾಚ್ಚೈನಮಮೋಚಯತ್ ॥14॥
ಅವರು ತಮ್ಮ ಶ್ರೇಷ್ಠವಾದ ಸ್ತೋತ್ರಗಳಿಂದ ದೇವಸೇನಾನಾಯಕನಾದ ಇಂದ್ರನನ್ನು ಸ್ತೋತ್ರ ಮಾಡಿ ಅವನ ಅನುಗ್ರಹದಿಂದ ವಸಿಷ್ಠರ ಪುತ್ರರ ಶಾಪದಿಂದ ತಮಗೆ ಬಂದಿದ್ದ ಚಂಡಾಲತ್ವವನ್ನು ಪರಿಹರಿಸಿಕೊಂಡರು.
ಧ್ರುವಸ್ಯೌತ್ತಾನಪಾದಸ್ಯ ಬ್ರಹ್ಮರ್ಷೀಣಾಂ ತಥೈವ ಚ |
ಮಧ್ಯೇ ಜ್ವಲತಿ ಯೋ ನಿತ್ಯಮುದೀಚೀಮಾಶ್ರಿತೋ ದಿಶಮ್ ॥15॥
ಅವರು ಉತ್ತರದಿಕ್ಕಿನಲ್ಲಿ ಧ್ರುವನಕ್ಷತ್ರದ ಸಮೀಪದಲ್ಲಿ ಬ್ರಹ್ಮರ್ಷಿಗಳ ಗಣವಾದ ಸಪ್ತರ್ಷಿಗಣಗಳ ಮಧ್ಯದಲ್ಲಿ ಯಾವಾಗಲೂ ಜ್ವಲಿಸುತ್ತಿದ್ದಾರೆ.
ತಸ್ಯೈತಾನಿ ಚ ಕರ್ಮಾಣಿ ತಥಾನ್ಯಾನಿ ಚ ಕೌರವ |
ಬ್ರಾಹ್ಮಣತ್ವಂ ಕುತೋ ಜಾತಮಿದಂ ಕೌತೂಹಲಂ ಮಮ ॥16॥
ಎಲೈ ಕೌರವನೇ, ಅವರ ಕರ್ಮಗಳು ಇಂತಹವು ಮತ್ತು ಇದಕ್ಕೆ ಸದೃಶವಾದವುಗಳು. ಅಂತಹವರಿಗೆ ಹೇಗೆ ಬ್ರಾಹ್ಮಣತ್ವವು ಉಂಟಾಯಿತು ಎಂದು ತಿಳಿಯಲು ನನಗೆ ಕುತೂಹಲವಿದೆ.
ಕಿಮೇತದಿತಿ ತತ್ತ್ವೇನ ಪ್ರಬ್ರೂಹಿ ಭರತರ್ಷಭ |
ದೇಹಾಂತರಮನಾಸಾದ್ಯ ಕಥಂ ಸ ಬ್ರಾಹ್ಮಣೋಽಭವತ್ ॥17॥
ಎಲೈ ಭರತಶ್ರೇಷ್ಠನೇ, ಇದು ಏನು ಎಂದು, ಇದರ ತತ್ತ್ವವನ್ನು ಸರಿಯಾಗಿ ಹೇಳು. ವಿಶ್ವಾಮಿತ್ರರು ದೇಹಾಂತರವನ್ನು ಪಡೆಯದೆ ಹೇಗೆ ಬ್ರಾಹ್ಮಣರಾದರು?
ಏತತ್ ತತ್ತ್ವೇನ ಮೇ ರಾಜನ್ ಸರ್ವಮಾಖ್ಯಾತುಮರ್ಹಸಿ |
ಮತಂಗಸ್ಯ ಯಥಾ ತತ್ತ್ವಂ ತಥೈವೈತದ್ ಬ್ರವೀಹಿ ಮೇ ॥18॥
ಎಲೈ ರಾಜನೇ, ಇದರ ತತ್ತ್ವವೆಲ್ಲವನ್ನೂ ನನಗೆ ಚೆನ್ನಾಗಿ ಹೇಳಬೇಕು. ಮತಂಗ ಋಷಿಗಳ ಕಥೆಯನ್ನು ಹೇಳಿದಂತೆ ಈ ಕಥೆಯನ್ನೂ ನನಗೆ ಹೇಳು.
ಸ್ಥಾನೇ ಮತಂಗೋ ಬ್ರಾಹ್ಮಣ್ಯಂ ನಾಲಭದ್ ಭರತರ್ಷಭ |
ಚಂಡಾಲಯೋನೌ ಜಾತೋ ಹಿ ಕಥಂ ಬ್ರಾಹ್ಮಣ್ಯಮಾಪ್ನುಯಾತ್ ॥19॥
ಎಲೈ ಭರತರ್ಷಭನೇ, ಮತಂಗರು ಬ್ರಾಹ್ಮಣ್ಯವನ್ನು ಪಡೆಯಲಿಲ್ಲ ಎಂಬುದು ಯುಕ್ತವಾದುದು. ಚಂಡಾಲಯೋನಿಯಲ್ಲಿ ಜನಿಸಿದವನು ಹೇಗೆ ಬ್ರಾಹ್ಮಣ್ಯವನ್ನು ಪಡೆದಾನು?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಅನುಶಾಸನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ಭೀಷ್ಮರಿಂದ ವಿಶ್ವಾಮಿತ್ರರ ಬ್ರಾಹ್ಮಣ್ಯಪ್ರಾಪ್ತಿಪ್ರಕಾರದ ಕಥನ
ಭೀಷ್ಮಃ
ಶ್ರೂಯತಾಂ ಪಾರ್ಥ ತತ್ತ್ವೇನ ವಿಶ್ವಾಮಿತ್ರೋ ಯಥಾ ಪುರಾ |
ಬ್ರಾಹ್ಮಣತ್ವಂ ಗತಸ್ತಾತ ರಾಜರ್ಷಿತ್ವಂ ತಥೈವ ಚ ॥1॥
ಭೀಷ್ಮರು ಎಲೈ ಪಾರ್ಥನೇ, ಪ್ರೀತಿಪಾತ್ರನೇ, ಹಿಂದೆ ವಿಶ್ವಾಮಿತ್ರರು ಹೇಗೆ ರಾಜರ್ಷಿಗಳೂ ಮತ್ತು ಬ್ರಾಹ್ಮಣರೂ ಆದರೆಂಬುದನ್ನು ಸರಿಯಾಗಿ ಕೇಳುವವನಾಗು.

ಭರತಸ್ಯಾನ್ವಯೇ ಚೈವಾಜಮೀಢೋ ನಾಮ ಪಾರ್ಥಿವಃ |
ಬಭೂವ ಭರತಶ್ರೇಷ್ಠ ಯಜ್ವಾ ಧರ್ಮಭೃತಾಂ ವರಃ ॥2॥
ಎಲೈ ಭರತಶ್ರೇಷ್ಠನೇ, ಭರತವಂಶದಲ್ಲಿ ಅಜಮೀಢನೆಂಬ ರಾಜನಿದ್ದನು. ಅವನು ಯಾಗವನ್ನು ಮಾಡುವವನೂ ಮತ್ತು ಧರ್ಮಿಷ್ಠರಲ್ಲಿ ಶ್ರೇಷ್ಠನೂ ಆಗಿದ್ದನು.
ತಸ್ಯ ಪುತ್ರೋ ಮಹಾನಾಸೀಜ್ಜಹ್ನುರ್ನಾಮ ಜನೇಶ್ವರಃ |
ದುಹಿತೃತ್ವಮನುಪ್ರಾಪ್ತಾ ಗಂಗಾ ಯಸ್ಯ ಮಹಾತ್ಮನಃ ॥3॥
ಅವನಿಗೆ ಶ್ರೇಷ್ಠನಾದ ಜಹ್ನುರಾಜನು ಪುತ್ರನಾದನು. ಗಂಗೆಯು ಆ ಮಹಾತ್ಮನ ಮಗಳಾದಳು.
ತಸ್ಯಾತ್ಮಜಸ್ತುಲ್ಯಗುಣಃ ಸಿಂಧುದ್ವೀಪೋ ಮಹಾಯಶಾಃ |
ಸಿಂಧುದ್ವೀಪಾಚ್ಚ ರಾಜರ್ಷಿರ್ವಿಪಾಶಾಶ್ವೋ ಮಹಾಬಲಃ ॥4॥
ಅವನ ಪುತ್ರನೆಂದರೆ ಅವನಿಗೆ ಸಮಾನವಾದ ಗುಣವುಳ್ಳ, ಮಹಾಕೀರ್ತಿವಂತನಾದ ಸಿಂಧುದ್ವೀಪ. ಸಿಂಧುದ್ವೀಪನಿಂದ ರಾಜರ್ಷಿಯಾದ, ಮಹಾಬಲನಾದ, ವಿಪಾಶಾಶ್ವಸನು (ಬಲಾಕಾಶ್ವನು) ಜನಿಸಿದನು.
ಪಲ್ಲವಸ್ತಸ್ಯ ತನಯಃ ಸಾಕ್ಷಾದ್ ಧರ್ಮ ಇವಾಪರಃ |
ಕುಶಿಕಸ್ತಸ್ಯ ತನಯಃ ಸಹಸ್ರಾಕ್ಷಸಮದ್ಯುತಿಃ ॥5॥
ಪಲ್ಲವನು ಅವನ ಪುತ್ರ. ಅವನು ಸಾಕ್ಷಾತ್ ಇನ್ನೊಬ್ಬ ಧರ್ಮನಂತೆ ಇದ್ದನು. ಇಂದ್ರನಿಗೆ ಸಮಾನವಾದ ದ್ಯುತಿಯುಳ್ಳ ಕುಶಿಕನು ಅವನ ಪುತ್ರ.
ಕುಶಿಕಸ್ಯಾತ್ಮಜಃ ಶ್ರೀಮಾನ್ ಗಾಧಿರ್ನಾಮ ಜನೇಶ್ವರಃ |
ಅಪುತ್ರಃ ಸ ಮಹಾಬಾಹುರ್ವನವಾಸಮುದಾವಸತ್ ॥6॥
ಕಾಂತಿಯುಕ್ತನಾದ ಗಾಧಿರಾಜನು ಕುಶಿಕನ ಪುತ್ರ. ಮಹಾಬಾಹುವಾದ ಅವನು ಪುತ್ರನಿಲ್ಲದೆ ವನವಾಸವನ್ನು ಮಾಡಿದನು.
ಕನ್ಯಾ ಜಜ್ಞೇ ಶುಭಾತ್ ತಸ್ಯ ವನೇ ನಿವಸತಃ ಸತಃ |
ನಾಮ್ನಾ ಸತ್ಯವತೀ ನಾಮ ರೂಪೇಣಾಪ್ರತಿಮಾ ಭುವಿ ॥7॥
ಕಾಡಿನಲ್ಲಿ ವಾಸಿಸುವ ಅವನಿಗೆ ಅವನ ಪುಣ್ಯದಿಂದ ಸತ್ಯವತಿ ಎಂಬ ಕನ್ಯೆಯು ಜನಿಸಿದಳು. ಅವಳು ಭೂಮಿಯಲ್ಲಿ ತನ್ನ ಸೌಂದರ್ಯದಿಂದ ಅಸದೃಶಳಾಗಿದ್ದಳು.
ತಾಂ ವವ್ರೇ ಭಾರ್ಗವಃ ಶ್ರೀಮಾಂಶ್ಚ್ಯವನಸ್ಯಾತ್ಮಜಃ ಪ್ರಭುಃ |
ಋಚೀಕ ಇತಿ ವಿಖ್ಯಾತೋ ವಿಪುಲೇ ತಪಸಿ ಸ್ಥಿತಃ ॥8॥
ಚ್ಯವನರ ಪುತ್ರರೂ, ಸಮರ್ಥರೂ, ಭೃಗುವಂಶದಲ್ಲಿ ಜನಿಸಿದವರೂ, ವಿಪುಲವಾದ ತಪಸ್ಸಿನಲ್ಲಿ ರತರಾದವರೂ ಆದ ಋಚೀಕ ಋಷಿಗಳು ಅವಳನ್ನು ಬೇಡಿದರು.
ಸ ತಾಂ ನ ಪ್ರದದೌ ತಸ್ಮೈ ಋಚೀಕಾಯ ಮಹಾತ್ಮನೇ |
ದರಿದ್ರ ಇತಿ ಮತ್ವಾ ವೈ ಗಾಧಿಃ ಶತ್ರುನಿಬರ್ಹಣಃ ॥9॥
ಶತ್ರುಸಂಹಾರಕನಾದ ಗಾಧಿಯು ಇವರು ದರಿದ್ರರು ಎಂದು ತಿಳಿದು ಮಹಾತ್ಮರಾದ ಋಚೀಕರಿಗೆ ತನ್ನ ಪುತ್ರಿಯನ್ನು ಕೊಡಲಿಲ್ಲ.
ಪ್ರತ್ಯಾಖ್ಯಾಯ ಪುನರ್ಯಾಂತಮಬ್ರವೀದ್ ರಾಜಸತ್ತಮಃ |
ಶುಲ್ಕಂ ಪ್ರದೀಯತಾಂ ಬ್ರಹ್ಮನ್ ತತೋ ವೇತ್ಸ್ಯಸಿ ಮೇ ಸುತಾಮ್ ॥
ಅವರನ್ನು ನಿರಾಕರಿಸಿದ ಆ ರಾಜಶ್ರೇಷ್ಠನು ಅವರು ಹೋಗುತ್ತಿದ್ದಂತೆ ಅವರನ್ನು ಕುರಿತು ಬ್ರಾಹ್ಮಣರೇ, ಕನ್ಯಾಶುಲ್ಕವನ್ನು ಕೊಡಿ, ಅನಂತರ ನನ್ನ ಪುತ್ರಿಯನ್ನು ಪಡೆಯುವಿರಿ ಎಂದು ಹೇಳಿದನು.
ಋಚೀಕಃ
ಕಿಂ ಪ್ರಯಚ್ಛಾಮಿ ರಾಜೇಂದ್ರ ತುಭ್ಯಂ ಶುಲ್ಕಮಹಂ ನೃಪ |
ದುಹಿತುರ್ಬ್ರೂಹ್ಯಸಂಸಕ್ತೋ ಮಾಽತ್ರಾಭೂತ್ ತೇ ವಿಚಾರಣಾ ॥11॥
ಋಚೀಕ ಎಲೈ ರಾಜೇಂದ್ರನೇ, ಭಗವದ್ಧ್ಯಾನಪರನಾದ ನಾನು ನಿನ್ನ ಮಗಳಿಗೆ ಅಥವಾ ನಿನಗೆ ಪುತ್ರಿಯ ಸಲುವಾಗಿ ಏನು ಶುಲ್ಕವನ್ನು ಕೊಡಲಿ ಎಂದು ಹೇಳು. ಈ ವಿಷಯದಲ್ಲಿ ಸಂಶಯಪಡಬೇಡ.
ಗಾಧಿಃ
ಚಂದ್ರರಶ್ಮಿಪ್ರಕಾಶಾನಾಂ ಹಯಾನಾಂ ವಾತರಂಹಸಾಮ್ |
ಏಕತಃ ಶ್ಯಾಮಕರ್ಣಾನಾಂ ಸಹಸ್ರಂ ದೇಹಿ ಭಾರ್ಗವ ॥12॥
ಗಾಧಿ ಎಲೈ ಭಾರ್ಗವರೇ, ಚಂದ್ರಕಿರಣಗಳಂತೆ ಶ್ವೇತವರ್ಣದಿಂದ ಕೂಡಿದ, ವಾಯುವೇಗವುಳ್ಳ, ಒಂದು ಕಿವಿ ಮಾತ್ರ ಕಪ್ಪಾಗಿರುವ ಸಹಸ್ರ ಅಶ್ವಗಳನ್ನು ಕೊಡಿ.
ಭೀಷ್ಮಃ
ತತಃ ಸ ಭೃಗುಶಾರ್ದೂಲಶ್ಚ್ಯವನಸ್ಯಾತ್ಮಜಃ ಪ್ರಭುಃ |
ಅಬ್ರವೀದ್ ವರುಣಂ ದೇವಮಾದಿತ್ಯಂ ಪತಿಮಂಭಸಾಮ್ ॥13॥
ಭೀಷ್ಮ ಅನಂತರ ಚ್ಯವನಪುತ್ರರಾದ, ಭೃಗುಕುಲೋತ್ಪನ್ನರಲ್ಲಿ ಶ್ರೇಷ್ಠರಾದ, ಸಮರ್ಥರಾದ ಋಚೀಕರು ಅದಿತಿಯ ಪುತ್ರನಾದ, ಜಲೇಶ್ವರನಾದ ವರುಣದೇವನನ್ನು ಕುರಿತು ಕೇಳಿದರು.
ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚಂದ್ರವರ್ಚಸಾಮ್ |
ಸಹಸ್ರಂ ವಾತವೇಗಾನಾಂ ಭಿಕ್ಷೇ ತ್ವಾಂ ದೇವಸತ್ತಮ ॥14॥

ಎಲೈ ದೇವಶ್ರೇಷ್ಠನೇ, ಒಂದು ಕಿವಿ ಮಾತ್ರ ಕಪ್ಪಾಗಿರುವ, ಚಂದ್ರನ ಕಾಂತಿಯನ್ನು ಹೊಂದಿದ, ವಾಯುವೇಗವನ್ನು ಹೊಂದಿದ ಸಹಸ್ರ ಅಶ್ವಗಳನ್ನು ನಾನು ನಿನ್ನನ್ನು ಬೇಡುತ್ತಿದ್ದೇನೆ (ಎಂದು ಹೇಳಿದರು).
ತಥೇತಿ ವರುಣೋ ದೇವ ಆದಿತ್ಯೋ ಭೃಗುಸತ್ತಮಮ್ |
ಉವಾಚ ಯತ್ರ ತೇ ಛಂದಸ್ತತ್ರೋತ್ಥಾಸ್ಯಂತಿ ವಾಜಿನಃ ॥15॥
ಅದಿತಿಯ ಪುತ್ರನಾದ ವರುಣದೇವನು ಭೃಗುಶ್ರೇಷ್ಠರನ್ನು ಕುರಿತು, ಹಾಗೆಯೇ ಆಗಲಿ ಎಂದು ಹೇಳಿ, ನೀವು ಬಯಸಿದ ಕಡೆಯಲ್ಲಿ ಆ ಅಶ್ವಗಳು ಮೇಲೆದ್ದು ಬರುತ್ತವೆ ಎಂದು ಹೇಳಿದನು.
ಧ್ಯಾತಮಾತ್ರೇ ಋಚೀಕೇನ ಹಯಾನಾಂ ಚಂದ್ರವರ್ಚಸಾಮ್ |
ಗಂಗಾಜಲಾತ್ ಸಮುತ್ತಸ್ಥೌ ಸಹಸ್ರಂ ವಿಪುಲೌಜಸಾಮ್ ॥16॥
ಋಚೀಕರು ಆ ಚಂದ್ರಕಾಂತಿಯುಳ್ಳ ಅಶ್ವಗಳನ್ನು ಧ್ಯಾನ ಮಾಡಿದ ತಕ್ಷಣವೇ ವಿಪುಲ ಸಾಮರ್ಥ್ಯವುಳ್ಳ ಆ ಸಹಸ್ರ ಅಶ್ವಗಳು ಗಂಗಾಜಲದಿಂದ ಮೇಲೆದ್ದವು.
ಅದೂರೇ ಕನ್ಯಾಕುಬ್ಜಸ್ಯ ಗಂಗಾಯಾಸ್ತೀರಮುತ್ತಮಮ್ |
ಅಶ್ವತೀರ್ಥಂ ತದದ್ಯಾಪಿ ಮಾನವಾಃ ಪರಿಚಕ್ಷತೇ ॥17॥
ಕಾನ್ಯಕುಬ್ಜದ ಸಮೀಪದಲ್ಲಿ ಗಂಗಾನದಿಯ ಶ್ರೇಷ್ಠವಾದ ತೀರದಿಂದ ಆ ಅಶ್ವಗಳು ಎದ್ದುಬಂದವು. ಆ ಸ್ಥಳವನ್ನು ಈಗಲೂ ಮನುಷ್ಯರು ಅಶ್ವತೀರ್ಥವೆಂದು ಕರೆಯುತ್ತಾರೆ.
ತತ್ ತದಾ ಗಾಧಯೇ ತಾತ ಸಹಸ್ರಂ ವಾಜಿನಾಂ ಶುಭಮ್ |
ಋಚೀಕಃ ಪ್ರದದೌ ಪ್ರೀತಃ ಶುಲ್ಕಾರ್ಥಂ ಜಪತಾಂ ವರಃ ॥18॥
ಎಲೈ ಪ್ರೀತಿಪಾತ್ರನೇ, ಆಗ ಜಪ ಮಾಡುವವರಲ್ಲಿ ಶ್ರೇಷ್ಠರಾದ ಋಚೀಕರು ಸಂತೋಷದಿಂದ ಕನ್ಯಾಶುಲ್ಕದ ರೂಪದಲ್ಲಿ ಆ ಶುಭವಾದ ಸಹಸ್ರ ಅಶ್ವಗಳನ್ನು ಗಾಧಿಗೆ ನೀಡಿದರು.
ತತಃ ಸ ವಿಸ್ಮಿತೋ ರಾಜಾ ಗಾಧಿಃ ಶಾಪಭಯೇನ ಚ |
ದದೌ ತಾಂ ಸಮಲಂಕೃತ್ಯ ಕನ್ಯಾಂ ಭೃಗುಸುತಾಯ ವೈ ॥19॥
ಆಗ ವಿಸ್ಮಯಗೊಂಡ ರಾಜನು ಕನ್ಯೆಯನ್ನು ಕೊಡದಿದ್ದರೆ ಅವರು ಕೊಡಬಹುದಾದ ಶಾಪದಿಂದಲೂ ಹೆದರಿ, ಅಲಂಕೃತಳಾದ ಕನ್ಯೆಯನ್ನು ಭೃಗುಕುಲೋತ್ಪನ್ನರಾದ ಅವರಿಗೆ ಕೊಟ್ಟನು.
ಜಗ್ರಾಹ ಪಾಣಿಂ ವಿಧಿನಾ ತಸ್ಯಾ ಬ್ರಹ್ಮರ್ಷಿಸತ್ತಮಃ |
ಸಾ ಚ ತಂ ಪತಿಮಾಸಾದ್ಯ ಪರಂ ಹರ್ಷಮವಾಪ ಹ ॥20॥
ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠರಾದ ಅವರು ವೇದವಿಧಿಗೆ ಅನುಸಾರವಾಗಿ ಅವಳ ಪಾಣಿಗ್ರಹಣವನ್ನು ಮಾಡಿದರು. ಅವಳಾದರೂ ಋಚೀಕರನ್ನು ಪತಿಯಾಗಿ ಹೊಂದಿ ಬಹಳ ಸಂತೋಷಪಟ್ಟಳು.
ಸ ತುತೋಷ ಚ ವಿಪ್ರರ್ಷಿಸ್ತಸ್ಯಾ ವೃತ್ತೇನ ಭಾರತ |
ಛಂದಯಾಮಾಸ ಚೈವೈನಾಂ ವರೇಣ ವರವರ್ಣಿನೀಮ್ ॥21॥
ಎಲೈ ಭಾರತನೇ, ಆ ಬ್ರಹ್ಮರ್ಷಿಗಳು ಅವಳ ಶೀಲದಿಂದ ಬಹಳ ಸಂತೋಷಪಟ್ಟು ಆ ಸುಂದರಿಯನ್ನು ಕುರಿತು, ಬೇಕಾದ ವರವನ್ನು ಕೇಳು ಎಂದು ಹೇಳಿದರು.
ಮಾತ್ರೇ ತತ್ಸರ್ವಮಾಚಖ್ಯೌ ಸಾ ಕನ್ಯಾ ರಾಜಸತ್ತಮಮ್ |
ಅಥ ತಾಮಬ್ರವೀದ್ ಮಾತಾ ಸುತಾಂ ಕಿಂಚಿದವಾಙ್ಮುಖೀಮ್ ॥22॥
ಎಲೈ ರಾಜಶ್ರೇಷ್ಠನೇ, ಆ ಕನ್ಯೆಯು ತನ್ನ ತಾಯಿಗೆ ಎಲ್ಲ ವಿಷಯವನ್ನೂ ಹೇಳಿದಳು. ಅನಂತರದಲ್ಲಿ ಸ್ವಲ್ಪ ತಲೆ ತಗ್ಗಿಸಿದ ತನ್ನ ಪುತ್ರಿಯನ್ನು ಕುರಿತು ತಾಯಿಯು ಹೇಳಿದಳು.
ಮಮಾಪಿ ಪುತ್ರಿ ಭರ್ತಾ ತೇ ಪ್ರಸಾದಂ ಕರ್ತುಮರ್ಹತಿ |
ಅಪತ್ಯಸ್ಯ ಪ್ರದಾನೇನ ಸಮರ್ಥಃ ಸ ಮಹಾತಪಾಃ ॥23॥
ಪುತ್ರಿಯೇ, ಮಹಾತಪಸ್ವಿಯಾದ ನಿನ್ನ ಪತಿಯು ನನಗೂ ಸಹ ಒಬ್ಬ ಪುತ್ರನನ್ನು ಕರುಣಿಸಿ ನನಗೆ ಅನುಗ್ರಹವನ್ನು ಮಾಡಬೇಕು (ಎಂದು ಹೇಳಿದಳು).
ತತಃ ಸಾ ತ್ವರಿತಂ ಗತ್ವಾ ತತ್ಸರ್ವಂ ಪ್ರತ್ಯವೇದಯತ್ |
ಮಾತುಶ್ಚಿಕೀರ್ಷಿತಂ ರಾಜನ್ ಋಚೀಕಸ್ತಾಮಥಾಬ್ರವೀತ್ ॥24॥
ಎಲೈ ರಾಜನೇ, ಅನಂತರ ಸತ್ಯವತಿಯು ಶೀಘ್ರವಾಗಿ ಋಚೀಕರ ಬಳಿಗೆ ಹೋಗಿ, ತಾಯಿಯ ಅಭಿಪ್ರಾಯವೆಲ್ಲವನ್ನೂ ತಿಳಿಸಿದಳು. ಋಚೀಕರು ಅವಳನ್ನು ಕುರಿತು ಹೇಳಿದರು.
ಗುಣವಂತಮಪತ್ಯಂ ವೈ ತ್ವಂ ಚ ಸಾ ಜನಯಿಷ್ಯಥಃ |
ಜನನ್ಯಾಸ್ತವ ಕಲ್ಯಾಣಿ ಮಾ ಭೂದ್ವೈ ಪ್ರಣಯೋಽನ್ಯಥಾ ॥25॥
ನೀನೂ ಮತ್ತು ನಿನ್ನ ತಾಯಿಯೂ ಶ್ರೇಷ್ಠರಾದ ಪುತ್ರರನ್ನು ಪಡೆಯುವಿರಿ. ಎಲೌ ಕಲ್ಯಾಣಿಯೇ, ನಿನ್ನ ತಾಯಿಯು ನನ್ನಲ್ಲಿ ತೋರಿಸಿದ ಪ್ರೀತಿ-ವಿಶ್ವಾಸಗಳು ವ್ಯರ್ಥವಾಗದಿರಲಿ.
ತವ ಚೈವ ಗುಣಶ್ಲಾಘೀ ಪುತ್ರ ಉತ್ಪತ್ಸ್ಯತೇ ಶುಭೇ |
ಅಸ್ಮದ್ವಂಶಕರಃ ಶ್ರೀಮಾಂಸ್ತವ ಮಾತುಶ್ಚ ವಂಶಕೃತ್ ॥26॥
ಎಲೌ ಶುಭಳೇ, ನಿನಗೂ ಸಹ ನಮ್ಮ ವಂಶವನ್ನು ಬೆಳೆಸುವ ಕಾಂತಿಯುಕ್ತನಾದ, ಗುಣವಂತನಾದ ಒಬ್ಬ ಪುತ್ರನು ಜನಿಸುವನು. ನಿನ್ನ ತಾಯಿಗೂ ಸಹ ವಂಶಕರನಾದ ಒಬ್ಬ ಪುತ್ರನು ಜನಿಸುವನು.

ಋತುಸ್ನಾತಾ ಚ ಸಾಽಶ್ವತ್ಥಂ ತ್ವಂ ಚ ವೃಕ್ಷಮುದುಂಬರಮ್ |
ಪರಿಷ್ವಜೇಥಾಃ ಕಲ್ಯಾಣಿ ತತ ಇಷ್ಟಮವಾಪ್ಸ್ಯಥಃ ॥27॥
ಎಲೌ ಕಲ್ಯಾಣಿಯೇ, ಋತುಸ್ನಾತಳಾದ ನೀನು ಅಶ್ವತ್ಥವೃಕ್ಷವನ್ನೂ, ನಿನ್ನ ತಾಯಿಯು ಔದುಂಬರ (ಅತ್ತಿ) ವೃಕ್ಷವನ್ನು ಆಲಿಂಗಿಸಿ. ಅದರಿಂದ ನಿಮ್ಮ ಅಭೀಷ್ಟವು ಸಿದ್ಧಿಸುವವು.
ಚರುದ್ವಯಮಿದಂ ಚೈವ ಮಂತ್ರಯುಕ್ತಂ ಶುಚಿಸ್ಮಿತೇ |
ತ್ವಂ ಚ ಸಾ ಚೋಪಯುಂಜೀಥಾಂ ತತಃ ಪುತ್ರಾವವಾಪ್ಸ್ಯಥಃ ॥28॥
ಎಲೌ ಶುಚಿಸ್ಮಿತೆಯೇ, ಮಂತ್ರದಿಂದ ಅಭಿಮಂತ್ರಿತವಾದ ಈ ಎರಡು ಚರುಗಳು ಇಲ್ಲಿವೆ. ಇವುಗಳನ್ನು ನೀನೂ ಮತ್ತು ನಿನ್ನ ತಾಯಿಯೂ ಉಪಯೋಗಿಸಿ. ಅನಂತರ ಪುತ್ರರನ್ನು ಪಡೆಯುವಿರಿ (ಎಂದು ಹೇಳಿದರು).
ತತಃ ಸತ್ಯವತೀ ಹೃಷ್ಟಾ ಮಾತರಂ ಪ್ರತ್ಯಭಾಷತ |
ಯದ್ ಋಚೀಕೇನ ಕಥಿತಂ ತಚ್ಚಾಚಖ್ಯೌ ಚರುದ್ವಯಮ್ ॥29॥
ಅನಂತರ ಸತ್ಯವತಿಯು ಸಂತೋಷದಿಂದ ಕೂಡಿದವಳಾಗಿ ತಾಯಿಗೆ ಋಚೀಕರು ಹೇಳಿದ ವೃಕ್ಷದ ವಿಷಯವೆಲ್ಲವನ್ನೂ ಮತ್ತು ಆ ಚರುದ್ವಯಗಳನ್ನೂ ಹೇಳಿದಳು.
ತಾಮುವಾಚ ತತೋ ಮಾತಾ ಸುತಾಂ ಸತ್ಯವತೀಂ ತದಾ |
ಪುತ್ರಿ ಮೂರ್ಧ್ನಾ ಪ್ರಪನ್ನಾಯಾಃ ಕುರುಷ್ವ ವಚನಂ ಮಮ ॥30॥
ಆಗ ಸತ್ಯವತಿಯ ತಾಯಿಯು ಅವಳನ್ನು ಕುರಿತು, `ಪುತ್ರಿಯೇ, ಶಿರಸ್ಸಿನಿಂದ ಶರಣಾಗತಳಾಗಿ ಹೇಳುತ್ತಿರುವ ನನ್ನ ಮಾತನ್ನು ನಡೆಸಿಕೊಡು'.
ಭರ್ತ್ರಾ ಯ ಏಷ ದತ್ತಸ್ತೇ ಚರುರ್ಮಂತ್ರಪುರಸ್ಕೃತಃ |
ಏತಂ ಪ್ರಯಚ್ಛ ಮಹ್ಯಂ ತ್ವಂ ಮದೀಯಂ ತ್ವಂ ಗೃಹಾಣ ಚ ॥31॥
ನಿನ್ನ ಪತಿಯು ಮಂತ್ರಪೂರಿತವಾದ ಯಾವ ಚರುವನ್ನು ನಿನಗೆ ಕೊಟ್ಟಿದ್ದಾರೆಯೋ ಅದನ್ನು ನನಗೆ ಕೊಡು. ನನ್ನ ಚರುವನ್ನು ನೀನು ಸ್ವೀಕರಿಸು.
ವ್ಯತ್ಯಾಸಂ ವೃಕ್ಷಯೋಶ್ಚಾಪಿ ಕರವಾವ ಶುಚಿಸ್ಮಿತೇ |
ಯದಿ ಪ್ರಮಾಣಂ ವಚನಂ ಮಮ ಮಾತುರನಿಂದಿತೇ |
ಸ್ವಮಪತ್ಯಂ ವಿಶಿಷ್ಟಂ ಹಿ ಸರ್ವ ಇಚ್ಛತ್ಯನಾವಿಲಮ್ ॥32॥
ಎಲೌ ಶುಚಿಸ್ಮಿತೆಯೇ, ನಾವು ವೃಕ್ಷಗಳಲ್ಲಿಯೂ ವ್ಯತ್ಯಾಸವನ್ನು ಮಾಡಿಕೊಳ್ಳೋಣ. ಅನಿಂದಿತಳೇ, ನನ್ನ ಮಾತು ನಿನಗೆ ಪ್ರಮಾಣವಾದರೆ ಹೀಗೆ ಮಾಡು. ಎಲ್ಲರೂ ಶ್ರೇಷ್ಠರಾದ, ನಿರ್ದುಷ್ಟರಾದ ಒಳ್ಳೆಯ ಪುತ್ರರನ್ನು ಅಪೇಕ್ಷಿಸುತ್ತಾರಷ್ಟೆ?
ವ್ಯಕ್ತಂ ಭಗವತಾ ಚಾತ್ರ ಕೃತಮೇವಂ ಭವಿಷ್ಯತಿ |
ತತೋ ಮೇ ತ್ವಚ್ಚರೌ ಭಾವಃ ಪಾದಪೇ ಚ ಸುಮಧ್ಯಮೇ |
ಕಥಂ ವಿಶಿಷ್ಟೋ ಭ್ರಾತಾ ತೇ ಭವೇದಿತ್ಯೇವ ಚಿಂತಯ ॥33॥
ಖಂಡಿತವಾಗಿ ಪೂಜ್ಯನಾದ ನಿನ್ನ ಪತಿಯು ಹೀಗೆಯೇ ಯೋಚಿಸುತ್ತಾನೆ. ಆದ್ದರಿಂದ ಎಲೌ ಸುಮಧ್ಯಮೆಯೇ, ನಿನ್ನ ಚರುವಿನಲ್ಲಿಯೂ ಮತ್ತು ವೃಕ್ಷದಲ್ಲಿಯೂ ನನಗೆ ಆಸೆಯುಂಟಾಗಿದೆ. ನಿನಗೆ ಹೇಗೆ ಒಬ್ಬ ಶ್ರೇಷ್ಠವಾದ ಒಬ್ಬ ತಮ್ಮನು ಜನಿಸುವನೋ ಎಂದು ಇಷ್ಟೇ ವಿಚಾರವನ್ನು ಮಾಡು (ಎಂದು ಹೇಳಿದಳು).
ತಥಾ ಚ ಕೃತವತ್ಯೌ ತೇ ಮಾತಾ ಸತ್ಯವತೀ ಚ ಸಾ |
ಅಥ ಗರ್ಭಾವನುಪ್ರಾಪ್ತೇ ಉಭೇ ತೇ ವೈ ಯುಧಿಷ್ಠಿರ ॥34॥
ತಾಯಿ ಮತ್ತು ಸತ್ಯವತಿ ಇಬ್ಬರೂ ಹಾಗೆಯೇ ಮಾಡಿದರು. ಎಲೈ ಯುಧಿಷ್ಠಿರನೇ, ಅನಂತರ ಅವರಿಬ್ಬರೂ ಗರ್ಭವನ್ನು ಧರಿಸಿದರು.
ದೃಷ್ಟ್ವಾ ಗರ್ಭಮನುಪ್ರಾಪ್ತಾಂ ಭಾರ್ಯಾಂ ಸ ಚ ಮಹಾನೃಷಿಃ |
ಉವಾಚ ತಾಂ ಸತ್ಯವತೀಂ ದುರ್ಮನಾ ಭೃಗುಸತ್ತಮಃ ॥35॥
ತನ್ನ ಪತ್ನಿಯು ಗರ್ಭವತಿಯಾದುದನ್ನು ನೋಡಿ, ಭೃಗುಶ್ರೇಷ್ಠರಾದ ಮಹರ್ಷಿಗಳಾದ ಋಚೀಕರು ಮನಸ್ಸಿನಲ್ಲಿ ಬೇಸರಗೊಂಡು ಪತ್ನಿಯಾದ ಸತ್ಯವತಿಯನ್ನು ಕುರಿತು ಹೇಳಿದರು.
ವ್ಯತ್ಯಾಸೇನೋಪಯುಕ್ತಸ್ತೇ ಚರುರ್ವ್ಯಕ್ತಂ ಭವಿಷ್ಯತಿ |
ವ್ಯತ್ಯಾಸಃ ಪಾದಪೇ ಚಾಪಿ ಸುವ್ಯಕ್ತಂ ತೇ ಕೃತಃ ಶುಭೇ ॥36॥
ಎಲೌ ಶುಭಳಾದವಳೇ, ನೀನು ಸ್ಪಷ್ಟವಾಗಿ ಚರುವಿನಲ್ಲಿ ವ್ಯತ್ಯಾಸ ಮಾಡಿದ್ದೀಯೆ. ಅದಕ್ಕಿಂತಲೂ ಸ್ಪಷ್ಟವಾಗಿ ವೃಕ್ಷಗಳಲ್ಲಿ ವ್ಯತ್ಯಾಸ ಮಾಡಿದ್ದೀಯೆ ಎಂದು ಕಾಣುತ್ತಿದೆ.
ಮಯಾ ಹಿ ವಿಧಿವದ್ ಬ್ರಹ್ಮ ತ್ವಚ್ಚರೌ ಸನ್ನಿವೇಶಿತಮ್ |
ಕ್ಷತ್ರವೀರ್ಯಂ ಚ ಸಕಲಂ ಚರೌ ತಸ್ಯಾ ನಿವೇಶಿತಮ್ ॥37॥
ನಾನು ನಿನ್ನ ಚರುವಿನಲ್ಲಿ ವಿಧಿವತ್ತಾಗಿ ಬ್ರಾಹ್ಮಣ ತೇಜಸ್ಸನ್ನು ಅಭಿಮಂತ್ರಿಸಿದ್ದೆನು. ನಿನ್ನ ತಾಯಿಯ ಚರುವಿನಲ್ಲಿ ಸಕಲವಾದ ಕ್ಷತ್ರತೇಜಸ್ಸನ್ನು ಅಭಿಮಂತ್ರಿಸಿ ಇಟ್ಟಿದ್ದೆನು.
ತ್ರಿಲೋಕವಿಖ್ಯಾತಗುಣಂ ತ್ವಂ ವಿಪ್ರಂ ಜನಯಿಷ್ಯಸಿ |
ಸಾ ಚ ಕ್ಷತ್ರಂ ವಿಶಿಷ್ಟಂ ವೈ ತತ ಏತತ್ ಕೃತಂ ಮಯಾ ॥38॥
ನೀನು ಮೂರುಲೋಕಗಳಲ್ಲಿಯೂ ವಿಖ್ಯಾತವಾದ ಗುಣವುಳ್ಳ ಬ್ರಾಹ್ಮಣನನ್ನು ಪಡೆಯುವಿ. ನಿನ್ನ ತಾಯಿಯು ಅಂಥ ವಿಶಿಷ್ಟನಾದ ಕ್ಷತ್ರಿಯ ಪುತ್ರನನ್ನು ಪಡೆಯುವಳು ಎಂದು ಯೋಚಿಸಿ ನಾನು ಹೀಗೆ ಮಾಡಿದೆನು.

ವ್ಯತ್ಯಾಸಸ್ತು ಕೃತೋ ಯಸ್ಮಾತ್ ತ್ವಯಾ ಮಾತ್ರಾ ತಥೈವ ಚ |
ತಸ್ಮಾತ್ ಸಾ ಬ್ರಾಹ್ಮಣಶ್ರೇಷ್ಠಂ ಮಾತಾ ತೇ ಜನಯಿಷ್ಯತಿ ॥39॥
ನೀನೂ ಮತ್ತು ನಿನ್ನ ತಾಯಿಯೂ ವ್ಯತ್ಯಾಸವನ್ನು ಮಾಡಿದ ಕಾರಣದಿಂದ ಆ ನಿನ್ನ ತಾಯಿಯು ಶ್ರೇಷ್ಠನಾದ ಬ್ರಾಹ್ಮಣನನ್ನು ಪುತ್ರನನ್ನಾಗಿ ಪಡೆಯುವಳು.
ಕ್ಷತ್ರಿಯಂ ತೂಗ್ರಕರ್ಮಾಣಂ ತ್ವಂ ಭದ್ರೇ ಜನಯಿಷ್ಯಸಿ |
ನ ಹಿ ತೇ ತತ್ಕೃತಂ ಸಾಧು ಮಾತೃಸ್ನೇಹೇನ ಭಾಮಿನಿ ॥40॥
ಎಲೌ ಭದ್ರೆಯೇ, ನೀನಾದರೂ ಕ್ರೂರಕರ್ಮವನ್ನು ಮಾಡುವ ಕ್ಷತ್ರಿಯನನ್ನು ಪುತ್ರನನ್ನಾಗಿ ಪಡೆಯುವಿ. ಎಲೌ ಭಾಮಿನಿಯೇ, ತಾಯಿಯ ಮೇಲಿನ ಪ್ರೀತಿಯಿಂದ ನೀನು ಮಾಡಿದ ವ್ಯತ್ಯಾಸವು ಸರಿಯಾದುದಲ್ಲ (ಎಂದು ಹೇಳಿದರು).
ಸಾ ಶ್ರುತ್ವಾ ಶೋಕಸಂತಪ್ತಾ ಪಪಾತ ವರವರ್ಣಿನೀ |
ಭೂಮೌ ಸತ್ಯವತೀ ರಾಜಂಶ್ಛಿನ್ನೇವ ರುಚಿರಾ ಲತಾ ॥41॥
ಆ ಮಾತುಗಳನ್ನು ಕೇಳಿ, ಸುಂದರಿಯಾದ ಸತ್ಯವತಿಯು ಶೋಕಸಂತಪ್ತಳಾಗಿ ಕತ್ತರಿಸಿ ಭೂಮಿಯ ಮೇಲೆ ಬಿದ್ದ ಸುಂದರವಾದ ಲತೆಯಂತೆ ಕೆಳಗೆ ಬಿದ್ದಳು.
ಪ್ರತಿಲಭ್ಯ ಚ ಸಾ ಸಂಜ್ಞಾಂ ಶಿರಸಾ ಪ್ರಣಿಪತ್ಯ ಚ |
ಉವಾಚ ಭಾರ್ಯಾ ಭರ್ತಾರಂ ಗಾಧೇಯೀ ಬ್ರಾಹ್ಮಣರ್ಷಭಮ್ ॥
ಅವಳು ಪ್ರಜ್ಞೆಯನ್ನು ಪಡೆದು ತನ್ನ ಪತಿಗೆ ಶಿರಸಾ ನಮಸ್ಕರಿಸಿ, ಪತ್ನಿಯಾದ, ಗಾಧಿಪುತ್ರಿಯಾದ ಅವಳು ಪತಿಯಾದ, ಬ್ರಾಹ್ಮಣಶ್ರೇಷ್ಠರಾದ ಅವರನ್ನು ಕುರಿತು ಮಾತನಾಡಿದಳು.
ಪ್ರಸಾದಯಂತ್ಯಾಂ ಭಾರ್ಯಾಯಾಂ ಮಯಿ ಬ್ರಹ್ಮವಿದಾಂ ವರ |
ಪ್ರಸಾದಂ ಕುರು ವಿಪ್ರರ್ಷೇ ನ ಮೇ ಸ್ಯಾತ್ ಕ್ಷತ್ರಿಯಃ ಸುತಃ ॥43॥
ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೇ, ಭಾರ್ಯೆಯಾಗಿ ನಾನು ಅನುಗ್ರಹವನ್ನು ಬೇಡುತ್ತಿರುವಾಗ ನನಗೆ ಅನುಗ್ರಹವನ್ನು ಮಾಡಿ. ಎಲೈ ವಿಪ್ರರ್ಷಿಗಳೇ, ನನಗೆ ಕ್ಷತ್ರಿಯನಾದ ಪುತ್ರನು ಜನಿಸುವುದು ಬೇಡ.
ಕಾಮಂ ಮಮೋಗ್ರಕರ್ಮಾ ವೈ ಪೌತ್ರೋ ಭವಿತುಮರ್ಹತಿ |
ನ ತು ಮೇ ಸ್ಯಾತ್ ಸುತೋ ಬ್ರಹ್ಮನ್ನೇಷ ಮೇ ದೀಯತಾಂ ವರಃ ॥
ನನ್ನ ಪೌತ್ರನು ಕ್ರೂರಕರ್ಮವನ್ನು ಮಾಡುವ ಕ್ಷತ್ರಿಯನಾದರೂ ಆಗಲಿ. ಆದರೆ ಅಂತಹ ಪುತ್ರನು ಮಾತ್ರ ಬೇಡ. ಪೂಜ್ಯರೇ, ನನಗೆ ಈ ವರವನ್ನು ಕೊಡಿ (ಎಂದು ಹೇಳಿದಳು).
ಏವಮಸ್ತ್ವಿತಿ ಹೋವಾಚ ಸ್ವಾಂ ಭಾರ್ಯಾಂ ಸುಮಹಾತಪಾಃ |
ತತಃ ಸಾ ಜನಯಾಮಾಸ ಜಮದಗ್ನಿಂ ಸುತಂ ಶುಭಮ್ ॥45॥
ಮಹಾರಥರಾದ ಋಚೀಕರು- ಹಾಗೇ ಆಗಲಿ ಎಂದು ಹೇಳಿದರು. ಅನಂತರ ಅವಳು ಶ್ರೇಷ್ಠರಾದ ಜಮದಗ್ನಿಗಳನ್ನು ಪುತ್ರನನ್ನಾಗಿ ಪಡೆದಳು.
ವಿಶ್ವಾಮಿತ್ರಂ ಚಾಜನಯದ್ ಗಾಧೇರ್ಭಾರ್ಯಾ ಯಶಸ್ವಿನೀ |
ಋಷೇಃ ಪ್ರಭಾವಾದ್ ರಾಜೇಂದ್ರ ಬ್ರಹ್ಮರ್ಷಿಂ ಬ್ರಹ್ಮವಾದಿನಮ್ ॥46॥
ಎಲೈ ರಾಜೇಂದ್ರನೇ, ಋಚೀಕ ಋಷಿಗಳ ಪ್ರಭಾವದಿಂದ ಕೀರ್ತಿವಂತಳಾದ ಗಾಧಿಯ ಭಾರ್ಯೆಯು ಬ್ರಹ್ಮರ್ಷಿಗಳೂ, ಬ್ರಹ್ಮವಾದಿಗಳೂ ಆದ ವಿಶ್ವಾಮಿತ್ರರನ್ನು ಪಡೆದಳು.
ತತೋ ಬ್ರಾಹ್ಮಣತಾಂ ಯಾತೋ ವಿಶ್ವಾಮಿತ್ರೋ ಮಹಾತಪಾಃ |
ಕ್ಷತ್ರಿಯಃ ಸೋಽಪಿ ಹಿ ತಥಾ ಬ್ರಹ್ಮವಂಶಸ್ಯ ಕಾರಕಃ ॥47॥
ಆ ಕಾರಣದಿಂದ ಮಹಾತಪಸ್ವಿಗಳಾದ ವಿಶ್ವಾಮಿತ್ರರು ಬ್ರಾಹ್ಮಣರಾದರು. ಅವರು ಕ್ಷತ್ರಿಯರಾಗಿ ಜನಿಸಿದರೂ ಬ್ರಾಹ್ಮಣವಂಶಕ್ಕೆ ಕಾರಕರಾದರು.
ತಸ್ಯ ಪುತ್ರಾ ಮಹಾತ್ಮಾನೋ ಬ್ರಹ್ಮವಂಶವಿವರ್ಧನಾಃ |
ತಪಸ್ವಿನೋ ಬ್ರಹ್ಮವಿದೋ ಗೋತ್ರಕರ್ತಾರ ಏವ ಚ ॥48॥
ಅವರ ಪುತ್ರರು ಮಹಾತ್ಮರೂ, ಬ್ರಾಹ್ಮಣವಂಶ ವಿವರ್ಧನರೂ, ತಪಸ್ವಿಗಳೂ, ಬ್ರಹ್ಮಜ್ಞಾನಿಗಳೂ ಮತ್ತು ಗೋತ್ರಾಭಿವರ್ಧಕರೂ ಆದರು.
ಮಧುಚ್ಛಂದಶ್ಚ ಭಗವಾನ್ ದೇವರಾತಶ್ಚ ವೀರ್ಯವಾನ್ |
ಅಕ್ಷೀಣಶ್ಚ ಶಕುಂಭಶ್ಚ ಬಭ್ರುಃ ಕಾಲಪಥಸ್ತಥಾ ॥49॥
ಯಾಜ್ಞವಲ್ಕ್ಯಶ್ಚ ವಿಖ್ಯಾತಸ್ತಥಾ ಸ್ಥೂಣೋ ಮಹಾವ್ರತಃ |
ಉಲೂಕೋ ಯಮದೂತಶ್ಚ ತಥರ್ಷಿಃ ಸೈಂಧವಾಯನಃ ॥50॥
ವಲ್ಗುಜಂಘಶ್ಚ ಭಗವಾನ್ ಗಾಲವಶ್ಚ ಮಹಾನೃಷಿಃ |
ಋಷಿರ್ವಜ್ರಸ್ತಥಾಖ್ಯಾತಃ ಶಾಲಂಕಾಯನ ಏವ ಚ ॥51॥
ಲಾಲಾಟ್ಯೋ ನಾರದಶ್ಚೈವ ತಥಾ ಕೂರ್ಚಮುಖಃ ಸ್ಮೃತಃ |
ಬಾಷ್ಕಲಿರ್ಮುಸಲಶ್ಚೈವ ರಕ್ಷೋಗ್ರೀವಸ್ತಥೈವ ಚ ॥52॥
ಅಂಘ್ರಿಕೋ ನೈಕಭೃಚ್ಚೈವ ಶಿಲಾಯೂಪಃ ಸಿತಃ ಶುಚಿಃ |
ಚಕ್ರಕೋ ಮಾರುತಂತವ್ಯೋ ವಾತಘ್ನೋಽಥಾಶ್ವಲಾಯನಃ ॥53॥

ಶ್ಯಾಮಾಯನೋಽಥ ಗಾರ್ಗ್ಯಶ್ಚ ಜಾಬಾಲಿಃ ಸುಶ್ರುತಸ್ತಥಾ |
ಕಾರೀಷಿರಥ ಸಂಶ್ರುತ್ಯಃ ಪರಪೌರವತಕ್ಷಕಃ ||54||
ಮಹಾನೃಷಿಶ್ಚ ಕಪಿಲಸ್ತಥರ್ಷಿಸ್ತಾರಕಾಯನಃ |
ತಥೈವ ಚೋಪಗಹನಸ್ತಥರ್ಷಿಶ್ಚಾರ್ಜುನಾಯನಃ ||55||
ಮಾರ್ಗಮಿತ್ರಿರ್ಹಿರಣ್ಯಾಕ್ಷೋ ಜಂಘಾರಿರ್ಬಭ್ರುವಾಹನಃ |
ಉಜ್ಜಯೋ ನಿರದಾಪೇಕ್ಷೀ ನಾರದೀ ಚ ಮಹಾನೃಷಿಃ |
ವಿಶ್ವಾಮಿತ್ರಾತ್ಮಜಾಃ ಸರ್ವೇ ಮುನಯೋ ಬ್ರಹ್ಮವಾದಿನಃ ||56||
ಪೂಜ್ಯರಾದ ಮಧುಛಂದರು, ಸಾಮರ್ಥ್ಯಪೂರ್ಣರಾದ ದೇವರಾತರಾದ ಶುನಃಶೇಪರು, ಅಕ್ಷೀಣ, ಶಕುಂತ (ಶಕುಂಭ), ಬಭ್ರು, ಕಾಲಪಥ, ಪ್ರಖ್ಯಾತರಾದ ಯಾಜ್ಞವಲ್ಕ್ಯ, ಮಹಾವ್ರತರಾದ ಸ್ಥೂಣ, ಉಲೂಕ, ಯಮದೂತ, ಸೈಂಧವ ಎಂಬ ಋಷಿ ವಲ್ಗುಜಂಘ, (ಕರ್ಣಜಂಘ), ಮಹಾತ್ಮರಾದ ಗಾಲವರೂ, ವಜ್ರಋಷಿ, ಶಾಲಂಕಾಯನ, ಲಾಲಾಟ್ಯ (ಲಲಾಟ), ನಾರದ, ಕೂರ್ಚಮುಖ (ಕೂರ್ಮಮುಖ), ಬಾಷ್ಕಲಿ, ಮುಸಲ, ರಕ್ಷೋಗ್ರೀವ (ವಕ್ಷೋಗ್ರೀವ), ಅಂಘ್ರಿಕ, ನೈಕಭೃತ್, ಶಿಲಾಯೂಪ, ಸಿತ, ಶುಚಿ, ಚಕ್ರಕ, ಮಾರುತಂತವ್ಯ, ವಾತಘ್ನ, ಆಶ್ವಲಾಯನ, ಶ್ಯಾಮಾಯನ, ಗಾರ್ಗ್ಯ, ಜಾಬಾಲಿ, ಸುಶ್ರುತ, ಕಾರೀಷಿ, ಸಂಶ್ರುತ್ಯ, ಪರಪೌರವ, ತಕ್ಷಕ, ಮಹರ್ಷಿಗಳಾದ ಕಪಿಲರು, ತಾರಕಾಯನ, ಉಪಗಹನ, ಅರ್ಜುನಾಯನ, ಮಾರ್ಗಮಿತ್ರಿ, ಹಿರಣ್ಯಾಕ್ಷ, ಜಂಘಾರಿ, ಬಭ್ರುವಾಹನ, ಉಜ್ಜಯ, ನಿರದಾಪೇಕ್ಷಿ, ನಾರದಿ - ಇವರೆಲ್ಲರೂ ವಿಶ್ವಾಮಿತ್ರರ ಪುತ್ರರು. ಇವರೆಲ್ಲರೂ ಋಷಿಗಳು ಮತ್ತು ಬ್ರಹ್ಮವಾದಿಗಳು.
ತನ್ನೈಷ ಕ್ಷತ್ರಿಯೋ ರಾಜನ್ ವಿಶ್ವಾಮಿತ್ರೋ ಮಹಾತಪಾಃ |
ಋಚೀಕೇನಾಹಿತಂ ಬ್ರಹ್ಮ ಪರಮೇತದ್ ಯುಧಿಷ್ಠಿರ ||57||
ಎಲೈ ರಾಜನೇ, ಆದ್ದರಿಂದ ಮಹಾತಪಸ್ವಿಗಳಾದ ವಿಶ್ವಾಮಿತ್ರರು ಕ್ಷತ್ರಿಯರಲ್ಲ. ಎಲೈ ಯುಧಿಷ್ಠಿರನೇ, ಅವರು ಋಚೀಕರಿಂದ ಸಮಾಹಿತವಾದ ಶ್ರೇಷ್ಠವಾದ ಬ್ರಹ್ಮತೇಜೋರೂಪರಾದವರು.
ಏತತ್ ತೇ ಸರ್ವಮಾಖ್ಯಾತಂ ತತ್ತ್ವೇನ ಭರತರ್ಷಭ |
ವಿಶ್ವಾಮಿತ್ರಸ್ಯ ವೈ ಜನ್ಮ ಸೋಮಸೂರ್ಯಾಗ್ನಿತೇಜಸಃ ||58||
ಎಲೈ ಭರತಶ್ರೇಷ್ಠನೇ, ಸೋಮ-ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳ ವಿಶ್ವಾಮಿತ್ರರ ಈ ಜನ್ಮವೃತ್ತಾಂತವೆಲ್ಲವನ್ನೂ ನಿನಗೆ ನಾನು ಯಥಾರ್ಥವಾಗಿ ಹೇಳಿದ್ದೇನೆ.
ಯತ್ರ ಯತ್ರ ಚ ಸಂದೇಹೋ ಭೂಯಸ್ತೇ ರಾಜಸತ್ತಮ |
ತತ್ರ ತತ್ರ ಚ ಮಾಂ ಬ್ರೂಹಿ ಚ್ಛೇತ್ತಾಸ್ಮಿ ತವ ಸಂಶಯಾನ್ ||61||
ಎಲೈ ರಾಜಶ್ರೇಷ್ಠನೇ, ನಿನಗೆ ಎಲ್ಲೆಲ್ಲಿ ಸಂಶಯವಿದೆಯೋ ಅದನ್ನು ಪುನಃ ನನ್ನ ಬಳಿ ಕೇಳು. ನಾನು ನಿನ್ನ ಸಂಶಯಗಳನ್ನು ಪರಿಹರಿಸುವೆನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಅನುಶಾಸನಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ವೀತಹವ್ಯನು ಬ್ರಾಹ್ಮಣ್ಯವನ್ನು ಹೊಂದಿದ ಪ್ರಕಾರದ ಕಥನ.
ಯುಧಿಷ್ಠಿರಃ
ಶ್ರುತಂ ಮೇ ಮಹದಾಖ್ಯಾನಮೇತತ್ ಕುರುಕುಲೋದ್ವಹ |
ಸುದುಷ್ಪ್ರಾಪ್ಯಂ ಯದ್ ಬ್ರವೀಷಿ ಬ್ರಾಹ್ಮಣ್ಯಂ ವದತಾಂವರ ||1||
ಯುಧಿಷ್ಠಿರ ಎಲೈ ಕುರುಕುಲೋದ್ವಹನೇ, ನೀನು ಬ್ರಾಹ್ಮಣ್ಯವು ಸಂಪಾದಿಸಲು ಬಹಳ ಕಷ್ಟಸಾಧ್ಯವೆಂದು ಏನು ಹೇಳುತ್ತಿದ್ದೀಯೋ, ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ, ಅಂತಹ ಈ ದೊಡ್ಡ ಆಖ್ಯಾನವನ್ನು ಕೇಳಿದೆನು.
ವಿಶ್ವಾಮಿತ್ರೋ ಮಹಾರಾಜ ರಾಜಾ ಬ್ರಾಹ್ಮಣತಾಂ ಗತಃ |
ಕಥಿತಂ ಭವತಾ ಸರ್ವಂ ವಿಸ್ತರೇಣ ಪಿತಾಮಹ ||2||
ಎಲೈ ಮಹಾರಾಜನೇ, ಪಿತಾಮಹನೇ, ರಾಜನಾದ ವಿಶ್ವಾಮಿತ್ರನು ಹೇಗೆ ಬ್ರಾಹ್ಮಣನಾದನು ಎಂಬ ಕಥೆಯನ್ನು ನೀವು ವಿಸ್ತಾರವಾಗಿ ಹೇಳಿದ್ದೀರಿ.
ತಚ್ಚ ರಾಜನ್ ಮಯಾ ಸರ್ವಂ ಶ್ರುತಂ ಬುದ್ಧಿಮತಾಂವರ |
ಆಗಮೋ ಹಿ ವರೋಽಸ್ಮಾಕಂ ತ್ವತ್ತಃ ಕೌರವನಂದನ ||3||
ಎಲೈ ರಾಜನೇ, ಬುದ್ಧಿವಂತರಲ್ಲಿ ಶ್ರೇಷ್ಠರಾದವನೇ, ಅವೆಲ್ಲವನ್ನೂ ನಾನು ಕೇಳಿದೆನು. ಎಲೈ ಕೌರವನಂದನನೇ, ನಿನ್ನ ಜ್ಞಾನೋಪದೇಶವೇ ನಾವು ನಿಮ್ಮಿಂದ ಪಡೆದಿರುವ ವರ.
ವೀತಹವ್ಯಶ್ಚ ರಾಜರ್ಷಿಃ ಶ್ರುತೋ ಮೇ ವೈ ಪಿತಾಮಹ |
ಬ್ರಾಹ್ಮಣತ್ವಮನುಪ್ರಾಪ್ತ ಇತಿ ರಾಜನ್ ಮಹಾಯಶಾಃ |
ತದೇವ ತಾವದ್ ಗಾಂಗೇಯ ಶ್ರೋತುಮಿಚ್ಛಾಮ್ಯಹಂ ವಿಭೋ ||4||
ಎಲೈ ಪಿತಾಮಹನೇ, ರಾಜರ್ಷಿಯಾದ ವೀತಹವ್ಯನ ವಿಷಯವನ್ನು ನಾನು ಕೇಳಿದ್ದೇನೆ. ಮಹಾಕೀರ್ತಿವಂತನಾದ ಅವನು ಬ್ರಾಹ್ಮಣತ್ವವನ್ನು ಹೊಂದಿದನು ಎಂದು ಕೇಳಿದ್ದೇನೆ. ಎಲೈ ಸಮರ್ಥನಾದವನೇ, ಗಂಗಾಪುತ್ರನೇ, ಅದನ್ನೇ ನಾನು ನಿನ್ನಿಂದ ಕೇಳಲು

ಬಯಸುತ್ತೇನೆ.
ಸ ಕೇನ ಕರ್ಮಣಾ ಪ್ರಾಪ್ತೋ ಬ್ರಾಹ್ಮಣ್ಯಂ ರಾಜಸತ್ತಮಃ |
ವರೇಣ ತಪಸಾ ವಾಽಪಿ ತನ್ಮೇ ಬ್ರೂಹಿ ಪಿತಾಮಹ ||5||
ಎಲೈ ಪಿತಾಮಹನೇ, ಆ ರಾಜಶ್ರೇಷ್ಠನು ಯಾವ ವರದಿಂದ ಅಥವಾ ತಪಸ್ಸಿನಿಂದ ಅಥವಾ ಕರ್ಮದಿಂದ ಬ್ರಾಹ್ಮಣತ್ವವನ್ನು ಹೊಂದಿದನು ಎಂಬುದನ್ನು ನನಗೆ ಹೇಳಿ.
ಭೀಷ್ಮಃ
ಶೃಣು ರಾಜನ್ ಯಥಾ ವೃತ್ತಂ ವೀತಹವ್ಯೋ ಮಹಾಯಶಾಃ |
ಕ್ಷತ್ರಿಯಃ ಸನ್ ಪುನಃ ಪ್ರಾಪ ಬ್ರಾಹ್ಮಣ್ಯಂ ಲೋಕಸತ್ಕೃತಮ್ ||6||
ಭೀಷ್ಮರು ಎಲೈ ರಾಜನೇ, ಮಹಾಕೀರ್ತಿವಂತನಾದ ವೀತಹವ್ಯನು ಕ್ಷತ್ರಿಯನಾಗಿದ್ದು ಪುನಃ ಲೋಕಸತ್ಕೃತವಾದ ಬ್ರಾಹ್ಮಣ್ಯವನ್ನು ಹೇಗೆ ಹೊಂದಿದನು ಎಂಬುದನ್ನು ಕೇಳು.
ಮನೋರ್ಮಹಾತ್ಮನಸ್ತಸ್ಯ ಪ್ರಜೇಶಸ್ಯ ಪ್ರಜಾಪತೇಃ |
ಬಭೂವ ಪುತ್ರೋ ಧರ್ಮಾತ್ಮಾ ಶರ್ಯಾತಿರಿತಿ ವಿಶ್ರುತಃ ||7||
ಮಹಾತ್ಮನೂ, ಪ್ರಜಾಧ್ಯಕ್ಷನೂ, ಪ್ರಜಾಪತಿಯೂ ಆದ ಅವನಿಗೆ ಶರ್ಯಾತಿ ಎಂದು ಪ್ರಖ್ಯಾತನಾದ ಧರ್ಮಾತ್ಮನಾದ ಪುತ್ರನು ಜನಿಸಿದನು.
ತಸ್ಯಾನ್ವವಾಯೇ ದ್ವೌ ರಾಜನ್ ರಾಜಾನೌ ಧರ್ಮದರ್ಶಿನೌ |
ಹೇಹಯಸ್ತಾಳಜಂಘಶ್ಚ ವತ್ಸೇಷು ನೃಪತೀ ಪುರಾ ||8||
ಅವನ ವಂಶದಲ್ಲಿ ಧರ್ಮದರ್ಶಿಗಳಾದ ಹೇಹಯ ಮತ್ತು ತಾಳಜಂಘ ಎಂಬ ಇಬ್ಬರು ರಾಜರು ಜನಿಸಿ ವತ್ಸದೇಶದಲ್ಲಿ ರಾಜರಾದರು.
ಹೇಹಯಸ್ಯ ತು ರಾಜೇಂದ್ರ ದಶಸು ಸ್ತ್ರೀಷು ಭಾರತ |
ಶತಂ ಬಭೂವ ಪುತ್ರಾಣಾಂ ಶೂರಾಣಾಮನಿವರ್ತಿನಾಮ್ ||9||
ಎಲೈ ರಾಜೇಂದ್ರನೇ, ಭಾರತನೇ, ಹೇಹಯನಿಗೆ ತನ್ನ ಹತ್ತುಜನ ಪತ್ನಿಯರಲ್ಲಿ ಶೂರರೂ, ಯುದ್ಧದಿಂದ ಹಿಮ್ಮೆಟ್ಟದವರೂ ಆದ ನೂರು ಪುತ್ರರು ಜನಿಸಿದರು.
ತುಲ್ಯರೂಪಪ್ರಭಾವಾಣಾಂ ವಿದುಷಾಂ ಬುದ್ಧಿಶಾಲಿನಾಮ್ |
ಧನುರ್ವೇದೇ ಚ ವೇದೇ ಚ ಸರ್ವತ್ರೈವ ಕೃತಶ್ರಮಾಃ ||10||
ಅವರು ಸಮಾನವಾದ ರೂಪ ಮತ್ತು ಸಾಮರ್ಥ್ಯವನ್ನು ಹೊಂದಿದವರೂ, ವಿದ್ವಾಂಸರೂ, ಮೇಧಾವಿಗಳೂ, ಧನುರ್ವೇದದಲ್ಲಿ ಮತ್ತು ವೇದದಲ್ಲಿಯೂ ಎಲ್ಲ ರೀತಿಯ ಪರಿಶ್ರಮವುಳ್ಳವರೂ ಆಗಿದ್ದರು.
ಕಾಶಿಷ್ವಪಿ ನೃಪೋ ರಾಜನ್ ದಿವೋದಾಸಪಿತಾಮಹಃ |
ಹರ್ಯಶ್ವ ಇತಿ ವಿಖ್ಯಾತೋ ರಾಜರಾಜ ಇವಾಪರಃ ||11||
ಎಲೈ ರಾಜನೇ, ಆಗ ಕಾಶಿಯಲ್ಲಿ ದಿವೋದಾಸನ ಪಿತಾಮಹನಾದ ಹರ್ಯಶ್ವ ಎಂಬ ಪ್ರಖ್ಯಾತನಾದ ರಾಜನಿದ್ದನು. ಅವನು ಇನ್ನೊಬ್ಬ ಕುಬೇರನಂತೆ ಇದ್ದನು.
ಸ ವೀತಹವ್ಯದಾಯಾದೈರಾಗತ್ಯ ಪುರುಷರ್ಷಭ |
ಗಂಗಾಯಮುನಯೋರ್ಮಧ್ಯೇ ಸಂಗ್ರಾಮೇ ವಿನಿಪಾತಿತಃ ||12||
ಎಲೈ ಪುರುಷಶ್ರೇಷ್ಠನೇ, ವೀತಹವ್ಯನ ಪುತ್ರರು ಅವನ ಮೇಲೆ ದಂಡೆತ್ತಿ ಬಂದು ಗಂಗಾ-ಯಮುನೆಗಳ ಮಧ್ಯದಲ್ಲಿ ಯುದ್ಧದಲ್ಲಿ ಅವನನ್ನು ಕೊಂದರು.
ತಂ ತು ಹತ್ವಾ ನರವರಂ ಹೈಹಯಾಸ್ತೇ ಮಹಾರಥಾಃ |
ಪ್ರತಿಜಗ್ಮುಃ ಪುರೀಂ ರಮ್ಯಾಂ ವತ್ಸಾನಾಮಕುತೋಭಯಾಃ ||13||
ಮಹಾರಥರಾದ ಹೈಹಯರಾದ ಅವರು ಆ ರಾಜನನ್ನು ಕೊಂದು ನಿರ್ಭಯವಾಗಿ ಮನೋಹರವಾದ ತಮ್ಮ ವತ್ಸದೇಶಕ್ಕೆ ಹಿಂದಿರುಗಿದರು.
ಹರ್ಯಶ್ವಸ್ಯ ಚ ದಾಯಾದಃ ಕಾಶಿರಾಜ್ಯೇಽಭಿಷೇಚಿತಃ |
ಸುದೇವೋ ದೇವಸಂಕಾಶಃ ಸಾಕ್ಷಾದ್ಧರ್ಮ ಇವಾಪರಃ ||14||
ಹರ್ಯಶ್ವನ ಪುತ್ರನಾದ ಸುದೇವನು ಕಾಶಿರಾಜ್ಯದಲ್ಲಿ ಅಭಿಷೇಕ ಮಾಡಲ್ಪಟ್ಟನು. ದೇವತೆಗಳ ಕಾಂತಿಯನ್ನು ಹೊಂದಿದ್ದ ಅವನು ದೇಹವನ್ನು ಧರಿಸಿದ ಧರ್ಮದಂತಿದ್ದನು.
ಸ ಪಾಲಯನ್ನೇವ ಮಹೀಂ ಧರ್ಮಾತ್ಮಾ ಕಾಶಿನಂದನಃ |
ತೈರ್ವೀತಹವ್ಯೈರಾಗತ್ಯ ಯುಧಿ ಸರ್ವೈರ್ವಿನಿರ್ಜಿತಃ||15||
ಧರ್ಮಾತ್ಮನೂ, ಕಾಶಿರಾಜನಂದನನೂ ಆದ ಅವನು ಭೂಮಿಯನ್ನು ಪಾಲಿಸುತ್ತಿರುವಾಗಲೇ ಆ ವೀತಹವ್ಯನ ಪುತ್ರರು ಎಲ್ಲರೂ ಬಂದು ಯುದ್ಧದಲ್ಲಿ ಅವನನ್ನು ಸೋಲಿಸಿದರು (ಕೊಂದರು).
ತಮಥಾಽಜೌ ವಿನಿರ್ಜಿತ್ಯ ಪ್ರತಿಜಗ್ಮುರ್ಯಥಾಗತಮ್ |
ಸೌದೇವಿಸ್ತ್ವಥ ಕಾಶೀಶೋ ದಿವೋದಾಸೋಽಭ್ಯಷಿಚ್ಯತ ||16||
ಅವರು ಅವನನ್ನು ಯುದ್ಧದಲ್ಲಿ ಕೊಂದು ಬಂದ ದಾರಿಯಲ್ಲೇ ಹಿಂದಿರುಗಿದರು. ಅನಂತರ ಸುದೇವನ ಪುತ್ರನಾದ ದಿವೋದಾಸನು ಕಾಶಿಯಲ್ಲಿ ರಾಜನಾದನು.
ದಿವೋದಾಸಸ್ತು ವಿಜ್ಞಾಯ ವೀರ್ಯಂ ತೇಷಾಂ ಮಹಾತ್ಮನಾಮ್ |

ವಾರಾಣಸೀಮುಪಾದಾಯ ದಿವೋದಾಸೋ ವಿನಿರ್ಮಮೇ ॥17॥
ದಿವೋದಾಸನಾದರೂ ಮಹಾತ್ಮರಾದ ವೀತಹವ್ಯರ ಪರಾಕ್ರಮವನ್ನು ತಿಳಿದು ಕಾಶಿಯನ್ನು ಬಿಟ್ಟು ವಾರಣಾಸಿಗೆ ಹೋಗಿ ಅಲ್ಲಿ ಪಟ್ಟಣವನ್ನು ನಿರ್ಮಾಣ ಮಾಡಿದನು.
ವಿಪ್ರಕ್ಷತ್ರಿಯಸಂಬಾಧಾಂ ವೈಶ್ಯಶೂದ್ರಸಮಾಕುಲಾಮ್ |
ನೈಕದ್ರವ್ಯೋಚ್ಚಯವತೀಂ ಸಮೃದ್ಧವಿಪಣಾಪಣಾಮ್ ॥18॥
ಅದು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರಿಂದ ನಿಬಿಡವಾಗಿ ಅನೇಕ ದ್ರವ್ಯ ರಾಶಿಗಳಿಂದ ಕೂಡಿ ಸಮೃದ್ಧವಾದ ಅಂಗಡಿಪೇಟೆಗಳಿಂದ ಕೂಡಿದ್ದಿತು.
ಗಂಗಾಯಾ ಉತ್ತರೇ ತೀರೇ ವಪ್ರಾಂತೇ ರಾಜಸತ್ತಮ |
ಗೋಮತ್ಯಾ ದಕ್ಷಿಣೇ ಚೈವ ರಮ್ಯಾಂ ದೇವಪುರೀಮಿವ ॥19॥
ಎಲೈ ರಾಜಶ್ರೇಷ್ಠನೇ, ಗಂಗೆಯ ಉತ್ತರ ಭಾಗದಲ್ಲಿ ಕೋಟೆಯಿಂದಾಚೆಗೆ ಗೋಮತಿಯ ದಕ್ಷಿಣಭಾಗದಲ್ಲಿ ದೇವಪುರದಂತೆ ಮನೋಹರವಾದ ಆ ಪಟ್ಟಣವನ್ನು ನಿರ್ಮಿಸಿದನು.
ತತ್ರ ತಂ ರಾಜಶಾರ್ದೂಲಂ ನಿವಸಂತಂ ಮಹೀಪತಿಮ್ |
ಆಗತ್ಯ ಹೈಹಯಾ ಭೂಯಃ ಪ್ರಬಾಧಂತೇ ಪುನಃ ಪುನಃ ॥20॥
ಆ ರಾಜಶಾರ್ದೂಲನು ಆ ಪಟ್ಟಣದಲ್ಲಿ ವಾಸಿಸುತ್ತಿದ್ದಾಗ ಹೈಹಯರು ಬಂದು ಪುನಃ ಪುನಃ ಅವನನ್ನು ಬಾಧಿಸಿದರು.
ಸನ್ನಿಪತ್ಯ ದದೌ ಯುದ್ಧಂ ತೇಷಾಂ ರಾಜಾ ಮಹಾಬಲಃ |
ದೇವಾಸುರಸಮಂ ಭೀಮಂ ದಿವೋದಾಸೋ ಮಹಾಯಶಾಃ ॥21॥
ಮಹಾಕೀರ್ತಿವಂತನೂ, ಮಹಾಬಲನೂ ಆದ ದಿವೋದಾಸ ರಾಜನು ಅವರ ಮೇಲೆ ಎರಗಿ ಅವರಿಗೆ ದೇವಾಸುರ ಯುದ್ಧಕ್ಕೆ ಸಮವಾದ ಯುದ್ಧವನ್ನು ನೀಡಿದನು.
ಸ ತು ಯುದ್ಧೇ ಮಹಾರಾಜ ದಿನಾನಾಂ ದಶ ವೈ ದಶ |
ಹತವಾಹನಭೂಯಿಷ್ಠೋ ರಾಜಾ ದೈನ್ಯಮುಪಾಗಮತ್ ॥22॥
ಎಲೈ ಮಹಾರಾಜನೇ, ಅವನು ನೂರು ದಿನಗಳವರೆಗೆ ಯುದ್ಧವನ್ನು ಮಾಡಿ ತನ್ನ ವಾಹನಗಳನ್ನೆಲ್ಲಾ ಕಳೆದುಕೊಂಡು ದೈನ್ಯವನ್ನು ಹೊಂದಿದನು.
ಹತಯೋಧಃ ಸ ರಾಜರ್ಷಿಃ ಕ್ಷೀಣಕೋಶಶ್ಚ ಭಾರತ |
ದಿವೋದಾಸಃ ಪುರೀಂ ತ್ಯಕ್ತ್ವಾ ಪಲಾಯನಪರೋಽಭವತ್ ॥23॥
ಎಲೈ ಭಾರತನೇ, ತನ್ನ ಯೋಧರನ್ನು ಕಳೆದುಕೊಂಡು, ಕೋಶವು ಬರಿದಾದ, ಆ ರಾಜರ್ಷಿಯಾದ ದಿವೋದಾಸನು ತನ್ನ ಪಟ್ಟಣವನ್ನು ಬಿಟ್ಟು ಪಲಾಯನ ಮಾಡಿದನು.
ಸ ಚಾಶ್ರಮಮುಪಾಗಮ್ಯ ಭರದ್ವಾಜಸ್ಯ ಧೀಮತಃ |
ಪ್ರಣಮ್ಯ ಚರಣೌ ತಸ್ಯ ಮೂರ್ಧ್ನಾ ಚ ನಿಪಪಾತ ಹ |
ಉವಾಚ ಭಗವಂತಂ ತಂ ಮಾನ್ಯಂ ಪುತ್ರಂ ಬೃಹಸ್ಪತೇಃ ॥24॥
ಅವನು ಮೇಧಾವಿಗಳಾದ ಭರದ್ವಾಜರ ಆಶ್ರಮಕ್ಕೆ ಬಂದು, ಅವರ ಪಾದಗಳ ಮೇಲೆ ಶಿರಸಾ ಬಿದ್ದು, ಬೃಹಸ್ಪತಿಯ ಪುತ್ರರಾದ, ಮಾನ್ಯರಾದ, ಪೂಜ್ಯರಾದ ಅವರನ್ನು ಕುರಿತು ಹೇಳಿದನು.
ಭಗವನ್ ವೈತಹವ್ಯೈರ್ಮೇ ಯುದ್ಧೇ ವಂಶಃ ಪ್ರಣಾಶಿತಃ |
ಅಹಮೇಕಃ ಪರಿದ್ಯೂನೋ ಭವಂತಂ ಶರಣಂ ಗತಃ ॥25॥
ಪೂಜ್ಯರೇ, ವೀತಹವ್ಯನ ಪುತ್ರರಿಂದ ನನ್ನ ವಂಶವು ಯುದ್ಧದಲ್ಲಿ ನಾಶಗೊಳಿಸಲ್ಪಟ್ಟಿದೆ. ನಾನೊಬ್ಬನು ಉಳಿದ ಎಲ್ಲವನ್ನೂ ಕಳೆದುಕೊಂಡು ನಿಮಗೆ ಶರಣಾಗತನಾಗಿದ್ದೇನೆ.
ಶಿಷ್ಯಸ್ನೇಹೇನ ಭಗವಂಸ್ತ್ವಂ ಮಾಂ ರಕ್ಷಿತುಮರ್ಹಸಿ |
ನಿಃಶೇಷೋ ಹಿ ಕೃತೋ ವಂಶೋ ಮಮ ತೈಃ ಪಾಪಕರ್ಮಭಿಃ ॥26॥
ಪೂಜ್ಯರೇ, ಶಿಷ್ಯನ ಮೇಲಿನ ಸ್ನೇಹದಿಂದ ನನ್ನನ್ನು ತಾವು ರಕ್ಷಿಸಬೇಕು. ಆ ಪಾಪಕರ್ಮಿಗಳು ನನ್ನ ವಂಶವನ್ನು ನಿಶ್ಶೇಷವಾಗಿ ನಾಶ ಮಾಡಿದ್ದಾರೆ (ಎಂದು ಹೇಳಿದನು).
ತಮುವಾಚ ಮಹಾತೇಜಾ ಭರದ್ವಾಜಃ ಪ್ರತಾಪವಾನ್ |
ನ ಭೇತವ್ಯಂ ನ ಭೇತವ್ಯಂ ಸೌದೇವ ವ್ಯೇತು ತೇ ಭಯಮ್ ॥27॥
ಅಹಮಿಷ್ಟಿಂ ಚ ತೇ ರಾಜನ್ ಕರೋಮಿ ಸುತಕಾರಿಕಾಮ್ |
ವೈತಹವ್ಯಸಹಸ್ರಾಣಿ ಯಥಾ ತ್ವಂ ವಿಷಹಿಷ್ಯಸೇ ॥28॥
ಪ್ರತಾಪಶಾಲಿಗಳಾದ, ಮಹಾತೇಜಸ್ವಿಗಳಾದ ಭರದ್ವಾಜರು ಅವನನ್ನು ಕುರಿತು `ಎಲೈ ಸುದೇವಪುತ್ರನೇ, ಹೆದರಬೇಡ, ಹೆದರಬೇಡ. ನಿನ್ನ ಭಯವು ದೂರವಾಗಲಿ. ಎಲೈ ರಾಜನೇ, ನಾನು ನಿನಗೆ ಪುತ್ರರನ್ನು ಕೊಡುವ ಇಷ್ಟಿಯನ್ನು ಮಾಡಿಸುತ್ತೇನೆ. ವೀತಹವ್ಯನ ಸಹಸ್ರಪುತ್ರರು ಬಂದರೂ ನೀನು ಅವರನ್ನು ಸಹಿಸುವಿ' ಎಂದು ಹೇಳಿದರು.
ತತ ಇಷ್ಟಿಂ ಚಕಾರರ್ಷಿಸ್ತಸ್ಯ ವೈ ಪುತ್ರಕಾಮಿಕೀಮ್ |
ಅಥಾಸ್ಯ ತನಯೋ ಜಜ್ಞೇ ದೈವೋದಾಸಃ ಪ್ರತರ್ದನಃ ॥29॥
ಅನಂತರ ಆ ಋಷಿಗಳು ಅವನಿಂದ ಪುತ್ರಕಾಮೇಷ್ಟಿಯನ್ನು ಮಾಡಿಸಿದರು. ಅನಂತರ ದಿವೋದಾಸನಿಗೆ ಪ್ರತರ್ದನನು ಪುತ್ರನಾಗಿ ಜನಿಸಿದನು.

ಸ ಜಾತಮಾತ್ರೋ ವವೃಧೇ ಸಮಾಃ ಸದ್ಯಸ್ತ್ರಯೋದಶ |
ವೇದಮದ್ಧ್ಯಗಮತ್ ಕೃತ್ಸ್ನಂ ಧನುರ್ವೇದಂ ಚ ಕೃತ್ಸ್ನಶಃ ॥30॥
ಅವನು ಹುಟ್ಟಿದ ತಕ್ಷಣವೇ ಹದಿಮೂರು ವರ್ಷದ ಪ್ರಾಯದವನಾಗಿ ಅಭಿವೃದ್ಧಿಯನ್ನು ಹೊಂದಿ, ಸಮಗ್ರವಾದ ವೇದವನ್ನೂ ಮತ್ತು ಧನುರ್ವೇದವನ್ನೂ ಅಧ್ಯಯನ ಮಾಡಿದನು.
ಯೋಗೇನ ತು ಸಮಾವಿಷ್ಟೋ ಭರದ್ವಾಜೇನ ಧೀಮತಾ |
ಕೃತ್ಸ್ನಂ ಹಿ ಲೋಕೇ ಯತ್ತೇಜಃ ತದೇತದ್ ದೇಹಮಾವಿಶತ್ ॥31॥
ಮೇಧಾವಿಗಳಾದ ಭರದ್ವಾಜರ ಅನುಗ್ರಹದಿಂದ, ಯೋಗಶಕ್ತಿಯಿಂದ ಕೂಡಿದವನಾದನು ಮತ್ತು ಲೋಕದಲ್ಲಿ ಇರುವ ತೇಜಸ್ಸೆಲ್ಲವೂ ಅವನ ದೇಹದಲ್ಲಿ ಬಂದು ನೆಲೆಸಿತು.
ತತಃ ಸ ಕವಚೀ ಧನ್ವೀ ಬಾಣೀ ದೀಪ್ತ ಇವಾನಲಃ |
ಪ್ರಯಯೌ ಸ ಧನುರ್ಧುನ್ವನ್ ವಿವರ್ಷಿಷುರಿವಾಂಬುದಃ ॥32॥
ಅನಂತರ ಅವನು ಕವಚವನ್ನು ಧರಿಸಿ ಧನುರ್ಬಾಣಗಳನ್ನು ಹಿಡಿದು ಜ್ವಲಿಸುವ ಅಗ್ನಿಯಂತೆ ಧನುಸ್ಸನ್ನು ತೂಗಾಡಿಸುತ್ತಾ ಮಳೆಯನ್ನು ಸುರಿಸಲಿರುವ ಮೋಡದಂತೆ ದಿಗ್ವಿಜಯಕ್ಕಾಗಿ ಹೊರಟನು.
ತಂ ದೃಷ್ಟ್ವಾ ಪರಮಂ ಹರ್ಷಂ ಸೌದೇವಿರುಪಪದ್ಯತ |
ಮೇನೇ ಚ ಮನಸಾ ದಗ್ಧಾನ್ ವೈಹತವ್ಯಾನ್ ಸ ಪಾರ್ಥಿವಃ ॥33॥
ಅವನನ್ನು ನೋಡಿ ಸುದೇವನ ಪುತ್ರನಾದ ದಿವೋದಾಸನು ಬಹಳ ಸಂತೋಷವನ್ನು ಹೊಂದಿ, ವೀತಹವ್ಯನ ಪುತ್ರರೆಲ್ಲರೂ ದಗ್ಧರಾಗಿದ್ದಾರೆಂದು ಮನಸ್ಸಿನಲ್ಲಿ ಭಾವಿಸಿದನು.
ತತೋ ವೈ ಯೌವರಾಜ್ಯೇನ ಸ್ಥಾಪಯಿತ್ವಾ ಪ್ರತರ್ದನಮ್ |
ಕೃತಕೃತ್ಯಂ ತದಾऽऽತ್ಮಾನಂ ಸ ರಾಜಾ ಪ್ರತ್ಯಪದ್ಯತ ॥34॥
ಆಗ ಅವನು ಪ್ರತರ್ದನನನ್ನು ಯೌವರಾಜ್ಯದಲ್ಲಿ ಸ್ಥಾಪಿಸಿ ತಾನು ಕೃತಕೃತ್ಯನೆಂದು ಭಾವಿಸಿದನು.
ತತಸ್ತು ವೈತಹವ್ಯಾನಾಂ ವಧಾಯ ಸ ಮಹೀಪತಿಃ |
ಪುತ್ರಂ ಪ್ರಸ್ಥಾಪಯಾಮಾಸ ಪ್ರತರ್ದನಮರಿಂದಮಮ್ ॥35॥
ಅನಂತರ ರಾಜನಾದ ದಿವೋದಾಸನು ಅರಿಂದಮನಾದ ತನ್ನ ಪುತ್ರನಾದ ಪ್ರತರ್ದನನನ್ನು ವೀತಹವ್ಯನ ಪುತ್ರರ ವಧೆಗಾಗಿ ಕಳುಹಿಸಿಕೊಟ್ಟನು.
ಸರಥಃ ಸ ಸಮುತ್ತೀರ್ಯ ಗಂಗಾಂ ಗಂಗಾಸಮಾನಧೀಃ |
ಪ್ರಯಯೌ ವೈತಹವ್ಯಾನಾಂ ಪುರೀಂ ಪರಪುರಂಜಯಃ ॥36॥
ಗಂಗೆಗೆ ಸಮಾನವಾದ ವಿಸ್ತಾರವಾದ ಬುದ್ಧಿಯುಳ್ಳ ಪ್ರತರ್ದನನು ರಥಾದಿ ಸಹಿತನಾಗಿ ಗಂಗೆಯನ್ನು ದಾಟಿ ಪರಪುರಂಜಯನಾದ ಅವನು ವೀತಹವ್ಯನ ಪುತ್ರರ ಪಟ್ಟಣಕ್ಕೆ ಬಂದನು.
ವೈತಹವ್ಯಾಸ್ತು ತಂ ಶ್ರುತ್ಯ ರಥಘೋಷಂ ಸಮುದ್ಧತಮ್ |
ನಿರ್ಯಯುರ್ನಗರಾಚ್ಛೀಘ್ರಂ ರಥಸ್ತೈರ್ನಗರೋಪಮೈಃ ॥37॥
ವೀತಹವ್ಯನ ಪುತ್ರರು ಆ ಉನ್ನತವಾದ ರಥಘೋಷವನ್ನು ಕೇಳಿ ಶೀಘ್ರವಾಗಿ ನಗರಾಕಾರದ ತಮ್ಮ ರಥಗಳಿಂದ ಹೊರಗೆ ಬಂದರು.
ನಿಷ್ಕ್ರಮ್ಯ ತೇ ನರವ್ಯಾಘ್ರಾ ದಂಸಿತಾಶ್ಚಿತ್ರಯೋಧಿನಃ |
ಪ್ರತರ್ದನಂ ಸಮಾಜಗ್ಮುಃ ಶರವರ್ಷೈರುದಾಯುಧಾಃ ॥38॥
ಯುದ್ಧಸನ್ನದ್ಧರಾದ, ವಿಚಿತ್ರಯೋಧಿಗಳಾದ ಆ ನರವ್ಯಾಘ್ರರು ಅನೇಕ ಆಯುಧಗಳನ್ನು ಹಿಡಿದು, ಬಾಣಗಳ ಮಳೆಯನ್ನು ಸುರಿಸುತ್ತಾ ನಗರದಿಂದ ಹೊರಟು ಪ್ರತರ್ದನನ ಸಮೀಪಕ್ಕೆ ಬಂದರು.
ಅಸ್ತ್ರೈಶ್ಚ ವಿವಿಧೈರ್ವೀರಾಃ ಶಸ್ತ್ರೈಶ್ಚ ಭರತರ್ಷಭ |
ಪ್ರಾವಪನ್ ವೈತಹವ್ಯಾಸ್ತೇ ಶೀಘ್ರಂ ಶೈಲಮಿವಾಂಬುದಾಃ ॥39॥
ಎಲೈ ಭರತಶ್ರೇಷ್ಠನೇ, ವೀತಹವ್ಯನ ಪುತ್ರರಾದ ವೀರರಾದ ಅವರು, ಮೋಡವು ಪರ್ವತದ ಮೇಲೆ ಮಳೆಯನ್ನು ಸುರಿಸಿದಂತೆ ಶೀಘ್ರವಾಗಿ ಪ್ರತರ್ದನನ ಮೇಲೆ ಶಸ್ತ್ರಾಸ್ತ್ರಗಳ ಮಳೆಯನ್ನು ಸುರಿಸಿದರು.
ಅಸ್ತ್ರೈರಸ್ತ್ರಾಣಿ ಸಂವಾರ್ಯ ತೇಷಾಂ ರಾಜಾ ಪ್ರತರ್ದನಃ |
ಜಘಾನ ತಾನ್ ಮಹಾತೇಜಾ ವಜ್ರವೇಗಸಮೈಃ ಶರೈಃ ॥40॥
ರಾಜನಾದ ಮಹಾತೇಜಸ್ವಿಯಾದ ಪ್ರತರ್ದನನು ಅವರ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನಿವಾರಿಸಿ, ವಜ್ರಸದೃಶವಾದ ತನ್ನ ಬಾಣಗಳಿಂದ ಅವರನ್ನು ಸಂಹರಿಸಿದನು.
ಹೃತೋತ್ತಮಾಂಗಾಸ್ತೇ ರಾಜನ್ ಭಲ್ಲೈಃ ಶತಸಹಸ್ರಶಃ |
ಪತಿತಾ ರುಧಿರಾಕ್ತಾಸ್ತೇ ಪುಷ್ಪಿತಾ ಇವ ಕಿಂಶುಕಾಃ ॥41॥
ಎಲೈ ರಾಜನೇ, ಭಲ್ಲಗಳಿಂದ ನೂರಾರು ಸಾವಿರಾರು ಸಂಖ್ಯೆಯಲ್ಲಿ ಶಿರಸ್ಸು ಕತ್ತರಿಸಲ್ಪಟ್ಟ ವೀತಹವ್ಯನ ಪುತ್ರರು ಮತ್ತು ಸೈನಿಕರು, ಅವರ ಶರೀರಗಳು ರಕ್ತದಿಂದ ತೊಯ್ದು ಹೂವರಳಿದ ಕಿಂಶುಕ ವೃಕ್ಷದಂತೆ ತೋರಿದರು.
ಹತೇಷು ತೇಷು ಸರ್ವೇಷು ವೀತಹವ್ಯಃ ಸುತೇಷ್ವಥ |
ಪ್ರಾದ್ರವನ್ನಗರಂ ಹಿತ್ವಾ ಭೃಗೋರಾಶ್ರಮಮಪ್ಯುತ ॥42॥
ತನ್ನ ಪುತ್ರರೆಲ್ಲರೂ ಹತರಾದ ಮೇಲೆ ವೀತಹವ್ಯನು ತನ್ನ ನಗರವನ್ನು ಬಿಟ್ಟು ಭೃಗುಗಳ ಆಶ್ರಮಕ್ಕೆ ಓಡಿಹೋದನು.
ಯಯೌ ಭೃಗುಂ ಸ ಶರಣಂ ವೀತಹವ್ಯೋ ನರಾಧಿಪ |

ಅಭಯಂ ಚ ದದೌ ತಸ್ಮೈ ವೀತಹವ್ಯಾಯ ವೈ ಭೃಗುಃ |
ಆಸನಂ ಶಿಷ್ಯಮಧ್ಯೇ ತು ಪುನರನ್ಯತ್ ಸಮಾದಿಶತ್ ||43||
ಎಲೈ ನರಾಧಿಪನೇ, ವೀತಹವ್ಯನು ಭೃಗುಗಳಿಗೆ ಶರಣಾಗತನಾದನು. ಭೃಗುಗಳು ವೀತಹವ್ಯನಿಗೆ ಅಭಯವನ್ನು ನೀಡಿ ತಮ್ಮ ಶಿಷ್ಯರ ಮಧ್ಯದಲ್ಲಿ ಅವನಿಗೆ ಇನ್ನೊಂದು ಆಸನವನ್ನೂ ನೀಡಿದರು.
ಅಥಾನುಪದಮೇವಾಶು ತತ್ರಾಗಚ್ಛತ್ ಪ್ರತರ್ದನಃ |
ಸ ಪ್ರಾಪ್ಯ ಚಾಶ್ರಮಪದಂ ದಿವೋದಾಸಾತ್ಮಜೋಽಬ್ರವೀತ್ ||44||
ಭೋಭೋ ಕೇಽತ್ರಾಶ್ರಮೇ ಸಂತಿ ಭೃಗೋಃ ಶಿಷ್ಯಾ ಮಹಾತ್ಮನಃ |
ದ್ರಷ್ಟುಮಿಚ್ಛೇ ಮುನಿಮಹಂ ತಸ್ಯಾಚಕ್ಷತ ಮಾಮಿತಿ ||45||
ಅನಂತರ ತಕ್ಷಣದಲ್ಲಿಯೇ ಪ್ರತರ್ದನನೂ ಅಲ್ಲಿಗೆ ಬಂದನು. ದಿವೋದಾಸನ ಪುತ್ರನಾದ ಅವನು ಆಶ್ರಮಕ್ಕೆ ಬಂದು `ಮಹಾತ್ಮರಾದ ಭೃಗುಗಳ ಶಿಷ್ಯರೇ, ಇಲ್ಲಿ ಆಶ್ರಮದಲ್ಲಿ ಯಾರಿದ್ದೀರಿ? ನಾನು ಭೃಗು ಋಷಿಗಳನ್ನು ನೋಡಲು ಬಯಸುತ್ತೇನೆ. ನಾನು ಬಂದಿದ್ದೇನೆಂದು ಅವರಿಗೆ ತಿಳಿಸಿ' ಎಂದು ಹೇಳಿದನು.
ಸ ತಂ ವಿದಿತ್ವಾ ತು ಭೃಗುರ್ನಿಶ್ಚಕ್ರಾಮಾಶ್ರಮಾತ್ ತದಾ |
ಪೂಜಯಾಮಾಸ ಚ ತತೋ ವಿಧಿನಾ ನೃಪಸತ್ತಮಮ್ ||46||
ಆ ವಚನವನ್ನು ಕೇಳಿದ ಭೃಗುಗಳು ಅವನನ್ನು ತಿಳಿದು ತಾವೇ ಆಶ್ರಮದಿಂದ ಹೊರಗೆ ಬಂದು ಆ ರಾಜನಿಗೆ ವಿಧಿಪುಕಾರವಾಗಿ ಪೂಜೆಯನ್ನು ಮಾಡಿದರು.
ಉವಾಚ ಚೈನಂ ರಾಜೇಂದ್ರ ಕಿಂ ಕಾರ್ಯಂ ಬ್ರೂಹಿ ಪಾರ್ಥಿವ |
ಸ ಚೋವಾಚ ನೃಪಸ್ತಸ್ಮೈ ಯದಾಗಮನಕಾರಣಮ್ ||47||
ಅವರು ಅವನನ್ನು ಕುರಿತು `ರಾಜೇಂದ್ರನೇ, ಇಲ್ಲಿಗೆ ಬಂದ ಉದ್ದೇಶವೇನು?' ಎಂದು ಕೇಳಿದರು. ರಾಜನು ಅವರಿಗೆ ತನ್ನ ಆಗಮನದ ಕಾರಣವನ್ನು ಹೇಳಿದನು.
ಅಯಂ ಬ್ರಹ್ಮನ್ನಿತೋ ರಾಜಾ ವೀತಹವ್ಯೋ ವಿಸರ್ಜ್ಯತಾಮ್ |
ಅಸ್ಯ ಪುತ್ರೈರ್ಹಿ ಮೇ ಕೃತ್ಸ್ನೋ ಬ್ರಹ್ಮನ್ ವಂಶಃ ಪ್ರಣಾಶಿತಃ ||48||
`ಪೂಜ್ಯರೇ, ಇಲ್ಲಿಗೆ ಬಂದಿರುವ ವೀತಹವ್ಯನನ್ನು ಬಿಟ್ಟುಬಿಡಿ. ಎಲೈ ಬ್ರಾಹ್ಮಣರೇ, ಅವನ ಮಕ್ಕಳಿಂದ ನನ್ನ ವಂಶವೆಲ್ಲವೂ ನಾಶಗೊಳಿಸಲ್ಪಟ್ಟಿದೆ'.
ಉತ್ಸಾದಿತಶ್ಚ ವಿಷಯಃ ಕಾಶೀನಾಂ ರತ್ನಸಂಚಯಃ |
ಏತಸ್ಯ ವೀರ್ಯದೃಪ್ತಸ್ಯ ಹತಂ ಪುತ್ರಶತಂ ಮಯಾ |
ಅಸ್ಯೇದಾನೀಂ ವಧಾದದ್ಯ ಭವಿಷ್ಯಾಮ್ಯನೃಣಃ ಪಿತುಃ ||49||
`ರತ್ನರಾಶಿಯಿದ್ದ ಕಾಶೀಪಟ್ಟಣವೂ ಸಹ ಧ್ವಂಸಗೊಳಿಸಲ್ಪಟ್ಟಿದೆ. ಸಾಮರ್ಥ್ಯದ ಅಹಂಕಾರದಿಂದ ಕೂಡಿದ ಅವನ ನೂರು ಮಕ್ಕಳನ್ನು ನಾನು ಕೊಂದಿದ್ದೇನೆ. ಈಗ ಅವನನ್ನು ಕೊಂದು ಈ ದಿನ ನಾನು ನನ್ನ ತಂದೆಯ ಋಣವನ್ನು ತೀರಿಸುವೆನು' (ಎಂದು ಹೇಳಿದನು).
ತಮುವಾಚ ಕೃಪಾವಿಷ್ಟೋ ಭೃಗುರ್ಧರ್ಮಭೃತಾಂವರಃ |
ನೇಹಾಸ್ತಿ ಕ್ಷತ್ರಿಯಃ ಕಶ್ಚಿತ್ ಸರ್ವೇ ಹೀಮೇ ದ್ವಿಜೋತ್ತಮಾಃ ||50||
ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಭೃಗುಗಳು ಕೃಪೆಯಿಂದ ಕೂಡಿದವರಾಗಿ ಅವನನ್ನು ಕುರಿತು `ಇಲ್ಲಿ ಯಾವ ಕ್ಷತ್ರಿಯನೂ ಇಲ್ಲ. ಇಲ್ಲಿರುವವರೆಲ್ಲರೂ ಬ್ರಾಹ್ಮಣಶ್ರೇಷ್ಠರು' ಎಂದು ಹೇಳಿದರು.
ಏವಮೇತದ್ ವಚಃ ಶ್ರುತ್ವಾ ಭೃಗೋಸ್ತಸ್ಯ ಪ್ರತರ್ದನಃ |
ಪಾದಾವುಪಸ್ಪೃಶ್ಯ ಶನೈಃ ಪ್ರಹೃಷ್ಟೋ ವಾಕ್ಯಮಬ್ರವೀತ್ ||51||
ಭೃಗುಗಳ ಈ ಮಾತುಗಳನ್ನು ಕೇಳಿದ ಪ್ರತರ್ದನನು ಅವರ ಪಾದಗಳಿಗೆ ನಮಸ್ಕರಿಸಿ ಸಂತೋಷಗೊಂಡು ಮೆಲ್ಲನೆ ಮಾತನಾಡಿದನು.
ಏವಮಪ್ಯಸ್ಮಿ ಭಗವನ್ ಕೃತಕೃತ್ಯೋ ನ ಸಂಶಯಃ |
ಯ ಏಷ ರಾಜಾ ವೀರ್ಯೇಣ ಸ್ವಜಾತಿಂ ತ್ಯಾಜಿತೋ ಮಯಾ ||52||
`ಪೂಜ್ಯರೇ, ಹಾಗಾದರೆ ನಾನು ಕೃತಕೃತ್ಯನಾಗಿದ್ದೇನೆ. ಇದರಲ್ಲಿ ಸಂಶಯವಿಲ್ಲ. ತನ್ನ ವೀರ್ಯದಿಂದ ದರ್ಪ ಹೊಂದಿದ್ದ ವೀತಹವ್ಯನನ್ನು ನಾನು ಅವನ ಜಾತಿಯಿಂದ ಬಿಡಿಸಿದ್ದೇನೆ.
ಅನುಜಾನೀಹಿ ಮಾಂ ಬ್ರಹ್ಮನ್ ಧ್ಯಾಯಸ್ವ ಚ ಶಿವೇನ ಮಾಮ್ |
ತ್ಯಾಜಿತೋ ಹಿ ಮಯಾ ಜಾತಿಮೇಷ ರಾಜಾ ಭೃಗೂದ್ವಹ ||53||
ಪೂಜ್ಯರೇ, ನನಗೆ ಅನುಮತಿಯನ್ನು ಕೊಡಿ, ನನಗೆ ಶುಭವನ್ನು ಹಾರೈಸಿ. ಎಲೈ ಭೃಗೂದ್ವಹರೇ, ಈ ರಾಜನನ್ನು ನಾನು ಅವನ ಜಾತಿಯಿಂದ ಬಿಡಿಸಿದ್ದೇನೆ' ಎಂದು ಹೇಳಿದನು.
ತತಸ್ತೇನಾಭ್ಯನುಜ್ಞಾತೋ ಯಯೌ ರಾಜಾ ಪ್ರತರ್ದನಃ |
ಯಥಾಗತಂ ಮಹಾರಾಜ ಮುಕ್ತ್ವಾ ವಿಷಮಿವೋರಗಃ ||54||
ಎಲೈ ಮಹಾರಾಜನೇ, ಆಗ ಅವರಿಂದ ಅನುಮತಿಯನ್ನು ಪಡೆದು ಪ್ರತರ್ದನ ರಾಜನು ವಿಷವನ್ನು ತ್ಯಜಿಸಿದ ಸರ್ಪದಂತೆ ಕೋಪವನ್ನು ಬಿಟ್ಟು ಬಂದ ದಾರಿಯಲ್ಲಿ ಹಿಂದಿರುಗಿದನು.
ಭೃಗೋರ್ವಚನಮಾತ್ರೇಣ ಸೋಽಪಿ ಬ್ರಾಹ್ಮಣತಾಂ ಗತಃ |
ವೀತಹವ್ಯೋ ಮಹಾರಾಜ ಬ್ರಹ್ಮವಾದಿತ್ವಮೇವ ಚ ||55||

ಎಲೈ ಮಹಾರಾಜನೇ, ಕೇವಲ ಭೃಗುಋಷಿಗಳ ವಚನದಿಂದ ವೀತಹವ್ಯನೂ ಸಹ ಬ್ರಾಹ್ಮಣ್ಯವನ್ನು ಪಡೆದು ಬ್ರಹ್ಮವಾದಿಯಾದನು.
ತಸ್ಯ ಗೃತ್ಸಮದಃ ಪುತ್ರೋ ರೂಪೇಣೇಂದ್ರ ಇವಾಪರಃ |
ಶಕ್ರಸ್ತ್ವಮಿತಿ ಯೋ ದೈತ್ಯೈರ್ನಿಗೃಹೀತಃ ಕಿಲಾಭವತ್ ॥56॥
ವೀತಹವ್ಯನ ಪುತ್ರನು ಗೃತ್ಸಮದ. ಅವನು ರೂಪದಲ್ಲಿ ಇಂದ್ರನಂತೆ ಇದ್ದನು. ಅವನನ್ನು ದೈತ್ಯರು ನೀನೇ ಇಂದ್ರನೆಂದು ಹೇಳಿ ನಿಗ್ರಹಿಸಿದ್ದರು.
ಋಗ್ವೇದೇ ವರ್ತತೇ ಚಾಗ್ರ್ಯಾ ಶ್ರುತಿರತ್ರ ವಿಶಾಂಪತೇ |
ಯತ್ರ ಗೃತ್ಸಮದೋ ಬ್ರಹ್ಮನ್ ಬ್ರಾಹ್ಮಣೈಃ ಸಮುದಾಹೃತಃ ॥57॥
ಋಗ್ವೇದದಲ್ಲಿ ಗೃತ್ಸಮದರನ್ನು ಬ್ರಾಹ್ಮಣರು ಪ್ರಶಂಸೆ ಮಾಡುವ ವೇದಭಾಗಗಳಿವೆ.
ಬ್ರಹ್ಮವಾದೀ ಸ ವಿಪ್ರರ್ಷಿಃ ಶ್ರೀಮಾನ್ ಗೃತ್ಸಮದೋಽಭವತ್ |
ಪುತ್ರೋ ಗೃತ್ಸಮದಸ್ಯಾಪಿ ವಿಪ್ರಃ ಸಾವತಸೋಽಭವತ್ ॥58॥
ಕಾಂತಿಯುಕ್ತರಾದ ಗೃತ್ಸಮದರು ಬ್ರಹ್ಮರ್ಷಿಯೂ, ಬ್ರಹ್ಮವಾದಿಗಳೂ ಆದರು. ಗೃತ್ಸಮದರಿಗೆ ಸಾವತಸನೆಂಬ ಬ್ರಾಹ್ಮಣ ಪುತ್ರನು ಜನಿಸಿದನು.
ಸಾವತಸಸ್ಯ ಪುತ್ರೋ ವೈ ವಿತಸ್ತ್ಯಸ್ತಸ್ಯ ಚಾತ್ಮಜಃ |
ವಿತಸ್ತ್ಯಸ್ಯ ಸುತಸ್ತಸ್ಯ ಶಿವಸ್ತಸ್ಯಾತ್ಮಜಃ ಸುತಃ ॥59॥
ಸಾವತಸನೆಂಬವನಿಗೆ ವಿತಸ್ತ್ಯನೆಂಬುವನು ಪುತ್ರ. ವಿತಸ್ತ್ಯನಿಗೆ ಶಿವನೆಂಬುವನು ಔರಸ ಪುತ್ರನಾದನು.
ಶ್ರವಸ್ತಸ್ಯಾತ್ಮಜಸ್ಯಾಪಿ ಶ್ರವಸಶ್ಚಾಭವತ್ತಮಃ |
ತಮಸಶ್ಚ ಪ್ರಕಾಶೋಽಭೂತ್ ತನಯೋ ದ್ವಿಜಸತ್ತಮಃ ॥60॥
ಶ್ರವನು ಶಿವನ ಪುತ್ರ. ಶ್ರವನಿಗೆ ತಮಸ್ಸೆಂಬ ಪುತ್ರನು ಜನಿಸಿದನು. ತಮಸ್ಸಿಗೆ ಪ್ರಕಾಶನೆಂಬ ದ್ವಿಜಶ್ರೇಷ್ಠನು ಪುತ್ರನಾಗಿ ಜನಿಸಿದನು.
ಪ್ರಕಾಶಸ್ಯ ತು ವಾಗಿಂದ್ರೋ ವಾಗಿಂದ್ರಾದ್ ಬ್ರಹ್ಮವಾಹನಃ |
ತಸ್ಯಾತ್ಮಜಶ್ಚ ಪ್ರಮಿತಿರ್ವೇದವೇದಾಂಗಪಾರಗಃ ॥61॥
ಪ್ರಕಾಶನ ಪುತ್ರ ವಾಗಿಂದ್ರ. ವಾಗಿಂದ್ರನ ಪುತ್ರ ಬ್ರಹ್ಮವಾಹನ. ಬ್ರಹ್ಮವಾಹನನ ಪುತ್ರ ವೇದವೇದಾಂಗ ಪಾರಾಂಗತನಾದ ಪ್ರಮಿತಿ.
ಬಭೂವಾಪ್ರತಿಮಸ್ತಸ್ಯ ಪುತ್ರೋ ವೇದವಿದಾಂವರಃ |
ಘೃತಾಚ್ಯಾಂ ತಸ್ಯ ಪುತ್ರಶ್ಚ ರುರುರ್ನಾಮೋದಪದ್ಯತ |
ಶುನಕೋ ನಾಮ ವಿಪ್ರರ್ಷಿರ್ಯಸ್ಯ ಪುತ್ರೋಽಥ ಶೌನಕಃ ॥62॥
ಪ್ರಮಿತಿಗೆ ವೇದಜ್ಞರಲ್ಲಿ ಶ್ರೇಷ್ಠನಾದ ಅಪ್ರತಿಮನು ಪುತ್ರನಾಗಿ ಜನಿಸಿದನು. ಅಪ್ರತಿಮನಿಗೆ ಘೃತಾಚಿಯಲ್ಲಿ ರುರು ಎಂಬ ಪುತ್ರನು ಜನಿಸಿದನು. ವಿಪ್ರರ್ಷಿಯಾದ ಶುನಕನು ರುರುವಿನ ಪುತ್ರ. ಶುನಕನ ಪುತ್ರ ಶೌನಕ.
ಏವಂ ಬ್ರಾಹ್ಮಣತಾಂ ಪ್ರಾಪ್ತೋ ವೀತಹವ್ಯೋ ಮಹಾತಪಾಃ |
ಭೃಗೋಃ ಪ್ರಸಾದಾದ್ ರಾಜೇಂದ್ರ ಕ್ಷತ್ರಿಯಃ ಕ್ಷತ್ರಿಯರ್ಷಭ ॥63॥
ಎಲೈ ರಾಜೇಂದ್ರನೇ, ಕ್ಷತ್ರಿಯರ್ಷಭನೇ, ಹೀಗೆ ಕ್ಷತ್ರಿಯನಾದ ವೀತಹವ್ಯನು ಭೃಗುಗಳ ಅನುಗ್ರಹದಿಂದ ಬ್ರಾಹ್ಮಣ್ಯ ಪಡೆದು ಮಹಾತಪಸ್ವಿಯಾದನು.
ಏಷ ತೇ ಕಥಿತೋ ರಾಜನ್ ವಂಶೋ ಗಾರ್ತ್ಸಮದೋ ಮಯಾ |
ವಿಸ್ತರೇಣ ಕುರುಶ್ರೇಷ್ಠ ಕಿಮನ್ಯದನುಪೃಚ್ಛಸಿ ॥64॥
ಎಲೈ ರಾಜನೇ, ಕುರುಶ್ರೇಷ್ಠನೇ, ಗೃತ್ಸಮದರ ಈ ವಂಶವನ್ನು ನಿನಗೆ ವಿಸ್ತಾರವಾಗಿ ಹೇಳಿದ್ದೇನೆ. ಬೇರೆ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಅನುಶಾಸನಪರ್ವಣಿ ದಾನಧರ್ಮೇ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ಅದೃಷ್ಟ ಮತ್ತು ಪುರುಷ ಪ್ರಯತ್ನಗಳಲ್ಲಿ ಪ್ರಾಬಲ್ಯವಿಚಾರ.
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ದೈವೇ ಪುರುಷಕಾರೇ ಚ ಕಿಂವಾ ಶ್ರೇಷ್ಠತಮಂ ಮತಮ್ ॥1॥
ಯುಧಿಷ್ಠಿರ ಸರ್ವಶಾಸ್ತ್ರವಿಶಾರದನೇ, ಮಹಾಪ್ರಾಜ್ಞನೇ, ಪಿತಾಮಹನೇ, ದೈವಬಲ ಮತ್ತು ಪುರುಷಪ್ರಯತ್ನದಲ್ಲಿ ಯಾವುದು ಶ್ರೇಷ್ಠವೆಂದು ನಿನ್ನ ಅಭಿಪ್ರಾಯ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವಸಿಷ್ಠಸ್ಯ ಚ ಸಂವಾದಂ ಬ್ರಹ್ಮಣಶ್ಚ ಯುಧಿಷ್ಠಿರ ॥2॥
ಭೀಷ್ಮ ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೂ ವಸಿಷ್ಠರಿಗೂ, ಬ್ರಹ್ಮದೇವರಿಗೂ ನಡೆದ ಸಂವಾದರೂಪವಾದ ಪುರಾತನವಾದ ಈ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.

ದೈವಮಾನುಷಯೋಃ ಕಿಂಸ್ವಿತ್ ಕರ್ಮಣೋಃ ಶ್ರೇಷ್ಠಮಿತ್ಯುತ |
ಪುರಾ ವಸಿಷ್ಠೋ ಭಗವಾನ್ ಪಿತಾಮಹಮಪೃಚ್ಛತ ||3||
ದೈವಪ್ರೇರಣೆ ಮತ್ತು ಮನುಷ್ಯ ಪ್ರಯತ್ನ ಇವೆರಡರಲ್ಲಿ ಯಾವುದು ಶ್ರೇಷ್ಠವಾದುದೆಂದು ಹಿಂದೆ ಪೂಜ್ಯರಾದ ವಸಿಷ್ಠರು ಪಿತಾಮಹರಾದ ಬ್ರಹ್ಮದೇವರನ್ನು ಕೇಳಿದರು.
ತತಃ ಪದ್ಮೋದ್ಭವೋ ರಾಜನ್ ದೇವದೇವಃ ಪಿತಾಮಹಃ |
ಉವಾಚ ಸುಶುಭಾಂ ವಾಣೀಂ ಶುಭಾರ್ಥಾಂ ಹೇತುಭಿರ್ಯುತಾಮ್ ||
ಎಲೈ ರಾಜನೇ, ಆಗ ಪದ್ಮಸಂಭವರೂ, ದೇವದೇವರೂ, ಪಿತಾಮಹರೂ ಆದ ಬ್ರಹ್ಮದೇವರು ಶುಭವಾದ ಅರ್ಥವನ್ನು ಒಳಗೊಂಡು ಹೇತುಗಳಿಂದ ಯುಕ್ತವಾದ ಶುಭವಾದ ಮಾತುಗಳನ್ನು ಆಡಿದರು.
ಬೀಜತೋ ಹ್ಯಂಕುರೋತ್ಪತ್ತಿರಂಕುರಾತ್ ಪರ್ಣಸಂಭವಃ |
ಪರ್ಣಾನ್ನಾಳಾಃ ಪ್ರಸೂಯಂತೇ ನಾಳಾತ್ ಸ್ಕಂಧಃ ಪ್ರವರ್ತತೇ ||5||
ಬೀಜದಿಂದ ಮೊಳಕೆಯು ಒಡೆಯುತ್ತದೆ. ಮೊಳಕೆಯಿಂದ ಎಲೆಗಳು ಉಂಟಾಗುತ್ತವೆ. ಎಲೆಗಳಿಂದ ನಾಳಗಳು ಉದ್ಭವಿಸುತ್ತವೆ. ನಾಳಗಳು ಕೊಂಬೆ ರೆಂಬೆಗಳಾಗುತ್ತವೆ.
ಸ್ಕಂಧಾತ್ ಪ್ರವರ್ತತೇ ಪುಷ್ಪಂ ಪುಷ್ಪಾನ್ನಿರ್ವರ್ತತೇ ಫಲಮ್ |
ಫಲಾನ್ನಿರ್ವರ್ತತೇ ಬೀಜಂ ಬೀಜಾತ್ ಸ್ಯಾತ್ ಸಂಭವಃ ಪುನಃ ||6||
ಕೊಂಬೆ-ರೆಂಬೆಗಳಿಂದ ಹೂವುಗಳಾಗುತ್ತವೆ. ಹೂವುಗಳಿಂದ ಹಣ್ಣುಗಳಾಗುತ್ತವೆ. ಹಣ್ಣುಗಳಿಂದ ಪುನಃ ಬೀಜವೂ, ಬೀಜದಿಂದ ಪುನಃ ಸಸ್ಯದ ಉತ್ಪತ್ತಿಯೂ ಉಂಟಾಗುತ್ತದೆ.
ನಾಬೀಜಂ ಜಾಯತೇ ಕಿಂಚಿನ್ನ ಬೀಜೇನ ವಿನಾ ಫಲಮ್ |
ಬೀಜಾದ್ ಬೀಜಂ ಭವತ್ಯೇವ ನಾಬೀಜಂ ವಿದ್ಯತೇ ಫಲಮ್ ||7||
ಬೀಜವಿಲ್ಲದಿದ್ದರೆ ಯಾವುದೂ ಹುಟ್ಟುವುದಿಲ್ಲ. ಬೀಜವಿಲ್ಲದಿದ್ದರೆ ಫಲವೂ ದೊರೆಯುವುದಿಲ್ಲ. ಬೀಜದಿಂದ ಬೀಜ ಉಂಟಾಗುತ್ತದೆ. ಬೀಜವಿಲ್ಲದಿರುವ ಫಲವಿರುವುದಿಲ್ಲ.
ಯಾದೃಶಂ ವಪತೇ ಬೀಜಂ ಕ್ಷೇತ್ರಮಾಸಾದ್ಯ ಕರ್ಷಕಃ |
ಸುಕೃತೇ ದುಷ್ಕೃತೇ ವಾಽಪಿ ತಾದೃಶಂ ಫಲಮಶ್ನುತೇ ||8||
ಕೃಷಿಕನಾದವನು ತನ್ನ ಕ್ಷೇತ್ರದಲ್ಲಿ ಎಂತಹ ಬೀಜವನ್ನು ಬಿತ್ತುತ್ತಾನೆಯೋ ಅದಕ್ಕೆ ಅನುಗುಣವಾದ ಫಲವನ್ನು ಪಡೆಯುತ್ತಾನೆ. ಸುಕೃತ, ದುಷ್ಕೃತವನ್ನು ಮಾಡಿದವನೂ ಸಹ ಅದರಂತೆ ಅದಕ್ಕೆ ಅನುಗುಣವಾದ ಫಲಗಳನ್ನು ಪಡೆಯುತ್ತಾನೆ.
ಯಥಾ ಬೀಜಂ ವಿನಾ ಕ್ಷೇತ್ರಂ ವಂಧ್ಯಂ ಭವತಿ ನಿಷ್ಫಲಮ್ |
ತಥಾ ಪುರುಷಕಾರೇಣ ವಿನಾ ದೈವಂ ನ ಸಿದ್ಧ್ಯತಿ ||9||
ಕ್ಷೇತ್ರಂ ಪುರುಷಕಾರಸ್ತು ದೈವಂ ಬೀಜಮುದಾಹೃತಮ್ |
ಕ್ಷೇತ್ರಬೀಜಸಮಾಯೋಗಾತ್ ತತಃ ಸಸ್ಯಂ ಸಮೃದ್ಧ್ಯತೇ ||10||
ಬೀಜವಿಲ್ಲದ ಕ್ಷೇತ್ರವು ಹೇಗೆ ಬಂಜೆಯಾಗಿ ಫಲರಹಿತವಾಗುತ್ತದೆಯೋ ಅದರಂತೆ ಪುರುಷಪ್ರಯತ್ನವಿಲ್ಲದಿದ್ದರೆ ದೈವಬಲವು ಫಲವನ್ನು ಕೊಡುವುದಿಲ್ಲ ಮತ್ತು ಪುರುಷ ಪ್ರಯತ್ನವು ಫಲವಿದ್ದಂತೆ, ದೈವಬಲವು ಬೀಜವೆಂದು ಹೇಳಲ್ಪಡುತ್ತದೆ. ಕ್ಷೇತ್ರ ಮತ್ತು ಬೀಜಗಳೆರಡೂ ಸೇರಿದರೆ ಆಗ ಸಸ್ಯವು ಸಮೃದ್ಧಿಯನ್ನು ಹೊಂದುತ್ತದೆ.
ಕರ್ಮಣಃ ಫಲನಿರ್ವೃತ್ತಿಂ ಸ್ವಯಮಶ್ನಾತಿ ಕಾರಕಃ |
ಪ್ರತ್ಯಕ್ಷಂ ದೃಶ್ಯತೇ ಲೋಕೇ ಕೃತಸ್ಯಾಪ್ಯಕೃತಸ್ಯ ವಾ ||11||
ಆಗ ತಾನು ಮಾಡಿದ ಕರ್ಮದ ಫಲವನ್ನು ಜೀವನು ತಾನೇ ಅನುಭವಿಸುತ್ತಾನೆ. ಮಾಡಿದ ಅಥವಾ ಮಾಡದಿದ್ದ ಕರ್ಮದ ಫಲಗಳು ಲೋಕದಲ್ಲಿ ಪ್ರತ್ಯಕ್ಷವಾಗಿ ಕಂಡು ಬರುತ್ತವೆ.
ಶುಭೇನ ಕರ್ಮಣಾ ಸೌಖ್ಯಂ ದುಃಖಂ ಪಾಪೇನ ಕರ್ಮಣಾ |
ಕೃತಂ ಸರ್ವಸ್ಯ ಫಲತಿ ನಾಕೃತಂ ಭುಜ್ಯತೇ ಕ್ವಚಿತ್ ||12||
ಶುಭಕರ್ಮದಿಂದ ಸೌಖ್ಯ ಉಂಟಾಗುತ್ತದೆ. ಪಾಪಕರ್ಮದಿಂದ ದುಃಖ ಉಂಟಾಗುತ್ತದೆ. ಮಾಡಿದ ಕರ್ಮವು ಎಲ್ಲರಿಗೂ ಫಲವನ್ನು ಕೊಟ್ಟೇ ಕೊಡುತ್ತದೆ. ಹಿಂದೆ ಮಾಡದಿದ್ದ ಕರ್ಮದ ಫಲವನ್ನು ಯಾರೂ ಭೋಗಿಸುವುದಿಲ್ಲ.
ಕೃತೀ ಸರ್ವತ್ರ ಲಭತೇ ಪ್ರತಿಷ್ಠಾಂ ಭಾಗ್ಯಸಂಯುತಾಮ್ |
ಅಕೃತೀ ಲಭತೇ ಭ್ರಷ್ಟಃ ಕ್ಷತೇ ಕ್ಷಾರಾವಸೇಚನಮ್ ||13||
ಪ್ರಯತ್ನಶೀಲನಾದವನು ಎಲ್ಲ ಕಡೆಗಳಲ್ಲಿಯೂ ಭಾಗ್ಯಯುಕ್ತವಾದ ಪ್ರತಿಷ್ಠೆಯನ್ನು ಪಡೆಯುತ್ತಾನೆ. ಪ್ರಯತ್ನರಹಿತನಾದವನು ಭ್ರಷ್ಟನಾಗಿ ಗಾಯಕ್ಕೆ ಉಪ್ಪನ್ನು ಎರೆಯುವವನಾಗುತ್ತಾನೆ.
ತಪಸಾ ರೂಪಸೌಭಾಗ್ಯಂ ರತ್ನಾನಿ ವಿವಿಧಾನಿ ಚ |
ಪ್ರಾಪ್ಯತೇ ಕರ್ಮಣಾ ಸರ್ವಂ ನ ದೈವಾದಕೃತಾತ್ಮನಾ ||14||
ತಪಸ್ಸಿನಿಂದ ರೂಪ-ಸೌಭಾಗ್ಯವೂ, ವಿವಿಧವಾದ ರತ್ನಗಳೂ ದೊರೆಯುತ್ತವೆ. ಕರ್ಮವನ್ನು ಮಾಡುವುದರಿಂದ ಎಲ್ಲವೂ ದೊರೆಯುತ್ತವೆ. ಕರ್ಮವನ್ನು ಮಾಡದೆ ಸುಮ್ಮನಿದ್ದರೆ ಕೇವಲ ದೈವದಿಂದ ಯಾವ ಫಲವೂ ದೊರೆಯುವುದಿಲ್ಲ.
ತಥಾ ಸ್ವರ್ಗಶ್ಚ ಭೋಗಶ್ಚ ನಿಷ್ಠಾ ಯಾ ಚ ಮನೀಷಿತಾ |
ಸರ್ವೇ ಪುರುಷಕಾರೇಣ ಮಾನುಷ್ಯಾದ್ ದೇವತಾಂ ಗತಾಃ ||15||
ಹಾಗೆ ಸ್ವರ್ಗ, ಭೋಗಗಳು, ನಿಷ್ಠೆ, ಮೇಧಾಶಕ್ತಿ ಎಲ್ಲವೂ ಪ್ರಯತ್ನ ಪೂರ್ವಕವಾದ ಕರ್ಮದಿಂದ ಉಂಟಾಗುತ್ತದೆ. ಎಲ್ಲರೂ

ಮನುಷ್ಯರಾಗಿ ಪ್ರಯತ್ನಶೀಲರಾಗಿ ದೈವತ್ವವನ್ನು ಸಂಪಾದಿಸಿದರು.
ಅರ್ಥೋ ವಾ ಮಿತ್ರವರ್ಗೋ ವಾ ಐಶ್ವರ್ಯಂ ವಾ ಗುಣಾನ್ವಿತಮ್ |
ಶ್ರೀಶ್ಚಾಪಿ ದುರ್ಲಭಾ ಭೋಕ್ತುಂ ತಥೈವಾಕೃತಕರ್ಮಭಿಃ ॥16॥
ಪ್ರಯತ್ನಶೀಲನಾಗದ ಪುರುಷನಿಂದ ಅರ್ಥವಾಗಲೀ, ಸ್ನೇಹಿತವರ್ಗವಾಗಲೀ, ಐಶ್ವರ್ಯವಾಗಲೀ, ಸಂಪತ್ತಾಗಲೀ ಭೋಗಿಸಲ್ಪಡಲು ಸಾಧ್ಯವಿಲ್ಲ.
ಶೌಚೇನ ಲಭತೇ ವಿಪ್ರಃ ಕ್ಷತ್ರಿಯೋ ವಿಕ್ರಮೇಣ ಹಿ |
ವೈಶ್ಯಃ ಪುರುಷಕಾರೇಣ ಶೂದ್ರಃ ಶಿಶ್ರೂಷಯಾ ಶ್ರಿಯಮ್ ॥17॥
ಬ್ರಾಹ್ಮಣನು ಶೌಚದಿಂದ ಸಂಪತ್ತನ್ನು ಪಡೆಯುತ್ತಾನೆ. ಕ್ಷತ್ರಿಯನು ಪರಾಕ್ರಮದಿಂದ ಪಡೆಯುತ್ತಾನೆ. ವೈಶ್ಯನು ಪ್ರಯತ್ನಪೂರ್ವಕವಾದ ಕೌಶಲದಿಂದ ಪಡೆಯುತ್ತಾನೆ. ಶೂದ್ರನು ಸೇವೆಯಿಂದ ಸಂಪತ್ತನ್ನು ಪಡೆಯುತ್ತಾನೆ.
ನಾದಾತಾರಂ ಭಜಂತ್ಯರ್ಥಾ ನ ಕ್ಲೀಬಂ ನಾಪಿ ನಿಷ್ಕ್ರಿಯಮ್ |
ನಾಕರ್ಮಶೀಲಂ ನಾಶೂರಂ ತಥಾ ನೈವಾತಪಸ್ವಿನಮ್ ॥18॥
ಹಿಂದೆ ದಾನವನ್ನು ಮಾಡದಿದ್ದವನ ಬಳಿಗೆ ಸಂಪತ್ತು ಬರುವುದಿಲ್ಲ. ಹಾಗೆ ನಪುಂಸಕನಾದವನಿಗೂ (ಹೇಡಿಯಾದವನಿಗೂ), ನಿಷ್ಕ್ರಿಯನಾದವನಿಗೂ, ಆಲಸ್ಯ ಪೂರ್ಣನಾದವನಿಗೂ, ಶೂರನಲ್ಲದವನಿಗೂ, ತಪಸ್ವಿಯಲ್ಲದವನಿಗೂ ಸಂಪತ್ತು ಉಂಟಾಗುವುದಿಲ್ಲ.
ಯೇನ ಲೋಕಾಸ್ತ್ರಯಃ ಸೃಷ್ಟಾ ದೈತ್ಯಾಃ ಸರ್ವಾಶ್ಚ ದೇವತಾಃ |
ಸ ಏಷ ಭಗವಾನ್ ವಿಷ್ಣುಃ ಸಮುದ್ರೇ ತಪ್ಯತೇ ತಪಃ ॥19॥
ಯಾವ ಈ ಭಗವಂತನಾದ ವಿಷ್ಣುವು ಮೂರುಲೋಕಗಳನ್ನೂ ದೇವ- ದಾನವರೆಲ್ಲರನ್ನೂ ಸೃಷ್ಟಿಸಿದನೋ ಅವನೂ ಸಮುದ್ರದಲ್ಲಿ ತಪಸ್ಸನ್ನು ಮಾಡುತ್ತಾನೆ.
ಸ್ವಂ ಚೇತ್ ಕರ್ಮಫಲಂ ನ ಸ್ಯಾತ್ ಸರ್ವಮೇವಾಫಲಂ ಭವೇತ್ |
ಲೋಕೋ ದೈವಂ ಸಮಾಸಾದ್ಯ ಉದಾಸೀನೋ ಭವೇನ್ನ ತು ॥20॥
ತಾನು ಮಾಡಿದ ಕರ್ಮದ ಫಲವು ತನಗೆ ಬರದಿದ್ದರೆ ಎಲ್ಲವೂ ನಿಷ್ಫಲವಾದೀತು! ಪುರುಷರು ದೈವದ ಮೇಲೆ ಭಾರವನ್ನು ಹಾಕಿ ಉದಾಸೀನರಾಗಿರಬಾರದಷ್ಟೆ!
ಅಕೃತ್ವಾ ಮಾನುಷಂ ಕರ್ಮ ಯೋ ದೈವಮನುವರ್ತತೇ |
ವೃಥಾ ಶ್ರಾಮ್ಯತಿ ಸಂಪ್ರಾಪ್ಯ ಪತಿಂ ಕ್ಲೀಬಮಿವಾಂಗನಾ ॥21॥
ಯಾವನು ಮನುಷ್ಯಪ್ರಯತ್ನವನ್ನು ಮಾಡದೆ ಕೇವಲ ದೈವಬಲವನ್ನು ನಿರೀಕ್ಷಿಸುತ್ತಾನೆಯೋ ಅವನು ನಪುಂಸಕನನ್ನು ಮದುವೆಯಾದ ಅಂಗನೆಯಂತೆ ವ್ಯರ್ಥವಾಗಿ ಶ್ರಮವನ್ನು ಪಡುತ್ತಾನೆ.
ನ ತಥಾ ಮಾನುಷೇ ಲೋಕೇ ಫಲಮಸ್ತಿ ಶುಭಾಶುಭೇ |
ಯಥಾ ತ್ರಿದಶಲೋಕೇ ವೈ ಫಲಮಲ್ಪೇನ ಜಾಯತೇ ॥22॥
ಸ್ವರ್ಗಲೋಕದಲ್ಲಿ ಅಲ್ಪ ಪ್ರಯತ್ನದಿಂದಲೂ ಫಲವು ದೊರಕುವಂತೆ ಮನುಷ್ಯ ಲೋಕದಲ್ಲಿ ಅಲ್ಪ ಪ್ರಯತ್ನದಿಂದ ಶುಭಾಶುಭ ಫಲಗಳು ದೊರೆಯುವುದಿಲ್ಲ.
ಕೃತಃ ಪುರುಷಕಾರಸ್ತು ದೈವಮೇವಾನುವರ್ತತೇ |
ನ ದೈವಂ ವಾಽಕೃತಂ ಕಿಂಚಿತ್ ಕಸ್ಯಚಿದ್ ದಾತುಮರ್ಹತಿ ॥23॥
ಮನುಷ್ಯ ಪ್ರಯತ್ನವನ್ನು ಮಾಡಿದರೂ ಫಲವು ದೈವವನ್ನೇ ಅವಲಂಬಿಸಿರುತ್ತದೆ. ದೈವವಾಗಲೀ, ಮಾಡದಿದ್ದ ಕರ್ಮವಾಗಲೀ ಯಾರಿಗೂ ಫಲವನ್ನು ಕೊಡಲು ಸಮರ್ಥವಲ್ಲ.
ಯಥಾ ಸ್ಥಾನಾನ್ಯನಿತ್ಯಾನಿ ದೃಶ್ಯಂತೇ ದೈವತೇಷ್ವಪಿ |
ಕಥಂ ಕರ್ಮ ವಿನಾ ದೈವಂ ಸ್ಥಾಪ್ಯತೇ ಸ್ಥಾಪಯಿಷ್ಯತಿ ॥24॥
ದೇವತೆಗಳ ಸ್ಥಾನವು ಅನಿತ್ಯವಾಗಿರುವುದನ್ನು ನೋಡಿದರೆ ಕರ್ಮವಿಲ್ಲದೆ ಹೇಗೆ ದೇವತಾಪದವು ಪ್ರಾಪ್ತವಾಗುತ್ತದೆ ಮತ್ತು ಉಳಿಯುವುದು?
ನ ದೈವತಾನಿ ಲೋಕೇಽಸ್ಮಿನ್ ವ್ಯಾಪಾರಂ ಯಾಂತಿ ಕಸ್ಯಚಿತ್ |
ಭಯಂ ಸಂಜನಯನ್ತ್ಯುಗ್ರಮಾತ್ಮಾಭಿಭವಶಂಕಯಾ ॥25॥
ದೇವತೆಗಳು ಈ ಲೋಕಕ್ಕೆ ಬಂದು ಯಾರ ಪರವಾಗಿಯೂ ಕರ್ಮಗಳನ್ನು ಮಾಡುವುದಿಲ್ಲ. ತಮಗೆ ಪರಾಭವ ಉಂಟಾಗುವುದೆಂಬ ಹೆದರಿಕೆಯಿಂದ ಅವರು ಮುನಿಗಳು ಮಾಡುವ ತಪಸ್ಸುಗಳಿಗೆ ವಿಘ್ನಗಳನ್ನು ತಂದೊಡ್ಡುತ್ತಾರೆ.
ಋಷೀಣಾಂ ದೇವತಾನಾಂ ಚ ಸದಾ ಭವತಿ ವಿಗ್ರಹಃ |
ಕಸ್ಯ ವಾಚಾ ಹ್ಯದೈವಂ ಸ್ಯಾದ್ ಯತೋ ದೈವಂ ಪ್ರವರ್ತತೇ ॥26॥
ಋಷಿಗಳಿಗೂ ಮತ್ತು ದೇವತೆಗಳಿಗೂ ಯಾವಾಗಲೂ ವಿರೋಧ ಉಂಟಾಗುತ್ತದೆ. ಯಾವಾತನ ಮಾತಿನಿಂದ ದೈವವು ನಿಷ್ಫಲವಾಗುತ್ತದೆ?
ಕಥಂ ಚಾಸ್ಯ ಸಮುತ್ಪತ್ತಿರ್ಯತೋ ದೈವಂ ಪ್ರವರ್ತತೇ |
ಏವಂ ತ್ರಿದಶಲೋಕೇಽಪಿ ಕರ್ಮಣಃ ಪ್ರಾಪ್ಯತೇ ಫಲಮ್ ॥27॥
ದೈವವು ಯಾವಾಗ ಪ್ರವೃತ್ತಿಯನ್ನು ಮಾಡುತ್ತದೆ? ಆ ದೈವದ ಉತ್ಪತ್ತಿಯು ಹೇಗೆ? ಈ ರೀತಿಯಲ್ಲಿ ದೇವಲೋಕದಲ್ಲಿ ಕೂಡ ಕರ್ಮದ ಫಲದ ವಿಷಯದಲ್ಲಿ ವಿಚಾರವು ನಡೆಯುತ್ತಲೇ ಇರುತ್ತದೆ.
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ |

ಆತ್ಮೈವ ಹ್ಯಾತ್ಮನಃ ಸಾಕ್ಷೀ ಕೃತಸ್ಯಾಪ್ಯಕೃತಸ್ಯ ಚ ॥28॥
ತಾನು ಮಾಡಿದ ಅಥವಾ ಮಾಡದಿದ್ದ ಕರ್ಮಕ್ಕೆ ತಾನೇ ಸಾಕ್ಷಿ. ತನಗೆ ತಾನೇ ಬಂಧು ಮತ್ತು ಪುರುಷನು ತನಗೆ ತಾನೇ ಶತ್ರು (ಸತ್ಕರ್ಮವನ್ನು ಮಾಡಿದರೆ ಬಂಧುವಾಗುತ್ತಾನೆ, ದುಷ್ಕರ್ಮವನ್ನು ಮಾಡಿದರೆ ದುಃಖಫಲವನ್ನು ಅನುಭವಿಸ ಬೇಕಾಗುವುದರಿಂದ ಶತ್ರುವಾಗುತ್ತಾನೆ).
ಕೃತಂ ಚ ವಿಕೃತಂ ಕರ್ಮ ಅಕೃತಾರ್ಥಂ ಕೃತಕರ್ಮಣಾ |
ಸುಕೃತಂ ದುಷ್ಕೃತಂ ಕರ್ಮ ಅಕೃತಾರ್ಥಂ ವಿಪದ್ಯತೇ ॥29॥
ಕರ್ಮವನ್ನು ಮಾಡಿದರೂ ಅದನ್ನು ಸರಿಯಾಗಿ ಮಾಡದಿದ್ದರೆ ಅದನ್ನು ಮಾಡದಿದ್ದಂತೆಯೇ. ಅಂತಹ ವ್ಯಕ್ತಿಯು ಸತ್ಕರ್ಮವನ್ನು ಮಾಡಲಿ ಅಥವಾ ದುಷ್ಕರ್ಮವನ್ನು ಮಾಡಲಿ, ಅದು ಮಾಡದಿದ್ದಂತೆಯೇ ಆಗಿ ವಿನಾಶವನ್ನು ಹೊಂದುತ್ತದೆ (ಅವನಿಗೆ ಸತ್ಕರ್ಮವು ಒಳ್ಳೆಯ ಫಲವನ್ನು ಕೊಡುವುದಿಲ್ಲ, ದುಷ್ಕರ್ಮವು ತಪ್ಪಾಗಿ ಮಾಡಿದರೂ ದುಃಖವನ್ನು ಕೊಟ್ಟು ವಿನಾಶದ ಕಡೆಗೇ ಕರೆದೊಯ್ಯುತ್ತದೆ).
ದೇವಾನಾಂ ಶರಣಂ ಪುಣ್ಯಂ ಸರ್ವಂ ಪುಣ್ಯೈರವಾಪ್ಯತೇ |
ಪುಣ್ಯಹೀನಂ ನರಂ ಪ್ರಾಪ್ಯ ಕಿಂ ದೈವಂ ಪ್ರಕರಿಷ್ಯತಿ ॥30॥
ದೇವತೆಗಳಿಗೆ ಪುಣ್ಯವು ದೊಡ್ಡ ಆಶ್ರಯ. ಅವರು ಪುಣ್ಯದಿಂದ ಎಲ್ಲವನ್ನೂ ಪಡೆಯುತ್ತಾರೆ. ಪುರುಷನಿಗೆ ಪುಣ್ಯವಿರದಿದ್ದರೆ ದೈವವು ಅವನಿಗೆ ಏನು ಮಾಡುವುದು?
ಪುರಾ ಯಯಾತಿರ್ವಿಭ್ರಷ್ಟಶ್ಚ್ಯಾವಿತಃ ಪತಿತಃ ಕ್ಷಿತೌ |
ಪುನರಾರೋಹಿತಃ ಸ್ವರ್ಗಂ ದೌಹಿತ್ರೈಃ ಪುಣ್ಯಕರ್ಮಭಿಃ ॥31॥
ಹಿಂದೆ ಧರ್ಮಭ್ರಷ್ಟನಾಗಿ ಯಯಾತಿಯು ಸ್ವರ್ಗದಿಂದ ಕೆಡವಲ್ಪಟ್ಟು ಭೂಮಿಯಲ್ಲಿ ಬೀಳುತ್ತಿರುವಾಗ ಅವನ ದೌಹಿತ್ರರು ಮಾಡಿದ ಪುಣ್ಯಕರ್ಮಗಳಿಂದ ಅವನು ಪುನಃ ಸ್ವರ್ಗವನ್ನು ಏರಿದನು.
ಪುರೂರವಾ ವೈ ರಾಜರ್ಷಿರ್ದ್ವಿಜೈರಭಿಹಿತಃ ಪುರಾ |
ಐಲ ಇತ್ಯಭಿವಿಖ್ಯಾತಃ ಸ್ವರ್ಗಂ ಪ್ರಾಪ್ತೋ ಮಹೀಪತಿಃ ॥32॥
ಐಲ ಎಂದು ವಿಖ್ಯಾತನಾದ ರಾಜರ್ಷಿಯಾದ ಪುರೂರವನೂ ಸಹ ಹಿಂದೆ ಬ್ರಾಹ್ಮಣರ ಮಾತಿನಂತೆ ನಡೆದುಕೊಂಡು ಸ್ವರ್ಗವನ್ನು ಪಡೆದನು.
ಅಶ್ವಮೇಧಾದಿಭಿರ್ಯಜ್ಞೈಃ ಸತ್ಕೃತಃ ಕೋಸಲಾಧಿಪಃ |
ಮಹರ್ಷಿಶಾಪಾತ್ ಸೌದಾಸಃ ಪುರುಷಾದತ್ವಮಾಗತಃ ॥33॥
ಕೋಸಲಾಧಿಪತಿಯಾದ ಸೌದಾಸನು ಅಶ್ವಮೇಧಾದಿ ಯಾಗಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸಿದ್ದರೂ ಮಹರ್ಷಿಗಳಾದ ವಸಿಷ್ಠರ ಶಾಪದಿಂದ ಅವನು ರಾಕ್ಷಸನಾದನು (ಸತ್ಕರ್ಮವನ್ನು ಮಾಡಿ ಪುಣ್ಯವನ್ನು ಸಂಪಾದಿಸಿದರೂ ಮಹದಪಚಾರದಿಂದ ಆ ಪುಣ್ಯವು ನಾಶವನ್ನು ಹೊಂದುತ್ತದೆ. ಫಲವನ್ನು ಕೊಡುವುದಿಲ್ಲ).
ಅಶ್ವತ್ಥಾಮಾ ಚ ರಾಮಶ್ಚ ಮುನಿಪುತ್ರೌ ಧನುರ್ಧರೌ |
ನ ಗಚ್ಛತಃ ಸ್ವರ್ಗಲೋಕಂ ಸ್ವಕೃತೇನೇಹ ಕರ್ಮಣಾ ॥34॥
ಧನುರ್ಧಾರಿಗಳಾದ ಅಶ್ವತ್ಥಾಮ ಮತ್ತು ಪರಶುರಾಮರಿಬ್ಬರೂ ಋಷಿ ಪುತ್ರರಾದವರು. ಅವರು ತಾವು ಮಾಡಿದ ಕರ್ಮಗಳಿಂದಾಗಿ ಸ್ವರ್ಗಕ್ಕೆ ಹೋಗಲಿಲ್ಲ (ಮನುಷ್ಯಲೋಕದಲ್ಲಿಯೇ ಚಿರಂಜೀವಿಗಳಾಗಿದ್ದಾರೆ).
ವಸುರ್ಯಜ್ಞಶತೈರಿಷ್ಟ್ವಾ ದ್ವಿತೀಯ ಇವ ವಾಸವಃ |
ಮಿಥ್ಯಾಭಿಧಾನೇನೈಕೇನ ರಸಾತಳತಳಂ ಗತಃ ॥35॥
ಉಪಚರವಸುವು ನೂರು ಯಜ್ಞಗಳನ್ನು ಮಾಡಿ ಎರಡನೆಯ ಇಂದ್ರನಂತೆ ಇದ್ದವನು ಒಂದು ಸುಳ್ಳನ್ನು ಹೇಳಿದ ಕಾರಣದಿಂದಾಗಿ ರಸಾತಳದ ಬುಡಕ್ಕೆ ಹೊರಟು ಹೋದನು (ಸಂಪಾದಿಸಿದ ಪುಣ್ಯವನ್ನು ಜಾಗರೂಕವಾಗಿ ರಕ್ಷಿಸದಿದ್ದರೆ ಅದು ನಾಶವಾಗುತ್ತದೆ).
ಬಲಿರ್ವೈರೋಚನಿರ್ಬದ್ಧೋ ಧರ್ಮಪಾಶೇನ ದೈವತೈಃ |
ವಿಷ್ಣೋಃ ಪುರುಷಕಾರೇಣ ಪಾತಾಲಸದನಃ ಕೃತಃ ॥36॥
ವಿರೋಚನ ಪುತ್ರನಾದ ಬಲಿಯು ದೇವತೆಗಳಿಂದ ಧರ್ಮಪಾಶದಿಂದ ಕಟ್ಟಲ್ಪಟ್ಟನು. ವಿಷ್ಣುವಿನ ಪ್ರಯತ್ನದಿಂದಾಗಿ ಅವನು ಪಾತಾಳದಲ್ಲಿ ವಾಸಿಸಬೇಕಾಯಿತು.
ಶಕ್ರಸ್ಯಾಥ ರಥೋಪಸ್ಥೇ ವಿಷ್ಠಿತೋ ಜನಮೇಜಯಃ |
ದ್ವಿಜಸ್ತ್ರೀಣಾಂ ವಧಂ ಕೃತ್ವಾ ಕಿಂ ದೈವೇನ ನ (ನಿ)ವಾರಿತಃ ॥37॥
ಇಂದ್ರನ ರಥಪೀಠದಲ್ಲಿ ನಿಂತು ಜನಮೇಜಯನು ಬ್ರಾಹ್ಮಣ ಸ್ತ್ರೀಯರ ವಧೆಯನ್ನು ಮಾಡಿದರೂ ಅವನ ಸ್ವರ್ಗಗಮನವನ್ನು ದೈವವು ತಡೆಯಲಿಲ್ಲ (ವಿಶೇಷ ಪುಣ್ಯ ಮತ್ತು ದೇವತಾನುಗ್ರಹದಿಂದ ಸ್ವಲ್ಪ ಪಾಪವು ನಾಶವನ್ನು ಹೊಂದುತ್ತದೆ).
ಅಜ್ಞಾನಾದ್ ಬ್ರಾಹ್ಮಣಂ ಹತ್ವಾ ಸ್ಪೃಷ್ಟೋ ಬಾಲವಧೇನ ಚ |
ವೈಶಂಪಾಯನವಿಪ್ರರ್ಷಿಃ ಕಿಂ ದೈವೇನ ನ (ನಿ)ವಾರಿತಃ ॥38॥
ಅಜ್ಞಾನದಿಂದ ಬ್ರಾಹ್ಮಣಪುತ್ರರನ್ನು ಕೊಂದು, ಬಾಲವಧೆಯ ದೋಷವನ್ನು ಹೊಂದಿದ ವಿಪ್ರರ್ಷಿಗಳಾದ ವೈಶಂಪಾಯನರು ದೈವದಿಂದ ತಡೆಯಲ್ಪಡಲಿಲ್ಲವೆ?
ಗೋಪ್ರದಾನೇನ ಮಿಥ್ಯಾ ಚ ಬ್ರಾಹ್ಮಣೇಭ್ಯೋ ಮಹಾಮಖೇ |
ನೃಗಶ್ಚೈವ ಮಹಾರಾಜ ಕೃಕಲಾಸತ್ವಮಾಗತಃ ॥39॥
ಭೃಗು ಮಹಾರಾಜನು ದೊಡ್ಡ ಯಜ್ಞದಲ್ಲಿ ಬ್ರಾಹ್ಮಣರಿಗೆ ಸುಳ್ಳಾಗಿ ಗೋದಾನ ಮಾಡಿದುದರಿಂದ ಕೃಕಲಾಸ (ಓತಿಕೇತ) ಜನ್ಮವನ್ನು

ಪಡೆದನು (ಕೆಲವೊಮ್ಮೆ ಸಣ್ಣ ಪಾಪವೂ ಸಹ ದೊಡ್ಡ ಪುಣ್ಯವನ್ನು ನಾಶಮಾಡುತ್ತದೆ).
ಧುಂಧುಮಾರಶ್ಚ ರಾಜರ್ಷಿಃ ಸತ್ರೇಷ್ವೇವ ಜರಾಂ ಗತಃ |
ಪ್ರೀತಿದಾಯಂ ಪರಿತ್ಯಜ್ಯ ಸುಷ್ವಾಪ ಸ ಗಿರಿವ್ರಜೇ ||40||
ಧುಂಧುಮಾರನೆಂಬ ರಾಜರ್ಷಿಯು ಸತ್ರಯಾಗಗಳಲ್ಲಿಯೇ ಜೀವನವನ್ನು ಕಳೆದು ಮುಪ್ಪನ್ನು ಹೊಂದಿದನು. ದೇವತೆಗಳು ಕೊಟ್ಟ ಸೌಭಾಗ್ಯವನ್ನು ಪರಿತ್ಯಜಿಸಿ ಅವನು ಪರ್ವತದ ತಪ್ಪಲಿನಲ್ಲಿ ಮಲಗಿದನು (ಅಂತಹದೂ ಒಂದು ಪುಣ್ಯಕರ್ಮ).
ಪಾಂಡವಾನಾಂ ಹೃತಂ ರಾಜ್ಯಂ ಧಾರ್ತರಾಷ್ಟ್ರೈರ್ಮಹಾಬಲೈಃ |
ಪುನಃ ಪ್ರತ್ಯಾಹೃತಂ ಚೈವ ನ ದೈವಾದ್ ಭುಜಸಂಶ್ರಯಾತ್ ||41||
ಮಹಾಬಲರಾದ ದುರ್ಯೋಧನಾದಿಗಳು ಪಾಂಡವರ ರಾಜ್ಯವನ್ನು ಅಪಹರಿಸಿದರು. ಪಾಂಡವರು ತಮ್ಮ ಭುಜಬಲದಿಂದಲೇ ಅದನ್ನು ಪುನಃ ಸಂಪಾದಿಸಿದರು. ಪ್ರಯತ್ನರಹಿತವಾದ ದೈವಬಲದಿಂದಲ್ಲ.
ತಪೋನಿಯಮಸಂಯುಕ್ತಾ ಮುನಯಃ ಶಂಸಿತವ್ರತಾಃ |
ಕಿಂ ತೇ ದೈವಬಲಾಚ್ಛಾಪಮುತ್ಸೃಜಂತೇ ನ ಕರ್ಮಣಾ ||42||
ತಪೋನಿಯಮಗಳಿಂದ ಕೂಡಿದವರೂ, ಶ್ರೇಷ್ಠ ವ್ರತಗಳನ್ನು ಆಚರಿಸುವವರೂ ಆದ ಋಷಿಗಳು ದೈವಬಲದಿಂದ ಶಾಪವನ್ನು ಕೊಡುತ್ತಾರೆಯೋ ಅಥವಾ ತಾವು ಆಚರಿಸಿದ ತಪಸ್ಸಿನ ಬಲದಿಂದ ಶಾಪವನ್ನು ಕೊಡುತ್ತಾರೆಯೋ? (ತಾವು ಆಚರಿಸಿದ ತಪಸ್ಸಿನ ಬಲದಿಂದಲೇ ಶಾಪವನ್ನು ಕೊಡುತ್ತಾರೆ).
ಪಾಪಮುತ್ಸೃಜತೇ ಲೋಕೇ ಸರ್ವಂ ಪ್ರಾಪ್ಯ ಸುದುರ್ಲಭಮ್ |
ಲೋಭಮೋಹಸಮಾಪನ್ನಂ ನ ದೈವಂ ತ್ರಾಯತೇ ನರಮ್ ||43||
ಸತ್ಪುರುಷನಾದವನು ದುರ್ಲಭವಾದ ಎಲ್ಲವನ್ನೂ ಪಡೆದು ಲೋಕದಲ್ಲಿ ಪಾಪವನ್ನು ತ್ಯಜಿಸಿ, ಸತ್ಕರ್ಮಗಳನ್ನು ಆಚರಿಸುತ್ತಾನೆ. ಲೋಭ-ಮೋಹಗಳಿಗೆ ವಶನಾದ ಮನುಷ್ಯನನ್ನು ಯಾವ ದೈವವೂ ಕಾಪಾಡುವುದಿಲ್ಲ.
ಯಥಾಽಽಗ್ನಿಃ ಪವನೋದ್ಧೂತಃ ಸುಸೂಕ್ಷ್ಮೋಽಪಿ ಮಹಾನ್ ಭವೇತ್ |
ತಥಾ ಕರ್ಮಸಮಾಯುಕ್ತಂ ದೈವಂ ಸಾಧು ವಿವರ್ಧತೇ ||44||
ಹೇಗೆ ಅಗ್ನಿಯ ಕಿಡಿಯು ಸಣ್ಣದಾಗಿದ್ದರೂ ಗಾಳಿಯಿಂದ ಎಬ್ಬಿಸಲ್ಪಟ್ಟು ದೊಡ್ಡದಾಗಿ ಬೆಳೆಯುತ್ತದೆಯೋ ಅದರಂತೆ ಕರ್ಮದ ಫಲದಿಂದ ಕೂಡಿದ ದೈವವು ಚೆನ್ನಾಗಿ ಅಭಿವೃದ್ಧಿಯನ್ನು ಹೊಂದುತ್ತದೆ.
ಯಥಾ ತೈಲಕ್ಷಯಾದ್ ದೀಪಃ ಪ್ರಮ್ಲಾನಿಮುಪಗಚ್ಛತಿ |
ತಥಾ ಕರ್ಮಕ್ಷಯಾದ್ ದೈವಂ ಪ್ರಮ್ಲಾನಿಮುಪಗಚ್ಛತಿ ||45||
ಎಣ್ಣೆಯು ಮುಗಿದರೆ ದೀಪವು ಆರಿ ಹೋಗುವಂತೆ ಕರ್ಮವು ಕ್ಷಯವನ್ನು ಹೊಂದಿದರೆ ದೈವವೂ ಕೂಡ ಶಕ್ತಿಹೀನವಾಗುತ್ತದೆ.
ವಿಪುಲಮಪಿ ಧನೌಘಂ ಪ್ರಾಪ್ಯ ಭೋಗಾನ್ ಸ್ತ್ರಿಯೋ ವಾ
ಪುರುಷ ಇಹ ನ ಶಕ್ತಃ ಕರ್ಮಹೀನೋ ಹಿ ಭೋಕ್ತುಮ್ |
ಸುವಿಹಿತಮಪಿ ಚಾರ್ಥಂ ದೈವತೈ ರಕ್ಷ್ಯಮಾಣಂ
ಪುರುಷ ಇಹ ಮಹಾತ್ಮಾ ಪ್ರಾಪ್ನುತೇ ನಿತ್ಯಯುಕ್ತಃ ||46||
ಸತ್ಕರ್ಮಹೀನನಾದ ಪುರುಷನು ಯಾವುದೋ ಪೂರ್ವಪುಣ್ಯ ಕಾರಣದಿಂದ ವಿಪುಲವಾದ ಧನರಾಶಿಯನ್ನೂ, ಭೋಗಸಾಮಗ್ರಿಗಳನ್ನೂ, ಸ್ತ್ರೀಯರನ್ನೂ ಪಡೆದರೂ ಅದನ್ನು ಭೋಗಿಸಲು ಸಮರ್ಥನಾಗುವುದಿಲ್ಲ. ಮಹಾತ್ಮನಾದ, ನಿತ್ಯವೂ ಎಚ್ಚರಿಕೆಯಿಂದ ಸತ್ಕರ್ಮಗಳನ್ನು ಮಾಡುವ ಪುರುಷನು ದೇವತೆಗಳಿಂದ ರಕ್ಷಿಸಲ್ಪಟ್ಟು ಹೂತಿಟ್ಟಿದ್ದರೂ ಸಹ ಅಂತಹ ಐಶ್ವರ್ಯವನ್ನು ಪಡೆಯುತ್ತಾನೆ.
ವ್ಯಯಗುಣಮಪಿ ಸಾಧುಂ ಕರ್ಮಣಾ ಸಂಶ್ರಯಂತೇ
ಭವತಿ ಮನುಜಲೋಕಾದ್ ದೈವಲೋಕೋ ವಿಶಿಷ್ಟಃ |
ಬಹುತರಸುಸಮೃದ್ಧ್ಯಾ ಮಾನುಷಾಣಾಂ ಗೃಹಾಣಿ
ಪಿತೃವನಭವನಾಭಂ ದೃಶ್ಯತೇ ಚಾಮರಾಣಾಮ್ ||47||
ಸತ್ಪಾತ್ರರಲ್ಲಿ ದಾನ ಮಾಡುವ ಪುರುಷನನ್ನು ಅವನು ಮಾಡುವ ಕರ್ಮಗಳ ಕಾರಣದಿಂದಾಗಿ ದೇವತೆಗಳು ಆಶ್ರಯಿಸುತ್ತಾರೆ. ಅವನಿಗೆ ಮನುಷ್ಯಲೋಕಕ್ಕಿಂತ ಶ್ರೇಷ್ಠವಾದ ದೇವಲೋಕದ ಸೌಭಾಗ್ಯವು ಉಂಟಾಗುತ್ತದೆ. ದಾನಹೀನನಾದ ಮನುಷ್ಯನ ಗೃಹವು ಬಹುತರವಾದ ಸಮೃದ್ಧಿಯಿಂದ ಕೂಡಿದ್ದರೂ ದೇವತೆಗಳ ದೃಷ್ಟಿಯಲ್ಲಿ ಅದು ಶ್ಮಶಾನದಲ್ಲಿರುವ ಮನೆಯಂತೆ.
ನ ಚ ಫಲತಿ ವಿಕರ್ಮಾ ಜೀವಲೋಕೇ ನ ದೈವಂ
ವ್ಯಪನಯತಿ ವಿಮಾರ್ಗಂ ನಾಸ್ತಿ ದೈವೇ ಪ್ರಭುತ್ವಮ್ |
ಗುರುಮಿವ ಕೃತಮಗ್ರ್ಯಂ ಕರ್ಮ ಸಂಯಾತಿ ದೈವಂ
ನಯತಿ ಪುರುಷಕಾರಃ ಸಂಚಿತಸ್ತತ್ರ ತತ್ರ ||48||
ಸತ್ಕರ್ಮವನ್ನು ಮಾಡದವನು ಈ ಜೀವಲೋಕದಲ್ಲಿ ಯಾವ ಫಲವನ್ನೂ ಹೊಂದುವುದಿಲ್ಲ. ದೈವವೂ ಅವನಿಗೆ ಯಾವ ಫಲವನ್ನೂ ಕೊಡುವುದಿಲ್ಲ. ದುರ್ಮಾರ್ಗದಲ್ಲಿ ಹೋಗುವ ಅವನನ್ನು ದೈವವು ತಡೆಯುವುದಿಲ್ಲ. ದೈವವು ಸ್ವತಂತ್ರವಾಗಿ ಏನನ್ನೂ ಮಾಡುವುದಿಲ್ಲ. ಗುರುವನ್ನು ಮುಂದೆ ಮಾಡಿಕೊಂಡು ಶಿಷ್ಯನು ನಡೆದಂತೆ ದೈವವು ಪುರುಷನು ಮಾಡಿದ ಕರ್ಮವನ್ನೇ ಮುಂದೆ ಮಾಡಿಕೊಂಡು ಫಲವನ್ನು ಕೊಡುತ್ತದೆ. ಆ ಪುರುಷಜ ಪ್ರಯತ್ನವು ಅದಕ್ಕೆ ಅನುಗುಣವಾಗಿ ಅಲ್ಲಲ್ಲಿಗೆ ಪುರುಷನನ್ನು ಕೊಂಡೊಯ್ಯುತ್ತದೆ.
ಏತತ್ ತೇ ಸರ್ವಮಾಖ್ಯಾತಂ ಮಯಾ ವೈ ಮುನಿಸತ್ತಮ |

ಫಲಂ ಪುರುಷಕಾರಸ್ಯ ಸದಾ ಸಂದೃಶ್ಯ ತತ್ತ್ವತಃ ॥49॥
ಎಲೈ ಮುನಿಶ್ರೇಷ್ಠರಾದ ವಸಿಷ್ಠರೇ, ನಾನು ಪುರುಷಪ್ರಯತ್ನದ ಫಲವನ್ನು ಯಾವಾಗಲೂ ಯಥಾರ್ಥವಾಗಿ ನೋಡಿ ಎಲ್ಲ ವಿಷಯವನ್ನೂ ನಿಮಗೆ ಹೇಳಿದ್ದೇನೆ.
ಅಭ್ಯುತ್ಥಾನೇನ ದೈವಸ್ಯ ಸಮಾರಬ್ಧೇನ ಕೇನಚಿತ್ |
ವಿಧಿನಾ ಕರ್ಮಣಾ ಚೈವ ಸ್ವರ್ಗಮಾರ್ಗಮವಾಪ್ನುಯಾತ್ ॥50॥
ದೈವದ ಅನುಗ್ರಹದಿಂದ ವಿಧಿಪ್ರಕಾರವಾಗಿ ಚೆನ್ನಾಗಿ ಆರಂಭಿಸಿ, ಪೂರೈಸಿದ ಕರ್ಮದಿಂದ ಮನುಷ್ಯನು ಸ್ವರ್ಗಮಾರ್ಗವನ್ನು ಹೊಂದುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಅನುಶಾಸನಪರ್ವಣಿ ದಾನಧರ್ಮೇ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ದಯಾಗುಣದ ಮಹಿಮೆ - ಇಂದ್ರ-ಶುಕರ ಸಂವಾದ
ಯುಧಿಷ್ಠಿರಃ
ಆನೃಶಂಸಸ್ಯ ಧರ್ಮಸ್ಯ ಗುಣಾನ್ ಭಕ್ತಜನಸ್ಯ ಚ |
ಶ್ರೋತುಮಿಚ್ಛಾಮಿ ಕಾರ್ತ್ಸ್ನ್ಯೇನ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ದಯಾರೂಪವಾದ ಧರ್ಮದ ಗುಣಗಳನ್ನು ಮತ್ತು ಭಕ್ತಿ (ನಿಷ್ಠೆ)ಯ ಗುಣಗಳನ್ನು ಸಮಗ್ರವಾಗಿ ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳು.
ಭೀಷ್ಮಃ
ವಿಷಯೇ ಕಾಶಿರಾಜಸ್ಯ ಗ್ರಾಮಾನ್ನಿಷ್ಕ್ರಮ್ಯ ಲುಬ್ಧಕಃ |
ಸವಿಷಂ ಕಾಂಡಮಾದಾಯ ಮೃಗಯಾಮಾಸ ವೈ ಮೃಗಮ್ ॥2॥
ಭೀಷ್ಮ ಕಾಶಿರಾಜನ ರಾಜ್ಯದಲ್ಲಿ ಒಬ್ಬ ಬೇಡನು ತನ್ನ ಗ್ರಾಮದಿಂದ ಹೊರಟು ವಿಷಪೂರಿತವಾದ ಬಾಣವನ್ನು ತೆಗೆದುಕೊಂಡು ಮೃಗಗಳನ್ನು ಹುಡುಕುತ್ತಿದ್ದನು.
ತತ್ರ ಚಾಮಿಷಲುಬ್ಧೇನ ಲುಬ್ಧಕೇನ ಮಹಾವನೇ |
ಅವಿದೂರೇ ಮೃಗಂ ದೃಷ್ಟ್ವಾ ಬಾಣಃ ಪ್ರತಿಸಮಾಹಿತಃ ॥3॥
ಮಾಂಸದ ಆಸೆಯುಳ್ಳ ಆ ಬೇಡನು ಆ ಕಾಡಿನಲ್ಲಿ ಅಲ್ಪದೂರದಲ್ಲಿಯೇ ಒಂದು ಮೃಗವನ್ನು ನೋಡಿ ಬಾಣವನ್ನು ಹೂಡಿದನು.
ತೇನ ದುರ್ವಾರಿತಾಸ್ತ್ರೇಣ ನಿಮಿತ್ತಚಪಲೇಷುಣಾ |
ಮಹಾವನತರುರ್ವಿದ್ಧೋ ಮೃಗಂ ತತ್ರ ಜಿಘಾಂಸತಾ ॥4॥
ಮೃಗವನ್ನು ಹೊಡೆಯಲು ಇಚ್ಛಿಸಿದ, ಗುರಿಯನ್ನು ತಪ್ಪದ ಆ ಬೇಡನಿಂದ ಪ್ರಯೋಗಿಸಲ್ಪಟ್ಟ ಆ ಬಾಣವು ಸ್ವಲ್ಪ ಚಲಿಸಿ ಒಂದು ದೊಡ್ಡ ವೃಕ್ಷಕ್ಕೆ ಹೊಡೆಯಿತು.
ಸ ತೀಕ್ಷ ್ಣವಿಷದಿಗ್ಧೇನ ಶರೇಣಾತಿಬಲಾತ್ಕೃತಃ |
ಉತ್ಸೃಜ್ಯ ಫಲಪತ್ರಾಣಿ ಪಾದಪಃ ಶೋಷಮಾಗತಃ ॥5॥
ತೀಕ್ಷ್ಣವಾದ ವಿಷದಿಂದ ಲೇಪಿಸಲ್ಪಟ್ಟ ಆ ಬಾಣದಿಂದ ಬಲವಾಗಿ ಹೊಡೆಯಲ್ಪಟ್ಟ ಆ ವೃಕ್ಷವು ಎಲೆಗಳನ್ನು, ಹಣ್ಣುಗಳನ್ನು ಉದುರಿಸಿ ಒಣಗಿ ಹೋಯಿತು.
ತಸ್ಮಿನ್ ವೃಕ್ಷೇ ತಥಾಭೂತೇ ಕೋಟರೇಷು ಚಿರೋಷಿತಃ |
ನ ಜಹಾತಿ ಶುಕೋ ವಾಸಂ ತಸ್ಯ ಭಕ್ತ್ಯಾ ವನಸ್ಪತೇಃ ॥6॥
ಆ ವೃಕ್ಷದ ಮೇಲಿನ ಪ್ರೀತಿಯಿಂದ ಆ ವೃಕ್ಷದ ಪೊಟರೆಗಳಲ್ಲಿ ಬಹುಕಾಲದಿಂದ ವಾಸವಾಗಿದ್ದ ಒಂದು ಗಿಣಿಯು ಆ ವೃಕ್ಷವು ಒಣಗಿ ಹೋದರೂ ಅದರಲ್ಲಿ ವಾಸ ಮಾಡುವುದನ್ನು ಬಿಡಲಿಲ್ಲ.
ನಿಷ್ಪ್ರಚಾರೋ ನಿರಾಹಾರೋ ಗ್ಲಾನಃ ಶಿಥಿಲವಾಗಪಿ |
ಕೃತಜ್ಞಃ ಸಹ ವೃಕ್ಷೇಣ ಧರ್ಮಾತ್ಮಾ ಸ ವ್ಯಶುಷ್ಯತ ॥7॥
ಚಲಿಸುವುದಕ್ಕೆ ಶಕ್ತಿಯಿಲ್ಲದೆ, ಆಹಾರವಿಲ್ಲದೆ, ಹುದುಗಿಹೋಗಿ ಶಿಥಿಲವಾದ ಸ್ವರದಿಂದ ಕೂಡಿದ್ದರೂ ಧರ್ಮಾತ್ಮವೂ ಮತ್ತು ಕೃತಜ್ಞವೂ ಆದ ಗಿಣಿಯು ಆ ವೃಕ್ಷದ ಜೊತೆಯಲ್ಲಿಯೇ ಒಣಗಲು ಪ್ರಾರಂಭಿಸಿತು.
ತಮುದಾರಂ ಮಹಾಸತ್ತ್ವಮತಿಮಾನುಷಚೇಷ್ಟಿತಮ್ |
ಸಮದುಃಖಸುಖಂ ಜ್ಞಾತ್ವಾ ವಿಸ್ಮಿತಃ ಪಾಕಶಾಸನಃ ॥8॥
ಮನುಷ್ಯರನ್ನು ಮೀರಿದ ಚೇಷ್ಟೆಯುಳ್ಳ, ಮಹಾಧೈರ್ಯಶಾಲಿಯಾದ, ಔದಾರ್ಯದಿಂದ ಕೂಡಿದ ವೃಕ್ಷದ ಜೊತೆಯಲ್ಲಿ ಸುಖ-ದುಃಖಗಳನ್ನು ಸಮವಾಗಿ ಹಂಚಿಕೊಂಡ ಆ ಗಿಣಿಯನ್ನು ನೋಡಿ ಇಂದ್ರನು ವಿಸ್ಮಿತನಾದನು.
ತತಶ್ಚಿಂತಾಮುಪಗತಃ ಶಕ್ರಃ ಕಥಮಯಂ ದ್ವಿಜಃ |
ತಿರ್ಯಗ್ಯೋನಾವಸಂಭಾವ್ಯಮಾನೃಶಂಸ್ಯಂ ಸಮಾಸ್ಥಿತಃ ॥9॥
ಆಗ ಇಂದ್ರನು ತಿರ್ಯಗ್ಯೋನಿಯಲ್ಲಿ ಜನಿಸಿದ್ದರೂ ಅಲ್ಲಿ ಅಸಂಭಾವಿತವಾದ ಇಂತಹ ದಯೆಯನ್ನು ಈ ಪಕ್ಷಿಯು ಹೇಗೆ ಹೊಂದಿದೆ ಎಂದು ಚಿಂತಿಸಿದನು.

ಅಥ ವಾ ನಾತ್ರ ಚಿತ್ರಂ ಹೀತ್ಯಭವದ್ ವಾಸವಸ್ಯ ತು |
ಪ್ರಾಣಿನಾಮಪಿ ಸರ್ವೇಷಾಂ ಸರ್ವಂ ಸರ್ವತ್ರ ದೃಶ್ಯತೇ ॥10॥
ಅಥವಾ ಇದರಲ್ಲಿ ಆಶ್ಚರ್ಯವಾದುದೇನೂ ಇಲ್ಲ. ಎಲ್ಲ ಪ್ರಾಣಿಗಳಿಗೂ, ಎಲ್ಲ ಕಡೆಗಳಲ್ಲಿಯೂ, ಎಲ್ಲ ವಿಧವಾದ ಭಾವನೆಗಳೂ ಇರುತ್ತವೆ ಎಂದು ಇಂದ್ರನು ಚಿಂತಿಸಿದನು.
ತತೋ ಬ್ರಾಹ್ಮಣವೇಷೇಣ ಮಾನುಷಂ ರೂಪಮಾಸ್ಥಿತಃ |
ಅವತೀರ್ಯ ಮಹೀಂ ಶಕ್ರಸ್ತಂ ಪಕ್ಷಿಣಮುವಾಚ ಹ ॥11॥
ಅನಂತರ ಇಂದ್ರನು ಮನುಷ್ಯರೂಪವನ್ನು ಧರಿಸಿ ಬ್ರಾಹ್ಮಣ ವೇಷವನ್ನು ಹೊಂದಿ ಸ್ವರ್ಗದಿಂದ ಭೂಮಿಗೆ ಇಳಿದು ಆ ಪಕ್ಷಿಯನ್ನು ಕುರಿತು ಮಾತನಾಡಿದನು.
ಶುಕ ಭೋಃ ಪಕ್ಷಿಣಾಂ ಶ್ರೇಷ್ಠ ದಾಕ್ಷೇಯೀ ಸುಪ್ರಜಾಸ್ತ್ವಯಾ |
ಪೃಚ್ಛೇ ತ್ವಾ ಶುಷ್ಕಮೇತಂ ವೈ ಕಸ್ಮಾನ್ನ ತ್ಯಜಸಿ ದ್ರುಮಮ್ ॥12॥
ಎಲೈ ಗಿಣಿಯೇ, ಪಕ್ಷಿಗಳಲ್ಲಿ ಶ್ರೇಷ್ಠನಾದವನೇ, ದಕ್ಷಕುಮಾರಿಯಾದ ನಿನ್ನ ತಾಯಿಯು ನಿನ್ನಂತಹ ಪ್ರಜೆಯನ್ನು ಹೊಂದಿ ಸುಪ್ರಜಳಾಗಿದ್ದಾಳೆ. ನೀನು ಒಣಗಿ ಹೋದ ಈ ವೃಕ್ಷವನ್ನು ಏಕೆ ಬಿಡುತ್ತಿಲ್ಲ ಎಂದು ನಿನ್ನನ್ನು ಕೇಳುತ್ತಿದ್ದೇನೆ.
ಅಥ ಪೃಷ್ಟಃ ಶುಕಃ ಪ್ರಾಹ ಮೂರ್ಧ್ನಾ ಸಮಭಿವಾದ್ಯ ತಮ್ |
ಸ್ವಾಗತಂ ದೇವರಾಜಾಯ ವಿಜ್ಞಾತಸ್ತಪಸಾ ಮಯಾ ॥13॥
ಹೀಗೆ ಕೇಳಲ್ಪಟ್ಟ ಆ ಗಿಣಿಯು ಅವನಿಗೆ ಶಿರಸಾ ನಮಸ್ಕಾರವನ್ನು ಮಾಡಿ ದೇವರಾಜನಾದ ನಿನಗೆ ಸ್ವಾಗತ. ಇದನ್ನು ನಾನು ನನ್ನ ತಪಸ್ಸಿನ ಬಲದಿಂದ ತಿಳಿದಿದ್ದೇನೆ ಎಂದು ಹೇಳಿತು.
ತತೋ ದಶಶತಾಕ್ಷೇಣ ಸಾಧು ಸಾಧ್ವಿತಿ ಭಾಷಿತಮ್ |
ಅಹೋ ವಿಜ್ಞಾನಮಿತ್ಯೇವಂ ತಪಸಾ ಪೂಜಿತಸ್ತತಃ ॥14॥
ಆಗ ಸಹಸ್ರಾಕ್ಷನಾದ ಇಂದ್ರನು ಸಾಧು-ಸಾಧು ಎಂದು ಹೇಳಿದನು. ವಿಜ್ಞಾನಬಲವು ಎಂತಹದು ಎಂದು ಚಿಂತಿಸಿದನು. ಅವನು ತಪೋಯುಕ್ತವಾದ ಆ ಗಿಣಿಯಿಂದ ಪೂಜಿಸಲ್ಪಟ್ಟನು.
ತಮೇವಂ ಶುಭಕರ್ಮಾಣಂ ಶುಕಂ ಪರಮಧಾರ್ಮಿಕಮ್ |
ವಿಜಾನನ್ನಪಿ ತಾಂ ಪ್ರಾಪ್ತಿಂ ಪಪ್ರಚ್ಛ ಬಲಸೂದನಃ ॥15॥
ಬಲಸೂದನನಾದ ಇಂದ್ರನು ಆ ಗಿಣಿಗೆ ಅಂತಹ ಜ್ಞಾನವು ಪ್ರಾಪ್ತವಾದ ಪ್ರಕಾರವನ್ನು ತಿಳಿದಿದ್ದರೂ ಶುಭಕರ್ಮವುಳ್ಳ, ಪರಮ ಧಾರ್ಮಿಕವಾದ ಆ ಗಿಣಿಯನ್ನು ಕುರಿತು ಪ್ರಶ್ನೆ ಮಾಡಿದನು.
ನಿಷ್ಪತ್ರಮಫಲಂ ಶುಷ್ಕಮಶರಣ್ಯಂ ಪತತ್ರಿಣಾಮ್ |
ಕಿಮರ್ಥಂ ಸೇವಸೇ ವೃಕ್ಷಂ ಯದಾ ಮಹದಿದಂ ವನಮ್ ॥16॥
ಈ ವೃಕ್ಷದಲ್ಲಿ ಪತ್ರವೂ, ಫಲವೂ ಇಲ್ಲ, ಒಣಗಿ ಹೋಗಿದೆ. ಪಕ್ಷಿಗಳ ವಾಸಕ್ಕೆ ಯೋಗ್ಯವಾಗಿಲ್ಲ. ಈ ವನವು ದೊಡ್ಡದಾಗಿದೆ. ಹೀಗಿರುವಾಗ ಈ ವೃಕ್ಷವನ್ನೇ ಏಕೆ ಸೇವಿಸುತ್ತಿದ್ದೀಯೆ?
ಅನ್ಯೇಽಪಿ ಬಹವೋ ವೃಕ್ಷಾಃ ಪತ್ರಸಂಛನ್ನಕೋಟರಾಃ |
ಶುಭಾಃ ಪರ್ಯಾಪ್ತಸಂಚಾರಾ ವಿದ್ಯಂತೇಽಸ್ಮಿನ್ ಮಹಾವನೇ ॥17॥
ಎಲೆಗಳಿಂದ ಮರೆಮಾಡಲ್ಪಟ್ಟ ಪೊಟರೆಗಳುಳ್ಳ ಇನ್ನೂ ಅನೇಕ ಶುಭವೃಕ್ಷಗಳು ಈ ಮಹಾವನದಲ್ಲಿ ಇವೆ. ಅವುಗಳಲ್ಲಿ ಸಂಚಾರ ಮಾಡಲು ಸಾಕಷ್ಟು ಅವಕಾಶವಿದೆ.
ಗತಾಯುಷಮಸಾಮರ್ಥ್ಯಂ ಕ್ಷೀಣಸಾರಂ ಹತಶ್ರಿಯಮ್ |
ವಿಮೃಶ್ಯ ಪ್ರಜ್ಞಯಾ ಧೀರ ಜಹೀಮಂ ಹ್ಯಸ್ಥಿರಂ ದ್ರುಮಮ್ ॥18॥
ಎಲೈ ಧೀರನೇ, ಆಯುಸ್ಸನ್ನು ಕಳೆದುಕೊಂಡು, ಬಲವನ್ನೂ, ಕಾಂತಿಯನ್ನೂ ಕಳೆದುಕೊಂಡು ಈ ಮರವು ಸಾಮರ್ಥ್ಯಹೀನವಾಗಿರುವುದನ್ನು ನಿನ್ನ ಬುದ್ಧಿಯಿಂದ ವಿಮರ್ಶೆ ಮಾಡಿ, ಅಲುಗಾಡುತ್ತಿರುವ ಈ ಮರವನ್ನು ಪರಿತ್ಯಜಿಸು (ಎಂದು ಹೇಳಿದನು).
ತದುಪಶ್ರುತ್ಯ ಧರ್ಮಾತ್ಮಾ ಶುಕಃ ಶಕ್ರೇಣ ಭಾಷಿತಮ್ |
ಸುದೀರ್ಘಮಭಿನಿಃಶ್ವಸ್ಯ ದೀನೋ ವಾಕ್ಯಮುವಾಚ ಹ ॥19॥
ಇಂದ್ರನ ಮಾತುಗಳನ್ನು ಕೇಳಿದ, ಧರ್ಮಾತ್ಮವಾದ ಆ ಗಿಣಿಯು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು, ದೈನ್ಯವನ್ನು ಹೊಂದಿ ಈ ಮಾತನ್ನಾಡಿತಷ್ಟೆ.
ಅನತಿಕ್ರಮಣೀಯಾನಿ ದೈವತಾನಿ ಶಚೀಪತೇ |
ಯತ್ರಾಭವತ್ ತವ ಪ್ರಶ್ನಸ್ತನ್ನಿಬೋಧ ಸುರಾಧಿಪ ॥20॥
ಎಲೈ ಶಚೀಪತಿಯೇ, ದೇವತೆಗಳ ಮಾತುಗಳನ್ನು ಉಲ್ಲಂಘಿಸಬಾರದು. ಎಲೈ ಸುರಾಧಿಪನೇ, ನೀನು ಯಾವ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದೆಯೋ ಅದಕ್ಕೆ ಉತ್ತರವನ್ನು ಕೇಳು.
ಅಸ್ಮಿನ್ನಹಂ ದ್ರುಮೇ ಜಾತಃ ಸಾಧುಭಿಶ್ಚ ಗುಣೈರ್ಯುತಃ |
ಬಾಲಭಾವೇ ಚ ಸಂಗುಪ್ತಃ ಶತ್ರುಭಿಶ್ಚ ನ ಧರ್ಷಿತಃ ॥21॥
ನಾನು ಈ ವೃಕ್ಷದಲ್ಲೇ ಜನಿಸಿದೆ. ಅನೇಕ ಸದ್ಗುಣಗಳನ್ನು ಸಂಪಾದಿಸಿದೆ. ನಾನು ಚಿಕ್ಕದಿದ್ದಾಗಿನಿಂದ ಈ ವೃಕ್ಷವು ನನಗೆ ರಕ್ಷಣೆಯನ್ನು ಕೊಟ್ಟಿದೆ. ಆದ್ದರಿಂದ ನಾನು ಶತ್ರುಗಳಿಂದ ಘಾಸಿಗೊಳಿಸಲ್ಪಡಲಿಲ್ಲ.
ಕಿಮನುಕ್ರೋಶವೈಫಲ್ಯಮುತ್ಪಾದಯಸಿ ಮೇಽನಘ |

ಆನೃಶಂಸ್ಯೇಽನುರಕ್ತಸ್ಯ ಭಕ್ತಸ್ಯಾನುಗತಸ್ಯ ಚ ॥22॥
ಎಲೈ ಅನಘನೇ, ನನಗೆ ಏಕೆ ನೀನು ಇಂತಹ ದಯಾಗುಣದ ವೈಫಲ್ಯವನ್ನು ಉಂಟುಮಾಡುತ್ತಿದ್ದೀಯೆ? ನಾನು ದಯಾಗುಣದಲ್ಲಿ ರತನಾದವನು. ಈ ವೃಕ್ಷದಲ್ಲಿ ಪ್ರೀತಿ ಮತ್ತು ನಿಷ್ಠೆಯುಳ್ಳವನು ಮತ್ತು ಈ ವೃಕ್ಷವನ್ನು ಅನುಸರಿಸುವವನು.
ಅನುಕ್ರೋಶೋ ಹಿ ಸಾಧೂನಾಂ ಸುಮಹದ್ಧರ್ಮಲಕ್ಷಣಮ್ |
ಅನುಕ್ರೋಶಶ್ಚ ಸಾಧೂನಾಂ ಸದಾ ಪ್ರೀತಿಂ ಪ್ರಯಚ್ಛತಿ ॥23॥
ದಯಾಗುಣವು ಸಜ್ಜನರಿಗೆ ದೊಡ್ಡ ಧರ್ಮದ ಲಕ್ಷಣವಾಗಿದೆ. ದಯಾಗುಣವು ಸಜ್ಜನರಿಗೆ ಯಾವಾಗಲೂ ಪ್ರೀತಿಯನ್ನುಂಟು ಮಾಡುತ್ತದೆ.
ತ್ವಮೇವ ದೈವತೈಃ ಸರ್ವೈಃ ಪೃಚ್ಛ್ಯಸೇ ಧರ್ಮಸಂಶಯಾನ್ |
ಅತಸ್ತ್ವಂ ದೇವ ದೇವಾನಾಮಾಧಿಪತ್ಯೇ ಪ್ರತಿಷ್ಠಿತಃ ॥24॥
ಎಲ್ಲ ದೇವತೆಗಳು ಧರ್ಮಸಂಶಯವುಂಟಾದಾಗ ನಿನ್ನನ್ನೇ ಪ್ರಶ್ನೆ ಮಾಡುತ್ತಾರೆ. ಆ ಕಾರಣದಿಂದ ಎಲೈ ದೇವನೇ, ನೀನು ದೇವತೆಗಳ ಅಧಿಪತಿಯಾಗಿ ಪ್ರತಿಷ್ಠಿತನಾಗಿದ್ದೀಯೆ.
ನಾರ್ಹಸಿ ತ್ವಂ ಸಹಸ್ರಾಕ್ಷ ತ್ಯಾಜಯಿತ್ವೇಹ ಭಕ್ತಿತಃ |
ಸಮರ್ಥಮುಪಜೀವ್ಯೇಮಂ ತ್ಯಜೇಯಂ ಕಥಮದ್ಯ ವೈ ॥25॥
ಎಲೈ ಸಹಸ್ರಾಕ್ಷನೇ, ಈ ವೃಕ್ಷದಲ್ಲಿ ಭಕ್ತಿಯುಳ್ಳ ನನಗೆ ನೀನು ಇದನ್ನು ಪರಿತ್ಯಾಗ ಮಾಡು ಎಂದು ಹೇಳುವುದು ಸರಿಯಲ್ಲ. ಸಮರ್ಥವಾದ ಈ ವೃಕ್ಷವನ್ನು ಇಷ್ಟು ದಿನ ಉಪಜೀವಿಸಿ ಈ ದಿನ ನಾನು ಹೇಗೆ ತ್ಯಜಿಸಲಿ?
ತಸ್ಯ ವಾಕ್ಯೇನ ಸೌಮ್ಯೇನ ಹರ್ಷಿತಃ ಪಾಕಶಾಸನಃ |
ಶುಕಂ ಪ್ರೋವಾಚ ಧರ್ಮಾತ್ಮಾಽಽನೃಶಂಸ್ಯೇನ ತೋಷಿತಃ ॥26॥
ವರಂ ವೃಣೀಷ್ವೇತಿ ತದಾ ಸ ಚ ವವ್ರೇ ವರಂ ಶುಕಃ |
ಆನೃಶಂಸ್ಯಪರೋ ನಿತ್ಯಂ ತಸ್ಯ ವೃಕ್ಷಸ್ಯ ಸಂಭವಮ್ ॥27॥
ಇಂದ್ರನು ಗಿಣಿಯ ಸೌಮ್ಯವಾದ ಮಾತುಗಳಿಂದ ಸಂತೋಷಗೊಂಡನು. ಅದರ ದಯಾಗುಣದಿಂದ ಸಂತೋಷಗೊಂಡ ಇಂದ್ರನು ಗಿಣಿಯನ್ನು ಕುರಿತು `ವರವನ್ನು ಬೇಡು' ಎಂದು ಹೇಳಿದನು. ದಯಾಪರವಾದ ಆ ಗಿಣಿಯು ಆ ವೃಕ್ಷದ ಪುನರುತ್ಪತ್ತಿಯನ್ನು ವರವಾಗಿ ಬೇಡಿತು.
ವಿದಿತ್ವಾ ಚ ದೃಢಾಂ ಭಕ್ತಿಂ ತಾಂ ಶುಕೇ ಶೀಲಸಂಪದಮ್ |
ಪ್ರೀತಃ ಕ್ಷಿಪ್ರಮಥೋ ವೃಕ್ಷಮಮೃತೇನಾವಸಿಕ್ತವಾನ್ ॥28॥
ಆ ಗಿಣಿಯ ದೃಢವಾದ ಭಕ್ತಿಯನ್ನು ಮತ್ತು ಶೀಲಸಂಪತ್ತನ್ನು ನೋಡಿ ಸಂತೋಷಗೊಂಡ ಇಂದ್ರನು ಶೀಘ್ರವಾಗಿ ಆ ವೃಕ್ಷವನ್ನು ಅಮೃತದಿಂದ ಸಿಂಪಡಿಸಿದನು.
ತತಃ ಫಲಾನಿ ಪತ್ರಾಣಿ ಶಾಖಾಶ್ಚಾಪಿ ಮನೋರಮಾಃ |
ಶುಕಸ್ಯ ದೃಢಭಕ್ತಿತ್ವಾಚ್ಛ್ರೀಮತ್ತ್ವಂ ಚಾಪ ಸ ದ್ರುಮಃ ॥29॥
ಗಿಣಿಯ ದೃಢಭಕ್ತಿಯ ಕಾರಣದಿಂದ ಆಗ ಆ ವೃಕ್ಷವು ಪತ್ರಗಳನ್ನೂ, ಫಲಗಳನ್ನೂ, ಮನೋಹರವಾದ ಶಾಖೆಗಳನ್ನೂ ಮತ್ತು ಕಾಂತಿಯನ್ನೂ ಪಡೆಯಿತು.
ಶುಕಶ್ಚ ಕರ್ಮಣಾ ತೇನ ಆನೃಶಂಸ್ಯಕೃತೇನ ಹ |
ಆಯುಷೋಽಂತೇ ಮಹಾರಾಜ ಪ್ರಾಪ ಶಕ್ರಸಲೋಕತಾಮ್ ॥30॥
ಎಲೈ ಮಹಾರಾಜನೇ, ಆ ಗಿಣಿಯಾದರೂ ಅಂತಹ ದಯಾಗುಣದಿಂದ ಕೂಡಿದ ಕಾರಣದಿಂದ ತನ್ನ ಆಯುಸ್ಸು ಮುಗಿದ ಮೇಲೆ ಇಂದ್ರಲೋಕಕ್ಕೆ ಹೋಯಿತು.
ಏವಮೇವ ಮನುಷ್ಯೇಂದ್ರ ಭಕ್ತಿಮಂತಂ ಸಮಾಶ್ರಿತಃ |
ಸರ್ವಾರ್ಥಸಿದ್ಧಿಂ ಲಭತೇ ಶುಕಂ ಪ್ರಾಪ್ಯ ಯಥಾ ದ್ರುಮಃ ॥31॥
ಎಲೈ ಮನುಷ್ಯೇಂದ್ರನೇ, ಹೀಗೆ ಭಕ್ತಿಯುಳ್ಳವನನ್ನು ಆಶ್ರಯಿಸಿದ ವ್ಯಕ್ತಿಯು, ವೃಕ್ಷವು ಗಿಣಿಯಿಂದ ಪಡೆದಂತೆ ಎಲ್ಲ ಅರ್ಥಸಿದ್ಧಿಯನ್ನೂ ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮನುಶಾಸನಪರ್ವಣಿ ದಾನಧರ್ಮೇ ಶುಕವಾಸವಸಂವಾದೇ ಆನೃಶಂಸ್ಯಶಿಕ್ಷಣಕಥನಂ ನಾಮ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *

## ಎಂಟನೆಯ ಅಧ್ಯಾಯ

## ವಿವಿಧ ಶುಭಕರ್ಮಗಳ ಫಲ ವರ್ಣನೆ

ಯುಧಿಷ್ಠಿರಃ
ಕರ್ಮಣಾಂ ಮೇ ಸಮಸ್ತಾನಾಂ ಶುಭಾನಾಂ ಭರತರ್ಷಭ |
ಫಲಾನಿ ವದತಾಂ ಶ್ರೇಷ್ಠ ಪ್ರಬ್ರೂಹಿ ಪರಿಪೃಚ್ಛತಃ ॥1॥
ಯುಧಿಷ್ಠಿರ ಎಲೈ ಭರತಶ್ರೇಷ್ಠನೇ, ಮಾತನಾಡುವವರಲ್ಲಿ ಶ್ರೇಷ್ಠರಾದವನೇ, ನಿನ್ನನ್ನು ಪ್ರಶ್ನಿಸುತ್ತಿರುವ ನನಗೆ ಎಲ್ಲ ಶುಭಕರ್ಮಗಳ ಫಲಗಳನ್ನು ಚೆನ್ನಾಗಿ ಹೇಳು.
ಭೀಷ್ಮಃ

ರಹಸ್ಯಂ ಯದೃಷೀಣಾಂ ತು ತಚ್ಛೃಣುಷ್ವ ಯುಧಿಷ್ಠಿರ |
ಯಾ ಗತಿಃ ಪ್ರಾಪ್ಯತೇ ಯೇನ ಪ್ರೇತ್ಯಭಾವೇ ಚಿರೇಪ್ಸಿತಾ ॥2॥
ಭೀಷ್ಮರು ಎಲೈ ಯುಧಿಷ್ಠಿರನೇ, ಮರಣವನ್ನು ಹೊಂದಿದ ಮೇಲೆ ಬಹಳ ಕಾಲದಿಂದ ಬಯಸಿದ ಎಂತಹ ಗತಿಯು ಪ್ರಾಪ್ತವಾಗುತ್ತದೆ ಎಂಬ ಋಷಿಗಳಿಗೆ ಸಮ್ಮತವಾದ, ರಹಸ್ಯವಾದ ವಿಷಯವನ್ನು ಕೇಳುವವನಾಗು.
ಯೇನ ಯೇನ ಶರೀರೇಣ ಯದ್ಯತ್ಕರ್ಮ ಕರೋತಿ ಯಃ |
ತೇನ ತೇನ ಶರೀರೇಣ ತತ್ತತ್ಫಲಮುಪಾಶ್ನುತೇ ॥3॥
ಯಾವ ಯಾವ ಶರೀರಗಳಿಂದ ಜೀವನು ಯಾವ ಯಾವ ಕರ್ಮಗಳನ್ನು ಮಾಡುತ್ತಾನೆಯೋ ಅಂತಹದೇ ಶರೀರಗಳಿಂದ ಆಯಾ ಕರ್ಮಗಳ ಫಲವನ್ನು ಅನುಭವಿಸುತ್ತಾನೆ.
ಯಸ್ಯಾಂ ಯಸ್ಯಾಮವಸ್ಥಾಯಾಂ ಯತ್ಕರೋತಿ ಶುಭಾಶುಭಮ್ |
ತಸ್ಯಾಂ ತಸ್ಯಾಮವಸ್ಥಾಯಾಂ ತತ್ಫಲಂ ಪ್ರತಿಪದ್ಯತೇ ॥4॥
ಬಾಲ್ಯ, ಕೌಮಾರ ಮೊದಲಾದ ಯಾವ ಯಾವ ಅವಸ್ಥೆಯಲ್ಲಿ ಜೀವನು ಶುಭಾಶುಭಕರ್ಮಗಳನ್ನು ಮಾಡುತ್ತಾನೆಯೋ ಅದೇ ಅವಸ್ಥೆಯಲ್ಲಿ ಅದರ ಫಲವನ್ನು ಹೊಂದುತ್ತಾನೆ.
ನ ನಶ್ಯತಿ ಕೃತಂ ಕರ್ಮ ಸದಾ ಪಂಚೇಂದ್ರಿಯೈರಿಹ |
ತೇ ಹ್ಯಸ್ಯ ಸಾಕ್ಷಿಣೋ ನಿತ್ಯಂ ಷಷ್ಠ ಆತ್ಮಾ ತಥೈವ ಚ ॥5॥
ಪಂಚೇಂದ್ರಿಯಗಳಿಂದ ಮಾಡಿದ ಯಾವ ಕರ್ಮವೂ ನಾಶವನ್ನು ಹೊಂದುವುದಿಲ್ಲ. ಪಂಚೇಂದ್ರಿಯಗಳು ಎಲ್ಲ ಕರ್ಮಗಳಿಗೂ ಯಾವಾಗಲೂ ಸಾಕ್ಷಿಗಳಾಗಿವೆ. ಜೀವನೇ ಆರನೆಯ ಸಾಕ್ಷಿ.
ಚಕ್ಷುರ್ದದ್ಯಾನ್ಮನೋ ದದ್ಯಾದ್ ವಾಚಂ ದದ್ಯಾಚ್ಚ ಸೂನೃತಾಮ್ |
ಅನುವ್ರಜೇದುಪಾಸೀತ ಸ ಯಜ್ಞಃ ಪಂಚದಕ್ಷಿಣಃ ॥6॥
ಅತಿಥಿಗಳು ಅಥವಾ ದೊಡ್ಡವರು ಬಂದಾಗ ಮೊದಲು ದೃಷ್ಟಿಯನ್ನು ಕೊಡಬೇಕು, ಅನಂತರ ಮನಸ್ಸನ್ನು ಕೊಡಬೇಕು, ಅನಂತರ ಪ್ರೀತಿಪೂರ್ವಕವಾದ ಮಾತುಗಳನ್ನು ಆಡಬೇಕು, ಅವರ ಸಮೀಪಕ್ಕೆ ಹೋಗಬೇಕು, ಒಳಗೆ ಕರೆದು ಅವರ ಸಮೀಪದಲ್ಲಿ ಕುಳಿತುಕೊಳ್ಳಬೇಕು. ಇದೊಂದು ಪಂಚದಕ್ಷಿಣೆಯುಳ್ಳ ಯಜ್ಞ.
ಯೋ ದದ್ಯಾದಪರಿಕ್ಲಿಷ್ಟಮನ್ನಮಧ್ವನಿ ವರ್ತತೇ |
ಶ್ರಾಂತಾಯಾದೃಷ್ಟಪೂರ್ವಾಯ ತಸ್ಯ ಪುಣ್ಯಫಲಂ ಮಹತ್ ॥7॥
ಯಾವನು ಹಿಂದೆ ನೋಡದಿರುವ ದಣಿದ ದಾರಿಹೋಕನಿಗೆ ಒಳ್ಳೆಯ ಅನ್ನವನ್ನು ದಾನ ಮಾಡುತ್ತಾನೆಯೋ ಅವನ ಪುಣ್ಯಫಲವು ಬಹಳ ದೊಡ್ಡದು.
ಸ್ಥಂಡಿಲೇಷು ಶಯಾನಾನಾಂ ಗೃಹಾಣಿ ಶಯನಾನಿ ಚ |
ಚೀರವಲ್ಕಲಸಂವೀತೇ ವಾಸಾಂಸ್ಯಾಭರಣಾನಿ ಚ ॥8॥
ವಾಹನಾಸನಯಾನಾನಿ ಯೋಗಾತ್ಮನಿ ತಪೋಧನೇ |
ಅಗ್ನೀನುಪಶಯಾನಸ್ಯ ರಾಜ್ಞಃ ಪೌರುಷಮುಚ್ಯತೇ ॥9॥
ನೆಲದ ಮೇಲೆ ಮಲಗುವವನಿಗೆ ಗೃಹವನ್ನೂ ಮತ್ತು ಹಾಸಿಗೆಗಳನ್ನೂ, ನಾರುಮಡಿಗಳನ್ನು ಉಡುವವನಿಗೆ ವಸ್ತ್ರಾಭರಣಗಳನ್ನೂ, ಯೋಗನಿಷ್ಠನಾದ ತಪಸ್ವಿಗೆ ವಾಹನ, ಆಸನ, ಯಾನಗಳನ್ನೂ ಕೊಟ್ಟು ಅಗ್ನಿಗಳನ್ನು ಸೇವಿಸುವ ರಾಜನಿಗೆ ಶೌರ್ಯವು ಫಲವೆಂದು ಹೇಳಲ್ಪಡುತ್ತದೆ.
ರಸಾನಾಂ ಪ್ರತಿಸಂಹಾರೇ ಸೌಭಾಗ್ಯಮನುಗಚ್ಛತಿ |
ಆಮಿಷಪ್ರತಿಸಂಹಾರೇ ಪಶೂನ್ ಪುತ್ರಾಂಶ್ಚ ವಿಂದತಿ ॥10॥
ರಸಪದಾರ್ಥಗಳನ್ನು ದಾನ ಮಾಡುವುದರಿಂದ ಸೌಭಾಗ್ಯ ಉಂಟಾಗುತ್ತದೆ. ಮಾಂಸವನ್ನು ದಾನ ಮಾಡುವುದರಿಂದ ಪಶು-ಪುತ್ರರನ್ನು ಪಡೆಯುತ್ತಾನೆ.
ಅವಾಕ್ ಶಿರಾಸ್ತು ಯೋ ಲಂಬೇದುದವಾಸಂ ಚ ಯೋ ವಸೇತ್ |
ಸತತಂ ಚೈಕಶಾಯೀ ಯಃ ಸ ಲಭೇತೇಪ್ಸಿತಾಂ ಗತಿಮ್ ॥11॥
ತಲೆಕೆಳಗಾಗಿ ನಿಂತು ತಪಸ್ಸನ್ನು ಮಾಡುವವನೂ, ನೀರಿನಲ್ಲಿ ನಿಂತು ತಪಸ್ಸನ್ನು ಮಾಡುವವನೂ, ಸತತವಾಗಿ ಒಬ್ಬನೇ ಮಲಗುವವನೂ ಆದ ತಪಸ್ವಿಯು ತನಗೆ ಇಷ್ಟವಾದ ಗತಿಯನ್ನು ಪಡೆಯುತ್ತಾನೆ.
ಪಾದ್ಯಮಾಸನಮೇವಾಥ ದೀಪಮನ್ನಂ ಪ್ರತಿಶ್ರಯಮ್ |
ದದ್ಯಾದತಿಥಿಪೂಜಾರ್ಥಂ ಸ ಯಜ್ಞಃ ಪಂಚದಕ್ಷಿಣಃ ॥12॥
ಅತಿಥಿಯ ಪೂಜೆಯ ಸಲುವಾಗಿ ಪಾದ್ಯ, ಆಸನ, ಅನ್ನ, ದೀಪ ಮತ್ತು ವಿಶ್ರಾಂತಿಗೆ ಸ್ಥಳವನ್ನು ಕೊಡುವುದು ಪಂಚದಕ್ಷಿಣೆಯುಳ್ಳ ಯಜ್ಞವೆಂದು ಕರೆಯಲ್ಪಡುತ್ತದೆ.
ವೀರಾಸನಂ ವೀರಶಯ್ಯಾಂ ವೀರಸ್ಥಾನಮುಪಾಸತಃ |
ಅಕ್ಷಯಾಸ್ತಸ್ಯ ವೈ ಲೋಕಾಃ ಸರ್ವಕಾಮಗಮಾಸ್ತಥಾ ॥13॥
ವೀರಾಸನ (ಲಕ್ಷ್ಮಣನಂತೆ ಅಲುಗಾಡದೆ ನಿಂತು ಇನ್ನೊಬ್ಬರನ್ನು ರಕ್ಷಿಸುವುದು), ವೀರಶಯ್ಯೆ (ಭೀಷ್ಮರಂತೆ ರಣರಂಗದಲ್ಲಿ ಮಲಗುವುದು), ವೀರಸ್ಥಾನ (ಯುದ್ಧದಿಂದ ಹಿಮ್ಮೆಟ್ಟದಿರುವುದು) ಇವುಗಳನ್ನು ಪಾಲಿಸುವವನಿಗೆ ಎಲ್ಲ ಕಾಮಗಳಿಂದಲೂ ತುಂಬಿದ ಅಕ್ಷಯಲೋಕಗಳು ಪ್ರಾಪ್ತವಾಗುತ್ತವೆ.
ಧನಂ ಲಭೇತ ದಾನೇನ ಮೌನೇನಾಜ್ಞಾಂ ವಿಶಾಂಪತೇ |

ಉಪಭೋಗಾಂಶ್ಚ ತಪಸಾ ಜೀವಿತಂ ಬ್ರಹ್ಮಚರ್ಯಯಾ ॥14॥
ಎಲೈ ರಾಜನ್, ದಾನದಿಂದ ಧನವು ಉಂಟಾಗುತ್ತದೆ. ಮೌನದಿಂದ ಪ್ರಭುಶಕ್ತಿಯು ಉಂಟಾಗುತ್ತದೆ. ತಪಸ್ಸಿನಿಂದ ಉಪಭೋಗಗಳೂ, ಬ್ರಹ್ಮಚರ್ಯದಿಂದ ಜೀವನವೂ ಉಂಟಾಗುತ್ತವೆ.
ರೂಪಮೈಶ್ವರ್ಯಮಾರೋಗ್ಯಮಹಿಂಸಾಫಲಮಶ್ನುತೇ |
ಫಲಮೂಲಾಶಿನಾಂ ರಾಜ್ಯಂ ಸ್ವರ್ಗಃ ಪರ್ಣಾಶಿನಾಂ ತಥಾ ॥15॥
ಅಹಿಂಸೆಯ ಫಲವಾಗಿ ರೂಪ, ಐಶ್ವರ್ಯ ಮತ್ತು ಆರೋಗ್ಯಗಳನ್ನು ಪಡೆಯುತ್ತಾನೆ. ಫಲ-ಮೂಲಗಳ ಆಹಾರವನ್ನು ಹೊಂದಿದವರಿಗೆ ರಾಜ್ಯವು ದೊರೆಯುತ್ತದೆ. ಎಲೆಗಳನ್ನು ತಿಂದು ತಪಸ್ಸು ಮಾಡುವವರಿಗೆ ಸ್ವರ್ಗವು ಲಭಿಸುತ್ತದೆ.
ಪ್ರಾಯೋಪವೇಶನಾದ್ ರಾಜ್ಯಂ ಸರ್ವತ್ರ ಸುಖಮುಚ್ಯತೇ |
ಸ್ವರ್ಗಂ ಸತ್ಯೇನ ಲಭತೇ ದೀಕ್ಷಯಾ ಕುಲಮುತ್ತಮಮ್ ॥16॥
ಪ್ರಾಯೋಪವೇಶದಿಂದ ರಾಜ್ಯವೂ, ಸರ್ವತ್ರ ಸುಖವೂ ಉಂಟಾಗುತ್ತದೆ. ಸತ್ಯದಿಂದ ಸ್ವರ್ಗವು ಉಂಟಾಗುತ್ತದೆ. ದೀಕ್ಷೆಯಿಂದ ಉತ್ತಮ ಕುಲಪ್ರಾಪ್ತಿಯಾಗುತ್ತದೆ.
ಗವಾಢ್ಯಃ ಶಾಕದೀಕ್ಷಾಯಾಂ ಸ್ವರ್ಗಗಾಮೀ ತೃಣಾಶನಃ |
ಸ್ತ್ರಿಯಸ್ತ್ರಿಷವಣಂ ಸ್ನಾತ್ವಾ ವಾಯುಂ ಪೀತ್ವಾ ಕ್ರತುಂ ಲಭೇತ್ ॥17॥
ಕೇವಲ ಶಾಕಗಳನ್ನು (ತರಕಾರಿ) ಸ್ವೀಕರಿಸಿದರೆ ಗೋಸಂಪತ್ತು ಉಂಟಾಗುತ್ತದೆ. ಫಲವನ್ನು ತಿಂದು ತಪಸ್ಸನ್ನು ಮಾಡುವವನು ಸ್ವರ್ಗಕ್ಕೆ ಹೋಗುತ್ತಾನೆ. ಮೂರುಕಾಲಗಳಲ್ಲಿಯೂ ಸ್ನಾನವನ್ನು ಮಾಡುವವನು ಒಳ್ಳೆಯ ಭಾರ್ಯೆಯನ್ನು ಪಡೆಯುತ್ತಾನೆ. ವಾಯುಭಕ್ಷನಾಗಿ ತಪಸ್ಸನ್ನು ಮಾಡುವವನು ಯಜ್ಞಗಳನ್ನು ಆಚರಿಸುತ್ತಾನೆ.
ಸಲಿಲಾಶೀ ಭವೇದ್ಯಸ್ತು ಸದಾಗ್ನಿಃ ಸಂಸ್ಕೃತೋ ದ್ವಿಜಃ |
ಮನುಂ ಸಾಧಯತೋ ರಾಜ್ಯಂ ನಾಕಪೃಷ್ಠಮನಾಶಕೇ ॥18॥
ಯಾವ ಬ್ರಾಹ್ಮಣನು ಕೇವಲ ಜಲಪಾನವನ್ನು ಮಾಡಿ, ಅಗ್ನಿಯನ್ನು ಉಪಚರಿಸಿ ಮಂತ್ರಸಿದ್ಧಿಯನ್ನು ಪಡೆಯುತ್ತಾನೆಯೋ ಅವನು ರಾಜ್ಯವನ್ನು ಹೊಂದುತ್ತಾನೆ. ಅನಶನ (ಉಪವಾಸ)ವ್ರತದಿಂದ ತಪಸ್ಸನ್ನು ಮಾಡುವವನು ಸ್ವರ್ಗಲೋಕವನ್ನು ಪಡೆಯುತ್ತಾನೆ.
ಉಪವಾಸಂ ಚ ದೀಕ್ಷಾಂ ಚ ಅಭಿಷೇಕಂ ಚ ಪಾರ್ಥಿವ |
ಕೃತ್ವಾ ದ್ವಾದಶವರ್ಷಾಣಿ ವೀರಸ್ಥಾನಾದ್ ವಿಶಿಷ್ಯತೇ ॥19॥
ಎಲೈ ರಾಜನ್, ಉಪವಾಸ, ದೀಕ್ಷೆ, ಮತ್ತು ಅಭಿಷೇಕ ಇವುಗಳನ್ನು ಹನ್ನೆರಡು ವರ್ಷಗಳ ಕಾಲ ಮಾಡಿದರೆ ಅದು ವೀರಸ್ಥಾನಕ್ಕಿಂತಲೂ ಶ್ರೇಷ್ಠವಾದುದು.
ಅಧೀತ್ಯ ಸರ್ವವೇದಾನ್ ವೈ ಸದ್ಯೋ ದುಃಖಾತ್ ಪ್ರಮುಚ್ಯತೇ |
ಮಾನಸಂ ಹಿ ಚರನ್ ಧರ್ಮಂ ಸ್ವರ್ಗಲೋಕಮವಾಪ್ನುತೇ ॥20॥
ಸರ್ವವೇದಗಳನ್ನು ಅಧ್ಯಯನ ಮಾಡಿದರೆ ದುಃಖದ ನಿವೃತ್ತಿಯುಂಟಾಗುತ್ತದೆ. ಮನಸ್ಸಿನಲ್ಲಿಯೇ ಧರ್ಮಾಚರಣೆಯನ್ನು ಮಾಡುವವನು ಸ್ವರ್ಗಲೋಕವನ್ನು ಹೊಂದುತ್ತಾನೆ.
ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ |
ಯೋಽಸೌ ಪ್ರಾಣಾಂತಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥
ಯಾವ ಆಸೆಯನ್ನು ದುರ್ಜನರು ತ್ಯಜಿಸಲು ಸಾಧ್ಯವಿಲ್ಲವೋ, ಯಾವುದು ಪುರುಷನು ಮುಪ್ಪನ್ನು ಹೊಂದಿದರೂ ಮುಪ್ಪನ್ನು ಹೊಂದುವುದಿಲ್ಲವೋ, ಯಾವುದು ಪ್ರಾಣಾಂತಕವಾದ ರೋಗವೋ ಅಂತಹ ಆಸೆಯನ್ನು ತೊರೆದವನು ಸುಖವನ್ನು ಹೊಂದುತ್ತಾನೆ.
ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಮ್ |
ಏವಂ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ ॥22॥
ಸಹಸ್ರಧೇನುಗಳ ಮಧ್ಯದಲ್ಲಿ ಕರುವು ಹೇಗೆ ತನ್ನ ತಾಯಿಯ ಸಮೀಪಕ್ಕೇ ಹೋಗುತ್ತದೆಯೋ ಅದರಂತೆ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದ ಫಲವು ಕರ್ಮವನ್ನು ಮಾಡಿದವನನ್ನೇ ಬೆನ್ನಟ್ಟಿ ಬರುತ್ತದೆ.
ಅಚೋದ್ಯಮಾನಾನಿ ಯಥಾ ಪುಷ್ಪಾಣಿ ಚ ಫಲಾನಿ ಚ |
ಸ್ವಕಾಲಂ ನಾತಿವರ್ತಂತೇ ತಥಾ ಕರ್ಮ ಪುರಾಕೃತಮ್ ॥23॥
ವೃಕ್ಷಗಳು ಬೇರೆ ಯಾವ ಪ್ರೇರಣೆ ಇಲ್ಲದಿದ್ದರೂ ಆಯಾ ಕಾಲದಲ್ಲಿ ಪುಷ್ಪ ಫಲಗಳನ್ನು ಕೊಡುವುದನ್ನು ಅತಿಕ್ರಮಿಸದಂತೆ ಪುರುಷನು ಹಿಂದೆ ಮಾಡಿದ ಕರ್ಮವು ಅದಕ್ಕೆ ಅನುಗುಣವಾದ ಫಲಗಳನ್ನು ಕೊಡುವುದನ್ನು ಅತಿಕ್ರಮಿಸುವುದಿಲ್ಲ.
ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ |
ಚಕ್ಷುಃಶ್ರೋತ್ರೇ ಚ ಜೀರ್ಯೇತೇ ತೃಷ್ಣೈಕಾ ತು ನ ಜೀರ್ಯತೇ ॥24॥
ಪುರುಷನು ವೃದ್ಧನಾದಂತೆ ಅವನ ಕೇಶಗಳು ಮುಪ್ಪನ್ನು ಹೊಂದುತ್ತವೆ. ದಂತಗಳು ಮುಪ್ಪನ್ನು ಹೊಂದುತ್ತವೆ. ಚಕ್ಷುಃಶ್ರೋತ್ರಗಳು ಮುಪ್ಪನ್ನು ಹೊಂದುತ್ತವೆ. ಆದರೆ ಆಸೆಯು ಮಾತ್ರ ಮುಪ್ಪನ್ನು ಹೊಂದುವುದಿಲ್ಲ.
ಯೇನ ಪ್ರೀಣಾತಿ ಪಿತರಂ ತೇನ ಪ್ರೀತಃ ಪಿತಾಮಹಃ |
ಪ್ರೀಣಾತಿ ಮಾತರಂ ಯೇನ ಪೃಥಿವೀ ತೇನ ಪೂಜಿತಾ ॥25॥
ಯಾವನು ತಂದೆಯನ್ನು, ತಾಯಿಯನ್ನು ಮತ್ತು ಪಿತಾಮಹನನ್ನು ಸಂತೋಷ ಪಡಿಸುತ್ತಾನೆಯೋ ಅವನು ಭೂಮಿಯನ್ನೇ ಸಂತೋಷಪಡಿಸುತ್ತಾನೆ.
ಯೇನ ಪ್ರೀಣಾತ್ಯುಪಾಧ್ಯಾಯಂ ತೇನ ಸ್ಯಾದ್ ಬ್ರಹ್ಮ ಪೂಜಿತಮ್ |
ಯಜ್ಞವಚ್ಚರತೇ ಧರ್ಮಂ ಸ್ವರ್ಗಲೋಕಮವಾಪ್ನುಯಾತ್ |

ಅತಿಥಿಃ ಪೂಜಿತೋ ಯೇನ ತೇನ ದೇವಾಶ್ಚ ಪೂಜಿತಾಃ ॥25॥
ಯಾವನು ಗುರುವನ್ನು ಸಂತೋಷಪಡಿಸುತ್ತಾನೆಯೋ ಅವನು ವೇದವನ್ನೇ ಸಂತೋಷಪಡಿಸುತ್ತಾನೆ. ಯಾವನು ಯಜ್ಞದಂತೆ ಧರ್ಮವನ್ನು ಆಚರಿಸುತ್ತಾನೆಯೋ ಅವನು ಸ್ವರ್ಗಲೋಕವನ್ನು ಹೊಂದುತ್ತಾನೆ. ಅತಿಥಿಗಳನ್ನು ಪೂಜಿಸುವವನು ದೇವತೆಗಳನ್ನೇ ಪೂಜಿಸುತ್ತಾನೆ.
ಸರ್ವೇ ತಸ್ಯಾದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ |
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥26॥
ಯಾವನು ತಂದೆ-ತಾಯಿಗಳು, ಪಿತಾಮಹರು ಮತ್ತು ಉಪಾಧ್ಯಾಯರು - ಈ ಮೂವರನ್ನು ಆದರಿಸುತ್ತಾನೆಯೋ ಅವನು ಎಲ್ಲ ಧರ್ಮವನ್ನೂ ಆದರಿಸಿದವನಾಗುತ್ತಾನೆ. ಈ ಮೂವರನ್ನು ಆದರಿಸದಿದ್ದವನು ಮಾಡುವ ಎಲ್ಲ ಕ್ರಿಯೆಗಳೂ ನಿಷ್ಫಲವಾಗುತ್ತವೆ.
ವೈಶಂಪಾಯನಃ
ಭೀಷ್ಮಸ್ಯ ತದ್ವಚಃ ಶ್ರುತ್ವಾ ವಿಸ್ಮಿತಾಃ ಕುರುಪುಂಗವಾಃ |
ಆಸನ್ ಪ್ರಹೃಷ್ಟಮನಸಃ ಪ್ರೀತಿಮಂತೋಽಭವಂಸ್ತದಾ ॥27॥
ವೈಶಂಪಾಯನ ಭೀಷ್ಮರ ಆ ಮಾತುಗಳನ್ನು ಕೇಳಿ ಎಲ್ಲ ಕುರುಶ್ರೇಷ್ಠರೂ ವಿಸ್ಮಿತರೂ, ಸಂತೋಷಗೊಂಡ ಮನಸ್ಸುಳ್ಳವರೂ ಆಗಿ ಪರಸ್ಪರ ಪ್ರೀತಿಯುಳ್ಳವರಾದರು.
ಯನ್ಮಂತ್ರೇ ಭವತಿ ವೃಥಾ ಪ್ರಯುಜ್ಯಮಾನೇ
ಯತ್ಸೋಮೇ ಭವತಿ ವೃಥಾಭಿಷೂಯಮಾಣೇ |
ಯಚ್ಚಾಗ್ನೌ ಭವತಿ ವೃಥಾಭಿಹೂಯಮಾನೇ
ತತ್ಸರ್ವಂ ಭವತಿ ವೃಥಾಽಭಿಧೀಯಮಾನೇ ॥28॥
ಮಂತ್ರವನ್ನು ವ್ಯರ್ಥವಾಗಿ ಪ್ರಯೋಗಿಸುವುದರಿಂದ ಯಾವ ದುಷ್ಫಲ ಉಂಟಾಗುತ್ತದೆಯೋ, ಸೋಮರಸವನ್ನು ವ್ಯರ್ಥವಾಗಿ ಹಿಂಡುವುದರಿಂದ ಯಾವ ದುಷ್ಫಲವು ಉಂಟಾಗುತ್ತದೆಯೋ, ಅಗ್ನಿಯಲ್ಲಿ ವ್ಯರ್ಥವಾಗಿ ಹೋಮ ಮಾಡುವುದರಿಂದ ಯಾವ ದುಷ್ಫಲವು ಉಂಟಾಗುತ್ತದೆಯೋ ಅವೆಲ್ಲವೂ ಆಚರಿಸಿದ ಧರ್ಮವನ್ನು ಕೀರ್ತನೆ ಮಾಡುವುದರಿಂದ ಒಟ್ಟಿಗೆ ಉಂಟಾಗುತ್ತವೆ. ಮೊದಲು ಹೇಳಿದ ಮೂರರಲ್ಲಿ ಒಂದೊಂದನ್ನು ವ್ಯರ್ಥವಾಗಿ ಮಾಡಿದರೆ ಒಂದೊಂದರ ಫಲವು ಮಾತ್ರ ವ್ಯರ್ಥವಾಗುತ್ತದೆ. ಆದರೆ ಮಾಡಿದ ಧರ್ಮದಲ್ಲಿ ಒಂದನ್ನು ಕೂಡ ಸಭೆಯಲ್ಲಿ ಕೀರ್ತನೆಯನ್ನು ಮಾಡಿದರೆ ಮಾಡಿದ ಎಲ್ಲ ಕರ್ಮಗಳೂ ವ್ಯರ್ಥವಾಗುತ್ತವೆ ಎಂದು ಅಭಿಪ್ರಾಯ ಲಕ್ಷಾಲಂಕಾರ.
ಇತ್ಯೇತದೃಷಿಣಾ ಪ್ರೋಕ್ತಮುಕ್ತವಾನಸ್ಮಿ ಯದ್ ವಿಭೋ |
ಶುಭಾಶುಭಫಲಪ್ರಾಪ್ತೌ ಕಿಮತಃ ಶ್ರೋತುಮಿಚ್ಛಸಿ ॥29॥
ಎಲೈ ವಿಭುವೇ, ಋಷಿಗಳು ಹೇಳಿದಂತೆ ಶುಭಾಶುಭ ಫಲಪ್ರಾಪ್ತಿಗೆ ಕಾರಣವಾದ ಕರ್ಮಗಳನ್ನು ನಾನು ನಿನಗೆ ಹೇಳಿದ್ದೇನೆ. ಬೇರೆ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕರ್ಮಫಲಪ್ರಶಂಸನಂ ನಾಮ ಅಷ್ಟಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಪೂಜ್ಯರ ವರ್ಣನೆ.
ಯುಧಿಷ್ಠಿರಃ
ಕೇ ಪೂಜ್ಯಾಃ ಕೇ ನಮಸ್ಕಾರ್ಯಾಃ ಕಾನ್ ನಮಸ್ಯಸಿ ಭಾರತ |
ಏತನ್ಮೇ ಸರ್ವಮಾಚಕ್ಷ್ವ ಯೇಷಾಂ ಸ್ಪೃಹಯಸೇ ನೃಪ ॥1॥
ಯುಧಿಷ್ಠಿರ ಎಲೈ ಭಾರತನೇ, ಯಾರು ಪೂಜ್ಯರು? ಯಾರು ನಮಸ್ಕಾರಕ್ಕೆ ಅರ್ಹರಾದವರು? ನೀನು ಯಾರನ್ನು ನಮಸ್ಕರಿಸುವಿ? ಎಲೈ ರಾಜನೇ, ನೀನು ಯಾರನ್ನು ಬಯಸುತ್ತೀಯೆ? ಇದೆಲ್ಲವನ್ನೂ ನನಗೆ ತಿಳಿಸು.
ಯಥೈವ ತೇ ನಮಸ್ಕಾರ್ಯಾ ಪ್ರೋಕ್ತಾ ಶಕ್ರೇಣ ಮಾನದ |
ತತ್ಸರ್ವಂ ಮಯಿ ಚಾಚಕ್ಷ್ವ ಯೇಷಾಂ ಸ್ಪೃಹಯಸೇ ನೃಪ ॥2॥
ಎಲೈ ಮಾನದನೇ, ಇಂದ್ರನು ಯಾರಿಗೆ ನಮಸ್ಕಾರ ಮಾಡಬೇಕೆಂದು ಉಪದೇಶಿಸಿದ್ದಾನೆಯೋ ಅದೇ ರೀತಿಯಲ್ಲಿ ನನಗೆ ತಿಳಿಸು. ರಾಜನೇ, ನೀನು ಮನಸ್ಸಿನಲ್ಲಿ ಯಾರನ್ನು ಬಯಸುತ್ತೀಯೆ?
ಉತ್ತಮಾಪದ್ಗತಸ್ಯಾಪಿ ಯತ್ರ ತೇ ವರ್ತತೇ ಮನಃ |
ಮನುಷ್ಯಲೋಕೇ ಸರ್ವಸ್ಮಿನ್ ಯದಮುತ್ರೇಹ ಚಾಪ್ಯುತ ॥3॥
ಇಂತಹ ಕಷ್ಟಕ್ಕೆ ಸಿಲುಕಿದ್ದರೂ ಈ ಮನುಷ್ಯಲೋಕದಲ್ಲಿ ಮತ್ತು ಪರಲೋಕದಲ್ಲಿ ನಿನ್ನ ಮನಸ್ಸು ಯಾವುದನ್ನು ಕುರಿತು ಚಿಂತಿಸುತ್ತಿದೆ ಎಂದು ಹೇಳು.
ಭೀಷ್ಮಃ
ಸ್ಪೃಹಯಾಮಿ ದ್ವಿಜಾತೀನಾಂ ಯೇಷಾಂ ಬ್ರಹ್ಮ ಪರಂ ಧನಮ್ |
ಯೇಷಾಂ ಸ್ವಪ್ರತ್ಯಯಃ ಸ್ವರ್ಗಸ್ತಪಃಸ್ವಾಧ್ಯಾಯಸಾಧನಃ ॥4॥
ಭೀಷ್ಮ ಯಾರಿಗೆ ವೇದವೇ ಶ್ರೇಷ್ಠವಾದ ಧನವಾಗಿದೆಯೋ, ಯಾರ ಜ್ಞಾನವು ಸ್ವರ್ಗಸಾಧನವಾಗಿದೆಯೋ, ಯಾರ ತಪಸ್ಸು ಅಧ್ಯಯನ

ಸಾಧನವಾಗಿದೆಯೋ ಅಂತಹ ಬ್ರಾಹ್ಮಣರನ್ನು ನಾನು ಬಯಸುತ್ತೇನೆ.
ಯೇಷಾಂ ವೃದ್ಧಾಶ್ಚ ಬಾಲಾಶ್ಚ ಪಿತೃಪೈತಾಮಹೀಂ ಧುರಮ್ |
ಉದ್ವಹಂತಿ ನ ಸೀದಂತಿ ತೇಷಾಂ ವೈ ಸ್ಪೃಹಯಾಮ್ಯಹಮ್ ॥5॥
ಯಾವ ಬ್ರಾಹ್ಮಣಕುಲದಲ್ಲಿ ಬಾಲಕರು ಮತ್ತು ವೃದ್ಧರು ಪಿತೃ-ಪಿತಾಮಹರ ಜ್ಞಾನ-ತಪಸ್ಸುಗಳ ಭಾರವನ್ನೇ ಹೊರುತ್ತಾರೆಯೋ ಮತ್ತು ಅದರಿಂದ ಕುಸಿದು ಬೀಳುವುದಿಲ್ಲವೋ ಅಂತಹ ಬ್ರಾಹ್ಮಣರನ್ನು ಬಯಸುತ್ತೇನೆ.
ವಿದ್ಯಾಸ್ವಭಿವಿನೀತಾನಾಂ ದಾಂತಾನಾಂ ಮೃದುಭಾಷಿಣಾಮ್ |
ಶ್ರುತವೃತ್ತೋಪಪನ್ನಾನಾಂ ಪದಾಕ್ಷರವಿದಾಂ ಸತಾಮ್ ॥6॥
ಸಂಸತ್ಸು ವದತಾಂ ಯೇಷಾಂ ಹಂಸಾನಾಮಿವ ಸಂಘಶಃ |
ಮಂಗಲ್ಯರೂಪಾ ರುಚಿರಾ ದಿವ್ಯಜೀಮೂತನಿಸ್ವನಾಃ ॥7॥
ಸಮ್ಯಗುಚ್ಚಾರಿತಾ ವಾಚಃ ಶ್ರೂಯಂತೇ ಹಿ ಯುಧಿಷ್ಠಿರ |
ಶಿ(ಶು)ಶ್ರೂಷಮಾಣೇ ನೃಪತೌ ಪ್ರೇತ್ಯ ಚೇಹ ಸುಖಾವಹಾಃ ॥8॥
ಯಾವ ಬ್ರಾಹ್ಮಣರು ಅನೇಕ ವಿದ್ಯೆಗಳಲ್ಲಿ ಶಿಕ್ಷಿತರಾಗಿ ಇಂದ್ರಿಯನಿಗ್ರಹವನ್ನೂ, ಮೃದುವಾದ ಮಾತುಗಳನ್ನೂ ಹೊಂದಿದವರಾಗಿ ಶೀಲವೃತ್ತಗಳನ್ನು ಹೊಂದಿ, ವ್ಯಾಕರಣ ಶಾಸ್ತ್ರಗಳನ್ನು ತಿಳಿದು ಸಜ್ಜನರಾಗಿರುತ್ತಾರೆಯೋ, ಯಾರು ಸಭೆಗಳಲ್ಲಿ ಹಂಸಗಳ ಸಮೂಹದಂತೆ ಮಂಗಳವೂ ಮತ್ತು ಮನೋಹರವೂ ಆದ ಮಾತುಗಳನ್ನು ತಮ್ಮ ಮೇಘಗಂಭೀರವಾದ ವಾಣಿಯಿಂದ ಆಡುತ್ತಾರೆಯೋ, ಎಲೈ ಯುಧಿಷ್ಠಿರನೇ, ರಾಜನು ಸಭೆಯಲ್ಲಿ ಕುಳಿತಿರುವಾಗ ಯಾರು ಚೆನ್ನಾಗಿ ಆಡಿದ ಮಾತುಗಳು ಕೇಳಿಬರುತ್ತವೆಯೋ ಅಂತಹ ಮಾತುಗಳು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖಪ್ರದವಾದವುಗಳು.
ಯೇ ಚಾಪಿ ತೇಷಾಂ ಶ್ರೋತಾರಃ ಸದಾ ಸದಸಿ ಸಮ್ಮತಾಃ |
ವಿಜ್ಞಾನಗುಣಸಂಪನ್ನಾಸ್ತೇಷಾಂ ಚ ಸ್ಪೃಹಯಾಮ್ಯಹಮ್ ॥9॥
ಸಭೆಯಲ್ಲಿ ಗೌರವಾನ್ವಿತರಾಗಿದ್ದು ಯಾರು ಅಂತಹ ಮಾತುಗಳನ್ನು ಕೇಳುತ್ತಾರೆಯೋ, ವಿಜ್ಞಾನಗುಣಸಂಪನ್ನರಾದ ಅಂತಹ ಬ್ರಾಹ್ಮಣರನ್ನು ನಾನು ಬಯಸುತ್ತೇನೆ.
ಸುಸಂಸ್ಕೃತಾನಿ ಶುಭ್ರಾಣಿ ಶುಚೀನಿ ಗುಣವಂತಿ ಚ |
ದದತ್ಯನ್ನಾನಿ ತೃಪ್ತ್ಯರ್ಥಂ ಬ್ರಾಹ್ಮಣೇಭ್ಯೋ ಯುಧಿಷ್ಠಿರ |
ಯೇ ಚಾಪಿ ತೇಷಾಂ ದಾತಾರಃ ತೇಷಾಂ ಚ ಸ್ಪೃಹಯಾಮ್ಯಹಮ್ ॥
ಎಲೈ ಯುಧಿಷ್ಠಿರನೇ, ಯಾರು ಬ್ರಾಹ್ಮಣರ ತೃಪ್ತಿಗಾಗಿ ಸುಸಂಸ್ಕೃತವಾದ, ಶುಚಿಯಾದ, ಗುಣಪೂರ್ಣವಾದ ಅನ್ನವನ್ನು ವಿನಯದಿಂದ ಕೊಡುತ್ತಾರೆಯೋ ಅಂತಹವರನ್ನು ನಾನು ಬಯಸುತ್ತೇನೆ.
ಶಕ್ಯಂ ಹ್ಯೇವಾಹವೇ ಯೋದ್ಧುಂ ನ ದಾತುಮನಸೂಯಿತಮ್ |
ಶೂರಾ ವೀರಾಶ್ಚ ಶತಶಃ ಸಂತಿ ಲೋಕೇ ಯುಧಿಷ್ಠಿರ |
ತೇಷಾಂ ಸಂಖ್ಯಾಯಮಾನಾನಾಂ ದಾನಶೂರೋ ವಿಶಿಷ್ಯತೇ ॥11॥
ರಣರಂಗದಲ್ಲಿ ಯುದ್ಧವನ್ನು ಮಾಡುವುದು ಸಾಧ್ಯವಾಗುತ್ತದೆ (ಸುಲಭ). ಆದರೆ ಅಸೂಯೆ ಇಲ್ಲದೆ ದಾನವನ್ನು ಕೊಡುವುದು ಕಷ್ಟ. ಎಲೈ ಯುಧಿಷ್ಠಿರನೇ, ಲೋಕದಲ್ಲಿ ಶೂರರೂ, ವೀರರೂ ನೂರಾರು ಸಂಖ್ಯೆಯಲ್ಲಿ ಇದ್ದಾರೆ. ಅವರನ್ನು ಎಣಿಸುವಾಗ ದಾನಶೂರನೇ ಶ್ರೇಷ್ಠನಾದವನು.
ಧನ್ಯಃ ಸ್ಯಾಂ ಯದ್ಯಹಂ ಭೂಯಃ ಸೌಮ್ಯ ಬ್ರಾಹ್ಮಣಕೋಽಪಿ ವಾ |
ಕುಲೇ ಜಾತೋ ಧರ್ಮಮತಿಸ್ತಪೋವಿದ್ಯಾಪರಾಯಣಃ ॥12॥
ನಾನು ಒಂದು ಒಳ್ಳೆಯ ಕುಲದಲ್ಲಿ ಅಲ್ಪಬ್ರಾಹ್ಮಣನಾಗಿಯಾದರೂ ಜನಿಸಿ, ಧರ್ಮದಲ್ಲಿ ಬುದ್ಧಿಯನ್ನು ಹೊಂದಿ, ತಪೋ-ವಿದ್ಯಾಪರಾಯಣನಾದರೆ, ಎಲೈ ಸೌಮ್ಯನೇ, ನಾನು ಧನ್ಯನೆಂದು ಭಾವಿಸುತ್ತೇನೆ.
ಭದ್ರಂ ತು ಜನ್ಮ ಸಂಪ್ರಾಪ್ಯ ಭೂಯೋ ಬ್ರಾಹ್ಮಣಕೋ ಭವೇತ್ |
ಬಂಧುಮಧ್ಯೇ ಕುಲೇ ಜಾತಃ ಸುದುರಾಪಮವಾಪ್ನುಯಾತ್ ॥13॥
ಒಳ್ಳೆಯ ಜನ್ಮವನ್ನು ಪಡೆಯುವುದಿದ್ದರೆ ಪುನಃ ಅಲ್ಪನಾದ ಬ್ರಾಹ್ಮಣನಾದರೂ ಆಗಬೇಕು. ಒಳ್ಳೆಯ ಕುಲದಲ್ಲಿ ಅಂತಹ ಬ್ರಾಹ್ಮಣರ ಮಧ್ಯದಲ್ಲಿ ಜನಿಸಿದವನು ಪಡೆಯಲು ಅಸಾಧ್ಯವಾದುದನ್ನೆಲ್ಲಾ ಪಡೆಯುತ್ತಾನೆ.
ನ ಮೇ ತ್ವತ್ತಃ ಪ್ರಿಯತರೋ ಲೋಕೇಽಸ್ಮಿನ್ ಪಾಂಡುನಂದನ |
ತ್ವತ್ತಶ್ಚ ಮೇ ಪ್ರಿಯತರಾ ಬ್ರಾಹ್ಮಣಾ ಭರತರ್ಷಭ ॥14॥
ಎಲೈ ಪಾಂಡುನಂದನನೇ, ಈ ಲೋಕದಲ್ಲಿ ನನಗೆ ನಿನಗಿಂತಲೂ ಪ್ರಿಯರಾದವರು ಯಾರೂ ಇಲ್ಲ. ಆದರೆ ಭರತರ್ಷಭನೇ, ಬ್ರಾಹ್ಮಣರು ಮಾತ್ರ ನಿನಗಿಂತ ಹೆಚ್ಚು ಪ್ರಿಯರಾದವರು.
ಯಥಾ ಮಮ ಪ್ರಿಯತರಾಸ್ತ್ವತ್ತೋ ವಿಪ್ರಾಃ ಕುರೂದ್ವಹ |
ತೇನ ಸತ್ಯೇನ ಗಚ್ಛೇಯಂ ಲೋಕಾನ್ ಯತ್ರ ಸ ಶಂತನುಃ ॥15॥
ಎಲೈ ಕುರೂದ್ವಹನೇ, ನನಗೆ ಬ್ರಾಹ್ಮಣರು ನಿನಗಿಂತ ಹೆಚ್ಚು ಪ್ರಿಯರಾದವರು ಎಂಬ ಸತ್ಯವಚನದಿಂದ ನಾನು ಶಂತನು ಇರುವ ಲೋಕಗಳಿಗೆ ಹೋದೇನು.
ನ ಮೇ ಪಿತಾ ಪ್ರಿಯತರೋ ಬ್ರಾಹ್ಮಣೇಭ್ಯಸ್ತಥಾಽಭವತ್ |
ನ ಮೇ ಪಿತುಃ ಪಿತಾ ವಾಪಿ ಯೇ ಚಾನ್ಯೇಽಪಿ ಸುಹೃಜ್ಜನಾಃ ॥16॥
ನನಗೆ ಬ್ರಾಹ್ಮಣರು ಎಷ್ಟು ಪ್ರಿಯರೋ ನನ್ನ ತಂದೆಯಾಗಲೀ, ನನ್ನ ತಂದೆಯ ತಂದೆಯಾಗಲೀ ಅಥವಾ ಉಳಿದ ಸುಹೃಜ್ಜನರಾಗಲೀ

ಅಷ್ಟು ಪ್ರಿಯರಲ್ಲ.
ನ ಚ ಮೇ ವೃಜಿನಂ ಕಿಂಚಿದ್ ವಿದ್ಯತೇ ಬ್ರಾಹ್ಮಣೇಷ್ವಿಹ |
ಅಣು ವಾ ಯದಿ ವಾ ಸ್ಥೂಲಂ ವಿದಿತಂ ಸಾಧುಕರ್ಮಭಿಃ ||17||
ನಾನು ಈ ಲೋಕದಲ್ಲಿ ಬ್ರಾಹ್ಮಣರಿಗೆ ಅಲ್ಪವಾದ ಅಪರಾಧವನ್ನೂ ಮಾಡಿಲ್ಲ. ನಾನು ಅಲ್ಪವಾದ ಅಥವಾ ದೊಡ್ಡದಾದ ಅಪರಾಧವನ್ನು ಮಾಡಿಲ್ಲವೆಂಬುದನ್ನು ಸತ್ಕರ್ಮ ಮಾಡುವ ಜನರು ತಿಳಿದಿದ್ದಾರೆ.
ಕರ್ಮಣಾ ಮನಸಾ ವಾಪಿ ವಾಚಾ ವಾಪಿ ಪರಂತಪ |
ಯನ್ಮೇ ಕೃತಂ ಬ್ರಾಹ್ಮಣೇಷು ತೇನಾದ್ಯ ನ ತಪಾಮ್ಯಹಮ್ ||18||
ಎಲೈ ಪರಂತಪನೇ, ನಾನು ಕರ್ಮದಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ಬ್ರಾಹ್ಮಣರಿಗೆ ಏನು ಹಿತವನ್ನು ಮಾಡಿದ್ದೇನೆಯೋ ಅದರ ಬಲದಿಂದ ಈ ದಿನ ತಾಪರಹಿತನಾಗಿದ್ದೇನೆ.
ಬ್ರಹ್ಮಣ್ಯ ಇತಿ ಮಾಮಾಹುಸ್ತಯಾ ವಾಚಾಽಸ್ಮಿ ತೋಷಿತಃ |
ಏತದೇವ ಹಿ ಪುತ್ರೇಭ್ಯಃ ಸರ್ವೇಭ್ಯಃ ಪರಮಂ ಸ್ಮೃತಮ್ ||19||
ನನ್ನನ್ನು ಬ್ರಾಹ್ಮಣವತ್ಸಲನೆಂದು ಕರೆಯುತ್ತಾರೆ. ಆ ಮಾತಿನಿಂದ ಬಹಳ ಸಂತೋಷಗೊಂಡಿದ್ದೇನೆ. ಸತ್ಪುತ್ರರನ್ನು ಪಡೆಯುವುದಕ್ಕಿಂತ ಇಂತಹ ಮಾತನ್ನು ಕೇಳುವುದು ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ.
ಪಶ್ಯಾಮಿ ಲೋಕಾನಮಲಾನ್ ಶುಚೀನ್ ಬ್ರಾಹ್ಮಣಯಾಯಿನಃ |
ತೇಷು ಮೇ ತಾತ ಗಂತವ್ಯಮಹ್ನಾಯ ಚ ಚಿರಾಯ ಚ ||20||
ಬ್ರಾಹ್ಮಣರು ಹೋಗುವ ನಿರ್ದುಷ್ಟವಾದ, ಶುಭ್ರವಾದ ಲೋಕಗಳನ್ನು ನಾನು ನೋಡುತ್ತಿದ್ದೇನೆ. ಎಲೈ ಪ್ರೀತಿಪಾತ್ರನೇ, ನಾನು ಅಲ್ಲಿಗೆ ಶೀಘ್ರವಾಗಿ ಮತ್ತು ಚಿರಕಾಲ ವಾಸಿಸುವಂತೆ ಹೋಗಬೇಕು.
ಯಥಾ ಪತ್ಯಾಶ್ರಯೋ ಧರ್ಮಃ ಸ್ತ್ರೀಣಾಂ ಲೋಕೇ ಯುಧಿಷ್ಠಿರ |
ಸ ದೇವಃ ಸಾ ಗತಿರ್ನಾನ್ಯಾ ಕ್ಷತ್ರಿಯಸ್ಯ ತಥಾ ದ್ವಿಜಾಃ ||21||
ಎಲೈ ಯುಧಿಷ್ಠಿರನೇ, ಸ್ತ್ರೀಯರಿಗೆ ಲೋಕದಲ್ಲಿ ಪತಿಯನ್ನು ಆಶ್ರಯಿಸುವುದೇ ಹೇಗೆ ಧರ್ಮವೋ, ಏಕೆಂದರೆ ಅವನೇ ಅವಳಿಗೆ ದೇವತೆ ಮತ್ತು ಗತಿ, ಅದರಂತೆ ಬ್ರಾಹ್ಮಣರು ಕ್ಷತ್ರಿಯರಿಗೆ ದೇವತೆಗಳು ಮತ್ತು ಗತಿಯಾದವರು.
ಕ್ಷತ್ರಿಯಃ ಶತವರ್ಷೀ ಚ ದಶವರ್ಷೀ ಚ ಬ್ರಾಹ್ಮಣಃ |
ಪಿತಾಪುತ್ರೌ ಚ ವಿಜ್ಞೇಯೌ ತಯೋರ್ಹಿ ಬ್ರಾಹ್ಮಣಃ ಪಿತಾ ||22||
ನೂರು ವರ್ಷದ ಕ್ಷತ್ರಿಯ ಮತ್ತು ಹತ್ತು ವರ್ಷದ ಬ್ರಾಹ್ಮಣರನ್ನು ಪಿತಾ-ಪುತ್ರರೆಂದು ತಿಳಿಯಬೇಕು. ಅವರಲ್ಲಿ ಬ್ರಾಹ್ಮಣನೇ ಪಿತೃವಾಗುತ್ತಾನೆ.
ನಾರೀ ತು ಪತ್ಯಭಾವೇ ವೈ ದೇವರಂ ಕುರುತೇ ಪತಿಮ್ |
ಪೃಥಿವೀ ಬ್ರಾಹ್ಮಣಾಲಾಭೇ ಕ್ಷತ್ರಿಯಂ ಕುರುತೇ ಪತಿಮ್ ||23||
ಸ್ತ್ರೀಯು ಪತಿ ಇಲ್ಲದಿದ್ದರೆ ಮೈದುನನನ್ನು ಪತಿಯಾಗಿ ಮಾಡಿಕೊಳ್ಳುತ್ತಾಳೆ. ಬ್ರಾಹ್ಮಣರು ದೊರೆಯದಿದ್ದರೆ ಭೂಮಿಯು ಕ್ಷತ್ರಿಯನನ್ನು ಪತಿಯಾಗಿ ಮಾಡಿಕೊಳ್ಳುತ್ತದೆ.
ತೇ ಪುತ್ರವಚ್ಚ ರಕ್ಷ್ಯಾ ವೈ ಉಪಾಸ್ಯಾ ಗುರುವಚ್ಚ ನಃ |
ಅಗ್ನಿವಚ್ಚೋಪಚರ್ಯಾ ವೈ ಬ್ರಾಹ್ಮಣಾಃ ಕುರುಸತ್ತಮ ||24||
ಎಲೈ ಕುರುಶ್ರೇಷ್ಠನೇ, ಬ್ರಾಹ್ಮಣರನ್ನು ಪುತ್ರರಂತೆ ರಕ್ಷಿಸಬೇಕು. ಗುರುಗಳಂತೆ ಉಪಾಸನೆ ಮಾಡಬೇಕು. ಅಗ್ನಿಯಂತೆ ಉಪಚರಿಸಬೇಕು.
ಋಜೂನ್ ಸತಃ ಸತ್ಯಶೀಲಾನ್ ಸರ್ವಭೂತಹಿತೇ ರತಾನ್ |
ಆಶೀವಿಷಾನಿವ ಕ್ರುದ್ಧಾನ್ ದ್ವಿಜಾನುಪಚರೇತ್ ಸದಾ ||25||
ಆರ್ಜವವನ್ನು ಹೊಂದಿದ, ಸತ್ಯಶೀಲರಾದ, ಸರ್ವಪ್ರಾಣಿಗಳ ಹಿತದಲ್ಲಿ ನಿರತರಾದ ಬ್ರಾಹ್ಮಣರನ್ನು, ಕೋಪಗೊಂಡ ಸರ್ಪವನ್ನು ಉಪಚರಿಸುವಂತೆ ಯಾವಾಗಲೂ ಉಪಚರಿಸಬೇಕು.
ತೇಜಸಸ್ತಪಸಶ್ಚೈವ ನಿತ್ಯಂ ಬಿಭ್ಯೇದ್ ಯುಧಿಷ್ಠಿರ |
ಉಭೇ ನೈತೇ ಪರಿತ್ಯಾಜ್ಯೇ ತೇಜಶ್ಚೈವ ತಪಸ್ತಥಾ ||26||
ಎಲೈ ಯುಧಿಷ್ಠಿರನೇ, ಬ್ರಾಹ್ಮಣರ ತೇಜಸ್ಸು ಮತ್ತು ತಪಸ್ಸುಗಳಿಗೆ ಯಾವಾಗಲೂ ಹೆದರಬೇಕು. ಅವರ ತೇಜಸ್ಸು ಮತ್ತು ತಪಸ್ಸು ಇನ್ನೊಬ್ಬರ ಮೇಲೆ ಬೀಳದಂತೆ ರಕ್ಷಿಸಬೇಕು.
ವ್ಯವಸಾಯಸ್ತಯೋಃ ಶೀಘ್ರಮುಭಯೋರೇವ ವಿದ್ಯತೇ |
ಹನ್ಯುಃ ಕ್ರುದ್ಧಾ ಮಹಾರಾಜ ಬ್ರಾಹ್ಮಣಾ ಯೇ ತಪಸ್ವಿನಃ ||27||
ಬ್ರಾಹ್ಮಣರ ತೇಜಸ್ಸು ಮತ್ತು ತಪಸ್ಸುಗಳ ಪರಿಣಾಮವು ಶೀಘ್ರ ಮತ್ತು ತೀವ್ರವಾದುದು. ಎಲೈ ಮಹಾರಾಜನೇ, ತಪಸ್ವಿಗಳಾದ ಬ್ರಾಹ್ಮಣರು ಕೋಪಗೊಂಡರೆ ತಮ್ಮ ಕೋಪದಿಂದಲೇ ಕೊಂದಾರು!
ಭೂಯಃ ಸ್ಯಾದುಭಯಂ ದತ್ತಂ ಬ್ರಾಹ್ಮಣಾದ್ ಯದಕೋಪನಾತ್ |
ಕುರ್ಯಾದುಭಯತಃಶೇಷಂ ದತ್ತಶೇಷಂ ನ ಶೇಷಯೇತ್ ||28||
ಕೋಪರಹಿತನಾದ ಬ್ರಾಹ್ಮಣನಿಂದ ಕೊಡಲ್ಪಟ್ಟ ತೇಜಸ್ಸು ಮತ್ತು ತಪಸ್ಸುಗಳು ಬಹಳ ಪರಿಣಾಮವನ್ನು ಉಂಟುಮಾಡುತ್ತವೆ. ಅವೆರಡೂ ಅವನಲ್ಲಿಯೇ ಉಳಿಯುವಂತೆ ಮಾಡಬೇಕು. ಒಂದು ಪಕ್ಷ ಇನ್ನೊಬ್ಬರ ಮೇಲೆ ಪ್ರಯೋಗಿಸಿದರೆ ಬ್ರಾಹ್ಮಣನಲ್ಲಿ ಆ ಕೋಪದ ಶೇಷವು ಉಳಿಯದಂತೆ ನೋಡಿಕೊಳ್ಳಬೇಕು.
ದಂಡಪಾಣಿರ್ಯಥಾ ಗೋಷು ಪಾಲೋ ನಿತ್ಯಂ ಸ್ಥಿರೋ ಭವೇತ್ |

ಬ್ರಾಹ್ಮಣಾನ್ ಬ್ರಹ್ಮನಿರತಾನ್ ಕ್ಷತ್ರಿಯಃ ಪರಿಪಾಲಯೇತ್ ॥29॥
ಗೋಪಾಲನು ಕೈಯಲ್ಲಿ ದಂಡವನ್ನು ಹಿಡಿದು ಯಾವಾಗಲೂ ಗೋವುಗಳ ಮಧ್ಯದಲ್ಲಿ ನಿಂತಿರುವಂತೆ ಕ್ಷತ್ರಿಯನಾದವನು ವೇದ ಮತ್ತು ಪರಬ್ರಹ್ಮನಿರತರಾದ ಬ್ರಾಹ್ಮಣರನ್ನು ರಕ್ಷಿಸಬೇಕು.
ಪಿತೇವ ಪುತ್ರಾನ್ ರಕ್ಷೇಥಾ ಬ್ರಾಹ್ಮಣಾನ್ ಬ್ರಹ್ಮತೇಜಸಃ |
ಗೃಹೇ ಚೈಷಾಮವೇಕ್ಷೇಥಾಃ ಕಚ್ಚಿದಸ್ತೀಹ ಜೀವನಮ್ ॥30॥
ಬ್ರಹ್ಮತೇಜಸ್ಸನ್ನು ಹೊಂದಿದ ಬ್ರಾಹ್ಮಣರನ್ನು ತಂದೆಯು ಪುತ್ರರನ್ನು ರಕ್ಷಿಸುವಂತೆ ರಕ್ಷಿಸುವವನಾಗು. ಅವರ ಮನೆಯಲ್ಲಿ ಜೀವನಕ್ಕೆ ಬೇಕಾದ ವಸ್ತುಗಳು ಇವೆಯೇ, ಇಲ್ಲವೇ ಎಂದು ನೋಡಿಕೊಳ್ಳುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಭೀಷ್ಮನಿಶ್ಚಯಕಥನಂ ನಾಮ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ದಾನ-ಧರ್ಮ ವಿಷಯದಲ್ಲಿ ವೇದಗಳ ಸಂವಾದ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಚತುರ್ಣಾಮಪಿ ವೇದಾನಾಂ ಸಂವಾದಂ ಪುತ್ರ ತಚ್ಛೃಣು ॥1॥
ಭೀಷ್ಮ ಎಲೈ ಪ್ರೀತಿಪಾತ್ರನಾದ ಪುತ್ರನೇ, ಈ ವಿಷಯದಲ್ಲಿ ನಾಲ್ಕು ವೇದಗಳಿಗೆ ಉಂಟಾದ ಸಂವಾದರೂಪವಾದ ಪ್ರಾಚೀನವಾದ ಈ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.
ಋಗ್ವೇದಃ
ಗೃಹಾನಾಶ್ರಯಮಾಣಸ್ಯ ಅಗ್ನಿಹೋತ್ರಂ ಚ ಜುಹ್ವತಃ |
ಸರ್ವಂ ಸುಕೃತಮಾದತ್ತೇ ಯಃ ಸಾಯೇ ನುದ್ಯತೇಽತಿಥಿಃ ॥2॥
ಋಗ್ವೇದ ಗೃಹಸ್ಥಾಶ್ರಮವನ್ನು ಹೊಂದಿ, ಅಗ್ನಿಹೋತ್ರವನ್ನು ಮಾಡುವವನ ಮನೆಯಿಂದ ಸಾಯಂಕಾಲದಲ್ಲಿ ಅತಿಥಿಯು ಹೊರಗೆ ಕಳುಹಿಸಲ್ಪಟ್ಟರೆ ಅವನು ಆ ಬ್ರಾಹ್ಮಣನ ಪುಣ್ಯವನ್ನೆಲ್ಲ ತೆಗೆದುಕೊಂಡು ಹೋಗುವನು.
ಯಜುರ್ವೇದಃ
ನ ಸ್ಕಂದತೇ ನ ವ್ಯಥತೇ ನಾಸ್ಯೋರ್ಧ್ವಂ ಸರ್ಪತೇ ರಜಃ |
ವರಿಷ್ಠಮಗ್ನಿಹೋತ್ರಾಚ್ಚ ಬ್ರಾಹ್ಮಣಸ್ಯ ಮುಖೇ ಹುತಮ್ ॥3॥
ಯಜುರ್ವೇದ ಬ್ರಾಹ್ಮಣನ ಮುಖದಲ್ಲಿ ಹಾಕಿದ ಆಹುತಿಯು ಜಾರಿ ಹೋಗುವುದಿಲ್ಲ, ವ್ಯಥೆಯನ್ನುಂಟು ಮಾಡುವುದಿಲ್ಲ. ಅದರಿಂದ ಧೂಳು ಮೇಲಕ್ಕೆ ಏಳುವುದಿಲ್ಲ. ಆದ್ದರಿಂದ ಅದು ಅಗ್ನಿಹೋತ್ರಕ್ಕಿಂತಲೂ ಶ್ರೇಷ್ಠವಾದುದು (ಅಗ್ನಿಹೋತ್ರದಲ್ಲಿ ಹಾಕಿದ ಹವಿಸ್ಸು ಜಾರುತ್ತದೆ, ವ್ಯಥೆಯನ್ನುಂಟು ಮಾಡುತ್ತದೆ ಮತ್ತು ಹೊಗೆಯ ಜೊತೆಯಲ್ಲಿ ಧೂಳು ಮೇಲೇಳುತ್ತದೆ).
ಸಾಮವೇದಃ
ನ ಚೇದ್ದಂತಿ ಪಿತರಂ ಮಾತರಂ ವಾ
ನ ಬ್ರಾಹ್ಮಣಂ ನೋಽಪವಾದಂ ಕರೋತಿ |
ಯತ್ ಕಿಂಚಾನ್ಯದ್ ವೃಜಿನಂ ಕರೋತಿ
ಪ್ರೀತೋಽತಿಥಿಸ್ತದುಪಹಂತಿ ಪಾಪಮ್॥4॥
ಸಾಮವೇದ ತಂದೆ-ತಾಯಿಗಳನ್ನು ಹೊಡೆಯದೆ, ಬ್ರಾಹ್ಮಣನನ್ನು ದೂಷಿಸದೆ ಉಳಿದ ಯಾವ ಅಪರಾಧವನ್ನು ಮಾಡಿದರೂ ಸಂತುಷ್ಟನಾದ ಅತಿಥಿಯು ಅದರಿಂದ ಉಂಟಾದ ಪಾಪವನ್ನು ನಾಶಪಡಿಸುತ್ತಾನೆ.
ಅಥರ್ವವೇದಃ
ಯತ್ಕ್ರೋಧನೋ ಯಜತೇ ಯದ್ ದದಾತಿ
ಯದ್ವಾ ತಪಸ್ತಪ್ಯತಿ ಯಜ್ಜುಹೋತಿ |
ವೈವಸ್ವತೋ ಹರತೇ ಸರ್ವಮಸ್ಯ
ಮೋಘಂ ಚೇಷ್ಟಂ ಭವತಿ ಕ್ರೋಧನಸ್ಯ ॥5॥
ಅಥರ್ವವೇದ ಕ್ರೋಧಶೀಲನಾದ ಪುರುಷನು ಮಾಡಿದ ಪೂಜೆ, ಕೊಟ್ಟ ದಾನ, ಆಚರಿಸಿದ ತಪಸ್ಸು, ಮಾಡಿದ ಹೋಮ ಎಲ್ಲವನ್ನೂ ಯಮನು ನಾಶಗೊಳಿಸುತ್ತಾನೆ. ಕ್ರೋಧಶೀಲನಾದ ಮನುಷ್ಯನ ಇಷ್ಟವೆಲ್ಲವೂ ವ್ಯರ್ಥವಾಗುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಚತುರ್ವೇದಸಂವಾದೋ ನಾಮ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ದೇವತೆಗಳ ಸಂವಾದ
ಭೀಷ್ಮಃ

ಭೂಯಸ್ತು ಶೃಣು ರಾಜೇಂದ್ರ ಧರ್ಮಾನ್ ಧರ್ಮಭೃತಾಂವರ |
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಇಂದ್ರಾಗ್ನ್ಯೋಃ ಸೂರ್ಯಶಚ್ಯೋಶ್ಚ ತನ್ಮೇ ನಿಗದತಃ ಶೃಣು ॥1॥
ಭೀಷ್ಮ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಎಲೈ ರಾಜೇಂದ್ರನೇ, ಇನ್ನೂ ಧರ್ಮಗಳನ್ನು ಕೇಳು. ಈ ವಿಷಯದಲ್ಲಿ ಇಂದ್ರಾಗ್ನಿ, ಸೂರ್ಯ, ಶಚೀ ದೇವತೆಗಳ ಸಂವಾದರೂಪವಾದ ಪ್ರಾಚೀನವಾದ ಇತಿಹಾಸವನ್ನು ಹೇಳುತ್ತಾರೆ.
ಇಂದ್ರಃ
ಯಥಾ ರಾಜ್ಯಂ ಪ್ರಪಾಸ್ಯಾಮಿ ಕಾಮಕ್ರೋಧವಿವರ್ಜಿತಾನ್ |
ಏತೇನ ಸತ್ಯವಾಕ್ಯೇನ ಪಾದಃ ಕುಂಭಸ್ಯ ಪೂರ್ಯತಾಮ್ ॥2॥
ಇಂದ್ರ ನಾನು ಕಾಮ-ಕ್ರೋಧರಹಿತನಾಗಿ ದೇವರಾಜ್ಯವನ್ನು ರಕ್ಷಣೆ ಮಾಡುವೆನು. ಈ ಸತ್ಯವಚನದಿಂದ ಮೂರು ಭಾಗ ನೀರಿನಿಂದ ತುಂಬಿರುವ ಈ ಕುಂಭದ ಇನ್ನೊಂದು ಭಾಗವು ನೀರಿನಿಂದ ತುಂಬಲಿ. (ಸತ್ಯವಚನ ಬಲದಿಂದ ಹೇಗೆ ಅಗ್ನಿಯು ಉಷ್ಣವನ್ನು ಕಳೆದುಕೊಳ್ಳುತ್ತಾನೆಯೋ ಅದರಂತೆ - ಲಕ್ಷಾಲಂಕಾರ).
ಅಗ್ನಿಃ
ಯಥಾಹಂ ತತ್ರ ನಾಶ್ನಾಮಿ ಯತ್ರ ನಾಶ್ನಂತಿ ವೈ ದ್ವಿಜಾಃ |
ಏತೇನ ಸತ್ಯವಾಕ್ಯೇನ ಪಾದಃ ಕುಂಭಸ್ಯ ಪೂರ್ಯತಾಮ್ ॥3॥
ಅಗ್ನಿ ಎಲ್ಲಿ ಬ್ರಾಹ್ಮಣರು ಭೋಜನ ಮಾಡುವುದಿಲ್ಲವೋ ಅಲ್ಲಿ ನಾನೂ ಭೋಜನ ಮಾಡುವುದಿಲ್ಲ. ಈ ಸತ್ಯವಾಕ್ಯದಿಂದ ಕುಂಭದ ನಾಲ್ಕನೆಯ ಒಂದು ಭಾಗವು ನೀರಿನಿಂದ ತುಂಬಲಿ.
ಸೂರ್ಯಃ
ಯಥಾ ಗೋಬ್ರಾಹ್ಮಣಸ್ಯಾರ್ಥೇ ನ ತಪಾಮಿ ಯಥಾಬಲಮ್ |
ಏತೇನ ಸತ್ಯವಾಕ್ಯೇನ ಪಾದಃ ಕುಂಭಸ್ಯ ಪೂರ್ಯತಾಮ್ ॥4॥
ಸೂರ್ಯ ಗೋ-ಬ್ರಾಹ್ಮಣರ ಹಿತದ ಸಲುವಾಗಿ ನಾನು ನನ್ನ ಪೂರ್ಣಶಕ್ತಿಯಿಂದ ತಾಪವನ್ನುಂಟು ಮಾಡುವುದಿಲ್ಲ. ಈ ಸತ್ಯವಚನದಿಂದ ಕುಂಭದ ಇನ್ನೊಂದು ಭಾಗವು ನೀರಿನಿಂದ ತುಂಬಲಿ.
ಶಚೀ
ಕರ್ಮಣಾ ಮನಸಾ ವಾಚಾ ನಾವಮನ್ಯೇ ಪುರಂದರಮ್ |
ಏತೇನ ಸತ್ಯವಾಕ್ಯೇನ ಪಾದಃ ಕುಂಭಸ್ಯ ಪೂರ್ಯತಾಮ್ ॥5॥
ಶಚೀ ನಾನು ಕರ್ಮದಿಂದಾಗಲೀ, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ ಪತಿಯಾದ ಪುರಂದರನಿಗೆ ಅವಮಾನವನ್ನು ಮಾಡುವುದಿಲ್ಲ. ಈ ಸತ್ಯವಚನದಿಂದ ಕುಂಭದ ಇನ್ನೊಂದು ಭಾಗವು ನೀರಿನಿಂದ ಪೂರ್ಣವಾಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಇಂದ್ರಾಗ್ನಿಸಂವಾದೇ ಸತ್ಯಪ್ರತಿಜ್ಞಾಕಥನೇ ಶಪಥೋಕ್ತಿರ್ನಾಮ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹನ್ನೊಂದನೆಯ
ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ವ್ಯಾಸ ಮತ್ತು ಮದ್ರರಾಜರ ಸಂವಾದ
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮದ್ರರಾಜಸ್ಯ ಸಂವಾದಂ ವ್ಯಾಸಸ್ಯ ಚ ಮಹಾತ್ಮನಃ ॥1॥
ಭೀಷ್ಮ ಈ ವಿಷಯದಲ್ಲಿ ಮಹಾತ್ಮರಾದ ವ್ಯಾಸರ ಮತ್ತು ಮದ್ರರಾಜನ ಸಂವಾದ ರೂಪವಾದ ಈ ಪುರಾತನವಾದ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.
ವೈತಾನೇ ಕರ್ಮಣಿ ತತೇ ಕುಂತೀಪುತ್ರಸ್ಯ ಯತ್ ಪುರಾ |
ಉಕ್ತೋ ಭಗವಾನ್ ಯಜ್ಞಾರ್ಥೇ ತೇನ ತತ್ರಾನೃಣೋಽಭವತ್ ॥2॥
ಹಿಂದೆ ಕುಂತೀಪುತ್ರನಾದ ಯುಧಿಷ್ಠಿರನ ವಿಸ್ತಾರವಾದ ಯಜ್ಞದಲ್ಲಿ ಯಜ್ಞದ ಪ್ರಯೋಜನದ ಕಾಲವು ಪ್ರಾಪ್ತವಾದಾಗ, ಅವನು ಕೃಷ್ಣನನ್ನು ಕುರಿತು ಯಜ್ಞವನ್ನು ಮಾಡುವವನು, ಯಜ್ಞದ ಫಲವನ್ನು ಭುಂಜಿಸುವವನು ನೀನೇ ಎಂದು ಹೇಳಿದನು. ಆ ಕಾರಣದಿಂದ ಯುಧಿಷ್ಠಿರನು ಯಜ್ಞದಲ್ಲಿ ದೇವ-ಋಷಿ-ಪಿತೃಋಣಗಳಿಂದ ಮುಕ್ತನಾದನು - ಲಕ್ಷಾಲಂಕಾರ.
ಮದ್ರರಾಜಃ
ಕಾನಿ ತೀರ್ಥಾನಿ ಭಗವನ್ ಫಲಾರ್ಥಾಶ್ಚೇಹ ಕೇಽಶ್ರಮಾಃ |
ಕ ಇಜ್ಯತೇ ಕಶ್ಚ ಯಜ್ಞಃ ಕೋ ಯೂಪಃ ಕ್ರಮತೇ ಚ ಕಃ ॥3॥
ಮದ್ರರಾಜ ಪೂಜ್ಯರೇ, ತೀರ್ಥಗಳು ಯಾವುವು? ಶ್ರಮರಹಿತವಾಗಿ ಫಲವನ್ನು ಉಂಟುಮಾಡುವವು ಯಾವುವು? ಶ್ರಮರಹಿತರಾದವರು ಯಾರು? ಪೂಜಿಸಲ್ಪಡುವವನು ಯಾವನು? ಯಜ್ಞವೆಂದರೆ ಏನು? ಯೂಪವು ಏನು? ಯಜ್ಞದಲ್ಲಿ ಕ್ರಮಣ ಮಾಡುವವನು ಯಾವನು?
ಕಶ್ಚಾಧ್ವರೇ ಶಸ್ಯತೇ ಗೀತಿಶಬ್ದೈಃ

ಕಶ್ಚಾಧ್ವರೇ ಗೀಯತೇ ವಲ್ಗುಭಾಷ್ಯೈಃ |
ಕೋ ಬ್ರಹ್ಮಶಬ್ದೈಃ ಸ್ತುತಿಭಿಃ ಸ್ತೂಯತೇ ಚ
ಕಸ್ಯೇಹ ವೈ ಹವಿರಧ್ವರ್ಯವಃ ಕಲ್ಪಯಂತಿ ॥4॥
ಯಜ್ಞದಲ್ಲಿ ಗೀತಿಶಬ್ದಗಳಿಂದ ಯಾವನು ಶಸ್ತ್ರಮಂತ್ರಗಳಿಂದ ಸ್ತೋತ್ರ ಮಾಡಲ್ಪಡುತ್ತಾನೆ? ಯಜ್ಞದಲ್ಲಿ ಯಾವನು ಸುಂದರವಾದ ವಾಕ್ಯಗಳಿಂದ ಧ್ಯಾನ ಮಾಡಲ್ಪಡುತ್ತಾನೆ? ವೇದಶಬ್ದಗಳಿಂದಲೂ, ಸ್ತೋತ್ರಗಳಿಂದಲೂ ಯಾವನು ಸ್ತೋತ್ರ ಮಾಡಲ್ಪಡುತ್ತಾನೆ? ಅಧ್ವರ್ಯಗಳು ಯಜ್ಞದಲ್ಲಿ ಯಾರಿಗೆ ಹವಿಸ್ಸನ್ನು ಕೊಡುತ್ತಾರೆ?
ವರ್ಣ್ಯೋ ಗ್ರಾಮೇ ಗೋಫಲೇ ಯಶ್ಚ ಸೋಮೇ
ಕಶ್ಚೋಂಕಾರಃ ಕಶ್ಚ ವೇದಾರ್ಥಮಾರ್ಗಃ |
ಪೃಷ್ಟಸ್ತನ್ಮೇ ಬ್ರೂಹಿ ಸರ್ವಂ ಮಹರ್ಷೇ
ಲೋಕಜ್ಯೇಷ್ಠಂ ಕಸ್ಯ ವಿಜ್ಞಾನಮಾಹುಃ ॥5॥
ಗೋಫಲ ಗ್ರಾಮದಲ್ಲಿ ಯಾವನು ವರ್ಣಿಸಲ್ಪಡುತ್ತಾನೆ? ಸೋಮ ಯಾಗದಲ್ಲಿ ಯಾವನು ವರ್ಣಿಸಲ್ಪಡುತ್ತಾನೆ? ಓಂಕಾರ ಪ್ರತಿಪಾದ್ಯನು ಯಾರು? ವೇದಾರ್ಥ ಮಾರ್ಗವು ಯಾವುದು? ಯಾರ ವಿಜ್ಞಾನವನ್ನು ಲೋಕದಲ್ಲಿ ಸರ್ವಶ್ರೇಷ್ಠವೆಂದು ಹೇಳುತ್ತಾರೆ? ಎಲೈ ಮಹರ್ಷಿಗಳೇ, ನನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರವನ್ನು ಹೇಳಿ.
ದ್ವೈಪಾಯನಃ
ಲೋಕಜ್ಯೇಷ್ಠಂ ಯಸ್ಯ ವಿಜ್ಞಾನಮಾಹು-
ರ್ಯೋನಿಜ್ಯೇಷ್ಠಂ ಯಸ್ಯ ವದಂತಿ ಜನ್ಮ |
ಪೂತಾತ್ಮಾನೋ ಬ್ರಾಹ್ಮಣಾ ವೇದಮುಖ್ಯಾ
ಅಸ್ಮಿನ್ ಪ್ರಶ್ನೋ ದೀಯತಾಂ ಕೇಶವಾಯ ॥6॥
ದ್ವೈಪಾಯನ ಪವಿತ್ರನಾದ, ವೇದಪ್ರಧಾನರಾದ ಬ್ರಾಹ್ಮಣರು ಯಾವ ಕೃಷ್ಣನ ಜ್ಞಾನವನ್ನು ಲೋಕದಲ್ಲಿ ಸರ್ವಶ್ರೇಷ್ಠವಾದುದೆಂದು ಹೇಳುತ್ತಾರೆಯೋ, ಯಾವ ಕೃಷ್ಣನ ಅವತಾರವನ್ನು ಎಲ್ಲ ಯೋನಿಗಳಲ್ಲಿ ಜನಿಸಿದವರಲ್ಲಿ ಶ್ರೇಷ್ಠವೆಂದು ಹೇಳುತ್ತಾರೆಯೋ, ಅಂತಹ ಕೃಷ್ಣನಿಗೆ ಈ ಪ್ರಶ್ನೆಯು ಕೊಡಲ್ಪಡಲಿ (ಅವನಿಂದ ಉತ್ತರವನ್ನು ಕೇಳು).
ಬ್ರಾಹ್ಮಣಾಃ
ಬಾಲೋ ಜಾತ್ಯಾ ಕ್ಷತ್ರಧರ್ಮಾರ್ಥಶೀಲೋ
ಜಾತೋ ದೇವಕ್ಯಾಂ ಶೂರಪುತ್ರೇಣ ವೀರಃ |
ವೇತ್ತುಂ ವೇದಾನರ್ಹತೇ ಕ್ಷತ್ರಿಯೋ ವೈ
ದಾಶಾರ್ಹಾಣಾಮುತ್ತಮಃ ಪುಷ್ಕರಾಕ್ಷಃ ॥7॥
ಬ್ರಾಹ್ಮಣರು ಯಾವಾಗಲೂ ಬಾಲಕನಾಗಿಯೇ ಇರುವವನೂ (ಮುಪ್ಪಿಲ್ಲದವನೂ), ಅವತಾರ ಮಾಡಿದ ಜಾತಿಯಿಂದ ಕ್ಷತ್ರಿಯಧರ್ಮವನ್ನು ಅನುಸರಿಸುವವನು, ದೇವಕಿಯಲ್ಲಿ ವಸುದೇವನಿಂದ ಜನಿಸಿದ ವೀರನೂ, ಕ್ಷತ್ರಿಯನೂ, ದಾಶಾರ್ಹರಲ್ಲಿ ಶ್ರೇಷ್ಠನೂ, ಪುಂಡರೀಕಾಕ್ಷನೂ ಆದ ಕೃಷ್ಣನು ವೇದಗಳ ಅರ್ಥವನ್ನು ಸರಿಯಾಗಿ ತಿಳಿಯುವುದಕ್ಕೆ ಅರ್ಹನಾದವನು.
ವಾಸುದೇವಃ
ಪಾರಾಶರ್ಯ ಬ್ರೂಹಿ ಯದ್ ಬ್ರಾಹ್ಮಣೇಭ್ಯಃ
ಪ್ರೀತಾತ್ಮಾ ವೈ ಬ್ರಹ್ಮಕಲ್ಪಃ ಸುಮೇಧಾಃ |
ಪೃಷ್ಟೋ ಯಜ್ಞಾರ್ಥಂ ಪಾಂಡವಸ್ಯಾತಿತೇಜಾ
ಏತಚ್ಛ್ರೇಯಸ್ಸಸ್ಯ ಲೋಕಸ್ಯ ಚೈವ ॥8॥
ವಾಸುದೇವ ಎಲೈ ಪರಾಶರಪುತ್ರರಾದ ವೇದವ್ಯಾಸರೇ, ನೀವು ಬ್ರಹ್ಮನಿಗೆ ಸಮಾನರಾಗಿ ಒಳ್ಳೆಯ ಮೇಧಾಶಕ್ತಿಯನ್ನೂ, ಸಂತುಷ್ಟವಾದ ಮನಸ್ಸನ್ನೂ ಹೊಂದಿದ್ದೀರಿ. ಪಾಂಡವನಾದ ಯುಧಿಷ್ಠಿರನ ಯಜ್ಞದ ವಿಷಯದಲ್ಲಿ ಈ ಪ್ರಶ್ನೆಗಳನ್ನು ಕೇಳಲ್ಪಟ್ಟ ಅತಿತೇಜಸ್ವಿಗಳಾದ ನೀವು ಬ್ರಾಹ್ಮಣರಿಗೂ ಮತ್ತು ಯಜಮಾನನಾದ ಯುಧಿಷ್ಠಿರನಿಗೂ ಶ್ರೇಯಸ್ಕರವಾದುದನ್ನು ಹೇಳಿ.
ವ್ಯಾಸಃ
ಉಕ್ತಂ ವಾಕ್ಯಂ ಯದ್ ಭವಾನ್ ಮಾಮವೋಚತ್
ಪ್ರಶ್ನಂ ಚಿತ್ರಂ ನಾಹಮತ್ರೋತ್ಸಹೇಽದ್ಯ |
ಛೇತ್ತುಂ ವಿಸ್ಪಷ್ಟಂ ತಿಷ್ಠತಿ ತ್ವದ್ವಿಧೇ ವೈ
ಲೋಕಜ್ಯೇಷ್ಠೇ ವಿಶ್ವರೂಪೇ ಸುನಾಭೇ ॥9॥
ವ್ಯಾಸರು ನೀನು ನನಗೆ ಏನನ್ನು ಹೇಳಬೇಕೆಂದಿದ್ದೀಯೋ ಅದನ್ನು ಮೊದಲೇ ಹೇಳಿದ್ದೇನೆ. ಲೋಕಗಳಲ್ಲಿ ಸರ್ವಶ್ರೇಷ್ಠನಾದ, ವಿಶ್ವರೂಪನಾದ, ಬ್ರಹ್ಮನನ್ನು ಪಡೆದ ನಾಭಿಯುಳ್ಳ, ಚೆನ್ನಾಗಿ ಸಂಶಯವನ್ನು ಪರಿಹಾರ ಮಾಡುವ ನಿನ್ನಂತಹವನು ಇರುವಾಗ ಇಂತಹ ಚಿತ್ರವಾದ ಪ್ರಶ್ನೆಗೆ ಉತ್ತರವನ್ನು ಹೇಳಲು ನಾನು ಬಯಸುವುದಿಲ್ಲ.
ವಾಸುದೇವಃ
ತತ್ತ್ವಂ ವಾಕ್ಯಂ ಬ್ರೂಹಿ ಯತ್ ತ್ವಂ ಮಹರ್ಷೇ
ಯಸ್ಮಿನ್ ಕೃಷ್ಣಃ ಪ್ರೋಚ್ಯತೇ ವೈ ಯಥಾವತ್ |
ಪ್ರೀತಸ್ತೇಽಹಂ ಜ್ಞಾನಶಕ್ತ್ಯಾ ಯಥಾವತ್
ತಸ್ಮಾನ್ನಿರ್ದೇಶೇ ಕರ್ಮಣಾಂ ಬ್ರೂಹಿ ಸಿದ್ಧಮ್ ॥10॥

ವಾಸುದೇವ ಎಲೈ ಮಹರ್ಷಿಗಳೇ, ನೀವು ಎಲ್ಲಿ ಕೃಷ್ಣನ ಮಹಿಮೆ ಹೇಳಲ್ಪಡುತ್ತದೆಯೋ ಅಂತಹ ಯಥಾರ್ಥವಾದ ಮಾತುಗಳನ್ನು ಹೇಳಿ. ನಿಮ್ಮ ಜ್ಞಾನಶಕ್ತಿಯಿಂದ ನಾನು ಸಂತೋಷಗೊಂಡಿದ್ದೇನೆ. ಆದ್ದರಿಂದ ನಾನು ನಿರ್ದೇಶ ಮಾಡಿದಂತೆ ಕರ್ಮದ ವಿಷಯದಲ್ಲಿ ಕೇಳಿದ ಈ ಪ್ರಶ್ನೆಗಳಿಗೆ ಶಾಸ್ತ್ರದಲ್ಲಿ ಸಿದ್ಧವಾದ ಉತ್ತರವನ್ನು ಹೇಳಿ.

ವೈಶಂಪಾಯನಃ

ಉಕ್ತವಾಕ್ಯೇ ಸತ್ತಮೇ ಯಾದವಾನಾಂ

ಕೃಷ್ಣೇ ವ್ಯಾಸಃ ಪ್ರಾಂಜಲಿರ್ವಾಸುದೇವಮ್ |

ವಿಪ್ರೈಃ ಸಾರ್ಧಂ ಪೂಜಯನ್ ದೇವದೇವಂ

ಕೃಷ್ಣಂ ವಿಷ್ಣುಂ ವಾಸುದೇವಂ ಬಭಾಷೇ ॥11॥

ವೈಶಂಪಾಯನ ಯಾದವಶ್ರೇಷ್ಠನಾದ ಕೃಷ್ಣನು ಈ ಮಾತನ್ನು ಆಡುತ್ತಿರಲು ವ್ಯಾಸರು ವಾಸುದೇವನಿಗೆ ಕೈಗಳನ್ನು ಮುಗಿದು, ಬ್ರಾಹ್ಮಣರ ಜೊತೆಯಲ್ಲಿ ಅವನನ್ನು ಪೂಜಿಸುತ್ತಾ ಕೃಷ್ಣನೂ, ವಿಷ್ಣುವೂ, ವಾಸುದೇವನೂ ಆದ ಅವನನ್ನು ಕುರಿತು ಹೇಳಿದರು.

ವ್ಯಾಸಃ

ಆನಂತ್ಯಂ ತೇ ವಿಶ್ವಕರ್ಮಂಸ್ತ್ವವೈವಂ

ರೂಪಂ ಪೌರಾಣಂ ಶಾಶ್ವತಂ ಚ ಧ್ರುವಂ ಚ |

ಕಸ್ತೇ ಬುದ್ಧ್ಯೇದ್ ವೇದವಾದೇಷು ಚೈತ-

ಲ್ಲೋಕೇ ಹ್ಯಸ್ಮಿನ್ ಶಾಸಕಸ್ತ್ವಂ ಪಿತೇವ ॥12॥

ವ್ಯಾಸರು ಎಲೈ ವಿಶ್ವಕರ್ಮನೇ, ನಿನ್ನ ರೂಪವು ಪ್ರಾಚೀನವೂ, ಶಾಶ್ವತವೂ, ನಿತ್ಯವೂ ಮತ್ತು ಅನಂತವೂ ಆದುದು. ನಿನ್ನ ವಿಪುಲಮಹಿಮೆಯನ್ನು ವೇದವಾದಿಗಳಲ್ಲಿ ಯಾವನು ತಿಳಿಯುತ್ತಾನೆ? ನೀನು ಲೋಕವನ್ನು ತಂದೆಯಂತೆ ಶಾಸನ ಮಾಡುವವನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವೇದವ್ಯಾಸೋದಾಹರಣಂ ನಾಮ ದ್ವಾದಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.

* * * * *

ಹದಿಮೂರನೆಯ ಅಧ್ಯಾಯ

ಮದ್ರರಾಜನ ಪ್ರಶ್ನೆಗಳಿಗೆ ಉತ್ತರ

ಭೀಷ್ಮಃ

ದ್ವಾರಕಾಯಾಂ ಯಥಾ ಪ್ರಾಹ ಪುರಾಽಯಂ ಮುನಿಸತ್ತಮಃ |

ವೇದವಿಪ್ರಮಯತ್ವಂ ತು ವಾಸುದೇವಸ್ಯ ತಚ್ಛೃಣು ॥1॥

ಭೀಷ್ಮರು ಮುನಿಶ್ರೇಷ್ಠರಾದ ಈ ಮುನಿವ್ಯಾಸರು ಹಿಂದೆ ದ್ವಾರಕೆಯಲ್ಲಿ ವಾಸುದೇವನು ವೇದಪ್ರತಿಪಾದ್ಯನೆಂದು, ವಿಪ್ರ ಪ್ರಧಾನನೆಂದು ಎಂದು ಏನು ಹೇಳಿದರೋ ಅದನ್ನು ಕೇಳು.

ಯೋಽಯಂ ವಿಷ್ಣುಂ ವಾಸುದೇವಂ ವಿಜಾನನ್

ಸರ್ವಾನ್ ವಿಪ್ರಾನ್ ಬೋಧತೇ ತತ್ತ್ವದರ್ಶೀ |

ವಿಷ್ಣುಂ ಕ್ರಾಂತಂ ವಾಸುದೇವಂ ವಿಜಾನನ್

ವಿಪ್ರೋ ವಿಪ್ರತ್ವಂ ಗಚ್ಛತೇ ತತ್ತ್ವದರ್ಶೀ ॥2॥

ತತ್ತ್ವಜ್ಞಾನಿಗಳಾದ ಈ ವ್ಯಾಸರು ವಾಸುದೇವನನ್ನು ವಿಷ್ಣುವೆಂದು ತಿಳಿದು ಎಲ್ಲರಿಗೂ ಬೋಧಿಸುತ್ತಾರೆ. ಬಲಿಯ ಯಜ್ಞದಲ್ಲಿ ಮೂರುಲೋಕವನ್ನು ಕ್ರಮಣ ಮಾಡಿದ ವಿಷ್ಣುವು ವಾಸುದೇವನೆಂದು ತಿಳಿದ ಬ್ರಾಹ್ಮಣನು ತತ್ತ್ವಜ್ಞಾನಿಯಾಗಿ ಬ್ರಾಹ್ಮಣತ್ವವನ್ನು ಹೊಂದುತ್ತಾನೆ.

ವಿಷ್ಣುರ್ಯಜ್ಞಸ್ತ್ವಿಜ್ಯತೇ ಚಾಪಿ ವಿಷ್ಣುಃ

ಕೃಷ್ಣೋ ವಿಷ್ಣುರ್ಯಶ್ಚ ಕೃತ್ಸ್ನಃ ಪ್ರಭುಶ್ಚ |

ಕೃಷ್ಣೋ ವೇದಾಂಗಂ ವೇದವಾದಾಶ್ಚ ಕೃಷ್ಣ

ಏವಂ ಜಾನನ್ ಬ್ರಾಹ್ಮಣೋ ಬ್ರಹ್ಮ ಏತಿ ॥3॥

ಯಜ್ಞವೆಂದರೆ ವಿಷ್ಣುವೇ (ಯಜ್ಞವೆಂಬುದು ವಿಷ್ಣುವಿನ ನಾಮ). ಯಜ್ಞದಲ್ಲಿ ಪೂಜಿಸಲ್ಪಡುವವನೂ ವಿಷ್ಣುವೇ. ಕೃಷ್ಣನೇ ವಿಷ್ಣು. ಅವನೇ ಪೂರ್ಣನಾದವನು ಮತ್ತು ಪ್ರಭುವಾದವನು. ವೇದ-ವೇದಾಂಗಗಳು ವೇದವಾದಗಳು ಎಲ್ಲವೂ ಕೃಷ್ಣನೇ (ಎಲ್ಲವೂ ಕೃಷ್ಣನನ್ನೇ ಪ್ರತಿಪಾದಿಸುತ್ತವೆ). ಹೀಗೆ ತಿಳಿದ ಬ್ರಾಹ್ಮಣನು ಪರಬ್ರಹ್ಮನನ್ನು ಹೊಂದುತ್ತಾನೆ.

ಸ್ಥಾನಂ ಸರ್ವಂ ವೈಷ್ಣವಂ ಯಜ್ಞಮಾರ್ಗೇ

ಚಾತುರ್ಹೋತ್ರಂ ವೈಷ್ಣವಂ ತತ್ರ ಕೃಷ್ಣಃ |

ಸರ್ವೈರ್ಭಾವೈರಿಜ್ಯತೇ ಸರ್ವಕಾಮೈಃ

ಪುಣ್ಯಾನ್ ಲೋಕಾನ್ ಬ್ರಾಹ್ಮಣಾಃ ಪ್ರಾಪ್ನುವಂತಿ ॥4॥

ಯಜ್ಞಮಾರ್ಗದಲ್ಲಿರುವ ಸ್ಥಾನಗಳೆಲ್ಲವೂ ವಿಷ್ಣುಸಂಬಂಧಿಯಾದವುಗಳು. ನಾಲ್ಕು ಜನ ಹೋತೃಗಳುಳ್ಳ ಯಜ್ಞವು ವಿಷ್ಣುಸಂಬಂಧಿಯಾದುದು. ಅಲ್ಲಿ ಕೃಷ್ಣನು ಸನ್ನಿಹಿತನಾಗಿದ್ದಾನೆ. ಕೃಷ್ಣನನ್ನು ಸರ್ವಕಾಮಗಳಿಂದ, ಸರ್ವಭಾವಗಳಿಂದ ಪೂಜಿಸಿದ ಬ್ರಾಹ್ಮಣರು ಪುಣ್ಯಲೋಕಗಳನ್ನು ಹೊಂದುತ್ತಾರೆ.

ಸೋಮಂ ಸದ್ಭಾವಾದ್ ಯೇ ಚ ಜಾತಂ ಪಿಬಂತಿ

दीप्तं कर्म ये विदानाश्चरंति |
ಏಕಾಂತಮಿಷ್ಟೌ ಚಿಂತಯಂತೋ ದಿವಿಸ್ಥಾ-
ಸ್ತೇ ವೈ ತ್ಯಾಗಂ ಪ್ರಾಪ್ನುವಂತಿ ಪ್ರತಿಜ್ಞಾಃ ॥5॥
ಯಾವ ದೇವತೆಗಳು ಸದ್ಭಾವನೆಯಿಂದ (ವಿಷ್ಣುಪ್ರೀತ್ಯರ್ಥವಾಗಿ) ತುಂಬಿದ ಸೋಮವನ್ನು ಪಾನ ಮಾಡುತ್ತಾರೆಯೋ, ದೀಪ್ತವಾದ ಕರ್ಮಗಳನ್ನು ಆಚರಿಸುತ್ತಾರೆಯೋ, ಏಕಾಂತದಲ್ಲಿ ಕೃಷ್ಣನಾದ ವಿಷ್ಣುವನ್ನು ಧ್ಯಾನ ಮಾಡುತ್ತಾರೆಯೋ ಅಂತಹ ಪ್ರತಿಸ್ಥಳದಲ್ಲಿಯೂ ವಿಷ್ಣುವನ್ನು ತಿಳಿಯುವಂತಹ ದೇವತೆಗಳು ಭವಬಂಧನವನ್ನು ಪರಿತ್ಯಾಗ ಮಾಡುತ್ತಾರೆ - ಲಕ್ಷಾಲಂಕಾರ.
ಓಮಿತ್ಯೇತದ್ ಧ್ಯಾಯಮಾನೋ ನ ಗಚ್ಛೇದ್
ದುರ್ಗಂ ಪಂಥಾನಂ ಪಾಪಕರ್ಮಾಪಿ ವಿಪ್ರಃ |
ಸರ್ವಂ ಕೃಷ್ಣಂ ವಾಸುದೇವಂ ಹಿ ವಿಪ್ರಾಃ
ಕೃತ್ವಾ ಧ್ಯಾನಂ ದುರ್ಗತಿಂ ನ ಪ್ರಯಾಂತಿ ॥6॥
ಬ್ರಾಹ್ಮಣನು ಪಾಪಕರ್ಮವನ್ನು ಮಾಡಿದರೂ ಓಂಕಾರಪ್ರತಿಪಾದ್ಯನಾದ ವಿಷ್ಣುವನ್ನು ಧ್ಯಾನ ಮಾಡುವವನು ದುಃಖದಾಯಕವಾದ ಮಾರ್ಗದಲ್ಲಿ ಹೋಗುವುದಿಲ್ಲ. ವಾಸುದೇವನಾದ ಕೃಷ್ಣನನ್ನು ಪೂರ್ಣನೆಂದು ಧ್ಯಾನವನ್ನು ಮಾಡುವ ಬ್ರಾಹ್ಮಣರು ದುರ್ಗತಿಯನ್ನು ಹೊಂದುವುದಿಲ್ಲ.
ಆಜ್ಯಂ ಯಜ್ಞಃ ಸ್ರುಕ್ಸ್ರುವೌ ಯಜ್ಞದಾತಾ
ಇಚ್ಛಾ ಪತ್ನೀ ಪತ್ನಿಶಾಲಾ ಹವೀಂಷಿ |
ಇಧ್ಮಾಃ ಪುರೋಡಾಶಃ ಸರ್ವದಾ ಹೋತೃಕರ್ತಾ
ಕೃತ್ಸ್ನಂ ವಿಷ್ಣುಂ ಸಂವಿಜಾನಂಸ್ತಮೇತಿ ॥7॥
ಆಜ್ಯ, ದೇವತೆಗಳಿಗಾಗಿ ದ್ರವ್ಯತ್ಯಾಗ, ಸ್ರುಕ್-ಸ್ರುವಗಳು, ಯಜಮಾನ, ಸಂಕಲ್ಪ, ಪತ್ನೀ, ಪತ್ನೀಶಾಲೆ, ಹವಿಸ್ಸುಗಳು, ಕಟ್ಟಿಗೆಗಳು, ಪುರೋಡಾಶ, ಹೋತೃ ಮೊದಲಾದ ಋತ್ವಿಜರು ಎಲ್ಲವೂ ವಿಷ್ಣುವೆಂದು ಚೆನ್ನಾಗಿ ತಿಳಿಯುವವನು (ಎಲ್ಲರಲ್ಲಿಯೂ ವಿಷ್ಣುವು ಸನ್ನಿಹಿತನಾಗಿದ್ದಾನೆಂದು ತಿಳಿಯುವವನು) ವಿಷ್ಣುವನ್ನು ಹೊಂದುತ್ತಾನೆ.
ಯೋಗೇ ಯೋಗೇ ಕರ್ಮಣಾಂ ಚಾಭಿಹಾರೇ
ಯುಕ್ತೇ ವೈತಾನೇ ಕರ್ಮಣಿ ಬ್ರಾಹ್ಮಣಸ್ಯ |
ಪುಷ್ಟ್ಯರ್ಥೇಷು ಪ್ರಾಪ್ನುಯಾತ್ ಕರ್ಮಸಿದ್ಧಿಂ
ಶಾಂತ್ಯರ್ಥೇಷು ಪ್ರಾಪ್ನುಯಾತ್ ಸರ್ವಶಾಂತಿಮ್ ॥8॥
ಬ್ರಾಹ್ಮಣನು ತಾನು ಮಾಡುವ ಪ್ರತಿಯೊಂದು ಕರ್ಮಗಳಲ್ಲಿಯೂ, ಯಜ್ಞಾದಿಗಳಲ್ಲಿಯೂ ಹೀಗೆ ಚಿಂತಿಸಿದರೆ ಪೌಷ್ಟಿಕಕರ್ಮಗಳಲ್ಲಿ ಕರ್ಮಸಿದ್ಧಿಯನ್ನು ಪಡೆಯುತ್ತಾನೆ. ಶಾಂತಿಕರ್ಮದಲ್ಲಿ ಸರ್ವಶಾಂತಿಯನ್ನು ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕೃಷ್ಣಪ್ರಶಂಸಾ ನಾಮ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹದಿಮೂರನೆಯ
ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ಮದ್ರರಾಜನಿಗೆ ವ್ಯಾಸರ ಉಪದೇಶ
ದ್ವೈಪಾಯನಃ
ಶ್ರದ್ಧಾ ತ್ಯಾಗಂ ನಿರ್ವೃತಿಂ ಚಾಪಿ ಪೂಜಾಂ
ಸತ್ಯಂ ಧರ್ಮಂ ಯಃ ಕೃತಂ ಚಾಭ್ಯುಪೈತಿ |
ಕಾಮದ್ವೇಷೌ ತ್ಯಜತಾಂ ಸರ್ವತುಲ್ಯಃ
ಶ್ರದ್ಧಾಪೂತಃ ಸರ್ವಯಜ್ಞೇಷು ಯೋಗ್ಯಃ ॥1॥
ಶ್ರದ್ಧೆ, ತ್ಯಾಗ (ದಾನ), ಸಂತೋಷ, ಪೂಜೆ, ಸತ್ಯ, ಧರ್ಮ, ಉಪಕಾರ ಸ್ಮರಣೆ, ಕಾಮ- ದ್ವೇಷ ತ್ಯಾಗ, ಸರ್ವಾತ್ಮನಾ ಸಮನಾಗಿರುವಿಕೆ, ಶ್ರದ್ಧೆಯಿಂದ ಉಂಟಾದ ಪಾವಿತ್ರ್ಯ -ಇವುಗಳನ್ನು ಹೊಂದಿದವನು ಎಲ್ಲ ಯಜ್ಞಗಳಲ್ಲಿಯೂ ಯೋಗ್ಯನಾಗುತ್ತಾನೆ.
ಯಸ್ಮಿನ್ ಯಜ್ಞೇ ಸರ್ವಭೂತಾಃ ಪ್ರಹೃಷ್ಟಾಃ
ಸರ್ವೇ ಚಾರಂಭಾಃ ಶಾಸ್ತ್ರದೃಷ್ಟಾಃ ಪ್ರವೃತ್ತಾಃ |
ಧರ್ಮ್ಯೈ ರ್ೃರಥ್ಯೈ ರ್ೃರ್ಯೇ ಯಜಂತೇ ಧ್ರುವಂ ತೇ
ಪೂತಾತ್ಮಾನೋ ಧರ್ಮಮೇಕಂ ಭಜಂತೇ ॥2॥
ಯಾವ ಯಜ್ಞದಲ್ಲಿ ಎಲ್ಲ ಪ್ರಾಣಿಗಳೂ ಸಂತೋಷಪಡುತ್ತವೆಯೋ, ಯಾವ ಎಲ್ಲ ಉಪಕ್ರಮಗಳು ಶಾಸ್ತ್ರವಿಧಿಯಂತೆಯೇ ಉಂಟಾಗುತ್ತವೆಯೋ, ಧರ್ಮದಿಂದ ಸಂಪಾದಿಸಿದ ಅರ್ಥದಿಂದ ಯಾರು ಯಾಗವನ್ನು ಮಾಡುತ್ತಾರೆಯೋ ಅಂತಹವರು ಪರಮಪವಿತ್ರರಾಗಿ ನಿಶ್ಚಯವಾಗಿ ಶ್ರೇಷ್ಠವಾದ ಧರ್ಮವನ್ನೇ ಹೊಂದುತ್ತಾರೆ.
ಏಕಾಕ್ಷರಂ ದ್ವ್ಯಕ್ಷರಮೇಕಮೇವ
ಸದಾ ಯಜಂತೇ ನಿಯತಾಃ ಪ್ರತೀತಾಃ |
ದೃಷ್ಟ್ವಾ ಮನಾಗರ್ಚಯಿತ್ವಾ ಸ್ಮ ವಿಪ್ರಾಃ

सतां मार्गं तं ध्रुवं संभजंते ॥3॥

ಏಕಾಕ್ಷರದ ಓಂಕಾರವೂ, ಎರಡು ಅಕ್ಷರಗಳ ಹರಿ ಶಬ್ದವೂ ಒಂದೇ ಅರ್ಥವನ್ನು ಹೇಳುತ್ತವೆ. ಸಜ್ಜನರು `ಹರಿಃ ಓಂ' ಎಂದು ಹೇಳಿ ನಿಯಮದಿಂದ ಕೂಡಿದವರಾಗಿ ಸಂತೋಷದಿಂದ ಯಾವಾಗಲೂ ಯಾಗವನ್ನು ಮಾಡುತ್ತಾರೆ. ಬ್ರಾಹ್ಮಣರು ಅವನನ್ನು ಅರ್ಚಿಸಿ, ಯಾವಾಗಲಾದರೂ ಒಮ್ಮೆ ನೋಡಿ, ಸಜ್ಜನರ ಮಾರ್ಗದಲ್ಲಿ ಖಂಡಿತವಾಗಿ ನಡೆಯುತ್ತಾರೆ (ಲಕ್ಷಾಲಂಕಾರ).

ಪಾಪಾತ್ಮಾನಃ ಕ್ರೋಧರಾಗಾಭಿಭೂತಾಃ

ಕೃಷ್ಣೇ ಭಕ್ತಾ ನಾಮ ಸಂಕೀರ್ತಯಂತಃ |

ಪೂತಾತ್ಮಾನೋ ಯಜ್ಞಶೀಲಾಃ ಸುಮೇಧಾ

ಯಜ್ಞಸ್ಯಾಂತೇ ಕೀರ್ತಿಲೋಕಾನ್ ಭಜಂತೇ ॥4॥

ಪಾಪವನ್ನು ಮಾಡುವವರೂ, ಕ್ರೋಧ-ರಾಗಗಳಿಗೆ ವಶರಾದವರೂ ಆದವರು ಭಕ್ತಿಯಿಂದ ಕೃಷ್ಣನ ನಾಮವನ್ನು ಸಂಕೀರ್ತನೆ ಮಾಡಿದರೆ ಪವಿತ್ರರಾಗಿ, ಯಜ್ಞಶೀಲರೂ, ಒಳ್ಳೆಯ ವಿವೇಕವುಳ್ಳವರೂ ಆಗಿ ಯಜ್ಞದ ಕೊನೆಯಲ್ಲಿ ಕೀರ್ತಿಯುಂಟಾಗುವ ಲೋಕಗಳನ್ನು ಹೊಂದುತ್ತಾರೆ.

ಏಕೋ ದೇವೋ ಬ್ರಾಹ್ಮಣಾನಾಂ ಬಭೂವ

ಚತುಷ್ಪಾದೋ ವೈ ಸಗುಣೋ ಬ್ರಹ್ಮಶೀರ್ಷೇ |

ಪಾದಂಪಾದಂ ಬ್ರಾಹ್ಮಣಾ ವೇದ್ಯಮಾಹುಃ

ತ್ರೇತಾಕಾಲೇಽಂತಿಮೇ ವಿದ್ಧಿ ಶೇಷಮ್ ॥5॥

ಬ್ರಾಹ್ಮಣರಿಗೆ ನಾರಾಯಣನೊಬ್ಬನೇ ದೇವನಾಗಿದ್ದಾನೆ. ಉಪನಿಷತ್ತುಗಳಲ್ಲಿ ಗುಣಭರಿತನಾದ ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸುದೇವ ಎಂಬ ನಾಲ್ಕು ಅಂಶಗಳುಳ್ಳವನಾದ ನಾರಾಯಣನ ತ್ರೇತಾಯುಗದಿಂದ ಆರಂಭಿಸಿ ಕಲಿಯುಗದ ಕೊನೆಯವರೆಗೆ ಬ್ರಾಹ್ಮಣರು ಒಂದೊಂದನ್ನು ಮಾತ್ರ ತಿಳಿಯುತ್ತಾರೆ. ಕಲಿಯುಗವು ಮುಗಿದು ಕೃತಯುಗವು ಪ್ರಾಪ್ತವಾದಾಗ ಉಳಿದ ಅಂಶಗಳನ್ನೂ ತಿಳಿಯುತ್ತಾರೆ (ಲಕ್ಷಾಲಂಕಾರ).

ದ್ವೈಪಾಯನಃ

ಸರ್ವೇ ವೇದಾಃ ಸರ್ವವೇದ್ಯಾಃ ಸಶಾಸ್ತ್ರಾಃ

ಸರ್ವೇ ಯಜ್ಞಾಃ ಸರ್ವ ಇಜ್ಯಾಶ್ಚ ಕೃಷ್ಣಃ |

ವಿದುಃ ಕೃಷ್ಣಂ ಬ್ರಾಹ್ಮಣಸ್ತತ್ತ್ವತೋ ಯೇ

ತೇಷಾಂ ರಾಜನ್ ಸರ್ವಯಜ್ಞಾಃ ಸಮಾಪ್ತಾಃ ॥6॥

ಜ್ಞೇಯೋ ಯೋಗೀ ಬ್ರಾಹ್ಮಣೈರ್ವೇದತತ್ತ್ವೈ-

ರಾರಣ್ಯಕೈಃ ಸೈಷ ಕೃಷ್ಣಃ ಪ್ರಭುತ್ವಾತ್ |

ಸರ್ವಾನ್ ಯಜ್ಞಾನ್ ಬ್ರಾಹ್ಮಣಾನ್ ಬ್ರಹ್ಮ ಚೈವ

ವ್ಯಾಪ್ಯಾತಿಷ್ಠದ್ ದೇವದೇವಸ್ತ್ರಿಲೋಕೇ ॥7॥

ಎಲ್ಲ ವೇದಗಳು, ಎಲ್ಲ ವೇದಾಂಗಗಳು ಮತ್ತು ಶಾಸ್ತ್ರಗಳು, ಸರ್ವಯಜ್ಞಗಳು, ಎಲ್ಲದರಿಂದಲೂ ಕೃಷ್ಣನೇ ಅರ್ಚ್ಯನಾದವನು ಮತ್ತು ಪೂಜ್ಯನಾದವನು. ಎಲೈ ರಾಜನೇ, ಯಾವ ಬ್ರಾಹ್ಮಣರು ಕೃಷ್ಣನನ್ನು ಚೆನ್ನಾಗಿ ತಿಳಿಯುತ್ತಾರೋ ಅವರು ಎಲ್ಲ ಯಜ್ಞಗಳನ್ನೂ ಮಾಡಿದಂತೆಯೇ ಸರಿ. ಬ್ರಾಹ್ಮಣರು ವೇದತತ್ತ್ವಗಳಿಂದಲೂ, ಆರಣ್ಯಕಗಳಿಂದಲೂ ಯೋಗೀಶ್ವರನಾದ ಕೃಷ್ಣನನ್ನೇ ತಿಳಿಯಬೇಕು. ಅಂತಹ ದೇವದೇವನಾದ ಈ ಕೃಷ್ಣನು ಪ್ರಭುವಾದ್ದರಿಂದ ಮೂರುಲೋಕಗಳನ್ನೂ, ಎಲ್ಲ ಯಜ್ಞಗಳನ್ನೂ, ಬ್ರಾಹ್ಮಣರನ್ನೂ, ವೇದಗಳನ್ನೂ ವ್ಯಾಪಿಸಿಕೊಂಡಿದ್ದಾನೆ.

ಸ ಏಷ ದೇವಃ ಶಕ್ರಮೀಶಂ ಯಜಾನಂ

ಪ್ರೀತ್ಯಾ ಪ್ರಾಹ ಕ್ರತುಯಷ್ಟಾರಮಗ್ರ್ಯಮ್ |

ನ ಮಾ ಶಕ್ರೋ ವೇದ ವೇದಾರ್ಥತತ್ತ್ವಾದ್

ಭಕ್ತೋ ಭಕ್ತ್ಯಾ ಶುದ್ಧಭಾವಪ್ರಧಾನಃ ॥8॥

ಈ ದೇವನು ಯಾಗವನ್ನು ಮಾಡುತ್ತಿದ್ದ ಶ್ರೇಷ್ಠನಾದ ಇಂದ್ರನನ್ನು ಕುರಿತು `ಭಕ್ತಿಯಿಂದ ಶುದ್ಧಮನಸ್ಸುಳ್ಳ ನನ್ನ ಭಕ್ತನಾದ ಇಂದ್ರನೂ ಸಹ ವೇದಾರ್ಥಗಳಿಂದ ನನ್ನನ್ನು ಸರಿಯಾಗಿ ತಿಳಿಯುವುದಿಲ್ಲ' ಎಂದು ಹೇಳಿದನು.

ಮಾಂ ಜಾನಂತೇ ಬ್ರಹ್ಮಶೀರ್ಷಂ ವರಿಷ್ಠಂ

ವಿಶ್ವೇ ವಿಶ್ವಂ ಬ್ರಹ್ಮಯೋನಿಂ ಹ್ಯಯೋನಿಮ್ |

ಸರ್ವತ್ರಾಹಂ ಶಾಶ್ವತಃ ಶಾಶ್ವತೇಶಃ

ಕೃತ್ಸ್ನೇ ವೇದೋ ದಿಗ್ಭುಜೋಽನಂತತೇಜಾಃ ॥9॥

ನನ್ನನ್ನು ಉಪನಿಷತ್‌ಪ್ರತಿಪಾದ್ಯನೆಂದೂ, ಸರ್ವೋತ್ತಮನೆಂದೂ, ವಿಶ್ವವ್ಯಾಪಕನೆಂದೂ, ಬ್ರಹ್ಮನಿಗೆ ಕಾರಣನೆಂದೂ, ಸ್ವತಃ ಕಾರಣವಿಲ್ಲದವನೆಂದೂ ಎಲ್ಲ ಸಜ್ಜನರೂ ತಿಳಿಯುತ್ತಾರೆ. ನಾನು ಎಲ್ಲ ಸ್ಥಳಗಳಲ್ಲಿಯೂ, ಎಲ್ಲ ರೂಪಗಳಲ್ಲಿಯೂ ನಿತ್ಯನಾದವನು. ನಿತ್ಯವಾದ ಪದಾರ್ಥಗಳಿಗೂ ಒಡೆಯನಾದವನು. ಸಮಗ್ರ ವೇದಗಳಿಂದ ಪ್ರತಿಪಾದ್ಯನಾದವನು. ಅಷ್ಟದಿಕ್ಕುಗಳಲ್ಲಿ ಭುಜಗಳನ್ನು ಹೊಂದಿದವನು. ಅನಂತವಾದ ತೇಜಸ್ಸುಳ್ಳವನು (ಲಕ್ಷಾಲಂಕಾರ).

ಸರ್ವೇ ವೇದಾ ವಾಸುದೇವಂ ಯಜಂತೇ

ತತೋ ಬುದ್ಧ್ಯಾ ಮಾರ್ಗಮಾಣಸ್ತನೂನಾಮ್ |

ಸರ್ವಾನ್ ಕಾಮಾನ್ ಪ್ರಾಪ್ನುವಂತೇ ವಿಶಾಲಾಂ-

ಸ್ತ್ರೈಲೋಕ್ಯೇಽಸ್ಮಿನ್ ಕೃಷ್ಣನಾಮಾಭಿಧಾನಾತ್ ॥10॥
ಎಲ್ಲ ವೇದಗಳೂ ವಾಸುದೇವನನ್ನು ಪೂಜಿಸುತ್ತವೆ. ಆದ್ದರಿಂದ ಬ್ರಹ್ಮಾದಿ ಸುರೋತ್ತಮ ಶರೀರಗಳಲ್ಲಿ ಅವನನ್ನು ಹುಡುಕುವವರು ಈ ಮೂರುಲೋಕಗಳಲ್ಲಿಯೂ ಕೃಷ್ಣನಾಮವನ್ನು ಸಂಕೀರ್ತನೆಯನ್ನು ಮಾಡುವುದರಿಂದ ಎಲ್ಲ ಕಾಮನೆಗಳನ್ನೂ ಪಡೆಯುತ್ತಾರೆ.
ಕೃಷ್ಣೋ ಯಜ್ಞೈರಿಜ್ಯತೇ ಯಾಯಜೂಕೈಃ
ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ |
ಕೃಷ್ಣೋ ವಾಕ್ಯೈರಿಜ್ಯತೇ ಸಂಮೃಶಾನೈಃ
ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ॥11॥
ಯಜ್ಞವನ್ನು ಮಾಡುವವರು ಕೃಷ್ಣನನ್ನೇ ಯಜ್ಞದಿಂದ ಪೂಜಿಸುತ್ತಾರೆ. ವೀರರಾದವರು ತಮ್ಮ ಪರಾಕ್ರಮದಿಂದ ಕೃಷ್ಣನನ್ನು ಪೂಜಿಸುತ್ತಾರೆ. ವಿಚಾರಶೀಲರಾದವರು ವೇದವಾಕ್ಯಗಳನ್ನು ವಿಮರ್ಶೆ ಮಾಡಿ ಕೃಷ್ಣನನ್ನು ಪೂಜಿಸುತ್ತಾರೆ. ಮೋಹಾದಿಗಳಿಂದ ರಹಿತರಾದ ಮುಕ್ತರು ಕೃಷ್ಣನನ್ನೇ ಅರ್ಚಿಸುತ್ತಾರೆ.
ವಿದ್ಯಾವಂತಃ ಸೋಮಪಾ ಯೇ ವಿಪಾಪಾ
ಇಷ್ಟ್ವಾ ಯಜ್ಞೈರ್ಗೋಚರಂ ಪ್ರಾರ್ಥಯಂತೇ |
ಸರ್ವಂ ಕ್ರಾಂತಂ ದೇವಲೋಕಂ ವಿಶಾಲಮ್
ಅಂತೇ ಗತ್ವಾ ಮರ್ತ್ಯಲೋಕಂ ಭಜಂತೇ ॥12॥
ವಿದ್ಯಾವಂತರಾಗಿ, ಸೋಮಪಾನವನ್ನು ಮಾಡಿ ಪಾಪರಹಿತರಾದ ಪುರುಷರು ಯಜ್ಞಗಳಿಂದ ಕೃಷ್ಣನನ್ನು ಪೂಜಿಸಿ, ಕೃಷ್ಣನ ಸಾಕ್ಷಾತ್ಕಾರವನ್ನು ಬಯಸುತ್ತಾರೆ. ಅವರು ವಿಶಾಲವಾದ ದೇವಲೋಕವನ್ನೆಲ್ಲ ದಾಟಿ ಕೊನೆಯಲ್ಲಿ ಮುಕ್ತಿಲೋಕಕ್ಕೆ ಹೋಗುತ್ತಾರೆ.
ಶ್ರೀಭಗವಾನ್
ಏವಂ ಸರ್ವೇ ತ್ವಾಶ್ರಮಾಃ ಸುವ್ರತಾ ಯೇ
ಮಾಂ ಜಾನಂತೋ ಯಾಂತಿ ಲೋಕಾನದೀನಾನ್ |
ಯಾಂ ಯಾಂ ದೀಕ್ಷಾಮುದ್ವಹಂತೇ ವಿಪಾಪಾ
ಜ್ಯೋತಿರ್ಭೂತ್ವಾ ದೇವಲೋಕಂ ಭಜಂತೇ ॥13॥
ವಾಸುದೇವ ಹೀಗೆ ಎಲ್ಲ ಆಶ್ರಮದವರೂ ಒಳ್ಳೆಯ ವ್ರತವನ್ನು ಮಾಡಿ, ನನ್ನ ಜ್ಞಾನವನ್ನು ಸಂಪಾದಿಸಿ, ಸಮೃದ್ಧವಾದ ಲೋಕಗಳನ್ನು ಹೊಂದುತ್ತಾರೆ. ಧ್ಯಾನದೀಕ್ಷೆಯನ್ನು ಧರಿಸಿದ ಪಾಪರಹಿತರಾದವರು ಜ್ಯೋತಿರ್ಮಯ ಶರೀರಿಗಳಾಗಿ ನನ್ನ ಲೋಕವನ್ನು ಹೊಂದುತ್ತಾರೆ.
ಪೂಜ್ಯಂತೇ ಮಾಂ ಪೂಜಯಂತಃ ಪ್ರಹೃಷ್ಟಾ
ಮಾಂ ಜಾನಂತಃ ಶ್ರದ್ಧಯಾ ವಾಸುದೇವಮ್ |
ಭಕ್ತ್ಯಾ ತುಷ್ಟೋಽಹಂ ತಸ್ಯ ಸತ್ತ್ವಂ ಪ್ರಯಚ್ಛೇ
ಸತ್ವಸ್ಪೃಷ್ಟೋ ವೀತಮೋಹೋಽಯಮೇತಿ ॥14॥
ಶ್ರದ್ಧೆಯಿಂದ ನನ್ನನ್ನು ತಿಳಿದು ವಾಸುದೇವನಾದ ನನ್ನನ್ನು ಸಂತೋಷದಿಂದ ಪೂಜಿಸುವವರು ತಾವೂ ಪೂಜಿಸಲ್ಪಡುತ್ತಾರೆ. ಭಕ್ತಿಯಿಂದ ಪ್ರಸನ್ನನಾದ ನಾನು ಅವರಿಗೆ ಶುದ್ಧವಾದ ಅಂತಃಕರಣವನ್ನು ಕೊಡುತ್ತೇನೆ. ಶುದ್ಧಾಂತಃಕರಣರಾದವರು ಮೋಹಾದಿಗಳನ್ನು ತೊರೆದು ನನ್ನನ್ನು ಹೊಂದುತ್ತಾರೆ.
ದ್ವೈಪಾಯನಃ
ಜ್ಯೋತೀಂಷಿ ಶುಕ್ಲಾನಿ ಚ ಯಾನಿ ಲೋಕೇ
ತ್ರಯೋ ಲೋಕಾ ಲೋಕಪಾಲಾಸ್ತ್ರಯೀ ಚ |
ತ್ರಯೋಽಗ್ನಯಶ್ಚಾಹುತಯಶ್ಚ ಪಂಚ
ಸರ್ವೇ ದೇವಾ ದೇವಕೀಪುತ್ರ ಏವ ॥15॥
ದ್ವೈಪಾಯನ ಲೋಕದಲ್ಲಿ ಯಾವ ಶುದ್ಧವಾದ ಜ್ಯೋತಿಸ್ಸು ಇದೆಯೋ, ಮೂರುಲೋಕಗಳು ಇವೆಯೋ, ಮೂರುಲೋಕಪಾಲಕರು ಯಾರಿದ್ದಾರೆಯೋ, ಮೂರು ಅಗ್ನಿಗಳು ಏನಿವೆಯೋ, ಐದು ಆಹುತಿಗಳು ಏನಿವೆಯೋ, ಎಲ್ಲ ದೇವತೆಗಳು ಯಾರಿದ್ದಾರೆಯೋ ಅವರೆಲ್ಲರೂ ಕೃಷ್ಣನೇ (ಕೃಷ್ಣನಿಗೆ ಅಧೀನರಾದವರು).
ಭೀಷ್ಮಃ
ವ್ಯಾಸಸ್ಯೈತದ್ ವಚಃ ಶ್ರುತ್ವಾ ಮದ್ರರಾಜೋ ಮಹರ್ಷಿಭಿಃ |
ವ್ಯಾಸಂ ಕೃಷ್ಣಂ ಚ ವಿಧಿವತ್ ಪ್ರೀತಾತ್ಮಾ ಪ್ರತ್ಯಪೂಜಯತ್ ॥16॥
ಭೀಷ್ಮರು ವ್ಯಾಸರ ಈ ಮಾತುಗಳನ್ನು ಕೇಳಿ ಮದ್ರರಾಜನು ಸಂತೋಷಗೊಂಡು ಮಹರ್ಷಿಗಳ ಜೊತೆಯಲ್ಲಿ ವ್ಯಾಸರನ್ನು ಮತ್ತು ಕೃಷ್ಣನನ್ನು ವಿಧಿಪೂರ್ವಕವಾಗಿ ಸಂತೋಷದಿಂದ ಪೂಜಿಸಿದನು.
ವೈಶಂಪಾಯನಃ
ಕವಿಪ್ರಧಾನಸ್ತು ಮಹರ್ಷಿಪುತ್ರೋ
ದ್ವೈಪಾಯನಸ್ತದ್ವಚನಂ ನಿಶಮ್ಯ |
ಜಗಾಮ ಪೃಥ್ವೀಂ ಶಿರಸಾ ಮಹಾತ್ಮಾ
ನಮಶ್ಚ ಕೃಷ್ಣಾಯ ಚಕಾರ ಭೀಷ್ಮಃ ॥17॥
ವೈಶಂಪಾಯನ ಮಹರ್ಷಿಗಳಾದ, ಪರಾಶರಪುತ್ರರಾದ ದ್ವೈಪಾಯನರು ಹೊರಟು ಹೋದರು. ಅವರು ಮಾತುಗಳನ್ನು ಕೇಳಿದ

ಮಹಾತ್ಮನಾದ ಮದ್ರರಾಜನು ಶಿರಸ್ಸನ್ನು ಭೂಮಿಯ ಮೇಲಿಟ್ಟು ನಮಸ್ಕಾರ ಮಾಡಿದನು. ಭೀಷ್ಮರೂ ಸಹ ಕೃಷ್ಣನಿಗೆ ನಮಸ್ಕಾರವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ಗರುಡಾಖ್ಯಾನದ ಪ್ರಾರಂಭ
ಯುಧಿಷ್ಠಿರಃ
ಗರುಡಃ ಪಕ್ಷಿಣಾಂ ಶ್ರೇಷ್ಠ ಇತಿ ಪೂರ್ವಂ ಪಿತಾಮಹ |
ಉಕ್ತಸ್ತ್ವಯಾ ಮಹಾಬಾಹೋ ಶ್ವೇತವಾಹಂ ಪ್ರಶಂಸತಾ ॥1॥
ಯುಧಿಷ್ಠಿರ ಎಲ್ಲೈ ಪಿತಾಮಹನೇ, ಮಹಾಬಾಹುವೇ, ನೀನು ಹಿಂದೆ ಶ್ವೇತವಾಹನನಾದ ಅರ್ಜುನನನ್ನು ಹೊಗಳುತ್ತಾ, ಗರುಡನು ಪಕ್ಷಿಗಳಲ್ಲಿ ಶ್ರೇಷ್ಠನೆಂದು ಹೇಳಿದ್ದೀಯೆ.
ಅತ್ರ ಕೌತೂಹಲಂ ಮೇಽಸ್ತಿ ಶ್ರವಣೇ ಜಾಯತೇ ಮತಿಃ |
ಕಥಂ ಗರುತ್ಮಾನ್ ಪಕ್ಷೀಣಾಂ ಶ್ರೈಷ್ಠ್ಯಂ ಪ್ರಾಪ ಪರಂತಪ ॥2॥
ಇದು ಕುತೂಹಲಕಾರಿ ಎಂಬ ಕಾರಣದಿಂದ ನನಗೆ ಅದನ್ನು ಕೇಳಲು ಮನಸ್ಸಾಗುತ್ತಿದೆ. ಎಲ್ಲೈ ಪರಂತಪನೇ, ಗರುಡನು ಹೇಗೆ ಪಕ್ಷಿಗಳಲ್ಲಿ ಶ್ರೇಷ್ಠನಾದನು?
ಸುಪರ್ಣೋ ವೈನತೇಯಶ್ಚ ಕೇನ ಶತ್ರುಶ್ಚ ಭೋಗಿನಾಮ್ |
ಕಿಂವೀರ್ಯಃ ಕಿಂಬಲಶ್ಚಾಸೌ ವಕ್ತುಮರ್ಹಸಿ ಭಾರತ ॥3॥
ಎಲ್ಲೈ ಭಾರತನೇ, ವಿನತಾಪುತ್ರನಾದ ಸುಪರ್ಣನು ಯಾವ ಕಾರಣದಿಂದ ಸರ್ಪಗಳಿಗೆ ಶತ್ರುವಾದನು? ಅವನ ವೀರ್ಯ-ಪರಾಕ್ರಮಗಳೆಂತಹವು? ಅವನ ಬಲವೆಂತಹದು ಎಂಬುದನ್ನು ನನಗೆ ಹೇಳು.
ಭೀಷ್ಮಃ
ವಾಸುದೇವ ಮಹಾಬಾಹೋ ದೇವಕೀ ಸುಪ್ರಜಾಸ್ತ್ವಯಾ |
ಶ್ರುತಂ ತೇ ಧರ್ಮರಾಜಸ್ಯ ಯದುಹರ್ಷವಿವರ್ಧನ ॥4॥
ಭೀಷ್ಮರು ಎಲ್ಲೈ ಮಹಾಬಾಹುವಾದ ವಾಸುದೇವನೇ, ಯದುಗಳ ಸಂತೋಷವನ್ನು ಹೆಚ್ಚಿಸುವವನೇ, ದೇವಕಿಯು ನಿನ್ನನ್ನು ಮಗನಾಗಿ ಪಡೆದು ಒಳ್ಳೆಯ ಪುತ್ರವಂತಳಾಗಿದ್ದಾಳೆ. ಧರ್ಮರಾಜನ ಮಾತುಗಳನ್ನು ನೀನು ಕೇಳಿದ್ದೀಯೆ.
ಸುಪರ್ಣಂ ಶಂಸ ಇತ್ಯೇವ ಮಾಮಾಹ ಕುರುನಂದನಃ |
ಅಸ್ಯ ಪ್ರವಕ್ತುಮಿಚ್ಛಾಮಿ ತ್ವಯಾಽಽಜ್ಞಪ್ತೋ ಮಹಾದ್ಯುತೇ ॥5॥
ಕುರುನಂದನನಾದ ಯುಧಿಷ್ಠಿರನು ಗರುಡನ ವಿಷಯವಾಗಿ ನನಗೆ ಹೇಳಿ ಎಂದು ನನ್ನನ್ನು ಕೇಳಿದ್ದಾನೆ. ಎಲ್ಲೈ ಮಹಾದ್ಯುತಿಯೇ, ನಿನ್ನಿಂದ ಆಜ್ಞಪ್ತನಾಗಿ ಅವನಿಗೆ ನಾನು ಅದನ್ನು ಹೇಳಲು ಬಯಸುತ್ತೇನೆ.
ತ್ವಂ ಹಿ ಶೌರೇ ಮಹಾಬಾಹೋ ಸುಪರ್ಣಃ ಪ್ರೋಚ್ಯಸೇ ಪುರಾ |
ಅನಾದಿನಿಧನೇ ಕಾಲೇ ಗರುಡಶ್ಚಾಸಿ ಕೇಶವ ॥6॥
ಮಹಾಬಾಹುವೇ, ನೀನೇ ಮೊದಲು ಸುಪರ್ಣನೆಂದು ಕರೆಸಿಕೊಳ್ಳಲ್ಪಡುತ್ತಿದ್ದೆ. `ಅತೋ ದಿವ್ಯಃ ಸ ಸುಪರ್ಣೋ......' ಎಂಬ ವೇದವು ನಿನಗೆ ಸುಪರ್ಣನೆಂಬ ಹೆಸರನ್ನು ಹೇಳುತ್ತದೆ. ಎಲ್ಲೈ ಕೇಶವನೇ, ಅನಾದ್ಯನಂತ ಕಾಲದಲ್ಲಿ ನೀನೇ ಗರುಡ ಎಂಬ ಶಬ್ದದಿಂದಲೂ ವಾಚ್ಯನಾಗಿದ್ದೀಯೆ (ಲಕ್ಷ್ಯಾಲಂಕಾರ).
ತಸ್ಮಾತ್ ಪೂರ್ವಂ ಪ್ರಸಾದ್ಯ ತ್ವಾಂ ಧರ್ಮಪುತ್ರಾಯ ಧೀಮತೇ |
ಗರುಡಂ ಪತತಾಂ ಶ್ರೇಷ್ಠಂ ವಕ್ತುಮಿಚ್ಛಾಮಿ ಮಾಧವ ॥7॥
ಆದ್ದರಿಂದ ಮೊದಲು ನಿನ್ನ ಅನುಮತಿಯನ್ನು ಪಡೆದು, ಅನಂತರ ಎಲ್ಲೈ ಮಾಧವನೇ, ಮೇಧಾವಿಯಾದ ಯುಧಿಷ್ಠಿರನಿಗೆ ಪಕ್ಷಿಶ್ರೇಷ್ಠನಾದ ಗರುಡನ ಕಥೆಯನ್ನು ಹೇಳಲು ಬಯಸುತ್ತೇನೆ.
ವಾಸುದೇವಃ
ಯಥೈವ ಮಾಂ ಭವಾನ್ ವೇದ ತಥಾ ವೇದ ಯುಧಿಷ್ಠಿರಃ |
ಯಥಾ ಚ ಗರುಡೋ ರಾಜಂಸ್ತಥಾಽಸ್ಮೈ ಬ್ರೂಹಿ ತತ್ತ್ವತಃ ॥8॥
ವಾಸುದೇವ ನೀನು ನನ್ನನ್ನು ಹೇಗೆ ತಿಳಿದಿದ್ದೀಯೋ ಹಾಗೆಯೇ ಯುಧಿಷ್ಠಿರನೂ ತಿಳಿದಿದ್ದಾನೆ. ಗರುಡನು ಹೇಗೆ ಜನ್ಮ ತಾಳಿದನೆಂದು ಅವನಿಗೆ ಸರಿಯಾಗಿ ಹೇಳುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನಂ ನಾಮ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾರನೆಯ ಅಧ್ಯಾಯ
ಅರುಣನ ಜನ್ಮ ಮತ್ತು ತಾಯಿಗೆ ಶಾಪ

ಭೀಷ್ಮಃ
ಯುಧಿಷ್ಠಿರ ಮಹಾಬಾಹೋ ಶೃಣು ರಾಜನ್ ಯಥಾತಥಮ್ |
ಗರುಡಂ ಪಕ್ಷಿಣಾಂ ಶ್ರೇಷ್ಠಂ ವೈನತೇಯಂ ಮಹಾಬಲಮ್ ॥1॥
ತಥಾ ಚ ಗರುಡೋ ರಾಜನ್ ಸುಪರ್ಣಶ್ಚ ಯಥಾಽಭವತ್ |
ಯಥಾ ಚ ಭುಜಗಾನ್ ಹಂತಿ ತಥಾ ಮೇ ಬ್ರುವತಃ ಶೃಣು ॥2॥
ಭೀಷ್ಮರು ಮಹಾಬಾಹುವಾದ ಯುಧಿಷ್ಠಿರನೇ, ರಾಜನೇ, ಮಹಾಬಲನೂ, ವಿನತಾ ಸುತನೂ, ಪಕ್ಷಿಗಳಲ್ಲಿ ಶ್ರೇಷ್ಠನೂ ಆದ ಗರುಡನ ವಿಷಯವನ್ನು ಯಥಾರ್ಥವಾಗಿ ಕೇಳು. ಹಾಗೆಯೇ ಎಲೈ ರಾಜನೇ, ಗರುಡನು ಹೇಗೆ ಸುಪರ್ಣನಾದನು? ಏಕೆ ಸರ್ಪವನ್ನು ಕೊಲ್ಲುತ್ತಾನೆ? ಎಂಬುದನ್ನೂ ನನ್ನ ಮಾತಿನಂತೆ ಕೇಳು.
ಪುರಾಽಹಂ ತಾತ ರಾಮೇಣ ಜಾಮದಗ್ನ್ಯೇನ ಧೀಮತಾ |
ಕೈಲಾಸಶಿಖರೇ ರಮ್ಯೇ ಮೃಗಾನ್ ನಿಘ್ನನ್ ಸಹಸ್ರಶಃ ॥3॥
ಎಲೈ ಪ್ರೀತಿಪಾತ್ರನೇ, ಹಿಂದೆ ನಾನು ಕೈಲಾಸ ಶಿಖರದಲ್ಲಿ ಜಮದಗ್ನಿ ಪುತ್ರರಾದ, ಮೇಧಾವಿಯಾದ, ಸಹಸ್ರಾರು ಮೃಗಗಳನ್ನು ಕೊಲ್ಲುತ್ತಿದ್ದ ಪರಶುರಾಮರನ್ನು ನೋಡಿದೆನು.
ತಮಹಂ ತಾತ ದೃಷ್ಟ್ವೈವ ಶಸ್ತ್ರಾಣ್ಯುತ್ಸೃಜ್ಯ ಸರ್ವಶಃ |
ಅಭಿವಾದ್ಯ ಪೂರ್ವಂ ರಾಮಾಯ ವಿನಯೇನೋಪತಸ್ಥಿವಾನ್ ॥4॥
ನಾನು ಅವರನ್ನು ನೋಡಿದ ಕೂಡಲೇ ಎಲ್ಲ ಶಸ್ತ್ರಗಳನ್ನೂ ಬಿಸುಟು ಮೊದಲು ಅವರಿಗೆ ನಮಸ್ಕಾರವನ್ನು ಮಾಡಿ, ವಿನಯದಿಂದ ಅವರ ಹತ್ತಿರ ನಿಂತೆನು.
ತಮಹಂ ಕಥಾಂತೇ ವರದಂ ಸುಪರ್ಣಸ್ಯ ಬಲೌಜಸೀ |
ಅಪೃಚ್ಛಂ ಸ ಚ ಮಾಂ ಪ್ರೀತಃ ಪ್ರತ್ಯುವಾಚ ಯುಧಿಷ್ಠಿರ ॥5॥
ಎಲೈ ಯುಧಿಷ್ಠಿರನೇ, ಕುಶಲವಾರ್ತೆಗಳಾದ ಮೇಲೆ ನಾನು ಅವರನ್ನು ಗರುಡನ ಬಲ ಮತ್ತು ಅವಷ್ಟಂಭ ಶಕ್ತಿಯನ್ನು ಕುರಿತು ಪ್ರಶ್ನೆ ಮಾಡಿದೆನು. ಅವರು ಸಂತೋಷದಿಂದ ನನಗೆ ಉತ್ತರವನ್ನು ಕೊಟ್ಟರು.
ಕದ್ರೂಶ್ಚ ವಿನತಾ ಚಾಸ್ತಾಂ ಪ್ರಜಾಪತಿಸುತೇ ಉಭೇ |
ತೇ ಧರ್ಮೇಣೋಪಮೇಯೇಽಥ ಮಾರೀಚಃ ಕಶ್ಯಪಃ ಪ್ರಭುಃ ॥6॥
ಪ್ರಾದಾತ್ ತಾಭ್ಯಾಂ ವರಂ ಪ್ರೀತೋ ಭಾರ್ಯಾಭ್ಯಾಂ ಸುಮಹಾತಪಾಃ ॥
ದಕ್ಷಪ್ರಜಾಪತಿಗೆ ಕದ್ರು-ವಿನತೆ ಎಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಮರೀಚಿ ಋಷಿಗಳ ಪುತ್ರರೂ, ಸಮರ್ಥರೂ ಆದ ಕಶ್ಯಪರು ಅವರನ್ನು ಧರ್ಮದಿಂದ ವಿವಾಹ ಮಾಡಿಕೊಂಡರು. ಮಹಾತಪಸ್ವಿಗಳಾದ ಅವರು ಸಂತೋಷಗೊಂಡು ತಮ್ಮ ಇಬ್ಬರು ಪತ್ನಿಯರಿಗೂ ವರವನ್ನು ಕೊಟ್ಟರು.
ತತ್ರ ಕದ್ರೂರ್ವರಂ ವವ್ರೇ ಪುತ್ರಾಣಾಂ ದಶತಃ ಶತಮ್ |
ತುಲ್ಯತೇಜಃಪ್ರಭಾವಾನಾಂ ಸರ್ವೇಷಾಂ ತುಲ್ಯಜನ್ಮನಾಮ್ ॥8॥
ಅವರಲ್ಲಿ ಕದ್ರುವು ಸಮಾನವಾದ ತೇಜಸ್ಸು ಮತ್ತು ಪ್ರಭಾವವುಳ್ಳ, ಸಮಾನ ಕಾಲದಲ್ಲಿ ಜನಿಸುವ ಸಹಸ್ರಪುತ್ರರನ್ನು ಬೇಡಿದಳು.
ವಿನತಾ ತು ವವ್ರೇ ದ್ವೌ ಪುತ್ರೌ ವೀರೌ ಭರತಸತ್ತಮ |
ಕದ್ರೂಪುತ್ರಸಹಸ್ರೇಣ ತುಲ್ಯವೇಗಪರಾಕ್ರಮೌ ॥9॥
ಎಲೈ ಭರತಶ್ರೇಷ್ಠನೇ, ವಿನತೆಯಾದರೂ ಕದ್ರುವಿನ ಸಹಸ್ರಪುತ್ರರಿಗೆ ಸಮಾನವಾದ ವೀರ್ಯ ಮತ್ತು ಪರಾಕ್ರಮಗಳುಳ್ಳ ವೀರರಾದ ಇಬ್ಬರು ಪುತ್ರರನ್ನು ಬೇಡಿದಳು.
ಸ ತು ತಾಭ್ಯಾಂ ವರಂ ಪ್ರಾದಾತ್ ತಥೇತ್ಯುಕ್ತ್ವಾ ಮಹಾತಪಾಃ |
ಜನಯಾಮಾಸ ತಾನ್ ಪುತ್ರಾಂಸ್ತಾಭ್ಯಾಮಾಸೀದ್ ಯಥಾ ಪುರಾ ॥10॥
ಮಹಾತಪಸ್ವಿಗಳಾದ ಕಶ್ಯಪರು ಹಾಗೆಯೇ ಆಗಲಿ ಎಂದು ಹೇಳಿ, ಅವರಿಗೆ ವರಗಳನ್ನು ನೀಡಿದರು ಮತ್ತು ಮೊದಲು ಮಾತನಾಡಿದ್ದಂತೆ ಅವರಿಗೆ ಪುತ್ರರನ್ನೂ ದಯಪಾಲಿಸಿದರು.
ಕದ್ರೂಃ ಪ್ರಜಜ್ಞೇ ತ್ವಂಡಾನಾಂ ತಥೈವ ದಶತಃ ಶತಮ್ |
ಅಂಡೇ ದ್ವೇ ವಿನತಾ ಚೈವ ದರ್ಶನೀಯತರೇ ಶುಭೇ ॥11॥
ಕದ್ರುವು ಒಂದು ಸಹಸ್ರ ಮೊಟ್ಟೆಗಳನ್ನು ಪ್ರಸವಿಸಿದಳು. ಹಾಗೆಯೇ ವಿನತೆಯು ಮನೋಹರವಾದ ಶುಭವಾದ ಎರಡು ಮೊಟ್ಟೆಗಳನ್ನು ಪ್ರಸವಿಸಿದಳು.
ತಾನಿ ತ್ವಂಡಾನಿ ತು ತಯೋಃ ಕದ್ರೂವಿನತಯೋರ್ದ್ವಯೋಃ |
ಸೋಪಸ್ವೇದೇಷು ಪಾತ್ರೇಷು ನಿದಧುಃ ಪರಿಚಾರಿಣಃ ॥12॥
ಅವರ ಪರಿಚಾರಕರು ಕದ್ರುವು ಹೆತ್ತ ಆ ಮೊಟ್ಟೆಗಳನ್ನು ನೀರಾದ ಘೃತದಿಂದ ಕೂಡಿದ ಪಾತ್ರೆಗಳಲ್ಲಿ ರಕ್ಷಣೆ ಮಾಡಿದರು.
ನಿಃಸರಂತಿ ತದಾಽಂಡೇಭ್ಯಃ ಕದ್ರೂಪುತ್ರಾ ಭುಜಂಗಮಾಃ |
ಪಂಚವರ್ಷಶತೇ ಕಾಲೇ ದೃಷ್ಟಿಶ್ವಾಸಾಮಲೌಜಸಃ ॥13॥
ಐದುನೂರು ವರ್ಷಗಳು ಕಳೆದ ಮೇಲೆ ಆ ಮೊಟ್ಟೆಗಳಿಂದ ದೃಷ್ಟಿಯಲ್ಲಿಯೂ ಮತ್ತು ಶ್ವಾಸದಲ್ಲಿಯೂ ತೀವ್ರವಾದ ಶಕ್ತಿಯುಳ್ಳ ಕದ್ರುಪುತ್ರರಾದ ಸರ್ಪಗಳು ಜನಿಸಿದವು.
ವಿನತಾ ತೇಷು ಜಾತೇಷು ಪನ್ನಗೇಷು ಮಹಾತ್ಮಸು |
ವಿಪುತ್ರಾ ಪುತ್ರಸಂತಾಪಾದಂಡಮೇಕಂ ಬಿಭೇದ ಹ ॥14॥

ಮಹಾತ್ಮರಾದ ಆ ಸರ್ಪಗಳು ಜನಿಸಿದ ಮೇಲೆ ವಿನತೆಯು ಪುತ್ರರಿಲ್ಲದೆ ಪುತ್ರಸಂತಾಪಕ್ಕೆ ಒಳಗಾಗಿ ಒಂದು ಅಂಡವನ್ನು ಒಡೆದಳು.
ಕಿಮನೇನ ಕರಿಷ್ಯೇಽಹಮಿತಿ ವಾಕ್ಯಮಭಾಷತ |
ನ ಹಿ ಪಂಚಶತೇ ಕಾಲೇ ಪುರಾ ಪುತ್ರೌ ದದರ್ಶ ಸಾ ॥15॥
ಸಾಪಶ್ಯದಂಡಾನ್ನಿಷ್ಕ್ರಾಂತಂ ನತಾ ಪುತ್ರಂ ಮನಸ್ವಿನಮ್ |
ಪೂರ್ವಕಾಯೋಪಸಂಪನ್ನಂ ವಿಯುಕ್ತಮಿತರೇಣ ಹ ॥16॥
ನಾನು ಇದರಿಂದ ಏನು ಮಾಡಲಿ? ಎಂದು ಹೇಳುತ್ತಾ ಅದನ್ನು ಒಡೆದಳು. ಏಕೆಂದರೆ ಅವಳು ಅಲ್ಲಿಯವರೆಗೆ ಐದುನೂರು ವರ್ಷಗಳು ಕಳೆದರೂ ಪುತ್ರರನ್ನು ಕಂಡಿರಲಿಲ್ಲ. ಆ ಪಾತ್ರೆಯ ಒಳಗೆ ಇರುವುದನ್ನು ನೋಡಲು ಬಗ್ಗಿದ ವಿನತೆಯು ಆ ಅಂಡದಿಂದ ಹೊರಬರುವ, ಧೈರ್ಯಶಾಲಿಯಾದ ದೇಹದ ಮೇಲ್ಭಾಗವನ್ನು ಮಾತ್ರ ಹೊಂದಿದ್ದ, ಇತರ ಭಾಗದಿಂದ ರಹಿತವಾದ ಶಿಶುವನ್ನು ನೋಡಿದಳು.
ದೃಷ್ಟ್ವಾ ತು ತಂ ತಥಾರೂಪಮಸಮಗ್ರಶರೀರಿಣಮ್ |
ಪುತ್ರದುಃಖಾನ್ವಿತಾಽಽಶೋಚತ್ಸ ಚ ಪಕ್ಷೀ ತಥಾ ಗತಃ ॥17॥
ಪೂರ್ಣಶರೀರವಿಲ್ಲದ ಅಂತಹ ಆಕಾರವುಳ್ಳ ಅವನನ್ನು ನೋಡಿ, ಅವಳು ಪುತ್ರಶೋಕಾನ್ವಿತಳಾಗಿ ವ್ಯಥೆಪಟ್ಟಳು. ಅವನು ಅದೇ ರೂಪದಲ್ಲಿ ಪಕ್ಷಿಯಾದನು.
ಅಬ್ರವೀಚ್ಚ ಮುದಾಽಯುಕ್ತಃ ಪರ್ಯಶ್ರುನಯನಸ್ತದಾ |
ಮಾತರಂ ಚಪಲಾಸೀತಿ ಹತೋಽಹಮಿತಿ ಚಾಸಕೃತ್ ॥18॥
ಅವನು ಸಂತೋಷರಹಿತನಾಗಿ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ತಾಯಿಯನ್ನು ಕುರಿತು, ನೀನು ಬಹಳ ಚಪಲಸ್ವಭಾವದವಳು. ನನ್ನನ್ನು ಕೊಂದಿದ್ದೀಯೆ ಎಂದು ಅನೇಕ ಬಾರಿ ಹೇಳಿದನು.
ನ ಮಯಾ ಕಾಂಕ್ಷಿತಃ ಯೋ ವಾ ನೇಷ್ಯೋಽಭ್ಯಗಾತ್ ಪುರಾ |
ಆವಾಂ ಭವಾವ ಪುತ್ರೌ ತೇ ಶ್ವಸನಾದ್ ಬಲವತ್ತರೌ ॥19॥
ನಾನು ಮುಂದೆ ಕಳೆಯಬೇಕಾಗಿದ್ದ ನನಗಿಷ್ಟವಾದ ಇನ್ನೂ ಐದುನೂರು ವರ್ಷಗಳು ಇನ್ನು ಪೂರ್ಣವಾಗಿರಲಿಲ್ಲ (ಅಕಾಲದಲ್ಲಿ ನೀನು ನನ್ನನ್ನು ನೋಡಿದೆ). ನಾವಿಬ್ಬರೂ ನಿನಗೆ ವಾಯುವಿಗಿಂತ ಬಲಿಷ್ಠರಾದ ಪುತ್ರರಾಗುವೆವು.
ಈರ್ಷ್ಯಾಕ್ರೋಧಾಭಿಭೂತತ್ವಾದ್ ಯೋಽಹಮೇವಂ ಕೃತಸ್ತ್ವಯಾ |
ತಸ್ಮಾತ್ ತ್ವಮಪಿ ಮೇ ಮಾತರ್ದಾಸೀಭಾವಂ ಗಮಿಷ್ಯಸಿ ॥20॥
ಎಲೌ ನನ್ನ ತಾಯಿಯೇ, ಅಸೂಯೆ ಮತ್ತು ಕ್ರೋಧಗಳಿಂದ ಕೂಡಿದವಳಾಗಿ ನೀನು ನನ್ನನ್ನು ಹೀಗೆ ಮಾಡಿದುದರಿಂದ ನೀನೂ ಸಹ ದಾಸೀಭಾವವನ್ನು ಹೊಂದುವಿ.
ಪಂಚವರ್ಷಶತಾನಿ ತ್ವಂ ಸ್ಪರ್ಧಸೇ ವೈ ಯಯಾ ಸಹ |
ದಾಸೀ ತಸ್ಯಾ ಭವಿತ್ರೀತಿ ಸಾಶ್ರುಪಾತಮುವಾಚ ಹ ॥21॥
ನೀನು ಯಾರ ಜೊತೆಯಲ್ಲಿ ಸ್ಪರ್ಧೆ ಮಾಡುತ್ತೀಯೋ ಅಂತಹ ಕದ್ರುವಿಗೆ ಐದುನೂರು ವರ್ಷಗಳ ಕಾಲ ದಾಸಿಯಾಗುವಿ ಎಂದು ಕಣ್ಣೀರಿನಿಂದ ಸಹಿತನಾಗಿ ಹೇಳಿದನು.
ಏಷ ಚೈವ ಮಹಾಭಾಗೇ ಬಲೀ ಬಲವತಾಂವರಃ |
ಮೋಕ್ಷಯಿಷ್ಯತಿ ತೇ ಮಾತರ್ದಾಸೀಭಾವಾನ್ಮಮಾನುಜಃ ॥22॥
ಎಲೌ ಮಹಾನುಭಾವಳೇ, ಈ ನನ್ನ ತಮ್ಮನು ಮಾತ್ರ ಬಲಿಷ್ಠರಲ್ಲಿ ಶ್ರೇಷ್ಠನಾಗಿ ಎಲೌ ತಾಯಿಯೇ, ನಿನ್ನನ್ನು ದಾಸ್ಯದಿಂದ ವಿಮೋಚನೆಗೊಳಿಸುವನು (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಅರುಣೋತ್ಪತ್ತಿರ್ನಾಮ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಕದ್ರೂ-ವಿನತೆಯರ ಪಣ.
ಭೀಷ್ಮಃ
ವಿನತಾ ಪುತ್ರಶೋಕಾರ್ತಾ ಶಾಪಾದ್ ಭೀತಾ ಚ ಭಾರತ |
ಪ್ರತೀಕ್ಷತೇ ಸ್ಮ ತಂ ಕಾಲಂ ಯಃ ಪುತ್ರೋಕ್ತಸ್ತದಾಽಭವತ್ ॥1॥
ಭೀಷ್ಮ ಎಲೈ ಭಾರತನೇ, ವಿನತೆಯು ಪುತ್ರಶೋಕದಿಂದ ಪೀಡಿತಳಾಗಿ, ಅರುಣನ ಶಾಪಕ್ಕೂ ಹೆದರಿ, ಪುತ್ರನಾದ ಅರುಣನು ಹೇಳಿದ ಕಾಲವನ್ನು ನಿರೀಕ್ಷಣೆ ಮಾಡಿಕೊಂಡಿದ್ದಳು.
ತತೋಽಪ್ಯತೀತೇ ಪಂಚಶತೇ ವರ್ಷಾಣಾಂ ಕಾಲಸಂಯುಗೇ |
ಗರುಡೋಽಥ ಮಹಾವೀರ್ಯೋ ಜಜ್ಞೇ ಭುಜಗಭುಗ್ ಬಲೀ ॥2॥
ಅನಂತರ ಐದುನೂರು ವರ್ಷಗಳ ಸಮುದಾಯವು ಕಳೆಯುತ್ತಿರಲು ಮಹಾಪರಾಕ್ರಮಿಯೂ ಬಲಿಷ್ಠನೂ, ಸರ್ಪಭೋಜನನೂ ಆದ ಗರುಡನು ಜನಿಸಿದನು.
ಬಂಧುರಾಸ್ಯಃ ಶಿಖೀ ಪತ್ರಕೋಶಃ ಕೂರ್ಮನಖೋ ಮಹಾನ್ |
ರಕ್ತಾಕ್ಷಃ ಸಂಹತಗ್ರೀವೋ ಹ್ರಸ್ವಪಾದೋ ಮಹಾಶಿರಾಃ ॥3॥
ಸುಂದರವಾದ ಮುಖ, ತಲೆಯ ಮೇಲೆ ಶಿಖೆ, ತುಂಬಿಕೊಂಡ ಎದೆಗಳು, ಆಮೆಯ ನಖದಂತಹ ನಖಗಳು, ದೊಡ್ಡ ಆಕೃತಿ, ಕೆಂಪು

ಕಣ್ಣುಗಳು, ಪುಷ್ಟವಾದ ಕತ್ತು, ಚಿಕ್ಕಪಾದಗಳು, ದೊಡ್ಡ ತಲೆ - ಇವುಗಳಿಂದ ಕೂಡಿ ಜನಿಸಿದನು.
ಯಸ್ತ್ವಂಡಾತ್ ಸ ವಿನಿರ್ಭಿನ್ನೋ ನಿಷ್ಕ್ರಾಂತೋ ಭರತರ್ಷಭ |
ವಿನತಾಪೂರ್ವಜಃ ಪುತ್ರಃ ಸೋಽರುಣೋ ದೃಶ್ಯತೇ ದಿವಿ ॥4॥
ಎಲೈ ಭರತಶ್ರೇಷ್ಠನೇ, ಯಾವ ಅರುಣನು ಅಂಡವನ್ನು ಭೇದಿಸಿಕೊಂಡು ಹೊರಗೆ ಬಂದು, ವಿನತೆಯ ಪ್ರಥಮ ಪುತ್ರನೆನಿಸಿದನೋ ಅವನು ಅರುಣನಾಗಿ ಆಕಾಶದಲ್ಲಿ ಕಾಣುತ್ತಾನೆ.
ಪೂರ್ವಾಂ ದಿಶಮಭಿಪ್ರೇತ್ಯ ಸೂರ್ಯಸ್ಯೋದಯನಂ ಪ್ರತಿ |
ಅರುಣೋರುಣಸಂಕಾಶೋ ನಾಮ್ನಾ ಚೈವಾರುಣಃ ಸ್ಮೃತಃ ॥5॥
ಸೂರ್ಯೋದಯಕ್ಕಿಂತ ಸ್ವಲ್ಪ ಮುಂಚೆ ಪೂರ್ವದಿಕ್ಕಿನಲ್ಲಿ ಹೆಸರಿನಿಂದಲೂ ಮತ್ತು ಬಣ್ಣದಿಂದಲೂ ಅರುಣನಾಗಿ ಕಾಣಿಸಿಕೊಳ್ಳುತ್ತಾನೆ.
ಜಾತಮಾತ್ರಸ್ತು ವಿಹಗೋ ಗರುಡಃ ಪನ್ನಗಾಶನಃ |
ವಿಹಾಯ ಮಾತರಂ ಕ್ಷಿಪ್ರಮಗಮತ್ ಸರ್ವತೋ ದಿಶಃ ॥6॥
ಪನ್ನಗಾಶನನಾದ ಗರುಡನು ಪಕ್ಷಿಯಾಗಿ ಜನಿಸಿದ ಕೂಡಲೇ ತಾಯಿಯನ್ನು ಬಿಟ್ಟು ಶೀಘ್ರವಾಗಿ ಎಲ್ಲ ದಿಕ್ಕುಗಳಲ್ಲಿಯೂ ಹಾರಾಡಿದನು.
ಸ ತಥಾ ಚಾತಿವವೃಧೇ ಸರ್ವಕಾಮೈರಥಾರ್ಚಿತಃ |
ಪಿತಾಮಹವಿಸೃಷ್ಟೇನ ಭೋಜನೇನ ವಿಶಾಂಪತೇ ॥7॥
ಎಲೈ ರಾಜನೇ, ಬ್ರಹ್ಮದೇವರು ವ್ಯವಸ್ಥೆಗೊಳಿಸಿದ ಆಹಾರದಿಂದ ಮತ್ತು ಎಲ್ಲ ಕಾಮಗಳಿಂದಲೂ ಪೂಜಿತನಾದ ಅವನು ಬಹಳ ದೊಡ್ಡದಾಗಿ ಬೆಳೆದನು.
ತಸ್ಮಿಂಶ್ಚ ವಿಹಗೇ ತತ್ರ ಯಥಾಕಾಮಂ ವಿವರ್ಧತಿ |
ಕದ್ರೂಶ್ಚ ವಿನತಾ ಚೈವ ಗಚ್ಛೇತಾಂ ಸಾಗರಂ ಪ್ರತಿ ॥8॥
ಗರುಡನು ಆ ರೀತಿಯಲ್ಲಿ ತನ್ನ ಇಚ್ಛೆಯಂತೆ ಬೆಳೆಯುತ್ತಿರಲು ಕದ್ರೂ ಮತ್ತು ವಿನತೆಯರು ಸಾಗರದ ಸಮೀಪಕ್ಕೆ ಹೋದರು.
ದದೃಶಾತೇ ತು ತೇ ಯಾಂತಮುಚ್ಚೈಃಶ್ರವಸಮಂತಿಕಾತ್ |
ಸ್ನಾತ್ವೋಪವೃತ್ತಂ ತ್ವರಿತಂ ಪೀತವಂತಂ ಚ ವಾಜಿನಮ್ ॥9॥
ತತಃ ಕದ್ರೂರ್ಹಸಂತ್ಯೇವ ವಿನತಾಮಿದಮಬ್ರವೀತ್ |
ಹಯಸ್ಯ ವರ್ಣಃ ಕೋ ನ್ವತ್ರ ಬ್ರೂಹಿ ಯಸ್ತೇ ಮನಃ ಶುಭೇ ॥10॥
ಅವರು ಸ್ನಾನವನ್ನು ಮಾಡಿ, ಜಲಪಾನವನ್ನು ಮಾಡಿ, ಶೀಘ್ರವಾಗಿ ಹಿಂದಿರುಗುತ್ತಿರುವಾಗ ಉಚ್ಚೈಶ್ರವಸ್ ಅಶ್ವವನ್ನು ಸಮೀಪದಲ್ಲಿ ನೋಡಿದರು. ಆಗ ಕದ್ರುವು ನೋಡುತ್ತಲೇ ವಿನತೆಯನ್ನು ಕುರಿತು, ಶುಭಳೇ, ಅಶ್ವದ ಬಣ್ಣವು ಯಾವುದು ಎಂದು ನಿನ್ನ ಅಭಿಪ್ರಾಯ ಎಂದು ಹೇಳು ಎಂದು ಕೇಳಿದಳು.
ವಿನತಾ
ಏಕವರ್ಣೋ ಹಯೋ ರಾಜ್ಞಃ ಸರ್ವಶ್ವೇತೋ ಮತೋ ಮಮ |
ವರ್ಣಂ ವಾ ಕೀದೃಶಂ ತಸ್ಯ ಮನ್ಯಸೇ ತ್ವಂ ಮನಸ್ವಿನಿ ॥11॥
ವಿನತೆ ರಾಣಿಯೇ, ಅಶ್ವವು ಒಂದೇ ವರ್ಣವುಳ್ಳದ್ದು. ಅದು ಸರ್ವಶ್ವೇತವಾಗಿದೆ ಎಂದು ನನ್ನ ಅಭಿಪ್ರಾಯ. ಧೈರ್ಯಶಾಲಿನಿಯೇ, ನಿನ್ನ ಅಭಿಪ್ರಾಯದಲ್ಲಿ ಅಶ್ವದ ಬಣ್ಣವೇನು?
ಕದ್ರೂಃ
ಯದ್ಯಾರ್ಯೇ (ಸ) ಮತಸ್ತುಭ್ಯಂ ಯ ಏಷ ಹಯಸತ್ತಮಃ |
ಬ್ರೂಹಿ ಕಲ್ಯಾಣಿ ದೀವ್ಯಾವೋ ವರ್ಣಾನ್ಯತ್ವೇನ ಭಾಮಿನಿ ॥12॥
ಕದ್ರೂ ಪೂಜ್ಯಳೇ, ಈ ಶ್ರೇಷ್ಠವಾದ ಹಯವು ಅಂತಹ ಬಣ್ಣವುಳ್ಳದ್ದೆಂದು ನಿನ್ನ ಅಭಿಪ್ರಾಯವಾದರೆ, ಭಾಮಿನಿಯೇ ಹೇಳು. ನಾವಿಬ್ಬರೂ ಅದರ ಬಣ್ಣದ ವಿಷಯದಲ್ಲಿ ಪಣ (ಬಾಜಿಯನ್ನು) ಕಟ್ಟೋಣ.
ವಿನತಾ
ಯದ್ಯಾರ್ಯೇ ದೀವ್ಯಸಿ ತ್ವಂ ಮೇ ಕಃ ಪಣೋ ನೋ ಭವಿಷ್ಯತಿ |
ಸಾ ತಜ್ಜ್ಞಾತ್ವಾ ಪಣೇಯಂ ವೈ ಜ್ಞಾತ್ವಾ ತು ವಿಪಣೇ ತ್ವಯಾ ॥13॥
ವಿನತೆ ಪೂಜ್ಯಳೇ, ನೀನು ನನ್ನ ಜೊತೆ ದ್ಯೂತವನ್ನು ಆಡುವುದಾದರೆ ಪಣವು ಯಾವುದಾಗುವುದು? ಪಣವನ್ನು ತಿಳಿದು ನಾನು ನಿನ್ನ ಜೊತೆಗೆ ದ್ಯೂತವಾಡುವೆನು (ಬಾಜಿಯನ್ನು ಕಟ್ಟುವೆನು).
ಕದ್ರೂಃ
ಜಿತಾ ದಾಸೀ ಭವೇರ್ಮೇ ತ್ವಮಹಂ ಚಾಪ್ಯಸಿತೇಕ್ಷಣೇ |
ನೈಕವರ್ಣೈಕವರ್ಣತ್ವೇ ವಿನತೇ ರೋಚತೇ ಚ ತೇ ॥14॥
ಕದ್ರು ನೀನು ಜಿತಳಾದರೆ ನನಗೆ ದಾಸಿಯಾಗಬೇಕು. ಎಲೌ ಕೃಷ್ಣನೇತ್ರೆಯೇ, ನಾನು ಜಿತಳಾದರೆ ನಿನ್ನ ದಾಸಿಯಾಗುವೆನು. ಎಲೌ ವಿನತೆಯೇ, ಅಶ್ವದ ವರ್ಣವು ಏಕ ಮತ್ತು ಅನೇಕ ಎಂಬ ವಿಷಯದಲ್ಲಿ ನಿನಗೆ ಯಾವುದು ರುಚಿಸುತ್ತದೆ?
ರೋಚತೇ ಮೇ ಪಣೇ ರಾಜ್ಞಿ ದಾಸೀತ್ವೇನ ನ ಸಂಶಯಃ |
ಸತ್ಯಮಾತಿಷ್ಠ ಭದ್ರಂ ತೇ ಸತ್ಯೇ ಸ್ಥಾಸ್ಯಾಮಿ ಚಾಪ್ಯಹಮ್ ॥15॥
ವಿನತೆ ಎಲೌ ರಾಣಿಯೇ, ಸೋತವರು ದಾಸಿಯಾಗಬೇಕೆಂಬ ಪಣವು ನನಗೆ ರುಚಿಸುತ್ತದೆ. ಇದರಲ್ಲಿ ಸಂಶಯವಿಲ್ಲ. ನೀನು ಸತ್ಯವನ್ನು

ಆಶ್ರಯಿಸುವವಳಾಗು. ನಿನಗೆ ಶುಭವಾಗಲಿ. ನಾನೂ ಸಹ ಸತ್ಯದಲ್ಲಿಯೇ ನಿಲ್ಲುವೆನು (ಅಶ್ವದ ವರ್ಣವು ನಾನು ಮೊದಲು ಹೇಳಿದಂತೆ ಸರ್ವಶ್ವೇತವಾದುದು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಗರುಡೋತ್ಪತ್ತಿರ್ನಾಮ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ತನ್ನ ಪುತ್ರರ ಜೊತೆಯಲ್ಲಿ ಕದ್ರುವಿನ ಸಂವಾದ
ಭೀಷ್ಮಃ
ವಿನತಾ ತು ತಥೇತ್ಯುಕ್ತ್ವಾ ಕೃತಸಂಶಪಥಾ ಪಣೇ |
ಕದ್ರೂರಪಿ ತಥೇತ್ಯುಕ್ತ್ವಾ ಪುತ್ರಾನಿದಮುವಾಚ ಹ ॥1॥
ಭೀಷ್ಮ ವಿನತೆಯು `ಹಾಗೆಯೇ ಆಗಲಿ' ಎಂದು ಹೇಳಿ ಪಣದ ವಿಷಯದಲ್ಲಿ ಶಪಥವನ್ನು ಮಾಡಿದಳು. ಕದ್ರುವೂ ಸಹ `ಹಾಗೆಯೇ ಆಗಲಿ' ಎಂದು ಹೇಳಿ ತನ್ನ ಪುತ್ರರನ್ನು ಕುರಿತು ಹೀಗೆ ಮಾತನಾಡಿದಳು.
ಕದ್ರೂಃ
ಮಯಾ ಕೃತಃ ಪಣಃ ಪುತ್ರಾ ಮಿಥೋ ವಿನತಯಾ ಸಹ |
ಉಚ್ಚೈಃಶ್ರವಸಿ ಗಾಂಧರ್ವೇ ತಚ್ಛೃಣುಧ್ವಂ ಭುಜಂಗಮಾಃ ॥2॥
ಕದ್ರೂ ಎಲೈ ಪುತ್ರರೇ, ಸರ್ಪಗಳೇ, ನಾನು ವಿನತೆಯ ಜೊತೆಯಲ್ಲಿ ಉಚ್ಚೈಶ್ರವಸ್ ಅಶ್ವದ ವಿಷಯದಲ್ಲಿ ಪರಸ್ಪರವಾಗಿ ಪಣವನ್ನು ಮಾಡಿಕೊಂಡಿದ್ದೇನೆ. ನೀವು ಅದನ್ನು ಕೇಳಿ.
ಅಬ್ರುವಂ ನೈಕವರ್ಣಂ ತಂ ಸೈಕವರ್ಣಮಥಾಬ್ರುವೀತ್ |
ಜಿತಾ ದಾಸೀ ಭವೇತ್ ಪುತ್ರಾಃ ಸಾ ವಾಹಂ ವಾ ನ ಸಂಶಯಃ ॥3॥
ನಾನು ಅದಕ್ಕೆ ಒಂದೇ ಬಣ್ಣವಿಲ್ಲ ಎಂದು ಹೇಳಿದ್ದೇನೆ. ಅವಳು ಒಂದೇ ಬಣ್ಣ ಉಳ್ಳದ್ದು ಎಂದು ಹೇಳಿದ್ದಾಳೆ. ಎಲೈ ಪುತ್ರರೇ, ನಾನಾಗಲೀ ಅಥವಾ ಅವಳಾಗಲೀ ಪರಾಜಿತರಾದವರು ದಾಸಿಯಾಗುವರು. ಇದರಲ್ಲಿ ಸಂಶಯವಿಲ್ಲ.
ಏಕವರ್ಣಶ್ಚ ವಾಜೀ ಸ ಚಂದ್ರಕೋಕನದಪ್ರಭಃ |
ಸಾಹಂ ದಾಸೀ ಭವಿಷ್ಯಾಮಿ ಜಿತಾ ಪುತ್ರಾ ನ ಸಂಶಯಃ ॥4॥
ಆ ಅಶ್ವವು ಚಂದ್ರನಂತೆ, ಕೋಕನದ (ಕೆಂದಾವರೆ) ಪುಷ್ಪದಂತೆ ಒಂದೇ ಬಣ್ಣವುಳ್ಳದ್ದು. ಎಲೈ ಪುತ್ರರೇ, ನಾನು ಪರಾಜಿತಳಾಗಿ ದಾಸಿಯಾಗುವೆನು. ಇದರಲ್ಲಿ ಸಂಶಯವಿಲ್ಲ.
ತೇ ಯೂಯಮಶ್ವಪ್ರವರಮಾವಿಶಧ್ವಮತಂದ್ರಿತಾಃ |
ಸರ್ವೇ ತ್ವೇಕಂ ಬಾಲಧಿಗಾ ಬಾಲಾ ಭೂತ್ವಾಂಜನಪ್ರಭಾಃ ॥5॥
ಆದ್ದರಿಂದ ನೀವು ಆ ಶ್ರೇಷ್ಠವಾದ ಅಶ್ವವನ್ನು ಸಮೀಪಿಸಿ, `ಕಾಡಿಗೆಯಂತಹ ಕಪ್ಪು ಬಣ್ಣವುಳ್ಳವುಗಳಾಗಿ ಅದರ ಬಾಲದ ಒಂದೊಂದು ಕೂದಲನ್ನೂ ಆಶ್ರಯಿಸಿ'.
ಸರ್ಪಾಃ
ನಿಕೃತ್ಯಾ ನ ಜಯಃ ಶ್ರೇಯಾನ್ ಮಾತಃ ಸತ್ಯಾ ಗಿರಃ ಶೃಣು |
ಆಯತ್ಯಾಂ ಚ ತದಾತ್ವೇ ಚ ನ ಚ ಧರ್ಮೋಽತ್ರ ವಿದ್ಯತೇ ॥6॥
ಸರ್ಪಗಳು `ತಾಯಿಯೇ, ಮೋಸದಿಂದ ಜಯವನ್ನು ಗಳಿಸುವುದು ಒಳ್ಳೆಯದಲ್ಲ. ನಮ್ಮ ಸತ್ಯವಾದ ಮಾತನ್ನು ಕೇಳು. ಹೀಗೆ ಮಾಡಿದರೆ ವರ್ತಮಾನ ಕಾಲದಲ್ಲಾಗಲೀ ಅಥವಾ ಭವಿಷ್ಯತ್ಕಾಲದಲ್ಲಾಗಲೀ ಇದರಲ್ಲಿ ಧರ್ಮವಿಲ್ಲ.
ಸಾ ತ್ವಂ ಧರ್ಮಾದಪೇತಂ ವೈ ಕಾಲಸ್ಯೈವ ಹಿತಂ ವಚಃ |
ನಿಕೃತ್ಯಾ ವಿಜಯಂ ಮಾತರ್ಮಾ ಸ್ಮ ಕಾರ್ಷೀಃ ಕಥಂಚನ ॥7॥
ನೀನು ಧರ್ಮದಿಂದ ಚ್ಯುತಳಾದ ವರ್ತಮಾನಕಾಲದಲ್ಲಿ ಮಾತ್ರ ಹಿತವಾದ ಮಾತನ್ನು ಆಡುತ್ತಿದ್ದೀಯೆ. ತಾಯಿಯೇ, ಮೋಸದಿಂದ ಎಂದೂ ಜಯವನ್ನು ಸಂಪಾದಿಸಬೇಡ.
ಯದ್ಯಧರ್ಮೇಣ ವಿಜಯಂ ವಯಂ ಕಾಂಕ್ಷಾಮಹೇ ಕ್ವಚಿತ್ |
ತ್ವಯಾ ನಾಮ ನಿವಾರ್ಯಾಃ ಸ್ಮ ಮಾ ಕುರುಧ್ವಮಿತಿ ಬ್ರುವಃ ॥8॥
ನಾವೇ ಒಂದು ಪಕ್ಷ ಅಧರ್ಮದಿಂದ ವಿಜಯವನ್ನು ಆಶಿಸಿದರೆ ನೀನು ನಮಗೆ ಹಾಗೆ ಮಾಡಬೇಡಿ ಎಂದು ಹೇಳಬೇಕಷ್ಟೆ?
ಸಾ ತ್ವಮಸ್ಮಾನಪಿ ಸತೋ ವಿಪಾಪಾನೃಜುಬುದ್ಧಿನಃ |
ಕಲ್ಮಷೇಣಾಭಿಸಂಯೋಕ್ತುಂ ಕಾಂಕ್ಷಸೇ ಲೋಭಮೋಹಿತಾ ॥9॥
ಅಂತಹ ನೀನು ಸಜ್ಜನರಾದ, ಪಾಪರಹಿತರಾದ, ಋಜು ಬುದ್ಧಿಯುಳ್ಳ ನಮ್ಮನ್ನೂ ಸಹ ಲೋಭದಿಂದ ಮೋಹಿತಳಾಗಿ, ಪಾಪದ ಜೊತೆಯಲ್ಲಿ ಸಂಯೋಗವನ್ನು ಮಾಡಲು ಬಯಸುತ್ತಿದ್ದೀಯೆ.
ತೇ ವಯಂ ತ್ವಾಂ ಪರಿತ್ಯಜ್ಯ ದ್ರವಿಷ್ಯಾಮ ದಿಶೋ ದಶ |
ಯತ್ರ ವಾಕ್ಯಂ ನ ತೇ ಮಾತಃ ಪುನಃ ಶ್ರೋಷ್ಯಾಮ ಈದೃಶಮ್ ॥10॥
ಅಂತಹ ನಾವು ನಿನ್ನನ್ನು ಬಿಟ್ಟು ಇನ್ನೊಮ್ಮೆ ನಿನ್ನ ಇಂತಹ ಮಾತುಗಳು ಕೇಳದಿರುವ ಹತ್ತುದಿಕ್ಕುಗಳಿಗೆ ಓಡಿ ಹೋಗುವೆವು.
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ |

ಉತ್ಪಥಂ ಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ ॥11॥
ಹಿರಿಯನಾದವನೂ ಸಹ ಗರ್ವಕ್ಕೆ ಒಳಗಾಗಿ ಕಾರ್ಯಾಕಾರ್ಯವನ್ನು ತಿಳಿಯದೆ ದುರ್ಮಾರ್ಗಗಾಮಿಯಾದರೆ ಅವನ ಪರಿತ್ಯಾಗವು ಶಾಸ್ತ್ರದಲ್ಲಿ ವಿಧಿಸಲ್ಪಡುತ್ತದೆ'.
ಕದ್ರೂಃ
ಶೃಣೋಮಿ ವಿವಿಧಾ ವಾಚೋ ಹೇತುಮತ್ಯಃ ಸಮೀರಿತಾಃ |
ವಕ್ರಗಾ ಮನ್ನಿಕೃತ್ಯರ್ಥಂ ತದಹಂ ವೋ ನ ರೋಚಯೇ ॥12॥
ಕದ್ರೂ `ಎಲೈ ಸರ್ಪಗಳೇ, ನನ್ನನ್ನು ವಂಚನೆ ಮಾಡುವ ಸಲುವಾಗಿ ನೀವು ಆಡುತ್ತಿರುವ, ಯುಕ್ತಿಯುಕ್ತವಾದ ವಿವಿಧವಾದ ಮಾತುಗಳನ್ನು ನಾನು ಕೇಳುತ್ತಿದ್ದೇನೆ. ನಿಮ್ಮ ಮಾತುಗಳನ್ನು ನಾನು ಇಷ್ಟಪಡುವುದಿಲ್ಲ.
ನ ಚ ತತ್ಪಣಿತಂ ಮಂದಾಃ ಶಕ್ಯಂ ಜೇತುಮತೋಽನ್ಯಥಾ |
ಜಿತೇ ನಿಕೃತ್ಯಾ ಶ್ರುತ್ವೈತತ್ಕ್ಷೇಮಂ ಕುರುತ ಪುತ್ರಕಾಃ ॥13॥
ಎಲೈ ಮಂದರೇ, ಹೀಗೆ ಮಾಡದಿದ್ದರೆ ಬೇರೆ ರೀತಿಯಲ್ಲಿ ಪಣವನ್ನು ಗೆಲ್ಲಲು ಸಾಧ್ಯವಿಲ್ಲ. ನನ್ನ ಮಾತನ್ನು ಕೇಳಿ ಮೋಸದಿಂದ ಜಯವನ್ನು ಗಳಿಸಿ. ಎಲೈ ಪುತ್ರರೇ, ನನಗೆ ಕ್ಷೇಮವನ್ನುಂಟು ಮಾಡಿ.
ಶ್ವೋಽಹಂ ಪ್ರಭಾತಸಮಯೇ ಜಿತಾ ಧರ್ಮೇಣ ಪುತ್ರಕಾಃ |
ಶೈಲೂಷಿಣೀ ಭವಿಷ್ಯಾಮಿ ವಿನತಾಯಾ ನ ಸಂಶಯಃ ॥14॥
ಎಲೈ ಪುತ್ರರೇ, ಇಲ್ಲದಿದ್ದರೆ ನಾಳೆ ಪ್ರಾತಃಕಾಲದಲ್ಲಿ ನಾನು ಧರ್ಮದಿಂದ ಪರಾಜಿತಳಾಗಿ ವಿನತೆಯ ದಾಸಿಯಾಗುವುದರಲ್ಲಿ ಸಂಶಯವಿಲ್ಲ.
ಇಹ ಚಾಮುತ್ರ ಚಾರ್ಥಾಯ ಪುತ್ರಾನಿಚ್ಛಂತಿ ಮಾತರಃ |
ಸೇಯಮೀಹಾ ವಿಪನ್ನಾ ಮೇ ಯುಷ್ಮಾನಾಸಾದ್ಯ ಸಂಗತಾನ್ ॥15॥
ತಾಯಿಯರು ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಸುಖವನ್ನು ಸಂಪಾದಿಸಿಕೊಳ್ಳಲು ಪುತ್ರರನ್ನು ಬಯಸುತ್ತಾರೆ. ಒಂದೇ ಅಭಿಪ್ರಾಯವಿರುವ ನಿಮ್ಮನ್ನು ಮಕ್ಕಳಾಗಿ ಪಡೆದು ನನ್ನ ಅಂತಹ ಸಂಕಲ್ಪವು ನಾಶವನ್ನು ಹೊಂದಿದೆ.
ಇಹ ವಾ ತಾರಯೇತ್ ಪುತ್ರಃ ಪ್ರೇತ್ಯ ವಾ ತಾರಯೇತ್ ಪಿತೃನ್ |
ನಾತ್ರ ಚಿತ್ರಂ ಭವೇತ್ ಕಿಂಚಿತ್ ಪುನಾತೀತಿ ಚ ಪುತ್ರತಾ ॥16॥
ಪುತ್ರನಾದವನು ಪಿತೃಗಳನ್ನು ಈ ಲೋಕದಲ್ಲಾಗಲೀ ಅಥವಾ ಪರಲೋಕದಲ್ಲಾಗಲೀ ದಾಟಿಸಬೇಕು. ಇದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಪವಿತ್ರೀಕರಿಸುವುದರಿಂದ ಪುತ್ರನೆನಿಸುತ್ತಾನೆ.
ತೇ ಯೂಯಂ ತಾರಣಾರ್ಥಾಯ ಮಮ ಪುತ್ರಾ ಮನೋಜವಾಃ |
ಆವಿಶಧ್ವಂ ಹಯಶ್ರೇಷ್ಠಂ ಬಾಲಾ ಭೂತ್ವಾಽಂಜನಪ್ರಭಾಃ ॥17॥
ಅಂತಹ ನನ್ನ ಪುತ್ರರಾದ, ಮನೋಜವವುಳ್ಳ ನೀವು ನನ್ನನ್ನು ಈ ವಿಪತ್ತಿನಿಂದ ದಾಟಿಸಲು ಕಾಡಿಗೆಯ ಕಪ್ಪುಬಣ್ಣದ ಸರ್ಪಗಳಾಗಿ ಆ ಶ್ರೇಷ್ಠವಾದ ಅಶ್ವದ ಬಾಲವನ್ನು ಆಶ್ರಯಿಸಿ.
ಜಾನಾಮ್ಯಧರ್ಮಂ ಸಕಲಂ ವಿಜಿತಾ ವಿನತಾ ಭವೇತ್ |
ನಿಕೃತ್ಯಾ ದಾಸಭಾವಸ್ತು ಯುಷ್ಮಾನಪ್ಯವಪೀಡಯೇತ್ ॥18॥
ನಾನು ಧರ್ಮವೆಲ್ಲವನ್ನೂ ತಿಳಿದಿದ್ದೇನೆ. ವಿನತೆಯು ಮೋಸದಿಂದಲಾದರೂ ಪರಾಜಿತಳಾಗಬೇಕು. ನಾನು ದಾಸ್ಯವನ್ನು ಹೊಂದಿದರೆ ಅದು ನಿಮಗೂ ಪೀಡೆಯನ್ನುಂಟು ಮಾಡೀತು.
ನಿಕೃತ್ಯಾ ವಿಜಯೋ ವೇತಿ ದಾಸತ್ವಂ ವಾ ಪರಾಭವೇ |
ಉಭಯಂ ನಿಶ್ಚಯಂ ಕೃತ್ವಾ ಜಯೋ ವೈ ಧಾರ್ಮಿಕೋ ವರಃ ॥19॥
ಮೋಸದಿಂದ ವಿಜಯ ಅಥವಾ ಪರಾಜಿತಳಾಗಿ ದಾಸ್ಯ, ಇವೆರಡನ್ನೂ ವಿಚಾರ ಮಾಡಿದರೆ ನನಗೆ ಜಯವೇ ಶ್ರೇಷ್ಠವೆಂದು ತೋರುತ್ತದೆ.

ಯದ್ಯಪ್ಯಧರ್ಮೋ ವಿಜಯೋ ಯುಷ್ಮಾನೇವ ಸ್ಪೃಶೇತ್ ಪುನಃ |
ಗುರೋರ್ವಚನಮಾಸ್ಥಾಯ ಧರ್ಮೋ ವಾ ಸಂಭವಿಷ್ಯತಿ ॥20॥
ಯದ್ಯಪಿ ಹೀಗೆ ವಿಜಯವನ್ನು ಸಂಪಾದಿಸಿದರೆ ಉಂಟಾಗುವ ಅಧರ್ಮವು ನಿಮ್ಮನ್ನೂ ಮುಟ್ಟೀತು. ಆದರೆ ಹಿರಿಯರ ಮಾತನ್ನು ಕೇಳುವುದರಿಂದ ನಿಮಗೆ ಧರ್ಮವೇ ಉಂಟಾಗುವುದು'.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಕದ್ರೂ-ಸರ್ಪಸಂವಾದೋ ನಾಮ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
ಹತ್ತೊಂಬತ್ತನೆಯ ಅಧ್ಯಾಯ
ವಿನತೆಯ ಪರಾಜಯ
ಭೀಷ್ಮಃ
ಶ್ರುತ್ವಾ ತು ವಚನಂ ಮಾತುಃ ಕ್ರುದ್ಧಾಯಾಸ್ತೇ ಭುಜಂಗಮಾಃ |
ಕೃಚ್ಛ್ರೇಣೈವಾನ್ವಮೋದಂತ ಕೇಚಿದ್ಧಿತ್ವಾ ದಿಶೋ ಗತಾಃ ॥1॥
ಭೀಷ್ಮ ತಾಯಿಯ ಮಾತನ್ನು ಕೇಳಿ ಕೋಪಗೊಂಡ ಆ ಸರ್ಪಗಳು ಬಹಳ ಕಷ್ಟದಿಂದಲೇ ಅನುಮತಿಯನ್ನು ನೀಡಿದವು. ಇನ್ನು ಕೆಲವು ಸರ್ಪಗಳು ತಾಯಿಯ ಮಾತನ್ನು ಒಪ್ಪದೆ ಅವಳನ್ನು ಬಿಟ್ಟು ದಿಕ್ಕು ದಿಕ್ಕುಗಳಿಗೆ ಹೊರಟು ಹೋದವು.

ಯೇ ಪ್ರತಸ್ಥುರ್ದಿಶಸ್ತತ್ರ ಕ್ರುದ್ಧಾ ತಾನಶಪದ್ ಭೃಶಮ್ |
ಭುಜಂಗಮಾನಾಂ ಮಾತಾಽಸೌ ಕದ್ರೂರ್ವೈರಕರೀ ತದಾ ॥2॥
ಯಾವ ಸರ್ಪಗಳು ತನ್ನನ್ನು ಬಿಟ್ಟು ಹೊರಟು ಹೋದವೋ ಅಂತಹ ಸರ್ಪಗಳನ್ನು ಕುರಿತು ಸರ್ಪಗಳ ತಾಯಿಯಾದ ಕದ್ರುವು ಅವರಲ್ಲಿ ವೈರವನ್ನು ಮಾಡಿ ಕೋಪದಿಂದ ಶಾಪವನ್ನು ನೀಡಿದಳು.
ಉತ್ಪತ್ಸ್ಯತಿ ಹಿ ರಾಜನ್ಯಃ ಪಾಂಡವೋ ಜನಮೇಜಯಃ |
ಚತುರ್ಥೋ ಧನ್ವಿನಾಂ ಶ್ರೇಷ್ಠಾತ್ ಕುಂತೀಪುತ್ರಾತ್ ಧನಂಜಯಾತ್ ॥
`ಧನುರ್ಧಾರಿಗಳಲ್ಲಿ ಶ್ರೇಷ್ಠನಾದ, ಕುಂತೀಪುತ್ರನಾದ ಧನಂಜಯನಿಂದ ಪಾಂಡವ ವಂಶದಲ್ಲಿ ನಾಲ್ಕನೆಯವನಾಗಿ ಜನಮೇಜಯನೆಂಬ ರಾಜನು ಆಗುತ್ತಾನೆ.
ಸ ಸರ್ಪಸತ್ರಮಾಹರ್ತಾ ಕ್ರುದ್ಧಃ ಕುರುಕುಲೋದ್ವಹಃ |
ತಸ್ಮಿನ್ ಸತ್ರೇಽಗ್ನಿನಾ ಯುಷ್ಮಾನ್ ಪಂಚತ್ವಮುಪನೇಷ್ಯತಿ ॥4॥
ಕುರುಕುಲೋದ್ವಹನಾದ ಅವನು ಕೋಪಗೊಂಡು ಸರ್ಪಸತ್ರವನ್ನು ಮಾಡುವನು. ಆ ಸತ್ರದಲ್ಲಿ ನಿಮ್ಮನ್ನು ಅಗ್ನಿಯಲ್ಲಿ ಹೋಮ ಮಾಡುವನು' (ಎಂದು ಶಾಪವನ್ನು ನೀಡಿದಳು).
ಏವಂ ಕ್ರುದ್ಧಾಽಶಪನ್ಮಾತಾ ಪನ್ನಗಾನ್ ಧರ್ಮಚಾರಿಣಃ |
ಗುರೋಃ ಪರಿತ್ಯಾಗಕೃತಂ ನೈತದನ್ಯದ್ ಭವಿಷ್ಯತಿ ॥5॥
ಹೀಗೆ ತಾಯಿಯು ಕ್ರುದ್ಧಳಾಗಿ ಧರ್ಮಾಚರಣೆಯನ್ನು ಮಾಡುವ ಆ ಸರ್ಪಗಳನ್ನು `ಹಿರಿಯರ ಮಾತನ್ನು ಪರಿತ್ಯಾಗ ಮಾಡಿರುವುದರಿಂದ ಇದು ಬೇರೆ ರೀತಿಯಾಗಲು ಸಾಧ್ಯವಿಲ್ಲ' ಎಂದು ಶಾಪ ನೀಡಿದಳು.
ಏವಂ ಶಪ್ತಾ ದಿಶಃ ಪ್ರಾಪ್ತಾಃ ಪನ್ನಗಾ ಧರ್ಮಚಾರಿಣಃ |
ವಿಹಾಯ ಮಾತರಂ ಕ್ರುದ್ಧಾ ಗತಾ ವೈರಕರೀಂ ತದಾ ॥6॥
ಹೀಗೆ ಧರ್ಮಚಾರಿಗಳಾದ ಸರ್ಪಗಳು ಶಾಪವನ್ನು ಪಡೆದು, ವೈರವನ್ನು ಮಾಡಿದ ತಾಯಿಯನ್ನು ಬಿಟ್ಟು ಕ್ರೋಧದಿಂದ ಹೊರಟು ಹೋದವು.
ತತ್ರ ಯೇ ವೃಜಿನಂ ತಸ್ಯಾ ಅನಾಪನ್ನಾ ಭುಜಂಗಮಾಃ |
ತೇ ತಸ್ಯ ವಾಜಿನೋ ವಾಲಾ ಬಭೂವುರಸಿತಪ್ರಭಾಃ ॥7॥
ತಾಯಿಗೆ ವಿರೋಧವನ್ನು ಮಾಡದಿದ್ದ ಸರ್ಪಗಳು ಹೋಗಿ, ಆ ಅಶ್ವದ ಬಾಲದಲ್ಲಿ ಕಪ್ಪಾದ ಕೂದಲುಗಳ ಬಣ್ಣವನ್ನು ಹೊಂದಿ ಸೇರಿಕೊಂಡವು.
ತಾನ್ ದೃಷ್ಟ್ವಾ ವಾಲಧಿಸ್ಥಾಂಶ್ಚ ಪುತ್ರಾನ್ ಕದ್ರೂರಥಾಬ್ರವೀತ್ |
ವಿನತಾಮಥ ಸಂಹೃಷ್ಟಾ ಹಯೋಽಸೌ ದೃಶ್ಯತಾಮಿತಿ ॥8॥
ಬಾಲವನ್ನು ಆಶ್ರಯಿಸಿದ ತನ್ನ ಪುತ್ರರಾದ ಸರ್ಪಗಳನ್ನು ನೋಡಿ ಸಂತೋಷಗೊಂಡ ಆ ಕದ್ರುವು ವಿನತೆಯನ್ನು ಕುರಿತು ಆ ಕುದುರೆಯನ್ನು ನೋಡೋಣ ಎಂದು ಹೇಳಿದಳು.
ಏಕವರ್ಣೋ ನ ವಾ ಭದ್ರೇ ಪಣೋ ನೌ ಸುವ್ಯವಸ್ಥಿತಃ |
ಉದಕಾದುತ್ತರಂತಂ ತಂ ಹಯಂ ಚೈವ ಚ ಭಾಮಿನಿ ॥9॥
`ಎಲೌ ಭಾಮಿನಿಯೇ, ನೀರಿನಿಂದ ಎದ್ದುಬರುವ ಆ ಅಶ್ವವನ್ನು ನೋಡೋಣ. ಎಲೌ ಶುಭಳೇ, ಅದು ಏಕವರ್ಣವುಳ್ಳದ್ದು ಎಂದು ನೀನು, ಅನೇಕ ವರ್ಣವುಳ್ಳದ್ದು ಎಂದು ನಾನು ಮಾಡಿರುವ ಪಣವು ಸ್ಥಿರವಾಗಿದೆ'.
ಸಾ ತ್ವವಕ್ರಮತಿರ್ದೇವೀ ವಿನತಾ ಜಿಹ್ಮಗಾಮಿನೀಮ್ |
ಅಬ್ರವೀದ್ ಭಗಿನೀಂ ಕಿಂಚಿದ್ ವಿಹಸಂತೀವ ಭಾರತ ॥10॥
ಎಲೈ ಭಾರತನೇ, ನೇರವಾದ ಬುದ್ಧಿಯುಳ್ಳ ವಿನತೆಯು ಕುಟಿಲ ಬುದ್ಧಿಯುಳ್ಳ ಕದ್ರುವನ್ನು ಕುರಿತು ಸ್ವಲ್ಪ ನಕ್ಕು ಮಾತನಾಡಿದಳು.
ಹಂತ ಪಶ್ಯಾವ ಗಚ್ಛಾವಃ ಸುಕೃತೋ ನೌ ಪಣಃ ಶುಭೇ |
ದಾಸೀ ವಾ ತೇ ಭವಿಷ್ಯಾಮಿ ತ್ವಂ ವಾ ದಾಸೀ ಭವಿಷ್ಯಸಿ ॥11॥
`ಸಂತೋಷ, ಹೋಗಿ ನೋಡೋಣ. ಎಲೌ ಶುಭಳೇ, ನಾವು ಪಣವನ್ನು ಚೆನ್ನಾಗಿ ಕಟ್ಟಿದ್ದೇವೆ. ನಾನು ನಿನಗೆ ದಾಸಿಯಾಗುವೆನು ಅಥವಾ ನೀನು ನನಗೆ ದಾಸಿಯಾಗುವಿ'.
ಏವಂ ಸ್ಥಿರಂ ಪಣಂ ಕೃತ್ವಾ ಹಯಂ ತೇ ತು ದದರ್ಶತುಃ |
ಕೃತ್ವಾ ಸಾಕ್ಷಿಣಮಾತ್ಮಾನಂ ಭಗಿನ್ಯೌ ಕುರುಸತ್ತಮ ॥12॥
ಎಲೈ ಕುರುಶ್ರೇಷ್ಠನೇ, ಹೀಗೆ ಸ್ಥಿರವಾದ ಪಣವನ್ನು ಮಾಡಿ, ಅದಕ್ಕೆ ತಮ್ಮನ್ನೇ ಸಾಕ್ಷಿಗಳನ್ನಾಗಿ ಮಾಡಿಕೊಂಡು, ಸಹೋದರಿಯರಾದ ಅವರು ಆ ಅಶ್ವವನ್ನು ನೋಡಿದರು.
ಸಾ ದೃಷ್ಟ್ವೈವ ಹಯಂ ಮಂದಂ ವಿನತಾ ಶೋಕಕರ್ಶಿತಾ |
ಶ್ವೇತಂ ಚಂದ್ರಾಂಶುವಾಲಂ ತಂ ಕಾಳವಾಲಂ ಮನೋಜವಮ್ ॥13॥
ಆ ಕುದುರೆಯನ್ನು ಅಸ್ಪಷ್ಟವಾಗಿ ನೋಡಿದ ತಕ್ಷಣವೇ ಶುದ್ಧ ಚಂದ್ರವರ್ಣದ ಬಾಲವನ್ನು ಹೊಂದಿದ್ದ ಮನೋವೇಗವುಳ್ಳ ಆ ಕುದುರೆಯು ಕಪ್ಪಾದ ಬಾಲವನ್ನು ಹೊಂದಿರುವುದನ್ನು ನೋಡಿ ವಿನತೆಯು ಶೋಕಪೀಡಿತಳಾದಳು.
ತತ್ರ ಸಾ ವ್ರೀಳಿತಾ ವಾಕ್ಯಂ ವಿನತಾ ಸಾಶ್ರುಬಿಂದುಕಾ |
ಉವಾಚ ಕಾಳವಾಲೋಽಯಂ ತುರಗೋ ವಿಜಿತಂ ತ್ವಯಾ ॥14॥
ವಿನತೆಯು ನಾಚಿಕೆಯಿಂದ ಕೂಡಿ, ಕಣ್ಣಿನಲ್ಲಿ ನೀರು ತುಂಬಿಕೊಂಡು `ಈ ಅಶ್ವವು ಕಪ್ಪಾದ ಬಾಲವುಳ್ಳದ್ದಾಗಿದೆ. ಪಣದಲ್ಲಿ ನೀನೇ

ಗೆದ್ದಿದ್ದೀಯೆ' ಎಂದು ಹೇಳಿದಳು.
ದಾಸೀಂ ಮಾಂ ಪ್ರೇಷಯ ಸ್ವಾರ್ಥೇ ಯಥಾ ಕಾಮಮವಶಾಂ ಶುಭೇ |
ದಾಸ್ಯಶ್ಚ ಕಾಮಕಾರಾ ಹಿ ಭರ್ತೄಣಾಂ ನಾತ್ರ ಸಂಶಯಃ ॥15॥
`ಎಲೌ ಶುಭಳೇ, ನಿನ್ನ ಮನಸ್ಸಿಗೆ ಬಂದಂತೆ ನಿನ್ನ ದಾಸಿಯಾದ ನನ್ನನ್ನು ನಿನ್ನ ಇಷ್ಟಬಂದ ಕಡೆ ನಿನ್ನ ಕಾರ್ಯಕ್ಕಾಗಿ ಕಳುಹಿಸು. ದಾಸಿಯರು ಸ್ವಾಮಿಯ ಕಾರ್ಯವನ್ನು ಮಾಡುವರು ಎಂಬ ವಿಷಯದಲ್ಲಿ ಸಂಶಯವಿಲ್ಲ' (ಎಂದು ಹೇಳಿದಳು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ವಿನತಾಪರಾಜಯೋ ನಾಮ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಹತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತನೆಯ ಅಧ್ಯಾಯ
ಕದ್ರೂ-ಗರುಡರ ಸಂವಾದ
ಭೀಷ್ಮಃ
ತಾತ ಕದ್ರೂರ್ಹಸಂತೀವ ವಿನತಾಂ ಧರ್ಮಚಾರಿಣೀಮ್ |
ದಾಸೀವತ್ ಪ್ರೇಷಯಾಮಾಸ ಸಾ ಚ ಸರ್ವಂ ಚಕಾರ ತತ್ ॥1॥
ಭೀಷ್ಮ ಎಲೈ ಪ್ರೀತಿಪಾತ್ರನೇ, ಕದ್ರುವು ನಗುತ್ತಾ, ಧರ್ಮಚಾರಣಿಯಾದ ವಿನತೆಯನ್ನು ದಾಸಿಯಂತೆ ಎಲ್ಲ ಕಡೆಗಳಲ್ಲಿಯೂ ಕಳುಹಿಸಿದಳು. ವಿನತೆಯಾದರೂ ಅವಳ ಎಲ್ಲ ಕಾರ್ಯವನ್ನೂ ಮಾಡಿದಳು.
ನ ವಿವರ್ಣಾ ನ ಸಂಕ್ಷುಬ್ಧಾ ನ ಚ ಕ್ರುದ್ಧಾ ನ ದುಃಖಿತಾ |
ಪ್ರೇಷ್ಯಕರ್ಮ ಚಕಾರಾಸ್ಯಾ ವಿನತಾ ಕಮಲೇಕ್ಷಣಾ ॥2॥
ಕಮಲನೇತ್ರೆಯಾದ ವಿನತೆಯು ಮುಖದ ಕಾಂತಿಯನ್ನು ಕಡಿಮೆ ಮಾಡದೆ, ಮನಸ್ಸಿನಲ್ಲಿ ಕ್ಷೋಭೆಗೊಳ್ಳದೆ, ಕೋಪಗೊಳ್ಳದೆ, ಶೋಕಪಡದೆ ಕದ್ರುವಿನ ದಾಸಿಯ ಕರ್ಮವೆಲ್ಲವನ್ನೂ ಮಾಡಿದಳು.
ಇಮಾ ದಿಶಶ್ಚತಸ್ರೋಽಸ್ಯಾಃ ಪ್ರೇಷ್ಯಭಾವೇನ ವರ್ತಿತಾಃ |
ಅಥ ಸ್ಮ ವೈನತೇಯಂ ವೈ ಬಲದರ್ಪೌ ಸಮೀಯತುಃ ॥3॥
ಕದ್ರುವು ವಿನತೆಯನ್ನು ದಾಸಿಯಾಗಿ ನಾಲ್ಕು ದಿಕ್ಕುಗಳಿಗೂ ಕಳುಹಿಸಿದಳು. ಅನಂತರ ಕಾಲಕ್ರಮದಲ್ಲಿ ಗರುಡನಿಗೆ ಬಲ-ದರ್ಪಗಳು ಉಂಟಾದವು.
ತಂ ದರ್ಪವಶಮಾಪನ್ನಂ ಪರಿಧಾವಂತಮಂತಿಕಾತ್ |
ದದರ್ಶ ನಾರದೋ ರಾಜನ್ ದೇವರ್ಷಿರ್ದರ್ಪಸಂಯುತಮ್ ॥4॥
ಎಲೈ ರಾಜನೇ,ದರ್ಪಸಮನ್ವಿತನಾಗಿ ಹತ್ತಿರದಲ್ಲಿ ಓಡಾಡುತ್ತಿದ್ದ ಗರುಡನನ್ನು ದೇವರ್ಷಿಗಳಾದ ನಾರದರು ನೋಡಿದರು.
ತಮಬ್ರುವೀಚ್ಚ ದೇವರ್ಷಿರ್ನಾರದಃ ಪ್ರಹಸನ್ನಿವ |
ಕಿಂ ದರ್ಪವಶಮಾಪನ್ನೋ ನ ವೈ ಪಶ್ಯಸಿ ಮಾತರಮ್ ॥5॥
ದೇವರ್ಷಿಗಳಾದ ನಾರದರು ನಗುತ್ತಾ, ಅವನನ್ನು ಕುರಿತು ಇಷ್ಟೊಂದು ದರ್ಪವಶನಾಗಿದ್ದೀಯೆ. ನಿನ್ನ ತಾಯಿಯನ್ನು ನೋಡಿಕೊಳ್ಳುತ್ತಿಲ್ಲ ಎಂದು ಹೇಳಿದರು.
ಬಲೇನ ಚ ಪುನಃ ಸ್ತಬ್ಧೋ ಯೋಽಹಂಮಾನಕೃತಾ ಸದಾ |
ದಾಸೀಂ ಪನ್ನಗರಾಜಸ್ಯ ಮಾತುರಂತರ್ಗೃಹೇ ಸತೀಮ್ ॥6॥
`ನೀನು ಬಹಳ ಬಲ ಮತ್ತು ಅಹಂಕಾರದಿಂದ ಕೂಡಿದ್ದೀಯೆ. ಸರ್ಪರಾಜನ ತಾಯಿಯಾದ ಕದ್ರುವಿನ ಅಂತಃಪುರದಲ್ಲಿ ದಾಸಿಯಾಗಿರುವ ನಿನ್ನ ತಾಯಿಯನ್ನು ನೋಡಿಕೊಳ್ಳುತ್ತಿಲ್ಲ' ಎಂದು ಹೇಳಿದರು.
ತಮಬ್ರುವೀದ್ ವೈನತೇಯೋ ಕರ್ಮ ಕಿಂ ತನ್ಮಹಾಮತೇ |
ಜನಯಿತ್ರೀ ಮಯಿ ಸುತೇ ಜಾತಾ ದಾಸೀ ತಪಸ್ವಿನೀ ॥7॥
ಗರುಡನು ನಾರದರನ್ನು ಕುರಿತು `ಎಲೈ ಮಹಾಮತಿಗಳೇ, ನಾನು ಪುತ್ರನಾಗಿರುವಾಗ ದಯಾಪಾತ್ರಳಾದ ನನ್ನ ತಾಯಿಯು ದಾಸಿಯಾಗುವಂತಹ ಕರ್ಮವು ಏನಾಯಿತು?' ಎಂದು ಕೇಳಿದನು.
ಅಥಾಬ್ರುವೀದೃಷಿರ್ವಾಕ್ಯಂ ದೀವ್ಯತೀ ವಿಜಿತಾ ಖಗ |
ನಿಕೃತ್ಯಾ ಪನ್ನಗೇಂದ್ರಸ್ಯ ಮಾತ್ರಾ ಪುತ್ರೈಃ ಪುರಾ ಸಹ ॥8॥
ಆಗ ನಾರದರು `ಪನ್ನಗಗಳ (ಸರ್ಪಗಳ) ತಾಯಿಯಾದ ಕದ್ರುವು ನಿನ್ನ ತಾಯಿಯ ಜೊತೆಯಲ್ಲಿ ಪಣವನ್ನು ಕಟ್ಟಿ ಹಿಂದೆ ತನ್ನ ಪುತ್ರರ ಸಹಾಯದಿಂದ ಮೋಸದಿಂದ ನಿನ್ನ ತಾಯಿಯನ್ನು ಪರಾಭವಗೊಳಿಸಿದಳು' ಎಂದು ಹೇಳಿದರು.
ಗರುಡಃ
ಕಥಂ ಜಿತಾ ನಿಕೃತ್ಯಾ ಸಾ ಭಗವನ್ ಜನನೀ ಮಮ |
ಬ್ರೂಹಿ ತನ್ಮೇ ಯಥಾವೃತ್ತಂ ಶ್ರುತ್ವಾ ವೇತ್ಸ್ಯೇ ತತಃ ಪರಮ್ ॥9॥
ಗರುಡ `ಪೂಜ್ಯರೇ, ನನ್ನ ತಾಯಿಯು ಹೇಗೆ ಮೋಸದಿಂದ ಪರಾಜಿತಳಾದಳು ಎಂಬುದನ್ನು ಸರಿಯಾಗಿ ಹೇಳಿ. ಅದನ್ನು ಕೇಳಿ ನಾನು ಮುಂದೆ ಏನು ಮಾಡಬೇಕೆಂದು ತಿಳಿಯುವೆನು'.
ತತಸ್ತಸ್ಯ ಯಥಾವೃತ್ತಂ ಸರ್ವಂ ತನ್ನಾರದಸ್ತದಾ |

ಆಚಖ್ಯೌ ಭರತಶ್ರೇಷ್ಠ ಯಥಾವೃತ್ತಂ ಪತತ್ರಿಣಃ ||10||
ಎಲೈ ಭರತಶ್ರೇಷ್ಠನೇ, ಆಗ ನಾರದರು ಪಕ್ಷಿಯಾದ ಆ ಗರುಡನಿಗೆ ಹಿಂದೆ ನಡೆದ ವೃತ್ತಾಂತವನ್ನೆಲ್ಲಾ ಯಥಾರ್ಥವಾಗಿ ತಿಳಿಸಿದರು.
ತಚ್ಛ್ರುತ್ವಾ ವೈನತೇಯಸ್ಯ ಕೋಪೋ ಹೃದಿ ಸಮಾವಿಶತ್ |
ಜಗರ್ಹೇ ಪನ್ನಗಾನ್ ಸರ್ವಾನ್ ಮಾತ್ರಾ ಸಹ ಪರಂತಪಃ ||11||
ಅದನ್ನು ಕೇಳಿದ ಗರುಡನಿಗೆ ಮನಸ್ಸಿನಲ್ಲಿ ಕೋಪವುಂಟಾಯಿತು. ಸರ್ಪಗಳನ್ನೂ ಮತ್ತು ಅವುಗಳ ತಾಯಿಯಾದ ಕದ್ರೂವನ್ನೂ ಪರಂತಪನಾದ ಅವನು ನಿಂದಿಸಿದನು.
ತತಸ್ತು ರೋಷಾದ್ ದುಃಖಾಚ್ಚ ತೂರ್ಣಮುತ್ಪತ್ಯ ಪಕ್ಷಿರಾಟ್ |
ಜಗಾಮ ಯತ್ರ ಮಾತಾಽಸ್ಯ ಕೃಚ್ಛ್ರೇ ಮಹತಿ ವರ್ತತೇ ||12||
ಆಗ ಪಕ್ಷಿರಾಜನಾದ ಗರುಡನು ರೋಷ ಮತ್ತು ದುಃಖಗಳಿಂದ ಶೀಘ್ರವಾಗಿ ಹಾರಿಕೊಂಡು ತನ್ನ ತಾಯಿಯು ದೊಡ್ಡ ಕಷ್ಟವನ್ನು ಅನುಭವಿಸುತ್ತಿದ್ದ ಸ್ಥಳಕ್ಕೆ ಹೋದನು.
ತತ್ರಾಪಶ್ಯತ್ ತತೋ ದೀನಾಂ ಜಟಿಲಾಂ ಮಲಿನಾಂ ಕೃಶಾಮ್ |
ತೋಯದೇನ ಪ್ರತಿಚ್ಛನ್ನಾಂ ಸೂರ್ಯಾಭಾಮಿವ ಮಾತರಮ್ ||13||
ಅಲ್ಲಿ ದೀನಳೂ, ಜಟಿಲಳೂ, ಕೃಶಳೂ ಆಗಿ ಮೋಡದಿಂದ ಮುಚ್ಚಲ್ಪಟ್ಟ ಸೂರ್ಯನ ಪ್ರಭೆಯಂತಿದ್ದ ತನ್ನ ತಾಯಿಯನ್ನು ನೋಡಿದನು.
ತಸ್ಯ ದುಃಖಾಚ್ಚ ರೋಷಾಚ್ಚ ನೇತ್ರಾಭ್ಯಾಮಶ್ರು ಚಾಸ್ರವತ್ |
ಪ್ರವೃತ್ತಿಂ ಚ ನಿವೃತ್ತಿಂ ಚ ಪೌರುಷೇ ಪಥಿ ತಸ್ಥುಷಃ ||14||
ಒಂದು ಕಾರ್ಯದಲ್ಲಿ ಪ್ರವೃತ್ತಿಯನ್ನಾಗಲಿ ಅಥವಾ ಅದರಿಂದ ನಿವೃತ್ತಿಯನ್ನಾಗಲಿ ಪೌರುಷದ ಮಾರ್ಗದಲ್ಲಿಯೇ ಆಚರಿಸುವ ಅವನ ಕಣ್ಣುಗಳಿಂದ ದುಃಖ ಮತ್ತು ರೋಷಗಳಿಂದ ಶೋಕಬಿಂದುಗಳು ಹರಿದವು.
ಅನುಕತ್ವ ಮಾತರಂ ಕಿಂಚಿತ್ ಪತತ್ರಿವರಪುಂಗವಃ |
ಕದ್ರೂಮೇವ ಸ ಧರ್ಮಾತ್ಮಾ ವಚನಂ ಪ್ರತ್ಯಭಾಷತ ||15||
ಪಕ್ಷಿಶ್ರೇಷ್ಠನೂ, ಧರ್ಮಾತ್ಮನೂ ಆದ ಗರುಡನು ತಾಯಿಯ ಜೊತೆಯಲ್ಲಿ ಏನನ್ನೂ ಮಾತನಾಡದೆ, ಕದ್ರುವಿನ ಜೊತೆಯಲ್ಲಿಯೇ ಮಾತನಾಡಿದನು.
ಯದಿ ಧರ್ಮೇಣ ಮೇ ಮಾತಾ ಜಿತಾ ಯದ್ಯಪ್ಯಧರ್ಮತಃ |
ಜ್ಯೇಷ್ಠಾ ತ್ವಮಸಿ ಮೇ ಮಾತಾ ಧರ್ಮಃ ಸರ್ವಃ ಸ ಮೇ ಮತಃ ||16||
`ಎಲೌ ತಾಯಿಯೇ, ನೀನು ನನ್ನ ತಾಯಿಯನ್ನು ಧರ್ಮದಿಂದಾಗಲೀ, ಅಧರ್ಮದಿಂದಾಗಲೀ ಜಯಿಸಿದ್ದರೂ ಸಹ ನೀನು ನನಗೆ ಹಿರಿಯಳಾಗಿ ತಾಯಿಯಾಗಿರುವುದರಿಂದ ನೀನು ಮಾಡಿದ ಎಲ್ಲವನ್ನೂ ಧರ್ಮವೆಂದೇ ನಾನು ತಿಳಿಯುತ್ತೇನೆ.
ಇಯಂ ತು ಮೇ ಸ್ಯಾತ್ ಕೃಪಣಾ ಮಯಿ ಪುತ್ರೇಽಂಬ ದುಃಖಿತಾ |
ಅನುಜಾನೀಹಿ ತಾಂ ಸಾಧು ಮತ್ಕೃತೇ ಧರ್ಮದರ್ಶಿನಿ ||17||
ಈ ನನ್ನ ತಾಯಿಯು ನಾನು ಪುತ್ರನಾಗಿರುವಾಗ ಕೃಪಣಳಾಗಿ ದುಃಖದಿಂದ ಕೂಡಿದ್ದಾಳೆ. ಧರ್ಮದರ್ಶಿನಿಯಾದ ನೀನು ನನ್ನ ಸಲುವಾಗಿ ಅವಳನ್ನು ಬಿಟ್ಟುಕೊಡು (ಎಂದು ಹೇಳಿದನು).
ಕದ್ರೂಃ ಶ್ರುತ್ವಾಽಸ್ಯ ತದ್ವಾಕ್ಯಂ ವೈನತೇಯಸ್ಯ ಧೀಮತಃ |
ಉವಾಚ ವಾಕ್ಯಂ ದುಷ್ಪ್ರಜ್ಞಾ ಪರೀತಾ ದುಃಖಮೂರ್ಚ್ಛಿತಾ ||18||
ಮೇಧಾವಿಯಾದ ಗರುಡನ ಮಾತುಗಳನ್ನು ಕೇಳಿ, ದುರ್ಬುದ್ಧಿಯಿಂದ ಕೂಡಿದವಳೂ, ದುಃಖಮೂರ್ಛಿತಳೂ ಆದ ಕದ್ರುವು ಮಾತನಾಡಿದಳು.
ನಾಹಂ ತವ ನ ತೇ ಮಾತುರ್ವೈನತೇಯ ಕಥಂಚನ |
ಕುರ್ಯಾಂ ಪ್ರಿಯಮನಿಷ್ಟಾತ್ಮಾ ಮಾಂ ಬ್ರವೀಷಿ ಖಗ ದ್ವಿಜ ||19||
`ಎಲೈ ಆಕಾಶದಲ್ಲಿ ಸಂಚರಿಸುವ ಅನಿಷ್ಟವಾದ ಪಕ್ಷಿಯೇ, ಗರುಡನೇ, ನಾನು ನಿನ್ನ ತಾಯಿಗೆ ನೀನು ಹೇಳುವಂತೆ ಎಂದೂ ಪ್ರಿಯವನ್ನು ಮಾಡುವುದಿಲ್ಲ'.
ತಾಂ ತದಾ ಬ್ರುವತೀಂ ವಾಕ್ಯಮನಿಷ್ಟಾಂ ಕ್ರೂರಭಾಷಿಣೀಮ್ |
ದಾರುಣಾಂ ಸೂನೃತಾಭಿಸ್ತಾಮನುನೇತುಂ ಪ್ರಚಕ್ರಮೇ ||20||
ಹೀಗೆ ದಾರುಣವಾದ, ಕ್ರೂರವಾದ, ಅನಿಷ್ಟವಾದ ಮಾತುಗಳನ್ನು ಆಡುತ್ತಿದ್ದ ಕದ್ರುವನ್ನು ಕುರಿತು ಗರುಡನು ಒಳ್ಳೆಯ ಮಾತುಗಳಿಂದ ಅವಳನ್ನು ಸಮಾಧಾನ ಪಡಿಸಲು ಉಪಕ್ರಮಿಸಿದನು.
ಗರುಡಃ
ಜ್ಯೇಷ್ಠಾ ತ್ವಮಸಿ ಕಲ್ಯಾಣಿ ಮಾತುರ್ಮೇ ಭಾಮಿನಿ ಪ್ರಿಯಾ |
ಸೋದರ್ಯೇರ್ಮಮ ಚಾಸಿ ತ್ವಂ ಜ್ಯೇಷ್ಠಾ ಮಾತಾ ನ ಸಂಶಯಃ ||21||
ಗರುಡ ಎಲೌ ಕಲ್ಯಾಣಿಯೇ, ನೀನು ಹಿರಿಯಳಾಗಿದ್ದೀಯೆ. ಎಲೌ ಭಾಮಿನಿಯೇ, ನನ್ನ ತಾಯಿಗೆ ಪ್ರಿಯಳಾಗಿದ್ದೀಯೆ. ನನ್ನ ಸೋದರರಿಗೆ ತಾಯಿಯಾಗಿದ್ದೀಯೆ. ನೀನು ನನ್ನ ಹಿರಿಯ ತಾಯಿ ಎಂಬುದರಲ್ಲಿ ಸಂಶಯವಿಲ್ಲ.
ಕದ್ರೂಃ
ವಿಹಂಗಮ ಯಥಾಕಾಮಂ ಗಚ್ಛ ಕಾಮಗಮ ದ್ವಿಜ |
ಸೂನೃತಾಭಿಸ್ತ್ವಯಾ ಮಾತಾ ನಾದಾಸೀ ಶಕ್ಯಮಂಡಜ ||22||

ಕದ್ರೂ `ಎಲೈ ಮನಸ್ಸಿಗೆ ಬಂದ ಕಡೆ ಹೋಗುವ ಪಕ್ಷಿಯೇ, ನಿನಗೆ ಇಷ್ಟ ಬಂದ ಕಡೆ ಹೊರಟು ಹೋಗು. ಎಲೈ ಪಕ್ಷಿಯೇ, ನಿನ್ನ ಒಳ್ಳೆಯ ಮಾತುಗಳಿಂದ ನಿನ್ನ ತಾಯಿಯನ್ನು ದಾಸ್ಯದಿಂದ ವಿಮೋಚನೆಗೊಳಿಸುವುದಿಲ್ಲ'.
ಅಮೃತಂ ಯದ್ಯಾಹರೇಸ್ತ್ವಂ ವಿಹಂಗ ಜನನೀಂ ತವ |
ಅದಾಸೀಂ ಮಮ ಪಶ್ಯೇಮಾಂ ವೈನತೇಯ ನ ಸಂಶಯಃ ॥23॥
ಎಲೈ ಪಕ್ಷಿಯೇ, ವಿನತಾಪುತ್ರನೇ, ನೀನು ಒಂದು ಪಕ್ಷ ನನಗೆ ಅಮೃತವನ್ನು ತಂದುಕೊಟ್ಟರೆ ಆಗ ನಿನ್ನ ತಾಯಿಯನ್ನು ದಾಸ್ಯದಿಂದ ವಿಮೋಚನೆಗೊಳಿಸುವೆನು. ಇದರಲ್ಲಿ ಸಂಶಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಕದ್ರೂಗರುಡಸಂವಾದೋ ನಾಮ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ಗಜ-ಕೂರ್ಮಗಳ ವರ್ಣನೆ
ಭೀಷ್ಮಃ
ತಥೇತ್ಯುಕತ್ವ ತು ವಿಹಗಃ ಪ್ರತಿಜ್ಞಾಯ ಮಹಾದ್ಯುತಿಃ |
ಅಮೃತಾಹರಣೇ ವಾಚಂ ತತಃ ಪಿತರಮಬ್ರವೀತ್ ॥1॥
ಭೀಷ್ಮ ಮಹಾದ್ಯುತಿಯೂ, ಪಕ್ಷಿಯೂ ಆದ ಗರುಡನು ಅಮೃತವನ್ನು ತರುವ ವಿಷಯದಲ್ಲಿ `ಹಾಗೆಯೇ ಆಗಲಿ' ಎಂದು ಹೇಳಿ, ಅನಂತರ ತಂದೆಯನ್ನು ಕುರಿತು ಮಾತನಾಡಿದನು.
ಕಾಮಂ ವೈ ಸೂನೃತಾ ವಾಚೋ ವಿಸೃಜ್ಯ ಚ ಮುಹುರ್ಮುಹುಃ |
ಯಚ್ಚಾಪ್ಯನುಜ್ಞಾಂ ಮಾತುರ್ವೈ ನ ಚ ಸಾ ಹ್ಯನುಮನ್ಯತೇ ॥2॥
`ನಾನು ಸಾಧ್ಯವಿದ್ದಷ್ಟು ಒಳ್ಳೆಯ ಮಾತುಗಳನ್ನು ಪುನಃ ಪುನಃ ಕದ್ರುವಿಗೆ ಹೇಳಿದರೂ ಅವಳು ನನ್ನ ತಾಯಿಯನ್ನು ಬಿಟ್ಟುಕೊಡುವುದಕ್ಕೆ ಸಮ್ಮತಿಸುವುದಿಲ್ಲ.
ಭಗವನ್ ವಿನತಾ ದಾಸೀ ಮಮ ಮಾತಾ ಮಹಾದ್ಯುತೇ |
ಸಾ ಮಾ ಬಹುವಿಧಾ ವಾಚೋ ವಜ್ರಕಲ್ಪಾ ವಿಸೃಜ್ಯ ವೈ ॥3॥
ಕದ್ರೂಃ ಪ್ರೇಷಯತೇ ಚೈವ ದಾಸೀಯಮಿತಿ ಚಾಬ್ರವೀತ್ |
ಆಹರಾಮೃತಮಿತ್ಯೇವ ಮೋಕ್ಷ್ಯತೇ ವಿನತಾ ತತಃ ॥4॥
ಪೂಜ್ಯರೇ, ಮಹಾದ್ಯುತಿಗಳೇ, ನನ್ನ ತಾಯಿಯಾದ ವಿನತೆಯು ದಾಸಿಯಾಗಿದ್ದಾಳೆ. ಕದ್ರುವು ನನ್ನನ್ನು ಕುರಿತು ವಜ್ರದಂತಹ ಕಠೋರವಾದ ಮಾತುಗಳನ್ನು ಆಡಿ, ಇವಳು ನನ್ನ ದಾಸಿ ಎಂದು ಹೇಳಿ, ವಿನತೆಯನ್ನು ಎಲ್ಲ ಕೆಲಸಗಳಿಗೂ ಕಳುಹಿಸುತ್ತಾಳೆ. ಅಮೃತವನ್ನು ತೆಗೆದುಕೊಂಡು ಬಂದು ಕೊಡು' ಆಗ ವಿನತೆಯನ್ನು ದಾಸ್ಯದಿಂದ ಬಿಡುಗಡೆಗೊಳಿಸುತ್ತೇನೆ ಎಂದು ಹೇಳಿದಳು.
ಸೋಽಹಂ ಮಾತೃವಿಮೋಕ್ಷಾರ್ಥಮಾಹರಿಷ್ಯ ಇತಿ ಬ್ರುವನ್ |
ಅಮೃತಂ ಪ್ರಾರ್ಥಿತಸ್ತೂರ್ಣಮಾಹರ್ತುಂ ಪ್ರತಿನಂದ್ಯ ವೈ ॥5॥
ಅಂತಹ ನಾನು ತಾಯಿಯನ್ನು ದಾಸ್ಯದಿಂದ ಬಿಡಿಸುವ ಸಲುವಾಗಿ ಅಮೃತವನ್ನು ತರುವೆನು ಎಂದು ಹೇಳಿದ್ದೇನೆ. ನೀವು ನನ್ನ ಮಾತನ್ನು ಅಭಿನಂದಿಸಿ. ಶೀಘ್ರವಾಗಿ ಅಮೃತವನ್ನು ತರಲು ನಿಮ್ಮನ್ನು ಪ್ರಾರ್ಥಿಸುತ್ತಿದ್ದೇನೆ'.
ಪಿತಾ
ಅಮೃತಂ ತಾತ ದುಷ್ಪ್ರಾಪಂ ದೇವೈರಪಿ ಕುತಸ್ತ್ವಯಾ |
ರಕ್ಷ್ಯತೇ ಹಿ ಭೃಶಂ ಪುತ್ರ ರಕ್ಷಿಭಿಸ್ತನ್ನಿಬೋಧ ಮೇ ॥6॥
ಪಿತಾ `ಪ್ರೀತಿಪಾತ್ರನೇ, ಅಮೃತವು ದೇವತೆಗಳಿಂದಲೂ ಪಡೆಯಲು ಕಷ್ಟಸಾಧ್ಯವಾದುದು. ನೀನು ಹೇಗೆ ಅದನ್ನು ತರುವಿ? ಎಲೈ ಪುತ್ರನೇ, ಅನೇಕ ಕಾವಲುಗಾರರು ಅದನ್ನು ಬಹಳವಾಗಿ ರಕ್ಷಿಸುತ್ತಿದ್ದಾರೆ.
ಗುಪ್ತಮದ್ಭಿರ್ಭೃಶಂ ಸಾಧು ಸರ್ವತಃ ಪರಿವಾರಿತಮ್ |
ಅನಂತರಮಥೋ ಗುಪ್ತಂ ಜ್ವಲತಾ ಜಾತವೇದಸಾ ॥7॥
ಮೊದಲು ಅದಕ್ಕೆ ಒಂದು ಮಂಡಲಾಕಾರವಿರುವ ಜಲದ ಕೋಟೆ ಇದೆ. ಅನಂತರದಲ್ಲಿ ಜ್ವಲಿಸುವ ಅಗ್ನಿಯ ಇನ್ನೊಂದು ಕೋಟೆಯಿಂದ ಅಮೃತವು ರಕ್ಷಿತವಾಗಿದೆ.
ತತಃ ಶತಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ರಕ್ಷಂತ್ಯಮೃತಮತ್ಯರ್ಥಂ ಕಿಂಕರಾ ನಾಮ ರಾಕ್ಷಸಾಃ ॥8॥
ಅನಂತರ ಕಿಂಕರ ಎಂಬ ಹೆಸರಿನ ರಾಕ್ಷಸರು ಶತಸಹಸ್ರ ಅಯುತ ಸಂಖ್ಯೆಯಲ್ಲಿ ಒಟ್ಟುಗೂಡಿ ಅಮೃತವನ್ನು ಅತ್ಯಂತವಾಗಿ ರಕ್ಷಿಸುತ್ತಿರುತ್ತಾರೆ.
ತೇಷಾಂ ಶಕ್ತ್ಯೃಷ್ಟಿಶೂಲಾಶ್ಚ ಶತಘ್ನ್ಯಃ ಪಟ್ಟಸಾಸ್ತಥಾ |
ಆಯುಧಾ ರಕ್ಷಿಣಾಂ ತಾತ ವಜ್ರಕಲ್ಪಾಃ ಶಿಲಾಸ್ತಥಾ ॥9॥
ಎಲೈ ಪ್ರೀತಿಪಾತ್ರನೇ, ಆ ಕಾವಲುಗಾರರ ಶಕ್ತಿ, ಋಷ್ಟಿ, ಶೂಲ, ಶತಘ್ನೀ, ಪಟ್ಟಸ, ಶಿಲೆ ಮೊದಲಾದ ಆಯುಧಗಳು ವಜ್ರದಂತಿವೆ.
ತತೋ ಜಾಲೇನ ಮಹತಾ ಅವನದ್ಧಂ ಸಮಂತತಃ |
ಅಯಸ್ಮಯೇನ ವೈ ತಾತ ವೃತ್ರಹಂತುಃ ಸ್ಮ ಶಾಸನಾತ್ ॥10॥

ಎಲೈ ಪ್ರೀತಿಪಾತ್ರನೇ, ಅನಂತರ ಇಂದ್ರನ ಶಾಸನದಂತೆ ಅದಕ್ಕೆ ಸುತ್ತಲೂ ಕಬ್ಬಿಣದ ಒಂದು ಪಂಜರವಿದೆ.
ತತ್ ತ್ವಮೇವಂವಿಧಂ ತಾತ ಕಥಂ ಪ್ರಾರ್ಥಯಸೇಽಮೃತಮ್ |
ಸುರಕ್ಷಿತಂ ವಜ್ರಭೃತಾ ವೈನತೇಯ ವಿಹಂಗಮ |
ಇಂದ್ರೇಣ ದೇವೈರ್ನಾಗೈಶ್ಚ ಖಡ್ಗೈರ್ಗಿರಿಜಲಾದಿಭಿಃ ॥11॥
ಎಲೈ ಪ್ರೀತಿಪಾತ್ರನೇ, ಇಂದ್ರನಿಂದಲೂ, ದೇವತೆಗಳಿಂದಲೂ, ಸರ್ಪಗಳಿಂದಲೂ, ಖಡ್ಗಗಳಿಂದಲೂ, ಪರ್ವತ-ಜಲಾದಿಗಳಿಂದಲೂ ಅತ್ಯಂತ ರಕ್ಷಿತವಾದ ಅಮೃತವನ್ನು ತರಲು ನೀನು ಹೇಗೆ ಆಶಿಸುತ್ತೀಯೆ?
ಗರುಡಃ
ಪುತ್ರಗೃದ್ಧ್ಯಾ ಬ್ರವೀಷ್ಯೇ ತಚ್ಛೃಣು ತಾತ ವಿನಿಶ್ಚಯಮ್ |
ಬಲವಾನುಪಾಯವಾನಸ್ಮಿ ಭೂಯಃ ಕಿಂ ಕರವಾಣಿ ತೇ ॥12॥
ಗರುಡ `ಎಲೈ ತಂದೆಯೇ, ಪುತ್ರನ ಮೇಲಿನ ಪ್ರೀತಿಯಿಂದ ಈ ಮಾತನ್ನು ಹೇಳುತ್ತಿದ್ದೀಯೆ. ನಾನು ಬಲಿಷ್ಠನೂ, ಉಪಾಯವನ್ನು ತಿಳಿದವನೂ ಆಗಿದ್ದೇನೆ. ನಿನಗೆ ಇನ್ನೂ ಏನು ಮಾಡಲಿ ಎಂದು ಹೇಳು'.
ತಮಬ್ರವೀತ್ ಪಿತಾ ಹೃಷ್ಟಃ ಪ್ರಹಸನ್ ವೈ ಪುನಃ ಪುನಃ |
ಯದಿ ತೌ ಭಕ್ಷಯೇಸ್ತಾತ ಕ್ರೂರೌ ಕಚ್ಛಪವಾರಣೌ ॥13॥
ತಥಾ ಬಲಮಮೇಯಂ ತೇ ಭವಿತಾ ತನ್ನ ಸಂಶಯಃ |
ಅಮೃತಸ್ಯೈವ ಚಾಹರ್ತಾ ಭವಿಷ್ಯಸಿ ನ ಸಂಶಯಃ ॥14॥
ಆಗ ತಂದೆಯು ಸಂತೋಷಗೊಂಡು ಪುನಃ ಪುನಃ ನಗುತ್ತಾ ಅವನನ್ನು ಕುರಿತು `ಪ್ರೀತಿಪಾತ್ರನೇ, ಆ ಕ್ರೂರವಾದ ಗಜ-ಕೂರ್ಮಗಳನ್ನು ನೀನು ತಿಂದರೆ ಆಗ ನಿನಗೆ ಅಪರಿಮಿತವಾದ ಬಲವು ಬರುತ್ತದೆ. ಆಗ ನೀನು ಅಮೃತವನ್ನು ತರುವುದರಲ್ಲಿ ಸಂಶಯವಿಲ್ಲ' ಎಂದು ಹೇಳಿದನು.
ಗರುಡಃ
ಕ್ವ ತೌ ಕ್ರೂರೌ ಮಹಾಭಾಗ ವರ್ತೇತೇ ಹಸ್ತಿಕಚ್ಛಪೌ |
ಭಕ್ಷಯಿಷ್ಯಾಮ್ಯಹಂ ತಾತ ಬಲಸ್ಯಾಪ್ಯಾಯನಂ ಪ್ರತಿ ॥15॥
ಗರುಡ `ಎಲೈ ಮಹಾನುಭಾವನೇ, ಆ ಕ್ರೂರವಾದ ಗಜ-ಕೂರ್ಮಗಳು ಎಲ್ಲಿವೆ? ತಂದೆಯೇ, ನನ್ನ ಬಲವನ್ನು ಅಭಿವೃದ್ಧಿಪಡಿಸುವುದಕ್ಕೋಸ್ಕರ ಅವೆರಡನ್ನೂ ಭಕ್ಷಿಸುವೆನು'.
ಕಶ್ಯಪಃ
ಪರ್ವತೋ ವೈ ಸಮುದ್ರಾಂತೇ ನಭಃ ಸ್ತಬ್ಧ್ವೇವ ತಿಷ್ಠತಿ |
ಉರಗೋ ನಾಮ ದುಷ್ಪ್ರಾಪಃ ಪುರಾ ದೇವಗಣೈರಪಿ ॥16॥
`ಸಮುದ್ರದ ಅಂಚಿನಲ್ಲಿ ಆಕಾಶವನ್ನು ವ್ಯಾಪಿಸಿ ನಿಂತಿರುವಂತಹ ಉರಗ ಎಂಬ ಪರ್ವತವಿದೆ. ದೇವತೆಗಳ ಸಮೂಹವೂ ಸಹ ಅಲ್ಲಿಗೆ ಹೋಗುವುದು ಕಷ್ಟ ಸಾಧ್ಯವಾಗಿದೆ.
ಗೋರುತಂ ತು ಸವಿಸ್ತೀರ್ಣಃ ಪುಷ್ಪಿತದ್ರುಮಸಾನುಮಾನ್ |
ತತ್ರ ಪಂಥಾಃ ಕೃತಸ್ತಾತ ಕುಂಜರೇಣ ಬಲೀಯಸಾ ॥17॥
ಒಂದು ವೃಷಭದ ಧ್ವನಿಯು ಸಂಚರಿಸುವಷ್ಟು ಪ್ರದೇಶದ ವಿಸ್ತಾರವನ್ನು ಹೊಂದಿದೆ. ಆ ಪರ್ವತ ಶಿಖರಗಳಲ್ಲಿ ಪುಷ್ಪಸಹಿತವಾದ ವೃಕ್ಷಗಳಿವೆ. ಎಲೈ ಪ್ರೀತಿಪಾತ್ರನೇ, ಅಲ್ಲಿ ಆ ಬಲಿಷ್ಠವಾದ ಗಜವು ಓಡಾಡಿ ಒಂದು ಮಾರ್ಗವನ್ನು ಮಾಡಿದೆ.
ಗೋರುತಾನ್ಯುದಯಸ್ತಸ್ಯ ನವ ಸಪ್ತ ಚ ಪುತ್ರಕ |
ಗಚ್ಛತಾಽಽಗಚ್ಛತಾ ಚೈವ ಕ್ಷಪಿತಃ ಸ ಮಹಾಗಿರಿಃ ॥18॥
ಎಲೈ ಪುತ್ರನೇ, ಅದು ಹದಿನಾರು ಗೋರುತದಷ್ಟು ಎತ್ತರವಾಗಿದೆ. ಆ ಗಜವು ಹಿಂದೆ ಮುಂದೆ ನಡೆದಾಡುತ್ತಾ ಆ ದೊಡ್ಡ ಪರ್ವತವು ವಿನಾಶವನ್ನು ಹೊಂದಿದೆ.
ತಾವಾನ್ ಭೂಮಿಸಮಸ್ತಾತ ಕೃತಃ ಪಂಥಾಃ ಸಮುತ್ಥಿತಃ |
ತೇನ ಗತ್ವಾ ಸ ಮಾತಂಗಃ ಪಿಪಾಸುರ್ಯುದ್ಧಮಿಚ್ಛತಿ ॥19॥
ಎಲೈ ಪ್ರೀತಿಪಾತ್ರನೇ, ಅಷ್ಟು ಭೂಮಿಯನ್ನು ಸಮತಟ್ಟಾಗಿ ಮಾಡಿ ಆ ಗಜವು ಮಾರ್ಗವನ್ನು ಮಾಡಿದೆ. ಆ ಮಾರ್ಗದಲ್ಲಿ ಅದು ನಡೆದು ನೀರನ್ನು ಕುಡಿಯಲು ಬಯಸಿ ಯುದ್ಧವನ್ನು ಮಾಡುತ್ತದೆ.
ತಮತೀತ್ಯ ತು ಶೈಲೇಂದ್ರಂ ಹ್ರದಃ ಕೋಕನದಾಯುತಃ |
ಕನಕೇತಿ ಚ ವಿಖ್ಯಾತಸ್ತತ್ರ ಕೂರ್ಮೋ ಮಹಾಬಲಃ ॥20॥
ಆ ಪರ್ವತರಾಜನಿಂದ ಆಚೆಗೆ ಕೋಕನದ ಪುಷ್ಪಗಳಿಂದ ಕೂಡಿದ ಕನಕ ಎಂದು ವಿಖ್ಯಾತವಾದ ಒಂದು ಸರೋವರವಿದೆ. ಆ ಸರೋವರದಲ್ಲಿ ಮಹಾಬಲವುಳ್ಳ ಕೂರ್ಮವು ವಾಸಿಸುತ್ತದೆ.
ಗೋರುತಾನಿ ಸ ವಿಸ್ತೀರ್ಣಃ ಕಚ್ಛಪಃ ಕುಂಜರಶ್ಚ ಸಃ |
ಆಯಾಮತಶ್ಚಾಪಿ ಸಮೌ ತೇಜೋಬಲಸಮನ್ವಿತೌ ॥21॥
ಆ ಗಜ-ಕೂರ್ಮಗಳೆರಡೂ ಅನೇಕ ಗೋರುತದಷ್ಟು ವಿಸ್ತಾರವನ್ನು ಹೊಂದಿ ಎತ್ತರದಲ್ಲಿಯೂ ಅಷ್ಟೇ ಎತ್ತರವನ್ನು ಹೊಂದಿ ತೇಜೋ-ಬಲಗಳಿಂದ ಕೂಡಿವೆ.
ಪುನರಾವೃತ್ತಿಮಾಪನ್ನೌ ತಾವೇತೌ ಮಧುಕೈಟಭೌ |
ಜನ್ಮಾಂತರೇ ವಿಪ್ರಮೂಢೌ ಪರಸ್ಪರವಧೈಷಿಣೌ ॥22॥

ಈ ಗಜ-ಕೂರ್ಮಗಳು ಜನ್ಮಾಂತರದಲ್ಲಿ ಮಧು-ಕೈಟಭರಾಗಿದ್ದು, ಪುನಃ ಜನ್ಮವನ್ನು ತಾಳಿ, ಭ್ರಾಂತಿಗೆ ಒಳಗಾಗಿ ಒಬ್ಬರನ್ನೊಬ್ಬರು ಕೊಲ್ಲಲು ಬಯಸುತ್ತಾರೆ.
ಯದಾ ಸ ನಾಗೋ ಬೃಂಹತಿ ಪಿಪಾಸುಸ್ತಂ ಜಲಾಶಯಮ್ |
ತದ್ಯೈನಂ ಕಚ್ಛಪೋ ರೋಷಾತ್ ಪ್ರತಿಯಾತಿ ಮಹಾಬಲಃ ||23||
ಆ ಗಜವು ನೀರನ್ನು ಕುಡಿಯಲು ಬಯಸಿ, ಜಲಾಶಯದ ಸಮೀಪದಲ್ಲಿ ಬೃಂಹಣವನ್ನು ಮಾಡಿದಾಗ, ಮಹಾಬಲವುಳ್ಳ ಕೂರ್ಮವು ರೋಷಗೊಂಡು ಅದಕ್ಕೆ ಎದುರಾಗಿ ಬರುತ್ತದೆ.
ನಖೈಶ್ಚ ದಶನೈಶ್ಚಾಪಿ ನಿಮಜ್ಯೋನ್ಮಜ್ಯ ವಾऽಸಕೃತ್ |
ವಿದದಾರಾಗ್ರಹಸ್ತೇನ ಕುಂಜರಂ ತಂ ಜಲೇಚರಃ ||24||
ಅದು ನೀರಿನಲ್ಲಿ ಗಜವನ್ನು ಅನೇಕ ಬಾರಿ ಮುಳುಗಿಸಿ ಎದ್ದು ತನ್ನ ನಖಗಳಿಂದಲೂ, ಹಲ್ಲುಗಳಿಂದಲೂ, ಉಗ್ರಹಸ್ತದಿಂದಲೂ ಅದನ್ನು ಗಾಯಗೊಳಿಸುತ್ತದೆ.
ನಾಗರಾಡಪಿ ತೋಯಾರ್ಥೀ ಪಿಪಾಸುಶ್ಚರಣೈರಪಿ |
ಅಗ್ರಹಸ್ತೇನ ದಂತಾಭ್ಯಾಂ ನಿವಾರಯತಿ ವಾರಿಜಮ್ ||25||
ಆ ಗಜರಾಜನೂ ಸಹ ಬಾಯಾರಿ ನೀರನ್ನು ಕುಡಿಯಲು ಬಯಸಿ, ತನ್ನ ಪಾದಗಳಿಂದಲೂ, ಸೊಂಡಿಲಿನಿಂದಲೂ ಮತ್ತು ಎರಡು ದಂತಗಳಿಂದಲೂ ಆ ಕೂರ್ಮವನ್ನು ನಿವಾರಿಸುತ್ತದೆ.
ಸ ತು ತೋಯಾದನುತ್ತಿಷ್ಠನ್ ವಾರಿಜೋ ಗಜಯೂಥಪಮ್ |
ನಖೈಶ್ಚ ದಶನೈಶ್ಚೈವ ದ್ವಿರದಂ ಪ್ರತಿಷೇಧತಿ ||26||
ಆ ಕೂರ್ಮವಾದರೂ ನೀರಿನಿಂದ ಹೊರಗೆ ಬರದೆ, ಆ ಗಜರಾಜನನ್ನು ತನ್ನ ನಖಗಳಿಂದಲೂ ಮತ್ತು ದಂತಗಳಿಂದಲೂ ನಿವಾರಿಸುತ್ತದೆ.
ನಿವಾರಿತೋ ಗಜಶ್ರೇಷ್ಠಃ ಪುನರ್ಗಚ್ಛತಿ ಸ್ವಂ ವನಮ್ |
ಪಿಪಾಸುಃ ಕ್ಲಿನ್ನಹಸ್ತಾಗ್ರೋ ರುಧಿರೇಣ ಸಮುಕ್ಷಿತಃ ||27||
ಹೀಗೆ ನಿವಾರಿಸಲ್ಪಟ್ಟ ಆ ಶ್ರೇಷ್ಠವಾದ ಗಜವು ಬಾಯಾರಿಕೆಯಿಂದ ಕೂಡಿದುದಾಗಿ ಸೊಂಡಿಲ ತುದಿಯು ಮಾತ್ರ ಒದ್ದೆಯಾಗಿ, ಮೈಯೆಲ್ಲ ರಕ್ತವು ಸೋರುತ್ತಾ ಪುನಃ ತನ್ನ ಕಾಡಿಗೆ ಹಿಂದಿರುಗುತ್ತದೆ.
ತೌ ಗಚ್ಛ ಸಹಿತೌ ಪುತ್ರ ಯದಿ ಶಕ್ತೋऽಪಿ ಭಕ್ಷಯ |
ನ ತೌ ಪೃಥಕ್ತಯಾ ಶಕ್ಯಾವಪ್ರಮತ್ತೌ ಬಲೇ ಸ್ಥಿತೌ ||28||
ಎಲೈ ಪುತ್ರನೇ, ನೀನು ಅಲ್ಲಿಗೆ ಹೋಗಿ ಸಾಧ್ಯವಾದರೆ ಅವುಗಳನ್ನು ಭಕ್ಷಿಸು. ಬಹಳ ಎಚ್ಚರಿಕೆಯಿಂದ ಕೂಡಿದ ಮತ್ತು ಬಲಿಷ್ಠವಾದ ಆ ಗಜ-ಕೂರ್ಮಗಳನ್ನು ಬೇರೆ ಬೇರೆಯಾಗಿ ಬಗ್ಗಿಸಲು (ಪರಾಭವಗೊಳಿಸಲು) ಸಾಧ್ಯವಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಗಜಕಚ್ಛಪವರ್ಣನಂ ನಾಮ ಏಕವಿಂಶೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಗರುಡನಿಂದ ವೃಕ್ಷಶಾಖೆಯ ಮೋಕ್ಷ.
ಗರುಡಃ
ಕಥಂ ತೌ ಭಗವನ್ ಶಕ್ಯೌ ಮಯಾ ವಾರಣಕಚ್ಛಪೌ |
ಯುಗಪದ್ ಗ್ರಹೀತುಂ ತನ್ಮೇ ತ್ವಮುಪಾಯಂ ವಕ್ತುಮರ್ಹಸಿ ||1||
ಗರುಡ `ಎಲೈ ಪೂಜ್ಯರೇ, ಆ ಗಜ-ಕೂರ್ಮಗಳನ್ನು ನಾನು ಒಟ್ಟಿಗೆ ಹಿಡಿಯಲು ಹೇಗೆ ಸಾಧ್ಯ ಎಂದು ನೀವು ನನಗೆ ಹೇಳಬೇಕು'.
ಕಶ್ಯಪಃ
ಯೋದ್ಧುಕಾಮೇ ಗಜೇ ತಸ್ಮಿನ್ ಮುಹೂರ್ತಂ ಸ ಜಲೇಚರಃ |
ಉತ್ತಿಷ್ಠತಿ ಜಲಾತ್ ತೂರ್ಣಂ ಯೋದ್ಧುಕಾಮಃ ಪುನಃ ಪುನಃ ||2||
ಕಶ್ಯಪ ಆ ಗಜವು ಯುದ್ಧ ಮಾಡಲು ಬಯಸಿದಾಗ ಒಂದು ಮುಹೂರ್ತ ಕಳೆದ ಮೇಲೆ ಜಲಚರವಾದ ಆ ಕೂರ್ಮವು ಪುನಃ ಪುನಃ ತಾನೂ ಯುದ್ಧ ಮಾಡಲು ಬಯಸಿ ನೀರಿನಿಂದ ಮೇಲೆ ಎದ್ದು ಬರುತ್ತದೆ.
ಜಲಜಂ ನಿರ್ಜಲಂ ತಾತ ಪ್ರಮತ್ತಂ ಚೈವ ವಾರಣಮ್ |
ಗ್ರಹೀಷ್ಯಸಿ ಪತಂಗೇಶ ನಾನ್ಯೋ ಯೋಗೋऽತ್ರ ವಿದ್ಯತೇ ||3||
ಎಲೈ ಪ್ರೀತಿಪಾತ್ರನೇ, ನೀರಿನಿಂದ ಹೊರಬಂದ ಕೂರ್ಮವನ್ನು ಮತ್ತು ಪ್ರಮತ್ತವಾದ (ಎಚ್ಚರ ತಪ್ಪಿದ) ಗಜವನ್ನು ನೀನು ಒಟ್ಟಿಗೆ ಹಿಡಿಯುವಿ. ಎಲೈ ಪಕ್ಷಿರಾಜನೇ, ಇದನ್ನು ಬಿಟ್ಟು ಬೇರೆ ಉಪಾಯವಿಲ್ಲ.
ಭೀಷ್ಮಃ
ಇತ್ಯೇವಮುಕ್ತೋ ವಿಹಗಸ್ತದ್ ಗತ್ವಾ ವನಮುತ್ತಮಮ್ |
ದದರ್ಶ ವಾರಣೇಂದ್ರಂ ತಂ ಮೇಘಾಚಲಸಮಪ್ರಭಮ್ ||4||
ಭೀಷ್ಮ ಹೀಗೆ ಹೇಳಲ್ಪಟ್ಟ ಗರುಡನು ಆ ಶ್ರೇಷ್ಠ ವನದ ಸಮೀಪಕ್ಕೆ ಹೋಗಿ, ಮೋಡಗಳ ಪರ್ವತದ ಕಾಂತಿಯನ್ನು ಹೊಂದಿದ್ದ ಆ ಗಜರಾಜನನ್ನು ನೋಡಿದನು.

ತಾಂ ಸ ನಾಗೋ ಗಿರೇರ್ವೀಥಿಂ ಸಂಪ್ರಾಪ್ತ ಇವ ಭಾರತ |
ಸ ತಂ ದೃಷ್ಟ್ವಾ ಮಹಾಭಾಗಃ ಸಂಪ್ರಹೃಷ್ಟತನೂರುಹಃ ॥5॥
ಎಲೈ ಭಾರತನೇ, ಆ ಗಜರಾಜನು ಆ ಪರ್ವತದ ಮಾರ್ಗವನ್ನು ಹೊಂದಿರುವುದನ್ನು ನೋಡಿ, ಮಹಾಭಾಗನಾದ ಗರುಡನು ರೋಮಾಂಚಗೊಂಡನು.
ಬಿಭಕ್ಷಯಿಷತೋ ರಾಜನ್ ದಾರುಣಸ್ಯ ಮಹಾತ್ಮನಃ |
ಮಾತಂಗಂ ಕಚ್ಛಪಂ ಚೈವ ಪ್ರಹರ್ಷಃ ಸುಮಹಾನಭೂತ್ ॥6॥
ಎಲೈ ರಾಜನೇ, ಕೂರ್ಮವನ್ನು ಮತ್ತು ಗಜವನ್ನು ಭಕ್ಷಿಸಲು ಬಯಸಿದ ದಾರುಣನೂ, ಮಹಾತ್ಮನೂ ಆದ ಗರುಡನಿಗೆ ಬಹಳ ಸಂತೋಷವುಂಟಾಯಿತು.
ಅಥ ವೇಗೇನ ಮಹತಾ ಖೇಚರಃ ಸ ಮಹಾಬಲಃ |
ಸಂಕುಚ್ಯ ಸರ್ವಗಾತ್ರಾಣಿ ಕೃಚ್ಛ್ರೇಣೈವಾನ್ವಪದ್ಯತ ॥7॥
ಆಗ ಮಹಾಬಲನೂ, ಗಗನಸಂಚಾರಿಯೂ ಆದ ಆ ಗರುಡನು ಶೀಘ್ರವಾಗಿ ತನ್ನ ದೇಹವನ್ನು ಸಂಕೋಚಗೊಳಿಸಿ ಕಷ್ಟದಿಂದ ಮುಂದೆ ಬಂದನು.
ತಥಾ ಗತ್ವಾ ತಮಧ್ವಾನಂ ವಾರಣಪ್ರವರೋ ಬಲೀ |
ನಿಶಶ್ವಾಸ ಮಹಾಶ್ವಾಸಃ ಶ್ರಮಾದ್ ವಿಶ್ರಮಣಾಯ ಚ ॥8॥
ಬಲಿಷ್ಠವಾದ ಆ ಶ್ರೇಷ್ಠ ಗಜವೂ ಕೂಡ ಪರ್ವತದ ಮಾರ್ಗವನ್ನು ಹೊಂದಿ ದಣಿದು ವಿಶ್ರಾಂತಿಯನ್ನು ಪಡೆಯಲು ಮಹಾಶ್ವಾಸವುಳ್ಳ ಅದು ದೊಡ್ಡ ನಿಶ್ವಾಸವನ್ನು ಬಿಟ್ಟಿತು.
ತಸ್ಯ ನಿಶ್ವಾಸವಾತೇನ ಮದಗನ್ಧೇನ ಚೈವ ಹ |
ಉದತಿಷ್ಠತ್ ಮಹಾಕೂರ್ಮೋ ವಾರಣಪ್ರತಿಷೇಧಕಃ ॥9॥
ಗಜರಾಜನ ನಿಟ್ಟುಸಿರಿನ ವಾಯುವಿನಿಂದಲೂ ಮತ್ತು ಮದಧಾರೆಯ ಗಂಧದಿಂದಲೂ ಯಾವಾಗಲೂ ತಡೆಯಲು ಬಯಸುವ ಆ ಮಹಾಕೂರ್ಮವು ನೀರಿನಿಂದ ಮೇಲೆದ್ದಿತು.
ತಯೋಃ ಸುತುಮುಲಂ ಯುದ್ಧಂ ದದರ್ಶ ಪತಗೇಶ್ವರಃ |
ಕಚ್ಛಪೇಂದ್ರದ್ವಿರದಯೋರಿಂದ್ರಪ್ರಹ್ಲಾದಯೋರಿವ ॥10॥
ಪತಗೇಶ್ವರನಾದ ಗರುಡನು, ಇಂದ್ರ-ಪ್ರಹ್ಲಾದರಿಗೆ ನಡೆದಂತೆ ಆ ಗಜ- ಕೂರ್ಮಗಳಿಗೆ ನಡೆದ ತೀವ್ರವಾದ ಯುದ್ಧವನ್ನು ನೋಡಿದನು.
ಸ್ಪೃಶಂತಮಗ್ರಹಸ್ತೇನ ತೋಯಂ ವಾರಣಯೂಥಪಮ್ |
ದಂತೈರ್ನಖೈಶ್ಚ ಜಲಜೋ ವಾರಯಾಮಾಸ ಭಾರತ ॥11॥
ಜಲಜಂ ವಾರಣೋಽಪ್ಯೇವಂ ಚರಣೈಃ ಪುಷ್ಕರೇಣ ಚ |
ಪ್ರತ್ಯಷೇಧನ್ನಿಮಜ್ಜಂತಮುನ್ಮಜ್ಜಂತಂ ತಥೈವ ಚ ॥12॥
ಎಲೈ ಭಾರತನೇ, ಗಜರಾಜನು ಜಲಾಶಯದ ನೀರನ್ನು ತನ್ನ ಸೊಂಡಿಲಿನ ತುದಿಯಿಂದ ಮುಟ್ಟಿದ ಕೂಡಲೇ ಕೂರ್ಮವು ತನ್ನ ದಂತ-ನಖಗಳಿಂದ ಗಾಯಗೊಳಿಸಿ ತಡೆಯುತ್ತಿದ್ದಿತು. ಆ ಗಜವೂ ಸಹ ತನ್ನ ಪಾದಗಳಿಂದಲೂ ಮತ್ತು ಸೊಂಡಿಲಿನಿಂದಲೂ ನೀರಿನಲ್ಲಿ ಮುಳುಗಿ ಏಳುತ್ತಿದ್ದ ಆ ಕೂರ್ಮವನ್ನು ನಿವಾರಿಸುತ್ತಿದ್ದಿತು.
ಮುಹೂರ್ತಮಭವದ್ ಯುದ್ಧಂ ತಯೋರ್ಭೀಮಪ್ರದರ್ಶನಮ್ |
ಅಥ ತಸ್ಮಾಜ್ಜಲಾದ್ ರಾಜನ್ ಕಚ್ಛಪಃ ಸ್ಥಲಮಾಸ್ಥಿತಃ ॥13॥
ಒಂದು ಮುಹೂರ್ತದವರೆಗೆ ಅವುಗಳಿಗೆ ಭಯಂಕರವಾಗಿ ಕಾಣುವ ಹೋರಾಟವು ನಡೆಯಿತು. ಅನಂತರ ಎಲೈ ರಾಜನೇ, ಆ ಕೂರ್ಮವು ನೀರನ್ನು ಬಿಟ್ಟು ಭೂಮಿಯ ಮೇಲೆ ಬಂದಿತು.
ಸ ತು ನಾಗಃ ಪ್ರಭಗ್ನೋಽಪಿ ಪಿಪಾಸುರ್ನ ನ್ಯವರ್ತತ |
ತೋಯಗೃಧ್ನುಃ ಶನೈಸ್ತಸ್ಮಾದಪಾಸರ್ಪತ ಪೃಷ್ಠತಃ ॥14॥
ಆ ಗಜವು ಗಾಯಗೊಂಡಿದ್ದರೂ ಬಾಯಾರಿದುದರಿಂದ ಹಿಂದೆ ಸರಿಯಲಿಲ್ಲ. ನೀರನ್ನು ಪಡೆಯಲು ಬಯಸಿ, ನಿಧಾನವಾಗಿ ಕೂರ್ಮದ ಹಿಂಭಾಗದಿಂದ ಜಲಾಶಯದ ಕಡೆಗೆ ಹೊರಟಿತು.
ತಂ ದೃಷ್ಟ್ವಾ ಜಲಜಸ್ತೂರ್ಣಮಪಸರ್ಪಂತಮಾಹವಾತ್ |
ಅಭಿದುದ್ರಾವ ವೇಗೇನ ವಜ್ರಪಾಣಿರಿವಾಸುರಮ್ ॥15॥
ಹೋರಾಟವನ್ನು ಬಿಟ್ಟು ಹಿಂದೆ ಸರಿಯುತ್ತಿರುವ ಆ ಗಜವನ್ನು ನೋಡಿ ಕೂರ್ಮವು ಇಂದ್ರನು ಅಸುರನ ಮೇಲೆ ಬಿದ್ದಂತೆ ವೇಗದಿಂದ ಅದರ ಕಡೆಗೆ ಧಾವಿಸಿತು.
ತಂ ರೋಷಾತ್ ಸ್ಥಲಮುತ್ತೀರ್ಣಮಸಂಪ್ರಾಪ್ತಂ ಗಜೋತ್ತಮಮ್ |
ಉಭಾವೇವ ಸಮಸ್ತೌ ತು ಜಗ್ರಾಹ ವಿನತಾಸುತಃ ॥16॥
ರೋಷದಿಂದ ಭೂಮಿಯ ಮೇಲೆ ಬಂದು, ಇನ್ನೂ ಗಜವನ್ನು ತಲುಪದಿದ್ದ ಆ ಕೂರ್ಮವನ್ನೂ ಮತ್ತು ಗಜವನ್ನೂ ವಿನತಾ ಪುತ್ರನಾದ ಗರುಡನು ಒಟ್ಟಿಗೆ ಹಿಡಿದುಕೊಂಡನು.
ಚರಣೇನ ತು ಸವ್ಯೇನ ಜಗ್ರಾಹ ಸ ಗಜೋತ್ತಮಮ್ |
ಪ್ರಸ್ಪಂದಮಾನಂ ಬಲವಾನ್ ದಕ್ಷಿಣೇನ ತು ಕಚ್ಛಪಮ್ ॥17॥
ಬಲಿಷ್ಠನಾದ ಅವನು ಎಡಗಾಲಿನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುವ ಗಜವನ್ನೂ ಮತ್ತು ಬಲಗಾಲಿನಿಂದ ಕೂರ್ಮವನ್ನೂ ಹಿಡಿದನು.

ಉತ್ಪಪಾತ ತತಸ್ತೂರ್ಣಂ ಪನ್ನಗೇಂದ್ರನಿಷೂದನಃ |
ದಿವಂ ಖಂ ಚ ಸಮುತ್ಪತ್ಯ ಪಕ್ಷಾಭ್ಯಾಮಪರಾಜಿತಃ ||18||
ಶ್ರೇಷ್ಠಸರ್ಪಸಂಹಾರಕನಾದ ಅವನು ದಣಿವಿಲ್ಲದವನಾಗಿ ಆಕಾಶಕ್ಕೆ ಹಾರಿ ತನ್ನ ರೆಕ್ಕೆಗಳ ಬಲದಿಂದ ಮೇಲಕ್ಕೆ ಹೋದನು.
ತೇನ ಚೋತ್ಪತತಾ ತೂರ್ಣಂ ಸಂಗೃಹೀತೋ ನಖೈರ್ಭೃಶಮ್ |
ವಜ್ರಗರ್ಭೈಃ ಸುನಿಶಿತೈಃ ಪ್ರಾಣಾಂಸ್ತೂರ್ಣಂ ಮುಮೋಚತುಃ ||19||
ಅವನು ಹಾಗೆ ಮೇಲಕ್ಕೆ ಹಾರುವಾಗ ವಜ್ರಗರ್ಭವಾದ ತೀಕ್ಷ್ಣವಾದ ನಖಗಳುಳ್ಳ ಪಾದಗಳಲ್ಲಿ ಹಿಡಿಯಲ್ಪಟ್ಟ ಕೂರ್ಮ-ಗಜಗಳು ಪ್ರಾಣವನ್ನು ಬಿಟ್ಟವು.
ತೌ ಗೃಹ್ಯ ಬಲವಾಂಸ್ತೂರ್ಣಂ ಸ್ರಸ್ತಪಾದಶಿರೋಧರೌ |
ವಿವಲ್ಗನ್ನಿವ ಖೇ ಕ್ರೀಡನ್ ಖೇಚರೋಽಭಿಜಗಾಮ ಹ ||20||
ಬಲಿಷ್ಠನಾದ ಗರುಡನು ಪಾದ ಮತ್ತು ಕತ್ತುಗಳನ್ನು ಕೆಳಗೆ ಹಾಕಿದ ಅವೆರಡನ್ನೂ ತೆಗೆದುಕೊಂಡು ಆಕಾಶದಲ್ಲಿ ಕ್ರೀಡೆ ಮಾಡುತ್ತ ಸಂಚರಿಸುವವನಂತೆ ಹೊರಟನು.
ಅತ್ತುಕಾಮಸ್ತತೋ ವೀರಃ ಪೃಥಿವ್ಯಾಂ ಪೃಥಿವೀಪತೇ |
ನಿರೈಕ್ಷತ ನ ಚಾಪಶ್ಯದ್ ದ್ರುಮಂ ಪರ್ಯಾಪ್ತಮಾಸಿತುಮ್ ||21||
ಎಲ್ಲೈ ರಾಜನೇ, ಭೂಮಿಯ ಮೇಲೆ ಎಲ್ಲಾದರೂ ಅವುಗಳನ್ನು ತಿನ್ನಲು ಬಯಸಿದ ವೀರನಾದ ಅವನು ಎಲ್ಲ ಕಡೆಯಲ್ಲಿಯೂ ನೋಡಿದನು. ಆದರೆ ತಾನು ಇಳಿದು ಕುಳಿತುಕೊಳ್ಳಬಹುದಾದ ವೃಕ್ಷವು ಅವನಿಗೆ ಕಾಣಲಿಲ್ಲ.
ನೈಮಿಶಂ ತ್ವಥ ಸಂಪ್ರಾಪ್ಯ ದೇವಾರಣ್ಯಂ ಮಹಾದ್ಯುತಿಃ |
ಅಪಶ್ಯತ ದ್ರುಮಂ ಕಂಚಿಚ್ಛಾಖಾಸ್ಕಂಧಸಮಾವೃತಮ್ ||22||
ಅನಂತರ ಮಹಾದ್ಯುತಿಯುಳ್ಳ ಅವನು ದೇವಾರಣ್ಯವಾದ ನೈಮಿಶ ಕ್ಷೇತ್ರಕ್ಕೆ ಬಂದು ಅನೇಕ ಕೊಂಬೆಗಳನ್ನು ಹೊಂದಿದ್ದ ಒಂದು ದೊಡ್ಡ ವೃಕ್ಷವನ್ನು ನೋಡಿದನು.
ಹಿಮವಚ್ಛಿಖರಪ್ರಖ್ಯಂ ಯೋಜನದ್ವಯಮುಚ್ಛ್ರಿತಮ್ |
ಪರಿಣಾಹೇನ ರಾಜೇಂದ್ರ ನಲ್ವಮಾತ್ರಂ ಸಮಂತತಃ ||23||
ಎಲ್ಲೈ ರಾಜೇಂದ್ರನೇ, ಆ ವೃಕ್ಷವು ಹಿಮಾಲಯದ ಶಿಖರದಂತೆ ಎರಡು ಯೋಜನ ಎತ್ತರವೂ ಮತ್ತು ಒಂದು ನಲ್ವಪರಿಮಾಣದಷ್ಟು ಸುತ್ತಳತೆಯನ್ನು ಹೊಂದಿರುವುದೂ ಆಗಿದ್ವಿತು.
ತಸ್ಯ ಶಾಖಾಽಭವತ್ ಕಾಚಿದಾಯತಾ ಪಂಚಯೋಜನಮ್ |
ದೃಢಮೂಲಾ ದೃಢಸ್ಕಂಧಾ ವಜ್ರಪತ್ರಸಮಾಚಿತಾ ||24||
ಆ ವೃಕ್ಷದಲ್ಲಿ ಐದು ಯೋಜನ ವಿಸ್ತಾರವಾದ ಒಂದು ದೊಡ್ಡ ಕೊಂಬೆ ಇದ್ವಿತು. ಅದು ದೃಢವಾದ ಆಧಾರವನ್ನೂ, ದೃಢವಾದ ಸಣ್ಣ ಕೊಂಬೆಗಳನ್ನೂ ಹೊಂದಿ ವಜ್ರದಂತಹ ಎಲೆಗಳಿಂದ ಕೂಡಿದ್ವಿತು.
ತತ್ರೋಪವಿಷ್ಟಃ ಸಹಸಾ ವೈನತೇಯೋ ನಿಗೃಹ್ಯ ತೌ |
ಅತ್ತುಕಾಮಸ್ತತಃ ಶಾಖಾ ತಸ್ಯ ವೇಗಾದವಾಪತತ್ ||25||
ಗಜ-ಕೂರ್ಮಗಳನ್ನು ಹಿಡಿದಿದ್ದ ಗರುಡನು ಅವುಗಳನ್ನು ತಿನ್ನಲು ಬಯಸಿ ತಕ್ಷಣ ಆ ಕೊಂಬೆಯ ಮೇಲೆ ಕುಳಿತನು. ಆದರೆ ಅವನ ವೇಗದಿಂದ ಆ ಕೊಂಬೆಯು ಮುರಿಯಿತು.
ತಾಂ ಪತಂತೀಮಭಿಪ್ರೇಕ್ಷ್ಯ ಪ್ರೇಕ್ಷ್ಯ ಚಾರ್ಷಿಗಣಾನಥ |
ಆಸೀನಾನ್ ವಸುಭಿಃ ಸಾರ್ಧಂ ಸತ್ರೇಣ ಜಗತೀಪತೇ ||26||
ವೈಖಾನಸಾನ್ನಾಮ ಯತೀನ್ ವಾಲಖಿಲ್ಯಗಣಾನಪಿ |
ತಸ್ಯ ಭೀರಾವಿಶತ್ ತತ್ರ ಪತಗೇಂದ್ರಸ್ಯ ಭಾರತ ||27||
ಎಲ್ಲೈ ಭಾರತನೇ, ರಾಜನೇ, ಮುರಿದು ಕೆಳಗೆ ಬೀಳಲಿರುವ ಕೊಂಬೆಯನ್ನು ನೋಡಿ, ಆ ಕೊಂಬೆಯ ಕೆಳಗೆ ಭೂಮಿಯ ಮೇಲೆ ವಸುಗಳ ಜೊತೆಯಲ್ಲಿ ಸತ್ರಯಾಗದಲ್ಲಿ ಕುಳಿತಿರುವ ವೈಖಾನಸ ನಾಮಕ ಯತಿಗಳನ್ನೂ, ವಾಲಖಿಲ್ಯ ಋಷಿಗಳ ಗಣಗಳನ್ನೂ ನೋಡಿ ಚಕಿತನಾದ ಅವನಿಗೆ ಭಯವುಂಟಾಯಿತು.
ತಾನ್ ದೃಷ್ಟ್ವಾ ಸ ಯತೀಂಸ್ತತ್ರ ಸಮಾಸೀನಾನ್ ಸುರೈಃ ಸಹ |
ತುಂಡೇನ ಗೃಹ್ಯ ತಾಂ ಶಾಖಾಮುತ್ಪಪಾತ ಖಗೇಶ್ವರಃ |
ತೌ ಚ ಪಕ್ಷೀ ಭುಜಂಗಾಶೋ ವ್ಯೋಮ್ನಿ ಕ್ರೀಡನ್ನಿವಾವ್ರಜತ್ ||28||
ದೇವತೆಗಳ ಜೊತೆಯಲ್ಲಿ ಕೆಳಗೆ ಕುಳಿತಿರುವ ಆ ಯತಿಗಳನ್ನು ನೋಡಿದ, ಗಗನ ಸಂಚಾರಿಯಾದ, ಪಕ್ಷಿರಾಜನಾದ ಗರುಡನು ತನ್ನ ಕೊಕ್ಕಿನಿಂದ ಆ ಕೊಂಬೆಯನ್ನು ಹಿಡಿದು ಪುನಃ ಆಕಾಶದಲ್ಲಿ ಕ್ರೀಡಿಸುವವನಂತೆ ಮೇಲೆ ಹಾರಿದನು.
ತಂ ದೃಷ್ಟ್ವಾ ಗುರುಸಂಭಾರಂ ಪ್ರಗೃಹ್ಯೋತ್ಪತಿತಂ ಖಗಮ್ |
ಋಷಯಸ್ತೇಽಬ್ರುವನ್ ಸರ್ವೇ ಗರುಡೋಽಯಮಿತಿ ಸ್ಮ ಹ |
ನ ತ್ವನ್ಯಃ ಕ್ಷಮತೇ ಕಶ್ಚಿದ್ ಯಥಾಽಯಂ ವೀರ್ಯವಾನ್ ಖಗಃ ||29||
ಅಷ್ಟು ದೊಡ್ಡ ಭಾರವನ್ನು ಎತ್ತಿಕೊಂಡು ಮೇಲಕ್ಕೆ ಹಾರಿದ ಆ ಪಕ್ಷಿಯನ್ನು ನೋಡಿ ಆ ಋಷಿಗಳೆಲ್ಲರೂ `ಇವನು ಗರುಡನೇ ಆಗಿರಬೇಕು. ಇಂತಹ ಪರಾಕ್ರಮವು ಇನ್ನೊಂದು ಪಕ್ಷಿಯಲ್ಲಿ ಕಂಡುಬರುವುದಿಲ್ಲ' ಎಂದು ಹೇಳಿದರು.
ಅಸೌ ಗಚ್ಛತಿ ಧರ್ಮಾತ್ಮಾ ಗುರುಭಾರಸಮನ್ವಿತಃ |
ಅಯಂ ಕ್ರೀಡನ್ನಿವಾಕಾಶೇ ತಸ್ಮಾದ್ ಗರುಡ ಏವ ಸಃ ||30||

`ಈ ಧರ್ಮಾತ್ಮನಾದ ಪಕ್ಷಿಯು ದೊಡ್ಡ ಭಾರವನ್ನು ಹೊತ್ತುಕೊಂಡು ಆಕಾಶದಲ್ಲಿ ಲೀಲೆಯಿಂದ ಸಂಚರಿಸುತ್ತಿದ್ದಾನೆ. ಆದ್ದರಿಂದ ಅವನು ಗರುಡನೇ ಸರಿ'.
ಏವಂ ತೇ ಸಮಯಂ ಸರ್ವೇ ವಸವಶ್ಚ ದಿವೌಕಸಃ |
ಅಕಾರ್ಷುಃ ಪಕ್ಷಿರಾಜಸ್ಯ ಗರುಡೇತ್ಯೇವ ನಾಮ ಹ ||31||
ಹೀಗೆ ಆ ಯತಿಗಳು ಮತ್ತು ವಸ್ವಾದಿ ದೇವತೆಗಳು ನಿಶ್ಚಯವನ್ನು ಮಾಡಿ, ಪಕ್ಷಿರಾಜನಿಗೆ ಗರುಡನೆಂದೇ ಹೆಸರಿಟ್ಟರು (ಇಲ್ಲಿಯವರೆಗೆ ಪಕ್ಷಿರಾಜನೆಂದೇ ವ್ಯವಹಾರವಿತ್ತು).
ಸ ಪಕ್ಷೀ ಪೃಥಿವೀಂ ಸರ್ವಾಂ ಪರಿಧಾವಂಸ್ತತಸ್ತತಃ |
ಮುಮುಕ್ಷುಃ ಶಾಖಿನಃ ಶಾಖಾಂ ನ ಸ್ಮ ದೇಶಮಪಶ್ಯತ ||32||
ಆ ಪಕ್ಷಿಯು ಆ ಕೊಂಬೆಯನ್ನು ಎಲ್ಲಾದರೂ ಕೆಳಗೆ ಹಾಕುವುದಕ್ಕೆ ಬಯಸಿ, ಭೂಮಿಯ ಮೇಲೆ, ಆಕಾಶದಲ್ಲಿ, ಎಲ್ಲ ಕಡೆಗಳಲ್ಲಿಯೂ ಸಂಚರಿಸಿದರೂ ಯೋಗ್ಯವಾದ ಒಂದು ಪ್ರದೇಶವನ್ನೂ ಕಾಣಲಿಲ್ಲ.
ಸ ವಾಚಮಶೃಣೋದ್ ದಿವ್ಯಾಮುಪರ್ಯುಪರಿ ಜಲ್ಪತಃ |
ದೇವದೂತಸ್ಯ ವಿಸ್ಪಷ್ಟಾಮಾಭಾಷ್ಯ ಗರುಡೇತಿ ಚ ||33||
ಅವನು ತನ್ನ ಮೇಲ್ಭಾಗದಿಂದ ಕೇಳಿಬರುವ ಗರುಡ ಎಂದು ಸಂಬೋಧನೆ ಮಾಡಿ ಮಾತನಾಡುವ ಒಬ್ಬ ದೇವದೂತನ ವಿಸ್ಪಷ್ಟವಾದ, ದಿವ್ಯವಾದ ವಾಣಿಯನ್ನು ಕೇಳಿದನು.
ವೈನತೇಯ ಕುವಿಂದೇಷು ಸಮುದ್ರಾಂತೇ ಮಹಾಬಲ |
ಪಾತ್ಯತಾಂ ಶಾಖಿನಃ ಶಾಖಾ ನ ಹಿ ತೇ ಧರ್ಮನಿಶ್ಚಯಾಃ ||34||
`ಎಲೈ ವಿನತಾಪುತ್ರನೇ, ಮಹಾಬಲನೇ, ಸಮುದ್ರದ ಅಂಚಿನಲ್ಲಿ, ಕುಳಿಂದ ದೇಶದಲ್ಲಿ ಈ ಶಾಖೆಯನ್ನು ಕೆಳಗೆ ಬಿಡು. ಕುಳಿಂದ ದೇಶದವರು ಧರ್ಮಾಚರಣೆಯನ್ನು ಮಾಡುವವರಲ್ಲ'.
ತಚ್ಛ್ರುತ್ವಾ ಗರುಡಸ್ತೂರ್ಣಂ ಜಗಾಮ ಲವಣಾಂಭಸಃ |
ಉದ್ದೇಶಂ ಯತ್ರ ತೇ ಮಂದಾಃ ಕುವಿಂದಾಃ ಪಾಪಕರ್ಮಿಣಃ ||35||
ಆ ಮಾತುಗಳನ್ನು ಕೇಳಿ, ಗರುಡನು ಶೀಘ್ರವಾಗಿ ಲವಣ ಸಮುದ್ರದ ಅಂಚಿನಲ್ಲಿ ಪಾಪಕರ್ಮನಿರತರೂ, ಮೂರ್ಖರೂ ಆದ ಕುಳಿಂದರು ವಾಸಿಸುವ ದೇಶವನ್ನು ತಲುಪಿದನು.
ತತೋ ಗತ್ವಾ ತತಃ ಶಾಖಾಂ ಮುಮೋಚ ಪತತಾಂವರಃ |
ತಯಾ ಹತಾ ಜನಪದಾಸ್ತದಾ ಷಟ್‌ತ್ರಿಂಶತೋ ನೃಪ ||36||
ಆ ಪಕ್ಷಿಶ್ರೇಷ್ಠನು ಅಲ್ಲಿಗೆ ಹೋಗಿ ಆ ಶಾಖೆಯನ್ನು ಕೆಳಗೆ ಬಿಟ್ಟನು. ಎಲೈ ರಾಜನೇ, ಅದರಿಂದ ಆ ಪ್ರದೇಶದಲ್ಲಿದ್ದ ಮೂವತ್ತಾರು ದೇಶದ ಜನರು ಹತರಾದರು.
ಸ ದೇಶೋ ರಾಜಶಾರ್ದೂಲ ಖ್ಯಾತಃ ಪರಮದಾರುಣಃ |
ಶಾಖಾಪತನ ಇತ್ಯೇವ ಕುವಿಂದಾನಾಂ ದುರಾತ್ಮನಾಮ್ ||37||
ಎಲೈ ರಾಜಶಾರ್ದೂಲನೇ, ಮಹಾಪ್ರಯತ್ನಶೀಲರಾದ ಕುಳಿಂದರ ಆ ಪರಮದಾರುಣವಾದ ದೇಶವು ಶಾಖಾಪತನ ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ
ಶಾಖಾಮೋಕ್ಷೋ ನಾಮ ದ್ವಾವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *

## ಇಪ್ಪತ್ಮೂರನೆಯ ಅಧ್ಯಾಯ

ಬ್ರಹ್ಮದೇವರಿಂದ ಗರುಡನನ್ನು ಕುರಿತು ಅಗ್ನಿಶಮನೋಪಾಯದ ಕಥನ.
ಭೀಷ್ಮಃ
ಗತ್ವಾ ತಂ ಪಕ್ಷಿಶಾರ್ದೂಲಃ ಕುವಿಂದಾನಾಂ ಜನವ್ರಜಮ್ |
ಉಪೋಪವಿಶ್ಯ ಶೈಲಾಗ್ರೇ ಭಕ್ಷಯಾಮಾಸ ತಾವುಭೌ |
ವಾರಣಂ ಕಚ್ಛಪಂ ಚೈವ ಸಂಹೃಷ್ಟಃ ಸ ಪತತ್ರಿರಾಟ್ ||1||
ಭೀಷ್ಮ ಪಕ್ಷಿಶ್ರೇಷ್ಠನಾದ ಆ ಗರುಡನು ಕುಳಿಂದ ದೇಶಕ್ಕೆ ಹೋಗಿ, ಒಂದು ಪರ್ವತದ ಶಿಖರದ ಮೇಲೆ ಕುಳಿತು ಸಂತೋಷಗೊಂಡು ಆ ಗಜ-ಕೂರ್ಮಗಳನ್ನು ಭಕ್ಷಿಸಿದನು.
ತಯೋಃ ಸ ರುಧಿರಂ ಪೀತ್ವಾ ಮೇದಸೌ ಚ ಪರಂತಪ |
ಸಂಹೃಷ್ಟಃ ಪತತಾಂಶ್ರೇಷ್ಠೋ ಲಬ್ಧ್ವಾ ಬಲಮನುತ್ತಮಮ್ |
ಜಗಾಮ ದೇವರಾಜಸ್ಯ ಭವನಂ ಪನ್ನಗಾಶನಃ ||2||
ಎಲೈ ಪರಂತಪನೇ, ಅವನು ಅವುಗಳ ರಕ್ತವನ್ನು ಪಾನ ಮಾಡಿ, ಮೇದಸ್ಸನ್ನು ಭಕ್ಷಿಸಿ, ಶ್ರೇಷ್ಠವಾದ ಬಲವನ್ನು ಪಡೆದು, ಸಂತೋಷಗೊಂಡು ಪನ್ನಗಾಶನನೂ, ಪಕ್ಷಿಶ್ರೇಷ್ಠನೂ ಆದ ಅವನು ದೇವರಾಜನಾದ ಇಂದ್ರನ ಮನೆಗೆ ಹೋದನು.
ತಂ ಪ್ರಣಮ್ಯ ಮಹಾತ್ಮಾನಂ ಪಾವಕಂ ವಿಷ್ಫುಲಿಂಗಿನಮ್ |
ರಾತ್ರಿಂ ದಿವಂ ಪ್ರಜ್ವಲಿತಂ ರಕ್ಷಾರ್ಥಮಮೃತಸ್ಯ ಹ ||3||

ತಂ ದೃಷ್ಟ್ವಾ ವಿಹಗೇಂದ್ರಸ್ಯ ಭಯಂ ತೀವ್ರಮುಪಾವಿಶತ್ |
ನತು ತೋಯಾನ್ನ ರಕ್ಷಿಭ್ಯೋ ಭಯಮಸ್ಯೋಪಪದ್ಯತೇ ||4||
ಅಲ್ಲಿ ಕಿಡಿಗಳಿಂದ ಕೂಡಿದ ಮಹಾತ್ಮನಾದ ಅಗ್ನಿಯು ಹಗಲೂ-ರಾತ್ರಿಯೂ ಅಮೃತದ ರಕ್ಷಣೆಗಾಗಿ ಪ್ರಜ್ವಲಿಸುತ್ತಿರುವುದನ್ನು ನೋಡಿ, ಪಕ್ಷಿರಾಜನಾದ ಅವನಿಗೆ ತೀವ್ರವಾದ ಭಯವುಂಟಾಯಿತು. ಗರುಡನಿಗೆ ಜಲದಿಂದಾಗಲೀ ಅಥವಾ ಕಾವಲುಗಾರನಿಂದಾಗಲೀ ಭಯವಿಲ್ಲ.
ಪಕ್ಷಿತ್ವಮಾತ್ಮನೋ ದೃಷ್ಟ್ವಾ ಜ್ವಲಂತಂ ಚ ಹುತಾಶನಮ್ |
ಪಿತಾಮಹಮಥೋ ಗತ್ವಾ ದದರ್ಶ ಭುಜಗಾಶನಃ ||5||
ತಾನು ಪಕ್ಷಿ ಎಂಬುದನ್ನೂ, ಅಗ್ನಿಯು ಪ್ರಜ್ವಲಿಸುತ್ತಿದೆ ಎಂಬುದನ್ನೂ ಗಮನಿಸಿದ, ಸರ್ಪಭಕ್ಷಕನಾದ ಅವನು ಬ್ರಹ್ಮದೇವರ ಬಳಿಗೆ ಹೋಗಿ ಅವರನ್ನು ನೋಡಿದನು.
ತಂ ಪ್ರಣಮ್ಯ ಮಹಾತ್ಮಾನಂ ಗರುಡಃ ಪ್ರಯತಾಂಜಲಿಃ |
ಪ್ರೋವಾಚ ತದಸಂದಿಗ್ಧಂ ವಚನಂ ಪತಗೇಶ್ವರಃ ||6||
ಪಕ್ಷಿರಾಜನಾದ ಗರುಡನು ಮಹಾತ್ಮರಾದ ಬ್ರಹ್ಮದೇವರ ಬಳಿಗೆ ಹೋಗಿ, ಕೈಗಳನ್ನು ಮುಗಿದು ನಮಸ್ಕರಿಸಿ ಸ್ಪಷ್ಟವಾಗಿ ಮಾತನಾಡಿದನು.
ಉದ್ಯತಂ ಗುರುಕೃತ್ಯೇ ಮಾಂ ಭಗವನ್ ಧರ್ಮನಿಶ್ಚಿತಮ್ |
ವಿಮೋಕ್ಷಣಾರ್ಥಂ ಮಾತುರ್ಹಿ ದಾಸಭಾವಾದನಿಂದಿತಮ್ ||7||
ಕದ್ರೂಸಕಾಶಮಮೃತಂ ಮಯಾ ಹರ್ತವ್ಯಮೀಶ್ವರ |
ತದಾ ಮೇ ಜನನೀ ದೇವ ದಾಸಭಾವಾತ್ ಪ್ರಮೋಕ್ಷ್ಯತೇ ||8||
\`ಪೂಜ್ಯರೇ, ಧರ್ಮನಿಶ್ಚಯವುಳ್ಳ ನಾನು ನನಗೆ ಹಿರಿಯಳಾದ ಅನಿಂದಿತಳಾದ ನನ್ನ ತಾಯಿಯ ದಾಸ್ಯಭಾವವನ್ನು ವಿಮೋಚನೆಗೊಳಿಸಲು ಉದ್ಯುಕ್ತನಾಗಿದ್ದೇನೆ. ಎಲೈ ಪ್ರಭುವೇ, ನಾನು ಕದ್ರುವಿಗೆ ಅಮೃತವನ್ನು ತೆಗೆದುಕೊಂಡು ಹೋಗಿ ಕೊಡಬೇಕು. ಎಲೈ ದೇವನೇ, ಆಗ ನನ್ನ ತಾಯಿಯು ದಾಸ್ಯದಿಂದ ಬಿಡುಗಡೆಯನ್ನು ಹೊಂದುವಳು.
ತತ್ರಾಮೃತಂ ಪ್ರಜ್ವಲಿತೋ ನಿತ್ಯಮೀಶ್ವರ ರಕ್ಷತಿ |
ಹಿರಣ್ಯರೇತಾ ಭಗವಾನ್ ಪಾಕಶಾಸನಶಾಸನಾತ್ ||9||
ಪೂಜ್ಯರೇ, ಪ್ರಭುಗಳೇ, ಆದರೆ ಅಲ್ಲಿ ಇಂದ್ರನ ಶಾಸನದಂತೆ ಪೂಜ್ಯನಾದ ಅಗ್ನಿಯು ಜ್ವಲಿಸುತ್ತಾ ಅಮೃತವನ್ನು ರಕ್ಷಿಸುತ್ತಿದ್ದಾನೆ.
ತತ್ರ ಮೇ ದೇವದೇವೇಶ ಭಯಂ ತೀವ್ರಮಥಾವಿಶತ್ |
ಜ್ವಲಂತಂ ಪಾವಕಂ ದೃಷ್ಟ್ವಾ ಪಕ್ಷಿತ್ವಂ ಚಾತ್ಮನಃ ಪ್ರಭೋ ||10||
ದೇವದೇವೇಶನೇ, ಪ್ರಭುವೇ, ನಾನು ಪಕ್ಷಿ ಎಂಬುದನ್ನೂ, ಅಗ್ನಿಯು ಜ್ವಲಿಸುತ್ತಿದೆ ಎಂಬುದನ್ನೂ ಗಮನಿಸಿದ ನನಗೆ ಅಲ್ಲಿ ತೀವ್ರವಾದ ಭಯವುಂಟಾಯಿತು.
ಸಮತಿಕ್ರಮಿತುಂ ಶಕ್ಯಃ ಕಥಂ ಸ್ಯಾತ್ಪಾವಕೋ ಮಯಾ |
ತಸ್ಯಾಭ್ಯುಪಾಯಂ ವರದ ವಕ್ತುಮೀಶೋಽಸಿ ಮೇ ಪ್ರಭೋ ||11||
ನಾನು ಅಗ್ನಿಯನ್ನು ದಾಟಲು ಹೇಗೆ ಸಾಧ್ಯ? ಎಲೈ ವರದರೇ, ಪ್ರಭುಗಳೇ, ಇದರ ಉಪಾಯವನ್ನು ನನಗೆ ತಿಳಿಸಲು ನೀವು ಸಮರ್ಥರಾಗಿದ್ದೀರಿ' (ಎಂದು ಹೇಳಿದನು).
ತಮಬ್ರವೀನ್ಮಹಾಭಾಗ ತಪ್ಯಮಾನಂ ವಿಹಂಗಮಮ್ |
ಅಗ್ನೇಃ ಸಂಶಮನೋಪಾಯಮುತ್ಸ್ಮಯನ್ ಸ ಪುನಃ ಪುನಃ ||12||
ಎಲೈ ಮಹಾನುಭಾವನೇ, ಹೀಗೆ ಸಂತಾಪ ಪಡುತ್ತಿದ್ದ, ಗಗನಸಂಚಾರಿಯಾದ ಗರುಡನನ್ನು ಕುರಿತು ಪುನಃ ಪುನಃ ನಗುತ್ತಾ ಬ್ರಹ್ಮದೇವರು ಅಗ್ನಿಯನ್ನು ಶಾಂತಗೊಳಿಸುವ ಉಪಾಯವನ್ನು ಹೇಳಿದರು.
ಪಯಸಾ ಶಾಮ್ಯತೇ ವತ್ಸ ಸರ್ಪಿಷಾ ಚ ಹುತಾಶನಃ |
ಶರೀರಸ್ಥೋಽಪಿ ಭೂತಾನಾಂ ಕಿಂ ಪುನಃ ಪ್ರಜ್ವಲನ್ ಭುವಿ ||13||
ಎಲೈ ವತ್ಸನೇ, ಅಗ್ನಿಯು ನೀರಿನಿಂದಲಾಗಲೀ ಅಥವಾ ತುಪ್ಪದಿಂದಲಾಗಲೀ ಶಾಂತಿಯನ್ನು ಹೊಂದುತ್ತದೆ. ಪ್ರಾಣಿಗಳ ಶರೀರದಲ್ಲಿದ್ದ ಅಗ್ನಿಯೂ ಅದರಿಂದ ಉಪಶಮನವನ್ನು ಹೊಂದುತ್ತದೆ. ಇನ್ನು ಭೂಮಿಯಲ್ಲಿ ಜ್ವಲಿಸುವ ಅಗ್ನಿಯು ಏಕೆ ಉಪಶಮನವನ್ನು ಹೊಂದುವುದಿಲ್ಲ?
ನವನೀತಂ ಪಯೋ ವಾಽಪಿ ಪಾವಕೇ ತ್ವಂ ಸಮಾದಧೇಃ |
ತತೋ ಗಚ್ಛ ಯಥಾಕಾಮಂ ನ ತ್ವಾ ಧಕ್ಷ್ಯತಿ ಪಾವಕಃ ||14||
ನೀನು ನವನೀತವನ್ನಾಗಲೀ ಅಥವಾ ಜಲವನ್ನಾಗಲೀ ಅಗ್ನಿಯ ಮೇಲೆ ಹಾಕಿ, ಅನಂತರ ನಿನ್ನ ಮನಸ್ಸಿಗೆ ಬಂದಂತೆ ಮುಂದೆ ಹೋಗು. ಅಗ್ನಿಯು ನಿನ್ನನ್ನು ದಹಿಸುವುದಿಲ್ಲ (ಎಂದು ಹೇಳಿದರು).
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಪಿತಾಮಹವಚನಂ ನಾಮ ತ್ರಯೋವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ

ಗರುಡನ ಮೇಲೆ ಇಂದ್ರನು ಪ್ರಯೋಗಿಸಿದ ವಜ್ರಾಯುಧದ ವೈಫಲ್ಯ.
ಭೀಷ್ಮ:
ಪಿತಾಮಹವಚಃ ಶ್ರುತ್ವಾ ಗರುಡಃ ಪತತಾಂವರಃ |
ಜಗಾಮ ಗೋಕುಲಂ ಕಿಂಚಿನ್ನವನೀತಜಿಹೀರ್ಷಯಾ ||1||
ಭೀಷ್ಮ ಪಕ್ಷಿಶ್ರೇಷ್ಠನಾದ ಗರುಡನು ಬ್ರಹ್ಮದೇವನ ಮಾತುಗಳನ್ನು ಕೇಳಿ ಸ್ವಲ್ಪ ನವನೀತವನ್ನು (ಬೆಣ್ಣೆ) ತರಲು ಗೋಕುಲಕ್ಕೆ ಹೋದನು.
ನವನೀತಂ ತಥಾಽಪಶ್ಯನ್ಮಥಿತಂ ಕಲಶೇ ಸ್ಥಿತಮ್ |
ತದಾದಾಯ ತತೋಽಗಚ್ಛದ್ ಯತಸ್ತದ್ ರಕ್ಷ್ಯತೇಽಮೃತಮ್ ||2||
ಅವನು ಅಲ್ಲಿ ಮೊಸರನ್ನು ಕಡೆದು ಒಂದು ಕಲಶದಲ್ಲಿದ್ದ ನವನೀತವನ್ನು ನೋಡಿ ಅದನ್ನು ತೆಗೆದುಕೊಂಡು ಅಮೃತವು ರಕ್ಷಿಸಲ್ಪಡುತ್ತಿದ್ದ ಸ್ಥಳಕ್ಕೆ ಬಂದನು.
ಸ ತತ್ರ ಗತ್ವಾ ಪತಗಸ್ತಿರ್ಯಕ್ತೋಯಂ ಮಹಾಬಲಃ |
ಹುತಾಶನಮಪಕ್ರಮ್ಯ ನವನೀತಮಪಾತಯತ್ ||3||
ಮಹಾಬಲನಾದ ಗರುಡನು ಜಲದುರ್ಗವನ್ನು ಅಡ್ಡವಾಗಿ ದಾಟಿ, ಅಗ್ನಿಯ ಸಮೀಪಕ್ಕೆ ಬಂದು ಅಗ್ನಿಯ ಮೇಲೆ ನವನೀತವನ್ನು ಹಾಕಿದನು.
ಸೋಽರ್ಚಿಷ್ಮಾನ್ ಮಂದವೇಗೋಽಭೂತ್ ಸರ್ಪಿಷಾ ತೇನ ತರ್ಪಿತಃ |
ಧೂಮಕೇತುರ್ನ ಜಜ್ವಾಲ ಧೂಮಮೇವ ಸಸರ್ಜ ಹ ||4||
ಆ ನವನೀತದಿಂದ ತೃಪ್ತಿಗೊಂಡ ಅಗ್ನಿಯು ಮಂದವೇಗವುಳ್ಳವನಾದನು. ಧೂಮಕೇತುವಾದ ಅವನು ಜ್ವಲಿಸಲಿಲ್ಲ. ಧೂಮವನ್ನೇ ಸೃಷ್ಟಿ ಮಾಡಿದನು.
ತಮತೀತ್ಯಾಶು ಗರುಡೋ ಹೃಷ್ಟಾತ್ಮಾ ಜಾತವೇದಸಮ್ |
ರಕ್ಷಾಂಸಿ ಸಮತಿಕ್ರಾಮತ್ ಪಕ್ಷವಾತೇನ ಪಾತಯನ್ ||5||
ಸಂತೋಷಗೊಂಡ ಗರುಡನು ಶೀಘ್ರವಾಗಿ ಅಗ್ನಿಯನ್ನು ದಾಟಿ ತನ್ನ ರೆಕ್ಕೆಗಳಿಂದ ಉಂಟಾದ ವಾಯುವಿನಿಂದ ಕಾವಲುಗಾರರಾದ ರಾಕ್ಷಸರನ್ನು ಬೀಳಿಸುತ್ತಾ ಅವರನ್ನೂ ದಾಟಿದನು.
ತೇ ಪತಂತಿ ಶಿರೋಭಿಶ್ಚ ಜಾನುಭಿಶ್ಚರಣೈಸ್ತಥಾ |
ಉತ್ಸೃಜ್ಯ ಶಸತ್ರವರಣಂ ಪಕ್ಷಿಪಕ್ಷಸಮಾಹತಾಃ ||6||
ಗರುಡನ ಪಕ್ಷವಾಯುವಿನಿಂದ ಹೊಡೆಯಲ್ಪಟ್ಟ ಆ ರಾಕ್ಷಸರು ತಮ್ಮ ಶಸ್ತ್ರಗಳನ್ನು ಬಿಟ್ಟು ತಮ್ಮ ತಲೆಯ ಮೇಲೆ, ಮಂಡಿಗಳ ಮೇಲೆ ಮತ್ತು ಪಾದಗಳ ಮೇಲೆ ಬಿದ್ದರು.
ಉತ್ಪ್ಲುತ್ಯ ಚಾವೃತಾನ್ನಾಗಾನ್ ಹತ್ವಾ ಚಕ್ರಂ ವ್ಯತೀತ್ಯ ಚ |
ಅರಾಂತರೇಣ ಶಿರಸಾ ಭಿತತ್ವ ಜಾಲಂ ಸಮಾದ್ರವತ್ ||7||
ಗರುಡನು ಅಲ್ಲಿಂದ ಹಾರಿ ಸರ್ಪಗಳನ್ನು ಕೊಂದು ಚಕ್ರದ, ಅರಗಳ ಮಧ್ಯದಲ್ಲಿ ತೂರಿ ಮುಂದೆ ಹೋಗಿ, ಕಬ್ಬಿಣದ ಬಲೆಯನ್ನು ಭೇದಿಸಿ ಮುಂದೆ ಸಾಗಿದನು.
ಸ ಭಿತತ್ವ ಶಿರಸಾ ಜಾಲಂ ವಜ್ರವೇಗಸಮೋ ಬಲೀ |
ಉಜ್ಜಹಾರ ತತಃ ಶೀಘ್ರಮಮೃತಂ ಭುಜಗಾಶನಃ ||8||
ಬಲಿಷ್ಠನೂ, ವಜ್ರವೇಗಕ್ಕೆ ಸಮನಾದ ವೇಗವುಳ್ಳವನೂ ಆದ, ಸರ್ಪಭಕ್ಷಕನಾದ ಗರುಡನು ಆ ಕಬ್ಬಿಣದ ಬಲೆಯನ್ನು ತನ್ನ ಶಿರಸ್ಸಿನಿಂದ ಭೇದಿಸಿ, ಶೀಘ್ರವಾಗಿ ಅಮೃತದ ಕಲಶವನ್ನು ಎತ್ತಿಕೊಂಡನು.
ತದಾದಾಯಾದ್ರವಚ್ಛೀಘ್ರಂ ಗರುಡಃ ಶ್ವಸನೋ ಯಥಾ |
ಅಥ ಸನ್ನಾಹಮಕರೋದ್ ವೃತ್ರಹಾ ವಿಬುಧೈಃ ಸಹ ||9||
ಗರುಡನು ಅಮೃತಕಲಶವನ್ನು ತೆಗೆದುಕೊಂಡು ವಾಯುವಿನಂತೆ ಶೀಘ್ರಗಾಮಿಯಾಗಿ ಹೊರಟನು. ಆಗ ಇಂದ್ರನು ದೇವತೆಗಳ ಜೊತೆಯಲ್ಲಿ ಯುದ್ಧ ಸನ್ನಾಹವನ್ನು ಮಾಡಿದನು.
ತತೋ ಮಾತಲಿಸಂಯುಕ್ತಂ ಹರಿಭಿಃ ಸ್ವರ್ಣಮಾಲಿಭಿಃ |
ಆರುರೋಹ ರಥಂ ಶೀಘ್ರಂ ಸೂರ್ಯಾಗ್ನಿಸಮತೇಜಸಮ್ ||10||
ಆಗ ಸ್ವರ್ಣಮಾಲೆಗಳನ್ನು ಧರಿಸಿದ ಅಶ್ವಗಳಿಂದ, ಮಾತಲಿಯಿಂದ ಹೂಡಲ್ಪಟ್ಟ ಸೂರ್ಯಾಗ್ನಿಗೆ ಸಮಾನವಾದ ತೇಜಸ್ಸನ್ನು ಹೊಂದಿದ ರಥವನ್ನು ಇಂದ್ರನು ಶೀಘ್ರವಾಗಿ ಏರಿದನು.
ಸೋಽಭ್ಯದ್ರವತ್ ಪಕ್ಷಿರಾಜಂ ವೃತ್ರಹಾ ಪಾಕಶಾಸನಃ |
ಉದ್ಯಮ್ಯ ನಿಶಿತಂ ವಜ್ರಂ ವಜ್ರಹಸ್ತೋ ಮಹಾಬಲಃ ||11||
ಮಹಾಬಲನಾದ ಪಾಕಶಾಸನನೂ, ವೃತ್ರಹಂತಕನೂ ಆದ ಇಂದ್ರನು ಕೈಯಲ್ಲಿ ತೀಕ್ಷ್ಣವಾದ ವಜ್ರಾಯುಧವನ್ನು ಎತ್ತಿಹಿಡಿದು, ಪಕ್ಷಿರಾಜನಾದ ಗರುಡನ ಬಳಿಗೆ ಓಡಿಬಂದನು.
ತಥೈವ ಗರುಡೋ ರಾಜನ್ ವಜ್ರಹಸ್ತಂ ಸಮಾದ್ರವತ್ |
ತತೋ ವೈ ಮಾತಲಿಂ ಪ್ರಾಹ ಶೀಘ್ರಂ ವಾಹಯ ವಾಜಿನಃ ||12||
ಎಲೈ ರಾಜನೇ, ಹಾಗೆಯೇ ಗರುಡನೂ ಸಹ ಇಂದ್ರನ ಮೇಲೆ ಧಾವಿಸಿದನು. ಆಗ ಇಂದ್ರನು ಮಾತಲಿಯನ್ನು ಕುರಿತು ಅಶ್ವಗಳನ್ನು ಶೀಘ್ರವಾಗಿ ಪ್ರಚೋದಿಸು ಎಂದು ಹೇಳಿದನು.

ಅಥ ದಿವ್ಯಂ ಮಹಾಘೋರಂ ಗರುಡಾಯ ಸಸರ್ಜ ಹ |
ವಜ್ರಂ ಸಹಸ್ರನಯನಸ್ತಿಗ್ಮವೇಗಪರಾಕ್ರಮಃ ॥13॥
ಅನಂತರ ಸಹಸ್ರಾಕ್ಷನೂ, ತೀಕ್ಷ್ಣವಾದ ವೇಗ ಮತ್ತು ಪರಾಕ್ರಮವುಳ್ಳವನೂ ಆದ ಇಂದ್ರನು ಮಹಾಘೋರವಾದ, ದಿವ್ಯವಾದ ವಜ್ರಾಯುಧವನ್ನು ಗರುಡನ ಮೇಲೆ ಪ್ರಯೋಗಿಸಿದನು.
ಉತ್ಸಿಸೃಕ್ಷಂತಮಾಜ್ಞಾಯ ವಜ್ರಂ ವೈ ತ್ರಿದಶೇಶ್ವರಮ್ |
ತೂರ್ಣಂ ವೇಗತರೋ ಭೂತ್ವಾ ಜಗಾಮ ಪತತಾಂವರಃ ॥14॥
ದೇವಪತಿಯಾದ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದ ವೇಗವನ್ನು ನೋಡಿದ ಪಕ್ಷಿಶ್ರೇಷ್ಠನಾದ ಗರುಡನು ತನ್ನ ವೇಗವನ್ನು ಶೀಘ್ರವಾಗಿ ಹೆಚ್ಚಿಸಿ ಮುಂದೆ ಹೊರಟನು.
ಪಿತಾಮಹನಿಸರ್ಗೇಣ ಜ್ಞಾತ್ವಾ ಲಬ್ಧವರಃ ಖಗಃ |
ಆಯುಧಾನಾಂ ವರಂ ವಜ್ರಮಥ ಶಕ್ರಮುವಾಚ ಹ ॥15॥
ಬ್ರಹ್ಮದೇವರಿಂದ ಎಂದೂ ನಿಷ್ಫಲವಾಗುವುದಿಲ್ಲವೆಂಬ ವರವನ್ನು ಪಡೆದ ವಜ್ರಾಯುಧವನ್ನು ತಿಳಿದು ಗರುಡನು ಇಂದ್ರನನ್ನು ಕುರಿತು ಮಾತನಾಡಿದನು.
ವೃತ್ರಹನ್ನೇಷ ವಜ್ರಸ್ತೇ ವರೋ ಲಬ್ಧಃ ಪಿತಾಮಹಾತ್ |
ಅತಃ ಸಮ್ಮಾನಮಾಕಾಂಕ್ಷನ್ ಮುಂಚಾಮ್ಯೇಕಂ ತನೂರುಹಮ್॥16॥
`ಎಲೈ ವೃತ್ರಹಂತಕನಾದ ಇಂದ್ರನೇ, ಈ ನಿನ್ನ ವಜ್ರಾಯುಧವು ಬ್ರಹ್ಮದೇವರಿಂದ ವರವನ್ನು ಪಡೆದಿದೆ. ಆದ್ದರಿಂದ ಅದನ್ನು ಸಮ್ಮಾನಿಸಲು ನಾನೇ ಒಂದು ಗರಿಯನ್ನು ಉದುರಿಸುತ್ತೇನೆ.
ಏತೇನಾಯುಧರಾಜೇನ ಯದಿ ಶಕ್ನೋಷಿ ವೃತ್ರಹನ್ |
ಹನ್ಯಾಸ್ತ್ವಂ ಪರಯಾ ಶಕ್ತ್ಯಾ ಗಚ್ಛಾಮ್ಯಹಮನಾಮಯಃ ॥17॥
ಎಲೈ ವೃತ್ರನಾಶಕನೇ, ಈ ಶ್ರೇಷ್ಠವಾದ ಆಯುಧದಿಂದ ನೀನು ನಿನ್ನ ಪೂರ್ಣಶಕ್ತಿಯಿಂದ ಆ ಗರಿಯನ್ನು ಕತ್ತರಿಸಿದರೆ ನಾನು ಕ್ಷೇಮದಿಂದ ಮುಂದೆ ಸಾಗುವೆನು' (ಎಂದು ಹೇಳಿದನು).
ತತ್ತು ತೂರ್ಣಂ ತದಾ ವಜ್ರಂ ಸ್ವೇನ ವೇಗೇನ ಭಾರತ |
ಜಘಾನ ಪರಯಾ ಶಕ್ತ್ಯಾ ನ ಚೈನಮದಹದ್ ಭೃಶಮ್ ॥18॥
ತತೋ ದೇವರ್ಷಯೋ ರಾಜನ್ ಗಚ್ಛಂತೋ ವೈ ವಿಹಾಯಸಾ |
ದೃಷ್ಟ್ವಾ ವಜ್ರಂ ವಿಷಕ್ತಂ ತಂ ಪಕ್ಷಿಪರ್ಣೇಽಬ್ರುವನ್ ವಚಃ ॥19॥
ಎಲೈ ಭಾರತನೇ, ಇಂದ್ರನು ಆ ವಜ್ರಾಯುಧವನ್ನು ತನ್ನ ಪೂರ್ಣಶಕ್ತಿಯಿಂದ ಗರುಡನ ಮೇಲೆ ಪ್ರಯೋಗಿಸಿದನು. ಆದರೆ ವಜ್ರಾಯುಧವು ಗರುಡನ ಗರಿಯನ್ನು ದಹಿಸಲಿಲ್ಲ. ಆಗ ಎಲೈ ರಾಜನೇ, ಆಕಾಶಮಾರ್ಗದಲ್ಲಿ ಸಂಚರಿಸುವ ದೇವರ್ಷಿಗಳು ವಜ್ರವು ಗರುಡನ ಗರಿಯಲ್ಲಿ ಸಿಲುಕಿಕೊಂಡುದನ್ನು ನೋಡಿ ಮಾತನಾಡಿದರು.
ಸುಪರ್ಣಃ ಪಕ್ಷಿಗರುಡೋ ಯಸ್ಯ ಪರ್ಣೇ ವರಾಯುಧಮ್ |
ವಿಷಕ್ತಂ ದೇವರಾಜಸ್ಯ ವೃತ್ರಹಂತುಃ ಸನಾತನಮ್ ॥20॥
`ಪಕ್ಷಿಶ್ರೇಷ್ಠನಾದ ಗರುಡನು ಒಳ್ಳೆಯ ಪುಚ್ಛವನ್ನು ಹೊಂದಿದವನು. ಅವನ ಪುಚ್ಛದ ಒಂದು ಗರಿಯಲ್ಲಿ ದೇವರಾಜನಾದ, ವೃತ್ರಹಂತಕನಾದ ಇಂದ್ರನ ಸನಾತನವಾದ, ಶ್ರೇಷ್ಠವಾದ ಆಯುಧವು ಸಿಲುಕಿಕೊಂಡಿದೆ'.
ಭೀಷ್ಮಃ
ಏವಂ ಸುಪರ್ಣೋ ವಿಹಗೋ ವೈನತೇಯಃ ಪ್ರತಾಪವಾನ್ |
ಋಷಯಸ್ತಂ ವಿಜಾನಂತಿ ಚಾಗ್ನೇಯಂ ವೈಷ್ಣವಂ ಪುನಃ ॥21॥
ಭೀಷ್ಮರು ಹೀಗೆ ಪಕ್ಷಿಯಾದ ಗರುಡನು ಪ್ರತಾಪಶಾಲಿಯಾದವನು ಮತ್ತು ಒಳ್ಳೆಯ ಪುಚ್ಛವನ್ನು ಹೊಂದಿದವನು. ಋಷಿಗಳು ಅವನನ್ನು ಅಗ್ನಿಸಂಬಂಧಿಯೆಂದೂ, ವಿಷ್ಣುಸಂಬಂಧಿಯೆಂದೂ ತಿಳಿಯುತ್ತಾರೆ.
ವೇದಾಭಿಷ್ಟುತಮತ್ಯರ್ಥಂ ಸ್ವರ್ಗಮಾರ್ಗಫಲಪ್ರದಮ್ |
ತನುಪರ್ಣಂ ಸುಪರ್ಣಸ್ಯ ಜಗೃಹುರ್ಬರ್ಹಿಣಸ್ತಥಾ ॥22॥
ಮಯೂರಾ ವಿಸ್ಮಿತಾಃ ಸರ್ವೇ ಆದ್ರವಂತಿ ಸ್ಮ ವಜ್ರಿಣಮ್ ॥23॥
ಅವನು ವೇದಗಳಿಂದ ಬಹಳವಾಗಿ ಸ್ತೋತ್ರ ಮಾಡಲ್ಪಟ್ಟವನು ಮತ್ತು ಸ್ವರ್ಗ ಮಾರ್ಗದಲ್ಲಿ ಫಲಪ್ರದನಾದವನು (ಮೋಕ್ಷಮಾರ್ಗದಲ್ಲಿಯೂ ಫಲಪ್ರದನಾದವನು). ಗರುಡನ ಆ ಸಣ್ಣಗರಿಯನ್ನು ನವಿಲುಗಳು ತೆಗೆದುಕೊಂಡವು. ನವಿಲುಗಳೆಲ್ಲವೂ ವಿಸ್ಮಯ ಹೊಂದಿ ಇಂದ್ರನ ಕಡೆ ಓಡಿದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಸುಪರ್ಣಸ್ಯ
ಸುಪರ್ಣತ್ವಂ ನಾಮ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಕದ್ರುವನ್ನು ಮೆಚ್ಚಿಸಿ ಇಂದ್ರನಿಗೆ ಪುನಃ ಅಮೃತದ ಕಲಶವನ್ನು ಕೊಟ್ಟು ಇಂದ್ರನಿಂದ ಗರುಡನು ವರಪ್ರಾಪ್ತಿ.
ಭೀಷ್ಮಃ

ತತೋ ವಜ್ರಂ ಸಹಸ್ರಾಕ್ಷೋ ದೃಷ್ಟ್ವಾ ಸಕ್ತಂ ವರಾಯುಧಮ್ |
ಋಷೀಂಶ್ಚ ದೃಷ್ಟ್ವಾ ಸಹಸಾ ಸುಪರ್ಣಮಿದಮಬ್ರವೀತ್ ॥1॥
ಭೀಷ್ಮ ಆಗ ಸಹಸ್ರಾಕ್ಷನಾದ ಇಂದ್ರನು ಶ್ರೇಷ್ಠವಾದ ತನ್ನ ಆಯುಧವಾದ ವಜ್ರವು ಗರುಡನ ಗರಿಯಲ್ಲಿ ಸಿಲುಕಿಕೊಂಡಿರುವುದನ್ನೂ ಮತ್ತು ಋಷಿಗಳನ್ನೂ ನೋಡಿ ಗರುಡನನ್ನು ಕುರಿತು ತಕ್ಷಣ ಮಾತನಾಡಿದನು.
ನ ತೇ ಸುಪರ್ಣ ಪಶ್ಯಾಮಿ ಪ್ರಭಾವಂ ತೇನ ಯೋಧಯೇ |
ಇತ್ಯುಕ್ತೇ ನ ಮಯಾ ರಕ್ಷ್ಯಾ ಶಕ್ಯಾ ಕರ್ತುಮತೋಽನ್ಯಥಾ |
ಇದಂ ವಜ್ರಂ ಮಯಾ ಸಾರ್ಧಂ ನಿವೃತ್ತಂ ಹಿ ಯಥಾಗತಮ್ ॥2॥
`ಎಲೈ ಗರುಡನೇ, ನಿನ್ನ ಪ್ರಭಾವವನ್ನು ನಾನು ತಿಳಿದಿಲ್ಲ. ಆದ್ದರಿಂದ ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದೇನೆ. ನಾನು ಬೇರೆ ಯಾವ ರೀತಿಯಲ್ಲಿಯೂ ಅಮೃತವನ್ನು ರಕ್ಷಿಸಲು ಸಾಧ್ಯವಿಲ್ಲ. ನಾನು ಮತ್ತು ವಜ್ರಾಯುಧವು ಬಂದಂತೆಯೇ ನಿವೃತ್ತಿಯನ್ನು ಹೊಂದುತ್ತಿದ್ದೇವೆ' (ಎಂದು ಹೇಳಿದನು).
ತತಃ ಸಹಸ್ರನಯನೇ ನಿವೃತ್ತೇ ಗರುಡಸ್ತಥಾ |
ಕದ್ರೂಮಭ್ಯಗಮತ್ ತೂರ್ಣಮಮೃತಂ ಗೃಹ್ಯ ಭಾರತ ॥3॥
ಎಲೈ ಭಾರತನೇ, ಇಂದ್ರನು ಹಿಂದಿರುಗುತ್ತಿರಲು, ಆಗ ಗರುಡನು ಅಮೃತ ಕಲಶವನ್ನು ತೆಗೆದುಕೊಂಡು ಶೀಘ್ರವಾಗಿ ಕದ್ರುವಿನ ಬಳಿಗೆ ಬಂದನು.
ಗರುಡಃ
ತದಾಹೃತಂ ಮಯಾ ಶೀಘ್ರಮಮೃತಂ ಜನನೀಕೃತೇ |
ಅದಾಸೀ ಸಾ ಭವತ್ವದ್ಯ ವಿನತಾ ಧರ್ಮಚಾರಿಣೀ ॥4॥
ಗರುಡ `ನಾನು ತಾಯಿಯ ಸಲುವಾಗಿ ಶೀಘ್ರವಾಗಿ ಅಮೃತವನ್ನು ತಂದಿದ್ದೇನೆ. ಧರ್ಮಚಾರಿಣಿಯಾದ, ನನ್ನ ತಾಯಿಯಾದ ವಿನತೆಯು ಈ ದಿನ ದಾಸ್ಯದಿಂದ ಬಿಡುಗಡೆಯನ್ನು ಹೊಂದಲಿ'.
ಕದ್ರೂಃ
ಸ್ವಾಗತಂ ಸ್ವಾಹೃತಂ ಚೇದಮಮೃತಂ ವಿನತಾತ್ಮಜ |
ಅದಾಸೀ ಜನನೀ ತೇಽದ್ಯ ಪುತ್ರ ಕಾಮವಶಾ ಶುಭಾ |
ಏವಮುಕ್ತೇ ತದಾ ಸಾ ಚ ಸಂಪ್ರಾಪ್ತಾ ವಿನತಾ ಗೃಹಮ್ ॥5॥
ಕದ್ರೂ `ಎಲೈ ವಿನತೆಯ ಪುತ್ರನೇ, ನಿನಗೆ ಸ್ವಾಗತ. ಈ ಅಮೃತವನ್ನು ಚೆನ್ನಾಗಿ ತಂದಿದ್ದೀಯೆ. ಶುಭಳಾದ ನಿನ್ನ ತಾಯಿಯು ಈ ದಿನ ದಾಸ್ಯದಿಂದ ವಿಮೋಚನೆಯನ್ನು ಹೊಂದಿ, ತನ್ನ ಇಚ್ಛೆಯಂತೆ ನಡೆದುಕೊಳ್ಳುವಳು ಎಂದು  ಕದ್ರುವು ಹೀಗೆ ಹೇಳುತ್ತಿರಲು ಆಗ ವಿನತೆಯು ತನ್ನ ಮನೆಗೆ ಹಿಂದಿರುಗಿದಳು.
ಉಪನೀಯ ಯಥಾನ್ಯಾಯಂ ವಿಹಗೋ ಬಲಿನಾಂವರಃ |
ಸ್ಮೃತ್ವಾ ನಿಕೃತ್ಯಾ ವಿಜಯಂ ಮಾತುಃ ಸಂಪ್ರತಿಪದ್ಯ ಚ ॥6॥
ವಧಂ ಚ ಭುಜಗೇಂದ್ರಾಣಾಂ ಯೇ ವಾಲಾಸ್ತಸ್ಯ ವಾಜಿನಃ |
ಬಭೂವುರಸಿತಪ್ರಖ್ಯಾ ನಿಕೃತ್ಯಾ ವೈ ಜಿತಂ ತಯಾ ॥7॥
ತಾಮುವಾಚ ತತೋ ನ್ಯಾಯ್ಯಂ ವಿಹಗೋ ಬಲಿನಾಂವರಃ |
ಉಜ್ಜಹಾರಾಮೃತಂ ತೂರ್ಣಮುತ್ಪಪಾತ ಚ ರಂಹಸಾ ॥8॥
ಬಲಿಷ್ಠರಲ್ಲಿ ಶ್ರೇಷ್ಠನಾದ ಗರುಡನು ನ್ಯಾಯದಂತೆಯೇ ಅಮೃತವನ್ನು ತಂದು, ತನ್ನ ತಾಯಿಯು ಮೋಸದಿಂದ ಪರಾಜಿತಳಾದುದನ್ನು ಕೇಳಿ, ಕಪ್ಪು ಬಣ್ಣವನ್ನು ಹೊಂದಿ ಕುದುರೆಯ ಬಾಲವನ್ನು ಸೇರಿದ ಸರ್ಪಗಳಿಗೆ ವಧೆಯ ಶಾಪವು ಬಂದಿರುವುದನ್ನು ಸ್ಮರಿಸಿ, ಕದ್ರುವನ್ನು ಕುರಿತು ಇಷ್ಟು ಮಾತುಗಳನ್ನು ಹೇಳಿ, ಪುನಃ ಅಮೃತದ ಕಲಶವನ್ನು ತೆಗೆದುಕೊಂಡು ಶೀಘ್ರವಾಗಿ ಮೇಲೆ ಹಾರಿದನು.
ತದ್ಗೃಹೀತ್ವಾಽಮೃತಂ ತೂರ್ಣಂ ಪ್ರಯಾಂತಮಪರಾಜಿತಮ್ |
ಕದ್ರೂರ್ಭುಜಂಗಜನನೀ ಸುಪರ್ಣಮಿದಮಬ್ರವೀತ್ ॥9॥
ಕಿಮರ್ಥಂ ವೈನತೇಯ ತ್ವಮಾಹೃತ್ಯಾಮೃತಮುತ್ತಮಮ್ |
ಪುನರ್ಹರಸಿ ದುರ್ಬುದ್ಧೇ ಮಾ ಜಾತು ವೃಜಿನಂ ಕೃಥಾಃ ॥10॥
ಅಮೃತಕಲಶವನ್ನು ತೆಗೆದುಕೊಂಡು ಶೀಘ್ರವಾಗಿ ಮೇಲೆ ಹಾರುತ್ತಿದ್ದ, ಅಪರಾಜಿತನಾದ ಗರುಡನನ್ನು ನೋಡಿ, ಸರ್ಪಮಾತೆಯಾದ ಕದ್ರುವು ಅವನನ್ನು ಕುರಿತು- `ಎಲೈ ವಿನತಾ ಪುತ್ರನೇ, ದುರ್ಬುದ್ಧಿಯುಳ್ಳವನೇ, ತಂದಿರುವ ಅಮೃತವನ್ನು ಪುನಃ ಏಕೆ ತೆಗೆದುಕೊಂಡು ಹೋಗುತ್ತಿದ್ದೀಯೆ? ಎಂದೂ ಅಪರಾಧವನ್ನು ಮಾಡಬೇಡ' ಎಂದು ಹೇಳಿದಳು.
ಸುಪರ್ಣಃ
ಅಮೃತಾಹರಣಂ ಮೇಽದ್ಯ ಯತ್ಕೃತಂ ಜನನೀಕೃತೇ |
ಭವತ್ಯಾ ವಚನಾದೇತದಾಹರಾಮೃತಮಿತ್ಯುತ ॥11॥
ಗರುಡ `ನಾನು ಅಮೃತವನ್ನು ತೆಗೆದುಕೊಂಡು ಬಾ ಎಂಬ ನಿನ್ನ ಮಾತಿಗೆ ಅನುಸಾರವಾಗಿ ತಾಯಿಯ ಸಲುವಾಗಿ ಈ ದಿನ ಅಮೃತವನ್ನು ತಂದೆನು.
ಆಹೃತಂ ತದಿದಂ ಶೀಘ್ರಂ ಮುಕ್ತಾ ಚ ಜನನೀ ಮಮ |
ಹರಾಮ್ಯೇಷ ಪುನಸ್ತತ್ರ ಯತ ಏತನ್ಮಯಾಽಽಹೃತಮ್ ॥12॥

ಈ ಅಮೃತವನ್ನು ಶೀಘ್ರವಾಗಿ ತಂದಿದ್ದಾಯಿತು. ನನ್ನ ತಾಯಿಯೂ ದಾಸ್ಯದಿಂದ ಬಿಡುಗಡೆಯನ್ನು ಹೊಂದಿದಳು. ಈ ಅಮೃತವನ್ನು ನಾನು ಎಲ್ಲಿಂದ ತಂದೆನೋ ಅಲ್ಲಿಗೇ ಪುನಃ ತೆಗೆದುಕೊಂಡು ಹೋಗುತ್ತೇನೆ.
ಯದಿ ಮಾಂ ಭವತೀ ಬ್ರೂಯಾದಮೃತಂ ಮೇ ಚ ದೀಯತಾಮ್ |
ತಥಾ ಕುರ್ಯಾಂ ನ ವಾ ಕುರ್ಯಾಂ ನ ಹಿ ತ್ವಮಮೃತಕ್ಷಮಾ |
ಮಯಾ ಧರ್ಮೇಣ ಸತ್ಯೇನ ವಿನತಾ ಚ ಸಮುದ್ಧೃತಾ ||13||
ನೀನು ಒಂದು ಪಕ್ಷ ನನಗೇ ಅಮೃತವನ್ನು ಕೊಡು ಎಂದು ಹೇಳಿದ್ದರೆ ಆಗ ಕೊಡುತ್ತಿದ್ದೆ ಅಥವಾ ಕೊಡುತ್ತಿರಲಿಲ್ಲ. ಏಕೆಂದರೆ ನೀನು ಅಮೃತಕ್ಕೆ ಯೋಗ್ಯಳಾದವಳಲ್ಲ. ನಾನು ಧರ್ಮದಿಂದಲೂ ಮತ್ತು ಸತ್ಯದಿಂದಲೂ ತಾಯಿಯನ್ನು ಬಿಡುಗಡೆಗೊಳಿಸಿದ್ದೇನೆ' (ಎಂದು ಹೇಳಿದನು).
ಭೀಷ್ಮಃ
ತತೋ ಗತ್ವಾಽಥ ಗರುಡಃ ಪುರಂದರಮುವಾಚ ಹ |
ಇದಂ ಮಯಾ ವೃತ್ರಹಂತರ್ಹೃತಂ ತೇಽಮೃತಮುತ್ತಮಮ್ |
ಮಾತ್ರರ್ಥೇ ಹಿ ತಥೈವೇದಂ ಗೃಹಾಣಾಮೃತಮಾಹೃತಮ್ ||14||
ಭೀಷ್ಮ ಆಗ ಗರುಡನು ಪುರಂದರನ ಬಳಿಗೆ ಹೋಗಿ `ಎಲೈ ವೃತ್ರಹಂತಕನೇ, ನಾನು ತಾಯಿಯ ಸಲುವಾಗಿ ತೆಗೆದುಕೊಂಡು ಹೋದ ಈ ಶ್ರೇಷ್ಠವಾದ ಅಮೃತವನ್ನು ಪುನಃ ಹಾಗೆಯೇ ತಂದಿದ್ದೇನೆ. ಇದನ್ನು ಸ್ವೀಕರಿಸು' ಎಂದು ಹೇಳಿದನು.
ಮಾತಾ ಚ ಮಮ ದೇವೇಶ ದಾಸೀತ್ವಮುಪಜಗ್ಮುಷೀ |
ಭುಜಂಗಮಾನಾಂ ಮಾತುರ್ವೈ ಸಾ ಮುಕ್ತಾಽಮೃತದರ್ಶನಾತ್ ||15||
`ಎಲೈ ದೇವೇಶನೇ, ನನ್ನ ತಾಯಿಯು ಸರ್ಪಮಾತೆಯಾದ ಕದ್ರುವಿಗೆ ದಾಸಿಯಾಗಿದ್ದಳು. ಕದ್ರುವಿನ ಅಮೃತದರ್ಶನದಿಂದ ಅವಳು ಬಿಡುಗಡೆಯನ್ನು ಹೊಂದಿದಳು' (ಎಂದು ಹೇಳಿದನು).
ಏತಚ್ಛ್ರುತ್ವಾ ಸಹಸ್ರಾಕ್ಷಃ ಸುಪರ್ಣಮನುಮನ್ಯತೇ |
ಉವಾಚ ಚ ಮುದಾ ಯುಕ್ತೋ ದಿಷ್ಟ್ಯಾ ದಿಷ್ಟ್ಯೇತಿ ವಾಸವಃ ||16||
ಇದನ್ನು ಕೇಳಿದ ಇಂದ್ರನು ಗರುಡನನ್ನು ಗೌರವಿಸಿ ಸಂತೋಷಗೊಂಡವನಾಗಿ `ದೇವರ ದಯದಿಂದ ಅಮೃತವು ಹಿಂದೆ ಬಂದಿತು' ಎಂದು ಹೇಳಿದನು.
ಋಷಯೋ ಯೇ ಸಹಸ್ರಾಕ್ಷಮುಪಾಸಂತಿ ಸುರೈಃ ಸಹ |
ತೇ ಸರ್ವೇ ಚ ಮುದಾ ಯುಕ್ತಾ ವಿಶ್ವೇದೇವಾಸ್ತಥೈವ ಚ ||17||
ಋಷಿಗಳು ದೇವತೆಗಳ ಜೊತೆಯಲ್ಲಿ ಇಂದ್ರನನ್ನು ಸ್ತೋತ್ರ ಮಾಡಿದರು. ಅವರೆಲ್ಲರೂ ಮತ್ತು ವಿಶ್ವೇದೇವತೆಗಳೂ ಸಂತೋಷಗೊಂಡರು.
ತತಸ್ತ್ವೃಷಯಃ ಸರ್ವೇ ದೇವಾಶ್ಚ ಭರತರ್ಷಭ |
ಊಚುಃ ಪುರಂದರಂ ಹೃಷ್ಟಾ ಗರುಡೋ ಲಭತಾಂ ವರಮ್ ||18||
ಎಲೈ ಭರತಶ್ರೇಷ್ಠನೇ, ಆಗ ಎಲ್ಲ ದೇವತೆಗಳು ಮತ್ತು ಋಷಿಗಳು ಸಂತೋಷಗೊಂಡು ಇಂದ್ರನನ್ನು ಕುರಿತು `ಗರುಡನಿಗೆ ವರವನ್ನು ಕೊಡು' ಎಂದು ಹೇಳಿದರು.
ತತಃ ಶಚೀಪತಿರ್ವಾಕ್ಯಮುವಾಚ ಪ್ರಹಸನ್ನಿವ |
ಜನಿಷ್ಯತಿ ಹೃಷೀಕೇಶಃ ಸ್ವಯಮೇವೈಷ ಪಕ್ಷಿರಾಟ್ ||19||
ಕೇಶವಃ ಪುಂಡರೀಕಾಕ್ಷಃ ಶೂರಪುತ್ರಸ್ಯ ವೇಶ್ಮನಿ |
ಸ್ವಯಂ ಧರ್ಮಸ್ಯ ರಕ್ಷಾರ್ಥಂ ವಿಭಜ್ಯ ಭುಜಗಾಶನ ||20||
ಆಗ ಶಚೀಪತಿಯು ನಗುತ್ತಾ ಅವನನ್ನು ಕುರಿತು `ಹೃಷೀಕೇಶನು ಸ್ವತಃ ಈ ಪಕ್ಷಿರಾಜನಾಗಿ ಜನಿಸುತ್ತಾನೆ (ಗರುಡನಲ್ಲಿ ಸನ್ನಿಹಿತನಾದ ವಿಷ್ಣುವು ಸ್ವತಃ ಅವತರಿಸುತ್ತಾನೆ). ಪುಂಡರೀಕಾಕ್ಷನಾದ ಕೇಶವನು ಶೂರಪುತ್ರನಾದ ವಸುದೇವನ ಪತ್ನಿಯಲ್ಲಿ ಧರ್ಮದ ರಕ್ಷಣೆಗಾಗಿ ಸ್ವತಃ ಅವತಾರವನ್ನು ಮಾಡುವನು (ಎಂದು ಹೇಳಿದನು) (ಲಕ್ಷಾಲಂಕಾರ).
ಭೀಷ್ಮಃ
ಏಷ ತೇ ಪಾಂಡವಶ್ರೇಷ್ಠ ಗರುಡೋಽಥ ಪತತ್ರಿರಾಟ್ |
ಸುಪರ್ಣೋ ವೈನತೇಯಶ್ಚ ಕೀರ್ತಿತೋ ಭದ್ರಮಸ್ತು ತೇ ||21||
ಭೀಷ್ಮ `ಎಲೈ ಪಾಂಡವಶ್ರೇಷ್ಠನೇ, ಪಕ್ಷಿರಾಜನಾದ ವಿನತಾಪುತ್ರನಾದ ಗರುಡನು ಹೇಗೆ ಒಳ್ಳೆಯ ರೆಕ್ಕೆಯುಳ್ಳವನಾದನು ಎಂದು ನಿನಗೆ ಹೇಳಿದ್ದೇನೆ. ನಿನಗೆ ಮಂಗಳವಾಗಲಿ'.
ತದೇತದ್ ದದತಾಂ ಶ್ರೇಷ್ಠ ಮಯಾಽಽಖ್ಯಾನಂ ಪ್ರಕೀರ್ತಿತಮ್ |
ಸುಪರ್ಣಸ್ಯ ಮಹಾಬಾಹೋ ಕಿಂ ಭೂಯಃ ಕಥಯಾಮಿ ತೇ ||22||
ಎಲೈ ದಾನಿಶ್ರೇಷ್ಠನೇ, ನಿನಗೆ ಗರುಡನ ಈ ಉಪಾಖ್ಯಾನವನ್ನು ಹೇಳಿದ್ದೇನೆ. ಎಲೈ ಮಹಾಬಾಹುವೇ, ಪುನಃ ಏನನ್ನು ಕೇಳಲು ಬಯಸುತ್ತೀಯೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗರುಡೋಪಾಖ್ಯಾನೇ ಸುಪರ್ಣವರಾಭೋ ನಾಮ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
|| ಸೌಪರ್ಣಂ ಸಮಾಪ್ತಮ್ ||

* * * * *

ಇಪ್ಪತ್ತಾರನೆಯ ಅಧ್ಯಾಯ

ವಾಗ್ದಾನವನ್ನು ಮಾಡಿದುದನ್ನು ಕೊಡಲೇಬೇಕೆಂಬ ನಿಯಮ

ಯುಧಿಷ್ಠಿರಃ

ಬ್ರಾಹ್ಮಣಾನಾಂ ತು ಯೇ ಲೋಕೇ ಪ್ರತಿಶ್ರುತ್ಯ ಪಿತಾಮಹ |
ನ ಪ್ರಯಚ್ಛಂತಿ ಮೋಹಾತ್ ತೇ ಕೇ ಭವಂತಿ ಮಹಾಮತೇ ॥1॥
ಏತನ್ಮೇ ತತ್ತ್ವತೋ ಬ್ರೂಹಿ ಧರ್ಮಂ ಧರ್ಮಭೃತಾಂ ವರ |
ಪ್ರತಿಶ್ರುತ್ಯ ದುರಾತ್ಮಾನೋ ನ ಪ್ರಯಚ್ಛಂತಿ ಯೇ ನರಾಃ ॥2॥

ಯುಧಿಷ್ಠಿರ ಪಿತಾಮಹನೇ, ಮಹಾಮತಿಯೇ, ಧರ್ಮಿಷ್ಠರಲ್ಲಿ ಶ್ರೇಷ್ಠರಾದವನೇ, ಲೋಕದಲ್ಲಿ ದುರಾತ್ಮರಾದ ಯಾರು ಬ್ರಾಹ್ಮಣರಿಗೆ ದಾನ ಮಾಡುತ್ತೇವೆಂದು ಪ್ರತಿಜ್ಞೆಯನ್ನು ಮಾಡಿ ಮೋಹದಿಂದ ದಾನ ಮಾಡುವುದಿಲ್ಲವೋ ಅವರಿಗೆ ಮುಂದೆ ಏನಾಗುತ್ತದೆ? ಇದನ್ನು ನನಗೆ ಯಥಾರ್ಥವಾಗಿ ತಿಳಿಸಿ.

ಭೀಷ್ಮಃ

ಯೋ ನ ದದ್ಯಾತ್ ಪ್ರತಿಶ್ರುತ್ಯ ಸ್ವಲ್ಪಂ ವಾ ಯದಿ ವಾ ಬಹು |
ಆಶಾಸ್ತಸ್ಯ ಹತಾಃ ಸರ್ವಾಃ ಕ್ಲೀಬಸ್ಯೇವ ಪ್ರಜಾಫಲಮ್ ॥3॥

ಭೀಷ್ಮ ಯಾವನು ಅಲ್ಪವನ್ನಾಗಲೀ, ಬಹಳವನ್ನಾಗಲೀ ದಾನ ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ ದಾನ ಮಾಡುವುದಿಲ್ಲವೋ ಅವನ ಎಲ್ಲ ಆಸೆಗಳೂ ನಪುಂಸಕನ ಪುತ್ರಾಸೆಯಂತೆ ನಾಶವನ್ನು ಹೊಂದುತ್ತವೆ.

ಯಾಂ ರಾತ್ರಿಂ ಜಾಯತೇ ಪಾಪೋ ಯಾಂ ಚ ರಾತ್ರಿಂ ವಿನಶ್ಯತಿ |
ಏತಸ್ಮಿನ್ನಂತರೇ ಯದ್ಯತ್ಸುಕೃತಂ ತಸ್ಯ ಭಾರತ |
ಯಚ್ಚ ತಸ್ಯ ಹುತಂ ಕಿಂಚಿತ್ ಸರ್ವಂ ತಸ್ಯೋಪಹನ್ಯತೇ ॥4॥

ಮನುಷ್ಯನು ಯಾವ ದಿವಸದಲ್ಲಿ ಜನಿಸಿ, ಯಾವ ದಿವಸದಲ್ಲಿ ಮರಣವನ್ನು ಹೊಂದುತ್ತಾನೋ, ಎಲೈ ಭಾರತನೇ, ಈ ಮಧ್ಯದಲ್ಲಿ ಅವನು ಮಾಡಿದ ಹೋಮ ಮೊದಲಾದ ಸುಕೃತವೆಲ್ಲವೂ ನಾಶವನ್ನು ಹೊಂದುತ್ತವೆ.

ತಪಸ್ತಪ್ತಮಥೋ ವಾಪಿ ಪ್ರಾಹುರ್ಧರ್ಮಶಾಸ್ತ್ರವಿದೋ ಜನಾಃ |
ನಿಶಮ್ಯ ಭರತಶ್ರೇಷ್ಠ ಬುದ್ಧ್ಯಾ ಪರಮಯುಕ್ತಯಾ ॥5॥

ಮಾಡಿದ ತಪಸ್ಸೂ ಸಹ ನಾಶವನ್ನು ಹೊಂದುವುದೆಂದು ಧರ್ಮಶಾಸ್ತ್ರವನ್ನು ತಿಳಿದ ಜನರು ಹೇಳುತ್ತಾರೆ. ಎಲೈ ಭರತಶ್ರೇಷ್ಠನೇ, ಇದನ್ನು ಕೇಳಿ ಶ್ರೇಷ್ಠವಾದ ಬುದ್ಧಿಯನ್ನು ಹೊಂದಿ ವಾಗ್ದಾನ ಮಾಡಿದುದನ್ನು ದಾನ ಮಾಡಬೇಕು.

ಅಪಿ ಚೋದಾಹರಂತೀಮಂ ಧರ್ಮಶಾಸ್ತ್ರವಿದೋ ಜನಾಃ |
ಅಶ್ವಾನಾಂ ಶ್ಯಾಮಕರ್ಣಾನಾಂ ಸಹಸ್ರೇಣ ಸ ಮುಚ್ಯತೇ ॥6॥

ಧರ್ಮಶಾಸ್ತ್ರವನ್ನು ತಿಳಿದ ಜನರು ಈ ವಿಷಯದಲ್ಲಿ ಕಪ್ಪು ಕಿವಿಯನ್ನು ಹೊಂದಿರುವ ಸಹಸ್ರ ಅಶ್ವಗಳನ್ನು ದಾನ ಮಾಡಿದರೆ ಆ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ ಎಂದು ಹೇಳುತ್ತಾರೆ.

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಸೃಗಾಲಸ್ಯ ಚ ಸಂವಾದಂ ವಾನರಸ್ಯ ಚ ಭಾರತ ॥7॥

ಎಲೈ ಭಾರತನೇ, ಇದೇ ವಿಷಯದಲ್ಲಿ ಹಿಂದೆ ಒಂದು ನರಿಗೂ ಮತ್ತು ಕಪಿಗೂ ನಡೆದ ಸಂವಾದ ರೂಪವಾದ ಈ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ.

ತೌ ಸಖಾಯೌ ಪುರಾ ಹ್ಯಾಸ್ತಾಂ ಮಾನುಷತ್ವೇ ಪರಂತಪ |
ಅನ್ಯಾಂ ಯೋನಿಂ ಸಮಾಪನ್ನೌ ಸಾರ್ಗಾಲೀಂ ವಾನರೀಂ ತಥಾ ॥8॥
ಪುರಾಸಖಾಯಂ ಖಾದಂತಂ ಸೃಗಾಲಂ ವಾನರೋಽಬ್ರವೀತ್ |
ಶ್ಮಶಾನಮಧ್ಯೇ ಸಂಪ್ರೇಕ್ಷ್ಯ ಪೂರ್ವಜಾತಿಮನುಸ್ಮರನ್ ॥9॥

ಎಲೈ ಪರಂತಪನೇ, ಅವೆರಡೂ ಹಿಂದಿನ ಜನ್ಮದಲ್ಲಿ ಮನುಷ್ಯರಾಗಿ ಸ್ನೇಹಿತರಾಗಿದ್ದವು. ಅನಂತರ ಒಬ್ಬನು ನರಿಯೋನಿಯನ್ನು, ಇನ್ನೊಬ್ಬನು ಕಪಿ ಯೋನಿಯನ್ನು ಹೊಂದಿದರು. ಕಪಿಯು ತನ್ನ ಪೂರ್ವಜನ್ಮ ಸ್ನೇಹಿತನಾದ ನರಿಯು ಸ್ಮಶಾನದ ಮಧ್ಯದಲ್ಲಿ ತಿನ್ನುತ್ತಿರುವುದನ್ನು ನೋಡಿ ಹಿಂದಿನ ಜನ್ಮವನ್ನು ಸ್ಮರಿಸಿ ಮಾತನಾಡಿತು.

ಕಿಂ ತ್ವಯಾ ಪಾಪ(ತ)ಕಂ ಕರ್ಮ ಕೃತಂ ಪೂರ್ವಂ ಸುದಾರುಣಮ್ |
ಯಸ್ತ್ವಂ ಶ್ಮಶಾನೇ ಮೃತಕಾನ್ ಪೂತಿಕಾನತ್ಸಿ ಕುತ್ಸಿತಾನ್ ॥10॥

ನೀನು ಸ್ಮಶಾನದಲ್ಲಿ ಸತ್ತು, ಕೊಳೆತು ಕೆಟ್ಟದಾದ ಶವಗಳನ್ನು ತಿನ್ನುತ್ತಿದ್ದೀಯೆ. ನೀನು ಪೂರ್ವಜನ್ಮದಲ್ಲಿ ಅಂತಹ ಅತ್ಯಂತ ದಾರುಣವಾದ ಯಾವ ಪಾಪವನ್ನು ಮಾಡಿದೆ?

ಏವಮುಕ್ತಃ ಪ್ರತ್ಯುವಾಚ ಸೃಗಾಲೋ ವಾನರಂ ತದಾ |
ಬ್ರಾಹ್ಮಣಸ್ಯ ಪ್ರತಿಶ್ರುತ್ಯ ನ ಮಯಾ ತದುಪಾಕೃತಮ್ ॥11॥

ಹೀಗೆ ಹೇಳಲ್ಪಟ್ಟ ನರಿಯು ಆ ಕಪಿಯನ್ನು ಕುರಿತು `ನಾನು ಬ್ರಾಹ್ಮಣನಿಗೆ ವಾಗ್ದಾನವನ್ನು ಮಾಡಿ ಅದನ್ನು ಕೊಡಲಿಲ್ಲ' ಎಂದು ಹೇಳಿತು.

ತತ್ಕೃತೇ ಪಾಪಿಕಾಂ ಯೋನಿಮಾಪನ್ನೋಽಸ್ಮಿ ಪ್ಲವಂಗಮ |
ತಸ್ಮಾದೇವಂವಿಧಂ ಭಕ್ಷ್ಯಂ ಭಕ್ಷಯಾಮಿ ಬುಭುಕ್ಷಿತಃ ॥12॥

`ಎಲೈ ಕಪಿಯೇ, ಆ ಕಾರಣದಿಂದ ನಾನು ಈ ಪಾಪಯೋನಿಯಲ್ಲಿ ಜನಿಸಿದ್ದೇನೆ. ಆದ್ದರಿಂದ ಹಸಿವಿನಿಂದ ಬಳಲಿ, ಇಂತಹ ಕೆಟ್ಟ ಆಹಾರವನ್ನು ತಿನ್ನುತ್ತಿದ್ದೇನೆ' (ಎಂದು ಹೇಳಿತು).
ಭೀಷ್ಮಃ
ಸೃಗಾಲೋ ವಾನರಂ ಪ್ರಾಹ ಪುನರೇವ ನೃಪೋತ್ತಮ |
ಕಿಂ ತ್ವಯಾ ಪಾತಕಂ ಕರ್ಮ ಕೃತಂ ಯೇನಾಸಿ ವಾನರಃ ॥13॥
ಭೀಷ್ಮ ಎಲೈ ರಾಜನೇ, ನರಿಯು ಪುನಃ ಕಪಿಯನ್ನು ಕುರಿತು `ನೀನು ಕಪಿಯಾಗುವಂತಹ ಯಾವ ಪಾಪವನ್ನು ಮಾಡಿದೆ' ಎಂದು ಕೇಳಿತು.
ಸ ಚಾಪ್ಯಾಹ ಬ್ರಾಹ್ಮಣಾನಾಂ ಫಲಾಹಾರಂ ಪ್ಲವಂಗಮಃ |
ತಸ್ಮಾನ್ನ ಬ್ರಾಹ್ಮಣಸ್ವಂ ತು ಹರ್ತವ್ಯಂ ವಿದುಷಾ ಸದಾ |
ಸೀಮಾವಿವಾದೇ ಮೋಕ್ತವ್ಯಂ ದಾತವ್ಯಂ ಚ ಪ್ರತಿಶ್ರುತಮ್ ॥14॥
ಆ ಕಪಿಯಾದರೂ `ನಾನು ಬ್ರಾಹ್ಮಣರ ಹಣ್ಣುಗಳನ್ನು ಅಪಹರಿಸಿದೆ' ಎಂದು ಹೇಳಿತು. ಆದ್ದರಿಂದ ವಿವೇಕಿಯಾದವನು ಬ್ರಾಹ್ಮಣರ ಸ್ವತ್ತನ್ನು ಎಂದೂ ಅಪಹರಿಸಬಾರದು. ಭೂಮಿಯ ಗಡಿಯ ವಿವಾದವು ಬಂದರೆ ಬ್ರಾಹ್ಮಣನಿಗೆ ಬಿಟ್ಟುಕೊಡಬೇಕು ಮತ್ತು ವಾಗ್ದಾನ ಮಾಡಿದುದನ್ನು ಕೊಡಬೇಕು.
ಇತ್ಯೇತದ್ ಬ್ರುವತೋ ರಾಜನ್ ಬ್ರಾಹ್ಮಣಸ್ಯ ಮಯಾ ಶ್ರುತಮ್ |
ಕಥಾಂ ಕಥಯತಃ ಪುಣ್ಯಾಂ ಧರ್ಮಜ್ಞಸ್ಯ ಪುರಾತನೀಮ್ ॥15॥
ಎಲೈ ರಾಜನೇ, ಹಿಂದೆ ಧರ್ಮಜ್ಞನಾದ ಬ್ರಾಹ್ಮಣನೊಬ್ಬನು ಪವಿತ್ರವಾದ ಕಥೆಗಳನ್ನು ಹೇಳುತ್ತಿದ್ದಾಗ ನಾನು ಈ ವಿಷಯವನ್ನು ಕೇಳಿದೆನು.
ಶ್ರುತಂ ಚಾಪಿ ಮಯಾ ಭೂಯಃ ಕೃಷ್ಣಸ್ಯಾಪಿ ವಿಶಾಂಪತೇ |
ಕಥಾಂ ಕಥಯತಃ ಪೂರ್ವಂ ಬ್ರಾಹ್ಮಣಂ ಪ್ರತಿ ಪಾಂಡವ ॥16॥
ಎಲೈ ಪಾಂಡವನೇ, ಮತ್ತು ಪುನಃ ಕೃಷ್ಣನ ಕಥೆಯನ್ನು ಕೇಳುವಾಗಲೂ ನಾನು ಬ್ರಾಹ್ಮಣರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು ಎಂದು ತಿಳಿದೆನು.
ಏವಮೇವ ಚ ಮಾಂ ನಿತ್ಯಂ ಬ್ರಾಹ್ಮಣಾಃ ಸಂದಿಶಂತಿ ವೈ |
ಪ್ರತಿಶ್ರುತ್ಯ ಭವೇದ್ ದೇಯಂ ನಾಶಾ ಕಾರ್ಯಾ ಹಿ ಬ್ರಾಹ್ಮಣೈಃ ॥17॥
ಬ್ರಾಹ್ಮಣರಿಗೆ ಆಸೆಯನ್ನು ಉಂಟುಮಾಡಿದ ಮೇಲೆ ಅದನ್ನು ಅವರಿಗೆ ಕೊಡಲೇಬೇಕು. ಕೇವಲ ಆಸೆಯನ್ನು ಹುಟ್ಟಿಸಬಾರದು ಎಂದು ಬ್ರಾಹ್ಮಣರು ನನಗೆ ಯಾವಾಗಲೂ ಸಂದೇಶವನ್ನು ಕೊಡುತ್ತಾರೆ.
ಬ್ರಾಹ್ಮಣೋ ಹ್ಯಾಶಯಾ ಪೂರ್ವಂ ಕೃತಯಾ ಪೃಥಿವೀಪತೇ |
ಸುಸಮಿದ್ಧೋ ಯಥಾ ದೀಪ್ತಃ ಪಾವಕಸ್ತದ್ವಿಧಃ ಸ್ಮೃತಃ ॥18॥
ಮೊದಲು ವಾಗ್ದಾನವನ್ನು ಮಾಡಿ ಬ್ರಾಹ್ಮಣನಿಗೆ ಆಸೆಯನ್ನು ಹುಟ್ಟಿಸಿದರೆ ಅಂತಹ ಬ್ರಾಹ್ಮಣನು ಜ್ವಲಿಸುವ ಅಗ್ನಿ ಇದ್ದಂತೆ.
ಯಂ ನಿರೀಕ್ಷೇತ ಸಂಕ್ರುದ್ಧ ಆಶಯಾ ಪೂರ್ವಜಾತಯಾ |
ಪ್ರದಹೇತ ಹಿ ತಂ ರಾಜನ್ ಕಕ್ಷಮಕ್ಷಯ್ಯಭುಗ್ಯಥಾ ॥19॥
ಮೊದಲು ಉಂಟುಮಾಡಿದ ಆಸೆಯಿಂದ ಬ್ರಾಹ್ಮಣನು ಯಾವ ವಸ್ತುವನ್ನು ನೋಡುತ್ತಾನೆಯೋ ಎಲೈ ರಾಜನೇ, ಅವನು ಅದನ್ನು ಅಗ್ನಿಯು ಹುಲ್ಲುಗಾವಲನ್ನು ಸುಡುವಂತೆ ಸುಡುತ್ತಾನೆ.
ಸ ಏವ ಹಿ ಯದಾ ತುಷ್ಟೋ ವಚಸಾ ಪ್ರತಿನಂದತಿ |
ಭವತ್ಯಗದಸಂಕಾಶೋ ವಿಷಯೇ ತಸ್ಯ ಭಾರತ ॥20॥
ಎಲೈ ಭಾರತನೇ, ಅದೇ ಬ್ರಾಹ್ಮಣನು ವಾಗ್ದಾನ ಮಾಡಿದ ದಾನವನ್ನು ಪಡೆದು, ಸಂತುಷ್ಟನಾಗಿ ಒಳ್ಳೆಯ ಮಾತುಗಳನ್ನಾಡಿದರೆ ಆ ರಾಜನ ರಾಜ್ಯದಲ್ಲಿ ಅವನು ದೊಡ್ಡ ಔಷಧಿಯಂತೆ ಆಗುತ್ತಾನೆ.
ಪುತ್ರಾನ್ ಪೌತ್ರಾನ್ ಪಶೂಂಶ್ಚೈವ ಬಾಂಧವಾನ್ ಸಚಿವಾಂಸ್ತಥಾ |
ಪುರಂ ಜನಪದಂ ಚೈವ ಶಾಂತಿರಿಷ್ಟೇವ ಪುಷ್ಯತಿ ॥21॥
ಅವನು ಶಾಂತಿಕರ್ಮವನ್ನು ಮಾಡಿದವನಂತೆ ಆ ರಾಜನ ಪುತ್ರರನ್ನೂ, ಪೌತ್ರರನ್ನೂ, ಬಾಂಧವರನ್ನೂ, ಸಚಿವರನ್ನೂ, ರಾಜಧಾನಿಯನ್ನೂ, ದೇಶವನ್ನೂ ಅಭಿವೃದ್ಧಿಗೊಳಿಸುತ್ತಾನೆ.
ಏತದ್ಧಿ ಪರಮಂ ತೇಜೋ ಬ್ರಾಹ್ಮಣಸ್ಯೇಹ ದೃಶ್ಯತೇ |
ಸಹಸ್ರಕಿರಣಸ್ಯೇವ ಸವಿತುರ್ಧರಣೀತಳೇ ॥22॥
ಸಹಸ್ರ ಕಿರಣನಾದ ಸೂರ್ಯನ ತೇಜಸ್ಸು ಭೂತಳದಲ್ಲಿ ಕಂಡುಬರುವಂತೆ ಬ್ರಾಹ್ಮಣನ ಶ್ರೇಷ್ಠವಾದ ಈ ತೇಜಸ್ಸು ಕಂಡುಬರುತ್ತದೆ.
ತಸ್ಮಾದ್ ದಾತವ್ಯಮೇವೇಹ ಪ್ರತಿಶ್ರುತ್ಯ ಯುಧಿಷ್ಠಿರ |
ಯದೀಚ್ಛೇಚ್ಛೋಭನಾಂ ಜಾತಿಂ ಪ್ರಾಪ್ತುಂ ಭರತಸತ್ತಮ ॥23॥
ಎಲೈ ಯುಧಿಷ್ಠಿರನೇ, ಭರತಶ್ರೇಷ್ಠನೇ, ಆದ್ದರಿಂದ ಮುಂದೆ ಒಳ್ಳೆಯ ಜಾತಿಯನ್ನು ಪಡೆಯಲು ಬಯಸುವವನು ವಾಗ್ದಾನ ಮಾಡಿದುದನ್ನು ಇಲ್ಲಿ ದಾನವನ್ನು ಮಾಡಲೇಬೇಕು.
ಬ್ರಾಹ್ಮಣಸ್ಯ ಹಿ ದತ್ತೇನ ಧ್ರುವಂ ಸ್ವರ್ಗೋ ಹ್ಯನುತ್ತಮಃ |
ಶಕ್ಯಂ ಪ್ರಾಪ್ತುಂ ವಿಶೇಷೇಣ ದಾನಂ ಹಿ ಮಹತೀ ಕ್ರಿಯಾ ॥24॥
ಬ್ರಾಹ್ಮಣರಿಗೆ ಮಾಡಿದ ಶ್ರೇಷ್ಠವಾದ ದಾನದಿಂದ ವಿಶೇಷವಾದ ಸ್ವರ್ಗವನ್ನು ಪಡೆಯಲು ಸಾಧ್ಯ. ಏಕೆಂದರೆ ದಾನವು ಭಗವತ್

ಪ್ರೀತಿಕರವಾದ ದೊಡ್ಡ ಕರ್ಮ.
ಇತೋ ದತ್ತೇನ ಜೀವಂತಿ ದೇವತಾಃ ಪಿತರಸ್ತಥಾ |
ತಸ್ಮಾದ್ ದಾನಾನಿ ದೇಯಾನಿ ಬ್ರಾಹ್ಮಣೇಭ್ಯೋ ವಿಜಾನತಾ ॥25॥
ಇಲ್ಲಿ ದಾನಮಾಡುವುದರಿಂದ ದೇವತೆಗಳು ಮತ್ತು ಪಿತೃಗಳು ಜೀವಿಸಿದ್ದಾರೆ. ಆದ್ದರಿಂದ ವಿವೇಕಿಯಾದವನು ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು.
ಮಹದ್ಧಿ ಭರತಶ್ರೇಷ್ಠ ಬ್ರಾಹ್ಮಣಸ್ತೀರ್ಥಮುಚ್ಯತೇ |
ವೇಲಾಯಾಂ ನ ತು ಕಸ್ಯಾಂಚಿದ್ ಗಚ್ಚೇದ್ ವಿಪ್ರೋ ಹ್ಯಪೂಜಿತಃ ॥26॥
ಎಲ್ಲೈ ಭರತಶ್ರೇಷ್ಠನೇ, ಬ್ರಾಹ್ಮಣನು ಸತ್ಪಾತ್ರರಲ್ಲಿ ದೊಡ್ಡವನೆಂದು ಹೇಳಲ್ಪಡುತ್ತದೆ. ಯಾವುದೇ ಶುಭಕಾಲದಲ್ಲಿ ಬ್ರಾಹ್ಮಣನು ಅಪೂಜಿತನಾಗಿ ಹೋಗಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವಾನರ-ಸೃಗಾಲ ಸಂವಾದೋ ನಾಮ ಷಟ್ವಿಂಶತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯಅಧ್ಯಾಯ
ನೀನಿಗೆ ಉಪದೇಶನಿಷೇಧ
ಯುಧಿಷ್ಠಿರಃ
ಮಿತ್ರಸೌಹೃದಭಾವೇನ ಉಪದೇಶಂ ಕರೋತಿ ಯಃ |
ಜಾತ್ಯಾಽವರಸ್ಯ ರಾಜರ್ಷೇ ದೋಷಸ್ತಸ್ಯ ಭವೇನ್ನ ವಾ ॥1॥
ಯುಧಿಷ್ಠಿರ ಎಲ್ಲೈ ರಾಜರ್ಷಿಯೇ, ಯಾವನು ಮಿತ್ರಭಾವದಿಂದ ಜಾತಿಯಿಂದ ಕೆಳಗಿನವನಿಗೆ ಉಪದೇಶವನ್ನು ಮಾಡುತ್ತಾನೆಯೋ ಅವನಿಗೆ ದೋಷ ಉಂಟಾಗುತ್ತದೆಯೇ, ಇಲ್ಲವೇ?
ಏತದಿಚ್ಛಾಮಿ ತತ್ತ್ವೇನ ವ್ಯಾಖ್ಯಾತುಂ ವೈ ಪಿತಾಮಹ |
ಸೂಕ್ಷ್ಮಾ ಗತಿರ್ಹಿ ಧರ್ಮಸ್ಯ ಯತ್ರ ಮುಹ್ಯಂತಿ ಮಾನವಾಃ ॥2॥
ಪಿತಾಮಹನೇ, ಇದನ್ನು ಸರಿಯಾಗಿ ತಿಳಿಯಲು ಬಯಸುತ್ತೇನೆ. ಧರ್ಮದ ಗತಿಯು ಸೂಕ್ಷ್ಮವಾದುದು. ಆದ್ದರಿಂದ ಅದರಲ್ಲಿ ಮನುಷ್ಯರು ಭ್ರಾಂತಿಗೆ ಒಳಗಾಗುತ್ತಾರೆ.
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಶೃಣು ರಾಜನ್ ಯಥಾಗಮಮ್ |
ಋಷೀಣಾಂ ವದತಾಂ ಶ್ರೇಷ್ಠ ಶ್ರುತಮಾಸೀದ್ ಯಥಾ ಮಯಾ ॥3॥
ಭೀಷ್ಮ ಎಲ್ಲೈ ರಾಜನೇ, ಈ ವಿಷಯದಲ್ಲಿ ಪರಂಪರಾಗತವಾಗಿ ಬಂದ ವಿಷಯವನ್ನು ನಾನು ನಿನಗೆ ಹೇಳುವೆನು. ಎಲ್ಲೈ ಮಾತನಾಡುವವರಲ್ಲಿ ಶ್ರೇಷ್ಠನೇ, ನಾನು ಹಿಂದೆ ಋಷಿಗಳಿಂದ ಕೇಳಿದಂತೆ ಈ ವಿಷಯವನ್ನು ಹೇಳುತ್ತೇನೆ.
ಉಪದೇಶೋ ನ ಕರ್ತವ್ಯೋ ಜಾತಿಹೀನಸ್ಯ ಕಸ್ಯಚಿತ್ |
ಉಪದೇಶೇ ಮಹಾನ್ ದೋಷ ಉಪಾಧ್ಯಾಯಸ್ಯ ಭಾಷ್ಯತೇ ॥4॥
ಜಾತಿಯಿಂದ ಹೀನನಾದ ಯಾವನಿಗೂ ಉಪದೇಶವನ್ನು ಮಾಡಬಾರದು. ಉಪದೇಶವನ್ನು ಮಾಡಿದರೆ ಉಪದೇಶವನ್ನು ಮಾಡಿದ ಗುರುವಿಗೆ ದೊಡ್ಡ ದೋಷವು ಹೇಳಲ್ಪಡುತ್ತದೆ.
ನಿದರ್ಶನಮಿದಂ ರಾಜನ್ ಶೃಣು ಮೇ ಭರತರ್ಷಭ |
ದುರುಕ್ತವಚನೇ ರಾಜನ್ ಯಥಾ ಪೂರ್ವಂ ಯುಧಿಷ್ಠಿರ |
ಬ್ರಹ್ಮಾಶ್ರಮಪದೇ ವೃತ್ತಂ ಪಾರ್ಶ್ವೇ ಹಿಮವತಃ ಶುಭೇ ॥5॥
ಎಲ್ಲೈ ಭರತರ್ಷಭನೇ, ಈ ಒಂದು ದೃಷ್ಟಾಂತವನ್ನು ಕೇಳು. ಎಲ್ಲೈ ರಾಜನೇ, ಯುಧಿಷ್ಠಿರನೇ, ಹಿಂದೆ ಹಿಮಾಲಯ ಪರ್ವತದ ಪಾರ್ಶ್ವದಲ್ಲಿ ಬ್ರಹ್ಮಾಶ್ರಮ ಸ್ಥಾನದಲ್ಲಿ ಹೀಗೆ ಉಪದೇಶ ಮಾಡಿದವರ ವಿಷಯದಲ್ಲಿ ಯಾವ ಸಂವಾದ ಉಂಟಾಯಿತೋ ಅದನ್ನು ಕೇಳುವವನಾಗು.
ತತ್ರಾಶ್ರಮಪದಂ ಪುಣ್ಯಂ ನಾನಾವೃಕ್ಷಗಣಾಯುತಮ್ |
ಬಹುಗುಲ್ಮಲತಾಕೀರ್ಣಂ ಮೃಗದ್ವಿಜನಿಷೇವಿತಮ್ ॥6॥
ಹಿಮಾಲಯ ಪಾರ್ಶ್ವದಲ್ಲಿ ನಾನಾ ವೃಕ್ಷಸಮೂಹಗಳಿಂದ ಯುಕ್ತವಾದ, ಪವಿತ್ರವಾದ ಒಂದು ಆಶ್ರಮವಿದೆ. ಅದು ಅನೇಕ ಲತೆಗಳಿಂದ ಕೂಡಿ, ಮೃಗ-ಪಕ್ಷಿಗಳಿಂದ ಆಶ್ರಿತವಾಗಿದೆ.
ಸಿದ್ಧಚಾರಣಸಂಘುಷ್ಟಂ ರಮ್ಯಂ ಪುಷ್ಪಿತಕಾನನಮ್ |
ವ್ರತಿಭಿರ್ಬಹುಭಿಃ ಕೀರ್ಣಂ ತಾಪಸೈರುಪಶೋಭಿತಮ್ ॥7॥
ಸಿದ್ಧ-ಚಾರಣರ ಘೋಷದಿಂದ ಕೂಡಿರುವ, ಪುಷ್ಪಭರಿತವಾದ ವೃಕ್ಷಗಳಿಂದ ಕೂಡಿರುವ ಆ ಮನೋಹರವಾದ ಆಶ್ರಮವು ಅನೇಕ ವ್ರತಶೀಲರಿಂದಲೂ, ತಾಪಸರಿಂದಲೂ ಕೂಡಿದುದಾಗಿ ಶೋಭಿಸುತ್ತದೆ.
ಬ್ರಾಹ್ಮಣೈಶ್ಚ ಮಹಾಭಾಗೈಃ ಸೂರ್ಯಜ್ವಲನಸನ್ನಿಭೈಃ |
ನಿಯಮವ್ರತಸಂಪನ್ನೈಃ ಸಮಾಕೀರ್ಣಂ ತಪಸ್ವಿಭಿಃ |
ದೀಕ್ಷಿತೈರ್ಭರತಶ್ರೇಷ್ಠ ಯತಾಹಾರೈಃ ಕೃತಾತ್ಮಭಿಃ ॥8॥

ಸೂರ್ಯಾಗ್ನಿ ಸದೃಶರಾದ, ಮಹಾನುಭಾವರಾದ, ನಿಯಮವ್ರತಸಂಪನ್ನರಾದ, ತಪಸ್ವಿಗಳಾದ ಬ್ರಾಹ್ಮಣರಿಂದ ತುಂಬಿದೆ. ಎಲೈ ಭರತಶ್ರೇಷ್ಠನೇ, ದೀಕ್ಷೆಯನ್ನು ಹೊಂದಿದ ಆಹಾರನಿಯಮವನ್ನು ಹೊಂದಿದ, ಮನೋಜಯವನ್ನು ಹೊಂದಿದ ತಪಸ್ವಿಗಳಿಂದ ಕೂಡಿದುದಾಗಿದೆ.
ವೇದಾಧ್ಯಯನಘೋಷೈಶ್ಚ ನಾದಿತಂ ಭರತರ್ಷಭ |
ವಾಲಖಿಲ್ಯೈಶ್ಚ ಬಹುಭಿರ್ಯತಿಭಿಶ್ಚ ನಿಷೇವಿತಮ್ ॥9॥
ಎಲೈ ಭರತಶ್ರೇಷ್ಠನೇ, ವೇದಾಧ್ಯಯನ ಘೋಷದಿಂದ ಅದು ನಾದಪೂರ್ಣವಾಗಿದೆ. ಅಲ್ಲಿ ಅನೇಕ ವಾಲಖಿಲ್ಯರು ಮತ್ತು ಯತಿಗಳು ವಾಸಿಸುತ್ತಾರೆ.
ತತ್ರ ಕಶ್ಚಿತ್ ಸಮುತ್ಸಾಹಂ ಕೃತ್ವಾ ಶೂದ್ರೋ ದಯಾನ್ವಿತಃ |
ಆಗತೋ ಹ್ಯಾಶ್ರಮಪದಂ ಪೂಜಿತಶ್ಚ ತಪಸ್ವಿಭಿಃ ॥10॥
ಅಲ್ಲಿ ಒಮ್ಮೆ ದಯಾನ್ವಿತನಾದ ಒಬ್ಬ ಶೂದ್ರನು ಉತ್ಸಾಹದಿಂದ ಆಶ್ರಮಕ್ಕೆ ಬಂದು ಆ ತಪಸ್ವಿಗಳಿಂದ ಪೂಜಿಸಲ್ಪಟ್ಟನು.
ತಾಂಸ್ತು ದೃಷ್ಟ್ವಾ ಮುನಿಗಣಾನ್ ದೇವಕಲ್ಪಾನ್ ಮಹೌಜಸಃ |
ವಹತೋ ವಿವಿಧಾ ದೀಕ್ಷಾಃ ಸಂಪ್ರಹೃಷ್ಯತ ಭಾರತ ॥11॥
ಎಲೈ ಭಾರತನೇ, ದೇವತೆಗಳಿಗೆ ಸಮಾನನಾಗಿದ್ದ, ಮಹಾಸಾಮರ್ಥ್ಯವುಳ್ಳ, ಅನೇಕ ದೀಕ್ಷೆಗಳನ್ನು ಧರಿಸಿದ್ದ ಆ ಋಷಿಸಮೂಹವನ್ನು ನೋಡಿ ಅವನು ಬಹಳ ಸಂತೋಷಪಟ್ಟನು.
ಅಥಾಸ್ಯ ಬುದ್ಧಿರಭವತ್ ತಪಸ್ಯೇ ಭರತರ್ಷಭ |
ತತೋಽಬ್ರುವೀತ್ ಕುಲಪತಿಂ ಪಾದೌ ಸಂಗೃಹ್ಯ ಭಾರತ ॥12॥
ಎಲೈ ಭರತಶ್ರೇಷ್ಠನೇ, ಆಗ ಅವನಿಗೆ ತಾನೂ ತಪಸ್ಸನ್ನು ಮಾಡಬೇಕೆಂಬ ಬುದ್ಧಿಯುಂಟಾಯಿತು. ಎಲೈ ಭಾರತನೇ, ಆಗ ಅವನು ಅಲ್ಲಿನ ಕುಲಪತಿಗಳ ಪಾದವನ್ನು ಹಿಡಿದು ಮಾತನಾಡಿದನು.
ಭವತ್ಪ್ರಸಾದಾದಿಚ್ಛಾಮಿ ಧರ್ಮಂ ಚರ್ತುಂ ದ್ವಿಜರ್ಷಭ |
ತನ್ಮಾಂ ತ್ವಂ ಭಗವನ್ ವಕ್ತುಂ ಪ್ರವ್ರಾಜಯಿತುಮರ್ಹಸಿ ॥13॥
ಎಲೈ ದ್ವಿಜಶ್ರೇಷ್ಠನೇ, ನಿನ್ನ ಅನುಗ್ರಹದಿಂದ ನಾನು ಧರ್ಮವನ್ನು ಆಚರಿಸಲು ಬಯಸುತ್ತೇನೆ. ಪೂಜ್ಯರಾದ ನೀವು ನನಗೆ ಸಂನ್ಯಾಸದೀಕ್ಷೆಯನ್ನು ಕೊಟ್ಟು ಉಪದೇಶವನ್ನು ಮಾಡಬೇಕು.
ವರ್ಣಾವರೋಽಹಂ ಭಗವನ್ ಶೂದ್ರೋ ಜಾತ್ಯಾಸ್ಮಿ ಸತ್ತಮ |
ಶಿಶ್ರೂಷಾಂ ಕರ್ತುಮಿಚ್ಛಾಮಿ ಪ್ರಪನ್ನಾಯ ಪ್ರಸೀದ ಮೇ ॥14॥
ಎಲೈ ಸಜ್ಜನರಲ್ಲಿ ಶ್ರೇಷ್ಠರೇ, ನಾನು ಜಾತಿಯಿಂದ ವರ್ಣಾವರನಾದ ಶೂದ್ರನಾಗಿದ್ದೇನೆ. ನಿಮಗೆ ಶರಣಾಗತನಾಗಿ ನಿಮ್ಮ ಶುಶ್ರೂಷೆಯನ್ನು ಮಾಡಲು ಬಯಸುತ್ತೇನೆ. ನನಗೆ ಅನುಗ್ರಹವನ್ನು ಮಾಡಿ (ಎಂದು ಹೇಳಿದನು).
ಕುಲಪತಿಃ
ನ ಶಕ್ಯಮಿಹ ಶೂದ್ರೇಣ ಲಿಂಗಮಾಶ್ರಿತ್ಯ ವರ್ತಿತುಮ್ |
ರಮ್ಯತಾಂ ಯದಿ ತೇ ಬುದ್ಧಿಃ ಶಿಶ್ರೂಷಾನಿರತೋ ಭವ ॥15॥
ಕುಲಪತಿ ಶೂದ್ರನಾದವನು ಸಂನ್ಯಾಸದೀಕ್ಷೆಯನ್ನು ಪಡೆದು ಪ್ರವರ್ತಿಸಲು ಸಾಧ್ಯವಿಲ್ಲ. ನಿನ್ನ ಬುದ್ಧಿಯು ನಿನ್ನ ಧರ್ಮದಲ್ಲಿ ನಿರತವಾಗುವುದಾದರೆ ಶುಶ್ರೂಷಾ ಪರನಾಗಿರು.
ಭೀಷ್ಮಃ
ಏವಮುಕ್ತಸ್ತು ಮುನಿನಾ ಸ ಶೂದ್ರೋಽಚಿಂತಯನ್ನೃಪ |
ಕಥಮತ್ರ ಮಯಾ ಕಾರ್ಯಂ ಶ್ರದ್ಧಾ ಧರ್ಮೇ ಪರಾ ಚ ಮೇ |
ವಿಜ್ಞಾತಮೇವಂ ಭವತು ಕರಿಷ್ಯೇ ಪ್ರಿಯಮಾತ್ಮನಃ ॥16॥
ಭೀಷ್ಮ ಕುಲಪತಿಗಳಿಂದ ಹೀಗೆ ಹೇಳಲ್ಪಟ್ಟ ಆ ಶೂದ್ರನು ಎಲೈ ನೃಪನೇ, ಹೀಗೆ ಚಿಂತಿಸಿದನು- ನಾನು ಈಗ ಏನು ಮಾಡಬೇಕು? ನನಗಾದರೂ ಧರ್ಮದಲ್ಲಿ ಬಹಳ ಶ್ರದ್ಧೆಯಿದೆ. ಇದು ಎಲ್ಲರಿಗೂ ತಿಳಿಯಲಿ. ನಾನು ನನಗೇ ಪ್ರಿಯವನ್ನು ಉಂಟುಮಾಡಿಕೊಳ್ಳುವೆನು (ಎಂದು ಚಿಂತಿಸಿದನು).
ಗತ್ವಾಽಶ್ರಮಪದಾದ್ ದೂರಮುಟಜಂ ಕೃತವಾಂಸ್ತು ಸಃ |
ತತ್ರ ವೇದಿಂ ಚ ಭೂಮಿಂ ಚ ದೇವತಾಯತನಾನಿ ಚ |
ನಿವೇಶ್ಯ ಭರತಶ್ರೇಷ್ಠ ನಿಯಮಸ್ಥೋಽಭವತ್ ಸುಖಮ್ ॥17॥
ಅವನು ಆ ಆಶ್ರಮಸ್ಥಾನದಿಂದ ದೂರಹೋಗಿ ಒಂದು ಪರ್ಣಶಾಲೆಯನ್ನು ನಿರ್ಮಿಸಿದನು. ಅಲ್ಲಿ ವೇದಿಯನ್ನೂ, ಶುದ್ಧವಾದ ಭೂಮಿಯನ್ನೂ ಮತ್ತು ದೇವಾಲಯಗಳನ್ನೂ ನಿರ್ಮಿಸಿ, ಎಲೈ ಭರತಶ್ರೇಷ್ಠನೇ, ನಿಯಮಕರ್ಮಗಳನ್ನು ಧರಿಸಿದವನಾಗಿ ಸುಖವಾಗಿ ವಾಸಿಸಿದನು.
ಅಭಿಷೇಕಾಂಶ್ಚ ನಿಯಮಾನ್ ದೇವತಾಯತನೇಷು ಚ |
ಬಲಿಂ ಚ ಕೃತ್ವಾ ಹುತ್ವಾ ಚ ದೇವತಾಂ ಚಾಪ್ಯಪೂಜಯತ್ ॥18॥
ಅವನು ದೇವಾಲಯಗಳಲ್ಲಿ ನಿಯಮದಂತೆ ಅಭಿಷೇಕವನ್ನು ಮಾಡಿ, ನೈವೇದ್ಯವನ್ನು ಮಾಡಿ, ಹೋಮವನ್ನು ಮಾಡಿ ದೇವತೆಗಳನ್ನು ಪೂಜಿಸಿದನು.
ಸಂಕಲ್ಪನಿಯಮೋಪೇತಃ ಫಲಾಹಾರೋ ಜಿತೇಂದ್ರಿಯಃ |
ನಿತ್ಯಂ ಸನ್ನಿಹಿತಾಭಿಶ್ಚ ಓಷಧೀಭಿಃ ಫಲೈಸ್ತಥಾ ॥19॥

ಅತಿಥೀನ್ ಪೂಜಯಾಮಾಸ ಯಥಾವತ್ ಸಮುಪಾಗತಾನ್ |
ಏವಂ ಹಿ ಸುಮಹಾನ್ ಕಾಲೋ ವ್ಯತ್ಯಕ್ರಾಮತ್ ಸ ತಸ್ಯ ವೈ ॥20॥
ಸಂಕಲ್ಪ ನಿಯಮಗಳಿಂದ ಕೂಡಿದವನಾಗಿ, ನಿತ್ಯವೂ ಜಿತೇಂದ್ರಿಯನೂ ಮತ್ತು ಫಲಾಹಾರಿಯೂ ಆಗಿ, ಅಲ್ಲಿ ಸನ್ನಿಹಿತವಾದ ಓಷಧಿ ಮತ್ತು ಫಲಗಳಿಂದ ಆಶ್ರಮಕ್ಕೆ ಬಂದ ಅತಿಥಿಗಳನ್ನು ಚೆನ್ನಾಗಿ ಪೂಜಿಸಿದನು. ಹೀಗೆ ಅವನಿಗೆ ಬಹುಕಾಲವು ಕಳೆಯಿತು.
ಅಥಾಸ್ಯ ಮುನಿರಾಗಚ್ಛತ್ ಸಂಗತ್ಯಾ ವೈ ತಮಾಶ್ರಮಮ್ |
ಸಂಪೂಜ್ಯ ಸ್ವಾಗತೇನರ್ಷಿಂ ವಿಧಿವತ್ ಪರ್ಯತೋಷಯತ್ ॥21॥
ಅನಂತರ ಒಮ್ಮೆ ಒಬ್ಬ ಋಷಿಯು ಆ ಆಶ್ರಮಕ್ಕೆ ಬಂದನು. ಈ ಶೂದ್ರತಪಸ್ವಿಯು ಅವನಿಗೆ ಸ್ವಾಗತವನ್ನು ಕೋರಿ, ವಿಧಿಪ್ರಕಾರವಾಗಿ ಅವನನ್ನು ಸಂತೋಷಪಡಿಸಿದನು.
ಅನುಕೂಲಾಃ ಕಥಾಃ ಕೃತ್ವಾ ಯಥಾವತ್ ಪರ್ಯಪೃಚ್ಛತ |
ಋಷಿಃ ಪರಮತೇಜಸ್ವೀ ಧರ್ಮಾತ್ಮಾ ಸಂಯತೇಂದ್ರಿಯಃ ॥22॥
ಅನುಕೂಲವಾದ ವಿಷಯಗಳನ್ನು ಕುರಿತು ಮಾತನಾಡಿ, ಪರಮತೇಜಸ್ವಿಯೂ, ಧರ್ಮಾತ್ಮನೂ, ಜಿತೇಂದ್ರಿಯನೂ ಆದ ಋಷಿಯು ಅವನನ್ನು ಸರಿಯಾಗಿ ಪ್ರಶ್ನೆ ಮಾಡಿದನು.
ಏವಂ ಸ ಬಹುಶಸ್ತಸ್ಯ ಶೂದ್ರಸ್ಯ ಭರತರ್ಷಭ |
ಸೋಽಗಚ್ಛದಾಶ್ರಮಮೃಷಿಃ ಶೂದ್ರಂ ದ್ರಷ್ಟುಂ ನರರ್ಷಭ ॥23॥
ಎಲೈ ಭರತರ್ಷಭನೇ, ಈ ರೀತಿಯಲ್ಲಿ ಆ ಋಷಿಯು ಆ ಶೂದ್ರನನ್ನು ನೋಡಲು ಅನೇಕ ಬಾರಿ ಅವನ ಆಶ್ರಮಕ್ಕೆ ಹೋದನು.
ಅಥ ತಂ ತಾಪಸಂ ಶೂದ್ರಃ ಸೋಽಬ್ರವೀದ್ ಭರತರ್ಷಭ |
ಪಿತೃಕಾರ್ಯಂ ಕರಿಷ್ಯಾಮಿ ತತ್ರ ಮೇಽನುಗ್ರಹಂ ಕುರು ॥24॥
ಎಲೈ ಭರತರ್ಷಭನೇ, ಅನಂತರ ಒಮ್ಮೆ ಆ ಶೂದ್ರನು ಋಷಿಯನ್ನು ಕುರಿತು `ನಾನು ಪಿತೃಕಾರ್ಯವನ್ನು ಮಾಡುವೆನು. ಅದರಲ್ಲಿ ನನಗೆ ಅನುಗ್ರಹವನ್ನು ಮಾಡು' ಎಂದು ಕೇಳಿದನು.
ಬಾಢಮಿತ್ಯೇವ ತಂ ವಿಪ್ರ ಉವಾಚ ಭರತರ್ಷಭ |
ಮುನಿರ್ಭೂತ್ವಾ ಸ ಶೂದ್ರಸ್ತು ತಸ್ಯರ್ಷೇಃ ಪಾದ್ಯಮಾನಯತ್ ॥25॥
ಎಲೈ ಭರತರ್ಷಭನೇ, ಆ ಬ್ರಾಹ್ಮಣನು ಹಾಗೆಯೇ ಆಗಲಿ ಎಂದು ಹೇಳಿದನು. ಶೂದ್ರನಾದರೂ ಶುಚಿಯಾಗಿ ಆ ಋಷಿಗೆ ಪಾದ್ಯವನ್ನು ತೆಗೆದುಕೊಂಡು ಬಂದನು.
ಅಥ ದರ್ಭಾಂಶ್ಚ ವನ್ಯಾಶ್ಚ ಓಷಧೀರ್ಭರತರ್ಷಭ |
ಪವಿತ್ರಮಾಸನಂ ಚೈವ ಬೃಸೀಂ ಚ ಸಮುಪಾನಯತ್ ॥26॥
ಎಲೈ ಭರತರ್ಷಭನೇ, ಅನಂತರ ದರ್ಭೆಗಳನ್ನೂ, ವನದಲ್ಲಿ ಸಿಗುವ ಓಷಧಿಗಳನ್ನೂ, ಪವಿತ್ರವಾದ ಆಸನವನ್ನೂ ಮತ್ತು ದರ್ಭೆಯ ಚಾಪೆಯನ್ನೂ ತಂದನು.
ಅಥ ದಕ್ಷಿಣಮಾಶ್ರಿತ್ಯ ಬೃಸೀಂ ಪಶ್ಚಿಮಶೀರ್ಷಿಕಾಮ್ |
ಕೃತಾಮನ್ಯಾಯತೋ ದೃಷ್ಟ್ವಾ ತತಸ್ತಮೃಷಿರಬ್ರವೀತ್ ॥27॥
ಕುರುಷ್ವೈತಾಂ ಪೂರ್ವಶೀರ್ಷಾಂ ಭವ ಚೋದಙ್ಮುಖಃ ಶುಚಿಃ |
ಸ ಚ ತತ್ಕೃತವಾನ್ ಶೂದ್ರಃ ಸರ್ವಂ ಯದೃಷಿರಬ್ರವೀತ್ ॥28॥
ಅನಂತರ ಪಿಂಡಗಳನ್ನು ಇಡಲು ಸೂಕ್ಷ್ಮವಾದ ಚಾಪೆಯಂತೆ ಮಾಡಿದ ದರ್ಭಪಂಕ್ತಿಗಳ ರೂಪವಾದ ಬೃಸಿಯನ್ನು ದಕ್ಷಿಣದಿಕ್ಕಿನಲ್ಲಿ ಪಶ್ಚಿಮಕ್ಕೆ ಅಗ್ರಭಾಗವನ್ನು ಮಾಡಿ ಇಟ್ಟನು. ಅದನ್ನು ತಪ್ಪಾಗಿ ಮಾಡಿದುದನ್ನು ನೋಡಿ ಆ ಋಷಿಯು ಅವನಿಗೆ ಹೇಳಿದನು: ನೀನು ದಕ್ಷಿಣಕ್ಕೆ ಅಭಿಮುಖವಾಗಿ ಕುಳಿತು ಶುಚಿಯಾಗಿ ಈ ದರ್ಭೆಯ ಚಾಪೆಯನ್ನು ಪೂರ್ವಕ್ಕೆ ಅಗ್ರಭಾಗವು ಬರುವಂತೆ ಮಾಡು (ಎಂದು ಹೇಳಿದನು). ಆ ಶೂದ್ರನಾದರೂ ಋಷಿಯು ಹೇಳಿದುದೆಲ್ಲವನ್ನೂ ಮಾಡಿದನು.
ಯಥೋಪದಿಷ್ಟಂ ಮೇಧಾವೀ ದರ್ಭಾದೀಂಸ್ತಾನ್ಯಥಾತಥಮ್ |
ಹವ್ಯಕವ್ಯವಿಧಿಂ ಕೃತ್ಸ್ನಮುಕ್ತಂ ತೇನ ತಪಸ್ವಿನಾ ॥29॥
ಮೇಧಾವಿಯಾದ ಆ ಶೂದ್ರನು ಋಷಿಯು ಉಪದೇಶ ಮಾಡಿದಂತೆ ದರ್ಭೆ ಮೊದಲಾದವುಗಳನ್ನು ಸರಿಯಾಗಿಟ್ಟು ಹವ್ಯ-ಕವ್ಯ ವಿಧಿಯನ್ನು ಸಮಗ್ರವಾಗಿ ಋಸಿಯು ಹೇಳಿದಂತೆಯೇ ಮಾಡಿದನು.
ಋಷಿಣಾ ಪಿತೃಕಾರ್ಯೇ ಚ ಯಥಾ ಧರ್ಮಪಥಿ ಸ್ಥಿತಃ |
ಪಿತೃಕಾರ್ಯೇ ಕೃತೇ ಚಾಪಿ ವಿಸೃಷ್ಟಃ ಸ ಜಗಾಮ ಹ ॥30॥
ಧರ್ಮಮಾರ್ಗದಲ್ಲಿ ಸ್ಥಿರನಾದವನು ಹೇಗೆ ಪಿತೃಕಾರ್ಯವನ್ನು ಮಾಡಬೇಕೋ ಅದರಂತೆ ಋಷಿಯು ಹೇಳಿದಂತೆ ಪಿತೃಕಾರ್ಯವನ್ನು ಮಾಡಿದನು. ಪಿತೃಕಾರ್ಯವು ಮುಗಿದ ಮೇಲೆ ಶೂದ್ರನಿಂದ ಬೀಳ್ಕೊಡಲ್ಪಟ್ಟು ಅವನು ತನ್ನ ಆಶ್ರಮಕ್ಕೆ ಹೋದನು.
ಅಥ ದೀರ್ಘಸ್ಯ ಕಾಲಸ್ಯ ಸ ತಪ್ಯನ್ ಶೂದ್ರತಾಪಸಃ |
ವನೇ ಪಂಚತ್ವಮಗಮತ್ ಸುಕೃತೇನ ಚ ತೇನ ವೈ |
ಅಜಾಯತ ಮಹಾರಾಜ ರಾಜವಂಶೇ ಮಹಾದ್ಯುತಿಃ ॥31॥
ಅನಂತರ ಬಹುಕಾಲದ ಮೇಲೆ ಆ ಶೂದ್ರತಾಪಸನು ಅಲ್ಲಿಯೇ ತಪಸ್ಸನ್ನು ಮಾಡುತ್ತಾ ಮರಣವನ್ನು ಹೊಂದಿದನು. ಎಲೈ ಮಹಾರಾಜನೇ, ಆ ತಪಸ್ಸಿನ ಪುಣ್ಯದಿಂದ ಅವನು ಮುಂದಿನ ಜನ್ಮದಲ್ಲಿ ಬಹಳ ಕಾಂತಿಯುಕ್ತನಾಗಿ ರಾಜವಂಶದಲ್ಲಿ ಜನಿಸಿದನು.
ತಥೈವ ಸ ಋಷಿಸ್ತಾತ ಕಾಲಧರ್ಮಮವಾಪ್ಯ ಹ |
ಪುರೋಹಿತಕುಲೇ ವಿಪ್ರಃ ಸ ಜಾತೋ ಭರತರ್ಷಭ ॥32॥

ಎಲೈ ಪ್ರೀತಿಪಾತ್ರನೇ, ಭರತಶ್ರೇಷ್ಠನೇ, ಅದರಂತೆಯೇ ಆ ಋಷಿಯೂ ಸಹ ಮರಣವನ್ನು ಹೊಂದಿ ಪುರೋಹಿತ ವಂಶದಲ್ಲಿ ಒಬ್ಬ ಬ್ರಾಹ್ಮಣನಾಗಿ ಜನಿಸಿದನು.
ಏವಂ ತೌ ತತ್ರ ಸಂಭೂತಾವುಭೌ ಶೂದ್ರಮುನೀ ತದಾ |
ಕ್ರಮೇಣ ವರ್ಧಿತೌ ಚಾಪಿ ವಿದ್ಯಾಸು ಕುಶಲಾವುಭೌ ॥33॥
ಅಥರ್ವವೇದೇ ವೇದೇ ಚ ಬಭೂವರ್ಷಿಃ ಸುನಿಶ್ಚಿತಃ |
ಕಲ್ಪಪ್ರಯೋಗೇ ಚೋತ್ಪನ್ನೇ ಜ್ಯೋತಿಷೇ ಚ ಪರಂ ಗತಃ |
ಸಖ್ಯೇ ಚಾಪಿ ಪರಾ ಪ್ರೀತಿಸ್ತಯೋಶ್ಚಾಪಿ ವ್ಯವರ್ಧತ ॥34॥
ಈ ರೀತಿಯಲ್ಲಿ ಆ ಶೂದ್ರ ಮತ್ತು ಋಷಿಗಳಿಬ್ಬರೂ ಪುನಃ ಜನಿಸಿ, ಕ್ರಮೇಣ ಬೆಳೆದು ಇಬ್ಬರೂ ವಿದ್ಯೆಗಳಲ್ಲಿ ಪಾರಂಗತರಾದರು. ಋಷಿಯು ಅಥರ್ವವೇದದಲ್ಲಿಯೂ ಮತ್ತು ಉಳಿದ ವೇದಗಳಲ್ಲಿಯೂ ಕಲ್ಪಪ್ರಯೋಗದಲ್ಲಿಯೂ ಜ್ಯೌತಿಷ ಶಾಸ್ತ್ರದಲ್ಲಿಯೂ ಸುಶಿಕ್ಷಿತನಾಗಿ ಪಾರಂಗತನಾದನು. ಅವರಿಬ್ಬರಿಗೂ ಸ್ನೇಹದಲ್ಲಿ ಬಹಳ ಸಂತೋಷವು ಅಭಿವೃದ್ಧಿಯನ್ನು ಹೊಂದಿತು.
ಪಿತರ್ಯುಪರತೇ ಚಾಪಿ ಕೃತಶೌಚಃ ಸ ಭಾರತ |
ಅಭಿಷಿಕ್ತಃ ಪ್ರಕೃತಿಭೀ ರಾಜಪುತ್ರಃ ಸ ಪಾರ್ಥಿವಃ |
ಅಭಿಷಿಕ್ತೇನ ಸ ಋಷಿರಭಿಷಿಕ್ತಃ ಪುರೋಹಿತಃ ॥35॥
ಎಲೈ ಭಾರತನೇ, ರಾಜವಂಶದಲ್ಲಿ ಜನಿಸಿದ ಆ ಶೂದ್ರನಾಗಿದ್ದ ರಾಜಪುತ್ರನು ಅವನ ತಂದೆಯು ಮೃತನಾದ ಮೇಲೆ, ಶುಚಿಯಾಗಿ ಪ್ರಜೆಗಳಿಂದ ರಾಜನಾಗಿ ಅಭಿಷೇಕ ಮಾಡಲ್ಪಟ್ಟನು. ಅಭಿಷೇಕವನ್ನು ಹೊಂದಿದ ಆ ರಾಜಕುಮಾರನು ಋಷಿಯನ್ನು ರಾಜಪುರೋಹಿತನನ್ನಾಗಿ ಅಭಿಷೇಕ ಮಾಡಿದನು.
ಸ ತಂ ಪುರೋಧಾಯ ಸುಖಮವಸದ್ ಭರತರ್ಷಭ |
ರಾಜ್ಯಂ ಶಶಾಸ ಧರ್ಮೇಣ ಪ್ರಜಾಶ್ಚ ಪರಿಪಾಲಯನ್ ॥36॥
ಎಲೈ ಭರತಶ್ರೇಷ್ಠನೇ, ಆ ರಾಜಪುತ್ರನು ಪುರೋಹಿತನನ್ನು ಮುಂದೆ ಮಾಡಿಕೊಂಡು ಸುಖವಾಗಿ ವಾಸಮಾಡಿ, ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಾ ರಾಜ್ಯವನ್ನು ಆಳಿದನು.
ಪುಣ್ಯಾಹವಾಚನೇ ನಿತ್ಯಂ ಧರ್ಮಕಾರ್ಯೇಷು ಚಾಸಕೃತ್ |
ಉತ್ಸ್ಮಯನ್ ಪ್ರಾಹಸಚ್ಚಾಪಿ ದೃಷ್ಟ್ವಾ ರಾಜಾ ಪುರೋಧಸಮ್ |
ಏವಂ ಸ ಬಹುಶೋ ರಾಜನ್ ಪುರೋಧಸಮುಪಾಹಸತ್ ॥37॥
ಧರ್ಮಕಾರ್ಯವನ್ನು ಮಾಡುವಾಗ ಯಾವಾಗಲೂ ಪುಣ್ಯಾಹವಾಚನ ಸಂದರ್ಭದಲ್ಲಿ ರಾಜನು ಪುರೋಹಿತನನ್ನು ನೋಡಿ ಅನೇಕ ಬಾರಿ ನಗುತ್ತಿದ್ದನು. ಎಲೈ ರಾಜನೇ, ಹೀಗೆ ಅವನು ಪುರೋಹಿತನನ್ನು ಅನೇಕ ಬಾರಿ ಉಪಹಾಸವನ್ನು ಮಾಡಿದನು.
ಲಕ್ಷಯಿತ್ವಾ ಪುರೋಧಾಸ್ತು ಬಹುಶಸ್ತಂ ನರಾಧಿಪಮ್ |
ಉತ್ಸ್ಮಯಂತಂ ಚ ಸತತಂ ದೃಷ್ಟ್ವಾಸೌ ಮನ್ಯುಮಾನಭೂತ್ ॥38॥
ಆ ಪುರೋಹಿತನು, ರಾಜನು ತನ್ನನ್ನು ನೋಡಿ ಅನೇಕ ಬಾರಿ ಸತತವಾಗಿ ನಗುವುದನ್ನು ಗಮನಿಸಿ ಕೋಪದಿಂದ ಕೂಡಿದವನಾದನು.
ಅಥ ಶೂನ್ಯೇ ಪುರೋಧಾಸ್ತು ಸಹ ರಾಜ್ಞಾ ಸಮಾಗತಃ |
ಕಥಾಭಿರನುಕೂಲಾಭೀ ರಾಜಾನಮಭಿರಾಮಯತ್ ॥39॥
ಅನಂತರ ಪುರೋಹಿತನು ಏಕಾಂತದಲ್ಲಿ ರಾಜನ ಜೊತೆಯಲ್ಲಿ ಸೇರಿ ಅನುಕೂಲವಾದ ಅನೇಕ ಕಥೆಗಳಿಂದ ರಾಜನನ್ನು ಸಂತೋಷಪಡಿಸಿದನು.
ತತೋಽಬ್ರವೀನ್ನರೇಂದ್ರಂ ಸ ಪುರೋಧಾ ಭರತರ್ಷಭ |
ವರಮಿಚ್ಛಾಮ್ಯಹಂ ತ್ವೇಕಂ ತ್ವಯಾ ದತ್ತಂ ಮಹಾದ್ಯುತೇ ॥40॥
ಅನಂತರ ಎಲೈ ಭರತರ್ಷಭನೇ, ಆ ಪುರೋಹಿತನು ರಾಜನನ್ನು ಕುರಿತು `ಎಲೈ ಮಹಾದ್ಯುತಿಯೇ, ನಾನು ನಿನ್ನಿಂದ ಒಂದು ವರವನ್ನು ಪಡೆಯಲು ಇಚ್ಛಿಸುತ್ತೇನೆ' ಎಂದು ಹೇಳಿದನು.
ರಾಜಾ
ವರಾಣಾಂ ತೇ ಶತಂ ದದ್ಯಾಂ ಕಿಮುತ್ವೈಕಂ ದ್ವಿಜೋತ್ತಮ |
ಸ್ನೇಹಾಚ್ಚ ಬಹುಮಾನಾಚ್ಚ ನಾಸ್ತ್ಯದೇಯಂ ಹಿ ಮೇ ತವ ॥41॥
ರಾಜ ನಿನಗೆ ನೂರು ವರಗಳನ್ನು ಕೊಟ್ಟೇನು. ಎಲೈ ಬ್ರಾಹ್ಮಣಶ್ರೇಷ್ಠನೇ, ಏಕೆ ಒಂದು ವರವನ್ನು ಕೇಳುತ್ತಿದ್ದೀಯೆ? ನನಗೆ ನಿನ್ನ ಮೇಲಿರುವ ಸ್ನೇಹದಿಂದಲೂ ಮತ್ತು ಗೌರವದಿಂದಲೂ ನಿನಗೆ ಕೊಡಲಾರದುದು ನನ್ನ ಬಳಿ ಯಾವುದೂ ಇಲ್ಲ.
ಪುರೋಹಿತಃ
ಏಕಂ ವೈ ವರಮಿಚ್ಛಾಮಿ ಯದಿ ತುಷ್ಟೋಽಸಿ ಪಾರ್ಥಿವ |
ಯದ್ ದದಾಸಿ ಮಹಾರಾಜ ಸತ್ಯಂ ತದ್ ವದ ಮಾನೃತಮ್ ॥42॥
ಪುರೋಹಿತ ಎಲೈ ಮಹಾರಾಜನೇ, ನೀನು ನನಗೆ ಕೊಡುತ್ತೇನೆಂದು ಸತ್ಯವನ್ನು ನುಡಿದು ಸುಳ್ಳು ಮಾತನಾಡದಿದ್ದರೆ, ನನ್ನ ಮೇಲೆ ಸಂತೋಷಗೊಂಡಿದ್ದರೆ ಒಂದು ವರವನ್ನು ಮಾತ್ರ ಕೇಳುತ್ತೇನೆ.
ಭೀಷ್ಮಃ
ಬಾಢಮಿತ್ಯೇವ ತಂ ರಾಜಾ ಪ್ರತ್ಯುವಾಚ ಯುಧಿಷ್ಠಿರ |
ಯದಿ ಜ್ಞಾಸ್ಯಾಮಿ ವಕ್ಷ್ಯಾಮಿ ಅಜಾನನ್ನ ತು ಸಂವದೇ ॥43॥
ಭೀಷ್ಮ ಎಲೈ ಯುಧಿಷ್ಠಿರನೇ, ಆ ರಾಜನು ಅವನನ್ನು ಕುರಿತು ಹಾಗೆಯೇ ಆಗಲಿ. ನೀನು ಬೇಡುವ ವರವು ನನಗೆ ತಿಳಿದರೆ ಅನಂತರ

ಕೊಡುವ ವಿಷಯದಲ್ಲಿ ಹೇಳುತ್ತೇನೆ. ಅದನ್ನು ತಿಳಿಯದೆ ಯಾವುದನ್ನೂ ಒಪ್ಪುವುದಿಲ್ಲ.
ಪುರೋಹಿತಃ
ಪುಣ್ಯಾಹವಾಚನೇ ನಿತ್ಯಂ ಧರ್ಮಕೃತ್ಯೇಷು ಚಾಸಕೃತ್ |
ಶಾಂತಿಹೋಮೇಷು ಚ ಸದಾ ಕಿಂ ತ್ವಂ ಹಸಸಿ ವೀಕ್ಷ್ಯ ಮಾಮ್ ॥44॥
ಪುರೋಹಿತ ಧರ್ಮಕಾರ್ಯಗಳಲ್ಲಿ ಪುಣ್ಯಾಹವಾಚನ ಮಾಡುವಾಗ ಮತ್ತು ಶಾಂತಿಕಾರ್ಯಗಳಲ್ಲಿ ನೀನು ಯಾವಾಗಲೂ ನನ್ನನ್ನು ನೋಡಿ ಏಕೆ ನಗುತ್ತೀಯೆ?
ಸವ್ರೀಡಂ ವೈ ಭವತಿ ಹಿ ಮನೋ ಮೇ ಹಸತಾ ತ್ವಯಾ |
ಕಾಮಯಾ ಶಾಪಿತೋ ರಾಜನ್ ನಾನ್ಯಥಾ ವಕ್ತುಮರ್ಹಸಿ ॥45॥
ನೀನು ನಕ್ಕಾಗಲೆಲ್ಲ ನನ್ನ ಮನಸ್ಸಿಗೆ ಬಹಳ ನಾಚಿಕೆಯಾಗುತ್ತದೆ. ನಿನಗೆ ಇಷ್ಟವಾದ ಪದಾರ್ಥಗಳ ಮೇಲೆ ಆಣೆಯನ್ನು ಮಾಡಿ ಕೇಳುತ್ತಿದ್ದೇನೆ ಎಲ್ಲೈ ರಾಜನೇ, ಈ ಪ್ರಶ್ನೆಗೆ ತಪ್ಪಾದ ಉತ್ತರವನ್ನು ಹೇಳಬಾರದು.
ಭಾವ್ಯಂ ಹಿ ಕಾರಣೇನಾತ್ರ ನ ತೇ ಹಾಸ್ಯಮಕಾರಣಮ್ |
ಕೌತೂಹಲಂ ಮೇ ಸುಭೃಶಂ ತತ್ತ್ವೇನ ಕಥಯಸ್ವ ಮೇ ॥46॥
ಇದರಲ್ಲಿ ಏನೋ ಕಾರಣವಿರಬೇಕು. ಕಾರಣವಿಲ್ಲದೆ ಹಾಸ್ಯವುಂಟಾಗುವುದಿಲ್ಲ. ಈ ವಿಷಯದಲ್ಲಿ ನನಗೆ ಬಹಳ ಕುತೂಹಲವಿದೆ. ಅದನ್ನು ನಿಜವಾಗಿ ಹೇಳು.
ರಾಜಾ
ಏವಮುಕ್ತೇ ತ್ವಯಾ ವಿಪ್ರ ಯದವಾಚ್ಯಂ ಭವೇದಪಿ |
ಅವಶ್ಯಮೇವ ವಕ್ತವ್ಯಂ ಶೃಣುಷ್ವೈಕಮನಾ ದ್ವಿಜ ॥47॥
ರಾಜ ಎಲ್ಲೈ ಬ್ರಾಹ್ಮಣನೇ, ನೀನು ಹೀಗೆ ಕೇಳಿದ ಮೇಲೆ ಹೇಳಬಾರದುದನ್ನೂ ಸಹ ಅವಶ್ಯವಾಗಿ ಹೇಳಲೇಬೇಕಾಗುತ್ತದೆ. ಎಲ್ಲೈ ಬ್ರಾಹ್ಮಣನೇ, ಒಂದೇ ಮನಸ್ಸಿನಿಂದ ಕೇಳುವವನಾಗು.
ಪೂರ್ವದೇಹೇ ಯಥಾ ವೃತ್ತಂ ತನ್ನಿಬೋಧ ದ್ವಿಜೋತ್ತಮ |
ಜಾತಿಂ ಸ್ಮರಾಮ್ಯಹಂ ಬ್ರಹ್ಮನ್ನವಧಾನೇನ ಮೇ ಶೃಣು ॥48॥
ಎಲ್ಲೈ ಬ್ರಾಹ್ಮಣಶ್ರೇಷ್ಠನೇ, ನಮ್ಮ ಪೂರ್ವದೇಹದಲ್ಲಿ ಏನು ನಡೆಯಿತೆಂದು ತಿಳಿಯುವವನಾಗು. ಎಲ್ಲೈ ಬ್ರಾಹ್ಮಣನೇ, ನನಗೆ ಪೂರ್ವಜನ್ಮದ ಸ್ಮರಣೆಯಿದೆ. ಅದನ್ನು ಅವಧಾನದಿಂದ ಕೇಳು.
ಶೂದ್ರೋಽಹಮಭವಂ ಪೂರ್ವಂ ತಾಪಸೇ ಕೃತನಿಶ್ಚಯಃ |
ಋಷಿರುಗ್ರತಪಾಸ್ತ್ವಂ ಚ ತದಾಽಭೂರ್ದ್ವಿಜಸತ್ತಮ ॥49॥
ಎಲ್ಲೈ ದ್ವಿಜಶ್ರೇಷ್ಠನೇ, ಹಿಂದಿನ ಜನ್ಮದಲ್ಲಿ ನಾನು ತಪಸ್ಸಿನಲ್ಲಿ ಇಚ್ಛೆಯುಳ್ಳ ಒಬ್ಬ ಶೂದ್ರನಾಗಿದ್ದೆನು. ನೀನಾದರೂ ಉಗ್ರ ತಪಸ್ಸನ್ನು ಮಾಡುವ ಋಷಿಯಾಗಿದ್ದೆ.
ಪ್ರೀಯತಾ ಹಿ ತದಾ ಬ್ರಹ್ಮನ್ ಮಮಾನುಗ್ರಹಬುದ್ಧಿನಾ |
ಪಿತೃಕಾರ್ಯೇ ತ್ವಯಾ ಪೂರ್ವಮುಪದೇಶಃ ಕೃತೋಽನಘ |
ಬೃಸ್ಯಾಂ ದರ್ಭೇಷು ಹವ್ಯೇ ಚ ಕವ್ಯೇ ಚ ಮುನಿಸತ್ತಮ ॥50॥
ಎಲ್ಲೈ ಬ್ರಾಹ್ಮಣನೇ, ಅನಘನೇ, ನನಗೆ ಅನುಗ್ರಹವನ್ನು ಮಾಡುವ ಬುದ್ಧಿಯಿಂದ ನೀನು ಸಂತೋಷಗೊಂಡು ಪಿತೃಕಾರ್ಯದಲ್ಲಿ ಬೃಸಿಯ ವಿಷಯದಲ್ಲಿಯೂ, ದರ್ಭೆಯ ವಿಷಯದಲ್ಲಿಯೂ, ಹವ್ಯ-ಕವ್ಯಗಳ ವಿಷಯದಲ್ಲಿಯೂ ನನಗೆ ಉಪದೇಶವನ್ನು ಮಾಡಿದೆ.
ಏತೇನ ಕರ್ಮದೋಷೇಣ ಪುರೋಧಾಸ್ತ್ವಮಜಾಯಥಾಃ |
ಅಹಂ ರಾಜಾ ಚ ವಿಪ್ರೇಂದ್ರ ಪಶ್ಯ ಕಾಲಸ್ಯ ಪರ್ಯಯಮ್ |
ಮತ್ಕೃತೇ ಹ್ಯುಪದೇಶೇನ ತ್ವಯಾ ಪ್ರಾಪ್ತಮಿದಂ ಫಲಮ್ ॥51॥
ಈ ಕರ್ಮದೋಷದಿಂದ ನೀನು ಪುರೋಹಿತನಾಗಿ ಜನಿಸಿದೆ. ಎಲ್ಲೈ ವಿಪ್ರೋತ್ತಮನೇ, ನಾನು ರಾಜನಾಗಿ ಜನಿಸಿದೆ. ಕಾಲದಿಂದ ಉಂಟಾದ ವಿಪರ್ಯಯವನ್ನು ನೋಡು. ನನಗೆ ಉಪದೇಶ ಮಾಡಿದ ಕಾರಣದಿಂದ ನಿನಗೆ ಈ ಫಲವು ಪ್ರಾಪ್ತವಾಗಿದೆ.
ಏತಸ್ಮಾತ್ ಕಾರಣಾದ್ ಬ್ರಹ್ಮನ್ ಪ್ರಹಸೇ ತ್ವಾಂ ದ್ವಿಜೋತ್ತಮ |
ನ ತ್ವಾಂ ಪರಿಭವನ್ ಬ್ರಹ್ಮನ್ ಪ್ರಹಸಾಮಿ ಗುರುರ್ಭವಾನ್ ॥52॥
ಎಲ್ಲೈ ದ್ವಿಜಶ್ರೇಷ್ಠನೇ, ಈ ಕಾರಣದಿಂದ ನಾನು ನಗುತ್ತೇನೆ. ಎಲ್ಲೈ ಬ್ರಾಹ್ಮಣನೇ, ನಿನ್ನನ್ನು ಅವಮಾನಗೊಳಿಸುವ ಅಭಿಪ್ರಾಯವಿಲ್ಲ. ನೀನು ನನಗೆ ಗುರುವಾದವನು.
ವಿಪರ್ಯಯೇಣ ಮೇ ಮನ್ಯುಸ್ತೇನ ಸಂತಪ್ಯತೇ ಮನಃ |
ಜಾತಿಂ ಸ್ಮರಾಮ್ಯಹಂ ತುಭ್ಯಮತಸ್ತ್ವಂ ಪ್ರಹಸಾಮಿ ವೈ ॥53॥
ಈ ವಿಪರ್ಯಾಸದಿಂದ ನನಗೆ ತಾಪವುಂಟಾಗಿ ಮನಸ್ಸಿಗೆ ನಿನ್ನ ಪೂರ್ವಜನ್ಮದ ಸ್ಮರಣೆಯು ಉಂಟಾಗುತ್ತದೆ. ಆದ್ದರಿಂದ ನಾನು ನಿನ್ನನ್ನು ನೋಡಿ ನಗುತ್ತೇನೆ.
ಏವಂ ತವೋಗ್ರಂ ಹಿ ತಪ ಉಪದೇಶೇನ ನಾಶಿತಮ್ |
ಪುರೋಹಿತತ್ವಮುತ್ಸೃಜ್ಯ ಯತಸ್ವ ತ್ವಂ ಪುನರ್ಭವೇ ॥54॥
ಈ ರೀತಿಯಲ್ಲಿ ನೀನು ಮಾಡಿದ ಉಗ್ರವಾದ ತಪಸ್ಸು ನೀನು ನನಗೆ ಮಾಡಿದ ಉಪದೇಶದಿಂದ ನಾಶವನ್ನು ಹೊಂದಿತು. ಪೌರೋಹಿತ್ಯವನ್ನು ಬಿಟ್ಟು ಪುನಃ ಒಳ್ಳೆಯ ಜನ್ಮವನ್ನು ಪಡೆಯಲು ನೀನು ಪ್ರಯತ್ನವನ್ನು ಪಡು.
ಇತಸ್ತ್ವಮಧಮಾಮನ್ಯಾಂ ಮಾ ಯೋನಿಂ ಪ್ರಾಪ್ಸ್ಯಸೇ ದ್ವಿಜ |

ಗೃಹ್ಯತಾಂ ದ್ರವಿಣಂ ವಿಪ್ರ ಪೂತಾತ್ಮಾ ಭವ ಸತ್ತಮ ॥55॥
ಎಲೈ ಬ್ರಾಹ್ಮಣನೇ, ಹಾಗೆ ಮಾಡಿದರೆ ನೀನು ಇದಕ್ಕಿಂತ ನೀಚ ಯೋನಿಯನ್ನು ಹೊಂದುವುದಿಲ್ಲ. ಎಲೈ ಬ್ರಾಹ್ಮಣನೇ, ಬೇಕಾದಷ್ಟು ದ್ರವ್ಯವನ್ನು ತೆಗೆದುಕೊ. ಸಜ್ಜನರಲ್ಲಿ ಶ್ರೇಷ್ಠನೇ, ಪವಿತ್ರನಾಗು.
ಭೀಷ್ಮಃ
ತತೋ ವಿಸೃಷ್ಟೋ ರಾಜ್ಞಾ ತು ವಿಪ್ರೋ ದಾನಾನ್ಯನೇಕಶಃ |
ಬ್ರಾಹ್ಮಣೇಭ್ಯೋ ದದೌ ವಿತ್ತಂ ಭೂಮಿಂ ಗ್ರಾಮಾಂಶ್ಚ ಸರ್ವಶಃ ॥56॥
ಭೀಷ್ಮ ಆಗ ರಾಜನಿಂದ ಬೀಳ್ಕೊಡಲ್ಪಟ್ಟ ಆ ಬ್ರಾಹ್ಮಣನು ಬ್ರಾಹ್ಮಣರಿಗೆ ಅನೇಕ ದಾನಗಳನ್ನೂ, ದ್ರವ್ಯವನ್ನೂ, ಭೂಮಿಯನ್ನೂ, ಗ್ರಾಮಗಳನ್ನೂ ಎಲ್ಲವನ್ನೂ ದಾನವಾಗಿ ಕೊಟ್ಟನು.
ಕೃಚ್ಛ್ರಾಣಿ ಚೀರ್ತ್ವಾ ಚ ತತೋ ಯಥೋಕ್ತಾನಿ ದ್ವಿಜೋತ್ತಮಃ |
ತೀರ್ಥಾನಿ ಚಾಭಿಗತ್ವಾ ವೈ ದಾನಾನಿ ವಿವಿಧಾನಿ ಚ ॥57॥
ಆ ಬ್ರಾಹ್ಮಣಶ್ರೇಷ್ಠನು ಶಾಸ್ತ್ರನಿಯಮದಂತೆ ಕೃಚ್ಛ್ರಗಳನ್ನು ಆಚರಿಸಿ, ತೀರ್ಥಯಾತ್ರೆಯನ್ನು ಮಾಡಿ, ವಿವಿಧ ದಾನಗಳನ್ನು ಮಾಡಿದನು.
ದತ್ತ್ವಾ ಗಾಶ್ಚೈವ ಸರ್ವೇಭ್ಯಃ ಪೂತಾತ್ಮಾಽಭವದಾತ್ಮವಾನ್ |
ತಮೇವ ಚಾಶ್ರಮಂ ಗತ್ವಾ ಚಚಾರ ವಿಪುಲಂ ತಪಃ ॥58॥
ಎಲ್ಲರಿಗೂ ಗೋದಾನವನ್ನು ಮಾಡಿ, ಅವನು ಮನೋಜಯವನ್ನು ಹೊಂದಿ ಪವಿತ್ರನಾದನು. ಪುನಃ ತನ್ನ ಹಿಂದಿನ ಜನ್ಮದ ಅದೇ ಆಶ್ರಮಕ್ಕೆ ಹೋಗಿ ವಿಪುಲವಾದ ತಪಸ್ಸನ್ನು ಮಾಡಿದನು.
ತತಃ ಸಿದ್ಧಿಂ ಪರಾಂ ಪ್ರಾಪ್ತೋ ಬ್ರಾಹ್ಮಣೋ ರಾಜಸತ್ತಮ |
ಸಮ್ಮತಶ್ಚಾಭವತ್ ತೇಷಾಮಾಶ್ರಮೇಽಶ್ರಮವಾಸಿನಾಮ್ ॥59॥
ಎಲೈ ರಾಜಶ್ರೇಷ್ಠನೇ, ಆ ಬ್ರಾಹ್ಮಣನು ಶ್ರೇಷ್ಠವಾದ ಸಿದ್ಧಿಯನ್ನು ಪಡೆದನು ಮತ್ತು ಆ ಆಶ್ರಮದ ನಿವಾಸಿಗಳೆಲ್ಲರಿಗೂ ಸಮ್ಮತನಾದನು.

ಏವಂ ಪ್ರಾಪ್ತೋ ಮಹತ್ಕೃಚ್ಛ್ರಮೃಷಿಃ ಸ ನೃಪಸತ್ತಮ |
ಬ್ರಾಹ್ಮಣೇನ ನ ವಕ್ತವ್ಯಂ ತಸ್ಮಾದ್ ವರ್ಣಾವರೇ ಜನೇ ॥60॥
ಎಲೈ ರಾಜಶ್ರೇಷ್ಠನೇ, ಆ ಋಷಿಯು ಹೀಗೆ ದೊಡ್ಡ ಕಷ್ಟಕ್ಕೆ ಸಿಲುಕಿದನು. ಆದ್ದರಿಂದ ಬ್ರಾಹ್ಮಣನಾದವನು ವರ್ಣದಿಂದ ಅಧಮನಾದವನಿಗೆ ಉಪದೇಶವನ್ನು ಮಾಡಬಾರದು.
ವರ್ಜಯೇದುಪದೇಶಂ ಚ ಸದೈವ ಬ್ರಾಹ್ಮಣೋ ನೃಪ |
ಉಪದೇಶಂ ಹಿ ಕುರ್ವಾಣೋ ದ್ವಿಜಃ ಕೃಚ್ಛ್ರಮವಾಪ್ನುಯಾತ್ ॥61॥
ಎಲೈ ರಾಜನೇ, ಬ್ರಾಹ್ಮಣನು ಯಾವಾಗಲೂ ಉಪದೇಶವನ್ನು ಮಾಡುವುದನ್ನು ವರ್ಜಿಸಬೇಕು. ಉಪದೇಶ ಮಾಡುವ ಬ್ರಾಹ್ಮಣನು ಕಷ್ಟಕ್ಕೆ ಸಿಲುಕುತ್ತಾನೆ.
ಏಷಿತವ್ಯಂ ಸದಾ ವಾಚಾ ನೃಪೇಣ ದ್ವಿಜಸತ್ತಮಾತ್ |
ನ ಪ್ರವಕ್ತವ್ಯಮಿಹ ಹಿ ಕಿಂಚಿದ್ ವರ್ಣಾವರೇ ಜನೇ ॥62॥
ರಾಜನಾದವನು ತನ್ನ ರಾಜ್ಯದಲ್ಲಿ ಬ್ರಾಹ್ಮಣನಾದವನು ವರ್ಣಾಧಮನಾದವನಿಗೆ ಏನನ್ನೂ ಉಪದೇಶ ಮಾಡಬಾರದೆಂದು ಆಶಿಸಬೇಕು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತ್ರಯೋ ವರ್ಣಾ ದ್ವಿಜಾತಯಃ |
ಏತೇಷು ಕಥಯನ್ ರಾಜನ್ ಬ್ರಾಹ್ಮಣೋ ನ ಪ್ರದುಷ್ಯತಿ ॥63॥
ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಈ ಮೂರು ವರ್ಣದವರು ದ್ವಿಜನ್ಮವುಳ್ಳವರು (ದ್ವಿಜರು). ಎಲೈ ರಾಜನೇ, ಅವರಿಗೆ ಉಪದೇಶವನ್ನು ಮಾಡಿದರೆ ಬ್ರಾಹ್ಮಣನಿಗೆ ದೋಷ ಉಂಟಾಗುವುದಿಲ್ಲ.
ತಸ್ಮಾತ್ ಸದ್ಭಿರ್ನ ವಕ್ತವ್ಯಂ ಕಸ್ಯಚಿತ್ ಕಿಂಚಿದಗ್ರತಃ |
ಸೂಕ್ಷ್ಮಾ ಗತಿರ್ಹಿ ಧರ್ಮಸ್ಯ ದುರ್ಜ್ಞೇಯಾ ಹ್ಯಕೃತಾತ್ಮಭಿಃ ॥64॥
ಆದ್ದರಿಂದ ಸಜ್ಜನನಾದವನು ಯಾವನಿಗಾದರೂ, ಯಾವಾಗಲಾದರೂ ಉಪದೇಶವನ್ನು ಮಾಡಬಾರದು. ಧರ್ಮದ ಮಾರ್ಗವು ಬಹಳ ಸೂಕ್ಷ್ಮವಾದುದು. ವಿವೇಕವಿಲ್ಲದವರು ಅದನ್ನು ತಿಳಿಯಲಾರರು.
ತಸ್ಮಾನ್ಮೌನಾನಿ ಮುನಯೋ ದೀಕ್ಷಾಂ ಕುರ್ವಂತಿ ಚಾದೃತಾಃ |
ದುರುಕ್ತಸ್ಯ ಭಯಾದ್ ರಾಜನ್ ನಾನುಭಾಷಂತಿ ಕಿಂಚನ ॥65॥
ಆದ್ದರಿಂದ ಋಷಿಗಳು ಆದರದಿಂದ ಮೌನದೀಕ್ಷೆಯನ್ನು ವಹಿಸುತ್ತಾರೆ. ಎಲೈ ರಾಜನೇ, ಎಲ್ಲಿ ಅಯೋಗ್ಯರಿಗೆ ಉಪದೇಶ ಮಾಡುವೆವೋ ಎಂಬ ಭಯದಿಂದ ಅವರು ಏನನ್ನೂ ಮಾತನಾಡುವುದಿಲ್ಲ.
ಧಾರ್ಮಿಕಾ ಗುಣಸಂಪನ್ನಾಃ ಸತ್ಯಾರ್ಜವಪರಾಯಣಾಃ |
ದುರುಕ್ತವಾಚಾಽಭಿಹತಾಃ ಪ್ರಾಪ್ನುವಂತೀಹ ದುಷ್ಕೃತಮ್ ॥66॥
ಧಾರ್ಮಿಕರೂ, ಗುಣಸಂಪನ್ನರೂ, ಸತ್ಯ ಮತ್ತು ಋಜುತನದಲ್ಲಿ ನಿರತರಾದವರೂ ಸಹ ಇಂತಹ ದುಷ್ಟ ಉಪದೇಶಗಳನ್ನು ಕೊಡುವುದಾದರೆ ಪಾಪವನ್ನು ವರಿಸುತ್ತಾರೆ.
ಉಪದೇಶೋ ನ ಕರ್ತವ್ಯಃ ಕದಾಚಿದಪಿ ಕಸ್ಯಚಿತ್ |
ಉಪದೇಶಾದ್ಧಿ ತತ್ಪಾಪಂ ಬ್ರಾಹ್ಮಣಃ ಸಮವಾಪ್ನುಯಾತ್ ॥67॥

ಯಾವಾಗಲಾದರೂ, ಯಾವನಿಗಾದರೂ ಉಪದೇಶವನ್ನು ಕೊಡಬಾರದು. ಉಪದೇಶವನ್ನು ನೀಡಿದರೆ ಬ್ರಾಹ್ಮಣನು ಆ ಉಪದೇಶವನ್ನು ಪಡೆದವನ ಪಾಪವನ್ನು ತೆಗೆದುಕೊಳ್ಳುತ್ತಾನೆ.
ವಿಮೃಶ್ಯ ತಸ್ಮಾತ್ ಪ್ರಾಜ್ಞೇನ ವಕ್ತವ್ಯಂ ಧರ್ಮಮಿಚ್ಛತಾ |
ಸತ್ಯಾನೃತೇನ ಹಿ ಕೃತ ಉಪದೇಶೋ ಹಿನಸ್ತಿ ವೈ ॥68॥
ಆದ್ದರಿಂದ ವಿವೇಕಿಯಾದವನು, ಧರ್ಮವನ್ನು ಸಂಪಾದಿಸಲು ಬಯಸುವವನು ವಿಚಾರವನ್ನು ಮಾಡಿ ಮಾತನಾಡಬೇಕು. ಸತ್ಯ ಮತ್ತು ಅನೃತದಿಂದ ಕೂಡಿದ ಉಪದೇಶವು ಉಪದೇಶಕನನ್ನು ನಾಶಗೊಳಿಸುತ್ತದೆ.
ವಕ್ತವ್ಯಮಿಹ ಪೃಷ್ಟೇನ ವಿನಿಶ್ಚಿತ್ಯ ವಿಪರ್ಯಯಮ್ |
ಸ ಚೋಪದೇಶಃ ಕರ್ತವ್ಯೋ ಯೇನ ಧರ್ಮಮವಾಪ್ನುಯಾತ್ ॥69॥
ಪ್ರಶ್ನೆಯನ್ನು ಮಾಡಿದಾಗ ಮಾತ್ರ ಉಪದೇಶವನ್ನು ಮಾಡದಿದ್ದರೆ ಉಂಟಾಗುವ ಅನರ್ಥವನ್ನು ತಿಳಿದು ಉಪದೇಶವನ್ನು ಮಾಡಬೇಕು. ಯಾವ ಉಪದೇಶವನ್ನು ಮಾಡಿದರೆ ತನಗೆ ಧರ್ಮವು ಉಂಟಾಗುವುದೋ ಅಂತಹ ಉಪದೇಶವನ್ನು ಮಾಡಬೇಕು.
ಏತತ್ ತೇ ಸರ್ವಮಾಖ್ಯಾತಮುಪದೇಶೇ ಕೃತೇ ಸತಿ |
ಮಹಾನ್ ಕ್ಲೇಶೋ ಹಿ ಭವತಿ ತಸ್ಮಾನ್ನೋಪದಿಶೇತ್ ಕ್ವಚಿತ್ ॥70॥
ನಾನು ನಿನಗೆ ಇದೆಲ್ಲವನ್ನೂ ಹೇಳಿದ್ದೇನೆ. ಸಾರ್ವಜನಿಕವಾಗಿ ಉಪದೇಶ ಮಾಡಿದರೆ ದೊಡ್ಡ ಕ್ಲೇಶವು ಉಂಟಾಗುತ್ತದೆ. ಆದ್ದರಿಂದ ಅಂತಹ ಉಪದೇಶವನ್ನು ಮಾಡಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವರ್ಣಾವರೇ ಉಪದೇಶೋಪಾಖ್ಯಾನಂ ನಾಮ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಲಕ್ಷ್ಮೀನಿವಾಸಸ್ಥಾನಗಳು, ಶ್ರೀದೇವಿ-ರುಗ್ಮಿಣಿಯರ ಸಂವಾದ
ಯುಧಿಷ್ಠಿರಃ
ಕೀದೃಶೇ ಪುರುಷೇ ತಾತ ಸ್ತ್ರೀಷು ವಾ ಭರತರ್ಷಭ |
ಶ್ರೀಃ ಪದ್ಮಾ ವಸತೇ ನಿತ್ಯಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಭರತಶ್ರೇಷ್ಠನೇ, ಪಿತಾಮಹನೇ, ಎಂತಹ ಪುರುಷನಲ್ಲಿ ಅಥವಾ ಸ್ತ್ರೀಯಲ್ಲಿ ಲಕ್ಷ್ಮೀದೇವಿಯು ಸತತವಾಗಿ ವಾಸಿಸುತ್ತಾಳೆ ಎಂದು ನನಗೆ ಹೇಳು.
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಯಥಾದೃಷ್ಟಂ ಯಥಾಶ್ರುತಮ್ |
ರುಗ್ಮಿಣೀ ದೇವಕೀಪುತ್ರಸನ್ನಿಧೌ ಪರ್ಯಪೃಚ್ಛತ ॥2॥
ಭೀಷ್ಮ ಈ ವಿಷಯದಲ್ಲಿ ನಾನು ಕೇಳಿದಂತೆ ಮತ್ತು ನೋಡಿದಂತೆ ನಿನಗೆ ಹೇಳುತ್ತೇನೆ. ರುಗ್ಮಿಣಿಯು ದೇವಕೀಪುತ್ರನ ಸನ್ನಿಧಿಯಲ್ಲಿ ಪ್ರಶ್ನೆ ಮಾಡಿದಳು.
ನಾರಾಯಣಸ್ಯಾಂಕಗತಾಂ ಜ್ವಲಂತೀಂ
ದೃಷ್ಟ್ವಾ ಶ್ರಿಯಂ ಪದ್ಮಸಮಾನವಕ್ತ್ರಮ್ |
ಕೌತೂಹಲಾದ್ ವಿಸ್ಮಿತಚಾರುನೇತ್ರಾ
ಪಪ್ರಚ್ಛ ಮಾತಾ ಮಕರಧ್ವಜಸ್ಯ ॥3॥
ನಾರಾಯಣನ ತೊಡೆಯಲ್ಲಿ ಕುಳಿತ ಪದ್ಮಸಮಾನವಾದ ಮುಖವುಳ್ಳ, ಕಾಂತಿಯಿಂದ ಜ್ವಲಿಸುವ ಶ್ರೀದೇವಿಯನ್ನು ನೋಡಿ ವಿಸ್ಮಯಗೊಂಡ ಸುಂದರನೇತ್ರೆಯಾದ, ಮಕರ ಧ್ವಜನಾದ ಮನ್ಮಥನ ತಾಯಿಯಾದ ರುಗ್ಮಿಣಿಯು ಕುತೂಹಲದಿಂದ ಪ್ರಶ್ನೆ ಮಾಡಿದಳು.
ಕಾನೀಹ ಭೂತಾನ್ಯುಪಸೇವಸೇ ತ್ವಂ
ಸಂತಿಷ್ಠತೀ ಕಾನಿ ನ ಸೇವಸೇ ತ್ವಮ್ |
ತಾನಿ ತ್ರಿಲೋಕೇಶ್ವರಭೂತಕಾಂತೇ
ತತ್ತ್ವೇನ ಮೇ ಬ್ರೂಹಿ ಮಹರ್ಷಿಕನ್ಯೇ ॥4॥
ನೀನು ಯಾವ ಜೀವರನ್ನು ಆಶ್ರಯಿಸಿಕೊಂಡಿರುತ್ತೀಯೆ? ನೆಲೆಸಿದವಳು ಯಾವ ಪುರುಷರನ್ನು ಬಿಟ್ಟು ಹೋಗುತ್ತೀಯೆ? ಎಲೈ ತ್ರಿಲೋಕೇಶ್ವರನಾದ ನಾರಾಯಣನ ಪತ್ನಿಯೇ, ಮಹರ್ಷಿಗಳಾದ ಭೃಗುಗಳ ಪುತ್ರಿಯೇ, ಆ ಸ್ಥಾನಗಳನ್ನು ನನಗೆ ಸರಿಯಾಗಿ ಹೇಳು.
ಏವಂ ತದಾ ಶ್ರೀರಭಿಭಾಷ್ಯಮಾಣಾ
ದೇವ್ಯಾ ಸಮಕ್ಷಂ ಗರುಡಧ್ವಜಸ್ಯ |
ಉವಾಚ ವಾಕ್ಯಂ ಮಧುರಾಭಿಧಾನಂ
ಮನೋಹರಂ ಚಂದ್ರಮುಖೀ ಪ್ರಸನ್ನಾ ॥5॥
ಹೀಗೆ ಲಕ್ಷ್ಮೀದೇವಿಯು ಗರುಡಧ್ವಜನಾದ ನಾರಾಯಣನ ಸಮಕ್ಷಮದಲ್ಲಿ ರುಗ್ಮಿಣಿಯಿಂದ ಮಾತನಾಡಿಸಲ್ಪಟ್ಟಾಗ ಚಂದ್ರಮುಖಿಯೂ, ಪ್ರಸನ್ನಚಿತ್ತಳೂ ಆದ ಅವಳು ಮಧುರವೂ, ಮನೋಹರವೂ ಆದ ಮಾತುಗಳನ್ನು ಆಡಿದಳು.
ವಸಾಮಿ ಸತ್ಯೇ ಸುಭಗೇ ಪ್ರಗಲ್ಭೇ

ದಕ್ಷೇ ನರೇ ಕರ್ಮಣಿ ವರ್ತಮಾನೇ |
ನಾಕರ್ಮಶೀಲೇ ಪುರುಷೇ ವಸಾಮಿ
ನ ನಾಸ್ತಿಕೇ ಸಾಂಕರಿಕೇ ಕೃತಘ್ನೇ |
ನ ಭಿನ್ನವೃತ್ತೇ ನ ನೃಶಂಸವೃತ್ತೇ
ನ ಚಾಪಿ ಚೋರೇ ನ ಗುರುಷ್ವಸೂಯೇ ||6||
ಸತ್ಯವಂತನಾದ ಪುರುಷನಲ್ಲಿ, ಸುಬಲನಲ್ಲಿ, ವಿದ್ವಾಂಸನಲ್ಲಿ, ದಕ್ಷನಾದ ಮನುಷ್ಯನಲ್ಲಿ, ಯಾವಾಗಲೂ ಕ್ರಿಯಾಶೀಲನಾದ ಮನುಷ್ಯನಲ್ಲಿ ವಾಸ ಮಾಡುತ್ತೇನೆ. ಕ್ರಿಯಾಶೀಲನಲ್ಲದ ಮನುಷ್ಯನಲ್ಲಿ, ನಾಸ್ತಿಕನಲ್ಲಿ, ಸಂಕರವನ್ನು ಮಾಡಿದವನಲ್ಲಿ ಮತ್ತು ಕೃತಘ್ನನಲ್ಲಿ ವಾಸ ಮಾಡುವುದಿಲ್ಲ. ಒಳಗಿನಿಂದ ಒಂದು, ಹೊರಗಿನಿಂದ ಇನ್ನೊಂದು ನಡತೆಯನ್ನು ಹೊಂದಿರುವವನಲ್ಲಿ, ಕ್ರೂರವಾದ ನಡತೆಯನ್ನು ಹೊಂದಿರುವವನಲ್ಲಿ, ಚೋರನಲ್ಲಿ, ಗುರುವನ್ನು ನೋಡಿ ಅಸೂಯೆ ಪಡುವವನಲ್ಲಿ ನಾನು ವಾಸ ಮಾಡುವುದಿಲ್ಲ.
ಯೇ ಚಾಲ್ಪತೇಜೋಬಲಸತ್ತ್ವಸಾರಾ
ಹೃಷ್ಯಂತಿ ತರ್ಪ್ಯಂತಿ ಚ ಯತ್ರ ತತ್ರ |
ನ ದೇವಿ ತಿಷ್ಠಾಮಿ ತಥಾವಿಧೇಷು
ನರೇಷು ಸಂಸುಪ್ತಮನೋರಥೇಷು ||7||
ಎಲೌ ದೇವಿಯೇ, ಯಾರು ಅಲ್ಪ ತೇಜೋಬಲ-ಧೈರ್ಯ-ಶಕ್ತಿಗಳಿಂದ ಕೂಡಿದವರಾಗಿ ಅಲ್ಲಲ್ಲಿ ಸಣ್ಣಪುಟ್ಟ ವಿಷಯಗಳಲ್ಲಿ ಸಂತೋಷಗೊಂಡು ತೃಪ್ತಿಯನ್ನು ಹೊಂದುತ್ತಾರೆಯೋ, ಎಲೌ ದೇವಿಯೇ, ಅಂತಹವರಲ್ಲಿ ನಾನು ಇರುವುದಿಲ್ಲ. ಮನೋರಥಗಳು ನಶಿಸಿಹೋದ ಪುರುಷನಲ್ಲಿಯೂ ನಾನು ಇರುವುದಿಲ್ಲ.
ಯಶ್ಚಾತ್ಮನಿ ಪ್ರಾರ್ಥಯತೇ ನ ಕಿಂಚಿದ್
ಯಶ್ಚ ಸ್ವಭಾವೋಪಹತಾಂತರಾತ್ಮಾ |
ತೇಷ್ವಲ್ಪಸಂತೋಷರತೇಷು ನಿತ್ಯಂ
ನರೇಷು ನಾಹಂ ನಿವಸಾಮಿ ದೇವಿ ||8||
ಯಾವನು ಮನಸ್ಸಿನಿಂದ ಏನನ್ನೂ ಆಶಿಸುವುದಿಲ್ಲವೋ, ಯಾವನ ಮನಸ್ಸು ಸ್ವಾಭಾವಿಕವಾಗಿ ಮಲಿನವಾಗಿದೆಯೋ, ಎಲೌ ದೇವಿಯೇ, ಅಂತಹ ಅಲ್ಪ ಸಂತೋಷದಲ್ಲೇ ನಿರತನಾದ ನರರಲ್ಲಿ ನಾನು ಎಂದೂ ವಾಸಮಾಡುವುದಿಲ್ಲ.
ವಸಾಮಿ ಧರ್ಮಶೀಲೇಷು ಧರ್ಮಜ್ಞೇಷು ಮಹಾತ್ಮಸು |
ವೃದ್ಧಸೇವಿಷು ದಾಂತೇಷು ಸತ್ತ್ವಜ್ಞೇಷು ಮಹಾತ್ಮಸು ||9||
ಧರ್ಮಶೀಲರಲ್ಲಿ, ಧರ್ಮವನ್ನು ತಿಳಿದವರಲ್ಲಿ, ಮಹಾತ್ಮರಲ್ಲಿ, ಹಿರಿಯರ ಸೇವೆಯನ್ನು ಮಾಡುವವರಲ್ಲಿ, ಇಂದ್ರಿಯನಿಗ್ರಹವುಳ್ಳವರಲ್ಲಿ, ಸತ್ವಗುಣವನ್ನು ತಿಳಿದ ಮಹಾತ್ಮರಲ್ಲಿ ವಾಸ ಮಾಡುತ್ತೇನೆ.
ಸ್ತ್ರೀಷು ಕ್ಷಾಂತಾಸು ದಾಂತಾಸು ದೇವದ್ವಿಜಪರಾಸು ಚ |
ವಸಾಮಿ ಸತ್ಯಶೀಲಾಸು ಸ್ವಭಾವನಿರತಾಸು ಚ ||10||
ಕ್ಷಮೆಯನ್ನು ಹೊಂದಿದ, ಇಂದ್ರಿಯನಿಗ್ರಹವುಳ್ಳ, ದೇವಪರಾಯಣರಾದ, ಸತ್ಯಶೀಲರಾದ, ತಮ್ಮ ಸ್ವಭಾವದಂತೆ ನಡೆದುಕೊಳ್ಳುವ ಸ್ತ್ರೀಯರಲ್ಲಿ ನಾನು ವಾಸಿಸುತ್ತೇನೆ.
ಪ್ರಕೀರ್ಣಭಾಂಡಾಮನವೇಕ್ಷ್ಯಕಾರಿಣೀಂ
ಸದಾ ಚ ಭರ್ತುಃ ಪ್ರತಿಕೂಲವಾದಿನೀಮ್ |
ಪರಸ್ಯ ವೇಶ್ಮಾಭಿರತಾಮಲಜ್ಜಾಮ್
ಏವಂವಿಧಾಂ ಸ್ತ್ರೀಂ ಪರಿವರ್ಜಯಾಮಿ ||11||
ಮನೆಯಲ್ಲಿ ಪಾತ್ರೆಗಳನ್ನು ಚೆಲ್ಲಾಡುವಂತಹ, ವಿಚಾರ ಮಾಡದೆ ಕೆಲಸವನ್ನು ಮಾಡುವ, ಗಂಡನಿಗೆ ಯಾವಾಗಲೂ ಎದುರಾಗಿ ಮಾತನಾಡುವ, ಇನ್ನೊಬ್ಬರ ಮನೆಯಲ್ಲೇ ಕಾಲವನ್ನು ಕಳೆಯುವ, ಲಜ್ಜಾಹೀನಳಾದ ಸ್ತ್ರೀಯನ್ನು ನಾನು ಪರಿತ್ಯಜಿಸುತ್ತೇನೆ.
ಲೋಲಾಂ ಮತಾಕ್ಷಾಮವಲೇಪಿನೀಂ ಚ
ವ್ಯಪೇತಧೈರ್ಯಾಂ ಕಲಹಪ್ರಿಯಾಂ ಚ |
ನಿದ್ರಾಭಿಭೂತಾಂ ಸತತಂ ಶಯಾನಾಮ್
ಏವಂವಿಧಾಂ ಸ್ತ್ರೀಂ ಪರಿವರ್ಜಯಾಮಿ ||12||
ಚಂಚಲಳಾದವಳನ್ನು, ಪಗಡೆಯಾಟದಲ್ಲಿ ನಿಪುಣಳಾದವಳನ್ನು, ಅಹಂಕಾರ ಉಳ್ಳವಳನ್ನು, ಧೈರ್ಯವಿಲ್ಲದವಳನ್ನು, ಕಲಹಪ್ರಿಯಳಾದವಳನ್ನು, ಹೆಚ್ಚಾಗಿ ನಿದ್ರೆ ಮಾಡುವವಳನ್ನು, ಯಾವಾಗಲೂ ಮಲಗಿರುವವಳನ್ನು - ಇಂತಹ ಸ್ತ್ರೀಯರನ್ನು ನಾನು ಪರಿತ್ಯಜಿಸುತ್ತೇನೆ.
ಸತ್ಯಾಸು ನಿತ್ಯಂ ಪ್ರಿಯದರ್ಶನಾಸು
ಸೌಭಾಗ್ಯಯುಕ್ತಾಸು ಗುಣಾನ್ವಿತಾಸು |
ವಸಾಮಿ ನಾರೀಷು ಪತಿವ್ರತಾಸು
ಕಲ್ಯಾಣಶೀಲಾಸು ವಿಭೂಷಿತಾಸು ||13||
ಸತ್ಯವಂತರಾದ, ನಿತ್ಯವೂ ನೋಡಲು ಪ್ರಿಯರಾದ, ಸೌಭಾಗ್ಯ ದ್ರವ್ಯಗಳಿಂದ ಕೂಡಿದ, ಗುಣವಂತರಾದ, ಕಲ್ಯಾಣವಾದ ನಡತೆಯುಳ್ಳ, ಅಲಂಕೃತಳಾದ ಪತಿವ್ರತೆಯರಲ್ಲಿ ನಾನು ವಾಸಿಸುತ್ತೇನೆ.

ಯಾನೇಷು ಕನ್ಯಾಸು ವಿಭೂಷಣೇಷು
　　ಯಜ್ಞೇಷು ಮೇಘೇಷು ಚ ವೃಷ್ಟಿಮತ್ಸು |
ವಸಾಮಿ ಫುಲ್ಲಾಸು ಚ ಪದ್ಮಿನೀಷು
　　ನಕ್ಷತ್ರವೀಥೀಷು ಚ ಶಾರದೀಷು ॥14॥
ಶೈಲೇಷು ಗೋಷ್ಠೇಷು ತಥಾ ವನೇಷು
　　ಸರಃಸು ಫುಲ್ಲೋತ್ಪಲಪಂಕಜೇಷು |
ನದೀಷು ಹಂಸಸ್ವನನಾದಿತಾಸು
　　ಕ್ರೌಂಚಾವಘುಷ್ಟಸ್ವರಭೂಷಿತಾಸು ॥15॥
ಯಾನಗಳಲ್ಲಿ, ಕನ್ಯೆಯರಲ್ಲಿ, ಆಭರಣಗಳಲ್ಲಿ, ಯಜ್ಞಗಳಲ್ಲಿ, ನೀರು ತುಂಬಿದ ಮೋಡಗಳಲ್ಲಿ, ಅರಳಿದ ಕಮಲ ಸರೋವರಗಳಲ್ಲಿ, ಶರತ್ಕಾಲದ ರಾತ್ರಿಯ ನಕ್ಷತ್ರಗಳಲ್ಲಿ ನಾನು ವಾಸಿಸುತ್ತೇನೆ. ಪರ್ವತಗಳಲ್ಲಿ, ಗೋಶಾಲೆಗಳಲ್ಲಿ, ಅರಣ್ಯಗಳಲ್ಲಿ, ಸರೋವರಗಳಲ್ಲಿ, ಉತ್ಪಲ ಮತ್ತು ಪದ್ಮಗಳು ಅರಳಿರುವ ಸರೋವರಗಳಲ್ಲಿ, ಹಂಸಸ್ವನಗಳಿಂದಲೂ ಮತ್ತು ಕ್ರೌಂಚಪಕ್ಷಿಗಳ ಸ್ವರಗಳಿಂದಲೂ ಕೂಡಿದ ನದಿಗಳಲ್ಲಿ ನಾನು ವಾಸಿಸುತ್ತೇನೆ.
ವಿಸ್ತೀರ್ಣಕೂಲಹ್ರದಶೋಭಿತಾಸು
　　ತಪಸ್ವಿಸಿದ್ಧದ್ವಿಜಸೇವಿತಾಸು |
ವಸಾಮಿ ನಿತ್ಯಂ ಸುಬಹೂದಕಾಸು
　　ಸಿಂಹೈರ್ಗಜೈಶ್ಚಾಕುಲಿತೋದಕಾಸು |
ಮತ್ತೇ ಗಜೇ ಗೋವೃಷಭೇ ನರೇಂದ್ರೇ
　　ಸಿಂಹಾಸನೇ ಸತ್ಪುರುಷೇ ಚ ನಿತ್ಯಮ್ ॥16॥
ವಿಸ್ತಾರವಾದ ದಡವನ್ನು ಹೊಂದಿದ, ಮೃಗಗಳಿಂದ ಶೋಭಿಸುವ, ತಪಸ್ವಿಗಳಿಂದಲೂ, ಬ್ರಾಹ್ಮಣರಿಂದಲೂ, ಸಿದ್ಧರಿಂದಲೂ ಸೇವಿತವಾದ, ಬಹಳ ಜಲವುಳ್ಳ, ಸಿಂಹ-ಗಜಗಳಿಂದ ಕಲಕಲ್ಪಡುವ ಜಲವುಳ್ಳ ಸರೋವರಗಳಲ್ಲಿ ನಾನು ಯಾವಾಗಲೂ ವಾಸಿಸುತ್ತೇನೆ. ಮದಿಸಿದ ಆನೆಯಲ್ಲಿಯೂ, ಗೋ-ವೃಷಭದಲ್ಲಿಯೂ, ರಾಜನಲ್ಲಿಯೂ, ಸಿಂಹಾಸನದಲ್ಲಿಯೂ ಮತ್ತು ಸತ್ಪುರುಷನಲ್ಲಿಯೂ ನಿತ್ಯವೂ ವಾಸಿಸುತ್ತೇನೆ.
ಯಸ್ಮಿನ್ ಯಜ್ಞೋ ಹೂಯತಿ ಹವ್ಯವಾಹೇ
　　ಗೋಬ್ರಾಹ್ಮಣಾಭ್ಯರ್ಚಿತದೇವತಾಸು |
ಕಾಲೇ ಚ ಪುಷ್ಪೈರ್ಬಲಯಃ ಕ್ರಿಯಂತೇ
　　ತಸ್ಮಿನ್ ಗೃಹೇ ನಿತ್ಯಮುಪೈಮಿ ವಾಸಮ್ ॥17॥
ಯಾವ ಗೃಹದಲ್ಲಿ ಗೋ-ಬ್ರಾಹ್ಮಣರಿಂದ ಪೂಜಿಸಲ್ಪಡುವ ದೇವತೆಗಳಿಗೆ ಅಗ್ನಿ ಮುಖದಲ್ಲಿ ಆಹುತಿಯು ಕೊಡಲ್ಪಡುತ್ತದೆಯೋ, ಯೋಗ್ಯವಾದ ಕಾಲದಲ್ಲಿ ಪುಷ್ಪಗಳಿಂದ ಪೂಜೆಯು ಮಾಡಲ್ಪಡುತ್ತದೆಯೋ ಅಂತಹ ಗೃಹದಲ್ಲಿ ನಿತ್ಯವೂ ವಾಸವಾಗಿರುತ್ತೇನೆ.
ಸ್ವಾಧ್ಯಾಯನಿತ್ಯೇಷು ದ್ವಿಜೇಷು ನಿತ್ಯಂ
　　ಕ್ಷತ್ರೇ ಚ ಧರ್ಮಾಭಿರತೇ ಸದೈವ |
ವೈಶ್ಯೇ ಚ ಕೃಷ್ಯಾಭಿರತೇ ವಸಾಮಿ
　　ಶೂದ್ರೇ ಚ ಶಿ(ಶು)ಶ್ರೂಷಣನಿತ್ಯಯತ್ನೇ ॥18॥
ಸ್ವಾಧ್ಯಾಯನಿರತರಾದ ದ್ವಿಜರಲ್ಲಿ ಯಾವಾಗಲೂ ವಾಸಿಸುತ್ತೇನೆ. ಧರ್ಮಾಭಿರುಚಿಯುಳ್ಳ ಕ್ಷತ್ರಿಯನಲ್ಲಿ, ಕೃಷಿನಿರತನಾದ ವೈಶ್ಯನಲ್ಲಿ ಮತ್ತು ಶುಶ್ರೂಷಾ ಪರನಾದ ಶೂದ್ರನಲ್ಲಿ ಯಾವಾಗಲೂ ನೆಲೆಸಿರುತ್ತೇನೆ.
ನಾರಾಯಣೇ ತ್ವೇಕಮನಾ ವಸಾಮಿ
　　ಸರ್ವೇಣ ಭಾವೇನ ಶರೀರಭೂತಾ |
ತಸ್ಮಿನ್ ಹಿ ಧರ್ಮಃ ಸುಮಹಾನ್ ನಿವಿಷ್ಟೋ
　　ಬ್ರಹ್ಮಣ್ಯತಾ ಚಾತ್ರ ತಥಾ ಪ್ರಿಯತ್ವಮ್ ॥19॥
ನಾರಾಯಣನಲ್ಲಿಯೇ ಮನಸ್ಸುಳ್ಳವಳಾಗಿ ಎಲ್ಲ ಭಾವಗಳಿಂದಲೂ ಅವನಿಗೆ ಶರೀರಳೆಂದೆನಿಸಿ ಅವನಲ್ಲಿ ನೆಲೆಸಿದ್ದೇನೆ. ಏಕೆಂದರೆ ಅವನಲ್ಲಿ ದೊಡ್ಡ ಧರ್ಮವೂ, ಬ್ರಾಹ್ಮಣ ವಾತ್ಸಲ್ಯವೂ ಮತ್ತು ಬ್ರಾಹ್ಮಣರಿಗೆ ಪ್ರಿಯವಾಗಿರುವಿಕೆಯೂ ದೊಡ್ಡ ಪ್ರಮಾಣದಲ್ಲಿ ಸೇರಿಕೊಂಡಿವೆ.
ನಾಹಂ ಶರೀರೇಣ ವಸಾಮಿ ದೇವಿ
　　ನೈವಂ ಮಯಾ ಶಕ್ಯಮಿಹಾಭಿಧಾತುಮ್ |
ಯಸ್ಮಿಂಸ್ತು ಭಾವೇನ ವಸಾಮಿ ಪುಂಸಿ
　　ಸ ವರ್ಧತೇ ಧರ್ಮಯಶೋರ್ಥಕಾಮೈಃ ॥20॥
ಎಲೌ ದೇವಿಯೇ, ನಾನು ದೇಹದಿಂದ ವಾಸ ಮಾಡುವುದಿಲ್ಲ. ಉಳಿದ ವಿಷಯವನ್ನು ನಾನು ಹೇಳಲಾರೆ. ನಾನು ಯಾವ ಪುರುಷನಲ್ಲಿ ನನ್ನ ಮನಸ್ಸಿನಿಂದ ನೆಲೆಸುತ್ತೇನೆಯೋ ಅವನು ಧರ್ಮ-ಯಶಸ್ಸು ಮತ್ತು ಅರ್ಥ-ಕಾಮಗಳಿಂದ ಅಭಿವೃದ್ಧಿಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಶ್ರಿಯಾ ಸಹ ರುಗ್ಮಿಣೀಸಂವಾದೋ ನಾಮ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *

ಇಪ್ಪತ್ತೊಂಬತ್ತನೆಯ ಅಧ್ಯಾಯ

ವತ್ಸನಾಭೋಪಾಖ್ಯಾನ

ಯುಧಿಷ್ಠಿರಃ

ಪ್ರಾಯಶ್ಚಿತ್ತಂ ಕೃತಘ್ನಾನಾಂ ಪ್ರತಿಬ್ರೂಹಿ ಪಿತಾಮಹ |
ಮಾತೄಃ ಪಿತೄನ್ ಗುರೂಂಶ್ಚೈವ ಯೇಽವಮನ್ಯಂತಿ ಮೋಹಿತಾಃ ||1||

ಯುಧಿಷ್ಠಿರ ಎಲೈ ಪಿತಾಮಹನೇ, ಭ್ರಾಂತಿಗೆ ಒಳಗಾಗಿ ತಂದೆ-ತಾಯಿಯರನ್ನೂ, ಗುರುಗಳನ್ನೂ ಅವಮಾನ ಮಾಡುವ ಕೃತಘ್ನರಿಗೆ ಏನು ಪ್ರಾಯಶ್ಚಿತವಿದೆ ಎಂದು ಹೇಳು.

ಯೇ ಚಾಪ್ಯನ್ಯೇ ಪರೇ ತಾತ ಕೃತಘ್ನಾ ನಿರಪತ್ರಪಾಃ |
ತೇಷಾಂ ಗತಿಂ ಮಹಾಬಾಹೋ ಶ್ರೋತುಮಿಚ್ಛಾಮಿ ತತ್ತ್ವತಃ ||2||

ಎಲೈ ಪ್ರೀತಿಪಾತ್ರನೇ, ಎಲೈ ಮಹಾಬಾಹುವೇ, ನಾಚಿಕೆಯಿಲ್ಲದ ಬೇರೆ ರೀತಿಯ ಕೃತಘ್ನರಿಗೂ ಸಹ ಯಾವ ಗತಿಯಿದೆ ಎಂದು ಕೇಳಲು ಬಯಸುತ್ತೇನೆ.

ಭೀಷ್ಮಃ

ಕೃತಘ್ನಾನಾಂ ಗತಿಸ್ತಾತ ನರಕೇ ಶಾಶ್ವತೀಃ ಸಮಾಃ |
ಮಾತಾಪಿತೃಗುರೂಣಾಂ ಚ ಯೇ ನ ತಿಷ್ಠಂತಿ ಶಾಸನೇ |
ಕ್ರಿ(ಕೃ)ಮಿಕೀಟಪಿಪೀಲೇಷು ಜಾಯಂತೇ ಸ್ಥಾವರೇಷು ಚ ||3||

ಭೀಷ್ಮ ಪ್ರೀತಿಪಾತ್ರನೇ, ಕೃತಘ್ನರಿಗೆ ನರಕದಲ್ಲಿ ಶಾಶ್ವತವಾಸವೇ ಗತಿ. ತಂದೆ- ತಾಯಿಗಳ ಮತ್ತು ಗುರುಗಳ ಮಾತುಗಳನ್ನು ಯಾರು ಕೇಳುವುದಿಲ್ಲವೋ ಅವರು ಪಿಪೀಲಿಕಾದಿ (ಇರುವೆ ಮುಂತಾದ) ಯೋನಿಯಲ್ಲಿಯೂ, ಗಿಡ-ಮರಗಳ ಯೋನಿಯಲ್ಲಿಯೂ ಜನಿಸುತ್ತಾರೆ.

ದುರ್ಲಭೋ ಹಿ ಪುನಸ್ತೇಷಾಂ ಮಾನುಷ್ಯೇ ಪುನರುದ್ಭವಃ |
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ||4||

ಅವರು ಪುರುಷರಾಗಿ ಪುನಃ ಮನುಷ್ಯಜನ್ಮವನ್ನು ತಾಳುವುದು ದುರ್ಲಭವಾದುದು. ಈ ವಿಷಯದಲ್ಲಿ ಒಂದು ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.

ವತ್ಸನಾಭೋ ಮಹಾಪ್ರಾಜ್ಞೋ ಮಹರ್ಷಿಃ ಸಂಶಿತವ್ರತಃ |
ವಲ್ಮೀಕಭೂತೋ ಬ್ರಹ್ಮರ್ಷಿಸ್ತಪ್ಯತೇ ಸುಮಹತ್ತಪಃ ||5||

ವತ್ಸನಾಭನೆಂಬ ಮಹಾಪ್ರಾಜ್ಞನೂ, ಮಹರ್ಷಿಯೂ, ಒಳ್ಳೆಯ ವ್ರತಧಾರಿಯೂ ಆದ ಬ್ರಹ್ಮರ್ಷಿಯು ದೊಡ್ಡ ತಪಸ್ಸನ್ನು ಆಚರಿಸುತ್ತಿದ್ದಾಗ ಅವನ ಸುತ್ತಲೂ ಒಂದು ಹುತ್ತವು ಬೆಳೆಯಿತು.

ತಸ್ಮಿಂಶ್ಚ ತಪ್ಯತಿ ತಪೋ ವಾಸವೋ ಭರತರ್ಷಭ |
ವವರ್ಷ ಸುಮಹದ್ ವರ್ಷಂ ಸವಿದ್ಯುತ್ಸ್ತನಯಿತ್ನುಮಾನ್ ||6||

ಎಲೈ ಭರತಶ್ರೇಷ್ಠನೇ, ಅವನು ಆ ಹುತ್ತದಲ್ಲಿ ತಪಸ್ಸನ್ನು ಮಾಡುತ್ತಿರಲು ಇಂದ್ರನು ಗುಡುಗು-ಮಿಂಚುಗಳಿಂದ ಕೂಡಿದ ದೊಡ್ಡ ಮಳೆಯನ್ನು ಅವನ ಮೇಲೆ ಸುರಿಸಿದನು.

ತತ್ರ ಸಪ್ತಾಹವರ್ಷಂ ತು ಮುಮುಚೇ ಪಾಕಶಾಸನಃ |
ನಿಮೀಲಿತಾಕ್ಷಸ್ತದ್ವರ್ಷಂ ಪ್ರತ್ಯಗೃಹ್ಣತ ವೈ ದ್ವಿಜಃ ||7||

ಪಾಕಶಾಸನನಾದ ಇಂದ್ರನು ಏಳು ದಿನಗಳ ಕಾಲ ಮಳೆಯನ್ನು ಸುರಿಸಿದನು. ಆ ಬ್ರಾಹ್ಮಣನಾದರೂ ಕಣ್ಣುಗಳನ್ನು ಮುಚ್ಚಿ ಆ ಮಳೆಯನ್ನು ಹಾಗೆಯೇ ಧರಿಸಿದನು.

ತಸ್ಮಿನ್ ಪತತಿ ವರ್ಷೇ ತು ಶೀತವಾತಸಮನ್ವಿತೇ |
ವಿಶೀರ್ಣಧ್ವಸ್ತಶಿಖರೋ ವಲ್ಮೀಕೋಽಶನಿತಾಡಿತಃ ||8||

ಶೀತ, ವಾತಗಳಿಂದ ಕೂಡಿದ ಆ ಮಳೆಯು ಹಾಗೆ ಬರುತ್ತಿರಲು ಮೇಲ್ಭಾಗವು ಕರಗಿ ಹೋದ ಆ ವಲ್ಮೀಕಕ್ಕೆ ಒಂದು ಸಿಡಿಲು ಬಡಿಯಿತು.

ತಾಡ್ಯಮಾನೇ ತತಸ್ತಸ್ಮಿನ್ ವತ್ಸನಾಭೇ ಮಹಾತ್ಮನಿ |
ಕಾರುಣ್ಯಾತ್ ತಸ್ಯ ಧರ್ಮಸ್ತು ಸ್ವಮಾನೃಶಂಸ್ಯಮಥಾಕರೋತ್ ||9||

ಮಹಾತ್ಮನಾದ ವತ್ಸನಾಭನು ಸಿಡಿಲಿನ ಏಟನ್ನು ತೆಗೆದುಕೊಳ್ಳುವಷ್ಟರಲ್ಲಿ ಧರ್ಮದೇವತೆಯಾದ ಯಮನು ಅವನ ಮೇಲೆ ಕರುಣೆಯನ್ನು ಹೊಂದಿ ದಯೆಯನ್ನು ತೋರಿಸಿದನು (ಲಕ್ಷ್ಯಾಲಂಕಾರ).

ಚಿಂತಯಾನಸ್ಯ ಬ್ರಹ್ಮರ್ಷಿಂ ತಪಂತಮತಿಧಾರ್ಮಿಕಮ್ |
ಅನುರೂಪಾ ಮತಿಃ ಕ್ಷಿಪ್ರಮುಪಜಾತಾ ಸ್ವಭಾವಜಾ ||10||

ತಪಸ್ಸನ್ನು ಮಾಡುತ್ತಿದ್ದ ಪರಮಧಾರ್ಮಿಕನಾದ ಆ ಬ್ರಹ್ಮರ್ಷಿಯನ್ನು ಚಿಂತಿಸುತ್ತಿದ್ದ ಯಮನಿಗೆ ಅವನ ಸ್ವಭಾವಕ್ಕೆ ಅನುಗುಣವಾದ ಬುದ್ಧಿಯು ಶೀಘ್ರವಾಗಿ ಉಂಟಾಯಿತು.

ಸ್ವಂ ರೂಪಂ ಮಾಹಿಷಂ ಕೃತ್ವಾ ಸುಮಹಾಂತಂ ಮನೋಹರಮ್ |
ರಕ್ಷಾರ್ಥಂ ವತ್ಸನಾಭಸ್ಯ ಚತುಷ್ಪಾದುಪರಿ ಸ್ಥಿತಃ ||11||

ಅವನು ಮನೋಹರವಾದ ಒಂದು ದೊಡ್ಡ ಎಮ್ಮೆಯ ರೂಪವನ್ನು ತೆಗೆದುಕೊಂಡು ವತ್ಸನಾಭನನ್ನು ರಕ್ಷಿಸಲು ನಾಲ್ಕು ಪಾದವುಳ್ಳವನಾಗಿ ಅವನ ಮೇಲ್ಭಾಗದಲ್ಲಿ ನಿಂತನು.

ಯದಾ ತ್ವಪಗತಂ ವರ್ಷಂ ವೃಷ್ಟಿವಾತಸಮನ್ವಿತಮ್ |

ತತೋ ಮಹಿಷರೂಪೇಣ ಧರ್ಮೋ ಧರ್ಮಭೃತಾಂವರ |
ಶನೈರ್ವಲ್ಮೀಕಮುತ್ಸೃಜ್ಯ ಪ್ರಾದ್ರುವದ್ ಭರತರ್ಷಭ ॥12॥
ಭರತರ್ಷಭನೇ, ಶೀತ-ವಾತ ಸಮನ್ವಿತವಾದ ಮಳೆಯು ನಿಂತಮೇಲೆ, ಧರ್ಮ ವಿಷಯದಲ್ಲಿ ಶ್ರೇಷ್ಠನಾದ, ಮಹಿಷರೂಪನಾದ ಧರ್ಮನು ನಿಧಾನವಾಗಿ ವಲ್ಮೀಕವನ್ನು ಬಿಟ್ಟು ಓಡಿ ಹೋಗಿ ದೂರ ನಿಂತನು.
ಸ್ಥಿತೇಽಸ್ಮಿನ್ ವೃಷ್ಟಿಸಂಪಾತೇ ವೀಕ್ಷತೇ ಸ್ಮ ಮಹಾತಪಾಃ |
ದಿಶಶ್ಚ ವಿಪುಲಾಸ್ತತ್ರ ಗಿರೀಣಾಂ ಶಿಖರಾಣಿ ಚ ॥13॥
ಮಳೆಯು ನಿಂತ ಮೇಲೆ ಮಹಾತಪಸ್ವಿಯಾದ ವತ್ಸನಾಭನಾದರೂ ವಿಪುಲವಾದ ದಿಕ್ಕುಗಳನ್ನೂ, ಪರ್ವತಶಿಖರಗಳನ್ನೂ ನೋಡಿದನು.
ದೃಷ್ಟ್ವಾ ಚ ಪೃಥಿವೀಂ ಸರ್ವಾಂ ಸಲಿಲೇನ ಪರಿಪ್ಲುತಾಮ್ |
ಜಲಾಶಯಾನ್ ಸ ತಾನ್ ದೃಷ್ಟ್ವಾ ವಿಪ್ರಃ ಪ್ರಮುದಿತೋಽಭವತ್ ॥
ಭೂಮಿಯೆಲ್ಲವೂ ನೀರಿನಿಂದ ತುಂಬಿರುವುದನ್ನೂ, ಜಲಾಶಯಗಳು ನೀರಿನಿಂದ ತುಂಬಿರುವುದನ್ನೂ ನೋಡಿ ಆ ಬ್ರಾಹ್ಮಣನು ಬಹಳ ಸಂತೋಷಗೊಂಡನು.
ಅಚಿಂತಯದ್ ವಿಸ್ಮಿತಶ್ಚ ವರ್ಷಾತ್ ಕೇನಾಸ್ಮಿ ರಕ್ಷಿತಃ |
ತತೋಽಪಶ್ಯತ್ ತತ್ರ ಮಹಿಷಮವಸ್ಥಿತಮದೂರತಃ ॥15॥
ವಿಸ್ಮಯಗೊಂಡ ಅವನು ಮಳೆಯಲ್ಲಿ ತನ್ನನ್ನು ಯಾರು ರಕ್ಷಿಸಿದರು ಎಂದು ಚಿಂತಿಸಿದನು. ಅನಂತರ ಸ್ವಲ್ಪ ದೂರದಲ್ಲಿ ನಿಂತಿದ್ದ ಆ ಎಮ್ಮೆಯನ್ನು ನೋಡಿದನು.
ತಿರ್ಯಗ್ಯೋನಾವಪಿ ಕಥಂ ದೃಶ್ಯತೇ ಧರ್ಮವತ್ಸಲಃ ॥16॥
ಅತೋ ನು ಭದ್ರಂ ಮಹಿಷಃ ಶಿಲಾಪಟ್ಟ ಇವ ಸ್ಥಿತಃ |
ಪೀವರಶ್ಚೈವ ಬಲ್ಯಶ್ಚ ಬಹುಮಾಂಸೋ ಭವೇದಯಮ್ ॥17॥
ಪ್ರಾಣಿಯೋನಿಯಲ್ಲಿ ಜನಿಸಿದ್ದರೂ ಈ ಮಹಿಷವು ಹೇಗೆ ಧರ್ಮವತ್ಸಲವಾಗಿದೆ? ಆದ್ದರಿಂದಲೇ ಇದು ಮಂಗಳವಾಗಿದೆ ಮತ್ತು ಕಲ್ಲು ಬಂಡೆಯಂತೆ ನಿಂತಿದೆ. ಇದು ಬಹಳ ಪುಷ್ಟವಾಗಿದೆ. ಆಹಾರಕ್ಕಾಗಿ ಉಪಯೋಗಿಸಿದರೆ ಬಹಳ ಮಾಂಸವು ದೊರೆಯಬಹುದು (ಎಂದು ಚಿಂತಿಸಿದನು).
ತಸ್ಯ ಬುದ್ಧಿರಿಯಂ ಜಾತಾ ಧರ್ಮಸಂಸಕ್ತಜಾ ಮುನೇಃ |
ಕೃತಘ್ನಾ ನರಕಂ ಯಾಂತಿ ಯೇ ಚ ವಿಶ್ವಸ್ತಘಾತಿನಃ ॥18॥
ನಿಷ್ಕೃತಿಂ ನೈವ ಪಶ್ಯಾಮಿ ಕೃತಘ್ನಾನಾಂ ಕಥಂಚನ |
ಋತೇ ಪ್ರಾಣಪರಿತ್ಯಾಗಾದ್ ಧರ್ಮಜ್ಞಾನಾಂ ವಚೋ ಯಥಾ ॥19॥
ಅನಂತರ ಆ ಋಷಿಗೆ ಧರ್ಮಾನುಗುಣವಾದ ಈ ಬುದ್ಧಿಯು ಉಂಟಾಯಿತು. ಕೃತಘ್ನರೂ, ವಿಶ್ವಾಸಘಾತಕರೂ ಆದ ಜನರು ನರಕಕ್ಕೆ ಹೋಗುತ್ತಾರೆ. ಧರ್ಮವನ್ನು ತಿಳಿದವರ ಮಾತನ್ನು ಕೇಳಿದರೆ ಕೃತಘ್ನರಾದವರಿಗೆ ಪ್ರಾಣಪರಿತ್ಯಾಗವನ್ನು ಬಿಟ್ಟು ಬೇರೆ ಯಾವ ಪ್ರಾಯಶ್ಚಿತ್ತವೂ ಇಲ್ಲ.
ಅಕೃತ್ವಾ ಭರಣಂ ಪಿತ್ರೋರದತ್ತ್ವಾ ಗುರುದಕ್ಷಿಣಾಮ್ |
ಕೃತಘ್ನತಾಂ ಚ ಸಂಪ್ರಾಪ್ಯ ಮರಣಾಂತಾ ಚ ನಿಷ್ಕೃತಿಃ ॥20॥
ತಂದೆ-ತಾಯಿಗಳ ಪೋಷಣೆಯನ್ನು ಮಾಡದೆ, ಗುರುದಕ್ಷಿಣೆಯನ್ನು ಕೊಡದೆ ಕೃತಘ್ನರಾದವರಿಗೆ ಮರಣವೇ ಪ್ರಾಯಶ್ಚಿತ್ತ ರೂಪವಾದುದು.
ಆಕಾಂಕ್ಷಾಯಾಮುಪೇಕ್ಷಾಯಾಂ ಚೋಪಪಾತಕಮುತ್ತಮಮ್ |
ತಸ್ಮಾತ್ ಪ್ರಾಣಾನ್ ಪರಿತ್ಯಕ್ಷ್ಯೇ ಪ್ರಾಯಶ್ಚಿತ್ತಾರ್ಥಮಿತ್ಯುತ ॥21॥
ಪಾಪಕಾರ್ಯವನ್ನು ಮನಸ್ಸಿನಲ್ಲಿ ಬಯಸಿದರೂ ಅಥವಾ ಗುರು-ಹಿರಿಯರ ಮಾತನ್ನು ಉಪೇಕ್ಷೆ ಮಾಡಿದರೂ ದೊಡ್ಡ ಉಪಪಾಠಕವು ಉಂಟಾಗುತ್ತದೆ (ನಾನು ಈ ಎಮ್ಮೆಯನ್ನು ಶೂಲಕ್ಕೇರಿಸಿ ಆಹಾರವನ್ನಾಗಿ ಮಾಡಿದರೆ ಬಹಳ ಮಾಂಸವು ದೊರೆಕೀತು ಎಂದು ಮನಸ್ಸಿನಲ್ಲಿ ವಿಚಾರ ಮಾಡಿದುದೇ ದೊಡ್ಡ ಅಪರಾಧ. ಅದು ಕೃತಘ್ನತಾ ರೂಪವಾದುದು). ಆದ್ದರಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಸಲುವಾಗಿ ನಾನು ಪ್ರಾಣವನ್ನು ಬಿಡುವೆನು (ಎಂಬ ಬುದ್ಧಿಯು ಉಂಟಾಯಿತು).
ಸ ಮೇರುಶಿಖರಂ ಗತ್ವಾ ನಿಃಸಂಗೇನಾಂತರಾತ್ಮನಾ |
ಪ್ರಾಯಶ್ಚಿತ್ತಂ ಕರ್ತುಕಾಮಃ ಶರೀರಂ ತ್ಯಕ್ತುಮುದ್ಯತಃ |
ನಿಗೃಹೀತಶ್ಚ ಧರ್ಮಾತ್ಮಾ ಹಸ್ತೇ ಧರ್ಮೇಣ ಧರ್ಮವಿತ್ ॥22॥
ಅವನು ಮೇರುಪರ್ವತದ ಶಿಖರಕ್ಕೆ ಹೋಗಿ ಮನಸ್ಸಿನಲ್ಲಿನ ಎಲ್ಲ ಸ್ನೇಹಗಳನ್ನೂ ತೊರೆದು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಸಲುವಾಗಿ ಶರೀರ ತ್ಯಾಗವನ್ನು ಮಾಡಲು ಸಿದ್ಧನಾದನು. ಆ ವೇಳೆಗೆ ಧರ್ಮಾತ್ಮನೂ, ಧರ್ಮವನ್ನು ತಿಳಿದವನೂ ಆದ ಅವನು ಯಮದೇವನಿಂದ ತಡೆಯಲ್ಪಟ್ಟನು.
ಧರ್ಮಃ
ವತ್ಸನಾಭ ಮಹಾಪ್ರಾಜ್ಞ ಬಹುವರ್ಷಶತಾಯುಷ |
ಪರಿತುಷ್ಟೋಽಸ್ಮಿ ತ್ಯಾಗೇನ ನಿಃಸಂಗೇನ ತಥಾಽಽತ್ಮನಃ ॥23॥
ಧರ್ಮ ಮಹಾಪ್ರಾಜ್ಞನೇ, ಅನೇಕ ಶತವರ್ಷಗಳ ಆಯುಸ್ಸುಳ್ಳ ವತ್ಸನಾಭನೇ, ನಿನ್ನ ತ್ಯಾಗದಿಂದಲೂ, ನಿನ್ನ ನಿಸ್ಸಂಗತೆಯಿಂದಲೂ ನಾನು ಸಂತೋಷಗೊಂಡಿದ್ದೇನೆ.

ಏವಂ ಧರ್ಮಭೃತಃ ಸರ್ವೇ ವಿಮೃಶಂತಿ ಕೃತಾಕೃತಮ್ ।
ನ ಕಶ್ಚಿದ್ ವತ್ಸನಾಭಸ್ಯ ಯಸ್ಯ ನೋಪಹತಂ ಮನಃ ॥24॥
ಧರ್ಮಿಷ್ಠರಾದವರು ಹೀಗೆ ತಾವು ಮಾಡಿದ ಅಥವಾ ಮಾಡದಿದ್ದ ಪ್ರತಿಯೊಂದು ಕಾರ್ಯವನ್ನು ವಿಮರ್ಶೆ ಮಾಡುತ್ತಾರೆ. ಯಾವ ವತ್ಸನಾಭನ ಮನಸ್ಸು ಆಸೆಗಳಿಂದ ಅಥವಾ ಸ್ನೇಹದಿಂದ ಪೀಡಿಸಲ್ಪಡಲಿಲ್ಲವೋ ಅಂತಹ ವತ್ಸನಾಭನಾದ ನಿನಗೆ ಯಾರೂ ಸಮರಲ್ಲ.
ಯಶ್ಚಾನವದ್ಯಶ್ಚರತಿ ಶಕ್ತ್ಯೋ ಧರ್ಮಂ ಚ ಸರ್ವಶಃ ।
ನಿವರ್ತಸ್ವ ಮಹಾಪ್ರಾಜ್ಞ ಪೂತಾತ್ಮಾ ಹ್ಯಸಿ ಶಾಶ್ವತಃ ॥25॥
ನೀನು ಯಾವ ದೋಷವೂ ಇಲ್ಲದವನಾಗಿ ನಿನ್ನ ಶಕ್ತಿಯಿದ್ದಷ್ಟು ಎಲ್ಲ ಧರ್ಮಗಳನ್ನೂ ಆಚರಿಸುತ್ತೀಯೆ. ಎಲೈ ಮಹಾಪ್ರಾಜ್ಞನೇ, ಹಿಂದಿರುಗು. ನೀನು ಶಾಶ್ವತನೂ, ಪವಿತ್ರಾತ್ಮನೂ ಆಗಿದ್ದೀಯೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವತ್ಸನಾಭೋಪಾಖ್ಯಾನಂ
ನಾಮ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಭಂಗಾಶ್ವನೋಪಾಖ್ಯಾನ
ಯುಧಿಷ್ಠಿರಃ
ಸ್ತ್ರೀಪುಂಸಯೋಃ ಸಂಪ್ರಯೋಗೇ ಸ್ಪರ್ಶಃ ಕಸ್ಯಾಧಿಕೋ ಭವೇತ್ ।
ಏತನ್ಮೇ ಸಂಶಯಂ ರಾಜನ್ ಯಥಾವದ್ ವಕ್ತುಮರ್ಹಸಿ ॥1॥
ಯುಧಿಷ್ಠಿರ ಸ್ತ್ರೀ-ಪುರುಷರು ಸಂಯೋಗವನ್ನು ಹೊಂದಿದಾಗ ಯಾರಿಗೆ ಸುಖವು ಅಧಿಕವಾಗಿರುತ್ತದೆ? ಎಲೈ ರಾಜನೇ, ಈ ನನ್ನ ಸಂಶಯವನ್ನು ಪರಿಹರಿಸಬೇಕು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಭಂಗಾಶ್ವನೇನ ಶಕ್ರಸ್ಯ ಯಥಾ ವೈರಮಭೂತ್ ಪುರಾ ॥2॥
ಭೀಷ್ಮ ಈ ವಿಷಯದಲ್ಲಿ ಕೂಡ ಭಂಗಾಶ್ವನ ಎಂಬ ರಾಜರ್ಷಿಗೂ ಮತ್ತು ಇಂದ್ರನಿಗೂ ವೈರ ಉಂಟಾದ ಒಂದು ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಪುರಾ ಭಂಗಾಶ್ವನೋ ನಾಮ ರಾಜರ್ಷಿರತಿಧಾರ್ಮಿಕಃ ।
ಅಪುತ್ರಃ ಸ ನರವ್ಯಾಘ್ರ ಪುತ್ರಾರ್ಥಂ ಯಜ್ಞಮಾಹರತ್ ॥3॥
ಎಲೈ ನರವ್ಯಾಘ್ರನೇ, ಹಿಂದೆ ಭಂಗಾಶ್ವನನೆಂಬ ಅತ್ಯಂತ ಧಾರ್ಮಿಕನಾದ ರಾಜರ್ಷಿಯು ಪುತ್ರರಿಲ್ಲದೆ, ಪುತ್ರರನ್ನು ಪಡೆಯುವ ಸಲುವಾಗಿ ಯಜ್ಞವನ್ನು ಆಚರಿಸಿದನು.
ಅಗ್ನಿಷ್ಟುನ್ನಾಮ ರಾಜರ್ಷಿರಿಂದ್ರದ್ವಿಷ್ಟಂ ಮಹಾಬಲಃ ।
ಪ್ರಾಯಶ್ಚಿತ್ತೇಷು ಮರ್ತ್ಯಾನಾಂ ಪುತ್ರಕಾಮಸ್ಯ ಚೇಷ್ಯತೇ ॥4॥
ಮಹಾಬಲನಾದ ರಾಜರ್ಷಿಯು ಇಂದ್ರನ ದ್ವೇಷಕ್ಕೆ ಪಾತ್ರವಾದ (ಇಂದ್ರನಿಗೆ ಇಷ್ಟವಿಲ್ಲದ) ಅಗ್ನಿಷ್ಟೋಮ ಎಂಬ ಯಾಗವನ್ನು ಮಾಡಿದನು. ಈ ಯಾಗವು ಮನುಷ್ಯರಿಗೆ ಪ್ರಾಯಶ್ಚಿತ್ತಾರ್ಥವಾಗಿಯೂ ಮತ್ತು ಪುತ್ರಕಾಮನೆಯುಳ್ಳವರಿಗೂ ಹೇಳಲ್ಪಡುತ್ತದೆ.
ಇಂದ್ರೋ ಜ್ಞಾತ್ವಾ ತು ತಂ ಯಜ್ಞಂ ತಥಾಗಮ್ಯ ಸುರೇಶ್ವರಃ ।
ಅಂತರಂ ತಸ್ಯ ರಾಜರ್ಷೇರನ್ವಿಚ್ಛನ್ ನಿಯತಾತ್ಮನಃ ॥5॥
ಸುರೇಶ್ವರನಾದ ಇಂದ್ರನು ಆ ಯಜ್ಞಾಚರಣೆಯನ್ನು ನೋಡಿ, ಅಲ್ಲಿಗೆ ಬಂದು ವ್ರತಶೀಲನಾದ ಆ ರಾಜರ್ಷಿಯಲ್ಲಿ ಯಾವುದಾದರೂ ಒಂದು ದೋಷವನ್ನು ಹುಡುಕಲು ಪ್ರಾರಂಭಿಸಿದನು.
ಕಸ್ಯಚಿತ್ತ್ವಥ ಕಾಲಸ್ಯ ಮೃಗಯಾಮಟತೋ ನೃಪ ।
ಇದಮಂತರಮಿತ್ಯೇವ ಶಕ್ರೋ ನೃಪಮಮೋಹಯತ್ ॥6॥
ಎಲೈ ರಾಜನೇ, ಎಷ್ಟೋ ಕಾಲವು ಕಳೆದ ಮೇಲೆ ಆ ರಾಜನು ಬೇಟೆಗಾಗಿ ತಿರುಗಾಡುತ್ತಿದ್ದಾಗ, ಇದೇ ಸಮಯವೆಂದು ತಿಳಿದು ಇಂದ್ರನು ಅವನಿಗೆ ಮೋಹವನ್ನುಂಟು ಮಾಡಿದನು.
ಏಕಾಶ್ವೇನ ಚ ರಾಜರ್ಷಿರ್ಭ್ರಾಂತ ಇಂದ್ರೇಣ ಮೋಹಿತಃ ।
ನ ದಿಶೋಽವಿಂದತ ನೃಪಃ ಕ್ಷುತ್ಪಿಪಾಸಾರ್ದಿತಸ್ತದಾ ॥7॥
ಇಂದ್ರನಿಂದ ಮೋಹಕ್ಕೆ ಒಳಗಾದ ಆ ರಾಜರ್ಷಿಯು ಒಂದೇ ಅಶ್ವದ ಜೊತೆಯಲ್ಲಿ ತಿರುಗುತ್ತಾ, ದಿಕ್ಕುಗಳನ್ನು ಕಳೆದುಕೊಂಡು ಹಸಿವೆ-ನೀರಡಿಕೆಗಳಿಂದ ಬಳಲಿದನು.
ಇತಶ್ಚೇತಶ್ಚ ವೈ ಧಾವನ್ ಶ್ರಮತೃಷ್ಣಾರ್ದಿತೋ ನೃಪಃ ।
ಸರೋಽಪಶ್ಯತ್ ಸುರುಚಿರಂ ಪೂರ್ಣಂ ಪರಮವಾರಿಣಾ ।
ಸೋಽವಗಾಹ್ಯ ಸರಸ್ತಾತ ಪಾಯಯಾಮಾಸ ವಾಜಿನಮ್ ॥8॥

ಶ್ರಮದಿಂದಲೂ, ಬಾಯಾರಿಕೆಯಿಂದಲೂ ಬಳಲಿದ ಆ ರಾಜನು ಇಲ್ಲಿಂದಲ್ಲಿಗೆ ಓಡಾಡುತ್ತಾ, ಒಳ್ಳೆಯ ನೀರಿನಿಂದ ತುಂಬಿದ ಮನೋಹರವಾದ ಸರೋವರವನ್ನು ನೋಡಿದನು. ಎಲೈ ಪ್ರೀತಿಪಾತ್ರನೇ, ಅವನು ನೀರಿನಲ್ಲಿ ಇಳಿದು ಕುದುರೆಗೆ ನೀರನ್ನು ಕುಡಿಸಿದನು.
ಅಥ ಪೀತೋದಕಂ ಸೋಽಶ್ವಂ ವೃಕ್ಷೇ ಬದ್ಧ್ವಾ ನೃಪೋತ್ತಮಃ |
ಅವಗಾಹ್ಯ ತತಃ ಸ್ನಾತೋ ರಾಜಾ ಸ್ತ್ರೀತ್ವಮವಾಪ ಹ ॥9॥
ಅಶ್ವವು ನೀರನ್ನು ಕುಡಿದಾದ ಮೇಲೆ ಆ ನೃಪಶ್ರೇಷ್ಠನು ಅದನ್ನು ಒಂದು ಮರಕ್ಕೆ ಕಟ್ಟಿ, ನೀರಿನಲ್ಲಿ ಇಳಿದು ಸ್ನಾನವನ್ನು ಮಾಡಿ ಸ್ತ್ರೀಯಾದನು.
ಆತ್ಮಾನಂ ಸ್ತ್ರೀಕೃತಂ ದೃಷ್ಟ್ವಾ ವ್ರೀಳಿತೋ ನೃಪಸತ್ತಮಃ |
ಚಿಂತಾನುಗತಸರ್ವಾತ್ಮಾ ವ್ಯಾಕುಲೇಂದ್ರಿಯಚೇತನಃ ॥10॥
ತಾನು ಸ್ತ್ರೀಯಾದುದನ್ನು ನೋಡಿ ಆ ರಾಜಶ್ರೇಷ್ಠನು ನಾಚಿಕೆಗೊಂಡು, ಎಲ್ಲ ಇಂದ್ರಿಯಗಳು, ಮನಸ್ಸು ವ್ಯಾಕುಲಗೊಂಡು ಪೂರ್ಣವಾಗಿ ಚಿಂತಾಕ್ರಾಂತನಾದನು.
ಆರೋಹಿಷ್ಯೇ ಕಥಂ ತ್ವಶ್ವಂ ಕಥಂ ಯಾಸ್ಯಾಮಿ ವೈ ಪುರಮ್ |
ಅಗ್ನಿಷ್ಟುನ್ನಾಮ ಇಷ್ಟಂ ಮೇ ಪುತ್ರಾಣಾಂ ಶತಮೌರಸಮ್ ॥11॥
ಜಾತಂ ಮಹಾಬಲಾನಾಂ ವೈ ತಾನ್ ಪ್ರವಕ್ಷ್ಯಾಮಿ ಕಿಂ ನ್ವಹಮ್ |
ದಾರೇಷು ಚಾಸ್ಮದೀಯೇಷು ಪೌರಜಾನಪದೇಷು ಚ ॥12॥
ನಾನು ಹೇಗೆ ಅಶ್ವವನ್ನು ಏರಲಿ? ಹೇಗೆ ರಾಜಧಾನಿಗೆ ಹಿಂದಿರುಗಲಿ? ನಾನು ಅಗ್ನಿಷ್ಟೋಮನಾಮಕವಾದ ಇಷ್ಟಿಯನ್ನು ಮಾಡಿದೆ. ಮಹಾಬಲರಾದ ನೂರು ಔರಸ ಪುತ್ರರು ಜನಿಸಿದರು. ಅವರಿಗೆ ನಾನು ಏನು ಹೇಳಲಿ? ನನ್ನ ಪತ್ನಿಯರಿಗೆ ಮತ್ತು ಪೌರಜನರಿಗೆ ಏನು ಹೇಳಲಿ?
ಮೃದುತ್ವಂ ಚ ತನುತ್ವಂ ಚ ವಿಕ್ಲವತ್ವಂ ತಥೈವ ಚ |
ಸ್ತ್ರೀಗುಣಾ ಋಷಿಭಿಃ ಪ್ರೋಕ್ತಾ ಧರ್ಮತತ್ತ್ವಾರ್ಥದರ್ಶಿಭಿಃ |
ವ್ಯಾಯಾಮಃ ಕರ್ಕಶತ್ವಂ ಚ ವೀರ್ಯಂ ಚ ಪುರುಷೇ ಗುಣಾಃ ॥13॥
ಮೃದುತ್ವ, ಕೃಶತ್ವ ಮತ್ತು ಚಂಚಲತೆ - ಇವುಗಳು ಸ್ತ್ರೀಗುಣಗಳೆಂದು ಧರ್ಮ ತತ್ತ್ವಾರ್ಥಗಳನ್ನು ತಿಳಿದ ಋಷಿಗಳು ಹೇಳುತ್ತಾರೆ. ಕಷ್ಟದ ಕೆಲಸ, ಕರ್ಕಶತೆ ಮತ್ತು ಪರಾಕ್ರಮಗಳು ಪುರುಷ ಗುಣಗಳು.
ಪೌರುಷಂ ವಿಪ್ರನಷ್ಟಂ ಮೇ ಸ್ತ್ರೀತ್ವಂ ಕೇನಾಪಿ ಮೇಽಭವತ್ |
ಸ್ತ್ರೀಭಾವಾತ್ ಕಥಮಶ್ವಂ ತಂ ಪುನರಾರೋಢುಮುತ್ಸಹೇ ॥14॥
ನನ್ನ ಪೌರುಷವು ನಷ್ಟವಾಯಿತು. ಯಾವುದೋ ಕಾರಣದಿಂದ ಸ್ತ್ರೀಭಾವವು ಉಂಟಾಯಿತು. ಸ್ತ್ರೀಯಾದ ಕಾರಣದಿಂದ ಪುನಃ ಹೇಗೆ ಅಶ್ವವನ್ನು ಏರಲಿ? (ಎಂದು ಚಿಂತಿಸಿದನು).
ಮಹತಾ ತ್ವಥ ಖೇದೇನ ಆರುಹ್ಯಾಶ್ವಂ ನರಾಧಿಪಃ |
ಪುನರಾಯಾತ್ಪುರಂ ತಾತ ಸ್ತ್ರೀಭೂತೋ ನೃಪಸತ್ತಮ ॥15॥
ಎಲೈ ನೃಪಶ್ರೇಷ್ಠನೇ, ಆ ರಾಜನು ಬಹಳ ದುಃಖದಿಂದ ಅಶ್ವವನ್ನು ಏರಿ ಪುನಃ ತನ್ನ ಪಟ್ಟಣಕ್ಕೆ ಸ್ತ್ರೀಯಾಗಿ ಹಿಂದಿರುಗಿದನು.
ಪುತ್ರಾ ದಾರಾಶ್ಚ ಭೃತ್ಯಾಶ್ಚ ಪೌರಜಾನಪದಾಶ್ಚ ತೇ |
ಕಿಂ ನ್ವಿದಂ ತ್ವಿತಿ ವಿಜ್ಞಾಯ ವಿಸ್ಮಯಂ ಪರಮಂ ಗತಾಃ ॥16॥
ಪುತ್ರರೂ, ಪತ್ನಿಯರೂ, ಭೃತ್ಯರೂ ಮತ್ತು ಪೌರಜನಪದರೆಲ್ಲರೂ ಇದೇನು ವಿಚಿತ್ರ ಎಂದು ತಿಳಿದು ಪರಮ ವಿಸ್ಮಿತರಾದರು.
ಅಥೋವಾಚ ಸ ರಾಜರ್ಷಿಃ ಸ್ತ್ರೀಭೂತೋ ವದತಾಂ ವರಃ |
ಮೃಗಯಾಮಸ್ಮಿ ನಿಯತೋ ಬಲೈಃ ಪರಿವೃತೋ ದೃಢಮ್ |
ಉದ್ಭ್ರಾಂತಃ ಪ್ರಾವಿಶಂ ಘೋರಾಮಟವೀಂ ದೈವಮೋಹಿತಃ ॥17॥
ಆಗ ಸ್ತ್ರೀಯಾಗಿದ್ದ, ಮಾತನಾಡುವವರಲ್ಲಿ ಶ್ರೇಷ್ಠನಾದ ಆ ರಾಜರ್ಷಿಯು ಅವರನ್ನು ಕುರಿತು ಮಾತನಾಡಿದನು: ನಾನು ಸೈನ್ಯದಿಂದ ಚೆನ್ನಾಗಿ ಪರಿವೃತನಾಗಿ ಬೇಟೆಯಾಡುವುದರಲ್ಲಿ ನಿರತನಾಗಿದ್ದೆ. ದೈವಮೋಹಿತನಾಗಿ, ಭ್ರಾಂತಿಗೆ ಒಳಗಾಗಿ ಒಂದು ಘೋರವಾದ ಅರಣ್ಯವನ್ನು ಪ್ರವೇಶಿಸಿದೆ.
ಅಟವ್ಯಾಂ ಚ ಸುಘೋರಾಯಾಂ ತೃಷ್ಣಾರ್ತೋ ನಷ್ಟಚೇತನಃ |
ಸರಃ ಸುರುಚಿರಪ್ರಖ್ಯಮಪಶ್ಯಂ ಪಕ್ಷಿಭಿರ್ವೃತಮ್ ॥18॥
ತತ್ರಾವಗಾಢಃ ಸ್ತ್ರೀಭೂತೋ ವ್ಯಕ್ತಂ ದೈವಾನ್ನ ಸಂಶಯಃ |
ಅತೃಪ್ತ ಇವ ಪುತ್ರಾಣಾಂ ದಾರಾಣಾಂ ಚ ಧನಸ್ಯ ಚ ॥19॥
ನಷ್ಟಚೇತನನಾದ ನಾನು ಬಾಯಾರಿಕೆಯಿಂದ ಬಳಲಿ, ಘೋರವಾದ ಆ ಅರಣ್ಯದಲ್ಲಿ ಪಕ್ಷಿಗಳಿಂದ ಸಮಾವೃತವಾಗಿದ್ದ ಅತ್ಯಂತ ಮನೋಹರವಾದ ಒಂದು ಸರೋವರವನ್ನು ನೋಡಿದೆನು. ಅಲ್ಲಿ ಸ್ನಾನ ಮಾಡಿ ದೈವೇಚ್ಛೆಯಂತೆ ನಾನು ಸ್ತ್ರೀಯಾದೆನು. ಇದು ಸ್ಪಷ್ಟವಾಗಿ ದೈವೇಚ್ಛೆ. ಇದರಲ್ಲಿ ಸಂಶಯವಿಲ್ಲ. ನಾನು ನನ್ನ ಪುತ್ರರಲ್ಲಿಯೂ, ಪತ್ನಿಯರಲ್ಲಿಯೂ ಮತ್ತು ಧನದಲ್ಲಿಯೂ ಇನ್ನೂ ತೃಪ್ತಿಯನ್ನು ಹೊಂದಿಲ್ಲ (ಎಂದು ಹೇಳಿದನು).
ಉವಾಚ ಪುತ್ರಾಂಶ್ಚ ತತಃ ಸ್ತ್ರೀಭೂತಃ ಪಾರ್ಥಿವೋತ್ತಮಃ |
ಸಂಪ್ರೀತ್ಯಾ ಭುಜ್ಯತಾಂ ರಾಜ್ಯಂ ವನಂ ಯಾಸ್ಯಾಮಿ ಪುತ್ರಕಾಃ |
ಸ ಪುತ್ರಾಣಾಂ ಶತಂ ರಾಜಾ ಅಭಿಷಿಚ್ಯ ವನಂ ಗತಃ ॥20॥

ಸ್ತ್ರೀಯಾದ ಆ ರಾಜಶ್ರೇಷ್ಠನು ಅನಂತರ ಪುತ್ರರನ್ನು ಕುರಿತು `ಮಕ್ಕಳೇ, ಸೌಹಾರ್ದದಿಂದ ರಾಜ್ಯವನ್ನು ಭೋಗಿಸಿ. ನಾನು ಕಾಡಿಗೆ ಹೋಗುವೆನು' ಎಂದು ಹೇಳಿದನು. ಆ ರಾಜನು ನೂರು ಪುತ್ರರಿಗೆ ಪಟ್ಟಾಭಿಷೇಕ ಮಾಡಿ ಕಾಡಿಗೆ ಹೋದನು.

ತಾಮಾಶ್ರಮೇ ಸ್ತ್ರಿಯಂ ತಾತ ತಾಪಸೋऽಭ್ಯವಪದ್ಯತ |
ತಾಪಸೇನಾಸ್ಯ ಪುತ್ರಾಣಾಮಾಶ್ರಮೇಪ್ಯಭವಚ್ಛತಮ್ ॥21॥

ಎಲೈ ಪ್ರೀತಿಪಾತ್ರನೇ, ಕಾಡಿನಲ್ಲಿ ಒಬ್ಬ ತಾಪಸನು ಅವಳಲ್ಲಿ ಅನುರಕ್ತನಾದನು. ಆ ತಾಪಸನಿಂದ ಆಶ್ರಮದಲ್ಲಿ ಅವಳಿಗೆ ಅರಣ್ಯದಲ್ಲಿಯೂ ನೂರು ಪುತ್ರರು ಜನಿಸಿದರು.

ಅಥ ಸಾ ತಾನ್ ಸುತಾನ್ ಗೃಹ್ಯ ಪೂರ್ವಪುತ್ರಾನಭಾಷತ |
ಪುರುಷತ್ವೇ ಸುತಾ ಯೂಯಂ ಸ್ತ್ರೀತ್ವೇ ಚೇಮೇ ಶತಂ ಸುತಾಃ ॥22॥
ಏಕತ್ರ ಭುಜ್ಯತಾಂ ರಾಜ್ಯಂ ಭ್ರಾತೃಭಾವೇನ ಪುತ್ರಕಾಃ |
ಸಹಿತಾ ಭ್ರಾತರಸ್ತೇऽಥ ರಾಜ್ಯಂ ಬುಭುಜಿರೇ ತದಾ ॥23॥

ಅನಂತರ ಅವನು ಆ ಮಕ್ಕಳನ್ನು ಕರೆದುಕೊಂಡು ಬಂದು ಮೊದಲಿನ ನೂರು ಮಕ್ಕಳನ್ನು ಕುರಿತು `ನೀವೆಲ್ಲವೂ ನಾನು ಪುರುಷನಾಗಿದ್ದಾಗ ಜನಿಸಿದ ಮಕ್ಕಳು. ಇವರು ನನ್ನ ಸ್ತ್ರೀಭಾವದಲ್ಲಿ ಜನಿಸಿದ ಪುತ್ರರು. ಎಲೈ ಪುತ್ರರೇ, ನೀವೆಲ್ಲರೂ ಒಳ್ಳೆಯ ಭ್ರಾತೃಭಾವದಿಂದ ಕೂಡಿದವರಾಗಿ ರಾಜ್ಯವನ್ನು ಭೋಗಿಸಿ' ಎಂದು ಹೇಳಿದನು. ಅನಂತರ ಆ ಸಹೋದರರೆಲ್ಲರೂ ಒಟ್ಟಿಗೆ ರಾಜ್ಯವನ್ನು ಭೋಗಿಸಿದರು.

ತಾನ್ ದೃಷ್ಟ್ವಾ ಭ್ರಾತೃಭಾವೇನ ಭುಂಜಾನಾನ್ ರಾಜ್ಯಮುತ್ತಮಮ್ |
ಚಿಂತಯಾಮಾಸ ದೇವೇಂದ್ರೋ ಮನ್ಯುನಾऽಭಿಪರಿಪ್ಲುತಃ |
ಉಪಕಾರೋऽಸ್ಯ ರಾಜರ್ಷೇಃ ಕೃತೋ ನಾಪಕೃತಂ ಮಯಾ ॥24॥

ಸೌಹಾರ್ದದಿಂದ ಶ್ರೇಷ್ಠವಾದ ರಾಜ್ಯವನ್ನು ಭೋಗಿಸುವ ಅವರನ್ನು ನೋಡಿ ದೇವೇಂದ್ರನು ಸಿಟ್ಟಿನಿಂದ ಕೂಡಿದವನಾಗಿ, ನಾನು ರಾಜರ್ಷಿಗೆ ಮಾಡಿದ ಅಪಕಾರವು ಅಪಕಾರವೇ ಆಗಲಿಲ್ಲ, ಉಪಕಾರವೇ ಆಯಿತು ಎಂದು ಚಿಂತಿಸಿದನು.

ತತೋ ಬ್ರಾಹ್ಮಣವೇಷೇಣ ದೇವರಾಜಃ ಶತಕ್ರತುಃ |
ಭೇದಯಾಮಾಸ ತಾನ್ ಗತ್ವಾ ನಗರಂ ವೈ ನೃಪಾತ್ಮಜಾನ್ ॥25॥

ಅನಂತರ ದೇವರಾಜನಾದ ಇಂದ್ರನು ಬ್ರಾಹ್ಮಣವೇಷದಿಂದ ನಗರಕ್ಕೆ ಹೋಗಿ ಆ ರಾಜಪುತ್ರರನ್ನು ಭೇದಿಸಿದನು (ಒಡಕು ಹುಟ್ಟಿಸಿದನು).

ಭ್ರಾತೄಣಾಂ ನಾಸ್ತಿ ಸೌಭ್ರಾತ್ರಂ ಯೇऽಪ್ಯೇಕಸ್ಯ ಪಿತುಃ ಸುತಾಃ |
ಕಾಶ್ಯಪಸ್ಯ ಸುರಾಶ್ಚೈವ ಅಸುರಾಶ್ಚ ಸುತಾಸ್ತಥಾ |
ರಾಜ್ಯಹೇತೋರ್ವಿವದಿತಾಃ ಕಾಶ್ಯಪಸ್ಯ ಸುರಾಸುರಾಃ ॥26॥

ಒಬ್ಬನೇ ತಂದೆಯ ಮಕ್ಕಳಾದರೂ ಅವರಿಗೆ ಸೌಹಾರ್ದವಿರುವುದಿಲ್ಲ. ದೇವತೆಗಳು ಮತ್ತು ಅಸುರರು ಒಬ್ಬರೇ ಕಾಶ್ಯಪರ ಪುತ್ರರು. ಆದರೂ ದೇವಾಸುರರು ರಾಜ್ಯದ ಸಲುವಾಗಿ ಹೊಡೆದಾಡಿದರು.

ಯೂಯಂ ಭಂಗಾಶ್ವನಾಪತ್ಯಾಸ್ತಾಪಸಸ್ಯೇತರೇ ಸುತಾಃ |
ಯುಷ್ಮಾಕಂ ಪೈತೃಕಂ ರಾಜ್ಯಂ ಭುಜ್ಯತೇ ತಾಪಸಾತ್ಮಜೈಃ ॥27॥

ನೀವು ಭಂಗಾಶ್ವನನ ಪುತ್ರರು, ಉಳಿದವರು ಒಬ್ಬ ತಾಪಸನ ಪುತ್ರರು. ನಿಮಗೆ ಪಿತೃವಿನಿಂದ ಬಂದ ರಾಜ್ಯವು ತಾಪಸನ ಮಕ್ಕಳಿಂದ ಭೋಗಿಸಲ್ಪಡುತ್ತಿದೆ (ಎಂದು ಭೇದಿಸಿದನು) (ಒಡಕು ಹುಟ್ಟಿಸಿದನು).

ಇಂದ್ರೇಣ ಭೇದಿತಾಸ್ತೇ ತು ಯುದ್ಧೇऽನ್ಯೋನ್ಯಮಪಾತಯನ್ |
ತಚ್ಛ್ರುತ್ವಾ ತಾಪಸೀ ಚಾಪಿ ಸಂತಪ್ತಾ ಪ್ರರುರೋದ ಹ ॥28॥

ಇಂದ್ರನಿಂದ ಹೀಗೆ ಭೇದಿಸಲ್ಪಟ್ಟ ಅವರು ಯುದ್ಧವನ್ನು ಮಾಡಿ, ಪರಸ್ಪರವಾಗಿ ನಾಶ ಮಾಡಿಕೊಂಡರು. ಅದನ್ನು ಕೇಳಿ ತಾಪಸಿಯು ಸಂತಾಪದಿಂದ ಬಹಳ ಅತ್ತಳು.

ಬ್ರಾಹ್ಮಣಚ್ಛದ್ಮನಾಭ್ಯೇತ್ಯ ತಾಮಿಂದ್ರೋऽಥಾನ್ವಪೃಚ್ಛತ |
ಕೇನ ದುಃಖೇನ ಸಂತಪ್ತಾ ರೋದಿಷಿ ತ್ವಂ ವರಾನನೇ ॥29॥

ಆಗ ಇಂದ್ರನು ಬ್ರಾಹ್ಮಣ ವೇಷದಿಂದ ಅವಳ ಬಳಿಗೆ ಬಂದು, ಎಲೌ ಸುಂದರಿಯೇ, ಯಾವ ದುಃಖದಿಂದ ಪೀಡಿಸಲ್ಪಟ್ಟು ಹೀಗೆ ಅಳುತ್ತಿದ್ದೀಯೆ ಎಂದು ಕೇಳಿದನು.

ಬ್ರಾಹ್ಮಣಂ ತು ತತೋ ದೃಷ್ಟ್ವಾ ಸಾ ಸ್ತ್ರೀ ಕರುಣಮಬ್ರವೀತ್ |
ಪುತ್ರಾಣಾಂ ದ್ವೇ ಶತೇ ಬ್ರಹ್ಮನ್ ಕಾಲೇನ ವಿನಿಪಾತಿತೇ ॥30॥

ಆಗ ಬ್ರಾಹ್ಮಣನನ್ನು ನೋಡಿ ಆ ಸ್ತ್ರೀಯು ಕರುಣಾಜನಕವಾಗಿ ಮಾತನಾಡಿದಳು: ಎಲೈ ಬ್ರಾಹ್ಮಣನೇ, ನನ್ನ ಇನ್ನೂರು ಪುತ್ರರು ಕಾಲದಿಂದ ನಾಶವನ್ನು ಹೊಂದಿದ್ದಾರೆ.

ಅಹಂ ರಾಜಾऽಭವಂ ಪೂರ್ವಂ ತತ್ರ ಪುತ್ರಶತಂ ಮಯಾ |
ಸಮುತ್ಪನ್ನಂ ಸುರೂಪಾಣಾಂ ವಿಕ್ರಾಂತಾನಾಂ ದ್ವಿಜೋತ್ತಮ ॥31॥

ಎಲೈ ದ್ವಿಜಶ್ರೇಷ್ಠನೇ, ನಾನು ಹಿಂದೆ ರಾಜನಾಗಿದ್ದೆನು. ಆಗ ನನಗೆ ಒಳ್ಳೆಯ ರೂಪವನ್ನು ಹೊಂದಿದ ಪರಾಕ್ರಮಶಾಲಿಗಳಾದ ನೂರು ಪುತ್ರರು ಜನಿಸಿದರು.

ಕದಾಚಿನ್ಮೃಗಯಾಂ ಯಾತ ಉದ್ಭ್ರಾಂತೋ ಗಹನೇ ವನೇ |
ಅವಗಾಢಶ್ಚ ಸರಸಿ ಸ್ತ್ರೀಭೂತೋ ಬ್ರಾಹ್ಮಣೋತ್ತಮ |

ಪುತ್ರಾನ್ ರಾಜ್ಯೇ ಪ್ರತಿಷ್ಠಾಪ್ಯ ವನಮಸ್ಮಿ ತತೋ ಗತಃ ॥32॥
ಒಮ್ಮೆ ಕಾಡಿಗೆ ಬೇಟೆಗಾಗಿ ಹೋಗಿ, ಭ್ರಾಂತಿಗೆ ಸಿಲುಕಿ, ಒಂದು ಸರೋವರದಲ್ಲಿ ಅವಗಾಹನವನ್ನು ಮಾಡಿ ಸ್ತ್ರೀಯಾದೆ. ಎಲೈ ಬ್ರಾಹ್ಮಣಶ್ರೇಷ್ಠನೇ, ಅನಂತರ ನಾನು ಪುತ್ರರನ್ನು ರಾಜ್ಯದಲ್ಲಿ ಪ್ರತಿಷ್ಠಾಪಿಸಿ ಅರಣ್ಯಕ್ಕೆ ಹೋದೆನು.
ಸ್ತ್ರಿಯಾಶ್ಚ ಮೇ ಪುತ್ರಶತಂ ತಾಪಸೇನ ಮಹಾತ್ಮನಾ |
ಆಶ್ರಮೇ ಜನಿತಂ ಬ್ರಹ್ಮನ್ನೀತಾಸ್ತೇ ನಗರಂ ಮಯಾ ॥33॥
ಎಲೈ ಬ್ರಾಹ್ಮಣನೇ, ಅಲ್ಲಿಯೂ ಸಹ ಮಹಾತ್ಮನಾದ ಒಬ್ಬ ತಪಸ್ವಿಯು ಸ್ತ್ರೀಯಾದ ನನ್ನಲ್ಲಿ ನೂರು ಪುತ್ರರನ್ನು ಪಡೆದನು. ನಾನು ಅವರನ್ನು ನಗರಕ್ಕೆ ಕರೆದುಕೊಂಡು ಹೋದೆನು.
ತೇಷಾಂ ಚ ವೈರಮುತ್ಪನ್ನಂ ಕಾಲಯೋಗೇನ ವೈ ದ್ವಿಜ |
ಏತಚ್ಛೋಚಾಮಿ ವಿಪ್ರೇಂದ್ರ ದೈವೇನಾಭಿಪರಿಪ್ಲುತಾ ॥34॥
ಎಲೈ ಬ್ರಾಹ್ಮಣನೇ, ಕಾಲಯೋಗದಿಂದ ಅವರಿಗೆ ಪರಸ್ಪರ ವೈರ ಉಂಟಾಯಿತು. ಎಲೈ ವಿಪ್ರೇಂದ್ರನೇ, ಹೀಗೆ ದೈವದಿಂದ ಉಪದ್ರವಕ್ಕೆ ಒಳಗಾಗಿ ನಾನು ಶೋಕಪಡುತ್ತಿದ್ದೇನೆ (ಎಂದು ಹೇಳಿದಳು).
ಇಂದ್ರಸ್ತಾಂ ದುಃಖಿತಾಂ ದೃಷ್ಟ್ವಾ ಅಬ್ರವೀತ್ ಪರುಷಂ ವಚಃ |
ಪುರಾ ಸುದುಃಸಹಂ ಭದ್ರೇ ಮಮ ದುಃಖಂ ತ್ವಯಾ ಕೃತಮ್ ॥35॥
ಇಂದ್ರದ್ವಿಷ್ಟೇನ ಯಜತಾ ಮಾಮನಾದೃತ್ಯ ದುರ್ಮತೇ |
ಇಂದ್ರೋಽಹಮಸ್ಮಿ ದುರ್ಬುದ್ಧೇ ವೈರಂ ತೇ ಯಾತಿತಂ ಮಯಾ ॥36॥
ಭೀಷ್ಮ ದುಃಖಿತಳಾದ ಅವಳನ್ನು ನೋಡಿ ಇಂದ್ರನು `ಎಲೌ ದುರ್ಮತಿಯೇ, ನೀನು ಹಿಂದೆ ನನ್ನನ್ನು ತಿರಸ್ಕರಿಸಿ, ನನ್ನ ದ್ವೇಷಕ್ಕೆ ವಿಷಯವಾದ ಯಾಗವನ್ನು ಮಾಡಿ, ನನಗೆ ಸಹಿಸಲಾರದಷ್ಟು ದುಃಖವನ್ನುಂಟು ಮಾಡಿದೆ. ಎಲೌ ದುರ್ಬುದ್ಧಿಯೇ, ನಾನು ಇಂದ್ರ. ಆ ವೈರವನ್ನು ನಾನು ತೀರಿಸಿಕೊಂಡಿದ್ದೇನೆ' ಎಂದು ಒರಟಾಗಿಯೇ ಹೇಳಿದನು.
ಇಂದ್ರಂ ತು ದೃಷ್ಟ್ವಾ ರಾಜರ್ಷಿಃ ಪಾದಯೋಃ ಶಿರಸಾ ಗತಃ |
ಪ್ರಸೀದ ತ್ರಿದಶಶ್ರೇಷ್ಠ ಪುತ್ರಕಾಮೇನ ಸ ಕ್ರತುಃ |
ಇಷ್ಟಸ್ತ್ರಿದಶಶಾರ್ದೂಲ ತತ್ರ ಮೇ ಕ್ಷಂತುಮರ್ಹಸಿ ॥37॥
ಇಂದ್ರನನ್ನು ನೋಡಿದ ಆ ರಾಜರ್ಷಿಯು ಅವನ ಪಾದಗಳಿಗೆ ಶಿರಸಾ ನಮಸ್ಕರಿಸಿ, `ಎಲೈ ದೇವಶ್ರೇಷ್ಠನೇ, ಪ್ರಸನ್ನನಾಗು. ಮಕ್ಕಳನ್ನು ಪಡೆಯುವ ಉದ್ದೇಶದಿಂದ ನಾನು ಯಾಗವನ್ನು ಮಾಡಿದೆ. ಎಲೈ ತ್ರಿದಶೇಶ್ವರನೇ, ನನ್ನ ಅಪರಾಧವನ್ನು ನೀನು ಕ್ಷಮಿಸಬೇಕು' ಎಂದು ಹೇಳಿದಳು.
ಪ್ರಣಿಪಾತೇನ ತಸ್ಯೇಂದ್ರಃ ಪರಿತುಷ್ಟೋ ವರಂ ದದೌ |
ಪುತ್ರಾ ವೈ ಕತಮೇ ರಾಜನ್ ಜೀವಂತು ತವ ಶಂಸ ಮೇ |
ಸ್ತ್ರೀಭೂತಸ್ಯ ಹಿ ಯೇ ಜಾತಾಃ ಪುರುಷಸ್ಯಾಥ ಯೇಽಭವನ್ ॥38॥
ಇಂದ್ರನು ಅವಳ ಪ್ರಣಾಮದಿಂದ ಸಂತುಷ್ಟನಾಗಿ ವರವನ್ನು ನೀಡಿದನು: ಎಲೈ ರಾಜನೇ, ನೀನು ಸ್ತ್ರೀಯಾಗಿದ್ದಾಗ ಜನಿಸಿದ್ದ ಪುತ್ರರು ಜೀವಿಸಬೇಕೋ ಅಥವಾ ಪುರುಷನಾಗಿದ್ದಾಗ ಜನಿಸಿದ ಪುತ್ರರು ಜೀವಿಸಬೇಕೋ ಎಂದು ನನಗೆ ಹೇಳು ಎಂದು ಹೇಳಿದನು.
ತಾಪಸೀ ತು ತತಃ ಶಕ್ರಮುವಾಚ ಪ್ರಯತಾಂಜಲಿಃ |
ಸ್ತ್ರೀಭೂತಸ್ಯ ಹಿ ಯೇ ಜಾತಾಸ್ತೇ ಮೇ ಜೀವಂತು ವಾಸವ ॥39॥
ತಾಪಸಿಯು ಕೈಗಳನ್ನು ಮುಗಿದು, ಇಂದ್ರನನ್ನು ಕುರಿತು- `ಎಲೈ ಇಂದ್ರನೇ, ನಾನು ಸ್ತ್ರೀಯಾಗಿದ್ದಾಗ ಜನಿಸಿದ ಪುತ್ರರು ಜೀವಿಸಲಿ' ಎಂದು ಹೇಳಿದಳು.
ಇಂದ್ರಸ್ತು ವಿಸ್ಮಿತೋ ದೃಷ್ಟ್ವಾ ಸ್ತ್ರಿಯಂ ಪಪ್ರಚ್ಛ ತಾಂ ಪುನಃ |
ಪುರುಷೋತ್ಪಾದಿತಾ ಯೇ ತೇ ಕಥಂ ದ್ವೇಷ್ಯಾಃ ಸುತಾಸ್ತವ ॥40॥
ಇಂದ್ರನಾದರೂ ಅದನ್ನು ನೋಡಿ ಪುನಃ ವಿಸ್ಮಿತನಾಗಿ ಆ ಸ್ತ್ರೀಯನ್ನು ಕುರಿತು- `ನೀನು ಪುರುಷನಾಗಿದ್ದಾಗ ಜನಿಸಿದ್ದ ಪುತ್ರರು ಏಕೆ ನಿನ್ನ ದ್ವೇಷಪಾತ್ರರು?' ಎಂದು ಪುನಃ ಅವಳನ್ನು ಕೇಳಿದನು.
ಸ್ತ್ರೀಭೂತಸ್ಯ ಹಿ ಯೇ ಜಾತಾಃ ಸ್ನೇಹಸ್ತೇಭ್ಯೋಽಧಿಕಃ ಕಥಮ್ |
ಕಾರಣಂ ಶ್ರೋತುಮಿಚ್ಛಾಮಿ ತನ್ಮೇ ವಕ್ತುಮಿಹಾರ್ಹಸಿ ॥41॥
`ನೀನು ಸ್ತ್ರೀಯಾಗಿದ್ದಾಗ ಜನಿಸಿದ ಮಕ್ಕಳಲ್ಲಿ ನಿನಗೆ ಅಧಿಕ ಸ್ನೇಹವಿರುವುದಕ್ಕೆ ನಾನು ಕಾರಣವನ್ನು ತಿಳಿಯಲು ಇಚ್ಛಿಸುತ್ತೇನೆ. ಅದನ್ನು ನೀನು ನನಗೆ ಹೇಳಬೇಕು' ಎಂದು ಹೇಳಿದನು.
ಸ್ತ್ರೀ
ಸ್ತ್ರಿಯಾಸ್ತ್ವಭ್ಯಧಿಕಃ ಸ್ನೇಹೋ ನ ತಥಾ ಪುರುಷಸ್ಯ ವೈ |
ತಸ್ಮಾತ್ ತೇ ಶಕ್ರ ಜೀವಂತು ಯೇ ಜಾತಾಃ ಸ್ತ್ರೀಕೃತಸ್ಯ ವೈ ॥42॥
ಸ್ತ್ರೀ ಸ್ತ್ರೀಗೆ ಪುತ್ರರಲ್ಲಿ ಅಧಿಕವಾದ ಸ್ನೇಹವಿರುತ್ತದೆ, ಪುರುಷನಿಗೆ ಇರುವುದಿಲ್ಲ. ಎಲೈ ಇಂದ್ರನೇ, ಆ ಕಾರಣದಿಂದ ನಾನು ಸ್ತ್ರೀಯಾಗಿದ್ದಾಗ ಜನಿಸಿದ ಮಕ್ಕಳು ಜೀವಿಸಲಿ.
ಭೀಷ್ಮಃ
ಏವಮುಕ್ತೇ ತತಸ್ತ್ವಿಂದ್ರಃ ಪ್ರೀತೋ ವಾಕ್ಯಮುವಾಚ ಹ |
ಸರ್ವ ಏವೇಹ ಜೀವಂತು ಪುತ್ರಾಸ್ತೇ ಸತ್ಯವಾದಿನಿ ॥43॥
ವರಂ ಚ ವೃಣು ರಾಜೇಂದ್ರ ಯಂ ತ್ವಮಿಚ್ಛಸಿ ಸುವ್ರತ |

ಪುರುಷತ್ವಮಥ ಸ್ತ್ರೀತ್ವಂ ಮತ್ತೋ ಯದಭಿಕಾಂಕ್ಷ್ಯಸೇ ॥44॥
ಭೀಷ್ಮ ಆ ಸ್ತ್ರೀಯು ಹೀಗೆ ಹೇಳುತ್ತಿರಲು ಇಂದ್ರನು ಸಂತೋಷಗೊಂಡು ಅವಳನ್ನು ಕುರಿತು- `ಎಲೌ ಸತ್ಯವಾದಿನಿಯೇ, ನಿನ್ನ ಎಲ್ಲ ಮಕ್ಕಳೂ ಬದುಕಲಿ. ಎಲೈ ರಾಜೇಂದ್ರನೇ, ಸುವ್ರತನೇ, ನೀನು ಬಯಸಿದ ವರವನ್ನು ಕೇಳು. ನೀನು ನನ್ನಿಂದ ಪುರುಷತ್ವವನ್ನು ಬಯಸುತ್ತೀಯೋ ಅಥವಾ ಸ್ತ್ರೀತ್ವವನ್ನು ಬಯಸುತ್ತೀಯೋ? ಎಂದು ಹೇಳು'.
ಸ್ತ್ರೀ
ಸ್ತ್ರೀತ್ವಮೇವ ವೃಣೇ ಶಕ್ರ ಪ್ರಸನ್ನೇ ತ್ವಯಿ ವಾಸವ।
ಏವಮುಕ್ತಸ್ತು ದೇವೇಂದ್ರಸ್ತಾಂ ಸ್ತ್ರಿಯಂ ಪ್ರತ್ಯುವಾಚ ಹ।
ಪುರುಷತ್ವಂ ಕಥಂ ತ್ಯಕ್ತ್ವಾ ಸ್ತ್ರೀತ್ವಂ ರೋಚಯಸೇ ವಿಭೋ ॥46॥
`ಎಲೈ ಇಂದ್ರನೇ, ವಾಸವನೇ, ನೀನು ಪ್ರಸನ್ನನಾದರೆ ಸ್ತ್ರೀತ್ವವನ್ನೇ ನಾನು ಬೇಡುತ್ತೇನೆ'. ಹೀಗೆ ಹೇಳಲ್ಪಟ್ಟ ದೇವೇಂದ್ರನು ಆ ಸ್ತ್ರೀಯನ್ನು ಕುರಿತು ಪುನಃ `ಎಲೈ ವಿಭುವೇ, ಪುರುಷತ್ವವನ್ನು ಬಿಟ್ಟು ನೀನು ಸ್ತ್ರೀತ್ವವನ್ನು ಏಕೆ ಬಯಸುತ್ತೀಯೆ?' ಎಂದು ಕೇಳಿದನು.
ಏವಮುಕ್ತಃ ಪ್ರತ್ಯುವಾಚ ಸ್ತ್ರೀಭೂತೋ ರಾಜಸತ್ತಮಃ।
ಸ್ತ್ರಿಯಾಃ ಪುರುಷಸಂಯೋಗೇ ಪ್ರೀತಿರಭ್ಯಧಿಕಾ ಸದಾ।
ಏತಸ್ಮಾತ್ ಕಾರಣಾಚ್ಛಕ್ರ ಸ್ತ್ರೀತ್ವಮೇವ ವೃಣೋಮ್ಯಹಮ್ ॥47॥
ಹೀಗೆ ಕೇಳಲ್ಪಟ್ಟ ಸ್ತ್ರೀಯಾಗಿದ್ದ ಆ ರಾಜಶ್ರೇಷ್ಠನು `ಸ್ತ್ರೀ-ಪುರುಷ ಸಂಯೋಗ ಉಂಟಾದಾಗ ಸ್ತ್ರೀಗೆ ಹೆಚ್ಚಿನ ಸುಖವುಂಟಾಗುತ್ತದೆ. ಎಲೈ ಇಂದ್ರನೇ, ಈ ಕಾರಣದಿಂದ ನಾನು ಸ್ತ್ರೀತ್ವವನ್ನೇ ಬೇಡುತ್ತೇನೆ' ಎಂದು ಹೇಳಿದನು.
ರಮೇ ಚೈವಾಧಿಕಂ ಸ್ತ್ರೀತ್ವೇ ಸತ್ಯಂ ವೈ ದೇವಸತ್ತಮ।
ಸ್ತ್ರೀಭಾವೇನ ಹಿ ತುಷ್ಯಾಮಿ ಗಮ್ಯತಾಂ ತ್ರಿದಶಾಧಿಪ ॥48॥
`ಎಲೈ ದೇವಶ್ರೇಷ್ಠನೇ, ನಾನು ನನ್ನ ಸ್ತ್ರೀತ್ವದಲ್ಲಿಯೇ ಸತ್ಯವಾಗಿ ಹೆಚ್ಚು ಸುಖ ಪಡುತ್ತೇನೆ. ಸ್ತ್ರೀಭಾವದಿಂದ ಸಂತೋಷಪಡುತ್ತೇನೆ. ಎಲೈ ಸ್ವರ್ಗಾಧಿಪನೇ, ನೀನು ಹೋಗಬಹುದು' (ಎಂದು ಹೇಳಿದಳು).
ಏವಮಸ್ತ್ವಿತಿ ಚೋಕ್ತ್ವಾ ತಾಮಾಪೃಚ್ಛ್ಯ ತ್ರಿದಿವಂ ಗತಃ।
ಏವಂ ಸ್ತ್ರಿಯಾ ಮಹಾರಾಜ ಅಧಿಕಾ ಪ್ರೀತಿರುಚ್ಯತೇ॥49॥
ಹಾಗೆಯೇ ಆಗಲಿ ಎಂದು ಅವಳಿಗೆ ಹೇಳಿ ಇಂದ್ರನು ಸ್ವರ್ಗಲೋಕಕ್ಕೆ ಹೋದನು. ಎಲೈ ಮಹಾರಾಜನೇ, ಹೀಗೆ ಸ್ತ್ರೀಯ ಸುಖವು ಪುರುಷನ ಸುಖಕ್ಕಿಂತ ಅಧಿಕವಾದುದೆಂದು ಹೇಳಲ್ಪಡುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಸ್ತ್ರೀಪುಂಸಂಯೋಗೇ ಸ್ತ್ರಿಯಃ ಪ್ರೀತ್ಯಾಧಿಕ್ಯಕಥನೇ ಭಂಗಾಶ್ವನೋಪಾಖ್ಯಾನಂ ನಾಮ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *

## ಮೂವತ್ತೊಂದನೆಯ ಅಧ್ಯಾಯ

### ಶುಭಾಶುಭ ಕರ್ಮಫಲ ಕಥನ

ಯುಧಿಷ್ಠಿರಃ
ಕಿಂ ಕರ್ತವ್ಯಂ ಮನುಷ್ಯೇಣ ಲೋಕಯಾತ್ರಾಹಿತಾರ್ಥಿನಾ।
ಕಥಂ ಹಿ ಲೋಕಯಾತ್ರಾಂ ತು ಕಿಂಶೀಲಶ್ಚ ಸಮಾಚರೇತ್ ॥1॥
ಯುಧಿಷ್ಠಿರ ಲೋಕಯಾತ್ರೆಯಲ್ಲಿ ಹಿತವನ್ನು ಬಯಸುವ ಮನುಷ್ಯನು ಏನು ಮಾಡಬೇಕು? ಎಂತಹ ನಡತೆಯುಳ್ಳವನಾಗಿ ಲೋಕಯಾತ್ರೆಯನ್ನು ಆಚರಿಸಬೇಕು?
ಭೀಷ್ಮಃ
ದೇವೇ ನಾರಾಯಣೇ ಭಕ್ತಿಃ ಶಂಕರೇ ಸಾಧುಪೂಜ್ಯತಾ।
ಧ್ಯಾನೇನಾಥ ಜಪಃ ಕಾರ್ಯಃ ಸ್ವಧರ್ಮೇ ಶುಚಿಚೇತಸಾ ॥2॥
ಭೀಷ್ಮ ದೇವನಾದ ನಾರಾಯಣನಲ್ಲಿ ಭಕ್ತಿ, ಶಂಕರನಲ್ಲಿ ಒಳ್ಳೆಯ ಪೂಜ್ಯತಾ ಬುದ್ಧಿ, ಧ್ಯಾನಪೂರ್ವಕವಾದ ಜಪ ಈ ಸ್ವಧರ್ಮಗಳನ್ನು ಶುದ್ಧವಾದ ಮನಸ್ಸಿನಿಂದ ಮಾಡಬೇಕು.
ಕಾಯೇನ ತ್ರಿವಿಧಂ ಕರ್ಮ ವಾಚಾ ಚಾಪಿ ಚತುರ್ವಿಧಮ್।
ಮನಸಾ ತ್ರಿವಿಧಂ ಚೈವ ದಶ ಕರ್ಮಪಥಾಂಸ್ತ್ಯಜೇತ್ ॥3॥
ದೇಹದಿಂದ ಮೂರುವಿಧವಾದ ಕರ್ಮಗಳನ್ನೂ, ಮಾತಿನಿಂದ ನಾಲ್ಕುವಿಧವಾದ ಕರ್ಮಗಳನ್ನೂ, ಮನಸ್ಸಿನಿಂದ ಮೂರು ವಿಧವಾದ ಕರ್ಮಗಳನ್ನೂ ಒಟ್ಟು ಹತ್ತು ಕರ್ಮಗಳನ್ನು ತ್ಯಜಿಸಬೇಕು.
ಪ್ರಾಣಾತಿಪಾತಂ ಸ್ತೈನ್ಯಂ ಚ ಪರದಾರಮಥಾಪಿ ಚ।
ತ್ರೀಣಿ ಪಾಪಾನಿ ಕಾಯೇನ ಸರ್ವತಃ ಪರಿವರ್ಜಯೇತ್ ॥4॥
ವಧೆ, ಕಳ್ಳತನ, ಪರಪತ್ನೀಸ್ಪರ್ಶ - ದೇಹದಿಂದ ಈ ಮೂರು ಕರ್ಮಗಳನ್ನು ಸರ್ವಥಾ ತ್ಯಾಗ ಮಾಡಬೇಕು.
ಅಸತ್ಪ್ರಲಾಪಂ ಪಾರುಷ್ಯಂ ಪೈಶುನ್ಯಮನೃತಂ ತಥಾ।
ಏತಾನಿ ವಾಚಾ ರಾಜೇಂದ್ರ ನ ಜಲ್ಪೇನ್ನಾನುಚಿಂತಯೇತ್ ॥5॥
ಕೆಟ್ಟಮಾತುಗಳು, ಒರಟಾದ ಮಾತುಗಳು, ಚಾಡಿಯ ಮಾತುಗಳು ಮತ್ತು ಸುಳ್ಳು ಮಾತುಗಳು - ಎಲೈ ರಾಜೇಂದ್ರನೇ, ಈ ನಾಲ್ಕು

ಪಾಪಕಾರ್ಯಗಳನ್ನು ಮಾಡಬಾರದು. ಮನಸ್ಸಿನಿಂದಲೂ ಚಿಂತಿಸಬಾರದು.
ಅನಭಿಧ್ಯಾ ಪರಸ್ವೇಷು ಸರ್ವಸತ್ತ್ವೇಷು ಸೌಹೃದಮ್ ।
ಕರ್ಮಣಾಂ ಫಲಮಸ್ತೀತಿ ತ್ರಿವಿಧಂ ಮನಸಾ ಚರೇತ್ ॥6॥
ಇನ್ನೊಬ್ಬರ ಸ್ವತ್ತನ್ನು ಅಪೇಕ್ಷಿಸದಿರುವುದು, ಸರ್ವಪ್ರಾಣಿಗಳಲ್ಲಿ ಸ್ನೇಹ, ಕರ್ಮಕ್ಕೆ ಫಲವಿದೆ ಎಂಬ ಶ್ರದ್ಧೆ - ಈ ಮೂರನ್ನು ಮನಸ್ಸಿನಿಂದ ಆಚರಿಸಬೇಕು.
ತಸ್ಮಾದ್ ವಾಕ್ಕಾಯಮನಸಾ ನಾಚರೇದಶುಭಂ ನರಃ ।
ಶುಭಾಶುಭಾನ್ಯಾಚರನ್ ಹಿ ತಸ್ಯ ತಸ್ಯಾಶ್ನುತೇ ಫಲಮ್ ॥7॥
ಆದ್ದರಿಂದ ಮನುಷ್ಯನಾದವನು ವಾಕ್-ಕಾಯ-ಮನಸ್ಸುಗಳಿಂದ ಅಶುಭವನ್ನು ಆಚರಿಸಬಾರದು. ಶುಭಾಶುಭಕರ್ಮಗಳನ್ನು ಆಚರಿಸುವ ಮನುಷ್ಯನು ಅವುಗಳಿಗೆ ಅನುಗುಣವಾದ ಫಲಗಳನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ತ್ರಿವಿಧಪಾಪತ್ಯಾಗಕಥನಂ
ನಾಮ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಉಪಮನ್ಯೂಪಾಖ್ಯಾನಮ್
ಮೂವತ್ತೆರಡನೆಯ ಅಧ್ಯಾಯ
ಶಿವ ಮಹಿಮೆ
ಯುಧಿಷ್ಠಿರಃ
ತ್ವಯಾಪಗೇಯ ನಾಮಾನಿ ಶ್ರುತಾನೀಹ ಜಗತ್ಪತೇಃ ।
ಪಿತಾಮಹೇಶಾಯ ವಿಭೋ ನಾಮಾನ್ಯಾಚಕ್ಷ್ವ ಶಂಭವೇ ।
ಬಭ್ರುವೇ ವಿಶ್ವಮಾಯಾಯ ಮಹಾಭಾಗ್ಯಂ ಚ ತತ್ತ್ವತಃ ॥1॥
ಸುರಾಸುರಗುರೌ ದೇವೇ ಶಂಕರೇಽವ್ಯಕ್ತಯೋನಯೇ ॥2॥
ಯುಧಿಷ್ಠಿರ ಗಂಗಾಪುತ್ರನೇ, ಜಗತ್ಪತಿಯೇ, ಪಿತಾಮಹನೇ, ನೀನು ಜಗತ್ಪತಿಯಾದ ಮಹೇಶನ ನಾಮಗಳನ್ನು ಕೇಳಿದ್ದೀಯೆ (ತಿಳಿದಿದ್ದೀಯೆ). ಸುರಾಸುರಗುರುವಾದ, ಅವ್ಯಕ್ತ ಯೋನಿಯಾದ ಬಭ್ರುವೂ, ವಿಶ್ವಮಾಯನೂ ಆದ ಶಂಕರನ ನಾಮಗಳನ್ನು ಹೇಳು. ಶಂಕರನ ಮಹಾಭಾಗ್ಯಗಳನ್ನು ಸರಿಯಾಗಿ ಹೇಳು.
ಭೀಷ್ಮಃ
ಅಶಕ್ತೋಽಹಂ ಗುಣಾನ್ ವಕ್ತುಂ ಮಹಾದೇವಸ್ಯ ಧೀಮತಃ ।
ಯೋ ಹಿ ಸರ್ವಗತೋ ದೇವೋ ನ ಚ ಸರ್ವತ್ರ ದೃಶ್ಯತೇ ॥3॥
ಭೀಷ್ಮ ಯಾವ ಶಂಕರನು ಸರ್ವಗತನಾದರೂ ಎಲ್ಲಿಯೂ ಕಾಣುವುದಿಲ್ಲವೋ ಅಂತಹ ಮೇಧಾವಿಯಾದ ಮಹಾದೇವನ ಗುಣಗಳನ್ನು ಹೇಳಲು ನಾನು ಅಸಮರ್ಥನಾದವನು.
ಬ್ರಹ್ಮವಿಷ್ಣುಸುರೇಶಾನಾಂ ಸ್ರಷ್ಟಾ ಯಃ ಪ್ರಭುರೇವ ಚ ।
ಬ್ರಹ್ಮಾದಯಃ ಪಿಶಾಚಾಂತಾ ಯಂ ಹಿ ದೇವಾ ಉಪಾಸತೇ ॥4॥
ಅವನು ಬ್ರಹ್ಮ-ವಿಷ್ಣು-ಸುರೇಶ್ವರರ ಸೃಷ್ಟಿಯನ್ನು ಮಾಡುವವನು, ಪ್ರಭುವಾದವನು. ಬ್ರಹ್ಮನಿಂದ ಹಿಡಿದು ಪಿಶಾಚಗಳ ವರೆಗೆ ಅವನನ್ನು ಉಪಾಸನೆ ಮಾಡುತ್ತಾರೆ.
ಪ್ರಕೃತೀನಾಂ ಪರತ್ವೇನ ಪುರುಷಸ್ಯ ಚ ಯಃ ಪರಃ ।
ಚಿಂತ್ಯತೇ ಯೋ ಯೋಗವಿದ್ಭಿರ್ಋಷಿಭಿಸ್ತತ್ತ್ವದರ್ಶಿಭಿಃ ॥5॥
ಯೋಗವನ್ನು ತಿಳಿದ, ತತ್ತ್ವದರ್ಶಿಗಳಾದ ಋಷಿಗಳು ಅವನನ್ನು ಪ್ರಕೃತಿಗಿಂತಲೂ ಪುರುಷನಿಗಿಂತಲೂ ಪರನಾದವನೆಂದು ತಿಳಿಯುತ್ತಾರೆ.
ಅಕ್ಷರಂ ಪರಮಂ ಪ್ರಾಹುರಸಚ್ಚ ಸದಸಚ್ಚ ಯಃ ।
ಪ್ರಕೃತಿಂ ಪುರುಷಂ ಚೈವ ಕ್ಷೋಭಯಿತ್ವಾ ಸ್ವತೇಜಸಾ ॥6॥
ಬ್ರಹ್ಮಾಣಮಸೃಜತ್ ತಸ್ಮಾದ್ ದೇವದೇವಃ ಪ್ರಜಾಪತಿಃ ।
ಕೋ ಹಿ ಶಕ್ತೋ ಗುಣಾನ್ ವಕ್ತುಂ ದೇವದೇವಸ್ಯ ಧೀಮತಃ ॥7॥
ಅವನನ್ನು ಪರಮಾಕ್ಷರ ಎಂದು ಹೇಳುತ್ತಾರೆ. ಕಾರ್ಯ-ಕಾರಣಗಳೆಂದು ಹೇಳುತ್ತಾರೆ. ಅವನು ಪ್ರಕೃತಿ-ಪುರುಷಗಳಲ್ಲಿ ಕ್ಷೋಭೆಯನ್ನುಂಟು ಮಾಡಿ ಬ್ರಹ್ಮದೇವರನ್ನು ಸೃಷ್ಟಿಸಿದನು. ಆದ್ದರಿಂದ ಅವನನ್ನು ದೇವದೇವನಾದ ಪ್ರಜಾಪತಿ ಎನ್ನುತ್ತಾರೆ. ದೇವದೇವನೂ ಮೇಧಾವಿಯೂ ಆದ ಅವನ ಗುಣಗಳನ್ನು ಹೇಳಲು ಯಾವನು ಸಮರ್ಥನಾಗುತ್ತಾನೆ?
ಗರ್ಭಜನ್ಮಜರಾಯುಕ್ತೋ ಮರ್ತ್ಯೋ ಮೃತ್ಯುಸಮನ್ವಿತಃ ।
ಕೋ ಹಿ ಶಕ್ತೋ ಭವಂ ಜ್ಞಾತುಂ ಮದ್ವಿಧಃ ಪರಮೇಶ್ವರಮ್ ॥8॥
ಗರ್ಭವಾಸ, ಜನನ, ಮುಪ್ಪು, ಮರಣಗಳನ್ನು ಹೊಂದಿದ ನನ್ನಂತಹ ಯಾವ ಮರ್ತ್ಯನು ತಾನೇ ಪರಮೇಶ್ವರನಾದ ಅವನನ್ನು ತಿಳಿಯಲು ಸಮರ್ಥನಾಗುತ್ತಾನೆ?
ಋತೇ ನಾರಾಯಣಾತ್ ಪುತ್ರ ಶಂಖಚಕ್ರಗದಾಧರಾತ್ ।

ಏಷ ವಿದ್ವಾನ್ ಯದುಶ್ರೇಷ್ಠೋ ವಿಷ್ಣುಃ ಪರಮದುರ್ಜಯಃ ॥9॥
ಎಲೈ ಪುತ್ರನೇ, ಶಂಖ-ಚಕ್ರ-ಗದಾಧರನಾದ ನಾರಾಯಣನನ್ನು ಬಿಟ್ಟು ಯಾರೂ ಅವನನ್ನು ತಿಳಿಯಲಾರರು. ಪರಮದುರ್ಜಯನೂ, ವಿಷ್ಣುವೂ ಆದ ಯದುಶ್ರೇಷ್ಠನಾದ ಕೃಷ್ಣನು ಅವನನ್ನು ತಿಳಿದಿದ್ದಾನೆ.
ದಿವ್ಯಚಕ್ಷುರ್ಮಹಾತೇಜಾ ವೀಕ್ಷ್ಯತೇ ಯೋಗಚಕ್ಷುಷಾ |
ರುದ್ರಭಕ್ತ್ಯಾ ತು ಕೃಷ್ಣೇನ ಜಗದ್ವ್ಯಾಪ್ತಂ ಮಹಾತ್ಮನಾ ॥10॥
ದಿವ್ಯದೃಷ್ಟಿಯುಳ್ಳವನೂ, ಮಹಾತೇಜಸ್ವಿಯೂ, ಯೋಗದೃಷ್ಟಿಯುಳ್ಳವನೂ ಆದ ಕೃಷ್ಣನು ಅವನನ್ನು ನೋಡುತ್ತಾನೆ. ರುದ್ರಭಕ್ತಿಯಿಂದ ಮಹಾತ್ಮನಾದ ಕೃಷ್ಣನು ಜಗತ್ತನ್ನು ವ್ಯಾಪಿಸಿದ್ದಾನೆ.
ತಂ ಪ್ರಸಾದ್ಯ ತದಾ ದೇವಂ ಬದರ್ಯಾಂ ಕಿಲ ಭಾರತ |
ಅರ್ಥಾತ್ ಪ್ರಿಯತರತ್ವಂ ಚ ಸರ್ವಲೋಕೇಷು ವೈ ತದಾ ॥11॥
ಎಲೈ ಭಾರತನೇ, ಬದರಿಯಲ್ಲಿ ಅವನು ಆ ದೇವನನ್ನು ಪ್ರಸನ್ನಗೊಳಿಸಿ ಎಲ್ಲ ಲೋಕಗಳಲ್ಲಿಯೂ ಅರ್ಥಕ್ಕಿಂತಲೂ ಪ್ರಿಯನಾಗಿದ್ದಾನೆ.

ಪ್ರಾಪ್ತವಾನೇವ ರಾಜೇಂದ್ರ ಸುವರ್ಣಾಕ್ಷಾನ್ಮಹೇಶ್ವರಾತ್ |
ಪೂರ್ಣಂ ವರ್ಷಸಹಸ್ರಂ ತು ತಪ್ತವಾನೇಷ ಮಾಧವಃ ॥12॥
ಎಲೈ ರಾಜೇಂದ್ರನೇ, ಮಾಧವನು ಪೂರ್ಣವಾಗಿ ಒಂದು ಸಹಸ್ರವರ್ಷ ತಪಸ್ಸನ್ನು ಮಾಡಿ, ಮಹೇಶ್ವರನಿಂದ ಸುವರ್ಣಮಯವಾದ ಚಕ್ಷುಸ್ಸನ್ನು ಪಡೆದಿದ್ದಾನೆ.
ಪ್ರಸಾದ್ಯ ವರದಂ ದೇವಂ ಚರಾಚರಗುರುಂ ಶಿವಮ್ |
ಯುಗೇ ಯುಗೇ ತು ಕೃಷ್ಣೇನ ತೋಷಿತೋ ವೈ ಮಹೇಶ್ವರಃ ॥13॥
ಚರಾಚರ ಗುರುವಾದ ವರಪ್ರದನಾದ ಶಿವನನ್ನು ಪ್ರಸನ್ನಗೊಳಿಸುತ್ತಾನೆ. ಕೃಷ್ಣನು ಪ್ರತಿಯುಗದಲ್ಲಿಯೂ ಮಹೇಶ್ವರನನ್ನು ತೃಪ್ತಿಗೊಳಿಸುತ್ತಾನೆ.
ಭಕ್ತ್ಯಾ ಪರಮಯಾ ರಾಜನ್ ಪ್ರೀತಶ್ಚೈವ ಮಹಾತ್ಮನಃ |
ಐಶ್ವರ್ಯಂ ಯಾದೃಶಂ ತಸ್ಯ ಜಗದ್ಯೋನೇರ್ಮಹಾತ್ಮನಃ ॥14॥
ತದಯಂ ದೃಷ್ಟವಾನ್ ಸಾಕ್ಷಾತ್ ಪುತ್ರಾರ್ಥೇ ಹರಿರಚ್ಯುತ |
ಯಸ್ಮಾತ್ ಪರತರಂ ಚೈವ ನಾನ್ಯಂ ಪಶ್ಯಾಮಿ ಭಾರತ ॥15॥
ಎಲೈ ರಾಜನೇ, ಶಿವನಲ್ಲಿ ಪರಮಭಕ್ತಿಯಿಂದ ಕೂಡಿದವನಾಗಿ, ಸಂತೋಷಗೊಂಡು, ಜಗದ್ಯೋನಿಯೂ, ಮಹಾತ್ಮನೂ ಆದ ಶಿವನ ಐಶ್ವರ್ಯವು ಎಂಥದಿದೆಯೋ ಅಂತಹ ಐಶ್ವರ್ಯವನ್ನು ಪುತ್ರಾರ್ಥವಾಗಿ ಅವನ ಬಳಿಗೆ ಹೋದ ಹರಿಯು ಸಾಕ್ಷಾತ್ತಾಗಿ ನೋಡಿದ್ದಾನೆ. ಎಲೈ ಭಾರತನೇ, ಅವನಿಗಿಂತ ಶ್ರೇಷ್ಠವಾದವರನ್ನು ನಾನು ಯಾವನನ್ನೂ ಕಾಣುವುದಿಲ್ಲ.
ವ್ಯಾಖ್ಯಾತುಂ ದೇವದೇವಸ್ಯ ಶಕ್ತೋ ನಾಮಾನ್ಯಶೇಷತಃ |
ಏಷ ಶಕ್ತೋ ಮಹಾಬಾಹುರ್ವಕ್ತುಂ ಭಗವತೋ ಗುಣಾನ್ |
ವಿಭೂತಿಂ ಚೈವ ಕಾರ್ತ್ಸ್ನ್ಯೇನ ಸತ್ಯಾಂ ಮಾಹೇಶ್ವರೀಂ ನೃಪ ॥16॥
ಈ ಮಹಾಬಾಹುವೇ, ಭಗವಂತನಾದ ದೇವದೇವನಾದ ಶಿವನ ಎಲ್ಲ ನಾಮಗಳನ್ನೂ ಮತ್ತು ಸತ್ಯವಾದ ಮಹೇಶ್ವರ ಸಂಬಂಧಿಯಾದ ಐಶ್ವರ್ಯವನ್ನೂ ವ್ಯಾಖ್ಯಾನ ಮಾಡಲು ಸಮರ್ಥನಾದವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ದರ್ಶನ ಭಾಷೆಯಿಂದ ಶಿವಮಹಿಮೆಯ ನಿರೂಪಣೆ.
ವೈಶಂಪಾಯನಃ
ಏವಮುಕತತ್ವ ತದಾ ಭೀಷ್ಮೋ ವಾಸುದೇವಂ ಮಹಾಯಶಾಃ |
ಭವಮಾಹಾತ್ಮ್ಯಸಂಯುಕ್ತಮಿದಮಾಹ ಪಿತಾಮಹಃ ॥1॥
ವೈಶಂಪಾಯನ ಮಹಾಕೀರ್ತಿವಂತರಾದ, ಪಿತಾಮಹರಾದ ಭೀಷ್ಮರು ವಾಸುದೇವನನ್ನು ಕುರಿತು ಹೇಳಿ, ಶಿವಮಹಿಮೆಯ ವಿಷಯದಲ್ಲಿ ಈ ಮಾತನ್ನು ಆಡಿದರು.
ಸುರಾಸುರಗುರೋ ದೇವ ವಿಷ್ಣೋ ತ್ವಂ ವಕ್ತುಮರ್ಹಸಿ |
ಶಿವಾಯ ವಿಶ್ವರೂಪಾಯ ಯನ್ಮಾಂ ಪೃಚ್ಛದ್ಯುಧಿಷ್ಠಿರಃ ॥2॥
ಎಲೈ ಸುರಾಸುರಗುರುವೇ, ದೇವನೇ, ವಿಷ್ಣುವೇ, ಯುಧಿಷ್ಠಿರನು ನನ್ನನ್ನು ಕುರಿತು ವಿಶ್ವರೂಪನಾದ ಶಿವನ ವಿಷಯದಲ್ಲಿ ಕೇಳಿದ ಪ್ರಶ್ನೆಗೆ ನೀನು ಉತ್ತರವನ್ನು ಹೇಳಬೇಕು.
ವ್ಯಾಖ್ಯಾನ ವಿಶೇಷ ಇದುವರೆಗೆ ಭೀಷ್ಮರು ಮೋಕ್ಷದಾಯಕವಾದ ಸಕಲ ವಿಷ್ಣುಧರ್ಮವನ್ನು ವಿಸ್ತಾರವಾಗಿ ನಿರೂಪಿಸಿ, ಈಗ ವ್ಯಾಸರಿಗೆ ತ್ರಿಭಾಷಾಂ ಯೋ ನಜಾನಾತಿ ರೀತೀನಾಂ ಶತಮೇವ ಚ (ಯಾವನು ಪುರಾಣಗಳ ಮೂರು ಭಾಷೆಗಳನ್ನು ಮತ್ತು ನೂರು ರೀತಿಗಳನ್ನು ತಿಳಿಯದೆ ಪುರಾಣಾದಿ ಪ್ರವಚನ ಮಾಡುತ್ತಾನೆಯೋ ಅವನಿಗೆ ಅನರ್ಥ ಉಂಟಾಗುತ್ತದೆ) ಎಂದು ಮುಂತಾಗಿ ಹೇಳಿದ ಪ್ರಕಾರದಲ್ಲಿ

ಭಾರತವು ತ್ರಿಭಾಷೆಗಳಿಂದ ಕೂಡಿದೆ ಎಂದು ಸ್ಫುಟ ಪಡಿಸುವುದಕ್ಕಾಗಿ ಕೇವಲ ಶೈವದರ್ಶನಸಮ್ಮತವಾದ, ಶಿವಸಂಬಂಧಿಯಾದ ಕಥೆಯನ್ನು ತಮ್ಮ ಮರಣಕಾಲದಲ್ಲಿ ತಮ್ಮ ಮುಖದಿಂದಲೇ ಹೇಳಲು ನಾಚಿಕೆಗೊಂಡು ಅಸುರಜನ ಮೋಹನಾರ್ಥವಾಗಿಯೂ ಅವತಾರ ಮಾಡಿದ ಕೃಷ್ಣನನ್ನೇ ನೀನೇ ಹೇಳು ಎಂದು ಸುರಾಸುರ ಗುರೋ ದೇವ ಇತ್ಯಾದಿ ಶ್ಲೋಕದಿಂದ ಹೇಳುತ್ತಾರೆ.
ಮುಂದೆ ಹೇಳಲಿರುವ ಶಿವಸರ್ವೋತ್ತಮತ್ವಾದಿಗಳು ಅಪ್ರಾಮಾಣಿಕವೆಂದು ಸೂಚಿಸಲು ಸುರರ ಮತ್ತು ಅಸುರರ ಗುರುವೇ ಎಂದು ಸಂಬೋಧನೆ ಇದೆ. ಬುದ್ಧಾದಿ ರೂಪದಿಂದ ಅವತರಿಸಿ, ವಿರುದ್ಧವಾದ ಕಥೆಯನ್ನು ಪ್ರಸಾರ ಮಾಡಿ, ಅಸುರ ಜನರನ್ನು ಮೋಹನಗೊಳಿಸಲು ನೀನೇ ಕುಶಲನಾದವನು ಎಂದು ಸೂಚಿಸಲು ಎಲೈ ಅಸುರರ ಗುರುವೇ ಎಂಬ ಸಂಬೋಧನೆ ಇದೆ. ಭಾರತವು ತ್ರಿಭಾಷಾ ಭರಿತವಾಗಿರಲಿ, ಆದರೆ ಮುಂದೆ ಹೇಳಿರುವ ಶಿವಸಂಬಂಧಿಯಾದ ಕಥೆಯು ಶೈವದರ್ಶನವು ಮಾತ್ರ ಅವಲಂಬಿಸಿ ಹೇಳಿದ ಕಥೆ ಎಂದು ಹೇಗೆ ತಿಳಿಯುತ್ತದೆ ಎಂಬ ಪ್ರಶ್ನೆಗೆ ಉತ್ತರವು ಈ ರೀತಿಯಾಗಿದೆ. `ಆದ್ಯಂತಯೋರ್ವಿರುದ್ಧಂ ಯದ್ದರ್ಶನಂ ತದುದಾಹೃತಮ್' (ಒಂದು ಗ್ರಂಥದಲ್ಲಿ ಯಾವುದು ಆದಿ ಮತ್ತು ಅಂತ್ಯದಲ್ಲಿ ಹೇಳುವ ವಿಷಯಗಳಿಗೆ ವಿರುದ್ಧವಾದುದೋ ಅದನ್ನು ದರ್ಶನ ಭಾಷೆ ಎಂದು ಕರೆಯುತ್ತಾರೆ) ಎಂಬ ಪ್ರಮಾಣವಿದೆ. ಭಾರತದಲ್ಲಿಯಾದರೂ `ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ' (ನಾರಾಯಣನಿಗೆ ಸಮನಾದ ಚೇತನನು ಹಿಂದೆ ಇರಲಿಲ್ಲ, ಮುಂದೆ ಇರುವುದಿಲ್ಲ ಎಂದು ಆದಿಯಲ್ಲಿರುವ ವಚನ. ಹಾಗೆ `ನ ಹಿ ಮೇ ಕೇನಚಿದ್ದೇಯೋ ವರಃ ಪಾಂಡವನಂದನ | ಇತಿ ಸಂಚಿಂತ್ಯ ಮನಸಾ ಪುರಾಣಂ ವಿಶ್ವಮೀಶ್ವರಮ್ | ಪುತ್ರಾರ್ಥಮಾರಾಧಿತವಾನಹಮಾತ್ಮಾನಮಾತ್ಮನಾ' (ಎಲೈ ಪಾಂಡುನಂದನನೇ, ನಾನು ಯಾರಿಂದಲೂ ವರವನ್ನು ಪಡೆಯಬೇಕಾಗಿಲ್ಲ ಎಂದು ಮನಸ್ಸಿನಲ್ಲಿ ಚಿಂತಿಸಿ, ಪುರಾಣ ಪುರುಷನಾದ ವಿಶ್ವೇಶ್ವರನನ್ನು ಪುತ್ರಾರ್ಥವಾಗಿ ಆರಾಧಿಸಿದೆನು. ಅವನ ಅಂತರ್ಯಾಮಿಯಾದ ನನ್ನನ್ನೇ ಆರಾಧಿಸಿದನು ಎಂದೂ, `ನ ಹಿ ವಿಷ್ಣುಃ ಪ್ರಣಮತಿ ಕಸ್ಮೈಚಿದ್ವಿಬುಧಾಯ ತು | ಋತ ಆತ್ಮಾನಮೇವೇತಿ ತತೋ ರುದ್ರಂ ನಮಾಮ್ಯಹಮ್ |' (ವಿಷ್ಣುವು ತನ್ನನ್ನು ಬಿಟ್ಟು ಬೇರೆ ಯಾವ ದೇವತೆಗೂ ನಮಸ್ಕರಿಸುವುದಿಲ್ಲ ಹಾಗೆ ನಾನು ರುದ್ರನಿಗೆ ನಮಸ್ಕರಿಸುತ್ತೇನೆ) ಎಂದೂ `ನ ಸ ಶಕ್ಯಸ್ತ್ವಯಾ ದ್ರಷ್ಟುಂ ಮಯಾಽನ್ಯೈರಪಿ ಸತ್ತಮ | ಸಗುಣೋ ನಿರ್ಗುಣೋ ವಿಶ್ವೋ ಜ್ಞಾನದೃಶ್ಯೋ ಹ್ಯಸೌ ಸ್ಮೃತಃ | ಅಹಂ ಬ್ರಹ್ಮಾ ಆದ್ಯ ಈಶಃ ಪ್ರಜಾನಾಂ ತಸ್ಮಾಜ್ಜಾತಸ್ತ್ವಂ ಚ ಮತ್ತಃ ಪ್ರಸೂತಃ| ಮತ್ತೋ ಜಗತ್ ಸ್ಥಾವರಂ ಜಂಗಮಂ ಚ ಸರ್ವೇ ವೇದಾಃ ಸರಹಸ್ಯಾಶ್ಚ ಪುತ್ರ' (ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ನನ್ನಿಂದಲಾಗಲೀ, ನಿನ್ನಿಂದಲಾಗಲೀ ಅಥವಾ ಬೇರೆಯವರಿಂದಾಗಲೀ ಅವನನ್ನು ನೋಡಲು ಸಾಧ್ಯವಿಲ್ಲ. ಅಪ್ರಾಕೃತಗುಣಭರಿತನೂ, ಪ್ರಾಕೃತಗುಣರಹಿತನೂ, ವ್ಯಾಪ್ತನೂ ಆದ ಅವನು ಜ್ಞಾನದೃಷ್ಟಿಯಿಂದ ಮಾತ್ರ ಕಾಣುತ್ತಾನೆ. ಬ್ರಹ್ಮನಾದ ನಾನು ಪ್ರಜೆಗಳಿಗೆ ಮೊದಲನೆಯ ಒಡೆಯನಾದವನು ಅವನಿಂದ ಜನಿಸಿದ್ದೇನೆ. ನೀನಾದರೂ ನನ್ನಿಂದ ಜನಿಸಿದ್ದೀಯೆ. ಎಲೈ ಪುತ್ರನೇ, ಸ್ಥಾವರ ಜಂಗಮಾತ್ಮಕವಾದ ಸಮಸ್ತವಾದ ಜಗತ್ತೂ, ರಹಸ್ಯ ಸಹಿತವಾದ ಎಲ್ಲ ವೇದಗಳೂ, ನನ್ನಿಂದ ಜನಿಸಿವೆ (ಇದು ರುದ್ರನನ್ನು ಕುರಿತು ಬ್ರಹ್ಮದೇವರ ವಾಕ್ಯ). `ಯತ್ತತ್ ಪದ್ಮಮಭೂತ್ಸರ್ವಂ ಯತೋ ಬ್ರಹ್ಮಾ ವ್ಯಜಾಯತ | ಬ್ರಹ್ಮಣಶ್ಚಾಪಿ ಸಂಭೂತಃ ಶಿವ ಇತ್ಯವಧಾರ್ಯತಾಮ್ | ಶಿವಾತ್ ಸ್ಕಂದಃ ಸಂಬಭೂವ ಏತತ್ ಸೃಷ್ಟಿಚತುಷ್ಟಯಮ್ | ಅನಾಶ್ರಿತ್ಯೋಚ್ಛ್ರಯೋ ನಾಸ್ತಿ ಮುಖ್ಯಮಾಶ್ರಯಮಾಶ್ರಯೇತ್ | ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ | ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ |' (ಮೊದಲು ಯಾವ ಪದ್ಮವು ಜನಿಸಿತೋ ಬ್ರಹ್ಮನು ಅದರಲ್ಲಿ ಜನಿಸಿದನು, ಶಿವನು ಬ್ರಹ್ಮನಿಂದ ಜನಿಸಿದನು. ಶಿವನಿಂದ ಸ್ಕಂದನು ಜನಿಸಿದನು. ಈ ನಾಲ್ಕು ಸೃಷ್ಟಿಯನ್ನು ತಿಳಿಯದೆ ಯಾವನೂ ಶ್ರೇಯಸ್ಸನ್ನು ಹೊಂದುವುದಿಲ್ಲ. ಮುಖ್ಯವಾದ ಶ್ರೇಯಸ್ಸನ್ನು ಆಶ್ರಯಿಸಬೇಕು. ದೇವತೆಗಳು ರುದ್ರನನ್ನು ಆಶ್ರಯಿಸಿರುತ್ತಾರೆ. ರುದ್ರನು ಬ್ರಹ್ಮನನ್ನು ಆಶ್ರಯಿಸಿರುತ್ತಾನೆ. ಬ್ರಹ್ಮನು ಯಾವಾಗಲೂ ನನ್ನನ್ನು ಆಶ್ರಯಿಸಿರುತ್ತಾನೆ. ನಾನು ಯಾರನ್ನೂ ಆಶ್ರಯಿಸಿರುವುದಿಲ್ಲ - ಇವು ದೇವರ ವಾಕ್ಯಗಳು). ಇವು ಮಹಾಭಾರತದಲ್ಲಿ ಮಧ್ಯಭಾಗದಲ್ಲಿರುವ ವಚನಗಳು. `ಸತ್ಯಂ ಸತ್ಯಂ ಪುನಃ ಸತ್ಯಮ್ ಉದ್ಧೃತ್ಯ ಭುಜಮುಚ್ಯತೇ | ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್' (ಇದು ಸತ್ಯ ಸತ್ಯ ಸತ್ಯ. ಭುಜವನ್ನು ಎತ್ತಿ ಹೇಳುತ್ತಿದ್ದೇನೆ. ವೇದಶಾಸ್ತ್ರಕ್ಕಿಂತ ಉತ್ತಮವಾದ ಶಾಸ್ತ್ರವಿಲ್ಲ. ಕೇಶವನಿಗಿಂತ ಉತ್ತಮವಾದ ದೈವವಿಲ್ಲ). ಇದು ಮಹಾಭಾರತದಲ್ಲಿ ಕೊನೆಯಲ್ಲಿ ಬರುವ ವಚನಗಳು. ಅದಕ್ಕೆ ವಿರುದ್ಧವಾದ ಶಿವನ ಶ್ರೇಷ್ಠತೆಯನ್ನು ಹೇಳುವ ಮಧ್ಯದಲ್ಲಿ ಬರುವ ಈ ಕಥೆಗಳು ಆ ಕಾರಣದಿಂದ ದರ್ಶನಭಾಷೆಯನ್ನು ಆಶ್ರಯಿಸಿ ಪ್ರವೃತ್ತಗಳಾದವುಗಳು ಎಂದು ವಿವೇಕಿಗಳಾದವರು ತಿಳಿಯಬೇಕು. ಇದು ಉತ್ತರ.
ಅಲ್ಲದೇ, `ನ ಹಿ ಮೇ ಕೇನಚಿದ್ದೇಯೋ ವರಃ ಪಾಂಡವನಂದನ | ಇತಿ ಸಂಚಿಂತ್ಯ ಮನಸಾ ಪುರಾಣಂ ವಿಶ್ವಮೀಶ್ವರಮ್ | ಪುತ್ರಾರ್ಥಮಾರಾಧಿತವಾನಹಮಾತ್ಮಾನಮಾತ್ಮನಾ | ನ ಹಿ ವಿಷ್ಣುಃ ಪ್ರಣಮತಿ ಕಸ್ಮೈಚಿದ್ವಿಬುಧಾಯ ತು' (ಎಂಬ ವಚನವೂ ಇದಕ್ಕೆ ಹತ್ತಿರದಲ್ಲೇ ಹಿಂದೆ ಮೋಕ್ಷಧರ್ಮಪರ್ವದಲ್ಲಿ ಇರುವ ವಚನ) ಇದರಲ್ಲಿ ಕೃಷ್ಣನ ಕೈಲಾಸಯಾತ್ರೆಯ ತೋರಿಕೆಯ ಕಥೆಯು ದೂಷಿಸಲ್ಪಟ್ಟಿದೆ. ಆದ್ದರಿಂದ ಮುಂದೆ ಹೇಳಿರುವ ಕೃಷ್ಣ ಕೈಲಾಸ ಯಾತ್ರೆಯೆಲ್ಲವೂ ಅಪ್ರಾಮಾಣಿಕವೆಂದು ತಿಳಿಯಬೇಕು. ಆದ್ದರಿಂದಲೂ ಇದು ಶೈವದರ್ಶನ ಭಾಷೆಯಿಂದಲೇ ಪ್ರವೃತ್ತವಾಗಿದೆ ಎಂದು ವಿಮರ್ಶೆಯುಳ್ಳವರು ಹೇಗೆ ತಿಳಿಯದೇ ಇರಲು ಸಾಧ್ಯ?
ಮತ್ತು `ಕುಮಾರಶ್ಚಿತ್ ಪಿತರಂ ವಂದಮಾನಂ ಪ್ರತಿ ನನಾಮ ರುದ್ರೋಪಯಂತಮ್ |', `ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಮ್ |', `ತವ ಶ್ರಿಯೇ ಮರುತೋ ಮರ್ಜಯಂತ ರುದ್ರ ಯತ್ತೇ ಜನಿಮ ಚಾರುಚಿತ್ರಮ್ | ಪದಂ ಯದ್ವಿಷ್ಣೋರುಪಮಂ ನಿಧಾಯಿ ತೇನ ಪಾಸಿ ಗುಹ್ಯಂ ನಾಮ ಗೋನಾಮ್', `ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ | ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್|',
`ಸೋರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಮ್|', `ರುದ್ರಸ್ಯೈವ ಧನುರಾರ್ತಿಃ ಶಿರ ಉತ್ಪಿಪೇಷ |', `ಯಂ ಕಾಮಯೇ ತಂ ತಮುಗ್ರಂ ಕೃಣೋಮಿ | ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ | ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ |', `ಉಚ್ಛೇಷಣಭಾಗೋ ವೈ ರುದ್ರಃ ತಾಭಿರೇನಂ ರುದ್ರೋಽನ್ವಾಯತ್ತಃ |', `ಈಶಾನಾಸಃ ಶವಸಾಕ್ರಂತಸೂರಯಃ |' (ಇವೇ ಮೊದಲಾದ ವೇದವಾಕ್ಯಗಳಲ್ಲಿ ರುದ್ರನು ಅಧಮನಾದವನೆಂದು ಹೇಳಿರುವುದರಿಂದ ರುದ್ರನ ಸರ್ವೋತ್ತಮತ್ವವು ವೇದವ್ಯಾಸರಿಗೆ ಸಮ್ಮತವಾದುದಲ್ಲ. ಆದ್ದರಿಂದಲೂ ಈ ಪ್ರಮೇಯವು ದರ್ಶನ ಭಾಷೆಯನ್ನು ಆಶ್ರಯಿಸಿ ಹೇಳಲ್ಪಟ್ಟಿದೆ ಎಂದು ತಿಳಿಯುತ್ತದೆ ಮತ್ತು `ಅಗ್ನಿರ್ವೈದೇವಾನಾಮವಮೋ ವಿಷ್ಣುಃ ಪರಮಃ ತದಂತರೇ ಸರ್ವಾ ಅನ್ಯಾ ದೇವತಾಃ' (ಎಂಬ ಶ್ರುತಿಯೂ ಅಗ್ನಿಯನ್ನು

ಕೆಳಭಾಗದಲ್ಲಿಟ್ಟು, ಇತರ ಎಲ್ಲಾ ದೇವತೆಗಳನ್ನೂ ಮಧ್ಯಭಾಗದಲ್ಲಿಟ್ಟು ವಿಷ್ಣುವಿಗೇ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡಿರುವುದರಿಂದ ಇಂತಹ ನಿರವಕಾಶಶ್ರುತಿಗೆ ವಿರುದ್ಧವಾದ ಸ್ಮೃತಿಗಳು ನೂರು ಇದ್ದರೂ ಅವುಗಳಿಗೆ `ವಿರೋಧೇ ತ್ವನಪೇಕ್ಷಂ ಸ್ಯಾತ್' ಎಂಬ ಮೀಮಾಂಸಾ ನ್ಯಾಯದಿಂದ ಅವಶ್ಯವಾಗಿ ಅಪ್ರಾಮಾಣ್ಯವೇ ಉಂಟಾಗುತ್ತದೆ. ಆದರೆ `ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಮಹಾಭಾರತವನ್ನು ಐದನೆಯ ವೇದ ಎಂದು ಹೇಳಿರುವುದರಿಂದ ಪೂರ್ಣವಾದ ಅಪ್ರಾಮಾಣ್ಯವು ಅಸಂಭಾವಿತವಾದುದು. ಆದುದರಿಂದ ಇದನ್ನು ಇನ್ನೊಂದು ದರ್ಶನದ ಅನುವಾದ ಎಂದು ಹೇಳಬೇಕು. ಈ ಪ್ರಕರಣವನ್ನು ಶಿವನ ಅಂತರ್ಯಾಮಿಯ ವಿಷಯದಲ್ಲಿ ಯೋಜನೆ ಮಾಡಬಹುದು. ಆದರೂ ಮಹಾಭಾರತದಲ್ಲಿ ಇಂತಹ ದರ್ಶನ ಭಾಷೆಯ ಭಾಗಗಳು ಇವೆ ಎಂದು ತಿಳಿಯಬೇಕು. ಆದ್ದರಿಂದ ಎಲ್ಲವೂ ನಿರ್ದುಷ್ಟವಾಗಿದೆ - ಲಕ್ಷ್ಮಾಲಂಕಾರ

ನಾಮ್ನಾಂ ಸಹಸ್ರಂ ದೇವಸ್ಯ ತಂಡಿನಾ ಬ್ರಹ್ಮಯೋನಿನಾ |
ನಿವೇದಿತಂ ಬ್ರಹ್ಮಲೋಕೇ ಬ್ರಹ್ಮಣೋ ಯತ್ಪುರಾಭವತ್ ॥3॥
ಶಿವನ ಸಹಸ್ರನಾಮಗಳು ಬ್ರಹ್ಮಪುತ್ರರಾದ ತಂಡಿ ಋಷಿಗಳಿಂದ ಹಿಂದೆ ಬ್ರಹ್ಮದೇವರ ಎದುರಿಗೆ ಬ್ರಹ್ಮಲೋಕದಲ್ಲಿ ನಿವೇದಿಸಲ್ಪಟ್ಟಿತು.
ದ್ವೈಪಾಯನಪ್ರಭೃತಯಸ್ತಥೈವೇಮೇ ತಪೋಧನಾಃ |
ಋಷಯಃ ಸುವ್ರತಾ ದಾಂತಾಃ ಶೃಣ್ವಂತು ಗದತಸ್ತವ ॥4॥
ದ್ವೈಪಾಯನರೇ ಮೊದಲಾದ ಈ ತಪಸ್ವಿಗಳೂ ಒಳ್ಳೆಯ ವ್ರತವನ್ನು ಧರಿಸಿ, ಇಂದ್ರಿಯನಿಗ್ರಹವುಳ್ಳ ಋಷಿಗಳೂ ಸಹ ನಿನ್ನಿಂದ ಶಿವನ ಮಹಿಮೆಯನ್ನು ಕೇಳಲಿ.
ಧ್ರುವಾಯ ನಂದಿನೇ ಹೋತ್ರೇ ಗೋಪ್ತ್ರೇ ವಿಶ್ವಸೃಜೇಽಗ್ನಯೇ |
ಮಹಾಭಾಗ್ಯಂ ವಿಭೋ ಬ್ರೂಹಿ ಮುಂಡಿನೇಥ ಕಪರ್ದಿನೇ ॥5॥
ಎಲೈ ವಿಭುವೇ, ಧ್ರುವನೂ, ಆನಂದಭರಿತನೂ, ಯಜಮಾನನಲ್ಲಿ ಇರುವವನೂ, ರಕ್ಷಕನಾದವನೂ, ವಿಶ್ವಕರ್ತೃವೂ, ಅಗ್ನಿಯೂ, ಮುಂಡನೂ, ಕಪರ್ದನೂ ಆದ ಶಿವನ ಮಹಾಭಾಗ್ಯವನ್ನು ಹೇಳು.
ವಾಸುದೇವಃ
ನ ಗತಿಃ ಕರ್ಮಣಾಂ ಶಕ್ಯಾ ವೇತ್ತುಮೀಶಸ್ಯ ತತ್ತ್ವತಃ ॥6॥
ಹಿರಣ್ಯಗರ್ಭಪ್ರಮುಖಾ ದೇವಾಃ ಸೇಂದ್ರಾ ಮಹರ್ಷಯಃ |
ನ ವಿದುರ್ಯಸ್ಯ ನಿಧನಮಾದಿಂ ವಾ ಸೂಕ್ಷ್ಮದರ್ಶಿನಃ |
ಸ ಕಥಂ ನರಮಾತ್ರೇಣ ಶಕ್ಯೋ ಜ್ಞಾತುಂ ಸತಾಂ ಗತಿಃ ॥7॥
ವಾಸುದೇವ- ಶಿವನ ಕರ್ಮದ ಗತಿಯನ್ನು ಸರಿಯಾಗಿ ತಿಳಿಯಲು ಸಾಧ್ಯವಿಲ್ಲ. ಇಂದ್ರಸಹಿತರಾದ ಬ್ರಹ್ಮಾದಿ ದೇವತೆಗಳೂ ಮತ್ತು ಮಹರ್ಷಿಗಳೂ ಸೂಕ್ಷ್ಮದರ್ಶನವನ್ನು ಹೊಂದಿದರೂ ಯಾವನ ಆದಿ, ಅಂತ್ಯಗಳನ್ನು ತಿಳಿದಿಲ್ಲವೋ ಅಂತಹ ಸಜ್ಜನರಿಗೆ ಗತಿಯಾದ ಶಿವನನ್ನು ಒಬ್ಬ ಮನುಷ್ಯಮಾತ್ರನಾದವನು ಹೇಗೆ ತಿಳಿಯಲು ಸಾಧ್ಯ?
ತಸ್ಯಾಹಮಸುರಘ್ನಸ್ಯ ಕಾಂಶ್ಚಿದ್ ಭಗವತೋ ಗುಣಾನ್ |
ಭವತಾಂ ಕೀರ್ತಯಿಷ್ಯಾಮಿ ವ್ರತೇಶಾಯ ಯಥಾತಥಮ್ ॥8॥
ನಾನು ಅಸುರಸಂಹಾರಕನಾದ, ವ್ರತಪತಿಯಾದ ಶಿವನ ಕೆಲವು ಗುಣಗಳನ್ನು ಯಥಾರ್ಥವಾಗಿ ನಿಮ್ಮ ಮುಂದೆ ಹೇಳುವೆನು.
ವೈಶಂಪಾಯನಃ
ಏವಮುಕ್ತಸ್ತು ಭಗವಾನ್ ಗುಣಾಂಸ್ತಸ್ಯ ಮಹಾತ್ಮನಃ |
ಉಪಸ್ಪೃಶ್ಯ ಶುಚಿರ್ಭೂತ್ವಾ ಕಥಯಾಮಾಸ ಧೀಮತಃ ॥9॥
ವೈಶಂಪಾಯನ ಹೀಗೆ ಹೇಳಿ ಭಗವಂತನಾದ ಕೃಷ್ಣನು ನೀರನ್ನು ಸ್ಪರ್ಶಿಸಿ, ಶುಚಿಯಾಗಿ ಮೇಧಾವಿಯಾದ ಶಿವನ ಗುಣಗಳನ್ನು ಹೇಳಿದನು.
ವಾಸುದೇವಃ
ಶುಶ್ರೂಷಧ್ವಂ ಬ್ರಾಹ್ಮಣೇಂದ್ರಾಸ್ತ್ವಂ ಚ ತಾತ ಯುಧಿಷ್ಠಿರ |
ತ್ವಂ ಚಾಪಗೇಯ ನಾಮಾನಿ ನಿಶಾಮಯ ಜಗತ್ಪತೇಃ ॥10॥
ವಾಸುದೇವ ಎಲೈ ಬ್ರಾಹ್ಮಣಶ್ರೇಷ್ಠರೇ ಕೇಳಿ, ಪ್ರೀತಿಪಾತ್ರನಾದ ಯುಧಿಷ್ಠಿರನೇ, ಗಂಗಾಪುತ್ರನಾದ ಭೀಷ್ಮನೇ, ಜಗತ್ಪತಿಯಾದ ಶಿವನ ನಾಮಗಳನ್ನು ಕೇಳುವವರಾಗಿ.
ಯದವಾಪ್ತಂ ಚ ಮೇ ಪೂರ್ವಂ ಸಾಂಬಹೇತೋಃ ಸುದುಷ್ಕರಮ್ |
ಯಥಾ ಚ ಭಗವಾನ್ ದೃಷ್ಟೋ ಮಯಾ ಪೂರ್ವಂ ಸಮಾಧಿನಾ ॥11॥
ನಾನು ಸಾಂಬನನ್ನು ಪಡೆಯುವ ಸಲುವಾಗಿ ದುಷ್ಕರವಾದ ಯಾವ ಶಿವನ ನಾಮಗಳನ್ನು ಸಂಪಾದಿಸಿದೆನೋ ಮತ್ತು ಸಮಾಧಿಸ್ಥನಾಗಿ ಪೂಜ್ಯನಾದ ಅವನನ್ನು ಹಿಂದೆ ಹೇಗೆ ನೋಡಿದೆನೋ ಅದಕ್ಕೆ ಅನುಗುಣವಾಗಿ ಹೇಳುವೆನು.
ಶಂಬರೇ ನಿಹತೇ ಪೂರ್ವಂ ರೌಗ್ಮಿಣೇಯೇನ ಧೀಮತಾ |
ಅತೀತೇ ದ್ವಾದಶೇ ವರ್ಷೇ ಜಾಂಬವತ್ಯಬ್ರವೀದ್ಧಿ ಮಾಮ್ ॥12॥
ಮೇಧಾವಿಯಾದ ಪ್ರದ್ಯುಮ್ನನಿಂದ ಹಿಂದೆ ಶಂಬರಾಸುರನು ಹತನಾಗಿ ಹನ್ನೆರಡು ವರ್ಷಗಳು ಕಳೆಯುತ್ತಿರಲು ಜಾಂಬವತಿಯು ನನ್ನನ್ನು ಕುರಿತು ಹೇಳಿದಳು.
ಪ್ರದ್ಯುಮ್ನಚಾರುದೇಷ್ಣಾದೀನ್ ರುಗ್ಮಿಣ್ಯಾ ವೀಕ್ಷ್ಯ ಪುತ್ರಕಾನ್ |
ಪುತ್ರಾರ್ಥಿನೀ ಮಾಮುಪೇತ್ಯ ವಾಕ್ಯಮಾಹ ಯುಧಿಷ್ಠಿರ ॥13॥
ಪ್ರದ್ಯುಮ್ನ, ಚಾರುದೇಷ್ಣ ಮೊದಲಾದ ರುಗ್ಮಿಣಿಯ ಪುತ್ರರನ್ನು ನೋಡಿ ಎಲೈ ಯುಧಿಷ್ಠಿರನೇ, ತಾನೂ ಪುತ್ರರನ್ನು ಬಯಸಿದ ಅವಳು

ನನ್ನನ್ನು ಸಮೀಪಿಸಿ ಮಾತನಾಡಿದಳು.
ಶೂರಂ ಬಲವತಾಂ ಶ್ರೇಷ್ಠಂ ಕಾಂತರೂಪಮಕಲ್ಮಷಮ್ |
ಆತ್ಮತುಲ್ಯಂ ಮಮ ಸುತಂ ಪ್ರಯಚ್ಛಾಚ್ಯುತ ಮಾಚಿರಮ್ ॥14॥
ಎಲೈ ಅಚ್ಯುತನೇ, ಶೂರನೂ, ಬಲಿಷ್ಠನೂ, ಗುಣವಂತನೂ, ದೋಷವಿಲ್ಲದವನೂ, ಸುಂದರವಾದ ರೂಪವುಳ್ಳವನೂ, ನಿನಗೆ ಸಮಾನನಾದವನೂ ಆದ ಪುತ್ರನನ್ನು ನನಗೆ ಬೇಗ ಕೊಡು.
ನ ಹಿ ತೇಽಪ್ರಾಪ್ಯಮಸ್ತೀಹ ತ್ರಿಷು ಲೋಕೇಷು ಕಿಂಚನ |
ಲೋಕಾನ್ ಸೃಜೇಸ್ತ್ವಮಪರಾನಿಚ್ಛನ್ ಯದುಕುಲೋದ್ವಹ ॥15॥
ಎಲೈ ಯದುಕುಲೋದ್ವಹನೇ, ಮೂರುಲೋಕದಲ್ಲಿ ನೀನು ಪಡೆಯಲಾರದುದು ಯಾವುದೂ ಇಲ್ಲ. ನೀನು ಇಚ್ಛಿಸಿದರೆ ಬೇರೆ ಲೋಕಗಳನ್ನೇ ಸೃಷ್ಟಿಸುವಿ.
ತ್ವಯಾ ದ್ವಾದಶ ವರ್ಷಾಣಿ ವಾಯುಭೂತೇನ ಶುಷ್ಯತಾ |
ಆರಾಧ್ಯ ಪಶುಭರ್ತಾರಂ ರುಗ್ಮಿಣ್ಯಾಂ ಜನಿತಾಃ ಸುತಾಃ ॥16॥
ನೀನು ಹನ್ನೆರಡು ವರ್ಷಗಳ ಕಾಲ ವಾಯುವಿನಿಂದ ದೇಹವನ್ನು ಒಣಗಿಸಿ, ಪಶುಪತಿಯಾದ ಶಿವನನ್ನು ಆರಾಧಿಸಿ ರುಗ್ಮಿಣಿಯಲ್ಲಿ ಮಕ್ಕಳನ್ನು ಪಡೆವೆ.
ಚಾರುದೇಷ್ಣಃ ಸುಚಾರುಶ್ಚ ಚಾರುವೇಷೋ ಯಶೋಧರಃ |
ಚಾರುಶ್ರವಾಶ್ಚಾರುಯಶಾಃ ಪ್ರದ್ಯುಮ್ನಃ ಶಂಭುರೇವ ಚ ॥17॥
ಚಾರುದೇಷ್ಣ, ಸುಚಾರು, ಚಾರುವೇಷ, ಯಶೋಧರ, ಚಾರುಶ್ರವ, ಚಾರುಯಶ, ಪ್ರದ್ಯುಮ್ನ, ಶಂಭು ಎಂಬುವರು ನಿನ್ನ ಆ ಪುತ್ರರು.
ಯಥಾ ತೇ ಜನಿತಾಃ ಪುತ್ರಾ ರುಗ್ಮಿಣ್ಯಾಶ್ಚಾರುವಿಕ್ರಮಾಃ |
ತಥಾ ಮಮಾಪಿ ತನಯಂ ಪ್ರಯಚ್ಛ ಬಲಶಾಲಿನಮ್ ॥18॥
ರುಗ್ಮಿಣಿಯಲ್ಲಿ ಸುಂದರರೂ, ಪರಾಕ್ರಮಶಾಲಿಗಳೂ ಆದ ಪುತ್ರರನ್ನು ಪಡೆದಂತೆ ನನಗೂ ಬಲಶಾಲಿಯಾದ ಒಬ್ಬ ಪುತ್ರನನ್ನು ಕೊಡು.
ಇತ್ಯೇವಂ ಚೋದಿತೋ ದೇವ್ಯಾ ತಾಮವೋಚಂ ಸುಮಧ್ಯಮಾಮ್ |
ಅನುಜಾನೀಹಿ ಮಾಂ ರಾಜ್ಞಿ ಕರಿಷ್ಯೇ ವಚನಂ ತವ |
ಸಾ ಚ ಮಾಮಬ್ರವೀದ್ ಗಚ್ಛ ವಿಜಯಾಯ ಶಿವಾಯ ಚ ॥19॥
ಹೀಗೆ ಅವಳಿಂದ ಹೇಳಲ್ಪಟ್ಟ ನಾನು ರಾಣಿಯೇ ನಿನ್ನ ಮಾತನ್ನು ನಡೆಸುತ್ತೇನೆ. ನನಗೆ ಅನುಮತಿಯನ್ನು ಕೊಡು ಎಂದು ಕೇಳಿದೆನು. ಆಗ ಅವಳು ಮಂಗಳಕ್ಕಾಗಿ ಮತ್ತು ವಿಜಯಕ್ಕಾಗಿ ಹೋಗಿ ಬಾ ಎಂದು ಹೇಳಿದಳು.
ಬ್ರಹ್ಮಾ ಶಿವಃ ಕಾಶ್ಯಪಶ್ಚ ನದ್ಯೋ ದೇವಾ ಮನೋನುಗಾಃ |
ಕ್ಷೇತ್ರೌಷಧ್ಯೋ ಯಜ್ಞವಾಹಾಶ್ಛಂದಾಂಸ್ಯೃಷಿಗಣಾ ಧರಾ ॥20॥
ಸಮುದ್ರಾ ದಕ್ಷಿಣಾಃ ಸ್ತೋಭಾ ಋಕ್ಷಾಣಿ ಪಿತರೋ ಗ್ರಹಾಃ |
ದೇವಪತ್ನ್ಯೋ ದೇವಕನ್ಯಾ ದೇವಮಾತರ ಏವ ಚ ॥21॥
ಮನ್ವಂತರಾಣಿ ಗಾವಶ್ಚ ಚಂದ್ರಮಾಃ ಸವಿತಾ ಹವಿಃ |
ಸಾವಿತ್ರೀ ಬ್ರಹ್ಮವಿದ್ಯಾ ಚ ಋತವೋ ವತ್ಸರಾಃ ಕ್ಷಪಾಃ ॥22॥
ಕ್ಷಣಾ ಲವಾ ಮುಹೂರ್ತಾಶ್ಚ ನಿಮೇಷಾ ಯುಗಪರ್ಯಯಾಃ |
ರಕ್ಷಂತು ಸರ್ವತ್ರ ಗತಂ ತ್ವಾಂ ಯಾದವ ಸುಖಾವಹಮ್ |
ಅರಿಷ್ಟಂ ಗಚ್ಛ ಪಂಥಾನಮಪ್ರಮತ್ತೋ ಭವಾನಘ ॥23॥
ಬ್ರಹ್ಮದೇವ, ಶಿವ, ಕಶ್ಯಪ, ನದಿಗಳು, ಮನೋನುಸಾರಿಗಳಾದ ದೇವತೆಗಳು, ಕ್ಷೇತ್ರೌಷಧಿಗಳು, ಯಜ್ಞವನ್ನು ನಡೆಸುವ ಛಂದಸ್ಸುಗಳು, ಋಷಿಸಮೂಹಗಳು, ಭೂಮಿ, ಸಮುದ್ರ, ದಕ್ಷಿಣೆ, ಸ್ತೋಭಾಕ್ಷರಗಳು, ನಕ್ಷತ್ರಗಳು, ಪಿತೃದೇವತೆಗಳು, ಗ್ರಹಗಳು, ದೇವಪತ್ನಿಯರು, ದೇವಕನ್ಯೆಯರು, ದೇವಮಾತೆಗಯರು, ಮನ್ವಂತರಗಳು, ಗೋವುಗಳು, ಚಂದ್ರ, ಸೂರ್ಯ, ಹವಿಸ್ಸು, ಸಾವಿತ್ರಿ, ಬ್ರಹ್ಮವಿದ್ಯಾ, ಋತುಗಳು, ಸಂವತ್ಸರಗಳು, ರಾತ್ರಿಗಳು, ಕ್ಷಣ-ಲವ-ಮುಹೂರ್ತಗಳು, ನಿಮಿಷಗಳು, ಯುಗಚಕ್ರ ಎಲ್ಲವೂ ಎಲೈ ಯಾದವನೇ, ಕಾರ್ಯಸಿದ್ಧಿಗಾಗಿ ಹೊರಟ ನಿನಗೆ ಸುಖವನ್ನುಂಟು ಮಾಡಲಿ. ಎಲೈ ಅನಘನೇ, ಜಾಗರೂಕನಾಗಿ ಮಾರ್ಗದಲ್ಲಿ ಹೋಗು. ನಿನಗೆ ಯಾವುದೂ ಅನಿಷ್ಟವಾಗದಿರಲಿ.
ಏವಂ ಕೃತಸ್ವಸ್ತ್ಯಯನಸ್ತಯಾಽಹಂ
ತಾಮಭ್ಯನುಜ್ಞಾಪ್ಯ ಕಪೀಂದ್ರಪುತ್ರೀಮ್ |
ಪಿತುಃ ಸಮೀಪೇ ನರಸತ್ತಮಸ್ಯ
ಮಾತುಶ್ಚ ರಾಜ್ಞಶ್ಚ ತಥಾಹುಕಸ್ಯ |
ತಮರ್ಥಮಾವೇದ್ಯ ಯದಬ್ರವೀನ್ಮಾಂ
ವಿದ್ಯಾಧರೇಂದ್ರಸ್ಯ ಸುತಾ ಭೃಶಾರ್ತಾ ॥24॥
ಹೀಗೆ ಅವಳಿಂದ ಶುಭಾಶಂಸನೆಯನ್ನು ಮಾಡಿಸಿಕೊಂಡು ಕಪೀಂದ್ರನಾದ ಜಾಂಬವಂತನ ಪುತ್ರಿಯಾದ ಅವಳಿಂದ ಅನುಮತಿಯನ್ನು ಪಡೆದು , ನರಶ್ರೇಷ್ಠನಾದ ತಂದೆಯ, ತಾಯಿಯ ಮತ್ತು ಆಹುಕ ರಾಜನ ಬಳಿಯಲ್ಲಿ ಶ್ರೇಷ್ಠನಾದ ವಿದ್ಯಾಧರನ ಪುತ್ರಿಯಾದ ದುಃಖಭರಿತಳಾದ ಜಾಂಬವತಿಯು ನನಗೆ ಹೇಳಿದ ವಿಷಯವನ್ನು ನಿರೂಪಿಸಿ ಹೊರಟೆನು.
ತಾನಭ್ಯನುಜ್ಞಾಪ್ಯ ತದಾತಿದುಃಖಾದ್
ಗದಂ ತಥೈವಾತಿಬಲಂ ಚ ರಾಮಮ್ |

ಅಥೋಚತುಃ ಪ್ರೀತಿಯುಕ್ತೌ ತದಾನೀಂ
ತಪಃಸಮೃದ್ಧಿರ್ಭವತೋಽಸ್ತ್ವವಿಘ್ನಮ್ ॥25॥
ಅತ್ಯಂತ ದುಃಖದಿಂದ ಅವಳಿಂದ ಅನುಮತಿಯನ್ನು ಪಡೆದು ಅನಂತರ ಗದನನ್ನು ಮತ್ತು ದೊಡ್ಡಣ್ಣನೂ, ಅತಿಬಲಿಷ್ಠನೂ ಆದ ಬಲರಾಮನನ್ನು ನೋಡಿದೆನು. ಅವರಿಬ್ಬರೂ ಆಗ ನಿರ್ವಿಘ್ನವಾಗಿ ನಿನ್ನ ತಪಸ್ಸಿನ ಸಮೃದ್ಧಿಯುಂಟಾಗಲಿ ಎಂದು ಪ್ರೀತಿಯುಕ್ತರಾಗಿ ಹೇಳಿದರು.
ಪ್ರಾಪ್ಯಾನುಜ್ಞಾಂ ಗುರುಜನಾದಹಂ ತಾರ್ಕ್ಷ್ಯಮಚಿಂತಯಮ್ |
ಸೋಽವಹದ್ಧಿಮವಂತಂ ಮಾಂ ಪ್ರಾಪ್ಯ ಚೈನಂ ವ್ಯಸರ್ಜಯಮ್ ॥26॥
ಹಿರಿಯರ ಅನುಮತಿಯನ್ನು ಪಡೆದು ನಾನು ಗರುಡನನ್ನು ಚಿಂತಿಸಿದೆನು. ಅವನು ಬಂದು ನನ್ನನ್ನು ಹಿಮಾಲಯ ಪರ್ವತದವರೆಗೆ ಹೊತ್ತುಕೊಂಡು ಹೋದನು. ಅಲ್ಲಿ ಅವನನ್ನು ನಾನು ಕಳುಹಿಸಿಕೊಟ್ಟೆನು.
ತತ್ರಾಹಮದ್ಭುತಾನ್ ಭಾವಾನಪಶ್ಯಂ ಗಿರಿಸತ್ತಮೇ |
ಕ್ಷೇತ್ರಂ ಚ ತಪಸಾಂ ಶ್ರೇಷ್ಠಂ ಪಶ್ಯಾಮ್ಯಾಶ್ರಮಮುತ್ತಮಮ್ ॥27॥
ಆ ಶ್ರೇಷ್ಠವಾದ ಪರ್ವತದಲ್ಲಿ ನಾನು ಅದ್ಭುತವಾದ ವಿಷಯಗಳನ್ನು ನೋಡಿದೆನು. ತಪಸ್ಸುಗಳಿಗೆ ಅತ್ಯಂತ ಶ್ರೇಷ್ಠವಾದ ಕ್ಷೇತ್ರವನ್ನು ಮತ್ತು ಆಶ್ರಮವನ್ನು ನೋಡಿದೆನು.
ದಿವ್ಯಂ ವೈಯಾಘ್ರಪದ್ಯಸ್ಯ ಉಪಮನ್ಯೋರ್ಮಹಾತ್ಮನಃ |
ಪೂಜಿತಂ ದೇವಗಂಧರ್ವೈರ್ಬ್ರಾಹ್ಮ್ಯಾ ಲಕ್ಷ್ಮ್ಯಾ ಸಮನ್ವಿತಮ್ ॥28॥
ವೈಯಾಘ್ರಪಾದಗೋತ್ರದ ಮಹಾತ್ಮನಾದ ಉಪಮನ್ಯುವಿನ ದಿವ್ಯವೂ, ದಿವ್ಯಗಂಧಗಳಿಂದ ಪೂಜಿತವೂ, ವೇದಸಂಪತ್ತಿನಿಂದ ಕೂಡಿದುದೂ ಆದ ಆಶ್ರಮವನ್ನು ನೋಡಿದೆನು.
ಧವಕಕುಭಕದಂಬನಾರಿಕೇಲೈಃ
ಕುರಬಕಕೇತಕಜಂಬುಪಾಟಲಾಭಿಃ |
ವಟವರುಣಕವತ್ಸನಾಭಬಿಲ್ವೈಃ
ಸರಲಕಪಿತ್ಥಪ್ರಿಯಾಲಸಾಲತಾಳೈಃ ॥29॥
ಬದರೀಕುಂದಪುನ್ನಾಗೈರಶೋಕಾಮ್ರಾತಿಮುಕ್ತಕೈಃ |
ಭಲ್ಲಾತಕೈರ್ಮಧೂಕೈಶ್ಚ ಚಂಪಕೈಃ ಪನಸೈಸ್ತಥಾ ॥30॥
ಅನ್ಯೈರ್ಬಹುವಿಧೈರ್ವೃಕ್ಷೈಃ ಫಲಪುಷ್ಪಪ್ರದೈರ್ಯುತಮ್ |
ಪುಷ್ಪಗುಲ್ಮಲತಾಕೀರ್ಣಂ ಕದಳೀಷಂಡಶೋಭಿತಮ್ ॥31॥
ಆ ಆಶ್ರಮವು ಧವ-ಕಕುಭ (ಅರ್ಜುನ ವೃಕ್ಷ)-ಕದಂಬ-ನಾರಿಕೇಲ-ಕುರಬಕ- ಕೇತಕ- ಜಂಬು-
ಪಾಟಲ-ವಟ-ವರುಣ-ವತ್ಸನಾಭ-ಬಿಲ್ವ-ಸರಳ- ಕಪಿತ್ಥ-ಪ್ರಿಯಾಲ-ಸಾಲ ತಾಳವೃಕ್ಷಗಳಿಂದಲೂ,
ಬದರಿ-ಕುಂದ-ಪುನ್ನಾಗಗಳಿಂದಲೂ, ಅಶೋಕ-ಆಮ್ರ- ಅತಿಮುಕ್ತಕ-ಮಧೂಕ-ಚಂಪಕ ಪನಸ (ಹಲಸು)ಗಳಿಂದಲೂ ಇನ್ನೂ ಅನೇಕ ವಿಧವಾದ ಫಲ-ಪುಷ್ಪಭರಿತವಾದ ವೃಕ್ಷಗಳಿಂದಲೂ ಕೂಡಿದ್ದು, ಪುಷ್ಪಿತವಾದ ಗುಲ್ಮಲತೆಗಳಿಂದ ಕೂಡಿ ಕದಳೀ ವೃಕ್ಷಗಳಿಂದ ಶೋಭಿತವಾಗಿದ್ದಿತು.
ನಾನಾಶಕುನಿಸಂಭೋಜ್ಯೈಃ ಫಲೈರ್ವೃಕ್ಷೈರಲಂಕೃತಮ್ |
ಯಥಾಸ್ಥಾನವಿನಿಕ್ಷಿಪ್ತೈರ್ಭೂಷಿತಂ ವನರಾಜಿಭಿಃ ॥32॥
ಅನೇಕ ಪಕ್ಷಿಗಳಿಗೆ ಪ್ರೀತಿಯ ಆಹಾರವಾದ ಹಣ್ಣುಗಳಿಂದ ಕೂಡಿದ ವೃಕ್ಷಗಳಿಂದ ಅಲಂಕೃತವಾಗಿದ್ದಿತು. ವನರಾಜಿಗಳು ತಾವು ಇರಬೇಕಾದ ಸ್ಥಾನದಲ್ಲಿ ಆಶ್ರಮಕ್ಕೆ ಭೂಷಣಪ್ರಾಯವಾಗಿದ್ದವು.
ರುರುವಾರಣಶಾರ್ದೂಲಸಿಂಹದ್ವೀಪಿಸಮಾಕುಲಮ್ |
ಕುರಂಗಬರ್ಹಿಣಾಕೀರ್ಣಂ ಮಾರ್ಜಾರಭುಜಗಾವೃತಮ್ |
ಪೂಗೈಶ್ಚ ಮೃಗಜಾತೀನಾಂ ಮಹಿಷರ್ಕ್ಷನಿಷೇವಿತಮ್ ॥33॥
ರುರು (ಜಿಂಕೆ)-ವಾರಣ (ಆನೆ)-ಶಾರ್ದೂಲ-ಸಿಂಹ-ದ್ವೀಪಿ ಮೃಗಗಳಿಂದ ನಿಬಿಡವಾಗಿದ್ದಿತು. ಕುರಂಗ-ಬರ್ಹಿ-ಕಸ್ತೂರಿಮೃಗ ಮತ್ತು ಸರ್ಪಗಳಿಂದ ಆವೃತವಾಗಿದ್ದಿತು. ಪೂಗ ವೃಕ್ಷಗಳಿಂದಲೂ, ಅನೇಕ ಜಾತಿಯ ಮೃಗಗಳಿಂದಲೂ, ಮಹಿಷ ಕರಡಿಗಳಿಂದಲೂ ಸೇವಿತವಾಗಿದ್ದಿತು.
ನಾನಾಪುಷ್ಪರಜೋಮಿಶ್ರೋ ಗಜದಾನಾಧಿವಾಸಿತಃ |
ದಿವ್ಯಸ್ತ್ರೀಗೀತಬಹುಲೋ ಮಾರುತೋಽತ್ರ ಸುಖೋ ವವೌ ॥34॥
ನಾನಾ ಪುಷ್ಪ-ಗರಜೋ ಮಿಶ್ರಿತವಾದ, ಗಜಗಳ ಮದೋದಕದ ಸುವಾಸನೆಯಿಂದ ಕೂಡಿದ, ದಿವ್ಯಸ್ತ್ರೀಯರ ಸಂಗೀತಮಿಶ್ರಿತವಾದ ವಾಯುವು ಅಲ್ಲಿ ಶುಭವಾಗಿ ಬೀಸುತ್ತಿದ್ದಿತು.
ಧಾರಾನಿನಾದೈರ್ವಿಹಗಪ್ರಣಾದೈಃ
ಶುಭೈಸ್ತಥಾ ಬೃಂಹಿತೈಃ ಕುಂಜರಾಣಾಮ್ |
ಗೀತೈಸ್ತಥಾ ಕಿನ್ನರಾಣಾಮುದಾರೈಃ
ಶುಭೈಃ ಸ್ವನೈಃ ಸಾಮಗಾನಾಂ ಚ ವೀರ ॥35॥
ಎಲೈ ವೀರನೇ, ಜಲಧಾರೆಗಳ ನಾದದಿಂದಲೂ, ಪಕ್ಷಿಗಳ ಶುಭವಾದ ಶಬ್ದಗಳಿಂದಲೂ, ಗಜಗಳ ಬೃಂಹಿತಗಳಿಂದಲೂ, ಕಿನ್ನರರ ಉದಾರವಾದ ಗಾನ ಶಬ್ದದಿಂದಲೂ, ಸಾಮವೇದಗಾಯಕರ ಶುಭವಾದ ಸ್ವರದಿಂದಲೂ ಕೂಡಿದ್ದಿತು.

ಅಚಿಂತ್ಯಂ ಮನಸಾಪ್ಯನ್ಯೈಃ ಸರೋಭಿಃ ಸಮಲಂಕೃತಮ್ |
ವಿಶಾಲೈಶ್ಚಾಗ್ನಿಶರಣೈರ್ಭೂಷಿತಂ ಕುಶಸಂವೃತಮ್ ||36||
ಉಳಿದವರು ಮನಸ್ಸಿನಿಂದಲೂ ಚಿಂತಿಸಲು ಸಾಧ್ಯವಿಲ್ಲದ ಸರೋವರಗಳಿಂದ ಅಲಂಕೃತವಾಗಿದ್ದಿತು. ವಿಶಾಲವಾದ ಅಗ್ನಿಗೃಹಗಳಿಂದ ಭೂಷಿತವಾಗಿ ಹೇರಳವಾದ ದರ್ಭೆಗಳಿಂದ ಕೂಡಿದ್ದಿತು.
ವಿಭೂಷಿತಂ ಪುಣ್ಯಪವಿತ್ರತೋಯಯಾ
ಸದಾ ಚ ಜುಷ್ಟಂ ನೃಪ ಜಹ್ನುಕನ್ಯಯಾ |
ಮಹಾತ್ಮಭಿರ್ಧರ್ಮಭೃತಾಂ ವರಿಷ್ಠೈ-
ರ್ಮಹರ್ಷಿಭಿರ್ಭೂಷಿತಮಗ್ನಿಕಲ್ಪೈಃ ||37||
ಎಲೈ ರಾಜನೇ, ಪವಿತ್ರಜಲವುಳ್ಳ ಜಾಹ್ನವೀ ನದಿಯಿಂದ ಅದು ಸೇವಿತವಾಗಿದ್ದಿತು ಮತ್ತು ವಿಭೂಷಿತವಾಗಿದ್ದಿತು. ಮಹಾತ್ಮರೂ, ಧರ್ಮಿಷ್ಠರಲ್ಲಿ ಶ್ರೇಷ್ಠರೂ, ಅಗ್ನಿಕಲ್ಪರೂ ಆದ ಮಹರ್ಷಿಗಳಿಂದ ಭೂಷಿತವಾಗಿದ್ದಿತು.
ವಾಯ್ವಾಹಾರೈರಂಬುಪೈರ್ಜಪ್ಯನಿತ್ಯೈಃ
ಸಂಪ್ರಕ್ಷಾಲೈರ್ಯತಿಭಿರ್ಧ್ಯಾನನಿತ್ಯೈಃ |
ಧೂಮಾಶನೈರೂಷ್ಮಪೈಃ ಕ್ಷೀರಪೈಶ್ಚ
ವಿಭೂಷಿತಂ ಬ್ರಾಹ್ಮಣೇಂದ್ರೈಃ ಸಮಂತಾತ್ ||38||
ವಾಯುಭಕ್ಷರಾದ, ಅಬ್ಭಕ್ಷರಾದ, ನಿತ್ಯಜಪಶೀಲರಾದ, ಸ್ನಾನಶೀಲರಾದ ಯತಿಗಳಾದ, ಸದಾ ಧ್ಯಾನ ನಿರತರಾದ, ಧೂಮಾಹಾರವುಳ್ಳ, ಹವೆಯನ್ನು ಪಾನ ಮಾಡುವವರಾದ, ಕ್ಷೀರವನ್ನು ಪಾನ ಮಾಡುವವರಾದ ಬ್ರಾಹ್ಮಣಶ್ರೇಷ್ಠರಿಂದ ಎಲ್ಲ ಕಡೆಗಳಲ್ಲಿಯೂ ವಿಭೂಷಿತವಾಗಿದ್ದಿತು.
ಗೋಚಾರಿಣೋಽಥಾಶ್ಮಕುಟ್ಟಾ ದಂತೋಲೂಖಲಿನಸ್ತಥಾ |
ಮರೀಚಿಪಾಃ ಫೇನಪಾಶ್ಚ ತಥೈವ ಮೃಗಚಾರಿಣಃ |
ಅಶ್ವತ್ಥಫಲಭಕ್ಷಾಶ್ಚ ತಥಾ ಹ್ಯುದಕಶಾಯಿನಃ |
ಚೀರಚರ್ಮಾಂಬರಧರಾಸ್ತಥಾ ವಲ್ಕಲಧಾರಿಣಃ ||39||
ಅಲ್ಲಿ ಗೋವ್ರತಧಾರಿಗಳೂ, ಅಶ್ಮಕುಟ್ಟನರೂ, ದಂತೋಲೂಬಲಿಗಳೂ, ಸೂರ್ಯಕಿರಣಗಳನ್ನು ಪಾನ ಮಾಡುವವರೂ, ಕೇವಲ ನೊರೆಯನ್ನು ಪಾನ ಮಾಡುವವರೂ, ದೃಢವ್ರತವನ್ನು ಆಚರಿಸುವವರೂ ಇದ್ದರು. ಅಶ್ವತ್ಥ ಫಲವನ್ನು ಭಕ್ಷಿಸುವವರು, ನೀರಿನಲ್ಲಿ ಮಲಗುವವರು, ಕೃಷ್ಣಾಜಿನ ಮತ್ತು ನಾರು ಮಡಿಯನ್ನು ಉಡುವವರು ಇದ್ದರು.
ಸುದುಃಖಾನ್ನಿಯಮಾಂಸ್ತಾಂಸ್ತಾನ್ ವಹತಃ ಸುತಪೋನ್ವಿತಾನ್ |
ಪಶ್ಯನ್ನುತ್ಫುಲ್ಲನಯನಃ ಪ್ರವೇಷ್ಟುಮುಪಚಕ್ರಮೇ ||40||
ಕಷ್ಟಕರವಾದ ಆಯಾ ನಿಯಮಗಳನ್ನು ಧರಿಸಿ, ಒಳ್ಳೆಯ ತಪಸ್ಸಿನಿಂದ ಕೂಡಿದ ಆ ಋಷಿಗಳನ್ನು ಅರಳಿದ ಕಣ್ಣುಗಳಿಂದ ನೋಡಿ, ನಾನು ಆ ಆಶ್ರಮವನ್ನು ಪ್ರವೇಶಿಸಲು ಉಪಕ್ರಮಿಸಿದೆನು.
ಸುಪೂಜಿತಂ ದೇವಗಣೈರ್ಮಹಾತ್ಮಭಿಃ
ಶಿವಾದಿಭಿರ್ಭಾರತ ಪುಣ್ಯಕರ್ಮಭಿಃ |
ರರಾಜ ತಚ್ಚಾಶ್ರಮಮಂಡಲಂ ಸದಾ
ದಿವೀವ ರಾಜನ್ ರವಿಮಂಡಲಂ ಯಥಾ ||41||
ಎಲೈ ರಾಜನೇ, ಮಹಾತ್ಮರಾದ, ಪುಣ್ಯಕರ್ಮಿಗಳಾದ ಶಿವಾದಿ ದೇವತೆಗಳ ಸಮೂಹದಿಂದ ಪೂಜಿಸಲ್ಪಟ್ಟ ಆ ಆಶ್ರಮಪ್ರದೇಶವು ಆಕಾಶದಲ್ಲಿ ಸೂರ್ಯಮಂಡಲದಂತೆ ಶೋಭಿಸುತ್ತಿದ್ದಿತು.
ಕ್ರೀಡಂತಿ ಸರ್ಪೈರ್ನಕುಲಾ ಮೃಗಾ ವ್ಯಾಘ್ರೈಶ್ಚ ಯತ್ರ ವೈ |
ಪ್ರಭಾವಾದ್ ದೀಪ್ತತಪಸಃ ಸನ್ನಿಕರ್ಷಗುಣಾನ್ವಿತಾಃ ||42||
ಉಜ್ವಲವಾದ ತಪಸ್ಸಿನ ಪ್ರಭಾವದಿಂದ, ಆ ತಪಸ್ಸಿನ ಗುಣಗಳಿಂದ ಕೂಡಿದವುಗಳಾಗಿ ಅಲ್ಲಿ ಮುಂಗುಸಿಗಳು ಸರ್ಪಗಳ ಜೊತೆಯಲ್ಲಿಯೂ, ಜಿಂಕೆಗಳು ವ್ಯಾಘ್ರಗಳ ಜೊತೆಯಲ್ಲಿಯೂ ಆಡುತ್ತಿದ್ದವು.
ತತ್ರಾಶ್ರಮಪದೇ ಶ್ರೇಷ್ಠೇ ಸರ್ವಭೂತಮನೋರಮೇ |
ಸೇವಿತೇ ದ್ವಿಜಶಾರ್ದೂಲೈರ್ವೇದವೇದಾಂಗಪಾರಗೈಃ ||43||
ನಾನಾನಿಯಮವಿಖ್ಯಾತೈರೃಷಿಭಿಶ್ಚ ಮಹಾತ್ಮಭಿಃ |
ಪ್ರವಿಶನ್ನೇವ ಚಾಪಶ್ಯಂ ಜಟಾಚೀರಧರಂ ಪ್ರಭುಮ್ ||44||
ಸರ್ವಪ್ರಾಣಿಗಳ ಮನಸ್ಸಿಗೂ ಸಂತೋಷವನ್ನು ಕೊಡುವ, ವೇದ-ವೇದಾಂಗ ಪಾರಂಗತರಾದ ಶ್ರೇಷ್ಠ ಬ್ರಾಹ್ಮಣರಿಂದ ಸೇವಿತವಾದ, ನಾನಾ ನಿಯಮಗಳಿಂದ ಒಡಗೂಡಿದ ಮಹಾತ್ಮರಾದ ಋಷಿಗಳಿಂದ ಸೇವಿತವಾದ ಆ ಆಶ್ರಮವನ್ನು ಪ್ರವೇಶಿಸುತ್ತಲೇ ನಾನು ಜಟಾವಲ್ಕಲಧರನಾದ ಪ್ರಭುವನ್ನು ನೋಡಿದೆನು.
ತೇಜಸಾ ತಪಸಾ ಚೈವ ದೀಪ್ಯಮಾನಂ ಯಥಾನಲಮ್ |
ಶಿಷ್ಯಮಧ್ಯಗತಂ ಶಾಂತಂ ಯುವಾನಂ ಬ್ರಾಹ್ಮಣರ್ಷಭಮ್ |
ಶಿರಸಾ ವಂದಮಾನಂ ಮಾಮುಪಮನ್ಯುರಭಾಷತ ||45||
ತೇಜಸ್ಸಿನಿಂದಲೂ ಮತ್ತು ತಪಸ್ಸಿನಿಂದಲೂ ಅಗ್ನಿಯಂತೆ ಜ್ವಲಿಸುವ, ಶಿಷ್ಯರ ಮಧ್ಯದಲ್ಲಿ ಇದ್ದು ಶಾಂತನಾದ, ಯುವಕನಾದ, ಬ್ರಾಹ್ಮಣಶ್ರೇಷ್ಠನನ್ನು ಶಿರಸಾ ವಂದಿಸುವ ಪ್ರಭುವಾದ ಉಪಮನ್ಯುವನ್ನು ನೋಡಿದೆನು. ಅವನು ನನ್ನನ್ನು ಕುರಿತು ಹೇಳಿದನು.

ಸ್ವಾಗತಂ ಪುಂಡರೀಕಾಕ್ಷ ಸಫಲಾನಿ ತಪಾಂಸಿ ನಃ |
ಯತ್ಪೂಜ್ಯಃ ಪೂಜಯಸಿ ನೋ ದ್ರಷ್ಟವ್ಯೋ ದ್ರಷ್ಟುಮಿಚ್ಛಸಿ ॥46॥
ಪುಂಡರೀಕಾಕ್ಷನೇ ನಿನಗೆ ಸ್ವಾಗತ. ಪೂಜ್ಯನಾದ ನೀನು ನಮ್ಮನ್ನು ಪೂಜಿಸುತ್ತಿರುವುದರಿಂದ, ದ್ರಷ್ಟವ್ಯನಾದ ನೀನು ನಮ್ಮನ್ನು ನೋಡಲು ಇಚ್ಛಿಸುವುದರಿಂದ ನಮ್ಮ ತಪಸ್ಸುಗಳು ಸಫಲವಾಗಿವೆ ಎಂದು ಉಪಮನ್ಯುವು ಹೇಳಿದನು.
ತಮಹಂ ಪ್ರಾಂಜಲಿರ್ಭೂತ್ವಾ ಮೃಗಪಕ್ಷಿಷ್ವಥಾಗ್ನಿಷು |
ಧರ್ಮೇ ಚ ಶಿಷ್ಯವರ್ಗೇ ಚ ಸಮಪೃಚ್ಛಮನಾಮಯಮ್ ॥47॥
ತತೋ ಮಾಂ ಭಗವಾನಾಹ ಸಾಮ್ನಾ ಪರಮವಲ್ಗುನಾ |
ಲಪ್ಸ್ಯಸೇ ತನಯಂ ಕೃಷ್ಣ ಆತ್ಮತುಲ್ಯಮಸಂಶಯಮ್ ॥48॥
ನಾನು ಅವನಿಗೆ ಕೈಗಳನ್ನು ಮುಗಿದು ಮೃಗಪಕ್ಷಿಗಳಲ್ಲಿ, ಅಗ್ನಿಗಳಲ್ಲಿ, ಧರ್ಮಗಳಲ್ಲಿ, ಶಿಷ್ಯವರ್ಗದಲ್ಲಿ ಕುಶಲವನ್ನು ವಿಚಾರಿಸಿದೆನು. ಅನಂತರ ಪೂಜ್ಯನಾದ ಉಪಮನ್ಯುವು ಪರಮ ಮಧುರವಾದ ಮಾತುಗಳಿಂದ ನನ್ನನ್ನು ಕುರಿತು- ಕೃಷ್ಣನೇ, ನೀನು ನಿನಗೆ ಸಮಾನನಾದ ಪುತ್ರನನ್ನು ಪಡೆಯುವಿ ಎಂದು ಹೇಳಿದನು.
ತಪಃ ಸುಮಹದಾಸ್ಥಾಯ ತೋಷಯೇಶಾನಮೀಶ್ವರಮ್ |
ಇಹ ದೇವಃ ಸಪತ್ನೀಕಃ ಸಮಾಕ್ರೀಡತ್ಯಧೋಕ್ಷಜ ॥49॥
ದೊಡ್ಡ ತಪಸ್ಸನ್ನು ಮಾಡಿ ಈಶಾನನಾದ ಈಶ್ವರನನ್ನು ಸಂತೋಷಗೊಳಿಸು. ಎಲೈ ಅಧೋಕ್ಷಜನೇ, ಇಲ್ಲಿ ಶಿವನು ಪತ್ನಿಯ ಜೊತೆಯಲ್ಲಿ ಆಟವಾಡುತ್ತಾನೆ.
ಇಹೈವ ದೇವತಾಶ್ರೇಷ್ಠಂ ದೇವಾಃ ಸರ್ಷಿಗಣಾಃ ಪುರಾ |
ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ |
ತೋಷಯಿತ್ವಾ ಶುಭಾನ್ ಕಾಮಾನ್ ಪ್ರಾಪ್ನುವಂಸ್ತೇ ಜನಾರ್ದನ ॥50॥
ಎಲೈ ಜನಾರ್ದನನೇ, ಇಲ್ಲಿಯೇ ದೇವತೆಗಳು, ಋಷಿಗಳು ಹಿಂದೆ ಬ್ರಹ್ಮಚರ್ಯದಿಂದಲೂ, ತಪಸ್ಸಿನಿಂದಲೂ, ಸತ್ಯದಮಗಳಿಂದಲೂ ದೇವಶ್ರೇಷ್ಠನಾದ ಶಿವನನ್ನು ಒಲಿಸಿ ಶುಭವಾದ ಕಾಮಗಳನ್ನು ಪಡೆದರು.
ತೇಜಸಾಂ ತಪಸಾಂ ಚೈವ ನಿಧಿಃ ಸ ಭಗವಾನಿಹ |
ಶುಭಾಶುಭಾನ್ವಿತಾನ್ ಭಾವಾನ್ ವಿಸೃಜನ್ ಸಂಕ್ಷಿಪನ್ನಪಿ |
ಆಸ್ತೇ ದೇವ್ಯಾ ಸಹಾಚಿಂತ್ಯೋ ಯಂ ಪ್ರಾರ್ಥಯಸಿ ಶತ್ರುಹನ್ ॥51॥
ತೇಜಸ್ಸು ಮತ್ತು ತಪಸ್ಸುಗಳ ನಿಧಿಯಾದ, ಪೂಜ್ಯನಾದ ಶಿವನು ಶುಭಾಶುಭ ಪದಾರ್ಥಗಳನ್ನು ಸೃಷ್ಟಿಸುತ್ತಾ, ಸಂಹಾರ ಮಾಡುತ್ತಾ ದೇವಿ ಪಾರ್ವತಿಯ ಜೊತೆಯಲ್ಲಿ ಇರುತ್ತಾನೆ. ಎಲೈ ಶತ್ರುಘಾತಕನೇ, ಯಾವನನ್ನು ನೋಡಲು ಬಯಸುವಿಯೋ ಅವನು ಅಚಿಂತ್ಯನಾದವನು.
ಹಿರಣ್ಯಕಶಿಪುರ್ಯೋಽಭೂದ್ ದಾನವೋ ಮೇರುಕಂಪನಃ |
ತೇನ ಸರ್ವಾಮರೈಶ್ವರ್ಯಂ ಶರ್ವಾತ್ ಪ್ರಾಪ್ತಂ ಸಮಾರ್ಬುದಮ್ ॥
ಮೇರುಪರ್ವತವನ್ನೇ ಅಲ್ಲಾಡಿಸಿ, ಹಿರಣ್ಯಕಶಿಪು ಎಂಬ ದಾನವನು ಶಿವನಿಂದ ವರವನ್ನು ಪಡೆದು ಒಂದು ಅರ್ಬುದ ವರ್ಷಗಳವರೆಗೆ ಎಲ್ಲ ದೇವತೆಗಳ ಐಶ್ವರ್ಯವನ್ನು ಪಡೆದನು.
ತಸ್ಯೈವ ಪುತ್ರಪ್ರವರೋ ಮಂದರೋ ನಾಮ ವಿಶ್ರುತಃ |
ಮಹಾದೇವವರಾಚ್ಛಕ್ರಂ ವರ್ಷಾರ್ಬುದಮಯೋಧಯತ್ ॥53॥
ಅವನ ಪುತ್ರಶ್ರೇಷ್ಠನಾದ ಪ್ರಖ್ಯಾತನಾದ ಮಂದರನೆಂಬುವನು ಶಿವನ ವರದಿಂದ ಇಂದ್ರನ ಜೊತೆಯಲ್ಲಿ ಅರ್ಬುದ ವರ್ಷಗಳ ಕಾಲ ಯುದ್ಧವನ್ನು ಮಾಡಿದನು.
ವಿಷ್ಣೋಶ್ಚಕ್ರಂ ಚ ತದ್ಘೋರಂ ವಜ್ರಮಾಖಂಡಲಸ್ಯ ಚ |
ಶೀರ್ಣಂ ಪುರಾಽಭವತ್ ತಾತ ಗ್ರಹಸ್ಯಾಂಗೇಷು ಕೇಶವ ॥54॥
ಎಲೈ ಕೇಶವನೇ, ಹಿಂದೆ ಘೋರವಾದ ವಿಷ್ಣುಚಕ್ರವು ಮತ್ತು ಇಂದ್ರನ ವಜ್ರಾಯುಧವು ಗ್ರಹಗಳ ಅಂಗಗಳಲ್ಲಿ ಚೂರಾಯಿತು.
ಯತ್ ತದ್ ಭಗವತಾ ಪೂರ್ವಂ ದತ್ತಂ ಚಕ್ರಂ ತವಾನಘ |
ಜಲಾಂತರಚರಂ ಹತ್ವಾ ದೈತ್ಯಂ ಚ ಬಲಗರ್ವಿತಮ್ ॥54.1॥
ಉತ್ಪಾದಿತಂ ವೃಷಾಂಕೇನ ದೀಪ್ತಜ್ವಲನಸನ್ನಿಭಮ್ |
ದತ್ತಂ ಭಗವತಾ ತುಭ್ಯಂ ದುರ್ದರ್ಶಂ ತೇಜಸಾದ್ಭುತಮ್ ॥54.2॥
ಎಲೈ ಅನಘನೇ, ಪೂಜ್ಯನಾದ ಶಿವನು ಜಲಾಂತರಚಾರಿಯೂ, ಬಲದರ್ಪಿತನೂ ಆದ ದೈತ್ಯನನ್ನು ಕೊಂದು ಜ್ವಲಿಸುವ ಅಗ್ನಿಗೆ ಸಮಾನವಾದ ಯಾವ ಚಕ್ರವನ್ನು ಸೃಷ್ಟಿ ಮಾಡಿ ನಿನಗೆ ಕೊಟ್ಟಿದ್ದನೋ ಅದರ ಅದ್ಭುತವಾದ ತೇಜಸ್ಸಿನಿಂದಾಗಿ ಅದನ್ನು ಯಾರೂ ನೋಡಲು ಸಾಧ್ಯವಾಗುತ್ತಿರಲಿಲ್ಲ.
ನ ಶಕ್ಯಂ ದ್ರಷ್ಟುಮನ್ಯೇನ ವರ್ಜಯಿತ್ವಾ ಪಿನಾಕಿನಮ್ |
ಸುದರ್ಶನಂ ಭವೇತ್ಯೇವಂ ಭವೇನೋಕ್ತಂ ತದಾ ತು ತತ್ ॥54.3॥
ಸುದರ್ಶನಂ ತದಾ ತಸ್ಯ ಲೋಕೇ ನಾಮ ಪ್ರತಿಷ್ಠಿತಮ್ |
ತಜ್ಜೀರ್ಣಮಭವತ್ ತಾತ ಗ್ರಹಸ್ಯಾಂಗೇಷು ಕೇಶವ ॥54.4॥
ಶಿವನನ್ನು ಬಿಟ್ಟು ಬೇರೆ ಯಾವನೂ ಅದನ್ನು ನೋಡಲು ಸಾಧ್ಯವಾಗುತ್ತಿರಲಿಲ್ಲ. ಆಗ ಶಿವನು ಅದನ್ನು ಕುರಿತು ನೀನು ಸುದರ್ಶನನಾಗು (ನೋಡಲು ಸಾಧ್ಯವಾಗುವುದಾಗಿ ಆಗು) ಎಂದು ಹೇಳಿದನು. ಆಗಿನಿಂದಲೂ ಅದಕ್ಕೆ ಲೋಕದಲ್ಲಿ ಸುದರ್ಶನನೆಂದೇ

ನಾಮವು ರೂಢವಾಯಿತು. ಎಲೈ ಕೇಶವನೇ, ಪ್ರೀತಿಪಾತ್ರನೇ, ಆ ಸುದರ್ಶನವು ಗ್ರಹದ ಅಂಗಗಳಲ್ಲಿ ಜೀರ್ಣವಾಯಿತು.
ಗ್ರಹಸ್ಯಾತಿಬಲಸ್ಯಾಂಗೇ ವರದತ್ತಸ್ಯ ಧೀಮತಃ |
ನ ಶಸಾತ್ರಣಿ ವಹಂತ್ಯಂಗೇ ಚಕ್ರವಜ್ರಶತಾನ್ಯಪಿ ॥54.5॥
ಮೇಧಾವಿಯಾದ ವರವನ್ನು ಪಡೆದ ಅತಿಬಲಿಷ್ಠವಾದ ಆ ಗ್ರಹದ ಅಂಗದಲ್ಲಿ ಸುದರ್ಶವೂ ನೂರು ವಜ್ರಾಯುಧಗಳೂ ಮತ್ತು ಉಳಿದ ಶಸ್ತ್ರಗಳೂ ಯಾವ ಪರಿಣಾಮವನ್ನೂ ಮಾಡುವುದಿಲ್ಲ.
ಅರ್ದ್ಯಮಾನಾಶ್ಚ ವಿಬುಧಾ ಗ್ರಹೇಣ ಸುಬಲೀಯಸಾ |
ಶಿವದತ್ತವರಾನ್ ಜಘ್ನುರಸುರೇಂದ್ರಾನ್ ಸುರಾ ಭೃಶಮ್ ॥55॥
ತುಷ್ಟೋ ವಿದ್ಯುತ್ಪ್ರಭಸ್ಯಾಪಿ ತ್ರಿಲೋಕೇಶ್ವರತಾಮದಾತ್ |
ಶತಂ ವರ್ಷಸಹಸ್ರಾಣಾಂ ಸರ್ವಲೋಕೇಶ್ವರೋಽಭವತ್ |
ಮಮೈವಾನುಚರೋ ನಿತ್ಯಂ ಭವಿತಾಸೀತಿ ಚಾಬ್ರವೀತ್ ॥56॥
ಬಲಿಷ್ಠವಾದ ಗ್ರಹದಿಂದ ಪೀಡೆಗೆ ಒಳಗಾದ ದೇವತೆಗಳು ಶಿವನಿಂದ ವರವನ್ನು ಪಡೆದು ಅಸುರೇಂದ್ರರನ್ನು ಚೆನ್ನಾಗಿ ಘಾಸಿಗೊಳಿಸಿದರು. ಶಿವನು ವಿದ್ಯುತ್ಪ್ರಭನಿಗೆ ಸಂತೋಷದಿಂದ ತ್ರಿಲೋಕೇಶ್ವರ ಪದವಿಯನ್ನು ಕೊಟ್ಟನು. ಅವನು ನೂರು ಸಾವಿರ ವರ್ಷಗಳ ಕಾಲ ಸರ್ವಲೋಕೇಶ್ವರನಾದನು. ಶಿವನು ಅವನನ್ನು ಕುರಿತು ನಿತ್ಯವೂ ನನ್ನ ಅನುಚರನಾಗುವಿ ಎಂದು ಹೇಳಿದನು.
ತಥಾ ಪುತ್ರಸಹಸ್ರಾಣಾಮಯುತಂ ಚ ದದೌ ಪ್ರಭುಃ |
ಕುಶದ್ವೀಪಂ ಚ ಸ ದದೌ ರಾಜ್ಯೇನ ಭಗವಾನಜಃ ॥57॥
ಹಾಗೆಯೇ ಐದುಸಹಸ್ರ ಪುತ್ರರನ್ನೂ ಶಿವನು ಕೊಟ್ಟನು. ಭಗವಂತನಾದ ಅಜನಾದ ಅವನು ಅವನ ರಾಜ್ಯವಾಗಿ ಕುಶದ್ವೀಪವನ್ನು ಕೊಟ್ಟನು.
ತಥಾ ಶತಮುಖೋ ನಾಮ ಧಾತ್ರಾ ಸೃಷ್ಟೋ ಮಹಾಭುಜಃ |
ಯೇನ ವರ್ಷಶತಂ ಸಾಗ್ರಮಾತ್ಮಮಾಂಸೈರ್ಹುತೋಽನಲಃ |
ತಂ ಪ್ರಾಹ ಭಗವಾಂಸ್ತುಷ್ಟಃ ಕಿಂ ಕರೋಮೀತಿ ಶಂಕರಃ ॥58॥
ಶತಮುಖನೆಂಬ ಬ್ರಹ್ಮದೇವನಿಂದ ಸೃಷ್ಟನಾದ ಮಹಾಸುರನು ಆತ್ಮಮಾಂಸದಿಂದ ನೂರು ವರ್ಷಗಳಿಂತಲೂ ಹೆಚ್ಚು ಕಾಲ ಅಗ್ನಿಯಲ್ಲಿ ಹೋಮ ಮಾಡಿದನು. ಸಂತುಷ್ಟನಾದ ಭಗವಂತನಾದ ಶಂಕರನು ಅವನನ್ನು ಕುರಿತು ನಿನಗೆ ಏನು ಬೇಕು ಎಂದು ಕೇಳಿದನು.
ತಂ ವೈ ಶತಮುಖಃ ಪ್ರಾಹ ಯೋಗೋ ಭವತು ಮೇಽದ್ಭುತಃ |
ಬಲಂ ಚ ದೈವತಶ್ರೇಷ್ಠ ಶಾಶ್ವತಂ ಸಂಪ್ರಯಚ್ಛ ಮೇ ॥59॥
ಆಗ ಶತಮುಖನು ಅವನನ್ನು ಕುರಿತು- ಎಲೈ ದೇವಶ್ರೇಷ್ಠನೇ, ನನಗೆ ಅದ್ಭುತವಾದ ಯೋಗಶಕ್ತಿಯನ್ನು ಕೊಡು ಮತ್ತು ಶಾಶ್ವತವಾದ ಬಲವನ್ನೂ ಕೊಡು ಎಂದು ಕೇಳಿದನು.
ಸ್ವಾಯಂಭುವಃ ಕ್ರತುಶ್ಚಾಪಿ ಪುತ್ರಾರ್ಥಮಭವತ್ಪುರಾ |
ಆವಿಶ್ಯ ಯೋಗೇನಾತ್ಮಾನಂ ತ್ರೀಣಿ ವರ್ಷಶತಾನ್ಯಪಿ ॥60॥
ತಸ್ಯ ದೇವೋಽದದತ್ ಪುತ್ರಾನ್ ಸಹಸ್ರಂ ಕ್ರತುಸಮ್ಮಿತಾನ್ |
ಯೋಗೇಶ್ವರಂ ದೇವಗೀತಂ ವೇತ್ಥ ಕೃಷ್ಣ ನ ಸಂಶಯಃ ॥61॥
ಹಿಂದೆ ಪುತ್ರಾರ್ಥವಾಗಿ ಅವನಿಂದ ಸ್ವಾಯಂಭುವ ಕ್ರತುವು ನಡೆಯಿತು. ಶಿವನು ಮೂರು ನೂರು ವರ್ಷಗಳ ಕಾಲ ಯೋಗಶಕ್ತಿಯಿಂದ ಅವನಲ್ಲಿ ಆವೇಶಗೊಂಡು ಅವನಿಗೆ ಕ್ರತುವನ್ನು ಮಾಡಲು ಅರ್ಹರಾದ ಸಹಸ್ರ ಪುತ್ರರನ್ನು ಕಳುಹಿಸಿದನು. ದೇವಗೀತನಾದ ಯೋಗೇಶ್ವರನಾದ ಶಿವನನ್ನು ನೀನು ತಿಳಿದಿದ್ದೀಯೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಯಾಜ್ಞವಲ್ಕ್ಯ ಇತಿ ಖ್ಯಾತ ಋಷಿಃ ಪರಮಧಾರ್ಮಿಕಃ |
ಆರಾಧ್ಯ ಸ ಮಹಾದೇವಂ ಪ್ರಾಪ್ತವಾನ್ ಜ್ಞಾನಮುತ್ತಮಮ್ ॥61.1॥
ವೇದವ್ಯಾಸಶ್ಚ ಯೋಗಾತ್ಮಾ ಪರಾಶರಸುತೋ ಮುನಿಃ |
ಸೋಽಪಿ ಶಂಕರಮಾರಾಧ್ಯ ಪ್ರಾಪ್ತವಾನತುಲಂ ಯಶಃ ॥61.2॥
ಪರಮಧಾರ್ಮಿಕನಾದ ಯಾಜ್ಞವಲ್ಕ್ಯನೆಂಬ ಋಷಿಯು ಮಹಾದೇವನನ್ನು ಆರಾಧಿಸಿ, ಶ್ರೇಷ್ಠವಾದ ಜ್ಞಾನವನ್ನು ಪಡೆದನು. ಪರಾಶರಪುತ್ರನೂ, ಯೋಗಶರೀರವುಳ್ಳವನೂ ಆದ ವೇದವ್ಯಾಸ ಋಷಿಯು ಶಂಕರನನ್ನು ಆರಾಧಿಸಿ, ಅತುಲವಾದ ಯಶಸ್ಸನ್ನು ಪಡೆದನು.
ವಾಲಖಿಲ್ಯಾ ಮಘವತಾ ಅವಜ್ಞಾತಾಃ ಪುರಾ ಕಿಲ |
ತೈಃ ಕ್ರುದ್ಧೈರ್ಭಗವಾನ್ ರುದ್ರಸ್ತಪಸಾ ತೋಷಿತೋ ಹ್ಯಭೂತ್ ॥62॥
ತಾಂಶ್ಚಾಪಿ ದೈವತಶ್ರೇಷ್ಠಃ ಪ್ರಾಹ ಪ್ರೀತೋ ಜಗತ್ಪತಿಃ |
ಸುಪರ್ಣಂ ಸೋಮಹರ್ತಾರಂ ತಪಸೋತ್ಪಾದಯಿಷ್ಯಥ ॥63॥
ಹಿಂದೆ ವಾಲಖಿಲ್ಯ ಋಷಿಗಳು ಇಂದ್ರನಿಂದ ಅವಮಾನಗೊಳಿಸಲ್ಪಟ್ಟಿದ್ದರಷ್ಟೆ? ಅವರು ಕೋಪಗೊಂಡು ಭಗವಂತನಾದ ರುದ್ರನನ್ನು ತಪಸ್ಸಿನಿಂದ ಸಂತೋಷಪಡಿಸಿದರು. ಜಗತ್ಪತಿಯೂ, ದೇವಶ್ರೇಷ್ಠನೂ ಆದ ಶಿವನು ಸಂತುಷ್ಟನಾಗಿ ಅವರನ್ನು ಕುರಿತು, ನೀವು ಸೋಮವನ್ನು ತರುವ ಸುಪರ್ಣನನ್ನು ನಿಮ್ಮ ತಪಸ್ಸಿನಿಂದ ಪಡೆಯುವಿರಿ ಎಂದು ಹೇಳಿದನು.
ಮಹಾದೇವಸ್ಯ ರೋಷಾಚ್ಚ ಆಪೋ ನಷ್ಟಾಃ ಪುರಾಭವನ್ |
ತಾಶ್ಚ ಸಪ್ತಕಪಾಲೇನ ದೇವೈರನ್ಯಾಃ ಪ್ರವರ್ತಿತಾಃ ॥64॥

ಮಹಾದೇವನ ಕೋಪದಿಂದ ಹಿಂದೆ ಜಲವು ನಷ್ಟವಾಯಿತು. ಆಗ ದೇವತೆಗಳು ಸಪ್ತಕಪಾಲದಿಂದ ಬೇರೆ ಜಲವನ್ನು ಪ್ರವರ್ತಿಸಿದರು.
ಅತ್ರೇರ್ಭಾರ್ಯಾಪಿ ಭರ್ತಾರಂ ಸಂತ್ಯಜ್ಯ ಬ್ರಹ್ಮವಾದಿನೀ |
ನಾಹಂ ತಸ್ಯ ಮುನೇರ್ಭೂಯೋ ವಶಗಾ ಸ್ಯಾಂ ಕಥಂಚನ |
ಇತ್ಯುಕ್ತ್ವಾ ಸಾ ಮಹಾದೇವಮಗಚ್ಛಚ್ಛರಣಂ ಕಿಲ ॥65॥
ಬ್ರಹ್ಮವಾದಿನಿಯಾದ ಅತ್ರಿಯ ಪತ್ನಿಯೂ ಸಹ, ನಾನು ಪುನಃ ಈ ಋಷಿಯ ವಶವಾಗಿರುವುದಿಲ್ಲ ಎಂದು ಹೇಳಿ, ಪತಿಯನ್ನು ತ್ಯಜಿಸಿ ಮಹಾದೇವನಿಗೆ ಶರಣಾಗತಳಾದಳು.
ನಿರಾಹಾರಾ ಭಯಾದತ್ರೇಸ್ತ್ರೀಣಿ ವರ್ಷಶತಾನ್ಯಪಿ |
ಅಶೇತ ಮುಸಲೇಷ್ವೇವ ಪ್ರಸಾದಾರ್ಥಂ ಭವಸ್ಯ ಸಾ ॥66॥
ಅತ್ರಿಗಳ ಭಯದಿಂದ ಅವಳು ಮುನ್ನೂರು ವರ್ಷಗಳ ಕಾಲ ನಿರಾಹಾರಳಾಗಿ ಶಿವನನ್ನು ಒಲಿಸಲು ಒನಕೆಯ ಮೇಲೆ ಮಲಗಿದಳು.
ತಾಮಬ್ರವೀದ್ಧಸನ್ ದೇವೋ ಭವಿತಾ ವೈ ಸುತಸ್ತವ |
ವಂಶೇ ತವೈವ ನಾಮ್ನಾ ತು ಖ್ಯಾತಿಂ ಯಾಸ್ಯತಿ ಚೇಪ್ಸಿತಾಮ್ ॥67॥
ದೇವನಾದ ಶಿವನು ನಗುತ್ತಾ ಅವಳನ್ನು ಕುರಿತು ನಿನ್ನ ವಂಶದಲ್ಲಿ ನಿನಗೆ ಇಷ್ಟವಾದ ಖ್ಯಾತಿಯನ್ನು ಸಂಪಾದಿಸಿಕೊಳ್ಳುವ ನಿನ್ನ ಹೆಸರಿನ ಪುತ್ರನು ಜನಿಸುವನು ಎಂದು ಹೇಳಿದನು.
ಶಾಕಲ್ಯಃ ಸಂಶಿತಾತ್ಮಾ ವೈ ನವ ವರ್ಷಶತಾನ್ಯಪಿ |
ಆರಾಧಯಾಮಾಸ ಭವಂ ಮನೋಯಜ್ಞೇನ ಕೇಶವ ॥68॥
ಎಲೈ ಕೇಶವನೇ, ಜಿತಾತ್ಮನಾದ ಶಾಕಲ್ಯನು ಒಂಬೈನೂರು ವರ್ಷಗಳ ಕಾಲ ಮನೋಯಜ್ಞದಿಂದ ಶಿವನನ್ನು ಆರಾಧಿಸಿದನು.
ತಂ ಚಾಹ ಭಗವಾಂಸ್ತುಷ್ಟೋ ಗ್ರಂಥಕಾರೋ ಭವಿಷ್ಯಸಿ |
ವತ್ಸಾಕ್ಷಯಾ ಚ ತೇ ಕೀರ್ತಿಸ್ತ್ರಿಷು ಲೋಕೇಷು ಯಾಸ್ಯತಿ |
ಅಕ್ಷಯಂ ಚ ಕುಲಂ ತೇಽಸ್ತು ಮಹರ್ಷಿಭಿರಲಂಕೃತಮ್ ॥69॥
ಅವನನ್ನು ಕುರಿತು ಸಂತುಷ್ಟನಾದ ಶಿವನು ನೀನು ಗ್ರಂಥಕಾರನಾಗುವಿ. ವತ್ಸಾಕ್ಷಯಾ (ಕ್ಷಯವನ್ನು ಹೊಂದದಿರುವ ಸಂತತಿಯುಳ್ಳವನು) ಎಂಬ ನಿನ್ನ ಕೀರ್ತಿಯು ಮೂರು ಲೋಕಗಳಲ್ಲಿಯೂ ಹರಡುವುದು. ನಿನ್ನ ಕುಲವು ಮಹರ್ಷಿಗಳಿಂದ ಅಲಂಕೃತವಾಗಿ ಅಕ್ಷಯವಾಗಲಿ ಎಂದು ಹೇಳಿದನು.
ಸಾವರ್ಣಿಶ್ಚಾಪಿ ವಿಖ್ಯಾತ ಋಷಿರಾಸೀತ್ಕೃತೇ ಯುಗೇ |
ಇಹ ತೇನ ತಪಸ್ತಪ್ತಂ ಷಷ್ಟಿಂ ವರ್ಷಶತಾನ್ಯಥ ॥70॥
ಕೃತಯುಗದಲ್ಲಿ ಸಾವರ್ಣಿ ಎಂಬ ವಿಖ್ಯಾತವಾದ ಋಷಿ ಇದ್ದನು. ಅವನು ಈ ಸ್ಥಳದಲ್ಲಿ ಆರುನೂರು ವರ್ಷಗಳ ಕಾಲ ತಪಸ್ಸನ್ನು ಮಾಡಿದನು.
ತಮಾಹ ಭಗವಾನ್ ರುದ್ರಃ ಸಾಕ್ಷಾತ್ ತುಷ್ಟೋಽಸ್ಮಿ ತೇಽನಘ |
ಗ್ರಂಥಕೃಲ್ಲೋಕವಿಖ್ಯಾತೋ ಭವಿತಾಸ್ಯಜರಾಮರಃ ॥71॥
ಆಗ ಭಗವಂತನಾದ ರುದ್ರನು ಅವನನ್ನು ಕುರಿತು ಎಲೈ ಅನಘನೇ, ನಾನು ನಿನಗೆ ಬಹಳ ಪ್ರಸನ್ನನಾಗಿದ್ದೇನೆ. ನೀನು ಗ್ರಂಥಕಾರನೂ, ಲೋಕವಿಖ್ಯಾತನೂ, ಅಜರಾಮರನೂ ಆಗುವಿ ಎಂದು ಹೇಳಿದನು.
ಮಯಾಪಿ ಚ ಯಥಾ ದೃಷ್ಟೋ ದೇವದೇವಃ ಪುರಾ ವಿಭುಃ |
ಸಾಕ್ಷಾತ್ಪಶುಪತಿಸ್ತಾತ ತಚ್ಚಾಪಿ ಶೃಣು ಮಾಧವ ॥72॥
ಎಲೈ ಮಾಧವನೇ, ನಾನೂ ಸಹ ಪಶುಪತಿಯಾದ, ದೇವದೇವನಾದ, ವಿಭುವಾದ ಅವನನ್ನು ಸಾಕ್ಷಾತ್ತಾಗಿ ಹೇಗೆ ನೋಡಿದೆನೋ, ಎಲೈ ಪ್ರೀತಿಪಾತ್ರನೇ, ಅದನ್ನು ಕೇಳು.
ಯದರ್ಥಂ ಚ ಮಹಾದೇವಃ ಪ್ರಯತೇನ ಮಯಾ ಪುರಾ |
ಆರಾಧಿತೋ ಮಹಾತೇಜಾಸ್ತಚ್ಚಾಪಿ ಶೃಣು ವಿಸ್ತರಮ್ ॥73॥
ನಾನು ಯಾವ ಉದ್ದೇಶದಿಂದ ನಿಯಮಬದ್ಧನಾಗಿ ಹಿಂದೆ ಮಹಾತೇಜಸ್ವಿಯಾದ ಅವನನ್ನು ಆರಾಧಿಸಿದೆನೋ ಅದನ್ನೂ ವಿಸ್ತಾರವಾಗಿ ಕೇಳು.
ಯದವಾಪ್ತಂ ಚ ಮೇ ಪೂರ್ವಂ ದೇವದೇವಾನ್ಮಹೇಶ್ವರಾತ್ |
ತತ್ಸರ್ವಮಖಿಲೇನಾದ್ಯ ಕಥಯಿಷ್ಯಾಮಿ ತೇಽನಘ ॥74॥
ಎಲೈ ಅನಘನೇ, ನಾನು ಪ್ರಸನ್ನನಾದ, ದೇವದೇವನಾದ ಮಹೇಶ್ವರನಿಂದ ಏನನ್ನು ಪಡೆದೆನೋ ಅದೆಲ್ಲವನ್ನೂ ನಿನಗೆ ಸಮಗ್ರವಾಗಿ ಹೇಳುವೆನು.
ಪುರಾ ಕೃತಯುಗೇ ತಾತ ಋಷಿರಾಸೀತ್ ಮಹಾತಪಾಃ |
ವ್ಯಾಘ್ರಪಾದ ಇತಿ ಖ್ಯಾತೋ ವೇದವೇದಾಂಗಪಾರಗಃ |
ತಸ್ಯಾಹಮಭವಂ ಪುತ್ರೋ ಧೌಮ್ಯಶ್ಚಾಪಿ ಮಮಾನುಜಃ ॥75॥
ಎಲೈ ಪ್ರೀತಿಪಾತ್ರನೇ, ಹಿಂದೆ ಕೃತಯುಗದಲ್ಲಿ ಮಹಾತಪಸ್ವಿಯಾದ, ವೇದವೇದಾಂಗಪಾರಂಗತನಾದ ವ್ಯಾಘ್ರಪಾದನೆಂಬ ಋಷಿ ಇದ್ದನು. ನಾನು ಅವನ ಪುತ್ರನಾಗಿದ್ದೆನು. ಧೌಮ್ಯನು ನನ್ನ ತಮ್ಮ.
ಕಸ್ಯಚಿತ್ತ್ವಥ ಕಾಲಸ್ಯ ಧೌಮ್ಯೇನ ಸಹ ಮಾಧವ |
ಗತವಾನಾಶ್ರಮಾನ್ ಕ್ರೀಡನ್ ಮುನೀನಾಂ ಭಾವಿತಾತ್ಮನಾಮ್ ॥76॥
ಎಲೈ ಮಾಧವನೇ, ಸ್ವಲ್ಪ ಕಾಲವು ಕಳೆದ ಮೇಲೆ ನಾನು ಆಟವಾಡುತ್ತಾ ಧೌಮ್ಯನ ಜೊತೆಯಲ್ಲಿ ಶುದ್ಧ ಮನಸ್ಸುಳ್ಳ ಋಷಿಗಳ

ಆಶ್ರಮಕ್ಕೆ ಹೋದೆನು.
ತತ್ರಾಪಿ ಚ ಮಯಾ ದೃಷ್ಟ್ವಾ ದುಹ್ಯಮಾನಾ ಪಯಸ್ವಿನೀ |
ಲಕ್ಷಿತಂ ಚ ಮಯಾ ಕ್ಷೀರಂ ಸ್ವಾದುತೋ ಹ್ಯಮೃತೋಪಮಮ್ ||77||
ನಾನು ಅಲ್ಲಿ ಹಾಲು ಕರೆಯುತ್ತಿದ್ದ ಹಸುವನ್ನು ನೋಡಿದೆನು. ಅದರ ಕ್ಷೀರವು ರುಚಿಯಲ್ಲಿ ಅಮೃತದಂತಿದ್ದುದನ್ನೂ ನೋಡಿದೆನು.
ಪಿತ್ರಾಽಹಂ ಯಜ್ಞಕಾಲೇ ಹಿ ನೀತೋ ಜ್ಞಾತಿಕುಲಂ ಮಹತ್ |
ತತ್ರ ಸಾ ಕ್ಷರತೇ ದೇವೀ ದಿವ್ಯಾ ಗೌಃ ಸುರನಂದಿನೀ ||78||
ಯಜ್ಞಕಾಲದಲ್ಲಿ ನನ್ನ ತಂದೆಯು ನನ್ನನ್ನು ಬಂಧುಗಳ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ದೇವತೆಗಳ ಧೇನುವಾದ ದಿವ್ಯಳಾದ ನಂದಿನಿ ಧೇನುವು ಹಾಲನ್ನು ಕೊಡುತ್ತಿದ್ದಳು.
ತಸ್ಯಾಹಂ ತತ್ಪಯಃ ಪೀತ್ವಾ ರಸೇನ ಹ್ಯಮೃತೋಪಮಮ್ |
ಜ್ಞಾತ್ವಾ ಕ್ಷೀರಗುಣಂ ಚೈವ ಉಪಲಭ್ಯ ಹಿ ಸಂಭವಮ್ ||79||
ಅಲ್ಲಿ ನಾನು ರುಚಿಯಲ್ಲಿ ಅಮೃತದಂತಿದ್ದ ಅದರ ಕ್ಷೀರವನ್ನು ಪಾನ ಮಾಡಿ, ಕ್ಷೀರಗುಣವನ್ನೂ, ಅದು ದೊರೆಯುವ ರೀತಿಯನ್ನೂ ತಿಳಿದೆನು.
ಸ ತು ಪಿಷ್ಟರಸಸ್ತಾತ ನ ಮೇ ಪ್ರೀತಿಮುದಾವಹತ್ |
ತತೋಽಹಮಬ್ರುವಂ ಬಾಲ್ಯಾತ್ ಜನನೀಮಾತ್ಮನಸ್ತದಾ |
ನೇದಂ ಕ್ಷೀರೋದನಂ ಮಾತರ್ಯತ್ ತ್ವಂ ಮೇ ದತ್ತವತ್ಯಸಿ ||80||
ತಾಯಿಯು ಕೊಡುತ್ತಿದ್ದ ಪಿಷ್ಟ ರಸವು ನನಗೆ ಸಂತೋಷವನ್ನು ಉಂಟುಮಾಡಲಿಲ್ಲ. ಆಗ ನಾನು ಬಾಲ್ಯಸಹಜವಾಗಿ ನನ್ನ ತಾಯಿಯನ್ನು ಕುರಿತು ತಾಯಿಯೇ, ನೀನು ನನಗೆ ಕೊಟ್ಟಿರುವುದು ಕ್ಷೀರಾನ್ನವಲ್ಲ ಎಂದು ಹೇಳಿದೆನು.
ಅಭಾವಾಚ್ಚೈವ ದುಗ್ಧಸ್ಯ ದುಃಖಿತಾ ಜನನೀ ತದಾ |
ತತೋ ಮಾಮಬ್ರವೀನ್ಮಾತಾ ದುಃಖಶೋಕಸಮನ್ವಿತಾ |
ಪುತ್ರಸ್ನೇಹಾತ್ಪರಿಷ್ವಜ್ಯ ಮೂರ್ಧ್ನಿ ಚಾಘ್ರಾಯ ಮಾಧವ ||81||
ಕುತಃ ಕ್ಷೀರೋದನಂ ವತ್ಸ ಮುನೀನಾಂ ಭಾವಿತಾತ್ಮನಾಮ್ |
ವನೇ ನಿವಸತಾಂ ನಿತ್ಯಂ ಕಂದಮೂಲಫಲಾಶಿನಾಮ್ ||82||
ಕ್ಷೀರವು ಇಲ್ಲದಿದ್ದ ಕಾರಣ ತಾಯಿಯು ದುಃಖಿತಳಾದಳು. ದುಃಖ-ಶೋಕ ಸಮನ್ವಿತಳಾದ ಅವಳು ನನ್ನನ್ನು ಕುರಿತು ಹೇಳಿದಳು: ಎಲೈ ಮಾಧವನೇ, ಪುತ್ರಸ್ನೇಹದಿಂದ ಅವಳು ನನ್ನನ್ನು ಆಲಿಂಗಿಸಿ ಶಿರಸ್ಸಿನಲ್ಲಿ ಆಘ್ರಾಣಿಸಿ, ವತ್ಸನೇ, ತಪಸ್ಸನ್ನು ಮಾಡುವ, ಕಾಡಿನಲ್ಲಿ ವಾಸಿಸುವ, ನಿತ್ಯವೂ ಕಂದ-ಮೂಲ-ಫಲವನ್ನು ಭಕ್ಷಿಸುವ ಋಷಿಗಳಿಗೆ ಕ್ಷೀರಾನ್ನವು ಎಲ್ಲಿಂದ ಬರಬೇಕು?
ಆಸ್ಥಿತಾನಾಂ ನದೀಂ ದಿವ್ಯಾಂ ವಾಲಖಿಲ್ಯೈರ್ನಿಷೇವಿತಾಮ್ |
ಕುತಃ ಕ್ಷೀರಂ ವನಸ್ಥಾನಾಂ ಮುನೀನಾಂ ಗಿರಿವಾಸಿನಾಮ್ ||83||
ಅಪ್ರಸಾದ್ಯ ವಿರೂಪಾಕ್ಷಂ ವರದಂ ಸ್ಥಾಣುಮವ್ಯಯಮ್ |
ಕುತಃ ಕ್ಷೀರೋದನಂ ವತ್ಸ ಸುಖಾನಿ ವಸನಾನಿ ಚ ||84||
ವಾಲಖಿಲ್ಯರಿಂದ ಸೇವಿತವಾದ ಕಾಡಿನಲ್ಲಿ ವಾಸಮಾಡುವ ಋಷಿಗಳಿಗೆ ಕ್ಷೀರವು ಎಲ್ಲಿಂದ ಬರಬೇಕು? ವತ್ಸನೇ, ವಿರೂಪಾಕ್ಷನೂ, ವರಪ್ರದನೂ, ಸ್ಥಾಣುವೂ, ಅವ್ಯಯನೂ ಆದ ಶಿವನನ್ನು ಒಲಿಸದೆ ಕ್ಷೀರಾನ್ನವಾಗಲೀ, ಸುಖಗಳಾಗಲೀ, ವಸ್ತ್ರಗಳಾಗಲೀ ಎಲ್ಲಿಂದ ಬರಬೇಕು?
ತಂ ಪ್ರಪದ್ಯ ಸದಾ ವತ್ಸ ಸರ್ವಭಾವೇನ ಶಂಕರಮ್ |
ತತ್ಪ್ರಸಾದಾಚ್ಚ ಕಾಮೇಭ್ಯಃ ಫಲಂ ಪ್ರಾಪ್ಸ್ಯಸಿ ಪುತ್ರಕ ||85||
ವತ್ಸನೇ, ಯಾವಾಗಲೂ ಸರ್ವಭಾವಗಳಿಂದ ಶಂಕರನಿಗೆ ಶರಣಾಗತನಾಗು. ಅವನ ಅನುಗ್ರಹದಿಂದ ಎಲ್ಲ ಕಾಮಿತ ಫಲಗಳನ್ನೂ ಹೊಂದುವೆ (ಎಂದು ಹೇಳಿದಳು).
ಜನನ್ಯಾಸ್ತದ್ವಚಃ ಶ್ರುತ್ವಾ ತದಾಪ್ರಭೃತಿ ಶತ್ರುಹನ್ |
ಪ್ರಾಂಜಲಿಃ ಪ್ರಣತೋ ಭೂತ್ವಾ ಇದಮಂಬಾಮವೋಚಯಮ್ ||86||
ತಾಯಿಯ ಆ ಮಾತುಗಳನ್ನು ಕೇಳಿ ಎಲೈ ಶತ್ರುಸೂದನನೇ, ಆ ಕಾಲದಿಂದಲೂ ನಾನು ಕೈಗಳನ್ನು ಮುಗಿದು ನಮಸ್ಕರಿಸಿ, ತಾಯಿಯನ್ನು ಕುರಿತು ಈ ಮಾತುಗಳನ್ನು ಹೇಳಿದೆನು.
ಕೋಽಯಮಂಬ ಮಹಾದೇವಃ ಸ ಕಥಂ ಚ ಪ್ರಸೀದತಿ |
ಕುತ್ರ ವಾ ವಸತೇ ದೇವೋ ದ್ರಷ್ಟವ್ಯೋ ವಾ ಕಥಂಚನ ||87||
ತಾಯಿಯೇ, ಮಹಾದೇವನು ಯಾರು? ಅವನು ಹೇಗೆ ಪ್ರಸನ್ನನಾಗುತ್ತಾನೆ? ಆ ದೇವನು ಎಲ್ಲಿ ವಾಸಮಾಡುತ್ತಾನೆ? ಅವನನ್ನು ಹೇಗೆ ನೋಡಬೇಕು?
ತುಷ್ಯತೇ ವಾ ಕಥಂ ಶರ್ವೋ ರೂಪಂ ತಸ್ಯ ಚ ಕೀದೃಶಮ್ |
ಕಥಂ ಜ್ಞೇಯಃ ಪ್ರಸನ್ನೋ ವಾ ದರ್ಶಯೇಜ್ಜನನೀ ಮಮ ||88||
ಅವನ ರೂಪವಾದರೂ ಹೇಗಿರುತ್ತದೆ? ಅವನು ಪ್ರಸನ್ನನಾಗಿದ್ದಾನೆಂದು ಹೇಗೆ ತಿಳಿಯಬೇಕು? ಇದನ್ನು ತಾಯಿಯಾದ ನೀನು ನನಗೆ ತಿಳಿಸು.
ಏವಮುಕ್ತಾ ತದಾ ಕೃಷ್ಣ ಮಾತಾ ಮೇ ಸುತವತ್ಸಲಾ |
ಮೂರ್ಧನ್ಯಾಘ್ರಾಯ ಗೋವಿಂದ ಸಬಾಷ್ಪಾಕುಲಲೋಚನಾ ||89||

ಪ್ರಮಾರ್ಜಂತೀ ಚ ಗಾತ್ರಾಣಿ ಮಮ ವೈ ಮಧುಸೂದನ |
ದೈನ್ಯಮಾಲಂಬ್ಯ ಜನನೀ ಇದಮಾಹ ಸುರೋತ್ತಮ ॥90॥
ಎಲೈ ಕೃಷ್ಣನೇ, ಹೀಗೆ ನನ್ನಿಂದ ಕೇಳಲ್ಪಟ್ಟ ಸುತವತ್ಸಳಾದ ನನ್ನ ತಾಯಿಯು ಎಲೈ ಗೋವಿಂದನೇ, ನನ್ನನ್ನು ಶಿರಸ್ಸಿನಲ್ಲಿ ಆಘ್ರಾಣಿಸಿ, ಕಣ್ಣುಗಳಲ್ಲಿ ನೀರನ್ನು ತಂದುಕೊಂಡು ಎಲೈ ಮಧುಸೂದನನೇ, ದೈನ್ಯವನ್ನು ಹೊಂದಿದವಳಾಗಿ ಈ ಮಾತನ್ನು ಆಡಿದಳು.
ದುರ್ವಿಜ್ಞೇಯೋ ಮಹಾದೇವೋ ದುರಾಧಾರೋ ದುರಂತಕಃ |
ದುರಾಬಾಧಶ್ಚ ದುರ್ಗ್ರಾಹ್ಯೋ ದುರ್ದೃಶ್ಯೋ ಹ್ಯಕೃತಾತ್ಮಭಿಃ ॥91॥
ಯಸ್ಯ ರೂಪಾಣ್ಯನೇಕಾನಿ ಪ್ರವದಂತಿ ಮನೀಷಿಣಃ |
ಸ್ಥಾನಾನಿ ಚ ವಿಚಿತ್ರಾಣಿ ಪ್ರಾಸಾದಶ್ಚಾಪ್ಯನೇಕಶಃ ॥92॥
ಮಹಾದೇವನನ್ನು ತಿಳಿಯುವುದು ಬಹಳ ಕಷ್ಟ. ಅವನಿಗೆ ಯಾವ ಆಧಾರವೂ ಇಲ್ಲ. ಅವನು ಅನಂತನಾದವನು. ಅವನನ್ನು ಯಾರೂ ಪೀಡಿಸಲಾರರು. ಅವನನ್ನು ಹಿಡಿಯುವುದೂ ಕಷ್ಟ. ಜಿತಮನಸ್ಸಿಲ್ಲದವರು ಅವನನ್ನು ನೋಡುವುದೂ ಸಾಧ್ಯವಿಲ್ಲ. ಜ್ಞಾನಿಗಳು ಅವನ ಅನೇಕ ರೂಪಗಳನ್ನು ಹೇಳುತ್ತಾರೆ. ಅವನ ವಿಚಿತ್ರವಾದ ಸ್ಥಾನಗಳನ್ನೂ, ಅವನ ಅನೇಕ ವಿಧವಾದ ಅನುಗ್ರಹವನ್ನೂ ಹೇಳುತ್ತಾರೆ.
ಕೋ ಹಿ ತತ್ತ್ವೇನ ತದ್ವೇದ ಈಶಸ್ಯ ಚರಿತಂ ಶುಭಮ್ |
ಕೃತವಾನ್ ಯಾನಿ ರೂಪಾಣಿ ದೇವದೇವಃ ಪುರಾ ಕಿಲ |
ಕ್ರೀಡತೇ ಚ ಯಥಾ ಶರ್ವಃ ಪ್ರಸೀದತಿ ಯಥಾ ಚ ವೈ ॥93॥
ಶಿವನ ಶುಭಚರಿತೆಯನ್ನು ಯಾವನು ಸರಿಯಾಗಿ ತಿಳಿಯುತ್ತಾನೆ? ದೇವದೇವನಾದ ಅವನು ಹಿಂದೆ ಯಾವ ಯಾವ ರೂಪವನ್ನು ಧರಿಸಿದನೆಂದು ಯಾವನು ತಿಳಿಯುತ್ತಾನೆ? ಶಿವನು ಹಾಗೆಯೇ ಆಟವಾಡುತ್ತಾನೆ. ಹೇಗೆ ಪ್ರಸನ್ನನಾಗುತ್ತಾನೆ? ಎಂದಾದರೂ ಯಾವನು ತಿಳಿಯುವನು?
ಹೃದಿಸ್ಥಃ ಸರ್ವಭೂತಾನಾಂ ವಿಶ್ವರೂಪೋ ಮಹೇಶ್ವರಃ |
ಭಕ್ತಾನಾಮನುಕಂಪಾರ್ಥಂ ದರ್ಶನಂ ಚ ಯಥಾಶ್ರುತಮ್ |
ಮುನೀನಾಂ ಬ್ರುವತಾಂ ದಿವ್ಯಮೀಶಾನಚರಿತಂ ಶುಭಮ್ ॥94॥
ವಿಶ್ವರೂಪನಾದ ಮಹೇಶ್ವರನು ಸರ್ವಪ್ರಾಣಿಗಳ ಹೃದಯದಲ್ಲಿದ್ದಾನೆ. ತನ್ನ ದಿವ್ಯವಾದ ಶುಭಚರಿತೆಯನ್ನು ಹೇಳುವ ಭಕ್ತರಾದ ಋಷಿಗಳಿಗೆ ಅವರ ಮೇಲಿನ ಅನುಕಂಪದಿಂದ ಶಾಸ್ತ್ರದಲ್ಲಿ ಹೇಳಿದಂತೆ ದರ್ಶನವನ್ನು ನೀಡುತ್ತಾನೆ.
ಕೃತವಾನ್ ಯಾನಿ ರೂಪಾಣಿ ಕಥಿತಾನಿ ದಿವೌಕಸೈಃ |
ಅನುಗ್ರಹಾರ್ಥಂ ವಿಪ್ರಾಣಾಂ ಶೃಣು ವತ್ಸ ಸಮಾಸತಃ ॥95॥
ತಾನಿ ತೇ ಕೀರ್ತಯಿಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ ॥96॥
ಬ್ರಾಹ್ಮಣರಿಗೆ ಅನುಗ್ರಹವನ್ನು ಮಾಡಲು ದೇವತೆಗಳಿಂದ ಸ್ತುತಿಸಲ್ಪಡುವ ಯಾವ ರೂಪಗಳನ್ನು ಅವನು ಧರಿಸಿದನೋ, ಎಲೈ ವತ್ಸನೇ, ಅದನ್ನು ಸಂಕ್ಷೇಪವಾಗಿ ಕೇಳು. ನಿನ್ನ ಪ್ರಶ್ನೆಗೆ ಉತ್ತರವಾಗಿ ನಾನು ಅದನ್ನು ನಿನಗೆ ಹೇಳುವೆನು.
ಬ್ರಹ್ಮವಿಷ್ಣುಸುರೇಂದ್ರಾಣಾಂ ರುದ್ರಾದಿತ್ಯಾಶ್ವಿನಾಮಪಿ |
ವಿಶ್ವೇಷಾಮಪಿ ದೇವಾನಾಂ ವಪುರ್ಧಾರಯತೇ ಭವಃ ॥97॥
ಅವನು ಬ್ರಹ್ಮ, ವಿಷ್ಣು, ದೇವೇಂದ್ರ, ರುದ್ರ-ಆದಿತ್ಯ, ಅಶ್ವಿನಿಗಳ ಮತ್ತು ವಿಶ್ವೇದೇವತೆಗಳ ಶರೀರವನ್ನು ಧರಿಸುತ್ತಾನೆ.
ನರಾಣಾಂ ದೇವನಾರೀಣಾಂ ತಥಾ ಪ್ರೇತಪಿಶಾಚಯೋಃ |
ಕಿರಾತಶಬರಾಣಾಂ ಚ ಜಲಜಾನಾಮನೇಕಶಃ ॥98॥
ಕರೋತಿ ಭಗವಾನ್ ರೂಪಮಾಟವ್ಯಶಬರಾಣ್ಯಪಿ |
ಕೂರ್ಮೋ ಮತ್ಸ್ಯಸ್ತಥಾ ಶಂಖಃ ಪ್ರವಾಳಾಂಕುರಭೂಷಣಃ ॥99॥
ಮನುಷ್ಯರ, ದೇವತಾಸ್ತ್ರೀಯರ ಹಾಗೆ ಪ್ರೇತ ಪಿಶಾಚಿಗಳ, ಕಿರಾತ ಶಬರರ ಮತ್ತು ಅನೇಕ ಜಲಚರ ಪ್ರಾಣಿಗಳ ರೂಪವನ್ನು ಧರಿಸುತ್ತಾನೆ. ಭಗವಂತನಾದ ಶಂಕರನು ಅಡವಿಯ ಬೇಡರ ರೂಪವನ್ನು ಧರಿಸುತ್ತಾನೆ. ಅವನು ಮತ್ಸ್ಯ-ಕೂರ್ಮ-ಶಂಖ ರೂಪವನ್ನು ಧರಿಸಿ ಪ್ರವಳಾಂಕುರಗಳಿಂದ ಭೂಷಿತನಾಗುತ್ತಾನೆ.
ಯಕ್ಷರಾಕ್ಷಸಸರ್ಪಾಣಾಂ ದೈತ್ಯದಾನವಯೋರಪಿ |
ವಪುರ್ಧಾರಯತೇ ದೇವೋ ಭೂಯಶ್ಚ ಬಿಲವಾಸಿನಾಮ್ ॥100॥
ಯಕ್ಷ-ರಾಕ್ಷಸ-ಸರ್ಪಗಳ ರೂಪವನ್ನೂ, ದೈತ್ಯ-ದಾನವರ ರೂಪಗಳನ್ನೂ, ಬಿಲವಾಸಿಗಳಾದ ಸರ್ಪಗಳ ರೂಪವನ್ನೂ ಶಿವನು ಧರಿಸುತ್ತಾನೆ.
ವ್ಯಾಘ್ರಸಿಂಹಮೃಗಾಣಾಂ ಚ ತರಕ್ಷ್ವೃಕ್ಷಪತತ್ರಿಣಾಮ್ |
ಉಲೂಕಶ್ವಸೃಗಾಲಾನಾಂ ರೂಪಾಣಿ ಕುರುತೇಽಪಿ ಚ ॥101॥
ವ್ಯಾಘ್ರ-ಸಿಂಹ-ಜಿಂಕೆಗಳ ರೂಪವನ್ನೂ, ಹುಲಿ-ಚಿರತೆ-ಪಕ್ಷಿಗಳ ರೂಪವನ್ನೂ, ಗೂಬೆ-ನಾಯಿ-ನರಿಗಳ ರೂಪವನ್ನೂ ಧರಿಸುತ್ತಾನೆ.
ಹಂಸಕಾಕಮಯೂರಾಣಾಂ ಕೃಕಲಾಸಕಸಾರಸಾಮ್ |
ರೂಪಾಣಿ ಚ ಬಲಾಕಾನಾಂ ಗೃಧ್ರಚಕ್ರಾಂಗಯೋರಪಿ ॥102॥
ಹಂಸ-ಕಾಕ-ಮಯೂರಗಳ ರೂಪವನ್ನೂ, ಕೃಕಲಾಸ (ಓತಿಕೇತ)-ಸಾರಸ ಪಕ್ಷಿಗಳ ರೂಪವನ್ನೂ, ಬಲಾಕಗಳ ಗೃಧ್ರಚಕ್ರವಾಕ ಪಕ್ಷಿಗಳ ರೂಪಗಳನ್ನೂ ಧರಿಸುತ್ತಾನೆ.
ಕರೋತಿ ವಾ ಸ ರೂಪಾಣಿ ಧಾರಯತ್ಯಪಿ ಪರ್ವತಮ್ |

ಗೋರೂಪಂ ಚ ಮಹಾದೇವೋ ಹಸ್ತ್ಯಶ್ವೋಷ್ಟ್ರಖರಾಕೃತಿಃ ॥103॥
ಅವನು ಅನೇಕ ರೂಪಗಳನ್ನು ಧರಿಸುತ್ತಾನೆ. ಪರ್ವತದ ರೂಪವನ್ನು ಧರಿಸುತ್ತಾನೆ. ಗೋರೂಪವನ್ನೂ, ಹಸ್ತಿ-ಅಶ್ವ-ಉಷ್ಟ್ರ (ಒಂಟೆ)-ರಾಸಭ (ಕತ್ತೆ)ರೂಪಗಳನ್ನೂ ಮಹಾದೇವನು ಧರಿಸುತ್ತಾನೆ.
ಛಾಗಶಾರ್ದೂಲರೂಪಶ್ಚ ಅನೇಕಮೃಗರೂಪಧೃಕ್ |
ಅಂಡಜಾನಾಂ ಚ ದಿವ್ಯಾನಾಂ ವಪುರ್ಧಾರಯತೇ ಭವಃ ॥104॥
ಹೋತ-ಶಾರ್ದೂಲ ರೂಪಗಳನ್ನೂ, ಅನೇಕ ಮೃಗಗಳ ರೂಪವನ್ನೂ, ದಿವ್ಯವಾದ ಪಕ್ಷಿಗಳ ರೂಪವನ್ನೂ ಅವನು ಧರಿಸುತ್ತಾನೆ.
ದಂಡೀ ಛತ್ರೀ ಚ ಕುಂಡೀ ಚ ದ್ವಿಜಾನಾಂ ವಾರಣಸ್ತಥಾ |
ಷಣ್ಮುಖೋ ವೈ ಬಹುಮುಖಸ್ತ್ರಿನೇತ್ರೋ ಬಹುಶೀರ್ಷಕಃ ॥105॥
ಬ್ರಾಹ್ಮಣರ ದಂಡ, ಛತ್ರ, ಕಮಂಡಲವನ್ನೂ ಗಜರೂಪವನ್ನೂ ಧರಿಸುತ್ತಾನೆ. ಅವನು ಷಣ್ಮುಖನು, ಬಹುಮುಖನು, ತ್ರಿನೇತ್ರ ಮತ್ತು ಅನೇಕ ಶಿರಸ್ಸುಗಳನ್ನು ಉಳ್ಳವನು.
ಅನೇಕಕಟಿಪಾದಶ್ಚ ಅನೇಕೋದರವಕ್ತ್ರಧೃತ್ |
ಅನೇಕಪಾಣಿಪಾರ್ಶ್ವಶ್ಚ ಅನೇಕಗಣಸಂವೃತಃ ॥106॥
ಅನೇಕ ಕಟಿಪಾದಗಳನ್ನು, ಅನೇಕ ಉದರ (ತೊಡೆ) ಮುಖಗಳನ್ನು, ಅನೇಕ ಪಾಣಿ-ಪಾರ್ಶ್ವಗಳನ್ನು ಹೊಂದಿ, ಅನೇಕ ಗಣಗಳಿಂದ ಪರಿವೃತನಾಗಿದ್ದಾನೆ.
ಋಷಿಗಂಧರ್ವರೂಪಶ್ಚ ಸಿದ್ಧಚಾರಣರೂಪಧೃತ್ |
ಭಸ್ಮಪಾಂಡರಗಾತ್ರಶ್ಚ ಚಂದ್ರಾರ್ಧಕೃತಭೂಷಣಃ ॥107॥
ಋಷಿ-ಗಂಧರ್ವರೂಪವನ್ನೂ, ಸಿದ್ಧ-ಚಾರಣ ರೂಪವನ್ನೂ, ಭಸ್ಮಲೇಪನದಿಂದ ಶ್ವೇತವರ್ಣದಿಂದ ಕೂಡಿದ ದೇಹವನ್ನೂ ಹೊಂದಿದ್ದಾನೆ. ಅರ್ಧಚಂದ್ರನಿಂದ ಶಿರಸ್ಸಿನಲ್ಲಿ ಅಲಂಕೃತನಾಗಿದ್ದಾನೆ.
ಅನೇಕರಾವಸಂಘುಷ್ಟಶ್ಚಾನೇಕಸ್ತುತಿಸಂಸ್ಕೃತಃ |
ಸರ್ವಭೂತಾಂತಕಃ ಸರ್ವಃ ಸರ್ವಲೋಕಪ್ರತಿಷ್ಠಿತಃ ॥108॥
ಅನೇಕ ಧ್ವನಿಗಳಿಂದಲೂ, ಅನೇಕ ಸ್ತೋತ್ರಗಳಿಂದಲೂ ಪೂಜಿಸಲ್ಪಡುತ್ತಾನೆ. ಸರ್ವಭೂತಸಂಹಾರಕನೂ, ಸರ್ವನೂ, ಸರ್ವಲೋಕ ಪ್ರತಿಷ್ಠಿತನೂ ಆಗಿದ್ದಾನೆ.
ಸರ್ವಲೋಕಾಂತರಾತ್ಮಾ ಚ ಸರ್ವಗಃ ಸರ್ವವಾದ್ಯಪಿ |
ಸರ್ವತ್ರ ಭಗವಾನ್ ಜ್ಞೇಯೋ ಹೃದಿಸ್ಥಃ ಸರ್ವದೇಹಿನಾಮ್ ॥109॥
ಸರ್ವಲೋಕದ ಅಂತರಾತ್ಮನೂ, ಸರ್ವತ್ರ ವ್ಯಾಪ್ತನೂ, ಸರ್ವವಾದಿಯೂ ಆಗಿದ್ದಾನೆ. ಭಗವಂತನಾದ ಶಿವನು ಸರ್ವದೇಹಿಗಳ ಹೃದಯದಲ್ಲಿದ್ದಾನೆಂದು ತಿಳಿಯಬೇಕು.
ಯೋ ಹಿ ಯಂ ಕಾಮಯೇತ್ ಕಾಮಂ ಯಸ್ಮಿನ್ನರ್ಥೇಽರ್ಚ್ಯತೇ ಪುನಃ |
ತತ್ಸರ್ವಂ ವೇತ್ತಿ ದೇವೇಶಸ್ತಂ ಪ್ರಪದ್ಯ ಯದೀಚ್ಛಸಿ ॥110॥
ಯಾವನ ಮನಸ್ಸಿನಲ್ಲಿ ಯಾವ ಆಸೆ ಇದೆಯೋ, ಯಾವುದರ ಸಲುವಾಗಿ ಅವನು ಅರ್ಚಿಸುತ್ತಾನೆಯೋ ಅದೆಲ್ಲವನ್ನೂ ದೇವೇಶನು ತಿಳಿದಿದ್ದಾನೆ. ನಿನಗೆ ಏನಾದರೂ ಬೇಕಾದರೆ ಅವನಿಗೆ ಶರಣಾಗತನಾಗು.
ನಂದತೇ ಕುಪ್ಯತೇ ಚಾಪಿ ತಥಾ ಹುಂಕಾರಯತ್ಯಪಿ |
ಚಕ್ರೀ ಶೂಲೀ ಗದಾಪಾಣಿರ್ಮುಸಲೀ ಖಡ್ಗಪಟ್ಟಿಸೀ ॥111॥
ಅವನು ಸಂತೋಷದಲ್ಲಿರುತ್ತಾನೆ, ಕೋಪಗೊಳ್ಳುತ್ತಾನೆ, ಹೂಂಕಾರವನ್ನು ಮಾಡುತ್ತಾನೆ.
ಚಕ್ರ-ಶೂಲ-ಗದಾ-ಮುಸಲ-ಖಡ್ಗ-ಪಟ್ಟಸಗಳನ್ನು ಧರಿಸುತ್ತಾನೆ.
ಭೂಧರೋ ನಾಗಮೌಂಜೀ ಚ ನಾಗಕುಂಡಲಕುಂಡಲೀ |
ನಾಗಯಜ್ಞೋಪವೀತೀ ಯ ನಾಗಚರ್ಮೋತ್ತರಚ್ಛದಃ ॥112॥
ಭೂಮಿಯನ್ನು ಧರಿಸುತ್ತಾನೆ. ಸರ್ಪಮೌಂಜಿಯನ್ನೂ, ಸರ್ಪಕುಂಡಲವನ್ನೂ, ಸರ್ಪಯಜ್ಞೋಪವೀತವನ್ನೂ, ಗಜಚರ್ಮದ ಉತ್ತರೀಯವನ್ನೂ, ಧರಿಸುತ್ತಾನೆ.
ಹಸತೇ ಗಾಯತೇ ಚೈವ ನೃತ್ಯತೇ ಚ ಮನೋಹರಮ್ |
ವಾದಯತ್ಯಪಿ ವಾದ್ಯಾನಿ ವಿಚಿತ್ರಾಣಿ ಗಣೈರ್ಯುತಃ ॥113॥
ನಗುತ್ತಾನೆ, ಗಾನ ಮಾಡುತ್ತಾನೆ, ಮನೋಹರವಾಗಿ ನರ್ತನವನ್ನು ಮಾಡುತ್ತಾನೆ. ತನ್ನ ಗಣಗಳಿಂದ ಕೂಡಿ ವಿಚಿತ್ರವಾದ ವಾದ್ಯಗಳನ್ನು ಬಾರಿಸುತ್ತಾನೆ.
ವಲ್ಗತೇ ಜೃಂಭತೇ ಚೈವ ರುದತೇ ರೋದಯತ್ಯಪಿ |
ಉನ್ಮತ್ತಮತ್ತರೂಪಂ ಚ ಭಾಷತೇ ಚಾಪಿ ಸುಸ್ವರಃ ॥114॥
ಮಾತನಾಡುತ್ತಾನೆ, ಆಕಳಿಸುತ್ತಾನೆ, ಅಳುತ್ತಾನೆ, ಅಳಿಸುತ್ತಾನೆ, ಉನ್ಮತ್ತ ಮತ್ತರೂಪಗಳನ್ನು ಧರಿಸಿ ಸುಸ್ವರದಿಂದ ಮಾತನಾಡುತ್ತಾನೆ.
ಅತೀವ ಹಸತೇ ರೌದ್ರಸ್ತ್ರಾಸಯನ್ ನಯನೈರ್ಜನಮ್ |
ಜಾಗರ್ತಿ ಚೈವ ಸ್ವಪಿತಿ ಜೃಂಭತೇ ಚ ಯಥಾಸುಖಮ್ ॥115॥
ಭಯಂಕರ ರೂಪವನ್ನು ತಾಳಿ ತನ್ನ ದೃಷ್ಟಿಯಿಂದ ಜನರನ್ನು ಭೀಷಣಗೊಳಿಸುತ್ತಾ ಬಹಳವಾಗಿ ನಗುತ್ತಾನೆ. ಅವನ ಮನಸ್ಸಿಗೆ ಬಂದಂತೆ ಎಚ್ಚರವಾಗಿರುತ್ತಾನೆ, ನಿದ್ರೆ ಮಾಡುತ್ತಾನೆ, ಆಕಳಿಸುತ್ತಾನೆ.
ಜಪತೇ ಜಪ್ಯತೇ ಚೈವ ತಪತೇ ತಪ್ಯತೇ ಪುನಃ |

ದದಾತಿ ಪ್ರತಿಗೃಹ್ಣಾತಿ ಯುಂಜತೇ ಧ್ಯಾಯತೇಽಪಿ ಚ ॥116॥
ಜಪವನ್ನು ಮಾಡುತ್ತಾನೆ, ತನ್ನನ್ನು ಉದ್ದೇಶಿಸಿ ಜಪವನ್ನು ಮಾಡಿಸಿಕೊಳ್ಳುತ್ತಾನೆ, ಪ್ರಕಾಶಿಸುತ್ತಾನೆ, ಪ್ರಕಾಶಿಸಲ್ಪಡುತ್ತಾನೆ, ದಾನ ಮಾಡುತ್ತಾನೆ, ಪ್ರತಿಗ್ರಹವನ್ನು ಮಾಡುತ್ತಾನೆ, ಯೋಗವನ್ನು ಮಾಡುತ್ತಾನೆ, ಧ್ಯಾನವನ್ನು ಮಾಡುತ್ತಾನೆ.
ವೇದೀಮಧ್ಯೇ ತಥಾ ಯೂಪೇ ಗೋಷ್ಠಮಧ್ಯೇ ಹುತಾಶನೇ |
ದೃಶ್ಯತೇ ದೃಶ್ಯತೇ ಚಾಪಿ ಬಾಲೋ ವೃದ್ಧೋ ಯುವಾ ತಥಾ ॥117॥
ವೇದಿಮಧ್ಯದಲ್ಲಿಯೂ, ಯೂಪದಲ್ಲಿಯೂ, ಗೋಶಾಲೆಯಲ್ಲಿಯೂ, ಅಗ್ನಿಯಲ್ಲಿಯೂ ಕಾಣುತ್ತಾನೆ. ಬಾಲನಾಗಿ, ಯುವಕನಾಗಿ, ವೃದ್ಧನಾಗಿ ಕಾಣುತ್ತಾನೆ.
ಕ್ರೀಡತೇ ಋಷಿಕನ್ಯಾಭಿರ್ಋಷಿಪತ್ನೀಭಿರೇವ ಚ |
ಊರ್ಧ್ವಕೇಶೋ ಮಹಾಶೇಫೋ ನಗ್ನೋ ವಿಕೃತಲೋಚನಃ ॥118॥
ಋಷಿಕನ್ಯೆಯರ ಜೊತೆಯಲ್ಲಿ, ಋಷಿಪತ್ನಿಯರ ಜೊತೆಯಲ್ಲಿ ಆಟವಾಡುತ್ತಾನೆ. ಮೇಲ್ಮುಖವಾದ ಕೇಶಗಳು, ದೊಡ್ಡ ಆಕಾರದ ಲಿಂಗವನ್ನು ಹೊಂದಿ ನಗ್ನನೂ, ವಿಕೃತಲೋಚನನೂ ಆಗಿದ್ದಾನೆ.
ಗೌರಃ ಶ್ಯಾಮಸ್ತದಾ ಕೃಷ್ಣಃ ಪಾಂಡರೋ ಧೂಮ್ರಲೋಹಿತಃ |
ವಿಕೃತಾಕ್ಷೋ ವಿಶಾಲಾಕ್ಷೋ ದಿಗ್ವಾಸಾಃ ಸರ್ವವಾಸಕಃ ॥119॥
ಅವನು ಗೌರವರ್ಣವನ್ನು, ಶ್ಯಾಮವರ್ಣವನ್ನು, ಕೃಷ್ಣವರ್ಣವನ್ನು, ಪಾಂಡರವರ್ಣವನ್ನು, ಧೂಮವರ್ಣವನ್ನು ಲೋಹಿತವರ್ಣವನ್ನು ಹೊಂದಿದ್ದಾನೆ. ವಿಕೃತವೂ, ವಿಶಾಲವೂ ಆದ ಕಣ್ಣುಗಳನ್ನು ಹೊಂದಿದ್ದಾನೆ. ದಿಗಂಬರನಾಗಿ ಸರ್ವರಿಗೂ ಆಶ್ರಯನಾಗಿದ್ದಾನೆ.
ಅರೂಪಸ್ಯಾದ್ಯರೂಪಸ್ಯ ಅತಿರೂಪಾದ್ಯರೂಪಿಣಃ |
ಅನಾದ್ಯಂತಮಜಸ್ಯಾಂತಂ ವೇತ್ಸ್ಯತೇ ಕೋಽಸ್ಯ ತತ್ತ್ವತಃ ॥120॥
ರೂಪರಹಿತನಾದ, ಅತಿಯಾದ ರೂಪವನ್ನು ಹೊಂದಿದ, ಆದ್ಯರೂಪನಾದ, ಜನ್ಮರಹಿತನಾದ, ಆದ್ಯಂತ ರಹಿತನಾದ ಅವನ ಜ್ಞಾನ ನಿರ್ಣಯವನ್ನು ಯಾವನು ಪಡೆಯುತ್ತಾನೆ?
ಹೃದಿ ಪ್ರಾಣೋ ಮನೋ ಜೀವೋ ಯೋಗಾತ್ಮಾ ಯೋಗಸಂಜ್ಞಿತಃ |
ಧ್ಯಾನಂ ತತ್ಪರಮಾತ್ಮಾ ಚ ಭಾವಗ್ರಾಹ್ಯೋ ಮಹೇಶ್ವರಃ ॥121॥
ಅವನು ಹೃದಯದಲ್ಲಿ ಪ್ರಾಣವನ್ನು ಹೊಂದಿದ್ದಾನೆ, ಮನಸ್ಸಿನಲ್ಲಿ ಜೀವರಿದ್ದಾರೆ. ಅವನು ಯೋಗಾತ್ಮ. ಯೋಗವೆಂಬ ಹೆಸರುಳ್ಳವನು. ಧ್ಯಾನರೂಪನಾದವನು. ಮಹೇಶ್ವರನಾದ ಆ ಪರಮಾತ್ಮನು ಭಕ್ತಿಯಿಂದ ಗ್ರಾಹ್ಯನಾದವನು.
ವಾದಕೋ ಗಾಯನಶ್ಚೈವ ಸಹಸ್ರಶತಲೋಚನಃ |
ಏಕವಕೊತ್ರೇ ದ್ವಿವಕ್ತ್ರಶ್ಚ ತ್ರಿವಕೊತ್ರೇಽನೇಕವಕ್ತ್ರಕಃ ॥122॥
ಅವನು ವಾದ್ಯವಾದಕನು, ಗಾಯನವನ್ನು ಮಾಡುವವನು, ಸಹಸ್ರ ಶತಲೋಚನನು, ಒಂದು ಮುಖ, ಎರಡು ಮುಖ, ಮೂರು ಮುಖ ಮತ್ತು ಅನೇಕ ಮುಖವುಳ್ಳವನು.
ತದ್ಭಕ್ತಸ್ತದ್ಗತೋ ನಿತ್ಯಂ ತನ್ನಿಷ್ಠಸ್ತತ್ಪರಾಯಣಃ |
ಭಜ ಪುತ್ರ ಮಹಾದೇವಂ ತತಃ ಪ್ರಾಪ್ಸ್ಯಸಿ ಚೇಪ್ಸಿತಮ್ ॥123॥
ಎಲೈ ಪುತ್ರನೇ, ಅಂತಹವನಿಗೆ ಭಕ್ತನಾಗಿ, ಅವನಲ್ಲೇ ನಿಶ್ಚಯವನ್ನು ಹೊಂದಿ, ಅವನನ್ನೇ ಶ್ರೇಷ್ಠನಾದ ಆಶ್ರಯವೆಂದು ತಿಳಿದು, ಮನಸ್ಸಿನಲ್ಲಿ ಅವನನ್ನೇ ಚಿಂತಿಸಿ ಭಜಿಸು. ಆಗ ಎಲ್ಲ ಇಷ್ಟವನ್ನೂ ಪಡೆಯುವಿ.
ಜನನ್ಯಾಸ್ತದ್ವಚಃ ಶ್ರುತ್ವಾ ತದಾಪ್ರಭೃತಿ ಶತ್ರುಹನ್ |
ಮಮ ಭಕ್ತಿರ್ಮಹಾದೇವೇ ನೈಷ್ಠಿಕೀ ಸಮಪದ್ಯತ ॥124॥
ಉಪಮನ್ಯು- ತಾಯಿಯ ಈ ಮಾತುಗಳನ್ನು ಕೇಳಿದಾಗಿನಿಂದ ಎಲೈ ಶತ್ರುಸಂಹಾರಕನೇ, ನನಗೆ ಮಹಾದೇವನಲ್ಲಿ ಏಕಾಂತವಾದ ಭಕ್ತಿಯು ಉಂಟಾಯಿತು.
ತತೋಽಹಂ ತಪ ಆಸ್ಥಾಯ ತೋಷಯಾಮಾಸ ಶಂಕರಮ್ |
ದಿವ್ಯಂ ವರ್ಷಸಹಸ್ರಂ ತು ಪಾದಾಂಗುಷ್ಠಾಗ್ರವಿಷ್ಠಿತಃ ॥125॥
ಅನಂತರ ನಾನು ದಿವ್ಯಮಾನದ ಸಹಸ್ರ ವರ್ಷಗಳ ಕಾಲ ಭೂಮಿಯಲ್ಲಿ ಪಾದಾಂಗುಷ್ಠದ ತುದಿಯಲ್ಲಿ ನಿಂತು ತಪಸ್ಸನ್ನು ಮಾಡಿ ಶಂಕರನನ್ನು ಸಂತೋಷಪಡಿಸಿದೆ.
ಏಕಂ ವರ್ಷಶತಂ ಚೈವ ಫಲಾಹಾರಸ್ತದಾಽಭವಮ್ |
ದ್ವಿತೀಯಂ ಶೀರ್ಣಪರ್ಣಾಶೀ ತೃತೀಯಂ ಚಾಂಬುಭೋಜನಃ |
ಶತಾನಿ ಸಪ್ತ ಚೈವಾಹಂ ವಾಯುಭಕ್ಷಸ್ತದಾಽಭವಮ್ ॥126॥
ಆಗ ನೂರು ವರ್ಷಗಳ ಕಾಲ ನಾನು ಕೇವಲ ಫಲಭಕ್ಷಕನಾಗಿದ್ದೆ. ಎರಡನೆಯ ನೂರು ವರ್ಷಗಳ ಕಾಲ ಕೆಳಗೆ ಬಿದ್ದ ಎಲೆಗಳನ್ನು ಆಹಾರವಾಗಿ ಸ್ವೀಕರಿಸಿದೆ. ಮೂರನೆಯ ನೂರು ವರ್ಷಗಳು ಕೇವಲ ಜಲವನ್ನು ಸ್ವೀಕರಿಸಿದೆ. ಅನಂತರ ಏಳು ನೂರು ವರ್ಷಗಳ ಕಾಲ ವಾಯುಭಕ್ಷಕನಾಗಿದ್ದೆ.
ತತಃ ಪ್ರೀತೋ ಮಹಾದೇವಃ ಸರ್ವಲೋಕೇಶ್ವರಃ ಪ್ರಭುಃ |
ಶಕ್ರರೂಪಂ ಸ ಕೃತ್ವಾ ತು ಸರ್ವೈರ್ದೇವಗಣೈರ್ವೃತಃ |
ಸಹಸ್ರಾಕ್ಷಸ್ತದಾ ಭೂತ್ವಾ ವಜ್ರಪಾಣಿರ್ಮಹಾಯಶಾಃ ॥127॥
ಸುಧಾವದಾತಂ ರಕ್ತಾಕ್ಷಂ ಸ್ತಬ್ಧಕರ್ಣಂ ಮದೋತ್ಕಟಮ್ |

ಆವೇಷ್ಟಿತಕರಂ ರೌದ್ರಂ ಚತುರ್ದಂಷ್ಟ್ರಂ ಮಹಾಗಜಮ್ ॥128॥
ಸಮಾಸ್ಥಿತಶ್ಚ ಭಗವಾನ್ ದೀಪ್ಯಮಾನಃ ಸ್ವತೇಜಸಾ |
ಆಜಗಾಮ ಕಿರೀಟೀ ತು ಹಾರಕೇಯೂರಭೂಷಿತಃ ॥129॥
ಆಗ ಪ್ರಸನ್ನನಾದ, ಸರ್ವಲೋಕೇಶ್ವರನಾದ, ಪ್ರಭುವಾದ ಮಹಾದೇವನು ಇಂದ್ರನ ರೂಪವನ್ನು ಧರಿಸಿ, ಸರ್ವದೇವಗಣಗಳಿಂದ ಕೂಡಿ, ಸಹಸ್ರಾಕ್ಷನಾಗಿ, ವಜ್ರಪಾಣಿಯಾಗಿ, ಅಮೃತದಂತೆ ಶ್ವೇತವರ್ಣದಿಂದ ಕೂಡಿದ, ಕೆಂಪಾದ ಕಣ್ಣುಗಳನ್ನು ಹೊಂದಿದ, ಅಲುಗಾಡದ ಕಿವಿಗಳನ್ನು ಹೊಂದಿದ, ಮದಭರಿತವಾದ, ಸುತ್ತಿದ ಸೊಂಡಿಲನ್ನು ಹೊಂದಿದ, ಮದೋತ್ಕಟವಾದ, ಭಯಂಕರವಾದ, ನಾಲ್ಕು ದಂತಗಳನ್ನು ಹೊಂದಿದ ಮಹಾಗಜವನ್ನು ಏರಿ, ತನ್ನ ತೇಜಸ್ಸಿನಿಂದ ಬೆಳಗುತ್ತಾ ಮಹಾಕೀರ್ತಿವಂತನೂ, ಭಗವಂತನೂ ಆದ ಶಂಕರನು ಕಿರೀಟವನ್ನು ಧರಿಸಿ, ಹಾರ-ಕೇಯೂರ ಭೂಷಿತನಾಗಿ ನನ್ನ ಬಳಿಗೆ ಬಂದನು.
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ಸೇವ್ಯಮಾನೋಽಪ್ಸರೋಭಿಶ್ಚ ದಿವ್ಯಗಂಧರ್ವನಾದಿತಃ ॥130॥
ತಲೆಯ ಮೇಲೆ ಹಿಡಿದ ಶ್ವೇತಚ್ಛತ್ರದಿಂದ ಕೂಡಿ, ಅಪ್ಸರೆಯರಿಂದ ಸೇವಿತನಾಗಿ ದಿವ್ಯಗಂಧರ್ವರಿಂದ ಗಾನ ಮಾಡಲ್ಪಡುತ್ತಿದ್ದನು.
ತತೋ ಮಾಮಾಹ ದೇವೇಂದ್ರಃ ಪ್ರೀತಸ್ತೇಽಹಂ ದ್ವಿಜೋತ್ತಮ |
ವರಂ ವೃಣೀಷ್ವ ಮತ್ತಸ್ತ್ವಂ ಯತ್ತೇ ಮನಸಿ ವರ್ತತೇ ॥131॥
ಆಗ ದೇವೇಂದ್ರನಾದ ಅವನು ಎಲೈ ದ್ವಿಜಶ್ರೇಷ್ಠನೇ, ನಾನು ಪ್ರಸನ್ನನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ವರವನ್ನು ನನ್ನಿಂದ ಸ್ವೀಕರಿಸು ಎಂದು ಹೇಳಿದನು.
ಶಕ್ರಸ್ಯ ತು ವಚಃ ಶ್ರುತ್ವಾ ನಾಹಂ ಪ್ರೀತಮನಾಽಭವಮ್ |
ಅಬ್ರುವಂ ಚ ತದಾ ಕೃಷ್ಣ ದೇವರಾಜಮಿದಂ ವಚಃ॥132॥
ಇಂದ್ರನ ಮಾತನ್ನು ಕೇಳಿ ನನಗೆ ಸಂತೋಷವಾಗಲಿಲ್ಲ. ಎಲೈ ಕೃಷ್ಣನೇ, ಆಗ ನಾನು ದೇವರಾಜನನ್ನು ಕುರಿತು ಹೀಗೆ ಮಾತನಾಡಿದೆನು.

ನಾಹಂ ತ್ವತ್ತೋ ವರಾಕಾಂಕ್ಷೀ ನಾನ್ಯಸ್ಮಾದಪಿ ದೈವತಾತ್ |
ಮನಾಕ್ ಶಕ್ರ ತ್ವಯಾ ದತ್ತಂ ತ್ರೈಲೋಕ್ಯಮಪಿ ಕಾಮಯೇ |
ಮಹಾದೇವಾದೃತೇ ಸೌಮ್ಯ ಸತ್ಯಮೇತದ್ ಬ್ರವೀಮಿ ತೇ ॥133॥
ಎಲೈ ಇಂದ್ರನೇ, ನಾನು ನಿನ್ನಿಂದಲಾಗಲೀ ಅಥವಾ ಬೇರೆ ದೇವತೆಯಿಂದಲಾಗಲೀ ವರವನ್ನು ಬಯಸುತ್ತಿಲ್ಲ. ಎಲೈ ಸೌಮ್ಯನೇ, ಮಹಾದೇವನ ಪ್ರಸಾದವನ್ನು ಬಿಟ್ಟು ನೀನು ಒಂದು ಪಕ್ಷ ತ್ರೈಲೋಕ್ಯವನ್ನು ಕೊಟ್ಟರೂ ಅದು ನನಗೆ ಬೇಡ. ಸತ್ಯವಾದ ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ.
ಸತ್ಯಂ ಸತ್ಯಂ ಹಿ ನಃ ಶಕ್ರ ವಾಕ್ಯಮೇತತ್ ಸುನಿಶ್ಚಿತಮ್ |
ನ ಯನ್ಮಹೇಶ್ವರಂ ಮುಕತ್ವ ಕಥಾಽನ್ಯಾ ಮಮ ರೋಚತೇ ॥134॥
ಎಲೈ ಶಕ್ರನೇ, ಈ ನನ್ನ ಮಾತು ನಿಶ್ಚಿತವಾಗಿ ಸತ್ಯ, ಸತ್ಯ. ಮಹೇಶ್ವರನ ಕಥೆಯನ್ನು ಬಿಟ್ಟು ಬೇರೆ ಯಾವ ಕಥೆಯೂ ನನಗೆ ಇಷ್ಟವಾಗುವುದಿಲ್ಲ.
ಪಶುಪತಿವಚನಾದ್ ಭವಾಮಿ ಸದ್ಯಃ
ಕೃಮಿರಥ ವಾ ತರುರಪ್ಯನೇಕಶಾಖಃ |
ಅಪಶುಪತಿವರಪ್ರಸಾದಜಾ ಮೇ
ತ್ರಿಭುವನರಾಜ್ಯವಿಭೂತಿರಪ್ಯನಿಷ್ಟಾ ॥135॥
ಪಶುಪತಿಯ ವಚನದಂತೆ ನಾನು ತಕ್ಷಣ ಕ್ರಿಮಿಯಾಗಲೀ, ಅನೇಕ ಶಾಖೆಯುಳ್ಳ ವೃಕ್ಷವಾಗಲೀ ಆಗುತ್ತೇನೆ. ಪಶುಪತಿಯಲ್ಲದವನ ಅನುಗ್ರಹದಿಂದ ಉಂಟಾದ ಮೂರುಲೋಕಗಳ ರಾಜ್ಯದ ಐಶ್ವರ್ಯವೂ ನನಗೆ ಇಷ್ಟವಾಗುವುದಿಲ್ಲ.
ಜನ್ಮ ಶ್ವಪಾಕಮಧ್ಯೇಽಪಿ ಮೇಽಸ್ತು ಹರಚರಣವಂದನರತಸ್ಯ |
ಮಾ ವಾಽನೀಶ್ವರಭಕ್ತೋ ಭವಾಮಿ ಭವನೇಽಪಿ ಶಕ್ರಸ್ಯ ॥136॥
ನನಗೆ ಶ್ವಪಚರ (ಚಂಡಾಲರ) ಮಧ್ಯದಲ್ಲಿ ಶಿವಪಾದ ವಂದನೆಯಲ್ಲಿ ರತನಾದವನ ಜನ್ಮವಾದರೂ ಇರಲಿ. ನಾನು ಈಶ್ವರ ಭಕ್ತನಾಗದೆ ಇಂದ್ರನ ಮನೆಯಲ್ಲಿಯೂ ಇರಲು ಇಷ್ಟಪಡುವುದಿಲ್ಲ.
ವಾಯ್ವಂಬುಭುಜೋಽಪಿ ಸತೋ ನರಸ್ಯ ದುಃಖಕ್ಷಯಃ ಕುತಸ್ತಸ್ಯ |
ಭವತಿ ಹಿ ಸುರಾಸುರಗುರೌ ಯಸ್ಯ ನ ವಿಶ್ವೇಶ್ವರೇ ಭಕ್ತಿಃ ॥137॥
ಸುರಾಸುರ ಗುರುವೂ, ವಿಶ್ವೇಶ್ವರನೂ ಆದ ಶಿವನಲ್ಲಿ ಭಕ್ತಿ ಇಲ್ಲದಿದ್ದರೆ ವಾಯುಭಕ್ಷ, ಅಬ್ಭಕ್ಷರಾಗಿ ತಪಸ್ಸನ್ನು ಮಾಡಿದರೂ ದುಃಖ ಪರಿಹಾರವು ಹೇಗೆ ಉಂಟಾದೀತು?
ಅಲಮನ್ಯಾಭಿಸ್ತೇಷಾಂ ಕಥಾಭಿರತ್ಯರ್ಥಧರ್ಮಯುಕ್ತಾಭಿಃ |
ಯೇಷಾಂ ನ ಕ್ಷಣಮಪಿ ರುಚಿತೋ ಹರಚರಣಸ್ಮರಣವಿಚ್ಛೇದಃ ॥138॥
ಯಾರಿಗೆ ಶಿವನ ಪಾದಸ್ಮರಣೆಯ ವಿಚ್ಛೇದವು ಒಂದು ಕ್ಷಣವೂ ಇಷ್ಟವಾಗುವುದಿಲ್ಲವೋ ಅಂತಹವರಿಗೆ ಬಹಳ ಧರ್ಮದಿಂದ ಯುಕ್ತವಾದ ಬೇರೆಯ ಕಥೆಗಳಿಂದ ಆಗಬೇಕಾದುದು ಏನಿದೆ?
ಹರಚರಣನಿರತಮತಿನಾ ಭವಿತವ್ಯಮಾರ್ಜವಂ ಗುಣಂ ಪ್ರಾಪ್ಯ |
ಸಂಸಾರಭಯಂ ನ ಭವತಿ ಹರಭಕ್ತಿರಸಾಯನಂ ಪೀತ್ವಾ ॥139॥
ಶಿವನ ಪಾದಗಳಲ್ಲಿ ನಿರತವಾದ ಭಕ್ತಿಯುಳ್ಳವನು ಆರ್ಜವಗುಣದಿಂದ ಕೂಡಿರಬೇಕು. ಅವನ ಭಕ್ತಿರಸಾಯನವನ್ನು ಪಾನ

ಮಾಡಿದವನಿಗೆ ಸಂಸಾರದ ಭಯವಿಲ್ಲ.
ದಿವಸಂ ದಿವಸಾರ್ಧಂ ವಾ ಮುಹೂರ್ತಂ ವಾ ಕ್ಷಣಂ ಲವಮ್ |
ನ ಹ್ಯಲಬ್ಧಪ್ರಸಾದಸ್ಯ ಭಕ್ತಿರ್ಭವತಿ ಶಂಕರೇ ॥140॥
ಶಿವನ ಅನುಗ್ರಹವಿಲ್ಲದೆ ಒಂದು ದಿವಸವಾಗಲೀ, ಅರ್ಧದಿವಸವಾಗಲೀ, ಒಂದು ಮುಹೂರ್ತವಾಗಲೀ, ಒಂದು ಕ್ಷಣವಾಗಲೀ, ಒಂದು ಲವವಾಗಲೀ ಶಂಕರನಲ್ಲಿ ಭಕ್ತಿಯುಂಟಾಗುವುದಿಲ್ಲ.
ಅಪಿ ಕೀಟಃ ಪತಂಗೋ ವಾ ಭವೇಯಂ ಶಂಕರಾಜ್ಞಯಾ |
ನ ತು ಶಕ್ರ ತ್ವಯಾ ದತ್ತಂ ತ್ರೈಲೋಕ್ಯಮಪಿ ಕಾಮಯೇ ॥141॥
ಶಂಕರನ ಆದೇಶದಂತೆ ನಾನು ಕೀಟವಾಗಲೀ, ಪತಂಗವಾಗಲೀ ಆದೇನು. ಎಲೈ ಇಂದ್ರನೇ, ನಿನ್ನಿಂದ ದತ್ತವಾದ ಮೂರು ಲೋಕಗಳನ್ನೂ ನಾನು ಬಯಸುವುದಿಲ್ಲ.
ಶ್ವಾಽಪಿ ಮಹೇಶ್ವರವಚನಾದ್ ಭವಾಮಿ ಸ ಹಿ ನಃ ಪರಃ ಕಾಮಃ |
ತ್ರಿದಶಗಣರಾಜ್ಯಮಪಿ ಖಲು ನೇಚ್ಛಾಮ್ಯಮಹೇಶ್ವರಾಜ್ಞಪ್ತಮ್ ॥142॥
ಮಹೇಶ್ವರನ ವಚನದಂತೆ ನಾನು ನಾಯಿಯಾದರೂ ಆಗುತ್ತೇನೆ. ಅದು ನನ್ನ ಶ್ರೇಷ್ಠವಾದ ಆಸೆ. ಮಹೇಶ್ವರನಿಂದ ಭಿನ್ನನಾದವನು ನೀಡಿದ ಸ್ವರ್ಗಲೋಕದ ರಾಜ್ಯವೂ ನನಗೆ ಬೇಡ.
ನ ನಾಕಪೃಷ್ಠಂ ನ ಚ ದೇವರಾಜ್ಯಂ
ನ ಬ್ರಹ್ಮಲೋಕಂ ನ ಚ ನಿಷ್ಕಲತ್ವಮ್ |
ನ ಸರ್ವಕಾಮಾನಖಿಲಾನ್ ವೃಣೋಮಿ
ಹರಸ್ಯ ದಾಸತ್ವಮಹಂ ವೃಣೋಮಿ ॥143॥
ಸ್ವರ್ಗಲೋಕವಾಗಲೀ ದೇವರಾಜ್ಯವಾಗಲೀ, ಬ್ರಹ್ಮಲೋಕವಾಗಲೀ, ಮೋಕ್ಷವಾಗಲೀ ನನಗೆ ಬೇಡ. ಯಾವ ಘೋರವಸ್ತುಗಳೂ ನನಗೆ ಬೇಡ. ಶಿವನ ದಾಸ್ಯವನ್ನು ಮಾತ್ರ ಬಯಸುತ್ತೇನೆ.
ಯಾವಚ್ಛಶಾಂಕಶಕಲಾಂಶಕಾಮಬದ್ಧಮೌಲಿ-
ರ್ನ ಪ್ರೀಯತೇ ಪಶುಪತಿರ್ಭಗವಾನ್ಮಮೇಶಃ |
ತಾವಜ್ಜರಾಮರಣಜನ್ಮಶತಾಭಿಘಾತೈ-
ರ್ದುಃಖಾನಿ ದೇಹವಿಹಿತಾನಿ ಸಮುದ್ವಹಾಮಿ ॥144॥
ಎಲ್ಲಿಯವರೆಗೆ ಶಶಾಂಕದಳ ಶೇಖರನಾದ, ಈಶ್ವರನಾದ, ಭಗವಂತನಾದ ಪಶುಪತಿಯು ಪ್ರಸನ್ನನಾಗುವುದಿಲ್ಲವೋ ಅಲ್ಲಿಯವರೆಗೆ ದೇಹಸಂಬಂಧದಿಂದ ಉಂಟಾದ ಜರಾ-ಮರಣ-ಜನನ ಮೊದಲಾದ ನೂರಾರು ದುಃಖಗಳನ್ನು ಅನುಭವಿಸುತ್ತೇನೆ.
ದಿವಸಕರಶಶಾಂಕವಹ್ನಿದೀಪ್ತಂ
ತ್ರಿಭುವನಸಾರಮಪಾರಮಾದ್ಯಮೇಕಮ್ |
ಅಜರಮಮರಮಪ್ರಸಾದ್ಯ ರುದ್ರಂ
ಜಗತಿ ಪುಮಾನಿಹ ಕೋ ಲಭೇತ ಶಾಂತಿಮ್ ॥145॥
ಸೂರ್ಯ-ಚಂದ್ರ-ಅಗ್ನಿಗಳ ಕಾಂತಿಯನ್ನು ಹೊಂದಿದ, ಮೂರುಲೋಕಗಳಲ್ಲಿ ಶ್ರೇಷ್ಠನಾದ, ಅಪಾರನಾದ, ಆದ್ಯನಾದ, ಮುಖ್ಯನಾದ, ಜರಾ-ಮರಣರಹಿತನಾದ ಶಿವನನ್ನು ಪ್ರಸನ್ನಗೊಳಿಸದೆ ಈ ಜಗತ್ತಿನಲ್ಲಿ ಯಾವ ಪುರುಷನು ಸುಖವನ್ನು ಪಡೆದಾನು?
ಶಕ್ರಃ
ಕಃ ಪುನಸ್ತವ ಹೇತುರ್ವೈ ಈಶೇ ಕಾರಣಕಾರಣೇ |
ಯೇನ ದೇವಾದೃತೇಽನ್ಯಸ್ಮಾತ್ಪ್ರಸಾದಂ ನಾಭಿಕಾಂಕ್ಷಸಿ ॥146॥
ಶಕ್ರ ಎಲ್ಲ ಕಾರಣಗಳಿಗೂ ಕಾರಣನಾದ ಈಶ್ವರನಲ್ಲಿ, ಬೇರೆ ದೇವತೆಗಳಿಂದ ಏನು ಬಂದರೂ ಬಯಸದಂತಹ, ನಿನಗೆ ಇಷ್ಟು ಭಕ್ತಿಗೆ ಕಾರಣವಾದುದು ಏನು?
ಉಪಮನ್ಯುಃ
ಹೇತುಭಿರ್ವಾ ಕಿಮನ್ಯೈಸ್ತೇ ಈಶಃ ಕಾರಣಕಾರಣಮ್ |
ನ ಶುಶ್ರುಮ ಯದನ್ಯಸ್ಯ ಲಿಂಗಮಭ್ಯರ್ಚ್ಯತೇ ಸುರೈಃ ॥147॥
ಉಪಮನ್ಯು ಬೇರೆ ಹೇತುಗಳನ್ನು ಹೇಳಿ ನಿನಗೆ ಏನು ಪ್ರಯೋಜನ? ಶಿವನು ಎಲ್ಲ ಕಾರಣಗಳಿಗೂ ಕಾರಣನಾಗಿದ್ದಾನೆ. ಶಿವನನ್ನು ಬಿಟ್ಟು ಯಾವನ ಲಿಂಗವು ದೇವತೆಗಳಿಂದ ಪೂಜಿಸಲ್ಪಡುವುದನ್ನು ನಾವು ಕೇಳಿದ್ದೇವೆ?
ಕಸ್ಯಾನ್ಯಸ್ಯ ಸುರೈಃ ಸರ್ವೈರ್ಲಿಂಗಂ ಮುಕ್ತತ್ವ ಮಹೇಶ್ವರಮ್ |
ಅರ್ಚ್ಯತೇಽರ್ಚಿತಪೂರ್ವಂ ವಾ ಬ್ರೂಹಿ ಯದ್ಯಸ್ತಿ ತೇ ಶ್ರುತಿಃ ॥148॥
ಶಿವನನ್ನು ಬಿಟ್ಟು ಬೇರೆ ಯಾವ ದೇವತೆಗಳ ಲಿಂಗವು ಎಲ್ಲ ದೇವತೆಗಳಿಂದಲೂ ಪೂಜಿಸಲ್ಪಡುತ್ತದೆ ಅಥವಾ ಹಿಂದೆ ಪೂಜಿಸಲ್ಪಟ್ಟಿದೆ ಎಂದು ನೀನೇನಾದರೂ ಕೇಳಿದ್ದರೆ ನನಗೆ ಹೇಳು.
ಯಸ್ಯ ಬ್ರಹ್ಮಾ ಚ ವಿಷ್ಣುಶ್ಚ ತ್ವಂ ಚಾಪಿ ಸಹ ದೈವತೈಃ |
ಅರ್ಚಯಧ್ವಂ ಸದಾ ಲಿಂಗಂ ತಸ್ಮಾಚ್ಛ್ರೇಷ್ಠತಮೋ ಹಿ ಸಃ ॥149॥
ಯಾವನ ಲಿಂಗವನ್ನು ಬ್ರಹ್ಮನೂ, ವಿಷ್ಣುವೂ, ದೇವತೆಗಳಿಂದ ಕೂಡಿದ ನೀನೂ ಸಹ ಪೂಜಿಸುತ್ತಿರುವಿರೋ ಆ ಕಾರಣದಿಂದ ಅವನು ಅತ್ಯಂತ ಶ್ರೇಷ್ಠನಾದವನು.
ಸದಸದ್ವ್ಯಕ್ತಮವ್ಯಕ್ತಂ ಯಮಾಹುರ್ಬ್ರಹ್ಮವಾದಿನಃ |

ನಿತ್ಯಮೇಕಮನೇಕಂ ಚ ವರಂ ತಸ್ಮಾದ್ ವೃಣೀಮಹೇ ॥150॥
ಅವನನ್ನು ಬಹ್ಮವಾದಿಗಳು ಕಾರ್ಯಕಾರಣ ರೂಪನೆಂದೂ ನಿತ್ಯಾನಿತ್ಯರೂಪನೆಂದೂ ಹೇಳುತ್ತಾರೆ. ಅವನು ನಿತ್ಯವೂ ಏಕನೂ, ಅನೇಕನೂ ಆಗಿದ್ದಾನೆ. ಆ ಕಾರಣದಿಂದ ಅವನಿಂದ ವರವನ್ನು ಬೇಡುತ್ತೇವೆ.
ಅನಾದಿಮಧ್ಯಪರ್ಯಂತಂ ಜ್ಞಾನೈಶ್ವರ್ಯಮಚಿಂತಿತಮ್ |
ಆತ್ಮಾನಂ ಪರಮಂ ಯಸ್ಮಾದ್ ವರಂ ತಸ್ಮಾದ್ ವೃಣೀಮಹೇ ॥151॥
ಆದಿ-ಮಧ್ಯಾಂತರಹಿತನಾದ, ಅಚಿಂತ್ಯವಾದ ಜ್ಞಾನೈಶ್ವರ್ಯ ಸಂಪನ್ನನಾದ, ಪರಮಾತ್ಮನಾದ ಅವನಿಂದ ನಾವು ವರವನ್ನು ಬೇಡುತ್ತೇವೆ.
ತಮಸಃ ಪರಮಂ ಜ್ಯೋತಿಸ್ತಪಸ್ತದ್ ವೃತ್ತಿನಾಂ ಪರಮ್ |
ಯಂ ಜ್ಞಾತ್ವಾ ನಾನುಶೋಚಂತಿ ವರಂ ತಸ್ಮಾದ್ ವೃಣೀಮಹೇ ॥152॥
ಅವನು ತಮಸ್ಸಿನ ಆಚೆಗಿರುವ ಜ್ಯೋತಿ. ಅವನು ತಪೋರೂಪನಾದವನು. ಅವನನ್ನು ತಿಳಿದವರು ಶೋಕನಿರ್ಮುಕ್ತರಾಗುತ್ತಾರೆ. ಅವನಿಂದ ವರವನ್ನು ಬೇಡುತ್ತೇವೆ.
ಭೂತಭಾವನಭಾವಜ್ಞಂ ಸರ್ವಭೂತಾಭಿಭಾವನಮ್ |
ಸರ್ವಗಂ ಸರ್ವದಂ ದೇವಂ ಪೂಜಯಾಮಿ ಪುರಂದರ ॥153॥
ಅವನು ಭೂತಭಾವನನಾದವನು. ಎಲ್ಲರ ಭಾವವನ್ನು ತಿಳಿದವನು. ಸರ್ವಭೂತಗಳನ್ನು ಸೋಲಿಸುವವನು. ಸರ್ವತ್ರ ವ್ಯಾಪ್ತನಾದವನು. ಸರ್ವವನ್ನೂ ಕೊಡುವವನು. ಎಲೈ ಪುರಂದರನೇ, ಅಂತಹ ದೇವನನ್ನು ಪೂಜಿಸುತ್ತೇನೆ.
ಹೇತುವಾದೈರ್ವಿನಿರ್ಮುಕ್ತಂ ಸಾಂಖ್ಯಯೋಗಾರ್ಥದಂ ಪರಮ್ |
ಯಮುಪಾಸಂತಿ ತತ್ವಜ್ಞಾ ವರಂ ತಸ್ಮಾದ್ ವೃಣೀಮಹೇ ॥154॥
ಶುಷ್ಕವಾದಗಳಿಂದ ವಿನಿರ್ಮುಕ್ತನಾದ, ಸಾಂಖ್ಯಯೋಗಗಳಲ್ಲಿ ಹೇಳಿದ ಫಲವನ್ನು ಕೊಡುವ, ಶ್ರೇಷ್ಠನಾದ ಯಾವನನ್ನು ತತ್ತ್ವಜ್ಞಾನಿಗಳು ಉಪಾಸನೆ ಮಾಡುತ್ತಾರೆಯೋ, ಅವನಿಂದ ವರವನ್ನು ಬೇಡುತ್ತೇವೆ.
ಮಘವನ್ ಮಘವಾತ್ಮಾನಂ ಯಂ ವದಂತಿ ಸುರೇಶ್ವರಮ್ |
ಸರ್ವಭೂತಗುರುಂ ದೇವಂ ವರಂ ತಸ್ಮಾದ್ ವೃಣೀಮಹೇ ॥155॥
ಇಂದ್ರನೇ, ಯಾವನನ್ನು ಸುರೇಶ್ವರನೆಂದೂ, ಇಂದ್ರನ ಸ್ವಾಮಿಯೆಂದೂ, ಸರ್ವಭೂತಗುರುವೆಂದೂ, ಶ್ರೇಷ್ಠನಾದ ದೇವನೆಂದು ಹೇಳುತ್ತಾರೆಯೋ ಅವನಿಂದ ವರವನ್ನು ಪಡೆಯುತ್ತೇವೆ.
ಯತ್ಪೂರ್ವಮಸೃಜದ್ ದೇವಂ ಬ್ರಹ್ಮಾಣಂ ಲೋಕಭಾವನಮ್ |
ಅಖಂಡಮಾಕಾಶಮಾಪೂರ್ಯ ವರಂ ತಸ್ಮಾದ್ ವೃಣೀಮಹೇ ॥156॥
ಅವನು ಅಖಂಡವಾದ ಆಕಾಶವನ್ನು ವ್ಯಾಪಿಸಿ, ಲೋಕಸೃಷ್ಟಿಕರ್ತನಾದ ಬ್ರಹ್ಮನನ್ನು ಮೊದಲು ಸೃಷ್ಟಿಸಿದುದರಿಂದ ಅವನಿಂದ ವರವನ್ನು ಬೇಡುತ್ತೇವೆ.
ಅಗ್ನಿರಾಪೋಽನಿಲಃ ಪೃಥ್ವೀ ಖಂ ಬುದ್ಧಿಶ್ಚ ಮನೋ ಮಹಾನ್ |
ಸ್ರಷ್ಟಾ ಚೈಷಾಂ ಭವೇದ್ ಯೋಽನ್ಯೋ ಬ್ರೂಹಿ ಕಃ ಪರಮೇಶ್ವರಾತ್ ॥
ಅಗ್ನಿ, ಜಲ, ಅನಿಲ, ಭೂಮಿ, ಆಕಾಶ, ಬುದ್ಧಿ, ಮನಸ್ಸು, ಮಹತತ್ತ್ವ ಇವುಗಳಿಗೆ ಪರಮೇಶ್ವರನನ್ನು ಬಿಟ್ಟು ಬೇರೆ ಯಾವನು ಸೃಷ್ಟಿಕರ್ತನಾಗುತ್ತಾನೆ ಎಂದು ಹೇಳು.
ಮನೋ ಮತಿರಹಂಕಾರಸ್ತನ್ಮಾತ್ರಾಣೀಂದ್ರಿಯಾಣಿ ಚ |
ಬ್ರೂಹಿ ಚೈಷಾಂ ಭವೇಚ್ಛಕ್ರ ಕೋಽನ್ಯೋಽಸ್ತಿ ಪರಮಂ ಶಿವಾತ್ ॥158॥
ಎಲೈ ಇಂದ್ರನೇ, ಮನಸ್ಸು, ಬುದ್ಧಿ, ಅಹಂಕಾರ, ತನ್ಮಾತ್ರಗಳು, ಇಂದ್ರಿಯಗಳು ಇವುಗಳಿಗೆ ಶಿವನನ್ನು ಬಿಟ್ಟು ಪ್ರವೃತ್ತಿಯನ್ನು ಉಂಟು ಮಾಡುವವನು ಯಾವನು ಇದ್ದಾನೆ ಎಂದು ಹೇಳು.
ಸ್ರಷ್ಟಾರಂ ಭುವನಸ್ಯೇಹ ವದಂತೀಹ ಪಿತಾಮಹಮ್ |
ಆರಾಧ್ಯ ಸ ತು ದೇವೇಶಮಶ್ನುತೇ ಮಹತೀಂ ಶ್ರಿಯಮ್ ॥159॥
ಪಿತಾಮಹನಾದ ಬ್ರಹ್ಮನನ್ನು ಲೋಕವನ್ನು ಸೃಷ್ಟಿಸುವವನು ಎಂದು ಹೇಳುತ್ತಾರೆ. ಆ ಬ್ರಹ್ಮನಾದರೂ ದೇವೇಶ್ವರನಾದ ಶಿವನನ್ನು ಆರಾಧಿಸಿ, ದೊಡ್ಡ ಸಂಪತ್ತನ್ನು ಪಡೆದಿದ್ದಾನೆ.
ಭಗವತ್ಯುತ್ತಮೈಶ್ವರ್ಯಂ ಬ್ರಹ್ಮವಿಷ್ಣುಪುರೋಗಮಮ್ |
ವಿದ್ಯತೇ ವೈ ಮಹಾದೇವಾದ್ ಬ್ರೂಹಿ ಕಃ ಪರಮೇಶ್ವರಾತ್ ॥160॥
ಭಗವಂತನಾದ ಶಿವನಲ್ಲಿ ಬ್ರಹ್ಮ, ವಿಷ್ಣುಗಳ ಸಂಪತ್ತನ್ನು ಮೀರಿಸಿದ ಐಶ್ವರ್ಯವಿದೆ. ಆದ್ದರಿಂದ ಪರಮೇಶ್ವರನಾದ ಮಹಾದೇವನನ್ನು ಬಿಟ್ಟು ಬೇರೆ ಯಾವನು ಉತ್ತಮನಿದ್ದಾನೆಂದು ಹೇಳು.
ದೈತ್ಯದಾನವಮುಖ್ಯಾನಾಮಾಧಿಪತ್ಯಾರಿಮರ್ದನಾತ್ |
ಕೋಽನ್ಯಃ ಶಕ್ನೋತಿ ದೇವೇಶಾದ್ ದಿತೇಃ ಸಂಪಾದಿತುಂ ಸುತಾನ್ ॥
ದೈತ್ಯ-ದಾನವ ಶ್ರೇಷ್ಠರ ಆಧಿಪತ್ಯವು ಅರಿಮರ್ದನನಾದ ಶಿವನಿಂದ ಉಂಟಾಗುತ್ತದೆ. ದಿತಿಯ ಪುತ್ರರಿಗೆ ದೇವೇಶನಾದ ಶಿವನನ್ನು ಬಿಟ್ಟು ಬೇರೆ ಯಾವನು ಇಂತಹ ಸಂಪತ್ತನ್ನು ಸಂಪಾದಿಸಿಕೊಡುತ್ತಾನೆ.
ದಿಕ್ಕಾಲಸೂರ್ಯತೇಜಾಂಸಿ ಗ್ರಹವಾಯ್ವಿಂದುತಾರಕಾಃ |
ವಿದ್ಧಿ ತ್ವೇತೇ ಮಹಾದೇವಾದ್ ಬ್ರೂಹಿ ಕಃ ಪರಮೇಶ್ವರಾತ್ ॥162॥
ದಿಕ್ಕುಗಳು, ಕಾಲ, ಸೂರ್ಯ, ತೇಜಸ್ಸುಗಳು, ಗ್ರಹಗಳು, ವಾಯು, ಚಂದ್ರ, ನಕ್ಷತ್ರಗಳು - ಇವೆಲ್ಲವೂ ಮಹಾದೇವನನಿಂದಲೇ ಉಂಟಾಗಿವೆ.

ಪರಮೇಶ್ವರನಿಗಿಂತ ಉತ್ತಮರು ಯಾರು ಎಂದು ಹೇಳು.
ಅಥೋತ್ಪತ್ತಿವಿನಾಶೇ ವಾ ಯಜ್ಞಸ್ಯ ತ್ರಿಪುರಸ್ಯ ವಾ |
ದೈತ್ಯದಾನವಮುಖ್ಯಾನಾಮಾಧಿಪತ್ಯಾರಿಮರ್ದನಃ ||163||
ಯಜ್ಞ-ದಾನಗಳ, ತ್ರಿಪುರಗಳ ಉತ್ಪತ್ತಿ-ವಿನಾಶಗಳು ಅವನಿಂದ ಆಗುತ್ತವೆ. ದೈತ್ಯ-ದಾನವ ಶ್ರೇಷ್ಠರ ಆಧಿಪತ್ಯಗಳು ಅರಿಮರ್ದನನಾದ ಅವನಿಂದ ಉಂಟಾಗುತ್ತವೆ.
ಕಿಂ ಚಾತ್ರ ಬಹುಭಿಃ ಸೂಕ್ತೈರ್ಹೇತುವಾದೈಃ ಪುರಂದರ |
ಸಹಸ್ರನಯನಂ ದೃಷ್ಟ್ವಾ ತ್ವಾಮೇವ ಸುರಸತ್ತಮ ||164||
ಪೂಜಿತಂ ಸಿದ್ಧಗಂಧರ್ವೈರ್ದೇವೈಶ್ಚ ಋಷಿಭಿಸ್ತಥಾ |
ದೇವದೇವಪ್ರಸಾದೇನ ತತ್ಸರ್ವಂ ಕುಶಿಕೋತ್ತಮ ||165||
ಅವ್ಯಕ್ತಮುಕ್ತಕೇಶಾಯ ಸರ್ವಗಸ್ಯೇದಮಾತ್ಮಕಮ್ |
ಚೇತನಾಚೇತನಾದ್ಯೇಷು ಶಕ್ರ ವಿದ್ಧಿ ಮಹೇಶ್ವರಾತ್ ||166||
ಎಲೈ ಪುರಂದರನೇ, ಬಹಳ ಯುಕ್ತಿಗಳನ್ನು ಹೇಳಿ ಏನು ಪ್ರಯೋಜನ? ಎಲೈ ಸುರಶ್ರೇಷ್ಠನೇ, ಸಿದ್ಧ-ಗಂಧರ್ವರಿಂದಲೂ, ಋಷಿಗಳಿಂದಲೂ ಪೂಜಿತವಾದ ನಿನ್ನನ್ನೇ ನೋಡು. ಎಲೈ ಕುಶಿಕಶ್ರೇಷ್ಠನೇ, ಇವೆಲ್ಲವೂ ದೇವದೇವನಾದ ಶಿವನ ಪ್ರಸಾದದಿಂದಲೇ ಉಂಟಾಗಿವೆ. ಅವ್ಯಕ್ತನೂ, ಮುಕ್ತಕೇಶನೂ, ಸರ್ವತ್ರ ವ್ಯಾಪ್ತನೂ ಆದ ಅವನು ಈ ಜಗತ್ತಿಗೆ ಸ್ವಾಮಿಯಾದವನು. ಜಡ-ಚೇತನಗಳಿಂದ ನಡೆಯುವ ವ್ಯಾಪಾರಗಳೆಲ್ಲವೂ ಮಹೇಶ್ವರನಿಂದಲೇ ಉಂಟಾಗುವುದೆಂದು ತಿಳಿ.
ಭುವಾದ್ಯೇಷು ಮಹಾಂತೇಷು ಲೋಕಾಲೋಕಾಂತರೇಷು ಚ |
ದ್ವೀಪಸ್ಥಾನೇಷು ಮೇರೋಶ್ಚ ವಿಭವೇಷ್ವಂತರೇಷು ಚ |
ಭಗವನ್ ಮಘವನ್ ದೇವಂ ವದಂತೇ ತತ್ತ್ವದರ್ಶಿನಃ ||167||
ಪೂಜ್ಯನಾದ ಇಂದ್ರನೇ, ದೊಡ್ಡಲೋಕಗಳಲ್ಲಿ, ಲೋಕಾಲೋಕ ಪರ್ವತಗಳ ಮಧ್ಯದಲ್ಲಿ, ದ್ವೀಪಸ್ಥಾನಗಳಲ್ಲಿ, ಮೇರುಪರ್ವತದ ವೈಭವಗಳಲ್ಲಿ, ಅದರ ಮಧ್ಯದ ಪ್ರದೇಶಗಳಲ್ಲಿ ತತ್ತ್ವಜ್ಞಾನಿಯಾದ ವೇದಜ್ಞರು ಶಿವನನ್ನೇ ಕೊಂಡಾಡುತ್ತಾರೆ.
ಯದಿ ದೇವಾಃ ಸುರಾಃ ಶಕ್ರ ಪಶ್ಯಂತ್ಯನ್ಯಾಂ ಭವಾಕೃತಿಮ್ |
ಕಿಂ ನ ಗಚ್ಛಂತಿ ಶರಣಂ ಮರ್ದಿತಾಶ್ಚಾಸುರೈಃ ಸುರಾಃ ||168||
ಎಲೈ ಇಂದ್ರನೇ, ದೇವತೆಗಳು ಶಿವನಂತೆ ತಮ್ಮನ್ನು ಸಲಹುವ ಇನ್ನೊಬ್ಬ ವ್ಯಕ್ತಿಯನ್ನು ನೋಡಿದರೆ ಅಸುರರಿಂದ ಪೀಡಿತರಾದ ಅವರು ಏಕೆ ಆ ವ್ಯಕ್ತಿಗೆ ಶರಣು ಹೊಂದುವುದಿಲ್ಲ?
ಅಭಿಘಾತೇಷು ದೇವಾನಾಂ ಸಯಕ್ಷೋರಗರಾಕ್ಷಸಾಮ್ |
ಪರಸ್ಪರವಿನಾಶೇಷು ಸ್ವಸ್ಥಾನೈಶ್ವರ್ಯದೋ ಭವಃ ||169||
ದೇವತೆಗಳಿಗೆ, ಯಕ್ಷ-ಉರಗ-ರಾಕ್ಷಸರಿಗೆ, ಪರಸ್ಪರ ವಿರೋಧವುಂಟಾಗಿ ಪರಸ್ಪರವಾಗಿ ವಿನಾಶವನ್ನು ಹೊಂದುವಾಗ ಅವರಿಗೆ ಅವರ ಸ್ಥಾನವನ್ನೂ, ಐಶ್ವರ್ಯವನ್ನೂ ಕೊಡುವವನು ಶಿವ.
ಅಂಧಕಸ್ಯಾಥ ಶುಕ್ರಸ್ಯ ದುಂದುಭೇರ್ಮಹಿಷಸ್ಯ ಚ |
ಯಕ್ಷೇಂದ್ರಬಲರಕ್ಷಸ್ಸು ನಿವಾತಕವಚೇಷು ಚ |
ವರದಾನಾವಘಾತಾಯ ಬ್ರೂಹಿ ಕೋಽನ್ಯೋ ಮಹೇಶ್ವರಾತ್ ||170||
ಅಂಧಕಾಸುರನಿಗೆ, ಶುಕ್ರನಿಗೆ, ದುಂಧುಬಿಗೆ, ಮಹಿಷಾಸುರನಿಗೆ, ಯಕ್ಷೇಂದ್ರ- ರಾಕ್ಷಸರಿಗೆ, ನಿವಾತ-ಕವಚರಿಗೆ ಕೊಟ್ಟ ವರವನ್ನು ವಿನಾಶಗೊಳಿಸಲು ಪರಮೇಶ್ವರನನ್ನು ಬಿಟ್ಟು ಬೇರೆ ಯಾವನು ಸಮರ್ಥನೆಂದು ಹೇಳು.
ಸುರಾಸುರಗುರೋರ್ವಕ್ತ್ರೇ ಕಸ್ಯ ರೇತಃ ಪುರಾ ಹುತಮ್ |
ಕಸ್ಯ ವಾಽನ್ಯಸ್ಯ ರೇತಸ್ತದ್ಯೇನ ಹೈಮೋ ಗಿರಿಃ ಕೃತಃ ||171||
ಸುರಾಸುರ ದೇವನಾದ ಅಗ್ನಿಯ ಮುಖದಲ್ಲಿ ಯಾವನ ರೇತಸ್ಸು ಹಿಂದೆ ಹಾಕಲ್ಪಟ್ಟಿತು? ಬೇರೆ ಯಾವನ ರೇತಸ್ಸಿನಿಂದ ಸುವರ್ಣಮಯವಾದ ಪರ್ವತವು ಉಂಟಾಗುತ್ತದೆ?
ದಿಗ್ವಾಸಾಃ ಕೀರ್ತ್ಯತೇ ಕೋಽನ್ಯೋ ಲೋಕೇ ಕಶ್ಚೋರ್ಧ್ವರೇತಸಃ |
ಕಸ್ಯ ಚಾರ್ಧೇ ಸ್ಥಿತಾ ಕಾಂತಾ ಅನಂಗಃ ಕೇನ ನಿರ್ಜಿತಃ ||172||
ಲೋಕದಲ್ಲಿ ದಿಗಂಬರನೆಂದೂ, ಊರ್ಧ್ವರೇತಸ್ಕನೆಂದೂ ಬೇರೆ ಯಾವನನ್ನು ಕೊಂಡಾಡುತ್ತಾರೆ? ಯಾವನ ಅರ್ಧಭಾಗದಲ್ಲಿ ಅವನ ಪತ್ನಿ ಇದ್ದಾಳೆ? ಮನ್ಮಥನನ್ನು ಜಯಿಸಿದವನು ಯಾರು?
ಬ್ರೂಹೀಂದ್ರ ಪರಮಂ ಸ್ಥಾನಂ ಕಸ್ಯ ದೇವೈಃ ಪ್ರಶಸ್ಯತೇ |
ಶ್ಮಶಾನೇ ಕಸ್ಯ ಕ್ರೀಡಾರ್ಥಂ ನೃತ್ತೇ ವಾ ಕೋಽಭಿಭಾಷ್ಯತೇ ||173||
ಎಲೈ ಇಂದ್ರನೇ, ಯಾವನ ಶ್ರೇಷ್ಠವಾದ ಸ್ಥಾನವು ದೇವತೆಗಳಿಂದ ಪ್ರಶಂಸಿಸಲ್ಪಡುತ್ತದೆ ಎಂದು ಹೇಳು. ಕ್ರೀಡಾರ್ಥವಾಗಿ ಸ್ಮಶಾನದಲ್ಲಿ ನೃತ್ಯವನ್ನು ಮಾಡುವ ಯಾವನು ವರ್ಣಿಸಲ್ಪಡುತ್ತಾನೆ?
ಕಸ್ಯೈಶ್ವರ್ಯಂ ಸಮಾನಂ ಚ ಭೂತೈಃ ಕೋ ವಾಽಪಿ ಕೀಡತೇ |
ಕಸ್ಯ ತುಲ್ಯಬಲಾ ದೇವಗಣಾಶ್ಚೈಶ್ವರ್ಯದರ್ಪಿತಾಃ ||174||
ಯಾವನ ಐಶ್ವರ್ಯವು ಶಿವನ ಐಶ್ವರ್ಯಕ್ಕೆ ಸಮಾನವಾಗಿದೆ? ಯಾವನು ಪಂಚಭೂತಗಳ ಜೊತೆಗೆ ಆಟವಾಡುತ್ತಾನೆ? ಐಶ್ವರ್ಯದಿಂದ ದರ್ಪವನ್ನು ಹೊಂದಿದ ದೇವತಾ ಸಮೂಹವು ಯಾವನಿಗೆ ಸಮಾನವಾದ ಬಲವನ್ನು ಹೊಂದಿದೆ?
ಘುಷ್ಯತೇ ಹ್ಯಚಲಂ ಸ್ಥಾನಂ ಕಸ್ಯ ತ್ರೈಲೋಕ್ಯಪೂಜಿತಮ್ |

ವರ್ಷತೇ ತಪತೇ ಕೋಽನ್ಯೋ ಜ್ವಲತೇ ತೇಜಸಾ ಚ ಕಃ ॥175॥
ಯಾವನ ಸ್ಥಾನವಾದ ಪರ್ವತವು ತ್ರೈಲೋಕ್ಯಜಿತವಾಗಿ ಪೂಜಿಸಲ್ಪಡುತ್ತದೆ? ಶಿವನನ್ನು ಬಿಟ್ಟು ಯಾವನು ಮಳೆಯನ್ನು ಸುರಿಸುತ್ತಾನೆ? ಬಿಸಿಲನ್ನು ಕೊಡುತ್ತಾನೆ? ತೇಜಸ್ಸಿನಿಂದ ಜ್ವಲಿಸುತ್ತಾನೆ?
ಕಸ್ಮಾದೋಷಧಿಸಂಪತ್ತಿಃ ಕೋ ವಾ ಧಾರಯತೇ ವಸು |
ಪ್ರಕಾಮಂ ಕ್ರೀಡತೇ ಕೋ ವಾ ತ್ರೈಲೋಕ್ಯೇ ಸಚರಾಚರೇ ॥176॥
ಓಷಧಿ-ವನಸ್ಪತಿಗಳ ಸಂಪತ್ತು ಯಾವನಿಂದ ಉಂಟಾಗುತ್ತದೆ? ಭೂಮಿಯ ಸಂಪತ್ತನ್ನು ಯಾವನು ಧರಿಸುತ್ತಾನೆ? ಜಲಾಚರಗಳಿಂದ ಸಹಿತವಾದ ಮೂರುಲೋಕಗಳಲ್ಲಿ ತನ್ನ ಮನಸ್ಸಿಗೆ ಬಂದಂತೆ ಬೇರೆ ಯಾವನು ಕ್ರೀಡಿಸುತ್ತಾನೆ?
ಜ್ಞಾನಸಿದ್ಧಿಕ್ರಿಯಾಯೋಗೈಃ ಸೇವ್ಯಮಾನಶ್ಚ ಯೋಗಿಭಿಃ |
ಋಷಿಗಂಧರ್ವಸಿದ್ಧೈಶ್ಚ ವಿಹಿತಂ ಕಾರಣಂ ಪರಮ್ ॥177॥
ಮುನಿಗಳಿಂದಲೂ, ಋಷಿ-ಗಂಧರ್ವ-ಸಿದ್ಧರಿಂದಲೂ ಜ್ಞಾನಯೋಗ, ಸಿದ್ಧಿಯೋಗ, ಕ್ರಿಯಾಯೋಗಗಳಿಂದ ಸಿದ್ಧಿಸಲ್ಪಡುವ ಅವನು ಜಗತ್ತಿಗೆ ಶ್ರೇಷ್ಠವಾದ ಕಾರಣನಾಗಿ ವಿಹಿತನಾಗಿದ್ದಾನೆ.
ಕರ್ಮಯಜ್ಞಕ್ರಿಯಾಯೋಗೈಃ ಸೇವ್ಯಮಾನಃ ಸುರಾಸುರೈಃ |
ನಿತ್ಯಂ ಕರ್ಮಫಲೈರ್ಹೀನಂ ತಮಹಂ ಕಾರಣಂ ವದೇ ॥178॥
ಸುರಾಸುರರಿಂದ ಕರ್ಮಗಳಿಂದಲೂ, ಯಜ್ಞಗಳಿಂದಲೂ, ಕ್ರಿಯಾಯೋಗಗಳಿಂದಲೂ ಸೇವಿಸಲ್ಪಡುವ ಸ್ವತಃ ನಿತ್ಯವೂ ಕರ್ಮಫಲ ರಹಿತನಾದ ಶಿವನು ಜಗತ್ತಿಗೆ ಕಾರಣನೆಂದು ಹೇಳುತ್ತೇನೆ.
ಸ್ಥೂಲಂ ಸೂಕ್ಷ್ಮಮನೌಪಮ್ಯಮಗ್ರಾಹ್ಯಂ ಗುಣಗೋಚರಮ್ |
ಗುಣಹೀನಂ ಗುಣಾಧ್ಯಕ್ಷಂ ಪರಂ ಮಾಹೇಶ್ವರಂ ಪದಮ್ ॥179॥
ಮಹೇಶ್ವರನ ಸ್ವರೂಪವು ಸ್ಥೂಲವಾದುದು, ಸೂಕ್ಷ್ಮವಾದುದು, ಅಸದೃಶವಾದುದು, ಬುದ್ಧಿಯಿಂದ ತಿಳಿಯಲು ಅಸಾಧ್ಯವಾದುದು. ಸದ್ಗುಣಗಳಿಗೆ ಗೋಚರವಾಗುವಂತಹದು. ಸ್ವತಃ ಗುಣಗಳಿಂದ ಹೀನವಾದುದು ಮತ್ತು ಎಲ್ಲ ಗುಣಗಳನ್ನು ನೇರವಾಗಿ ನೋಡುವಂತಹದು.
ವಿಶ್ವೇಶಂ ಕಾರಣಗುರುಂ ಲೋಕಾಲೋಕಾಂತಕಾರಣಮ್ |
ಭೂತಾಭೂತಭವಿಷ್ಯಚ್ಚ ಜನಕಂ ಸರ್ವಕಾರಣಮ್ ॥180॥
ಜಗತ್ತಿಗೆ ಒಡೆಯನಾದ ಕಾರಣವಾದುದು, ಗುರುವಾದುದು, ಲೋಕಾಲೋಕ ವಿನಾಶಕ್ಕೆ ಕಾರಣವಾದುದು. ಭೂತ-ಭವಿಷ್ಯತ್-ವರ್ತಮಾನವಾದ ಸರ್ವಪದಾರ್ಥಗಳಿಗೆ ಕಾರಣವಾದುದು.
ಅಕ್ಷರಕ್ಷರಮವ್ಯಕ್ತಂ ವಿದ್ಯಾವಿದ್ಯೇ ಕೃತಾಕೃತೇ |
ಧರ್ಮಾಧರ್ಮೌ ಯತಃ ಶಕ್ರ ತಮಹಂ ಕಾರಣಂ ಬ್ರುವೇ ॥181॥
ಎಲೈ ಶಕ್ರನೇ, ಅದು ಅಕ್ಷರವಾದುದು, ಕ್ಷರವಾದುದು, ಅವ್ಯಕ್ತವಾದುದು, ವಿದ್ಯೆ, ಅವಿದ್ಯೆ, ಕೃತ, ಅಕೃತ, ಧರ್ಮ ಮತ್ತು ಅಧರ್ಮಗಳು ಯಾವನಿಂದ ಉಂಟಾಗುತ್ತವೆಯೋ ಅವನನ್ನು ಕಾರಣನೆಂದು ಹೇಳುತ್ತೇನೆ.
ಪ್ರತ್ಯಕ್ಷಮಿಹ ದೇವೇಂದ್ರ ಪಶ್ಯ ಲಿಂಗಂ ಭಗಾಂಕಿತಮ್ |
ದೇವದೇವೇನ ರುದ್ರೇಣ ಸೃಷ್ಟಿಸಂಹಾರಹೇತುನಾ ॥182॥
ಎಲೈ ದೇವೇಂದ್ರನೇ, ದೇವದೇವನೂ, ಸೃಷ್ಟಿಸಂಹಾರ ಕಾರಣನೂ ಆದ ರುದ್ರನ ಭಗಾಂಕಿತವಾದ ಲಿಂಗವು ಇಲ್ಲಿ ಪ್ರತ್ಯಕ್ಷವಾಗಿರುವುದನ್ನು ನೋಡು.
ಮಾತ್ರಾ ಪೂರ್ವಂ ಮಮಾಖ್ಯಾತಂ ಕಾರಣಂ ಲೋಕಲಕ್ಷಣಮ್ |
ನಾಸ್ತಿ ಚೇಶಾತ್ ಪರಂ ಶಕ್ರ ತಂ ಪ್ರಪದ್ಯ ಯದೀಚ್ಛಸಿ ॥183॥
ನನ್ನ ತಾಯಿಯು ಹಿಂದೆ ನನಗೆ ಅವನನ್ನು ಕಾರಣವೆಂದೂ ಮತ್ತು ತ್ರಿಲೋಕ ರೂಪವನ್ನು ಧರಿಸಿದವನು ಎಂದೂ ಹೇಳಿದಳು. ಎಲೈ ಇಂದ್ರನೇ, ಶಿವನಿಗಿಂತ ಶ್ರೇಷ್ಠವಾದುದು ಇಲ್ಲ. ನಿನಗೆ ಮನಸ್ಸಿದ್ದರೆ ಅವನಿಗೆ ಶರಣಾಗತನಾಗು.
ಪ್ರತ್ಯಕ್ಷಂ ನ ತು ತೇ ಸುರೇಶ ವಿದಿತಂ ಸಂಯೋಗಲಿಂಗೋದ್ಭವಮ್ |
ತ್ರೈಲೋಕ್ಯಂ ಸವಿಕಾರನಿರ್ಗುಣಗಣಂ ಬ್ರಹ್ಮಾದಿ ರೇತೋದ್ಭವಮ್ ॥
ಯದ್ ಬ್ರಹ್ಮೇಂದ್ರಹುತಾಶವಿಷ್ಣುಸಹಿತಾ ದೇವಾಶ್ಚ ದೈತ್ಯೇಶ್ವರಾಃ
ನಾನ್ಯತ್ಕಾಮಸಹಸ್ರಕಲ್ಪಿತಧಿಯಃ ಶಂಸಂತಿ ಈಶಾತ್ ಪರಮ್ ॥185॥
ಎಲೈ ಸುರೇಶನೇ, ಮೂರುಲೋಕಗಳೂ ಲಿಂಗಸಂಯೋಗದಿಂದ ಉಂಟಾಗಿವೆ ಎಂಬುದು ನಿನಗೆ ಪ್ರತ್ಯಕ್ಷವಾಗಿ ತಿಳಿದಿದೆ. ತ್ರಿಲೋಕಸಹಿತರಾದ ಬ್ರಹ್ಮಾದಿ ಸರ್ವಗಣಗಳೂ ಅವನ ರೇತಸ್ಸಿನಿಂದ ಜನಿಸಿದವುಗಳು. ಸಹಸ್ರ ಕಾಮಗಳನ್ನು ಹೊಂದಿರುವ ಬ್ರಹ್ಮೇಂದ್ರ, ಅಗ್ನಿ, ವಿಷ್ಣು ಸಹಿತರಾದ ಸಕಲ ದೇವತೆಗಳು, ಮತ್ತು ದೈತ್ಯೇಶ್ವರರು ಶಿವನಿಗಿಂತಲೂ ಶ್ರೇಷ್ಠವಾದುದು ಇಲ್ಲವೆಂದು ಪ್ರಶಂಸಿಸುತ್ತಾರೆ.
ತಂ ದೇವಂ ಸಚರಾಚರಸ್ಯ ಜಗತೋ ವ್ಯಾಖ್ಯಾತವೇದ್ಯೋತ್ತಮಮ್ |
ಕಾಮಾರ್ಥೀ ವರಯಾಮಿ ಸಂಯತಮನಾ ಮೋಕ್ಷಾಯ ಸದ್ಯಃ ಶಿವಮ್ ॥
ಚರಾಚರವಾದ ಜಗತ್ತಿನಲ್ಲಿ ಜ್ಞೇಯ ವಸ್ತುಗಳಲ್ಲಿ ಅತ್ಯಂತ ಶ್ರೇಷ್ಠನೆಂದು ಹೇಳಲ್ಪಟ್ಟ ಆ ದೇವನನ್ನು ಕಾಮಾರ್ಥಿಯಾದ ನಾನು ಮನೋನಿಗ್ರಹವನ್ನು ಮಾಡಿಕೊಂಡು ಮೋಕ್ಷಕ್ಕಾಗಿ ತಕ್ಷಣದಲ್ಲಿ ವರವನ್ನು ಬೇಡುತ್ತೇನೆ.
ಹೇತುಭಿರ್ವಾ ಕಿಮನ್ಯೈಸ್ತೈರೀಶಃ ಕಾರಣಕಾರಣಮ್ |
ನ ಶುಶ್ರುಮ ಯದನ್ಯಸ್ಯ ಲಿಂಗಮಭ್ಯರ್ಚಿತಂ ಸುರೈಃ ॥187॥

ಅನೇಕ ಯುಕ್ತಿಗಳನ್ನು ಹೇಳಿ ಏನು ಪ್ರಯೋಜನ? ಈಶ್ವರನೇ ಕಾರಣಕಾರಣನು. ಬೇರೆ ಯಾವನ ಲಿಂಗವಾದರೂ ದೇವತೆಗಳಿಂದ ಪೂಜಿಸಲ್ಪಡುತ್ತದೆ ಎಂಬುದನ್ನು ನಾವು ಕೇಳಿಲ್ಲ.
ಕಸ್ಯಾನ್ಯಸ್ಯ ಸುರೈಃ ಸರ್ವೈರ್ಲಿಂಗಂ ಮುಕತ್ವ ಮಹೇಶ್ವರಮ್ |
ಅರ್ಚ್ಯತೇಽರ್ಚಿತಪೂರ್ವಂ ವಾ ಬ್ರೂಹಿ ಯದ್ಯಸ್ತಿ ತೇ ಶ್ರುತಿಃ ॥188॥
ಈಶ್ವರನನ್ನು ಬಿಟ್ಟು ಬೇರೆ ಯಾವನ ಲಿಂಗವು ದೇವತೆಗಳಿಂದ ಹಿಂದೆ ಅರ್ಚಿಸಲ್ಪಟ್ಟಿದೆ ಅಥವಾ ಈಗ ಅರ್ಚಿಸಲ್ಪಡುತ್ತದೆ ಎಂದು ನೀನೇನಾದರೂ ಕೇಳಿದ್ದರೆ ನನಗೆ ಹೇಳು.
ಯಸ್ಯ ಬ್ರಹ್ಮಾ ಚ ವಿಷ್ಣುಶ್ಚ ತ್ವಂ ಚಾಪಿ ಸಹದೈವತೈಃ |
ಅರ್ಚಯಧ್ವಂ ಸದಾ ಲಿಂಗಂ ತಸ್ಮಾಚ್ಛ್ರೇಷ್ಠತಮೋ ಹಿ ಸಃ ॥189॥
ಯಾವನ ಲಿಂಗವನ್ನು ಬ್ರಹ್ಮನೂ, ವಿಷ್ಣುವೂ, ಸರ್ವದೇವತೆಗಳ ಸಹಿತನಾದ ನೀನೂ ಸದಾ ಪೂಜಿಸುತ್ತಿರುವಿರೋ ಆ ಕಾರಣದಿಂದ ಅವನು ಸರ್ವಶ್ರೇಷ್ಠನಾದವನು.
ನ ಪದ್ಮಾಂಕಾ ನ ಚಕ್ರಾಂಕಾ ನ ವಜ್ರಾಂಕಾ ಯತಃ ಪ್ರಜಾಃ |
ಲಿಂಗಾಂಕಾ ಚ ಭಗಾಂಕಾ ಚ ತಸ್ಮಾನ್ಮಾಹೇಶ್ವರೀ ಪ್ರಜಾಃ ॥190॥
ಜನಿಸಿದ ಪ್ರಜೆಗಳಲ್ಲಿ ಪದ್ಮದ ಚಿಹ್ನೆಯಾಗಲೀ, ಚಕ್ರದ ಚಿಹ್ನೆಯಾಗಲೀ, ವಜ್ರದ ಚಿಹ್ನೆಯಾಗಲೀ ಇರುವುದಿಲ್ಲ. ಆದರೆ ಲಿಂಗದ ಚಿಹ್ನೆಯೂ, ಭಗದ ಚಿಹ್ನೆಯೂ ಇರುತ್ತದೆ. ಆದ್ದರಿಂದ ಎಲ್ಲ ಪ್ರಜೆಗಳು ಮಹೇಶ್ವರನಿಂದ ಜನಿಸಿದವರು.
ದೇವ್ಯಾಃ ಕಾರಣರೂಪಭಾವಜನಿತಾಃ ಸರ್ವಾ ಭಗಾಂಕಾಃ ಸ್ತ್ರಿಯೋ
ಲಿಂಗೇನಾಪಿ ಹರಸ್ಯ ಸರ್ವಪುರುಷಾಃ ಪ್ರತ್ಯಕ್ಷಚಿಹ್ನೀಕೃತಾಃ |
ಯೋಽನ್ಯತ್ ಕಾರಣಮೀಶ್ವರಾತ್ ಪ್ರವದತೇ ದೇವ್ಯಾ ಚ ಯನ್ನಾಂಕಿತಂ
ತ್ರೈಲೋಕ್ಯೇ ಸಚರಾಚರೇ ಸ ತು ಪುಮಾನ್ ಬಾಹ್ಯೋ ಭವೇದ್ ದುರ್ಮತಿಃ ॥
ಎಲ್ಲ ಸ್ತ್ರೀಯರೂ ಕಾರಣರೂಪಳಾದ ದೇವಿಯ ಚಿಹ್ನೆಯಾದ ಭಗದಿಂದ ಚಿಹ್ನಿತರಾಗಿದ್ದಾರೆ. ಎಲ್ಲ ಪುರುಷರೂ ಈಶ್ವರನ ಚಿಹ್ನೆಯಾದ ಲಿಂಗದಿಂದ ಪ್ರತ್ಯಕ್ಷವಾಗಿ ಚಿಹ್ನಿತರಾಗಿದ್ದಾರೆ. ಹೀಗೆ ಪ್ರಜೆಗಳು ದೇವಿಯ ಚಿಹ್ನೆಯಿಂದಾಗಲೀ, ಶಿವನ ಚಿಹ್ನೆಯಿಂದಾಗಲೀ ಅಂಕಿತರಾಗಿರುವಾಗ ಈಶ್ವರನನ್ನು ಬಿಟ್ಟು ಜಗತ್ತಿಗೆ ಬೇರೆ ಕಾರಣನಿದ್ದಾನೆಂದು ಹೇಳುವ ದುರ್ಮತಿಯಾದ ಅವನು ಚರಾಚರ ಪ್ರಾಣಿಗಳಿಂದ ಸಹಿತವಾದ ತ್ರೈಲೋಕ್ಯದಲ್ಲಿ ಬಾಹ್ಯನೆನಿಸುತ್ತಾನೆ.
ಪುಲ್ಲಿಂಗಂ ಸರ್ವಮೀಶಾನಂ ಸ್ತ್ರೀಲಿಂಗಂ ವಿದ್ಧಿ ಚಾಪ್ಯುಮಾಮ್ |
ದ್ವಾಭ್ಯಾಂ ತನುಭ್ಯಾಂ ವ್ಯಾಪ್ತಂ ಹಿ ಚರಾಚರಮಿದಂ ಜಗತ್ ॥192॥
ಪುಲ್ಲಿಂಗ ಎಲ್ಲವನ್ನೂ ಈಶ್ವರನೆಂದು ತಿಳಿ. ಸ್ತ್ರೀಲಿಂಗವನ್ನು ಪಾರ್ವತಿ ಎಂದು ತಿಳಿ. ಎರಡು ಶರೀರಗಳಿಂದ ಶಿವ-ಪಾರ್ವತಿಯರಿಂದ ಚರಾಚರಾತ್ಮಕವಾದ ಈ ಜಗತ್ತು ವ್ಯಾಪ್ತವಾಗಿದೆ.
ತಸ್ಮಾದ್ವರಮಹಂ ಕಾಂಕ್ಷೇ ನಿಧನಂ ವಾಪಿ ಕೌಶಿಕ |
ಗಚ್ಛ ವಾ ತಿಷ್ಠ ವಾ ಶಕ್ರ ಯಥೇಷ್ಟಂ ಬಲಸೂದನ ॥193॥
ಆದ್ದರಿಂದ ಎಲೈ ಕೌಶಿಕನೇ, ನಾನು ವರವನ್ನಾಗಲೀ, ವಧೆಯನ್ನಾಗಲೀ ಶಿವನಿಂದ ಬಯಸುತ್ತೇನೆ. ಎಲೈ ಬಲಸೂದನನೇ, ನಿನ್ನ ಮನಸ್ಸಿಗೆ ಬಂದಂತೆ ಇಲ್ಲಿಯೇ ಇರು ಅಥವಾ ಹೊರಟು ಹೋಗು.
ಕಾಮಮೇಷ ವರೋ ಮೇಽಸ್ತು ಶಾಪೋ ವಾಪಿ ಮಹೇಶ್ವರಾತ್ |
ನ ಚಾನ್ಯಾಂ ದೇವತಾಂ ಕಾಂಕ್ಷೇ ಸರ್ವಕಾಮಫಲಾನ್ಯಪಿ ॥194॥
ನನಗೆ ಶಿವನಿಂದ ವರವಾದರೂ ಇರಲಿ ಅಥವಾ ಶಾಪವಾದರೂ ಇರಲೀ ಅದು ನನಗೆ ಇಷ್ಟವಾದುದು. ನಾನು ಬೇರೆ ದೇವತೆಯನ್ನಾಗಲೀ, ಆ ದೇವತೆಯಿಂದ ಸರ್ವಕಾಮಫಲಗಳನ್ನಾಗಲೀ ಆಶಿಸುವುದಿಲ್ಲ.
ಏವಮುಕತ್ವ ತು ದೇವೇಂದ್ರಂ ದುಃಖಾದಾಕುಲಿತೇಂದ್ರಿಯಃ |
ನ ಪ್ರಸೀದತಿ ಮೇ ರುದ್ರಃ ಕಿಮೇತದಿತಿ ಚಿಂತಯನ್ |
ಅಥಾಪಶ್ಯಂ ಕ್ಷಣೇನೈವ ತಮೇವೈರಾವತಂ ಪುನಃ ॥195॥
ಹೀಗೆ ದೇವೇಂದ್ರನನ್ನು ಕುರಿತು ಹೇಳಿ, ದುಃಖದಿಂದ ಕೂಡಿದ ಮನಸ್ಸುಳ್ಳವನಾಗಿ, ಇದೇನು, ರುದ್ರನು ನನಗೆ ಪ್ರಸನ್ನನಾಗುತ್ತಿಲ್ಲ ಎಂದು ಚಿಂತಿಸುತ್ತಾ ಅನಂತರ ಒಂದು ಕ್ಷಣದಲ್ಲಿಯೇ ಅದೇ ಐರಾವತವನ್ನು ಪುನಃ ನೋಡಿದೆನು.
ಹಂಸಕುಂದೇಂದುಸದೃಶಂ ಮೃಣಾಲರಜತಪ್ರಭಮ್ |
ವೃಷರೂಪಧರಂ ಸಾಕ್ಷಾತ್ ಕ್ಷೀರೋದಮಿವ ಸಾಗರಮ್ ॥196॥
ಕೃಷ್ಣಪುಚ್ಛಂ ಮಹಾಕಾಯಂ ಮಧುಪಿಂಗಲಲೋಚನಮ್ |
ವಜ್ರಸಾರಮಯೈಃ ಶೃಂಗೈರ್ನಿಷ್ಟಪ್ತಕನಕಪ್ರಭೈಃ ॥197॥
ತೀಕ್ಷ್ಣೈರಮ್ರದುರಕ್ತಾಗ್ರೈರುತ್ಕಿರಂತಮಿವಾವನಿಮ್ |
ಜಾಂಬೂನದೇನ ದಾಮ್ನಾ ಚ ಸರ್ವತಃ ಸಮಲಂಕೃತಮ್ ॥198॥
ರಕ್ತಾಕ್ಷಂ ಸುಮಹಾನಾಸಂ ಸುಕರ್ಣಂ ಸುಕಟೀತಟಮ್ |
ಸುಪಾರ್ಶ್ವಂ ವಿಪುಲಸ್ಕಂಧಂ ಸುರೂಪಂ ಚಾರುದರ್ಶನಮ್ ॥199॥
ಹಂಸಪಕ್ಷಿ, ಪುಷ್ಪ ಸದೃಶವಾದ, ಮೃಣಾಲ, ಚಂದ್ರರಿಗೆ ರಜತಕಾಂತಿಯಂತೆ ಶ್ವೇತವರ್ಣದಿಂದ ಕೂಡಿದ, ಸಾಕ್ಷಾತ್ ಕ್ಷೀರ ಸಮುದ್ರದಂತೆ ವಿಶ್ವರೂಪವನ್ನು ಧರಿಸಿದ, ಕೃಷ್ಣ ಪುಚ್ಛವನ್ನೂ, ದೊಡ್ಡ ಶರೀರವನ್ನೂ, ಜೇನಿನಂತೆ ಪಿಂಗಲವರ್ಣದ ಲೋಚನವನ್ನೂ, ಚಿನ್ನದಂತೆ ಹೊಳೆಯುವ ವಜ್ರಸಾರದಂತಿರುವ ಶೃಂಗಗಳನ್ನೂ, ತೀಕ್ಷ್ಣವೂ, ಒರಟೂ, ಕೆಂಪೂ ಆದ ತುದಿಯುಳ್ಳ

ಪಾದತಳದಿಂದ ಭೂಮಿಯ ಮಣ್ಣನ್ನು ಎಬ್ಬಿಸುತ್ತಿದ್ದಂತಹ, ಸುವರ್ಣಮಯವಾದ ಹಗ್ಗದಿಂದ ಭೂಷಿತವಾದಂತಹ, ಕೆಂಪಾದ ಕಣ್ಣುಳ್ಳ, ದೊಡ್ಡ ನಾಸಿಕವುಳ್ಳ, ಒಳ್ಳೆಯ ಕರ್ಣವನ್ನು, ಕಟಿ ಪ್ರದೇಶವನ್ನು, ಪಾರ್ಶ್ವ ಪ್ರದೇಶವನ್ನು, ವಿಸ್ತಾರವಾದ ಭುಜವನ್ನು, ಮನೋಹರ ರೂಪವುಳ್ಳ ವೃಷಭವನ್ನು (ಐರಾವತದ ಸ್ಥಾನದಲ್ಲಿ) ನೋಡಿದೆನು.
ಕಕುದಂ ತಸ್ಯ ಚಾಭಾತಿ ಸ್ಕಂಧಮಾಪೂರ್ಯ ವಿಷ್ಠಿತಮ್ |
ತುಷಾರಗಿರಿಕೂಟಾಭಂ ಸಿತಾಭ್ರಶಿಖರೋಪಮಮ್ ॥200॥
ಭುಜಪ್ರದೇಶವನ್ನೆಲ್ಲ ಆವರಿಸಿಕೊಂಡಿರುವ ಆ ವೃಷಭದ ಹಿಣಿಲು ಹಿಮಾಲಯ ಪರ್ವತದಂತೆ ಬಿಳಿಯ ಮೋಡದ ಶಿಖರದಂತೆ ಇದ್ದಿತು.
ತಮಾಸ್ಥಿತಶ್ಚ ಭಗವಾನ್ ದೇವದೇವಃ ಸಹೋಮಯಾ |
ಅಶೋಭತ ಮಹಾದೇವಃ ಪೌರ್ಣಮಾಸ್ಯಾಮಿವೋಡುರಾಟ್ ॥201॥
ಆ ವೃಷಭದ ಮೇಲೆ ಭಗವಂತನಾದ, ದೇವದೇವನಾದ ಮಹಾದೇವನು ಉಮೆಯ ಸಹಿತನಾಗಿ ಪೌರ್ಣಮಾಸಿಯ ಚಂದ್ರನಂತೆ ಶೋಭಿಸಿದನು.
ತಸ್ಯ ತೇಜೋಭವೋ ವಹ್ನಿಃ ಸಮೇಘಃ ಸ್ತನಯಿತ್ನುಮಾನ್ |
ಸಹಸ್ರಮಿವ ಸೂರ್ಯಾಣಾಂ ಸರ್ವಮಾವೃತ್ಯ ತಿಷ್ಠತಿ ॥202॥
ಅವನ ತೇಜಸ್ಸಿನಿಂದ ವಹ್ನಿಯೂ, ಮೇಘವೂ, ಗುಡುಗುಗಳೂ ಉಂಟಾದವು. ಅವನ ತೇಜಸ್ಸು ಸಹಸ್ರ ಸೂರ್ಯರ ಪ್ರಭೆಯಂತೆ ಎಲ್ಲವನ್ನೂ ಆವರಿಸಿ ನಿಂತಿತು.
ಈಶ್ವರಃ ಸುಮಹಾತೇಜಾಃ ಸಂವರ್ತಕ ಇವಾನಲಃ |
ಯುಗಾಂತೇ ಸರ್ವಭೂತಾನಾಂ ದಿಧಕ್ಷುರಿವ ಚೋದ್ಯತಃ ॥203॥
ಅತ್ಯಂತ ಮಹತ್ತಾದ ತೇಜಸ್ಸುಳ್ಳ ಈಶ್ವರನು ಯುಗಾಂತಕಾಲದಲ್ಲಿ ಸರ್ವಭೂತಗಳನ್ನೂ ದಹಿಸುವ ಸಂವರ್ತಕಾಗ್ನಿಯಂತೆ ಉದಯಿಸಿದನು.
ತೇಜಸಾ ತು ತದಾ ವ್ಯಾಪ್ತೇ ದುರ್ನಿರೀಕ್ಷ್ಯೇ ಯೇ ಸಮಂತತಃ |
ಪುನರುದ್ವಿಗ್ನಹೃದಯಃ ಕಿಮೇತದಿತಿ ಚಿಂತಯಮ್ ॥204॥
ಅವನ ತೇಜಸ್ಸಿನಿಂದ ಎಲ್ಲವೂ ವ್ಯಾಪ್ತವಾಗಿ, ಅವನನ್ನು ನೋಡಲು ಸಾಧ್ಯವಿಲ್ಲದಿದ್ದಾಗ ಪುನಃ ನಾನು ಮನಸ್ಸಿನಲ್ಲಿ ಉದ್ವೇಗಗೊಂಡು ಇದೇನೆಂದು ಚಿಂತಿಸಿದೆನು.
ಮುಹೂರ್ತಮಿವ ತತ್ತೇಜೋ ವ್ಯಾಪ್ಯ ಸರ್ವಾ ದಿಶೋ ದಶ |
ಪ್ರಶಾಂತಂ ಚ ಕ್ಷಣೇನೈವ ದೇವದೇವಸ್ಯ ಮಾಯಯಾ ॥205॥
ಒಂದು ಮುಹೂರ್ತದಲ್ಲಿ ಹತ್ತು ದಿಕ್ಕುಗಳನ್ನೂ ವ್ಯಾಪಿಸಿದ್ದ ಆ ತೇಜಸ್ಸು ಒಂದು ಕ್ಷಣದಲ್ಲಿಯೇ ದೇವದೇವನ ಸಾಮರ್ಥ್ಯದಿಂದ ಪ್ರಶಾಂತಗೊಂಡಿತು.
ಅಥಾಪಶ್ಯಂ ಸ್ಥಿತಂ ಸ್ಥಾಣುಂ ಭಗವಂತಂ ಮಹೇಶ್ವರಮ್ |
ಸೌರಭೇಯಗತಂ ಸೌಮ್ಯಂ ವಿಧೂಮಮಿವ ಪಾವಕಮ್ |
ಸಹಿತಂ ಚಾರುಸರ್ವಾಂಗ್ಯಾ ಪಾರ್ವತ್ಯಾ ಪರಮೇಶ್ವರಮ್ ॥206॥
ಆಗ ನಾನು ವೃಷಭವನ್ನು ಏರಿ, ಧೂಮವಿಲ್ಲದ ಅಗ್ನಿಯಂತೆ ಶೋಭಿಸುತ್ತಾ, ಸೌಮ್ಯರೂಪದಲ್ಲಿ ಕುಳಿತ, ಮನೋಹರಳಾದ ಪಾರ್ವತಿಯ ಜೊತೆಗೆ ಇದ್ದ, ಭಗವಂತನಾದ ಸ್ಥಾಣುವಾದ ಪರಮೇಶ್ವರನನ್ನು ನೋಡಿದೆನು.
ನೀಲಕಂಠಂ ಮಹಾತ್ಮಾನಮಸಕ್ತಂ ತೇಜಸಾಂ ನಿಧಿಮ್ |
ಅಷ್ಟಾದಶಭುಜಂ ಸ್ಥಾಣುಂ ಸರ್ವಾಭರಣಭೂಷಿತಮ್ ॥207॥
ಶುಕ್ಲಾಂಬರಧರಂ ದೇವಂ ಶುಕ್ಲಮಾಲ್ಯಾನುಲೇಪನಮ್ |
ಶುಕ್ಲಧ್ವಜಮನಾಧೃಷ್ಯಂ ಶುಕ್ಲಯಜ್ಞೋಪವೀತಿನಮ್ ॥208॥
ನೀಲಕಂಠನೂ, ಮಹಾತ್ಮನೂ, ಸಂಗರಹಿತನೂ, ತೇಜೋನಿಧಿಯೂ, ಹದಿನೆಂಟು ಭುಜವುಳ್ಳವನೂ, ಸ್ಥಾಣುವೂ, ಸರ್ವಾಭರಣ ಭೂಷಿತನೂ, ಶ್ವೇತವಸ್ತ್ರಧಾರಿಯೂ ಶುಕ್ಲಮಾಲ್ಯವನ್ನು ಧರಿಸಿದ, ಶುಕ್ಲ ಧ್ವಜವುಳ್ಳವನೂ, ಶುಕ್ಲ ಯಜ್ಞೋಪವೀತವುಳ್ಳವನೂ, ಯಾರಿಗೂ ಸೋಲದವನೂ ಆದ ದೇವನನ್ನು ನೋಡಿದೆನು.
ಗಾಯದ್ಭಿರ್ನೃತ್ಯಮಾನೈಶ್ಚ ಉತ್ಪತದ್ಭಿರಿತಸ್ತತಃ |
ವೃತಂ ಪಾರಿಷದೈರ್ದಿವ್ಯೈರಾತ್ಮತುಲ್ಯಪರಾಕ್ರಮೈಃ ॥209॥
ಬಾಲೇಂದುಮುಕುಟಂ ಪಾಂಡುಂ ಶರಚ್ಚಂದ್ರಮಿವೋದಿತಮ್ |
ತ್ರಿಭಿರ್ನೇತ್ರೈಃ ಕೃತೋದ್ದ್ಯೋತಂ ತ್ರಿಭಿಃ ಸೂರ್ಯೈರಿವೋದಿತೈಃ ॥210॥
ಗಾನವನ್ನು ಮಾಡುತ್ತಾ, ನರ್ತನವನ್ನು ಮಾಡುತ್ತಾ, ಇಲ್ಲಿಂದಲ್ಲಿಗೆ ಕುಣಿಯುತ್ತಾ ಇದ್ದ, ತನಗೆ ಸಮಾನವಾದ ಪರಾಕ್ರಮವುಳ್ಳ, ದಿವ್ಯರಾದ, ಪಾರ್ಷದರಿಂದ ಪರಿವೃತನಾದ, ಶಿರಸ್ಸಿನಲ್ಲಿ ಬಾಲಚಂದ್ರನನ್ನು ಧರಿಸಿದ ಶರತ್ಕಾಲದಲ್ಲಿ ಉದಿಸಿದ ಚಂದ್ರನಂತೆ ಪಾಂಡುವರ್ಣದ ಮೂರು ನೇತ್ರಗಳಿಂದ ನೂರು ಸೂರ್ಯರಿಂದಲೋ ಎಂಬಂತೆ ಪ್ರಕಾಶದಿಂದ ಜ್ವಲಿಸುತ್ತಿದ್ದ ಶಿವನನ್ನು ನೋಡಿದೆನು.
ಅಶೋಭತ ಚ ದೇವಸ್ಯ ಮಾಲಾ ಗಾತ್ರೇ ಸಿತಪ್ರಭೇ |
ಜಾತರೂಪಮಯೈಃ ಪದ್ಮೈರ್ಗ್ರಥಿತಾ ರತ್ನಭೂಷಿತಾ ॥211॥
ಬಿಳಿಯ ವರ್ಣದ ಅವನ ಶರೀರದಲ್ಲಿ ಸುವರ್ಣಮಯವಾದ ಪದ್ಮಗಳಿಂದ ಪೋಣಿಸಲ್ಪಟ್ಟ ರತ್ನಭೂಷಿತವಾದ ಮಾಲೆಯು

ಶೋಭಿಸುತ್ತಿದ್ದಿತು.
ಮೂರ್ತಿಮಂತಿ ತಥಾಸ್ತ್ರಾಣಿ ಸರ್ವತೇಜೋಮಯಾನಿ ಚ |
ಮಯಾ ದೃಷ್ಟಾನಿ ಗೋವಿಂದ ಭವಸ್ಯಾಮಿತತೇಜಸಃ ||212||
ಎಲೈ ಗೋವಿಂದನೇ, ಅಮಿತಪರಾಕ್ರಮಿಯಾದ ಶಿವನ ತೇಜೋಮಯವಾದ ಶರೀರಧಾರಿಗಳಾದ ಎಲ್ಲ ಅಸ್ತ್ರಗಳನ್ನೂ ನಾನು ನೋಡಿದೆನು.
ಇಂದ್ರಾಯುಧಸಹಸ್ರಾಭಂ ಧನುಸ್ತಸ್ಯ ಮಹಾತ್ಮನಃ |
ಪಿನಾಕಮಿತಿ ವಿಖ್ಯಾತಂ ಸ ಚ ವೈ ಪನ್ನಗೋ ಮಹಾನ್ ||213||
ಸಪ್ತಶೀರ್ಷೋ ಮಹಾಕಾಯಸ್ತೀಕ್ಷ್ಣದಂಷ್ಟ್ರೋ ವಿಷೋಲ್ಬಣಃ |
ಜ್ಯಾವೇಷ್ಟಿತಮಹಾಗ್ರೀವಃ ಸ್ಥಿತಃ ಪುರುಷವಿಗ್ರಹಃ ||214||
ಸಹಸ್ರ ಇಂದ್ರಾಯುಧಗಳ ಕಾಂತಿಯನ್ನು ಹೊಂದಿದ ಆ ಮಹಾತ್ಮನ ಧನುಸ್ಸು ಪಿನಾಕ ಎಂದು ವಿಖ್ಯಾತವಾಗಿದೆ. ಅದರಲ್ಲಿ ಏಳು ಶಿರಸ್ಸುಗಳುಳ್ಳ ದೊಡ್ಡ ಶರೀರವನ್ನೂ, ತೀಕ್ಷ್ಣವಾದ ದಂಷ್ಟ್ರವನ್ನು ಹೊಂದಿ, ವಿಷೋಲ್ಬಣವಾದ ಒಂದು ಮಹಾಸರ್ಪವು ದೊಡ್ಡ ಕತ್ತನ್ನು ಹೊಂದಿದ್ದಾಗಿ ಪುರುಷರೂಪವನ್ನು ಧರಿಸಿ ಧನುಸ್ಸಿನ ಹೆದೆಯನ್ನು ಸುತ್ತಿಕೊಂಡಿದೆ.
ಶರಶ್ಚ ಸೂರ್ಯಸಂಕಾಶಃ ಕಾಲಾನಲಸಮದ್ಯುತಿಃ |
ಏತದಸ್ತ್ರಂ ಮಹಾಘೋರಂ ದಿವ್ಯಂ ಪಾಶುಪತಂ ಮಹತ್ ||215||
ಅದ್ವಿತೀಯಮನಿರ್ದೇಶ್ಯಂ ಸರ್ವಭೂತಭಯಾವಹಮ್ |
ಸಸ್ಫುಲಿಂಗಂ ಮಹಾಕಾಯಂ ವಿಸೃಜಂತಮಿವಾನಲಮ್ ||216||
ಬಾಣವಾದರೂ ಸೂರ್ಯಪ್ರಭೆಯನ್ನು ಹೊಂದಿ ಕಾಲಾಗ್ನಿಗೆ ಸಮವಾದ ಕಾಂತಿಯನ್ನು ಹೊಂದಿದೆ. ಇದು ದಿವ್ಯವೂ, ಮಹಾಘೋರವೂ ಆದ ಮಹತ್ತಾದ ಪಾಶುಪತಾಸ್ತ್ರ. ಅದು ಅದ್ವಿತೀಯವಾದುದು. ಅದನ್ನು ಹೀಗೆಯೇ ಎಂದು ವರ್ಣಿಸಲು ಸಾಧ್ಯವಿಲ್ಲ. ಎಲ್ಲ ಪ್ರಾಣಿಗಳಿಗೂ ಭಯವನ್ನುಂಟು ಮಾಡುವಂತಹದು. ದೊಡ್ಡ ಶರೀರವುಳ್ಳ ಅದು ಕಿಡಿಗಳುಳ್ಳ ಅಗ್ನಿಯನ್ನು ಕಾರುವಂತಿದೆ.
ಏಕಪಾದಂ ಮಹಾದಂಷ್ಟ್ರಂ ಸಹಸ್ರಶಿರಸೋದರಮ್ |
ಸಹಸ್ರಭುಜಜಿಹ್ವಾಕ್ಷಮುದ್ಗಿರಂತಮಿವಾನಲಮ್ ||217||
ಬ್ರಾಹ್ಮಾನ್ನಾರಾಯಣಾದ್ಯೆಂದ್ರಾದಾಗ್ನೇಯಾದಪಿ ವಾರುಣಾತ್ |
ಯದ್ವಿಶಿಷ್ಟಂ ಮಹಾಬಾಹೋ ಸರ್ವಶಸ್ತ್ರವಿಘಾತನಮ್ ||218||
ಅದಕ್ಕೆ ಒಂದು ಪಾದ, ಮಹಾದಂಷ್ಟ್ರಗಳು, ಸಹಸ್ರ ಶಿರಸ್ಸುಗಳು ಮತ್ತು ಉದರಗಳು. ಸಹಸ್ರ ಜಿಹ್ವೆಗಳು, ಭುಜಗಳು ಮತ್ತು ನೇತ್ರಗಳು. ಅಗ್ನಿಯನ್ನು ಉಗುಳುವಂತಿದೆ. ಎಲೈ ಮಹಾಬಾಹುವೇ, ಅದು ಬ್ರಹ್ಮಾಸ್ತ್ರಕ್ಕಿಂತಲೂ, ನಾರಾಯಣಾಸ್ತ್ರಕ್ಕಿಂತಲೂ, ಐಂದ್ರಾಸ್ತ್ರಕ್ಕಿಂತಲೂ, ಆಗ್ನೇಯಾಸ್ತ್ರಕ್ಕಿಂತಲೂ, ವಾರುಣಾಸ್ತ್ರಕ್ಕಿಂತಲೂ ಶ್ರೇಷ್ಠವಾದುದು. ಸರ್ವಶಸ್ತ್ರವಿಘಾತಕವಾದುದು.
ಯೇನ ತತ್ತ್ರಿಪುರಂ ದಗ್ಧ್ವಾ ಕ್ಷಣಾದ್ ಭಸ್ಮೀಕೃತಂ ಪುರಾ |
ಶರೇಣೈಕೇನ ಗೋವಿಂದ ಮಹಾದೇವೇನ ಲೀಲಯಾ ||219||
ಎಲೈ ಗೋವಿಂದನೇ, ಆ ಅಸ್ತ್ರದಿಂದ ಮಹಾದೇವನು ಲೀಲೆಯಿಂದ ಒಂದೇ ಒಂದು ಬಾಣದಿಂದ ಹಿಂದೆ ತ್ರಿಪುರವನ್ನು ಸುಟ್ಟು, ಒಂದು ಕ್ಷಣದಲ್ಲಿ ಭಸ್ಮವನ್ನು ಮಾಡಿದನು.
ನಿರ್ದದಾಹ ಜಗತ್ಕೃತ್ಸ್ನಂ ತ್ರೈಲೋಕ್ಯಂ ಸಚರಾಚರಮ್ |
ಮಹೇಶ್ವರಭುಜೋತ್ಸೃಷ್ಟಂ ನಿಮೇಷಾತ್ತು ನ ಸಂಶಯಃ ||220||
ಮಹೇಶ್ವರನ ಭುಜದಿಂದ ಪ್ರಯೋಗಿಸಲ್ಪಟ್ಟ ಆ ಅಸ್ತ್ರವು ಚರಾಚರ ಪ್ರಾಣಿಗಳಿಂದ ಸಹಿತವಾದ ಮೂರುಲೋಕಗಳಿಂದ ಕೂಡಿದ ಸಮಸ್ತವಾದ ಜಗತ್ತನ್ನು ಒಂದು ನಿಮಿಷದಲ್ಲಿ ದಹಿಸುವುದು ಎಂಬ ವಿಷಯದಲ್ಲಿ ಸಂಶಯವಿಲ್ಲ.
ನಾವಧ್ಯೋ ಯಸ್ಯ ಲೋಕೇಽಸ್ಮಿನ್ ಬ್ರಹ್ಮವಿಷ್ಣುಸುರೇಷ್ವಪಿ |
ತದಹಂ ದೃಷ್ಟವಾಂಸ್ತಾತ ಆಶ್ಚರ್ಯಾದ್ಭುತಮುತ್ತಮಮ್ ||221||
ಆ ಅಸ್ತ್ರಕ್ಕೆ ಬ್ರಹ್ಮ-ವಿಷ್ಣು, ದೇವತೆಗಳಲ್ಲಿ ಅವಧ್ಯರಾದವರು ಯಾರೂ ಇಲ್ಲ. ಎಲೈ ಪ್ರೀತಿಪಾತ್ರನೇ, ನಾನು ಅಂತಹ ಅದ್ಭುತವೂ, ಶ್ರೇಷ್ಠವೂ, ಆಶ್ಚರ್ಯಕರವೂ ಆದ ಅಸ್ತ್ರವನ್ನು ನೋಡಿದೆನು.
ಗುಹ್ಯಮಸ್ತ್ರಂ ಪರಂ ಚಾಪಿ ತತ್ತುಲ್ಯಾಧಿಕಮೇವ ವಾ |
ಯತ್ತಚ್ಛೂಲಮಿತಿ ಖ್ಯಾತಂ ಸರ್ವಲೋಕೇಷು ಶೂಲಿನಃ ||222||
ದಾರಯೇದ್ ಯನ್ಮಹೀಂ ಕೃತ್ಸ್ನಾಂ ಶೋಷಯೇದ್ ವಾ ಮಹೋದಧಿಮ್ |
ಸಂಹರೇದ್ ವಾ ಜಗತ್ಕೃತ್ಸ್ನಂ ವಿಸೃಷ್ಟಂ ಶೂಲಪಾಣಿನಾ ||223||
ಅವನಲ್ಲಿ ಇನ್ನೊಂದು ರಹಸ್ಯವಾದ ಅಸ್ತ್ರವಿದೆ. ಅದು ಪಾಶುಪತಕ್ಕೆ ಸಮಾನವಾದುದು ಅಥವಾ ಅಧಿಕವಾದುದು. ಶಿವನ ಆ ಆಯುಧವು ಶೂಲವೆಂದು ಎಲ್ಲ ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ. ಶೂಲಪಾಣಿಯು ಅದನ್ನು ವಿಸರ್ಜಿಸಿದರೆ ಅದು ಸಮಗ್ರವಾದ ಭೂಮಿಯನ್ನು ಸೀಳೀತು! ಮಹಾಸಾಗರವನ್ನು ಒಣಗಿಸೀತು! ಜಗತ್ತೆಲ್ಲವನ್ನೂ ನಾಶಮಾಡೀತು!
ಯೌವನಾಶ್ವೋ ಹತೋ ಯೇನ ಮಾಂಧಾತಾ ಸಬಲಃ ಪುರಾ |
ಚಕ್ರವರ್ತೀ ಮಹಾತೇಜಾಸ್ತ್ರಿಲೋಕವಿಜಯೀ ನೃಪಃ ||224||
ಚಕ್ರವರ್ತಿಯೂ, ಮಹಾತೇಜಸ್ವಿಯೂ, ತ್ರಿಲೋಕವಿಜಯಿಯೂ, ಯುವನಾಶ್ವನ ಪುತ್ರನೂ ಆದ ಮಾಂಧಾತೃ ರಾಜನು ಹಿಂದೆ ತನ್ನ ಸೈನ್ಯಸಹಿತನಾಗಿ ಅದರಿಂದ ಹತನಾದನು.

ಮಹಾಬಲೋ ಮಹಾವೀರ್ಯಃ ಶಕ್ರತುಲ್ಯಪರಾಕ್ರಮಃ |
ಕರಸ್ಥೇನೈವ ಗೋವಿಂದ ಲವಣಸ್ಯೇವ ರಕ್ಷಸಃ ॥225॥
ತಚ್ಛೂಲಮತಿತೀಕ್ಷ್ಣಾಗ್ರಂ ಸುಭೀಮಂ ಲೋಮಹರ್ಷಣಮ್ |
ತ್ರಿಶಾಖೀಂ ಭ್ರುಕುಟೀಂ ಕೃತ್ವಾ ತರ್ಜಮಾನಮಿವ ಸ್ಥಿತಮ್ ॥226॥
ಮಹಾಬಲನೂ, ಮಹಾವೀರ್ಯನೂ, ಶಕ್ರನಿಗೆ ಸಮವಾದ ಪರಾಕ್ರಮವುಳ್ಳವನೂ ಆದ ಮಾಂಧಾತೃವು ಶೂಲವು ಶಿವನ ಕೈಯಲ್ಲಿದ್ದಾಗಲೇ ಹತನಾದನು. ಲವಣಾಸುರನ ಶೂಲದಂತೆ ಆ ಶೂಲವು ಅತ್ಯಂತ ತೀಕ್ಷ್ಣವಾದ ತುದಿಯುಳ್ಳದ್ದು, ಭಯಂಕರವಾದುದು, ರೋಮಾಂಚಕಾರಿಯಾದುದು. ಮೂರು ಶಾಖೆಯನ್ನು ಹೊಂದಿ ಹುಬ್ಬನ್ನು ಗಂಟಿಕ್ಕಿದಂತೆ ಅದು ಜಗತ್ತನ್ನು ಹೆದರಿಸುವಂತಿದೆ.
ವಿಧೂಮಂ ಸಾರ್ಚಿಷಂ ಕೃಷ್ಣಂ ಕಾಲಸೂರ್ಯಮಿವೋದಿತಮ್ |
ಸರ್ಪಹಸ್ತಮನಿರ್ದೇಶ್ಯಂ ಪಾಶಹಸ್ತಮಿವಾಂತಕಮ್ |
ದೃಷ್ಟವಾನಸ್ಮಿ ಗೋವಿಂದ ತದಸ್ತ್ರಂ ರುದ್ರಸನ್ನಿಧೌ ॥227॥
ಧೂಮವಿಲ್ಲದೆ ಜ್ವಾಲೆಯಿಂದ ಕೂಡಿದ, ಉದಿಸಿದ ಕಾಲಸೂರ್ಯನಂತೆ ಪ್ರಕಾಶಿಸುವ, ಕೃಷ್ಣವರ್ಣದಿಂದ ಕೂಡಿದ, ಸರ್ಪಹಸ್ತಪರಿಮಾಣವನ್ನುಳ್ಳ, ವರ್ಣಿಸಲು ಅಸಾಧ್ಯವಾದ, ಕೈಯಲ್ಲಿ ಪಾಶವನ್ನು ಹಿಡಿದ ಯಮನಂತಿರುವ, ಆ ಅಸ್ತ್ರವನ್ನು ಎಲೈ ಗೋವಿಂದನೇ, ರುದ್ರನ ಸನ್ನಿಧಿಯಲ್ಲಿ ನಾನು ನೋಡಿದೆನು.
ಪರಶುಸ್ತೀಕ್ಷ್ಣಧಾರಶ್ಚ ದತ್ತೋ ರಾಮಸ್ಯ ಯಃ ಪುರಾ |
ಮಹಾದೇವೇನ ತುಷ್ಟೇನ ಕ್ಷತ್ರಿಯಾಣಾಂ ಕ್ಷಯಂಕರಃ |
ಕಾರ್ತವೀರ್ಯೋ ಹತೋ ಯೇನ ಚಕ್ರವರ್ತೀ ಮಹಾಮೃಧೇ ॥228॥
ತೀಕ್ಷ್ಣವಾದ ಅಲುಗುಳ್ಳ ಯಾವ ಪರಶುವು ಹಿಂದೆ ಮಹಾದೇವನಿಂದ ಸಂತೋಷದಿಂದ ಪರಶುರಾಮನಿಗೆ ಕೊಡಲ್ಪಟ್ಟಿತೋ ಅದು ಕ್ಷತ್ರಿಯ ವಿನಾಶಕವಾದುದು. ಅದರಿಂದ ದೊಡ್ಡ ಯುದ್ಧದಲ್ಲಿ ಚಕ್ರವರ್ತಿಯಾದ ಕಾರ್ತವೀರ್ಯನು ಹತನಾದನು.
ತ್ರಿಃಸಪ್ತಕೃತ್ವಃ ಪೃಥಿವೀ ಯೇನ ನಿಃಕ್ಷತ್ರಿಯಾ ಕೃತಾ |
ಜಾಮದಗ್ನ್ಯೇನ ಗೋವಿಂದ ರಾಮೇಣಾಕ್ಲಿಷ್ಟಕರ್ಮಣಾ ॥229॥
ದೀಪ್ತಧಾರಃ ಸುರೌದ್ರಾಸ್ಯಃ ಸರ್ಪಕಂಠಾಗ್ರವೇಷ್ಟಿತಃ |
ಅಭವಚ್ಛೂಲಿನೋಽಭ್ಯಾಶೇ ದೀಪ್ತವಹ್ನಿಶಿಖೋಪಮಃ ॥230॥
ಎಲೈ ಗೋವಿಂದನೇ, ಲೀಲೆಯಿಂದ ಕರ್ಮವನ್ನು ಮಾಡುವ ಜಮದಗ್ನಿಯ ಮಗನಾದ ಪರಶುರಾಮನಿಂದ ಅದೇ ಆಯುಧದಿಂದ ಭೂಮಿಯು ಇಪ್ಪತ್ತೊಂದು ಬಾರಿ ಕ್ಷತ್ರಿಯರಹಿತವಾಗಿ ಮಾಡಲ್ಪಟ್ಟಿತು. ದೀಪ್ತವಾದ ಅಲುಗುಳ್ಳ, ಭೀಕರವಾದ ಮುಖವುಳ್ಳ ಸರ್ಪದಿಂದ ಕಂಠಪ್ರದೇಶದಲ್ಲಿ ಸುತ್ತುವರಿಯಲ್ಪಟ್ಟ ಅಂತಹ ಜ್ವಲಿಸುವ ಅಗ್ನಿಶಿಖೆಯಂತಿರುವ ಅಂತಹ ಪರಶುವು ಶೂಲಿಯಾದ ಶಿವನ ಸಮೀಪದಲ್ಲಿ ಇದೆ.
ಅಸಂಖ್ಯೇಯಾನಿ ಚಾಸ್ತ್ರಾಣಿ ತಸ್ಯ ದಿವ್ಯಾನಿ ಧೀಮತಃ |
ಪ್ರಾಧಾನ್ಯತೋ ಮಯೈತಾನಿ ಕೀರ್ತಿತಾನಿ ತವಾನಘ ॥231॥
ಮೇಧಾವಿಯಾದ ಅವನ ಬಳಿ ಅಸಂಖ್ಯವಾದ ದಿವ್ಯಾಸ್ತ್ರಗಳಿವೆ. ಎಲೈ ಅನಘನೇ, ನಾನು ಪ್ರಧಾನವಾದ ಈ ಕೆಲವನ್ನು ಮಾತ್ರ ಹೇಳಿದ್ದೇನೆ.
ಸವ್ಯದೇಶೇ ತು ದೇವಸ್ಯ ಬ್ರಹ್ಮಾ ಲೋಕಪಿತಾಮಹಃ |
ದಿವ್ಯಂ ವಿಮಾನಮಾಸ್ಥಾಯ ಹಂಸಯುಕ್ತಂ ಮನೋಜವಮ್ ॥232॥
ವಾಮಪಾರ್ಶ್ವಗತಶ್ಚೈವ ತಥಾ ನಾರಾಯಣಃ ಸ್ಥಿತಃ |
ವೈನತೇಯಂ ಸಮಾರುಹ್ಯ ಶಂಖಚಕ್ರಗದಾಧರಃ ॥233॥
ಶಿವನ ಬಲಭಾಗದಲ್ಲಿ ಲೋಕಪಿತಾಮಹನಾದ ಬ್ರಹ್ಮನು ಮನೋಜವವನ್ನು ಹೊಂದಿದ, ಹಂಸಯುಕ್ತವಾದ ದಿವ್ಯವಿಮಾನವನ್ನು ಏರಿ ನಿಂತಿದ್ದಾನೆ. ಶಂಖ-ಚಕ್ರ- ಗದಾಧರನಾದ ನಾರಾಯಣನು ಗರುಡನನ್ನು ಏರಿ ಅವನ ಎಡಭಾಗದಲ್ಲಿದ್ದಾನೆ.
ಸ್ಕಂದೋ ಮಯೂರಮಾಸ್ಥಾಯ ಸ್ಥಿತೋ ದೇವ್ಯಾಃ ಸಮೀಪತಃ |
ಶಕ್ತಿಂ ಕಂಠೇ ಸಮಾದಾಯ ದ್ವಿತೀಯ ಇವ ಭಾಸ್ಕರಃ ॥234॥
ಪುರಸ್ತಾಚ್ಚೈವ ದೇವಸ್ಯ ನಂದಿಂ ಪಶ್ಯಾಮ್ಯವಸ್ಥಿತಮ್ |
ಶೂಲಂ ವಿಷ್ಟಭ್ಯ ತಿಷ್ಠಂತಂ ದ್ವಿತೀಯಮಿವ ಶಂಕರಮ್ ॥235॥
ಸ್ಕಂಧನು ನವಿಲನ್ನು ಏರಿ ಪಾರ್ವತಿಯ ಶಕ್ತಿಯನ್ನು ತನ್ನ ಕಂಠದಲ್ಲಿ ಧರಿಸಿ, ಪರ್ವತದ ಸಮೀಪದಲ್ಲಿ ಎರಡನೆಯ ಸೂರ್ಯನಂತಿದ್ದಾನೆ. ದೇವನಾದ ಶಿವನ ಮುಂಭಾಗದಲ್ಲಿ ನಂದಿಯು ಶೂಲವನ್ನು ಊರಿ ನಿಂತು ಎರಡನೆಯ ಶಂಕರನಂತೆ ಇರುವುದನ್ನು ನೋಡಿದೆನು.
ಸ್ವಾಯಂಭುವಾದ್ಯಾ ಮನವೋ ಭೃಗ್ವಾದ್ಯಾ ಋಷಯಸ್ತಥಾ |
ಶಕ್ರಾದ್ಯಾ ದೇವತಾಶ್ಚೈವ ಸರ್ವ ಏವ ಸಮಭ್ಯಯುಃ ॥236॥
ಸ್ವಾಯಂಭುವ ಮೊದಲಾದ ಮನುಗಳು, ಭೃಗ್ವಾದಿ ಋಷಿಗಳು, ಶಕ್ರಾದಿ ದೇವತೆಗಳು, ಎಲ್ಲರೂ ಅಲ್ಲಿಗೆ ಬಂದರು.
ತೇಽಭಿವಾದ್ಯ ಮಹಾತ್ಮಾನಂ ಪರಿವಾರ್ಯ ಸಮಂತತಃ |
ಅಸ್ತುವನ್ ವಿವಿಧೈಃ ಸ್ತೋತ್ರೈರ್ಮಹಾದೇವಂ ಸುರಾಸ್ತದಾ ॥237॥
ಆ ದೇವತೆಗಳು ಆ ಮಹಾತ್ಮನಾದ ಮಹಾದೇವನನ್ನು ನಮಸ್ಕರಿಸಿ, ಅವನನ್ನು ಸುತ್ತುವರಿದು, ವಿವಿಧ ಸ್ತೋತ್ರಗಳಿಂದ ಅವನನ್ನು

ಸ್ತೋತ್ರ ಮಾಡಿದರು.
ಬ್ರಹ್ಮಾ ಭವಂ ತದಾ ಸ್ತುನ್ವನ್ ರಥಂತರಮುದೀರಯನ್ |
ಜ್ಯೇಷ್ಠಸಾಮ್ನಾ ಚ ದೇವೇಶಂ ಜಗೌ ನಾರಾಯಣಸ್ತದಾ |
ಗೃಣನ್ ಶಕ್ರಃ ಪರಂ ಬ್ರಹ್ಮ ಶತರುದ್ರೀಯಮುತ್ತಮಮ್ ॥238॥
ಬ್ರಹ್ಮದೇವನು ಅವನನ್ನು ಸ್ತೋತ್ರ ಮಾಡುತ್ತಾ ರಥಂತರ ಸಾಮವನ್ನು ಹೇಳಿದನು. ನಾರಾಯಣನು ಆಗ ದೇವೇಶನಾದ ಶಿವನನ್ನು ಜ್ಯೇಷ್ಠಸಾಮ, ಎಂದರೆ ಬೃಹತ್ಸಾಮದಿಂದ ಸ್ತೋತ್ರವನ್ನು ಮಾಡಿದನು. ಇಂದ್ರನು ಪರಬ್ರಹ್ಮನನ್ನು ಸ್ತೋತ್ರ ಮಾಡುತ್ತಾ ಉತ್ತಮವಾದ ಶತರುದ್ರೀಯವನ್ನು ಪಠಿಸಿದನು.
ಬ್ರಹ್ಮಾ ನಾರಾಯಣಶ್ಚೈವ ದೇವರಾಜಶ್ಚ ಕೌಶಿಕಃ |
ಅಶೋಭಂತ ಮಹಾತ್ಮಾನಸ್ತ್ರಯಸ್ತ್ರಯ ಇವಾಗ್ನಯಃ ॥239॥
ಬ್ರಹ್ಮದೇವರು, ನಾರಾಯಣ ಮತ್ತು ದೇವರಾಜನಾದ ಇಂದ್ರ - ಈ ಮೂವರು ಮಹಾತ್ಮರು ಮೂರು ಅಗ್ನಿಗಳಂತೆ ಶೋಭಿಸಿದರು.
ತೇಷಾಂ ಮಧ್ಯಗತೋ ದೇವೋ ರರಾಜ ಭಗವಾನ್ ಶಿವಃ |
ಶರದ್ಘನವಿನಿರ್ಮುಕ್ತಃ ಪರಿವಿಷ್ಟ ಇವಾಂಶುಮಾನ್ |
ತತೋऽಹಮಸ್ತುವಂ ದೇವಂ ಸ್ತವೇನಾನೇನ ಸುವ್ರತಮ್ ॥240॥
ಆ ಮೂವರ ಮಧ್ಯದಲ್ಲಿ ಭಗವಂತನಾದ ಶಿವನು ಶರತ್ಕಾಲದ ಮೋಡಗಳಿಂದ ನಿರ್ಮುಕ್ತನಾಗಿ, ಪರಿವೇಷವನ್ನು ಹೊಂದಿದ ಸೂರ್ಯನಂತೆ ರಾರಾಜಿಸಿದನು. ಆಗ ನಾನು ಈ ಸ್ತೋತ್ರದಿಂದ ಸುವ್ರತರಾದ ದೇವನನ್ನು ಸ್ತೋತ್ರ ಮಾಡಿದೆ.
ನಮೋ ದೇವಾಧಿದೇವಾಯ ಮಹಾದೇವಾಯ ವೈ ನಮಃ |
ಶಕ್ರಾಯ ಶಕ್ರರೂಪಾಯ ಶಕ್ರವೇಷಧರಾಯ ಚ ॥241॥
ದೇವಾಧಿದೇವನಿಗೆ ನಮಸ್ಕಾರ. ಮಹಾದೇವನಿಗೆ ನಮಸ್ಕಾರ. ಶಕ್ರನಿಗೆ, ಶಕ್ರರೂಪನಿಗೆ ಶಕ್ರವೇಷವನ್ನು ಧರಿಸಿದವನಿಗೆ ನಮಸ್ಕಾರ.
ನಮಸ್ತೇ ವಜ್ರಹಸ್ತಾಯ ಪಿಂಗಲಾಯಾರುಣಾಯ ಚ |
ಪಿನಾಕಪಾಣಿನೇ ನಿತ್ಯಂ ಖಡ್ಗಶೂಲಧರಾಯ ಚ ॥242॥
ವಜ್ರಹಸ್ತನಾದ, ಇಂದ್ರನಾದ, ಅರುಣನಾದ ನಿನಗೆ ನಮಸ್ಕಾರ. ಪಿನಾಕಪಾಣಿಗೆ ಖಡ್ಗ-ತ್ರಿಶೂಲಧರನಿಗೆ ಯಾವಾಗಲೂ ನಮಸ್ಕಾರ.
ನಮಸ್ತೇ ಕೃಷ್ಣವಾಸಾಯ ಕೃಷ್ಣಕುಂಚಿತಮೂರ್ಧಜೇ |
ಕೃಷ್ಣಾಜಿನೋತ್ತರೀಯಾಯ ಕೃಷ್ಣಾಯಾಮಿತತೇಜಸೇ ॥243॥
ಕಪ್ಪು ವಸ್ತ್ರವನ್ನು ಧರಿಸಿದ, ಕಪ್ಪಾದ ಗುಂಗುರು ಕೂದಲನ್ನುಳ್ಳ, ಕೃಷ್ಣಾಜಿನದ ಉತ್ತರೀಯವನ್ನು ಧರಿಸಿದ, ಕೃಷ್ಣನಾದ, ಅಮಿತ ಪರಾಕ್ರಮಿಯಾದ ನಿನಗೆ ನಮಸ್ಕಾರ.
ಶುಕ್ಲವರ್ಣಾಯ ಶುಕ್ಲಾಯ ಶುಕ್ಲಾಂಬರಧರಾಯ ಚ |
ಶುಕ್ಲಭಸ್ಮಾವಲಿಪ್ತಾಯ ಶುಕ್ಲಕಮರತಾಯ ಚ ॥244॥
ಶುಕ್ಲವರ್ಣವನ್ನು ಹೊಂದಿದ, ಶುಕ್ಲನಾದ, ಶುಕ್ಲಾಂಬರವನ್ನು ಧರಿಸಿದ, ಶುಕ್ಲ ಭಸ್ಮವನ್ನು ಲೇಪಿಸಿಕೊಂಡ, ಶುಕ್ಲ ಕರ್ಮಗಳಲ್ಲಿ ನಿರತನಾದ ನಿನಗೆ ನಮಸ್ಕಾರ.
ನಮೋಸ್ತು ರಕ್ತವರ್ಣಾಯ ರಕ್ತಾಂಬರಧರಾಯ ಚ |
ರಕ್ತಧ್ವಜಪತಾಕಾಯ ರಕ್ತಸ್ರಗನುಲೇಪಿನೇ |
ನಮೋಸ್ತು ಪೀತವರ್ಣಾಯ ಪೀತಾಂಬರಧರಾಯ ಚ ॥245॥
ರಕ್ತವರ್ಣದವನಾದ, ರಕ್ತಾಂಬರನಾದ, ರಕ್ತಪತಾಕೆಯನ್ನು ಹೊಂದಿದ, ರಕ್ತಮಾಲ್ಯಾನುಲೇಪನಗಳನ್ನು ಹೊಂದಿದ ನಿನಗೆ ನಮಸ್ಕಾರ. ಪೀತವರ್ಣವನ್ನು ಹೊಂದಿದ, ಪೀತಾಂಬರಧಾರಿಯಾದ ನಿನಗೆ ನಮಸ್ಕಾರ.
ನಮೋಸ್ತೂಚ್ಛ್ರಿತಚ್ಛತ್ರಾಯ ಕಿರೀಟವರಧಾರಿಣೇ |
ಅರ್ಧಹಾರಾರ್ಧಕೇಯೂರ ಅರ್ಧಕುಂಡಲಕರ್ಣಿನೇ ॥246॥
ಎತ್ತಿಹಿಡಿದ ಛತ್ರವುಳ್ಳ, ಶ್ರೇಷ್ಠಕಿರೀಟವನ್ನು ಧರಿಸಿದ, ಅರ್ಧಹಾರ, ಅರ್ಧಕೇಯೂರ, ಕರ್ಣಗಳಲ್ಲಿ ಅರ್ಧಕುಂಡಲವನ್ನು ಧರಿಸಿದ ನಿನಗೆ ನಮಸ್ಕಾರ.
ನಮಃ ಪವನವೇಗಾಯ ನಮೋ ದೇವಾಯ ವೈ ನಮಃ |
ಸುರೇಂದ್ರಾಯ ಮುನೀಂದ್ರಾಯ ಮಹೇಂದ್ರಾಯ ನಮೋಸ್ತು ತೇ ॥
ವಾಯುವೇಗವನ್ನು ಹೊಂದಿದ ನಿನಗೆ ನಮಸ್ಕಾರ. ದೇವನಾದ ನಿನಗೆ ನಮಸ್ಕಾರ. ಸುರೇಂದ್ರನಾದ, ಮುನೀಂದ್ರನಾದ, ಮಹೇಂದ್ರನಾದ ನಿನಗೆ ನಮಸ್ಕಾರ.
ನಮಃ ಪದ್ಮಾರ್ಧಮಾಲಾಯ ಉತ್ಪಲೈರ್ಮಿಶ್ರಿತಾಯ ಚ |
ಅರ್ಧಚಂದನಲಿಪ್ತಾಯ ಅರ್ಧಸ್ರಗನುಲೇಪಿನೇ ॥248॥
ಉತ್ಪಲಮಿಶ್ರಿತವಾದ ಪದ್ಮಗಳ ಅರ್ಧಮಾಲೆಯುಳ್ಳ ನಿನಗೆ ನಮಸ್ಕಾರ. ಅರ್ಧಚಂದನದಿಂದ ಲೇಪಿತನಾದ, ಅರ್ಧಮಾಲೆಯನ್ನು ಧರಿಸಿದ ನಿನಗೆ ನಮಸ್ಕಾರ.
ನಮ ಆದಿತ್ಯವಕತ್ರಾಯ ಆದಿತ್ಯನಯನಾಯ ಚ |
ನಮ ಆದಿತ್ಯವರ್ಣಾಯ ಆದಿತ್ಯಪ್ರತಿಮಾಯ ಚ ॥249॥
ಸೂರ್ಯನಂತಹ ಮುಖವುಳ್ಳ, ಸೂರ್ಯನಂತಹ ಕಣ್ಣುಳ್ಳ ನಿನಗೆ ನಮಸ್ಕಾರ. ಸೂರ್ಯನ ವರ್ಣವನ್ನು ಹೊಂದಿದ, ಸೂರ್ಯನ ಪ್ರತೀಕವನ್ನು ಹೊಂದಿದ ನಿನಗೆ ನಮಸ್ಕಾರ.

ನಮಃ ಸೋಮಾಯ ಸೌಮ್ಯಾಯ ಸೌಮ್ಯವಕ್ತ್ರಧರಾಯ ಚ |
ಸೌಮ್ಯರೂಪಾಯ ಮುಖ್ಯಾಯ ಸೌಮ್ಯದಂಷ್ಟ್ರಾವಿಭೂಷಿಣೇ ॥250॥
ಶಾಂತನಾದ ಸೋಮನಾದ ನಿನಗೆ ನಮಸ್ಕಾರ. ಶಾಂತಮುಖವನ್ನು ಧರಿಸಿದ ನಿನಗೆ ನಮಸ್ಕಾರ. ಶಾಂತರೂಪವನ್ನು ಧರಿಸಿದ ಪ್ರಧಾನನಾದ, ಶಾಂತದಂಷ್ಟ್ರಗಳಿಂದ ವಿಭೂಷಿತನಾದ ನಿನಗೆ ನಮಸ್ಕಾರ.
ನಮಃ ಶ್ಯಾಮಾಯ ಗೌರಾಯ ಅರ್ಧಪೀತಾರ್ಧಪಾಂಡವೇ |
ನಾರೀನರಶರೀರಾಯ ಸ್ತ್ರೀಪುಂಸಾಯ ನಮೋಸ್ತು ತೇ ॥251॥
ಶ್ಯಾಮವರ್ಣದ, ಗೌರವರ್ಣದ, ಅರ್ಧಪೀತ-ಅರ್ಧಪಾಂಡುವರ್ಣದ ನಿನಗೆ ನಮಸ್ಕಾರ. ನರ-ನಾರೀ ಶರೀರವುಳ್ಳ, ಸ್ತ್ರೀ-ಪುಂ ರೂಪವುಳ್ಳ ನಿನಗೆ ನಮಸ್ಕಾರ.
ನಮೋ ವೃಷಭವಾಹಾಯ ಗಜೇಂದ್ರಗಮನಾಯ ಚ |
ದುರ್ಗಮಾಯ ನಮಸ್ತುಭ್ಯಮಗಮ್ಯಾಗಮನಾಯ ಚ ॥252॥
ವೃಷಭವಾಹನನಾದ, ಗಜೇಂದ್ರಗಮನನಾದ ನಿನಗೆ ನಮಸ್ಕಾರ. ದುರ್ಗಮನಾದ ನಿನಗೆ ನಮಸ್ಕಾರ. ತಿಳಿಯಲು ಸಾಧ್ಯವಿಲ್ಲದ ಗಮನಾಗಮನವುಳ್ಳ ನಿನಗೆ ನಮಸ್ಕಾರ.
ನಮೋಸ್ತು ಗಣಗೀತಾಯ ಗಣವೃಂದರತಾಯ ಚ |
ಗಣಾನುಯಾತಮಾರ್ಗಾಯ ಗಣನಿತ್ಯವ್ರತಾಯ ಚ ॥253॥
ಗಣಗಳಿಂದ ಗಾನಮಾಡಲ್ಪಟ್ಟ ನಿನಗೆ ನಮಸ್ಕಾರ. ಗಣಗಳ ಸಮೂಹದಲ್ಲಿ ನಿರತನಾದ ನಿನಗೆ, ಗಣಗಳಿಂದ ಹಿಂಬಾಲಿಸಲ್ಪಟ್ಟ ಮಾರ್ಗವುಳ್ಳ ನಿನಗೆ, ಗಣಗಳಲ್ಲಿ ನಿತ್ಯವೂ ರತನಾದ ನಿನಗೆ ನಮಸ್ಕಾರ.
ನಮಃ ಶ್ವೇತಾಭ್ರವರ್ಣಾಯ ಸಂಧ್ಯಾರಾಗಪ್ರಭಾಯ ಚ |
ಅನುದ್ದಿಷ್ಟಾಭಿಧಾನಾಯ ಸ್ವರೂಪಾಯ ನಮೋಸ್ತು ತೇ ॥254॥
ಬಿಳಿಯ ಮೋಡದ ವರ್ಣದ, ಸಂಧ್ಯಾರಾಗದ ಕಾಂತಿಯ ನಿನಗೆ ನಮಸ್ಕಾರ. ನಿನ್ನ ಸ್ವರೂಪವನ್ನು ತಿಳಿಸುವ ಸರಿಯಾದ ನಾಮವಿಲ್ಲದ ನಿನಗೆ ನಮಸ್ಕಾರ.
ನಮೋ ರಕ್ತಾಗ್ರವಾಸಾಯ ರಕ್ತಸೂತ್ರಧರಾಯ ಚ |
ರಕ್ತಮಾಲಾವಿಚಿತ್ರಾಯ ರಕ್ತಾಂಬರಧರಾಯ ಚ ॥255॥
ರಕ್ತವರ್ಣದ ಶ್ರೇಷ್ಠ ವಸ್ತ್ರವುಳ್ಳ, ರಕ್ತಸೂತ್ರವನ್ನು ಧರಿಸಿದ, ರಕ್ತಮಾಲೆಗಳಿಂದ ವಿಚಿತ್ರನಾದ, ರಕ್ತವಸ್ತ್ರಧಾರಿಯಾದ ನಿನಗೆ ನಮಸ್ಕಾರ.
ಮಣಿಭೂಷಿತಮೂರ್ಧಾಯ ನಮಶ್ಚಂದ್ರಾರ್ಧಭೂಷಿಣೇ |
ವಿಚಿತ್ರಮಣಿಮೂರ್ಧಾಯ ಕುಸುಮಾಷ್ಟಧರಾಯ ಚ ॥256॥
ಮಣಿಗಳಿಂದ ಭೂಷಿತವಾದ ಶಿರಸ್ಸುಳ್ಳ, ಅರ್ಧಚಂದ್ರಭೂಷಣನಾದ, ವಿಚಿತ್ರಮಣಿಗಳಿಂದ ಅಲಂಕೃತವಾದ ಶಿರಸ್ಸುಳ್ಳ, ಅಷ್ಟ ಕುಸುಮಗಳನ್ನು ಧರಿಸಿದ ನಿನಗೆ ನಮಸ್ಕಾರ.
ನಮೋಽಗ್ನಿಮುಖನೇತ್ರಾಯ ಸಹಸ್ರಶಶಿಲೋಚನೇ |
ಅಗ್ನಿರೂಪಾಯ ಕಾಂತಾಯ ನಮೋಸ್ತು ಗಹನಾಯ ಚ ॥257॥
ಅಗ್ನಿಮುಖವುಳ್ಳ, ಅಗ್ನಿನೇತ್ರವುಳ್ಳ, ಸಹಸ್ರ ಚಂದ್ರ ಲೋಚನನಾದ ನಿನಗೆ ನಮಸ್ಕಾರ. ಅಗ್ನಿಯ ರೂಪವುಳ್ಳ, ಮನೋಹರನಾದ, ಗಹನನಾದ ನಿನಗೆ ನಮಸ್ಕಾರ.
ಖಚರಾಯ ನಮಸ್ತುಭ್ಯಂ ಗೋಚರಾಭಿರತಾಯ ಚ |
ಭೂಚರಾಯ ಭುವನಾಯ ಅನಂತಾಯ ಶಿವಾಯ ಚ ॥258॥
ಆಕಾಶದಲ್ಲಿ ಸಂಚರಿಸುವ ನಿನಗೆ ನಮಸ್ಕಾರ. ಭೂಮಿಯಲ್ಲಿ ಸಂಚರಿಸುವವರಲ್ಲಿ ರತನಾದ ನಿನಗೆ ನಮಸ್ಕಾರ. ಭೂಮಿಯಲ್ಲಿ ಸಂಚರಿಸುವ ಭುವನರೂಪನಾದ, ಅನಂತನಾದ, ಮಂಗಳನಾದ ನಿನಗೆ ನಮಸ್ಕಾರ.
ನಮೋ ದಿಗ್ವಾಸಸೇ ನಿತ್ಯಮಧಿವಾಸಸುವಾಸಸೇ |
ನಮೋ ಜಗನ್ನಿವಾಸಾಯ ಪ್ರತಿಪತ್ತಿಸುಖಾಯ ಚ ॥259॥
ದಿಗಂಬರನಾದ, ನಿತ್ಯವೂ ಶ್ರೇಷ್ಠವಾದ ಸುವಸ್ತ್ರವನ್ನು ಧರಿಸುವ ನಿನಗೆ ನಮಸ್ಕಾರ. ಜಗತ್ತಿನಲ್ಲಿ ನಿವಾಸಿಸುವ, ಜ್ಞಾನದಿಂದ ಸುಖವನ್ನು ಪಡುವ ನಿನಗೆ ನಮಸ್ಕಾರ.
ನಿತ್ಯಮುದ್ಬದ್ಧಮುಕುಟೇ ಮಹಾಕೇಯೂರಧಾರಿಣೇ |
ಸರ್ಪಕಂಠೋಪಹಾರಾಯ ವಿಚಿತ್ರಾಭರಣಾಯ ಚ ॥260॥
ಯಾವಾಗಲೂ ಶಿರಸ್ಸಿನಲ್ಲಿ ಧರಿಸಿದ ಕಿರೀಟವುಳ್ಳ, ಮಹಾಕೇಯೂರವನ್ನು ಧರಿಸಿದ, ಕಂಠದಲ್ಲಿ ಸರ್ಪಹಾರವನ್ನು ಧರಿಸಿದ, ವಿಚಿತ್ರಾಭರಣವುಳ್ಳ ನಿನಗೆ ನಮಸ್ಕಾರ.
ನಮಸ್ತ್ರಿನೇತ್ರನೇತ್ರಾಯ ಸಹಸ್ರಶತಲೋಚನೇ |
ಸ್ತ್ರೀಪುಂಸಾಯ ನಪುಂಸಾಯ ನಮಃ ಸಾಂಖ್ಯಾಯ ಯೋಗಿನೇ ॥261॥
ತ್ರಿನೇತ್ರನಾದ, ಸಹಸ್ರಶತಲೋಚನನಾದ, ಸ್ತ್ರೀ-ಪುರುಷರೂಪನಾದ, ನಪುಂಸಕರೂಪನಾದ, ಸಾಂಖ್ಯಯೋಗರೂಪನಾದ ನಿನಗೆ ನಮಸ್ಕಾರ.
ಶಂಯೋರಭಿಸ್ರವಂತಾಯ ಅಥರ್ವಾಯ ನಮೋನಮಃ |
ನಮಃ ಸರ್ವಾರ್ತಿನಾಶಾಯ ನಮಃ ಶೋಕಹರಾಯ ಚ ॥262॥
ಸುಖವನ್ನು ಸುರಿಸುವ ಅಥರ್ವನಾದ ನಿನಗೆ ನಮಸ್ಕಾರ. ಸರ್ವದುಃಖಗಳನ್ನೂ ಪರಿಹರಿಸುವ ನಿನಗೆ ನಮಸ್ಕಾರ.

ಶೋಕಪರಿಹಾರಕನಾದ ನಿನಗೆ ನಮಸ್ಕಾರ.
ನಮೋ ಮೇಘನಿನಾದಾಯ ಬಹುಮಾಯಾಧರಾಯ ಚ |
ಬೀಜಕ್ಷೇತ್ರಾಭಿಪಾಲಾಯ ಜಗತ್ಸ್ರಷ್ಟ್ರೇ ನಮೋ ನಮಃ ॥263॥
ಮೇಘಗಂಭೀರನಾದವುಳ್ಳ ನಿನಗೆ ನಮಸ್ಕಾರ. ಅನೇಕ ಸಾಮರ್ಥ್ಯಗಳನ್ನು ಧರಿಸಿದ ನಿನಗೆ ನಮಸ್ಕಾರ. ಬೀಜ-ಕ್ಷೇತ್ರಗಳನ್ನು ರಕ್ಷಿಸುವ, ಜಗತ್‌ಸೃಷ್ಟಿಕರ್ತನಾದ ನಿನಗೆ ನಮಸ್ಕಾರ.
ನಮಃ ಸುರಾಸುರೇಶಾಯ ವಿಶ್ವೇಶಾಯ ನಮೋನಮಃ |
ನಮಃ ಪವನವೇಗಾಯ ನಮಃ ಪವನರೂಪಿಣೇ ॥264॥
ಸುರಾಸುರ ಪ್ರಭುವಾದ, ವಿಶ್ವಪ್ರಭುವಾದ ನಿನಗೆ ನಮಸ್ಕಾರ. ವಾಯುವೇಗವುಳ್ಳ, ವಾಯುರೂಪನಾದ ನಿನಗೆ ನಮಸ್ಕಾರ.
ನಮಃ ಕಾಂಚನಮಾಲಾಯ ಗಿರಿಮಾಲಾಯ ವೈ ನಮಃ |
ನಮಃ ಸುರಾರಿಮಾಲಾಯ ಚಂಡವೇಗಾಯ ವೈ ನಮಃ ॥265॥
ಸುವರ್ಣಮಾಲೆಯನ್ನು ಧರಿಸಿದ, ಗಿರಿಮಾಲೆಯನ್ನು ಧರಿಸಿದ, ದೈತ್ಯರ ಮಾಲೆಯನ್ನು ಧರಿಸಿದ, ಚಂಡವೇಗವುಳ್ಳ ನಿನಗೆ ನಮಸ್ಕಾರ.
ಬ್ರಹ್ಮಶಿರೋಪಹರ್ತಾಯ ಮಹಿಷಘ್ನಾಯ ವೈ ನಮಃ |
ನಮಃ ಸ್ತ್ರೀರೂಪಧರಾಯ ಯಜ್ಞವಿಧ್ವಂಸನಾಯ ಚ ॥266॥
ಬ್ರಹ್ಮದೇವರ ಶಿರಸ್ಸನ್ನು ಕತ್ತರಿಸಿದ, ಮಹಿಷಾಸುರ ಸಂಹಾರಕನಾದ ನಿನಗೆ ನಮಸ್ಕಾರ. ಸ್ತ್ರೀರೂಪವನ್ನು ಧರಿಸಿದ, ಯಜ್ಞವಿಧ್ವಂಸಕನಾದ ನಿನಗೆ ನಮಸ್ಕಾರ.
ನಮಸ್ತ್ರಿಪುರಹರ್ತಾ ಯಜ್ಞವಿಧ್ವಂಸನಾಯ ಚ |
ನಮಃ ಕಾಮಾಂಗನಾಶಾಯ ಕಾಲದಂಡಧರಾಯ ಚ ॥267॥
ಶತ್ರುಗಳಾದ ತ್ರಿಪುರರನ್ನು ಸಂಹರಿಸಿದ ನಿನಗೆ, ಯಜ್ಞಗಳನ್ನು ಧ್ವಂಸ ಮಾಡಿದ ನಿನಗೆ, ಮನ್ಮಥಶರೀರವನ್ನು ನಾಶಮಾಡಿದ ನಿನಗೆ, ಕಾಲದಂಡವನ್ನು ಧರಿಸಿದ ನಿನಗೆ ನಮಸ್ಕಾರ.
ನಮಃ ಸ್ಕಂದವಿಶಾಖಾಯ ಬ್ರಹ್ಮದಂಡಾಯ ವೈ ನಮಃ |
ನಮೋ ಭವಾಯ ಶರ್ವಾಯ ವಿಶ್ವರೂಪಾಯ ವೈ ನಮಃ ॥268॥
ಸ್ಕಂಧವಿಶಾಖನಾದ, ಬ್ರಹ್ಮದಂಡರೂಪನಾದ, ಭವನಾದ, ಶರ್ವನಾದ, ವಿಶ್ವರೂಪನಾದ ನಿನಗೆ ನಮಸ್ಕಾರ.
ಈಶಾನಾಯ ಭವಘ್ನಾಯ ನಮೋಸ್ತ್ವಂಧಕಘಾತಿನೇ |
ನಮೋ ವಿಶ್ವಾಯ ಮಾಯಾಯ ಚಿಂತ್ಯಾಚಿಂತ್ಯಾಯ ವೈ ನಮಃ ॥269॥
ಈಶಾನನಾದ, ಸಂಸಾರನಾಶಕನಾದ, ಅಂಧಕಸಂಹಾರಕನಾದ ನಿನಗೆ ನಮಸ್ಕಾರ. ವಿಶ್ವನಾದ, ಪ್ರಧಾನನಾದ, ಚಿಂತ್ಯಾಚಿಂತ್ಯನಾದ ನಿನಗೆ ನಮಸ್ಕಾರ.
ತ್ವಂ ನೋ ಗತಿಶ್ಚ ಶ್ರೇಷ್ಠಶ್ಚ ತ್ವಮೇವ ಹೃದಯಂ ತಥಾ |
ತ್ವಂ ಬ್ರಹ್ಮಾ ಸರ್ವದೇವಾನಾಂ ರುದ್ರಾಣಾಂ ನೀಲಲೋಹಿತಃ |
ಆತ್ಮಾ ಚ ಸರ್ವಭೂತಾನಾಂ ಸಾಂಖ್ಯೇ ಪುರುಷ ಉಚ್ಯಸೇ ॥270॥
ನೀನೇ ನಮಗೆ ಗತಿಯಾದವನು, ಶ್ರೇಷ್ಠನಾದವನು, ನಮಗೆ ಪ್ರಿಯನಾದವನು. ಎಲ್ಲ ದೇವತೆಗಳಿಗೂ ನೀನು ಬ್ರಹ್ಮನಾಗಿದ್ದೀಯೆ. ರುದ್ರನಲ್ಲಿ ನೀಲ- ಲೋಹಿತನಾಗಿದ್ದೀಯೆ. ಸರ್ವಭೂತಗಳಲ್ಲಿ ಆತ್ಮನಾಗಿದ್ದೀಯೆ. ಸಾಂಖ್ಯಶಾಸ್ತ್ರದಲ್ಲಿ ಪುರುಷನಾಗಿದ್ದೀಯೆ ಎಂದು ಹೇಳಲ್ಪಡುವಿ.
ಋಷಭಸ್ತ್ವಂ ಪವಿತ್ರಾಣಾಂ ಯೋಗಿನಾಂ ನಿಷ್ಕಲಃ ಶಿವಃ |
ಆಶ್ರಮಾಣಾಂ ಗೃಹಸ್ಥಸ್ತ್ವಮೀಶ್ವರಾಣಾಂ ಮಹೇಶ್ವರಃ |
ಕುಬೇರಃ ಸರ್ವಯಕ್ಷಾಣಾಂ ಕ್ರತೂನಾಂ ವಿಷ್ಣುರುಚ್ಯಸೇ ॥271॥
ಪವಿತ್ರರಾದವರಲ್ಲಿ ನೀನು ವೃಷಭನಾಗಿದ್ದೀಯೆ. ಯೋಗಿಗಳಲ್ಲಿ ನಿಷ್ಕಲನಾದ ಶಿವನಾಗಿದ್ದೀಯೆ. ಆಶ್ರಮಗಳಲ್ಲಿ ಗೃಹಸ್ಥನೂ, ಈಶ್ವರರಲ್ಲಿ ಮಹೇಶ್ವರನೂ, ಸರ್ವಯಕ್ಷರಲ್ಲಿ ಕುಬೇರನೂ, ಕ್ರತುಗಳಲ್ಲಿ ವಿಷ್ಣುವೂ ಆಗಿದ್ದೀಯೆ.
ಪರ್ವತಾನಾಂ ಮಹಾಮೇರುರ್ನಕ್ಷತ್ರಾಣಾಂ ಚ ಚಂದ್ರಮಾಃ |
ವಸಿಷ್ಠಸ್ತ್ವಮೃಷೀಣಾಂ ಚ ಗ್ರಹಾಣಾಂ ಸೂರ್ಯ ಉಚ್ಯಸೇ ॥272॥
ಪರ್ವತಗಳಲ್ಲಿ ಮಹಾಮೇರುವೂ, ನಕ್ಷತ್ರಗಳಲ್ಲಿ ಚಂದ್ರನೂ, ಋಷಿಗಳಲ್ಲಿ ವಸಿಷ್ಠನೂ, ಗ್ರಹಗಳಲ್ಲಿ ಸೂರ್ಯನೂ ಆಗಿದ್ದೀಯೆ ಎಂದು ಹೇಳಲ್ಪಡುವಿ.
ಆರಣ್ಯಾನಾಂ ಪಶೂನಾಂ ಚ ಸಿಂಹಸ್ತ್ವಂ ಪರಮೇಶ್ವರಃ |
ಗ್ರಾಮ್ಯಾಣಾಂ ಗೋವೃಷಶ್ಚಾಸಿ ಭಗವಾಲ್ಲೋಕಪೂಜಿತಃ ॥273॥
ಪರಮೇಶ್ವರನಾದ ನೀನು ವನದಲ್ಲಿ ವಾಸಿಸುವ ಪಶುಗಳಲ್ಲಿ ಸಿಂಹನಾಗಿದ್ದೀಯೆ. ಲೋಕಪೂಜಿತನಾದ, ಭಗವಂತನಾದ ನೀನು ಗ್ರಾಮದಲ್ಲಿ ವಾಸಿಸುವ ಪಶುಗಳಲ್ಲಿ ಗೋವೃಷಭನಾಗಿದ್ದೀಯೆ.
ಆದಿತ್ಯಾನಾಂ ಭವಾನ್ ವಿಷ್ಣುರ್ವಸೂನಾಂ ಚೈವ ಪಾವಕಃ |
ಪಕ್ಷಿಣಾಂ ವೈನತೇಯಶ್ಚ ಅನಂತೋ ಭುಜಗೇಷು ಚ ॥274॥
ಆದಿತ್ಯರಲ್ಲಿ ನೀನು ವಿಷ್ಣುವೂ, ವಸುಗಳಲ್ಲಿ ಅಗ್ನಿಯೂ, ಪಕ್ಷಿಗಳಲ್ಲಿ ಗರುಡನೂ, ಸರ್ಪಗಳಲ್ಲಿ ಶೇಷನೂ ಆಗಿದ್ದೀಯೆ.
ಸಾಮವೇದಶ್ಚ ವೇದಾನಾಂ ಯಜುಷಾಂ ಶತರುದ್ರಿಯಮ್ |
ಸನತ್ಕುಮಾರೋ ಯೋಗೀನಾಂ ಸಿದ್ಧಾನಾಂ ಕಪಿಲೋ ಹ್ಯಸಿ ॥275॥

ವೇದಗಳಲ್ಲಿ ಸಾಮವೇದವೂ, ದ್ವಿಜಸ್ಸುಗಳಲ್ಲಿ ಶತರುದ್ರೀಯವೂ, ಯೋಗಿಗಳಿಗೆ ಸನತ್ಕುಮಾರನೂ, ಸಿದ್ಧರಲ್ಲಿ ಕಪಿಲ ಋಷಿಯೂ ಆಗಿದ್ದೀಯೆ.
ಶಕ್ರೋಽಸಿ ಮರುತಾಂ ದೇವ ಪಿತ್ೃಣಾಂ ಧರ್ಮರಾಡಸಿ |
ಬ್ರಹ್ಮಲೋಕಶ್ಚ ಲೋಕಾನಾಂ ಗತೀನಾಂ ಮೋಕ್ಷ ಉಚ್ಯಸೇ ॥276॥
ಎಲೈ ದೇವನೇ, ಮರುತ್ತುಗಳಲ್ಲಿ ಇಂದ್ರನಾಗಿದ್ದೀಯೆ. ಪಿತೃಗಳಲ್ಲಿ ಯಮನಾಗಿದ್ದೀಯೆ. ಲೋಕಗಳಲ್ಲಿ ಬ್ರಹ್ಮಲೋಕನಾಗಿದ್ದೀಯೆ. ಗತಿಗಳಲ್ಲಿ ಮೋಕ್ಷವೆಂದು ಹೇಳಲ್ಪಡುತ್ತೀಯೆ.
ಕ್ಷೀರೋದಃ ಸಾಗರಾಣಾಂ ಚ ಶೈಲಾನಾಂ ಹಿಮವಾನ್ ಗಿರಿಃ |
ವರ್ಣಾನಾಂ ಬ್ರಾಹ್ಮಣಶ್ಚಾಸಿ ವಿಪ್ರಾಣಾಂ ದೀಕ್ಷಿತೋ ದ್ವಿಜಃ |
ಆದಿಸ್ತ್ವಮಸಿ ದೇವಾನಾಂ ಸಂಹರ್ತಾ ಕಾಲ ಏವ ಚ ॥277॥
ಯಚ್ಚಾನ್ಯದಪಿ ಲೋಕೇಷು ಸತ್ತ್ವಂ ತೇಜೋಧಿಕಂ ಸ್ಮೃತಮ್ |
ತತ್ಸರ್ವಂ ಭಗವಾನೇವ ಇತಿ ಮೇ ನಿಶ್ಚಿತಾ ಮತಿಃ ॥278॥
ಸಾಗರಗಳಲ್ಲಿ ಕ್ಷೀರಸಮುದ್ರವಾಗಿದ್ದೀಯೆ. ಪರ್ವತಗಳಲ್ಲಿ ಹಿಮಾಲಯವಾಗಿದ್ದೀಯೆ. ವರ್ಣಗಳಲ್ಲಿ ಬ್ರಾಹ್ಮಣನಾಗಿದ್ದೀಯೆ. ಬ್ರಾಹ್ಮಣರಲ್ಲಿ ದೀಕ್ಷಿತ ಬ್ರಾಹ್ಮಣನಾಗಿದ್ದೀಯೆ. ನೀನು ದೇವತೆಗಳಿಗೆ ಆದಿಯಾಗಿದ್ದೀಯೆ, ಅಂತಕನಾಗಿದ್ದೀಯೆ ಮತ್ತು ಕಾಮಪ್ರದನಾಗಿದ್ದೀಯೆ. ಲೋಕದಲ್ಲಿ ಅಧಿಕ ತೇಜಸ್ಸನ್ನು ಹೊಂದಿದ ಉಳಿದ ಯಾವ ಯಾವ ಪದಾರ್ಥಗಳಿವೆಯೋ ಅವೆಲ್ಲವೂ ನೀನೇ ಎಂದು ನನ್ನ ನಿಶ್ಚಿತವಾದ ಅಭಿಪ್ರಾಯ.
ನಮಸ್ತೇ ಭಗವನ್ ದೇವ ನಮಸ್ತೇ ಭಕ್ತವತ್ಸಲ |
ಯೋಗೇಶ್ವರ ನಮಸ್ತೇಽಸ್ತು ನಮಸ್ತೇ ವಿಶ್ವಸಂಭವ ॥279॥
ಭಗವಂತನಾದ ದೇವನೇ ನಿನಗೆ ನಮಸ್ಕಾರ. ಭಕ್ತವತ್ಸಲನೇ ನಿನಗೆ ನಮಸ್ಕಾರ. ಯೋಗೇಶ್ವರನೇ ನಿನಗೆ ನಮಸ್ಕಾರ. ವಿಶ್ವಸಂಭವನೇ ನಿನಗೆ ನಮಸ್ಕಾರ.
ಪ್ರಸೀದ ಮಮ ಭಕ್ತಸ್ಯ ದೀನಸ್ಯ ಕೃಪಣಸ್ಯ ಚ |
ಅನೈಶ್ವರ್ಯೇಣ ಯುಕ್ತಸ್ಯ ಗತಿರ್ಭವ ಸನಾತನ ॥280॥
ದೀನನೂ, ಕೃಪಣನೂ, ನಿನ್ನ ಭಕ್ತನೂ ಆದ ನನಗೆ ಅನುಗ್ರಹವನ್ನು ಮಾಡು. ಎಲೈ ಸನಾತನನೇ, ದಾರಿದ್ರ್ಯದಿಂದ ಕೂಡಿದ ನನಗೆ ಗತಿಯಾಗು.
ಯಂ ಚಾಪರಾಧಂ ಕೃತವಾನಜ್ಞಾನಾತ್ಪರಮೇಶ್ವರ |
ಮದ್ಭಕ್ತ ಇತಿ ದೇವೇಶ ತತ್ಸರ್ವಂ ಕ್ಷಂತುಮರ್ಹಸಿ ॥281॥
ಪರಮೇಶ್ವರನೇ, ನಾನು ಅಜ್ಞಾನದಿಂದ ಯಾವ ಅಪರಾಧವನ್ನು ಮಾಡಿದ್ದೇನೆಯೋ, ಎಲೈ ದೇವೇಶನೇ, ಅವೆಲ್ಲವನ್ನೂ ನಿನ್ನ ಭಕ್ತನೆಂದು ತಿಳಿದು ಕ್ಷಮಿಸಬೇಕು.
ಮೋಹಿತಶ್ಚಾಸ್ಮಿ ದೇವೇಶ ತುಭ್ಯಂ ರೂಪವಿಪರ್ಯಯಾತ್ |
ತೇನ ನಾರ್ಘ್ಯಂ ಮಯಾ ದತ್ತಂ ಪಾದ್ಯಂ ಚಾಪಿ ಸುರೇಶ್ವರ ॥282॥
ಎಲೈ ದೇವೇಶನೇ, ನಿನ್ನ ರೂಪಗಳ ವ್ಯತ್ಯಾಸವನ್ನು ನೋಡಿ, ನಾನು ಮೋಹಿತನಾಗಿದ್ದೇನೆ. ಎಲೈ ಸುರೇಶ್ವರನೇ, ಆದ್ದರಿಂದ ನಿನಗೆ ಅರ್ಘ್ಯವನ್ನಾಗಲೀ, ಪಾದ್ಯವನ್ನಾಗಲೀ ಕೊಡಲಿಲ್ಲ.
ಏವಂ ಸ್ತುತ್ವಾಹಮೀಶಾನಂ ಪಾದ್ಯಮರ್ಘ್ಯಂ ಚ ಭಕ್ತಿತಃ |
ಕೃತಾಂಜಲಿಪುಟೋ ಭೂತ್ವಾ ಸರ್ವಂ ತಸ್ಮೈ ನ್ಯವೇದಯಮ್ ॥283॥
ನಾನು ಈಶಾನನನ್ನು ಭಕ್ತಿಯಿಂದ ಈ ರೀತಿಯಲ್ಲಿ ಸ್ತೋತ್ರವನ್ನು ಮಾಡಿ, ಕೈಗಳನ್ನು ಮುಗಿದು, ಅವನಿಗೆ ಪಾದ್ಯ, ಅರ್ಘ್ಯ ಮೊದಲಾದ ಎಲ್ಲವನ್ನೂ ನಿವೇದಿಸಿದೆನು.
ತತಃ ಶೀತಾಂಬುಸಂಯುಕ್ತಾ ದಿವ್ಯಗಂಧಸಮನ್ವಿತಾ |
ಪುಷ್ಪವೃಷ್ಟಿಃ ಶುಭಾ ತಾತ ಪಪಾತ ಮಮ ಮೂರ್ಧನಿ ॥284॥
ಆಗ ಶೀತಜಲಕಣಗಳಿಂದ ಕೂಡಿದ, ದಿವ್ಯಗಂಧದಿಂದ ಕೂಡಿದ ಶುಭವಾದ ಪುಷ್ಪವೃಷ್ಟಿಯು ನನ್ನ ತಲೆಯ ಮೇಲೆ ಬಿದ್ದಿತು.
ದುಂದುಭಿಶ್ಚ ತತೋ ದಿವ್ಯಸ್ತಾಡಿತೋ ದೇವಕಿಂಕರೈಃ |
ವವೌ ಚ ಮಾರುತಃ ಪುಣ್ಯಃ ದಿವ್ಯಗಂಧಸಮನ್ವಿತಃ ॥285॥
ದೇವಕಿಂಕರರು ಆಗ ದಿವ್ಯವಾದ ದುಂದುಭಿಗಳನ್ನು ಬಾರಿಸಿದರು. ದಿವ್ಯಗಂಧದಿಂದ ಕೂಡಿದ ಪುಣ್ಯವಾದ ವಾಯುವು ಬೀಸಿತು.
ತತಃ ಪ್ರೀತೋ ಮಹಾದೇವಃ ಸಪತ್ನೀಕೋ ವೃಷಧ್ವಜಃ |
ಅಬ್ರವೀತ್ ತ್ರಿದಶಾಂಸ್ತತ್ರ ಹರ್ಷಯನ್ನಿವ ಮಾಂ ತದಾ ॥286॥
ಆಗ ಪ್ರಸನ್ನನಾದ, ಪತ್ನೀಸಹಿತನಾದ, ವೃಷಭಧ್ವಜನಾದ ಮಹಾದೇವನು ನನಗೆ ಸಂತೋಷವನ್ನುಂಟು ಮಾಡುವವನಂತೆ ಅಲ್ಲಿ ದೇವತೆಗಳನ್ನು ಕುರಿತು ಹೇಳಿದನು.
ಪಶ್ಯಧ್ವಂ ತ್ರಿದಶಾಃ ಸರ್ವೇ ಉಪಮನ್ಯೋರ್ಮಹಾತ್ಮನಃ |
ಮಯಿ ಭಕ್ತಿಂ ಪರಾಂ ನಿತ್ಯಾಮೇಕಭಾವಾದವಸ್ಥಿತಾಮ್ ॥287॥
ಎಲೈ ದೇವತೆಗಳೇ, ನೀವೆಲ್ಲರೂ ಮಹಾತ್ಮನಾದ ಉಪಮನ್ಯುವಿನ, ನನ್ನಲ್ಲಿ ಏಕಪ್ರಕಾರವಾಗಿರುವ ಶ್ರೇಷ್ಠವಾದ ಭಕ್ತಿಯನ್ನು ನೋಡಿ (ಎಂದು ಹೇಳಿದನು).
ಏವಮುಕ್ತಾಸ್ತತಃ ಕೃಷ್ಣ ಸುರಾಸ್ತೇ ಶೂಲಪಾಣಿನಾ |

ಊಚುಃ ಪ್ರಾಂಜಲಯಃ ಸರ್ವೇ ನಮಸ್ಕೃತ್ವಾ ವೃಷಧ್ವಜಮ್ ॥288॥
ಎಲೈ ಕೃಷ್ಣನೇ, ಶೂಲಪಾಣಿಯಿಂದ ಹೀಗೆ ಹೇಳಲ್ಪಟ್ಟ ಆ ದೇವತೆಗಳೆಲ್ಲರೂ ವೃಷಧ್ವಜನಾದ ಅವನಿಗೆ ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಹೇಳಿದರು.
ಭಗವನ್ ದೇವದೇವೇಶ ಲೋಕನಾಥ ಜಗತ್ಪತೇ |
ಲಭತಾಂ ಸರ್ವಕಾಮೇಭ್ಯಃ ಫಲಂ ತ್ವತ್ತೋ ದ್ವಿಜೋತ್ತಮಃ ॥289॥
ಭಗವಂತನೇ, ದೇವದೇವೇಶನೇ, ಲೋಕನಾಥನೇ, ಜಗತ್ಪತಿಯೇ, ದ್ವಿಜೋತ್ತಮನಾದ ಉಪಮನ್ಯುವು ನಿನ್ನಿಂದ ಎಲ್ಲ ಕಾಮದ ಫಲವನ್ನು ಪಡೆಯಲಿ (ಎಂದು ಹೇಳಿದರು).
ಏವಮುಕ್ತಸ್ತತಃ ಶರ್ವಃ ಸುರೈರ್ಬ್ರಹ್ಮಾದಿಭಿಸ್ತಥಾ |
ಆಹ ಮಾಂ ಭಗವಾನೀಶಃ ಪ್ರಹಸನ್ನಿವ ಶಂಕರಃ ॥290॥
ಬ್ರಹ್ಮಾದಿ ದೇವತೆಗಳಿಂದ ಹೀಗೆ ಹೇಳಲ್ಪಟ್ಟ ಭಗವಂತನೂ, ಈಶನೂ ಆದ ಶಂಕರನು ನಗುತ್ತಾ ನನ್ನನ್ನು ಕುರಿತು ಹೇಳಿದನು.
ವತ್ಸೋಪಮನ್ಯೋ ಪ್ರೀತೋಽಸ್ಮಿ ವರಂ ವರಯ ಸುವ್ರತ |
ದೃಢಭಕ್ತೋಽಸಿ ವಿಪ್ರರ್ಷೇ ಮಯಾ ಜಿಜ್ಞಾಸಿತೋ ಹ್ಯಸಿ ॥291॥
ವತ್ಸ ಉಪಮನ್ಯು, ಒಳ್ಳೆಯ ವ್ರತವನ್ನು ಧರಿಸಿದವನೇ, ನಾನು ಪ್ರಸನ್ನನಾಗಿದ್ದೇನೆ. ವರವನ್ನು ಕೇಳು. ವಿಪ್ರರ್ಷಿಯೇ, ನನ್ನಲ್ಲೇ ದೃಢಭಕ್ತಿಯುಳ್ಳವನಾಗಿದ್ದೀಯೆ. ನಿನ್ನನ್ನು ನಾನು ಪರೀಕ್ಷಿಸಿದೆ.
ಅನಯಾ ಚೈವ ಭಕ್ತ್ಯಾ ತೇ ಅತ್ಯರ್ಥಂ ಪ್ರೀತಿಮಾನಹಮ್ |
ತಸ್ಮಾತ್ ಸರ್ವಾನ್ ದದಾಮ್ಯದ್ಯ ಕಾಮಾನ್ ಮನಸಿ ತೇ ಸ್ಥಿತಾನ್॥
ನಿನ್ನ ಈ ಭಕ್ತಿಯಿಂದ ನಾನು ನಿನ್ನಲ್ಲಿ ಬಹಳ ಪ್ರೀತಿಯುಳ್ಳವನಾಗಿದ್ದೇನೆ. ಆದ್ದರಿಂದ ಈ ದಿನ ನಿನ್ನ ಮನಸ್ಸಿನಲ್ಲಿರುವ ಎಲ್ಲಾ ಕಾಮಗಳನ್ನು ಕೊಡುತ್ತೇನೆ.
ಏವಮುಕ್ತಸ್ಯ ಚೈವಾಥ ಮಹಾದೇವೇನ ಮೇ ವಿಭೋ |
ಹರ್ಷಾದಶ್ರೂಣ್ಯವರ್ತಂತ ಲೋಮಹರ್ಷಶ್ಚ ಜಾಯತೇ ॥293॥
ಎಲೈ ವಿಭುವೇ, ಮಹಾದೇವನಿಂದ ಹೀಗೆ ಹೇಳಲ್ಪಟ್ಟ ನನಗೆ ಕಣ್ಣುಗಳಲ್ಲಿ ಆನಂದಬಾಷ್ಪವೂ ಮತ್ತು ರೋಮಾಂಚವೂ ಉಂಟಾಯಿತು.
ಅಬ್ರುವಂ ಚ ತದಾ ದೇವಂ ಹರ್ಷಗದ್ಗದಯಾ ಗಿರಾ |
ಜಾನುಭ್ಯಾಮವನಿಂ ಗತ್ವಾ ಪ್ರಣಮ್ಯ ಚ ಪುನಃ ಪುನಃ ॥294॥
ನಾನು ಭೂಮಿಯ ಮೇಲೆ ಮಂಡೆಗಳನ್ನೂರಿ ಅವನಿಗೆ ಪುನಃ ಪುನಃ ನಮಸ್ಕರಿಸಿ ಹರ್ಷದಿಂದ ಗದ್ಗದವಾದ ಮಾತುಗಳಿಂದ ಅವನನ್ನು ಕುರಿತು ಹೇಳಿದೆನು.
ಅದ್ಯ ಜಾತೋ ಹ್ಯಹಂ ದೇವ ಅದ್ಯ ಮೇ ಸಫಲಂ ತಪಃ |
ಯನ್ಮೇ ಸಾಕ್ಷಾನ್ಮಹಾದೇವಃ ಪ್ರಸನ್ನಸ್ತಿಷ್ಠತೇಽಗ್ರತಃ ॥295॥
ಎಲೈ ದೇವನೇ, ನಾನು ಈ ದಿನ ಜನ್ಮವನ್ನು ಪಡೆದಿದ್ದೇನೆ. ಮಹಾದೇವನಾದ ನೀನು ಪ್ರಸನ್ನನಾಗಿ ನನ್ನ ಎದುರಿಗೆ ನಿಂತಿರುವುದರಿಂದ ಈ ದಿನ ನನ್ನ ತಪಸ್ಸು ಸಫಲವಾಗಿದೆ.
ಯಂ ನ ಪಶ್ಯಂತಿ ಚಾರಾಧ್ಯ ದೇವಾ ಹ್ಯಮಿತವಿಕ್ರಮಮ್ |
ತಮಹಂ ದೃಷ್ಟವಾನ್ ದೇವಂ ಕೋಽನ್ಯೋ ಧನ್ಯತರೋ ಮಯಾ ॥
ದೇವತೆಗಳೂ ಸಹ ಅಮಿತವಿಕ್ರಮನಾದ ಯಾವನನ್ನು ಆರಾಧಿಸಿ ಕಾಣುವುದಿಲ್ಲವೋ ಅಂತಹ ದೇವನನ್ನು ನಾನು ನೋಡಿದ್ದೇನೆ. ನನಗಿಂತ ಧನ್ಯರಾದವರು ಬೇರೆ ಯಾರಿದ್ದಾರೆ?
ಏವಂ ಧ್ಯಾಯಂತಿ ವಿದ್ವಾಂಸಃ ಪರಂ ತತ್ತ್ವಂ ಸನಾತನಮ್ |
ಷಟ್‌ವಿಂಶಕಮಿತಿ ಖ್ಯಾತಂ ಯತ್ಪರಾತ್ಪರಮಕ್ಷರಮ್ ॥297॥
ವಿದ್ವಾಂಸರಾದವರು ಪರತತ್ವನೂ, ಸನಾತನನೂ, ಇಪ್ಪತ್ತಾರನೆಯ ತತ್ತ್ವನೆಂದು ಪ್ರಸಿದ್ಧನಾದವನೂ, ಪರಾತ್ಪರನೂ, ಅಕ್ಷರನೂ ಆದ ಶಿವನನ್ನು ಹೀಗೆ ಧ್ಯಾನ ಮಾಡುತ್ತಾರೆ.
ಸ ಏಷ ಭಗವಾನ್ ದೇವಃ ಸರ್ವತತ್ತ್ವಾದಿರವ್ಯಯಃ |
ಸರ್ವತತ್ತ್ವವಿಧಾನಜ್ಞಃ ಪ್ರಧಾನಪುರುಷೇಶ್ವರಃ ॥298॥
ಅಂತಹ ಭಗವಂತನಾದ ಈ ದೇವನು ಎಲ್ಲ ತತ್ತ್ವಗಳಿಗಿಂತ ಮೊದಲು ಇದ್ದವನು. ಅವ್ಯಯನಾದವನು. ಸರ್ವತತ್ತ್ವಗಳ ರೀತಿಯನ್ನು ತಿಳಿದವನು. ಪ್ರಧಾನ ಪುರುಷೇಶ್ವರನಾದವನು.
ಯೋಽಸೃಜದ್ ದಕ್ಷಿಣಾದಂಗಾದ್ ಬ್ರಹ್ಮಾಣಂ ಲೋಕಸಂಭವಮ್ |
ವಾಮಪಾರ್ಶ್ವಾತ್ ತಥಾ ವಿಷ್ಣುಂ ಲೋಕರಕ್ಷಾರ್ಥಮೀಶ್ವರಃ |
ಯುಗಾಂತೇ ಚೈವ ಸಂಪ್ರಾಪ್ತೇ ರುದ್ರಮಂಗಾತ್ ಸೃಜತ್ ಪ್ರಭುಃ ॥
ಅವನು ತನ್ನ ಶರೀರದ ಬಲಭಾಗದಿಂದ ಲೋಕಸ್ರಷ್ಟ್ಯಾರನಾದ ಬ್ರಹ್ಮನನ್ನು ಸೃಷ್ಟಿಸಿದನು. ಈಶ್ವರನಾದ ಅವನು ಲೋಕದ ರಕ್ಷಣೆಗಾಗಿ ತನ್ನ ಶರೀರದ ಎಡಭಾಗದಿಂದ ವಿಷ್ಣುವನ್ನು ಸೃಷ್ಟಿಸಿದನು. ಪ್ರಭುವಾದ ಅವನು ಯುಗಾಂತಕಾಲವು ಸಮೀಪಿಸಿದಾಗ ರುದ್ರನನ್ನು ತನ್ನ ಶರೀರದಿಂದ ಸೃಷ್ಟಿಸುತ್ತಾನೆ.
ಸ ರುದ್ರಃ ಸಂಹರನ್ ಕೃತ್ಸ್ನಂ ಜಗತ್ಸ್ಥಾವರಜಂಗಮಮ್ |
ಕಾಲೋ ಭೂತ್ವಾ ಮಹಾತೇಜಾಃ ಸಂವರ್ತಕ ಇವಾನಲಃ ॥300॥

ಆ ರುದ್ರನು ಸಂವರ್ತಕಾಗ್ನಿಯಂತೆ ಮಹಾತೇಜಸ್ವಿಯಾಗಿ, ಕಾಲನಾಗಿ, ಸ್ಥಾವರ-ಜಂಗಮಾತ್ಮಕವಾದ ಸಮಸ್ತವಾದ ಜಗತ್ತನ್ನು ಸಂಹರಿಸುತ್ತಾನೆ.
ಏಷ ದೇವೋ ಮಹಾದೇವೋ ಜಗತ್ ಸೃಷ್ಟ್ವಾ ಚರಾಚರಮ್ |
ಕಲ್ಪಾಂತೇ ಚೈವ ಸರ್ವೇಷಾಂ ಸ್ಮೃತಿಮಾಕ್ರಮ್ಯ ತಿಷ್ಠತಿ ॥301॥
ಮಹಾದೇವನಾದ ಈ ದೇವನು ಚರಾಚರವಾದ ಜಗತ್ತನ್ನು ಸೃಷ್ಟಿಸಿ, ಕಲ್ಪದ ಕೊನೆಯಲ್ಲಿ ಎಲ್ಲರ ಸ್ಮೃತಿಯನ್ನು ಆಕ್ರಮಿಸಿ (ನಾಶಮಾಡಿ) ಇರುತ್ತಾನೆ.
ಸರ್ವಗಃ ಸರ್ವಭೂತಾತ್ಮಾ ಸರ್ವಭೂತಭವೋದ್ಭವಃ |
ಆಸ್ತೇ ಸರ್ವಗತೋ ನಿತ್ಯಮದೃಶ್ಯಃ ಸರ್ವದೈವತೈಃ ॥302॥
ಸರ್ವತ್ರವ್ಯಾಪ್ತನೂ, ಸರ್ವಭೂತಸ್ವಾಮಿಯೂ, ಸರ್ವಭೂತಗಳಿಗೆ ಉಂಟಾಗುವ ಎಲ್ಲದಕ್ಕೂ ಕಾರಣನೂ ಆದ ಶಿವನು ನಿತ್ಯವೂ ಸರ್ವದೇವತೆಗಳಿಗೂ  ಅದೃಶ್ಯನಾಗಿರುತ್ತಾನೆ.
ಯದಿ ದೇಯೋ ವರೋ ಮಹ್ಯಂ ಯದಿ ತುಷ್ಟಶ್ಚ ಮೇ ಪ್ರಭುಃ |
ಭಕ್ತಿರ್ಭವತು ಮೇ ನಿತ್ಯಂ ಶಾಶ್ವತೀ ತ್ವಯಿ ಶಂಕರ ॥303॥
ದೇವನಾದ ನೀನು ನನಗೆ ವರವನ್ನು ಕೊಡುವುದಾದರೆ, ಪ್ರಭುವಾದ ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ಎಲೈ ಶಂಕರನೇ, ನನಗೆ ನಿನ್ನಲ್ಲಿ ಶಾಶ್ವತವಾದ ಭಕ್ತಿ ಇರಲಿ.
ಅತೀತಾನಾಗತಂ ಚೈವ ವರ್ತಮಾನಂ ಚ ಯದ್ವಿಭೋ |
ಜಾನೀಯಾಮಿತಿ ಮೇ ಬುದ್ಧಿಸ್ತ್ವತ್ಪ್ರಸಾದಾತ್ ಸುರೋತ್ತಮ ॥304॥
ಎಲೈ ವಿಭುವೇ, ಸುರೋತ್ತಮನೇ, ನಿನ್ನ ಅನುಗ್ರಹದಿಂದ ನಾನು ಭೂತ, ಭವಿಷ್ಯತ್, ವರ್ತಮಾನ ವಸ್ತುಗಳ ಜ್ಞಾನವನ್ನು ಪಡೆದೇನು.
ಕ್ಷೀರೋದನಂ ಚ ಭುಂಜೀಯಾಮಕ್ಷಯಂ ಸಹ ಬಾಂಧವೈಃ |
ಆಶ್ರಮೇ ಚ ಸದಾ ಮಹ್ಯಂ ಸಾನ್ನಿಧ್ಯಂ ಪರಮಸ್ತು ತೇ ॥305॥
ಬಂಧುಗಳ ಜೊತೆಯಲ್ಲಿ ಅಕ್ಷಯಕಾಲದಲ್ಲಿ ಕ್ಷೀರಾನ್ನವನ್ನು ನಾನು ಭುಂಜಿಸುವಂತಾಗಲಿ. ನನ್ನ ಆಶ್ರಮದಲ್ಲಿ ನಿತ್ಯವೂ ನಿನ್ನ ಶ್ರೇಷ್ಠವಾದ ಸನ್ನಿಧಾನವಿರಲಿ.
ಏವಮುಕ್ತಃ ಸ ಮಾಂ ಪ್ರಾಹ ಭಗವಾಲ್ಲೋಕಪೂಜಿತಃ |
ಮಹೇಶ್ವರೋ ಮಹಾತೇಜಾಶ್ಚರಾಚರಗುರುಃ ಪ್ರಭುಃ ॥306॥
ಹೀಗೆ ಹೇಳಲ್ಪಟ್ಟ ಭಗವಂತನೂ, ಲೋಕಪೂಜಿತನೂ, ಮಹಾತೇಜಸ್ವಿಯೂ, ಚರಾಚರಗುರುವೂ, ಪ್ರಭುವೂ ಆದ ಮಹೇಶ್ವರನು ನನ್ನನ್ನು ಕುರಿತು ಹೇಳಿದನು.
ಅಜರಶ್ಚಾಮರಶ್ಚೈವ ಭವ ದುಃಖವಿವರ್ಜಿತಃ |
ಶೀಲವಾನ್ ಗುಣಸಂಪನ್ನಃ ಸರ್ವಜ್ಞಃ ಪ್ರಿಯದರ್ಶನಃ ॥307॥
ನೀನು ಜರಾ-ಮರಣ ರಹಿತನಾಗಿ, ದುಃಖವಿವರ್ಜಿತನಾಗಿ ಆಗು. ಶೀಲವಂತನೂ, ಗುಣಸಂಪನ್ನನೂ, ಸರ್ವಜ್ಞನೂ, ಪ್ರಿಯದರ್ಶನನೂ ಆಗು.
ಅಕ್ಷಯಂ ಯೌವನಂ ತೇಸ್ತು ತೇಜಶ್ಚೈವಾನಲೋಪಮಮ್ |
ಕ್ಷೀರೋದಃ ಸಾಗರಶ್ಚೈವ ಯತ್ರ ಯತ್ರೇಚ್ಛಸೇ ಮುನೇ ॥308॥
ತತ್ರ ತೇ ಭವಿತಾ ಕಾಮಂ ಸಾನ್ನಿಧ್ಯಂ ಪಯಸೋ ನಿಧೇಃ |
ಕ್ಷೀರೋದನಂ ಚ ಭುಕ್ಷ್ವ ೇವ ತ್ವಮಮೃತೇನ ಸಮನ್ವಿತಮ್ ॥309॥
ನಿನಗೆ ಅಕ್ಷಯವಾದ ಯೌವನವಿರಲಿ. ಅಗ್ನಿಗೆ ಸದೃಶವಾದ ತೇಜಸ್ಸು ಇರಲಿ. ಎಲೈ ಮುನಿಯೇ, ನೀನು ಎಲ್ಲೆಲ್ಲಿ ಬಯಸುತ್ತೀಯೋ ಅದರಂತೆ ಕ್ಷೀರಸಮುದ್ರದಲ್ಲಿಯೂ ನಿನ್ನ ಸನ್ನಿಧಾನವಿರಲಿ. ನೀನು ಅಮೃತದಿಂದ ಯುಕ್ತವಾದ ಕ್ಷೀರಾನ್ನವನ್ನು ಭುಂಜಿಸುವವನಾಗು.
ಬಂಧುಭಿಃ ಸಹಿತಃ ಕಲ್ಪಂ ತತೋ ಮಾಮುಪಯಾಸ್ಯಸಿ |
ಸಾನ್ನಿಧ್ಯಮಾಶ್ರಮೇ ತುಭ್ಯಂ ಕರಿಷ್ಯಾಮಿ ದ್ವಿಜೋತ್ತಮ ॥310॥
ಒಂದು ಕಲ್ಪದವರೆಗೆ ಬಂಧುಗಳಿಂದ ಸಹಿತನಾಗಿ ಈ ಭೋಗವನ್ನು ಅನುಭವಿಸಿ ಅನಂತರ ನನ್ನ ಸಮೀಪಕ್ಕೆ ಬರುವಿ. ಎಲೈ ದ್ವಿಜೋತ್ತಮನೇ, ನಿನ್ನ ಆಶ್ರಮದಲ್ಲಿ ನಾನು ನಿತ್ಯವೂ ಸನ್ನಿಹಿತನಾಗಿರುತ್ತೇನೆ.
ತಿಷ್ಠ ವತ್ಸ ಯಥಾಕಾಮಂ ನೋತ್ಕಂಠಾಂ ಕರ್ತುಮರ್ಹಸಿ |
ಸ್ಮೃತಃ ಸ್ಮೃತಶ್ಚ ತೇ ವತ್ಸ ಸದಾ ದಾಸ್ಯಾಮಿ ದರ್ಶನಮ್ ॥311॥
ವತ್ಸನೇ, ನಿನ್ನ ಮನಸ್ಸಿಗೆ ಬಂದಂತೆ ಇಲ್ಲಿಯೇ ಇರು. ಆತಂಕ ಪಡಬೇಡ. ವತ್ಸನೇ, ನೀನು ಸ್ಮರಣೆ ಮಾಡಿದಾಗಲೆಲ್ಲ ನಿನಗೆ ದರ್ಶನವನ್ನು ನೀಡುವೆನು.
ಏವಮುಕತ್ವ ಸ ಭಗವಾನ್ ಸೂರ್ಯಕೋಟಿಸಮಪ್ರಭಃ |
ಮಮೇಶಾನೋ ವರಂ ದತತ್ವ ತತ್ರೈವಾಂತರಧೀಯತ ॥312॥
ಸೂರ್ಯಕೋಟಿ ಸಮಪ್ರಭೆಯುಳ್ಳ ಭಗವಂತನಾದ ಈಶ್ವರನು ನನ್ನನ್ನು ಕುರಿತು ಹೀಗೆ ಹೇಳಿ, ನನಗೆ ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಏವಂ ದೃಷ್ಟೋ ಮಯಾ ಕೃಷ್ಣ ದೇವದೇವಃ ಸಮಾಧಿನಾ |
ತದವಾಪ್ತಂ ಚ ಮೇ ಸರ್ವಂ ಯದುಕ್ತಂ ತೇನ ಧೀಮತಾ ॥313॥

ಎಲೈ ಕೃಷ್ಣನೇ, ದೇವದೇವನಾದ ಅವನು ಸಮಾಧಿಯಲ್ಲಿ ಈ ರೀತಿಯಲ್ಲಿ ನನ್ನಿಂದ ನೋಡಲ್ಪಟ್ಟನು. ಮೇಧಾವಿಯಾದ ಅವನು ಹೇಳಿದುದೆಲ್ಲವೂ ನನಗೆ ಪ್ರಾಪ್ತವಾಯಿತು.
ಪ್ರತ್ಯಕ್ಷಂ ಚೈವ ತೇ ಕೃಷ್ಣ ಪಶ್ಯ ಸಿದ್ಧಾನ್ ವ್ಯವಸ್ಥಿತಾನ್ |
ಋಷೀನ್ ವಿದ್ಯಾಧರಾನ್ ಯಕ್ಷಾನ್ ಗಂಧರ್ವಾಪ್ಸರಸಸ್ತಥಾ ॥314॥
ಎಲೈ ಕೃಷ್ಣನೇ, ನಿನ್ನ ಕಣ್ಣೆದುರಿಗೆ ಈ ಆಶ್ರಮದಲ್ಲಿ ಸನ್ನಿಹಿತರಾಗಿರುವ ಸಿದ್ಧರನ್ನೂ, ಋಷಿಗಳನ್ನೂ, ವಿದ್ಯಾಧರರನ್ನೂ, ಯಕ್ಷರನ್ನೂ, ಗಂಧರ್ವಾಪ್ಸರರನ್ನೂ ನೋಡು.
ಪಶ್ಯ ವೃಕ್ಷಾನ್ ಮನೋರಮ್ಯಾನ್ ಸದಾ ಪುಷ್ಪಫಲಾನ್ವಿತಾನ್ |
ಸರ್ವರ್ತುಕುಸುಮೈರ್ಯುಕ್ತಾನ್ ಸ್ನಿಗ್ಧಪತ್ರಾನ್ ಸುಗಂಧಿನಃ ॥315॥
ಮನೋಹರವಾದ, ಸದಾ ಪುಷ್ಪ-ಫಲಭರಿತವಾದ, ಎಲ್ಲ ಋತುಗಳಲ್ಲಿಯೂ ಪುಷ್ಪಗಳಿಂದ ಕೂಡಿದ, ನಿಬಿಡವಾದ ಫಲಗಳಿಂದ ಕೂಡಿದ ಈ ವೃಕ್ಷಗಳನ್ನು ನೋಡು.
ಏವಮೇತನ್ಮಹಾಬಾಹೋ ದಿವ್ಯಭಾವಸಮನ್ವಿತಮ್ |
ಪ್ರಸಾದಾದ್ ದೇವದೇವಸ್ಯ ಈಶ್ವರಸ್ಯ ಮಹಾತ್ಮನಃ ॥316॥
ಎಲೈ ಮಹಾಬಾಹುವೇ, ದೇವದೇವನೂ ಮಹಾತ್ಮನೂ ಆದ ಈಶ್ವರನ ಅನುಗ್ರಹದಿಂದ ಈ ನನ್ನ ಆಶ್ರಮವು ದಿವ್ಯಭಾವಗಳಿಂದ ಕೂಡಿದೆ.
ವಾಸುದೇವಃ
ಏತಚ್ಛ್ರುತ್ವಾ ವಚಸ್ತಸ್ಯ ಪ್ರತ್ಯಕ್ಷಮಿವ ದರ್ಶನಮ್ |
ವಿಸ್ಮಯಂ ಪರಮಂ ಗತ್ವಾ ಅಬ್ರುವಂ ತಂ ಮಹಾಮುನಿಮ್ ॥317॥
ವಾಸುದೇವ ಅವನ ಈ ಮಾತುಗಳನ್ನು ಕೇಳಿ, ಎಲ್ಲವೂ ಪ್ರತ್ಯಕ್ಷವಾಗಿ ಕಾಣುತ್ತಿರುವಂತೆ ಬಹಳ ವಿಸ್ಮಯವನ್ನು ಹೊಂದಿ, ಆ ಮಹಾಮುನಿಯನ್ನು ಕುರಿತು ಹೇಳಿದೆನು.
ಧನ್ಯಸ್ತ್ವಮಸಿ ವಿಪ್ರೇಂದ್ರ ಕಸ್ತ್ವದನ್ಯೋಽಸ್ತಿ ಪುಣ್ಯಕೃತ್ |
ಯಸ್ಯ ದೇವಾಧಿದೇವಸ್ತೇ ಸಾನ್ನಿಧ್ಯಂ ಕುರುತೇಽಶ್ರಮೇ ॥318॥
ಎಲೈ ವಿಪ್ರೇಂದ್ರನೇ, ನೀನು ಧನ್ಯನಾಗಿದ್ದೀಯೆ. ದೇವಾಧಿದೇವನಾದ ಶಿವನು ನಿನ್ನ ಆಶ್ರಮದಲ್ಲಿ ಸನ್ನಿಹಿತನಾಗಿರುವುದರಿಂದ ನಿನಗಿಂತ ಪುಣ್ಯಶಾಲಿಯಾದವನು ಬೇರೆ ಯಾವನಿದ್ದಾನೆ?
ಅಪಿ ತಾವನ್ಮಮಾಪ್ಯೇವಂ ದದ್ಯಾತ್ ಸ ಭಗವಾನ್ ಶಿವಃ |
ದರ್ಶನಂ ಮುನಿಶಾರ್ದೂಲ ಪ್ರಸಾದಂ ಚಾಪಿ ಶಂಕರಃ ॥319॥
ಎಲೈ ಮುನಿಶಾರ್ದೂಲನೇ, ನನಗೂ ಸಹ ಭಗವಂತನಾದ ಶಿವನು ಇಂತಹ ದರ್ಶನವನ್ನು ಕೊಡಲಿ. ಶಂಕರನು ನನಗೂ ಅನುಗ್ರಹವನ್ನು ಮಾಡಲಿ (ಎಂದು ಹೇಳಿದೆನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಉಪಮನ್ಯು-ಶ್ರೀಕೃಷ್ಣಸಂವಾದೇ ತ್ರಯಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ನಾಲ್ಕನೆಯ ಅಧ್ಯಾಯ
ತಪಸ್ಸನ್ನು ಆಚರಿಸಿದ ಕೃಷ್ಣನಿಂದ ಶಿವ-ಪಾರ್ವತಿಯರ ದರ್ಶನ
ಉಪಮನ್ಯುಃ
ದ್ರಕ್ಷ್ಯಸೇ ಪುಂಡರೀಕಾಕ್ಷ ಮಹಾದೇವಂ ನ ಸಂಶಯಃ |
ಅಚಿರೇಣೈವ ಕಾಲೇನ ಯಥಾ ದೃಷ್ಟೋ ಮಯಾಽನಘ ॥1॥
ಉಪಮನ್ಯು ಎಲೈ ಪುಂಡರೀಕಾಕ್ಷನೇ, ಅನಘನೇ, ನೀನು ಅಲ್ಪಕಾಲದಲ್ಲಿಯೇ ನನ್ನ ದೃಷ್ಟಿಗೆ ಗೋಚರಿಸಿದಂತೆ ಮಹಾದೇವನನ್ನು ನೋಡುವುದರಲ್ಲಿ ಸಂಶಯವಿಲ್ಲ.
ಚಕ್ಷುಷಾ ಚೈವ ದಿವ್ಯೇನ ಪಶ್ಯಾಮ್ಯಮಿತವಿಕ್ರಮ |
ಷಷ್ಠೇ ಮಾಸಿ ಮಹಾದೇವಂ ದ್ರಕ್ಷ್ಯಸೇ ಪುರುಷೋತ್ತಮ ॥2॥
ಎಲೈ ಅಮಿತವಿಕ್ರಮನೇ, ಎಲೈ ಪುರುಷೋತ್ತಮನೇ, ಇಲ್ಲಿಂದ ಆರನೆಯ ತಿಂಗಳಿನಲ್ಲಿ ನೀನು ಮಹಾದೇವನನ್ನು ನೋಡುವಿ ಎಂದು ನಾನು ನನ್ನ ದಿವ್ಯದೃಷ್ಟಿಯಿಂದ ನೋಡುತ್ತಿದ್ದೇನೆ.
ಷೋಡಶಾಷ್ಟೌ ವರಾಂಶ್ಚಾಪಿ ಪ್ರಾಪ್ಸ್ಯಸಿ ತ್ವಂ ಮಹೇಶ್ವರಾತ್ |
ಸಪತ್ನೀಕಾದ್ ಯದುಶ್ರೇಷ್ಠ ಸತ್ಯಮೇತದ್ ಬ್ರವೀಮಿ ತೇ ॥3॥
ಎಲೈ ಯದುಶ್ರೇಷ್ಠನೇ, ನೀನು ಪತ್ನೀಸಹಿತನಾದ ಮಹೇಶ್ವರನಿಂದ ಹದಿನಾರು ಮತ್ತು ಎಂಟುವರಗಳನ್ನು ಪಡೆಯುವಿ. ನಿನಗೆ ಸತ್ಯವಾದ ಈ ವಿಷಯವನ್ನು ಹೇಳುತ್ತಿದ್ದೇನೆ.
ಅತೀತಾನಾಗತಂ ಚೈವ ವರ್ತಮಾನಂ ಚ ನಿತ್ಯಶಃ |
ವಿದಿತಂ ಮೇ ಮಹಾಬಾಹೋ ಪ್ರಸಾದಾತ್ ತಸ್ಯ ಧೀಮತಃ |
ಏತಾನ್ ಸಹಸ್ರಶಶ್ಚಾನ್ಯಾನ್ ಸಮನುಧ್ಯಾತವಾನ್ ಹರಃ ॥4॥

ಎಲೈ ಮಹಾಬಾಹುವೇ, ಮೇಧಾವಿಯಾದ ಆ ಶಿವನ ಅನುಗ್ರಹದಿಂದ ನನಗೆ ಭೂತ-ಭವಿಷ್ಯತ್-ವರ್ತಮಾನಗಳ ಜ್ಞಾನವು ಯಾವಾಗಲೂ ಇದೆ. ಶಿವನು ಇದನ್ನು ಇಂತಹ ಅನೇಕ ಸಹಸ್ರ ವಿಷಯಗಳನ್ನು ನಿನ್ನ ವಿಷಯದಲ್ಲಿ ಚಿಂತಿಸಿದ್ದಾನೆ.
ಕಸ್ಮಾತ್ ಪ್ರಸಾದಂ ಭಗವಾನ್ನ ಕುರ್ಯಾತ್ ತವ ಮಾಧವ |
ತ್ವಾದೃಶೇನ ಹಿ ದೇವಾನಾಂ ಶ್ಲಾಘನೀಯಃ ಸಮಾಗಮಃ ॥5॥
ಬ್ರಹ್ಮಣ್ಯೇನಾನೃಶಂಸೇನ ಶ್ರದ್ದಧಾನೇನ ಚಾಪ್ಯುತ |
ಜಪ್ಯಂ ಚ ತೇ ಪ್ರದಾಸ್ಯಾಮಿ ಯೇನ ದ್ರಕ್ಷ್ಯಸಿ ಶಂಕರಮ್ ॥6॥
ಎಲೈ ಮಾಧವನೇ, ನಿನಗೆ ಶಿವನು ಏಕೆ ಅನುಗ್ರಹವನ್ನು ಮಾಡಲಾರ? ನಿನ್ನಂತಹ ಬ್ರಾಹ್ಮಣ ವತ್ಸಲನೂ, ದಯಾಪರನೂ, ಶ್ರದ್ಧಾಯುಕ್ತನೂ ಆದ ಪುರುಷನ ಜೊತೆಯಲ್ಲಿ ಸಮಾಗಮವು ದೇವತೆಗಳಿಗೂ ಶ್ಲಾಘ್ಯವಾದುದು. ನೀನು ಶಂಕರನನ್ನು ನೋಡುವಂತೆ ನಿನಗೆ ಮಂತ್ರವನ್ನುಪದೇಶಿಸುತ್ತೇನೆ.
ಕೃಷ್ಣಃ
ಅಬ್ರುವಂ ತಮಹಂ ಬ್ರಹ್ಮಂಸ್ತ್ವತ್ಪ್ರಸಾದಾನ್ಮಹಾಮುನೇ |
ದ್ರಕ್ಷ್ಯೇ ದಿತಿಜಸಂಘಾನಾಂ ಮರ್ದನಂ ತ್ರಿದಶೇಶ್ವರಮ್ ॥7॥
ಕೃಷ್ಣ ನಾನು ಉಪಮನ್ಯುವನ್ನು ಕುರಿತು ಎಲೈ ಮಹಾಮುನಿಯೇ, ಬ್ರಾಹ್ಮಣಶ್ರೇಷ್ಠನೇ, ನಿನ್ನ ಅನುಗ್ರಹದಿಂದ ನಾನು ದೈತ್ಯಸಮೂಹವನ್ನು ಮರ್ದಿಸುವ ತ್ರಿದಶೇಶ್ವರನಾದ ಶಿವನನ್ನು ನೋಡುವೆನು ಎಂದು ಹೇಳಿದೆನು.
ದಿನೇಽಷ್ಟಮೇ ಚ ವಿಪ್ರೇಣ ದೀಕ್ಷಿತೋಽಹಂ ಯಥಾವಿಧಿ |
ದಂಡೀ ಮುಂಡೀ ಕುಶೀ ಚೀರೀ ಘೃತಾಕ್ತೋ ಮೇಖಲೀ ತಥಾ ॥8॥
ಎಂಟನೆಯ ದಿವಸದಲ್ಲಿ ನಾನು ವಿಧಿಗೆ ಅನುಗುಣವಾಗಿ ಆ ಬ್ರಾಹ್ಮಣನಿಂದ ದೀಕ್ಷೆಯನ್ನು ಪಡೆದು ದಂಡ, ಕುಶಗಳನ್ನು ಧರಿಸಿ, ಮುಂಡನವನ್ನು ಮಾಡಿಕೊಂಡು, ನಾರುಮಡಿಯನ್ನುಟ್ಟು, ಘೃತಾಕ್ತನಾಗಿ ಮೇಖಲವನ್ನು ಧರಿಸಿದೆನು.
ಮಾಸಮೇಕಂ ಫಲಾಹಾರೋ ದ್ವಿತೀಯಂ ಸಲಿಲಾಶನಃ |
ತೃತೀಯಂ ಚ ಚತುರ್ಥಂ ಚ ಪಂಚಮಂ ಚಾನಿಲಾಶನಃ ॥9॥
ಒಂದು ತಿಂಗಳು ಫಲಾಹಾರ, ಎರಡನೆಯ ತಿಂಗಳಿನಲ್ಲಿ ಜಲಪಾನ, ತೃತೀಯ, ಚತುರ್ಥ ಮತ್ತು ಪಂಚಮ ಮಾಸಗಳಲ್ಲಿ ವಾಯುಭಕ್ಷ್ಯನಾದೆನು.
ಏಕಪಾದೇನ ತಿಷ್ಠಂಶ್ಚ ಊರ್ಧ್ವಬಾಹುರತಂದ್ರಿತಃ |
ತೇಜಃ ಸೂರ್ಯಸಹಸ್ರಸ್ಯ ಅಪಶ್ಯಂ ದಿವಿ ಭಾರತ ॥10॥
ಕೈಗಳನ್ನು ಮೇಲಕ್ಕೆ ಎತ್ತಿ, ಒಂದು ಪಾದದ ಮೇಲೆ ನಿಂತು, ಆಲಸ್ಯವಿಲ್ಲದೆ ತಪಸ್ಸನ್ನು ಮಾಡಿ ಎಲೈ ಭಾರತನೇ, ಆಕಾಶದಲ್ಲಿ ಸಹಸ್ರ ಸೂರ್ಯರ ತೇಜಸ್ಸನ್ನು ನೋಡಿದೆನು.
ತಸ್ಯ ಮಧ್ಯಗತಂ ಚಾಪಿ ತೇಜಸಃ ಪಾಂಡುನಂದನ |
ಇಂದ್ರಾಯುಧಪಿನದ್ಧಾಂಗಂ ವಿದ್ಯುನ್ಮಾಲಾಗವಾಕ್ಷಕಮ್ |
ನೀಲಶೈಲಚಯಪ್ರಖ್ಯಂ ಬಲಾಕಾಭೂಷಿತಾಂಬರಮ್ ॥11॥
ಎಲೈ ಪಾಂಡುನಂದನನೇ, ಆ ತೇಜಸ್ಸಿನ ಮಧ್ಯದಲ್ಲಿ ಇದ್ದ, ಇಂದ್ರಾಯುಧವನ್ನು ಕೈಯಲ್ಲಿ ಹಿಡಿದ, ವಿದ್ಯುನ್ಮಾಲೆಗಳ ಗವಾಕ್ಷವನ್ನು ಹೊಂದಿದ, ನೀಲಪರ್ವತದಂತೆ ಕಾಂತಿಯನ್ನು ಹೊಂದಿದ, ಬಲಾಕಪಕ್ಷಿಗಳಿಂದ ಭೂಷಿತವಾದ ಮೇಘದಂತಿದ್ದ ತೇಜೋರಾಶಿಯನ್ನು ನೋಡಿದೆನು.
ತಮಾಸ್ಥಿತಶ್ಚ ಭಗವಾನ್ ದೇವ್ಯಾ ಸಹ ಮಹಾದ್ಯುತಿಃ |
ತಪಸಾ ತೇಜಸಾ ಕಾಂತ್ಯಾ ದೀಪ್ತಯಾ ಸಹ ಭಾರ್ಯಯಾ ॥12॥
ಆ ತೇಜೋರಾಶಿಯನ್ನು ಆಶ್ರಯಿಸಿದ, ತಪಸ್ಸಿನಿಂದಲೂ, ತೇಜಸ್ಸಿನಿಂದಲೂ, ಕಾಂತಿಯಿಂದಲೂ ಕೂಡಿದ, ತನ್ನ ಪತ್ನಿಯಾದ ಪಾರ್ವತಿಯಿಂದ ಸಹಿತನಾದ, ಮಹಾಪ್ರಭೆಯುಳ್ಳ ಭಗವಂತನಾದ ಶಿವನನ್ನು ನೋಡಿದೆನು.
ರರಾಜ ಭಗವಾಂಸ್ತತ್ರ ದೇವ್ಯಾ ಸಹ ಮಹೇಶ್ವರಃ |
ಸೋಮೇನ ಸಹಿತಃ ಸೂರ್ಯೋ ಯಥಾ ಮೇಘಸ್ಥಿತಸ್ತಥಾ ॥13॥
ದೇವಿಯಿಂದ ಸಹಿತನಾದ, ಭಗವಂತನಾದ ಮಹೇಶ್ವರನು ಅಲ್ಲಿ ಮೇಘಸ್ಥಿತನಾದ ಸೂರ್ಯನು ಚಂದ್ರನಿಂದ ಸಹಿತನಾದಂತೆ ವಿರಾಜಿಸಿದನು.
ಸಂಹೃಷ್ಟರೋಮಾ ಕೌಂತೇಯ ವಿಸ್ಮಯೋತ್ಫುಲ್ಲಲೋಚನಃ |
ಅಪಶ್ಯಂ ದೇವಸಂಘಾನಾಂ ಗತಿಮಾರ್ತಿಹರಂ ಹರಮ್ ॥14॥
ಎಲೈ ಕೌಂತೇಯನೇ, ನಾನು ರೋಮಾಂಚಗೊಂಡು ವಿಸ್ಮಯದಿಂದ ಅರಳಿದ ಕಣ್ಣುಳ್ಳವನಾಗಿ, ದೇವಸಂಘಗಳಿಗೆ ಗತಿಯೂ, ದೇವಸಂಘಗಳ ದುಃಖ ಪರಿಹಾರಕನೂ ಆದ ಹರನನ್ನು ನೋಡಿದೆನು.
ಕಿರೀಟಿನಂ ಗದಿನಂ ಶೂಲಪಾಣಿಂ
ವ್ಯಾಘ್ರಾಜಿನಂ ಜಟಿಲಂ ದಂಡಪಾಣಿಮ್ |
ಪಿನಾಕಿನಂ ವಜ್ರಿಣಂ ತೀಕ್ಷ್ಣದಂಷ್ಟ್ರಂ
ಶುಭಾಂಗದಂ ವ್ಯಾಳಯಜ್ಞೋಪವೀತಮ್ ॥15॥
ಕಿರೀಟ, ಗದೆ ಮತ್ತು ಶೂಲಗಳನ್ನು ಧರಿಸಿದ, ವ್ಯಾಘ್ರಾಜಿನವನ್ನು ಉಟ್ಟಿರುವ ಜಟಿಲನೂ, ದಂಡಪಾಣಿಯೂ, ಪಿನಾಕಿಯೂ, ವಜ್ರಹಸ್ತನೂ, ತೀಕ್ಷ್ಣದಂಷ್ಟ್ರನೂ, ಶುಭಾಂಗದ ಉಳ್ಳವನೂ, ಸರ್ಪಯಜ್ಞೋಪವೀತನೂ ಆದ,

ದಿವ್ಯಾಂ ಮಾಲಾಮುರಸಾನೇಕವರ್ಣಾಂ
ಸಮುದ್ವಹಂತಂ ಗುಹ್ಯದೇಶಾವಲಂಬಾಮ್ |
ಚಂದ್ರಂ ಯಥಾ ಪರಿವಿಷ್ಟಂ ಸಸಂಧ್ಯಂ
ವರ್ಷಾತ್ಯಯೇ ತದ್ವದಪಶ್ಯಮೇನಮ್ ||16||
ಕಟಿಪ್ರದೇಶದವರಿಗೂ ಇಳಿಬಿದ್ದ ಸುವರ್ಣಮಯವಾದ ದಿವ್ಯವಾದ ಮಾಲೆಯನ್ನು ಧರಿಸಿದವನೂ, ವರ್ಷಾಕಾಲದ ಅಂತ್ಯದಲ್ಲಿ ಸಂಧ್ಯಾಕಾಲದಲ್ಲಿ ಪರಿವೇಷವನ್ನು ಹೊಂದಿದ ಚಂದ್ರನಂತೆ ಇದ್ದವನೂ ಆದ ಆ ಶಿವನನ್ನು ನೋಡಿದೆನು.
ಪ್ರಮಥಾನಾಂ ಗಣೈಶ್ಚೈವ ಸಮಂತಾತ್ ಪರಿವಾರಿತಮ್ |
ಶರದೀವ ಸುದುಷ್ಪ್ರೇಕ್ಷ್ಯಂ ಪರಿವಿಷ್ಟಂ ದಿವಾಕರಮ್ ||17||
ಪ್ರಮಥರ ಗಣದಿಂದ ಸುತ್ತಲೂ ಪರಿವೃತನಾದವನೂ, ಶರತ್ಕಾಲದ ಪರಿವೇಷಗೊಂಡ ಸೂರ್ಯನಂತೆ ನೋಡಲು ಅಸಾಧ್ಯನಾದವನೂ ಆದ ಶಿವನನ್ನು ನೋಡಿದೆನು.
ಏಕಾದಶ ತಥಾ ಚೈನಂ ರುದ್ರಾಣಾಂ ವೃಷವಾಹನಮ್ |
ಅಸ್ತುವನ್ ನಿಯತಾತ್ಮಾನಃ ಕರ್ಮಭಿಃ ಶುಭಕರ್ಮಿಣಮ್ ||18||
ನಿಯತ ಮನಸ್ಸುಳ್ಳ ಏಕಾದಶರುದ್ರರು ಶುಭಕರ್ಮಗಳನ್ನು ಮಾಡುವ ವೃಷವಾಹನನನ್ನು ಅವನ ಕರ್ಮಗಳಿಂದ ಸ್ತೋತ್ರ ಮಾಡಿದರು.
ಆದಿತ್ಯಾ ವಸವಃ ಸಾಧ್ಯಾ ವಿಶ್ವೇದೇವಾಸ್ತಥಾಶ್ವಿನೌ |
ವಿಶ್ವಾಭಿಃ ಸ್ತುತಿಭಿರ್ದೇವಂ ವಿಶ್ವದೇವಂ ಸಮಸ್ತುವನ್ ||19||
ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನಿಗಳು ಅನೇಕ ಸ್ತೋತ್ರಗಳಿಂದ ವಿಶ್ವದೇವನಾದ ಶಿವನನ್ನು ಸ್ತೋತ್ರ ಮಾಡಿದರು.
ಶತಕ್ರತುಶ್ಚ ಭಗವಾನ್ ವಿಷ್ಣುಶ್ಚಾದಿತಿನಂದನೌ |
ಬ್ರಹ್ಮಾ ರಥಂತರಂ ಸಾಮ ಈರಯಂತಿ ಭವಾಂತಿಕೇ ||20||
ಅದಿತಿ ಪುತ್ರರಾದ ಇಂದ್ರನು ಮತ್ತು ಪೂಜ್ಯನಾದ ವಿಷ್ಣುವು ಶಿವನ ಸಮೀಪದಲ್ಲಿ ಸ್ತೋತ್ರ ಮಾಡಿದರು. ಬ್ರಹ್ಮದೇವನು ರಥಂತರ ಸಾಮವನ್ನು ಗಾನ ಮಾಡಿದನು.
ಯೋಗೀಶ್ವರಾಃ ಸುಬಹವೋ ಯೋಗದಂ ಪಿತರಂ ಗುರುಮ್ |
ಬ್ರಹ್ಮರ್ಷಯಶ್ಚ ಸಸುತಾಸ್ತಥಾ ದೇವರ್ಷಯಶ್ಚ ವೈ ||21||
ಪೃಥಿವೀ ಚಾಂತರಿಕ್ಷಂ ಚ ನಕ್ಷತ್ರಾಣಿ ಗ್ರಹಾಸ್ತಥಾ |
ಮಾಸಾರ್ಧಮಾಸಾ ಋತವೋ ರಾತ್ರ್ಯಃ ಸಂವತ್ಸರಾಃ ಕ್ಷಣಾಃ ||22||
ಮುಹೂರ್ತಾಶ್ಚ ನಿಮೇಷಾಶ್ಚ ತಥೈವ ಯುಗಪರ್ಯಯಾಃ |
ದಿವ್ಯಾ ರಾಜನ್ ನಮಸ್ಯಂತಿ ವಿದ್ಯಾಃ ಸರ್ವಾ ದಿಶಸ್ತಥಾ ||23||
ಎಲೈ ರಾಜನೇ, ಯೋಗಫಲಪ್ರದನಾದ, ಸರ್ವಲೋಕ ಪಿತೃವಾದ, ಗುರುವಾದ ಶಿವನಿಗೆ ಅನೇಕ ಯೋಗೀಶ್ವರರು, ಪುತ್ರಸಹಿತರಾದ ಬ್ರಹ್ಮರ್ಷಿಗಳು, ದೇವರ್ಷಿಗಳು, ಭೂಮಿ, ಅಂತರಿಕ್ಷ, ನಕ್ಷತ್ರಗಳು, ಗ್ರಹಗಳು, ಮಾಸಗಳು, ಅರ್ಧಮಾಸಗಳು, ಋತುಗಳು, ರಾತ್ರಿಗಳು, ಸಂವತ್ಸರಗಳು, ಕ್ಷಣಗಳು, ಮುಹೂರ್ತಗಳು, ನಿಮಿಷಗಳು, ಯುಗಪರ್ಯಾಯಗಳು, ಸರ್ವದಿಗ್ವಿದ್ಯೆಗಳು ನಮಸ್ಕಾರವನ್ನು ಮಾಡಿದವು.
ಸನತ್ಕುಮಾರೋ ವೇದಾಶ್ಚ ಇತಿಹಾಸಾಸ್ತಥೈವ ಚ |
ಮರೀಚಿರಂಗಿರಾ ಅತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ||24||
ಮುನಯಃ ಸಪ್ತಸೋಮಶ್ಚ ಅಥರ್ವಾ ಸಬೃಹಸ್ಪತಿಃ |
ಭೃಗುರ್ದಕ್ಷಃ ಕಶ್ಯಪಶ್ಚ ವಸಿಷ್ಠಃ ಕಾಶ್ಯ ಏವ ಚ ||25||
ಸನತ್ಕುಮಾರನು, ವೇದಗಳು, ಇತಿಹಾಸಗಳು, ಮರೀಚಿ, ಅಂಗಿರ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಋಷಿಗಳು, ಸಪ್ತಸೋಮಗಳು, ಅಥರ್ವರು, ಬೃಹಸ್ಪತಿ, ಭೃಗು, ದಕ್ಷ, ಕಶ್ಯಪ, ವಸಿಷ್ಠ, ಕಾಶ್ಯ;
ಛಂದಾಂಸಿ ದೀಕ್ಷಾ ಯಜ್ಞಾಶ್ಚ ದಕ್ಷಿಣಾಃ ಪಾವಕೋ ಹವಿಃ |
ಯಜ್ಞೋಪಗಾನಿ ದ್ರವ್ಯಾಣಿ ಮೂರ್ತಿಮಂತಿ ಯುಧಿಷ್ಠಿರ ||26||
ಪ್ರಜಾನಾಂ ಪತಯಃ ಸರ್ವೇ ಸರಿತಃ ಪನ್ನಗಾ ನಗಾಃ |
ದೇವಾನಾಂ ಮಾತರಃ ಸರ್ವಾ ದೇವಪತ್ನ್ಯಃ ಸಕನ್ಯಕಾಃ ||27||
ಛಂದಸ್ಸುಗಳು, ದೀಕ್ಷೆ, ಯಜ್ಞಗಳು, ದಕ್ಷಿಣೆಗಳು, ಅಗ್ನಿ, ಹವಿಸ್ಸು, ಎಲೈ ಯುಧಿಷ್ಠಿರನೇ, ಶರೀರವನ್ನು ಧರಿಸಿದ ಯಜ್ಞಸಂಬಂಧಿ ದ್ರವ್ಯಗಳು, ಎಲ್ಲಾ ಪ್ರಜಾಪತಿಗಳು, ನದಿಗಳು, ಸರ್ಪಗಳು, ಪರ್ವತಗಳು, ದೇವಮಾತೆಯರು, ಎಲ್ಲ ದೇವಪತ್ನಿಯರು, ದೇವಕನ್ನಿಕೆಯರು;
ಸಹಸ್ರಾಣಿ ಮುನೀನಾಂ ಚ ಅಯುತಾನ್ಯರ್ಬುದಾನಿ ಚ |
ನಮಸ್ಯಂತಿ ಪ್ರಭುಂ ಶಾಂತಂ ಪರ್ವತಾಃ ಸಾಗರಾ ದಿಶಃ ||28||
ಅಯುತ, ಅರ್ಬುದ ಸಹಸ್ರ ಋಷಿಗಳು, ಪರ್ವತಗಳು, ಸಾಗರಗಳು, ದಿಕ್ಕುಗಳು ಇವರೆಲ್ಲರೂ ಶಾಂತನಾದ, ಪ್ರಭುವಾದ ಶಿವನಿಗೆ ನಮಸ್ಕಾರವನ್ನು ಮಾಡಿದರು.
ಗಂಧರ್ವಾಪ್ಸರಸಶ್ಚೈವ ಗೀತವಾದಿತ್ರಕೋವಿದಾಃ |
ದಿವ್ಯತಾನೇನ ಗಾಯಂತಃ ಸ್ತುವಂತಿ ಭವಮದ್ಭುತಮ್ |

ವಿದ್ಯಾಧರಾ ದಾನವಾಶ್ಚ ಗುಹ್ಯಕಾ ರಾಕ್ಷಸಾಸ್ತಥಾ ॥29॥
ಸರ್ವಾಣಿ ಚೈವ ಭೂತಾನಿ ಸ್ಥಾವರಾಣಿ ಚರಾಣಿ ಚ |
ನಮಸ್ಯಂತಿ ಮಹಾರಾಜ ವಾಙ್ಮನಃಕರ್ಮಭಿಃ ಪ್ರಭುಮ್ |
ಪುರಸ್ತಾದ್ ವಿಷ್ಠಿತಃ ಶರ್ವೋ ಮಮಾಸೀತ್ ತ್ರಿದಶೇಶ್ವರಃ ॥30॥
ಗೀತ-ವಾದ್ಯಕೋವಿದರಾದ ಗಂಧರ್ವಾಪ್ಸರರು, ದಿವ್ಯತಾನಗಳಿಂದ ಗಾನ ಮಾಡುತ್ತಾ ಶಿವನನ್ನು ಅದ್ಭುತವಾಗಿ ಸ್ತೋತ್ರ ಮಾಡಿದರು. ವಿದ್ಯಾಧರರೂ, ದಾನವರೂ, ಗುಹ್ಯಕರೂ, ರಾಕ್ಷಸರೂ, ಚರಾಚರವಾದ ಸರ್ವಭೂತಗಳೂ, ಎಲೈ ಮಹಾರಾಜನೇ, ವಾಙ್ಮನಃ ಕರ್ಮಗಳಿಂದ ಪ್ರಭುವಾದ ಶಿವನನ್ನು ಸ್ತೋತ್ರ ಮಾಡಿದವು. ತ್ರಿದಶೇಶ್ವರನಾದ ಶರ್ವನು ನನ್ನ ಎದುರಿನಲ್ಲಿ ಸ್ಥಿತನಾದನು.
ಪುರಸ್ತಾದ್ ವಿಷ್ಠಿತಂ ದೃಷ್ಟ್ವಾ ಮಮೇಶಾನಂ ಚ ಭಾರತ |
ಸಪ್ರಜಾಪತಿಶಕ್ರಾಂತಂ ಜಗನ್ಮಾಮಭ್ಯುದೈಕ್ಷತ ॥31॥
ಎಲೈ ಭಾರತನೇ, ನನ್ನ ಎದುರಿಗೆ ನಿಂತ ಈಶಾನನನ್ನು ನೋಡಿ ಪ್ರಜಾಪತಿಗಳಿಂದ ಹಿಡಿದು ಇಂದ್ರನವರೆಗಿನ ಜಗತ್ತು ನನ್ನನ್ನು ನೋಡಿತು.
ಈಕ್ಷಿತುಂ ಚ ಮಹಾದೇವಂ ನ ಮೇ ಶಕ್ತಿರಭೂತ್ತದಾ |
ತತೋ ಮಾಮಬ್ರುವೀದ್ ದೇವಃ ಪಶ್ಯ ಕೃಷ್ಣ ವದಸ್ವ ಚ ॥32॥
ಮಹಾದೇವನನ್ನು ನೋಡಲೂ ಆಗ ನನಗೆ ಶಕ್ತಿ ಇರಲಿಲ್ಲ. ಆಗ ಆ ದೇವನು ನನ್ನನ್ನು ಕುರಿತು ಕೃಷ್ಣನೇ, ನನ್ನನ್ನು ನೋಡು, ಮಾತನಾಡು ಎಂದು ಹೇಳಿದನು.
ಶಿರಸಾ ವಂದಿತೇ ದೇವೇ ದೇವೀ ಪ್ರೀತಾ ಉಮಾಽಭವತ್ |
ತತೋಽಹಮಸ್ತುವಂ ಸ್ಥಾಣುಂ ಸ್ತುತಂ ಬ್ರಹ್ಮಾದಿಭಿಃ ಸುರೈಃ ॥33॥
ನಾನು ಶಿವನಿಗೆ ಶಿರಸಾ ಪ್ರಣಾಮವನ್ನು ಮಾಡಿದಾಗ ಪಾರ್ವತೀದೇವಿಯು ಪ್ರಸನ್ನಳಾದಳು. ಅನಂತರ ನಾನು ಬ್ರಹ್ಮಾದಿ ದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟ ಸ್ಥಾಣುವಾದ ಶಿವನನ್ನು ಸ್ತೋತ್ರ ಮಾಡಿದೆನು.
ನಮೋಸ್ತು ತೇ ಶಾಶ್ವತ ಸರ್ವಯೋನೇ
ಬ್ರಹ್ಮಾಧಿಪಂ ತ್ವಾಂ ಮುನಯೋ ವದಂತಿ |
ತಪಶ್ಚ ಸತ್ತ್ವಂ ಚ ರಜಸ್ತಮಶ್ಚ
ತ್ವಾಮೇವ ಸತ್ಯಂ ಚ ವದಂತಿ ಸಂತಃ ॥34॥
ಎಲೈ ಶಾಶ್ವತನೇ, ಸರ್ವಕಾರಣನೇ ನಿನಗೆ ನಮಸ್ಕಾರ. ಋಷಿಗಳು, ನಿನ್ನನ್ನು ಬ್ರಹ್ಮನಿಗೂ ಅಧಿಪತಿ ಎಂದು ಹೇಳುತ್ತಾರೆ. ಸಜ್ಜನರು, ತಪಸ್ಸು, ಸತ್ವ-ರಜಸ್-ತಮೋಗುಣಗಳು, ಸತ್ಯ ಎಲ್ಲವೂ ನೀನೇ ಎಂದು ಹೇಳುತ್ತಾರೆ (ನಿನ್ನ ಅಧೀನವೆಂದು ಹೇಳುತ್ತಾರೆ).
ತ್ವಂ ವೈ ಬ್ರಹ್ಮಾ ಚ ರುದ್ರಶ್ಚ ವರುಣೋಽಗ್ನಿರ್ಮನುರ್ಭವಃ |
ಧಾತಾ ತ್ವಷ್ಟಾ ವಿಧಾತಾ ಚ ತ್ವಂ ಪ್ರಭುಃ ಸರ್ವತೋಮುಖಃ ॥35॥
ನೀನೇ ಬ್ರಹ್ಮ, ನೀನೇ ರುದ್ರ, ವರುಣ, ಅಗ್ನಿ, ಮನು, ಭವ, ಧಾತಾ, ತ್ವಷ್ಟ, ವಿಧಾತಾ, ನೀನೇ ಸರ್ವತೋಮುಖನಾದ ಪ್ರಭು.
ತ್ವತ್ತೋ ಜಾತಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ತ್ವಮಾದಿಃ ಸರ್ವಭೂತಾನಾಂ ಸಂಹರ್ತಾ ಚ ತ್ವಮೇವ ಹಿ ॥36॥
ಸ್ಥಾವರ-ಜಂಗಮಾತ್ಮಕವಾದ ಪ್ರಾಣಿಗಳೆಲ್ಲವೂ ನಿನ್ನಿಂದ ಜನಿಸಿದೆ. ನೀನೇ ಎಲ್ಲ ಭೂತಗಳಿಗೆ ಕಾರಣನಾದವನು ಮತ್ತು ಸಂಹಾರಕನಾದವನು.
ಯೇ ಚೇಂದ್ರಿಯಾರ್ಥಾಶ್ಚ ಮನಶ್ಚ ಕೃತ್ಸ್ನಂ
ಯೇ ವಾಯವಃ ಸಪ್ತ ತಥೈವ ಚಾಗ್ನಿಃ |
ಯೇ ವಾ ದಿವಿಸ್ಥಾ ದೇವತಾಶ್ಚಾಪಿ ಪುಂಸಾಂ
ತಸ್ಮಾತ್ಪರಂ ತ್ವಾಮೃಷಯೋ ವದಂತಿ ॥37॥
ಜಗತ್ತಿನಲ್ಲಿ ಇಂದ್ರಿಯವಿಷಯಗಳು, ಮನಸ್ಸು, ಸಪ್ತ ವಾಯುಗಳು, ಅಗ್ನಿ, ಸ್ವರ್ಗದಲ್ಲಿರುವ ದೇವತೆಗಳು ಯಾರಿದ್ದಾರೆಯೋ ಅವರೆಲ್ಲರಿಗಿಂತಲೂ ನೀನು ಶ್ರೇಷ್ಠನಾದವನು, ಪುರುಷಶ್ರೇಷ್ಠನಾದವನು ಎಂದು ಋಷಿಗಳು ಹೇಳುತ್ತಾರೆ.
ವೇದಾ ಯಜ್ಞಾಶ್ಚ ಸೋಮಶ್ಚ ದಕ್ಷಿಣಾ ಪಾವಕಾ ಪುನಃ |
ಯಜ್ಞೋಪಗಂ ಚ ಯತ್ ಕಿಂಚಿದ್ಭಗವಾಂಸ್ತದಸಂಶಯಮ್ ॥38॥
ಎಲೈ ಭಗವಂತನೇ, ವೇದಗಳು, ಯಜ್ಞಗಳು, ಸೋಮ, ದಕ್ಷಿಣೆ, ಅಗ್ನಿಗಳು, ಯಜ್ಞ ಸಂಬಂಧಿಯಾದ ದ್ರವ್ಯಗಳು- ಇವೆಲ್ಲವೂ ನೀನೇ. ಇದರಲ್ಲಿ ಸಂಶಯವಿಲ್ಲ.
ಇಷ್ಟಂ ದತ್ತಮಧೀತಂ ಚ ವ್ರತಾನಿ ನಿಯಮಾಶ್ಚ ಯೇ |
ಹ್ರೀಃ ಕೀರ್ತಿಃ ಶ್ರೀರ್ದ್ಯುತಿಸ್ತುಷ್ಟಿಃ ಸಿದ್ಧಿಶ್ಚೈವ ತ್ವದರ್ಪಣಾ ॥39॥
ಇಷ್ಟವಾದುದು, ದಾನ ಮಾಡಿದುದು, ಅಧ್ಯಯನವನ್ನು ಮಾಡಿದುದು, ವ್ರತ-ನಿಯಮಗಳನ್ನು ಆಚರಿಸಿದುದು, ನಾಚಿಕೆ, ಕೀರ್ತಿ, ಸಂಪತ್ತು, ಕಾಂತಿ, ತುಷ್ಟಿ, ಸಿದ್ಧಿ ಎಲ್ಲವೂ ನಿನಗೆ ಅರ್ಪಿತವಾದವುಗಳು.
ಕಾಮಃ ಕ್ರೋಧೋ ಭಯಂ ಲೋಭೋ ಮದಃ ಸ್ತಂಭೋಽಥ ಮತ್ಸರಃ |
ಆಧಯೋ ವ್ಯಾಧಯಶ್ಚೈವ ಭಗವಂಸ್ತನಯಾಸ್ತವ ॥40॥
ಎಲೈ ಭಗವಂತನೇ, ಕಾಮ, ಕ್ರೋಧ, ಭಯ, ಲೋಭ, ಮದ, ಅಹಂಕಾರ, ಮತ್ಸರ, ಮನೋರೋಗಗಳು-ದೈಹಿಕ ರೋಗಗಳು ಎಲ್ಲವೂ ನಿನ್ನ ಪುತ್ರರು.

ಕೃತಿರ್ವಿಕಾರಃ ಪ್ರಲಯಃ ಪ್ರಧಾನಂ ಪ್ರಭವೋಽವ್ಯಯಃ |
ತಮಸಃ ಪರಮಾ ಯೋನಿಃ ಸ್ವಭಾವಶ್ಚಾಪಿ ಶಾಶ್ವತಃ |
ಅವ್ಯಕ್ತಃ ಪಾವನ ವಿಭೋ ಸಹಸ್ರಾಂಶುರ್ಹಿರಣ್ಮಯಃ ॥41॥
ಎಲ್ಲೈ ವಿಭುವೇ, ನೀನೇ ಸೃಷ್ಟಿ,ವಿಕಾರ, ಪ್ರಳಯ, ಪ್ರಧಾನ, ಸಂಪತ್ತು ಎಲ್ಲದಕ್ಕೂ ಕಾರಣನಾದವನು. ನೀನೇ ಹ್ರಾಸರಹಿತನು. ತಮಸ್ಸಿಗೂ ಕಾರಣನಾದವನು, ಶಾಶ್ವತ ಸುಖನಾದವನು, ಅವ್ಯಕ್ತನಾದವನು, ಪವಿತ್ರನಾದವನು, ಸಹಸ್ರಕಿರಣನಾದವನು ಮತ್ತು ಸುವರ್ಣಮಯವಾದವನು.
ಆದಿರ್ಗುಣಾನಾಂ ಸರ್ವೇಷಾಂ ಭವಾನ್ ವೈ ಜೀವನಾಶ್ರಯಃ |
ಮಹಾನಾತ್ಮಾ ಮತಿರ್ಬ್ರಹ್ಮಾ ವಿಶ್ವಃ ಶಂಭುಃ ಸ್ವಯಂಪ್ರಭುಃ ॥42॥
ಬುದ್ಧಿಃ ಪ್ರಜ್ಞೋಪಲಬ್ಧಿಶ್ಚ ಸಂವಿತ್ ಖ್ಯಾತಿರ್ಧೃತಿಃ ಸ್ಮೃತಿಃ |
ಪರ್ಯಾಯವಾಚಕೈಃ ಶಬ್ದೈರ್ಮಹಾನಾತ್ಮಾ ವಿಭಾವ್ಯಸೇ ॥43॥
ನೀನು ಎಲ್ಲ ಗುಣಗಳಿಗೂ ಮೂಲನಾದವನು, ಜೀವನಕ್ಕೆ ಆಶ್ರಯನಾದವನು. ಮಹಾನ್, ಆತ್ಮ, ಮತಿ, ಬ್ರಹ್ಮಾ, ಈಶ, ಶಂಭು, ಸ್ವಯಂಪ್ರಭು, ಬುದ್ಧಿ, ಪ್ರಜ್ಞಾ, ಉಪಲಬ್ಧಿ, ಸವಿತ್, ಖ್ಯಾತಿ, ಧೃತಿ, ಸ್ಮೃತಿ - ಈ ಎಲ್ಲ ಪರ್ಯಾಯ ಶಬ್ದಗಳಿಂದ ಮಹಾತ್ಮನಾದ ನೀನೇ ಹೇಳಲ್ಪಡುತ್ತೀಯೆ.
ತ್ವಾಂ ಬುದ್ಧ್ವಾ ಬ್ರಾಹ್ಮಣೋ ವಿದ್ವಾನ್ನ ಪ್ರಮೋಹಂ ನಿಗಚ್ಛತಿ |
ಹೃದಯಂ ಸರ್ವಭೂತಾನಾಂ ಕ್ಷೇತ್ರಜ್ಞಸ್ತ್ವಮೃಷಿಷ್ಟುತಃ ॥44॥
ನಿನ್ನನ್ನು ತಿಳಿದ ವಿದ್ವಾಂಸನಾದ ಬ್ರಾಹ್ಮಣನು ಪುನಃ ಮೋಹವನ್ನು ಹೊಂದುವುದಿಲ್ಲ. ನೀನು ಎಲ್ಲ ಜೀವರ ಹೃದಯನಾಗಿದ್ದೀಯೆ. ಕ್ಷೇತ್ರಜ್ಞನಾಗಿದ್ದೀಯೆ. ಋಷಿಗಳಿಂದ ಸ್ತುತನಾಗಿದ್ದೀಯೆ.
ಸರ್ವತಃಪಾಣಿಪಾದಸ್ತ್ವಂ ಸರ್ವತೋಕ್ಷಿಶಿರೋಮುಖಃ |
ಸರ್ವತಃಶ್ರುತಿಮಾಲ್ಲೋಕೇ ಸರ್ವಮಾವೃತ್ಯ ತಿಷ್ಠಸಿ ॥45॥
ನೀನು ಸರ್ವತ್ರ ಪಾಣಿ-ಪಾದಗಳನ್ನು ಹೊಂದಿದ್ದೀಯೆ. ಸರ್ವತ್ರ ನೇತ್ರ- ಶಿರೋ-ಮುಖಗಳನ್ನು ಹೊಂದಿದ್ದೀಯೆ. ಸರ್ವತ್ರ ಶ್ರೋತ್ರಗಳನ್ನು ಹೊಂದಿದ್ದೀಯೆ. ಲೋಕಗಳನ್ನು ಎಲ್ಲ ಕಡೆಯಿಂದಲೂ ಆವರಿಸಿಕೊಂಡಿದ್ದೀಯೆ.
ಫಲಂ ತ್ವಮಸಿ ತಿಗ್ಮಾಂಶೋ ನಿಮೇಷಾದಿಷು ಕರ್ಮಸು |
ತ್ವಂ ವೈ ಪ್ರಭಾರ್ಚಿಃ ಪುರುಷಃ ಸರ್ವಸ್ಯ ಹೃದಿ ಸಂಶ್ರಿತಃ |
ಅಣಿಮಾ ಲಘಿಮಾ ಪ್ರಾಪ್ತಿರೀಶಾನೋ ಜ್ಯೋತಿರವ್ಯಯಃ ॥46॥
ಎಲ್ಲೈ ಚಂಡಕಿರಣನೇ, ನಿಮೇಷಾದಿ ಕರ್ಮಗಳಲ್ಲಿ ನೀನೇ ಫಲರೂಪನಾಗಿದ್ದೀಯೆ. ನೀನೇ ಕಾಂತಿರೂಪನಾದವನು, ಜ್ವಾಲಾರೂಪನಾದವನು, ಪುರುಷನಾದವನು, ಎಲ್ಲರ ಹೃದಯವನ್ನು ಆಶ್ರಯಿಸಿದವನು.  ಅಣಿಮಾ, ಲಘಿಮಾ, ಪ್ರಾಪ್ತಿ, ಈಶಿತ್ವ ಎಲ್ಲವೂ ನಿನ್ನದೇ. ನೀನು ಜ್ಯೋತೀರೂಪನಾದವನು, ಅವ್ಯಯನಾದವನು.
ತ್ವಯಿ ಬುದ್ಧಿರ್ಮತಿಲೋರ್ಕಾಃ ಪ್ರಪನ್ನಾಃ ಸಂಶ್ರಿತಾಶ್ಚ ಯೇ |
ಧ್ಯಾನಿನೋ ನಿತ್ಯಯೋಗಾಶ್ಚ ಸತ್ಯಸಂಧಾ ಜಿತೇಂದ್ರಿಯಾಃ ॥47॥
ಯಾರು ನಿನ್ನಲ್ಲಿ ತಮ್ಮ ಮತಿ-ಬುದ್ಧಿಗಳನ್ನಿಟ್ಟು ನಿನ್ನನ್ನು ಆಶ್ರಯಿಸಿ, ನಿನಗೆ ಶರಣಾಗತರಾಗಿ ನಿತ್ಯಯೋಗದಿಂದ ನಿನ್ನನ್ನು ಧ್ಯಾನ ಮಾಡುತ್ತಾರೆಯೋ ಅವರು ಸತ್ಯಸಂಧರು ಮತ್ತು ಜಿತೇಂದ್ರಿಯರು.
ಯಸ್ತ್ವಾಂ ಧ್ರುವಂ ವೇದಯತೇ ಗುಹಾಶಯಂ
ಪ್ರಭುಂ ಪುರಾಣಂ ಪುರುಷಂ ವಿಶ್ವರೂಪಮ್ |
ಹಿರಣ್ಮಯಂ ಬುದ್ಧಿಮತಾಂ ಪರಾಂ ಗತಿಂ
ಸ ಬುದ್ಧಿಮಾನ್ ಬುದ್ಧಿಮತೀತ್ಯ ತಿಷ್ಠತಿ ॥48॥
ಯಾವನು ನಿನ್ನನ್ನು ಶಾಶ್ವತನೆಂದೂ, ಹೃದಯ ವಾಸಿಯೆಂದೂ, ಪ್ರಭು-ಪುರಾಣ- ವಿಶ್ವರೂಪನೆಂದೂ, ಹಿರಣ್ಮಯನೆಂದೂ, ವಿವೇಕಿಗಳಿಗೆ ಪರಮಗತಿಯೆಂದೂ ಹೇಳುತ್ತಾರೆಯೋ ಅವನು ಬುದ್ಧಿಯನ್ನು ಮೀರಿ ಇರುತ್ತಾನೆ.
ವಿದಿತ್ವಾ ಸಪ್ತ ಸೂಕ್ಷ್ಮಾಣಿ ಷಡಂಗಂ ತ್ವಾಂ ಚ ಮೂರ್ತಿತಃ |
ಪ್ರಧಾನವಿಧಿಯೋಗಸ್ಥಸ್ತ್ವಾಮೇವ ವಿಶತೇ ಬುಧಃ ॥49॥
ನಿನ್ನ ಸಪ್ತ ಸೂಕ್ಷ್ಮಗಳನ್ನೂ, ನಿನ್ನ ಮೂರ್ತಿಯ ಷಡಂಗಗಳನ್ನೂ ತಿಳಿದು ಪ್ರಧಾನವಾದ ವಿಧಿ ಮತ್ತು ಯೋಗಗಳನ್ನು ಅನುಸರಿಸುವ ಜ್ಞಾನಿಯು ನಿನ್ನನ್ನೇ ಪ್ರವೇಶಿಸುತ್ತಾನೆ.
ಏವಮುಕ್ತೇ ಮಯಾ ಪಾರ್ಥ ಭವೇ ಚಾರ್ತಿವಿನಾಶನೇ |
ಚರಾಚರಂ ಜಗತ್ಸರ್ವಂ ಸಿಂಹನಾದಮಥಾಕರೋತ್ ॥50॥
ಎಲ್ಲೈ ಪಾರ್ಥನೇ, ಆರ್ತಿವಿನಾಶನನಾದ ಶಿವನು ನನ್ನಿಂದ ಹೀಗೆ ಹೇಳಲ್ಪಟ್ಟಾಗ ಚರಾಚರವಾದ ಜಗತ್ತೆಲ್ಲವೂ ಸಿಂಹನಾದವನ್ನು ಮಾಡಿತು.
ಸವಿಪ್ರಸಂಘಾಶ್ಚ ಸುರಾಸುರಾಶ್ಚ
ಪಿಶಾಚಯಕ್ಷಾಃ ಪಿತರೋ ವಯಾಂಸಿ |
ರಕ್ಷೋಗಣಾ ಭೂತಗಣಾಶ್ಚ ಸರ್ವೇ
ಮಹರ್ಷಯಶ್ಚೈವ ತಥಾ ಪ್ರಣೇಮುಃ ॥51॥
ಆಗ ವಿಪ್ರಸಮೂಹಗಳಿಂದ ಕೂಡಿದ ಸುರಾಸುರರು, ಪಿಶಾಚಿಗಳು, ಯಕ್ಷರು, ಪಿತೃಗಳು, ಪಕ್ಷಿಗಳು, ರಾಕ್ಷಸಸಮೂಹಗಳು,

ಭೂತಗಣಗಳು, ಮಹರ್ಷಿಗಳು ಎಲ್ಲರೂ ಶಿವನಿಗೆ ನಮಸ್ಕರಿಸಿದರು.
ಮಮ ಮೂರ್ಧ್ನಿ ಚ ದಿವ್ಯಾನಾಂ ಕುಸುಮಾನಾಂ ಸುಗಂಧಿನಾಮ್ |
ರಾಶಯೋ ನಿಪತಂತಿ ಸ್ಮ ವಾಯುಶ್ಚ ಸುಸುಖೋ ವವೌ ॥52॥
ನನ್ನ ಶಿರಸ್ಸಿನಲ್ಲಿ ಸುಗಂಧವುಳ್ಳ ದಿವ್ಯಪುಷ್ಪಗಳ ರಾಶಿಯು ಬಿದ್ದಿತು. ವಾಯುವೂ ಹಿತವಾಗಿ ಬೀಸಿದನು.
ನಿರೀಕ್ಷ್ಯ ಭಗವಾನ್ ದೇವೀಮುಮಾಂ ಮಾಂ ಚ ಜಗದ್ಧಿತಃ |
ಶತಕ್ರತುಂ ಚಾಭಿವೀಕ್ಷ್ಯ ಸ್ವಯಂ ಮಾಮಾಹ ಶಂಕರಃ ॥53॥
ಭಗವಂತನೂ, ಜಗತ್ತಿಗೆ ಹಿತಕರನೂ ಆದ ಶಿವನು ನನ್ನನ್ನೂ, ಉಮಾದೇವಿಯನ್ನೂ ಮತ್ತು ಇಂದ್ರನನ್ನೂ ನೋಡಿ ಸ್ವತಃ ನನ್ನನ್ನು ಕುರಿತು ಹೇಳಿದನು.
ವಿದ್ಮಃ ಕೃಷ್ಣ ಪರಾಂ ಭಕ್ತಿಮಸ್ಮಾಸು ತವ ಶತ್ರುಹನ್ |
ಕ್ರಿಯತಾಮಾತ್ಮನಃ ಶ್ರೇಯಃ ಪ್ರೀತಿರ್ಹಿ ಪರಮಾ ತ್ವಯಿ ॥54॥
ವೃಣೀಷ್ವಾಷ್ಟೌ ವರಾನ್ ಕೃಷ್ಣ ದಾತಾಸ್ಮಿ ತವ ಸತ್ತಮ |
ಬ್ರೂಹಿ ಯಾದವಶಾರ್ದೂಲ ಯಾನಿಚ್ಛಸಿ ಸುದುರ್ಲಭಾನ್ ॥55॥
ಎಲೈ ಕೃಷ್ಣನೇ, ಶತ್ರುಘಾತಕನೇ, ನಮ್ಮಲ್ಲಿ ನಿನಗಿರುವ ಪ್ರೀತಿಯನ್ನು, ನಿನಗಿರುವ ಭಕ್ತಿಯನ್ನು ನಾವು ತಿಳಿದಿದ್ದೇವೆ. ನಿನ್ನ ಶ್ರೇಯಸ್ಸನ್ನು ಹೊಂದುವವನಾಗು. ನನಗೂ ನಿನ್ನ ಮೇಲೆ ಬಹಳ ಪ್ರೀತಿಯಿದೆಯಷ್ಟೆ. ಎಲೈ ಕೃಷ್ಣನೇ, ಎಂಟು ವರಗಳನ್ನು ಕೇಳು. ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ನಾನು ಅವುಗಳನ್ನು ಕೊಡುವೆನು. ನರಶಾರ್ದೂಲನೇ, ಯಾವ ದುರ್ಲಭವಾದ ವರವನ್ನು ಬಯಸುವಿಯೋ ಅದನ್ನು ಕೇಳು (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಈಶ್ವರದರ್ಶನಂ ನಾಮ ಚತುಸಿತ್ರಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ಕೃಷ್ಣನಿಗೆ ಶಿವನಿಂದ ವರಪ್ರಾಪ್ತಿ ಮತ್ತು ಶಿವಸಹಸ್ರನಾಮ.
ಕೃಷ್ಣಃ
ಮೂರ್ಧ್ನಾ ಪ್ರಣಮ್ಯ ತು ಭವಂ ದೇವಮೀಶಾನಮವ್ಯಯಮ್ |
ಪರಮಂ ಹರ್ಷಮಾಗಮ್ಯ ಭಗವಂತಮಥಾಬ್ರುವಮ್ ॥1॥
ಕೃಷ್ಣ ದೇವನೂ, ಈಶಾನನೂ, ಅವ್ಯಯನೂ ಆದ ಭವನನ್ನು ಶಿರಸಾ ನಮಸ್ಕರಿಸಿ ಬಹಳ ಸಂತೋಷವನ್ನು ಹೊಂದಿ, ಆ ಭಗವಂತನನ್ನು ಕುರಿತು ಹೇಳಿದೆನು.
ಧರ್ಮೇ ದೃಢತ್ವಂ ಯುಧಿ ಶತ್ರುಘಾತಂ
ಯಶಸ್ತಥಾಗ್ರ್ಯಂ ಪರಮಂ ಬಲಂ ಚ |
ಯೋಗಿಪ್ರಿಯತ್ವಂ ಯುಧಿ ಸನ್ನಿಕರ್ಷಂ
ವೃಣೇ ಸುತಾನಾಂ ಚ ಶತಂ ಶತಾನಿ ॥2॥
ಏವಮಸಿತ್ವತಿ ತದ್ವಾಕ್ಯಂ ಮಯೋಕ್ತಃ ಪ್ರಾಹ ಶಂಕರಃ ॥3॥
ಧರ್ಮದಲ್ಲಿ ದಾರ್ಢ್ಯ, ಯುದ್ಧದಲ್ಲಿ ಶತ್ರುಜಯ, ಶ್ರೇಷ್ಠವಾದ ಕೀರ್ತಿ, ಶ್ರೇಷ್ಠವಾದ ಬಲ, ಯೋಗಿಪ್ರಿಯತ್ವ, ಯುದ್ಧದಲ್ಲಿ ಹಿಮ್ಮೆಟ್ಟದಿರುವುದು ಮತ್ತು ಹತ್ತುಸಾವಿರ ಪುತ್ರರನ್ನು ವರವಾಗಿ ಬೇಡುತ್ತೇನೆ (ಎಂದು ಹೇಳಿದೆನು). ಹೀಗೆ ನಾನು ಹೇಳಿದಾಗ ನನ್ನ ಮಾತನ್ನು ಕೇಳಿ `ಹಾಗೆಯೇ ಆಗಲಿ' ಎಂದು ಹೇಳಿದನು.
ತತೋ ಮಾಂ ಜಗತೋ ಮಾತಾ ಧರಣೀ ಸರ್ವಪಾವನೀ |
ಉವಾಚೋಮಾ ಪ್ರಣಿಹಿತಾ ಶರ್ವಾಣೀ ತಪಸಾಂ ನಿಧಿಃ ॥4॥
ಅನಂತರ ಜಗತ್ತಿನ ತಾಯಿಯೂ, ಜಗತ್ತನ್ನು ಧರಿಸಿದವಳೂ, ಸರ್ವವನ್ನು ಪವಿತ್ರೀಕರಿಸುವವಳೂ, ತಪೋನಿಧಿಯೂ, ಭವಪತ್ನಿಯೂ ಆದ ಪಾರ್ವತಿಯು ವಿಶ್ವಾಸದಿಂದ ನನ್ನನ್ನು ಕುರಿತು ಹೇಳಿದಳು.
ದತ್ತೋ ಭಗವತಾ ಪುತ್ರಃ ಸಾಂಬೋ ನಾಮ ತವಾನಘ |
ಮತ್ತೋಽಪ್ಯಷ್ಟೌ ವರಾನಿಷ್ಟಾನ್ ಗೃಹಾಣ ತ್ವಂ ದದಾಮಿ ತೇ |
ಪ್ರಣಮ್ಯ ಶಿರಸಾ ಸಾ ಚ ಮಯೋಕ್ತಾ ಪಾಂಡುನಂದನ ॥5॥
ಎಲೈ ಅನಘನೇ, ನಿನಗೆ ಭಗವಂತನು ಸಾಂಬನೆಂಬ ಪುತ್ರನನ್ನು ಕೊಟ್ಟಿದ್ದಾನೆ. ನನ್ನಿಂದಲೂ ನಿನಗೆ ಇಷ್ಟವಾದ ಎಂಟು ವರಗಳನ್ನು ಸ್ವೀಕರಿಸು. ಅದನ್ನು ನಿನಗೆ ಕೊಡುವೆನು (ಎಂದು ಹೇಳಿದಳು). ಎಲೈ ಪಾಂಡುನಂದನನೇ, ಅವಳಿಗೆ ಶಿರಸಾ ನಮಸ್ಕರಿಸಿ ನಾನು ಮಾತನಾಡಿದೆನು.
ದ್ವಿಜೇಷ್ವಕೋಪಂ ಪಿತೃತಃ ಪ್ರಸಾದಂ
ಶತಂ ಸುತಾನಾಮುಪಭೋಗಂ ಪರಂ ಚ |
ಕುಲೇ ಪ್ರೀತಿಂ ಮಾತೃತಶ್ಚ ಪ್ರಸಾದಂ
ಶಮಪ್ರಾಪ್ತಿಂ ಪ್ರವೃಣೇ ಚಾಪಿ ದಾಕ್ಷ್ಯಮ್ ॥6॥

ಬ್ರಾಹ್ಮಣರಲ್ಲಿ ಕೋಪವಿಲ್ಲದಿರುವಿಕೆ, ತಂದೆಯ ಅನುಗ್ರಹ, ನೂರು ಪುತ್ರರು, ಶ್ರೇಷ್ಠವಾದ ಭೋಗ, ಕುಲದಲ್ಲಿ ಪ್ರೀತಿ, ತಾಯಿಯ ಅನುಗ್ರಹ, ಸುಖಪ್ರಾಪ್ತಿ ಮತ್ತು ದಕ್ಷತೆಯನ್ನು ವರವಾಗಿ ಬೇಡುತ್ತೇನೆ (ಎಂದು ಹೇಳಿದೆನು).

ದೇವೀ

ಏವಂ ಭವಿಷ್ಯತ್ಯಮರಪ್ರಭಾವ
ನಾಹಂ ಮೃಷಾ ಜಾತು ವದೇ ಕದಾಚಿತ್ |
ಭಾರ್ಯಾಸಹಸ್ರಾಣಿ ಚ ಷೋಡಶೈವ
ತಾಸು ಪ್ರಿಯತ್ವಂ ಚ ತಥಾಽಕ್ಷಯತ್ವಮ್ ॥7॥
ಪ್ರೀತಿಂ ಚಾಗ್ರ್ಯಾಂ ಬಾಂಧವಾನಾಂ ಸಕಾಶಾದ್
ದದಾಮಿ ತೇ ವಪುಷಃ ಕಾಮ್ಯತಾಂ ಚ |
ಭೋಕ್ಷ್ಯಂತೇ ವೈ ಸಪ್ತತಿರ್ವೈ ಶತಾನಿ
ಗೃಹೇ ತುಭ್ಯಮತಿಥೀನಾಂ ಚ ನಿತ್ಯಮ್ ॥8॥

ದೇವೀ ಎಲೈ ದೇವಸಾಮರ್ಥ್ಯವನ್ನು ಹೊಂದಿದವನೇ, ಅದು ಹಾಗೆಯೇ ಆಗುವುದು. ನನ್ನ ಮಾತು ಎಂದೂ ಸುಳ್ಳಾಗುವುದಿಲ್ಲ.ನಿನಗೆ ಹದಿನಾರು ಸಾವಿರ ಭಾರ್ಯೆಯರೂ ಅವರಲ್ಲಿ ಪ್ರಿಯತ್ವವೂ, ಅಕ್ಷಯತ್ವವೂ, ಬಾಂಧವರಲ್ಲಿ ಅತಿಶಯವಾದ ಪ್ರೀತಿಯೂ, ದೇಹದಲ್ಲಿ ಸೌಂದರ್ಯವೂ ನನ್ನ ಅನುಗ್ರಹದಿಂದ ಉಂಟಾಗುತ್ತದೆ. ನಿನ್ನ ಗೃಹದಲ್ಲಿ ನಿತ್ಯವೂ ಏಳು ಸಾವಿರ ಅತಿಥಿಗಳು ಭೋಜನ ಮಾಡುತ್ತಾರೆ.

ವಾಸುದೇವಃ

ಏವಂ ದತ್ತ್ವಾ ವರಾನ್ ದೇವೋ ಮಮ ದೇವೀ ಚ ಭಾರತ |
ಅಂತರ್ಹಿತಃ ಕ್ಷಣೇ ತಸ್ಮಿನ್ ಸಗಣೋ ಭೀಮಪೂರ್ವಜ ॥9॥

ವಾಸುದೇವ ಎಲೈ ಭಾರತನೇ, ಭೀಮನ ಅಣ್ಣನೇ, ಹೀಗೆ ಶಿವನು ಮತ್ತು ಪಾರ್ವತಿಯು ನನಗೆ ವರಗಳನ್ನು ನೀಡಿ, ಆ ಕ್ಷಣದಲ್ಲಿ ತಮ್ಮ ಗಣದ ಜೊತೆಯಲ್ಲಿ ಅಂತರ್ಧಾನವನ್ನು ಹೊಂದಿದರು.

ಏತದತ್ಯದ್ಭುತಂ ಸರ್ವಂ ಬ್ರಾಹ್ಮಣಾಯಾತಿತೇಜಸೇ |
ಉಪಮನ್ಯವೇ ಮಯಾ ಕೃತ್ಸ್ನಮಾಖ್ಯಾತಂ ಕೌರವೋತ್ತಮ ॥10॥

ಎಲೈ ಕೌರವಶ್ರೇಷ್ಠನೇ, ಈ ಅದ್ಭುತವಾದ ಘಟನೆಯೆ ಎಲ್ಲವನ್ನೂ ನಾನು ಬ್ರಾಹ್ಮಣನೂ, ಅತಿ ತೇಜಸ್ವಿಯೂ ಆದ ಉಪಮನ್ಯುವಿಗೆ ಹೇಳಿದೆನು.

ನಮಸ್ಕೃತ್ವಾ ತು ಸ ಪ್ರಾಹ ದೇವದೇವಾಯ ಸುವ್ರತ |
ನಾಸ್ತಿ ಶರ್ವಸಮೋ ದಾನೇ ನಾಸ್ತಿ ಶರ್ವಸಮೋ ರಣೇ |
ನಾಸ್ತಿ ಶರ್ವಸಮೋ ದೇವೋ ನಾಸ್ತಿ ಶರ್ವಸಮಾ ಗತಿಃ ॥11॥

ಎಲೈ ಸುವ್ರತನೇ, ಅವನು ದೇವದೇವನಾದ ಶಿವನಿಗೆ ನಮಸ್ಕರಿಸಿ ದಾನವನ್ನು ಕೊಡುವುದರಲ್ಲಿ, ಯುದ್ಧವನ್ನು ಮಾಡಿದವರಲ್ಲಿ ಶಿವನಿಗೆ ಸಮನಾದವರು ಯಾರೂ ಇಲ್ಲ. ದೇವತೆಗಳಲ್ಲಿ ಶಿವನಿಗೆ ಸಮರಾದವರು ಯಾರೂ ಇಲ್ಲ. ಶಿವನಿಗೆ ಸಮಾನವಾದ ಗಮ್ಯನು ಯಾರೂ ಇಲ್ಲ ಎಂದು ಹೇಳಿದನು.

ಋಷಿರಾಸೀತ್ ಕೃತೇ ತಾತ ತಂಡಿರಿತ್ಯೇವ ವಿಶ್ರುತಃ |
ದಶ ವರ್ಷಸಹಸ್ರಾಣಿ ತೇನ ದೇವಃ ಸಮಾಧಿನಾ |
ಆರಾಧಿತೋಽಭೂದ್ಭಕ್ತೇನ ತಸ್ಯೋದರ್ಕಂ ನಿಶಾಮಯ ॥12॥
ಸ ದೃಷ್ಟವಾನ್ ಮಹಾದೇವಮಸ್ತೌಷೀಚ್ಚ ಸ್ತವೈರ್ವಿಭುಮ್ |
ಇತಿ ತಂಡಿಸ್ತಪೋಯೋಗಾತ್ ಪರಮಾತ್ಮಾನಮವ್ಯಯಮ್ ॥13॥

ಎಲೈ ಪ್ರೀತಿಪಾತ್ರನೇ, ಕೃತಯುಗದಲ್ಲಿ ತಂಡಿ ಎಂಬ ಪ್ರಖ್ಯಾತನಾದ ಋಷಿ ಇದ್ದನು. ಹತ್ತು ಸಹಸ್ರ ವರ್ಷಗಳ ಕಾಲ ಭಕ್ತನಾದ ಅವನು ದೇವನನ್ನು ಪೂಜಿಸಿದನು. ಅವನು ಪಡೆದ ವೈಭವವನ್ನು ಕೇಳು. ಅವನು ವಿಭುವಾದ ಅವನನ್ನು ನೋಡಿ ಸ್ತೋತ್ರಗಳಿಂದ ಸ್ತೋತ್ರ ಮಾಡಿದನು. ಹೀಗೆ ತಂಡಿಯು ತಪೋಯೋಗದಿಂದ ಅವ್ಯಯನಾದ ಪರಮಾತ್ಮನನ್ನು ನೋಡಿದನು.

ಚಿಂತಯಿತ್ವಾ ಮಹಾತ್ಮಾನಮಿದಮಾಹ ಸುವಿಸ್ಮಿತಃ |
ಯೇ ಪಠಂತಿ ಸದಾ ಸಾಂಖ್ಯಾಶ್ಚಿಂತಯಂತಿ ಚ ಯೋಗಿನಃ ॥14॥
ಪರಂ ಪ್ರಧಾನಂ ಪುರುಷಮಧಿಷ್ಠಾತಾರಮೀಶ್ವರಮ್ |
ಉತ್ಪತ್ತೌ ಚ ವಿನಾಶೇ ಚ ಕಾರಣಂ ಯಂ ವಿದುರ್ಬುಧಾಃ ॥15॥

ಅವನು ವಿಸ್ಮಿತನಾಗಿ ಮಹಾತ್ಮನಾದ ಶಿವನನ್ನು ಚಿಂತಿಸುತ್ತಾ ಹೀಗೆ ಹೇಳಿದನು. ಸಾಂಖ್ಯರು ಯಾವನನ್ನು ಚಿಂತನೆ ಮಾಡುತ್ತಾರೋ, ಯೋಗಿಗಳು ಯಾರನ್ನು ಧ್ಯಾನ ಮಾಡುತ್ತಾರೋ ಅಂತಹ ಈಶ್ವರನು ಶ್ರೇಷ್ಠನೂ, ಪ್ರಧಾನನೂ, ಪುರುಷನೂ, ಎಲ್ಲದರಲ್ಲಿಯೂ ಸನ್ನಿಹಿತನಾಗಿ ಉತ್ಪತ್ತಿ-ವಿನಾಶಕ್ಕೆ ಕಾರಣನಾದವನು ಎಂದು ಅವನನ್ನು ಜ್ಞಾನಿಗಳು ತಿಳಿಯುತ್ತಾರೆ.

ದೇವಾಸುರಮುನೀನಾಂ ಚ ಪರಂ ಯಸ್ಮಾನ್ನ ವಿದ್ಯತೇ |
ಅಜಂ ತಮಹಮೀಶಾನಮನಾದಿನಿಧನಂ ಪ್ರಭುಮ್ ॥16॥
ಅತ್ಯಂತಸುಖಿನಂ ದೇವಮನಘಂ ಶರಣಂ ವ್ರಜೇ |
ಏವಂ ಬ್ರುವನ್ನೇವ ತದಾ ದದರ್ಶ ತಪಸಾಂ ನಿಧಿಮ್ ॥17॥

ದೇವಾಸುರ-ಋಷಿಗಳಲ್ಲಿ ಯಾವನಿಗಿಂತ ಶ್ರೇಷ್ಠನಾದವನು ಇಲ್ಲವೋ ಅಂತಹ ಜನ್ಮರಹಿತನೂ, ಈಶಾನನೂ, ಆದ್ಯಂತ ರಹಿತನೂ,

ಪ್ರಭುವೂ, ಅತ್ಯಂತ ಸುಖಿಯೂ, ಅನಘನೂ ಆದ ದೇವನಿಗೆ ಶರಣಾಗತನಾಗುತ್ತೇನೆ. ಹೀಗೆ ಹೇಳುತ್ತಲೇ ಅವನು ತಪೋನಿಧಿಯಾದ ಶಿವನನ್ನು ನೋಡಿದನು.
ತಮವ್ಯಯಮನೌಪಮ್ಯಮಚಿಂತ್ಯಂ ಶಾಶ್ವತಂ ಧ್ರುವಮ್ |
ನಿಷ್ಕಲಂ ಸಕಲಂ ಬ್ರಹ್ಮ ನಿರ್ಗುಣಂ ಗುಣಗೋಚರಮ್ ॥18॥
ಯೋಗಿನಾಂ ಪರಮಾನಂದಮಕ್ಷರಂ ಮೋಕ್ಷಸಂಜ್ಞಿತಮ್ |
ಮನೋರಿಂದ್ರಾಗ್ನಿಮರುತಾಂ ವಿಶ್ವಸ್ಯ ಬ್ರಹ್ಮಣೋ ಗತಿಮ್ ॥19॥
ಅವ್ಯಯನೂ, ಅಸದೃಶನೂ, ಅಚಿಂತ್ಯನೂ, ಶಾಶ್ವತನೂ, ನಿಷ್ಕಲನೂ, ಎಲ್ಲ ಕಲೆಗಳಿಂದ ಕೂಡಿದವನೂ, ಬ್ರಹ್ಮನೂ, ನಿರ್ಗುಣನೂ, ಗುಣಗೋಚರನೂ, ಯೋಗಿಗಳಿಗೆ ಪರಮಾನಂದವನ್ನು ಕೊಡುವವನೂ, ವಿನಾಶರಹಿತನೂ, ಮೋಕ್ಷದಾಯಕನೂ, ಮನು-ಇಂದ್ರ-ಅಗ್ನಿ-ಮರುತ್ತುಗಳು, ಜಗತ್ತು ಮತ್ತು ಬ್ರಹ್ಮನಿಗೆ ಗತಿಯಾದವನೂ;
ಅಗ್ರಾಹ್ಯಮಚಲಂ ಶುದ್ಧಂ ಬುದ್ಧಿಗ್ರಾಹ್ಯಂ ಮನೋಮಯಮ್ |
ದುರ್ವಿಜ್ಞೇಯಮಸಂಖ್ಯೇಯಂ ದುಷ್ಪ್ರಾಪಮಕೃತಾತ್ಮಭಿಃ ॥20॥
ಯೋನಿಂ ವಿಶ್ವಸ್ಯ ಜಗತಸ್ತಮಸಃ ಪರತಃ ಪರಮ್ |
ಪರಂ ಪುರಾಣಂ ಪುರುಷಂ ಪರೇಭ್ಯಃ ಪರತಃ ಪರಮ್ ॥21॥
ತಿಳಿಯಲು ಅಸಾಧ್ಯನಾದವನೂ, ಅಚಲನೂ, ಶುದ್ಧನೂ, ಬುದ್ಧಿಗೆ ಗೋಚರನಾಗುವವನೂ, ಮನೋಮಯನೂ, ಕಷ್ಟದಿಂದ ತಿಳಿಯಲ್ಪಡುವವನೂ, ಎಣಿಸಲು ಸಾಧ್ಯವಿಲ್ಲದವನೂ, ಮನೋಜಯವಿಲ್ಲದವನಿಂದ ಹೊಂದಲು ಅಸಾಧ್ಯನಾದವನೂ, ಸಮಸ್ತ ಜಗತ್ತಿಗೆ ಕಾರಣನಾದವನೂ, ಪ್ರಕೃತಿಗಿಂತಲೂ ಪರನೂ, ಶ್ರೇಷ್ಠನೂ, ಪುರಾಣಪುರುಷನೂ, ಶ್ರೇಷ್ಠರಿಗಿಂತಲೂ ಶ್ರೇಷ್ಠನೂ;
ಯಂ ಪ್ರಾಣವಂತಮಾತ್ಮಾನಂ ಜ್ಯೋತಿರ್ಜೀವಸ್ಥಿತಂ ಮನಃ |
ತಂ ದೇವಂ ದರ್ಶನಾಕಾಂಕ್ಷೀ ಬಹೂನ್ ವರ್ಷಗಣಾನೃಷಿಃ |
ತಪಸ್ಯುಗ್ರೇ ಸ್ಥಿತೋ ಭೂತ್ವಾ ದೃಷ್ಟ್ವಾ ತುಷ್ಟಾವ ಚೇಶ್ವರಮ್ ॥22॥
ಯಾವನು ಪ್ರಾಣಗಳಿಂದ ಕೂಡಿದವನೂ, ಸ್ವಾಮಿಯೂ, ಜ್ಯೋತಿರೂಪನೂ, ಜೀವಸ್ಥಿತ ಮನೋರೂಪನೂ ಆದವನೋ, ಅಂತಹ ದೇವನನ್ನು ನೋಡಲು ಬಯಸಿ, ಋಷಿಯಾದ ತಂಡಿಯು ಅನೇಕ ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿ, ಶಂಕರನನ್ನು ನೋಡಿ ಅವನನ್ನು ಹೀಗೆ ಸ್ತೋತ್ರ ಮಾಡಿದನು.
ಪವಿತ್ರಾಣಾಂ ಪವಿತ್ರಸ್ತ್ವಂ ಗತಿರ್ಗತಿಮತಾಂ ವರಾ ॥23॥
ಅತ್ಯುಗ್ರಂ ತೇಜಸಾಂ ತೇಜಸ್ತಪಸಾಂ ಪರಮಂ ತಪಃ ॥24॥
ಎಲೈ ಜ್ಞಾನಿಗಳಲ್ಲಿ ಶ್ರೇಷ್ಠನಾದ ದೇವನೇ, ನೀನು ಪವಿತ್ರನಲ್ಲಿ ಪವಿತ್ರನಾದವನು, ಶ್ರೇಷ್ಠನಾದ ಗಮ್ಯನಾದವನು. ತೇಜಸ್ಸುಗಳಲ್ಲಿ ಅತ್ಯುಗ್ರವಾದ ತೇಜೋರೂಪನಾದವನು. ತಪಸ್ಸುಗಳಲ್ಲಿ ಉಗ್ರವಾದ ತಪೋರೂಪನಾದವನು.
ವಿಶ್ವಾವಸುಹಿರಣ್ಯಾಕ್ಷಪುರುಹೂತನಮಸ್ಕೃತ |
ಭೂರಿಕಲ್ಯಾಣದ ವಿಭೋ ಪುರುಸತ್ಯ ನಮೋಽಸ್ತು ತೇ ॥25॥
ವಿಶ್ವಾವಸು, ಹಿರಣ್ಯಾಕ್ಷ ಮತ್ತು ಇಂದ್ರನಿಂದ ನಮಸ್ಕೃತನಾದವನೇ, ಬಹಳ ಶುಭವನ್ನು ಕೊಡುವವನೇ, ವ್ಯಾಪ್ತನೇ, ಅತ್ಯಂತ ಸತ್ಯನಾದವನೇ, ನಿನಗೆ ನಮಸ್ಕಾರ.
ಜಾತೀಮರಣಭೀರೂಣಾಂ ಯತೀನಾಂ ಯತತಾಂ ವಿಭೋ |
ನಿರ್ವಾಣದ ಸಹಸ್ರಾಂಶೋ ನಮಸ್ತೇಽಸ್ತು ಸುಖಾಶ್ರಯ ॥26॥
ಜನ್ಮ-ಮರಣಗಳಿಗೆ ಹೆದರುವ ಪ್ರಯತ್ನಶೀಲರಾದ ಯತಿಗಳಿಗೆ ಮೋಕ್ಷವನ್ನು ಕೊಡುವ ವಿಭುವೇ, ಸಹಸ್ರ ಕಿರಣಗಳನ್ನು ಹೊಂದಿದವನೇ, ಸುಖನಿಧಿಯೇ, ನಿನಗೆ ನಮಸ್ಕಾರ.
ಬ್ರಹ್ಮಾ ಶತಕ್ರತುರ್ವಿಷ್ಣುರ್ವಿಶ್ವೇದೇವಾ ಮಹರ್ಷಯಃ |
ನ ವಿದುಸಾತ್ವಂ ತು ತತ್ತ್ವೇನ ಕುತೋ ವೇತ್ಸ್ಯಾಮಹೇ ವಯಮ್ ॥27॥
ಬ್ರಹ್ಮದೇವರು, ಇಂದ್ರ, ವಿಷ್ಣು, ವಿಶ್ವೇದೇವತೆಗಳು, ಮಹರ್ಷಿಗಳು ನಿನ್ನನ್ನು ಸರಿಯಾಗಿ ತಿಳಿಯಲಾರರು. ನಾವು ಹೇಗೆ ತಿಳಿದೇವು?
ತ್ವತ್ತಃ ಪ್ರವರ್ತತೇ ಕಾಲಸ್ತ್ವಯಿ ಕಾಲಶ್ಚ ಲೀಯತೇ |
ಕಾಲಾಖ್ಯಃ ಪುರುಷಾಖ್ಯಶ್ಚ ಬ್ರಹ್ಮಾಖ್ಯಶ್ಚ ತ್ವಮೇವ ಹಿ ॥28॥
ಕಾಲವು ನಿನ್ನಿಂದ ಪ್ರವೃತ್ತವಾಗುತ್ತದೆ. ನಿನ್ನಲ್ಲಿ ಲಯವನ್ನು ಹೊಂದುತ್ತದೆ. ಕಾಲನಾಮಕನಾದವನು, ಪುರುಷನಾಮಕನಾದವನು, ಬ್ರಹ್ಮನಾಮಕನಾದವನು ನೀನೇ.
ತನವಸ್ತೇ ಸ್ಮೃತಾಸ್ತಿಸ್ರಃ ಪುರಾಣಜ್ಞೈಃ ಸುರರ್ಷಿಭಿಃ |
ಅಧಿಪೌರುಷಮಧ್ಯಾತ್ಮಮಧಿಭೂತಾಧಿದೈವತಮ್ |
ಅಧಿಲೋಕ್ಯಾಧಿವಿಜ್ಞಾನಮಧಿಯಜ್ಞಸ್ತ್ವಮೇವ ಹಿ ॥29॥
ಪುರಾಣಗಳನ್ನು ತಿಳಿದ ದೇವರ್ಷಿಗಳು ನಿನಗೆ ಮೂರು ರೂಪಗಳೆಂದು ಹೇಳುತ್ತಾರೆ ಹಾಗೂ ಅದು ಸರ್ವಶರೀರಗಳಲ್ಲಿರುವ ಪೌರುಷ ರೂಪ, ಭೂತಗಳಲ್ಲಿರುವ ಅಧಿಭೂತ ರೂಪ ಮತ್ತು ದೇವತೆಗಳಲ್ಲಿರುವ ಅಧಿದೈವತ ರೂಪ. ಅಧಿಲೋಕ್ಯ, ಅಧಿವಿಜ್ಞಾನ, ಅಧಿಯಜ್ಞರೂಪಗಳೂ ನಿನ್ನವೇ.
ತ್ವಾಂ ವಿದಿತ್ವಾಽತ್ಮದೇಹಸ್ಥಂ ದುರ್ವಿದಂ ದೈವತೈರಪಿ |
ವಿದ್ವಾಂಸೋ ಯಾಂತಿ ನಿರ್ಮುಕ್ತಾಃ ಪರಂ ಭಾವಮನಾಮಯಮ್ ॥
ದೇವತೆಗಳಿಂದಲೂ ತಿಳಿಯಲು ಕಷ್ಟಸಾಧ್ಯನಾದ ನಿನ್ನನ್ನು ತಮ್ಮ ಶರೀರದಲ್ಲಿ ನೋಡಿದ ಜ್ಞಾನಿಗಳು, ಮೋಕ್ಷವನ್ನು ಹೊಂದಿ

ನಿರ್ದುಷ್ಟವಾದ ಶ್ರೇಷ್ಠವಾದ, ಭಾವವನ್ನು ಹೊಂದುತ್ತಾರೆ.
ಅನಿಚ್ಛತಸ್ತವ ವಿಭೋ ಜನ್ಮಮೃತ್ಯುರನೇಕಶಃ |
ದ್ವಾರಂ ತ್ವಂ ಸ್ವರ್ಗಮೋಕ್ಷಾಣಾಮಾಕ್ಷೇಪ್ತಾ ತ್ವಂ ದದಾಸಿ ಚ ॥31॥
ನಿನ್ನನ್ನು ಬಯಸದವನಿಗೆ ಅನೇಕ ಜನನ-ಮರಣಗಳುಂಟಾಗುತ್ತವೆ. ನೀನು ಸ್ವರ್ಗ-ಮೋಕ್ಷಗಳಿಗೆ ದ್ವಾರನಾದವನು. ಅವುಗಳನ್ನು ಕೊಡುವವನು ಮತ್ತು ಸಂಹರಿಸುವವನು ನೀನು.
ತ್ವಮೇವ ಮೋಕ್ಷಃ ಸ್ವರ್ಗಶ್ಚ ಕಾಮಃ ಕ್ರೋಧಸ್ತ್ವಮೇವ ಹಿ |
ಸತ್ತ್ವಂ ರಜಸ್ತಮಶ್ಚೈವ ಅಧಶ್ಚೋರ್ಧ್ವಂ ತ್ವಮೇವ ಹಿ ॥32॥
ಮೋಕ್ಷ-ಸ್ವರ್ಗ, ಕಾಮ-ಕ್ರೋಧ, ಸತ್ವ-ರಜಸ್ಸು-ತಮಸ್ಸು, ಊರ್ಧ್ವದಿಕ್ಕು ಮತ್ತು ಅಧೋದಿಕ್ಕು ಎಲ್ಲವೂ ನೀನೇ.
ಭವಶ್ಚ ವಿಷ್ಣುಶ್ಚ ರುದ್ರಶ್ಚ ಸ್ಕಂದೇಂದ್ರೌ ಸವಿತಾ ಯಮಃ |
ವರುಣೇಂದೂ ಮನುರ್ಧಾತಾ ವಿಧಾತಾ ತ್ವಂ ಧನೇಶ್ವರಃ ॥33॥
ನೀನೇ ಭವ, ವಿಷ್ಣು, ರುದ್ರ, ಸ್ಕಂಧ, ಇಂದ್ರ, ಸವಿತಾ, ಯಮ, ವರುಣ, ಚಂದ್ರ, ಮನು, ಧಾತ, ವಿಧಾತ, ಕುಬೇರ.
ಭೂರ್ವಾಯುರ್ಜ್ಯೋತಿರಾಪಶ್ಚ ವಾಗ್ಬುದ್ಧಿಸ್ತ್ವಂ ಮತಿರ್ಮನಃ |
ಕರ್ಮ ಸತ್ಯಾನೃತೇ ಚೋಭೇ ತ್ವಮೇವಾಸ್ತಿ ಚ ನಾಸ್ತಿ ಚ ॥34॥
ಭೂಮಿ, ವಾಯು, ಅಗ್ನಿ, ಜಲ, ವಾಕ್, ಬುದ್ಧಿ, ಮತಿ, ಮನಸ್ಸು, ಕರ್ಮ, ಸತ್ಯ, ಅನೃತ, ಸತ್ವ ಮತ್ತು ಅಸತ್ವ ಎಲ್ಲವೂ ನೀನೇ.
ಇಂದ್ರಿಯಾಣೀಂದ್ರಿಯಾರ್ಥಾಶ್ಚ ಪ್ರಕೃತಿಭ್ಯಃ ಪರಂ ಧ್ರುವಮ್ |
ವಿಶ್ವಾವಿಶ್ವಪರೋ ಭಾವಶ್ಚಿಂತ್ಯಾಚಿಂತ್ಯಸ್ತ್ವಮೇವ ಹಿ ॥35॥
ಇಂದ್ರಿಯಗಳು, ಇಂದ್ರಿಯದ ವಿಷಯಗಳು, ಪ್ರಕೃತಿಗಿಂತ ಶ್ರೇಷ್ಠವಾದುದು, ನಿತ್ಯವಾದುದು, ವಿಶ್ವಗಳಿಗಿಂತ ಶ್ರೇಷ್ಠವಾದ ವಸ್ತು, ಚಿಂತ್ಯನೂ, ಅಚಿಂತ್ಯನೂ ಆದವನು ಎಲ್ಲವೂ ನೀನೇ.
ಯಚ್ಚೈತತ್ಪರಮಂ ಬ್ರಹ್ಮ ಯಚ್ಚ ತತ್ಪರಮಂ ಪದಮ್ |
ಯಾ ಗತಿಃ ಸಾಂಖ್ಯಯೋಗಾನಾಂ ಸ ಭವಾನ್ನಾತ್ರ ಸಂಶಯಃ ॥36॥
ಪರಬ್ರಹ್ಮನೂ, ಪರಮಪದನೂ ನೀನೇ. ಸಾಂಖ್ಯಯೋಗಗಳ ಗತಿಯೂ ನೀನೇ. ಇದರಲ್ಲಿ ಸಂಶಯವಿಲ್ಲ.
ನೂನಮದ್ಯ ಕೃತಾರ್ಥಾಃ ಸ್ಮ ನೂನಂ ಪ್ರಾಪ್ತಾಃ ಸತಾಂ ಗತಿಮ್ |
ಯಾಂ ಗತಿಂ ಪ್ರಾಪ್ನುವಂತೀಹ ಜ್ಞಾನನಿರ್ಮಲಬುದ್ಧಯಃ ॥37॥
ಈ ದಿನ ನಾವು ನಿಶ್ಚಿತವಾಗಿ ಧನ್ಯರಾಗಿದ್ದೇವೆ. ಜ್ಞಾನನಿರ್ಮಲವಾದ ಬುದ್ಧಿಯುಳ್ಳವರು ಎಂತಹ ಗತಿಯನ್ನು ಹೊಂದುತ್ತಾರೋ ಅಂತಹ ಸದ್ಗತಿಯನ್ನು ಹೊಂದಿದ್ದೇವೆ.
ಅಹೋ ಮೂಢಾಃ ಸ್ಮ ಸುಚಿರಮಿಮಂ ಕಾಲಮಚೇತಸಃ |
ಯನ್ನ ವಿದ್ಮಃ ಪರಂ ದೇವಂ ಶಾಶ್ವತಂ ಯಂ ವಿದುರ್ಬುಧಾಃ ॥38॥
ಶಾಶ್ವತನಾದ ದೇವನಾದ ಯಾವನನ್ನು ಜ್ಞಾನಿಗಳು ತಿಳಿಯುತ್ತಾರೆಯೋ ಅಂತಹ ಶ್ರೇಷ್ಠನಾದ ನಿನ್ನನ್ನು ಇಷ್ಟು ಕಾಲ ತಿಳಿಯದೆ ಜ್ಞಾನಶೂನ್ಯರಾಗಿ ನಾವು ಮೂಢರಾಗಿದ್ದೆವು.
ಸೋಽಯಮಾಸಾದಿತಃ ಸಾಕ್ಷಾದ್ ತ್ವದ್ಭಕ್ತಿರ್ಜನ್ಮಭಿರ್ಮಯಾ |
ಭಕ್ತಾನುಗ್ರಹಕೃದ್ ದೇವೋ ಯಂ ಜ್ಞಾತ್ವಾಽಮೃತಮಶ್ನುತೇ ॥39॥
ನಾನು ಅನೇಕ ಜನ್ಮಗಳ ಸಾಧನೆಯಿಂದ ನಿನ್ನಲ್ಲಿ ಇಂತಹ ಭಕ್ತಿಯನ್ನು ಪಡೆದು ಭಕ್ತಾನುಗ್ರಹಕಾರಕನಾದ ಯಾವನ ಜ್ಞಾನದಿಂದ ಮೋಕ್ಷವುಂಟಾಗುವುದೋ ಅಂತಹ ನಿನ್ನನ್ನು ಹೊಂದಿದ್ದೇವೆ.
ದೇವಾಸುರಮುನೀನಾಂ ಚ ಯಚ್ಚ ಗುಹ್ಯಂ ಸನಾತನಮ್ |
ಗುಹಾಯಾಂ ನಿಹಿತಂ ಬ್ರಹ್ಮ ದುರ್ವಿಜ್ಞೇಯಂ ಸುರೈರಪಿ ॥40॥
ಸ ಏಷ ಭಗವಾನ್ ದೇವಃ ಸರ್ವಕೃತ್ಸರ್ವತೋಮುಖಃ |
ಸರ್ವಾತ್ಮಾ ಸರ್ವದರ್ಶೀ ಚ ಸರ್ವಗಃ ಸರ್ವವೇದಿತಾ ॥41॥
ದೇವಾಸುರ-ಋಷಿಗಳಿಗೆ ಯಾವುದು ರಹಸ್ಯವೋ, ಯಾವುದು ಸನಾತನವೋ, ಯಾವ ವಸ್ತುವು ಪ್ರಕೃತಿಯ ಗುಹೆಯಲ್ಲಿ (ಜೀವರ ಹೃದಯಗುಹೆಯಲ್ಲಿ) ಹಿತವಾಗಿದೆಯೋ, ಯಾವ ಬ್ರಹ್ಮನು ದೇವತೆಗಳಿಂದಲೂ ಕಷ್ಟದಿಂದ ತಿಳಿಯಲು ಸಾಧ್ಯನೋ ಅಂತಹ ಭಗವಂತನಾದ ಇವನು ದೇವನಾದವನು, ಸರ್ವವನ್ನೂ ಮಾಡುವವನು, ಸರ್ವತೋಮುಖನಾದವನು, ಸರ್ವವ್ಯಾಪ್ತನಾದವನು, ಸರ್ವದರ್ಶೀ, ಸರ್ವಸ್ವಾಮಿ ಮತ್ತು ಸರ್ವಜ್ಞನಾದವನು.
ಪ್ರಾಣಕೃತ್ಪ್ರಾಣಭೃತ್ಪ್ರಾಣೀ ಪ್ರಾಣದಃ ಪ್ರಾಣಿನಾಂ ಗತಿಃ |
ದೇಹಕೃದ್ ದೇಹಭೃದ್ ದೇಹೀ ದೇಹಭುಗ್ದೇಹಿನಾಂ ಗತಿಃ ॥42॥
ಪ್ರಾಣಗಳನ್ನು ಮಾಡುವವನು, ಪ್ರಾಣಗಳನ್ನು ಧರಿಸುವವನು, ಸ್ವತಃ ಪ್ರಾಣವುಳ್ಳವನು, ಪ್ರಾಣವನ್ನು ಕೊಡುವವನು, ಪ್ರಾಣಿಗಳಿಗೆ ಗತಿಯಾದವನು, ದೇಹವನ್ನು ಕೊಡುವವನು, ದೇಹವನ್ನು ಧರಿಸುವವನು, ದೇಹವುಳ್ಳವನು, ದೇಹವನ್ನು ಭೋಗಿಸುವವನು, ದೇಹಿಗಳಿಗೆ ಗತಿಯಾದವನು.
ಅಧ್ಯಾತ್ಮಗತಿನಿಷ್ಠಾನಾಂ ಧ್ಯಾನಿನಾಮಾತ್ಮವೇದಿನಾಮ್ |
ಅಪುನರ್ಮಾರಕಾಮಾನಾಂ ಯಾ ಗತಿಃ ಸೋಽಯಮೀಶ್ವರಃ ॥43॥
ಅಧ್ಯಾತ್ಮಯೋಗನಿಷ್ಠರಾದ, ಆತ್ಮಜ್ಞಾನಿಗಳಾದ, ಧ್ಯಾನಶೀಲರಾದ, ಪುನಃ ಮರಣವನ್ನುಬಯಸದ ಯೋಗಿಗಳಿಗೆ ಯಾವನು ಗಮ್ಯನೋ ಇವನು ಅಂತಹ ಈಶ್ವರನಾದವನು.

ಅಯಂ ಚ ಸರ್ವಭೂತಾನಾಂ ಶುಭಾಶುಭಗತಿಪ್ರದಃ |
ಅಯಂ ಚ ಜನ್ಮಮರಣೇ ವಿದಧ್ಯಾತ್ ಸರ್ವಜಂತುಷು ॥44॥
ಇವನು ಸರ್ವಭೂತಗಳಿಗೆ ಶುಭಾಶುಭ ಗತಿಯನ್ನು ಕೊಡುವವನು. ಎಲ್ಲ ಜಂತುಗಳಿಗೂ ಜನ್ಮ-ಮರಣಗಳನ್ನು ಉಂಟುಮಾಡುವವನು.
ಅಯಂ ಸಂಸಿದ್ಧಿಕಾಮಾನಾಮೃಷೀಣಾಂ ಸಿದ್ಧಿದಃ ಪ್ರಭುಃ |
ಅಯಂ ಚ ಮೋಕ್ಷಕಾಮಾನಾಂ ದ್ವಿಜಾನಾಂ ಮೋಕ್ಷದಃ ಪ್ರಭುಃ ॥45॥
ಇವನು ಒಳ್ಳೆಯ ಸಿದ್ಧಿಯನ್ನು ಬಯಸುವ ಋಷಿಗಳಿಗೆ ಸಿದ್ಧಿಯನ್ನು ಕೊಡುವ ಪ್ರಭು ಮತ್ತು ಮೋಕ್ಷವನ್ನು ಬಯಸುವ ದ್ವಿಜರಿಗೆ ಮೋಕ್ಷವನ್ನು ಕೊಡುವ ಪ್ರಭು.
ಭೂರಾದ್ಯಾನ್ ಸರ್ವಭುವನಾನುತ್ಪಾದ್ಯ ಸದಿವೌಕಸಃ |
ಬಿಭರ್ತಿ ದೇವಸ್ತನುಭಿರಷ್ಟಾಭಿಶ್ಚ ದದಾತಿ ಚ ॥46॥
ದೇವನಾದ ಇವನು ಭೂಮಿಯೇ ಮೊದಲಾದ ಎಲ್ಲ ಲೋಕಗಳನ್ನು, ದೇವತೆಗಳನ್ನು ಸೃಷ್ಟಿಮಾಡಿ, ಅವುಗಳನ್ನು ತನ್ನ ಎಂಟು ರೂಪಗಳಿಂದ ಧರಿಸುತ್ತಾನೆ ಮತ್ತು ಇಷ್ಟಾರ್ಥಗಳನ್ನು ಕೊಡುತ್ತಾನೆ.
ಅತಃ ಪ್ರವರ್ತತೇ ಸರ್ವಮಸ್ಮಿನ್ ಸರ್ವಂ ಪ್ರತಿಷ್ಠಿತಮ್ |
ಅಸ್ಮಿಂಶ್ಚ ಪ್ರಲಯಂ ಯಾತಿ ಅಯಮೇಕಃ ಸನಾತನಃ ॥47॥
ಇವನಿಂದಲೇ ಎಲ್ಲವೂ ಪ್ರವೃತ್ತಿಯನ್ನು ಹೊಂದುತ್ತವೆ. ಎಲ್ಲವೂ ಇವನಲ್ಲಿಯೇ ಪ್ರತಿಷ್ಠಿತವಾಗಿವೆ. ಇವನಲ್ಲಿಯೇ ಲಯವನ್ನು ಹೊಂದುತ್ತವೆ. ಇವನೊಬ್ಬನೇ ಸನಾತನನಾದವನು.
ಅಯಂ ಸ ಸತ್ಯಕಾಮಾನಾಂ ಸತ್ಯಲೋಕಃ ಪರಃ ಸತಾಮ್ |
ಅಪವರ್ಗಶ್ಚ ಮುಕ್ತಾನಾಂ ಕೈವಲ್ಯಂ ಚಾತ್ಮವಾದಿನಾಮ್ ॥48॥
ಇವನೇ ಸತ್ಯವನ್ನು ಬಯಸುವ ಸಜ್ಜನರಿಗೆ ಶ್ರೇಷ್ಠವಾದ ಸತ್ಯಲೋಕಪ್ರದನಾದವನು. ಮುಕ್ತರಿಗೆ ಮೋಕ್ಷವನ್ನು ಕೊಡುವವನು. ಆತ್ಮವಾದಿಗಳಿಗೆ ಶುದ್ಧನೆನಿಸುವವನು.
ಅಯಂ ಬ್ರಹ್ಮಾದಿಭಿಃ ಸಿದ್ಧೈರ್ಗುಹಾಯಾಂ ಗೋಪಿತಃ ಪ್ರಭುಃ |
ದೇವಾಸುರಮನುಷ್ಯಾಣಾಮ್ ಅಪ್ರಕಾಶೋ ಭವೇದಿತಿ ॥49॥
ಬ್ರಹ್ಮ ಮೊದಲಾದ ಸಿದ್ಧರು ಇವನನ್ನು ದೇವಾಸುರ ಮನುಷ್ಯರಿಗೆ ಇವನು ತಿಳಿಯದಿರಲಿ ಎಂದು ತಮ್ಮ ಹೃದಯದಲ್ಲಿ ಅಡಗಿಸಿ ಇಡುತ್ತಾರೆ.
ತಂ ತ್ವಾಂ ದೇವಾಸುರನರಾಸ್ತತ್ತ್ವೇನ ನ ವಿದುರ್ಭವಮ್ |
ಮೋಹಿತಾಃ ಖಲ್ವನೇನೈವ ಹೃಚ್ಛಯೇನ ಪ್ರವೇಶಿತಾಃ ॥50॥
ಸರ್ವಜೀವರ ಹೃದಯದಲ್ಲಿರುವ ಭವನಾದ ಇವನಿಂದಲೇ ಮೋಹಿತರಾಗಿ ದೇವಾಸುರ-ಮನುಷ್ಯರು ಯಾರೂ ಇವನನ್ನು ಸರಿಯಾಗಿ ತಿಳಿಯುವುದಿಲ್ಲ.
ಯೇ ಚೈನಂ ಸಂಪ್ರಪದ್ಯಂತೇ ಭಕ್ತಿಯೋಗೇನ ಭಾರತ |
ತೇಷಾಮೇವಾತ್ಮನಾತ್ಮಾನಂ ದರ್ಶಯತ್ಯೇಷ ಹೃಚ್ಛಯಃ ॥51॥
ಎಲೈ ಭಾರತನೇ, ಯಾರು ಇವನಿಗೆ ಭಕ್ತಿಯೋಗದಿಂದ ಶರಣಾಗತರಾಗುತ್ತಾರೆಯೋ ಅವರಿಗೆ ಮಾತ್ರ ಹೃದಯವಾಸಿಯಾದ ಅವನು ತಾನೇ ತನ್ನನ್ನು ತೋರಿಸಿಕೊಳ್ಳುತ್ತಾನೆ.
ಯಂ ಜ್ಞಾತ್ವಾ ನ ಪುನರ್ಜನ್ಮ ಮರಣಂ ಚಾಪಿ ವಿದ್ಯತೇ |
ಯಂ ವಿದಿತ್ವಾ ಪರಂ ವೇದ್ಯಂ ವೇದಿತವ್ಯಂ ನ ವಿದ್ಯತೇ ॥52॥
ಯಾವನನ್ನು ತಿಳಿದರೆ ಪುನರ್ಜನ್ಮ ಮತ್ತು ಮರಣಗಳು ಇರುವುದಿಲ್ಲವೋ, ಯಾವನನ್ನು ತಿಳಿದರೆ ತಿಳಿಯಬೇಕಾದ ಇನ್ನೊಂದು ವಸ್ತುವು ಇರುವುದಿಲ್ಲವೋ ಅವನು ಶಿವ.
ಯಂ ಲಬ್ಧ್ವಾ ಪರಮಂ ಲಾಭಂ ಮನ್ಯತೇ ನಾಧಿಕಂ ಪುನಃ |
ಯಾಂ ಸೂಕ್ಷ್ಮಾಂ ಪರಮಾಂ ಪ್ರಾಪ್ತಿಮಾಗಚ್ಛತ್ಯಕ್ಷಯಾವಹಾಮ್ ॥53॥
ಯಾವನನ್ನು ಹೊಂದಿದ ಭಕ್ತನು ಅದೇ ಪರಮಲಾಭವೆಂದೂ, ಅದಕ್ಕಿಂತ ಅಧಿಕವಾದುದು ಯಾವುದೂ ಇಲ್ಲವೆಂದೂ ತಿಳಿಯುತ್ತಾನೆಯೋ ಮತ್ತು ಸೂಕ್ಷ್ಮವಾದ, ಅಕ್ಷಯವಾದ ಶ್ರೇಷ್ಠವಾದ ಪ್ರಾಪ್ತಿಯನ್ನು ಹೊಂದುತ್ತಾನೆಯೋ ಅಂತಹವನು ಶಿವ.
ಯಂ ಸಾಂಖ್ಯಾ ಗುಣತತ್ತ್ವಜ್ಞಾಃ ಸಾಂಖ್ಯಶಾಸ್ತ್ರವಿಶಾರದಾಃ |
ಸೂಕ್ಷ್ಮಜ್ಞಾನರತಾಃ ಪೂರ್ವಂ ಜ್ಞಾತ್ವಾ ಮುಚ್ಯಂತಿ ಬಂಧನೈಃ ॥54॥
ಗುಣತತ್ತ್ವಗಳನ್ನು ತಿಳಿದ, ಸಾಂಖ್ಯಶಾಸ್ತ್ರವಿಶಾರದರಾದ, ಸೂಕ್ಷ್ಮಜ್ಞಾನದಲ್ಲಿ ನಿರತರಾದ ಸಾಂಖ್ಯರು ಮೊದಲು ಯಾವನನ್ನು ತಿಳಿದು, ಸಂಸಾರಬಂಧನದಿಂದ ಮುಕ್ತರಾಗುತ್ತಾರೆಯೋ ಅವನು ಶಿವ.
ಯಂ ಚ ವೇದವಿದೋ ವೇದ್ಯಂ ವೇದಾಂತೇಷು ಪ್ರತಿಷ್ಠಿತಮ್ |
ಪ್ರಾಣಾಯಾಮಪರಾ ನಿತ್ಯಂ ಯಂ ವಿಶಂತಿ ಜಪಂತಿ ಚ |
ಓಂಕಾರರಥಮಾರುಹ್ಯ ತೇ ವಿಶಂತಿ ಮಹೇಶ್ವರಮ್ ॥55॥
ವೇದವನ್ನು ತಿಳಿದವರು ಯಾವನನ್ನು ವೇದಾಂತಗಳಲ್ಲಿ ವಂದ್ಯನಾಗಿ ಪ್ರತಿಷ್ಠಿತನಾಗಿದ್ದಾನೆಂದು ತಿಳಿಯುತ್ತಾರೆಯೋ, ಯಾರು ಪ್ರಾಣಾಯಾಮ ನಿರತರಾಗಿ ನಿತ್ಯವೂ ಜಪವನ್ನು ಮಾಡುತ್ತಾರೆಯೋ ಅಂತಹವರೂ ಓಂಕಾರವೆಂಬ ರಥವನ್ನು ಏರಿ ಮಹೇಶ್ವರನನ್ನು ಪ್ರವೇಶಿಸುತ್ತಾರೆ.

ಅಯಂ ಸ ದೇವಯಾನಾನಾಮಾದಿತ್ಯೋ ದ್ವಾರಮುಚ್ಯತೇ |
ಅಯಂ ಚ ಪಿತೃಯಾನಾನಾಂ ಚಂದ್ರಮಾ ದ್ವಾರಮುಚ್ಯತೇ ॥56॥
ಇವನೇ ದೇವಯಾನದ ದ್ವಾರನಾದ ಆದಿತ್ಯ ಮತ್ತು ಪಿತೃಯಾನದ ದ್ವಾರನಾದ ಚಂದ್ರ ಎಂದು ಹೇಳಲ್ಪಡುತ್ತಾನೆ.
ಏಷ ಕಾಲಗತಿಶ್ಚಿತ್ರಾ ಸಂವತ್ಸರಯುಗಾದಿಷು |
ದಿವ್ಯಾದಿವ್ಯಃ ಪರೋ ಲಾಭ ಅಯನೇ ದಕ್ಷಿಣೋತ್ತರೇ ॥57॥
ಸಂವತ್ಸರ ಮೊದಲಾದವುಗಳಲ್ಲಿ ವಿಚಿತ್ರವಾದ ಕಾಲಗತಿ ರೂಪನಾದವನೂ, ದಿವ್ಯನೂ, ಅದಿವ್ಯನೂ, ಪರಮಲಾಭರೂಪನೂ, ದಕ್ಷಿಣಾಯನ, ಉತ್ತರಾಯಣ ರೂಪನೂ ಇವನೇ ಆಗಿದ್ದಾನೆ.
ಏನಂ ಪ್ರಜಾಪತಿಃ ಪೂರ್ವಮಾರಾಧ್ಯ ಬಹುಭಿಃ ಸ್ತವೈಃ |
ವರಯಾಮಾಸ ಪುತ್ರತ್ವೇ ನೀಲಲೋಹಿತಸಂಜ್ಞಿತಮ್ ॥58॥
ಹಿಂದೆ ಪ್ರಜಾಪತಿಯು ಅನೇಕ ಸ್ತೋತ್ರಗಳಿಂದ ಅವನನ್ನು ಆರಾಧಿಸಿ, ನೀಲಲೋಹಿತನನ್ನು ಪುತ್ರನನ್ನಾಗಿ ವರವನ್ನು ಕೇಳಿದನು.
ಋಗ್ಭಿರ್ಯಮನುಶಂಸಂತಿ ತಂತ್ರೇ ಕರ್ಮಣಿ ಬಹ್ವೃಚಃ |
ಯಜುರ್ಭಿರ್ಯಂ ತ್ರಿಧಾ ವೇದ್ಯಂ ಜುಹ್ವತ್ಯಧ್ವರ್ಯವೋಽಧ್ವರೇ ॥59॥
ಸಾಮಭಿರ್ಯಂ ಚ ಗಾಯಂತಿ ಸಾಮಗಾಃ ಶುದ್ಧಬುದ್ಧಯಃ |
ಋತಂ ಸತ್ಯಂ ಪರಂ ಬ್ರಹ್ಮ ಸ್ತುವಂತ್ಯಾಥರ್ವಣಾ ದ್ವಿಜಾಃ |
ಯಜ್ಞಸ್ಯ ಪರಮಾ ಯೋನಿಃ ಪತಿಶ್ಚಾಯಂ ಪರಃ ಸ್ಮೃತಃ ॥60॥
ಕರ್ಮತಂತ್ರದಲ್ಲಿ ನಿರತರಾದ ಋಗ್ವೇದಿಗಳು ಯಾವನನ್ನು ಋಗ್ವೇದದಿಂದ ಶಂಸನೆ ಮಾಡುತ್ತಾರೆಯೋ, ಅಧ್ವರ್ಯುಗಳು ಯಜ್ಞದಲ್ಲಿ ಯಜುಸ್ಸುಗಳಿಂದ ವೇದ್ಯನಾದ ಯಾವನನ್ನು ಮೂರು ರೀತಿಯಲ್ಲಿ ಹೋಮವನ್ನು ಮಾಡುತ್ತಾರೆಯೋ, ಶುದ್ಧಬುದ್ಧಿಯುಳ್ಳ ಸಾಮಗಾಯಕರು ಸಾಮಗಳಿಂದ ಯಾವನನ್ನು ಗಾನ ಮಾಡುತ್ತಾರೆಯೋ, ಅಥರ್ವಣ ಬ್ರಾಹ್ಮಣರು ಯಾವನನ್ನು ಋತ, ಸತ್ಯ, ಪರಬ್ರಹ್ಮ ಎಂದು ಸ್ತೋತ್ರ ಮಾಡುತ್ತಾರೆಯೋ ಅಂತಹ ಈ ಶಿವನು ಯಜ್ಞಕ್ಕೆ ಮೂಲಕಾರಣನಾದವನು ಮತ್ತು ಶ್ರೇಷ್ಠಸ್ವಾಮಿಯಾದವನೆಂದು ಹೇಳಲ್ಪಡುತ್ತದೆ.
ರಾತ್ರ್ಯಹಃಶ್ರೋತ್ರನಯನಃ ಪಕ್ಷಮಾಸಶಿರೋಭುಜಃ |
ಋತುವೀರ್ಯಸ್ತಪೋಧೈರ್ಯೋ ಹ್ಯಬ್ದಗುಹ್ಯೋರುಪಾದವಾನ್ ॥61॥
ರಾತ್ರಿ ಮತ್ತು ಹಗಲುಗಳು ಅವನ ಶ್ರೋತ್ರನಯನಗಳು. ಪಕ್ಷ-ಮಾಸಗಳು ಶಿರೋ-ಭುಜಗಳು. ಋತುಗಳು ಅವನ ವೀರ್ಯ. ತಪಸ್ಸು ಅವನ ಧೈರ್ಯ. ಸಂವತ್ಸರಗಳು ಅವನ ಗುಹ್ಯಪ್ರದೇಶ. ಅವನು ಅನೇಕ ಪಾದಗಳುಳ್ಳವನು.
ಮೃತ್ಯುರ್ಯಮೋ ಹುತಾಶಶ್ಚ ಕಾಲಃ ಸಂಹಾರವೇಗವಾನ್ |
ಕಾಲಸ್ಯ ಪರಮಾ ಯೋನಿಃ ಕಾಲಶ್ಚಾಯಂ ಸನಾತನಃ ॥62॥
ಅವನು ಮೃತ್ಯು, ಯಮ, ಅಗ್ನಿ, ಸಂಹಾರವೇಗ ಉಳ್ಳ ಕಾಲ. ಕಾಲಕ್ಕೆ ಮೂಲಕಾರಣನಾದವನು ಮತ್ತು ಸ್ವತಃ ಸನಾತನನಾದ ಕಾಲ ರೂಪನಾದವನು.
ಚಂದ್ರಾದಿತ್ಯೌ ಸನಕ್ಷತ್ರೌ ಸಗ್ರಹೌ ಸಹ ವಾಯುನಾ |
ಧ್ರುವಃ ಸಪ್ತರ್ಷಯಶ್ಚೈವ ಭುವನಾಃ ಸಪ್ತ ಏವ ಚ ॥63॥
ನಕ್ಷತ್ರಗಳಿಂದಲೂ, ಗ್ರಹಗಳಿಂದಲೂ ಮತ್ತು ವಾಯುವಿನಿಂದಲೂ ಕೂಡಿದ ಚಂದ್ರ-ಸೂರ್ಯರು, ಧ್ರುವ, ಸಪ್ತರ್ಷಿಗಳು, ಏಳು ಭುವನಗಳು.
ಪ್ರಧಾನಂ ಮಹದವ್ಯಕ್ತಂ ವಿಶೇಷಾಂತಂ ಸವೈಕೃತಮ್ |
ಬ್ರಹ್ಮಾದಿ ಸ್ತಂಬಪರ್ಯಂತಂ ಭೂತಾದಿ ಸದಸಚ್ಚ ಯತ್ ॥64॥
ಪ್ರಧಾನ, ಮಹತ್ತತ್ತ್ವ, ಅವ್ಯಕ್ತ ತತ್ತ್ವ, ಭೂಮಿಯವರೆಗಿನ ಎಲ್ಲ ಪ್ರಕೃತಿ ವಿಕಾರಗಳು, ಬ್ರಹ್ಮಾದಿ ಸ್ತಂಬಪರ್ಯಂತವಾದ ಜೀವರಾಶಿ, ಸಮಸ್ತವಾದ ಕಾರ್ಯಕಾರಣಗಳು.
ಅಷ್ಟೌ ಪ್ರಕೃತಯಶ್ಚೈವ ಪ್ರಕೃತಿಭ್ಯಶ್ಚ ಯತ್ಪರಮ್ |
ಅಸ್ಯ ದೇವಸ್ಯ ಯದ್ಭಾಗಂ ಕೃತ್ಸ್ನಂ ಸಂಪರಿವರ್ತತೇ ॥65॥
ಎಂಟು ಪ್ರಕೃತಿಗಳು, ಪ್ರಕೃತಿಗಿಂತ ಪರವಾದುದು ಎಲ್ಲವೂ ಈ ದೇವನ ಒಂದು ಭಾಗ ಮಾತ್ರ. ಇವೆಲ್ಲವೂ ಆ ದೇವನಿಂದ ಪರಿವರ್ತನವನ್ನು ಹೊಂದುತ್ತವೆ.
ಏತತ್ಪರಮಮಾನಂದಂ ಯತ್ತಚ್ಛಾಶ್ವತಮೇವ ಚ |
ಏಷಾ ಗತಿರ್ವಿರಕ್ತಾನಾಮೇಷ ಭಾವಃ ಪರಃ ಸತಾಮ್ ॥66॥
ಇವನು ಶಾಶ್ವತವಾದ ಪರಮಾನಂದರೂಪನಾದವನು. ವಿರಕ್ತರಿಗೆ ಗತಿಯಾದವನು. ಸಜ್ಜನರ ಭಕ್ತಿಗೆ ವಿಷಯನಾದವನು.
ಏತತ್ಪದಮನುದ್ವಿಗ್ನಮೇತದ್ ಬ್ರಹ್ಮ ಸನಾತನಮ್ |
ಶಾಸ್ತ್ರವೇದಾಂಗವಿದುಷಾಮೇತದ್ ಧ್ಯಾನಂ ಪರಂ ಪದಮ್ ॥67॥
ಅವನ ಸ್ವರೂಪವು ಉದ್ವೇಗರಹಿತವಾದುದು. ಅವನೇ ಬ್ರಹ್ಮ, ಸನಾತನನಾದವನು. ಶಾಸ್ತ್ರಗಳನ್ನು ಮತ್ತು ವೇದಾಂಗಗಳನ್ನು ತಿಳಿದ ಜ್ಞಾನಿಗಳಿಗೆ ಅವನೇ ಶ್ರೇಷ್ಠವಾದ ಧ್ಯಾನವಿಷಯವಾದ ವಸ್ತು.
ಇಯಂ ಸಾ ಪರಮಾ ಕಾಷ್ಠಾ ಇಯಂ ಸಾ ಪರಮಾ ಕಲಾ |
ಇಯಂ ಸಾ ಪರಮಾ ಸಿದ್ಧಿರಿಯಂ ಸಾ ಪರಮಾ ಗತಿಃ ॥68॥
ಪರಮಕಾಷ್ಠೆ ಎಂದರೆ (ಸರ್ವಶ್ರೇಷ್ಠನೆಂದರೆ) ಇವನೇ. ಶ್ರೇಷ್ಠವಾದ ಕಲೆ ಎಂದರೆ ಇವನೇ. ಶ್ರೇಷ್ಠವಾದ ಸಿದ್ಧಿ ಎಂದರೆ ಇವನೇ.

ಶ್ರೇಷ್ಠವಾದ ಗತಿ ಎಂದರೂ ಇವನೇ.
ಇಯಂ ಸಾ ಪರಮಾ ಶಾಂತಿರಿಯಂ ಸಾ ನಿರ್ವೃತಿಃ ಪರಾ |
ಯಂ ಪ್ರಾಪ್ಯ ಕೃತಕೃತ್ಯಾಃ ಸ್ಮ ಇತ್ಯಮನ್ಯಂತ ಯೋಗಿನಃ ॥69॥
ಪರಮಶಾಂತಿಯು ಇವನೇ. ಪರಮಸುಖವು ಇವನೇ. ಇವನನ್ನು ಹೊಂದಿ ನಾವು ಕೃತಕೃತ್ಯರಾಗಿದ್ದೇವೆ ಎಂದು ಯೋಗಿಗಳು ತಿಳಿದಿದ್ದಾರೆ.
ಇಯಂ ತುಷ್ಟಿರಿಯಂ ಸಿದ್ಧಿರಿಯಂ ಶ್ರುತಿರಿಯಂ ಸ್ಮೃತಿಃ |
ಅಧ್ಯಾತ್ಮಗತಿನಿಷ್ಠಾನಾಂ ವಿದುಷಾಂ ಪ್ರಾಪ್ತಿರವ್ಯಯಾ ॥70॥
ಇವನೇ ತುಷ್ಟಿ, ಇವನೇ ಸಿದ್ಧಿ, ಇವನೇ ಶ್ರುತಿ-ಸ್ಮೃತಿರೂಪನಾದವನು. ಅಧ್ಯಾತ್ಮ ಮಾರ್ಗನಿಷ್ಠರಾದ ಇವನೇ ವಿದ್ವಾಂಸರಿಗೆ ಶಾಶ್ವತನಾಗಿ ಪ್ರಾಪ್ಯನಾದವನು.
ಯಜತಾಂ ಯಜ್ಞಕಾಮಾನಾಂ ಯಜ್ಞೈರ್ವಿಪುಲದಕ್ಷಿಣೈಃ |
ಯಾ ಗತಿರ್ದೈವತೈರ್ದಿವ್ಯಾ ಸಾ ಗತಿಸ್ತ್ವಂ ಸನಾತನ ॥71॥
ಎಲೈ ಸನಾತನನೇ, ಯಜ್ಞವನ್ನು ಮಾಡಲು ಬಯಸಿ ವಿಪುಲದಕ್ಷಿಣೆಗಳನ್ನು ನೀಡುವ ದೇವತೆಗಳಿಗೆ ಯಾವ ಗತಿಯುಂಟಾಗುತ್ತದೆಯೋ ನೀನು ಅಂತಹ ಗತಿಪ್ರದನಾದವನು.
ಸಮ್ಯಗ್ ಯೋಗಜಪೈಃ ಶಾಂತಿರ್ನಿಯಮೈರ್ದೇಹಪಾತನೈಃ |
ತಪ್ಯತಾಂ ಯಾ ಗತಿರ್ದೇವ ವೈರಾಜೀ ಸಾ ಗತಿರ್ಭವಾನ್ ॥72॥
ಚೆನ್ನಾದ ಯೋಗ-ಜಪಗಳಿಂದಲೂ, ಶಾಂತಿ-ನಿಯಮ-ದೇಹ ದಂಡನೆಗಳಿಂದಲೂ, ತಪಸ್ಸನ್ನು ಮಾಡುವವರಿಗೆ ಬ್ರಹ್ಮಾಂಡದಲ್ಲಿ ಯಾವ ಗತಿಯಾಗುತ್ತದೆಯೋ, ಎಲೈ ದೇವನೇ, ನೀನೇ ಆ ಗತಿಪ್ರದನಾದವನು.
ಕರ್ಮನ್ಯಾಸಕೃತಾನಾಂ ಚ ವಿರಕ್ತಾನಾಂ ತತಸ್ತತಃ |
ಯಾ ಗತಿರ್ಬ್ರಹ್ಮಸದನೇ ಸಾ ಗತಿಸ್ತ್ವಂ ಸನಾತನ ॥73॥
ಎಲೈ ಸನಾತನನೇ, ಕರ್ಮನ್ಯಾಸವನ್ನು ಮಾಡಿ, ಎಲ್ಲದರಿಂದಲೂ ವಿರಕ್ತರಾದ ಸಂನ್ಯಾಸಿಗಳಿಗೆ ಬ್ರಹ್ಮಸದನದಲ್ಲಿ ಯಾವ ಗತಿಯಾಗುತ್ತದೆಯೋ ಅಂತಹ ಗತಿಪ್ರದನಾದವನು ನೀನು.
ಅಪುನರ್ಭವಕಾಮಾನಾಂ ವೈರಾಗ್ಯೇ ವರ್ತತಾಂ ಪರೇ |
ವಿಕೃತೀನಾಂ ಲಯಾನಾಂ ಚ ಸಾ ಗತಿಸ್ತ್ವಂ ಸನಾತನ ॥74॥
ಮೋಕ್ಷವನ್ನು ಬಯಸಿ ವಿರಕ್ತರಾದವರಿಗೂ ಶ್ರೇಷ್ಠವಾದ ವೈರಾಗ್ಯವನ್ನು ಹೊಂದಿದವರಿಗೂ, ವಿಕಾರಗಳಿಗೂ ಮತ್ತು ಲಯಗಳಿಗೂ (ವಿನಾಶಗಳಿಗೂ) ನೀನೇ ಗತಿಯಾದವನು.
ಜ್ಞಾನವಿಜ್ಞಾನನಿಷ್ಠಾನಾಂ ನಿರುಪಾಖ್ಯಾ ನಿರಂಜನಾ |
ಕೈವಲ್ಯಾ ಯಾ ಗತಿರ್ದೇವ ಪರಮಾ ಸಾ ಗತಿರ್ಭವಾನ್ ॥75॥
ಜ್ಞಾನ-ವಿಜ್ಞಾನನಿಷ್ಠರಾದವರಿಗೆ ವರ್ಣಿಸಲು ಅಸಾಧ್ಯವಾದ, ದೋಷದೂರವಾದ ಯಾವ ಶ್ರೇಷ್ಠಗತಿಯುಂಟಾಗುತ್ತದೆಯೋ ಅಂತಹ ಶ್ರೇಷ್ಠ ಗತಿಯನ್ನು ಕೊಡುವವನು ನೀನು.
ವೇದಶಾಸ್ತ್ರಪುರಾಣೋಕ್ತಾಃ ಪಂಚೈತಾ ಗತಯಃ ಸ್ಮೃತಾಃ |
ತ್ವತ್ಪ್ರಸಾದಾದ್ಧಿ ಲಭ್ಯಂತೇ ನ ಲಭ್ಯಂತೇಽನ್ಯಥಾ ವಿಭೋ ॥76॥
ವೇದ-ಶಾಸ್ತ್ರ-ಪುರಾಣಗಳಲ್ಲಿ ಈ ಐದು ಗತಿಗಳು ಹೇಳಲ್ಪಟ್ಟಿವೆ. ಎಲೈ ವಿಭುವೇ, ಇವು ನಿನ್ನ ಅನುಗ್ರಹದಿಂದ ಲಭ್ಯವಾಗುತ್ತವೆ. ಬೇರೆ ರೀತಿಯಲ್ಲಿ ಲಭ್ಯವಾಗುವುದಿಲ್ಲ.
ಇತಿ ತಂಡಿಸ್ತಪೋಯೋಗಾತ್ ತುಷ್ಟಾವೇಶಾನಮವ್ಯಯಮ್ |
ಜಗೌ ಚ ಪರಮಂ ಬ್ರಹ್ಮ ಯತ್ಪುರಾ ಲೋಕಕೃಜ್ಜಗೌ ॥77॥
ಹೀಗೆ ತಂಡಿಯು ತಪೋಯೋಗದಿಂದ ಅವ್ಯಯನಾದ ಈಶಾನನನ್ನು ಸ್ತೋತ್ರ ಮಾಡಿದನು. ಹಿಂದೆ ಲೋಕಕರ್ತನಾದ ಬ್ರಹ್ಮನು ಮಾಡಿದ ಪರಮವೇದವನ್ನು ಗಾನ ಮಾಡಿದನು.
ಉಪಮನ್ಯುಃ
ಏವಂ ಸ್ತುತೋ ಮಹಾದೇವಸ್ತಂಡಿನಾ ಬ್ರಹ್ಮವಾದಿನಾ |
ಉವಾಚ ಭಗವಾನ್ ದೇವ ಉಮಯಾ ಸಹಿತಃ ಪ್ರಭುಃ ॥78॥
ಉಪಮನ್ಯು ಹೀಗೆ ಬ್ರಹ್ಮವಾದಿಯಾದ ತಂಡಿಯಿಂದ ಸ್ತೋತ್ರ ಮಾಡಲ್ಪಟ್ಟ ಉಮಾಸಹಿತನಾದ ಭಗವಂತನಾದ ಮಹಾದೇವನು ತಂಡಿಯನ್ನು ಕುರಿತು ಹೇಳಿದನು.
ಬ್ರಹ್ಮಾ ಶತಕ್ರತುರ್ವಿಷ್ಣುರ್ವಿಶ್ವೇದೇವಾ ಮಹರ್ಷಯಃ |
ನ ವಿದುಸ್ತ್ವಾಮಿತಿ ತತಸ್ತುಷ್ಟಃ ಪ್ರೋವಾಚ ತಂ ಶಿವಃ ॥79॥
ಬ್ರಹ್ಮದೇವನು, ಇಂದ್ರನು, ವಿಷ್ಣುವು, ವಿಶ್ವೇದೇವತೆಗಳು, ಮಹರ್ಷಿಗಳು ನಿನ್ನನ್ನು ತಿಳಿಯುವುದಿಲ್ಲ ಎಂದು ಹೇಳಿದ ಕಾರಣದಿಂದ ಸಂತುಷ್ಟನಾದ ಶಿವನು ಅವನನ್ನು ಕುರಿತು ಮಾತನಾಡಿದನು.
ಅಕ್ಷಯಶ್ಚಾವ್ಯಯಶ್ಚೈವ ಭವಿತಾ ದುಃಖವರ್ಜಿತಃ |
ಯಶಸ್ವೀ ತೇಜಸಾ ಯುಕ್ತೋ ದಿವ್ಯಜ್ಞಾನಸಮನ್ವಿತಃ ॥80॥
ನೀನು ಅಕ್ಷಯವಾದುದನ್ನು ಮತ್ತು ಅವ್ಯಯವಾದುದನ್ನು ಹೊಂದುತ್ತೀಯೆ. ದುಃಖರಹಿತನಾಗುತ್ತೀಯೆ. ಯಶಸ್ವಿಯೂ, ತೇಜಸ್ವಿಯೂ, ದಿವ್ಯ ಜ್ಞಾನ ಸಮನ್ವಿತನೂ ಆಗುವಿ.

ಋಷೀಣಾಮಭಿಗಮ್ಯಶ್ಚ ಸೂತ್ರಕರ್ತಾ ಸುತಸ್ತವ |
ಮತ್ಪ್ರಸಾದಾದ್ ದ್ವಿಜಶ್ರೇಷ್ಠ ಭವಿಷ್ಯತಿ ನ ಸಂಶಯಃ ॥81॥
ಋಷಿಗಳು ನಿನ್ನ ಬಳಿಗೆ ಬರುತ್ತಾರೆ. ನಿನ್ನ ಪುತ್ರನು ಸೂತ್ರಕರ್ತನಾಗುತ್ತಾನೆ. ಎಲೈ ದ್ವಿಜಶ್ರೇಷ್ಠನೇ, ನನ್ನ ಅನುಗ್ರಹದಿಂದ ಇವೆಲ್ಲವೂ ಆಗುವವು. ಇದರಲ್ಲಿ ಸಂಶಯವಿಲ್ಲ.
ಕಂ ವಾ ಕಾಮಂ ದದಾಮ್ಯದ್ಯ ಬ್ರೂಹಿ ಯದ್ವತ್ಸ ಕಾಂಕ್ಷಸೇ |
ಪ್ರಾಂಜಲಿಃ ಸ ಉವಾಚೇದಂ ತ್ವಯಿ ಭಕ್ತಿರ್ದೃಢಾಸ್ತು ಮೇ ॥82॥
ವತ್ಸನೇ, ನೀನು ಬೇರೆ ಏನನ್ನು ಬಯಸುತ್ತೀಯೋ ಅಂತಹ ಯಾವ ವರವನ್ನು ಈ ದಿನ ಕೊಡಲಿ ಎಂದು ಹೇಳು ಎಂದು ಶಿವನು ಹೇಳಿದನು. ತಂಡಿಯು ಕೈಗಳನ್ನು ಮುಗಿದು `ನನಗೆ ನಿನ್ನಲ್ಲಿ ದೃಢವಾದ ಭಕ್ತಿ ಇರಲಿ' ಎಂದು ಕೇಳಿದನು.
ಏವಂ ದತ್ತ್ವಾ ವರಂ ದೇವೋ ವಂದ್ಯಮಾನಃ ಸುರರ್ಷಿಭಿಃ |
ಸ್ತೂಯಮಾನಶ್ಚ ವಿಬುಧೈಸ್ತತ್ರೈವಾಂತರಧೀಯತ ॥83॥
ಹೀಗೆ ದೇವನು ವರವನ್ನು ಕೊಟ್ಟು, ದೇವತೆಗಳಿಂದಲೂ ಮತ್ತು ಋಷಿಗಳಿಂದಲೂ ನಮಸ್ಕರಿಸಲ್ಪಟ್ಟು ಮತ್ತು ಸ್ತೋತ್ರ ಮಾಡಲ್ಪಟ್ಟು, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಅಂತರ್ಹಿತೇ ಭಗವತಿ ಸಾನುಗೇ ಯಾದವೇಶ್ವರ |
ಋಷಿರಾಶ್ರಮಮಾಗಮ್ಯ ಮಮೈತತ್ಪ್ರೋಕ್ತವಾನಿಹ ॥84॥
ಎಲೈ ಯಾದವೇಶ್ವರನೇ, ಭಗವಂತನು ಪರಿವಾರ ಸಹಿತನಾಗಿ ಅಂತರ್ಧಾನವನ್ನು ಹೊಂದಿದ ಮೇಲೆ ಋಷಿಯು ಈ ಆಶ್ರಮಕ್ಕೆ ಬಂದು ನನಗೆ ಇದನ್ನು ಹೇಳಿದನು.
ಯಾನಿ ಚ ಪ್ರಥಿತಾನ್ಯಾದೌ ತಂಡಿರಾಖ್ಯಾತವಾನ್ ಮಮ |
ನಾಮಾನಿ ಮಾನವಶ್ರೇಷ್ಠ ತಾನಿ ತ್ವಂ ಶೃಣು ಸಿದ್ಧಯೇ ॥85॥
ಎಲೈ ಮಾನವಶ್ರೇಷ್ಠನೇ, ತಂಡಿಯು ಹಿಂದೆ ಯಾವ ಪ್ರಖ್ಯಾತವಾದ ನಾಮಗಳನ್ನು ನನಗೆ ಹೇಳಿದನೋ ನೀನು ನಿನ್ನ ಸಿದ್ಧಿಗಾಗಿ ಆ ನಾಮಗಳನ್ನು ಕೇಳು.
ದಶ ನಾಮಸಹಸ್ರಾಣಿ ವೇದೇಷ್ವಾಹ ಪಿತಾಮಹಃ |
ಶರ್ವಸ್ಯ ಶಾಸ್ತ್ರೇಷು ತಥಾ ದಶ ನಾಮಶತಾನಿ ವೈ ॥86॥
ಪಿತಾಮಹರಾದ ಬ್ರಹ್ಮದೇವರು ವೇದಗಳಲ್ಲಿ ದಶಸಹಸ್ರನಾಮಗಳನ್ನು ಹೇಳಿದ್ದಾರೆ. ಹಾಗೆ ಶಾಸ್ತ್ರಗಳಲ್ಲಿ ಶಿವನಿಗೆ ಹತ್ತು ಶತ (ಸಾವಿರ) ನಾಮಗಳು ಹೇಳಲ್ಪಟ್ಟಿವೆ.
ಗುಹ್ಯಾನೀಮಾನಿ ನಾಮಾನಿ ತಂಡಿರ್ಭಗವತೋಽಚ್ಯುತ |
ದೇವಪ್ರಸಾದಾದ್ ದೇವೇಶ ಪುರಾ ಪ್ರಾಹ ಮಹಾತ್ಮನೇ ॥87॥
ಎಲೈ ಅಚ್ಯುತನೇ, ಈ ನಾಮಗಳೆಲ್ಲವೂ ರಹಸ್ಯವಾದವು. ಎಲೈ ದೇವೇಶನೇ, ಹಿಂದೆ ತಂಡಿಯು ಆ ದೇವನ ಅನುಗ್ರಹದಿಂದ ಮಹಾತ್ಮನಾದ ವಾಸುದೇವನಿಗೆ ಆ ನಾಮಗಳನ್ನು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಈಶ್ವರದರ್ಶನಂ ನಾಮ ಪಂಚತ್ರಿಂಶೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತಾರನೆಯ ಅಧ್ಯಾಯ
ಶಿವಸಹಸ್ರನಾಮಾವಲಿಃ
ವಾಸುದೇವಃ
ತತಃ ಸ ಪ್ರಯತೋ ಭೂತ್ವಾ ಮಮ ತಾತ ಯುಧಿಷ್ಠಿರ |
ಪ್ರಾಂಜಲಿಃ ಪ್ರಾಹ ವಿಪ್ರರ್ಷಿರ್ನಾಮಸಂಹಾರಮಾದಿತಃ ॥1॥
ವಾಸುದೇವ ಎಲೈ ಪ್ರೀತಿಪಾತ್ರನಾದ ಯುಧಿಷ್ಠಿರನೇ, ಅನಂತರ ಆ ವಿಪ್ರರ್ಷಿಯು ಕೈಗಳನ್ನು ಮುಗಿದು, ಮನಸ್ಸನ್ನು ಏಕಾಗ್ರೀಕರಿಸಿ, ಶಿವನ ನಾಮಸಮುದಾಯವನ್ನು ಮೊದಲಿನಿಂದಲೂ ಹೇಳಿದನು.
ಉಪಮನ್ಯುಃ
ಬ್ರಹ್ಮಪ್ರೋಕ್ತೈರ್ಋಷಿಪ್ರೋಕ್ತೈರ್ವೇದವೇದಾಂಗಸಂಭವೈಃ |
ಸರ್ವಲೋಕೇಷು ವಿಖ್ಯಾತೈಃ ಸ್ಥಾಣುಂ ಸ್ತೋಷ್ಯಾಮಿ ನಾಮಭಿಃ ॥2॥
ಉಪಮನ್ಯು ಬ್ರಹ್ಮದೇವರಿಂದ ಹೇಳಲ್ಪಟ್ಟ, ಋಷಿಗಳಿಂದ ಹೇಳಲ್ಪಟ್ಟ, ವೇದ-ವೇದಾಂತಗಳಲ್ಲಿ ಇರುವ, ಸರ್ವಲೋಕಗಳಲ್ಲಿ ಪ್ರಸಿದ್ಧವಾದ ನಾಮಗಳಿಂದ ಸ್ಥಾಣುವನ್ನು ಸ್ತೋತ್ರ ಮಾಡುವೆನು.
ಮಹದ್ಭಿರ್ವಿಹಿತೈಃ ಸತ್ಯೈಃ ಸಿದ್ಧೈಃ ಸರ್ವಾರ್ಥಸಾಧಕೈಃ |
ಋಷಿಣಾ ತಂಡಿನಾ ಭಕ್ತ್ಯಾ ಕೃತೈರ್ದೇವಕೃತಾತ್ಮನಾ ॥3॥
ಮಹಾತ್ಮರು ವಿಧಾನ ಮಾಡಿದ, ಸರ್ವಾರ್ಥ ಸಾಧಕವಾದ, ಆ ದೇವನ ಸನ್ನಿಧಾನ ಪಾತ್ರನಾದ ತಂಡಿಯೆಂಬ ಋಷಿಯು ಭಕ್ತಿಯಿಂದ ಮಾಡಿದ ನಾಮಗಳನ್ನು ಹೇಳುತ್ತೇನೆ.
ಯಥೋಕ್ತೈರ್ಲೋಕವಿಖ್ಯಾತೈರ್ಮುನಿಭಿಸ್ತತ್ತ್ವದರ್ಶಿಭಿಃ |
ಪ್ರವರಂ ಪ್ರಥಮಂ ಸ್ವರ್ಗ್ಯಂ ಸರ್ವಭೂತಹಿತಂ ಶುಭಮ್ |

ಶ್ರುತೈಃ ಸರ್ವತ್ರ ಜಗತಿ ಬ್ರಹ್ಮಲೋಕಾವತಾರಿತೈಃ ॥4॥
ಲೋಕವಿಖ್ಯಾತರಾದ, ತತ್ತ್ವದರ್ಶಿಗಳಾದ ಋಷಿಗಳಿಂದ ಹೇಳಲ್ಪಟ್ಟಂತೆ ಅತ್ಯಂತ ಶ್ರೇಷ್ಠವೂ, ನಿತ್ಯವೂ, ಸ್ವರ್ಗಪ್ರದವೂ, ಸರ್ವಪ್ರಾಣಿಗಳಿಗೆ ಹಿತವೂ ಮತ್ತು ಶುಭವೂ ಆದ ಬ್ರಹ್ಮಲೋಕದಿಂದ ಕೆಳಗೆ ಇಳಿದು ಬಂದು ಜಗತ್ತಿನಲ್ಲಿ ಎಲ್ಲ ಕಡೆ ಶ್ರುತವಾದ ನಾಮಗಳನ್ನು ಹೇಳುತ್ತೇನೆ.
ಯಚ್ಚೈತತ್ ಪರಮಂ ಗುಹ್ಯಂ ಬ್ರಹ್ಮಪ್ರೋಕ್ತಂ ಸನಾತನಮ್ |
ವಕ್ಷ್ಯೇ ಯದುಕುಲಶ್ರೇಷ್ಠ ಶೃಣುಷ್ವಾವಹಿತೋ ಮಮ ॥5॥
ಎಲೈ ಯದುಕುಲಶ್ರೇಷ್ಠನೇ, ಬ್ರಹ್ಮನಿಂದ ಹೇಳಲ್ಪಟ್ಟ, ಸನಾತನವಾದ, ಅತ್ಯಂತ ರಹಸ್ಯವಾದ ಯಾವ ನಾಮಗಳನ್ನು ಹೇಳುವೆನೋ ಅದನ್ನು ನನ್ನಿಂದ ಅವಧಾನಪೂರ್ವಕವಾಗಿ (ಲಕ್ಷ್ಯಗೊಟ್ಟು) ಕೇಳು.
ಪರತ್ವೇನ ಭವಂ ದೇವಂ ಭಕ್ತಸ್ತ್ವಂ ಪರಮೇಶ್ವರಮ್ |
ತೇನ ತೇ ಶ್ರಾವಯಿಷ್ಯಾಮಿ ಯತ್ತದ್ ಬ್ರಹ್ಮ ಸನಾತನಮ್ ॥6॥
ನೀನು ಪರಮೇಶ್ವರನನ್ನು ಶ್ರೇಷ್ಠನೆಂದು ತಿಳಿಯುವ ಭಕ್ತನಾಗಿದ್ದೀಯೆ. ಆದ್ದರಿಂದ ಸನಾತನವಾದ ಆ ಸ್ತೋತ್ರವನ್ನು ನಿನಗೆ ಶ್ರವಣ ಮಾಡಿಸುವೆನು.
ನ ಶಕ್ಯಂ ವಿಸ್ತರಾತ್ಕೃತ್ಸ್ನಂ ವಕ್ತುಂ ಶರ್ವಸ್ಯ ಕೇನಚಿತ್ |
ಯುಕ್ತೇನಾಪಿ ವಿಭೂತೀನಾಮಪಿ ವರ್ಷಶತೈರಪಿ ॥7॥
ಶಿವನ ವಿಭೂತಿಗಳ ಸಮಗ್ರವಾದ ವಿಸ್ತಾರವನ್ನು ಯಾವನೂ ನೂರು ವರ್ಷಗಳಿಂದಲೂ ಹೇಳಲು ಸಾಧ್ಯವಿಲ್ಲ.
ಯಸ್ಯಾದಿರ್ಮಧ್ಯಮಂತಶ್ಚ ಸುರೈರಪಿ ನ ಗಮ್ಯತೇ |
ಕಸ್ತಸ್ಯ ಶಕ್ನುಯಾದ್ ವಕ್ತುಂ ಗುಣಾನ್ ಕಾರ್ತ್ಸ್ನ್ಯೇನ ಮಾಧವ ॥8॥
ಎಲೈ ಮಾಧವನೇ, ಯಾವನ ಆದಿ, ಅಂತ್ಯ, ಮಧ್ಯಗಳನ್ನು ದೇವತೆಗಳು ತಿಳಿಯಲಾರರೋ ಅಂತಹ ಅವನ ಗುಣಗಳನ್ನು ಪೂರ್ಣವಾಗಿ ಯಾವನು ಹೇಳಿಯಾನು?
ಕಿಂ ತು ದೇವಸ್ಯ ಮಹತಃ ಸಂಕ್ಷಿಪ್ತಾರ್ಥಪದಾಕ್ಷರಮ್ |
ಶಕ್ತಿತಶ್ಚರಿತಂ ವಕ್ಷ್ಯೇ ಪ್ರಸಾದಾತ್ ತಸ್ಯ ಚೈವ ಹಿ ॥9॥
ಆದರೆ ಆ ಮಹಾತ್ಮನಾದ ದೇವನ ಅನುಗ್ರಹದಿಂದ ಸಂಕ್ಷಿಪ್ತವಾದ ಅರ್ಥಗಳನ್ನು, ಪದಗಳನ್ನು ಮತ್ತು ಅಕ್ಷರಗಳನ್ನು ಹೊಂದಿದ ಅವನ ಚರಿತ್ರೆಯನ್ನು ನಾನು ನನ್ನ ಶಕ್ತಿಯಿದ್ದಷ್ಟು ಹೇಳುವೆನು.
ಅಪ್ರಾಪ್ಯೇಹ ತತೋಽನುಜ್ಞಾಂ ನ ಶಕ್ಯಃ ಸ್ತೋತುಮೀಶ್ವರಃ |
ಯದಾ ತೇನಾಭ್ಯನುಜ್ಞಾತಃ ಸ್ತುವತ್ಯೇವ ಸದಾ ಭವಮ್ ॥10॥
ಅವನ ಅನುಮತಿಯನ್ನು ಪಡೆಯದೆ ಯಾರೂ ಈಶ್ವರನನ್ನು ಸ್ತೋತ್ರ ಮಾಡಲಾರರು. ಅವನ ಅನುಮತಿಯನ್ನು ಪಡೆದರೆ ಮಾತ್ರ ಅವನನ್ನು ಸ್ತೋತ್ರ ಮಾಡುವರು.
ಅನಾದಿನಿಧನಸ್ಯಾಹಂ ಸರ್ವಯೋನೇರ್ಮಹಾತ್ಮನಃ |
ನಾಮ್ನಾಂ ಕಂಚಿತ್ಸಮುದ್ದೇಶಂ ವಕ್ಷ್ಯೇ ಹ್ಯವ್ಯಕ್ತಯೋನಿನಃ ॥11॥
ಅನಾದಿನಿಧನನೂ, ಸರ್ವಕಾರಣನೂ, ಮಹಾತ್ಮನೂ, ಅವ್ಯಕ್ತ ಯೋನಿಯೂ ಆದ ಅವನ ಕೆಲವು ನಾಮ ಸಮೂಹಗಳನ್ನು ಹೇಳುವೆನು.
ವರದಸ್ಯ ವರೇಣ್ಯಸ್ಯ ವಿರೂಪಾಕ್ಷಸ್ಯ ಧೀಮತಃ |
ಶೃಣು ನಾಮಸಮುದ್ದೇಶಂ ಯದುಕ್ತಂ ಪದ್ಮಯೋನಿನಾ ॥12॥
ಬ್ರಹ್ಮದೇವರು ಹೇಳಿದ ವರಪ್ರದನೂ, ವರೇಣ್ಯನೂ, ವಿರೂಪಾಕ್ಷನೂ, ಮೇಧಾವಿಯೂ ಆದ ಅವನ ನಾಮಸಮೂಹವನ್ನು ಕೇಳು.
ದಶ ನಾಮಸಹಸ್ರಾಣಿ ಯಾನ್ಯಾಹ ಪ್ರಪಿತಾಮಹಃ |
ತಾನಿ ನಿರ್ಮಥ್ಯ ಮನಸಾ ದಧ್ನೋ ಘೃತಮಿವೋದ್ಧೃತಮ್ ॥13॥
ಗಿರೇಃ ಸಾರಂ ಯಥಾ ಹೇಮಂ ಪುಷ್ಪಾತ್ಸಾರಂ ಯಥಾ ಮಧು |
ಘೃತಾತ್ಸಾರಂ ಯಥಾ ಮಂಡಸ್ತಥೈತತ್ಸಾರಮುದ್ಧೃತಮ್ ॥14॥
ಸರ್ವಪಾಪಾಪಹಮಿದಂ ಚತುರ್ವೇದಸಮನ್ವಿತಮ್ |
ಪ್ರಯತ್ನೇನಾಧಿಗಂತವ್ಯಂ ಧಾರ್ಯಂ ಚ ಪ್ರಯತಾತ್ಮನಾ |
ಶಾಂತಿಕಂ ಪೌಷ್ಟಿಕಂ ಚೈವ ರಕ್ಷೋಘ್ನಂ ಪಾವನಂ ಮಹತ್ ॥15॥
ಪ್ರಪಿತಾಮಹರಾದ ಬ್ರಹ್ಮದೇವರು ಯಾವ ಹತ್ತು ಸಹಸ್ರನಾಮಗಳನ್ನು ಹೇಳಿದರೋ ಅವುಗಳನ್ನು ಮನಸ್ಸಿನಲ್ಲೇ ಮಥನ ಮಾಡಿ, ದಧಿಯಿಂದ ಘೃತವನ್ನು ತೆಗೆದಂತೆ, ಪರ್ವತದಿಂದ ಸಾರವಾದ ಸುವರ್ಣವನ್ನು ತೆಗೆದಂತೆ, ಪುಷ್ಪದಿಂದ ಸಾರವಾದ ಮಧುವನ್ನು ತೆಗೆದಂತೆ, ಘೃತದಿಂದ ಸಾರವಾದ ಕೆನೆಯನ್ನು ತೆಗೆದಂತೆ ಸಾರರೂಪವಾಗಿ ಈ ಸಹಸ್ರನಾಮಗಳು ಉದ್ಧರಿಸಲ್ಪಟ್ಟಿವೆ. ಇದು ಸರ್ವಪಾಪ ಪರಿಹಾರಕವಾದುದು. ಚತುರ್ವೇದಗಳಿಗೆ ಸಮ್ಮತವಾದುದು. ಪ್ರಯತ್ನಪೂರ್ವಕವಾದುದು ಮತ್ತು ನಿಷ್ಠೆಯಿಂದ ಧರಿಸಬೇಕಾದುದು. ಇದು ಶಾಂತಿ, ಪುಷ್ಟಿ, ರಕ್ಷೋವಿನಾಶಗಳನ್ನುಂಟು ಮಾಡುವ ದೊಡ್ಡ ಸ್ತೋತ್ರ.
ಇದಂ ಭಕ್ತಾಯ ದಾತವ್ಯಂ ಶ್ರದ್ದಧಾನಾಸ್ತಿಕಾಯ ಚ |
ನಾಶ್ರದ್ದಧಾನರೂಪಾಯ ನಾಸ್ತಿಕಾಯಾಜಿತಾತ್ಮನೇ ॥16॥
ಇದನ್ನು ಭಕ್ತಿಯುಳ್ಳ, ಶ್ರದ್ಧೆಯುಳ್ಳ, ಆಸ್ತಿಕ್ಯಬುದ್ಧಿಯುಳ್ಳ ಪುರುಷನಿಗೆ ಉಪದೇಶಿಸಬೇಕು. ಶ್ರದ್ಧೆಯಿಲ್ಲದ ನಾಸ್ತಿಕನಿಗೆ, ಮನೋಜಯವಿಲ್ಲದವನಿಗೆ ಉಪದೇಶಿಸಬಾರದು.

ಯಶ್ಚಾಭ್ಯಸೂಯತೇ ದೇವಂ ಭೂತಾತ್ಮಾನಂ ಪಿನಾಕಿನಮ್ |
ಸ ಕೃಷ್ಣ ನರಕಂ ಯಾತಿ ಸಹ ಪೂರ್ವೈಃ ಸಹಾನುಗೈಃ ॥17॥
ಎಲೈ ಕೃಷ್ಣನೇ, ಯಾವನು ಭೂತಸ್ವಾಮಿಯೂ, ಪಿನಾಕಧಾರಿಯೂ ಆದ ದೇವನನ್ನು ದ್ವೇಷಿಸುತ್ತಾನೆಯೋ ಅವನು ತನ್ನ ಪೂರ್ವಜರಿಂದ ಮತ್ತು ಅನಂತರ ಜನಿಸುವವರಿಂದ ಕೂಡಿಕೊಂಡು ನರಕಕ್ಕೆ ಹೋಗುತ್ತಾನೆ.
ಇದಂ ಧ್ಯಾನಮಿದಂ ಯೋಗಮಿದಂ ಜ್ಞಾನಮನುತ್ತಮಮ್ |
ಇದಂ ಜಪ್ಯಮಿದಂ ಧ್ಯೇಯಂ ರಹಸ್ಯಮಿದಮುತ್ತಮಮ್ |
ಇದಂ ಜ್ಞಾತ್ವಾಽಂತಕಾಲೇಽಪಿ ಗಚ್ಛೇದ್ಧಿ ಪರಮಾಂ ಗತಿಮ್ ॥18॥
ಧ್ಯಾನವೆಂದರೆ ಇದು (ಈ ಸ್ತೋತ್ರ), ಇದೇ ಯೋಗ. ಇದೇ ಶ್ರೇಷ್ಠವಾದ ಜ್ಞಾನ. ಇದೇ ಜಪಿಸಲ್ಪಡಬೇಕಾದುದು. ಇದೇ ಧ್ಯಾನ ಮಾಡಲ್ಪಡಬೇಕಾದುದು. ಇದು ಶ್ರೇಷ್ಠವಾದ ರಹಸ್ಯ. ಮರಣಕಾಲದಲ್ಲಿ ಇದನ್ನು ತಿಳಿದರೆ ಶ್ರೇಷ್ಠಗತಿಯನ್ನು ಹೊಂದುವವನು.
ಪವಿತ್ರಂ ಮಂಗಲಂ ಪುಣ್ಯಂ ಕಲ್ಯಾಣಮಿದಮುತ್ತಮಮ್ |
ನಿಗದಿಷ್ಯೇ ಮಹಾಬಾಹೋ ಸ್ತವಾನಾಮುತ್ತಮಂ ಸ್ತವಮ್ ॥19॥
ಎಲೈ ಮಹಾಬಾಹುವೇ, ಪವಿತ್ರವೂ, ಮಂಗಳವೂ, ಪುಣ್ಯಪ್ರದವೂ, ಕಲ್ಯಾಣದಾಯಕವೂ, ಶ್ರೇಷ್ಠವೂ ಆದ ಈ ಉತ್ತಮಸ್ತೋತ್ರವನ್ನು ನಿನಗೆ ಹೇಳುವೆನು.
ಇದಂ ಬ್ರಹ್ಮಾ ಪುರಾ ಕೃತ್ವಾ ಸರ್ವಲೋಕಪಿತಾಮಹಃ |
ಸರ್ವಸ್ತವಾನಾಂ ದಿವ್ಯಾನಾಂ ರಾಜತ್ವೇ ಸಮಕಲ್ಪಯತ್ ॥20॥
ಸರ್ವಲೋಕಪಿತಾಮಹರಾದ ಬ್ರಹ್ಮದೇವರು ಇದನ್ನು ಮೊದಲು ರಚಿಸಿ, ಎಲ್ಲ ದಿವ್ಯಸ್ತೋತ್ರಗಳ ರಾಜನನ್ನಾಗಿ ಕಲ್ಪಿಸಿದರು.
ತದಾಪ್ರಭೃತಿ ಚೈವಾಯಮೀಶ್ವರಸ್ಯ ಮಹಾತ್ಮನಃ |
ಸ್ತವರಾಜೇತಿ ವಿಖ್ಯಾತೋ ಜಗತ್ಯಮರಪೂಜಿತಃ |
ಬ್ರಹ್ಮಲೋಕಾದಯಂ ಚೈವ ಸ್ತವರಾಜೋಽವತಾರಿತಃ ॥21॥
ಅಲ್ಲಿಂದ ಪ್ರಾರಂಭಿಸಿ ಇದು ಮಹಾತ್ಮನಾದ ಈಶ್ವರನ ಸ್ತವರಾಜವೆಂದು ದೇವತೆಗಳಿಂದ ಪೂಜಿತವಾಗಿ ಜಗತ್ತಿನಲ್ಲಿ ಪ್ರಖ್ಯಾತವಾಗಿದೆ. ಈ ಸ್ತವರಾಜವು ಬ್ರಹ್ಮಲೋಕದಿಂದ ಭೂಮಿಗೆ ತರಲ್ಪಟ್ಟಿದೆ.
ಯಸ್ಮಾತ್ ತಂಡಿಃ ಪುರಾ ಪ್ರಾಹ ತೇನ ತಂಡಿಕೃತೋಽಭವತ್ |
ಸ್ವರ್ಗಾಚ್ಚೈವಾತ್ರ ಭೂಲೋಕಂ ತಂಡಿನಾ ಹ್ಯವತಾರಿತಃ ॥22॥
ಇದನ್ನು ತಂಡಿಯು ಮೊದಲು (ಭೂಲೋಕದಲ್ಲಿ) ಹೇಳಿದುದರಿಂದ ಇದನ್ನು ತಂಡಿಕೃತ ಎಂದು ಕರೆಯುತ್ತಾರೆ. ವಸ್ತುತಃ ತಂಡಿಯು ಸ್ವರ್ಗಲೋಕದಿಂದ ಈ ಸ್ತೋತ್ರವನ್ನು ಭೂಲೋಕಕ್ಕೆ ತೆಗೆದುಕೊಂಡು ಬಂದನು.
ಸರ್ವಮಂಗಲಮಂಗಲ್ಯಂ ಸರ್ವಪಾಪಪ್ರಣಾಶನಮ್ |
ನಿಗದಿಷ್ಯೇ ಮಹಾಬಾಹೋ ಸ್ತವಾನಾಮುತ್ತಮಂ ಸ್ತವಮ್ ॥23॥
ಇದು ಎಲ್ಲ ಮಂಗಳಕ್ಕಿಂತಲೂ ಮಂಗಳವಾದುದು. ಎಲ್ಲ ಪಾಪಗಳ ಪರಿಹಾರಕವಾದುದು. ಎಲೈ ಮಹಾಬಾಹುವೇ, ಎಲ್ಲ ಸ್ತೋತ್ರಗಳಲ್ಲೂ ಶ್ರೇಷ್ಠವಾದ ಈ ಸ್ತೋತ್ರವನ್ನು ನಿನಗೆ ಹೇಳುವೆನು.
ಬ್ರಹ್ಮಣಾಮಪಿ ಯದ್ಬ್ರಹ್ಮ ಪರಾಣಾಮಪಿ ಯತ್ಪರಮ್ |
ತೇಜಸಾಮಪಿ ಯತ್ತೇಜಸ್ತಪಸಾಮಪಿ ಯತ್ತಪಃ ॥24॥
ಶಾಂತೀನಾಮಪಿ ಯಾ ಶಾಂತಿರ್ದ್ಯುತೀನಾಮಪಿ ಯಾ ದ್ಯುತಿಃ |
ವೇದಗಳಿಗೂ ಯಾವುದು ವೇದತುಲ್ಯವೋ, ಶ್ರೇಷ್ಠವಾದುದಕ್ಕಿಂತಲೂ ಯಾವುದು ಶ್ರೇಷ್ಠವೋ, ತೇಜಸ್ಸುಗಳಿಗಿಂತ ಯಾವುದು ಹೆಚ್ಚು ತೇಜಸ್ಸುಳ್ಳದ್ದೋ, ತಪಸ್ಸುಗಳಲ್ಲಿ ಯಾವುದು ದೊಡ್ಡ ತಪಸ್ಸೋ, ಶಾಂತಿಗಳಲ್ಲಿ ಯಾವುದು ದೊಡ್ಡ ಶಾಂತಿಯೋ, ಕಾಂತಿಗಳಲ್ಲಿ ಯಾವುದು ಶ್ರೇಷ್ಠ ಕಾಂತಿಯೋ ಅಂತಹದು ಈ ಸ್ತೋತ್ರಗಳಲ್ಲಿ ಸ್ತೋತ್ರರೂಪವಾದ ಶಿವಸಹಸ್ರನಾಮಾವಳಿ.
ದಾಂತಾನಾಮಪಿ ಯೋ ದಾಂತೋ ಧೀಮತಾಮಪಿ ಯಾ ಚ ಧೀಃ ॥
ದೇವಾನಾಮಪಿ ಯೋ ದೇವೋ ಮುನೀನಾಮಪಿ ಯೋ ಮುನಿಃ |
ಯಜ್ಞಾನಾಮಪಿ ಯೋ ಯಜ್ಞಃ ಶಿವಾನಾಮಪಿ ಯಃ ಶಿವಃ ॥26॥
ರುದ್ರಾಣಾಮಪಿ ಯೋ ರುದ್ರಃ ಪ್ರಭುಃ ಪ್ರಭವತಾಮಪಿ |
ಯೋಗಿನಾಮಪಿ ಯೋ ಯೋಗೀ ಕಾರಣಾನಾಂ ಚ ಕಾರಣಮ್ ॥27॥
ಯತೋ ಲೋಕಾಃ ಸಂಭವಂತಿ ನ ಭವಂತಿ ಯತಃ ಪುನಃ |
ಸರ್ವಭೂತಾತ್ಮಭೂತಸ್ಯ ಹರಸ್ಯಾಮಿತತೇಜಸಃ ॥28॥
ಅಷ್ಟೋತ್ತರಸಹಸ್ರಂ ತು ನಾಮ್ನಾಂ ಶರ್ವಸ್ಯ ಮೇ ಶೃಣು |
ಯಚ್ಛ್ರುತ್ವಾ ಮನುಜಶ್ರೇಷ್ಠ ಸರ್ವಾನ್ ಕಾಮಾನವಾಪ್ಸ್ಯಸಿ ॥29॥
ಯಾವನು ದಾಂತರಲ್ಲಿಯೂ ದಾಂತನೋ, ಧೀಮಂತರಲ್ಲಿಯೂ ಧೀಮಂತನೋ, ದೇವತೆಗಳಲ್ಲಿಯೂ ದೇವನೋ, ಋಷಿಗಳಲ್ಲಿಯೂ ಋಷಿಯೋ, ಯಜ್ಞಗಳಿಗೂ ಯಾವನು ಯಜ್ಞನೋ, ರುದ್ರರಿಗೂ ಯಾವನು ರುದ್ರನೋ, ಶಿವರಿಗೂ ಯಾವನು ಶಿವನೋ, ಪ್ರಭುಗಳಿಗೂ ಯಾವನು ಪ್ರಭುವೋ, ಯೋಗಿಗಳಿಗೂ ಯಾವನು ಯೋಗಿಯೋ, ಕಾರಣಗಳಿಗೂ ಯಾವನು ಕಾರಣನೋ, ಯಾವನಿಂದ ಎಲ್ಲ ಲೋಕಗಳು ಸೃಷ್ಟಿಯನ್ನು ಹೊಂದುವವೋ ಅಂತಹ ಸರ್ವಭೂತಾಂತರ್ಯಾಮಿ- ಯಾದ, ಅಮಿತ ಪರಾಕ್ರಮಿಯಾದ ಶಿವನ ಅಷ್ಟೋತ್ತರ ಸಹಸ್ರನಾಮವನ್ನು ಕೇಳುವವನಾಗು. ಎಲೈ ಮನುಜಶ್ರೇಷ್ಠನೇ, ಅದನ್ನು ಕೇಳಿದರೆ ನೀನು ಎಲ್ಲ ಕಾಮಗಳನ್ನು ಹೊಂದುವಿ.

ಸ್ಥಿರಃ ಸ್ಥಾಣುಃ ಪ್ರಭುರ್ಭಾನುಃ ಪ್ರವರೋ ವರದೋ ವರಃ |
ಸರ್ವಾತ್ಮಾ ಸರ್ವವಿಖ್ಯಾತಃ ಸರ್ವಃ ಸರ್ವಕರೋ ಭವಃ ॥30॥
ಸ್ಥಿರ= ನಿತ್ಯ, ಸ್ಥಾಣು= ಜಗತ್ತಿಗೆ ಆಧಾರನಾದವನು, ಪ್ರಭುಃ= ಸಮರ್ಥ, ಭಾನುಃ= ಪ್ರಕಾಶರೂಪನಾದವನು, ಪ್ರವರ= ಸರ್ವಶ್ರೇಷ್ಠನಾದವನು, ವರದಃ= ವರಗಳನ್ನು ಕೊಡುವವನು, ವರಃ= ವರಿಸಲ್ಪಡುವವನು, ಸರ್ವಾತ್ಮಾ= ಸರ್ವವ್ಯಾಪಕನಾದವನು, ಸರ್ವವಿಖ್ಯಾತಃ= ಎಲ್ಲ ಕಡೆಯಲ್ಲಿಯೂ ಪ್ರಸಿದ್ಧನಾದವನು, ಸರ್ವಃ= ಸರ್ವ ವ್ಯಾಪ್ತನಾದವನು, ಸರ್ವಕರಃ= ಎಲ್ಲವನ್ನೂ ಮಾಡುವವನು, ಭವಃ= ಮಂಗಳ ಸ್ವರೂಪನು.
ಜಟೀ ಚರ್ಮೀ ಶಿಖಂಡೀ ಚ ಸರ್ವಾಂಗಃ ಸರ್ವಭಾವನಃ |
ಹರಶ್ಚ ಹರಿಣಾಕ್ಷಶ್ಚ ಸರ್ವಭೂತಹರಃ ಪ್ರಭುಃ ॥31॥
ಜಟೀ= ಜಟಾಧಾರಿ, ಚರ್ಮೀ= ಗಜಚರ್ಮಾಂಬರ, ಶಿಖಂಡೀ= ಶಿಖೆಯನ್ನು ಧರಿಸಿದವನು, ಸರ್ವಾಂಗಃ= ಸಂಪೂರ್ಣವಾದ ಅವಯವವುಳ್ಳವನು, ಸರ್ವಭಾವನಃ= ಸಕಲ ಸೃಷ್ಟಿಕರ್ತಾ, ಹರಃ= ಸಂಹಾರಕ, ಹರಿಣಾಕ್ಷಃ= ಜಿಂಕೆಯ ಕಣ್ಣಿನಂತಹ ಕಣ್ಣುಳ್ಳವನು, ಸರ್ವಭೂತಹರಃ= ಎಲ್ಲ ಪ್ರಾಣಿಗಳನ್ನು ಸಂಹರಿಸುವವನು, ಪ್ರಭುಃ= ಸಮರ್ಥ.
ಪ್ರವೃತ್ತಿಶ್ಚ ನಿವೃತ್ತಿಶ್ಚ ನಿಯತಃ ಶಾಶ್ವತೋ ಧ್ರುವಃ |
ಶ್ಮಶಾನಚಾರೀ ಭಗವಾನ್ ಖಚರೋ ಗೋಚರೋಽರ್ದನಃ ॥32॥
ಪ್ರವೃತ್ತಿಃ= ಪ್ರವರ್ತಕನಾದವನು, ನಿವೃತ್ತಿಃ= ನಿವರ್ತಕನಾದವನು, ನಿಯತಃ= ನೇಮನಿಷ್ಠನಾದವನು, ಶಾಶ್ವತಃ= ನಿತ್ಯ, ಧ್ರುವಃ= ಸ್ಥಿರ, ಸ್ಮಶಾನಚಾರೀ= ಸ್ಮಶಾನದಲ್ಲಿ ಸಂಚರಿಸುವವನು, ಭಗವಾನ್= ಐಶ್ವರ್ಯಾದಿಗುಣವುಳ್ಳವನು, ಖಚರಃ= ಆಕಾಶದಲ್ಲಿ ಸಂಚರಿಸುವವನು, ಗೋಚರಃ= ಭೂಮಿಯಲ್ಲಿ ಸಂಚರಿಸುವವನು, ಅರ್ದನಃ= ಹಿಂಸಿಸುವವನು.
ಅಭಿವಾದ್ಯೋ ಮಹಾಕರ್ಮಾ ತಪಸ್ವೀ ಭೂತಭಾವನಃ |
ಉನ್ಮತ್ತವೇಷಪ್ರಚ್ಛನ್ನಃ ಸರ್ವಲೋಕಪ್ರಜಾಪತಿಃ ॥33॥
ಅಭಿವಾದ್ಯಃ= ನಮಸ್ಕರಿಸಲು ಯೋಗ್ಯನಾದವನು, ಮಹಾಕರ್ಮಾ= ದೊಡ್ಡ ಕಾರ್ಯಗಳನ್ನು ಮಾಡುವವನು, ತಪಸ್ವೀ= ತಪೋನಿಷ್ಠನಾದವನು, ಭೂತಭಾವನಃ= ಪಂಚಮಹಾಭೂತಗಳನ್ನು ಸೃಷ್ಟಿಸುವವನು, ಉನ್ಮತ್ತ ವೇಷ ಪ್ರಚ್ಛನ್ನಃ= ಉನ್ಮತ್ತನಂತೆ ವೇಷವನ್ನು ಧರಿಸಿ, ತನ್ನ ನಿಜಸ್ವರೂಪವನ್ನು ತಿಳಿಯಗೊಡದವನು, ಸರ್ವಲೋಕಪ್ರಜಾಪತಿಃ= ಎಲ್ಲ ಲೋಕಗಳ ಪ್ರಜೆಗಳನ್ನೂ ಪಾಲಿಸುವವನು.
ಮಹಾರೂಪೋ ಮಹಾಕಾಯಃ ಸರ್ವರೂಪೋ ಮಹಾಯಶಾಃ |
ಮಹಾತ್ಮಾ ಸರ್ವಭೂತಶ್ಚ ವಿರೂಪೋ ವಾಮನೋ ಮನುಃ ॥34॥
ಮಹಾರೂಪಃ= ದೊಡ್ಡ ರೂಪವುಳ್ಳವನು, ಮಹಾಕಾಯಃ= ದೊಡ್ಡ ಶರೀರವುಳ್ಳವನು, ಸರ್ವರೂಪಃ= ಎಲ್ಲ ರೂಪಗಳನ್ನು ಹೊಂದಿದವನು, ಮಹಾಯಶಾಃ= ಬಹಳ ಕೀರ್ತಿಯನ್ನು ಪಡೆದವನು, ಮಹಾತ್ಮಾ= ಮಹಾತ್ಮನಾದವನು, ಸರ್ವಭೂತಃ= ಸರ್ವಭೂತಗಳಿಗೆ ಒಡೆಯನಾದವನು, ವಿರೂಪಃ= ವಿರೂಪ ಉಳ್ಳವನು, ವಾಮನಃ= ಸುಂದರ, ಮನುಃ= ಜ್ಞಾನರೂಪ.
ಲೋಕಪಾಲೋಽಂತರ್ಹಿತಾತ್ಮಾ ಪ್ರಸಾದೋ ಹಯಗರ್ದಭಿಃ |
ಪವಿತ್ರಶ್ಚ ಮಹಾಂಶ್ಚೈವ ನಿಯಮೋ ನಿಯಮಮಾಶ್ರಿತಃ ॥35॥
ಲೋಕಪಾಲಃ= ಲೋಕಗಳನ್ನು ರಕ್ಷಿಸುವವನು, ಅಂತರ್ಹಿತಾತ್ಮಾ= ಅದೃಶ್ಯವಾದ ಸ್ವರೂಪವುಳ್ಳವನು, ಪ್ರಸಾದಃ= ಅನುಗ್ರಹಶೀಲನಾದವನು, ಹಯಗರ್ದಭಿಃ= ಅಶ್ವ ಮತ್ತು ಗರ್ದಭಗಳನ್ನು ಹೂಡಿದ ರಥವುಳ್ಳವನು, ಪವಿತ್ರಃ= ಪವಿತ್ರನಾದವನು, ಮಹಾನ್= ದೊಡ್ಡವನಾದವನು, ನಿಯಮಃ= ನಿಯಮರೂಪನಾದವನು, ನಿಯಮಮಾಶ್ರಿತಃ= ನಿಯಮವನ್ನು ಧರಿಸಿದವನು.
ಸರ್ವಕರ್ಮಾ ಸ್ವಯಂಭೂಶ್ಚ ಆದಿರಾದಿಕರೋ ನಿಧಿಃ |
ಸಹಸ್ರಾಕ್ಷೋ ವಿರೂಪಾಕ್ಷಃ ಸೋಮೋ ನಕ್ಷತ್ರಸಾಧಕಃ ॥36॥
ಸರ್ವಕರ್ಮಾ= ಎಲ್ಲ ಕಾರ್ಯಗಳನ್ನು ಮಾಡುವವನು, ಸ್ವಯಂಭೂಃ= ಸ್ವತಂತ್ರ, ಆದಿಃ= ಎಲ್ಲದಕ್ಕೂ ಮೂಲಕಾರಣ, ಆದಿಕರಃ= ಎಲ್ಲದರ ಉತ್ಪತ್ತಿಗೆ ಕಾರಣ, ನಿಧಿಃ= ಐಶ್ವರ್ಯರೂಪನಾದವನು, ಸಹಸ್ರಾಕ್ಷಃ= ಸಾವಿರ ಕಣ್ಣುಳ್ಳವನು, ವಿರೂಪಾಕ್ಷಃ= ವಿರೂಪವಾದ ಕಣ್ಣುಳ್ಳವನು, ಸೋಮಃ= ಚಂದ್ರನಲ್ಲಿರುವವನು, ನಕ್ಷತ್ರಸಾಧಕಃ= ನಕ್ಷತ್ರಗಳನ್ನು ಬೆಳಗುವವನು.
ಚಂದ್ರಸೂರ್ಯಶನಿಃ ಕೇತುರ್ಗ್ರಹೋ ಗ್ರಹಪತಿರ್ವರಃ |
ಅತ್ರಿರತ್ರ್ಯಾ ನಮಸ್ಕರ್ತಾ ಮೃಗಬಾಣಾರ್ಪಣೋಽನಘಃ ॥37॥
ಚಂದ್ರಸೂರ್ಯಶನಿಃ= ಚಂದ್ರ-ಸೂರ್ಯ-ಶನಿಗಳಲ್ಲಿ ಇರುವವನು, ಕೇತುಃ= ಕೇತುವಿನಲ್ಲಿರುವವನು, ಗ್ರಹಃ= ರಾಹುವಿನಲ್ಲಿರುವವನು, ಗ್ರಹಪತಿಃ= ಗ್ರಹಗಳಿಗೆ ಒಡೆಯ, ವರಃ= ಶ್ರೇಷ್ಠ, ಅತ್ರಿಃ= ಅತ್ರಿಗೋತ್ರದ ದುರ್ವಾಸ ಮುನಿಸ್ವರೂಪನು, ಅತ್ರ್ಯಾ ನಮಸ್ಕರ್ತಾ= ಅತ್ರಿಗೆ ನಮಸ್ಕರಿಸುವವನು, ಮೃಗಬಾಣಾರ್ಪಣಃ= ಮೃಗರೂಪನಾದ ವ್ಯಾಧನ ಮೇಲೆ ಬಾಣ ಬಿಟ್ಟವನು, ಅನಘಃ= ದೋಷ ರಹಿತನು.
ಮಹಾತಪಾ ಘೋರತಪಾ ಅದೀನೋ ದೀನಸಾಧಕಃ |
ಸಂವತ್ಸರಕರೋ ಮಂತ್ರಃ ಪ್ರಮಾಣಂ ಪರಮಂ ತಪಃ ॥38॥
ಮಹಾತಪಾಃ= ದೊಡ್ಡ ತಪಸ್ವಿ, ಘೋರತಪಾಃ= ಘೋರ ತಪಸ್ಸನ್ನು ಮಾಡುವವನು, ಅದೀನಃ= ದೈನ್ಯವಿಲ್ಲದವನು, ದೀನಸಾಧಕಃ= ದೀನರ ಕಾರ್ಯವನ್ನು ಸಾಧಿಸುವವನು, ಸಂವತ್ಸರಕರಃ= ಸಂವತ್ಸರಗಳಿಗೆ ಪ್ರವರ್ತಕನು, ಮಂತ್ರಃ= ಜ್ಞಾನ ರೂಪನಾದವನು, ಪ್ರಮಾಣಂ= ಪ್ರಮಾಣ ರೂಪನಾದವನು, ಪರಮಂ ತಪಃ= ಶ್ರೇಷ್ಠವಾದ ತಪೋರೂಪನಾದವನು.
ಯೋಗೀ ಯೋಜ್ಯೋ ಮಹಾಬೀಜೋ ಮಹಾರೇತಾ ಮಹಾಬಲಃ |
ಸುವರ್ಣರೇತಾಃ ಸರ್ವಜ್ಞಃ ಸುಬೀಜೋ ಬೀಜವಾಹನಃ ॥39॥

ಯೋಗೀ= ಯೋಗಿಯಾದವನು, ಯೋಜ್ಯಃ= ಭಕ್ತರಿಂದ ಯೋಗವನ್ನು ಹೊಂದಲ್ಪಡುವವನು, ಮಹಾಬೀಜಃ= ಜಗದ್‌ವೃಕ್ಷಕ್ಕೆ ದೊಡ್ಡ ಬೀಜನಾದವನು, ಮಹಾರೇತಾಃ= ಶ್ರೇಷ್ಠವಾದ ರೇತಸ್ಸನ್ನು ಹೊಂದಿದವನು, ಮಹಾಬಲಃ= ಬಹಳ ಬಲವುಳ್ಳವನು, ಸುವರ್ಣರೇತಾಃ= ಸುವರ್ಣಮಯವಾದ ರೇತಸ್ಸನ್ನು ಹೊಂದಿದವನು, ಸರ್ವಜ್ಞಃ= ಸರ್ವಜ್ಞನಾದವನು, ಸುಬೀಜಃ= ಜಗತ್ತಿಗೆ ಶ್ರೇಷ್ಠವಾದ ಬೀಜವಾದವನು, ಬೀಜವಾಹನಃ= ಬೀಜಗಳನ್ನು ಕೊಂಡೊಯ್ಯುವವನು.

ದಶಬಾಹುಸ್ತ್ವನಿಮಿಷೋ ನೀಲಕಂಠ ಉಮಾಪತಿಃ |
ವಿಶ್ವರೂಪಃ ಸ್ವಯಂಶ್ರೇಷ್ಠೋ ಬಲವೀರೋ ಬಲೋ ಗಣಃ ॥40॥

ದಶಬಾಹುಃ= ಹತ್ತು ಬಾಹುಗಳುಳ್ಳವನು, ಅನಿಮಿಷಃ= ರೆಪ್ಪೆಯನ್ನು ಮುಚ್ಚದವನು, ನೀಲಕಂಠಃ= ಕಂಠದಲ್ಲಿ ನೀಲವರ್ಣವುಳ್ಳವನು, ಉಮಾಪತಿಃ= ಪಾರ್ವತೀ ಪತಿ, ವಿಶ್ವರೂಪಃ= ಅನೇಕ ರೂಪಗಳನ್ನು ಹೊಂದಿದವನು, ಸ್ವಯಂಶ್ರೇಷ್ಠಃ= ತಾನೇ ಶ್ರೇಷ್ಠನಾಗಿರುವವನು, ಬಲವೀರಃ= ಬಲದಿಂದ ವೀರನಾದವನು, ಬಲಃ= ಬಲರೂಪಿಯಾದವನು, ಗಣಃ= ತನ್ನ ಗಣದಲ್ಲಿ ಇರುವವನು.

ಗಣಕರ್ತಾ ಗಣಪತಿರ್ದಿಗ್ವಾಸಾಃ ಕಾಮ್ಯ ಏವ ಚ |
ಪವಿತ್ರಂ ಪರಮಂ ಮಂತ್ರಃ ಸರ್ವಭಾವಕರೋ ಹರಃ ॥41॥

ಗಣಕರ್ತಾ= ಗಣಗಳನ್ನು ಮಾಡುವವನು, ಗಣಪತಿಃ= ಗಣಗಳಿಗೆ ಒಡೆಯ, ದಿಗ್ವಾಸಾಃ= ದಿಗಂಬರ, ಕಾಮ್ಯಃ= ಎಲ್ಲರಿಂದಲೂ ಬಯಸಲ್ಪಡುವವನು, ಪವಿತ್ರಂ= ಪವಿತ್ರನಾದವನು, ಪರಮಂ= ಶ್ರೇಷ್ಠನಾದವನು, ಮಂತ್ರಃ= ಮಂತ್ರಸ್ವರೂಪಿಯು, ಸರ್ವಭಾವಕರಃ= ಎಲ್ಲದರ ಉತ್ಪತ್ತಿಗೆ ಕಾರಣನು, ಹರಃ= ಸಂಹರಿಸುವವನು.

ಕಮಂಡಲುಧರೋ ಧನ್ವೀ ಬಾಣಹಸ್ತಃ ಕಪಾಲವಾನ್ |
ಅಶನೀ ಶತಘ್ನೀ ಖಡ್ಗೀ ಪಟ್ಟಿಶೀ ಚಾಯುಧೀ ಮಹಾನ್ ॥42॥

ಕಮಂಡಲುಧರಃ= ಕಮಂಡಲುವನ್ನು ಧರಿಸಿದವನು, ಧನ್ವೀ= ಧನುರ್ಧಾರಿ, ಬಾಣಹಸ್ತಃ= ಹಸ್ತದಲ್ಲಿ ಬಾಣವುಳ್ಳವನು, ಕಪಾಲವಾನ್= ಕಪಾಲವನ್ನು ಧರಿಸಿದವನು, ಅಶನೀ= ಅಶನವೆಂಬ ಆಯುಧವುಳ್ಳವನು, ಶತಘ್ನೀ= ಶತಘ್ನೀ ಎಂಬ ಆಯುಧ ಉಳ್ಳವನು, ಖಡ್ಗೀ= ಖಡ್ಗವನ್ನು ಧರಿಸಿದವನು, ಪಟ್ಟಿಶೀ= ಪಟ್ಟಸವೆಂಬ ಆಯುಧವನ್ನು ಧರಿಸಿದವನು, ಆಯುಧೀ= ಇನ್ನೂ ಅನೇಕ ಆಯುಧಗಳನ್ನು ಧರಿಸಿದವನು, ಮಹಾನ್= ದೊಡ್ಡವನು.

ಸ್ರುವಹಸ್ತಃ ಸುರೂಪಶ್ಚ ತೇಜಸ್ತೇಜಸ್ಕರೋ ನಿಧಿಃ |
ಉಷ್ಣೀಷೀ ಚ ಸುವಕ್ತ್ರಶ್ಚ ಉದಗ್ರೋ ವಿರತಸ್ತಥಾ ॥43॥

ಸ್ರುವಹಸ್ತಃ= ಹಸ್ತದಲ್ಲಿ ಸ್ರುವವನ್ನು ಹಿಡಿದವನು, ಸುರೂಪಃ= ಒಳ್ಳೆಯ ರೂಪವುಳ್ಳವನು, ತೇಜಃ= ತೇಜೋರೂಪಿಯಾದವನು, ತೇಜಸ್ಕರಃ= ತೇಜಸ್ಸನ್ನು ಉಂಟು ಮಾಡುವವನು, ಉಷ್ಣೀಷೀ= ರುಮಾಲನ್ನು ಧರಿಸಿದವನು, ಸುವಕ್ತ್ರಃ= ಸುಂದರವಾದ ಮುಖವುಳ್ಳವನು, ಉದಗ್ರಃ= ಉನ್ನತನಾದವನು, ವಿರತಃ= ವಿರಾಗವನ್ನು ಹೊಂದಿದವನು.

ದೀರ್ಘಶ್ಚ ಹರಿಕೇಶಶ್ಚ ಸುತೀರ್ಥಃ ಕೃಷ್ಣ ಏವ ಚ |
ಸೃಗಾಲರೂಪಃ ಸರ್ವಾರ್ಥೋ ಮುಂಡಃ ಕುಂಡೀ ಕಮಂಡಲುಃ ॥44॥

ದೀರ್ಘಃ= ಎತ್ತರನಾದವನು, ಹರಿಕೇಶಃ= ಕಂದುಬಣ್ಣದ ಕೇಶವುಳ್ಳವನು, ಸುತೀರ್ಥಃ= ಬಹಳ ಪವಿತ್ರನಾದವನು, ಕೃಷ್ಣಃ= ಆನಂದರೂಪನಾದವನು, ಸೃಗಾಲರೂಪಃ= ನರಿಯ ರೂಪವನ್ನು ಧರಿಸಿದವನು, ಸರ್ವಾರ್ಥಃ= ಸರ್ವ ಪ್ರಯೋಜನವನ್ನುಂಟು ಮಾಡುವವನು, ಮುಂಡಃ= ಸಂನ್ಯಾಸಿ ಸ್ವರೂಪನು, ಕುಂಡೀ= ಕುಂಡವನ್ನು ಧರಿಸಿದವನು, ಕಮಂಡಲುಃ= ಕಮಂಡಲುಧಾರಿ.

ಅಜಶ್ಚ ಮೃಗರೂಪಶ್ಚ ಗಂಧಧಾರೀ ಕಪರ್ದ್ಯಪಿ |
ಊರ್ಧ್ವರೇತಾ ಊರ್ಧ್ವಲಿಂಗ ಊರ್ಧ್ವಶಾಯೀ ನಭಸ್ತಳಃ ॥45॥

ಅಜಃ= ಆಡಿನ ರೂಪದವನು, ಮೃಗಃ= ಜಿಂಕೆಯ ರೂಪದವನು, ಗಂಧಧಾರೀ= ಕಸ್ತೂರಿ ಮೃಗರೂಪವುಳ್ಳವನು, ಕಪರ್ದೀ= ಜಟಾಸಮೂಹಧಾರಿ, ಊರ್ಧ್ವರೇತಾಃ= ಊರ್ಧ್ವರೇತಸ್ಕನಾದವನು, ಊರ್ಧ್ವಲಿಂಗ= ಊರ್ಧ್ವಮುಖವಾದ ಲಿಂಗವುಳ್ಳವನು, ಊರ್ಧ್ವಶಾಯೀ= ಮೇಲ್ಮುಖವಾಗಿ ಮಲಗುವವನು, ನಭಸ್ತಳಃ= ಆಕಾಶವಾಸಿ.

ತ್ರಿಜಟಶ್ಚೀರವಾಸಾಶ್ಚ ರುದ್ರಃ ಸೇನಾಪತಿರ್ವಿಭುಃ |
ಅಹಶ್ಚರೋಽಥ ನಕ್ತಂ ಚ ತಿಗ್ಮಮನ್ಯುಃ ಸುವರ್ಚಸಃ ॥46॥

ತ್ರಿಜಟಃ= ಮೂರು ಜಡೆಯುಳ್ಳವನು, ಚೀರವಾಸಃ= ನಾರುಮಡಿಯನ್ನು ಧರಿಸಿದವನು, ರುದ್ರಃ= ಭಯಂಕರನಾದವನು, ಸೇನಾಪತಿಃ= ಸೇನಾ ನಾಯಕನಾದವನು, ವಿಭುಃ= ವ್ಯಾಪ್ತನಾದವನು, ಅಹಶ್ಚರಃ= ಹಗಲಿನಲ್ಲಿ ಸಂಚರಿಸುವವನು, ನಕ್ತಂ= ರಾತ್ರಿಯಲ್ಲಿ ಸಂಚರಿಸುವವನು, ತಿಗ್ಮಮನ್ಯುಃ= ತೀಕ್ಷ್ಣವಾದ ಕೋಪವುಳ್ಳವನು, ಸುವರ್ಚಸಃ= ಒಳ್ಳೆಯ ವರ್ಚಸ್ಸನ್ನು ಹೊಂದಿದವನು.

ಗಜಹಾ ದೈತ್ಯಹಾ ಕಾಲೋ ಲೋಕಧಾತಾ ಗುಣಾಕರಃ |
ಸಿಂಹಶಾರ್ದೂಲರೂಪಶ್ಚ ಆರ್ದ್ರಚರ್ಮಾಂಬರಾವೃತಃ ॥47॥

ಗಜಹಾ= ಗಜವನ್ನು ಕೊಂದವನು, ದೈತ್ಯಹಾ= ದೈತ್ಯರನ್ನು ಕೊಂದವನು, ಕಾಲಃ= ಸಂಹಾರಕನಾದವನು, ಲೋಕಧಾತಾ= ಲೋಕಗಳ ಧಾರಣೆಯನ್ನು ಮಾಡುವವನು, ಗುಣಾಕರಃ= ಗುಣಗಳಿಗೆ ಆಶ್ರಯನಾದವನು, ಸಿಂಹಶಾರ್ದೂಲರೂಪಃ= ಸಿಂಹ ಶಾರ್ದೂಲರೂಪಗಳನ್ನು ಹೊಂದಿದವನು, ಆರ್ದ್ರಚರ್ಮಾಂಬರಾವೃತಃ= ಹಸಿಯ ಚರ್ಮದ ವಸ್ತ್ರವನ್ನು ಉಟ್ಟವನು.

ಕಾಲಯೋಗೀ ಮಹಾನಾದಃ ಸರ್ವವಾಸಶ್ಚತುಷ್ಪಥಃ |
ನಿಶಾಚರಃ ಪ್ರೇತಚಾರೀ ಭೂತಚಾರೀ ಮಹೇಶ್ವರಃ ॥48॥

ಕಾಲಯೋಗೀ= ಕಾಲದ ಸಂಬಂಧವುಳ್ಳವನು, ಮಹಾನಾದಃ= ದೊಡ್ಡನಾದವನ್ನು ಮಾಡುವವನು, ಸರ್ವವಾಸಃ= ಎಲ್ಲ ರೀತಿಯ ವಸ್ತ್ರವನ್ನು ಧರಿಸುವವನು, ಚತುಷ್ಪಥಃ= ತನ್ನ ಪ್ರಾಪ್ತಿಗೆ ನಾಲ್ಕು ಮಾರ್ಗವನ್ನು ಹೊಂದಿದವನು, ನಿಶಾಚರಃ= ರಾತ್ರಿಯಲ್ಲಿ ಸಂಚರಿಸುವವನು, ಪ್ರೇತಚಾರೀ= ಪ್ರೇತಗಳ ಜೊತೆಯಲ್ಲಿ ಸಂಚರಿಸುವವನು, ಭೂತಚಾರೀ= ಭೂತಗಳ ಜೊತೆಯಲ್ಲಿ

ಸಂಚರಿಸುವವನು, ಮಹೇಶ್ವರಃ= ದೊಡ್ಡವರಿಗೂ ಈಶ್ವರನು.
ಬಹುಭೂತೋ ಬಹುಧನಃ ಸರ್ವಾಧಾರೋಽಮಿತೋ ಗತಿಃ |
ನೃತ್ಯಪ್ರಿಯೋ ನಿತ್ಯನರ್ತೋ ನರ್ತಕಃ ಸರ್ವಲಾಸಕಃ ॥49॥
ಬಹುಭೂತಃ= ಅನೇಕ ರೂಪಗಳನ್ನು ಧರಿಸಿದವನು, ಬಹುಧನಃ= ಅನೇಕ ಧನವನ್ನು ಹೊಂದಿದವನು, ಸರ್ವಾಧಾರಃ= ಎಲ್ಲದಕ್ಕೂ ಆಧಾರನಾದವನು, ಅಮಿತಃ= ಪರಿಮಾಣವಿಲ್ಲದವನು, ಗತಿಃ= ಗಮ್ಯನಾದವನು, ನೃತ್ಯಪ್ರಿಯಃ= ನರ್ತನ ಪ್ರಿಯ, ನಿತ್ಯನರ್ತಃ= ಯಾವಾಗಲೂ ನರ್ತನವನ್ನು ಮಾಡುವವನು, ನರ್ತಕಃ= ನರ್ತಕ, ಸರ್ವಲಾಸಕಃ= ಎಲ್ಲ ವಿಧದ ಲಾಸ್ಯನರ್ತನವನ್ನು ಮಾಡುವವನು.
ಘೋರೋ ಮಹಾತಪಾಃ ಪಾಶೋ ನಿತ್ಯೋ ಗಿರಿಚರೋ ನಭಃ |
ಸಹಸ್ರಹಸ್ತೋ ವಿಜಯೋ ವ್ಯವಸಾಯೋ ಹ್ಯತಂದ್ರಿತಃ ॥50॥
ಘೋರಃ= ಭಯಂಕರನಾದವನು, ಮಹಾತಪಾಃ= ದೊಡ್ಡ ತಪಸ್ವಿ, ಪಾಶಃ= ಪಾಶವನ್ನು ಹೊಂದಿದವನು, ಗಿರಿಚರಃ= ಪರ್ವತದ ಸಂಚಾರಿ, ನಭಃ= ಆಕಾಶ ರೂಪನು, ಸಹಸ್ರಹಸ್ತಃ= ಸಹಸ್ರ ಹಸ್ತವುಳ್ಳವನು, ವಿಜಯಃ= ವಿಜಯಶಾಲಿ, ವ್ಯವಸಾಯಃ= ನಿಶ್ಚಯರೂಪನಾದವನು, ಹ್ಯತಂದ್ರಿತಃ= ಆಲಸ್ಯರಹಿತನಾದವನು.
ಅಧರ್ಷಣೋ ಮರ್ಷಣಾತ್ಮಾ ಯಜ್ಞಹಾ ಕಾಮನಾಶನಃ |
ದಕ್ಷಯಜ್ಞಾಪಹಾರೀ ಚ ಸುಸಹೋ ಮಧ್ಯಮಸ್ತಥಾ ॥51॥
ಅಧರ್ಷಣಃ= ಭಕ್ತರನ್ನು ಹಿಂಸಿಸದವನು, ಮರ್ಷಣಾತ್ಮಾ= ಕ್ಷಮಾರೂಪನಾದವನು, ಯಜ್ಞಹಾ= ಯಜ್ಞಧ್ವಂಸಕ, ಕಾಮನಾಶನಃ= ಮನ್ಮಥನನ್ನು ಸಂಹರಿಸಿದವನು, ದಕ್ಷಯಜ್ಞಾಪಹಾರೀ= ದಕ್ಷನ ಯಜ್ಞವನ್ನು ನಾಶಗೊಳಿಸಿದವನು, ಸುಸಹಃ= ಎಲ್ಲವನ್ನೂ ಸಹಿಸುವವನು, ಮಧ್ಯಮಃ= ಮಧ್ಯದಲ್ಲಿರುವವನು.
ತೇಜೋಪಹಾರೀ ಬಲಹಾ ಮುದಿತೋಽರ್ಥೋಜಿತೋ ವರಃ |
ಗಂಭೀರಘೋಷೋ ಗಂಭೀರೋ ಗಂಭೀರಬಲವಾಹನಃ ॥52॥
ತೇಜೋಪಹಾರೀ= ಶತ್ರುಗಳ ತೇಜಸ್ಸನ್ನು ಅಪಹರಿಸುವವನು, ಬಲಹಾ= ಬಲವನ್ನು ನಾಶಮಾಡುವವನು, ಮುದಿತಃ= ಸಂತೋಷರೂಪಿ, ಅರ್ಥಃ= ಪುರುಷಾರ್ಥರೂಪನು, ಅಜಿತಃ= ಪರಾಜಯವನ್ನು ಹೊಂದದವನು, ವರಃ= ಶ್ರೇಷ್ಠನಾದವನು, ಗಂಭೀರ ಘೋಷಃ= ಗಂಭೀರವಾದ ನಾದವುಳ್ಳವನು, ಗಂಭೀರಃ= ತಿಳಿಯಲು ಅಶಕ್ಯನಾದವನು, ಗಂಭೀರಬಲವಾಹನಃ= ಗಂಭೀರವಾದ ಬಲವನ್ನು ಮತ್ತು ವಾಹನವನ್ನು ಹೊಂದಿದವನು.
ನ್ಯಗ್ರೋಧರೂಪೋ ನ್ಯಗ್ರೋಧೋ ವೃಕ್ಷಕರ್ಣಸ್ಥಿತಿರ್ವಿಭುಃ |
ಸುತೀಕ್ಷ್ಣದಶನಶ್ಚೈವ ಮಹಾಕಾಯೋ ಮಹಾನನಃ ॥53॥
ನ್ಯಗ್ರೋಧರೂಪಃ= ವಟವೃಕ್ಷನಾದವನು, ನ್ಯಗ್ರೋಧಃ= ಸರ್ವತ್ರ ವ್ಯಾಪಿಸುವವನು, ವೃಕ್ಷಕರ್ಣಸ್ಥಿತಿಃ= ವೃಕ್ಷಕರ್ಣದ ಬಳಿ ಇರುವವನು, ವಿಭುಃ= ವ್ಯಾಪಕನು, ಸುತೀಕ್ಷ್ಣದಶನ= ತೀಕ್ಷ್ಣವಾದ ದಂತವುಳ್ಳವನು, ಮಹಾಕಾಯಃ= ದೊಡ್ಡ ಶರೀರಧಾರಿ, ಮಹಾನನಃ= ದೊಡ್ಡ ಮುಖವುಳ್ಳವನು.
ವಿಷ್ವಕ್ಸೇನೋ ಹರಿರ್ಯಜ್ಞಃ ಸಂಯುಗಾಪೀಡವಾಹನಃ |
ತೀಕ್ಷ್ಣತಾಪಶ್ಚ ಹರ್ಯಶ್ವಃ ಸಹಾಯಃ ಕರ್ಮಕಾಲವಿತ್ ॥54॥
ವಿಷ್ವಕ್ಸೇನಃ= ಎಲ್ಲ ಕಡೆಗಳಲ್ಲಿಯೂ ಸೈನ್ಯವುಳ್ಳವನು, ಹರಿಃ= ಪಾಪಹರನು, ಯಜ್ಞಃ= ಯಜ್ಞ ರೂಪನಾದವನು, ಸಂಯುಗಾಪೀಡವಾಹನಃ= ಯುದ್ಧದಲ್ಲಿ ಪೀಡಿಸಲ್ಪಡದ ವಾಹನವುಳ್ಳವನು, ತೀಕ್ಷ್ಣತಾಪಃ= ತೀಕ್ಷ್ಣವಾದ ತಾಪವನ್ನು ಹೊಂದಿದವನು, ಹರ್ಯಶ್ವಃ= ಕಂದು-ಹಳದಿ ಬಣ್ಣದ ಅಶ್ವವುಳ್ಳವನು, ಸಹಾಯಃ= ಭಕ್ತರಿಗೆ ಸಹಾಯನಾದವನು, ಕರ್ಮಕಾಲವಿತ್= ಕರ್ಮವನ್ನು ಮಾಡುವ ಸಮಯವನ್ನು ತಿಳಿದವನು.
ವಿಷ್ಣುಪ್ರಸಾದಿತೋ ಯಜ್ಞಃ ಸಮುದ್ರೋ ವಡವಾಮುಖಃ |
ಹುತಾಶನಸಹಾಯಶ್ಚ ಪ್ರಶಾಂತಾತ್ಮಾ ಹುತಾಶನಃ ॥55॥
ವಿಷ್ಣುಪ್ರಸಾದಿತಃ= ವಿಷ್ಣುವಿನಿಂದ ಸಂತೋಷಗೊಳಿಸಲ್ಪಟ್ಟವನು, ಯಜ್ಞ= ಯಜ್ಞರೂಪನು, ಸಮುದ್ರಃ= ಉದ್ರಿಕ್ತವಾದ ಗುಣವುಳ್ಳವನು, ವಡವಾಮುಖಃ= ಹೆಣ್ಣು ಕುದುರೆಯ ಮುಖ ಉಳ್ಳವನು, ಹುತಾಶನಸಹಾಯಃ= ಅಗ್ನಿಗೆ ಸಹಾಯ ಮಾಡುವವನು, ಪ್ರಶಾಂತಾತ್ಮಾ= ಶಾಂತವಾದ ಮನಸ್ಸುಳ್ಳವನು, ಹುತಾಶನಃ= ಅಗ್ನಿಮುಖವುಳ್ಳವನು.
ಉಗ್ರತೇಜಾ ಮಹಾತೇಜಾ ಜಯೋ ವಿಜಯಕಾಲವಿತ್ |
ಜ್ಯೋತಿಷಾಮಯನಂ ಸಿದ್ಧಿಃ ಸಂಧಿರ್ವಿಗ್ರಹ ಏವ ಚ ॥56॥
ಉಗ್ರತೇಜಾಃ= ಉಗ್ರವಾದ ತೇಜಸ್ಸುಳ್ಳವನು, ಮಹಾತೇಜಾಃ= ಮಹಾತೇಜಸ್ವಿ, ಜಯಃ= ಜಯರೂಪಿ, ವಿಜಯಕಾಲವಿತ್= ಜಯದ ಕಾಲವನ್ನು ತಿಳಿದವನು, ಜ್ಯೋತಿಷಾಮಯನಂ= ಜ್ಯೋತಿಸ್ಸುಗಳಿಗೆ ಆಶ್ರಯ, ಸಿದ್ಧಿಃ= ಸಿದ್ಧಿರೂಪನಾದವನು, ಸಂಧಿಃ= ಸಂಧಿಗೆ ನಿಯಾಮಕನಾದವನು, ವಿಗ್ರಹಃ= ಯುದ್ಧಕ್ಕೆ ನಿಯಾಮಕನಾದವನು.
ಶಿಖೀ ದಂಡೀ ಜಟೀ ಜ್ವಾಲೀ ಮೂರ್ತಿಜೋ ಮೂರ್ಧಗೋ ಬಲೀ |
ವೇಣವೀ ಪಣವೀ ತಾಲೀ ಕಾಲಃ ಕಾಲಕಟಂಕಟಃ ॥57॥
ಶಿಖೀ= ಶಿಖೆಯನ್ನು ಧರಿಸಿದವನು, ದಂಡೀ= ದಂಡವನ್ನು ಧರಿಸಿದವನು, ಜಟೀ= ಜಟೆಗಳನ್ನು ಧರಿಸಿದವನು, ಜ್ವಾಲೀ= ಜ್ವಾಲೆಗಳನ್ನು ಹೊಂದಿದವನು, ಮೂರ್ತಿಜಃ= ಸಾಕಾರರೂಪನಾಗಿ ಜನಿಸಿದವನು, ಮೂರ್ಧಗಃ= ಎಲ್ಲರ ಮೇಲೆ ಇರುವವನು, ಬಲೀ= ಬಲಿಷ್ಠನಾದವನು, ವೇಣವೀ= ಕೊಳಲನ್ನು ಹಿಡಿದವನು, ಪಣವೀ= ಪಣವವನ್ನು ಹಿಡಿದವನು, ತಾಲೀ= ತಾಳವನ್ನು ಹಿಡಿದವನು, ಕಾಲ= ಕಾಲರೂಪನಾದವನು, ಕಾಲಕಟಂಕಟಃ= ಕಾಲವನ್ನು ಮೀರಿದವನು.

ನಕ್ಷತ್ರವಿಗ್ರಹವಿಧಿರ್ಗುಣವೃದ್ಧಿರ್ಲಯೋऽಗಮಃ |
ಪ್ರಜಾಪತಿರ್ದಿಶಾಬಾಹುರ್ವಿಭಾಗಃ ಸರ್ವತೋಮುಖಃ ॥58॥
ನಕ್ಷತ್ರವಿಗ್ರಹವಿಧಿಃ= ನಕ್ಷತ್ರ ವಿಗ್ರಹಗಳನ್ನು ಉಂಟು ಮಾಡುವವನು, ಗುಣವೃದ್ಧಿಃ= ಗುಣಗಳನ್ನು ಅಭಿವೃದ್ಧಿಪಡಿಸುವವನು, ಲಯಃ= ನಾಶವನ್ನು ಮಾಡುವವನು, ಅಗಮಃ= ಭಕ್ತರನ್ನು ಬಿಟ್ಟು ಹೋಗದವನು, ಪ್ರಜಾಪತಿಃ= ಪ್ರಜೆಗಳಿಗೆ ಒಡೆಯನಾದವನು, ದಿಶಾಬಾಹುಃ= ದಿಕ್ಕುಗಳಲ್ಲಿ ಬಾಹುಗಳನ್ನು ಹೊಂದಿದವನು, ವಿಭಾಗಃ= ವಿಭಾಗವನ್ನು ಮಾಡಿದವನು, ಸರ್ವತೋಮುಖಃ= ಎಲ್ಲ ಕಡೆಗಳಲ್ಲಿಯೂ ಮುಖವನ್ನು ಹೊಂದಿದವನು.
ವಿಮೋಚನಃ ಸುರಗಣೋ ಹಿರಣ್ಯಕವಚೋದ್ಭವಃ |
ಮೇಢ್ರಜೋ ಬಲಚಾರೀ ಚ ಮಹಾಚಾರೀ ಸ್ತುತಸ್ತಥಾ ॥59॥
ವಿಮೋಚನಃ= ಭಕ್ತರ ಸಂಕಟವನ್ನು ಬಿಡಿಸುವವನು, ಸುರಗಣಃ= ದೇವತೆಗಳ ಸಮೂಹದಲ್ಲಿ ಇರುವವನು, ಹಿರಣ್ಯಕವಚೋದ್ಭವಃ= ಬ್ರಹ್ಮದೇವರಿಂದ ಜನಿಸಿದವನು, ಮೇಢ್ರಜಃ= ಲಿಂಗರೂಪದಿಂದ ಜನಿಸಿದವನು, ಬಲಚಾರೀ= ಬಲದಿಂದ ಸಂಚರಿಸುವವನು, ಮಹಾಚಾರೀ= ಬಹಳ ಸಂಚರಿಸುವವನು, ಸ್ತುತಃ= ಸ್ತೋತ್ರ ಮಾಡಲ್ಪಡುವವನು.
ಸರ್ವತೂರ್ಯನಿನಾದೀ ಚ ಸರ್ವವಾದ್ಯಪರಿಗ್ರಹಃ |
ವ್ಯಾಲರೂಪೋ ಗುಹಾವಾಸೀ ಗುಹೋ ಮಾಲೀ ತರಂಗವಿತ್ ॥60॥
ಸರ್ವತೂರ್ಯನಿನಾದೀ= ಎಲ್ಲ ತೂರ್ಯಗಳ ನಾದವುಳ್ಳವನು, ಸರ್ವವಾದ್ಯ ಪರಿಗ್ರಹಃ= ಎಲ್ಲ ವಾದ್ಯಗಳನ್ನು ಪರಿಗ್ರಹಿಸುವವನು, ವ್ಯಾಲರೂಪಃ= ಸರ್ಪ ರೂಪನಾದವನು, ಗುಹಾವಾಸಿ= ಎಲ್ಲರ ಹೃದಯ ಗುಹೆಯಲ್ಲಿರುವವನು, ಗುಹಃ= ಷಣ್ಮುಖನಲ್ಲಿ ಸನ್ನಿಹಿತನಾದವನು, ಮಾಲೀ= ಮಾಲೆಯನ್ನು ಧರಿಸಿದವನು, ತರಂಗವಿತ್= ಸೃಷ್ಟಿ-ಸಂಹಾರಗಳ ತರಂಗಗಳನ್ನು ತಿಳಿದವನು.
ತ್ರಿದಶಸ್ತ್ರಿಕಾಲಧೃಕ್ಕರ್ಮ ಸರ್ವಬಂಧವಿಮೋಚನಃ |
ಬಂಧನಸ್ತ್ವಸುರೇಂದ್ರಾಣಾಂ ಯುಧಿ ಶತ್ರುವಿನಾಶನಃ ॥61॥
ತ್ರಿದಶಃ= ದೇವತೆಗಳಲ್ಲಿರುವವನು, ತ್ರಿಕಾಲಧೃಕ್= ಮೂರು ಕಾಲಗಳನ್ನೂ ಧರಿಸಿದವನು, ಕರ್ಮ= ಸರ್ವಕರ್ಮವನ್ನು ಮಾಡಿಸುವವನು, ಸರ್ವಬಂಧ ವಿಮೋಚನಃ= ಎಲ್ಲ ಬಂಧಗಳನ್ನೂ ಬಿಡಿಸುವವನು, ಅಸುರೇಂದ್ರಾಣಾಂ ಬಂಧನಃ= ಅಸುರಶ್ರೇಷ್ಠರಿಗೆ ಬಂಧನವನ್ನುಂಟು ಮಾಡುವವನು, ಯುಧಿ ಶತ್ರುವಿನಾಶನಃ= ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುವವನು.
ಸಾಂಖ್ಯಪ್ರಸಾದೋ ದುರ್ವಾಸಾಃ ಸರ್ವಸಾಧುನಿಷೇವಿತಃ |
ಪ್ರಸ್ಕಂದನೋ ವಿಭಾಗಜ್ಞ ಅತುಲ್ಯೋ ಯಜ್ಞಭಾಗವಿತ್ ॥62॥
ಸಾಂಖ್ಯಪ್ರಸಾದಃ= ಶುದ್ಧವಾದ ಜ್ಞಾನದಿಂದ ಪ್ರಸನ್ನನಾಗುವವನು, ದುರ್ವಾಸಾಃ= ದುರ್ವಾಸ ಋಷಿ ರೂಪನಾದವನು, ಸರ್ವಸಾಧುನಿಷೇವಿತಃ= ಎಲ್ಲ ಸಜ್ಜನರಿಂದಲೂ ಸೇವಿತನಾದವನು, ಪ್ರಸ್ಕಂದನಃ= ಅಭಕ್ತರಿಗೆ ಸ್ಥಾನ ಚ್ಯುತಿಯನ್ನುಂಟು ಮಾಡುವವನು, ವಿಭಾಗಜ್ಞಃ= ಎಲ್ಲ ಪ್ರಾಣಿಗಳ ವಿಭಾಗವನ್ನು ತಿಳಿದವನು, ಅತುಲ್ಯಃ= ಅಸದೃಶನಾದವನು, ಯಜ್ಞಭಾಗವಿತ್= ಯಜ್ಞಾಂಗಗಳನ್ನು ತಿಳಿದವನು.
ಸರ್ವಾವಾಸಃ ಸರ್ವಚಾರೀ ದುರ್ವಾಸಾ ವಾಸವೋऽಮರಃ |
ಹೈಮೋ ಹೇಮಕರೋ ಯಜ್ಞಃ ಸರ್ವಧಾರೀ ಧರೋತ್ತಮಃ ॥63॥
ಸರ್ವಾವಾಸಃ= ಎಲ್ಲರನ್ನೂ ತನ್ನಲ್ಲಿ ವಾಸ ಮಾಡಿಸಿಕೊಳ್ಳುವವನು, ಸರ್ವಚಾರೀ= ಎಲ್ಲ ಕಡೆಗಳಲ್ಲಿಯೂ ಸಂಚರಿಸುವವನು, ದುರ್ವಾಸಾಃ= ಮಲಿನವಸ್ತ್ರಧಾರಿ, ವಾಸವಃ= ಇಂದ್ರನಲ್ಲಿ ಇರುವವನು, ಅಮರಃ= ಮರಣ ರಹಿತನಾದವನು, ಹೈಮಃ= ಸುವರ್ಣರೂಪನಾದವನು, ಹೇಮಕರಃ= ಸುವರ್ಣಕ್ಕೆ ಉತ್ಪಾದಕನು, ಯಜ್ಞಃ= ಯಜ್ಞರೂಪಿ, ಸರ್ವಧಾರಿ= ಎಲ್ಲವನ್ನೂ ಧರಿಸಿದವನು, ಧರೋತ್ತಮಃ= ಧರಿಸಿದವರಲ್ಲಿ ಶ್ರೇಷ್ಠನಾದವನು.
ಲೋಹಿತಾಕ್ಷೋ ಮಹಾಕ್ಷಶ್ಚ ವಿಜಯಾಕ್ಷೋ ವಿಶಾರದಃ |
ಸಂಗ್ರಹೋ ನಿಗ್ರಹಃ ಕರ್ತಾ ಸರ್ಪಚೀರನಿವಾಸನಃ ॥64॥
ಲೋಹಿತಾಕ್ಷಃ= ಕೆಂಪಾದ ಕಣ್ಣುಳ್ಳವನು, ಮಹಾಕ್ಷಃ= ವಿಶಾಲ ನೇತ್ರ, ವಿಜಯಾಕ್ಷಃ= ವಿಜಯವನ್ನು ನೋಡುವ ನೇತ್ರವುಳ್ಳವನು, ವಿಶಾರದಃ= ಕುಶಲನಾದವನು, ಸಂಗ್ರಹಃ= ಭಕ್ತರನ್ನು ಸ್ವೀಕರಿಸುವವನು, ನಿಗ್ರಹಃ= ಅಭಕ್ತರನ್ನು ಶಿಕ್ಷಿಸುವವನು, ಕರ್ತಾ= ಸರ್ವಕರ್ತ, ಸರ್ವಚೀರನಿವಾಸನಃ= ಸರ್ವಚರ್ಮಧಾರಿ.
ಮುಖ್ಯೋऽಮುಖ್ಯಶ್ಚ ದೇಹಶ್ಚ ದೇಹರ್ದ್ಧಿಃ ಸರ್ವಕಾಮದಃ |
ಸರ್ವಕಾಮಪ್ರಸಾದಶ್ಚ ಸುಬಲೋ ಬಲರೂಪಧೃಕ್ ॥65॥
ಮುಖ್ಯಃ= ಮುಖ್ಯನಾದವನು, ಅಮುಖ್ಯಃ= ಅಮುಖ್ಯರಲ್ಲಿರುವವನು, ದೇಹಃ= ದೇಹದಲ್ಲಿರುವವನು, ದೇಹರ್ದ್ಧಿಃ= ದೇಹದ ಅಭಿವೃದ್ಧಿಗೆ ಕಾರಣನಾದವನು, ಸರ್ವಕಾಮದಃ= ಎಲ್ಲ ಕಾಮಗಳನ್ನೂ ಕೊಡುವವನು, ಸರ್ವಕಾಮಪ್ರಸಾದಃ= ಎಲ್ಲ ಕಾಮಗಳನ್ನು ಅನುಗ್ರಹಿಸುವವನು, ಸುಬಲಃ= ಒಳ್ಳೆಯ ಬಲವುಳ್ಳವನು, ಬಲರೂಪಧೃಕ್= ಬಲ-ರೂಪವನ್ನು ಧರಿಸಿದವನು.
ಆಕಾಶನಿಧಿರೂಪಶ್ಚ ನಿಪಾತೀ ಉರಗಃ ಖಗಃ |
ರೌದ್ರರೂಪೋऽಂಶುರಾದಿತ್ಯೋ ವಸುರಶ್ಮಿಃ ಸುವರ್ಚಸೀ ॥66॥
ಆಕಾಶನಿಧಿರೂಪಃ= ಆಕಾಶದಂತೆ ಅಸಂಗನಾದವನು, ನಿಪಾತೀ= ಪಕ್ಷಿಯಂತೆ ಸಂಚರಿಸುವವನು, ಉರಗಃ= ಸರ್ಪದಂತೆ ಸಂಚರಿಸುವವನು, ಖಗಃ= ಪಕ್ಷಿ ರೂಪಧಾರಿ, ರೌದ್ರರೂಪಃ= ಭಯಂಕರ ರೂಪವುಳ್ಳವನು, ಅಂಶುಃ= ಕಿರಣರೂಪ- ನಾದವನು, ಆದಿತ್ಯಃ= ಆದಿತ್ಯನಲ್ಲಿರುವವನು, ವಸುರಶ್ಮಿಃ= ರಶ್ಮಿಗಳಿಗೆ ಆಶ್ರಯನಾದವನು, ಸುವರ್ಚಸೀ= ಒಳ್ಳೆಯ ವರ್ಚಸ್ಸನ್ನು ಹೊಂದಿದವನು.
ವಸುವೇಗೋ ಮಹಾವೇಗೋ ಮನೋವೇಗೋ ನಿಶಾಚರಃ |
ಸರ್ವಾವಾಸೀ ಶ್ರಿಯಾವಾಸೀ ಉಪದೇಶಕರೋ ಹರಃ ॥67॥

ವಸುವೇಗಃ= ವಸುಗಳ ವೇಗವನ್ನು ಹೊಂದಿದವನು, ಮಹಾವೇಗಃ= ಮಹಾವೇಗವನ್ನು ಹೊಂದಿದವನು, ಮನೋವೇಗಃ= ಮನೋವೇಗವನ್ನು ಹೊಂದಿದವನು, ನಿಶಾಚರಃ= ರಾತ್ರಿಯಲ್ಲಿ ಸಂಚರಿಸುವವನು, ಸರ್ವಾವಾಸೀ= ಎಲ್ಲರನ್ನೂ ತನ್ನಲ್ಲಿ ವಾಸಿಸಿಕೊಳ್ಳುವವನು, ಶ್ರಿಯಾವಾಸೀ= ವೇದಪ್ರತಿಪಾದ್ಯನಾದವನು, ಉಪದೇಶಕರಃ= ಉಪದೇಶವನ್ನು ಮಾಡುವವನು, ಹರಃ= ಪಾಪಹಾರಕನು.

ಮುನಿರಾತ್ಮನಿರಾಲೋಕಃ ಸಂಭೋಜ್ಯಶ್ಚ ಸಹಸ್ರದಃ |
ಪಕ್ಷೀ ಚ ಪಕ್ಷಿರೂಪೀ ಚ ಅತಿದೀಪ್ತೋ ವಿಶಾಂಪತಿಃ ॥68॥

ಮುನಿಃ= ಮನನಶೀಲನಾದವನು, ಆತ್ಮನಿರಾಲೋಕಃ= ಆತ್ಮದರ್ಶನಶೀಲನು, ಸಂಭೋಜ್ಯಃ= ಚೆನ್ನಾಗಿ ಪೂಜಿಸಲ್ಪಡಬೇಕಾದವನು, ಸಹಸ್ರದಃ= ಸಹಸ್ರ ಕಾಮಗಳನ್ನು ಕೊಡುವವನು, ಪಕ್ಷೀ= ಪಕ್ಷರೂಪವನ್ನು ಹೊಂದಿದವನು, ಪಕ್ಷಿರೂಪೀ= ಪಕ್ಷಿ ರೂಪವನ್ನು ಧರಿಸಿದವನು, ಅತಿದೀಪ್ತಃ= ಬಹಳ ಪ್ರಕಾಶವುಳ್ಳವನು, ವಿಶಾಂಪತಿಃ= ಪ್ರಜೆಗಳಿಗೆ ಪತಿ.

ಉನ್ಮಾದೋ ಮದನಃ ಕಾಮೋ ಅರ್ಥಾರ್ಥಕರರೋಮಶಃ |
ವಾಮದೇವಶ್ಚ ವಾಮಶ್ಚ ಪ್ರಾಗ್ದಕ್ಷಿಣ್ಯಶ್ಚ ವಾಮನಃ॥69॥

ಉನ್ಮಾದಃ= ಉನ್ಮತ್ತನಾದವನು, ಮದನಃ= ಸುಖರೂಪನಾದವನು, ಕಾಮಃ= ಸುಂದರನಾದವನು, ಅರ್ಥಾರ್ಥಕರರೋಮಶಃ= ಎಲ್ಲ ಪುರುಷಾರ್ಥಗಳನ್ನು ಕೊಡುವ ರೋಮಗಳಿಂದ ದೇಹದಲ್ಲಿ ಆವೃತನಾದವನು, ವಾಮದೇವಃ= ಸುಂದರನಾದ ದೇವನಾದವನು, ವಾಮಃ= ಸುಂದರನು, ಪ್ರಾಕ್= ಎಲ್ಲರಿಗಿಂತಲೂ ಮೊದಲಿನವನು, ದಕ್ಷಿಣ್ಯಃ= ಕುಶಲನಾದವನು, ವಾಮನಃ= ವಟುರೂಪಿಯು.

ಸಿದ್ಧಯೋಗಾಪಹಾರೀ ಚ ಸಿದ್ಧಃ ಸರ್ವಾರ್ಥಸಾಧಕಃ |
ಭಿಕ್ಷುಶ್ಚ ಭಿಕ್ಷುರೂಪಶ್ಚ ವಿಷಾಣೀ ಮೃದುರವ್ಯಯಃ ॥70॥

ಸಿದ್ಧಯೋಗಾಪಹಾರೀ= ಅಭಕ್ತರಿಗೆ ಸಿದ್ಧವಾದ ಯೋಗಗಳನ್ನು ಅಪಹರಿಸುವವನು ಸಿದ್ಧಃ= ಸರ್ವ ಸಿದ್ಧನಾದವನು, ಸರ್ವಾರ್ಥಸಾಧಕಃ= ಎಲ್ಲ ಅರ್ಥಗಳನ್ನು ಸಾಧಿಸಿಕೊಡುವವನು, ಭಿಕ್ಷುಃ= ಭಿಕ್ಷುಗಳಲ್ಲಿ ಇರುವವನು, ಭಿಕ್ಷುರೂಪಶ್ಚ= ಭಿಕ್ಷುವಿನ ರೂಪವನ್ನು ಧರಿಸಿದವನು, ವಿಷಾಣೀ= ಶೃಂಗವುಳ್ಳವನು, ಮೃದುಃ= ಮೃದುವಾದವನು, ಅವ್ಯಯಃ= ಶಾಶ್ವತನಾದವನು.

ಮಹಾಸೇನೋ ವಿಶಾಖಶ್ಚ ಷಷ್ಟಿಭಾಗೋ ಗವಾಂಪತಿಃ |
ವಜ್ರಹಸ್ತಶ್ಚ ವಿಷ್ಕಂಭೀ ಚಮೂಸ್ತಂಭನ ಏವ ಚ ॥71॥

ಮಹಾಸೇನಃ= ದೊಡ್ಡ ಸೈನ್ಯವುಳ್ಳವನು, ವಿಶಾಖಃ= ಸ್ಕಂಧನ ಸ್ನೇಹಿತನಾದ ವಿಶಾಖನಲ್ಲಿರುವವನು, ಷಷ್ಟಿಭಾಗಃ= ಪ್ರಭವಾದಿ ಸಂವತ್ಸರ ರೂಪವಾದ ಕಾಲಭಾಗದಲ್ಲಿರುವವನು, ಗವಾಂಪತಿಃ= ಗೋವುಗಳಿಗೆ ಪತಿಯಾದವನು, ವಜ್ರಹಸ್ತಃ= ಕೈಯಲ್ಲಿ ವಜ್ರವನ್ನು ಹಿಡಿದವನು, ವಿಷ್ಕಂಭೀ= ವಿಸ್ತೃತನಾದವನು, ಚಮೂಸ್ತಂಭನಃ= ಸೈನ್ಯವನ್ನು ಸ್ತಂಭನಗೊಳಿಸುವವನು.

ಋತುರ್ಋತುಕರಃ ಕಾಲೋ ಮಧುರ್ಮಧುಕರೋಚಲಃ |
ವಾನಸ್ಪತ್ಯೋ ವಾಜಸನೋ ನಿತ್ಯಮಾಶ್ರಮಪೂಜಿತಃ ॥72॥

ಋತುಃ= ಋತುನಾಮಕನಾದವನು, ಋತುಕರಃ= ಋತುಗಳ ಪ್ರವರ್ತಕ, ಮಧುಃ= ವಸಂತ ಋತು ನಿಯಾಮಕ, ಮಧುಕರಃ= ಮಧುವನ್ನು ಮಾಡುವವನು, ಅಚಲಃ= ಸ್ಥಿರ, ವಾನಸ್ಪತ್ಯಃ= ವನಸ್ಪತಿಗಳಿಗೆ ಒಡೆಯ, ವಾಜಸನಃ= ಅನ್ನವನ್ನು ಕೊಡುವವನು, ನಿತ್ಯಮಾಶ್ರಮಪೂಜಿತಃ= ನಾಲ್ಕು ಆಶ್ರಮದವರಿಂದ ನಿತ್ಯವೂ ಪೂಜಿತನಾದವನು.

ಬ್ರಹ್ಮಚಾರೀ ಲೋಕಚಾರೀ ಸರ್ವಚಾರೀ ಸಂಚಾರವಿತ್ |
ಈಶಾನ ಈಶ್ವರಃ ಕಾಲೋ ನಿಶಾಚಾರೀ ಪಿನಾಕವಾನ್ ॥73॥

ಬ್ರಹ್ಮಚಾರೀ= ಬ್ರಹ್ಮಚರ್ಯವನ್ನು ಹೊಂದಿದವನು, ಲೋಕಚಾರೀ= ಲೋಕ ಸಂಚಾರಿ, ಸರ್ವಚಾರೀ= ಸರ್ವ ಸಂಚಾರಿ, ಸಂಚಾರವಿತ್= ಒಳ್ಳೆಯ ಸಂಚಾರದಿಂದ ಕೂಡಿದವನು, ಈಶಾನಃ= ಪ್ರಭು, ಈಶ್ವರಃ= ಪ್ರಭು, ಕಾಲಃ= ಕಾಲರೂಪಿ, ನಿಶಾಚಾರೀ= ರಾತ್ರಿ ಸಂಚರಿಸುವವನು, ಪಿನಾಕವಾನ್= ಪಿನಾಕಧಾರಿ.

ನಂದೀಶ್ವರಶ್ಚ ನಂದೀ ಚ ನಂದನೋ ನಂದಿವರ್ಧನಃ |
ಭಗಹಾರೀ ನಿಹಂತಾ ಚ ಕಾಲೋ ಬ್ರಹ್ಮವಿದಾಂ ವರಃ ॥74॥

ನಂದೀಶ್ವರಃ= ನಂದಿಯ ಒಡೆಯನಾದವನು, ನಂದೀ= ಆನಂದರೂಪಾನುಭವಿ, ನಂದನಃ= ಆನಂದರೂಪನಾದವನು, ನಂದಿವರ್ಧನಃ= ಭಕ್ತರ ಸುಖವನ್ನು ಹೆಚ್ಚಿಸುವವನು, ಭಗಹಾರೀ= ದುಷ್ಟರ ಸಂಪತ್ತನ್ನು ನಾಶ ಮಾಡುವವನು, ನಿಹಂತಾ= ಸಂಹರಿಸುವವನು, ಕಾಲಃ= ಕಾಲರೂಪಿ, ಬ್ರಹ್ಮವಿದಾಂ ವರಃ= ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು.

ಚತುರ್ಮುಖೋ ಮಹಾಲಿಂಗಶ್ಚಾರುಲಿಂಗಸ್ತಥೈವ ಚ |
ಲಿಂಗಾಧ್ಯಕ್ಷಃ ಸುರಾಧ್ಯಕ್ಷೋ ಲೋಕಾಧ್ಯಕ್ಷೋ ಯುಗಾವಹಃ ॥75॥

ಚತುರ್ಮುಖಃ= ನಾಲ್ಕು ಮುಖವುಳ್ಳವನು, ಮಹಾಲಿಂಗಃ= ದೊಡ್ಡ ಲಿಂಗವುಳ್ಳವನು, ಚಾರುಲಿಂಗಃ= ಮನೋಹರವಾದ ಲಿಂಗವುಳ್ಳವನು, ಲಿಂಗಾಧ್ಯಕ್ಷಃ= ಲಿಂಗಕ್ಕೆ ಒಡೆಯ, ಸುರಾಧ್ಯಕ್ಷಃ= ದೇವತೆಗಳಿಗೆ ಒಡೆಯ, ಲೋಕಾಧ್ಯಕ್ಷಃ= ಲೋಕಗಳಿಗೆ ಒಡೆಯ, ಯುಗಾವಹಃ= ಯುಗಗಳ ಪ್ರವರ್ತಕ.

ಬೀಜಾಧ್ಯಕ್ಷೋ ಬೀಜಕರ್ತಾ ಅಧ್ಯಾತ್ಮಾನುಗತೋ ಬಲಃ |
ಇತಿಹಾಸಃ ಸಕಲ್ಪಶ್ಚ ಗೌತಮೋಽಥ ಜಲೇಶ್ವರಃ ॥76॥

ಬೀಜಾಧ್ಯಕ್ಷಃ= ಬೀಜಗಳಿಗೆ ಒಡೆಯ, ಬೀಜಕರ್ತಾ= ಬೀಜಗಳನ್ನು ಮಾಡುವವನು, ಅಧ್ಯಾತ್ಮಾನುಗತಃ= ಶರೀರಗಳಲ್ಲಿ ಅನುಗತನಾದವನು, ಬಲಃ= ಬಲಶಾಲಿ, ಇತಿಹಾಸಃ ಸಕಲ್ಪಃ= ಕಲ್ಪಸಹಿತ ಇತಿಹಾಸ ಪ್ರತಿಪಾದ್ಯನಾದವನು, ಗೌತಮಃ= ಒಳ್ಳೆಯ ಜ್ಞಾನವುಳ್ಳವನು, ಜಲೇಶ್ವರಃ= ವರುಣರೂಪಿಯಾದವನು.

ದಂಭೋ ಹ್ಯದಂಭೋ ವೈದಂಭೋ ವಶ್ಯೋ ವಶಕರಃ ಕಲಿಃ |

ಲೋಕಕರ್ತಾ ಪಶುಪತಿರ್ಮಹಾಕರ್ತಾ ಹ್ಯನೌಷಧಃ ॥77॥
ದಂಭಃ= ಡಂಭದಲ್ಲಿ ಇರುವವನು, ಅದಂಭಃ= ಡಂಭವಿಲ್ಲದವನು, ವೈದಂಭಃ= ಡಂಭಕ್ಕೆ ವಿರುದ್ಧನಾದವನು, ವಶ್ಯಃ= ಭಕ್ತರಿಗೆ ವಶನಾದವನು, ವಶಕರಃ= ಭಕ್ತರನ್ನು ವಶಪಡಿಸಿಕೊಳ್ಳುವವನು, ಕಲಿಃ= ವೀರನಾದವನು, ಲೋಕಕರ್ತಾ= ಲೋಕಗಳ ಸೃಷ್ಟಿಕರ್ತ, ಪಶುಪತಿಃ= ಪಶುಗಳಿಗೆ ಪತಿ, ಮಹಾಕರ್ತಾ= ದೊಡ್ಡ ಕಾರ್ಯವನ್ನು ಮಾಡುವವನು, ಅನೌಷಧಃ= ಔಷಧ ರಹಿತನಾದವನು.
ಅಕ್ಷರಂ ಪರಮಂ ಬ್ರಹ್ಮ ಬಲವಾನ್ ಶಕ್ರ ಏವ ಚ |
ನೀತಿರ್ಹ್ಯನೀತಿಃ ಶುದ್ಧಾತ್ಮಾ ಶುದ್ಧೋ ಮಾನ್ಯೋ ಮನೋಗತಿಃ ॥78॥
ಅಕ್ಷರಂ= ನಾಶವನ್ನು ಹೊಂದದವನು, ಪರಮಂ ಬ್ರಹ್ಮ= ಶ್ರೇಷ್ಠನಾದ ಬ್ರಹ್ಮ, ಬಲವಾನ್= ಬಲಿಷ್ಠ, ಶಕ್ರಃ= ಇಂದ್ರ, ನೀತಿಃ= ನಯರೂಪನಾದವನು, ಅನೀತಿಃ= ಅನೀತಿಯ ಪ್ರವರ್ತಕ, ಶುದ್ಧಾತ್ಮಾ= ಶುದ್ಧವಾದ ಮನಸ್ಸುಳ್ಳವನು, ಶುದ್ಧಃ= ಶುದ್ಧನು, ಮಾನ್ಯಃ= ಸಮ್ಮಾನಿಸಲ್ಪಡುವವನು, ಮನೋಗತಿಃ= ಮನಸ್ಸಿನ ವೇಗವನ್ನು ಹೊಂದಿದವನು.
ಬಹುಪ್ರಸಾದಃ ಸ್ವಪನೋ ದರ್ಪಣೋऽಥ ತ್ವಮಿತ್ರಜಿತ್ |
ವೇದಕಾರಃ ಸೂತ್ರಕಾರೋ ವಿದ್ವಾನ್ ಸಮರಮರ್ದನಃ ॥79॥
ಬಹುಪ್ರಸಾದಃ= ಬಹಳ ಅನುಗ್ರಹವನ್ನು ಮಾಡುವವನು, ಸ್ವಪನಃ= ಸ್ವಪ್ನ ಉಳ್ಳವನು, ದರ್ಪಣಃ= ಕನ್ನಡಿಯಂತೆ ಸ್ವಚ್ಛನಾದವನು, ಅಮಿತ್ರಜಿತ್= ಶತ್ರುಗಳನ್ನು ಜಯಿಸುವವನು, ವೇದಕಾರಃ= ವೇದ ಪ್ರವರ್ತಕ, ಸೂತ್ರಕಾರಃ= ಸೂತ್ರಗಳ ರಚನೆ ಮಾಡುವವನು, ವಿದ್ವಾನ್= ವಿದ್ಯಾವಂತನು, ಸಮರಮರ್ದನಃ= ಯುದ್ಧವನ್ನು ನಾಶ ಪಡಿಸುವವನು.
ಮಹಾಮೇಘನಿವಾಸೀ ಚ ಮಹಾಘೋರೋ ವಶೀಕರಃ |
ಅಗ್ನಿಜ್ವಾಲೋ ಮಹಾಜ್ವಾಲೋ ಅತಿಧೂಮ್ರೋ ಹುತೋ ಹವಿಃ ॥80॥
ಮಹಾಮೇಘನಿವಾಸೀ= ದೊಡ್ಡ ಮೋಡಗಳಲ್ಲಿ ವಾಸಿಸುವನು, ಮಹಾಘೋರಃ= ಬಹಳ ಘೋರನಾದವನು, ವಶೀಕರಃ= ಎಲ್ಲರನ್ನೂ ವಶಪಡಿಸಿಕೊಳ್ಳುವವನು, ಅಗ್ನಿಜ್ವಾಲಃ= ಅಗ್ನಿಜ್ವಾಲೆಗಳಲ್ಲಿ ಸನ್ನಿಹಿತನಾದವನು, ಮಹಾಜ್ವಾಲಃ= ದೊಡ್ಡ ಜ್ವಾಲೆಗಳನ್ನು ಹೊಂದಿದವನು, ಅತಿಧೂಮ್ರಃ= ಬಹಳ ಧೂಮದಿಂದ ಕೂಡಿದವನು, ಹುತಃ= ಹೋಮ ಮಾಡಲ್ಪಟ್ಟವನು, ಹವಿಃ= ದೇವತೆಗಳಿಂದ ಆಹ್ವಾನ ಮಾಡಲ್ಪಟ್ಟವನು.
ವೃಷಣಃ ಶಂಕರೋ ನಿತ್ಯೋ ವರ್ಚಸ್ವೀ ಧೂಮಕೇತನಃ |
ನೀಲಸ್ತಥಾಂಗಲುಬ್ಧಶ್ಚ ಶೋಭನೋ ನಿರವಗ್ರಹಃ ॥81॥
ವೃಷಣಃ= ಶ್ರೇಷ್ಠ ಸುಖರೂಪನಾದವನು, ಶಂಕರಃ= ಮಂಗಳವನ್ನು ಮಾಡುವವನು, ವರ್ಚಸ್ವೀ= ಕಾಂತಿಮಯನು, ಧೂಮಕೇತನಃ= ಧೂಮಧ್ವಜನು, ನೀಲಃ= ನೀಲವರ್ಣದವನು, ಅಂಗಲುಬ್ಧಃ= ತನ್ನ ಅಂಗಗಳ ಸೌಂದರ್ಯದಲ್ಲಿ ಆಸಕ್ತನಾದವನು, ಶೋಭನಃ= ಶುಭರೂಪನಾದವನು, ನಿರವಗ್ರಹಃ= ಪ್ರತಿಬಂಧಕ ಇಲ್ಲದವನು.
ಸ್ವಸ್ತಿದಃ ಸ್ವಸ್ತಿಭಾವಶ್ಚ ಭಾಗೀ ಭಾಗಕರೋ ಲಘುಃ |
ಉತ್ಸಂಗಶ್ಚ ಮಹಾಂಗಶ್ಚ ಮಹಾಗರ್ಭಃ ಪರಾಯಣಃ ॥82॥
ಸ್ವಸ್ತಿದಃ= ಕ್ಷೇಮವನ್ನು ಮಾಡುವವನು, ಸ್ವಸ್ತಿಭಾವಃ= ಕ್ಷೇಮರೂಪಿ, ಭಾಗೀ= ಯಜ್ಞಭಾಗಕ್ಕೆ ಅರ್ಹನಾದವನು, ಭಾಗಕರಃ= ಭಾಗ ಮಾಡುವವನು, ಲಘುಃ= ಶೀಘ್ರನಾದವನು, ಉತ್ಸಂಗಃ= ಶ್ರೇಷ್ಠ ಸಹವಾಸ ಉಳ್ಳವನು, ಮಹಾಂಗಃ= ದೊಡ್ಡ ಅವಯವಗಳುಳ್ಳವನು, ಮಹಾಗರ್ಭಃ= ದೊಡ್ಡ ಗರ್ಭರೂಪನಾದವನು, ಪರಾಯಣಃ= ಉತ್ತಮ ಆಶ್ರಯನಾದವನು.
ಕೃಷ್ಣವರ್ಣಃ ಸುವರ್ಣಶ್ಚ ಇಂದ್ರಿಯಃ ಸರ್ವದೇಹಿನಾಮ್ |
ಮಹಾಪಾದೋ ಮಹಾಹಸ್ತೋ ಮಹಾಕಾಯೋ ಮಹಾಯಶಾಃ ॥83॥
ಕೃಷ್ಣವರ್ಣಃ= ಕಪ್ಪು ಬಣ್ಣದವನು, ಸುವರ್ಣಃ= ಒಳ್ಳೆಯ ಬಣ್ಣದವನು, ಸರ್ವದೇಹಿನಾಮ್ ಇಂದ್ರಿಯಃ= ಎಲ್ಲ ದೇಹಿಗಳ ಇಂದ್ರಿಯಗಳಲ್ಲಿ ಇರುವವನು, ಮಹಾಪಾದಃ= ದೊಡ್ಡ ಪಾದವುಳ್ಳವನು, ಮಹಾಹಸ್ತಃ= ದೊಡ್ಡ ಹಸ್ತವುಳ್ಳವನು, ಮಹಾಕಾಯಃ= ದೊಡ್ಡಶರೀರಧಾರಿ, ಮಹಾಯಶಃ= ದೊಡ್ಡ ಕೀರ್ತಿಯುಳ್ಳವನು.
ಮಹಾಮೂರ್ಧಾ ಮಹಾಮಾತ್ರೋ ಮಹಾನೇತ್ರೋ ದಿಗಾಲಯಃ |
ಮಹಾದಂತೋ ಮಹಾಕರ್ಣೋ ಮಹಾಮೇಢ್ರೋ ಮಹಾಹನುಃ ॥
ಮಹಾಮೂರ್ಧಾ= ದೊಡ್ಡ ತಲೆಯುಳ್ಳವನು, ಮಹಾಮಾತ್ರಃ= ಪ್ರಧಾನನಾದವನು, ಮಹಾನೇತ್ರಃ= ವಿಶಾಲ ನೇತ್ರವುಳ್ಳವನು, ದಿಗಾಲಯಃ= ದಿಕ್ಕುಗಳಲ್ಲಿ ವಾಸಿಸುವವನು, ಮಹಾದಂತಃ= ದೊಡ್ಡ ದಂತಗಳುಳ್ಳವನು, ಮಹಾಕರ್ಣಃ= ದೊಡ್ಡ ಕಿವಿಗಳುಳ್ಳವನು, ಮಹಾಮೇಢ್ರಃ= ದೊಡ್ಡ ಶಿಶ್ನವುಳ್ಳವನು, ಮಹಾಹನುಃ= ದೊಡ್ಡ ಗಲ್ಲವುಳ್ಳವನು.
ಮಹಾನಾಸೋ ಮಹಾಕಂಬುರ್ಮಹಾಗ್ರೀವಃ ಶ್ಮಶಾನಭಾಕ್ |
ಮಹಾವಕ್ಷಾ ಮಹೋರಸ್ಕೋ ಅಂತರಾತ್ಮಾ ಮೃಗಾಲಯಃ ॥85॥
ಮಹಾನಾಸಃ= ದೊಡ್ಡ ನಾಸಿಕವುಳ್ಳವನು, ಮಹಾಕಂಬುಃ= ದೊಡ್ಡ ಕಂಠವುಳ್ಳವನು, ಮಹಾಗ್ರೀವಃ= ದೊಡ್ಡ ಕತ್ತುಳ್ಳವನು, ಶ್ಮಶಾನಭಾಕ್= ಸ್ಮಶಾನದಲ್ಲಿ ನೆಲೆಸಿರುವವನು, ಮಹಾವಕ್ಷಾಃ= ದೊಡ್ಡ ವಕ್ಷಸ್‌ಸ್ಥಲವುಳ್ಳವನು, ಮಹೋರಸ್ಕ= ದೊಡ್ಡ ಎದೆಯುಳ್ಳವನು, ಅಂತರಾತ್ಮಾ= ಜೀವರ ಒಳಗೆ ಇರುವವನು, ಮೃಗಾಲಯಃ= ಪ್ರಾಣಿಗಳಲ್ಲಿ ವಾಸಿಸುವವನು.
ಲಂಬನೋ ಲಂಬಿತೋಷ್ಠಶ್ಚ ಮಹಾಮಾಯಃ ಪಯೋನಿಧಿಃ |
ಮಹಾದಂತೋ ಮಹಾದಂಷ್ಟ್ರೋ ಮಹಾಜಿಹ್ವೋ ಮಹಾಮುಖಃ ॥86॥
ಲಂಬನಃ= ಆಲಂಬನನಾದವನು, ಲಂಬಿತೋಷ್ಠಃ= ಸಂಹಾರಕನಾದ್ದರಿಂದ ದೊಡ್ಡ ತುಟಿಯುಳ್ಳವನು, ಮಹಾಮಾಯಃ= ಅನೇಕ ಸಾಮರ್ಥ್ಯವುಳ್ಳವನು, ಪಯೋನಿಧಿಃ= ಸಮುದ್ರದಲ್ಲಿರುವವನು, ಮಹಾದಂತಃ= ದೊಡ್ಡ ಹಲ್ಲುಳ್ಳವನು, ಮಹಾದಂಷ್ಟ್ರಃ= ದೊಡ್ಡ ಕೋರೆದಂತವುಳ್ಳವನು, ಮಹಾಜಿಹ್ವಃ= ದೊಡ್ಡ ನಾಲಿಗೆಯುಳ್ಳವನು, ಮಹಾಮುಖಃ= ದೊಡ್ಡ ಮುಖವುಳ್ಳವನು.

ಮಹಾನಖೋ ಮಹಾರೋಮಾ ಮಹಾಕೇಶೋ ಮಹಾಜಟಃ |
ಪ್ರಸನ್ನಶ್ಚ ಪ್ರಸಾದಶ್ಚ ಪ್ರತ್ಯಯೋ ಗಿರಿಸಾಧನಃ ॥87॥
ಮಹಾನಖಃ= ಶ್ರೇಷ್ಠವಾದ ನಖವುಳ್ಳವನು, ಮಹಾರೋಮಾ= ಶ್ರೇಷ್ಠವಾದ ರೋಮವುಳ್ಳವನು, ಮಹಾಕೇಶ= ಶ್ರೇಷ್ಠವಾದ ತಲೆಕೂದಲುಗಳನ್ನುಳ್ಳವನು, ಮಹಾಜಟಃ= ಶ್ರೇಷ್ಠವಾದ ಜಟೆಯನ್ನುಳ್ಳವನು, ಪ್ರಸನ್ನಃ= ಪ್ರಸನ್ನನಾದವನು, ಪ್ರಸಾದಃ= ಸುಖರೂಪನಾದವನು, ಪ್ರತ್ಯಯಃ= ಜ್ಞಾನರೂಪನಾದವನು, ಗಿರಿಸಾಧನಃ= ಪರ್ವತವೇ ಆಯುಧವಾಗಿ ಉಳ್ಳವನು.
ಸ್ನೇಹನೋಽಸ್ನೇಹನಶ್ಚೈವ ಅಜಿತಶ್ಚ ಮಹಾಮುನಿಃ |
ವೃಕ್ಷಾಕಾರೋ ವೃಕ್ಷಕೇತುರನಲೋ ವಾಯುವಾಹನಃ ॥88॥
ಸ್ನೇಹನಃ= ಭಕ್ತರಲ್ಲಿ ಸ್ನೇಹವುಳ್ಳವನು, ಅಸ್ನೇಹನಃ= ಅಭಕ್ತರಲ್ಲಿ ಸ್ನೇಹವಿಲ್ಲದವನು, ಅಜಿತಃ= ಪರಾಜಿತನಾಗದವನು, ಮಹಾಮುನಿಃ= ಬಹಳ ಮನನಶೀಲನಾದವನು, ವೃಕ್ಷಾಕಾರಃ= ವೃಕ್ಷದ ಆಕಾರವನ್ನು ಹೊಂದಿದವನು, ವೃಕ್ಷಕೇತುಃ= ವೃಕ್ಷಧ್ವಜನಾದವನು, ಅನಲಃ= ಅಗ್ನಿ, ವಾಯುವಾಹನಃ= ವಾಯುವನ್ನು ವಾಹನವಾಗಿ ಹೊಂದಿದವನು.
ಮಂಡಲೀ ಮೇರುಧಾಮಾ ಚ ದೇವಾಧಿಪತಿರೇವ ಚ |
ಅಥರ್ವಶೀರ್ಷಃ ಸಾಮಾಸ್ಯ ಋಕ್ಸಹಸ್ರಾಮಿತೇಕ್ಷಣಃ ॥89॥
ಮಂಡಲೀ= ಭೂಮಂಡಲದಲ್ಲಿರುವವನು, ಮೇರುಧಾಮಾ= ಮೇರು ಪರ್ವತವನ್ನು ಮನೆಯಾಗಿ ಹೊಂದಿದವನು, ದೇವಾಧಿಪತಿಃ= ದೇವತೆಗಳಿಗೆ ಒಡೆಯ, ಅಥರ್ವಶೀರ್ಷಃ= ಅಥರ್ವವೇದವನ್ನು ಶಿರಸ್ಸಿನಲ್ಲಿ ಧರಿಸಿದವನು, ಸಾಮಾಸ್ಯಃ= ಸಾಮವೇದವು ಮುಖವನ್ನು ಆಶ್ರಯಿಸಿದೆ, ಋಕ್ಸಹಸ್ರಾಮಿತೇಕ್ಷಣಃ= ಸಹಸ್ರ ಋಕ್ ಮಂತ್ರಗಳು ಅವನ ನೇತ್ರವನ್ನು ಆಶ್ರಯಿಸಿವೆ.
ಯಜುಃಪಾದಭುಜೋ ಗುಹ್ಯಃ ಪ್ರಕಾಶೋ ಜಂಗಮಸ್ತಥಾ |
ಅಮೋಘಾರ್ಥಃ ಪ್ರಸಾದಶ್ಚ ಅಭಿಗಮ್ಯಃ ಸುದರ್ಶನಃ ॥90॥
ಯಜುಃಪಾದಭುಜಃ= ಯಜುಸ್ಸುಗಳು ಅವನ ಪಾದ ಮತ್ತು ಭುಜಗಳು, ಗುಹ್ಯಃ= ರಹಸ್ಯನಾದವನು, ಪ್ರಕಾಶಃ- ಪ್ರಕಾಶರೂಪನಾದವನು, ಜಂಗಮಃ= ಚಲಿಸುವ ರೂಪವನ್ನು ಧರಿಸಿದವನು, ಅಮೋಘಾರ್ಥಃ= ಭಕ್ತರ ಪ್ರಾರ್ಥನೆಯನ್ನು ವ್ಯರ್ಥ ಮಾಡದವನು, ಪ್ರಸಾದಃ= ಅನುಗ್ರಹಕರ್ತಾ, ಅಭಿಗಮ್ಯಃ= ಭಕ್ತರಿಂದ ಹೊಂದಲ್ಪಡುವವನು, ಸುದರ್ಶನಃ= ಸುಂದರ.
ಉಪಹಾರಪ್ರಿಯಃ ಶರ್ವಃ ಕನಕಃ ಕಾಂಚನಚ್ಛವಿಃ |
ನಾಭಿರ್ನಂದಿಕರೋ ಭಾವ್ಯಃ ಪುಷ್ಕರಸ್ಥಪತಿಃ ಸ್ಥಿರಃ ॥91॥
ಉಪಹಾರಪ್ರಿಯಃ= ಪೂಜೆಯಿಂದ ಸಂತೋಷ ಪಡುವವನು, ಶರ್ವಃ= ಶರ್ವನಾಮಕನು, ಕನಕಃ= ಸುವರ್ಣರೂಪಿ, ಕಾಂಚನಚ್ಛವಿಃ= ಸುವರ್ಣಕಾಂತಿಯನ್ನು ಹೊಂದಿದವನು, ನಾಭಿಃ= ಜಗತ್ತಿಗೆ ಮೂಲನಾದವನು, ಭಾವ್ಯಃ= ಭಕ್ತಿಗೆ ವಿಷಯನಾದವನು, ಪುಷ್ಕರಸ್ಥಪತಿಃ= ಬ್ರಹ್ಮಾಂಡ ರೂಪವಾದ ಕಮಲವನ್ನು ಮಾಡಿದ ಬಡಗಿ, ಸ್ಥಿರಃ= ಶಾಶ್ವತನು.
ದ್ವಾದಶಸ್ತ್ರಾಸನಶ್ಚಾದ್ಯೋ ಯಜ್ಞೋ ಯಜ್ಞಸಮಾಹಿತಃ |
ನಕ್ತಂ ಕಲಿಶ್ಚ ಕಾಲಶ್ಚ ಮಕರಃ ಕಾಲಪೂಜಿತಃ ॥92॥
ದ್ವಾದಶಃ= ಗರ್ಭವಾಸಾದಿಗಳಿಂದ ಎಣಿಸಿದರೆ ಮೋಕ್ಷವು ಹನ್ನೆರಡನೆಯದು ಅಂತಹ ಮೋಕ್ಷಪ್ರದನು, ತ್ರಾಸನಃ= ಅಭಕ್ತರನ್ನು ಹೆದರಿಸುವವನು, ಆದ್ಯಃ= ಮೊದಲನೆಯವನು, ಯಜ್ಞಃ= ಯಜ್ಞರೂಪಿ, ಯಜ್ಞಸಮಾಹಿತಃ= ಯಜ್ಞದಲ್ಲಿ ಸನ್ನಿಹಿತನಾದವನು, ನಕ್ತಂ= ರಾತ್ರಿ ಪ್ರವರ್ತಕನಾದವನು, ಕಲಿಃ= ಪರಾಕ್ರಮಿ, ಕಾಲಃ= ಕಾಲನಿಯಾಮಕ, ಮಕರಃ= ಶಿಂಶುಮಾರರೂಪನಾದವನು, ಕಾಲಪೂಜಿತಃ= ಮೃತ್ಯುವಿನಿಂದ ಪೂಜಿಸಲ್ಪಡುವವನು.
ಸಗಣೋ ಗಣಕಾರಶ್ಚ ಭೂತಭಾವನಸಾರಥಿಃ |
ಭಸ್ಮಶಾಯೀ ಭಸ್ಮಗೋಪ್ತಾ ಭಸ್ಮಭೂತಸ್ತರುರ್ಗಣಃ ॥93॥
ಸಗಣಃ= ಗಣದಿಂದ ಕೂಡಿದವನು, ಗಣಕಾರಃ= ಗಣಗಳನ್ನು ಮಾಡುವವನು, ಭೂತಭಾವನಸಾರಥಿಃ= ತ್ರಿಪುರಾಸುರ ಸಂಹಾರಕಾಲದಲ್ಲಿ ಬ್ರಹ್ಮನನ್ನು ಸಾರಥಿಯನ್ನಾಗಿ ಮಾಡಿಕೊಂಡವನು, ಭಸ್ಮಶಾಯೀ= ಭಸ್ಮದಲ್ಲಿ ಮಲಗುವವನು, ಭಸ್ಮಗೋಪ್ತಾ= ಭಸ್ಮದಿಂದ ರಕ್ಷಿಸುವವನು, ಭಸ್ಮಭೂತಃ= ಭಸ್ಮದಲ್ಲಿ ಇರುವವನು, ತರುಃ= ಕಲ್ಪವೃಕ್ಷ ಸ್ವರೂಪನು, ಗಣಃ= ನಂದಿ ಮೊದಲಾದ ಗಣಗಳನ್ನು ಹೊಂದಿದವನು.
ಲೋಕಪಾಲಸ್ತಥಾಽಲೋಕೋ ಮಹಾತ್ಮಾ ಸರ್ವಪೂಜಿತಃ |
ಶಂಕುಸ್ತ್ರಿಶಂಕುಃ ಸಂಪನ್ನಃ ಶುಚಿರ್ಭೂತನಿಷೇವಿತಃ ॥94॥
ಲೋಕಪಾಲಃ= ಲೋಕಪಾಲಕನಾದವನು, ಅಲೋಕಃ= ಲೋಕವಿಲಕ್ಷಣ- ನಾದವನು, ಮಹಾತ್ಮ= ಮಹಾತ್ಮನು, ಸರ್ವಪೂಜಿತಃ= ಎಲ್ಲರಿಂದ ಪೂಜಿತನು, ಶಂಕುಃ= ಶಂಕುರೂಪನಾದವನು, ತ್ರಿಶಂಕುಃ= ತ್ರಿಶಂಕುರೂಪಿ, ಸಂಪನ್ನಃ= ಗುಣಭರಿತನಾದವನು, ಶುಚಿಃ= ಶುದ್ಧನಾದವನು, ಭೂತನಿಷೇವಿತಃ= ಭೂತಗಳಿಂದ ಸೇವಿಸಲ್ಪಡುವವನು.
ಆಶ್ರಮಸ್ಥಃ ಕಪೋತಸ್ಥೋ ವಿಶ್ವಕರ್ಮಾ ಪತಿರ್ವರಃ |
ಶಾಖೋ ವಿಶಾಖಸ್ತಾಮ್ರೋಷ್ಠೋ ಹ್ಯಂಬುಜಾಲಃ ಸುನಿಶ್ಚಯಃ ॥95॥
ಆಶ್ರಮಸ್ಥಃ= ಎಲ್ಲ ಆಶ್ರಮಗಳಲ್ಲಿಯೂ ಇರುವವನು, ಕಪೋತಸ್ಥಃ= ಪಾರಿವಾಳದಲ್ಲಿ ಇರುವವನು, ವಿಶ್ವಕರ್ಮಾ= ಎಲ್ಲ ಕರ್ಮಗಳನ್ನೂ ಮಾಡುವವನು, ಪತಿಃ= ಒಡೆಯನಾದವನು, ವರಃ= ಶ್ರೇಷ್ಠನಾದವನು, ಶಾಖಃ= ಅನೇಕ ರೂಪವುಳ್ಳವನು, ವಿಶಾಖಃ= ಅನೇಕ ಭಾಗವುಳ್ಳವನು, ತಾಮ್ರೋಷ್ಠಃ= ಕೆಂಪಾದ ತುಟಿಯುಳ್ಳವನು, ಅಂಬುಜಾಲಃ= ಸಮುದ್ರದಲ್ಲಿ ಇರುವವನು, ಸುನಿಶ್ಚಯಃ= ನಿಶ್ಚಯ ಜ್ಞಾನರೂಪನಾದವನು.
ಕಪಿಲೋಽಕಪಿಲಃ ಶೂರ ಆಯುಶ್ಚೈವ ಪರೋಽಪರಃ |
ಗಂಧರ್ವೋ ಹ್ಯದಿತಿಸ್ತಾರ್ಕ್ಷ್ಯಃ ಸುವಿಜ್ಞೇಯಃ ಸುಸಾರಥಿಃ ॥96॥

ಕಪಿಲಃ= ಕಪಿಲವರ್ಣದವನು, ಅಕಪಿಲಃ= ಕಪಿಲೇತರ ವರ್ಣದವನು, ಶೂರಃ= ಶೂರನಾದವನು, ಆಯುಃ= ಆಯುಃಪ್ರದ, ಪರಃ= ಶ್ರೇಷ್ಠರಲ್ಲಿ ಇರುವವನು, ಅಪರಃ= ಕನಿಷ್ಠರಲ್ಲಿ ಇರುವವನು, ಗಂಧರ್ವಃ= ಗಂಧರ್ವರಲ್ಲಿ ಇರುವವನು, ಅದಿತಿ= ಅದಿತಿಯಲ್ಲಿ ಇರುವವನು, ತಾರ್ಕ್ಷ್ಯಃ= ಗರುಡನಲ್ಲಿ ಇರುವವನು, ಸುವಿಜ್ಞೇಯಃ= ಚೆನ್ನಾಗಿ ತಿಳಿಯಲ್ಪಡುವವನು, ಸುಸಾರಥಿಃ= ಒಳ್ಳೆಯ ಸಾರಥಿಯನ್ನು ಹೊಂದಿದವನು.

ಪರಶ್ವಧಾಯುಧೋ ದೇವ ಅರ್ಥಕಾರೀ ಸುಬಾಂಧವಃ |
ತುಂಬವೀಣೀ ಮಹಾಕೋಪ ಊರ್ಧ್ವರೇತಾ ಜಲೇಶಯಃ ॥97॥

ಪರಶ್ವಧಾಯುಧಃ= ಗಂಡು ಕೊಡಲಿಯನ್ನು ಆಯುಧವಾಗಿ ಉಳ್ಳವನು, ದೇವಃ= ಕ್ರೀಡಾದಿ ವಿಶಿಷ್ಟನಾದವನು, ಅರ್ಥಕಾರೀ= ಪುರುಷಾರ್ಥಪ್ರದನಾದವನು, ಸುಬಾಂಧವಃ= ಒಳ್ಳೆಯ ಬಂಧುಗಳನ್ನು ಹೊಂದಿದವನು, ತುಂಬವೀಣೀ= ತುಂಬ ವೀಣೆಯನ್ನು ನುಡಿಸುವವನು, ಮಹಾಕೋಪಃ= ಬಹಳ ಕೋಪವನ್ನು ಹೊಂದಿದವನು, ಊರ್ಧ್ವರೇತಃ= ಮೇಲ್ಮುಖವಾದ ವೀರ್ಯವುಳ್ಳವನು, ಜಲೇಶಯಃ= ನೀರಿನಲ್ಲಿ ಮಲಗಿದವನು.

ಉಗ್ರೋ ವಂಶಕರೋ ವಂಶೋ ವಂಶನಾದೋ ಹ್ಯನಿಂದಿತಃ |
ಸರ್ವಾಂಗರೂಪೋ ಮಾಯಾವೀ ಸುಹೃದೋ ಹ್ಯನಿಲೋಽನಲಃ॥98॥

ಉಗ್ರಃ= ಉಗ್ರನಾದವನು, ವಂಶಕರಃ= ವಂಶವನ್ನು ಉಂಟು ಮಾಡುವವನು, ವಂಶಃ= ವಂಶಸ್ವರೂಪನಾದವನು, ವಂಶನಾದಃ= ವೇಣುನಾದ ರೂಪನಾದವನು, ಅನಿಂದಿತಃ= ದೋಷವಿಲ್ಲದವನು, ಸರ್ವಾಂಗರೂಪಃ= ಸರ್ವಾಂಗಗಳಲ್ಲಿಯೂ ಒಳ್ಳೆಯ ರೂಪವನ್ನು ಹೊಂದಿದವನು, ಮಾಯಾವೀ= ಸಾಮರ್ಥ್ಯವನ್ನು ಹೊಂದಿದವನು, ಸುಹೃದಃ= ಒಳ್ಳೆಯ ಹೃದಯವುಳ್ಳವನು, ಅನಿಲಃ= ವಾಯುರೂಪಿ, ಅನಲಃ= ಅಗ್ನಿರೂಪಿ.

ಬಂಧನೋ ಬಂಧಕರ್ತಾ ಚ ಸುಬಂಧನವಿಮೋಚನಃ |
ಸ ಯಜ್ಞಾರಿಃ ಸ ಕಾಮಾರಿರ್ಮಹಾದಂಷ್ಟ್ರೋ ಮಹಾಯುಧಃ ॥99॥

ಬಂಧನಃ= ಬಂಧನರೂಪನಾದವನು, ಬಂಧಕರ್ತಾ= ಬಂಧನವನ್ನುಂಟು ಮಾಡುವವನು, ಸುಬಂಧನವಿಮೋಚನಃ= ಒಳ್ಳೆಯ ಬಂಧನವನ್ನು ಬಿಡಿಸುವವನು, ಯಜ್ಞಾರಿಃ= ದಕ್ಷಯಜ್ಞಕ್ಕೆ ಶತ್ರುವಾದವನು, ಕಾಮಾರಿಃ= ಮನ್ಮಥ ಶತ್ರು, ಮಹಾದಂಷ್ಟ್ರಃ= ದೊಡ್ಡ ದಂತಗಳನ್ನು ಹೊಂದಿದವನು, ಮಹಾಯುಧಃ= ದೊಡ್ಡ ಆಯುಧವುಳ್ಳವನು.

ಬಾಹುಸ್ತ್ವನಿಂದಿತಃ ಶರ್ವಃ ಶಂಕರಃ ಶಂಕರೋಽಧನಃ |
ಅಮರೇಶೋ ಮಹಾದೇವೋ ವಿಶ್ವದೇವಃ ಸುರಾರಿಹಾ ॥100॥

ಬಾಹುಃ= ಬಾಹುಸ್ವರೂಪನಾದವನು, ಅನಿಂದಿತಃ= ನಿಂದಿತನಲ್ಲದವನು, ಶರ್ವಃ= ಸಂಹಾರಕನಾದವನು, ಶಂಕರಃ= ಸುಖಕರನಾದವನು, ಶಂಕರಃ= ಮಂಗಳಕರನು, ಅಧನಃ= ಹೇಯವಾದ ಧನದಿಂದ ರಹಿತನಾದವನು, ಅಮರೇಶಃ= ದೇವತೆಗಳಿಗೆ ಒಡೆಯ, ಮಹಾದೇವಃ= ಮಹಾದೇವನು, ವಿಶ್ವದೇವಃ= ವಿಶ್ವಕ್ಕೆ ದೇವನಾದವನು, ಸುರಾರಿಹಾ= ದೇವತೆಗಳ ಶತ್ರುಗಳನ್ನು ಕೊಲ್ಲುವವನು.

ಅಹಿರ್ಬುಧ್ನೋ ನಿರ್ಋತಿಶ್ಚ ಚೇಕಿತಾನೋ ಹರಿಸ್ತಥಾ |
ಅಜೈಕಪಾಚ್ಚ ಕಾಪಾಲೀ ತ್ರಿಶಂಕುರಜಿತಃ ಶಿವಃ ॥101॥

ಅಹಿರ್ಬುಧ್ನಃ= ಶ್ರೇಷ್ಠಸ್ವರೂಪನಾದವನು, ನಿರ್ಋತಿಃ= ಶತ್ರುಗಳಿಗೆ ಹಿಂಸಕನಾದವನು, ಚೇಕಿತಾನಃ= ಬಹುಜ್ಞಾನವುಳ್ಳವನು, ಹರಿಃ= ಪಾಪಹಾರಕನಾದವನು, ಅಜೈಕಪಾತ್= ಅನೇಕ ಪಾದಗಳುಳ್ಳವನು, ಕಾಪಾಲಿ= ಕಪಾಲವನ್ನು ಧರಿಸಿದವನು, ತ್ರಿಶಂಕುಃ= ಮೂರು ಲೋಕಗಳನ್ನು ವ್ಯಾಪಿಸಿದವನು, ಅಜಿತಃ= ಸೋಲಿಲ್ಲದವನು, ಶಿಅಃ= ಶುಭಕರನು.

ಧನ್ವಂತರಿರ್ಧೂಮಕೇತುಃ ಸ್ಕಂದೋ ವೈಶ್ರವಣಸ್ತಥಾ |
ಧಾತಾ ಶಕ್ರಶ್ಚ ವಿಷ್ಣುಶ್ಚ ಮಿತ್ರಸ್ತ್ವಷ್ಟಾ ಧ್ರುವೋ ಧರಃ ॥102॥

ಧನ್ವಂತರಿಃ= ಮಹಾವೈದ್ಯನಾದವನು, ಧೂಮಕೇತುಃ= ಅಗ್ನಿಸ್ವರೂಪನು, ಸ್ಕಂದಃ= ಷಣ್ಮುಖಸ್ವರೂಪನು, ವೈಶ್ರವಣಃ= ಕುಬೇರಸ್ವರೂಪನು, ಧಾತಾ= ಬ್ರಹ್ಮಸ್ವರೂಪನು, ಶಕ್ರಃ= ಇಂದ್ರಸ್ವರೂಪನು, ವಿಷ್ಣುಃ= ವಿಷ್ಣುಸ್ವರೂಪನು, ಮಿತ್ರಃ= ಮಿತ್ರಸ್ವರೂಪನು, ತ್ವಷ್ಟಾ= ತ್ವಷ್ಟುಸ್ವರೂಪನು, ಧ್ರುವಃ= ಧ್ರುವಸ್ವರೂಪನು, ಧರಃ= ಧರಸ್ವರೂಪನು (ಧರ ಮೊದಲಾದ ಅಷ್ಟವಸುಗಳಲ್ಲಿ ಇರುವವನು).

ಪ್ರಭಾವಃ ಸರ್ವಗೋ ವಾಯುರರ್ಯಮಾ ಸವಿತಾ ರವಿಃ |
ಉಷಂಗುಶ್ಚ ವಿಧಾತಾ ಚ ಮಾಂಧಾತಾ ಭೂತಭಾವನಃ ॥103॥

ಪ್ರಭಾವಃ= ಒಳ್ಳೆಯ ಸಾಮರ್ಥ್ಯವುಳ್ಳವನು, ಸರ್ವಗಃ= ಸರ್ವಸಂಚಾರಿ, ವಾಯುಃ= ವಾಯುಸ್ವರೂಪನು, ಅರ್ಯಮಾ= ಅರ್ಯಮಸ್ವರೂಪಿ, ಸವಿತಾ= ಜಗತ್ತನ್ನು ಪ್ರಸವಿಸುವವನು, ರವಿಃ= ಸೂರ್ಯ, ಉಷಂಗುಃ= ಅಗ್ನಿಕಿರಣನಾದವನು, ವಿಧಾತಾ= ವಿಧವಿಧವಾದ ರೂಪ ಧಾರಣೆಯನ್ನು ಮಾಡುವವನು, ಮಾಂಧಾತಾ= ಮಾಂಧಾತೃ ಮೊದಲಾದ ರಾಜರಲ್ಲಿ ಇರುವವನು, ಭೂತಭಾವನಃ= ಎಲ್ಲ ಜೀವಿಗಳಿಂದ ಪ್ರಾರ್ಥಿತನು.

ವಿಭುರ್ವರ್ಣವಿಭಾವೀ ಚ ಸರ್ವಕಾಮಗುಣಾವಹಃ |
ಪದ್ಮಗರ್ಭೋ ಮಹಾಗರ್ಭಶ್ಚಂದ್ರವಕೊತ್ರೇ ಮನೋರಮಃ ॥104॥

ವಿಭುಃ= ವ್ಯಾಪ್ತನು, ವರ್ಣವಿಭಾವೀ= ಅನೇಕ ವರ್ಣಗಳನ್ನು ತೋರಿಸುವವನು, ಸರ್ವಕಾಮ- ಗುಣಾವಹಃ= ಬಯಸಿದ ಎಲ್ಲ ಗುಣಗಳನ್ನೂ ತಂದುಕೊಡುವವನು, ಪದ್ಮಗರ್ಭಃ= ಪದ್ಮವನ್ನು ಗರ್ಭದಲ್ಲಿ ಧರಿಸಿದವನು, ಮಹಾಗರ್ಭಃ= ದೊಡ್ಡ ಗರ್ಭವುಳ್ಳವನು, ಚಂದ್ರವಕ್ತ್ರಃ= ಚಂದ್ರನಂತಹ ಮುಖವುಳ್ಳವನು, ಮನೋರಮಃ= ಮನಸ್ಸಿಗೆ ಸಂತೋಷವನ್ನು ಕೊಡುವವನು.

ಬಲವಾಂಶ್ಚೋಪಶಾಂತಶ್ಚ ಪುರಾಣಃ ಪುಣ್ಯಚಂಚುರೀ |

ಕುರುಕರ್ತಾ ಕಾಲರೂಪೀ ಕುರುಭೂತೋ ಮಹೇಶ್ವರಃ ॥105॥
ಬಲವಾನ್= ಬಲಿಷ್ಠನಾದವನು, ಉಪಶಾಂತಃ= ಶಾಂತಸ್ವಭಾವದವನು, ಪುರಾಣಃ= ಪ್ರಾಚೀನನಾದವನು, ಪುಣ್ಯಚಂಚುರೀ= ಪುಣ್ಯಗಳನ್ನು ಮಾಡಿಸುವವನು, ಕುರುಕರ್ತಾ= ಕುರುಕ್ಷೇತ್ರವನ್ನು ಮಾಡಿದವನು, ಕಾಲರೂಪೀ= ಕಾಲರೂಪನಾದವನು, ಕುರುಭೂತಃ= ಕುರುಕ್ಷೇತ್ರದಲ್ಲಿ ಇರುವವನು, ಮಹೇಶ್ವರಃ= ಮಹೇಶ್ವರನು.
ಸರ್ವಾಶಯೋ ದರ್ಭಶಾಯೀ ಸರ್ವೇಷಾಂ ಪ್ರಾಣಿನಾಂ ಪತಿಃ |
ದೇವದೇವಮುಖೋऽಸಕ್ತಃ ಸದಸತ್ಸರ್ವರತ್ನವಿತ್ ॥106॥
ಸರ್ವಾಶಯಃ= ಎಲ್ಲರಿಗೂ ಆಶ್ರಯನಾದವನು, ದರ್ಭಶಾಯೀ= ದರ್ಭೆಗಳ ಮೇಲೆ ಮಲಗಿದವನು, ಸರ್ವೇಷಾಂ ಪ್ರಾಣಿನಾಂ ಪತಿಃ= ಎಲ್ಲ ಪ್ರಾಣಿಗಳಿಗೂ ಒಡೆಯನಾದವನು, ದೇವದೇವಮುಖಃ= ದೇವ-ದೇವತೆಗಳಿಗಿಂತಲೂ ಪ್ರಧಾನನಾದವನು, ಅಸಕ್ತಃ= ಲೇಪರಹಿತನಾದವನು, ಸದಸತ್= ಕಾರ್ಯ-ಕಾರಣ ರೂಪಿಯಾದವನು, ಸರ್ವರತ್ನವಿತ್= ಎಲ್ಲ ರತ್ನಗಳನ್ನೂ ಪಡೆದವನು.
ಕೈಲಾಸಶಿಖರಾವಾಸೀ ಹಿಮವದ್ಗಿರಿಸಂಶ್ರಯಃ |
ಕೂಲಹಾರೀ ಕೂಲಕರ್ತಾ ಬಹುವಿದ್ಯೋ ಬಹುಪ್ರದಃ ॥107॥
ಕೈಲಾಸಶಿಖರಾವಾಸೀ= ಕೈಲಾಸ ಶಿಖರದಲ್ಲಿ ವಾಸಿಸುವವನು, ಹಿಮವದ್ಗಿರಿ ಸಂಶಯಃ= ಹಿಮವದ್ಗಿರಿಯಲ್ಲಿ ವಾಸಿಸುವವನು, ಕೂಲಹಾರೀ= ಪ್ರವಾಹದಿಂದ ನದಿಗಳ ಕೂಲವನ್ನು ಅಪಹರಿಸುವವನು, ಕೂಲಕರ್ತಾ= ಕೂಲ(ದಂಡೆ)ಗಳನ್ನು ನಿರ್ಮಿಸುವವನು, ಬಹುವಿದ್ಯಃ= ಬಹಳ ವಿದ್ಯೆಗಳನ್ನು ಬಲ್ಲವನು, ಬಹುಪ್ರದಃ= ಬಹಳವನ್ನು ಕೊಡುವವನು.
ವಣಿಜೋ ವರ್ಧನೋ ವೃಕ್ಷೋ ನಕುಲಶ್ಚಂದನಶ್ಛದಃ |
ಸಾರಗ್ರೀವೋ ಮಹಾಜತ್ರುರಲೋಲಶ್ಚ ಮಹೌಷಧಃ ॥108॥
ವಣಿಜಃ= ವೈಶ್ಯರಲ್ಲಿ ಇರುವವನು, ವರ್ಧನಃ= ಅಭಿವೃದ್ಧಿಶೀಲನಾದವನು, ವೃಕ್ಷಃ= ಸಂಸಾರ ಛೇದಕನಾದವನು, ನಕುಲಃ= ಮುಂಗುಸಿಯಲ್ಲಿರುವವನು, ಚಂದನಃ= ಚಂದನ ವೃಕ್ಷದಲ್ಲಿರುವವನು, ಛದಃ= ಜಗತ್ತಿಗೆ ಆವರಣನಾದವನು, ಸಾರಗ್ರೀವಃ= ದೃಢವಾದ ಕತ್ತುಳ್ಳವನು, ಮಹಾಜತ್ರುಃ= ದೊಡ್ಡ ಭುಜಸಂಧಿಯುಳ್ಳವನು, ಅಲೋಲಃ= ಚಂಚಲನಾದವನು, ಮಹೌಷಧಃ= ಸಂಸಾರ ರೋಗಕ್ಕೆ ಔಷಧಿರೂಪನಾದವನು.
ಸಿದ್ಧಾರ್ಥಕಾರೀ ಸಿದ್ಧಾರ್ಥಶ್ಛಂದೋವ್ಯಾಕರಣೋತ್ತರಃ |
ಸಿಂಹನಾದಃ ಸಿಂಹದಂಷ್ಟ್ರಃ ಸಿಂಹಗಃ ಸಿಂಹವಾಹನಃ ॥109॥
ಸಿದ್ಧಾರ್ಥಕಾರೀ= ಸಿದ್ಧವಾದ ಅರ್ಥವನ್ನು ಮಾಡುವವನು, ಸಿದ್ಧಾರ್ಥಃ= ಸಿದ್ಧಿಸಿದ ಪುರುಷಾರ್ಥವುಳ್ಳವನು, ಛಂದೋವ್ಯಾಕರಣೋತ್ತರಃ= ಛಂದಸ್ಸು ಮತ್ತು ವ್ಯಾಕರಣ ಶಾಸ್ತ್ರವನ್ನು ಮೀರಿದವನು, ಸಿಂಹನಾದಃ= ಸಿಂಹದಂತಹ ನಾದವುಳ್ಳವನು, ಸಿಂಹದಂಷ್ಟ್ರಃ= ಸಿಂಹದಂತಹ ಕೋರೆದಾಡೆಯುಳ್ಳವನು, ಸಿಂಹಗಃ= ಸಿಂಹದಲ್ಲಿ ಇರುವವನು, ಸಿಂಹವಾಹನಃ= ಸಿಂಹವನ್ನು ವಾಹನವಾಗಿ ಹೊಂದಿದವನು.
ಪ್ರಭಾವಾತ್ಮಾ ಜಗತ್ಕಾಲಸ್ತಾಲೋ ಲೋಕಹಿತಸ್ತರುಃ |
ಸಾರಂಗೋ ನವಚಕ್ರಾಂಗಃ ಕೇತುಮಾಲೀ ಸಭಾವನಃ ॥110॥
ಪ್ರಭಾವಾತ್ಮಾ= ಪ್ರಭಾವಶಾಲಿಯಾದ ದೇಹವನ್ನು ಹೊಂದಿದವನು, ಜಗತ್ಕಾಲಃ= ಜಗತ್ತಿಗೆ ಬಂಧನ, ಸಂಹಾರಗಳನ್ನು ಮಾಡುವವನು, ತಾಲಃ= ತಾಳಪ್ರವರ್ತಕನಾದವನು, ಲೋಕಹಿತಃ= ಲೋಕಕ್ಕೆ ಹಿತನಾದವನು, ತರುಃ= ಕಷ್ಟದಿಂದ ದಾಟಿಸುವವನು, ಸಾರಂಗಃ= ಸಾರಂಗರೂಪನಾದವನು, ನವಚಕ್ರಾಂಗಃ= ಎಳೆಯ ಹಂಸರೂಪವನ್ನು ಧರಿಸಿರುವವನು, ಕೇತುಮಾಲೀ= ಧ್ವಜಗಳಿಂದ ಅಲಂಕೃತನಾದವನು, ಸಭಾವನಃ= ಸಭೆಯನ್ನು ರಕ್ಷಿಸುವವನು.
ಭೂತಾಲಯೋ ಭೂತಪತಿರಹೋರಾತ್ರಮನಿಂದಿತಃ |
ವಾಹಿತಾ ಸರ್ವಭೂತಾನಾಂ ನಿಲಯಶ್ಚ ವಿಭುರ್ಭವಃ ॥111॥
ಭೂತಾಲಯಃ= ಎಲ್ಲ ಪ್ರಾಣಿಗಳಿಗೂ ಆಶ್ರಯನಾದವನು, ಭೂತಪತಿಃ= ಭೂತಗಳಿಗೆ ಒಡೆಯ, ಅಹೋರಾತ್ರಂ= ಹಗಲು-ರಾತ್ರಿಗಳ ಪ್ರವರ್ತಕ, ಅನಿಂದಿತಃ= ಅನಿಂದಿತನು, ವಾಹಿತಾ= ಎಲ್ಲವನ್ನೂ ನಡೆಸುವವನು, ಸರ್ವಭೂತಾನಾಂ ನಿಲಯಃ= ಎಲ್ಲ ಪ್ರಾಣಿಗಳಿಗೆ ಆಶ್ರಯನಾದವನು, ವಿಭುಃ= ವ್ಯಾಪ್ತನಾದವನು, ಭವಃ= ಐಶ್ವರ್ಯರೂಪನಾದವನು.
ಅಮೋಘಃ ಸಂಯತೋ ಹ್ಯಶ್ವೋ ಭೋಜನಃ ಪ್ರಾಣಧಾರಣಃ |
ಧೃತಿಮಾನ್ ಮತಿಮಾನ್ ದಕ್ಷಃ ಸತ್ಕೃತಶ್ಚ ಯುಗಾಧಿಪಃ ॥112॥
ಅಮೋಘಃ= ಭಕ್ತರ ಪ್ರಾರ್ಥನೆಯನ್ನು ವ್ಯರ್ಥಗೊಳಿಸದವನು, ಸಂಯತಃ= ಸಂಯಮವನ್ನು ಹೊಂದಿದವನು, ಅಶ್ವಃ= ಅಶ್ವಗಳಲ್ಲಿ ಇರುವವನು, ಭೋಜನಃ= ಪ್ರಾಣಿಗಳಿಗೆ ಆಹಾರವನ್ನು ಕೊಡುವವನು, ಪ್ರಾಣಧಾರಣಃ= ಪ್ರಾಣಗಳನ್ನು ಧರಿಸಿದವನು, ಧೃತಿಮಾನ್= ಧೈರ್ಯಶಾಲಿ, ಮತಿಮಾನ್= ಒಳ್ಳೆಯ ಬುದ್ಧಿಯುಳ್ಳವನು, ದಕ್ಷಃ= ದಕ್ಷತೆಯುಳ್ಳವನು, ಸತ್ಕೃತಃ= ಸಮ್ಮಾನಿತನು, ಯುಗಾಧಿಪಃ= ಯುಗಗಳಿಗೆ ಒಡೆಯ.
ಗೋಪಾಲಿರ್ಗೋಪತಿರ್ಗ್ರಾಮೋ ಗೋಚರ್ಮವಸನೋ ಹರಃ |
ಹಿರಣ್ಯಬಾಹುಶ್ಚ ತಥಾ ಗುಹಾಪಾಲಃ ಪ್ರವೇಶಿನಾಮ್ ॥113॥
ಗೋಪಾಲಿಃ= ಗೋವುಗಳನ್ನು ರಕ್ಷಿಸುವವನು, ಗೋಪತಿಃ= ಗೋವುಗಳಿಗೆ ಒಡೆಯ, ಗ್ರಾಮಃ= ಗ್ರಾಮದಲ್ಲಿ ಇರುವವನು, ಗೋಚರ್ಮವಸನಃ= ಗೋಚರ್ಮವನ್ನು ಧರಿಸಿದವನು, ಹರಃ= ಪಾಪಹರನು, ಹಿರಣ್ಯಬಾಹುಃ= ಸುವರ್ಣಮಯವಾದ ಬಾಹು ಉಳ್ಳವನು, ಪ್ರವೇಶಿನಾಮ್ ಗುಹಾಪಾಲಃ= ಮನಸ್ಸಿನಲ್ಲಿ ತನ್ನನ್ನು ಧ್ಯಾನಿಸುವ ಯೋಗಿಗಳ ಹೃದಯದಲ್ಲಿದ್ದು ರಕ್ಷಿಸುವವನು.
ಪ್ರಕೃಷ್ಟಾರಿಃ ಮಹಾಹರ್ಷೋ ಜಿತಕಾಮೋ ಜಿತೇಂದ್ರಿಯಃ |
ಗಾಂಧಾರಶ್ಚ ಸುವಾಸಶ್ಚ ತಪಃಕರ್ಮರತಿರ್ಧನುಃ ॥114॥

ಪ್ರಕೃಷ್ಟಾರಿಃ= ಶತ್ರುಗಳನ್ನು ಎಳೆದಾಡುವವನು, ಮಹಾಹರ್ಷಃ= ಬಹಳ ಸಂತೋಷದಿಂದ ಕೂಡಿದವನು, ಜಿತಕಾಮಃ= ಕಾಮವನ್ನು ಗೆದ್ದವನು, ಜಿತೇಂದ್ರಿಯಃ= ಇಂದ್ರಿಯಜಯವುಳ್ಳವನು, ಗಾಂಧಾರಃ= ಗಾಂಧಾರಾದಿ ಸ್ವರ ನಿಯಾಮಕನು, ಸುವಾಸಃ= ಒಳ್ಳೆಯ ವಸ್ತ್ರವುಳ್ಳವನು, ತಪಃಕರ್ಮರತಿಃ= ತಪಸ್ಸಿನಲ್ಲಿ ನಿರತನಾದವನು, ಧನುಃ= ಪಿನಾಕಧನುರ್ಧಾರಿ.

ಮಹಾಗೀತೋ ಮಹಾನೃತ್ತೋ ಹ್ಯಪ್ಸರೋಗಣಸೇವಿತಃ |
ಮಹಾಕೇತುರ್ಧನುರ್ಧಾತುರ್ನೈಕಸಾನುಚರಶ್ಚರಃ ॥115॥

ಮಹಾಗೀತಃ= ದೊಡ್ಡ ಗಾನವನ್ನು ಮಾಡುವವನು, ಮಹಾನೃತ್ತಃ= ಉತ್ತಮವಾಗಿ ನೃತ್ಯವನ್ನು ಮಾಡುವವನು, ಅಪ್ಸರೋಗಣಸೇವಿತಃ= ಅಪ್ಸರೆಯರ ಗಣದಿಂದ ಸೇವಿತನಾದವನು, ಮಹಾಕೇತುಃ= ದೊಡ್ಡ ಧ್ವಜವುಳ್ಳವನು, ಧನುಃ= ಶ್ರೇಷ್ಠ ಧನುರ್ಧಾರಿ, ಧಾತುಃ= ಜಗತ್ತನ್ನು ಪೋಷಿಸುವವನು, ನೈಕಸಾನುಚರಃ= ಅನೇಕ ಪರ್ವತ ಶಿಖರಗಳಲ್ಲಿ ಸಂಚರಿಸುವವನು, ಚರಃ= ಚಲಿಸುವವನು.

ಆವೇದನೀಯ ಆದೇಶಃ ಸರ್ವಗಂಧಸುಖಾವಹಃ |
ತೋರಣಸ್ತಾರಣೋ ವಾಯುಃ ಪರಿಧಾವತಿ ಚೈಕತಃ ॥116॥

ಆವೇದನೀಯಃ= ಉಪದೇಶಿಸಲ್ಪಡುವವನು, ಆದೇಶಃ= ಆಜ್ಞೆಯನ್ನು ಕೊಡುವವನು, ಸರ್ವಗಂಧಸುಖಾವಹಃ= ಸರ್ವಗಂಧಗಳಿಂದ ಸುಖವನ್ನು ಕೊಡುವವನು, ತೋರಣಃ= ಸುಖಕ್ಕೆ ದ್ವಾರನಾದವನು, ತಾರಣಃ= ಕಷ್ಟದಿಂದ ದಾಟಿಸುವವನು, ವಾಯುಃ= ವಾಯುವಿನಲ್ಲಿ ಇರುವವನು, ಪರಿಧಾವತಿ ಚೈಕತಃ= ಒಂದು ಸ್ಥಾನದಿಂದ ಎಲ್ಲ ಕಡೆಯಲ್ಲಿಯೂ ಓಡುವವನು.

ಸಂಯೋಗೋ ವರ್ಧನೋ ವೃದ್ಧೋ ಮಹಾವೃದ್ಧೋ ಗಣಾಧಿಪಃ |
ನಿತ್ಯ ಆತ್ಮಸಹಾಯಶ್ಚ ದೇವಾಸುರಪತಿಃ ಪತಿಃ ॥117॥

ಸಂಯೋಗಃ= ಒಳ್ಳೆಯ ಯೋಗವುಳ್ಳವನು, ವರ್ಧನಃ= ಅಭಿವೃದ್ಧಿ ಪಡಿಸುವವನು, ವೃದ್ಧಃ= ಅಭಿವೃದ್ಧನಾದವನು, ಮಹಾವೃದ್ಧಃ= ಬಹಳ ವೃದ್ಧಿಯನ್ನು ಹೊಂದಿದವನು, ಗಣಾಧಿಪಃ= ಗಣಗಳಿಗೆ ಒಡೆಯ, ನಿತ್ಯಃ= ನಿತ್ಯನು, ಆತ್ಮಸಹಾಯಃ= ತನಗೆ ತಾನೇ ಸಹಾಯನಾದವನು, ದೇವಾಸುರಪತಿಃ= ದೇವಾಸುರರಿಗೆ ಒಡೆಯನಾದವನು, ಪತಿಃ= ರಕ್ಷಕನು.

ಯುಕ್ತಶ್ಚ ಯುಕ್ತಬಾಹುಶ್ಚ ದೇವೋ ದಿವಿ ಸುಪರ್ವಣಃ |
ಆಷಾಢಶ್ಚ ಸುಷಾಢಶ್ಚ ಧ್ರುವೋ ಹರಿಹಣೋ ಹರಃ ॥118॥

ಯುಕ್ತಃ= ಯೋಗಯುಕ್ತನಾದವನು, ಯುಕ್ತಬಾಹುಃ= ಭಕ್ತರ ಕಷ್ಟ ಪರಿಹಾರಕ್ಕೆ ಉದ್ಯುಕ್ತವಾದ ಬಾಹುವುಳ್ಳವನು, ದೇವಃ= ದೇವನು, ದಿವಿ ಸುಪರ್ವಣಃ= ಸ್ವರ್ಗದಲ್ಲಿಯೂ ಆರಾಧ್ಯನಾದವನು, ಆಷಾಢಃ= ಭಕ್ತರ ತಪ್ಪನ್ನು ಸಹಿಸುವವನು, ಸುಷಾಢಃ= ಒಳ್ಳೆಯ ಸಹನಶೀಲನಾದವನು, ಧ್ರುವಃ= ನಿತ್ಯನಾದವನು, ಹರಿಹಣಃ= ಸಿಂಹವನ್ನು ಕೊಲ್ಲುವವನು, ಹರಃ= ಪಾಪಹರನು.

ವಪುರಾವರ್ತಮಾನೇಭ್ಯೋ ವಸುಶ್ರೇಷ್ಠೋ ಮಹಾಪಥಃ |
ಶಿರೋಹಾರೀ ವಿಮರ್ಷಶ್ಚ ಸರ್ವಲಕ್ಷಣಭೂಷಿತಃ ॥119॥

ಆವರ್ತಮಾನೇಭ್ಯಃ ವಪುಃ= ಲೋಕಾಂತರದಿಂದ ಹಿಂದಿರುಗಿದವರಿಗೆ ಶರೀರವನ್ನು ಕೊಡುವವನು, ವಸುಶ್ರೇಷ್ಠಃ= ವಾಸ ಮಾಡುವವರಲ್ಲಿ ಶ್ರೇಷ್ಠನಾದವನು, ಮಹಾಪಥಃ= ದೊಡ್ಡ ಮಾರ್ಗರೂಪನು, ಶಿರೋಹಾರೀ= ದುಷ್ಟರ ಶಿರಸ್ಸನ್ನು ಛೇದಿಸುವವನು, ವಿಮರ್ಷಃ= ವಿವಿಧವಾದ ಸಹನೆಯುಳ್ಳವನು, ಸರ್ವಲಕ್ಷಣ ಭೂಷಿತಃ= ಎಲ್ಲ ಲಕ್ಷಣಗಳಿಂದಲೂ ಅಲಂಕೃತನಾದವನು.

ಅಕ್ಷಶ್ಚ ರಥಯೋಗೀ ಚ ಸರ್ವಯೋಗೀ ಮಹಾಬಲಃ |
ಸಮಾಮ್ನಾಯೋಽಸಮಾಮ್ನಾಯಸ್ತೀರ್ಥದೇವೋ ಮಹಾರಥಃ ॥120॥

ಅಕ್ಷಃ= ರಥದ ಅಕ್ಷದಂತೆ ಆಧಾರನಾದವನು, ರಥಯೋಗೀ= ರಥವನ್ನು ಹೊಂದಿದವನು, ಸರ್ವಯೋಗೀ= ಸರ್ವವನ್ನೂ ಪಡೆದವನು, ಸಮಾಮ್ನಾಯಃ= ವೇದಪ್ರತಿಪಾದ್ಯನು, ಅಸಮಾಮ್ನಾಯಃ= ವೇದಗಳಿಂದಲೂ ಪೂರ್ಣವಾಗಿ ಪ್ರತಿಪಾದಿಸಲ್ಪಡದವನು, ತೀರ್ಥದೇವಃ= ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿದ ದೇವನು, ಮಹಾರಥಃ= ದೊಡ್ಡ ರಥವುಳ್ಳವನು.

ನಿರ್ಜೀವೋ ಜೀವನೋ ಮಂತ್ರಃ ಶುಭಾಕ್ಷೋ ಬಹುಕರ್ಕಶಃ |
ರತ್ನಪ್ರಭೂತೋ ರತ್ನಾಂಗೋ ಮಹಾರ್ಣವನಿಪಾನವಿತ್ ॥121॥

ನಿರ್ಜೀವಃ= ಜಡಪ್ರಪಂಚಕ್ಕೆ ಸ್ವಾಮಿ, ಜೀವನಃ= ಬದುಕಿಸುವವನು, ಮಂತ್ರಃ= ಮಂತ್ರಪ್ರತಿಪಾದ್ಯನು, ಶುಭಾಕ್ಷಃ= ಶುಭವಾದ ಕಣ್ಣುಳ್ಳವನು, ಬಹುಕರ್ಕಶಃ= ಶತ್ರುಗಳಿಗೆ ಬಹಳ ಒರಟಾದವನು, ರತ್ನಪ್ರಭೂತಃ= ರತ್ನಗಳಿಗೆ ಉತ್ಪತ್ತಿಸ್ಥಾನನಾದವನು, ರತ್ನಾಂಗಃ= ಉತ್ತಮವಾದ ಅಂಗಗಳುಳ್ಳವನು, ಮಹಾರ್ಣವನಿಪಾನವಿತ್= ಸಮುದ್ರವನ್ನು ಪಾನ ಮಾಡಿ ಶೋಷಿಸಲು ತಿಳಿದವನು.

ಮೂಲಂ ವಿಶಾಲೋ ಹ್ಯಮೃತೋ ವ್ಯಕ್ತಾವ್ಯಕ್ತಸ್ತಪೋನಿಧಿಃ |
ಆರೋಹಣೋ ನಿರೋಹಶ್ಚ ಶೈಲಹಾರೀ ಮಹಾತಪಾಃ ॥122॥

ಮೂಲಂ= ಎಲ್ಲದಕ್ಕೂ ಮೂಲನಾದವನು, ವಿಶಾಲಃ= ವಿಸ್ತಾರನಾದವನು, ಅಮೃತಃ= ಮರಣರಹಿತನು, ವ್ಯಕ್ತಾವ್ಯಕ್ತಃ= ವ್ಯಕ್ತನು ಮತ್ತು ಅವ್ಯಕ್ತನು, ತಪೋನಿಧಿಃ= ತಪಸ್ಸಿಗೆ ಆಶ್ರಯನಾದವನು, ಆರೋಹಣಃ= ಮೇಲ್ಮುಖವಾಗಿ ಹೋಗುವವನು, ನಿರೋಹಃ= ಶತ್ರುಗಳನ್ನು ಕೆಳಗೆ ತಳ್ಳುವವನು, ಶೈಲಹಾರೀ= ಪರ್ವತವನ್ನು ನಾಶಮಾಡುವವನು, ಮಹಾತಪಾಃ= ಮಹಾತಪಸ್ವಿ.

ಸೇನಾಕಲ್ಪೋ ಮಹಾಕಲ್ಪೋ ಯುಗಾಯುಗಕರೋ ಹರಿಃ |
ಯುಗರೂಪೋ ಮಹಾರೂಪಃ ಮಹಾನಾಗಹನೋಽವಧಃ ॥123॥

ಸೇನಾಕಲ್ಪಃ= ಸೇನೆಯನ್ನು ಉಂಟುಮಾಡುವವನು, ಮಹಾಕಲ್ಪಃ= ಆಭರಣಗಳಿಂದ ಅಲಂಕೃತನಾದವನು, ಯುಗಾಯುಗಕರಃ= ಯುಗಗಳನ್ನು ಮತ್ತು ಯುಗಭಿನ್ನವಾದವುಗಳನ್ನು ಮಾಡುವವನು, ಹರಿಃ= ಪಾಪಹಾರಿಯು, ಯುಗರೂಪಃ= ಯುಗವನ್ನು ರೂಪಿಸುವವನು, ಮಹಾರೂಪಃ= ದೊಡ್ಡ ರೂಪವನ್ನು ಹೊಂದಿದವನು, ಮಹಾನಾಗಹನಃ= ದೊಡ್ಡ ಸರ್ಪವನ್ನು ಕೊಂದವನು, ಅವಧಃ= ಮರಣ ರಹಿತನಾದವನು.

ನ್ಯಾಯನಿರ್ವಾಪಣಃ ಪಾದಃ ಪಂಡಿತೋ ಹ್ಯಚಲೋಪಮಃ |
ಬಹುಮಾಲೋ ಮಹಾಮಾಲಃ ಸುಮಾಲೋ ಬಹುಲೋಚನಃ ॥124॥
ನ್ಯಾಯನಿರ್ವಾಪಣಃ= ಶಾಸ್ತ್ರನ್ಯಾಯದಂತೆ ದಾನವನ್ನು ಮಾಡುವವನು, ಪಾದಃ= ಗಮ್ಯನಾದವನು, ಪಂಡಿತಃ= ಜ್ಞಾನಿ, ಅಚಲೋಪಮಃ= ಪರ್ವತದಂತೆ ಸ್ಥಿರನಾದವನು, ಬಹುಮಾಲಃ= ಅನೇಕ ಮಾಲೆಗಳನ್ನು ಧರಿಸಿದವನು, ಮಹಾಮಾಲಃ= ದೊಡ್ಡ ಮಾಲೆಯನ್ನು ಧರಿಸಿದವನು, ಸುಮಾಲಃ= ಒಳ್ಳೆಯ ಮಾಲೆಗಳನ್ನು ಧರಿಸಿದವನು, ಬಹುಲೋಚನಃ= ಅನೇಕ ನೇತ್ರಗಳುಳ್ಳವನು.
ವಿಸ್ತಾರೋ ಲವಣಃ ಕೂಪಃ ತ್ರಿಯುಗಃ ಸಫಲೋದಯಃ |
ವೃಷಭೋ ವೃಷಭಾಂಕಾಂಗೋ ಮಣಿಬಿಲ್ವೋ ಜಟಾಧರಃ ॥125॥
ವಿಸ್ತಾರಃ= ವಿಶಾಲನಾದವನು, ಲವಣಃ= ಲವಣ ನಿಯಾಮಕನು, ಕೂಪಃ= ಬಾವಿಗಳಲ್ಲಿ ಇರುವವನು, ತ್ರಿಯುಗಃ= ಮೂರು ಯುಗಗಳಲ್ಲಿ ಇರುವವನು, ಸಫಲೋದಯಃ= ಸಫಲವಾದ ಅಭಿವೃದ್ಧಿಯನ್ನು ಕೊಡುವವನು, ವೃಷಭಃ= ಶ್ರೇಷ್ಠನಾದವನು, ವೃಷಭಾಂಕಾಂಗಃ= ವೃಷಭ ಚಿಹ್ನೆಯುಳ್ಳ ಅಂಗಗಳನ್ನುಳ್ಳವನು, ಮಣಿಬಿಲ್ವಃ= ಮಣಿಗಳಲ್ಲಿ ಮತ್ತು ಬಿಲ್ವಗಳಲ್ಲಿ ಇರುವವನು, ಜಟಾಧರಃ= ಜಟೆಯನ್ನು ಧರಿಸಿದವನು.
ಬಿಂದುರ್ವಿಸರ್ಗಃ ಸುಮುಖಃ ಸುರಃ ಸರ್ವಾಯುಧಃ ಸಹಃ |
ನಿವೇದನಃ ಸುಧಾಜಾತಃ ಸುಗಂಧಾರೋ ಮಹಾಧನುಃ ॥126॥
ಬಿಂದುಃ= ಬಿಂದುವಿನಲ್ಲಿ ಇರುವವನು, ವಿಸರ್ಗಃ= ವಿಸರ್ಗದಲ್ಲಿ ಇರುವವನು, ಸುಮುಖಃ= ಒಳ್ಳೆಯ ಮುಖವುಳ್ಳವನು, ಸುರಃ= ಒಳ್ಳೆಯ ಸುಖರೂಪನು, ಸರ್ವಾಯುಧಃ= ಎಲ್ಲ ಆಯುಧಗಳನ್ನೂ ಹೊಂದಿದವನು, ಸಹಃ= ಸಹನರೂಪನು, ನಿವೇದನಃ= ಎಲ್ಲವನ್ನೂ ನಿವೇದಿಸುವವನು, ಸುಧಾಜಾತಃ= ಅಮೃತದ ಉತ್ಪತ್ತಿಗೆ ಕಾರಣನು, ಸುಗಂಧಾರಃ= ಒಳ್ಳೆಯ ಗಂಧದಿಂದ ಕೂಡಿದವನು, ಮಹಾಧನುಃ= ಮಹಾಧನುರ್ಧಾರಿ.
ಗಂಧಮಾಲೀ ಚ ಭಗವಾನುತ್ಥಾನಃ ಸರ್ವಕರ್ಮಣಾಮ್ |
ಮಂಥಾನೋ ಬಹುಲೋ ಬಾಹುಃ ಸಕಲಃ ಸರ್ವಲೋಚನಃ ॥127॥
ಗಂಧಮಾಲೀ= ಸುಗಂಧಯುಕ್ತ ಮಾಲೆಯುಳ್ಳವನು, ಸರ್ವಕರ್ಮಣಾಮ್ ಭಗವಾನುತ್ಥಾನಃ= ಎಲ್ಲ ಕರ್ಮಗಳಿಗೆ ಅಭಿವೃದ್ಧಿಯನ್ನು ಕೊಡುವವನು, ಮಂಥಾನಃ= ಸಂಸಾರಸಾಗರಕ್ಕೆ ಕಡೆಗೋಲಿನ ರೂಪನಾದವನು, ಬಹುಲಃ= ಅನೇಕ ರೂಪಗಳುಳ್ಳವನು, ಬಾಹುಃ= ಅನೇಕ ಬಾಹುಗಳನ್ನು ಹೊಂದಿದವನು, ಸಕಲಃ= ಕಲೆಗಳಿಂದ ಕೂಡಿದವನು, ಸರ್ವಲೋಚನಃ= ಎಲ್ಲ ಕಡೆಗಳಲ್ಲಿಯೂ ಕಣ್ಣುಳ್ಳವನು.
ತಲಸ್ತಾಲಃ ಕರಸ್ಥಾಲೀ ಊರ್ಧ್ವಸಂಹನನೋ ವಹಃ |
ಛತ್ರಂ ಸುಚ್ಛತ್ರೋ ವಿಖ್ಯಾತಃ ಸರ್ವಲೋಕಾಶ್ರಯೋ ಮಹಾನ್ ॥128॥
ತಲಃ= ಆಶ್ರಯನಾದವನು, ತಾಲಃ= ಕ್ರಿಯಾನಿಯಾಮಕ, ಕರಸ್ಥಾಲೀ= ಹಸ್ತವೇ ಪಾತ್ರೆಯಾಗಿ ಉಳ್ಳವನು, ಊರ್ಧ್ವಸಂಹನಃ= ಊರ್ಧ್ವಮುಖವಾದ ಶರೀರವುಳ್ಳವನು, ವಹಃ= ಸರ್ವನಿರ್ವಾಹಕನು, ಛತ್ರಂ= ಆಚ್ಛಾದಕನು, ಸುಚ್ಛತ್ರಃ= ಭಕ್ತರನ್ನು ಕಷ್ಟದಿಂದ ಆಚ್ಛಾದಿಸುವವನು, ವಿಖ್ಯಾತಃ= ಪ್ರಸಿದ್ಧನು, ಸರ್ವಲೋಕಾಶ್ರಯಃ= ಎಲ್ಲ ಲೋಕಗಳಿಗೆ ಆಶ್ರಯನಾದವನು, ಮಹಾನ್= ದೊಡ್ಡವನು.

ಮುಂಡೋ ವಿರೂಪೋ ವಿಕೃತೋ ದಂಡಿಮುಂಡೋ ವಿಕುರ್ವಣಃ |
ಹರ್ಯಕ್ಷಃ ಕಕುಭೋ ವಜ್ರೀ ದೀಪ್ತಜಿಹ್ವಃ ಸಹಸ್ರಪಾತ್ ॥129॥
ಮುಂಡಃ= ಭಿಕ್ಷುರೂಪನು, ವಿರೂಪಃ= ವಿರೂಪವುಳ್ಳವನು, ವಿಕೃತಃ= ವಿಕಾರವನ್ನು ಹೊಂದಿಸುವವನು, ದಂಡಿಮುಂಡಃ= ದಂಡವನ್ನು ಧರಿಸಿ ಮುಂಡನಾದವನು (ಭಿಕ್ಷು), ವಿಕುರ್ವಣಃ= ವಿಕಾರವನ್ನು ಉಂಟುಮಾಡುವವನು, ಹರ್ಯಕ್ಷಃ= ಸಿಂಹದಲ್ಲಿ ಇರುವವನು, ಕಕುಭಃ= ದಿಕ್ಕುಗಳಲ್ಲಿ ಇರುವವನು, ವಜ್ರೀ= ವಜ್ರಾಯುಧವನ್ನು ಧರಿಸಿದವನು, ದೀಪ್ತಜಿಹ್ವಃ= ಪ್ರಕಾಶಮಾನವಾದ ನಾಲಿಗೆಯುಳ್ಳವನು, ಸಹಸ್ರಪಾತ್= ಸಹಸ್ರ ಪಾದಗಳುಳ್ಳವನು.
ಸಹಸ್ರಮೂರ್ಧಾ ದೇವೇಂದ್ರಃ ಸರ್ವದೇವಮಯೋ ಗುರುಃ |
ಸಹಸ್ರಬಾಹುಃ ಸರ್ವಾಂಗಃ ಶರಣ್ಯಃ ಸರ್ವಲೋಕಕೃತ್ ॥130॥
ಸಹಸ್ರಮೂರ್ಧಾ= ಸಹಸ್ರ ಶಿರಸ್ಸುಳ್ಳವನು, ದೇವೇಂದ್ರಃ= ದೇವತೆಗಳಿಗೆ ಒಡೆಯ, ಸರ್ವದೇವಮಯಃ= ಎಲ್ಲ ದೇವತೆಗಳಿಗೆ ಪ್ರಧಾನನಾದವನು, ಗುರುಃ= ಉಪದೇಶಕ, ಸಹಸ್ರಬಾಹುಃ= ಸಹಸ್ರ ಬಾಹುಗಳುಳ್ಳವನು, ಸರ್ವಾಂಗಃ= ಎಲ್ಲ ಅಂಗಧಾರಿ, ಶರಣ್ಯಃ= ಶರಣು ಹೊಂದಲು ಅರ್ಹನಾದವನು, ಸರ್ವಲೋಕಕೃತ್= ಎಲ್ಲ ಲೋಕಗಳನ್ನು ಸೃಷ್ಟಿಸುವವನು.
ಪವಿತ್ರಂ ತ್ರಿಕಕುನ್ಮಂತ್ರಃ ಕನಿಷ್ಠಃ ಕೃಷ್ಣಪಿಂಗಲಃ |
ಬ್ರಹ್ಮದಂಡವಿನಿರ್ಮಾತಾ ಶತಘ್ನೀಶತಪಾಶಧೃಕ್ ॥131॥
ಪವಿತ್ರಂ= ಪವಿತ್ರನಾದವನು, ತ್ರಿಕಕುನ್ಮಂತ್ರಃ= ಮೂರು ಶಿಖರಗಳುಳ್ಳ ಗಾಯತ್ರಿಯಿಂದ ಪ್ರತಿಪಾದ್ಯನು, ಕನಿಷ್ಠಃ= ಕನಿಷ್ಠರಲ್ಲಿ ಇರುವವನು, ಕೃಷ್ಣಪಿಂಗಲಃ= ಕಪ್ಪು ಕಂದುರೂಪದವನು, ಬ್ರಹ್ಮದಂಡವಿನಿರ್ಮಾತಾ= ಬ್ರಹ್ಮದಂಡವನ್ನು ಸೃಷ್ಟಿಸುವವನು, ಶತಘ್ನೀಶತಪಾಶಧೃಕ್= ಶತಘ್ನೀ- ಶತಪಾಶ ಎಂಬ ಆಯುಧವನ್ನು ಹಿಡಿದವನು.
ಪದ್ಮಗರ್ಭೋ ಮಹಾಗರ್ಭೋ ಬ್ರಹ್ಮಗರ್ಭೋ ಜಲೋದ್ಭವಃ |
ಗಭಸ್ತಿರ್ಬ್ರಹ್ಮಕೃದ್ ಬ್ರಹ್ಮಾ ಬ್ರಹ್ಮವಿದ್ ಬ್ರಾಹ್ಮಣೋ ಗತಿಃ ॥132॥
ಪದ್ಮಗರ್ಭಃ= ಗರ್ಭದಲ್ಲಿ ಪದ್ಮವನ್ನು ಧರಿಸಿದವನು, ಮಹಾಗರ್ಭಃ= ದೊಡ್ಡ ಗರ್ಭವುಳ್ಳವನು, ಬ್ರಹ್ಮಗರ್ಭಃ= ವೇದಗಳನ್ನು ಹೃದಯದಲ್ಲಿ ಧರಿಸಿದವನು, ಜಲೋದ್ಭವಃ= ಜಲದ ಉತ್ಪತ್ತಿಗೆ ಕಾರಣನಾದವನು, ಗಭಸ್ತಿಃ= ಕಿರಣಗಳನ್ನು ಹೊಂದಿದವನು, ಬ್ರಹ್ಮಕೃದ್= ವೇದೋಪದೇಶಕ, ಬ್ರಹ್ಮಾ= ಪೂರ್ಣನಾದವನು, ಬ್ರಹ್ಮವಿದ್= ಬ್ರಹ್ಮನನ್ನು ಹೊಂದಿದವನು, ಬ್ರಾಹ್ಮಣಃ= ಬ್ರಹ್ಮನನ್ನು

ತಿಳಿದವನು,  ಗತಿಃ= ಗಮ್ಯನಾದವನು.
ಅನಂತರೂಪೋ ನೈಕಾತ್ಮಾ ತಿಗ್ಮತೇಜಾಃ ಸ್ವಯಂಭುವಃ |
ಊರ್ಧ್ವಗಾತ್ಮಾ ಪಶುಪತಿರ್ವಾತರಂಹಾ ಮನೋಜವಃ ॥133॥
ಅನಂತರೂಪಃ= ಅನಂತರೂಪಗಳನ್ನು ಹೊಂದಿದವನು, ನೈಕಾತ್ಮಾ= ಅನೇಕ ಶರೀರಗಳನ್ನು ಹೊಂದಿದವನು, ತಿಗ್ಮತೇಜಾಃ= ತೀಕ್ಷ್ಣವಾದ ತೇಜಸ್ಸನ್ನು ಹೊಂದಿದವನು, ಸ್ವಯಂಭುವಃ= ಸ್ವತಂತ್ರನಾಗಿ ಇರುವವನು, ಊರ್ಧ್ವಗಾತ್ಮಾ= ಊರ್ಧ್ವಮುಖವಾದ ಶರೀರವುಳ್ಳವನು, ಪಶುಪತಿಃ= ಪಶುಗಳಿಗೆ ಒಡೆಯ, ವಾತರಂಹಾಃ= ವಾಯುವೇಗವುಳ್ಳವನು, ಮನೋಜವಃ= ಮನೋವೇಗವುಳ್ಳವನು.

ಚಂದನೀ ಪದ್ಮಮಾಲಾಗ್ರ್ಯಃ ಸುರಭ್ಯುತ್ತರಣೋ ನರಃ |
ಕರ್ಣಿಕಾರಮಹಾಸ್ರಗ್ವೀ ನೀಲವೌಲಿಃ ಪಿನಾಕಧೃಕ್ ॥134॥
ಚಂದನೀ= ಗಂಧದಿಂದ ಲಿಪ್ತನಾದವನು, ಪದ್ಮಮಾಲಾಗ್ರ್ಯಃ= ಶ್ರೇಷ್ಠವಾದ ಪದ್ಮಮಾಲೆಯನ್ನು ಧರಿಸಿದವನು, ಸುರಭ್ಯುತ್ತರಣಃ= ಕಾಮಧೇನುವನ್ನು ಕಷ್ಟದಿಂದ ಪಾರು ಮಾಡಿದವನು, ನರಃ= ಪುರುಷರೂಪದಿಂದ ಇರುವವನು, ಕರ್ಣಿಕಾರ ಮಹಾಸ್ರಗ್ವೀ= ಕರ್ಣಿಕಾರ ಪುಷ್ಪದ ದೊಡ್ಡ ಮಾಲೆಯನ್ನು ಧರಿಸಿದವನು, ನೀಲವೌಲಿಃ= ನೀಲಮಣಿಯ ಕಿರೀಟವನ್ನು ಧರಿಸಿದವನು, ಪಿನಾಕಧೃಕ್= ಪಿನಾಕಧನುರ್ಧಾರಿ.
ಉಮಾಪತಿರುಮಾಕಾಂತೋ ಜಾಹ್ನವೀಧೃಗುಮಾಧವಃ |
ವರೋ ವರಾಹೋ ವರದೋ ವರೇಶಃ ಸುಮಹಾಸ್ವನಃ ॥135॥
ಉಮಾಪತಿಃ= ಪಾರ್ವತೀಪತಿ, ಉಮಾಕಾಂತಃ= ಪಾರ್ವತಿಗೆ ಮನೋಹರನಾದವನು, ಜಾಹ್ನವೀಧೃಕ್= ಗಂಗೆಯನ್ನು ಧರಿಸಿದವನು, ಉಮಾಧವಃ= ಪಾರ್ವತಿಯನ್ನು ಶುದ್ಧಿಗೊಳಿಸುವವನು, ವರಃ= ಶ್ರೇಷ್ಠನಾದವನು, ವರಾಹಃ= ವರಾಹ ರೂಪದಲ್ಲಿರುವವನು, ವರದಃ= ವರಪ್ರದಾತಾ, ವರೇಶಃ= ವರಗಳಿಗೆ ಸ್ವಾಮಿ, ಸುಮಹಾಸ್ವನಃ= ದೊಡ್ಡ ನಾದವುಳ್ಳವನು (ವೇದಪ್ರತಿಪಾದ್ಯನು).
ಮಹಾಪ್ರಸಾದೋ ದಮನಃ ಶತ್ರುಹಾ ಶ್ವೇತಪಿಂಗಲಃ |
ಪ್ರೀತಾತ್ಮಾ ಪರಮಾತ್ಮಾ ಚ ಸಂಯತಾತ್ಮಾ ಪ್ರಧಾನಧೃಕ್ ॥136॥
ಮಹಾಪ್ರಸಾದಃ= ದೊಡ್ಡ ಅನುಗ್ರಹವನ್ನು ಮಾಡುವವನು, ದಮನಃ= ಶತ್ರುಗಳನ್ನು ದಮನ ಮಾಡುವವನು, ಶತ್ರುಹಾ= ಶತ್ರುಗಳನ್ನು ಸಂಹರಿಸುವವನು, ಶ್ವೇತಪಿಂಗಲಃ= ಬಿಳಿ ಮತ್ತು ಕಂದು ಬಣ್ಣದಿಂದ ಕೂಡಿದವನು, ಪ್ರೀತಾತ್ಮಾ= ಸಂತುಷ್ಟವಾದ ಮನಸ್ಸುಳ್ಳವನು, ಪರಮಾತ್ಮಾ= ಜಿತವಾದ ಮನಸ್ಸುಳ್ಳವನು, ಸಂಯತಾತ್ಮಾ= ಸಂಯಮಿ, ಪ್ರಧಾನಧೃಕ್= ಪ್ರಧಾನರಾದವರನ್ನು ಧರಿಸಿದವನು.
ಸರ್ವಪಾರ್ಶ್ವಸುತಸ್ತಾರ್ಕ್ಷ್ಯೋ ಧರ್ಮಸಾಧಾರಣೋ ವರಃ |
ಚರಾಚರಾತ್ಮಾ ಸೂಕ್ಷ್ಮಾತ್ಮಾ ಸುವೃಷೋ ಗೋವೃಷೇಶ್ವರಃ ॥137॥
ಸರ್ವಪಾರ್ಶ್ವಸುತಃ= ಎಲ್ಲ ಪಾರ್ಶ್ವಗಳಲ್ಲಿಯೂ ಮಕ್ಕಳನ್ನು ಹೊಂದಿದವನು, ತಾರ್ಕ್ಷ್ಯಃ= ಗರುಡನಲ್ಲಿ ಇರುವವನು, ಧರ್ಮಸಾಧಾರಣಃ= ಧರ್ಮಕ್ಕೆ ಆಶ್ರಯನಾದವನು, ವರಃ= ಶ್ರೇಷ್ಠನಾದವನು, ಚರಾಚರಾತ್ಮಾ= ಚರಾಚರವನ್ನು ವ್ಯಾಪಿಸಿದವನು, ಸೂಕ್ಷ್ಮಾತ್ಮಾ= ಸೂಕ್ಷ್ಮ ಶರೀರವನ್ನು ಹೊಂದಿದವನು, ಸುವೃಷಃ= ಒಳ್ಳೆಯ ವೃಷಭವನ್ನು ವಾಹನವಾಗಿ ಹೊಂದಿದವನು, ಗೋವೃಷೇಶ್ವರಃ= ಗೋ- ವೃಷಭಗಳಿಗೆ ಒಡೆಯ.
ಸಾಧ್ಯರ್ಷಿರ್ವಸುರಾದಿತ್ಯೋ ವಿವಸ್ವಾನ್ ಸವಿತಾ ಮೃಡಃ |
ವ್ಯಾಸಃ ಸರ್ವಸ್ಯ ಸಂಕ್ಷೇಪೋ ವಿಸ್ತರಃ ಪರ್ಯಯೋ ನಯಃ ॥138॥
ಸಾಧ್ಯರ್ಷಿಃ= ಸಾಧ್ಯರಲ್ಲಿ ಮತ್ತು ಋಷಿಗಳಲ್ಲಿ ಇರುವವನು, ವಸುಃ= ವಾಸನ ಶೀಲನಾದವನು, ಆದಿತ್ಯಃ= ಆದಿತ್ಯನಲ್ಲಿರುವವನು, ವಿವಸ್ವಾನ್= ಸೂರ್ಯನಲ್ಲಿ ಇರುವವನು, ಸವಿತಾ= ಸವಿತೃನಾಮಕ ಸೂರ್ಯನಲ್ಲಿರುವವನು, ಮೃಡಃ= ರಕ್ಷಿಸುವವನು, ಸರ್ವಸ್ಯ ವ್ಯಾಸಃ= ಎಲ್ಲವನ್ನೂ ವಿಸ್ತಾರ ಮಾಡುವವನು, ಸಂಕ್ಷೇಪಃ= ಸಂಕ್ಷೇಪಗೊಳಿಸುವವನು, ವಿಸ್ತರಃ= ವಿಶಾಲನಾದವನು, ಪರ್ಯಯಃ= ಯುಗ ಪ್ರವರ್ತಕನಾದವನು, ನಯಃ= ನೀತಿರೂಪನಾದವನು.
ಋತುಃ ಸಂವತ್ಸರೋ ಮಾಸಃ ಪಕ್ಷಃ ಸಂಖ್ಯಾಸಮಾಪನಃ |
ಕಲಾಃ ಕಾಷ್ಠಾ ಲವೋ ಮಾತ್ರಾ ಮುಹೂರ್ತೋಽಹಃ ಕ್ಷಪಾಃ ಕ್ಷಣಾಃ ॥
ಋತುಃ= ಋತುನಿಯಾಮಕನು, ಸಂವತ್ಸರಃ= ಸಂವತ್ಸರ ನಿಯಾಮಕ, ಮಾಸಃ= ಮಾಸನಿಯಾಮಕನು, ಪಕ್ಷಃ= ಪಕ್ಷನಿಯಾಮಕನು, ಸಂಖ್ಯಾಸಮಾಪನಃ= ಸಂಖ್ಯೆಯನ್ನು ಕೊನೆ ಮಾಡುವವನು, ಕಲಾಃ= ಕಲೆಗಳಿಗೆ ಒಡೆಯ, ಕಾಷ್ಠಾ= ಕಾಷ್ಠಗಳಿಗೆ ನಿಯಾಮಕ, ಲವ= ಲವನಿಯಾಮಕ, ಮಾತ್ರಾ= ಮಾತ್ರಾನಿಯಾಮಕ, ಮುಹೂರ್ತಃ= ಮುಹೂರ್ತ ನಿಯಾಮಕ, ಅಹಃ= ಹಗಲಿನ ನಿಯಾಮಕ, ಕ್ಷಪಾಃ= ರಾತ್ರಿಯ ನಿಯಾಮಕ, ಕ್ಷಣಾಃ= ಕ್ಷಣಗಳ ನಿಯಾಮಕ.
ವಿಶ್ವಕ್ಷೇತ್ರಂ ಪ್ರಜಾಬೀಜಂ ಲಿಂಗಮಾದ್ಯಸ್ತ್ವನಿಂದಿತಃ |
ಸದಸದ್ವ್ಯಕ್ತಮವ್ಯಕ್ತಂ ಪಿತಾ ಮಾತಾ ಪಿತಾಮಹಃ ॥140॥
ವಿಶ್ವಕ್ಷೇತ್ರಂ= ಜಗತ್ತು ಅಭಿವೃದ್ಧಿಯನ್ನು ಹೊಂದುವ ಕ್ಷೇತ್ರರೂಪನಾಗಿರುವವನು, ಪ್ರಜಾಬೀಜಂ= ಪ್ರಜೆಗಳಿಗೆ ಕಾರಣನಾದವನು, ಲಿಂಗಂ= ಲಿಂಗರೂಪನಾದವನು, ಆದ್ಯಃ= ಮೊದಲಿನಲ್ಲಿರುವವನು, ಅನಿಂದಿತಃ= ಅನಿಂದ್ಯನು, ಸದಸತ್= ಕಾರ್ಯಕಾರಣದಲ್ಲಿ ಇರುವವನು, ವ್ಯಕ್ತಮವ್ಯಕ್ತಂ= ವ್ಯಕ್ತ-ಅವ್ಯಕ್ತ ರೂಪನು, ಪಿತಾ= ಜಗತ್ತನ್ನು ಪಾಲಿಸುವವನು, ಮಾತಾ= ತಾಯಿಯಂತೆ ರಕ್ಷಿಸುವವನು, ಪಿತಾಮಹಃ= ಜಗತ್ತಿಗೆ ಪಿತಾಮಹನಾದವನು.
ಸ್ವರ್ಗದ್ವಾರಂ ಪ್ರಜಾದ್ವಾರಂ ಮೋಕ್ಷದ್ವಾರಂ ತ್ರಿವಿಷ್ಟಪಮ್ |
ನಿರ್ವಾಣಂ ಹ್ಲಾದನಂ ಚೈವ ಬ್ರಹ್ಮಲೋಕಃ ಪರಾ ಗತಿಃ ॥141॥

ಸ್ವರ್ಗದ್ವಾರಂ= ಸ್ವರ್ಗಕ್ಕೆ ಕಾರಣನಾದವನು, ಪ್ರಜಾದ್ವಾರಂ= ಪ್ರಜೆಗಳಿಗೆ ಕಾರಣನಾದವನು, ಮೋಕ್ಷದ್ವಾರಂ= ಮೋಕ್ಷಕ್ಕೆ ಕಾರಣನಾದವನು, ತ್ರಿವಿಷ್ಟಪಮ್= ಸ್ವರ್ಗಕ್ಕೆ ಕಾರಣನಾದವನು, ನಿರ್ವಾಣಂ= ಪ್ರಾಕೃತ ದೇಹರಾಹಿತ್ಯಕ್ಕೆ ಕಾರಣನಾದವನು, ಹ್ಲಾದನಂ= ಸಂತೋಷವನ್ನು ಕೊಡುವವನು, ಬ್ರಹ್ಮಲೋಕಃ= ಬ್ರಹ್ಮನನ್ನು ನೋಡುವವನು, ಪರಾ ಗತಿಃ= ಶ್ರೇಷ್ಠನಾದ ಗಮ್ಯನು.
ದೇವಾಸುರವಿನಿರ್ಮಾತಾ ದೇವಾಸುರಪರಾಯಣಃ |
ದೇವಾಸುರಗುರುರ್ದೇವೋ ದೇವಾಸುರನಮಸ್ಕೃತಃ ॥142॥
ದೇವಾಸುರವಿನಿರ್ಮಾತಾ= ದೇವಾಸುರರನ್ನು ಸೃಷ್ಟಿಸುವವನು, ದೇವಾಸುರ ಪರಾಯಣಃ= ದೇವಾಸುರರಿಗೆ ದೊಡ್ಡ ಆಶ್ರಯನಾದವನು, ದೇವಾಸುರಗುರುಃ= ದೇವಾಸುರರಿಗೆ ಉಪದೇಶಕನಾದವನು, ದೇವಃ= ಸ್ವತಃ ದೇವನು, ದೇವಾಸುರನಮಸ್ಕೃತಃ= ದೇವಾಸುರರಿಂದ ನಮಸ್ಕರಿಸಲ್ಪಡುವವನು.
ದೇವಾಸುರಮಹಾಮಾತ್ರೋ ದೇವಾಸುರಗಣಾಶ್ರಯಃ |
ದೇವಾಸುರಗಣಾಧ್ಯಕ್ಷೋ ದೇವಾಸುರಗಣಾಗ್ರಣೀಃ ॥143॥
ದೇವಾಸುರಮಹಾಮಾತ್ರಃ= ದೇವಾಸುರರಲ್ಲಿ ಪ್ರಧಾನನಾದವನು, ದೇವಾಸುರ ಗಣಾಶ್ರಯಃ= ದೇವಾಸುರ ಗಣಗಳಿಗೆ ಆಶ್ರಯನಾದವನು, ದೇವಾಸುರಗಣಾಧ್ಯಕ್ಷಃ= ದೇವಾಸುರ ಗಣಗಳನ್ನು ಮೇಲಿನಿಂದ ನೋಡುವವನು, ದೇವಾಸುರಗಣಾಗ್ರಣೀಃ= ದೇವಾಸುರ ಗಣಗಳಿಗೆ ನಾಯಕನಾದವನು.
ದೇವಾತಿದೇವೋ ದೇವರ್ಷಿರ್ದೇವಾಸುರವರಪ್ರದಃ |
ದೇವಾಸುರೇಶ್ವರೋ ವಿಶ್ವೋ ದೇವಾಸುರಮಹೇಶ್ವರಃ ॥144॥
ದೇವಾತಿದೇವಃ= ದೇವತೆಗಳನ್ನು ಮೀರಿದ ದೇವನು, ದೇವರ್ಷಿಃ= ದೇವರ್ಷಿಯಾದವನು, ದೇವಾಸುರವರಪ್ರದಃ= ದೇವಾಸುರರಿಗೆ ವರವನ್ನು ನೀಡುವವನು, ದೇವಾಸುರೇಶ್ವರಃ= ದೇವಾಸುರರಿಗೆ ಒಡೆಯನಾದವನು, ವಿಶ್ವಃ= ವಿಶ್ವರೂಪನಾದವನು, ದೇವಾಸುರಮಹೇಶ್ವರಃ= ದೇವಾಸುರರಿಗೆ ದೊಡ್ಡ ಪ್ರಭುವಾದವನು.
ಸರ್ವದೇವಮಯೋಽಚಿಂತ್ಯೋ ದೇವತಾತ್ಮಾತ್ಮಸಂಭವಃ |
ಉದ್ಭಿದಸ್ತ್ರಿಕ್ರಮೋ ವೈದ್ಯೋ ವಿರಜೋ ವಿರಜೋಂಬರಃ ॥145॥
ಸರ್ವದೇವಮಯಃ= ಎಲ್ಲ ದೇವತೆಗಳಲ್ಲಿ ಪ್ರಭುವಾದವನು, ಅಚಿಂತ್ಯಃ= ಭಕ್ತರ ಚಿಂತನೆಯನ್ನು ಮೀರಿದವನು, ದೇವತಾತ್ಮಾ= ದೇವತಾಸ್ವರೂಪನು, ಆತ್ಮಸಂಭವಃ= ತನ್ನಿಂದಲೇ ಜನಿಸಿದವನು, ಉದ್ಭಿದಃ= ಭೂಮಿಯನ್ನು ಒಡೆದು ಮೇಲೆ ಬರುವ ಸಸ್ಯದಲ್ಲಿರುವವನು, ತ್ರಿಕ್ರಮಃ= ಮೂರು ವಿಧವಾದ ನಡಿಗೆಯುಳ್ಳವನು, ವೈದ್ಯಃ= ಭವರೋಗವೈದ್ಯನು, ವಿರಜಃ= ದೋಷದೂರನು, ವಿರಜೋಂಬರಃ= ಶುಭ್ರವಸ್ತ್ರವನ್ನು ಧರಿಸಿದವನು.
ಈಡ್ಯೋ ಹಸ್ತೀ ಸುರವ್ಯಾಘ್ರೋ ದೇವಸಿಂಹೋ ನರರ್ಷಭಃ |
ವಿಬುಧಾಗ್ರವರಃ ಶ್ರೇಷ್ಠಃ ಸರ್ವದೇವೋತ್ತಮೋತ್ತಮಃ ॥146॥
ಈಡ್ಯಃ= ಸ್ತೋತ್ರ ಮಾಡಲ್ಪಡುವವನು, ಹಸ್ತೀ= ಪ್ರಶಸ್ತವಾದ ಹಸ್ತವುಳ್ಳವನು, ಸುರವ್ಯಾಘ್ರಃ= ದೇವತೆಗಳಲ್ಲಿ ಪ್ರಧಾನನಾದವನು, ದೇವಸಿಂಹಃ= ದೇವತೆಗಳಲ್ಲಿ ಸಿಂಹದಂತೆ ಶ್ರೇಷ್ಠನಾದವನು, ನರರ್ಷಭಃ= ಮನುಷ್ಯರಲ್ಲಿಯೂ ಶ್ರೇಷ್ಠನಾದವನು, ವಿಬುಧಾಗ್ರವರಃ= ದೇವತೆಗಳಿಗೆ ಶ್ರೇಷ್ಠವಾದ ವರವನ್ನು ಕೊಡುವವನು, ಶ್ರೇಷ್ಠಃ= ಸ್ವತಃ ಶ್ರೇಷ್ಠನಾದವನು, ಸರ್ವದೇವೋತ್ತಮೋತ್ತಮಃ= ಎಲ್ಲ ದೇವತೆಗಳಲ್ಲಿ ಉತ್ತಮೋತ್ತಮನಾದವನು.
ಸುಯುಕ್ತಃ ಶೋಭನೋ ವಜ್ರ ಈಶಾನಃ ಪ್ರಭುರವ್ಯಯಃ |
ಗುರುಃ ಕಾಂತೋ ನಿಜಃ ಸರ್ಗಃ ಪವಿತ್ರಃ ಸರ್ವವಾಹನಃ ॥147॥
ಸುಯುಕ್ತಃ= ಒಳ್ಳೆಯ ಯೋಗದಿಂದ ಕೂಡಿದವನು, ಶೋಭನಃ= ಮಂಗಳ ಸ್ವರೂಪನು, ವಜ್ರಃ= ವಜ್ರಾಯುಧದಲ್ಲಿ ಇರುವವನು, ಈಶಾನಃ= ಈಶಾನನು, ಪ್ರಭುಃ= ಒಡೆಯನು, ಅವ್ಯಯಃ= ನಾಶರಹಿತನು, ಗುರುಃ= ಉಪದೇಶಕನು, ಕಾಂತಃ= ಮನೋಹರನಾದವನು, ನಿಜಃ= ಭಕ್ತರಿಗೆ ಸೇರಿದವನು, ಸರ್ಗಃ= ಸೃಷ್ಟಿಕರ್ತ, ಪವಿತ್ರಃ= ಪವಿತ್ರನು, ಸರ್ವವಾಹನಃ= ಎಲ್ಲ ವಾಹನಗಳನ್ನು ಹೊಂದಿದವನು.
ಶೃಂಗೀ ಶೃಂಗಪ್ರಿಯೋ ಬಭ್ರೂ ರಾಜರಾಜೋ ನಿರಾಮಯಃ |
ಅಭಿರಾಮಃ ಸುರಗಣೋ ವಿರಾಮಃ ಸರ್ವಸಾಧನಃ ॥148॥
ಶೃಂಗೀ= ಶೃಂಗವನ್ನು ಧರಿಸಿದವನು, ಶೃಂಗಪ್ರಿಯಃ= ಶೃಂಗಪ್ರಿಯನಾದವನು, ಬಭ್ರೂಃ= ಜಗತ್ತನ್ನು ವಿಶೇಷವಾಗಿ ಭರಿಸುವವನು, ರಾಜರಾಜಃ= ರಾಜರಿಗೂ ರಾಜನಾದವನು, ನಿರಾಮಯಃ= ರೋಗರಹಿತನು, ಅಭಿರಾಮಃ= ಸುಖರೂಪನು, ಸುರಗಣಃ= ದೇವತೆಗಳ ಗಣಗಳನ್ನು ಹೊಂದಿದವನು, ವಿರಾಮಃ= ಎಲ್ಲವನ್ನೂ ಕೊನೆಗೊಳಿಸುವವನು, ಸರ್ವಸಾಧನಃ= ಎಲ್ಲದಕ್ಕೂ ಸಾಧನನಾದವನು.
ಲಲಾಟಾಕ್ಷೋ ವಿಶ್ವದೇಹೋ ಹರಿಣೋ ಬ್ರಹ್ಮವರ್ಚಸಃ |
ಸ್ಥಾವರಾಣಾಂ ಪತಿಶ್ಚೈವ ನಿಯಮೇಂದ್ರಿಯವರ್ಧನಃ ॥149॥
ಲಲಾಟಾಕ್ಷಃ= ಹಣೆಯಲ್ಲಿ ಕಣ್ಣುಳ್ಳವನು, ವಿಶ್ವದೇಹಃ= ಜಗತ್ತನ್ನೇ ದೇಹವಾಗಿ ಹೊಂದಿದವನು, ಹರಿಣಃ= ಜಿಂಕೆಗಳಲ್ಲಿ ಇರುವವನು, ಬ್ರಹ್ಮವರ್ಚಸಃ= ಬ್ರಹ್ಮವರ್ಚಸ್ವಿ, ಸ್ಥಾವರಾಣಾಂ ಪತಿಃ= ವೃಕ್ಷಗಳಿಗೆ ಒಡೆಯ, ನಿಯಮೇಂದ್ರಿಯವರ್ಧನಃ= ನಿಯಮಗಳನ್ನು ಮತ್ತು ಇಂದ್ರಿಯಗಳನ್ನು ಅಭಿವೃದ್ಧಿಗೊಳಿಸುವವನು.
ಸಿದ್ಧಾರ್ಥಃ ಸರ್ವಭೂತಾರ್ಥೋಽಚಿಂತ್ಯಃ ಸತ್ಯವ್ರತಃ ಶುಚಿಃ |
ವ್ರತಾಧಿಪಃ ಪರಂ ಬ್ರಹ್ಮ ಮುಕ್ತಾನಾಂ ಪರಮಾ ಗತಿಃ ॥150॥
ಸಿದ್ಧಾರ್ಥಃ= ಲಬ್ಧವಾದ ಪುರುಷಾರ್ಥವುಳ್ಳವನು, ಸರ್ವಭೂತಾರ್ಥಃ= ಸರ್ವ ಪ್ರಾಣಿಗಳಿಗೆ ಪುರುಷಾರ್ಥವನ್ನು ಕೊಡುವವನು, ಅಚಿಂತ್ಯಃ= ಚಿಂತೆಯನ್ನು ಮೀರಿದವನು, ಸತ್ಯವ್ರತಃ= ಸತ್ಯವಾದ ವ್ರತವುಳ್ಳವನು, ಶುಚಿಃ= ಶುದ್ಧನಾದವನು, ವ್ರತಾಧಿಪಃ= ವ್ರತಗಳಿಗೆ ಒಡೆಯ, ಪರಂ ಬ್ರಹ್ಮ= ಪರಬ್ರಹ್ಮನಾದವನು, ಮುಕ್ತಾನಾಂ ಪರಮಾ ಗತಿಃ= ಮುಕ್ತರಿಗೆ ಆಶ್ರಯನಾದವನು.

ವಿಮುಕ್ತೋ ಮುಕ್ತತೇಜಾಶ್ಚ ಶ್ರೀಮಾನ್ ಶ್ರೀವರ್ಧನೋ ಜಗತ್ |
ಯಥಾಪ್ರಧಾನಂ ಭಗವಾನಿತಿ ಭಕ್ತ್ಯಾ ಸ್ತುತೋ ಮಯಾ ॥151॥
ವಿಮುಕ್ತಃ= ಮುಕ್ತನಾದವನು, ಮುಕ್ತತೇಜಾಃ= ಶತ್ರುಗಳಿಗೆ ತನ್ನ ತೇಜಸ್ಸನ್ನು ತೋರಿಸುವವನು, ಶ್ರೀಮಾನ್= ಕಾಂತಿಯುಕ್ತನಾದವನು, ಶ್ರೀವರ್ಧನಃ= ಕಾಂತಿಯನ್ನು ಹೆಚ್ಚಿಸುವವನು, ಜಗತ್= ಸಂಚರಿಸುವವನು. ಅವನ ಪ್ರಾಧಾನ್ಯಕ್ಕೆ ಅನುಗುಣವಾಗಿ ಅವನನ್ನು ಭಗವಂತನೆಂದು ನಾನು ಭಕ್ತಿಯಿಂದ ಸ್ತೋತ್ರ ಮಾಡಿದೆನು.
ಯಂ ನ ಬ್ರಹ್ಮಾದಯೋ ದೇವಾ ವಿದುರ್ಯಂ ನ ಮಹರ್ಷಯಃ |
ಸ್ತೋತವ್ಯಮರ್ಚ್ಯಂ ವಂದ್ಯಂ ಚ ಕಃ ಸ್ತೋಷ್ಯತಿ ಜಗತ್ಪತಿಮ್ ॥152॥
ಯಾವನನ್ನು ಬ್ರಹ್ಮಾದಿ ದೇವತೆಗಳು, ಮಹರ್ಷಿಗಳು ತಿಳಿದಿಲ್ಲವೋ ಅಂತಹ ಸ್ತೋತ್ರ ಮಾಡಲು ಅರ್ಹನಾದ, ಪೂಜಿಸಲು-ನಮಸ್ಕರಿಸಲು ಅರ್ಹನಾದ ಜಗತ್ಪತಿಯನ್ನು ಯಾವನು ಸ್ತೋತ್ರ ಮಾಡುವನು?
ಭಕ್ತಿಂ ತ್ವೇವಂ ಪುರಸ್ಕೃತ್ಯ ಮಯಾ ಯಜ್ಞಪತಿರ್ವಸುಃ |
ತತೋಽಭ್ಯನುಜ್ಞಾಂ ಪ್ರಾಪ್ಯೈವ ಸ್ತುತೋ ಮತಿಮತಾಂ ವರಃ ॥153॥
ನಾನು ನನ್ನ ಭಕ್ತಿಯನ್ನು ಮುಂದೆ ಮಾಡಿಕೊಂಡು, ಆ ಜಗತ್ಪತಿಯಿಂದಲೇ ಅನುಮತಿಯನ್ನು ಪಡೆದು, ಯಜ್ಞಪತಿಯೂ, ಮೇಧಾವಿಗಳಲ್ಲಿ ಶ್ರೇಷ್ಠನೂ, ಸರ್ವನಿವಾಸ ಸ್ಥಾನನೂ ಆದ ಅವನನ್ನು ಸ್ತೋತ್ರ ಮಾಡಿದೆನು.
ಶಿವಮೇಭಿಃ ಸ್ತುವನ್ ದೇವಂ ನಾಮಭಿಃ ಪುಷ್ಟಿವರ್ಧನೈಃ |
ನಿತ್ಯಯುಕ್ತಃ ಶುಚಿರ್ಭೂತ್ವಾ ಪ್ರಾಪ್ನೋತ್ಯಾತ್ಮಾನಮಾತ್ಮನಾ ॥154॥
ಯಾವ ಪುರುಷನು ಶುಚಿಯಾಗಿ ನಿತ್ಯದಲ್ಲಿಯೂ ಶಿವನ ಯೋಗಯುಕ್ತನಾಗಿ, ಪುಷ್ಟಿವರ್ಧಕವಾದ ಈ ನಾಮಗಳಿಂದ ದೇವನಾದ ಶಿವನನ್ನು ಸ್ತೋತ್ರ ಮಾಡುತ್ತಾನೆಯೋ ಅವನು ಶಿವನಿಂದ ಎಲ್ಲವನ್ನೂ ಪಡೆಯುತ್ತಾನೆ.
ಏತದ್ಧಿ ಪರಮಂ ಬ್ರಹ್ಮ ಸ್ವಯಂ ಗೀತಂ ಸ್ವಯಂಭುವಾ |
ಋಷಯಶ್ಚೈವ ದೇವಾಶ್ಚ ಸ್ತುವಂತ್ಯೇತೇನ ತತ್ಪರಮ್ ॥155॥
ಇದು ಬ್ರಹ್ಮದೇವರು ಸ್ವತಃ ಗಾನ ಮಾಡಿದ ಶ್ರೇಷ್ಠವಾದ ಸ್ತೋತ್ರ. ಋಷಿಗಳು ಮತ್ತು ದೇವತೆಗಳು ಈ ಸ್ತೋತ್ರದಿಂದ ಶ್ರೇಷ್ಠನಾದ ಶಿವನನ್ನು ಸ್ತೋತ್ರ ಮಾಡುತ್ತಾರೆ.
ಸ್ತೂಯಮಾನೋ ಮಹಾದೇವಃ ಪ್ರೀಯತೇ ಚಾತ್ಮನಾಮಭಿಃ |
ಭಕ್ತಾನುಕಂಪೀ ಭಗವಾನಾತ್ಮಸಂಸ್ಥಾನ್ ಕರೋತಿ ತಾನ್ ॥156॥
ತನ್ನ ನಾಮಗಳಿಂದ ಸ್ತೋತ್ರ ಮಾಡಲ್ಪಟ್ಟ ಮಹಾದೇವನು ಪ್ರಸನ್ನನಾಗುತ್ತಾನೆ. ಭಕ್ತಾನುಕಂಪಿಯಾದ ಆ ಭಗವಂತನು ಅವರನ್ನು ತನ್ನಲ್ಲಿಯೇ ಇರಿಸಿಕೊಳ್ಳುತ್ತಾನೆ.
ತಥೈವ ಚ ಮನುಷ್ಯೇಷು ಯೇ ಮನುಷ್ಯಾಃ ಪ್ರಧಾನತಃ |
ಆಸ್ತಿಕಾಃ ಶ್ರದ್ದಧಾನಾಶ್ಚ ಬಹುಭಿರ್ಜನ್ಮಭಿಃ ಸ್ತವೈಃ ॥157॥
ಭಕ್ತ್ಯಾ ಹ್ಯನನ್ಯಮೀಶಾನಂ ಪರಂ ದೇವಂ ಸನಾತನಮ್ |
ಕರ್ಮಣಾ ಮನಸಾ ವಾಚಾ ಭಾವೇನಾಮಿತತೇಜಸಃ ॥158॥
ಸ್ವಪಂತೋ ಜಾಗ್ರಮಾಣಾಶ್ಚ ವ್ರಜನ್ನುಪವಿಶಂಸ್ತಥಾ |
ಉನ್ಮಿಷನ್ ನಿಮಿಷಂಶ್ಚೈವ ಚಿಂತಯಂತಃ ಪುನಃ ಪುನಃ ॥159॥
ಜಾಗ್ರತಶ್ಚ ಸ್ವಪಂತಶ್ಚ ವ್ರಜಂತಃ ಪಥಿ ಸಂಸ್ಥಿತಾಃ |
ಸ್ತುವಂತಿ ಸ್ತೂಯಮಾನಾಶ್ಚ ತುಷ್ಯಂತಿ ಚ ರಮಂತಿ ಚ ॥160॥
ಹಾಗೆಯೇ ಮನುಷ್ಯರಲ್ಲಿ ಯಾರು ಪ್ರಧಾನವಾಗಿ ಆಸ್ತಿಕರೂ, ಶ್ರದ್ಧೆಯುಳ್ಳವರೂ ಆಗಿದ್ದಾರೆಯೋ ಅವರು ಅನೇಕ ಜನ್ಮಗಳಲ್ಲಿ ಭಕ್ತಿಯಿಂದ ಅನನ್ಯನಾದ, ಪರದೇವನಾದ, ಸನಾತನನಾದ ಈಶ್ವರನನ್ನು ಕರ್ಮದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಭಕ್ತಿಯಿಂದಲೂ ಸ್ತೋತ್ರ ಮಾಡುತ್ತಾರೆಯೋ, ಮಲಗುವಾಗಲೂ, ಎಚ್ಚರದಲ್ಲೂ, ನಡೆಯುವಾಗಲೂ, ಕುಳಿತುಕೊಳ್ಳುವಾಗಲೂ, ಕಣ್ಣಿನ ರೆಪ್ಪೆಯನ್ನು ಮುಚ್ಚಿ ಬಿಡುವಾಗಲೂ ಪುನಃ ಪುನಃ ಅವನನ್ನೇ ಚಿಂತಿಸುತ್ತಾರೆಯೋ ಎಚ್ಚರವಾಗಿರುವಾಗ, ಮಲಗಿರುವಾಗ, ನಡೆಯುವಾಗ, ದಾರಿಯಲ್ಲಿ ಇರುವಾಗ ಅವನನ್ನು ಸ್ತೋತ್ರ ಮಾಡುತ್ತಾರೆಯೋ, ಉಳಿದವರಿಂದ ಸ್ತೋತ್ರ ಮಾಡಿಸಲ್ಪಡುತ್ತಾರೆಯೋ ಅಂತಹ ಮನುಷ್ಯರು ತೃಪ್ತಿಯನ್ನು ಮತ್ತು ಸಂತೋಷವನ್ನು ಹೊಂದುತ್ತಾರೆ.
ಜನ್ಮಕೋಟಿಸಹಸ್ರೇಷು ನಾನಾಸಂಸಾರಯೋನಿಷು |
ಜಂತೋರ್ವಿಶುದ್ಧಪಾಪಸ್ಯ ಭವೇ ಭಕ್ತಿಃ ಪ್ರಜಾಯತೇ |
ಉತ್ಪನ್ನಾ ಚ ಭವೇ ಭಕ್ತಿರನನ್ಯಾ ಸರ್ವಭಾವತಃ ॥161॥
ಅನೇಕ ಸಹಸ್ರಕೋಟಿ ಜನ್ಮಗಳಲ್ಲಿ, ನಾನಾ ಸಂಸಾರಯೋನಿಗಳಲ್ಲಿ ತಿರುಗಿ ಪಾಪವನ್ನು ಕಳೆದುಕೊಂಡ ಜೀವನಿಗೆ ಶಿವನಲ್ಲಿ ಭಕ್ತಿಯುಂಟಾಗುತ್ತದೆ. ಶಿವನಲ್ಲಿ ಉಂಟಾದ ಅಂತಹ ಭಕ್ತಿ ಅತಿಶ್ರೇಷ್ಠವಾಗಿದ್ದು ಎಲ್ಲವನ್ನೂ ಸಂಪಾದಿಸಿಕೊಡುತ್ತದೆ.
ಭಾವಿನಃ ಕಾರಣಂ ತಸ್ಯ ಸರ್ವಮುಕ್ತಸ್ಯ ಸರ್ವತಃ |
ಏತದ್ ದೇವೇಷು ದುಷ್ಪ್ರಾಪಂ ಮನುಷ್ಯೇಷು ನ ಲಭ್ಯತೇ ॥162॥
ಸರ್ವಮುಕ್ತನಾದ ಅವನಿಗೆ ಮುಂದೆ ಉಂಟಾಗುವ ಶುಭಕ್ಕೆಲ್ಲ ಕಾರಣವಾಗುತ್ತದೆ. ಅಂತಹ ಭಕ್ತಿಯು ದೇವತೆಗಳಿಗೂ ಪಡೆಯಲು ಕಷ್ಟಸಾಧ್ಯವಾದುದು. ಮನುಷ್ಯರಿಗೆ ಅಂತಹ ಭಕ್ತಿಯು ಬರುವುದಿಲ್ಲ.
ನಿರ್ವಿಘ್ನಾ ನಿಶ್ಚಲಾ ರುದ್ರೇ ಭಕ್ತಿರವ್ಯಭಿಚಾರಿಣೀ |
ತಸ್ಯೈವ ಚ ಪ್ರಸಾದೇನ ಭಕ್ತಿರುತ್ಪದ್ಯತೇ ನೃಣಾಮ್ |

ಯಯಾ ಯಾಂತಿ ಪರಾಂ ಸಿದ್ಧಿಂ ತದ್ಭಾವಗತಚೇತಸಃ ॥163॥
ಶಿವನ ಪ್ರಸಾದದಿಂದ ಮನುಷ್ಯರಿಗೆ ಅವನಲ್ಲಿ ಪ್ರತಿಬಂಧರಹಿತವಾದ, ಅವ್ಯಭಿಚರಿತವಾದ, ನಿಶ್ಚಲವಾದ ಭಕ್ತಿಯುಂಟಾಗುತ್ತದೆ. ಅವನನ್ನೇ ಚಿಂತಿಸಿ ಪವಿತ್ರವಾದ ಮನಸ್ಸಿನಿಂದ, ಆ ಭಕ್ತಿಯಿಂದ ಅವರು ಶ್ರೇಷ್ಠವಾದ ಸಿದ್ಧಿಯನ್ನು ಪಡೆಯುತ್ತಾರೆ.
ಯೇ ಸರ್ವಭಾವೋಪಗತಾಃ ಪರತ್ವೇನಾಭವನ್ ನರಾಃ |
ಪ್ರಪನ್ನವತ್ಸಲೋ ದೇವಃ ಸಂಸಾರಾತ್ ತಾನ್ ಸಮುದ್ಧರೇತ್ ॥164॥
ಯಾರು ಸರ್ವಪ್ರಕಾರದಿಂದ ಅವನನ್ನು ಶ್ರೇಷ್ಠನೆಂದು ಚಿಂತಿಸಿ, ಅವನಿಗೆ ಶರಣಾಗತರಾಗುತ್ತಾರೆಯೋ ಅಂತಹ ಮನುಷ್ಯರನ್ನು ಪ್ರಪನ್ನವತ್ಸಲನಾದ ದೇವನು ಸಂಸಾರದಿಂದ ದಾಟಿಸುತ್ತಾನೆ.
ಏವಮನ್ಯೇ ನ ಕುರ್ವಂತಿ ದೇವಾಃ ಸಂಸಾರಮೋಚನಮ್ |
ಮನುಷ್ಯಾಣಾಂ ಮಹಾದೇವಾದನ್ಯತ್ರಾಪಿ ತಪೋಬಲಾತ್ ॥165॥
ಆ ರೀತಿಯಲ್ಲಿ ಬೇರೆ ದೇವತೆಗಳು ಮಹಾದೇವನು ತಪೋಬಲದಿಂದ ಸಂಸಾರಮೋಚನೆಯನ್ನು ಮಾಡಿದಂತೆ ಮನುಷ್ಯರಿಗೆ ಸಂಸಾರಮೋಚನೆಯನ್ನು ಮಾಡುವುದಿಲ್ಲ.
ಇತಿ ತೇನೇಂದ್ರಕಲ್ಪೇನ ಭಗವಾನ್ ಸದಸತ್ಪತಿಃ |
ಕೃತ್ತಿವಾಸಾಃ ಸ್ತುತಃ ಕೃಷ್ಣ ತಂಡಿನಾ ಶುದ್ಧಬುದ್ಧಿನಾ ॥166॥
ಎಲೈ ಪುರುಷನೇ, ಈ ರೀತಿಯಾಗಿ ಇಂದ್ರನಿಗೆ ಸಮಾನವಾದ ಶುದ್ಧ ಬುದ್ಧಿಯುಳ್ಳ ತಂಡಿಯಿಂದ ಭಗವಂತನೂ, ಚರ್ಮಾಂಬರನೂ ಆದ ಶಿವನು ಸ್ತೋತ್ರ ಮಾಡಲ್ಪಟ್ಟನು.
ಸ್ತವಮೇತಂ ಭಗವತೋ ಬ್ರಹ್ಮಾ ಸ್ವಯಮಧಾರಯತ್ |
ಗೀಯತೇ ಚ ಸ ಬುದ್ಧ್ಯೇತ ಬ್ರಹ್ಮಾ ಶಂಕರಸನ್ನಿಧೌ ॥167॥
ಇದಂ ಪುಣ್ಯಂ ಪವಿತ್ರಂ ಚ ಸರ್ವದಾ ಪಾಪನಾಶನಮ್ |
ಯೋಗದಂ ಮೋಕ್ಷದಂ ಚೈವ ಸ್ವರ್ಗದಂ ತೋಷದಂ ತಥಾ ॥168॥
ಬ್ರಹ್ಮದೇವನು ಈ ಸ್ತೋತ್ರವನ್ನು ಸ್ವತಃ ಧರಿಸಿ ಶಂಕರನ ಸನ್ನಿಧಿಯಲ್ಲಿ ಗಾನವನ್ನು ಮಾಡಿ ವೃದ್ಧಿಯನ್ನು ಹೊಂದಿದನು. ಇದು ಪುಣ್ಯಪ್ರದವಾದುದು, ಪವಿತ್ರವಾದುದು, ಪಾಪನಾಶನವಾದುದು, ಯೋಗವನ್ನು ಕೊಡುವಂತಹದು, ಮೋಕ್ಷವನ್ನೂ, ಸ್ವರ್ಗವನ್ನೂ, ಸಂತೋಷವನ್ನೂ ಕೊಡುವಂತಹದು.
ಏವಮೇತತ್ ಪಠಂತೇ ಯೇ ಏಕಭಕ್ತ್ಯಾ ತು ಶಂಕರೇ |
ಯಾ ಗತಿಃ ಸಾಂಖ್ಯಯೋಗಾನಾಂ ವ್ರಜಂತ್ಯೇತಾಂ ಗತಿಂ ತದಾ ॥169॥
ನಿಶ್ಚಲವಾದ ಭಕ್ತಿಯಿಂದ ಶಂಕರನ ಸ್ತೋತ್ರವನ್ನು ಯಾರು ಪಠಿಸುತ್ತಾರೆಯೋ ಅವರು ಸಾಂಖ್ಯಯೋಗಗಳಲ್ಲಿ ಹೇಳಿದ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ಸ್ತವಮೇತಂ ಪ್ರಯತ್ನೇನ ಸದಾ ರುದ್ರಸ್ಯ ಸನ್ನಿಧೌ |
ಅಬ್ದಮೇಕಂ ಚರೇದ್ ಭಕ್ತಃ ಪ್ರಾಪ್ನುಯಾದೀಪ್ಸಿತಂ ಫಲಮ್ ॥170॥
ಭಕ್ತನಾದವನು ರುದ್ರನ ಸನ್ನಿಧಿಯಲ್ಲಿ ಒಂದು ವರ್ಷದ ಕಾಲ ಪ್ರಯತ್ನ ಪೂರ್ವಕವಾಗಿ ಈ ಸ್ತೋತ್ರವನ್ನು ಹೇಳಿದರೆ ತನ್ನ ಅಭೀಷ್ಟವಾದ ಫಲವನ್ನು ಪಡೆಯುತ್ತಾನೆ.
ಏತದ್ ರಹಸ್ಯಂ ಪರಮಂ ಬ್ರಹ್ಮಣೋ ಹೃದಿ ಸಂಸ್ಥಿತಮ್ |
ಬ್ರಹ್ಮಾ ಪ್ರೋವಾಚ ಶಕ್ರಾಯ ಶಕ್ರಃ ಪ್ರೋವಾಚ ಮೃತ್ಯವೇ ॥171॥
ಇದು ಬ್ರಹ್ಮದೇವನ ಹೃದಯದಲ್ಲಿದ್ದ ಪರಮ ರಹಸ್ಯವಾದ ಸ್ತೋತ್ರ. ಬ್ರಹ್ಮನು ಇಂದ್ರನಿಗೂ, ಇಂದ್ರನು ಮೃತ್ಯುವಿಗೂ ಹೇಳಿದನು.
ಮೃತ್ಯುಃ ಪ್ರೋವಾಚ ರುದ್ರಾಣಾಂ ರುದ್ರೇಭ್ಯಸ್ತಂಡಿಮಾಗಮತ್ |
ಮಹತಾ ತಪಸಾ ಪ್ರಾಪ್ತಸ್ತಂಡಿನಾ ಬ್ರಹ್ಮಸದ್ಮನಿ ॥172॥
ಮೃತ್ಯುವು ರುದ್ರರಿಗೂ, ರುದ್ರರು ತಂಡಿಗೂ ಹೇಳಿದರು. ತಂಡಿಯು ಬ್ರಹ್ಮದೇವರ ಸದನದಲ್ಲಿ ದೊಡ್ಡ ತಪಸ್ಸಿನಿಂದ ಇದನ್ನು ಪಡೆದನು.
ತಂಡಿಃ ಪ್ರೋವಾಚ ಶುಕ್ರಾಯ ಗೌತಮಾಯಾಹ ಭಾರ್ಗವಃ |
ವೈವಸ್ವತಾಯ ಮನವೇ ಗೌತಮಃ ಪ್ರಾಹ ಮಾಧವ ॥173॥
ತಂಡಿಯು ಶುಕ್ರನಿಗೆ ಉಪದೇಶಿಸಿದನು. ಶುಕ್ರನು ಗೌತಮರಿಗೆ ಉಪದೇಶಿಸಿದನು. ಎಲೈ ಮಾಧವನೇ, ಗೌತಮರು ವೈವಸ್ವತ ಮನುವಿಗೆ ಉಪದೇಶಿಸಿದರು.
ನಾರಾಯಣಾಯ ಸಾಧ್ಯಾಯ ಮನುರಿಷ್ಟಾಯ ಧೀಮತೇ |
ಯಮಾಯ ಪ್ರಾಹ ಭಗವಾನ್ ಸಾಧ್ಯೋ ನಾರಾಯಣೋಽಚ್ಯುತಃ ॥
ಮನುವು ತನಗೆ ಇಷ್ಟನಾದ ಮೇಧಾವಿಯಾದ ಸಾಧ್ಯನಾದ ನಾರಾಯಣನಿಗೆ ಉಪದೇಶಿಸಿದನು. ಸಾಧ್ಯನಾದ ಅಚ್ಯುತನಾದ ಭಗವಂತನು ಯಮನಿಗೆ ಉಪದೇಶಿಸಿದನು.
ನಾಚಿಕೇತಾಯ ಭಗವಾನಾಹ ವೈವಸ್ವತೋ ಯಮಃ |
ಮಾರ್ಕಂಡೇಯಾಯ ವಾರ್ಷ್ಣೇಯ ನಾಚಿಕೇತೋಽಭ್ಯಭಾಷತ ॥175॥
ಪೂಜ್ಯನಾದ ಯಮನು ನಚಿಕೇತನಿಗೆ ಉಪದೇಶಿಸಿದನು. ಎಲೈ ವಾರ್ಷ್ಣೇಯನೇ, ನಚಿಕೇತನು ಮಾರ್ಕಂಡೇಯರಿಗೆ ಉಪದೇಶಿಸಿದನು.
ಮಾರ್ಕಂಡೇಯಾನ್ಮಯಾ ಪ್ರಾಪ್ತಂ ನಿಯಮೇನ ಜನಾರ್ದನ |
ತವಾಪ್ಯಹಮಮಿತ್ರಘ್ನ ಸ್ತವಂ ದದ್ಮ್ಯದ್ಯ ವಿಶ್ರುತಮ್ |

ಸ್ವರ್ಗ್ಯಮಾರೋಗ್ಯಮಾಯುಷ್ಯಂ ಧನ್ಯಂ ಬಲ್ಯಂ ತಥೈವ ಚ ॥176॥
ಎಲೈ ಜನಾರ್ದನನೇ, ನಾನು ನಿಯಮವನ್ನು ಧರಿಸಿ ಮಾರ್ಕಂಡೇಯರಿಂದ ಈ ಸ್ತೋತ್ರವನ್ನು ಪಡೆದೆನು. ಎಲೈ ಶತ್ರುಸಂಹಾರಕನೇ, ಈ ದಿನ ನಾನು ನಿನಗೆ ಈ ಪ್ರಖ್ಯಾತವಾದ ಸ್ತೋತ್ರವನ್ನು ಹೇಳುತ್ತಿದ್ದೇನೆ. ಇದು ಸ್ವರ್ಗಪ್ರದವಾದುದು, ರೋಗನಿವಾರಕವಾದುದು, ಆಯುಃಪ್ರದವಾದುದು, ಧನಪ್ರದವಾದುದು ಮತ್ತು ಬಲಪ್ರದವಾದುದು.
ನ ತಸ್ಯ ವಿಘ್ನಂ ಕುರ್ವಂತಿ ದಾನವಾ ಯಕ್ಷರಾಕ್ಷಸಾಃ |
ಪಿಶಾಚಾ ಯಾತುಧಾನಾಶ್ಚ ಗುಹ್ಯಕಾ ಭುಜಗಾ ಅಪಿ ॥177॥
ಈ ಸ್ತೋತ್ರವನ್ನು ಪಠಿಸುವವನಿಗೆ ದಾನವರಾಗಲೀ, ಯಕ್ಷ-ರಾಕ್ಷಸರಾಗಲೀ, ಪಿಶಾಚಿಗಳಾಗಲೀ, ಯಾತುಧಾನರಾಗಲೀ, ಗುಹ್ಯಕರಾಗಲೀ, ಸರ್ಪಗಳಾಗಲೀ ವಿಘ್ನವನ್ನು ಮಾಡುವುದಿಲ್ಲ.
ಯಃ ಪಠೇತ ಶುಚಿಃ ಪಾರ್ಥ ಬ್ರಹ್ಮಚಾರೀ ಜಿತೇಂದ್ರಿಯಃ |
ಅಭಗ್ನಯೋಗೋ ವರ್ಷಂ ತು ಸೋಽಶ್ವಮೇಧಫಲಂ ಲಭೇತ್ ॥178॥
ಎಲೈ ಪಾರ್ಥನೇ, ಯಾವನು ಬ್ರಹ್ಮಚಾರಿಯಾಗಿ, ಜಿತೇಂದ್ರಿಯನಾಗಿ, ಯೋಗಬಲವನ್ನು ಹೊಂದಿ ಒಂದು ವರ್ಷದ ಕಾಲ ಇದನ್ನು ಪಠಿಸುವನೋ ಅವನಿಗೆ ಅಶ್ವಮೇಧ ಫಲವುಂಟಾಗುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಮಹಾದೇವಸ್ಯ ಸಹಸ್ರನಾಮಸ್ತುತಿರ್ನಾಮ ಷಟ್‌ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *

## ಮೂವತ್ತೇಳನೆಯ ಅಧ್ಯಾಯ

## ಶಿವಸ್ತುತಿಮಹಾತ್ಮೆ

ವೈಶಂಪಾಯನಃ
ಏವಮುಕ್ತೇ ತು ಕೃಷ್ಣೇನ ತದಾನೀಂ ಜನಮೇಜಯ |
ಪ್ರಹೃಷ್ಟಾನಾಂ ನಿನಾದೋಭೂನ್ಮುನೀನಾಂ ಸಾಧುಸಾಧ್ವಿತಿ ॥1॥
ವೈಶಂಪಾಯನ ಎಲೈ ಜನಮೇಜಯನೇ, ಕೃಷ್ಣನು ಹೀಗೆ ಹೇಳುತ್ತಿರಲು ಆಗ ಸಂತೋಷಗೊಂಡ ಮುನಿಗಳಿಂದ ಸಾಧು-ಸಾಧು ಎಂಬ ಶಬ್ದವು ಕೇಳಿಬಂದಿತು.
ಮಹಾಯೋಗೀ ತತಃ ಪ್ರಾಹ ಕೃಷ್ಣದ್ವೈಪಾಯನೋ ಮುನಿಃ |
ಪಠಸ್ವ ಪುತ್ರ ಭದ್ರಂ ತೇ ಪ್ರೀಯತಾಂ ತೇ ಮಹೇಶ್ವರಃ ॥2॥
ಆಗ ಮಹಾಯೋಗಿಗಳಾದ ಕೃಷ್ಣದ್ವೈಪಾಯನರು ಯುಧಿಷ್ಠಿರನನ್ನು ಕುರಿತು ಪುತ್ರನೇ, ನಿನಗೆ ಮಂಗಳವಾಗಲಿ. ಶಿವಸಹಸ್ರನಾಮವನ್ನು ಪಠನ ಮಾಡು. ನಿನಗೆ ಮಹೇಶ್ವರನು ಪ್ರಸನ್ನನಾಗಲಿ ಎಂದು ಹೇಳಿದರು.
ಪುರಾ ಪುತ್ರ ಮಯಾ ಮೇರೌ ತಪ್ಯತಾ ಪರಮಂ ತಪಃ |
ಪುತ್ರಹೇತೋರ್ಮಹಾರಾಜ ಸ್ತವ ಏಷೋಽನುಕೀರ್ತಿತಃ ॥3॥
ಎಲೈ ಪುತ್ರನೇ, ಹಿಂದೆ ಪುತ್ರರನ್ನು ಪಡೆಯುವ ಉದ್ದೇಶದಿಂದ ಮೇರುಪರ್ವತದಲ್ಲಿ ನಾನು ದೊಡ್ಡ ತಪಸ್ಸನ್ನು ಮಾಡುತ್ತಿದ್ದಾಗ ಎಲೈ ಮಹಾರಾಜನೇ, ಈ ಸ್ತೋತ್ರವನ್ನು ಹೇಳಿದೆನು.
ಲಬ್ಧವಾನಸ್ಮಿ ತಾನ್ ಕಾಮಾನಹಂ ವೈ ಪಾಂಡುನಂದನ |
ತಥಾ ತ್ವಮಪಿ ಶರ್ವಾದ್ಧಿ ಸರ್ವಾನ್ ಕಾಮಾನವಾಪ್ಸ್ಯಸಿ ॥4॥
ಎಲೈ ಪಾಂಡುನಂದನನೇ, ನಾನು ನನ್ನ ಅಭೀಷ್ಟಗಳನ್ನು ಪಡೆದೆನು. ಅದರಂತೆಯೇ ನೀನೂ ಸಹ ಶಿವನಿಂದ ಸರ್ವಾಭೀಷ್ಟಗಳನ್ನು ಪಡೆಯುವಿ (ಎಂದು ಹೇಳಿದರು).
ಕಪಿಲಶ್ಚ ತತಃ ಪ್ರಾಹ ಸಾಂಖ್ಯರ್ಷಿರ್ದೇವಸಮ್ಮತಃ |
ಮಯಾ ಜನ್ಮಾನ್ಯನೇಕಾನಿ ಶಕ್ತ್ಯಾ ಚಾರಾಧಿತೋ ಭವಃ |
ಪ್ರೀತಶ್ಚ ಭಗವಾನ್ ಜ್ಞಾನಂ ದದೌ ಮಮ ಭವಾಂತಕಮ್ ॥5॥
ಅನಂತರ ದೇವತೆಗಳಿಗೆ ಸಮ್ಮತರಾದ, ಸಾಂಖ್ಯಾಚಾರ್ಯರಾದ ಕಪಿಲರು ಮಾತನಾಡಿದರು. ನಾನು ಅನೇಕ ಜನ್ಮಗಳಲ್ಲಿ ಭಕ್ತಿಯಿಂದ ಶಿವನನ್ನು ಆರಾಧಿಸಿದೆನು. ಭಗವಂತನಾದ ಶಿವನು ಪ್ರಸನ್ನನಾಗಿ ನನಗೆ ಸಂಸಾರ ನಾಶಕವಾದ ಜ್ಞಾನವನ್ನು ಕೊಟ್ಟನು.
ಪೃಥುಶೀರ್ಷಸ್ತತಃ ಪ್ರಾಹ ಶಕ್ರಸ್ಯ ದಯಿತಃ ಸಖಾ |
ಆಲಂಬಾಯನ ಇತ್ಯೇವ ವಿಶ್ರುತಃ ಕರುಣಾತ್ಮಕಃ ॥6॥
ಅನಂತರ ಪೃಥುಶೀರ್ಷನೆಂಬ ಇಂದ್ರನ ಪ್ರಿಯಸ್ನೇಹಿತರಾದ ಆಲಂಬಾಯನ ಎಂದು ಪ್ರಖ್ಯಾತರಾದ, ಕರುಣಾಮಯರಾದ ಋಷಿಗಳು ಹೇಳಿದರು.
ಮಯಾ ಗೋಕರ್ಣಮಾಸಾದ್ಯ ತಪಸ್ತಪ್ತ್ವಾ ಶತಂ ಸಮಾಃ |
ಅಯೋನಿಜಾನಾಂ ದಾಂತಾನಾಂ ಧರ್ಮಜ್ಞಾನಾಂ ಸುವರ್ಚಸಾಮ್ ॥
ಅಜರಾಣಾಮದುಃಖಾನಾಂ ಶತವರ್ಷಸಹಸ್ರಿಣಾಮ್ |
ಲಬ್ಧಂ ಪುತ್ರಶತಂ ಶರ್ವಾತ್ ಪುರಾ ಪಾಂಡುನೃಪಾತ್ಮಜ ॥6॥
ಎಲೈ ಪಾಂಡುಕುಮಾರನೇ, ನಾನು ಗೋಕರ್ಣಕ್ಕೆ ಹೋಗಿ ನೂರು ವರ್ಷಗಳ ಕಾಲ ತಪಸ್ಸನ್ನು ಮಾಡಿ ಅಯೋನಿಜರಾದ, ಇಂದ್ರಿಯನಿಗ್ರಹವುಳ್ಳ, ಧರ್ಮಜ್ಞರಾದ, ಒಳ್ಳೆಯ ವರ್ಚಸ್ವಿಗಳಾದ, ಮುಪ್ಪಿಲ್ಲದ, ದುಃಖರಹಿತರಾದ, ಶತಸಹಸ್ರ ವರ್ಷ ಆಯುಷ್ಯವುಳ್ಳ

ನೂರು ಪುತ್ರರನ್ನು ಶಿವನಿಂದ ಪಡೆದೆನು (ಎಂದು ಹೇಳಿದರು).
ವಾಲ್ಮೀಕಿಶ್ಚಾಪಿ ಭಗವಾನ್ ಯುಧಿಷ್ಠಿರಮಭಾಷತ |
ವಿವಾದೇ ಸಾಮ್ನಿ ಮುನಿಭಿರ್ಬ್ರಹ್ಮಘ್ನೋ ವೈ ಭವಾನಿತಿ |
ಉಕ್ತಃ ಕ್ಷಣೇನ ಚಾವಿಷ್ಟಸ್ತೇನಾಧರ್ಮೇಣ ಭಾರತ ||7||
ಸೋಽಹಮೀಶಾನಮನಘಮಸ್ತೌಷಂ ಶರಣಂ ಗತಃ |
ಮುಕ್ತಶ್ಚಾಸ್ಮ್ಯವಶಃ ಪಾಪೈಃ ತತೋ ದುಃಖವಿನಾಶನಃ |
ಆಹ ಮಾಂ ತ್ರಿಪುರಘ್ನೋ ವೈ ಯಶಸ್ತೇಽಗ್ರ್ಯಂ ಭವಿಷ್ಯತಿ ||8||
ಪೂಜ್ಯರಾದ ವಾಲ್ಮೀಕಿಗಳು ಯುಧಿಷ್ಠಿರನನ್ನು ಕುರಿತು- `ಎಲೈ ಭಾರತನೇ, ನಾನು ಸಾಮವನ್ನು ಗಾನ ಮಾಡುವಾಗ ಋಷಿಗಳು, ತಪ್ಪಾಗಿ ಹೇಳಿದೆನೆಂದು ತಿಳಿದು ನನಗೆ ಬ್ರಹ್ಮಹತ್ಯಾ ದೋಷವು ಬಂದಿದೆ ಎಂದು ಹೇಳಿದರು. ಒಂದು ಕ್ಷಣದಲ್ಲಿ ಆ ಅಧರ್ಮದ ದೋಷವು ನನ್ನನ್ನು ಆವರಿಸಿತು. ಆಗ ನಾನು ದೋಷದೂರನಾದ ಈಶಾನನನ್ನು ಶರಣು ಹೊಂದಿದೆನು ಮತ್ತು ಆ ಪಾಪದಿಂದ ವಿಮುಕ್ತನಾದೆನು. ದುಃಖ ಪರಿಹಾರಕನಾದ, ತ್ರಿಪುರಘ್ನನಾದ ಈಶಾನನು ನಿನಗೆ ಶ್ರೇಷ್ಠವಾದ ಕೀರ್ತಿ ಉಂಟಾಗುತ್ತದೆ ಎಂದು ನನಗೆ ಹೇಳಿದನು.
ಜಾಮದಗ್ನ್ಯಶ್ಚ ಕೌಂತೇಯಮಾಹ ಧರ್ಮಭೃತಾಂ ವರಃ |
ಋಷಿಮಧ್ಯೇ ಸ್ಥಿತಃ ಪ್ರಾಹ ತಪನ್ನಿವ ವಿಭಾವಸುಃ ||9||
ಪಿತೃವಿಪ್ರವಧೇನಾಹಮಾರ್ತೋ ವೈ ಪಾಂಡವಾಗ್ರಜ |
ಶುಚಿರ್ಭೂತ್ವಾ ಮಹಾದೇವಂ ಗತವಾನ್ ಶರಣಂ ನೃಪ ||10||
ಧರ್ಮಿಷ್ಠರಲ್ಲಿ ಶ್ರೇಷ್ಠರಾದ, ಜಮದಗ್ನಿ ಪುತ್ರರಾದ, ಜ್ವಲಿಸುವ ಅಗ್ನಿಯಂತಿರುವ ಪರಶುರಾಮರು ಋಷಿಗಳ ಮಧ್ಯದಲ್ಲಿ ನಿಂತು ಯುಧಿಷ್ಠಿರನನ್ನು ಕುರಿತು- `ಎಲೈ ಪಾಂಡವರಿಗೆ ಅಣ್ಣನಾದವನೇ, ನಾನು ಪಿತೃ-ವಿಪ್ರ ವಧೆಯಿಂದ ಆರ್ತನಾಗಿ ಶುದ್ಧನಾಗಿ ತಕ್ಷಣ ಮಹಾದೇವನಿಗೆ ಶರಣಾಗತನಾದೆನು.
ನಾಮಭಿಶ್ಚಾಸ್ತುವಂ ದೇವಂ ತತಸ್ತುಷ್ಟೋಽಭವದ್ ಭವಃ |
ಪರಶುಂ ಚ ತತೋ ದೇವೋ ದಿವ್ಯಾನ್ಯಸ್ತ್ರಾಣಿ ಚೈವ ಮೇ ||11||
ಪಾಪಂ ನ ಭವಿತಾ ತೇಽದ್ಯ ಅಜೇಯಶ್ಚ ಭವಿಷ್ಯಸಿ |
ನ ತೇ ಪ್ರಭವಿತಾ ಮೃತ್ಯುರ್ಯಶಸ್ವೀ ಚ ಭವಿಷ್ಯಸಿ ||12||
ಎಲೈ ರಾಜನೇ, ಅವನನ್ನು ಸಹಸ್ರನಾಮಗಳಿಂದ ಸ್ತೋತ್ರ ಮಾಡಿದೆನು. ಸಂತುಷ್ಟನಾದ ಶಿವದೇವನು ನನಗೆ ಪರಶುವನ್ನೂ ಮತ್ತು ದಿವ್ಯಾಸ್ತ್ರಗಳನ್ನೂ ಕೊಟ್ಟನು. ಇಂದು ನಿನಗೆ ಪಾಪವುಂಟಾಗುವುದಿಲ್ಲ. ನೀನು ಅಜೇಯನಾಗುವಿ. ನಿನಗೆ ಮೃತ್ಯುವು ಉಂಟಾಗುವುದಿಲ್ಲ, ಕೀರ್ತಿವಂತನಾಗುವಿ (ಎಂದು ಹೇಳಿದನು).
ಆಹ ಮಾಂ ಭಗವಾನೇವಂ ಶಿಖಂಡೀ ಶಿವವಿಗ್ರಹಃ |
ತದವಾಪ್ತಂ ಚ ಮೇ ಸರ್ವಂ ಪ್ರಸಾದಾತ್ ತಸ್ಯ ಧೀಮತಃ ||13||
ಶಿಖೆಯನ್ನು ಧರಿಸಿದ ಶಿವರೂಪನಾದ ಭಗವಂತನು ನನಗೆ ಹೀಗೆ ಹೇಳಿದನು. ಮೇಧಾವಿಯಾದ ಅವನ ಅನುಗ್ರಹದಿಂದ ನನಗೆ ಅವೆಲ್ಲವೂ ದೊರೆತವು (ಎಂದು ಹೇಳಿದರು).
ವಿಶ್ವಾಮಿತ್ರಸ್ತದೋವಾಚ ಕ್ಷತ್ರಿಯೋಽಹಂ ಪುರಾಭವಮ್ |
ಬ್ರಾಹ್ಮಣೋಽಹಂ ಭವಾನೀತಿ ಮಯಾ ಚಾರಾಧಿತೋ ಭವಃ |
ತತ್ಪ್ರಸಾದಾತ್ ಮಯಾ ಪ್ರಾಪ್ತಂ ಬ್ರಾಹ್ಮಣ್ಯಂ ದುಲರ್ಭಂ ಮಹತ್ ||14||
ಆಗ ವಿಶ್ವಾಮಿತ್ರರು, ನಾನು ಮೊದಲು ಕ್ಷತ್ರಿಯನಾಗಿದ್ದೆ. ನಾನು ಬ್ರಾಹ್ಮಣನಾಗಬೇಕೆಂದು ಬಯಸಿ ಭವನನ್ನು ಆರಾಧಿಸಿದೆ. ಅವನ ಅನುಗ್ರಹದಿಂದ ನನಗೆ ದುರ್ಲಭವಾದ ಶ್ರೇಷ್ಠವಾದ ಬ್ರಾಹ್ಮಣ್ಯವು ದೊರೆಯಿತು ಎಂದು ಹೇಳಿದರು.
ಅಸಿತೋ ದೇವಲಶ್ಚೈವ ಪ್ರಾಹ ಪಾಂಡುಸುತಂ ನೃಪಮ್ |
ಶಾಪಾಚ್ಛಕ್ರಸ್ಯ ಕೌಂತೇಯ ಚಿತೋ ಧರ್ಮೋಽನಶನ್ಮಮ |
ತನ್ಮೇ ಧರ್ಮಂ ಯಶಶ್ಚಾಗ್ರ್ಯಮಾಯುಶ್ಚೈವಾದದದ್ ಭವಃ ||15||
ಅಸಿತರು ಮತ್ತು ದೇವಲರು ರಾಜನಾದ ಪಾಂಡುಪುತ್ರನನ್ನು ಕುರಿತು- `ಎಲೈ ಕೌಂತೇಯನೇ, ಇಂದ್ರನ ಶಾಪದಿಂದ ನಾನು ಬಹಳ ಕಾಲದಿಂದ ಸಂಪಾದಿಸಿದ್ದ ಧರ್ಮವು ನಾಶವನ್ನು ಹೊಂದಿತು. ಭವನು ಪ್ರಸನ್ನನಾಗಿ ನನಗೆ ಆ ಧರ್ಮವನ್ನೂ, ಶ್ರೇಷ್ಠವಾದ ಕೀರ್ತಿಯನ್ನೂ ಮತ್ತು ಆಯುಸ್ಸನ್ನೂ ಕೊಟ್ಟನು' ಎಂದು ಹೇಳಿದರು.
ಋಷಿರ್ಗೃತ್ಸಮದೋ ನಾಮ ಶಕ್ರಸ್ಯ ದಯಿತಃ ಸಖಾ |
ಪ್ರಾಹಾಜಮೀಢಂ ಭಗವಾನ್ ಬೃಹಸ್ಪತಿಸಮದ್ಯುತಿಃ ||16||
ಶಕ್ರನ ಪ್ರೀತಿಪಾತ್ರ ಸ್ನೇಹಿತರಾದ, ಬೃಹಸ್ಪತಿಗೆ ಸಮಾನವಾದ ಕಾಂತಿಯುಳ್ಳ, ಪೂಜ್ಯರಾದ ಗೃತ್ಸಮದ ಋಷಿಗಳು ಆಜಮೀಢನಾದ ಧರ್ಮರಾಜನನ್ನು ಕುರಿತು ಹೀಗೆ ಹೇಳಿದರು.
ವಸಿಷ್ಠೋ ನಾಮ ಭಗವಾಂಶ್ಚಾಕ್ಷುಷಸ್ಯ ಮನೋಃ ಸುತಃ |
ಶತಕ್ರತೋರಚಿಂತ್ಯಸ್ಯ ಸತ್ರೇ ವರ್ಷಸಹಸ್ರಿಕೇ |
ವರ್ತಮಾನೇಽಬ್ರುವೀದ್ ವಾಕ್ಯಂ ಸಾಮ್ನಿ ಹ್ಯುಚ್ಚಾರಿತೇ ಮಯಾ ||17||
ರಥಂತರೇ ದ್ವಿಜಶ್ರೇಷ್ಠ ನ ಸಮ್ಯಗಿತಿ ವರ್ತತೇ |
ಸಮೀಕ್ಷಸ್ವ ಪುನರ್ಬುದ್ಧ್ಯಾ ಹರ್ಷಂ ತ್ಯಕ್ತ್ವಾ ದ್ವಿಜೋತ್ತಮ |
ಅಯಜ್ಞವಾಹಿನಂ ಪಾಪಮಕಾರ್ಷೀಸ್ತ್ವಂ ಸುದುರ್ಮತೇ ||18||

ಚಾಕ್ಷುಷಮನುವಿನ ಪುತ್ರರಾದ ಪೂಜ್ಯರಾದ ವಸಿಷ್ಠರು ಅಚಿಂತ್ಯ ಮಹಿಮೆಯುಳ್ಳ ಇಂದ್ರನ ಸಹಸ್ರವರ್ಷದ ಸತ್ರಯಾಗವು ನಡೆಯುತ್ತಿದ್ದಾಗ ನಾನು ಸಾಮವನ್ನು ಉಚ್ಛಾರ ಮಾಡುತ್ತಿರಲು ಹೀಗೆ ಹೇಳಿದರು: ಎಲೈ ದ್ವಿಜಶ್ರೇಷ್ಠನೇ, ನೀನು ರಥಂತರ ಸಾಮವನ್ನು ಸರಿಯಾಗಿ ಹೇಳಲಿಲ್ಲ. ಎಲೈ ದ್ವಿಜೋತ್ತಮನೇ, ಪುನಃ ಹರ್ಷವನ್ನು ಬಿಟ್ಟು ಬುದ್ಧಿಯಿಂದ ವಿಮರ್ಶಿಸು. ಎಲೈ ದುರ್ಬುದ್ಧಿಯುಳ್ಳವನೇ, ನೀನು ಯಜ್ಞಕ್ಕೆ ಅನುಪಯೋಗಿಯಾದ ಸಾಮೋಚ್ಚಾರಣೆಯಿಂದ ಪಾಪವನ್ನು ಮಾಡಿದ್ದೀಯೆ.

ಏವಮುಕತತ್ವ ಮಹಾಕ್ರೋಧಾತ್ ಪ್ರಾಹ ರುಷ್ಟಃ ಪುನರ್ವಚಃ |
ಪ್ರಜ್ಞಯಾ ರಹಿತೋ ದುಃಖೀ ನಿತ್ಯಂ ಭೀತೋ ವನೇಚರಃ |
ದಶ ವರ್ಷಸಹಸ್ರಾಣಿ ದಶಾಷ್ಟೌ ಚ ಶತಾನಿ ಚ ॥19॥
ನಷ್ಟಪಾನೀಯಪವನೇ ಮೃಗೈರನ್ಯೈಶ್ಚ ವರ್ಜಿತೇ |
ಅಯಜ್ಞೀಯದ್ರುಮೇ ದೇಶೇ ರುರುಸಿಂಹನಿಷೇವಿತೇ |
ಭವಿತಾ ತ್ವಂ ಮೃಗಃ ಕ್ರೂರೋ ಮಹಾದುಃಖಸಮನ್ವಿತಃ ॥20॥

ಹೀಗೆ ಹೇಳಿ ಮಹಾಕ್ರೋಧದಿಂದ ಕೂಡಿದವರಾಗಿ ಪುನಃ ಮಾತನಾಡಿದರು: ನೀನು ಪ್ರಜ್ಞಾಹೀನನಾಗಿ, ದುಃಖಿಯಾಗಿ, ಭಯದಿಂದ, ಯಾವಾಗಲೂ ವನಸಂಚಾರಿಯಾಗಿ ಹತ್ತು ಸಹಸ್ರವರ್ಷ ಮತ್ತು ಹದಿನೆಂಟು ನೂರು ವರ್ಷಗಳ ಕಾಲ ಜಲ-ವಾಯುವಿಲ್ಲದಿರುವ, ಬೇರೆ ಮೃಗಗಳೂ ಇಲ್ಲದಿರುವ, ಯಜ್ಞ ವೃಕ್ಷಗಳಿಲ್ಲದಿರುವ, ರುರು (ಜಿಂಕೆ) ಸಿಂಹಗಳಿಂದ ಕೂಡಿರುವ ಅರಣ್ಯದಲ್ಲಿ ಕ್ರೂರವಾದ ಮಹಾದುಃಖದಿಂದ ಕೂಡಿದ ಮೃಗವಾಗುವಿ ಎಂದು ಹೇಳಿದರು.

ತಸ್ಯ ವಾಕ್ಯಸ್ಯ ನಿಧನೇ ಪಾರ್ಥ ಜಾತೋ ಹ್ಯಹಂ ಮೃಗಃ |
ತತೋ ಮಾಂ ಶರಣಂ ಪ್ರಾಪ್ತಂ ಪ್ರಾಹ ಯೋಗೀ ಮಹೇಶ್ವರಃ ॥21॥

ಎಲೈ ಪಾರ್ಥನೇ, ಅವರು ಆ ವಾಕ್ಯವನ್ನು ಮುಗಿಸುತ್ತಿದ್ದಂತೆಯೇ ನಾನು ಮೃಗವಾದೆನು. ಆಗ ಶರಣಾಗತನಾದ ನನ್ನನ್ನು ಕುರಿತು ಯೋಗಿಯಾದ ಮಹೇಶ್ವರನು ಹೀಗೆ ಹೇಳಿದನು.

ಅಜರಶ್ಚಾಮರಶ್ಚೈವ ಭವಿತಾ ದುಃಖವರ್ಜಿತಃ |
ಸಾಮ್ಯಂ ಮಮಾಸ್ತು ತೇ ಸೌಖ್ಯಂ ಯುವಯೋರ್ವರ್ಧತಾಂ ಕ್ರತುಃ ॥

ನೀನು ಅಜರನೂ, ಮರಣರಹಿತನೂ ಮತ್ತು ದುಃಖವರ್ಜಿತನೂ ಆಗುವಿ. ನಿನ್ನ ಸುಖವು ನನ್ನ ಸುಖಕ್ಕೆ ಸಮವಾಗಲಿ. ನಿಮ್ಮಿಬ್ಬರಿಂದ (ವಸಿಷ್ಠ ಮತ್ತು ಗೃತ್ಸಮದರಿಂದ) ಕ್ರತುವು ಅಭಿವೃದ್ಧಿಯನ್ನು ಹೊಂದಲಿ ಎಂದು ಹೇಳಿದನು.

ಅನುಗೃಹಾನೇವಮೇಷ ಕರೋತಿ ಭಗವಾನ್ ವಿಭುಃ |
ಅಯಂ ಧಾತಾ ವಿಧಾತಾ ಚ ಸುಖದುಃಖೇ ಚ ಸರ್ವದಾ ॥23॥

ಭಗವಂತನೂ, ವಿಭುವೂ ಆದ ಶಿವನು ಹೀಗೆಯೇ ಅನುಗ್ರಹವನ್ನು ಮಾಡುವನು. ಇವನೇ ಧಾತ, ವಿಧಾತ ಮತ್ತು ಯಾವಾಗಲೂ ಸುಖ-ದುಃಖಗಳಿಗೆ ಕಾರಣನಾದವನು.

ಅಚಿಂತ್ಯ ಏಷ ಭಗವಾನ್ ಕರ್ಮಣಾ ಮನಸಾ ಗಿರಾ |
ನ ಮೇ ತಾತ ಯುಧಿಶ್ರೇಷ್ಠ ವಿದ್ಯಯಾ ಪಂಡಿತಃ ಸಮಃ ॥24॥

ಅಂತಹ ಭಗವಂತನನ್ನು ಕರ್ಮದಿಂದಲಾಗಲೀ, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ ಚಿಂತಿಸಲು ಸಾಧ್ಯವಿಲ್ಲ. ಎಲೈ ಯುದ್ಧ ಮಾಡುವವರಲ್ಲಿ ಶ್ರೇಷ್ಠನಾದ ಪ್ರೀತಿಪಾತ್ರನೇ, ನನ್ನ ದೃಷ್ಟಿಯಲ್ಲಿ ವಿದ್ಯೆಯಿಂದ ಪಂಡಿತನಾದ ಯಾವನೂ ಅವನಿಗೆ ಸಮನಲ್ಲ.

ವಾಸುದೇವಸ್ತದೋವಾಚ ಪುನರ್ಮತಿಮತಾಂ ವರಃ |
ಸುವರ್ಣಾಕ್ಷೋ ಮಹಾದೇವಸ್ತಪಸಾ ತೋಷಿತೋ ಮಯಾ ॥25॥
ತತೋಽಥ ಭಗವಾನಾಹ ಪ್ರೀತೋ ಮಾಂ ವೈ ಯುಧಿಷ್ಠಿರ |
ಅನ್ಯಾತ್ ಪ್ರಿಯತರಃ ಕೃಷ್ಣ ಮತ್ಪ್ರಸಾದಾದ್ ಭವಿಷ್ಯತಿ ॥26॥
ಅಪರಾಜಿತಶ್ಚ ಯುದ್ಧೇಷು ತೇಜಶ್ಚೈವಾನಲೋಪಮಮ್ |
ಏವ ಸಹಸ್ರಶಶ್ಚಾತ್ಮಾ ಮಹಾದೇವೋ ವರಂ ದದೌ ॥27॥
ಮಣಿಮಂಥೇಽಥ ಶೈಲೇ ವೈ ಪುರಾ ಸಂರಾಧಿತೋ ಮಯಾ |
ವರ್ಷಾಯುತಸಹಸ್ರಾಣಾಂ ಸಹಸ್ರಶತಮೇವ ಚ ॥28॥

ಆಗ ಮೇಧಾವಿಗಳಲ್ಲಿ ಶ್ರೇಷ್ಠನಾದ ವಾಸುದೇವನು ಪುನಃ ಮಾತನಾಡಿದನು: ಸುವರ್ಣನೇತ್ರನಾದ ಮಹಾದೇವನನ್ನು ನಾನು ತಪಸ್ಸಿನಿಂದ ಸಂತೋಷಪಡಿಸಿದೆ. ಎಲೈ ಯುಧಿಷ್ಠಿರನೇ, ಆಗ ಭಗವಂತನಾದ ಅವನು ಪ್ರೀತನಾಗಿ ನನ್ನನ್ನು ಕುರಿತು- `ಕೃಷ್ಣನೇ, ನನ್ನ ಅನುಗ್ರಹದಿಂದ ನೀನು ಅನ್ಯಕ್ಕಿಂತಲೂ (ಎಲ್ಲದಕ್ಕಿಂತಲೂ) ಪ್ರಿಯಕರನಾಗುವಿ. ಯುದ್ಧದಲ್ಲಿ ಅಪರಾಜಿತನಾಗುವಿ. ನಿನ್ನ ತೇಜಸ್ಸು ಅಗ್ನಿಗೆ ಸಮಾನವಾಗಿರುತ್ತದೆ' ಎಂದು ಹೇಳಿದನು. ಹೀಗೆ ಮಹಾದೇವನು ಸಾವಿರಾರು ವರಗಳನ್ನು ಕೊಟ್ಟನು.

ತತೋ ಮಾಂ ಭಗವಾನ್ ಪ್ರೀತ ಇದಂ ವಚನಮಬ್ರವೀತ್ |
ವರಂ ವೃಣೀಷ್ವ ಭದ್ರಂ ತೇ ಯಸ್ತೇ ಮನಸಿ ವರ್ತತೇ ॥29॥

ಮಣಿವಂತ ಎಂಬ ಪರ್ವತದಲ್ಲಿ ನಾನು ಹಿಂದೆ ಅವನನ್ನು ಸಹಸ್ರ ವರ್ಷಗಳು ಮತ್ತು ಶತಸಹಸ್ರ ವರ್ಷಗಳ ಕಾಲ ಆರಾಧಿಸಿದೆನು. ಆಗ ಭಗವಂತನಾದ ಶಿವನು ಪ್ರೀತನಾಗಿ ನನ್ನನ್ನು ಕುರಿತು ನಿನಗೆ ಮಂಗಳವಾಗಲಿ, ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳು ಎಂದು ಹೇಳಿದನು.

ತತಃ ಪ್ರಣಮ್ಯ ಶಿರಸಾ ಇದಂ ವಚನಮಬ್ರುವಮ್ |
ಯದಿ ಪ್ರೀತೋ ಮಹಾದೇವೋ ಭಕ್ತ್ಯಾ ಪರಮಯಾ ಪ್ರಭುಃ ॥30॥
ನಿತ್ಯಕಾಲಂ ತವೇಶಾನ ಭಕ್ತಿರ್ಭವತು ಮೇ ಸ್ಥಿರಾ |

ಏವಮಸಿತ್ವತಿ ಭಗವಾಂಸ್ತತ್ರೋಕ್ತತ್ವಂತರಧೀಯತ ॥31॥
ಆಗ ನಾನು ಅವನಿಗೆ ಶಿರಸಾ ಪ್ರಣಾಮವನ್ನು ಮಾಡಿ `ಮಹಾದೇವನೇ, ಪ್ರಭುವಾದ ನೀನು ನನ್ನ ಶ್ರೇಷ್ಠವಾದ ಭಕ್ತಿಯಿಂದ ಪ್ರಸನ್ನನಾಗಿದ್ದರೆ, ಎಲೈ ಈಶಾನನೇ, ನನಗೆ ನಿತ್ಯವೂ ನಿನ್ನಲ್ಲಿ ಸ್ಥಿರವಾದ ಭಕ್ತಿಯುಂಟಾಗಲಿ' ಎಂದು ಕೇಳಿದೆನು. ಹಾಗೆಯೇ ಆಗಲಿ ಎಂದು ಹೇಳಿ ಭಗವಂತನು ಅಂತರ್ಧಾನವನ್ನು ಹೊಂದಿದನು.
ಜೈಗೀಷವ್ಯಃ
ಮಮಾಷ್ಟಗುಣಮೈಶ್ವರ್ಯಂ ದತ್ತಂ ಭಗವತಾ ಪುರಾ |
ಯತ್ನೇನಾಲ್ಪೇನ ಬಲಿನಾ ವಾರಾಣಸ್ಯಾಂ ಯುಧಿಷ್ಠಿರ ॥32॥
ಜೈಗೀಷವ್ಯ ಎಲೈ ಯುಧಿಷ್ಠಿರನೇ, ನಾನು ಹಿಂದೆ ವಾರಣಾಸಿಯಲ್ಲಿ ಮಾಡಿದ ಅಲ್ಪ ತಪಸ್ಸಿನ ಪ್ರಯತ್ನದಿಂದ ಬಲಿಷ್ಠನಾದ ಭಗವಂತನಾದ ಶಿವನು ಪ್ರಸನ್ನನಾಗಿ ಎಂಟು ಪಟ್ಟು ಅಧಿಕವಾದ ಐಶ್ವರ್ಯವನ್ನು ಕೊಟ್ಟನು.
ಗಾರ್ಗ್ಯಃ
ಚತುಃಷಷ್ಟ್ಯಂಗಮದದಾತ್ಕಾಲಜ್ಞಾನಂ ಮಮಾದ್ಭುತಮ್ |
ಸರಸ್ವತ್ಯಾಸ್ತಟೇ ತುಷ್ಟೋ ಮನೋಯಜ್ಞೇನ ಪಾಂಡವ ॥33॥
ತುಲ್ಯಂ ಮಮ ಸಹಸ್ರಂ ತು ಸುತಾನಾಂ ಬ್ರಹ್ಮವಾದಿನಾಮ್ |
ಆಯುಶ್ಚೈವ ಸಪುತ್ರಸ್ಯ ಸಂವತ್ಸರಶತಾಯುತಮ್ ॥34॥
ಗಾರ್ಗ್ಯ ಎಲೈ ಪಾಂಡವನೇ, ಸರಸ್ವತೀ ದಡದಲ್ಲಿ ನನ್ನ ಮಾನಸಿಕ ಯಜ್ಞದಿಂದ ಸಂತುಷ್ಟನಾದ ಶಿವನು ನನಗೆ ಅರವತ್ನಾಲ್ಕು ಅಂಗಗಳಿಂದ ಸಹಿತವಾದ ಅದ್ಭುತವಾದ ಕಾಲಜ್ಞಾನವನ್ನು ಕೊಟ್ಟನು. ನನಗೆ ಸಮಾನರಾದ ಬ್ರಹ್ಮವಾದಿಗಳಾದ ಸಹಸ್ರ ಪುತ್ರರನ್ನು ಕೊಟ್ಟನು. ಪುತ್ರರಿಂದ ಸಹಿತನಾದ ನನಗೆ ಶತಾಯುತ (ಹತ್ತು ಲಕ್ಷ) ವರ್ಷಗಳ ಆಯುಸ್ಸನ್ನೂ ಕೊಟ್ಟನು.
ಪರಾಶರಃ
ಪ್ರಸಾದ್ಯೇಹ ಪುರಾ ಶರ್ವಂ ಮನಸಾಚಿಂತಯಂ ನೃಪ |
ಮಹಾತಪಾ ಮಹಾತೇಜಾ ಮಹಾಯೋಗೀ ಮಹಾಯಶಾಃ |
ವೇದಾವಾಸಃ ಶ್ರಿಯಾವಾಸೋ ಬ್ರಹ್ಮಣ್ಯಃ ಕರುಣಾತ್ಮಕಃ ॥35॥
ಅಪ್ಯಸಾವೀಪ್ಸಿತಃ ಪುತ್ರೋ ಮಮ ಸ್ಯಾದ್ವೈ ಮಹೇಶ್ವರಾತ್ |
ಇತಿ ಮತ್ವಾ ಹೃದಿ ಮತಂ ಪ್ರಾಹ ಮಾಂ ಸುರಸತ್ತಮಃ ॥36॥
ಪರಾಶರ ಎಲೈ ರಾಜನೇ, ನಾನು ಹಿಂದೆ ಶಿವನನ್ನು ಪ್ರಸನ್ನೀಕರಿಸಿಕೊಂಡು ಮನಸ್ಸಿನಿಂದಲೇ ಧ್ಯಾನಿಸಿದೆನು. ಮಹೇಶ್ವರನ ಅನುಗ್ರಹದಿಂದ ನನಗೆ ಮಹಾತಪಸ್ವಿಯೂ, ಮಹಾತೇಜಸ್ವಿಯೂ, ಮಹಾಯೋಗಿಯೂ, ಮಹಾಕೀರ್ತಿವಂತನೂ, ವೇದವಿಭಾಗವನ್ನು ಮಾಡುವವನೂ, ಕಾಂತಿಯಿಂದ ಕೂಡಿದವನೂ, ಬ್ರಾಹ್ಮಣವತ್ಸಲನೂ, ಕರುಣಾಮೂರ್ತಿಯೂ ಆದ ಪುತ್ರನು ಜನಿಸುತ್ತಾನೆ ಎಂದು ತಿಳಿದು ಧ್ಯಾನ ಮಾಡಿದೆನು. ನನ್ನ ಹೃದಯದಲ್ಲಿದ್ದ ಈ ಆಸೆಯನ್ನು ತಿಳಿದ ಸುರಶ್ರೇಷ್ಠನಾದ ಶಿವನು ನನ್ನನ್ನು ಕುರಿತು ಹೇಳಿದನು.
ಮಯಿ ಸಂಭವತಸ್ತಸ್ಯ ಫಲಾತ್ ಕೃಷ್ಣೋ ಭವಿಷ್ಯತಿ |
ಸಾವರ್ಣಸ್ಯ ಮನೋಃ ಸರ್ಗೇ ಸಪ್ತರ್ಷಿಶ್ಚ ಭವಿಷ್ಯತಿ ॥37॥
ನನ್ನನ್ನು ಧ್ಯಾನ ಮಾಡಿದುದರ ಫಲವಾಗಿ ನಿನಗೆ ಕೃಷ್ಣ ಎಂಬ ಪುತ್ರನು ಜನಿಸುವನು. ಅವನು ಸಾವರ್ಣಿಯ ಮನ್ವಂತರದಲ್ಲಿ ಸಪ್ತರ್ಷಿಯಾಗುವನು.
ವೇದಾನಾಂ ಚ ಸ ವೈ ವ್ಯಸ್ತಾ ಕುರುವಂಶಕರಸ್ತಥಾ |
ಇತಿಹಾಸಸ್ಯ ಕರ್ತಾ ಚ ಪುತ್ರಸ್ತೇ ಜಗತೋ ಹಿತಃ ॥38॥
ವೇದಗಳನ್ನು ವಿಭಾಗ ಮಾಡುವವನು. ಕುರುವಂಶವನ್ನು ಅಭಿವೃದ್ಧಿ ಮಾಡುವವನು. ನಿನ್ನ ಪುತ್ರನು ಇತಿಹಾಸವನ್ನು ರಚಿಸಿ ಜಗತ್ತಿಗೆ ಹಿತಕಾರಿಯಾಗುವನು.
ಭವಿಷ್ಯತಿ ಮಹೇಂದ್ರಸ್ಯ ದಯಿತಃ ಸ ಮಹಾಮುನಿಃ |
ಅಜರಶ್ಚಾಮರಶ್ಚೈವ ಪರಾಶರ ಸುತಸ್ತವ ॥39॥
ಅವನು ಇಂದ್ರನಿಗೆ ಪ್ರಿಯನಾದ ಮಹರ್ಷಿಯಾಗುವನು. ಎಲೈ ಪರಾಶರನೇ, ನಿನ್ನ ಪುತ್ರನು ಅಜರಾಮರನಾಗುವನು (ಎಂದು ಹೇಳಿದನು).
ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರಧೀಯತ |
ಯುಧಿಷ್ಠಿರ ಮಹಾಯೋಗೀ ವೀರ್ಯವಾನಕ್ಷಯೋಽವ್ಯಯಃ ॥40॥
ಎಲೈ ಯುಧಿಷ್ಠಿರನೇ, ಹೀಗೆ ಹೇಳಿ ಮಹಾಯೋಗಿಯೂ, ಪರಾಕ್ರಮಶಾಲಿಯೂ, ಅಕ್ಷಯನೂ, ನಾಶರಹಿತನೂ ಆದ, ಭಗವಂತನಾದ ಶಿವನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಮಾಂಡವ್ಯಃ
ಅಚೌರಶ್ಚೌರಶಂಕಾಯಾಂ ಶೂಲೇ ಭಿನ್ನೋ ಹ್ಯಹಂ ಯದಾ |
ತತ್ರಸ್ಥೇನ ಸ್ತುತೋ ದೇವಃ ಪ್ರಾಹ ಮಾಂ ವೈ ಮಹೇಶ್ವರಃ ॥41॥
ಮಾಂಡವ್ಯ ಕಳ್ಳತನವನ್ನು ಮಾಡದಿದ್ದರೂ ಕಳ್ಳನೆಂಬ ಶಂಕೆಯಿಂದ ನನ್ನನ್ನು ಶೂಲಕ್ಕೆ ಏರಿಸಿ ಭೇದಿಸಿದಾಗ ಶೂಲದಲ್ಲಿಯೇ ಇದ್ದು ಸ್ತೋತ್ರ ಮಾಡಿದ ನನ್ನನ್ನು ಕುರಿತು ದೇವನಾದ ಮಹೇಶ್ವರನು ಹೇಳಿದನು.
ಮೋಕ್ಷಂ ಪ್ರಾಪ್ಸ್ಯಸಿ ಶೂಲಾಚ್ಚ ಜೀವಿಷ್ಯಸಿ ಸಮಾರ್ಬುದಮ್ |
ರುಜಾ ಶೂಲಕೃತಾ ಚೈವ ನ ತೇ ವಿಪ್ರ ಭವಿಷ್ಯತಿ |

ಆಧಿಭಿರ್ವ್ಯಾಧಿಭಿಶ್ಚೈವ ವರ್ಜಿತಸ್ತ್ವಂ ಭವಿಷ್ಯಸಿ ॥42॥
ಶೂಲದಿಂದ ಬಿಡುಗಡೆಯನ್ನು ಹೊಂದುವಿ. ಅರ್ಬುದ ವರ್ಷಗಳವರೆಗೆ ಜೀವಿಸುವಿ. ಎಲೈ ಬ್ರಾಹ್ಮಣನೇ, ಶೂಲಕ್ಕೆ ಏರಿಸಿದುದರಿಂದ ನಿನಗೆ ಯಾವ ನೋವೂ ಉಂಟಾಗುವುದಿಲ್ಲ. ನೀನು ಆಧಿ-ವ್ಯಾಧಿಗಳಿಂದ ರಹಿತನಾಗುವಿ.
ಪಾದಾಚ್ಚತುರ್ಥಾತ್ ಸಂಭೂತ ಆತ್ಮಾ ಯಸ್ಮಾನ್ಮುನೇ ತವ |
ತ್ವಂ ಭವಿಷ್ಯಸ್ಯನುಪಮೋ ಜನ್ಮ ವೈ ಸಫಲಂ ಕುರು ॥43॥
ಎಲೈ ಋಷಿಯೇ, ನೀನು ಧರ್ಮದ ನಾಲ್ಕನೆಯ ಪಾದದಿಂದ ಜನಿಸಿದವನು. ನೀನು ಅಸದೃಶನಾಗುವಿ. ನಿನ್ನ ಜನ್ಮವನ್ನು ಸಫಲವನ್ನಾಗಿ ಮಾಡಿಕೊ.
ತೀರ್ಥಾಭಿಷೇಕಂ ಸಫಲಂ ತ್ವಮವಿಘ್ನೇನ ಚಾಪ್ಸ್ಯಸಿ |
ಸ್ವರ್ಗಂ ಚೈವಾಕ್ಷಯಂ ವಿಪ್ರ ವಿದಧಾಮಿ ತವೋರ್ಜಿತಮ್ ॥44॥
ನೀನು ಸಫಲವಾದ ತೀರ್ಥಯಾತ್ರೆಯನ್ನು ನಿರ್ವಿಘ್ನವಾಗಿ ಮಾಡುವಿ. ಎಲೈ ಬ್ರಾಹ್ಮಣನೇ, ನಿನಗೆ ಶ್ರೇಷ್ಠವಾದ, ಅಕ್ಷಯವಾದ ಸ್ವರ್ಗವನ್ನು ದಯಪಾಲಿಸುವೆನು (ಎಂದು ಹೇಳಿದನು).
ಏವಮುಕತ್ವ ತು ಭಗವಾನ್ ವರೇಣ್ಯೋ ವೃಷವಾಹನಃ |
ಮಹೇಶ್ವರೋ ಮಹಾರಾಜ ಕೃತ್ತಿವಾಸಾ ಮಹಾದ್ಯುತಿಃ |
ಸಗಣೋ ದೈವತಶ್ರೇಷ್ಠಸ್ತತ್ರೈವಾಂತರಧೀಯತ ॥45॥
ಹೀಗೆ ಹೇಳಿ ಎಲೈ ಮಹಾರಾಜನೇ, ವರೇಣ್ಯನೂ, ಭಗವಂತನೂ, ವೃಷವಾಹನನೂ, ಚರ್ಮಚೇಲನೂ, ಮಹಾದ್ಯುತಿಯುಳ್ಳವನು, ದೇವಶ್ರೇಷ್ಠನೂ ಆದ ಮಹೇಶ್ವರನು ತನ್ನ ಗಣಗಳ ಜೊತೆಯಲ್ಲಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಗಾಲವಃ
ವಿಶ್ವಾಮಿತ್ರಾಭ್ಯನುಜ್ಞಾತೋ ಹ್ಯಹಂ ಪಿತರಮಾಗತಃ |
ಅಬ್ರವೀನ್ಮಾಂ ತತೋ ಮಾತಾ ದುಃಖಿತಾ ರುದತೀ ಭೃಶಮ್ ॥47॥
ಕೌಶಿಕೇನಾಭ್ಯನುಜ್ಞಾತಂ ಪುತ್ರಂ ವೇದವಿಭೂಷಿತಮ್ |
ನ ತಾತ ತರುಣಂ ದಾಂತಂ ಪಿತಾ ತ್ವಾಂ ಪಶ್ಯತೇಽನಘ ॥48॥
ಗಾಲವ ವಿಶ್ವಾಮಿತ್ರರಲ್ಲಿ ವಿದ್ಯಾಭ್ಯಾಸ ಮಾಡಿ, ಅವರ ಅನುಗ್ರಹವನ್ನು ಪಡೆದು ನಾನು ತಂದೆಯ ಬಳಿಗೆ ಬಂದೆನು. ಆಗ ತಾಯಿಯು ದುಃಖಿತಳಾಗಿ ಅಳುತ್ತಾ ನನ್ನನ್ನು ಕುರಿತು- `ಎಲೈ ಪುತ್ರನೇ, ನೀನು ವಿಶ್ವಾಮಿತ್ರರಿಂದ ಅನುಜ್ಞೆಯನ್ನು ಪಡೆದಿದ್ದರೂ ವೇದಗಳಿಂದ ಅಲಂಕೃತನಾಗಿದ್ದರೂ ಎಲೈ ಅನಘನೇ, ಪ್ರೀತಿಪಾತ್ರನೇ, ತರುಣನೂ, ಇಂದ್ರಿಯನಿಗ್ರಹವುಳ್ಳವನೂ ಆದ ನಿನ್ನನ್ನು ನಿನ್ನ ತಂದೆಯು ನೋಡುವುದಿಲ್ಲ' ಎಂದು ಹೇಳಿದಳು.
ಶ್ರುತ್ವಾ ಜನನ್ಯಾ ವಚನಂ ನಿರಾಶೋ ಗುರುದರ್ಶನೇ |
ನಿಯತಾತ್ಮಾ ಮಹಾದೇವಮಪಶ್ಯಂ ಸೋಽಬ್ರವೀಚ್ಚ ಮಾಮ್ ॥49॥
ಪಿತಾ ಮಾತಾ ಚ ತೇ ತ್ವಂ ಚ ಪುತ್ರ ಮೃತ್ಯುವಿವರ್ಜಿತಾಃ |
ಭವಿಷ್ಯಥ ವಿಶ ಕ್ಷಿಪ್ರಂ ದ್ರಷ್ಟಾಸಿ ಪಿತರಂ ಕ್ಷಯೇ ॥50॥
ತಾಯಿಯ ಮಾತನ್ನು ಕೇಳಿ, ತಂದೆಯ ದರ್ಶನವಿಲ್ಲದೆ ನಿರಾಸೆಯಿಂದ ಕೂಡಿ, ನಿಯತವಾದ ಮನಸ್ಸಿನಿಂದ ಮಹದೇವನನ್ನು ನೋಡಿದೆನು. ಅವನು ನನ್ನನ್ನು ಕುರಿತು- `ಎಲೈ ಪುತ್ರನೇ, ನಿನ್ನ ತಂದೆ-ತಾಯಿ ಮತ್ತು ನೀನೂ ಸಹ ಮೃತ್ಯುವಿವರ್ಜಿತರಾಗುವಿರಿ. ಮನೆಗೆ ಹೋಗು. ಕ್ಷಿಪ್ರವಾಗಿ ತಂದೆಯನ್ನು ನೋಡುವಿ' ಎಂದು ಹೇಳಿದನು.
ಅನುಜ್ಞಾತೋ ಭಗವತಾ ಗೃಹಂ ಗತ್ವಾ ಯುಧಿಷ್ಠಿರ |
ಅಪಶ್ಯಂ ಪಿತರಂ ತಾತ ಇಷ್ಟಿಂ ಕೃತ್ವಾ ವಿನಿಃಸೃತಮ್ ॥51॥
ಎಲೈ ಯುಧಿಷ್ಠಿರನೇ, ಭಗವಂತನಾದ ಈಶ್ವರನ ಅನುಗ್ರಹವನ್ನು ಪಡೆದು ಮನೆಗೆ ಹೋಗಿ, ಇಷ್ಟಿಯನ್ನು ಮಾಡಿ ಹೊರಗೆ ಬರುತ್ತಿದ್ದ ನನ್ನ ತಂದೆಯನ್ನು ನೋಡಿದೆನು.
ಉಪಸ್ಪೃಶ್ಯ ಗೃಹೀತ್ವೇಧ್ಮಂ ಕುಶಾಂಶ್ಚ ಶರಣಾದ್ ಗುರೂನ್ |
ತಾನ್ ವಿಸೃಜ್ಯ ಚ ಮಾಂ ಪ್ರಾಹ ಪಿತಾ ಸಾಸ್ರಾವಿಲೇಕ್ಷಣಃ ॥52॥
ಅಗ್ನಿಗೃಹದಿಂದ ಕೈಗಳನ್ನು ತೊಳೆದು, ಕಟ್ಟಿಗೆಯನ್ನು ಮತ್ತು ಬಹಳ ದರ್ಭೆಗಳನ್ನು ತರುತ್ತಿದ್ದ ತಂದೆಯು ಅವುಗಳನ್ನು ಪಕ್ಕದಲ್ಲಿಟ್ಟು ಪ್ರೀತಿಯಿಂದ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ನನ್ನನ್ನು ಕುರಿತು ಮಾತನಾಡಿದನು.
ಪ್ರಣಮಂತಂ ಪರಿಷ್ವಜ್ಯ ಮೂರ್ಧ್ನಿ ಚಾಘ್ರಾಯ ಪಾಂಡವ |
ದಿಷ್ಟ್ಯಾ ದೃಷ್ಟೋಽಸಿ ಮೇ ಪುತ್ರ ಕೃತವಿದ್ಯ ಇಹಾಗತಃ ॥53॥
ಎಲೈ ಪಾಂಡವನೇ, ನಮಸ್ಕಾರ ಮಾಡಿದ ನನ್ನನ್ನು ಆಲಿಂಗಿಸಿ, ಶಿರಸ್ಸಿನಲ್ಲಿ ಆಘ್ರಾಣಿಸಿ `ಪುತ್ರನೇ, ವಿದ್ಯಾಭ್ಯಾಸವನ್ನು ಮುಗಿಸಿ ಇಲ್ಲಿಗೆ ಬಂದ ನಿನ್ನನ್ನು ದೇವರ ದಯೆಯಿಂದ ನೋಡುತ್ತಿದ್ದೇನೆ' ಎಂದು ಹೇಳಿದನು.
ವೈಶಂಪಾಯನಃ
ಏತಾನ್ಯತ್ಯದ್ಭುತಾನ್ಯೇವ ಕರ್ಮಾಣ್ಯಥ ಮಹಾತ್ಮನಃ |
ಪ್ರೋಕ್ತಾನಿ ಮುನಿಭಿಃ ಶ್ರುತ್ವಾ ವಿಸ್ಮಯಾಮಾಸ ಪಾಂಡವಃ ॥54॥
ವೈಶಂಪಾಯನ ಶಿವನ ಇಂತಹ ಅದ್ಭುತವಾದ ಕರ್ಮಗಳು ಋಷಿಗಳಿಂದ ಹೇಳಲ್ಪಟ್ಟುದನ್ನು ಕೇಳಿ ಯುಧಿಷ್ಠಿರನು ವಿಸ್ಮಯಗೊಂಡನು.
ತತಃ ಕೃಷ್ಣೋಽಬ್ರವೀದ್ ವಾಕ್ಯಂ ಪುನರ್ಮತಿಮತಾಂ ವರಃ |

ಯುಧಿಷ್ಠಿರಂ ಧರ್ಮನಿತ್ಯಂ ಪುರುಹೂತಮಿವೇಶ್ವರಃ ॥55॥
ಆಗ ಮೇಧಾವಿಗಳಲ್ಲಿ ಶ್ರೇಷ್ಠನಾದ ಕೃಷ್ಣನು ಧರ್ಮನಿಷ್ಠನಾದ ಯುಧಿಷ್ಠಿರನನ್ನು ಕುರಿತು, ಈಶ್ವರನು ಇಂದ್ರನನ್ನು ಕುರಿತು ಹೇಳಿದಂತೆ ಪುನಃ ಮಾತನಾಡಿದನು.
ಉಪಮನ್ಯುರ್ಮಯಿ ಪ್ರಾಹ ತಪನ್ನಿವ ದಿವಾಕರಃ |
ಅಶುಭೈಃ ಪಾಪಕರ್ಮಾಣೋ ಯೇ ನರಾ ಕಲುಷೀಕೃತಾಃ ॥56॥
ಈಶಾನಂ ನ ಪ್ರಪದ್ಯಂತೇ ತಮೋರಾಜಸವೃತ್ತಯಃ |
ಈಶ್ವರಂ ಸಂಪ್ರಪದ್ಯಂತೇ ದ್ವಿಜಾಃ ಭಾವಿತಭಾವನಾಃ ॥57॥
ತಪಸ್ಸಿನಿಂದ ದಿವಾಕರನಂತೆ ಬೆಳಗುತ್ತಾ ಉಪಮನ್ಯುವು ನನಗೆ ಹೀಗೆ ಹೇಳಿದನು: `ಯಾವ ಮನುಷ್ಯರು ಪಾಪಕರ್ಮವನ್ನು ಮಾಡಿ, ಅಶುಭಗಳಿಂದ ಮಲಿನರಾಗಿರುತ್ತಾರೆಯೋ ಅಂತಹ ತಾಮಸ-ರಾಜಸ ಪ್ರವೃತ್ತಿಯುಳ್ಳವರು ಶಿವನಿಗೆ ಶರಣಾಗತರಾಗುವುದಿಲ್ಲ. ಶುದ್ಧ ಮನಸ್ಸುಳ್ಳ ಬ್ರಾಹ್ಮಣರು ಈಶ್ವರನಿಗೆ ಶರಣಾಗತರಾಗುತ್ತಾರೆ.
ಸರ್ವಯಾ ವರ್ತಮಾನೋಽಪಿ ಯೋ ಭಕ್ತಃ ಪರಮೇಶ್ವರೇ |
ಸದೃಶೋಽರಣ್ಯವಾಸೀನಾಂ ಮುನೀನಾಂ ಭಾವಿತಾತ್ಮನಾಮ್ ॥58॥
ಮನುಷ್ಯನು ಯಾವ ರೀತಿಯಲ್ಲಿದ್ದರೂ ಪರಮೇಶ್ವರನಲ್ಲಿ ಭಕ್ತನಾದರೆ ಶುದ್ಧ ಮನಸ್ಸುಳ್ಳ ಅರಣ್ಯವಾಸಿಗಳಾದ ಋಷಿಗಳಿಗೆ ಸದೃಶನಾಗುತ್ತಾನೆ.
ಬ್ರಹ್ಮತ್ವಂ ಕೇಶವತ್ವಂ ವಾ ಶಕ್ರತ್ವಂ ವಾ ಸುರೈಃ ಸಹ |
ತ್ರೈಲೋಕ್ಯಸ್ಯಾಧಿಪತ್ಯಂ ವಾ ತುಷ್ಟೋ ರುದ್ರಃ ಪ್ರಯಚ್ಛತಿ ॥59॥
ರುದ್ರನು ಪ್ರಸನ್ನನಾದರೆ ಬ್ರಹ್ಮಪದವಿಯನ್ನಾಗಲೀ, ಕೇಶವ ಪದವಿಯನ್ನಾಗಲೀ, ದೇವತೆಗಳಿಂದ ಕೂಡಿದ ಇಂದ್ರಪದವಿಯನ್ನಾಗಲೀ, ಮೂರುಲೋಕದ ಆಧಿಪತ್ಯವನ್ನಾಗಲೀ ಕೊಡುತ್ತಾನೆ.
ಮನಸಾಪಿ ಶಿವಂ ತಾತ ಯೇ ಪ್ರಪದ್ಯಂತಿ ಮಾನವಾಃ |
ವಿಧೂಯ ಸರ್ವಪಾಪಾನಿ ದೇವೈಃ ಸಹ ವಸಂತಿ ತೇ ॥60॥
ಎಲೈ ಪ್ರೀತಿಪಾತ್ರನೇ, ಯಾವ ಮಾನವರು ಮನಸ್ಸಿನಿಂದಲಾದರೂ ಶಿವನಿಗೆ ಶರಣಾಗತರಾಗುವರೋ ಅವರು ಎಲ್ಲ ಪಾಪಗಳನ್ನೂ ಕಳೆದುಕೊಂಡು ದೇವತೆಗಳ ಜೊತೆಯಲ್ಲಿ ವಾಸ ಮಾಡುತ್ತಾರೆ.
ಭಿತ್ತ್ವಾ ಭಿತ್ತ್ವಾ ಚ ಕೂಲಾನಿ ಹತ್ವಾ ಸರ್ವಮಿದಂ ಜಗತ್ |
ಯಜೇದ್ ದೇವಂ ವಿರೂಪಾಕ್ಷಂ ನ ಸ ಪಾಪೇನ ಲಿಪ್ಯತೇ ॥61॥
ಕೆರೆ-ಕಟ್ಟೆಗಳನ್ನು ಒಡೆದು, ಎಲ್ಲ ಜಗತ್ತನ್ನು ಕೊಂದರೂ ವಿರೂಪಾಕ್ಷನನ್ನು ಪೂಜಿಸುವವನು ಪಾಪದಿಂದ ಲೇಪಿತವಾಗುವುದಿಲ್ಲ.
ಸರ್ವಲಕ್ಷಣಹೀನೋಽಪಿ ಯುಕ್ತೋ ವಾ ಸರ್ವಪಾತಕೈಃ |
ಸರ್ವಂ ತುದತಿ ತತ್ಪಾಪಂ ಭಾವಯನ್ ಶಿವಮಾತ್ಮನಾ ॥62॥
ಎಲ್ಲ ಲಕ್ಷಣಗಳಿಂದ ರಹಿತನಾಗಿದ್ದರೂ, ಎಲ್ಲ ಪಾಪಗಳನ್ನು ಮಾಡಿದ್ದರೂ ಶಿವನನ್ನು ಮನಸ್ಸಿನಲ್ಲಿಯೇ ಚಿಂತಿಸಿದರೆ ಮನುಷ್ಯನು ಆ ಪಾಪವೆಲ್ಲವನ್ನೂ ನಾಶಗೊಳಿಸುವನು.
ಕೀಟಪಕ್ಷಿಪತಂಗಾನಾಂ ತಿರಶ್ಚಾಮಪಿ ಕೇಶವ |
ಮಹಾದೇವಪ್ರಪನ್ನಾನಾಂ ನ ಭಯಂ ವಿದ್ಯತೇ ಕ್ವಚಿತ್ ॥63॥
ಎಲೈ ಕೇಶವನೇ, ಮಹಾದೇವನಿಗೆ ಶರಣಾಗತರಾದ ಕೀಟ, ಪಕ್ಷಿ, ಪತಂಗಗಳಿಗೂ ಯಾವ ಭಯವು ಇರುವುದಿಲ್ಲ.
ಏವಮೇವ ಮಹಾದೇವಂ ಭಕ್ತ್ಯಾ ಯೇ ಮಾನವಾ ಭುವಿ |
ನ ತೇ ಸಂಸಾರವಶಗಾ ಇತಿ ಮೇ ನಿಶ್ಚಿತಾ ಮತಿಃ |
ತತಃ ಕೃಷ್ಣೋಽಬ್ರವೀದ್ ವಾಕ್ಯಂ ಧರ್ಮಪುತ್ರಂ ಯುಧಿಷ್ಠಿರಮ್ ॥64॥
ಹೀಗೆ ಯಾವ ಮಾನವರು ಭೂಮಿಯಲ್ಲಿ ಮಹದೇವನಿಗೆ ಭಕ್ತಿಯಿಂದ ಶರಣಾಗತರಾಗುತ್ತಾರೆಯೋ ಅವನು ಸಂಸಾರವಶರಾಗುವುದಿಲ್ಲವೆಂದು ನನ್ನ ನಿಶ್ಚಿತವಾದ ಅಭಿಪ್ರಾಯ' (ಎಂದು ಉಪಮನ್ಯುವು ಹೇಳಿದನು). ಆಗ ಕೃಷ್ಣನು ಧರ್ಮಪುತ್ರನಾದ ಯುಧಿಷ್ಠಿರನನ್ನು ಕುರಿತು ಮಾತನಾಡಿದನು.
ಆದಿತ್ಯಚಂದ್ರಾವನಿಲಾನಲೌ ಚ
ದ್ಯೌರ್ಭೂಮಿರಾಪೋ ವಸವೋಽಥ ವಿಶ್ವೇ |
ಧಾತಾರ್ಯಮಾ ಶುಕ್ರಬೃಹಸ್ಪತೀ ಚ
ರುದ್ರಾಃ ಸಸಾಧ್ಯಾ ವರುಣೋಽಥ ಗೋಪಃ ॥65॥
ಆದಿತ್ಯ-ಚಂದ್ರರು, ಅಗ್ನಿ-ವಾಯುಗಳು, ಆಕಾಶ-ಭೂಮಿ ಮತ್ತು ಜಲ, ಎಲ್ಲ ವಸುಗಳು, ಧಾತಾ, ಅರ್ಯಮಾ, ಶುಕ್ರ-ಬೃಹಸ್ಪತಿಗಳು, ರುದ್ರಗಣಕ್ಕೆ ಸೇರಿದವರು, ಸಾಧ್ಯರಿಂದ ಸಹಿತರಾದವರು, ವರುಣ, ಇಂದ್ರ;
ಬ್ರಹ್ಮಾ ಶಕ್ರೋ ಮಾರುತೋ ಬ್ರಹ್ಮ ಸತ್ಯಂ
ವೇದಾ ಯಜ್ಞಾ ದಕ್ಷಿಣಾ ವೇದವಾಹಾಃ |
ಸೋಮೋ ಯಷ್ಟಾ ಯಚ್ಚ ಹವ್ಯಂ ಹವಿಶ್ಚ
ರಕ್ಷಾ ದೀಕ್ಷಾ ಸಂಯಮಾ ಯೇ ಚ ಕೇಚಿತ್ ॥66॥
ಬ್ರಹ್ಮದೇವರು, ಇಂದ್ರ, ವಾಯು, ಬ್ರಹ್ಮ, ವೇದಗಳು, ಸತ್ಯ, ಯಜ್ಞಗಳು, ದಕ್ಷಿಣೆಗಳು, ವೇದ ಪಾಠಕರು, ಸೋಮ, ಯಜ್ಞವನ್ನು ಮಾಡುವ ಯಜಮಾನ, ಹವಿರ್ದ್ರವ್ಯ, ಹವಿಸ್ಸು, ರಕ್ಷೆ, ದೀಕ್ಷೆ, ಸಂಯಮಗಳು;

ಸ್ವಾಹಾ ವೌಷಟ್ ಬ್ರಾಹ್ಮಣಾಃ ಸೌರಭೇಯಾ
ಧರ್ಮಂ ಚಕ್ರಂ ಕಾಲಚಕ್ರಂ ಚರಂ ಚ |
ಯಶೋ ದಮೋ ಬುದ್ಧಿಮತೀ ಸ್ಥಿತಿಶ್ಚ
ಶುಭಾಶುಭಂ ಮುನಯಶ್ಚೈವ ಸಪ್ತ ॥67॥
ಸ್ವಾಹಾಕಾರ, ವೌಷಟ್‌ಕಾರ, ಬ್ರಾಹ್ಮಣರು, ಗೋವುಗಳು, ಧರ್ಮಚಕ್ರ, ಚಲಿಸುವ ಕಾಲಚಕ್ರ, ಕೀರ್ತಿ, ಇಂದ್ರಿಯನಿಗ್ರಹ, ಬುದ್ಧಿಯುಳ್ಳ ಸ್ಥಿತಿ, ಶುಭಾಶುಭಗಳು, ಸಪ್ತರ್ಷಿಗಳು,
ಅಗ್ರ್ಯಾ ಬುದ್ಧಿರ್ಮನಸಾ ದರ್ಶನೇ ಚ
ಸ್ಪರ್ಶೇ ಸಿದ್ಧಿಃ ಕರ್ಮಣಾಂ ಯಾ ಚ ಸಿದ್ಧಿಃ |
ಗಣಾ ದೇವಾನಾಮೂಷ್ಮಪಾಃ ಸೋಮಪಾಶ್ಚ
ಲೇಖಾಃ ಸುಯಾಮಾಸ್ತುಷಿತಾ ಬ್ರಹ್ಮಕಾಯಾಃ ॥68॥
ಮನಸ್ಸಿನಿಂದಲೂ ಮತ್ತು ನೋಡುವುದರಿಂದಲೂ ಶ್ರೇಷ್ಠವಾದ ಬುದ್ಧಿ, ಸ್ಪರ್ಶದಿಂದ ಉಂಟಾಗುವ ಸಿದ್ಧಿ, ಕರ್ಮಗಳ ಸಿದ್ಧಿ, ದೇವತಾ ಗಣಗಳು, ಊಷ್ಮಪ ಋಷಿಗಳು, ಸೋಮಪಾನ ಮಾಡುವ ಋಷಿಗಳು, ದೇವತೆಗಳು, ಕಾಲನಿಯಾಮಕ ದೇವತೆಗಳು, ತುಷಿತ ನಾಮಕ ದೇವತೆಗಳು, ಬ್ರಾಹ್ಮಣ ಶರೀರಗಳು;
ಆಭಾಸುರಾ ಗಂಧಪಾ ದೃಷ್ಟಿಪಾಶ್ಚ
ವಾಚಾ ವಿರುದ್ಧಾಶ್ಚ ಮನೋವಿರುದ್ಧಾಃ |
ಶುದ್ಧಾಶ್ಚ ನಿರ್ವಾಣರತಾಶ್ಚ ದೇವಾಃ
ಸ್ಪರ್ಶಾಶನಾ ದರ್ಶಪಾ ಆಜ್ಯಪಾಶ್ಚ ॥69॥
ಶ್ರೇಷ್ಠವಾದ ಕಾಂತಿಯುಳ್ಳ ದೇವತೆಗಳು, ಗಂಧವನ್ನು ಪಾನ ಮಾಡುವವನು, ದೃಷ್ಟಿಯಿಂದಲೇ ಪಾನ ಮಾಡುವವನು, ವಾಕ್ ಮತ್ತು ಮನಸ್ಸುಗಳಿಗೆ ವಿರುದ್ಧವಾದ ಭಾವಗಳು, ಶುದ್ಧರಾದ, ಮೋಕ್ಷರತರಾದ ದೇವತೆಗಳು, ಸ್ಪರ್ಶದಿಂದಲೇ ಭೋಜನ ಮಾಡುವವರು, ದರ್ಶನದಿಂದ ಪಾನ ಮಾಡುವವರು, ಆಜ್ಯಪಾನ ಮಾಡುವವರು;
ಚಿಂತಾಗತಾ ಯೇ ಚ ದೇವೇಷು ಮುಖ್ಯಾ
ಯೇ ಚಾಪ್ಯನ್ಯೇ ದೇವತಾಶ್ಚಾಜಮೀಢ |
ಸುಪರ್ಣಗಂಧರ್ವಪಿಶಾಚದಾನವಾ
ಯಕ್ಷಾಸ್ತಥಾ ಪನ್ನಗಾಶ್ಚಾರಣಾಶ್ಚ ॥70॥
ಎಲೈ ಆಜಮೀಢನೇ, ಚಿಂತಾಗತರಾದ ದೇವತೆಗಳಲ್ಲಿ ಮುಖ್ಯರಾದವರು, ಉಳಿದ ದೇವತೆಗಳು, ಸುಪರ್ಣಗಂಧರ್ವಪಿಶಾಚ-ದಾನವರು, ಯಕ್ಷರು, ಪನ್ನಗ-ಚಾರಣರು;
ಸೂಕ್ಷ್ಮಂ ಸ್ಥೂಲಂ ಮೃದು ಯಚ್ಚಾಪ್ಯಸೂಕ್ಷ್ಮಂ
ಸುಖಂ ದುಃಖಂ ಸುಖದುಃಖಾಂತರಂ ಚ |
ಸಾಂಖ್ಯಂ ಯೋಗಂ ತತ್ಪರಾಣಾಂ ಪರಂ ಚ
ಶರ್ವಾಜ್ಜಾತಂ ವಿದ್ಧಿ ಯತ್ಕೀರ್ತಿತಂ ಮೇ ॥71॥
ಸೂಕ್ಷ್ಮ, ಸ್ಥೂಲ, ಮೃದು, ಕಠಿಣವಾದ ವಸ್ತುಗಳು, ಸುಖ-ದುಃಖ, ಸುಖ ದುಃಖದ ಮಧ್ಯದಲ್ಲಿರುವ ವಸ್ತುಗಳು, ಸಾಂಖ್ಯ ಯೋಗಪರರಾದವರಿಗೆ ಪರವಾದುದು ನಾನು ಹೇಳಿದ ಈ ಎಲ್ಲವೂ ಈಶ್ವರನಿಂದಲೇ ಜನಿಸಿವೆ ಎಂದು ತಿಳಿ.
ತತ್ಸಂಭೂತಾ ಭೂತಕೃತೋ ವರೇಣ್ಯಾಃ
ಸರ್ವೇ ದೇವಾ ಭುವನಸ್ಯಾಸ್ಯ ಗೋಪಾಃ |
ಆವಿಶ್ಯೇಮಾಂ ಧರಣೀಂ ಯೇಽಭ್ಯರಕ್ಷನ್
ಪುರಾತನೀಂ ತಸ್ಯ ದೇವಸ್ಯ ಸೃಷ್ಟಿಮ್ ॥72॥
ಭೂತ ನಿರ್ಮಾಪಕರಾದ, ಭಜನೀಯರಾದ ದೇವತೆಗಳೆಲ್ಲರೂ ಅವನಿಂದಲೇ ಜನಿಸಿದವರು. ಈ ಭೂಮಿಯನ್ನು ಪ್ರವೇಶಿಸಿ ಪುರಾತನವಾದ ಈ ಭೂಮಿಯನ್ನು ಯಾವ ದೇವತೆಗಳು ರಕ್ಷಿಸುತ್ತಾರೆಯೋ ಅಂತಹ ಭೂಮಿಯ ರಕ್ಷಕರಾದ ಎಲ್ಲ ದೇವತೆಗಳೂ ಅವನಿಂದಲೇ ಜನಿಸಿದವರು.
ವಿಚಿನ್ವಂತಂ ತಪಸಾ ತೋಷ್ಟುವೀಮಿ
ಕಿಂಚಿತ್ತತ್ತ್ವಂ ಪ್ರಾಣಹೇತೋರ್ನತೋಽಸ್ಮಿ |
ದದಾತು ದೇವಃ ಸ ವರಾನಿಹೇಷ್ಟಾನ್
ಅಭಿಷ್ಟುತೋ ನಃ ಪ್ರಭುರವ್ಯಯಃ ಸದಾ ॥73॥
ಋಷಿಗಳು ಯಾವನನ್ನು ಅನ್ವೇಷಣೆ ಮಾಡುತ್ತಾರೆಯೋ ಅಂತಹ ಅವನನ್ನು ತಪಸ್ಸಿನಿಂದ ಸ್ತೋತ್ರ ಮಾಡುತ್ತೇನೆ. ನನ್ನ ಪ್ರಾಣಗಳ ಸಲುವಾಗಿ ಜಗದ್ವಿಲಕ್ಷಣನಾದ ಆ ತತ್ತ್ವವನ್ನು ನಮಸ್ಕರಿಸುತ್ತೇನೆ. ಹೀಗೆ ಸ್ತೋತ್ರ ಮಾಡಲ್ಪಟ್ಟ ಅವ್ಯಯನಾದ ಪ್ರಭುವಾದ ಆ ದೇವನು ನಮಗೆ ಇಷ್ಟವಾದ ವರಗಳನ್ನು ಕೊಡಲಿ.
ಇಮಂ ಸ್ತವಂ ಸನ್ನಿಯಮ್ಯೇಂದ್ರಿಯಾಣಿ
ಶುಚಿರ್ಭೂತ್ವಾ ಯಃ ಪುರುಷಃ ಪಠೇತ |
ಅಭಗ್ನಯೋಗೋ ನಿಯತೋಽಬ್ದಮೇಕಂ
ಸ ಪ್ರಾಪ್ನುಯಾದಶ್ವಮೇಧೇ ಫಲಂ ಯತ್ ॥74॥

ಯಾವ ಪುರುಷನು ಶುಚಿಯಾಗಿ, ಇಂದ್ರಿಯನಿಯಮದಿಂದ ಕೂಡಿ, ನಿಯಮವನ್ನು ಭಗ್ನಗೊಳಿಸದೆ ಒಂದು ವರ್ಷದ ಕಾಲ ಈ ಸ್ತೋತ್ರವನ್ನು ಪಠನ ಮಾಡುತ್ತಾನೆಯೋ ಅವನು ಅಶ್ವಮೇಧ ಫಲವನ್ನು ಪಡೆಯುವನು.
ವೇದಾನ್ ಕೃತ್ಸ್ನಾನ್ ಬ್ರಾಹ್ಮಣಃ ಪ್ರಾಪ್ನುಯಾಚ್ಚ
ಜಯೇದ್ ರಾಜಾ ಪೃಥಿವೀಂ ಚಾಪಿ ಕೃತ್ಸ್ನಾಮ್ |
ವೈಶ್ಯೋ ಲಾಭಂ ಪ್ರಾಪ್ನುಯಾನ್ನೈಪುಣಂ ಚ
ಶೂದ್ರೋ ಗತಿಂ ಪ್ರೇತ್ಯ ತಥಾ ಸುಖಂ ಚ ॥75॥
ಬ್ರಾಹ್ಮಣನು ಸಮಸ್ತ ವೇದಗಳನ್ನು ಹೊಂದುವನು. ರಾಜನು ಸಮಗ್ರವಾದ ಭೂಮಿಯನ್ನು ಜಯಿಸುವನು. ವೈಶ್ಯನು ಲಾಭವನ್ನು ಮತ್ತು ಕೌಶಲವನ್ನು ಪಡೆಯುವನು. ಶೂದ್ರನು ಒಳ್ಳೆಯ ಸುಖವನ್ನು ಮತ್ತು ಮರಣ ಹೊಂದಿದ ಮೇಲೆ ಸದ್ಗತಿಯನ್ನು ಪಡೆಯುವನು.
ಸ್ತವರಾಜಮಿಮಂ ಕೃತ್ವಾ ರುದ್ರಾಯ ದಧಿರೇ ಮನಃ |
ಸರ್ವದೋಷಾಪಹಂ ಪುಣ್ಯಂ ಪವಿತ್ರಂ ಚ ಯಶಸ್ವಿನಃ ॥76॥
ಯಾವಂತ್ಯಸ್ಯ ಶರೀರೇಷು ರೋಮಕೂಪಾಣಿ ಭಾರತ |
ತಾವದ್ವರ್ಷಸಹಸ್ರಾಣಿ ಸ್ವರ್ಗೇ ವಸತಿ ಮಾನವಃ ॥77॥
ಯಶಸ್ವಿಗಳಾದ ಋಷಿಗಳು ಶ್ರೇಷ್ಠವಾದ, ಸರ್ವದೋಷ ಪರಿಹಾರಕವಾದ, ಪುಣ್ಯದಾಯಕವಾದ, ಪವಿತ್ರೀಕರಿಸುವ ಈ ಸ್ತೋತ್ರವನ್ನು ಮಾಡಿ ರುದ್ರನನ್ನು ಧ್ಯಾನಿಸಿದರು. ಎಲೈ ಭಾರತನೇ, ಯಾರು ಈ ರೀತಿಯಲ್ಲಿ ಧ್ಯಾನಿಸುತ್ತಾರೆಯೋ ಅಂತಹ ಮನುಷ್ಯನು ತನ್ನ ಶರೀರದಲ್ಲಿರುವ ರೋಮಕೂಪಗಳಿಗೆ ಸಮವಾದ ಸಹಸ್ರ ವರ್ಷಗಳವರೆಗೆ ಸ್ವರ್ಗದಲ್ಲಿ ವಾಸಿಸುತ್ತಾನೆ.
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ಚಾನುಕೀರ್ತನಾತ್ |
ವಿಪುಳಾಂ ಶ್ರಿಯಮಾಪ್ನೋತಿ ಪೂಜಯಾ ಚ ನ ಸಂಶಯಃ ॥78॥
ಈ ಸ್ತೋತ್ರವನ್ನು ಪಠನ ಮಾಡುವುದರಿಂದ ಬ್ರಹ್ಮಹತ್ಯಾದಿ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ. ಈಶ್ವರನನ್ನು ಪೂಜಿಸುವುದರಿಂದ ವಿಪುಲವಾದ ಸಂಪತ್ತನ್ನು ಹೊಂದುತ್ತಾನೆ, ಇದರಲ್ಲಿ ಸಂಶಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಯುಧಿಷ್ಠಿರಂ ಪ್ರತಿ ಕೃಷ್ಣೇನ ಶಿವಸಹಸ್ರನಾಮಾನುವರ್ಣನಂ ನಾಮ ಸಪ್ತತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೆಂಟನೆಯ ಅಧ್ಯಾಯ
ಗರುಡ-ನಾರಾಯಣರ ಸಂವಾದದ ವಿಷಯದಲ್ಲಿ ಯುಧಿಷ್ಠಿರನ ಪ್ರಶ್ನೆ.
ವೈಶಂಪಾಯನಃ
ಏವಂ ಭಗವತಃ ಕೃಷ್ಣಾತ್ ಶ್ರುತ್ವಾ ಸರ್ವಂ ಯುಧಿಷ್ಠಿರಃ |
ಶರತಲ್ಪಗತಂ ಭೀಷ್ಮಂ ಭೂಯಃ ಪಪ್ರಚ್ಛ ಭೂಪತೇ ॥1॥
ವೈಶಂಪಾಯನ ಎಲೈ ರಾಜನೇ, ಯುಧಿಷ್ಠಿರನು ಈ ರೀತಿಯಲ್ಲಿ ಭಗವಂತನಾದ ಕೃಷ್ಣನಿಂದ ಎಲ್ಲವನ್ನೂ ಕೇಳಿ ಶರತಲ್ಪದಲ್ಲಿ ಮಲಗಿದ ಭೀಷ್ಮರನ್ನು ಕುರಿತು ಪುನಃ ಪ್ರಶ್ನೆ ಮಾಡಿದನು.
ಆತ್ಮನ್ಯಗ್ನೀನ್ ಸಮಾಧಾಯ ಯ ಏತೇ ಕುರುನಂದನ |
ದ್ವಿಜಾತಯೋ ವ್ರತೋಪೇತಾ ಜಪಯಜ್ಞಪರಾಯಣಾಃ ॥2॥
ಯಜಂತ್ಯಾರಂಭಯಜ್ಞೈಶ್ಚ ಮಾನಸಂ ಯಜ್ಞಮಾಸ್ಥಿತಾ |
ಅಗ್ನಿಭ್ಯಶ್ಚ ಪರಂ ನಾಸ್ತಿ ಯೇಷಾಮೇಷಾ ವ್ಯವಸ್ಥಿತಿಃ ॥3॥
ತೇಷಾಂ ಗತಿರ್ಮಹಾಪ್ರಾಜ್ಞ ಕೀದೃಶೀ ಕಿಂಪರಾಶ್ಚ ತೇ |
ಏತದಿಚ್ಛಾಮಿ ತತ್ತ್ವೇನ ತ್ವತ್ತಃ ಶ್ರೋತುಂ ಪಿತಾಮಹ ॥4॥
ಎಲೈ ಕುರುನಂದನನೇ, ಜಪ-ಯಜ್ಞದಲ್ಲಿ ನಿರತರಾದ, ವ್ರತನಿಷ್ಠರಾದ ದ್ವಿಜರು ಅಗ್ನಿಯನ್ನು ತಮ್ಮಲ್ಲಿಯೇ ಆರೋಪ ಮಾಡಿಕೊಂಡು, ಮಾನಸ ಯಜ್ಞವನ್ನು ಮಾಡುತ್ತಾ ಯಜ್ಞಗಳನ್ನು ಉಪಕ್ರಮಿಸಿ ಆರಾಧಿಸುತ್ತಾರೆಯೋ, ಯಾರಿಗೆ ಅಗ್ನಿಗಿಂತಲೂ ಉತ್ತಮವಾದ ಉಪಾಸನಾಧಿಷ್ಠಾನವಿಲ್ಲವೋ, ಎಲೈ ಮಹಾಪ್ರಾಜ್ಞನೇ, ಪಿತಾಮಹನೇ, ಅವರಿಗೆ ಎಂತಹ ಗತಿಯಾಗುತ್ತದೆ? ಅವರು ಏನನ್ನು ಚಿಂತಿಸುತ್ತಾರೆ? ಇದನ್ನು ನಿನ್ನಿಂದ ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಇತಿಹಾಸಂ ಪುರಾತನಮ್ |
ವೈಕುಂಠಸ್ಯ ಚ ಸಂವಾದಂ ಸುಪರ್ಣಸ್ಯ ಚ ಭಾರತ ॥5॥
ಭೀಷ್ಮ ಎಲೈ ಭಾರತನೇ, ಈ ವಿಷಯದಲ್ಲಿ ನಾನು ನಾರಾಯಣನಿಗೂ ಮತ್ತು ಗರುಡನಿಗೂ ನಡೆದ ಪುರಾತನ ಸಂವಾದರೂಪವಾದ ಇತಿಹಾಸವನ್ನು ಹೇಳುವೆನು.
ಅಮೃತಸ್ಯ ಸಮುತ್ಪತ್ತೌ ದೇವಾನಾಮಸುರೈಃ ಸಹ |
ಷಷ್ಟಿಂ ವರ್ಷಸಹಸ್ರಾಣಿ ದೇವಾಸುರಮವರ್ತತ ॥6॥
ಅಮೃತವು ಉತ್ಪತ್ತಿಯಾದ ಮೇಲೆ ದೇವಾಸುರರಿಗೆ ಅರವತ್ತು ಸಹಸ್ರ ವರ್ಷಗಳ ಕಾಲ ಯುದ್ಧವು ನಡೆಯಿತು.

ತತ್ರ ದೇವಾಸ್ತು ದೈತೇಯೈರ್ವಧ್ಯಂತೇ ಭೃಶದಾರುಣೈಃ |
ತ್ರಾತಾರಂ ನಾಧಿಗಚ್ಛಂತಿ ವಧ್ಯಮಾನಾ ಮಹಾಸುರೈಃ ॥7॥
ಆಗ ಬಹಳ ಕ್ರೂರಿಗಳಾದ, ದಿತಿಪುತ್ರರಾದ ಮಹಾ ಅಸುರರಿಂದ ಪ್ರಹಾರಕ್ಕೆ ಒಳಗಾದ ದೇವತೆಗಳಿಗೆ ಯಾವ ರಕ್ಷಕನೂ ಕಾಣಲಿಲ್ಲ.
ಆರ್ತಾಸ್ತೇ ದೇವದೇವೇಶಂ ಪ್ರಪನ್ನಾಃ ಶರಣೈಷಿಣಃ |
ಪಿತಾಮಹಂ ಮಹಾಪ್ರಾಜ್ಞ ವಧ್ಯಮಾನಾ ಸುರೇತರೈಃ ॥8॥
ಎಲೈ ಮಹಾಪ್ರಾಜ್ಞನೇ, ಅಸುರರಿಂದ ಪೀಡಿತರಾಗಿ ಆರ್ತರಾದ ಅವರು ಒಬ್ಬ ರಕ್ಷಕನನ್ನು ಬಯಸಿ, ದೇವದೇವೇಶನಾದ ಬ್ರಹ್ಮದೇವನ ಬಳಿಗೆ ಹೋದರು.
ತಾ ದೃಷ್ಟ್ವಾ ದೇವತಾ ಬ್ರಹ್ಮಾ ಸಂತ್ರಸ್ತೇಂದ್ರಿಯಮಾನಸಾಃ |
ವೈಕುಂಠಂ ಶರಣಂ ದೇವಂ ಪ್ರತಿಪೇದೇ ಚ ತೈಃ ಸಹ॥9॥
ಬ್ರಹ್ಮನು ಬಳಲಿದ ಇಂದ್ರಿಯ-ಮನಸ್ಸುಗಳುಳ್ಳ ಆ ದೇವತೆಗಳನ್ನು ನೋಡಿ, ಅವರ ಜೊತೆಯಲ್ಲಿ ದೇವನಾದ ನಾರಾಯಣನನ್ನು ಶರಣು ಹೊಂದಿದನು.
ತತಃ ಸ ದೇವೈಃ ಸಹಿತಃ ಪದ್ಮಯೋನಿರ್ನರೇಶ್ವರ |
ತುಷ್ಟಾವ ಪ್ರಾಂಜಲಿಭೂತ್ವಾ ನಾರಾಯಣಮನಾಮಯಮ್ ॥10॥
ಎಲೈ ನರೇಶ್ವರನೇ, ಅನಂತರ ಅವನು ದೇವತೆಗಳಿಂದ ಸಹಿತನಾಗಿ ಕೈಗಳನ್ನು ಮುಗಿದು ನಿರ್ದುಷ್ಟನಾದ ನಾರಾಯಣನನ್ನು ಸ್ತೋತ್ರ ಮಾಡಿದನು.
ಬ್ರಹ್ಮಾಃ
ತ್ವದ್ರೂಪಚಿಂತನಾನ್ನಾಮ್ನಾಂ ಸ್ಮರಣಾದರ್ಚನಾದಪಿ |
ತಪೋಯೋಗಾದಿಭಿಶ್ಚೈವ ಶ್ರೇಯೋ ಯಾಂತಿ ಮನೀಷಿಣಃ ॥11॥
ವಿವೇಕಿಗಳಾದವರು ನಿನ್ನ ರೂಪದ ಚಿಂತನೆಯಿಂದ, ನಿನ್ನ ನಾಮದ ಕೀರ್ತನೆಯಿಂದ, ನಿನ್ನ ಸ್ಮರಣೆಯಿಂದ, ಅರ್ಚನೆಯಿಂದ ಮತ್ತು ತಪೋಯೋಗದಿಂದ ಶ್ರೇಯಸ್ಸನ್ನು ಹೊಂದುತ್ತಾರೆ.
ಭಕ್ತವತ್ಸಲ ಪದ್ಮಾಕ್ಷ ಪರಮೇಶ್ವರ ಪಾಪಹನ್ |
ಪರಮಾತ್ಮಾವಿಕಾರಾದ್ಯ ನಾರಾಯಣ ನಮೋಸ್ತು ತೇ ॥12॥
ಭಕ್ತವತ್ಸಲನೇ, ಪದ್ಮಾಕ್ಷನೇ, ಪರಮೇಶ್ವರನೇ, ಪಾಪನಾಶಕನೇ, ಪರಮಾತ್ಮನೇ, ವಿಕಾರರಹಿತನೇ, ಅನಾದಿಯಾದವನೇ, ನಾರಾಯಣನೇ ನಿನಗೆ ನಮಸ್ಕಾರ.
ನಮಸ್ತೇ ಸರ್ವಲೋಕಾದೇ ಸರ್ವಾತ್ಮಾऽಮಿತವಿಕ್ರಮ |
ಸರ್ವಭೂತಭವಿಷ್ಯೇಶ ಸರ್ವಭೂತಮಹೇಶ್ವರ ॥13॥
ಎಲ್ಲ ಲೋಕಗಳಿಗೂ ಕಾರಣನಾದವನೇ, ಸರ್ವವ್ಯಾಪ್ತನೇ, ಅಮಿತವಿಕ್ರಮನೇ, ಸರ್ವಭೂತಭವಿಷ್ಯತ್‌ಗಳಿಗೆ ಒಡೆಯನೇ, ಸರ್ವಭೂತಗಳಿಗೆ ಮಹೇಶ್ವರನಾದವನೇ ನಿನಗೆ ನಮಸ್ಕಾರ.
ದೇವಾನಾಮಪಿ ದೇವಸ್ತ್ವಂ ಸರ್ವವಿದ್ಯಾಪರಾಯಣಃ |
ಜಗದ್ಬೀಜಸಮಾಹಾರೋ ಜಗತಃ ಪರಮೋ ಹ್ಯಸಿ ॥14॥
ನೀನು ದೇವತೆಗಳಿಗೂ ದೇವನಾದವನು, ಎಲ್ಲ ವಿದ್ಯೆಗಳಿಗೆ ಆಶ್ರಯನಾದವನು, ಜಗತ್ತಿಗೆ ಬೀಜರೂಪನಾದವನು, ಜಗತ್ತಿಗೆ ಸರ್ವಶ್ರೇಷ್ಠನಾದವನು.
ತ್ರಾಯಸ್ವ ದೇವತಾ ವೀರ ದಾನವಾದ್ಯೈಃ ಸುಪೀಡಿತಾನ್ |
ಲೋಕಾಂಶ್ಚ ಲೋಕಪಾಲಾಂಶ್ಚ ಋಷೀಂಶ್ಚ ಜಯತಾಂವರ ॥15॥
ಎಲೈ ವೀರನೇ, ಜಯಶಾಲಿಗಳಲ್ಲಿ ಶ್ರೇಷ್ಠನೇ, ದಾನವಾದಿಗಳಿಂದ ಬಹಳವಾಗಿ ಪೀಡಿತರಾದ ದೇವತೆಗಳನ್ನೂ, ಲೋಕಗಳನ್ನೂ, ಲೋಕಪಾಲಕರನ್ನೂ, ಋಷಿಗಳನ್ನೂ ರಕ್ಷಿಸು.
ವೇದಾಃ ಸಾಂಗೋಪನಿಷದಃ ಸರಹಸ್ಯಾಃ ಸಸಂಗ್ರಹಾಃ |
ಸೋಂಕಾರಾಃ ಸವಷಟ್ಕಾರಾಃ ಪ್ರಾಹುಸತ್ತ್ವಂ ಯಜ್ಞಮುತ್ತಮಮ್ ॥
ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಮ್ |
ತಪಸ್ವಿನಾಂ ತಪಶ್ಚೈವ ದೈವತಂ ದೇವತಾಸ್ವಪಿ ॥17॥
ಅಂಗಗಳಿಂದ ಮತ್ತು ಉಪನಿಷತ್ತುಗಳಿಂದ ಸಹಿತವಾದ, ರಹಸ್ಯಪೂರ್ಣವಾದ, ಸಂಕ್ಷೇಪ ಗ್ರಂಥಗಳಿಂದ ಸಹಿತವಾದ, ಓಂಕಾರದಿಂದ ಸಹಿತವಾದ, ವಷಟ್ಕಾರದಿಂದ ಸಹಿತವಾದ ವೇದಗಳು ನಿನ್ನನ್ನು ಶ್ರೇಷ್ಠನಾದ ಭಜನೀಯನೆಂದೂ, ಪವಿತ್ರವಾದ ವಸ್ತುಗಳಿಗಿಂತಲೂ ಪವಿತ್ರನೆಂದೂ, ಮಂಗಳಗಳಿಗೂ ಮಂಗಳನೆಂದೂ, ತಪಸ್ವಿಗಳ ತಪಸ್ಸಿಗೆ ವಿಷಯನೆಂದೂ, ದೇವತೆಗಳಿಗೂ ದೇವತೆ ಎಂದೂ ಹೇಳುತ್ತವೆ.
ಏವಮಾದಿಪುರಸ್ಕಾರೈರ್ಋಕ್ಸಾಸಮಯಜುಷಾಂ ಗಣೈಃ |
ವೈಕುಂಠಂ ತುಷ್ಟುವುರ್ದೇವಾಃ ಸರ್ವೇ ಬ್ರಹ್ಮರ್ಷಿಭಿಃ ಸಹ ॥18॥
ದೇವತೆಗಳು ಈ ರೀತಿಯಾದ ಸ್ತೋತ್ರಗಳಿಂದ ಋಕ್ಸಾಮಯಜುರ್ವೇದ ಸಮೂಹಗಳಿಂದ ಬ್ರಹ್ಮರ್ಷಿಗಳೊಂದಿಗೆ ವೈಕುಂಠನನ್ನು ಸ್ತೋತ್ರ ಮಾಡಿದರು.
ತತೋऽಂತರಿಕ್ಷೇ ವಾಗಾಸೀನ್ಮೇಘಗಂಭೀರನಿಸ್ವನಾ |
ಜೇಷ್ಯಧ್ವಂ ದಾನವಾನ್ ಯೂಯಂ ಮಯ್ಯೈವ ಸಹ ಸಂಗರೇ ॥19॥

ಆಗ ಅಂತರಿಕ್ಷದಲ್ಲಿ ``ನೀವು ನನ್ನಿಂದಲೇ ಯುದ್ಧದಲ್ಲಿ ದಾನವರನ್ನು ಗೆಲ್ಲುವಿರಿ'' ಎಂಬ ಮೇಘಗಂಭೀರವಾದ ವಾಣಿಯು ಕೇಳಿ ಬಂದಿತು.
ತತೋ ದೇವಗಣಾನಾಂ ಚ ದಾನವಾನಾಂ ಚ ಯುದ್ಧ್ಯತಾಮ್ |
ಪ್ರಾದುರಾಸೀನ್ಮಹಾತೇಜಾ ಶಾರ್ಙ್ಗಚಕ್ರಗದಾಧರಃ ॥20॥
ಆಗ ದೇವತೆಗಳ ಸಮೂಹವು ಮತ್ತು ದಾನವರು ಯುದ್ಧವನ್ನು ಮಾಡುತ್ತಿರಲು ಮಹಾತೇಜಸ್ವಿಯಾದ ಶಾರ್ಙ್ಗಚಕ್ರಗದಾಧರನು ಪ್ರತ್ಯಕ್ಷನಾದನು.
ಸುಪರ್ಣಪೃಷ್ಠಮಾಸ್ಥಾಯ ತೇಜಸಾ ಪ್ರದಹನ್ನಿವ |
ವ್ಯಧಮದ್ ದಾನವಾನ್ ಸರ್ವಾನ್ ಬಾಹುದ್ರವಿಣತೇಜಸಾ ॥21॥
ಗರುಡನ ಬೆನ್ನಿನ ಮೇಲೆ ಕುಳಿತು ತನ್ನ ತೇಜಸ್ಸಿನಿಂದ ಎಲ್ಲರನ್ನೂ ಸುಡುವವನಂತೆ ತನ್ನ ಬಾಹುಬಲದಿಂದ ಎಲ್ಲ ದಾನವರನ್ನೂ ನಾಶಗೊಳಿಸಿದನು.
ತಂ ಸಮಾಸಾದ್ಯ ಸಮರೇ ದೈತ್ಯದಾನವಪುಂಗವಾಃ |
ವ್ಯನಶ್ಯಂತ ಮಹಾರಾಜ ಪತಂಗಾ ಇವ ಪಾವಕಮ್॥22॥
ಎಲೈ ಮಹಾರಾಜನೇ, ದೈತ್ಯದಾನವಶ್ರೇಷ್ಠರು ಯುದ್ಧದಲ್ಲಿ ಅವನನ್ನು ಸಮೀಪಿಸಿ ಅಗ್ನಿಯನ್ನು ಸಮೀಪಿಸಿದ ಪತಂಗಗಳಂತೆ ನಾಶ ಹೊಂದಿದರು.
ಸ ವಿಜಿತ್ಯಾಸುರಾನ್ ಸರ್ವಾನ್ ದಾನವಾಂಶ್ಚ ಮಹಾಮತಿಃ |
ಪಶ್ಯತಾಮೇವ ದೇವಾನಾಂ ತತ್ರೈವಾಂತರಧೀಯತ ॥23॥
ಮಹಾಬುದ್ಧಿಯುಳ್ಳ ಅವನು ಎಲ್ಲ ಅಸುರರನ್ನೂ ಮತ್ತು ದಾನವರನ್ನೂ ಜಯಿಸಿ ದೇವತೆಗಳು ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ತಂ ದೃಷ್ಟ್ವಾಽಂತರ್ಹಿತಂ ದೇವಂ ವಿಷ್ಣುಂ ದೇವಾಮಿತದ್ಯುತಿಮ್ |
ವಿಸ್ಮಯೋತ್ಫುಲ್ಲನಯನಾ ಬ್ರಹ್ಮಾಣಮಿದಮಬ್ರುವನ್ ॥24॥
ಅಮಿತ ದ್ಯುತಿಯಾದ ದೇವನಾದ ವಿಷ್ಣುವು ಅಂತರ್ಧಾನವನ್ನು ಹೊಂದಿದುದನ್ನು ನೋಡಿ ದೇವತೆಗಳು ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ಬ್ರಹ್ಮದೇವರನ್ನು ಕುರಿತು ಹೀಗೆ ಹೇಳಿದರು.
ಭಗವನ್ ಸರ್ವಲೋಕೇಶ ಸರ್ವಲೋಕಪಿತಾಮಹ |
ಇದಮತ್ಯದ್ಭುತಂ ವೃತ್ತಂ ತನ್ನಃ ಶಂಸಿತುಮರ್ಹಸಿ ॥25॥
ಭಗವಂತನೇ, ಸರ್ವಲೋಕೇಶನೇ, ಸರ್ವಲೋಕಪಿತಾಮಹನೇ, ನಡೆದ ಈ ಘಟನೆಯು ಅದ್ಭುತವಾದುದು. ಅದನ್ನು ನಮಗೆ ತಿಳಿಸಬೇಕು.
ದೇವಾಸುರೇಽಸ್ಮಿನ್ ಸಂಗ್ರಾಮೇ ತ್ರಾತಾ ಯೇನ ವಯಂ ವಿಭೋ |
ಏತದ್ ವಿಜ್ಞಾತುಮಿಚ್ಛಾಮಃ ಕುತೋಽಸೌ ಕಶ್ಚ ತತ್ತ್ವತಃ ॥26॥
ಈ ದೇವಾಸುರ ಸಂಗ್ರಾಮದಲ್ಲಿ ನಮ್ಮನ್ನು ರಕ್ಷಿಸಿದವನು ಯಾರು? ಎಲೈ ವಿಭುವೇ, ಅವನು ಎಲ್ಲಿಂದ ಬಂದನು ಮತ್ತು ಅವನ ಸ್ವರೂಪವೇನು ಎಂದು ತಿಳಿಯಲು ನಾವು ಇಚ್ಛಿಸುತ್ತೇವೆ.
ಕೋಽಯಮಸ್ಮಾನ್ ಪರಿತ್ರಾಯ ತೂಷ್ಣೀಮೇವ ಯಥಾಗತಮ್ |
ಪ್ರತಿಪ್ರಯಾತೋ ದಿವ್ಯಾತ್ಮಾ ತಂ ನಃ ಶಂಸಿತುಮರ್ಹಸಿ ॥27॥
ನಮ್ಮನ್ನು ರಕ್ಷಿಸಿ ಬಂದಂತೆಯೇ ಮಾತನಾಡದೆ ಹೊರಟು ಹೋದ ಆ ದಿವ್ಯಾತ್ಮನು ಯಾರು ಎಂದು ನಮಗೆ ಹೇಳಬೇಕು.
ಏವಮುಕ್ತಃ ಸುರೈಃ ಸರ್ವೈರ್ವಚನಂ ವಚನಾರ್ಥವಿತ್ |
ಉವಾಚ ಪದ್ಮನಾಭಸ್ಯ ಪೂರ್ವರೂಪಂ ಪ್ರತಿ ಪ್ರಭೋ ॥28॥
ಎಲೈ ಪ್ರಭುವೇ, ಎಲ್ಲ ದೇವತೆಗಳಿಂದ ಹೀಗೆ ಕೇಳಲ್ಪಟ್ಟ, ದೇವತೆಗಳ ವಚನಾರ್ಥಗಳನ್ನು ತಿಳಿದ ಬ್ರಹ್ಮನು ಪದ್ಮನಾಭನ ಪೂರ್ವರೂಪವಾದ ನಾರಾಯಣನ ರೂಪದ ವಿಷಯದಲ್ಲಿ ಮಾತನಾಡಿದನು.
ಬ್ರಹ್ಮಾ
ನ ಹ್ಯೇನಂ ವೇದ ತತ್ತ್ವೇನ ಭುವನಂ ಭುವನೇಶ್ವರಮ್ |
ಸಂಖ್ಯಾತುಂ ನೈವ ಚಾತ್ಮಾನಂ ನಿರ್ಗುಣಂ ಗುಣಿನಾಂ ವರಮ್ ॥29॥
ಬ್ರಹ್ಮಾ ಭುವನೇಶ್ವರನಾದ ಇವನನ್ನು ಸಮಸ್ತ ಲೋಕವು ಸರಿಯಾಗಿ ತಿಳಿದಿಲ್ಲ. ಪ್ರಾಕೃತ ಗುಣರಹಿತನೂ, ಅಪ್ರಾಕೃತ ಗುಣಗಳಿಂದ ಗುಣವಂತರಲ್ಲಿ ಶ್ರೇಷ್ಠನೂ ಆದ ಅವನ ಗುಣವನ್ನಾಗಲೀ ಲೋಕವು ತಿಳಿದಿಲ್ಲ.
ಅತ್ರ ವೋ ವರ್ತಯಿಷ್ಯಾಮಿ ಇತಿಹಾಸಂ ಪುರಾತನಮ್ |
ಸುಪರ್ಣಸ್ಯ ಚ ಸಂವಾದಮೃಷೀಣಾಂ ಚಾಪಿ ದೇವತಾಃ ॥30॥
ಎಲೈ ದೇವತೆಗಳೇ, ಈ ವಿಷಯದಲ್ಲಿ ಹಿಂದೆ ನಡೆದ ಗರುಡ ಮತ್ತು ಋಷಿಗಳ ಸಂವಾದ ರೂಪವಾದ ಇತಿಹಾಸವನ್ನು ಹೇಳುವೆನು.
ಪುರಾ ಬ್ರಹ್ಮರ್ಷಯಶ್ಚೈವ ಸಿದ್ಧಾಶ್ಚ ಭುವನೇಶ್ವರಮ್ |
ಆಶ್ರಿತ್ಯ ಹಿಮವತ್ಪೃಷ್ಠೇ ಚಕ್ರಿರೇ ವಿವಿಧಾಃ ಕಥಾಃ ॥31॥
ಹಿಂದೆ ಬ್ರಹ್ಮರ್ಷಿಗಳು ಮತ್ತು ಸಿದ್ಧರು ಹಿಮಾಲಯದ ತಪ್ಪಲಿನಲ್ಲಿ ಸೇರಿ ಭುವನೇಶ್ವರನಾದ ನಾರಾಯಣನ ವಿಷಯದಲ್ಲಿ ಅನೇಕ ಕಥೆಗಳನ್ನು ಮಾಡಿದರು.
ತೇಷಾಂ ಕಥಯತಾಂ ತತ್ರ ಕಥಾಂತೇ ಪತತಾಂ ವರಃ |

ಪ್ರಾದುರಾಸೀತ್ ಮಹಾತೇಜಾ ವಾಹಶ್ಚಕ್ರಗದಾಭೃತಃ ॥32॥
ಅವರು ಕಥೆಗಳನ್ನು ಹೇಳುತ್ತಿರುವಾಗ ಆ ಕಥೆಗಳು ಮುಗಿದ ಮೇಲೆ ಹಾರುವವರಲ್ಲಿ ಶ್ರೇಷ್ಠನಾದವನೂ, ಮಹಾತೇಜಸ್ವಿಯೂ, ಚಕ್ರಗಧಾಧಾರಿಯಾದ ನಾರಾಯಣನ ವಾಹನನೂ ಆದ ಗರುಡನು ಪ್ರತ್ಯಕ್ಷನಾದನು.
ಸ ತಾನ್ ಋಷೀನ್ ಸಮಾಸಾದ್ಯ ವಿನಯಾವನತಾನನಃ |
ಅವತೀರ್ಯ ಮಹಾವೀರ್ಯಸ್ತಾನೃಷೀನಭಿಜಗ್ಮಿವಾನ್ ॥33॥
ಮಹಾಪರಾಕ್ರಮಿಯಾದ ಅವನು ಅಂತರಿಕ್ಷದಿಂದ ಇಳಿದು, ಋಷಿಗಳನ್ನು ಸಮೀಪಿಸಿ, ವಿನಯದಿಂದ ಶಿರಸ್ಸನ್ನು ತಗ್ಗಿಸಿ, ಆ ಋಷಿಗಳ ಸಮೀಪಕ್ಕೆ ಹೋದನು.
ಅಭ್ಯರ್ಚಿತಃ ಸ ಋಷಿಭಿಃ ಸ್ವಾಗತೇನ ಮಹಾಬಲಃ |
ಉಪಾವಿಶತ ತೇಜಸ್ವೀ ಭೂಮೌ ವೇಗವತಾಂ ವರಃ ॥34॥
ಮಹಾಬಲನಾದ ವೇಗವಂತರಲ್ಲಿ ಶ್ರೇಷ್ಠನಾದ ತೇಜಸ್ವಿಯಾದ ಅವನು ಋಷಿಗಳಿಂದ ಸ್ವಾಗತವಚನಗಳಿಂದ ಪೂಜಿಸಲ್ಪಟ್ಟು ಭೂಮಿಯ ಮೇಲೆ ಕುಳಿತನು.
ತಮಾಸೀನಂ ಮಹಾತ್ಮಾನಂ ವೈನತೇಯಂ ಮಹಾದ್ಯುತಿಮ್ |
ಋಷಯಃ ಪರಿಪಪ್ರಚ್ಛುರ್ಮಹಾತ್ಮಾನಸ್ತಪಸ್ವಿನಃ ॥35॥
ಕೌತೂಹಲಂ ವೈನತೇಯ ಪರಂ ನೋ ಹೃದಿ ವರ್ತತೇ |
ತಸ್ಯ ನಾನ್ಯೋಽಸ್ತಿ ವಕ್ತೇಹ ತ್ವಾಮೃತೇ ಪನ್ನಗಾಶನ ॥36॥
ತದಾಖ್ಯಾತುಮಿಹೇಚ್ಛಾಮೋ ಭವತಾ ಪ್ರಶ್ನಮುತ್ತಮಮ್ |
ಏವಮುಕ್ತಃ ಪ್ರತ್ಯುವಾಚ ಪ್ರಾಂಜಲಿರ್ವಿನತಾಸುತಃ ॥37॥
ಭೂಮಿಯ ಮೇಲೆ ಕುಳಿತ ಮಹಾತ್ಮನೂ, ಮಹಾದ್ಯುತಿಯೂ ಆದ, ವಿನತಾ ಪುತ್ರನಾದ ಗರುಡನನ್ನು ಕುರಿತು ಮಹಾತ್ಮರೂ, ತಪಸ್ವಿಗಳೂ ಆದ ಋಷಿಗಳು ಎಲೈ ವೈನತೇಯನೇ, ನಮ್ಮ ಮನಸ್ಸಿನಲ್ಲಿ ದೊಡ್ಡ ಕುತೂಹಲವಿದೆ. ಎಲೈ ಪನ್ನಗಾಶನನೇ, ನಿನ್ನನ್ನು ಬಿಟ್ಟು ಅದಕ್ಕೆ ಉತ್ತರವನ್ನು ಕೊಡಲು ಯಾರೂ ಸಮರ್ಥರಲ್ಲ. ಆದ್ದರಿಂದ ಆ ಶ್ರೇಷ್ಠವಾದ ಪ್ರಶ್ನೆಗೆ ನೀನು ಉತ್ತರವನ್ನು ಹೇಳಬೇಕೆಂದು ಬಯಸುತ್ತೇವೆ ಎಂದು ಹೇಳಿದರು. ಹೀಗೆ ಹೇಳಲ್ಪಟ್ಟ ವಿನತಾಸುತನಾದ ಗರುಡನು ಕೈಗಳನ್ನು ಮುಗಿದು ಮಾತನಾಡಿದನು.
ಸುಪರ್ಣಃ
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮಾಂ ಬ್ರಹ್ಮರ್ಷಿಸತ್ತಮಾಃ |
ಪ್ರಷ್ಟವ್ಯಂ ಪ್ರಷ್ಟುಮಿಚ್ಛಂತಿ ಪ್ರೀತಿಮಂತೋಽನಸೂಯಕಾಃ ॥38॥
ಗರುಡ ಎಲೈ ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠರೇ, ನಾನು ಧನ್ಯನಾಗಿದ್ದೇನೆ. ನಿಮ್ಮಿಂದ ಅನುಗ್ರಹಿತನಾಗಿದ್ದೇನೆ. ಏಕೆಂದರೆ ನೀವು ಪ್ರೀತಿಯಿಂದ ಅಸೂಯಾರಹಿತರಾಗಿ ನನ್ನನ್ನು ಪ್ರಶ್ನೆ ಮಾಡುತ್ತಿದ್ದೀರಿ.
ಕಿಂ ಮಯಾ ಬ್ರೂತ ವಕ್ತವ್ಯಂ ಕಾರ್ಯಂ ಚ ವದತಾಂವರಾಃ |
ಯೂಯಂ ಹಿ ಮಾಂ ಯಥಾಯುಕ್ತಂ ಸರ್ವಂ ವೈ ಪ್ರಷ್ಟುಮರ್ಹಥ ॥
ಎಲೈ ಮಾತನಾಡುವವರಲ್ಲಿ ಶ್ರೇಷ್ಠರಾದವರೇ, ನಾನು ಏನು ಹೇಳಬೇಕು? ಅಥವಾ ಏನು ಮಾಡಬೇಕೆಂದು ಹೇಳಿ. ನೀವು ನನ್ನನ್ನು ಯಥೋಚಿತವಾಗಿ ಎಲ್ಲ ವಿಷಯದಲ್ಲಿಯೂ ಪ್ರಶ್ನೆಯನ್ನು ಮಾಡಬಹುದು (ಎಂದು ಹೇಳಿದನು).
ನಮಸ್ಕೃತ್ವಾ ಹ್ಯನಂತಾಯ ತತಸ್ತೇ ಋಷಿಸತ್ತಮಾಃ |
ಪ್ರಷ್ಟುಂ ಪ್ರಚಕ್ರಮುಸ್ತತ್ರ ವೈನತೇಯಂ ಮಹಾಬಲಮ್ ॥40॥
ಆಗ ಋಷಿಗಳು ಅನಂತನಾದ ನಾರಾಯಣನಿಗೆ ನಮಸ್ಕಾರ ಮಾಡಿ, ಮಹಾಬಲನಾದ ಗರುಡನನ್ನು ಕುರಿತು ಪ್ರಶ್ನೆಯನ್ನು ಮಾಡಲು ಪ್ರಾರಂಭಿಸಿದರು.
ದೇವದೇವಂ ಮಹಾತ್ಮಾನಂ ನಾರಾಯಣಮನಾಮಯಮ್ |
ಭವಾನುಪಾಸ್ತೇ ವರದಂ ಕುತೋಽಸೌ ಕಶ್ಚ ತತ್ತ್ವತಃ ॥41॥
ದೇವದೇವನೂ, ಮಹಾತ್ಮನೂ, ನಿರ್ದೋಷನೂ, ವರಪ್ರದನೂ ಆದ ನಾರಾಯಣನನ್ನು ನೀನು ಉಪಾಸನೆ ಮಾಡುತ್ತೀಯೆ. ಅವನು ಎಲ್ಲಿಂದ ಬಂದವನು? ಅವನ ಸ್ವರೂಪವೇನು?
ಪ್ರಕೃತಿರ್ವಿಕೃತಿರ್ವಾಽಸ್ಯ ಕೀದೃಶೀ ಕ್ವ ನು ಸಂಸ್ಥಿತಿಃ |
ಏತದ್ ಭವಂತಂ ಪೃಚ್ಛಾಮೋ ದೇವೋಽಯಂ ಕ್ವ ಕೃತಾಲಯಃ ॥42॥
ಅವನ ಸ್ವಭಾವವಾಗಲೀ ಅಥವಾ ವಿವಿಧ ಕಾರ್ಯಗಳಾಗಲೀ ಯಾವ ರೀತಿ ಇರುತ್ತವೆ? ಅವನ ನಿಜವಾದ ಸ್ಥಿತಿ ಏನು? ಆ ದೇವನು ಎಲ್ಲಿ ವಾಸ ಮಾಡುತ್ತಾನೆ? ಎಂದು ನಾವು ನಿನ್ನನ್ನು ಕೇಳುತ್ತಿದ್ದೇವೆ.
ಏಷ ಭಕ್ತಪ್ರಿಯೋ ದೇವಃ ಪ್ರಿಯಭಕ್ತಸ್ತಥೈವ ಚ |
ತ್ವಂ ಪ್ರಿಯಶ್ಚಾಸ್ಯ ಭಕ್ತಶ್ಚ ನಾನ್ಯಃ ಕಾಶ್ಯಪ ವಿದ್ಯತೇ ॥43॥
ಆ ದೇವನು ಭಕ್ತರಿಗೆ ಪ್ರಿಯನಾದವನು. ಹಾಗೆಯೇ ಭಕ್ತರೂ ಅವನಿಗೆ ಪ್ರಿಯರಾದವರು. ಎಲೈ ಕಾಶ್ಯಪಪುತ್ರನೇ, ನೀನು ಅವನಿಗೆ ಪ್ರಿಯನಾದವನು ಮತ್ತು ಭಕ್ತನಾದವನು. ನಿನ್ನಂತಹವನು ಇನ್ನೊಬ್ಬನಿಲ್ಲ.
ಮುಷ್ಣನ್ನಿವ ಮನಶ್ಚಕ್ಷೂಂಷ್ಯವಿಭಾವ್ಯತನುರ್ವಿಭುಃ |
ಅನಾದಿಮಧ್ಯನಿಧನೋ ನ ವಿದ್ಮೈನಂ ಕುತೋ ಹ್ಯಸೌ ॥44॥
ಆ ವಿಭುವು ತಿಳಿಯಲು ಅಸಾಧ್ಯವಾದ ಶರೀರವನ್ನು ಹೊಂದಿ, ನಮ್ಮ ಮನಸ್ಸನ್ನು ಮತ್ತು ಚಕ್ಷುಸ್ಸುಗಳನ್ನು ಅಪಹರಿಸುವವನಂತೆ

ಇದ್ದಾನೆ. ಆದಿ-ಮಧ್ಯಾಂತ ಶೂನ್ಯನಾದ ಅವನನ್ನು ನಾವು ತಿಳಿದಿಲ್ಲ.
ವೇದೇಷ್ವಪಿ ಚ ವಿಶ್ವಾತ್ಮಾ ಗೀಯತೇ ನ ಚ ವಿದ್ಮಹೇ |
ತತ್ತ್ವತಸ್ತತ್ತ್ವಭೂತಾತ್ಮಾ ವಿಭುರ್ನಿತ್ಯಃ ಸನಾತನಃ ॥45॥
ವೇದಗಳಲ್ಲಿಯೂ ಆ ವಿಶ್ವಾತ್ಮನು ಗಾನ ಮಾಡಲ್ಪಡುತ್ತಾನೆ. ಆದರೂ ನಾವು ಅವನನ್ನು ಸರಿಯಾಗಿ ತಿಳಿದಿಲ್ಲ. ಅವನು ಯಥಾರ್ಥವಾದ ಸ್ವರೂಪವುಳ್ಳವನು, ವ್ಯಾಪ್ತನಾದವನು, ನಿತ್ಯನಾದವನು, ಸನಾತನನಾದವನು.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಗುಣಾಶ್ಚೈಷಾಂ ಯಥಾಸಂಖ್ಯಂ ಭಾವಾಭಾವೌ ತಥೈವ ಚ ॥46॥
ತಮಃ ಸತ್ವಂ ರಜಶ್ಚೈವ ಭಾವಾಶ್ಚೈವ ತದಾತ್ಮಕಾಃ |
ಮನೋ ಬುದ್ಧಿಶ್ಚ ತೇಜಶ್ಚ ಬುದ್ಧಿಗಮ್ಯಾನಿ ತತ್ತ್ವತಃ ॥47॥
ಜಾಯಂತೇ ತಾತ ಕಸ್ಮಾದ್ಧಿ ತಿಷ್ಠತೇ ತೇಷ್ವಸೌ ವಿಭುಃ |
ಸಂಚಿತ್ಯ ಬಹುಧಾ ಬುದ್ಧ್ಯಾ ನಾಧ್ಯವಸ್ಯಾಮಹೇ ಪರಮ್ ॥48॥
ಪೃಥಿವೀ, ವಾಯು, ಆಕಾಶ, ಜಲ ಮತ್ತು ಅಗ್ನಿ ಅವುಗಳ ಕ್ರಮವಾದ ಗುಣಗಳು ಉತ್ಪತ್ತಿ-ನಾಶಗಳು, ಸತ್ವ-ರಜಸ್-ತಮೋಗುಣಗಳು, ಅಂತಹ ಗುಣಾತ್ಮಕವಾದ ವಸ್ತುಗಳು, ಮನಸ್ಸು, ಬುದ್ಧಿ, ತೇಜಸ್ಸು ಇವೆಲ್ಲವೂ ಬುದ್ಧಿಗೆ ವಿಷಯವಾಗುವಂತಹವುಗಳು. ಎಲೈ ಪ್ರೀತಿಪಾತ್ರನೇ, ಇವೆಲ್ಲವೂ ಯಾರಿಂದ ಉಂಟಾಗುತ್ತವೆ? ಅವುಗಳಲ್ಲಿ ವ್ಯಾಪ್ತನಾದ ಇವನು ಇರುತ್ತಾನೆ. ನಾವು ಬುದ್ಧಿಯಿಂದ, ಯುಕ್ತಿಯಿಂದ ಎಷ್ಟು ವಿಚಾರ ಮಾಡಿದರೂ ನಾವು ಆ ಸರ್ವೋತ್ತಮನಾದ ಇವನನ್ನು ಸರಿಯಾಗಿ ತಿಳಿಯಲಾರೆವು.
ತಸ್ಯ ದೇವಸ್ಯ ತತ್ತ್ವೇನ ತನ್ನಃ ಶಂಸ ಯಥಾತಥಮ್ |
ಏತಮೇವ ಪರಂ ಪ್ರಶ್ನಂ ಕೌತೂಹಲಸಮನ್ವಿತಾಃ |
ಏವಂ ಭವಂತಂ ಪೃಚ್ಛಾಮಸ್ತನ್ನಃ ಶಂಸಿತುಮರ್ಹಸಿ ॥49॥
ಆ ದೇವನ ಸರಿಯಾದ ತತ್ತ್ವವನ್ನು ನಮಗೆ ನೀನು ಹೇಳುವವನಾಗು. ಕುತೂಹಲದಿಂದ ಕೂಡಿದ ನಾವು ಇದೇ ಶ್ರೇಷ್ಠವಾದ ಪ್ರಶ್ನೆಯನ್ನು ನಿನಗೆ ಕೇಳುತ್ತಿದ್ದೇವೆ. ಈ ಪ್ರಶ್ನೆಗೆ ಉತ್ತರವನ್ನು ಹೇಳು.
ಸುಪರ್ಣಃ
ಸ್ಥೂಲತೋ ಯಸ್ತು ಭಗವಾಂಸ್ತೇನೈವ ಸ್ವೇನ ಹೇತುನಾ |
ತ್ರೈಲೋಕ್ಯಸ್ಯ ತು ರಕ್ಷಾರ್ಥಂ ದೃಶ್ಯತೇ ರೂಪಮಾಸ್ಥಿತಃ ॥50॥
ಗರುಡ ಭಗವಂತನು ತನ್ನ ಇಚ್ಛೆಯ ನಿಮಿತ್ತದಿಂದಲೇ ಮೂರು ಲೋಕಗಳ ರಕ್ಷಣೆಗೋಸ್ಕರ ಸ್ಥೂಲರೂಪವನ್ನು ತೆಗೆದುಕೊಂಡು ಕಾಣಿಸಿಕೊಳ್ಳುತ್ತಾನೆ.
ಮಯಾ ತು ಮಹದಾಶ್ಚರ್ಯಂ ಪುರಾ ದೃಷ್ಟಂ ಸನಾತನೇ |
ದೇವೇ ಶ್ರೀವೃಕ್ಷನಿಲಯೇ ತಚ್ಛೃಣುಧ್ವಮಶೇಷತಃ ॥51॥
ನಾನು ಸನಾತನನೂ, ಶ್ರೀವೃಕ್ಷವಾಸಿಯೂ ಆದ ದೇವನಲ್ಲಿ ಹಿಂದೆ ಒಂದು ದೊಡ್ಡ ಆಶ್ಚರ್ಯವನ್ನು ನೋಡಿದೆನು. ಅದನ್ನು ಪೂರ್ಣವಾಗಿ ಕೇಳಿ.
ನ ಸ್ಮ ಶಕ್ತೋ ಮಯಾ ವೇತ್ತುಂ ನ ಭವದ್ಭಿಃ ಕಥಂಚನ |
ಯಥಾ ಮಾಂ ಪ್ರಾಹ ಭಗವಾಂಸ್ತಥಾ ತಚ್ಛ್ರೂಯತಾಂ ಮಮ ॥52॥
ನಾನಾಗಲೀ, ನೀವಾಗಲೀ ಅವನನ್ನು ತಿಳಿಯಲಾರೆವು. ಅವನೇ ನನಗೆ ಉಪದೇಶ ಮಾಡಿದಂತೆ ನಾನು ನಿಮಗೆ ಹೇಳುತ್ತಿದ್ದೇನೆ, ಅದನ್ನು ಕೇಳಿ.
ಮಯಾಽಮೃತಂ ದೇವತಾನಾಂ ಮಿಷತಾಮೃಷಿಸತ್ತಮಾಃ |
ಹೃತಂ ವಿಪಾಟ್ಯ ತದ್ಯಂತ್ರಂ ವಿದ್ರಾವ್ಯಾಮೃತರಕ್ಷಿಣಃ ॥53॥
ಎಲೈ ಋಷಿಶ್ರೇಷ್ಠರೇ, ನಾನು ಅಮೃತವನ್ನು ರಕ್ಷಿಸುವ ಕಾವಲುಗಾರರನ್ನು ಓಡಿಸಿ, ಯಂತ್ರವನ್ನು ಭೇದಿಸಿ ದೇವತೆಗಳು ನೋಡುತ್ತಿರುವಂತೆಯೇ ಅಮೃತವನ್ನು ತಂದೆನು.
ದೇವತಾ ವಿಮುಖೀಕೃತ್ಯ ಸೇಂದ್ರಾಃ ಸಮರುತೋ ಮೃಧೇ |
ಉನ್ಮಥ್ಯಾಶು ಗಿರೀಂಶ್ಚೈವ ವಿಮೋಕ್ಷ್ಯ ಚ ಮಹೋದಧಿಮ್ ॥54॥
ಇಂದ್ರನಿಂದಲೂ, ಮರುದ್ಗಣದಿಂದಲೂ ಸಹಿತರಾದ ದೇವತೆಗಳನ್ನು ಯುದ್ಧದಲ್ಲಿ ವಿಮುಖರನ್ನಾಗಿ ಮಾಡಿ, ಮಹಾಸಾಗರವನ್ನು ಕ್ಷೋಭೆಗೊಳಿಸಿ, ಪರ್ವತಗಳನ್ನು ದಾಟಿ (ಅಮೃತವನ್ನು ತಂದೆನು).
ತಂ ದೃಷ್ಟ್ವಾ ಮಮ ವಿಕ್ರಾಂತಂ ವಾಗುವಾಚಾಶರೀರಿಣೀ |
ಪ್ರೀತೋಽಸ್ಮಿ ತೇ ವೈನತೇಯ ಕರ್ಮಣಾಽನೇನ ಸುವ್ರತ ॥55॥
ಅವೃಥಾ ತೇಽಸ್ತು ಮದ್ವಾಕ್ಯಂ ಬ್ರೂಹಿ ಕಿಂ ಕರವಾಣಿ ತೇ |
ತಾಮೇವಂವಾದಿನೀಂ ವಾಚಮಹಂ ಪ್ರತ್ಯುಕ್ತವಾಂಸ್ತದಾ ॥56॥
ನನ್ನ ಪರಾಕ್ರಮವನ್ನು ನೋಡಿ ಒಂದು ಅಶರೀರವಾಣಿಯು `ಎಲೈ ವಿನತಾ ಪುತ್ರನೇ, ಸುವ್ರತನೇ, ನಿನ್ನ ಈ ಕಾರ್ಯದಿಂದ ನಾನು ಪ್ರಸನ್ನನಾಗಿದ್ದೇನೆ. ನನ್ನ ಮಾತು ನಿನ್ನಲ್ಲಿ ವ್ಯರ್ಥವಾಗುವುದು ಬೇಡ. ನಿನಗೆ ಏನು ಮಾಡಲಿ ಎಂದು ಹೇಳು' ಎಂದು ಹೇಳಿತು. ಹೀಗೆ ಹೇಳಿದ ಆ ಅಶರೀರವಾಣಿಯನ್ನು ಕುರಿತು ಆಗ ನಾನು ಪ್ರತಿಯಾಗಿ ಹೇಳಿದೆನು.
ಜ್ಞಾತುಮಿಚ್ಛಾಮಿ ಕಸ್ತ್ವಂ ಹಿ ತತೋ ಮೇ ದಾಸ್ಯಸೇ ವರಮ್ |
ಪ್ರಕೃತಿರ್ವಿಕೃತಿರ್ವಾ ತ್ವಂ ದೇವೋ ವಾ ದಾನವೋಽಪಿ ವಾ ॥57॥

ನೀನು ಯಾರು ಎಂದು ತಿಳಿಯಲು ಬಯಸುತ್ತೇನೆ. ಅನಂತರ ವರವನ್ನು ಕೊಡಬಹುದು. ನೀನು ಪ್ರಕೃತಿಯೇ ಅಥವಾ ವಿಕಾರವೇ? ದೇವನೇ ಅಥವಾ ದಾನವನೇ?
ತತೋ ಜಲದಗಂಭೀರಂ ಪ್ರಹಸ್ಯ ಗದತಾಂವರಃ |
ಉವಾಚ ವರದಃ ಪ್ರೀತಃ ಕಾಲೇ ತ್ವಂ ಮಾಽಭಿವೇತ್ಸ್ಯತಿ ॥58॥
ಆಗ ಮಾತನಾಡುವವರಲ್ಲಿ ಶ್ರೇಷ್ಠನಾದ, ವರಪ್ರದನಾದ ಅವನು ಮೇಘಗಂಭೀರವಾಗಿ ನಕ್ಕು, ಸಂತೋಷಗೊಂಡು `ಯೋಗ್ಯವಾದ ಕಾಲದಲ್ಲಿ ನೀನು ನನ್ನನ್ನು ತಿಳಿಯುವಿ' ಎಂದು ಹೇಳಿದನು.
ವಾಹನಂ ಭವ ಮೇ ಸಾಧೋ ವರಂ ದದ್ಮಿ ತವೋತ್ತಮಮ್ |
ನ ತೇ ವೀರ್ಯೇಣ ಸದೃಶಃ ಕಶ್ಚಿಲ್ಲೋಕೇ ಭವಿಷ್ಯತಿ ॥59॥
ಪತಂಗ ಪತತಾಂಶ್ರೇಷ್ಠ ನ ದೇವೋ ನಾಪಿ ದಾನವಃ |
ಮತ್ಸಖಿತ್ವಮನುಪ್ರಾಪ್ತೋ ದುರ್ಧರ್ಷಶ್ಚ ಭವಿಷ್ಯತಿ ॥60॥
`ಎಲೈ ಸಾಧುವೇ, ನನಗೆ ವಾಹನನಾಗು. ನಿನಗೆ ಶ್ರೇಷ್ಠವಾದ ವರಗಳನ್ನು ಕೊಡುತ್ತೇನೆ. ಎಲೈ ಪಕ್ಷಿಯೇ, ಹಾರುವವರಲ್ಲಿ ಶ್ರೇಷ್ಠನಾದವನೇ, ದೇವನಾಗಲೀ, ದಾನವನಾಗಲೀ ನಿನಗೆ ಸದೃಶವಾದ ಪರಾಕ್ರಮವನ್ನು ಲೋಕದಲ್ಲಿ ಹೊಂದುವುದಿಲ್ಲ. ನೀನು ನನ್ನ ಸ್ನೇಹವನ್ನು ಪಡೆದು ಯಾರಿಂದಲೂ ಸೋಲಿಸಲು ಅನರ್ಹನಾಗುವಿ' (ಎಂದು ಹೇಳಿದನು).
ತಮಬ್ರುವಂ ದೇವದೇವಂ ಮಾಮೇವಂವಾದಿನಂ ಪರಮ್ |
ಪ್ರಯತಃ ಪ್ರಾಂಜಲಿರ್ಭೂತ್ವಾ ಪ್ರಣಮ್ಯ ಶಿರಸಾ ವಿಭುಮ್ ॥61॥
ನನ್ನನ್ನು ಕುರಿತು ಹೀಗೆಮಾತನಾಡಿದ ಸರ್ವೋತ್ತಮನೂ, ದೇವದೇವನೂ ಆದ ಅವನನ್ನು ಕುರಿತು ಕೈಗಳನ್ನು ಮುಗಿದು, ಶಿರಸಾ ನಮಸ್ಕರಿಸಿ ನಾನು ಮಾತನಾಡಿದೆನು.
ಏವಮೇತನ್ಮಹಾಬಾಹೋ ಸರ್ವಮೇತದ್ ಭವಿಷ್ಯತಿ |
ವಾಹನಂ ತೇ ಭವಿಷ್ಯಾಮಿ ಯಥಾ ವದಸಿ ಮಾಂ ಭವಾನ್ ॥62॥
ಮಮಾಪಿ ಚ ಮಹಾಬುದ್ಧೇ ನಿಶ್ಚಯಂ ಶ್ರೂಯತಾಮಿತಿ |
ಧ್ವಜಸ್ತೇಽಹಂ ಭವಿಷ್ಯಾಮಿ ರಥಸ್ಥಸ್ಯ ನ ಸಂಶಯಃ ॥63॥
`ಮಹಾಬಾಹುವೇ, ನೀನು ಹೇಳಿದಂತೆಯೇ ಎಲ್ಲವೂ ಆಗುತ್ತದೆ. ನೀನು ನನಗೆ ಹೇಳುವಂತೆ ನಾನು ನಿನ್ನ ವಾಹನವಾಗುವೆನು. ಎಲೈ ಮಹಾಬುದ್ಧಿಯೇ, ನನ್ನ ಮಾತನ್ನು ಕೇಳುವವನಾಗು. ನಾನು ನಿನ್ನ ರಥದಲ್ಲಿದ್ದು ನಿನಗೆ ಧ್ವಜವಾಗುತ್ತೇನೆ. ಇದರಲ್ಲಿ ಸಂಶಯವಿಲ್ಲ' (ಎಂದು ಹೇಳಿದೆನು).
ತಥಾಸ್ತ್ವಿತಿ ಸ ಮಾಮುಕತ್ವ ಭೂಯಃ ಪ್ರಾಹ ಮಹಾಮನಾಃ |
ನ ತೇ ಗತಿವಿಘಾತೋಽದ್ಯ ಭವಿಷ್ಯತ್ಯಮೃತಂ ವಿನಾ ॥64॥
ಮಹಾಮನಸ್ಸುಳ್ಳ ಅವನು `ಹಾಗೆಯೇ ಆಗಲಿ' ಎಂದು ಹೇಳಿ ಪುನಃ ನನ್ನನ್ನು ಕುರಿತು `ನಿನ್ನ ಗಮನಕ್ಕೆ ಅಮೃತವನ್ನು ಬಿಟ್ಟು ಎಂದೂ ವಿಘಾತವುಂಟಾಗುವುದಿಲ್ಲ' ಎಂದು ಹೇಳಿದನು. (ಅಮೃತವನ್ನು ತರುವಾಗ ಸ್ವಲ್ಪ ತಡೆಯಯುಂಟಾಗುತ್ತದೆ. ಬೇರೆ ಯಾವಾಗಲೂ ಇಲ್ಲ ಎಂದು ಅಭಿಪ್ರಾಯ).
ಏವಂ ಕೃತ್ವಾ ತು ಸಮಯಂ ದೇವದೇವಃ ಸನಾತನಃ |
ಮಾಮುಕತ್ವ ಸಾಧಯಸ್ವೇತಿ ಯಥಾಭಿಪ್ರಾಯತೋ ಗತಃ ॥65॥
ಸನಾತನನಾದ ಆ ದೇವದೇವನು ನನಗೆ ಹೀಗೆ ಪ್ರತಿಜ್ಞೆಯನ್ನು ಮಾಡಿ, ನೀನು ಹೊರಡು ಎಂದು ಹೇಳಿ, ತನ್ನ ಅಭಿಪ್ರಾಯದಂತೆ ತಾನೂ ಹೊರಟು ಹೋದನು.
ತತೋಽಹಂ ಕೃತಸಂವಾದೋ ತೇನ ಕೇನಾಪಿ ಸತ್ತಮಾಃ |
ಕೌತೂಹಲಸಮಾವಿಷ್ಟಃ ಪಿತರಂ ಕಾಶ್ಯಪಂ ಗತಃ ॥66॥
ಎಲೈ ಸಜ್ಜನರಲ್ಲಿ ಶ್ರೇಷ್ಠರೇ, ಲೋಕವಿಲಕ್ಷಣನಾದ ಅವನ ಜೊತೆಯಲ್ಲಿ ಸಂವಾದವನ್ನು ಮಾಡಿ, ಕುತೂಹಲದಿಂದ ಕೂಡಿದ ನಾನು ತಂದೆಯಾದ ಕಾಶ್ಯಪರ ಬಳಿಗೆ ಹೋದೆನು.
ಸೋಽಹಂ ಪಿತರಮಾಸಾದ್ಯ ಪ್ರಣಿಪತ್ಯಾಭಿವಾದ್ಯ ಚ |
ಸರ್ವಮೇತದ್ ಯಥಾತಥ್ಯಮುಕ್ತವಾನ್ ಪಿತುರಂತಿಕೇ ॥67॥
ನಾನು ತಂದೆಯನ್ನು ಸಮೀಪಿಸಿ, ಅವರಿಗೆ ನಮಸ್ಕಾರವನ್ನು ಮಾಡಿ, ನಡೆದುದೆಲ್ಲವನ್ನೂ ಅವರಿಗೆ ಸರಿಯಾಗಿ ವಿವರಿಸಿದೆನು.
ಶ್ರುತ್ವಾ ತು ಭಗವಾನ್ ಮಹ್ಯಂ ಧ್ಯಾನಮೇವಾನ್ವಪದ್ಯತ |
ಸ ಮುಹೂರ್ತಮಿವ ಧ್ಯಾತ್ವಾ ಮಾಮಾಹ ವದತಾಂವರಃ ॥68॥
ನನ್ನ ಮಾತನ್ನು ಕೇಳಿದ ಆ ಪೂಜ್ಯರು ಧ್ಯಾನಪರರಾದರು. ಒಂದು ಮುಹೂರ್ತದ ಕಾಲ ಧ್ಯಾನವನ್ನು ಮಾಡಿ, ಮಾತನಾಡುವವರಲ್ಲಿ ಶ್ರೇಷ್ಠರಾದ ಅವರು ನನ್ನನ್ನು ಕುರಿತು ಹೇಳಿದರು.
ಧನ್ಯೋಽಸ್ಮ್ಯನುಗೃಹೀತಶ್ಚ ಯತ್ತ್ವಂ ತೇನ ಮಹಾತ್ಮನಾ |
ಸಂವಾದಂ ಕೃತವಾಂಸ್ತಾತ ಗುಹ್ಯೇನ ಪರಮಾತ್ಮನಾ ॥69॥
`ಎಲೈ ಪ್ರೀತಿಪಾತ್ರನೇ, ರಹಸ್ಯನಾದ, ಮಹಾತ್ಮನಾದ ಆ ಪರಮಾತ್ಮನ ಜೊತೆಯಲ್ಲಿ ನೀನು ಸಂವಾದ ಮಾಡಿರುವುದರಿಂದ ನಾನು ಧನ್ಯನಾಗಿದ್ದೇನೆ, ಅನುಗೃಹೀತನಾಗಿದ್ದೇನೆ.
ಸ್ಥೂಲದೃಶ್ಯಃ ಸ ಭಗವಾಂಸ್ತೇನ ತೇನೈವ ಹೇತುನಾ |
ದೃಶ್ಯತೇಽವ್ಯಕ್ತರೂಪಸ್ಥಃ ಪ್ರಧಾನಂ ಪ್ರಭವಾಪ್ಯಯಃ ॥70॥

ಅವ್ಯಕ್ತ ಸ್ವಭಾವದವನೂ, ಪ್ರಧಾನನೂ, ಜಗತ್ತಿನ ಉತ್ಪತ್ತಿ-ಆಶ್ರಯಗಳಿಗೆ ಕಾರಣನೂ ಆದ ಆ ಭಗವಂತನು ಆಯಾ ನಿಮಿತ್ತದಿಂದ ಸ್ಥೂಲರೂಪದಿಂದ ಕಾಣುತ್ತಾನೆ.
ಮಯಾ ಹಿ ಸ ಮಹಾತೇಜಾ ನಾನ್ಯಯೋಗಸಮಾಧಿನಾ |
ತಪಸೋಗ್ರೇಣ ತೇಜಸ್ವೀ ತೋಷಿತಸ್ತಪಸಾಂ ನಿಧಿಃ ||71||
ನಾನು ಮಹಾತೇಜಸ್ವಿಯೂ, ತಪಸ್ವಿಯೂ ಆದ ಅವನನ್ನು ಅನನ್ಯವಾದ ಯೋಗ ಸಮಾಧಿಗಳಿಂದಲೂ, ಉಗ್ರವಾದ ತಪಸ್ಸಿನಿಂದಲೂ ಸಂತೋಷಪಡಿಸಿದೆನು.
ತತೋ ಮೇ ದರ್ಶಯಾಮಾಸ ತೋಷಯನ್ನಿವ ಪುತ್ರಕ |
ಶ್ವೇತಪೀತಾರುಣನಿಭಃ ಕದ್ರೂಕಪಿಲಪಿಂಗಲಃ ||72||
ರಕ್ತನೀಲಾಸಿತನಿಭಃ ಸಹಸ್ರೋದರಪಾಣಿಮಾನ್ |
ದ್ವಿಸಾಹಸ್ರಮಹಾವಕ್ತ್ರ ಏಕಾಕ್ಷಃ ಶತಲೋಚನಃ ||73||
ಎಲೈ ಪುತ್ರನೇ, ಆಗ ಅವನು ನನಗೆ ಸಂತೋಷವನ್ನುಂಟು ಮಾಡುವವನಾಗಿ ಶ್ವೇತ-ಪೀತ-ಅರುಣ ವರ್ಣದ
ಕಂದು-ಕಪಿಲ-ಪಿಂಗಲವರ್ಣದ, ರಕ್ತ-ನೀಲ-ಕೃಷ್ಣ ವರ್ಣದ, ಸಹಸ್ರ ಉದರ-ಪಾಣಿಗಳುಳ್ಳ, ಎರಡು ಸಹಸ್ರ ವದನಗಳುಳ್ಳ,
ಏಕಾಕ್ಷವುಳ್ಳ, ಶತನೇತ್ರಗಳುಳ್ಳ ರೂಪಗಳನ್ನು ತೋರಿಸಿದನು.
ಅನಿಷ್ಯಂದಾ ನಿರಾಹಾರಾಃ ಸಮಾನಾಃ ಸೂರ್ಯತೇಜಸಾ |
ತಮುಪಾಸಂತಿ ಪರಮಂ ಗುಹ್ಯಮಕ್ಷರಮವ್ಯಯಮ್ ||74||
ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ, ನಿರಾಹಾರರಾದ, ಬೆವರಿನಿಂದ ರಹಿತರಾದ ಋಷಿಗಳು ಮತ್ತು ತೇಜಸ್ವಿಗಳು
ಗುಹ್ಯನೂ, ಅಕ್ಷರನೂ, ಅವ್ಯಯನೂ, ಸರ್ವೋತ್ತಮನೂ ಆದ ಅವನನ್ನು ಸ್ತೋತ್ರ ಮಾಡುತ್ತಾರೆ.
ಸಮಾಸಾದ್ಯ ತು ತಂ ವಿಶ್ವಮಹಂ ಮೂರ್ಧ್ನಾ ಪ್ರಣಮ್ಯ ಚ |
ಋಗ್ಯಜುಃಸಾಮಭಿಃ ಸ್ತುತ್ವಾ ಶರಣ್ಯಂ ಶರಣಂ ಗತಃ ||75||
ಆ ವಿಶ್ವರೂಪನನ್ನು ಸಮೀಪಿಸಿ, ಅವನಿಗೆ ನಮಸ್ಕರಿಸಿ, ಋಗ್ಯಜುಃಸಾಮಗಳಿಂದ ಅವನನ್ನು ಸ್ತೋತ್ರ ಮಾಡಿ, ಶರಣು ಹೊಂದಲು ಯೋಗ್ಯನಾದ ಅವನಿಗೆ ನಾನು ಶರಣಾಗತನಾದೆನು.
ಮಹಾಮೇೌಘಧೀರೇಣ ಸ್ವರೇಣ ಜಯತಾಂ ವರಃ |
ಆಭಾಷ್ಯ ಪುತ್ರ ಪುತ್ರೇತಿ ಇದಮಾಹ ಧ್ರುವಂ ವಚಃ ||76||
ಎಲೈ ಪುತ್ರನೇ, ಜಯಶಾಲಿಗಳಲ್ಲಿ ಶ್ರೇಷ್ಠನಾದ ಅವನು ಮೇಘಗಂಭೀರ ವಾಣಿಯಿಂದ ನನ್ನನ್ನು `ಎಲೈ ಪುತ್ರನೇ' ಎಂದು ಸಂಬೋಧಿಸಿ ಈ ಮಾತನ್ನು ಆಡಿದನು.
ತ್ವಯಾಽಭ್ಯುದಯಕಾಮೇನ ತಪಶ್ಚೀರ್ಣಂ ಮಹಾಮುನೇ |
ಅಮುಕ್ತಸ್ತ್ವಂ ನ ಮಾಂ ಸಂಗೈರವಿಮುಕ್ತೋಽದ್ಯ ಪಶ್ಯಸಿ ||77||
`ಎಲೈ ಮಹಾಮುನಿಯೇ, ಶ್ರೇಯಸ್ಸನ್ನು ಪಡೆಯಲು ಬಯಸಿ ನೀನು ತಪಸ್ಸನ್ನು ಮಾಡಿದ್ದೀಯೆ. ಅಮುಕ್ತನಾದ ನೀನು
ಸ್ನೇಹಪಾಶದಿಂದ ಮುಕ್ತನಾಗದಿರುವುದರಿಂದ ನನ್ನನ್ನು ಸರಿಯಾಗಿ ಕಾಣುತ್ತಿಲ್ಲ.
ಯದಾ ಸಂಗೈರ್ವಿಮುಕ್ತಶ್ಚ ಗತಮೋಹೋ ಗತಸ್ಪೃಹಃ |
ಭವಿಷ್ಯಸಿ ತದಾ ಬ್ರಹ್ಮ ಮಾಮನುಧ್ಯಾಸ್ಯಸೇ ದ್ವಿಜ ||78||
ಎಲೈ ಬ್ರಾಹ್ಮಣನೇ, ನೀನು ಎಲ್ಲ ಸಂಗಗಳನ್ನು, ಮೋಹವನ್ನು ಮತ್ತು ಆಸೆಯನ್ನು ಕಳೆದುಕೊಂಡಾಗ ಆಗ ನನ್ನನ್ನು ಧ್ಯಾನಿಸುವಿ (ನೋಡುವಿ).
ಏಕಾಂತಿಕೀಂ ಮತಿಂ ಕೃತ್ವಾ ಮದ್ಭಕ್ತೋ ಮತ್ಪರಾಯಣಃ |
ಜ್ಞಾಸ್ಯಸೇ ಮಾಂ ತತೋ ಬ್ರಹ್ಮನ್ ವೀತಮೋಹಶ್ಚ ತತ್ತ್ವತಃ ||79||
ಎಲೈ ಬ್ರಾಹ್ಮಣನೇ, ನನ್ನಲ್ಲಿ ಏಕಾಂತವಾದ ಬುದ್ಧಿಯನ್ನು ಹೊಂದಿ, ನನ್ನ ಭಕ್ತನಾಗಿ ನನ್ನನ್ನೇ ಶ್ರೇಷ್ಠವಾದ ಆಶ್ರಯವೆಂದು ನಂಬಿ,
ಮೋಹಗಳಿಂದ ದೂರವಾಗಿ ನನ್ನನ್ನು ಯಥಾರ್ಥವಾಗಿ ತಿಳಿಯುವಿ' (ಎಂದು ಹೇಳಿದನು).
ತೇನ ತ್ವಂ ಕೃತಸಂವಾದಃ ಸ್ವತಃ ಸರ್ವಹಿತೈಷಿಣಾ |
ವಿಶ್ವರೂಪೇಣ ದೇವೇನ ಪುರುಷೇಣ ಮಹಾತ್ಮನಾ ||80||
`ನೀನು ಅಂತಹ ಸರ್ವಹಿತೈಷಿಯಾದ, ವಿಶ್ವರೂಪನಾದ, ಮಹಾತ್ಮನಾದ, ಪುರುಷಶಬ್ದವಾಚ್ಯನಾದ ದೇವನ ಜೊತೆಯಲ್ಲಿ ಸ್ವತಃ ಸಂವಾದವನ್ನು ಮಾಡಿದ್ದೀಯೆ.
ತಮೇವಾರಾಧಯ ಕ್ಷಿಪ್ರಂ ತಮಾರಾಧ್ಯ ನ ಸೀದತಿ |
ಸೋಽಹಮೇವಂ ಭಗವತಾ ಪಿತ್ರಾ ಬ್ರಹ್ಮರ್ಷಿಸತ್ತಮಾಃ |
ಅನುನೀತೋ ಯಥಾನ್ಯಾಯಂ ಸ್ವಮೇವ ಭವನಂ ಗತಃ ||81||
ಅವನನ್ನೇ ಶೀಘ್ರವಾಗಿ ಆರಾಧಿಸು. ಅವನನ್ನು ಆರಾಧಿಸಿದವನು ನಾಶವನ್ನು ಹೊಂದುವುದಿಲ್ಲ' ಎಂದು ಎಲೈ ಬ್ರಹ್ಮರ್ಷಿಶ್ರೇಷ್ಠರೇ ನಾನು ಪೂಜ್ಯರಾದ ತಂದೆಯಿಂದ ನ್ಯಾಯರೀತಿಯಲ್ಲಿ ಸಮಾಧಾನಪಡಿಸಲ್ಪಟ್ಟು ನನ್ನ ಗೃಹಕ್ಕೆ ಹೋದೆನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಗರುಡಕಾಶ್ಯಪಸಮಾಗಮೋ ನಾಮ ಅಷ್ಟತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *
मूवत्तोंबत्तनेय अध्याय

ಮೂವತ್ತೊಂಬತ್ತನೆಯ ಅಧ್ಯಾಯ
ಗರುಡ-ನಾರಾಯಣರ ಸಮಾಗಮ
ಸುಪರ್ಣಃ
ಸೋಽಹಮಾಮಂತ್ರ್ಯ ಪಿತರಂ ತದ್ಭಾವಗತಮಾನಸಃ |
ಸ್ವಮೇವಾಲಯಮಾಸಾದ್ಯ ತಮೇವಾರ್ಥಮಚಿಂತಯಮ್ ॥1॥
ಗರುಡ ನಾನು ತಂದೆಯ ಅನುಮತಿಯನ್ನು ಪಡೆದು, ಭಗವಂತನಲ್ಲೇ ನೆಟ್ಟ ಮನಸ್ಸುಳ್ಳವನಾಗಿ, ಅದೇ ವಿಷಯವನ್ನು ಚಿಂತಿಸುತ್ತಾ ಮನೆಗೆ ಬಂದೆನು.
ತದ್ಭಾವಗತಭಾವಾತ್ಮಾ ತದ್ಭೂತಗತಮಾನಸಃ |
ಗೋವಿಂದಂ ಚಿಂತಯನ್ನಾಸ್ಸೇ ಶಾಶ್ವತಂ ಪರಮವ್ಯಯಮ್ |
ಧೃತಂ ಬಭೂವ ಹೃದಯಂ ನಾರಾಯಣದಿದೃಕ್ಷಯಾ ॥2॥
ಅವನ ಸ್ವರೂಪವನ್ನೇ ಚಿಂತಿಸುತ್ತಾ, ಅವನಲ್ಲಿಯೇ ನಿಂತ ಮನಸ್ಸುಳ್ಳವನಾಗಿ ಶಾಶ್ವತನೂ, ಶ್ರೇಷ್ಠನೂ, ಅವ್ಯಯನೂ ಆದ ಗೋವಿಂದನನ್ನು ಚಿಂತಿಸುತ್ತಿದ್ದೆನು. ನನ್ನ ಹೃದಯದಲ್ಲಿ ನಾರಾಯಣನನ್ನು ನೋಡುವ ಆಸೆಯು ಆವರಿಸಿತು.
ಸೋಽಹಂ ವೇಗಂ ಸಮಾಸ್ಥಾಯ ಮನೋಮಾರುತವೇಗವಾನ್ |
ರಮ್ಯಾಂ ವಿಶಾಲಾಂ ಬದರೀಂ ಗತೋ ನಾರಾಯಣಾಶ್ರಮಮ್ ॥3॥
ಅಂತಹ ನಾನು ಮನೋಮಾರುತ ವೇಗವನ್ನು ಆಶ್ರಯಿಸಿ ರಮ್ಯವೂ, ವಿಶಾಲವೂ ಆದ ನಾರಾಯಣಾಶ್ರಮವಾದ ಬದರಿಗೆ ಹೋದೆನು.
ತತಸ್ತತ್ರ ಹರಿಂ ದೃಷ್ಟ್ವಾ ಜಗತಃ ಪ್ರಭವಂ ವಿಭುಮ್ |
ಗೋವಿಂದಂ ಪುಂಡರೀಕಾಕ್ಷಂ ಪ್ರಣತಃ ಶಿರಸಾ ಹರಿಮ್ ॥4॥
ಅಲ್ಲಿ ಜಗತ್ತಿಗೆ ಕಾರಣನೂ, ವ್ಯಾಪ್ತನೂ, ಪುಂಡರೀಕಾಕ್ಷನೂ, ಪಾಪ ಪರಿಹಾರಕನೂ ಆದ ಗೋವಿಂದನನ್ನು ನೋಡಿ ಹರಿಗೆ ಶಿರಸಾ ಪ್ರಣಾಮವನ್ನು ಮಾಡಿದೆನು.
ಋಗ್ಯಜುಃಸಾಮಭಿಶ್ಚೈನಂ ತುಷ್ಟಾವ ಪರಯಾ ಮುದಾ |
ಅಥಾಪಶ್ಯಂ ಸುವಿಪುಲಮಶ್ವತ್ಥಂ ದೇವಸಂಶ್ರಯಮ್ ॥5॥
ಬಹಳ ಸಂತೋಷದಿಂದ ಕೂಡಿದವನಾಗಿ ಋಗ್ಯಜುಸ್ಸಾಮವೇದಗಳಿಂದ ಅವನನ್ನು ಸ್ತೋತ್ರ ಮಾಡಿದೆನು. ಅನಂತರ ದೇವನು ಆಶ್ರಯಿಸಿದ ವಿಸ್ತಾರವಾದ ಅಶ್ವತ್ಥ ವೃಕ್ಷವನ್ನು ನೋಡಿದೆನು.
ಚತುರ್ದ್ವಿಗುಣಪೀನಾಂಗಃ ಶಂಖಚಕ್ರಗದಾಧರಃ |
ಪ್ರಾದುರ್ಬಭೂವ ಪುರುಷಃ ಪೀತವಾಸಾಃ ಸನಾತನಃ |
ಮಧ್ಯಾಹ್ನಾರ್ಕಪ್ರತೀಕಾಶಸ್ತೇಜಸಾ ಭಾಸಯನ್ ದಿಶಃ ॥6॥
ಶಂಕಚಕ್ರಗದಾಧರನೂ, ಪುಷ್ಟವಾದ ಅಷ್ಟಾಂಗವುಳ್ಳವನೂ, ಪೀತಾಂಬರಧಾರಿಯೂ, ಸನಾತನನೂ ಆದ, ಪುರುಷನಾದ ಹರಿಯು ಮಧ್ಯಾಹ್ನದ ಸೂರ್ಯನಂತೆ ತನ್ನ ತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗುತ್ತಾ ಪ್ರತ್ಯಕ್ಷನಾದನು.
ಸಂಸ್ತುತಃ ಸಂವಿದಂ ಕೃತ್ವಾ ಜಗತಃ ಶ್ರೇಯಸೇ ರತಃ |
ಪ್ರಾಗುದೀಚೀಂ ದಿಶಂ ದೇವಃ ಪ್ರತಸ್ಥೇ ಪುರುಷೋತ್ತಮಃ |
ದಿಶಶ್ಚ ವಿದಿಶಶ್ಚೈವ ಭಾಸಯನ್ ಸ್ವೇನ ತೇಜಸಾ ॥7॥
ತಮಹಂ ಪುರುಷಂ ದಿವ್ಯಂ ವ್ರಜಂತಮಮಿತೌಜಸಮ್ |
ಅನುವವ್ರಾಜ ವೇಗೇನ ಶನೈರ್ಗಚ್ಛಂತಮವ್ಯಯಮ್ ॥8॥
ನಾನು ಅವನನ್ನು ಸ್ತೋತ್ರ ಮಾಡಿ ಅವನ ಜೊತೆಯಲ್ಲಿ ಮಾತನಾಡಿದ ಮೇಲೆ ಪುರುಷೋತ್ತಮನಾದ ಆ ದೇವನು ತನ್ನ ತೇಜಸ್ಸಿನಿಂದ ದಿಕ್ಕು-ವಿದಿಕ್ಕುಗಳನ್ನು ಬೆಳಗುತ್ತಾ ಈಶಾನ್ಯದಿಕ್ಕಿಗೆ ಹೊರಟನು. ಜಗತ್ತಿನ ಶ್ರೇಯಸ್ಸಿನಲ್ಲಿ ನಿರತನಾದ ನಾನು ನಿಧಾನವಾಗಿ ಹೋಗುತ್ತಿದ್ದ ಅವ್ಯಯನೂ, ಅಮಿತಪರಾಕ್ರಮಿಯೂ ಆದ ಆ ದಿವ್ಯಪುರುಷನನ್ನು ವೇಗದಿಂದ ಹಿಂಬಾಲಿಸಿದೆನು.
ಯೋಜನಾನಾಂ ಸಹಸ್ರಾಣಿ ಷಷ್ಟಿಮಷ್ಟೌ ತಥಾ ಶತಮ್ |
ತಥಾ ಶತಸಹಸ್ರಂ ಚ ಶತಂ ದ್ವಿಗುಣಮೇವ ಚ ॥9॥
ಸ ಗತ್ವಾ ದೀರ್ಘಮಧ್ವಾನಮಪಶ್ಯಮಹಮದ್ಭುತಮ್ |
ಮಹಾಂತಂ ಪಾವಕಂ ದೀಪ್ತಮರ್ಚಿಷ್ಮಂತಮನಿಂಧನಮ್ ॥10॥
ಸಹಸ್ರಯೋಜನಗಳನ್ನು, ಅರವತ್ತೆಂಟು ನೂರು ಯೋಜನಗಳನ್ನು, ಪುನಃ ಶತಸಹಸ್ರ ಯೋಜನಗಳನ್ನು, ಪುನಃ ಅದರ ಎರಡರಷ್ಟು ಶತಯೋಜನಗಳನ್ನು ಹೊಂದಿದ ದೀರ್ಘವಾದ ಮಾರ್ಗಗಳಲ್ಲಿ ಹೋಗಿ ಇಂಧನವಿಲ್ಲದೆ ಉರಿಯುತ್ತಿದ್ದ ಜ್ವಾಲೆಗಳಿಂದ ಕೂಡಿದ ಅದ್ಭುತವಾದ ದೊಡ್ಡ ಅಗ್ನಿಯನ್ನು ನೋಡಿದೆನು.
ಶತಯೋಜನವಿಸ್ತೀರ್ಣಂ ತಸ್ಮಾದ್ ದ್ವಿಗುಣಮಾಯತಮ್ |
ವಿವೇಶ ಸ ಮಹಾಯೋಗೀ ಪಾವಕಂ ಪಾವಕದ್ಯುತಿಃ ॥11॥
ನೂರು ಯೋಜನ ವಿಸ್ತೀರ್ಣವಾದ, ಇನ್ನೂರು ಯೋಜನ ಅಗಲವಾದ ಆ ಅಗ್ನಿಯನ್ನು ಅಗ್ನಿಗೆ ಸಮಾನವಾದ ಕಾಂತಿಯನ್ನು ಹೊಂದಿದ ಆ ಮಹಾಯೋಗಿಯು ಪ್ರವೇಶಿಸಿದನು.
ತತ್ರ ಶಂಭುಸ್ತಪಸ್ತೇಪೇ ಮಹಾದೇವಃ ಸಹೋಮಯಾ |
ಸ ತೇನ ಸಂವಿದಂ ಕೃತ್ವಾ ಪಾವಕಂ ಸಮತಿಕ್ರಮತ್ |

ಶ್ರಮಾಭಿಭೂತೇನ ಮಯಾ ಕಥಂಚಿದನುಗಮ್ಯತೇ ॥12॥
ಅಲ್ಲಿ ಪಾರ್ವತಿಯ ಜೊತೆಯಲ್ಲಿ ಮಹಾದೇವನಾದ ಶಂಭುವು ತಪಸ್ಸನ್ನು ಮಾಡುತ್ತಿದ್ದನು. ಅವನು ಅವನ ಜೊತೆಯಲ್ಲಿ ಮಾತನಾಡಿ ಅಗ್ನಿಯನ್ನು ಪ್ರವೇಶಿಸಿದನು. ಬಳಲಿದ ನಾನು ಕಷ್ಟಪಟ್ಟು ಅವನನ್ನು ಹಿಂಬಾಲಿಸಿದೆನು.
ಗತ್ವಾ ಸ ದೀರ್ಘಮಧ್ವಾನಂ ಭಾಸ್ಕರೇಣಾವಭಾಸಿತಮ್ |
ಅಭಾಸ್ಕರಮಮರ್ಯಾದಂ ವಿವೇಶ ಸುಮಹತ್ತಮಃ ॥13॥
ಸೂರ್ಯನಿಂದ ಪ್ರಕಾಶಿತವಾದ ದೀರ್ಘವಾದ ಮಾರ್ಗದಲ್ಲಿ ಹೋಗಿ ಅವನು ಸೂರ್ಯರಶ್ಮಿ ಇಲ್ಲದ, ಎಲ್ಲೆಯೇ ಇಲ್ಲದ ದೊಡ್ಡ ಅಂಧಕಾರವನ್ನು ಪ್ರವೇಶಿಸಿದನು.
ಅಥ ದೃಷ್ಟಿಃ ಪ್ರತಿಹತಾ ಮಮ ತತ್ರ ಬಭೂವ ಹ |
ಯಥಾಸ್ವಭಾವಂ ಭೂತಾತ್ಮಾ ವಿವೇಶ ಸ ಮಹಾದ್ಯುತಿಃ ॥14॥
ಆಗ ನನ್ನ ದೃಷ್ಟಿಯು ಅಂಧಕಾರದಿಂದ ಪ್ರತಿಹತವಾಯಿತು. ಆದರೆ ಸರ್ವಸ್ವಾಮಿಯೂ, ಮಹಾದ್ಯುತಿಯೂ ಆದ ಅವನು ಸಹಜವಾಗಿಯೇ ಪ್ರವೇಶಿಸಿದನು.
ತತೋಽಹಮಭವಂ ಮೂಢೋ ಜಡಾಂಧಬಧಿರೋಪಮಃ |
ದಿಶಶ್ಚ ವಿದಿಶಶ್ಚೈವ ನ ವಿಜಜ್ಞೇ ತಮೋವೃತಃ ॥15॥
ಆಗ ನಾನು ಜಡಾಂಧಬಧಿರರಂತೆ ಮೂಢನಾದೆನು. ತಮಸ್ಸಿನಿಂದ ಆವೃತವಾಗಿ ದಿಕ್ಕುಗಳನ್ನಾಗಲೀ, ವಿದಿಕ್ಕುಗಳನ್ನಾಗಲೀ ತಿಳಿಯಲಿಲ್ಲ.
ಅವಿಜಾನನ್ನಹಂ ಕಿಂಚಿತ್ ತಸ್ಮಿಂಸ್ತಮಸಿ ಸಂವೃತೇ |
ಸುಸಂಭ್ರಾಂತೇನ ಮನಸಾ ವ್ಯಥಾಂ ಪರಮಿಕಾಂ ಗತಃ ॥16॥
ತಮಸ್ಸು ಎಲ್ಲ ಕಡೆಯಲ್ಲಿಯೂ ಆವರಿಸಿರಲು ನಾನು ಏನನ್ನೂ ಕಾಣದೆ, ದಿಗ್ಭ್ರಾಂತನಾಗಿ ಮನಸ್ಸಿನಲ್ಲಿ ಬಹಳ ವ್ಯಥೆಯನ್ನು ಹೊಂದಿದೆನು.
ಸೋಽಹಂ ಪ್ರಪನ್ನಃ ಶರಣಂ ದೇವದೇವಂ ಸನಾತನಮ್ |
ಪ್ರಾಂಜಲಿರ್ಮನಸಾ ಭೂತ್ವಾ ವಾಕ್ಯಮೇತತ್ ತದೋಕ್ತವಾನ್ ॥17॥
ಅಂತಹ ನಾನು ಸನಾತನನೂ, ದೇವದೇವನೂ ಆದ ಅವನಿಗೆ ಶರಣಾಗತನಾಗಿ ಕೈಗಳನ್ನು ಮುಗಿದು, ಮನಸ್ಸಿನಲ್ಲಿ ಅವನನ್ನು ಚಿಂತಿಸಿ ಈ ಮಾತನ್ನು ಆಡಿದೆನು.
ಭಗವನ್ ಭೂತಭವ್ಯೇಶ ಭವದ್ಭೂತಕೃದವ್ಯಯ |
ಶರಣಂ ಸಂಪ್ರಪನ್ನಂ ಮಾಂ ತ್ರಾತುಮರ್ಹಸ್ಯರಿಂದಮ ॥18॥
ಭಗವಂತನೇ, ಭೂತಭವ್ಯಪ್ರಭುವೇ, ಭೂತವಸ್ತುಗಳನ್ನು ಸೃಷ್ಟಿಸಿದವನೇ, ವರ್ತಮಾನನೇ, ಅವ್ಯಯನೇ, ಅರಿಂದಮನೇ, ಶರಣಾಗತನಾದ ನನ್ನನ್ನು ರಕ್ಷಿಸಬೇಕು.
ಅಹಂ ತು ತತ್ತ್ವಜಿಜ್ಞಾಸುಃ ಕೋಽಸಿ ಕಸ್ಯಾಸಿ ಕುತ್ರ ವಾ |
ಸಂಪ್ರಾಪ್ತಃ ಪದವೀಂ ದೇವ ಸ ಮಾಂ ಸಂತ್ರಾತುಮರ್ಹಸಿ |
ಆವಿರ್ಭೂತಃ ಪುರಾಣಾತ್ಮಾ ಮಾಮೇಹೀತಿ ಸನಾತನಃ ॥19॥
ನಾನಾದರೂ ನೀನು ಯಾರು? ಯಾರಿಗೆ ಸೇರಿದವನು? ಎಲ್ಲಿಂದ ಬಂದೆ? ಎಲ್ಲಿ ವಾಸಿಸುತ್ತೀಯೆ? ಎಂದು ನಿನ್ನ ಮಾರ್ಗವನ್ನು ತಿಳಿಯಲು ಬಂದವನು. ಅಂತಹ ನನ್ನನ್ನು ರಕ್ಷಿಸಬೇಕು (ಎಂದು ಹೇಳಿದೆನು). ಪುರಾಣಾತ್ಮನೂ, ಸನಾತನನೂ ಆದ ಅವನು ಪ್ರತ್ಯಕ್ಷನಾಗಿ ನನ್ನನ್ನು ಕುರಿತು ನನ್ನನ್ನು ಹಿಂಬಾಲಿಸು ಎಂದು ಹೇಳಿದನು.
ತತೋಽಪರಾಂತತೋ ದೇವೋ ವಿಶ್ವಸ್ಯ ಗತಿರಾತ್ಮವಾನ್ |
ಮೋಹಯಾಮಾಸ ಮಾಂ ತತ್ರ ದುರ್ವಿಭಾವ್ಯವಪುರ್ವಿಭುಃ ॥20॥
ಅನಂತರ ಇನ್ನೊಂದು ತುದಿಗೆ ಹೋಗಿ, ವಿಶ್ವಕ್ಕೆ ಗತಿಯೂ, ಆತ್ಮವಂತನೂ, ದುರ್ವಿಭಾವ್ಯವಾದ ಶರೀರವುಳ್ಳವನೂ, ವಿಭುವೂ ಆದ ದೇವನು ಅಲ್ಲಿ ನನಗೆ ಮೋಹವನ್ನುಂಟು ಮಾಡಿದನು.
ಸ್ವಭಾವಮಾತ್ಮನಸ್ತತ್ರ ದರ್ಶಯನ್ ಸ್ವಯಮಾತ್ಮನಾ |
ಶ್ರಮಂ ಮೇ ಜನಯಾಮಾಸ ಭಯಂ ಚಾಭಯದಃ ಪ್ರಭುಃ ॥21॥
ಅಭಯವನ್ನು ಕೊಡುವ ಆ ಪ್ರಭುವು ತನ್ನ ಇಚ್ಛೆಯಿಂದಲೇ ತನ್ನ ಸ್ವಭಾವವನ್ನು ತೋರಿಸುತ್ತಾ ಅಲ್ಲಿ ನನಗೆ ಶ್ರಮವನ್ನೂ, ಭಯವನ್ನೂ ಉಂಟು ಮಾಡಿದನು.
ಖಿನ್ನ ಇತ್ಯೇವ ಮಾಂ ಮತ್ವಾ ಭಗವಾನವ್ಯಯೋಽಚ್ಯುತಃ |
ಶಬ್ದೇನಾಶ್ವಾಸಯಾಮಾಸ ಜಗಾಹೇ ಚ ತಮೋ ಮಹತ್ ॥22॥
ನಾನು ಖಿನ್ನನಾಗಿದ್ದೇನೆಂದು ತಿಳಿದ ಭಗವಂತನೂ, ಅವ್ಯಯನೂ ಆದ ಅಚ್ಯುತನು ನನ್ನನ್ನು ಮಾತಿನಿಂದ ಸಮಾಧಾನ ಪಡಿಸಿ, ಆ ದೊಡ್ಡ ತಮಸ್ಸನ್ನು ಪ್ರವೇಶಿಸಿದನು.
ಅಹಂ ಚ ಖೇದಾನುಗತಃ ಶ್ರಮಾಚ್ಚಲಪದಶ್ಚರನ್ |
ಮನಸಾ ದೇವದೇವೇಶಂ ಧ್ಯಾತುಂ ಸಮುಪಚಕ್ರಮೇ ॥23॥
ನಾನಾದರೂ ಖೇದವನ್ನು ಹೊಂದಿದವನಾಗಿ, ಶ್ರಮದಿಂದ ನಡುಗುವ ಪಾದಗಳಿಂದ ಕೂಡಿ, ಮನಸ್ಸಿನಲ್ಲಿಯೇ ದೇವದೇವೇಶನನ್ನು ಧ್ಯಾನ ಮಾಡಲು ಪ್ರಾರಂಭಿಸಿದೆನು.
ತಥಾಗತಂ ತು ಮಾಂ ಜ್ಞಾತ್ವಾ ಭಗವಾನಮಿತದ್ಯುತಿಃ |

ತಮಃ ಪ್ರಣಾಶಯಾಮಾಸ ಮಮಾನುಗ್ರಹಕಾಂಕ್ಷಯಾ ॥24॥
ನನ್ನ ಅವಸ್ಥೆಯನ್ನು ತಿಳಿದ ಅಮಿತದ್ಯುತಿಯಾದ ಭಗವಂತನು ನನಗೆ ಅನುಗ್ರಹವನ್ನು ಮಾಡಲು ಬಯಸಿ ಆ ತಮಸ್ಸನ್ನು ನಾಶಪಡಿಸಿದನು.
ತತಃ ಪ್ರನಷ್ಟೇ ತಮಸಿ ತಮಹಂ ದೀಪ್ತತೇಜಸಮ್ |
ಅಪಶ್ಯಂ ತೇಜಸಾ ವ್ಯಾಪ್ತಂ ಮಧ್ಯಾಹ್ನ ಇವ ಭಾಸ್ಕರಮ್ ॥25॥
ತಮಸ್ಸು ನಾಶವನ್ನು ಹೊಂದುತ್ತಿರಲು ನಾನು ತನ್ನ ತೇಜಸ್ಸಿನಿಂದ ವ್ಯಾಪ್ತನಾದ, ಮಧ್ಯಾಹ್ನದ ಸೂರ್ಯನಂತೆ ಬೆಳಗುವ ದೀಪ್ತವಾದ ತೇಜಸ್ಸುಳ್ಳ ಅವನನ್ನು ನೋಡಿದೆನು.
ಸ್ವಯಂಪ್ರಭಾಂಶ್ಚ ಪುರುಷಾನ್ ಸ್ತ್ರಿಯಶ್ಚ ಪರಮಾದ್ಭುತಾಃ |
ಅಪಶ್ಯಮಹಮವ್ಯಗ್ರಂ ತಸ್ಮಿನ್ ದೇಶೇ ಸಹಸ್ರಶಃ ॥26॥
ನಾನು ಆ ಪ್ರದೇಶದಲ್ಲಿ ಸ್ವಯಂಪ್ರಭೆಯುಳ್ಳ, ಪರಮಾದ್ಭುತರಾದ ಪುರುಷರನ್ನು ಮತ್ತು ಸ್ತ್ರೀಯರನ್ನು ಅವ್ಯಗ್ರನಾಗಿ ಸಹಸ್ರ ಸಂಖ್ಯೆಯಲ್ಲಿ ನೋಡಿದೆನು.
ನ ತತ್ರ ದ್ಯೋತತೇ ಸೂರ್ಯೋ ನ ನಕ್ಷತ್ರಾಣಿ ತಥೈವ ಚ |
ನ ತತ್ರ ಚಂದ್ರಮಾ ಭಾತಿ ನ ವಾಯುರ್ವಾತಿ ಪಾಂಸುಲಃ ॥28॥
ಅಲ್ಲಿ ಸೂರ್ಯನಾಗಲೀ, ನಕ್ಷತ್ರವಾಗಲೀ ಪ್ರಕಾಶಿಸುವುದಿಲ್ಲ. ಚಂದ್ರನು ಪ್ರಕಾಶಿಸುವುದಿಲ್ಲ. ಧೂಳಿನಿಂದ ಕೂಡಿದ ವಾಯುವು ಬೀಸುವುದಿಲ್ಲ.
ತತ್ರ ತೂರ್ಯಾಣ್ಯನೇಕಾನಿ ಗೀತಾನಿ ಮಧುರಾಣಿ ಚ |
ಅದೃಶ್ಯಾನಿ ಮನೋಜ್ಞಾನಿ ಶ್ರೂಯಂತೇ ಸರ್ವತೋದಿಶಮ್ ॥29॥
ಅಲ್ಲಿ ಕಣ್ಣಿಗೆ ಕಾಣದಂತೆ ಎಲ್ಲ ದಿಕ್ಕುಗಳಿಂದಲೂ ಮನೋಹರವಾದ ಮಧುರವಾದ ಗೀತೆಗಳು ಮತ್ತು ಗೀತವಾದ್ಯಗಳು ಕೇಳಿಬರುತ್ತವೆ.

ಸ್ರವಂತಿ ವೈಡೂರ್ಯಲತಾಃ ಪದ್ಮೋತ್ಪಲಝಷಾಕುಲಾಃ |
ಮುಕ್ತಾಸಿಕತವಪ್ರಾಶ್ಚ ಸರಿತೋ ನಿರ್ಮಲೋದಕಾಃ ॥30॥
ಅಲ್ಲಿ ವೈಡೂರ್ಯಲತೆಗಳನ್ನು ಹೊಂದಿದ, ಪದ್ಮಗಳಿಂದಲೂ ಉತ್ಪಲಗಳಿಂದಲೂ, ಮೀನುಗಳಿಂದಲೂ ನಿಬಿಡವಾದ, ಮುತ್ತಿನಂತಹ ಮರಳುಗಳ ಹೊಂದಿದ ತೀರವನ್ನು ಹೊಂದಿದ, ನಿರ್ಮಲವಾದ ನೀರಿರುವ ನದಿಗಳು ಹರಿಯುತ್ತವೆ.
ಅಗತಿಸ್ತತ್ರ ದೇವಾನಾಮಸುರಾಣಾಂ ತಥೈವ ಚ |
ಗಂಧರ್ವನಾಗಯಕ್ಷಾಣಾಂ ರಾಕ್ಷಸಾನಾಂ ತಥೈವ ಚ ॥31॥
ಅಲ್ಲಿ ದೇವತೆಗಳಾಗಲೀ, ಅಸುರರಾಗಲೀ, ಗಂಧರ್ವ-ಸರ್ಪ-ಯಕ್ಷರಾಗಲೀ, ರಾಕ್ಷಸರಾಗಲೀ ಹೋಗಲು ಸಾಧ್ಯವಿಲ್ಲ.
ಸ್ವಯಂಪ್ರಭಾಸ್ತತ್ರ ನರಾ ದೃಶ್ಯಂತೇಽದ್ಭುತದರ್ಶನಾಃ |
ಯೇಷಾಂ ನ ದೇವತಾಸ್ತುಲ್ಯಾಃ ಪ್ರಭಾಭಿರ್ಭಾಸಿತಾತ್ಮನಾಮ್ ॥32॥
ಅಲ್ಲಿ ಸ್ವಯಂಪ್ರಭೆಯುಳ್ಳ, ಅದ್ಭುತರೂಪವುಳ್ಳ ಮನುಷ್ಯರು ಕಂಡುಬರುತ್ತಾರೆ. ಸ್ವಯಂ ಪ್ರಭೆಯಿಂದ ಬೆಳಗುವ ಅವರಿಗೆ ದೇವತೆಗಳೂ ಸಮಾನರಲ್ಲ.
ಸ ಚ ತಾನ್ಯಪ್ಯತಿಕ್ರಮ್ಯ ದೈವತ್ಯೈರಪಿ ಪೂಜಿತಃ |
ವಿವೇಶ ಜ್ವಲನಂ ದೀಪ್ತಮನಿಂಧನಮನೌಪಮಮ್ ॥33॥
ಅವನು ದೇವತೆಗಳಿಂದ ಪೂಜಿಸಲ್ಪಟ್ಟು, ಅಂತಹ ಜಲವನ್ನು ದಾಟಿ, ಇಂಧನವಿಲ್ಲದೆ ಉರಿಯುತ್ತಿದ್ದ ಅಸದೃಶವಾದ ಆ ಅಗ್ನಿಯನ್ನು ಪ್ರವೇಶಿಸಿದನು.
ಜ್ವಾಲಾಭಿರ್ಮಾಂ ಪ್ರವಿಷ್ಟಂ ಚ ಜ್ವಲಂತಂ ಸರ್ವತೋದಿಶಮ್ |
ದೈತ್ಯದಾನವರಕ್ಷೋಭಿರ್ದೈವತ್ಯೈಶ್ಚಾಪಿ ದುಃಸಹಮ್ ॥34॥
ದೈತ್ಯ-ದಾನವ-ರಾಕ್ಷಸರಿಂದಲೂ, ದೇವತೆಗಳಿಂದಲೂ ಸಹಿಸಲು ಅಸಾಧ್ಯವಾದ ಅಗ್ನಿಜ್ವಾಲೆಗಳಿಂದ ನಾನು ಎಲ್ಲ ಕಡೆಯಲ್ಲಿಯೂ ಆವೃತನಾಗಿ ನಾನೂ ಅಗ್ನಿಯನ್ನು ಪ್ರವೇಶಿಸಿದೆನು.
ಜ್ವಾಲಾಮಾಲಿನಮಾಸಾದ್ಯ ತಮಗ್ನಿಮಹಮವ್ಯಯಮ್ |
ಅವಿಷಹ್ಯತಮಂ ಮತ್ವಾ ಮನಸೇದಮಚಿಂತಯಮ್ ॥35॥
ಜ್ವಾಲಾಮಾಲೆಗಳುಳ್ಳ, ತಡೆಯಲು ಅತ್ಯಂತ ಅಸಾಧ್ಯವಾದ, ನಾಶವನ್ನು ಹೊಂದದ ಆ ಅಗ್ನಿಯನ್ನು ಪ್ರವೇಶಿಸಿ ನಾನು ಮನಸ್ಸಿನಲ್ಲಿ ಹೀಗೆ ಚಿಂತಿಸಿದೆನು.
ಮಯಾ ಹಿ ಸಮರೇಷ್ವಗ್ನಿರನೇಕೇಷು ಮಹಾದ್ಯುತಿಃ |
ಪ್ರವಿಷ್ಟಶ್ಚಾಪವಿದ್ಧಶ್ಚ ನ ಚ ಮಾಂ ದಗ್ಧವಾನ್ ಕ್ವಚಿತ್ ॥36॥
ನಾನು ಯುದ್ಧಗಳಲ್ಲಿ ಅನೇಕ ಬಾರಿ ಮಹಾದ್ಯುತಿಯುಳ್ಳ ಅಗ್ನಿಯನ್ನು ಪ್ರವೇಶ ಮಾಡಿ ಹೊರಗೆ ಬಂದಿದ್ದೇನೆ. ಅಗ್ನಿಯು ಎಂದೂ ನನ್ನನ್ನು ಸುಡಲಿಲ್ಲ.
ಅಯಂ ಚ ದುಃಸಹಃ ಶಶ್ವತ್ ತೇಜಸಾಽತಿಹುತಾಶನಃ |
ಅತ್ಯಾದಿತ್ಯಪ್ರಕಾಶಾರ್ಚಿರನಲೋ ದೀಪ್ಯತೇ ಮಹಾನ್ ॥37॥
ಆದರೆ ಈ ಅಗ್ನಿಯು ಮಾತ್ರ ತಡೆಯಲು ಅಸಾಧ್ಯವಾದುದು. ತನ್ನ ತೇಜಸ್ಸಿನಿಂದ ಅಗ್ನಿಯನ್ನು ಮೀರಿದೆ. ಸೂರ್ಯಪ್ರಕಾಶವನ್ನು ಮೀರಿದ ಜ್ವಾಲೆಗಳನ್ನು ಹೊಂದಿ ದೊಡ್ಡದಾಗಿ ಜ್ವಲಿಸುತ್ತಿದೆ (ಎಂದು ಚಿಂತಿಸಿದೆನು).

ಸ ತಥಾ ದಹ್ಯಮಾನೋಽಪಿ ತೇಜಸಾ ದೀಪ್ತವರ್ಚಸಾ |
ಪ್ರಪನ್ನಃ ಶರಣಂ ದೇವಂ ಶಂಖಚಕ್ರಗದಾಧರಮ್ ॥38॥
ಭಕ್ತಶ್ಚಾನುಗತಶ್ಚೇತಿ ತ್ರಾತುಮರ್ಹಸಿ ಮಾಂ ವಿಭೋ |
ಯಥಾ ಮಾಂ ನ ದಹೇದಗ್ನಿಃ ಸದ್ಯೋ ದೇವ ತಥಾ ಕುರು ॥39॥
ನಾನು ದೀಪ್ತವಾದ ಕಾಂತಿಯುಳ್ಳ ಅಗ್ನಿಯ ತೇಜಸ್ಸಿನಿಂದ ಹಾಗೆ ದಹಿಸಲ್ಪಡುತ್ತಿದ್ದರೂ ಪ್ರಪನ್ನರನ್ನು ರಕ್ಷಿಸುವ, ಶಂಖಚಕ್ರಗದಾಧರನಾದ ದೇವನಿಗೆ ಶರಣಾಗತನಾಗಿ ಎಲ್ಲೈ ವಿಭುವೇ, ನಾನು ನಿನ್ನ ಭಕ್ತನಾಗಿ ಹಿಂಬಾಲಿಸುತ್ತಿದ್ದೇನೆಂದು ನೀನು ನನ್ನನ್ನು ರಕ್ಷಿಸಬೇಕು. ದೇವನೇ, ಈ ಅಗ್ನಿಯು ನನ್ನನ್ನು ಸುಡದಂತೆ ತಕ್ಷಣ ಅನುಗ್ರಹಿಸು (ಎಂದು ಕೇಳಿದೆನು).
ಏವಂ ವಿಲಪಮಾನಸ್ಯ ಜ್ಞಾತ್ವಾ ಮೇ ವಚನಂ ಪ್ರಭುಃ |
ಮಾ ಭೈರಿತಿ ವಚಃ ಪ್ರಾಹ ಮೇಘಗಂಭೀರನಿಸ್ವನಃ |
ಸ ಮಾಮಾಶಾಸ್ಯ ವಚನಂ ಪ್ರಾಹೇದಂ ಭಗವಾನ್ ವಿಭುಃ ॥40॥
ಹೀಗೆ ಮಾತನಾಡುತ್ತಿದ್ದ ನನ್ನ ಮಾತನ್ನು ತಿಳಿದ ಪ್ರಭುವಾದ ಅವನು ಮೇಘ ಗಂಭೀರವಾಣಿಯಿಂದ ಹೆದರಬೇಡ ಎಂದು ನನ್ನನ್ನು ಕುರಿತು ಹೇಳಿದನು. ಆ ರೀತಿ ನನಗೆ ಸಮಾಧಾನವನ್ನು ಮಾಡಿ ವ್ಯಾಪ್ತನಾದ ಭಗವಂತನು ಹೀಗೆ ಹೇಳಿದನು.
ಮಮ ತ್ವಂ ವಿದಿತಃ ಸೌಮ್ಯ ಯಥಾವತ್ ತತ್ತ್ವದರ್ಶನೇ |
ಜ್ಞಾಪಿತಶ್ಚಾಪಿ ಯತ್ ಪಿತ್ರಾ ತಚ್ಚಾಪಿ ವಿದಿತಂ ಮಹತ್ ॥41॥
ಎಲ್ಲೈ ಪ್ರೀತಿಪಾತ್ರನೇ, ಸರಿಯಾದ ತತ್ತ್ವವನ್ನು ತಿಳಿಯಲು ನೀನು ಬಂದಿದ್ದೀಯೆ ಎಂದು ನಾನು ತಿಳಿದಿದ್ದೇನೆ. ನಿನಗೆ ನಿನ್ನ ತಂದೆಯು ಹೇಳಿದ ವಿಷಯವೆಲ್ಲವೂ ನನಗೆ ತಿಳಿದಿದೆ.
ವೈನತೇಯ ಮಮಾಪ್ಯೇವಮಹಂ ವೇದ್ಯಃ ಕಥಂಚನ |
ಮಹದೇತತ್ಸ್ವರೂಪಂ ಮೇ ನ ತೇ ವೇದ್ಯಂ ಕಥಂಚನ ॥42॥
ಮಾಂ ಹಿ ವಿಂದಂತಿ ವಿದ್ವಾಂಸೋ ಯೇ ಜ್ಞಾನೇ ಪರಿನಿಷ್ಠಿತಾಃ |
ನಿರ್ಮಮಾ ನಿರಹಂಕಾರಾ ನಿರಾಶೀರ್ಬಂಧನಾಯುತಾಃ ॥43॥
ಎಲ್ಲೈ ಗರುಡನೇ, ನಾನು ಯಾರಿಂದಲೂ ತಿಳಿಯಲು ಸಾಧ್ಯವಾದವನಲ್ಲ. ಅಹಂಕಾರ, ಮಮಕಾರವನ್ನು ಬಿಟ್ಟು, ಆಶಾಬಂಧಗಳಿಂದ ಮುಕ್ತರಾದ, ಜ್ಞಾನನಿಷ್ಠರಾದ ಜ್ಞಾನಿಗಳು ಮಾತ್ರ ನನ್ನನ್ನು ತಿಳಿಯುತ್ತಾರೆ.
ಭವಾಂಸ್ತು ಸತತಂ ಭಕ್ತೋ ಮನ್ಮನಾಃ ಪಕ್ಷಿಸತ್ತಮ |
ಸ್ಥೂಲಂ ಮಾಂ ವೇತ್ಸ್ಯತೇ ತಸ್ಮಾಜ್ಜಗತಃ ಕಾರಣೇ ಸ್ಥಿತಮ್ ॥44॥
ಎಲ್ಲೈ ಪಕ್ಷಿಶ್ರೇಷ್ಠನೇ, ನೀನು ಯಾವಾಗಲೂ ನನ್ನ ಭಕ್ತನಾಗಿ ನನ್ನಲ್ಲಿಯೇ ಮನಸ್ಸನ್ನು ಇಟ್ಟಿದ್ದೀಯೆ. ಆದ್ದರಿಂದ ಜಗತ್ತಿಗೆ ಕಾರಣವಾದ ನನ್ನ ಸ್ಥೂಲರೂಪವನ್ನು ತಿಳಿಯುವಿ (ಎಂದು ಹೇಳಿದನು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಗರುಡನಾರಾಯಣಸಮಾಗಮೋ ನಾಮ ಏಕೋನಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

ನಲವತ್ತನೆಯ ಅಧ್ಯಾಯ
ಗರುಡನಿಂದ ನಾರಾಯಣನ ಮಹಿಮೆಯ ವರ್ಣನೆ
ಸುಪರ್ಣಃ
ಏವಂ ದತ್ತಾಭಯಸ್ತೇನ ತತೋಽಹಮೃಷಿಸತ್ತಮಾಃ |
ನಷ್ಟಖೇದಶ್ರಮಭಯಃ ಕ್ಷಣೇನ ಹ್ಯಭವಂ ತದಾ ॥1॥
ಗರುಡ ನಾನು ಹೀಗೆ ಅವನಿಂದ ಅಭಯವನ್ನು ಪಡೆದ ತಕ್ಷಣ ಒಂದು ಕ್ಷಣದಲ್ಲಿ ನನ್ನ ದುಃಖ-ಶ್ರಮ-ಭಯಗಳು ನಾಶವನ್ನು ಹೊಂದಿದವು.
ಸ ಶನೈರ್ಯಾತಿ ಭಗವಾನ್ ಗತ್ಯಾ ಲಘುಪರಾಕ್ರಮಃ |
ಅಹಂ ತು ಸುಮಹಾವೇಗಮಾಸ್ಥಾಯಾನುವ್ರಜಾಮಿ ತಮ್ ॥2॥
ಅಲ್ಪಪರಾಕ್ರಮವನ್ನು ತೋರಿಸುತ್ತಿದ್ದ ಆ ಭಗವಂತನು ನಿಧಾನಗತಿಯಿಂದ ಮುಂದೆ ಹೋಗುತ್ತಿದ್ದನು. ನಾನಾದರೂ ಬಹಳ ವೇಗವನ್ನು ಹೊಂದಿ ಅವನನ್ನು ಹಿಂಬಾಲಿಸಿದೆನು.
ಸ ಗತ್ವಾ ದೀರ್ಘಮಧ್ವಾನಮಾಕಾಶಮಮಿತದ್ಯುತಿಃ |
ಮನಸಾಽಪ್ಯಗಮಂ ದೇಶಮಾಸಸಾದಾತ್ಮತತ್ತ್ವವಿತ್ ॥3॥
ಅಮಿತದ್ಯುತಿಯೂ, ಆತ್ಮತತ್ತ್ವಜ್ಞನೂ ಆದ ಅವನು ಪ್ರಕಾಶಮಾನವಾದ ದೀರ್ಘವಾದ ಮಾರ್ಗದಲ್ಲಿ ಹೋಗಿ ಮನಸ್ಸಿನಿಂದಲೂ ಸಮೀಪಿಸಲು ಸಾಧ್ಯವಿಲ್ಲದ ದೇಶವನ್ನು ತಲುಪಿದನು.
ಅಥ ದೇವಃ ಸಮಾಸಾದ್ಯ ಮನಸಃ ಸದೃಶಂ ಜವಮ್ |
ಮೋಹಯಿತ್ವಾ ಚ ಮಾಂ ತತ್ರ ಕ್ಷಣೇನಾಂತರಧೀಯತ ॥4॥
ಅನಂತರ ಆ ದೇವನು ತನ್ನ ಮನಸ್ಸಿಗೆ ಅನುಗುಣವಾದ ವೇಗವನ್ನು ಹೊಂದಿ, ನನಗೆ ಮೋಹವನ್ನುಂಟು ಮಾಡಿ, ಅಲ್ಲಿ ಒಂದು ಕ್ಷಣದಲ್ಲಿ ಅಂತರ್ಧಾನವನ್ನು ಹೊಂದಿದನು.

ತತ್ರಾಂಬುಧರಧೀರೇಣ ಭೋಶಬ್ದೇನಾನುನಾದಿನಾ |
ಅಯಂ ಭೋಽಹಮಿತಿ ಪ್ರಾಹ ವಾಕ್ಯಂ ವಾಕ್ಯವಿಶಾರದಃ ॥5॥
ವಾಕ್ಯವಿಶಾರದನಾದ ಅವನು ಮೇಘಗಂಭೀರವಾಣಿಯಿಂದ ಪ್ರತಿಧ್ವನಿಸುವ ಭೋಶಬ್ದದಿಂದ ಕೂಡಿದ `ಅಯ್ಯಾ ಇದು ನಾನು' ಎಂಬ ಮಾತನ್ನು ಆಡಿದನು.
ಶಬ್ದಾನುಸಾರೀ ತು ತತಸ್ತಂ ದೇಶಮಹಮಾವ್ರಜಮ್ |
ತತ್ರಾಪಶ್ಯಂ ತತಶ್ಚಾಹಂ ಶ್ರೀಮದ್ಧಂಸಯುತಂ ಸರಃ ॥6॥
ಆಗ ನಾನು ಶಬ್ದವನ್ನು ಅನುಸರಿಸಿ ಆ ದೇಶಕ್ಕೆ ಹೋದೆನು. ನಾನು ಅಲ್ಲಿ ಕಾಂತಿಯುಕ್ತವಾದ ಹಂಸಗಳಿಂದ ಕೂಡಿದ ಸರೋವರವನ್ನು ನೋಡಿದೆನು.
ಸ ತತ್ ಸರಃ ಸಮಾಸಾದ್ಯ ಭಗವಾನಾತ್ಮವಿತ್ತಮಃ |
ಭೋಶಬ್ದಪ್ರತಿಸೃಷ್ಟೇನ ಸ್ವರೇಣಾಪ್ರತಿವಾದಿನಾ ॥7॥
ವಿವೇಶ ದೇವಃ ಸ್ವಾಂ ಯೋನಿಂ ಮಾಮಿದಂ ಚಾಭ್ಯಭಾಷತ |
ವಿಶಸ್ವ ಸಲಿಲಂ ಸೌಮ್ಯ ಸುಖಮತ್ರ ವಸಾಮಹೇ ॥8॥
ಆತ್ಮಜ್ಞಾನಿಯಾದ ಭಗವಂತನಾದ ಅವನು ಆ ಸರೋವರವನ್ನು ತಲುಪಿ ಭೋಶಬ್ದದಿಂದ ಕೂಡಿದ ಪ್ರತಿಧ್ವನಿ ಬಾರದಂತಹ ಸ್ವರದಿಂದ ತನ್ನ ಯೋನಿಯಾದ ಆ ನೀರನ್ನು ಪ್ರವೇಶಿಸಿ ನನ್ನನ್ನು ಕುರಿತು- `ಎಲೈ ಸೌಮ್ಯನೇ, ನೀನೂ ಜಲವನ್ನು ಪ್ರವೇಶಿಸು. ನಾವಿಬ್ಬರೂ ಇಲ್ಲಿ ಸುಖವಾಗಿ ವಾಸ ಮಾಡೋಣ' ಎಂದು ಹೇಳಿದನು.
ತತಶ್ಚ ಪ್ರಾವಿಶಂ ತತ್ರ ಸಹ ತೇನ ಮಹಾತ್ಮನಾ |
ದೃಷ್ಟವಾನದ್ಭುತತರಂ ತಸ್ಮಿನ್ ಸರಸಿ ಭಾಸ್ವತಾಮ್ ॥9॥
ಅನಂತರ ಆ ಮಹಾತ್ಮನ ಜೊತೆಯಲ್ಲಿ ನಾನೂ ಆ ಜಲವನ್ನು ಪ್ರವೇಶಿಸಿದೆನು. ಆ ಸರೋವರದಲ್ಲಿ ಅದ್ಭುತವಾದ, ಪ್ರಕಾಶಮಾನವಾದ ವಿಷಯಗಳನ್ನು ನೋಡಿದೆನು.
ಅಗ್ನೀನಾಮಪ್ರಣೀತಾನಾಮಿದ್ಧಾನಾಮಿಂಧನೈರ್ವಿನಾ |
ದೀಪ್ತಾನಾಮಾಜ್ಯಸಿಕ್ತಾನಾಂ ಪ್ರಾಪ್ತಾಜ್ಯಾನಾಮಿವಾಭವತ್ ॥10॥
ಅಲ್ಲಿ ಇಂಧನವಿಲ್ಲದೆಯೇ ಆಜ್ಯವನ್ನು ಹಾಕಿದ, ಅಗ್ನಿಗಳಂತೆ ಜ್ವಲಿಸುವ ಆಜ್ಯರಹಿತವಾದ ಅಗ್ನಿಗಳನ್ನು ನೋಡಿದೆನು.
ದೀಪ್ತಿಸ್ತೇಷಾಮನಾಜ್ಯಾನಾಂ ಪ್ರಾಪ್ತಾಜ್ಯಾನಾಮಿವಾಭವತ್ |
ಅನಿದ್ಧಾನಾಮಿವ ಸತಾಮಿದ್ಧಾನಾಮಿವ ಭಾಸ್ವತಾಮ್ ॥11॥
ಆಜ್ಯವಿಲ್ಲದ ಆ ಅಗ್ನಿಗಳ ಪ್ರಕಾಶವು ಆಜ್ಯಸಿಕ್ತವಾದ ಅಗ್ನಿಗಳ ಪ್ರಕಾಶದಂತಿದ್ದಿತು. ಯಾರೂ ಜ್ವಲಿಸದಿದ್ದರೂ ಅವು ತಾವಾಗಿಯೇ ಜ್ವಲಿಸುತ್ತಿದ್ದವು.
ಅಥಾಹಂ ವರದಂ ದೇವಂ ನಾಪಶ್ಯಂ ತತ್ರ ಸಂಗತಮ್ |
ತತಃ ಸಮ್ಮೋಹಮಾಪನ್ನೋ ವಿಷಾದಮಗಮಂ ಪರಮ್ ॥12॥
ಅನಂತರ ನಾನು ಅಲ್ಲಿ ವರಪ್ರದನಾದ ಆ ದೇವನನ್ನು ಕಾಣಲಿಲ್ಲ. ಆಗ ನನಗೆ ಮೋಹವುಂಟಾಗಿ ತೀವ್ರವಾದ ವಿಷಾದ ಉಂಟಾಯಿತು.

ಅಪಶ್ಯಂ ಚಾಗ್ನಿಹೋತ್ರಾಣಿ ಶತಶೋಽಥ ಸಹಸ್ರಶಃ |
ವಿಧಿನಾ ಸಂಪ್ರಣೀತಾನಿ ಧಿಷ್ಣ್ಯೇಷ್ವಾಜ್ಯವತಾಂ ತದಾ ॥13॥
ಆಗ ವಿಧಿಪ್ರಕಾರವಾಗಿ ಸಾಧಿಸಿದ ಆಜ್ಯದಿಂದ ಕೂಡಿದ ಅಗ್ನಿಸ್ಥಾನಗಳನ್ನು ನೂರರ ಸಂಖ್ಯೆಯಲ್ಲಿ ಮತ್ತು ಸಾವಿರದ ಸಂಖ್ಯೆಯಲ್ಲಿ ಅಗ್ನಿಹೋತ್ರಗಳನ್ನು ನೋಡಿದೆನು.
ಅಸಂಮಾಪ್ಷತಳಾಂಶ್ಚೈವ ವೇದೀಃ ಕುಸುಮಸಂಸ್ತೃತಾಃ |
ಕುಶಪದ್ಮೋತ್ಪಲಾಸಂಗಾನ್ ಕಲಶಾಂಶ್ಚ ಹಿರಣ್ಮಯಾನ್ ॥14॥
ಕುಸುಮಗಳು ಹರಡಲ್ಪಟ್ಟ ಸಾರಿಸದ ವೇದಿಗಳನ್ನು ಕುಶಪದ್ಮ ಉತ್ಪಲಗಳನ್ನು ಹೊಂದಿದ ಬುಟ್ಟಿಗಳನ್ನು, ಸುವರ್ಣಮಯವಾದ ಕಲಶಗಳನ್ನು ನೋಡಿದೆನು.
ಅಗ್ನಿಹೋತ್ರಾಣಿ ಚಿತ್ರಾಣಿ ಶತಶೋಽಥ ಸಹಸ್ರಶಃ |
ಅಗ್ನಿಹೋತ್ರೋಪಯುಕ್ತಾನಿ ಯಾನಿ ದ್ರವ್ಯಾಣಿ ಕಾನಿಚಿತ್ |
ತಾನಿ ಚಾತ್ರ ಸಮೃದ್ಧಾನಿ ದೃಷ್ಟವಾನಸ್ಮ್ಯನೇಕಶಃ ॥15॥
ವಿಚಿತ್ರವಾದ ಅಗ್ನಿಹೋತ್ರಗಳನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ನೋಡಿದೆನು. ಅಗ್ನಿಹೋತ್ರಗಳಿಗೆ ಉಪಯುಕ್ತವಾದ ಯಾವ ದ್ರವ್ಯಗಳಿವೆಯೋ ಅವುಗಳು ಅಲ್ಲಿ ಅನೇಕ ಕಡೆಗಳಲ್ಲಿ ಸಮೃದ್ಧವಾಗಿರುವುದನ್ನು ನೋಡಿದೆನು.
ಮನೋಹೃದ್ಯತಮಶ್ಚಾತ್ರ ಸುರಭಿಃ ಪುಣ್ಯಲಕ್ಷಣಃ |
ಆಜ್ಯಗಂಧೋ ಮನೋಗ್ರಾಹೀ ಘ್ರಾಣಚಕ್ಷುಃ ಸುಖಾವಹಃ ॥16॥
ಅಲ್ಲಿ ಮನಸ್ಸಿಗೆ ಆನಂದವನ್ನುಂಟು ಮಾಡುವ ಪವಿತ್ರವಾದ ಸುವಾಸನೆಯಿಂದ ಕೂಡಿದ ಆಜ್ಯಗಂಧದಿಂದ ಸಹಿತವಾದ, ಮನಸ್ಸಿಗೆ ಹಿತವಾದ ಸುಖವನ್ನು ಕೊಡುವ ವಾಯುವು ಬೀಸುತ್ತಿದ್ದಿತು.
ತೇಷಾಂ ತತ್ರಾಗ್ನಿಹೋತ್ರಾಣಾಮೀಡಿತಾನಾಂ ಸಹಸ್ರಶಃ |
ಸಮೀಪೇ ತ್ವದ್ಭುತತಮಮಪಶ್ಯಮಹಮವ್ಯಯಮ್ ॥17॥
ಹೀಗೆ ಸಹಸ್ರಸಂಖ್ಯೆಯಲ್ಲಿ ಪೂಜಿಸಲ್ಪಟ್ಟ ಆ ಅಗ್ನಿಹೋತ್ರಗಳ ಸಮೀಪದಲ್ಲಿ ಅದ್ಭುತತಮವಾದ, ಅವ್ಯಯವಾದ ವಿಷಯವನ್ನು

ನೋಡಿದೆನು.
ಚಂದ್ರಾಂಶುಕಾಶಶುಭ್ರಾಣಾಂ ತುಷಾರೋದ್ಭೇದವರ್ಚಸಾಮ್ |
ವಿಮಲಾದಿತ್ಯಭಾಸಾನಾಂ ಸ್ಥಂಡಿಲಾನಿ ಸಹಸ್ರಶಃ ॥18॥
ದೃಷ್ಟಾನ್ಯಗ್ನಿಸಮೀಪೇ ತು ದ್ಯುತಿಮಂತಿ ಮಹಾಂತಿ ಚ |
ಏಷು ಚಾಗ್ನಿಸಮೀಪೇಷು ಶುಶ್ರಾವ ಸುಪದಾಕ್ಷರಾಃ ॥19॥
ಅಲ್ಲಿ ಚಂದ್ರಗಳ ಕಿರಣಗಳಂತೆ, ಕಾಶಕುಸುಮಗಳಂತೆ ಶುಭ್ರವಾದ ಹಿಮದ ಅಂಕುರದಂತೆ ವರ್ಚಸ್ಸನ್ನು ಹೊಂದಿದ, ವಿಮಲಾದಿತ್ಯ ಪ್ರಕಾಶವನ್ನು ಹೊಂದಿದ ಕಾಂತಿಯುಕ್ತವಾದ, ದೊಡ್ಡದಾದ ಸ್ಥಂಡಿಲಗಳನ್ನು ಸಹಸ್ರ ಸಂಖ್ಯೆಯಲ್ಲಿ ಅಗ್ನಿ ಸಮೀಪದಲ್ಲಿ ನಾನು ನೋಡಿದೆನು. ಆ ಅಗ್ನಿಗಳ ಸಮೀಪದಲ್ಲಿ ಒಳ್ಳೆಯ ಪದಾಕ್ಷರವುಳ್ಳ ವಾಣಿಯು ಕೇಳಿಬರುತ್ತಿದ್ದಿತು.
ಪ್ರಭಾವಾಂತರಿತಾನಾಂ ತು ಪ್ರಸ್ಪಷ್ಟಾಕ್ಷರಭಾಷಿಣಾಮ್ |
ಋಗ್ಯಜುಃಸಾಮಗಾನಾಂ ಚ ಮಧುರಾಃ ಸುಸ್ವರಾ ಗಿರಃ ॥20॥
ಸ್ಪಷ್ಟವಾದ ಅಕ್ಷರಗಳನ್ನು ಉಚ್ಚರಿಸುವ ಪ್ರಭಾವಯುಕ್ತರಾದ ಪುರುಷರ ಋಗ್ಯಜುಸ್ಸಾಮವೇದಗಳ ಮಧುರವಾದ ಸುಸ್ವರಗಳು ಕೇಳಿಬಂದವು.
ಸುಸಮ್ಮೃಷ್ಟತಳೈಸ್ತೈಸ್ತು ಬೃಹದ್ಭಿರ್ದೀಪ್ತತೇಜಸೈಃ |
ಪಾವಕೈಃ ಪಾವಿತಾತ್ಮಾಽಹಮಭವಂ ಲಘುವಿಕ್ರಮಃ ॥21॥
ಸುತ್ತಲೂ ಸಾರಿಸಿದ, ಬಹಳ ಪ್ರಕಾಶ ಹೊಂದಿದ ಮಹತ್ತಾದ, ಅನೇಕ ಅಗ್ನಿಗಳಿಂದ ಪವಿತ್ರೀಕರಿಸಲ್ಪಟ್ಟ ನಾನು ಲಘುವಿಕ್ರಮವನ್ನು ಹೊಂದಿದೆನು.
ತತೋಽಹಂ ತೇಷು ಧಿಷ್ಣ್ಯೇಷು ಜ್ವಲಮಾನೇಷು ಯಜ್ವನಾಮ್ |
ತಂ ದೇಶಂ ಪ್ರಣಮಿತ್ವಾಽಥ ಅನ್ವೇಷ್ಟುಮುಪಚಕ್ರಮೇ ॥22॥
ಅನಂತರ ನಾನು ಯಜ್ಞ ಮಾಡುವವರಿಂದ ಸ್ಥಾಪಿಸಲ್ಪಟ್ಟು, ತಮ್ಮ ಸ್ಥಾನಗಳಲ್ಲಿ ಅಗ್ನಿಗಳು ಜ್ವಲಿಸುತ್ತಿರಲು ಆ ದೇಶಕ್ಕೆ ನಮಸ್ಕಾರವನ್ನು ಮಾಡಿ ಹುಡುಕಲು ಪ್ರಾರಂಭಿಸಿದೆನು.
ತಾನ್ಯನೇಕಸಹಸ್ರಾಣಿ ಪರೀಯಂಸ್ತು ಮಹಾಜವಾತ್ |
ಅಪಶ್ಯಮಾನಸ್ತಂ ದೇವಂ ತತೋಽಹಂ ವ್ಯಥಿತೋಽಭವಮ್ ॥23॥
ಅಂತಹ ಅನೇಕ ಅಗ್ನಿಹೋತ್ರಗಳುಳ್ಳ ದೊಡ್ಡ ಅಗ್ನಿಯಲ್ಲಿ ಸುತ್ತಾಡುತ್ತಾ ಆ ದೇವನನ್ನು ಕಾಣದೆ ನಾನು ವ್ಯಥೆಯಿಂದ ಕೂಡಿದೆನು.
ತತಸ್ತೇಷ್ವಗ್ನಿಹೋತ್ರೇಷು ಜ್ವಲತ್ಸು ವಿಮಲಾರ್ಚಿಷು |
ಭಾನುಮತ್ಸು ನ ಪಶ್ಯಾಮಿ ದೇವದೇವಂ ಸನಾತನಮ್ ॥24॥
ವಿಮಲವಾದ ಜ್ವಾಲೆಗಳಿಂದ ಆ ಅಗ್ನಿಹೋತ್ರಗಳು ಪ್ರಕಾಶಮಾನವಾಗಿ ಉರಿಯುತ್ತಿದ್ದರೂ ಸನಾತನನಾದ ಆ ದೇವದೇವನನ್ನು ನಾನು ಕಾಣಲಿಲ್ಲ.
ತತೋಽಹಂ ತಾನಿ ದೀಪ್ತಾನಿ ಪರೀಯ ವ್ಯಥಿತೇಂದ್ರಿಯಃ |
ನಾಂತಂ ತೇಷಾಂ ಪ್ರಪಶ್ಯಾಮಿ ಖೇದಶ್ಚ ಸಹಸಾಭವತ್ ॥25॥
ಅನಂತರ ನಾನು ಮನೋವ್ಯಥೆಯನ್ನು ಹೊಂದಿ ಆ ದೀಪ್ತವಾದ ಅಗ್ನಿಗಳನ್ನು ಸುತ್ತುತ್ತಿರಲು ಅವುಗಳ ಅಂತವೇ ಕಾಣಲಿಲ್ಲ.
ವಿಹೃತ್ಯ ಸರ್ವತೋ ದೃಷ್ಟಿಂ ಭಯಮೋಹಸಮನ್ವಿತಃ |
ಶ್ರಮಂ ಪರಮಮಾಪನ್ನಶ್ಚಿಂತಯಾಮಿ ವಿಚೇತನಃ ॥26॥
ಎಲ್ಲ ಕಡೆಗಳಲ್ಲಿಯೂ ದೃಷ್ಟಿಯನು ಹರಿಸಿ, ಭಯಾಭ್ರಾಂತಿಯುಕ್ತನಾಗಿ, ಬಹಳ ದಣಿದು ವಿಚೇತನನಾಗಿ ಚಿಂತಿಸಿದೆ.
ತಸ್ಮಿನ್ನು ಖಲು ವರ್ತಾಮಿ ಲೋಕೇ ಕಿಂ ಚೈತದೀದೃಶಮ್ |
ಋಗ್ಯಜುಃಸಾಮನಿರ್ಘೋಷಃ ಶ್ರೂಯತೇ ನ ಚ ದೃಶ್ಯತೇ ॥27॥
ಆ ಲೋಕದಲ್ಲಿಯೇ ಇದ್ದೇನಷ್ಟೆ? ಇದು ಏಕೆ ಹೀಗಿದೆ? ಋಗ್ಯಜುಸ್ಸಾಮ ವೇದಗಳ ಸ್ವರಗಳು ಕೇಳಿ ಬರುತ್ತವೆ. ಆದರೆ ಯಾರೂ ಕಾಣುತ್ತಿಲ್ಲ (ಎಂದು ಚಿಂತಿಸಿದೆನು).
ನ ಚ ಪಶ್ಯಾಮಿ ತಂ ದೇವಂ ಯೇನಾಹಮಿಹ ಚೋದಿತಃ |
ಏವಂ ಚಿಂತಾಸಮಾಪನ್ನಃ ಪ್ರಧ್ಯಾತುಮುಪಚಕ್ರಮೇ ॥28॥
ಯಾವನಿಂದ ಇಲ್ಲಿಗೆ ಬರಲು ಪ್ರಚೋದಿಸಲ್ಪಟ್ಟೆನೋ ಅವನನ್ನೂ ಕಾಣದೆ ಚಿಂತಾಪರನಾಗಿ ಧ್ಯಾನವನ್ನು ಮಾಡಲು ಉಪಕ್ರಮಿಸಿದೆನು.
ತತಶ್ಚಿಂತಯತೋ ಮಹ್ಯಂ ಮೋಹೇನಾವಿಷ್ಟಚೇತಸಃ |
ಮಹಾನ್ ಶಬ್ದಃ ಪ್ರಾದುರಾಸೀತ್ ಸುಭೃಶಂ ಮೇಽವ್ಯಥಾಕರಃ ॥29॥
ಮೋಹದಿಂದ ಕೂಡಿದ ಮನಸ್ಸುಳ್ಳವನಾಗಿ ಅವನನ್ನೇ ಚಿಂತಿಸುತ್ತಿದ್ದ ನನಗೆ ವ್ಯಥೆಯನ್ನು ಪರಿಹರಿಸುವ ದೊಡ್ಡ ಶಬ್ದವು ಕೇಳಿಬಂದಿತು.
ತಥಾಽಹಂ ಸಹಸಾ ತತ್ರ ಶೃಣೋಮಿ ವಿಪುಲಧ್ವನಿಮ್ |
ಅಪಶ್ಯಂ ಚ ಸುಪರ್ಣಾನಾಂ ಸಹಸ್ರಾಣ್ಯಯುತಾನಿ ಚ ॥30॥
ಆ ವಿಪುಲಧ್ವನಿಯನ್ನು ಕೇಳಿದ ನಾನು ಸಹಸ್ರ ಅಯುತದ ಸಂಖ್ಯೆಯಲ್ಲಿ ಇದ್ದ ಸುಪರ್ಣಗಳನ್ನು (ಗರುಡ ಪಕ್ಷಿಗಳನ್ನು) ನೋಡಿದೆನು.

ಅಭ್ಯದ್ರವಂತ ಮಾಮೇವ ವಿಪುಲದ್ಯುತಿರಂಹಸಃ |

ತೇಷಾಮಹಂ ಪ್ರಭಾವೇಣ ಸರ್ವಥೈವಾವರೋಽಭವಮ್ ॥31॥
ವಿಪುಲವಾದ ಕಾಂತಿ ಮತ್ತು ವೇಗವನ್ನು ಹೊಂದಿದ ಅವುಗಳು ನನ್ನ ಕಡೆಗೆ ಓಡಿ ಬಂದವು. ಅವುಗಳ ಪ್ರಭಾವದ ಮುಂದೆ ನಾನು ಸರ್ವಥಾ ಅಲ್ಪನಾದೆನು.
ಸೋಽಹಂ ಸಮಂತಾತ್ ತೈಃ ಸರ್ವೈಃ ಸುಪರ್ಣೈರತಿತೇಜಸೈಃ |
ದೃಷ್ಟ್ವಾಽಽತ್ಮಾನಂ ಪರಿಗತಂ ಸಂಭ್ರಮಂ ಪರಮಂ ಗತಃ ॥32॥
ಅಂತಹ ನಾನು ಎಲ್ಲ ಕಡೆಗಳಿಂದಲೂ ಅಮಿತ ಸಾಮರ್ಥ್ಯವುಳ್ಳ ಅಂತಹ ಸುಪರ್ಣಗಳಿಂದ ಸುತ್ತುವರಿಯಲ್ಪಟ್ಟುದನ್ನು ನೋಡಿ ಗಾಬರಿಗೆ ಒಳಗಾದೆನು.
ವಿನಯಾವನತೋ ಭೂತ್ವಾ ನಮಶ್ಚಕ್ರೇ ಮಹಾತ್ಮನೇ |
ಅನಾದಿನಿಧನಾಯ್ಯೆಭಿರ್ನಾಮಭಿಃ ಪರಮಾತ್ಮನೇ ॥32॥
ಆಗ ವಿನಯದಿಂದ ಬಾಗಿ ಮಹಾತ್ಮನೂ, ಆದ್ಯಂತರಹಿತನೂ ಆದ ಪರಮಾತ್ಮನಿಗೆ ಈ ನಾಮಗಳಿಂದ ನಮಸ್ಕಾರವನ್ನು ಮಾಡಿದೆನು.
ನಾರಾಯಣಾಯ ಶುದ್ಧಾಯ ಶಾಶ್ವತಾಯ ಧ್ರುವಾಯ ಚ |
ಭೂತಭವ್ಯಭವೇಶಾಯ ಶಿವಾಯ ಶಿವಮೂರ್ತಯೇ ॥33॥
ನಾರಾಯಣನಾದ ಶುದ್ಧನಾದ, ಶಾಶ್ವತನಾದ, ಅಚಲನಾದ, ಭೂತಭವಿಷ್ಯತ್ ವರ್ತಮಾನ ಪ್ರಭುವಾದ, ಮಂಗಳಸ್ವರೂಪನಾದ, ಮಂಗಳ ಶರೀರವುಳ್ಳ;
ಶಿವಯೋನೇಃ ಶಿವಾದ್ಯಾಯ ಶಿವಪೂಜ್ಯತಮಾಯ ಚ |
ಘೋರರೂಪಾಯ ಮಹತೇ ಯುಗಾಂತಕರಣಾಯ ಚ ॥34॥
ಶಿವನಿಗೆ ಕಾರಣನಾದ, ಶಿವನಿಗಿಂತಲೂ ಮೊದಲನೆಯವನಾದ, ಶಿವನಿಂದ ಪೂಜ್ಯನಾದ, ಘೋರರೂಪವನ್ನು ಹೊಂದಿದ, ದೊಡ್ಡ ರೂಪವನ್ನು ಧರಿಸಿದ, ಯುಗಗಳನ್ನು ಪರ್ಯವಸಾನ ಮಾಡುವ;
ವಿಶ್ವಾಯ ವಿಶ್ವದೇವಾಯ ವಿಶ್ವೇಶಾಯ ಮಹಾತ್ಮನೇ |
ಸಹಸ್ರೋದರಪಾದಾಯ ಸಹಸ್ರನಯನಾಯ ಚ ॥35॥
ಸರ್ವತ್ರ ಪ್ರವಿಷ್ಟನಾದ, ವಿಶ್ವದೇವನಾದ, ವಿಶ್ವಪ್ರಭುವಾದ, ಮಹಾತ್ಮನಾದ, ಸಹಸ್ರ ಹೊಟ್ಟೆ-ಪಾದಗಳನ್ನು ಹೊಂದಿದ, ಸಹಸ್ರನಯನಗಳನ್ನು ಹೊಂದಿದ;
ಸಹಸ್ರಬಾಹವೇ ಚೈವ ಸಹಸ್ರವದನಾಯ ಚ |
ಶುಚಿಶ್ರವಾಯ ಮಹತೇ ಋತುಸಂವತ್ಸರಾಯ ಚ ॥36॥
ಸಹಸ್ರಬಾಹುಗಳನ್ನು ಹೊಂದಿದ, ಸಹಸ್ರ ಮುಖಗಳನ್ನು ಹೊಂದಿದ, ಪವಿತ್ರವಾದ ಕೀರ್ತಿಯುಳ್ಳ, ಮಹಾತ್ಮನಾದ, ಋತು-ಸಂವತ್ಸರ ಪ್ರವರ್ತಕನಾದ;
ಋಗ್ಯಜುಸ್ಸಾಮವಕ್ತ್ರಾಯ ಅಥರ್ವಶಿರಸೇ ನಮಃ |
ಹೃಷೀಕೇಶಾಯ ಕೃಷ್ಣಾಯ ದ್ರುಹಿಣೋರುಕ್ರಮಾಯ ಚ ॥37॥
ಋಗ್ಯಜುಸ್ಸಾಮವೇದಗಳನ್ನು ಮುಖದಲ್ಲಿ ಧರಿಸಿದ, ಅಥರ್ವವೇದವನ್ನು ಶಿರಸ್ಸಿನಲ್ಲಿ ಧರಿಸಿದ, ಇಂದ್ರಿಯಗಳ ಪತಿಯಾದ, ಆನಂದರೂಪನಾದ, ಬ್ರಹ್ಮದೇವರ ಪರಾಕ್ರಮಕ್ಕೆ ಕಾರಣನಾದ ಕೃಷ್ಣನಿಗೆ ನಮಸ್ಕಾರ.
ಬ್ರಹ್ಮೇಂದ್ರಕಾಯ ತಾರ್ಕ್ಷ್ಯಾಯ ವರಾಹಾಯ್ಯೆಕಶೃಂಗಿಣೇ |
ಶಿಪಿವಿಷ್ಟಾಯ ಸತ್ಯಾಯ ಹರಯೇಽಥ ಶಿಖಂಡಿನೇ ॥38॥
ಬ್ರಹ್ಮ-ಇಂದ್ರರಿಗೆ ಸುಖವನ್ನು ಕೊಡುವ, ಗರುಡನ ಅಂತರ್ಯಾಮಿಯಾದ, ವರಾಹರೂಪಿಯಾದ, ಏಕಶೃಂಗವುಳ್ಳ ಮತ್ಸ್ಯರೂಪಿಯಾದ, ಗರುಡಾರೂಢನಾದ, ಜಗತ್ಸೃಷ್ಟ್ಯಾದಿ ಕರ್ತನಾದ, ಪಾಪಪರಿಹಾರಕನಾದ, ಶಿಖೆಯನ್ನು ಧರಿಸಿದ;
ಹುತಾಯೋರ್ಧ್ವಾಯ ವಕ್ತ್ರಾಯ ರೌದ್ರಾನೀಕಾಯ ಸಾಧವೇ |
ಸಿಂಧವೇ ಸಿಂಧವರ್ಷಘ್ನೇ ದೇವಾನಾಂ ಸಿಂಧವೇ ನಮಃ ॥39॥
ಎಲ್ಲರಿಂದಲೂ ಆಹೂತನಾದ, ಉನ್ನತನಾದ, ವಾಕ್ ಪ್ರೇರಕನಾದ, ಭಯಂಕರವಾದ ಸೈನ್ಯವನ್ನು ಹೊಂದಿದ, ಸಾಧುವಾದ, ಆಶ್ರಯನಾದ, ಸಿಂಧವರ್ಷಘ್ನನಾದ ದೇವತೆಗಳಿಗೆ ಆಶ್ರಯನಾದ ಹರಿಗೆ ನಮಸ್ಕಾರ.
ಗರುತ್ಮತೇ ತ್ರಿನೇತ್ರಾಯ ಸುಧಾಮಾಯ ವೃಷಾವೃಷೇ |
ಸಮ್ರಾಡುಗ್ರೇ ಸಂಕೃತಯೇ ವಿರಜೇ ಸಂಭವೇ ಭವೇ ॥40॥
ರೆಕ್ಕೆಗಳನ್ನು ಹೊಂದಿದ, ತ್ರಿನೇತ್ರನಾದ, ಒಳ್ಳೆಯ ನಿವಾಸವನ್ನು ಹೊಂದಿರುವ, ಶ್ರೇಷ್ಠರಿಗೂ ಶ್ರೇಷ್ಠನಾದ, ಉಗ್ರನಾದ ಚಕ್ರವರ್ತಿಯಾದ, ಚೆನ್ನಾಗಿ ಕಾರ್ಯಗಳನ್ನು ಮಾಡುವ, ರಜೋರಹಿತನಾದ, ಉತ್ಪತ್ತಿ ಕಾರಣನಾದ, ವೈಭವರೂಪನಾದ;
ವೃಷಾಯ ವೃಷರೂಪಾಯ ವಿಭವೇ ಭೂರ್ಭುವಾಯ ಚ |
ದೀಪ್ತಸೃಷ್ಟಾಯ ಯಜ್ಞಾಯ ಸ್ಥಿರಾಯ ಸ್ಥವಿರಾಯ ಚ ॥41॥
ಶ್ರೇಷ್ಠನಾದ, ವೃಷಭರೂಪವನ್ನು ಧರಿಸಿದ, ವಿಭುವಾದ, ಪೂರ್ಣನಾದ, ಬಹುಪರಾಕ್ರಮಿಯಾದ, ದೀಪ್ತವಾದ ಸೃಷ್ಟಿಯನ್ನು ಹೊಂದಿದ, ಯಜನೀಯನಾದ, ಸ್ಥಿರನಾದ, ವೃದ್ಧನಾದ;
ಅಚ್ಯುತಾಯ ತುಷಾರಾಯ ವೀರಾಯ ಚ ಸಮಾಯ ಚ |
ಜಿಷ್ಣವೇ ಪುರುಹೂತಾಯ ವಸಿಷ್ಠಾಯ ವರಾಯ ಚ ॥42॥
ಚ್ಯುತಿರಹಿತನಾದ, ಶುಭ್ರನಾದ, ವೀರನಾದ, ಸಮನಾದ, ಜಯಶೀಲನಾದ, ಅನೇಕರಿಂದ ಸ್ತೋತ್ರ ಮಾಡಲ್ಪಡುವ, ವಾಸಮಾಡುವವರಲ್ಲಿ ಉತ್ತಮನಾದ, ಶ್ರೇಷ್ಠನಾದ;

ಸತ್ಯೇಶಾಯ ಸುರೇಶಾಯ ಹರಯೇಽಥ ಶಿಖಂಡಿನೇ |
ಬರ್ಹಿಷಾಯ ವರೇಣ್ಯಾಯ ವಸವೇ ವಿಶ್ವವೇಧಸೇ ॥43॥
ಸತ್ಯಕ್ಕೆ ಪ್ರಿಯನಾದ, ದೇವತೆಗಳಿಗೆ ಒಡೆಯನಾದ, ಹರಿರೂಪನಾದ, ಶಿಖಾ ಧಾರಿಯಾದ, ನವಿಲುಗರಿಯನ್ನು ಧರಿಸಿದ, ವರ್ಣನೀಯನಾದ, ಸರ್ವತ್ರ ವಾಸಿಸುವ, ವಿಶ್ವವನ್ನು ಧರಿಸುವ;
ಕಿರೀಟಿನೇ ಸುಕೇಶಾಯ ವಾಸುದೇವಾಯ ಶುಷ್ಮಿಣೇ |
ಬೃಹದುಗ್ಧ್ವೇ ಸುಷೇಣಾಯ ಯುಗ್ಯೇ ದುಂದುಭಯೇ ತಥಾ ॥44॥
ಕಿರೀಟವನ್ನು ಧರಿಸಿದ, ಒಳ್ಳೆಯ ಕೇಶವನ್ನು ಹೊಂದಿದ, ಪ್ರಶಸ್ತವಾದ ವೀರ್ಯವನ್ನು ಹೊಂದಿದ, ವಾಸುದೇವನಾದ, ಬಹಳ ಅಭೀಷ್ಟಗಳನ್ನು ಕರೆಯುವ, ಒಳ್ಳೆಯ ಸೈನ್ಯಗಳನ್ನು ಹೊಂದಿದ, ರಥದ ಅಶ್ವಗಳಲ್ಲಿ ಇರುವ, ದುಂದುಭಿಯಲ್ಲಿರುವ;
ಭವೇ ಸಖಾಯ ವಿಭವೇ ಭರದ್ವಾಜಾಭಯಾಯ ಚ |
ಭಾಸ್ಕರಾಯ ಚ ಚಂದ್ರಾಯ ಪದ್ಮನಾಭಾಯ ಭೂರಿಣೇ ॥45॥
ಸಂಸಾರದಲ್ಲಿ ಸ್ನೇಹಿತನಾದ, ವ್ಯಾಪ್ತನಾದ, ಅನ್ನಪ್ರೇಮಿಗಳಿಗೆ ಭಯದಾಯಕನಾದ, ಪ್ರಕಾಶಮಾನನಾದ, ಶ್ರೇಷ್ಠನಾದ, ಸ್ವಾಮಿಯಾದ, ಪದ್ಮನಾಭನಾದ, ಬಹುರೂಪಿಯಾದ (ನಿನಗೆ ನಮಸ್ಕಾರ).
ಪುನರ್ವಸುಭೃತತ್ವಾಯ ಜೀವಪ್ರಭವಿಷಯಾಯ ಚ |
ವಷಟ್ಕಾರಾಯ ಸ್ವಾಹಾಯೈ ಸ್ವಧಾಯ ನಿಧನಾಯ ಚ ॥46॥
ಪುನರ್ವಸು ಮೊದಲಾದ ನಕ್ಷತ್ರಗಳನ್ನು ಧರಿಸಿದ, ಜೀವನ ಜ್ಞಾನಕ್ಕೆ ವಿಷಯನಾದ, ಪೂರ್ಣಷಡ್ಗುಣ ಸಂಪನ್ನನಾದ, ಚೆನ್ನಾಗಿ ಆಹ್ವಾನಿಸಲ್ಪಡುವ, ಸುಖರೂಪನಾದ, ಜಗತ್ಸಂಹಾರಕನಾದ;
ಋಚೇ ಚ ಯಜುಷೇ ಸಾಮ್ನೇ ತ್ರೈಲೋಕ್ಯಪತಯೇ ನಮಃ |
ಶ್ರೀಪದ್ಮಾಯಾಜಸದೃಶೇ ಧರಣೇ ಧಾರಣೇ ಪರೇ ॥47॥
ಅರ್ಚನೀಯನಾದ, ಯಾಜ್ಯನಾದ, ಸಮನಾದ, ತ್ರಿಲೋಕಪತಿಯಾದ ನಿನಗೆ ನಮಸ್ಕಾರ. ಲಕ್ಷ್ಮಿಯಲ್ಲಿ ಶ್ರೀಪದ್ಮರೂಪದಿಂದಿರುವ, ನಿನಗೆ ನೀನೇ ಸದೃಶನಾದ, ಎಲ್ಲವನ್ನೂ ಧರಿಸುವ ಶ್ರೇಷ್ಠನಾದ;
ಸೌಮ್ಯಾಯ ಸೌಮ್ಯರೂಪಾಯ ಸೌಮ್ಯೇ ಸುಮನಸೇ ನಮಃ |
ವಿಶ್ವಾಯ ಚ ಸುವಿಶ್ವಾಯ ವಿಶ್ವರೂಪಧರಾಯ ಚ ॥48॥
ಸೌಮ್ಯನಾದ, ಸೌಮ್ಯಶರೀರವನ್ನು ಹೊಂದಿದ, ಒಳ್ಳೆಯ ಮನಸ್ಸನ್ನು ಹೊಂದಿದ ನಿನಗೆ ನಮಸ್ಕಾರ. ವಿಶ್ವನಾದ, ಒಳ್ಳೆಯ ವಿಶ್ವವನ್ನು ಹೊಂದಿದ, ವಿಶ್ವರೂಪವನ್ನು ಧರಿಸಿದ;
ಕೇಶವಾಯ ಸುಕೇಶಾಯ ರಶ್ಮಿಕೇಶಾಯ ಭೂರಿಣೇ |
ಹಿರಣ್ಯಗರ್ಭಾಯ ನಮಃ ಸೌಮ್ಯಾಯ ವೃಷರೂಪಿಣೇ ॥49॥
ಕೇಶವನಾದ, ಒಳ್ಳೆಯ ಕೇಶವನ್ನು ಹೊಂದಿದ, ಕಿರಣಗಳಂತಹ ಕೇಶವನ್ನು ಹೊಂದಿದ, ಬಹುರೂಪನಾದ, ಹಿರಣ್ಯಗರ್ಭನಾದ, ವೃಷರೂಪನಾದ, ಸೌಮ್ಯನಾದ ನಿನಗೆ ನಮಸ್ಕಾರ.
ನಾರಾಯಣಾಗ್ರವಪುಷೇ ಪುರುಹೂತಾಯ ವಜ್ರಿಣೇ |
ಧರ್ಮಿಣೇ ವೃಷಸೇನಾಯ ಧರ್ಮಸೇನಾಯ ರೋಧಸೇ ॥50॥
ನಾರಾಯಣನಾದ, ಶ್ರೇಷ್ಠ ಶರೀರವನ್ನು ಧರಿಸಿದ, ಅನೇಕರಿಂದ ಸ್ತೋತ್ರ ಮಾಡಲ್ಪಡುವ, ವಜ್ರಧರನಾದ, ಧರ್ಮಶೀಲನಾದ, ವೃಷಸೇನೆಯನ್ನು ಹೊಂದಿದ, ಧರ್ಮಸೇನೆಯನ್ನು ಹೊಂದಿದ, ಸಂಸಾರ ಸಮುದ್ರಕ್ಕೆ ದಡನಾದ;
ಮುನಯೇ ಜ್ವರಮುಕ್ತಾಯ ಜ್ವರಾಧಿಪತಯೇ ನಮಃ |
ಅನೇತ್ರಾಯ ತ್ರಿನೇತ್ರಾಯ ಪಿಂಗಲಾಯ ವಿಧರ್ಮಿಣೇ ॥51॥
ತಪೋಬ್ರಹ್ಮನಿಧಾನಾಯ ಯುಗಪರ್ಯಾಯಿಣೇ ನಮಃ |
ಶರಣಾಯ ಶರಣ್ಯಾಯ ಶಕ್ತೇಷ್ಟಶರಣಾಯ ಚ ॥52॥
ಜ್ಞಾನಶೀಲನಾದ, ಜ್ವರರಹಿತನಾದ, ಜ್ವರಸ್ವಾಮಿಯಾದ ನಿನಗೆ ನಮಸ್ಕಾರ. ಪ್ರಾಕೃತ ನೇತ್ರರಹಿತನಾದ, ಅಪ್ರಾಕೃತ ತ್ರಿನೇತ್ರನಾದ, ಪಿಂಗಲವರ್ಣದವನಾದ, ಪ್ರಜೆಗಳೆಂಬ ಅಲೆಗಳನ್ನು ಹೊಂದಿದ, ತಪಸ್ಸು ಮತ್ತು ವೇದಗಳಿಗೆ ನಿಧಿಯಾದ, ಯುಗ ಪ್ರವರ್ತಕನಾದ ನಿನಗೆ ನಮಸ್ಕಾರ. ಆಶ್ರಯನಾದ, ಶರಣು ಹೊಂದಲು ಯೋಗ್ಯನಾದ, ಶ್ರೇಷ್ಠನಾದ, ಭಕ್ತರಿಗೆ ಆಶ್ರಯನಾದ;
ನಮಃ ಸರ್ವಭವೇಶಾಯ ಭೂತಭವ್ಯಭವಾಯ ಚ |
ಪಾಹಿ ಮಾಂ ದೇವದೇವೇಶ ಕೋಽಪ್ಯಜೋಽಸಿ ಸನಾತನ |
ಏವಂ ಗತೋಽಸ್ಮಿ ಶರಣಂ ಶರಣ್ಯಂ ಬ್ರಹ್ಮಯೋನಿನಾಮ್ ॥53॥
ಎಲ್ಲ ವೈಭವಕ್ಕೂ ಕಾರಣನಾದ, ಭೂತ-ವರ್ತಮಾನ-ಭವಿಷ್ಯತ್ ಕಾಲಗಳಲ್ಲಿ ಇರುವ ನಿನಗೆ ನಮಸ್ಕಾರ. ಎಲೈ ದೇವದೇವೇಶನೇ ನನ್ನನ್ನು ರಕ್ಷಿಸು. ಎಲೈ ಸನಾತನನೇ, ನೀನು ಜನ್ಮರಹಿತನಾಗಿ ಲೋಕವಿಲಕ್ಷಣನಾಗಿದ್ದೀಯೆ. ಈ ರೀತಿ ಬ್ರಾಹ್ಮಣರಿಗೆ ಶರಣ್ಯನಾದ ಆ ದೇವನಿಗೆ ಶರಣಾಗತನಾದೆನು.
ಸ್ತವ್ಯಂ ಸ್ತವಂ ಸ್ತುತವತಃ ತತ್ತಮೋ ಮೇ ಪ್ರಣಶ್ಯತ |
ಭಯಂ ಚ ಮೇ ವ್ಯಪಗತಂ ಪಕ್ಷಿಣೋಽಂತರ್ಹಿತಾ ಭವನ್ |
ಶೃಣೋಮಿ ಚ ಗಿರಂ ದಿವ್ಯಾಮಂತರ್ಧಾನಗತಾಂ ಶಿವಾಮ್ ॥54॥
ಸ್ತೋತ್ರ ಮಾಡಲ್ಪಡಬೇಕಾದ ಸ್ತೋತ್ರವನ್ನು ಕೀರ್ತನೆ ಮಾಡಿದುದರಿಂದ ನನಗೆ ಆ ಮೋಹವು ನಷ್ಟವಾಯಿತು. ಭಯವು ನಾಶವಾಯಿತು. ಆ ಪಕ್ಷಿಗಳು ಅಂತರ್ಧಾನವನ್ನು ಹೊಂದಿದವು. ದಿವ್ಯವಾದ ಮಂಗಳವಾದ ಅಶರೀರವಾಣಿಯನ್ನು ಕೇಳಿದೆನು.

ಭಗವಾನ್
ಮಾ ಭೈರ್ಗರುತ್ಮನ್ ದಾಂತೋಽಸಿ ಪುನಃ ಸೇಂದ್ರಾ ದಿವೌಕಸಃ |
ಸ್ವಂ ಚೈವ ಭವನಂ ಗತ್ವಾ ದ್ರಕ್ಷ್ಯಸೇ ಪುತ್ರಬಾಂಧವಾನ್ ॥55॥
ಭಗವಾನ್ ಎಲೈ ಗರುಡನೇ, ಹೆದರಬೇಡ. ಇಂದ್ರಿಯನಿಗ್ರಹ ಉಳ್ಳವನಾಗಿದ್ದೀಯೆ. ನೀನು ಪುನಃ ನಿನ್ನ ಮನೆಗೆ ಹೋಗಿ ಇಂದ್ರಾದಿ ದೇವತೆಗಳನ್ನು, ನಿನ್ನ ಪುತ್ರ-ಬಾಂಧವರನ್ನು ನೋಡುವಿ.
ಸುಪರ್ಣಃ
ತತಸ್ತಸ್ಮಿನ್ ಕ್ಷಣೇನೈವ ಸಹಸೈವ ಮಹಾದ್ಯುತಿಃ |
ಪ್ರತ್ಯದೃಶ್ಯತ ತೇಜಸ್ವೀ ಪುರಸ್ತಾತ್ ಸ ಮಮಾಂತಿಕೇ ॥56॥
ಗರುಡ ಆಗ ಆ ಕ್ಷಣದಲ್ಲಿಯೇ ನನ್ನ ಸಮೀಪದಲ್ಲಿ ಮಹಾಕಾಂತಿಯುಳ್ಳ ತೇಜಸ್ವಿಯಾದ ಅವನು ನನ್ನ ಎದುರಿಗೆ ಕಂಡನು.
ಸಮಾಗಮ್ಯ ತತಸ್ತೇನ ಶಿವೇನ ಪರಮಾತ್ಮನಾ |
ಅಪಶ್ಯಂ ಚಾಹಮಾಯಾಂತಂ ನರನಾರಾಯಣಾಶ್ರಮೇ |
ಚತುರ್ದ್ವಿಗುಣವಿನ್ಯಾಸಂ ತಂ ಚ ದೇವಂ ಸನಾತನಮ್ ॥57॥
ಮಂಗಳಕರನಾದ ಆ ಪರಮಾತ್ಮನ ಜೊತೆಯಲ್ಲಿ ಸಂವಾದವನ್ನು ಹೊಂದಿ ನಾನು ನರನಾರಾಯಣಾಶ್ರಮಕ್ಕೆ ಹೋಗುತ್ತಿರುವುದನ್ನು ಗಮನಿಸಿದೆನು. ಎಂಟುಪಟ್ಟು ಗುಣಗಳಿಂದ ಕೂಡಿದ (ಎಂಟುಪಟ್ಟು ದೊಡ್ಡದಾದ ರೂಪದಿಂದ ಕೂಡಿದ) ಸನಾತನನಾದ ಆ ದೇವನನ್ನು ನೋಡಿದೆನು.
ಯಜತಸ್ತಾನೃಷೀನ್ ದೇವಾನ್ ವದತೋ ಧ್ಯಾಯತೋ ಮುನೀನ್ |
ಯುಕ್ತಾನ್ ಸಿದ್ಧಾನ್ ನೈಷ್ಠಿಕಾಂಶ್ಚ ಜಪತೋ ಯಜತೋ ಗೃಹೀನ್ ॥58॥
ಯಾಗ ಮಾಡುವ ಆ ಋಷಿಗಳನ್ನು, ಪ್ರವಚನ ಮಾಡುವ ದೇವತೆಗಳನ್ನು, ದಾನ ಮಾಡುವ ಮುನಿಗಳನ್ನು, ಯೋಗಯುಕ್ತರಾದ ಸಿದ್ಧರನ್ನು, ಜಪವನ್ನು ಮಾಡುವ ನೈಷ್ಠಿಕರಾದ ಬ್ರಹ್ಮಚಾರಿಗಳನ್ನು, ಯಾಗವನ್ನು ಮಾಡುವ ಗೃಹಸ್ಥರನ್ನು ನೋಡಿದೆನು.
ಪುಷ್ಪಪೂರಪರಿಕ್ಷಿಪ್ತಂ ಧೂಪಿತಂ ದೀಪಿತಂ ಹುತಮ್ |
ವಂದಿತಂ ಸಿಕ್ತಸಮ್ಮೃಷ್ಟಂ ನರನಾರಾಯಣಾಶ್ರಮಮ್ ॥59॥
ಆ ನರನಾರಾಯಣಾಶ್ರಮದಲ್ಲಿ ಪುಷ್ಪಸಮೂಹವೆಲ್ಲವೂ ಹರಡಿದ್ದಿತು. ಧೂಪ ದೀಪಗಳಿಂದ ಕೂಡಿ ಹಿತವಾಗಿ ವಂದನೀಯವಾಗಿದ್ದಿತು. ನೀರನ್ನು ಚುಮುಕಿಸಿ ಸಾರಿಸಲ್ಪಟ್ಟಿದ್ದಿತು.
ತದದ್ಭುತಮಹಂ ದೃಷ್ಟ್ವಾ ವಿಸ್ಮಿತೋಽಸ್ಮಿ ತದಾಽನಘಾಃ |
ಜಗಾಮ ಶಿರಸಾ ದೇವಂ ಪ್ರಯತೇನಾಂತರಾತ್ಮನಾ ॥60॥
ಎಲೈ ಅನಘರೇ, ಆ ಅದ್ಭುತವನ್ನು ನೋಡಿ ಆಗ ನಾನು ವಿಸ್ಮಯವನ್ನು ಹೊಂದಿದೆ. ನಾನು ಏಕಾಗ್ರವಾದ ಮನಸ್ಸಿನಿಂದ ಆ ದೇವನಿಗೆ ಶಿರಸಾ ನಮಸ್ಕಾರವನ್ನು ಮಾಡಿದೆ.
ತದತ್ಯದ್ಭುತಸಂಕಾಶಂ ಕಿಮೇತದಿತಿ ಚಿಂತಯನ್ |
ನಾಧ್ಯಗಚ್ಛಂ ಪರಂ ದಿವ್ಯಂ ತಸ್ಯ ಸರ್ವಭವಾತ್ಮನಃ ॥61॥
ಇದೇನು ಅದ್ಭುತವಾದ ದೃಶ್ಯ ಎಂದು ಚಿಂತಿಸಿದರೂ ಸರ್ವಸಂಪದ್ಭರಿತನಾದ ಆ ಪರಮಾತ್ಮನ ದಿವ್ಯ ಮಹಿಮೆಯನ್ನು ತಿಳಿಯಲು ಸಾಧ್ಯವಾಗಲಿಲ್ಲ.
ಪ್ರಣಿಪತ್ಯ ಸುದುರ್ಧರ್ಷಂ ಪುನಃ ಪುನರುದೀಕ್ಷ್ಯ ಚ |
ಶಿರಸ್ಯಂಜಲಿಮಾಧಾಯ ವಿಸ್ಮಯೋತ್ಫುಲ್ಲಲೋಚನಃ |
ಅವೋಚಂ ತಮದೀನಾರ್ಥಂ ಶ್ರೇಷ್ಠಾನಾಂ ಶ್ರೇಷ್ಠಮುತ್ತಮಮ್ ॥62॥
ನಾನು ಎಂದೂ ಸೋಲದ ಅವನಿಗೆ ನಮಸ್ಕಾರವನ್ನು ಮಾಡಿ ಪುನಃ ಪುನಃ ಅವನನ್ನು ನೋಡಿ ತಲೆ ಮೇಲೆ ಕೈಗಳನ್ನು ಜೋಡಿಸಿ ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವನಾಗಿ ಶ್ರೇಷ್ಠರಿಗೂ ಶ್ರೇಷ್ಠನಾದ, ಸರ್ವೋತ್ತಮನಾದ ಅವನನ್ನು ಕುರಿತು ಉದಾರ ಅರ್ಥವುಳ್ಳವಾದ ಮಂತ್ರವನ್ನು ಹೇಳಿದೆನು.
ನಮಸ್ತೇ ಭಗವನ್ ದೇವ ಭೂತಭವ್ಯಭವತ್ಪ್ರಭೋ |
ಯದೇತದದ್ಭುತಂ ದೇವ ಮಯಾ ದೃಷ್ಟಂ ತ್ವದಾಶ್ರಯಮ್ |
ಅನಾದಿಮಧ್ಯಪರ್ಯಂತಂ ಕಿಂ ತಚ್ಛಂಸಿತುಮರ್ಹಸಿ ॥63॥
ಎಲೈ ದೇವನೇ, ಭಗವಂತನೇ, ಭೂತ-ಭವ್ಯ-ಭವತ್ಪ್ರಭುವೇ, ನಿನಗೆ ನಮಸ್ಕಾರ. ಎಲೈ ದೇವನೇ, ನಿನಗೆ ಸಂಬಂಧಿಸಿದ ನಾನು ನೋಡಿದ ಆದಿಮಧ್ಯಾಂತರಹಿತವಾದ ಈ ಅದ್ಭುತವಾದ ದೃಶ್ಯವು ಏನೆಂದು ತಿಳಿಸುವವನಾಗು.
ಯದಿ ಜಾನಾಸಿ ಮಾಂ ಭಕ್ತಂ ಯದಿ ವಾಽನುಗ್ರಹೋ ಮಯಿ |
ಶಂಸ ಸರ್ವಮಶೇಷೇಣ ಶ್ರೋತವ್ಯಂ ಯದಿ ಚೇನ್ಮಯಾ ॥64॥
ನನ್ನನ್ನು ನೀನು ಭಕ್ತನೆಂದು ಭಾವಿಸಿದರೆ ಮತ್ತು ನನ್ನಲ್ಲಿ ನಿನ್ನ ಅನುಗ್ರಹವಿದ್ದರೆ ಮತ್ತು ನನಗೆ ಎಲ್ಲವನ್ನೂ ಪೂರ್ಣವಾಗಿ ಕೇಳುವ ಅರ್ಹತೆ ಇದ್ದರೆ ನನಗೆ ಹೇಳು.
ಸ್ವಭಾವಸ್ತವ ದುರ್ಜ್ಞೇಯಃ ಪ್ರಾದುರ್ಭಾವೋ ಭವಸ್ಯ ಚ |
ಭವದ್ಭೂತಭವಿಷ್ಯೇಶ ಸರ್ವಥಾ ಗಹನಂ ಭವಾನ್ ॥65॥
ನಿನ್ನ ಸ್ವಭಾವವಾಗಲೀ, ನಿನ್ನ ಸಂಪತ್ತಿನ ಪ್ರಾದುರ್ಭಾವವಾಗಲೀ ತಿಳಿಯಲು ಅಸಾಧ್ಯವಾದುದು. ಎಲೈ ವರ್ತಮಾನ-ಭೂತ-ಭವಿಷ್ಯತ್ ಪ್ರಭುವೇ, ನೀನು ಸರ್ವಥಾ ತಿಳಿಯಲು ಬಹಳ ಕಷ್ಟಸಾಧ್ಯನಾದವನು.

ಬ್ರೂಹಿ ಸರ್ವಮಶೇಷೇಣ ತದಾಶ್ಚರ್ಯಂ ಮಹಾಮುನೇ |
ಕಿಂ ತದತ್ಯದ್ಭುತಂ ವೃತ್ತಂ ತೇಷ್ವಗ್ನಿಷು ಸಮಂತತಃ ||66||
ಎಲೈ ಮಹಾಮುನಿಯೇ, ಆ ಅಗ್ನಿಗಳಲ್ಲಿ ಸುತ್ತಲೂ ನಡೆದ ಅದ್ಭುತವಾದ, ಆಶ್ಚರ್ಯಕರವಾದ ಘಟನೆಯು ಏನೆಂದು ಹೇಳು.
ಕಾನಿ ತಾನ್ಯಗ್ನಿಹೋತ್ರಾಣಿ ಕೇಷಾಂ ಶಬ್ದಃ ಶ್ರುತೋ ಮಯಾ |
ಶೃಣ್ವತಾಂ ಬ್ರಹ್ಮ ಸತತಮದೃಶ್ಯಾನಾಂ ಮಹಾತ್ಮನಾಮ್ ||67||
ಆ ಅಗ್ನಿಹೋತ್ರಗಳು ಯಾವುವು? ನಾನು ಕೇಳಿದ ಶಬ್ದವು ಯಾವುದು? ಸತತವಾಗಿ ಅದೃಶ್ಯರಾಗಿ ವೇದವನ್ನು ಪಠಿಸಿದ ಆ ಮುನಿಗಳು ಯಾರು?
ಏತನ್ಮೇ ಭಗವನ್ ಕೃಷ್ಣ ಬ್ರೂಹಿ ಸರ್ವಮಶೇಷತಃ |
ಗೃಣಂತ್ಯಗ್ನಿಸಮೀಪೇಷು ಕೇ ಚ ತೇ ಬ್ರಹ್ಮರಾಶಯಃ ||68||
ಎಲೈ ಭಗವಂತನಾದ ಕೃಷ್ಣನೇ, ನನಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳು. ಅಗ್ನಿ ಸಮೀಪದಲ್ಲಿ ವೇದರಾಶಿಯಂತೆ ಕುಳಿತು ವೇದವನ್ನು ಉಚ್ಚಾರ ಮಾಡಿದ ಆ ಮುನಿಗಳು ಯಾರು?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಶ್ರೀನಾರಾಯಣಸ್ತುತಿರ್ನಾಮ ಚತ್ವಾರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂದನೆಯ ಅಧ್ಯಾಯ
ನಾರಾಯಣನಿಂದ ಗರುಡನಿಗೆ ತನ್ನ ಸ್ವರೂಪದ ಉಪದೇಶ
ಶ್ರೀಭಗವಾನ್
ಮಾಂ ನ ದೇವಾ ನ ಗಂಧರ್ವಾ ನ ಪಿಶಾಚಾ ನ ರಾಕ್ಷಸಾಃ |
ವಿದುಸ್ತತ್ತ್ವೇನ ತತ್ತ್ವಸ್ಥಂ ಸೂಕ್ಷ್ಮಾತ್ಮಾನಮವಸ್ಥಿತಮ್ ||1||
ಶ್ರೀಭಗವಾನ್ ಎಲ್ಲ ತತ್ತ್ವಗಳಲ್ಲಿ ಸೂಕ್ಷ್ಮರೂಪದಲ್ಲಿರುವ ನನ್ನನ್ನು ದೇವತೆಗಳಾಗಲೀ, ಗಂಧರ್ವರಾಗಲೀ, ಪಿಶಾಚಿಗಳಾಗಲೀ, ರಾಕ್ಷಸರಾಗಲೀ ಸರಿಯಾಗಿ ತಿಳಿದಿರುವುದಿಲ್ಲ.
ಚತುರ್ಧಾಽಹಂ ವಿಭಕ್ತಾತ್ಮಾ ಲೋಕಾನಾಂ ಹಿತಕಾಮ್ಯಯಾ |
ಭೂತಭವ್ಯಭವಿಷ್ಯಾದಿರನಾದಿರ್ವಿಶ್ವಕೃತ್ತಮಃ ||2||
ಭೂತ-ಭವ್ಯ-ಭವಿಷ್ಯ ವಸ್ತುಗಳಿಗೆ ಕಾರಣನಾದ, ಸ್ವತಃ ಅನಾದಿಯಾದ, ಜಗತ್ಸೃಷ್ಟಿ ಕಾರಣಗಳಲ್ಲಿ ಶ್ರೇಷ್ಠನಾದ ನಾನು ಲೋಕಕ್ಕೆ ಹಿತವನ್ನು ಬಯಸಿ ನಾಲ್ಕು ರೂಪಗಳನ್ನು ಧರಿಸಿದ್ದೇನೆ.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಮನೋ ಬುದ್ಧಿಶ್ಚ ತೇಜಶ್ಚ ತಮಃ ಸತ್ತ್ವಂ ರಜಸ್ತಥಾ ||3||
ಪ್ರಕೃತಿರ್ವಿಕೃತಿಶ್ಚೇತಿ ವಿದ್ಯಾವಿದ್ಯೇ ಶುಭಾಶುಭೇ |
ಮತ್ತ ಏತಾನಿ ಜಾಯಂತೇ ನಾಹಮೇಭ್ಯಃ ಕಥಂಚನ ||4||
ಭೂಮಿ, ವಾಯು, ಆಕಾಶ, ಜಲ, ಜ್ಯೋತಿ, ಮನಸ್ಸು, ಬುದ್ಧಿ, ತೇಜಸ್ಸು, ಸತ್ತ್ವ-ರಜಸ್-ತಮೋ ಗುಣಗಳು, ಪ್ರಕೃತಿ, ವಿಕಾರ, ಜ್ಞಾನ, ಅಜ್ಞಾನ, ಶುಭ, ಅಶುಭ - ಇವೆಲ್ಲವೂ ನನ್ನಿಂದಲೇ ಜನಿಸುತ್ತವೆ. ನಾನು ಇವುಗಳಿಂದ ಯಾವ ರೀತಿಯಿಂದಲೂ ಜನಿಸುವುದಿಲ್ಲ.
ಸ ಕಿಂಚಿಚ್ಛ್ರೇಯಸಾ ಯುಕ್ತಃ ಶ್ರೇಷ್ಠಭಾವಂ ವ್ಯವಸ್ಯತಿ |
ಧರ್ಮಯುಕ್ತಂ ಚ ಪುಣ್ಯಂ ಚ ಸೋಽಹಮಸ್ಮಿ ನಿರಾಮಯಃ ||5||
ಯಾವ ವಸ್ತುವು ಗುಣಗಳನ್ನು ಹೊಂದಿ ಶ್ರೇಷ್ಠವಾಗಿರುತ್ತದೆಯೋ, ಧರ್ಮಯುಕ್ತವೂ ಮತ್ತು ಪವಿತ್ರವೂ ಆಗಿರುತ್ತದೆಯೋ ಅಂತಹ ವಸ್ತುವಿನಲ್ಲಿ ನಿರ್ದೋಷನಾದ ನಾನು ಇರುತ್ತೇನೆ.
ಯತ್ ಸ್ವಭಾವಾತ್ಮತತ್ತ್ವಜ್ಞೈಃ ಕಾರಣೈರುಪಲಕ್ಷ್ಯತೇ |
ಅನಾದಿಮಧ್ಯನಿಧನಃ ಸೋಽಂತರಾತ್ಮಾಽಸ್ಮಿ ಶಾಶ್ವತಃ ||6||
ಸ್ವತಂತ್ರವಸ್ತುವನ್ನು, ಆತ್ಮತತ್ತ್ವವನ್ನು ತಿಳಿದವರು ಕಾರಣಗಳಿಂದ (ಹೇತುಗಳಿಂದ) ಯಾರನ್ನು ತಿಳಿಯುತ್ತಾರೆಯೋ ಅಂತಹ ಆದಿ-ಮಧ್ಯ-ಅಂತಶೂನ್ಯನಾದ, ಶಾಶ್ವತನಾದ ಅಂತರಾತ್ಮನು ನಾನಾಗಿದ್ದೇನೆ.
ಯತ್ತು ಮೇ ಪರಮಂ ಗುಹ್ಯಂ ರೂಪಂ ಸೂಕ್ಷ್ಮಾರ್ಥದರ್ಶಿಭಿಃ |
ಗೃಹ್ಯತೇ ಸೂಕ್ಷ್ಮಭಾವಜ್ಞೈಃ ಸೋಽವಿಭಾವ್ಯೋಽಸ್ಮಿ ಶಾಶ್ವತಃ ||7||
ಸೂಕ್ಷ್ಮದರ್ಶಿಗಳಾದ ಜ್ಞಾನಿಗಳಿಂದ ಯಾವ ನನ್ನ ಅತ್ಯಂತ ಶ್ರೇಷ್ಠವಾದ ಮತ್ತು ರಹಸ್ಯವಾದ ರೂಪವು ತಿಳಿಯಲ್ಪಡುತ್ತದೆಯೋ ಅಂತಹ ಶಾಶ್ವತನಾದ ನಾನು ಧ್ಯಾನಿಸಲ್ಪಡಬೇಕು.
ಯತ್ತು ಮೇ ಪರಮಂ ಗುಹ್ಯಂ ಯೇ(ತೇ)ನ ವ್ಯಾಪ್ತಮಿದಂ ಜಗತ್ |
ಸೋಽಹಂ ಗತಃ ಸರ್ವಸತ್ತ್ವಃ ಸರ್ವಸ್ಯ ಪ್ರಭವೋಽವ್ಯಯಃ ||8||
ನನ್ನ ಪರಮಮುಖ್ಯವಾದ ರೂಪವೇನಿದೆಯೋ ಅದರಿಂದ ಈ ಜಗತ್ತು ವ್ಯಾಪ್ತವಾಗಿದೆ. ಸರ್ವಗುಣಪೂರ್ಣನಾದ, ಸರ್ವ ವಸ್ತುಗಳ ಉತ್ಪತ್ತಿ-ವಿನಾಶಗಳಿಗೆ ಕಾರಣನಾದ ನಾನು ಈ ರೀತಿ ಇದ್ದೇನೆ.
ಮತ್ತೋ ಜಾತಾನಿ ಭೂತಾನಿ ಮಯಾ ಧಾರ್ಯಂತ್ಯಹರ್ನಿಶಮ್ |

ಮಯ್ಯೇವ ವಿಲಯಂ ಯಾಂತಿ ಪ್ರಲಯೇ ಪನ್ನಗಾಶನ ॥9॥
ನನ್ನಿಂದ ಜನಿಸಿದ ಎಲ್ಲ ಭೂತಗಳು ಹಗಲೂ-ರಾತ್ರಿಯೂ ನನ್ನಿಂದಲೇ ಧರಿಸಲ್ಪಡುತ್ತವೆ. ಎಲೈ ಪನ್ನಗಾಶನನಾದ ಗರುಡನೇ, ಪ್ರಳಯ ಕಾಲದಲ್ಲಿ ನನ್ನಲ್ಲೇ ವಿಲಯವನ್ನು ಹೊಂದುತ್ತವೆ.
ಯೋ ಮಾಂ ಯಥಾ ವೇದಯತಿ ತಸ್ಯ ತಸ್ಯಾಸ್ಮಿ ಕಾಶ್ಯಪ |
ಮನೋಬುದ್ಧಿಗತಃ ಶ್ರೇಯೋ ವಿದಧಾಮಿ ವಿಹಂಗಮ ॥10॥
ಎಲೈ ಕಶ್ಯಪಪುತ್ರನೇ, ಯಾರು ನನ್ನನ್ನು ಹೇಗೆ ಉಪಾಸನೆ ಮಾಡುತ್ತಾರೆಯೋ ಅವರವರಿಗೆ ನಾನು ಹಾಗೆಯೇ ಇರುತ್ತೇನೆ (ಕಾಣಿಸುತ್ತೇನೆ). ಎಲೈ ಪಕ್ಷಿಯೇ, ನಾನು ಮನಸ್ಸು, ಬುದ್ಧಿಗಳಲ್ಲಿದ್ದು ಅವರಿಗೆ ಶ್ರೇಯಸ್ಸನ್ನುಂಟು ಮಾಡುತ್ತೇನೆ.
ಮಾಂ ತು ಜ್ಞಾತುಂ ಕೃತಾ ಬುದ್ಧಿರ್ಭವತಾ ಪಕ್ಷಿಸತ್ತಮ |
ಶೃಣು ಯೋಽಹಂ ಯತಶ್ಚಾಹಂ ಯದರ್ಥಶ್ಚಾಹಮುದ್ಯತಃ ॥11॥
ಎಲೈ ಪಕ್ಷಿಶ್ರೇಷ್ಠನೇ, ನನ್ನನ್ನು ತಿಳಿಯಲು ನೀನು ನಿಶ್ಚಯಿಸಿದೆ. ನಾನು ಯಾರು? ಎಲ್ಲಿಂದ ಬಂದೆ? ಏನು ಮಾಡಲು ಉದ್ಯುಕ್ತನಾಗಿದ್ದೇನೆ ಎಂಬುದನ್ನು ಕೇಳು.
ಯೇ ಕೇಚಿನ್ನಿಯತಾತ್ಮಾನಸ್ತ್ರೇತಾಗ್ನಿಪರಮಾರ್ಚಿತಾಃ |
ಅಗ್ನಿಕಾರ್ಯಪರಾ ನಿತ್ಯಂ ಜಪಹೋಮಪರಾಯಣಾಃ ॥12॥
ಆತ್ಮನ್ಯಗ್ನೀನ್ ಸಮಾಧಾಯ ನಿಯತಾ ನಿಯತೇಂದ್ರಿಯಾಃ |
ಅನನ್ಯಮನಸಸ್ತೇ ಮಾಂ ಸರ್ವೇ ವೈ ಸಮುಪಾಸತೇ ॥13॥
ಯಾವ ದ್ವಿಜರು ಮನೋನಿಗ್ರಹವನ್ನು ಹೊಂದಿ, ತ್ರೇತಾಗ್ನಿಯ ಉಪಾಸನೆಯನ್ನು ಮಾಡಿ, ನಿತ್ಯವೂ ಅಗ್ನಿಕಾರ್ಯವನ್ನು ಮಾಡಿ, ಜಪಹೋಮ-ಪಾರಾಯಣಗಳನ್ನು ಮಾಡಿ, ತಮ್ಮಲ್ಲಿಯೇ ಅಗ್ನಿಯನ್ನು ಆರೋಪ ಮಾಡಿಕೊಂಡು, ಇಂದ್ರಿಯಜಯವನ್ನು ಹೊಂದಿ ಬೇರೆ ವಿಷಯವನ್ನು ಚಿಂತಿಸುವುದಿಲ್ಲವೋ ಅವರೆಲ್ಲರೂ ನನ್ನನ್ನು ಉಪಾಸನೆ ಮಾಡುತ್ತಾರೆ.
ಯಜಂತೋ ಜಪಯಜ್ಞೈರ್ಮಾಂ ಮಾನಸೈಶ್ಚ ಸುಸಂಯತಾಃ |
ಅಗ್ನೀನಭ್ಯುದ್ಯಯುಃ ಶಶ್ವದ್ ಅಗ್ನಿಷ್ವೇವಾಭಿಸಂಸ್ಥಿತಾಃ ॥14॥
ಒಳ್ಳೆಯ ಸಂಯಮದಿಂದ ಕೂಡಿ, ಮಾನಸ ಯಜ್ಞಗಳಿಂದಲೂ, ಜಪ ಯಜ್ಞಗಳಿಂದಲೂ ನನ್ನನ್ನು ಪೂಜಿಸುತ್ತಾ, ಅಗ್ನಿಯಲ್ಲಿ ಉದ್ಯುಕ್ತರಾದ ಅವರು ಯಾವಾಗಲೂ ಅಗ್ನಿಯಲ್ಲಿರುವ ನನ್ನನ್ನೇ ಉಪಾಸನೆ ಮಾಡಿ ಹೊಂದುತ್ತಾರೆ.
ಅನನ್ಯಕಾರ್ಯಾಃ ಶುಚಯೋ ನಿತ್ಯಮಗ್ನಿಪರಾಯಣಾಃ |
ಯ ಏವಂಬುದ್ಧಯೋ ಧೀರಾಸ್ತೇ ಮಾಂ ಗಚ್ಛಂತಿ ತಾದೃಶಾಃ ॥15॥
ನನ್ನ ಪೂಜೆಯನ್ನು ಬಿಟ್ಟು ಬೇರೆ ಕಾರ್ಯವನ್ನು ಮಾಡದೆ, ಶುದ್ಧರಾಗಿ ನಿತ್ಯವೂ ಅಗ್ನಿಪರಾಯಣರಾಗಿ, ಇಂತಹ ಬುದ್ಧಿಯನ್ನು ಹೊಂದಿದ ಧೀರರು ನನ್ನನ್ನು ಹೊಂದುತ್ತಾರೆ.
ಅಕಾಮಹತಸಂಕಲ್ಪಾ ಜ್ಞಾನೇ ನಿತ್ಯಂ ಸಮಾಹಿತಾಃ |
ಆತ್ಮನ್ಯಗ್ನೀನ್ ಸಮಾಧಾಯ ನಿರಾಹಾರಾ ನಿರಾಶಿಷಃ ॥16॥
ವಿಷಯೇಷು ನಿರಾರಂಭಾ ವಿಮುಕ್ತಾ ಜ್ಞಾನಚಕ್ಷುಷಃ |
ಅನನ್ಯಮನಸೋ ಧೀರಾಃ ಸ್ವಭಾವನಿಯಮಾನ್ವಿತಾಃ ॥17॥
ಯಾರ ಒಳ್ಳೆಯ ಸಂಕಲ್ಪಗಳು ಕಾಮದಿಂದ ಹತವಾಗುವುದಿಲ್ಲವೋ, ಯಾರು ಯಾವಾಗಲೂ ಜ್ಞಾನದಲ್ಲಿ ನಿಷ್ಠೆಯನ್ನು ಹೊಂದಿರುತ್ತಾರೆಯೋ, ತಮ್ಮಲ್ಲಿಯೇ ಅಗ್ನಿಯನ್ನು ಆರೋಪ ಮಾಡಿಕೊಂಡು, ಅಲ್ಪಾಹಾರರಾಗಿ, ಆಸೆಗಳನ್ನು ತೊರೆದು, ವಿಷಯಗಳಲ್ಲಿ ಪ್ರಸಕ್ತರಾಗದೆ ಜ್ಞಾನಚಕ್ಷುಸ್ಸನ್ನು ಹೊಂದಿ, ಅನನ್ಯ ಮನಸ್ಕರಾಗಿ ಸ್ವಾಭಾವಿಕವಾದ ನಿಯಮಗಳಿಂದ ಕೂಡಿರುತ್ತಾರೆಯೋ ಅಂತಹ ಧೀರರು ವಿಮುಕ್ತರಾಗುತ್ತಾರೆ.
ಯತ್ತದ್ ವಿಯತಿ ದೃಷ್ಟಂ ತತ್ ಸರಃ ಪದ್ಮೋತ್ಪಲಾಯುತಮ್ |
ತತ್ರಾಗ್ನಯಃ ಸನ್ನಿಹಿತಾ ದೀಪ್ಯಂತೇ ಸ್ಮ ನಿರಿಂಧನಾಃ ॥18॥
ನೀನು ಆಕಾಶದಲ್ಲಿ ಪದ್ಮೋತ್ಪಲ ಪುಷ್ಪಗಳಿಂದ ಕೂಡಿದ ಸರೋವರವನ್ನು ನೋಡಿದೆಯಷ್ಟೆ? ಅಲ್ಲಿ ಅಗ್ನಿಗಳು ಸನ್ನಿಹಿತವಾಗಿವೆ. ಇಂಧನವಿಲ್ಲದೆಯೇ ಅವು ಉರಿಯುತ್ತವೆ.
ಜ್ಞಾನಾಮಲಾಶಯಾಸ್ತಸ್ಮಿನ್ ಯೇ ಚ ಚಂದ್ರಾಂಶುನಿರ್ಮಲಾಃ |
ಉಪಾಸೀನಾ ಗೃಣಂತೋಽಗ್ನಿಂ ಪ್ರಸ್ಪಷ್ಟಾಕ್ಷರಭಾಷಿಣಃ |
ಆಕಾಂಕ್ಷಮಾಣಾಃ ಶುಚಯಸ್ತೇಷ್ವಗ್ನಿಷು ವಿಹಂಗಮ ॥19॥
ಎಲೈ ಪಕ್ಷಿಯೇ, ಆ ಅಗ್ನಿಯ ಸಮೀಪದಲ್ಲಿ ಕುಳಿತಿದ್ದ ಚಂದ್ರಕಿರಣಗಳಂತೆ ನಿರ್ಮಲವಾದ, ಜ್ಞಾನದಿಂದ ಪವಿತ್ರವಾದ ಮನಸ್ಸುಳ್ಳ, ಅಸ್ಪಷ್ಟವಾದ ಅಕ್ಷರದಿಂದ ಸ್ತೋತ್ರ ಮಾಡುತ್ತಿದ್ದ ಶುಚಿಗಳಾದ ಪುರುಷರು ಆ ಅಗ್ನಿಯಲ್ಲಿ ಇರುವ ನನ್ನನ್ನೇ ಬಯಸುವವರು.
ಯೇ ಮಯಾ ಭಾವಿತಾತ್ಮಾನೋ ಮಯ್ಯೇವಾಭಿರತಾಃ ಸದಾ |
ಉಪಾಸತೇ ಚ ಮಾಮೇವ ಜ್ಯೋತಿರ್ಭೂತಾ ನಿರಾಮಯಾಃ ॥20॥
ತೈರ್ಹಿ ತತ್ರೈವ ವಸ್ತವ್ಯಂ ನೀರಾಗಾತ್ಮಭಿರಚ್ಯುತೈಃ ॥21॥
ಯಾರ ಮನಸ್ಸನ್ನು ನಾನು ಪವಿತ್ರೀಕರಿಸಿದ ನಂತರ ಅವರು ನನ್ನಲ್ಲೇ ರತರಾಗಿ, ನಿರ್ದುಷ್ಟರಾಗಿ, ಜ್ಯೋತೀರೂಪವನ್ನು ಧರಿಸಿದ ನನ್ನನ್ನೇ ಉಪಾಸನೆ ಮಾಡುತ್ತಾರೆಯೋ ಅಂತಹ ವಿರಾಗಿಗಳಾದ ಅಚ್ಯುತವಾದ ಮನಸ್ಸಿನಿಂದ ಕೂಡಿದವರು ಅಲ್ಲಿಯೇ ವಾಸ ಮಾಡಬೇಕು.
ನಿರಾಹಾರಾ ಹ್ಯನಿಷ್ಯಂದಾಃ ಚಂದ್ರಾಂಶುಸದೃಶಪ್ರಭಾಃ |

ನಿರ್ಮಲಾ ನಿರಹಂಕಾರಾ ನಿರಾಲಂಬಾ ನಿರಾಶಿಷಃ |
ಮದ್ಭಕ್ತಾಃ ಸತತಂ ತೇ ವೈ ಭಕ್ತಸ್ತಾನಪಿ ಚಾಪ್ಯಹಮ್ ॥22॥
ಅಲ್ಪಾಹಾರವನ್ನು ಹೊಂದಿ, ಸ್ವೇದ ಮೊದಲಾದ ದೋಷಗಳಿಂದ ರಹಿತರಾಗಿ, ಚಂದ್ರಕಿರಣಗಳ ಕಾಂತಿಯನ್ನು ಹೊಂದಿ ನಿರ್ಮಲರಾಗಿ, ನಿರಹಂಕಾರರಾಗಿ, ನನ್ನನ್ನು ಬಿಟ್ಟು ಬೇರೆಯವರನ್ನು ಆಶ್ರಯಿಸದೆ, ಎಲ್ಲ ಆಸೆಗಳನ್ನು ತೊರೆದ ನನ್ನ ಭಕ್ತರು ಯಾರಿದ್ದಾರೆಯೋ ಅವರಲ್ಲಿ ನಾನು ಪ್ರೀತಿಯನ್ನು ಹೊಂದಿದ್ದೇನೆ.
ಚತುರ್ಧಾಽಹಂ ವಿಭಕ್ತಾತ್ಮಾ ಚರಾಮಿ ಜಗತೋ ಹಿತಃ |
ಲೋಕಾನಾಂ ಧಾರಣಾರ್ಥಾಯ ವಿಧಾನಂ ವಿದಧಾಮಿ ಚ ॥23॥
ಯಥಾವತ್ ತದಶೇಷೇಣ ಶ್ರೋತುಮರ್ಹತಿ ಮೇ ಭವಾನ್ ॥24॥
ನಾನು ನಾಲ್ಕು ರೂಪಗಳನ್ನು ಧರಿಸಿ ಜಗತ್ತಿಗೆ ಹಿತವನ್ನು ಮಾಡಲು ಸಂಚರಿಸುತ್ತೇನೆ. ಲೋಕವನ್ನು ಧಾರಣೆ ಮಾಡುವ ಪ್ರಕಾರವನ್ನು ರೂಪಿಸುತ್ತೇನೆ. ನೀನು ಅದೆಲ್ಲವನ್ನೂ ಸರಿಯಾಗಿ ಕೇಳಬೇಕು.
ಏಕಾ ಮೂರ್ತಿರ್ನಿರ್ಗುಣಾತ್ಮಾ ಯೋಗಂ ಪರಮಮಾಸ್ಥಿತಾ |
ದ್ವಿತೀಯಾ ಸೃಜತೇ ತಾತ ಭೂತಗ್ರಾಮಂ ಚರಾಚರಮ್ ॥25॥
ಒಂದು ರೂಪವು ಗುಣಗಳನ್ನು ಮೀರಿದ ಸ್ವರೂಪವುಳ್ಳದ್ದಾಗಿ ಪರಮಯೋಗವನ್ನು ಮಾಡುತ್ತದೆ. ಎಲೈ ಪ್ರೀತಿಪಾತ್ರನೇ, ದ್ವಿತೀಯಮೂರ್ತಿಯು ಚರಾಚರವಾದ ಜಗತ್ತನ್ನು ಸೃಷ್ಟಿಸುತ್ತದೆ.
ಸೃಷ್ಟಂ ಸಂಹರತೇ ಚೈಕಾ ಜಗತ್ ಸ್ಥಾವರಜಂಗಮಮ್ |
ಜಾತಾತ್ಮನಿಷ್ಠಾ ಕ್ಷಪಯನ್ ಮೋಹಯನ್ನಿವ ಮಾಯಯಾ |
ಕ್ಷಿಪಂತೀ ಮೋಹಯಂತೀ ಚ ಹ್ಯಾತ್ಮನಿಷ್ಠಾ ಸ್ವಮಾಯಯಾ ॥26॥
ಇನ್ನೊಂದು ಮೂರ್ತಿಯು ಸೃಷ್ಟವಾದ ಸ್ಥಾವರ-ಜಂಗಮಾತ್ಮಕವಾದ ಜಗತ್ತನ್ನು ಸಂಹರಿಸುತ್ತದೆ. ತನ್ನಲ್ಲೇ ನಿಷ್ಠೆಯನ್ನು ಹೊಂದಿದ ಆ ಮೂರ್ತಿಯು ತನ್ನ ಸಾಮರ್ಥ್ಯದಿಂದ ಜಗತ್ತನ್ನು ಮೋಹಗೊಳಿಸಿ ನಾಶಪಡಿಸುತ್ತದೆ. ತನ್ನ ಮಹಿಮೆಯಲ್ಲಿಯೇ ನಿಷ್ಠೆಯನ್ನು ಹೊಂದಿ ತನ್ನ ಸಾಮರ್ಥ್ಯದಿಂದಲೇ ಜಗತ್ತನ್ನು ಮೋಹಿಸುತ್ತದೆ ಮತ್ತು ನಾಶಗೊಳಿಸುತ್ತದೆ.
ಚತುರ್ಥೀ ಮೇ ಮಹಾಮೂರ್ತಿರ್ಜಗದ್ವೃದ್ಧಿಂ ದದಾತಿ ಸಾ |
ರಕ್ಷತೇ ಚಾಪಿ ನಿಯತಾ ಸೋಽಹಮಸ್ಮಿ ನಭಶ್ಚರಃ ॥27॥
ನನ್ನ ನಾಲ್ಕನೆಯ ರೂಪವು ಜಗತ್ತಿಗೆ ಅಭಿವೃದ್ಧಿಯನ್ನು ಕೊಡುತ್ತದೆ. ಜಗತ್ತಿನ ರಕ್ಷಣೆಯನ್ನು ಮಾಡುತ್ತದೆ. ಅಂತಹ ನಾನು ಆಕಾಶದಲ್ಲಿ ಸಂಚರಿಸುತ್ತೇನೆ.
ಮಯಾ ಸರ್ವಮಿದಂ ವ್ಯಾಪ್ತಂ ಮಯಿ ಸರ್ವಂ ಪ್ರತಿಷ್ಠಿತಮ್ |
ಅಹಂ ಸರ್ವಜಗದ್ಬೀಜಂ ಸರ್ವತ್ರ ಗತಿರವ್ಯಯಃ ॥28॥
ನನ್ನಿಂದ ಎಲ್ಲವೂ ವ್ಯಾಪ್ತವಾಗಿದೆ. ಎಲ್ಲವೂ ನನ್ನಲ್ಲಿ ಪ್ರತಿಷ್ಠಿತವಾಗಿದೆ. ಎಲ್ಲ ಜಗತ್ತಿಗೆ ನಾನು ಬೀಜದಂತೆ ಪ್ರಧಾನಕಾರಣನು. ನನಗೆ ಸರ್ವತ್ರ ಗತಿ ಇದೆ. ನಾನು ಅವ್ಯಯನಾದವನು.
ಯಾನಿ ತಾನ್ಯಗ್ನಿಹೋತ್ರಾಣಿ ಯೇ ಚ ಚಂದ್ರಾಂಶುರಾಶಯಃ |
ಗೃಣಂತಿ ವೇದಂ ಸತತಂ ತೇಷ್ವಗ್ನಿಷು ವಿಹಂಗಮ ॥29॥
ಕ್ರಮೇಣ ಮಾಂ ಸಮಾಯಾಂತಿ ಸುಖಿನೋ ಜ್ಞಾನಸಂಯುತಾಃ |
ತೇಷಾಮಹಂ ತಪೋ ದೀಪ್ತಂ ತೇಜಃ ಸಮ್ಯಕ್ ಸಮಾಹಿತಮ್ |
ನಿತ್ಯಂ ತೇ ಮಯಿ ವರ್ತಂತೇ ತೇಷು ಚಾಹಮತಂದ್ರಿತಃ ॥30॥
ಅಲ್ಲಿ ಯಾವ ಅಗ್ನಿಹೋತ್ರಗಳಿದ್ದವೋ ಚಂದ್ರಕಿರಣಗಳಂತೆ ಶುಭ್ರವಾಗಿ ಇದ್ದು ಆ ಅಗ್ನಿಗಳಲ್ಲಿ ಇರುವ ನನ್ನನ್ನು ಯಾರು ಸತತವಾಗಿ ವೇದಗಳಿಂದ ಸ್ತೋತ್ರ ಮಾಡುತ್ತಿದ್ದರೋ ಎಲೈ ಪಕ್ಷಿಯೇ, ಅವರೆಲ್ಲರೂ ಜ್ಞಾನಸಂಯುಕ್ತರಾಗಿ ಸುಖವನ್ನು ಹೊಂದಿ ಕ್ರಮವಾಗಿ ನನ್ನನ್ನು ಹೊಂದುತ್ತಾರೆ. ನಾನು ಅವರಿಗೆ ದೀಪ್ತವಾದ ತಪಸ್ಸನ್ನೂ, ಒಳ್ಳೆಯ ತೇಜಸ್ಸನ್ನೂ ದಯಪಾಲಿಸುತ್ತೇನೆ. ಅವರು ಯಾವಾಗಲೂ ಮನಸ್ಸಿನಿಂದ ನನ್ನಲ್ಲೇ ಇರುತ್ತಾರೆ. ನಾನೂ ಸಹ ಆಲಸ್ಯವಿಲ್ಲದೆ ಅವರಲ್ಲಿ ಇರುತ್ತೇನೆ.
ಸರ್ವತೋ ಮುಕ್ತಸಂಗೇನ ಮಯ್ಯನನ್ಯಸಮಾಧಿನಾ |
ಶಕ್ಯಃ ಸಮಾಸಾದಯಿತುಮಹಂ ವೈ ಜ್ಞಾನಚಕ್ಷುಷಾ ॥31॥
ಎಲ್ಲ ಕಡೆಗಳಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ಆಸೆಯನ್ನು ತೊರೆದು ಅಚಲವಾದ ಸಮಾಧಿಯಿಂದ ಮತ್ತು ಜ್ಞಾನದೃಷ್ಟಿಯಿಂದ ನನ್ನನ್ನು ಉಪಾಸನೆ ಮಾಡುವ ಪುರುಷನಿಂದ ನಾನು ಹೊಂದಲ್ಪಡುತ್ತೇನೆ.
ಮಾಂ ಸ್ಥೂಲದರ್ಶನಂ ವಿದ್ಧಿ ಜಗತಃ ಕಾರ್ಯಕಾರಣಮ್ |
ಮತ್ತಶ್ಚ ಸಂಪ್ರಸೂತಾನ್ ವೈ ವಿದ್ಧಿ ಲೋಕಾನ್ ಸದೈವತಾನ್ ॥32॥
ಜಗತ್ತಿನ ಎಲ್ಲ ಕಾರ್ಯಗಳಿಗೂ ಕಾರಣನಾದ ನನ್ನನ್ನು ಸ್ಥೂಲರೂಪವನ್ನು ಧರಿಸಿದವನೆಂದು ತಿಳಿ. ದೇವತೆಗಳಿಂದ ಸಹಿತವಾದ ಲೋಕಗಳು ನನ್ನಿಂದಲೇ ಜನಿಸಿವೆ ಎಂದು ತಿಳಿ.
ಮಯಾ ಚಾಪಿ ಚತುರ್ಧಾಽಽತ್ಮಾ ವಿಭಕ್ತಃ ಪ್ರಾಣಿಷು ಸ್ಥಿತಃ |
ಆತ್ಮಭೂತೋ ವಾಸುದೇವೋ ಹ್ಯನಿರುದ್ಧೋ ಮತೌ ಸ್ಥಿತಃ ॥33॥
ನಾನು ನನ್ನ ರೂಪವನ್ನು ನಾಲ್ಕು ವಿಭಾಗವನ್ನಾಗಿ ಮಾಡಿ ಜೀವರಲ್ಲಿ ಇದ್ದೇನೆ. ಜೀವರ ಆತ್ಮದಲ್ಲಿ ವಾಸುದೇವನಾಗಿದ್ದೇನೆ. ಬುದ್ಧಿಯಲ್ಲಿ ಅನಿರುದ್ಧನಾಗಿದ್ದೇನೆ.
ಸಂಕರ್ಷಣೋಽಹಂಕಾರೇ ಚ ಪ್ರದ್ಯುಮ್ನೋ ಮನಸಿ ಸ್ಥಿತಃ |

ಅನ್ಯಥಾ ಚ ಚತುರ್ಧಾ ಯತ್ ಸಮ್ಯಕ್ ತ್ವಂ ಶ್ರೋತುಮರ್ಹಸಿ ॥34॥
ಅಹಂಕಾರದಲ್ಲಿ ಸಂಕರ್ಷಣರೂಪದಿಂದಿದ್ದೇನೆ. ಮನಸ್ಸಿನಲ್ಲಿ ಪ್ರದ್ಯುಮ್ನ ರೂಪದಿಂದಿದ್ದೇನೆ. ನಾನು ಬೇರೆ ರೀತಿಯಲ್ಲಿಯೂ ನಾಲ್ಕು ವಿಭಾಗದಿಂದ ಇರುವುದನ್ನು ನೀನು ಸರಿಯಾಗಿ ಕೇಳು.
ಹಿರಣ್ಯಗರ್ಭಃ ಪದ್ಮಾಖ್ಯೋ ಯತ್ರ ಬ್ರಹ್ಮಾ ವ್ಯಜಾಯತ |
ಬ್ರಹ್ಮಣಶ್ಚಾಪಿ ಸಂಭೂತಃ ಶಿವ ಇತ್ಯವಧಾರ್ಯತಾಮ್ ॥35॥
ಶಿವಾತ್ ಸ್ಕಂದಃ ಸಂಬಭೂವ ಏತತ್ ಸೃಷ್ಟಿಚತುಷ್ಟಯಮ್ |
ದೈತ್ಯದಾನವದರ್ಪಘ್ನಮೇವಂ ಮಾಂ ವಿದ್ಧಿ ನಿತ್ಯಶಃ ॥36॥
ನನ್ನಿಂದ ಪದ್ಮವು ಉದಯಿಸಿತು. ಆ ಪದ್ಮದಲ್ಲಿ ಹಿರಣ್ಯಗರ್ಭನೆಂದೂ, ಪದ್ಮನೆಂದೂ ಕರೆಸಿಕೊಳ್ಳುವ ಬ್ರಹ್ಮನು ಜನಿಸಿದನು. ಬ್ರಹ್ಮನಿಂದ ಶಿವನು ಜನಿಸಿದನೆಂದು ತಿಳಿ. ಶಿವನಿಂದ ಸ್ಕಂದನು ಜನಿಸಿದನು. ಇದು ನಾಲ್ಕು ವಸ್ತುಗಳ ಸೃಷ್ಟಿ. ದೈತ್ಯ-ದಾನವ ದರ್ಪನಾಶನನಾದ ನನ್ನನ್ನು ಈ ನಾಲ್ಕು ಸೃಷ್ಟಿಗೆ ಕಾರಣನೆಂದು ಯಾವಾಗಲೂ ತಿಳಿ (ಈ ನಾಲ್ಕರಲ್ಲಿ ನಾನು ನಾಲ್ಕು ರೂಪಗಳಿಂದ ಇರುತ್ತೇನೆ).
ದೈತ್ಯದಾನವರಕ್ಷೋಭಿರ್ಯದಾ ಧರ್ಮಃ ಪ್ರಪೀಡ್ಯತೇ |
ತದಾಽಹಂ ಧರ್ಮವೃದ್ಧ್ಯರ್ಥಂ ಮೂರ್ತಿಮಾನ್ ಭವಿತಾಽಽಶುಗ ॥
ಎಲೈ ಶೀಘ್ರಗಾಮಿಯೇ, ದೈತ-ದಾನವ-ರಾಕ್ಷಸರಿಂದ ಧರ್ಮವು ಪೀಡಿಸಲ್ಪಟ್ಟಾಗ ಧರ್ಮದ ಸಂಸ್ಥಾಪನೆಗಾಗಿ ನಾನು ಶರೀರವನ್ನು ಧರಿಸಿ ಬರುತ್ತೇನೆ.
ವೇದವ್ರತಪರಾ ಯೇ ತು ಧೀರಾ ನಿಶ್ಚಿತಬುದ್ಧಯಃ |
ಯೋಗಿನೋ ಯೋಗಯುಕ್ತಾಶ್ಚ ತೇ ಮಾಂ ಪಶ್ಯಂತಿ ನಾನ್ಯಥಾ ॥38॥
ವೇದವ್ರತನಿಷ್ಠರಾದ, ನಿಶ್ಚಿತ ಬುದ್ಧಿಯುಳ್ಳ, ಯಾವಾಗಲೂ ನನ್ನ ಮನೋಯೋಗವನ್ನು ಹೊಂದಿದ ಧೀರರಾದ ಯೋಗಿಗಳು ನನ್ನನ್ನು ನೋಡುತ್ತಾರೆ. ನನ್ನನ್ನು ಬೇರೆ ರೀತಿಯಲ್ಲಿ ನೋಡಲು ಸಾಧ್ಯವಿಲ್ಲ.
ಪಂಚಭಿಃ ಸಂಪ್ರಯುಕ್ತೋಽಹಂ ವಿಪ್ರಯುಕ್ತಶ್ಚ ಪಂಚಭಿಃ |
ವರ್ತಮಾನಶ್ಚ ತೇಷ್ವೇವಂ ನಿವೃತ್ತಶ್ಚೈವ ತೇಷ್ವಹಮ್ ॥39॥
ನಾನು ಪಂಚಭೂತಗಳ ಸಂಯೋಗವನ್ನು ಹೊಂದಿದ್ದೇನೆ. ಆದರೂ ಪಂಚಭೂತಗಳ ವಿಯೋಗವನ್ನು ಹೊಂದಿದ್ದೇನೆ. ನಾನು ಈ ರೀತಿ ಅವುಗಳಲ್ಲಿದ್ದರೂ ಅವುಗಳ ದೋಷದಿಂದ ಸಂಯುಕ್ತನಾಗದಿರುವುದರಿಂದ ನಾನು ಅವುಗಳಿಂದ ನಿವೃತ್ತನಾಗಿದ್ದೇನೆ.
ಯೇ ವಿದುರ್ಜಾತಸಂಕಲ್ಪಾಸ್ತೇ ಮಾಂ ಪಶ್ಯಂತಿ ತಾದೃಶಾಃ |
ಖಂ ವಾಯುರಾಪೋ ಜ್ಯೋತಿಶ್ಚ ಪೃಥಿವೀ ಚೇತಿ ಪಂಚಮಮ್ |
ತದಾತ್ಮಕೋಽಸ್ಮಿ ವಿಜ್ಞೇಯೋ ನ ಚಾನ್ಯೋಽಸ್ಮೀತಿ ನಿಶ್ಚಿತಮ್ ॥40॥
ಯಾರು ಒಳ್ಳೆಯ ಸಂಕಲ್ಪವನ್ನು ಮಾಡಿ ಅನುಷ್ಠಾನ ಮಾಡುತ್ತಾರೆಯೋ ಅಂತಹವರು ನನ್ನನ್ನು ನೋಡುತ್ತಾರೆ. ನಾನು ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ ಇವುಗಳಲ್ಲಿ ವ್ಯಾಪ್ತನಾಗಿದ್ದೇನೆಂದು ತಿಳಿ. ನಾನು ವ್ಯಾಪ್ತನಾಗದೆ ಇರುವುದಿಲ್ಲವೆಂಬುದು ನಿಶ್ಚಿತವಾದುದು.
ವರ್ತಮಾನಮತೀತಂ ಚ ಪಂಚವರ್ಗೇಷು ನಿಶ್ಚಲಮ್ |
ಶಬ್ದಸ್ಪರ್ಶೇಷು ರೂಪೇಷು ರಸಗಂಧೇಷು ಚಾಪ್ಯಹಮ್ ॥41॥
ವರ್ತಮಾನವಾದ ಮತ್ತು ಅತೀತವಾದ, ಶಬ್ದ-ಸ್ಪರ್ಶ-ರೂಪ-ರಸ-ಗಂಧ ಈ ಪಂಚಸಮೂಹದಲ್ಲಿ ನಿಶ್ಚಲನಾದ ನಾನು ಇರುತ್ತೇನೆ.
ರಜಸ್ತಮೋಭ್ಯಾಮಾವಿಷ್ಟಾ ಯೇಷಾಂ ಬುದ್ಧಿರನಿಶ್ಚಿತಾ |
ತೇ ನ ಪಶ್ಯಂತಿ ಮೇ ತತ್ತ್ವಂ ತಪಸಾ ಮಹತಾ ಹ್ಯಪಿ ॥42॥
ಯಾರ ಬುದ್ಧಿಯು ರಜೋಗುಣ, ತಮೋಗುಣದಿಂದ ಪ್ರಭಾವಿತವಾಗಿ ಅನಿಶ್ಚಿತವಾಗಿರುತ್ತದೆಯೋ ಅಂತಹವರು ದೊಡ್ಡ ತಪಸ್ಸನ್ನು ಮಾಡಿದರೂ ನನ್ನನ್ನು ನೋಡುವುದಿಲ್ಲ.
ನೋಪವಾಸೈರ್ನ ನಿಯಮೈರ್ನ ವ್ರತೈರ್ವಿವಿಧೈರಪಿ |
ದ್ರಷ್ಟುಂ ವಾ ವೇದಿತುಂ ವಾಽಪಿ ನ ಶಕ್ಯಾ ಪರಮಾ ಗತಿಃ ॥43॥
ಉಪವಾಸಗಳಿಂದಾಗಲೀ, ನಿಯಮಗಳಿಂದಾಗಲೀ, ವಿವಿಧವಾದ ವ್ರತಗಳಿಂದಾಗಲೀ ನನ್ನ ನಿರ್ದುಷ್ಟವಾದ ರೂಪವನ್ನು ನೋಡಲು ಅಥವಾ ತಿಳಿಯಲು ಸಾಧ್ಯವಿಲ್ಲ.
ಮಹಾಮೋಹೋತ್ಥಪಂಕೇ ತು ನಿಮಗ್ನಾನಾಂ ಗತಿರ್ಹರಿಃ |
ಏಕಾಂತಿನೋ ಧ್ಯಾನಪರಾ ಯತಿಭಾವಾದ್ ವ್ರಜಂತಿ ಮಾಮ್ ॥44॥
ಮಹಾಮೋಹವೆಂಬ ಕೆಸರಿನಲ್ಲಿ ಮುಳುಗಿದವರಿಗೆ ಹರಿಯೆ ಗತಿ. ಏಕಾಂತಿಗಳು, ಧ್ಯಾನಪರರು, ಯತ್ನಶೀಲರು ನನ್ನನ್ನು ಹೊಂದುತ್ತಾರೆ.
ಸತ್ತ್ವಯುಕ್ತಾ ಮತಿರ್ಯೇಷಾಂ ಕೇವಲಾಽಽತ್ಮವಿನಿಶ್ಚಿತಾ |
ತೇ ಪಶ್ಯಂತಿ ಸ್ವಮಾತ್ಮಾನಂ ಪರಮಾತ್ಮಾನಮವ್ಯಯಮ್ ॥45॥
ಯಾರ ಮನಸ್ಸು ಸತ್ತ್ವಗುಣದಿಂದ ಯುಕ್ತವಾಗಿ, ನಿಶ್ಚಿತಜ್ಞಾನವನ್ನು ಹೊಂದಿ ನನ್ನಲ್ಲೇ ನೆಲೆ ಹೊಂದಿರುತ್ತದೆಯೋ ಅಂತಹವರು ತಮಗೆ ಸ್ವಾಮಿಯಾದ, ಅವ್ಯಯನಾದ, ಪರಮಾತ್ಮನಾದ ನನ್ನನ್ನು ನೋಡುತ್ತಾರೆ.
ಅಹಿಂಸಾ ಸರ್ವಭೂತೇಷು ತೇಷ್ವವಸ್ಥಿತಮಾರ್ಜವಮ್ |
ತೇಷ್ವೇವ ಚ ಸಮಾಧಾಯ ಸಮ್ಯಗೇತಿ ಸ ಮಾಮಜಮ್ ॥46॥

ಸರ್ವಭೂತಗಳಲ್ಲಿ ಅಹಿಂಸೆ ಮತ್ತು ಆರ್ಜವಗಳು ಇರುತ್ತವೆ. ಅವರಲ್ಲಿಯೇ ಸಮಾಧಿಯು ಇರುತ್ತದೆ. ಅಂತಹವರು ಜನ್ಮರಹಿತನಾದ ನನ್ನನ್ನು ಚೆನ್ನಾಗಿ ಹೊಂದುತ್ತಾರೆ.
ಯದೇತತ್ ಪರಮಂ ಗುಹ್ಯಮಾಖ್ಯಾನಂ ಪರಮಾದ್ಭುತಮ್ |
ಯತ್ನೇನ ತದಶೇಷೇಣ ಯಥಾವಚ್ಛ್ರೋತುಮರ್ಹಸಿ ॥47॥
ಪರಮಾದ್ಭುತವಾದ, ಪರಮರಹಸ್ಯವಾದ ಈ ನನ್ನ ಆಖ್ಯಾನವೇನಿದೆಯೋ ಅದನ್ನು ಪ್ರಯತ್ನಪೂರ್ವಕವಾಗಿ, ಸಮಗ್ರವಾಗಿ, ಸರಿಯಾಗಿ ಕೇಳುವವನಾಗು.
ಯೇ ತ್ವಗ್ನಿಹೋತ್ರನಿಯಮಾ ಜಪಯಜ್ಞಪರಾಯಣಾಃ |
ತೇ ಮಾಮುಪಾಸತೇ ಶಶ್ವದ್ ಏತಾಂಸ್ತ್ವಂ ದೃಷ್ಟವಾನಸಿ ॥48॥
ಯಾರು ನಿಯತವಾಗಿ ಅಗ್ನಿಹೋತ್ರನಿಷ್ಠರಾಗಿ, ಜಪ-ಯಜ್ಞಪರಾಯಣರಾಗಿ ಯಾವಾಗಲೂ ನನ್ನನ್ನು ಉಪಾಸನೆ ಮಾಡುತ್ತಾರೆಯೋ ಅಂತಹವರನ್ನು ನೀನು ನೋಡಿದೆ.
ಶಾಸ್ತ್ರದೃಷ್ಟವಿಧಾನಜ್ಞಾ ಅಸಕ್ತಾಃ ಕ್ವಚಿದನ್ಯಥಾ |
ಶಕ್ಯೋಽಹಂ ವೇದಿತುಂ ತೈಸ್ತು ಯನ್ಮೇ ಪರಮಮವ್ಯಯಮ್ ॥49॥
ಶಾಸ್ತ್ರದಲ್ಲಿ ವಿಧಿಸಿದ ವಿಧಾನಗಳನ್ನು ತಿಳಿದು ಬೇರೆ ವಿಷಯಗಳಲ್ಲಿ ಆಸಕ್ತರಾಗದೆ ಯಾರು ಇರುತ್ತಾರೆಯೋ ಅಂತಹವರು ನನ್ನ ಶ್ರೇಷ್ಠವಾದ ಅವ್ಯಯವಾದ ಸ್ವರೂಪವನ್ನು ತಿಳಿಯಲು ಸಾಧ್ಯವಾಗುತ್ತದೆ.
ಯೇ ತು ಸಾಂಖ್ಯಂ ಚ ಯೋಗಂ ಚ ಜ್ಞಾತ್ವಾಽಪ್ಯಧೃತನಿಶ್ಚಯಾಃ |
ನ ತೇ ಗಚ್ಛಂತ್ಯಕುಶಲಾಃ ಪರಾಂ ಗತಿಮನುತ್ತಮಾಮ್ ॥50॥
ಯಾರು ಸಾಂಖ್ಯಯೋಗಗಳನ್ನು ಚೆನ್ನಾಗಿ ತಿಳಿದಿದ್ದರೂ ನನ್ನ ವಿಷಯದಲ್ಲಿ ದೃಢವಾದ ನಿಶ್ಚಯವನ್ನು ಹೊಂದುವುದಿಲ್ಲವೋ ಅಂತಹ ಅಕುಶಲರು ಶ್ರೇಷ್ಠವಾದ ಪರಗತಿಯನ್ನು ಹೊಂದುವುದಿಲ್ಲ.
ತಸ್ಮಾಜ್ಜ್ಞಾನೇನ ಶುದ್ಧೇನ ಪ್ರಸನ್ನಾತ್ಮಾಽಽತ್ಮವಿಚ್ಛುಚಿಃ |
ಆಸಾದಯತಿ ತದ್ ಬ್ರಹ್ಮ ಯತ್ರ ಗತ್ವಾ ನ ಶೋಚತಿ ॥51॥
ಆದ್ದರಿಂದ ಪ್ರಸನ್ನವಾದ ಮನಸ್ಸನ್ನು ಹೊಂದಿ, ಪರಮಾತ್ಮನನ್ನು ತಿಳಿದು, ಶುಚಿಯಾಗಿ ಶುದ್ಧವಾದ ಜ್ಞಾನವನ್ನು ಹೊಂದಿದವನು ಯಾವನನ್ನು ಹೊಂದಿದರೆ ಶೋಕರಹಿತನಾಗುತ್ತಾನೆಯೋ ಅಂತಹ ಪರಬ್ರಹ್ಮನನ್ನು ಹೊಂದುತ್ತಾನೆ.
ಶುದ್ಧಾಭಿಜನಸಂಪನ್ನಾಃ ಶ್ರದ್ಧಾಯುಕ್ತೇನ ಚೇತಸಾ |
ಮದ್ಭಕ್ತ್ಯಾ ಚ ದ್ವಿಜಶ್ರೇಷ್ಠಾ ಗಚ್ಛಂತಿ ಪರಮಾಂ ಗತಿಮ್ ॥52॥
ಶುದ್ಧವಾದ ಕುಲಗಳಲ್ಲಿ ಜನಿಸಿ, ಶ್ರದ್ಧೆಯಿಂದ ಕೂಡಿದ ಮನಸ್ಸನ್ನು ಹೊಂದಿದ ದ್ವಿಜಶ್ರೇಷ್ಠರು ನನ್ನ ಭಕ್ತಿಯಿಂದ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ಯದ್ಗುಹ್ಯಂ ಪರಮಂ ಬುದ್ಧೇರಲಿಂಗಗ್ರಹಣಂ ಚ ಯತ್ |
ತತ್ ಸೂಕ್ಷ್ಮಂ ಗೃಹ್ಯತೇ ವಿಪ್ರೈರ್ಯತಿಭಿಸ್ತತ್ತ್ವದರ್ಶಿಭಿಃ ॥53॥
ಯಾವುದು ಅತ್ಯಂತ ರಹಸ್ಯವೋ, ಬುದ್ಧಿಯನ್ನು ಮೀರಿದುದೋ, ಅನುಮಾನಗಳಿಂದ ತಿಳಿಯಲ್ಪಡುವುದಿಲ್ಲವೋ ಅಂತಹ ಸೂಕ್ಷ್ಮವಾದ ತತ್ತ್ವವಾದ ನನ್ನನ್ನು ತತ್ತ್ವದರ್ಶಿಗಳಾದ, ಪ್ರಯತ್ನಶೀಲರಾದ ವಿಪ್ರರು ತಿಳಿಯುತ್ತಾರೆ.
ನ ವಾಯುಃ ಪವತೇ ತತ್ರ ನ ತಸ್ಮಿನ್ ಜ್ಯೋತಿಷಾಂ ಗತಿಃ |
ನ ಚಾಪಃ ಪೃಥಿವೀ ನೈವ ನಾಕಾಶಂ ನ ಮನೋಗತಿಃ ॥54॥
ಅಲ್ಲಿ ವಾಯುವು ಸಂಚರಿಸುವುದಿಲ್ಲ. ಜ್ಯೋತಿಸ್ಸುಗಳಿಗೆ ಅಲ್ಲಿ ಗತಿ ಇಲ್ಲ. ಅಲ್ಲಿ ಆಕಾಶವಾಗಲೀ, ಜಲವಾಗಲೀ, ಪೃಥಿವಿಯಾಗಲೀ ಇಲ್ಲ. ಮನೋಗತಿಯೂ ಇಲ್ಲ.
ತಸ್ಮಾಚ್ಚೈತಾನಿ ಸರ್ವಾಣಿ ಪ್ರಜಾಯಂತೇ ವಿಹಂಗಮ |
ಸರ್ವೇಭ್ಯಶ್ಚ ಸ ತೇಭ್ಯಶ್ಚ ಪ್ರಭವತ್ಯಮಲೋ ವಿಭುಃ॥55॥
ಎಲೈ ಪಕ್ಷಿಯೇ, ಅಂತಹ ಸೂಕ್ಷ್ಮತತ್ತ್ವದಿಂದ ಇವೆಲ್ಲವೂ ಜನಿಸುತ್ತವೆ. ನಿರ್ಮಲನಾದ, ವ್ಯಾಪ್ತನಾದ ಅವನು ಇವೆಲ್ಲವುಗಳಿಗೂ ಪ್ರಭುವಾಗಿದ್ದಾನೆ.
ಸ್ಥೂಲದರ್ಶನಮೇತನ್ಮೇ ಯದ್ದೃಷ್ಟಂ ಭವತಾಽನಘ |
ಏತತ್ಸೂಕ್ಷ್ಮಸ್ಯ ಚ ದ್ವಾರಂ ಕಾರ್ಯಾಣಾಂ ಕಾರಣಂ ತ್ವಹಮ್ ॥56॥
ಎಲೈ ಅನಘನೇ, ನೀನು ನೋಡಿದುದು ನನ್ನ ಸ್ಥೂಲವಾದ ರೂಪ. ಇದು ಸೂಕ್ಷ್ಮರೂಪದ ದರ್ಶನಕ್ಕೆ ದ್ವಾರವಾದುದು. ಸ್ಥೂಲರೂಪವು ಕಾರ್ಯಗಳಲ್ಲಿರುವ ರೂಪ. ಎಲ್ಲ ಕಾರ್ಯಗಳಿಗೂ ಕಾರಣನಾದ ಸೂಕ್ಷ್ಮರೂಪಧಾರಿಯಾದವನು ನಾನು.
ದೃಷ್ಟೋ ವೈ ಭವತಾ ತಸ್ಮಾತ್ ಸರಸ್ಯಮಿತವಿಕ್ರಮ |
ಬ್ರಹ್ಮಣೋ ಯದಹೋರಾತ್ರಂ ಸಂಖ್ಯಾನಜ್ಞೈರ್ವಿಭಾವ್ಯತೇ |
ಏಷ ಕಾಲಸ್ತ್ವಯಾ ತತ್ರ ಸರಸ್ಯಹಮುಪಾಗತಃ ॥57॥
ಎಲೈ ಅಮಿತವಿಕ್ರಮನೇ, ಆದ್ದರಿಂದ ನೀನು ಅಲ್ಲಿ ಸರೋವರದಲ್ಲಿ ನಾನು ಇದ್ದುದನ್ನು ನೋಡಿದೆ. ಎಣಿಸಲು ತಿಳಿಯುವವರು ಬ್ರಹ್ಮದೇವರ ಹಗಲು ಮತ್ತು ರಾತ್ರಿ ಎಂದು ಏನು ಹೇಳುತ್ತಾರೆಯೋ ಅಂತಹ ಸಾವಿರ ಚತುರ್ಯುಗದಷ್ಟು ಕಾಲ (ಚತುರ್ಯುಗದ ಸಾವಿರವು ಬ್ರಹ್ಮನ ಹಗಲು, ಅಷ್ಟೇ ಕಾಲ ಬ್ರಹ್ಮನ ರಾತ್ರಿ) ಅಲ್ಲಿ ಸರೋವರದಲ್ಲಿ ನಾನು ಸನ್ನಿಹಿತನಾಗಿದ್ದೆನು.
ಮಾಂ ಯಜ್ಞಮಾಹುರ್ಯಜ್ಞಜ್ಞಾ ವೇದಂ ವೇದವಿದೋ ಜನಾಃ |
ಮುನಯಶ್ಚಾಪಿ ಮಾಮೇವ ಜಪಯಜ್ಞಂ ಪ್ರಚಕ್ಷತೇ ॥58॥

ಯಜ್ಞವನ್ನು ತಿಳಿದವರು ನನ್ನನ್ನು ಯಜ್ಞನೆಂದೂ (ಯಜನೀಯನೆಂದು) ಹೇಳುತ್ತಾರೆ. ವೇದವನ್ನು ತಿಳಿದ ಪುರುಷರು ನನ್ನನ್ನು ವೇದವೆಂದೂ (ಜ್ಞಾನರೂಪನೆಂದು) ಹೇಳುತ್ತಾರೆ. ಮುನಿಗಳು ನನ್ನನ್ನೇ ಜಪಯಜ್ಞನೆಂದೂ (ಜನ್ಮದಿಂದ ರಕ್ಷಿಸುವವನೆಂದು ಮತ್ತು ಯಜನೀಯನೆಂದೂ) ಹೇಳುತ್ತಾರೆ.
ವಕ್ತಾ ಮಂತಾ ರಸಯಿತಾ ಘ್ರಾತಾ ದ್ರಷ್ಟಾ ಪ್ರದರ್ಶಕಃ |
ಬೋದ್ಧಾ ಬೋಧಯಿತಾ ಚಾಹಂ ಗಂತಾ ಶ್ರೋತಾ ಚಿದಾತ್ಮಕಃ ॥59॥
ಚೈತನ್ಯರೂಪನಾದ ನಾನೇ ಮಾತನಾಡುವವನು, ಮನಸ್ಸಿನಲ್ಲಿ ಯೋಚನೆ ಮಾಡುವವನು, ಜಿಹ್ವೆಯಿಂದ ರಸವನ್ನು ಅನುಭವಿಸುವವನು, ನಾಸಿಕದಿಂದ ಗಂಧವನ್ನು ಅನುಭವಿಸುವವನು, ಚಕ್ಷುಸ್ಸಿನಿಂದ ನೋಡುವವನು, ಜೀವನಿಗೆ ತೋರಿಸುವವನು, ಬುದ್ಧಿಯಿಂದ ತಿಳಿಸುವವನು, ನಾನೇ ನಡೆಯುವವನು ಮತ್ತು ಕೇಳುವವನು.
ಮಾಮಿಷ್ಟ್ವಾ ಸ್ವರ್ಗಮಾಯಾಂತಿ ತಥಾ ಚಾಪ್ನುವತೇ ಮಹತ್ |
ಜ್ಞಾತ್ವಾ ಮಾಮೇವ ಚೈವಂ ತೇ ನಿಸ್ಸಂಗೇನಾಂತರಾತ್ಮನಾ ॥60॥
ನಿಸ್ಸಂಗವಾದ ಮನಸ್ಸಿನಿಂದ ನನ್ನನ್ನು ಈ ರೀತಿಯಾಗಿ ತಿಳಿದು ನನ್ನನ್ನು ಪೂಜಿಸಿ ಸ್ವರ್ಗವನ್ನು ಹೊಂದುತ್ತಾರೆ ಮತ್ತು ಮಹತ್ತಾದ ಮೋಕ್ಷವನ್ನೂ ಹೊಂದುತ್ತಾರೆ.
ಅಹಂ ತೇಜೋ ದ್ವಿಜಾತೀನಾಂ ಮಮ ತೇಜೋ ದ್ವಿಜಾತಯಃ |
ಮಮ ಯಸ್ತೇಜಸಾ ದೇಹಃ ಸೋಽಗ್ನಿರಿತ್ಯವಗಮ್ಯತಾಮ್ ॥61॥
ನಾನು ದ್ವಿಜರ ತೇಜಸ್ಸಾಗಿದ್ದೇನೆ. ದ್ವಿಜರೂ ಸಹ ನನ್ನ ತೇಜಸ್ಸಾಗಿದ್ದಾರೆ. ನನ್ನ ತೇಜಸ್ಸೇ ರೂಪವನ್ನು ಧರಿಸಿ ಅಗ್ನಿ ಎಂದು ಕರೆಯಲ್ಪಡುತ್ತದೆ ಎಂದು ತಿಳಿ.
ಪ್ರಾಣಪಾಲಃ ಶರೀರೇಽಹಂ ಯೋಗಿನಾಮಹಮೀಶ್ವರಃ |
ಸಾಂಖ್ಯಾನಾಮಿದಮೇವಾಗ್ರೇ ಮಯಿ ಸರ್ವಮಿದಂ ಜಗತ್ ॥62॥
ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚೈವಾರ್ಜವಂ ಜಪಮ್ |
ತಮಃ ಸತ್ತ್ವಂ ರಜಶ್ಚೈವ ಕರ್ಮಜಂ ಚ ಭವಾಪ್ಯಯಮ್ ॥63॥
ನಾನು ಶರೀರಗಳಲ್ಲಿ ಇಂದ್ರಿಯಗಳನ್ನು ರಕ್ಷಿಸುವವನು. ಯೋಗಿಗಳಿಗೆ ನಾನು ಈಶ್ವರನಾದವನು. ಸಾಂಖ್ಯರಿಗೆ ಜಗತ್ತಿನ ಸೃಷ್ಟಿಗೆ ಕಾರಣನಾದವನು. ನನ್ನಲ್ಲಿ ಈ ಜಗತ್ತೆಲ್ಲವೂ ಇದೆ. ಇವೆಲ್ಲವೂ ಎಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳು, ಆರ್ಜವ, ಜಪ, ಸತ್ತ್ವ-ರಜಸ್-ತಮೋ ಗುಣಗಳು ಕರ್ಮದಿಂದ ಉಂಟಾದ ಅಭಿವೃದ್ಧಿ ಮತ್ತು ವಿನಾಶಗಳು.
ಸ ತದಾಽಹಂ ತಥಾರೂಪಸ್ತ್ವಯಾ ದೃಷ್ಟಃ ಸನಾತನಃ |
ತತಸ್ತ್ವಹಂ ಪರತರಃ ಶಕ್ಯಃ ಕಾಲೇನ ವೇದಿತುಮ್ ॥64॥
ಸನಾತನನಾದ ನಾನು ಆಗ ಅಂತಹ ರೂಪದಿಂದ ನೋಡಲ್ಪಟ್ಟೆನು. ಅದಕ್ಕಿಂತಲೂ ಶ್ರೇಷ್ಠವಾದ ನನ್ನ ರೂಪವನ್ನು ಕಾಲಕ್ರಮದಲ್ಲಿ ಉಪಾಸನೆಯಿಂದ ನೋಡಲು ಸಾಧ್ಯ.
ಮಮ ಯತ್ ಪರಮಂ ಗುಹ್ಯಂ ಶಾಶ್ವತಂ ಧ್ರುವಮವ್ಯಯಮ್ |
ತದೇವಂ ಪರಮೋ ಗುಹ್ಯೋ ದೇವೋ ನಾರಾಯಣೋ ಹರಿಃ |
ನ ತಚ್ಛಕ್ಯಂ ಭುಜಂಗಾರೇ ವೇತ್ತುಮಭ್ಯುದಯಾನ್ವಿತೈಃ ॥65॥
ನನ್ನ ಪರಮಗುಹ್ಯವಾದ, ಶಾಶ್ವತವಾದ, ಸ್ಥಿರವಾದ, ನಾಶರಹಿತವಾದ ರೂಪವೇನಿದೆಯೋ ಅದನ್ನೇ ಹರಿ ಎಂದೂ ದೇವನೆಂದೂ, ನಾರಾಯಣನೆಂದೂ ಹೇಳುತ್ತಾರೆ. ಎಲೈ ಸರ್ಪಶತ್ರುವೇ, ಸಾಂಸಾರಿಕ ಅಭಿವೃದ್ಧಿಯಲ್ಲಿ ನಿರತರಾದವರು ಅದನ್ನು ತಿಳಿಯಲಾರರು.
ನಿರಾರಂಭನಮಸ್ಕಾರಾ ನಿರಾಶೀರ್ಬಂಧನಾಸ್ತಥಾ |
ಗಚ್ಛಂತಿ ತಂ ಮಹಾತ್ಮಾನಂ ಪರಂ ಬ್ರಹ್ಮ ಸನಾತನಮ್ ॥66॥
ಕಾಮ್ಯಕರ್ಮಗಳನ್ನು ಆರಂಭಿಸದೆ, ಅದಕ್ಕಾಗಿ ನಮಸ್ಕರಿಸದೆ, ಆಶಾಬಂಧನಗಳನ್ನು ತೊರೆದ ಪುರುಷರು ಮಹಾತ್ಮನೂ, ಸನಾತನನೂ ಆದ ಆ ಪರಬ್ರಹ್ಮನನ್ನು ಹೊಂದುತ್ತಾರೆ.
ಸ್ಥೂಲೋಽಹಮೇವಂ ವಿಹಗ ತ್ವಯಾ ದೃಷ್ಟಸ್ತಥಾಽನಘ |
ಏತಚ್ಚಾಪಿ ನ ವೇತ್ತ್ಯನ್ಯಸ್ತ್ವಮೃತೇ ಪನ್ನಗಾಶನ ॥67॥
ಎಲೈ ಅನಘನೇ, ಪಕ್ಷಿಯೇ, ನೀನು ನೋಡಿದುದು ನನ್ನ ಸ್ಥೂಲರೂಪ. ಎಲೈ ಪನ್ನಗಾಶನನೇ, ಇದನ್ನೂ ಸಹ ನಿನ್ನನ್ನು ಬಿಟ್ಟು ಬೇರೆಯವರು ನೋಡಲಾರರು.
ಮಾ ಮತಿಸ್ತವ ಗಾನ್ನಾಶಮೇಷಾ ಗತಿರನುತ್ತಮಾ |
ಮದ್ಭಕ್ತೋ ಭವ ನಿತ್ಯಂ ತ್ವಂ ತತೋ ವೇತ್ಸ್ಯಸಿ ಮೇ ಪದಮ್ ॥68॥
ನಿನಗೆ ಉಂಟಾದ ಈ ಶ್ರೇಷ್ಠವಾದ ಜ್ಞಾನವು ನಾಶ ಹೊಂದದಿರಲಿ. ಯಾವಾಗಲೂ ನನ್ನಲ್ಲಿ ಭಕ್ತಿಯನ್ನು ಹೊಂದು. ಅದರಿಂದ ನನ್ನ ಶ್ರೇಷ್ಠವಾದ ಸ್ಥಾನವನ್ನು ಹೊಂದುವಿ.
ಏತತ್ ತೇ ಸರ್ವಮಾಖ್ಯಾತಂ ರಹಸ್ಯಂ ದಿವ್ಯಮಾನುಷಮ್ |
ಏತಚ್ಛ್ರೇಯಃ ಪರಂ ಚೈತತ್ ಪಂಥಾನಂ ವಿದ್ಧಿ ಮೋಕ್ಷಿಣಾಮ್ ॥69॥
ದಿವ್ಯಪುರುಷರಿಗೆ ಸಂಬಂಧಿಸಿದ ರಹಸ್ಯವಾದ ಇವೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇದು ಶ್ರೇಯಸ್ಸಾಧನ. ಇದು ಮೋಕ್ಷಮಾರ್ಗ ಎಂದು ತಿಳಿ.
ಸುಪರ್ಣಃ
ಏವಮುಕತ್ವಾ ಸ ಭಗವಾಂಸ್ತತ್ರೈವಾಂತರಧೀಯತ |

ಪಶ್ಯತೋ ಮೇ ಮಹಾಯೋಗೀ ಜಗಾಮಾತ್ಮಗತಿರ್ಗತಿಮ್ ॥70॥
ಗರುಡ ಹೀಗೆ ಹೇಳಿ ನಾನು ನೋಡುತ್ತಿರುವಂತೆಯೇ ಮಹಾಯೋಗಿಯೂ, ಆತ್ಮಗತಿಯೂ ಆದ ಭಗವಂತನು ಅಂತರ್ಧಾನವನ್ನು ಹೊಂದಿ ತನ್ನ ಸ್ವರೂಪವನ್ನು ತಲುಪಿದನು.
ಏತದೇವಂವಿಧಂ ತಸ್ಯ ಮಹಿಮಾನಂ ಮಹಾತ್ಮನಃ ।
ಅಚ್ಯುತಸ್ಯಾಪ್ರಮೇಯಸ್ಯ ದೃಷ್ಟವಾನಸ್ಮಿ ಯತ್ ಪುರಾ ॥71॥
ನಾನು ಹಿಂದೆ ಅಚ್ಯುತನೂ, ಅಪ್ರಮೇಯನೂ, ಮಹಾತ್ಮನೂ ಆದ ಯಾವ ಮಹಿಮೆಯನ್ನು ನೋಡಿದೆನೋ ಅದು ಇಂತಹ ರೀತಿಯಾದುದು.
ಏತದ್ ವಃ ಸರ್ವಮಾಖ್ಯಾತಂ ಚೇಷ್ಟಿತಂ ತಸ್ಯ ಧೀಮತಃ ।
ಮಯಾಽನುಭೂತಂ ಪ್ರತ್ಯಕ್ಷಂ ದೃಷ್ಟ್ವಾ ಚಾದ್ಭುತಕರ್ಮಣಃ ॥72॥
ಎಲೈ ಋಷಿಗಳೇ, ನಾನು ಮೇಧಾವಿಯಾದ, ಅದ್ಭುತಕಾರ್ಯವನ್ನು ಮಾಡುವ ಅವನ ವ್ಯಾಪಾರವನ್ನು ಪ್ರತ್ಯಕ್ಷವಾಗಿ ನೋಡಿ ಎಲ್ಲವನ್ನೂ ನಿಮಗೆ ಹೇಳಿದ್ದೇನೆ.
ಋಷಯಃ
ಅಹೋ ಶ್ರಾವಿತಮಾಖ್ಯಾನಂ ಭವತಾಽತ್ಯದ್ಭುತಂ ಮಹತ್ ।
ಪುಣ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ ॥73॥
ಋಷಿಗಳು ನೀನು ನಮಗೆ ಅತ್ಯದ್ಭುತವಾದ, ಶ್ರೇಷ್ಠವಾದ, ಪವಿತ್ರವಾದ, ಕೀರ್ತಿಪ್ರದವಾದ, ಆಯುಷ್ಯಪ್ರದವಾದ, ಸ್ವರ್ಗಪ್ರದವಾದ, ಮಂಗಳಕರವಾದ ಶ್ರೇಷ್ಠವಾದ ಆಖ್ಯಾನವನ್ನು ಹೇಳಿದ್ದೀಯೆ.
ಏತತ್ ಪವಿತ್ರಂ ದೇವಾನಾಮೇತದ್ ಗುಹ್ಯಂ ಪರಂತಪ ।
ಏತಜ್ಜ್ಞಾನವತಾಂ ಜ್ಞೇಯಮೇಷಾ ಗತಿರನುತ್ತಮಾ ॥74॥
ಎಲೈ ಪರಂತಪನೇ, ಇದು ಪವಿತ್ರವಾದುದು ಮತ್ತು ದೇವರಹಸ್ಯರೂಪವಾದುದು. ಜ್ಞಾನವಂತರಾದವರು ತಿಳಿಯಬೇಕಾದ ವಿಷಯ. ಇದೇ ಶ್ರೇಷ್ಠವಾದ ಗತಿ.
ಯ ಇಮಾಂ ಶ್ರಾವಯೇದ್ ವಿದ್ವಾನ್ ಕಥಾಂ ಪರ್ವಸು ಪರ್ವಸು ।
ಸ ಲೋಕಾನ್ ಪ್ರಾಪ್ನುಯಾತ್ ಪುಣ್ಯಾನ್ ದೇವರ್ಷಿಭಿರಭಿಷ್ಟುತಾನ್ ॥
ಯಾವ ವಿದ್ವಾಂಸನು ಈ ಕಥೆಯನ್ನು ಪರ್ವಪರ್ವಗಳಲ್ಲಿ ಪ್ರವಚನ ಮಾಡುತ್ತಾನೆಯೋ ಅವನು ದೇವರ್ಷಿಗಳಿಂದ ಸೂಚಿಸಲ್ಪಟ್ಟ ಪುಣ್ಯಲೋಕಗಳನ್ನು ಹೊಂದುವನು.
ಶ್ರಾದ್ಧಕಾಲೇ ಚ ವಿಪ್ರಾಣಾಂ ಯ ಇಮಾಂ ಶ್ರಾವಯೇಚ್ಛುಚಿಃ ।
ನ ತತ್ರ ರಕ್ಷಸಾಂ ಭಾಗೋ ನಾಸುರಾಣಾಂ ಚ ವಿದ್ಯತೇ ॥76॥
ಶ್ರಾದ್ಧಕಾಲದಲ್ಲಿ ಬ್ರಾಹ್ಮಣನಿಗೆ ಶುಚಿಯಾಗಿ ಈ ಮಹಿಮೆಯನ್ನು ಕೇಳಿಸಿದರೆ ಅಲ್ಲಿ ರಾಕ್ಷಸರಾಗಲೀ, ಅಸುರರಾಗಲೀ ಭಾಗವಹಿಸುವುದಿಲ್ಲ.
ಅನಸೂಯುರ್ಜಿತಕ್ರೋಧಃ ಸರ್ವಸತ್ತ್ವಹಿತೇ ರತಃ ।
ಯಃ ಪಠೇತ್ ಸತತಂ ಯುಕ್ತಃ ಸ ವ್ರಜೇತ್ ತತ್ಸಲೋಕತಾಮ್ ॥77॥
ಅಸೂಯಾರಹಿತನಾಗಿ, ಕ್ರೋಧವನ್ನು ಜಯಿಸಿ, ಸರ್ವಭೂತಗಳ ಹಿತದಲ್ಲಿ ರತನಾಗಿ ಸತತವಾಗಿ ಭಗವಂತನನ್ನು ಧ್ಯಾನಿಸಿ ಯಾವನು ಇದನ್ನು ಪಠಿಸುತ್ತಾನೆಯೋ ಅವನು ಪರಮಾತ್ಮನ ಸಾನ್ನಿಧ್ಯವನ್ನು ಹೊಂದುತ್ತಾನೆ.
ವೇದಾನ್ ಪಾರಯತೇ ವಿಪ್ರೋ ರಾಜಾ ವಿಜಯವಾನ್ ಭವೇತ್ ।
ವೈಶ್ಯಸ್ತು ಧನಧಾನ್ಯಾಢ್ಯಃ ಶೂದ್ರಃ ಸುಖಮವಾಪ್ನುಯಾತ್ ॥78॥
ವಿಪ್ರನು ವೇದಾಧ್ಯಯನವನ್ನು ಪೂರ್ಣಗೊಳಿಸುತ್ತಾನೆ. ರಾಜನು ವಿಜಯಶಾಲಿಯಾಗುತ್ತಾನೆ. ವೈಶ್ಯನು ಧನಧಾನ್ಯಾಢ್ಯನಾಗುತ್ತಾನೆ. ಶೂದ್ರನು ಸುಖವನ್ನು ಹೊಂದುತ್ತಾನೆ.
ಭೀಷ್ಮಃ
ತತಸ್ತೇ ಮುನಯಃ ಸರ್ವೇ ಸಂಪೂಜ್ಯ ವಿನತಾಸುತಮ್ ।
ಸ್ವಾನೇವ ಚಾಶ್ರಮಾನ್ ಜಗ್ಮುರ್ಬಭೂವುಃ ಶಾಂತಿತತ್ಪರಾಃ ॥79॥
ಭೀಷ್ಮರು ಅನಂತರ ಆ ಋಷಿಗಳೆಲ್ಲರೂ ವಿನತಾಪುತ್ರನಾದ ಗರುಡನನ್ನು ಪೂಜಿಸಿ ತಮ್ಮ ತಮ್ಮ ಆಶ್ರಮಗಳಿಗೆ ಹೋಗಿ ಶಾಂತಿತತ್ಪರರಾದರು.
ಸ್ಥೂಲದರ್ಶಿಭಿರಾಕೃಷ್ಟೋ ದುರ್ಜ್ಞೇಯೋ ಹ್ಯಕೃತಾತ್ಮಭಿಃ ।
ಏಷಾ ಶ್ರುತಿರ್ಮಹಾರಾಜ ಧರ್ಮ್ಯಾ ಧರ್ಮಭೃತಾಂವರ ॥80॥
ಸುರಾಣಾಂ ಬ್ರಹ್ಮಣಾ ಪ್ರೋಕ್ತಾ ವಿಸ್ಮಿತಾನಾಂ ಪರಂತಪ ॥81॥
ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಸ್ಥೂಲದರ್ಶಿಗಳಿಗೆ ಆಕರ್ಷಕವಾದ ಈ ಮಹಿಮೆಯನ್ನು ಮನೋಜಯರಹಿತರಾದವರು ತಿಳಿಯಲು ಸಾಧ್ಯವಿಲ್ಲ. ಎಲೈ ಮಹಾರಾಜನೇ, ಈ ಆಖ್ಯಾನವು ಧರ್ಮಪ್ರದವಾದುದು. ಎಲೈ ಪರಂತಪನೇ, ವಿಸ್ಮಿತರಾದ ದೇವತೆಗಳಿಗೆ ಬ್ರಹ್ಮದೇವರಿಂದ ಹೇಳಲ್ಪಟ್ಟುದು.
ಮಮಾಪ್ಯೇಷಾ ಕಥಾ ತಾತ ಕಥಿತಾ ಮಾತುರಂತಿಕೇ ।
ವಸುಭಿಃ ಸತ್ತ್ವಸಂಪನ್ನೈಸ್ತವಾಪ್ಯೇಷಾ ಮಯೋಚ್ಯತೇ ॥82॥
ಎಲೈ ಪ್ರೀತಿಪಾತ್ರನೇ, ನಾನೂ ಸಹ ತಾಯಿಯ ಸಮೀಪದಲ್ಲಿದ್ದಾಗ ಸತ್ವ ಸಂಪನ್ನರಾದ ವಸುಗಳಿಂದ ಈ ಕಥೆಯನ್ನು ಕೇಳಿದೆ.

ಇದನ್ನು ನಿನಗೆ ಹೇಳುತ್ತಿದ್ದೇನೆ.
ತದಗ್ನಿಹೋತ್ರಪರಮಾ ಜಪಯಜ್ಞಪರಾಯಣಾಃ |
ನಿರಾಶೀರ್ಬಂಧನಾಃ ಸಂತಃ ಪ್ರಯಾಂತ್ಯಕ್ಷರಸಾತ್ಮತಾಮ್ ॥83॥
ಆದ್ದರಿಂದ ಅಗ್ನಿಹೋತ್ರಪರಾಯಣರಾದ, ಜಪಯಜ್ಞಪರಾಯಣರಾದ, ಆಶಾ ಬಂಧನ ನಿರ್ಮುಕ್ತರಾದ ಸಜ್ಜನರು ಅಕ್ಷರನಾದ ಪರಮಾತ್ಮನ ಸಾಲೋಕ್ಯಾದಿಗಳನ್ನು ಹೊಂದುತ್ತಾರೆ.
ಆರಂಭಯಜ್ಞಾನುತ್ಸೃಜ್ಯ ಜಪಹೋಮಪರಾಯಣಾಃ |
ಧ್ಯಾಯಂತೋ ಮನಸಾ ವಿಷ್ಣುಂ ಗಚ್ಛಂತಿ ಪರಮಾಂ ಗತಿಮ್ ॥84॥
ಕಾಮ್ಯಫಲಕ್ಕಾಗಿ ಮಾಡುವ ಯಜ್ಞಗಳನ್ನು ತ್ಯಜಿಸಿ, ಜಪಹೋಮಪರಾಯಣರಾಗಿ ಮನಸ್ಸಿನಿಂದ ಯಾವಾಗಲೂ ವಿಷ್ಣುವನ್ನು ಧ್ಯಾನ ಮಾಡುವವರು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.
ತದೇವ ಪರಮೋ ಮೋಕ್ಷೋ ಮೋಕ್ಷದ್ವಾರಂ ಚ ಭಾರತ |
ಯದಾ ವಿನಿಶ್ಚಿತಾತ್ಮಾನೋ ಗಚ್ಛಂತಿ ಪರಮಾಂ ಗತಿಮ್ ॥85॥
ಎಲೈ ಭಾರತನೇ, ಸರಿಯಾದ ಜ್ಞಾನವನ್ನು ಹೊಂದಿ, ಶ್ರೇಷ್ಠವಾದ ಗತಿಯನ್ನು ಹೊಂದುವುದೇ ಪರಮಮೋಕ್ಷ ಮತ್ತು ಮೋಕ್ಷಮಾರ್ಗ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಗರುಡನಾರಾಯಣಸಂವಾದೇ
ನಾರಾಯಣಕಥಾನುವರ್ಣನಂ ನಾಮ ಏಕಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೆರಡನೆಯ ಅಧ್ಯಾಯ
ಅಷ್ಟಾವಕ್ರನೋಪಾಖ್ಯಾನ ಪ್ರಾರಂಭ. ಅಷ್ಟಾವಕ್ರ-ವದಾನ್ಯರ ಸಂವಾದ.
ಯುಧಿಷ್ಠಿರಃ
ಯದಿದಂ ಸಹಧರ್ಮೇತಿ ಪ್ರೋಚ್ಯತೇ ಭರತರ್ಷಭ |
ಪಾಣಿಗ್ರಹಣಕಾಲೇ ತು ಸ್ತ್ರೀಣಾಮೇತತ್ಕಥಂ ಸ್ಮೃತಮ್ ॥1॥
ಯುಧಿಷ್ಠಿರ ಎಲೈ ಭರತಶ್ರೇಷ್ಠನೇ, ಪಾಣಿಗ್ರಹಣ ಕಾಲದಲ್ಲಿ ಸ್ತ್ರೀಯರಿಗೆ ಸಹಧರ್ಮವನ್ನು ಹೇಳುತ್ತಾರಷ್ಟೆ? ಇದು ಹೇಗೆ ಹೇಳಲ್ಪಡುತ್ತದೆ?
ಆರ್ಷ ಏಷ ಭವೇದ್ ಧರ್ಮಃ ಪ್ರಾಜಾಪತ್ಯೋಽಥ ವಾಽಽಸುರಃ |
ಯದೇತತ್ಸಹಧರ್ಮೇತಿ ಪೂರ್ವಮುಕ್ತಂ ಮಹರ್ಷಿಭಿಃ ॥2॥
ಹಿಂದೆ ಮಹರ್ಷಿಗಳು ಹೇಳಿದ ಸಹಧರ್ಮವೆಂಬ ಈ ಆಚರಣೆಯು ಋಷಿಗಳ ಪರಂಪರೆಯಿಂದ ಬಂದುದೋ? ಪ್ರಜಾಪತಿಯ ಪರಂಪರೆಯಿಂದ ಬಂದುದೋ? ಅಥವಾ ಅಸುರ ಪರಂಪರೆಯಿಂದ ಬಂದುದೋ?
ಸಂದೇಹಃ ಸುಮಹಾನೇಷ ವಿರುದ್ಧ ಇತಿ ಮೇ ಮತಿಃ |
ಇಹ ಯಃ ಸಹಧರ್ಮೋ ವೈ ಪ್ರೇತ್ಯಾಯಂ ವಿಹಿತಃ ಕ್ವ ನು ॥3॥
ಈ ವಿಷಯದಲ್ಲಿ ನನಗೆ ದೊಡ್ಡ ಸಂದೇಹವಿದೆ. ಸಹಧರ್ಮವು ವಿರುದ್ಧ ಎಂದು ನನ್ನ ಅಭಿಪ್ರಾಯ. ಇಲ್ಲಿ ಸಹಧರ್ಮವು ವಿಹಿತವಾಗುವುದಾದರೆ ಮರಣಾನಂತರದಲ್ಲಿ ಸಹಧರ್ಮವು ಹೇಗೆ ಉಂಟಾಗುತ್ತದೆ?
ಸ್ವರ್ಗೇ ಮೃತಾನಾಂ ಭವತಿ ಸಹಧರ್ಮಃ ಪಿತಾಮಹ |
ಪೂರ್ವಮೇಕಸ್ತು ಮ್ರಿಯತೇ ಕ್ವ ಚೈಕಸ್ತಿಷ್ಠತೇ ವದ ॥4॥
ಎಲೈ ಪಿತಾಮಹನೇ, ಸ್ವರ್ಗದಲ್ಲಿ ಮೃತರಿಗೆ ಸಹಧರ್ಮವು ಉಂಟಾಗಬೇಕು. ಆದರೆ ಮೊದಲು ಒಬ್ಬರು ಸಾಯುತ್ತಾರೆ. ಆಗ ಇನ್ನೊಬ್ಬ ವ್ಯಕ್ತಿಯು ಸಹಧರ್ಮದಿಂದ ಎಲ್ಲಿರುತ್ತಾನೆ ಎಂಬುದನ್ನು ಹೇಳು.
ನಾನಾಕರ್ಮಫಲೋಪೇತಾ ನಾನಾಕರ್ಮನಿವಾಸಿತಾಃ |
ನಾನಾನಿರಯನಿಷ್ಠಾಂತಾ ಮಾನುಷಾ ಬಹವೋ ಯದಾ ॥5॥
ನಾನಾ ಕರ್ಮಗಳ ಫಲಗಳನ್ನು ಹೊಂದಿದ, ನಾನಾ ಕರ್ಮ ವಾಸನೆಗಳಿಂದ ಕೂಡಿದ ಅನೇಕ ನರಕಗಾಮಿಗಳಾದ ಮನುಷ್ಯರು ಬಹಳ ಜನರಿರುತ್ತಾರೆ.
ಅನೃತಾಃ ಸ್ತ್ರಿಯ ಇತ್ಯೇವಂ ಸೂತ್ರಕಾರೋ ವ್ಯವಸ್ಯತಿ |
ಯದಾಽನೃತಾಃ ಸ್ತ್ರಿಯಸ್ತಾತ ಸಹಧರ್ಮಃ ಕುತಃ ಸ್ಮೃತಃ ॥6॥
ಸೂತ್ರಕಾರನೂ ಸಹ ಸ್ತ್ರೀಯರು ಅನೃತರು ಎಂದು ನಿರ್ಧರಿಸುತ್ತಾನೆ. ಪ್ರೀತಿಪಾತ್ರನೇ, ಸ್ತ್ರೀಯರು ಅನೃತರಾದರೆ ಸಹಧರ್ಮವನ್ನು ಏಕೆ ಹೇಳುತ್ತಾರೆ?
ಅನೃತಾಃ ಸ್ತ್ರಿಯ ಇತ್ಯೇವಂ ವೇದೇಷ್ವಪಿ ಹಿ ಪಠ್ಯತೇ |
ಧರ್ಮೋಽಯಂ ಪೌರ್ವಿಕೋ ದೃಷ್ಟಃ ಉಪಚಾರಃ ಕ್ರಿಯಾವಿಧಿಃ ॥7॥
ಸ್ತ್ರೀಯರು ಅನೃತರಾದವರು ಎಂಬ ವಿಷಯವು ವೇದಗಳಲ್ಲಿಯೂ ಹೇಳಲ್ಪಡುತ್ತದೆ. ಆದ್ದರಿಂದ ಪೂರ್ವಿಕರಿಂದ ಬಂದ ಈ ಸಹಧರ್ಮವು ದಂಪತಿಗಳು ಜೊತೆಯಿಂದ ಮಾಡುವ ಕಾರ್ಯಗಳಲ್ಲಿ ಅಮುಖ್ಯವಾದ ಪ್ರಯೋಗವನ್ನು ಹೊಂದುತ್ತದೆ.
ಗಹ್ವರಂ ಪ್ರತಿಭಾತ್ಯೇತನ್ಮಮ ಚಿಂತಯತೋಽನಿಶಮ್ |
ನಿಃಸಂದೇಹಮಿದಂ ಸರ್ವಂ ಪಿತಾಮಹ ಯಥಾಶ್ರುತಿಃ ॥8॥

ಯದೇತದ್ ಯಾದೃಶಂ ಚೈತದ್ ಯಥಾ ಚೈತತ್ಪ್ರವರ್ತಿತಮ್ |
ನಿಖಿಲೇನ ಮಹಾಪ್ರಾಜ್ಞ ಭವಾನೇತದ್ ಬ್ರವೀತು ಮೇ ||9||
ಸತತವಾಗಿ ಚಿಂತನ ಮಾಡಿದರೂ ಇದು ನನಗೆ ಬಹಳ ಗೂಢವಾಗಿ ಕಾಣುತ್ತಿದೆ. ಎಲೈ ಪಿತಾಮಹನೇ, ಎಲೈ ಮಹಾಪ್ರಾಜ್ಞನೇ, ಎಲ್ಲವನ್ನೂ ಶ್ರುತಿಗೆ ಅನುಸಾರವಾಗಿ, ಸಂದೇಹಕ್ಕೆ ಎಡೆಯಿಲ್ಲದಂತೆ ಸಹಧರ್ಮವೆಂದರೆ ಏನು? ಅದು ಎಂತಹದು? ಅದು ಯಾವ ಪ್ರಕಾರವನ್ನು ಹೊಂದಿದೆ? ಅದು ಹೇಗೆ ಪ್ರವರ್ತಿತವಾಯಿತುಎಂಬುದನು  ಸಮಗ್ರವಾಗಿ ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಷ್ಟಾವಕ್ರಸ್ಯ ಸಂವಾದಂ ದಿಶಯಾ ಸಹ ಭಾರತ ||10||
ಎಲೈ ಭಾರತನೇ, ಈ ವಿಷಯದಲ್ಲಿಯೂ ಸಹ ಅಷ್ಟಾವಕ್ರನಿಗೂ ಮತ್ತು ದಿಗ್ವನಿತೆಗೂ ನಡೆದ ಸಂವಾದರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ನಿರ್ವೇಷ್ಟುಕಾಮಸ್ತು ಪುರಾ ಅಷ್ಟಾವಕ್ರೋ ಮಹಾತಪಾಃ |
ಋಷೇರಥ ವದಾನ್ಯಸ್ಯ ಕನ್ಯಾಂ ವವ್ರೇ ಮಹಾತ್ಮನಃ ||11||
ಮಹಾತಪಸ್ವಿಯಾದ ಅಷ್ಟಾವಕ್ರ ಋಷಿಯು ಹಿಂದೆ ಮದುವೆ ಮಾಡಿಕೊಳ್ಳಲು ಬಯಸಿ ಮಹಾತ್ಮನಾದ ವದಾನ್ಯ ಋಷಿಯ ಕನ್ಯೆಯನ್ನು ಬೇಡಿದನು.
ಸುಪ್ರಭಾಂ ನಾಮ ವೈ ನಾಮ್ನಾ ರೂಪೇಣಾಪ್ರತಿಮಾಂ ಭುವಿ |
ಗುಣಪ್ರಭಾವಶೀಲೇನ ಸಾಧ್ವೀಂ ಚಾರಿತ್ರಶೋಭನಾಮ್ ||12||
ಭೂಮಿಯಲ್ಲಿ ಅಪ್ರತಿಮ ಸುಂದರಿಯಾದ, ಗುಣ-ಪ್ರಭಾವ-ಶೀಲಗಳಿಂದ ಸಾಧ್ವಿಯಾದ, ಶುದ್ಧಚಾರಿತ್ರವುಳ್ಳ ಸುಪ್ರಭಾ ಎಂಬ ಕನ್ಯೆಯನ್ನು ಬೇಡಿದನು.
ಸಾ ತಸ್ಯ ದೃಷ್ಟ್ವೈವ ಮನೋ ಜಹಾರ ಶುಭಲೋಚನಾ |
ವನರಾಜೀ ಯಥಾ ಚಿತ್ರಾ ವಸಂತೇ ಕುಸುಮಾಚಿತಾ ||13||
ವಸಂತಕಾಲದಲ್ಲಿ ಕುಸುಮಭರಿತವಾದ ವನರಾಜಿಯು ನೋಡಿದ ತಕ್ಷಣವೇ ಮನಸ್ಸನ್ನು ಸೆಳೆಯುವಂತೆ ಶುಭಲೋಚನಳಾದ ಅವಳು ಋಷಿಯು ತನ್ನನ್ನು ನೋಡಿದ ತಕ್ಷಣವೇ ಅವನ ಮನಸ್ಸನ್ನು ಸೆಳೆದಳು.
ಅನನ್ಯಸ್ತ್ರೀಜನಃ ಪ್ರಾಜ್ಞೋ ಹ್ಯಪ್ರವಾಸೀ ಪ್ರಿಯಂವದಃ |
ಸುರೂಪಃ ಸಮ್ಮತೋ ವೀರಃ ಶೀಲವಾನ್ ಭೋಗಭುಕ್ ಶುಚಿಃ ||14||
ದಾರಾನುಮತಯಜ್ಞಶ್ಚ ಸುನಕ್ಷತ್ರಮಥೋದ್ವಹೇತ್ |
ಸ್ವಭೃತ್ಯಸ್ವಜನೋಪೇತ ಇಹ ಪ್ರೇತ್ಯ ಚ ಮೋದತೇ ||15||
ಮೊದಲು ಮದುವೆಯಾಗದಿದ್ದ ಪ್ರಾಜ್ಞನಾದ, ಬಹಳ ಪ್ರವಾಸವನ್ನು ಮಾಡದಿರುವ, ಪ್ರಿಯವಾಗಿ ಮಾತನಾಡುವ, ಒಳ್ಳೆಯ ರೂಪವನ್ನು ಹೊಂದಿದ, ಸ್ತ್ರೀಯರಿಗೆ ಸಮ್ಮತನಾಗುವ, ವೀರನಾದ, ಶೀಲವಂತನಾದ, ಭೋಗಿಯಾದ, ಶುಚಿಯಾದ, ಪತ್ನಿಯ ಜೊತೆಯಲ್ಲಿ ಯಜ್ಞವನ್ನು ಮಾಡುವ ಪುರುಷನು ತನ್ನ ಭೃತ್ಯರಿಂದ ಮತ್ತು ಸ್ವಜನರಿಂದ ಒಡಗೂಡಿ ಶುಭನಕ್ಷತ್ರದಲ್ಲಿ ವಿವಾಹವನ್ನು ಮಾಡಿಕೊಳ್ಳಬೇಕು. ಆಗ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸಂತೋಷಪಡುತ್ತಾನೆ.
ಋಷಿಸ್ತಮಾಹ ದೇಯಾ ಮೇ ಸುತಾ ತುಭ್ಯಂ ಶೃಣುಷ್ವ ಮೇ |
ಗಚ್ಛ ತಾವದ್ ದಿಶಂ ಪುಣ್ಯಾಮುತ್ತರಾಂ ದ್ರಕ್ಷ್ಯಸೇ ತತಃ ||16||
ವದಾನ್ಯ ಋಷಿಯು ಅಷ್ಟಾವಕ್ರನನ್ನು ಕುರಿತು ನಿನಗೆ ನನ್ನ ಮಗಳನ್ನು ಕೊಡಬೇಕು. ನನ್ನ ಮಾತನ್ನು ಕೇಳು. ಪವಿತ್ರವಾದ ಉತ್ತರದಿಕ್ಕಿಗೆ ಹೋಗು. ಅಲ್ಲಿ ನೋಡುವಿ ಎಂದು ಹೇಳಿದನು.
ಅಷ್ಟಾವಕ್ರಃ
ಕಿಂ ದ್ರಷ್ಟವ್ಯಂ ಮಯಾ ತತ್ರ ವಕ್ತುಮರ್ಹತಿ ಮೇ ಭವಾನ್ |
ತಥೇದಾನೀಂ ಮಯಾ ಕಾರ್ಯಂ ಯಥಾ ವಕ್ಷ್ಯತಿ ಮಾಂ ಭವಾನ್ ||
ಅಷ್ಟಾವಕ್ರ ನಾನು ಅಲ್ಲಿ ಏನನ್ನು ನೋಡಬೇಕೆಂದು ನೀನು ನನಗೆ ಹೇಳಬೇಕು. ನೀನು ಹೇಗೆ ಹೇಳುತ್ತೀಯೋ ಅದರಂತೆ ನಾನೀಗ ಕಾರ್ಯವನ್ನು ಮಾಡಬೇಕಾಗಿದೆ.
ವದಾನ್ಯಃ
ಧನದಂ ಸಮತಿಕ್ರಮ್ಯ ಹಿಮವಂತಂ ತಥೈವ ಚ |
ರುದ್ರಸ್ಯಾಯತನಂ ದೃಷ್ಟ್ವಾ ಸಿದ್ಧಚಾರಣಸೇವಿತಮ್ ||18||
ವದಾನ್ಯ ಕುಬೇರನ ವಾಸಸ್ಥಾನವನ್ನು ದಾಟಿ, ಹಾಗೆಯೇ ಹಿಮಾಲಯ ಪರ್ವತವನ್ನೂ ದಾಟಿ, ಸಿದ್ಧ-ಚಾರಣ ಸಹಿತವಾದ, ಶಿವನ ನಿವಾಸಸ್ಥಾನಕ್ಕೆ ಹೋಗಿ ನೋಡು.
ಸಂಹೃಷ್ಟೈಃ ಪಾರ್ಷದೈರ್ಜುಷ್ಟಂ ನೃತ್ಯದ್ಭಿರ್ವಿವಿಧಾನನೈಃ |
ದಿವ್ಯಾಂಗರಾಗೈಃ ಪೈಶಾಚೈರ್ವನ್ಯೈರ್ನಾನಾವಿಧೈಸ್ತಥಾ ||19||
ಪಾಣಿತಾಳಸತಾಳೈಶ್ಚ ಶಮ್ಯಾತಾಳೈಃ ಸಮೈಸ್ತಥಾ |
ಸಂಪ್ರಹೃಷ್ಟೈಃ ಪ್ರನೃತ್ಯದ್ಭಿಃ ಶರ್ವಸ್ತತ್ರ ನಿಷೇವ್ಯತೇ ||20||
ವಿವಿಧವಾದ ಮುಖಗಳನ್ನು ಹೊಂದಿದ, ನಾನಾ ವಿಧವಾದ ವನರಸಗಳಿಂದ ದಿವ್ಯಾಂಗರಾಗದಿಂದ ಭೂಷಿತರಾದ, ಪಿಶಾಚಿಗಳಾದ ಪಾರ್ಷದರು ಸಂತೋಷದಿಂದ ಅಲ್ಲಿರುತ್ತಾರೆ. ಕಂಚಿನ ತಾಳಗಳ ಜೊತೆಯಲ್ಲಿ ಅವರಿಗೆ ಸಮಾನವಾಗಿ ಚಪ್ಪಾಳೆಯನ್ನು ತಟ್ಟುತ್ತಾ,

ಸಂತೋಷದಿಂದ ನರ್ತನವನ್ನು ಮಾಡುತ್ತಾ ಅಲ್ಲಿ ಶಿವನನ್ನು ಸೇವಿಸುತ್ತಾರೆ.
ಇಷ್ಟಂ ಕಿಲ ಗಿರೌ ಸ್ಥಾನಂ ತದ್ ದಿವ್ಯಮನುಶುಶ್ರುಮ |
ನಿತ್ಯಂ ಸನ್ನಿಹಿತೋ ದೇವಸ್ತಥಾ ಪಾರಿಷದಾಃ ಶುಭಾಃ ॥21॥
ಆ ದಿವ್ಯಸ್ಥಾನವು ಶಿವನಿಗೆ ಇಷ್ಟವಾದುದು ಎಂದು ನಾವು ಕೇಳಿದ್ದೇವೆ. ಅಲ್ಲಿ ದೇವನಾದ ಶಿವನೂ ಮತ್ತು ಅವನ ಶುಭ ಪಾರ್ಷದರೂ ಯಾವಾಗಲೂ ಸನ್ನಿಹಿತರಾಗಿರುತ್ತಾರೆ.
ತತ್ರ ದೇವ್ಯಾ ತಪಸ್ತಪ್ತಂ ಶಂಕರಾರ್ಥಂ ಸುದುಶ್ಚರಮ್ |
ಅತಸ್ತದಿಷ್ಟಂ ದೇವಸ್ಯ ತಥೋಮಾಯಾ ಇತಿ ಶ್ರುತಿಃ ॥22॥
ಅಲ್ಲಿ ಪಾರ್ವತಿಯು ಶಂಕರನನ್ನು ಪತಿಯಾಗಿ ಪಡೆಯಲು ಸುದುಶ್ಚರವಾದ ತಪಸ್ಸನ್ನು ಮಾಡಿದಳು. ಆ ಕಾರಣದಿಂದ ಆ ಸ್ಥಾನವು ದೇವನಿಗೂ ಮತ್ತು ಪಾರ್ವತಿಗೂ ಇಷ್ಟವಾದುದು ಎಂದು ನಾವು ಕೇಳಿದ್ದೇವೆ.
ಪೂರ್ವೇ ತತ್ರ ಮಹಾನ್ ಪಾರ್ಶ್ವೇ ದೇವಸ್ಯೋತ್ತರತಸ್ತಥಾ |
ಋತವಃ ಕಾಳರಾತ್ರಿಶ್ಚ ಯೇ ದಿವ್ಯಾ ಯೇ ಚ ಮಾನುಷಾಃ ॥23॥
ಸರ್ವೇ ದೇವಮುಪಾಸಂತೇ ರೂಪಿಣಃ ಕಿಲ ತತ್ರ ಹ |
ತದತಿಕ್ರಮ್ಯ ಭವನಂ ತ್ವಯಾ ಯಾತವ್ಯಮೇವ ಹಿ ॥24॥
ಅಲ್ಲಿ ಆ ದೇವನ ಪೂರ್ವ ಮತ್ತು ಉತ್ತರ ಪಾರ್ಶ್ವಗಳಲ್ಲಿ ಋತುಗಳು, ಕಾಳ ರಾತ್ರಿ, ದಿವ್ಯಪುರುಷರು ಎಲ್ಲರೂ ಒಳ್ಳೆಯ ರೂಪವನ್ನು ಧರಿಸಿ ದೇವನನ್ನು ಉಪಾಸನೆ ಮಾಡುತ್ತಾರೆ. ನೀನು ಆ ಸ್ಥಾನವನ್ನು ದಾಟಿ ಮುಂದೆ ಹೋಗಬೇಕು.
ತತೋ ನೀಲಂ ವನೋದ್ದೇಶಂ ದ್ರಕ್ಷ್ಯಸೇ ಮೇಘಸನ್ನಿಭಮ್ |
ರಮಣೀಯಂ ಮನೋಗ್ರಾಹಿ ತತ್ರ ದ್ರಕ್ಷ್ಯಸಿ ವೈ ಸ್ತ್ರಿಯಮ್ ॥25॥
ಅನಂತರ ನೀನು ರಮಣೀಯವಾದ, ಮನೋಹರವಾದ, ಮೇಘ ಕಾಂತಿಯನ್ನು ಹೊಂದಿದ ಕಪ್ಪಾದ ವನಪ್ರದೇಶವನ್ನು ನೋಡುವಿ. ಅಲ್ಲಿ ಸ್ತ್ರೀಯನ್ನು ನೋಡುವಿ.
ತಪಸ್ವಿನೀಂ ಮಹಾಭಾಗಾಂ ವೃದ್ಧಾಂ ದೀಕ್ಷಾಮನುಷ್ಠಿತಾಮ್ |
ದ್ರಷ್ಟವ್ಯಾ ಸಾ ತ್ವಯಾ ತತ್ರ ಸಂಪೂಜ್ಯಾ ಚೈವ ಯತ್ನತಃ ॥26॥
ಅವಳು ತಪಸ್ವಿನಿ, ಮಹಾನುಭಾವಳು, ವೃದ್ಧಳು ಮತ್ತು ದೀಕ್ಷಾನಿರತಳು. ನೀನು ಅವಳನ್ನು ಅಲ್ಲಿ ನೋಡಿ ಪ್ರಯತ್ನಪೂರ್ವಕವಾಗಿ ಅವಳನ್ನು ಪೂಜಿಸಬೇಕು.
ತಾಂ ದೃಷ್ಟ್ವಾ ವಿನಿವೃತ್ತಸ್ತ್ವಂ ತತಃ ಪಾಣಿಂ ಗ್ರಹೀಷ್ಯಸಿ |
ಯದ್ಯೇಷ ಸಮಯಃ ಸತ್ಯಃ ಸಾಧ್ಯತಾಂ ತತ್ರ ಗಮ್ಯತಾಮ್ ॥27॥
ಅವಳನ್ನು ನೋಡಿ ಹಿಂದಿರುಗಿದ ಮೇಲೆ ನೀನು ಪಾಣಿಗ್ರಹಣವನ್ನು ಮಾಡಿಕೊಳ್ಳುವಿ. ಈ ನಿಬಂಧನೆ ನಿನಗೆ ಸತ್ಯವೆನಿಸಿದರೆ (ಒಪ್ಪಿಗೆಯಾದರೆ) ಅಲ್ಲಿಗೆ ಹೊರಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಅಷ್ಟಾವಕ್ರವದಾನ್ಯಸಂವಾದೇ ಕನ್ಯಾವರಣಂ ನಾಮ
ದ್ವಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ಮೂರನೆಯ ಅಧ್ಯಾಯ
ಅಷ್ಟಾವಕ್ರ ದಿಕ್ಸಂವಾದ
ಅಷ್ಟಾವಕ್ರಃ
ತಥಾಸ್ತು ಸಾಧಯಿಷ್ಯಾಮಿ ತತ್ರ ಯಾಸ್ಯಾಮ್ಯಸಂಶಯಮ್ |
ಯತ್ರ ತ್ವಂ ವದಸೇ ಸಾಧೋ ಭವಾನ್ ಭವತು ಸತ್ಯವಾಕ್ ॥1॥
ಅಷ್ಟಾವಕ್ರ ಎಲೈ ಸಾಧುವೇ, ಹಾಗೆಯೇ ಆಗಲಿ. ನಿಸ್ಸಂಶಯವಾಗಿ ನೀನು ಎಲ್ಲಿಗೆ ಹೋಗಬೇಕೆಂದು ಹೇಳುತ್ತೀಯೋ ಅಲ್ಲಿಗೇ ಹೊರಡುವೆನು. ನಿನ್ನ ವಚನವು ಸತ್ಯವಾಗಲಿ.
ಭೀಷ್ಮಃ
ತತೋಽಗಚ್ಛತ್ ಸ ಭಗವಾನುತ್ತರಾಮುತ್ತಮಾಂ ದಿಶಮ್ |
ಹಿಮವಂತಂ ಗಿರಿಶ್ರೇಷ್ಠಂ ಸಿದ್ಧಚಾರಣಸೇವಿತಮ್ ॥2॥
ಭೀಷ್ಮ ಅನಂತರ ಆ ಪೂಜ್ಯನು ಶ್ರೇಷ್ಠವಾದ ಉತ್ತರ ದಿಕ್ಕಿಗೆ ಹೊರಟು ಸಿದ್ಧ-ಚಾರಣ ಸೇವಿತವಾದ ಶ್ರೇಷ್ಠಪರ್ವತವಾದ ಹಿಮಾಲಯಕ್ಕೆ ಹೋದನು.
ಸ ಗತ್ವಾ ದ್ವಿಜಶಾರ್ದೂಲೋ ಹಿಮವಂತಂ ಮಹಾಗಿರಿಮ್ |
ಅಭ್ಯಗಚ್ಛನ್ನದೀಂ ಪುಣ್ಯಾಂ ಬಾಹುದಾಂ ಧರ್ಮದಾಯಿನೀಮ್ ॥3॥
ಆ ದ್ವಿಜಶಾರ್ದೂಲನು ಹಿಮಾಲಯ ಪರ್ವತಕ್ಕೆ ಹೋಗಿ ಅಲ್ಲಿಂದ ಪವಿತ್ರವಾದ, ಧರ್ಮಪ್ರದವಾದ ಬಾಹುದಾ ನದಿಯನ್ನು ತಲುಪಿದನು.
ಅಶೋಕೇ ವಿಮಲೇ ತೀರ್ಥೇ ಸ್ನಾತ್ವಾ ತರ್ಪ್ಯ ಚ ದೇವತಾಃ |
ತತ್ರ ವಾಸಾಯ ಶಯನೇ ಕೌಶ್ಯೇ ಸುಖಮುವಾಸ ಹ ॥4॥

ಅಲ್ಲಿಂದ ಮುಂದೆ ವಿಮಲವಾದ ಅಶೋಕತೀರ್ಥಕ್ಕೆ ಹೋಗಿ ಸ್ನಾನವನ್ನು ಮಾಡಿ ದೇವತೆಗಳಿಗೆ ತರ್ಪಣವನ್ನು ನೀಡಿ ಅಲ್ಲಿಯೇ ರಾತ್ರಿಯನ್ನು ಕಳೆಯಲು ಒಂದು ದರ್ಭೆಯ ಹಾಸಿಗೆಯಲ್ಲಿ ಸುಖವಾಗಿ ಮಲಗಿದನು.
ತತೋ ರಾತ್ರ್ಯಾಂ ವ್ಯತೀತಾಯಾಂ ಪ್ರಾತರುತ್ಥಾಯ ಸ ದ್ವಿಜಃ |
ಸ್ನಾತ್ವಾ ಪ್ರಾದುಶ್ಚಕಾರಾಗ್ನಿಂ ಹುತ್ವಾ ಚೈವ ವಿಧಾನತಃ ॥5॥
ರಾತ್ರಿಯು ಕಳೆಯುತ್ತಿರಲು ಪ್ರಾತಃಕಾಲದಲ್ಲಿ ಆ ಬ್ರಾಹ್ಮಣನು ಎದ್ದು ಸ್ನಾನವನ್ನು ಮಾಡಿ ಅಗ್ನಿಯನ್ನು ಪ್ರಾದುರ್ಭಾವಗೊಳಿಸಿ ಹೋಮವನ್ನು ಮಾಡಿದನು.
ರುದ್ರಾಣೀಕೂಪಮಾಸಾದ್ಯ ಹ್ರದೇ ತತ್ರ ಸಮಾಶ್ವಸತ್ |
ವಿಶ್ರಾಂತಶ್ಚ ಸಮುತ್ಥಾಯ ಕೈಲಾಸಮಭಿತೋ ಯಯೌ ॥6॥
ಅಲ್ಲಿಂದ ಮುಂದೆ ಪಾರ್ವತೀ ತೀರ್ಥಕ್ಕೆ ಹೋಗಿ ಆ ಮಡುವಿನಲ್ಲಿ ವಿಶ್ರಮಿಸಿದನು. ವಿಶ್ರಾಂತಿಯನ್ನು ಪಡೆದ ಮೇಲೆ ಅಲ್ಲಿಂದ ಎದ್ದು ಕೈಲಾಸ ಪರ್ವತದ ಕಡೆ ಹೊರಟನು.
ಸೋಽಪಶ್ಯತ್ ಕಾಂಚನದ್ವಾರಂ ದೀಪ್ಯಮಾನಮಿವ ಶ್ರಿಯಾ |
ಮಂದಾಕಿನೀಂ ಚ ನಳಿನೀಂ ಧನದಸ್ಯ ಮಹಾತ್ಮನಃ ॥7॥
ಅವನು ಅಲ್ಲಿಂದ ಹೊರಟು ಮಂದಾಕಿನೀ ನದಿಯನ್ನೂ, ಸಂಪತ್ತಿನಿಂದ ಜ್ವಲಿಸುವ ಮಹಾತ್ಮನಾದ ಕುಬೇರನ ಸುವರ್ಣಮಯವಾದ ಬೃಹತ್ದ್ವಾರವನ್ನೂ ನೋಡಿದನು.
ಅಥ ತೇ ರಾಕ್ಷಸಾಃ ಸರ್ವೇ ಯೇಽಭಿರಕ್ಷಂತಿ ಪದ್ಮಿನೀಮ್ |
ಪ್ರತ್ಯುತ್ಥಿತಾ ಭಗವಂತಂ ಮಾಣಿಭದ್ರಪುರೋಗಮಾಃ ॥8॥
ಆಗ ಆ ಸರೋವರ ರಕ್ಷಕರಾದ ಮಾಣಿಭದ್ರ ಮೊದಲಾದ ರಾಕ್ಷಸರೆಲ್ಲರೂ ಆ ಪೂಜ್ಯನನ್ನು ನೋಡಿ ಎದ್ದು ನಿಂತರು.
ಸ ತಾನ್ ಪ್ರತ್ಯರ್ಚಯಾಮಾಸ ರಾಕ್ಷಸಾನ್ ಭೀಮವಿಕ್ರಮಾನ್ |
ನಿವೇದಯತ ಮಾಂ ಕ್ಷಿಪ್ರಂ ಧನದಾಯೇತಿ ಚಾಬ್ರವೀತ್ ॥9॥
ಆ ಬ್ರಾಹ್ಮಣನು ಭಯಂಕರ ಪರಾಕ್ರಮವುಳ್ಳ ಆ ರಾಕ್ಷಸರನ್ನು ಪೂಜಿಸಿ, ಕುಬೇರನಿಗೆ ನಾನು ಬಂದಿದ್ದೇನೆಂದು ಶೀಘ್ರವಾಗಿ ತಿಳಿಸಿ ಎಂದು ಹೇಳಿದನು.
ತೇ ರಾಕ್ಷಸಾಸ್ತದಾ ರಾಜನ್ ಭಗವಂತಮಥಾಬ್ರುವನ್ |
ಅಸೌ ವೈಶ್ರವಣೋ ರಾಜಾ ಸ್ವಯಮಾಯಾತಿ ತೇಽಂತಿಕಮ್ ॥10॥
ವಿದಿತೋ ಭಗವಾನಸ್ಯ ಕಾರ್ಯಮಾಗಮನೇ ಚ ಯತ್ |
ಪಶ್ಯೈನಂ ತ್ವಂ ಮಹಾಭಾಗಂ ಜ್ವಲಂತಮಿವ ತೇಜಸಾ ॥11॥
ಎಲೈ ರಾಜನೇ, ಆಗ ಆ ರಾಕ್ಷಸರು ಪೂಜ್ಯನಾದ ಬ್ರಾಹ್ಮಣನನ್ನು ಕುರಿತು ನಮ್ಮ ರಾಜನಾದ ಕುಬೇರನು ನಿನ್ನ ಬಳಿಗೆ ಸ್ವತಃ ಬರುತ್ತಾನೆ. ನೀನು ಬಂದಿರುವುದು ಮತ್ತು ನಿನ್ನ ಆಗಮನದ ಉದ್ದೇಶವು ಅವನಿಗೆ ತಿಳಿದಿದೆ. ತೇಜಸ್ಸಿನಿಂದ ಬರುವ ಆ ಮಹಾನುಭಾವನನ್ನು ನೋಡು ಎಂದು ಹೇಳಿದರು.
ತತೋ ವೈಶ್ರವಣೋಽಭ್ಯೇತ್ಯ ಅಷ್ಟಾವಕ್ರಮನಿಂದಿತಮ್ |
ವಿಧಿವತ್ ಕುಶಲಂ ಪೃಷ್ಟ್ವಾ ತತೋ ಬ್ರಹ್ಮರ್ಷಿಮಬ್ರವೀತ್ ॥12॥
ಅನಂತರ ಕುಬೇರನು ಬಂದು ನಿರ್ದುಷ್ಟನಾದ ಅಷ್ಟಾವಕ್ರನನ್ನು ಶಾಸೊತ್ರೀಕ್ತರೀತಿಯಲ್ಲಿ ಕುಶಲಪ್ರಶ್ನೆಯನ್ನು ಮಾಡಿ ಅನಂತರ ಬ್ರಹ್ಮರ್ಷಿಯನ್ನು ಕುರಿತು ಕೇಳಿದನು.
ಸುಖಂ ಪ್ರಾಪ್ತೋ ಭವಾನ್ ಕಚ್ಚಿತ್ ಕಿಂ ವಾ ಮತ್ತಶ್ಚಿಕೀರ್ಷಸಿ |
ಬ್ರೂಹಿ ಸರ್ವಂ ಕರಿಷ್ಯಾಮಿ ಯನ್ಮಾಂ ತ್ವಂ ವಕ್ಷ್ಯಸಿ ದ್ವಿಜ ॥13॥
ಭವನಂ ಪ್ರವಿಶ ತ್ವಂ ಮೇ ಯಥಾಕಾಮಂ ದ್ವಿಜೋತ್ತಮ |
ಸತ್ಕೃತಃ ಕೃತಕಾರ್ಯಶ್ಚ ಭವಾನ್ ಯಾಸ್ಯತ್ಯವಿಘ್ನತಃ ॥14॥
ನೀನು ಇಲ್ಲಿಗೆ ಸುಖವಾಗಿ ಬಂದೆಯಾ? ನನ್ನಿಂದ ನೀನು ಏನು ಬಯಸುತ್ತೀಯೆ? ಅದನ್ನು ಹೇಳು. ಎಲೈ ಬ್ರಾಹ್ಮಣನೇ, ನೀನು ಹೇಳಿದುದೆಲ್ಲವನ್ನೂ ಮಾಡುವೆನು. ಎಲೈ ದ್ವಿಜಶ್ರೇಷ್ಠನೇ, ನೀನು ನನ್ನ ಮನೆಯನ್ನು ಪ್ರವೇಶಿಸಿ ಅಲ್ಲಿ ಪೂಜಿತನಾಗಿ ಕೃತಕೃತ್ಯನಾಗಿ ನೀನು ನಿರ್ವಿಘ್ನವಾಗಿ ಮುಂದೆ ಹೋಗುವಿ (ಎಂದು ಹೇಳಿದನು).
ಪ್ರಾವಿಶದ್ ಭವನಂ ಸ್ವಂ ವೈ ಗೃಹೀತ್ವಾ ತಂ ದ್ವಿಜೋತ್ತಮಮ್ |
ಆಸನಂ ಸ್ವಂ ದದೌ ಚೈವ ಪಾದ್ಯಮರ್ಘ್ಯಂ ತಥೈವ ಚ ॥15॥
ಕುಬೇರನು ಆ ದ್ವಿಜೋತ್ತಮನ ಕೈಯನ್ನು ಹಿಡಿದು ತನ್ನ ಗೃಹವನ್ನು ಪ್ರವೇಶಿಸಿ ಆ ಬ್ರಾಹ್ಮಣನಿಗೆ ತನ್ನ ಆಸನವನ್ನು ನೀಡಿ ಅರ್ಘ್ಯ-ಪಾದ್ಯಗಳನ್ನು ನೀಡಿದನು.
ಅಥೋಪವಿಷ್ಟಯೋಸ್ತತ್ರ ಮಾಣಿಭದ್ರಪುರೋಗಮಾಃ |
ನಿಷೇದುಸ್ತತ್ರ ಕೌಬೇರಾ ಯಕ್ಷಗಂಧರ್ವಕಿನ್ನರಾಃ ॥16॥
ಅನಂತರ ಕುಬೇರ ಮತ್ತು ಅಷ್ಟಾವಕ್ರರು ಕುಳಿತಿರಲು ಮಾಣಿಭದ್ರನೇ ಮೊದಲಾದ ಕುಬೇರನ ಅನುಚರರಾದ ಯಕ್ಷ-ಗಂಧರ್ವ-ಕಿನ್ನರರು ಅಲ್ಲಿ ಕುಳಿತುಕೊಂಡರು.
ತತಸ್ತೇಷಾಂ ನಿಷಣ್ಣಾನಾಂ ಧನದೋ ವಾಕ್ಯಮಬ್ರವೀತ್ |
ಭವಚ್ಛಂದಂ ಸಮಾಜ್ಞಾಯ ನೃತ್ಯೇರನ್ನಪ್ಸರೋಗಣಾಃ ॥17॥
ಆತಿಥ್ಯಂ ಪರಮಂ ಕಾರ್ಯಂ ಶುಶ್ರೂಷಾ ಭವತಸ್ತಥಾ |

ಸಂವರ್ತತಾಮಿತ್ಯುವಾಚ ಮುನಿರ್ಮಧುರಯಾ ಗಿರಾ ॥18॥
ಎಲ್ಲರೂ ಕುಳಿತುಕೊಂಡ ಮೇಲೆ ಕುಬೇರನು ಬ್ರಾಹ್ಮಣನನ್ನು ಕುರಿತು ನಿನ್ನ ಅಭಿಪ್ರಾಯವನ್ನು ತಿಳಿದು ಅಪ್ಸರೆಯ ಸಮೂಹಗಳು ನೃತ್ಯವನ್ನು ಮಾಡುತ್ತವೆ. ನಿನಗೆ ನಾನು ಶ್ರೇಷ್ಠವಾದ ಆತಿಥ್ಯವನ್ನು ಮತ್ತು ಸೇವೆಯನ್ನು ಮಾಡಬೇಕು ಎಂದು ಹೇಳಿದನು. ಋಷಿಯು ಮಧುರವಾದ ಮಾತಿನಿಂದ ನೃತ್ಯವು ಜರುಗಲಿ ಎಂದು ಹೇಳಿದನು.
ಅಥೋರ್ವರಾ ಮಿಶ್ರಕೇಶೀ ರಂಭಾ ಚೈವೋರ್ವಶೀ ತಥಾ |
ಅಲಂಬುಸಾ ಘೃತಾಚೀ ಚ ಚಿತ್ರಾ ಚಿತ್ರಾಂಗದಾ ರುಚಿಃ ॥19॥
ಮನೋಹರಾ ಸುಕೇಶೀ ಚ ಸುಮುಖೀ ಹಾಸಿನೀ ಪ್ರಭಾ |
ವಿದ್ಯುತಾ ಪ್ರಶಮೀ ದಾಂತಾ ವಿದ್ಯೋತಾ ರತಿರೇವ ಚ ॥20॥
ಏತಾಶ್ಚಾನ್ಯಾಶ್ಚ ವೈ ಬಹ್ವ್ಯಃ ಪ್ರನೃತ್ತಾಪ್ಸರಸಃ ಶುಭಾಃ |
ಅವಾದಯಂಶ್ಚ ಗಂಧರ್ವಾ ವಾದ್ಯಾನಿ ವಿವಿಧಾನಿ ಚ ॥21॥
ಅನಂತರ ಊರ್ವರಾ, ಮಿಶ್ರಕೇಶೀ, ರಂಭಾ, ಊರ್ವಶೀ, ಅಲಂಬುಸಾ, ಘೃತಾಚೀ, ಚಿತ್ರಾ, ಚಿತ್ರಾಂಗದಾ, ರುಚಿ, ಮನೋಹರಾ, ಸುಕೇಶೀ, ಸುಮುಖೀ, ಹಾಸಿನೀ, ಪ್ರಭಾ, ವಿದ್ಯುತಾ, ಪ್ರಶಮೀ, ದಾಂತಾ, ವಿದ್ಯೋತಾ, ರತಿ ಇವರೂ ಮತ್ತು ಇನ್ನೂ ಅನೇಕ ಶುಭರಾದ ಅಪ್ಸರೆಯರೂ ನೃತ್ಯವನ್ನು ಮಾಡಿದರು. ಗಂಧರ್ವರು ವಿವಿಧವಾದ ವಾದ್ಯಗಳನ್ನು ನುಡಿಸಿದರು.
ಅಥ ಪ್ರವೃತ್ತೇ ಗಾಂಧರ್ವೇ ದಿವ್ಯೇ ಋಷಿರುಪಾವಸತ್ |
ದಿವ್ಯಂ ಸಂವತ್ಸರಂ ತತ್ರ ರಮನ್ ವೈ ಸುಮಹಾತಪಾಃ ॥22॥
ಹೀಗೆ ದಿವ್ಯವಾದ ನೃತ್ಯ-ಗಾನಗಳು ಜರುಗುತ್ತಿರಲು ಮಹಾತಪಸ್ವಿಯಾದ ಆ ಋಷಿಯು ಸಂತೋಷಪಡುತ್ತಾ ದಿವ್ಯವಾದ ಒಂದು ಸಂವತ್ಸರ ಕಾಲದವರೆಗೆ ಅಲ್ಲಿ ವಾಸ ಮಾಡಿದನು.
ತತೋ ವೈಶ್ರವಣೋ ರಾಜಾ ಭಗವಂತಮುವಾಚ ಹ |
ಸಾಗ್ರಃ ಸಂವತ್ಸರೋ ಯಾತಸ್ತವ ವಿಪ್ರೇಹ ಪಶ್ಯತಃ ॥23॥
ಹಾರ್ಯೋಽಯಂ ವಿಷಯೋ ಬ್ರಹ್ಮನ್ ಗಾಂಧರ್ವೋ ನಾಮ ನಾಮತಃ |
ಛಂದತೋ ವರ್ತತಾಂ ವಿಪ್ರ ಯಥಾ ವದತಿ ವಾ ಭವಾನ್ ॥24॥
ಅತಿಥಿಃ ಪೂಜನೀಯಸ್ತ್ವಮಿದಂ ಚ ಭವತೋ ಗೃಹಮ್ |
ಸರ್ವಮಾಜ್ಞಾಪ್ಯತಾಮಾಶು ಪರವಂತೋ ವಯಂ ತ್ವಯಿ ॥25॥
ಅನಂತರ ರಾಜನಾದ ವೈಶ್ರವಣನು ಪೂಜ್ಯನಾದ ಆ ಬ್ರಾಹ್ಮಣನನ್ನು ಕುರಿತು `ಎಲೈ ಬ್ರಾಹ್ಮಣನೇ, ಇಲ್ಲಿ ನೃತ್ಯಾದಿಗಳನ್ನು ನೋಡುವ ನಿನಗೆ ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲವು ಕಳೆದಿದೆ. ಎಲೈ ಬ್ರಾಹ್ಮಣನೇ, ಈ ದೇಶಕ್ಕೆ ಗಾಂಧರ್ವ ಎಂದು ಹೆಸರು. ನಾವು ಇದನ್ನು ಬಿಡಬೇಕು. ಎಲೈ ಬ್ರಾಹ್ಮಣನೇ, ನಿನ್ನ ಅಭಿಪ್ರಾಯದಂತೆ ನೀನು ಇಲ್ಲಿ ಇರಬಹುದು ಅಥವಾ ನೀನು ಹೇಳಿದಂತೆ ನಾನು ಕೇಳುತ್ತೇನೆ. ನೀನು ನಮಗೆ ಪೂಜ್ಯನಾದ ಅತಿಥಿ. ಇದು ನಿನ್ನ ಗೃಹ. ನಾವು ಏನು ಮಾಡಬೇಕೆಂದು ಶೀಘ್ರವಾಗಿ ಆಜ್ಞೆಯನ್ನು ಮಾಡು. ನಾವು ನಿನಗೆ ಅಧೀನರಾದವರು' ಎಂದು ಹೇಳಿದನು.
ಅಥ ವೈಶ್ರವಣಂ ಪ್ರೀತೋ ಭಗವಾನ್ ಪ್ರತ್ಯಭಾಷತ |
ಅರ್ಚಿತೋಽಸ್ಮಿ ಯಥಾನ್ಯಾಯಂ ಗಮಿಷ್ಯಾಮಿ ಧನೇಶ್ವರ ॥26॥
ಪ್ರೀತೋಽಸ್ಮಿ ಸದೃಶಂ ಚೈವ ತವ ಸರ್ವಂ ಧನಾಧಿಪ |
ತವ ಪ್ರಸಾದಾದ್ ಭಗವನ್ ಮಹರ್ಷೇಶ್ಚ ಮಹಾತ್ಮನಃ |
ನಿಯೋಗಾದದ್ಯ ಯಾಸ್ಯಾಮಿ ವೃದ್ಧಿಮಾನ್ ಋದ್ಧಿಮಾನ್ ಭವ ॥27॥
ಆಗ ಪೂಜ್ಯನಾದ ಋಷಿಯು ಸಂತೋಷದಿಂದ ವೈಶ್ರವಣನನ್ನು ಕುರಿತು `ಎಲೈ ಧನೇಶ್ವರನೇ, ನಾನು ಶಾಸ್ತ್ರೋಕ್ತ ರೀತಿಯಲ್ಲಿ ಪೂಜಿತನಾಗಿದ್ದೇನೆ. ಇನ್ನು ಹೊರಡುವೆನು. ನಾನು ಬಹಳ ಪ್ರಸನ್ನನಾಗಿದ್ದೇನೆ. ಎಲೈ ಜನೇಶ್ವರನೇ, ನೀನು ಮಾಡಿದುದೆಲ್ಲವೂ ನಿನ್ನ ಯೋಗ್ಯತೆಗೆ ಉಚಿತವಾಗಿದೆ. ಎಲೈ ಪೂಜ್ಯನೇ, ನಿನ್ನ ಅನುಗ್ರಹದಿಂದ ಮಹಾತ್ಮನಾದ ಮಹರ್ಷಿಯಾದ ವದಾನ್ಯನ ಆಜ್ಞೆಯಂತೆ ಈ ದಿನ ನಾನು ಹೊರಡುವೆನು. ನೀನು ಸಂಪತ್ತನ್ನೂ ಅಭಿವೃದ್ಧಿಯನ್ನೂ ಹೊಂದುವವನಾಗು' ಎಂದು ಹೇಳಿದನು.
ಅಥ ನಿಷ್ಕ್ರಮ್ಯ ಭಗವಾನ್ ಪ್ರಯಯಾವುತ್ತರಾಮುಖಃ |
ಕೈಲಾಸೇ ಶಂಕರಾವಾಸಮಭಿವೀಕ್ಷ್ಯ ಪ್ರಣಮ್ಯ ಚ ॥28॥
ಗೌರೀಶಂ ಶಂಕರಂ ದಾಂತಂ ಶರಣಾಗತವತ್ಸಲಮ್ |
ಗಂಗಾಧರಂ ಗೋಪತಿಗಂ ಗಣಾವೃತಮಕಲ್ಮಷಮ್ |
ಕೈಲಾಸಂ ಮಂದರಂ ಹೈಮಂ ಸರ್ವಾನನುಚಚಾರ ಹ ॥29॥
ಆಗ ಪೂಜ್ಯನಾದ ಋಷಿಯು ಅನಂತರ ಅಲ್ಲಿಂದ ಉತ್ತರಾಭಿಮುಖವಾಗಿ ಹೊರಟನು. ಶಂಕರನ ವಾಸಸ್ಥಾನವಾದ ಕೈಲಾಸ ಪರ್ವತವನ್ನು ನೋಡಿ ನಮಸ್ಕರಿಸಿ ಗೌರೀಪತಿಯೂ, ಶಂಕರನೂ, ಶರಣಾಗತವತ್ಸಲನೂ, ದಾಂತನೂ, ಗಂಗಾಧರನೂ, ಪಶುಪತಿಯೂ, ತನ್ನ ಗಣಗಳಿಂದ ಆವೃತನಾದವನೂ, ಕಲ್ಮಷರಹಿತನಾದವನೂ ಆದ ಶಿವನ ವಾಸಸ್ಥಾನವಾದ ಸುವರ್ಣಮಯವಾದ ಕೈಲಾಸ ಮತ್ತು ಮಂದರ ಪರ್ವತಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ಸಂಚರಿಸಿದನು.
ತಾನತೀತ್ಯ ಮಹಾಶೈಲಾನ್ ಕೈರಾತಂ ಸ್ಥಾನಮುತ್ತಮಮ್ |
ಪ್ರದಕ್ಷಿಣಂ ತತಶ್ಚಕ್ರೇ ಪ್ರಯತಃ ಶಿರಸಾ ನಮನ್ |
ಧರಣೀಮವತೀರ್ಯಾಥ ಪೂತಾತ್ಮಾಽಸೌ ತದಾಽಭವತ್ ॥30॥
ಆ ಮಹಾಪರ್ವತಗಳನ್ನು ದಾಟಿ ಕಿರಾತರ ಶ್ರೇಷ್ಠವಾದ ಸ್ಥಾನಕ್ಕೆ ಪ್ರದಕ್ಷಿಣೆಯನ್ನು ಮಾಡಿ ಶಿರಸಾ ನಮಸ್ಕಾರವನ್ನು ಮಾಡಿ ಅಲ್ಲಿಂದ

ಭೂಮಿಗೆ ಇಳಿದು ಆಗ ಪವಿತ್ರನಾದನು.
ಸ ತಂ ಪ್ರದಕ್ಷಿಣಂ ಕೃತ್ವಾ ತ್ರಿಃ ಶೈಲಂ ಚೋತ್ತರಾಮುಖಃ |
ಸಮೇನ ಭೂಮಿಭಾಗೇನ ಯಯೌ ಪ್ರೀತಿಪುರಸ್ಕೃತಃ ||31||
ಅವನು ಮೂರು ಬಾರಿ ಆ ಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿ ಉತ್ತರಾಭಿಮುಖವಾಗಿ ಸಮತಟ್ಟಾದ ಭೂಮಿಭಾಗದಲ್ಲಿ ಸಂತೋಷದಿಂದ ಹೊರಟನು.
ತತೋಽಪರಂ ವನೋದ್ದೇಶಂ ರಮಣೀಯಮಪಶ್ಯತ |
ಸರ್ವರ್ತುಭಿರ್ಮೂಲಫಲೈಃ ಪಕ್ಷಿಭಿಶ್ಚ ಸಮನ್ವಿತಮ್ |
ರಮಣೀಯೈರ್ವನೋದ್ದೇಶೈಸ್ತತ್ರ ತತ್ರ ವಿಭೂಷಿತಮ್ ||32||
ಅನಂತರ ರಮಣೀಯವಾದ, ಸರ್ವಋತುಗಳಲ್ಲಿಯೂ ಮೂಲಫಲಗಳನ್ನು ನೀಡುವ ವೃಕ್ಷಗಳಿಂದ ಕೂಡಿದ, ಪಕ್ಷಿಗಳಿಂದ ಕೂಡಿದ, ರಮಣೀಯವಾದ ವನ ಪ್ರದೇಶದಿಂದ ವಿಭೂಷಿತವಾದ ಇನ್ನೊಂದು ವನವನ್ನು ತಲುಪಿದನು.
ತತ್ರಾಶ್ರಮಪದಂ ದಿವ್ಯಂ ದದರ್ಶ ಭಗವಾನಥ |
ಶೈಲಾಂಶ್ಚ ವಿವಿಧಾಕಾರಾನ್ ಕಾಂಚನಾನ್ ರತ್ನಭೂಷಿತಾನ್ |
ಮಣಿಭೂಮೌ ನಿವಿಷ್ಟಾಶ್ಚ ಪುಷ್ಕರಿಣ್ಯಸ್ತಥೈವ ಚ ||33||
ಪೂಜ್ಯನಾದ ಅವನು ಇನ್ನೊಂದು ದಿವ್ಯವಾದ ಆಶ್ರಮಸ್ಥಾನವನ್ನು ನೋಡಿದನು. ವಿವಿಧಾಕಾರದ, ರತ್ನಭೂಷಿತವಾದ, ಸುವರ್ಣಮಯವಾದ ಪರ್ವತವನ್ನೂ, ಮಣಿಭೂಮಿಯಲ್ಲಿ ನಿರ್ಮಿಸಿದ ಸರೋವರಗಳನ್ನೂ ನೋಡಿದನು.
ಅನ್ಯಾನ್ಯಪಿ ಸುರಮ್ಯಾಣಿ ದದರ್ಶ ಸುಬಹೂನ್ಯಥ |
ಭೃಶಂ ತಸ್ಯ ಮನೋ ರೇಮೇ ಮಹರ್ಷೇರ್ಭಾವಿತಾತ್ಮನಃ ||34||
ಬೇರೆ ಬೇರೆ ಅನೇಕ ಸುಂದರ ಪದಾರ್ಥಗಳನ್ನು ಅಲ್ಲಿ ನೋಡಿದನು. ಶುದ್ಧವಾದ ಮನಸ್ಸುಳ್ಳ ಆ ಮಹರ್ಷಿಯ ಮನಸ್ಸು ಬಹಳ ಸಂತೋಷಗೊಂಡಿತು.
ಸ ತತ್ರ ಕಾಂಚನಂ ದಿವ್ಯಂ ಸರ್ವರತ್ನಮಯಂ ಗೃಹಮ್ |
ದದರ್ಶಾದ್ಭುತಸಂಕಾಶಂ ಧನದಸ್ಯ ಗೃಹಾದ್ ವರಮ್ ||35||
ಅವನು ಅಲ್ಲಿ ಕುಬೇರನ ಮನೆಗಿಂತಲೂ ಶ್ರೇಷ್ಠವಾದ, ಸರ್ವರತ್ನಮಯವಾದ, ಸುವರ್ಣನಿರ್ಮಿತವಾದ, ಅದ್ಭುತವಾದ ದಿವ್ಯವಾದ ಇನ್ನೊಂದು ಗೃಹವನ್ನು ನೋಡಿದನು.
ಮಹಾಂತೋ ಯತ್ರ ವಿವಿಧಾಃ ಮಣಿಕಾಂಚನಪರ್ವತಾಃ |
ವಿಮಾನಾನಿ ಚ ರಮ್ಯಾಣಿ ರತ್ನಾನಿ ವಿವಿಧಾನಿ ಚ ||36||
ಅಲ್ಲಿ ದೊಡ್ಡದಾದ ವಿವಿಧವಾದ ಮಣಿ-ಕಾಂಚನಪರ್ವತಗಳೂ ಮನೋಹರವಾದ ಉಪ್ಪರಿಗೆಗಳೂ, ವಿವಿಧವಾದ ರತ್ನಗಳೂ ಇದ್ದವು.
ಮಂದಾರಪುಷ್ಪೈಃ ಸಂಕೀರ್ಣಾ ತಥಾ ಮಂದಾಕಿನೀ ನದೀ |
ಸ್ವಯಂಪ್ರಭಾಶ್ಚ ಮಣಯೋ ವಜ್ರೈರ್ಭೂಮಿಶ್ಚ ಭೂಷಿತಾ ||37||
ಮಂದಾರಪುಷ್ಪಗಳಿಂದ ಭರಿತವಾದ ಮಂದಾಕಿನೀ ನದಿ ಇದ್ದಿತು. ಸ್ವಯಂಪ್ರಭೆಯುಳ್ಳ ಮಣಿಗಳು, ವಜ್ರಖಚಿತವಾದ ಭೂಮಿಯು ಅಲ್ಲಿ ಅಲಂಕಾರಪ್ರದವಾಗಿದ್ದಿತು.
ನಾನಾವಿಧೈಶ್ಚ ಭವನೈರ್ವಿಚಿತ್ರಮಣಿತೋರಣೈಃ |
ಮುಕ್ತಾಜಾಲಪರಿಕ್ಷಿಪ್ತೈರ್ಮಣಿರತ್ನವಿಭೂಷಿತೈಃ |
ಮನೋದೃಷ್ಟಿಹರೈ ರಮ್ಯೈಃ ಸರ್ವತಃ ಸಂವೃತಂ ಶುಭೈಃ ||38||
ಆ ಗೃಹದ ಸುತ್ತಲೂ ನಾನಾ ವಿಧವಾದ ವಿಚಿತ್ರ ಮಂಟಪಗಳನ್ನು ಹೊಂದಿದ, ಮುತ್ತಿನ ಜಾಲಗಳಿಂದ ಸುತ್ತುವರಿಯಲ್ಪಟ್ಟ, ಮಣಿರತ್ನವಿಭೂಷಿತವಾದ, ಮನಸ್ಸಿಗೂ ಕಣ್ಣಿಗೂ ಸಂತೋಷವನ್ನು ಕೊಡುವ ಅನೇಕ ಗೃಹಗಳಿದ್ದವು.
ಋಷಿಃ ಸಮಂತತೋಽಪಶ್ಯತ್ ತತ್ರ ತತ್ರ ಮನೋರಮಮ್ |
ತತೋಽಭವತ್ ತಸ್ಯ ಚಿಂತಾ ಕ್ವ ಮೇ ವಾಸೋ ಭವೇದಿತಿ ||39||
ಋಷಿಯು ಸುತ್ತಲೂ ಮನೋಹರವಾದ ಅವುಗಳನ್ನು ನೋಡಿ ನಾನು ಎಲ್ಲಿ ವಾಸ ಮಾಡಬೇಕು ಎಂದು ಚಿಂತಾಕ್ರಾಂತನಾದನು.
ಅಥ ದ್ವಾರಂ ಸಮಭಿತೋ ಗತ್ವಾ ಸ್ಥಿತ್ವಾ ತತೋಽಬ್ರವೀತ್ |
ಅತಿಥಿಂ ಮಾಮನುಪ್ರಾಪ್ತಮನುಜಾನಂತು ಯೇಽತ್ರ ವೈ ||40||
ಆಗ ಆ ಪ್ರಧಾನವಾದ ಮನೆಯ ದ್ವಾರಕ್ಕೆ ಹೋಗಿ ನಿಂತು `ನಾನು ಅತಿಥಿಯಾಗಿ ಬಂದಿದ್ದೇನೆ. ಒಳಗೆ ಯಾರಿದ್ದೀರೋ ಅವರು ನನಗೆ ಅನುಮತಿಯನ್ನು ಕೊಡಿ' ಎಂದು ಹೇಳಿದನು.
ಅಥ ಕನ್ಯಾಪರಿವೃತಾ ಗೃಹಾತ್ ತಸ್ಮಾದ್ ವಿನಿಃಸೃತಾಃ |
ನಾನಾರೂಪಾಃ ಸಪ್ತ ವಿಭೋ ಕನ್ಯಾಃ ಸರ್ವಾ ಮನೋಹರಾಃ ||41||
ಆಗ ಎಲೈ ವಿಭುವೇ, ಮನೋಹರವಾದ ನಾನಾ ರೂಪವನ್ನು ಧರಿಸಿದ ಸಪ್ತಕನ್ಯೆಯರು ಆ ಗೃಹದಿಂದ ಒಟ್ಟಿಗೆ ಹೊರಬಂದರು.
ಯಾಂ ಯಾಮಪಶ್ಯತ್ ಕನ್ಯಾಂ ಸ ಸಾ ಸಾ ತಸ್ಯ ಮನೋಽಹರತ್ |
ನ ಚ ಶಕ್ತೋ ನಿವಾರಯಿತುಂ ಮನೋಽಥಾಸ್ಯಾವಸೀದತಿ ||42||
ಆ ಋಷಿಯು ಯಾವ ಯಾವ ಕನ್ಯೆಯನ್ನು ನೋಡಿದನೋ ಅವರವರು ಅವನ ಮನಸ್ಸನ್ನು ಅಪಹರಿಸಿದರು. ಅವನು ತನ್ನ ಮನಸ್ಸನ್ನು ಚಾಂಚಲ್ಯದಿಂದ ನಿವಾರಿಸಲು ಸಮರ್ಥನಾಗಲಿಲ್ಲ. ಆಗ ಅವನ ಮನಸ್ಸು ಕುಸಿಯಿತು.
ತತೋ ಧೃತಿಃ ಸಮುತ್ಪನ್ನಾ ತಸ್ಯ ವಿಪ್ರಸ್ಯ ಧೀಮತಃ |

ಅಥ ತಂ ಪ್ರಮದಾಃ ಪ್ರಾಹುರ್ಭಗವಾನ್ ಪ್ರವಿಶತ್ವಿತಿ ॥43॥
ಅನಂತರ ಮೇಧಾವಿಯಾದ ಆ ಬ್ರಾಹ್ಮಣನು ಮನಸ್ಸಿಗೆ ಧೈರ್ಯವನ್ನು ತಂದುಕೊಂಡನು. ಆಗ ಆ ಕನ್ಯೆಯರು `ಪೂಜ್ಯನೇ, ಒಳಗೆ ಪ್ರವೇಶಿಸಬೇಕು' ಎಂದು ಹೇಳಿದರು.
ಸ ಚ ತಾಸಾಂ ಸುರೂಪಾಣಾಂ ತಸ್ಯೈವ ಭವನಸ್ಯ ಚ |
ಕೌತೂಹಲಸಮಾವಿಷ್ಟಃ ಪ್ರವಿವೇಶ ಗೃಹಂ ದ್ವಿಜಃ ॥44॥
ಆ ಬ್ರಾಹ್ಮಣನು ಅವರ ಸೌಂದರ್ಯದಿಂದಲೂ, ಆ ಮನೆಯ ಸೌಂದರ್ಯದಿಂದಲೂ ಕುತೂಹಲಭರಿತನಾಗಿ ಗೃಹವನ್ನು ಪ್ರವೇಶಿಸಿದನು.
ತತ್ರಾಪಶ್ಯಜ್ಜರಾಯುಕ್ತಾಮರಜೋಂಬರಧಾರಿಣೀಮ್ |
ವೃದ್ಧಾಂ ಪರ್ಯಂಕಮಾಸೀನಾಂ ಸರ್ವಾಭರಣಭೂಷಿತಾಮ್ ॥45॥
ಅಲ್ಲಿ ಜರೆಯಿಂದ ಕೂಡಿದ, ಶುದ್ಧವಾದ ವಸ್ತ್ರವನ್ನು ಧರಿಸಿದ, ಸರ್ವಾಭರಣ ಭೂಷಿತಳಾದ, ಮಂಚದ ಮೇಲೆ ಕುಳಿತ ಒಬ್ಬ ವೃದ್ಧಳನ್ನು ನೋಡಿದನು.
ಸ್ವಸ್ತೀತಿ ಚಾಥ ತೇನೋಕ್ತಾ ಸಾ ಸ್ತ್ರೀ ಪ್ರತ್ಯವದತ್ ತದಾ |
ಪ್ರತ್ಯುತ್ಥಾಯ ಚ ತಂ ವಿಪ್ರಮಾಸ್ಯತಾಮಿತ್ಯುವಾಚ ಹ ॥46॥
`ನಿನಗೆ ಕ್ಷೇಮವಾಗಲಿ' ಎಂದು ಋಷಿಯಿಂದ ಹೇಳಲ್ಪಟ್ಟ ಆ ವನಿತೆಯು ಎದ್ದು ನಿಂತು ಆ ಬ್ರಾಹ್ಮಣನನ್ನು ಕುರಿತು `ಕುಳಿತುಕೊಳ್ಳಿ' ಎಂದು ಹೇಳಿದಳು.
ಅಷ್ಟಾವಕ್ರಃ
ಸರ್ವಾಃ ಸ್ವಾನಾಲಯಾನ್ ಯಾಂತು ಏಕಾ ಮಾಮುಪತಿಷ್ಠತು |
ಸುಪ್ರಜ್ಞಾತಾ ಸುಪ್ರಶಾಂತಾ ಶೇಷಾ ಗಚ್ಛಂತು ಚ್ಛಂದತಃ ॥47॥
ಅಷ್ಟಾವಕ್ರ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಲಿ, ಸ್ಪಷ್ಟವಾದ ಜ್ಞಾನವಿರುವ ಪ್ರಶಾಂತಳಾದ ಒಬ್ಬಳು ಮಾತ್ರ ಉಳಿಯಲಿ, ಅವಳು ಮಾತ್ರ ನನ್ನ ಸಮೀಪದಲ್ಲಿರಲಿ ಎಂದು ಹೇಳಿದನು.
ತತಃ ಪ್ರದಕ್ಷಿಣೀಕೃತ್ಯ ಕನ್ಯಾಸ್ತಾಸ್ತಮೃಷಿಂ ತದಾ |
ನಿರಾಕ್ರಾಮನ್ ಗೃಹಾತ್ ತಸ್ಮಾತ್ಸಾ ವೃದ್ಧಾಥ ವ್ಯತಿಷ್ಠತ |
ತಯಾ ಸಂಪೂಜಿತಸ್ತತ್ರ ಶಯನೇ ಚಾತಿನಿರ್ಮಲೇ ॥48॥
ಆಗ ಆ ಕನ್ಯೆಯರೆಲ್ಲರೂ ಆ ಋಷಿಗೆ ಪ್ರದಕ್ಷಿಣೆಯನ್ನು ಮಾಡಿ, ಆ ಗೃಹದಿಂದ ಹೊರಗೆ ಹೋದರು. ಆ ವೃದ್ಧೆಯೊಬ್ಬಳು ಮಾತ್ರ ಅಲ್ಲಿ ಉಳಿದಳು. ಅವಳಿಂದ ಆ ಋಷಿಯು ಅತಿ ನಿರ್ಮಲವಾದ ಹಾಸಿಗೆಯಲ್ಲಿ ಚೆನ್ನಾಗಿ ಪೂಜಿಸಲ್ಪಟ್ಟನು.
ಅಥ ತಾಂ ಸಂವಿಶನ್ ಪ್ರಾಹ ಶಯನೇ ಭಾಸ್ವರೇ ತದಾ |
ತ್ವಯಾಽಪಿ ಸುಪ್ಯತಾಂ ಭದ್ರೇ ರಜನೀ ಹ್ಯತಿವರ್ತತೇ ॥49॥
ತನ್ನ ಶುಭ್ರವಾದ ಹಾಸಿಗೆಯಲ್ಲಿ ಮಲಗುತ್ತಾ ಅವನು ಆ ವೃದ್ಧೆಯನ್ನು ಕುರಿತು- `ಶುಭಸ್ವರೂಪಳೇ, ನೀನೂ ಸಹ ಮಲಗು. ರಾತ್ರಿಯು ಮೀರುತ್ತಿದೆ' ಎಂದು ಹೇಳಿದನು.
ಸಂಲಾಪಾತ್ ತೇನ ವಿಪ್ರೇಣ ತಥಾ ಸಾ ತತ್ರ ಭಾಷಿತಾ |
ದ್ವಿತೀಯೇ ಶಯನೇ ದಿವ್ಯೇ ಸಂವಿವೇಶ ಮಹಾಪ್ರಭೇ ॥50॥
ಆ ಬ್ರಾಹ್ಮಣನ ಜೊತೆಯಲ್ಲಿ ಸಲ್ಲಾಪವನ್ನು ಮಾಡುತ್ತಾ, ಅವಳು ಇನ್ನೊಂದು ದಿವ್ಯವಾದ ಮಹಾಪ್ರಭೆಯುಳ್ಳ ಹಾಸಿಗೆಯಲ್ಲಿ ಮಲಗಿದಳು.
ಅಥ ಸಾ ವೇಪಮಾನಾಂಗೀ ನಿಮಿತ್ತಂ ಶೀತಜಂ ತದಾ |
ವ್ಯಪದಿಶ್ಯ ಮಹರ್ಷೇರ್ವೈ ಶಯನಂ ವ್ಯವರೋಹತ ॥51॥
ಅವಳು ಅಲ್ಲಿ ನಡುಗುತ್ತಾ ಮಹರ್ಷಿಯನ್ನು ಕುರಿತು ಶೈತ್ಯದ ಕಾರಣವನ್ನು ಹೇಳಿ ಮಹರ್ಷಿಯ ಹಾಸಿಗೆಯನ್ನೇ ಏರಿದಳು.
ಸ್ವಾಗತೇನಾಗತಾಂ ತಾಂ ತು ಭಗವಾಂಸ್ತಾಮಭಾಷತ |
ಸಾ ಜುಗೂಹ ಭುಜಾಭ್ಯಾಂ ತು ಋಷಿಂ ಪ್ರೀತ್ಯಾ ನರರ್ಷಭ ॥52॥
ಆ ಪೂಜ್ಯನು ಅವಳನ್ನು ಸ್ವಾಗತ ವಚನದಿಂದ ಅಭಿನಂದಿಸಿದನು. ಎಲೈ ನರರ್ಷಭನೇ, ಅವಳು ಆ ಋಷಿಯನ್ನು ತನ್ನ ಭುಜಗಳಿಂದ ಪ್ರೀತಿಯಿಂದ ಅಪ್ಪಿಕೊಂಡಳು.
ನಿರ್ವಿಕಾರಮೃಷಿಂ ಚಾಪಿ ಕಾಷ್ಠಕುಡ್ಯೋಪಮಂ ತದಾ |
ದುಃಖಿತಾ ಪ್ರೇಕ್ಷ್ಯ ಸಂಜಲ್ಪಮಕಾರ್ಷೀದೃಷಿಣಾ ಸಹ ॥53॥
ಆ ಋಷಿಯು ಕಲ್ಲಿನಂತೆ ಅಥವಾ ಕಟ್ಟಿಗೆಯಂತೆ ನಿರ್ವಿಕಾರವಾಗಿರುವುದನ್ನು ಗಮನಿಸಿ ದುಃಖಿತಳಾಗಿ ಋಷಿಯ ಜೊತೆಯಲ್ಲಿ ಸಂಭಾಷಣೆಯನ್ನು ಮಾಡಿದಳು.
ಬ್ರಹ್ಮನ್ನ ಕಾಮಕಾರೋಽಸ್ತಿ ಸ್ತ್ರೀಣಾಂ ಪುರುಷತೋಽಧೃತಿಃ |
ಕಾಮೇನ ಮೋಹಿತಾ ಚಾಹಂ ತ್ವಾಂ ಭಜಂತೀಂ ಭಜಸ್ವ ಮಾಮ್ ॥54॥
ಪೂಜ್ಯನೇ, ಇದು ಕಾಮಾಚಾರವಲ್ಲ. ಸ್ತ್ರೀಯರಿಗೆ ಪುರುಷರಿಗಿರುವಷ್ಟು ಸ್ಥೈರ್ಯವಿರುವುದಿಲ್ಲ. ನಾನು ಕಾಮದಿಂದ ಮೋಹಿತಳಾಗಿದ್ದೇನೆ. ನಿನ್ನನ್ನು ಬೇಡುತ್ತಿರುವ ನನ್ನನ್ನು ಭಜಿಸು.
ಪ್ರಹೃಷ್ಟೋ ಭವ ವಿಪ್ರರ್ಷೇ ಸಮಾಗಚ್ಛ ಮಯಾ ಸಹ |
ಉಪಗೂಹ ಚ ಮಾಂ ವಿಪ್ರ ಕಾಮಾರ್ತಾಽಹಂ ಭೃಶಂ ತ್ವಯಿ ॥55॥

ವಿಪ್ರರ್ಷಿಯೇ, ಸಂತೋಷದಿಂದ ನನ್ನ ಜೊತೆಯಲ್ಲಿ ಸಮಾಗಮವನ್ನು ಹೊಂದು. ಎಲೈ ಬ್ರಾಹ್ಮಣನೇ, ನನ್ನನ್ನು ಆಲಿಂಗಿಸು. ನನಗೆ ನಿನ್ನಲ್ಲಿ ಉಂಟಾದ ಕಾಮದಿಂದ ಬಳಲುತ್ತಿದ್ದೇನೆ.
ಏತದ್ಧಿ ತವ ಧರ್ಮಾತ್ಮಂಸ್ತಪಸಃ ಪೂಜ್ಯತೇ ಫಲಮ್ |
ಪ್ರಾರ್ಥಿತಂ ದರ್ಶನಾದೇವ ಭಜಮಾನಾಂ ಭಜಸ್ವ ಮಾಮ್ ॥56॥
ಎಲೈ ಧರ್ಮಾತ್ಮನೇ, ಇದು ನಿನ್ನ ತಪಸ್ಸಿನ ಫಲವಾದುದು. ಆದ್ದರಿಂದ ಪೂಜಿಸಲ್ಪಡುತ್ತದೆ ಮತ್ತು ಇಂತಹ ಫಲವು ಪ್ರಾರ್ಥಿಸಲ್ಪಡುತ್ತದೆ. ನಿನ್ನ ದರ್ಶನದಿಂದಲೇ ನಿನ್ನಲ್ಲಿ ಅನುರಕ್ತಳಾದ ನನ್ನನ್ನು ಸ್ವೀಕರಿಸುವವನಾಗು.
ಸದ್ಮ ಚೇದಂ ಧನಂ ಸರ್ವಂ ಯಚ್ಚಾನ್ಯದಪಿ ಪಶ್ಯಸಿ |
ಪ್ರಭುತ್ವಂ ತವ ಸರ್ವತ್ರ ಮಯಿ ಚೈವ ನ ಸಂಶಯಃ ॥57॥
ಈ ನನ್ನ ಗೃಹ, ಧನ ಮತ್ತು ನೀನು ನೋಡುತ್ತಿರುವ ಎಲ್ಲ ವಸ್ತುಗಳು ಇವೆಲ್ಲದಕ್ಕೂ ನೀನೇ ಒಡೆಯನಾದವನು. ನನಗೂ ನೀನೇ ಒಡೆಯನಾದವನು. ಇದರಲ್ಲಿ ಸಂಶಯವಿಲ್ಲ.
ಸರ್ವಾನ್ ಕಾಮಾನ್ ವಿಧಾಸ್ಯಾಮಿ ರಮಸ್ವ ಸಹಿತೋ ಮಯಾ |
ರಮಣೀಯೇ ವನೇ ವಿಪ್ರ ಸರ್ವಕಾಮಫಲಪ್ರದೇ ॥58॥
ನಿನ್ನ ಎಲ್ಲಾ ಇಚ್ಛೆಗಳನ್ನೂ ಪೂರೈಸುವೆನು. ಎಲೈ ವಿಪ್ರನೇ, ಸರ್ವಕಾಮ ಫಲಪ್ರದವಾದ ಮನೋಹರವಾದ ಈ ವನದಲ್ಲಿ ನನ್ನ ಜೊತೆಯಲ್ಲಿ ವಿಹರಿಸು.
ತ್ವದ್ವಶಾಽಹಂ ಭವಿಷ್ಯಾಮಿ ರಂಸ್ಯಸೇ ಚ ಮಯಾ ಸಹ |
ಸರ್ವಾನ್ ಕಾಮಾನುಪಾಶ್ನಾನೋ ಯೇ ದಿವ್ಯಾ ಯೇ ಚ ಮಾನುಷಾಃ ॥
ನಾನು ನಿನ್ನ ವಶಳಾಗುವೆನು. ದಿವ್ಯ ಮತ್ತು ಮಾನುಷವಾದ ಎಲ್ಲ ಭೋಗಗಳನ್ನೂ ಭೋಗಿಸುತ್ತಾ ನೀನು ನನ್ನ ಜೊತೆಯಲ್ಲಿ ಸುಖವನ್ನು ಅನುಭವಿಸು.
ನಾತಃ ಪರಂ ಹಿ ನಾರೀಣಾಂ ವಿದ್ಯತೇ ಚ ಕದಾಚನ |
ಯಥಾ ಪುರುಷಸಂಸರ್ಗಃ ಪರಮೇತದ್ಧಿ ನಃ ಫಲಮ್ ॥60॥
ಸ್ತ್ರೀಯರಿಗೆ ಪುರುಷಸಮಾಗಮಕ್ಕಿಂತಲೂ ಶ್ರೇಷ್ಠವಾದುದು ಯಾವುದೂ ಇರುವುದಿಲ್ಲ. ಅದು ನಾವು ಆಶಿಸುವ ಶ್ರೇಷ್ಠವಾದ ಫಲ.
ಆತ್ಮಚ್ಛಂದೇನ ವರ್ತಂತೇ ನಾರ್ಯೋ ಮನ್ಮಥಚೋದಿತಾಃ |
ನ ಚ ದಹ್ಯಂತಿ ಗಚ್ಛಂತ್ಯಃ ಸುತಪ್ತೈರಪಿ ಪಾಂಸುಭಿಃ ॥61॥
ಕಾಮಾವಿಷ್ಟರಾದ ಸ್ತ್ರೀಯರು ತಮ್ಮ ಮನಸ್ಸಿಗೆ ಇಷ್ಟವಾದಂತೆ ನಡೆಯುತ್ತಾರೆ. ಆಗ ಬಿಸಿಯಾದ ಧೂಳಿನ ಮೇಲೆ ನಡೆದರೂ ಅವರಿಗೆ ದಾಹವುಂಟಾಗುವುದಿಲ್ಲ (ಎಂದು ಹೇಳಿದಳು).
ಅಷ್ಟಾವಕ್ರಃ
ಪರದಾರಾನಹಂ ಭದ್ರೇ ನ ಗಚ್ಛೇಯಂ ಕಥಂಚನ |
ದೂಷಿತಂ ಧರ್ಮಶಾಸ್ತ್ರೇಷು ಪರದಾರಾಭಿಮರ್ಶನಮ್ ॥62॥
ಅಷ್ಟಾವಕ್ರ ಎಲೌ ಶುಭಸ್ವರೂಪಳೇ, ಇನ್ನೊಬ್ಬರ ಪತ್ನಿಯನ್ನು ನಾನು ಎಂದೂ ಸ್ಪರ್ಶ ಮಾಡುವುದಿಲ್ಲ. ಇನ್ನೊಬ್ಬರ ಪತ್ನಿಯ ಸ್ಪರ್ಶವು ಧರ್ಮಶಾಸ್ತ್ರಗಳಲ್ಲಿ ದೂಷಿತವಾದುದು.
ಶುದ್ಧಕ್ಷೇತ್ರೇ ಬ್ರಹ್ಮಹತ್ಯಾ ಪ್ರಾಯಶ್ಚಿತ್ತಮಥೋಚ್ಯತೇ |
ಪುನಶ್ಚ ಪಾತಕಂ ದೃಷ್ಟಂ ವಿಪ್ರಕ್ಷೇತ್ರೇ ವಿಶೇಷತಃ ॥63॥
ಪರಪತ್ನಿಯಾಗದೆ ಶುದ್ಧಕ್ಷೇತ್ರಳಾದರೆ ಅಂತಹವಳ ಜೊತೆಯಲ್ಲಿ ಗಮನವು ಬ್ರಹ್ಮಹತ್ಯಾ ದೋಷವನ್ನು ತಂದುಕೊಡುತ್ತದೆ. ಅದಕ್ಕೆ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ. ಆ ಕ್ಷೇತ್ರವು ಬ್ರಾಹ್ಮಣಕ್ಷೇತ್ರವಾದರೆ ಇನ್ನೂ ವಿಶೇಷವಾದ ಪಾತಕವಿದೆ.
ಭದ್ರೇ ನಿವೇಷ್ಟುಕಾಮಂ ಮಾಂ ವಿದ್ಧಿ ಸತ್ಯೇನ ವೈ ಶಪೇ |
ಪ್ರಾಯಶ್ಚಿತ್ತಂ ಮಹದತೋ ದಾರಗ್ರಹಣಪೂರ್ವಕಮ್ ॥64॥
ಶುಭಳೇ, ನಾನು ವಿವಾಹ ಮಾಡಿಕೊಳ್ಳಲು ಬಯಸುತ್ತೇನೆ ಎಂದು ತಿಳಿ. ಇದನ್ನು ಶಪಥ ಮಾಡಿ ಹೇಳುತ್ತಿದ್ದೇನೆ. ವಿವಾಹಕ್ಕಿಂತಲೂ ಮೊದಲು ಮಾಡಿದ ಸ್ತ್ರೀ ಸಂಗಕ್ಕೆ ದೊಡ್ಡ ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ.
ಬೀಜಂ ನ ಶುದ್ಧ್ಯತೇ ವೋಢುರನ್ಯಥಾಽಕೃತನಿಷ್ಕೃತೇ |
ಮಾತೃತಃ ಪಿತೃತಃ ಶುದ್ಧೋ ಜ್ಞೇಯಃ ಪುತ್ರೋ ಯಥಾರ್ಥತಃ |
ವಿಷಯೇಷ್ವನಭಿಜ್ಞೋಽಹಂ ಧರ್ಮಾರ್ಥಂ ಕಿಲ ಸಂತತಿಃ ॥65॥
ಹಾಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ವಿವಾಹ ಮಾಡಿಕೊಳ್ಳುವವನ ವೀರ್ಯವು ಅಶುದ್ಧವಾಗುತ್ತದೆ. ಜನಿಸುವ ಪುತ್ರನು ತಾಯಿಯಿಂದಲೂ, ತಂದೆಯಿಂದಲೂ ಶುದ್ಧನಾಗಿ ಜನಿಸಬೇಕಷ್ಟೆ? ನಾನು ಈ ವಿಷಯವನ್ನು ತಿಳಿಯದವನು. ಸಂತತಿಯು ಧರ್ಮದ ಉದ್ದೇಶದಿಂದಷ್ಟೆ?
ಏವಂ ಲೋಕಾನ್ ಗಮಿಷ್ಯಾಮಿ ಪುತ್ರೈರಿತಿ ನ ಸಂಶಯಃ |
ಭದ್ರೇ ಧರ್ಮಂ ವಿಜಾನೀಷ್ವ ಜ್ಞಾತ್ವಾ ಚೋಪರಮಸ್ವ ಹ ॥66॥
ನಾನು ಅಂತಹ ಪುತ್ರರಿಂದ ಒಳ್ಳೆಯ ಲೋಕಗಳನ್ನು ಪಡೆಯುವೆನು ಎಂಬ ಅಭಿಪ್ರಾಯವನ್ನು ಹೊಂದಿದ್ದೇನೆ. ಇದರಲ್ಲಿ ಸಂಶಯವಿಲ್ಲ. ಶುಭಳೇ, ಧರ್ಮವನ್ನು ನೋಡು, ನೋಡಿ ಶಾಂತಳಾಗು.
ಸ್ತ್ರೀ
ನಾನಿಲೋಽಗ್ನಿರ್ನ ವರುಣೋ ನ ಚಾನ್ಯೇ ತ್ರಿದಶಾ ದ್ವಿಜ |

ಪ್ರಿಯಾಃ ಸ್ತ್ರೀಣಾಂ ಯಥಾ ಕಾಮೋ ರತಿಶೀಲಾ ಹಿ ಯೋಷಿತಃ ॥67॥
ಸ್ತ್ರೀ ಎಲೈ ಬ್ರಾಹ್ಮಣನೇ, ವಾಯುವಾಗಲೀ, ವರುಣನಾಗಲೀ ಅಥವಾ ಬೇರೆ ದೇವತೆಯಾಗಲೀ ಸ್ತ್ರೀಯರಿಗೆ ಕಾಮದಷ್ಟು ಪ್ರಿಯರಲ್ಲ. ಸ್ತ್ರೀಯರು ರತಿಶೀಲರಾದವರು.
ಸಹಸ್ರೈಕಾ ಯಥಾ ನಾರೀ ಪ್ರಾಪ್ನೋತೀಹ ಕದಾಚನ |
ತಥಾ ಶತಸಹಸ್ರೇಷು ಯದಿ ಕಾಚಿತ್ ಪತಿವ್ರತಾ ॥68॥
ಸಾವಿರ ಸ್ತ್ರೀಯರಲ್ಲಿ ಯಾವಾಗಲಾದರೂ ಒಬ್ಬಳು ಸಂಯಮವಿದ್ದವಳು ದೊರೆಯುತ್ತಾಳೆ. ಹಾಗೆಯೇ ಲಕ್ಷಸ್ತ್ರೀಯರಲ್ಲಿ ಒಬ್ಬಳು ಪತಿವ್ರತೆಯಾಗಿರುತ್ತಾಳೆ.
ನೈತಾ ಜಾನಂತಿ ಪಿತರಂ ನ ಕುಲಂ ನ ಚ ಮಾತರಮ್ |
ನ ಭ್ರಾತೄನ್ನ ಚ ಭರ್ತಾರಂ ನ ಪುತ್ರಾನ್ನ ಚ ದೇವರಾನ್ ॥69॥
ಸ್ತ್ರೀಯರು ತಂದೆಯನ್ನಾಗಲೀ, ತಾಯಿಯನ್ನಾಗಲೀ, ಕುಲವನ್ನಾಗಲೀ, ಸಹೋದರರನ್ನಾಗಲೀ, ಪತಿಯನ್ನಾಗಲೀ, ಪುತ್ರರನ್ನಾಗಲೀ, ಮೈದುನರನ್ನಾಗಲೀ ಗಮನಿಸುವುದಿಲ್ಲ.
ಲೀಲಾಯಂತ್ಯಃ ಕುಲಂ ಘ್ನಂತಿ ಕೂಲಾನಿವ ಸರಿದ್ವರಾಃ |
ದೋಷಾಂಶ್ಚ ಮಂದಾನ್ ಮಂದಾಸು ಪ್ರಜಾಪತಿರಭಾಷತ ॥70॥
ದೊಡ್ಡ ನದಿಗಳು ದಡವನ್ನು ಕೊಚ್ಚಿಕೊಂಡು ಹರಿಯುವಂತೆ ಅವರು ಕಾಮಲೀಲೆಯಿಂದ ಕುಲವನ್ನು ನಾಶಮಾಡುತ್ತಾರೆ. ಅಂತಹ ಮಂದರಾದ ಸ್ತ್ರೀಯರಲ್ಲಿ ಪ್ರಜಾಪತಿಯು ಬಹಳ ದೋಷಗಳನ್ನು ಹೇಳಿದ್ದಾನೆ.
ಭೀಷ್ಮಃ
ತತಃ ಸ ಋಷಿರೇಕಾಗ್ರಸ್ತಾಂ ಸ್ತ್ರಿಯಂ ಪ್ರತ್ಯಭಾಷತ |
ಆಸ್ಯತಾಂ ರುಚಿರಂ ಛಂದಃ ಕಿಂ ವಾ ಕಾರ್ಯಂ ಬ್ರವೀಹಿ ಮೇ ॥71॥
ಭೀಷ್ಮ ಆಗ ಆ ಋಷಿಯು ಸ್ಥಿರನಾಗಿ ಆ ಸ್ತ್ರೀಯನ್ನು ಕುರಿತು- `ಬಾ, ನಿನ್ನ ಮನಸ್ಸಿಗೆ ಬಂದಂತೆ ಕುಳಿತುಕೊ. ಏನು ಮಾಡಬೇಕೆಂದು ನನಗೆ ಹೇಳು' ಎಂದು ಹೇಳಿದನು.
ಸಾ ಸ್ತ್ರೀ ಪ್ರೋವಾಚ ಭಗವನ್ ಜ್ಞಾಸ್ಯಸೇ ದೇಶಕಾಲತಃ |
ವಸ ತಾವನ್ಮಹಾಪ್ರಾಜ್ಞ ಕೃತಕೃತ್ಯೋ ಗಮಿಷ್ಯಸಿ ॥72॥
ಆ ವನಿತೆಯು ಅವನನ್ನು ಕುರಿತು- `ಪೂಜ್ಯನೇ, ಯೋಗ್ಯವಾದ ದೇಶದಲ್ಲಿ ಮತ್ತು ಕಾಲದಲ್ಲಿ ಏನು ಮಾಡಬೇಕೆಂದು ತಿಳಿಯುವಿ. ಮಹಾಪ್ರಾಜ್ಞನೇ, ಸದ್ಯದಲ್ಲಿ ಇಲ್ಲಿ ವಾಸ ಮಾಡು. ನೀನು ಕೃತ್ಯಕೃತ್ಯನಾಗುವಿ' ಎಂದು ಹೇಳಿದಳು.
ಬ್ರಹ್ಮರ್ಷಿಸ್ತಾಮಥೋವಾಚ ಸ ತಥೇತಿ ಯುಧಿಷ್ಠಿರ |
ವತ್ಸ್ಯೇಽಹಂ ಯಾವದುತ್ಸಾಹೋ ಭವತ್ಯಾ ನಾತ್ರ ಸಂಶಯಃ ॥73॥
ಎಲೈ ಯುಧಿಷ್ಠಿರನೇ, ಬ್ರಹ್ಮರ್ಷಿಯು ಅವಳನ್ನು ಕುರಿತು- `ಹಾಗೆಯೇ ಆಗಲಿ. ನನ್ನ ಇಚ್ಛೆ ಇರುವವರೆಗೂ ನಿನ್ನ ಜೊತೆಯಲ್ಲಿ ವಾಸ ಮಾಡುವೆನು. ಇದರಲ್ಲಿ ಸಂಶಯವಿಲ್ಲ' ಎಂದು ಹೇಳಿದನು.
ಅಥರ್ಷಿರಭಿಸಂಪ್ರೇಕ್ಷ್ಯ ಸ್ತ್ರಿಯಂ ತಾಂ ಜರಯಾಽನ್ವಿತಾಮ್ |
ಚಿಂತಾಂ ಪರಮಿಕಾಂ ಭೇಜೇ ಸಂತಪ್ತ ಇವ ಚಾಭವತ್ ॥74॥
ಅನಂತರ ಆ ಋಷಿಯು ಮುಪ್ಪಿನಿಂದ ಗ್ರಸ್ತಳಾದ ಆ ಸ್ತ್ರೀಯನ್ನು ನೋಡಿ ಚಿಂತಾಕ್ರಾಂತನಾಗಿ ಸಂತಾಪವನ್ನು ಹೊಂದಿದನು.
ಯದ್ಯದಂಗಂ ಹಿ ಸೋಽಪಶ್ಯತ್ ತಸ್ಯಾ ವಿಪ್ರರ್ಷಭಸ್ತದಾ |
ನಾರಮತ್ ತತ್ರ ತತ್ರಾಸ್ಯ ದೃಷ್ಟೀ ರೂಪಪರಾಜಿತಾ ॥75॥
ಆ ವಿಪ್ರಶ್ರೇಷ್ಠನು ಅವಳ ಯಾವ ಯಾವ ಅಂಗವನ್ನು ನೋಡಿದರೂ ಅಲ್ಲಿರುವ ರೂಪವಿಕಾರವನ್ನು ನೋಡಿ ಅವನ ದೃಷ್ಟಿಯು ಸಂತೋಷಗೊಳ್ಳಲಿಲ್ಲ.
ದೇವತೇಯಂ ಗೃಹಸ್ಯಾಸ್ಯ ಶಾಪಾನ್ನೂನಂ ವಿರೂಪತಾ |
ಅಸ್ಯಾಶ್ಚ ಕಾರಣಂ ವೇತ್ತುಂ ನ ಯುಕ್ತಂ ಸಹಸಾ ಮಯಾ ॥76॥
ಇವಳು ಈ ಗೃಹದ ದೇವತೆ. ಶಾಪದಿಂದ ವಿರೂಪಳಾಗಿದ್ದಾಳೆ. ಇದಕ್ಕೆ ತಕ್ಷಣ ನಾನು ಕಾರಣವನ್ನು ತಿಳಿಯುವುದು ಯೋಗ್ಯವಲ್ಲ.
ಇತಿ ಚಿಂತಾವಿಷಕ್ತಸ್ಯ ತಮರ್ಥಂ ಜ್ಞಾತುಮಿಚ್ಛತಃ |
ವ್ಯಗಮತ್ ತದಹಃಶೇಷಂ ಮನಸಾ ವ್ಯಾಕುಲೇನ ತು ॥77॥
ಹೀಗೆ ಚಿಂತಾಕ್ರಾಂತನಾಗಿ ಆ ವಿಷಯವನ್ನು ತಿಳಿಯಲು ಬಯಸಿದ ವ್ಯಾಕುಲವಾದ ಮನಸ್ಸುಳ್ಳ ಅವನಿಗೆ ಆ ದಿನದ ಉಳಿದ ಭಾಗವು ಕಳೆಯಿತು.
ಅಥ ಸಾ ಸ್ತ್ರೀ ತದೋವಾಚ ಭಗವನ್ ಪಶ್ಯ ವೈ ರವಿಮ್ |
ರೂಪಂ ಸಂಧ್ಯಾಭ್ರಸಂಯುಕ್ತಂ ಕಿಮುಪಸ್ಥಾಪ್ಯತಾಂ ತವ ॥78॥
ಅನಂತರ ಆ ವನಿತೆಯು ಅವನನ್ನು ಕುರಿತು- `ಪೂಜ್ಯನೇ, ಸೂರ್ಯನನ್ನು ನೋಡು. ಸಂಧ್ಯಾಕಾಲದ ಮೇಘಸಂಯುಕ್ತನಾದ ಅವನ ರೂಪವನ್ನು ನೋಡು. ನಿನಗೆ ಏನು ಒದಗಿಸಬೇಕು' ಎಂದು ಕೇಳಿದಳು.
ಸ ಉವಾಚ ತದಾ ತಾಂ ಸ್ತ್ರೀಂ ಸ್ನಾನೋದಕಮಿಹಾನಯ |
ಉಪಾಸಿಷ್ಯೇ ತತಃ ಸಂಧ್ಯಾಂ ವಾಗ್ಯತೋ ನಿಯತೇಂದ್ರಿಯಃ ॥79॥
ಆಗ ಅವನು ಆ ಸ್ತ್ರೀಯನ್ನು ಕುರಿತು- `ನನಗೆ ಸ್ನಾನೋದಕವನ್ನು ತೆಗೆದುಕೊಂಡು ಬಾ. ಅನಂತರ ನಾನು ಮೌನದಿಂದ ಮತ್ತು ಇಂದ್ರಿಯಜಯದಿಂದ ಕೂಡಿ ಸಂಧ್ಯೋಪಾಸನೆಯನ್ನು ಮಾಡುವೆನು' ಎಂದು ಹೇಳಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಅಷ್ಟಾವಕ್ರ-ದಿಕ್‌ಸಂವಾದೋ ನಾಮ ತ್ರಿಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ನಾಲ್ಕನೆಯ ಅಧ್ಯಾಯ
ವೃದ್ಧೆಯಿಂದ ಕನ್ಯಾರೂಪದ ಸ್ವೀಕಾರ
ಭೀಷ್ಮಃ
ಅಥ ಸಾ ಸ್ತ್ರೀ ತಮುಕ್ತತ್ವ ತು ವಿಪ್ರಮೇವಂ ಭವತ್ವಿತಿ ।
ತೈಲಂ ದಿವ್ಯಮುಪಾದಾಯ ಸ್ನಾನಶಾಟೀಮುಪಾನಯತ್ ॥1॥
ಭೀಷ್ಮ ಅನಂತರ ಆ ವನಿತೆಯು ಬ್ರಾಹ್ಮಣನನ್ನು ಕುರಿತು ಹಾಗೆಯೇ ಆಗಲೆಂದು ಹೇಳಿ, ದಿವ್ಯವಾದ ತೈಲವನ್ನು ಮತ್ತು ಸ್ನಾನ ವಸ್ತ್ರಗಳನ್ನು ತಂದಳು.
ಅನುಜ್ಞಾತಾ ಚ ಮುನಿನಾ ಸಾ ಸ್ತ್ರೀ ತೇನ ಮಹಾತ್ಮನಾ ।
ಅಥಾಸ್ಯ ತೈಲೇನಾಂಗಾನಿ ಸರ್ವಾಣ್ಯೇವಾಭ್ಯಮೃಕ್ಷಯತ್ ॥2॥
ಮಹಾತ್ಮನಾದ ಆ ಋಷಿಯಿಂದ ಅನುಮತಿಯನ್ನು ಪಡೆದ ಆ ವನಿತೆಯು ಅವನ ಎಲ್ಲಾ ಅಂಗಗಳನ್ನು ತೈಲದಿಂದ ಹಚ್ಚಿದಳು.
ಶನೈಶ್ಚಾಚ್ಛಾದಿತಸ್ತತ್ರ ಸ್ನಾನಶಾಲಾಮುಪಾಗಮತ್ ।
ಭದ್ರಾಸನಂ ತತಶ್ಚಿತ್ರಂ ಋಷಿರನ್ವಾವಿಶನ್ನವಮ್ ॥3॥
ಅಲ್ಪವಸ್ತ್ರವನ್ನು ಧರಿಸಿದ ಋಷಿಯು ಸ್ನಾನಶಾಲೆಗೆ ಬಂದು ಸುಂದರವಾದ ಮತ್ತು ಹೊಸದಾದ ಒಂದು ಭದ್ರಾಸನದ ಮೇಲೆ ಕುಳಿತನು.
ಅಥೋಪವಿಷ್ಟಶ್ಚ ಯದಾ ತಸ್ಮಿನ್ ಭದ್ರಾಸನೇ ತದಾ ।
ಸ್ನಾಪಯಾಮಾಸ ಶನಕೈಸ್ತಮೃಷಿಂ ಸುಖಹಸ್ತವತ್ ।
ಜಲೇನ ಸುಸುಖೋಷ್ಣೇನ ತಸ್ಯಾ ಹಸ್ತಸುಖೇನ ಚ ॥4॥
ಭದ್ರಾಸನದಲ್ಲಿ ಕುಳಿತ ಆ ಋಷಿಗೆ ಅವಳು ಮೆಲ್ಲನೆ ತನ್ನ ಸುಖಹಸ್ತದಿಂದ ಸುಖೋಷ್ಣವಾದ ಜಲದಿಂದ ಸ್ನಾನವನ್ನು ಮಾಡಿಸಿದಳು.
ದಿವ್ಯಂ ಚ ವಿಧಿವಚ್ಚಕ್ರೇ ಸೋಪಚಾರಂ ಮುನೇಸ್ತದಾ ।
ವ್ಯತೀತಾಂ ರಜನೀಂ ಕೃತ್ಸ್ನಾಂ ನಾಜಾನಾತ್ಸ ಮಹಾವ್ರತಃ ॥5॥
ಆ ಋಷಿಗೆ ಶಾಸ್ತ್ರೋಕ್ತವಾದ ದಿವ್ಯವಾದ ಉಪಚಾರಗಳನ್ನು ಮಾಡಿದಳು. ಮಹಾವ್ರತನಾದ ಆ ಋಷಿಯು ಕಳೆದ ಆ ರಾತ್ರಿಯನ್ನು ಸ್ಮರಿಸಲೇ ಇಲ್ಲ.
ತತ ಉತ್ಥಾಯ ಸ ಮುನಿಸ್ತದಾ ಪರಮವಿಸ್ಮಿತಃ ।
ಪೂರ್ವಸ್ಯಾಂ ದಿಶಿ ಸೂರ್ಯಂ ಚ ಸೋಽಪಶ್ಯದುದಿತಂ ದಿವಿ ॥6॥
ಅನಂತರ ಪರಮವಿಸ್ಮಿತನಾದ ಆ ಮುನಿಯು ಎದ್ದು ಪೂರ್ವದಿಕ್ಕಿನಲ್ಲಿ ಆಕಾಶದಲ್ಲಿ ಉದಯಿಸಿದ ಸೂರ್ಯನನ್ನು ನೋಡಿದನು.
ತಸ್ಯ ಬುದ್ಧಿರಿಯಂ ಕಿಂ ನು ಮೋಹಸ್ತತ್ತ್ವಮಿದಂ ಭವೇತ್ ।
ಅಥೋಪಾಸ್ಯ ಸಹಸ್ರಾಂಶುಂ ಕಿಂ ಕರೋಮೀತ್ಯುವಾಚ ತಾಮ್ ॥7॥
ಅವನಿಗೆ ಇದೇನು ಭ್ರಾಂತಿಯೋ ಅಥವಾ ಸತ್ಯವಾದುದೋ ಎಂಬ ಸಂಶಯ ಬುದ್ಧಿಯುಂಟಾಯಿತು. ಅನಂತರ ಅವನು ಸೂರ್ಯೋಪಾಸನೆಯನ್ನು ಮಾಡಿ, ಮುಂದೇನು ಮಾಡಲಿ ಎಂದು ಅವಳನ್ನು ಕೇಳಿದನು.
ಸಾ ಚಾಮೃತರಸಪ್ರಖ್ಯಮೃಷೇರನ್ನಮುಪಾಹರತ್ ।
ತಸ್ಯ ಸ್ವಾದುತಯಾಽನ್ನಸ್ಯ ನ ಪ್ರಭೂತಂ ಚಕಾರ ಸಃ ।
ವ್ಯಗಮಚ್ಚಾಪ್ಯಹಃಶೇಷಂ ತತಃ ಸಂಧ್ಯಾಽಗಮತ್ ಪುನಃ ॥8॥
ಅವಳು ಋಷಿಗೆ ಅಮೃತ ಸಮಾನವಾದ ಅನ್ನವನ್ನು ತಂದಳು. ಅನ್ನವು ಬಹಳ ರುಚಿಕರವಾಗಿದ್ದ ಕಾರಣದಿಂದ ಋಷಿಯು ಬಹಳವಾಗಿ ಸ್ವೀಕರಿಸಲಿಲ್ಲ. ಹಗಲು ಕಳೆದು ಪುನಃ ರಾತ್ರಿಯು ಬಂದಿತು.
ಅಥ ಸ್ತ್ರೀ ಭಗವಂತಂ ಸಾ ಸುಪ್ಯತಾಮಿತ್ಯಚೋದಯತ್ ।
ತತ್ರ ವೈ ಶಯನೇ ದಿವ್ಯೇ ತಸ್ಯ ತಸ್ಯಾಶ್ಚ ಕಲ್ಪಿತೇ ॥9॥
ಆಗ ಆ ವನಿತೆಯು ಪೂಜ್ಯನಾದ ಋಷಿಯನ್ನು ಕುರಿತು ಮಲಗಿಕೊ ಎಂದು ಒತ್ತಾಯವನ್ನು ಮಾಡಿದಳು. ಅಲ್ಲಿ ಋಷಿಗೂ ಮತ್ತು ಅವಳಿಗೂ ಸೇರಿ ಒಂದು ಶಯನವು ಸಿದ್ಧವಾಗಿದ್ದಿತು.
ಅಷ್ಟಾವಕ್ರಃ
ನ ಭದ್ರೇ ಪರದಾರೇಷು ಮನೋ ಮೇ ಸಂಪ್ರಸಜ್ಜತಿ ।
ಉತ್ತಿಷ್ಠ ಭದ್ರೇ ಭದ್ರಂ ತೇ ಸ್ವಪ ವೈ ವಿರಮಸ್ವ ಚ ॥10॥
ಅಷ್ಟಾವಕ್ರ ಶುಭಳೇ, ಪರಸ್ತ್ರೀಯರಲ್ಲಿ ನನ್ನ ಮನಸ್ಸು ಸ್ನೇಹವನ್ನು ಹೊಂದುವುದಿಲ್ಲ. ನೀನು ಇಲ್ಲಿಂದ ಎದ್ದು ಬೇರೆ ಮಲಗು. ವಿಶ್ರಾಂತಿಯನ್ನು ಪಡೆ.
ಭೀಷ್ಮಃ
ಸಾ ತದಾ ತೇನ ವಿಪ್ರೇಣ ತಥಾ ಧೃತ್ಯಾ ನಿವರ್ತಿತಾ ।

ಸ್ವತಂತ್ರಾಸ್ಮೀತ್ಯುವಾಚರ್ಷಿಂ ನ ಧರ್ಮಚ್ಛಲಮಸ್ತಿ ತೇ ॥11॥
ಭೀಷ್ಮರು ಆಗ ಬ್ರಾಹ್ಮಣನಿಂದ ಧೈರ್ಯದಿಂದ ಹೀಗೆ ನಿರಾಕರಿಸಲ್ಪಟ್ಟ ಅವಳು ಋಷಿಯನ್ನು ಕುರಿತು ನಾನು ಸ್ವತಂತ್ರಳಾದವಳು. ನಿನಗೆ ಇದರಿಂದ ಪಾಪ ಉಂಟಾಗುವುದಿಲ್ಲ ಎಂದು ಹೇಳಿದಳು.
ಅಷ್ಟಾವಕ್ರಃ
ನಾಸ್ತಿ ಸ್ವತಂತ್ರತಾ ಸ್ತ್ರೀಣಾಮಸ್ವತಂತ್ರಾ ಹಿ ಯೋಷಿತಃ |
ಪ್ರಜಾಪತಿಮತಂ ಹ್ಯೇತನ್ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥12॥
ಅಷ್ಟಾವಕ್ರ ಸ್ತ್ರೀಗೆ ಸ್ವಾತಂತ್ರ್ಯವಿಲ್ಲ. ಸ್ತ್ರೀಯರು ಅಸ್ವತಂತ್ರರಾದವರು. ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂಬುದು ಪ್ರಜಾಪತಿಗಳಾದ ಬ್ರಹ್ಮದೇವರ ಅಭಿಪ್ರಾಯ.
ಸ್ತ್ರೀ
ಬಾಧತೇ ಮೈಥುನಂ ವಿಪ್ರ ಮಮ ಭಕ್ತಿಂ ಚ ಪಶ್ಯ ವೈ |
ಅಧರ್ಮಂ ಪ್ರಾಪ್ಸ್ಯಸೇ ವಿಪ್ರ ಯನ್ಮಾಂ ತ್ವಂ ನಾಭಿನಂದಸಿ ॥13॥
ಸ್ತ್ರೀ ಎಲೈ ಬ್ರಾಹ್ಮಣನೇ, ಮೈಥುನದ ಆಸೆಯು ನನ್ನನ್ನು ಬಾಧಿಸುತ್ತಿದೆ. ನನ್ನ ಪ್ರೀತಿಯನ್ನು ಗಮನಿಸು. ಎಲೈ ಬ್ರಾಹ್ಮಣನೇ, ನನ್ನನ್ನು ನಿರಾಕರಿಸಿದರೆ ನಿನಗೆ ಅಧರ್ಮವುಂಟಾಗುವುದು.
ಅಷ್ಟಾವಕ್ರಃ
ಹರಂತಿ ದೋಷಜಾತಾನಿ ನರಮಿಂದ್ರಿಯಕಿಂಕರಮ್ |
ಪ್ರಭವಾಮಿ ಸದಾ ಧೃತ್ಯಾ ಭದ್ರೇ ಸ್ವಂ ಶಯನಂ ವ್ರಜ ॥14॥
ಅಷ್ಟಾವಕ್ರ ಇಂದ್ರಿಯಗಳಿಗೆ ವಶನಾದ ಮನುಷ್ಯನನ್ನು ದೋಷಗಳು ಅಧಃಪತನಕ್ಕೆ ಕಂಡೊಯ್ಯುತ್ತವೆ. ನಾನು ಧೈರ್ಯದಿಂದ ಕೂಡಿ ಯಾವಾಗಲು ಅಚಲನಾಗಿದ್ದೇನೆ. ಶುಭಳೇ, ನಿನ್ನ ಹಾಸಿಗೆಗೆ ಹೋಗು.
ಸ್ತ್ರೀ
ಶಿರಸಾ ಪ್ರಣಮೇ ವಿಪ್ರ ಪ್ರಸಾದಂ ಕರ್ತುಮರ್ಹಸಿ |
ಭೂಮೌ ನಿಪತಮಾನಾಯಾಃ ಶರಣಂ ಭವ ಮೇಽನಘ ॥15॥
ಸ್ತ್ರೀ ಬ್ರಾಹ್ಮಣನೇ, ನಿನಗೆ ಶಿರಸಾ ನಮಸ್ಕಾರವನ್ನು ಮಾಡುತ್ತೇನೆ. ನನಗೆ ಅನುಗ್ರಹವನ್ನು ಮಾಡು. ಎಲೈ ಅನಘನೇ, ಕಾಮತಪ್ತಳಾಗಿ ಭೂಮಿಯ ಮೇಲೆ ಬೀಳುತ್ತಿರುವ ನನಗೆ ಆಶ್ರಯನಾಗು.
ಯದಿ ವಾ ದೋಷಜಾತಂ ತ್ವಂ ಪರದಾರೇಷು ಪಶ್ಯಸಿ |
ಆತ್ಮಾನಂ ಸ್ಪರ್ಶಯಾಮ್ಯದ್ಯ ಪಾಣಿಂ ಗೃಹ್ಣೀಷ್ವ ಮೇ ದ್ವಿಜ ॥16॥
ಒಂದು ಪಕ್ಷ ನೀನು ಪರಸ್ತ್ರೀ ಎಂದು ದೋಷಸಮೂಹವನ್ನು ಭಾವಿಸುವಿಯಾದರೆ ನಾನೇ ನನ್ನನ್ನು ನಿನಗೆ ದಾನ ಮಾಡಿಕೊಳ್ಳುತ್ತೇನೆ. ಎಲೈ ಬ್ರಾಹ್ಮಣನೇ, ನನ್ನ ಪಾಣಿಗ್ರಹಣವನ್ನು ಮಾಡಿಕೊ.
ನ ದೋಷೋ ಭವಿತಾ ಚೈವ ಸತ್ಯೇನೈತದ್ ಬ್ರವೀಮ್ಯಹಮ್ |
ಸ್ವತಂತ್ರಾಂ ಮಾಂ ವಿಜಾನೀಹಿ ಯೋಽಧರ್ಮಃ ಸೋಽಸ್ತು ವೈ ಮಯಿ ॥
ನಿನಗೆ ಯಾವ ದೋಷವೂ ಬರುವುದಿಲ್ಲ. ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ. ನನ್ನನ್ನು ಸ್ವತಂತ್ರಳೆಂದು ತಿಳಿ. ಪಾಪವೇನಾದರೂ ಬರುವುದಾದರೆ ಅದು ನನಗೇ ಬರಲಿ.
ಅಷ್ಟಾವಕ್ರಃ
ಸ್ವತಂತ್ರಾ ತ್ವಂ ಕಥಂ ಭದ್ರೇ ಬ್ರೂಹಿ ಕಾರಣಮತ್ರ ವೈ |
ನಾಸ್ತಿ ಲೋಕೇ ಹಿ ಕಾಚಿತ್‌ಸ್ತ್ರೀ ಯಾ ವೈ ಸ್ವಾತಂತ್ರ್ಯಮರ್ಹತಿ ॥18॥
ಅಷ್ಟಾವಕ್ರ ಶುಭಳೇ, ನೀನು ಹೇಗೆ ಸ್ವತಂತ್ರಳು? ಅದಕ್ಕೆ ಕಾರಣವನ್ನು ಹೇಳು. ಲೋಕದಲ್ಲಿ ಸ್ವತಂತ್ರಳಾದ ಯಾವ ಸ್ತ್ರೀಯೂ ಇಲ್ಲ.
ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ |
ಪುತ್ರಸ್ತು ಸ್ಥವಿರೇಭಾವೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ |
ನ ವೃದ್ಧಾಮಕ್ಷಮಾಂ ಮನ್ಯೇ ನ ಚೇಚ್ಛಾ ತ್ವಯಿ ಮೇಽನಘೇ ॥19॥
ಬಾಲ್ಯದಲ್ಲಿ ತಂದೆಯು ರಕ್ಷಿಸುತ್ತಾನೆ, ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ, ವೃದ್ಧಾಪ್ಯದಲ್ಲಿ ಪುತ್ರನು ರಕ್ಷಿಸುತ್ತಾನೆ. ಸ್ತ್ರೀಯರಿಗೆ ಸ್ವಾತಂತ್ರ್ಯವಿರುವುದಿಲ್ಲ. ವೃದ್ಧಳಾದವಳು ರತಿಸಮರ್ಥಳಲ್ಲ ಎಂದು ನಾನು ತಿಳಿಯುವುದಿಲ್ಲ. ಆದರೆ ಅನಘಳೇ, ನನಗೆ ನಿನ್ನಲ್ಲಿ ಇಚ್ಛೆಯಿಲ್ಲ.
ಸ್ತ್ರೀ
ಕೌಮಾರಂ ಬ್ರಹ್ಮಚರ್ಯಂ ಮೇ ಕನ್ಯೈವಾಸ್ಮಿ ನ ಸಂಶಯಃ |
ಪತ್ನಿಂ ಕುರುಷ್ವ ಮಾಂ ವಿಪ್ರ ಶ್ರದ್ಧಾಂ ವಿಜಹಿ ಮಾ ಮಮ ॥20॥
ಸ್ತ್ರೀ ನಾನು ಬಾಲ್ಯದಿಂದಲೂ ಬ್ರಹ್ಮಚಾರಿಣಿಯಾಗಿದ್ದೇನೆ. ನಾನು ಇನ್ನೂ ಕನ್ಯೆಯೇ ಆಗಿದ್ದೇನೆ, ಇದರಲ್ಲಿ ಸಂಶಯವಿಲ್ಲ. ಎಲೈ ಬ್ರಾಹ್ಮಣನೇ, ನನ್ನನ್ನು ಪತ್ನಿಯಾಗಿ ಸ್ವೀಕರಿಸು. ನನ್ನ ಆಸೆಯನ್ನು ಭಗ್ನಗೊಳಿಸಬೇಡ.
ಅಷ್ಟಾವಕ್ರಃ
ಯಥಾ ಮಮ ತಥಾ ತುಭ್ಯಂ ಯಥಾ ತವ ತಥಾ ಮಮ |
ಜಿಜ್ಞಾಸೇಯಮೃಷೇಸ್ತಸ್ಯ ವಿಘ್ನಃ ಸತ್ಯಂ ನು ಕಿಂ ಭವೇತ್ ॥21॥
ಅಷ್ಟಾವಕ್ರ ನನಗೆ ಹೇಗೆ ವಿವಾಹದ ಆಸೆ ಇದೆಯೋ, ನಿನಗೂ ಹಾಗೆ ವಿವಾಹದ ಆಸೆ ಇದೆ. ಇದೇನು ವದಾನ್ಯ ಋಷಿಯ ಪರೀಕ್ಷೆಯೋ

ಅಥವಾ ನನ್ನ ವಿವಾಹ ಪ್ರಯತ್ನಕ್ಕೆ ಒದಗಿದ ವಿಘ್ನವೋ? ಯಾವುದು ಸತ್ಯವೆಂದು ತಿಳಿಯದು.
ಆಶ್ಚರ್ಯಂ ಪರಮಂ ಹೀದಂ ಕಿಂ ನು ಶ್ರೇಯೋ ಹಿ ಮೇ ಭವೇತ್ |
ದಿವ್ಯಾಭರಣವಸತ್ರ ಹಿ ಕನ್ಯೇಯಂ ಮಾಮುಪಸ್ಥಿತಾ ॥22॥
ಇದು ಪರಮಾಶ್ಚರ್ಯಕರವಾದುದು. ಏನು ಮಾಡಿದರೆ ನನಗೆ ಶ್ರೇಯಸ್ಸಾದೀತು? ದಿವ್ಯವಸತ್ರಭರಣಗಳನ್ನು ಧರಿಸಿದ ಇವಳು ಕನ್ಯೆಯ ರೂಪವನ್ನು ಧರಿಸಿ ನನ್ನ ಬಳಿಗೆ ಬಂದಿದ್ದಾಳೆ.
ಕಿಂ ತ್ವಸ್ಯಾಃ ಪರಮಂ ರೂಪಂ ಜೀರ್ಣಮಾಸೀತ್ ಕಥಂ ಪುನಃ |
ಕನ್ಯಾರೂಪಮಿಹಾದ್ಯೈವ ಕಿಮಿಹಾತ್ರೋತ್ತರಂ ಭವೇತ್ ॥23॥
ಅವಳ ಹಿಂದಿನ ವೃದ್ಧ ರೂಪವು ಹೇಗೆ ಹೊರಟು ಹೋಯಿತು? ಇಲ್ಲಿ ಈಗಲೇ ಇವಳಿಗೆ ಕನ್ಯಾರೂಪವು ಹೇಗೆ ಬಂದಿತು? ಈ ಪ್ರಶ್ನೆಗೆ ಏನು ಉತ್ತರ?
ಯಥಾ ಪರಂ ಶಕ್ತಿಧೃತೇರ್ನ ವ್ಯುತ್ಥಾಸ್ಯೇ ಕಥಂಚನ |
ನ ರೋಚಯೇ ಹಿ ವ್ಯುತ್ಥಾನಂ ಧೃತ್ಯೈವಂ ಸಾಧಯಾಮ್ಯಹಮ್ ॥24॥
ಆದರೂ ನಾನು ನನ್ನ ಶಕ್ತಿ ಮತ್ತು ಧೈರ್ಯಗಳಿಂದ ಕೂಡಿದವನಾಗಿ ನನ್ನ ಧರ್ಮವ್ರತವನ್ನು ಬಿಡುವುದಿಲ್ಲ. ನನ್ನ ವ್ರತವನ್ನು ತ್ಯಜಿಸುವುದು ನನಗೆ ಇಷ್ಟವೂ ಅಲ್ಲ. ಧೈರ್ಯದಿಂದಲೇ ಅದನ್ನು ಸಾಧಿಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಅಷ್ಟಾವಕ್ರೀಯೇ ದಿಕ್ಸಂವಾದೇ ಚತುಶ್ಚತ್ವಾರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೈದನೆಯ ಅಧ್ಯಾಯ
ಅಷ್ಟಾವಕ್ರರ ವಿವಾಹ
ಯುಧಿಷ್ಠಿರಃ
ನ ಬಿಭೇತಿ ಕಥಂ ಸಾ ಸ್ತ್ರೀ ಶಾಪಸ್ಯ ಪರಮದ್ಯುತೇಃ |
ಕಥಂ ನಿವೃತ್ತೋ ಭಗವಾಂಸ್ತದ್ ಭವಾನ್ ಪ್ರಬ್ರವೀತು ಮೇ ॥1॥
ಯುಧಿಷ್ಠಿರ ಆ ವನಿತೆಯು ಪರಮತೇಜಸ್ವಿಯಾದ ಆ ಋಷಿಯ ಶಾಪಕ್ಕೆ ಹೇಗೆ ಹೆದರುವುದಿಲ್ಲ? ಆ ಪೂಜ್ಯನು ಅಲ್ಲಿಂದ ಹೇಗೆ ಹಿಂದಿರುಗಿದನು ಎಂದು ನನಗೆ ಹೇಳು.
ಭೀಷ್ಮಃ
ಅಷ್ಟಾವಕ್ರೋಽನ್ವಪೃಚ್ಛತ್ ತಾಂ ರೂಪಂ ವಿಕುರುಷೇ ಕಥಮ್ |
ನ ಚಾನೃತಂ ತೇ ವಕ್ತವ್ಯಂ ಬ್ರೂಹಿ ಬ್ರಾಹ್ಮಣಕಾಮ್ಯಯಾ ॥2॥
ಭೀಷ್ಮ ಅಷ್ಟಾವಕ್ರನು ಅವಳನ್ನು ಕುರಿತು ಹೇಗೆ ನೀನು ರೂಪವನ್ನು ಬದಲಾಯಿಸುತ್ತೀಯೆ? ಬ್ರಾಹ್ಮಣನಾದ ನಾನು ಕೇಳುವಾಗ ಸುಳ್ಳನ್ನು ಹೇಳಬಾರದು, ಸತ್ಯವನ್ನು ನುಡಿ ಎಂದು ಹೇಳಿದನು.
ಸ್ತ್ರೀ
ದ್ಯಾವಾಪೃಥಿವೀಮಾತ್ರೈಷಾ ಕಾಮ್ಯಾ ಬ್ರಾಹ್ಮಣಸತ್ತಮ |
ಶೃಣುಷ್ವಾವಹಿತಃ ಸರ್ವಂ ಯದಿದಂ ಸತ್ಯವಿಕ್ರಮ ॥3॥
ಸ್ತ್ರೀ ಎಲೈ ಬ್ರಾಹ್ಮಣಶ್ರೇಷ್ಠನೇ, ಭೂಮಿಯಲ್ಲಾಗಲೀ, ಅಂತರಿಕ್ಷದಲ್ಲಾಗಲೀ ಸ್ತ್ರೀ-ಪುರುಷರ ಈ ಕಾಮನೆಯು ಇದ್ದೇ ಇದೆ. ಎಲೈ ಸತ್ಯವಿಕ್ರಮನೇ, ನೀನು ಕೇಳಿದ ಎಲ್ಲ ಪ್ರಶ್ನೆಗೆ ಸಾವಧಾನವಾಗಿ ಉತ್ತರವನ್ನು ಕೇಳು.
ಉತ್ತರಾಂ ಮಾಂ ದಿಶಂ ವಿದ್ಧಿ ದೃಷ್ಟಂ ಸ್ತ್ರೀಚಾಪಲಂ ಚ ತೇ |
ಅವ್ಯುತ್ಥಾನೇನ ತೇ ಲೋಕಾ ಜಿತಾಃ ಸತ್ಯಪರಾಕ್ರಮ ॥4॥
ನನ್ನನ್ನು ಉತ್ತರದಿಕ್ಕಿನ ದೇವತೆ ಎಂದು ತಿಳಿ. ಸ್ತ್ರೀಯರ ಚಾಂಚಲ್ಯವನ್ನು ನೀನು ನೋಡಿದ್ದೀಯೆ. ಎಲೈ ಸತ್ಯಪರಾಕ್ರಮನೇ, ನಿನ್ನ ನಿಯಮವನ್ನು ಬಿಡದೆ ನೀನು ಪುಣ್ಯಲೋಕಗಳನ್ನು ಜಯಿಸಿದ್ದೀಯೆ.
ಜಿಜ್ಞಾಸೇಯಂ ಪ್ರಯುಕ್ತಾ ಮೇ ಸ್ಥಿರೀಕರ್ತುಂ ತವಾನಘ |
ಸ್ಥವಿರಾಣಾಮಪಿ ಸ್ತ್ರೀಣಾಂ ಬಾಧತೇ ಮೈಥುನಜ್ವರಃ ॥5॥
ಎಲೈ ಅನಘನೇ, ನಿನ್ನ ದಾರ್ಢ್ಯವನ್ನು ನೋಡಲು ನಾನು ಈ ಪರೀಕ್ಷೆಯನ್ನು ಮಾಡಿದೆ. ಮೈಥುನದ ಆಸೆಯು ವೃದ್ಧರಾದ ಸ್ತ್ರೀಯರನ್ನೂ ಬಾಧಿಸುತ್ತದೆ.
ಅವಿಶ್ವಾಸೋ ನವ್ಯಸನೀ ನಾತಿಸಕ್ತೋಽಪ್ರವಾಸಕಃ |
ವಿದ್ವಾನ್ ಸುಶೀಲಃ ಪುರುಷಃ ಸದಾರಃ ಸುಖಮಶ್ನುತೇ ॥6॥
ದೇವರಲ್ಲಿ ವಿಶ್ವಾಸವನ್ನು ಹೊಂದಿ, ಚಟಗಳಿಂದ ದೂರನಾಗಿ, ವಿಷಯದಲ್ಲಿ ಬಹಳವಾಗಿ ಆಸಕ್ತನಾಗದೆ, ಬಹಳ ಪ್ರವಾಸವನ್ನು ಮಾಡದಿರುವ ವಿದ್ವಾಂಸನೂ, ಸುಶೀಲನೂ ಆದ ಪುರುಷನು ಪತ್ನಿಯನ್ನು ಹೊಂದಿ ಸುಖವನ್ನು ಹೊಂದುತ್ತಾನೆ.
ತುಷ್ಟಃ ಪಿತಾಮಹಸ್ತೇಽದ್ಯ ತಥಾ ದೇವಾಃ ಸವಾಸವಾಃ |
ಸ ತ್ವಂ ಯೇನ ಚ ಕಾರ್ಯೇಣ ಸಂಪ್ರಾಪ್ತೋ ಭಗವಾನಿಹ ॥7॥
ನಿನಗೆ ಈ ದಿನ ಪಿತಾಮಹನೂ, ಇಂದ್ರಾದಿ ದೇವತೆಗಳೂ ಪ್ರಸನ್ನರಾಗಿದ್ದಾರೆ. ಪೂಜ್ಯನಾದ ನೀನು ಯಾವ ಉದ್ದೇಶದಿಂದ ಇಲ್ಲಿಗೆ

ಬಂದಿದ್ದೀಯೋ (ಆ ವಿಷಯದಲ್ಲಿ ಪ್ರಸನ್ನರಾಗಿದ್ದಾರೆ).
ಪ್ರೇಷಿತಸ್ತೇನ ವಿಪ್ರೇಣ ಕನ್ಯಾಪಿತ್ರಾ ದ್ವಿಜರ್ಷಭ |
ನಿಕೃತಿಃ ಸ್ತ್ರೀ ಭೋಗಪರಾ ಪ್ರಿಯವಾದಾಪ್ರವಾಸನಾತ್ |
ರಕ್ಷ್ಯತೇ ಚ ಕುಚೇಲಾದ್ಯೈರಪ್ರಸಂಗಾನುವರ್ತನೈಃ ॥8॥
ಎಲೈ ದ್ವಿಜಶ್ರೇಷ್ಠನೇ, ನೀನು ಕನ್ಯಾಪಿತೃವಾದ ಆ ಬ್ರಾಹ್ಮಣನಿಂದ (ವದಾನ್ಯ ಋಷಿಯಿಂದ) ಕಳುಹಿಸಲ್ಪಟ್ಟಿದ್ದೀಯಷ್ಟೆ?
ವಂಚನಾಶೀಲಳಾದ, ಭೋಗಪರಳಾದ ಸ್ತ್ರೀಯನ್ನು ಪ್ರಿಯನುಡಿಗಳಿಂದ, ಅವಳನ್ನು ಬಿಟ್ಟು ದೂರ ಹೋಗದಿರುವುದರಿಂದ,
ಅವಳನ್ನು ಅನುಸರಿಸುವುದರಿಂದ, ಸಾಧಾರಣ ವಸ್ತ್ರಗಳಿಂದ ರಕ್ಷಿಸಬೇಕು.
ಅಪರ್ವಾಸ್ವನಿಷಿದ್ಧಾಸು ರಾತ್ರಿಷ್ವಪ್ಯನೃತೌ ವ್ರಜೇತ್ |
ರಾತ್ರೌ ಚ ನಾತಿನಿಯಮೋ ನ ವೈ ಹ್ಯನಿಯಮೋ ಭವೇತ್ |
ತವೋಪದೇಶಂ ಕರ್ತುಂ ವೈ ತಚ್ಚ ಸರ್ವಂ ಕೃತಂ ಮಯಾ ॥9॥
ನಿಷಿದ್ಧವಲ್ಲದ, ಪರ್ವಕಾಲವಲ್ಲದ ರಾತ್ರಿಗಳಲ್ಲಿ ಋತುಕಾಲವಲ್ಲದಿದ್ದರೂ ಸ್ತ್ರೀ ಸಂಗವನ್ನು ಮಾಡಬಹುದು. ರಾತ್ರಿಯ ಕಾಲದಲ್ಲಿ
ಬಹಳ ನಿಯಮಗಳಿರುವುದಿಲ್ಲ. ಆದರೆ ನಿಯಮವೇ ಇಲ್ಲದೆ ನಡೆದುಕೊಳ್ಳಬಾರದು. ನಿನಗೆ ಉಪದೇಶವನ್ನು ಮಾಡಲು ನಾನು
ಇದೆಲ್ಲವನ್ನು ಮಾಡಿದೆ.
ಕ್ಷೇಮೀ ಗಮಿಷ್ಯಸಿ ಗೃಹಾನ್ ಶ್ರಮಶ್ಚ ನ ಭವಿಷ್ಯತಿ |
ಕನ್ಯಾಂ ಪ್ರಾಪ್ಸ್ಯಸಿ ತಾಂ ವಿಪ್ರ ಪುತ್ರಿಣೀ ಚ ಭವಿಷ್ಯತಿ ॥10॥
ನೀನು ಕ್ಷೇಮದಿಂದ ಮನೆಗೆ ಹಿಂದಿರುಗುವಿ. ಶ್ರಮವಾಗುವುದಿಲ್ಲ. ನೀನು ಬಯಸಿದ ಕನ್ಯೆಯನ್ನೇ ಪಡೆಯುವಿ. ಎಲೈ ಬ್ರಾಹ್ಮಣನೇ,
ಅವಳು ನಿನಗೆ ಪುತ್ರರನ್ನೂ ಕೊಡುವಳು.
ಕಾಮ್ಯಯಾ ಪೃಷ್ಟವಾಂಸ್ತ್ವಂ ಮಾಂ ತತೋ ವ್ಯಾಹೃತಮುತ್ತರಮ್ |
ಅನತಿಕ್ರಮಣೀಯೈಷಾ ಕೃತ್ಸ್ನೈರ್ಲೋಕೈಸ್ತ್ರಿಭಿಃ ಸದಾ ॥11॥
ನೀನು ನನ್ನನ್ನು ತಿಳಿಯುವ ಆಸೆಯಿಂದ ಪ್ರಶ್ನೆಯನ್ನು ಮಾಡಿದೆ. ಅದಕ್ಕೆ ನಾನು ಉತ್ತರವನ್ನು ಹೇಳಿದ್ದೇನೆ. ಬ್ರಾಹ್ಮಣನ ಆಸೆಯು
ಮೂರು ಲೋಕಗಳಲ್ಲಿಯೂ ಕೂಡ ಯಾವಾಗಲೂ ಮೀರಬಾರದಂತಹುದು.
ಗಚ್ಛಸ್ವ ಸುಕೃತಂ ಕೃತ್ವಾ ಕಿಂ ವಾನ್ಯಚ್ಛ್ರೋತುಮಿಚ್ಛಸಿ |
ಯಾವದ್ ಬ್ರವೀಮಿ ವಿಪ್ರರ್ಷೇ ಅಷ್ಟಾವಕ್ರ ಯಥಾತಥಮ್ ॥12॥
ಎಲೈ ಅಷ್ಟಾವಕ್ರ ವಿಪ್ರರ್ಷಿಯೇ, ನೀನು ಒಳ್ಳೆಯ ಕಾರ್ಯವನ್ನು ಮಾಡಿದ್ದೀಯೆ. ಅಥವಾ ಬೇರೆ ಏನಾದರೂ ಕೇಳಿದರೆ ನಾನು
ಯಥಾರ್ಥವಾಗಿ ಉತ್ತರವನ್ನು ಹೇಳುತ್ತೇನೆ. ಹೋಗಿ ಬಾ.
ಋಷಿಣಾ ಪ್ರಸಾದಿತಾ ಚಾಸ್ಮಿ ತವ ಹೇತೋರ್ದ್ವಿಜರ್ಷಭ |
ತಸ್ಯ ಸಮ್ಮಾನನಾರ್ಥಂ ಮೇ ತ್ವಯಿ ವಾಕ್ಯಂ ಪ್ರಭಾಷಿತಮ್ ॥13॥
ಎಲೈ ದ್ವಿಜಶ್ರೇಷ್ಠನೇ, ಋಷಿಯಾದ ವದಾನ್ಯನು ನಿನ್ನ ಸಲುವಾಗಿ ನನ್ನನ್ನು ಸೃಷ್ಟಿಸಿದ್ದಾನೆ. ಅವನನ್ನು ಗೌರವಿಸುವ ಉದ್ದೇಶದಿಂದ
ನಾನು ನಿನ್ನ ಜೊತೆಯಲ್ಲಿ ಮಾತನಾಡಿದೆ.
ಭೀಷ್ಮಃ
ಶ್ರುತ್ವಾ ತು ವಚನಂ ತಸ್ಯಾಃ ಸ ವಿಪ್ರಃ ಪ್ರಾಂಜಲಿಃ ಸ್ಥಿತಃ |
ಅನುಜ್ಞಾತಸ್ತಯಾ ಚಾಪಿ ಸ್ವಗೃಹಂ ಪುನರಾವ್ರಜತ್ ॥14॥
ಭೀಷ್ಮ ಅವಳ ಮಾತನ್ನು ಕೇಳಿ ಆ ಬ್ರಾಹ್ಮಣನು ಅವಳಿಗೆ ಕೈಗಳನ್ನು ಮುಗಿದನು. ಅವಳ ಅನುಮತಿಯನ್ನು ಪಡೆದು ಪುನಃ ತನ್ನ
ಮನೆಗೆ ಹಿಂದಿರುಗಿದನು.
ಗೃಹಮಾಗತ್ಯ ವಿಶ್ರಾಂತಃ ಸ್ವಜನಂ ಪ್ರತಿಪೂಜ್ಯ ಚ |
ಅಭ್ಯಗಚ್ಛತ ತಂ ವಿಪ್ರಂ ನ್ಯಾಯತಃ ಕುರುನಂದನ ॥15॥
ಎಲೈ ಕುರುನಂದನನೇ, ಮನೆಗೆ ಹಿಂದಿರುಗಿ ವಿಶ್ರಾಂತಿಯನ್ನು ಪಡೆದು, ಸ್ವಜನರನ್ನು ಪೂಜಿಸಿ ಆ ವದಾನ್ಯ ಋಷಿಯ ಬಳಿಗೆ ಹೋದನು.

ಪೃಷ್ಟಶ್ಚ ತೇನ ವಿಪ್ರೇಣ ದೃಷ್ಟಂ ತ್ವೇತನ್ನಿದರ್ಶನಮ್ |
ಪ್ರಾಹ ವಿಪ್ರಂ ತದಾ ವಿಪ್ರಃ ಸುಪ್ರೀತೇನಾಂತರಾತ್ಮನಾ ॥16॥
ಆ ಬ್ರಾಹ್ಮಣನಿಂದ ಕೇಳಲ್ಪಟ್ಟು ತಾನು ನೋಡಿದುದನ್ನೆಲ್ಲ ಆ ವಿಪ್ರನಿಗೆ ಹೇಳಿದನು. ಆಗ ಸಂತೋಷಗೊಂಡ ಮನಸ್ಸಿನಿಂದ
ಅಷ್ಟಾವಕ್ರನು ವದಾನ್ಯ ಋಷಿಯನ್ನು ಕುರಿತು ಮಾತನಾಡಿದನು.
ಭವತಾಹಮನುಜ್ಞಾತಃ ಪ್ರಸ್ಥಿತೋ ಗಂಧಮಾದನಮ್ |
ತಸ್ಯ ಚೋತ್ತರತೋ ದೇಶೇ ದೃಷ್ಟಂ ತದ್ದೈವತಂ ಮಹತ್ ॥17॥
ನಿನ್ನ ಅನುಮತಿಯನ್ನು ಪಡೆದು ನಾನು ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿಂದ ಉತ್ತರದಿಕ್ಕಿನಲ್ಲಿ ಆ ದೊಡ್ಡ ದೇವತೆಯನ್ನು
ನೋಡಿದೆನು.
ತಯಾ ಚಾಹಮನುಜ್ಞಾತೋ ಭವಾಂಶ್ಚಾಪಿ ಪ್ರಕೀರ್ತಿತಃ |
ಶ್ರಾವಿತಶ್ಚಾಪಿ ತದ್ವಾಕ್ಯಂ ಗೃಹಮಭ್ಯಾಗತಃ ಪ್ರಭೋ ॥18॥
ನಿನ್ನ ಹೆಸರನ್ನು ಹೇಳಿ ಅನುಮತಿಯನ್ನು ನೀಡಿದಳು. ಎಲೈ ಪ್ರಭುವೇ, ಅವಳ ಮಾತುಗಳನ್ನು ಕೇಳಿ ಮನೆಗೆ ಹಿಂದಿರುಗಿ ನಿನ್ನ ಬಳಿ
ಬಂದಿದ್ದೇನೆ (ಎಂದು ಹೇಳಿದನು).

ತಮುವಾಚ ತತೋ ವಿಪ್ರಃ ಪ್ರತಿಗೃಹ್ಣೀಷ್ವ ಮೇ ಸುತಾಮ್ |
ನಕ್ಷತ್ರತಿಥಿಸಂಯೋಗೇ ಪಾತ್ರಂ ಹಿ ಪರಮಂ ಭವಾನ್ ||19||
ಆಗ ಆ ಬ್ರಾಹ್ಮಣನು ಒಳ್ಳೆಯ ತಿಥಿ, ನಕ್ಷತ್ರ, ಯೋಗ ಇರುವಾಗ ನನ್ನ ಪುತ್ರಿಯನ್ನು ಸ್ವೀಕರಿಸು. ಕನ್ಯಾದಾನಕ್ಕೆ ನೀನು ಶ್ರೇಷ್ಠನಾದ ಪಾತ್ರ ಎಂದು ಹೇಳಿದನು.
ಅಷ್ಟಾವಕ್ರಸ್ತಥೇತ್ಯುಕತ್ವ ಪ್ರತಿಗೃಹ್ಯ ಚ ತಾಂ ಪ್ರಭೋ |
ಕನ್ಯಾಂ ಪರಮಧರ್ಮಾತ್ಮಾ ಪ್ರೀತಿಮಾಂಶ್ಚಾಭವತ್ತದಾ ||20||
ಎಲೈ ಪ್ರಭುವೇ, ಅಷ್ಟಾವಕ್ರನು ಆ ಕನ್ಯೆಯನ್ನು ಸ್ವೀಕರಿಸಿ ಪರಮಧರ್ಮಾತ್ಮನಾದ ಅವನು ಸಂತೋಷವನ್ನು ಹೊಂದಿದನು.
ಕನ್ಯಾಂ ತಾಂ ಪ್ರತಿಗೃಹ್ಯೈವ ಭಾರ್ಯಾಂ ಪರಮಶೋಭನಾಮ್ |
ಉವಾಸ ಮುದಿತಸ್ತತ್ರ ಆಶ್ರಮೇ ವಿಗತಜ್ವರಃ ||21||
ಪರಮಶೋಭನಳಾದ ಆ ಕನ್ಯೆಯನ್ನು ಭಾರ್ಯೆಯಾಗಿ ಸ್ವೀಕರಿಸಿ ತನ್ನ ಆಶ್ರಮದಲ್ಲಿ ಚಿಂತಾರಹಿತನಾಗಿ ಸುಖದಿಂದ ವಾಸ ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಅಷ್ಟಾವಕ್ರವಿವಾಹೋನಾಮ ಪಂಚಚತ್ವಾರಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತಾರನೆಯ ಅಧ್ಯಾಯ
ಅನ್ಯಜಾತಿಯಲ್ಲಿ ಉತ್ಪನ್ನರಾದ ಋಷಿಗಳ ಮಹಿಮೆ
ಯುಧಿಷ್ಠಿರಃ
ವೈಶ್ಯಯೋನ್ಯಾಂ ಸಮುತ್ಪನ್ನಾಃ ಶೂದ್ರಯೋನ್ಯಾಂ ತಥೈವ ಚ |
ಬ್ರಹ್ಮರ್ಷಯ ಇತಿ ಪ್ರೋಕ್ತಾಃ ಪುರಾಣಾ ದ್ವಿಜಸತ್ತಮಾಃ ||1||
ಕಥಮೇತನ್ಮಹಾರಾಜ ತತ್ತ್ವಂ ಶಂಸಿತುಮರ್ಹಸಿ |
ವಿರುದ್ಧಮಿಹ ಪಶ್ಯಾಮಿ ವಿಯೋನೌ ಬ್ರಾಹ್ಮಣೋ ಭವೇತ್ ||2||
ಯುಧಿಷ್ಠಿರ ಎಲೈ ಮಹಾರಾಜನೇ, ದ್ವಿಜಶ್ರೇಷ್ಠರೂ ಪ್ರಾಚೀನರಾದ ಬ್ರಹ್ಮರ್ಷಿಗಳೂ ವೈಶ್ಯಯೋನಿಯಲ್ಲಿಯೂ, ಶೂದ್ರಯೋನಿಯಲ್ಲಿಯೂ ಜನಿಸಿದ್ದಾರೆಂದು ಹೇಳಲ್ಪಡುತ್ತದೆ. ಇದು ಹೇಗೆ ಆಗುತ್ತದೆ? ಇದರ ತತ್ತ್ವವನ್ನು ಹೇಳಬೇಕು. ಬೇರೆ ಯೋನಿಯಲ್ಲಿ ಹುಟ್ಟಿದವರು ಬ್ರಾಹ್ಮಣರಾಗುವುದು ವಿರುದ್ಧವಾದುದು ಎಂದು ಭಾವಿಸುತ್ತೇನೆ.
ಭೀಷ್ಮಃ
ಅಲಂ ಕೌತೂಹಲೇನಾತ್ರ ನಿಬೋಧ ತ್ವಂ ಯುಧಿಷ್ಠಿರ |
ಶುಭೇತರಂ ಶುಭಂ ವಾಽಪಿ ನ ಚಿಂತಯಿತುಮರ್ಹಸಿ ||3||
ಭೀಷ್ಮ ಎಲೈ ಯುಧಿಷ್ಠಿರನೇ, ಕುತೂಹಲವನ್ನು ಪಡಬೇಕಾದುದಿಲ್ಲ. ನಾನು ಹೇಳುವುದನ್ನು ಕೇಳು. ಋಷಿಗಳ ವಿಷಯದಲ್ಲಿ ಅದು ಶುಭವಾಗಲಿ ಅಥವಾ ಅಶುಭವಾಗಲಿ ಅದನ್ನು ಚಿಂತಿಸುವುದು ಯೋಗ್ಯವಲ್ಲ.
ಈಶಂತ್ಯಾತ್ಮನ ಇತ್ಯೇತದ್ ಗತಿಶ್ಚೈಷಾಂ ನ ಸಜ್ಜತೇ |
ಬ್ರಹ್ಮಭೂಯಾಂಸ ಇತ್ಯೇವ ಋಷಯಃ ಶ್ರುತಿಚೋದಿತಾಃ ||4||
ಅವರು ತಮ್ಮ ಮೇಲೆಯೇ ತಮ್ಮ ಪ್ರಭುತ್ವವನ್ನು ಹೊಂದಿರುತ್ತಾರೆ. ಅವರು ಏನು ಮಾಡಿದರೂ ಅವರ ಸದ್ಗತಿಯಲ್ಲಿ ವ್ಯತ್ಯಾಸವಾಗುವುದಿಲ್ಲ. ಜೀವನ್ಮುಕ್ತರಾದವರು ಎಂದೇ ಋಷಿಗಳು ಶ್ರುತಿಗಳಲ್ಲಿ ಹೇಳಲ್ಪಡುತ್ತಾರೆ.
ನಿಂದ್ಯಾ ನ ಚೈತೇ ರಾಜೇಂದ್ರ ಪ್ರಮಾಣಂ ಹಿ ಪ್ರಮಾಣಿನಾಮ್ |
ಲೋಕೋಽನುಮನ್ಯತೇ ಚೈತಾನ್ ಪ್ರಮಾಣಂ ಹ್ಯತ್ರ ವೈ ತಪಃ ||5||
ಎಲೈ ರಾಜೇಂದ್ರನೇ, ಅವರು ನಿಂದನೀಯರಲ್ಲ. ಪ್ರಮಾಣಕ್ಕೆ ಅನುಗುಣವಾಗಿ ಕಾರ್ಯವನ್ನು ಮಾಡುವ ಅವರ ನಡತೆಯು ಅವರಿಗೆ ಪ್ರಮಾಣವಾಗುತ್ತದೆ. ಲೋಕವು ಅವರನ್ನು ಅಂಗೀಕರಿಸುತ್ತದೆ. ಅದಕ್ಕೆ ಮುಖ್ಯಕಾರಣವೆಂದರೆ ಅವರ ತಪಸ್ಸು.
ಏವಂ ಮಹಾತ್ಮಭಿಸ್ತಾತ ತಪೋಜ್ಞಾನಸಮನ್ವಿತೈಃ |
ಪ್ರವರ್ತಿತಾನಿ ಕಾರ್ಯಾಣಿ ಪ್ರಮಾಣಾನ್ಯೇವ ಸತ್ತಮ ||6||
ಎಲೈ ಪ್ರೀತಿಪಾತ್ರನೇ, ಸಜ್ಜನರಲ್ಲಿ ಶ್ರೇಷ್ಠನೇ, ಈ ರೀತಿಯಲ್ಲಿ ತಪೋ-ಜ್ಞಾನ ಸಮನ್ವಿತರಾದ ಅಂತಹವರು ಮಾಡಿದ ಕಾರ್ಯಗಳು ಪ್ರಮಾಣಗಳೇ (ಪ್ರಾಮಾಣಿಕವೇ) ಆಗುತ್ತವೆ.
ಭಾರ್ಯಾಶ್ಚತಸ್ರೋ ರಾಜೇಂದ್ರ ಬ್ರಾಹ್ಮಣಸ್ಯ ಸ್ವಧರ್ಮತಃ |
ಬ್ರಾಹ್ಮಣೀ ಕ್ಷತ್ರಿಯಾ ವೈಶ್ಯಾ ಶೂದ್ರಾ ಚ ಭರತರ್ಷಭ ||7||
ರಾಜ್ಞಾಂ ತು ಕ್ಷತ್ರಿಯಾ ವೈಶ್ಯಾ ಶೂದ್ರಾ ಚ ಭರತರ್ಷಭ |
ವೈಶ್ಯಸ್ಯ ವೈಶ್ಯಾ ವಿಹಿತಾ ಶೂದ್ರಾ ಚ ಭರತರ್ಷಭ ||8||
ಎಲೈ ರಾಜೇಂದ್ರನೇ, ಬ್ರಾಹ್ಮಣರಿಗೆ ತನ್ನ ಧರ್ಮಕ್ಕೆ ಅನುಸಾರವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಸ್ತ್ರೀಯರು ನಾಲ್ವರೂ ಭಾರ್ಯೆಯರಾಗುತ್ತಾರೆ. ಎಲೈ ಭರತಶ್ರೇಷ್ಠನೇ, ರಾಜನಿಗೆ ಕ್ಷತ್ರಿಯ, ವೈಶ್ಯ, ಶೂದ್ರ ಸ್ತ್ರೀಯರೂ; ವೈಶ್ಯರಿಗೆ ವೈಶ್ಯ ಮತ್ತು ಶೂದ್ರರು ಭಾರ್ಯೆಯರಾಗುತ್ತಾರೆಂದು ವಿಹಿತವಾಗಿದೆ.

ಶೂದ್ರಸ್ಯೈಕಾ ಸ್ಮೃತಾ ಭಾರ್ಯಾ ಪ್ರತಿಲೋಮೇ ತು ಸಂಕರಃ |
ಶೂದ್ರಾಯಾಸ್ತು ನರಶ್ರೇಷ್ಠ ಚತ್ವಾರಃ ಪತಯಃ ಸ್ಮೃತಾಃ ||9||
ಶೂದ್ರರಿಗೆ ಮಾತ್ರ ಶೂದ್ರಳಾದವಳು ಒಬ್ಬಳೇ ಭಾರ್ಯೆ. ಇದು ವಿರುದ್ಧವಾದರೆ (ಕೆಳಗಿನ ಜಾತಿಯ ಪುರುಷನು ಮೇಲಿನ ಜಾತಿಯ ಸ್ತ್ರೀಯನ್ನು ವಿವಾಹವಾದರೆ ಅದನ್ನು ಸಂಕರವೆಂದು ಕರೆಯುತ್ತಾರೆ). ಎಲೈ ನರಶ್ರೇಷ್ಠನೇ, ಶೂದ್ರಳಿಗೆ ನಾಲ್ಕುವರ್ಣದವರೂ ಪತಿಯಾಗಬಹುದೆಂದು ಹೇಳಲ್ಪಡುತ್ತದೆ.
ವರ್ಣೋತ್ತಮಾಯಾಸ್ತು ಪತಿಃ ಸವರ್ಣಸ್ತ್ವೇಕ ಏವ ಸಃ |
ದ್ವೌ ಕ್ಷತ್ರಿಯಾಯಾ ವಿಹಿತೌ ಬ್ರಾಹ್ಮಣಃ ಕ್ಷತ್ರಿಯಸ್ತಥಾ ||10||
ಶ್ರೇಷ್ಠವರ್ಣವಾದ ಬ್ರಾಹ್ಮಣವರ್ಣದಲ್ಲಿ ಜನಿಸಿದ ಸ್ತ್ರೀಗೆ ಮಾತ್ರ ಬ್ರಾಹ್ಮಣವರ್ಣದವನೊಬ್ಬನೇ ಪತಿಯಾಗುತ್ತಾನೆ. ಕ್ಷತ್ರಿಯ ಸ್ತ್ರೀಗೆ ಬ್ರಾಹ್ಮಣನಾಗಲೀ, ಕ್ಷತ್ರಿಯನಾಗಲೀ ಪತಿಯು ವಿಹಿತನಾಗಿದ್ದಾನೆ.
ವೈಶ್ಯಾಯಾಸ್ತು ನರಶ್ರೇಷ್ಠ ವಿಹಿತಾಃ ಪತಯಸ್ತ್ರಯಃ |
ಸವರ್ಣಃ ಕ್ಷತ್ರಿಯಶ್ಚೈವ ಬ್ರಾಹ್ಮಣಶ್ಚ ವಿಶಾಂಪತೇ ||11||
ಎಲೈ ರಾಜನೇ, ವೈಶ್ಯ ಸ್ತ್ರೀಗೆ ವೈಶ್ಯನೂ, ಕ್ಷತ್ರಿಯನೂ, ಬ್ರಾಹ್ಮಣನೂ ಪತಿಯಾಗಿ ವಿಹಿತವಾಗಿದ್ದಾರೆ.
ಏವಂವಿಧಿಮನುಸೃತ್ಯ ತತಸ್ತೇ ಋಷಿಭಿಃ ಪುರಾ |
ಉತ್ಪಾದಿತಾ ಮಹಾತ್ಮಾನಃ ಪುತ್ರಾ ಬ್ರಹ್ಮರ್ಷಯಃ ಪುರಾ ||12||
ಇಂತಹ ವಿಧಿಯನ್ನು ಅನುಸರಿಸಿ ಹಿಂದೆ ಋಷಿಗಳಿಂದ ಮಹಾತ್ಮರೂ, ಬ್ರಹ್ಮರ್ಷಿಗಳೂ ಆದ ಪುತ್ರರು ಜನ್ಮವನ್ನು ಪಡೆದಿದ್ದಾರೆ.
ಪುರಾಣಾಭ್ಯಾಮೃಷಿಭ್ಯಾಂ ತು ಮಿತ್ರೇಣ ವರುಣೇನ ಚ |
ವಸಿಷ್ಠೋಽಥ ತಥಾಽಗಸ್ತ್ಯೋ ಬರ್ಹಿಷದ್ಭಿಸ್ತಥೈವ ಚ ||13||
ಪ್ರಾಚೀನ ಋಷಿಗಳಿಂದ ಹಾಗೂ ಮಿತ್ರಾವರುಣರಿಂದ ವಸಿಷ್ಠರೂ, ಅಗಸ್ತ್ಯರೂ ಮತ್ತು ಬರ್ಹಿಷದರಿಂದ ಬೇರೆ ಪುತ್ರರೂ ಜನಿಸಿದ್ದಾರೆ.
ಕಕ್ಷೀವಾನಷ್ರ್ಟಿಷೇಣಶ್ಚ ಪುರುಷಃ ಕಕ್ಷ ಏವ ಚ |
ಮಾಮತೇಯಸ್ಯ ವೈ ಪುತ್ರಾ ಗೌತಮಸ್ಯಾತ್ಮಜಾಃ ಸ್ಮೃತಾಃ ||14||
ಕಕ್ಷೀವಾನ್, ಋಷ್ಟಿಷೇಣ, ಪುರುಷ, ಕಕ್ಷ ಇವರೆಲ್ಲರೂ ಮಮತೆಯಲ್ಲಿ ಗೌತಮರಿಗೆ ಜನಿಸಿದ ಪುತ್ರರು.
ವತ್ಸಪ್ರಿಯಶ್ಚ ಭಗವಾನ್ ಸ್ಥೂಲರಶ್ಮಿಸ್ತಥಾಕ್ಷಣಿಃ |
ಗೌತಮಸ್ಯೈವ ತನಯಾ ಯೇ ದಾಸ್ಯಾಂ ಜನಿತಾ ಹ್ಯುತ ||15||
ವತ್ಸಪ್ರಿಯ, ಭಗವಾನ್, ಸ್ಥೂಲರಶ್ಮಿ, ಅಕ್ಷಣಿ ಇವರೆಲ್ಲರೂ ಗೌತಮರಿಗೆ ದಾಸಿಯಲ್ಲಿ ಜನಿಸಿದ ಪುತ್ರರು.
ಕಪಿಂಜಲಾದೋ ಬ್ರಹ್ಮರ್ಷಿಶ್ಚಾಂಡಾಲ್ಯಾಮುದಪದ್ಯತ |
ವೈನತೇಯಸ್ತಥಾ ಪಕ್ಷೀ ತುರ್ಯಾಯಾಂ ಚ ವಸಿಷ್ಠತಃ ||16||
ಬ್ರಹ್ಮರ್ಷಿಗಳಾದ ಕಪಿಂಜಲಾದರು ಚಂಡಾಲ ಸ್ತ್ರೀಯಲ್ಲಿ ಜನಿಸಿದವರು. ಪಕ್ಷಿಯಾದ ಗರುಡನು ವಸಿಷ್ಠರಿಂದ ಶೂದ್ರ ಸ್ತ್ರೀಯಲ್ಲಿ ಜನಿಸಿದವನು (ಈ ವಸಿಷ್ಠರೂ ಮತ್ತು ವೈನತೇಯನೂ ಬೇರೆಯವರು).
ಪ್ರಸಾದಾಚ್ಚ ವಸಿಷ್ಠಸ್ಯ ಶುಕ್ಲಾಭ್ಯುಪಗಮೇನ ಚ |
ಅದೃಶ್ಯಂತ್ಯಾಃ ಪಿತಾ ವೈಶ್ಯೋ ನಾಮ್ನಾ ಚಿತ್ರಮುಖಃ ಪುರಾ |
ಬ್ರಾಹ್ಮಣತ್ವಮನುಪ್ರಾಪ್ತೋ ಬ್ರಹ್ಮರ್ಷಿತ್ವಂ ಚ ಕೌರವ ||17||
ವಸಿಷ್ಠರ ಅನುಗ್ರಹದಿಂದ ಮತ್ತು ಶುದ್ಧ ಚಾರಿತ್ರ್ಯದಿಂದ ಅದೃಶ್ಯಂತಿಯ ತಂದೆಯಾದ ಜಾತಿಯಲ್ಲಿ ವೈಶ್ಯನಾದ ಚಿತ್ರಮುಖನೆಂಬುವನು ಎಲೈ ಕೌರವ್ಯನೇ, ಬ್ರಾಹ್ಮಣ್ಯವನ್ನು ಮತ್ತು ಬ್ರಹ್ಮರ್ಷಿತ್ವವನ್ನು ಪಡೆದನು.
ವೈಶ್ಯಶ್ಚಿತ್ರಮುಖಃ ಕನ್ಯಾಂ ವಸಿಷ್ಠತನಯಸ್ಯ ವೈ |
ಶುಭಾಂ ಪ್ರಾದಾದ್ ಯತೋ ಜಾತೋ ಬ್ರಹ್ಮರ್ಷಿಸ್ತು ಪರಾಶರಃ ||18||
ವೈಶ್ಯನಾದ ಚಿತ್ರಮುಖನು ತನ್ನ ಮಗಳಾದ ಶುಭಳಾದ ಅದೃಶ್ಯಂತಿಯನ್ನು ವಸಿಷ್ಠರ ತನಯನಾದ ಶಕ್ತಿಗೆ ಕೊಟ್ಟನು. ಅವರಲ್ಲಿ ಬ್ರಹ್ಮರ್ಷಿಗಳಾದ ಪರಾಶರರು ಜನಿಸಿದರು.
ತಥೈವ ದಾಶಕನ್ಯಾಯಾಂ ಸತ್ಯವತ್ಯಾಂ ಮಹಾನೃಷಿಃ |
ಪರಾಶರಾತ್ ಪ್ರಸೂತಶ್ಚ ವ್ಯಾಸೋ ಯೋಗಮಯೋ ಮುನಿಃ ||19||
ಹಾಗೆಯೇ ಪರಾಶರರಿಂದ ದಾಶಕನ್ಯೆಯಾದ ಸತ್ಯವತಿಯಲ್ಲಿ ದೊಡ್ಡ ಋಷಿಗಳೂ, ಯೋಗಾತ್ಮಕರೂ ಆದ ವ್ಯಾಸರು ಜನಿಸಿದರು.
ವಿಭಾಂಡಕಸ್ಯ ಮೃಗ್ಯಾಂ ಚ ತಪೋಯೋಗಾತ್ಮಕೋ ಮುನಿಃ |
ಋಷ್ಯಶೃಂಗಃ ಸಮುತ್ಪನ್ನೋ ಬ್ರಹ್ಮಚಾರೀ ಮಹಾಯಶಾಃ ||20||
ವಿಭಾಂಡಕಋಷಿಗಳಿಗೆ ಹೆಣ್ಣು ಜಿಂಕೆಯಲ್ಲಿ ತಪೋಯೋಗಾತ್ಮಕನೂ, ಬ್ರಹ್ಮಚಾರಿಯೂ, ಮಹಾಕೀರ್ತಿವಂತನೂ ಆದ ಋಷ್ಯಶೃಂಗನು ಜನಿಸಿದನು.
ಶಾರ್ಙ್ಗ್ಯಾಂ ಚ ಮಂದಪಾಲಸ್ಯ ಚತ್ವಾರೋ ಬ್ರಹ್ಮವಾದಿನಃ |
ಜಾತಾ ಬ್ರಹ್ಮರ್ಷಯಃ ಪುಣ್ಯಾ ಯೈಃ ಸ್ತುತೋ ಹವ್ಯವಾಹನಃ ||21||
ದ್ರೋಣಶ್ಚ ಸ್ತಂಬಮಿತ್ರಶ್ಚ ಸಾ(ಶಾ)ರಿಸೃಕ್ವಶ್ಚ ಬುದ್ಧಿಮಾನ್ |
ಜರಿತಾರಿಶ್ಚ ವಿಖ್ಯಾತಾಶ್ಚತ್ವಾರಃ ಸೂರ್ಯಸನ್ನಿಭಾಃ ||22||
ಮಂದಪಾಲನಿಗೆ ಶಾರ್ಙ್ಗ ಪಕ್ಷಿಯಲ್ಲಿ ಬ್ರಹ್ಮವಾದಿಗಳಾದ ನಾಲ್ವರು ಪವಿತ್ರರಾದ ಬ್ರಹ್ಮರ್ಷಿಗಳು ಜನಿಸಿ, ಅವರು ಖಾಂಡವ ದಹನ ಕಾಲದಲ್ಲಿ ಅಗ್ನಿಯನ್ನು ಸ್ತೋತ್ರ ಮಾಡಿದರು. ಅವರು ಸೂರ್ಯಸನ್ನಿಭರಾದ ದ್ರೋಣ, ಸ್ತಂಬಮಿತ್ರ, ಸಾರಿಸೃಕ್ವ ಮತ್ತು ಜರಿತಾರಿ

ಎಂದು ಪ್ರಖ್ಯಾತರಾದ ನಾಲ್ವರು.
ಮಹರ್ಷೇಃ ತಾಳವೃಕ್ಷಸ್ಯ ಶಕುಂತ್ಯಾಮೇವ ಜಜ್ಞವಾನ್ |
ಹಿರಣ್ಯಹಸ್ತೋ ಭಗವಾನ್ ಮಹರ್ಷಿಃ ಕಾಂಚನಪ್ರಭಃ ॥23॥
ತಾಳವೃಕ್ಷ ಎಂಬ ಮಹರ್ಷಿಗೆ ಶಕುಂತ ಪಕ್ಷಿಯಲ್ಲಿ ಪೂಜ್ಯನೂ, ಮಹರ್ಷಿಯೂ, ಕಾಂಚನ ಪ್ರಭೆಯುಳ್ಳವನೂ ಆದ ಹಿರಣ್ಯಹಸ್ತನು ಜನಿಸಿದನು.
ಪಾವಕಾತ್ ತಾತ ಸಂಭೂತಾ ಮನಸಾ ಚ ಮಹರ್ಷಯಃ |
ಪಿತಾಮಹಸ್ಯ ರಾಜೇಂದ್ರ ಪುಲಸ್ತ್ಯಪುಲಹಾದಯಃ ॥24॥
ಎಲೈ ರಾಜೇಂದ್ರನೇ, ಪಿತಾಮಹನಾದ ಬ್ರಹ್ಮನ ಆದೇಶದಂತೆ ಪುಲಸ್ತ್ಯ, ಪುಲಹ ಮೊದಲಾದವರು ಅಗ್ನಿಯಿಂದ ಜನಿಸಿದರು. ಹಾಗೆಯೇ ಕೆಲವು ಮಹರ್ಷಿಗಳು ಮನಸ್ಸಿನಿಂದಲೂ (ಸ್ತ್ರೀ ಸಂಯೋಗವಿಲ್ಲದೆ) ಜನಿಸಿದ್ದಾರೆ.
ಸವರ್ಣಶ್ಚಾಪಿ ರಾಜರ್ಷಿಃ ಸವರ್ಣಾಯಾಮಜಾಯತ |
ಮೃನ್ಮಯ್ಯಾಂ ಭರತಶ್ರೇಷ್ಠ ಆದಿತ್ಯೇನ ವಿವಸ್ವತಾ ॥25॥
ಎಲೈ ಭರತಶ್ರೇಷ್ಠನೇ, ವಿವಸ್ವಾನ್ ನಾಮಕ ಆದಿತ್ಯನಿಂದ ಸವರ್ಣಾ ಎಂಬ ವನಿತೆಯ ಮಣ್ಣಿನ ಪ್ರತಿಮೆಯಲ್ಲಿ ರಾಜರ್ಷಿಯಾದ ಸವರ್ಣನು ಜನಿಸಿದನು.
ಶಾಂಡಿಲ್ಯಶ್ಚಾಗ್ನಿತೋ ಜಾತಃ ಕಾಶ್ಯಪಸ್ಯಾತ್ಮಜಃ ಪ್ರಭುಃ |
ಶರದ್ವತಃ ಶರಸ್ತಂಬಾತ್ ಕೃಪಶ್ಚ ಕೃಪಯಾ ಸಹ ॥26॥
ಕಶ್ಯಪರ ಅಣ್ಣನಾದ ಪ್ರಭುವಾದ ಶಾಂಡಿಲ್ಯರು ಅಗ್ನಿಯಿಂದ ಜನಿಸಿದರು. ಶರದ್ವಾನ್ ಋಷಿಗಳಿಂದ ಶರಸ್ತಂಬದಲ್ಲಿ ಕೃಪ ಮತ್ತು ಕೃಪಿಯರು ಜನಿಸಿದರು.
ಪದ್ಮಾಚ್ಚ ಜಜ್ಞೇ ರಾಜೇಂದ್ರ ಸೋಮಪಸ್ಯ ಮಹಾತ್ಮನಃ |
ರೇಣುಶ್ಚ ರೇಣುಕಾ ಚೈವ ರಾಮಮಾತಾ ಯಶಸ್ವಿನೀ ॥27॥
ಎಲೈ ರಾಜೇಂದ್ರನೇ, ಮಹಾತ್ಮರಾದ ಸೋಮಪನಿಗೆ ಪದ್ಮದಲ್ಲಿ ರೇಣು ಎಂಬ ಪುತ್ರನೂ, ಪರಶುರಾಮನ ತಾಯಿಯಾದ ಕೀರ್ತಿವಂತಳಾದ ರೇಣುಕೆಯೂ ಜನಿಸಿದರು.
ಯಮುನಾಯಾಃ ಸಮುದ್ಭೂತಃ ಸೋಮಕೇನ ಮಹಾತ್ಮನಾ |
ಅರ್ಕದತ್ತೋ ಮಹಾನೃಷಿಃ ಪ್ರಥಿತಃ ಪೃಥಿವೀತಳೇ ॥28॥
ಭೂತಳದಲ್ಲಿ ವಿಖ್ಯಾತನಾದ ಅರ್ಕದತ್ತ ಎಂಬ ಮಹರ್ಷಿಯು ಮಹಾತ್ಮನಾದ ಸೋಮಕನಿಂದ ಯಮುನೆಯಲ್ಲಿ ಜನಿಸಿದನು.
ಅಗ್ನೇರಾಹವನೀಯಾಚ್ಚ ದ್ರುಪದಸ್ಯೇಂದ್ರವರ್ಚಸಃ |
ಧೃಷ್ಟದ್ಯುಮ್ನಶ್ಚ ಸಂಭೂತೋ ವೇದ್ಯಾಂ ಕೃಷ್ಣಾ ಚ ಭಾರತ ॥29॥
ಎಲೈ ಭಾರತನೇ, ಇಂದ್ರನಿಗೆ ಸಮಾನವಾದ ವರ್ಚಸ್ಸುಳ್ಳ ದ್ರುಪದನಿಗೆ ಆಹವನೀಯಾಗ್ನಿಯಿಂದ ಧೃಷ್ಟದ್ಯುಮ್ನನೂ, ವೇದಿಯಿಂದ ದ್ರೌಪದಿಯು ಜನಿಸಿದರು.
ವ್ಯಾಘ್ರಯೋನ್ಯಾಂ ತತೋ ಜಾತಾ ವಸಿಷ್ಠಸ್ಯ ಮಹಾತ್ಮನಃ |
ಏಕೋನವಿಂಶತಿಃ ಪುತ್ರಾ ಖ್ಯಾತಾ ವ್ಯಾಘ್ರಪದಾದಯಃ ॥30॥
ಮಹಾತ್ಮರಾದ ವಸಿಷ್ಠರಿಗೆ ವ್ಯಾಘ್ರಯೋನಿಯಲ್ಲಿ ಹತ್ತೊಂಬತ್ತು ಪುತ್ರರು ಜನಿಸಿದರು. ಅವರು ಪ್ರಖ್ಯಾತರಾದ ವ್ಯಾಘ್ರಪದ ಮೊದಲಾದವರು.
ಮಂಥಶ್ಚ ವಾದಲೋಮಶ್ಚ ಜಾಬಾಲಿಶ್ಚ ಮಹಾನೃಷಿಃ |
ಮನ್ಯುಶ್ಚೈವೋಪಮನ್ಯುಶ್ಚ ಸೇತುಕರ್ಣಸ್ತಥೈವ ಚ |
ಏತೇ ಚಾನ್ಯೇ ಚ ವಿಖ್ಯಾತಾಃ ಪೃಥಿವ್ಯಾಂ ಗೋತ್ರತಾಂ ಗತಾಃ ॥31॥
ವ್ಯಾಘ್ರಪದ, ಮಂಥ, ವಾದಲೋಮ, ಜಾಬಾಲಿ, ಮನ್ಯು, ಉಪಮನ್ಯು, ಸೇತುಕರ್ಣ, ಇವರೇ ಮೊದಲಾದ ಪ್ರಖ್ಯಾತರಾದವರು ಭೂಮಿಯಲ್ಲಿ ವಸಿಷ್ಠ ಗೋತ್ರಕ್ಕೆ ಸೇರಿದವರು.
ವಿಶ್ವಕಾಶಸ್ಯ ರಾಜರ್ಷೇರೈಕ್ಷ್ವಾಕೋಸ್ತು ಮಹಾತ್ಮನಃ |
ಬಾಲಾಶ್ವೋ ನಾಮ ಪುತ್ರೋಽಭೂಚ್ಛಿಖಾಂ ಭಿತ್ತ್ವಾ ವಿನಿಸ್ಸೃತಃ ॥32॥
ಮಹಾತ್ಮನಾದ ಇಕ್ಷ್ವಾಕು ವಂಶದ ವಿಶ್ವಕಾಶ ಎಂಬ ರಾಜರ್ಷಿಗೆ ಬಾಲಾಶ್ವನೆಂಬ ಪುತ್ರನು ತಂದೆಯ ಶಿಖೆಯನ್ನು ಭೇದಿಸಿ ಹೊರಬಂದನು.
ಮಾಂಧಾತಾ ಚೈವ ರಾಜರ್ಷಿರ್ಯುವನಾಶ್ವೇನ ಧೀಮತಾ |
ಸ್ವಯಂ ಧೃತೋಽಥ ಗರ್ಭೇಣ ದಿವ್ಯಾಸ್ತ್ರಬಲಸಂಯುತಃ ॥33॥
ದಿವ್ಯಾಸ್ತ್ರ ಬಲಗಳಿಂದ ಸಂಯುಕ್ತನಾದ ರಾಜರ್ಷಿಯಾದ ಮಾಂಧಾತೃವು ಮೇಧಾವಿಯಾದ ಯುವನಾಶ್ವನಿಂದ ಸ್ವತಃ ಗರ್ಭದಲ್ಲಿ ಧರಿಸಲ್ಪಟ್ಟನು.
ಗೌರಿಕಶ್ಚಾಪಿ ರಾಜರ್ಷಿಶ್ಚಕ್ರವರ್ತೀ ಮಹಾಯಶಾಃ |
ಬಾಹುದಾಯಾಂ ಸಮುತ್ಪನ್ನೋ ನದ್ಯಾಂ ರಾಜ್ಞಾ ಸುಬಾಹುನಾ ॥34॥
ಮಹಾಕೀರ್ತಿವಂತನಾದ ರಾಜರ್ಷಿಯಾದ ಗೌರಿಕ ಚಕ್ರವರ್ತಿಯು ಸುಬಾಹುರಾಜನಿಂದ ಬಾಹುದಾ ನದಿಯಲ್ಲಿ ಜನಿಸಿದನು.
ಭೂಮೇಶ್ಚ ಪುತ್ರೋ ನರಕಃ ಸಂವರ್ತಶ್ಚೈವ ಪುಷ್ಕಲಃ |
ಅದ್ರಿಶ್ಚೈವ ಮಹಾತೇಜಾ ಋಷಿರ್ಗಾರ್ಗ್ಯೋ ಹ್ಯಜಾಯತ ॥35॥

ಭೂಮಿಯ ಪುತ್ರರು ನರಕ, ಸಂವರ್ತ ಮತ್ತು ಪುಷ್ಕಲರು. ಮಹಾತೇಜಸ್ವಿಯಾದ ಗಾರ್ಗ್ಯ ಋಷಿಗಳು ಜಲದಿಂದ ಜನಿಸಿದರು.
ಏತೇ ಚಾನ್ಯೇ ಚ ಬಹವೋ ರಾಜನ್ಯಾ ಬ್ರಾಹ್ಮಣಾಸ್ತಥಾ |
ಪ್ರಭಾವೇನಾಭಿಸಂಭೂತಾ ಮಹರ್ಷೀಣಾಂ ಮಹಾತ್ಮನಾಮ್ |
ನಾಸಾಧ್ಯಂ ತಪಸಾ ತೇಷಾಂ ವಿದ್ಯಯಾಽಽತ್ಮಗುಣೈಃ ಪರೈಃ ॥36॥
ಇವರು ಮತ್ತು ಇನ್ನೂ ಅನೇಕ ರಾಜರು ಮತ್ತು ಬ್ರಾಹ್ಮಣರು ಮಹಾತ್ಮರಾದ ಮಹರ್ಷಿಗಳ ಪ್ರಭಾವದಿಂದ ಜನಿಸಿದ್ದಾರೆ. ಶ್ರೇಷ್ಠವಾದ ಅವರ ಆತ್ಮಗುಣಗಳಿಗೆ ಮತ್ತು ತಪಸ್ಸಿಗೆ ಅಸಾಧ್ಯವಾದುದು ಯಾವುದೂ ಇಲ್ಲ.
ಅಸ್ಮಿನ್ನರ್ಥೇ ಚ ಮನುನಾ ಗೀತಃ ಶ್ಲೋಕೋ ನರಾಧಿಪ |
ಧರ್ಮಂ ಪ್ರಣಯತಾ ರಾಜಂಸ್ತಂ ನಿಬೋಧ ಯುಧಿಷ್ಠಿರ ॥37॥
ಎಲೈ ಯುಧಿಷ್ಠಿರನೇ, ನರಾಧಿಪನೇ, ಧರ್ಮಶಾಸ್ತ್ರವನ್ನು ರಚಿಸುತ್ತಾ ಈ ವಿಷಯದಲ್ಲಿ ಮನುವು ಹೇಳಿರುವ ಒಂದು ಶ್ಲೋಕವನ್ನು ಕೇಳು.
ಋಷೀಣಾಂ ಚ ನದೀನಾಂ ಚ ಸಾಧೂನಾಂ ಚ ಮಹಾತ್ಮನಾಮ್ |
ಪ್ರಭವೋ ನಾಧಿಗಂತವ್ಯಃ ಸ್ತ್ರೀಣಾಂ ದುಶ್ಚರಿತಸ್ಯ ಚ ॥38॥
ಋಷಿಗಳ, ನದಿಗಳ ಮತ್ತು ಮಹಾತ್ಮರಾದ ಸಾಧುಗಳ ಉತ್ಪತ್ತಿಯನ್ನು ವಿಚಾರ ಮಾಡಬಾರದು. ಹಾಗೆಯೇ ಸ್ತ್ರೀಯರ ದುಷ್ಟ ನಡತೆಗಳ ಮೂಲವನ್ನೂ ವಿಚಾರ ಮಾಡಬಾರದು.
ತನ್ನಾತ್ರ ಚಿಂತಾ ಕರ್ತವ್ಯಾ ಮಹರ್ಷೀಣಾಂ ಸಮುದ್ಭವೇ |
ಯಥಾ ಸರ್ವಗತೋ ಹ್ಯಗ್ನಿಸ್ತಥಾ ತೇಜೋ ಮಹಾತ್ಮಸು ॥39॥
ಆದ್ದರಿಂದ ಮಹರ್ಷಿಗಳ ಉತ್ಪತ್ತಿಯ ವಿಷಯದಲ್ಲಿ ಚಿಂತೆಯನ್ನು ಮಾಡಬಾರದು. ಸರ್ವಗತನಾದ ಅಗ್ನಿಯಂತೆ ಮಹಾತ್ಮರಲ್ಲಿ ತೇಜಸ್ಸಿರುತ್ತದೆ (ಅಗ್ನಿಯು ಸರ್ವವನ್ನೂ ದಹಿಸುವಂತೆ ಮಹಾತ್ಮರ ತೇಜಸ್ಸು ಸರ್ವದೋಷಗಳನ್ನೂ ದಹಿಸುತ್ತದೆ. ಅಗ್ನಿಯು ಯಾವಾಗಲೂ ಶುದ್ಧನಾಗಿರುವಂತೆ ಮಹಾತ್ಮರು ಏನು ಮಾಡಿದರೂ ಶುದ್ಧರಾಗಿರುತ್ತಾರೆ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಋಷಿಮಾಹಾತ್ಮ್ಯಕಥನಂ ನಾಮ ಷಟ್‌ಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೇಳನೆಯ ಅಧ್ಯಾಯ
ನಾರದ-ಮಾರ್ಕಂಡೇಯ ಸಂವಾದ. ಹವ್ಯ-ಕವ್ಯಾದಿ ಸ್ವೀಕಾರ ವಿಚಾರ.
ಯುಧಿಷ್ಠಿರಃ
ಪುತ್ರೈಃ ಕಥಂ ಮಹಾರಾಜ ಪುರುಷಸ್ತಾರಿತೋ ಭವೇತ್ |
ಯಾವನ್ನ ಲಬ್ಧವಾನ್ ಪುತ್ರಮಫಲಃ ಪುರುಷೋ ನೃಪ ॥1॥
ಯುಧಿಷ್ಠಿರ ಎಲೈ ಮಹಾರಾಜನೇ, ಪುತ್ರನಿಂದ ಮನುಷ್ಯನು ಹೇಗೆ ಉದ್ಧರಿಸಲ್ಪಡುತ್ತಾನೆ? ಎಲೈ ರಾಜನೇ, ಪುತ್ರರನ್ನು ಪಡೆಯುವವರೆಗೆ ಮನುಷ್ಯ ಜನ್ಮವು ನಿಷ್ಫಲವೆಂದು ಹೇಳಲ್ಪಡುತ್ತದೆಯಷ್ಟೆ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಾರದೇನ ಪುರಾ ಗೀತಂ ಮಾರ್ಕಂಡೇಯಾಯ ಪೃಚ್ಛತೇ ॥2॥
ಭೀಷ್ಮ ಈ ವಿಷಯದಲ್ಲಿಯೂ ಸಹ ಪ್ರಶ್ನೆ ಮಾಡಿದ ಮಾರ್ಕಂಡೇಯರಿಗೆ ನಾರದರು ಹೇಳಿದ ಉತ್ತರ ರೂಪವಾದ ಪುರಾತನವಾದ ಒಂದು ಇತಿಹಾಸವನ್ನು ಹೇಳುತ್ತಾರೆ.
ಪರ್ವತಂ ನಾರದಂ ಚೈವ ಅಸಿತಂ ದೇವಲಂ ಚ ತಮ್ |
ಆರುಣೇಯಂ ಚ ರೈಭ್ಯಂ ಚ ಏತಾನತ್ರಾಗತಾನ್ ಪುರಾ ॥3॥
ಗಂಗಾಯಮುನಯೋರ್ಮಧ್ಯೇ ಭೋಗವತ್ಯಾಃ ಸಮಾಗಮೇ |
ದೃಷ್ಟ್ವಾ ಪೂರ್ವಂ ಸಮಾಸೀನಾನ್ ಮಾರ್ಕಂಡೇಯೋಽಭ್ಯಗಚ್ಛತ ॥4॥
ಪರ್ವತ, ನಾರದ, ಅಸಿತ, ದೇವಲ, ಆರುಣೇಯ ಮತ್ತು ರೈಭ್ಯ - ಇವರು ಗಂಗಾ-ಯಮುನಾ ನದಿಗಳ ಮಧ್ಯದಲ್ಲಿ ಭೋಗವತಿ ನದಿಯ ಸಂಗಮದಲ್ಲಿ ಕುಳಿತಿರುವುದನ್ನು ನೋಡಿ ಮಾರ್ಕಂಡೇಯರು ಅವರನ್ನು ಸಮೀಪಿಸಿದರು.
ಋಷಯಸ್ತು ಮುನಿಂ ದೃಷ್ಟ್ವಾ ಸಮುತ್ಥಾಯೋನ್ಮುಖಾಃ ಸ್ಥಿತಾಃ |
ಅರ್ಚಯಿತ್ವಾಽರ್ಹತೋ ವಿಪ್ರಂ ಕಿಂ ಕುರ್ಮ ಇತಿ ಚಾಬ್ರುವನ್ ॥5॥
ಋಷಿಗಳು ಮಾರ್ಕಂಡೇಯರನ್ನು ನೋಡಿ ಎದ್ದು, ಅವರಿಗೆ ಅಭಿಮುಖವಾಗಿ ನಿಂತು, ಯಥಾಯೋಗ್ಯವಾಗಿ ಅರ್ಚಿಸಿ, ನಿಮಗೆ ನಮ್ಮಿಂದ ಏನಾಗಬೇಕು ಎಂದು ಕೇಳಿದರು.
ಮಾರ್ಕಂಡೇಯಃ
ಅಯಂ ಸಮಾಗಮಃ ಸದ್ಭಿರ್ಯತ್ನೇನಾಸಾದಿತೋ ಮಯಾ |
ಅತ್ರ ಪ್ರಾಪ್ಸ್ಯಾಮಿ ಧರ್ಮಾಣಾಮಾಚಾರಸ್ಯ ಚ ನಿಶ್ಚಯಮ್ ॥6॥
ಮಾರ್ಕಂಡೇಯ ಸಜ್ಜನರಾದ ನಿಮ್ಮ ಸಮಾಗಮವನ್ನುನಾನು ಪ್ರಯತ್ನಪೂರ್ವಕವಾಗಿ ಸಂಪಾದಿಸಿದ್ದೇನೆ. ಧರ್ಮ ಮತ್ತು ಆಚಾರ

ವಿಷಯಗಳಲ್ಲಿ ನನಗಿರುವ ಸಂಶಯಗಳ ಪರಿಹಾರವನ್ನು ಇಲ್ಲಿ ಹೊಂದುವೆನು.
ಋಜುಃ ಕೃತಯುಗೇ ಧರ್ಮಸ್ತಸ್ಮಿನ್ ಕ್ಷೀಣೇ ವಿಮುಹ್ಯತಿ |
ಯುಗೇಯುಗೇ ಮಹರ್ಷಿಭ್ಯೋ ಧರ್ಮಮಿಚ್ಛಾಮಿ ವೇದಿತುಮ್ ॥7॥
ಕೃತಯುಗದಲ್ಲಿ ಪರಿಪೂರ್ಣವಾದ ಧರ್ಮವಿದ್ದಿತು. ಕೃತಯುಗ ಮುಗಿಯುತ್ತಾ ಬರುತ್ತಿರಲು ಧರ್ಮವು ಕ್ಷೀಣಿಸುತ್ತಾ ಯುಗ ಯುಗಗಳಲ್ಲಿ ಕಡಿಮೆಯಾಗುತ್ತದೆ. ಮಹರ್ಷಿಗಳಾದ ನಿಮ್ಮಿಂದ ಅಂತಹ ಧರ್ಮವನ್ನು ತಿಳಿಯಲು ಬಯಸುತ್ತೇನೆ.
ಋಷಿಭಿರ್ನಾರದಃ ಪ್ರೋಕ್ತೋ ಬ್ರೂಹಿ ಯತ್ರಾಸ್ಯ ಸಂಶಯಃ |
ಧರ್ಮಾಧರ್ಮೇಷು ತತ್ವಜ್ಞ ತ್ವಂ ಹಿ ಚ್ಛೇತ್ತಾಸಿ ಸಂಶಯಾನ್ ॥8॥
ಆಗ ಉಳಿದ ಋಷಿಗಳು ನಾರದರನ್ನು ಕುರಿತು ಎಲೈ ತತ್ತ್ವಜ್ಞರೇ, ನೀವು ಎಲ್ಲ ಸಂಶಯಗಳನ್ನು ಪರಿಹಾರ ಮಾಡಲು ಸಮರ್ಥರು. ಮಾರ್ಕಂಡೇಯರಿಗೆ ಯಾವ ಧರ್ಮಾಧರ್ಮಗಳ ವಿಷಯದಲ್ಲಿ ಸಂಶಯವಿದೆಯೋ ಅವೆಲ್ಲವನ್ನೂ ಸರಿಯಾಗಿ ತಿಳಿಸಿ ಎಂದು ಹೇಳಿದರು.
ಋಷಿಭ್ಯೋಽನುಮತಂ ವಾಕ್ಯಂ ನಿಯೋಗಾನ್ನಾರದೋಽಬ್ರವೀತ್ |
ಸರ್ವಧರ್ಮಾರ್ಥತತ್ತ್ವಜ್ಞಂ ಮಾರ್ಕಂಡೇಯಂ ತತೋಽಬ್ರವೀತ್ ॥9॥
ಆಗ ನಾರದರು ಋಷಿಗಳ ಅನುಮತಿಯನ್ನು ಪಡೆದು ಅವರ ಆದೇಶದಂತೆ ಸರ್ವಧರ್ಮಾರ್ಥವನ್ನು ತಿಳಿದ ಮಾರ್ಕಂಡೇಯರನ್ನು ಕುರಿತು ಹೇಳಿದರು.
ದೀರ್ಘಾಯೋ ತಪಸಾ ದೀಪ್ತ ವೇದವೇದಾಂಗತತ್ವವಿತ್ |
ಯತ್ರ ತೇ ಸಂಶಯೋ ಬ್ರಹ್ಮನ್ ಸಮುತ್ಪನ್ನಃ ಸ ಉಚ್ಯತಾಮ್ ॥10॥
ಧರ್ಮಂ ಲೋಕೋಪಕಾರಂ ವಾ ಯಚ್ಚಾನ್ಯಚ್ಛ್ರೋತುಮಿಚ್ಛಸಿ |
ತದಹಂ ಕಥಯಿಷ್ಯಾಮಿ ಬ್ರೂಹಿ ತ್ವಂ ಸುಮಹಾತಪಃ ॥11॥
ಎಲೈ ದೀರ್ಘಾಯುಷ್ಯವಂತರೇ, ತಪಸ್ಸಿನಿಂದ ಪ್ರಕಾಶಿಸುವವರೇ, ವೇದವೇದಾಂಗ ತತ್ತ್ವವನ್ನು ತಿಳಿದವರೆ, ಬ್ರಾಹ್ಮಣರೇ, ನಿಮಗೆ ಎಲ್ಲಿ ಸಂಶಯವುಂಟಾಗಿದೆಯೋ ಅದನ್ನು ಹೇಳಿ. ಧರ್ಮದ ವಿಷಯದಲ್ಲಾಗಲೀ, ಲೋಕೋಪಕಾರದ ವಿಷಯದಲ್ಲಾಗಲೀ ಅಥವಾ ಬೇರೆ ವಿಷಯದಲ್ಲಾಗಲೀ ಏನನ್ನು ಕೇಳಲು ಬಯಸುತ್ತೀರೋ ಅದನ್ನು ನಾನು ಹೇಳುವೆನು. ಮಹಾತಪಸ್ವಿಗಳೇ, ನೀವು ಅದನ್ನು ಕೇಳಿ (ಎಂದು ಹೇಳಿದರು).
ಮಾರ್ಕಂಡೇಯಃ
ಯುಗೇಯುಗೇ ವ್ಯತೀತೇಽಸ್ಮಿನ್ ಧರ್ಮಸೇತುಃ ಪ್ರಣಶ್ಯತಿ |
ಕಥಂ ಧರ್ಮಚ್ಛಲೇನಾಹಂ ಪ್ರಾಪ್ನುಯಾಮಿತಿ ಮೇ ಮತಿಃ ॥12॥
ಮಾರ್ಕಂಡೇಯರು ಯುಗಗಳು ಕಳೆಕಳೆದಂತೆ ಧರ್ಮಸೇತುಗಳು ನಾಶವನ್ನು ಹೊಂದುತ್ತವೆ. ಧರ್ಮದ ಸೋಗಿನಲ್ಲಿ ಅಧರ್ಮಗಳು ಬೆಳೆಯುತ್ತವೆ. ಅಂತಹ ಅಧರ್ಮಗಳಿಂದ ನಾನು ಧರ್ಮವನ್ನು ಸಂಪಾದಿಸುವುದು ಹೇಗೆ ಎಂದು ನನ್ನ ಚಿಂತೆ.
ನಾರದಃ
ಆಸೀದ್ ಧರ್ಮಃ ಪುರಾ ವಿಪ್ರ ಚತುಷ್ಪಾದಃ ಕೃತೇ ಯುಗೇ |
ತತೋ ಹ್ಯಧರ್ಮಃ ಕಾಲೇನ ಪ್ರಸೂತಃ ಕಿಂಚಿದೂನತಃ ॥13॥
ತತಸ್ತ್ರೇತಾಯುಗಂ ನಾಮ ಪ್ರವೃತ್ತಂ ಧರ್ಮದೂಷಣಮ್ ॥14॥
ನಾರದರು ಎಲೈ ಬ್ರಾಹ್ಮಣರೇ, ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳಿಂದ ಕೂಡಿದ್ದಿತು. ಅನಂತರ ಕಾಲಕ್ರಮದಲ್ಲಿ ಆ ಧರ್ಮವು ಬೆಳೆದು ಆ ನಾಲ್ಕು ಪಾದಗಳಲ್ಲಿ ಊನತೆಯು ಉಂಟಾಯಿತು. ಆಗ ಧರ್ಮವನ್ನು ದೂಷಿಸುವ ತ್ರೇತಾಯುಗವು ಪ್ರವೃತ್ತವಾಯಿತು.
ತಸ್ಮಿನ್ ವ್ಯತೀತೇ ಸಂಪ್ರಾಪ್ತಂ ತೃತೀಯಂ ದ್ವಾಪರಂ ಸ್ಮೃತಮ್ |
ತದಾ ಧರ್ಮಸ್ಯ ದ್ವೌ ಪಾದಾವಧರ್ಮೋ ನಾಶಯಿಷ್ಯತಿ ॥15॥
ತ್ರೇತಾಯುಗವು ಕಳೆದ ಮೇಲೆ ಮೂರನೆಯದಾದ ದ್ವಾಪರ ಯುಗವು ಬಂದಿತು. ಆಗ ಅಧರ್ಮದ ಎರಡು ಪಾದಗಳು ಧರ್ಮದ ನಾಲ್ಕು ಪಾದಗಳಲ್ಲಿ ಎರಡು ಪಾದಗಳನ್ನು ನಾಶ ಮಾಡಿದವು.
ದ್ವಾಪರೇ ತು ಪರಿಕ್ಷೀಣೇ ನಂದಿಕೇ ಸಮುಪಸ್ಥಿತೇ |
ಲೋಕವೃತ್ತಂ ಚ ಧರ್ಮಂ ಚ ಉಚ್ಯಮಾನಂ ನಿಬೋಧ ಮೇ ॥16॥
ದ್ವಾಪರ ಯುಗವು ಕಳೆದು ಕಲಿಯುಗವು ಪ್ರಾಪ್ತವಾಗಿರುವಾಗ ಲೋಕದ ನಡತೆಯನ್ನು ಮತ್ತು ಧರ್ಮವನ್ನು ನಾನು ಹೇಳುತ್ತೇನೆ, ಅದನ್ನು ನನ್ನಿಂದ ಕೇಳಿ. ನಂದಿಕ ಎಂದರೆ ಕಲಿಯುಗದಲ್ಲಿ ಉಳಿದುಕೊಂಡಿರುವ ಧರ್ಮದ ನಾಲ್ಕನೆಯ ಪಾದವಾದ ಸತ್ಯ (ಲಕ್ಷಾಲಂಕಾರ).
ಚತುರ್ಥಂ ನಂದಿಕಂ ನಾಮ ಧರ್ಮಃ ಪಾದಾವಶೇಷಿತಃ |
ತತಃ ಪ್ರಭೃತಿ ಜಾಯಂತೇ ಕ್ಷೀಣಪ್ರಜ್ಞಾಯುಷೋ ನರಾಃ |
ಕ್ಷೀಣಪ್ರಾಣಧನಾ ಲೋಕೇ ಧರ್ಮಾಚಾರಬಹಿಷ್ಕೃತಾಃ ॥17॥
ಚತುರ್ಥವಾದ ಕಲಿಯುಗದಲ್ಲಿ ಧರ್ಮವು ನಂದಿಕ ಎಂಬ ಧರ್ಮದ ಪಾದದಿಂದ ಮಾತ್ರ ಉಳಿದಿರುತ್ತದೆ. ಕಲಿಯುಗದ ಪ್ರಾರಂಭದಿಂದ ಮನುಷ್ಯರು ಅಲ್ಪಪ್ರಜ್ಞೆಯುಳ್ಳವರೂ, ಅಲ್ಪಾಯುಷ್ಯವುಳ್ಳವರೂ, ಅಲ್ಪ ಪ್ರಾಣ-ಧನಗಳನ್ನುಳ್ಳವರೂ, ಧರ್ಮಾಚಾರದಿಂದ ದೂರರೂ ಆಗುತ್ತಾರೆ.
ಮಾರ್ಕಂಡೇಯಃ

ಏವಂ ನಾಶ ಮಿತೇ ಧರ್ಮೇ ಲೋಕೇ ಚಾಧರ್ಮಸಂಯುತೇ |
ಚಾತುರ್ವರ್ಣ್ಯಸ್ಯ ನಿಯತಂ ಹವ್ಯಂ ಕವ್ಯಂ ನ ನಶ್ಯತಿ ||18||
ಮಾರ್ಕಂಡೇಯರು ಹೀಗೆ ಧರ್ಮವು ಲೋಪವನ್ನು ಹೊಂದಿ ಅಧರ್ಮದಿಂದ ಕೂಡಿದಾಗ ಚಾತುರ್ವರ್ಣ್ಯದವರು ನಿಯತವಾಗಿ ಕೊಡುವ ಹವ್ಯ-ಕವ್ಯಗಳು ಕೆಟ್ಟು ಹೋಗುವುದಿಲ್ಲವೆ?
ನಾರದಃ
ಮಂತ್ರಪೂತಂ ಸದಾ ಹವ್ಯಂ ಕವ್ಯಂ ಚೈವ ನ ನಶ್ಯತಿ |
ಪ್ರತಿಗೃಹ್ಣಂತಿ ತದ್ ದೇವಾ ದಾತುರ್ನ್ಯಾಯಾತ್ ಪ್ರಯಚ್ಛತಃ ||19||
ನಾರದರು ಮಂತ್ರಪುರಸ್ಸರವಾಗಿ ಕೊಡುವ ಹವ್ಯ-ಕವ್ಯಗಳು ಯಾವಾಗಲೂ ನಾಶವನ್ನು ಹೊಂದುವುದಿಲ್ಲ. ಯಜಮಾನನು ನ್ಯಾಯದಿಂದ ಕೊಡುವ ಹವ್ಯ-ಕವ್ಯಗಳನ್ನು ದೇವತೆಗಳು ಸ್ವೀಕರಿಸುತ್ತಾರೆ.
ಸತ್ವಯುಕ್ತಂ ಚ ದಾತಾ ಚ ಸರ್ವಾನ್ ಕಾಮಾನವಾಪ್ನುಯಾತ್ |
ಅವಾಪ್ತಕಾಮಃ ಸ್ವರ್ಗೇ ಚ ಮಹೀಯೇತ ಯಥೇಪ್ಸಿತಮ್ ||20||
ಸದ್ಗುಣಭರಿತನಾಗಿ ಹವ್ಯ-ಕವ್ಯಗಳನ್ನು ಕೊಡುವ ಪುರುಷನು ಎಲ್ಲ ಕಾಮಗಳನ್ನೂ ಹೊಂದುತ್ತಾನೆ. ಇಲ್ಲಿ ಎಲ್ಲ ಕಾಮಗಳನ್ನು ಹೊಂದಿ ಸ್ವರ್ಗದಲ್ಲಿ ತನಗೆ ಇಷ್ಟವಾದಂತೆ ವಿಹರಿಸುತ್ತಾನೆ.
ಮಾರ್ಕಂಡೇಯಃ
ಚತ್ವಾರೋ ಹ್ಯಥ ಯೇ ವರ್ಣಾ ಹವ್ಯಂ ಕವ್ಯಂ ಪ್ರದಾಸ್ಯತಿ |
ಮಂತ್ರಹೀನಮಪನ್ಯಾಯಂ ತೇಷಾಂ ದಾನಂ ಕ್ವ ಗಚ್ಛತಿ ||21||
ಮಾರ್ಕಂಡೇಯ ನಾಲ್ಕು ವರ್ಣದವರು ಹವ್ಯ-ಕವ್ಯಗಳನ್ನು ಕೊಡುತ್ತಾರಷ್ಟೆ? ಅವನ್ನು ಮಂತ್ರಹೀನವಾಗಿ ನ್ಯಾಯವಿರುದ್ಧವಾಗಿ ಕೊಟ್ಟರೆ ಆ ಹವ್ಯ-ಕವ್ಯ-ದಾನವು ಎಲ್ಲಿ ಹೋಗುತ್ತದೆ?
ನಾರದಃ
ಅಸುರಾನ್ ಗಚ್ಛತೇ ದತ್ತಂ ವಿಪ್ರೈ ರಕ್ಷಾಂಸಿ ಕ್ಷತ್ರಿಯೈಃ |
ವೈಶ್ಯೈಃ ಪ್ರೇತಾನಿ ವೈ ದತ್ತಂ ಶೂದ್ರೈರ್ಭೂತಾನಿ ಗಚ್ಛತಿ ||22||
ನಾರದರು ಬ್ರಾಹ್ಮಣರು ಕೊಟ್ಟ ದಾನವು ಅಸುರರಿಗೆ ಸೇರುತ್ತದೆ. ಕ್ಷತ್ರಿಯರ ದಾನವು ರಾಕ್ಷಸರಿಗೆ ಸೇರುತ್ತದೆ. ವೈಶ್ಯರ ದಾನವು ಪ್ರೇತಗಳಿಗೆ ಸೇರುತ್ತದೆ. ಶೂದ್ರರು ಕೊಟ್ಟ ದಾನವು ಭೂತಗಳಿಗೆ ಸೇರುತ್ತದೆ.
ಮಾರ್ಕಂಡೇಯಃ
ಅಥ ವರ್ಣಾವರೇ ಜಾತಾಶ್ಚಾತುರ್ವರ್ಣ್ಯಾಯದೇಶಿನಃ |
ದಾಸ್ಯಂತಿ ಹವ್ಯಕವ್ಯಾನಿ ತೇಷಾಂ ದತ್ತಂ ಕ್ವ ಗಚ್ಛತಿ ||23||
ಮಾರ್ಕಂಡೇಯ ಹೀನವರ್ಣದಲ್ಲಿ ಜನಿಸಿದವರು ಯಾವ ಹವ್ಯಕವ್ಯಗಳನ್ನು ಕೊಡುತ್ತಾರೆಯೋ ಅವು ಎಲ್ಲಿಗೆ ಹೋಗುತ್ತವೆ?
ನಾರದಃ
ವರ್ಣಾವರಾಣಾಂ ಭೂತಾನಾಂ ಹವ್ಯಕವ್ಯಪ್ರದಾತೃಣಾಮ್ |
ನೈವ ದೇವಾ ನ ಪಿತರಃ ಪ್ರತಿಗೃಹ್ಣಂತಿ ತತ್ಸ್ವಯಮ್ ||24||
ನಾರದರು ವರ್ಣಾವರರಾದವರು ಹವ್ಯ-ಕವ್ಯಗಳನ್ನು ಕೊಟ್ಟರೆ ಅದನ್ನು ದೇವತೆಗಳಾಗಲೀ, ಪಿತೃಗಳಾಗಲೀ ತಾವು ತೆಗೆದುಕೊಳ್ಳುವುದಿಲ್ಲ.
ಯಾತುಧಾನಾಃ ಪಿಶಾಚಾಶ್ಚ ಭೂತಾ ಯೇ ಚಾಪಿ ನೈರ್ಋತಾಃ |
ತೇಷಾಂ ಸಾ ವಿಹಿತಾ ವೃತ್ತಿಃ ಪಿತೃದೈವತನಿರ್ಗತಾ ||25||
ಪಿತೃದೇವತೆಗಳಿಂದ ತಿರಸ್ಕೃತವಾದ ಆ ಭಾಗವು ಯಾತುಧಾನರಿಗೆ, ಪಿಶಾಚಿಗಳಿಗೆ ಮತ್ತು ರಾಕ್ಷಸರಿಗೆ ವಿಹಿತವಾದ ಭಾಗವೆಂದು ಹೇಳಲ್ಪಡುತ್ತದೆ.
ತೇಷಾಂ ಸರ್ವಪ್ರದಾತ್ರೂಣಾಂ ಹವ್ಯಕವ್ಯಂ ಸಮಾಹಿತಾಃ |
ಯತ್ಪ್ರಯಚ್ಛಂತಿ ವಿಧಿವತ್ ತದ್ವೈ ಭುಂಜಂತಿ ದೇವತಾಃ ||26||
ಆದರೆ ನ್ಯಾಯದಿಂದ ಶಾಸ್ತ್ರೋಕ್ತವಾಗಿ ಎಲ್ಲರೂ ಕೊಡುವ ಹವ್ಯ-ಕವ್ಯಗಳನ್ನು ದೇವತೆಗಳು ಸ್ವೀಕರಿಸುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ನಾರದ-ಮಾರ್ಕಂಡೇಯಸಂವಾದೇ (ಮಂತ್ರಸಂಸ್ಕಾರಪ್ರಯೋಗೋ ನಾಮ)
ಸಪ್ತಚತ್ವಾರಿಂಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೆಂಟನೆಯ ಅಧ್ಯಾಯ
ಕನ್ಯಾವಸ್ಥೆಯಲ್ಲಿ ಜನಿಸಿದ ಪುತ್ರರ ವಿಚಾರ.
ಮಾರ್ಕಂಡೇಯಃ
ಶ್ರುತಂ ವರ್ಣಾವರೇ ದತ್ತಂ ಹವ್ಯಂ ಕವ್ಯಂ ಚ ನಾರದ |
ಸಂಪ್ರಯೋಗೇ ಚ ಪುತ್ರಾಣಾಂ ಕನ್ಯಾನಾಂ ಚ ಬ್ರವೀಹಿ ಮೇ ||1||
ಮಾರ್ಕಂಡೇಯ ನಾರದರೇ, ವರ್ಣಾವರರು ನೀಡಿದ ಹವ್ಯ-ಕವ್ಯಗಳ ವಿಷಯದಲ್ಲಿ ನಿಮ್ಮ ಉಪದೇಶವನ್ನು ಕೇಳಿದ್ದಾಯಿತು.

ಸ್ತ್ರೀ-ಪುರುಷ ಸಂಯೋಗ ವಿಷಯದಲ್ಲಿಯೂ, ಕನ್ಯಾಪುತ್ರರ ವಿಷಯದಲ್ಲಿಯೂ ನನಗೆ ಹೇಳಿ.
ನಾರದಃ
ಕನ್ಯಾಪ್ರದಾನಂ ಪುತ್ರಾಣಾಂ ಸ್ತ್ರೀಣಾಂ ಸಂಯೋಗಮೇವ ಚ |
ಆನುಪೂರ್ವ್ಯಾನ್ಮಯಾ ಸಮ್ಯಗುಚ್ಯಮಾನಂ ನಿಬೋಧ ಮೇ ॥2॥
ನಾರದರು ಪುತ್ರರಿಗೆ ಕನ್ಯಾಪ್ರದಾನ ಮಾಡುವ ವಿಷಯವನ್ನೂ ಮತ್ತು ಸ್ತ್ರೀ ಸಂಗದ ವಿಷಯವನ್ನೂ ಕ್ರಮವಾಗಿ ಹೇಳುತ್ತೇನೆ, ಕೇಳುವವನಾಗು.
ಜಾತಮಾತ್ರಾ ತು ದಾತವ್ಯಾ ಕನ್ಯಕಾ ಸದೃಶೇ ವರೇ |
ಕಾಲೇ ದತ್ತಾಸು ಕನ್ಯಾಸು ಪಿತಾ ಧರ್ಮೇಣ ಯುಜ್ಯತೇ ॥3॥
ಕನ್ಯೆಯು ಜನಿಸಿದ ಮೇಲೆ ಅವಳನ್ನು ಸದೃಶನಾದ ವರನಿಗೆ ಕೊಡಬೇಕು. ಸರಿಯಾದ ಕಾಲದಲ್ಲಿ ಕನ್ಯಾದಾನವನ್ನು ಮಾಡಿದರೆ ತಂದೆಯು ಧರ್ಮವನ್ನು ಸಂಪಾದಿಸುತ್ತಾನೆ.
ಯಸ್ತು ಪುಷ್ಪವತೀಂ ಕನ್ಯಾಂ ಬಾಂಧವೋ ನ ಪ್ರಯಚ್ಛತಿ |
ಮಾಸಿಮಾಸಿ ಗತೇ ಬಂಧುಸ್ತಸ್ಯಾ ಭ್ರೌಣಘ್ನಮಾಪ್ನುತೇ ॥4॥
ಪುಷ್ಪವತಿಯಾದ ಕನ್ಯೆಯನ್ನು ಅಧಿಕಾರಯುಕ್ತನಾದ ಯಾವ ಬಂಧುವು ಕೊಡುವುದಿಲ್ಲವೋ ಅವಳು ಪ್ರತಿ ತಿಂಗಳು ರಜಸ್ವಲೆಯಾದಾಗಲೆಲ್ಲ ಅವನಿಗೆ ಭ್ರೂಣ ಹತ್ಯಾ ದೋಷವು ಬರುತ್ತದೆ.
ಯಸ್ತು ಕನ್ಯಾಂ ಗೃಹೇ ರುಂಧ್ಯಾದ್ ಗ್ರಾಮ್ಯೈರ್ಭೋಗೈರ್ವಿವರ್ಜಿತಾಮ್ |
ಅವಧ್ಯಾತಃ ಸ ಕನ್ಯಾಯಾ ಬಂಧುಃ ಪ್ರಾಪ್ನೋತಿ ಭ್ರೂಣಹಾಮ್ ॥5॥
ಯಾವನು ಕನ್ಯೆಯನ್ನು ಅವಳ ಸುಖದಿಂದ ವಂಚಿತಳನ್ನಾಗಿ ಮಾಡಿ ಮನೆಯಲ್ಲಿಯೇ ಬಂಧನದಲ್ಲಿಡುತ್ತಾನೆಯೋ ಆ ಬಂಧುವು ಆ ಕನ್ಯೆಯ ತಿರಸ್ಕಾರಕ್ಕೆ ಪಾತ್ರನಾಗಿ ಭ್ರೂಣಹತ್ಯಾ ದೋಷವನ್ನು ಹೊಂದುತ್ತಾನೆ.
ದೂಷಿತಾ ಪಾಣಿಮಾತ್ರೇಣ ಮೃತೇ ಭರ್ತರಿ ದಾರಿಕಾ |
ಸಂಸ್ಕಾರಂ ಲಭತೇ ನಾರೀ ದ್ವಿತೀಯೇ ಸಾ ಪುನಃ ಪತೌ ॥6॥
ಕೇವಲ ಪಾಣಿಗ್ರಹಣವನ್ನು ಮಾಡಿಕೊಂಡ ತಕ್ಷಣ ಪತಿಯು ಮೃತನಾಗುವುದರಿಂದ ದೂಷಿತಳಾದ ಕನ್ಯೆಯು ಇನ್ನೊಬ್ಬ ಪತಿಯು ದೊರೆತರೆ ಪುನಃ ವಿವಾಹ ಸಂಸ್ಕಾರಕ್ಕೆ ಅರ್ಹಳಾಗುತ್ತಾಳೆ.
ಪುನರ್ಭೂರ್ನಾಮ ಸಾ ಕನ್ಯಾ ಸಪುತ್ರಾ ಹವ್ಯಕವ್ಯದಾ |
ಅದೂಷ್ಯಾ ಸಾ ಪ್ರಸೂತೀಷು ಪ್ರಜಾನಾಂ ದಾರಕರ್ಮಣಿ ॥7॥
ಅಂತಹ ಕನ್ಯೆಗೆ ಪುನರ್ಭೂ ಎಂದು ಹೆಸರು. ಅವಳು ಪುತ್ರರನ್ನು ಪಡೆದು ಹವ್ಯ-ಕವ್ಯ ದಾನಕ್ಕೆ ಅರ್ಹಳಾಗುತ್ತಾಳೆ. ಸಂತತಿಯ ವಿಷಯದಲ್ಲಿ ಮತ್ತು ವಿವಾಹದ ವಿಷಯದಲ್ಲಿ ಅವಳನ್ನು ದೂಷಿಸಬಾರದು.
ಮಾರ್ಕಂಡೇಯಃ
ಯಾ ತು ಕನ್ಯಾ ಪ್ರಸೂಯೇತ ಗರ್ಭಿಣೀ ಯಾ ತು ವಾ ಭವೇತ್ |
ಕಥಂ ದಾರಕ್ರಿಯಾಂ ಭೂಯಃ ಸಾ ಭವೇದೃಷಿಸತ್ತಮ ॥8॥
ಮಾರ್ಕಂಡೇಯ ಎಲೈ ದ್ವಿಜೋತ್ತಮನೇ, ಯಾವಳು ಕನ್ಯೆಯಾಗಿಯೇ ಪ್ರಸವಿಸುತ್ತಾಳೆಯೋ ಅಥವಾ ಗರ್ಭಿಣಿಯಾಗುತ್ತಾಳೆಯೋ ಅವಳಿಗೆ ಪುನಃ ವಿವಾಹಕರ್ಮವು ಹೇಗೆ ಉಂಟಾಗುತ್ತದೆ?
ನಾರದಃ
ತತ್ತ್ವಾರ್ಥನಿಶ್ಚಿತಂ ಶಬ್ದಂ ಕನ್ಯಕಾ ನಯತೇಽಗ್ನಯೇ |
ತಸ್ಮಾತ್ ಕುರ್ವಂತಿ ವೈ ಭಾವಂ ಕುಮಾರ್ಯಸ್ತಾ ನ ಕನ್ಯಕಾಃ ॥9॥
ನಾರದರು ಅಂತಹ ಕನ್ಯೆಯು ಅಗ್ನಿಯ ಮುಂದೆ ನಡೆದ ಘಟನೆಯನ್ನು ಯಥಾರ್ಥವಾಗಿ ಹೇಳಬೇಕು. ಅನಂತರ ಬಂಧುಗಳು ಅವಳಲ್ಲಿ ಸ್ನೇಹವನ್ನು ಮಾಡುತ್ತಾರೆ. ಅವಳನ್ನು ಕುಮಾರಿ ಎಂದು ಕರೆಯುತ್ತಾರೆ. ಅವರು ಕನ್ಯೆಯರಲ್ಲ.
ಬ್ರಹ್ಮಹತ್ಯಾತ್ರಿಭಾಗೇನ ಗರ್ಭಾಧಾನವಿಶೋಧಿತಾಮ್ |
ಗೃಹ್ಣೀಯಾತ್ ತಾಂ ಚತುರ್ಭಾಗಂ ವಿಶುದ್ಧಾಂ ಸರ್ಜನಾತ್ ಪುನಃ ॥
ಬ್ರಹ್ಮಹತ್ಯೆಗೆ ಹೇಳಿದ ಪ್ರಾಯಶ್ಚಿತ್ತದಲ್ಲಿ ಮೂರು ಭಾಗವನ್ನು ಮಾಡಿ ಅವಳ ಗರ್ಭಾಧಾನವನ್ನು ಶೋಧಿಸಬೇಕು ಮತ್ತು ನಾಲ್ಕನೆಯ ಭಾಗವನ್ನು ಮಾಡಿ ಅವಳ ಪ್ರಸವ ದೋಷವನ್ನು ಶೋಧಿಸಬೇಕು. ಅನಂತರ ಅವಳನ್ನು ಪರಿಗ್ರಹಿಸಬಹುದು.
ಮಾರ್ಕಂಡೇಯಃ
ಕಥಂ ಕನ್ಯಾಸು ಯೇ ಜಾತಾ ಬಂಧೂನಾಂ ದೂಷಿತಾಃ ಸದಾ |
ಕಸ್ಯ ತೇ ಹವ್ಯಕವ್ಯಾನಿ ಪ್ರದಾಸ್ಯಂತಿ ಮಹಾಮುನೇ ॥11॥
ಮಾರ್ಕಂಡೇಯ ಕನ್ಯಾವಸ್ಥೆಯಲ್ಲಿ ಜನಿಸಿ, ಬಂಧುಗಳಿಂದ ಯಾವಾಗಲೂ ತಿರಸ್ಕೃತರಾದವರು ಎಲೈ ಮಹಾಮುನಿಯೇ, ಯಾರಿಗೆ ಹವ್ಯಕವ್ಯಗಳನ್ನು ಕೊಡುತ್ತಾರೆ?
ನಾರದಃ
ಕನ್ಯಾಯಾಸ್ತು ಪಿತುಃ ಪುತ್ರಾಃ ಕಾನೀನಾ ಹವ್ಯಕವ್ಯದಾಃ |
ಅಂತರ್ವತ್ನ್ಯಾಸ್ತು ಯಃ ಪಾಣಿಂ ಗೃಹ್ಣೀಯಾತ್ ಸ ಸಹೋಢಜಃ ॥12॥
ನಾರದರು ಅಂತಹ ಪುತ್ರರು ಕಾನೀನರೆನಿಸುತ್ತಾರೆ. ಅವರು ಆ ಕನ್ಯೆಯ ತಂದೆಗೆ ಹವ್ಯ-ಕವ್ಯಗಳನ್ನು ನೀಡುತ್ತಾರೆ. ಗರ್ಭಿಣಿಯಾದವಳನ್ನು ಯಾವನು ಪಾಣಿಗ್ರಹಣ ಮಾಡಿಕೊಳ್ಳುತ್ತಾನೆಯೋ ಅವನು (ಅವಳಿಗೆ ಜನಿಸಿದ ಪುತ್ರನು) ಸಹೋಢಜ

ಎನಿಸುತ್ತಾನೆ.
ಮಾರ್ಕಂಡೇಯಃ
ಅಥ ಯೇನಾಹಿತೋ ಗರ್ಭಃ ಕನ್ಯಾಯಾಂ ತತ್ರ ನಾರದ |
ಕಥಂ ಪುತ್ರಫಲಂ ತಸ್ಯ ಭವೇದೇತತ್ ಪ್ರಚಕ್ಷ್ವ ಮೇ ॥13॥
ಮಾರ್ಕಂಡೇಯ ಎಲ್ಲೈ ನಾರದರೇ, ಯಾವನು ಅಂತಹಹ ಕನ್ಯೆಯಲ್ಲಿ ಗರ್ಭಾಧಾನವನ್ನು ಮಾಡಿರುತ್ತಾನೆಯೋ ಅವನಿಗೆ ಅವಳಿಗೆ ಹುಟ್ಟಿದ ಪುತ್ರನಿಂದ ಯಾವ ಫಲವು ದೊರೆಯುತ್ತದೆ ಎಂದು ನನಗೆ ಹೇಳಿ.
ನಾರದಃ
ಧರ್ಮಾಚಾರೇಷು ತೇ ನಿತ್ಯಂ ದೂಷಕಾಃ ಕೃತಶೋಧನಾಃ |
ಬೀಜಂ ಚ (ನ) ನಶ್ಯತೇ ತೇಷಾಂ ಮೋಘಚೇಷ್ಟಾ ಭವಂತಿ ತೇ ॥14॥
ನಾರದರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದ ಅಂತಹವರು ಧರ್ಮಾಚಾರರಲ್ಲಿ ಯಾವಾಗಲೂ ದೂಷಿತರಾದವರು. ಅವರ ಬೀಜವು ನಾಶವನ್ನು ಹೊಂದುತ್ತದೆ ಮತ್ತು ಅವರ ಗರ್ಭಾಧಾನ ಕ್ರಿಯೆಯು ನಿಷ್ಫಲವಾಗುತ್ತದೆ.
ಮಾರ್ಕಂಡೇಯಃ
ಅಥ ಕಾಚಿದ್ ಭವೇತ್ಕನ್ಯಾ ಕ್ರೀತಾ ದತ್ತಾ ಹೃತಾऽಪಿ ವಾ |
ಕಥಂ ಪುತ್ರಕೃತಂ ತಸ್ಯಾಸ್ತದ್ ಭವೇದೃಷಿಸತ್ತಮ ॥15॥
ಮಾರ್ಕಂಡೇಯ ಎಲ್ಲೈ ಋಷಿಶ್ರೇಷ್ಠರೇ, ಒಂದು ಪಕ್ಷ ಒಬ್ಬ ಕನ್ಯೆಯನ್ನು ಮಾರಿದರೆ ಅಥವಾ ಅಪಹರಿಸಿದರೆ ಅಥವಾ ಅವಿಧಿಪೂರ್ವಕವಾಗಿ ದಾನ ಮಾಡಿದರೆ ಅವಳಲ್ಲಿ ಜನಿಸಿದ ಪುತ್ರರಿಗೆ ಏನಾಗುತ್ತದೆ?
ನಾರದಃ
ಕ್ರೀತಾ ದತ್ತಾ ಹೃತಾ ಚೈವ ಯಾ ಕನ್ಯಾ ಪಾಣಿವರ್ಜಿತಾ |
ಕೌಮಾರೀ ನಾಮ ಸಾ ಭಾರ್ಯಾ ಪ್ರಸವೇದೌರಸಾನ್ ಸುತಾನ್ |
ನ ಪತ್ನ್ಯರ್ಥೇ ಶುಭಾ ಪ್ರೋಕ್ತಾ ತತ್ಕರ್ಮಣ್ಯಪರಾಜಿತೇ ॥16॥
ನಾರದರು ವಿಧಿಬದ್ಧವಾದ ಕ್ರಮವಿಲ್ಲದೆ ಯಾವ ಕನ್ಯೆಯು ಕೊಂಡೊಕೊಳ್ಳಲ್ಪಡುತ್ತಾಳೆಯೋ ಅಥವಾ ಹಾಗೆಯೇ ದಾನ ಮಾಡಲ್ಪಡುತ್ತಾಳೆಯೋ ಅಥವಾ ಅಪಹರಿಸಲ್ಪಡುತ್ತಾಳೆಯೋ ಅವಳಿಗೆ ಕೌಮಾರಿ ಎಂದು ಹೆಸರು. ಅವಳಲ್ಲಿ ಜನಿಸಿದ ಪುತ್ರರು ಔರಸ ಪುತ್ರರು. ವೇದೋಕ್ತವಾದ ಕರ್ಮವನ್ನು ಮಾಡುವಾಗ ಅವಳನ್ನು ಪತ್ನಿಯಾಗಿ ಭಾಗವಹಿಸುವಂತೆ ಮಾಡಲು ಅವಳು ಅರ್ಹಳಲ್ಲ.
ಮಾರ್ಕಂಡೇಯಃ
ಕೇನ ಮಂಗಲಕೃತ್ಯೇಷು ವಿನಿಯುಜ್ಯಂತಿ ಕನ್ಯಕಾಃ |
ಏತದಿಚ್ಛಾಮಿ ವಿಜ್ಞಾತುಂ ತತ್ತ್ವೇನೇಹ ಮಹಾಮುನೇ ॥17॥
ಮಾರ್ಕಂಡೇಯ ಯಾವ ಕಾರಣದಿಂದ ಮಂಗಳಕಾರ್ಯಗಳಲ್ಲಿ ಕನ್ಯೆಯರನ್ನು ಬಳಸಿಕೊಳ್ಳುತ್ತಾರೆ. ಎಲ್ಲೈ ಮಹಾಮುನಿಯೇ, ಇದನ್ನು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ.
ನಾರದಃ
ನಿತ್ಯಂ ನಿವಸತೇ ಲಕ್ಷ್ಮೀಃ ಕನ್ಯಕಾಸು ಪ್ರತಿಷ್ಠಿತಾ |
ಶೋಭನಾ ಶುಭಯೋಗ್ಯಾ ಚ ಪೂಜ್ಯಾ ಮಂಗಲಕರ್ಮಸು ॥18॥
ಕನ್ನಿಕೆಯರಲ್ಲಿ ಲಕ್ಷ್ಮಿಯು ನಿತ್ಯವೂ ಸನ್ನಿಹಿತಳಾಗಿ ಪ್ರತಿಷ್ಠಿತಳಾಗಿರುತ್ತಾಳೆ. ಆದ್ದರಿಂದ ಕನ್ಯೆಯು ಮಂಗಳಳಾದವಳು, ಮಂಗಳ ಕಾರ್ಯಕ್ಕೆ ಯೋಗ್ಯಳಾದವಳು ಮತ್ತು ಮಂಗಳಕಾರ್ಯದಲ್ಲಿ ಪೂಜನೀಯಳಾದವಳು.
ಆಕರಸ್ಥಂ ಯಥಾ ರತ್ನಂ ಸರ್ವಕಾಮಫಲೋಪಗಮ್ |
ತಥಾ ಕನ್ಯಾ ಮಹಾಲಕ್ಷ್ಮೀಃ ಸರ್ವಲೋಕಸ್ಯ ಮಂಗಲಮ್ ॥19॥
ಮಣಿಯಲ್ಲಿರುವ ರತ್ನವು ಹೇಗೆ ಎಲ್ಲ ಕಾಮಗಳನ್ನು ಕೊಡಲು ಸಮರ್ಥವಾಗುತ್ತದೆಯೋ ಅದರಂತೆ ಮಹಾಲಕ್ಷ್ಮಿಯ ಸನ್ನಿಧಾನಕ್ಕೆ ಪಾತ್ರಳಾದ ಕನ್ಯೆಯು ಎಲ್ಲ ಲೋಕಗಳಲ್ಲಿಯೂ ಮಂಗಳವನ್ನು ಮಾಡುತ್ತಾಳೆ.
ಏವಂ ಕನ್ಯಾ ಪರಾ ಲಕ್ಷ್ಮೀ ರತಿಸ್ತೋಷಶ್ಚ ದೇಹಿನಾಮ್ |
ಮಹಾಕುಲಾನಾಂ ಚಾರಿತ್ರವೃತ್ತೇನ ನಿಕಷೋಪಲಮ್ ॥20॥
ಹೀಗೆ ಕನ್ಯೆಯು ಶ್ರೇಷ್ಠಳಾದ ಲಕ್ಷ್ಮೀ ಸನ್ನಿಧಾನ ಪಾತ್ರಳು. ಅವಳೇ ಮನುಷ್ಯರ ಸುಖ-ಸಂತೋಷಕ್ಕೆ ಕಾರಣಳಾದವಳು. ಅಂತಹ ಕನ್ಯೆಯ ಒಂದು ಚಾರಿತ್ರವೃತ್ತಗಳು ಒಂದು ಶ್ರೇಷ್ಠವಾದ ಚಾರಿತ್ರವೃತ್ತಗಳಿಗೆ ಒರೆಗಲ್ಲಾಗುತ್ತದೆ.
ಆನಯಿತ್ವಾ ಸ್ವಕಾದ್ ವರ್ಣಾತ್ ಕನ್ಯಕಾಂ ಯೋ ಭಜೇನ್ನರಃ |
ದಾತಾರಂ ಹವ್ಯಕವ್ಯಾನಾಂ ಪುತ್ರಕಂ ಯಾ ಪ್ರಸೂಯತಿ ॥21॥
ಮನುಷ್ಯನು ತನ್ನ ವರ್ಣದ ಕನ್ನಿಕೆಯನ್ನು ವಿವಾಹ ಮಾಡಿಕೊಂಡು ಮನೆಗೆ ತಂದರೆ ಅವಳು ಹವ್ಯ-ಕವ್ಯಗಳನ್ನು ನೀಡುವ ಪುತ್ರನನ್ನು ಪ್ರಸವಿಸುತ್ತಾಳೆ.
ಸಾಧ್ವೀ ಕುಲಂ ವರ್ಧಯತಿ ಸಾಧ್ವೀ ಪುಷ್ಟಿರ್ಗೃಹೇ ಪರಾ |
ಸಾಧ್ವೀ ಲಕ್ಷ್ಮೀ ರತಿಃ ಸಾಕ್ಷಾತ್ ಪ್ರತಿಷ್ಠಾ ಶಾಶ್ವತೀಃ ಸಮಾಃ ॥22॥
ಸಾಧ್ವಿಯಾದ ಅಂತಹವಳು ಕುಲವನ್ನು ಅಭಿವೃದ್ಧಿ ಪಡಿಸುತ್ತಾಳೆ. ಅಂತಹ ಸಾಧ್ವಿಯು ಕುಲದ ಪೋಷಣೆಯಲ್ಲಿ ನಿರತಳಾಗಿರುತ್ತಾಳೆ. ಅವಳಲ್ಲಿ ಸಾಕ್ಷಾತ್ ಲಕ್ಷ್ಮಿ ಮತ್ತು ರತಿಯರ ಸನ್ನಿಧಾನವಿರುತ್ತದೆ. ಅವಳು ಬಹುಕಾಲದವರೆಗೆ ಕುಲದ ಆಧಾರ

ಸ್ತಂಭಳಾಗುತ್ತಾಳೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ನಾರದಮಾರ್ಕಂಡೇಯಸಂವಾದೇ
ಕನ್ಯಾಪ್ರಶಂಸಾ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂಬತ್ತನೆಯ ಅಧ್ಯಾಯ
ವಿವಿಧ ಭಾರ್ಯೆಯರ ಪ್ರಕಾರಗಳು
ಮಾರ್ಕಂಡೇಯಃ
ಶ್ರುತಂ ಬಹುವಿಧಂ ವೃತ್ತಂ ಕನ್ಯಕಾನಾಂ ಮಹಾಮತೇ |
ಇಚ್ಛಾಮಿ ಯೋಷಿತಾಂ ಶ್ರೋತುಂ ಧರ್ಮಾಧರ್ಮೌ ಪರಿಗ್ರಹೇ ॥1॥
ಮಾರ್ಕಂಡೇಯ ಎಲೈ ಮಹಾಮತಿಯೇ, ಕನ್ನಿಕೆಯರ ಬಹುವಿಧವಾದ ನಡತೆಯನ್ನು ಕೇಳಿದೆನು. ಪಾಣಿಗ್ರಹಣ ಮಾಡಿಕೊಳ್ಳುವ ಸ್ತ್ರೀಯರ ಧರ್ಮಾಧರ್ಮಗಳ ವಿಷಯದಲ್ಲಿ ಕೇಳಲು ಬಯಸುತ್ತೇನೆ.
ನಾರದಃ
ಅಷ್ಟೌ ಭಾರ್ಯಾಗಮಾ ಧರ್ಮ್ಯಾ ನರಾಣಾಂ ದಾರಕರ್ಮಣಿ |
ಪ್ರೇತ್ಯೇಹ ಚ ಹಿತಾ ಯಾಸ್ತು ಸ್ವಪುತ್ರಾ ಹವ್ಯಕವ್ಯದಾಃ ॥2॥
ನಾರದರು ಮನುಷ್ಯರಿಗೆ ಪತ್ನಿಯನ್ನು ಸ್ವೀಕರಿಸುವಾಗ ಎಂಟು ವಿಧವಾದ ಪತ್ನಿಯರ ಪ್ರಾಪ್ತಿಯು ಧರ್ಮಪ್ರದವಾದುದು. ಅವರು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಹಿತರಾಗಿರುತ್ತಾರೆ. ಅವರಲ್ಲಿ ಹುಟ್ಟಿದ ಪುತ್ರರು ಹವ್ಯಕವ್ಯಗಳನ್ನು ಕೊಡಲು ಅರ್ಹರಾಗಿರುತ್ತಾರೆ.
ಸಾಧ್ವೀ ಪಾಣಿಗೃಹೀತಾ ಯಾ ಕೌಮಾರೀ ಪಾಣಿವರ್ಜಿತಾ |
ಭ್ರಾತೃಭಾರ್ಯಾ ಸ್ವಭಾರ್ಯೇತಿ ಪ್ರಸೂಯೇತ್ ಪುತ್ರಮೌರಸಮ್ ॥3॥
ವಿಧಿಪ್ರಕಾರವಾಗಿ ವಿವಾಹ ಮಾಡಿಕೊಂಡ ಸಾಧ್ವೀ, ಅಂತಹ ವಿಧಿಯಿಲ್ಲದ ಕೌಮಾರಿ, ಮೊದಲು ಭ್ರಾತೃಭಾರ್ಯೆಯಾಗಿದ್ದು ಅವನ ಮರಣದಿಂದ ತನ್ನ ಭಾರ್ಯೆಯಾದವಳು ಈ ಮೂವರು ಔರಸ ಪುತ್ರರನ್ನು ಪ್ರಸವಿಸುತ್ತಾಳೆ.
ಮಾರ್ಕಂಡೇಯಃ
ತ್ರಯೋ ಭಾರ್ಯಾಗಮಾ ಜ್ಞೇಯಾ ಯತ್ರ ಧರ್ಮೋ ನ ನಶ್ಯತಿ |
ಪಂಚಾನ್ಯಾಃ ಪಶ್ಚಿಮಾ ಬ್ರೂಹಿ ಭಾರ್ಯಾಸ್ತಾಸಾಂ ಚ ಯೇ ಸುತಾಃ ॥4॥
ಮಾರ್ಕಂಡೇಯ ಧರ್ಮವು ನಾಶವಾಗದಿರುವಂತಹ ಮೂರು ವಿಧವಾದ ಭಾರ್ಯಾಪ್ರಾಪ್ತಿಯನ್ನು ಕೇಳಿದೆನು. ಅನಂತರ ಐದು ವಿಧವಾದ ಭಾರ್ಯಾ ಪ್ರಾಪ್ತಿಯನ್ನೂ, ಅವರಲ್ಲಿ ಜನಿಸಿದ ಪುತ್ರರ ಪರಿಸ್ಥಿತಿಯನ್ನೂ ಹೇಳಿ.
ನಾರದಃ
ಸಗೋತ್ರಭಾರ್ಯಾ ಕ್ರೀತಾ ಚ ಪರಭಾರ್ಯಾ ಚ ಕಾರಿತಾ |
ಗತಾಗತಾ ಚ ಯಾ ಭಾರ್ಯಾ ಆಶ್ರಮಾದಾಹೃತಾ ಚ ಯಾ ॥5॥
ಏತಾ ಭಾರ್ಯಾಗಮಾಃ ಪಂಚ ಪುನರ್ಭಾರ್ಯಾ ಭವಂತಿ ಯಾಃ |
ಏತಾ ಭಾರ್ಯಾ ನೃಣಾಂ ಗಮ್ಯಾಸ್ತತ್ಪುತ್ರಾ ಹವ್ಯಕವ್ಯದಾಃ ॥6॥
ನಾರದರು ತನ್ನ ಗೋತ್ರದ ಭಾರ್ಯೆ, ಕ್ರಯವನ್ನು ಮಾಡಿ ತಂದ ಭಾರ್ಯೆ, ನಿಯೋಗ ಪದ್ಧತಿಯಂತೆ ಇನ್ನೊಬ್ಬನಿಗೆ ಭಾರ್ಯೆಯಾಗಿ ಮಾಡಲ್ಪಟ್ಟವಳು, ತನ್ನ ಬಳಿ ಯಾವಾಗಲೂ ಇರದೆ ಹೋಗಿ ಬರುವವಳು ಮತ್ತು ಆಶ್ರಮದಿಂದ ಹಾಗೆಯೇ ತರಲ್ಪಟ್ಟವಳು - ಇದು ಆ ಐದು ವಿಧವಾದ ಭಾರ್ಯಾಪ್ರಾಪ್ತಿ. ಇವರೆಲ್ಲರೂ ಪುನರ್ಭಾರ್ಯೆಯರು ಎಂದು ಹೇಳಲ್ಪಡುತ್ತಾರೆ. ಮನುಷ್ಯರು ಇಂತಹ ಭಾರ್ಯೆಯರ ಸಂಗವನ್ನು ಮಾಡಬಹುದು. ಅವರಲ್ಲಿ ಜನಿಸಿದ ಪುತ್ರರು ಹವ್ಯಕವ್ಯಗಳನ್ನು ಕೊಡಲು ಅರ್ಹರಾಗುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಭಾರ್ಯಾಗಮನಿರ್ಣಯೋ ನಾಮ ಏಕೋನಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತನೆಯ ಅಧ್ಯಾಯ
ಪುರುಷಚಾಪಲ್ಯದ ಫಲಕಥನ.
ಮಾರ್ಕಂಡೇಯಃ
ಶ್ರುತಾ ಭಾರ್ಯಾಶ್ಚ ಪುತ್ರಾಶ್ಚ ವಿಸ್ತರೇಣ ಮಹಾಮುನೇ |
ಆಶ್ರಮಸ್ಥಾಶ್ಚ ಯಾ ನಾರ್ಯೋ ನ ದುಷ್ಯಂತೀತಿ ಬ್ರೂಹಿ ಭೋ ॥1॥
ಮಾರ್ಕಂಡೇಯ ಎಲೈ ಮಹಾಮುನಿಯೇ, ಭಾರ್ಯೆಯರ ಮತ್ತು ಪುತ್ರರ ವಿಷಯದಲ್ಲಿ ವಿಸ್ತಾರವಾಗಿ ಕೇಳಿದೆನು. ಮೊದಲು ಇನ್ನೊಬ್ಬನ ಪತ್ನಿಯಾದವಳನ್ನು ತನ್ನ ಪತ್ನಿಯಾಗಿ ಕರೆತಂದರೆ ಅವಳು ಹೇಗೆ ದೂಷಿತಳಾಗುವುದಿಲ್ಲವೆಂದು ಹೇಳಿ. (ಲಕ್ಷಾಲಂಕಾರ).
ನಾರದಃ
ಆಶ್ರಮಸ್ಥಾಸು ನಾರೀಷು ಬಾಂಧವತ್ವಂ ಪ್ರಣಶ್ಯತಿ |

ನಷ್ಟವಂಶ್ಯಾ ಭವಂತ್ಯೇತಾ ಬಂಧೂನಾಮಥ ಭರ್ತೃಣಾಮ್ ॥2॥
ನಾರದರು ಮೊದಲು ಇನ್ನೊಬ್ಬನ ಪತ್ನಿಯಾಗಿದ್ದವಳಲ್ಲಿ ಬಂಧುತ್ವವು ನಾಶವನ್ನು ಹೊಂದುತ್ತದೆ. ಅವಳು ಅವಳ ಜನಕ ವಂಶವನ್ನೂ ಈ ಇಬ್ಬರು ಭರ್ತೃಗಳ ವಂಶವನ್ನೂ ನಾಶಪಡಿಸುತ್ತಾಳೆ.
ಪರದಾರಾ ಮುಕ್ತದೋಷಾಸ್ತಾ ನಾರ್ಯೋಽಶ್ರಮಸಂಸ್ಥಿತಾಃ|
ಸ್ವಯಮೀಶಾಃ ಸ್ವದೇಹಾನಾಂ ಕಾಮ್ಯಾಸ್ತದ್ಗತಮಾನಸಾಃ ॥3॥
ಇನ್ನೊಬ್ಬನ ಪತ್ನಿಯಾಗದಿದ್ದವಳನ್ನು ತನ್ನ ಪತ್ನಿಯಾಗಿ ಕರೆತಂದರೆ ಅವಳಿಗೆ ದೋಷವಿಲ್ಲ. ಅವರು ತಮ್ಮ ದೇಹಕ್ಕೆ ತಾವೇ ಒಡೆಯರು. ಕರೆತಂದವನಲ್ಲಿ ಅವನಿಗೆ ಪ್ರೀತಿ ಇದ್ದರೆ ಅಂತಹವರನ್ನು ಸ್ವೀಕರಿಸಬಹುದು (ಲಕ್ಷಾಲಂಕಾರ).
ಏವಂ ನಾರ್ಯೋ ನ ದುಷ್ಯಂತಿ ನರಾಣಾಂ ತತ್ಪ್ರಸೂತಿಷು|
ಧರ್ಮಪತ್ನ್ಯೋ ಭವಂತ್ಯೇತಾಃ ಸಪುತ್ರಾ ಹವ್ಯಕವ್ಯದಾಃ ॥4॥
ಅಂತಹ ನಾರಿಯರು ಮತ್ತು ಅವರ ಸಂತತಿಯು ದೂಷಿತವಾಗುವುದಿಲ್ಲ. ಅವರು ಧರ್ಮಪತ್ನಿಯರೆನಿಸುತ್ತಾರೆ. ಅವರ ಪುತ್ರರು ಹವ್ಯ-ಕವ್ಯದಾನಕ್ಕೆ ಅರ್ಹರಾಗುತ್ತಾರೆ.
ಮಾರ್ಕಂಡೇಯಃ
ಪರಸ್ಯ ಭಾರ್ಯಾ ಯಾ ಪೂರ್ವಂ ಮೃತೇ ಭರ್ತರಿ ಯಾ ಪುನಃ|
ಅನ್ಯಂ ಭಜತಿ ಭರ್ತಾರಂ ಸಸುತಾ ಅಸುತಾ ಕಥಮ್ ॥5॥
ಮಾರ್ಕಂಡೇಯ ಮೊದಲು ಇನ್ನೊಬ್ಬನ ಭಾರ್ಯೆಯಾಗಿದ್ದು, ಪುತ್ರರನ್ನು ಪಡೆದು ಅಥವಾ ಪಡೆಯದೆ ಅವನು ಮೃತನಾದ ಮೇಲೆ ಇನ್ನೊಬ್ಬನ ಬಳಿಗೆ ಹೋಗುವ ಮಕ್ಕಳಿರುವ ಅಥವಾ ಇಲ್ಲದಿರುವ ಸ್ತ್ರೀಯ ಪರಿಸ್ಥಿತಿ ಏನು?
ನಾರದಃ
ಅಸುತಾ ವಾ ಪ್ರಸೂತಾ ವಾ ಗೃಹಸ್ಥಾನಾಂ ಪರಸ್ತ್ರಿಯಃ|
ಪರಾಮೃಷ್ಟೇತಿ ತಾ ವರ್ಜ್ಯಾ ಧರ್ಮಚಾರೇಷು ದೂಷಿತಾಃ ॥6॥
ನ ಚಾಸಾಂ ಹವ್ಯಕವ್ಯಾನಿ ಪ್ರತಿಗೃಹ್ಣಂತಿ ದೇವತಾಃ|
ಯಸ್ತಾಸು ಜನಯೇತ್ ಪುತ್ರಾನ್ನ ತೈಃ ಪುತ್ರಮವಾಪ್ನುಯಾತ್ ॥7॥
ನಾರದರು ಅಂತಹ ಪರಸ್ತ್ರೀಗೆ ಪುತ್ರನು ಇರಲಿ ಇಲ್ಲದಿರಲಿ, ಅವಳು ಇನ್ನೊಬ್ಬನಿಂದ ಸ್ಪರ್ಶಿಸಲ್ಪಟ್ಟವಳು ಎಂಬ ಕಾರಣದಿಂದ ಧರ್ಮಾಚಾರಗಳಲ್ಲಿ ದೂಷಿತಳಾಗುತ್ತಾಳೆ. ಅವಳ ಪುತ್ರರು ನೀಡಿದ ಹವ್ಯಕವ್ಯಗಳನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಅವಳಲ್ಲಿ ಯಾವನು ಪುತ್ರನನ್ನು ಪಡೆಯುತ್ತಾನೆಯೋ ಅವನಿಗೆ ಪುತ್ರಫಲವು ದೊರೆಯುವುದಿಲ್ಲ.
ಮಾರ್ಕಂಡೇಯಃ
ಪರಕ್ಷೇತ್ರೇಷು ಯೋ ಬೀಜಂ ಚಾಪಲ್ಯಾದ್ ವಿಸೃಜೇನ್ನರಃ|
ಕಥಂ ಪುತ್ರಫಲಂ ತಸ್ಯ ಭವೇತ್ ತದೃಷಿಸತ್ತಮ ॥8॥
ಮಾರ್ಕಂಡೇಯ ಯಾವ ಪುರುಷನು ಚಪಲತೆಗೆ ಒಳಗಾಗಿ ಪರಕ್ಷೇತ್ರದಲ್ಲಿ ತನ್ನ ಬೀಜವನ್ನು ಬಿತ್ತುತ್ತಾನೆಯೋ ಎಲ್ಲೈ ಋಷಿಶ್ರೇಷ್ಠನೇ, ಅಂತಹವನಿಗೆ ಪುತ್ರಫಲವು ಉಂಟಾಗುತ್ತದೆಯೇ? ಇಲ್ಲವೇ?
ನಾರದಃ
ಅಸ್ವಾಮಿಕೇ ಪರಕ್ಷೇತ್ರೇ ಯೋ ನರೋ ಬೀಜಮುತ್ಸೃಜೇತ್|
ಸ್ವಯಂವೃತೋಽಶ್ರಮಸ್ಥಾಯಾಂ ತದ್ಬೀಜಂ ನ ವಿನಶ್ಯತಿ ॥9॥
ನಾರದರು ಸ್ವಾಮಿ ಇಲ್ಲದ ಪರಕ್ಷೇತ್ರದಲ್ಲಿ ಯಾವ ಪುರುಷನು ತನ್ನ ಬೀಜವನ್ನು ಬಿತ್ತುತ್ತಾನೆಯೋ ಅಥವಾ ಆಶ್ರಮದಲ್ಲಿದ್ದು ಪತ್ನಿ ಇಲ್ಲದವಳಿಂದಲೇ ಸ್ವತಃ ವರಿಸಲ್ಪಡುತ್ತಾನೆಯೋ ಅಂತಹವನ ಬೀಜವು ನಾಶವನ್ನು ಹೊಂದುವುದಿಲ್ಲ.
ಪರಕ್ಷೇತ್ರೇಷು ಯೋ ಬೀಜಂ ನರೋ ದರ್ಪಾತ್ ಸಮುತ್ಸೃಜೇತ್|
ಕ್ಷೇತ್ರಿಕಸ್ಯೈವ ತದ್ಬೀಜಂ ನ ಬೀಜೀ ಲಭತೇ ಫಲಮ್ ॥10॥
ಯಾವ ಪುರುಷನು ದರ್ಪದಿಂದ ಪರಕ್ಷೇತ್ರದಲ್ಲಿ ತನ್ನ ಬೀಜವನ್ನು ಇಡುತ್ತಾನೆಯೋ ಅಲ್ಲಿ ಹುಟ್ಟಿದ ಪುತ್ರನು ಆ ಕ್ಷೇತ್ರದ ಸ್ವಾಮಿಗೇ ಸೇರುತ್ತಾನೆ ಹೊರತು ದರ್ಪದಿಂದ ಬೀಜವನ್ನು ಇಟ್ಟವನಿಗೆ ಅಲ್ಲ.
ನಾತಃ ಪರಮಧರ್ಮ್ಯಂ ಚಾಪ್ಯಯಶಸ್ಯಂ ತಥೋತ್ತರಮ್|
ಗರ್ಭಾದೀನಾಂ ಚ ಬಹುಭಿಸ್ತಾಶ್ಚ ತ್ಯಾಜ್ಯಾಃ ಸಮೇಷ್ವಪಿ ॥11॥
ಆದರೆ ಬಹಳ ಪುರುಷರಿಂದ ಗರ್ಭವನ್ನು ಧರಿಸುವುದಕ್ಕಿಂತ ಹೆಚ್ಚು ಅಧಾರ್ಮಿಕವಾದುದು, ಹೆಚ್ಚು ಅಕೀರ್ತಿಕರವಾದುದು ಬೇರೆ ಯಾವುದೂ ಇಲ್ಲ. ಅಂತಹ ಸ್ತ್ರೀಯರು ತನ್ನ ವರ್ಣದವರೇ ಆಗಿದ್ದರೂ ಅವರನ್ನು ಪರಿತ್ಯಜಿಸಬೇಕು.
ಮಾರ್ಕಂಡೇಯಃ
ಅಥ ಯೇ ಪರದಾರೇಷು ಪುತ್ರಾ ಜಾಯಂತಿ ನಾರದ|
ಕಸ್ಯ ತೇ ಬಂಧುದಾಯಾದಾ ಭವಂತಿ ಪರಮದ್ಯುತೇ ॥12॥
ಮಾರ್ಕಂಡೇಯ ಎಲ್ಲೈ ನಾರದರೇ, ಪರಮದ್ಯುತಿಯನ್ನು ಹೊಂದಿದವರೇ, ಪರಪತ್ನಿಯರಲ್ಲಿ ಹುಟ್ಟಿದ ಪುತ್ರರು ಯಾರಿಗೆ ಬಂಧುಗಳು ಮತ್ತು ದಾಯಾದಿಗಳು ಆಗುತ್ತಾರೆ?
ನಾರದಃ
ಪರದಾರೇಷು ಜಾಯೇತೇ ದ್ವೌ ಪುತ್ರೌ ಕುಂಡಗೋಲಕೌ|
ಜೀವತ್ಯಥ ಪತೌ ಕುಂಡೋ ಮೃತೇ ಭರ್ತರಿ ಗೋಲಕಃ ॥13॥

ನಾರದರು ಪರಸ್ತ್ರೀಯರಲ್ಲಿ ಕುಂಡ-ಗೋಲಕ ಎಂಬ ಎರಡು ಬಗೆಯ ಪುತ್ರರು ಜನಿಸುತ್ತಾರೆ. ಪತಿಯು ಬದುಕಿರುವಾಗಲೇ ಪರಪುರುಷನಿಂದ ಹುಟ್ಟಿದವನು ಕುಂಡ. ಪತಿಯು ಮೃತನಾದ ಮೇಲೆ ಪರಪುರುಷನಿಂದ ಹುಟ್ಟಿದವನು ಗೋಲಕ.
ತೇ ಚ ಜಾತಾಃ ಪರಕ್ಷೇತ್ರೇ ದೇಹಿನಾಂ ಪ್ರೇತ್ಯ ಚೇಹ ಚ |
ದತ್ತಾನಿ ಹವ್ಯಕವ್ಯಾನಿ ನಾಶಯಂತ್ಯಥ ದಾತೃಣಾಮ್ ॥14॥
ಪರಕ್ಷೇತ್ರದಲ್ಲಿ ಜನಿಸಿದ ಅಂತಹವರು ಆ ವಂಶದ ಪಿತೃಗಳಿಗೆ ದಾತೃಗಳು ಕೊಡುವ ಹವ್ಯ-ಕವ್ಯಗಳನ್ನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ನಾಶ ಮಾಡುತ್ತಾರೆ.
ಪಿತುರ್ಹಿ ನರಕಾಯೈತೇ ಗೋಲಕಸ್ತು ವಿಶೇಷತಃ |
ಚಂಡಾಲತುಲ್ಯೌ ತಜ್ಞೌ ಹಿ ಪರತ್ರೇಹ ಚ ನಶ್ಯತಃ ॥15॥
ಅವರಿಬ್ಬರೂ ತಂದೆಗೆ ನರಕವನ್ನುಂಟು ಮಾಡುವವರು. ಗೋಲಕನಾದವನು ವಿಶೇಷವಾಗಿ ನರಕವನ್ನುಂಟು ಮಾಡುತ್ತಾನೆ. ಅವರಿಂದ ಜನಿಸಿದ ಪುತ್ರರು ಚಂಡಾಲರಿಗೆ ಸಮಾನರಾದವರು. ಅವರು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ನಾಶವನ್ನು ಹೊಂದುತ್ತಾರೆ.
ಮಾರ್ಕಂಡೇಯಃ
ಕಸ್ಯ ತೇ ಗರ್ಹಿತಾಃ ಪುತ್ರಾಃ ಪಿತೄಣಾಂ ಹವ್ಯಕವ್ಯದಾಃ |
ಯಸ್ಯ ಕ್ಷೇತ್ರೇ ಪ್ರಸೂಯಂತೇ ಯೋ ವಾ ತಾನ್ ಜನಯೇತ್ ಸುತಾನ್ ॥
ಮಾರ್ಕಂಡೇಯ ಅಂತಹ ದೂಷಿತರಾದ ಪುತ್ರರು ಯಾವ ಪಿತೃಗಳಿಗೆ ಹವ್ಯ-ಕವ್ಯಗಳನ್ನು ಕೊಡುತ್ತಾರೆ? ಪರಕ್ಷೇತ್ರದ ಸ್ವಾಮಿಗೋ ಅಥವಾ ತಮ್ಮನ್ನು ಹುಟ್ಟಿಸಿದ ಪಿತೃವಿಗೋ?
ನಾರದಃ
ಕ್ಷೇತ್ರಿಕಶ್ಚೈವ ಬೀಜೀ ಚ ದ್ವಾವೇತೌ ನಿರಯಂ ಗತೌ |
ನ ರಕ್ಷತಿ ಚ ಯೋ ದಾರಾನ್ ಪರದಾರಾಂಶ್ಚ ಗಚ್ಛತಿ ॥17॥
ಗರ್ಹಿತಾಸ್ತೇ ನರಾ ನಿತ್ಯಂ ಧರ್ಮಾಚಾರಬಹಿಷ್ಕೃತಾಃ |
ಕುಂಡೋ ಭೋಕ್ತಾ ಚ ಭೋಗೀ ಚ ಕುತ್ಸಿತಾಃ ಪಿತೃದೈವತ್ಯೈಃ ॥18॥
ನಾರದರು ಕ್ಷೇತ್ರಸ್ವಾಮಿಯೂ, ಬೀಜವನ್ನಿಟ್ಟವನೂ ಇಬ್ಬರೂ ನರಕಕ್ಕೆ ಹೋಗುತ್ತಾರೆ. ಕ್ಷೇತ್ರಸ್ವಾಮಿಯು ತನ್ನ ಕ್ಷೇತ್ರವನ್ನು ರಕ್ಷಣೆ ಮಾಡದೆ ಇದ್ದ ದೋಷದಿಂದಲೂ, ಬೀಜವನ್ನು ಇಟ್ಟವನು ಪರಸ್ತ್ರೀಯನ್ನು ಸ್ಪರ್ಶ ಮಾಡಿದ ಕಾರಣದಿಂದಲೂ ನರಕಕ್ಕೆ ಹೋಗುತ್ತಾನೆ. ಅಂತಹ ಮೂವರು ಯಾವಾಗಲೂ ಧರ್ಮಾಚಾರದಿಂದ ಬಹಿಷ್ಕೃತರಾಗಿ ನಿಂದಿತರಾದವರು. ಕ್ಷೇತ್ರಸ್ವಾಮಿ, ಬೀಜವನ್ನಿಟ್ಟವನು ಮತ್ತು ಅಲ್ಲಿ ಜನಿಸಿದ ಪುತ್ರ - ಈ ಮೂವರೂ ಪಿತೃಗಳಿಂದಲೂ ಮತ್ತು ದೇವತೆಗಳಿಂದಲೂ ನಿಂದಿತರಾದವರು.
ಮಾರ್ಕಂಡೇಯಃ
ತಥೈತೇ ಗರ್ಹಿತಾಃ ಪುತ್ರಾ ಹವ್ಯಕವ್ಯಾನಿ ನಾರದ |
ಕಸ್ಯ ನಿತ್ಯಂ ಪ್ರಯಚ್ಛಂತಿ ಧರ್ಮೋ ವಾ ತೇಷು ಕಿಂ ಫಲಮ್ ॥19॥
ಮಾರ್ಕಂಡೇಯ ಎಲೈ ನಾರದರೇ, ಹೀಗೆ ದೂಷಿತರಾದ ಪುತ್ರರು ಹವ್ಯ-ಕವ್ಯಗಳನ್ನು ಯಾರಿಗೆ ಕೊಡುತ್ತಾರೆ? ಧರ್ಮವಾದರೂ ಅವರಿಗೆ ಏನು ಫಲವನ್ನು ಕೊಡುತ್ತದೆ?
ನಾರದಃ
ಯಾತುಧಾನಾಃ ಪಿಶಾಚಾಶ್ಚ ಪ್ರತಿಗೃಹ್ಣಂತಿ ತೈರ್ಹುತಮ್ |
ಹವ್ಯಂ ಕವ್ಯಂ ಚ ತೈರ್ದತ್ತಂ ಯೇ ಚ ಭೂತಾ ನಿಶಾಚರಾಃ ॥20॥
ನಾರದರು ಪಿಶಾಚಿಗಳು ಮತ್ತು ರಾಕ್ಷಸರು ಅವರು ಮಾಡಿದ ಹೋಮ ಮೊದಲಾದ ಧರ್ಮಗಳನ್ನು ಸ್ವೀಕರಿಸುತ್ತಾರೆ. ಅವರು ಕೊಡುವ ಹವ್ಯ-ಕವ್ಯಗಳನ್ನು ಭೂತಗಳು ಮತ್ತು ನಿಶಾಚರರಾದ ಅಸುರರು ಸ್ವೀಕರಿಸುತ್ತಾರೆ.
ಮಾರ್ಕಂಡೇಯಃ
ಅಥ ತೇ ರಾಕ್ಷಸಾಃ ಪ್ರೀತಾಃ ಕಿಂ ಪ್ರಯಚ್ಛಂತಿ ದಾತೃಣಾಮ್ |
ಕಿಂ ವಾ ಧರ್ಮಫಲಂ ತೇಷಾಂ ಭವೇತ್ ತದೃಷಿಸತ್ತಮ ॥21॥
ಮಾರ್ಕಂಡೇಯ ಅಂತಹ ಪ್ರಸನ್ನರಾದ ರಾಕ್ಷಸಾದಿಗಳು ಹವ್ಯ-ಕವ್ಯವನ್ನು ಕೊಟ್ಟವರಿಗೆ ಯಾವ ಫಲವನ್ನು ಕೊಡುತ್ತಾರೆ? ಎಲೈ ಋಷಿಶ್ರೇಷ್ಠರೇ, ಅವರು ಮಾಡಿದ ಧರ್ಮಕ್ಕೆ ಫಲವಾದರೂ ಏನು?
ನಾರದಃ
ನ ದತ್ತಂ ನಶ್ಯತೇ ಕಿಂಚಿತ್ ಸರ್ವಭೂತೇಷು ದಾತೃಣಾಮ್ |
ಪ್ರೇತ್ಯ ಚೇಹ ಚ ತಾಂ ಪುಷ್ಟಿಮುಪಾಶ್ನಂತಿ ಪ್ರದಾಯಿನಃ ॥22॥
ನಾರದರು ದಾತೃಗಳು ಸರ್ವಭೂತಗಳಲ್ಲಿ ಯಾರಿಗೇ ದಾನವನ್ನು ಮಾಡಿದರೂ ಅದು ನಾಶವನ್ನು ಹೊಂದುವುದಿಲ್ಲ. ಕೊಟ್ಟವರು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸ್ವೀಕರಿಸಿದವರಿಗೆ ಯೋಗ್ಯತೆಗೆ ಅನುಗುಣವಾದ ಪುಷ್ಟಿಯನ್ನು ಪಡೆಯುತ್ತಾರೆ.
ಮಾರ್ಕಂಡೇಯಃ
ಅಥ ಗೋಲಕಕುಂಡಾಭ್ಯಾಂ ಸಂತತಿರ್ಯಾ ಭವಿಷ್ಯತಿ |
ತಯೋರ್ಯೇ ಬಾಂಧವಾಃ ಕೇಚಿತ್ ಪ್ರದಾಸ್ಯಂತಿ ಕಥಂ ನು ತಮ್ ॥
ಮಾರ್ಕಂಡೇಯ ಇನ್ನು ಗೋಲಕ-ಕುಂಡರಿಂದ ಉಂಟಾಗುವ ಸಂತತಿ ಮತ್ತು ಗೋಲಕ-ಕುಂಡರಿಗೆ ಬಾಂಧವರು ಕೊಡುವ ಹವ್ಯ-ಕವ್ಯಾದಿಗಳ ಪರಿಸ್ಥಿತಿ ಏನು?

ನಾರದಃ
ಸಾಧ್ವೀಜಾತಾಃ ಸುತಾಸ್ತೇಷಾಂ ತಾಂ ವೃತ್ತಿಮನುತಿಷ್ಠತಾಮ್ |
ಪ್ರೀಣಂತಿ ಪಿತೃದೈವತ್ಯಂ ಹವ್ಯಕವ್ಯಸಮಾಹಿತಾಃ ||24||
ನಾರದರು ಗೋಲಕ-ಕುಂಡರ ಪತ್ನಿಯರು ಸಾಧ್ವಿಯರಾದರೆ, ಅವರಲ್ಲಿ ಜನಿಸುವ ಪುತ್ರರು ಸನ್ಮಾರ್ಗದಲ್ಲಿ ನಡೆಯುವವರಾದರೆ ಅವರಿಗೆ ಹವ್ಯ-ಕವ್ಯಗಳ ಅಧಿಕಾರವಿದೆ. ಅದರಿಂದ ಪಿತೃದೇವತೆಗಳು ಸಂತೋಷಪಡುತ್ತಾರೆ.
ಏವಂ ಗೋಲಕಕುಂಡಾಭ್ಯಾಂ ಯೇ ಚ ವರ್ಣಾಪದೇಶಿನಃ |
ಹವ್ಯಂ ಕವ್ಯಂ ಚ ಶುದ್ಧಾನಾಂ ಪ್ರತಿಗೃಹ್ಣಂತಿ ದೇವತಾಃ ||25||
ಹೀಗೆ ನಾಲ್ಕು ವರ್ಣಗಳಿಗೂ ಸೇರಿದ (ಅಂತಹವರು ಶುದ್ಧವಾದ ವರ್ಣದಿಂದ ಕೂಡಿದವರಲ್ಲ) ಗೋಲಕ-ಕುಂಡರಿಂದ ಜನಿಸಿದ ಶುದ್ಧರಾದ ಪುತ್ರರಿಂದ ಕೊಡಲ್ಪಡುವ ಹವ್ಯಕವ್ಯಗಳನ್ನು ದೇವತೆಗಳು ಸ್ವೀಕರಿಸುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ನರಚಾಪಲ್ಯಕಥನಂ ನಾಮ ಪಂಚಾಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂದನೆಯ ಅಧ್ಯಾಯ
ಸ್ತ್ರೀಯರ ಚಾಪಲ್ಯದ ಫಲಕಥನ.
ಮಾರ್ಕಂಡೇಯಃ
ಶ್ರುತಂ ನರಾಣಾಂ ಚಾಪಲ್ಯಂ ಪರಸ್ತ್ರೀಷು ಪ್ರಜಾಯತಾಮ್ |
ಪ್ರಮದಾನಾಂ ತು ಚಾಪಲ್ಯೇ ದೋಷಮಿಚ್ಛಾಮಿ ವೇದಿತುಮ್ ||1||
ಮಾರ್ಕಂಡೇಯ ಪುರುಷರು ಚಪಲತೆಯಿಂದ ಪರಸ್ತ್ರೀಯರಲ್ಲಿ ಪುತ್ರರನ್ನು ಪಡೆದರೆ ಅದರ ವಿವರವನ್ನು ಕೇಳಿದ್ದಾಯಿತು. ಸ್ತ್ರೀಯರೇ ಚಪಲತೆಯಿಂದ ಪರ ಪುರುಷನ ಬಳಿಗೆ ಹೋದರೆ ಅದರ ದೋಷವನ್ನು ಕೇಳಲು ಬಯಸುತ್ತೇನೆ.
ನಾರದಃ
ಏಕವರ್ಣೋಽಪಿ ದೋಷಂ ತು ಗಮನಂ ಪೂರ್ವಕಾಲಿಕಮ್ |
ಧಾತಾ ಚ ಸಮನುಜ್ಞಾತೋ ವಿಷ್ಣುನಾ ತತ್ತಥಾಽಕರೋತ್ ||2||
ನಾರದರು ಸ್ತ್ರೀಯು ಸಮಾನವರ್ಣದವನ ಬಳಿಗೆ ಹೋದರೆ ಅದರಲ್ಲಿ ದೋಷವಿಲ್ಲ. ವಿಷ್ಣುವಿನಿಂದ ಆದೇಶವನ್ನು ಪಡೆದ ಬ್ರಹ್ಮದೇವರು ಪೂರ್ವಕಾಲದಲ್ಲಿ ಅಂತಹ ವ್ಯವಸ್ಥೆಯನ್ನು ಮಾಡಿದರು.
ಭಗಲಿಂಗೇ ಮಹಾಪ್ರಾಜ್ಞ ಪೂರ್ವಮೇವ ಪ್ರಜಾಪತಿಃ |
ಸಸರ್ಜ ತಾಭ್ಯಾಂ ಸಂಯೋಗಮನುಜ್ಞಾತಶ್ಚಕಾರ ಸಃ ||3||
ಎಲೈ ಮಹಾಪ್ರಾಜ್ಞನೇ, ಪ್ರಜಾಪತಿಯಾದ ಬ್ರಹ್ಮನು ಮೊದಲೇ ಭಗ-ಲಿಂಗಗಳನ್ನು (ಸ್ತ್ರೀಯೋನಿ ಮತ್ತು ಪುರುಷಲಿಂಗಗಳನ್ನು) ಸೃಷ್ಟಿ ಮಾಡಿ, ಅವುಗಳ ಸಂಯೋಗವನ್ನು ಅನುಮೋದಿಸಿದನು.
ಅಥ ವಿಷ್ಣುಪ್ರಸಾದೇನ ಭಗೋ ದತ್ತವರಃ ಕಿಲ |
ತೇನ ಚೈವ ಪ್ರಸಾದೇನ ಸರ್ವಾಂಲ್ಲೋಕಾನುಪಾಶ್ನುತೇ ||4||
ಅನಂತರ ವಿಷ್ಣುವಿನ ಅನುಗ್ರಹದಿಂದ ಭಗವು ಪ್ರಬಲವಾಯಿತು. ಆ ಅನುಗ್ರಹದ ಕಾರಣದಿಂದಲೇ ಅದು ಎಲ್ಲ ಲೋಕವನ್ನೂ ಆಳುತ್ತದೆ.
ತಸ್ಮಾತ್ತು ಪುರುಷೇ ದೋಷೋ ಹ್ಯಧಿಕೋ ನಾತ್ರ ಸಂಶಯಃ |
ವಿನಾ ಗರ್ಭಂ ಸವರ್ಣೇಷು ನ ತ್ಯಾಜ್ಯಾ ಗಮನಾತ್ ಸ್ತ್ರಿಯಃ ||5||
ಆ ಕಾರಣದಿಂದ ಪುರುಷನಿಗೆ ಅಧಿಕ ದೋಷವಿರುತ್ತದೆ. ಇದರಲ್ಲಿ ಸಂಶಯವಿಲ್ಲ. ಪರಪುರುಷನ ಬಳಿಗೆ ಹೋದ ಸ್ತ್ರೀಯರು ಅವರಿಂದ ಗರ್ಭಧಾರಣೆಯನ್ನು ಮಾಡದಿದ್ದರೆ ಅವರನ್ನು ಪರಿತ್ಯಾಗ ಮಾಡಬಾರದು.
ಪ್ರಾಯಶ್ಚಿತ್ತಂ ಯಥಾನ್ಯಾಯಂ ದಂಡಂ ಕುರ್ಯಾತ್ ಸ ಪಂಡಿತಃ |
ಶ್ವಭಿರ್ವಾ ದಂಶನಂ ಸ್ನಾನಂ ಸವನತ್ರಿತಯಂ ನಿಶಿ ||6||
ಭೂಮೌ ಚ ಭಸ್ಮಶಯನಂ ದಾನಂ ಭೋಗವಿವರ್ಜಿತಮ್ |
ದೋಷಗೌರವತಃ ಕಾಲೋ ದ್ರವ್ಯಗೌರವಮೇವ ಚ |
ಮರ್ಯಾದಾ ಸ್ಥಾಪಿತಾ ಪೂರ್ವಮಿತಿ ತೀರ್ಥಾಂತರಂ ಗತೇ ||7||
ವಿವೇಕಿಯಾದವನು ಶಾಸೋತ್ತಕ್ತವಾಗಿ ಶಿಕ್ಷೆಯನ್ನು ಕೊಡಬೇಕು. ನಾಯಿಗಳಿಂದ ಕಚ್ಚಿಸುವುದು, ರಾತ್ರಿಯ ವೇಳೆಯಲ್ಲಿ ಮೂರು ಬಾರಿ ಸ್ನಾನವನ್ನು ಮಾಡಿಸುವುದು, ಭೂಮಿಯಲ್ಲಿ ಭಸ್ಮದ ಮೇಲೆ ಮಲಗಿಸುವುದು, ಬಹಳ ಭೋಗವಿಲ್ಲದಂತೆ ಅನ್ನ ವಸ್ತ್ರಗಳನ್ನು ಕೊಡುವುದು ಇವು ಶಿಕ್ಷೆಗಳು. ದೋಷವು ಹೆಚ್ಚಾದಂತೆ ಶಿಕ್ಷೆಯ ಕಾಲವೂ, ಶಿಕ್ಷೆಯ ದ್ರವ್ಯ ಮತ್ತು ತೀವ್ರತೆಯೂ ಹೆಚ್ಚಾಗಬೇಕು. ಹೀಗೆ ಸ್ತ್ರೀಯರು ತಾವೇ ಪರಪುರುಷನ ಬಳಿಗೆ ಹೋದರೆ ಈ ಒಂದು ಪರಿಹಾರವು ಸ್ಥಾಪಿಸಲ್ಪಟ್ಟಿದ್ದಿತು.
ತದ್ಯೋಷಿತಾಂ ತು ದೀರ್ಘಾಯೋ ನಾಸ್ತಿ ದೋಷೋ ವ್ಯತಿಕ್ರಮೇ |
ಭಗಸ್ತೀರ್ಥಾಂತರೇ ಶುದ್ಧ್ಯೋ ವಿಷ್ಣೋಸ್ತು ವಚನಾದಿಹ ||8||
ಎಲೈ ದೀರ್ಘಾಯುಷ್ಯವಂತನೇ, ಆದ್ದರಿಂದ ಪತಿಯನ್ನು ಅತಿಕ್ರಮಿಸಿದರೆ ಸ್ತ್ರೀಯರಿಗೆ ದೋಷವಿಲ್ಲ. ಪರಪುರುಷನ ಸಂಪರ್ಕವನ್ನು ಮಾಡಿದರೂ ವಿಷ್ಣುವಿನ ವಚನದಂತೆ ಯೋನಿಯು ಶುದ್ಧವಾಗುತ್ತದೆ.

ರಕ್ಷ್ಯಾಶ್ಚೈವಾನ್ಯಸಂವಾದೈರನ್ಯಗೇಹಾದ್ ವಿಚಕ್ಷಣೈಃ |
ಆಸಾಂ ಶುದ್ಧೌ ವಿಶೇಷೇಣ ಕರ್ಮಣಾಂ ಫಲಮಶ್ನುತೇ ||9||
ಆದರೆ ವಿವೇಕಿಗಳಾದವರು ಪರಪುರುಷರ ಜೊತೆಯಲ್ಲಿ ತನ್ನ ಪತ್ನಿಯು ಯಾವಾಗಲೂ ಸಂಭಾಷಣೆಯಲ್ಲಿ ತೊಡಗದಿರುವಂತೆ, ಇನ್ನೊಬ್ಬನ ಮನೆಗೆ ಪುನಃ ಪುನಃ ಹೋಗದಿರುವಂತೆ ರಕ್ಷಿಸಬೇಕು. ಸ್ತ್ರೀಯರು ಶುದ್ಧರಾಗಿದ್ದರೆ ಮಾತ್ರ ಕರ್ಮಗಳ ಫಲವು ವಿಶೇಷವಾಗಿ ದೊರೆಯುತ್ತದೆ.
ನೈತಾ ವಾಚ್ಯಾ ನ ವೈ ವಧ್ಯಾ ನ ಕ್ಲೇಶ್ಯಾಃ ಶುಭಮಿಚ್ಛತಾ |
ವಿಷ್ಣುಪ್ರಸಾದಾದಿತ್ಯೇವ ಭಗಸ್ತ್ರೀರ್ಥಾಂತರಂ ಗತಃ |
ಮಾಸಿಮಾಸಿ ರಜಸ್ತ್ವಾಸಾಂ ದುಷ್ಕೃತಾನಪಕರ್ಷತಿ ||10||
ಶುಭವನ್ನು ಹೊಂದಲು ಇಚ್ಛಿಸುವವನು ಅವರನ್ನು ಹೊಡೆಯಬಾರದು, ನಿಂದಿಸಬಾರದು, ಬಹಳ ಕಷ್ಟಕ್ಕೆ ಈಡುಮಾಡಬಾರದು. ವಿಷ್ಣುವಿನ ಅನುಗ್ರಹದಿಂದಲೇ ಸ್ತ್ರೀಯೋನಿಯು ಪರಪುರುಷನ ಸಂಪರ್ಕವನ್ನು ಪಡೆದಿದ್ದರೂ ಅದು ಪ್ರತಿ ತಿಂಗಳೂ ಋತುಸ್ನಾತಳಾದ ಅವಳ ದೋಷವನ್ನು ಪರಿಹರಿಸುತ್ತದೆ.
ಸ್ತ್ರಿಯಸ್ತೋಷಕರಾ ನೃಣಾಂ ಸ್ತ್ರಿಯಸ್ತುಷ್ಟಿಪ್ರದಾಃ ಸದಾ |
ಪುತ್ರಸೇತುಪ್ರತಿಷ್ಠಾಯ ಸ್ತ್ರಿಯೋ ಲೋಕೇ ಮಹಾದ್ಯುತೇ ||11||
ಸ್ತ್ರೀಯರು ಪುರುಷರಿಗೆ ಯಾವಾಗಲೂ ಸಂತೋಷವನ್ನು ಮತ್ತು ಪುಷ್ಟಿಯನ್ನು ಉಂಟು ಮಾಡುವವರು. ಎಲೈ ಮಹಾದ್ಯುತಿಯೇ, ಪುತ್ರನೆಂಬ ವಂಶದ ಸೇತುವೆಯನ್ನು ಲೋಕದಲ್ಲಿ ನಿರ್ಮಾಣ ಮಾಡುವವರೂ ಅವರೇ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಯೋಷಿತ್ಪ್ರಭಾವಕಥನಂ ನಾಮ ಏಕಪಂಚಾಶೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೆರಡನೆಯ ಅಧ್ಯಾಯ
ಪತಿ-ಪತ್ನಿಯರ ಶುದ್ಧ್ಯಶುದ್ಧಿ ಕಥನ.
ಮಾರ್ಕಂಡೇಯಃ
ಶ್ರುತಂ ಬಲಂ ಪ್ರಭಾವಶ್ಚ ಯೋಷಿತಾಂ ಮುನಿಸತ್ತಮ |
ಏಕಸ್ಯ ಬಹುಭಾರ್ಯಸ್ಯ ಧರ್ಮಮಿಚ್ಛಾಮಿ ವೇದಿತುಮ್ ||1||
ಮಾರ್ಕಂಡೇಯ ಎಲೈ ಮುನಿಶ್ರೇಷ್ಠರೇ, ಸ್ತ್ರೀಯರ ಬಲವನ್ನು ಮತ್ತು ಸಾಮರ್ಥ್ಯವನ್ನು ಕೇಳಿದೆನು. ಅನೇಕ ಪತ್ನಿಯರನ್ನು ಹೊಂದಿದ ಪುರುಷನ ಧರ್ಮವನ್ನು ತಿಳಿಯಲು ಬಯಸುತ್ತೇನೆ.
ನಾರದಃ
ಬಹುಭಾರ್ಯಾಸು ಸಕ್ತಸ್ಯ ನಾರೀಭೋಗೇಷು ಗೇಹಿನಃ |
ಋತೌ ವಿಮುಚ್ಯಮಾನಸ್ಯ ಸಾನ್ನಿಧ್ಯೇ ಭ್ರೂಣಹಾ ಸ್ಮೃತಃ ||2||
ನಾರದರು ಗೃಹಸ್ಥನಾದವನು ಸ್ತ್ರೀಭೋಗದಲ್ಲಿ ಆಸಕ್ತನಾಗಿ, ಅನೇಕ ಭಾರ್ಯೆಯರನ್ನು ಹೊಂದಿ, ಋತುಕಾಲದಲ್ಲಿ ಸನ್ನಿಧಿಯಲ್ಲಿರುವ ಭಾರ್ಯೆಯ ಸಂಗವನ್ನು ಮಾಡದಿದ್ದರೆ ಭ್ರೂಣಹತ್ಯಾ ದೋಷವನ್ನು ಹೊಂದುವನು.
ವೃದ್ಧಾಂ ವಂಧ್ಯಾಂ ಸುವ್ರತಾಂ ಚ ಮೃತಾಪತ್ಯಾಮಪುಷ್ಪಿಣೀಮ್ |
ಕನ್ಯಾಂ ಚ ಬಹುಪುತ್ರಾಂ ಚ ವರ್ಜಯನ್ಮುಚ್ಯತೇ ಭಯಾತ್ ||3||
ವೃದ್ಧಳಾದ, ವಂಧ್ಯೆಯಾದ, ವ್ರತಧಾರಿಣಿಯಾದ, ಪುನಃ ಪುನಃ ಮಕ್ಕಳನ್ನು ಕಳೆದುಕೊಳ್ಳುವ, ಪ್ರೌಢೆಯಾಗದ, ಬಹುಪುತ್ರರನ್ನು ಪಡೆದಿರುವ ಸ್ತ್ರೀಯನ್ನು ಋತುಕಾಲದಲ್ಲಿ ಪರಿತ್ಯಜಿಸಿದರೂ ದೋಷಕ್ಕೆ ಗುರಿಯಾಗುವುದಿಲ್ಲ.
ವ್ಯಾಧಿತೋ ಬಂಧನಸ್ಥೋ ವಾ ಪ್ರವಾಸೇಷ್ವಥ ಪರ್ವಸು |
ಋತುಕಾಲೇಷು ನಾರೀಣಾಂ ಭ್ರೂಣಹತ್ಯಾಂ ಪ್ರಮುಂಚತಿ ||4||
ವ್ಯಾಧಿಗ್ರಸ್ತನಾದವನು, ಬಂಧನಕ್ಕೆ ಒಳಗಾದವನು, ಪ್ರವಾಸದಲ್ಲಿರುವವನು ಋತುಕಾಲದಲ್ಲಿ ಪತ್ನಿಗಮನವನ್ನು ಮಾಡದಿದ್ದರೂ ಭ್ರೂಣಹತ್ಯೆಗೆ ಗುರಿಯಾಗುವುದಿಲ್ಲ. ಪರ್ವಕಾಲಗಳಲ್ಲಿಯೂ ಹಾಗೆಯೇ.
ಮಾರ್ಕಂಡೇಯಃ
ವೇಶ್ಯನಾರೀಷು ವೈ ಜಾತಾಃ ಪರಪ್ರೇಷ್ಯಾಸು ವಾ ಸುತಾಃ |
ಕಸ್ಯ ತೇ ಬಂಧುದಾಯಾದಾ ಭವಂತಿ ಹಿ ಮಹಾಮುನೇ ||5||
ಮಾರ್ಕಂಡೇಯ ಎಲೈ ಮಹಾಮುನಿಯೇ, ವೇಶ್ಯೆಯರಲ್ಲಿ ಮತ್ತು ಇಟ್ಟುಕೊಂಡವಳಲ್ಲಿ ಜನಿಸಿದ ಪುತ್ರರು ಯಾರಿಗೆ ಬಂಧು-ದಾಯಾದಿಗಳಾಗುತ್ತಾರೆ?
ನಾರದಃ
ಪಣ್ಯಸ್ತ್ರೀಷು ಪ್ರಸೂತಾ ಯೇ ಯಸ್ಯ ಸ್ತ್ರೀ ತಸ್ಯ ತೇ ಸುತಾಃ |
ಕ್ರಯಾಚ್ಚ ಕೃತ್ರಿಮಾಃ ಪುತ್ರಾಃ ಪ್ರದಾನಾಚ್ಚೈವ ದತ್ರಿಮಾಃ ||6||
ನಾರದರು ವೇಶ್ಯಾಸ್ತ್ರೀಯರಲ್ಲಿ ಜನಿಸಿದ ಪುತ್ರರು ಯಾವ ಪುರುಷನಿಗೆ ಜನಿಸಿರುತ್ತಾರೆಯೋ ಅವನಿಗೆ ಪುತ್ರರಾಗುತ್ತಾರೆ. ಕ್ರಯದಿಂದ ಪಡೆದವರು ಕೃತ್ರಿಮ ಪುತ್ರರೆಂದೂ, ದಾನದಿಂದ ಪಡೆದವರು ದತ್ತಪುತ್ರರೆಂದೂ ಕರೆಯಲ್ಪಡುತ್ತಾರೆ.
ಮಾರ್ಕಂಡೇಯಃ

ಪಣ್ಯನಾರೀಷ್ವನಿಯತಃ ಪುಂಸೋಽರ್ಥೋ ವರ್ತತೇ ಧ್ರುವಮ್ |
ಅತ್ರ ಚಾಹಿತಗರ್ಭಾಯಾಃ ಕಸ್ಯ ಪುತ್ರಂ ವದಂತಿ ತಮ್ ॥7॥
ಮಾರ್ಕಂಡೇಯ ವೇಶ್ಯೆಯರಲ್ಲಿ ನಿಯತವಾದ ಸಂಬಂಧವಿರುವುದಿಲ್ಲ ಎಂಬುದು ಪ್ರಸಿದ್ಧವಾದುದು. ಅಂತಹವಳಲ್ಲಿ ಹುಟ್ಟಿದ ಪುತ್ರನನ್ನು ಯಾರ ಪುತ್ರನೆಂದು ಕರೆಯಬೇಕು?
ನಾರದಃ
ತೀರ್ಥಭೂತಾಸು ನಾರೀಷು ಜ್ಞಾಯತೇ ಯೋಽಭಿಗಚ್ಛತಿ |
ಋತೌ ತಸ್ಯ ಭವೇದ್ ಗರ್ಭೋ ಯಂ ವಾ ನಾರೀ ನ ಶಂಕತೇ ॥8॥
ನಾರದರು ಋತುಕಾಲದಲ್ಲಿ ಶುದ್ಧಳಾದ ನಾರಿಯನ್ನು ಯಾವ ಪುರುಷನು ಸಂಪರ್ಕಿಸುತ್ತಾನೆಯೋ ಅವಳಲ್ಲಿ ಜನಿಸುವ ಆ ಗರ್ಭವು ಅವನಿಗೆ ಸೇರಿದುದು ಅಥವಾ ಆ ವೇಶ್ಯೆಯು ನಿಶ್ಚಿತವಾಗಿ ಯಾರ ಪುತ್ರನೆಂದು ಹೇಳುತ್ತಾಳೆಯೋ ಅವನಿಗೆ ಸೇರಿದುದು.
ಮಾರ್ಕಂಡೇಯಃ
ನರಾಣಾಂ ತ್ಯಜತಾಂ ಭಾರ್ಯಾಂ ಕಾಮಕ್ರೋಧಾದ್ ಗುಣಾನ್ವಿತಾಮ್|
ಅಪ್ರಸೂತಾಂ ಪ್ರಸೂತಾಂ ವಾ ತೇಷಾಂ ಪೃಚ್ಛಾಮಿ ನಿಷ್ಕೃತಿಮ್ ॥9॥
ಮಾರ್ಕಂಡೇಯ ಪುರುಷರು ಕಾಮ-ಕ್ರೋಧದಿಂದ ಮಕ್ಕಳನ್ನು ಪಡೆದ ಅಥವಾ ಪಡೆಯದ ಗುಣಾನ್ವಿತರಾದ ಭಾರ್ಯೆಯನ್ನು ತ್ಯಜಿಸಿದರೆ ಅವರಿಗೆ ಪ್ರಾಯಶ್ಚಿತ್ತವೇನು ಎಂದು ಕೇಳುತ್ತಿದ್ದೇನೆ.
ನಾರದಃ
ಅಪಾಪಾಂ ತ್ಯಜಮಾನಸ್ಯ ಸಾಧ್ವೀಂ ಮತ್ವೈವಮಾದಿತಃ |
ಆತ್ಮವಂಶಃ ಸ್ವಧರ್ಮೋ ವಾ ತ್ಯಜತೋ ನಿಷ್ಕೃತಿರ್ನ ತು ॥10॥
ನಾರದರು ತನ್ನ ಪತ್ನಿ ಸಾಧ್ವಿ ಎಂದು ತಿಳಿದು ಅವಳು ಪಾಪರಹಿತಳಾಗಿದ್ದರೂ ಅವಳನ್ನು ಪರಿತ್ಯಾಗ ಮಾಡುವವನಿಗೆ ಆತ್ಮವಂಶವಾಗಲೀ, ತನ್ನ ಧರ್ಮವಾಗಲೀ ಅಥವಾ ಪ್ರಾಯಶ್ಚಿತ್ತವಾಗಲೀ ಇರುವುದಿಲ್ಲ.
ಯೋ ನರಸ್ತ್ಯಜತೇ ಭಾರ್ಯಾಂ ಪುಷ್ಪಿಣೀಮಪ್ರಸೂತಿಕಾಮ್ |
ಸ ನಷ್ಟವಂಶಃ ಪಿತೃಭಿರ್ಯುಕ್ತಸ್ತ್ಯಜ್ಯೇತ ದೈವತೈಃ ॥11॥
ಯಾವ ಪುರುಷನು ಮಕ್ಕಳಿಲ್ಲದ, ಋತುಸ್ನಾತಳಾದ ತನ್ನ ಭಾರ್ಯೆಯನ್ನು ತ್ಯಜಿಸುತ್ತಾನೆಯೋ ಅವನು ತನ್ನ ಪಿತೃಗಳ ಜೊತೆಯಲ್ಲಿ ವಂಶನಾಶವನ್ನು ಹೊಂದಿ ದೇವತೆಗಳಿಂದ ಪರಿತ್ಯಜಿಸಲ್ಪಡುತ್ತಾನೆ.
ಭಾರ್ಯಾಮಪತ್ಯಸಂಜಾತಾಂ ಪ್ರಸೂತಾಂ ಪುತ್ರಪೌತ್ರಿಣೀಮ್ |
ಪುತ್ರದಾರಪರಿತ್ಯಾಗೀ ನ ಸ ಪ್ರಾಪ್ನೋತಿ ನಿಷ್ಕೃತಿಮ್ ॥12॥
ಮಕ್ಕಳನ್ನು ಪಡೆದ ಪುತ್ರ-ಪೌತ್ರ ಸಹಿತಳಾದ ಭಾರ್ಯೆಯನ್ನು ಮತ್ತು ಪುತ್ರರನ್ನು ಪರಿತ್ಯಾಗ ಮಾಡುವವನಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ.
ಏವಂ ಹಿ ಭಾರ್ಯಾಂ ತ್ಯಜತಾಂ ನರಾಣಾಂ ನಾಸ್ತಿ ನಿಷ್ಕೃತಿಃ |
ನಾರ್ಹಂತಿ ಪ್ರಮದಾಸ್ತ್ಯಕ್ತುಂ ಪುತ್ರಪೌತ್ರಪ್ರತಿಷ್ಠಿತಾಃ ॥13॥
ಹೀಗೆ ಭಾರ್ಯೆಯನ್ನು ತ್ಯಜಿಸುವ ಪುರುಷರಿಗೆ ಪ್ರಾಯಶ್ಚಿತ್ತವಿಲ್ಲ ಮತ್ತು ಪುತ್ರ- ಪೌತ್ರರ ಪ್ರತಿಷ್ಠೆಗೆ ಕಾರಣರಾದ ಸ್ತ್ರೀಯರು ಪರಿತ್ಯಾಗಕ್ಕೆ ಅರ್ಹರಲ್ಲ.
ಮಾರ್ಕಂಡೇಯಃ
ಕೀದೃಶೀಂ ಸಂತ್ಯಜನ್ ಭಾರ್ಯಾಂ ನರೋ ದೋಷೈರ್ನ ಲಿಪ್ಯತೇ |
ಏತದಿಚ್ಛಾಮಿ ತತ್ತ್ವೇನ ವಿಜ್ಞಾತುಮೃಷಿಸತ್ತಮ ॥14॥
ಮಾರ್ಕಂಡೇಯ ಎಲೈ ಋಷಿಶ್ರೇಷ್ಠರೇ, ಎಂತಹ ಭಾರ್ಯೆಯನ್ನು ಪರಿತ್ಯಜಿಸಿದರೆ ದೋಷವು ಉಂಟಾಗುವುದಿಲ್ಲವೆಂದು ಕೇಳಲು ನಾನು ಇಚ್ಛಿಸುತ್ತೇನೆ.
ನಾರದಃ
ಮೋಕ್ಷಧರ್ಮಸ್ಥಿತಾನಾಂ ತು ಅನ್ಯೋನ್ಯಮನುಜಾನತಾಮ್ |
ಭಾರ್ಯಾಪತೀನಾಂ ಮುಕ್ತಾನಾಮಧರ್ಮೋ ನ ವಿಧೀಯತೇ ॥15॥
ನಾರದರು ಮೋಕ್ಷಧರ್ಮನಿರತರಾಗಿ ಪರಸ್ಪರ ಅನುಮತಿಯಿಂದ ಭಾರ್ಯಾ- ಪತಿಗಳು ಮೈಥುನವನ್ನು ಮಾಡದಿದ್ದರೆ ಅವರಿಗೆ ಅಧರ್ಮವುಂಟಾಗುವುದಿಲ್ಲ.
ಅನ್ಯಸಂಗಾಂ ಗತಾಪತ್ಯಾಂ ಶೂದ್ರಗಾಂ ಪರಭಾಗಿನೀಮ್ |
ಪರೀಕ್ಷ್ಯ ತ್ಯಜಮಾನಾನಾಂ ನರಾಣಾಂ ನಾಸ್ತಿ ಪಾತಕಮ್ ॥16॥
ಪಾತಕೇಽಪಿ ತು ಭರ್ತವ್ಯೌ ದ್ವೌ ತು ಮಾತಾ ಪಿತಾ ತಥಾ ॥17॥
ಇನ್ನೊಬ್ಬನ ಬಳಿಗೆ ಹೋಗುವವಳನ್ನು, ಪುನಃ ಪುನಃ ಮಕ್ಕಳನ್ನು ಕಳೆದುಕೊಳ್ಳುವವಳನ್ನು, ಶೂದ್ರನ ಬಳಿಗೆ ಹೋಗುವವಳನ್ನು, ವ್ಯಭಿಚಾರಿಣಿಯನ್ನು ಪರೀಕ್ಷೆಗಳಿಂದ ಅವರ ದೋಷಗಳನ್ನು ನಿಶ್ಚಯಿಸಿ ಪರಿತ್ಯಜಿಸುವ ಪುರುಷನಿಗೆ ಪಾಪವು ಬರುವುದಿಲ್ಲ. ಪಾತಕವನ್ನು ಮಾಡಿದ್ದರೂ ತಂದೆ-ತಾಯಿಗಳನ್ನು ಪೋಷಿಸಲೇಬೇಕು.
ಮಾರ್ಕಂಡೇಯಃ
ಭಾರ್ಯಾಯಾಂ ವ್ಯಭಿಚಾರಿಣ್ಯಾಂ ನರಸ್ಯ ತ್ಯಜತೋ ರುಷಾ |
ಕಥಂ ಧರ್ಮೋಽಪ್ಯಧರ್ಮೋ ವಾ ಭವತೀಹ ಮಹಾಮತೇ ॥18॥

ಮಾರ್ಕಂಡೇಯ ಎಲೈ ಮಹಾಮತಿಯೇ, ಭಾರ್ಯೆಯು ವ್ಯಭಿಚಾರಿಣಿಯಾದಾಗ ರೋಷದಿಂದ ಅವಳನ್ನು ತ್ಯಜಿಸುವ ಪುರುಷನಿಗೆ ಧರ್ಮಾಧರ್ಮಗಳು ಹೇಗೆ ಉಂಟಾಗುತ್ತವೆ?
ನಾರದಃ
ಅನೃತೇಽಪಿ ಹಿ ಸತ್ಯೇ ವಾ ಯೋ ನಾರೀಂ ದೂಷಿತಾಂ ತ್ಯಜೇತ್ |
ಅರಕ್ಷಮಾಣಃ ಸ್ವಾಂ ಭಾರ್ಯಾಂ ನರೋ ಭವತಿ ಭ್ರೂಣಹಾ ॥19॥
ನಾರದರು ಪತ್ನಿಯ ಮೇಲೆ ದೋಷಾರೋಪಣವನ್ನು ಮಾಡಿ, ಆ ಆರೋಪವು ನಿಜವಾಗಿರಲಿ ಅಥವಾ ಸುಳ್ಳಾಗಿರಲಿ ಅಂತಹವಳನ್ನು ರಕ್ಷಿಸದೆ ಪರಿತ್ಯಾಗ ಮಾಡಿದರೆ ಅವನಿಗೆ ಭ್ರೂಣ ಹತ್ಯಾ ದೋಷವು ಬರುತ್ತದೆ.
ಅಪತ್ಯಹೇತೋರ್ಯಾ ನಾರೀ ಭರ್ತಾರಮತಿಲಂಘಯೇತ್ |
ಲೋಲೇಂದ್ರಿಯೇತಿ ಸಾ ರಕ್ಷ್ಯಾ ನ ಸಂತ್ಯಾಜ್ಯಾ ಕಥಂಚನ ॥20॥
ಮಕ್ಕಳಿಲ್ಲದ ಯಾವ ನಾರಿಯು ಪತಿಯನ್ನು ಬಿಟ್ಟು ಬೇರೆಯವನ ಕಡೆಗೆ ಹೋಗುತ್ತಾಳೆಯೋ ಅವಳನ್ನು ಇಂದ್ರಿಯಲೋಲಳು ಎಂದು ತಿಳಿದು ರಕ್ಷಿಸಬೇಕು ಹೊರತು ಯಾವ ಕಾರಣದಿಂದಲೂ ಪರಿತ್ಯಜಿಸಬಾರದು.
ನದ್ಯಶ್ಚ ನಾರ್ಯಶ್ಚ ಸಮಸ್ವಭಾವಾ
ನೈತಾ ನ ದುಷ್ಯಂತಿ ನರಾವಗಾಢಾಃ |
ಸ್ರೋತಾಂಸಿ ನದ್ಯೋ ವಹತೇ ನಿಪಾತಂ
ನಾರೀ ರಜೋಭಿಃ ಪುನರೇತಿ ಶೌಚಮ್ ॥21॥
ನದಿಗಳು ಮತ್ತು ನಾರಿಯರು ಒಂದೇ ಸ್ವಭಾವವುಳ್ಳವರು. ಪುರುಷರ ಸಂಬಂಧವಾದರೂ ಅವರು ತಮ್ಮ ಶುದ್ಧಿಯನ್ನು ಕಳೆದುಕೊಳ್ಳುವುದಿಲ್ಲ. ನದಿಗಳು ತಮ್ಮ ಪ್ರವಾಹದಿಂದ ಶುದ್ಧವಾಗುತ್ತವೆ (ಶವಾದಿಗಳು ಬಿದ್ದರೂ ಪ್ರವಾಹದಿಂದ ಶುದ್ಧಿಯನ್ನು ಹೊಂದುತ್ತವೆ). ನಾರಿಯು ಪ್ರತಿ ಮಾಸದ ರಜೋದರ್ಶನದಿಂದ ಶುದ್ಧಿಯನ್ನು ಹೊಂದುತ್ತಾಳೆ.
ಏವಂ ನಾರ್ಯೋ ನ ದುಷ್ಯಂತಿ ವ್ಯಭಿಚಾರೇಽಪಿ ಭರ್ತೃಣಾಮ್ |
ಮಾಸಿಮಾಸಿ ಭವೇತ್ ತ್ಯಾಗಸ್ತತಃ ಶುದ್ಧಾ ಭವಂತ್ಯುತ ॥22॥
ಹೀಗೆ ನಾರಿಯರು ಪತಿಗಳನ್ನು ಮೀರಿ ವ್ಯಭಿಚಾರವನ್ನು ಮಾಡಿದರೂ ದೂಷಿತರಾಗುವುದಿಲ್ಲ. ಅವರಿಗೆ ಪ್ರತಿ ಮಾಸವೂ ಅವರಲ್ಲಿ ಶೋಣಿತತ್ಯಾಗ ಉಂಟಾಗುತ್ತದೆ. ಅದರಿಂದ ಅವರು ಶುದ್ಧರಾಗುತ್ತಾರೆ.
ಮಾರ್ಕಂಡೇಯಃ
ಕಾನಿ ತೀರ್ಥಾನಿ ಭಗವನ್ ನೃಣಾಂ ದೇಹಾಶ್ರಿತಾನಿ ವೈ |
ತಾನಿ ವೈ ಶಂಸ ಭಗವನ್ ಯಾಥಾತಥ್ಯೇನ ಪೃಚ್ಛತಃ ॥23॥
ಮಾರ್ಕಂಡೇಯ ಪೂಜ್ಯರೇ, ಯಾವ ತೀರ್ಥಗಳು ಪುರುಷರ ಹಸ್ತದಲ್ಲಿ ಇರುತ್ತವೆ? ಪೂಜ್ಯರೇ, ನನ್ನ ಪ್ರಶ್ನೆಗೆ ಉತ್ತರವಾಗಿ ಅವನ್ನು ನನಗೆ ಸರಿಯಾಗಿ ತಿಳಿಸಿ.
ಸರ್ವತೀರ್ಥೇಷು ತೀರ್ಥಜ್ಞ ಕಿಂ ತೀರ್ಥಂ ಪರಮಂ ನೃಣಾಮ್ |
ಯತ್ರೋಪಸ್ಪೃಶ್ಯ ಪೂತಾತ್ಮಾ ನರೋ ಭವತಿ ನಿತ್ಯಶಃ ॥24॥
ಎಲೈ ಸರ್ವಜ್ಞರೇ, ಎಲ್ಲ ತೀರ್ಥಗಳಲ್ಲಿಯೂ ಪುರುಷರಲ್ಲಿ ಶ್ರೇಷ್ಠವಾದ ತೀರ್ಥಗಳು ಯಾವುದು? ಎಲ್ಲಿ ಸ್ಪರ್ಶವನ್ನು ಮಾಡಿ ಮನುಷ್ಯನು ನಿತ್ಯವೂ ಪವಿತ್ರನಾಗುತ್ತಾನೆ?
ನಾರದಃ
ದೇವರ್ಷಿಪಿತೃತೀರ್ಥಾನಿ ಬ್ರಾಹ್ಮಂ ಮಧ್ಯೇಽಥ ವೈಷ್ಣವಮ್ |
ನೃಣಾಂ ತೀರ್ಥಾನಿ ಪಂಚಾಹುಃ ಪಾಣೌ ಸನ್ನಿಹಿತಾನಿ ವೈ ॥25॥
ನಾರದರು ದೇವತೀರ್ಥ, ಋಷಿತೀರ್ಥ, ಪಿತೃತೀರ್ಥ, ಬ್ರಹ್ಮತೀರ್ಥ ಮತ್ತು ವಿಷ್ಣುತೀರ್ಥ - ಈ ಐದು ತೀರ್ಥಗಳು ಪುರುಷನ ಹಸ್ತದಲ್ಲಿ ಸನ್ನಿಹಿತವಾಗಿರುತ್ತವೆ ಎಂದು ಜ್ಞಾನಿಗಳು ಹೇಳುತ್ತಾರೆ.
ಆದ್ಯತೀರ್ಥಂ ತು ತೀರ್ಥಾನಾಂ ವೈಷ್ಣವೋ ಭಾಗ ಉಚ್ಯತೇ |
ಯತ್ರೋಪಸ್ಪೃಶ್ಯ ವರ್ಣಾನಾಂ ಚತುರ್ಣಾಂ ವರ್ಧತೇ ಕುಲಮ್ |
ಪಿತೃದೈವತಕಾರ್ಯಾಣಿ ವರ್ಧಂತೇ ಪ್ರೇತ್ಯ ಚೇಹ ಚ ॥26॥
ಅವುಗಳಲ್ಲಿ ಶ್ರೇಷ್ಠವಾದ ತೀರ್ಥವೆಂದರೆ ಹಸ್ತಮಧ್ಯದಲ್ಲಿರುವ ವಿಷ್ಣುತೀರ್ಥ. ಅಲ್ಲಿ ಸ್ಪರ್ಶವನ್ನು ಮಾಡಿದರೆ ನಾಲ್ಕು ವರ್ಣದವರಿಗೂ ಕುಲವೃದ್ಧಿಯಾಗುತ್ತದೆ. ದೇವ-ಪಿತೃಕಾರ್ಯಗಳು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅಭಿವೃದ್ಧಿಯನ್ನು ಹೊಂದುತ್ತವೆ.
ಮಾರ್ಕಂಡೇಯಃ
ನರಾಣಾಂ ಕಾಮವೃತ್ತಾನಾಂ ಯಾ ನಾರ್ಯೋ ನಿರವಗ್ರಹಾಃ |
ಯಾಸಾಮಭಿಗ್ರಹೋ ನಾಸ್ತಿ ತಾ ಮೇ ಕಥಯ ನಾರದ ॥27॥
ಮಾರ್ಕಂಡೇಯ ಕಾಮಾಸಕ್ತರಾದ ಪುರುಷರು ಯಾವ ನಾರಿಯರ ಬಳಿಗೆ ಹೋದರೆ ನಿರ್ಬಂಧವಿಲ್ಲ? ಹಾಗೆಯೇ ಯಾವ ಸ್ತ್ರೀಯರಿಗೆ ಪುರುಷರ ಬಳಿಗೆ ಹೋದರೆ ನಿರ್ಬಂಧವಿಲ್ಲವೆಂದು ತಿಳಿಸಿ.
ನಾರದಃ
ವಾಗುರ್ವೇಶ್ಯಾ ನಟೀ ಗೋಪೀ ತಾಂತುಕೀ ತುನ್ನವಾಯಿಕೀ |
ನಾರೀ ಕಿರಾತೀ ಶಬರೀ ನರ್ತಕೀ ಚಾನವಗ್ರಹಾ ॥28॥
ನಾರದರು ವ್ಯಭಿಚಾರಿಣಿ, ಸ್ವತಂತ್ರಳಾದವಳು, ಗೋಪಾಲಕಿ, ನೇಯ್ಗೆಯವಳು, ಜಿಪ್ಪಿಗರವಳು, ಕಿರಾತ, ಶಬರ ಮೊದಲಾದ

ಮ್ಲೇಚ್ಛಜಾತಿಗೆ ಸೇರಿದವಳು, ನರ್ತಕಿಯಾದವಳು- ಇವರ ಬಳಿ ಹೋಗಲು ನಿರ್ಬಂಧವಿಲ್ಲ.
ಮಾರ್ಕಂಡೇಯಃ
ಏತಾಸು ಜಾತಾ ನಾರೀಷು ಸರ್ವವರ್ಣೇಷು ಯೇ ಸುತಾಃ |
ತೇಷು ಕೇ ಬಂಧುದಾಯಾದಾ ಭವಂತಿ ಋಷಿಸತ್ತಮ ॥29॥
ಮಾರ್ಕಂಡೇಯ ಎಲೈ ಋಷಿಶ್ರೇಷ್ಠರೇ, ಇಂತಹ ಸ್ತ್ರೀಯರಲ್ಲಿ ನಾಲ್ಕು ವರ್ಣದವರಿಗೆ ಜನಿಸಿದ ಪುತ್ರರು ಯಾರಿಗೆ ಬಂಧು-ದಾಯಾದಿಗಳಾಗುತ್ತಾರೆ? (ಪುತ್ರರಾಗುತ್ತಾರೆ)
ನಾರದಃ
ಯ ಏತಾಃ ಪರಿಗೃಹ್ಣಂತಿ ತೇಷಾಮೇವ ಹಿ ತೇ ಸುತಾಃ |
ಸರ್ವತ್ರ ತು ಪ್ರವೃತ್ತಾಸು ಬೀಜಂ ನಶ್ಯತಿ ದೇಹಿನಾಮ್ ॥30॥
ನಾರದರು ಯಾವ ಪುರುಷರು ಅಂತಹ ಸ್ತ್ರೀಯರನ್ನು ಸ್ವೀಕರಿಸುತ್ತಾರೆಯೋ ಅವರಿಗೇ ಅವರು ಪುತ್ರರಾಗುತ್ತಾರೆ. ಪುರುಷರು ಮನಸ್ಸಿಗೆ ಬಂದಂತೆ ಎಲ್ಲ ಪುರುಷರ ಜೊತೆಯಲ್ಲೂ ಸಂಬಂಧವನ್ನು ಮಾಡುವ ಸ್ತ್ರೀ ಬಳಿಗೆ ಹೋದರೆ ಅವನ ಬೀಜವು ನಾಶವನ್ನು ಹೊಂದುತ್ತದೆ.
ಮಾರ್ಕಂಡೇಯಃ
ಸರ್ವಸ್ತ್ರೀಷು ಪ್ರವೃತ್ತಾಸ್ತು ಸಾಧುವೇದವಿವರ್ಜಿತಾಃ |
ಮಾನವಾಃ ಕಾಂಡಪೃಷ್ಠಾಶ್ಚ ವೇದಮಂತ್ರಬಹಿಷ್ಕೃತಾಃ |
ನಿಯುಕ್ತಾ ಹವ್ಯಕವ್ಯೇಷು ತೇಷಾಂ ದತ್ತಂ ಕಥಂ ಭವೇತ್ ॥31॥
ಮಾರ್ಕಂಡೇಯ ಸರ್ವಸ್ತ್ರೀಯರಲ್ಲಿ ಪ್ರವೃತ್ತರಾಗುವವರು, ವೇದಬಾಹಿರರಾದವರು, ಆಯುಧಧಾರಿಗಳಾಗಿ ವೇದಮಂತ್ರಗಳಿಂದ ಬಹಿಷ್ಕೃತರಾದವರು ಹವ್ಯ-ಕವ್ಯಗಳಲ್ಲಿ ಆಹ್ವಾನಿಸಲ್ಪಟ್ಟರೆ ಅವರಿಗೆ ದಾನ ಮಾಡಲ್ಪಟ್ಟುದು ಏನಾಗುತ್ತದೆ?
ನಾರದಃ
ನಾರ್ಹಂತಿ ಹವ್ಯಕವ್ಯಾನಿ ಸಾವಿತ್ರೀವರ್ಜಿತಾ ದ್ವಿಜಾಃ |
ವ್ರಾತ್ಯೇಷ್ವನ್ನಪ್ರದಾನಂ ತದ್ ಯಥಾ ಶೂದ್ರೇಷು ವೈ ತಥಾ ॥32॥
ನಾರದರು ಗಾಯತ್ರೀಮಂತ್ರವನ್ನು ಜಪ ಮಾಡದ ದ್ವಿಜರು ಹವ್ಯ-ಕವ್ಯಗಳಿಗೆ ಅರ್ಹರಾಗುವುದಿಲ್ಲ. ವ್ರತಹೀನರಲ್ಲಿ ನೀಡಿದ ಅನ್ನವು ಶೂದ್ರರಿಗೆ ನೀಡಿದ ಅನ್ನದಂತೆ ಹವ್ಯ-ಕವ್ಯಗಳಲ್ಲಿ ವ್ಯರ್ಥವಾಗುತ್ತದೆ.
ಮಾರ್ಕಂಡೇಯಃ
ಧರ್ಮೇಷ್ವಧಿಕೃತಾನಾಂ ತು ನರಾಣಾಂ ಮುಹ್ಯತೇ ಮನಃ |
ಕಥಂ ನ ವಿಘ್ನೋ ಭವತಿ ಏತದಿಚ್ಛಾಮಿ ವೇದಿತುಮ್ ॥33॥
ಮಾರ್ಕಂಡೇಯ ಧರ್ಮಗಳನ್ನು ಆಚರಿಸಲು ಹೊರಟ ಮನುಷ್ಯರ ಮನಸ್ಸಿನಲ್ಲಿ ಧರ್ಮಾಚರಣೆಗೆ ಹೇಗೆ ವಿಘ್ನವು ಬರದೇ ಇದ್ದೀತು ಎಂಬ ಶಂಕೆ ಉಂಟಾಗುತ್ತದೆ. ನಾನು ಅದನ್ನು ತಿಳಿಯಲು ಬಯಸುತ್ತೇನೆ.
ನಾರದಃ
ಅರ್ಥಾಶ್ಚ ನಾರ್ಯಶ್ಚ ಸಮಾನಮೇತತ್
ಶ್ರೇಯಾಂಸಿ ಪುಂಸಾಮಿಹ ಮೋಹಯಂತಿ |
ರತಿಪ್ರಮೋದಾತ್ ಪ್ರಮದಾ ಹರಂತಿ
ಭೋಗೈರ್ಧನಂ ಚಾಪ್ಯುಪಹಂತಿ ಧರ್ಮಾನ್ ॥34॥
ನಾರದರು ಧನ ಮತ್ತು ನಾರಿಯರು ಇಬ್ಬರೂ ಸಮಾನರು. ಅವರು ಪುರುಷರಿಗೆ ಶ್ರೇಯಸ್ಸನ್ನೂ, ಗೌರವವನ್ನೂ ಉಂಟುಮಾಡುವವರು. ರತಿಯನ್ನು ಕೊಟ್ಟು ನಾರಿಯರು ಪುರುಷರನ್ನು ಧರ್ಮದಿಂದ ದೂರವಿಡುತ್ತಾರೆ. ಧನವು ಭೋಗವನ್ನು ಕೊಟ್ಟು ಪುರುಷನನ್ನು ಧರ್ಮದಿಂದ ದೂರ ಎಳೆಯುತ್ತದೆ.
ಹವ್ಯಂ ಕವ್ಯಂ ಚ ಧರ್ಮಾತ್ಮಾ ಸರ್ವಂ ತಚ್ಛ್ರೋತ್ರಿಯೋಽರ್ಹತಿ |
ದತ್ತಂ ಹಿ ಶ್ರೋತ್ರಿಯೇ ಸಾಧೌ ಜ್ವಲಿತಾಗ್ನಾವಿವಾಹುತಿಃ ॥35॥
ಹವ್ಯ-ಕವ್ಯಗಳೆಲ್ಲದಕ್ಕೂ ಧರ್ಮಾತ್ಮನಾದ ಶ್ರೋತ್ರಿಯನೇ ಅರ್ಹನಾದವನು. ಸಜ್ಜನನಾದ ಶ್ರೋತ್ರಿಯನಲ್ಲಿ ಕೊಟ್ಟ ದಾನವು ಜ್ವಲಿಸುವ ಅಗ್ನಿಯಲ್ಲಿ ಕೊಟ್ಟ ಆಹುತಿಯಂತೆ.
ಮಾರ್ಕಂಡೇಯಃ
ಶ್ರೋತ್ರಿಯಾಣಾಂ ಕುಲೇ ಜಾತಾ ವೇದಾರ್ಥವಿದಿತಾತ್ಮನಾಮ್ |
ಹಿತ್ವಾ ಕಸ್ಮಾತ್ತ್ರಯೀಂ ವಿದ್ಯಾಂ ವಾರ್ತಾಂ ವೃತ್ತಿಮುಪಾಶ್ರಿತಾಃ ॥36॥
ಮಾರ್ಕಂಡೇಯ ವೇದಾರ್ಥವನ್ನು ತಿಳಿದ ಶ್ರೋತ್ರಿಯರ ಕುಲದಲ್ಲಿ ಜನಿಸಿದವರು ಏತಕ್ಕಾಗಿ ವೇದವಿದ್ಯೆಯ ಮಾರ್ಗವನ್ನು ಬಿಟ್ಟು ವ್ಯಾಪಾರಾದಿ ಜೀವನೋಪಾಯಗಳನ್ನು ಆಶ್ರಯಿಸುತ್ತಾರೆ?
ನಾರದಃ
ಚಾತುರ್ವರ್ಣ್ಯಂ ಪುರಾ ನ್ಯಸ್ತಂ ಸುವಿದ್ವತ್ಸು ದ್ವಿಜಾತಿಷು |
ತಸ್ಮಾದ್ ವರ್ಣೈಃ ಸಂವಿಭಜ್ಯಾ ವೃತ್ತಿಃ ಸಂಕರವರ್ಜಿತಾ ॥37॥
ನಾರದರು ಒಳ್ಳೆಯ ಜ್ಞಾನವನ್ನು ಹೊಂದಿದ ದ್ವಿಜಾತಿಗಳಲ್ಲಿ ಹಿಂದೆ ನಾಲ್ಕು ವರ್ಣಗಳೂ ಒಪ್ಪಿಸಲ್ಪಟ್ಟಿದ್ದವು. ಆದ್ದರಿಂದ ಆ ವರ್ಣದವರಲ್ಲಿ ಪರಸ್ಪರ ಸಾಂಕರ್ಯ ಉಂಟಾಗದಂತೆ ಜೀವನೋಪಾಯಗಳನ್ನು ವಿಭಾಗಿಸಬೇಕು.

ಯೇ ಚಾನ್ಯೇ ಶ್ರೋತ್ರಿಯಾ ಜಾತಾಃ ಸಂಸ್ಕೃತಾಃ ಪುತ್ರಗೃಧ್ನುಭಿಃ |
ಪೂರ್ವನಿರ್ವಾಣನಿವೃತ್ತಾಂ ಜಾತಾಂ ವೃತ್ತಿಮುಪಾಶ್ರಿತಾಃ ॥38॥
ಪುತ್ರರನ್ನು ಬಯಸುವ ಶ್ರೋತ್ರಿಯರಾದ ಪುರುಷರು ಪುತ್ರರನ್ನು ಪಡೆದು ಅವನಿಗೆ ಎಲ್ಲ ಸಂಸ್ಕಾರವನ್ನು ಮಾಡಿದರೆ ಆ ಪುತ್ರರು ತಮ್ಮ ಸಂಸ್ಕಾರಕ್ಕೆ ಅನುಗುಣವಾಗಿ ಪೂರ್ವಿಕರು ಅನುಸರಿಸಿದ ವೃತ್ತಿಯನ್ನೇ ಅನುಸರಿಸುತ್ತಾರೆ.
ಮಾರ್ಕಂಡೇಯಃ
ಅಸಂಸ್ಕೃತಾಃ ಶ್ರೋತ್ರಿಯಜಾಃ ಸಂಸ್ಕೃತಾ ಜ್ಞಾನಿಜಾಃ ಕಥಮ್ ॥39॥
ಮಾರ್ಕಂಡೇಯ ಅಸಂಸ್ಕೃತರಾದ ಶ್ರೋತ್ರಿಯ ಪುತ್ರರು ಸಂಸ್ಕಾರ ಹೊಂದಿದ ಜ್ಞಾನಿಗಳ ಪುತ್ರರು ಎಂದು ಹೇಗಾಗುತ್ತದೆ?
ನಾರದಃ
ಅಸಂಸ್ಕಾರೋ ವೈದಿಕಶ್ಚ ಸ ಮಾನ್ಯಃ ಶ್ರೋತ್ರಿಯಾತ್ಮಜಃ |
ಶುದ್ಧಾನ್ವಯಃ ಶ್ರೋತ್ರಿಯಸ್ತು ಸವಿದ್ವದ್ಭಿಃ ಸಮೋಽನ್ಯಥಾ ॥40॥
ಮಾರ್ಕಂಡೇಯ ಸಂಸ್ಕಾರವಿಲ್ಲದ, ವೈದಿಕನಾದ ಶ್ರೋತ್ರಿಯಪುತ್ರನು ಮಾನ್ಯನಾಗುತ್ತಾನೆ. ವಂಶಶುದ್ಧಿಯನ್ನು ಹೊಂದಿದ (ಸಂಸ್ಕಾರವನ್ನು ಹೊಂದಿದ) ಶ್ರೋತ್ರಿಯನು ಮಾತ್ರ ಎಲ್ಲ ವಿದ್ವಾಂಸರಿಗೂ ಸಮಾನನಾಗುತ್ತಾನೆ.
ಅನಧೀಯಾನಪುತ್ರಾಶ್ಚ ವೇದಸಂಸ್ಕಾರವರ್ಜಿತಾಃ |
ತಸ್ಮಾತ್ ತೇ ವೇದವಿಜ್ಞಾಽಪಿ ವಿಪ್ರಾಃ ಶ್ರುತಿನಿಕಾರಿಣಃ ॥41॥
ಅಧ್ಯಯನವನ್ನು ಮಾಡದೆ ಪುತ್ರರನ್ನು ಹೊಂದಿದವರು, ವೇದಸಂಸ್ಕಾರ ರಹಿತರಾದವರು, ಅಂತಹ ಬ್ರಾಹ್ಮಣರು ವೇದವನ್ನು ತಿಳಿದವರಾದರೂ ಅವರು ವೇದಕ್ಕೆ ಅಪಚಾರವನ್ನು ಮಾಡಿದವರು.
ಬ್ರಹ್ಮರಾಶೌ ಪುರಾ ಸೃಷ್ಟಾ ವೇದಸಂಸ್ಕಾರಸಂಸ್ಕೃತಾಃ |
ತಸ್ಮಾತ್ ತೇಷ್ವೇವ ತೇ ಜಾತಾಃ ಸಾಧವಃ ಕುಲಧಾರಿಣಃ ॥42॥
ಹಿಂದೆ ವೇದಸಂಸ್ಕಾರದಿಂದ ಕೂಡಿದವರು ಬ್ರಾಹ್ಮಣಸಮೂಹದಲ್ಲಿದ್ದರು. ಆದ್ದರಿಂದ ಅಂತಹವರಿಂದ ಜನಿಸಿದ ಸಜ್ಜನರು ವೇದಾಧಿಕಾರಿಗಳೂ, ಕುಲಪ್ರವರ್ತಕರೂ ಆಗುವರು.
ಮಾರ್ಕಂಡೇಯಃ
ಸ್ವಯಂ ಕ್ರೀತಾಸು ಪ್ರೇಷ್ಯಾಸು ಪ್ರಸೂಯಂತೇ ತು ಯೇ ನರಾಃ |
ಕಸ್ಯ ನಾರ್ಯಃ ಸುತಾಶ್ಚೈವ ಭವಂತಿ ಋಷಿಸತ್ತಮ ॥43॥
ಮಾರ್ಕಂಡೇಯ ತಾನೇ ಕ್ರಯಕ್ಕೆ ಪಡೆದವಳಲ್ಲಿ ಅಥವಾ ದಾಸಿಯಲ್ಲಿ ಪುರುಷರು ಮಕ್ಕಳನ್ನು ಪಡೆಯುತ್ತಾರೆ. ಎಲೈ ಋಷಿಶ್ರೇಷ್ಠರೇ, ಅಂತಹ ನಾರಿಯರು ಮತ್ತು ಪುತ್ರರು ಯಾರಿಗೆ ಸೇರುತ್ತಾರೆ?
ನಾರದಃ
ಸ್ವದಾಸ್ಯಾಂ ಯೋ ನರೋ ಮೋಹಾತ್ ಪ್ರಸೂಯೇತ ಸ ಪಾಪಕೃತ್ |
ಇಹಾಪಿ ನಿಂದಿತಃ ಪ್ರೇತ್ಯ ಅಪತ್ಯಂ ಪ್ರೇಷ್ಯತಾಂ ನಯೇತ್ ॥44॥
ನಾರದರು ತನ್ನ ದಾಸಿಯಲ್ಲಿ ಯಾವನು ಪುತ್ರೋತ್ಪತ್ತಿಯನ್ನು ಮಾಡುವನೋ ಅವನು ಪಾಪವನ್ನು ಆಚರಿಸುತ್ತಾನೆ. ಅವನು ಇಲ್ಲಿ ನಿಂದಿತನಾಗುತ್ತಾನೆ ಮತ್ತು ಮರಣವನ್ನು ಹೊಂದಿದ ಮೇಲೆ ತನ್ನ ಪುತ್ರನನ್ನೂ ದಾಸನನ್ನಾಗಿಯೇ ಮಾಡುತ್ತಾನೆ.
ಸಾ ತಸ್ಯ ಭಾರ್ಯಾ ಪುತ್ರಾ ಯೇ ಹವ್ಯಕವ್ಯಪ್ರದಾಸ್ತು ತೇ |
ತಸ್ಯಾ ಯೇ ಬಾಂಧವಾಃ ಕೇಚಿದ್ವಿಷಕ್ತಾಃ ಪ್ರೇಷ್ಯತಾಂ ಗತಾಃ |
ಸರ್ವೇ ತಸ್ಯಾಸ್ತು ಸಂಬಂಧಾ ಮುಚ್ಯಂತೇ ಪ್ರೇಷ್ಯಕರ್ಮಸು ॥45॥
ಅವನ ಭಾರ್ಯೆ, ಹವ್ಯ-ಕವ್ಯಗಳನ್ನು ಕೊಡುವ ಅವನ ಪುತ್ರರು, ಅವನ ಬಾಂಧವರು ಮತ್ತು ಅವನಲ್ಲಿ ಆಸಕ್ತರಾದ ಎಲ್ಲರೂ ದಾಸರಾಗುತ್ತಾರೆ. ಅವನ ಸಂಬಂಧಿಕರೆಲ್ಲರೂ ದಾಸಕರ್ಮಗಳಲ್ಲಿಯೇ ನಿಯೋಗಿಸಲ್ಪಡುತ್ತಾರೆ.
ಏತತ್ ತೇ ಕಥಿತಂ ಸರ್ವಂ ಯದಭಿವ್ಯಾಹೃತಂ ತ್ವಯಾ |
ಅಥವಾ ಸಂಶಯಃ ಕಶ್ಚಿದ್ ಭೂಯಃ ಸಂಪ್ರಷ್ಟುಮರ್ಹಸಿ ॥46॥
ನೀನು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿದ್ದೇನೆ. ಇನ್ನೂ ಏನಾದರೂ ಸಂಶಯವಿದ್ದರೆ ಪ್ರಶ್ನೆಯನ್ನು ಮಾಡಬಹುದು.
ಮಾರ್ಕಂಡೇಯಃ
ಅಮಿಥ್ಯಾದರ್ಶನೋ ಲೋಕೇ ನಾರದಃ ಸರ್ವಕೋವಿದಃ |
ಪ್ರತ್ಯಕ್ಷದರ್ಶೀ ಲೋಕಾನಾಂ ಸ್ವಯಂಭೂರಿವ ಸತ್ತಮಃ ॥47॥
ಮಾರ್ಕಂಡೇಯ ಲೋಕದಲ್ಲಿ ನಾರದರು ಭ್ರಾಂತಿ ಇಲ್ಲದವರು ಮತ್ತು ಸರ್ವವನ್ನೂ ತಿಳಿದವರು. ಲೋಕಗಳಲ್ಲಿ ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದವರು. ಬ್ರಹ್ಮದೇವರಂತೆ ಅತ್ಯಂತ ಶ್ರೇಷ್ಠರಾದವರು.
ಭೀಷ್ಮಃ
ಇತಿ ಸಂಭಾಷ್ಯ ಋಷಿಭಿರ್ಮಾರ್ಕಂಡೇಯೋ ಮಹಾತಪಾಃ |
ನಾರದಂ ಚಾಪಿ ಸತ್ಕೃತ್ಯ ತೇನ ಚೈವಾಭಿಸತ್ಕೃತಃ |
ಆಮಂತ್ರಯಿತ್ವಾ ಋಷಿಭಿಃ ಪ್ರಯಯಾವಾಶ್ರಮಂ ಮುನಿಃ ॥48॥
ಋಷಯಶ್ಚಾಪಿ ತೀರ್ಥಾನಾಂ ಪರಿಚರ್ಯಾಂ ಪ್ರಚಕ್ರಮುಃ ॥49॥
ಭೀಷ್ಮ ಹೀಗೆ ಋಷಿಗಳ ಜೊತೆಯಲ್ಲಿ ಮಹಾತಪಸ್ವಿಗಳಾದ ಮಾರ್ಕಂಡೇಯರು ನಾರದರ ಜೊತೆಯಲ್ಲಿ ಮಾತನಾಡಿ, ಅವರನ್ನು ಸತ್ಕರಿಸಿ, ಅವರಿಂದ ಸತ್ಕರಿಸಲ್ಪಟ್ಟು, ಅವರ ಅನುಮತಿಯನ್ನು ಪಡೆದು ಋಷಿಗಳ ಜೊತೆಯಲ್ಲಿ ತಮ್ಮ ಆಶ್ರಮಕ್ಕೆ ತೆರಳಿದರು.

ಋಷಿಗಳೂ ಸಹ ತಮ್ಮ ತೀರ್ಥಯಾತ್ರೆಯನ್ನು ಮುಂದುವರಿಸಿದರು.
ಸುಕ್ಷೇತ್ರಬೀಜಸಂಸ್ಕಾರವಿಶುದ್ಧೋ ಬ್ರಹ್ಮಚರ್ಯಯಾ |
ನಿತ್ಯನೈಮಿತ್ತಿಕಾತ್ ಸ್ನಾತೋ ಮನಃಶುದ್ಧ್ಯಾ ಚ ಶುದ್ಧ್ಯತಿ ॥50॥
ಒಳ್ಳೆಯ ಕ್ಷೇತ್ರ, ಒಳ್ಳೆಯ ಬೀಜ ಮತ್ತು ಒಳ್ಳೆಯ ಸಂಸ್ಕಾರದಿಂದಲೂ ಮತ್ತು ಬ್ರಹ್ಮಚರ್ಯದಿಂದಲೂ, ನಿತ್ಯನೈಮಿತ್ತಿಕ ಕರ್ಮಾಚರಣೆಗಳಿಂದಲೂ, ಸ್ನಾನದಿಂದಲೂ, ಮನಶ್ಶುದ್ಧಿಯಿಂದಲೂ ಪುರುಷನು ಶುದ್ಧನಾಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ
ದಾನಧರ್ಮೇನಾರದ-ಮಾರ್ಕಂಡೇಯಸಂವಾದೋ
ನಾಮ ದ್ವಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಐವತ್ಮೂರನೆಯ ಅಧ್ಯಾಯ
ದಾನಗಳಲ್ಲಿ ಪಾತ್ರಪರೀಕ್ಷೆ
ಯುಧಿಷ್ಠಿರಃ
ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಮ್ |
ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವಾಪ್ಯಲಿಂಗಿನಮ್ ॥1॥
ಯುಧಿಷ್ಠಿರ ಎಲೈ ಭರತಶ್ರೇಷನೇ, ವೇದಸಮ್ಮತನಾದ ಪಾತ್ರವು ಯಾವುದೆಂದು ಬ್ರಾಹ್ಮಣರು ಹೇಳುತ್ತಾರೆ? ಆಶ್ರಮ ಚಿಹ್ನೆಯನ್ನು ಧರಿಸಿದ ಬ್ರಹ್ಮಚಾರಿ, ಗೃಹಸ್ಥರೋ? ಅಥವಾ ಆಶ್ರಮ ಚಿಹ್ನೆಯನ್ನು ಧರಿಸದ ಸಂನ್ಯಾಸಿ ಬ್ರಾಹ್ಮಣನೋ?
ಭೀಷ್ಮಃ
ಸ್ವವೃತ್ತಿಮಭಿಪನ್ನಾಯ ಲಿಂಗಿನೇ ವೇತರಾಯ ವಾ |
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥2॥
ಭೀಷ್ಮ ಎಲೈ ಮಹಾರಾಜನೇ, ತನಗೆ ಉಚಿತವಾದ ಧರ್ಮವನ್ನು ಆಚರಿಸುವ ಆಶ್ರಮ ಚಿಹ್ನೆಯನ್ನು ಧರಿಸಿದವನಿಗೆ ಅಥವಾ ಇತರರಿಗೆ ದಾನವನ್ನು ಕೊಡಬೇಕೆಂದು ಹೇಳುತ್ತಾರೆ. ಅವರಿಬ್ಬರೂ ತಪಸ್ವಿಗಳು.
ಯುಧಿಷ್ಠಿರಃ
ಶ್ರದ್ಧಯಾ ಪರಯಾ ಪೂತೋ ಯಃ ಪ್ರಯಚ್ಛೇದ್ ದ್ವಿಜಾತಯೇ |
ಹವ್ಯಂ ಕವ್ಯಂ ತಥಾ ದಾನಂ ಕೋ ದೋಷಃ ಸ್ಯಾತ್ ಪಿತಾಮಹ ॥3॥
ಯುಧಿಷ್ಠಿರ ಎಲೈ ಪಿತಾಮಹನೇ, ಬಹಳ ಶ್ರದ್ಧೆಯಿಂದ ಕೂಡಿದವನಾಗಿ (ಮತ್ತು ಬಹಳ ಆಚಾರವಿಲ್ಲದೆ) ಬ್ರಾಹ್ಮಣನಿಗೆ ಹವ್ಯಕವ್ಯವನ್ನು ಕೊಡುವವನಿಗೆ ಯಾವ ದೋಷ ಉಂಟಾಗುತ್ತದೆ?
ಭೀಷ್ಮಃ
ಶ್ರದ್ಧಾಪೂತೋ ನರಸ್ತಾತ ದುರ್ದಾಂತೋಽಪಿ ನ ಸಂಶಯಃ |
ಪೂತೋ ಭವತಿ ಸರ್ವತ್ರ ಕಿಂ ಪುನಸ್ತ್ವಂ ಮಹೀಪತೇ ॥4॥
ಭೀಷ್ಮ ಪ್ರೀತಿಪಾತ್ರನೇ, ಶ್ರದ್ಧೆಯಿಂದ ಪವಿತ್ರನಾದ ಮನುಷ್ಯನು ಒಳ್ಳೆಯ ಇಂದ್ರಿಯ ನಿಗ್ರಹವನ್ನು ಹೊಂದಿರದಿದ್ದರೂ ಅವನು ಅಂತಹ ದಾನದಿಂದ ಯಾವಾಗಲೂ ಪವಿತ್ರನಾಗುತ್ತಾನೆ. ಎಲೈ ರಾಜನೇ, ಇನ್ನು ನಿನ್ನ ವಿಷಯದಲ್ಲಿ ಹೇಳುವುದೇನು?
ಯುಧಿಷ್ಠಿರಃ
ನ ಬ್ರಾಹ್ಮಣಂ ಪರೀಕ್ಷೇತ ದೈವೇಷು ಸತತಂ ನರಃ |
ಕವ್ಯಪ್ರದಾನೇ ತು ಬುಧಾಃ ಪರೀಕ್ಷ್ಯಂ ಬ್ರಾಹ್ಮಣಂ ವಿದುಃ ॥5॥
ಯುಧಿಷ್ಠಿರ ಮನುಷ್ಯನು ದೈವಕಾರ್ಯಗಳಲ್ಲಿ ದಾನವನ್ನು ಮಾಡುವಾಗ ಬ್ರಾಹ್ಮಣನನ್ನು ಪರೀಕ್ಷೆ ಮಾಡಬಾರದು. ಕವ್ಯಪ್ರದಾನವನ್ನು ಮಾಡುವಾಗ ಬ್ರಾಹ್ಮಣನನ್ನು ಪರೀಕ್ಷೆ ಮಾಡಬೇಕೆಂದು ಜ್ಞಾನಿಗಳು ಹೇಳುತ್ತಾರೆ.
ಭೀಷ್ಮಃ
ನ ಬ್ರಾಹ್ಮಣಃ ಸಾಧಯತೇ ಹವ್ಯಂ ದೈವಾತ್ ಪ್ರಸಿಧ್ಯತಿ |
ದೇವಪ್ರಸಾದಾದಿಜ್ಯಂತೇ ಯಜಮಾನಾ ನ ಸಂಶಯಃ ॥6॥
ಭೀಷ್ಮ ಅದು ನಿಜ. ದೇವತೆಗಳಿಗೆ ಕೊಡುವ ಹವ್ಯವು ದೇವತೆಗಳಿಂದಲೇ ಸಿದ್ಧಿಸುತ್ತದೆ. ಅದನ್ನು ಬ್ರಾಹ್ಮಣನು ಸಾಧಿಸುವುದಿಲ್ಲ. ಯಜಮಾನರು ದೇವತಾನುಗ್ರಹದಿಂದಲೇ ಯಾಗವನ್ನು ಮಾಡುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಬ್ರಾಹ್ಮಣಾ ಭರತಶ್ರೇಷ್ಠ ಸತತಂ ಬ್ರಹ್ಮವಾದಿನಃ |
ಮಾರ್ಕಂಡೇಯಃ ಪುರಾ ಪ್ರಾಹ ಇಹ ಲೋಕೇಷು ಬುದ್ಧಿಮಾನ್ ॥7॥
ಎಲೈ ಭರತಶ್ರೇಷ್ಠನೇ, ಮೇಧಾವಿಗಳಾದ ಮಾರ್ಕಂಡೇಯರು ಹಿಂದೆ ಈ ಲೋಕದಲ್ಲಿ ಬ್ರಾಹ್ಮಣರು ಯಾವಾಗಲೂ ಬ್ರಹ್ಮವಾದಿಗಳಾಗಿರುತ್ತಾರೆ ಎಂದು ಹೇಳಿದ್ದಾರೆ.
ಯುಧಿಷ್ಠಿರಃ
ಅಪೂರ್ವೋಽಪ್ಯಥ ವಾ ವಿದ್ವಾನ್ ಸಂಬಂಧೀ ವಾಽಥ ಯೋ ಭವೇತ್ |
ತಪಸ್ವೀ ಯಜ್ಞಶೀಲೋ ವಾ ಕಥಂ ಪಾತ್ರಂ ಭವೇತ್ತು ಸಃ ॥8॥
ಯುಧಿಷ್ಠಿರ ಅಪರಿಚಿತನಾದ ವಿದ್ವಾಂಸ ಅಥವಾ ತಪಸ್ವಿಯೂ, ಯಜ್ಞಶೀಲನೂ ಆದ ಸಂಬಂಧಿ ಇವರಲ್ಲಿ ಯಾರು ಒಳ್ಳೆಯ

ಪಾತ್ರರಾಗುತ್ತಾರೆ.
ಭೀಷ್ಮ
ಕುಲೀನಃ ಕರ್ಮಕೃದ್ ವೈದ್ಯಸ್ತಥಾ ಚಾಪ್ಯಾನೃಶಂಸ್ಯವಾನ್ |
ಹ್ರೀಮಾನೃಜುಃ ಸತ್ಯವಾದೀ ಪಾತ್ರಂ ಪೂರ್ವೇ ಚ ತೇ ತ್ರಯಃ ॥9॥
ಭೀಷ್ಮ ಸತ್ಕುಲಪ್ರಸೂತನಾಗಿ, ವೇದಜ್ಞಾನವನ್ನು ಹೊಂದಿ, ಸದ್ಧರ್ಮಾಚರಣೆಯನ್ನು ಮಾಡುವವನು, ದಯಾಪರನಾದವನು, ಆರ್ಜವವನ್ನೂ ನಾಚಿಕೆಯನ್ನೂ ಹೊಂದಿ ಸತ್ಯವನ್ನು ನುಡಿಯುವವನು-ಈ ಮೂವರು ಪಾತ್ರರೆನಿಸುವರು.
ತತ್ರೇದಂ ಶೃಣು ಮೇ ಪಾರ್ಥ ಚತುರ್ಣಾಂ ತೇಜಸಾಂ ಮತಮ್ |
ಪೃಥಿವ್ಯಾಃ ಕಾಶ್ಯಪಸ್ಯಾಗ್ನೇರ್ಮಾಕಂಡೇಯಸ್ಯ ಚೈವ ಹಿ ॥10॥
ಎಲೈ ಪಾರ್ಥನೇ, ಆ ವಿಷಯದಲ್ಲಿ ತೇಜಸ್ವಿಗಳಾದ ಪೃಥಿವೀ, ಕಾಶ್ಯಪರು, ಅಗ್ನಿ ಮತ್ತು ಮಾರ್ಕಂಡೇಯರಿಗೆ ಸಮ್ಮತವಾದ ಅಭಿಪ್ರಾಯವನ್ನು ಕೇಳು.
ಪೃಥಿವೀ
ಯಥಾ ಮಹಾರ್ಣವೇ ಕ್ಷಿಪ್ತಃ ಕ್ಷಿಪ್ರಂ ನೇಷ್ಟುಃ ವಿನಶ್ಯತಿ |
ತಥಾ ದುಶ್ಚರಿತಂ ಸರ್ವಂ ತ್ರಯ್ಯಾವೃತ್ತ್ಯಾ ವಿನಶ್ಯತಿ ॥11॥
ಪೃಥಿವೀ ಹೇಗೆ ದೊಡ್ಡ ಸಮುದ್ರಕ್ಕೆ ಎಸೆದ ಮಣ್ಣಿನ ಹೆಂಟೆಯು ಶೀಘ್ರವಾಗಿ ನಾಶವನ್ನು ಹೊಂದುತ್ತದೆಯೋ ಅದರಂತೆ ವೇದವನ್ನು ಆವೃತ್ತಿಯನ್ನು ಮಾಡುವುದರಿಂದ ಮಾಡಿದ ದುಷ್ಕರ್ಮವೆಲ್ಲವೂ ನಾಶವನ್ನು ಹೊಂದುತ್ತದೆ.
ಕಾಶ್ಯಪಃ
ಸರ್ವೇ ಚ ವೇದಾಃ ಸಹ ಷಡ್‌ಭಿರಂಗೈಃ
ಸಾಂಖ್ಯಂ ಪುರಾಣಂ ಚ ಕುಲೇ ಚ ಜನ್ಮ |
ನೈತಾನಿ ಸರ್ವಾಣಿ ಗತಿರ್ಭವಂತಿ
ಶೀಲವ್ಯಪೇತಸ್ಯ ನೃಪ ದ್ವಿಜಸ್ಯ ॥12॥
ಕಾಶ್ಯಪರು ಎಲೈ ರಾಜನೇ, ಶೀಲರಹಿತನಾದ ದ್ವಿಜನಿಗೆ ಷಡಂಗ ಸಹಿತವಾದ ಎಲ್ಲ ವೇದಗಳೂ, ಸಾಂಖ್ಯಶಾಸ್ತ್ರ, ಮತ್ತು ಪುರಾಣಗಳೂ, ಸತ್ಕುಲದಲ್ಲಿ ಜನ್ಮವೂ ಇವೆಲ್ಲವೂ ಸೇರಿದರೂ ಸದ್ಗತಿಯನ್ನು ಉಂಟುಮಾಡುವುದಿಲ್ಲ.
ಅಗ್ನಿಃ
ಅಧೀಯಾನಃ ಪಂಡಿತಮ್ಮನ್ಯಮಾನೋ
ಯೋ ವಿದ್ಯಯಾ ಹಂತಿ ಯಶಃ ಪರೇಷಾಮ್ |
ಬ್ರಹ್ಮನ್ ಸ ತೇನಾಚರತೇ ಬ್ರಹ್ಮವಧ್ಯಾಂ
ಲೋಕಾಸ್ತಸ್ಯ ಹ್ಯಂತವಂತೋ ಭವಂತಿ ॥13॥
ಅಗ್ನಿ ವೇದಾಧ್ಯಯನ ಮಾಡುತ್ತಾ ತನ್ನನ್ನು ಪಂಡಿತನೆಂದು ತಿಳಿದು, ಯಾವನು ತನ್ನ ವಿದ್ಯೆಯಿಂದ ಇನ್ನೊಬ್ಬರ ಕೀರ್ತಿಯನ್ನು ಹಾನಿಗೊಳಿಸುತ್ತಾನೆಯೋ ಅವನು ಬ್ರಹ್ಮಹತ್ಯಾ ದೋಷವನ್ನು ಸಂಪಾದಿಸುತ್ತಾನೆ. ಅವನು ಪಡೆದ ಲೋಕಗಳು ಕ್ಷಿಪ್ರವಾಗಿ ನಾಶವನ್ನು ಹೊಂದುತ್ತವೆ.
ಮಾರ್ಕಂಡೇಯಃ
ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ |
ನಾಭಿಜಾನಾಮಿ ಯಜ್ಞಂ ತು ಸತ್ಯಸ್ಯಾರ್ಧಮವಾಪ್ನುಯಾತ್ ॥14॥
ಮಾರ್ಕಂಡೇಯ ಸಹಸ್ರ ಅಶ್ವಮೇಧಗಳು ಮತ್ತು ಸತ್ಯವಚನ ಎರಡನ್ನೂ ತಕ್ಕಡಿಯಲ್ಲಿಟ್ಟು ತೂಗಿದರೆ ಸಹಸ್ರ ಅಶ್ವಮೇಧಗಳು ಸತ್ಯದ ಅರ್ಧಭಾಗಕ್ಕಾದರೂ ಬರುತ್ತವೆಯೋ ಎಂದು ನಾನು ತಿಳಿಯಲಾರೆ.
ಭೀಷ್ಮ
ಇತ್ಯುಕ್ತ್ವಾ ತೇ ಜಗ್ಮುರಾಶು ಚತ್ವಾರೋಽಮಿತತೇಜಸಃ |
ಪೃಥಿವೀ ಕಾಶ್ಯಪೋಽಗ್ನಿಶ್ಚ ಪ್ರಕೃಷ್ಟಾಯುಶ್ಚ ಭಾರ್ಗವಃ ॥15॥
ಭೀಷ್ಮ ಹೀಗೆ ಹೇಳಿ ಅಮಿತ ತೇಜಸ್ವಿಗಳಾದ ಪೃಥಿವೀ, ಕಾಶ್ಯಪ, ಅಗ್ನಿ ಮತ್ತು ಭಾರ್ಗವರಾದ ಮಾರ್ಕಂಡೇಯರು ನಾಲ್ವರೂ ಶೀಘ್ರವಾಗಿ ಹೊರಟು ಹೋದರು.
ಯುಧಿಷ್ಠಿರಃ
ಯದಿ ತೇ ಬ್ರಾಹ್ಮಣಾ ಲೋಕೇ ವ್ರತಿನೋ ಭುಂಜತೇ ಹವಿಃ |
ದತ್ತಂ ಬ್ರಾಹ್ಮಣಕಾಮಾಯ ಕಥಂ ತತ್ ಸುಕೃತಂ ಭವೇತ್ ॥16॥
ಯುಧಿಷ್ಠಿರ ವ್ರತವನ್ನು ಧರಿಸಿದ ಬ್ರಾಹ್ಮಣರು ಬ್ರಾಹ್ಮಣರಿಗೇ ಭೋಜನವನ್ನು ಕೊಡಬೇಕೆಂಬ ನಿಯಮವಿರುವವನಿಂದ ಒತ್ತಾಯದಿಂದ ಕೊಡಲ್ಪಟ್ಟ ಹವ್ಯ ರೂಪವಾದ ಭೋಜನವನ್ನು ಸ್ವೀಕರಿಸಿದರೆ ಅದು ಹೇಗೆ ಒಳ್ಳೆಯದಾಗುತ್ತದೆ?
ಭೀಷ್ಮ
ಆದಿಷ್ಟಿನೋ ಯೇ ರಾಜೇಂದ್ರ ಬ್ರಾಹ್ಮಣಾ ವೇದಪಾರಗಾಃ |
ಭುಂಜತೇ ಬ್ರಹ್ಮಕಾಮಾಯ ವ್ರತುಲುಪ್ತಾ ಭವಂತಿ ತೇ ॥17॥
ಭೀಷ್ಮ ಎಲೈ ರಾಜೇಂದ್ರನೇ, ವೇದಪಾರಂಗತರಾದ ಬ್ರಾಹ್ಮಣರು ಇನ್ನೊಬ್ಬ ಬ್ರಾಹ್ಮಣನ ಉದ್ದೇಶಕ್ಕೆ ಅನುಗುಣವಾಗಿ ಅವನಿಂದ ಒತ್ತಾಯ ಪಡಿಸಲ್ಪಟ್ಟು ಭುಂಜಿಸಿದರೂ ಸಹ ಅವರ ವ್ರತಕ್ಕೆ ಲೋಪವುಂಟಾಗುತ್ತದೆ.

ಯುಧಿಷ್ಠಿರಃ
ಅನೇಕಾಂತಂ ಬಹುದ್ವಾರಂ ಧರ್ಮಮಾಹುರ್ಮನೀಷಿಣಃ |
ಕಿಂ ನಿಶ್ಚಿತಂ ಭವೇತ್ತತ್ರ ತನ್ಮೇ ಬ್ರೂಹಿ ಪಿತಾಮಹ ||18||
ಯುಧಿಷ್ಠಿರ ಎಲೈ ಪಿತಾಮಹನೇ, ವಿವೇಕಿಗಳು ಧರ್ಮಕ್ಕೆ ಅನೇಕ ಮಾರ್ಗಗಳಿವೆ ಎಂದು ಹೇಳುತ್ತಾರೆ. ಅವುಗಳಲ್ಲಿ ಯಾವುದು ನಿಶ್ಚಿತವಾಗಿದೆ ಎಂದು ನನಗೆ ಹೇಳಿ.
ಭೀಷ್ಮಃ
ಅಹಿಂಸಾ ಸತ್ಯಮಕ್ರೋಧ ಆನೃಶಂಸ್ಯಂ ದಮಸ್ತಥಾ |
ಆರ್ಜವಂ ಚೈವ ರಾಜೇಂದ್ರ ನಿಶ್ಚಿತಂ ಧರ್ಮಲಕ್ಷಣಮ್ ||19||
ಭೀಷ್ಮ ಎಲೈ ರಾಜೇಂದ್ರನೇ, ಅಹಿಂಸೆ, ಸತ್ಯ, ಅಕ್ರೋಧ, ದಯೆ, ಇಂದ್ರಿಯನಿಗ್ರಹ, ಆರ್ಜವ ಇವು ನಿಶ್ಚಿತವಾದ ಧರ್ಮದ ಲಕ್ಷಣಗಳು (ಧರ್ಮವನ್ನು ಸಂಪಾದಿಸುವ ಮಾರ್ಗಗಳು).
ಯೇ ತು ಧರ್ಮಂ ಪ್ರಶಂಸಂತಶ್ಚರಂತಿ ಪೃಥಿವೀಮಿಮಾಮ್ |
ಅನಾಚರಂತಸ್ತದ್ಧರ್ಮಂ ಸಂಕರೇ ನಿರತಾಃ ಪ್ರಭೋ ||20||
ಎಲೈ ಪ್ರಭುವೇ, ಯಾರು ಧರ್ಮವನ್ನು ಪ್ರಶಂಸೆ ಮಾಡುತ್ತಾ, ತಾವು ಅಧರ್ಮವನ್ನು ಆಚರಿಸುತ್ತಾ ಭೂಮಿಯಲ್ಲಿ ಸಂಚರಿಸುತ್ತಾರೆಯೋ ಅವರು ಧರ್ಮಸಂಕರಕಾರಕರು.
ತೇಭ್ಯೋ ರತ್ನಂ ಹಿರಣ್ಯಂ ವಾ ಗಾಮಶ್ವಾನ್ ವಾ ದದಾತಿ ಯಃ |
ದಶ ವರ್ಷಾಣಿ ವಿಷ್ಠಾಂ ಸ ಭುಂಕ್ತೇ ನಿರಯಮಾಶ್ರಿತಃ ||21||
ಯಾವನು ಅಂತಹವರಿಗೆ ರತ್ನವನ್ನಾಗಲೀ, ಹಿರಣ್ಯವನ್ನಾಗಲೀ, ಗೋವನ್ನಾಗಲೀ ಅಶ್ವವನ್ನಾಗಲೀ ದಾನ ಮಾಡುತ್ತಾನೆಯೋ ಅವನು ಹತ್ತು ವರ್ಷಗಳ ಕಾಲ ನೀಚ ಯೋನಿಯಲ್ಲಿ ಜನಿಸಿ ಅಮೇಧ್ಯವನ್ನು ಭುಂಜಿಸುತ್ತಾನೆ.
ಧನೇನ ಪುಲ್ಕಸಾನಾಂ ಚ ತಥೈವಾಂತಾವಸಾಯಿನಾಮ್ |
ಕೃತಂ ಕರ್ಮಾಕೃತಂ ಚಾಪಿ ರಾಗಮೋಹೇನ ಜಲ್ಪತಾಮ್ ||22||
ಧನದ ನಿಮಿತ್ತದಿಂದಾಗಿ ಪುಲ್ಕಸರಿಗೆ, ಚಂಡಾಲರಿಗೆ ಮತ್ತು ರಾಗ-ಮೋಹಗಳಿಂದ ಜಂಭದ ಮಾತುಗಳನ್ನು ಆಡಿದವರಿಗೆ ಮಾಡಿಸಿದ ಕರ್ಮವು ಮಾಡಿಸದಂತೆಯೇ ಸರಿ.
ವೈಶ್ವದೇವಂ ಚ ಯೇ ಮೂಢಾ ವಿಪ್ರಾಯ ಬ್ರಹ್ಮಚಾರಿಣೇ |
ದದತೀಹ ನ ರಾಜೇಂದ್ರ ತೇ ಲೋಕಾನ್ ಭುಂಜತೇಽಶುಭಾನ್ ||23||
ಎಲೈ ರಾಜೇಂದ್ರನೇ, ಯಾವ ಮೂಢರು ಬ್ರಹ್ಮನಿಷ್ಠರಾದ ಬ್ರಾಹ್ಮಣರಿಗೆ ವೈಶ್ವದೇವಾದಿ ಹವಿಸ್ಸುಗಳನ್ನು ಕೊಡುವುದಿಲ್ಲವೋ ಅವರು ಅಶುಭಲೋಕಗಳನ್ನು ಹೊಂದುತ್ತಾರೆ.
ಯುಧಿಷ್ಠಿರಃ
ಕಿಂ ಪರಂ ಬ್ರಹ್ಮಚರ್ಯಸ್ಯ ಕಿಂ ಪರಂ ಧರ್ಮಲಕ್ಷಣಮ್ |
ಕಿಂ ಚ ಶ್ರೇಷ್ಠತಮಂ ಶೌಚಂ ತನ್ಮೇ ಬ್ರೂಹಿ ಪಿತಾಮಹ ||24||
ಯುಧಿಷ್ಠಿರ ಬ್ರಹ್ಮಚರ್ಯದಲ್ಲಿ ಯಾವುದು ಶ್ರೇಷ್ಠವಾದುದು? ಶ್ರೇಷ್ಠವಾದ ಧರ್ಮಲಕ್ಷಣವೇನು? ಅತ್ಯಂತ ಶ್ರೇಷ್ಠವಾದ ಶೌಚ ಯಾವುದು? ಎಲೈ ಪಿತಾಮಹರೇ, ಅದನ್ನು ನನಗೆ ಹೇಳಿ.
ಭೀಷ್ಮಃ
ಬ್ರಹ್ಮಚರ್ಯಂ ಪರಂ ತಾತ ಮಧುಮಾಂಸಸ್ಯ ವರ್ಜನಮ್ |
ಮರ್ಯಾದಾಯಾಂ ಸ್ಥಿತೋ ಧರ್ಮಃ ಶಮಃ ಶೌಚಸ್ಯ ಲಕ್ಷಣಮ್||25||
ಭೀಷ್ಮ ಎಲೈ ಪ್ರೀತಿಪಾತ್ರನೇ, ಶ್ರೇಷ್ಠವಾದ ಬ್ರಹ್ಮಚರ್ಯವೆಂದರೆ ಮಧು- ಮಾಂಸಗಳನ್ನು ಪರಿತ್ಯಾಗ ಮಾಡುವುದು. ವಿಧಿಯ ಕಟ್ಟುಪಾಡಿನಲ್ಲಿರುವುದು ಧರ್ಮ. ಶಾಂತತೆಯು ಶೌಚದ (ಶುದ್ಧಿ) ಲಕ್ಷಣ.
ಯುಧಿಷ್ಠಿರಃ
ಕಸ್ಮಿನ್ಕಾಲೇ ಚರೇದ್ ಧರ್ಮಂ ಕಸ್ಮಿನ್ಕಾಲೇಽರ್ಥಮಾಚರೇತ್ |
ಕಸ್ಮಿನ್ಕಾಲೇ ಸುಖೀ ಚ ಸ್ಯಾತ್ತನ್ಮೇ ಬ್ರೂಹಿ ಪಿತಾಮಹ ||26||
ಯುಧಿಷ್ಠಿರ ಯಾವ ಕಾಲದಲ್ಲಿ ಧರ್ಮವನ್ನು ಆಚರಿಸಬೇಕು? ಯಾವ ಕಾಲದಲ್ಲಿ ಅರ್ಥಾರ್ಜನೆಯನ್ನು ಮಾಡಬೇಕು? ಯಾವ ಕಾಲದಲ್ಲಿ ಭೋಗವನ್ನು ಮಾಡಬೇಕು? ಎಲೈ ಪಿತಾಮಹರೇ, ಇದನ್ನು ನನಗೆ ಹೇಳಿ.
ಭೀಷ್ಮಃ
ಕಾಲ್ಯಮರ್ಥಂ ನಿಷೇವೇತ ತತೋ ಧರ್ಮಮನಂತರಮ್ |
ಪಶ್ಚಾತ್ ಕಾಮಂ ನಿಷೇವೇತ ನ ಚ ಗಚ್ಛೇತ್ ಪ್ರಸಂಗತಾಮ್ ||27||
ಭೀಷ್ಮ ಪ್ರಾತಃಕಾಲದಲ್ಲಿ ಮೊದಲು ಅರ್ಥವನ್ನು ಸೇವಿಸಬೇಕು. ಅನಂತರ ಧರ್ಮವನ್ನು ಆಚರಿಸಬೇಕು. ಅನಂತರ ಕಾಮವನ್ನು ಸೇವಿಸಬೇಕು. ಯಾವುದರಲ್ಲೂ ಹೆಚ್ಚು ಆಸಕ್ತನಾಗಬಾರದು.
ಬ್ರಾಹ್ಮಣಾಂಶ್ಚಾಭಿಮನ್ಯೇತ ಗುರೂಂಶ್ಚಾಪ್ಯಭಿಪೂಜಯೇತ್ |
ಸರ್ವಭೂತಾನುಲೋಮಶ್ಚ ಮೃದುಶೀಲಃ ಪ್ರಿಯಂವದಃ ||28||
ಬ್ರಾಹ್ಮಣರನ್ನು ಗೌರವಿಸಬೇಕು. ಗುರುಗಳನ್ನು ಪೂಜಿಸಬೇಕು. ಸರ್ವಪ್ರಾಣಿಗಳಲ್ಲಿ ಹಿತನಾಗಿರಬೇಕು. ಮೃದುವಾದ ನಡತೆಯನ್ನು ಹೊಂದಿ ಪ್ರಿಯವಾಗಿ ಮಾತನಾಡಬೇಕು.

ಅಧಿಕಾರೇ ಯದನೃತಂ ಯಚ್ಚ ರಾಜಸು ಪೈಶುನಮ್ |
ಗುರೋಶ್ಚಾಲೀಕನಿರ್ಬಂಧಃ ಸಮಂ ತದ್ ಬ್ರಹ್ಮಹತ್ಯಯಾ ॥29॥
ಅಧಿಕಾರದಲ್ಲಿದ್ದು ಸುಳ್ಳು ಹೇಳುವುದು, ರಾಜರಿಗೆ ಚಾಡಿಯನ್ನು ಹೇಳುವುದು ಮತ್ತು ಗುರುವನ್ನು ವ್ಯರ್ಥವಾಗಿ ಒತ್ತಾಯ ಪಡಿಸುವುದು - ಈ ಮೂರೂ ಬ್ರಹ್ಮಹತ್ಯೆಗೆ ಸಮವಾದವುಗಳು.
ಪ್ರಹರೇನ್ನ ನರೇಂದ್ರೇಷು ನ ಗಾಂ ಹನ್ಯಾತ್ ತಥೈವ ಚ |
ಭ್ರೂಣಹತ್ಯಾಸಮಂ ಚೈತದುಭಯಂ ಯೋ ನಿಷೇವತೇ ॥30॥
ರಾಜರಿಗೆ ಹೊಡೆಯಬಾರದು, ಹಾಗೆಯೇ ಗೋವನ್ನೂ ಹೊಡೆಯಬಾರದು. ಇವುಗಳನ್ನು ಮಾಡುವವನು ಭ್ರೂಣಹತ್ಯೆಗೆ ಸಮವಾದ ಪಾಪವನ್ನು ಹೊಂದುತ್ತಾನೆ.
ನಾಗ್ನಿಂ ಪರಿತ್ಯಜೇಜ್ಜಾತು ನ ಚ ವೇದಾನ್ ಪರಿತ್ಯಜೇತ್ |
ನ ಚ ಬ್ರಾಹ್ಮಣಮಾಕ್ರೋಶೇತ್ ಸಮಂ ತದ್ ಬ್ರಹ್ಮಹತ್ಯಯಾ ॥31॥
ಅಗ್ನಿಯನ್ನು ಎಂದೂ ಪರಿತ್ಯಾಗ ಮಾಡಬಾರದು. ವೇದವನ್ನೂ ಪರಿತ್ಯಾಗ ಮಾಡಬಾರದು. ಬ್ರಾಹ್ಮಣನನ್ನು ಕಿರುಚಿ ನಿಂದಿಸಬಾರದು. ಅವು ಬ್ರಹ್ಮಹತ್ಯೆಗೆ ಸಮವಾದ ದೋಷಗಳು.
ಯುಧಿಷ್ಠಿರಃ
ಕೀದೃಶಾಃ ಸಾಧವೋ ವಿಪ್ರಾಃ ಕೇಭ್ಯೋ ದತ್ತಂ ಮಹಾಫಲಮ್ |
ಕೀದೃಶಾನಾಂ ಚ ಭೋಕ್ತವ್ಯಂ ತನ್ಮೇ ಬ್ರೂಹಿ ಪಿತಾಮಹ ॥32॥
ಯುಧಿಷ್ಠಿರ ಎಲೈ ಪಿತಾಮಹನೇ, ಸಾಧುಗಳಾದ ವಿಪ್ರರು ಹೇಗಿರುತ್ತಾರೆ? ಯಾರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ? ಯಾರ ಅನ್ನವನ್ನು ಭುಂಜಿಸಬಹುದು ಎಂದು ನನಗೆ ಹೇಳು.
ಭೀಷ್ಮಃ
ಅಕ್ರೋಧನಾ ಧರ್ಮಪರಾಃ ಸತ್ಯನಿತ್ಯಾ ದಮೇ ರತಾಃ |
ತಾದೃಶಾಃ ಸಾಧವೋ ವಿಪ್ರಾಸ್ತೇಭ್ಯೋ ದತ್ತಂ ಮಹಾಫಲಮ್ ॥33॥
ಭೀಷ್ಮ ಕೋಪರಹಿತರಾಗಿ, ಧರ್ಮಪರರಾಗಿ, ಸತ್ಯನಿಷ್ಠರಾಗಿ, ಇಂದ್ರಿಯನಿಗ್ರಹದಲ್ಲಿ ರತರಾದ ಬ್ರಾಹ್ಮಣರು ಸಾಧುಗಳು. ಅವರಿಗೆ ಮಾಡಿದ ದಾನಗಳು ಮಹಾಫಲವನ್ನು ಕೊಡುತ್ತವೆ.
ಅಮಾನಿನಃ ಸರ್ವಸಹಾ ದೃಷ್ಟಾರ್ಥಾ ವಿಜಿತೇಂದ್ರಿಯಾಃ |
ಸರ್ವಭೂತಹಿತಾ ಮೈತ್ರಾಸ್ತೇಭ್ಯೋ ದತ್ತಂ ಮಹಾಫಲಮ್ ॥34॥
ಅಹಂಕಾರರಹಿತರಾಗಿ, ಶೀತೋಷ್ಣಗಳನ್ನು ಸಹಿಸಿಕೊಂಡು ಪ್ರಪಂಚದ ಅಸಾರತ್ವವನ್ನು ತಿಳಿದವರಾಗಿ, ಇಂದ್ರಿಯಜಯವುಳ್ಳವರಾಗಿ, ಸರ್ವಭೂತಹಿತರಾಗಿ, ಸ್ನೇಹಶೀಲರಾಗಿರುವ ಬ್ರಾಹ್ಮಣರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.
ಅಲುಬ್ಧಾಃ ಶುಚಯೋ ವೈದ್ಯಾ ಹ್ರೀಮಂತಃ ಸತ್ಯವಾದಿನಃ |
ಸ್ವಕರ್ಮನಿರತಾ ಯೇ ಚ ತೇಭ್ಯೋ ದತ್ತಂ ಮಹಾಫಲಮ್ ॥35॥
ಲೋಭರಹಿತರಾಗಿ, ಶುದ್ಧರಾಗಿ, ವೇದವಿದ್ಯಾಸಂಪನ್ನರಾಗಿ, ದುಷ್ಕರ್ಮವನ್ನು ಮಾಡಲು ನಾಚುವವರಾಗಿ, ಸತ್ಯವಾದಿಗಳಾಗಿ, ಸ್ವಕರ್ಮನಿರತರಾಗಿ ಇರುವ ಅಂತಹವರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.
ಸಾಂಗಾಂಶ್ಚ ಚತುರೋ ವೇದಾನ್ ಯೋಽಧೀಯೀತ ದ್ವಿಜರ್ಷಭಃ |
ಷಡ್ಭ್ಯೋ ಪ್ರವೃತ್ತಃ ಕರ್ಮಭ್ಯಸ್ತಂ ಪಾತ್ರಮೃಷಯೋ ವಿದುಃ ॥36॥
ಯಾವ ದ್ವಿಜಶ್ರೇಷ್ಠನು ಅಂಗಸಹಿತವಾಗಿ ನಾಲ್ಕು ವೇದಗಳನ್ನು ಅಧ್ಯಯನ ಮಾಡಿ, ಷಟ್ಕರ್ಮನಿರತನಾಗಿರುತ್ತಾನೆಯೋ (ಯಜನ-ಯಾಜನ, ದಾನ-ಪ್ರತಿಗ್ರಹ, ಅಧ್ಯಯನ-ಅಧ್ಯಾಪನ - ಇವು ಆರು ಕರ್ಮಗಳು) ಅವನನ್ನು ಋಷಿಗಳು ಪಾತ್ರನೆಂದು ತಿಳಿಯುತ್ತಾರೆ.
ಯೇ ತ್ವೇವಂಗುಣಜಾತೀಯಾಸ್ತೇಭ್ಯೋ ದತ್ತಂ ಮಹಾಫಲಮ್ |
ಸಹಸ್ರಗುಣಮಾಪ್ನೋತಿ ಗುಣಾರ್ಹಾಯ ಪ್ರದಾಯಕಃ ॥37॥
ಇಂತಹ ಗುಣಗಳು ಯಾರಲ್ಲಿ ಇವೆಯೋ ಅಂತಹವರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ. ಗುಣಗಳಿಂದ ಅರ್ಹನಾದ ಬ್ರಾಹ್ಮಣನಿಗೆ ದಾನವನ್ನು ಮಾಡುವ ಯಜಮಾನನು ಸಹಸ್ರ ಗುಣಿತವಾದ ಫಲವನ್ನು ಹೊಂದುತ್ತಾನೆ.
ಪ್ರಜ್ಞಾಶ್ರುತಾಭ್ಯಾಂ ವೃತ್ತೇನ ಶೀಲೇನ ಚ ಸಮನ್ವಿತಃ |
ತಾರಯೇತ ಕುಲಂ ಕೃತ್ಸ್ನಮೇಕೋಽಪೀಹ ದ್ವಿಜರ್ಷಭಃ |
ತೃಪ್ತೇ ತೃಪ್ತಾಃ ಸರ್ವದೇವಾಃ ಪಿತರೋ ಮುನಯೋಽಪಿ ಚ ॥38॥
ತನ್ನ ಪ್ರಜ್ಞೆ-ವಿದ್ಯೆಗಳಿಂದ, ಶೀಲ-ನಡತೆಗಳಿಂದ ಕೂಡಿದ ಒಬ್ಬ ಬ್ರಾಹ್ಮಣ ಶ್ರೇಷ್ಠನೂ ಸಹ (ದಾನವನ್ನು ಸ್ವೀಕಾರ ಮಾಡಿದರೆ) ಸಮಗ್ರವಾದ ಕುಲವನ್ನು ಸಂಕಟದಿಂದ ಪಾರು ಮಾಡುತ್ತಾನೆ. ರಾಜನು ತೃಪ್ತನಾದರೆ ಎಲ್ಲ ದೇವತೆಗಳು, ಪಿತೃಗಳು ಮತ್ತು ಋಷಿಗಳು ತೃಪ್ತರಾಗುತ್ತಾರೆ.
ಗಾಮಶ್ವಂ ವಿತ್ತಮನ್ನಂ ವಾ ತದ್ವಿಧೇ ಪ್ರತಿಪಾದಯೇತ್ |
ದ್ರವ್ಯಾಣಿ ಚಾನ್ಯಾನಿ ತಥಾ ಪ್ರೇತ್ಯಭಾವೇ ನ ಶೋಚತಿ ॥39॥
ಗೋದಾನವನ್ನಾಗಲೀ, ಅಶ್ವದಾನವನ್ನಾಗಲೀ, ಧನದಾನವನ್ನಾಗಲೀ, ಅನ್ನದಾನವನ್ನಾಗಲೀ ಅಂತಹ ಬ್ರಾಹ್ಮಣನಿಗೆ ಮಾಡಬೇಕು. ಅಥವಾ ಬೇರೆ ದ್ರವ್ಯವನ್ನಾಗಲೀ ಅಂತಹವರಿಗೆ ಕೊಡಬೇಕು. ಹಾಗೆ ದಾನ ಮಾಡಿದವನು ಮರಣವನ್ನು ಹೊಂದಿದ ಮೇಲೆ ಶೋಕಪಡುವುದಿಲ್ಲ.

ತಾರಯೇತ ಕುಲಂ ಕೃತ್ಸ್ನಮೇಕೋಽಪೀಹ ದ್ವಿಜೋತ್ತಮಃ |
ಕಿಮಂಗ ಪುನರೇವೈತೇ ತಸ್ಮಾತ್ ಪಾತ್ರಂ ಸಮಾಚರೇತ್ ॥40॥
ಒಬ್ಬ ದ್ವಿಜಶ್ರೇಷ್ಠನು ಸಮಗ್ರವಾದ ಕುಲವನ್ನು ಸಂಕಟ ಮತ್ತು ಪಾಪಗಳಿಂದ ಪಾರು ಮಾಡುವನು. ಹೀಗಿರುವಾಗ ಇಷ್ಟೊಂದು ಬ್ರಾಹ್ಮಣರಿರುವಾಗ (ನಿನಗೆ ಏನು ಚಿಂತೆ?) ಆದ್ದರಿಂದ ಪಾತ್ರವನ್ನು ವಿಚಾರ ಮಾಡಿ ದಾನವನ್ನು ಮಾಡಬೇಕು.
ನಿಶಮ್ಯ ಚ ಗುಣೋಪೇತಂ ಬ್ರಾಹ್ಮಣಂ ಸಾಧುಸಮ್ಮತಮ್ |
ದೂರಾದಾನಾಯಯೇತ್ ಕೃತ್ಯೇ ಸರ್ವತಶ್ಚಾಭಿಪೂಜಯೇತ್ ॥41॥
ಸಾಧುಸಮ್ಮತನೂ, ಗುಣವಂತನೂ ಆದ ಬ್ರಾಹ್ಮಣನನ್ನು ಕೇಳಿ, ದೂರದಿಂದಲಾದರೂ ಅವನನ್ನು ಕರೆಸಿ, ಹವ್ಯ-ಕವ್ಯಾದಿ ಕೃತ್ಯಗಳಲ್ಲಿ ಅವನನ್ನು ಸರ್ವವಿಧದಿಂದಲೂ ಪೂಜಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಬಹುಪ್ರಶ್ನಿಕೋನಾಮ ತ್ರಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಐವತ್ನಾಲ್ಕನೆಯ ಅಧ್ಯಾಯ
ದೈವ-ಪಿತೃಕರ್ಮಗಳಲ್ಲಿ ಮಾಡಿದ ದಾನದ ಫಲಕಥನ.
ಯುಧಿಷ್ಠಿರಃ
ಶ್ರಾದ್ಧಕಾಲೇ ಚ ದೈವೇ ಚ ಧರ್ಮೇ ಚಾಪಿ ಪಿತಾಮಹ |
ಇಚ್ಛಾಮೀಹ ತ್ವಯಾಽಽಖ್ಯಾತಂ ವಿಹಿತಂ ಯತ್ ಸುರರ್ಷಿಭಿಃ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಶ್ರಾದ್ಧಕಾಲದ ವಿಷಯದಲ್ಲಿಯೂ ದೇವಕಾರ್ಯಗಳ ವಿಷಯದಲ್ಲಿಯೂ ದೇವತೆಗಳಿಂದಲೂ ಮತ್ತು ಋಷಿಗಳಿಂದಲೂ ಹೇಳಲ್ಪಟ್ಟ ವಿಧಾನವನ್ನು ನಾನು ತಿಳಿಯಲು ಅಪೇಕ್ಷಿಸುತ್ತೇನೆ.
ಭೀಷ್ಮಃ
ದೈವಂ ಪೂರ್ವಾಹ್ಣಿಕೇ ಕುರ್ಯಾದಪರಾಹ್ಣೇ ತು ಪೈತೃಕಮ್ |
ಮಂಗಲಾಚಾರಸಂಪನ್ನಃ ಕೃತಶೌಚಃ ಪ್ರಯತ್ನವಾನ್ ॥2॥
ಭೀಷ್ಮ ಮಂಗಳಾಚಾರಸಂಪನ್ನನಾಗಿ, ಶುಚಿಯಾಗಿ, ಪ್ರಯತ್ನಶೀಲನಾಗಿ ಪೂರ್ವಾಹ್ಣದಲ್ಲಿ ದೈವಕಾರ್ಯವನ್ನು ಮಾಡಬೇಕು. ಅಪರಾಹ್ಣದಲ್ಲಿ ಪಿತೃಕಾರ್ಯವನ್ನು ಮಾಡಬೇಕು.
ಮನುಷ್ಯಾಣಾಂ ತು ಮಧ್ಯಾಹ್ನೇ ಪ್ರದದ್ಯಾದುಪಪತ್ತಿಭಿಃ |
ಕಾಲಹೀನಂ ತು ಯದ್ದಾನಂ ತಂ ಭಾಗಂ ರಕ್ಷಸಾಂ ವಿದುಃ ॥3॥
ಮಧ್ಯಾಹ್ನ ಕಾಲದಲ್ಲಿ ಮನುಷ್ಯರಿಗೆ ಯೋಗ್ಯತವಾದ ಉಪಚಾರವನ್ನು ಮಾಡಬೇಕು. ಕಾಲಹೀನವಾದ ದಾನವನ್ನು ರಾಕ್ಷಸರ ಭಾಗವೆಂದು ತಿಳಿಯುತ್ತಾರೆ.
ಲಂಘಿತಂ ಚಾವಲೀಢಂ ಚ ಕಾಲಪೂರ್ವಂ ಚ ಯತ್ಕೃತಮ್ |
ರಜಸ್ವಲಾಭಿರ್ದೃಷ್ಟಂ ಚ ತಂ ಭಾಗಂ ರಕ್ಷಸಾಂ ವಿದುಃ ॥4॥
ದಾಟಿದ ಅನ್ನ, ನೆಕ್ಕಲ್ಪಟ್ಟ ಅನ್ನ, ಹಿಂದಿನ ದಿನ ಮಾಡಿದ ಅನ್ನ, ರಜಸ್ವಲೆಯಿಂದ ದೃಷ್ಟವಾದ ಅನ್ನ - ಇವು ರಾಕ್ಷಸರ ಭಾಗಗಳು.
ಅವಘುಷ್ಟಂ ಚ ಯದ್ಭುಕ್ತಮವ್ರತೇನ ಚ ಭಾರತ |
ಪರಾಮೃಷ್ಟಂ ಶುನಾ ಚೈವ ತಂ ಭಾಗಂ ರಕ್ಷಸಾಂ ವಿದುಃ ॥5॥
ಎಲೈ ಭಾರತನೇ, ನಿಂದಿಸುತ್ತಾ ಭುಂಜಿಸಿದ ಅನ್ನ, ವ್ರತಹೀನರು ಭಕ್ಷಿಸಿದ ಅನ್ನ, ನಾಯಿಯು ಸ್ಪರ್ಶ ಮಾಡಿದ ಅನ್ನ ಇವೆಲ್ಲವೂ ರಾಕ್ಷಸ ಭಾಗಗಳೆಂದು ತಿಳಿಯುತ್ತಾರೆ.
ಕೇಶಕೀಟಾವಪತಿತಂ ಕ್ಷುತಂ ಶ್ವಭಿರವೇಕ್ಷಿತಮ್ |
ರುದಿತಂ ಚಾವಧೂತಂ ಚ ತಂ ಭಾಗಂ ರಕ್ಷಸಾಂ ವಿದುಃ ॥6॥
ಕೀಟಗಳು ಮತ್ತು ಕೂದಲು ಇದ್ದ ಅನ್ನ, ಕ್ಷುತವಾದ (ಸೀನಲ್ಪಟ್ಟ) ಅನ್ನ, ನಾಯಿಗಳಿಂದ ನೋಡಲ್ಪಟ್ಟ ಅನ್ನ, ರೋದನ ಸಹಿತವಾದ ಅನ್ನ ಮತ್ತು ಎಸೆದ ಅನ್ನ ಇವುಗಳು ರಾಕ್ಷಸರ ಭಾಗಗಳು.
ನಿರೋಂಕಾರೇಣ ಯದ್ ಭುಕ್ತಂ ಸಶಸ್ತ್ರೇಣ ಚ ಭಾರತ |
ದುರಾತ್ಮನಾ ಚ ಯದ್ ಭುಕ್ತಂ ತಂ ಭಾಗಂ ರಕ್ಷಸಾಂ ವಿದುಃ ॥7॥
ಎಲೈ ಭಾರತನೇ, ಓಂಕಾರವಿಲ್ಲದೆ ಭುಂಜಿಸಿದ ಅನ್ನ, ಶಸ್ತ್ರಧಾರಿಯಾಗಿ ಭುಂಜಿಸಿದ ಅನ್ನ, ದುಷ್ಟರು ಭುಂಜಿಸಿದ ಅನ್ನ - ಇವು ರಾಕ್ಷಸರ ಭಾಗಗಳು.
ಪರೋಚ್ಛಿಷ್ಟಂ ಚ ಯದ್ ಭುಕ್ತಂ ಪರಿಭುಕ್ತಂ ಚ ಯದ್ ಭವೇತ್ |
ದೈವೇ ಪಿತ್ರ್ಯೇ ಚ ಸತತಂ ತಂ ಭಾಗಂ ರಕ್ಷಸಾಂ ವಿದುಃ ॥8॥
ದೇವಕಾರ್ಯದಲ್ಲಾಗಲೀ, ಪಿತೃಕಾರ್ಯದಲ್ಲಾಗಲೀ ಇನ್ನೊಬ್ಬನಿಂದ ಉಚ್ಛಿಷ್ಟವಾದ ಅನ್ನ, ಸುತ್ತಲೂ ಕುಳಿತು ಭುಂಜಿಸಿದ ಅನ್ನ - ಇದನ್ನು ರಾಕ್ಷಸರ ಭಾಗವೆಂದು ಸತತವಾಗಿ ಹೇಳುತ್ತಾರೆ.
ಗರ್ಹಿತಂ ನಿಂದಿತಂ ಚೈವ ಪರಿವಿಷ್ಟಂ ಸಮನ್ಯುನಾ |
ದೈವಂ ವಾಪ್ಯಥ ವಾ ಪೈತ್ರ್ಯಂ ತಂ ಭಾಗಂ ರಕ್ಷಸಾಂ ವಿದುಃ ॥9॥
ಬೈಯ್ಯುತ್ತಾ ಬಡಿಸಿದ ಅನ್ನ, ನಿಂದಿತವಾದ ಅನ್ನ, ಕೋಪದಿಂದ ಬಡಿಸಿದ ಅನ್ನ ಇವನ್ನು ದೇವಕಾರ್ಯದಲ್ಲಿಯೂ,

ಪಿತೃಕಾರ್ಯದಲ್ಲಿಯೂ ರಾಕ್ಷಸರ ಭಾಗವೆಂದು ತಿಳಿಯುತ್ತಾರೆ.
ಮಂತ್ರಹೀನಂ ಕ್ರಿಯಾಹೀನಂ ಯಚ್ಛ್ರಾದ್ಧಂ ಪರಿವಿಶ್ಯತೇ |
ತ್ರಿಭಿರ್ವರ್ಣೈರ್ನರಶ್ರೇಷ್ಠ ತಂ ಭಾಗಂ ರಕ್ಷಸಾಂ ವಿದುಃ ॥10॥
ಎಲೈ ನರಶ್ರೇಷ್ಠನೇ, ಮಂತ್ರವಿಲ್ಲದೆ, ಕ್ರಿಯಾವಿಧಾನವಿಲ್ಲದೆ ಯಾವ ಶ್ರಾದ್ಧ ಭೋಜನವು ಮೂರು ವರ್ಣದವರಿಂದ ಬಡಿಸಲ್ಪಡುತ್ತದೆಯೋ ಅದು ರಾಕ್ಷಸರ ಭಾಗ.
ಆಜ್ಯಾಹುತಿಂ ವಿನಾ ಚೈವ ಯತ್ ಕಿಂಚಿತ್ ಪರಿವಿಶ್ಯತೇ |
ದುರಾಚಾರೈಶ್ಚ ಯದ್ ಭುಕ್ತಂ ತಂ ಭಾಗಂ ರಕ್ಷಸಾಂ ವಿದುಃ ॥11॥
ಅಗ್ನಿಯಲ್ಲಿ ವೈಶ್ವದೇವ ಹೋಮವನ್ನು ಮಾಡದೆ ಬಡಿಸಿದ ಅನ್ನ, ದುರಾಚಾರಿಗಳು ಭುಂಜಿಸಿದ ಅನ್ನ ಇವು ರಾಕ್ಷಸರ ಭಾಗವೆಂದು ತಿಳಿಯುತ್ತಾರೆ.
ಯೇ ಭಾಗಾ ರಕ್ಷಸಾಂ ಪ್ರೋಕ್ತಾಸ್ತ ಉಕ್ತಾ ಭರತರ್ಷಭ |
ಅತ ಊರ್ಧ್ವಂ ವಿಸರ್ಗಸ್ಯ ಪರೀಕ್ಷಾಂ ಬ್ರಾಹ್ಮಣೇ ಶೃಣು ॥12॥
ಎಲೈ ಭರತಶ್ರೇಷ್ಠನೇ, ರಾಕ್ಷಸರಿಗೆ ಹೇಳಲ್ಪಟ್ಟ ಭಾಗಗಳನ್ನು ಹಿಂದೆ ತಿಳಿಸಿದ್ದೇನೆ. ಇಲ್ಲಿಂದ ಮುಂದೆ ದಾನ ಮಾಡುವ ಕಾಲದಲ್ಲಿ ಮಾಡಬೇಕಾದ ಬ್ರಾಹ್ಮಣನ ಪರೀಕ್ಷೆಯನ್ನು ಕೇಳು.
ಯಾವಂತಃ ಪತಿತಾ ವಿಪ್ರಾ ಜಡೋನ್ಮತ್ತಾಸ್ತಥೈವ ಚ |
ದೈವೇ ವಾಪ್ಯಥ ವಾ ಪಿತ್ರ್ಯೇ ರಾಜನ್ ನಾರ್ಹಂತಿ ಕೇತನಮ್ ॥13॥
ಪತಿತರಾದ ಬ್ರಾಹ್ಮಣರು, ಜಡರು, ಉನ್ಮತ್ತರಾದ ಬ್ರಾಹ್ಮಣರು ದೈವಕಾರ್ಯದಲ್ಲಾಗಲೀ, ಪಿತೃಕಾರ್ಯದಲ್ಲಾಗಲೀ `ಪಿತುಃ ಸ್ಥಾನೇ ಕ್ಷಣಃ ಕ್ರಿಯತಾಮ್' ಪಿತೃಗಳ ಸ್ಥಾನದಲ್ಲಿ ಕುಳಿತುಕೊಳ್ಳಿ ಅಥವಾ ದೇವಸ್ಥಾನದಲ್ಲಿ ಕುಳಿತುಕೊಳ್ಳಿ ಎಂದು ಹೇಳಿ ಸ್ಥಾನವನ್ನು ಕೊಡಲು ಅರ್ಹರಲ್ಲ.
ಶ್ವಿತ್ರೀ ಕುಷ್ಠೀ ಚ ಕ್ಲೀಬಶ್ಚ ತಥಾ ಯಕ್ಷ್ಮಹತಶ್ಚ ಯಃ |
ಅಪಸ್ಮಾರೀ ಚ ಯಶ್ಚಾಂಧೋ ರಾಜನ್ ನಾರ್ಹಂತಿ ಸತ್ಕೃತಿಮ್ ॥14॥
ಎಲೈ ರಾಜನೇ, ತೊನ್ನುರೋಗದವನು, ಕುಷ್ಠರೋಗದವನು, ನಪುಂಸಕನು, ಯಕ್ಷ್ಮರೋಗಿ, ಅಪಸ್ಮಾರಿ, ಕುರುಡ ಇವರು ಯಾರೂ ಸತ್ಕಾರಕ್ಕೆ ಯೋಗ್ಯರಲ್ಲ.
ಚಿಕಿತ್ಸಕಾ ದೇವಲಕಾ ವೃಥಾನಿಯಮಧಾರಿಣಃ |
ಸೋಮವಿಕ್ರಯಿಣಶ್ಚೈವ ಶ್ರಾದ್ಧೇ ನಾರ್ಹಂತಿ ಕೇತನಮ್ ॥15॥
ವೈದ್ಯರು, ಸಂಬಳಕ್ಕಾಗಿ ದೇವಸ್ಥಾನದಲ್ಲಿ ಪೂಜೆಯನ್ನು ಮಾಡುವವರು, ವ್ಯರ್ಥವಾದ ನಿಯಮವನ್ನು ಪಾಲಿಸುವವರು, ಸೋಮರಸವನ್ನು ಮಾರುವವರು ಶ್ರಾದ್ಧದಲ್ಲಿ ಸ್ಥಾನಕ್ಕೆ ಅರ್ಹರಲ್ಲ.
ಗಾಯನಾ ನರ್ತಕಾಶ್ಚೈವ ಪ್ಲವಕಾ ವಾದಕಾಸ್ತಥಾ |
ಕಥಕಾ ಯೋಧಕಾಶ್ಚೈವ ರಾಜನ್ ನಾರ್ಹಂತಿ ಕೇತನಮ್ ॥16॥
ಎಲೈ ರಾಜನೇ, ಸಂಗೀತಗಾರರು, ನರ್ತಕರು, ನಾಪಿತರು, ಸಂಗೀತ ವಾದ್ಯ ವಾದಕರು, ಕಥೆಯನ್ನು ಹೇಳಿ ಜೀವಿಸುವವರು, ಸೈನಿಕರು ಸ್ಥಾನಕ್ಕೆ ಅರ್ಹರಲ್ಲ.
ಹೋತಾರೋ ವೃಷಲಾನಾಂ ಚ ವೃಷಲಾಧ್ಯಾಪಕಾಸ್ತಥಾ |
ತಥಾ ವೃಷಲಶಿಷ್ಯಾಶ್ಚ ರಾಜನ್ ನಾರ್ಹಂತಿ ಕೇತನಮ್ ॥17॥
ಶೂದ್ರನಿಗೆ ಹೋಮವನ್ನು ಮಾಡಿಸುವವರು, ಶೂದ್ರನಿಗೆ ಅಧ್ಯಯನವನ್ನು ಮಾಡಿಸುವವರು ಮತ್ತು ಶೂದ್ರನ ಶಿಷ್ಯರು ಎಲೈ ರಾಜನೇ, ಸ್ಥಾನಕ್ಕೆ ಅರ್ಹರಲ್ಲ.
ಅನುಯೋಕ್ತಾ ಚ ಯೋ ವಿಪ್ರೋ ಅನುಯುಕ್ತಶ್ಚ ಭಾರತ |
ನಾರ್ಹತಸ್ತಾವಪಿ ಶ್ರಾದ್ಧಂ ಬ್ರಹ್ಮವಿಕ್ರಯಿಣೌ ಹಿ ತೌ ॥18॥
ಇಷ್ಟು ಧನವನ್ನು ಕೊಟ್ಟರೆ ಅಧ್ಯಯನವನ್ನು ಮಾಡಿಸುತ್ತೇನೆ, ಇಲ್ಲದಿದ್ದರೆ ಇಲ್ಲ ಎಂದು ಹೇಳು ಎಂದು ಬ್ರಾಹ್ಮಣರಿಗೆ ಆದೇಶವನ್ನು ಮಾಡುವವನು, ಅಂತಹ ಆದಿಷ್ಟನಾದ ಬ್ರಾಹ್ಮಣನೂ ಸಹ ಎಲೈ ಭಾರತನೇ, ಶ್ರಾದ್ಧದಲ್ಲಿ ಅರ್ಹರಲ್ಲ. ಅವರಿಬ್ಬರೂ ವೇದವನ್ನು ಮಾರಿದವರು.
ಅಗ್ರಣೀರ್ಯಃ ಕೃತಃ ಪೂರ್ವಂ ವರ್ಣಾಚಾರಪರಿಗ್ರಹಃ |
ಬ್ರಾಹ್ಮಣಃ ಸರ್ವವಿದ್ಯೋऽಪಿ ರಾಜನ್ ನಾರ್ಹತಿ ಕೇತನಮ್ ॥19॥
ಮೊದಲು ಸೇನಾನಾಯಕನಾಗಿದ್ದು ಅನಂತರ ವರ್ಣಾಚಾರಗಳನ್ನು ಅನುಸರಿಸುವ ಬ್ರಾಹ್ಮಣನು ಎಲೈ ರಾಜನೇ, ಸರ್ವರೀತಿ ಸಂಪನ್ನನಾಗಿದ್ದರೂ ಸ್ಥಾನಕ್ಕೆ ಅರ್ಹನಲ್ಲ.
ಅನಗ್ನಯಶ್ಚ ಯೇ ವಿಪ್ರಾ ಮೃತನಿರ್ಯಾತಕಾಶ್ಚ ಯೇ |
ಸ್ತೇನಾಶ್ಚ ಪತಿತಾಶ್ಚೈವ ರಾಜನ್ ನಾರ್ಹಂತಿ ಕೇತನಮ್ ॥20॥
ಎಲೈ ರಾಜನೇ, ಅಗ್ನಿಯಿಲ್ಲದ ಬ್ರಾಹ್ಮಣರು, ಶವವಾಹಕರು, ಕಳ್ಳರು, ಪತಿತರು ಸ್ಥಾನಕ್ಕೆ ಅರ್ಹರಲ್ಲ.
ಅಪರಿಜ್ಞಾತಪೂರ್ವಾಶ್ಚ ಗಣಪೂರ್ವಾಶ್ಚ ಭಾರತ |
ಪುತ್ರಿಕಾಪೂರ್ವಪುತ್ರಾಶ್ಚ ಶ್ರಾದ್ಧೇ ನಾರ್ಹಂತಿ ಕೇತನಮ್ ॥21॥
ಎಲೈ ಭಾರತನೇ, ಅಪರಿಚಿತರಾದವರು, ಒಂದು ಗುಂಪಿಗೆ ಒಡೆಯರಾದವರು, ಪುತ್ರಿಕಾಪುತ್ರರು (ಪುತ್ರಿಯನ್ನು ಮದುವೆ ಮಾಡಿಕೊಡುವುದಾದರೆ ಇವಳಲ್ಲಿ ಹುಟ್ಟುವ ಪುತ್ರನು ನನ್ನ ಪುತ್ರ ಎಂದು ಕನ್ಯಾ ಪಿತೃವಿನಿಂದ ಸ್ವೀಕರಿಸಲ್ಪಟ್ಟ ಪುತ್ರನು ಪುತ್ರಿಕಾ

ಪುತ್ರನೆನಿಸುತ್ತಾನೆ) ಸ್ಥಾನಕ್ಕೆ ಅರ್ಹನಲ್ಲ.
ಋಣಕರ್ತಾ ಚ ಯೋ ರಾಜನ್ ಯಶ್ಚ ವಾರ್ಧುಷಿಕೋ ದ್ವಿಜಃ |
ಪ್ರಾಣಿವಿಕ್ರಯವೃತ್ತಿಶ್ಚ ರಾಜನ್ ನಾರ್ಹಂತಿ ಕೇತನಮ್ ॥22॥
ಎಲೈ ರಾಜನೇ, ಸಾಲವನ್ನು ಮಾಡುವ ಬ್ರಾಹ್ಮಣನೂ ಮತ್ತು ಬಡ್ಡಿಗಾಗಿ ಹಣವನ್ನು ಕೊಡುವ ಬ್ರಾಹ್ಮಣನೂ, ಪ್ರಾಣಿಯನ್ನು ಮಾರುವ ಬ್ರಾಹ್ಮಣನೂ ಸ್ಥಾನಕ್ಕೆ ಅರ್ಹರಲ್ಲ.
ಸ್ತ್ರೀಪೂರ್ವಾಃ ಕಾಂಡಪೃಷ್ಠಾಶ್ಚ ಯಾವಂತೋ ಭರತರ್ಷಭ |
ಅಜಪಾ ಬ್ರಾಹ್ಮಣಾಶ್ಚೈವ ಶ್ರಾದ್ಧೇ ನಾರ್ಹಂತಿ ಕೇತನಮ್ ॥23॥
ಎಲೈ ಭರತಶ್ರೇಷ್ಠನೇ, ಮೊದಲು ಸ್ತ್ರೀಯಾಗಿದ್ದು ಅನಂತರ ಪುರುಷನಾದವನು, ಬೆನ್ನಿನಲ್ಲಿ ಆಯುಧವನ್ನು ಧರಿಸಿದವನು ಮತ್ತು ಜಪವನ್ನು ಮಾಡದ ಬ್ರಾಹ್ಮಣನು ಶ್ರಾದ್ಧದಲ್ಲಿ ಸ್ಥಾನಕ್ಕೆ ಅರ್ಹನಾಗುವುದಿಲ್ಲ.
ಶ್ರಾದ್ಧೇ ದೈವೇ ಚ ನಿರ್ದಿಷ್ಟಾ ಬ್ರಾಹ್ಮಣಾ ಭರತರ್ಷಭ |
ದಾತುಃ ಪ್ರತಿಗ್ರಹೀತುಶ್ಚ ಶೃಣುಷ್ವಾನುಗ್ರಹಂ ಪುನಃ ॥24॥
ಎಲೈ ಭರತಶ್ರೇಷ್ಠನೇ, ಶ್ರಾದ್ಧಕರ್ಮದಲ್ಲಿಯೂ ದೇವಕಾರ್ಯದಲ್ಲಿಯೂ ಪಾತ್ರರಾದ ಬ್ರಾಹ್ಮಣರನ್ನು (ಅಪಾತ್ರರಾದ ಬ್ರಾಹ್ಮಣರನ್ನು) ತಿಳಿಸಿದ್ದೇನೆ. ದಾನ-ಪ್ರತಿಗ್ರಹ ವಿಷಯದಲ್ಲಿ ಸ್ವೀಕಾರ ಮಾಡಬೇಕಾದ ರೀತಿಯನ್ನು ಕೇಳು.
ಚೀರ್ಣವ್ರತಾ ಗುಣೈರ್ಯುಕ್ತಾ ಭವೇಯುರ್ಯೇಽಪಿ ಕರ್ಷಕಾಃ |
ಸಾವಿತ್ರೀಜ್ಞಾಃ ಕ್ರಿಯಾವಂತಸ್ತೇ ರಾಜನ್ ಕೇತನಕ್ಷಮಾಃ ॥25॥
ವ್ರತಗಳನ್ನು ಮಾಡಿ ಸದ್ಗುಣದಿಂದ ಕೂಡಿದ ಬ್ರಾಹ್ಮಣನು ಭೂಮಿಯಲ್ಲಿ ವ್ಯವಸಾಯ ಮಾಡುವವರಾಗಿದ್ದರೂ ಗಾಯತ್ರೀ ಮಂತ್ರವನ್ನು ಜಪಿಸಿ ಸತ್ಕ್ರಿಯೆಗಳನ್ನು ಮಾಡುವವರು ಸ್ಥಾನಕ್ಕೆ ಅರ್ಹರಾಗುತ್ತಾರೆ.
ಕ್ಷಾತ್ರಧರ್ಮಿಣಮಪ್ಯಾಜೌ ಕೇತಯೇತ್ ಕುಲಜಂ ದ್ವಿಜಮ್ |
ನ ತ್ವೇವ ವಣಿಜಂ ತಾತ ಶ್ರಾದ್ಧೇಷು ಪರಿಕಲ್ಪಯೇತ್ ॥26॥
ಕ್ಷತ್ರಿಯ ಧರ್ಮವನ್ನು ಅನುಸರಿಸುವ ಸತ್ಕುಲೀನನಾದ ಬ್ರಾಹ್ಮಣನೂ ಸಹ ಸ್ಥಾನಕ್ಕೆ ಅರ್ಹನಾಗುತ್ತಾನೆ. ಎಲೈ ಪ್ರೀತಿಪಾತ್ರನೇ, ವೈಶ್ಯನನ್ನು ಮಾತ್ರ ಶ್ರಾದ್ಧದಲ್ಲಿ ಕುಳ್ಳಿರಿಸಬಾರದು.
ಅಗ್ನಿಹೋತ್ರೀ ಚ ಯೋ ವಿಪ್ರೋ ಗ್ರಾಮವಾಸೀ ಚ ಯೋ ಭವೇತ್ |
ಅಸ್ತೇನಶ್ಚಾತಿಥಿಜ್ಞಶ್ಚ ಸ ರಾಜನ್ ಕೇತನಕ್ಷಮಃ ॥27॥
ಎಲೈ ರಾಜನೇ, ಯಾವ ಬ್ರಾಹ್ಮಣನು ಅಗ್ನಿಹೋತ್ರಿಯಾಗಿ, ಗ್ರಾಮವಾಸಿಯಾಗಿ ಚೋರನಾಗದೆ ಅತಿಥಿ ಪ್ರಿಯನಾಗಿರುತ್ತಾನೋ ಅಂತಹವನು ಸ್ಥಾನಕ್ಕೆ ಅರ್ಹನಾಗುತ್ತಾನೆ.
ಸಾವಿತ್ರೀಜಪಕೋ ಯಶ್ಚ ತ್ರಿಕಾಲಂ ಭರತರ್ಷಭ |
ಭಿಕ್ಷಾವೃತ್ತಿಃ ಕ್ರಿಯಾವಾಂಶ್ಚ ಸ ರಾಜನ್ ಕೇತನಕ್ಷಮಃ ॥28॥
ಎಲೈ ರಾಜನೇ, ಭರತಶ್ರೇಷ್ಠನೇ, ಮೂರು ಕಾಲದಲ್ಲಿಯೂ ಗಾಯತ್ರಿಯನ್ನು ಜಪಿಸಿ, ಭಿಕ್ಷಾವೃತ್ತಿಯನ್ನು ಮಾಡಿ, ಸತ್ಕರ್ಮವನ್ನು ಮಾಡುವ ಬ್ರಾಹ್ಮಣನು ಸ್ಥಾನಕ್ಕೆ ಯೋಗ್ಯನಾಗುತ್ತಾನೆ.
ಉದಿತಾಸ್ತಮಿತೋ ಯಶ್ಚ ತಥೈವಾಸ್ತಮಿತೋದಿತಃ |
ಅಹಿಂಸ್ರಶ್ಚಾಲ್ಪದೋಷಶ್ಚ ಸ ರಾಜನ್ ಕೇತನಕ್ಷಮಃ ॥29॥
ಮೊದಲು ಶ್ರೀಮಂತನಾಗಿ ಅನಂತರ ದರಿದ್ರನಾದವನು ಮತ್ತು ಮೊದಲು ದರಿದ್ರನಾಗಿ ಅನಂತರ ಶ್ರೀಮಂತನಾದವನು, ಇನ್ನೊಬ್ಬರಿಗೆ ಹಿಂಸೆಯನ್ನು ಮಾಡದೆ ಅಲ್ಪ ದೋಷದಿಂದ ಕೂಡಿದ್ದರೆ ಅವನು ಸ್ಥಾನಕ್ಕೆ ಅರ್ಹನಾಗುತ್ತಾನೆ.
ಅಕಲ್ಕಕೋ ಹ್ಯತರ್ಕಶ್ಚ ಬ್ರಾಹ್ಮಣೋ ಭರತರ್ಷಭ |
ಸಸಂಜ್ಞೋ ಭೈಕ್ಷ್ಯವೃತ್ತಿಶ್ಚ ಸ ರಾಜನ್ ಕೇತನಕ್ಷಮಃ ॥30॥
ಎಲೈ ರಾಜನೇ, ಭರತಶ್ರೇಷ್ಠನೇ, ವಂಚನೆಯನ್ನು ಮಾಡದವನು, ವಿತಂಡ ವಾದವನ್ನು ಮಾಡದವನು, ಯೋಗ್ಯವಾದ ಜ್ಞಾನವನ್ನು ಹೊಂದಿ ಭೈಕ್ಷ್ಯವೃತ್ತಿಯನ್ನು ಆಚರಿಸುವವನು ಸ್ಥಾನಕ್ಕೆ ಯೋಗ್ಯನಾಗುತ್ತಾನೆ.
ಅವ್ರತೀ ಕಿತವಃ ಸ್ತೇನಃ ಪ್ರಾಣಿವಿಕ್ರಯ್ಯಥೋ ವಣಿಕ್ |
ಪಶ್ಚಾಚ್ಚ ಪೀತವಾನ್ ಸೋಮಂ ಸ ರಾಜನ್ ಕೇತನಕ್ಷಮಃ ॥31॥
ಮೊದಲು ವ್ರತಹೀನನಾಗಿ, ಮೋಸಗಾರನಾಗಿ, ಕಳ್ಳನಾಗಿ, ಪ್ರಾಣಿವಿಕ್ರಯವನ್ನು ಮಾಡಿ ವರ್ತಕನಾಗಿದ್ದ ಬ್ರಾಹ್ಮಣನೂ ಸಹ ಅನಂತರ ಪಶ್ಚಾತ್ತಾಪವನ್ನು ಪಟ್ಟು, ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಸೋಮಪಾನವನ್ನು ಮಾಡಿದರೆ, ಎಲೈ ರಾಜನೇ, ಅವನು ಸ್ಥಾನಕ್ಕೆ ಯೋಗ್ಯನಾಗುತ್ತಾನೆ.
ಆರ್ಜಯಿತ್ವಾ ಧನಂ ಪೂರ್ವಂ ದಾರುಣೈಃ ಕೃಷಿಕರ್ಮಭಿಃ |
ಭವೇತ್ಸರ್ವಾತಿಥಿಃ ಪಶ್ಚಾತ್ಸ ರಾಜನ್ ಕೇತನಕ್ಷಮಃ ॥32॥
ಎಲೈ ರಾಜನೇ, ಯಾವನು ಮೊದಲು ದಾರುಣವಾದ ಕೃಷಿಕರ್ಮಗಳಿಂದ ಧನಾರ್ಜನೆಯನ್ನು ಮಾಡಿ ಅನಂತರ ಸರ್ವಾತಿಥಿಯಾಗುತ್ತಾನೆಯೋ ಅವನು ಸ್ಥಾನಕ್ಕೆ ಅರ್ಹನಾಗುತ್ತಾನೆ.
ಬ್ರಹ್ಮವಿಕ್ರಯನಿರ್ದಿಷ್ಟಂ ಸ್ತ್ರಿಯಾ ಯಚ್ಚಾರ್ಜಿತಂ ಧನಮ್ |
ಅದೇಯಂ ಪಿತೃದೇವೇಭ್ಯೋ ಯಚ್ಚ ಕ್ಲೈಬ್ಯಾದುಪಾರ್ಜಿತಮ್ ॥33॥
ವೇದವನ್ನು ಮಾರಿ ಸಂಪಾದಿಸಿದ ಧನ, ಸ್ತ್ರೀಯು ಸಂಪಾದಿಸಿದ ಧನ, ನಪುಂಸಕನು ಗಳಿಸಿದ ಧನ - ಇವುಗಳನ್ನು ಪಿತೃಕಾರ್ಯದಲ್ಲಿ ಕೊಡಬಾರದು.

ಕ್ರಿಯಮಾಣೇಽಪವರ್ಗೇ ತು ಯೋ ದ್ವಿಜೋ ಭರತರ್ಷಭ |
ನ ವ್ಯಾಹರತಿ ಯದ್ಯುಕ್ತಂ ತಸ್ಯಾಧರ್ಮೋ ಗವಾನೃತಮ್ ॥34॥
ಎಲೈ ಭರತಶ್ರೇಷ್ಠನೇ, ದಾನವನ್ನು ಮಾಡುವಾಗ ಸ್ವೀಕರಿಸುವ ಬ್ರಾಹ್ಮಣನು ಯೋಗ್ಯವಾದ ಮಾತನ್ನು (ಆಶೀರ್ವಾದ ರೂಪವಾದ ಮಾತನ್ನು) ಆಡದಿದ್ದರೆ ಅವನಿಗೆ ಉಂಟಾಗುವ ಅಧರ್ಮವು ಗವಾನೃತಕ್ಕೆ ಸಮವಾಗುತ್ತದೆ. ಗವಾನೃತವೆಂದರೆ ಬ್ರಾಹ್ಮಣನಿಗೆ ಗೋವನ್ನು ಕೊಡುತ್ತೇನೆ ಎಂದು ಮೊದಲು ಹೇಳಿ ಅನಂತರ ಇಲ್ಲ ಎಂದು ಹೇಳುವ ಅನೃತ. ಅಥವಾ ಗೋವಿಗೆ ತೃಣಾದಿಗಳನ್ನು ತೋರಿಸಿ ಕೊಡದೆ ಹಿಂದಕ್ಕೆ ತೆಗೆದುಕೊಂಡು ಹೋಗುವ ವಂಚನೆ - ಲಕ್ಷ್ಮಾಲಂಕಾರ.
ಶ್ರಾದ್ಧಸ್ಯ ಬ್ರಾಹ್ಮಣಃ ಕಾಲಃ ಪ್ರಾಪ್ತಂ ದಧಿ ಘೃತಂ ತಥಾ |
ಸೋಮಕ್ಷಯಶ್ಚ ಮಾಸಶ್ಚ ಯದಾರಣ್ಯಂ ಯುಧಿಷ್ಠಿರ ॥35॥
ಎಲೈ ಯುಧಿಷ್ಠಿರನೇ, ಶ್ರಾದ್ಧಕ್ಕೆ ಬ್ರಾಹ್ಮಣ, ಕಾಲ, ಒದಗಿದ ಘೃತಗಳು, ಅಮಾವಾಸ್ಯೆ ಮತ್ತು ಪೌರ್ಣಮಿಗಳು ಮತ್ತು ತಪೋವನ ಇವು ಮುಖ್ಯವಾದವು.
ಮುಹೂರ್ತಾನಾಂ ತ್ರಯಂ ಪೂರ್ವಮಹ್ನಃ ಪ್ರಾತರಿತಿ ಸ್ಮೃತಮ್ |
ಜಪಧ್ಯಾನಾದಿಭಿಸ್ತಸ್ಮಿನ್ ವಿಪ್ರೈಃ ಕಾರ್ಯಂ ಶುಭವ್ರತಮ್ ॥36॥
ಹಗಲಿನ ಮೊದಲಿನ ಮೂರು ಮುಹೂರ್ತಗಳು ಪ್ರಾತಃಕಾಲ ಎಂದು ಕರೆಯಲ್ಪಡುತ್ತವೆ. ಬ್ರಾಹ್ಮಣರು ಆ ಕಾಲದಲ್ಲಿ ಜಪ-ಧ್ಯಾನಾದಿ ಶುಭವ್ರತಗಳನ್ನು ಮಾಡಬೇಕು.
ಸಂಗವಾಖ್ಯಂ ತ್ರಿಭಾಗಂ ತು ಮಧ್ಯಾಹ್ನಸ್ತ್ರಿಮುಹೂರ್ತಕಃ |
ಲೌಕಿಕಂ ಸಂಗವೇಽರ್ಧಂ ಚ ಸ್ನಾನಾದಿ ಹ್ಯಥ ಮಧ್ಯಮೇ ॥37॥
ಸಂಗವು ಮೂರು ಮುಹೂರ್ತಗಳು ಮತ್ತು ಮಧ್ಯಾಹ್ನಕಾಲವು ಮೂರು ಮುಹೂರ್ತಗಳು. ಸಂಗವದ ಮೊದಲಿನ ಅರ್ಧದಲ್ಲಿ ಲೋಕಹಿತಕಾರ್ಯವನ್ನು ಮಾಡಿ ಅನಂತರದ ಅರ್ಧದಲ್ಲಿ ದ್ವಿತೀಯ ಸ್ನಾನಾದಿ ಕಾರ್ಯಗಳನ್ನು ಮಾಡಬೇಕು.
ಚತುರ್ಥಮಪರಾಹ್ಣಂ ತು ತ್ರಿಮುಹೂರ್ತಂ ತು ಪಿತ್ರ್ಯಕಮ್ |
ಸಾಯಾಹ್ನಸ್ತ್ರಿಮುಹೂರ್ತಂ ಚ ಮಧ್ಯಮಂ ಕವಿಭಿಃ ಸ್ಮೃತಮ್ ॥38॥
ಚತುರ್ಥೇ ತ್ವಪರಾಹ್ಣಾಖ್ಯೇ ಶ್ರಾದ್ಧಂ ಕುರ್ಯಾತ್ ಸದಾ ನೃಪ ॥39॥
ನಾಲ್ಕನೆಯ ಮೂರು ಮುಹೂರ್ತಕ್ಕೆ ಅಪರಾಹ್ಣವೆಂದು ಹೆಸರು. ಆಗ ಪಿತೃ ಕರ್ಮವನ್ನು ಮಾಡಬೇಕು. ಸಾಯಾಹ್ನವು ಮೂರು ಮುಹೂರ್ತವು ಪಿತೃಕಾರ್ಯಕ್ಕೆ ಅದು ಮಧ್ಯಮ ಕಾಲವೆಂದು ಜ್ಞಾನಿಗಳ ಅಭಿಪ್ರಾಯ. ಎಲೈ ರಾಜನೇ, ಹಗಲಿನ ನಾಲ್ಕನೆಯ ಭಾಗವಾದ ಅಪರಾಹ್ಣದಲ್ಲಿ ಯಾವಾಗಲೂ ಶ್ರಾದ್ಧವನ್ನು ಮಾಡಬೇಕು.
ಪ್ರಾಗುದೀಚೀಮುಖಾ ವಿಪ್ರಾಃ ವಿಶ್ವೇದೇವೇ ಚ ದಕ್ಷಿಣಾಃ |
ಶ್ರಾವಿತೇಷು ಸುತೃಪ್ತೇಷು ಪಿಂಡಂ ದದ್ಯಾತ್ ಸದಕ್ಷಿಣಮ್ ॥40॥
ಬ್ರಾಹ್ಮಣರನ್ನು ಈಶಾನ್ಯಾಭಿಮುಖವಾಗಿಯೂ ವಿಶ್ವೇದೇವತೆಗಳನ್ನು ದಕ್ಷಿಣದಲ್ಲಿಯೂ ಕುಳ್ಳಿರಿಸಿ, ಬ್ರಾಹ್ಮಣರು ಭೋಜನವನ್ನು ಮಾಡಿ, ನಾವು ತೃಪ್ತರಾಗಿದ್ದೇವೆಂದು ಹೇಳಿದ ಮೇಲೆ ಅವರಿಗೆ ದಕ್ಷಿಣೆಯನ್ನು ನೀಡಿ ಪಿಂಡಪ್ರದಾನವನ್ನು ಮಾಡಬೇಕು.
ಶ್ರಾದ್ಧಾಪವರ್ಗೇ ವಿಪ್ರಸ್ಯ ಸ್ವಧಾ ವೈ ಸ್ವಧಿತಾ ಭವೇತ್ |
ಕ್ಷತ್ರಿಯಸ್ಯಾಪ್ಯಥೋ ಬ್ರೂಯಾತ್ ಪ್ರೀಯಂತಾಂ ಪಿತರಸಿತ್ವತಿ ॥41॥
ಬ್ರಾಹ್ಮಣನಿಗೆ ಪಿಂಡಪ್ರದಾನವನ್ನು ಮಾಡುವಾಗ ಅಧಿಕಾರಿಯು `ಸ್ವಧಾ ಸ್ವಧಾ ಸ್ವಧಾ ಸಂಪದ್ಯಂತಾಮ್' ಎಂದು ಹೇಳಿ ದಾನವನ್ನು ಮಾಡಿದರೆ ಆ ದಾನವು ಸಮ್ಯಗಧೀತವಾಗುತ್ತದೆ (ಶುಭವಾಗುತ್ತದೆ). ಕ್ಷತ್ರಿಯನಿಗೆ ದಾನ ಮಾಡುವಾಗ `ಪ್ರೀಯಂತಾಂ ತರಃ' ಪಿತೃಗಳು ಪ್ರಸನ್ನರಾಗಲಿ ಎಂದು ಹೇಳಬೇಕು.
ಅಪವರ್ಗೇ ತು ವೈಶ್ಯಸ್ಯ ಶ್ರಾದ್ಧಕರ್ಮಣಿ ಭಾರತ |
ಅಕ್ಷಯ್ಯಮಭಿಧಾತವ್ಯಂ ಸ್ವಸ್ತಿ ಶೂದ್ರಸ್ಯ ಭಾರತ ॥42॥
ಎಲೈ ಭಾರತನೇ, ವೈಶ್ಯರಿಗೆ ಅವರು ಶ್ರಾದ್ಧಕರ್ಮವನ್ನು ಮಾಡುವಾಗ ಅಕ್ಷಯವಾಗಲಿ ಎಂದು ಹೇಳಬೇಕು. ಶೂದ್ರರಿಗೆ ಅವರು ಶ್ರಾದ್ಧಕರ್ಮವನ್ನು ಮಾಡುವಾಗ ಸ್ವಸ್ತಿ (ಒಳ್ಳೆಯದಾಗಲಿ) ಎಂದು ಹೇಳಬೇಕು.
ಪುಣ್ಯಾಹವಾಚನಂ ದೈವೇ ಬ್ರಾಹ್ಮಣಸ್ಯ ವಿಧೀಯತೇ |
ಏತದೇವ ನಿರೋಂಕಾರಂ ಕ್ಷತ್ರಿಯಸ್ಯ ವಿಧೀಯತೇ |
ವೈಶ್ಯಸ್ಯ ಚೈವ ವಕ್ತವ್ಯಂ ಪ್ರೀಯಂತಾಂ ದೇವತಾ ಇತಿ ॥43॥
ದೈವಕಾರ್ಯದಲ್ಲಿ ಬ್ರಾಹ್ಮಣರಿಗೆ ಪುಣ್ಯಾಹವಾಚನವು ವಿಧಿಸಲ್ಪಡುತ್ತದೆ. ಕ್ಷತ್ರಿಯನಿಗಾದರೆ ಓಂಕಾರ ರಹಿತವಾಗಿ ಅದೇ ಪುಣ್ಯಾಹವಾಚನವು ವಿಧಿಸಲ್ಪಡುತ್ತದೆ. ವೈಶ್ಯನಿಗಾದರೆ `ಪ್ರೀಯಂತಾಂ ದೇವತಾಃ' ದೇವತೆಗಳು ಪ್ರಸನ್ನರಾಗಲಿ ಎಂದಿಷ್ಟೇ ಹೇಳಬೇಕು.
ಗೋಹಿಂಸಾಯಾಂ ಚತುರ್ಭಾಗಂ ಪೂರ್ವವಿಪ್ರಾತಿಕೇತನಃ |
ವರ್ಣಾವರೇಷು ಭುಂಜಾನಂ ಕ್ರಮಾಚ್ಛೂದ್ರೇ ಚತುರ್ಗುಣಮ್ |
ನಾನ್ಯತ್ರ ಬ್ರಾಹ್ಮಣೋ ಬ್ರೂಯಾತ್ ಪೂರ್ವಂ ವಿಪ್ರೇಣ ಕೇತಿತಃ ॥44॥
ಮೊದಲು ಬ್ರಾಹ್ಮಣನಿಂದ ಶ್ರಾದ್ಧ ಭೋಜನಕ್ಕಾಗಿ ನಿಮಂತ್ರಿಸಲ್ಪಟ್ಟು ಅವನನ್ನು ಉಲ್ಲಂಘಿಸಿದರೆ ಗೋಹತ್ಯೆಯ ನಾಲ್ಕನೆಯ ಒಂದು ಭಾಗದ ಪಾಪವು ಬರುತ್ತದೆ. ಅವನನ್ನು ಉಲ್ಲಂಘಿಸಿ ಕ್ಷತ್ರಿಯನ ಮನೆಯಲ್ಲಿ, ವೈಶ್ಯನ ಮನೆಯಲ್ಲಿ, ಶೂದ್ರನ ಮನೆಯಲ್ಲಿ ಭೋಜನವನ್ನು ಮಾಡಿದರೆ ಕ್ರಮವಾಗಿ ಒಂದೊಂದು ಪಾದವು ಹೆಚ್ಚಾಗಿ ಶೂದ್ರನ ಭೋಜನದಿಂದ ಪೂರ್ಣವಾದ ಗೋಹತ್ಯಾ ದೋಷವು ಬರುತ್ತದೆ. ಮೊದಲು ಬ್ರಾಹ್ಮಣನಿಂದ ನಿಮಂತ್ರಿಸಲ್ಪಟ್ಟವನು ಬೇರೆಯ ಕಡೆಯಲ್ಲಿ ಒಪ್ಪಬಾರದು.
ಅಭೋಜನೇ ಚ ದೋಷಃ ಸ್ಯಾದ್ ವರ್ಜಯೇತ್ ಶೂದ್ರಕೇತನಮ್ |

ಶೂದ್ರಾನ್ನರಸಪುಷ್ಟಾಂಗೋ ದ್ವಿಜೋ ನೋರ್ಧ್ವಗತಿಂ ಲಭೇತ್ ॥45॥
ನಿಮಂತ್ರಣವನ್ನು ಸ್ವೀಕರಿಸಿ ಭೋಜನಕ್ಕೆ ಹೋಗದಿದ್ದರೆ ದೋಷವಿದೆ. ಶೂದ್ರ ಶ್ರಾದ್ಧದ ಭೋಜನವನ್ನು ವರ್ಜಿಸಬೇಕು. ಶೂದ್ರನ ಅನ್ನರಸದಿಂದ ಪುಷ್ಟನಾದ ದ್ವಿಜನು ಊರ್ಧ್ವಗತಿಯನ್ನು ಹೊಂದುವುದಿಲ್ಲ.
ಅಶುಚಿರ್ನೈವ ಚಾಶ್ನೀಯಾನ್ನಾಸ್ತಿಕೋ ಮಾನವರ್ಜಿತಃ |
ನ ಪೂರ್ವಂ ಲಂಘಯೇಲ್ಲೋಭಾದೇಕವರ್ಣೋಽಪಿ ಪಾರ್ಥಿವ |
ವಿಪ್ರಾಃ ಸ್ಮೃತಾ ಭೂಮಿದೇವಾ ಉಪಕುರ್ವಾಣವರ್ಜಿತಾಃ ॥46॥
ಎಲೈ ರಾಜನೇ, ಅಶುಚಿಯಾದವನಿಗೂ, ನಾಸ್ತಿಕನಿಗೂ, ಮರ್ಯಾದಾರಹಿತನಿಗೂ ನಿಮಂತ್ರಣವನ್ನು ಕೊಡಬಾರದು. ಮೊದಲು ನಿಮಂತ್ರಣವನ್ನು ತೆಗೆದುಕೊಂಡು ಅದೇ ವರ್ಣದ ಎರಡನೆಯವನು ನಿಮಂತ್ರಣವನ್ನು ನೀಡಿದರೆ ಮೊದಲನೆಯ ನಿಮಂತ್ರಣವನ್ನು ಮೀರಬಾರದು. ತನಗೆ ಉಪಕಾರವನ್ನು ಮಾಡುವ ಬ್ರಾಹ್ಮಣರನ್ನು ಬಿಟ್ಟು ಉಳಿದ ಬ್ರಾಹ್ಮಣರು ಭೂದೇವತೆಗಳೆನಿಸುತ್ತಾರೆ.
ಕರ್ಮಣಾಮಾನುಪೂರ್ವೀಂ ಚ ವಿಧಿಪೂರ್ವಕೃತಂ ಶೃಣು |
ಜಾತಕರ್ಮಾದಿಕಾನ್ ಸರ್ವಾಂಸ್ತ್ರಿಷು ವರ್ಣೇಷು ಭಾರತ |
ಬ್ರಹ್ಮಕ್ಷತ್ರೇ ಹಿ ಮಂತ್ರೋಕ್ತಾ ವೈಶ್ಯಸ್ಯ ಚ ಯುಧಿಷ್ಠಿರ ॥47॥
ದ್ವಿಜರಿಗೆ ವಿಧಿಪೂರ್ವಕವಾಗಿ ಮಾಡಬೇಕಾದ ಕರ್ಮವನ್ನು ಹೇಳುತ್ತೇನೆ ಕೇಳು. ಎಲೈ ಭಾರತನೇ, ಜಾತಕರ್ಮಾದಿ ಸರ್ವಕರ್ಮಗಳನ್ನು ಮೂರು ವರ್ಣದವರೂ ಮಾಡಬೇಕು. ಎಲೈ ಯುಧಿಷ್ಠಿರನೇ, ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಿಗೆ ಮಂತ್ರಪೂರ್ವಕವಾಗಿ ಮಾಡಬೇಕು.
ವಿಪ್ರಸ್ಯ ರಶನಾ ಮೌಂಜೀ ಮೌರ್ವೀ ರಾಜನ್ಯಗಾಮಿನೀ |
ಬಾಲ್ವಜೀ ಚೈವ ವೈಶ್ಯಸ್ಯ ಧರ್ಮ ಏಷ ಯುಧಿಷ್ಠಿರ ॥48॥
ಉಪನಯನದಲ್ಲಿ ಬ್ರಾಹ್ಮಣರಿಗೆ ಸೊಂಟಕ್ಕೆ ಕಟ್ಟುವ ಬಂಧನವು ಮೌಂಜೀ ಎಂಬ ದರ್ಭವಿಶೇಷಾತ್ಮಕವಾದುದು. ರಾಜಕುಮಾರರಿಗೆ ಬಿಲ್ಲಿನ ಹೆದೆಯ ರೂಪವಾದುದು. ವೈಶ್ಯರಿಗೆ ಬಲ್ವ ಎಂಬ ದರ್ಭದಿಂದ ಮಾಡಲ್ಪಟ್ಟದು. ಎಲೈ ಯುಧಿಷ್ಠಿರನೇ, ಇದು ಧರ್ಮ.
ಪಾಲಾಶೋ ದ್ವಿಜದಂಡಃ ಸ್ಯಾದಶ್ವತ್ಥಃ ಕ್ಷತ್ರಿಯಸ್ಯ ತು |
ಔದುಂಬರಶ್ಚ ವೈಶ್ಯಸ್ಯ ಧರ್ಮ ಏಷ ಯುಧಿಷ್ಠಿರ ॥49॥
ಬ್ರಾಹ್ಮಣರಿಗೆ ಉಪನಯನದಲ್ಲಿ ಮುತ್ತುಗದ ದಂಡ ದಂಡವಾಗುತ್ತದೆ. ಕ್ಷತ್ರಿಯನಿಗೆ ಅಶ್ವತ್ಥ ದಂಡ. ವೈಶ್ಯನಿಗೆ ಅತ್ತಿಯ ದಂಡ. ಯುಧಿಷ್ಠಿರನೇ, ಇದು ಧರ್ಮ.
ದಾತುಃ ಪ್ರತಿಗ್ರಹೀತುಶ್ಚ ಧರ್ಮಾಧರ್ಮಾವಿಮೌ ಶೃಣು |
ಬ್ರಾಹ್ಮಣಸ್ಯಾನೃತೇಽಧರ್ಮಃ ಪ್ರೋಕ್ತಃ ಪಾತಕಸಂಜ್ಞಿತಃ |
ಚತುರ್ಗುಣಃ ಕ್ಷತ್ರಿಯಸ್ಯ ವೈಶ್ಯಸ್ಯಾಷ್ಟಗುಣಃ ಸ್ಮೃತಃ ॥50॥
ದಾನವನ್ನು ಕೊಡುವವನಿಗೆ ಮತ್ತು ಪ್ರತಿಗ್ರಹವನ್ನು ಮಾಡುವವನಿಗೆ ಉಂಟಾಗುವ ಈ ಧರ್ಮಾಧರ್ಮಗಳನ್ನು ಕೇಳು. ಬ್ರಾಹ್ಮಣನಿಗೆ ಸುಳ್ಳು ಹೇಳಿದರೆ ಉಂಟಾಗುವ ಅಧರ್ಮಕ್ಕೆ ಪಾತಕ ಎಂದು ಹೆಸರು. ಕ್ಷತ್ರಿಯನು ಬ್ರಾಹ್ಮಣನಿಗೆ ಸುಳ್ಳನ್ನು ಹೇಳಿದರೆ ಅದರ ನಾಲ್ಕು ಪಟ್ಟು ಮತ್ತು ವೈಶ್ಯನು ಸುಳ್ಳನ್ನು ಹೇಳಿದರೆ ಅದಕ್ಕೆ ಎಂಟು ಪಟ್ಟು ಪಾತಕ ಉಂಟಾಗುತ್ತದೆ.
ನಾನ್ಯತ್ರ ಬ್ರಾಹ್ಮಣೋಽಶ್ನೀಯಾತ್ ಪೂರ್ವಂ ವಿಪ್ರೇಣ ಕೇತಿತಃ |
ಯವೀಯಾನ್ ಪಶುಹಿಂಸಾಯಾಂ ತುಲ್ಯಧರ್ಮೋ ಭವೇತ್ಸ ಹಿ ॥51॥
ಮೊದಲು ಬ್ರಾಹ್ಮಣನಿಂದ ನಿಮಂತ್ರಿಸಲ್ಪಟ್ಟ ಬ್ರಾಹ್ಮಣನು ಬೇರೆ ಕಡೆಯಲ್ಲಿ ಭೋಜನ ಮಾಡಬಾರದು. ಮೊದಲು ನಿಮಂತ್ರಿತನಾಗಿರುವುದನ್ನು ತಿಳಿದು ಅನಂತರ ನಿಮಂತ್ರಣ ಮಾಡುವವನು ಪಶುಹಿಂಸೆಯನ್ನು ಮಾಡಿದ ಪಾಪವನ್ನು ಹೊಂದುತ್ತಾನೆ.
ಅಥ ರಾಜನ್ಯವೈಶ್ಯಾಭ್ಯಾಂ ಯದ್ಯಶ್ನೀಯಾತ್ತು ಕೇತಿತಃ |
ಯವೀಯಾನ್ ಪಶುಹಿಂಸಾಯಾಂ ಭಾಗಾರ್ಧಂ ಸಮವಾಪ್ನುಯಾತ್ ॥
ಬ್ರಾಹ್ಮಣನಿಮಂತ್ರಣವನ್ನು ಪಡೆದು, ಅನಂತರ ರಾಜ ಅಥವಾ ವೈಶ್ಯರ ನಿಮಂತ್ರಣವನ್ನು ಒಪ್ಪಿದರೆ ಅಲ್ಪನಾದ ಅಂತಹವನು ಪಶುಹಿಂಸೆಯ ಅರ್ಧದಷ್ಟು ಪಾಪವನ್ನು ಹೊಂದುತ್ತಾನೆ.
ದೈವಂ ವಾಪ್ಯಥ ವಾ ಪಿತ್ರ್ಯಂ ಯೋಽಶ್ನೀಯಾದ್ ಬ್ರಾಹ್ಮಣಾದಿಷು |
ಅಸ್ನಾತೋ ಬ್ರಾಹ್ಮಣೋ ರಾಜಂಸ್ತಸ್ಯಾಧರ್ಮೋ ಗವಾನೃತಮ್ ॥53॥
ದೈವಕಾರ್ಯದಲ್ಲಾಗಲೀ ಅಥವಾ ಪಿತೃಕಾರ್ಯದಲ್ಲಾಗಲೀ ಬ್ರಾಹ್ಮಣಾದಿಗಳ ಮನೆಗೆ ಹೋಗಿ ಸ್ನಾನವಿಲ್ಲದೆ ಭೋಜನವನ್ನು ಮಾಡುವ ಬ್ರಾಹ್ಮಣನಿಗೆ ಎಲೈ ರಾಜನೇ, ಗವಾನೃತ ಪಾಪವು ಬರುತ್ತದೆ.
ಆಶೌಚೋ ಬ್ರಾಹ್ಮಣೋ ರಾಜನ್ ಯೋಽಶ್ನೀಯಾದ್ ಬ್ರಾಹ್ಮಣಾದಿಷು |
ಜ್ಞಾನಪೂರ್ವಮಥೋ ಲೋಭಾತ್ ತಸ್ಯಾಧರ್ಮೋ ಗವಾನೃತಮ್ ॥
ಎಲೈ ರಾಜನೇ, ಅಶುಚಿಯಾದ (ಸೂತಕ ಮತ್ತು ಮೃತಕಗಳನ್ನು ಹೊಂದಿರುವ) ಬ್ರಾಹ್ಮಣನು ಅಶೌಚವನ್ನು ತಿಳಿಯದೆ ಬ್ರಾಹ್ಮಣಾದಿಗಳಲ್ಲಿ ಭೋಜನವನ್ನು ಮಾಡಿದರೆ ಅಥವಾ ಅಶೌಚವನ್ನು ತಿಳಿದು, ಲೋಭದಿಂದ ಭೋಜನವನ್ನು ಮಾಡಿದರೆ ಅವನ ಪಾಪವು ಗವಾನೃತಕ್ಕೆ ಸಮವಾಗುತ್ತದೆ.
ಅನ್ನೇನಾನ್ನಂ ಚ ಯೋ ಲಿಪ್ಸೇತ್ ಕರ್ಮಾರ್ಥಂ ಚೈವ ಭಾರತ |
ಆಮಂತ್ರಯತಿ ರಾಜೇಂದ್ರ ತಸ್ಯಾಧರ್ಮೋಽನೃತಂ ಸ್ಮೃತಮ್ ॥55॥
ಎಲೈ ಭಾರತನೇ, ಯಾವನು ಅನ್ನವನ್ನು ನೀಡಿ ಅನ್ನವನ್ನು ಪಡೆಯಲು ಇಚ್ಛಿಸುತ್ತಾನೆಯೋ (ತಾನು ಆಹ್ವಾನ ಮಾಡಿದರೆ ಅವರೂ

ಆಹ್ವಾನ ಮಾಡುತ್ತಾರೆಂದು ಬಯಸುತ್ತಾನೆಯೋ) ದೈವ- ಪಿತೃಕಾರ್ಯಾರ್ಥವಾಗಿ ಧನವನ್ನು ಸಂಗ್ರಹಿಸಿ ಆಹ್ವಾನ ಮಾಡುತ್ತಾನೆಯೋ, ಎಲೈ ರಾಜೇಂದ್ರನೇ, ಅವನ ಪಾಪವು ಅನೃತವಚನದ ಪಾಪಕ್ಕೆ ಸಮವಾಗುತ್ತದೆ.

ಅವೇದವ್ರತಚಾರಿತ್ರಾಸ್ತ್ರಿಭಿರ್ವರ್ಣೈರ್ಯುಧಿಷ್ಠಿರ |
ಮಂತ್ರವತ್ಪರಿವಿಷ್ಯಂತೇ ತೇಷ್ವಧರ್ಮೋ ಗವಾನೃತಮ್ ॥56॥

ಎಲೈ ಯುಧಿಷ್ಠಿರನೇ, ವೇದ, ವ್ರತ ಮತ್ತು ಚಾರಿತ್ರ್ಯವಿಲ್ಲದವರಿಗೆ ಮೂರು ವರ್ಣದವರು ಮಂತ್ರಜ್ಞನೆಂದು ತಿಳಿದು ಶ್ರಾದ್ಧ ಭೋಜನವನ್ನು ನೀಡಿದರೆ ಅವರಿಗೆ ಗವಾನೃತ ದೋಷವು ಬರುತ್ತದೆ.

ಯುಧಿಷ್ಠಿರಃ

ಪಿತ್ರ್ಯಂ ವಾಪ್ಯಥ ವಾ ದೈವಂ ದೀಯತೇ ಯತ್ಪಿತಾಮಹ |
ಏತದಿಚ್ಛಾಮ್ಯಹಂ ಶ್ರೋತುಂ ದತ್ತಂ ಯೇಷು ಮಹಾಫಲಮ್ ॥57॥

ಯುಧಿಷ್ಠಿರ ಪಿತಾಮಹನೇ, ದೈವಕಾರ್ಯದಲ್ಲಾಗಲೀ ಅಥವಾ ಪಿತೃಕಾರ್ಯದಲ್ಲಾಗಲೀ ಯಾರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ ಎಂದು ತಿಳಿಯಲು ಬಯಸುತ್ತೇನೆ.

ಭೀಷ್ಮಃ

ಯೇಷಾಂ ದಾರಾಃ ಪ್ರತೀಕ್ಷಂತೇ ಸುವೃಷ್ಟಿಮಿವ ಕರ್ಷಕಾಃ |
ಉಚ್ಛೇಷಪರಿಶೇಷಂ ಹಿ ತಾನ್ ಭೋಜಯ ಯುಧಿಷ್ಠಿರ ॥58॥

ಭೀಷ್ಮ ಕೃಷೀವಲನು ಒಳ್ಳೆಯ ಮಳೆಯನ್ನು ನಿರೀಕ್ಷಿಸುವಂತೆ ಯಾವ ಪತ್ನಿಯು ಪತಿಯ ಉಚ್ಛಿಷ್ಟವನ್ನು ನಿರೀಕ್ಷಿಸುತ್ತಾಳೆಯೋ ಎಲೈ ಯುಧಿಷ್ಠಿರನೇ, ಅಂತಹವರಿಗೆ ಭೋಜನವನ್ನು ನೀಡು.

ಚಾರಿತ್ರನಿಯತಾ ರಾಜನ್ ಯೇ ಕೃಶಾಃ ಕೃಶವೃತ್ತಯಃ |
ಅರ್ಥಿನಶ್ಚೋಪಗಚ್ಛಂತಿ ತೇಷು ದತ್ತಂ ಮಹಾಫಲಮ್ ॥59॥

ಎಲೈ ರಾಜನೇ, ಚಾರಿತ್ರಸಂಪನ್ನರಾಗಿ, ಕೃಶರಾಗಿ, ದುರ್ಬಲವಾದ ಜೀವನೋಪಾಯವನ್ನು ಹೊಂದಿ ಪ್ರಾರ್ಥಿಸಿ ಸಮೀಪಕ್ಕೆ ಬರುತ್ತಾರೆಯೋ ಅಂತಹವರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.

ತದ್ಭಕ್ತಾಸ್ತದ್ಗೃಹಾ ರಾಜಂಸ್ತದ್ಧನಾಸ್ತದಪಾಶ್ರಯಾಃ |
ಅರ್ಥಿನಶ್ಚ ಭವಂತ್ಯರ್ಥೇ ತೇಷು ದತ್ತಂ ಮಹಾಫಲಮ್ ॥60॥

ಎಲೈ ರಾಜನೇ, ತನ್ನ ಭಕ್ತರು, ತನ್ನ ಗೃಹದಲ್ಲಿ ವಾಸಿಸುವವರು, ತನ್ನ ಧನದಲ್ಲೇ ಜೀವಿಸುವವರು, ತನ್ನನ್ನೇ ಆಶ್ರಯಿಸಿಕೊಂಡಿರುವವರು, ತಮ್ಮ ಕಾರ್ಯಕ್ಕಾಗಿ ತನ್ನನ್ನೇ ಪ್ರಾರ್ಥಿಸುವವರು ಅಂತಹವರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.

ತಸ್ಕರೇಭ್ಯಃ ಪರೇಭ್ಯೋ ವಾ ಯೇ ಭಯಾರ್ತಾ ಯುಧಿಷ್ಠಿರ |
ಅರ್ಥಿನೋ ಭೋಕ್ತುಮಿಚ್ಛಂತಿ ತೇಷು ದತ್ತಂ ಮಹಾಫಲಮ್ ॥61॥

ಎಲೈ ಯುಧಿಷ್ಠಿರನೇ, ಕಳ್ಳರಿಗೋ ಅಥವಾ ಬೇರೆಯವರಿಗೋ ಹೆದರಿ ಅರ್ಥಿಗಳಾಗಿ ಯಾರು ಭೋಜನಕ್ಕೆ ಬರುತ್ತಾರೆಯೋ ಅಂತಹವರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುವುದು.

ಅಕಲ್ಕಸ್ಯಾಪಿ ವಿಪ್ರಸ್ಯ ಭೈಕ್ಷ್ಯೋತ್ಕರಕೃತಾತ್ಮನಃ |
ಬಟವೋ ಯಸ್ಯ ಭಿಕ್ಷಂತಿ ತೇಭ್ಯೋ ದತ್ತಂ ಮಹಾಫಲಮ್ ॥62॥

ನಿರ್ವಂಚನೆಯಿಂದ ಜೀವಿಸಿ (ವೈದ್ಯವೃತ್ತಿಯನ್ನು ಮಾಡದ) ಭಿಕ್ಷಾವೃತ್ತಿಯಿಂದ ದೇಹವನ್ನು ಪೋಷಿಸುವ ಬ್ರಾಹ್ಮಣನ ಭಿಕ್ಷೆಯನ್ನು ಬೇಡುವ ವಟುಗಳಿಗೆ ಕೊಟ್ಟುದುದು ಮಹಾಫಲವನ್ನು ಕೊಡುತ್ತದೆ.

ಹೃತಸ್ವಾ ಹೃತದಾರಾಶ್ಚ ಯೇ ವಿಪ್ರಾ ದೇಶಸಂಪ್ಲವೇ |
ಅರ್ಥಾರ್ಥಮಭಿಗಚ್ಛಂತಿ ತೇಭ್ಯೋ ದತ್ತಂ ಮಹಾಫಲಮ್ ॥63॥

ದೇಶಕ್ಕೆ ಕ್ಷೋಭೆಯುಂಟಾಗಿ ಯಾವ ಬ್ರಾಹ್ಮಣರು ಪತ್ನಿಯನ್ನೂ, ಸರ್ವಸ್ವವನ್ನೂ ಕಳೆದುಕೊಂಡು, ಜೀವನವನ್ನು ಸಾಗಿಸುವ ಧನಕ್ಕಾಗಿ ತನ್ನ ಬಳಿಗೆ ಬರುತ್ತಾರೆಯೋ ಅವರಿಗೆ ನೀಡಿದುದು ಮಹಾಫಲವನ್ನು ಕೊಡುತ್ತದೆ.

ವ್ರತಿನೋ ನಿಯಮಸ್ಥಾಶ್ಚ ಯೇ ವಿಪ್ರಾಃ ಶ್ರುತಸಮ್ಮತಾಃ |
ತತ್ಸಮಾಪ್ತ್ಯರ್ಥಮಿಚ್ಛಂತಿ ತೇಷು ದತ್ತಂ ಮಹಾಫಲಮ್ ॥64॥

ವಿದ್ಯೆಯಿಂದ ಸಮ್ಮತರಾದ ಯಾವ ಬ್ರಾಹ್ಮಣರು ವ್ರತ-ನೇಮನಿಷ್ಠರಾಗಿ ಅವುಗಳನ್ನು ಸಮಾಪ್ತಿಗೊಳಿಸಲು ಬಯಸಿ ಸಮೀಪಿಸುತ್ತಾರೆಯೋ ಅವರಿಗೆ ನೀಡಿದುದು ಮಹಾಫಲವನ್ನು ಕೊಡುತ್ತದೆ.

ಅವ್ಯುತ್ಕ್ರಾಂತಾಶ್ಚ ಧರ್ಮೇಷು ಪಾಷಂಡಸಮಯೇಷು ಚ |
ಕೃಶಪ್ರಾಣಾಃ ಕೃಶಧನಾಸ್ತೇಷು ದತ್ತಂ ಮಹಾಫಲಮ್ ॥65॥

ಧರ್ಮಮಾರ್ಗವನ್ನು ಬಿಡದೆ, ಪಾಷಂಡಮಾರ್ಗವನ್ನು ಹಿಡಿಯದೆ ಯಾರು ಅಲ್ಪಪ್ರಮಾಣದ ಧನವನ್ನು ಬೇಡುತ್ತಾರೆಯೋ ಅವರಿಗೆ ನೀಡಿದುದು ಮಹಾಫಲವನ್ನು ಕೊಡುತ್ತದೆ.

ಕೃತಸರ್ವಸ್ವಹರಣಾ ನಿರ್ದೋಷಾಃ ಪ್ರಭವಿಷ್ಣುಭಿಃ |
ಸ್ಪೃಹಯಂತಿ ಚ ಭುಕ್ತಾನ್ನಂ ತೇಷು ದತ್ತಂ ಮಹಾಫಲಮ್ ॥66॥

ರಾಜರಿಂದ ಅಥವಾ ಪ್ರಬಲರಿಂದ ತಮ್ಮ ಸರ್ವಸ್ವವೂ ಅಪಹರಿಸಲ್ಪಟ್ಟು ನಿರ್ದೋಷರಾದ ಯಾರು ಅನ್ನವನ್ನು ಬಯಸುತ್ತಾರೆಯೋ ಅವರಿಗೆ ನೀಡಿದುದು ಮಹಾಫಲವನ್ನು ಕೊಡುತ್ತದೆ.

ತಪಸ್ವಿನಸ್ತಪೋನಿಷ್ಠಾಸ್ತೇಷಾಂ ಭೈಕ್ಷಚರಾಶ್ಚ ಯೇ |

ಅರ್ಥಿನಃ ಕಿಂಚಿದಿಚ್ಛಂತಿ ತೇಷು ದತ್ತಂ ಮಹಾಫಲಮ್ ॥67॥
ತಪಸ್ಸಿನಲ್ಲಿ ನಿರತರಾದ ತಪಸ್ವಿಗಳು ಮತ್ತು ಅವರ ಸಲುವಾಗಿ ಭಿಕ್ಷೆಯನ್ನು ಬೇಡುವವರು ಅರ್ಥಿಗಳಾಗಿ ಏನಾದರೂ ಬಯಸಿದರೆ ಅವರಿಗೆ ಕೊಟ್ಟುದುದು ಮಹಾಫಲವನ್ನು ಕೊಡುತ್ತದೆ.
ವ್ರತಾನಾಂ ಪಾರಣಾರ್ಥಾಯ ಗುರ್ವರ್ಥೇ ಯಜ್ಞದಕ್ಷಿಣಾಮ್ |
ನಿವೇಶಾರ್ಥಂ ಚ ವಿದ್ವಾಂಸಸ್ತೇಷಾಂ ದತ್ತಂ ಮಹಾಫಲಮ್ ॥68॥
ವ್ರತಗಳನ್ನು ಸಮಾಪ್ತಿಗೊಳಿಸುವುದಕ್ಕಾಗಿ, ಗುರುದಕ್ಷಿಣೆಯನ್ನು ಕೊಡುವುದಕ್ಕಾಗಿ, ಯಜ್ಞದಕ್ಷಿಣೆಯನ್ನು ಕೊಡುವುದಕ್ಕಾಗಿ, ಗೃಹಸ್ಥಾಶ್ರಮವನ್ನು ಸ್ವೀಕರಿಸುವುದಕ್ಕಾಗಿ ವಿದ್ವಾಂಸರಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.
ಪಿತ್ರೋಶ್ಚ ರಕ್ಷಣಾರ್ಥಾಯ ಪುತ್ರದಾರಾರ್ಥಮೇವ ವಾ |
ಮಹಾವ್ಯಾಧಿವಿಮೋಕ್ಷಾರ್ಥಂ ತೇಷು ದತ್ತಂ ಮಹಾಫಲಮ್ ॥69॥
ತಂದೆ-ತಾಯಿಗಳ ರಕ್ಷಣೆಗಾಗಿ, ಪತ್ನೀ-ಪುತ್ರರ ರಕ್ಷಣೆಗಾಗಿ, ಮಹಾವ್ಯಾಧಿಗಳಿಂದ ಬಿಡುಗಡೆ ಹೊಂದುವುದಕ್ಕಾಗಿ ನೀಡಿದುದು ಮಹಾಫಲವನ್ನು ಕೊಡುತ್ತದೆ.
ಮಹಾಫಲವಿಧಿರ್ದಾನೇ ಶ್ರುತಸ್ತೇ ಭರತರ್ಷಭ |
ನಿರಯಂ ಯೇನ ಗಚ್ಛಂತಿ ಸ್ವರ್ಗಂ ಚೈವ ಹಿ ತಚ್ಛೃಣು ॥70॥
ಎಲೈ ಭರತಶ್ರೇಷ್ಠನೇ, ಧನದ ವಿಷಯದಲ್ಲಿ ಮಹಾಫಲವನ್ನು ಗಳಿಸುವ ವಿಧಾನವನ್ನು ನಿನಗೆ ಹೇಳಿದ್ದೇನೆ. ಯಾವ ಕರ್ಮಗಳಿಂದ ನರಕಕ್ಕೆ ಹೋಗುತ್ತಾರೆ ಅಥವಾ ಸ್ವರ್ಗಕ್ಕೆ ಹೋಗುತ್ತಾರೆ ಎಂದು ಹೇಳುತ್ತೇನೆ, ಅದನ್ನು ಕೇಳು.
ಬಾಲಾಃ ಸ್ತ್ರಿಯಶ್ಚ ವಾಂಛಂತಿ ಸುಭಕ್ತಂ ಚಾಪ್ಯಸಾಧನಾಃ |
ಸ್ವರ್ಗಮಾಯಾಂತಿ ದತ್ತ್ವೈಷಾಂ ನಿರಯಾನ್ ನೋಪಯಾಂತಿ ತೇ ॥
ಜೀವನೋಪಾಯ ರಹಿತರಾದ ಯಾರ ಸ್ತ್ರೀಯರು ಮತ್ತು ಬಾಲಕರು ಅನ್ನವನ್ನು ಬಯಸುತ್ತಾರೆಯೋ ಅವರಿಗೆ ಅನ್ನವನ್ನು ನೀಡಿದದವರು ಸ್ವರ್ಗಕ್ಕೆ ಹೋಗುತ್ತಾರೆ. ನರಕಕ್ಕೆ ಹೋಗುವುದಿಲ್ಲ.
ಗುರ್ವರ್ಥಂ ವಾಽಭಯಾರ್ಥಂ ವಾ ವರ್ಜಯಿತ್ವಾ ಯುಧಿಷ್ಠಿರ |
ಯೇಽನೃತಂ ಕಥಯಂತಿ ಸ್ಮ ತೇ ವೈ ನಿರಯಗಾಮಿನಃ ॥72॥
ಎಲೈ ಯುಧಿಷ್ಠಿರನೇ, ಯಾರು ಗುರುಗಳ ಸಲುವಾಗಿ ಅಥವಾ ಅಭಯವನ್ನು ಕೊಡುವ ಸಲುವಾಗಿ ಬಿಟ್ಟು ಬೇರೆಯ ಕಾರಣಕ್ಕಾಗಿ ಸುಳ್ಳನ್ನು ಹೇಳುತ್ತಾರೆಯೋ ಅವರು ನರಕಕ್ಕೆ ಹೋಗುತ್ತಾರೆ.
ಪರದಾರಾಭಿಹರ್ತಾರಃ ಪರದಾರಾಭಿಮರ್ಶಿನಃ |
ಪರದಾರಪ್ರಯೋಕ್ತಾರಸ್ತೇ ವೈ ನಿರಯಗಾಮಿನಃ ॥73॥
ಇನ್ನೊಬ್ಬರ ಪತ್ನಿಯನ್ನು ಅಪಹರಿಸುವವರು, ಇನ್ನೊಬ್ಬರ ಪತ್ನಿಯನ್ನು ಭೋಗಿಸುವವರು, ಇನ್ನೊಬ್ಬರ ಪತ್ನಿಯನ್ನು ಮತ್ತೊಬ್ಬನೆಡೆಗೆ ಕಳುಹಿಸುವವರು ನರಕಕ್ಕೆ ಹೋಗುತ್ತಾರೆ.
ಯೇ ಪರಸ್ವಾಪಹರ್ತಾರಃ ಪರಸ್ವಾನಾಂ ಚ ನಾಶಕಾಃ |
ಸೂಚಕಾಶ್ಚ ಪರೇಷಾಂ ಯೇ ತೇ ವೈ ನಿರಯಗಾಮಿನಃ ॥74॥
ಪರಸ್ವತ್ತನ್ನು ಅಪಹರಿಸುವವರು, ಪರಸ್ವತ್ತನ್ನು ನಾಶಪಡಿಸುವವರು, ಚಾಡಿಯನ್ನು ಹೇಳುವವರು ನರಕಕ್ಕೆ ಹೋಗುತ್ತಾರೆ.
ಪ್ರಪಾಣಾಂ ಚ ಸಭಾನಾಂ ಚ ಸಂಕ್ರಮಾಣಾಂ ಚ ಭಾರತ |
ಆಗಾರಾಣಾಂ ಚ ಭೇತ್ತಾರೋ ನರಾ ನಿರಯಗಾಮಿನಃ ॥75॥
ಎಲೈ ಭಾರತನೇ, ಅರವಟ್ಟಿಗೆಗಳು, ಸಭಾಮಂದಿರಗಳು, ಸೇತುವೆಗಳು, ಮನೆಗಳು ಇವುಗಳನ್ನು ಒಡೆಯುವ ಮನುಷ್ಯರು ನರಕಕ್ಕೆ ಹೋಗುತ್ತಾರೆ.
ಅನಾಥಾಂ ಪ್ರಮದಾಂ ಬಾಲಾಂ ವೃದ್ಧಾಂ ಭೀತಾಂ ತಪಸ್ವಿನೀಮ್ |
ವಂಚಯಂತಿ ನರಾ ಯೇ ಚ ತೇ ವೈ ನಿರಯಗಾಮಿನಃ ॥76॥
ಅನಾಥಳೂ ಅಥವಾ ಚಿಕ್ಕವಳೂ ಅಥವಾ ಬಾಲಕಿಯೂ ಅಥವಾ ವೃದ್ಧಳೂ ಅಥವಾ ಭೀತಳೂ ಅಥವಾ ದರಿದ್ರಳೂ ಆದ ಸ್ತ್ರೀಯನ್ನು ವಂಚಿಸುವವರು ನರಕಕ್ಕೆ ಹೋಗುತ್ತಾರೆ.
ವೃತ್ತಿಚ್ಛೇದಂ ಗೃಹಚ್ಛೇದಂ ದಾರಚ್ಛೇದಂ ಚ ಭಾರತ |
ಮಿತ್ರಚ್ಛೇದಂ ತಥಾಶಾಯಾಸ್ತೇ ವೈ ನಿರಯಗಾಮಿನಃ ॥77॥
ಎಲೈ ಭಾರತನೇ, ವೃತ್ತಿಚ್ಛೇದವನ್ನು ಮಾಡುವವರು, ಮನೆಯನ್ನು ಒಡೆಯುವವರು, ದಾಂಪತ್ಯವನ್ನು ಒಡೆಯುವವರು, ಮಿತ್ರಚ್ಛೇದವನ್ನು ಮಾಡುವವರು, ಆಶಾಭಂಗವನ್ನು ಮಾಡುವವರು ನರಕಕ್ಕೆ ಹೋಗುತ್ತಾರೆ.
ಸೂಚಕಾಃ ಸಂಧಿಭೇತ್ತಾರಃ ಪರವೃತ್ತ್ಯುಪಜೀವಿನಃ |
ಅಕೃತಜ್ಞಾಶ್ಚ ಮಿತ್ರಾಣಾಂ ತೇ ವೈ ನಿರಯಗಾಮಿನಃ ॥78॥
ಚಾಡಿಕೋರರು, ಸ್ನೇಹವನ್ನು ಭೇದಿಸುವವರು, ಇನ್ನೊಬ್ಬರಿಂದ ದುಡಿಸಿ ಜೀವಿಸುವವರು, ಮಿತ್ರರಲ್ಲಿ ಕೃತಜ್ಞತೆ ಇಲ್ಲದವರು ನರಕಕ್ಕೆ ಹೋಗುತ್ತಾರೆ.
ಪಾಷಂಡಾ ದೂಷಕಾಶ್ಚೈವ ಸಮಯಾನಾಂ ಚ ದೂಷಕಾಃ |
ಯೇ ಪ್ರತ್ಯವಸಿತಾಶ್ಚೈವ ತೇ ವೈ ನಿರಯಗಾಮಿನಃ ॥79॥
ಪಾಷಂಡರು, ಎಲ್ಲರನ್ನೂ ದೂಷಿಸುವವರು, ಧರ್ಮದ ವಿಧಿಗಳನ್ನು ದೂಷಿಸುವವರು, ಸಂನ್ಯಾಸವನ್ನು ಸ್ವೀಕರಿಸಿ ಪುನಃ ಗೃಹಸ್ಥಾಶ್ರಮವನ್ನು ಸ್ವೀಕರಿಸುವವರು ಎಲ್ಲರೂ ನರಕಕ್ಕೆ ಹೋಗುತ್ತಾರೆ.

ವಿಷಮವ್ಯವಹಾರಾಶ್ಚ ವಿಷಮಾಶ್ಚೈವ ವೃದ್ಧಿಷು |
ಲಾಭೇಷು ವಿಷಮಾಶ್ಚೈವ ತೇ ವೈ ನಿರಯಗಾಮಿನಃ ॥80॥
ವ್ಯವಹಾರಗಳಲ್ಲಿ ವಿಷಮರಾದವರು, ಬಡ್ಡಿಯ ವಿಷಯದಲ್ಲಿ ವಿಷಮರಾದವರು, ಲಾಭಗಳ ವಿಷಯದಲ್ಲಿ ವಿಷಮರಾದವರು ನರಕಕ್ಕೆ ಹೋಗುತ್ತಾರೆ.
ದ್ಯೂತಸಂವ್ಯವಹಾರಾಶ್ಚ ನಿಷ್ಪರೀಕ್ಷಾಶ್ಚ ಮಾನವಾಃ |
ಪ್ರಾಣಿಹಿಂಸಾಪ್ರವೃತ್ತಾಶ್ಚ ತೇ ವೈ ನಿರಯಗಾಮಿನಃ ॥81॥
ದ್ಯೂತವ್ಯವಹಾರವನ್ನು ಮಾಡುವವರು, ಗುಣ-ದೋಷಗಳ ಪರೀಕ್ಷೆಯನ್ನು ತಿಳಿಯದವರು, ಪ್ರಾಣಿಹಿಂಸೆಯಲ್ಲಿ ಪ್ರವೃತ್ತರಾದವರು ನರಕಕ್ಕೆ ಹೋಗುತ್ತಾರೆ.
ಕೃತಾಶಂ ಕೃತನಿರ್ವೇಶಂ ಕೃತಭಕ್ತಂ ಕೃತಶ್ರಮಮ್ |
ಭೇದೈರ್ಯೇ ವ್ಯಪಕರ್ಷಂತಿ ತೇ ವೈ ನಿರಯಗಾಮಿನಃ ॥82॥
ಒಬ್ಬ ಸ್ವಾಮಿಯ ಬಳಿಯಲ್ಲಿ ಅವನಿಗೆ ಕಷ್ಟಪಟ್ಟು ಕೆಲಸ ಮಾಡಿ, ಅವನಲ್ಲಿ ನಿಷ್ಠೆಯನ್ನು ಹೊಂದಿ, ವಿವಾಹವನ್ನು ಮಾಡಿಕೊಂಡು, ಅವನಲ್ಲಿ ಆಸೆ ಇಟ್ಟುಕೊಂಡಿರುವ ಭೃತ್ಯನನ್ನು ಭೇದೋಪಾಯಗಳಿಂದ ಯಾರು ಸ್ವಾಮಿಯಿಂದ ಬೇರ್ಪಡಿಸುತ್ತಾರೆಯೋ ಅವರು ನರಕಕ್ಕೆ ಹೋಗುತ್ತಾರೆ.
ಪರ್ಯಶ್ನಂತಿ ಚ ಯೇ ದಾರಾನಗ್ನಿಭೃತ್ಯಾತಿಥೀಂಸ್ತಥಾ |
ಉತ್ಸನ್ನಪಿತೃದೇವೇಜ್ಯಾಸ್ತೇ ವೈ ನಿರಯಗಾಮಿನಃ ॥83॥
ಪತ್ನಿಯನ್ನೂ, ಭೃತ್ಯರನ್ನೂ, ಅತಿಥಿಗಳನ್ನು ಬಿಟ್ಟು ಅಗ್ನಿಯನ್ನು ಪೂಜಿಸದೆ ಯಾರು ಮೊದಲು ಭೋಜನವನ್ನು ಮಾಡುತ್ತಾರೆಯೋ, ಪಿತೃಗಳನ್ನೂ ದೇವತೆಗಳನ್ನೂ ಯಾರು ಪೂಜಿಸುವುದಿಲ್ಲವೋ ಅವರು ನರಕಕ್ಕೆ ಹೋಗುತ್ತಾರೆ.
ವೇದವಿಕ್ರಯಿಣಶ್ಚೈವ ವೇದಾನಾಂ ಚೈವ ದೂಷಕಾಃ |
ವೇದಾನಾಂ ಲೇಖಕಾಶ್ಚೈವ ತೇ ವೈ ನಿರಯಗಾಮಿನಃ ॥84॥
ವೇದವಿಕ್ರಯವನ್ನು ಮಾಡುವವರು, ವೇದಗಳನ್ನು ದೂಷಿಸುವವರು, ವೇದವನ್ನು ಬರೆಯುವವರು ನರಕಕ್ಕೆ ಹೋಗುತ್ತಾರೆ.
ಚಾತುರಾಶ್ರಮ್ಯಬಾಹ್ಯಾಶ್ಚ ಶ್ರುತಿಬಾಹ್ಯಾಶ್ಚ ಯೇ ನರಾಃ |
ವಿಕರ್ಮಭಿಶ್ಚ ಜೀವಂತಿ ತೇ ವೈ ನಿರಯಗಾಮಿನಃ ॥85॥
ನಾಲ್ಕು ಆಶ್ರಮಗಳ ಧರ್ಮವನ್ನು ಪಾಲಿಸದೆ, ವೇದಬಾಹ್ಯರಾಗಿ ವಿಕರ್ಮದಿಂದ ಜೀವಿಸುವವರು ನರಕಕ್ಕೆ ಹೋಗುತ್ತಾರೆ.
ಕೇಶವಿಕ್ರಯಿಕಾ ರಾಜನ್ ವಿಷವಿಕ್ರಯಿಕಾಶ್ಚ ಯೇ |
ಕ್ಷೀರವಿಕ್ರಯಿಕಾಶ್ಚೈವ ತೇ ವೈ ನಿರಯಗಾಮಿನಃ ॥86॥
ಎಲೈ ರಾಜನೇ, ಕೂದಲನ್ನು ಮಾರುವವರು, ವಿಷವನ್ನು ಮಾರುವವರು, ಕ್ಷೀರವನ್ನು ಮಾರುವವರು ನರಕಕ್ಕೆ ಹೋಗುತ್ತಾರೆ.
ಬ್ರಾಹ್ಮಣಾನಾಂ ಗವಾಂ ಚೈವ ಕನ್ಯಾನಾಂ ಚ ಯುಧಿಷ್ಠಿರ |
ಯೇಽಂತರಂ ಯಾಂತಿ ಕಾರ್ಯೇಷು ತೇ ವೈ ನಿರಯಗಾಮಿನಃ ॥87॥
ಎಲೈ ಯುಧಿಷ್ಠಿರನೇ, ಬ್ರಾಹ್ಮಣರ ಮಧ್ಯದಲ್ಲಿ, ಗೋವುಗಳ ಮಧ್ಯದಲ್ಲಿ, ಕನ್ಯೆಯರ ಮಧ್ಯದಲ್ಲಿ ತಮ್ಮ ಕಾರ್ಯಕ್ಕಾಗಿ ಯಾರು ಹೋಗುತ್ತಾರೆಯೋ ಅವರು ನರಕಕ್ಕೆ ಹೋಗುತ್ತಾರೆ.
ಶಸ್ತ್ರವಿಕ್ರಯಕಾಶ್ಚೈವ ಕರ್ತಾರಶ್ಚ ಯುಧಿಷ್ಠಿರ |
ಶಲ್ಯಾನಾಂ ಧನುಷಾಂ ಚೈವ ತೇ ವೈ ನಿರಯಗಾಮಿನಃ ॥88॥
ಎಲೈ ಯುಧಿಷ್ಠಿರನೇ, ಶಸ್ತ್ರಗಳನ್ನು ಮಾಡುವವರು, ಮಾರುವವರು, ಈಟಿ ಮತ್ತು ಧನುಸ್ಸುಗಳನ್ನು ಮಾರುವವರು ನರಕಕ್ಕೆ ಹೋಗುತ್ತಾರೆ.
ಶಲ್ಯೈರ್ವಾ ಶಂಕುಭಿರ್ವಾಪಿ ಶ್ವಭ್ರೈರ್ವಾ ಭರತರ್ಷಭ |
ಯೇ ಮಾರ್ಗಮನುರುಂಧಂತಿ ತೇ ವೈ ನಿರಯಗಾಮಿನಃ ॥89॥
ಎಲೈ ಭರತಶ್ರೇಷ್ಠನೇ, ಹರಿತವಾದ ಗೂಟಗಳಿಂದಾಗಲೀ, ಆಯುಧಗಳಿಂದಾಗಲೀ ಅಥವಾ ರಂಧ್ರಗಳಿಂದಾಗಲೀ ಅಥವಾ ಹಳ್ಳದಿಂದಾಗಲೀ ನಡೆಯುವ ಮಾರ್ಗವನ್ನು ತಡೆಯುವವರು ನರಕಕ್ಕೆ ಹೋಗುತ್ತಾರೆ.
ಉಪಾಧ್ಯಾಯಾಂಶ್ಚ ಭೃತ್ಯಾಂಶ್ಚ ಭಕ್ತಾಂಶ್ಚ ಭರತರ್ಷಭ |
ಯೇ ತ್ಯಜಂತ್ಯಸಮರ್ಥಾಂಸ್ತಾಂಸ್ತೇ ವೈ ನಿರಯಗಾಮಿನಃ ॥90॥
ಎಲೈ ಭರತಶ್ರೇಷ್ಠನೇ, ಅಶಕ್ತರಾದ ಉಪಾಧ್ಯಾಯರನ್ನು, ಭೃತ್ಯರನ್ನು ಮತ್ತು ಭಕ್ತರನ್ನು ತೊರೆಯುವವರು ನರಕಕ್ಕೆ ಹೋಗುತ್ತಾರೆ.
ಅಪ್ರಾಪ್ತದಮಕಾಶ್ಚೈವ ನಾಸಾನಾಂ ವೇಧಕಾಸ್ತಥಾ |
ಬಂಧಕಾಶ್ಚ ಪಶೂನಾಂ ಯೇ ತೇ ವೈ ನಿರಯಗಾಮಿನಃ ॥91॥
ಹೋರಿಗಳಿಗೆ ಅಪ್ರಾಪ್ತಕಾಲದಲ್ಲಿ ಬೀಜಗಳನ್ನು ಒಡೆಯುವವರು, ಮೂಗು ದಾರವನ್ನು ಹಾಕುವವರು, ಪಶುಗಳನ್ನು ಬಂಧಿಸಿ ಹಿಂಸೆಯನ್ನು ಕೊಡುವವರು ನರಕಕ್ಕೆ ಹೋಗುತ್ತಾರೆ.
ಅಗೋಪ್ತಾರಶ್ಚಲದ್ರವ್ಯಾ ಬಲಿಷಡ್ಗತತ್ಪರಾಃ |
ಸಮರ್ಥಾಶ್ಚಾಪ್ಯದಾತಾರಸ್ತೇ ವೈ ನಿರಯಗಾಮಿನಃ ॥92॥
ಪ್ರಜೆಗಳನ್ನು ರಕ್ಷಿಸದೆ ಛಲದಿಂದ ಅವರ ದ್ರವ್ಯವನ್ನು ಸಂಪಾದಿಸಿ, ಅವರ ಆದಾಯದಲ್ಲಿ ಆರನೆಯ ಒಂದು ಭಾಗವನ್ನು ಕರವಾಗಿ ಸ್ವೀಕರಿಸಿ ಸಮರ್ಥರಾದರೂ ದಾನ ಮಾಡದಿರುವ ರಾಜರು ನರಕಕ್ಕೆ ಹೋಗುತ್ತಾರೆ.
ಕ್ಷಾಂತಾನ್ ದಾಂತಾಂಸ್ತಥಾ ಪ್ರಾಜ್ಞಾನ್ ದೀರ್ಘಕಾಲಂ ಸಹೋಷಿತಾನ್|

ತ್ಯಜಂತಿ ಕೃತಕೃತ್ಯಾ ಯೇ ತೇ ವೈ ನಿರಯಗಾಮಿನಃ ॥93॥
ಕ್ಷಮಾವಂತರು, ಇಂದ್ರಿಯನಿಗ್ರಹವುಳ್ಳವರು, ಪ್ರಾಜ್ಞರು, ಬಹುಕಾಲ ತನ್ನ ಜೊತೆಯಲ್ಲಿ ಇದ್ದವರು ಆದವರಿಂದ ತಮ್ಮ ಕಾರ್ಯವನ್ನು ಮಾಡಿಸಿಕೊಂಡು ಅನಂತರ ಪರಿತ್ಯಜಿಸುವವರು ನರಕಕ್ಕೆ ಹೋಗುತ್ತಾರೆ.
ಬಾಲಾನಾಮಥ ವೃದ್ಧಾನಾಂ ದಾಸಾನಾಂ ಚೈವ ಯೇ ನರಾಃ।
ಅದತ್ತತ್ವ ಭಕ್ಷಯಂತ್ಯಗ್ರೇ ತೇ ವೈ ನಿರಯಗಾಮಿನಃ ॥94॥
ಬಾಲಕರಿಗೆ, ವೃದ್ಧರಿಗೆ, ದಾಸರಿಗೆ ಅನ್ನವನ್ನು ನೀಡದೆ ತಾವು ಮೊದಲು ಊಟವನ್ನು ಮಾಡುವವರು ನರಕಕ್ಕೆ ಹೋಗುತ್ತಾರೆ.
ಸರ್ವೇಷ್ವೇವ ತು ಕಾರ್ಯೇಷು ದೈವಪೂರ್ವೇಷು ಭಾರತ।
ಹಂತಿ ಪುತ್ರಾನ್ ಪಶೂನ್ ಕೃತ್ಸ್ನಾನ್ ಬ್ರಾಹ್ಮಣಾತಿಕ್ರಮಃ ಕೃತಃ ॥95॥
ಎಲೈ ಭಾರತನೇ, ದೇವಕಾರ್ಯ, ಪಿತೃಕಾರ್ಯ ಮುಂತಾದ ಎಲ್ಲ ಕಾರ್ಯಗಳಲ್ಲಿಯೂ ಯಾರು ಮಕ್ಕಳನ್ನು, ಪಶುಗಳನ್ನು ಹೊಡೆಯುತ್ತಾರೆಯೋ, ಬ್ರಾಹ್ಮಣಾತಿಕ್ರಮವನ್ನು ಮಾಡುತ್ತಾರೆಯೋ ಅಂತಹವರು ನರಕಕ್ಕೆ ಹೋಗುತ್ತಾರೆ.
ಏತೇ ಪೂರ್ವರ್ಷಿಭಿರ್ದೃಷ್ಟಾಃ ಪ್ರೋಕ್ತಾ ನಿರಯಗಾಮಿನಃ।
ಭಾಗಿನಃ ಸ್ವರ್ಗಲೋಕಸ್ಯ ವಕ್ಷ್ಯಾಮಿ ಭರತರ್ಷಭ ॥96॥
ಎಲೈ ಭರತಶ್ರೇಷ್ಠನೇ, ಹೀಗೆ ಪೂರ್ವರ್ಷಿಗಳು ಹೇಳಿದಂತೆ ನರಕಕ್ಕೆ ಹೋಗುವವರನ್ನು ನಿನಗೆ ಹೇಳಿದ್ದೇನೆ. ಸ್ವರ್ಗಲೋಕಕ್ಕೆ ಹೋಗುವವರನ್ನು ಹೇಳುವೆನು.
ದಾನೇನ ತಪಸಾ ಚೈವ ಸತ್ಯೇನ ಚ ಯುಧಿಷ್ಠಿರ।
ಯೇ ಧರ್ಮಮನುವರ್ತಂತೇ ತೇ ನರಾಃ ಸ್ವರ್ಗಗಾಮಿನಃ ॥97॥
ಎಲೈ ಯುಧಿಷ್ಠಿರನೇ, ದಾನವನ್ನು ಮಾಡಿ, ತಪಸ್ಸನ್ನು ಮಾಡಿ, ಸತ್ಯದಿಂದ ಯಾರು ಧರ್ಮವನ್ನು ಅನುಸರಿಸುತ್ತಾರೆಯೋ ಅಂತಹ ಮನುಷ್ಯರು ಸ್ವರ್ಗಕ್ಕೆ ಹೋಗುತ್ತಾರೆ.
ಶು(ಶಿ)ಶ್ರೂಷಾಭಿಸ್ತಪೋಭಿಶ್ಚ ಶ್ರುತಮಾದಾಯ ಭಾರತ।
ಯೇ ಪ್ರತಿಗ್ರಹನಿಃಸ್ನೇಹಾಸ್ತೇ ನರಾಃ ಸ್ವರ್ಗಗಾಮಿನಃ ॥98॥
ಎಲೈ ಭಾರತನೇ, ಯಾರು ಗುರುಶುಶ್ರೂಷೆಯಿಂದಲೂ ಮತ್ತು ತಪಸ್ಸಿನಿಂದಲೂ ವಿದ್ಯೆಯನ್ನು ಸಂಪಾದಿಸಿ, ಪ್ರತಿಗ್ರಹವನ್ನು ಮಾಡದೆ ಜೀವಿಸುತ್ತಾರೆಯೋ ಅಂತಹವರು ಸ್ವರ್ಗಕ್ಕೆ ಹೋಗುತ್ತಾರೆ.
ಭಯಾತ್ ಪಾಪಾತ್ ತಥಾ ಬಾಧಾದ್ ದಾರಿದ್ರ್ಯಾದ್ ವ್ಯಾಧಿಧರ್ಷಣಾತ್।
ಯತ್ಕೃತೇ ಪ್ರತಿಮುಚ್ಯಂತೇ ತೇ ನರಾಃ ಸ್ವರ್ಗಗಾಮಿನಃ ॥99॥
ಭಯದಿಂದ, ದುಷ್ಕರ್ಮದಿಂದ, ಬಾಧೆಯಿಂದ, ದಾರಿದ್ರ್ಯದಿಂದ, ವ್ಯಾಧಿಯ ಉಪದ್ರವದಿಂದ ಏನನ್ನು ಮಾಡಿದರೆ ಅವುಗಳಿಂದ ಬಿಡುಗಡೆಯನ್ನು ಹೊಂದುತ್ತಾರೆಯೋ ಅಂತಹ ಕಾರ್ಯವನ್ನು ಮಾಡಿ, ಸಂಕಟದಿಂದ ಬಿಡುಗಡೆಗೊಳಿಸುವ ಮಾನವರು ಸ್ವರ್ಗಕ್ಕೆ ಹೋಗುತ್ತಾರೆ.
ಕ್ಷಮಾವಂತಶ್ಚ ಧೀರಾಶ್ಚ ಧರ್ಮಕಾರ್ಯೇಷು ಚೋತ್ಥಿತಾಃ।
ಮಂಗಲಾಚಾರಯುಕ್ತಾಶ್ಚ ತೇ ನರಾಃ ಸ್ವರ್ಗಗಾಮಿನಃ ॥100॥
ಕ್ಷಮಾವಂತರು, ಧೈರ್ಯಶಾಲಿಗಳು, ಧರ್ಮಕಾರ್ಯದಲ್ಲಿ ಉದ್ಯುಕ್ತರಾದವರು, ಶುಭಾಚಾರವುಳ್ಳವರು ಆದ ನರರು ಸ್ವರ್ಗಕ್ಕೆ ಹೋಗುತ್ತಾರೆ.
ನಿವೃತ್ತಾ ಮಧುಮಾಂಸೇಭ್ಯಃ ಪರದಾರೇಭ್ಯ ಏವ ಚ।
ನಿವೃತ್ತಾಶ್ಚೈವ ಮದ್ಯೇಭ್ಯಸ್ತೇ ನರಾಃ ಸ್ವರ್ಗಗಾಮಿನಃ ॥101॥
ಮಧು-ಮಾಂಸಗಳಿಂದ ನಿವೃತ್ತರಾದ, ಪರಪತ್ನಿಯರಿಂದ ನಿವೃತ್ತರಾದ, ಮದ್ಯದಿಂದ ನಿವೃತ್ತರಾದ ಮಾನವರು ಸ್ವರ್ಗಕ್ಕೆ ಹೋಗುತ್ತಾರೆ.
ಆಶ್ರಮಾಣಾಂ ಚ ಕರ್ತಾರಃ ಕುಲಾನಾಂ ಚೈವ ಭಾರತ।
ದೇಶಾನಾಂ ನಗರಾಣಾಂ ಚ ತೇ ನರಾಃ ಸ್ವರ್ಗಗಾಮಿನಃ ॥102॥
ಎಲೈ ಭಾರತನೇ, ಆಶ್ರಮವನ್ನು ಕಟ್ಟಿಸುವವರು, ಕುಲಗಳನ್ನು ನಿರ್ಮಿಸುವವರು, ದೇಶಗಳನ್ನು ಮತ್ತು ನಗರಗಳನ್ನು ನಿರ್ಮಿಸುವವರು ಸ್ವರ್ಗಕ್ಕೆ ಹೋಗುತ್ತಾರೆ.
ವಸ್ತ್ರಾಭರಣದಾತಾರೋ ಭಕ್ಷಪಾನಾನ್ನದಾಸ್ತಥಾ।
ಕುಟುಂಬಾನಾಂ ಚ ದಾತಾರಸ್ತೇ ನರಾಃ ಸ್ವರ್ಗಗಾಮಿನಃ ॥103॥
ವಸ್ತ್ರಾಭರಣಗಳನ್ನು ದಾನ ಮಾಡುವವರು, ಭಕ್ಷ-ಪಾನ-ಅನ್ನಗಳನ್ನು ದಾನ ಮಾಡುವವರು, ಕುಟುಂಬವನ್ನು ದಾನ ಮಾಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ಸರ್ವಹಿಂಸಾನಿವೃತ್ತಾಶ್ಚ ನರಾಃ ಸರ್ವಸಹಾಶ್ಚ ಯೇ।
ಸರ್ವಸ್ಯಾಶ್ರಯಭೂತಾಶ್ಚ ತೇ ನರಾಃ ಸ್ವರ್ಗಗಾಮಿನಃ ॥104॥
ಎಲ್ಲ ರೀತಿಯ ಹಿಂಸೆಗಳಿಂದಲೂ ಹಿಂದೆ ಸರಿದು, ಶೀತೋಷ್ಣಾದಿ ಎಲ್ಲವನ್ನೂ ಸಹಿಸಿಕೊಂಡು, ಎಲ್ಲರಿಗೂ ಆಶ್ರಯವನ್ನು ನೀಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ಮಾತರಂ ಪಿತರಂ ಚೈವ ಶಿ(ಶು)ಶ್ರೂಷಂತಿ ಜಿತೇಂದ್ರಿಯಾಃ।
ಭ್ರಾತೄಣಾಂ ಚೈವ ಸಸ್ನೇಹಾಸ್ತೇ ನರಾಃ ಸ್ವರ್ಗಗಾಮಿನಃ ॥105॥
ಮಾತಾ-ಪಿತೃಗಳ ಸೇವೆಯನ್ನು ಮಾಡಿ ಜಿತೇಂದ್ರಿಯರಾಗಿ ಸಹೋದರರಲ್ಲಿ ಸ್ನೇಹವನ್ನು ಹೊಂದಿದವರು ಸ್ವರ್ಗಕ್ಕೆ ಹೋಗುತ್ತಾರೆ.

ಆಢ್ಯಾಶ್ಚ ಬಲವಂತಶ್ಚ ಯೌವನಸ್ಥಾಶ್ಚ ಭಾರತ |
ಯೇ ವೈ ಜಿತೇಂದ್ರಿಯಾ ಧೀರಾಸ್ತೇ ನರಾಃ ಸ್ವರ್ಗಗಾಮಿನಃ ॥106॥
ಎಲೈ ಭಾರತನೇ, ಧನಾಡ್ಯರೂ, ಬಲಿಷ್ಠರೂ, ಯುವಕರೂ ಆಗಿ ಯಾರು ಧೀರರಾಗಿ ಜಿತೇಂದ್ರಿಯರಾಗಿರುತ್ತಾರೆಯೋ ಅವರು ಸ್ವರ್ಗಕ್ಕೆ ಹೋಗುತ್ತಾರೆ.
ಅಪರಾದ್ಧೇಷು ಸಸ್ನೇಹಾ ಮೃದವೋ ಮಿತ್ರವತ್ಸಲಾಃ |
ಆರಾಧನಸುಖಾಶ್ಚಾಪಿ ತೇ ನರಾಃ ಸ್ವರ್ಗಗಾಮಿನಃ ॥107॥
ಅಪರಾಧ ಮಾಡಿದವರಲ್ಲಿ ಸ್ನೇಹವನ್ನು ಹೊಂದಿದವರು, ಮೃದು ಸ್ವಭಾವದವರು, ಮಿತ್ರರಲ್ಲಿ ವಾತ್ಸಲ್ಯವುಳ್ಳವರು, ಇನ್ನೊಬ್ಬರನ್ನು ಆರಾಧಿಸಿ ಸಂತೋಷ ಪಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ಸಹಸ್ರಪರಿವೇಷ್ಟಾರಸ್ತಥೈವ ಚ ಸಹಸ್ರದಾಃ |
ತ್ರಾತಾರಶ್ಚ ಸಹಸ್ರಾಣಾಂ ಪುರುಷಾಃ ಸ್ವರ್ಗಗಾಮಿನಃ ॥108॥
ಸಹಸ್ರಜನಗೆ ಅನೇಕ ಬಾರಿ ಭೋಜನವನ್ನು ಬಡಿಸುವವರು, ಸಹಸ್ರ ಜನರನ್ನು ರಕ್ಷಿಸುವವರು ಸ್ವರ್ಗಕ್ಕೆ ಹೋಗುತ್ತಾರೆ.
ಸುವರ್ಣಸ್ಯ ಚ ದಾತಾರೋ ಗವಾಂ ಚ ಭರತರ್ಷಭ |
ಯಾನಾನಾಂ ವಾಹನಾನಾಂ ಚ ತೇ ನರಾಃ ಸ್ವರ್ಗಗಾಮಿನಃ ॥109॥
ಎಲೈ ಭರತಶ್ರೇಷ್ಠನೇ, ಸುವರ್ಣದಾನವನ್ನು ಮಾಡುವವರು, ಗೋದಾನವನ್ನು ಮಾಡುವವರು, ಯಾನಗಳ ಮತ್ತು ವಾಹನಗಳ ದಾನವನ್ನು ಮಾಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ವೈವಾಹಿಕಾನಾಂ ಕನ್ಯಾನಾಂ ಪ್ರೇಷ್ಯಾಣಾಂ ಚ ಯುಧಿಷ್ಠಿರ |
ದಾತಾರೋ ವಾಸಸಾಂ ಚೈವ ತೇ ನರಾಃ ಸ್ವರ್ಗಗಾಮಿನಃ ॥110॥
ಎಲೈ ಯುಧಿಷ್ಠಿರನೇ, ವಿವಾಹ ಯೋಗ್ಯರಾದ ತನ್ನ ಭೃತ್ಯರ ಕನ್ಯೆಯರಿಗೆ ವಸ್ತ್ರಗಳನ್ನು ಕೊಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ವಿಹಾರಾವಸಥೋದ್ಯಾನಕೂಪಾರಾಮಸಭಾಪ್ರದಾಃ |
ವಪ್ರಾಣಾಂ ಚೈವ ಕರ್ತಾರಸ್ತೇ ನರಾಃ ಸ್ವರ್ಗಗಾಮಿನಃ ॥111॥
ವಿಹಾರಸ್ಥಾನ, ಮನೆಗಳು, ಉದ್ಯಾನ, ಬಾವಿ, ತೋಟ, ಸಭೆ- ಇವುಗಳನ್ನು ದಾನ ಮಾಡಿ ಕೋಟೆಗಳನ್ನು ಕಟ್ಟುವವರು ಸ್ವರ್ಗಕ್ಕೆ ಹೋಗುತ್ತಾರೆ.
ನಿವೇಶನಾನಾಂ ಕ್ಷೇತ್ರಾಣಾಂ ವಸತೀನಾಂ ಚ ಭಾರತ |
ದಾತಾರಃ ಪ್ರಾರ್ಥಿತಾನಾಂ ಚ ತೇ ನರಾಃ ಸ್ವರ್ಗಗಾಮಿನಃ ॥112॥
ಎಲೈ ಭಾರತನೇ, ಮನೆಯನ್ನು ಕಟ್ಟಲು ಯೋಗ್ಯವಾದ ನಿವೇಶನಗಳನ್ನು, ಹೊಲಗಳನ್ನು, ಮನೆಗಳನ್ನು ಪ್ರಾರ್ಥನೆ ಮಾಡುವವರಿಗೆ ಕೊಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ರಸಾನಾಮಥ ಬೀಜಾನಾಂ ಧಾನ್ಯಾನಾಂ ಚ ಯುಧಿಷ್ಠಿರ |
ಸ್ವಯಮುತ್ಪಾದ್ಯ ದಾತಾರಃ ಪುರುಷಾಃ ಸ್ವರ್ಗಗಾಮಿನಃ ॥113॥
ಎಲೈ ಯುಧಿಷ್ಠಿರನೇ, ರಸಪದಾರ್ಥಗಳನ್ನು, ಧಾನ್ಯಬೀಜಗಳನ್ನು ಮತ್ತು ಧಾನ್ಯಗಳನ್ನು ಸ್ವತಃ ಉತ್ಪಾದಿಸಿ ದಾನ ಮಾಡುವವರು ಸ್ವರ್ಗಕ್ಕೆ ಹೋಗುತ್ತಾರೆ.
ಯಸ್ಮಿನ್ ಕಸ್ಮಿನ್ ಕುಲೇ ಜಾತಾ ಬಹುಪುತ್ರಾಃ ಶತಾಯುಷಃ |
ಸಾನುಕ್ರೋಶಾ ಜಿತಕ್ರೋಧಾಃ ಪುರುಷಾಃ ಸ್ವರ್ಗಗಾಮಿನಃ ॥114॥
ಯಾವ ಕುಲದಲ್ಲಿ ಹುಟ್ಟಿದರೂ ಅನೇಕ ಪುತ್ರರನ್ನು ಹೊಂದಿ ಪೂರ್ಣಾಯುಷ್ಯವನ್ನು ಹೊಂದಿ, ಕ್ರೋಧವನ್ನು ಜಯಿಸಿ, ದಯಾಪರರಾದವರು ಸ್ವರ್ಗಕ್ಕೆ ಹೋಗುತ್ತಾರೆ.
ಏತದುಕ್ತಮಮುತ್ರಾರ್ಥಂ ದೈವಂ ಪಿತ್ರ್ಯಂ ಚ ಭಾರತ |
ಧರ್ಮಾಧರ್ಮೌ ಚ ದಾನಸ್ಯ ಯಥಾ ಪೂರ್ವರ್ಷಿಭಿಃ ಕೃತೌ ॥115॥
ಎಲೈ ಭಾರತನೇ, ನಾನು ನಿನಗೆ ಪರಲೋಕದ ವಿಷಯವನ್ನೂ, ದೇವ-ಪಿತೃ ಕಾರ್ಯಗಳ ಪ್ರಕಾರಗಳನ್ನೂ, ಧರ್ಮಾಧರ್ಮಗಳನ್ನೂ, ದಾನಫಲಗಳನ್ನೂ ಪೂರ್ವರ್ಷಿಗಳು ಹೇಳಿದಂತೆ ತಿಳಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಸ್ವರ್ಗನರಕಗಾಮಿಜನಕಥನಂ ನಾಮ ಚತುಃಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೈದನೆಯ ಅಧ್ಯಾಯ
ಹಿಂಸೆ ಮಾಡದೆ ಬ್ರಹ್ಮಹತ್ಯಾದೋಷದ ಘಟನೆಯ ಪ್ರಕಾರ.
ಯುಧಿಷ್ಠಿರಃ
ಇದಂ ಮೇ ತತ್ತ್ವತೋ ರಾಜನ್ ವಕ್ತುಮರ್ಹಸಿ ಭಾರತ |
ಅಹಿಂಸಯಿತ್ವಾ ಕೇನೇಹ ಬ್ರಹ್ಮಹತ್ಯಾ ವಿಧೀಯತೇ ॥1॥
ಯುಧಿಷ್ಠಿರ ಎಲೈ ಭಾರತನೇ, ರಾಜನೇ, ಹಿಂಸೆ ಮಾಡದೆ ಬ್ರಹ್ಮಹತ್ಯೆಯ ಸಂಘಟನೆಯು ಹೇಗೆ ಆಗುತ್ತದೆ ಎಂಬ ವಿಷಯವನ್ನು ಚೆನ್ನಾಗಿ ಹೇಳುವವನಾಗು.
ಭೀಷ್ಮಃ

ವ್ಯಾಸಮಾಮಂತ್ರ್ಯ ರಾಜೇಂದ್ರ ಪುರಾ ಯತ್ಪೃಷ್ಟವಾನಹಮ್ |
ತತ್ತೇಽಹಂ ಸಂಪ್ರವಕ್ಷ್ಯಾಮಿ ತದಿಹೈಕಮನಾಃ ಶೃಣು ॥2॥
ಭೀಷ್ಮ ಎಲೈ ರಾಜೇಂದ್ರನೇ, ವೇದವ್ಯಾಸರನ್ನು ಕರೆದು ಹಿಂದೆ ನಾನು ನೀನು ಮಾಡಿದ ಪ್ರಶ್ನೆಗೆ ಅವರು ಕೊಟ್ಟ ಉತ್ತರವನ್ನು ನಿನಗೆ ಹೇಳುವೆನು. ಅದನ್ನು ಒಂದೇ ಮನಸ್ಸಿನಿಂದ ಕೇಳು.
ಚತುರ್ಥಸ್ತ್ವಂ ವಸಿಷ್ಠಸ್ಯ ತತ್ತ್ವಮಾಖ್ಯಾಹಿ ಮೇ ಮುನೇ |
ಅಹಿಂಸಯಿತ್ವಾ ಕೇನೇಹ ಬ್ರಹ್ಮಹತ್ಯಾ ವಿಧೀಯತೇ ॥3॥
ಎಲೈ ಮಹರ್ಷಿಯೇ, ನೀವು ವಸಿಷ್ಠರಿಂದ ನಾಲ್ಕನೆಯವರು (ವಸಿಷ್ಠ-ಶಕ್ತಿ- ಪರಾಶರ-ವೇದವ್ಯಾಸ) ಹಿಂಸೆಯನ್ನು ಮಾಡದೆ ಹೇಗೆ ಬ್ರಹ್ಮಹತ್ಯಾ ಪಾಪವು ಸಂಘಟಿಸುತ್ತದೆ?
ಇತಿ ಪೃಷ್ಟೋ ಮಹಾರಾಜ ಪರಾಶರಶರೀರಜಃ |
ಅಬ್ರವೀನ್ನಿಪುಣೋ ಧರ್ಮೇ ನಿಃಸಂಶಯಮನುತ್ತಮಮ್ ॥4॥
ಎಲೈ ಮಹಾರಾಜನೇ, ಹೀಗೆ ಪ್ರಶ್ನೆ ಮಾಡಲ್ಪಟ್ಟ ಪರಾಶರಪುತ್ರರಾದ ಧರ್ಮದಲ್ಲಿ ನಿಪುಣರಾದ ವ್ಯಾಸರು ಸಂಶಯವಿಲ್ಲದಂತೆ ಶ್ರೇಷ್ಠವಾದ ಉತ್ತರವನ್ನು ಕೊಟ್ಟರು.
ಬ್ರಾಹ್ಮಣಂ ಸ್ವಯಮಾಹೂಯ ಭಿಕ್ಷಾರ್ಥೇ ಕೃಶವೃತ್ತಿನಮ್ |
ಬ್ರೂಯಾನ್ನಾಸ್ತೀತಿ ಯಃ ಪಶ್ಚಾತ್ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥5॥
ದರಿದ್ರನಾದ ಬ್ರಾಹ್ಮಣನನ್ನು ಸ್ವತಃ ಭಿಕ್ಷಾರ್ಥಕ್ಕಾಗಿ ಕರೆದು ಅನಂತರ ಇಲ್ಲ ಎಂದು ಹೇಳುವವನು ಬ್ರಹ್ಮಘಾತಕನೆಂದು ತಿಳಿಯಬೇಕು.

ಮಧ್ಯಸ್ಥಸ್ಯೇಹ ವಿಪ್ರಸ್ಯ ಯೋಽನೂಚಾನಸ್ಯ ಭಾರತ |
ವೃತ್ತಿಂ ಹರತಿ ದುರ್ಬುದ್ಧಿಸ್ತಂ ವಿದ್ಯಾದ್ ಬ್ರಹ್ಮಘಾತಿನಮ್ ॥6॥
ಎಲೈ ಭಾರತನೇ, ಸಂಪ್ರದಾಯ ನಿಷ್ಠನಾದ ನಿರುಪದ್ರವಿಯಾದ ಬ್ರಾಹ್ಮಣನ ಜೀವನೋಪಾಯವನ್ನು ಯಾವ ದುರ್ಬುದ್ಧಿಯುಳ್ಳ ಪುರುಷನು ನಾಶ ಮಾಡುತ್ತಾನೆಯೋ ಅವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.
ಗೋಕುಲಸ್ಯ ತೃಷಾರ್ತಸ್ಯ ಜಲಾರ್ಥೇ ವಸುಧಾಧಿಪ |
ಉತ್ಪಾದಯತಿ ಯೋ ವಿಘ್ನಂ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥7॥
ಎಲೈ ವಸುಧಾಧಿಪನೇ, ಬಾಯಾರಿಕೆಯಿಂದ ಬಳಲಿ ನೀರಿನ ಬಳಿಗೆ ಹೋಗುವ ಗೋವುಗಳ ಸಮೂಹಕ್ಕೆ ವಿಘ್ನವನ್ನು ಮಾಡುವವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.
ಯಃ ಪ್ರವೃತ್ತಾಂ ಶ್ರುತಿಂ ಸಮ್ಯಕ್ ಶಾಸ್ತ್ರಂ ವಾ ಮುನಿಭಿಃ ಕೃತಮ್ |
ದೂಷಯತ್ಯನಭಿಜ್ಞಾಯ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥8॥
ಯಾವನು ಜ್ಞಾನವಿಲ್ಲದಿದ್ದರೂ ಅನಾದಿಕಾಲದಿಂದ ಬಂದ ವೇದವನ್ನು ಮತ್ತು ಋಷಿಗಳು ಮಾಡಿದ ಯಥಾರ್ಥವಾದ ಶಾಸ್ತ್ರವನ್ನು ದೂಷಿಸುತ್ತಾನೆಯೋ ಅವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.
ಆತ್ಮಜಾಂ ರೂಪಸಂಪನ್ನಾಂ ಮಹತೀಂ ಸದೃಶೇ ವರೇ |
ನ ಪ್ರಯಚ್ಛತಿ ಯಃ ಕನ್ಯಾಂ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥9॥
ರೂಪಸಂಪನ್ನಳೂ, ಪ್ರೌಢಳೂ ಆದ ಪುತ್ರಿಯನ್ನು ಯಾವನು ಯೋಗ್ಯನಾದ ವರನಿಗೆ ಕೊಡುವುದಿಲ್ಲವೋ ಅವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.
ಅಧರ್ಮನಿರತೋ ಮೂಢೋ ಮಿಥ್ಯಾ ಯೋ ವೈ ದ್ವಿಜಾತಿಷು |
ದದ್ಯಾನ್ಮರ್ಮಾತಿಗಂ ಶೋಕಂ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥10॥
ಅಧರ್ಮನಿರತನಾದವನನ್ನೂ, ಮೂಢನಾದವನನ್ನೂ ಬ್ರಾಹ್ಮಣರಿಗೆ ಸುಳ್ಳಿನಿಂದ ನಡೆದುಕೊಳ್ಳುವವನನ್ನೂ, ಮರ್ಮಭೇದಕ ಶೋಕವನ್ನು ಉಂಟು ಮಾಡುವವನನ್ನೂ ಬ್ರಹ್ಮಘಾತಕನೆಂದು ತಿಳಿಯಬೇಕು.
ಚಕ್ಷುಷಾ ವಿಪ್ರಹೀನಸ್ಯ ಪಂಗುಲಸ್ಯ ಜಡಸ್ಯ ವಾ |
ಹರೇತ ಯೋ ವೈ ಸರ್ವಸ್ವಂ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥11॥
ಯಾವನು ಅಂಧನ, ದರಿದ್ರನ, ಕುಂಟನ ಅಥವಾ ಬುದ್ಧಿಹೀನನ ಸರ್ವಸ್ವವನ್ನು ಅಪಹರಿಸುತ್ತಾನೆಯೋ ಅವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.
ಆಶ್ರಮೇ ವಾ ವನೇ ವಾ ಯೋ ಗ್ರಾಮೇ ವಾ ಯದಿ ವಾ ಪುರೇ |
ಅಗ್ನಿಂ ಸಮುತ್ಸೃಜೇನ್ಮೋಹಾತ್ ತಂ ವಿದ್ಯಾದ್ ಬ್ರಹ್ಮಘಾತಿನಮ್ ॥12॥
ಯಾವನು ಆಶ್ರಮದಲ್ಲಾಗಲೀ, ಕಾಡಿನಲ್ಲಾಗಲೀ, ಗ್ರಾಮದಲ್ಲಾಗಲೀ ಅಥವಾ ಪಟ್ಟಣದಲ್ಲಾಗಲೀ ಮೋಹದಿಂದ ಅಗ್ನಿಯನ್ನು ಹಚ್ಚುತ್ತಾನೆಯೋ ಅವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಬ್ರಹ್ಮಹತ್ಯಾಕಥನಂ
ನಾಮ ಪಂಚಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತಾರನೆಯ ಅಧ್ಯಾಯ

ತೀರ್ಥಪ್ರಶಂಸಾ
ಯುಧಿಷ್ಠಿರಃ
ತೀರ್ಥಾನಾಂ ದರ್ಶನಂ ಶ್ರೇಯಃ ಸ್ನಾನಂ ಚ ಭರತರ್ಷಭ |
ಶ್ರವಣಂ ಚ ಮಹಾಪ್ರಾಜ್ಞ ಶ್ರೋತುಮಿಚ್ಛಾಮಿ ತತ್ತ್ವತಃ ||1||
ಯುಧಿಷ್ಠಿರ ಎಲೈ ಭರತರ್ಷಭನೇ, ತೀರ್ಥಗಳ ದರ್ಶನವು ಮತ್ತು ಸ್ನಾನವು ಶ್ರೇಯಸ್ಕರವಾದುದು. ಎಲೈ ಮಹಾಪ್ರಾಜ್ಞನೇ, ಅವುಗಳ ಮಹಿಮೆಯ ಶ್ರವಣವೂ ಶ್ರೇಯಸ್ಕರವಾದುದು. ನಾನು ಅದನ್ನು ಯಥಾರ್ಥವಾಗಿ ತಿಳಿಯಲು ಬಯಸುತ್ತೇನೆ.
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನಿ ಭರತರ್ಷಭ |
ವಕ್ತುಮರ್ಹಸಿ ಮೇ ತಾನಿ ಶ್ರೋತಾಸ್ಮಿ ನಿಯತಃ ಪ್ರಭೋ ||2||
ಎಲೈ ಭರತರ್ಷಭನೇ, ಪೃಥಿವಿಯಲ್ಲಿ ಯಾವ ಪವಿತ್ರವಾದ ತೀರ್ಥಗಳಿವೆಯೋ ಎಲೈ ಪ್ರಭುವೇ, ಅವುಗಳನ್ನು ನನಗೆ ಹೇಳು. ನಾನು ನಿಯಮಬದ್ಧನಾಗಿ ಕೇಳುತ್ತೇನೆ.
ಭೀಷ್ಮಃ
ಇಮಮಂಗಿರಸಾ ಪ್ರೋಕ್ತಂ ತೀರ್ಥವಂಶಂ ಮಹಾದ್ಯುತೇ |
ಶ್ರೋತುಮರ್ಹಸಿ ಭದ್ರಂ ತೇ ಪ್ರಾಪ್ಸ್ಯಸೇ ಧರ್ಮಮುತ್ತಮಮ್ ||3||
ಭೀಷ್ಮ ಎಲೈ ಮಹಾದ್ಯುತಿಯೇ, ನಿನಗೆ ಮಂಗಳವಾಗಲಿ. ಇದು ಅಂಗಿರಸರು ಹೇಳಿದ ತೀರ್ಥವಂಶ. ಇದನ್ನು ಕೇಳು. ಇದರಿಂದ ಶ್ರೇಷ್ಠವಾದ ಧರ್ಮವನ್ನು ಪಡೆಯುವಿ.
ತಪೋವನಗತಂ ವಿಪ್ರಮಭಿಗಮ್ಯ ಮಹಾಮುನಿಮ್ |
ಪಪ್ರಚ್ಛಾಂಗಿರಸಂ ವೀರ ಗೌತಮಃ ಸಂಶಿತವ್ರತಃ ||4||
ಎಲೈ ವೀರನೇ, ಒಳ್ಳೆಯ ವ್ರತಧಾರಿಗಳಾದ ಗೌತಮರು ತಪೋವನದಲ್ಲಿ ಇದ್ದ ಅಂಗಿರಸ ಮಹರ್ಷಿಗಳನ್ನು ಸಮೀಪಿಸಿ ಪ್ರಶ್ನೆಯನ್ನು ಮಾಡಿದರು.
ಅಸ್ತಿ ಮೇ ಭಗವನ್ ಕಶ್ಚಿತ್ ತೀರ್ಥೇಭ್ಯೋ ಧರ್ಮಸಂಶಯಃ |
ತತ್ಸರ್ವಂ ಶ್ರೋತುಮಿಚ್ಛಾಮಿ ತನ್ಮೇ ಶಂಸ ಮಹಾಮುನೇ ||5||
ಪೂಜ್ಯರೇ, ನನಗೆ ತೀರ್ಥಗಳ ವಿಷಯದಲ್ಲಿ ಸ್ವಲ್ಪ ಧರ್ಮಸಂಶಯವಿದೆ. ಅದೆಲ್ಲವನ್ನೂ ನಿಮ್ಮನ್ನು ಕೇಳಲು ಬಯಸುತ್ತೇನೆ. ಮಹರ್ಷಿಗಳೇ ಅದನ್ನು ನನಗೆ ಹೇಳಿ.
ಉಪಸ್ಪೃಶ್ಯ ಫಲಂ ಕಿಂ ಸ್ಯಾತ್ತೇಷು ತೀರ್ಥೇಷು ವೈ ಮುನೇ |
ಪ್ರೇತ್ಯಭಾವೇ ಮಹಾಪ್ರಾಜ್ಞ ತದ್ ಯಥಾಽಸ್ತಿ ತಥಾ ವದ ||6||
ಎಲೈ ಋಷಿಗಳೇ, ಆ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದರೆ ಏನಾಗುತ್ತದೆ? ಮಹಾಪ್ರಾಜ್ಞರೇ, ಮರಣವನ್ನು ಹೊಂದಿದ ಮೇಲೆ ಉಂಟಾಗುವ ಫಲವನ್ನು ನನಗೆ ತಿಳಿಸಿ.
ಅಂಗಿರಾಃ
ಸಪ್ತಾಹಂ ಚಂದ್ರಭಾಗಾಂ ವೈ ವಿತಸ್ತಾಮೂರ್ಮಿಮಾಲಿನೀಮ್ |
ವಿಗಾಹ್ಯ ವೈ ನಿರಾಹಾರೋ ನಿರ್ಮಮೋ ಮುನಿವದ್ಭವೇತ್ ||7||
ಅಂಗಿರಸ ಏಳು ದಿವಸಗಳ ಕಾಲ ಚಂದ್ರಭಾಗಾ ನದಿಯಲ್ಲಿಯೂ, ಊರ್ಮಿಮಾಲೆಗಳನ್ನುಳ್ಳ ವಿತಸ್ತಾ ನದಿಯಲ್ಲಿಯೂ ನಿರಾಹಾರನಾಗಿ ಸ್ನಾನವನ್ನು ಮಾಡಿದರೆ ಮಮಕಾರವನ್ನು ತ್ಯಜಿಸಿ ಮುನಿಯಂತೆ ಆಗುವನು.
ಕಾಶ್ಮೀರಮಂಡಲೇ ನದ್ಯೋ ಯಾಃ ಪತಂತಿ ಮಹಾನದಮ್ |
ತಾ ನದೀಃ ಸಿಂಧುಮಾಸಾದ್ಯ ಶೀಲವಾನ್ ಸ್ವರ್ಗಮಾಪ್ನುಯಾತ್ ||8||
ಕಾಶ್ಮೀರಮಂಡಲದಲ್ಲಿ ಮಹಾನದವಾದ ಸಿಂಧುವಿಗೆ ಹೋಗಿ ಸೇರುವ ನದಿಗಳಲ್ಲಿ ಮತ್ತು ಸಿಂಧು ನದದಲ್ಲಿ ಸ್ನಾನವನ್ನು ಮಾಡುವವನು ಒಳ್ಳೆಯ ಶೀಲವನ್ನು ಹೊಂದಿ ಸ್ವರ್ಗವನ್ನು ಪಡೆಯುವನು.
ಪುಷ್ಕರಂ ಚ ಪ್ರಭಾಸಂ ಚ ನೈಮಿಶಂ ಸಾಗರೋದಕಮ್ |
ದೇವಿಕಾಮಿಂದ್ರಮಾರ್ಗಂ ಚ ಸ್ವರ್ಣಬಿಂದುಂ ವಿಗಾಹ್ಯ ಚ |
ವಿಬೋಧ್ಯತೇ ವಿಮಾನಸ್ಥಃ ಸೋಽಪ್ಸರೋಭಿರಭಿಷ್ಟುತಃ ||9||
ಪುಷ್ಕರ, ಪ್ರಭಾಸ, ನೈಮಿಶ, ಸಾಗರ, ದೇವಿಕಾ, ಇಂದ್ರಮಾರ್ಗ, ಸ್ವರ್ಣಬಿಂದು ಈ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದವನು ಉಪ್ಪರಿಗೆ ಮನೆಯಲ್ಲಿದ್ದೂ ಎಚ್ಚರಿಸಲ್ಪಡುತ್ತಾನೆ. ಅಪ್ಸರೆಯರಿಂದ ಸ್ತೋತ್ರ ಮಾಡಲ್ಪಡುತ್ತಾನೆ.
ಹಿರಣ್ಯಬಿಂದುಂ ವಿಕ್ಷೋಭ್ಯ ಪ್ರಯತಶ್ಚಾಭಿವಾದ್ಯ ತಮ್ |
ಕುಶೇಶಯೇ ಚ ದೇವತ್ವಂ ಪೂಯತೇ ತಸ್ಯ ಕಿಲ್ಬಿಷಮ್ ||10||
ಹಿರಣ್ಯಬಿಂದು ತೀರ್ಥವನ್ನು ನೋಡಿ ಅಲ್ಲಿ ನಮಸ್ಕರಿಸಿ ಕುಶೇಶಯ ತೀರ್ಥದಲ್ಲಿ ಸ್ನಾನವನ್ನು ಮಾಡುವವನು ಪಾಪಗಳಿಂದ ನಿರ್ಮುಕ್ತನಾಗಿ ದೇವತ್ವವನ್ನು ಹೊಂದುತ್ತಾನೆ.
ಇಂದ್ರತೋಯಾಂ ಸಮಾಸಾದ್ಯ ಗಂಧಮಾದನಸನ್ನಿಧೌ |
ಕರತೋಯಾಂ ಕುರಂಗೇಷು ತ್ರಿರಾತ್ರೋಪೋಷಿತೋ ನರಃ |
ಅಶ್ವಮೇಧಮವಾಪ್ನೋತಿ ವಿಗಾಹ್ಯ ನಿಯತಃ ಶುಚಿಃ ||11||
ಗಂಧಮಾದನ ಸನ್ನಿಧಿಯಲ್ಲಿರುವ ಇಂದ್ರತೋಯಾ ನದಿಯನ್ನೂ, ಕುರಂಗ ದೇಶದಲ್ಲಿರುವ ಕರತೋಯಾ ನದಿಯನ್ನು ಸಮೀಪಿಸಿ ಮೂರು ರಾತ್ರಿ ಉಪವಾಸವನ್ನು ಮಾಡಿ, ನಿಯಮದಿಂದ ಶುಚಿಯಾಗಿ ಸ್ನಾನವನ್ನು ಮಾಡುವವನು ಅಶ್ವಮೇಧ ಫಲವನ್ನು

ಹೊಂದುತ್ತಾನೆ.
ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೇಮಿಪರ್ವತೇ |
ತಥಾ ಕನಖಲೇ ಸ್ನಾತ್ವಾ ಧೂತಪಾಪ್ಮಾ ದಿವಂ ವ್ರಜೇತ್ ॥12॥
ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೇಮಿಪರ್ವತ, ಕನಖಲ ಈ ಪ್ರದೇಶಗಳಲ್ಲಿ ಸ್ನಾನವನ್ನು ಮಾಡಿ ಪಾಪಗಳನ್ನು ಕಳೆದುಕೊಂಡು ಸ್ವರ್ಗಕ್ಕೆ ಹೋಗುತ್ತಾನೆ.
ಅಪಾಂ ಹ್ರದ ಉಪಸ್ಪೃಶ್ಯ ವಾಜಪೇಯಫಲಂ ಲಭೇತ್ |
ಬ್ರಹ್ಮಚಾರೀ ಜಿತಕ್ರೋಧಃ ಸತ್ಯಸಂಧಸ್ತ್ವಹಿಂಸಕಃ ॥13॥
ಬ್ರಹ್ಮಚಾರಿಯೂ, ಕ್ರೋಧವನ್ನು ಜಯಿಸಿದವನೂ, ಸತ್ಯಸಂಧನೂ, ಅಹಿಂಸಾ ಪರನೂ ಆಗಿ ಜಲಹ್ರದದಲ್ಲಿ ಸ್ನಾನವನ್ನು ಮಾಡುವವನು ವಾಜಪೇಯ ಯಾಗದ ಫಲವನ್ನು ಪಡೆಯುತ್ತಾನೆ.
ಯತ್ರ ಭಾಗೀರಥೀ ಗಂಗಾ ಭಜತೇ ದಿಶಮುತ್ತರಾಮ್ |
ಮಹೇಶ್ವರಸ್ಯ ನಿಷ್ಠಾನೇ ಯೋ ನರಸ್ತ್ವಭಿಷಿಚ್ಯತೇ |
ಏಕಮಾಸಂ ನಿರಾಹಾರಃ ಸ್ವಯಂ ಪಶ್ಯತಿ ದೇವತಾಃ॥14॥
ಭಾಗೀರಥಿಯಾದ ಗಂಗೆಯು ಉತ್ತರಾಭಿಮುಖವಾಗಿ ಹರಿಯುವ ಮಹೇಶ್ವರ ಸ್ಥಾನದಲ್ಲಿ ಯಾವ ಮನುಷ್ಯನು ನಿರಾಹಾರನಾಗಿ ಒಂದು ತಿಂಗಳು ಸ್ನಾನವನ್ನು ಮಾಡುತ್ತಾನೆಯೋ ಅವನು ಸ್ವತಃ ದೇವತೆಗಳನ್ನು ನೋಡುತ್ತಾನೆ.
ಸಪ್ತಗಂಗೇ ತ್ರಿಗಂಗೇ ಚ ಇಂದ್ರಮಾರ್ಗೇ ಚ ತರ್ಪಯನ್ |
ಸುಧಾಂ ವೈ ಲಭತೇ ಭೋಕ್ತುಂ ಯೋ ನರೋ ಜಾಯತೇ ಪುನಃ ॥15॥
ಸಪ್ತಗಂಗಾ, ತ್ರಿಗಂಗಾ ಮತ್ತು ಇಂದ್ರಮಾರ್ಗಗಳಲ್ಲಿ ಸ್ನಾನ ಮಾಡಿ, ದೇವಾದಿಗಳಿಗೆ ತರ್ಪಣವನ್ನು ಕೊಡುವವನು ಪುನಃ ಜನಿಸಿ ಅಮೃತಭೋಜನನಾಗುತ್ತಾನೆ.
ಮಹಾಶ್ರಮ ಉಪಸ್ಪೃಶ್ಯ ಯೋಽಗ್ನಿಹೋತ್ರಪರಃ ಶುಚಿಃ |
ಏಕಮಾಸಂ ನಿರಾಹಾರಃ ಸಿದ್ಧಿಂ ಮಾಸೇನ ಸ ವ್ರಜೇತ್ ॥16॥
ಮಹಾಶ್ರಮದಲ್ಲಿ ಸ್ನಾನವನ್ನು ಮಾಡಿ ಶುಚಿಯಾಗಿ, ನಿರಾಹಾರನಾಗಿ ಒಂದು ತಿಂಗಳ ಕಾಲ ಅಗ್ನಿಹೋತ್ರಪರನಾದವನು ಒಂದು ತಿಂಗಳಿನಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ಮಹಾಹ್ರದ ಉಪಸ್ಪೃಶ್ಯ ಭೃಗುತುಂಗೇ ತ್ವಲೋಲುಪಃ |
ತ್ರಿರಾತ್ರೋಪೋಷಿತೋ ಭೂತ್ವಾ ಮುಚ್ಯತೇ ಬ್ರಹ್ಮಹತ್ಯಯಾ ॥17॥
ಇಂದ್ರಿಯಲೋಲುಪತೆಯನ್ನು ಬಿಟ್ಟು ಮಹಾಹ್ರದದಲ್ಲಿ ಮತ್ತು ಭೃಗುತುಂಗದಲ್ಲಿ ಮೂರು ರಾತ್ರಿ ಉಪವಾಸವನ್ನು ಮಾಡಿ ಸ್ನಾನವನ್ನು ಮಾಡುವವನು ಬ್ರಹ್ಮಹತ್ಯಾ ದೋಷದಿಂದ ನಿರ್ಮುಕ್ತನಾಗುತ್ತಾನೆ.
ಕನ್ಯಾಕೂಪ ಉಪಸ್ಪೃಶ್ಯ ಬಲಾಕಾಯಾಂ ಕೃತೋದಕಃ |
ದೇವೇಷು ಕೀರ್ತಿಂ ಲಭತೇ ಯಶಸಾ ಚ ವಿರಾಜತೇ ॥18॥
ಕನ್ಯಾಕೂಪದಲ್ಲಿ ಸ್ನಾನವನ್ನು ಮಾಡಿ, ಬಲಾಕಾ ತೀರ್ಥದಲ್ಲಿ ತರ್ಪಣವನ್ನು ಕೊಡುವ ಮನುಷ್ಯನು ದೇವತೆಗಳಲ್ಲಿ ಕೀರ್ತಿಯನ್ನು ಹೊಂದುತ್ತಾನೆ ಮತ್ತು ಈ ಲೋಕದಲ್ಲಿ ಯಶಸ್ಸಿನಿಂದ ಶೋಭಿಸುತ್ತಾನೆ.
ದೇಶಕಾಲ ಉಪಸ್ಪೃಶ್ಯ ತಥಾ ಸುಂದರಿಕಾಹ್ರದೇ |
ಅಶ್ವಿಭ್ಯಾಂ ರೂಪವರ್ಚಸ್ಯಂ ಪ್ರೇತ್ಯ ವೈ ಲಭತೇ ನರಃ ॥19॥
ದೇಶಕಾಲ ತೀರ್ಥದಲ್ಲಿಯೂ, ಸುಂದರಿಕಾ ಸರೋವರದಲ್ಲಿಯೂ ಸ್ನಾನವನ್ನು ಮಾಡುವವನು ಅಶ್ವಿನೀದೇವತೆಗಳ ಅನುಗ್ರಹದಿಂದ ಮರಣವನ್ನು ಹೊಂದಿದ ಮೇಲೆ ಒಳ್ಳೆಯ ರೂಪವನ್ನು ಮತ್ತು ಕಾಂತಿಯನ್ನು ಹೊಂದುತ್ತಾನೆ.
ಮಹಾಗಂಗಾಮುಪಸ್ಪೃಶ್ಯ ಕೃತ್ತಿಕಾಂಗಾರಕೇ ತಥಾ |
ಪಕ್ಷಮೇಕಂ ನಿರಾಹಾರಃ ಸ್ವರ್ಗಮಾಪ್ನೋತಿ ನಿರ್ಮಲಃ ॥20॥
ಮಹಾಗಂಗಾ ತೀರ್ಥದಲ್ಲಿಯೂ, ಕೃತ್ತಿಕಾಂಗಾರಕ ತೀರ್ಥದಲ್ಲಿಯೂ ಒಂದು ಪಕ್ಷದ ಕಾಲ ನಿರಾಹಾರನಾಗಿ, ನಿರ್ಮಲನಾಗಿ ಸ್ನಾನವನ್ನು ಮಾಡುವವನು ಸ್ವರ್ಗವನ್ನು ಪಡೆಯುತ್ತಾನೆ.
ವೈಮಾನಿಕ ಉಪಸ್ಪೃಶ್ಯ ಕಿಂಕಿಣೀಕಾಶ್ರಮೇ ತಥಾ |
ನಿವಾಸೇಽಪ್ಸರಸಾಂ ದಿವ್ಯೇ ಕಾಮಚಾರೀ ಮಹೀಯತೇ ॥21॥
ವೈಮಾನಿಕ ತೀರ್ಥದಲ್ಲಿಯೂ, ಕಿಂಕಿಣೀಕಾಶ್ರಮ ತೀರ್ಥದಲ್ಲಿಯೂ ಸ್ನಾನವನ್ನು ಮಾಡುವವನು ಅಪ್ಸರೆಯರ ದಿವ್ಯನಿವಾಸದಲ್ಲಿ ಕಾಮಚಾರಿಯಾಗಿ ಪೂಜಿಸಲ್ಪಡುತ್ತಾನೆ.
ಕಾಳಿಕಾಶ್ರಮಮಾಸಾದ್ಯ ವಿಪಾಶಾಯಾಂ ಕೃತೋದಕಃ |
ಬ್ರಹ್ಮಚಾರೀ ಜಿತಕ್ರೋಧಸ್ತ್ರಿರಾತ್ರಾನ್ಮುಚ್ಯತೇ ಭವಾತ್ ॥22॥
ಕಾಳಿಕಾಶ್ರಮಕ್ಕೆ ಹೋಗಿ ವಿಪಾಶಾ ನದಿಯಲ್ಲಿ ಸ್ನಾನ-ತರ್ಪಣವನ್ನು ಮಾಡಿ ಬ್ರಹ್ಮಚಾರಿಯೂ, ಜಿತಕ್ರೋಧನೂ ಆಗಿದ್ದರೆ ಮೂರು ರಾತ್ರಿಗಳಲ್ಲಿ ಸಂಸಾರದಿಂದ ಮುಕ್ತನಾಗುತ್ತಾನೆ.
ಆಶ್ರಮೇ ಕೃತ್ತಿಕಾನಾಂ ತು ಸ್ನಾತ್ವಾ ಯಸ್ತರ್ಪಯೇತ್ಪಿತೄನ್ |
ತೋಷಯಿತ್ವಾ ಮಹಾದೇವಂ ನಿರ್ಮಲಃ ಸ್ವರ್ಗಮಾಪ್ನುಯಾತ್ ॥23॥
ಕೃತ್ತಿಕಾಶ್ರಮದಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೆ ತರ್ಪಣವನ್ನು ಕೊಡುವವನು ಈಶ್ವರನನ್ನು ಸಂತೋಷಪಡಿಸಿ ನಿರ್ಮಲನಾಗಿ ಸ್ವರ್ಗವನ್ನು ಹೊಂದುತ್ತಾನೆ.

ಮಹಾಪುರ ಉಪಸ್ಪೃಶ್ಯ ತ್ರಿರಾತ್ರೋಪೋಷಿತೋ ನರಃ |
ತ್ರಸಾನಾಂ ಸ್ಥಾವರಾಣಾಂ ಚ ದ್ವಿಪದಾನಾಂ ಭಯಂ ತ್ಯಜೇತ್ ||24||
ಮಹಾಪುರ ತೀರ್ಥದಲ್ಲಿ ಮೂರು ರಾತ್ರಿ ಉಪವಾಸವಿದ್ದು ಸ್ನಾನವನ್ನು ಮಾಡುವ ಮನುಷ್ಯನು ಸ್ಥಾವರ-ಜಂಗಮ ಪ್ರಾಣಿಗಳಿಂದಲೂ, ದ್ವಿಪದ ಪ್ರಾಣಿಗಳಿಂದಲೂ ಉಂಟಾಗುವ ಭಯವನ್ನು ತ್ಯಜಿಸುತ್ತಾನೆ.
ದೇವದಾರುವನೇ ಸ್ನಾತ್ವಾ ಧೂತಪಾಪ್ಮಾ ಕೃತೋದಕಃ |
ದೇವಲೋಕಮವಾಪ್ನೋತಿ ಸಪ್ತರಾತ್ರೋಷಿತಃ ಶುಚಿಃ ||25||
ದೇವದಾರುವನದಲ್ಲಿ ಶುಚಿಯಾಗಿ ಏಳು ರಾತ್ರಿಗಳ ಕಾಲ ವಾಸವನ್ನು ಮಾಡಿ ಸ್ನಾನ-ತರ್ಪಣಗಳನ್ನು ಮಾಡುವವನು ಪಾಪಗಳನ್ನು ಕಳೆದುಕೊಂಡು ದೇವಲೋಕವನ್ನು ಪಡೆಯುತ್ತಾನೆ.
ಕೌಶಂತೇ ಚ ಕುಶಸ್ತಂಭೇ ದ್ರೋಣಶರ್ಮಪದೇ ತಥಾ |
ಆಪಃಪ್ರಪತನೇ ಸ್ನಾತಃ ಸೇವ್ಯತೇ ಸೋಽಪ್ಸರೋಗಣೈಃ ||26||
ಕೌಶಂತ ತೀರ್ಥದಲ್ಲಿ, ಕುಶಸ್ತಂಭ ತೀರ್ಥದಲ್ಲಿ, ದ್ರೋಣಶರ್ಮ ತೀರ್ಥದಲ್ಲಿ, ಜಲಪ್ರಪತನ ತೀರ್ಥದಲ್ಲಿ ಸ್ನಾನವನ್ನು ಮಾಡುವವನು ಅಪ್ಸರೆಯರ ಸಮೂಹದಿಂದ ಸೇವಿಸಲ್ಪಡುತ್ತಾನೆ.
ಚಿತ್ರಕೂಟೇ ಜನಸ್ಥಾನೇ ತಥಾ ಮಂದಾಕಿನೀಜಲೇ |
ವಿಗಾಹ್ಯ ವೈ ನಿರಾಹಾರೋ ರಾಜಲಕ್ಷ್ಮೀಂ ನಿಗಚ್ಛತಿ ||27||
ಚಿತ್ರಕೂಟ ಪರ್ವತದಲ್ಲಿಯೂ, ಜನಸ್ಥಾನದಲ್ಲಿಯೂ, ಮಂದಾಕಿನೀ ನದಿಯಲ್ಲಿಯೂ ನಿರಾಹಾರನಾಗಿ ಸ್ನಾನವನ್ನು ಮಾಡುವವನು ರಾಜಸಂಪತ್ತನ್ನು ಪಡೆಯುತ್ತಾನೆ.
ಶ್ಯಾಮಾಯಾಸ್ತ್ವಾಶ್ರಮಂ ಗತ್ವಾ ಉಷ್ಯ ಚೈವಾಭಿಷಿಚ್ಯ ಚ |
ತ್ರೀಂಸ್ತ್ರಿರಾತ್ರಾನ್ ಸ ಸಂಧಾಯ ಗಂಧರ್ವನಗರೇ ವಸೇತ್ ||28||
ಶ್ಯಾಮಾಶ್ರಮಕ್ಕೆ ಹೋಗಿ, ಅಲ್ಲಿ ಒಂಬತ್ತು ದಿನಗಳ ಕಾಲ ವಾಸ ಮಾಡಿ, ಸ್ನಾನವನ್ನು ಮಾಡಿ, ಮನಸ್ಸನ್ನು ತೀರ್ಥಗಳಲ್ಲಿ ಇಡುವವನು ಗಂಧರ್ವನಗರದಲ್ಲಿ ವಾಸ ಮಾಡುತ್ತಾನೆ.
ರಮಣ್ಯಾಂ ಚ ಉಪಸ್ಪೃಶ್ಯ ತಥಾ ವೈ ಗಂಧತಾರಿಕೇ |
ಏಕಮಾಸಂ ನಿರಾಹಾರಸ್ತ್ವಂತರ್ಧಾನಫಲಂ ಲಭೇತ್ ||29||
ಒಂದು ತಿಂಗಳ ಕಾಲ ನಿರಾಹಾರನಾಗಿ ರಮಣೀ ತೀರ್ಥದಲ್ಲಿಯೂ, ಗಂಧತಾರಿಕ ತೀರ್ಥದಲ್ಲಿಯೂ ಸ್ನಾನವನ್ನು ಮಾಡುವವನು ಅಂತರ್ಧಾನ ಶಕ್ತಿಯನ್ನು ಪಡೆಯುತ್ತಾನೆ.
ಕೌಶಿಕೀದ್ವಾರಮಾಸಾದ್ಯ ವಾಯುಭಕ್ಷಸ್ತ್ವಲೋಲುಪಃ |
ಏಕವಿಂಶತಿರಾತ್ರೇಣ ಸ್ವರ್ಗಮಾರೋಹತೇ ನರಃ ||30||
ವಾಯುಭಕ್ಷನಾಗಿ, ಇಂದ್ರಿಯಲೋಲುಪತೆಯನ್ನು ಬಿಟ್ಟು ಕೌಶಿಕೀದ್ವಾರಕ್ಕೆ ಹೋಗಿ ಇಪ್ಪತ್ತೊಂದು ರಾತ್ರಿಗಳ ಕಾಲ ವಾಸ ಮಾಡಿ ಸ್ನಾನ ಮಾಡುವವನು ಸ್ವರ್ಗಕ್ಕೆ ಹೋಗುತ್ತಾನೆ.
ಮತಂಗವಾಪ್ಯಾಂ ಯಃ ಸ್ನಾಯಾದೇಕರಾತ್ರೇಣ ಸಿಧ್ಯತಿ |
ವಿಗಾಹತಿ ಹ್ಯನಾಲಂಬಮಂಧಕಂ ವೈ ಸನಾತನಮ್ ||31||
ಮಂತಗವಾಪಿಯಲ್ಲಿ ಸನಾತನತೀರ್ಥದಲ್ಲಿ ಮತ್ತು ಅಂಧಕತೀರ್ಥದಲ್ಲಿ ಸ್ನಾನವನ್ನು ಮಾಡುವವನು ಒಂದು ರಾತ್ರಿಯಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ನೈಮಿಶೇ ಸ್ವರ್ಗತೀರ್ಥೇ ಚ ಉಪಸ್ಪೃಶ್ಯ ಜಿತೇಂದ್ರಿಯಃ |
ಫಲಂ ಪುರುಷಮೇಧಸ್ಯ ಲಭೇನ್ಮಾಸಂ ಕೃತೋದಕಃ ||32||
ಜಿತೇಂದ್ರಿಯನಾಗಿ ಒಂದು ತಿಂಗಳ ಕಾಲ ನೈಮಿಶದಲ್ಲಿಯೂ ಮತ್ತು ಸ್ವರ್ಗತೀರ್ಥದಲ್ಲಿಯೂ ಸ್ನಾನವನ್ನು ಮಾಡಿ ತರ್ಪಣವನ್ನು ಕೊಡುವವನು ಪುರುಷಮೇಧ ಯಜ್ಞದ ಫಲವನ್ನು ಹೊಂದುತ್ತಾನೆ.
ಗಂಗಾಹ್ರದ ಉಪಸ್ಪೃಶ್ಯ ತಥಾ ಚೈವೋತ್ಪಲಾವನೇ |
ಅಶ್ವಮೇಧಮವಾಪ್ನೋತಿ ತತ್ರ ಮಾಸಂ ಕೃತೋದಕಃ ||33||
ಗಂಗಾಹ್ರದದಲ್ಲಿ ಹಾಗೆಯೇ ಉತ್ಪಲಾವನದಲ್ಲಿ ಸ್ನಾನವನ್ನು ಮಾಡಿ ಒಂದು ತಿಂಗಳ ಕಾಲ ತರ್ಪಣವನ್ನು ಕೊಡುವವನು ಅಶ್ವಮೇಧ ಫಲವನ್ನು ಪಡೆಯುತ್ತಾನೆ.
ಗಂಗಾಯಮುನಯೋಸ್ತೀರ್ಥೇ ತಥಾ ಕಾಲಂಜರೇ ಗಿರೌ |
ಷಷ್ಟಿಹ್ರದ ಉಪಸ್ಪೃಶ್ಯ ದಾನಂ ನಾನ್ಯದ್ ವಿಶಿಷ್ಯತೇ ||34||
ಗಂಗಾ-ಯಮುನತೀರ್ಥದಲ್ಲಿಯೂ, ಕಾಲಂಜರ ಪರ್ವತದಲ್ಲಿಯೂ, ಷಷ್ಟಿಹ್ರದದಲ್ಲಿಯೂ ಸ್ನಾನವನ್ನು ಮಾಡಿದರೆ ಅದಕ್ಕಿಂತ ಯಾವ ದಾನವೂ ಶ್ರೇಷ್ಠವಾದುದಲ್ಲ.
ದಶ ತೀರ್ಥಸಹಸ್ರಾಣಿ ತಿಸ್ರಃ ಕೋಟ್ಯಸ್ತಥಾಪರಾಃ |
ಸಮಾಗಚ್ಛಂತಿ ಮಾಘ್ಯಾಂ ತು ಪ್ರಯಾಗೇ ಭರತರ್ಷಭ ||35||
ಎಲೈ ಭರತರ್ಷಭನೇ, ಮಾಘಮಾಸದಲ್ಲಿ ಪ್ರಯಾಗದಲ್ಲಿ ಹತ್ತು ಸಹಸ್ರ ತೀರ್ಥಗಳು ಮತ್ತು ಬೇರೆ ಮೂರುಕೋಟಿ ತೀರ್ಥಗಳು ಬಂದು ಸೇರುತ್ತವೆ.
ಮಾಘಮಾಸಂ ಪ್ರಯಾಗೇ ತು ನಿಯತಃ ಸಂಶಿತವ್ರತಃ |
ಸ್ನಾತ್ವಾ ತು ಭರತಶ್ರೇಷ್ಠ ನಿರ್ಮಲಃ ಸ್ವರ್ಗಮಾಪ್ನುಯಾತ್ ||36||

ಎಲೈ ಭರತಶ್ರೇಷ್ಠನೇ, ಮಾಘಮಾಸದಲ್ಲಿ ಪ್ರಯಾಗದಲ್ಲಿ ವಾಸ ಮಾಡಿ ನಿಯಮಬದ್ಧನಾಗಿ, ವ್ರತವನ್ನು ಧರಿಸಿ ನಿರ್ಮಲವಾಗಿ ಸ್ನಾನ ಮಾಡುವವನು ಸ್ವರ್ಗವನ್ನು ಹೊಂದುತ್ತಾನೆ.
ಮರುದ್ಗಣ ಉಪಸ್ಪೃಶ್ಯ ಪಿತೄಣಾಮಾಶ್ರಮೇ ಶುಚಿಃ |
ವೈವಸ್ವತಸ್ಯ ತೀರ್ಥೇ ಚ ತೀರ್ಥಭೂತೋ ಭವೇನ್ನರಃ ||37||
ಮರುದ್ಗಣ ತೀರ್ಥದಲ್ಲಿಯೂ, ಪಿತೃಗಳ ಆಶ್ರಮದಲ್ಲಿಯೂ, ವೈವಸ್ವತ ತೀರ್ಥದಲ್ಲಿಯೂ ಶುಚಿಯಾಗಿ ಸ್ನಾನವನ್ನು ಮಾಡುವವನು ಸ್ವತಃ ತೀರ್ಥನಾಗುತ್ತಾನೆ (ಇನ್ನೊಬ್ಬರನ್ನು ಪವಿತ್ರೀಕರಿಸುವ ಸಾಮರ್ಥ್ಯವನ್ನು ಹೊಂದುತ್ತಾನೆ).
ತಥಾ ಬ್ರಹ್ಮಶಿರೋ ಗತ್ವಾ ಭಾಗೀರಥ್ಯಾಂ ಕೃತೋದಕಃ |
ಏಕಮಾಸಂ ನಿರಾಹಾರಃ ಸೋಮಲೋಕಮವಾಪ್ನುಯಾತ್ ||38||
ಹಾಗೆಯೇ ಬ್ರಹ್ಮಶಿರ ಕ್ಷೇತ್ರಕ್ಕೆ ಹೋಗಿ ಭಾಗೀರಥಿಯಲ್ಲಿ ನಿರಾಹಾರನಾಗಿ ಒಂದು ತಿಂಗಳ ಕಾಲ ಸ್ನಾನ-ತರ್ಪಣವನ್ನು ಮಾಡುವವನು ಚಂದ್ರಲೋಕಕ್ಕೆ ಹೋಗುತ್ತಾನೆ.
ಕಪೋತಕೇ ನರಃ ಸ್ನಾತ್ವಾ ಅಷ್ಟಾವಕ್ರೇ ಕೃತೋದಕಃ |
ದ್ವಾದಶಾಹಂ ನಿರಾಹಾರೋ ನರಮೇಧಫಲಂ ಲಭೇತ್ ||39||
ಕಪೋತಕ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಅಷ್ಟಾವಕ್ರತೀರ್ಥದಲ್ಲಿ ನಿರಾಹಾರನಾಗಿ ಹನ್ನೆರಡು ದಿವಸ ತರ್ಪಣವನ್ನು ಕೊಡುವ ನರನು ನರಮೇಧಫಲವನ್ನು ಹೊಂದುತ್ತಾನೆ.
ಮುಂಜಪೃಷ್ಠಂ ಗಯಾಂ ಚೈವ ನಿರ್ಋತಿಂ ದೇವಪರ್ವತಮ್ |
ತೃತೀಯಾಂ ಕೌಂಚಪಾದೀಂ ಚ ಬ್ರಹ್ಮಹತ್ಯಾ ವಿಶುಧ್ಯತಿ ||40||
ಮುಂಜಪೃಷ್ಠದಲ್ಲಿ, ಗಯಾದಲ್ಲಿ, ನಿರ್ಋತಿತೀರ್ಥದಲ್ಲಿ, ದೇವಪರ್ವತದಲ್ಲಿ, ಕೌಂಚಪಾದಿಯಲ್ಲಿ ಸ್ನಾನವನ್ನು ಮಾಡುವವನು ಬ್ರಹ್ಮಹತ್ಯಾ ದೋಷದಿಂದ ರಹಿತನಾಗಿ ಶುದ್ಧನಾಗುತ್ತಾನೆ.
ಕಲಶ್ಯಾಂ ವಾಪ್ಯುಪಸ್ಪೃಶ್ಯ ವೇದ್ಯಾಂ ಚ ಬಹುಶೋಜಲಾಮ್ |
ಅಗ್ನೇಃ ಪುರೇ ನರಃ ಸ್ನಾತ್ವಾ ವಿಶಾಲಾಯಾಂ ಕೃತೋದಕಃ |
ದೇವಹ್ರದ ಉಪಸ್ಪೃಶ್ಯ ಬ್ರಹ್ಮಭೂತೋ ವಿರಾಜತೇ ||41||
ಕಲಶೀತೀರ್ಥದಲ್ಲಿ ಅಥವಾ ಬಹುಜಲವಿರುವ ವೇದ್ಯತೀರ್ಥದಲ್ಲಿ, ಹಾಗೆಯೇ ಅಗ್ನಿಪುರದಲ್ಲಿರುವ ತೀರ್ಥದಲ್ಲಿ, ವಿಶಾಲಾ ಕ್ಷೇತ್ರದಲ್ಲಿ (ಬದರಿ) ಮತ್ತು ದೇವವ್ರತದಲ್ಲಿ ಸ್ನಾನವನ್ನು ಮಾಡಿ, ತರ್ಪಣವನ್ನು ಕೊಡುವವನು ಬ್ರಹ್ಮನಲ್ಲಿಯೇ ಇರುವವನಾಗಿ ಶೋಭಿಸುತ್ತಾನೆ (ಬಹಳ ಪವಿತ್ರನಾಗುತ್ತಾನೆ).
ಪುರಾಪವರ್ತನಂ ನಂದಾಂ ಮಹಾನಂದಾಂ ಚ ಸೇವ್ಯ ವೈ |
ನಂದನೇ ಸೇವ್ಯತೇ ದಾಂತಸ್ತ್ವಪ್ಸರೋಭಿರಹಿಂಸಕಃ ||42||
ಇಂದ್ರಿಯನಿಗ್ರಹವನ್ನು ಹೊಂದಿ, ಪ್ರಾಣಿಹಿಂಸೆ ಮಾಡದೆ ಪುರಾಪರ್ತನ ತೀರ್ಥದಲ್ಲಿ, ನಂದಾ-ಮಹಾನಂದಾ ತೀರ್ಥದಲ್ಲಿ ಸ್ನಾನವನ್ನು ಮಾಡುವವನು ಸಂತೋಷ ಪಡುತ್ತಾನೆ ಮತ್ತು ಅಪ್ಸರೆಯರಿಂದ ಸೇವಿಸಲ್ಪಡುತ್ತಾನೆ.
ಉರ್ವಶೀಕೃತ್ತಿಕಾಯೋಗೇ ಗತ್ವಾ ಯಃ ಸುಸಮಾಹಿತಃ |
ಲೌಹಿತ್ಯೇ ವಿಧಿವತ್ಸ್ನಾತ್ವಾ ಪುಂಡರೀಕಫಲಂ ಲಭೇತ್ ||43||
ಉರ್ವಶೀ-ಕೃತ್ತಿಕಾಸಮಾಗಮ ಕ್ಷೇತ್ರದಲ್ಲಿ ಮತ್ತು ಲೌಹಿತ್ಯಕ್ಷೇತ್ರದಲ್ಲಿ ವಿಧಿ ಪೂರ್ವಕವಾಗಿ ಸ್ನಾನವನ್ನು ಮಾಡುವವನು ಪುಂಡರೀಕಯಾಗದ ಫಲವನ್ನು ಪಡೆಯುತ್ತಾನೆ.
ರಾಮಹ್ರದ ಉಪಸ್ಪೃಶ್ಯ ವಿಶಾಲಾಯಾಂ ಕೃತೋದಕಃ |
ದ್ವಾದಶಾಹಂ ನಿರಾಹಾರಃ ಕಲ್ಮಷಾದ್ ವಿಪ್ರಮುಚ್ಯತೇ ||44||
ಹನ್ನೆರಡು ದಿವಸಗಳ ಕಾಲ ನಿರಾಹಾರನಾಗಿ ರಾಮಹ್ರದದಲ್ಲಿ ಸ್ನಾನವನ್ನು ಮಾಡಿ ವಿಶಾಲಾ ಕ್ಷೇತ್ರದಲ್ಲಿ ತರ್ಪಣವನ್ನು ಕೊಡುವವನು ದೋಷದಿಂದ ರಹಿತನಾಗುತ್ತಾನೆ.
ಮಹಾಹ್ರದ ಉಪಸ್ಪೃಶ್ಯ ಶುದ್ಧೇನ ಮನಸಾ ನರಃ |
ಏಕಮಾಸಂ ನಿರಾಹಾರೋ ಜಮದಗ್ನಿಗತಿಂ ಲಭೇತ್ ||45||
ಶುದ್ಧವಾದ ಮನಸ್ಸಿನಿಂದ ಒಂದು ತಿಂಗಳ ಕಾಲ ನಿರಾಹಾರನಾಗಿ ಮಹಾಹ್ರದದಲ್ಲಿ ಸ್ನಾನ ಮಾಡುವ ಮನುಷ್ಯನು ಜಮದಗ್ನಿಗಳ ಗತಿಯನ್ನು ಹೊಂದುತ್ತಾನೆ.
ವಿಂಧ್ಯೇ ಸಂತಾಪ್ಯ ಚಾತ್ಮಾನಂ ಸತ್ಯಸಂಧಸ್ತ್ವಹಿಂಸಕಃ |
ಷಣ್ಮಾಸಂ ಪದಮಾಸ್ಥಾಯ ಮಾಸೇನೈಕೇನ ಶುಧ್ಯತಿ ||46||
ವಿಂಧ್ಯಪರ್ವತದಲ್ಲಿ ತನ್ನನ್ನು ತಪಸ್ಸಿನಿಂದ ಸಂತಾಪಗೊಳಿಸಿ ಸತ್ಯಸಂಧನೂ, ಹಿಂಸಾ ರಹಿತನೂ ಆಗಿ ಆರು ತಿಂಗಳುಗಳ ಕಾಲ ವಾಸಿಸುವವನು ಒಂದೇ ತಿಂಗಳಿನಲ್ಲಿ ಶುದ್ಧನಾಗುತ್ತಾನೆ.
ನರ್ಮದಾಯಾಮುಪಸ್ಪೃಶ್ಯ ತಥಾ ಶೂರ್ಪಾರಕೋದಕೇ |
ಏಕಪಕ್ಷಂ ನಿರಾಹಾರೋ ರಾಜಪುತ್ರೋ ವಿಧೀಯತೇ ||47||
ನರ್ಮದಾ ನದಿಯಲ್ಲಿ ಹಾಗೆಯೇ ಶೂರ್ಪಾರಕ ತೀರ್ಥದಲ್ಲಿ (ಕೃಷ್ಣಾನದಿ) ಒಂದು ಪಕ್ಷದ ಕಾಲ ನಿರಾಹಾರನಾಗಿ ಸ್ನಾನ ಮಾಡುವವನು ರಾಜಪುತ್ರನಾಗಿ ಜನಿಸುತ್ತಾನೆ.
ಜಂಬೂಮಾರ್ಗೇ ತ್ರಿಭಿರ್ಮಾಸೈಃ ಸಂಯತಃ ಸುಸಮಾಹಿತಃ |
ಅಹೋರಾತ್ರೇಣ ಚೈಕೇನ ಸಿದ್ಧಿಂ ಸಮಧಿಗಚ್ಛತಿ ||48||

ಜಂಬೂಮಾರ್ಗದಲ್ಲಿ ಮೂರು ತಿಂಗಳ ಕಾಲ ಸಮಾಧಾನದಿಂದ ಸಂಯಮದಿಂದ ಕೂಡಿ ವಾಸಿಸುವವನು ಒಂದೇ ಹಗಲು ಮತ್ತು ರಾತ್ರಿಯಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ಕೋಕಾಮುಖೇ ವಿಗಾಹ್ಯಾಪೋ ಗತ್ವಾ ಚಂಡಾಲಿಕಾಶ್ರಮಮ್ |
ಶಾಕಭಕ್ಷಶ್ಚೀರವಾಸಾಃ ಕುಮಾರೀರ್ವಿಂದತೇ ದಶ ॥49॥
ಕೋಕಾಮುಖ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಚಂಡಾಲಿಕಾಶ್ರಮಕ್ಕೆ ಹೋಗಿ ಶಾಕಭಕ್ಷನಾಗಿ ನಾರು ಮಡಿಯನ್ನು ಉಡುವವನು ಹತ್ತು ಹೆಣ್ಣುಮಕ್ಕಳನ್ನು ಪಡೆಯುತ್ತಾನೆ.
ವೈವಸ್ವತಸ್ಯ ಸದನಂ ನ ಸ ಗಚ್ಛೇತ್ಕದಾಚನ |
ಯಸ್ಯ ಕನ್ಯಾಹ್ರದೇ ವಾಸೋ ದೇವಲೋಕಂ ಸ ಗಚ್ಛತಿ ॥50॥
ಯಾವನು ಕನ್ಯಾಹ್ರದದಲ್ಲಿ ವಾಸ ಮಾಡುತ್ತಾನೆಯೋ ಅವನು ಎಂದೂ ಯಮ ಪಟ್ಟಣಕ್ಕೆ ಹೋಗುವುದಿಲ್ಲ. ದೇವಲೋಕಕ್ಕೆ ಹೋಗುತ್ತಾನೆ.
ಪ್ರಭಾಸೇ ತ್ವೇಕರಾತ್ರೇಣ ಅಮಾವಾಸ್ಯಾಂ ಸಮಾಹಿತಃ |
ಸಿಧ್ಯತೇಽತ್ರ ಮಹಾಬಾಹೋ ಯೋ ನರೋ ಜಾಯತೇ ಪುನಃ ॥51॥
ಎಲೈ ಮಹಾಬಾಹುವೇ, ಪ್ರಭಾಸ ಕ್ಷೇತ್ರದಲ್ಲಿ ಅಮಾವಾಸ್ಯೆ ದಿವಸ ಸಮಾಧಾನದಿಂದ ಸ್ನಾನವನ್ನು ಮಾಡುವವನು ಪುನಃ ಮನುಷ್ಯನಾಗಿ ಜನಿಸಿದರೆ ಒಂದೇ ರಾತ್ರಿಯಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.
ಉಜ್ಜಾನಕ ಉಪಸ್ಪೃಶ್ಯ ಆರ್ಷ್ಟಿಷೇಣಸ್ಯ ಚಾಶ್ರಮೇ |
ಪಿಂಗಾಯಾಶ್ಚಾಶ್ರಮೇ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥52॥
ಉಜ್ಜಾನಕರ ಆಶ್ರಮದಲ್ಲಿಯೂ, ಅರ್ಷ್ಟಿಷೇಣರ ಆಶ್ರಮದಲ್ಲಿಯೂ, ಪಿಂಗೆಯರ ಆಶ್ರಮದಲ್ಲಿಯೂ ಸ್ನಾನವನ್ನು ಮಾಡಿದರೆ ಸರ್ವಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ಕುಲ್ಯಾಯಾಂ ಸಮುಪಸ್ಪೃಶ್ಯ ಜಪ್ತ್ವಾ ಚೈವಾಘಮರ್ಷಣಮ್ |
ಅಶ್ವಮೇಧಮವಾಪ್ನೋತಿ ತ್ರಿರಾತ್ರೋಪೋಷಿತಃ ಶುಚಿಃ ॥53॥
ಕುಲ್ಯಾತೀರ್ಥದಲ್ಲಿ ಮೂರು ರಾತ್ರಿ ಉಪವಾಸದಿಂದ ವಾಸವನ್ನು ಮಾಡಿ, ಶುಚಿಯಾಗಿ ಅಘಮರ್ಷಣ ಸೂಕ್ತವನ್ನು ಜಪ ಮಾಡಿ ಸ್ನಾನವನ್ನು ಮಾಡುವವನು ಅಶ್ವಮೇಧಫಲವನ್ನು ಪಡೆಯುತ್ತಾನೆ.
ಪಿಂಡಾರಕ ಉಪಸ್ಪೃಶ್ಯ ಏಕರಾತ್ರೋಷಿತೋ ನರಃ |
ಅಗ್ನಿಷ್ಟೋಮಮವಾಪ್ನೋತಿ ಪ್ರಭಾತಾಂ ಶರ್ವರೀಂ ಶುಚಿಃ ॥54॥
ಪಿಂಡಾರಕ ಕ್ಷೇತ್ರದಲ್ಲಿ ಒಂದು ದಿವಸ ವಾಸಿಸಿ ಸ್ನಾನವನ್ನು ಮಾಡುವ ಮನುಷ್ಯನು ರಾತ್ರಿಯು ಕಳೆಯುವಷ್ಟರಲ್ಲಿ ಶುಚಿಯಾಗಿ ಅಗ್ನಿಷ್ಟೋಮ ಫಲವನ್ನು ಪಡೆಯುತ್ತಾನೆ.
ತಥಾ ಬ್ರಹ್ಮಸರೋ ಗತ್ವಾ ಧರ್ಮಾರಣ್ಯೋಪಶೋಭಿತಮ್ |
ಪುಂಡರೀಕಮವಾಪ್ನೋತಿ ಪ್ರಭಾತಾಂ ಶರ್ವರೀಂ ಶುಚಿಃ ॥55॥
ಹಾಗೆಯೇ ಧರ್ಮಾರಣ್ಯದಿಂದ ಶೋಭಿಸುವ ಬ್ರಹ್ಮಸರೋವರಕ್ಕೆ ಹೋಗಿ ಸ್ನಾನವನ್ನು ಮಾಡುವವನು ಒಂದು ರಾತ್ರಿಯು ಕಳೆಯುವಷ್ಟರಲ್ಲಿ ಶುಚಿಯಾಗಿ ಪುಂಡರೀಕ ಯಾಗದ ಫಲವನ್ನು ಹೊಂದುತ್ತಾನೆ.
ಮೈನಾಕೇ ಪರ್ವತೇ ಸ್ನಾತ್ವಾ ತಥಾ ಸಂಧ್ಯಾಮುಪಾಸ್ಯ ಚ |
ಕಾಮಂ ಜಿತ್ವಾ ಚ ವೈ ಮಾಸಂ ಸರ್ವಮೇಧಫಲಂ ಲಭೇತ್ ॥56॥
ಮೈನಾಕ ಪರ್ವತದಲ್ಲಿ ಒಂದು ತಿಂಗಳ ಕಾಲ ಸ್ನಾನವನ್ನು ಮಾಡಿ ಸಂಧ್ಯೋಪಾಸನೆಯನ್ನು ಮಾಡುವವನು ಕಾಮವನ್ನು ಗೆದ್ದು ಸರ್ವಮೇಧ ಫಲವನ್ನು ಹೊಂದುತ್ತಾನೆ.
ಕಾಲೋದಕಂ ನಂದಿಕುಂಡಂ ತಥೈವೋತ್ತರಮಾನಸಮ್ |
ಅಭ್ಯೇತ್ಯ ಯೋಜನಶತಾದ್ ಭ್ರೂಣಹಾ ವಿಪ್ರಮುಚ್ಯತೇ ॥57॥
ಕಾಲೋದಕ, ನಂದಿಕುಂಡ, ಉತ್ತರಮಾನಸ ತೀರ್ಥಗಳಿಗೆ ಹೋಗುವವನು ನೂರು ಯೋಜನ ದೂರದಲ್ಲಿಯೇ ಭ್ರೂಣಹತ್ಯಾ ಪಾಪದಿಂದ ನಿರ್ಮುಕ್ತನಾಗುತ್ತಾನೆ.
ನಂದೀಶ್ವರಸ್ಯ ಮೂರ್ತಿಂ ತು ದೃಷ್ಟ್ವಾ ಮುಚ್ಯೇತ ಕಿಲ್ಬಿಷೈಃ |
ಸ್ವರ್ಗಮಾರ್ಗೇ ನರಃ ಸ್ನಾತ್ವಾ ಬ್ರಹ್ಮಲೋಕಂ ಸ ಗಚ್ಛತಿ ॥58॥
ನಂದೀಶ್ವರನನ್ನು ನೋಡಿ ದೋಷಗಳಿಂದ ರಹಿತನಾಗುತ್ತಾನೆ. ಸ್ವರ್ಗಮಾರ್ಗದಲ್ಲಿ ಸ್ನಾನ ಮಾಡಿದ ಮನುಷ್ಯನು ಬ್ರಹ್ಮಲೋಕಕ್ಕೆ ಹೋಗುತ್ತಾನೆ.
ವಿಖ್ಯಾತೋ ಹಿಮವಾನ್ಪುಣ್ಯಃ ಶಂಕರಶ್ವಶುರೋ ಗಿರಿಃ |
ಆಕರಃ ಸರ್ವರತ್ನಾನಾಂ ಸಿದ್ಧಚಾರಣಸೇವಿತಃ ॥59॥
ಶಂಕರನ ಮಾವನಾದ ಹಿಮಾಲಯ ಪರ್ವತವು ಪ್ರಖ್ಯಾತವಾದುದು ಮತ್ತು ಪವಿತ್ರವಾದುದು. ಅದು ಸರ್ವರತ್ನಗಳಿಗೆ ಆಕರವಾಗಿ ಸಿದ್ಧ-ಚಾರಣರಿಂದ ಸೇವಿತವಾದುದು.
ಶರೀರಮುತ್ಸೃಜೇತ್ ತತ್ರ ವಿಧಿಪೂರ್ವಮನಾಶಕೇ |
ಅಧ್ರುವಂ ಜೀವಿತಂ ಜ್ಞಾತ್ವಾ ಯೋ ವೈ ವೇದಾಂತಗೋ ದ್ವಿಜಃ ॥60॥
ಅಭ್ಯರ್ಚ್ಯ ದೇವತಾಸ್ತತ್ರ ನಮಸ್ಕೃತ್ಯ ಮುನೀಂಸ್ತಥಾ |
ತತಃ ಸಿದ್ಧೋ ದಿವಂ ಗಚ್ಛೇದ್ ಬ್ರಹ್ಮಲೋಕಂ ಸನಾತನಮ್ ॥61॥

ಯಾವನು ಅಲ್ಲಿ ನಿರಶನವ್ರತವನ್ನು ಮಾಡಿ, ವೇದಾಂತವನ್ನು ಅಧ್ಯಯನ ಮಾಡಿ, ಜೀವನವು ಅಸ್ಥಿರವೆಂದು ತಿಳಿದು, ದೇವತೆಗಳನ್ನು ಪೂಜಿಸಿ, ಅಲ್ಲಿರುವ ಋಷಿಗಳಿಗೆ ನಮಸ್ಕರಿಸಿ ವಿಧಿವತ್ತಾಗಿ ದೇಹವನ್ನು ತ್ಯಜಿಸುತ್ತಾನೆಯೋ ಅವನು ಸಿದ್ಧನಾಗಿ ಸ್ವರ್ಗಕ್ಕೆ ಹೋಗಿ ಅಲ್ಲಿಂದ ಸನಾತನವಾದ ಬ್ರಹ್ಮಲೋಕಕ್ಕೆ ಹೋಗುತ್ತಾನೆ.
ಕಾಮಂ ಕ್ರೋಧಂ ಚ ಲೋಭಂ ಚ ಯೋ ಜಿತ್ವಾ ತೀರ್ಥಮಾವಸೇತ್ |
ನ ತೇನ ಕಿಂಚಿನ್ನ ಪ್ರಾಪ್ತಂ ತೀರ್ಥಾಭಿಗಮನಾದ್ ಭವೇತ್ ॥62॥
ಕಾಮ-ಕ್ರೋಧ-ಲೋಭಗಳನ್ನು ವರ್ಜಿಸಿ ಯಾವನು ತೀರ್ಥಯಾತ್ರೆಯನ್ನು ಮಾಡುತ್ತಾನೆಯೋ ಅವನಿಗೆ ತೀರ್ಥಯಾತ್ರೆಯಿಂದ ಅಲಭ್ಯವಾದ ಫಲವು ಯಾವುದೂ ಇಲ್ಲ.
ಯಾನ್ಯಗಮ್ಯಾನಿ ತೀರ್ಥಾನಿ ದುರ್ಗಾಣಿ ವಿಷಮಾಣಿ ಚ |
ಮನಸಾ ತಾನಿ ಗಮ್ಯಾನಿ ಸರ್ವತೀರ್ಥಸಮಾಸತಃ ॥63॥
ಯಾವ ತೀರ್ಥಗಳು ಅಗಮ್ಯವೋ ಅಥವಾ ಹೋಗಲು ಬಹಳ ಕಷ್ಟಸಾಧ್ಯವೋ, ವಿಷಮ ಮಾರ್ಗದಿಂದ ಕೂಡಿರುತ್ತವೆಯೋ ಅಂತಹ ಸರ್ವತೀರ್ಥಗಳಿಗೆ ಮನಸ್ಸಿನಿಂದಲೇ ಹೋಗಬೇಕು.
ಇದಂ ಮೇಧ್ಯಮಿದಂ ಧನ್ಯಮಿದಂ ಸ್ವರ್ಗ್ಯಮಿದಂ ಸುಖಮ್ |
ಇದಂ ರಹಸ್ಯಂ ದೇವಾನಾಮಾಪ್ಲಾವ್ಯಾನಾಂ ಚ ಪಾವನಮ್ ॥64॥
ಈ ತೀರ್ಥಮಹಿಮೆಯು ಸ್ವೀಕಾರಕ್ಕೆ ಯೋಗ್ಯವಾದುದು, ಧನಪ್ರದವಾದುದು, ಸ್ವರ್ಗಪ್ರದವಾದುದು, ಸುಖಪ್ರದವಾದುದು, ರಹಸ್ಯವಾದುದು. ದೇವತೆಗಳನ್ನೂ ಮತ್ತು ಸ್ನಾನ ಮಾಡುವವರನ್ನೂ ಶುದ್ಧಗೊಳಿಸುವಂತಹದು.
ಇದಂ ದದ್ಯಾದ್ ದ್ವಿಜಾತೀನಾಂ ಸಾಧೂನಾಮಾತ್ಮಜಸ್ಯ ವಾ |
ಸುಹೃದಾಂ ಚ ಜಪೇತ್ಕರ್ಣೇ ಶಿಷ್ಯಸ್ಯಾನುಗತಸ್ಯ ವಾ ॥65॥
ಇದನ್ನು ಬ್ರಾಹ್ಮಣರಿಗೆ, ಸಜ್ಜನರಿಗೆ ಮತ್ತು ಪುತ್ರನಿಗೆ ಹೇಳಬೇಕು. ಸುಹೃದರ ಅಥವಾ ಶಿಷ್ಯನ ಕಿವಿಯಲ್ಲಿ ಅಥವಾ ಅನುಸರಿಸಿದವನ ಕಿವಿಯಲ್ಲಿ ಜಪಿಸಬೇಕು.
ದತ್ತವಾನ್ ಗೌತಮಸ್ಯೇದಮಂಗಿರಾ ವೈ ಮಹಾತಪಾಃ |
ಗುರುಭಿಃ ಸಮನುಜ್ಞಾತಃ ಕಾಶ್ಯಪೇನ ಚ ಧೀಮತಾ ॥66॥
ಈ ವಿದ್ಯೆಯನ್ನು ಮಹಾತಪಸ್ವಿಗಳಾದ ಅಂಗಿರಸರು ಗುರುಗಳ ಅನುಮತಿಯನ್ನು ಪಡೆದು, ಮೇಧಾವಿಯಾದ ಕಾಶ್ಯಪರ ಅನುಮತಿಯನ್ನು ಪಡೆದು ಗೌತಮರಿಗೆ ಕೊಟ್ಟರು.
ಮಹರ್ಷೀಣಾಮಿದಂ ಜಪ್ಯಂ ಪಾವನಾನಾಂ ತಥೋತ್ತಮಮ್ |
ಜಪಂಶ್ಚಾಭ್ಯುತ್ಥಿತಃ ಶಶ್ವನ್ನಿರ್ಮಲಃ ಸ್ವರ್ಗಮಾಪ್ನುಯಾತ್ ॥67॥
ಇದು ಮಹರ್ಷಿಗಳು ಜಪಿಸಲು ಯೋಗ್ಯವಾದುದು. ಪವಿತ್ರವಾದುದರಲ್ಲಿ ಅತ್ಯಂತ ಪವಿತ್ರವಾದುದು. ಇದನ್ನು ಪ್ರಾತಃಕಾಲದಲ್ಲಿ ಯಾವಾಗಲೂ ಜಪಿಸುವವನು ನಿರ್ಮಲನಾಗಿ ಸ್ವರ್ಗವನ್ನು ಹೊಂದುತ್ತಾನೆ.
ಇದಂ ಯಶ್ಚಾಪಿ ಶೃಣುಯಾದ್ ರಹಸ್ಯಂ ತ್ವಂಗಿರೋಮತಮ್ |
ಉತ್ತಮೇ ಚ ಕುಲೇ ಜನ್ಮ ಲಭೇಜ್ಜಾತಿಂ ಚ ಸಂಸ್ಮರೇತ್ ॥68॥
ಅಂಗಿರಸರಿಗೆ ಅಭಿಪ್ರೇತವಾದ ಈ ರಹಸ್ಯವನ್ನು ಯಾವನು ಕೇಳುತ್ತಾನೆಯೋ ಅವನು ಉತ್ತಮ ಕುಲದಲ್ಲಿ ಜನ್ಮವನ್ನು ಪಡೆದು ಪೂರ್ವಜನ್ಮದ ಸ್ಮರಣೆಯನ್ನು ಹೊಂದುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಅಂಗಿರಸತೀರ್ಥಯಾತ್ರಾವರ್ಣನಂ ನಾಮ ಷಟ್‌ಪಂಚಾಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಅನುಶಾಸನ ಪರ್ವ
ಐವತ್ತೇಳನೆಯ ಅಧ್ಯಾಯ
ಗಂಗಾ ಪ್ರಶಂಸೆ.
ವೈಶಂಪಾಯನಃ
ಬೃಹಸ್ಪತಿಸಮಂ ಬುದ್ಧ್ಯಾ ಕ್ಷಮಯಾ ಬ್ರಹ್ಮಣಃ ಸಮಮ್ |
ಪರಾಕ್ರಮೇ ಶಕ್ರಸಮಮಾದಿತ್ಯಸಮತೇಜಸಮ್ ॥1॥
ಗಾಂಗೇಯಮರ್ಜುನೇನಾಜೌ ನಿಹತಂ ಭೂರಿವರ್ಚಸಮ್ |
ಭ್ರಾತೃಭಿಃ ಸಹಿತೋऽನ್ಯೈಶ್ಚ ಪರ್ಯುಪಾಸ್ತೇ ಯುಧಿಷ್ಠಿರಃ ॥2॥
ವೈಶಂಪಾಯನ ಬುದ್ಧಿಯಲ್ಲಿ ಬೃಹಸ್ಪತಿಗೆ ಸಮನೂ, ಕ್ಷಮೆಯಲ್ಲಿ ಬ್ರಹ್ಮನಿಗೆ ಸಮನೂ, ಪರಾಕ್ರಮದಲ್ಲಿ ಇಂದ್ರನಿಗೆ ಸಮನೂ, ತೇಜಸ್ಸಿನಲ್ಲಿ ಸೂರ್ಯನಿಗೆ ಸಮನೂ ಆದ, ಅರ್ಜುನನಿಂದ ಯುದ್ಧದಲ್ಲಿ ಹತನಾಗಿ ಬಿದ್ದ, ಮಹಾವರ್ಚಸ್ವಿಯಾದ, ಗಂಗಾ ಪುತ್ರರಾದ ಭೀಷ್ಮರನ್ನು ತಮ್ಮಂದಿರಿಂದಲೂ ಮತ್ತು ಅನ್ಯರಿಂದಲೂ ಸಹಿತನಾದ ಯುಧಿಷ್ಠಿರನು ಉಪಾಸನೆ ಮಾಡಿದನು.
ಶಯಾನಂ ವೀರಶಯನೇ ಕಾಲಾಕಾಂಕ್ಷಿಣಮಚ್ಯುತಮ್ |

ಆಜಗ್ಮುರ್ಭರತಶ್ರೇಷ್ಠಂ ದ್ರಷ್ಟುಕಾಮಾ ಮಹರ್ಷಯಃ ॥3॥
ವೀರಶಯನದಲ್ಲಿ ಮಲಗಿ ಉತ್ತರಾಯಣ ಕಾಲವನ್ನು ಆಕಾಂಕ್ಷಿಸುತ್ತಾ ತನ್ನ ಗುಣಗಳಿಂದ ಚ್ಯುತನಾಗದ ಭರತಶ್ರೇಷ್ಠನನ್ನು ನೋಡಲು ಬಯಸಿ ಮಹರ್ಷಿಗಳು ಆಗಮಿಸಿದರು.
ಅತ್ರಿರ್ವಸಿಷ್ಠೋಽಥ ಭೃಗುಃ ಪುಲಸ್ತ್ಯಃ ಪುಲಹಃ ಕ್ರತುಃ |
ಅಂಗಿರಾ ಗೌತಮೋಽಗಸ್ತ್ಯಃ ಸುಮತಿಃ ಸ್ವಾಯುರಾತ್ಮವಾನ್ ॥4॥
ವಿಶ್ವಾಮಿತ್ರಃ ಸ್ಥೂಲಶಿರಾಃ ಸಂವರ್ತಃ ಪ್ರಮತಿರ್ದಮಃ |
ಉಶನಾ ಬೃಹಸ್ಪತಿರ್ವ್ಯಾಸಶ್ಚ್ಯವನಃ ಕಾಶ್ಯಪೋ ಧ್ರುವಃ ॥5॥
ದುರ್ವಾಸಾ ಜಮದಗ್ನಿಶ್ಚ ಮಾರ್ಕಂಡೇಯೋಽಥ ಗಾಲವಃ |
ಭರದ್ವಾಜಶ್ಚ ರೈಭ್ಯಶ್ಚ ಯವಕ್ರೀತಸ್ತ್ರಿತಸ್ತಥಾ ॥6॥
ಅತ್ರಿ, ವಸಿಷ್ಠ, ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಾ, ಗೌತಮ, ಅಗಸ್ತ್ಯ, ಸುಮತಿ, ಸ್ವಾಯು, ವಿಶ್ವಾಮಿತ್ರ, ಸ್ಥೂಲಶಿರಾ, ಸಂವರ್ತ, ಪ್ರಮತಿ, ದಮ, ಶುಕ್ರ, ಗುರು, ವ್ಯಾಸ, ಚ್ಯವನ, ಕಾಶ್ಯಪ, ಧ್ರುವ, ದುರ್ವಾಸ, ಜಮದಗ್ನಿ, ಮಾರ್ಕಂಡೇಯ, ಗಾಲವ, ಭರದ್ವಾಜ, ರೈಭ್ಯ, ಯವಕ್ರೀತ, ತ್ರಿತ;
ಸ್ಥೂಲಾಕ್ಷಃ ಶಕಲಾಕ್ಷಶ್ಚ ಕಣ್ವೋ ಮೇಧಾತಿಥಿಃ ಕೃಶಃ |
ನಾರದಃ ಪರ್ವತಶ್ಚೈವ ಸುಧನ್ವಾಥೈಕತೋ ದ್ವಿತಃ ॥7॥
ನಿತಂಭೂರ್ಭುವನೋ ಧೌಮ್ಯಃ ಶತಾನಂದೋಽಕೃತವ್ರಣಃ |
ಜಾಮದಗ್ನ್ಯಸ್ತಥಾ ರಾಮಃ ಕಾಮ್ಯಶ್ಚೇತ್ಯೇವಮಾದಯಃ |
ಸಮಾಗತಾ ಮಹಾತ್ಮಾನೋ ಭೀಷ್ಮಂ ದ್ರಷ್ಟುಂ ಮಹರ್ಷಯಃ ॥8॥
ಸ್ಥೂಲಾಕ್ಷ, ಶಕಲಾಕ್ಷ, ಕಣ್ವ, ಮೇಧಾತಿಥಿ, ಕೃಶ, ನಾರದ, ಪರ್ವತ, ಸುಧನ್ವಾ, ಏಕತ, ದ್ವಿತ, ನಿತಂಭೂ, ಭುವನ, ಧೌಮ್ಯ, ಶತಾನಂದ, ಅಕೃತವ್ರಣ, ಜಮದಗ್ನಿ ಪುತ್ರರಾದ ಪರಶುರಾಮ, ಕಾಮ್ಯ - ಇವರೇ ಮೊದಲಾದ ಮಹಾತ್ಮರಾದ ಮಹರ್ಷಿಗಳು ಭೀಷ್ಮರನ್ನು ನೋಡಲು ಬಂದರು.
ತೇಷಾಂ ಮಹಾತ್ಮನಾಂ ಪೂಜಾಮಾಗತಾನಾಂ ಯುಧಿಷ್ಠಿರಃ |
ಭ್ರಾತೃಭಿಃ ಸಹಿತಶ್ಚಕ್ರೇ ಯಥಾವದನುಪೂರ್ವಶಃ ॥9॥
ಯುಧಿಷ್ಠಿರನು ಸಹೋದರರಿಂದ ಸಹಿತನಾಗಿ ಆಗತರಾದ ಆ ಮಹಾತ್ಮರಿಗೆ ಕ್ರಮವಾಗಿ ಪೂಜೆಯನ್ನು ಮಾಡಿದನು.
ತೇ ಪೂಜಿತಾಃ ಸುಖಾಸೀನಾಃ ಕಥಾಶ್ಚಕ್ರುರ್ಮಹರ್ಷಯಃ |
ಭೀಷ್ಮಾಶ್ರಿತಾಃ ಸುಮಧುರಾಃ ಸರ್ವೇಂದ್ರಿಯಮನೋಹರಾಃ ॥10॥
ಪೂಜಿತರಾದ ಆ ಮಹರ್ಷಿಗಳು ಸುಖವಾಗಿ ಕುಳಿತು ಭೀಷ್ಮರಿಗೆ ಸಂಬಂಧಿಸಿದ ಮಧುರವಾದ, ಸರ್ವೇಂದ್ರಿಯ ಮನೋಹರವಾದ ಕಥೆಗಳನ್ನು ಹೇಳಿದರು.
ಭೀಷ್ಮಸ್ತೇಷಾಂ ಕಥಾಃ ಶ್ರುತ್ವಾ ಋಷೀಣಾಂ ಭಾವಿತಾತ್ಮನಾಮ್ |
ಮೇನೇ ದಿವಿಸ್ಥಮಾತ್ಮಾನಂ ತುಷ್ಟ್ಯಾ ಪರಮಯಾ ಯುತಃ ॥11॥
ಭೀಷ್ಮರು ಪೂತಾತ್ಮರಾದ ಆ ಋಷಿಗಳ ಮಾತನ್ನು ಕೇಳಿ, ಬಹಳ ಸಂತೋಷದಿಂದ ಕೂಡಿದವರಾಗಿ ತಾವು ಸ್ವರ್ಗದಲ್ಲಿದ್ದೇವೆಂದು ತಿಳಿದರು.
ತತಸ್ತೇ ಭೀಷ್ಮಮಾಮಂತ್ರ್ಯ ಪಾಂಡವಾಂಶ್ಚ ಮಹರ್ಷಯಃ |
ಅಂತರ್ಧಾನಂ ಗತಾಃ ಸರ್ವೇ ಸರ್ವೇಷಾಮೇವ ಪಶ್ಯತಾಮ್ ॥12॥
ಅನಂತರ ಆ ಮಹರ್ಷಿಗಳು ಭೀಷ್ಮರ ಮತ್ತು ಪಾಂಡವರ ಅನುಮತಿಯನ್ನು ಪಡೆದು ಎಲ್ಲರೂ ನೋಡುತ್ತಿರುವಂತೆಯೇ ಅಂತರ್ಧಾನವನ್ನು ಹೊಂದಿದರು.
ತಾನೃಷೀನ್ ಸುಮಹಾಭಾಗಾನಂತರ್ಧಾನಗತಾನಪಿ |
ಪಾಂಡವಾಸ್ತುಷ್ಟುವುಃ ಸರ್ವೇ ಪ್ರಣೇಮುಶ್ಚ ಮುಹುರ್ಮುಹುಃ ॥13॥
ಆ ಋಷಿಗಳು ಅಂತರ್ಧಾನ ಹೊಂದಿದ್ದರೂ ಪಾಂಡವರೆಲ್ಲರೂ ಅವರನ್ನು ಸ್ತೋತ್ರ ಮಾಡಿ ಪುನಃ ಪುನಃ ನಮಸ್ಕರಿಸಿದರು.
ಪ್ರಸನ್ನಮನಸಃ ಸರ್ವೇ ಗಾಂಗೇಯಂ ಕುರುಸತ್ತಮಾಃ |
ಉಪತಸ್ಥುರ್ಯಥೋದ್ಯಂತಮಾದಿತ್ಯಂ ಮಂತ್ರಕೋವಿದಾಃ ॥14॥
ಪ್ರಸನ್ನಚಿತ್ತರಾದ ಗಾಂಗೇಯರನ್ನು ಕುರುಶ್ರೇಷ್ಠರೆಲ್ಲರೂ ಮಂತ್ರಜ್ಞರು ಉದಿಸಿದ ಸೂರ್ಯನನ್ನು ಸ್ತೋತ್ರ ಮಾಡುವಂತೆ ಸ್ತೋತ್ರ ಮಾಡಿದರು.
ಪ್ರಭಾವಾತ್ ತಪಸಸ್ತೇಷಾಮೃಷೀಣಾಂ ವೀಕ್ಷ್ಯ ಪಾಂಡವಾಃ |
ಪ್ರಕಾಶಂತೋ ದಿಶಃ ಸರ್ವಾ ವಿಸ್ಮಯಂ ಪರಮಂ ಯಯುಃ ॥15॥
ಆ ಋಷಿಗಳ ತಪಸ್ಸಿನ ಪ್ರಭಾವದಿಂದ ಎಲ್ಲ ದಿಕ್ಕುಗಳೂ ಪ್ರಕಾಶಿಸುತ್ತಿರುವುದನ್ನು ನೋಡಿದ ಪಾಂಡವರು ವಿಸ್ಮಯವನ್ನು ಹೊಂದಿದರು.
ಮಹಾಭಾಗ್ಯಂ ಪರಂ ತೇಷಾಮೃಷೀಣಾಮನುಚಿಂತ್ಯ ತೇ |
ಪಾಂಡವಾಃ ಸಹ ಭೀಷ್ಮೇಣ ಕಥಾಶ್ಚಕ್ರುಸ್ತದಾಶ್ರಯಾಃ ॥16॥
ಆ ಋಷಿಗಳ ಶ್ರೇಷ್ಠವಾದ ಮಹಾಭಾಗ್ಯವನ್ನು ಚಿಂತಿಸಿ ಪಾಂಡವರು ಭೀಷ್ಮರ ಜೊತೆಯಲ್ಲಿ ಆ ಋಷಿಗಳಿಗೆ ಸಂಬಂಧಪಟ್ಟ ಕಥೆಗಳನ್ನು ಮಾತನಾಡಿದರು.

ಕಥಾಂತೇ ಶಿರಸಾ ಪಾದೌ ಸ್ಪೃಷ್ಟ್ವಾ ಭೀಷ್ಮಸ್ಯ ಪಾಂಡವಃ |
ಧರ್ಮ್ಯಂ ಧರ್ಮಸುತಃ ಪ್ರಶ್ನಂ ಪರ್ಯಪೃಚ್ಛದ್ ಯುಧಿಷ್ಠಿರಃ ||17||
ಕಥೆಗಳ ಕೊನೆಯಲ್ಲಿ ಪಾಂಡವನಾದ ಧರ್ಮಪುತ್ರನಾದ ಯುಧಿಷ್ಠಿರನು ಭೀಷ್ಮರ ಪಾದಗಳನ್ನು ಶಿರಸಾ ಸ್ಪರ್ಶ ಮಾಡಿ ನಮಸ್ಕರಿಸಿ ಧರ್ಮಸಂಬಂಧಿಯಾದ ಪ್ರಶ್ನೆಯನ್ನು ಕೇಳಿದನು.
ಕೇ ದೇಶಾಃ ಕೇ ಜನಪದಾ ಆಶ್ರಮಾಃ ಕೇ ಚ ಪರ್ವತಾಃ |
ಪ್ರಕೃಷ್ಟಾಃ ಪುಣ್ಯತಃ ಕಾಶ್ಚ ಜ್ಞೇಯಾ ನದ್ಯಃ ಪಿತಾಮಹ ||18||
ಪಿತಾಮಹನೇ, ಪುಣ್ಯವನ್ನು ಉಂಟುಮಾಡುವ ದೃಷ್ಟಿಯಿಂದ ಯಾವ ದೇಶಗಳು, ಯಾವ ರಾಜ್ಯಗಳು, ಯಾವ ಆಶ್ರಮಗಳು, ಯಾವ ಪರ್ವತಗಳು ಶ್ರೇಷ್ಠವಾದವುಗಳು? ಯಾವ ನದಿಗಳನ್ನು ಶ್ರೇಷ್ಠವಾದವುಗಳೆಂದು ತಿಳಿಯಬೇಕು?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಿಲೋಂಛವೃತ್ತೇಃ ಸಂವಾದಂ ಸಿದ್ಧಸ್ಯ ಚ ಯುಧಿಷ್ಠಿರ ||19||
ಭೀಷ್ಮ ಎಲೈ ಯುಧಿಷ್ಠಿರನೇ, ಈ ವಿಷಯದಲ್ಲೂ ಸಹ ಸಿಲೋಂಛವೃತ್ತಿಯ ಒಬ್ಬ ಬ್ರಾಹ್ಮಣನಿಗೂ ಮತ್ತು ಒಬ್ಬ ಸಿದ್ಧಪುರುಷನಿಗೂ ನಡೆದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಇಮಾಂ ಕಶ್ಚಿತ್ಪರಿಕ್ರಮ್ಯ ಪೃಥಿವೀಂ ಶೈಲಭೂಷಿತಾಮ್ |
ಅಸಕೃದ್ ದ್ವಿಪದಾಂ ಶ್ರೇಷ್ಠಃ ಶ್ರೇಷ್ಠಸ್ಯ ಗೃಹಮೇಧಿನಃ ||20||
ಸಿಲವೃತ್ತೇರ್ಗೃಹಂ ಪ್ರಾಪ್ತಃ ಸ ತೇನ ವಿಧಿನಾರ್ಚಿತಃ |
ಕೃತಕೃತ್ಯ ಉಪಾತಿಷ್ಠತ್ ಸಿದ್ಧಂ ತಮತಿಥಿಂ ತದಾ ||21||
ಮನುಷ್ಯರಲ್ಲಿ ಶ್ರೇಷ್ಠನಾದ ಒಬ್ಬ ಸಿದ್ಧ ಪುರುಷನು ಪರ್ವತಭೂಷಿತವಾದ ಈ ಭೂಮಿಯನ್ನು ಅನೇಕ ಬಾರಿ ಸಂಚರಿಸಿ, ಶ್ರೇಷ್ಠನಾದ ಸಿಲೋಂಛವೃತ್ತಿಯಿಂದ ಜೀವಿಸುವ ಒಬ್ಬ ಗೃಹಸ್ಥನ ಬಳಿಗೆ ಬಂದು, ಅವನಿಂದ ವಿಧಿಗೆ ಅನುಗುಣವಾಗಿ ಪೂಜಿಸಲ್ಪಟ್ಟನು. ಆ ಸಿಲೋಂಛವೃತ್ತಿಯ ಬ್ರಾಹ್ಮಣನು ಕೃತಕೃತ್ಯನಾಗಿ ಅತಿಥಿಯಾದ ಆ ಸಿದ್ಧನನ್ನು ಒಲೈಸಿದನು.
ತೌ ಸಮೇತ್ಯ ಮಹಾತ್ಮಾನೌ ಸುಖಾಸೀನೌ ಕಥಾಃ ಶುಭಾಃ |
ಚಕ್ರತುರ್ವೇದಸಂಬದ್ಧಾಸ್ತಚ್ಛೇಷಕೃತಲಕ್ಷಣಾಃ ||22||
ಆ ಇಬ್ಬರು ಮಹಾತ್ಮರು ಒಟ್ಟಿಗೆ ಸುಖವಾಗಿ ಕುಳಿತು, ದೇವತೆಗಳ ಶೇಷರೂಪವಾದ ಪ್ರಸಾದವನ್ನು ಧರಿಸಿ, ವೇದಸಂಬಂಧಿಯಾದ ಶುಭವಾದ ಕಥೆಯನ್ನು ಮಾಡಿದರು.
ಸಿಲವೃತ್ತಿಃ ಕಥಾಂತೇ ತು ಸಿದ್ಧಮಾಮಂತ್ರ್ಯ ಯತ್ನತಃ |
ಪ್ರಶ್ನಂ ಪಪ್ರಚ್ಛ ಮೇಧಾವೀ ಯನ್ಮಾಂ ತ್ವಂ ಪರಿಪೃಚ್ಛಸಿ ||23||
ಸಿಲವೃತ್ತಿಯು ಕಥೆಯ ಕೊನೆಯಲ್ಲಿ ಸಿದ್ಧನನ್ನು ಪ್ರಯತ್ನಪೂರ್ವಕವಾಗಿ ಆಮಂತ್ರಿಸಿ ನೀನು ಕೇಳುವ ಪ್ರಶ್ನೆಯನ್ನೇ ಮೇಧಾವಿಯಾದ ಅವನು ಕೇಳಿದನು.
ಸಿಲವೃತ್ತಿಃ
ಕೇ ದೇಶಾಃ ಕೇ ಜನಪದಾಃ ಕೇಽಽಶ್ರಮಾಃ ಕೇ ಚ ಪರ್ವತಾಃ |
ಪ್ರಕೃಷ್ಟಾಃ ಪುಣ್ಯತಃ ಕಾಶ್ಚ ಜ್ಞೇಯಾ ನದ್ಯಸ್ತದುಚ್ಯತಾಮ್ ||24||
ಸಿಲವೃತ್ತಿ ಪುಣ್ಯವನ್ನು ಪಡೆಯುವ ಉದ್ದೇಶದಿಂದ ಯಾವ ದೇಶಗಳು, ಯಾವ ರಾಜ್ಯಗಳು, ಯಾವ ಆಶ್ರಮಗಳು, ಯಾವ ಪರ್ವತಗಳು ಶ್ರೇಷ್ಠವಾದವುಗಳು? ಯಾವ ನದಿಗಳನ್ನು ಶ್ರೇಷ್ಠವಾದವುಗಳೆಂದು ತಿಳಿಯಬೇಕೆಂದು ಹೇಳು.
ಸಿದ್ಧಃ
ತೇ ದೇಶಾಸ್ತೇ ಜನಪದಾಸ್ತೇಽಽಶ್ರಮಾಸ್ತೇ ಚ ಪರ್ವತಾಃ |
ಯೇಷಾಂ ಭಾಗೀರಥೀ ಗಂಗಾ ಮಧ್ಯೇನೈತಿ ಸರಿದ್ವರಾ ||25||
ಸಿದ್ಧ ಯಾವ ದೇಶದ ಮಧ್ಯದಲ್ಲಿ ಶ್ರೇಷ್ಠ ನದಿಯಾದ ಗಂಗೆಯು ಹರಿಯುತ್ತಾಳೆಯೋ ಆ ದೇಶಗಳು, ಆ ರಾಜ್ಯಗಳು, ಆ ಆಶ್ರಮಗಳು ಮತ್ತು ಆ ಪರ್ವತಗಳು ಶ್ರೇಷ್ಠವಾದವುಗಳು.
ತಪಸಾ ಬ್ರಹ್ಮಚರ್ಯೇಣ ಯಜ್ಞೈಸ್ತ್ಯಾಗೇನ ವಾ ಪುನಃ |
ಗತಿಂ ತಾಂ ನ ಲಭೇಜ್ಜಂತುರ್ಗಂಗಾಂ ಸಂಸೇವ್ಯ ಯಾಂ ಲಭೇತ್ ||26||
ಗಂಗೆಯನ್ನು ಸೇವಿಸಿ ಪಡೆಯಬಹುದಾದ ಗತಿಯನ್ನು ತಪಸ್ಸಿನಿಂದಾಗಲೀ, ಬ್ರಹ್ಮಚರ್ಯದಿಂದಾಗಲೀ, ಯಜ್ಞದಿಂದಾಗಲೀ, ತ್ಯಾಗದಿಂದಾಗಲೀ ಮನುಷ್ಯನು ಪಡೆಯಲು ಸಾಧ್ಯವಿಲ್ಲ.
ಸ್ಪೃಷ್ಟಾನಿ ಯೇಷಾಂ ಗಾಂಗೇಯೈಸ್ತೋಯೈರ್ಗಾತ್ರಾಣಿ ದೇಹಿನಾಮ್ |
ನ್ಯಸ್ತಾನಿ ನ ಪುನಸ್ತೇಷಾಂ ತ್ಯಾಗಃ ಸ್ವರ್ಗಾದ್ ವಿಧೀಯತೇ ||27||
ಯಾರ ದೇಹಗಳು ಗಂಗೆಯ ಜಲದಿಂದ ಸ್ಪರ್ಶವನ್ನು ಹೊಂದಿ, ಗಂಗೆಯ ಜಲದಲ್ಲಿ ಇಡಲ್ಪಡುತ್ತವೆಯೋ ಅವರಿಗೆ ಎಂದೂ ಸ್ವರ್ಗ ಪರಿತ್ಯಾಗವು ಹೇಳಲ್ಪಡುವುದಿಲ್ಲ.
ಸರ್ವಾಣಿ ಯೇಷಾಂ ಗಾಂಗೇಯೈಸ್ತೋಯೈಃ ಕೃತ್ಯಾನಿ ದೇಹಿನಾಮ್ |
ಗಾಂ ತ್ಯಕ್ತ್ವಾ ಮಾನವಾ ವಿಪ್ರ ದಿವಿ ತಿಷ್ಠಂತಿ ತೇಽಚಲಾಃ ||28||
ಎಲೈ ಬ್ರಾಹ್ಮಣನೇ, ಯಾವ ಮನುಷ್ಯನು ತನ್ನ ಎಲ್ಲ ಕಾರ್ಯಗಳನ್ನು ಗಂಗಾ ಜಲದಿಂದಲೇ ಮಾಡುತ್ತಾನೆಯೋ ಅವನು ಭೂಮಿಯನ್ನು ತ್ಯಜಿಸಿ, ಸ್ವರ್ಗದಲ್ಲಿ ಸುಖವಾಗಿ ನೆಲೆಸುತ್ತಾನೆ.

ಪೂರ್ವೇ ವಯಸಿ ಕರ್ಮಾಣಿ ಕೃತ್ವಾ ಪಾಪಾನಿ ಯೇ ನರಾಃ |
ಪಶ್ಚಾದ್ ಗಂಗಾಂ ನಿಷೇವಂತೇ ತೇಽಪಿ ಯಾಂತ್ಯುತ್ತಮಾಂ ಗತಿಮ್ ||
ಯಾವ ಮನುಷ್ಯರು ಪೂರ್ವವಯಸ್ಸಿನಲ್ಲಿ ಪಾಪಕೃತ್ಯವನ್ನು ಮಾಡಿ, ಅನಂತರ ಗಂಗೆಯನ್ನು ಸೇವಿಸುತ್ತಾರೆಯೋ ಅವರೂ ಸಹ ಉತ್ತಮ ಗತಿಯನ್ನು ಹೊಂದುತ್ತಾರೆ.
ಸ್ನಾತಾನಾಂ ಶುಚಿಭಿಸ್ತೋಯೈರ್ಗಾಂಗೇಯೈಃ ಪ್ರಯತಾತ್ಮನಾಮ್ |
ವ್ಯುಷ್ಟಿರ್ಭವತಿ ಯಾ ಪುಂಸಾಂ ನ ಸಾ ಕ್ರತುಶತೈರಪಿ ||30||
ಗಂಗೆಯ ಶುಭ ಜಲಗಳಿಂದ ಯಾವ ಜಿತಾತ್ಮರು ಸ್ನಾನವನ್ನು ಮಾಡುತ್ತಾರೆಯೋ ಅಂತಹವರಿಗೆ ಉಂಟಾಗುವ ಪುಣ್ಯದ ಅಭಿವೃದ್ಧಿಯು ನೂರು ಯಾಗಗಳಿಂದಲೂ ಉಂಟಾಗುವುದಿಲ್ಲ.
ಯಾವದಸ್ಥಿ ಮನುಷ್ಯಸ್ಯ ಗಂಗಾತೋಯೇಷು ತಿಷ್ಠತಿ |
ತಾವದ್ವರ್ಷಸಹಸ್ರಾಣಿ ಸ್ವರ್ಗಂ ಪ್ರಾಪ್ಯ ಮಹೀಯತೇ ||31||
ಎಲ್ಲಿಯವರೆಗೆ ಮನುಷ್ಯನ ಅಸ್ಥಿಯು ಗಂಗಾಜಲದಲ್ಲಿ ಇರುತ್ತದೆಯೋ ಅಷ್ಟು ಸಹಸ್ರ ವರ್ಷಗಳು ಅವನು ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ಅಪಹತ್ಯ ತಮಸ್ತೀವ್ರಂ ಯಥಾ ಭಾತ್ಯುದಯೇ ರವಿಃ |
ತಥಾಽಪಹತ್ಯ ಪಾಪ್ಮಾನಂ ಭಾತಿ ಗಂಗಾಜಲೋಕ್ಷಿತಃ ||32||
ಸೂರ್ಯನು ಉದಯಿಸುವಾಗ ತೀವ್ರವಾದ ತಮಸ್ಸನ್ನು ನಾಶಪಡಿಸಿ ಪ್ರಕಾಶಿಸುವಂತೆ ಗಂಗಾಜಲದಲ್ಲಿ ಸ್ನಾನ ಮಾಡಿದವನು ತನ್ನ ಪಾಪವನ್ನು ನಾಶಪಡಿಸಿ ಪ್ರಕಾಶಿಸುತ್ತಾನೆ.
ವಿಸೋಮಾ ಇವ ಶರ್ವರ್ಯೋ ವಿಪುಷ್ಪಾಸ್ತರವೋ ಯಥಾ |
ತದ್ವದ್ ದೇಶಾ ದಿಶಶ್ಚೈವ ಹೀನಾ ಗಂಗಾಜಲೈರ್ಃ ಶುಭೈಃ ||33||
ಶುಭವಾದ ಗಂಗಾಜಲದಿಂದ ರಹಿತವಾದ ದಿಕ್ಕುಗಳು ಮತ್ತು ದೇಶಗಳು ಚಂದ್ರನಿಲ್ಲದ ರಾತ್ರಿಯಂತೆ, ಪುಷ್ಪವಿಲ್ಲದ ವೃಕ್ಷಗಳಂತೆ.
ವರ್ಣಾಶ್ರಮಾ ಯಥಾ ಸರ್ವೇ ಸ್ವಧರ್ಮಜ್ಞಾನವರ್ಜಿತಾಃ |
ಕ್ರತವಶ್ಚ ಯಥಾಽಸೋಮಾಸ್ತಥಾ ಗಂಗಾಂ ವಿನಾ ಜಗತ್ ||34||
ಗಂಗೆ ಇಲ್ಲದ ಜಗತ್ತು ತಮ್ಮ ಧರ್ಮ ಮತ್ತು ಜ್ಞಾನಗಳಿಂದ ವರ್ಜಿತರಾದ ವರ್ಣಾಶ್ರಮಗಳಂತೆ, ಸೋಮವಿಲ್ಲದ ಯಾಗದಂತೆ.
ಯಥಾ ಹೀನಂ ನಭೋಽರ್ಕೇಣ ಭೂಃ ಶೈಲೈಃ ಖಂ ಚ ವಾಯುನಾ |
ತಥಾ ದೇಶಾ ದಿಶಶ್ಚೈವ ಗಂಗಾಹೀನಾ ನ ಸಂಶಯಃ ||35||
ಗಂಗಾರಹಿತವಾದ ದೇಶ ಮತ್ತು ದಿಕ್ಕುಗಳು ಸೂರ್ಯನಿಲ್ಲದ ಆಕಾಶದಂತೆ, ಪರ್ವತವಿಲ್ಲದ ಭೂಮಿಯಂತೆ ಮತ್ತು ವಾಯುವಿಲ್ಲದ ಅಂತರಿಕ್ಷದಂತೆ. ಇದರಲ್ಲಿ ಸಂಶಯವಿಲ್ಲ.
ತ್ರಿಷು ಲೋಕೇಷು ಯೇ ಕೇಚಿತ್ಪ್ರಾಣಿನಃ ಸರ್ವ ಏವ ತೇ |
ತರ್ಪ್ಯಮಾಣಾಃ ಪರಾಂ ತೃಪ್ತಿಂ ಯಾಂತಿ ಗಂಗಾಜಲೈಃ ಶುಭೈಃ ||36||
ಮೂರು ಲೋಕಗಳಲ್ಲಿ ಯಾವ ಪ್ರಾಣಿಗಳಿವೆಯೋ ಅವುಗಳಿಗೆ ಶುಭವಾದ ಗಂಗಾ ಜಲದಿಂದ ತರ್ಪಣವನ್ನು ಕೊಟ್ಟರೆ ಶ್ರೇಷ್ಠವಾದ ತೃಪ್ತಿಯನ್ನು ಹೊಂದುತ್ತವೆ.
ಅನ್ಯೇ ಚ ದೇವಾ ಮುನಯಃ ಪ್ರೇತಾನಿ ಪಿತೃಭಿಃ ಸಹ |
ತರ್ಪಿತಾಸ್ತೃಪ್ತಿಮಾಯಾಂತಿ ತ್ರಿಷು ಲೋಕೇಷು ಸರ್ವಶಃ ||37||
ಮೂರು ಲೋಕಗಳಲ್ಲಿರುವ ಎಲ್ಲ ದೇವತೆಗಳು, ಋಷಿಗಳು, ಪಿತೃಗಳು ಮತ್ತು ಪ್ರೇತಗಳು ಗಂಗಾಜಲದಿಂದ ತೃಪ್ತಿಯನ್ನು ಹೊಂದುತ್ತಾರೆ.
ಯಸ್ತು ಸೂರ್ಯೇಣ ನಿಷ್ಟಪ್ತಂ ಗಾಂಗೇಯಂ ಪಿಬತೇ ಜಲಮ್ |
ಗವಾಂ ನಿರ್ಹಾರನಿರ್ಮುಕ್ತಾದ್ಯಾವಕಾತ್ ತದ್ ವಿಶಿಷ್ಯತೇ ||38||
ಯಾವನು ಸೂರ್ಯಕಿರಣಗಳು ಬಿದ್ದ ಗಂಗಾಜಲವನ್ನು ಪಾನ ಮಾಡುತ್ತಾನೆಯೋ ಅವನು ಗೋಮಯದಲ್ಲಿ ಬಂದ ಯವ(ಗೋಧಿ)ಗಳನ್ನು ಉಪಯೋಗಿಸಿ ವ್ರತವನ್ನು ಮಾಡುವವನಿಗಿಂತ ಶ್ರೇಷ್ಠವಾದ ಪುಣ್ಯವನ್ನು ಪಡೆಯುತ್ತಾನೆ.
ಇಂದುವ್ರತಸಹಸ್ರಂ ತು ಚರೇದ್ ಯಃ ಕಾಯಶೋಧನಮ್ |
ಪಿಬೇದ್ ಯಶ್ಚಾಪಿ ಗಂಗಾಂಭಃ ಸಮೌ ಸ್ಯಾತಾಂ ನ ವಾ ಸಮೌ ||39||
ಒಬ್ಬನು ದೇಹಶೋಧನೆಗಾಗಿ ಸಹಸ್ರ ಚಾಂದ್ರಾಯಣವನ್ನು ಮಾಡಿದರೆ, ಇನ್ನೊಬ್ಬನು ಗಂಗಾಜಲವನ್ನು ಕುಡಿದರೆ ಅವರಿಬ್ಬರೂ ಸಮರಾಗಬಹುದು ಅಥವಾ ಆಗಲಾರರು.
ತಿಷ್ಠೇದ್ ಯುಗಸಹಸ್ರಂ ತು ಪಾದೇನೈಕೇನ ಯಃ ಪುಮಾನ್ |
ಮಾಸಮೇಕಂ ತು ಗಂಗಾಯಾಂ ಸಮೌ ಸ್ಯಾತಾಂ ನ ವಾ ಸಮೌ ||40||
ಒಬ್ಬನು ಸಹಸ್ರ ಯುಗಗಳ ಕಾಲ ಒಂದು ಪಾದದ ಮೇಲೆ ನಿಂತು ತಪಸ್ಸನ್ನು ಮಾಡಿದರೆ, ಇನ್ನೊಬ್ಬನು ಒಂದು ತಿಂಗಳ ಕಾಲ ಗಂಗೆಯಲ್ಲಿ ನಿಂತರೆ ಅವರಿಬ್ಬರೂ ಸಮರಾಗಬಹುದು ಅಥವಾ ಇಲ್ಲದಿರಬಹುದು.
ಲಂಬೇತಾವಾಕ್ಶಿರಾ ಯಸ್ತು ಯುಗಾನಾಮಯುತಂ ಪುಮಾನ್ |
ತಿಷ್ಠೇದ್ ಯಥೇಷ್ಟಂ ಯಶ್ಚಾಪಿ ಗಂಗಾಯಾಂ ಸ ವಿಶಿಷ್ಯತೇ ||41||
ಹತ್ತು ಸಾವಿರ ವರ್ಷಗಳ ಕಾಲ ಒಬ್ಬನು ತಲೆಕೆಳಗಾಗಿ ನಿಂತು ತಪಸ್ಸನ್ನು ಮಾಡಿದರೆ ಇನ್ನೊಬ್ಬನು ಗಂಗೆಯಲ್ಲಿ ತನ್ನ ಮನಸ್ಸಿಗೆ ಬಂದಂತೆ ನಿಂತರೆ ಗಂಗೆಯಲ್ಲಿ ನಿಂತವನೇ ಅವರಲ್ಲಿ ಶ್ರೇಷ್ಠನಾಗುತ್ತಾನೆ.

ಅಗ್ನೌ ಪ್ರಾಸ್ತಂ ಪ್ರದೂಯೇತ ಯಥಾ ತೂಲಂ ದ್ವಿಜೋತ್ತಮ |
ತಥಾ ಗಂಗಾವಗಾಢಸ್ಯ ಸರ್ವಂ ಪಾಪಂ ಪ್ರದೂಯತೇ ॥42॥
ಎಲೈ ದ್ವಿಜೋತ್ತಮನೇ, ಅಗ್ನಿಯಲ್ಲಿ ಎಸೆದ ಹತ್ತಿಯು ನಾಶ ಹೊಂದುವಂತೆ ಗಂಗಾಜಲದಲ್ಲಿ ಮುಳುಗಿದವನ ಎಲ್ಲ ಪಾಪಗಳೂ ನಾಶವನ್ನು ಹೊಂದುತ್ತವೆ.
ಭೂತಾನಾಮಿಹ ಸರ್ವೇಷಾಂ ದುಃಖೋಪಹತಚೇತಸಾಮ್ |
ಗತಿಮನ್ವೇಷಮಾಣಾನಾಂ ನ ಗಂಗಾಸದೃಶೀ ಗತಿಃ ॥43॥
ದುಃಖದಿಂದ ಪೀಡಿತರಾಗಿ ಸದ್ಗತಿಯನ್ನು ಹುಡುಕುವ ಎಲ್ಲ ಪ್ರಾಣಿಗಳಿಗೆ ಗಂಗಾ ಸದೃಶವಾದ ಗತಿಯು ಇನ್ನೊಂದು ಇಲ್ಲ.
ಭವಂತಿ ನಿರ್ವಿಷಾಃ ಸರ್ಪಾ ಯಥಾ ತಾರ್ಕ್ಷ್ಯಸ್ಯ ದರ್ಶನಾತ್ |
ಗಂಗಾಯಾ ದರ್ಶನಾತ್ ತದ್ವತ್ ಸರ್ವಪಾಪೈಃ ಪ್ರಮುಚ್ಯತೇ ॥44॥
ಗರುಡನನ್ನು ನೋಡಿದ ತಕ್ಷಣ ಹೇಗೆ ಸರ್ಪಗಳು ತಮ್ಮ ವಿಷವನ್ನು ಕಳೆದುಕೊಳ್ಳುತ್ತವೆಯೋ ಅದರಂತೆ ಗಂಗೆಯ ದರ್ಶನದಿಂದ ಮನುಷ್ಯನು ಸರ್ವ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಅಪ್ರತಿಷ್ಠಾಶ್ಚ ಯೇ ಕೇಚಿದಧರ್ಮಶರಣಾಶ್ಚ ಯೇ |
ತೇಷಾಂ ಪ್ರತಿಷ್ಠಾ ಗಂಗೇಹ ಶರಣಂ ಶರ್ಮ ವರ್ಮ ಚ ॥45॥
ಪ್ರಪಂಚದಲ್ಲಿ ಯಾರಿಗೆ ನೆಲೆ ಇಲ್ಲವೋ, ಯಾರು ಅಧರ್ಮ ಪರಾಯಣರಾಗಿರುತ್ತಾರೆಯೋ ಅವರಿಗೆ ಈ ಲೋಕದಲ್ಲಿ ಗಂಗೆಯೇ ನೆಲೆ, ಗಂಗೆಯೇ ಆಶ್ರಯ, ಗಂಗೆಯೇ ಸುಖ, ಗಂಗೆಯೇ ಕವಚ.
ಪ್ರಕೃಷ್ಟೈರಶುಭೈರ್ಗ್ರಸ್ತಾನನೇಕೈಃ ಪುರುಷಾಧಮಾನ್ |
ಪತತೋ ನರಕೇ ಗಂಗಾ ಸಂಶ್ರಿತಾನ್ ಪ್ರೇತ್ಯ ತಾರಯೇತ್ ॥46॥
ಅನೇಕ ಅಶುಭ ಕರ್ಮಗಳನ್ನು ಮಾಡಿ ನರಕದಲ್ಲಿ ಬೀಳಲಿರುವ ಪುರುಷಾಧಮನಿಂದ ಗಂಗೆಯು ಸೇವಿಸಲ್ಪಟ್ಟರೆ ಅವಳು ಅವನನ್ನು ನರಕದಿಂದ ದಾಟಿಸುತ್ತಾಳೆ.
ತೇ ಸಂವಿಭಕ್ತಾ ಮುನಿಭಿರ್ನೂನಂ ದೇವೈಃ ಸವಾಸವೈಃ |
ಯೇಽಭಿಗಚ್ಛಂತಿ ಸತತಂ ಗಂಗಾಮಭಿಗತಾಂ ಸುರೈಃ ॥47॥
ದೇವತೆಗಳಿಂದ ಸೇವಿಸಲ್ಪಡುವ ಗಂಗೆಯನ್ನು ಯಾರು ನಿತ್ಯವೂ ಹೋಗಿ ಸ್ನಾನಾದಿಗಳಿಂದ ಸೇವಿಸುತ್ತಾರೆಯೋ ಅವರು ಮರಣವನ್ನು ಹೊಂದಿದ ಮೇಲೆ ಇಂದ್ರಾದಿ ದೇವತೆಗಳಿಂದಲೂ, ಋಷಿಗಳಿಂದಲೂ ಕೂಡಿ ಸುಖಗಳನ್ನು ಹಂಚಿಕೊಂಡು ಅನುಭವಿಸುತ್ತಾರೆ.
ವಿನಯಾಚಾರಹೀನಾಶ್ಚ ಅಶಿವಾಶ್ಚ ನರಾಧಮಾಃ |
ತೇ ಭವಂತಿ ಶಿವಾ ವಿಪ್ರ ಯೇ ವೈ ಗಂಗಾಂ ಸಮಾಶ್ರಿತಾಃ ॥48॥
ಎಲೈ ಬ್ರಾಹ್ಮಣನೇ, ವಿನಯಾಚಾರ ರಹಿತರಾದವರೂ, ಅಮಂಗಳರಾದ ನರಾಧಮರೂ ಗಂಗೆಯನ್ನು ಚೆನ್ನಾಗಿ ಆಶ್ರಯಿಸಿದರೆ ಅವರು ಮಂಗಳ ಸ್ವರೂಪರಾಗುತ್ತಾರೆ.
ಯಥಾ ಸುರಾಣಾಮಮೃತಂ ಪಿತೄಣಾಂ ಚ ಯಥಾ ಸ್ವಧಾ |
ಸುಧಾ ಯಥಾ ಚ ನಾಗಾನಾಂ ತಥಾ ಗಂಗಾಜಲಂ ನೃಣಾಮ್ ॥49॥
ದೇವತೆಗಳಿಗೆ ಅಮೃತವಿದ್ದಂತೆ, ಪಿತೃಗಳಿಗೆ ಸ್ವಧೆ ಇದ್ದಂತೆ, ನಾಗಗಳಿಗೆ ಸುಧೆಯಿದ್ದಂತೆ ಮನುಷ್ಯರಿಗೆ ಗಂಗಾಜಲವಿದೆ.
ಉಪಾಸತೇ ಯಥಾ ಬಾಲಾ ಮಾತರಂ ಕ್ಷುಧಯಾಽರ್ದಿತಾಃ |
ಶ್ರೇಯಸ್ಕಾಮಾಸ್ತಥಾ ಗಂಗಾಮುಪಾಸಂತೀಹ ದೇಹಿನಃ ॥50॥
ಹಸಿವಿನಿಂದ ಬಳಲುವ ಮಕ್ಕಳು ತಾಯಿಯನ್ನು ಆಶ್ರಯಿಸುವಂತೆ ಈ ಲೋಕದಲ್ಲಿ ಶ್ರೇಯಸ್ಸನ್ನು ಬಯಸುವ ಮಾನವರು ಗಂಗೆಯನ್ನು ಆಶ್ರಯಿಸುತ್ತಾರೆ.
ಸ್ವಾಯಂಭುವಂ ಯಥಾ ಸ್ಥಾನಂ ಸರ್ವೇಷಾಂ ಶ್ರೇಷ್ಠಮುಚ್ಯತೇ |
ಸ್ನಾತಾನಾಂ ಸರಿತಾಂ ಶ್ರೇಷ್ಠಾ ಗಂಗಾ ತದ್ವದಿಹೋಚ್ಯತೇ ॥51॥
ಬ್ರಹ್ಮದೇವರ ಸ್ಥಾನವು ಹೇಗೆ ಎಲ್ಲಕ್ಕಿಂತಲೂ ಶ್ರೇಷ್ಠವೆಂದು ಹೇಳಲ್ಪಡುತ್ತದೆಯೋ ಹಾಗೆಯೇ ಸ್ನಾನವನ್ನು ಮಾಡುವವರಿಗೆ ಗಂಗೆಯು ಈ ಲೋಕದಲ್ಲಿ ಎಲ್ಲ ನದಿಗಳಿಗಿಂತಲೂ ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ.
ಯಥೋಪಜೀವಿನಾಂ ಧೇನುರ್ದೇವಾದೀನಾಂ ಧರಾ ಸ್ಮೃತಾ |
ತಥೋಪಜೀವಿನಾಂ ಗಂಗಾ ಸರ್ವಪ್ರಾಣಭೃತಾಮಿಹ ॥52॥
ಹೇಗೆ ಹವಿಸ್ಸನ್ನು ಉಪಜೀವಿಸುವ ದೇವತೆಗಳಿಗೆ ಧೇನುವು ಧಾರಣ- ಪೋಷಣೆಯನ್ನು ಮಾಡುತ್ತದೆಯೋ ಹಾಗೆ ತನ್ನನ್ನು ಆಶ್ರಯಿಸುವ ಸರ್ವಪ್ರಾಣಿಗಳಿಗೆ ಗಂಗೆಯು ಧಾರಣ-ಪೋಷಣೆಯನ್ನು ಮಾಡುತ್ತಾಳೆ.
ದೇವಾಃ ಸೋಮಾರ್ಕಸಂಸ್ಥಾನಿ ಯಥಾ ಸತ್ರಾದಿಭಿರ್ಮಖೈಃ |
ಅಮೃತಾನ್ಯುಪಜೀವಂತಿ ತಥಾ ಗಂಗಾಜಲಂ ನರಾಃ ॥53॥
ದೇವತೆಗಳು ಸತ್ರವೇ ಮೊದಲಾದ ಯಾಗಗಳಿಂದ ಸೂರ್ಯ-ಚಂದ್ರರಲ್ಲಿರುವ ಅಮೃತವನ್ನು ಉಪಜೀವಿಸುವಂತೆ ಮನುಷ್ಯರು ಗಂಗಾಜಲವನ್ನು ಉಪಜೀವಿಸುತ್ತಾರೆ.
ಜಾಹ್ನವೀಪುಳಿನೋತ್ಥಾಭಿಃ ಸಿಕತಾಭಿಃ ಸಮುಕ್ಷಿತಃ |
ಮನ್ಯತೇ ಪುರುಷೋಽಽತ್ಮಾನಂ ದಿವಿಷ್ಠಮಿವ ಶೋಭಿತಮ್ ॥54॥
ಜಾಹ್ನವಿಯ ತೀರದ ಮರಳಿನ ಕಣಗಳು ತನ್ನ ಶರೀರಕ್ಕೆ ಮೆತ್ತಿಕೊಂಡ ಪುರುಷನು ತಾನು ಸ್ವರ್ಗದಲ್ಲಿದ್ದೇನೆಂದು ತಿಳಿದು ಶೋಭಿಸುತ್ತಾನೆ.

ಜಾಹ್ನವೀತೀರಸಂಭೂತಾಂ ಮೃದಂ ಮೂರ್ಧ್ನಾ ಬಿಭರ್ತಿ ಯಃ |
ಬಿಭರ್ತಿ ರೂಪಂ ಸೋಽರ್ಕಸ್ಯ ತಮೋನಾಶಾತ್ ಸುನಿರ್ಮಲಮ್ ||
ಜಾಹ್ನವೀತೀರದ ಮೃತ್ತಿಕೆಯನ್ನು ತಲೆಯ ಮೇಲೆ ಧರಿಸುವವನು ತನ್ನ ಅಜ್ಞಾನವನ್ನು ಕಳೆದುಕೊಂಡು ಸುನಿರ್ಮಲರೂಪವನ್ನು ಧರಿಸಿ ಸೂರ್ಯನ ಕಾಂತಿಯನ್ನು ಹೊಂದುತ್ತಾನೆ.
ಗಂಗೋರ್ಮಿಭಿರಥೋ ದಿಗ್ಧಃ ಪುರುಷಂ ಪವನೋ ಯದಾ |
ಸ್ಪೃಶತೇ ಸೋಽಪಿ ಪಾಪ್ಮಾನಂ ಸದ್ಯ ಏವಾಪಮಾರ್ಜತಿ ||56||
ಗಂಗೆಯ ಜಲದ ಕಣಗಳಿಂದ ಕೂಡಿದ ವಾಯುವು ಯಾವನ ದೇಹವನ್ನು ಸ್ಪರ್ಶ ಮಾಡುತ್ತದೆಯೋ ಅವನೂ ಸಹ ತಕ್ಷಣವೇ ತನ್ನ ಪಾಪಗಳನ್ನು ಕಳೆದುಕೊಳ್ಳುತ್ತಾನೆ.
ವ್ಯಸನೈರಭಿತಪ್ತಸ್ಯ ನರಸ್ಯ ವಿನಶಿಷ್ಯತಃ |
ಗಂಗಾದರ್ಶನಜಾ ಪ್ರೀತಿರ್ವ್ಯಸನಾನ್ಯಪಕರ್ಷತಿ ||57||
ವ್ಯಸನಗಳಿಗೆ ತುತ್ತಾಗಿ ವಿನಾಶವನ್ನು ಹೊಂದಿರುವ ಮನುಷ್ಯನಿಗೆ ಗಂಗೆಯ ದರ್ಶನದಿಂದ ಉಂಟಾದ ಸಂತೋಷವು ವ್ಯಸನಗಳನ್ನು ನಾಶಮಾಡುತ್ತದೆ.
ಹಂಸಾರಾವೈಃ ಕೋಕರವೈ ರವೈರನ್ಯೈಶ್ಚ ಪಕ್ಷಿಣಾಮ್ |
ಪಸ್ಪರ್ಧ ಗಂಗಾ ಗಂಧರ್ವಾನ್ ಪುಳಿನೈಶ್ಚ ಶಿಲೋಚ್ಚಯಾನ್ ||58||
ಗಂಗೆಯು ಹಂಸಧ್ವನಿಗಳಿಂದಲೂ, ಕೋಕಪಕ್ಷಿಯ ಧ್ವನಿಗಳಿಂದಲೂ ಮತ್ತು ಉಳಿದ ಪಕ್ಷಿಯ ಧ್ವನಿಗಳಿಂದಲೂ ಗಂಧರ್ವರ ಜೊತೆ ಸ್ಪರ್ಧೆಯನ್ನು ಮಾಡುತ್ತದೆ. ತನ್ನ ಮರಳುಗಳಿಂದ ಪರ್ವತಗಳ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡುತ್ತದೆ.
ಹಂಸಾದಿಭಿಃ ಸುಬಹುಭಿರ್ವಿವಿಧೈಃ ಪಕ್ಷಿಭಿರ್ವೃತಾಮ್ |
ಗಂಗಾಂ ಗೋಕುಲಸಂಬಾಧಾಂ ದೃಷ್ಟ್ವಾ ಸ್ವರ್ಗೋಽಪಿ ವಿಸ್ಮೃತಃ ||59||
ಅನೇಕ ಹಂಸಾದಿ ಪಕ್ಷಿಗಳಿಂದ ಕೂಡಿದ, ತೀರದಲ್ಲಿ ಮೇಯುವ ಗೋವುಗಳ ಸಮೂಹದಿಂದ ನಿಬಿಡವಾದ ಗಂಗೆಯನ್ನು ನೋಡಿ ಸ್ವರ್ಗವೂ ಮರೆತುಹೋಗುತ್ತದೆ.
ನ ಸಾ ಪ್ರೀತಿರ್ದಿವಿಷ್ಠಸ್ಯ ಸರ್ವಕಾಮಾನುಪಾಶ್ನತಃ |
ಅಭವದ್ ಯಾ ಪರಾ ಪ್ರೀತಿರ್ಗಂಗಾಯಾಃ ಪುಲಿನೇ ನೃಣಾಮ್ ||60||
ಗಂಗೆಯ ತೀರದ ಮರುಳುಗಳಲ್ಲಿ ಮನುಷ್ಯರಿಗೆ ಯಾವ ಶ್ರೇಷ್ಠವಾದ ಸಂತೋಷ ಉಂಟಾಗುತ್ತದೆಯೋ ಅಂತಹ ಸಂತೋಷವು ಸ್ವರ್ಗದಲ್ಲಿ ಎಲ್ಲ ಕಾಮಗಳನ್ನು ಅನುಭವಿಸುವವನಿಗೂ ಉಂಟಾಗುವುದಿಲ್ಲ.
ವಾಙ್ಮನಃಕರ್ಮಜೈರ್ಗ್ರಸ್ತಃ ಪಾಪೈರಪಿ ಪುಮಾನಿಹ |
ವೀಕ್ಷ್ಯ ಗಂಗಾಂ ಭವೇತ್ಪೂತಸ್ತತ್ರ ಮೇ ನಾಸ್ತಿ ಸಂಶಯಃ ||61||
ವಾಗೀಂದ್ರಿಯದಿಂದ, ಮನಸ್ಸಿನಿಂದ ಮತ್ತು ಕರ್ಮಗಳಿಂದ ಉಂಟಾದ ಪಾಪಗಳಿಂದ ಗ್ರಸ್ತನಾದ ಪುರುಷನು ಗಂಗೆಯನ್ನು ನೋಡುವುದರಿಂದಲೇ ಪವಿತ್ರನಾಗುತ್ತಾನೆ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಸಪ್ತಾವರಾನ್ ಸಪ್ತ ಪರಾನ್ ಪಿತೄಂಸ್ತೇಭ್ಯಶ್ಚ ಯೇ ಪರೇ |
ಪುಮಾಂಸ್ತಾರಯತೇ ಗಂಗಾಂ ವೀಕ್ಷ್ಯ ಸ್ಪೃಷ್ಟ್ವಾವಗಾಹ್ಯ ಚ ||62||
ಗಂಗೆಯನ್ನು ನೋಡುವ, ಸ್ಪರ್ಶಿಸುವ, ಗಂಗೆಯಲ್ಲಿ ಸ್ನಾನವನ್ನು ಮಾಡುವ ಪುರುಷನು ತನ್ನ ಹಿಂದಿನ ಏಳು ತಲೆಯ ಪಿತೃಗಳನ್ನು, ಮುಂದಿನ ಏಳು ತಲೆಯ ಪಿತೃಗಳನ್ನು ಮತ್ತು ಅವರಿಂದ ಆಚೆಯವರನ್ನೂ ನರಕದಿಂದ ದಾಟಿಸುತ್ತಾನೆ.
ಶ್ರುತಾಽಭಿಲಷಿತಾ ದೃಷ್ಟಾ ಸ್ಪೃಷ್ಟಾ ಪೀತಾವಗಾಹಿತಾ |
ಗಂಗಾ ತಾರಯತೇ ನೃಣಾಮುಭೌ ವಂಶೌ ವಿಶೇಷತಃ ||63||
ಗಂಗೆಯ ಮಹಿಮೆಯನ್ನು ಕೇಳಿದರೆ, ಗಂಗೆಯನ್ನು ಆಶಿಸಿದರೆ, ನೋಡಿದರೆ, ಸ್ಪರ್ಶ ಮಾಡಿದರೆ, ಗಂಗಾಜಲವನ್ನು ಪಾನ ಮಾಡಿದರೆ, ಗಂಗೆಯಲ್ಲಿ ಸ್ನಾನ ಮಾಡಿದರೆ ಗಂಗೆಯು ಆ ಮನುಷ್ಯನ ತಂದೆ-ತಾಯಿಯ ಎರಡು ವಂಶಗಳನ್ನೂ ವಿಶೇಷವಾಗಿ ಸಂಕಟದಿಂದ ಪಾರುಮಾಡುತ್ತಾಳೆ.
ದರ್ಶನಾತ್ ಸ್ಪರ್ಶನಾತ್ ಪಾನಾತ್ ತಥಾ ಗಂಗೇತಿ ಕೀರ್ತನಾತ್ |
ಪುನಾತ್ಯಪುಣ್ಯಾನ್ ಪುರುಷಾನ್ ಶತಶೋಽಥ ಸಹಸ್ರಶಃ ||64||
ದರ್ಶನದಿಂದ, ಸ್ಪರ್ಶದಿಂದ, ಪಾನದಿಂದ, ಗಂಗಾ ಎಂದು ಹೇಳುವುದರಿಂದ ಗಂಗೆಯು ಪಾಪಿಗಳಾದ ಪುರುಷರನ್ನು ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಪವಿತ್ರೀಕರಿಸುತ್ತಾಳೆ.
ಯ ಇಚ್ಛೇತ್ಸಫಲಂ ಜನ್ಮ ಜೀವಿತಂ ಶ್ರುತಮೇವ ಚ |
ಸ ಪಿತೄಂಸ್ತರ್ಪಯೇದ್ ಗಂಗಾಮಭಿಗಮ್ಯ ಸುರಾಂಸ್ತಥಾ ||65||
ಯಾವನು ತನ್ನ ಜನ್ಮವು, ಜೀವನವು ಮತ್ತು ವಿದ್ಯೆಯು ಸಫಲವಾಗಬೇಕೆಂದು ಬಯಸುತ್ತಾನೆಯೋ ಅವನು ಗಂಗೆಗೆ ಹೋಗಿ ಪಿತೃಗಳಿಗೆ ಮತ್ತು ದೇವತೆಗಳಿಗೆ ತರ್ಪಣವನ್ನು ಕೊಡಬೇಕು.
ನ ಸುತೈರ್ನ ಚ ವಿತ್ತೇನ ಕರ್ಮಣಾ ನ ಚ ತತ್ಫಲಮ್ |
ಪ್ರಾಪ್ನುಯಾತ್ಪುರುಷೋಽತ್ಯಂತಂ ಗಂಗಾಂ ಪ್ರಾಪ್ಯ ಯದಾಪ್ನುಯಾತ್ ||
ಪುರುಷನು ಗಂಗೆಗೆ ಹೋಗುವುದರಿಂದ ಯಾವ ಪುಣ್ಯಫಲವನ್ನು ಸಂಪಾದಿಸುತ್ತಾನೆಯೋ ಅದನ್ನು ಪುತ್ರರಿಂದಾಗಲೀ, ಧನದಿಂದಾಗಲೀ, ಸತ್ಕರ್ಮದಿಂದಾಗಲೀ ಪಡೆಯಲಾರ.
ಜಾತ್ಯಂಧೈರಿಹ ತುಲ್ಯಾಸ್ತೇ ಮೃತೈಃ ಪಂಗುಭಿರೇವ ಚ |

ಸಮರ್ಥಾ ಯೇ ನ ಪಶ್ಯಂತಿ ಗಂಗಾಂ ಪುಣ್ಯಜಲಾಂ ಶಿವಾಮ್ ॥67॥
ಸಮರ್ಥರಾದ ಯಾರು ಪವಿತ್ರವಾದ ಜಲವುಳ್ಳ ಮಂಗಳಪ್ರದಳಾದ ಗಂಗೆಯನ್ನು ನೋಡುವುದಿಲ್ಲವೋ ಅವರು ಹುಟ್ಟುಕುರುಡರಿಗೆ, ಮೃತರಾದವರಿಗೆ ಮತ್ತು ಕುಂಟರಿಗೆ ಸಮರಾದವರು.
ಭೂತಭವ್ಯಭವಿಷ್ಯಜ್ಞೈರ್ಮಹರ್ಷಿಭಿರುಪಸ್ಥಿತಾಮ್ ।
ದೇವೈಃ ಸೇಂದ್ರೈಶ್ಚ ಕೋ ಗಂಗಾಂ ನೋಪಸೇವೇತ ಮಾನವಃ ॥68॥
ಭೂತ-ಭವ್ಯ-ವರ್ತಮಾನ ಕಾಲಗಳನ್ನು ತಿಳಿದ ಮಹರ್ಷಿಗಳಿಂದ ಮತ್ತು ಇಂದ್ರಾದಿ ದೇವತೆಗಳಿಂದ ಸೇವಿತವಾದ ಗಂಗೆಯನ್ನು ಯಾವ ಮನುಷ್ಯನು ಸೇವಿಸಲಾರ?
ವಾನಪ್ರಸ್ಥೈರ್ಗೃಹಸ್ಥೈಶ್ಚ ಯತಿಭಿರ್ಬ್ರಹ್ಮಚಾರಿಭಿಃ ।
ವಿದ್ಯಾವದ್ಭಿಃ ಶ್ರಿತಾಂ ಗಂಗಾಂ ಪುಮಾನ್ ಕೋ ನಾಮ ನಾಶ್ರಯೇತ್ ॥
ವಿದ್ಯಾವಂತರಾದ ಬ್ರಹ್ಮಚಾರಿಗಳಿಂದಲೂ, ಗೃಹಸ್ಥರಿಂದಲೂ, ವಾನಪ್ರಸ್ಥರಿಂದಲೂ ಮತ್ತು ಯತಿಗಳಿಂದಲೂ ಸೇವಿತವಾದ ಗಂಗೆಯನ್ನು ಯಾವ ಪುರುಷನು ಆಶ್ರಯಿಸುವುದಿಲ್ಲ?
ಉತ್ಕ್ರಾಮದ್ಭಿಶ್ಚ ಯಃ ಪ್ರಾಣೈಃ ಪ್ರಯತಃ ಶಿಷ್ಟಸಮ್ಮತಃ ।
ಚಿಂತಯೇನ್ಮನಸಾ ಗಂಗಾಂ ಸ ಗತಿಂ ಪರಮಾಂ ಲಭೇತ್ ॥70॥
ಯಾವನು ಶಿಷ್ಟಸಮ್ಮತನಾಗಿ ಪ್ರಾಣಗಳು ಹೊರಡಲು ಸಿದ್ಧವಾದಾಗ ಪ್ರಯತ್ನ ಪೂರ್ವಕವಾಗಿ ಮನಸ್ಸಿನಿಂದಲೇ ಗಂಗೆಯನ್ನು ಚಿಂತಿಸುತ್ತಾನೆಯೋ ಅವನು ಶ್ರೇಷ್ಠವಾದ ಗತಿಯನ್ನು ಹೊಂದುವನು.
ನ ಭಯೇಭ್ಯೋ ಭಯಂ ತಸ್ಯ ನ ಪಾಪೇಭ್ಯೋ ನ ರಾಜತಃ ।
ಆ ದೇಹಪತನಾದ್ ಗಂಗಾಮುಪಾಸ್ತೇ ಯಃ ಪುಮಾನಿಹ ॥71॥
ಯಾವ ಮನುಷ್ಯನು ದೇಹಪಾತವಾಗುವವರೆಗೆ ಗಂಗೆಯನ್ನು ಉಪಾಸನೆ ಮಾಡುತ್ತಾನೆಯೋ ಅವನಿಗೆ ಭಯದ ಕಾರಣಗಳಿಂದಾಗಲೀ, ಪಾಪದಿಂದಾಗಲೀ, ರಾಜನಿಂದಾಗಲೀ ಭಯವುಂಟಾಗುವುದಿಲ್ಲ.
ಗಗನಾದ್ ಯಾಂ ಮಹಾಪುಣ್ಯಾಂ ಪತಂತೀಂ ವೈ ಮಹೇಶ್ವರಃ ।
ದಧಾರ ಶಿರಸಾ ದೇವೀಂ ತಾಮೇವ ದಿವಿ ಸೇವತೇ ॥72॥
ಯಾವ ಮಹೇಶ್ವರನು ಗಗನದಿಂದ ಕೆಳಗೆ ಬೀಳುವ ಮಹಾಪುಣ್ಯಳಾದ ಗಂಗಾದೇವಿಯನ್ನು ಶಿರಸ್ಸಿನಲ್ಲಿ ಧರಿಸಿದನೋ ಅವನೇ ಸ್ವರ್ಗಲೋಕದಲ್ಲಿ ಆ ಗಂಗೆಯನ್ನು ಸೇವಿಸುತ್ತಾನೆ.
ಅಲಂಕೃತಾಸ್ತ್ರಯೋ ಲೋಕಾಃ ಪಥಿಭಿರ್ವಿಮಲೈಸ್ತ್ರಿಭಿಃ ।
ಯಸ್ತು ತಸ್ಯಾ ಜಲಂ ಸೇವೇತ್ಕೃತಕೃತ್ಯಃ ಪುಮಾನ್ ಭವೇತ್ ॥73॥
ಗಂಗೆಯ ವಿಮಲವಾದ ಮೂರು ಮಾರ್ಗಗಳಿಂದ ಮೂರು ಲೋಕಗಳು ಅಲಂಕೃತವಾಗಿವೆ. ಯಾವನು ಅಂತಹ ಗಂಗೆಯ ಜಲವನ್ನು ಸೇವಿಸುತ್ತಾನೆಯೋ ಅವನು ಕೃತಕೃತ್ಯನಾಗುತ್ತಾನೆ.
ದಿವಿ ಜ್ಯೋತಿರ್ಯಥಾಽದಿತ್ಯಃ ಪಿತೄಣಾಂ ಚೈವ ಚಂದ್ರಮಾಃ ।
ದೇವೇಶಶ್ಚ ಯಥಾ ನೄಣಾಂ ಗಂಗೇಹ ಸರಿತಾಂ ತಥಾ ॥74॥
ಆಕಾಶದಲ್ಲಿ ಜ್ಯೋತೀರೂಪನಾದ ಆದಿತ್ಯನು ಹೇಗೋ, ಪಿತೃಗಳಿಗೆ ಚಂದ್ರಮನು ಹೇಗೋ, ಮನುಷ್ಯರಿಗೆ ಇಂದ್ರನು ಹೇಗೋ ಹಾಗೆ ನದಿಗಳಿಗೆ ಗಂಗೆಯು ಶ್ರೇಷ್ಠಳಾದವಳು.
ಮಾತ್ರಾ ಪಿತ್ರಾ ಸುತೈರ್ದಾರೈರ್ವಿಯುಕ್ತಸ್ಯ ಧನೇನ ವಾ ।
ನ ಭವೇದ್ಧಿ ತಥಾ ದುಃಖಂ ಯಥಾ ಗಂಗಾವಿಯೋಗಜಮ್ ॥75॥
ತಂದೆಯಿಂದ, ತಾಯಿಯಿಂದ, ಪುತ್ರರಿಂದ, ಪತ್ನಿಯಿಂದ, ಧನದಿಂದ ವಿಯೋಗವನ್ನು ಹೊಂದಿದರೂ ಗಂಗೆಯ ವಿಯೋಗದಿಂದ ಉಂಟಾಗುವಷ್ಟು ದುಃಖವು ಉಂಟಾಗುವುದಿಲ್ಲ.
ನಾರಣ್ಯೈರ್ನೇಷ್ಟವಿಷಯೈರ್ನ ಸುತೈರ್ನ ಧನಾಗಮೈಃ ।
ತಥಾ ಪ್ರಸಾದೋ ಭವತಿ ಗಂಗಾಂ ವೀಕ್ಷ್ಯ ಯಥಾ ನೃಣಾಮ್ ॥76॥
ಗಂಗೆಯನ್ನು ನೋಡುವ ಮನುಷ್ಯರಿಗೆ ಮನಸ್ಸಿಗೆ ಎಂತಹ ಪ್ರಸನ್ನತೆ ಉಂಟಾಗುತ್ತದೆಯೋ ಅಂತಹ ಪ್ರಸನ್ನತೆಯು ಅರಣ್ಯದರ್ಶನದಿಂದಾಗಲೀ, ಇಷ್ಟ ವಿಷಯಗಳ ಪ್ರಾಪ್ತಿಯಿಂದಾಗಲೀ, ಪುತ್ರರಿಂದಾಗಲೀ, ಧನಪ್ರಾಪ್ತಿಯಿಂದಾಗಲೀ ಆಗುವುದಿಲ್ಲ.
ಪೂರ್ಣಮಿಂದುಂ ಯಥಾ ದೃಷ್ಟ್ವಾ ನೃಣಾಂ ದೃಷ್ಟಿಃ ಪ್ರಸೀದತಿ ।
ಗಂಗಾಂ ತ್ರಿಪಥಗಾಂ ದೃಷ್ಟ್ವಾ ತಥಾ ದೃಷ್ಟಿಃ ಪ್ರಸೀದತಿ ॥77॥
ಪೂರ್ಣಚಂದ್ರನನ್ನು ನೋಡಿ ಹೇಗೆ ಮನುಷ್ಯರಕಣ್ಣಿಗೆ ಸಂತೋಷವಾಗುತ್ತದೆಯೋ ಅದರಂತೆ ತ್ರಿಪಥಗಾಮಿನಿಯಾದ ಗಂಗೆಯನ್ನು ನೋಡಿ ದೃಷ್ಟಿಯು ಪ್ರಸನ್ನವಾಗುತ್ತದೆ.
ತದ್ಭಾವಸ್ತದ್ಗತಮನಾಸ್ತನ್ನಿಷ್ಠಸ್ತತ್ಪರಾಯಣಃ ।
ಗಂಗಾಂ ಯೋಽನುಗತೋ ಭಕ್ತ್ಯಾ ಸ ತಸ್ಯಾಃ ಪ್ರಿಯತಾಂ ವ್ರಜೇತ್ ॥
ಯಾವನು ಗಂಗೆಯಲ್ಲಿ ಭಕ್ತಿಯನ್ನು ಹೊಂದಿ, ಅವಳಲ್ಲೇ ಮನಸ್ಸನ್ನಿಟ್ಟು, ಅವಳಲ್ಲಿ ನಿಷ್ಠೆಯನ್ನು ಹೊಂದಿ, ಅವಳನ್ನೇ ಶ್ರೇಷ್ಠಳಾದ ಆಶ್ರಯವೆಂದು ತಿಳಿದು ಭಕ್ತಿಯಿಂದ ಗಂಗೆಯನ್ನು ಅನುಸರಿಸುತ್ತಾನೆಯೋ ಅವನು ಗಂಗೆಗೆ ಪ್ರಿಯನಾಗುತ್ತಾನೆ.
ಭೂಃಸ್ಥೈಃ ಖಸ್ಥೈರ್ದಿವಿಷ್ಠೈಶ್ಚ ಭೂತೈರುಚ್ಚಾವಚೈರಪಿ ।
ಗಂಗಾ ವಿಗಾಹ್ಯಾ ಸತತಮೇತತ್ಕಾರ್ಯತಮಂ ಸತಾಮ್ ॥79॥
ಭೂಮಿಯಲ್ಲಿರುವ, ಸ್ವರ್ಗದಲ್ಲಿರುವ ಉಚ್ಚ-ನೀಚಪ್ರಾಣಿಗಳು ಗಂಗೆಯಲ್ಲಿ ಸತತವಾಗಿ ಸ್ನಾನವನ್ನು ಮಾಡಬೇಕು. ಇದು ಸಜ್ಜನರು

ಅವಶ್ಯವಾಗಿ ಮಾಡಬೇಕಾದ ಕಾರ್ಯಗಳಲ್ಲಿ ಶ್ರೇಷ್ಠವಾದುದು.
ತ್ರಿಷು ಲೋಕೇಷು ಪುಣ್ಯತ್ವಾದ್ ಗಂಗಾಯಾಃ ಪ್ರಥಿತಂ ಯಶಃ |
ಯತ್ಪುತ್ರಾನ್ ಸಗರಸ್ಯೈಷಾ ಭಸ್ಮಾಖ್ಯಾನನಯದ್ ದಿವಮ್ ||80||
ಭಸ್ಮಸಂಜ್ಞರಾಗಿದ್ದ ಸಗರಪುತ್ರರನ್ನು ಸ್ವರ್ಗಕ್ಕೆ ಕಳುಹಿಸಿ ಪವಿತ್ರಳಾದುದರಿಂದ ಗಂಗೆಯ ಕೀರ್ತಿಯು ಮೂರುಲೋಕಗಳಲ್ಲಿಯೂ ಹಬ್ಬಿದೆ.
ವಾಯ್ವೀರಿತಾಭಿಃ ಸುಮಹಾಸ್ವನಾಭಿಃ
ದ್ರುತಾಭಿರತ್ಯರ್ಥಸಮುಚ್ಛ್ರಿತಾಭಿಃ |
ಗಂಗೋರ್ಮಿಭಿರ್ಭಾನುಮತೀಭಿರಿದ್ಧಃ
ಸಹಸ್ರರಶ್ಮಿಪ್ರತಿಮೋ ವಿಭಾತಿ ||81||
ವಾಯುವಿನಿಂದ ಎಬ್ಬಿಸಲ್ಪಟ್ಟ ಮಹಾನಾದದಿಂದ ಕೂಡಿದ, ಶೀಘ್ರವಾದ, ಅತ್ಯಂತ ಎತ್ತರವಾದ, ಪ್ರಕಾಶಮಾನವಾದ ಗಂಗೆಯ ತರಂಗಗಳಿಂದ ತೊಯ್ದು ದೀಪ್ತನಾದ ಪುರುಷನು ಸಹಸ್ರರಶ್ಮಿಯುಳ್ಳ ಸೂರ್ಯನಂತೆ ಶೋಭಿಸುತ್ತಾನೆ.
ಪಯಸ್ವಿನೀಂ ಘೃತಿನೀಮತ್ಯುದಾರಾಂ
ಸಮೃದ್ಧಿನೀಂ ವೇಗಿನೀಂ ದುರ್ವಿಗಾಹ್ಯಾಮ್ |
ಗಂಗಾಂ ಗತ್ವಾ ಯೈಃ ಶರೀರಂ ವಿಸೃಷ್ಟಂ
ಗತಾ ಧೀರಾಸ್ತೇ ವಿಬುಧೈಃ ಸಮತ್ವಮ್ ||82||
ಯಾರು ಜಲಪೂರ್ಣಳಾದ, ಘೃತದಂತೆ ಶೀಘ್ರವಾದ ಜಲದಿಂದ ಕೂಡಿದ, (ಯಾವಾಗಲೂ ಪ್ರವಹಿಸುವ) ಉದಾರಳಾದ, ಸಮೃದ್ಧಿಯಿಂದ ಕೂಡಿದ, ವೇಗದಿಂದ ಕೂಡಿದ, ಪ್ರವೇಶಿಸಲು ಕಷ್ಟಸಾಧ್ಯಳಾದ ಗಂಗೆಗೆ ಹೋಗಿ ಶರೀರವನ್ನು ಬಿಡುತ್ತಾರೆಯೋ ಅಂತಹ ಧೀರರು ದೇವತೆಗಳಿಗೆ ಸಮಾನರಾಗುತ್ತಾರೆ.
ಅಂಧಾನ್ ಜಡಾನ್ ದ್ರವ್ಯಹೀನಾಂಶ್ಚ ಗಂಗಾ
ಯಶಸ್ವಿನೀ ಬೃಹತೀ ವಿಶ್ವರೂಪಾ |
ದೇವೈಃ ಸೇಂದ್ರೈರ್ಮುನಿಭಿರ್ಮಾನವೈಶ್ಚ
ನಿಷೇವಿತಾ ಸರ್ವಕಾಮೈರ್ಯುನಕ್ತಿ ||83||
ಇಂದ್ರ ಸಹಿತರಾದ ದೇವತೆಗಳಿಂದಲೂ, ಋಷಿಗಳಿಂದಲೂ, ಮನುಷ್ಯರಿಂದಲೂ ಸೇವಿಸಲ್ಪಡುವ, ಕೀರ್ತಿವಂತಳಾದ, ಮಹಾತ್ಮಳಾದ, ವಿಶ್ವರೂಪಳಾದ ಗಂಗೆಯು ಕುರುಡರನ್ನೂ, ಬುದ್ಧಿಹೀನರನ್ನೂ, ದ್ರವ್ಯಹೀನರನ್ನೂ ಎಲ್ಲ ಅಭೀಷ್ಟಗಳಿಂದಲೂ ಸಂಯೋಜಿಸುತ್ತಾಳೆ.
ಊರ್ಜಾವತೀಂ ಮಧುಮತೀಂ ಮಹಾಪುಣ್ಯಾಂ ತ್ರಿವರ್ತ್ಮಗಾಮ್ |
ತ್ರಿಲೋಕಗೋಪ್ತ್ರೀಂ ಯೇ ಗಂಗಾಂ ಸಂಶ್ರಿತಾಸ್ತೇ ದಿವಂ ಗತಾಃ ||84||
ದೇವತೆಗಳಿಗೆ ಅನ್ನವನ್ನು ಕೊಡುವ, ಪಿತೃಗಳಿಗೆ ಅನ್ನವನ್ನು ಕೊಡುವ ಮಹಾಪುಣ್ಯವತಿಯಾದ, ತ್ರಿಪಥಗಾಮಿನಿಯಾದ, ಮೂರುಲೋಕಗಳನ್ನೂ ರಕ್ಷಿಸುವ ಗಂಗೆಯನ್ನು ಯಾರು ಆಶ್ರಯಿಸುತ್ತಾರೋ ಅವರು ಸ್ವರ್ಗವನ್ನು ಹೊಂದುತ್ತಾರೆ.
ಯೋ ವತ್ಸ್ಯತಿ ದ್ರಕ್ಷ್ಯತಿ ವಾಪಿ ಮರ್ತ್ಯಃ
ತಸ್ಮೈ ಪ್ರಯಚ್ಛಂತಿ ಸುಖಾನಿ ದೇವಾಃ |
ತದ್ಭಾವಿತಾಃ ಸ್ಪರ್ಶನೇ ದರ್ಶನೇ ಯಃ
ತಸ್ಮೈ ದೇವಾ ಗತಿಮಿಷ್ಟಾಂ ದಿಶಂತಿ ||85||
ಯಾವ ಮರ್ತ್ಯನು ಗಂಗೆಯ ಬಳಿಯಲ್ಲಿ ವಾಸ ಮಾಡುವನೋ, ಗಂಗೆಯನ್ನು ನಿತ್ಯವೂ ದರ್ಶನ ಮಾಡುವನೋ ಅವನಿಗೆ ದೇವತೆಗಳು ಸುಖವನ್ನು ಕೊಡುತ್ತಾರೆ. ಗಂಗೆಯ ಸ್ಪರ್ಶನ, ದರ್ಶನದಿಂದ ಪವಿತ್ರನಾದವನಿಗೆ ದೇವತೆಗಳು ಇಷ್ಟವಾದ ಗತಿಯನ್ನು ಕೊಡುತ್ತಾರೆ.
ದಕ್ಷಾಂ ಪೃಥ್ವೀಂ ಬೃಹತೀಂ ವಿಪ್ರಕೃಷ್ಟಾಂ
ಶಿವಾಮೃತಾಂ ಸುರಸಾಂ ಸುಪ್ರಸನ್ನಾಮ್ |
ವಿಭಾವರೀಂ ಸರ್ವಭೂತಪ್ರತಿಷ್ಠಾಂ
ಗಂಗಾಂ ಗತಾ ಯೇ ತ್ರಿದಿವಂ ಗತಾಸ್ತೇ ||86||
ಪಾಪಪರಿಹಾರದಕ್ಷಳೂ, ವಿಸ್ತಾರವುಳ್ಳವಳೂ, ಮಹತ್ವವುಳ್ಳವಳೂ, ವಿಶೇಷವಾಗಿ ಅತ್ಯಂತ ಶ್ರೇಷ್ಠಳೂ, ಸುಖಪ್ರದವಾದ ಅಮೃತಪ್ರಿಯವಾದ ಒಳ್ಳೆಯ ರಸವುಳ್ಳ ಜಲವುಳ್ಳವಳೂ, ಬಹಳ ಪ್ರಸನ್ನಳೂ, ಬೆಳದಿಂಗಳ ರಾತ್ರಿಯಂತೆ ಇರುವವಳೂ, ಸರ್ವಭೂತಗಳಿಗೆ ಆಶ್ರಯಳಾದವಳೂ ಆದ ಗಂಗೆಗೆ ಯಾರು ಹೋಗುತ್ತಾರೆಯೋ ಅವರು ಸ್ವರ್ಗಕ್ಕೆ ಹೋಗುತ್ತಾರೆ.
ಖ್ಯಾತಿರ್ಯಸ್ಯಾಃ ಖಂ ದಿವಂ ಗಾಂ ಚ ನಿತ್ಯಂ
ಪುರಾ ದಿಶೋ ವಿದಿಶಶ್ಚಾವತಸ್ಥೇ |
ತಸ್ಯಾ ಜಲಂ ಸೇವ್ಯ ಸರಿದ್ವರಾಯಾ
ಮರ್ತ್ಯಾಃ ಸರ್ವೇ ಕೃತಕೃತ್ಯಾ ಭವಂತಿ ||87||
ಯಾವಳ ಖ್ಯಾತಿಯು ಹಿಂದಿನಿಂದಲೂ ಸತತವಾಗಿ ಭೂಮಿ, ಅಂತರಿಕ್ಷ, ಸ್ವರ್ಗ, ದಿಕ್ಕು ಮತ್ತು ವಿದಿಕ್ಕುಗಳನ್ನು ವ್ಯಾಪಿಸಿ ನಿಂತಿದೆಯೋ ಅಂತಹ ಸರಿತ್ ಶ್ರೇಷ್ಠಳಾದ ಗಂಗೆಯ ಜಲವನ್ನು ಸೇವಿಸುವ ಮರ್ತ್ಯರೆಲ್ಲರೂ ಕೃತಕೃತ್ಯರಾಗುತ್ತಾರೆ.
ಇಯಂ ಗಂಗೇತಿ ನಿಯತಂ ಪ್ರತಿಷ್ಠಾ
ಗುಹಸ್ಯ ರುಗ್ಮಸ್ಯ ಚ ಗರ್ಭಯೋಷಾ |
ಪ್ರಾತಸ್ತ್ರಿಮಾರ್ಗಾ ಘೃತವಹಾ ವಿಪಾಪ್ಮಾ

ಗಂಗಾವತೀರ್ಣಾ ವಿಯತೋ ವಿಶ್ವತೋಯಾ ॥88॥
ಈ ಗಂಗೆಯು ನಿಯತವಾಗಿ ಪ್ರಾಣಿಗಳಿಗೆ ಆಶ್ರಯಳಾದವಳು. ಸ್ಕಂದನನ್ನು ಮತ್ತು ಸುವರ್ಣವನ್ನು ಗರ್ಭದಲ್ಲಿ ಧರಿಸಿದವಳು. ಮೂರು ಮಾರ್ಗದಲ್ಲಿ ಹರಿಯುವವಳು (ಪ್ರಾತಃಕಾಲದಲ್ಲಿ ಸ್ನಾನ ಮಾಡುವವರಿಗೆ ಧರ್ಮಾರ್ಥ ಕಾಮಗಳನ್ನು ಕೊಡುವವಳು) ಘೃತದಂತಹ ಶುದ್ಧವಾದ ನೀರನ್ನು ಹೊಂದಿದವಳು, ಪಾಪರಹಿತಳಾದವಳು, ಪೂರ್ಣ ಜಲವುಳ್ಳವಳು, ಆಕಾಶದಿಂದ ಭೂಮಿಗೆ ಇಳಿದವಳು.
ಸುತಾಽವನೀಧ್ರಸ್ಯ ಹರಸ್ಯ ಭಾರ್ಯಾ
ದಿವೋ ಭುವಶ್ಚಾಪಿ ಕಕ್ಷ್ಯಾನುರೂಪಾ |
ಭವ್ಯಾ ಪೃಥಿವ್ಯಾ ಭಾವಿನೀ ಭಾತಿ ರಾಜನ್
ಗಂಗಾ ಲೋಕಾನಾಂ ಪುಣ್ಯದಾ ವೈ ತ್ರಯಾಣಾಮ್ ॥89॥
ಪರ್ವತರಾಜನಾದ ಹಿಮಾಲಯನ ಪುತ್ರಿ (ಭಗೀರಥರಾಜನ ಪುತ್ರಿ), ಶಿವನ ಪತ್ನಿ, ಸ್ವರ್ಗದಲ್ಲಿ ಮತ್ತು ಭೂಮಿಯಲ್ಲಿ ಆಯಾ ದೇಶದ ಎತ್ತರಕ್ಕೆ ಅನುಗುಣಳಾಗಿದ್ದಾಳೆ, ಭವ್ಯಳಾಗಿದ್ದಾಳೆ. ಪೃಥಿವಿಯನ್ನು ವೈಭವೀಕರಿಸುತ್ತಾಳೆ. ಎಲೈ ರಾಜನೇ, ಅಂತಹ ಈ ಗಂಗೆಯು ಮೂರು ಲೋಕಗಳಿಗೂ ಪುಣ್ಯವನ್ನು ಕೊಡುತ್ತಾ ಕಂಗೊಳಿಸುತ್ತಾಳೆ. (ಸಿದ್ಧಪುರುಷ ಮತ್ತು ಸಿಲವೃತ್ತಿಯ ಸಂಭಾಷಣೆಯು ಭೀಷ್ಮ-ಯುಧಿಷ್ಠಿರ ಸಂಭಾಷಣೆಯಲ್ಲಿ ಮೂಡಿ ಬಂದಿದೆ ಎಂದು ತಿಳಿಸಲು ಮಧ್ಯದಲ್ಲಿ ಧರ್ಮರಾಜನನ್ನು ಕುರಿತ ಭೀಷ್ಮನ ಸಂಭಾಷಣೆಯಲ್ಲಿ ರಾಜನ್ ಎಂದು ಮೂಡಿಬಂದಿದೆ).
ಮಧುಪ್ರವಾಹಾ ಘೃತರಾಗೋದ್ಧತಾಭಿಃ
ಮಹೋರ್ಮಿಭಿಃ ಶೋಭಿತಾ ಬ್ರಾಹ್ಮಣೈಶ್ಚ |
ದಿವಶ್ಚ್ಯುತಾ ಶಿರಸಾತ್ತಾ ಭವೇನ
ಗಂಗಾವನೀಧ್ರಾತ್ ತ್ರಿದಿವಸ್ಯ ಮಾಲಾ ॥90॥
ಮಧುರವಾದ ಪ್ರವಾಹವುಳ್ಳ, ಭಕ್ತರಲ್ಲಿ ಪ್ರೇಮವನ್ನು ಹೊಂದಿದ, ಎತ್ತರವಾದ ದೊಡ್ಡ ಅಲೆಗಳಿಂದಲೂ ಮತ್ತು ಬ್ರಾಹ್ಮಣರಿಂದಲೂ ಶೋಭಿಸುವ, ಆಕಾಶದಿಂದ ಕೆಳಗಿಳಿದ, ಈಶ್ವರನು ತಲೆಯ ಮೇಲೆ ಧರಿಸಿದ ಗಂಗೆಯು ಹಿಮಾಲಯ ಪರ್ವತದಿಂದ ಸ್ವರ್ಗದವರೆಗೂ ಹಾಕಿದ ಮಾಲೆಯಂತಿದೆ.
ಯೋನಿರ್ವರಿಷ್ಠಾ ವಿರಜಾ ವಿತನ್ವೀ
ಶುಷ್ಮಾ ಇರಾ ವಾರಿವಹಾ ಯಶೋದಾ |
ವಿಶ್ವಾವತೀ ಚಾಕೃತಿರಿಷ್ಟಿರಿದ್ಧಾ
ಗಂಗೋಕ್ಷಿತಾನಾಂ ಭುವನಸ್ಯ ಪಂಥಾಃ ॥91॥
ಗಂಗೆಯು ಪುಣ್ಯಕ್ಕೆ ಕಾರಣಳಾದವಳು, ಶ್ರೇಷ್ಠಳಾದವಳು, ದೋಷ- ದೂರಳಾದವಳು, ಬಹಳ ಸೂಕ್ಷ್ಮಳಾದವಳು, ಸಮರ್ಥಳಾದವಳು, ಸುಖಪ್ರದಳಾದವಳು, ಜಲಪೂರ್ಣಳಾದವಳು, ಕೀರ್ತಿಪ್ರದಳಾದವಳು, ವಿಶ್ವವನ್ನು ರಕ್ಷಿಸುವವಳು, ಒಳ್ಳೆಯ ಕಾರ್ಯವನ್ನು ಮಾಡುವವಳು, ಎಲ್ಲರಿಗೂ ಬಹಳವಾಗಿ ಇಷ್ಟಳಾದವಳು, ಕಂಗೊಳಿಸುವವಳು, ಸ್ನಾನ ಮಾಡುವವರಿಗೆ ಸ್ವರ್ಗ ಮಾರ್ಗಪ್ರದಳಾದವಳು.

ಕ್ಷಾಂತ್ಯಾ ಮಹ್ಯಾ ಗೋಪನೇ ಧಾರಣೇ ಚ
ದೀಪ್ತ್ಯಾ ಕೃಶಾನೋಸ್ತಪನಸ್ಯ ಚೈವ |
ತುಲ್ಯಾ ಗಂಗಾ ಸಮ್ಮತಾ ಬ್ರಾಹ್ಮಣಾನಾಂ
ಗುಹಸ್ಯ ಬ್ರಹ್ಮಣ್ಯತಯಾ ಚ ನಿತ್ಯಮ್ ॥92॥
ಕ್ಷಮಾಗುಣದಿಂದಲೂ ಮತ್ತು ಧರಿಸುವ ಗುಣಗಳಿಂದಲೂ ಭೂಮಿಗೆ ಸಮಳಾದವಳು. ಪ್ರಕಾಶದಿಂದ ಅಗ್ನಿಗೆ ಮತ್ತು ಸೂರ್ಯನಿಗೆ ಸಮಳಾದವಳು, ಬ್ರಾಹ್ಮಣರ ವಾತ್ಸಲ್ಯದಲ್ಲಿ ಸ್ಕಂದನಿಗೆ ಸಮಳಾದವಳು ಎಂದು ಬ್ರಾಹ್ಮಣರಿಗೆ ಸಮ್ಮತಳಾದವಳು.
ಋಷಿಷ್ಟುತಾಂ ವಿಷ್ಣುಪದೀಂ ಪುರಾಣೀಂ
ಸುಪುಣ್ಯತೋಯಾಂ ಮನಸಾಽಪಿ ಲೋಕೇ |
ಸರ್ವಾತ್ಮನಾ ಜಾಹ್ನವೀಂ ಯೇ ಪ್ರಪನ್ನಾ-
ಸ್ತೇ ಬ್ರಹ್ಮಣಃ ಸದನಂ ಸಂಪ್ರಯಾತಾಃ ॥93॥
ಋಷಿಗಳಿಂದ ಸ್ತುತಿಸಲ್ಪಟ್ಟ, ವಿಷ್ಣುಪಾದದಿಂದ ಉದ್ಭವಿಸಿದ, ಪ್ರಾಚೀನಳಾದ, ಪವಿತ್ರಜಲವನ್ನು ಹೊಂದಿದ ಗಂಗೆಯನ್ನು ಸ್ಮರಿಸಿ ಸರ್ವಾತ್ಮನಾ ಮನಸ್ಸಿನಿಂದಾದರೂ ಯಾರು ಶರಣಾಗತರಾಗುತ್ತಾರೆಯೋ ಅವರು ಬ್ರಹ್ಮಸದನಕ್ಕೆ ಹೋಗುತ್ತಾರೆ.
ಲೋಕಾನಿಮಾನ್ ನಯತಿ ಯಾ ಜನನೀವ ಪುತ್ರಾನ್
ಸರ್ವಾತ್ಮನಾ ಸರ್ವಗುಣೋಪಪನ್ನಾ |
ಸ್ವಸ್ಥಾನಮಿಷ್ಟಮಿಹ ಬ್ರಾಹ್ಮಮಭೀಪ್ಸಮಾನೈಃ
ಗಂಗಾ ಸದೈವಾತ್ಮವಶೈರುಪಾಸ್ಯಾ ॥94॥
ಯಾವ ಗಂಗೆಯು ತಾಯಿಯು ಮಕ್ಕಳನ್ನು ನಡೆಸಿದಂತೆ ಈ ಪ್ರಜೆಗಳನ್ನು ಸ್ವರ್ಗಕ್ಕೆ ನಡೆಸಿಕೊಂಡು ಹೋಗುತ್ತಾಳೆಯೋ ಅಂತಹ ಸರ್ವರೀತಿಯಿಂದಲೂ, ಸರ್ವಗುಣಗಳಿಂದ ಕೂಡಿದ ಗಂಗೆಯು ತಮಗೆ ಇಷ್ಟವಾದ ಬ್ರಹ್ಮಸ್ಥಾನವನ್ನು ಹೊಂದಲು ಬಯಸುವ ಆತ್ಮವಶರಾದವರಿಂದ ಯಾವಾಗಲೂ ಉಪಾಸಿಸಲ್ಪಡಲು ಯೋಗ್ಯಳಾದವಳು.
ಉಸ್ರಾಂ ಜುಷ್ಟಾಂ ಮಿಷತೀಂ ವಿಶ್ವತೋಯಾ-
ಮಿರಾಂ ವಜ್ರೀಂ ರೇವತೀಂ ಭೂಧರಾಣಾಮ್ |
ಶಿಷ್ಟಾಶ್ರಯಾಮಮೃತಾಂ ಬ್ರಹ್ಮಕಾಂತಾಂ

ಗಂಗಾಂ ಶ್ರಯೇದಾತ್ಮವಾನ್ ಸಿದ್ಧಿಕಾಮಃ ॥95॥
ಪ್ರಕಾಶಮಾನವಾದ ಕಿರಣಗಳಿಂದ ಕೂಡಿದ, ಋಷ್ಯಾದಿಗಳಿಂದ ಸೇವಿತಳಾದ, ಸರ್ವಸಾಕ್ಷಿಯಾದ, ಪೂರ್ಣಜಲವನ್ನು ಹೊಂದಿದ, ಅನ್ನಪ್ರದಳಾದ, ವಜ್ರಗಳನ್ನು ಹೊಂದಿದ, ಪರ್ವತಗಳಿಗೆ ಸಂಪತ್ತನ್ನು ನೀಡುವ, ಶಿಷ್ಟರಿಂದ ಆಶ್ರಯಿಸಲ್ಪಡುವ, ನಿತ್ಯಳಾದ, ಬ್ರಾಹ್ಮಣರ ಪ್ರೀತಿಗೆ ಪಾತ್ರಳಾದ ಗಂಗೆಯನ್ನು ಸಿದ್ಧಿಯನ್ನು ಬಯಸುವ ಧೈರ್ಯಶಾಲಿಯು ಆಶ್ರಯಿಸಬೇಕು.
ಪ್ರಸಾದ್ಯ ದೇವಾನ್ ಸವಿಭೂನ್ ಸಮಸ್ತಾನ್
ಭಗೀರಥಸ್ತಪಸೋಗ್ರೇಣ ಗಂಗಾಮ್ ।
ಗಾಮಾನಯತ್ ತಾಮಭಿಗಮ್ಯ ಶಶ್ವತ್
ಪುಮಾನ್ ಭಯಂ ನೇಹ ನಾಮುತ್ರ ವಿದ್ಯಾತ್ ॥96॥
ವಿಭುವೇ ಮೊದಲಾದ ಸಮಸ್ತ ದೇವತೆಗಳನ್ನು ಪ್ರಸನ್ನೀಕರಿಸಿ ಭಗೀರಥನು ಉಗ್ರವಾದ ತಪಸ್ಸಿನಿಂದ ಗಂಗೆಯನ್ನು ಭೂಮಿಗೆ ತಂದನು. ಅಂತಹ ಗಂಗೆಯನ್ನು ಸಮೀಪಿಸುವ ಪುರುಷನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಭಯವನ್ನು ಹೊಂದುವುದಿಲ್ಲ.
ಉದಾಹೃತಃ ಸರ್ವಥಾ ತೇ ಗುಣಾನಾಂ
ಮಯ್ಯೈಕದೇಶಃ ಪ್ರಸಮೀಕ್ಷ್ಯ ಬುದ್ಧ್ಯಾ ।
ಶಕ್ತಿರ್ನ ಮೇ ಕಾಚಿದಿಹಾಸ್ತಿ ವಕ್ತುಂ
ಗುಣಾನ್ ಸರ್ವಾನ್ ಪರಿಮಾತುಂ ತಥೈವ ॥97॥
ನಿನಗೆ ನನ್ನ ಬುದ್ಧಿಯಿಂದ ಆಲೋಚಿಸಿ ಗಂಗೆಯ ಗುಣಗಳ ಏಕದೇಶವನ್ನು ಮಾತ್ರ ಸರ್ವಥಾ ಹೇಳಿದ್ದೇನೆ. ಆದರೆ ಎಲ್ಲ ಗುಣಗಳನ್ನು ಹೇಳಲು ಅಥವಾ ಪರಿಗಣಿಸಲು ನನಗೆ ಶಕ್ತಿ ಇಲ್ಲ.
ಮೇರೋಃ ಸಮುದ್ರಸ್ಯ ಚ ಸರ್ವರತ್ನೈಃ
ಸಂಖ್ಯೋಪಲಾನಾಮುದಕಸ್ಯ ವಾಪಿ ।
ವಕ್ತುಂ ಶಕ್ಯಂ ನೇಹ ಗಂಗಾಜಲಾನಾಂ
ಗುಣಾಖ್ಯಾನಂ ಪರಿಮಾತುಂ ತಥೈವ ॥98॥
ಮೇರುವಿನಲ್ಲಿರುವ ಶಿಲೆಗಳ ಸಂಖ್ಯೆಯನ್ನೂ, ಸಮುದ್ರದಲ್ಲಿರುವ ರತ್ನಗಳ ಸಂಖ್ಯೆಯನ್ನೂ ಹೇಳಲು ಸಾಧ್ಯವಾದೀತು. ಆದರೆ ಗಂಗಾಜಲದ ಗುಣಗಳನ್ನು ಎಣಿಸಲು ಸಾಧ್ಯವಾಗುವುದಿಲ್ಲ.
ತಸ್ಮಾದಿಮಾನ್ ಪರಯಾ ಶ್ರದ್ಧಯೋಕ್ತಾನ್
ಗುಣಾನ್ ಸರ್ವಾನ್ ಜಾಹ್ನವೀಜಾಂಸ್ತಥೈವ ।
ಭಜೇದ್ ವಾಚಾ ಮನಸಾ ಕರ್ಮಣಾ ಚ
ಭಕ್ತ್ಯಾ ಯುಕ್ತಃ ಪರಯಾ ಶ್ರದ್ಧಧಾನಃ ॥99॥
ಆದ್ದರಿಂದ ನಾನು ಶ್ರದ್ಧೆಯಿಂದ ಹೇಳಿದ ಗಂಗೆಯ ಎಲ್ಲಾ ಗುಣಗಳನ್ನೂ ಮಾತಿನಿಂದ, ಮನಸ್ಸಿನಿಂದ ಮತ್ತು ಕರ್ಮದಿಂದ ಭಕ್ತಿ-ಶ್ರದ್ಧೆಗಳಿಂದ ಕೂಡಿದವನಾಗಿ ಉಪಾಸನೆ ಮಾಡಬೇಕು.
ಲೋಕಾನಿಮಾಂಸ್ತ್ರೀನ್ ಯಶಸಾ ವಿತತ್ಯ
ಸಿದ್ಧಿಂ ಪ್ರಾಪ್ಯ ಮಹತೀಂ ತಾಂ ದುರಾಪಾಮ್ ।
ಗಂಗಾಕೃತಾನಚಿರೇಣೈವ ಲೋಕಾನ್
ಯಥೇಷ್ಟಮಿಷ್ಟಾನ್ ವಿಚರಿಷ್ಯಸಿ ತ್ವಮ್ ॥100॥
ಎಲೈ ಸಿಲವೃತ್ತಿ ಬ್ರಾಹ್ಮಣನೇ, ನೀನು ಪಡೆಯಲು ಕಷ್ಟಸಾಧ್ಯವಾದ ಸಿದ್ಧಿಯನ್ನು ಹೊಂದಿ, ಮೂರುಲೋಕಗಳಲ್ಲಿ ನಿನ್ನ ಕೀರ್ತಿಯನ್ನು ತುಂಬಿ, ಗಂಗೆಯ ಪ್ರಸಾದ ರೂಪವಾದ ಇಷ್ಟವಾದ ಲೋಕವನ್ನು ಹೊಂದಿ ಅವುಗಳಲ್ಲಿ ಸಂಚರಿಸುವಿ.
ತವ ಮಮ ಚ ಗುಣೈರ್ಮಹಾನುಭಾವಾ
ಜುಷತು ಮತಿಂ ಸತತಂ ಸ್ವಧರ್ಮಯುಕ್ತೈಃ ।
ಅಭಿಗತಜನವತ್ಸಲಾ ಹಿ ಗಂಗಾ
ಭಜತಿ ಯುನಕ್ತಿ ಸುಖೈಶ್ಚ ಭಕ್ತಿಮಂತಮ್ ॥101॥
ನನ್ನ ಮತ್ತು ನಿನ್ನ ಗುಣಗಳಿಂದ ಮಹಾನುಭಾವಳಾದ ಗಂಗೆಯು ತನ್ನ ಗುಣಗಳನ್ನು ಹೇಳುವ ಮಾತುಗಳಿಗೆ ಕಾರಣವಾದ ನಮ್ಮ ಬುದ್ಧಿಯನ್ನು ನೋಡಿ ಸಂತೋಷಪಡಲಿ. ಶರಣಾಗತರಲ್ಲಿ ವಾತ್ಸಲ್ಯವುಳ್ಳ ಗಂಗೆಯು ತನ್ನಲ್ಲಿ ಭಕ್ತಿಯುಳ್ಳವರನ್ನು ಸಮೀಪಿಸಿ ಸುಖವನ್ನು ನೀಡುತ್ತಾಳೆ.
ಭೀಷ್ಮಃ
ಇತಿ ಪರಮಮತಿರ್ಗುಣಾನನೇಕಾನ್
ಸಿಲರತಯೇ ತ್ರಿಪಥಾನುಯೋಗರೂಪಾನ್ ।
ಬಹುವಿಧಮನುಶಾಸ್ಯ ತಥ್ಯರೂಪಾನ್
ಗಗನತಳಂ ದ್ಯುತಿಮಾನ್ ವಿವೇಶ ಸಿದ್ಧಃ ॥102॥
ಭೀಷ್ಮ ಹೀಗೆ ಶ್ರೇಷ್ಠವಾದ ಬುದ್ಧಿಯುಳ್ಳ ಆ ಸಿದ್ಧನು ಗಂಗೆಯ ಸ್ವರೂಪದ ಪ್ರಶ್ನೆಗೆ ಉತ್ತರರೂಪವಾದ ಗಂಗೆಯ ಅನೇಕ ಸತ್ಯವಾದ ಗುಣಗಳನ್ನು ಸಿಲವೃತ್ತಿ ಬ್ರಾಹ್ಮಣನಿಗೆ ಬಹುವಿಧವಾಗಿ ಉಪದೇಶ ಮಾಡಿ ಕಾಂತಿಯುಕ್ತನಾಗಿ ಆಕಾಶವನ್ನು ಪ್ರವೇಶಿಸಿದನು.
ಸಿಲವೃತ್ತಿಸ್ತು ಸಿದ್ಧಸ್ಯ ವಾಕ್ಯೈಃ ಸಂಬೋಧಿತಸ್ತದಾ ।
ಗಂಗಾಮುಪಾಸ್ಯ ವಿಧಿವತ್ ಸಿದ್ಧಿಂ ಪ್ರಾಪ್ತಃ ಸುದುರ್ಲಭಾಮ್ ॥103॥

ಸಿಲವೃತ್ತಿ ಬ್ರಾಹ್ಮಣನಾದರೂ ಸಿದ್ಧನ ಮಾತುಗಳಿಂದ ಪ್ರಭಾವಿತನಾಗಿ, ಗಂಗೆಯನ್ನು ವಿಧಿಯ ಪ್ರಕಾರವಾಗಿ ಉಪಾಸನೆಯನ್ನು ಮಾಡಿ, ದುರ್ಲಭವಾದ ಸಿದ್ಧಿಯನ್ನು ಪಡೆದನು.
ತಸ್ಮಾತ್ತ್ವಮಪಿ ಕೌಂತೇಯ ಭಕ್ತ್ಯಾ ಪರಮಯಾ ಯುತಃ |
ಗಂಗಾಮಭ್ಯೇಹಿ ಸತತಂ ಪ್ರಾಪ್ಸ್ಯಸೇ ಸಿದ್ಧಿಮುತ್ತಮಾಮ್ ॥104॥
ಎಲ್ಲೈ ಕೌಂತೇಯನೇ, ನೀನೂ ಸಹ ಪರಮಭಕ್ತಿಯಿಂದ ಕೂಡಿದವನಾಗಿ ಸತತವಾಗಿ ಗಂಗೆಗೆ ಶರಣಾಗತನಾಗು, ಶ್ರೇಷ್ಠವಾದ ಸಿದ್ಧಿಯನ್ನು ಪಡೆಯುವಿ.
ವೈಶಂಪಾಯನಃ
ಶ್ರುತ್ವೇತಿಹಾಸಂ ಭೀಷ್ಮೋಕ್ತಂ ಗಂಗಾಯಾಃ ಸ್ತವಸಂಯುತಮ್ |
ಯುಧಿಷ್ಠಿರಃ ಪರಾಂ ಪ್ರೀತಿಮಗಚ್ಛದ್ ಭ್ರಾತೃಭಿಃ ಸಹ ॥105॥
ವೈಶಂಪಾಯನ ಭೀಷ್ಮರು ಹೇಳಿದ ಗಂಗೆಯ ಸ್ತೋತ್ರ ಸಹಿತವಾದ ಇತಿಹಾಸವನ್ನು ಕೇಳಿ ಯುಧಿಷ್ಠಿರನು ತಮ್ಮಂದಿರ ಜೊತೆಯಲ್ಲಿ ಬಹಳ ಸಂತೋಷವನ್ನು ಹೊಂದಿದನು.
ಇತಿಹಾಸಮಿಮಂ ಪುಣ್ಯಂ ಶೃಣುಯಾದ್ ಯಃ ಪಠೇತ ವಾ |
ಗಂಗಾಯಾಃ ಸ್ತವಸಂಯುಕ್ತಂ ಸ ಮುಚ್ಯೇತ್ಸರ್ವಕಿಲ್ಬಿಷೈಃ ॥106॥
ಯಾವನು ಗಂಗೆಯ ಸ್ತೋತ್ರದಿಂದ ಕೂಡಿದ ಈ ಪವಿತ್ರವಾದ ಇತಿಹಾಸವನ್ನು ಕೇಳುತ್ತಾನೆಯೋ ಅಥವಾ ಪಾರಾಯಣ ಮಾಡುತ್ತಾನೆಯೋ ಅವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗಂಗಾಮಾಹಾತ್ಮ್ಯವರ್ಣನಂ ನಾಮ ಸಪ್ತಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೆಂಟನೆಯ ಅಧ್ಯಾಯ
ಮತಂಗೋಪಾಖ್ಯಾನ ಪ್ರಾರಂಭ.
ಯುಧಿಷ್ಠಿರಃ
ಪ್ರಜ್ಞಾಶ್ರುತಾಭ್ಯಾಂ ವೃತ್ತೇನ ಶೀಲೇನ ಚ ಯಥಾ ಭವಾನ್ |
ಗುಣೈಃ ಸಮುದಿತಃ ಸರ್ವೈರ್ವಯಸಾ ಚ ಸಮನ್ವಿತಃ |
ತಸ್ಮಾದ್ ಭವಂತಂ ಪೃಚ್ಛಾಮಿ ಧರ್ಮಂ ಧರ್ಮಭೃತಾಂ ವರ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಪ್ರಜ್ಞೆ ಮತ್ತು ವೃತ್ತಗಳಿಂದಲೂ, ನಡತೆಯಿಂದಲೂ ಮತ್ತು ಎಲ್ಲ ಗುಣಗಳಿಂದಲೂ, ಮನಸ್ಸಿನಿಂದಲೂ ನೀನು ಕೂಡಿದ್ದೀಯೆ. ಧರ್ಮಿಷ್ಠರಲ್ಲಿ ಶ್ರೇಷ್ಠನೇ, ಆದ್ದರಿಂದ ನಿನ್ನನ್ನು ಧರ್ಮದ ವಿಷಯದಲ್ಲಿ ಪ್ರಶ್ನೆಯನ್ನು ಮಾಡುತ್ತಿದ್ದೇನೆ.
ಕ್ಷತ್ರಿಯೋ ಯದಿ ವಾ ವೈಶ್ಯಃ ಶೂದ್ರೋ ವಾ ರಾಜಸತ್ತಮ |
ಬ್ರಾಹ್ಮಣ್ಯಂ ಪ್ರಾಪ್ನುಯಾತ್ ಕೇನ ತನ್ಮೇ ವ್ಯಾಖ್ಯಾತುಮರ್ಹಸಿ ॥2॥
ಎಲೈ ರಾಜಶ್ರೇಷ್ಠನೇ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರನು ಬ್ರಾಹ್ಮಣ್ಯವನ್ನು ಪಡೆಯುವುದಾದರೆ ಅದನ್ನು ಯಾವ ರೀತಿಯಿಂದ ಪಡೆಯುತ್ತಾನೆ ಎಂದು ನನಗೆ ತಿಳಿಸು.
ತಪಸಾ ವಾ ಸುಮಹತಾ ಕರ್ಮಣಾ ವಾ ಶ್ರುತೇನ ವಾ |
ಬ್ರಾಹ್ಮಣ್ಯಮಥ ಚೇದಿಚ್ಛೇತ್ತನ್ಮೇ ಬ್ರೂಹಿ ಪಿತಾಮಹ ॥3॥
ಪಿತಾಮಹನೇ, ಅವನು ಬ್ರಾಹ್ಮಣ್ಯವನ್ನು ಬಯಸಿದರೆ ಅದನ್ನು ತಪಸ್ಸಿನಿಂದ ಅಥವಾ ಮಹಾಕರ್ಮದಿಂದ ಅಥವಾ ವಿದ್ಯೆಯಿಂದ ಪಡೆಯಬಹುದೋ ಎಂದು ನನಗೆ ತಿಳಿಸು.
ಭೀಷ್ಮಃ
ಬ್ರಾಹ್ಮಣ್ಯಂ ತಾತ ದುಷ್ಪ್ರಾಪಂ ವರ್ಣೈಃ ಕ್ಷತ್ರಾದಿಭಿಸ್ತ್ರಿಭಿಃ |
ಪರಂ ಹಿ ಸರ್ವಭೂತಾನಾಂ ಸ್ಥಾನಮೇತದ್ ಯುಧಿಷ್ಠಿರ ॥4॥
ಭೀಷ್ಮ ಎಲೈ ಯುಧಿಷ್ಠಿರನೇ, ಕ್ಷತ್ರಿಯಾದಿ ಮೂರು ವರ್ಣದವರಿಂದ ಬ್ರಾಹ್ಮಣ್ಯವನ್ನು ಸಂಪಾದಿಸುವುದು ಅಸಾಧ್ಯವಾದುದು. ಬ್ರಾಹ್ಮಣ್ಯವೆಂಬುದು ಸರ್ವ ಪ್ರಾಣಿಗಳಲ್ಲಿ ಶ್ರೇಷ್ಠವಾದ ಸ್ಥಾನ.
ಬಹ್ವೀಸ್ತು ಸಂಸರನ್ ಯೋನೀರ್ಜಾಯಮಾನಃ ಪುನಃ ಪುನಃ |
ಪರ್ಯಾಯೇ ತಾತ ಕಸ್ಮಿಂಶ್ಚಿದ್ ಬ್ರಾಹ್ಮಣೋ ನಾಮ ಜಾಯತೇ ॥5॥
ಸಂಸಾರದಲ್ಲಿ ಪುನಃ ಪುನಃ ಅನೇಕ ಯೋನಿಗಳಲ್ಲಿ ಜನಿಸುವ ಜೀವನು ಎಲೈ ಪ್ರೀತಿಪಾತ್ರನೇ, ಯಾವುದೋ ಒಂದು ಪರ್ಯಾಯದಲ್ಲಿ ಬ್ರಾಹ್ಮಣನಾಗಿ ಜನಿಸುತ್ತಾನೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮತಂಗಸ್ಯ ಚ ಸಂವಾದಂ ಗರ್ದಭ್ಯಾಶ್ಚ ಯುಧಿಷ್ಠಿರ ॥6॥
ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೂ ಸಹ ಮತಂಗ ಋಷಿಗಳಿಗೆ ಮತ್ತು ಒಂದು ಹೆಣ್ಣು ಕತ್ತೆಗೆ ನಡೆದ ಸಂವಾದರೂಪವಾದ ಪ್ರಾಚೀನವಾದ ಈ ಇತಿಹಾಸವನ್ನು ಹೇಳುತ್ತಾರೆ.
ದ್ವಿಜಾತೇಃ ಕಸ್ಯಚಿತ್ ತಾತ ತುಲ್ಯವರ್ಣಃ ಸುತಃ ಪ್ರಭುಃ |

ಮತಂಗೋ ನಾಮ ನಾಮ್ನಾಽಭೂತ್ ಸರ್ವೈಃ ಸಮುದಿತೋ ಗುಣೈಃ ॥
ಯಾವನೋ ಒಬ್ಬ ಬ್ರಾಹ್ಮಣನಿಗೆ ತನ್ನ ವರ್ಣದವನಾದ, ಸಮರ್ಥನಾದ, ಸರ್ವಗುಣಗಳಿಂದ ಸಂಪನ್ನನಾದ ಮತಂಗನೆಂಬ ಪುತ್ರನು ಜನಿಸಿದನು.
ಸ ಯಜ್ಞಕಾರಃ ಕೌಂತೇಯ ಪಿತ್ರಾ ಸೃಷ್ಟಃ ಪರಂತಪ |
ಪ್ರಾಯಾದ್ ಗರ್ದಭಯುಕ್ತೇನ ರಥೇನೇಹಾಶುಗಾಮಿನಾ ॥8॥
ಎಲೈ ಪರಂತಪನೇ, ಅವನು ವಿದ್ಯಾಸಂಪನ್ನನಾಗಿ ತಂದೆಯಿಂದ ಯಜ್ಞವನ್ನು ಮಾಡಿಸಲು ಹೇಳಲ್ಪಟ್ಟು, ಕತ್ತೆಯನ್ನು ಹೂಡಿದ ಶೀಘ್ರಗಾಮಿಯಾದ ರಥದಿಂದ ಹೊರಟನು.
ಸ ಬಾಲಂ ಗರ್ದಭಂ ರಾಜನ್ ವಹಂತಂ ಮಾತುರಂತಿಕೇ |
ನಿರವಿಧ್ಯತ್ ಪ್ರತೋದೇನ ನಾಸಿಕಾಯಾಂ ಪುನಃ ಪುನಃ ॥9॥
ಎಲೈ ರಾಜನೇ, ಅವನು ತಾಯಿಯ ಸಮೀಪದಲ್ಲಿಯೇ ಕಟ್ಟಿದ ರಥವನ್ನು ಎಳೆಯುತ್ತಿದ್ದ ಒಂದು ಎಳೆಯ ಕತ್ತೆಯನ್ನು ಚಾವಟಿಯಿಂದ ಅದರ ನಾಸಿಕದಲ್ಲಿ ಪುನಃ ಪುನಃ ಹೊಡೆದನು.
ತಂ ತು ತೀವ್ರವ್ರಣಂ ದೃಷ್ಟ್ವಾ ಗರ್ದಭೀ ಪುತ್ರಗೃದ್ಧಿನೀ |
ಉವಾಚ ಮಾ ಶುಚಃ ಪುತ್ರ ಚಂಡಾಲಸ್ತ್ವಧಿತಿಷ್ಠತಿ ॥10॥
ಪುತ್ರನ ಮೇಲೆ ಮಮತೆಯುಳ್ಳ ಆ ಕತ್ತೆಯು ಪುತ್ರನ ತೀವ್ರವ್ರಣವನ್ನು ನೋಡಿ ಪುತ್ರನೇ ಶೋಕ ಪಡಬೇಡ, ರಥದಲ್ಲಿ ಚಂಡಾಲನು ಕುಳಿತಿದ್ದಾನೆ ಎಂದು ಹೇಳಿತು.
ಬ್ರಾಹ್ಮಣೇ ದಾರುಣಂ ನಾಸ್ತಿ ಮೈತ್ರೋ ಬ್ರಾಹ್ಮಣ ಉಚ್ಯತೇ |
ಆಚಾರ್ಯಃ ಸರ್ವಭೂತಾನಾಂ ಶಾಸ್ತಾ ಕಿಂ ಪ್ರಹರಿಷ್ಯತಿ ॥11॥
ಬ್ರಾಹ್ಮಣರಲ್ಲಿ ಕ್ರೂರಕರ್ಮವು ಇರುವುದಿಲ್ಲ. ಅವನು ಸರ್ವರಲ್ಲಿಯೂ ಸ್ನೇಹವುಳ್ಳವನು. ಸರ್ವಭೂತಗಳಿಗೂ ಆಚಾರ್ಯನಾಗಿ ಉಪದೇಶ ಮಾಡುವವನು. ಅಂತಹವನು ಏಕೆ ಹೊಡೆಯುವನು?
ಅಯಂ ತು ಪಾಪಪ್ರಕೃತಿರ್ಬಾಲೇ ನ ಕುರುತೇ ದಯಾಮ್ |
ಸ್ವಯೋನಿಂ ಮಾನಯತ್ಯೇಷ ಭಾವೋ ಭಾವಂ ನಿಗಚ್ಛತಿ ॥12॥
ರಥದಲ್ಲಿ ಕುಳಿತ ಇವನಾದರೂ ಪಾಪಸ್ವಭಾವದವನು. ಚಿಕ್ಕ ವಯಸ್ಸಿನ ನಿನ್ನಲ್ಲಿ ದಯೆಯನ್ನು ತೋರಿಸುತ್ತಿಲ್ಲ. ತನ್ನ ಯೋನಿಯನ್ನೇ ಗೌರವಿಸುತ್ತಾನೆ. ಜಾತಿ ಸ್ವಭಾವವು ಮನಸ್ಸಿನ ಸ್ವಭಾವವನ್ನು ನಿಯಂತ್ರಿಸುತ್ತದೆ (ಎಂದು ಹೇಳಿತು).
ಏತಚ್ಛ್ರುತ್ವಾ ಮತಂಗಸ್ತು ದಾರುಣಂ ರಾಸಭೀವಚಃ |
ಅವತೀರ್ಯ ರಥಾತ್ತೂರ್ಣಂ ರಾಸಭೀಂ ಪ್ರತ್ಯಭಾಷತ ॥13॥
ಮತಂಗನು ಹೆಣ್ಣು ಕತ್ತೆಯ ದಾರುಣವಾದ ಈ ಮಾತನ್ನು ಕೇಳಿ, ರಥದಿಂದ ಶೀಘ್ರವಾಗಿ ಇಳಿದು ರಾಸಭಿಯನ್ನು ಕುರಿತು ಮಾತನಾಡಿದನು.
ಬ್ರೂಹಿ ರಾಸಭಿ ಕಲ್ಯಾಣಿ ಮಾತಾ ಮೇ ಯೇನ ದೂಷಿತಾ |
ಕಥಂ ಮಾಂ ವೇತ್ಸಿ ಚಂಡಾಲಂ ಕ್ಷಿಪ್ರಂ ರಾಸಭಿ ಶಂಸ ಮೇ ॥14॥
ಎಲೌ ರಾಸಭಿಯೇ, ಕಲ್ಯಾಣಿಯೇ ನನ್ನ ತಾಯಿಯು ಯಾವನಿಂದ ದೂಷಿಸಲ್ಪಟ್ಟಳು? ನಾನು ಚಂಡಾಲನೆಂದು ನೀನು ಹೇಗೆ ತಿಳಿದಿದ್ದೀಯೆ? ಅದನ್ನು ಶೀಘ್ರವಾಗಿ ನನಗೆ ಹೇಳು.
ಕೇನ ಜಾತೋಽಸ್ಮಿ ಚಂಡಾಲೋ ಬ್ರಾಹ್ಮಣ್ಯಂ ಯೇನ ಮೇಽನಶತ್ |
ತತ್ತ್ವೇನೈತನ್ಮಹಾಪ್ರಾಜ್ಞೇ ಬ್ರೂಹಿ ಸರ್ವಮಶೇಷತಃ॥15॥
ಯಾವ ಕಾರಣದಿಂದ ನಾನು ಚಂಡಾಲನಾದೆ? ಬ್ರಾಹ್ಮಣ್ಯವು ಯಾವ ಆಧಾರದಿಂದ ನಾಶವನ್ನು ಹೊಂದಿತು? ಮಹಾಪ್ರಾಜ್ಞೆಯೇ, ಇವೆಲ್ಲವನ್ನೂ ಸಮಗ್ರವಾಗಿ ನನಗೆ ನಿಜವಾಗಿ ಹೇಳು (ಎಂದು ಹೇಳಿದನು).
ಗರ್ದಭೀ
ಬ್ರಾಹ್ಮಣ್ಯಾಂ ವೃಷಲೇನ ತ್ವಂ ಮತ್ತಾಯಾಂ ನಾಪಿತೇನ ಹ |
ಜಾತಸ್ತ್ವಮಸಿ ಚಂಡಾಲೋ ಬ್ರಾಹ್ಮಣ್ಯಂ ತೇನ ತೇಽನಶತ್ ॥16॥
ಗರ್ದಭೀ ನೀನು ಮೈಮರೆತ ನಿನ್ನ ಬ್ರಾಹ್ಮಣಳಾದ ತಾಯಿಯಲ್ಲಿ ಶೂದ್ರನಾದ ಒಬ್ಬ ಕ್ಷೌರಿಕನಿಂದ ಜನಿಸಿದ್ದೀಯೆ. ಅದರಿಂದ ನಿನ್ನ ಬ್ರಾಹ್ಮಣ್ಯವು ನಷ್ಟವಾಗಿ ಚಂಡಾಲನಾಗಿದ್ದೀಯೆ.
ಏವಮುಕ್ತೋ ಮತಂಗಸ್ತು ಪ್ರತ್ಯುಪಾಯಾದ್ ಗೃಹಂ ಪ್ರತಿ |
ತಮಾಗತಮಭಿಪ್ರೇಕ್ಷ್ಯ ಪಿತಾ ವಾಕ್ಯಮಥಾಬ್ರವೀತ್ ॥17॥
ಈ ಮಾತುಗಳನ್ನು ಕೇಳಿದ ಮತಂಗನು ತನ್ನ ಮನೆಗೆ ಹಿಂದಿರುಗಿದನು. ಹಿಂದಿರುಗಿದ ಅವನನ್ನು ನೋಡಿ ತಂದೆಯು ಮಾತನಾಡಿದನು.
ಮಯಾ ತ್ವಂ ಯಜ್ಞಸಂಸಿದ್ಧೌ ನಿಯುಕ್ತೋ ಗುರುಕರ್ಮಣಿ |
ಕಸ್ಮಾತ್ ಪ್ರತಿನಿವೃತ್ತೋಽಸಿ ಕಚ್ಚಿನ್ನ ಕುಶಲಂ ತವ ॥18॥
ನಾನು ನಿನಗೆ ಯಜ್ಞವನ್ನು ಮಾಡಿಸುವ ದೊಡ್ಡ ಭಾರವನ್ನು ಒಪ್ಪಿಸಿದ್ದೆ. ಏತಕ್ಕೆ ಹಿಂದಿರುಗಿದೆ? ನಿನಗೆ ಎಲ್ಲವೂ ಕ್ಷೇಮವಷ್ಟೆ?
ಮತಂಗಃ
ಅಯೋನಿರಭಿಯೋನಿರ್ವಾ ಯಃ ಸ್ಯಾತ್ಸ ಕುಶಲೀ ಭವೇತ್ |
ಕುಶಲಂ ತು ಕುತಸ್ತಸ್ಯ ಯಸ್ಯೇಯಂ ಜನನೀ ಪಿತಃ ॥19॥

ಮತಂಗ ಅಯೋನಿಜರಾದವರು ಅಥವಾ ಪ್ರಶಸ್ತ ಯೋನಿಯಲ್ಲಿ ಜನಿಸಿದವನು ಕ್ಷೇಮದಿಂದಿರಬಹುದು. ಆದರೆ ಎಲೈ ತಂದೆಯೇ, ಇಂತಹ ತಾಯಿಯನ್ನು ಹೊಂದಿದವನು ಹೇಗೆ ಕ್ಷೇಮದಿಂದ ಇರಲು ಸಾಧ್ಯ?
ಬ್ರಾಹ್ಮಣ್ಯಾಂ ವೃಷಲಾಜ್ಜಾತಂ ಪಿತರ್ವೇದಯತೀಹ ಮಾಮ್ |
ಅಮಾನುಷೀ ಗರ್ದಭೀಯಂ ತಸ್ಮಾತ್ ತಪ್ಸ್ಯೇ ತಪೋ ಮಹತ್ ॥20॥
ತಂದೆಯೇ, ನಾನು ಬ್ರಾಹ್ಮಣಿಯಲ್ಲಿ ಶೂದ್ರನಿಂದ ಜನಿಸಿದವನೆಂದು ಈ ಅಮಾನುಷವಾದ ಕತ್ತೆಯು ಹೇಳುತ್ತಿದೆ. ಆದ್ದರಿಂದ ದೊಡ್ಡ ತಪಸ್ಸನ್ನು ಮಾಡುವೆನು.
ಏವಮುಕ್ತ್ವಾ ಸ ಪಿತರಂ ಪುತಸ್ತ್ವೇ ಕೃತನಿಶ್ಚಯಃ |
ತತೋ ಗತ್ವಾ ಮಹಾರಣ್ಯಮತಪ್ಯತ ಮಹತ್ತಪಃ ॥21॥
ತಂದೆಗೆ ಹೀಗೆ ಹೇಳಿ ತಪಸ್ಸನ್ನು ಮಾಡುವುದಾಗಿ ನಿಶ್ಚಯಿಸಿ ಹೊರಟು ಮಹಾರಣ್ಯವನ್ನು ಸೇರಿ ಅವನು ದೊಡ್ಡ ತಪಸ್ಸನ್ನು ಮಾಡಿದನು.
ತತಃ ಸಂತಾಪಯಾಮಾಸ ವಿಬುಧಾಂಸ್ತಪಸಾಽನ್ವಿತಃ |
ಮತಂಗಃ ಸುಸುಖಂ ಪ್ರೇಪ್ಸುಃ ಸ್ಥಾನಂ ಸುಚರಿತಾದಪಿ ॥22॥
ಮತಂಗನು ತನ್ನ ಶ್ರೇಷ್ಠವಾದ ತಪಸ್ಸಿನಿಂದ ಸುಖಪ್ರದವಾದ ಬ್ರಾಹ್ಮಣ್ಯರೂಪವಾದ ಸ್ಥಾನವನ್ನು ಪಡೆಯಲು ಬಯಸಿ, ತಪಸ್ಸಿನಿಂದ ಪೂರ್ಣನಾಗಿ ದೇವತೆಗಳಿಗೆ ಸಂತಾಪವನ್ನು ಉಂಟುಮಾಡಿದನು.
ತಂ ತಥಾ ತಪಸಾ ಯುಕ್ತಮುವಾಚ ಹರಿವಾಹನಃ |
ಮತಂಗ ತಪ್ಯಸೇ ಕಿಂ ತ್ವಂ ಭೋಗಾನುತ್ಸೃಜ್ಯ ಮಾನುಷಾನ್ ॥23॥
ವರಂ ದದಾನಿ ತೇ ಹಂತ ವೃಣೀಷ್ವ ತ್ವಂ ಯದಿಚ್ಛಸಿ |
ಯಚ್ಚಾಪ್ಯವಾಪ್ಯಮನ್ಯತ್ ತೇ ಸರ್ವಂ ಪ್ರಬ್ರೂಹಿ ಮಾಚಿರಮ್ ॥24॥
ಇಂದ್ರನು ಆ ರೀತಿಯಲ್ಲಿ ತಪಸ್ಸನ್ನು ಮಾಡುತ್ತಿದ್ದ ಅವನ ಬಳಿಗೆ ಬಂದು ಮತಂಗನೇ, ಮಾನುಷ ಭೋಗಗಳನ್ನು ತ್ಯಜಿಸಿ ಏಕೆ ತಪಸ್ಸನ್ನು ಮಾಡುತ್ತಿದ್ದೀಯೆ? ಸಂತೋಷ. ನಿನಗೆ ವರಗಳನ್ನು ಕೊಡುವೆನು. ಇಷ್ಟವಾದ ವರಗಳನ್ನು ಕೇಳು ಅಥವಾ ಪಡೆಯಲು ಸಾಧ್ಯವಿಲ್ಲದ ಬೇರೆ ಏನಾದರೂ ಇದ್ದರೂ ಶೀಘ್ರವಾಗಿ ಹೇಳು ಎಂದು ಹೇಳಿದನು.
ಮತಂಗಃ
ಬ್ರಾಹ್ಮಣ್ಯಂ ಕಾಮಯಾನೋಽಹಮಿದಮಾರಬ್ಧವಾಂಸ್ತಪಃ |
ಗಚ್ಛೇಯಂ ತದವಾಪ್ಯೇಹ ವರ ಏಷ ವೃತೋ ಮಯಾ ॥25॥
ಮತಂಗ ಬ್ರಾಹ್ಮಣ್ಯವನ್ನು ಪಡೆಯಲು ಬಯಸಿ ನಾನು ಈ ತಪಸ್ಸನ್ನು ಆರಂಭಿಸಿದ್ದೇನೆ. ಆ ವರವನ್ನು ಪಡೆದು ನಾನು ಇಲ್ಲಿಂದ ಹೋದೇನು. ಇದೇ ನಾನು ಬೇಡುವ ವರ.
ಏತಚ್ಛ್ರುತ್ವಾ ತು ವಚನಂ ತಮುವಾಚ ಪುರಂದರಃ |
ಬ್ರಾಹ್ಮಣ್ಯಂ ಪ್ರಾರ್ಥಯಾನಸ್ತ್ವಮಪ್ರಾಪ್ಯಮಕೃತಾತ್ಮಭಿಃ ॥26॥
ಈ ಮಾತನ್ನು ಕೇಳಿ ಇಂದ್ರನು ಅವನನ್ನು ಕುರಿತು ನೀನು ಮನೋಜಯ ರಹಿತರಾದ ಮನುಷ್ಯರಿಂದ ಹೊಂದಲು ಅಸಾಧ್ಯವಾದ ಬ್ರಾಹ್ಮಣ್ಯವನ್ನು ಬೇಡುತ್ತಿದ್ದೀಯೆ.
ಶ್ರೇಷ್ಠಂ ಯತ್ಸರ್ವಭೂತೇಷು ತಪೋ ಯನ್ನಾತಿವರ್ತತೇ |
ತದಗ್ರ್ಯಂ ಪ್ರಾರ್ಥಯಾನಸ್ತ್ವಮಚಿರಾದ್ ವಿನಶಿಷ್ಯಸಿ ॥27॥
ಸರ್ವಪ್ರಾಣಿಗಳಲ್ಲಿಯೂ ಶ್ರೇಷ್ಠವಾದ, ತಪಸ್ಸು ಸಂಪಾದಿಸಿಕೊಡಲು ಅಸಾಧ್ಯವಾದ, ಶ್ರೇಷ್ಠವಾದ ಆ ಬ್ರಾಹ್ಮಣ್ಯವನ್ನು ಬಯಸುವ ನೀನು ಶೀಘ್ರದಲ್ಲಿಯೇ ವಿನಾಶವನ್ನು ಹೊಂದುವಿ.
ದೇವತಾಸುರಮರ್ತ್ಯೇಷು ಯತ್ಪವಿತ್ರಂ ಪರಂ ಸ್ಮೃತಮ್ |
ಚಂಡಾಲಯೋನೌ ಜಾತೇನ ನ ತತ್ ಪ್ರಾಪ್ಯಂ ಕಥಂಚನ ॥28॥
ದೇವತಾಸುರಮನುಷ್ಯರಲ್ಲಿ ಯಾವುದು ಅತ್ಯಂತ ಶ್ರೇಷ್ಠವೆಂದು ಹೇಳಲ್ಪಡುತ್ತದೆಯೋ ಅಂತಹ ಬ್ರಾಹ್ಮಣ್ಯವು
ಚಂಡಾಲಯೋನಿಯಲ್ಲಿ ಜನಿಸಿದ ನಿನ್ನಿಂದ ಯಾವ ರೀತಿಯಲ್ಲೂ ಪಡೆಯಲು ಅಸಾಧ್ಯವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಇಂದ್ರ-ಮತಂಗಸಂವಾದೋ ನಾಮ ಅಷ್ಟಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಐವತ್ತೊಂಬತ್ತನೆಯ ಅಧ್ಯಾಯ
ಇಂದ್ರನಿಂದ ಬ್ರಾಹ್ಮಣ್ಯ ಪ್ರಶಂಸೆ.
ಭೀಷ್ಮಃ
ಏವಮುಕ್ತೋ ಮತಂಗಸ್ತು ಸಂಶಿತಾತ್ಮಾ ಯತವ್ರತಃ |
ಅತಿಷ್ಠದೇಕಪಾದೇನ ವರ್ಷಾಣಾಂ ಶತಮಚ್ಯುತ ॥1॥
ಭೀಷ್ಮ ಎಲೈ ಅಚ್ಯುತನೇ, ಹೀಗೆ ಹೇಳಲ್ಪಟ್ಟ ಮತಂಗನು ವ್ರತನಿಷ್ಠನಾಗಿ, ಮನೋಜಯವನ್ನು ಹೊಂದಿ ನೂರು ವರ್ಷಗಳ ಕಾಲ ಒಂದು ಪಾದದ ಮೇಲೆ ನಿಂತು ತಪಸ್ಸನ್ನು ಮಾಡಿದನು.

ತಮುವಾಚ ತತಃ ಶಕ್ರಃ ಪುನರೇವ ಮಹಾಯಶಾಃ |
ಮತಂಗ ಪರಮಂ ಸ್ಥಾನಂ ಪ್ರಾರ್ಥಯನ್ನತಿದುರ್ಲಭಮ್ ॥2॥
ಮಾ ಕೃಥಾಃ ಸಾಹಸಂ ಪುತ್ರ ನೈಷ ಧರ್ಮಪಥಸ್ತವ |
ಅಪ್ರಾಪ್ಯಂ ಪ್ರಾರ್ಥಯಾನೋ ಹಿ ನಚಿರಾದ್ ವಿನಶಿಷ್ಯಸಿ ॥3॥
ಮಹಾಕೀರ್ತಿವಂತನಾದ ಇಂದ್ರನು ಪುನಃ ಬಂದು ಅವನನ್ನು ಕುರಿತು ಮತಂಗನೇ, ಅತ್ಯಂತ ದುರ್ಲಭವಾದ ಶ್ರೇಷ್ಠವಾದ ಸ್ಥಾನವನ್ನು ಬಯಸುತ್ತಿದ್ದೀಯೆ. ಪುತ್ರನೇ, ಇಂತಹ ಸಾಹಸವನ್ನು ಮಾಡಬೇಡ. ಇದು ನಿನಗೆ ಧರ್ಮದ ಮಾರ್ಗವಲ್ಲ. ಅಸಾಧ್ಯವಾದುದನ್ನು ಬೇಡುವವನು ಶೀಘ್ರವಾಗಿ ವಿನಾಶವನ್ನು ಹೊಂದುವವನು ಎಂದು ಹೇಳಿದನು.
ಮತಂಗ ಪರಮಂ ಸ್ಥಾನಂ ವಾರ್ಯಮಾಣೋ ಮಯಾಽಸಕೃತ್ |
ಚಿಕೀರ್ಷಸ್ಯೇವ ತಪಸಾ ಸರ್ವಥಾ ನ ಭವಿಷ್ಯಸಿ ॥4॥
ಎಲೈ ಮತಂಗನೇ, ನಾನು ಅನೇಕ ಬಾರಿ ನಿಷೇಧ ಮಾಡಿದರೂ ನೀನು ಶ್ರೇಷ್ಠ ಸ್ಥಾನವನ್ನು ಪಡೆಯಲು ಬಯಸಿ ತಪಸ್ಸನ್ನೇ ಮಾಡುತ್ತಿದ್ದೀಯೆ. ಸರ್ವಥಾ ನಿನಗೆ ಅಂತಹ ಸ್ಥಾನವು ದೊರೆಯುವುದಿಲ್ಲ.
ತಿರ್ಯಗ್ಯೋನಿಗತಃ ಸರ್ವೋ ಮಾನುಷ್ಯಂ ಯದಿ ಗಚ್ಛತಿ |
ಸ ಜಾಯತೇ ಪುಲ್ಕಸೋ ವಾ ಚಂಡಾಲೋ ವಾ ಕದಾಚನ ॥5॥
ತಿರ್ಯಗ್ಯೋನಿಯಲ್ಲಿ ಇರುವವನು ಮಾನುಷತ್ವವನ್ನು ಬಯಸಿದರೆ ಅವನು ಯಾವಾಗಲೋ ಒಮ್ಮೆ ಬೇಡನೋ, ಚಂಡಾಲನೋ ಆಗಿ ಜನಿಸುತ್ತಾನೆ.
ಪುಂಶ್ಚಲಃ ಪಾಪಯೋನಿರ್ವಾ ಯಃ ಕಶ್ಚಿದಿಹ ಲಕ್ಷ್ಯತೇ |
ಸ ತಸ್ಯಾಮೇವ ಸುಚಿರಂ ಮತಂಗ ಪರಿವರ್ತತೇ ॥6॥
ಕಾರ್ಯನಿಯಮವಿಲ್ಲದವನಾಗಿ, ಪಾಪಯೋನಿಯಲ್ಲಿ ಜನಿಸಿದವನಾಗಿ ಯಾವನು ಇಲ್ಲಿ ಕಂಡುಬರುತ್ತಾನೆಯೋ ಅವನು ಎಲೈ ಮತಂಗನೇ, ಅದೇ ಯೋನಿಯಲ್ಲಿಯೇ ಬಹಳ ಕಾಲ ತಿರುಗುತ್ತಿರುತ್ತಾನೆ.
ತತೋ ದಶಗುಣೇ ಕಾಲೇ ಲಭತೇ ಶೂದ್ರತಾಮಪಿ |
ಶೂದ್ರಯೋನಾವಪಿ ತತೋ ಬಹುಶಃ ಪರಿವರ್ತತೇ ॥7॥
ಅನಂತರ ಹತ್ತುಪಟ್ಟು ಕಾಲವು ಕಳೆದ ಮೇಲೆ ಶೂದ್ರಯೋನಿಯಲ್ಲಿ ಜನಿಸಿ ಶೂದ್ರಯೋನಿಯಲ್ಲಿಯೂ ಸಹ ಹಾಗೆಯೇ ಬಹಳ ಕಾಲ ತಿರುಗುತ್ತಿರುತ್ತಾನೆ.
ತತಸ್ತ್ರಿಂಶದ್ಗುಣೇ ಕಾಲೇ ಲಭತೇ ವೈಶ್ಯತಾಮಪಿ |
ವೈಶ್ಯತಾಯಾಂ ಚಿರಂ ಕಾಲಂ ತತ್ರೈವ ಪರಿವರ್ತತೇ ॥8॥
ಅನಂತರ ಮೂವತ್ತು ಪಟ್ಟು ಕಾಲವು ಕಳೆದ ಮೇಲೆ ವೈಶ್ಯಯೋನಿಯಲ್ಲಿ ಜನಿಸಿ, ವೈಶ್ಯಯೋನಿಯಲ್ಲಿಯೂ ಸಹ ಬಹಳ ಕಾಲದವರೆಗೆ ಅಲ್ಲಿಯೇ ತಿರುಗುತ್ತಿರುತ್ತಾನೆ.
ತತಃ ಷಷ್ಟಿಗುಣೇ ಕಾಲೇ ರಾಜನ್ಯೋ ನಾಮ ಜಾಯತೇ |
ರಾಜನ್ಯತ್ವೇ ಚಿರಂ ಕಾಲಂ ತತ್ರೈವ ಪರಿವರ್ತತೇ ॥9॥
ಅನಂತರ ಅರವತ್ತು ಪಟ್ಟು ಕಾಲವು ಕಳೆದ ಮೇಲೆ ಕ್ಷತ್ರಿಯನಾಗಿ ಜನಿಸಿ ಬಹುಕಾಲ ಕ್ಷತ್ರಿಯ ಯೋನಿಯಲ್ಲಿಯೇ ತಿರುಗುತ್ತಿರುತ್ತಾನೆ.
ತತಃ ಷಷ್ಟಿಗುಣೇ ಕಾಲೇ ಲಭತೇ ಬ್ರಹ್ಮಬಂಧುತಾಮ್ |
ಬ್ರಹ್ಮಬಂಧುಶ್ಚಿರಂ ಕಾಲಂ ತತ್ರೈವ ಪರಿವರ್ತತೇ ॥10॥
ಪುನಃ ಅರವತ್ತು ಪಟ್ಟು ಕಾಲವು ಕಳೆದ ಮೇಲೆ ಬ್ರಹ್ಮಬಂಧುವಾಗಿ ಜನಿಸಿ ಬಹುಕಾಲ ಬ್ರಹ್ಮಬಂಧುವಾಗಿಯೇ ತಿರುಗುತ್ತಿರುತ್ತಾನೆ.
ತತಸ್ತು ದ್ವಿಶತೇ ಕಾಲೇ ಲಭತೇ ಕಾಂಡಪೃಷ್ಠತಾಮ್ |
ಕಾಂಡಪೃಷ್ಠಶ್ಚಿರಂ ಕಾಲಂ ತತ್ರೈವ ಪರಿವರ್ತತೇ ॥11॥
ಅನಂತರ ಹಿಂದಿನ ಇನ್ನೂರು ಪಟ್ಟು ಕಾಲವು ಕಳೆದ ಮೇಲೆ ಶಸ್ತ್ರಧಾರಿಯಾದ ಬ್ರಾಹ್ಮಣನಾಗಿ ಅಲ್ಲಿಯೇ ಬಹುಕಾಲ ತಿರುಗುತ್ತಿರುತ್ತಾನೆ.
ತತಸ್ತು ತ್ರಿಶತೇ ಕಾಲೇ ಲಭತೇ ದ್ವಿಜತಾಮಪಿ |
ತಾಂ ಚ ಪ್ರಾಪ್ಯ ಚಿರಂ ಕಾಲಂ ತತ್ರೈವ ಪರಿವರ್ತತೇ ॥12॥
ಹಿಂದಿನ ಮೂರು ನೂರು ಪಟ್ಟು ಕಾಲವು ಕಳೆದ ಮೇಲೆ ದ್ವಿಜನಾಗಿ ಜನಿಸಿ ಅಲ್ಲಿಯೇ ಬಹುಕಾಲ ತಿರುಗುತ್ತಿರುತ್ತಾನೆ.
ತತಶ್ಚತುಃಶತೇ ಕಾಲೇ ಶ್ರೋತ್ರಿಯೋ ನಾಮ ಜಾಯತೇ |
ಶ್ರೋತ್ರಿಯತ್ವೇ ಚಿರಂ ಕಾಲಂ ತತ್ರೈವ ಪರಿವರ್ತತೇ ॥13॥
ಅನಂತರ ಹಿಂದಿನ ನಾಲ್ಕುನೂರು ಪಟ್ಟು ಕಾಲವು ಕಳೆದ ಮೇಲೆ ಶ್ರೋತ್ರಿಯನಾಗಿ ಜನಿಸಿ ಬಹುಕಾಲ ಅಲ್ಲಿಯೇ ತಿರುಗುತ್ತಿರುತ್ತಾನೆ.
ತದೈವ ಕ್ರೋಧಹರ್ಷೌ ಚ ಕಾಮದ್ವೇಷೌ ಚ ಪುತ್ರಕ |
ಅತಿಮಾನಾತಿವಾದೌ ತಮಾವಿಶಂತಿ ದ್ವಿಜಾಧಮಮ್ ॥14॥
ಎಲೈ ಪುತ್ರನೇ, ಆಗಲೇ ಅವನಿಗೆ ಕ್ರೋಧ-ಹರ್ಷಗಳು, ಕಾಮ-ದ್ವೇಷಗಳು, ಅಹಂಕಾರ ಮತ್ತು ಅತಿವಾದಗಳು ದ್ವಿಜಾಧಮನಾದರೆ ಅವನನ್ನು ಆವರಿಸುತ್ತವೆ.
ತಾಂಶ್ಚೇಜ್ಜಯತಿ ಶತ್ರೂನ್ ಸ ತದಾ ಪ್ರಾಪ್ನೋತಿ ಸದ್ಗತಿಮ್ |
ಅಥ ತೇ ವೈ ಜಯಂತ್ಯೇನಂ ತಾಳಾಗ್ರಾದಿವ ಪಾತ್ಯತೇ ॥15॥
ಆ ಶತ್ರುಗಳನ್ನು ಅವನು ಜನಿಸಿದರೆ ಸದ್ಗತಿಯನ್ನು ಹೊಂದುತ್ತಾನೆ. ಆ ದೋಷಗಳೇ ಅವನನ್ನು ಜಯಿಸಿದರೆ ತಾಳೆಯ ಮರದ

ತುದಿಯಿಂದ ಬಿದ್ದಂತೆ ಅಧಃಪತನವನ್ನು ಹೊಂದುತ್ತಾನೆ.
ಮತಂಗ ಸಂಪ್ರಧಾರ್ಯೈತದ್ ಯದಹಂ ತ್ವಾಮಚೂಚುದಮ್ |
ವೃಣೀಷ್ವ ಕಾಮಮನ್ಯಂ ತ್ವಂ ಬ್ರಾಹ್ಮಣ್ಯಂ ಹಿ ಸುದುಲರ್ಭಮ್ ॥16॥
ಎಲೈ ಮತಂಗನೇ, ಈ ವಿಷಯವನ್ನು ಚೆನ್ನಾಗಿ ನಿರ್ಧರಿಸಿ ನಾನು ನಿನ್ನನ್ನು ಪ್ರೇರಿಸುತ್ತಿರುವಂತೆ ಬೇರೆ ವರವನ್ನು ಕೇಳು. ಬ್ರಾಹ್ಮಣ್ಯವು ಅತ್ಯಂತ ದುರ್ಲಭವಾದುದು (ಎಂದು ಹೇಳಿದನು).
॥ ॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಇಂದ್ರ-ಮತಂಗಸಂವಾದೇ ಬ್ರಾಹ್ಮಣ್ಯಪ್ರಶಂಸಾ ನಾಮ ಏಕೋನಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತನೆಯ ಅಧ್ಯಾಯ
ಮತಂಗೋಪಾಖ್ಯಾನದ ಉಪಸಂಹಾರ.
ಭೀಷ್ಮಃ
ಏವಮುಕ್ತೋ ಮತಂಗಸ್ತು ಸಂಶಿತಾತ್ಮಾ ಯತವ್ರತಃ |
ಸಹಸ್ರಮೇಕಪಾದೇನ ತತೋಽಬ್ದಾನಾಮತಿಷ್ಠತ ॥1॥
ಭೀಷ್ಮ ಹೀಗೆ ಹೇಳಲ್ಪಟ್ಟ ಮತಂಗನಾದರೂ ದೃಢವ್ರತನಾಗಿ ತೀವ್ರವಾದ ಮನಸ್ಸನ್ನು ಹೊಂದಿ ಒಂದು ಸಹಸ್ರವರ್ಷಗಳ ಕಾಲ ಒಂದು ಪಾದದ ಮೇಲೆ ನಿಂತು ತಪಸ್ಸನ್ನು ಮಾಡಿದನು.
ತಂ ಸಹಸ್ರಾವರೇ ಕಾಲೇ ಶಕ್ರೋ ದ್ರಷ್ಟುಮುಪಾಗಮತ್ |
ತದೇವ ಚ ಪುನರ್ವಾಕ್ಯಮುವಾಚ ಬಲವೃತ್ರಹಾ ॥2॥
ಸಹಸ್ರವರ್ಷಗಳು ಕಳೆಯುವುದಕ್ಕಿಂತ ಸ್ವಲ್ಪ ಮುಂಚೆ ಬಲಾರಿಯೂ, ವೃತ್ರಹನೂ ಆದ ಇಂದ್ರನು ಅವನನ್ನು ನೋಡಲು ಬಂದು ಪುನಃ ಹಿಂದೆ ಆಡಿದ ಮಾತುಗಳನ್ನೇ ಆಡಿದನು.
ಮತಂಗಃ
ಇದಂ ವರ್ಷಸಹಸ್ರಂ ವೈ ಬ್ರಹ್ಮಚಾರೀ ಸಮಾಹಿತಃ |
ಅತಿಷ್ಠಮೇಕಪಾದೇನ ಬ್ರಾಹ್ಮಣ್ಯಂ ನಾಪ್ನುಯಾಂ ಕಥಮ್ ॥3॥
ಮತಂಗ ಈ ಒಂದು ಸಹಸ್ರವರ್ಷ ಕಾಲ ಬ್ರಹ್ಮಚಾರಿಯಾಗಿ ಸಮಾಧಿಯನ್ನು ಮಾಡಿ ಒಂದು ಪಾದದ ಮೇಲೆ ನಿಂತಿದ್ದೇನೆ. ನನಗೆ ಹೇಗೆ ಬ್ರಾಹ್ಮಣ್ಯವು ದೊರೆಯುವುದಿಲ್ಲ?
ಶಕ್ರಃ
ಚಂಡಾಲಯೋನೌ ಜಾತೇನ ನಾವಾಪ್ಯಂ ವೈ ಕಥಂಚನ |
ಅನ್ಯಂ ಕಾಮಂ ವೃಣೀಷ್ವ ತ್ವಂ ಮಾ ವೃಥಾ ತೇಽಸ್ತ್ವಯಂ ಶ್ರಮಃ ॥4॥
ಇಂದ್ರ ಚಂಡಾಲಯೋನಿಯಲ್ಲಿ ಜನಿಸಿದವನಿಗೆ ಬ್ರಾಹ್ಮಣ್ಯವು ಎಂದೂ ದೊರೆಯುವುದಿಲ್ಲ. ನೀನು ಬೇರೆ ವರವನ್ನು ಕೇಳು. ವ್ಯರ್ಥವಾಗಿ ಶ್ರಮವನ್ನು ಪಡಬೇಡ.
ಭೀಷ್ಮಃ
ಏವಮುಕ್ತೋ ಮತಂಗಸ್ತು ಭೃಶಂ ಶೋಕಪರಾಯಣಃ |
ಅತಿಷ್ಠತ ಗಯಾಂ ಗತ್ವಾ ಸೋಽಂಗುಷ್ಠೇನ ಶತಂ ಸಮಾಃ ॥5॥
ಭೀಷ್ಮ ಹೀಗೆ ಹೇಳಲ್ಪಟ್ಟ ಮತಂಗನು ತೀವ್ರಶೋಕಪರಾಯಣನಾಗಿ ಗಯಾ ಕ್ಷೇತ್ರಕ್ಕೆ ಹೋಗಿ ಪಾದಾಂಗುಷ್ಠದ ಮೇಲೆ ನೂರು ವರ್ಷಗಳ ಕಾಲ ನಿಂತನು.
ಸುದುಷ್ಕರಂ ವಹನ್ ಯೋಗಂ ಕೃಶೋ ಧಮನಿಸಂತತಃ |
ತ್ವಗಸ್ಥಿಭೂತೋ ಧರ್ಮಾತ್ಮಾ ಸ ಪಪಾತೇತಿ ನಃ ಶ್ರುತಮ್ ॥6॥
ಸುದುಷ್ಕರವಾದ ತಪಸ್ಸನ್ನು ಮಾಡುತ್ತಾ ಕೃಶನಾಗಿ ಧಮನಿಸಂತತನಾಗಿ ಅಸ್ಥಿ ಚರ್ಮಗಳು ಮಾತ್ರ ಉಳಿದ ಧರ್ಮಾತ್ಮನಾದ ಅವನು ಕುಸಿದು ಬಿದ್ದನೆಂದು ನಾವು ಕೇಳಿದ್ದೇವೆ.
ತಂ ಪತಂತಮಭಿದ್ರುತ್ಯ ಪರಿಜಗ್ರಾಹ ವಾಸವಃ |
ವರಾಣಾಮೀಶ್ವರೋ ದಾತಾ ಸರ್ವಭೂತಹಿತೇ ರತಃ ॥7॥
ವರಗಳನ್ನು ಕೊಡುವುದರಲ್ಲಿ ಪ್ರಭುವಾದ, ಸರ್ವಭೂತಹಿತದಲ್ಲಿ ರತನಾದ ಇಂದ್ರನು ಬೀಳುತ್ತಿದ್ದ ಅವನ ಬಳಿಗೆ ಓಡಿ ಬಂದು ಹಿಡಿದುಕೊಂಡನು.
ಶಕ್ರಃ
ಮತಂಗ ಬ್ರಾಹ್ಮಣತ್ವಂ ತೇ ಸಂವೃತಂ ಪರಿಪಂಥಿಭಿಃ |
ಪೂಜಯನ್ ಸುಖಮಾಪ್ನೋತಿ ದುಃಖಮಾಪ್ನೋತ್ಯಪೂಜಯನ್ ॥8॥
ಇಂದ್ರ ಮತಂಗನೇ, ನಿನಗೆ ಬ್ರಾಹ್ಮಣ್ಯವು ಶತ್ರುಗಳಿಂದ ತಡೆಹಿಡಿಯಲ್ಪಟ್ಟಿದೆ. ಈ ಅಭಿಪ್ರಾಯವನ್ನು ಪೂಜಿಸುವವನು ಸುಖವನ್ನು ಪಡುತ್ತಾನೆ, ಇಲ್ಲದಿದ್ದರೆ ದುಃಖವನ್ನು ಪಡೆಯುತ್ತಾನೆ.
ಬ್ರಾಹ್ಮಣೇ ಸರ್ವಭೂತಾನಾಂ ಯೋಗಕ್ಷೇಮಃ ಸಮಾಹಿತಃ |

ಬ್ರಾಹ್ಮಣೇಭ್ಯೋಽನುತೃಪ್ಯಂತಿ ಪಿತರೋ ದೇವತಾಸ್ತಥಾ ॥9॥
ಎಲ್ಲ ಪ್ರಾಣಿಗಳ ಯೋಗಕ್ಷೇಮವು ಬ್ರಾಹ್ಮಣನಲ್ಲಿ ನೆಲೆಗೊಂಡಿದೆ. ಪಿತೃಗಳು ಮತ್ತು ದೇವತೆಗಳು ಬ್ರಾಹ್ಮಣರಿಂದ ತೃಪ್ತಿಯನ್ನು ಪಡುತ್ತಾರೆ.
ಬ್ರಾಹ್ಮಣಃ ಸರ್ವಭೂತಾನಾಂ ಮತಂಗ ಪರ ಉಚ್ಯತೇ |
ಬ್ರಾಹ್ಮಣಃ ಕುರುತೇ ತದ್ಧಿ ಯಥಾ ಯದ್ಯಚ್ಚ ವಾಂಛತಿ ॥10॥
ಎಲೈ ಮತಂಗನೇ, ಬ್ರಾಹ್ಮಣನು ಸರ್ವಭೂತಗಳಲ್ಲಿ ಶ್ರೇಷ್ಠನಾದವನೆಂದು ಹೇಳಲ್ಪಡುತ್ತದೆ. ಬ್ರಾಹ್ಮಣನು ಏನನ್ನು ಬಯಸುತ್ತಾನೆಯೋ ಅದೆಲ್ಲವನ್ನೂ ಸಂಪಾದಿಸುತ್ತಾನೆ.
ಬಹ್ವೀಸ್ತು ಸಂಸರನ್ ಯೋನೀರ್ಜಾಯಮಾನಃ ಪುನಃ ಪುನಃ |
ಪರ್ಯಾಯೇ ತಾತ ಕಸ್ಮಿಂಶ್ಚಿದ್ ಬ್ರಾಹ್ಮಣ್ಯಮಿಹ ವಿಂದತಿ ॥11॥
ಅನೇಕ ಯೋನಿಗಳಲ್ಲಿ ಸಂಚರಿಸುತ್ತಾ, ಪುನಃ ಪುನಃ ಹುಟ್ಟುತ್ತಾ ಎಲೈ ಪ್ರೀತಿಪಾತ್ರನೇ, ಯಾವುದೋ ಒಂದು ಪರ್ಯಾಯದಲ್ಲಿ ಇಲ್ಲಿ ಬ್ರಾಹ್ಮಣನಾಗಿ ಜನಿಸುತ್ತಾನೆ.
ಮತಂಗಃ
ಕಿಂ ಮಾಂ ತುದಸಿ ದುಃಖಾರ್ತಂ ಮೃತಂ ಮಾರಯಸೇ ಚ ಮಾಮ್ |
ಕಿಂತು ಶೋಚಾಮಿ ಯಲ್ಲಬ್ಧ್ವಂ ಬ್ರಾಹ್ಮಣ್ಯಂ ನ ಬುಭೂಷಸೇ ॥12॥
ಮತಂಗ ಮೊದಲೇ ದುಃಖದಿಂದ ಕೂಡಿರುವ ನನ್ನನ್ನು ಏಕೆ ಮಾತುಗಳಿಂದ ಚುಚ್ಚುತ್ತಿದ್ದೀಯೆ? ಮೊದಲೇ ಮೃತನಾದ ನನ್ನನ್ನು ನೀನು ಪುನಃ ಕೊಲ್ಲುತ್ತಿದ್ದೀಯೆ. ಆದರೆ ನಾನು ಬಯಸುವ ಬ್ರಾಹ್ಮಣ್ಯವನ್ನು ನೀನು ಕೊಡಲು ಇಚ್ಛಿಸುವುದಿಲ್ಲವೆಂದು ನಾನು ಶೋಕಪಡುತ್ತಿದ್ದೇನೆ (ಲಕ್ಷ್ಯಾಲಂಕಾರ).
ಬ್ರಾಹ್ಮಣ್ಯಂ ಯದಿ ದುಷ್ಪ್ರಾಪಂ ತ್ರಿಭಿರ್ವರ್ಣೈಃ ಶತಕ್ರತೋ |
ಸುದುರ್ಲಭಂ ತದಾವಾಪ್ಯ ನಾನುತಿಷ್ಠಂತಿ ಮಾನವಾಃ ॥13॥
ಎಲೈ ಇಂದ್ರನೇ, ಮೂರು ವರ್ಣದವರಿಂದ ಬ್ರಾಹ್ಮಣ್ಯವು ಪಡೆಯಲು ಅಸಾಧ್ಯವಾದರೆ ಅತ್ಯಂತ ದುರ್ಲಭವಾದ ಅದನ್ನು ಪಡೆದು ಯಾವ ಮನುಷ್ಯರೂ ಅನುಷ್ಠಾನವನ್ನೇ ಮಾಡಲಾರರು.
ಯಃ ಪಾಪೇಭ್ಯಃ ಪಾಪತಮಸ್ತೇಷಾಮಧಮ ಏವ ಸಃ |
ಬ್ರಾಹ್ಮಣ್ಯಂ ಯೋಽವಜಾನೀತೇ ಧನಂ ಲಬ್ಧ್ವೇವ ದುರ್ಲಭಮ್ ॥14॥
ದುಷ್ಪ್ರಾಪಂ ಖಲು ವಿಪ್ರತ್ವಂ ಪ್ರಾಪ್ತಂ ದುರನುಪಾಲನಮ್ |
ದುರವಾಪಮವಾಪ್ಯೈತನ್ನಾನುತಿಷ್ಠಂತಿ ಮಾನವಾಃ ॥15॥
ಯಾವನು ಬ್ರಾಹ್ಮಣ್ಯವನ್ನು ಅವಮಾನ ಮಾಡುತ್ತಾನೆಯೋ ಅವನು ಪಾಪಿಷ್ಠರಲ್ಲಿ ಪಾಪಿಷ್ಠನು ಮತ್ತು ಅಧಮನಾದವನು. ದುರ್ಲಭವಾದ ಧನವನ್ನು ಸಂಪಾದಿಸಿ ಅದನ್ನು ರಕ್ಷಿಸದಿದ್ದವನಂತೆ ದುರ್ಲಭವಾದ ಬ್ರಾಹ್ಮಣ್ಯವನ್ನು ಪಡೆದ ಮಾನವನು ಅದನ್ನು ರಕ್ಷಿಸದಿದ್ದರೆ ಮಾನವರು ಅಂತಹ ಬ್ರಾಹ್ಮಣ್ಯವನ್ನು ಪಡೆದು ಅನುಷ್ಠಾನ ಮಾಡಲಾರರು.
ಏಕಾರಾಮೋ ಹ್ಯಹಂ ಶಕ್ರ ನಿರ್ದ್ವಂದ್ವೋ ನಿಷ್ಪರಿಗ್ರಹಃ |
ಅಹಿಂಸಾದಮದಾನಸ್ಥಃ ಕಥಂ ನಾರ್ಹಾಮಿ ವಿಪ್ರತಾಮ್ ॥16॥
ಎಲೈ ಶಕ್ರನೇ, ನನಗೆ ಒಂದೇ ಮನೆ ಇದೆ. ದ್ವಂದ್ವಾತೀತನಾಗಿದ್ದೇನೆ. ಯಾವ ದಾನವನ್ನೂ ಸ್ವೀಕರಿಸುವುದಿಲ್ಲ. ಅಹಿಂಸಾ, ಇಂದ್ರಿಯನಿಗ್ರಹ ಮತ್ತು ದಾನಗಳಲ್ಲಿ ನಿರತನಾಗಿದ್ದೇನೆ. ಅಂತಹ ನಾನು ಬ್ರಾಹ್ಮಣ್ಯಕ್ಕೆ ಹೇಗೆ ಅರ್ಹನಾಗುವುದಿಲ್ಲ?
ಯಥಾಕಾಮವಿಹಾರೀ ಸ್ಯಾಂ ಕಾಮರೂಪೀ ವಿಹಂಗಮಃ |
ಬ್ರಹ್ಮಕ್ಷತ್ರಾವಿರೋಧೇನ ಪೂಜಾಂ ಚ ಪ್ರಾಪ್ನುಯಾಮಹಮ್ |
ಯಥಾ ಮಮಾಕ್ಷಯಾ ಕೀರ್ತಿರ್ಭವೇಚ್ಚಾಪಿ ಪುರಂದರ ॥17॥
ನಾನು ಮನಸ್ಸಿಗೆ ಬಂದಂತೆ ವಿಹರಿಸುವ ಕಾಮರೂಪಿಯಾದ ಪಕ್ಷಿಯಾಗಬೇಕು. ಬ್ರಾಹ್ಮಣ-ಕ್ಷತ್ರಿಯರಿಗೆ ವಿರೋಧವಿಲ್ಲದಂತೆ ಸತ್ಕಾರವನ್ನು ಪಡೆಯಬೇಕು. ನನ್ನ ಕೀರ್ತಿಯು ಅಕ್ಷಯವಾಗಬೇಕು. ಎಲೈ ಪುರಂದರನೇ, ಆ ರೀತಿಯಲ್ಲಿ ಮಾಡು.
ಇಂದ್ರಃ
ಛಂದೋದೇವ ಇತಿ ಖ್ಯಾತಃ ಸ್ತ್ರೀಣಾಂ ಪೂಜ್ಯೋ ಭವಿಷ್ಯಸಿ |
ಇಂದ್ರ ಛಂದೋದೇವ ಎಂದು ಪ್ರಖ್ಯಾತನಾಗಿ ನೀನು ಸ್ತ್ರೀಯರಿಂದ ಪೂಜ್ಯನಾಗು.
ಭೀಷ್ಮಃ
ಏವಂ ತಸ್ಮೈ ವರಂ ದತ್ತ್ವಾ ವಾಸವೋಽಂತರಧೀಯತ |
ಪ್ರಾಣಾಂಸ್ತ್ಯಕ್ತ್ವಾ ಮತಂಗೋಽಪಿ ಪ್ರಾಪ ತತ್ಸ್ಥಾನಮುತ್ತಮಮ್ ॥18॥
ಭೀಷ್ಮ ಹೀಗೆ ಮತಂಗನಿಗೆ ವರವನ್ನು ಕೊಟ್ಟು ಇಂದ್ರನು ಅಂತರ್ಧಾನವನ್ನು ಹೊಂದಿದನು. ಮತಂಗನೂ ಸಹ ಪ್ರಾಣಗಳನ್ನು ತ್ಯಜಿಸಿ ಅಂತಹ ಶ್ರೇಷ್ಠವಾದ ಸ್ಥಾನವನ್ನು ಪಡೆದನು.
ಏವಮೇತತ್ಪರಂ ಸ್ಥಾನಂ ಬ್ರಾಹ್ಮಣ್ಯಂ ನಾಮ ಭಾರತ |
ತಚ್ಚ ದುಷ್ಪ್ರಾಪಮಿಹ ವೈ ಮಹೇಂದ್ರವಚನಂ ಯಥಾ ॥19॥
ಎಲೈ ಭಾರತನೇ, ಈ ರೀತಿಯಲ್ಲಿ ಬ್ರಾಹ್ಮಣ್ಯವು ಶ್ರೇಷ್ಠವಾದ ಸ್ಥಾನ. ಇಂದ್ರನ ವಚನದಂತೆ ಅದು ದುಷ್ಪ್ರಾಪ್ಯವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ

ಶಕ್ರ-ಮತಂಗಸಂವಾದೋ ನಾಮ ಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂದನೆಯ ಅಧ್ಯಾಯ
ಪೂಜ್ಯಪುರುಷರ ಲಕ್ಷಣಕಥನ.
ಯುಧಿಷ್ಠಿರಃ
ಕೇ ಪೂಜ್ಯಾಃ ಕೇ ನಮಸ್ಕಾರ್ಯಾ ಮಾನವೈರ್ಭರತರ್ಷಭ |
ವಿಸ್ತರೇಣ ತದಾಚಕ್ಷ್ವ ನ ಹಿ ತೃಪ್ಯಾಮಿ ಕಥ್ಯತಾಮ್ ||1||
ಯುಧಿಷ್ಠಿರ ಎಲ್ಲೈ ಭರತರ್ಷಭನೇ, ಮಾನವರಿಂದ ಪೂಜೆಗೆ ಮತ್ತು ನಮಸ್ಕಾರಕ್ಕೆ ಅರ್ಹರಾದವರು ಯಾರು? ಇದನ್ನು ವಿಸ್ತಾರವಾಗಿ ನನಗೆ ಹೇಳು. ನಿನ್ನ ಮಾತುಗಳನ್ನು ಕೇಳುತ್ತಾ ನನಗೆ ತೃಪ್ತಿಯೇ ಆಗುತ್ತಿಲ್ಲ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಾರದಸ್ಯ ಚ ಸಂವಾದಂ ವಾಸುದೇವಸ್ಯ ಚೋಭಯೋಃ ||2||
ಭೀಷ್ಮ ಈ ವಿಷಯದಲ್ಲೂ ಸಹ ನಾರದ ಮತ್ತು ಕೃಷ್ಣರಿಗೆ ನಡೆದ ಸಂವಾದ ರೂಪವಾದ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ನಾರದಂ ಪ್ರಾಂಜಲಿಂ ದೃಷ್ಟ್ವಾ ಪೂಜಯಾನಂ ದ್ವಿಜರ್ಷಭಾನ್ |
ಕೇಶವಃ ಪರಿಪಪ್ರಚ್ಛ ಭಗವನ್ ಕಾನ್ ನಮಸ್ಯಸಿ ||3||
ನಾರದರು ಕೈಗಳನ್ನು ಮುಗಿದು ದ್ವಿಜಶ್ರೇಷ್ಠರನ್ನು ಪೂಜಿಸುವುದನ್ನು ನೋಡಿದ ಕೇಶವನು ಪೂಜ್ಯರೇ, ಯಾರನ್ನು ನಮಸ್ಕರಿಸುತ್ತೀರಿ ಎಂದು ಪ್ರಶ್ನೆ ಮಾಡಿದನು.
ಬಹುಮಾನಃ ಪರಃ ಕೇಷು ಭವತೋ ಯಾನ್ ನಮಸ್ಯಸಿ |
ಶಕ್ಯಂ ಚೇಚ್ಛ್ರೋತುಮಿಚ್ಛಾಮಿ ಬ್ರೂಹ್ಯೇತದ್ ಧರ್ಮವಿತ್ತಮ ||4||
ಎಲ್ಲೈ ಧರ್ಮಜ್ಞರಲ್ಲಿ ಶ್ರೇಷ್ಠರಾದವರೇ, ನಿಮಗೆ ಯಾರಲ್ಲಿ ಶ್ರೇಷ್ಠವಾದ ಬಹುಮಾನ (ಗೌರವ)ವಿದೆ? ಯಾರನ್ನು ನಮಸ್ಕರಿಸುವಿರಿ? ನಾನು ತಿಳಿಯಲು ಸಾಧ್ಯವಾದರೆ ನನಗೆ ಅದನ್ನು ಹೇಳಿ.
ನಾರದಃ
ಶೃಣು ಗೋವಿಂದ ಯಾನೇತಾನ್ ಪೂಜಯಾಮ್ಯರಿಮರ್ದನ |
ತ್ವತ್ತೋಽನ್ಯಃ ಕಃ ಪುಮಾನ್ಲೋಕೇ ಶ್ರೋತುಮೇತದಿಹಾರ್ಹತಿ ||5||
ನಾರದರು ಗೋವಿಂದನೇ, ಅರಿಮರ್ದನನೇ, ನಾನು ಯಾವ ಇವರನ್ನು ಪೂಜೆ ಮಾಡುತ್ತಾನೆಂದು ಕೇಳು. ನಿನ್ನನ್ನು ಬಿಟ್ಟು ಲೋಕದಲ್ಲಿ ಯಾವ ಪುರುಷನು ಇದನ್ನು ಕೇಳಲು ಅರ್ಹನಾಗುತ್ತಾನೆ?
ವರುಣಂ ವಾಯುಮಾದಿತ್ಯಂ ಪರ್ಜನ್ಯಂ ಜಾತವೇದಸಮ್ |
ಸ್ಥಾಣುಂ ಸ್ಕಂದಂ ತಥಾ ಲಕ್ಷ್ಮೀಂ ವಿಷ್ಣುಂ ಬ್ರಹ್ಮಾಣಮೇವ ಚ ||6||
ವಾಚಸ್ಪತಿಂ ಚಂದ್ರಮಸಮಪಃ ಪೃಥ್ವೀಂ ಸರಸ್ವತೀಮ್ |
ಸತತಂ ಯೇ ನಮಸ್ಯಂತಿ ತಾನ್ನಮಸ್ಯಾಮ್ಯಹಂ ವಿಭೋ ||7||
ವರುಣ, ವಾಯು, ಆದಿತ್ಯ, ಪರ್ಜನ್ಯ, ಅಗ್ನಿ, ಶಿವ, ಸ್ಕಂದ, ಲಕ್ಷ್ಮೀ, ವಿಷ್ಣು, ಬ್ರಹ್ಮ, ಬೃಹಸ್ಪತಿ, ಚಂದ್ರ, ಜಲ, ಪೃಥಿವೀ, ಸರಸ್ವತೀ - ಇವರನ್ನು ಸತತವಾಗಿ ಯಾರು ನಮಸ್ಕರಿಸುತ್ತಾರೆಯೋ ಎಲ್ಲೈ ವಿಭುವೇ, ಅಂತಹವರನ್ನು ನಾನು ನಮಸ್ಕರಿಸುತ್ತೇನೆ.
ತಪೋಧನಾನ್ ವೇದವಿದೋ ನಿತ್ಯಂ ವೇದಪರಾಯಣಾನ್ |
ಮಹಾರ್ಹಾನ್ ವೃಷ್ಣಿಶಾರ್ದೂಲ ಸದಾ ಸಂಪೂಜಯಾಮ್ಯಹಮ್ ||8||
ಎಲ್ಲೈ ವೃಷ್ಣಿಶಾರ್ದೂಲನೇ, ತಪೋಧನರೂ, ವೇದಜ್ಞರೂ, ವೇದಪರಾಯಣರೂ ಆಗಿ ಮಹಾಯೋಗ್ಯತೆಯನ್ನು ಹೊಂದಿದವರನ್ನು ನಾನು ಯಾವಾಗಲೂ ಪೂಜಿಸುತ್ತೇನೆ.
ಅಭುಕತ್ವ ದೇವಕಾರ್ಯಾಣಿ ಕುರ್ವತೇ ಯೇಽವಿಕತ್ಥನಾಃ |
ಸಂತುಷ್ಟಾಶ್ಚ ಕ್ಷಮಾಯುಕ್ತಾಸ್ತಾನ್ನಮಸ್ಯಾಮ್ಯಹಂ ವಿಭೋ ||9||
ಯಾರು ಏನನ್ನೂ ತಿನ್ನದೆ ದೇವಕಾರ್ಯವನ್ನು ಮಾಡುತ್ತಾರೆಯೋ, ತಮ್ಮನ್ನು ತಾವು ಹೊಗಳಿಕೊಳ್ಳುವುದಿಲ್ಲವೋ, ತುಷ್ಟಿಯನ್ನು ಹೊಂದಿ ಕ್ಷಮೆಯಿಂದ ಕೂಡಿರುತ್ತಾರೆಯೋ ಎಲ್ಲೈ ವಿಭುವೇ, ನಾನು ಅವರನ್ನು ನಮಸ್ಕರಿಸುತ್ತೇನೆ.
ಸಮ್ಯಗ್ವದತಿ ಯೇ ಚೇಷ್ಟಾನ್ ಕ್ಷಾಂತಾ ದಾಂತಾ ಜಿತೇಂದ್ರಿಯಾಃ |
ಸಸ್ಯಂ ಧನಂ ಕ್ಷಿತಿಂ ಗಾಶ್ಚ ತಾನ್ ನಮಸ್ಯಾಮಿ ಯಾದವ ||10||
ಎಲ್ಲೈ ಯಾದವನೇ, ಯಾರು ಇಷ್ಟವಾದ ಪದಾರ್ಥಗಳನ್ನು ಚೆನ್ನಾಗಿ ದಾನ ಮಾಡುತ್ತಾರೆಯೋ, ಕ್ಷಮೆಯಿಂದಲೂ ನಿಯಮದಿಂದಲೂ ಕೂಡಿ ಜಿತೇಂದ್ರಿಯರಾಗಿರುತ್ತಾರೆಯೋ, ಸಸ್ಯವನ್ನೂ, ಧನವನ್ನೂ, ಗೋವನ್ನೂ ದಾನ ಮಾಡುತ್ತಾರೆಯೋ ಅವರನ್ನು ನಮಸ್ಕರಿಸುವೆನು.
ಯೇ ತೇ ತಪಸಿ ವರ್ತಂತೇ ವನೇ ಮೂಲಫಲಾಶನಾಃ |
ಅಸಂಚಯಾಃ ಕ್ರಿಯಾವಂತಸ್ತಾನ್ ನಮಸ್ಯಾಮಿ ಯಾದವ ||11||
ಎಲ್ಲೈ ಯಾದವನೇ, ಯಾರು ಅರಣ್ಯದಲ್ಲಿ ವಾಸಿಸಿ, ತಪೋನಿರತರಾಗಿ, ಕಂದ ಮೂಲ-ಫಲಗಳನ್ನು ಆಹಾರವಾಗಿ ಸೇವಿಸಿ ಶೇಖರಿಸಿ ಇಟ್ಟುಕೊಳ್ಳದೆ ಸತ್ಕರ್ಮವನ್ನು ಮಾಡುತ್ತಾರೆಯೋ ಅವರನ್ನು ನಮಸ್ಕರಿಸುವೆನು.

ಯೇ ಭೃತ್ಯಭರಣೇ ಸಕ್ತಾಃ ಸತತಂ ಚಾತಿಥಿಪ್ರಿಯಾಃ |
ಭುಂಜಂತೇ ದೇವಶೇಷಾಣಿ ತಾನ್ ನಮಸ್ಯಾಮಿ ಯಾದವ ||12||
ಎಲೈ ಯಾದವನೇ, ಯಾರು ಸೇವಕರನ್ನು ಪೋಷಿಸುವುದರಲ್ಲಿ ಆಸಕ್ತರಾಗಿರುತ್ತಾರೆಯೋ, ಸತತವಾಗಿ ಅತಿಥಿಪ್ರಿಯರಾಗಿರುತ್ತಾರೆಯೋ, ದೇವ ನೈವೇದ್ಯ ಶೇಷವನ್ನು ಭುಂಜಿಸುತ್ತಾರೆಯೋ ಅವರನ್ನು ನಮಸ್ಕರಿಸುತ್ತೇನೆ.
ಯೇ ವೇದಂ ಪ್ರಾಪ್ಯ ದುರ್ಧರ್ಷಾ ವಾಗ್ಮಿನೋ ಬ್ರಹ್ಮವಾದಿನಃ |
ಯಾಜನಾಧ್ಯಾಪನೇ ಯುಕ್ತಾ ನಿತ್ಯಂ ತಾನ್ ಪೂಜಯಾಮ್ಯಹಮ್ ||
ಯಾವ ದುರ್ಧರ್ಷರು ವೇದವನ್ನು ಅಧ್ಯಯನ ಮಾಡಿ ವಾಗ್ಮಿಗಳಾಗಿ, ಬ್ರಹ್ಮವಾದಿಗಳಾಗಿ, ಯಾಜನ ಮತ್ತು ಅಧ್ಯಾಪನದಲ್ಲಿ ನಿರತರಾಗಿರುತ್ತಾರೆಯೋ ಅವರನ್ನು ನಾನು ನಿತ್ಯವೂ ಪೂಜಿಸುತ್ತೇನೆ.
ಪ್ರಸನ್ನಹೃದಯಾಶ್ಚೈವ ಸರ್ವಸತ್ತ್ವೇಷು ನಿತ್ಯಶಃ |
ಆಪೃಷ್ಠತಾಪಾತ್ ಸ್ವಾಧ್ಯಾಯೇ ಯುಕ್ತಾಸ್ತಾನ್ ಪೂಜಯಾಮ್ಯಹಮ್ ||
ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಪ್ರಸನ್ನವಾದ ಮನಸ್ಸನ್ನು ಹೊಂದಿದವರಾಗಿ ಪ್ರಾತಃಕಾಲದಲ್ಲಿ ಕುಳಿತರೆ ಬೆನ್ನು ಕಾಯುವವರೆಗೂ ಸ್ವಾಧ್ಯಾಯದಲ್ಲಿ ನಿರತರಾದವರನ್ನು ನಾನು ಪೂಜಿಸುತ್ತೇನೆ.
ಗುರುಪ್ರಸಾದೇ ಸ್ವಾಧ್ಯಾಯೇ ಯತಂತೇ ಯೇ ಸ್ಥಿರವ್ರತಾಃ |
ಶಿ(ಶು)ಶ್ರೂಷವೋಽನಸೂಯಂತಸ್ತಾನ್ ನಮಸ್ಯಾಮಿ ಯಾದವ ||15||
ಯಾರು ಸ್ಥಿರವಾದ ವ್ರತವನ್ನು ಧರಿಸಿ, ಗುರುಗಳ ಅನುಗ್ರಹವನ್ನು ಸಂಪಾದಿಸುವುದಲ್ಲಿಯೂ, ಸ್ವಾಧ್ಯಾಯದಲ್ಲಿಯೂ ಪ್ರಯತ್ನಶೀಲರಾಗಿರುತ್ತಾರೆಯೋ, ದೊಡ್ಡವರನ್ನು ಸೇವಿಸಿ ಅಸೂಯಾರಹಿತರಾಗಿರುತ್ತಾರೆಯೋ ಎಲೈ ಯಾದವನೇ, ಅಂತಹವರನ್ನು ನಮಸ್ಕರಿಸುವೆನು.
ಸುವ್ರತಾ ಮುನಯೋ ಯೇ ಚ ಬ್ರಹ್ಮಣ್ಯಾಃ ಸತ್ಯಸಂಗರಾಃ |
ವೋಢಾರೋ ಹವ್ಯಕವ್ಯಾನಾಂ ತಾನ್ನಮಸ್ಯಾಮಿ ಯಾದವ ||16||
ಎಲೈ ಯಾದವನೇ, ಒಳ್ಳೆಯ ವ್ರತವನ್ನು ಧರಿಸಿದ ಮುನಿಗಳು, ಬ್ರಾಹ್ಮಣ ವತ್ಸಲರಾದವರು, ಸತ್ಯನಿರತರಾದವರು, ಹವ್ಯ-ಕವ್ಯಗಳನ್ನು ದಾನ ಮಾಡುವವರು ಆದವರನ್ನು ನಮಸ್ಕರಿಸುವೆನು.
ಭೈಕ್ಷ್ಯಚರ್ಯಾಸು ನಿರತಾಃ ಕೃಶಾ ಗುರುಕುಲಾಶ್ರಯಾಃ |
ನಿಃಸುಖಾ ನಿರ್ಧನಾ ಯೇ ಚ ತಾನ್ ನಮಸ್ಯಾಮಿ ಯಾದವ ||17||
ಎಲೈ ಯಾದವನೇ, ಗುರುಕುಲದಲ್ಲಿ ವಾಸವನ್ನು ಮಾಡಿ ಕೃಶರಾಗಿ ಭಿಕ್ಷಾಟನೆಯಲ್ಲಿ ನಿರತರಾಗಿ, ಸುಖರಹಿತರಾಗಿ, ಧನರಹಿತರಾಗಿ ಇರುವವರನ್ನು ನಾನು ನಮಸ್ಕರಿಸುವೆನು.
ನಿರ್ಮಮಾ ನಿಷ್ಪ್ರತಿದ್ವಂದ್ವಾ ನಿರ್ಹ್ರೀಕಾ ನಿಷ್ಪ್ರಯೋಜನಾಃ |
ಅಹಿಂಸಾನಿರತಾ ಯೇ ಚ ಯೇ ಚ ಸತ್ಯವ್ರತಾ ನರಾಃ |
ದಾಂತಾಃ ಶಮಪರಾಶ್ಚೈವ ತಾನ್ ನಮಸ್ಯಾಮಿ ಕೇಶವ ||18||
ಎಲೈ ಕೇಶವನೇ, ಯಾರು ಮಮಕಾರರಹಿತರಾಗಿ, ಯಾರಲ್ಲಿಯೂ ಶತ್ರುತ್ವವನ್ನು ಮಾಡದೆ, ದೇಹಾಭಿಮಾನವನ್ನು ತೊರೆದು, ಫಲೋದ್ದೇಶದಿಂದ ಕರ್ಮವನ್ನು ಮಾಡದೆ, ಅಹಿಂಸಾ ನಿರತರಾಗಿ, ಸತ್ಯವ್ರತರಾಗಿ, ಕ್ಷಮದಮವನ್ನು ಹೊಂದಿದವರಾಗಿರುತ್ತಾರೆಯೋ ಅವರನ್ನು ನಾನು ನಮಸ್ಕರಿಸುವೆನು.
ದೇವತಾತಿಥಿಪೂಜಾಯಾಂ ಪ್ರಸಕ್ತಾ ಗೃಹಮೇಧಿನಃ |
ಕಪೋತವೃತ್ತಯೋ ನಿತ್ಯಂ ತಾನ್ ನಮಸ್ಯಾಮಿ ಯಾದವ ||19||
ಎಲೈ ಯಾದವನೇ, ಯಾವ ಗೃಹಸ್ಥರು ದೇವತಾತಿಥಿ ಪೂಜೆಯಲ್ಲಿ ದೀಕ್ಷೆಯನ್ನು ಹೊಂದಿ ಕಪೋತವೃತ್ತಿಯನ್ನು (ಅಸಂಚಯವನ್ನು) ಅನುಸರಿಸುತ್ತಾರೆಯೋ ಅವರನ್ನು ಯಾವಾಗಲೂ ನಮಸ್ಕರಿಸುವೆನು.
ಯೇಷಾಂ ತ್ರಿವರ್ಗಃ ಕೃತ್ಯೇಷು ವರ್ತತೇ ನೋಪಹೀಯತೇ |
ಶಿಷ್ಟಾಚಾರಪ್ರವೃತ್ತಾಶ್ಚ ತಾನ್ ನಮಸ್ಯಾಮ್ಯಹಂ ಸದಾ ||20||
ಯಾರ ಕಾರ್ಯಗಳಲ್ಲಿ ಧರ್ಮಾರ್ಥಕಾಮಗಳು ಇರುತ್ತವೆಯೋ, ಅವು ನಾಶವನ್ನು ಹೊಂದುವುದಿಲ್ಲವೋ, ಯಾರು ಶಿಷ್ಟಾಚಾರದಂತೆ ನಡೆದುಕೊಳ್ಳುತ್ತಾರೆಯೋ ಅವರನ್ನು ಯಾವಾಗಲೂ ನಮಸ್ಕರಿಸುವೆನು.
ಬ್ರಾಹ್ಮಣಾಸ್ತ್ರಿಷು ಲೋಕೇಷು ಯೇ ತ್ರಿವರ್ಗಮನುಷ್ಠಿತಾಃ |
ಅಲೋಲುಪಾಃ ಪುಣ್ಯಶೀಲಾಸ್ತಾನ್ ನಮಸ್ಯಾಮಿ ಕೇಶವ ||21||
ಎಲೈ ಕೇಶವನೇ, ಮೂರುಲೋಕದಲ್ಲಿರುವ ಧರ್ಮಾರ್ಥಕಾಮಗಳ ಅನುಷ್ಠಾನದಲ್ಲಿ ಆಸಕ್ತರಾದ, ಇಂದ್ರಿಯಲೋಲುಪತೆಯನ್ನು ಹೊಂದದ, ಪುಣ್ಯಶೀಲರಾದ ಬ್ರಾಹ್ಮಣರನ್ನು ನಮಸ್ಕರಿಸುವೆನು.
ಅಬ್ಭಕ್ಷಾ ವಾಯುಭಕ್ಷಾಶ್ಚ ಸುಧಾಭಕ್ಷಾಶ್ಚ ಯೇ ಸದಾ |
ವ್ರತೈಶ್ಚ ವಿವಿಧೈರ್ಯುಕ್ತಾಸ್ತಾನ್ನಮಸ್ಯಾಮಿ ಮಾಧವ ||22||
ಎಲೈ ಮಾಧವನೇ, ಅಭಕ್ಷರಾದವರನ್ನೂ, ವಾಯುಭಕ್ಷರಾದವರನ್ನೂ, ಕ್ಷೀರ ಭಕ್ಷರಾದವರನ್ನೂ, ಸದಾ ವಿವಿಧವಾದ ವ್ರತಗಳನ್ನು ಧರಿಸಿದವರನ್ನೂ ನಾನು ನಮಸ್ಕರಿಸುವೆನು.
ಅಯೋನೀನಗ್ನಿಯೋನೀಂಶ್ಚ ಬ್ರಹ್ಮಯೋನೀಂಸ್ತಥೈವ ಚ |
ಸರ್ವಭೂತಾತ್ಮಯೋನೀಂಶ್ಚ ತಾನ್ ನಮಸ್ಯಾಮ್ಯಹಂ ದ್ವಿಜಾನ್ ||23||
ಅಯೋನಿಜರಾದ, ಅಗ್ನಿಯಿಂದ ಉದ್ಭವಿಸಿದ, ಬ್ರಹ್ಮನಿಂದ ಉದ್ಭವಿಸಿದ, ಸರ್ವಭೂತಗಳ ಅಂತರ್ಯಾಮಿಯಿಂದ ಜನಿಸಿದ

ದ್ವಿಜರನ್ನು ನಾನು ನಮಸ್ಕರಿಸುವೆನು.
ನಿತ್ಯಮೇತಾನ್ ನಮಸ್ಯಾಮಿ ಕೃಷ್ಣ ಲೋಕಕರಾನೃಷೀನ್ |
ಲೋಕಜ್ಯೇಷ್ಠಾನ್ ಜ್ಞಾನನಿಷ್ಠಾಂಸ್ತಮೋಘ್ನಾಲ್ಲೋಕಭಾಸ್ಕರಾನ್ ॥24॥
ಎಲ್ಲೈ ಕೃಷ್ಣನೇ, ಲೋಕಕ್ಕೆ ಶ್ರೇಯಸ್ಕರರೂ, ಲೋಕದಲ್ಲಿ ಹಿರಿಯರೂ, ಜ್ಞಾನನಿಷ್ಠರೂ, ಅಜ್ಞಾನವನ್ನು ಕಳೆದು ಜ್ಞಾನದಿಂದ ಸೂರ್ಯನಂತೆ ಇರುವವರೂ ಆದ ಈ ಋಷಿಗಳನ್ನು ನಿತ್ಯವೂ ನಮಸ್ಕರಿಸುತ್ತೇನೆ.
ತಸ್ಮಾತ್ತ್ವಮಪಿ ವಾರ್ಷ್ಣೇಯ ದ್ವಿಜಾನ್ ಪೂಜಯ ನಿತ್ಯದಾ |
ಪೂಜಿತಾಃ ಪೂಜನಾರ್ಹಾ ಹಿ ಸುಖಂ ದಾಸ್ಯಂತಿ ತೇಽನಘ ॥25॥
ಆದ್ದರಿಂದ ಎಲ್ಲೈ ವಾರ್ಷ್ಣೇಯನೇ, ನೀನೂ ಯಾವಾಗಲೂ ದ್ವಿಜರನ್ನು ಪೂಜಿಸು. ಎಲ್ಲೈ ಅನಘನೇ, ಪೂಜೆಗೆ ಅರ್ಹರಾದ ಅವರು ಪೂಜಿಸಲ್ಪಟ್ಟರೆ ಸುಖವನ್ನು ನೀಡುವರು.
ಅಸ್ಮಿನ್‌ಲೋಕೇ ಸದಾ ಹ್ಯೇತೇ ಪರತ್ರ ಚ ಸುಖಪ್ರದಾಃ |
ತ ಏತೇ ಮಾನ್ಯಮಾನಾ ವೈ ಪ್ರದಾಸ್ಯಂತಿ ಸುಖಂ ತವ ॥26॥
ಇಂತಹವರು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖಪ್ರದರಾದವರು. ಅಂತಹ ಇವರನ್ನು ಪೂಜಿಸಿದರೆ ಅವರು ನಿನಗೆ ಸುಖವನ್ನು ಕೊಡುತ್ತಾರೆ.
ಯೇ ಸರ್ವಾತಿಥಯೋ ನಿತ್ಯಂ ಗೋಷು ಚ ಬ್ರಾಹ್ಮಣೇಷು ಚ |
ನಿತ್ಯಂ ಸತ್ಯೇ ಚ ನಿರತಾ ದುರ್ಗಾಣ್ಯತಿತರಂತಿ ತೇ ॥27॥
ಯಾರು ಎಲ್ಲರನ್ನೂ ಅತಿಥಿಗಳಾಗಿ ಸ್ವೀಕಾರ ಮಾಡುತ್ತಾರೆಯೋ, ನಿತ್ಯವೂ ಗೋವುಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ ಮತ್ತು ಸತ್ಯದಲ್ಲಿಯೂ ರತರಾಗಿರುತ್ತಾರೆಯೋ ಅಂತಹವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ನಿತ್ಯಂ ಶಮಪರಾ ಯೇ ಚ ತಥಾ ಯೇ ಚಾನಸೂಯಕಾಃ |
ನಿತ್ಯಂ ಸ್ವಾಧ್ಯಾಯಿನೋ ಯೇ ಚ ದುರ್ಗಾಣ್ಯತಿತರಂತಿ ತೇ ॥28॥
ನಿತ್ಯವೂ ಭಗವದ್ಧ್ಯಾನ ಮಾಡುವವರು, ಅಸೂಯಾರಹಿತರಾದವರು ಮತ್ತು ನಿತ್ಯವೂ ಸ್ವಾಧ್ಯಾಯವನ್ನು ಮಾಡುವವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ಸರ್ವಾನ್ ದೇವಾನ್ ನಮಸ್ಯಂತಿ ಯೇ ಚೈಕಂ ದೇವಮಾಶ್ರಿತಾಃ |
ಶ್ರದ್ದಧಾನಾಶ್ಚ ದಾಂತಾಶ್ಚ ದುರ್ಗಾಣ್ಯತಿತರಂತಿ ತೇ॥29॥
ಯಾರು ಪ್ರಧಾನನಾದ ಒಬ್ಬ ದೇವನನ್ನು ಆಶ್ರಯಿಸಿ, ಉಳಿದ ದೇವತೆಗಳಿಗೂ ನಮಸ್ಕಾರ ಮಾಡಿ, ಶ್ರದ್ಧೆ ಮತ್ತು ದಮಗಳಿಂದ ಕೂಡಿಎರುತ್ತಾರೆಯೋ ಅವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ತಥೈವ ವಿಪ್ರಪ್ರವರಾನ್ ನಮಸ್ಕೃತ್ಯ ಯತವ್ರತಾನ್ |
ಭವಂತಿ ಯೇ ದಾನರತಾ ದುರ್ಗಾಣ್ಯತಿತರಂತಿ ತೇ ॥30॥
ಹಾಗೆಯೇ ವ್ರತನಿಷ್ಠರಾದ ಶ್ರೇಷ್ಠಬ್ರಾಹ್ಮಣರಿಗೆ ನಮಸ್ಕರಿಸಿ ಯಾರು ದಾನವನ್ನು ಕೊಡುವುದರಲ್ಲಿ ಆಸಕ್ತರಾಗಿರುತ್ತಾರೆಯೋ ಅವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ತಪಸ್ವಿನಶ್ಚ ಯೇ ನಿತ್ಯಂ ಕೌಮಾರಬ್ರಹ್ಮಚಾರಿಣಃ |
ತಪಸಾ ಭಾವಿತಾತ್ಮಾನೋ ದುರ್ಗಾಣ್ಯತಿತರಂತಿ ತೇ ॥31॥
ಯಾರು ತಪಸ್ವಿಗಳೋ, ಬಾಲ್ಯದಿಂದಲೂ ಬ್ರಹ್ಮಚಾರಿಗಳೋ, ತಪಸ್ಸಿನಿಂದ ಶುದ್ಧವಾದ ಮನಸ್ಸುಳ್ಳವರೋ ಅವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ದೇವತಾತಿಥಿಭೃತ್ಯಾನಾಂ ಪಿತೄಣಾಂ ಚಾರ್ಚನೇ ರತಾಃ |
ಶಿಷ್ಟಾನ್ನಭೋಜಿನೋ ಯೇ ಚ ದುರ್ಗಾಣ್ಯತಿತರಂತಿ ತೇ ॥32॥
ದೇವತೆಗಳ, ಅತಿಥಿಗಳ, ವೃದ್ಧರ ಮತ್ತು ಪಿತೃಗಳ ಅರ್ಚನೆಯಲ್ಲಿ ರತರಾಗಿ ದೇವನೈವೇದ್ಯವನ್ನೇ ಭುಂಜಿಸುವವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ಅಗ್ನೀನಾಧಾಯ ವಿಧಿವತ್ ಪ್ರಯತಾ ಧಾರಯಂತಿ ಯೇ |
ಪ್ರಾಪ್ತಾಃ ಸೋಮಾಹುತಿಂ ಚೈವ ದುರ್ಗಾಣ್ಯತಿತರಂತಿ ತೇ ॥33॥
ಅಗ್ನಿಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಆಧಾನ ಮಾಡಿ, ಪ್ರಯತ್ನಪೂರ್ವಕವಾಗಿ ಯಾರು ಅವುಗಳನ್ನು ಇಟ್ಟುಕೊಂಡು ಕಾಲ-ಕಾಲದಲ್ಲಿ ಸೋಮಾಹುತಿಯನ್ನು ಕೊಡುತ್ತಾರೆಯೋ ಅವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ.
ಮಾತಾಪಿತ್ರೋರ್ಗುರುಷು ಚ ಸಮ್ಯಗ್ವರ್ತಂತಿ ಯೇ ಸದಾ |
ಯಥಾ ತ್ವಂ ವೃಷ್ಣಿಶಾರ್ದೂಲೇತ್ಯುಕ್ತ್ವೈವಂ ವಿರರಾಮ ಸಃ ॥34॥
ಎಲ್ಲೈ ವೃಷ್ಣಿಶಾರ್ದೂಲನೇ, ನಿನ್ನಂತೆ ಮಾತಾ-ಪಿತೃ-ಗುರುಗಳಲ್ಲಿ ಯಾರು ಯಾವಾಗಲೂ ಚೆನ್ನಾಗಿ ನಡೆದುಕೊಳ್ಳುತ್ತಾರೆಯೋ ಅವರು ಎಲ್ಲ ಕಷ್ಟಗಳನ್ನೂ ದಾಟುತ್ತಾರೆ ಎಂದು ಹೇಳಿ ಸುಮ್ಮನಾದರು.
ತಸ್ಮಾತ್ ತ್ವಮಪಿ ಕೌಂತೇಯ ಪಿತೃದೇವದ್ವಿಜಾತಿಥೀನ್ |
ಸಮ್ಯಕ್ಪೂಜಯ ಯೇನ ತ್ವಂ ಗತಿಮಿಷ್ಟಾಮವಾಪ್ಸ್ಯಸಿ ॥35॥
ಆದ್ದರಿಂದ ಎಲ್ಲೈ ಕೌಂತೇಯನೇ, ನೀನು ಪಿತೃಗಳ, ದೇವತೆಗಳ, ದ್ವಿಜರ ಮತ್ತು ಅತಿಥಿಗಳ ಪೂಜೆಯನ್ನು ಚೆನ್ನಾಗಿ ಮಾಡು. ಅದರಿಂದ ನೀನು ಇಷ್ಟವಾದ ಗತಿಯನ್ನು ಹೊಂದುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ

ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಕೃಷ್ಣ-ನಾರದಸಂವಾದೇ ಪೂಜ್ಯಪುರುಷವರ್ಣನಂ ನಾಮ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ಶ್ಯೇನ-ಕಪೋತೀಯ
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಧರ್ಮಂ ಭರತಸತ್ತಮ ॥1॥
ಯುಧಿಷ್ಠಿರ ಪಿತಾಮಹನೇ, ಮಹಾಪ್ರಾಜ್ಞನೇ, ಸರ್ವಶಾಸ್ತ್ರ ವಿಶಾರದನೇ, ಭರತಶ್ರೇಷ್ಠನೇ, ನಿನ್ನಿಂದ ನಾನು ಧರ್ಮವನ್ನು ಕೇಳಲು ಬಯಸುತ್ತೇನೆ.
ಶರಣಾಗತಂ ಯೇ ರಕ್ಷಂತಿ ಭೂತಗ್ರಾಮಂ ಚತುರ್ವಿಧಮ್ |
ಕಿಂ ತಸ್ಯ ಭರತಶ್ರೇಷ್ಠ ಫಲಂ ಭವತಿ ತತ್ತ್ವತಃ ॥2॥
ಎಲೈ ಭರತಶ್ರೇಷ್ಠನೇ, ಶರಣಾಗತವಾದ ನಾಲ್ಕು ವಿಧವಾದ ಪ್ರಾಣಿ ಸಮೂಹವನ್ನು ರಕ್ಷಿಸುವವನಿಗೆ ಯಾವ ನಿಜವಾದ ಫಲವು ಉಂಟಾಗುತ್ತದೆ?
ಭೀಷ್ಮಃ
ಇದಂ ಶೃಣು ಮಹಾರಾಜ ಧರ್ಮಪುತ್ರ ಮಹಾಯಶಃ |
ಇತಿಹಾಸಂ ಪುರಾವೃತ್ತಂ ಶರಣಾರ್ಥಂ ಮಹಾಫಲಮ್ ॥3॥
ಭೀಷ್ಮ ಎಲೈ ಮಹಾರಾಜನೇ, ಧರ್ಮಪುತ್ರನೇ, ಮಹಾಕೀರ್ತಿವಂತನೇ, ಶರಣಾಗತರ ವಿಷಯದಲ್ಲಿ ಹಿಂದೆ ನಡೆದ ಮಹಾಫಲಪ್ರದವಾದ ಈ ಇತಿಹಾಸವನ್ನು ಕೇಳು.
ಪ್ರಪಾತ್ಯಮಾನಃ ಶ್ಯೇನೇನ ಕಪೋತಃ ಪ್ರಿಯದರ್ಶನಃ |
ವೃಷದರ್ಭಂ ಮಹಾಭಾಗಂ ನರೇಂದ್ರಂ ಶರಣಂ ಗತಃ ॥4॥
ಹಿಂದೆ ಗಿಡುಗದಿಂದ ಅಟ್ಟಿಸಿಕೊಂಡು ಬರಲ್ಪಟ್ಟ ಒಂದು ಸುಂದರವಾದ ಪಾರಿವಾಳವು ಎಲೈ ಮಹಾಭಾಗನೇ, ರಾಜನಾದ ವೃಷದರ್ಭನಿಗೆ ಶರಣಾಗತವಾಯಿತು.
ಸ ತಂ ದೃಷ್ಟ್ವಾ ವಿಶುದ್ಧಾತ್ಮಾ ತ್ರಾಸಾದಂಕಮುಪಾಗತಮ್ |
ಆಶ್ವಾಸ್ಯಾಶ್ವಸಿಹೀತ್ಯಾಹ ನ ತೇಽಸ್ತಿ ಭಯಮಂಡಜ ॥5॥
ವಿಶುದ್ಧವಾದ ಮನಸ್ಸುಳ್ಳ ಅವನು ಭಯದಿಂದ ತನ್ನ ತೊಡೆಯ ಮೇಲೆ ಕುಳಿತ ಆ ಕಪೋತವನ್ನು ನೋಡಿ ಸಮಾಧಾನಗೊಳಿಸಿ ಎಲೈ ಪಕ್ಷಿಯೇ, ಸಮಾಧಾನವನ್ನು ತಂದುಕೊ, ನಿನಗೆ ಭಯವಿಲ್ಲ ಎಂದು ಹೇಳಿದ್ದನು.
ಭಯಂ ತೇ ಸುಮಹತ್ಕಸ್ಮಾತ್ ಕುತ್ರ ಕಿಂ ವಾ ಕೃತಂ ತ್ವಯಾ |
ಯೇನ ತ್ವಮಿಹ ಸಂಪ್ರಾಪ್ತೋ ವಿಸಂಜ್ಞೋ ಭ್ರಾಂತಚೇತನಃ ॥6॥
ನಿನಗೆ ಯಾವ ಕಾರಣದಿಂದ ದೊಡ್ಡ ಭಯವುಂಟಾಗಿದೆ? ನೀನು ಎಲ್ಲಿ ಏನನ್ನು ಮಾಡಿ ಸಂಜ್ಞಾಶೂನ್ಯನಾಗಿ, ದಿಗ್ಭ್ರಾಂತನಾಗಿ ಇಲ್ಲಿಗೆ ಬಂದಿದ್ದೀಯೆ?
ನವನೀಲೋತ್ಪಲಾಪೀಡ ಚಾರುವರ್ಣ ಸುದರ್ಶನ |
ದಾಡಿಮಾಶೋಕಪುಷ್ಪಾಕ್ಷ ಮಾ ತ್ರಸಸ್ವಾಭಯಂ ತವ ॥7॥
ಹೊಸ ನೀಲೋತ್ಪಲಪುಷ್ಪದಂತೆ ತಲೆಯ ಮೇಲೆ ಭಾಗವನ್ನು ಧರಿಸಿದವನೇ, ಒಳ್ಳೆಯ ಬಣ್ಣವನ್ನು ಹೊಂದಿದವನೇ, ಮನೋಹರನೇ, ದಾಳಿಂಬೆಯ ಮತ್ತು ಅಶೋಕ ಪುಷ್ಪದಂತಹ ಕಣ್ಣುಳ್ಳವನೇ ಹೆದರಬೇಡ. ನಿನಗೆ ಅಭಯವನ್ನು ನೀಡಿದ್ದೇನೆ.
ಮತ್ಸಕಾಶಮನುಪ್ರಾಪ್ತಂ ನ ತ್ವಾಂ ಕಶ್ಚಿತ್ಸಮುತ್ಸಹೇತ್ |
ಮನಸಾ ಗ್ರಹಣಂ ಕರ್ತುಂ ರಕ್ಷಾಧ್ಯಕ್ಷಪುರಸ್ಕೃತಮ್ ॥8॥
ನನ್ನ ಸಮೀಪಕ್ಕೆ ಬಂದು ರಕ್ಷಣೆ ಮತ್ತು ನನ್ನ ದೃಷ್ಟಿಯಿಂದ ಕೂಡಿದ ನಿನ್ನನ್ನು ಯಾವನೂ ಸಹ ತನ್ನ ಮನಸ್ಸಿನಿಂದಲೂ ಹಿಡಿಯಲು ಚಿಂತಿಸಲಾರ.
ಕಾಶಿರಾಜ್ಯಂ ತವಾದ್ಯೇಹ ತ್ವದರ್ಥಂ ಜೀವಿತಂ ತಥಾ |
ತ್ಯಜೇಯಂ ಭವ ವಿಸ್ರಬ್ಧಃ ಕಪೋತ ನ ಭಯಂ ತವ ॥9॥
ಈ ದಿನ ಕಾಶಿರಾಜ್ಯವು ನಿನ್ನದು. ನಿನ್ನ ಸಲುವಾಗಿ ನಾನು ಈ ದಿನ ಇಲ್ಲಿ ಜೀವಿತವನ್ನೂ ತೊರೆದೇನು, ಸಮಾಧಾನದಿಂದಿರು. ಎಲೈ ಕಪೋತವೇ, ನಿನಗೆ ಭಯವಿಲ್ಲ (ಎಂದು ಹೇಳಿದನು).
ಶ್ಯೇನಃ
ಮಮೈತದ್ ವಿಹಿತಂ ಭಕ್ಷ್ಯಂ ನ ರಾಜಂಸ್ತ್ರಾತುಮರ್ಹಸಿ |
ಅತಿಕ್ರಾಂತಂ ಚ ಪ್ರಾಪ್ತಂ ಚ ಪ್ರಯತ್ನಾಚ್ಚೋಪಪಾದಿತಮ್ ॥10॥
ಶ್ಯೇನ ಎಲೈ ರಾಜನೇ, ನನಗೆ ದೈವವಿಹಿತವಾದ ಈ ಆಹಾರವನ್ನು ನೀನು ರಕ್ಷಿಸುವುದು ಸರಿಯಲ್ಲ. ನನ್ನನ್ನು ಮೀರಿ ಹೋಗಿದ್ದ ಈ ಕಪೋತವು ನನ್ನ ಪ್ರಯತ್ನದಿಂದ ನನಗೆ ದೊರಕಿದೆ.
ಮಾಂಸಂ ಚ ರುಧಿರಂ ಚಾಸ್ಯ ಮಜ್ಜಾ ಮೇದಶ್ಚ ಮೇ ಹಿತಮ್ |

ಪರಿತೋಷಕರೋ ಹ್ಯೇಷ ಮಮ ಮಾಸ್ಯಾಗ್ರತೋ ಭವ ॥11॥
ಇದರ ಮಾಂಸ, ರಕ್ತ, ಮಜ್ಜಾ ಮತ್ತು ಮೇದಸ್ಸುಗಳು ನನಗೆ ಹಿತವನ್ನೂ, ಸಂತೋಷವನ್ನೂ ಉಂಟುಮಾಡುವಂತಹವು. ಅದರ ಮುಂದೆ ಬಂದು ನನಗೆ ಅಡ್ಡವಾಗಿ ನಿಲ್ಲಬೇಡ.
ತೃಷ್ಣಾಂ ಮೇ ಬಾಧತೇಽತ್ಯುಗ್ರಾ ಕ್ಷುಧಾ ನಿರ್ದಹತೀವ ಮಾಮ್ |
ಮುಂಚೈನಂ ನ ಹಿ ಶಕ್ಷ್ಯಾಮಿ ರಾಜನ್ ಮಂದಯಿತುಂ ಕ್ಷುಧಾಮ್ ॥
ನನ್ನನ್ನು ಬಾಯಾರಿಕೆಯು ತೀವ್ರವಾಗಿ ಬಾಧಿಸುತ್ತಿದೆ. ಉಗ್ರವಾದ ಹಸಿವೆಯು ನನ್ನನ್ನು ಸುಟ್ಟುಬಿಡುವಂತಿದೆ. ಎಲೈ ರಾಜನೇ, ಇದನ್ನು ಬಿಟ್ಟುಬಿಡು. ನಾನು ಬೇರೆ ರೀತಿಯಲ್ಲಿ ನನ್ನ ಹಸಿವನ್ನು ನೀಗಿಸಿಕೊಳ್ಳಲಾರೆ.
ಮಯಾ ಹ್ಯನುಸೃತೋ ಹ್ಯೇಷ ಮತ್ಪಕ್ಷನಖವಿಕ್ಷತಃ |
ಕಿಂಚಿದುಚ್ಛ್ವಾಸನಿಶ್ವಾಸಂ ನ ರಾಜನ್ ಗೋಪ್ತುಮರ್ಹಸಿ ॥13॥
ನಾನು ಇದನ್ನು ಅನುಸರಿಸಿ ಇದನ್ನು ನನ್ನ ರೆಕ್ಕೆ ಮತ್ತು ನಖಗಳಿಂದ ಗಾಯಗೊಳಿಸಿದ್ದೇನೆ. ಎಲೈ ರಾಜನೇ, ಸ್ವಲ್ಪವೇ ಉಸಿರಾಡುತ್ತಿರುವ ಇದನ್ನು ನೀನು ರಕ್ಷಿಸುವುದು ಯೋಗ್ಯವಲ್ಲ.
ಯದಿ ಸ್ವವಿಷಯೇ ರಾಜನ್ ಪ್ರಭುಸ್ತ್ವಂ ರಕ್ಷಣೇ ನೃಣಾಮ್ |
ಖೇಚರಸ್ಯ ತೃಷಾರ್ತಸ್ಯ ನ ತ್ವಂ ಪ್ರಭುರಥೋ ಮಮ ॥14॥
ಎಲೈ ರಾಜನೇ, ನೀನು ನಿನ್ನ ರಾಜ್ಯದಲ್ಲಿರುವ ಮಾನವರ ರಕ್ಷಣೆಯಲ್ಲಿ ಪ್ರಭುತ್ವವನ್ನು (ಅಧಿಕಾರವನ್ನು) ಹೊಂದಿದ್ದರೂ ಗಗನ ಸಂಚಾರಿಯೂ, ಬಾಯಾರಿಕೆಯಿಂದ ಬಳಲಿದವನೂ ಆದ ನನ್ನ ಮೇಲೆ ನಿನ್ನ ಅಧಿಕಾರವಿಲ್ಲ.
ಯದಿ ವೈರಿಷು ಭೃತ್ಯೇಷು ಸ್ವಜನವ್ಯವಹಾರಯೋಃ |
ವಿಷಯೇಷ್ವಿಂದ್ರಿಯಾಣಾಂ ಚ ಆಕಾಶೇ ಮಾ ಪರಾಕ್ರಮ ॥15॥
ನಿನಗೆ ಪ್ರಭುತ್ವವಿರಬೇಕಾದರೆ ನಿನ್ನ ವೈರಿಗಳಲ್ಲಿ, ಭೃತ್ಯರಲ್ಲಿ, ಸ್ವಜನರಲ್ಲಿ, ವ್ಯವಹಾರಗಳಲ್ಲಿ, ಇಂದ್ರಿಯವಿಷಯಗಳಲ್ಲಿ ಅದನ್ನು ತೋರಿಸು. ಆಕಾಶದಲ್ಲಿ ಅದನ್ನು ತೋರಿಸಲು ಉದ್ಯುಕ್ತನಾಗಬೇಡ.
ಪ್ರಭುತ್ವಂ ಹಿ ಪರಾಕ್ರಮ್ಯ ಸಮ್ಯಕ್ ಪಕ್ಷಹರೇಷು ತೇ |
ಯದಿ ತ್ವಮಿಹ ಧರ್ಮಾರ್ಥೀ ಮಾಮಪಿ ದ್ರಷ್ಟುಮರ್ಹಸಿ ॥16॥
ನಿನ್ನನ್ನು ಆಕ್ರಮಿಸಿ ನಿನ್ನ ಸ್ವತ್ತನ್ನು ಅಪಹರಿಸುವವರಲ್ಲಿ ನೀನು ನಿನ್ನ ಪ್ರಭುತ್ವವನ್ನು ತೋರಿಸಬೇಕಷ್ಟೆ? ಧರ್ಮಾರ್ಥಿಯಾಗಿ ಕಪೋತವನ್ನು ರಕ್ಷಿಸುವುದಾದರೆ ಹಸಿವಿನಿಂದ ಬಳಲಿದ ನನ್ನನ್ನೂ ಸಹ ಧರ್ಮದೃಷ್ಟಿಯಿಂದಲೇ ನೋಡಬೇಕು (ಎಂದು ಹೇಳಿತು).
ಭೀಷ್ಮಃ
ಶ್ರುತ್ವಾ ಶ್ಯೇನಸ್ಯ ತದ್ವಾಕ್ಯಂ ರಾಜರ್ಷಿರ್ವಿಸ್ಮಯಂ ಗತಃ |
ಸಂಭಾವ್ಯ ಚೈನಂ ತದ್ವಾಕ್ಯಂ ತದರ್ಥೀ ಪ್ರತ್ಯಭಾಷತ ॥17॥
ಭೀಷ್ಮ ಆ ರಾಜರ್ಷಿಯು ಗಿಡುಗದ ಆ ಮಾತುಗಳನ್ನು ಕೇಳಿ ವಿಸ್ಮಿತನಾದನು. ಆ ಪಕ್ಷಿಯನ್ನು ಸಮಾಧಾನಪಡಿಸಿ ಅದನ್ನು ಬೇಡುತ್ತಾ ಮಾತನಾಡಿದನು.
ಗೋವೃಷೋ ವಾ ವರಾಹೋ ವಾ ಮೃಗೋ ವಾ ಮಹಿಷೋಽಪಿ ವಾ |
ತ್ವದರ್ಥಮದ್ಯ ಕ್ರಿಯತಾಂ ಕ್ಷುಧಾಪ್ರಶಮನಾಯ ತೇ ॥18॥
ವೃಷಭವನ್ನಾಗಲೀ, ವರಾಹವನ್ನಾಗಲೀ, ಜಿಂಕೆಯನ್ನಾಗಲೀ ಅಥವಾ ಎಮ್ಮೆಯನ್ನಾಗಲೀ ನಿನ್ನ ಹಸಿವೆಯನ್ನು ಇಂಗಿಸುವುದಕ್ಕೆ ಈ ದಿನ ಆಹಾರವನ್ನಾಗಿ ಮಾಡಿಕೊ.
ಶರಣಾಗತಂ ನ ತ್ಯಜೇಯಮಿತಿ ಮೇ ವ್ರತಮಾಹಿತಮ್ |
ನ ಮುಂಚತಿ ಮಮಾಂಗಾನಿ ದ್ವಿಜೋಽಯಂ ಪಶ್ಯ ವೈ ದ್ವಿಜ ॥19॥
ಶರಣಾಗತರನ್ನು ಪರಿತ್ಯಜಿಸುವುದಿಲ್ಲವೆಂಬುದು ನಾನು ಧರಿಸಿದ ವ್ರತ. ಎಲೈ ಪಕ್ಷಿಯೇ, ಈ ಕಪೋತವು ನನ್ನ ಶರೀರದ ಅಂಗಗಳನ್ನು ಬಿಡುತ್ತಿಲ್ಲವೆಂಬುದನ್ನು ನೋಡು (ಎಂದು ಹೇಳಿದನು).
ಶ್ಯೇನಃ
ನ ವರಾಹಂ ನ ಚೋಕ್ಷಾಣಂ ನ ಚಾನ್ಯಾನ್ ವಿವಿಧಾನ್ ದ್ವಿಜಾನ್ |
ಭಕ್ಷಯಾಮಿ ಮಹಾರಾಜ ಕಿಮನ್ನಾದ್ಯೇನ ತೇನ ಮೇ ॥20॥
ಶ್ಯೇನ ಎಲೈ ಮಹಾರಾಜನೇ, ನಾನು ವರಾಹವನ್ನಾಗಲೀ, ವೃಷಭವನ್ನಾಗಲೀ ಅಥವಾ ವಿವಿಧ ಪಕ್ಷಿಗಳನ್ನಾಗಲೀ ತಿನ್ನುವುದಿಲ್ಲ. ಅಂತಹ ಆಹಾರದಿಂದ ನನಗೆ ಏನು ಪ್ರಯೋಜನ?
ಯಸ್ತು ಮೇ ವಿಹಿತೋ ಭಕ್ಷಂ ಸ್ವಯಂ ದೇವೈಃ ಸನಾತನಃ |
ಶ್ಯೇನಾ ಕಪೋತಾನ್ ಖಾದಂತಿ ಸ್ಥಿತಿರೇಷಾ ಸನಾತನೀ ॥21॥
ನನಗೆ ದೇವತೆಗಳಿಂದ ಅನಾದಿಯಿಂದಲೂ ಯಾವುದು ಆಹಾರವೆಂದು ವಿಹಿತವಾಗಿದೆಯೋ ಅದು ನನಗೆ ಬೇಕು. ಗಿಡುಗಗಳು ಕಪೋತಗಳನ್ನು ತಿನ್ನುತ್ತವೆ ಎಂಬುದು ಒಂದು ಸನಾತನವಾದ ವಸ್ತುಸ್ಥಿತಿ.
ಉಶೀನರ ಕಪೋತೇ ತು ಯದಿ ಸ್ನೇಹಸ್ತವಾನಘ |
ತತಸ್ತ್ವಂ ಮೇ ಪ್ರಯಚ್ಛಾದ್ಯ ಸ್ವಮಾಂಸಂ ತುಲಯಾ ಧೃತಮ್ ॥22॥
ಎಲೈ ಉಶೀನರನೇ, ಅನಘನೇ, ನಿನಗೆ ಕಪೋತದಲ್ಲಿ ಸ್ನೇಹವಿದ್ದರೆ ಕಪೋತದ ಮಾಂಸದಷ್ಟು ನಿನ್ನ ಶರೀರದ ಮಾಂಸವನ್ನು ತಕ್ಕಡಿಯಲ್ಲಿ ತೂಗಿ ಈ ದಿನ ನನಗೆ ಕೊಡು.
ರಾಜಾ

ಮಹಾನನುಗ್ರಹೋ ಮೇಽದ್ಯ ಯಸ್ತ್ವಮೇವಮಿಹಾತ್ಥ ಮಾಮ್ |
ಬಾಢಮೇವಂ ಕರಿಷ್ಯಾಮೀತ್ಯುಕ್ತತ್ವಾಽಸೌ ರಾಜಸತ್ತಮ ॥23॥
ಉತ್ಕೃತ್ಯೋತ್ಕೃತ್ಯ ಮಾಂಸಾನಿ ತುಲಯಾ ಸಮತೋಲಯತ್ ॥24॥
ರಾಜ ಎಲ್ಲೈ ರಾಜಶ್ರೇಷ್ಠನೇ, ಆಗ ಉಶೀನರನು ಹೀಗೆ ಮಾತನಾಡಿ, ನೀನು ನನಗೆ ಮಹಾ ಅನುಗ್ರಹವನ್ನು ಮಾಡಿದ್ದೀಯೆ, ಒಳ್ಳೆಯದು, ಹಾಗೆಯೇ ಮಾಡುತ್ತೇನೆಂದು ಹೇಳಿ, ತನ್ನ ಶರೀರದ ಮಾಂಸವನ್ನು ಕತ್ತರಿಸಿ ಕತ್ತರಿಸಿ ತಕ್ಕಡಿಯಲ್ಲಿಟ್ಟು ತೂಗಿದನು.
ಅಂತಃಪುರೇ ತತಸ್ತಸ್ಯ ಸ್ತ್ರಿಯೋ ರತ್ನವಿಭೂಷಿತಾಃ |
ಹಾಹಾಭೂತಾ ವಿನಿಷ್ಕ್ರಾಂತಾಃ ಶ್ರುತ್ವಾ ಪರಮದುಃಖಿತಾಃ ॥25॥
ಅಂತಃಪುರದಲ್ಲಿದ್ದ ರತ್ನಭೂಷಿತರಾದ ಅವನ ಸ್ತ್ರೀಯರು ಈ ವಾರ್ತೆಯನ್ನು ಕೇಳಿ ಬಹಳ ದುಃಖದಿಂದ ಕೂಡಿದವರಾಗಿ ಹಾಹಾಕಾರವನ್ನು ಮಾಡುತ್ತಾ ಅಲ್ಲಿಗೆ ಬಂದರು.
ತಾಸಾಂ ರುದಿತಶಬ್ದೇನ ಮಂತ್ರಿಭೃತ್ಯಜನಸ್ಯ ಚ |
ಬಭೂವ ಸುಮಹಾನ್ನಾದೋ ಮೇಘಗಂಭೀರನಿಸ್ವನಃ ॥26॥
ಅವರ ರೋದನದ ಶಬ್ದದಿಂದ ಮತ್ತು ಮಂತ್ರಿ-ಭೃತ್ಯಜನರ ಶಬ್ದದಿಂದ ಮೇಘ ಗಂಭೀರವಾದ ದೊಡ್ಡ ನಾದವುಂಟಾಯಿತು.
ನಿರುದ್ಧಂ ಗಗನಂ ಸರ್ವಂ ಶುಭ್ರಂ ಮೇಘೈಃ ಸಮಂತತಃ |
ಮಹೀ ಪ್ರಚಲಿತಾ ಚಾಸೀತ್ ತಸ್ಯ ಸತ್ಯೇನ ಕರ್ಮಣಾ ॥27॥
ಶುಭ್ರವಾದ ಗಗನವನ್ನು ಮೇಘವು ಎಲ್ಲ ಕಡೆಗಳಲ್ಲಿಯೂ ಮುಚ್ಚಿತು. ಅವನ ಆ ಸತ್ಯಕರ್ಮದಿಂದ ಭೂಮಿಯು ನಡುಗಿತು.
ಸ ರಾಜಾ ಪಾರ್ಶ್ವತಶ್ಚೈವ ಬಾಹುಭ್ಯಾಮೂರುತಶ್ಚ ಯತ್ |
ತಾನಿ ಮಾಂಸಾನಿ ಸಂಛಿದ್ಯ ತುಲಾಂ ಪೂರಯತೇ ಶನೈಃ ॥28॥
ಆ ರಾಜನು ತನ್ನ ಪಕ್ಕೆಗಳಿಂದಲೂ, ಬಾಹುಗಳಿಂದಲೂ ಮತ್ತು ತೊಡೆಗಳಿಂದಲೂ ಮಾಂಸವನ್ನು ಕತ್ತರಿಸಿ ನಿಧಾನವಾಗಿ ತಕ್ಕಡಿಯಲ್ಲಿ ತುಂಬಿದನು.
ತಥಾಪಿ ನ ಸಮಸ್ತೇನ ಕಪೋತೇನ ಬಭೂವ ಹ |
ಅಸ್ಥಿಭೂತೋ ಯದಾ ರಾಜಾ ನಿರ್ಮಾಂಸೋ ರುಧಿರಸ್ರವಃ ॥29॥
ತುಲಾಂ ತತಃ ಸಮಾರೂಢಃ ಸ್ವಂ ಮಾಂಸಕ್ಷಯಮುತ್ಸೃಜನ್ |
ತತಃ ಸೇಂದ್ರಾಸ್ತ್ರಯೋ ಲೋಕಾಸ್ತಂ ನರೇಂದ್ರಮುಪಸ್ಥಿತಾಃ ॥30॥
ಆದರೂ ಅದರ ತೂಕವು ಕಪೋತದ ತೂಕಕ್ಕೆ ಸಮನಾಗಲಿಲ್ಲ. ರಾಜನು ತನ್ನ ಮಾಂಸವನ್ನೆಲ್ಲ ತೆಗೆದು ರಕ್ತವನ್ನು ಸುರಿಸುತ್ತಾ ಕೇವಲ ಅಸ್ಥಿಮಾತ್ರ ಶರೀರನಾಗಿ ತನ್ನ ಮಾಂಸ ರಹಿತ ಶರೀರವನ್ನು ನೋಡಿ ತಾನೇ ತಕ್ಕಡಿಯಲ್ಲಿ ಕುಳಿತುಕೊಂಡನು. ಆಗ ಇಂದ್ರನನ್ನೇ ಮೊದಲು ಮಾಡಿಕೊಂಡ ಮೂರುಲೋಕಗಳು ಆ ನರೇಂದ್ರನ ಸಮೀಪಕ್ಕೆ ಬಂದರು.
ಭೇರ್ಯಶ್ಚಾಕಾಶಗೈಸ್ತತ್ರ ವಾದಿತಾ ದೇವದುಂದುಭಿಃ |
ಅಮೃತೇನಾವಸಿಕ್ತಶ್ಚ ವೃಷದರ್ಭೋ ನರೇಶ್ವರಃ ॥31॥
ಆಕಾಶಸಂಚಾರಿಗಳಿಂದ ಭೇರಿಗಳು ಬಾರಿಸಲ್ಪಟ್ಟವು. ದೇವದುಂದುಭಿಗಳು ಮೊಳಗಿಸಲ್ಪಟ್ಟವು. ರಾಜನಾದ ವೃಷದರ್ಭನು ಅಮೃತದಿಂದ ಚುಮುಕಿಸಲ್ಪಟ್ಟನು.
ದಿವ್ಯೈಶ್ಚ ಸುಮುಖೈರ್ಮಾಲ್ಯೈರಭಿವೃಷ್ಟಃ ಪುನಃ ಪುನಃ |
ದೇವಗಂಧರ್ವಸಂಘಾತೈರಪ್ಸರೋಭಿಶ್ಚ ಸರ್ವತಃ ॥32॥
ದೇವ-ಗಂಧರ್ವಸಮೂಹದಿಂದಲೂ, ಅಪ್ಸರೆಯರಿಂದಲೂ ಪುನಃ ಪುನಃ ಅವನ ಮೇಲೆ ಎಲ್ಲ ಕಡೆಯಿಂದಲೂ ಸುಗಂಧಯುಕ್ತವಾದ, ಸುಖಕರವಾದ ಹೂಮಾಲೆಗಳ ಮಳೆಯು ಸುರಿಸಲ್ಪಟ್ಟಿತು.
ನೃತ್ತಶ್ಚೈವೋಪಗೀತಶ್ಚ ಪಿತಾಮಹ ಇವ ಪ್ರಭುಃ |
ಹೇಮಪ್ರಾಸಾದಸಂಬಾಧಂ ಮಣಿಕಾಂಚನತೋರಣಮ್ ॥33॥
ಸ ವೈದೂರ್ಯಮಣಿಸ್ತಂಭವಿಮಾನಂ ಸಮಧಿಷ್ಠಿತಃ |
ಸ ರಾಜರ್ಷಿರ್ಗತಃ ಸ್ವರ್ಗಂ ಕರ್ಮಣಾ ತೇನ ಶಾಶ್ವತಮ್ ॥34॥
ಪ್ರಭುವಾದ ಅವನು ಪಿತಾಮಹನಾದ ಬ್ರಹ್ಮನಂತೆ ನೃತ್ಯ, ಗೀತೆಗಳಿಂದ ಸೇವಿಸಲ್ಪಟ್ಟನು. ಆ ರಾಜರ್ಷಿಯು ಸುವರ್ಣಮಯವಾದ ಪ್ರಾಸಾದಗಳಿಂದ ನಿಬಿಡವಾದ ಮಣಿ-ಕಾಂಚನ ತೋರಣಗಳನ್ನು ಹೊಂದಿದ, ವೈಡೂರ್ಯಮಣಿ ಸ್ತಂಭಗಳಿರುವ ಉಪ್ಪರಿಗೆಗಳನ್ನು ಹೊಂದಿರುವ ಗೃಹಗಳಿಂದ ಕೂಡಿದ ಶಾಶ್ವತವಾದ ಸ್ವರ್ಗಕ್ಕೆ ಆ ಕರ್ಮದಿಂದ ಹೋದನು.
ಶರಣಾಗತೇಷು ಚೈವಂ ತ್ವಂ ಕುರು ಸರ್ವಂ ಯುಧಿಷ್ಠಿರ |
ಭಕ್ತಾನಾಮನುರಕ್ತಾನಾಮಾಶ್ರಿತಾನಾಂ ಚ ರಕ್ಷಿತಾ ॥35॥
ಎಲೈ ಯುಧಿಷ್ಠಿರನೇ, ನೀನು ಶರಣಾಗತರಿಗೆ ಹೀಗೆ ಸರ್ವ ಉಪಕಾರವನ್ನು ಮಾಡು. ಭಕ್ತರು, ಅನುರಕ್ತರು ಮತ್ತು ಆಶ್ರಿತರಾದವರನ್ನು ರಕ್ಷಿಸುವವನಾಗು.
ದಯಾವಾನ್ ಸರ್ವಭೂತೇಷು ಪರತ್ರ ಸುಖಮೇಧತೇ ॥36॥
ಸರ್ವಪ್ರಾಣಿಗಳಲ್ಲಿ ದಯೆಯನ್ನು ಹೊಂದಿದವನು ಪರಲೋಕದಲ್ಲಿ ಸುಖವನ್ನು ಪಡೆಯುತ್ತಾನೆ.
ಸಾಧುವೃತ್ತೋ ಹಿ ಯೋ ರಾಜಾ ಸದ್ವೃತ್ತಮನುತಿಷ್ಠತಿ |
ಕಿಂ ನ ಪ್ರಾಪ್ತಂ ಭವೇತ್ತೇನ ಸ್ವವ್ಯಾಜೇನೇಹ ಕರ್ಮಣಾ ॥37॥
ಸ ರಾಜರ್ಷಿರ್ವಿಶುದ್ಧಾತ್ಮಾ ಧೀರಃ ಸತ್ಯಪರಾಕ್ರಮಃ |

ಕಾಶೀನಾಮೀಶ್ವರಃ ಖ್ಯಾತಸ್ತ್ರಿಷು ಲೋಕೇಷು ಕರ್ಮಣಾ ॥38॥
ತನ್ನನ್ನೇ ನಿಮಿತ್ತೀಕರಿಸಿಕೊಂಡು ಮಾಡಿದ ಆ ಸತ್ಕರ್ಮದಿಂದ ಆ ರಾಜನು ಏನನ್ನು ಪಡೆಯಲು ಸಾಧ್ಯವಿಲ್ಲ? ವಿಶುದ್ಧವಾದ ಮನಸ್ಸುಳ್ಳವನೂ, ಧೀರನೂ, ಸತ್ಯಪರಾಕ್ರಮ ಉಳ್ಳವನೂ ಆದ ಕಾಶೀರಾಜನಾದ ಆ ರಾಜರ್ಷಿಯು ತನ್ನ ಇಂತಹ ಕರ್ಮದಿಂದ ಮೂರುಲೋಕಗಳಲ್ಲಿಯೂ ಪ್ರಖ್ಯಾತನಾದನು.

ಯೋಽಪ್ಯನ್ಯಃ ಕಾರಯೇದೇವಂ ಶರಣಾಗತರಕ್ಷಣಮ್ |
ಸೋಽಪಿ ಗಚ್ಛೇತ ತಾಮೇವ ಗತಿಂ ಭರತಸತ್ತಮ ॥39॥
ಎಲೈ ಭರತಸತ್ತಮನೇ, ಬೇರೆಯವನೂ ಸಹ ಹೀಗೆ ಶರಣಾಗತ ರಕ್ಷಣೆಯನ್ನು ಮಾಡಿದರೆ ಅವನೂ ಸಹ ಅದೇ ಗತಿಯನ್ನು ಹೊಂದುವನು.

ಇದಂ ವೃತ್ತಂ ಹಿ ರಾಜರ್ಷೇರ್ವೃಷದರ್ಭಸ್ಯ ಕೀರ್ತಯನ್ |
ಪೂತಾತ್ಮಾ ವೈ ಭವೇಲ್ಲೋಕೇ ಶೃಣುಯಾದ್ ಯಶ್ಚ ನಿತ್ಯಶಃ ॥40॥
ರಾಜರ್ಷಿಯಾದ ವೃಷದರ್ಭನ ಈ ವೃತ್ತಾಂತವನ್ನು ಯಾವನು ನಿತ್ಯದಲ್ಲಿಯೂ ಕೀರ್ತನೆ ಮಾಡುತ್ತಾನೆಯೋ ಅಥವಾ ಕೇಳುತ್ತಾನೆಯೋ ಅವನು ಲೋಕದಲ್ಲಿ ಪವಿತ್ರಾತ್ಮನಾಗುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಶ್ಯೇನ-ಕಪೋತೀಯಂ ನಾಮ
ದ್ವಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು.

* * * * *

ಅರವತ್ಮೂರನೆಯ ಅಧ್ಯಾಯ
ಭೀಷ್ಮರಿಂದ ಬ್ರಾಹ್ಮಣಪ್ರಶಂಸೆ.

ಯುಧಿಷ್ಠಿರಃ
ಕಿಂ ರಾಜ್ಞಃ ಸರ್ವಕೃತ್ಯಾನಾಂ ಗರೀಯಃ ಸ್ಯಾತ್ ಪಿತಾಮಹ |
ಕಿಂ ಕುರ್ವನ್ ಕರ್ಮ ನೃಪತಿರುಭೌ ಲೋಕೌ ಸಮಶ್ನುತೇ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ರಾಜರು ಮಾಡಬೇಕಾದ ಕಾರ್ಯದಲ್ಲಿ ಅತ್ಯಂತ ದೊಡ್ಡದಾದುದು ಯಾವುದು? ರಾಜನು ಯಾವ ಕರ್ಮವನ್ನು ಮಾಡಿದರೆ ಎರಡು ಲೋಕಗಳನ್ನೂ ಪಡೆಯುತ್ತಾನೆ?

ಭೀಷ್ಮಃ
ಏತದ್ ರಾಜ್ಞಃ ಕೃತ್ಯತಮಮಭಿಷಿಕ್ತಸ್ಯ ಭಾರತ |
ಬ್ರಾಹ್ಮಣಾನಾಮನುಷ್ಠಾನಮತ್ಯಂತಂ ಸುಖಮಿಚ್ಛತಾ |
ಶ್ರೋತ್ರಿಯಾನ್ ಬ್ರಾಹ್ಮಣಾನ್ ವೃದ್ಧಾನ್ ನಿತ್ಯಮೇವಾಭಿಪೂಜಯೇತ್ ॥
ಭೀಷ್ಮ ಎಲೈ ಭಾರತನೇ, ಅಭಿಷಿಕ್ತನಾಗಿ ಸುಖವನ್ನು ಬಯಸುವ ರಾಜನಿಗೆ ಬ್ರಾಹ್ಮಣರಿಗೆ ಅನುಕೂಲವಾದ ಸ್ಥಾನವನ್ನು ಕಲ್ಪಿಸಿಕೊಡುವುದು ಮಾಡಬೇಕಾದ ಗುರುತರವಾದ ಕಾರ್ಯ. ಶ್ರೋತ್ರಿಯರೂ, ವೃದ್ಧರೂ ಆದ ಬ್ರಾಹ್ಮಣರನ್ನು ನಿತ್ಯವೂ ಪೂಜಿಸಬೇಕು (ಲಕ್ಷಾಲಂಕಾರ).

ಪೌರಜಾನಪದಾಂಶ್ಚಾಪಿ ಬ್ರಾಹ್ಮಣಾಂಶ್ಚ ಬಹುಶ್ರುತಾನ್ |
ಸಾಂತ್ವೇನ ಭೋಗದಾನೇನ ನಮಸ್ಕಾರೈಸ್ತಥಾಽರ್ಚಯೇತ್ ॥3॥
ಪೌರ-ಜಾನಪದರನ್ನೂ, ಬಹುಶ್ರುತರಾದ ಬ್ರಾಹ್ಮಣರನ್ನೂ ಸಮಾಧಾನ ವಚನಗಳಿಂದಲೂ, ಭೋಗದಾನಗಳಿಂದಲೂ, ನಮಸ್ಕಾರಗಳಿಂದಲೂ ಪೂಜಿಸಬೇಕು.

ಏತತ್ ಕೃತ್ಯತಮಂ ರಾಜ್ಞೋ ನಿತ್ಯಮೇವೇತಿ ಲಕ್ಷಯೇತ್ |
ಯಥಾಽಽತ್ಮಾನಂ ಯಥಾ ಪುತ್ರಾಂಸ್ತಥೈತಾನ್ ಪರಿಪಾಲಯೇತ್ ॥4॥
ಇದು ರಾಜನು ನಿತ್ಯವೂ ಮಾಡಬೇಕಾದ ಅತ್ಯಂತ ದೊಡ್ಡ ಕಾರ್ಯವೆಂದು ಗಮನಿಸಬೇಕು. ತನ್ನನ್ನು, ತನ್ನ ಪುತ್ರರನ್ನು ಪರಿಪಾಲಿಸಿದಂತೆ ಇವರನ್ನೂ ಪರಿಪಾಲಿಸಬೇಕು.

ಯೇ ಚಾಪ್ಯೇಷಾಂ ಪೂಜ್ಯತಮಾಸ್ತಾನ್ ದೃಢಂ ಪ್ರತಿಪೂಜಯೇತ್ |
ತೇಷು ಶಾಂತೇಷು ತದ್ರಾಷ್ಟ್ರಂ ಸರ್ವಮೇವ ವಿರಾಜತೇ ॥5॥
ಅವರಲ್ಲಿಯೂ ಯಾರು ಅತ್ಯಂತ ಪೂಜ್ಯರಿರುತ್ತಾರೆಯೋ ಅವರನ್ನು ಇನ್ನೂ ಹೆಚ್ಚಾಗಿ ಪೂಜಿಸಬೇಕು. ಅಂತಹವರು ಶಾಂತವಾಗಿದ್ದರೆ ರಾಷ್ಟ್ರವೆಲ್ಲವೂ ಕಂಗೊಳಿಸುತ್ತದೆ.

ತೇ ಪೂಜ್ಯಾಸ್ತೇ ನಮಸ್ಕಾರ್ಯಾಸ್ತೇ ರಕ್ಷ್ಯಾಃ ಪಿತರೋ ಯಥಾ |
ತೇಷ್ವೇವ ಯಾತ್ರಾ ಲೋಕಸ್ಯ ಭೂತಾನಾಮಿವ ವಾಸವೇ ॥6॥
ಅವರೇ ತಂದೆಯಂತೆ ಪೂಜ್ಯರು, ಅವರೇ ನಮಸ್ಕಾರಕ್ಕೆ ಅರ್ಹರಾದವರು ಮತ್ತು ರಕ್ಷಿಸಲ್ಪಡಬೇಕಾದವರು. ಪ್ರಾಣಿಗಳ ಜೀವನವು ಇಂದ್ರನನ್ನು ಅವಲಂಬಿಸಿದಂತೆ ಲೋಕಯಾತ್ರೆಯು ಅವರನ್ನೇ ಅವಲಂಬಿಸಿದೆ.

ಅಭಿಚಾರೈರುಪಾಯೈಶ್ಚ ದಹೇಯುರಪಿ ತೇಜಸಾ |
ನಿಃಶೇಷಂ ಕುಪಿತಾಃ ಕುರ್ಯುರುಗ್ರಾಃ ಸತ್ಯಪರಾಕ್ರಮಾಃ ॥7॥

ಅಂತಹ ಉಗ್ರರೂ, ಸತ್ಯಪರಾಕ್ರಮರೂ ಆದ ಬ್ರಾಹ್ಮಣರು ಕೋಪಗೊಂಡರೆ ತಮ್ಮ ತೇಜಸ್ಸಿನಿಂದಲೂ, ಅಭಿಚಾರ ಪ್ರಯೋಗಗಳಿಂದಲೂ, ಬೇರೆ ಉಪಾಯಗಳಿಂದಲೂ ನಿಶ್ಶೇಷವಾಗಿ ದಹಿಸಿಯಾರು.
ನಾಂತಮೇಷಾಂ ಪ್ರಪಶ್ಯಾಮಿ ನ ದಿಶಶ್ಚಾಪ್ಯಪಾವೃತಾಃ |
ಕುಪಿತಾಃ ಸಮುದೀಕ್ಷಂತೇ ದಾವೇಷ್ವಗ್ನಿಶಿಖಾ ಇವ ||8||
ಅವರ ಸಾಮರ್ಥ್ಯಕ್ಕೆ ಎಲ್ಲೆಯನ್ನೇ ಕಾಣುವುದಿಲ್ಲ. ಎಲ್ಲ ದಿಕ್ಕುಗಳೂ ಅವರಿಗೆ ಮುಕ್ತವಾಗಿವೆ. ಕುಪಿತರಾದರೆ ಅವರ ದೃಷ್ಟಿಯು ದಾವಾಗ್ನಿಯ ಜ್ವಾಲೆಯಂತೆ ಇರುತ್ತದೆ.
ಬಿಭ್ಯತ್ಯೇಷಾಂ ಸಾಹಸಿಕಾ ಗುಣಾಸ್ತೇಷಾಮತೀವ ಹಿ |
ಕೂಪಾ ಇವ ತೃಣಚ್ಛನ್ನಾ ವಿಶುದ್ಧಾ ದ್ಯೌರಿವಾಪರೇ ||9||
ಸಾಹಸ ಮಾಡುವವರೂ ಸಹ ಅವರಿಗೆ ಹೆದರುತ್ತಾರೆ. ಅವರ ಗುಣಗಳು ಅಪಾರವಾಗಿವೆ. ಕೆಲವರು ಹುಲ್ಲಿನಿಂದ ಮುಚ್ಚಿದ ಬಾವಿಯಂತೆಯೂ, ಇನ್ನು ಕೆಲವರು ವಿಶುದ್ಧವಾದ ಆಕಾಶದಂತೆಯೂ ಇರುತ್ತಾರೆ.
ಪ್ರಸಹ್ಯಕಾರಿಣಃ ಕೇಚಿತ್ ಕಾರ್ಪಾಸಮೃದವೋಽಪರೇ |
ಸಂತಿ ಚೈಷಾಮತಿಶಠಾಸ್ತಥಾನ್ಯೇಽತಿತಪಸ್ವಿನಃ ||10||
ಕೆಲವರು ತಮ್ಮ ಸಾಮರ್ಥ್ಯವನ್ನು ಉಪಯೋಗಿಸಿ ಕಾರ್ಯವನ್ನು ಮಾಡುವವರು, ಇನ್ನು ಕೆಲವರು ಹತ್ತಿಯಂತೆ ಮೃದುವಾದವರು. ಅವರಲ್ಲಿ ಬಹಳ ಶಠರೂ ಇದ್ದಾರೆ ಬಹಳ ತಪಸ್ವಿಗಳಾದವರೂ ಇದ್ದಾರೆ.
ಕೃಷಿಗೋರಕ್ಷಮಪ್ಯನ್ಯೇ ಭೈಕ್ಷಮನ್ಯೇಽಪ್ಯನುಷ್ಠಿತಾಃ |
ಚೋರಾಶ್ಚಾನ್ಯೇಽನೃತಾಶ್ಚಾನ್ಯೇ ತಥಾನ್ಯೇ ನಟನರ್ತಕಾಃ ||11||
ಕೆಲವರು ಕೃಷಿ, ಗೋರಕ್ಷವನ್ನು ಮಾಡುತ್ತಾರೆ. ಇನ್ನು ಕೆಲವರು ಭಿಕ್ಷಾವೃತ್ತಿಯನ್ನು ಮಾಡುತ್ತಾರೆ. ಅವರಲ್ಲಿ ಚೋರರೂ, ಅನೃತವನ್ನು ನುಡಿಯುವವರೂ, ನಟ-ನರ್ತಕರೂ ಇದ್ದಾರೆ.
ಸರ್ವಕರ್ಮಸು ದೃಶ್ಯಂತೇ ಪ್ರಶಾಂತೇಷ್ವಿತರೇಷು ಚ |
ವಿವಿಧಾಚಾರಯುಕ್ತಾಶ್ಚ ಬ್ರಾಹ್ಮಣಾ ಭರತರ್ಷಭ ||12||
ಅವರು ಪ್ರಶಾಂತವಾದ ಮತ್ತು ಪ್ರಶಾಂತವಲ್ಲದ ಎಲ್ಲ ಕಾರ್ಯಗಳಲ್ಲಿಯೂ ಕಂಡುಬರುತ್ತಾರೆ. ಎಲ್ಲೈ ಭರತಶ್ರೇಷ್ಠನೇ, ಬ್ರಾಹ್ಮಣರು ಅನೇಕ ವಿಧವಾದ ಆಚಾರದಿಂದ ಕೂಡಿದವರು.
ನಾನಾಕರ್ಮಸು ಯುಕ್ತಾನಾಂ ಬಹುಕರ್ಮೋಪಜೀವಿನಾಮ್ |
ಧರ್ಮಜ್ಞಾನಾಂ ಸತಾಂ ತೇಷಾಂ ನಿತ್ಯಮೇವಾನುಕೀರ್ತಯೇತ್ ||13||
ಅನೇಕ ಕಾರ್ಯಗಳಲ್ಲಿ ನಿಯುಕ್ತರಾದ, ಅನೇಕ ಕರ್ಮಗಳನ್ನು ಉಪಜೀವಿಸುವ ಧರ್ಮಜ್ಞರಾದ, ಸಜ್ಜನರಾದ ಅವರನ್ನು ಯಾವಾಗಲೂ ಪ್ರಶಂಸಿಸಬೇಕು.
ಪಿತೄಣಾಂ ದೇವತಾನಾಂ ಚ ಮನುಷ್ಯೋರಗರಕ್ಷಸಾಮ್ |
ಪುರೋಹಿತಾ ಮಹಾಭಾಗಾ ಬ್ರಾಹ್ಮಣಾ ವೈ ನರಾಧಿಪ ||14||
ಎಲ್ಲೈ ನರಾಧಿಪನೇ, ಪಿತೃಗಳಿಗೂ, ದೇವತೆಗಳಿಗೂ, ಮನುಷ್ಯೋರಗ-ರಾಕ್ಷಸರಿಗೂ ಮಹಾನುಭಾವರಾದ ಬ್ರಾಹ್ಮಣರೇ ಪುರೋಹಿತರಷ್ಟೇ?
ನೈತೇ ದೇವೈರ್ನ ಪಿತೃಭಿರ್ನ ಗಂಧರ್ವೈರ್ನ ರಾಕ್ಷಸೈಃ |
ನಾಸುರೈರ್ನ ಪಿಶಾಚೈಶ್ಚ ಶಕ್ಯಾ ಜೇತುಂ ದ್ವಿಜಾತಯಃ ||15||
ದೇವತೆಗಳಾಗಲೀ, ಪಿತೃಗಳಾಗಲೀ, ಗಂಧರ್ವರಾಗಲೀ, ರಾಕ್ಷಸರಾಗಲೀ, ಅಸುರರಾಗಲೀ, ಪಿಶಾಚಿಗಳಾಗಲೀ ತಮ್ಮ ಶಕ್ತಿಯಿಂದ ಬ್ರಾಹ್ಮಣರನ್ನು ಜಯಿಸಲು ಸಾಧ್ಯವಿಲ್ಲ.
ಅದೈವಂ ದೈವತಂ ಕುರ್ಯುರ್ದೈವತಂ ಚಾಪ್ಯದೈವತಮ್ |
ಯಮಿಚ್ಛೇಯುಃ ಸ ರಾಜಾ ಸ್ಯಾದ್ ಯಂ ದ್ವಿಷ್ಯುಃ ಸ ಪರಾಭವೇತ್ ||
ಅವರು ದೇವತೆಯಲ್ಲದವನನ್ನೂ ದೇವತೆಯಾಗಿ ಮಾಡಿಯಾರು. ದೇವತೆಯನ್ನು ಅದೇವತೆಯನ್ನಾಗಿ ಮಾಡಿಯಾರು. ಅವರು ಯಾರನ್ನು ಇಷ್ಟಪಡುತ್ತಾರೆಯೋ ಅವನು ರಾಜನಾದಾನು. ಯಾರನ್ನು ದ್ವೇಷಿಸುತ್ತಾರೋ ಅವನು ಪರಾಭವ ಹೊಂದಿಯಾನು.
ಪರಿವಾದಂ ಚ ಯೇ ಕುರ್ಯುರ್ಬ್ರಾಹ್ಮಣಾನಾಮಚೇತಸಃ |
ನಿಂದಾಪ್ರಶಂಸಾಕುಶಲಾಃ ಕೀರ್ತ್ಯಕೀರ್ತಿಪರಾವರಾಃ |
ಪರಿಕುಪ್ಯಂತಿ ತೇ ರಾಜನ್ ಸತತಂ ದ್ವಿಷತಾಂ ದ್ವಿಜಾಃ ||17||
ನಿಂದಾ-ಪ್ರಶಂಸೆಗಳಲ್ಲಿ ಕುಶಲರಾದ, ಕೀರ್ತಿಯನ್ನು ಶ್ರೇಷ್ಠವೆಂದೂ, ಅಕೀರ್ತಿಯನ್ನು ಕನಿಷ್ಠವೆಂದೂ ತಿಳಿಯುವ ಅವರು ಯಾವ ಮೂರ್ಖರು ತಮ್ಮನ್ನು ನಿಂದಿಸುತ್ತಾರೆಯೋ ಮತ್ತು ದ್ವೇಷವನ್ನು ಮಾಡುತ್ತಾರೆಯೋ ಅವರ ಮೇಲೆ ಸತತವಾಗಿ ಕೋಪಗೊಳ್ಳುತ್ತಾರೆ.
ಬ್ರಾಹ್ಮಣಾ ಯಂ ಪ್ರಶಂಸಂತಿ ಪುರುಷಃ ಸ ಪ್ರವರ್ಧತೇ |
ಬ್ರಾಹ್ಮಣೈರ್ಯಃ ಪರಾಕೃಷ್ಟಃ ಪರಾಭೂಯಾತ್ ಕ್ಷಣಾದ್ಧಿ ಸಃ ||18||
ಬ್ರಾಹ್ಮಣರು ಯಾವನನ್ನು ಹೊಗಳುತ್ತಾರೆಯೋ ಅಂತಹ ಪುರುಷನು ಅಭಿವೃದ್ಧಿಯನ್ನು ಹೊಂದುತ್ತಾನೆ. ಬ್ರಾಹ್ಮಣರಿಂದ ನಿಂದಿಸಲ್ಪಡುವವನು ಒಂದೇ ಕ್ಷಣದಲ್ಲಿ ಪರಾಭವ ಹೊಂದುತ್ತಾನೆ.
ಶಕಾ ಯವನಕಾಂಬೋಜಾಸ್ತಾಸ್ತಾಃ ಕ್ಷತ್ರಿಯಜಾತಯಃ |
ವೃಷಲತ್ವಂ ಪರಿಗತಾ ಬ್ರಾಹ್ಮಣಾನಾಮದರ್ಶನಾತ್ ||19||
ಶಕರೂ, ಯವನರೂ, ಕಾಂಬೋಜರೂ ಮೊದಲಾದ ಕ್ಷತ್ರಿಯ ಜಾತಿಯವರು ಬ್ರಾಹ್ಮಣರನ್ನು ನೋಡದಿದ್ದ ಕಾರಣದಿಂದ

ಶೂದ್ರತ್ವವನ್ನು ಹೊಂದಿದರು.
ದ್ರಮಿಳಾಶ್ಚ ಕಳಿಂಗಾಶ್ಚ ಪುಳಿಂದಾಶ್ಚಾಪ್ಯುಶೀನರಾಃ |
ಕೌಲಾಃ ಸರ್ಪಾ ಮಾಹಿಷಕಾಸ್ತಾಸ್ತಾಃ ಕ್ಷತ್ರಿಯಜಾತಯಃ ॥20॥
ವೃಷಲತ್ವಂ ಪರಿಗತಾ ಬ್ರಾಹ್ಮಣಾನಾಮದರ್ಶನಾತ್ |
ಶ್ರೇಯಾನ್ ಪರಾಜಯಸ್ತೇಭ್ಯೋ ನ ಜಯೋ ಜಯತಾಂವರ ॥21॥
ದ್ರಮಿಳರೂ, ಕಳಿಂಗರೂ, ಪುಳಿಂದರೂ, ಉಶೀನರರೂ, ಕೌಲರೂ, ಸರ್ಪದೇಶದವರೂ, ಮಾಹಿಷಿಕರೂ ಮೊದಲಾದ ಕ್ಷತ್ರಿಯಜಾತಿಯವರು ಬ್ರಾಹ್ಮಣರನ್ನು ನೋಡದಿದ್ದ ಕಾರಣದಿಂದ ಶೂದ್ರರಾದರು. ಎಲೈ ಜಯಶಾಲಿಗಳಲ್ಲಿ ಶ್ರೇಷ್ಠನೇ, ಬ್ರಾಹ್ಮಣರಿಂದ ಪರಾಜಯವನ್ನು ಹೊಂದುವುದು ಶ್ರೇಯಸ್ಕರವಾದುದು. ಅವರನ್ನು ಜಯಿಸುವುದು ಶ್ರೇಯಸ್ಕರವಲ್ಲ.
ಯಸ್ತು ಸರ್ವಮಿದಂ ಹನ್ಯಾದ್ ಬ್ರಾಹ್ಮಣಂ ಚ ನ ತತ್ಸಮಮ್ |
ಬ್ರಹ್ಮವಧ್ಯಾ ಮಹಾನ್ ದೋಷ ಇತ್ಯಾಹುಃ ಪರಮರ್ಷಯಃ ॥22॥
ಒಬ್ಬನು ಈ ಜಗತ್ತೆಲ್ಲವನ್ನೂ ಕೊಂದರೂ ಮತ್ತು ಬ್ರಾಹ್ಮಣರನ್ನು ಕೊಂದರೂ ಜಗತ್ತಿನ ಹತ್ಯೆಯು ಬ್ರಹ್ಮಹತ್ಯೆಗೆ ಸಮವಾಗುವುದಿಲ್ಲ. ಬ್ರಹ್ಮಹತ್ಯೆಯು ಬಹಳ ದೊಡ್ಡ ದೋಷವೆಂದು ಶ್ರೇಷ್ಠರಾದ ಋಷಿಗಳು ಹೇಳುತ್ತಾರೆ.
ಪರಿವಾದೋ ದ್ವಿಜಾತೀನಾಂ ನ ಶ್ರೋತವ್ಯಃ ಕಥಂಚನ |
ಆಸೀತಾಧೋಮುಖಸ್ತೂಷ್ಣೀಂ ಸಮುತ್ಥಾಯ ವ್ರಜೇತ ವಾ ॥23॥
ಬ್ರಾಹ್ಮಣರ ನಿಂದೆಯನ್ನು ಎಂದೂ ಕೇಳಬಾರದು. ತಲೆಯನ್ನು ತಗ್ಗಿಸಿ ಕುಳಿತು ಕೊಳ್ಳಬೇಕು ಅಥವಾ ಮೌನದಿಂದ ಎದ್ದು ಹೊರಗೆ ಹೋಗಬೇಕು.
ನ ಸ ಜಾತೋ ಜನಿಷ್ಯೋ ವಾ ಪೃಥಿವ್ಯಾಮಿಹ ಕಶ್ಚನ |
ಯೋ ಬ್ರಾಹ್ಮಣವಿರೋಧೇನ ಸುಖಂ ಜೀವಿತುಮುತ್ಸಹೇತ್ ॥24॥
ಹಿಂದೆ ಹುಟ್ಟಿದವನಾಗಲೀ, ಮುಂದೆ ಹುಟ್ಟುವವನಾಗಲೀ ಈ ಭೂಮಿಯಲ್ಲಿ ಬ್ರಾಹ್ಮಣರ ವಿರೋಧವನ್ನು ಮಾಡಿ ಸುಖವಾಗಿ ಜೀವಿಸ ಬಯಸಲು ಸಾಧ್ಯವಿಲ್ಲ.
ದುರ್ಗ್ರಹೋ ಮುಷ್ಟಿನಾ ವಾಯುರ್ದುಃಸ್ಪರ್ಶಃ ಪಾಣಿನಾ ಶಶೀ |
ದುರ್ಧರಾ ಪೃಥಿವೀ ಮೂರ್ಧ್ನಾ ದುರ್ಜಯಾ ಬ್ರಾಹ್ಮಣಾ ಭುವಿ ॥25॥
ವಾಯುವನ್ನು ಮುಷ್ಟಿಯಿಂದ ಹಿಡಿಯುವುದು ಅಸಾಧ್ಯ. ಚಂದ್ರನನ್ನು ಹಸ್ತದಿಂದ ಮುಟ್ಟುವುದು ಅಸಾಧ್ಯ. ಭೂಮಿಯನ್ನು ಶಿರಸ್ಸಿನಲ್ಲಿ ಧರಿಸುವುದು ಅಸಾಧ್ಯ. ಭೂಮಿಯಲ್ಲಿ ಬ್ರಾಹ್ಮಣರನ್ನು ಜಯಿಸುವುದು ಅಸಾಧ್ಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಬ್ರಾಹ್ಮಣಪ್ರಶಂಸಾನಾಮ ತ್ರಿಷಷ್ಟಿತಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೂರನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ನಾಲ್ಕನೆಯ ಅಧ್ಯಾಯ
ಬ್ರಾಹ್ಮಣ ಪ್ರಶಂಸೆ. ಪೃಥಿವೀ-ವಾಸುದೇವ ಸಂವಾದ.
ಭೀಷ್ಮಃ
ಬ್ರಾಹ್ಮಣಾನೇವ ಸತತಂ ಭೃಶಂ ಸಂಪ್ರತಿಪೂಜಯೇತ್ |
ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ॥1॥
ಭೀಷ್ಮ ಬ್ರಾಹ್ಮಣರನ್ನೇ ಸತತವಾಗಿ ಚೆನ್ನಾಗಿ ಪೂಜಿಸಬೇಕು. ಅವರಿಗೆ ಚಂದ್ರನು ರಾಜನಾದವನು. ಅವರು ಸುಖ-ದುಃಖವನ್ನು ಉಂಟು ಮಾಡಲು ಸಮರ್ಥರಾದವರು.
ಏತೇ ಭೋಗೈರಲಂಕಾರೈರನ್ಯೈಶ್ಚೈವ ಕಿಮಿಚ್ಛಕೈಃ |
ಸದಾ ಪೂಜ್ಯಾ ನಮಸ್ಕಾರ್ಯಾ ರಕ್ಷ್ಯಾಶ್ಚ ಪಿತೃವನ್ನೃಪೈಃ |
ಅತೋ ರಾಷ್ಟ್ರಸ್ಯ ಶಾಂತಿರ್ಹಿ ಭೂತಾನಾಮಿವ ವಾಸವಾತ್ ॥2॥
ಅವರನ್ನು ಭೋಗಗಳಿಂದಲೂ, ಅಲಂಕಾರಗಳಿಂದಲೂ, ಅವರು ಇಚ್ಛಿಸುವ ಅನೇಕ ಪದಾರ್ಥಗಳಿಂದಲೂ ಯಾವಾಗಲೂ ಚೆನ್ನಾಗಿ ಪೂಜಿಸಿ, ನಮಸ್ಕರಿಸಿ ರಾಜರು ತಂದೆಯಂತೆ ರಕ್ಷಿಸಬೇಕು. ಎಲ್ಲ ಪ್ರಾಣಿಗಳಿಗೆ ಇಂದ್ರನಿಂದ ಶಾಂತಿ ಉಂಟಾದಂತೆ ರಾಷ್ಟ್ರಕ್ಕೆ ಬ್ರಾಹ್ಮಣರಿಂದ ಶಾಂತಿಯುಂಟಾಗುತ್ತದೆ.
ಜಾಯತಾಂ ಬ್ರಹ್ಮವರ್ಚಸ್ವೀ ರಾಷ್ಟ್ರೇ ವೈ ಬ್ರಾಹ್ಮಣಃ ಶುಚಿಃ |
ಮಹಾರಥಶ್ಚ ರಾಜನ್ಯ ಏಷ್ಟವ್ಯಃ ಶತ್ರುತಾಪನಃ ॥3॥
ನನ್ನ ರಾಜ್ಯದಲ್ಲಿ ಶುಚಿಯೂ, ಬ್ರಹ್ಮವರ್ಚಸ್ವಿಯೂ ಆದ ಬ್ರಾಹ್ಮಣನು ಜನಿಸಲಿ. ಮಹಾರಥನೂ, ಶತ್ರುತಾಪನನೂ ಆದ ಕ್ಷತ್ರಿಯನು ಜಯಿಸಲಿ ಎಂದು (ರಾಜನು) ಬಯಸಬೇಕು.
ಬ್ರಾಹ್ಮಣಂ ಜಾತಿಸಂಪನ್ನಂ ಧರ್ಮಜ್ಞಂ ಸಂಶಿತವ್ರತಮ್ |
ವಾಸಯೇತ ಗೃಹೇ ರಾಜನ್ನ ತಸ್ಮಾತ್ ಪರಮಸ್ತಿ ವೈ ॥4॥
ಎಲೈ ರಾಜನೇ, ಸತ್ಕುಲಪ್ರಸೂತನಾದ, ಧರ್ಮಜ್ಞನಾದ, ವ್ರತಧಾರಿಯಾದ ಬ್ರಾಹ್ಮಣನನ್ನು ಮನೆಯಲ್ಲಿ ಇರಿಸಿಕೊಳ್ಳಬೇಕು. ಅವನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.

ಬ್ರಾಹ್ಮಣೇಭ್ಯೋ ಹವಿರ್ದತ್ತಂ ಪ್ರತಿಗೃಹ್ಣಂತಿ ದೇವತಾಃ |
ಪಿತರಃ ಸರ್ವಭೂತಾನಾಂ ನೈತೇಭ್ಯೋ ವಿದ್ಯತೇ ಪರಮ್ ||5||
ಬ್ರಾಹ್ಮಣರಿಗೆ ಕೊಟ್ಟ ಹವಿಸ್ಸನ್ನು ದೇವತೆಗಳು ಸ್ವೀಕರಿಸುತ್ತಾರೆ. ಬ್ರಾಹ್ಮಣರು ಎಲ್ಲ ಜೀವರಿಗೂ ತಂದೆಯ ಸಮಾನರಾದವರು. ಅವರಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.
ಆದಿತ್ಯಶ್ಚಂದ್ರಮಾ ವಾಯುರ್ಭೂಮಿರಾಪೋಽಂಬರಂ ದಿಶಃ |
ಸರ್ವೇ ಬ್ರಾಹ್ಮಣಮಾವಿಶ್ಯ ಸದಾಽನ್ನಮುಪಭುಂಜತೇ ||6||
ಸೂರ್ಯ, ಚಂದ್ರ, ವಾಯು, ಭೂಮಿ, ಜಲ, ಆಕಾಶ, ದಿಕ್ಕು- ಎಲ್ಲವೂ ಬ್ರಾಹ್ಮಣರನ್ನು ಪ್ರವೇಶಿಸಿ ಯಾವಾಗಲೂ ಅನ್ನವನ್ನು ಭುಂಜಿಸುತ್ತಾರೆ.
ನ ತಸ್ಯಾಶ್ನಂತಿ ಪಿತರೋ ಯಸ್ಯ ವಿಪ್ರಾ ನ ಭುಂಜತೇ |
ದೇವಾಶ್ಚಾಪ್ಯಸ್ಯ ನಾಶ್ನಂತಿ ಪಾಪಸ್ಯ ಬ್ರಾಹ್ಮಣದ್ವಿಷಃ ||7||
ಯಾವನ ಮನೆಯಲ್ಲಿ ಬ್ರಾಹ್ಮಣರು ಭುಂಜಿಸುವುದಿಲ್ಲವೋ ಅವನ ಅನ್ನವನ್ನು ಪಿತೃಗಳು ಸ್ವೀಕರಿಸುವುದಿಲ್ಲ. ಬ್ರಾಹ್ಮಣರನ್ನು ದ್ವೇಷಿಸುವ ಪಾಪಿಯ ಅನ್ನವನ್ನು ದೇವತೆಗಳೂ ಸ್ವೀಕರಿಸುವುದಿಲ್ಲ.
ಬ್ರಾಹ್ಮಣೇಷು ತು ತುಷ್ಟೇಷು ಪ್ರೀಯಂತೇ ಪಿತರಃ ಸದಾ |
ತಥೈವ ದೇವತಾ ರಾಜನ್ ನಾತ್ರ ಕಾರ್ಯಾ ವಿಚಾರಣಾ ||8||
ಎಲೈ ರಾಜನೇ, ಬ್ರಾಹ್ಮಣರು ಪ್ರೀತರಾದರೆ ಪಿತೃಗಳು ಸದಾ ಪ್ರೀತರಾಗುತ್ತಾರೆ. ಹಾಗೆಯೇ ದೇವತೆಗಳೂ ಪ್ರೀತರಾಗುತ್ತಾರೆ. ಇದರಲ್ಲಿ ಸಂಶಯಪಡಬೇಕಾದುದಿಲ್ಲ.
ತಥೈವ ತೇಽಪಿ ಪ್ರೀಯಂತೇ ಯೇಷಾಂ ಭವತಿ ತದ್ಧವಿಃ |
ನ ಚ ಪ್ರೇತ್ಯ ವಿನಶ್ಯಂತಿ ಗಚ್ಛಂತಿ ಪರಮಾಂ ಗತಿಮ್ ||9||
ಹಾಗೆಯೇ ಯಾರ ಉದ್ದೇಶದಿಂದ ಹವಿಸ್ಸನ್ನು ಕೊಟ್ಟಿದೆಯೋ ಅಂತಹ ದೇವತೆಗಳೂ ಪ್ರೀತರಾಗುತ್ತಾರೆ. ಅಂತಹವರು ಮರಣವನ್ನು ಹೊಂದಿ ವಿನಾಶವನ್ನು ಹೊಂದದೆ ಶ್ರೇಷ್ಠವಾದ ಗತಿಯನ್ನು ಪಡೆಯುತ್ತಾರೆ.
ಯೇನ ಯೇನೈವ ಹವಿಷಾ ಬ್ರಾಹ್ಮಣಾಂಸ್ತರ್ಪಯೇನ್ನರಃ |
ತೇನ ತೇನೈವ ಪ್ರೀಯಂತೇ ಪಿತರೋ ದೇವತಾಸ್ತಥಾ ||10||
ಯಾವ ಯಾವ ಹವಿಸ್ಸಿನಿಂದ ನರನು ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಾನೆಯೋ ಅದೇ ಹವಿಸ್ಸುಗಳಿಂದ ಪಿತೃಗಳು ಮತ್ತು ದೇವತೆಗಳು ಪ್ರೀತರಾಗುತ್ತಾರೆ.
ಬ್ರಾಹ್ಮಣಾದೇವ ತದ್ಭೂತಂ ಪ್ರಭವಂತಿ ಯತಃ ಪ್ರಜಾಃ |
ಯತಶ್ಚಾಯಂ ಪ್ರಭವತಿ ಪ್ರೇತ್ಯ ಯತ್ರ ಚ ಗಚ್ಛತಿ ||11||
ವೇದೈಷ ಮಾರ್ಗಂ ಸ್ವರ್ಗಸ್ಯ ತಥೈವ ನರಕಸ್ಯ ಚ |
ಆಗತಾನಾಗತೇ ಚೋಭೇ ಬ್ರಾಹ್ಮಣೋ ದ್ವಿಪದಾಂವರಃ |
ಬ್ರಾಹ್ಮಣೋ ಭರತಶ್ರೇಷ್ಠ ಸ್ವಧರ್ಮಂ ವೇದ ಮೇಧಯಾ ||12||
ಬ್ರಾಹ್ಮಣರಿಂದಲೇ ಎಲ್ಲವೂ ಉಂಟಾಗಿದೆ. ಪ್ರಜೆಗಳು ಎಲ್ಲಿಂದ ಜನಿಸುತ್ತಾರೆ? ಈ ಪ್ರಪಂಚವು ಎಲ್ಲಿಂದ ಬಂದಿದೆ? ವಿನಾಶವನ್ನು ಹೊಂದಿ ಎಲ್ಲಿಗೆ ಹೋಗುತ್ತದೆ? ಹೀಗೆ ಇದೆಲ್ಲವನ್ನೂ ಸ್ವರ್ಗ ಮತ್ತು ನರಕ ಮಾರ್ಗಗಳನ್ನೂ, ಅತೀತ ಮತ್ತು ಭವಿಷ್ಯ ವಸ್ತುಗಳನ್ನೂ ದ್ವಿಪದರಲ್ಲಿ ಶ್ರೇಷ್ಠನಾದ ಈ ಬ್ರಾಹ್ಮಣನು ತಿಳಿದಿರುತ್ತಾನೆ. ಎಲೈ ಭರತಶ್ರೇಷ್ಠನೇ, ಬ್ರಾಹ್ಮಣನು ತನ್ನ ಮೇಧಾಶಕ್ತಿಯಿಂದ ತನ್ನ ಧರ್ಮವನ್ನು ತಿಳಿದಿರುತ್ತಾನೆ.
ಯೇ ಚೈನಮನುವರ್ತಂತೇ ತೇ ನ ಯಾಂತಿ ಪರಾಭವಮ್ |
ನ ತೇ ಪ್ರೇತ್ಯ ವಿನಶ್ಯಂತಿ ಗಚ್ಛಂತಿ ನ ಪರಾಭವಮ್ ||13||
ಬ್ರಾಹ್ಮಣರನ್ನು ಅನುಸರಿಸುವವರು ಪರಾಭವವನ್ನು ಹೊಂದುವುದಿಲ್ಲ. ಅವರು ಮರಣವನ್ನು ಹೊಂದಿ ವಿನಾಶವನ್ನು ಹೊಂದುವುದಿಲ್ಲ. ಪರಾಭವವನ್ನೂ ಹೊಂದುವುದಿಲ್ಲ.
ಯೇ ಬ್ರಾಹ್ಮಣಮುಖಾತ್ ಪ್ರಾಪ್ತಂ ಪ್ರತಿಗೃಹ್ಣಂತಿ ವೈ ವಚಃ |
ಕೃತಾತ್ಮಾನೋ ಮಹಾತ್ಮಾನಸ್ತೇ ನ ಯಾಂತಿ ಪರಾಭವಮ್ ||14||
ಯಾವ ಜಿತಮನಸ್ಕರಾದ ಮಹಾತ್ಮರು ಬ್ರಾಹ್ಮಣನ ಮುಖದಿಂದ ಬಂದ ಮಾತನ್ನು ಸ್ವೀಕರಿಸುತ್ತಾರೆಯೋ ಅವರು ಪರಾಭವವನ್ನು ಹೊಂದುವುದಿಲ್ಲ.
ಕ್ಷತ್ರಿಯಾಣಾಂ ಪ್ರತಪತಾಂ ತೇಜಸಾ ಚ ಬಲೇನ ಚ |
ಬ್ರಾಹ್ಮಣೇಷ್ವೇವ ಶಾಮ್ಯಂತಿ ತೇಜಾಂಸಿ ಚ ಬಲಾನಿ ಚ ||15||
ತೇಜಸ್ಸಿನಿಂದಲೂ ಮತ್ತು ಬಲದಿಂದಲೂ ಜ್ವಲಿಸುವ ಕ್ಷತ್ರಿಯರ ತೇಜಸ್ಸು ಬ್ರಾಹ್ಮಣರನ್ನು ತಲುಪಿ ಉಪಶಮನವನ್ನು ಹೊಂದುತ್ತದೆ.
ಭೃಗವೋಽಜಯಂಸ್ತಾಳಜಂಘಾನ್ನೀಪಾನಂಗಿರಸೋಽಜಯನ್ |
ಭರದ್ವಾಜೋ ವೈತಹವ್ಯಾನೈಲಾಂಶ್ಚ ಭರತರ್ಷಭ ||16||
ಭರತಶ್ರೇಷ್ಠನೇ, ಭೃಗುಗಳು ತಾಳಜಂಘರನ್ನು ಜಯಿಸಿದರು. ಅಂಗಿರಸರು ನೀಪರನ್ನು ಜಯಿಸಿದರು. ಎಲೈ ಭರತಶ್ರೇಷ್ಠನೇ, ಭರದ್ವಾಜರು ವೀತಹವ್ಯರನ್ನೂ ಮತ್ತು ಇಳಾ ಪುತ್ರರನ್ನೂ ಜಯಿಸಿದರು.
ಚಿತ್ರಾಯುಧಾಂಶ್ಚಾಪ್ಯಜಯನ್ನೇತೇ ಕೃಷ್ಣಾಜಿನಧ್ವಜಾಃ |
ಪ್ರಕ್ಷಿಪ್ಯಾಥ ಚ ಕುಂಭಾನ್ ವೈ ಪಾರಗಾಮಿನಮಾಹರನ್ ||17||

ಕೃಷ್ಣಾಜಿನಧ್ವಜವುಳ್ಳ ಈ ಬ್ರಾಹ್ಮಣರು ವಿಚಿತ್ರವಾದ ಆಯುಧಗಳುಳ್ಳ ಕ್ಷತ್ರಿಯರನ್ನು ಜಯಿಸಿದರು. ತಮ್ಮ ಕುಂಭಗಳನ್ನು (ಕಮಂಡಲುಗಳನ್ನು) ಎಸೆದು ಕಾರ್ಯದ ತುದಿಯನ್ನು ತಲುಪಿ ರಾಜರ ಸ್ವತ್ತನ್ನು ಎಳೆದು ತಂದರು.
ಯತ್ಕಿಂಚಿತ್ ಕಥ್ಯತೇ ಲೋಕೇ ಶ್ರೂಯತೇ ಪಶ್ಯತೇಽಪಿ ವಾ |
ಸರ್ವಂ ತದ್ ಬ್ರಾಹ್ಮಣೇಷ್ವೇವ ಗೂಢೋಽಗ್ನಿರಿವ ದಾರುಷು ॥18॥
ಪ್ರಪಂಚದಲ್ಲಿ ಯಾವ ಒಳ್ಳೆಯ ವಿಷಯವು ಹೇಳಲ್ಪಡುತ್ತದೆಯೋ, ಕೇಳಲ್ಪಡುತ್ತದೆಯೋ ಅಥವಾ ನೋಡಲ್ಪಡುತ್ತದೆಯೋ ಅವೆಲ್ಲವೂ ಬ್ರಾಹ್ಮಣರಲ್ಲಿಯೇ ಅಗ್ನಿಯು ಗೂಢವಾಗಿರುವಂತೆ ಗೂಢವಾಗಿರುತ್ತವೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಂವಾದಂ ವಾಸುದೇವಸ್ಯ ಪೃಥ್ವ್ಯಾಶ್ಚ ಭರತರ್ಷಭ ॥19॥
ಎಲೈ ಭರತರ್ಷಭನೇ, ಈ ವಿಷಯದಲ್ಲಿಯೂ ಸಹ ವಾಸುದೇವ ಮತ್ತು ಭೂಮಿಗೆ ನಡೆದ ಸಂವಾದರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ವಾಸುದೇವಃ
ಮಾತರಂ ಸರ್ವಭೂತಾನಾಂ ಪೃಚ್ಛೇ ತ್ವಾ ಸಂಶಯಂ ಶುಭೇ |
ಕೇನಸ್ವಿತ್ಕರ್ಮಣಾ ಪಾಪಂ ವ್ಯಪೋಹತಿ ನರೋ ಗೃಹೀ ॥20॥
ವಾಸುದೇವ ಎಲೌ ಶುಭಳೇ, ಸರ್ವಭೂತಗಳಿಗೆ ತಾಯಿಯಾದ ನಿನ್ನನ್ನು ಕೇಳುತ್ತಿದ್ದೇನೆ. ಗೃಹಸ್ಥನಾದ ಮನುಷ್ಯನು ಯಾವ ಕರ್ಮದಿಂದ ಪಾಪವನ್ನು ಕಳೆದುಕೊಳ್ಳುತ್ತಾನೆ?
ಪೃಥಿವೀ
ಬ್ರಾಹ್ಮಣಾನೇವ ಸೇವೇತ ಪವಿತ್ರಂ ಹ್ಯೇತದುತ್ತಮಮ್ |
ಬ್ರಾಹ್ಮಣಾನ್ ಸೇವಮಾನಸ್ಯ ರಜಃ ಸರ್ವಂ ಪ್ರಣಶ್ಯತಿ ॥21॥
ಪೃಥಿವೀ ಬ್ರಾಹ್ಮಣರನ್ನೇ ಸೇವಿಸಬೇಕು. ಇದೇ ಪವಿತ್ರವಾದುದು ಮತ್ತು ಶ್ರೇಷ್ಠವಾದುದು. ಬ್ರಾಹ್ಮಣರನ್ನು ಸೇವೆ ಮಾಡುವವನ ಎಲ್ಲ ದೋಷಗಳೂ ಪರಿಹಾರವನ್ನು ಹೊಂದುತ್ತವೆ.
ಅತೋ ಭೂತಿರತಃ ಕೀರ್ತಿರತೋ ಬುದ್ಧಿಃ ಪ್ರಜಾಯತೇ |
ಅಪರೇಷಾಂ ಪರೇಷಾಂ ಚ ಪರೇಭ್ಯಶ್ಚೈವ ಯೇ ಪರೇ ॥22॥
ಕನಿಷ್ಠರಾದವರಿಗೂ, ಶ್ರೇಷ್ಠರಾದವರಿಗೂ, ಶ್ರೇಷ್ಠರಿಗಿಂತಲೂ ಶ್ರೇಷ್ಠರಾದವರಿಗೂ ಸಹ ಬ್ರಾಹ್ಮಣರಿಂದಲೇ ಐಶ್ವರ್ಯ, ಬ್ರಾಹ್ಮಣರಿಂದಲೇ ಕೀರ್ತಿ ಮತ್ತು ಬ್ರಾಹ್ಮಣರಿಂದಲೇ ಬುದ್ಧಿಯುಂಟಾಗುತ್ತದೆ.
ಬ್ರಾಹ್ಮಣಾ ಯಂ ಪ್ರಶಂಸಂತಿ ಪುರುಷಃ ಸ ಪ್ರವರ್ಧತೇ |
ಅಥ ಯೋ ಬ್ರಾಹ್ಮಣಾಕ್ರುಷ್ಟಃ ಪರಾಭವತಿ ಸೋಽಚಿರಾತ್ ॥23॥
ಬ್ರಾಹ್ಮಣರು ಯಾರನ್ನು ಹೊಗಳುತ್ತಾರೆಯೋ ಅಂತಹ ಪುರುಷನು ಅಭಿವೃದ್ಧಿಯನ್ನು ಹೊಂದುತ್ತಾನೆ. ಬ್ರಾಹ್ಮಣರಿಂದ ನಿಂದಿಸಲ್ಪಡುವವನು ಕ್ಷಿಪ್ರವಾಗಿ ಪರಾಭವವನ್ನು ಹೊಂದುತ್ತಾನೆ.
ಯಥಾ ಮಹಾರ್ಣವೇ ಕ್ಷಿಪ್ತಂ ಆಮಲೋಷ್ಟೋ ವಿನಶ್ಯತಿ |
ತಥಾ ದುಶ್ಚರಿತಂ ಕರ್ಮ ಪರಾಭಾವಾಯ ಕಲ್ಪತೇ ॥24॥
ದೊಡ್ಡ ಸಾಗರದಲ್ಲಿ ಎಸೆದ ಹಸಿಯ ಮಣ್ಣಿನ ಹೆಂಟೆಯು ಹೇಗೆ ಕ್ಷಿಪ್ರವಾಗಿ ನಾಶವನ್ನು ಹೊಂದುತ್ತದೆಯೋ ಅದರಂತೆ (ಬ್ರಾಹ್ಮಣರನ್ನು ಪೂಜಿಸುವವನು) ಮಾಡಿದ ದುಷ್ಕರ್ಮವು ಕ್ಷಿಪ್ರವಾಗಿ ಪರಾಭವವನ್ನು ತಂದುಕೊಡುತ್ತದೆ.
ಪಶ್ಯ ಚಂದ್ರೇ ಕೃತಂ ಲಕ್ಷ್ಮ ಸಮುದ್ರೇ ಲವಣೋದಕಮ್ |
ತಥಾ ಭಗಸಹಸ್ರೇಣ ಮಹೇಂದ್ರಂ ಪರಿಚಿಹ್ನಿತಮ್ ॥25॥
ಚಂದ್ರನಲ್ಲಿ ಇರುವ ಕಳಂಕವನ್ನು ನೋಡು. ಸಮುದ್ರದಲ್ಲಿರುವ ಉಪ್ಪುನೀರನ್ನು ನೋಡು. ಸಹಸ್ರ ಭಗಗಳಿಂದ ಚಿಹ್ನಿತನಾದ ಮಹೇಂದ್ರನನ್ನು ನೋಡು.
ತೇಷಾಮೇವ ಪ್ರಭಾವೇನ ಸಹಸ್ರನಯನೋ ಹ್ಯಸೌ |
ಶತಕ್ರತುಃ ಸಮಭವತ್ ಪಶ್ಯ ಮಾಧವ ಯಾದೃಶಮ್ ॥26॥
ಅವರ ಪ್ರಭಾವದಿಂದಲೇ ಈ ಸಹಸ್ರನಯನನಾದ ಇಂದ್ರನು ಶತಕ್ರತುವಾದನು. ಎಲೈ ಮಾಧವನೇ, ಪರಿಸ್ಥಿತಿಯು ಹೇಗಿದೆ ಎಂಬುದನ್ನು ನೋಡು.
ಇಚ್ಛನ್ ಭೂತಿಂ ಚ ಕೀರ್ತಿಂ ಚ ಲೋಕಾಂಶ್ಚ ಮಧುಸೂದನ |
ಬ್ರಾಹ್ಮಣಾನುಮತೇ ತಿಷ್ಠೇತ್ ಪುರುಷಃ ಶುಚಿರಾತ್ಮವಾನ್ ॥27॥
ಎಲೈ ಮಧುಸೂದನನೇ, ಐಶ್ವರ್ಯವನ್ನೂ, ಶುಭಲೋಕಗಳನ್ನೂ ಇಚ್ಛಿಸುವ ಪುರುಷನು ಶುಚಿಯಾಗಿ ಮನೋಧೈರ್ಯವನ್ನು ಹೊಂದಿ ಬ್ರಾಹ್ಮಣರನ್ನು ಅನುಸರಿಸಿ ನಡೆಯಬೇಕು.
ಭೀಷ್ಮಃ
ಇತ್ಯೇತದ್ವಚನಂ ಶ್ರುತ್ವಾ ಮೇದಿನ್ಯಾ ಮಧುಸೂದನಃ |
ಸಾಧು ಸಾಧ್ವಿತ್ಯಥೇತ್ಯುಕ್ತ್ವಾ ಮೇದಿನೀಂ ಪ್ರತ್ಯಪೂಜಯತ್ ॥28॥
ಭೀಷ್ಮ ಮಧುಸೂದನನು ಭೂಮಿಯ ಈ ಮಾತುಗಳನ್ನು ಕೇಳಿ ಸಾಧು-ಸಾಧು ಎಂದು ಹೇಳಿ ಭೂಮಿಯನ್ನು ಪೂಜಿಸಿದನು.
ಏತಾಂ ಶ್ರುತ್ವೋಪಮಾಂ ಪಾರ್ಥ ಪ್ರಯತೋ ಬ್ರಾಹ್ಮಣರ್ಷಭಾನ್ |
ಸತತಂ ಪೂಜಯೇಥಾಸ್ತ್ವಂ ತತಃ ಶ್ರೇಯೋಽಭಿಪತ್ಸ್ಯಸೇ ॥29॥

ಎಲೈ ಪಾರ್ಥನೇ, ಈ ದೃಷ್ಟಾಂತವನ್ನು ಕೇಳಿ ನೀನು ಶ್ರದ್ಧೆಯಿಂದ ಬ್ರಾಹ್ಮಣ ಶ್ರೇಷ್ಠರನ್ನು ಸತತವಾಗಿ ಪೂಜಿಸುವವನಾಗು. ಅದರಿಂದ ನೀನು ಶ್ರೇಯಸ್ಸನ್ನು ಹೊಂದುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ ಬ್ರಾಹ್ಮಣಪ್ರಶಂಸಾನಾಮ
ಚತುಃಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೈದನೆಯ ಅಧ್ಯಾಯ
ಬ್ರಾಹ್ಮಣಪ್ರಶಂಸೆ. ಬ್ರಹ್ಮದೇವರ ಹಿತವಚನ.
ಭೀಷ್ಮ ಃ
ಜನ್ಮನೈವ ಮಹಾಭಾಗೋ ಬ್ರಾಹ್ಮಣೋ ನಾಮ ಜಾಯತೇ |
ನಮಸ್ಯಃ ಸರ್ವಭೂತಾನಾಮತಿಥಿಃ ಪ್ರಸೃತಾಗ್ರಭುಕ್ ॥1॥
ಭೀಷ್ಮ ಬ್ರಾಹ್ಮಣನು ಹುಟ್ಟಿದಾಗಿನಿಂದಲೇ ಮಹಾಭಾಗ್ಯವಂತನಾಗಿ, ಸರ್ವಪ್ರಾಣಿಗಳಿಂದಲೂ ನಮಸ್ಕಾರಕ್ಕೆ ಅರ್ಹನಾಗಿ, ಆತಿಥ್ಯಕ್ಕೆ ಯೋಗ್ಯನಾಗಿ, ಅಗ್ರಭೋಜನಕ್ಕೆ ಅರ್ಹನಾಗಿ ಜನಿಸುತ್ತಾನೆ.
ಸರ್ವಾನ್ ನಃ ಸುಹೃದಸ್ತಾತ ಬ್ರಾಹ್ಮಣಾಃ ಸುಮನೋಮುಖಾಃ |
ಗೀರ್ಭಿರ್ಮಂಗಲಯುಕ್ತಾಭಿರನುಧ್ಯಾಯಂತಿ ಪೂಜಿತಾಃ ॥2॥
ಎಲೈ ಪ್ರೀತಿಪಾತ್ರನೇ, ಒಳ್ಳೆಯ ಮನಸ್ಸು ಮತ್ತು ಮುಖವುಳ್ಳ ಬ್ರಾಹ್ಮಣರು ಪೂಜಿಸಲ್ಪಟ್ಟರೆ ಸುಹೃದರಾದ ನಮ್ಮೆಲ್ಲರನ್ನೂ ಮಂಗಳವಾದ ವಚನಗಳಿಂದ ಅನುಧ್ಯಾನ ಮಾಡುತ್ತಾರೆ.
ಸರ್ವಾನ್ ನೋ ದ್ವಿಷತಸ್ತಾತ ಬ್ರಾಹ್ಮಣಾ ಜಾತಮನ್ಯವಃ |
ಗೀರ್ಭಿರ್ದಾರುಣಯುಕ್ತಾಭಿರಭಿಹನ್ಯುರಪೂಜಿತಾಃ ॥3॥
ಪೂಜಿಸದೆ ಬ್ರಾಹ್ಮಣರನ್ನು ದ್ವೇಷಿಸುವ ನಮ್ಮೆಲ್ಲರನ್ನೂ ಅವರು ಕೋಪಗೊಂಡು ದಾರುಣವಾದ ಮಾತುಗಳಿಂದ ವಿನಾಶಗೊಳಿಸಿಯಾರು.
ಅತ್ರ ಗಾಥಾ ಬ್ರಹ್ಮಗೀತಾಃ ಕೀರ್ತಯಂತಿ ಪುರಾವಿದಃ |
ಸೃಷ್ಟ್ವಾ ದ್ವಿಜಾತೀನ್ ಧಾತಾ ಹಿ ಯಥಾಪೂರ್ವಂ ಸಮಾದಧತ್ ॥4॥
ಈ ವಿಷಯದಲ್ಲಿ ಪುರಾಣವನ್ನು ತಿಳಿದವರು ಬ್ರಹ್ಮದೇವರು ಹಾಡಿದ ಗೀತೆಯನ್ನು ಹೇಳುತ್ತಾರೆ. ಬ್ರಹ್ಮದೇವರು ಮೊದಲಿನಂತೆ ಬ್ರಾಹ್ಮಣರನ್ನು ಸೃಷ್ಟಿಸಿ ಅವರಿಗೆ ಸಮಾಧಾನದ ಮಾತುಗಳನ್ನು ಹೇಳಿದರು.
ನ ವೋಽನ್ಯದಿಹ ಕರ್ತವ್ಯಂ ಕಿಂಚಿದೂರ್ಧ್ವಂ ಯಥಾವಿಧಿ |
ಗುಪ್ತಾ ಗೋಪಾಯತ ಬ್ರಹ್ಮ ಶ್ರೇಯೋ ವಸ್ತೇನ ಶೋಭನಮ್ ॥5॥
ನೀವು ಇನ್ನು ಮುಂದೆ ಬೇರೆ ಏನನ್ನೂ ಮಾಡಬೇಕಾದುದಿಲ್ಲ. ನೀವು ಕ್ಷತ್ರಿಯರಿಂದ ರಕ್ಷಿತರಾಗಿ ವೇದವನ್ನು ರಕ್ಷಿಸುವವರಾಗಿ. ನಿಮಗೆ ಅದರಿಂದ ಒಳ್ಳೆಯ ಶ್ರೇಯಸ್ಸು ಉಂಟಾಗುತ್ತದೆ.
ಸ್ವಮೇವ ಕುರ್ವತಾಂ ಕರ್ಮ ಶ್ರೀರ್ವೋ ಬ್ರಾಹ್ಮೀ ಭವಿಷ್ಯತಿ |
ಪ್ರಮಾಣಂ ಸರ್ವಭೂತಾನಾಂ ಪ್ರಗ್ರಹಂ ಚ ಗಮಿಷ್ಯಥ ॥6॥
ನಿಮ್ಮ ಕರ್ಮವನ್ನೇ ನೀವು ಮಾಡಿದರೆ ಬ್ರಹ್ಮತೇಜಸ್ಸುಂಟಾಗುತ್ತದೆ. ನೀವು ಎಲ್ಲರಿಗೂ ಪ್ರಮಾಣಭೂತರೂ, ಸ್ವೀಕಾರಕ್ಕೆ ಅರ್ಹರೂ ಆಗುವಿರಿ.
ನ ಶೌದ್ರಂ ಕರ್ಮ ಕರ್ತವ್ಯಂ ಬ್ರಾಹ್ಮಣೇನ ವಿಪಶ್ಚಿತಾ |
ಶೌದ್ರಂ ಹಿ ಕುರ್ವತಃ ಕರ್ಮ ಧರ್ಮಃ ಸಮುಪರುಧ್ಯತೇ ॥7॥
ವಿದ್ವಾಂಸನಾದ ಬ್ರಾಹ್ಮಣನು ಶೂದ್ರನ ಕರ್ಮವನ್ನು ಮಾಡಬಾರದು. ಶೂದ್ರ ಕರ್ಮವನ್ನು ಮಾಡುವ ಬ್ರಾಹ್ಮಣನಿಗೆ ಅವನ ಧರ್ಮವು ನಾಶವನ್ನು ಹೊಂದುತ್ತದೆ.
ಶ್ರೀಶ್ಚ ಬುದ್ಧಿಶ್ಚ ತೇಜಶ್ಚ ವಿಭೂತಿಶ್ಚ ಪ್ರತಾಪಿನೀ |
ಸ್ವಾಧ್ಯಾಯೇನೈವ ಮಾಹಾತ್ಮ್ಯಂ ವಿಮಲಂ ಪ್ರತಿಪತ್ಸ್ಯಥ ॥8॥
ಸಂಪತ್ತು, ಬುದ್ಧಿ, ತೇಜಸ್ಸು, ಜ್ವಲಿಸುವ ಐಶ್ವರ್ಯ, ವಿಮಲವಾದ ಮಾಹಾತ್ಮ್ಯ ಎಲ್ಲವನ್ನೂ ವೇದಾಧ್ಯಯನದಿಂದಲೇ ಪಡೆಯುವಿರಿ.
ಹುತ್ವಾ ಚಾಹವನೀಯಸ್ಥಂ ಮಹಾಭಾಗ್ಯೇ ಪ್ರತಿಷ್ಠಿತಾಃ |
ಅಗ್ರಭೋಜ್ಯಾಃ ಪ್ರಸೂತೀನಾಂ ಶ್ರಿಯಾ ಬ್ರಾಹ್ಮ್ಯಾನುಕಲ್ಪಿತಾಃ ॥9॥
ಆಹವನೀಯ ಸ್ಥಾನದಲ್ಲಿರುವ ಅಗ್ನಿಯಲ್ಲಿ ಹೋಮವನ್ನು ಮಾಡಿ ಮಹಾಭಾಗ್ಯದಲ್ಲಿ ಪ್ರತಿಷ್ಠಿತರಾಗಿ ಪ್ರಜೆಗಳಲ್ಲಿ ಅಗ್ರಭೋಜನರಾಗಿ ಬ್ರಾಹ್ಮ ಸಂಪತ್ತಿನಿಂದ ಕೂಡಿದವರಾಗಿ ನೀವು ಸೃಷ್ಟಿಸಲ್ಪಟ್ಟಿದ್ದೀರಿ.
ಶ್ರದ್ದಯಾ ಪರಯಾ ಯುಕ್ತಾ ಹ್ಯನಭಿದ್ರೋಹಲಬ್ಧಯಾ |
ದಮಸ್ವಾಧ್ಯಾಯನಿರತಾಃ ಸರ್ವಾನ್ ಕಾಮಾನವಾಪ್ಸ್ಯಥ ॥10॥
ಯಾವ ಪ್ರಾಣಿಗಳಿಗೂ ದ್ರೋಹವನ್ನು ಮಾಡದಿರುವುದರಿಂದ ಉಂಟಾದ ಶ್ರೇಷ್ಠವಾದ ಶ್ರದ್ಧೆಯಿಂದ ಕೂಡಿದವರಾಗಿ ಇಂದ್ರಿಯನಿಗ್ರಹ ಮತ್ತು ಸ್ವಾಧ್ಯಾಯದಲ್ಲಿ ನಿರತರಾಗಿ ಎಲ್ಲಾ ಅಭೀಷ್ಟಗಳನ್ನೂ ಹೊಂದುವಿರಿ.

ಯಚ್ಚೈವ ಮಾನುಷೇ ಲೋಕೇ ಯಚ್ಚ ದೇವೇಷು ಕಿಂಚನ |
ಸರ್ವಂ ತತ್ತಪಸಾ ಸಾಧ್ಯಂ ಜ್ಞಾನೇನ ವಿನಯೇನ ಚ ॥11॥
ಮನುಷ್ಯಲೋಕದಲ್ಲಿ ಮತ್ತು ದೈವಲೋಕದಲ್ಲಿ ಶ್ರೇಷ್ಠವಾದುದು ಏನಿವೆಯೋ ಅವೆಲ್ಲವನ್ನೂ ತಪಸ್ಸಿನಿಂದಲೂ, ಜ್ಞಾನದಿಂದಲೂ ಮತ್ತು ವಿನಯದಿಂದಲೂ ಪಡೆಯಲು ಸಾಧ್ಯ.
ಯುಷ್ಮತ್ಸಮ್ಮಾನನಾತ್ ಪ್ರೀತಿಂ ಪಾವನ್ಯೈಃ ಕ್ಷತ್ರಿಯಾಶ್ರಮಮ್ |
ಅಮುತ್ರೇಹ ಸಮಾಯಾಂತಿ ವೈಶ್ಯಶೂದ್ರಾದಿಕಾಸ್ತಥಾ ॥12॥
ವೈಶ್ಯ-ಶೂದ್ರಾದಿಗಳು ನಿಮ್ಮನ್ನು ಪೂಜಿಸುವುದರಿಂದ ನಿಮ್ಮ ಪ್ರೀತಿಯನ್ನು ಸಂಪಾದಿಸಿ ಪವಿತ್ರವಾದ ಕರ್ಮಗಳಿಂದ ಮುಂದೆ ಕ್ಷತ್ರಿಯಜನ್ಮವನ್ನು ಪಡೆಯುತ್ತಾರೆ.
ಅರಕ್ಷಿತಾಶ್ಚ ಯುಷ್ಮಾಭಿರ್ವಿರುದ್ಧಾ ಯಾಂತಿ ವಿಪ್ಲವಮ್ |
ಯುಷ್ಮತ್ತೇಜೋಧೃತಾ ಲೋಕಾಸ್ತದ್ ರಕ್ಷಥ ಜಗತ್ತ್ರಯಮ್ ॥13॥
ನೀವು ಅವರನ್ನು ರಕ್ಷಿಸದಿದ್ದರೆ ನಿಮ್ಮ ವಿರುದ್ಧರಾಗಿ ಅವರು ವಿನಾಶವನ್ನು ಹೊಂದುತ್ತಾರೆ. ಲೋಕಗಳು ನಿಮ್ಮ ತೇಜಸ್ಸಿನಿಂದ ಧರಿಸಲ್ಪಟ್ಟಿದೆ. ಆದ್ದರಿಂದ ಮೂರು ಲೋಕಗಳನ್ನೂ ರಕ್ಷಿಸಿ (ಎಂದು ಹೇಳಿದರು).
ಭೀಷ್ಮಃ
ಇತ್ಯೇತಾ ಬ್ರಹ್ಮಗೀತಾಸ್ತೇ ಸಮಾಖ್ಯಾತಾ ಮಯಾಽನಘ |
ವಿಪ್ರಾನುಕಂಪಾರ್ಥಮಿದಂ ತೇನ ಪ್ರೋಕ್ತಂ ಹಿ ಧೀಮತಾ ॥14॥
ಭೀಷ್ಮ ಎಲೈ ಅನಘನೇ, ಬ್ರಹ್ಮದೇವರು ಆಡಿದ ಈ ಮಾತುಗಳನ್ನು ನಾನು ನಿನಗೆ ಹೇಳಿದ್ದೇನೆ. ಬ್ರಾಹ್ಮಣರ ಮೇಲಿನ ಅನುಕಂಪದಿಂದ ಮೇಧಾವಿಗಳಾದ ಅವರು ಇದನ್ನು ಹೇಳಿದ್ದಾರಷ್ಟೆ?
ಭೂಯಸ್ತೇಷಾಂ ಬಲಂ ಮನ್ಯೇ ಯಥಾ ರಾಜ್ಞಸ್ತಪಸ್ವಿನಃ |
ದುರಾಸದಾಶ್ಚ ಚಂಡಾಶ್ಚ ರಭಸಾಃ ಕ್ಷಿಪ್ರಕಾರಿಣಃ ॥15॥
ತಪಸ್ವಿಯಾದ ರಾಜನ ಬಲದಂತೆ ಬ್ರಾಹ್ಮಣನ ಬಲವು ಬಹಳ ಅಧಿಕವಾಗಿದೆ ಎಂದು ನಾನು ತಿಳಿದಿದ್ದೇನೆ. ಅವರು ಸಮೀಪಿಸಲು ಸಾಧ್ಯವಿಲ್ಲದವರು, ದಾರುಣರು, ಶೀಘ್ರರು ಮತ್ತು ಶೀಘ್ರವಾಗಿ ಕಾರ್ಯವನ್ನು ಮಾಡುವವರು.
ಸಂತ್ಯೇಷಾಂ ಸಿಂಹಸತತ್ತ್ವಶ್ಚ ವ್ಯಾಘ್ರಸತತ್ತ್ವಸ್ತಥಾಪರೇ |
ವರಾಹಮೃಗಸತತ್ತ್ವಶ್ಚ ಗಜಸತತ್ತ್ವಸ್ತಥಾಪರೇ ॥16॥
ಅವರಲ್ಲಿ ಸಿಂಹಪರಾಕ್ರಮವುಳ್ಳವರೂ ಇದ್ದಾರೆ. ಇನ್ನು ಕೆಲವರು ವ್ಯಾಘ್ರಪರಾಕ್ರಮವನ್ನು ಹೊಂದಿರುತ್ತಾರೆ. ಕೆಲವರು ವರಾಹ-ಮೃಗಗಳ ಪರಾಕ್ರಮವನ್ನೂ, ಇನ್ನು ಕೆಲವರು ಗಜಗಳ ಪರಾಕ್ರಮವನ್ನೂ ಹೊಂದಿರುತ್ತಾರೆ.
ಕಾರ್ಪಾಸಮೃದವಃ ಕೇಚಿತ್ತಥಾನ್ಯೇ ಮಕರಸ್ಪೃಶಃ |
ವಿಭಾಷ್ಯಘಾತಿನಃ ಕೇಚಿತ್ ತಥಾ ಚಕ್ಷುರ್ಹಣೋಽಪರೇ ॥17॥
ಕೆಲವರು ಹತ್ತಿಯಂತೆ ಮೃದುವಾಗಿರುತ್ತಾರೆ. ಇನ್ನು ಕೆಲವರು ಮೊಸಳೆಯ ಸ್ಪರ್ಶದಂತೆ ಕರ್ಕಶರಾಗಿರುತ್ತಾರೆ. ಕೆಲವರು ಮಾತಿನಿಂದ ಹೇಳಿ ನಾಶವನ್ನು ಉಂಟುಮಾಡುತ್ತಾರೆ. ಇನ್ನು ಕೆಲವರು ದೃಷ್ಟಿಯಿಂದಲೇ ವಿನಾಶವನ್ನು ಉಂಟುಮಾಡುತ್ತಾರೆ.
ಸಂತಿ ಚಾಶೀವಿಷನಿಭಾಃ ಸಂತಿ ಮಂದಾಸ್ತಥಾಽಪರೇ |
ವಿವಿಧಾನೀಹ ವೃತ್ತಾನಿ ಬ್ರಾಹ್ಮಣಾನಾಂ ಯುಧಿಷ್ಠಿರ ॥18॥
ಸರ್ಪದಂತೆ ಇರುವವರೂ ಇದ್ದಾರೆ.. ಮಂದಗಾಮಿಗಳೂ ಇದ್ದಾರೆ. ಎಲೈ ಯುಧಿಷ್ಠಿರನೇ, ಬ್ರಾಹ್ಮಣರ ನಡತೆಗಳು ಹೀಗೆ ಅನೇಕ ವಿಧವಾಗಿರುತ್ತವೆ.
ಮೇಕಲಾ ದ್ರುಮಿಳಾಃ ಕಾಶಾಃ ಪೌಂಡ್ರಾಃ ಕೋಲ್ಲಗಿರಾಸ್ತಥಾ |
ಶೌಂಡಿಕಾ ದರದಾ ದರ್ವಾಶ್ಚೌರಾಃ ಶಬರಬರ್ಬರಾಃ ॥19॥
ಕಿರಾತಾ ಯವನಾಶ್ಚೈವ ತಾಸ್ತಾಃ ಕ್ಷತ್ರಿಯಜಾತಯಃ |
ವೃಷಲತ್ವಮನುಪ್ರಾಪ್ತಾ ಬ್ರಾಹ್ಮಣಾನಾಮದರ್ಶನಾತ್ ॥20॥
ಕ್ಷತ್ರಿಯಜಾತಿಗೆ ಸೇರಿದ ಮೇಕಲರು, ದ್ರುಮಿಳರು, ಕಾಶರು, ಪೌಂಡ್ರರು, ಕೊಲ್ಲಗಿರರು, ಶೌಂಡಿಕರು, ದರದರು, ದರ್ವರು, ಚೌರರು, ಶಬರರು, ಬರ್ಬರರು, ಕಿರಾತರು, ಯವನರು ಮುಂತಾದವರು ಬ್ರಾಹ್ಮಣರ ದರ್ಶನವನ್ನು ಮಾಡದೆ ಶೂದ್ರತ್ವವನ್ನು ಹೊಂದಿದರು.
ಬ್ರಾಹ್ಮಣಾನಾಂ ಪರಿಭವಾದಸುರಾಃ ಸಲಿಲೇಶಯಾಃ |
ಬ್ರಾಹ್ಮಣಾನಾಂ ಪ್ರಸಾದಾಚ್ಚ ದೇವಾಃ ಸ್ವರ್ಗನಿವಾಸಿನಃ ॥21॥
ಬ್ರಾಹ್ಮಣರನ್ನು ಪರಾಭವಗೊಳಿಸಿದುದರಿಂದ ಅಸುರರು ಸಮುದ್ರಜಲದಲ್ಲಿ ಮಲಗಿದ್ದಾರೆ (ವಾಸ ಮಾಡುತ್ತಾರೆ). ಬ್ರಾಹ್ಮಣರ ಅನುಗ್ರಹದಿಂದ ದೇವತೆಗಳು ಸ್ವರ್ಗದಲ್ಲಿ ವಾಸವನ್ನು ಮಾಡುತ್ತಾರೆ.
ಅಶಕ್ಯಂ ಸ್ಪ್ರಷ್ಟುಮಾಕಾಶಮಚಾಲ್ಯೋ ಹಿಮವಾನ್ ಗಿರಿಃ |
ಅವಾರ್ಯಾ ಸೇತುನಾ ಗಂಗಾ ದುರ್ಜಯಾ ಬ್ರಾಹ್ಮಣಾ ಭುವಿ ॥22॥
ಆಕಾಶವನ್ನು ಮುಟ್ಟಲು ಸಾಧ್ಯವಿಲ್ಲ. ಹಿಮಾಲಯ ಪರ್ವತವನ್ನು ಅಲುಗಾಡಿಸಲು ಸಾಧ್ಯವಿಲ್ಲ. ಗಂಗೆಯನ್ನು ಸೇತುವೆಯಿಂದ ಕಟ್ಟಿ ನಿಲ್ಲಿಸಲು ಸಾಧ್ಯವಿಲ್ಲ. ಭೂಮಿಯಲ್ಲಿ ಬ್ರಾಹ್ಮಣರನ್ನು ಜಯಿಸಲು ಸಾಧ್ಯವಿಲ್ಲ.
ನ ಬ್ರಾಹ್ಮಣವಿರೋಧೇನ ಶಕ್ಯಾ ಶಾಸ್ತುಂ ವಸುಂಧರಾ |
ಬ್ರಾಹ್ಮಣಾ ಹಿ ಮಹಾತ್ಮಾನೋ ದೇವಾನಾಮಪಿ ದೇವತಾಃ ॥23॥
ಬ್ರಾಹ್ಮಣರಿಗೆ ವಿರೋಧವನ್ನು ಮಾಡಿ ಭೂಮಿಯನ್ನು ಆಳಲು ಸಾಧ್ಯವಿಲ್ಲ. ಏಕೆಂದರೆ ಬ್ರಾಹ್ಮಣರು ಮಹಾತ್ಮರು, ದೇವತೆಗಳಿಗೂ

ದೇವತೆಗಳು.
ತಾನ್ ಪೂಜಯಸ್ವ ಸತತಂ ದಾನೇನ ಪರಿಚರ್ಯಯಾ |
ಯದೀಚ್ಛಸಿ ಮಹೀಂ ಭೋಕ್ತುಮಿಮಾಂ ಸಾಗರಮೇಖಲಾಮ್ ॥24॥
ಸಾಗರ ಮೇಖಲೆಯಾದ ಈ ಭೂಮಿಯನ್ನು ಭೋಗಿಸಲು ಇಚ್ಛಿಸುವಿಯಾದರೆ ಅವರನ್ನು ದಾನದಿಂದಲೂ ಪರಿಚರ್ಯದಿಂದಲೂ ಸತತವಾಗಿ ಪೂಜಿಸು.
ಪ್ರತಿಗ್ರಹೇಣ ತೇಜೋ ಹಿ ವಿಪ್ರಾಣಾಂ ಶಾಮ್ಯತೇಽನಘ |
ಪ್ರತಿಗ್ರಹಂ ಯೇ ನೇಚ್ಛೇಯುಸ್ತೇಽಪಿ ರಕ್ಷ್ಯಾಸ್ತ್ವಯಾಽನಘ ॥25॥
ಎಲೈ ಅನಘನೇ, ಪ್ರತಿಗ್ರಹದಿಂದ ಬ್ರಾಹ್ಮಣರ ತೇಜಸ್ಸು ಶಮನಗೊಳ್ಳುತ್ತದೆ. ಎಲೈ ಅನಘನೇ, ಯಾವ ಬ್ರಾಹ್ಮಣರು ಪ್ರತಿಗ್ರಹವನ್ನು ಬಯಸುವುದಿಲ್ಲವೋ ಅವರನ್ನೂ ನೀನು ರಕ್ಷಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನ-ಧರ್ಮೇ
ಬ್ರಾಹ್ಮಣಪ್ರಶಂಸಾನಾಮ ಪಂಚಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತಾರನೆಯ ಅಧ್ಯಾಯ
ಬ್ರಾಹ್ಮಣಪ್ರಶಂಸೆ - ಇಂದ್ರಶಂಬರ ಸಂವಾದ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶಕ್ರಶಂಬರಸಂವಾದಂ ತನ್ನಿಬೋಧ ಯುಧಿಷ್ಠಿರ ॥1॥
ಭೀಷ್ಮ ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೂ ಸಹ ಇಂದ್ರ ಮತ್ತು ಶಂಬರರಿಗೆ ನಡೆದ ಸಂವಾದ ರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ. ಅದನ್ನು ಕೇಳು.
ಶಕ್ರೋ ಹ್ಯಜ್ಞಾತರೂಪೇಣ ಜಟೀ ಭೂತ್ವಾ ರಜೋರುಣಃ |
ವಿರೂಪಂ ರೂಪಮಾಸ್ಥಾಯ ಪ್ರಶ್ನಂ ಪಪ್ರಚ್ಛ ಶಂಬರಮ್ ॥2॥
ಇಂದ್ರನು ತನ್ನ ಸ್ವರೂಪವು ತಿಳಿಯದಂತೆ ಜಟೆಯನ್ನು ಧರಿಸಿ ಶರೀರವು ಧೂಳಿನಿಂದ ಕೂಡಿದವನಾಗಿ ತನ್ನನ್ನು ವಿರೂಪನನ್ನಾಗಿ ಮಾಡಿಕೊಂಡು ಶಂಬರನನ್ನು ಪ್ರಶ್ನೆ ಮಾಡಿದನು.
ಕೇನ ಶಂಬರ ವೃತ್ತೇನ ಸ್ವಜಾತ್ಯಾನಧಿತಿಷ್ಠಸಿ |
ಶ್ರೇಷ್ಠಂ ತ್ವಾಂ ಕೇನ ಮನ್ಯಂತೇ ತನ್ಮೇ ಪ್ರಬ್ರೂಹಿ ಪೃಚ್ಛತಃ ॥3॥
ಶಂಬರನೇ, ಯಾವ ನಡತೆಯಿಂದ ನೀನು ನಿನ್ನ ಜಾತಿಯವರಲ್ಲಿ ಶ್ರೇಷ್ಠನಾಗಿದ್ದೀಯೆ? ಯಾವ ಕಾರಣದಿಂದ ನಿನ್ನನ್ನು ನಿನ್ನ ಜಾತಿಯವರು ಶ್ರೇಷ್ಠನೆಂದು ತಿಳಿಯುತ್ತಾರೆ? ಪ್ರಶ್ನೆ ಮಾಡುವ ನನಗೆ ಅದನ್ನು ಹೇಳು.
ಶಂಬರಃ
ನಾಸೂಯಾಮಿ ಸದಾ ವಿಪ್ರಾನ್ ಬ್ರಹ್ಮಾಣಂ ಚ ಪಿತಾಮಹಮ್ |
ಶಾಸ್ತ್ರಾಣಿ ವದತೋ ವಿಪ್ರಾನ್ ಸಮ್ಮನ್ಯಾಮಿ ಯಥಾಸುಖಮ್ ॥4॥
ಶಂಬರ ಬ್ರಾಹ್ಮಣರನ್ನು ನೋಡಿ ಅಸೂಯೆ ಪಡುವುದಿಲ್ಲ. ಪಿತಾಮಹನಾದ ಬ್ರಹ್ಮದೇವರ ಮೇಲೂ ಅಸೂಯೆಯನ್ನು ಹೊಂದುವುದಿಲ್ಲ. ಶಾಸ್ತ್ರಗಳನ್ನು ವ್ಯಾಖ್ಯಾನ ಮಾಡುವ ಬ್ರಾಹ್ಮಣರನ್ನು ಸಾಧ್ಯವಾದಷ್ಟು ಪೂಜಿಸುತ್ತೇನೆ.
ಶ್ರುತ್ವಾ ಚ ನಾವಜಾನಾಮಿ ನಾಪರಾಧ್ಯಾಮಿ ಕರ್ಹಿಚಿತ್ |
ಅಭ್ಯರ್ಚ್ಯಾನನುಪೃಚ್ಛಾಮಿ ಪಾದೌ ಗೃಹ್ಣಾಮಿ ಧೀಮತಾಮ್ ॥5॥
ಅವರ ಮಾತುಗಳನ್ನು ಕೇಳಿ ಅವರನ್ನು ಅವಮಾನಗೊಳಿಸುವುದಿಲ್ಲ. ಯಾವ ಕಾರಣದಿಂದಲೂ ಅವರಿಗೆ ಅಪರಾಧವನ್ನು ಮಾಡುವುದಿಲ್ಲ. ಪೂಜ್ಯರಾದ ಅವರನ್ನು ಪ್ರಶ್ನೆ ಮಾಡಿ ವಿಷಯಗಳನ್ನು ತಿಳಿದುಕೊಳ್ಳುತ್ತೇನೆ. ಮೇಧಾವಿಗಳಾದ ಅವರನ್ನು ನಮಸ್ಕರಿಸುತ್ತೇನೆ.
ತೇ ವಿಸ್ರಬ್ಧಾಃ ಪ್ರಭಾಷಂತೇ ಸಂಯಚ್ಛಂತಿ ಚ ಮಾಂ ಸದಾ |
ಪ್ರಮತ್ತೇಷ್ವಪ್ರಮತ್ತೋಽಸ್ಮಿ ಸದಾ ಸುಪ್ತೇಷು ಜಾಗ್ರಮಿ ॥6॥
ಅವರು ನನ್ನನ್ನು ಯಾವಾಗಲೂ ನಿಯಂತ್ರಿಸುತ್ತಾರೆ. ಅವರು ಎಚ್ಚರ ತಪ್ಪಿ ನಡೆದರೂ ನಾನು ಎಚ್ಚರ ತಪ್ಪುವುದಿಲ್ಲ. ಅವರು ನಿಂದ್ರಿಸುತ್ತಿದ್ದರೂ ನಾನು ಎಚ್ಚರದಿಂದ ಇರುತ್ತೇನೆ.
ತೇ ಮಾಂ ಶಾಸ್ತ್ರಪಥೇ ಯುಕ್ತಂ ಬ್ರಹ್ಮಣ್ಯಮನಸೂಯಕಮ್ |
ಸಮಾಸಿಂಚಂತಿ ಶಾಸ್ತಾರಃ ಕ್ಷೌದ್ರಂ ಮಧ್ವಿವ ಮಕ್ಷಿಕಾಃ ॥7॥
ಶಾಸನವನ್ನು ಮಾಡುವ ಅವರು ಶಾಸ್ತ್ರಮಾರ್ಗದಲ್ಲಿದ್ದು ಬ್ರಾಹ್ಮಣ ವತ್ಸಲನೂ, ಅಸೂಯಾ ರಹಿತನೂ ಆದ ನನ್ನನ್ನು ತಮ್ಮ ಉಪದೇಶರೂಪವಾದ ವಚನಗಳಿಂದ ಜೇನುಹುಳುಗಳು ಜೇನನ್ನು ಸುರಿಸಿದಂತೆ ನನ್ನ ಕಿವಿಯಲ್ಲಿ ಮಧುಪ್ರಾಯವಾದ ವಚನಗಳನ್ನು ಸುರಿಸುತ್ತಾರೆ.
ಯಚ್ಚ ಭಾಷಂತಿ ತೇ ತುಷ್ಟಾಸ್ತತ್ತದ್ ಗೃಹ್ಣಾಮಿ ಮೇಧಯಾ |

ಸಮಾಧಿಮಾತ್ಮನೋ ನಿತ್ಯಮನುಲೋಮಮಚಿಂತಯನ್ ॥8॥
ಅವರು ಸಂತೋಷದಿಂದ ಆಡಿದ ಮಾತುಗಳನ್ನು ನಾನು ಬುದ್ಧಿಯಿಂದ ಗ್ರಹಿಸುತ್ತೇನೆ. ಯಾವಾಗಲೂ ಸಮಾಧಾನದಿಂದಿದ್ದು ಅವರಿಗೆ ವಿರುದ್ಧವಾದುದನ್ನು ಯಾವುದನ್ನೂ ಚಿಂತಿಸದೆ ಇರುತ್ತೇನೆ.
ಸೋಽಹಮಗ್ರ್ಯಶಿಷ್ಟಾನಾಂ ರಸಾನಾಮವಲೇಹಕಃ।
ಸ್ವಜಾತ್ಯಾನಧಿತಿಷ್ಠಾಮಿ ನಕ್ಷತ್ರಾಣೀವ ಚಂದ್ರಮಾಃ ॥9॥
ಅಂತಹ ನಾನು ಬ್ರಾಹ್ಮಣರಿಗೆ ದಾನ ಮಾಡಿ ಉಳಿದ ಆಹಾರವನ್ನು ಸ್ವೀಕರಿಸುತ್ತೇನೆ. ಚಂದ್ರನು ನಕ್ಷತ್ರಗಳ ಮಧ್ಯದಲ್ಲಿ ಶೋಭಿಸುವಂತೆ ನಾನು ನನ್ನ ಜಾತಿಯವರ ಮಧ್ಯದಲ್ಲಿ ಶ್ರೇಷ್ಠನಾಗಿದ್ದೇನೆ (ಲಕ್ಷ್ಯಾಲಂಕಾರ).
ಏತತ್ಪೃಥಿವ್ಯಾಮಮೃತಮೇತಚ್ಚಕ್ಷುರನುತ್ತಮಮ್।
ಯದ್ ಬ್ರಾಹ್ಮಣಮುಖಾಚ್ಛ್ರುತ್ವಾ ಸ್ವಮಿಹ ಶ್ರುತ್ವಾ ಪ್ರವರ್ತತೇ ॥10॥
ಬ್ರಾಹ್ಮಣರ ಮುಖದಿಂದ ಬರುವ ಮಾತುಗಳನ್ನು ಕೇಳಿ ಪ್ರವೃತ್ತನಾಗುವುದು ಭೂಮಿಯಲ್ಲಿ ಅಮೃತಪ್ರಾಯವಾದುದು. ಶ್ರೇಷ್ಠವಾದ ಕಣ್ಣಿನಂತೆ ಇರುವುದು (ಮಾರ್ಗದರ್ಶಕವಾದುದು).
ಏತತ್ಕಾರಣಮಾಜ್ಞಾಯ ದೃಷ್ಟ್ವಾ ದೇವಾಸುರಂ ಪುರಾ।
ಯುದ್ಧಂ ಪಿತಾ ಮೇ ಹೃಷ್ಟಾತ್ಮಾ ವಿಸ್ಮಿತಃ ಪ್ರತ್ಯಪದ್ಯತ ॥11॥
ಈ ಕಾರಣವನ್ನು ತಿಳಿದು ಹಿಂದೆ ದೇವಾಸುರ ಯುದ್ಧವು ನಡೆದಾಗ ನನ್ನ ತಂದೆಯು ವಿಸ್ಮಿತನಾದನು.
ದೃಷ್ಟ್ವಾ ಚ ಬ್ರಾಹ್ಮಣಾನಾಂ ತು ಮಹಿಮಾನಂ ಮಹಾತ್ಮನಾಮ್।
ಪರ್ಯಪೃಚ್ಛತ್ ಕಥಮಿಮೇ ಸಿದ್ಧಾ ಇತಿ ನಿಶಾಕರಮ್ ॥12॥
ಮಹಾತ್ಮರಾದ ಬ್ರಾಹ್ಮಣರ ಮಹಿಮೆಯನ್ನು ನೋಡಿ ಅವನು ಚಂದ್ರನನ್ನು, ಇವರು ಹೇಗೆ ಸಿದ್ಧಿಯನ್ನು ಪಡೆದರು ಎಂದು ಪ್ರಶ್ನೆ ಮಾಡಿದನು.
ಸೋಮಃ
ಬ್ರಾಹ್ಮಣಾಸ್ತಪಸಾ ಸರ್ವೇ ಸಿಧ್ಯಂತೇ ವಾಗ್ಬಲಾಃ ಸದಾ।
ಭುಜವೀರ್ಯಾ ಹಿ ರಾಜಾನೋ ವಾಗಸ್ತ್ರಶ್ಚ ದ್ವಿಜಾತಯಃ ॥13॥
ಚಂದ್ರ ಬ್ರಾಹ್ಮಣರೆಲ್ಲರೂ ತಪಸ್ಸಿನಿಂದ ಸಿದ್ಧಿಯನ್ನು ಪಡೆಯುತ್ತಾರೆ. ಅವರು ಯಾವಾಗಲೂ ವಾಗ್ಬಲವುಳ್ಳವರು. ರಾಜರು ಭುಜಪರಾಕ್ರಮಿಗಳು. ಬ್ರಾಹ್ಮಣರು ವಾಗಸ್ತ್ರವುಳ್ಳವರು.
ಪ್ರವಸನ್ ವಾಽಪ್ಯಧೀಯೀತ ಬಹ್ವೀರ್ದುರ್ವಸತೀರ್ವಸನ್।
ನಿರ್ಮನ್ಯುರಪಿ ನಿರ್ಮಾನೋ ಯತಿಃ ಸ್ಯಾತ್ ಸಮದರ್ಶನಃ ॥14॥
ಗುರುಕುಲಕ್ಕೆ ಪ್ರವಾಸವನ್ನು ಮಾಡಿ, ಗುರುಸೇವಾರೂಪವಾದ ಅನೇಕ ಕ್ಲೇಶಗಳನ್ನು ಅನುಭವಿಸಿಯಾದರೂ ಅಧ್ಯಯನವನ್ನು ಮಾಡಬೇಕು. ಕೋಪವನ್ನೂ, ಅಹಂಕಾರವನ್ನೂ ತ್ಯಜಿಸಿ ಸಮಾಧಾನದಿಂದಿದ್ದು ಪ್ರಯತ್ನಶೀಲನಾಗಬೇಕು.
ಅಪಿ ಚೇಜ್ಜ್ಞಾತಿಸಂಪನ್ನಃ ಸರ್ವಾನ್ ವೇದಾನ್ ಪಿತುರ್ಗೃಹೇ।
ಶ್ಲಾಘಮಾನ ಇವಾಧೀಯೇದ್ ಗ್ರಾಮ್ಯ ಇತ್ಯೇವ ತಂ ವಿದುಃ ॥15॥
ಶ್ರೇಷ್ಠಜಾತಿಯಲ್ಲಿ ಹುಟ್ಟಿದವನು ತಂದೆಯ ಮನೆಯಲ್ಲಿ ಎಲ್ಲ ವೇದಗಳನ್ನು ಇನ್ನೊಬ್ಬರು ಪ್ರಶಂಸಿಸುವಂತೆ ಅಧ್ಯಯನ ಮಾಡಿದರೂ ಅವನನ್ನು ಅಧ್ಯಯನ ಮಾಡದವನು ಎಂದೇ ತಿಳಿಯುತ್ತಾರೆ.
ಭೂಮಿರೇತೌ ನಿಗಿರತಿ ಸರ್ಪೋ ಬಿಲಶಯಾನಿವ।
ರಾಜಾನಂ ಚಾಪ್ಯಯೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥16॥
ಯುದ್ಧವನ್ನು ಮಾಡದಿರುವ ಕ್ಷತ್ರಿಯ ಮತ್ತು ಪ್ರವಾಸವನ್ನು ಮಾಡದಿರುವ ಬ್ರಾಹ್ಮಣ ಇವರಿಬ್ಬರನ್ನೂ ಭೂಮಿಯು ಸರ್ಪವು ಇಲಿಗಳನ್ನು ನುಂಗುವಂತೆ ನುಂಗುತ್ತದೆ.
ಅತಿಮಾನಃ ಶ್ರಿಯಂ ಹಂತಿ ಪುರುಷಸ್ಯಾಲ್ಪಮೇಧಸಃ।
ಗರ್ಭೇಣ ದುಷ್ಯತೇ ಕನ್ಯಾ ಗೃಹವಾಸೇನ ಚ ದ್ವಿಜಃ ॥17॥
ಅಲ್ಪಬುದ್ಧಿಯುಳ್ಳ ಮನುಷ್ಯನ ಅಹಂಕಾರವು ಅವನ ಸಂಪತ್ತನ್ನು ನಾಶಗೊಳಿಸುತ್ತದೆ. ಗರ್ಭವು ಕನ್ಯೆಯನ್ನು ಹಾಳುಮಾಡುತ್ತದೆ. ಗೃಹವಾಸವು ಬ್ರಾಹ್ಮಣನನ್ನು ಹಾಳು ಮಾಡುತ್ತದೆ.
ಶಂಬರಃ
ಇತ್ಯೇತನ್ಮೇ ಪಿತಾ ಶ್ರುತ್ವಾ ಸೋಮಾದದ್ಭುತದರ್ಶನಾತ್।
ಬ್ರಾಹ್ಮಣಾನ್ ಪೂಜಯಾಮಾಸ ತಥೈವಾಹಂ ಮಹಾವ್ರತಾನ್ ॥18॥
ಶಂಬರ ಅದ್ಭುತ ಜ್ಞಾನವುಳ್ಳ ಚಂದ್ರನಿಂದ ಇದನ್ನು ಕೇಳಿದ ನನ್ನ ತಂದೆಯು ಬ್ರಾಹ್ಮಣರನ್ನು ಪೂಜಿಸಿದನು. ಹಾಗೆಯೇ ನಾನೂ ಮಹಾವ್ರತರಾದ ಬ್ರಾಹ್ಮಣರನ್ನು ಪೂಜಿಸುತ್ತೇನೆ.
ಭೀಷ್ಮಃ
ಶ್ರುತ್ವೈತದ್ವಚನಂ ಶಕ್ರೋ ದಾನವೇಂದ್ರಮುಖಾಚ್ಚ್ಯುತಮ್।
ದ್ವಿಜಾನ್ ಸಂಪೂಜಯಾಮಾಸ ಮಹೇಂದ್ರತ್ವಮವಾಪ ಚ ॥19॥
ಭೀಷ್ಮ ಇಂದ್ರನು ದಾನವೇಂದ್ರನಾದ ಶಂಬರನ ಮುಖದಿಂದ ಹೊರಟ ಈ ಮಾತುಗಳನ್ನು ಕೇಳಿ ಬ್ರಾಹ್ಮಣರನ್ನು ಪೂಜಿಸಿ ಮಹೇಂದ್ರತ್ವವನ್ನು ಪಡೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ

ಶಕ್ರಶಂಬರಸಂವಾದೋ ನಾಮ ಷಟ್‌ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೇಳನೆಯ ಅಧ್ಯಾಯ
ಬ್ರಾಹ್ಮಣ ಪ್ರಶಂಸೆ. ಪಾತ್ರಪರೀಕ್ಷೆ.
ಯುಧಿಷ್ಠಿರಃ
ಅಪೂರ್ವಂ ವಾ ಭವೇತ್ ಪಾತ್ರಮಥ ವಾಪಿ ಚಿರೋಷಿತಮ್ ।
ದೂರಾದಭ್ಯಾಗತಂ ವಾಪಿ ಕಿಂ ಪಾತ್ರಂ ಸ್ಯಾತ್ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ಹೊಸದಾಗಿ ಬಂದ ಅಪರಿಚಿತನು ಪಾತ್ರನಾಗುತ್ತಾನೆಯೋ? ಹತ್ತಿರದಲ್ಲಿಯೇ ಬಹಳ ಕಾಲ ವಾಸಿಸಿದವನು ಪಾತ್ರನಾಗುತ್ತೇನೆಯೋ? ಅಥವಾ ದೂರದಿಂದ ಬಂದವನು ಪಾತ್ರನಾಗುತ್ತಾನೆಯೋ?
ಭೀಷ್ಮಃ
ಕ್ರಿಯಾ ಭವತಿ ಕೇಷಾಂಚಿದುಪಾಂಶುವ್ರತಮುತ್ತಮಮ್ ।
ಯೋ ಯೋ ಯಾಚೇತ ಯತ್ ಕಿಂಚಿತ್ ಸರ್ವಂ ದದ್ಯಾಮ ಇತ್ಯುತ ॥
ಅಪೀಡಯನ್ ಭೃತ್ಯವರ್ಗಮಿತ್ಯೇವಮನುಶುಶ್ರುಮ ।
ಪೀಡಯನ್ ಭೃತ್ಯವರ್ಗಂ ಹಿ ಆತ್ಮಾನಮಪಕರ್ಷತಿ ॥3॥
ಭೀಷ್ಮ ಕೆಲವರು ಯಾವಯಾವನು ಏನನ್ನು ಬೇಡುತ್ತಾನೆಯೋ ಅವೆಲ್ಲವನ್ನೂ ಭೃತ್ಯವರ್ಗವನ್ನು ಪೀಡಿಸದೆ ಕೊಡುತ್ತೇನೆ ಎಂಬ ರಹಸ್ಯವ್ರತವನ್ನು ಧರಿಸಿ ಅದಕ್ಕೆ ಅನುಗುಣವಾಗಿ ದಾನವನ್ನು ಮಾಡುತ್ತಾರೆ ಎಂದು ಕೇಳಿದ್ದೇವೆ. ಭೃತ್ಯವರ್ಗವನ್ನು ಪೀಡಿಸುವವನು ತನ್ನನ್ನು ಹೀನ ಸ್ಥಿತಿಗೆ ತಂದುಕೊಳ್ಳುತ್ತಾನೆ.
ಅಪೂರ್ವಂ ವಾಪಿ ಯತ್ ಪಾತ್ರಂ ಯಚ್ಚಾಪಿ ಸ್ಯಾಚ್ಚಿರೋಷಿತಮ್ ।
ದೂರಾದಭ್ಯಾಗತಂ ಚಾಪಿ ತತ್ ಪಾತ್ರಂ ಚ ವಿದುರ್ಬುಧಾಃ ॥4॥
ಅಪರಿಚಿತನಾಗಲೀ ಅಥವಾ ಬಹುಕಾಲ ಪರಿಚಿತನಾಗಲೀ ಅಥವಾ ದೂರದಿಂದ ಬಂದವನಾಗಲೀ ಅವನು ಪಾತ್ರನೆಂದು ಜ್ಞಾನಿಗಳು ತಿಳಿಯುತ್ತಾರೆ.
ಯುಧಿಷ್ಠಿರಃ
ಅಪೀಡಯಾ ಚ ಭೃತ್ಯಾನಾಂ ಧರ್ಮಸ್ಯಾಹಿಂಸಯಾ ತಥಾ ।
ಪಾತ್ರಂ ವಿದ್ಯಾಮ ತತ್ತ್ವೇನ ಯಸ್ಮೈ ದತ್ತಂ ನ ಸಂತಪೇತ್ ॥5॥
ಯುಧಿಷ್ಠಿರ ಭೃತ್ಯರನ್ನು ಪೀಡಿಸದೆ ಧರ್ಮವನ್ನು ಹಿಂಸೆ ಮಾಡದಂತೆ ಯಾವನಿಗೆ ದಾನ ಮಾಡಿದರೆ ಸಂತಾಪ ಉಂಟುಮಾಡುವುದಿಲ್ಲವೋ ಅಂತಹ ಪಾತ್ರನನ್ನು ಸರಿಯಾಗಿ ತಿಳಿಯೋಣ.
ಭೀಷ್ಮಃ
ಋತ್ವಿಕ್ಪುರೋಹಿತಾಚಾರ್ಯಾಃ ಶಿಷ್ಯಾಃ ಸಂಬಂಧಿಬಾಂಧವಾಃ ।
ಸರ್ವೇ ಪೂಜ್ಯಾಶ್ಚ ಮಾನ್ಯಾಶ್ಚ ಶ್ರುತವೃತ್ತೋಪಸಂಹಿತಾಃ ॥6॥
ಭೀಷ್ಮ ಒಳ್ಳೆಯ ವಿದ್ಯೆ ಮತ್ತು ನಡತೆಯಿಂದ ಕೂಡಿದ ಋತ್ವಿಜರು, ಪುರೋಹಿತರು, ಆಚಾರ್ಯರು, ಶಿಷ್ಯರು, ಸಂಬಂಧಿ-ಬಾಂಧವರು ಎಲ್ಲರೂ ಪೂಜ್ಯರು ಮತ್ತು ಸಮ್ಮಾನಕ್ಕೆ ಅರ್ಹರಾದವರು.
ಅತೋಽನ್ಯಥಾ ವರ್ತಮಾನಾಃ ಸರ್ವೇ ನಾರ್ಹಂತಿ ಸತ್ಕ್ರಿಯಾಮ್ ।
ತಸ್ಮಾನ್ನಿತ್ಯಂ ಪರೀಕ್ಷೇತ ಪುರುಷಾನ್ ಪ್ರಣಿಧಾಯ ವೈ ॥7॥
ಅವರೆಲ್ಲರೂ ಬೇರೆ ರೀತಿಯಲ್ಲಿ ಇದ್ದರೆ ಸತ್ಕಾರಕ್ಕೆ ಅರ್ಹರಾಗುವುದಿಲ್ಲ. ಆದ್ದರಿಂದ ರಾಜನಾದವನು ಗೂಢಚಾರರನ್ನಿಟ್ಟು ಯಾವಾಗಲೂ ಪರೀಕ್ಷಿಸಬೇಕು.
ಅಕ್ರೋಧಃ ಸತ್ಯವಚನಮಹಿಂಸಾ ದಮ ಆರ್ಜವಮ್ ।
ಅದ್ರೋಹೋ ನಾತಿಮಾನಶ್ಚ ಹ್ರೀಸ್ತಿತಿಕ್ಷಾ ತಪಃ ಶಮಃ ॥8॥
ಯಸ್ಮಿನ್ನೇತಾನಿ ದೃಶ್ಯಂತೇ ನ ಚಾಕಾರ್ಯಾಣಿ ಭಾರತ ।
ಭಾವತೋ ಸ್ವನಿವಿಷ್ಟಾನಿ ತತ್ಪಾತ್ರಂ ಮಾನಮರ್ಹತಿ ॥9॥
ಕ್ರೋಧರಾಹಿತ್ಯ, ಸತ್ಯವಚನ, ಅಹಿಂಸೆ, ಇಂದ್ರಿಯನಿಗ್ರಹ, ಮೃದು ಸ್ವಭಾವ, ಅದ್ರೋಹ, ಅಹಂಕಾರ ರಾಹಿತ್ಯ, ನಾಚಿಕೆ, ದ್ವಂದ್ವಸಹಿಷ್ಣುತೆ, ತಪಸ್ಸು, ಭಗವನ್ನಿಷ್ಠೆ - ಎಲೈ ಭಾರತನೇ, ಇವೆಲ್ಲವೂ ಯಾವನಲ್ಲಿ ಕಂಡುಬರುತ್ತವೋ ಮತ್ತು ಯಾವನಲ್ಲಿ ಸ್ವಾಭಾವಿಕವಾಗಿಯೇ ಇವೆಯೋ ಅವನು ಪಾತ್ರ. ಅವನು ಸಮ್ಮಾನಕ್ಕೆ ಅರ್ಹನಾದವನು.
ತಥಾ ಚಿರೋಷಿತಂ ಚಾಪಿ ಸಂಪ್ರತ್ಯಾಗತಮೇವ ಚ ।
ಅಪೂರ್ವಂ ಚೈವ ಪೂರ್ವಂ ಚ ತತ್ಪಾತ್ರಂ ಮಾನಮರ್ಹತಿ ॥10॥
ಅಂತಹ ಬಹುಕಾಲದಿಂದ ವಾಸಮಾಡಿ ಪರಿಚಿತನಾದವನು, ಈಗ ತಾನೇ ಬಂದವನು, ಹಿಂದೆ ಅಪರಿಚಿತನಾದವನೂ ಪಾತ್ರನಾಗುತ್ತಾನೆ, ಸತ್ಕಾರಕ್ಕೆ ಅರ್ಹನಾಗುತ್ತಾನೆ.
ಅಪ್ರಾಮಾಣ್ಯಂ ಚ ವೇದಾನಾಂ ಶಾಸ್ತ್ರಾಣಾಂ ಚಾತಿಲಂಘನಮ್ ।
ಸರ್ವತ್ರ ಚಾನವಸ್ಥಾನಮೇತನ್ನಾಶನಮಾತ್ಮನಃ ॥11॥

ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು, ಶಾಸ್ತ್ರವಚನಗಳನ್ನು ಮೀರುವುದು, ಯಾವ ಮಾತನ್ನೂ ಒಪ್ಪದಿರುವುದು ಇದು ಆತ್ಮನಾಶಕ್ಕೆ ಕಾರಣ.
ಭವೇತ್ ಪಂಡಿತಮಾನೀ ಯೋ ಬ್ರಾಹ್ಮಣೋ ವೇದನಿಂದಕಃ |
ಆನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥಿಕಾಮ್ ॥12॥
ಹೇತುವಾದಾನ್ ಬ್ರುವನ್ ಸತ್ಸು ವಿಜೇತಾ ಹೇತುವಾದಿಕಃ |
ಆಕ್ರೋಷ್ಟಾ ಚಾತಿವಕ್ತಾ ಚ ಬ್ರಾಹ್ಮಣಾನಾಂ ಸದೈವ ಹಿ ॥13॥
ಸರ್ವಾಭಿಶಂಕೀ ಮೂಢಶ್ಚ ಬಾಲಃ ಕಟುಕವಾಗಪಿ |
ಬೋದ್ಧವ್ಯಸ್ತಾದೃಶಸ್ತಾತ ನರಶ್ವಾನಂ ಹಿ ತಂ ವಿದುಃ ॥14॥
ತಾನು ಪಂಡಿತನೆಂಬ ಅಹಂಕಾರವನ್ನು ಹೊಂದಿರುವವನು, ವೇದನಿಂದಕನಾದ ಬ್ರಾಹ್ಮಣನು, ವ್ಯರ್ಥವಾದ ಶುಷ್ಕತರ್ಕವಿದ್ಯೆಯಲ್ಲಿ ಅನುರಕ್ತನಾದವನು, ಸಜ್ಜನರನ್ನು ದುಷ್ಟಹೇತುಗಳನ್ನು ಹೇಳಿ ಜಯಿಸುವವನು, ಹೇತುವಾದವನ್ನು ಅವಲಂಬಿಸುವವನು, ಬ್ರಾಹ್ಮಣರನ್ನು ನಿಂದಿಸುವವನು, ಬ್ರಾಹ್ಮಣರ ಜೊತೆಯಲ್ಲಿ ಅವರನ್ನು ಮೀರಿ ಮಾತನಾಡುವವನನು, ಎಲ್ಲರನ್ನೂ ಶಂಕಿಸುವವನು, ಸ್ವತಃ ಮೂಢನೂ ಬುದ್ಧಿಶೂನ್ಯನೂ ಆಗಿ ಕ್ರೂರವಾಗಿ ಮಾತನಾಡುವವನು ಅಂತಹ ಬ್ರಾಹ್ಮಣನು ಯಾರೆಂದು ತಿಳಿಯಬೇಕು. ಎಲೈ ಪ್ರೀತಿಪಾತ್ರನೇ, ಜ್ಞಾನಿಗಳು ಅಂತಹ ಬ್ರಾಹ್ಮಣನನ್ನು ಮನುಷ್ಯ ಶ್ವಾನನೆಂದು ಕರೆಯುತ್ತಾರೆ.
ಯಥಾ ಶ್ವಾ ಭಷಿತುಂ ಚೈವ ಹಂತುಂ ಚೈವಾವಸೃಜ್ಯತೇ |
ಏವಂ ಸಂಭಾಷಣಾರ್ಥಾಯ ಸರ್ವಶಾಸ್ತ್ರವಧಾಯ ಚ |
ಅಲ್ಪಶ್ರುತಾಃ ಕುತರ್ಕಾಶ್ಚ ದೃಷ್ಟಾಃ ಸ್ಪಷ್ಟಾಃ ಕುಪಂಡಿತಾಃ ॥15॥
ಹೇಗೆ ನಾಯಿಯು ಬೊಗಳುವುದಕ್ಕಾಗಿ ಮತ್ತು ಕಚ್ಚುವುದಕ್ಕಾಗಿ ಸಾಕಲ್ಪಡುತ್ತದೆಯೋ ಹಾಗೆಯೇ ಶುಷ್ಕವಾದ ಮಾತನ್ನು ಆಡುವುದಕ್ಕಾಗಿ, ಸರ್ವಶಾಸ್ತ್ರ ವಧೆಯನ್ನು ಮಾಡುವುದಕ್ಕಾಗಿ ಅಲ್ಪಶ್ರುತರೂ, ಕುತರ್ಕಿಗಳೂ, ಕುಪಂಡಿತರೂ ಆದವರು ಸ್ಪಷ್ಟರಾಗಿ ಕಾಣುತ್ತಾರೆ.
ವಿದ್ಯಾತಪೋಭ್ಯಾಂ ಹೀನೇನ ನ ತು ಗ್ರಾಹ್ಯಃ ಪ್ರತಿಗ್ರಹಃ |
ಗೃಹ್ಣನ್ ಪ್ರತಿಗ್ರಹಮಥೋ ನಯತ್ಯಾತ್ಮಾನಮೇವ ಚ ॥16॥
ವಿದ್ಯಾ-ತಪಸ್ಸುಗಳಿಂದ ಹೀನನಾದ ಮನುಷ್ಯನು ನೀಡಿದ ದಾನವನ್ನು ಸ್ವೀಕರಿಸಬಾರದು. ಅಂತಹ ದಾನವನ್ನು ಸ್ವೀಕರಿಸುವವನು ತನ್ನನ್ನೇ ಅಧಃಪತನಕ್ಕೆ ಸೆಳೆದೊಯ್ಯುತ್ತಾನೆ.
ಪ್ರತಿಗ್ರಹಸಮರ್ಥೋಽಪಿ ನಾದತ್ತೇ ಯಃ ಪ್ರತಿಗ್ರಹಮ್ |
ಯೇ ಲೋಕಾ ದಾನಶೀಲಾನಾಂ ಸ ತಾನಾಪ್ನೋತಿ ಪುಷ್ಕಳಾನ್ ॥17॥
ದಾನವನ್ನು ಸ್ವೀಕರಿಸಲು ಅರ್ಹತೆ ಇದ್ದರೂ ಯಾವನು ಸ್ವೀಕಾರ ಮಾಡುವುದಿಲ್ಲವೋ ಅವನು ದಾನಶೀಲರು ಪಡೆಯುವ ಪುಷ್ಕಳವಾದ ಲೋಕಗಳನ್ನು ಪಡೆಯುತ್ತಾನೆ.
ಶ್ರುತಿಸ್ಮೃತೀತಿಹಾಸಾದಿಪುರಾಣಾರಣ್ಯವೇದಿನಃ |
ಅನುರುಂಧ್ಯಾದ್ ಬಹುಜ್ಞಾಂಶ್ಚ ಸಾರಜ್ಞಾಂಶ್ಚೈವ ಪಂಡಿತಾನ್ ॥18॥
ಶ್ರುತಿ-ಸ್ಮೃತಿ-ಇತಿಹಾಸ-ಪುರಾಣ-ಆರಣ್ಯಕಾದಿಗಳನ್ನು ತಿಳಿದ ಬಹುಜ್ಞರೂ, ಸಾರಜ್ಞರೂ ಆದ ಪಂಡಿತರನ್ನು ಅನುಸರಿಸಬೇಕು.
ಲೋಕಯಾತ್ರಾ ಚ ದ್ರಷ್ಟವ್ಯಾ ಧರ್ಮಶ್ಚಾತ್ಮಹಿತಾನಿ ಚ |
ಏವಂ ನರೋ ವರ್ತಮಾನಃ ಶಾಶ್ವತೀರೇಧತೇ ಸಮಾಃ ॥19॥
ಲೋಕಯಾತ್ರೆಯನ್ನೂ ಗಮನಿಸಬೇಕು, ಧರ್ಮವನ್ನೂ ಮತ್ತು ಆತ್ಮಹಿತವನ್ನೂ ಗಮನಿಸಬೇಕು. ಈ ರೀತಿಯಲ್ಲಿ ಬದುಕುವ ಮನುಷ್ಯನು ಶಾಶ್ವತವಾಗಿ ಅಭಿವೃದ್ಧಿಯನ್ನು ಹೊಂದುತ್ತಾನೆ.
ಋಣಮುನ್ಮುಚ್ಯ ದೇವಾನಾಮೃಷೀಣಾಂ ಚ ತಥೈವ ಚ |
ಪಿತೄಣಾಮಥ ವಿಪ್ರಾಣಾಮತಿಥೀನಾಂ ಚ ಪಂಚಮಮ್ ॥20॥
ಪರ್ಯಾಯೇಣ ವಿಶುದ್ಧೇನ ಸುನಿರ್ಣಿಕ್ತೇನ ಕರ್ಮಣಾ |
ಏವಂ ಗೃಹಸ್ಥಃ ಕರ್ಮಾಣಿ ಕುರ್ವನ್ ಧರ್ಮಾನ್ನ ಹೀಯತೇ ॥21॥
ದೇವರ್ಷಿ-ಪಿತೃಗಳ ಋಣವನ್ನು, ಬ್ರಾಹ್ಮಣರ ಋಣವನ್ನು, ಅತಿಥಿಗಳ ಋಣವನ್ನು ಶುದ್ಧವಾಗಿ ಸತ್ಕರ್ಮಗಳಿಂದ ಒಂದರ ನಂತರ ಒಂದನ್ನು ತೀರಿಸಿ ಈ ರೀತಿ ಕರ್ಮವನ್ನು ಆಚರಿಸುವ ಗೃಹಸ್ಥನು ಧರ್ಮದಿಂದ ಹೀನನಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಬ್ರಾಹ್ಮಣಪ್ರಶಂಸಾಯಾಂ ಪಾತ್ರಪರೀಕ್ಷಾನಾಮ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೆಂಟನೆಯ ಅಧ್ಯಾಯ
ಸ್ತ್ರೀಯರ ದೋಷಕಥನ. ನಾರದ ಮತ್ತು ಪಂಚಚೂಡಳ ಸಂವಾದ.
ಯುಧಿಷ್ಠಿರಃ
ಸ್ತ್ರೀಣಾಂ ಸ್ವಭಾವಮಿಚ್ಛಾಮಿ ಶ್ರೋತುಂ ಭರತಸತ್ತಮ |
ಸ್ತ್ರಿಯೋ ಹಿ ಮೂಲಂ ದೋಷಾಣಾಂ ಲಘುಚಿತ್ತಾಃ ಪಿತಾಮಹ ॥1॥

ಯುಧಿಷ್ಠಿರ ಎಲೈ ಭರತಶ್ರೇಷ್ಠನೇ, ಸ್ತ್ರೀಯರ ಸ್ವಭಾವವನ್ನು ಕೇಳಲು ಬಯಸುತ್ತೇನೆ. ಪಿತಾಮಹನೇ, ಸ್ತ್ರೀಯರು ಚಂಚಲಚಿತ್ತರಾದವರು ಮತ್ತು ದೋಷಗಳಿಗೆ ಕಾರಣರಾದವರು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಾರದಸ್ಯ ಚ ಸಂವಾದಂ ಪುಂಶ್ಚಲ್ಯಾ ಪಂಚಚೂಡಯಾ ॥2॥
ಭೀಷ್ಮ ಈ ವಿಷಯದಲ್ಲಿಯೂ ಸಹ ನಾರದರಿಗೂ ಮತ್ತು ಅಪ್ಸರೆಯಾದ ಪಂಚಚೂಡೆಗೂ ನಡೆದ ಪುರಾತನವಾದ ಸಂವಾದ ರೂಪವಾದ ಈ ಇತಿಹಾಸವನ್ನು ಹೇಳುತ್ತಾರೆ.
ಲೋಕಾನನುಚರನ್ ಧೀಮಾನ್ ದೇವರ್ಷಿರ್ನಾರದಃ ಪುರಾ |
ದದರ್ಶಾಪ್ಸರಸಂ ಬ್ರಾಹ್ಮೀಂ ಪಂಚಚೂಡಾಮನಿಂದಿತಾಮ್ ॥3॥
ಮೇಧಾವಿಗಳಾದ ದೇವರ್ಷಿಗಳಾದ ನಾರದರು ಲೋಕಗಳನ್ನು ಸಂಚರಿಸುತ್ತಾ ಹಿಂದೆ ಒಮ್ಮೆ ಬ್ರಹ್ಮಲೋಕದ ಅಪ್ಸರೆಯಾದ ಸುಂದರಿಯಾದ ಪಂಚಚೂಡೆಯನ್ನು ನೋಡಿದರು.
ತಾಂ ದೃಷ್ಟ್ವಾ ಚಾರುಸರ್ವಾಂಗೀಂ ಪಪ್ರಚ್ಛಾಪ್ಸರಸಂ ಮುನಿಃ |
ಸಂಶಯೋ ಹೃದಿ ಮೇ ಕಶ್ಚಿತ್ ತನ್ಮೇ ಬ್ರೂಹಿ ಸುಮಧ್ಯಮೇ ॥4॥
ಸುಂದರ ಸರ್ವಾಂಗವುಳ್ಳ ಅವಳನ್ನು ನೋಡಿದ ನಾರದರು ಅಪ್ಸರೆಯನ್ನು ಕುರಿತು ಸುಂದರಿಯೇ, ನನ್ನ ಮನಸ್ಸಿನಲ್ಲಿ ಒಂದು ಸಂಶಯವಿದೆ. ಅದಕ್ಕೆ ಉತ್ತರವನ್ನು ಹೇಳು ಎಂದು ಕೇಳಿದರು.
ಏವಮುಕ್ತಾ ತು ಸಾ ವಿಪ್ರಂ ಪ್ರತ್ಯುವಾಚಾಥ ನಾರದಮ್ |
ವಿಷಯೇ ಸತಿ ವಕ್ಷ್ಯಾಮಿ ಸಮರ್ಥಾಂ ಮನ್ಯಸೇ ಚ ಮಾಮ್ ॥5॥
ಹೀಗೆ ಹೇಳಲ್ಪಟ್ಟ ಅವಳು ನಾರದರನ್ನು ಕುರಿತು ನೀನು ನನ್ನನ್ನು ಉತ್ತರವನ್ನು ಕೊಡಲು ಸಮರ್ಥಳೆಂದು ತಿಳಿದಿದ್ದೀಯೆ. ಯೋಗ್ಯವಾದ ವಿಷಯವಾದರೆ ನಾನು ಉತ್ತರವನ್ನು ಹೇಳುವೆನು ಎಂದಳು.
ನಾರದಃ
ನ ತ್ವಾಮವಿಷಯೇ ಭದ್ರೇ ನಿಯೋಕ್ಷ್ಯಾಮಿ ಕಥಂಚನ |
ಸ್ತ್ರೀಣಾಂ ಸ್ವಭಾವಮಿಚ್ಛಾಮಿ ತ್ವತ್ತಃ ಶ್ರೋತುಂ ವರಾನನೇ ॥6॥
ನಾರದರು ಶುಭಳಾದವಳೇ, ನಿನ್ನನ್ನು ಅಯೋಗ್ಯ ವಿಷಯದಲ್ಲಿ ಪ್ರಶ್ನೆ ಮಾಡುವುದಿಲ್ಲ. ಸುಂದರಿಯೇ, ಸ್ತ್ರೀಯರ ಸ್ವಭಾವವನ್ನು ನಿನ್ನಿಂದ ಕೇಳಲು ಬಯಸುತ್ತೇನೆ.
ಭೀಷ್ಮಃ
ಏತಚ್ಛ್ರುತ್ವಾ ವಚಸ್ತಸ್ಯ ದೇವರ್ಷೇರಪ್ಸರೋತ್ತಮಾ |
ಪ್ರತ್ಯುವಾಚ ನ ಶಕ್ಷ್ಯಾಮಿ ಸ್ತ್ರೀ ಸತೀ ನಿಂದಿತುಂ ಸ್ತ್ರಿಯಃ ॥7॥
ಭೀಷ್ಮ ದೇವರ್ಷಿಯ ಈ ಮಾತನ್ನು ಕೇಳಿ ಶ್ರೇಷ್ಠ ಅಪ್ಸರೆಯಾದ ಅವಳು ನಾನೇ ಸ್ತ್ರೀಯಾಗಿದ್ದು ಸ್ತ್ರೀಯರನ್ನು ನಿಂದಿಸಲಾರೆ ಎಂದು ಉತ್ತರವನ್ನು ನೀಡಿದಳು.
ವಿದಿತಾಸ್ತೇ ಸ್ತ್ರಿಯೋ ಯಾಶ್ಚ ಯಾದೃಶಾಶ್ಚ ಸ್ವಭಾವತಃ |
ನ ಮಾಮರ್ಹಸಿ ದೇವರ್ಷೇ ನಿಯೋಕ್ತುಂ ಪ್ರಶ್ನ ಈದೃಶೇ ॥8॥
ಸ್ತ್ರೀಯರು ಎಂತಹವರು? ಎಂತಹ ಸ್ವಭಾವವುಳ್ಳವರು ಎಂದು ನಿಮಗೆ ತಿಳಿದಿದೆ. ದೇವರ್ಷಿಯೇ, ನೀವು ನನಗೆ ಇಂತಹ ಪ್ರಶ್ನೆಯನ್ನು ಮಾಡಬಾರದು (ಎಂದು ಹೇಳಿದಳು).
ತಾಮುವಾಚ ಸ ದೇವರ್ಷಿಃ ಸತ್ಯಂ ವದ ಸುಮಧ್ಯಮೇ |
ಮೃಷಾವಾದೇ ಭವೇದ್ ದೋಷಃ ಸತ್ಯೇ ದೋಷೋ ನ ವಿದ್ಯತೇ ॥9॥
ದೇವರ್ಷಿಯು ಅವಳನ್ನು ಕುರಿತು- `ಸುಂದರಿಯೇ, ಸತ್ಯವನ್ನು ಹೇಳು. ಸುಳ್ಳನ್ನು ಹೇಳಿದರೆ ದೋಷವುಂಟಾಗುತ್ತದೆ. ಸತ್ಯವನ್ನು ಹೇಳಿದರೆ ದೋಷವಿಲ್ಲ' ಎಂದು ಹೇಳಿದರು.
ಇತ್ಯುಕ್ತಾ ಸಾ ಕೃತಮತಿರಭವಚ್ಚಾರುಹಾಸಿನೀ |
ಸ್ತ್ರೀದೋಷಾನ್ ಶಾಶ್ವತಾನ್ ಸತ್ಯಾನ್ ಭಾಷಿತುಂ ಸಂಪ್ರಚಕ್ರಮೇ ॥10॥
ಈ ಮಾತನ್ನು ಕೇಳಿದ ಅವಳು ಮನಸ್ಸಿನಲ್ಲಿ ನಿಶ್ಚಯಿಸಿ, ಸುಂದರವಾದ ಮಂದಹಾಸವನ್ನು ಬೀರಿ, ಶಾಶ್ವತವಾದ ಮತ್ತು ಸತ್ಯವಾದ ಸ್ತ್ರೀ ದೋಷಗಳನ್ನು ಹೇಳಲು ಉಪಕ್ರಮಿಸಿದಳು.
ಪಂಚಚೂಡಾ
ಕುಲೀನಾ ರೂಪವತ್ಯಶ್ಚ ನಾಥವತ್ಯಶ್ಚ ಯೋಷಿತಃ |
ಮರ್ಯಾದಾಸು ನ ತಿಷ್ಠಂತಿ ಸ ದೋಷಃ ಸ್ತ್ರೀಷು ನಾರದ ॥11॥
ಪಂಚಚೂಡಾ ನಾರದರೇ, ಒಳ್ಳೆಯ ಕುಲದಲ್ಲಿ ಜನಿಸಿದವರೂ, ಒಳ್ಳೆಯ ರೂಪವನ್ನು ಹೊಂದಿದವರೂ, ಒಳ್ಳೆಯ ಪತಿಯನ್ನು ಹೊಂದಿದವರೂ ಆದ ಸ್ತ್ರೀಯರು ಕಟ್ಟುಪಾಡಿನಲ್ಲಿ ನಿಲ್ಲುವುದಿಲ್ಲ. ಇದು ಸ್ತ್ರೀಯರ ದೋಷ.
ನ ಸ್ತ್ರೀಭ್ಯಃ ಕಿಂಚಿದನ್ಯದ್ ವೈ ಪಾಪೀಯಸ್ತರಮಸ್ತಿ ವೈ |
ಸ್ತ್ರಿಯೋ ಹಿ ಮೂಲಂ ದೋಷಾಣಾಂ ತಥಾ ತ್ವಮಪಿ ವೇತ್ಥ ಹ ॥12॥
ಸ್ತ್ರೀಯರಿಗಿಂತ ಹೆಚ್ಚು ಪಾಪಿಷ್ಠವಾದುದು ಇನ್ನೊಂದು ಯಾವುದೂ ಇಲ್ಲ. ಸ್ತ್ರೀಯರೇ ಎಲ್ಲ ದೋಷಗಳಿಗೂ ಮೂಲಕಾರಣರಾದವರು. ಅದನ್ನು ನೀವೂ ತಿಳಿದಿದ್ದೀರಿ.

ಸಮಾಜ್ಞಾತಾನೃದ್ಧಿಮತಃ ಪ್ರತಿರೂಪಾನ್ ವಶೇ ಸ್ಥಿತಾನ್ |
ಪತೀನಂತರಮಾಸಾದ್ಯ ನಾಲಂ ನಾರ್ಯಃ ಪ್ರತೀಕ್ಷಿತುಮ್ ॥13॥
ಸ್ತ್ರೀಯರು ಒಂದು ಅವಕಾಶವು ದೊರೆತರೆ ತಾವು ಚೆನ್ನಾಗಿ ತಿಳಿದ ಭಾಗ್ಯವಂತರಾದ ತಮ್ಮ ನೆರಳಿನಂತಿರುವ ತಮ್ಮ ವಶವರ್ತಿಗಳಾದ ಪತಿಗಳನ್ನೂ ಲಕ್ಷಿಸುವುದಿಲ್ಲ.
ಅಸದ್ಧರ್ಮಸ್ತ್ವಯಂ ಸ್ತ್ರೀಣಾಮಸ್ಮಾಕಂ ಭವತಿ ಪ್ರಭೋ |
ಪಾಪೀಯಸೋ ನರಾನ್ ಯದ್ ವೈ ಲಜ್ಜಾಂ ತ್ಯಕತ್ವ ಭಜಾಮಹೇ ॥
ಎಲೈ ಪ್ರಭುಗಳೇ, ಇದು ನಮ್ಮಂತಹ ಸ್ತ್ರೀಯರ ಕೆಟ್ಟ ಧರ್ಮವಾಗಿರುತ್ತದೆ. ಪಾಪಿಷ್ಠರಾದ ನರರ ಜೊತೆಯಲ್ಲಿಯೂ ಸಹ ನಾವು ಲಜ್ಜೆಯನ್ನು ತೊರೆದು ಅವರನ್ನು ಸೇವಿಸುತ್ತೇವೆ.
ಸ್ತ್ರಿಯಂ ಹಿ ಯಃ ಪ್ರಾರ್ಥಯತೇ ಸನ್ನಿಕರ್ಷಂ ಚ ಗಚ್ಛತಿ |
ಈಷಚ್ಚ ಕುರುತೇ ಸೇವಾಂ ತಮೇವೇಚ್ಛಂತಿ ಯೋಷಿತಃ ॥15॥
ಯಾವನು ತಮ್ಮನ್ನು ಬೇಡುತ್ತಾನೆಯೋ, ತಮ್ಮ ಸಮೀಪಕ್ಕೆ ಬರುತ್ತಾನೆಯೋ, ಸ್ವಲ್ಪ ಉಪಕಾರವನ್ನು ಮಾಡುತ್ತಾನೆಯೋ ಅವನನ್ನೇ ಸ್ತ್ರೀಯರು ಬಯಸುತ್ತಾರೆ.
ಅನರ್ಥಿತ್ವಾನ್ಮನುಷ್ಯಾಣಾಂ ಭಯಾತ್ ಪರಿಜನಸ್ಯ ಚ |
ಮರ್ಯಾದಾಯಾಮಮರ್ಯಾದಾಃ ಸ್ತ್ರಿಯಸ್ತಿಷ್ಠಂತಿ ಭರ್ತೃಷು ॥16॥
ಸ್ವತಃ ಕಟ್ಟುಪಾಡಿಲ್ಲದ ಸ್ತ್ರೀಯರು ಬೇರೆ ಪುರುಷರು ಬಂದು ಬೇಡದಿರುವುದರಿಂದ ಮತ್ತು ಪರಿಜನರ ಭಯದಿಂದ ಕಟ್ಟುಪಾಡನ್ನು ಅನುಸರಿಸಿ ತಮ್ಮ ಪತಿಗಳ ಬಳಿಯಲ್ಲಿ  ಇರುತ್ತಾರೆ.
ನಾಸಾಂ ಕಶ್ಚಿದಗಮ್ಯೋಽಸ್ತಿ ನಾಸಾಂ ವಯಸಿ ಸಂಸ್ಥಿತಿಃ |
ವಿರೂಪಂ ರೂಪವಂತಂ ವಾ ಪುಮಾನಿತ್ಯೇವ ಭುಂಜತೇ ॥17॥
ಅವರಿಗೆ ಅಗಮ್ಯನಾದವನು ಯಾವನೂ ಇಲ್ಲ. ಅವರು ವಯಸ್ಸನ್ನು ಪರಿಗಣಿಸುವುದಿಲ್ಲ. ರೂಪಹೀನನ್ನಾಗಲೀ, ರೂಪವಂತನನ್ನಾಗಲೀ ಪುರುಷನೆಂದೇ ಭೋಗಿಸುತ್ತಾರೆ.
ನ ಭಯಾನ್ನಾಪ್ಯನುಕ್ರೋಶಾನ್ನಾರ್ಥಹೇತೋಃ ಕಥಂಚನ |
ನ ಜ್ಞಾತಿಕುಲಸಂಬಂಧಾತ್ ಸ್ತ್ರಿಯಸ್ತಿಷ್ಠಂತಿ ಭರ್ತೃಷು ॥18॥
ಭಯದಿಂದಲಾಗಲೀ, ದಯೆಯಿಂದಲಾಗಲೀ, ಧನದ ಕಾರಣದಿಂದಾಗಲೀ, ನಿಬಿಡವಾದ ಪರಿಜನರು ಇರುವ ಕಾರಣದಿಂದಾಗಲೀ ಸ್ತ್ರೀಯರು ಪತಿಗಳಲ್ಲಿ ನಿಯತರಾಗಿ ನಿಲ್ಲುವುದಿಲ್ಲ.
ಯೌವನೇ ವರ್ತಮಾನಾನಾಂ ಮೃಷ್ಟಾಭರಣವಾಸಸಾಮ್ |
ನಾರೀಣಾಂ ಸ್ವೈರವೃತ್ತಾನಾಂ ಸ್ಪೃಹಯಂತಿ ಕುಲಸ್ತ್ರಿಯಃ ॥19॥
ಕುಲಸ್ತ್ರೀಯರು ಒಳ್ಳೆಯ ವಸ್ತ್ರಾಭರಣಗಳನ್ನು ಧರಿಸಿದ, ಸ್ವಚ್ಛಂದ ವೃತ್ತಿಗಳಾದ ಯುವತಿಯರನ್ನು ನೋಡಿ ಅವರ ಜೀವನದ ರೀತಿಯನ್ನು ಬಯಸುತ್ತಾರೆ.
ಯಾಶ್ಚ ಶಶ್ವದ್ ಬಹುಮತಾ ರಕ್ಷ್ಯಂತೇ ದಯಿತಾಃ ಸ್ತ್ರಿಯಃ |
ಅಪಿ ತಾಃ ಸಂಪ್ರಸಜ್ಜಂತೇ ಕುಬ್ಜಾಂಧಜಡವಾಮನೈಃ ॥20॥
ಪಂಗುಷ್ವಪಿ ಚ ದೇವರ್ಷೇ ಯೇ ಚಾನ್ಯೇ ಕುತ್ಸಿತಾ ನರಾಃ |
ಸ್ತ್ರೀಣಾಮಗಮ್ಯೋ ಲೋಕೇಽಸ್ಮಿನ್ನಾಸ್ತಿ ಕಶ್ಚಿನ್ಮಹಾಮುನೇ ॥21॥
ಪತಿಯಿಂದ ಯಾವಾಗಲೂ ಬಹುಮಾನಕ್ಕೆ ಒಳಗಾಗಿ ಯಾವ ಸ್ತ್ರೀಯರು ಪ್ರೀತಿಯಿಂದ ರಕ್ಷಿಸಲ್ಪಡುತ್ತಾರೆಯೋ ಅವರೂ ಸಹ ಕುಬ್ಜರಲ್ಲಿಯೂ, ಅಂಧರಲ್ಲಿಯೂ, ಮೂರ್ಖರಲ್ಲಿಯೂ, ವಾಮನರಲ್ಲಿಯೂ, ಕುಂಟರಲ್ಲಿಯೂ ಮತ್ತು ಬೇರೆ ಕೆಟ್ಟ ಪುರುಷರಲ್ಲಿಯೂ ಪ್ರಸಕ್ತರಾಗುತ್ತಾರೆ. ಎಲೈ ಮಹಾಮುನಿಗಳೇ, ಈ ಲೋಕದಲ್ಲಿ ಸ್ತ್ರೀಯರಿಗೆ ಅಗಮ್ಯನಾದ ಪುರುಷನು ಯಾವನೂ ಇಲ್ಲ.
ಯದಿ ಪುಂಸಾಂ ಗತಿರ್ಬ್ರಹ್ಮನ್ ಕಥಂಚಿನ್ನೋಪಪದ್ಯತೇ |
ಅಪ್ಯನ್ಯೋನ್ಯಂ ಪ್ರವರ್ತಂತೇ ನ ಹಿ ತಿಷ್ಠಂತಿ ಭರ್ತೃಷು ॥22॥
ಎಲೈ ಬ್ರಾಹ್ಮಣರೇ, ಅವರಿಗೆ ಪುರುಷನು ಯಾವ ರೀತಿಯಿಂದಲೂ ದೊರೆಯದಿದ್ದರೆ ಕಾಮಾತುರರಾದ ವನಿತೆಯರು ತಮ್ಮ ತಮ್ಮಲ್ಲಿಯೇ ಕಾಮಕೇಳಿಗಳಲ್ಲಿ ಪ್ರವೃತ್ತರಾಗುತ್ತಾರೆ. ಪತಿಯ ಅಣತಿಯಲ್ಲಿ ಇರುವುದಿಲ್ಲ.
ದುಷ್ಟಾಚಾರಾಃ ಪಾಪರತಾ ಅಸತ್ಯಾ ಮಾಯಯಾ ವೃತಾಃ |
ಅದೃಷ್ಟಬುದ್ಧಿಬಹುಲಾಃ ಪ್ರಾಯೇಣೇತ್ಯವಗಮ್ಯತಾಮ್ ॥23॥
ಸ್ತ್ರೀಯರು ಹೆಚ್ಚಾಗಿ ದುಷ್ಟಾಚಾರವುಳ್ಳವರು, ಪಾಪ ಕರ್ಮದಲ್ಲಿ ನಿರತರಾದವರು,  ಸುಳ್ಳನ್ನು ಹೇಳುವವರು, ಕಪಟದಿಂದ ಕೂಡಿದವರು ಮತ್ತು ಬುದ್ಧಿವೈಶಾಲ್ಯವಿಲ್ಲದವರು ಎಂದು ತಿಳಿಯಬೇಕು.
ಅಲಾಭಾತ್ ಪುರುಷಾಣಾಂ ಹಿ ಭಯಾತ್ ಪರಿಜನಸ್ಯ ಚ |
ವಧಬಂಧಭಯಾಚ್ಚಾಪಿ ಸ್ವಯಂ ಗುಪ್ತಾ ಭವಂತಿ ತಾಃ ॥24॥
ಪುರುಷರು ದೊರೆಯದಿರುವುದರಿಂದ ಮತ್ತು ಪರಿಜನರ ಭಯದಿಂದ ಮತ್ತು ವಧೆ, ಬಂಧಗಳ ಭಯದಿಂದ ಸ್ತ್ರೀಯರು ಸ್ವತಃ ರಕ್ಷಿತರಾಗಿರುತ್ತಾರೆ.
ಚಲಸ್ವಭಾವಾ ದುಃಸೇವ್ಯಾ ದುರ್ಗ್ರಾಹ್ಯಾ ಭಾವತಸ್ತಥಾ |
ಪ್ರಾಜ್ಞಸ್ಯ ಪುರುಷಸ್ಯೇಹ ಯಥಾ ವಾಚಸ್ತಥಾ ಸ್ತ್ರಿಯಃ |
ಸುಹೃದ್ಯವದ್ಯಹೃದ್ಯಾಸ್ತಾ ವೈರಕೋಪಾಲಯಾ ಸ್ಮೃತಾಃ ॥25॥

ಸ್ತ್ರೀಯರು ಪ್ರಾಜ್ಞ ಪುರುಷನ ವಚನದಂತೆ ಚಂಚಲಸ್ವಭಾವವುಳ್ಳವರು, ಸೇವಿಸಲು ಕಷ್ಟಸಾಧ್ಯರಾದವರು ಮತ್ತು ತಿಳಿಯಲು ಸಾಧ್ಯವಾಗದ ಅಭಿಪ್ರಾಯವುಳ್ಳವರು. ಅವರು ಸುಹೃದರಲ್ಲಿಯೂ ದೋಷವನ್ನು ಚಿಂತಿಸುವವರು ಮತ್ತು ವೈರ, ಕೋಪಗಳಿಗೆ ಆಶ್ರಯರಾದವರು ಎಂದು ಹೇಳಲ್ಪಡುತ್ತಾರೆ.

ನಾಗ್ನಿಸ್ತೃಪ್ಯತಿ ಕಾಷ್ಠಾನಾಂ ನಾಪಗಾನಾಂ ಮಹೋದಧಿಃ |
ನಾಂತಕಃ ಸರ್ವಭೂತಾನಾಂ ನ ಪುಂಸಾಂ ವಾಮಲೋಚನಾಃ ॥26॥

ಅಗ್ನಿಯು ಕಟ್ಟಿಗೆಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ. ಮಹಾಸಮುದ್ರವು ನದಿಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ. ಯಮನು ಸರ್ವಭೂತಗಳ ಮಾರಣದಿಂದ ತೃಪ್ತಿಯನ್ನು ಹೊಂದುವುದಿಲ್ಲ. ವಾಮಲೋಚನೆಯರು (ಸುಂದರಿಯರು) ಪುರುಷರಿಂದ ತೃಪ್ತಿಯನ್ನು ಹೊಂದುವುದಿಲ್ಲ.

ಇದಮನ್ಯಚ್ಚ ದೇವರ್ಷೇ ರಹಸ್ಯಂ ಸರ್ವಯೋಷಿತಾಮ್ |
ದೃಷ್ಟ್ವೈವ ಪುರುಷಂ ಹೃದ್ಯಂ ಯೋನಿಃ ಪ್ರಕ್ಲಿದ್ಯತೇ ಸ್ತ್ರಿಯಃ ॥27॥

ಎಲೈ ದೇವರ್ಷಿಗಳೇ, ಎಲ್ಲ ಸ್ತ್ರೀಯರಿಗೆ ರಹಸ್ಯವಾದುದು ಇದು ಇನ್ನೊಂದು ವಿಷಯ. ಸುಂದರನಾದ ಪುರುಷನನ್ನು ನೋಡಿದ ಕೂಡಲೇ ಸ್ತ್ರೀಯರ ಯೋನಿಯು ಸ್ರವಿಸುತ್ತದೆ.

ಕಾಮಾನಾಮಪಿ ದಾತಾರಂ ಕರ್ತಾರಂ ಮಾನಸಾಂತ್ವಯೋಃ |
ರಕ್ಷಿತಾರಂ ನ ಮೃಷ್ಯಂತಿ ಭರ್ತಾರಂ ಪರಮಂ ಸ್ತ್ರಿಯಃ ॥28॥

ತಾವು ಬೇಡಿದುದನ್ನೆಲ್ಲಾ ತಂದುಕೊಡುವ, ತಮಗೆ ಯಾವಾಗಲೂ ಗೌರವವನ್ನು ಮತ್ತು ಸಮಾಧಾನವನ್ನು ಕೊಡುವ, ತಮ್ಮನ್ನು ರಕ್ಷಿಸುವ ಶ್ರೇಷ್ಠನಾದ ಪತಿಯನ್ನೂ ಸ್ತ್ರೀಯರು ಸಹಿಸುವುದಿಲ್ಲ.

ನ ಕಾಮಭೋಗಾನ್ ಬಹುಲಾನ್ನಾಲಂಕಾರಾರ್ಥಸಂಚಯಾನ್ |
ತಥೈವ ಬಹು ಮನ್ಯಂತೇ ಯಥಾ ರತ್ಯಾಮನುಗ್ರಹಮ್ ॥29॥

ಸ್ತ್ರೀಯರಿಗೆ ರತಿಸುಖವು ಎಷ್ಟು ಪ್ರಿಯವಾದುದೋ ಹಾಗೆ ಇಷ್ಟವಸ್ತುಗಳ ಭೋಗವಾಗಲೀ, ಬಹಳವಾದ ಅಲಂಕಾರ ಅಥವಾ ಧನರಾಶಿಯಾಗಲೀ ಇಷ್ಟವಾದುದಲ್ಲ.

ಅಂತಕಃ ಶಮನೋ ಮೃತ್ಯುಃ ಪಾತಾಳಂ ವಡವಾಮುಖಮ್ |
ಕ್ಷುರಧಾರಾ ವಿಷಂ ಸರ್ಪೋ ವಹ್ನಿರಿತ್ಯೇಕತಃ ಸ್ತ್ರಿಯಃ ॥30॥

ಅಂತಕನೂ ಎಲ್ಲವನ್ನು ಮುಗಿಸುವವನೂ ಆದ ಮೃತ್ಯು, ಪಾತಾಳ, ವಡವಾಗ್ನಿಯ ಮುಖ, ಕತ್ತಿಯ ಅಲುಗು, ವಿಷ, ಸರ್ಪ, ಅಗ್ನಿ ಇವುಗಳು ಒಂದೇ ಸೇರಿದ ವಸ್ತುವೇ ಕಡೆ ಸ್ತ್ರೀಯರು ಎನಿಸುತ್ತಾರೆ.

ಯತಶ್ಚ ಭೂತಾನಿ ಮಹಾಂತಿ ಪಂಚ
ಯತಶ್ಚ ಲೋಕಾ ವಿಹಿತಾ ವಿಧಾತ್ರಾ |
ಯತಃ ಪುಮಾಂಸಃ ಪ್ರಮದಾಶ್ಚ ನಿರ್ಮಿತಾ-
ಸ್ತದೈವ ದೋಷಾಃ ಪ್ರಮದಾಸು ನಾರದ ॥31॥

ಎಲೈ ನಾರದರೇ, ಬ್ರಹ್ಮದೇವರು ಯಾವಾಗ ಪಂಚಭೂತಗಳನ್ನು ಸೃಷ್ಟಿಸಿದರೋ, ಯಾವಾಗ ಲೋಕಗಳನ್ನು ಸೃಷ್ಟಿಸಿದರೋ, ಯಾವಾಗ ಪುರುಷರು ಮತ್ತು ಸ್ತ್ರೀಯರನ್ನು ಸೃಷ್ಟಿಸಿದರೋ ಆಗಲೇ ಸ್ತ್ರೀಯರಲ್ಲಿ ದೋಷಗಳನ್ನು ಸೃಷ್ಟಿಸಿದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ನಾರದಪಂಚಚೂಡಾಸಂವಾದೇ ಸ್ತ್ರೀಣಾಂ ಸ್ವಭಾವವರ್ಣನಂ ನಾಮ ಅಷ್ಟಷಷ್ಟಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.

* * * * *

ಅರವತ್ತೊಂಬತ್ತನೆಯ ಅಧ್ಯಾಯ

ಯುಧಿಷ್ಠಿರನಿಂದ ಸ್ತ್ರೀದೋಷಗಳ ಪ್ರಶ್ನೆ.

ಯುಧಿಷ್ಠಿರಃ

ಇಮೇ ವೈ ಮಾನವಾ ಲೋಕೇ ಸ್ತ್ರೀಷು ಸಜ್ಜಂತ್ಯಭೀಕ್ಷ್ಣಶಃ |
ಮೋಹೇನ ಪರಮಾವಿಷ್ಟಾ ದೈವಾದಿಷ್ಟೇನ ಪಾರ್ಥಿವ |
ಸ್ತ್ರಿಯಶ್ಚ ಪುರುಷೇಷ್ವೇವ ಪ್ರತ್ಯಕ್ಷಂ ಲೋಕಸಾಕ್ಷಿಕಮ್ ॥1॥

ಯುಧಿಷ್ಠಿರ ಎಲೈ ರಾಜನೇ, ದೈವದತ್ತವಾದ ಮೋಹಕ್ಕೆ ಒಳಗಾದ ಪುರುಷರು ಸತತವಾಗಿ ಸ್ತ್ರೀಯರಲ್ಲಿ ಅನುರಕ್ತರಾಗುತ್ತಾರೆ. ಹಾಗೆಯೇ ಸ್ತ್ರೀಯರು ಪುರುಷರಲ್ಲಿ ಅನುರಕ್ತರಾಗುತ್ತಾರೆ. ಇದು ಲೋಕಸಾಕ್ಷಿಕವಾಗಿ ಪ್ರತ್ಯಕ್ಷ ಸಿದ್ಧವಾಗಿದೆ.

ಅತ್ರ ಮೇ ಸಂಶಯಸ್ತೀವ್ರೋ ಹೃದಿ ಸಂಪರಿವರ್ತತೇ |
ಕಥಮಾಸಾಂ ನರಾಃ ಸಂಗಂ ಕುರ್ವತೇ ಕುರುನಂದನ |
ಸ್ತ್ರಿಯೋ ವಾ ತೇಷು ರಜ್ಯಂತೇ ವಿರಜ್ಯಂತೇಽಥ ವಾ ಪುನಃ ॥2॥

ಈ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ತೀವ್ರವಾದ ಸಂಶಯವಿದೆ. ಎಲೈ ಕುರುನಂದನನೇ, ಪುರುಷರು ಇಂತಹವರ ಜೊತೆಯಲ್ಲಿ ಹೇಗೆ ಸಂಗವನ್ನು ಮಾಡುತ್ತಾರೆ? ಸ್ತ್ರೀಯರಾದರೂ ಪುರುಷರಲ್ಲಿ ಹೇಗೆ ಆಸಕ್ತರೂ, ನಿರಾಸಕ್ತರೂ ಆಗುತ್ತಾರೆ?

ಇತಿ ತಾಃ ಪುರುಷವ್ಯಾಘ್ರ ಕಥಂ ಶಕ್ಯಾಃ ಸ್ಮ ರಕ್ಷಿತುಮ್ |
ಪ್ರಮದಾಃ ಪುರುಷೇಣೇಹ ತನ್ಮೇ ವ್ಯಾಖ್ಯಾತುಮರ್ಹಸಿ ॥3॥

ಎಲೈ ಪುರುಷವ್ಯಾಘ್ರನೇ, ಇಂತಹ ಸ್ವಚ್ಛಂದವೃತ್ತಿಗಳಾದ ಸ್ತ್ರೀಯರನ್ನು ಪುರುಷನು ಹೇಗೆ ರಕ್ಷಿಸಬೇಕೆಂದು ನನಗೆ ನೀನು ಹೇಳು.

ಏತಾ ಹಿ ಮಯಮಾಯಾಭಿರ್ವಂಚಯಂತೀಹ ಮಾನವಾನ್ |
ನ ಚಾಸಾಂ ಮುಚ್ಯತೇ ಕಶ್ಚಿತ್ಪುರುಷೋ ಹಸ್ತಮಾಗತಃ |
ಗಾವೋ ನವತೃಣಾನೀವ ಗೃಹ್ಣಂತ್ಯೇವ ನವಾನ್ನವಾನ್ ॥4॥
ಈ ಸ್ತ್ರೀಯರು ಮಯನ ಮಾಯೆಗಳಿಂದ ಪುರುಷನನ್ನು ವಂಚಿಸುತ್ತಾರೆ. ಅವರ ಕೈಗೆ ಸಿಲುಕಿದ ಯಾವ ಪುರುಷನೂ ತಪ್ಪಿಸಿಕೊಳ್ಳಲಾರ. ಹಸುಗಳು ಹೊಸ ಹುಲ್ಲನ್ನು ಸ್ವೀಕರಿಸಿದಂತೆ ಇವರು ಹೊಸ ಹೊಸ ಪುರುಷರನ್ನು ಪರಿಗ್ರಹಿಸುತ್ತಾರೆ.
ಶಂಬರಸ್ಯ ಚ ಯಾ ಮಾಯಾ ಯಾ ಮಾಯಾ ನಮುಚೇರಪಿ |
ಬಲೇಃ ಕುಂಭೀನಸಾನಾಂ ಚ ಸರ್ವಾಸ್ತಾ ಯೋಷಿತೋ ವಿದುಃ ॥5॥
ಶಂಬರನ ಮಾಯೆಗಳನ್ನೂ, ಮಯ, ನಮುಚಿ ಮತ್ತು ಬಲಿಗಳ ಮಾಯೆಗಳನ್ನೂ, ಸರ್ಪದ ಮಾಯೆ- ಎಲ್ಲವನ್ನೂ ಸ್ತ್ರೀಯರು ತಿಳಿದಿದ್ದಾರೆ.
ಹಸಂತಂ ಪ್ರಹಸಂತ್ಯೇತಾ ರುದಂತಂ ಪ್ರರುದಂತಿ ಚ |
ಅಪ್ರಿಯಂ ಪ್ರಿಯವಾಕ್ಯೈಶ್ಚ ಗೃಹ್ಣತೇ ಕಾಲಯೋಗತಃ ॥6॥
ಅವರು ನಗುವವನನ್ನು ನೋಡಿ ನಗುತ್ತಾರೆ. ಅಳುವವನನ್ನು ನೋಡಿ ಅಳುತ್ತಾರೆ. ತಮ್ಮಲ್ಲಿ ಪ್ರೀತಿ ಇಲ್ಲದವನನ್ನೂ ಸೂಕ್ತಕಾಲದಲ್ಲಿ ಪ್ರಿಯವಾಕ್ಯಗಳಿಂದ ಸ್ವೀಕರಿಸುತ್ತಾರೆ.
ಯದಿ ಜಿಹ್ವಾಸಹಸ್ರಂ ಸ್ಯಾಜ್ಜೀವೇಚ್ಚ ಶರದಾಂ ಶತಮ್ |
ಅನನ್ಯಕರ್ಮಾ ಸ್ತ್ರೀದೋಷಾನ್ನ ಚೋಕ್ತ್ವಾ ನಿಧನಂ ವ್ರಜೇತ್ ॥7॥
ಒಂದು ಸಹಸ್ರ ನಾಲಿಗೆಗಳಿದ್ದು, ನೂರು ವರ್ಷ ಬದುಕಿ ಬೇರೆ ಯಾವ ಕೆಲಸವನ್ನೂ ಮಾಡದೆ ಕೇವಲ ಸ್ತ್ರೀದೋಷವನ್ನೇ ಹೇಳುತ್ತಿದ್ದರೂ ಅವುಗಳನ್ನು ಮುಗಿಸಲು ಸಾಧ್ಯವಿಲ್ಲ.
ಉಶನಾ ವೇದ ಯಚ್ಛಾಸ್ತ್ರಂ ಯಚ್ಚ ವೇದ ಬೃಹಸ್ಪತಿಃ |
ಸ್ತ್ರೀಬುದ್ಧ್ಯಾ ನ ವಿಶಿಷ್ಯೇತೇ ತಾಃ ಸ್ಮ ರಕ್ಷ್ಯಾಃ ಕಥಂ ನರೈಃ ॥8॥
ಶುಕ್ರನಿಗೆ ಯಾವ ಶಾಸ್ತ್ರವು ತಿಳಿದಿದೆಯೋ, ಬೃಹಸ್ಪತಿಗೆ ಯಾವ ಶಾಸ್ತ್ರವು ತಿಳಿದಿದೆಯೋ ಅಂತಹ ಶಾಸ್ತ್ರಪ್ರಣೇತಾರರ ಬುದ್ಧಿಯು ಸ್ತ್ರೀ ಬುದ್ಧಿಗಿಂತ ಅತಿಶಯವೇನೂ ಅಲ್ಲ. ಅಂತಹ ಸ್ತ್ರೀಯರನ್ನು ಪುರುಷರು ರಕ್ಷಿಸುವ ಬಗೆ ಹೇಗೆ?
ಅನೃತಂ ಸತ್ಯಮಿತ್ಯಾಹುಃ ಸತ್ಯಂ ಚಾಪಿ ತಥಾಽನೃತಮ್ |
ಇತಿ ಯಾಸ್ತಾಃ ಕಥಂ ವೀರ ಸಂರಕ್ಷ್ಯಾಃ ಪುರುಷೈರಿಹ ॥9॥
ಅನೃತವನ್ನು ಸತ್ಯವೆಂದು ಹೇಳುತ್ತಾರೆ. ಸತ್ಯವನ್ನು ಅನೃತವೆಂದು ಹೇಳುತ್ತಾರೆ. ಎಲೈ ವೀರನೇ, ಅಂತಹ ಸ್ತ್ರೀಯರನ್ನು ಪುರುಷರು ಹೇಗೆ ರಕ್ಷಿಸಬೇಕು?
ಸ್ತ್ರೀಣಾಂ ಬುದ್ಧ್ಯುಪನಿಷ್ಕರ್ಷಾದರ್ಥಶಾಸ್ತ್ರಾಣಿ ಶತ್ರುಹನ್ |
ಬೃಹಸ್ಪತಿಪ್ರಭೃತಿಭಿರ್ಮನ್ಯೇ ಸದ್ಭಿಃ ಕೃತಾನಿ ವೈ ॥10॥
ಎಲೈ ಶತ್ರುಘಾತಕನೇ, ಸ್ತ್ರೀಯರ ಬುದ್ಧಿಯನ್ನು ಅವಲಂಬಿಸಿಯೇ ಬೃಹಸ್ಪತಿ ಮೊದಲಾದ ಸಜ್ಜನರು ಅರ್ಥಶಾಸ್ತ್ರಗಳನ್ನು ರಚಿಸಿದ್ದಾರೆಂದು ನಾನು ತಿಳಿದಿದ್ದೇನೆ.
ಸಂಪೂಜ್ಯಮಾನಾಃ ಪುರುಷೈರ್ವಿಕುರ್ವಂತಿ ಮನೋ ನೃಷು |
ಅಪಾಸ್ತಾಶ್ಚ ತಥಾ ರಾಜನ್ ವಿಕುರ್ವಂತಿ ಮನಃ ಸ್ತ್ರಿಯಃ ॥11॥
ಪುರುಷರಿಂದ ಸನ್ಮಾನಿಸಲ್ಪಟ್ಟರೂ ಅವರ ಮನಸ್ಸನ್ನು ವಿಕಾರಗೊಳಿಸುತ್ತಾರೆ. ಎಲೈ ರಾಜನೇ, ಪುರುಷರಿಂದ ನಿರಾಕರಿಸಲ್ಪಟ್ಟರೂ ಸ್ತ್ರೀಯರು ಅವರ ಮನಸ್ಸನ್ನು ವಿಕಾರಗೊಳಿಸುತ್ತಾರೆ.
ಇಮಾಃ ಪ್ರಜಾ ಮಹಾಬಾಹೋ ಧಾರ್ಮಿಕ್ಯ ಇತಿ ನಃ ಶ್ರುತಮ್ |
ಸತ್ಕೃತಾಸತ್ಕೃತಾಶ್ಚಾಪಿ ವಿಕುರ್ವಂತಿ ಮನಃ ಸದಾ ॥12॥
ಎಲೈ ಮಹಾಬಾಹುವೇ, ಈ ಸ್ತ್ರೀ ಪ್ರಜೆಗಳು ಧಾರ್ಮಿಕರಾದವರೆಂದು ನಾವು ಕೇಳಿದ್ದೇವೆ. ಅವರಿಗೆ ಸತ್ಕಾರ ಮಾಡಿದರೂ ಅಥವಾ ತಿರಸ್ಕಾರ ಮಾಡಿದರೂ ಅವರು ಪುರುಷರ ಮನಸ್ಸನ್ನು ವಿಕಾರಗೊಳಿಸುತ್ತಾರೆ.
ಕಸ್ತಾಃ ಶಕ್ತೋ ರಕ್ಷಿತುಂ ಸ್ಯಾದಿತಿ ಮೇ ಸಂಶಯೋ ಮಹಾನ್ |
ತನ್ಮೇ ಬ್ರೂಹಿ ಮಹಾಬಾಹೋ ಕುರೂಣಾಂ ವಂಶವರ್ಧನ ॥13॥
ಎಲೈ ಕುರುವಂಶದ ಕೀರ್ತಿವರ್ಧನನೇ, ಮಹಾಬಾಹುವೇ, ಇಂತಹ ಸ್ತ್ರೀಯರನ್ನು ಯಾರು ರಕ್ಷಿಸಲು ಸಾಧ್ಯ ಎಂದು ನನಗೆ ದೊಡ್ಡ ಸಂಶಯ ಉಂಟಾಗಿದೆ. ಅದಕ್ಕೆ ಉತ್ತರವನ್ನು ಹೇಳು.
ಯದಿ ಶಕ್ಯಾ ಕುರುಶ್ರೇಷ್ಠ ರಕ್ಷಾ ತಾಸಾಂ ಕಥಂಚನ |
ಕರ್ತುಂ ವಾ ಕೃತಪೂರ್ವಾ ವಾ ತನ್ಮೇ ವ್ಯಾಖ್ಯಾತುಮರ್ಹಸಿ ॥14॥
ಎಲೈ ಕುರುಶ್ರೇಷ್ಠನೇ, ಅವರನ್ನು ರಕ್ಷಿಸುವುದು ಸಾಧ್ಯವಾಗುವುದಾದರೆ ಅಥವಾ ಹಿಂದೆ ಯಾರಾದರೂ ರಕ್ಷಿಸಿದ್ದರೆ ಅದನ್ನೂ ನನಗೆ ಹೇಳಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ನಾರದಪಂಚಚೂಡಾಸಂವಾದೇ ಸ್ತ್ರೀಣಾಂ ದೋಷಕಥನಂ ನಾಮ ಏಕೋನಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *

ಎಪ್ಪತ್ತನೆಯ ಅಧ್ಯಾಯ
ಗುರುಪತ್ನಿಯ ಶೀಲವನ್ನು ರಕ್ಷಿಸಲು ವಿಪುಲನಿಂದ ಅವಳ ಶರೀರಪ್ರವೇಶ.
ಭೀಷ್ಮಃ
ಏವಮೇತನ್ಮಹಾಬಾಹೋ ನಾತ್ರ ಮಿಥ್ಯಾಽಸ್ತಿ ಕಿಂಚನ |
ಯಥಾ ಬ್ರವೀಷಿ ಕೌರವ್ಯ ನಾರೀಂ ಪ್ರತಿ ಜನಾಧಿಪ ॥1॥
ಭೀಷ್ಮ ಎಲೈ ಮಹಾಬಾಹುವೇ, ನರಾಧಿಪನೇ, ಕೌರವ್ಯನೇ, ನೀನು ಸ್ತ್ರೀಯರ ವಿಷಯದಲ್ಲಿ ಏನು ಹೇಳಿದೆಯೋ ಅದೆಲ್ಲವೂ ಹಾಗೆಯೇ ಸರಿ. ಅದರಲ್ಲಿ ಯಾವುದೂ ಸುಳ್ಳಲ್ಲ.
ಅತ್ರ ತೇ ವರ್ತಯಿಷ್ಯಾಮಿ ಇತಿಹಾಸಂ ಪುರಾತನಮ್ |
ಯಥಾ ರಕ್ಷಾ ಕೃತಾ ಪೂರ್ವಂ ವಿಪುಲೇನ ಮಹಾತ್ಮನಾ ॥2॥
ಈ ವಿಷಯದಲ್ಲಿ ಮಹಾತ್ಮನಾದ ವಿಪುಲನು ಹಿಂದೆ ಗುರುಪತ್ನಿಯನ್ನು ರಕ್ಷಣೆ ಮಾಡಿದ ಒಂದು ಪುರಾತನ ಇತಿಹಾಸವನ್ನು ಹೇಳುತ್ತೇನೆ.
ಪ್ರಮದಾಶ್ಚ ಯಥಾ ಸೃಷ್ಟಾ ಬ್ರಹ್ಮಣಾ ಭರತರ್ಷಭ |
ಯದರ್ಥಂ ತಚ್ಚ ತೇ ತಾತ ಪ್ರವಕ್ಷ್ಯೇ ವಸುಧಾಧಿಪ ॥3॥
ಎಲೈ ಭರತಶ್ರೇಷ್ಠನೇ, ವಸುಧಾಧಿಪನೇ, ಪ್ರೀತಿಪಾತ್ರನೇ, ಬ್ರಹ್ಮದೇವರಿಂದ ಸ್ತ್ರೀಯರು ಹೇಗೆ ಸೃಷ್ಟರಾದರು, ಏತಕ್ಕೆ ಸೃಷ್ಟರಾದರೆಂದು ನಿನಗೆ ಹೇಳುವೆನು.
ನ ಹಿ ಸ್ತ್ರೀಭ್ಯ ಪರಂ ಪುತ್ರ ಪಾಪೀಯಃ ಕಿಂಚಿದಸ್ತಿ ವೈ |
ಅಗ್ನಿರ್ಹಿ ಪ್ರಮದಾ ದೀಪ್ತೋ ಮಾಯಾಶ್ಚ ಮಯಜಾ ವಿಭೋ |
ಕ್ಷುರಧಾರಾ ವಿಷಂ ಸರ್ಪೋ ಮೃತ್ಯುರಿತ್ಯೇಕತಃ ಸ್ತ್ರಿಯಃ ॥4॥
ಎಲೈ ಪುತ್ರನೇ, ಸ್ತ್ರೀಯರಿಗಿಂತ ಕೆಟ್ಟದಾದ ವಸ್ತುವು ಇನ್ನೊಂದಿಲ್ಲ. ಎಲೈ ವಿಭುವೇ, ದೀಪ್ತವಾದ ಅಗ್ನಿ, ಮಯನ ಮಾಯೆಗಳು, ಕತ್ತಿಯ ಅಲುಗು, ವಿಷ, ಸರ್ಪ, ಮೃತ್ಯು - ಇವೆಲ್ಲದರ ದೋಷವನ್ನು ಸೇರಿಸಿದರೆ ಸ್ತ್ರೀಯರೆನಿಸುತ್ತಾರೆ.
ಇಮಾಃ ಪ್ರಜಾ ಮಹಾಬಾಹೋ ಧಾರ್ಮಿಕಾ ಇತಿ ನಃ ಶ್ರುತಮ್ |
ಸ್ವಯಂ ಗಚ್ಛಂತಿ ದೇವತ್ವಂ ತತೋ ದೇವಾನಿಯಾದ್ ಭಯಮ್ ॥5॥
ಎಲೈ ಮಹಾಬಾಹುವೇ, ಈ ಪ್ರಜೆಗಳು ಧಾರ್ಮಿಕರು ಎಂದು ನಾನು ಹೇಳಿದ್ದೇನೆ. ತಮ್ಮ ಅನುಷ್ಠಾನದಿಂದ ಪ್ರಜೆಗಳು ದೇವತ್ವವನ್ನು ಪಡೆಯಲು ಪ್ರಾರಂಭಿಸಿದರು. ಆಗ ದೇವತೆಗಳಿಗೆ ಭಯವುಂಟಾಯಿತು.
ಅಥಾಭ್ಯಗಚ್ಛನ್ ದೇವಾಸ್ತೇ ಪಿತಾಮಹಮರಿಂದಮ |
ನಿವೇದ್ಯ ಮಾನಸಂ ಚಾಪಿ ತೂಷ್ಣೀಮಾಸನ್ನವಾಙ್ಮುಖಾಃ ॥6॥
ಎಲೈ ಅರಿಂದಮನೇ, ಆಗ ದೇವತೆಗಳು ಪಿತಾಮಹರಾದ ಬ್ರಹ್ಮದೇವರ ಬಳಿಗೆ ಹೋಗಿ ತಮ್ಮ ಮನಸ್ಸಿನ ಅಭಿಪ್ರಾಯವನ್ನು ನಿವೇದಿಸಿ, ತಲೆಯನ್ನು ತಗ್ಗಿಸಿ, ಮೌನದಿಂದ ನಿಂತರು.
ತೇಷಾಮಂತರ್ಗತಂ ಜ್ಞಾತ್ವಾ ದೇವಾನಾಂ ಸ ಪಿತಾಮಹಃ |
ಮಾನವಾನಾಂ ಪ್ರಮೋಹಾರ್ಥಂ ಕೃತ್ಯಾ ನಾರ್ಯೋಽಸೃಜತ್ ಪ್ರಭುಃ ॥
ಪ್ರಭುಗಳಾದ ಬ್ರಹ್ಮದೇವರು ದೇವತೆಗಳ ಮನಸ್ಸಿನ ಭಾವವನ್ನು ತಿಳಿದು, ಮನುಷ್ಯರನ್ನು ಮೋಹಗೊಳಿಸಲು ಪಿಶಾಚಿಗಳನ್ನು ಸ್ತ್ರೀಯರನ್ನಾಗಿ ಸೃಷ್ಟಿಸಿದನು.
ಪೂರ್ವಸರ್ಗೇ ತು ಕೌಂತೇಯ ಸಾಧ್ವ್ಯೋ ನಾರ್ಯ ಇಹಾಭವನ್ |
ಅಸಾಧ್ವ್ಯಸ್ತು ಸಮುತ್ಪನ್ನಾ ಕೃತ್ಯಾಸರ್ಗಾತ್ ಪ್ರಜಾಪತೇಃ ॥8॥
ಎಲೈ ಕೌಂತೇಯನೇ, ಮೊದಲನೆಯ ಸೃಷ್ಟಿಯಲ್ಲಿ ಭೂಲೋಕದಲ್ಲಿ ನಾರಿಯರು ಸಾಧ್ವಿಯರಾಗಿದ್ದರು. ಬ್ರಹ್ಮದೇವರ ಈ ಪಿಶಾಚಸೃಷ್ಟಿಯ ನಂತರ ಅವರು ಅಸಾಧ್ವಿಯರಾದರು.
ತಾಭ್ಯಃ ಕಾಮಾನ್ ಯಥಾಕಾಮಂ ಪ್ರಾದಾದ್ಧಿ ಸ ಪಿತಾಮಹಃ |
ತಾಃ ಕಾಮಲುಬ್ಧಾಃ ಪ್ರಮದಾಃ ಪ್ರಾಮಥ್ನಂತ ನರಾಂಸ್ತದಾ ॥9॥
ಬ್ರಹ್ಮದೇವರು ಅವರಿಗೆ ಇಷ್ಟ ಬಂದ ಕಾಮ್ಯವರಗಳನ್ನೆಲ್ಲಾ ಕೊಟ್ಟರು. ಆ ವರಗಳನ್ನು ಪಡೆದ ಪ್ರಮದೆಯರು ಕಾಮಲುಬ್ಧರಾಗಿ ಪುರುಷರ ಮನಸ್ಸನ್ನು ಕಲಕಿದರು.
ಕ್ರೋಧಂ ಕಾಮಸ್ಯ ದೇವೇಶಃ ಸಹಾಯಂ ಚಾಸೃಜತ್ ಪ್ರಭುಃ |
ಅಸಜ್ಜಂತ ಪ್ರಜಾಃ ಸರ್ವಾಃ ಕಾಮಕ್ರೋಧವಶಂ ಗತಾಃ ॥10॥
ಪ್ರಭುಗಳಾದ ದೇವೇಶರಾದ ಬ್ರಹ್ಮದೇವರು ಕ್ರೋಧವನ್ನು ಕಾಮದ ಸಹಾಯಕ್ಕಾಗಿ ಸೃಷ್ಟಿಸಿದರು. ಕಾಮ-ಕ್ರೋಧವಶರಾದ ಪ್ರಜೆಗಳೆಲ್ಲರೂ ಸ್ತ್ರೀಯರಲ್ಲಿ ಆಸಕ್ತರಾದರು.
ದ್ವಿಜಾನಾಂ ಚ ಗುರೂಣಾಂ ಚ ಮಹಾಗುರುನೃಪಾದಿನಾಮ್ |
ಕ್ಷಣಸ್ತ್ರೀಸಂಗಕಾಮೋತ್ಥಾ ಯಾತನಾಽಹೋ ನಿರಂತರಾ ॥11॥
ಬ್ರಾಹ್ಮಣರಿಗೆ, ಗುರುಗಳಿಗೆ, ಮಹಾಗುರುಗಳಿಗೆ, ರಾಜರಿಗೆ ಎಲ್ಲರಿಗೂ ಒಂದು ಕ್ಷಣದ ಸ್ತ್ರೀ ಸಂಗದ ಆಸೆಯಿಂದ ಉಂಟಾಗುವ ಯಾತನೆಯು ನಿರಂತರವಾಗಿರುತ್ತದೆ.
ಅರಕ್ತಮನಸಾಂ ನಿತ್ಯಂ ಬ್ರಹ್ಮಚರ್ಯಾಮಲಾತ್ಮನಾಮ್ |
ತಪೋದಮಾರ್ಚನಾಧ್ಯಾನಯುಕ್ತಾನಾಂ ಶುದ್ಧಿರುತ್ತಮಾ ॥12॥

ವೈರಾಗ್ಯದಿಂದ ಕೂಡಿದ ಮನಸ್ಸನ್ನು ಹೊಂದಿ ಬ್ರಹ್ಮಚರ್ಯದಿಂದ ನಿರ್ಮಲವಾದ ಮನಸ್ಸನ್ನು ಹೊಂದಿ ತಪಸ್ಸು, ಇಂದ್ರಿಯನಿಗ್ರಹ, ದೇವತಾರ್ಚನೆ ಮತ್ತು ಧ್ಯಾನದಿಂದ ಕೂಡಿರುವವರಿಗೆ ಉತ್ತಮವಾದ ಶುದ್ಧಿ ಇರುತ್ತದೆ.
ನ ಚ ಸ್ತ್ರೀಣಾಂ ಕ್ರಿಯಾ ಕಾಚಿದಿತಿ ಧರ್ಮೋ ವ್ಯವಸ್ಥಿತಃ |
ನಿರಿಂದ್ರಿಯಾ ಅಮಂತ್ರಾಶ್ಚ ಸ್ತ್ರಿಯೋಽನೃತಮಿತಿ ಶ್ರುತಿಃ ॥13॥
ಸ್ತ್ರೀಯರಿಗೆ ಯಾವ ಧಾರ್ಮಿಕ ಕ್ರಿಯೆಯೂ ವಿಹಿತವಾಗಿಲ್ಲ ಎಂಬುದು ಲೋಕದ ವ್ಯವಸ್ಥೆ. ಇಂದ್ರಿಯಜಯವಿಲ್ಲದ, ಮಂತ್ರಹೀನರಾದ ಸ್ತ್ರೀಯರು ಅನೃತರು ಎಂದು ಶ್ರುತಿ ಇದೆ.
ಶಯ್ಯಾಸನಮಲಂಕಾರಮನ್ನಪಾನಮನಾರ್ಯತಾಮ್ |
ದುರ್ವಾಗ್ಭಾವಂ ರತಿಂ ಚೈವ ದದೌ ಸ್ತ್ರೀಭ್ಯಃ ಪ್ರಜಾಪತಿಃ ॥14॥
ಪ್ರಜಾಪತಿಗಳಾದ ಬ್ರಹ್ಮದೇವರು ಸ್ತ್ರೀಯರಿಗೆ ಹಾಸಿಗೆ, ಆಸನ, ಅಲಂಕಾರ, ಅನ್ನ-ಪಾನಗಳು, ನೀಚಬುದ್ಧಿ, ಒರಟು ಮಾತುಗಳು, ರತಿಯ ಆಸೆ ಎಲ್ಲವನ್ನೂ ಕೊಟ್ಟರು.
ನ ತಾಸಾಂ ರಕ್ಷಣಂ ಕರ್ತುಂ ಶಕ್ಯಂ ಪುಂಸಾ ಕಥಂಚನ |
ಅಪಿ ವಿಶ್ವಕೃತಾ ತಾತ ಕುತಸ್ತು ಪುರುಷೈರಿಹ ॥15॥
ಎಲೈ ಪ್ರೀತಿಪಾತ್ರನೇ, ವಿಶ್ವಸೃಷ್ಟಿಯನ್ನು ಮಾಡುವ ಬ್ರಹ್ಮದೇವರೂ ಅವರ ರಕ್ಷಣೆಯನ್ನು ಮಾಡಲು ಸಾಧ್ಯವಿಲ್ಲ. ಇನ್ನು ಭೂಮಿಯಲ್ಲಿ ಪುರುಷರು ಹೇಗೆ ರಕ್ಷಣೆ ಮಾಡಿಯಾರು?
ವಾಚಾ ವಾ ವಧಬಂಧೈರ್ವಾ ಕ್ಲೇಶೈರ್ವಾ ವಿವಿಧೈಸ್ತಥಾ |
ನ ಶಕ್ಯಾ ರಕ್ಷಿತುಂ ನಾರ್ಯಸ್ತಾ ಹಿ ನಿತ್ಯಮಸಂಯತಾಃ ॥16॥
ಮಾತಿನಿಂದಾಗಲೀ, ಪ್ರಹಾರ ಅಥವಾ ಬಂಧನದಿಂದಾಗಲೀ, ವಿವಿಧವಾದ ಕ್ಲೇಶಗಳಿಂದಾಗಲೀ ನಾರಿಯರನ್ನು ರಕ್ಷಿಸಲು ಸಾಧ್ಯವಿಲ್ಲ. ಅವರು ಯಾವಾಗಲೂ ಸ್ವೇಚ್ಛಾಚಾರಿಗಳು.
ಇದಂ ತು ಪುರುಷವ್ಯಾಘ್ರ ಪುರಸ್ತಾಚ್ಛ್ರುತವಾನಹಮ್ |
ಯಥಾ ರಕ್ಷಾ ಕೃತಾ ಪೂರ್ವಂ ವಿಪುಲೇನ ಗುರುಸ್ತ್ರಿಯಾಃ ॥17॥
ಎಲೈ ಪುರುಷವ್ಯಾಘ್ರನೇ, ಹೇಗೆ ದೇವಶರ್ಮನ ಶಿಷ್ಯನಾದ ವಿಪುಲನು ಹಿಂದೆ ಗುರುಪತ್ನಿಯನ್ನು ರಕ್ಷಿಸಿದನು ಎಂದು ನಾನು ಮೊದಲು ಕೇಳಿದ್ದೇನೆ.
ಋಷಿರಾಸೀನ್ಮಹಾಭಾಗೋ ದೇವಶರ್ಮೇತಿ ವಿಶ್ರುತಃ |
ತಸ್ಯ ಭಾರ್ಯಾ ರುಚಿರ್ನಾಮ ರೂಪೇಣಾಸದೃಶೀ ಭುವಿ ॥18॥
ಮಹಾನುಭಾವನಾದ ಪ್ರಖ್ಯಾತನಾದ ದೇವಶರ್ಮನೆಂಬ ಋಷಿ ಇದ್ದನು. ಭೂಲೋಕದಲ್ಲಿ ಅಸದೃಶವಾದ ರೂಪವನ್ನು ಹೊಂದಿದ ರುಚಿ ಎಂಬುವಳು ಅವನ ಪತ್ನಿ.
ತಸ್ಯ ರೂಪೇಣ ಸಮ್ಮತ್ತಾ ದೇವಗಂಧರ್ವದಾನವಾಃ |
ವಿಶೇಷತಸ್ತು ರಾಜೇಂದ್ರ ವೃತ್ರಹಾ ಪಾಕಶಾಸನಃ ॥19॥
ಅವಳ ರೂಪದಿಂದ ದೇವ-ಗಂಧರ್ವ-ದಾನವರು ಮೋಹಗೊಂಡರು. ಎಲೈ ರಾಜೇಂದ್ರನೇ, ವೃತ್ರಸಂಹಾರಿಯೂ, ಪಾಕಶಾಸನನೂ ಆದ ಇಂದ್ರನು ವಿಶೇಷವಾಗಿ ಮೋಹಗೊಂಡನು.
ನಾರೀಣಾಂ ಚರಿತಜ್ಞಶ್ಚ ದೇವಶರ್ಮಾ ಮಹಾಮುನಿಃ |
ಯಥಾಶಕ್ತಿ ಯಥೋತ್ಸಾಹಂ ಭಾರ್ಯಾಂ ತಾಮಭ್ಯರಕ್ಷತ ॥20॥
ನಾರಿಯರ ನಡತೆಯನ್ನು ತಿಳಿದ ಮಹಾಮುನಿಯಾದ ದೇವಶರ್ಮನು ತನ್ನ ಶಕ್ತಿ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ಆ ಭಾರ್ಯೆಯನ್ನು ರಕ್ಷಿಸಿದನು.
ಪುರಂದರಂ ಚ ಜಾನೀತೇ ಪರಸ್ತ್ರೀಕಾಮಚಾರಿಣಮ್ |
ತಸ್ಮಾದ್ ಯತ್ನೇನ ಭಾರ್ಯಾಯಾ ರಕ್ಷಣಂ ಸ ಚಕಾರ ಹ ॥21॥
ಇಂದ್ರನು ಪರಸ್ತ್ರೀಕಾಮುಕನೆಂಬುದನ್ನು ಅವನು ತಿಳಿದಿದ್ದನು. ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಪತ್ನಿಯ ರಕ್ಷಣೆಯನ್ನು ಮಾಡಿದನು.
ಸ ಕದಾಚಿದೃಷಿಸ್ತಾತ ಯಜ್ಞಂ ಕರ್ತುಮನಾಸ್ತದಾ |
ಭಾರ್ಯಾಸಂರಕ್ಷಣಂ ಕಾರ್ಯಂ ಕಥಂ ಸ್ಯಾದಿತ್ಯಚಿಂತಯತ್ ॥22॥
ಎಲೈ ಪ್ರೀತಿಪಾತ್ರನೇ, ಅವನು ಒಮ್ಮೆ ಯಜ್ಞವನ್ನು ಮಾಡಿಸುವ ಮನಸ್ಸುಳ್ಳವನಾಗಿ ಭಾರ್ಯೆಯ ಸಂರಕ್ಷಣೆಯನ್ನು ಹೇಗೆ ಮಾಡಬೇಕೆಂದು ಚಿಂತಿಸಿದನು.
ರಕ್ಷಾವಿಧಾನಂ ಮನಸಾ ಸ ವಿಚಿಂತ್ಯ ಮಹಾತಪಾಃ |
ಆಹೂಯ ದಯಿತಂ ಶಿಷ್ಯಂ ವಿಪುಲಂ ಪ್ರಾಹ ಭಾರ್ಗವಮ್ ॥23॥
ಮಹಾತಪಸ್ವಿಯಾದ ಅವನು ರಕ್ಷಣೆಯನ್ನು ಮಾಡುವ ಪ್ರಕಾರವನ್ನು ಮನಸ್ಸಿನಲ್ಲಿ ಚಿಂತಿಸಿ ಪ್ರೀತಿಪಾತ್ರನಾದ ಶಿಷ್ಯನಾದ ವಿಪುಲನನ್ನು ಆಹ್ವಾನಿಸಿದನು. ಭಾರ್ಗವ ಗೋತ್ರಕ್ಕೆ ಸೇರಿದ ಅವನನ್ನು ಕುರಿತು ಮಾತನಾಡಿದನು.
ಯಜ್ಞಕಾರೋ ಗಮಿಷ್ಯಾಮಿ ರುಚಿಂ ಚೇಮಾಂ ಸುರೇಶ್ವರಃ |
ಪುತ್ರ ಪ್ರಾರ್ಥಯತೇ ನಿತ್ಯಂ ತಾಂ ರಕ್ಷಸ್ವ ಯಥಾಬಲಮ್ ॥24॥
ನಾನು ಯಜ್ಞವನ್ನು ಮಾಡಿಸಲು ಹೊರಡುತ್ತಿದ್ದೇನೆ. ನನ್ನ ಪತ್ನಿಯಾದ ರುಚಿಯನ್ನು ಸುರೇಶ್ವರನು ಯಾವಾಗಲೂ ಬಯಸುತ್ತಾನೆ. ನಿನ್ನ ಶಕ್ತಿಗನುಗುಣವಾಗಿ ಅವಳನ್ನು ರಕ್ಷಿಸು.

ಅಪ್ರಮತ್ತೇನ ತೇ ಭಾವ್ಯಂ ಸದಾ ಪ್ರತಿ ಪುರಂದರಮ್ |
ಸ ಹಿ ರೂಪಾಣಿ ಕುರುತೇ ವಿವಿಧಾನಿ ಭೃಗೂದ್ವಹ ॥25॥
ಪುರಂದರನ ವಿಷಯದಲ್ಲಿ ನೀನು ಯಾವಾಗಲೂ ಜಾಗರೂಕನಾಗಿರಬೇಕು. ಎಲೈ ಭೃಗೂದ್ವಹನೇ, ಅವನು ವಿವಿಧ ರೂಪಗಳನ್ನು ಧರಿಸಿ ಬರುತ್ತಾನೆ (ಎಂದು ಹೇಳಿದನು).
ಇತ್ಯುಕ್ತೋ ವಿಪುಲಸ್ತೇನ ತಪಸ್ವೀ ನಿಯತೇಂದ್ರಿಯಃ |
ಸದೈವೋಗ್ರತಪಾ ರಾಜನ್ನಗ್ನ್ಯಕಸದೃಶದ್ಯುತಿಃ ॥26॥
ಧರ್ಮಜ್ಞಃ ಸತ್ಯವಾದೀ ಚ ತಥೇತಿ ಪ್ರತ್ಯಭಾಷತ |
ಪುನಶ್ಚೇದಂ ಮಹಾರಾಜ ಪಪ್ರಚ್ಛ ಪ್ರಥಿ(ಸ್ಥಿ)ತಂ ಗುರುಮ್ ॥27॥
ಎಲೈ ರಾಜನೇ, ಹೀಗೆ ಹೇಳಲ್ಪಟ್ಟ ತಪಸ್ವಿಯೂ, ಜಿತೇಂದ್ರಿಯನೂ, ಯಾವಾಗಲೂ ಉಗ್ರ ತಪಸ್ಸಿನಲ್ಲಿ ನಿರತನೂ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನೂ, ಧರ್ಮಜ್ಞನೂ, ಸತ್ಯವಾದಿಯೂ ಆದ ಅವನು ಹಾಗೆಯೇ ಆಗಲಿ ಎಂದು ಹೇಳಿದನು. ಎಲೈ ಮಹಾರಾಜನೇ, ಅವನು ಪುನಃ ತನ್ನ ಪ್ರಖ್ಯಾತವಾದ ಗುರುವನ್ನು ಕುರಿತು ಹೀಗೆ ಮಾತನಾಡಿದನು.
ಕಾನಿ ರೂಪಾಣಿ ಶಕ್ರಸ್ಯ ಭವಂತ್ಯಾಗಚ್ಛತೋ ಮುನೇ |
ವಪುಸ್ತೇಜಶ್ಚ ಕೀದೃಗ್ವೈ ತನ್ಮೇ ವ್ಯಾಖ್ಯಾತುಮರ್ಹಸಿ ॥28॥
ಎಲೈ ಋಷಿಯೇ, ಇಂದ್ರನು ಬರುವಾಗ ಎಂತಹ ರೂಪವನ್ನು ತೆಗೆದುಕೊಂಡು ಬರುತ್ತಾನೆ? ಅವನ ಶರೀರ ಮತ್ತು ತೇಜಸ್ಸುಗಳು ಹೇಗಿರುತ್ತವೆ ಎಂಬುದನ್ನು ನನಗೆ ನೀವು ತಿಳಿಸಬೇಕು (ಎಂದು ಕೇಳಿದನು).
ತತಃ ಸ ಭಗವಾಂಸ್ತಸ್ಮೈ ವಿಪುಲಾಯ ಮಹಾತ್ಮನೇ |
ಆಚಚಕ್ಷೇ ಯಥಾತತ್ತ್ವಂ ಮಾಯಾಂ ಶಕ್ರಸ್ಯ ಭಾರತ ॥29॥
ಎಲೈ ಭಾರತನೇ, ಆಗ ಪೂಜ್ಯನಾದ ಆ ಋಷಿಯು ಮಹಾತ್ಮನಾದ ವಿಪುಲನಿಗೆ ಶಕ್ರನ ಮಾಯೆಯನ್ನು ಚೆನ್ನಾಗಿ ತಿಳಿಸಿದನು.
ಬಹುಮಾಯಃ ಸ ವಿಪ್ರರ್ಷೇ ಬಲಹಾ ಪಾಕಶಾಸನಃ |
ತಾಂಸ್ತಾನ್ ವಿಕುರುತೇ ಭಾವಾನ್ ಬಹೂನಥ ಮುಹುರ್ಮುಹುಃ ॥
ಎಲೈ ವಿಪ್ರರ್ಷಿಯೇ, ಬಲಸಂಹಾರಕನೂ, ಪಾಕಶಾಸನನೂ ಆದ ಇಂದ್ರನು ಅನೇಕ ಮಾಯೆಗಳನ್ನು ಹೊಂದಿರುವವನು. ಅವನು ಪುನಃ ಪುನಃ ತನ್ನ ಅನೇಕ ರೂಪಗಳನ್ನು ಬದಲಾಯಿಸುತ್ತಾನೆ.
ಕಿರೀಟೀ ವಜ್ರಭೃದ್ಧನ್ವೀ ಮುಕುಟೀ ಬದ್ಧಕುಂಡಲಃ |
ಭವತ್ಯಥ ಮುಹೂರ್ತೇನ ಚಂಡಾಲಸಮದರ್ಶನಃ ॥31॥
ಕಿರೀಟಧಾರಿಯಾಗಿ, ವಜ್ರ-ಧನುಸ್ಸುಗಳನ್ನು ಕೈಯಲ್ಲಿ ಹಿಡಿದು ಮುಕುಟ-ಕುಂಡಲ ಧಾರಿಯಾಗಿ ಕಾಣಿಸುತ್ತಾನೆ. ಒಂದು ಮುಹೂರ್ತದಲ್ಲಿ ಚಂಡಾಲನ ವೇಷವನ್ನು ಹಾಕಿಕೊಳ್ಳುತ್ತಾನೆ.
ಶಿಖೀ ಜಟೀ ಚೀರವಾಸಾಃ ಪುನರ್ಭವತಿ ಪುತ್ರಕ |
ಬೃಹಚ್ಛರೀರಶ್ಚ ಪುನಃ ಪೀವರೋಽಥ ಪುನಃ ಕೃಶಃ ॥32॥
ಶಿಖೆಯನ್ನೂ, ಜಟೆಯನ್ನೂ ಧರಿಸಿ ಪುನಃ ನಾರುಮಡಿಯನ್ನುಟ್ಟವನಾಗುತ್ತಾನೆ. ಎಲೈ ಪುತ್ರನೇ, ಅವನು ಪುನಃ ದೊಡ್ಡ ಶರೀರವನ್ನು, ಸ್ಥೂಲಶರೀರವನ್ನು, ಪುನಃ ಕೃಶ ಶರೀರವನ್ನು ತೆಗೆದುಕೊಳ್ಳುತ್ತಾನೆ.
ಗೌರಂ ಶ್ಯಾಮಂ ಚ ಕೃಷ್ಣಂ ಚ ವರ್ಣಂ ವಿಕುರುತೇ ಪುನಃ |
ವಿರೂಪೋ ರೂಪವಾಂಶ್ಚೈವ ಯುವಾ ವೃದ್ಧಸ್ತಥೈವ ಚ ॥33॥
ಪ್ರಾಜ್ಞೋ ಜಡಶ್ಚ ಮೂಕಶ್ಚ ಹ್ರಸ್ವೋ ದೀರ್ಘಸ್ತಥೈವ ಚ |
ಬ್ರಾಹ್ಮಣಃ ಕ್ಷತ್ರಿಯಶ್ಚೈವ ವೈಶ್ಯಃ ಶೂದ್ರಸ್ತಥೈವ ಚ |
ಪ್ರತಿಲೋಮಾನುಲೋಮಶ್ಚ ಭವತ್ಯಥ ಶತಕ್ರತುಃ ॥34॥
ಗೌರವರ್ಣದ, ಶ್ಯಾಮವರ್ಣದ, ಕೃಷ್ಣವರ್ಣದ ರೂಪಗಳನ್ನು ತೆಗೆದುಕೊಳ್ಳುತ್ತಾನೆ. ರೂಪಹೀನವಾದ, ರೂಪದಿಂದ ಕೂಡಿದ ದೇಹಗಳನ್ನು ತೆಗೆದುಕೊಳ್ಳುತ್ತಾನೆ. ಯುವಕನಾಗುತ್ತಾನೆ ಹಾಗೆಯೇ ವೃದ್ಧನಾಗುತ್ತಾನೆ. ಪ್ರಾಜ್ಞ, ಜಡ, ಮೂಕ, ಕುಳ್ಳ, ಎತ್ತರ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಪ್ರತಿಲೋಮ, ಅನುಲೋಮ - ಈ ಎಲ್ಲ ರೂಪಗಳನ್ನೂ ಶತಕ್ರತುವು (ಇಂದ್ರನು) ತೆಗೆದುಕೊಳ್ಳುತ್ತಾನೆ.
ಶುಕವಾಯಸರೂಪೀ ಚ ಹಂಸಕೋಕಿಲರೂಪವಾನ್ |
ಸಿಂಹವ್ಯಾಘ್ರಗಜಾನಾಂ ಚ ರೂಪಂ ಧಾರಯತೇ ಪುನಃ ॥35॥
ಗಿಣಿ ಮತ್ತು ಕಾಗೆಯ ರೂಪಗಳನ್ನು ಧರಿಸುತ್ತಾನೆ. ಹಂಸ, ಕೋಗಿಲೆಗಳ ರೂಪಗಳನ್ನು, ಪುನಃ ಸಿಂಹ-ವ್ಯಾಘ್ರ-ಗಜಗಳ ರೂಪವನ್ನು ಧರಿಸುತ್ತಾನೆ.
ದೈವಂ ದೈತ್ಯಮಥೋ ರಾಜ್ಞಾಂ ವಪುರ್ಧಾರಯತೇಽಪಿ ಚ |
ಸುಕೃಶೋ ವಾಯುಭಗ್ನಾಂಗಃ ಶಕುನಿರ್ವಿಕೃತಸ್ತಥಾ ॥36॥
ದೇವತಾರೂಪ, ದೈತ್ಯರೂಪ, ರಾಜರೂಪಗಳನ್ನು ಧರಿಸುತ್ತಾನೆ. ಅತ್ಯಂತ ಕೃಶನಾಗಿ ಪಾರ್ಶ್ವವಾಯು ಮೊದಲಾದವುಗಳಿಂದ ಭಗ್ನವಾದ ಶರೀರವುಳ್ಳವನಾಗಿ, ವಿಕಾರ ರೂಪವನ್ನು ಹೊಂದಿದ ಪಕ್ಷಿಯಾಗಿ ಬರುತ್ತಾನೆ.
ಚತುಷ್ಪಾದ್ ಬಹುರೂಪಶ್ಚ ಪುನರ್ಭವತಿ ಬಾಲಿಶಃ |
ಮಕ್ಷಿಕಾಮಶಕಾದೀನಾಂ ವಪುರ್ಧಾರಯತೇಽಪಿ ಚ ॥37॥
ನಾಲ್ಕು ಪಾದವುಳ್ಳವನಾಗಿ, ಬಹುರೂಪವುಳ್ಳವನಾಗಿ ಪುನಃ ಬಾಲಿಶನಾಗಿ ಬರುತ್ತಾನೆ. ನೊಣ, ಸೊಳ್ಳೆ ಮೊದಲಾದವುಗಳ ಶರೀರವನ್ನು ಧರಿಸಿ ಬರುತ್ತಾನೆ.

ನ ಶಕ್ಯಮಸ್ಯ ಗ್ರಹಣಂ ಕರ್ತುಂ ವಿಪುಲ ಕೇನಚಿತ್ |
ಅಪಿ ವಿಶ್ವಕೃತಾ ತಾತ ಯೇನ ಸೃಷ್ಟಮಿದಂ ಜಗತ್ ॥38॥
ಎಲೈ ವಿಪುಲನೇ, ಅವನ ರೂಪವನ್ನು ತಿಳಿಸಲು ಯಾರಿಗೂ ಸಾಧ್ಯವಿಲ್ಲ. ಜಗತ್ತನ್ನು ಸೃಷ್ಟಿಸಿದ ಬ್ರಹ್ಮನಿಗೂ ಸಾಧ್ಯವಿಲ್ಲ.
ಪುನರಂತರ್ಹಿತಃ ಶಕ್ರೋ ದೃಶ್ಯತೇ ಜ್ಞಾನಚಕ್ಷುಷಾ |
ವಾಯುಭೂತಶ್ಚ ಸ ಪುನರ್ದೇವರಾಜೋ ಭವತ್ಯುತ ॥39॥
ಇಂದ್ರನು ಪುನಃ ಅಂತರ್ಧಾನವನ್ನು ಹೊಂದಿ ಜ್ಞಾನದೃಷ್ಟಿಗೆ ಗೋಚರಿಸುತ್ತಾನೆ. ದೇವರಾಜನಾದ ಅವನು ಪುನಃ ವಾಯುಶರೀರವನ್ನು ತೆಗೆದುಕೊಳ್ಳುತ್ತಾನೆ.
ಏವಂ ರೂಪಾಣಿ ಸತತಂ ಕುರುತೇ ಪಾಕಶಾಸನಃ |
ತಸ್ಮಾದ್ ವಿಪುಲ ಯತ್ನೇನ ರಕ್ಷೇಮಾಂ ತನುಮಧ್ಯಮಾಮ್ ॥40॥
ಹೀಗೆ ಪಾಕಶಾಸನನು ಸತತವಾಗಿ ರೂಪಗಳನ್ನು ಬದಲಾಯಿಸುತ್ತಾನೆ. ಆದ್ದರಿಂದ ಎಲೈ ವಿಪುಲನೇ, ಸುಂದರಿಯಾದ ಈ ನನ್ನ ಪತ್ನಿಯನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸು.
ಯಥಾ ರುಚಿಂ ನಾವಲಿಹೇದ್ ದೇವೇಂದ್ರೋ ಭೃಗುಸತ್ತಮ |
ಕ್ರತಾವುಪಹಿತಂ ನ್ಯಸ್ತಂ ಹವಿಃ ಶ್ವೇವ ದುರಾತ್ಮವಾನ್ ॥41॥
ಎಲೈ ಭೃಗುಶ್ರೇಷ್ಠನೇ, ಯಜ್ಞದಲ್ಲಿ ಸ್ಥಾಪಿಸಿದ ಹವಿಸ್ಸನ್ನು ನಾಯಿಯು ನೆಕ್ಕಿದಂತೆ ದುರಾತ್ಮನಾದ ದೇವೇಂದ್ರನು ರುಚಿಯನ್ನು ಸ್ಪರ್ಶಿಸದಂತೆ ನೋಡಿಕೊ.
ಏವಮಾಖ್ಯಾಯ ಸ ಮುನಿರ್ಯಜ್ಞಕಾರೋಽಗಮತ್ ತದಾ |
ದೇವಶರ್ಮಾ ಮಹಾಭಾಗಸ್ತತೋ ಭರತಸತ್ತಮ ॥42॥
ಎಲೈ ಭರತಶ್ರೇಷ್ಠನೇ, ಮಹಾನುಭಾವನಾದ ದೇವಶರ್ಮನು ಹೀಗೆ ಶಿಷ್ಯನಿಗೆ ಆದೇಶವನ್ನು ಮಾಡಿ ಯಜ್ಞವನ್ನು ಮಾಡಿಸಲು ಹೊರಟು ಹೋದನು.
ವಿಪುಲಸ್ತು ವಚಃ ಶ್ರುತ್ವಾ ಗುರೋಶ್ಚಿಂತಾಪರೋಽಭವತ್ |
ರಕ್ಷಾಂ ಚ ಪರಮಾಂ ಚಕ್ರೇ ದೇವರಾಜಾನ್ಮಹಾಬಲಾತ್ ॥43॥
ವಿಪುಲನಾದರೂ ಗುರುಗಳ ಮಾತನ್ನು ಕೇಳಿ ಚಿಂತಾಪರನಾದನು. ಮಹಾಬಲನಾದ ದೇವೇಂದ್ರನಿಂದ ಗುರುಪತ್ನಿಯನ್ನು ರಕ್ಷಿಸಲು ಬಹಳ ಪ್ರಯತ್ನವನ್ನು ಮಾಡಿದನು.
ಕಿಂ ನು ಶಕ್ಯಂ ಮಯಾ ಕರ್ತುಂ ಗುರುದಾರಾಭಿರಕ್ಷಣೇ |
ಮಾಯಾವೀ ಹಿ ಸುರೇಂದ್ರೋಽಸೌ ದುರ್ಧರ್ಷಶ್ಚಾಪಿ ವೀರ್ಯವಾನ್ ॥
ಗುರುಪತ್ನಿಯನ್ನು ರಕ್ಷಿಸುವ ವಿಷಯದಲ್ಲಿ ನಾನು ಏನು ಮಾಡಲು ಸಾಧ್ಯ? ಈ ಸುರೇಂದ್ರನಾದರೂ ಮಾಯಾವಿಯಾದವನು, ಸೋಲಿಸಲು ಅಸಾಧ್ಯನಾದವನು ಮತ್ತು ಪರಾಕ್ರಮಶಾಲಿಯಾದವನು.
ನಾಪಿಧಾಯಾಶ್ರಮಂ ಶಕ್ಯೋ ರಕ್ಷಿತುಂ ಪಾಕಶಾಸನಃ |
ಉಟಜಂ ವಾ ತಥಾ ಹ್ಯಸ್ಯ ನಾನಾವಿಧಸರೂಪತಾ ॥45॥
ಆಶ್ರಮವನ್ನು ಮುಚ್ಚಿ ಇಂದ್ರನಿಂದ ರಕ್ಷಿಸಲು ಸಾಧ್ಯವಿಲ್ಲ ಅಥವಾ ಪರ್ಣಶಾಲೆಯನ್ನಾದರೂ ಮುಚ್ಚಬೇಕು. ಏಕೆಂದರೆ ಅವನು ನಾನಾ ರೂಪಗಳನ್ನು ತೆಗೆದುಕೊಂಡು ಬರುತ್ತಾನೆ.
ವಾಯುರೂಪೇಣ ವಾ ಶಕ್ರೋ ಗುರುಪತ್ನೀಂ ಪ್ರಧರ್ಷಯೇತ್ |
ತಸ್ಮಾದಿಮಾಂ ಸಂಪ್ರವಿಶ್ಯ ರುಚಿಂ ಸ್ಥಾಸ್ಯೇಽಹಮದ್ಯ ವೈ ॥46॥
ಇಂದ್ರನು ವಾಯುರೂಪವನ್ನು ತೆಗೆದುಕೊಂಡು ಬಂದು ಗುರುಪತ್ನಿಯನ್ನು ಬಲಾತ್ಕರಿಸಬಹುದು. ಆದ್ದರಿಂದ ನಾನು ಈ ರುಚಿಯನ್ನು ಪ್ರವೇಶ ಮಾಡಿ ಈ ದಿನ ನಿಲ್ಲುತ್ತೇನೆ.
ಅಥ ವಾ ಪೌರುಷೇಣೇಯಮಶಕ್ಯಾ ರಕ್ಷಿತುಂ ಮಯಾ |
ಬಹುರೂಪೋ ಹಿ ಭಗವಾನ್ ಶ್ರೂಯತೇ ಹರಿವಾಹನಃ ॥47॥
ಅಥವಾ ಪುರುಷಪ್ರಯತ್ನದಿಂದ ನಾನು ಇವಳನ್ನು ರಕ್ಷಿಸಲಾರೆ. ಪೂಜ್ಯನಾದ ದೇವೇಂದ್ರನು ಬಹುರೂಪವುಳ್ಳವನೆಂದು ಕೇಳಿಬರುತ್ತದೆ.
ಸೋಽಹಂ ಯೋಗಬಲಾದೇನಾಂ ರಕ್ಷಿಷ್ಯೇ ಪಾಕಶಾಸನಾತ್ |
ಗಾತ್ರಾಣಿ ಗಾತ್ರೈರಸ್ಯಾಹಂ ಸಂಪ್ರವೇಕ್ಷ್ಯೇಯೇಽಭಿರಕ್ಷಿತುಮ್ ॥48॥
ಆದ್ದರಿಂದ ನಾನು ಇವಳನ್ನು ನನ್ನ ಯೋಗಬಲದಿಂದ ದೇವೇಂದ್ರನಿಂದ ರಕ್ಷಿಸುವೆನು. ಅವಳನ್ನು ರಕ್ಷಿಸಲು ನನ್ನ ಶರೀರದ ಅವಯವಗಳಿಂದ ಅವಳ ಶರೀರವನ್ನು ಪ್ರವೇಶಿಸುವೆನು.
ಯದ್ಯುಚ್ಛಿಷ್ಟಾಮಿಮಾಂ ಪತ್ನೀಂ ರುಚಿಂ ಪಶ್ಯೇತ ಮೇ ಗುರುಃ |
ಶಪ್ಸ್ಯತ್ಯಸಂಶಯಂ ಕೋಪಾದ್ ದಿವ್ಯಜ್ಞಾನೋ ಮಹಾತಪಾಃ ॥49॥
ಇಂದ್ರನಿಂದ ಸ್ಪರ್ಶಿಸಲ್ಪಟ್ಟ ರುಚಿಯನ್ನು ಗುರುವು ಏನಾದರೂ ನೋಡಿದರೆ ದಿವ್ಯ ಜ್ಞಾನವನ್ನು ಹೊಂದಿದ ಮಹಾತಪಸ್ವಿಯಾದ ಅವರು ನಿಸ್ಸಂಶಯವಾಗಿ ಶಾಪವನ್ನು ಕೊಡುವರು.
ನ ಚೇಯಂ ರಕ್ಷಿತುಂ ಶಕ್ಯಾ ಯಥಾಽನ್ಯಾ ಪ್ರಮದಾ ನೃಭಿಃ |
ಮಾಯಾವೀ ಹಿ ಸುರೇಂದ್ರೋಸಾವಹೋ ಪ್ರಾಪ್ತೋಸ್ಮಿ ಸಂಶಯಮ್ ॥
ಲೋಕದ ಸಾಮಾನ್ಯ ಸ್ತ್ರೀಯರನ್ನು ರಕ್ಷಿಸಿದಂತೆ ಇವಳನ್ನು ರಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಸುರೇಂದ್ರನು ಮಾಯಾವಿಯಾದವನು.

ಆದ್ದರಿಂದ ನಾನು ಬಹಳ ಸಂಶಯಕ್ಕೆ ಸಿಲುಕಿದ್ದೇನೆ.
ಅವಶ್ಯಕರಣೀಯಂ ಹಿ ಗುರೋರಿಹ ಹಿ ಶಾಸನಮ್ |
ಯದಿ ತ್ವೇತದಹಂ ಕುರ್ಯಾಮಾಶ್ಚರ್ಯಂ ಸ್ಯಾತ್ ಕೃತಂ ಮಯಾ ॥
ಗುರುಗಳ ಆಜ್ಞೆಯು ಅವಶ್ಯವಾಗಿ ಪಾಲಿಸಲ್ಪಡಬೇಕಾದುದು. ನಾನು ಈ ಕಾರ್ಯವನ್ನು ಮಾಡಿದರೆ ಒಂದು ಅದ್ಭುತವನ್ನು ಮಾಡಿದಂತಾಗುತ್ತದೆ.
ಯೋಗೇನಾನುಪ್ರವಿಶ್ಯೇಹ ಗುರುಪತ್ನ್ಯಾಃ ಕಳೇವರಮ್ |
ನಿರ್ಮುಕ್ತಸ್ಯ ರಜೋರೂಪಾನ್ನಾಪರಾಧೋ ಭವೇನ್ಮಮ ॥52॥
ನಾನು ಒಂದು ಧೂಳಿನ ಕಣದ ರೂಪದಲ್ಲಿ ಗುರುಪತ್ನಿಯ ಶರೀರವನ್ನು ಪ್ರವೇಶಿಸಿ ಹೊರಗೆ ಬಂದರೆ ನನಗೆ ಯಾವ ದೋಷವೂ ಉಂಟಾಗುವುದಿಲ್ಲ.
ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ |
ಅನ್ಯಥಾಲಿಂಗ್ಯತೇ ಕಾಂತಾಂ ದುಹಿತಾಲಿಂಗ್ಯತೇಽನ್ಯಥಾ ॥53॥
ಮನುಷ್ಯರ ಬಂಧ-ಮೋಕ್ಷಗಳಿಗೆ ಮನಸ್ಸೇ ಕಾರಣವಾದುದು. ಭಾರ್ಯೆಯನ್ನು ಬೇರೆ ರೀತಿಯಲ್ಲಿ ಆಲಿಂಗಿಸುತ್ತಾನೆ. ಪುತ್ರಿಯನ್ನು ಬೇರೆ ರೀತಿ ಆಲಿಂಗಿಸುತ್ತಾನೆ.
ಗರ್ಭಸಂಸ್ಥೋ ಯಥಾ ಪುತ್ರೋ ಜಾಯಮಾನೋ ನ ಲಿಪ್ಯತೇ |
ಏವಂ ಜ್ಞಾನೀ ನ ಲೌಕ್ಯೈಶ್ಚ ಕರ್ಮಭಿರ್ನೈವ ದುಷ್ಯತೇ ॥54॥
ಗರ್ಭದಲ್ಲಿದ್ದ ಪುತ್ರನು ಜನಿಸುವಾಗ ಹೇಗೆ ಅವನಿಗೆ ದೋಷವಿಲ್ಲವೋ ಅದರಂತೆ ಜ್ಞಾನಿಯಾದವನು ಲೋಕ ಸಹಜವಾದ ಕರ್ಮಗಳಿಂದ ದೂಷಿತನಾಗುವುದಿಲ್ಲ.
ಯಥಾ ಹಿ ಶೂನ್ಯಾಂ ಪಥಿಕಃ ಸಭಾಮಧ್ಯಾವಸೇತ್ ಪಥಿ |
ತಥಾದ್ಯಾವಾಸಯಿಷ್ಯಾಮಿ ಗುರುಪತ್ನ್ಯಾಃ ಕಳೇವರಮ್ ॥55॥
ದಾರಿಹೋಕನಾದವನು ದಾರಿಯಲ್ಲಿ ಸಿಗುವ ಶೂನ್ಯವಾದ ಸಭೆಯಲ್ಲಿ ವಾಸ ಮಾಡಿದಂತೆ ಈ ದಿನ ನಾನು ಗುರುಪತ್ನಿಯ ಶರೀರದಲ್ಲಿ ವಾಸ ಮಾಡುವೆನು.
ಅಸಕ್ತಃ ಪದ್ಮಪತ್ರಸ್ಥೋ ಜಲಬಿಂದುರ್ಯಥಾ ಚಲಃ |
ಏವಮೇವ ಶರೀರೇಽಸ್ಯಾ ನಿವತ್ಸ್ಯಾಮಿ ಸಮಾಹಿತಃ ॥56॥
ಪದ್ಮಪತ್ರದಲ್ಲಿ ಚಲಿಸುವ ಜಲಬಿಂದುವು ಹೇಗೆ ಅಂಟಿಕೊಳ್ಳದೆ ಇರುತ್ತದೆಯೋ ಅದರಂತೆ ನಾನು ಸಮಾಧಿಯನ್ನು ಹೊಂದಿ ಇವಳ ಶರೀರದಲ್ಲಿ ವಾಸ ಮಾಡುವೆನು.
ಇತ್ಯೇವಂ ಧರ್ಮಮಾಲೋಕ್ಯ ವೇದವೇದಾಂಶ್ಚ ಸರ್ವಶಃ |
ತಪಶ್ಚ ವಿಪುಲಂ ದೃಷ್ಟ್ವಾ ಗುರೋರಾತ್ಮನ ಏವ ಚ ॥57॥
ಇತಿ ನಿಶ್ಚಿತ್ಯ ಮನಸಾ ರಕ್ಷಾಂ ಪ್ರತಿ ಸ ಭಾರ್ಗವಃ |
ಅನ್ವತಿಷ್ಠತ್ಪರಂ ಯತ್ನಂ ಯಥಾ ತಚ್ಛೃಣು ಪಾರ್ಥಿವ ॥58॥
ಈ ರೀತಿಯಲ್ಲಿ ಧರ್ಮಶಾಸ್ತ್ರವನ್ನು ಗಮನಿಸಿ, ವೇದಶಾಸ್ತ್ರವನ್ನು ಗಮನಿಸಿ, ಗುರುವಿನ ಮತ್ತು ತನ್ನ ವಿಪುಲವಾದ ತಪಸ್ಸನ್ನು ಗಮನಿಸಿ, ಭಾರ್ಗವ, ಗೋತ್ರನಾದ ವಿಪುಲನು ಗುರುಪತ್ನಿಯ ರಕ್ಷಣೆಯನ್ನು ಮನಸ್ಸಿನಿಂದಲೇ ನಿಶ್ಚಯಿಸಿ ಹೇಗೆ ಶ್ರೇಷ್ಠ ಪ್ರಯತ್ನವನ್ನು ಮಾಡಿದನೆಂದು ನನ್ನಿಂದ ಕೇಳುವವನಾಗು.
ಗುರುಪತ್ನೀಂ ಸಮಾಸೀನೋ ವಿಪುಲಃ ಸ ಮಹಾತಪಾಃ |
ಉಪಾಸೀನಾಮನಿಂದ್ಯಾಂಗೀಂ ಕಥಾರ್ಥೈಃ ಸಮಲೋಭಯತ್ ॥59॥
ಮಹಾತಪಸ್ವಿಯಾದ ವಿಪುಲನು ಗುರುಪತ್ನಿಯ ಸಮೀಪದಲ್ಲಿ ಕುಳಿತು ಅನೇಕ ಕಥೆಗಳಿಂದ ಅನವದ್ಯಾಂಗಿಯಾದ (ಸುಂದರಿಯಾದ) ಅವಳನ್ನು ಮರುಳುಗೊಳಿಸಿದನು.
ನೇತ್ರಾಭ್ಯಾಂ ನೇತ್ರಯೋರಸ್ಯಾ ರಶ್ಮಿಂ ಸಂಯೋಜ್ಯ ರಶ್ಮಿಭಿಃ |
ವಿವೇಶ ವಿಪುಲಃ ಕಾಯಮಾಕಾಶಂ ಪವನೋ ಯಥಾ ॥60॥
ಅವಳ ನೇತ್ರರಶ್ಮಿಗಳ ಜೊತೆಯಲ್ಲಿ ತನ್ನ ನೇತ್ರರಶ್ಮಿಗಳನ್ನು ಸೇರಿಸಿ ವಿಪುಲನು ವಾಯುವು ಆಕಾಶವನ್ನು ಪ್ರವೇಶಿಸಿದಂತೆ ಅವಳ ಶರೀರವನ್ನು ಪ್ರವೇಶಿಸಿದನು.
ಲಕ್ಷಣಂ ಲಕ್ಷಣೇನೈವ ವದನಂ ವದನೇನ ಚ |
ಅವಿಚೇಷ್ಟನ್ನತಿಷ್ಠದ್ವೈ ಛಾಯೇವಾಂತರ್ಗತೋ ಮುನಿಃ ॥61॥
ತನ್ನ ಲಕ್ಷಣಗಳನ್ನು ಅವಳ ಲಕ್ಷಣಗಳ ಜೊತೆಯಲ್ಲಿ, ತನ್ನ ಮುಖವನ್ನು ಅವಳ ಮುಖದ ಜೊತೆಯಲ್ಲಿ ಸಂಯೋಜಿಸಿ ಒಳಗೆ ಪ್ರವೇಶಿಸಿದವನಾಗಿ ವಿಪುಲ ಋಷಿಯು ನೆರಳಿನಂತೆ ಅಲುಗಾಡದೆ ನಿಂತನು.
ತತೋ ವಿಷ್ಟಭ್ಯ ವಿಪುಲೋ ಗುರುಪತ್ನ್ಯಾಃ ಕಳೇವರಮ್ |
ಉವಾಸ ರಕ್ಷಣೇ ಯುಕ್ತೋ ನ ಚ ಸಾ ತಮಬುಧ್ಯತ ॥62॥
ಆಗ ವಿಪುಲನು ಗುರುಪತ್ನಿಯ ಶರೀರವನ್ನು ಸ್ತಂಭನಗೊಳಿಸಿ ರಕ್ಷಣೆಯಲ್ಲಿ ತತ್ಪರನಾಗಿ ಅಲ್ಲಿ ನೆಲೆಸಿದನು. ರುಚಿಗೆ ಅದು ತಿಳಿಯಲಿಲ್ಲ.

ಯಂ ಕಾಲಂ ನಾಗತೋ ರಾಜನ್ ಗುರುಸ್ತಸ್ಯ ಮಹಾತ್ಮನಃ |
ಕ್ರತುಂ ಸಮಾಪ್ಯ ಸ್ವಗೃಹಂ ತಂ ಕಾಲಂ ಸೋಽಭ್ಯರಕ್ಷತ ॥63॥

ಎಲ್ಲೈ ರಾಜನೇ, ಮಹಾತ್ಮನಾದ ಅವನ ಗುರುವು ಯಾಗವನ್ನು ಮುಗಿಸಿ ಮನೆಗೆ ಹಿಂದಿರುಗಿ ಬರುವಷ್ಟು ಕಾಲದವರೆಗೆ ಅವನು ಅವಳನ್ನು ರಕ್ಷಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವಿಪುಲೋಪಾಖ್ಯಾನೇ ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂದನೆಯ ಅಧ್ಯಾಯ
ಇಂದ್ರನ ಆಗಮನ. ವಿಪುಲನಿಂದ ಗುರುಪತ್ನಿಯ ರಕ್ಷಣೆ
ಮತ್ತು ದೇವೇಂದ್ರನ ನಿಂದೆ.
ಭೀಷ್ಮಃ
ತತಃ ಕದಾಚಿದ್ ದೇವೇಂದ್ರೋ ದಿವ್ಯರೂಪವಪುರ್ಧರಃ |
ಇದಮಂತರಮಿತ್ಯೇವಮಭ್ಯಗಾತ್ ತಮಥಾಶ್ರಮಮ್ ॥1॥
ಭೀಷ್ಮ ಅನಂತರ ದೇವೇಂದ್ರನು ಇದೇ ಸರಿಯಾದ ಅವಕಾಶವೆಂದು ತಿಳಿದು ದಿವ್ಯರೂಪದ ಶರೀರವನ್ನು ಧರಿಸಿ ಆ ಆಶ್ರಮಕ್ಕೆ ಬಂದನು.
ರೂಪಮಪ್ರತಿಮಂ ಕೃತ್ವಾ ಲೋಭನೀಯಂ ಜನಾಧಿಪ |
ದರ್ಶನೀಯತಮೋ ಭೂತ್ವಾ ಪ್ರವಿವೇಶ ತಮಾಶ್ರಮಮ್ ॥2॥
ಎಲ್ಲೈ ಜನಾಧಿಪನೇ, ಆಸೆಯನ್ನು ಹುಟ್ಟಿಸುವಂತಹ ಅಸದೃಶವಾದ ರೂಪವನ್ನು ಧರಿಸಿ ಅತ್ಯಂತ ಸುಂದರನಾಗಿ ಆ ಆಶ್ರಮವನ್ನು ಪ್ರವೇಶಿಸಿದನು.
ಸ ದದರ್ಶ ತಮಾಸೀನಂ ವಿಪುಲಸ್ಯ ಕಳೇವರಮ್ |
ನಿಶ್ಚೇಷ್ಟಂ ಸ್ತಬ್ಧನಯನಂ ಯಥಾಽಽಲೇಖ್ಯಗತಂ ತಥಾ ॥3॥
ರುಚಿಂ ಚ ರುಚಿರಾಪಾಂಗೀಂ ಪೀನಶ್ರೋಣಿಪಯೋಧರಾಮ್ |
ಪದ್ಮಪತ್ರವಿಶಾಲಾಕ್ಷೀಂ ಸಂಪೂರ್ಣೇಂದುನಿಭಾನನಾಮ್ ॥4॥
ಅವನು ಅಲುಗಾಡದೆ ಕಣ್ಣುಗಳನ್ನೂ ಅಲುಗಾಡಿಸದೆ ಚಿತ್ರದಲ್ಲಿ ಬರೆದ ಪ್ರತಿಮೆಯಂತೆ ಕುಳಿತಿದ್ದ ವಿಪುಲನ ಶರೀರವನ್ನು ನೋಡಿದನು. ಮನೋಹರವಾದ ಕಟಾಕ್ಷವುಳ್ಳ, ಪೀನನಿತಂಬ-ಸ್ತನಗಳನ್ನು ಹೊಂದಿದ, ಪದ್ಮದಳದಂತೆ ವಿಶಾಲವಾದ ಕಣ್ಣುಳ್ಳ, ಪೂರ್ಣಚಂದ್ರನಂತಹ ಮುಖವನ್ನು ಹೊಂದಿದ ರುಚಿಯನ್ನೂ ನೋಡಿದನು.
ಸಾ ತಮಾಲೋಕ್ಯ ಸಹಸಾ ಪ್ರತ್ಯುತ್ಥಾತುಮಿಯೇಷ ಹ |
ರೂಪೇಣ ವಿಸ್ಮಿತಾ ಕೋಽಸೀತ್ಯಥ ವಕ್ತುಮಿಹೇಚ್ಛತೀ ॥5॥
ಅವಳು ಅವನನ್ನು ನೋಡಿ ತಕ್ಷಣ ಮೇಲಕ್ಕೇಳಲು ಬಯಸಿದಳು. ಅವನ ರೂಪವನ್ನು ನೋಡಿ ವಿಸ್ಮಿತಳಾಗಿ ನೀನು ಯಾರು ಎಂದು ಕೇಳಲು ಬಯಸಿದಳು.
ಉತ್ಥಾತುಕಾಮಾಽಪಿ ಸತೀ ವಿಷ್ಟಬ್ಧಾ ವಿಪುಲೇನ ಸಾ |
ನಿಗೃಹೀತಾ ಮನುಷ್ಯೇಂದ್ರ ನ ಶಶಾಕ ವಿಚೇಷ್ಟಿತುಮ್ ॥6॥
ಅವಳು ಏಳಲು ಬಯಸಿದರೂ ವಿಪುಲನಿಂದ ಅವಳು ತಡೆಹಿಡಿಯಲ್ಪಟ್ಟಳು. ಎಲ್ಲೈ ಮನುಷ್ಯೇಂದ್ರನೇ, ವಿಪುಲನ ಬಲಕ್ಕೆ ಅಧೀನಳಾದ ಅವಳು ನಿಗೃಹೀತಳಾಗಿ ಅಲುಗಾಡಲು ಸಾಧ್ಯವಾಗಲಿಲ್ಲ.
ತಾಮಾಬಭಾಷೇ ದೇವೇಂದ್ರಃ ಸಾಮ್ನಾ ಪರಮವಲ್ಗುನಾ |
ತ್ವದರ್ಥಮಾಗತಂ ವಿದ್ಧಿ ದೇವೇಂದ್ರಂ ಮಾಂ ಶುಚಿಸ್ಮಿತೇ ॥7॥
ಕ್ಲಿಶ್ಯಮಾನಮನಂಗೇನ ತ್ವತ್ಸಂಕಲ್ಪಭವೇನ ಹ |
ತತ್ಪರ್ಯಾಪ್ನುಹಿ ಮಾಂ ಸುಭ್ರು ಪುರಾ ಕಾಲೋಽತಿವರ್ತತೇ ॥8॥
ದೇವೇಂದ್ರನು ಅವಳನ್ನು ಕುರಿತು ಅತ್ಯಂತ ಮೃದುವಾದ ವಾಣಿಯಿಂದ ಎಲೌ ಶುಚಿಸ್ಮಿತೆಯೇ ನನ್ನನ್ನು ನಿನ್ನ ಸಲುವಾಗಿ ಬಂದ ದೇವೇಂದ್ರನೆಂದು ತಿಳಿ. ನಿನ್ನ ಆಸೆಯಿಂದ ಉಂಟಾದ ಮನ್ಮಥನ ಬಾಧೆಯಿಂದ ನಿನ್ನ ಬಳಿಗೆ ಬಂದಿದ್ದೇನೆ. ಎಲೌ ಸುಂದರಿಯೇ, ಕಾಲವು ಮೀರಿಹೋಗುವುದಕ್ಕಿಂತ ಮೊದಲು ನನ್ನ ಬಳಿಗೆ ಬಾ ಎಂದು ಹೇಳಿದನು.
ತಮೇವಂವಾದಿನಂ ಶಕ್ರಂ ಶುಶ್ರಾವ ವಿಪುಲೋ ಮುನಿಃ |
ಗುರುಪತ್ನ್ಯಾಃ ಶರೀರಸ್ಥೋ ದದರ್ಶ ಚ ಸುರಾಧಿಪಮ್ ॥9॥
ಋಷಿಯಾದ ವಿಪುಲನು ಇಂದ್ರನ ಈ ಮಾತುಗಳನ್ನು ಕೇಳಿದನು ಮತ್ತು ಗುರುಪತ್ನಿಯ ಶರೀರದಲ್ಲಿಯೇ ಇದ್ದು ಸುರಾಧಿಪನಾದ ಇಂದ್ರನನ್ನು ನೋಡಿದನು.
ನ ಶಶಾಕ ಚ ಸಾ ರಾಜನ್ ಪ್ರತ್ಯುತ್ಥಾತುಮನಿಂದಿತಾ |
ವಕ್ತುಂ ಚ ನಾಶಕದ್ ರಾಜನ್ ವಿಷ್ಟಬ್ಧಾ ವಿಪುಲೇನ ಸಾ ॥10॥
ಎಲ್ಲೈ ರಾಜನೇ, ಅನಿಂದಿತಳಾದ ಅವಳು ಏಳಲು ಸಮರ್ಥಳಾಗಲಿಲ್ಲ. ಎಲ್ಲೈ ರಾಜನೇ, ವಿಪುಲನಿಂದ ಸ್ತಂಬಿತಳಾದ ಅವಳು ಮಾತನಾಡಲೂ ಸಮರ್ಥಳಾಗಲಿಲ್ಲ.
ಆಕಾರಂ ಗುರುಪತ್ನ್ಯಾಸ್ತು ವಿಜ್ಞಾಯ ಸ ಭೃಗೂದ್ವಹಃ |
ನಿಜಗ್ರಾಹ ಮಹಾತೇಜಾ ಯೋಗೇನ ಬಲವತ್ ಪ್ರಭೋ |

ಬಬಂಧ ಯೋಗಬಂಧೈಶ್ಚ ತಸ್ಯಾಃ ಸರ್ವೇಂದ್ರಿಯಾಣಿ ಸಃ ॥11॥
ಆ ಭೃಗುವಂಶದಲ್ಲಿ ಜನಿಸಿದ ವಿಪುಲನು ಗುರುಪತ್ನಿಯ ಇಂಗಿತವನ್ನು ತಿಳಿದ ಮಹಾತೇಜಸ್ವಿಯಾದ ಅವನು ಯೋಗಶಕ್ತಿಯಿಂದ ಅವಳನ್ನು ಬಲವಾಗಿ ತಡೆದನು. ಎಲೈ ಪ್ರಭುವೇ, ಯೋಗಬಂಧಗಳಿಂದ ಅವಳ ಎಲ್ಲ ಇಂದ್ರಿಯಗಳನ್ನು ಬಂಧಿಸಿದನು.
ತಾಂ ನಿರ್ವಿಕಾರಾಂ ದೃಷ್ಟ್ವಾ ತು ಪುನರೇವ ಶಚೀಪತಿಃ |
ಉವಾಚ ವ್ರೀಡಿತೋ ರಾಜಂಸ್ತಾಂ ಯೋಗಬಲಮೋಹಿತಾಮ್ ॥12॥
ಎಲೈ ರಾಜನೇ, ಅವಳು ನಿರ್ವಿಕಾರಳಾಗಿರುವುದನ್ನು ನೋಡಿದ ಶಚೀಪತಿಯಾದ ಇಂದ್ರನು ನಾಚಿಕೆಗೊಂಡು ಯೋಗಬಲಮೋಹಿತಳಾದ ಅವಳನ್ನು ಕುರಿತು ಪುನಃ ಮಾತನಾಡಿದನು.
ಏಹ್ಯೇಹೀತಿ ತತಃ ಸಾ ತಂ ಪ್ರತಿವಕ್ತುಮಿಯೇಷ ಚ |
ಸ ತಾಂ ವಾಚಂ ಗುರೋಃ ಪತ್ನ್ಯಾ ವಿಪುಲಃ ಪರ್ಯವರ್ತಯತ್ ॥13॥
ಅವಳು ಬಾ, ಬಾ ಎಂದು ಅವನನ್ನು ಕರೆಯಲು ಬಯಸಿದಳು. ಆದರೆ ವಿಪುಲನು ಗುರುಪತ್ನಿಯ ಆ ಮಾತುಗಳನ್ನು ತಿರುಗಿಸಿದನು.
ಭೋಃ ಕಿಮಾಗಮನೇ ಕೃತ್ಯಮಿತಿ ತಸ್ಯಾಶ್ಚ ನಿಃಸೃತಾ |
ವಕ್ತ್ರಾಚ್ಚಶಾಂಕಪ್ರತಿಮಾದ್ ವಾಣೀ ಸಂಸ್ಕಾರಭೂಷಿತಾ ॥14॥
ಚಂದ್ರಮುಖಿಯಾದ ಅವಳ ಮುಖದಿಂದ ಸಂಸ್ಕಾರಭೂಷಿತವಾದ ಅಯ್ಯಾ ಇಲ್ಲಿ ಬರಲು ಉದ್ದೇಶವೇನು ಎಂಬ ಮಾತುಗಳು ಹೊರಬಂದವು.
ವ್ರೀಡಿತಾ ಸಾ ತು ತದ್ವಾಕ್ಯಮುಕ್ತ್ವಾ ಪರವಶಾ ತದಾ |
ಪುರಂದರಶ್ಚ ಸಂತ್ರಸ್ತೋ ಬಭೂವ ವಿಮನಾಸ್ತದಾ ॥15॥
ಪರವಶಳಾದ ಅವಳು ಆ ವಾಕ್ಯವನ್ನು ಹೇಳಿ ನಾಚಿಕೆಗೊಂಡಳು. ಪುರಂದರನೂ ಸಹ ಹೆದರಿ ವಿಮನಸ್ಕನಾದನು.
ಸ ತದ್ವೈಕೃತಮಾಲಕ್ಷ್ಯ ದೇವರಾಜೋ ವಿಶಾಂಪತೇ |
ಅವೈಕ್ಷತ ಸಹಸ್ರಾಕ್ಷಸ್ತದಾ ದಿವ್ಯೇನ ಚಕ್ಷುಷಾ ॥16॥
ಎಲೈ ರಾಜನೇ, ದೇವರಾಜನಾದ ಇಂದ್ರನು ಅವಳ ವ್ಯತ್ಯಾಸವನ್ನು ಗಮನಿಸಿ ಸಹಸ್ರಾಕ್ಷನಾದ ಅವನು ದಿವ್ಯಚಕ್ಷುಸ್ಸಿನಿಂದ ನೋಡಿದನು.
ದದರ್ಶ ಚ ಮುನಿಂ ತಸ್ಯಾಃ ಶರೀರಾಂತರಗೋಚರಮ್ |
ಪ್ರತಿಬಿಂಬಮಿವಾದರ್ಶೇ ಗುರುಪತ್ನ್ಯಾಃ ಶರೀರಗಮ್ ॥17॥
ಅವನು ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡಿದಂತೆ ಗುರುಪತ್ನಿಯ ಶರೀರದೊಳಗೆ ಕಾಣಿಸುತ್ತಿದ್ದಂತಹ ಆ ವಿಪುಲ ಮುನಿಯನ್ನು ನೋಡಿದನು.
ಸ ತಂ ಘೋರೇಣ ತಪಸಾ ಯುಕ್ತಂ ದೃಷ್ಟ್ವಾ ಪುರಂದರಃ |
ಪ್ರಾವೇಪತ ಸುಸಂತ್ರಸ್ತಃ ಶಾಪಭೀತಸ್ತದಾ ವಿಭೋ ॥18॥
ಎಲೈ ವಿಭುವೇ, ಪುರಂದರನು ಘೋರವಾದ ತಪಸ್ಸಿನಿಂದ ಕೂಡಿದ ಆ ವಿಪುಲನನ್ನು ನೋಡಿ ಅವನು ಕೊಡಬಹುದಾದ ಶಾಪಕ್ಕೆ ಬಹಳ ಹೆದರಿದನು.
ವಿಮುಚ್ಯ ಗುರುಪತ್ನೀಂ ತು ವಿಪುಲಃ ಸುಮಹಾತಪಾಃ |
ಸ್ವಂ ಕಳೇವರಮಾವಿಶ್ಯ ಶಕ್ರಂ ಭೀತಮಥಾಬ್ರವೀತ್ ॥19॥
ಮಹಾತಪಸ್ವಿಯಾದ ವಿಪುಲನು ಗುರುಪತ್ನಿಯ ಶರೀರವನ್ನು ಬಿಟ್ಟು ತನ್ನ ಶರೀರವನ್ನು ಪ್ರವೇಶಿಸಿ ಭೀತನಾದ ಇಂದ್ರನನ್ನು ಕುರಿತು ಮಾತನಾಡಿದನು.
ಅಜಿತೇಂದ್ರಿಯ ಪಾಪಾತ್ಮನ್ ಕಾಮಾತ್ಮಕ ಪುರಂದರ |
ನ ಚಿರಂ ಪೂಜಯಿಷ್ಯಂತಿ ದೇವಾಸ್ತ್ವಾಂ ಮಾನುಷಾಸ್ತಥಾ ॥20॥
ಎಲೈ ಅಜಿತೇಂದ್ರಿಯನೇ, ಪಾಪಾತ್ಮನೇ, ಕಾಮಾತ್ಮಕನೇ, ಪುರಂದರನೇ, ನಿನ್ನನ್ನು ದೇವತೆಗಳು ಮತ್ತು ಮನುಷ್ಯರು ಬಹುಕಾಲ ಪೂಜಿಸುವುದಿಲ್ಲ.
ಕಿಂ ನು ತದ್ ವಿಸ್ಮೃತಂ ಶಕ್ರ ನ ತನ್ಮನಸಿ ತೇ ಸ್ಥಿತಮ್ |
ಗೌತಮೇನಾಸಿ ಯನ್ಮುಕ್ತೋ ಭಗಾಂಕಪರಿಚಿಹ್ನಿತಃ ॥21॥
ಎಲೈ ಶಕ್ರನೇ, ಗೌತಮರಿಂದ ಬಿಡುಗಡೆಯನ್ನು ಹೊಂದಿ ದೇಹದಲ್ಲೆಲ್ಲ ಸ್ತ್ರೀಯೋನಿಯ ಚಿಹ್ನೆಯನ್ನು ಧರಿಸಿರುವ ನೀನು ಎಲ್ಲವನ್ನೂ ಮರೆತೆಯಾ? ಅದು ಯಾವುದೂ ನಿನ್ನ ಮನಸ್ಸಿನಲ್ಲಿ ಇಲ್ಲವೆ?
ಜಾನೇ ತ್ವಾಂ ಬಾಲಿಶಮತಿಮಕೃತಾತ್ಮಾನಮಸ್ಥಿರಮ್ |
ಮಯೇಯಂ ರಕ್ಷ್ಯತೇ ಮೂಢ ಗಚ್ಛ ಪಾಪ ಯಥಾಗತಮ್ ॥22॥
ನೀನು ಹುಡುಗ ಬುದ್ಧಿಯವನೆಂದೂ, ಅಜಿತಮನಸ್ಕನೆಂದೂ, ಚಂಚಲನೆಂದೂ ನಾನು ತಿಳಿದಿದ್ದೇನೆ. ಎಲೈ ಮೂಢನೇ, ನಾನು ಇವಳನ್ನು ರಕ್ಷಿಸುತ್ತಿದ್ದೇನೆ. ಪಾಪಿಯಾದ ನೀನು ಬಂದಂತೆ ಹೊರಟು ಹೋಗು.
ನಾಹಂ ತ್ವಾಮದ್ಯ ಮೂಢಾತ್ಮನ್ ದಹೇಯಂ ಹಿ ಸ್ವತೇಜಸಾ |
ಕೃಪಾಯಮಾಣಸ್ತು ನ ತೇ ದಗ್ಧುಮಿಚ್ಛಾಮಿ ವಾಸವ ॥23॥
ಎಲೈ ಮೂಢಾತ್ಮನೇ, ಈ ದಿನ ನಾನು ನಿನ್ನನ್ನು ನನ್ನ ತೇಜಸ್ಸಿನಿಂದ ಸುಡುವುದಿಲ್ಲ. ಎಲೈ ವಾಸವನೇ, ನಿನ್ನ ಮೇಲೆ ಕೃಪೆಯನ್ನು ಹೊಂದಿ ನಾನು ಈ ದಿನ ನಿನ್ನನ್ನು ದಹಿಸಲು ಬಯಸುವುದಿಲ್ಲ.
ಸ ಚ ಘೋರತಪಾ ಧೀಮಾನ್ ಗುರುರ್ಮೇ ಪಾಪಚೇತಸಮ್ |

ದೃಷ್ಟ್ವಾ ತ್ವಾಂ ನಿರ್ದಹೇದದ್ಯ ಕ್ರೋಧದೀಪ್ತೇನ ಚಕ್ಷುಷಾ ॥24॥
ಮೇಧಾವಿಯೂ, ಘೋರತಪಸ್ವಿಗಳೂ ಆದ ನನ್ನ ಗುರುಗಳು ಪಾಪಮನಸ್ಸುಳ್ಳ ನಿನ್ನನ್ನು ನೋಡಿ ಕ್ರೋಧದಿಂದ ಉರಿಯುವ ಕಣ್ಣುಗಳಿಂದ ಈ ದಿನ ನಿನ್ನನ್ನು ಕೊಂದಾರು.
ನೈವಂ ತು ಶಕ್ರ ಕರ್ತವ್ಯಂ ಪುನರ್ಮಾನ್ಯಾಶ್ಚ ತೇ ದ್ವಿಜಾಃ।
ಮಾ ಗಮಃ ಸಸುತಾಮಾತ್ಯೋಽತ್ಯಯಂ ಬ್ರಹ್ಮಬಲಾರ್ದಿತಃ ॥25॥
ಎಲೈ ಶಕ್ರನೇ, ಪುನಃ ಹೀಗೆ ಮಾಡಬಾರದು. ನೀನು ಬ್ರಾಹ್ಮಣರನ್ನು ಸನ್ಮಾನಿಸಬೇಕು. ಬ್ರಹ್ಮತೇಜಸ್ಸಿಗೆ ಒಳಗಾಗಿ ನೀನು ಪುತ್ರ-ಅಮಾತ್ಯರೊಂದಿಗೆ ವಿನಾಶವನ್ನು ಹೊಂದಬೇಡ.
ಅಮರೋಽಸ್ಮೀತಿ ಯದ್ ಬುದ್ಧಿಮೇತಾಮಾಸ್ಥಾಯ ವರ್ತಸೇ।
ಮಾವಮಂಸ್ಥಾ ನ ತಪಸಾಮಸಾಧ್ಯಂ ನಾಮ ಕಿಂಚನ ॥26॥
ನಾನು ಅಮರನಾಗಿದ್ದೇನೆ (ನನಗೆ ಮೃತ್ಯುವಿಲ್ಲ) ಎಂಬ ಬುದ್ಧಿಯನ್ನು ಹೊಂದಿ ನೀನು ನಡೆದುಕೊಳ್ಳುತ್ತಿದ್ದೀಯಷ್ಟೆ? ಹಾಗೆ ಅವಮಾನವನ್ನು ಮಾಡಬೇಡ. ತಪಸ್ಸಿಗೆ ಅಸಾಧ್ಯವಾದುದು ಯಾವುದೂ ಇಲ್ಲ.
ತಚ್ಛ್ರುತ್ವಾ ವಚನಂ ಶಕ್ರೋ ವಿಪುಲಸ್ಯ ಮಹಾತ್ಮನಃ।
ಅಕಿಂಚಿದುಕ್ತ್ವಾ ವ್ರೀಡಿತಸ್ತತ್ರೈವಾಂತರಧೀಯತ ॥27॥
ಮಹಾತ್ಮನಾದ ವಿಪುಲನ ಆ ಮಾತುಗಳನ್ನು ಕೇಳಿ ಇಂದ್ರನು ಏನೂ ಮಾತನಾಡದೆ ನಾಚಿಕೆಗೊಂಡು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.
ಮುಹೂರ್ತಯಾತೇ ಶಕ್ರೇ ತು ದೇವಶರ್ಮಾ ಮಹಾತಪಾಃ।
ಕೃತ್ವಾ ಯಜ್ಞಂ ಯಥಾಕಾಮಮಾಜಗಾಮ ಸ್ವಮಾಶ್ರಮಮ್ ॥28॥
ಇಂದ್ರನು ಹೋಗಿ ಒಂದು ಮುಹೂರ್ತವಾಗುತ್ತಿರಲು ಮಹಾತಪಸ್ವಿಯಾದ ದೇವಶರ್ಮನು ತನ್ನ ಸಂಕಲ್ಪದಂತೆಯೇ ಯಜ್ಞವನ್ನು ಮುಗಿಸಿ ತನ್ನ ಆಶ್ರಮಕ್ಕೆ ಹಿಂದಿರುಗಿದನು.
ಆಗತೇಽಥ ಗುರೌ ರಾಜನ್ ವಿಪುಲಃ ಪ್ರಿಯಕರ್ಮಕೃತ್।
ರಕ್ಷಿತಾಂ ಗುರವೇ ಭಾರ್ಯಾಂ ನ್ಯವೇದಯದನಿಂದಿತಾಮ್ ॥29॥
ಎಲೈ ರಾಜನೇ, ಗುರುವು ಆಶ್ರಮಕ್ಕೆ ಬಂದ ಮೇಲೆ ಪ್ರಿಯಕಾರ್ಯವನ್ನು ಮಾಡಿದ ವಿಪುಲನು ಗುರುಗಳಿಗೆ ಅನಿಂದಿತಳಾಗಿ ರಕ್ಷಿಸಲ್ಪಟ್ಟ ಅವರ ಪತ್ನಿಯನ್ನು ಸಮರ್ಪಿಸಿದನು.
ಅಭಿವಾದ್ಯ ಚ ಶಾಂತಾತ್ಮಾ ಸ ಗುರುಂ ಗುರುವತ್ಸಲಃ।
ವಿಪುಲಃ ಪರ್ಯುಪಾತಿಷ್ಠದ್ ಯಥಾಪೂರ್ವಮಶಂಕಿತಃ ॥30॥
ಗುರುಭಕ್ತಿಯುಳ್ಳ ಶಾಂತಾತ್ಮನಾದ ವಿಪುಲನು ಗುರುವಿಗೆ ನಮಸ್ಕರಿಸಿ ಮೊದಲಿನಂತೆಯೇ ನಿಶ್ಶಂಕೆಯಿಂದ ಅವರ ಸಮೀಪದಲ್ಲಿ ನಿಂತನು.
ವಿಶ್ರಾಂತಾಯ ತತಸ್ತಸ್ಮೈ ಸಹಾಸೀನಾಯ ಭಾರ್ಯಯಾ।
ನಿವೇದಯಾಮಾಸ ತದಾ ವಿಪುಲಃ ಶಕ್ರಕರ್ಮ ತತ್ ॥31॥
ಅನಂತರ ವಿಶ್ರಾಂತಿಯನ್ನು ಹೊಂದಿ ಪತ್ನಿಯ ಜೊತೆಯಲ್ಲಿ ಕುಳಿತಿದ್ದ ಅವರಿಗೆ ವಿಪುಲನು ಶಕ್ರನು ಮಾಡಿದ ಕಾರ್ಯವನ್ನು ನಿವೇದಿಸಿದನು.
ತಚ್ಛ್ರುತ್ವಾ ಸ ಮುನಿಸ್ತುಷ್ಟೋ ವಿಪುಲಸ್ಯ ಪ್ರತಾಪವಾನ್।
ಬಭೂವ ಶೀಲವೃತ್ತಾಭ್ಯಾಂ ತಪಸಾ ನಿಯಮೇನ ಚ ॥32॥
ಪ್ರತಾಪಶಾಲಿಯಾದ ಆ ಗುರುಗಳು ವಿಪುಲನ ಶೀಲ-ವೃತ್ತದಿಂದಲೂ, ತಪಸ್ಸಿನಿಂದಲೂ, ನಿಯಮದಿಂದಲೂ ಅವನ ಮೇಲೆ ಬಹಳ ಪ್ರಸನ್ನರಾದರು.
ವಿಪುಲಸ್ಯ ಗುರೌ ವೃತ್ತಿಂ ಭಕ್ತಿಮಾತ್ಮನಿ ಚ ಪ್ರಭುಃ।
ಧರ್ಮೇ ಚ ಸ್ಥಿರತಾಂ ದೃಷ್ಟ್ವಾ ಸಾಧು ಸಾಧ್ವಿತ್ಯುವಾಚ ಹ ॥33॥
ವಿಪುಲನ ಗುರುಗಳ ಮೇಲಿನ ನಡತೆಯನ್ನು, ತನ್ನ ಮೇಲಿರುವ ಭಕ್ತಿಯನ್ನೂ, ಧರ್ಮದ ಮೇಲಿರುವ ಸ್ಥಿರತೆಯನ್ನೂ ನೋಡಿ ಸಮರ್ಥರಾದ ಅವರು `ಸಾಧು- ಸಾಧು' ಎಂದು ಹೇಳಿದರು.
ಪ್ರತಿನಂದ್ಯ ಚ ಧರ್ಮಾತ್ಮಾ ಶಿಷ್ಯಂ ಧರ್ಮಪರಾಯಣಮ್।
ವರೇಣ ಚ್ಛಂದಯಾಮಾಸ ಸ ತಸ್ಮಾದ್ ಗುರುವತ್ಸಲಃ।
ಅನುಜ್ಞಾತಶ್ಚ ಗುರುಣಾ ಚಚಾರಾನುತ್ತಮಂ ತಪಃ ॥34॥
ಧರ್ಮಾತ್ಮರಾದ ಅವರು ಧರ್ಮಪರಾಯಣನಾದ ಶಿಷ್ಯನನ್ನು ಅಭಿನಂದಿಸಿ ವರವನ್ನು ಕೇಳುವಂತೆ ಒತ್ತಾಯಿಸಿದರು. ಗುರುವತ್ಸಲನಾದ ವಿಪುಲನು ಗುರುಗಳ ಅನುಮತಿಯನ್ನು ಪಡೆದು ಶ್ರೇಷ್ಠವಾದ ತಪಸ್ಸನ್ನು ಆಚರಿಸಿದನು.
ತಥೈವ ದೇವಶರ್ಮಾಪಿ ಸಭಾರ್ಯಃ ಸ ಮಹಾತಪಾಃ।
ನಿರ್ಭಯೋ ಬಲವೃತ್ರಘ್ನಾಚ್ಚಚಾರ ವಿಜನೇ ವನೇ ॥35॥
ಹಾಗೆಯೇ ಮಹಾತಪಸ್ವಿಯಾದ ದೇವಶರ್ಮನೂ ಸಹ ಪತ್ನೀ ಸಹಿತನಾಗಿ ಇಂದ್ರನ ಭಯವಿಲ್ಲದೆ ನಿರ್ಜನವಾದ ವನದಲ್ಲಿ ತಪಸ್ಸನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ವಿಪುಲೋಪಾಖ್ಯಾನೇ ಗುರುಪತ್ನಿಸಂರಕ್ಷಣೋಪಾಯಕಥನಂ ನಾಮ

ಏಕಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *

ಎಪ್ಪತ್ತೆರಡನೆಯ ಅಧ್ಯಾಯ
ವನದಲ್ಲಿ ಸಂಚರಿಸುವ ವಿಪುಲನಿಂದ ತನ್ನ ಶಾಪದ ಶ್ರವಣ.
ಭೀಷ್ಮಃ
ವಿಪುಲಸ್ತ್ವಕರೋತ್ ತೀವ್ರಂ ತಪಃ ಕೃತ್ವಾ ಗುರೋರ್ವಚಃ |
ತಪೋಯುಕ್ತಮಥಾತ್ಮಾನಮಮನ್ಯತ ಚ ವೀರ್ಯವಾನ್ ॥1॥
ಭೀಷ್ಮ ವಿಪುಲನು ಗುರುಗಳ ಮಾತನ್ನು ನಡೆಸಿಕೊಟ್ಟು ತೀವ್ರವಾದ ತಪಸ್ಸನ್ನು ಮಾಡಿದನು. ಮಹಾಸಾಮರ್ಥ್ಯವುಳ್ಳ ಅವನು ತನ್ನನ್ನು ತಪೋಬಲಯುಕ್ತನಾದವನೆಂದು ತಿಳಿದನು.
ಸ ತೇನ ಕರ್ಮಣಾ ಸ್ಪರ್ಧನ್ ಪೃಥಿವೀಂ ಪೃಥಿವೀಪತೇ |
ಚಚಾರ ಗತಭೀಃ ಪ್ರೀತೋ ಲಬ್ಧಕೀರ್ತಿರ್ವರೋ ನೃಷು ॥2॥
ಎಲೈ ಪೃಥಿವೀಪತಿಯೇ, ಮನುಷ್ಯರಲ್ಲಿ ಶ್ರೇಷ್ಠನಾದ ಅವನು ಆ ಕರ್ಮದಿಂದ ಉತ್ತಮರ ಜೊತೆಯಲ್ಲಿ ಸ್ಪರ್ಧಿಸುತ್ತಾ ಕೀರ್ತಿವಂತನಾಗಿ ಭಯವಿಲ್ಲದೆ ಸಂತೋಷದಿಂದ ಭೂಮಿಯಲ್ಲಿ ಸಂಚರಿಸಿದನು.
ಉಭೌ ಲೋಕೌ ಜಿತೌ ಚಾಪಿ ತಥೈವಾಮನ್ಯತ ಪ್ರಭುಃ |
ಕರ್ಮಣಾ ತೇನ ಕೌರವ್ಯ ತಪಸಾ ವಿಪುಲೇನ ಚ ॥3॥
ಎಲೈ ಕೌರವ್ಯನೇ, ಪ್ರಭುವಾದ ಅವನು ತನ್ನ ಕರ್ಮದಿಂದಲೂ ಮತ್ತು ವಿಪುಲವಾದ ತಪಸ್ಸಿನಿಂದಲೂ ಎರಡು ಲೋಕಗಳನ್ನೂ ಜಯಿಸಿದ್ದೇನೆಂದು ತಿಳಿದನು.
ಅಥ ಕಾಲೇ ವ್ಯತಿಕ್ರಾಂತೇ ಕಸ್ಮಿಂಶ್ಚಿತ್ಕುರುನಂದನ |
ರುಚ್ಯಾ ಭಗಿನ್ಯಾ ದಾನಂ ವೈ ಬಭೂವ ಧನಧಾನ್ಯವತ್ ॥4॥
ಎಲೈ ಕುರುನಂದನನೇ, ಅನಂತರ ಸ್ವಲ್ಪ ಕಾಲವು ಕಳೆದ ಮೇಲೆ ರುಚಿಯ ತಂಗಿಯ ದಾನವು ಧನ-ಧಾನ್ಯ ಸಮೃದ್ಧಿಯಿಂದ ಕೂಡಿದುದಾಗಿ ಪ್ರವೃತ್ತವಾಯಿತು.
ಏತಸ್ಮಿನ್ನೇವ ಕಾಲೇ ತು ದಿವ್ಯಾ ಕಾಚಿದ್ ವರಾಂಗನಾ |
ಬಿಭ್ರತೀ ಪರಮಂ ರೂಪಂ ಜಗಾಮಾಥ ವಿಹಾಯಸಾ ॥5॥
ಅದೇ ಸಮಯದಲ್ಲಿ ಯಾವಳೋ ಒಬ್ಬಳು ವರಾಂಗನೆಯು ಶ್ರೇಷ್ಠವಾದ ರೂಪವನ್ನು ಧರಿಸಿ ಆಕಾಶದಲ್ಲಿ ಹೋಗುತ್ತಿದ್ದಳು.
ತಸ್ಯಾಃ ಶರೀರಾತ್ ಪುಷ್ಪಾಣಿ ಪತಿತಾನಿ ಮಹೀತಳೇ |
ತಸ್ಯಾಶ್ರಮಸ್ಯಾವಿದೂರೇ ದಿವ್ಯಗಂಧಾನಿ ಭಾರತ ॥6॥
ಎಲೈ ಭಾರತನೇ, ಅವನ ಆಶ್ರಮದ ಸಮೀಪದಲ್ಲಿ ಅವಳ ಶರೀರದಿಂದ ದಿವ್ಯಗಂಧಯುಕ್ತವಾದ ಪುಷ್ಪಗಳು ಭೂಮಿಯ ಮೇಲೆ ಬಿದ್ದವು.
ತಾನ್ಯಗೃಹ್ಣಾತ್ ತತೋ ರಾಜನ್ ರುಚಿರ್ನಳಿನಲೋಚನಾ |
ತದಾ ನಿಮಂತ್ರಕಸ್ತಸ್ಯಾ ಅಂಗೇಭ್ಯಃ ಕ್ಷಿಪ್ರಮಾಗಮತ್ ॥7॥
ಎಲೈ ರಾಜನೇ, ನಳಿನಾಕ್ಷಿಯಾದ ರುಚಿಯು ಆ ಪುಷ್ಪಗಳನ್ನು ಎತ್ತಿಕೊಂಡಳು. ಆಗ ಅಂಗದೇಶದಿಂದ ಅವಳಿಗೆ ಆಹ್ವಾನವನ್ನು ಕೊಡಲು ರಾಜದೂತನು ಶೀಘ್ರವಾಗಿ ಬಂದನು.
ತಸ್ಯಾ ಹಿ ಭಗಿನೀ ತಾತ ಜ್ಯೇಷ್ಠಾ ನಾಮ್ನಾ ಪ್ರಭಾವತೀ |
ಭಾರ್ಯಾ ಚಿತ್ರರಥಸ್ಯಾಥ ಬಭೂವಾಂಗೇಶ್ವರಸ್ಯ ವೈ ॥8॥
ಎಲೈ ಪ್ರೀತಿಪಾತ್ರನೇ, ಅವಳ ಅಕ್ಕಳಾದ ಪ್ರಭಾವತಿ ಎಂಬುವಳು ಅಂಗರಾಜನಾದ ಚಿತ್ರರಥನ ಪತ್ನಿ.
ಪಿನಹ್ಯ ತಾನಿ ಪುಷ್ಪಾಣಿ ಕೇಶೇಷು ವರವರ್ಣಿನೀ |
ಆಮಂತ್ರಿತಾ ತತೋಽಗಚ್ಛದ್ ರುಚಿರಂಗಪತೇರ್ಗೃಹಾನ್ ॥9॥
ಸುಂದರಿಯಾದ ರುಚಿಯು ಆ ಪುಷ್ಪಗಳನ್ನು ಕಟ್ಟಿ ತಲೆಯಲ್ಲಿ ಮುಡಿದು ಅಂಗಪತಿಯ ಅರಮನೆಗೆ ಹೋದಳು.
ಪುಷ್ಪಾಣಿ ತಾನಿ ದೃಷ್ಟ್ವಾಽಥ ತದಾಽಂಗೇಂದ್ರವರಾಂಗನಾ |
ಭಗಿನೀಂ ಚೋದಯಾಮಾಸ ಪುಷ್ಪಾರ್ಥೇ ಚಾರುಲೋಚನಾ ॥10॥
ಆ ಪುಷ್ಪಗಳನ್ನು ನೋಡಿದ ಚಾರುನೇತ್ರೆಯಾದ ಅಂಗರಾಜನ ಪತ್ನಿಯು ತನ್ನ ತಂಗಿಗೆ ಆ ಪುಷ್ಪಗಳ ಸಲುವಾಗಿ ಒತ್ತಾಯ ಮಾಡಿದಳು.

ಸಾ ಭರ್ತ್ರೇ ಸರ್ವಮಾಚಷ್ಟ ರುಚಿಃ ಸುರುಚಿರಾನನಾ |
ಭಗಿನ್ಯಾ ಭಾಷಿತಂ ಸರ್ವಮೃಷಿಸ್ತಚ್ಚಾಭ್ಯನಂದತ ॥11॥
ಸುಂದರಮುಖಿಯಾದ ರುಚಿಯು ತನ್ನ ಅಕ್ಕನು ಹೇಳಿದ ಎಲ್ಲ ವಿಷಯವನ್ನೂ ಪತಿಗೆ ತಿಳಿಸಿದಳು. ಪತಿಯಾದ ದೇವಶರ್ಮನು ಅದನ್ನು ಅಭಿನಂದಿಸಿದನು.
ತತೋ ವಿಪುಲಮಾನಾಯ್ಯ ದೇವಶರ್ಮಾ ಮಹಾತಪಾಃ |
ಪುಷ್ಪಾರ್ಥೇ ಚೋದಯಾಮಾಸ ಗಚ್ಛ ಗಚ್ಛೇತಿ ಭಾರತ ॥12॥

ಎಲೈ ಭಾರತನೇ, ಆಗ ಮಹಾತಪಸ್ವಿಯಾದ ದೇವಶರ್ಮನು ವಿಪುಲನನ್ನು ಕರೆಸಿ ಪುಷ್ಪಗಳನ್ನು ತರುವಂತೆ ಒತ್ತಾಯ ಮಾಡಿ ಹೋಗು ಹೋಗು ಎಂದು ಕಳುಹಿಸಿದನು.
ವಿಪುಲಸ್ತು ಗುರೋರ್ವಾಕ್ಯಮವಿಚಾರ್ಯ ಮಹಾತಪಾಃ |
ಸ ತಥೇತ್ಯಬ್ರುವೀದ್ ರಾಜಂಸ್ತಂ ಚ ದೇಶಂ ಜಗಾಮ ಹ ॥13॥
ಎಲೈ ರಾಜನೇ, ಮಹಾತಪಸ್ವಿಯಾದ ವಿಪುಲನಾದರೂ ಗುರುಗಳ ವಾಕ್ಯವನ್ನು ಕೇಳಿ ವಿಚಾರ ಮಾಡದೆ ಹಾಗೆಯೇ ಆಗಲಿ ಎಂದು ಹೇಳಿ ಆ ಪ್ರದೇಶಕ್ಕೆ ಹೋದನು.
ಯಸ್ಮಿನ್ ದೇಶೇ ತು ತಾನ್ಯಾಸನ್ ಪತಿತಾನಿ ನಭಸ್ತಳಾತ್ |
ಅಮ್ಲಾನಾನ್ಯಪಿ ತತ್ರಾಸನ್ ಕುಸುಮಾನ್ಯಪರಾಣ್ಯಪಿ ॥14॥
ಯಾವ ಪ್ರದೇಶದಲ್ಲಿ ಆಕಾಶದಿಂದ ಆ ಪುಷ್ಪಗಳು ಬಿದ್ದಿದ್ದವೋ ಅಲ್ಲಿ ಬಾಡದಿದ್ದ ಅಂತಹ ಬೇರೆ ಪುಷ್ಪಗಳೂ ಬಿದ್ದಿದ್ದವು.
ತತಃ ಸ ತಾನಿ ಜಗ್ರಾಹ ದಿವ್ಯಾನಿ ರುಚಿರಾಣಿ ಚ |
ಪ್ರಾಪ್ತಾನಿ ಸ್ವೇನ ತಪಸಾ ದಿವ್ಯಗಂಧಾನಿ ಭಾರತ ॥15॥
ಎಲೈ ಭಾರತನೇ, ಅವನು ತನ್ನ ತಪಸ್ಸಿನಿಂದ ಪ್ರಾಪ್ತವಾದ ಆ ದಿವ್ಯವೂ ಮನೋಹರವೂ ಆದ ಪುಷ್ಪಗಳನ್ನು ತೆಗೆದುಕೊಂಡನು.
ಸಂಪ್ರಾಪ್ಯ ತಾನಿ ಪ್ರೀತಾತ್ಮಾ ಗುರೋರ್ವಚನಕಾರಕಃ |
ತತೋ ಜಗಾಮ ತೂರ್ಣಂ ಚ ಚಂಪಾಂ ಚಂಪಕಮಾಲಿನೀಮ್ ॥16॥
ಗುರುಗಳ ವಚನವನ್ನು ನಡೆಸುವ ಅವನು ಸಂತೋಷಗೊಂಡು ಆ ಪುಷ್ಪಗಳನ್ನು ತೆಗೆದುಕೊಂಡು ಶೀಘ್ರವಾಗಿ ಚಂಪಕಮಾಲೆಯನ್ನು ಹೊಂದಿದ ಚಂಪಾಪುರಿಗೆ (ಅಂಗದೇಶದ ರಾಜಧಾನಿಗೆ) ಹೊರಟನು.
ಸ ವನೇ ವಿಜನೇ ತಾತ ದದರ್ಶ ಮಿಥುನಂ ನೃಣಾಮ್ |
ಚಕ್ರವತ್ಪರಿವರ್ತಂತಂ ಗೃಹೀತ್ವಾ ಪಾಣಿನಾ ಕರಮ್ ॥17॥
ಎಲೈ ಪ್ರೀತಿಪಾತ್ರನೇ, ಅವನು ನಿರ್ಜನವಾದ ಕಾಡಿನಲ್ಲಿ ಹೋಗುತ್ತಾ ಇಬ್ಬರು ಪುರುಷರನ್ನು ನೋಡಿದನು. ಅವರು ಕೈಗಳಿಂದ ಕೈಗಳನ್ನು ಹಿಡಿದುಕೊಂಡು ಚಕ್ರದಂತೆ ಸುತ್ತುತ್ತಿದ್ದರು.
ತತ್ರೈಕಸ್ತೂರ್ಣಮಗಮತ್ ತತ್ಪದೇ ಪರಿವರ್ತಯನ್ |
ಏಕಸ್ತು ನ ತಥಾ ರಾಜಂಶ್ಚಕ್ರತುಃ ಕಲಹಂ ತತಃ ॥18॥
ಅವರಲ್ಲಿ ಒಬ್ಬನು ಪಾದಗಳಲ್ಲಿ ತಿರುಗುತ್ತಾ ಶೀಘ್ರವಾಗಿ ತಿರುಗುತ್ತಿದ್ದನು. ಎಲೈ ರಾಜನೇ, ಇನ್ನೊಬ್ಬನು ಮಂದಗತಿಯಲ್ಲಿ ತಿರುಗುತ್ತಿದ್ದನು. ಅನಂತರ ಅವರು ಕಲಹವನ್ನು ಮಾಡಿದರು.
ತ್ವಂ ಶೀಘ್ರಂ ಗಚ್ಛಸೀತ್ಯೇಕೋಽಬ್ರವೀನ್ನೇತಿ ತಥಾಪರಃ |
ನೇತಿ ನೇತಿ ಚ ತೌ ತಾತ ಪರಸ್ಪರಮಥೋಚತುಃ ॥19॥
ನೀನು ಶೀಘ್ರವಾಗಿ ಹೋಗುತ್ತಿದ್ದೀಯೆ ಎಂದು ಒಬ್ಬನು ಹೇಳಿದನು. ಇನ್ನೊಬ್ಬನು ಇಲ್ಲ ಎಂದು ಹೇಳಿದನು. ಎಲೈ ಪ್ರೀತಿಪಾತ್ರನೇ, ನೀನು ಹೇಳುವುದು ಸುಳ್ಳು, ನೀನು ಹೇಳುವುದು ಸುಳ್ಳು ಎಂದು ಅವರು ಪರಸ್ಪರವಾಗಿ ಹೇಳಿಕೊಂಡರು.
ತಯೋರ್ವಿಸ್ಪರ್ಧತೋರೇವಂ ಶಪಥೋಽಯಮಭೂತ್ ತದಾ |
ಮನಸೋದ್ದಿಶ್ಯ ವಿಪುಲಂ ತತೋ ವಾಕ್ಯಮಥೋಚತುಃ ॥20॥
ಅವರು ಹೀಗೆ ಸ್ಪರ್ಧೆಯನ್ನು ಮಾಡುತ್ತಿದ್ದಾಗ ಒಂದು ಶಪಥವನ್ನು ಮಾಡಿದರು. ಮನಸ್ಸಿನಿಂದ ವಿಪುಲನನ್ನು ಉದ್ದೇಶಿಸಿ ಈ ವಾಕ್ಯವನ್ನು ಹೇಳಿದರು.
ಆವಯೋರನೃತಂ ಪ್ರಾಹ ಯಸ್ತಸ್ಯಾಥ ದ್ವಿಜಸ್ಯ ವೈ |
ವಿಪುಲಸ್ಯ ಪರೇ ಲೋಕೇ ಯಾ ಗತಿಃ ಸಾ ಭವೇದಿತಿ ॥21॥
ನಮ್ಮಿಬ್ಬರಲ್ಲಿ ಯಾರು ಅನೃತವನ್ನು ನುಡಿಯುತ್ತಾರೆಯೋ ಅವನಿಗೆ ಬ್ರಾಹ್ಮಣನಾದ ವಿಪುಲನಿಗೆ ಯಾವ ಗತಿಯು ಆಗುತ್ತದೆಯೋ ಅಂತಹ ಗತಿಯು ಆಗಲಿ (ಎಂದು ಹೇಳಿದರು).
ಏತಚ್ಛ್ರುತ್ವಾ ತು ವಿಪುಲೋ ವಿಷಣ್ಣವದನೋಽಭವತ್ |
ಏವಂ ತೀವ್ರತಪಾಶ್ಚಾಹಂ ಕಷ್ಟಶ್ಚಾಯಂ ಪರಿಶ್ರಮಃ ॥22॥
ಮಿಥುನಸ್ಯಾಸ್ಯ ಕಿಂ ಮೇ ಸ್ಯಾತ್ಕೃತಂ ಪಾಪಂ ಯತೋ ಗತಿಃ |
ಅನಿಷ್ಟಾ ಸರ್ವಭೂತಾನಾಂ ಕೀರ್ತಿತಾಽನೇನ ಮೇಽದ್ಯ ವೈ ॥23॥
ಇದನ್ನು ಕೇಳಿದ ವಿಪುಲನು ವಿಷಣ್ಣವದನನಾದನು. ಇಂತಹ ತೀವ್ರ ತಪಸ್ಸನ್ನು ಮಾಡಿದ ನನಗೆ ನನ್ನ ಪರಿಶ್ರಮವೆಲ್ಲವೂ ವ್ಯರ್ಥವಾಯಿತು. ನನಗೆ ಅನಿಷ್ಟಗತಿಯಾಗಲೆಂದು ಹೇಳುವಂತಿದೆ. ಈ ಮಿಥುನಕ್ಕಾದರೂ (ಪುರುಷ ಜೋಡಿಗಾದರೂ) ನಾನು ಯಾವ ಅಪರಾಧವನ್ನು ಮಾಡಿದ್ದೇನೆ?
ಏವಂ ಸಂಚಿಂತಯನ್ನೇವ ವಿಪುಲೋ ರಾಜಸತ್ತಮ |
ಅವಾಙ್ಮುಖೋ ನ್ಯಸ್ತಶಿರಾ ದಧ್ಯೌ ದುಷ್ಕೃತಮಾತ್ಮನಃ ॥24॥
ಎಲೈ ರಾಜಶ್ರೇಷ್ಠನೇ, ಹೀಗೆ ಚಿಂತಿಸುತ್ತಲೇ ತಲೆಯನ್ನೂ, ಮುಖವನ್ನೂ ಕೆಳಗೆ ಮಾಡಿ ತನ್ನ ಪಾಪವನ್ನು ಕುರಿತು ಚಿಂತಿಸಿದನು.
ತತಃ ಷಡನ್ಯಾನ್ ಪುರುಷಾನಕ್ಷೈಃ ಕಾಂಚನರಾಜತೈಃ |
ಅಪಶ್ಯದ್ ದೀವ್ಯಮಾನಾನ್ ವೈ ಲೋಭಹರ್ಷಾನ್ವಿತಾಂಸ್ತಥಾ ॥25॥
ಆಗ ಅವನು ಚಿನ್ನದ ಮತ್ತು ಬೆಳ್ಳಿಯ ದಾಳಗಳಿಂದ ಲೋಭ ಮತ್ತು ಕೋಪಗಳಿಂದ ಕೂಡಿದವರಾಗಿ ಪಗಡೆಯಾಡುತ್ತಿದ್ದ ಬೇರೆ ಆರು ಪುರುಷರನ್ನು ನೋಡಿದನು.

ಕುರ್ವತಃ ಶಪಥಂ ತಂ ವೈ ಯಃ ಕೃತೋ ಮಿಥುನೇನ ವೈ |
ವಿಪುಲಂ ವೈ ಸಮುದ್ದಿಶ್ಯ ತೇಽಪಿ ವಾಕ್ಯಮಥಾಬ್ರುವನ್ ॥26॥
ಆ ಮಿಥುನರು ಮಾಡಿದಂತೆ ಶಪಥವನ್ನು ಮಾಡುತ್ತಿದ್ದ ಆ ಆರು ಪುರುಷರನ್ನು ಅವನು ನೋಡಿದನು. ಅವರೂ ಸಹ ವಿಪುಲನನ್ನು ಉದ್ದೇಶಿಸಿ ಈ ವಾಕ್ಯವನ್ನು ಹೇಳಿದರು.
ಯೋ ಲೋಭಮಾಸ್ಥಾಯಾಸ್ಮಾಕಂ ವಿಷಮಂ ಕರ್ತುಮುತ್ಸಹೇತ್ |
ವಿಪುಲಸ್ಯ ಪರೇ ಲೋಕೇ ಯಾ ಗತಿಸ್ತಾಮವಾಪ್ನುಯಾತ್ ॥27॥
ನಮ್ಮಲ್ಲಿ ಯಾವನು ಲೋಭದಿಂದ ಮೋಸದಿಂದ ಆಡುತ್ತಾನೆಯೋ ಅವನಿಗೆ ವಿಪುಲನಿಗೆ ಪರಲೋಕದಲ್ಲಿ ಯಾವ ಗತಿಯಾಗುತ್ತದೆಯೋ ಅಂತಹ ಗತಿಯಾಗಲಿ (ಎಂದು ಹೇಳಿದರು).
ಏತಚ್ಛ್ರುತ್ವಾ ತು ವಿಪುಲೋ ನಾಪಶ್ಯದ್ ಧರ್ಮಸಂಕರಮ್ |
ಜನ್ಮಪ್ರಭೃತಿ ಕೌರವ್ಯ ಕೃತಪೂರ್ವಮಥಾತ್ಮನಃ ॥28॥
ಎಲೈ ಕೌರವ್ಯನೇ, ಈ ಮಾತನ್ನು ಕೇಳಿದ ವಿಪುಲನು ಹುಟ್ಟಿದಾಗಿನಿಂದ ತಾನು ಮಾಡಿದ ಯಾವ ಧರ್ಮದ ಅಪಚಾರವನ್ನೂ ಕಾಣಲಿಲ್ಲ.
ಸ ಪ್ರದಧ್ಯೌ ತದಾ ರಾಜನ್ನಗ್ನಾವಗ್ನಿರಿವಾಹಿತಃ |
ದಹ್ಯಮಾನೇನ ಮನಸಾ ಶಾಪಂ ಶ್ರುತ್ವಾ ತಥಾವಿಧಮ್ ॥29॥
ಎಲೈ ರಾಜನೇ, ಮೊದಲಿನ ಮಾತಿನ ಜೊತೆಯಲ್ಲಿ ಈ ಮಾತು ಬೆರೆತು ಅಗ್ನಿಯಲ್ಲಿ ಹಾಕಿದ ಅಗ್ನಿಯಂತೆ ಮನಸ್ಸಿನಲ್ಲಿ ಬೇಯುತ್ತಾ ಅಂತಹ ಶಾಪವನ್ನು ಕುರಿತು ಅವನು ಬಹಳವಾಗಿ ಚಿಂತಿಸಿದನು.
ತಸ್ಯ ಚಿಂತಯತಸ್ತಾತ ಬಹ್ವ್ಯೋ ದಿನನಿಶಾ ಯಯುಃ |
ಇದಮಾಸೀನ್ಮನಸಿ ಚ ರುಚ್ಯಾ ರಕ್ಷಣಕಾರಿತಮ್ ॥30॥
ಎಲೈ ಪ್ರೀತಿಪಾತ್ರನೇ, ಆ ರೀತಿಯಲ್ಲಿ ಚಿಂತಿಸುತ್ತಿದ್ದ ಅವನಿಗೆ ಬಹಳ ಹಗಲು- ರಾತ್ರಿಗಳು ಕಳೆದುಹೋದವು. ಕೊನೆಗೆ ಅವನ ಮನಸ್ಸಿನಲ್ಲಿ ರುಚಿಯ ರಕ್ಷಣೆಗಾಗಿ ತಾನು ಮಾಡಿದ ಕಾರ್ಯವು ಸ್ಮರಣೆಗೆ ಬಂದಿತು.
ಲಕ್ಷಣಂ ಲಕ್ಷಣೇನೈವ ವದನಂ ವದನೇನ ಚ |
ವಿಧಾಯ ನ ಮಯಾ ಚೋಕ್ತಂ ಸತ್ಯಮೇತದ್ ಗುರೋಸ್ತದಾ ॥31॥
ನಾನು ರುಚಿಯ ಮುಖಕ್ಕೆ ಮುಖವನ್ನು ಜೋಡಿಸಿ, ಅಂಗಗಳಿಗೆ ಅಂಗಗಳನ್ನು ಸಂಯೋಜಿಸಿ ಸತ್ಯವಾದ ಈ ಕಾರ್ಯವನ್ನು ಗುರುಗಳಿಗೆ ಹೇಳಲಿಲ್ಲ (ಎಂದು ಚಿಂತಿಸಿದನು).
ಏತದಾತ್ಮನಿ ಕೌರವ್ಯ ದುಷ್ಕೃತಂ ವಿಪುಲಸ್ತದಾ |
ಅಮನ್ಯತ ಮಹಾಭಾಗ ತಥಾ ತಚ್ಚ ನ ಸಂಶಯಃ ॥32॥
ಎಲೈ ಕೌರವ್ಯನೇ, ಮಹಾನುಭಾವನಾದ ವಿಪುಲನು ತಾನು ಮಾಡಿದ ಈ ಒಂದು ಕಾರ್ಯವು ತನ್ನ ದುಷ್ಕೃತವೆಂದು ತಿಳಿದನು. ಅದು ಹಾಗೆಯೇ ಸರಿ, ಅದರಲ್ಲಿ ಸಂಶಯವಿಲ್ಲ.
ಸ ಚಂಪಾಂ ನಗರೀಮೇತ್ಯ ಪುಷ್ಪಾಣಿ ಗುರವೇ ದದೌ |
ಪೂಜಯಾಮಾಸ ಚ ಗುರುಂ ವಿಧಿವತ್ ಸ ಗುರುಪ್ರಿಯಃ ॥33॥
ಗುರುಪ್ರಿಯನಾದ ಅವನು ಚಂಪಾನಗರಕ್ಕೆ ಬಂದು ಗುರುಗಳಿಗೆ ಪುಷ್ಪವನ್ನು ಕೊಟ್ಟನು. ಗುರುಗಳಾದರೂ ಅವನನ್ನು ವಿಧಿಗೆ ಅನುಗುಣವಾಗಿ ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ವಿಪುಲಸ್ಯ ಸ್ವದುಷ್ಕೃತಸ್ಮರಣಂ
ನಾಮ ದ್ವಾಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ಮೂರನೆಯ ಅಧ್ಯಾಯ
ವಿಪುಲನಿಗೆ ಗುರುಗಳ ಅನುಗ್ರಹ
ಭೀಷ್ಮಃ
ತಮಾಗತಮಭಿಪ್ರೇಕ್ಷ್ಯ ಶಿಷ್ಯಂ ವಾಕ್ಯಮಥಾಬ್ರವೀತ್ |
ದೇವಶರ್ಮಾ ಮಹಾತೇಜಾ ಯತ್ತಚ್ಛೃಣು ನರಾಧಿಪ ॥1॥
ಭೀಷ್ಮ ಎಲೈ ನರಾಧಿಪನೇ, ಮಹಾತೇಜಸ್ವಿಯಾದ ದೇವಶರ್ಮನು ಹಿಂದಿರುಗಿದ ಶಿಷ್ಯನನ್ನು ನೋಡಿ ಏನು ಮಾತನಾಡಿದನೆಂಬುದನ್ನು ಕೇಳು.
ದೇವಶರ್ಮಾ
ಕಿಂ ತೇ ವಿಪುಲ ದೃಷ್ಟಂ ವೈ ತಸ್ಮಿನ್ನದ್ಯ ಮಹಾವನೇ |
ತೇ ತ್ವಾಂ ಜಾನಂತಿ ನಿಪುಣಂ ಆತ್ಮಾ ಚ ರುಚಿರೇವ ಚ ॥2॥
ದೇವಶರ್ಮ ಎಲೈ ವಿಪುಲನೇ, ಆ ದೊಡ್ಡ ಕಾಡಿನಲ್ಲಿ ನೀನು ಈ ದಿನ ಏನನ್ನು ನೋಡಿದೆ? ಅವರು ನಿನ್ನನ್ನು ಚೆನ್ನಾಗಿ ತಿಳಿದಿದ್ದಾರೆ. ನಾನು ಮತ್ತು ರುಚಿಯೂ ಸಹ ನಿನ್ನನ್ನು ಚೆನ್ನಾಗಿ ತಿಳಿದಿದ್ದೇವೆ.

ವಿಪುಲಃ
ಬ್ರಹ್ಮರ್ಷೇ ಮಿಥುನಂ ಕಿಂ ತತ್ಕೇ ಚ ತೇ ಪುರುಷಾ ವಿಭೋ |
ಯೇ ಮಾಂ ಜಾನಂತಿ ತತ್ತ್ವೇನ ತಾಂಶ್ಚ ಮೇ ವಕ್ತುಮರ್ಹಸಿ ॥3॥
ವಿಪುಲ ಬ್ರಹ್ಮರ್ಷಿಯೇ, ವಿಭುವೇ, ನಾನು ನೋಡಿದ ಇಬ್ಬರು ಪುರುಷರು ಯಾರು? ಅವರು ನನ್ನನ್ನು ಸರಿಯಾಗಿ ತಿಳಿದಿದ್ದಾರೆ. ಅವರನ್ನು ನನಗೆ ತಿಳಿಸಬೇಕು.
ದೇವಶರ್ಮಾ
ಯದ್ವೈ ತನ್ಮಿಥುನಂ ಬ್ರಹ್ಮನ್ನಹೋರಾತ್ರಂ ಹಿ ವಿದ್ಧಿ ತತ್ |
ಚಕ್ರವತ್ಪರಿವರ್ತೇತ ತತ್ತೇ ಜಾನಾತಿ ದುಷ್ಕೃತಮ್ ॥4॥
ದೇವಶರ್ಮ ಎಲೈ ಬ್ರಾಹ್ಮಣನೇ, ನೀನು ನೋಡಿದ ಪುರುಷಜೋಡಿಯನ್ನು ಹಗಲು ಮತ್ತು ರಾತ್ರಿ ಎಂದು ತಿಳಿ. ಅವು ಚಕ್ರದಂತೆ ತಿರುಗುತ್ತವೆ. ಆ ಮಿಥುನವು ನಿನ್ನ ದುಷ್ಕರ್ಮವನ್ನು ತಿಳಿದಿದೆ.
ಯೇ ಚ ತೇ ಪುರುಷಾ ವಿಪ್ರ ಅಕ್ಷೈರ್ದೀವ್ಯಂತಿ ಹೃಷ್ಟವತ್ |
ಋತೂಂಸ್ತಾನಭಿಜಾನೀಹಿ ತೇ ತೇ ಜಾನಂತಿ ದುಷ್ಕೃತಮ್ ॥5॥
ಎಲೈ ಬ್ರಾಹ್ಮಣನೇ, ಸಂತೋಷದಿಂದ ಪಗಡೆಯಾಡುತ್ತಿದ್ದ ಆ ಪುರುಷರನ್ನು ಋತುಗಳೆಂದು ತಿಳಿ. ಅವರೂ ಸಹ ನಿನ್ನ ದುಷ್ಕರ್ಮವನ್ನು ತಿಳಿದಿದ್ದಾರೆ.
ನ ಮಾಂ ಕಶ್ಚಿದ್ ವಿಜಾನೀತ ಇತಿ ಕೃತ್ವಾ ನ ವಿಶ್ವಸೇತ್ |
ನರೋ ರಹಸಿ ಪಾಪಾತ್ಮಾ ಪಾಪಕಂ ಕರ್ಮ ವೈ ದ್ವಿಜ ॥6॥
ಎಲೈ ಬ್ರಾಹ್ಮಣನೇ, ಪಾಪಾತ್ಮನಾದ ಮನುಷ್ಯನು ರಹಸ್ಯವಾಗಿ ಪಾಪಕರ್ಮವನ್ನು ಮಾಡಿ ನನ್ನನ್ನು (ನನ್ನ ದುಷ್ಕರ್ಮವನ್ನು) ಯಾರೂ ನೋಡುತ್ತಿಲ್ಲ ಎಂದು ತಿಳಿಯಬಾರದು.
ಕುರ್ವಾಣಂ ಹಿ ನರಂ ಕರ್ಮ ಪಾಪಂ ರಹಸಿ ಸರ್ವದಾ |
ಪಶ್ಯಂತಿ ಋತವಶ್ಚಾಪಿ ತಥಾ ದಿನನಿಶೇಪ್ಯುತ ॥7॥
ಏಕಾಂತದಲ್ಲಿ ಪಾಪಕರ್ಮವನ್ನು ಮಾಡುವ ಪುರುಷನ ಪಾಪಕರ್ಮವನ್ನು ಋತುಗಳು ಮತ್ತು ಹಗಲು-ರಾತ್ರಿಗಳು ಯಾವಾಗಲೂ ನೋಡುತ್ತವೆ.
ತೇ ತ್ವಾಂ ಹರ್ಷಸ್ಮಿತಂ ದೃಷ್ಟ್ವಾ ಗುರೋಃ ಕರ್ಮಾನಿವೇದಕಮ್ |
ಸ್ಮಾರಯಂತಸ್ತಥಾ ಪ್ರಾಹುಸ್ತೇ ಯಥಾ ಶ್ರುತವಾನ್ ಭವಾನ್ ॥8॥
ಅವರು ಗುರುಗಳಿಗೆ ನೀನು ಮಾಡಿದ ಕಾರ್ಯವನ್ನು ಪೂರ್ಣವಾಗಿ ಹೇಳದೆ ಸಂತೋಷದಿಂದ ಇರುವುದನ್ನು ನೋಡಿ ನಿನಗೆ ನಿನ್ನ ಕರ್ಮವನ್ನು ಸ್ಮರಣೆಗೆ ತರುತ್ತಾ ನೀನು ಕೇಳಿದಂತೆ ಮಾತನಾಡಿದ್ದಾರೆ.
ಅಹೋರಾತ್ರಂ ವಿಜಾನಾತಿ ಋತವಶ್ಚಾಪಿ ನಿತ್ಯಶಃ |
ಪುರುಷೇ ಪಾಪಕಂ ಕರ್ಮ ಶುಭಂ ವಾ ಶುಭಕರ್ಮಣಃ ॥9॥
ಅಹೋರಾತ್ರಿಗಳು ಮತ್ತು ಋತುಗಳು ಪುರುಷನು ಮಾಡುವ ಪಾಪಕರ್ಮವನ್ನಾಗಲೀ ಅಥವಾ ಶುಭ ಪುರುಷನು ಮಾಡುವ ಶುಭಕರ್ಮವನ್ನಾಗಲೀ ಯಾವಾಗಲೂ ತಿಳಿದಿರುತ್ತಾರೆ.
ತತ್ತ್ವಯಾ ವೈ ತಥಾ ಕರ್ಮಮಭಿಚಾರಭಯಾತ್ಮಕಮ್ |
ನಾಖ್ಯಾತಮಿತಿ ಜಾನಂತಸ್ತೇ ತ್ವಾಮಾಹುಸ್ತಥಾ ದ್ವಿಜ ॥10॥
ನೀನು ಮಾಡಿದ ಆ ಕರ್ಮವನ್ನು ವ್ಯಭಿಚಾರದ ಶಂಕೆಯಿಂದ ನನಗೆ ಹೇಳಲಿಲ್ಲವೆಂದು ತಿಳಿದು ನಿನಗೆ ಹಾಗೆ ಹೇಳಿದರು.
ತೇ ಚೈವ ಹಿ ಭವೇಯುಸ್ತೇ ಲೋಕಾಃ ಪಾಪಕೃತೋ ಯಥಾ |
ಕೃತ್ವಾ ನಾಚಕ್ಷತಃ ಕರ್ಮ ಮಮ ಯಚ್ಚ ತ್ವಯಾ ಕೃತಮ್ ॥11॥
ನನಗೆ ನೀನು ಮಾಡಿದಂತೆ ಪಾಪಕರ್ಮವನ್ನು ಮಾಡಿ ಹೇಳದಿದ್ದವನಿಗೆ ಪಾಪಿಗಳಿಗೆ ದೊರೆಯುವ ಲೋಕಗಳೇ ದೊರೆಯುತ್ತವೆ.
ತಥಾಽಶಕ್ಯಾ ಚ ದುರ್ವೃತ್ತಾ ರಕ್ಷಿತುಂ ಪ್ರಮದಾ ದ್ವಿಜ |
ನ ಚ ತ್ವಂ ಕೃತವಾನ್ ಕಿಂಚಿದಾಗಃ ಪ್ರೀತೋಽಸ್ಮಿ ತೇನ ತೇ ॥12॥
ಎಲೈ ಬ್ರಾಹ್ಮಣನೇ, ದುರ್ನಡತೆಯುಳ್ಳ ಸ್ತ್ರೀಯರನ್ನು ನೀನು ಮಾಡಿದ ರೀತಿಯನ್ನು ಬಿಟ್ಟು ಬೇರೆ ರೀತಿಯಲ್ಲಿ ರಕ್ಷಿಸಲು ಸಾಧ್ಯವಿಲ್ಲ. ನೀನು ಯಾವ ಅಪರಾಧವನ್ನೂ ಮಾಡಿಲ್ಲ. ಆದ್ದರಿಂದ ನಾನು ನಿನಗೆ ಪ್ರಸನ್ನನಾಗಿದ್ದೇನೆ.
ಮನೋದೋಷವಿಹೀನಾನಾಂ ನ ದೋಷಃ ಸ್ಯಾತ್ ತಥಾ ತವ |
ಅನ್ಯಥಾಽಽಲಿಂಗ್ಯತೇ ಕಾಂತಾ ಸ್ನೇಹೇನ ದುಹಿತಾಽನ್ಯಥಾ ॥13॥
ಮನೋದೋಷವಿಲ್ಲದವರಿಗೆ ನಿನ್ನಂತೆ ಯಾವ ದೋಷವೂ ಬರುವುದಿಲ್ಲ. ಪತ್ನಿಯನ್ನು ಬೇರೆ ರೀತಿಯಲ್ಲಿ ಆಲಿಂಗಿಸುತ್ತಾನೆ. ಮಗಳನ್ನು ಬೇರೆ ರೀತಿಯಲ್ಲಿ ಆಲಿಂಗಿಸುತ್ತಾನೆ.
ಯತೇಶ್ಚ ಕಾಮುಕಾನಾಂ ಚ ಯೋಷಿದ್ರೂಪೇಽನ್ಯಥಾ ಮತಿಃ |
ಅಶಿಕ್ಷಯೈವ ಮನಸಃ ಪ್ರಾಯೋ ಲೋಕಾಸ್ತು ವಂಚ್ಯತೇ ॥14॥
ಒಬ್ಬ ಹೆಂಗಸನ್ನು ನೋಡಿದರೆ ಸಂನ್ಯಾಸಿಗೆ ಬರುವ ಬುದ್ಧಿಯೇ ಬೇರೆ, ಕಾಮುಕನಿಗೆ ಬರುವ ಬುದ್ಧಿಯೇ ಬೇರೆ. ಮನಸ್ಸನ್ನು ನಿಯಂತ್ರಿಸದಿರುವುದರಿಂದ ಜನರು ಹೆಚ್ಚಾಗಿ ವಂಚನೆಗೀಡಾಗುತ್ತಾರೆ (ದುಃಖವನ್ನು ಅನುಭವಿಸುತ್ತಾರೆ).
ಲಾಲೇತ್ಯುದ್ವಿಜತೇ ಲೋಕೋ ವಕ್ಷತ್ರಸವ ಇತಿ ಸ್ಪೃಹಾ |
ಅಬಂಧಾಯೋಗ್ಯಮನಸಾಮಿತಿ ಮಂತ್ರಾತ್ರಾತ್ಮದೈವಕಮ್ ॥15॥

ಜೊಲ್ಲು ಎಂದರೆ ಅಸಹ್ಯವಾಗುತ್ತದೆ. ಅದೇ ವಸ್ತುವನ್ನು ವಕತತ್ರಸವ ಎಂದು ಹೇಳಿದರೆ ಆಸೆಯುಂಟಾಗುತ್ತದೆ (ಇದು ಮನೋದೋಷ). ಹಿಡಿತವಿಲ್ಲದ ಅಯೋಗ್ಯವಾದ ಮನಸ್ಸುಳ್ಳವರಿಗೆ ಮಂತ್ರಗಳು ದೇವತೆಗಳು ಹೀಗೆಯೇ (ಒಳ್ಳೆಯ ಫಲವನ್ನು ಕೊಡುವುದಿಲ್ಲ).

ನ ರಾಗಸ್ನೇಹಲೋಭಾಂಧಂ ಕರ್ಮಿಣಾಂ ತನ್ಮಹಾಫಲಮ್ |
ನಿಷ್ಕಷಾಯೋ ವಿಶುದ್ಧಸ್ತ್ವಂ ರುಚ್ಯಾವೇಶಾನ್ನ ದೂಷಿತಃ ||16||

ರಾಗ, ಸ್ನೇಹ ಮತ್ತು ಲೊಭಗಳಿಂದ ಕುರುಡರಾಗಿ ಕರ್ಮವನ್ನು ಮಾಡುವವರಿಗೆ ಆ ಕರ್ಮಗಳು ಮಹಾಫಲವನ್ನು ಕೊಡುವುದಿಲ್ಲ. ನೀನು ನಿರ್ದುಷ್ಟನಾಗಿದ್ದೀಯೆ. ವಿಶುದ್ಧನಾಗಿದ್ದೀಯೆ. ರುಚಿಯನ್ನು ಪ್ರವೇಶ ಮಾಡಿದುದರಿಂದ ನಿನಗೆ ಯಾವ ದೋಷಗಳೂ ಉಂಟಾಗಲಿಲ್ಲ.

ಯದಿ ತ್ವಹಂ ತ್ವಾಂ ದುರ್ವೃತ್ತಮದ್ರಾಕ್ಷಂ ದ್ವಿಜಸತ್ತಮ |
ಶಪೇಯಂ ತ್ವಾಮಹಂ ಕ್ರೋಧಾನ್ನ ಮೇಽತ್ರಾಸ್ತಿ ವಿಚಾರಣಾ ||17||

ಎಲೈ ದ್ವಿಜಶ್ರೇಷ್ಠನೇ, ನೀನು ದುರ್ನಡತೆಯುಳ್ಳವನೆಂದು ನಾನು ಗಮನಿಸಿದ್ದರೆ ಕ್ರೋಧದಿಂದ ನಿನಗೆ ಶಾಪವನ್ನು ಕೊಡುತ್ತಿದ್ದೆ. ಈ ವಿಷಯದಲ್ಲಿ ಸಂಶಯವಿಲ್ಲ.

ಸಜ್ಜಂತಿ ಪುರುಷೇ ನಾರ್ಯಃ ಪುಂಸಾಂ ಸೋಽರ್ಥಶ್ಚ ಪುಷ್ಕಲಃ |
ಅನ್ಯಥಾ ರಕ್ಷತಃ ಶಾಪೋಽಭವಿಷ್ಯತ್ತೇ ಗತಿಶ್ಚ ಸಾ ||18||
ರಕ್ಷಿತಾ ಸಾ ತ್ವಯಾ ಪುತ್ರ ಮಮ ಚಾಪಿ ನಿವೇದಿತಾ |
ಅಹಂ ತೇ ಪ್ರೀತಿಮಾಂಸ್ತಾತ ಸ್ವಸ್ತಿ ಸ್ವರ್ಗಂ ಗಮಿಷ್ಯಸಿ ||19||

ನಾರಿಯರು ಪುರುಷರಲ್ಲಿ ಆಸಕ್ತರಾಗುತ್ತಾರೆ. ಪುರುಷರಿಗೆ ಅದು ಬಹಳವಾಗಿ ಅಪೇಕ್ಷಿತವಾದ ವಿಷಯ. ನನಗೆ ನೀನು ನಿವೇದಿಸಿದ್ದೀಯೆ. ಪ್ರೀತಿಪಾತ್ರನೇ, ನಾನು ನಿನ್ನಲ್ಲಿ ಪ್ರೀತಿಯುಳ್ಳವನಾಗಿದ್ದೇನೆ. ನಿನಗೆ ಶುಭವಾಗಲಿ, ನೀನು ಸ್ವರ್ಗಕ್ಕೆ ಹೋಗುವಿ (ಎಂದು ಹೇಳಿದರು).

ಭೀಷ್ಮಃ

ಇತ್ಯುಕತ್ವ ವಿಪುಲಂ ಪ್ರೀತೋ ದೇವಶರ್ಮಾ ಮಹಾನೃಷಿಃ |
ಮುಮೋದ ಸ್ವರ್ಗಮಾಸ್ಥಾಯ ಸಹಭಾರ್ಯಃ ಸಶಿಷ್ಯಕಃ ||20||

ಭೀಷ್ಮ ಆ ಮಹಾಋಷಿಯಾದ ದೇವಶರ್ಮರು ವಿಪುಲನಿಗೆ ಈ ರೀತಿ ಸಂತೋಷದಿಂದ ಹೇಳಿ ಸ್ವರ್ಗಕ್ಕೆ ಹೋಗಿ ಪತ್ನಿ ಮತ್ತು ಶಿಷ್ಯರ ಜೊತೆಯಲ್ಲಿ ಸುಖವಾಗಿದ್ದನು.

ಇದಮಾಖ್ಯಾತವಾಂಶ್ಚಾಪಿ ಮಮಾಖ್ಯಾನಂ ಮಹಾಮುನಿಃ |
ಮಾರ್ಕಂಡೇಯಃ ಪುರಾ ರಾಜನ್ ಗಂಗಾಕೂಲೇ ಕಥಾಂತರೇ ||21||

ಎಲೈ ರಾಜನೇ, ಹಿಂದೆ ಇದನ್ನು ಗಂಗಾತೀರದಲ್ಲಿ ಬೇರೆ ಕಥೆಗಳ ಮಧ್ಯದಲ್ಲಿ ಮಹರ್ಷಿಗಳಾದ ಮಾರ್ಕಂಡೇಯರು ನನಗೆ ಹೇಳಿದರು.

ತಸ್ಮಾದ್ ಬ್ರವೀಮಿ ಪಾರ್ಥ ತ್ವಾಂ ಸ್ತ್ರಿಯಃ ಸರ್ವಾಃ ಸದೈವ ಚ |
ಉಭಯಂ ದೃಶ್ಯತೇ ತಾಸು ಸತತಂ ಸಾಧ್ವಸಾಧು ಚ||22||

ಎಲೈ ಪಾರ್ಥನೇ, ಆದ್ದರಿಂದ ನಾನು ನಿನಗೆ ಹೇಳುತ್ತಿದ್ದೇನೆ. ಸ್ತ್ರೀಯರಲ್ಲಿ ಯಾವಾಗಲೂ ಒಳ್ಳೆಯದು ಮತ್ತು ಕೆಟ್ಟದು ಎರಡೂ ಕಂಡುಬರುತ್ತವೆ.

ಸ್ತ್ರಿಯಃ ಸಾಧ್ವ್ಯೋ ಮಹಾಭಾಗಾಃ ಸಮ್ಮತಾ ಲೋಕಮಾತರಃ |
ಧಾರಯಂತಿ ಮಹೀಂ ರಾಜನ್ನಿಮಾಂ ಸವನಕಾನನಾಮ್ ||23||

ಮಹಾನುಭಾವೆಯರಾದ, ಸಾಧ್ವಿಯರಾದ ಸ್ತ್ರೀಯರು ಲೋಕಕ್ಕೆ ತಾಯಿಯರು ಮತ್ತು ಪೂಜ್ಯರು. ಎಲೈ ರಾಜನೇ, ಅವರೇ ವನ-ಕಾನನ ಸಹಿತವಾದ ಈ ಭೂಮಿಯನ್ನು ಧರಿಸಿರುತ್ತಾರೆ.

ಅಸಾಧ್ವ್ಯಶ್ಚಾಪಿ ದುರ್ವೃತ್ತಾಃ ಕುಲಘ್ನ್ಯಃ ಪಾಪನಿಶ್ಚಯಾಃ |
ವಿಜ್ಞೇಯಾ ಲಕ್ಷಣೈರ್ದುಷ್ಟೈಃ ಸ್ವಗಾತ್ರಸಹಜೈರ್ನೃಪ ||24||

ಅಸಾಧ್ವಿಯರಾದವರು ದುರ್ನಡತೆಯುಳ್ಳವರು, ಕುಲನಾಶಕರು ಮತ್ತು ಪಾಪನಿಶ್ಚಯವುಳ್ಳವರು. ಎಲೈ ರಾಜನೇ, ಅವರ ದೇಹದಲ್ಲಿ ಸಹಜವಾಗಿ ಇರುವ ದುಷ್ಟಲಕ್ಷಣಗಳಿಂದಲೇ ಅವರನ್ನು ತಿಳಿಯಬಹುದು.

ಏವಮೇತಾಸು ರಕ್ಷಾ ವೈ ಶಕ್ಯಾ ಕರ್ತುಂ ಮಹಾತ್ಮಭಿಃ |
ಅನ್ಯಥಾ ರಾಜಶಾರ್ದೂಲ ನ ಶಕ್ಯಾ ರಕ್ಷಿತುಂ ಸ್ತ್ರಿಯಃ ||25||

ವಿಪುಲನು ಮಾಡಿದ ರೀತಿಯಲ್ಲಿಯೇ ಮಹಾತ್ಮರಿಂದ ಸ್ತ್ರೀಯರ ರಕ್ಷಣೆಯನ್ನು ಮಾಡಲು ಸಾಧ್ಯ. ಎಲೈ ರಾಜಶಾರ್ದೂಲನೇ, ಬೇರೆ ರೀತಿಯಲ್ಲಿ ಅವರನ್ನು ರಕ್ಷಿಸುವುದಕ್ಕೆ ಸಾಧ್ಯವಿಲ್ಲ.

ಏತಾ ಹಿ ಮನುಜವ್ಯಾಘ್ರ ತೀಕ್ಷ್ಣಾಸ್ತೀಕ್ಷ್ಣಪರಾಕ್ರಮಾಃ |
ನಾಸಾಮಸ್ತಿ ಪ್ರಿಯೋ ನಾಮ ಮೈಥುನೇ ಸಂಗಮೇ ನೃಭಿಃ ||26||

ಎಲೈ ಮನುಜಶ್ರೇಷ್ಠನೇ, ಇವರು ಕ್ರೂರಿಗಳು ಮತ್ತು ಕ್ರೂರವಾದ ಪರಾಕ್ರಮ ಉಳ್ಳವರು. ಅವರಿಗೆ ಯಾವನೂ ಪ್ರಿಯನಲ್ಲ. ಮೈಥುನದಲ್ಲಿ ಸಂಗತನಾದ ಎಲ್ಲ ಪುರುಷನೂ ಪ್ರಿಯನಾಗುತ್ತಾನೆ.

ಏತಾಃ ಕೃತ್ಯಾಶ್ಚ ಕಾರ್ಯಾಶ್ಚ ಕೃತಾಶ್ಚ ಭರತರ್ಷಭ |
ನ ಚೈಕಸ್ಮಿನ್ ರಮಂತ್ಯೇತಾಃ ಪುರುಷೇ ಪಾಂಡುನಂದನ ||27||

ಎಲೈ ಭರತರ್ಷಭನೇ, ಅವರು ಪಿಶಾಚಿಗಳಂತೆ ಅಥವಾ ಮಾಟದ ಗೊಂಬೆಗಳಂತೆ, ಮಾಟದ ಕ್ರಿಯೆಗಳಂತೆ, ಮಾಟದ ಫಲದಂತೆ ಇರುತ್ತಾರೆ. ಎಲೈ ಪಾಂಡುನಂದನನೇ, ಅವರು ಒಬ್ಬ ಪುರುಷನಲ್ಲಿ ರಮಿಸಿ ತೃಪ್ತಿಯನ್ನು ಹೊಂದುವುದಿಲ್ಲ.

ನಾಸು ಸ್ನೇಹೋ ನೃಭಿಃ ಕಾರ್ಯಸ್ತಥೈವೇರ್ಷ್ಯಾ ಜನೇಶ್ವರ |
ಸ್ವೇದಮಾಸ್ಥಾಯ ಭುಂಜೀತ ಧರ್ಮಮಾಸ್ಥಾಯ ಚೈವ ಹಿ ॥28॥
ಎಲೈ ಜನೇಶ್ವರನೇ, ಅವರಲ್ಲಿ ಸ್ನೇಹವನ್ನು ಮಾಡಬಾರದು, ಹಾಗೆಯೇ ಅಸೂಯೆಯನ್ನೂ ಮಾಡಬಾರದು. ಬೆವರು ನಮಗೆ ಅಪ್ರಿಯವಾದರೂ ಅದನ್ನು ಬಿಟ್ಟಿರಲು ಸಾಧ್ಯವಿಲ್ಲದಂತೆ ಅವರನ್ನು ಧರ್ಮಕ್ಕೆ ಅನುಗುಣವಾಗಿ ಭೋಗಿಸಬೇಕು.
ವಿಹನ್ಯೇತಾನ್ಯಥಾ ಕುರ್ವನ್ ನರಃ ಕೌರವನಂದನ |
ಸರ್ವಥಾ ರಾಜಶಾರ್ದೂಲ ಯುಕ್ತಿಃ ಸರ್ವತ್ರ ಪೂಜ್ಯತೇ ॥29॥
ಎಲೈ ಕೌರವನಂದನನೇ, ಬೇರೆ ರೀತಿಯಲ್ಲಿ ನಡೆದುಕೊಳ್ಳುವ ಮನುಷ್ಯನು ವಿನಾಶವನ್ನು ಹೊಂದಿಯಾನು! ಎಲೈ ರಾಜಶಾರ್ದೂಲನೇ, ವಿರಕ್ತಿಯು ಎಲ್ಲ ರೀತಿಯಿಂದಲೂ, ಎಲ್ಲ ಕಡೆಯಲ್ಲಿಯೂ ಪೂಜಿಸಲ್ಪಡುತ್ತದೆ.
ತೇನೈಕೇನ ತು ರಕ್ಷಾ ವೈ ವಿಪುಲೇನ ಕೃತಾ ಸ್ತ್ರಿಯಾಃ |
ನಾನ್ಯಃ ಶಕ್ತೋ ನೃಲೋಕೇಽಸ್ಮಿನ್ ರಕ್ಷಿತುಂ ನೃಪ ಯೋಷಿತಃ ॥30॥
ಆ ವಿಪುಲನೊಬ್ಬನು ಒಬ್ಬ ವನಿತೆಯ ರಕ್ಷಣೆಯನ್ನು ಮಾಡಿದನು. ಎಲೈ ರಾಜನೇ, ಬೇರೆಯವನು ಈ ಮನುಷ್ಯಲೋಕದಲ್ಲಿ ಸ್ತ್ರೀಯರನ್ನು ರಕ್ಷಿಸಲು ಸಮರ್ಥನಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ವಿಪುಲೋಪಾಖ್ಯಾನಂ ನಾಮ ತ್ರಿಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ನಾಲ್ಕನೆಯ ಅಧ್ಯಾಯ
ವಿವಾಹಧರ್ಮಗಳು- ಕನ್ಯಾದಾನ ನಿರ್ಣಯ.
ಯುಧಿಷ್ಠಿರಃ
ಯನ್ಮೂಲಂ ಸರ್ವಧರ್ಮಾಣಾಂ ಪ್ರಜನಸ್ಯ ಗೃಹಸ್ಯ ಚ |
ಪಿತೃದೇವಾತಿಥೀನಾಂ ಚ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಎಲ್ಲ ಧರ್ಮಗಳಿಗೂ, ಸಂತತಿಗೂ, ಗೃಹಕ್ಕೂ, ಪಿತೃ-ದೇವ-ಅತಿಥಿ(ಪೂಜೆ)ಗಳಿಗೂ ಮೂಲವಾದ ವಿಷಯವನ್ನು ನನಗೆ ಹೇಳಿ.
ಭೀಷ್ಮಃ
ಅಯಂ ಹಿ ಸರ್ವಧರ್ಮಾಣಾಂ ಧರ್ಮಶ್ಚಿಂತ್ಯತಮೋ ಮತಃ |
ಕೀದೃಶಾಯ ಪ್ರದೇಯಾ ಸ್ಯಾತ್ ಕನ್ಯೇತಿ ವಸುಧಾಧಿಪ ॥2॥
ಭೀಷ್ಮ ಎಲೈ ರಾಜನೇ, ಎಲ್ಲ ಧರ್ಮಗಳಲ್ಲಿ ಯಾರಿಗೆ ಕನ್ಯೆಯನ್ನು ಕೊಡಬೇಕೆಂದು ಚಿಂತಿಸುವುದು ಬಹಳವಾಗಿ ಚಿಂತಿಸಬೇಕಾದ ಒಂದು ಧರ್ಮ.
ಶೀಲವೃತ್ತೇ ಸಮಾಜ್ಞಾಯ ವಿದ್ಯಾಂ ಯೋನಿಂ ಚ ಕರ್ಮ ಚ |
ಅದ್ಭಿರೇವ ಪ್ರದಾತವ್ಯಾ ಕನ್ಯಾ ಗುಣವತೇ ವರೇ |
ಬ್ರಾಹ್ಮಣಾನಾಂ ಸತಾಮೇಷ ಧರ್ಮೋ ನಿತ್ಯಂ ಯುಧಿಷ್ಠಿರ ॥3॥
ವರನ ಶೀಲ-ವೃತ್ತಗಳನ್ನು, ವಿದ್ಯೆ, ಕುಲ ಮತ್ತು ಕರ್ಮಗಳನ್ನು ತಿಳಿದು ಗುಣವಂತನಾದ ಅಂತಹವನಿಗೆ ಧಾರಾಪೂರ್ವಕವಾಗಿ ಕನ್ಯೆಯನ್ನು ಕೊಡಬೇಕು. ಎಲೈ ಯುಧಿಷ್ಠಿರನೇ, ಇದು ಸಜ್ಜನರಾದ ಬ್ರಾಹ್ಮಣರ ನಿತ್ಯವಾದ ಧರ್ಮ (ಇದಕ್ಕೆ ಬ್ರಾಹ್ಮ ವಿವಾಹವೆಂದು ಹೆಸರು).
ಆವಾಹ್ಯಮಾವಹೇದೇವಂ ಯೋ ದದ್ಯಾದನುಕೂಲತಃ |
ಶಿಷ್ಟಾನಾಂ ಕ್ಷತ್ರಿಯಾಣಾಂ ಚ ಧರ್ಮ ಏಷ ಸನಾತನಃ ॥4॥
ಕನ್ಯೆಯನ್ನು ಕೊಡಲು ಯೋಗ್ಯನಾದವನನ್ನು ಕರೆದು ಅನುಕೂಲವಿದ್ದಷ್ಟು ಧನ- ಕನಕಾದಿಗಳನ್ನು ಕೊಟ್ಟು ವಿವಾಹವನ್ನು ಮಾಡುವುದು ಶಿಷ್ಟರಾದ ಕ್ಷತ್ರಿಯರ ಸನಾತನವಾದ ಧರ್ಮ (ಇದು ಪ್ರಾಜಾಪತ್ಯ ವಿವಾಹ).
ಆತ್ಮಾಭಿಪ್ರೇತಮುತ್ಸೃಜ್ಯ ಕನ್ಯಾಭಿಪ್ರೇತ ಏವ ಯಃ |
ಅಭಿಪ್ರೇತಾ ಚ ಯಾ ಯಸ್ಯ ತಸ್ಮೈ ದೇಯಾ ಯುಧಿಷ್ಠಿರ |
ಗಾಂಧರ್ವಮಿತಿ ತಂ ಧರ್ಮಂ ಪ್ರಾಹುರ್ಧರ್ಮವಿದೋ ಜನಾಃ ॥5॥
ಎಲೈ ಯುಧಿಷ್ಠಿರನೇ, ಕನ್ಯಾಪಿತೃವು ತನಗೆ ಇಷ್ಟವಾದ ವರನನ್ನು ಬಿಟ್ಟು ಕನ್ಯೆಗೆ ಇಷ್ಟವಾದ ವರನಿಗೇ ಕೊಡುವುದು ಗಾಂಧರ್ವವಿವಾಹವೆನಿಸುತ್ತದೆ. ಧರ್ಮವನ್ನು ತಿಳಿದವರು ಅದನ್ನೂ ಧರ್ಮವೆಂದೇ ಹೇಳುತ್ತಾರೆ.
ಧನೇನ ಬಹುನಾ ಕ್ರೀತ್ವಾ ಸಂಪ್ರಲೋಭ್ಯ ಚ ಬಾಂಧವಾನ್ |
ಅಸುರಾಣಾಂ ನೃಪೈತಂ ವೈ ಧರ್ಮಮಾಹುರ್ಮನೀಷಿಣಃ ॥6॥
ಕನ್ಯಾಬಾಂಧವರನ್ನು ಮರುಳುಗೊಳಿಸಿ ಬಹಳ ಧನವನ್ನು ಕೊಟ್ಟು ಕನ್ಯೆಯನ್ನು ಕೊಂಡುಕೊಂಡು ಹೋಗಿ ಮದುವೆ ಮಾಡಿಕೊಳ್ಳುವುದು ಅಸುರ ಧರ್ಮ. ಇದನ್ನು ಜ್ಞಾನಿಗಳು ಆಸುರ ವಿವಾಹ ಅಥವಾ ಪೈಶಾಚ ವಿವಾಹ ಎನ್ನುತ್ತಾರೆ.
ಹತ್ವಾ ಛಿತ್ತ್ವಾ ಚ ಶೀರ್ಷಾಣಿ ರುದತಾಂ ರುದತೀಂ ಗೃಹಾತ್ |
ಪ್ರಸಹ್ಯ ಹರಣಂ ತಾತ ರಾಕ್ಷಸಂ ಧರ್ಮಲಕ್ಷಣಮ್ ॥7॥

ಎಲೈ ಪ್ರೀತಿಪಾತ್ರನೇ, ಕನ್ಯೆಯ ಬಂಧುಗಳಲ್ಲಿ ಕೆಲವರನ್ನು ಕೊಂದು, ಕೆಲವರ ತಲೆಯನ್ನು ಸೀಳಿ, ಅಳುತ್ತಿರುವ ಬಂಧುಗಳ ಮಧ್ಯದಿಂದ ಅಳುತ್ತಿರುವ ಕನ್ಯೆಯನ್ನು ಬಲಾತ್ಕಾರದಿಂದ ಕರೆದುಕೊಂಡು ಹೋಗುವುದು ರಾಕ್ಷಸ ಧರ್ಮ. ಈ ವಿವಾಹವು ರಾಕ್ಷಸ ವಿವಾಹವೆನಿಸುತ್ತದೆ.
ಪಂಚಾನಾಂ ತು ತ್ರಯೋ ಧರ್ಮ್ಯಾ ದ್ವಾವಧರ್ಮ್ಯೌ ಯುಧಿಷ್ಠಿರ |
ಪೈಶಾಚ ಆಸುರಶ್ಚೈವ ನ ಕರ್ತವ್ಯೌ ಕಥಂಚನ ॥8॥
ಎಲೈ ಯುಧಿಷ್ಠಿರನೇ, ಈ ಐದು ವಿವಾಹಗಳಲ್ಲಿ ಮೊದಲನೆಯ ಮೂರು ಧರ್ಮಸಮ್ಮತವಾದವುಗಳು. ಪೈಶಾಚ ಮತ್ತು ಆಸುರ ವಿವಾಹಗಳನ್ನು ಮಾತ್ರ ಯಾವ ಕಾರಣದಿಂದಲೂ ಮಾಡಬಾರದು.
ಬ್ರಾಹ್ಮಃ ಕ್ಷಾತ್ರೋಽಥ ಗಾಂಧರ್ವ ಏತೇ ಧರ್ಮ್ಯಾ ನರರ್ಷಭ |
ಪೃಥಗ್ವಾ ಯದಿ ವಾ ಮಿಶ್ರಾಃ ಕರ್ತವ್ಯಾ ನಾತ್ರ ಸಂಶಯಃ ॥9॥
ಎಲೈ ನರಶ್ರೇಷ್ಠನೇ, ಬ್ರಾಹ್ಮ, ಕ್ಷಾತ್ರ ಮತ್ತು ಗಾಂಧರ್ವ ವಿವಾಹಗಳು ಮೂರೂ ಧರ್ಮಸಮ್ಮತವಾದವುಗಳು. ಅವುಗಳನ್ನು ಬೇರೆ ಬೇರೆಯಾಗಿಯೇ ಅಥವಾ ಒಂದು ವಿವಾಹದಲ್ಲಿ ಬೇರೆ ವಿವಾಹಗಳನ್ನು ಬೆರೆಸಿಯಾದರೂ ಕೂಡ ಮಾಡಬಹುದು. ಇದರಲ್ಲಿ ಸಂಶಯವಿಲ್ಲ (ಕೇವಲ ಕನ್ಯಾ-ವರರು ಪರಸ್ಪರವಾಗಿ ಮೆಚ್ಚಿ ಮಂತ್ರವಿಲ್ಲದೆ ವಿವಾಹವಾಗುವುದು ಗಾಂಧರ್ವವಿವಾಹ. ಕನ್ಯಾ-ವರರು ಪರಸ್ಪರವಾಗಿ ಮೆಚ್ಚಿದ ಮೇಲೆ ಧಾರಾ ಪೂರ್ವಕವಾಗಿ ಧಾರೆ ಎರೆದು ಕೊಡುವುದು ಗಾಂಧರ್ವ ಮತ್ತು ಬ್ರಾಹ್ಮ ವಿವಾಹದ ಮಿಶ್ರಣ. ವರನಿಗೆ ಧನ-ಕನಕಾದಿಗಳನ್ನು ಕೊಟ್ಟು ಕನ್ಯಾ-ವರರು ಮೆಚ್ಚಿದ ಮೇಲೆ ವಿವಾಹ ಮಾಡಿಕೊಡುವುದು ಬ್ರಾಹ್ಮ-ಕ್ಷಾತ್ರ ಮತ್ತು ಗಾಂಧರ್ವ ವಿವಾಹಗಳ ಮಿಶ್ರಣ).
ತಿಸ್ರೋ ಭಾರ್ಯಾ ಬ್ರಾಹ್ಮಣಸ್ಯ ದ್ವೇ ಭಾರ್ಯೇ ಕ್ಷತ್ರಿಯಸ್ಯ ತು |
ವೈಶ್ಯಃ ಸ್ವಜಾತಿಂ ವಿಂದೇತ ತಾಸ್ವಪತ್ಯಂ ಸಮಂ ಭವೇತ್ ॥10॥
ಬ್ರಾಹ್ಮಣರಿಗೆ ಮೂರು ಜನ ಎಂದರೆ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಸ್ತ್ರೀಯರು ಭಾರ್ಯೆಯರಾಗುತ್ತಾರೆ. ಕ್ಷತ್ರಿಯನಿಗೆ ಕ್ಷತ್ರಿಯ ಮತ್ತು ವೈಶ್ಯ ಸ್ತ್ರೀಯರು ಭಾರ್ಯೆ ಆಗಬಹುದು. ವೈಶ್ಯನು ತನ್ನ ಜಾತಿಯಲ್ಲಿಯೇ ವಿವಾಹವನ್ನು ಮಾಡಿಕೊಳ್ಳಬೇಕು. ಅವರಲ್ಲಿ ಜನಿಸಿದ ಮಕ್ಕಳು ಆಯಾ ವರ್ಣದವರೇ ಆಗುತ್ತಾರೆ.
ಬ್ರಾಹ್ಮಣೀ ತು ಭವೇಜ್ಜ್ಯೇಷ್ಠಾ ಕ್ಷತ್ರಿಯಾ ಕ್ಷತ್ರಿಯಸ್ಯ ತು |
ರತ್ಯರ್ಥಮಪಿ ಶೂದ್ರಾ ಸ್ಯಾನ್ನೇತ್ಯಾಹುರಪರೇ ಜನಾಃ ॥11॥
ಬ್ರಾಹ್ಮಣನಿಗೆ ಬ್ರಾಹ್ಮಣ ಸ್ತ್ರೀಯೇ ಜ್ಯೇಷ್ಠಪತ್ನಿಯಾಗಬೇಕು. ಕ್ಷತ್ರಿಯನಿಗೆ ಕ್ಷತ್ರಿಯ ಸ್ತ್ರೀಯರು ಜ್ಯೇಷ್ಠಪತ್ನಿಯಾಗಬೇಕು. ರತಿಸುಖಕ್ಕಾಗಿ ಶೂದ್ರ ಸ್ತ್ರೀಯನ್ನೂ ವಿವಾಹವಾಗಬಹುದು ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಹಾಗೆ ಮಾಡಕೂಡದು ಎಂದು ಹೇಳುತ್ತಾರೆ.
ಅಪತ್ಯಜನ್ಮ ದೋಷಾಯ ವಿಪ್ರೇ ಶೂದ್ರತ್ವಸಾಧನಾತ್ |
ಶೂದ್ರಾಯಾಂ ಜನಯನ್ ವಿಪ್ರಃ ಪ್ರಾಯಶ್ಚಿತ್ತೀ ವಿಧೀಯತೇ ॥12॥
ಬ್ರಾಹ್ಮಣನಿಗೆ ಶೂದ್ರ ಸ್ತ್ರೀಯಲ್ಲಿ ಮಕ್ಕಳನ್ನು ಪಡೆಯುವುದು ಶೂದ್ರತ್ವವನ್ನು ತಂದುಕೊಡುತ್ತದೆ. ಶೂದ್ರಳಲ್ಲಿ ಮಕ್ಕಳನ್ನು ಪಡೆದ ಬ್ರಾಹ್ಮಣನಿಗೆ ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ.
ನಾತಿಬಾಲಾಂ ವಹಂತ್ಯನ್ಯೇ ಅನಿತ್ಯತ್ವಾತ್ ಪ್ರಜಾರ್ಥಿನಃ |
ವಹಂತಿ ಕರ್ಮಿಣಸ್ತಸ್ಯಾಮಂತಃಶುದ್ಧಿವ್ಯಪೇಕ್ಷಯಾ ॥
ಜೀವನವು ಅನಿತ್ಯವಾದುದರಿಂದ ಬೇಗ ಸಂತತಿಯನ್ನು ಬಯಸುವ ಕೆಲವರು ಬಹಳ ಚಿಕ್ಕ ಕನ್ಯೆಯನ್ನು ವಿವಾಹವಾಗುವುದಿಲ್ಲ. ಕರ್ಮದೀಕ್ಷೆಯುಳ್ಳವರು ಕರ್ಮದ ಶುದ್ಧಿಯನ್ನು ಬಯಸಿ ಬಹಳ ಚಿಕ್ಕವಯಸ್ಸಿನ ಕನ್ಯೆಯನ್ನು ಮದುವೆಯಾಗುತ್ತಾರೆ.
ತ್ರಿಶಂದ್ವರ್ಷೋ ದಶವರ್ಷಾಂ ಭಾರ್ಯಾಂ ವಿಂದೇತ ನಗ್ನಿಕಾಮ್ |
ಏಕವಿಂಶತಿವರ್ಷೋ ವಾ ಸಪ್ತವರ್ಷಾಮವಾಪ್ನುಯಾತ್ ॥13॥
ಮೂವತ್ತು ವರ್ಷದವನು ಹತ್ತು ವರ್ಷದ ಋತುಮತಿಯಾಗದ ಕನ್ಯೆಯನ್ನು ವಿವಾಹವಾಗಬೇಕು. ಅಥವಾ ಇಪ್ಪತ್ತೊಂದು ವರ್ಷದ ವರನು ಏಳು ವರ್ಷದ ಕನ್ಯೆಯನ್ನು ವಿವಾಹವಾಗಬೇಕು.
ಯಸ್ಯಾಸ್ತು ನ ಭವೇದ್ ಭ್ರಾತಾ ಪಿತಾ ವಾ ಭರತರ್ಷಭ |
ನೋಪಯಚ್ಛೇತ ತಾಂ ಜಾತು ಪುತ್ರಿಕಾಧರ್ಮಿಣೀ ಹಿ ಸಾ ॥14॥
ಎಲೈ ಭರತರ್ಷಭನೇ, ಯಾವ ಕನ್ಯೆಗೆ ತಂದೆಯಾಗಲೀ, ಸಹೋದರರಾಗಲೀ ಇರುವುದಿಲ್ಲವೋ ಅಂತಹವಳನ್ನು ಮದುವೆಯಾಗಬಾರದು. ಅವಳಲ್ಲಿ ಹುಟ್ಟಿದ ಮಗನು ಕನ್ಯೆಯ ತಂದೆಗೆ ಸೇರುವವನು.
ತ್ರೀಣಿ ವರ್ಷಾಣ್ಯುದೀಕ್ಷೇತ ಕನ್ಯಾ ಋತುಮತೀ ಸತೀ |
ಚತುರ್ಥೇ ತ್ವಥ ಸಂಪ್ರಾಪ್ತೇ ಸ್ವಯಂ ಭರ್ತಾರಮರ್ಜಯೇತ್ ॥15॥
ಋತುಮತಿಯಾದ ಕನ್ಯೆಯು ಮೂರುವರ್ಷದವರೆಗೆ ತಂದೆಯ ಮನೆಯಲ್ಲಿ ನಿರೀಕ್ಷಿಸಬೇಕು. ನಾಲ್ಕನೆಯ ವರ್ಷವು ಪ್ರಾಪ್ತವಾದರೆ ತಾನೇ ಸ್ವತಃ ಪತಿಯನ್ನು ಸಂಪಾದಿಸಬೇಕು.
ಪ್ರಜಾ ನ ಹೀಯತೇ ತಸ್ಯಾ ರತಿಶ್ಚ ಭರತರ್ಷಭ |
ಅತೋಽನ್ಯಥಾ ವರ್ತಮಾನಾ ಭವೇದ್ ವಾಚ್ಯಾ ಪ್ರಜಾಪತೇಃ ॥16॥
ಎಲೈ ಭರತರ್ಷಭನೇ, ಅಂತಹವಳಲ್ಲಿ ಸಂತತಿಯಾಗಲೀ, ರತಿಸುಖವಾಗಲೀ ನಾಶವನ್ನು ಹೊಂದುವುದಿಲ್ಲ. ಹಾಗಲ್ಲದೆ ತಾನೇ ಪತಿಯನ್ನು ಪಡೆದು ವಿವಾಹವಾಗದೆ ಬೇರೆ ರೀತಿಯಲ್ಲಿ ವರ್ತಿಸುವವಳು ಪ್ರಜಾಪತಿಯಿಂದ ನಿಂದಿತಳಾಗುತ್ತಾಳೆ.
ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ |

ಇತ್ಯೇತಾಮನುಗಚ್ಛೇತ ತಂ ಧರ್ಮಂ ಮನುರಬ್ರವೀತ್ ॥17॥
ತಾಯಿಯ ಸಪಿಂಡಳಲ್ಲದವಳು, ತಂದೆಯ ಸಗೋತ್ರಳಲ್ಲದವಳು ಆದ ಕನ್ಯೆಯನ್ನು ಮದುವೆಯಾಗಬೇಕು. ಅದು ಧರ್ಮವೆಂದು ಮನುವು ಹೇಳಿದನು (ಎರಡು ಕಡೆಯಲ್ಲಿಯೂ ಚಕಾರವಿರುವುದರಿಂದ ಅವಳು ತಾಯಿಗೆ ಸಗೋತ್ರಳೂ ಆಗಿರಬಾರದು ಮತ್ತು ತಂದೆಗೂ ಸಪಿಂಡಳಾಗಿರಬಾರದು).

ಯುಧಿಷ್ಠಿರಃ
ಶುಲ್ಕಮನ್ಯೇನ ದತ್ತಂ ಸ್ಯಾದ್ ದದಾನೀತ್ಯಾಹ ಚಾಪರಃ |
ಬಲಾದನ್ಯಃ ಪ್ರಭಾಷೇತ ಧನಮನ್ಯಃ ಪ್ರದರ್ಶಯೇತ್ ॥18॥
ಪಾಣಿಗ್ರಹೀತಾ ತ್ವನ್ಯಃ ಸ್ಯಾತ್ ಕಸ್ಯ ಕನ್ಯಾ ಪಿತಾಮಹ |
ತತ್ತ್ವಂ ಜಿಜ್ಞಾಸಮಾನಾನಾಂ ಚಕ್ಷುರ್ಭವತು ನೋ ಭವಾನ್ ॥19॥
ಯುಧಿಷ್ಠಿರ ಒಬ್ಬನು ಕನ್ಯಾಶುಲ್ಕವನ್ನು ಕೊಟ್ಟಿರುತ್ತಾನೆ. ಇನ್ನೊಬ್ಬನು ಕನ್ಯಾಶುಲ್ಕವನ್ನು ಕೊಡುತ್ತೇನೆ ಎಂದು ಹೇಳುತ್ತಾನೆ. ಇನ್ನೊಬ್ಬನು ಪ್ರಬಲನಾಗಿದ್ದು ನನಗೇ ಕನ್ಯೆಯನ್ನು ಕೊಡಬೇಕೆಂದು ಮಾತನಾಡುತ್ತಾನೆ. ಅಧಿಕವಾದ ಕನ್ಯಾಶುಲ್ಕವನ್ನು ಇನ್ನೊಬ್ಬನು ತೋರಿಸುತ್ತಾನೆ. ಪಾಣಿಗ್ರಹಣವನ್ನು ಮಾಡಿಕೊಳ್ಳುವವನು ಇನ್ನೊಬ್ಬನಾಗುತ್ತಾನೆ. ಎಲೈ ಪಿತಾಮಹನೇ, ಆ ಕನ್ಯೆಯು ಯಾರಿಗೆ ಸೇರಿದವಳು? ತತ್ತ್ವವನ್ನು ಕೇಳಲು ಹೊರಟ ನನಗೆ ನೀವು ಜ್ಞಾನದೃಷ್ಟಿಯನ್ನು ಕೊಡಿ.

ಭೀಷ್ಮಃ
ಯತ್ ಕಿಂಚಿತ್ ಕರ್ಮ ಮಾನುಷ್ಯಂ ಸಂಸ್ಥಾನಾಯ ಪ್ರದೃಶ್ಯತೇ |
ಮಂತ್ರವನ್ಮಂತ್ರಿತಂ ತಸ್ಯ ಮೃಷಾವಾದಸ್ತು ಪಾತಕಃ ॥20॥
ಭೀಷ್ಮ ಮಂತ್ರಪೂತವಾದ ವಿವಾಹದ ಘಟನೆಗಾಗಿ ಮನುಷ್ಯರಲ್ಲಿ ಯಾವ ಮಂತ್ರಾಲೋಚನೆಯು ನಡೆಯುತ್ತದೆಯೋ ಅದನ್ನು ನಿರಾಕರಿಸುವುದು ಪಾತಕವಾಗುತ್ತದೆ.
ಭಾರ್ಯಾಪತ್ಯೃತ್ವಿಗಾಚಾರ್ಯಾಃ ಶಿಷ್ಯೋಪಾಧ್ಯಾಯ ಏವ ಚ |
ಮೃಷೋಕ್ತೇ ದಂಡಮರ್ಹಂತಿ ನೇತ್ಯಾಹುರಪರೇ ಜನಾಃ ॥21॥
ಪತ್ನಿಯಾಗಲೀ, ಪುತ್ರನಾಗಲೀ, ಋತ್ವಿಕ್-ಆಚಾರ್ಯ-ಶಿಷ್ಯರಾಗಲೀ, ಉಪಾಧ್ಯಾಯರಾಗಲೀ ಸುಳ್ಳನ್ನು ಹೇಳಿದರೆ ಅವರು ದಂಡಕ್ಕೆ ಅರ್ಹರಾಗುತ್ತಾರೆ. ವಿವಾಹದ ಸಂದರ್ಭದಲ್ಲಿ ಸುಳ್ಳನ್ನು ಹೇಳಿದರೆ ದಂಡಾರ್ಹರಾಗುವುದಿಲ್ಲ ಎಂದು ಇನ್ನು ಕೆಲವರ ಅಭಿಪ್ರಾಯ.
ನ ಹ್ಯಕಾಮೇನ ಸಂವಾದಂ ಮನುರೇವಂ ಪ್ರಶಂಸತಿ |
ಅಯಶಸ್ಯಮಧರ್ಮ್ಯಂ ಚ ಯನ್ಮೃಷಾ ಧರ್ಮಕೋಪನಮ್ ॥22॥
ಯಾರಿಗೆ ಕನ್ಯೆಯನ್ನು ಕೊಡಲು ಇಷ್ಟವಿಲ್ಲವೋ ಅವನ ಜೊತೆಯಲ್ಲಿ ವಿವಾಹ ಸಂವಾದವನ್ನು ಮಾಡುವುದನ್ನು ಮನುವು ಪ್ರಶಂಸಿಸುವುದಿಲ್ಲ. ಅದು ಅಕೀರ್ತಿಕರವಾದುದು, ಅಧಾರ್ಮಿಕವಾದುದು ಮತ್ತು ವ್ಯರ್ಥವಾಗಿ ಧರ್ಮಕ್ಕೆ ಕೋಪವನ್ನುಂಟು ಮಾಡುವಂತಹದು.
ನೈಕಾಂತದೋಷ ಏಕಸ್ಮಿಂಸ್ತದ್ದಾನಂ ನೋಪಲಭ್ಯತೇ |
ಧರ್ಮತೋ ಯಾಂ ಪ್ರಯಚ್ಛಂತಿ ಯಾಂ ಚ ಕ್ರೀಣಂತಿ ಭಾರತ ॥23॥
ಎಲೈ ಭಾರತನೇ, ಒಬ್ಬನಿಗೇ ಕೊಡಲು ಬಯಸಿ ಅಥವಾ ಒಬ್ಬನಿಂದಲೇ ಶುಲ್ಕವನ್ನು ತೆಗೆದುಕೊಳ್ಳಲು ಬಯಸಿ, ಅವನನ್ನೇ ಕರೆದು ಮಾತನಾಡುವುದು ದೋಷಕ್ಕೆ ಕಾರಣವಾಗುವುದಿಲ್ಲ. ಅಂತಹ ದಾನಗಳು ಅಪರೂಪವಾದವುಗಳು.
ಬಂಧುಭಿಃ ಸಮನುಜ್ಞಾತೋ ಮಂತ್ರಹೋಮೌ ಪ್ರಯೋಜಯೇತ್ |
ತಥಾ ಸಿಧ್ಯಂತಿ ತೇ ಮಂತ್ರಾ ನಾದತ್ತಾಯಾಃ ಕಥಂಚನ ॥24॥
ಬಂಧುಗಳ ಅನುಮತಿಯನ್ನು ಪಡೆದು, ಮಂತ್ರಹೋಮ ಪುರಸ್ಸರವಾಗಿ ಯಾವ ಕನ್ಯೆಯನ್ನು ಧರ್ಮದಿಂದ ದಾನ ಮಾಡುತ್ತಾರೆಯೋ ಅಥವಾ ಧನದಿಂದ ಕ್ರಯವನ್ನು ಮಾಡಿ ಅನಂತರ ದಾನವಾಗಿ ಪಡೆಯುತ್ತಾರೆಯೋ ಅಂತಹ ಸಂದರ್ಭದಲ್ಲಿ ಎಲ್ಲ ಮಂತ್ರಗಳೂ ಸಿದ್ಧಿಸುತ್ತವೆ. ಬಂಧುಗಳಿಂದ ದಾನ ಮಾಡಲ್ಪಡದಿದ್ದರೆ ಯಾವ ಮಂತ್ರವೂ ಸಿದ್ಧಿಸುವುದಿಲ್ಲ.
ಯಸ್ತ್ವತ್ರ ಮಂತ್ರಸಮಯೋ ಭಾರ್ಯಾಪತ್ಯೋರ್ಮಿಥಃ ಕೃತಃ |
ತಮೇವಾಹುರ್ಗರೀಯಾಂಸಂ ಯಶ್ಚಾಸೌ ಜ್ಞಾತಿಭಿಃ ಕೃತಃ ॥25॥
ವಿವಾಹಸಂದರ್ಭದಲ್ಲಿ ವಧೂ-ವರರು ಮಂತ್ರಕ್ಕೆ ಅನುಗುಣವಾಗಿ ಯಾವ ಪರಸ್ಪರ ನಿಬಂಧನೆಗಳನ್ನು ಅಂಗೀಕರಿಸುತ್ತಾರೆಯೋ ಜೊತೆಗೆ ಕನ್ಯಾ-ವರರ ಬಂಧುಗಳು ಯಾವ ನಿಬಂಧನೆಗಳನ್ನು ವಿಧಿಸುತ್ತಾರೆಯೋ ಅವೇ ಬಹಳ ಶ್ರೇಷ್ಠವಾದವು.
ದೇವದತ್ತಾಂ ಪತಿರ್ಭಾರ್ಯಾಂ ವೇತ್ತಿ ಧರ್ಮಸ್ಯ ಶಾಸನಾತ್ |
ಸಾ ದೈವೀಂ ಮಾನುಷೀಂ ವಾಚಮನೃತಾಂ ಪರ್ಯುದಸ್ಯತಿ ॥26॥
ಯಾವ ವರನು ದೇವರ ಮುಂದೆ ಚೀಟಿಯನ್ನು ಹಾಕಿ ಬಂದ ಚೀಟಿಗೆ ಅನುಸಾರವಾಗಿ ಕನ್ಯೆಯನ್ನು ಸ್ವೀಕರಿಸುತ್ತಾನೆಯೋ ಅವಳನ್ನು ಅವನು ತನಗೆ ದೇವರು ಕೊಟ್ಟ ಭಾರ್ಯೆ ಎಂದು ತಿಳಿಯುತ್ತಾನೆ. ಆ ದೈವವಾಣಿಯು ಬಂಧುಗಳು ಮೊದಲು ಹೇಳಿದ ಕೊಡುವುದಿಲ್ಲ ಎಂಬ ಮಾತನ್ನು ನಿರಾಕರಿಸುತ್ತದೆ (ಲಕ್ಷಾಲಂಕಾರ).

ಯುಧಿಷ್ಠಿರಃ
ಕನ್ಯಾಯಾಂ ಪ್ರಾಪ್ತಶುಲ್ಕಾಯಾಂ ಜ್ಯಾಯಾಂಶ್ಚೇದಾವ್ರಜೇದ್ ವರಃ |
ಧರ್ಮಕಾಮಾರ್ಥಸಂಪನ್ನೋ ವಾಚ್ಯಮತ್ರಾನೃತಂ ನ ವಾ ॥27॥
ಯುಧಿಷ್ಠಿರ ಕನ್ಯೆಗೆ ಶುಲ್ಕವನ್ನು ಕೊಟ್ಟಮೇಲೆ ಧರ್ಮಕಾಮಾರ್ಥಸಂಪನ್ನನಾದ ಶ್ರೇಷ್ಠನಾದ ವರನು ಬಂದರೆ ಆಗ ಸುಳ್ಳನ್ನು ಹೇಳಬೇಕೇ, ಬೇಡವೇ?

ತಸ್ಮಿನ್ನುಭಯತೋ ದೋಷೇ ಕುರ್ವಂಛ್ರೇಯಃ ಸಮಾಚರೇತ್ |
ಅಯಂ ನಃ ಸರ್ವಧರ್ಮಾಣಾಂ ಧರ್ಮಶ್ಚಿಂತ್ಯತಮೋ ಮತಃ ॥28॥
ಆಗ ಎರಡನೆಯ ವರನಿಗೆ ಕೊಟ್ಟರೆ ಮೊದಲನೆಯ ವರನಿಗೆ ಸುಳ್ಳು ಹೇಳಿದಂತಾಗುತ್ತದೆ. ಎರಡನೆಯ ವರನಿಗೆ ಕೊಡದಿದ್ದರೆ ಕನ್ಯೆಯ ಆಸೆಯನ್ನು ಭಂಗ ಮಾಡಿದಂತಾಗುತ್ತದೆ. ಎರಡು ಪಕ್ಷಗಳಲ್ಲಿಯೂ ದೋಷವಿದೆ. ಏನು ಮಾಡಿದರೆ ಶ್ರೇಯಸ್ಸು ಉಂಟಾಗುತ್ತದೆ? ಎಲ್ಲ ಧರ್ಮಗಳಲ್ಲಿ ಇದು ನಾವು ಬಹಳವಾಗಿ ಚಿಂತಿಸಬೇಕಾದ ಧರ್ಮ.
ತತ್ತ್ವಂ ಜಿಜ್ಞಾಸಮಾನಾನಾಂ ಚಕ್ಷುರ್ಭವತು ನೋ ಭವಾನ್ |
ತದೇತತ್ ಸರ್ವಮಾಚಕ್ಷ್ವ ನ ಹಿ ತೃಪ್ಯಾಮಿ ಕಥ್ಯತಾಮ್ ॥29॥
ತತ್ತ್ವವನ್ನು ತಿಳಿಯಲು ಬಯಸುವ ನಮಗೆ ನೀವು ತತ್ತ್ವಜ್ಞಾನವನ್ನು ನೀಡಿ. ಇವೆಲ್ಲವನ್ನೂ ನಮಗೆ ತಿಳಿಸಿ. ನೀವು ಹೇಳುವ ವಿಷಯಗಳನ್ನು ಕೇಳಿ ನನಗೆ ತೃಪ್ತಿಯೇ ಆಗುತ್ತಿಲ್ಲ.
ಭೀಷ್ಮಃ
ನ ವೈ ನಿಷ್ಠಾಕರಂ ಶುಲ್ಕಂ ಜ್ಞಾತ್ವಾಸೀತ್ ತೇನ ನಾಹೃತಮ್ |
ನ ಹಿ ಶುಲ್ಕಪರಾಃ ಸಂತಃ ಕನ್ಯಾಂ ದದತಿ ಕರ್ಹಿಚಿತ್ ॥30॥
ಭೀಷ್ಮ ಶುಲ್ಕವೇ ವಿವಾಹವವನ್ನು ನಿರ್ಧರಿಸುವುದಿಲ್ಲ. ಮೊದಲನೆಯ ವರನು ಕನ್ಯೆಯನ್ನು ಕರೆದುಕೊಂಡು ಹೋಗಿಲ್ಲ. ಸಜ್ಜನರಾದವರು ಶುಲ್ಕದ ಮೇಲೆ ಆಸೆಯನ್ನು ಹೊಂದಿ ಎಂದೂ ಕನ್ಯಾದಾನವನ್ನು ಮಾಡುವುದಿಲ್ಲ.
ಅನ್ಯೈರ್ಗುಣೈರುಪೇತಂ ತು ಶುಲ್ಕಂ ಯಾಚಂತಿ ಬಾಂಧವಾಃ |
ಅಲಂಕೃತ್ವಾ ವಹಸ್ವೇತಿ ಯೋ ದದ್ಯಾದನುಕೂಲತಃ ॥31॥
ತಚ್ಚ ತಾಂ ಚ ದದಾತ್ಯೇವ ನ ಶುಲ್ಕಂ ವಿಕ್ರಯೋ ನ ಸಃ |
ಪ್ರತಿಗೃಹ್ಯ ಭವೇದ್ ದೇಯಮೇಷ ಧರ್ಮಃ ಸನಾತನಃ ॥32॥
ಬೇರೆ ಗುಣಗಳಿಂದ (ಕೆಲವು ದೋಷಗಳಿದ್ದರೂ) ಯುಕನಾದ ವರನು ಬಂದರೆ ಆಗ ಬಾಂಧವರು ಅವನಿಗೆ ಶುಲ್ಕವನ್ನು ಬೇಡುತ್ತಾರೆ. ಅವನು ಅವರಿಗೆ ಅನುಕೂಲವಾಗುವಷ್ಟು ಶುಲ್ಕವನ್ನು ಕೊಡುವ ಸಾಮರ್ಥ್ಯವನ್ನು ಹೊಂದಿದರೆ ನಮಗೆ ಸಾಕಾಗುವಷ್ಟು ಶುಲ್ಕವನ್ನು ನೀಡಿ ಕನ್ಯೆಯನ್ನು ಮದುವೆಯಾಗು ಎಂದು ಹೇಳುತ್ತಾರೆ. ಅವನು ಆ ಶುಲ್ಕವನ್ನು ಕೊಟ್ಟು ವಿವಾಹ ಮಾಡಿಕೊಳ್ಳುತ್ತಾನೆ. ಆ ಶುಲ್ಕವು ವಿಕ್ರಯವಲ್ಲ. ದಾನವನ್ನು ಸ್ವೀಕಾರ ಮಾಡಿದ್ದಕ್ಕೆ ಪ್ರತಿಯಾಗಿ ಏನನ್ನಾದರೂ ಕೊಡುವುದು ಸನಾತನ ಧರ್ಮ.
ದಾಸ್ಯಾಮಿ ಭವತೇ ಕನ್ಯಾಮಿತಿ ಪೂರ್ವಂ ನ ಭಾಷಿತಮ್ |
ಯೇ ಚೈವಾಹುರ್ಯೇ ಚ ನಾಹುರ್ಯೇ ಚಾವಶ್ಯಂ ವದನ್ತ್ಯುತ ॥33॥
ತಸ್ಮಾದಾಗ್ರಹಣಾತ್ ಪಾಣೇರ್ಯಾಚಯಂತಿ ಪರಸ್ಪರಮ್ |
ಕನ್ಯಾವರಃ ಪುರಾ ದತ್ತೋ ಮರುದ್ಭಿರಿತಿ ನಃ ಶ್ರುತಮ್ ॥34॥
ಶುಲ್ಕವನ್ನು ತೆಗೆದುಕೊಂಡಾಗ ನಿನಗೇ ಕನ್ಯೆಯನ್ನು ಕೊಡುತ್ತೇನೆ ಎಂದು ಹೇಳಿರುವುದಿಲ್ಲ. ಒಂದು ಪಕ್ಷ ಹಾಗೆ ಹೇಳಿದ್ದರೂ ಅಥವಾ ಹೇಳದಿದ್ದರೂ ಅಥವಾ ಒತ್ತಾಯಕ್ಕೆ ಸಿಲುಕಿ ಹೇಳಿದ್ದರೂ ಸಹ ಪಾಣಿಗ್ರಹಣವಾಗುವವರೆಗೆ ಆ ಮಾತುಗಳಿಗೆ ಬೆಲೆ ಇಲ್ಲ. ಪಾಣಿಗ್ರಹಣವಾಗುವವರೆಗೆ ಪರಸ್ಪರವಾಗಿ ಯಾಚನೆಯನ್ನು ಮಾಡುತ್ತಾರೆ. ಮೊದಲು ಒಬ್ಬ ವರನು ಬಂದಿದ್ದರೂ ಅದಕ್ಕಿಂತ ಉತ್ತಮ ವರನು ಬಂದಾಗ ಅವನನ್ನು ವಿವಾಹ ಮಾಡಿಕೊಂಡರೆ ಯಾವ ದೋಷವೂ ಇಲ್ಲವೆಂದು ಕನ್ಯೆಯರಿಗೆ ಮರುತ್ತುಗಳು ವರವನ್ನು ಕೊಟ್ಟಿದ್ದಾರೆಂದು ನಾವು ಕೇಳಿದ್ದೇವೆ.
ನಾನಿಷ್ಟಾಯ ಪ್ರದಾತವ್ಯಾ ಕನ್ಯಾ ಇತ್ಯೃಷಿಚೋದಿತಮ್ |
ತನ್ಮೂಲಂ ಕಾಮಮೂಲಸ್ಯ ಪ್ರಜನಸ್ಯೇತಿ ಮೇ ಮತಿಃ ॥35॥
ಕನ್ಯೆಯು ಒಪ್ಪದಿದ್ದ ವರನಿಗೆ ಅವಳನ್ನು ಕೊಟ್ಟು ವಿವಾಹ ಮಾಡಬಾರದೆಂದು ಋಷಿಗಳ ಅಭಿಪ್ರಾಯ. ವಿವಾಹವು ಕಾಮಭೋಗಕ್ಕೂ ಮತ್ತು ಸಂತತಿಗೂ ಮೂಲವಾದುದೆಂದು ನನ್ನ ಅಭಿಪ್ರಾಯ.
ಸಮೀಕ್ಷ್ಯ ಚ ಬಹೂನ್ ದೋಷಾನ್ ಸಂವಾಸಾದ್ ವಿದ್ವಿಷಾಣಯೋಃ |
ಯಥಾ ನಿಷ್ಠಾಕರಂ ಶುಲ್ಕಂ ನ ಜಾತ್ವಾಸೀತ್ ತಥಾ ಶೃಣು ॥36॥
ಶುಲ್ಕವನ್ನು ತೆಗೆದುಕೊಂಡು ವಿವಾಹವಾಗಿ ಬಹುಕಾಲ ವಾಸಿಸುವವರು ಮಾಡುವ ಪರಸ್ಪರ ದ್ವೇಷವನ್ನು ನೋಡಿ ಶುಲ್ಕವು ಎಂದೂ ವಿವಾಹ ನಿಶ್ಚಾಯಕವಲ್ಲ ಎಂದು ನಾನು ತೀರ್ಮಾನ ಮಾಡಿದೆ. ಅದರ ಪ್ರಕಾರವನ್ನು ಕೇಳು.
ಅಹಂ ವಿಚಿತ್ರವೀರ್ಯಾಯ ದ್ವೇ ಕನ್ಯೇ ಸಮುದಾವಹಮ್ |
ಜಿತ್ವಾ ಚ ಮಾಗಧಾನ್ ಸರ್ವಾನ್ ಕಾಶೀನಥ ಚ ಕೋಸಲಾನ್ |
ಗೃಹೀತಪಾಣಿರೇಕಾಸೀತ್ ಪ್ರಾಪ್ತಶುಲ್ಕಾಽಪರಾಭವತ್ ॥37॥
ನಾನು ವಿಚಿತ್ರವೀರ್ಯನಿಗೆ ಇಬ್ಬರು ಕನ್ಯೆಯರನ್ನು ಕರೆದುಕೊಂಡು ಬಂದೆ. ಮಾಗಧರನ್ನೂ, ಕಾಶಿಗಳನ್ನೂ, ಕೋಸಲರನ್ನೂ ಎಲ್ಲರನ್ನೂ ಜಯಿಸಿ ಕರೆದುಕೊಂಡು ಬಂದೆನು. ಅದರಲ್ಲಿ ಒಬ್ಬಳು ಪಾಣಿಗ್ರಹಣ ಮಾಡಿಕೊಂಡವಳು, ಇನ್ನೊಬ್ಬಳು ಶುಲ್ಕವನ್ನು ಪಡೆದವಳು.
ಪಾಣೌ ಗೃಹೀತಾ ತತ್ರೈವ ವಿಸೃಜ್ಯಾ ಇತಿ ಮೇ ಪಿತಾ |
ಅಬ್ರವೀದಿತರಾಂ ಕನ್ಯಾಮಾವಹತ್ ಸ ತು ಕೌರವಃ ॥38॥
ಪಾಣಿಗ್ರಹಣ ಮಾಡಿಕೊಂಡವಳನ್ನು ಅಲ್ಲಿಯೇ ಬಿಟ್ಟುಬಿಡು ಎಂದು ನನ್ನ ತಂದೆಯು ಹೇಳಿದನು. ಕೌರವನಾದ ವಿಚಿತ್ರವೀರ್ಯನು ಇನ್ನೊಬ್ಬಳನ್ನು ವಿವಾಹವಾದನು.
ಅಪ್ಯನ್ಯಾಮನುಪಪ್ರಚ್ಛ ಶಂಕಮಾನಃ ಪಿತುರ್ವಚಃ |

ಅತೀವ ಹ್ಯಸ್ಯ ಧರ್ಮೇಪ್ಸಾ ಪಿತುರ್ಮೇಽಭ್ಯಧಿಕಾಭವತ್ ॥39॥
ನಾನು ನನ್ನ ತಂದೆಯ ಮಾತನ್ನು ಪೂರ್ಣವಾಗಿ ನಂಬದೆ ಅದನ್ನು ಶಂಕಿಸಿ ಬೇರೆ ವಿದ್ವಾಂಸರನ್ನು ಕೇಳಿದೆನು. ನನ್ನ ತಂದೆಗಾದರೂ ಧರ್ಮನಿಷ್ಠೆಯು ಬಹಳವಾಗಿದ್ದಿತು.
ತತೋಽಹಮಬ್ರುವಂ ರಾಜನ್ನಾಚಾರೇಪ್ಸುರಿದಂ ವಚಃ |
ಆಚಾರಂ ತತ್ತ್ವತೋ ವೇತ್ತುಮಿಚ್ಛಾಮೀತಿ ಪುನಃ ಪುನಃ ॥40॥
ಎಲೈ ರಾಜನೇ, ಆಗ ನಾನು ಶುದ್ಧವಾದ ಆಚಾರವನ್ನು ಅನುಷ್ಠಾನ ಮಾಡಲು ಬಯಸಿ, ಅದನ್ನು ಮೊದಲು ಸರಿಯಾಗಿ ತಿಳಿಯಲು ಬಯಸಿ ನನ್ನ ತಂದೆಯನ್ನು ಪುನಃ ಪುನಃ ಕೇಳಿದೆನು.
ತತೋ ಮಯ್ಯೇವಮುಕ್ತೇ ತು ವಾಕ್ಯೇ ಧರ್ಮಭೃತಾಂ ವರಃ |
ಪಿತಾ ಮಮ ಮಹಾರಾಜ ಬಾಹ್ಲೀಕೋ ವಾಕ್ಯಮಬ್ರವೀತ್ ॥41॥
ಎಲೈ ಮಹಾರಾಜನೇ, ಆಗ ನನ್ನ ತಂದೆಯನ್ನು ಹಾಗೆ ಕೇಳಿದಾಗ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ನನ್ನ ತಂದೆಯಾದ ಬಾಹ್ಲೀಕನು ಹೀಗೆ ಮಾತನಾಡಿದನು.
ಯದಿ ವಃ ಶುಲ್ಕತೋ ನಿಷ್ಠಾ ನ ಪಾಣಿಗ್ರಹಣಂ ತಥಾ |
ಲಾಜಾಂತರಮುಪಾಸೀತ ಪ್ರಾಪ್ತಶುಲ್ಕಾ ಪತಿಂ ವೃತಮ್ ॥42॥
ನಿಮಗೆ ಶುಲ್ಕದಲ್ಲಿಯೇ ತಾತ್ಪರ್ಯ, ಪಾಣಿಗ್ರಹಣವು ವಿವಾಹ ಸ್ವೀಕಾರ ಎಂಬ ಅಭಿಪ್ರಾಯವಿಲ್ಲದಿದ್ದರೆ ಮೊದಲು ಶುಲ್ಕವನ್ನು ಪಡೆದವಳು ಇನ್ನೊಬ್ಬ ಪತಿಯು ಬಂದರೆ ಬೇರೆ ಲಾಜಾಹೋಮವನ್ನು ಮಾಡಿ ಅನಂತರ ಬಂದ ತಾನು ವರಿಸಿದವನನ್ನು ಪತಿಯಾಗಿ ಹೊಂದಬೇಕು.
ನ ಹಿ ಧರ್ಮವಿದಃ ಪ್ರಾಹುಃ ಪ್ರಮಾಣಂ ವಾಕ್ಯತಃ ಸ್ಮೃತಮ್ |
ಯೇಷಾಂ ವೈ ಶುಲ್ಕತೋ ನಿಷ್ಠಾ ನ ಪಾಣಿಗ್ರಹಣಾತ್ ತಥಾ ॥43॥
ಯಾರಿಗೆ ಶುಲ್ಕದಲ್ಲೇ ತಾತ್ಪರ್ಯವೋ, ಪಾಣಿಗ್ರಹಣದಲ್ಲಿ ತಾತ್ಪರ್ಯವಿಲ್ಲವೋ ಅಂತಹವರ ವಾಕ್ಯವು ಪ್ರಮಾಣವಲ್ಲವೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ.
ಪ್ರಸಿದ್ಧಂ ಭಾಷಿತಂ ದಾನೇ ತೇಷಾಂ ಪ್ರತ್ಯಸನಂ ಪುನಃ |
ಯೇ ಮನ್ಯಂತೇ ಕ್ರಯಂ ಶುಲ್ಕಂ ನ ತೇ ಧರ್ಮವಿದೋ ಜನಾಃ ॥44॥
ಎಲ್ಲ ಕಡೆಗಳಲ್ಲಿಯೂ ಪಾಣಿಗ್ರಹಣ ಮಹೋತ್ಸವವಾಯಿತು ಎಂದೇ ಹೇಳುತ್ತಾರೆ. ಶುಲ್ಕಗ್ರಹಣವಾಯಿತು (ಎಂದು ವಿವಾಹವನ್ನು) ಹೇಳುವುದಿಲ್ಲ. ಅಂತಹವರ ಮಾತನ್ನು ಒಪ್ಪಿದರೆ ಲೋಕಸಮ್ಮತವಾದ ವ್ಯವಹಾರವನ್ನು ನಿರಾಕರಿಸಬೇಕಾಗುತ್ತದೆ. ಕನ್ಯಾಶುಲ್ಕವನ್ನು ಕ್ರಯವೆಂದು ತಿಳಿಯುವವರು ಧರ್ಮಜ್ಞರಲ್ಲ.
ನ ಚೈತೇಭ್ಯಃ ಪ್ರದಾತವ್ಯಾ ನ ವೋಢವ್ಯಾ ತಥಾವಿಧಾ |
ನ ಹ್ಯೇವ ಭಾರ್ಯಾ ಕ್ರೇತವ್ಯಾ ನ ವಿಕ್ರೇಯಾ ಕಥಂಚನ ॥45॥
ಯಾರು ಕನ್ಯಾಶುಲ್ಕವನ್ನು ಕ್ರಯವೆಂದು ತಿಳಿಯುತ್ತಾರೆಯೋ ಅಂತಹವರಿಗೆ ಕನ್ಯೆಯನ್ನು ಕೊಡಬಾರದು ಅಥವಾ ಕನ್ಯೆಯೇ ಹಾಗೆ ತಿಳಿದಿದ್ದರೆ ಅವಳನ್ನು ವಿವಾಹವಾಗಬಾರದು. ಪತ್ನಿಯು ಮಾರುವ ಅಥವಾ ಕೊಳ್ಳುವ ಒಂದು ವಸ್ತುವಲ್ಲ.
ಯೇ ಚ ಕ್ರೀಣಂತಿ ದಾಸೀವದ್ ಯೇ ಚ ವಿಕ್ರೀಣತೇ ಜನಾಃ |
ಭವೇತ್ ತೇಷಾಂ ತಥಾ ನಿಷ್ಠಾ ಲುಬ್ಧಾನಾಂ ಪಾಪಚೇತಸಾಮ್ ॥46॥
ಯಾರು ದಾಸಿಯರನ್ನು ಕೊಂಡುಕೊಂಡಂತೆ (ಕನ್ಯೆಯರನ್ನು) ಕೊಂಡುಕೊಳ್ಳುತ್ತಾರೆಯೋ ಅಥವಾ ಮಾರುತ್ತಾರೆಯೋ ಅಂತಹ ಧನಲೋಭವುಳ್ಳ ಪಾಪಿಷ್ಠರಿಗೆ ಅಂತಹ ಅಭಿಪ್ರಾಯ ಇರಬಹುದಷ್ಟೆ?
ಅಸ್ಮಿನ್ ಧರ್ಮೇ ಸತ್ಯವಂತಂ ಪರ್ಯಪೃಚ್ಛಂತ ವೈ ಜನಾಃ |
ಕನ್ಯಾಯಾಃ ಪ್ರಾಪ್ತಶುಲ್ಕಾಯಾಃ ಶುಲ್ಕದಃ ಪ್ರಶಮಂ ಗತಃ ॥47॥
ಪಾಣಿಗ್ರಹೀತಾ ಚಾನ್ಯಃ ಸ್ಯಾದತ್ರ ನೋ ಧರ್ಮಸಂಶಯಃ |
ತನ್ನಶ್ಛಿಂಧಿ ಮಹಾಪ್ರಾಜ್ಞ ತ್ವಂ ಹಿ ವೈ ಪ್ರಾಜ್ಞಸಮ್ಮತಃ |
ತತ್ತ್ವಂ ಜಿಜ್ಞಾಸಮಾನಾನಾಂ ಚಕ್ಷುರ್ಭವತು ನೋ ಭವಾನ್ ॥48॥
ಈ ಧರ್ಮದ ವಿಷಯದಲ್ಲಿ ಜನರು ಸಾವಿತ್ರೀಪತಿಯಾದ ಸತ್ಯವಂತನನ್ನು ಪ್ರಶ್ನೆ ಮಾಡಿದರು. ಶುಲ್ಕವನ್ನು ಪಡೆದ ಕನ್ಯೆಗೆ ಶುಲ್ಕವನ್ನು ಕೊಟ್ಟ ಪತಿಯು ಮೃತನಾಗುತ್ತಾನೆ. ಇನ್ನೊಬ್ಬನು ಪಾಣಿಗ್ರಹಣ ಮಾಡಿಕೊಳ್ಳುತ್ತಾನೆ. ಇಂತಹ ಸಂದರ್ಭದಲ್ಲಿ ನಮಗೆ ಧರ್ಮಸಂಶಯ ಉಂಟಾಗಿದೆ. ಎಲೈ ಮಹಾಪ್ರಾಜ್ಞನೇ, ನೀನು ಪ್ರಾಜ್ಞರಿಗೆ ಸಮ್ಮತನಾದವನು. ಆದ್ದರಿಂದ ನಮ್ಮ ಸಂಶಯವನ್ನು ಪರಿಹಾರ ಮಾಡು. ತತ್ತ್ವವನ್ನು ತಿಳಿಯಲು ಬಯಸುವ ನಮಗೆ ನೀನು ಜ್ಞಾನಚಕ್ಷುಸ್ಸನ್ನು ನೀಡುವವನಾಗು (ಎಂದು ಹೇಳಿದರು).
ತಾನೇವಂ ಬ್ರುವತಃ ಸರ್ವಾನ್ ಸತ್ಯವಾನ್ ವಾಕ್ಯಮಬ್ರವೀತ್ |
ಯತ್ರೇಷ್ಟಂ ತತ್ರ ದೇಯಾ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ |
ಕುರ್ವತೇ ಜೀವತೋಽಪ್ಯೇವಂ ಮೃತೇ ನೈವಾಸ್ತಿ ಸಂಶಯಃ ॥49॥
ಹೀಗೆ ಹೇಳುವ ಅವರೆಲ್ಲರನ್ನೂ ಕುರಿತು ಸತ್ಯವಂತನು ಮಾತನಾಡಿದನು: ಕನ್ಯೆಗೆ ಯಾವ ವರನು ಇಷ್ಟವೋ ಅವನು ಅನಂತರ ಬಂದ ವರನಾದರೂ ಅವನಿಗೇ ಕೊಟ್ಟು ವಿವಾಹವನ್ನು ಮಾಡಬೇಕು. ಇದರಲ್ಲಿ ವಿಚಾರ ಮಾಡುವ ಅಗತ್ಯವೇ ಇಲ್ಲ. ಮೊದಲನೆಯ ವರನು ಬದುಕಿದ್ದರೂ ಹೀಗೆಯೇ ಮಾಡಬೇಕು. ಇನ್ನು ಮೊದಲನೆಯ ವರನು ಮೃತನಾದ ಮೇಲೆ ಯಾವ ಸಂಶಯಕ್ಕೂ ಅವಕಾಶವಿಲ್ಲ.
ದೇವರಂ ಪ್ರವಿಶೇತ್ ಕನ್ಯಾ ತಪ್ಯೇದ್ವಾಪಿ ಮಹತ್ ತಪಃ |
ತಮೇವಾನುವ್ರತಾ ಭೂತ್ವಾ ಪಾಣಿಗ್ರಹಣಕಾಮ್ಯಯಾ ॥50॥

ಪಾಣಿಗ್ರಹಣವಾದ ಮೇಲೆ ಪತಿಯು ಮೃತನಾದರೆ ಕನ್ಯೆಯು ಮೈದುನನನ್ನು ಮದುವೆ ಮಾಡಿಕೊಳ್ಳಬಹುದು ಅಥವಾ ಮೃತನಾದ ಪತಿಗೇ ನಿಷ್ಠಳಾಗಿ ಜನ್ಮಾಂತರದಲ್ಲಿ ಅವನನ್ನು ಪಡೆವ ಆಸೆಯಿಂದ ದೊಡ್ಡ ತಪಸ್ಸನ್ನಾದರೂ ಆಚರಿಸಬಹುದು.
ಲಿಖಂತ್ಯೇವ ತು ಕೇಷಾಂಚಿದಪರೇಷಾಂ ಶನೈರಪಿ |
ಇತಿ ಯೇ ಸಂವದಂತ್ಯತ್ರ ತ ಏತಂ ನಿಶ್ಚಯಂ ವಿದುಃ ॥51॥
ಕೆಲವರು ಹೀಗೆ ಮೈದುನನನ್ನು ವಿವಾಹವಾಗಬಹುದು ಎಂದು ಬರೆಯುತ್ತಾರೆ. ಕೆಲವರು ಇದನ್ನು ಅಷ್ಟಾಗಿ ಒಪ್ಪುವುದಿಲ್ಲ. ಈ ವಿಷಯವನ್ನು ವಿದ್ವಾಂಸರು ನಿಶ್ಚಯ ಮಾಡಿ ತಿಳಿಯುತ್ತಾರೆ.
ತತ್ಪಾಣಿಗ್ರಹಣಾತ್ ಪೂರ್ವಮುತ್ತರಂ ಯತ್ರ ವರ್ತತೇ |
ಸರ್ವಮಂಗಲಮಂತ್ರಂ ವೈ ಮೃಷಾವಾದಸ್ತು ಪಾತಕಃ ॥52॥
ಪಾಣಿಗ್ರಹಣಕ್ಕಿಂತ ಮೊದಲು ಉತ್ತಮವಾದ ಇನ್ನೊಬ್ಬ ವರನು ಬಂದರೆ ಅವನ ಜೊತೆಯಲ್ಲಿ ಸರ್ವಮಂಗಳ ಮಂತ್ರಗಳಿಂದ ವಿವಾಹವನ್ನು ಮಾಡಬಹುದು. ಕನ್ಯಾ ಪಿತೃಗಳಿಗೆ ಸುಳ್ಳನ್ನು ಹೇಳಿದ ದೋಷವು ಮಾತ್ರ ಬರುತ್ತದೆ.
ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ಸಪ್ತಮೇ ಪದೇ |
ಪಾಣಿಗ್ರಾಹಸ್ಯ ಭಾರ್ಯಾ ಸ್ಯಾದ್ ಯಸ್ಯ ಚಾದ್ಭಿಃ ಪ್ರದೀಯತೇ ॥53॥
ಪಾಣಿಗ್ರಹಣ ಮಂತ್ರಗಳ ಪರಿಸಮಾಪ್ತಿ ಎಂದರೆ ಅದು ಸಪ್ತಪದಿಯ ಏಳನೆಯ ಹೆಜ್ಜೆಯಲ್ಲಿ. ಜಲಧಾರಾಪೂರ್ವಕವಾಗಿ ಧಾರೆ ಎರೆದುಕೊಡಲ್ಪಟ್ಟವಳು ಯಾವನು ಅಂತಹ ಪಾಣಿಗ್ರಹಣವನ್ನು ಮಾಡಿಕೊಳ್ಳುತ್ತಾನೆಯೋ ಅವನ ಭಾರ್ಯೆಯಾಗುತ್ತಾಳೆ.
ಅನುಕೂಲಮನುವಂಶಾಂ ಭ್ರಾತ್ರಾ ದತ್ತಾಮುಪಾಗ್ನಿಕಾಮ್ |
ಪರಿಕ್ರಮ್ಯ ಯಥಾನ್ಯಾಯಂ ಭಾರ್ಯಾಂ ವಿಂದೇತ ವೈ ದ್ವಿಜಃ ॥54॥
ಒಳ್ಳೆಯ ವಂಶದಿಂದ ಬಂದ, ತನಗೆ ಅನುಕೂಲಳಾದ ಸಹೋದರರಿಂದ ಅಗ್ನಿ ಸಾಕ್ಷಿಕವಾಗಿ ಕೊಡಲ್ಪಟ್ಟ, ಅಗ್ನಿ ಪ್ರದಕ್ಷಿಣೆಯನ್ನು ಮಾಡಿ ಶಾಸ್ತ್ರೋಕ್ತ ವಿಧಿಯಂತೆ ಸ್ವೀಕರಿಸಲ್ಪಟ್ಟ ಕನ್ಯೆಯು ದ್ವಿಜನ ಪತ್ನಿಯಾಗುತ್ತಾಳೆ (ಅಂತಹ ಕನ್ಯೆಯನ್ನು ದ್ವಿಜರು ಪತ್ನಿಯಾಗಿ ಪಡೆಯಬೇಕು).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಕನ್ಯಾದಾನನಿರ್ಣಯೋ ನಾಮ ಚತುಃಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೈದನೆಯ ಅಧ್ಯಾಯ
ಕನ್ಯಾದಾನಧರ್ಮಗಳು
ಯುಧಿಷ್ಠಿರಃ
ಕನ್ಯಾಯಾಃ ಪ್ರಾಪ್ತಶುಲ್ಕಾಯಾಃ ಪತಿಶ್ಚೇನ್ನಾಸ್ತಿ ಕಶ್ಚನ |
ತತ್ರ ಕಾ ಪ್ರತಿಪತ್ತಿಃ ಸ್ಯಾತ್ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಕನ್ಯೆಯು ಒಬ್ಬನಿಂದ ಶುಲ್ಕವನ್ನು ತೆಗೆದುಕೊಂಡ ಮೇಲೆ ಅವನು ಯಾವುದಾದರೂ ಕಾರ್ಯದಿಂದ ಪುನಃ ಬರದೆ ಹೋದರೆ ಅವಳು ಏನು ಮಾಡಬೇಕೆಂದು ನನಗೆ ಹೇಳು.
ಭೀಷ್ಮಃ
ಯಾ ಪುತ್ರಕಸ್ಯಾಪ್ಯರಿಕ್ಥಸ್ಯ ಪ್ರತಿಪತ್ಸಾ ತದಾ ಭವೇತ್ ॥2॥
ಅಥ ಚೇತ್ ಸಾ ಹರೇಚ್ಛುಲ್ಕಂ ಕ್ರೀತಾ ಶುಲ್ಕಪ್ರದಸ್ಯ ಸಾ |
ತಸ್ಯಾರ್ಥೇಽಪತ್ಯಮೀಹೇತ ಯೇನ ನ್ಯಾಯೇನ ಶಕ್ನುಯಾತ್ ॥3॥
ನ ತಸ್ಯಾ ಮಂತ್ರವತ್ ಕಾರ್ಯಂ ಕಶ್ಚಿತ್ ಕುರ್ವೀತ ಕಿಂಚನ ॥4॥
ಭೀಷ್ಮ ಆಸ್ತಿಯಲ್ಲಿ ಭಾಗವನ್ನು ತೆಗೆದುಕೊಳ್ಳಲು ಅರ್ಹನಾದ ಪುತ್ರನಂತೆ ಅವಳನ್ನು ತಿಳಿಯಬೇಕು. ಅವಳು (ಅವಳಿಗಾಗಿ ಅವಳ ತಂದೆಯು) ಶುಲ್ಕವನ್ನು ತೆಗೆದುಕೊಂಡಿದ್ದರೆ ಅವಳು ಶುಲ್ಕವನ್ನು ಕೊಟ್ಟವನಿಗೆ ಮಾರಲ್ಪಟ್ಟಂತೆಯೇ ಸರಿ. ಯಾವ ನ್ಯಾಯಮಾರ್ಗದಿಂದಾದರೂ ಶುಲ್ಕವನ್ನು ಕೊಟ್ಟವನ ಸಲುವಾಗಿ ಮಕ್ಕಳನ್ನು ಪಡೆಯಲು ಪ್ರಯತ್ನವನ್ನು ಮಾಡಬೇಕು. ಆದರೆ ಅವಳು ಯಾವ ಕಾರ್ಯವನ್ನೂ ಮಂತ್ರ ಪೂರ್ವಕವಾಗಿ ಮಾಡಬಾರದು.
ಸ್ವಯಂವೃತೇತಿ ಸಾವಿತ್ರೀ ಪಿತ್ರಾ ವೈ ಪ್ರತ್ಯಪದ್ಯತ |
ತತ್ ತಸ್ಯಾನ್ಯೇ ಪ್ರಶಂಸಂತಿ ಧರ್ಮಜ್ಞಾ ನೇತರೇ ಜನಾಃ ॥5॥
ಸಾವಿತ್ರಿಯ ತಂದೆಯು ಸತ್ಯವಂತನು ಅವಳಿಂದ ಸ್ವತಃ ವರಿಸಲ್ಪಟ್ಟಿದ್ದಾನೆ ಎಂದು ತಿಳಿದು ಅಂಗೀಕರಿಸಿದನು. ಧರ್ಮಜ್ಞರಾದ ಕೆಲವರು ಅಂತಹ ನೀತಿಯನ್ನು ಪ್ರಶಂಸೆ ಮಾಡುತ್ತಾರೆ. ಇನ್ನು ಕೆಲವರು ಪ್ರಶಂಸೆ ಮಾಡುವುದಿಲ್ಲ.
ಏತತ್ತು ನಾಪರೇ ಚಕ್ರುರ್ನ ಪರೇ ಜಾತು ಸಾಧವಃ |
ಸಾಧೂನಾಂ ಪುನರಾಚಾರೋ ಗರೀಯೋ ಧರ್ಮಲಕ್ಷಣಮ್ ॥6॥
ಸಾವಿತ್ರಿಯ ಮಾಡಿದಂತಹ ಕಾರ್ಯವನ್ನು ಉಳಿದವರು ಯಾರೂ ಮಾಡಲಿಲ್ಲ. ಸಜ್ಜನರಂತೂ ಎಂದೂ ಮಾಡಲಿಲ್ಲ. ಸಜ್ಜನರ ಆಚಾರವೇ ಶ್ರೇಷ್ಠವಾದ ಧರ್ಮಪ್ರಮಾಣವಷ್ಟೆ?
ಅಸ್ಮಿನ್ನೇವ ಪ್ರಕರಣೇ ಸುಕ್ರತುರ್ವಾಕ್ಯಮಬ್ರವೀತ್ |
ನಪ್ತಾ ವಿದೇಹರಾಜಸ್ಯ ಜನಕಸ್ಯ ಮಹಾತ್ಮನಃ ॥7॥
ಅಸದಾಚರಿತೇ ಮಾರ್ಗೇ ಕಥಂ ಸ್ಯಾದನುಕೀರ್ತನಮ್ |

ಅನುಪ್ರಶ್ನಃ ಸಂಶಯೋ ವಾ ಸತಾಮೇತದುಪಾಲಭೇತ್ ॥8॥
ಈ ಪ್ರಕರಣದಲ್ಲಿಯೇ ಮಹಾತ್ಮನಾದ ವಿದೇಹರಾಜನಾದ ಜನಕನ ಮೊಮ್ಮಗನಾದ ಸುಕ್ರತುವು ಹೀಗೆ ಮಾತನಾಡಿದನು: ಅಸಜ್ಜನರು ಆಚರಿಸಿದ ರೀತಿಯನ್ನು ಮಾತಿನಿಂದ ಹೇಳುವುದೂ ಯೋಗ್ಯವಲ್ಲ. ಅದು ವಿಮರ್ಶೆಗೂ ಅರ್ಹವಲ್ಲ. ಸಂಶಯ ಮತ್ತು ವಿಮರ್ಶೆಗಳನ್ನು ಸಜ್ಜನರ ಆಚಾರದಲ್ಲಿಯೇ ಮಾಡಬೇಕು.
ಅಸದೇವ ಹಿ ಧರ್ಮಸ್ಯ ಪ್ರಮಾದೋ ಧರ್ಮ ಆಸುರಃ |
ನಾನುಶುಶ್ರುಮ ಜಾತ್ವೇತಾಮಿಮಾಂ ಪೂರ್ವೇಷು ಜನ್ಮಸು ॥9॥
ಧರ್ಮದ ವಿಷಯದಲ್ಲಿ ಪ್ರಮಾದವನ್ನು ಮಾಡುವುದು ಅಸುರರ ಸ್ವಭಾವ. ಪೂರ್ವದಲ್ಲಿ ಜನಿಸಿದವರಲ್ಲಿ ಇಂತಹ ವೃತ್ತಾಂತವನ್ನು ನಾವು ಎಂದೂ ಕೇಳಲಿಲ್ಲ.
ಭಾರ್ಯಾಪತ್ಯೋರ್ಹಿ ಸಂಬಂಧಃ ಸ್ತ್ರೀಪುಂಸೋಸ್ತುಲ್ಯ ಏವ ಸಃ |
ರತಿಃ ಸಾಧಾರಣೋ ಧರ್ಮ ಇತಿ ಚಾಹ ಸ ಪಾರ್ಥಿವಃ ॥10॥
ಪತಿ-ಪತ್ನಿಯರ ಸಂಬಂಧವು ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾದುದು. ರತಿ ಸುಖವು ಇಬ್ಬರಿಗೂ ಸಾಧಾರಣವಾದ ಧರ್ಮ ಎಂದು ಆ ರಾಜನು ಹೇಳಿದನು.
ಯುಧಿಷ್ಠಿರಃ
ಅಥ ಕೇನ ಪ್ರಮಾಣೇನ ಪುಂಸಾಮಾದೀಯತೇ ಧನಮ್ |
ಪುತ್ರವದ್ಧಿ ಪಿತುಸ್ತಸ್ಯ ಕನ್ಯಾ ಭವಿತುಮರ್ಹತಿ ॥11॥
ಯುಧಿಷ್ಠಿರ (ಪುತ್ರರಿಲ್ಲದಿರುವಾಗ) ಪಿತೃಧನವು ಹೇಗೆ ಇನ್ನೊಬ್ಬರಿಂದ ತೆಗೆದುಕೊಳ್ಳಲ್ಪಡುತ್ತದೆ. ಆ ತಂದೆಗೆ ಪುತ್ರಿಯೇ ಪುತ್ರನಂತಾಗುತ್ತಾಳಷ್ಟೆ? (ಪುತ್ರರಿಗೆ ಧನವು ತೆಗೆದುಕೊಳ್ಳಲ್ಪಡುವುದಿಲ್ಲವಷ್ಟೆ?)
ಭೀಷ್ಮಃ
ಯಥೈವಾತ್ಮಾ ತಥಾ ಪುತ್ರಃ ಪುತ್ರೇಣ ದುಹಿತಾ ಸಮಾ |
ತಸ್ಯಾಮಾತ್ಮನಿ ತಿಷ್ಠಂತ್ಯಾಂ ಕಥಮನ್ಯೋ ಧನಂ ಹರೇತ್ ॥12॥
ಭೀಷ್ಮ ತಾನು ಹೇಗೋ ಹಾಗೆಯೇ ಪುತ್ರನು. ಪುತ್ರಿಯು ಪುತ್ರನಿಗೆ ಸಮಾನಳಾದವಳು. ಅಂತಹ ಆತ್ಮರೂಪಳಾದ ಪುತ್ರಿಯು ಬದುಕಿರುವಾಗ ಅವಳನ್ನು ಬಿಟ್ಟು ಇನ್ನೊಬ್ಬನು ಹೇಗೆ ಪಿತೃಧನವನ್ನು ತೆಗೆದುಕೊಳ್ಳುತ್ತಾನೆ?
ಮಾತುಶ್ಚ ಯೌತಕಂ ಯತ್ ಸ್ಯಾತ್ ಕುಮಾರೀಭಾಗ ಏವ ಸಃ |
ದೌಹಿತ್ರ ಏವ ವಾ ರಿಕ್ಥಮಪುತ್ರಸ್ಯ ಪಿತುರ್ಹರೇತ್ ॥13॥
ತಾಯಿಗೆ ತವರು ಮನೆಯಿಂದ ಬಂದ ಸಂಪತ್ತು ಏನಿದೆಯೋ ಅದೆಲ್ಲವೂ ಪುತ್ರಿಯ ಭಾಗವೇ. ಪುತ್ರನಿಲ್ಲದಿದ್ದರೆ ಆ ಪುರುಷನ ಆಸ್ತಿಯನ್ನು ದೌಹಿತ್ರನೇ ತೆಗೆದುಕೊಳ್ಳಬೇಕು.
ದದಾತಿ ಹಿ ಸ ಪಿಂಡಂ ವೈ ಪಿತುರ್ಮಾತಾಮಹಸ್ಯ ಚ |
ಪುತ್ರದೌಹಿತ್ರಯೋರ್ನೇಹ ವಿಶೇಷೋ ಧರ್ಮತಃ ಸ್ಮೃತಃ ॥14॥
ದೌಹಿತ್ರನು ತನ್ನ ತಂದೆಗೂ ಮತ್ತು ಮಾತಾಮಹನಿಗೂ ಪಿಂಡಪ್ರದಾನ ಮಾಡುವನಷ್ಟೆ? ಧರ್ಮದ ದೃಷ್ಟಿಯಿಂದ ಪುತ್ರನಿಗೂ ಮತ್ತು ದೌಹಿತ್ರನಿಗೂ ಯಾವ ವೈಲಕ್ಷಣ್ಯವೂ ಇಲ್ಲ.
ಅನ್ಯತ್ರ ಜಾತಯಾ ಸಾ ಹಿ ಪ್ರಜಯಾ ಪುತ್ರ ಈಹತೇ |
ದುಹಿತಾಽನ್ಯತ್ರ ಜಾತೇನ ಪುತ್ರೇಣಾಪಿ ವಿಶಿಷ್ಯತೇ ॥15॥
ಪತಿಯು ಮರಣವನ್ನು ಹೊಂದಿದ ಮೇಲೆ ಜ್ಯೇಷ್ಠ-ಕನಿಷ್ಠಾದಿ ದೇವರರಿಂದಲಾಗಲೀ ಅಥವಾ ಪತಿಗೆ ಜೀವಿಸಿದಾಗ ದಾಸಿಯಲ್ಲಿ ಜನಿಸಿದ ಪುತ್ರನಿಂದಾಗಲೀ ಪುತ್ರನಿರಬಹುದು. ಆದರೆ ಅಂತಹ ಪುತ್ರನಿಗಿಂತಲೂ ಪುತ್ರಿಯೇ ಶ್ರೇಷ್ಠಳಾದವಳು. ಅವಳೇ ತಂದೆಯ ಆಸ್ತಿಯ ಬಹುಭಾಗಕ್ಕೆ ಅರ್ಹಳಾದವಳು.
ದೌಹಿತ್ರಕೇಣ ಧರ್ಮೇಣ ನಾತ್ರ ಪಶ್ಯಾಮಿ ಕಾರಣಮ್ |
ವಿಕ್ರೀತಾಸು ಚ ಯೇ ಪುತ್ರಾ ಭವಂತಿ ಪಿತುರೇವ ತೇ ॥16॥
ಕನ್ಯಾಶುಲ್ಕವನ್ನು ಪಡೆದು ಪುತ್ರಿಯನ್ನು ವಿವಾಹ ಮಾಡಿಕೊಟ್ಟು ಅವಳಲ್ಲಿ ದೌಹಿತ್ರನನ್ನು ಪಡೆದರೆ ಅವನಿಗೆ ಮಾತಾಮಹನ ಆಸ್ತಿಯಲ್ಲಿ ಭಾಗವು ಇರುವುದಕ್ಕೆ ಯಾವುದೂ ಕಾರಣವಿಲ್ಲ. ವಿಕ್ರೀತಳಾದವಳಲ್ಲಿ ಹುಟ್ಟಿದ ಪುತ್ರನು ಮಾತ್ರ ತಂದೆಗೇ ಸೇರುತ್ತಾರೆ (ಅವರು ತಂದೆಯ ಆಸ್ತಿಗೆ ಪಾಲುದಾರರಾಗುತ್ತಾರೆ).
ಅಸೂಯವಸ್ತ್ವಧರ್ಮಿಷ್ಠಾಃ ಪರಸ್ವಾದಾಯಿನಃ ಶಠಾಃ |
ಆಸುರಾದಧಿಸಂಭೂತಾ ಧರ್ಮಾದ್ ವಿಷಮವೃತ್ತಯಃ ॥17॥
ಅಸೂಯೆಯಿಂದ ತಮ್ಮ ಧರ್ಮವನ್ನು ಮಾಡುವವರು (ಧರ್ಮಿಷ್ಠರ ಮೇಲಿನ ಅಸೂಯೆಯಿಂದ ಅಧರ್ಮವನ್ನು ಮಾಡುವವರು) ಪರಸ್ವತ್ತನ್ನು ಅಪಹರಿಸುವವರು, ಅಹಂಕಾರಿಗಳು, ಆಸುರವಿವಾಹದಿಂದ ಜೀವಿಸಿದವರು ಇವರೆಲ್ಲರೂ ಧರ್ಮಕ್ಕೆ ವಿರುದ್ಧವಾದ ನಡತೆಯುಳ್ಳವರು.
ಅತ್ರ ಗಾಥಾ ಯಮೋದ್ಗೀತಾಃ ಕೀರ್ತಯಂತಿ ಪುರಾವಿದಃ |
ಧರ್ಮಜ್ಞಾ ಧರ್ಮಶಾಸ್ತ್ರೇಷು ನಿಬದ್ಧಾ ಧರ್ಮಸೇತುಷು ॥18॥
ಈ ವಿಷಯದಲ್ಲಿ ಧರ್ಮಶಾಸ್ತ್ರಗಳನ್ನು ತಿಳಿದವರೂ, ಧರ್ಮದ ಕಟ್ಟುಪಾಡನ್ನು ಅನುಸರಿಸುವವರೂ ಆದ ಪ್ರಾಚೀನರು ಯಮದೇವರು ಹಾಡಿದ ಒಂದು ಗೀತೆಯನ್ನು ಹಾಡುತ್ತಾರೆ.
ಯೋ ಮನುಷ್ಯಃ ಸ್ವಕಂ ಪುತ್ರಂ ವಿಕ್ರೀಯ ಧನಮಿಚ್ಛತಿ |

ಕನ್ಯಾಂ ವಾ ಜೀವಿತಾರ್ಥಾಯ ಯಃ ಶುಲ್ಕೇನ ಪ್ರಯಚ್ಛತಿ ॥19॥
ಸಪ್ತಾವರೇ ಮಹಾಘೋರೇ ನಿರಯೇ ಕಾಲಸಾಹ್ವಯೇ।
ಸ್ವೇದಂ ಮೂತ್ರಂ ಪುರೀಷಂ ಚ ತಸ್ಮಿನ್ ಪ್ರೇತ ಉಪಾಶ್ನುತೇ ॥20॥
ಯಾವ ಮನುಷ್ಯನು ತನ್ನ ಜೀವನದ ಸಲುವಾಗಿ ಪುತ್ರನನ್ನು ಮಾರಿ ಧನವನ್ನು ಪಡೆಯಲು ಬಯಸುತ್ತಾನೆಯೋ, ಅಥವಾ ಕನ್ಯೆಯನ್ನು ಶುಲ್ಕಕ್ಕಾಗಿ ಕೊಡುತ್ತಾನೆಯೋ ಅವನ ನಂತರದ ಏಳು ತಲೆಮಾರಿನವರು ಮರಣವನ್ನು ಹೊಂದಿದ ಮೇಲೆ ಕಾಲಸೂತ್ರನಾಮಕವಾದ ನರಕದಲ್ಲಿ ಬಿದ್ದು ಅಲ್ಲಿ ಮೂತ್ರ ಮತ್ತು ಮಲಗಳನ್ನು ಭಕ್ಷಿಸುತ್ತಾರೆ.
ಆರ್ಷೇ ಗೋಮಿಥುನಂ ಶುಲ್ಕಂ ಕೇಚಿದಾಹುರ್ಮೃಷೈವ ತತ್।
ಅಲ್ಪಂ ವಾ ಬಹು ವಾ ರಾಜನ್ ವಿಕ್ರಯಸ್ತಾವದೇವ ಸಃ ॥21॥
ಆರ್ಷವಿವಾಹದಲ್ಲಿ ಒಂದು ಜೊತೆ ಗೂಳಿಗಳು ಶುಲ್ಕವೆಂದು ಕೆಲವರು ಹೇಳುತ್ತಾರೆ. ಅದು ಸುಳ್ಳು. ಎಲೈ ರಾಜನೇ, ಅಲ್ಪವಾಗಲೀ, ಬಹಳವಾಗಲೀ ಕನ್ಯೆಗೆ ಪ್ರತಿಯಾಗಿ ಏನನ್ನಾದರೂ ತೆಗೆದುಕೊಂಡರೆ ಅದು ವಿಕ್ರಯವೇ ಆಗುತ್ತದೆ.
ಯದ್ಯಪ್ಯಾಚರಿತಃ ಕೈಶ್ಚಿನ್ನೈಷ ಧರ್ಮಃ ಕಥಂಚನ।
ಅನ್ಯೇಷಾಮಪಿ ದೃಶ್ಯಂತೇ ಲೋಭತಃ ಸಂಪ್ರವೃತ್ತಯಃ ॥22॥
ಯದ್ಯಪಿ ಕೆಲವರು ಅದನ್ನು ಆಚರಿಸುತ್ತಾರೆ. ಆದರೂ ಅದು ಯಾವ ರೀತಿಯಲ್ಲೂ ಧರ್ಮವಲ್ಲ. ಪ್ರಪಂಚದಲ್ಲಿ ಅನೇಕರು ಲೋಭದಿಂದ ಇಂತಹ ಪ್ರವೃತ್ತಿಯನ್ನು ಮಾಡುವುದು ಕಂಡುಬರುತ್ತದೆ.
ವಶ್ಯಾಂ ಕುಮಾರೀಂ ವಿಹಿತಾಂ ಯೇ ಚ ತಾಮುಪಭುಂಜತೇ।
ಏತೇ ಪಾಪಸ್ಯ ಕರ್ತಾರಸ್ತಮಸ್ಯಂಧೇಽಥ ಶೇರತೇ ॥23॥
ಇನ್ನೊಬ್ಬನಿಗೆ ಸಂಕಲ್ಪಿಸಿದ ಕುಮಾರಿಯನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ಅವಳನ್ನು ಭೋಗಿಸುವವರು ಪಾಪಿಷ್ಠರು. ಅವರು ಅಂಧತಮಸ್ಸಿನಲ್ಲಿ ಮಲಗುತ್ತಾರೆ.
ಅನ್ಯೋಽಪ್ಯಥ ನ ವಿಕ್ರೇಯೋ ಮನುಷ್ಯಃ ಕಿಂ ಪುನಃ ಪ್ರಜಾಃ।
ಅಧರ್ಮಮೂಲೈರ್ಹಿ ಧನೈರ್ನ ತೈರರ್ಥೋಽಸ್ತಿ ಕಶ್ಚನ ॥24॥
ಯಾವ ಮನುಷ್ಯನನ್ನೂ ವಿಕ್ರಯ ಮಾಡಬಾರದು. ಇನ್ನು ಪ್ರಜೆಗಳನ್ನು ಮಾರುವುದು ಹೇಗೆ? ಅಧರ್ಮದಿಂದ ಗಳಿಸಿದ ಧನದಿಂದ ಯಾವ ಪುರುಷಾರ್ಥವೂ ಉಂಟಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಕನ್ಯಾದಾನಧರ್ಮಕಥನಂ ನಾಮ ಪಂಚಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತಾರನೆಯ ಅಧ್ಯಾಯ
ಸ್ತ್ರೀಯರ ಪ್ರಶಂಸೆ.
ಭೀಷ್ಮಃ
ಪ್ರಾಚೇತಸಸ್ಯ ವಚನಂ ಕೀರ್ತಯಂತಿ ಪುರಾವಿದಃ।
ಯಸ್ಯಾಃ ಕಿಂಚಿನ್ನಾದದತೇ ಜ್ಞಾತಯೋ ನ ಸ ವಿಕ್ರಯಃ ॥1॥
ಭೀಷ್ಮ ಪುರಾಣಗಳನ್ನು ತಿಳಿದವರು ಪ್ರಾಚೇತಸನಾದ ದಕ್ಷನ ಮಾತನ್ನು ಉದಾಹರಿಸುತ್ತಾರೆ. ಕನ್ಯೆಗೆ ಬಂದ ಧನ, ಉಡುಗೊರೆಗಳೆಲ್ಲವನ್ನೂ ಜ್ಞಾತಿಗಳು ತೆಗೆದುಕೊಳ್ಳದಿದ್ದರೆ ಅದು ವಿಕ್ರಯವೆನಿಸುವುದಿಲ್ಲ.
ಅರ್ಹಣಂ ತತ್ಕುಮಾರೀಣಾಮಾನೃಶಂಸ್ಯತಮಂ ಚ ತತ್।
ಸರ್ವಂ ಚ ಪ್ರತಿದೇಯಂ ಸ್ಯಾತ್ ಕನ್ಯಾಯೈ ತದಶೇಷತಃ ॥2॥
ಅದು ಕುಮಾರಿಯರಿಗೆ ಮಾಡಬೇಕಾದ ಕರುಣಾಮಯವಾದ ಪೂಜೆ. ವಿವಾಹದಲ್ಲಿ ಬಂದುದೆಲ್ಲವನ್ನೂ ಸಂಪೂರ್ಣವಾಗಿ ಕನ್ಯೆಗೆ ಕೊಡಬೇಕು.
ಪಿತೃಭಿರ್ಭ್ರಾತೃಭಿಶ್ಚೈವ ಶ್ವಶುರೈರಥ ದೇವರೈಃ।
ಪೂಜ್ಯಾ ಲಾಲಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥3॥
ಬಹಳ ಕಲ್ಯಾಣವನ್ನು ಬಯಸುವ ತಂದೆ, ಸಹೋದರರು, ಮಾವ, ಮೈದುನರು ಎಲ್ಲರೂ ಅವಳನ್ನು ಲಾಲಿಸಿ ಪೂಜಿಸಬೇಕು.
ಯದಿ ವೈ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್।
ಅಮೋದನಾತ್ ಪುನಃ ಪುಂಸಃ ಪ್ರಜನಂ ನ ಪ್ರವರ್ಧತೇ ॥4॥
ಸ್ತ್ರೀಯು ಸಂತೋಷದಿಂದಿಲ್ಲದಿದ್ದರೆ ಪುರುಷನಿಗೆ ಸಂತೋಷವನ್ನು ಕೊಡುವುದಿಲ್ಲ. ಪುರುಷನು ಸಂತೋಷದಿಂದಿಲ್ಲದಿದ್ದರೆ ಪುನಃ ಸಂತತಿಯು ಪ್ರವೃದ್ಧಿಯನ್ನು ಹೊಂದುವುದಿಲ್ಲ.
ಪೂಜ್ಯಾ ಲಾಲಯಿತವ್ಯಾಶ್ಚ ಸ್ತ್ರಿಯೋ ನಿತ್ಯಂ ಜನಾಧಿಪ।
ಅಪೂಜಿತಾಶ್ಚ ಯತ್ರೈತಾಃ ಸರ್ವಾಸ್ತತ್ರಾಫಲಾಃ ಕ್ರಿಯಾಃ।
ತದೈವ ತತ್ಕುಲಂ ನಾಸ್ತಿ ಯದಾ ಶೋಚಂತಿ ಜಾಮಯಃ ॥5॥
ಎಲೈ ಜನಾಧಿಪನೇ, ಸ್ತ್ರೀಯರು ಯಾವಾಗಲೂ ಪೂಜನೀಯರು ಮತ್ತು ಲಾಲನೀಯರು. ಎಲ್ಲಿ ಸ್ತ್ರೀಯರಿಗೆ ಗೌರವವಿಲ್ಲವೋ ಅಲ್ಲಿ ಮಾಡಿದ ಎಲ್ಲ ಕ್ರಿಯೆಗಳೂ ವ್ಯರ್ಥವಾಗುತ್ತವೆ. ಸೊಸೆಯರು ಶೋಕಪಟ್ಟರೆ ಆಗಲೇ ಆ ಕುಲವು ನಾಶವನ್ನು ಹೊಂದುತ್ತದೆ.
ಜಾಮೀಶಪ್ತಾನಿ ಗೇಹಾನಿ ನಿಕೃತ್ತಾನೀವ ಕೃತ್ಯಯಾ।

ನೈವ ಭಾಂತಿ ನ ವರ್ಧಂತೇ ಶ್ರಿಯಾ ಹೀನಾನಿ ಪಾರ್ಥಿವ ॥6॥
ಎಲೈ ರಾಜನೇ, ಸೊಸೆಯರ ಶಾಪಕ್ಕೆ ಒಳಗಾದ ಕುಲಗಳು ಪಿಶಾಚಿಯಿಂದ ಸಂಹರಿಸಲ್ಪಟ್ಟಂತೆ ಪ್ರಕಾಶಿಸುವುದಿಲ್ಲ, ಅಭಿವೃದ್ಧಿಯನ್ನು ಹೊಂದುವುದಿಲ್ಲ, ಸಂಪತ್ತಿನಿಂದಲೂ ರಹಿತವಾಗುತ್ತವೆ.
ಸ್ತ್ರಿಯಃ ಪುಂಸಾಂ ಪರಿದದೇ ಮನುರ್ಜಿಗಮಿಷುರ್ದಿವಮ್ |
ಅಬಲಾಃ ಸ್ವಲ್ಪಕೌಪೀನಾಃ ಸುಹೃದಃ ಸತ್ಯಜಿಷ್ಣವಃ ॥7॥
ಮನುವು ಸ್ವರ್ಗಕ್ಕೆ ಹೋಗಲು ಬಯಸಿ ಪುರುಷರಿಗೆ ಸ್ತ್ರೀಯರನ್ನು ಕೊಟ್ಟನು. ಅವರು ಅಬಲೆಯರು, ಸ್ವಲ್ಪ ಕೆಟ್ಟಕಾರ್ಯವನ್ನು ಮಾಡುವವರು (ಅಲ್ಪ ವಸ್ತ್ರಗಳಿಂದಲೂ ತೃಪ್ತರಾಗುವವರು), ಸ್ನೇಹಮಯರಾದವರು, ಸತ್ಯದಿಂದ ಜಯಿಸುವವರು.
ಈರ್ಷ್ಯವೋ ಮಾನಕಾಮಾಶ್ಚ ಚಂಡಾ ಅಸುಹೃದೋಽಬುಧಾಃ |
ಸ್ತ್ರಿಯೋ ಮಾನನಮರ್ಹಂತಿ ತಾ ಮಾನಯತ ಮಾನವಾಃ ॥8॥
ಕೆಲವರು ಅಸೂಯಾಪರರು, ಸಮ್ಮಾನವನ್ನು ಬಯಸುವವರು, ಹಠ ಸ್ವಭಾವದವರು, ಸ್ನೇಹವಿಲ್ಲದವರು, ಮೂಢರೂ ಆಗಿರುತ್ತಾರೆ. ಆದರೂ ಅವರು ಸಮ್ಮಾನಕ್ಕೆ ಅರ್ಹರಾದವರು. ಎಲೈ ಮಾನವರೇ, ಅವರನ್ನು ಸಮ್ಮಾನಿಸಿ.
ಸ್ತ್ರೀಪ್ರತ್ಯಯೋ ಹಿ ವೋ ಧರ್ಮೋ ರತಿಭೋಗಾಶ್ಚ ಕೇವಲಾಃ |
ಪರಿಚರ್ಯಾನ್ನಸಂಸ್ಕಾರಾಸ್ತದಾಯತ್ತಾ ಭವಂತು ವಃ ॥9॥
ನಿಮ್ಮ ಧರ್ಮ ಮತ್ತು ರತಿಭೋಗಗಳೆಲ್ಲವೂ ಸ್ತ್ರೀಯರ ಜ್ಞಾನ ಮತ್ತು ಶ್ರದ್ಧೆಯನ್ನು ಅವಲಂಬಿಸಿವೆ. ನಿಮ್ಮ ಪರಿಚರ್ಯೆ ಅನ್ನಸಂಸ್ಕಾರ ಎಲ್ಲವೂ ಅವರಿಗೆ ಅಧೀನವಾಗಿರಲಿ.
ಉತ್ಪಾದನಮಪತ್ಯಸ್ಯ ಜಾತಸ್ಯ ಪರಿಪಾಲನಮ್ |
ಪ್ರೀತ್ಯರ್ಥಂ ಲೋಕಯಾತ್ರಾ ಚ ಪಶ್ಯತ ಸ್ತ್ರೀನಿಬಲಂಧನಮ್ ॥10॥
ಮಕ್ಕಳನ್ನು ಪಡೆಯುವುದು, ಹುಟ್ಟಿದ ಮಕ್ಕಳನ್ನು ಪಾಲಿಸುವುದು, ಸಂತೋಷದಿಂದ ಸಮಾಜದಲ್ಲಿ ಪಾಲ್ಗೊಳ್ಳುವುದು ಎಲ್ಲವೂ ಸ್ತ್ರೀಯ ಅಧೀನವಾಗಿದೆ ಎಂಬುದನ್ನು ನೋಡಿ.
ಸಮ್ಮಾನ್ಯಮಾನಾಶ್ಚೈತಾಭಿಃ ಸರ್ವಕಾರ್ಯಾಣ್ಯವಾಪ್ಸ್ಯಥ |
ವಿದೇಹರಾಜದುಹಿತಾ ಚಾತ್ರ ಶ್ಲೋಕಮಗಾಯತ ॥11॥
ಅವರಿಂದ ನೀವು ಸಮ್ಮಾನಿಸಲ್ಪಟ್ಟರೆ ಎಲ್ಲ ಕಾರ್ಯಗಳಲ್ಲಿಯೂ ಸಫಲರಾಗುತ್ತೀರಿ. ವಿದೇಹರಾಜಕುಮಾರಿಯು ಈ ವಿಷಯದಲ್ಲಿ ಒಂದು ಶ್ಲೋಕವನ್ನು ಹಾಡಿದಳು.
ನಾಸ್ತಿ ಯಜ್ಞಃ ಸ್ತ್ರಿಯಃ ಕಶ್ಚಿನ್ನ ಶ್ರಾದ್ಧಂ ನೋಪವಾಸಕಮ್ |
ಧರ್ಮಸ್ತು ಭರ್ತೃಶುಶ್ರೂಷಾ ತಯಾ ಸ್ವರ್ಗಂ ಜಯತ್ಯುತ ॥12॥
ಸ್ತ್ರೀಯರಿಗೆ ಯಾವ ಯಜ್ಞವೂ ಇಲ್ಲ. ಶ್ರಾದ್ಧ ಮತ್ತು ಉಪವಾಸಗಳು ಹೇಳಲ್ಪಡುವುದಿಲ್ಲ. ಭರ್ತೃಸೇವೆಯೊಂದೇ ಧರ್ಮ. ಅದರಿಂದ ಅವರು ಸ್ವರ್ಗವನ್ನು ಜಯಿಸುತ್ತಾರೆ.
ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ |
ಪುತ್ರಾಸ್ತು ಸ್ಥವಿರೀಭಾವೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥13॥
ಬಾಲ್ಯದಲ್ಲಿ ತಂದೆಯು ರಕ್ಷಿಸುತ್ತಾನೆ. ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ. ಮುಪ್ಪಿನಲ್ಲಿ ಪುತ್ರರು ರಕ್ಷಿಸುತ್ತಾರೆ. ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ (ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳುವುದಕ್ಕೆ ಅರ್ಹಳಲ್ಲ. ಅದು ಸಮಾಜಕ್ಕೆ ಒಂದು ಅಪಶಕುನ).
ಶ್ರಿಯ ಏತಾಃ ಸ್ತ್ರಿಯೋ ನಾಮ ಸತ್ಕಾರ್ಯಾ ಭೂತಿಮಿಚ್ಛತಾ |
ಲಾಲಿತಾ ನಿಗೃಹೀತಾ ಚ ಸ್ತ್ರೀ ಶ್ರೀರ್ಭವತಿ ಭಾರತ ॥14॥
ಈ ಸ್ತ್ರೀಯರು ಲಕ್ಷ್ಮಿಯರೇ. ಸಂಪತ್ತನ್ನು ಬಯಸುವವನು ಅವರನ್ನು ಸತ್ಕರಿಸಬೇಕು. ಎಲೈ ಭಾರತನೇ, ಲಾಲಿತರಾಗಿ ಸ್ವಲ್ಪ ನಿಬಂಧನೆಯಲ್ಲೂ ಇಡಲ್ಪಟ್ಟ ಸ್ತ್ರೀಯು ಮನೆಗೆ ಲಕ್ಷ್ಮಿಯೇ ಆಗುತ್ತಾಳೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಸ್ತ್ರೀಪ್ರಶಂಸನಂ ನಾಮ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೇಳನೆಯ ಅಧ್ಯಾಯ
ತಂದೆಯ ಆಸ್ತಿವಿಭಾಗ.
ಯುಧಿಷ್ಠಿರಃ
ಅತೀವಸಂಶಯಚ್ಛೇತ್ತಾ ಭವಾನ್ ವೈ ಪ್ರಥಿತಃ ಕ್ಷಿತೌ |
ಕಶ್ಚಿತ್ತು ಸಂಶಯೋ ಮೇಽಸ್ತಿ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ನನ್ನ ಮನಸ್ಸಿನಲ್ಲಿ ಒಂದು ಸಂಶಯವಿದೆ. ಅದನ್ನು ಪರಿಹರಿಸು. ಇಂತಹ ಕಷ್ಟವಾದ ಆಪತ್ಕಾಲದಲ್ಲಿ ನಾವು ಯಾರನ್ನು ಕೇಳೋಣ.
ಅಸ್ಯಾಮಾಪದಿ ಕಷ್ಟಾಯಾಮನ್ಯಂ ಪೃಚ್ಛಾಮ ಕಂ ವಯಮ್ |
ಸರ್ವಶಾಸ್ತ್ರವಿಧಾನಜ್ಞ ಸಂಶಯಂ ಛಿಂಧಿ ತಾತ ಮೇ ॥2॥
ಸರ್ವಶಾಸ್ತ್ರವಿಧಿಯನ್ನು ತಿಳಿದವನೇ, ಪ್ರೀತಿಪಾತ್ರನೇ, ನನ್ನ ಸಂಶಯವನ್ನು ಪರಿಹರಿಸು. ಈ ಭೂಮಿಯಲ್ಲಿ ಸಂಶಯವನ್ನು

ಪರಿಹರಿಸುವವನೆಂದು ಪ್ರಖ್ಯಾತನಾಗಿದ್ದೀಯೆ.
ಯಥಾ ನರೇಣ ಕರ್ತವ್ಯಂ ಯಶ್ಚ ಧರ್ಮಃ ಸನಾತನಃ |
ಏತತ್ಸರ್ವಂ ಮಹಾಬಾಹೋ ಭವಾನ್ ವ್ಯಾಖ್ಯಾತುಮರ್ಹತಿ ॥3॥
ಎಲೈ ಮಹಾಬಾಹುವೇ, ಮನುಷ್ಯನ ಕರ್ತವ್ಯವೇನು? ಸನಾತನ ಧರ್ಮ ಯಾವುದು? ಇವೆಲ್ಲವನ್ನೂ ನೀನು ಸರಿಯಾಗಿ ಹೇಳಬಲ್ಲೆ.
ಚತಸ್ರೋ ವಿಹಿತಾ ಭಾರ್ಯಾ ಬ್ರಾಹ್ಮಣಸ್ಯ ಪಿತಾಮಹ |
ಬ್ರಾಹ್ಮಣೀ ಕ್ಷತ್ರಿಯಾ ವೈಶ್ಯಾ ಶೂದ್ರಾ ಚ ರತಿಮಿಚ್ಛತಃ ॥4॥
ಎಲೈ ಪಿತಾಮಹನೇ, ಬ್ರಾಹ್ಮಣನಿಗೆ ನಾಲ್ಕು ಭಾರ್ಯೆಯರು ಹೇಳಲ್ಪಟ್ಟಿದ್ದಾರೆ. ಅವರು ಬ್ರಾಹ್ಮಣೀ, ಕ್ಷತ್ರಿಯಾ ಮತ್ತು ವೈಶ್ಯಾ.
ರತಿಯನ್ನು ಬಯಸುವವನಿಗೆ ಶೂದ್ರಳೂ ಆಗಬಹುದು.
ತತ್ರ ಜಾತೇಷು ಪುತ್ರೇಷು ಸರ್ವಾಸಾಂ ಕುರುಸತ್ತಮ |
ಆನುಪೂರ್ವ್ಯೇಣ ಕಸ್ತೇಷಾಂ ಪಿತ್ರ್ಯಂ ದಾಯಾದ್ಯಮರ್ಹತಿ ॥5॥
ಎಲೈ ಕುರುಶ್ರೇಷ್ಠನೇ, ಅವರಲ್ಲಿ ಜನಿಸಿದ ಎಲ್ಲ ಪುತ್ರರಲ್ಲಿ ಕ್ರಮವಾಗಿ ಯಾರು ತಂದೆಯ ಆಸ್ತಿಯಲ್ಲಿ ಎಷ್ಟು ಭಾಗಕ್ಕೆ
ಅಧಿಕಾರಿಗಳಾಗುತ್ತಾರೆ?
ಕೇನ ವಾ ಕಿಂ ತತೋ ಹಾರ್ಯಂ ಪಿತೃವಿತ್ತಾತ್ ಪಿತಾಮಹ |
ಏತದಿಚ್ಛಾಮಿ ಕಥಿತಂ ವಿಭಾಗಸ್ತೇಷು ಯಃ ಸ್ಮೃತಃ ॥6॥
ಎಲೈ ಪಿತಾಮಹನೇ, ಯಾವನು ಪಿತೃಧನದ ಎಷ್ಟು ಭಾಗವನ್ನು ತೆಗೆದುಕೊಳ್ಳಬೇಕು? ಈ ಆಸ್ತಿವಿಭಾಗವನ್ನು ನಿನ್ನಿಂದ ತಿಳಿಯಲು
ಬಯಸುತ್ತೇನೆ.
ಭೀಷ್ಮಃ
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಸ್ತ್ರಯೋ ವರ್ಣಾ ದ್ವಿಜಾತಯಃ |
ಏತೇಷು ವಿಹಿತೋ ಧರ್ಮೋ ಬ್ರಾಹ್ಮಣಸ್ಯ ಯುಧಿಷ್ಠಿರ ॥7॥
ಭೀಷ್ಮ ಎಲೈ ಯುಧಿಷ್ಠಿರನೇ, ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಈ ಮೂರು ವರ್ಣಗಳೂ ದ್ವಿಜ ಎನಿಸಿಕೊಳ್ಳುತ್ತವೆ. ಬ್ರಾಹ್ಮಣನಿಗೆ
ವಿಶೇಷವಾದ ಧರ್ಮಗಳು ವಿಧಿಸಲ್ಪಡುತ್ತವೆ.
ವೈಷಮ್ಯಾದಥ ವಾ ಲೋಭಾತ್ ಕಾಮಾದ್ ವಾಪಿ ಪರಂತಪ |
ಬ್ರಾಹ್ಮಣಸ್ಯ ಭವೇಚ್ಛೂದ್ರಾ ನ ತು ದೃಷ್ಟಾಂತತಃ ಸ್ಮೃತಾ ॥8॥
ಎಲೈ ಪರಂತಪನೇ, ಮನಸ್ತಾಪದಿಂದಲೋ ಅಥವಾ ಲೋಭದಿಂದಲೋ ಅಥವಾ ಕಾಮದಿಂದಲೋ ಬ್ರಾಹ್ಮಣರಿಗೆ ಶೂದ್ರಳು
ಭಾರ್ಯೆಯಾಗಬಹುದು. ಆದರೆ ಹಿಂದಿನಿಂದಲೂ ಅಂತಹ ಉದಾಹರಣೆಗಳಿಲ್ಲ.
ಶೂದ್ರಾಂ ಶಯನಮಾರೋಪ್ಯ ಬ್ರಾಹ್ಮಣಃ ಪೀಡಿತೋ ಭವೇತ್ |
ಪ್ರಾಯಶ್ಚಿತ್ತೀಯತೇ ಚಾಪಿ ವಿಧಿದೃಷ್ಟೇನ ಹೇತುನಾ ॥9॥
ಶೂದ್ರಳನ್ನು ಶಯನದಲ್ಲಿ ಕರೆದುಕೊಂಡರೆ ಬ್ರಾಹ್ಮಣನಿಗೆ ಧರ್ಮಪೀಡೆಯುಂಟಾಗಿ ಅಧೋಗತಿಯನ್ನು ಹೊಂದುತ್ತಾನೆ. ಆ
ಕಾರಣದಿಂದ ಶಾಸ್ತ್ರವು ಹೇಳಿದಂತೆ ಅವನಿಗೆ ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ.
ತತ್ರ ಜಾತೇಷ್ವಪತ್ಯೇಷು ದ್ವಿಗುಣಂ ಸ್ಯಾದ್ ಯುಧಿಷ್ಠಿರ |
ಅತಸ್ತೇ ನಿಯಮಂ ವಿತ್ತೇ ಸಂಪ್ರವಕ್ಷ್ಯಾಮಿ ಭಾರತ ॥10॥
ಎಲೈ ಯುಧಿಷ್ಠಿರನೇ, ಅವಳಲ್ಲಿ ಮಕ್ಕಳನ್ನು ಪಡೆದರೆ ಅದರ ಎರಡರಷ್ಟು ಪ್ರಾಯಶ್ಚಿತ್ತವು ಹೇಳಲ್ಪಡುತ್ತದೆ. ಆದ್ದರಿಂದ
ಪಿತೃಧನದಲ್ಲಿ ಭಾಗ ಮಾಡಬೇಕಾದ ನಿಯಮವನ್ನು ನಾನು ಹೇಳುತ್ತೇನೆ.
ಲಕ್ಷಣ್ಯೋ ಗೋವೃಷೋ ಯಾನಂ ಯತ್ಪ್ರಧಾನತಮಂ ಭವೇತ್ |
ಬ್ರಾಹ್ಮಣ್ಯಾಸ್ತದ್ಧರೇತ್ ಪುತ್ರ ಏಕಾಂಶಂ ವೈ ಪಿತುರ್ಧನಾತ್ ॥11॥
ಶ್ರೇಷ್ಠವಾದ ಪದಾರ್ಥಗಳು, ಎತ್ತು, ಯಾನ, ಪ್ರಧಾನವಾದ ವಸ್ತುಗಳು ಎಲ್ಲವನ್ನೂ ಒಟ್ಟುಮಾಡಿ ಆ ಪಿತೃಧನದಲ್ಲಿ ಅರ್ಧಭಾಗವನ್ನು
ಬ್ರಾಹ್ಮಣಿಯ ಪುತ್ರನು ತೆಗೆದುಕೊಳ್ಳಬೇಕು.
ಶೇಷಂ ತು ದಶಧಾ ಕಾರ್ಯಂ ಬ್ರಾಹ್ಮಣಸ್ವಂ ಯುಧಿಷ್ಠಿರ |
ತತ್ರ ತೇನೈವ ಹರ್ತವ್ಯಾಶ್ಚತ್ವಾರೋಽಂಶಾಃ ಪಿತುರ್ಧನಾತ್ ॥12॥
ಎಲೈ ಯುಧಿಷ್ಠಿರನೇ, ಉಳಿದ ಪಿತೃಧನವನ್ನು ಹತ್ತುಭಾಗವನ್ನಾಗಿ ಮಾಡಬೇಕು. ಅದರಲ್ಲಿ ಆ ಬ್ರಾಹ್ಮಣಿಯ ಪುತ್ರನೇ ನಾಲ್ಕು
ಭಾಗಗಳನ್ನು ತೆಗೆದುಕೊಳ್ಳಬೇಕು.
ಕ್ಷತ್ರಿಯಾಯಾಸ್ತು ಯಃ ಪುತ್ರೋ ಬ್ರಾಹ್ಮಣಃ ಸೋಽಪ್ಯಸಂಶಯಃ |
ಸ ತು ಮಾತೃವಿಶೇಷೇಣ ತ್ರೀನಂಶಾನ್ ಹರ್ತುಮರ್ಹತಿ ॥13॥
ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದ ಪುತ್ರನೂ ಬ್ರಾಹ್ಮಣನೇ, ಇದರಲ್ಲಿ ಸಂಶಯವಿಲ್ಲ. ಅವನೂ ತಾಯಿಯು ವೈಶ್ಯಸ್ತ್ರೀಗಿಂತಲೂ ಶ್ರೇಷ್ಠಳಾದ
ಕಾರಣ ಮೂರು ಭಾಗಗಳನ್ನು ತೆಗೆದುಕೊಳ್ಳಬೇಕು.
ವರ್ಣೇ ತೃತೀಯೇ ಜಾತಸ್ತು ವೈಶ್ಯಾಯಾಂ ಬ್ರಾಹ್ಮಣಾದಪಿ |
ದ್ವಿರಂಶಸ್ತೇನ ಹರ್ತವ್ಯೋ ಬ್ರಾಹ್ಮಣಸ್ವಾದ್ಯುಧಿಷ್ಠಿರ ॥14॥
ಎಲೈ ಯುಧಿಷ್ಠಿರನೇ, ಬ್ರಾಹ್ಮಣನಿಗೆ ವೈಶ್ಯ ಸ್ತ್ರೀಯಲ್ಲಿ ಜನಿಸಿದ ಪುತ್ರನು ಎರಡು ಭಾಗಗಳನ್ನು ತೆಗೆದುಕೊಳ್ಳಬೇಕು.
ಶೂದ್ರಾಯಾಂ ಬ್ರಾಹ್ಮಣಾಜ್ಜಾತೋ ನಿತ್ಯಾದೇಯಧನಃ ಸ್ಮೃತಃ |
ಅಲ್ಪಂ ವಾಪಿ ಪ್ರದಾತವ್ಯಂ ಶೂದ್ರಾಪುತ್ರಾಯ ಭಾರತ ॥15॥

ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಜನಿಸಿದವನು ಯದ್ಯಪಿ ಪಿತೃಧನಕ್ಕೆ ಅರ್ಹನಾಗುವುದಿಲ್ಲ. ಆದರೂ ಎಲೈ ಭಾರತನೇ, ಅವನಿಗೂ ಸ್ವಲ್ಪ ಭಾಗವನ್ನಾದರೂ ಕೊಡಬೇಕು. ಆದ್ದರಿಂದ ಹತ್ತು ಭಾಗದಲ್ಲಿ ಉಳಿದ ಒಂದು ಭಾಗವನ್ನು ಅವನಿಗೆ ಕೊಡಬೇಕು.
ದಶಧಾ ಪ್ರವಿಭಕ್ತಸ್ಯ ಧನಸ್ಯೈಷ ಭವೇತ್ಕ್ರಮಃ |
ಸವರ್ಣಾಸು ತು ಜಾತಾನಾಂ ಸಮಾನ್ ಭಾಗಾನ್ ಪ್ರಕಲ್ಪಯೇತ್ ||
ಹತ್ತು ಭಾಗವಾಗಿ ವಿಭಜಿಸಿದ ತಂದೆಯ ಆಸ್ತಿಯನ್ನು ಹಂಚುವುದರಲ್ಲಿ ಈ ಕ್ರಮವಿರುತ್ತದೆ. ಒಂದೇ ವರ್ಣದ ಸ್ತ್ರೀಯಲ್ಲಿ ಹುಟ್ಟಿದ ಪುತ್ರರು ಆ ಭಾಗವನ್ನು ಎಲ್ಲರೂ ಸಮವಾಗಿ ಹಂಚಿಕೊಳ್ಳಬೇಕು.
ಅಧಿಕಂ ಗುಣಿನೋ ವಾಂಶಂ ಸರ್ವಜ್ಯೇಷ್ಠಃ ಸಮೇಷು ವಾ |
ದೇಯಂ ವರ್ಣೋತ್ತರಾಧಿಕ್ಯಾದಪರೇಷ್ವಲ್ಪಕೇಷು ಚ ||17||
ಅಥವಾ ಒಂದೇ ತಾಯಿಯಲ್ಲಿ ಹುಟ್ಟಿದ ಪುತ್ರರಲ್ಲಿ ಸರ್ವಜ್ಯೇಷ್ಠನೂ, ಗುಣದಿಂದ ಶ್ರೇಷ್ಠನಾದವನೂ ಅಧಿಕ ಭಾಗವನ್ನು ತೆಗೆದುಕೊಂಡು ಉಳಿದವನ್ನು ಉಳಿದವರಿಗೆ ಕೊಡಬೇಕು.
ಅಬ್ರಾಹ್ಮಣಂ ತು ಮನ್ಯಂತೇ ಶೂದ್ರಾಪುತ್ರಮನೈಪುಣಾತ್ |
ತ್ರಿಷು ವರ್ಣೇಷು ಜಾತೋ ಹಿ ಬ್ರಾಹ್ಮಣಾದ್ ಬ್ರಾಹ್ಮಣೋ ಭವೇತ್ ||
ಶೂದ್ರಸ್ತ್ರೀಯ ಪುತ್ರನಿಗೆ ನೈಪುಣ್ಯವಿಲ್ಲದಿರುವುದರಿಂದ ಅವನನ್ನು ಬ್ರಾಹ್ಮಣನೆಂದು ಅಂಗೀಕರಿಸುವುದಿಲ್ಲ. ಉಳಿದ ಮೂರು ವರ್ಣಗಳಲ್ಲಿ ಬ್ರಾಹ್ಮಣನಿಂದ ಜನಿಸಿದ ಪುತ್ರನು ಬ್ರಾಹ್ಮಣನಾಗುತ್ತಾನೆ.
ಸ್ಮೃತಾ ವರ್ಣಾಶ್ಚ ಚತ್ವಾರಃ ಪಂಚಮೋ ನಾಧಿಗಮ್ಯತೇ |
ಹರೇತ್ತು ದಶಮಂ ಭಾಗಂ ಶೂದ್ರಾಪುತ್ರಃ ಪಿತುರ್ಧನಾತ್ ||19||
ವರ್ಣಗಳು ನಾಲ್ಕೇ ಆಗಿವೆ. ಐದನೆಯ ವರ್ಣವು ಎಲ್ಲಿಯೂ ಕೇಳಿ ಬರುವುದಿಲ್ಲ. ಶೂದ್ರಸ್ತ್ರೀಯ ಪುತ್ರನಾದವನು ತಂದೆಯ ಧನದಲ್ಲಿ ಹತ್ತನೆಯ ಒಂದು ಭಾಗವನ್ನು ಸ್ವೀಕರಿಸಬೇಕು.
ತತ್ತು ದತ್ತಂ ಹರೇತ್ಪಿತ್ರಾ ನಾದತ್ತಂ ಹರ್ತುಮರ್ಹತಿ |
ಅವಶ್ಯಂ ಹಿ ಧನಂ ದೇಯಂ ಶೂದ್ರಾಪುತ್ರಾಯ ಭಾರತ ||20||
ಎಲೈ ಭಾರತನೇ, ಅದನ್ನೂ ಸಹ ತಂದೆಯು ಕೊಟ್ಟುದನ್ನು ಸ್ವೀಕರಿಸಬೇಕು. ತಂದೆಯು ಕೊಡದಿದ್ದಾಗ ಕಿತ್ತುಕೊಳ್ಳಬಾರದು. ಶೂದ್ರಸ್ತ್ರೀಯ ಪುತ್ರನಿಗೂ ಅವಶ್ಯವಾಗಿ ಧನವನ್ನು ಕೊಡಬೇಕು.
ಆನೃಶಂಸ್ಯಂ ಪರೋ ಧರ್ಮ ಇತಿ ತಸ್ಮೈ ಪ್ರದೀಯತೇ |
ಯತ್ರ ತತ್ರ ಸಮುತ್ಪನ್ನೋ ಗುಣಾಯೈವೋಪಕಲ್ಪತೇ ||21||
ದಯೆಯು ದೊಡ್ಡ ಧರ್ಮ ಎಂಬ ಕಾರಣದಿಂದ ಅವನಿಗೆ ಕೊಡಲ್ಪಡುತ್ತದೆ. ಅವನು ಎಲ್ಲಿ ಜನಿಸಿದರೂ ದಯೆಯಿಂದ ಮಾಡುವ ಈ ಧನದಾನವು ಗುಣವೆಂದೇ ಹೇಳಲ್ಪಡುತ್ತದೆ.
ಯದಿ ವಾಪ್ಯೇಕಪುತ್ರಃ ಸ್ಯಾದಪುತ್ರೋ ಯದಿ ವಾ ಭವೇತ್ |
ನಾಧಿಕಂ ದಶಮಾದ್ ದದ್ಯಾಚ್ಛೂದ್ರಾಪುತ್ರಾಯ ಭಾರತ ||22||
ತಂದೆಗೆ ಒಬ್ಬನೇ ಪುತ್ರನಿದ್ದರೆ ಅಥವಾ ಪುತ್ರನೇ ಇಲ್ಲದಿದ್ದರೂ ಎಲೈ ಭಾರತನೇ, ಶೂದ್ರಸ್ತ್ರೀಯ ಪುತ್ರನು ಹತ್ತನೆಯ ಒಂದು ಭಾಗಕ್ಕಿಂತ ಹೆಚ್ಚು ಆಸ್ತಿಯನ್ನು ತೆಗೆದುಕೊಳ್ಳಬಾರದು.
ಸ್ಮೃತ ಏಕಶ್ಚತುರ್ಭಾಗಃ ಕನ್ಯಾಭಾಗಸ್ತು ಧರ್ಮತಃ |
ಅಭ್ರಾತೃಕಾ ಸಮಗ್ರಾರ್ಹಾ ಚಾರ್ಧಸ್ಯೇತ್ಯಪರೇ ವಿದುಃ ||23||
ತಂದೆಯ ಆಸ್ತಿಯಲ್ಲಿ ಪುತ್ರಿಯ ಭಾಗ ನಾಲ್ಕನೆಯ ಒಂದು ಭಾಗ ಎಂದು ಧರ್ಮದಿಂದ ಹೇಳಲ್ಪಡುತ್ತದೆ. ಅವಳಿಗೆ ಸಹೋದರರೇ ಇಲ್ಲದಿದ್ದರೆ ಅವಳು ತಂದೆಯ ಸಮಸ್ತ ಧನಕ್ಕೆ ಅರ್ಹಳಾಗುತ್ತಾಳೆ. ಇನ್ನು ಕೆಲವರು ತಂದೆ ಇದ್ದಾಗ ಅರ್ಧಕ್ಕೆ ಮಾತ್ರ ಅರ್ಹಳಾಗುತ್ತಾಳೆಂದು ಹೇಳುತ್ತಾರೆ.
ತ್ರೈವಾರ್ಷಿಕಾದ್ ಯದಾ ಭಕ್ತಾದಧಿಕಂ ಸ್ಯಾದ್ ದ್ವಿಜಸ್ಯ ತು |
ಯಜೇತ ತೇನ ದ್ರವ್ಯೇಣ ನ ವೃಥಾ ಸಾಧಯೇದ್ ಧನಮ್ ||24||
ದ್ವಿಜನಿಗೆ ಹೀಗೆ ತೆಗೆದುಕೊಂಡ ಭಾಗದಲ್ಲಿ ಮೂರುವರ್ಷಗಳಿಗೆ ಬೇಕಾಗುವ ಧನಕ್ಕಿಂತ ಹೆಚ್ಚು ಧನವಿದ್ದರೆ ಆ ಧನದಿಂದ ಯಜ್ಞವನ್ನು ಮಾಡಬೇಕು. ಧನವನ್ನು ವ್ಯರ್ಥವಾಗಿ ಸಂಗ್ರಹಿಸಿ ವೃದ್ಧಿಪಡಿಸಬಾರದು.
ತ್ರಿಸಾಹಸ್ರಪರೋ ದಾಯಃ ಸ್ತ್ರಿಯೋ ದೇಯೋ ಧನಸ್ಯ ವೈ |
ತಚ್ಚ ಭರ್ತ್ರಾ ಧನಂ ದತ್ತಂ ನಾದತ್ತಂ ಭೋಕ್ತುಮರ್ಹತಿ ||25||
ಪುತ್ರಿಗೆ ಕೊಡಬಹುದಾದ ಪರಮ ಆಸ್ತಿಯ ಭಾಗವೆಂದರೆ ಮೂರುಸಹಸ್ರ (ನಿಷ್ಕಗಳು). ಅದನ್ನು ಅವಳು ತನ್ನ ಪತಿಯು ಕೊಟ್ಟುದನ್ನು ಮಾತ್ರ ಸ್ವೀಕರಿಸಬೇಕು. ಪತಿಯಿಂದ ಕೊಡಲ್ಪಡದಿದ್ದುದನ್ನು ಅವಳು ಭೋಗಿಸಬಾರದು.
ಸ್ತ್ರಿಯಾಸ್ತು ಯತ್ ಭವೇದ್ ವಿತ್ತಂ ಪಿತ್ರಾ ದತ್ತಂ ಯುಧಿಷ್ಠಿರ |
ಕನ್ಯೈಕಾ ತದ್ವರೇದನ್ಯಾ ಪಿತೃದಾಯಾದ್ಯಭಾಗಿನಃ ||26||
ಎಲೈ ಯುಧಿಷ್ಠಿರನೇ, ತಂದೆಯ ಮನೆಯಿಂದ ಸ್ತ್ರೀಗೆ ಬಂದ ಧನಕ್ಕೆ ಅವಳ ಪುತ್ರಿಯು ಮಾತ್ರ ಅಧಿಕಾರಿಯಾಗುತ್ತಾಳೆ. ಉಳಿದವರು ಅದರಲ್ಲಿ ಭಾಗಕ್ಕೆ ಅರ್ಹರಾಗುವುದಿಲ್ಲ.
ಸ್ತ್ರೀಣಾಂ ತು ಪತಿದಾಯಾದ್ಯಮುಪಭೋಗಫಲಂ ಸ್ಮೃತಮ್ |
ನಾಪಹಾರಂ ಸ್ತ್ರಿಯಃ ಕುರ್ಯುಃ ಪತಿವಿತ್ತಾತ್ ಕಥಂಚನ ||27||
ಸ್ತ್ರೀಯರಿಗೆ ದೊರಕುವ ಪತಿಯ ಧನ ಮತ್ತು ತಂದೆಯ ಧನಗಳನ್ನು ಉಪಭೋಗಿಸಿ ವ್ಯಯ ಮಾಡಬೇಕು. ಸ್ತ್ರೀಯರು ಪತಿವಿತ್ತವನ್ನು

ಎಂದೂ ಅಪಹರಿಸಬಾರದು (ಪತಿಯು ಕೊಟ್ಟುದನ್ನು ಮಾತ್ರ ಉಪಯೋಗಿಸಬೇಕು).
ಶೂದ್ರೇಣ ಚಾಧಿಕಂ ದೇಯಂ ದ್ವಿಜೇಭ್ಯೋ ಯಜನಂ ಪ್ರತಿ |
ದಾಸೈರ್ವಾ ಬಂಧುಭಿರ್ವಾಽಪಿ ಸ್ವತ್ವಂ ಯೋಗಾದ್ ಯಥಾರ್ಹತಃ ||
ಶೂದ್ರನಾದವನು ಬ್ರಾಹ್ಮಣನಿಗೆ ಯಾಗ-ಯಜ್ಞಕ್ಕಾಗಿ ಅಧಿಕ ಭಾಗವನ್ನು ಕೊಡಬೇಕು. ದಾಸರಾಗಲೀ ಅಥವಾ ಬಂಧುಗಳಾಗಲೀ ಹಾಗೆ ಕೊಟ್ಟು ಉಳಿದ ಭಾಗಕ್ಕೆ ಅರ್ಹರಾಗುತ್ತಾರೆ.
ಜ್ಞಾತಿಕ್ಷತ್ರಿಯವೈಶ್ಯಾಭ್ಯಾಂ ತ್ರೈವಾರ್ಷಿಕಾದಧಿಕಂ ಧನಮ್ |
ವಿಪ್ರೇಭ್ಯಸ್ತು ಪ್ರದಾತವ್ಯಂ ಯಜ್ಞಾರ್ಥಮಭಿವರ್ಜಿತಮ್ ||29||
ಜ್ಞಾತಿಗಳು, ಕ್ಷತ್ರಿಯರು ಮತ್ತು ವೈಶ್ಯರು ತಮಗೆ ಮೂರುವರ್ಷಕ್ಕೆ ಬೇಕಾಗುವುದಕ್ಕಿಂತ ಅಧಿಕವಾದ ಧನವನ್ನು ಯಜ್ಞಾರ್ಥವಾಗಿ ಬ್ರಾಹ್ಮಣರಿಗೆ ಕೊಡಬೇಕು.
ಸ್ತ್ರಿಯಾಸ್ತು ಯದ್ ಭವೇದ್ ವಿತ್ತಂ ಪಿತ್ರಾ ದತ್ತಂ ಯುಧಿಷ್ಠಿರ |
ಬ್ರಾಹ್ಮಣ್ಯಾಸ್ತದ್ಧರೇತ್ ಕನ್ಯಾ ಯಥಾ ಪುತ್ರಸ್ತಥಾ ಹಿ ಸಾ |
ಸಾ ಹಿ ಪುತ್ರಸಮಾ ರಾಜನ್ ವಿಹಿತಾ ಕುರುನಂದನ ||30||
ಎಲೈ ಯುಧಿಷ್ಠಿರನೇ, ಸ್ತ್ರೀಗೆ ತಂದೆಯಿಂದ ಕೊಟ್ಟ ಧನವೇನಿದೆಯೋ ಅದನ್ನು ಬ್ರಾಹ್ಮಣಪತ್ನಿಯ ಪುತ್ರಿಯು ತೆಗೆದುಕೊಳ್ಳಬೇಕು. ಅವಳು ಪುತ್ರನಂತೆಯೇ ಇರುತ್ತಾಳೆ. ಎಲೈ ರಾಜನೇ, ಕುರುನಂದನನೇ, ಅವಳು ಪುತ್ರನಿಗೆ ಸಮಳಾದವಳು ಎಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.
ಏವಮೇತತ್ಸಮುದ್ದಿಷ್ಟಂ ಧರ್ಮೇಷು ಭರತರ್ಷಭ |
ಏತದ್ ಧರ್ಮಮನುಸ್ಮೃತ್ಯ ನ ವೃಥಾ ಸಾಧಯೇದ್ ಧನಮ್ ||31||
ಎಲೈ ಭರತರ್ಷಭನೇ, ಧರ್ಮಶಾಸ್ತ್ರಗಳಲ್ಲಿ ಆಸ್ತಿ ವಿಭಾಗವು ಹೀಗೆ ಹೇಳಲ್ಪಟ್ಟಿದೆ. ಈ ಧರ್ಮವನ್ನು ಮನಸ್ಸಿನಲ್ಲಿ ಸ್ಮರಿಸಿ ವ್ಯರ್ಥವಾಗಿ ಧನಸಂಗ್ರಹವನ್ನು ಮಾಡಬಾರದು.
ಯುಧಿಷ್ಠಿರಃ
ಶೂದ್ರಾಯಾಂ ಬ್ರಾಹ್ಮಣಾಜ್ಜಾತೋ ಯದ್ಯದೇಯಧನಃ ಸ್ಮೃತಃ |
ಕೇನ ಪ್ರತಿವಿಶೇಷೇಣ ದಶಮೋಽಪ್ಯಸ್ಯ ದೀಯತೇ ||32||
ಯುಧಿಷ್ಠಿರ ಶೂದ್ರಳಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಪುತ್ರನು ತಂದೆಯ ಆಸ್ತಿಯ ಭಾಗಕ್ಕೆ ಅನರ್ಹನಾದರೆ ಯಾವ ಕಾರಣದಿಂದ ಅವನಿಗೆ ಹತ್ತನೆಯ ಒಂದು ಭಾಗವಾದರೂ ಕೊಡಲ್ಪಡುತ್ತದೆ?
ಬ್ರಾಹ್ಮಣ್ಯಾಂ ಬ್ರಾಹ್ಮಣಾಜ್ಜಾತೋ ಬ್ರಾಹ್ಮಣಃ ಸ್ಯಾನ್ನ ಸಂಶಯಃ |
ಕ್ಷತ್ರಿಯಾಯಾಂ ತಥೈವ ಸ್ಯಾದ್ ವೈಶ್ಯಾಯಾಮಪಿ ಚೈವ ಹಿ ||33||
ಬ್ರಾಹ್ಮಣಿಯಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಪುತ್ರನು ಬ್ರಾಹ್ಮಣನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ. ಕ್ಷತ್ರಿಯ ಸ್ತ್ರೀ ಮತ್ತು ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಪುತ್ರನೂ ಹಾಗೆಯೇ ಬ್ರಾಹ್ಮಣನಾಗುತ್ತಾನೆ?
ಕಸ್ಮಾತ್ ತೇ ವಿಷಮಂ ಭಾಗಂ ಭಜೇರನ್ ನೃಪಸತ್ತಮ |
ಯದಾ ಸರ್ವೇ ತ್ರಯೋ ವರ್ಣಾಸ್ತ್ವಯೋಕ್ತಾ ಬ್ರಾಹ್ಮಣಾ ಇತಿ ||34||
ಎಲೈ ನೃಪಶ್ರೇಷ್ಠನೇ, ಮೂರು ವರ್ಣದ ಸ್ತ್ರೀಯರಲ್ಲಿ ಜನಿಸಿದ ಪುತ್ರರೆಲ್ಲರೂ ಬ್ರಾಹ್ಮಣರಾದ ಮೇಲೆ ಅವರು ಏಕೆ ವಿಷಮವಾಗಿ ಭಾಗವನ್ನು ಸ್ವೀಕರಿಸುತ್ತಾರೆ?
ಭೀಷ್ಮಃ
ದಾರಾ ಇತ್ಯುಚ್ಯತೇ ಲೋಕೇ ನಾಮ್ನೈಕೇನ ಪರಂತಪ |
ಪ್ರೋಕ್ತೇನ ಚೈಕನಾಮ್ನಾಯಂ ವಿಶೇಷಃ ಸುಮಹಾನ್ ಭವೇತ್ ||35||
ಭೀಷ್ಮ ಎಲೈ ಪರಂತಪನೇ, ಮೂರು ಜನ ಪತ್ನಿಯರೂ ದಾರಾ ಎಂಬ ಒಂದೇ ಶಬ್ದದಿಂದ ಹೇಳಲ್ಪಡುತ್ತಾರೆ. ಆದರೆ ಒಂದೇ ಶಬ್ದದಿಂದ ಹೇಳಿದರೂ ಅವರಲ್ಲಿ ಬಹಳ ವ್ಯತ್ಯಾಸಗಳಿವೆ.
ತಿಸ್ರಃ ಕೃತ್ವಾ ಪುರೋ ಭಾರ್ಯಾಃ ಪಶ್ಚಾದ್ ವಿಂದೇತ ಬ್ರಾಹ್ಮಣೀಮ್ |
ಸಾ ಜ್ಯೇಷ್ಠಾ ಸಾ ಚ ಪೂಜ್ಯಾ ಸ್ಯಾತ್ ಸಾ ಚ ತಾಭ್ಯೋ ಗರೀಯಸೀ ||
ಮೊದಲು ಉಳಿದ ವರ್ಣದ ಭಾರ್ಯೆಯರನ್ನು ಸಂಪಾದಿಸಿ ಕೊನೆಯಲ್ಲಿ ಬ್ರಾಹ್ಮಣ ಸ್ತ್ರೀಯನ್ನು ವಿವಾಹವಾದರೂ ಬ್ರಾಹ್ಮಣಸ್ತ್ರೀಯೇ ಜ್ಯೇಷ್ಠಳಾಗುತ್ತಾಳೆ, ಪೂಜ್ಯಳಾಗುತ್ತಾಳೆ ಮತ್ತು ಆ ಮೂವರಿಗಿಂತ ಶ್ರೇಷ್ಠಳೂ ಆಗುತ್ತಾಳೆ.
ಸ್ನಾನಂ ಪ್ರಸಾಧನಂ ಭರ್ತುರ್ದಂತಧಾವನಮಂಜನಮ್ |
ಹವ್ಯಂ ಕವ್ಯಂ ಚ ಯಚ್ಚಾನ್ಯದ್ಧರ್ಮಯುಕ್ತಂ ಭವೇದ್ ಗೃಹೇ ||37||
ನ ತಸ್ಯಾಂ ಜಾತು ತಿಷ್ಠಂತ್ಯಾಮನ್ಯಾ ತತ್ಕರ್ತುಮರ್ಹತಿ |
ಬ್ರಾಹ್ಮಣೀ ತ್ವೇವ ತತ್ಕುರ್ಯಾದ್ ಬ್ರಾಹ್ಮಣಸ್ಯ ಯುಧಿಷ್ಠಿರ ||38||
ಪತಿಯು ಗೃಹದಲ್ಲಿ ಮಾಡಬೇಕಾದ ಸ್ನಾನ, ಅಲಂಕಾರ, ದಂತಧಾವನ, ಅಂಜನ, ಹವ್ಯ-ಕವ್ಯಗಳು, ಉಳಿದ ಧರ್ಮಕಾರ್ಯಗಳು ಇವುಗಳನ್ನು ಬ್ರಾಹ್ಮಣಿಯು ಇರುವಾಗ ಉಳಿದವರು ಮಾಡುವಂತಿಲ್ಲ. ಎಲೈ ಯುಧಿಷ್ಠಿರನೇ, ಬ್ರಾಹ್ಮಣನಾದವನಿಗೆ ಈ ಸಹಾಯ ಅಥವಾ ಉಪಕಾರವನ್ನು ಬ್ರಾಹ್ಮಣಿಯೇ ಮಾಡಬೇಕು.
ಅನ್ನಂ ಪಾನಂ ಚ ಮಾಲ್ಯಂ ಚ ವಾಸಾಂಸ್ಯಾಭರಣಾನಿ ಚ |
ಬ್ರಾಹ್ಮಣ್ಯೈ ತಾನಿ ದೇಯಾನಿ ಭರ್ತುಃ ಸಾ ಹಿ ಗರೀಯಸೀ ||39||

ಅನ್ನ-ಪಾನಗಳು, ವಸ್ತ್ರ-ಮಾಲ್ಯಗಳು, ಆಭರಣಗಳು ಇವುಗಳನ್ನು ಬ್ರಾಹ್ಮಣಿಯೇ ಕೊಡಬೇಕು. ಏಕೆಂದರೆ ಪತಿಗೆ ಅವಳೇ ಶ್ರೇಷ್ಠಳಾದವಳು.
ಮನುನಾಭಿಹಿತಂ ಶಾಸ್ತ್ರಂ ಯಚ್ಚಾಪಿ ಕುರುನಂದನ |
ಅನುರಾಗಸ್ತಥಾ ಧರ್ಮೋ ಸಾ ಹಿ ತಾಭ್ಯೋ ಗರೀಯಸೀ | |40||
ಎಲೈ ಕುರುನಂದನನೇ, ಮನುವು ಹೇಳಿದ ಶಾಸ್ತ್ರವು ಹಾಗೆಯೇ ಇದೆ. ಬ್ರಾಹ್ಮಣಿಯಲ್ಲಿಯೇ ಅನುರಾಗ ಮತ್ತು ಧರ್ಮಗಳು ಅಧಿಕವಾಗಿದೆ. ಏಕೆಂದರೆ ಅವಳೇ ಉಳಿದವರಿಗಿಂತಲೂ ಶ್ರೇಷ್ಠಳಾದವಳು.
ಅಥ ಚೇದನ್ಯಥಾ ಕುರ್ಯಾತ್ ಕಾಮಲೋಭಾದ್ ಯುಧಿಷ್ಠಿರ |
ಯಥಾ ಬ್ರಾಹ್ಮಣಚಂಡಾಲಃ ಪೂರ್ವದೃಷ್ಟಸ್ತಥೈವ ಸಃ ||41||
ಎಲೈ ಯುಧಿಷ್ಠಿರನೇ, ಕಾಮಲೋಭದಿಂದ ಬ್ರಾಹ್ಮಣನು ಬೇರೆ ರೀತಿಯಲ್ಲಿ ನಡೆದುಕೊಂಡರೆ ಅವನು ಹಿಂದೆ ಹೇಳಿದ ಬ್ರಾಹ್ಮಣ ಚಂಡಾಲನಂತೆಯೇ ಆಗುತ್ತಾನೆ.
ಬ್ರಾಹ್ಮಣ್ಯಾಃ ಸದೃಶಃ ಪುತ್ರಃ ಕ್ಷತ್ರಿಯಾಯಾಶ್ಚ ಯೋ ಭವೇತ್ |
ರಾಜನ್ ವಿಶೇಷೋ ನಾಸ್ತ್ಯತ್ರ ವರ್ಣಯೋರುಭಯೋರಪಿ |
ನ ತು ಜಾತ್ಯಾ ಸಮಾ ಲೋಕೇ ಬ್ರಾಹ್ಮಣ್ಯಾಃ ಕ್ಷತ್ರಿಯಾ ಭವೇತ್ ||42||
ಎಲೈ ರಾಜನೇ, ಕ್ಷತ್ರಿಯಸ್ತ್ರೀಯ ಪುತ್ರನು, ಬ್ರಾಹ್ಮಣಸ್ತ್ರೀಯ ಪುತ್ರನ ಸದೃಶನಾಗಿದ್ದರೆ ಆ ಎರಡು ವರ್ಣದವರಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ. ಜಾತಿಯಿಂದ ಮಾತ್ರ ಕ್ಷತ್ರಿಯ ಸ್ತ್ರೀಯು ಬ್ರಾಹ್ಮಣ ಸ್ತ್ರೀಗೆ ಸಮವಾಗುವುದಿಲ್ಲ. ಉಳಿದ ಎಲ್ಲ ವಿಷಯಗಳಲ್ಲಿಯೂ ಸಮನಾಗುತ್ತಾಳೆ.
ಬ್ರಾಹ್ಮಣ್ಯಾಃ ಪ್ರಥಮಃ ಪುತ್ರೋ ಭೂಯಾನ್ ಸ್ಯಾದ್ರಾಜಸತ್ತಮ |
ಭೂಯೋಽಪಿ ಭೂಯಸಾ ಹಾರ್ಯಂ ಪಿತೃವಿತ್ತಾದ್ ಯುಧಿಷ್ಠಿರ ||43||
ಎಲೈ ರಾಜಶ್ರೇಷ್ಠನೇ, ಬ್ರಾಹ್ಮಣಿಯ ಪ್ರಥಮ ಪುತ್ರನು ಶ್ರೇಷ್ಠನಾದವನು. ಆದ್ದರಿಂದ ಎಲೈ ಯುಧಿಷ್ಠಿರನೇ, ಅವನು ಪಿತೃಧನದಲ್ಲಿ ಅಧಿಕ ಭಾಗವನ್ನು ಪಡೆಯಬೇಕು.
ಯಥಾ ನ ಸದೃಶೀ ಜಾತು ಬ್ರಾಹ್ಮಣ್ಯಾಃ ಕ್ಷತ್ರಿಯಾ ಭವೇತ್ |
ಕ್ಷತ್ರಿಯಾಯಾಸ್ತಥಾ ವೈಶ್ಯಾ ನ ಜಾತು ಸದೃಶೀ ಭವೇತ್ ||44||
ಕ್ಷತ್ರಿಯಸ್ತ್ರೀಯು ಹೇಗೆ ಬ್ರಾಹ್ಮಣಸ್ತ್ರೀಗೆ ಎಂದೂ ಸದೃಶವಾಗುವುದಿಲ್ಲವೋ ಅದರಂತೆ ವೈಶ್ಯಸ್ತ್ರೀಯೂ ಸಹ ಕ್ಷತ್ರಿಯಸ್ತ್ರೀಗೆ ಎಂದೂ ಸದೃಶವಾಗುವುದಿಲ್ಲ.
ಶ್ರೀಶ್ಚ ರಾಜ್ಯಂ ಚ ಕೋಶಶ್ಚ ಕ್ಷತ್ರಿಯಾಣಾಂ ಯುಧಿಷ್ಠಿರ |
ವಿಹಿತಂ ದೃಶ್ಯತೇ ರಾಜನ್ ಸಾಗರಾಂತಾ ಚ ಮೇದಿನೀ ||45||
ಎಲೈ ಯುಧಿಷ್ಠಿರನೇ, ಸಂಪತ್ತು, ರಾಜ್ಯ, ಕೋಶ, ಸಾಗರಾಂತವಾದ ಭೂಮಿ ಎಲ್ಲವೂ ಕ್ಷತ್ರಿಯರಿಗೆ ವಿಹಿತವಾಗಿರುವುದು ಕಂಡುಬರುತ್ತದೆ.
ಕ್ಷತ್ರಿಯೋ ಹಿ ಸ್ವಧರ್ಮೇಣ ಶ್ರಿಯಂ ಪ್ರಾಪ್ನೋತಿ ಭೂಯಸೀಮ್ |
ರಾಜಾ ದಂಡಧರೋ ರಾಜನ್ ರಕ್ಷಾ ನಾನ್ಯತ್ರ ಕ್ಷತ್ರಿಯಾತ್ ||46||
ಕ್ಷತ್ರಿಯನು ತನ್ನ ಧರ್ಮದಿಂದ ಬಹಳ ಸಂಪತ್ತನ್ನು ಗಳಿಸುತ್ತಾನೆ. ಎಲೈ ರಾಜನೇ, ರಾಜನೇ ದಂಡಧಾರಿಯಾಗಿ ರಕ್ಷಿಸುವವನು. ಲೋಕದ ರಕ್ಷಣೆಯು ಕ್ಷತ್ರಿಯನನ್ನು ಬಿಟ್ಟು ಬೇರೆಯವರಿಗೆ ಹೇಳಲ್ಪಟ್ಟಿಲ್ಲ.
ಬ್ರಾಹ್ಮಣಾ ಹಿ ಮಹಾಭಾಗಾ ದೇವಾನಾಮಪಿ ದೇವತಾಃ |
ತೇಷು ಧರ್ಮಾಶ್ಚ ವೇದಾಶ್ಚ ಗೌರವಂ ಚ ಪ್ರತಿಷ್ಠಿತಮ್ |
ವೈದಿಕಾನಿ ಹಿ ಧರ್ಮಾಣಿ ವೈಶ್ಯೋ ಪುತ್ರಾಧಿಕಾರವಾನ್ ||47||
ಮಹಾಭಾಗರಾದ ಬ್ರಾಹ್ಮಣರು ದೇವತೆಗಳಿಗೂ ದೇವತೆಗಳು. ಅವರಲ್ಲಿ ಧರ್ಮಗಳು, ವೇದಗಳು, ಗೌರವವು, ವೈದಿಕಧರ್ಮಗಳು ಎಲ್ಲವೂ ಪ್ರತಿಷ್ಠಿತವಾಗಿವೆ. ವೈಶ್ಯ ಸ್ತ್ರೀಯ ಪುತ್ರನು ಪುತ್ರಾಧಿಕಾರವನ್ನು ಹೊಂದಿರುತ್ತಾನೆ.
ನಾತ್ರಾಧಿಕಾರಃ ಶೂದ್ರಸ್ಯ ನ ಗುರೂಂಸ್ತತ್ರಯತೇ ಭಯಾತ್ |
ಭಯಂ ಸಂಜನಯತ್ಯೇವ ತಸ್ಮಾತ್ ದೇಯಧನಸ್ತ್ವಸೌ |
ಲುಪ್ಯಮಾನಾಃ ಸ್ವಧರ್ಮೇಣ ಕ್ಷತ್ರಿಯೋ ರಕ್ಷತಿ ಪ್ರಜಾಃ ||48||
ರಕ್ಷಣೆಯ ವಿಷಯದಲ್ಲಿ ಶೂದ್ರನಿಗೆ ಅಧಿಕಾರವಿಲ್ಲ. ಅವನು ತನಗಿಂತ ಹಿರಿಯರಾದವರನ್ನು ರಕ್ಷಿಸುವುದಿಲ್ಲ. ಅದಕ್ಕೆ ಬದಲಾಗಿ ಅವರಿಗೆ ಭಯವನ್ನು ಉಂಟು ಮಾಡುತ್ತಾನೆ. ಆದ್ದರಿಂದ ಅವನು ಕೊಟ್ಟ ಧನವನ್ನು ಮಾತ್ರ ಸ್ವೀಕರಿಸುವವನು. ಕೆಲವರಿಗೆ ಧರ್ಮಲೋಪವುಂಟಾದರೆ ಆಗ ಕ್ಷತ್ರಿಯನು ರಕ್ಷಿಸುತ್ತಾನೆ.
ದಸ್ಯುಭಿರ್ಹ್ರಿಯಮಾಣಂ ಚ ಧನಂ ದಾರಾಶ್ಚ ಸರ್ವಶಃ |
ಸರ್ವೇಷಾಮೇವ ವರ್ಣಾನಾಂ ತ್ರಾತಾ ಭವತಿ ಪಾರ್ಥಿವಃ ||49||
ಧನ-ದಾರಾದಿಗಳನ್ನು ಕಳ್ಳರು ಮತ್ತು ದರೋಡೆಕೋರರು ಅಪಹರಿಸಿದರೆ ಆಗ ಎಲ್ಲ ವರ್ಣದವರನ್ನೂ ರಕ್ಷಿಸುವವನು ರಾಜನೇ ಆಗುತ್ತಾನೆ.
ಭೂಯಾನ್ ಸ್ಯಾತ್ ಕ್ಷತ್ರಿಯಾಪುತ್ರೋ ವೈಶ್ಯಾಪುತ್ರಾನ್ನ ಸಂಶಯಃ |
ಭೂಯಸ್ತೇನಾಪಿ ಹರ್ತವ್ಯಂ ಪಿತೃವಿತ್ತಾದ್ ಯುಧಿಷ್ಠಿರ ||50||
ವೈಶ್ಯಾಪುತ್ರನಿಗಿಂತಲೂ ಕ್ಷತ್ರಿಯಸ್ತ್ರೀಯ ಪುತ್ರನು ಶ್ರೇಷ್ಠನಾಗುವುದರಲ್ಲಿ ಸಂಶಯವಿಲ್ಲ. ಎಲೈ ಯುಧಿಷ್ಠಿರನೇ, ಆದ್ದರಿಂದ

ಪಿತೃಧನದಲ್ಲಿ ವೈಶ್ಯಾಪುತ್ರನಿಗಿಂತಲೂ ಪಿತೃಧನದಲ್ಲಿ ಅವನು ಅಧಿಕಭಾಗವನ್ನು ತೆಗೆದುಕೊಳ್ಳಬೇಕು.
ಯುಧಿಷ್ಠಿರಃ
ಉಕ್ತಂ ತೇ ವಿಧಿವದ್ ರಾಜನ್ ಬ್ರಾಹ್ಮಣಸ್ವೇ ಪಿತಾಮಹ |
ಇತರೇಷಾಂ ತು ವರ್ಣಾನಾಂ ಕಥಂ ವಿನಿಯಮೋ ಭವೇತ್ ॥51॥
ಯುಧಿಷ್ಠಿರ ಎಲೈ ಪಿತಾಮಹನೇ, ರಾಜನೇ, ಬ್ರಾಹ್ಮಣ ಧನವನ್ನು ಶಾಸೊತ್ರೋಕ್ತವಾಗಿ ವಿಭಾಗ ಮಾಡುವ ರೀತಿಯನ್ನು ನೀನು ಹೇಳಿದ್ದೀಯೆ. ಬೇರೆ ವರ್ಣದವರಲ್ಲಿ ತಂದೆಯ ಆಸ್ತಿಯನ್ನು ವಿಭಾಗ ಮಾಡಿಕೊಳ್ಳುವ ಬಗೆ ಹೇಗೆ?
ಭೀಷ್ಮಃ
ಕ್ಷತ್ರಿಯಸ್ಯಾಪಿ ಭಾರ್ಯೇ ದ್ವೇ ವಿಹಿತೇ ಕುರುನಂದನ |
ತೃತೀಯಾ ಚ ಭವೇಚ್ಛೂದ್ರಾ ನ ತು ದೃಷ್ಟಾಂತತಃ ಸ್ಮೃತಾ ॥52॥
ಭೀಷ್ಮ ಎಲೈ ಕುರುನಂದನನೇ, ಕ್ಷತ್ರಿಯನಿಗೆ ಕ್ಷತ್ರಿಯ ಭಾರ್ಯೆ ಮತ್ತು ವೈಶ್ಯ ಭಾರ್ಯೆಯರು ವಿಹಿತರಾಗಿದ್ದಾರೆ. ಮೂರನೆಯವಳಾದ ಶೂದ್ರಳೂ ಭಾರ್ಯೆಯಾಗಬಹುದು. ಆದರೆ ಅದಕ್ಕೆ ಉದಾಹರಣೆಗಳಿಲ್ಲ.
ಏಷ ಏವ ಕ್ರಮೋ ಹಿ ಸ್ಯಾತ್ ಕ್ಷತ್ರಿಯಾಣಾಂ ಯುಧಿಷ್ಠಿರ |
ಅಷ್ಟಧಾ ತು ಭವೇತ್ ಕಾರ್ಯಂ ಕ್ಷತ್ರಿಯಸ್ವಂ ಯುಧಿಷ್ಠಿರ ॥53॥
ಎಲೈ ಯುಧಿಷ್ಠಿರನೇ, ಬ್ರಾಹ್ಮಣರಿಗೆ ಆಸ್ತಿ ವಿಭಾಗದ ವಿಷಯದಲ್ಲಿ ಇದ್ದಂತೆಯೇ ಕ್ಷತ್ರಿಯರಿಗೂ ಕ್ರಮವಿರುತ್ತದೆ. ಎಲೈ ಯುಧಿಷ್ಠಿರನೇ, ಕ್ಷತ್ರಿಯನ ಆಸ್ತಿಯನ್ನು ಎಂಟು ಭಾಗವನ್ನಾಗಿ ಮಾಡಬೇಕು.
ಕ್ಷತ್ರಿಯಾಯಾ ಹರೇತ್ ಪುತ್ರಶ್ಚತುರೋಽಂಶಾನ್ ಪಿತುರ್ಧನಾತ್ |
ಯುದ್ಧಾವಹಾರಿಕಂ ಯಚ್ಚ ಪಿತುಃ ಸ್ಯಾತ್ ಸ ಹರೇಚ್ಚ ತತ್ ॥54॥
ಆ ಪಿತೃಧನದಲ್ಲಿ ಕ್ಷತ್ರಿಯಳಲ್ಲಿ ಜನಿಸಿದ ಪುತ್ರನು ನಾಲ್ಕು ಭಾಗವನ್ನು ತೆಗೆದುಕೊಳ್ಳಬೇಕು. ತಂದೆಯ ಯುದ್ಧ ಸಲಕರಣೆಗಳನ್ನೂ ಅವನೇ ತೆಗೆದುಕೊಳ್ಳಬೇಕು.
ವೈಶ್ಯಾಪುತ್ರಸ್ತು ಭಾಗಾಂಸ್ತ್ರೀನ್ ಶೂದ್ರಾಪುತ್ರಸ್ತಥಾಷ್ಟಮಮ್ |
ಸೋಽಪಿ ದತ್ತಂ ಹರೇತ್ ಪಿತ್ರಾ ನಾದತ್ತಂ ಹರ್ತುಮರ್ಹತಿ ॥55॥
ವೈಶ್ಯಸ್ತ್ರೀಯ ಪುತ್ರನು ಮೂರು ಭಾಗವನ್ನೂ, ಶೂದ್ರ ಸ್ತ್ರೀಯ ಪುತ್ರನು ಒಂದು ಭಾಗವನ್ನು ತೆಗೆದುಕೊಳ್ಳಬೇಕು. ಶೂದ್ರಪುತ್ರನೂ ಸಹ ಕೊಟ್ಟಿದ್ದನ್ನು ತೆಗೆದುಕೊಳ್ಳಬೇಕು. ಕೊಡದಿದ್ದುದನ್ನು ಬಲಾತ್ಕಾರವಾಗಿ ಕಿತ್ತುಕೊಳ್ಳುವ ಪ್ರಯತ್ನವನ್ನು ಮಾಡಬಾರದು.
ಏಕೈವ ಹಿ ಭವೇದ್ ಭಾರ್ಯಾ ವೈಶ್ಯಸ್ಯ ಕುರುನಂದನ |
ದ್ವಿತೀಯಾ ವಾ ಭವೇಚ್ಛೂದ್ರಾ ನ ತು ದೃಷ್ಟಾಂತತಃ ಸ್ಮೃತಾ ॥56॥
ಎಲೈ ಕುರುನಂದನನೇ, ವೈಶ್ಯನಿಗೆ ವೈಶ್ಯಸ್ತ್ರೀ ಒಬ್ಬಳೇ ಭಾರ್ಯೆ. ಎರಡನೆಯವಳಾದ ಶೂದ್ರ ಸ್ತ್ರೀಯೂ ಆಗಬಹುದು. ಆದರೆ ಅದಕ್ಕೆ ಉದಾಹರಣೆಗಳಿಲ್ಲ.
ವೈಶ್ಯಸ್ಯ ವರ್ತಮಾನಸ್ಯ ವೈಶ್ಯಾಯಾಂ ಭರತರ್ಷಭ |
ಶೂದ್ರಾಯಾಂ ಚೈವ ಕೌಂತೇಯ ತಯೋರ್ವಿನಿಯಮಃ ಸ್ಮೃತಃ ॥57॥
ಎಲೈ ಭರತರ್ಷಭನೇ, ವೈಶ್ಯನಿಗೆ ವೈಶ್ಯಪತ್ನಿಯಲ್ಲಿಯೂ ಮತ್ತು ಶೂದ್ರ ಸ್ತ್ರೀಯಲ್ಲಿಯೂ ಪುತ್ರರಿದ್ದರೆ ಅವರು ತಂದೆಯ ಆಸ್ತಿಯನ್ನು ಹಂಚಿಕೊಳ್ಳಬೇಕಾದ ರೀತಿಯು ಹೀಗೆ ಹೇಳಲ್ಪಟ್ಟಿದೆ.
ಪಂಚಧಾ ತು ಭವೇತ್ ಕಾರ್ಯಂ ವೈಶ್ಯಸ್ವಂ ಭರತರ್ಷಭ |
ತಯೋರಪತ್ಯೇ ವಕ್ಷ್ಯಾಮಿ ವಿಭಾಗಂ ಚ ಜನಾಧಿಪ ॥58॥
ಎಲೈ ಭರತರ್ಷಭನೇ, ತಂದೆಯಾದ ವೈಶ್ಯನ ಧನವನ್ನು ಐದು ಭಾಗವನ್ನಾಗಿ ಮಾಡಬೇಕು. ಎಲೈ ರಾಜನೇ, ಅವನ ಪುತ್ರರು ಮಾಡಿಕೊಳ್ಳಬೇಕಾದ ವಿಭಾಗವನ್ನು ಹೇಳುವೆನು.
ವೈಶ್ಯಾಪುತ್ರೇಣ ಹರ್ತವ್ಯಾಶ್ಚತ್ವಾರೋಽಂಶಾಃ ಪಿತುರ್ಧನಾತ್ |
ಪಂಚಮಸ್ತು ಭವೇದ್ ಭಾಗಃ ಶೂದ್ರಾಪುತ್ರಾಯ ಭಾರತ ॥59॥
ತಂದೆಯ ಧನದಲ್ಲಿ ನಾಲ್ಕು ಭಾಗಗಳನ್ನು ವೈಶ್ಯಸ್ತ್ರೀಯ ಪುತ್ರನು ತೆಗೆದುಕೊಳ್ಳಬೇಕು. ಎಲೈ ಭಾರತನೇ, ಉಳಿದ ಒಂದು ಭಾಗವು ಶೂದ್ರ ಸ್ತ್ರೀಯ ಪುತ್ರನಿಗೆ ಸೇರಿದುದು.
ಸೋಽಪಿ ದತ್ತಂ ಹರೇತ್ ಪಿತ್ರಾ ನಾದತ್ತಂ ಹರ್ತುಮರ್ಹತಿ |
ತ್ರಿಭಿರ್ವರ್ಣೈಸ್ತಥಾ ಜಾತಃ ಶೂದ್ರೋ ದೇಯಧನೋ ಭವೇತ್ |
ಪ್ರತಿಲೋಮವಿಹೀನಂ ತು ಗ್ರಾಹ್ಯಾಸ್ತೈರ್ಬಾಂಧವಾಃ ಸದಾ ॥60॥
ಅವನೂ ಸಹ ತಂದೆಯು ಕೊಟ್ಟುದನ್ನೇ ಸ್ವೀಕರಿಸಬೇಕು. ಕೊಡದಿದ್ದುದನ್ನು ಕಿತ್ತುಕೊಳ್ಳುವ ಪ್ರಯತ್ನವನ್ನು ಮಾಡಬಾರದು. ಈ ರೀತಿಯಲ್ಲಿ ಮೂರು ವರ್ಣದ ಪಿತೃಗಳಿಂದ ಜನಿಸಿದ್ದರೂ ಶೂದ್ರನು ದೇಯಧನನೇ ಆಗುತ್ತಾನೆ (ಕೊಟ್ಟ ಧನಕ್ಕೆ ಮಾತ್ರ ಅಧಿಕಾರಿಯಾಗುತ್ತಾನೆ). ಪ್ರತಿಲೋಮವಿಲ್ಲದಿದ್ದರೆ (ಶೂದ್ರನು ತನಗಿಂತ ಉತ್ತಮ ವರ್ಣದವರ ಸ್ತ್ರೀಯರನ್ನು ವಿವಾಹವಾಗದಿದ್ದರೆ) ಅಂತಹ ಶೂದ್ರಪುತ್ರನಿಗೆ ಬಂಧುಗಳು ತಂದೆಯ ಆಸ್ತಿಯ ಆ ಭಾಗವನ್ನು ಕೊಡಬೇಕು.
ಶೂದ್ರಸ್ಯ ಸ್ಯಾತ್ ಸವರ್ಣೈವ ಭಾರ್ಯಾ ನಾನ್ಯಾ ಕಥಂಚನ |
ಶೂದ್ರಸ್ಯ ಸಮಭಾಗಃ ಸ್ಯಾದ್ ಯದಿ ಪುತ್ರಶತಂ ಭವೇತ್ ॥61॥
ಶೂದ್ರನಿಗೆ ತನ್ನ ವರ್ಣಕ್ಕೆ ಸೇರಿದ ಶೂದ್ರಸ್ತ್ರೀಯು ಒಬ್ಬಳೇ ಪತ್ನಿ. ವೈಶ್ಯಾದಿ ಕುಲದಲ್ಲಿ ಜನಿಸಿದ ಸ್ತ್ರೀಯರು ಅವನ ಪತ್ನಿಯರಾಗುವುದಿಲ್ಲ. ಶೂದ್ರನಿಗೆ ನೂರು ಮಕ್ಕಳಿದ್ದರೂ ಅವರು ತಂದೆಯ ಆಸ್ತಿಯನ್ನು ಸಮವಾಗಿ ಹಂಚಿಕೊಳ್ಳಬೇಕು.

ಜಾತಾನಾಂ ಸಮವರ್ಣಾಸು ಪುತ್ರಾಣಾಮವಿಶೇಷತಃ |
ಸರ್ವೇಷಾಮೇವ ವರ್ಣಾನಾಂ ಸಮಭಾಗೋ ಧನೇ ಸ್ಮೃತಃ ॥62॥
ಒಂದೇ ವರ್ಣದ ಸ್ತ್ರೀಯರಲ್ಲಿ ಎಂದರೆ ಬ್ರಾಹ್ಮಣಿಯಲ್ಲಿ ಅಥವಾ ಕ್ಷತ್ರಿಯಳಲ್ಲಿ ಅಥವಾ ವೈಶ್ಯರಲ್ಲಿ ಎಷ್ಟು ಪುತ್ರರು ಜನಿಸಿದ್ದರೂ ಅವರು ಹಿಂದೆ ಹೇಳಿದ ರೀತಿಯಲ್ಲಿ ಬಂದ ಭಾಗವನ್ನು ಸಮವಾಗಿ ಹಂಚಿಕೊಳ್ಳಬೇಕು.
ಜ್ಯೇಷ್ಠಸ್ಯ ಭಾಗೋ ಜ್ಯೇಷ್ಠಃ ಸ್ಯಾದೇಕಾಂಶೋ ಯಃ ಪ್ರಧಾನತಃ |
ಏಷ ದಾಯವಿಧಿಃ ಪಾರ್ಥ ಪೂರ್ವಮುಕ್ತಃ ಸ್ವಯಂಭುವಾ ॥63॥
ಜ್ಯೇಷ್ಠಪುತ್ರನಿಗೆ ಪ್ರಾಧಾನ್ಯವಿರುವ ಕಾರಣ ಅವನಿಗೆ ಸ್ವಲ್ಪ ಭಾಗವನ್ನು ಅಧಿಕವಾಗಿ ಕೊಡಬೇಕು. ಎಲೈ ಭಾರತನೇ, ಇದು ಬ್ರಹ್ಮದೇವರು ಹಿಂದೆ ಉಪದೇಶ ಮಾಡಿದ ಆಸ್ತಿ ವಿಭಾಗದ ವಿಧಿ.
ಸಮವರ್ಣಾಸು ಜಾತಾನಾಂ ವಿಶೇಷೋಽಸ್ತ್ಯಪರೋ ನೃಪ |
ವಿವಾಹವೈಶೇಷ್ಯಕೃತಃ ಪೂರ್ವಃ ಪೂರ್ವೋ ವಿಶಿಷ್ಯತೇ ॥64॥
ಎಲೈ ರಾಜನೇ, ಒಂದೇ ವರ್ಣದ ಸ್ತ್ರೀಯಲ್ಲಿ ಜನಿಸಿದವರಲ್ಲಿ ಇನ್ನೊಂದು ವಿಶೇಷವಿದೆ. ವಿವಾಹದ ಕ್ರಮವನ್ನು ಅನುಸರಿಸಿ ಮೊದಮೊದಲು ಜನಿಸಿದವನು ಶ್ರೇಷ್ಠನೆನಿಸುತ್ತಾನೆ.
ಹರೇಜ್ಜ್ಯೇಷ್ಠಃ ಪ್ರಧಾನಾಂಶಮೇಕಂ ತುಲ್ಯಾಸುತೇಷ್ವಪಿ |
ಮಧ್ಯಮೋ ಮಧ್ಯಮಂ ಚೈವ ಕನೀಯಾಂಸ್ತು ಕನೀಯಸಮ್ ॥65॥
ಒಂದೇ ವರ್ಣದ ಅನೇಕ ಸ್ತ್ರೀಯರನ್ನು ವಿವಾಹ ಮಾಡಿಕೊಂಡರೂ ಆ ಸ್ತ್ರೀಯರೆಲ್ಲರೂ ಸಮಾನರಾದರೂ ಅವರಲ್ಲಿ ಜ್ಯೇಷ್ಠಪುತ್ರನು ಪ್ರಧಾನಾಂಶವನ್ನೂ, ಮಧ್ಯಮ ಪುತ್ರನು ಮಧ್ಯಮಾಂಶವನ್ನೂ, ಕನಿಷ್ಠ ಪುತ್ರನು ಕನಿಷ್ಠಾಂಶವನ್ನು ತೆಗೆದುಕೊಳ್ಳಬೇಕು.
ಏವಂ ಜಾತಿಷು ಸರ್ವಾಸು ಸವರ್ಣಾಃ ಶ್ರೇಷ್ಠತಾಂ ಗತಾಃ |
ಮಹರ್ಷಿರಪಿ ಚೈತದ್ ವೈ ಮಾರೀಚಃ ಕಾಶ್ಯಪೋಽಬ್ರವೀತ್ ॥66॥
ಹೀಗೆ ಎಲ್ಲ ಜಾತಿಗಳಲ್ಲಿಯೂ ಸಜಾತೀಯರು ಶ್ರೇಷ್ಠರೆನಿಸುತ್ತಾರೆ. ಮರೀಚಿ ಪುತ್ರರಾದ ಕಶ್ಯಪ ಮಹರ್ಷಿಗಳೂ ಸಹ ಇದನ್ನು ಹೇಳಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದಾಯಾದವಿಭಾಗವಿಧಿರ್ನಾಮ ಸಪ್ತಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆಂಟನೆಯ ಅಧ್ಯಾಯ
ಸಂಕರವರ್ಣಗಳ ವಿಭಾಗ.
ಯುಧಿಷ್ಠಿರಃ
ಅರ್ಥಾಶ್ರಯಾದ್ವಾ ಕಾಮಾದ್ವಾ ವರ್ಣಾನಾಂ ವಾಪ್ಯನಿಶ್ಚಯಾತ್ |
ಅಜ್ಞಾನಾದ್ವಾಪಿ ವರ್ಣಾನಾಂ ಜಾಯತೇ ವರ್ಣಸಂಕರಃ ॥1॥
ತೇಷಾಮೇತೇನ ವಿಧಿನಾ ಜಾತಾನಾಂ ವರ್ಣಸಂಕರೇ |
ಕೋ ಧರ್ಮಃ ಕಾನಿ ಕರ್ಮಾಣಿ ತನ್ಮೇ ಬ್ರೂಹಿ ಪಿತಾಮಹ ॥2॥
ಯುಧಿಷ್ಠಿರ ಧನದ ನಿಮಿತ್ತದಿಂದಾಗಲಿ, ಕಾಮದಿಂದಾಗಲೀ, ವರ್ಣದ ಜ್ಞಾನವಿಲ್ಲದಿರುವುದರಿಂದಾಗಲೀ ಅಥವಾ ಅಜ್ಞಾನದಿಂದಾಗಲೀ ವರ್ಣಸಂಕರವು ಉಂಟಾಗುತ್ತದೆ. ಎಲೈ ಪಿತಾಮಹನೇ, ಈ ವರ್ಣಸಂಕರದಿಂದ ಜನಿಸಿದವರಿಗೆ ಯಾವ ಧರ್ಮ ಮತ್ತು ಯಾವ ಕರ್ಮಗಳು ಹೇಳಲ್ಪಡುತ್ತವೆ ಎಂದು ನನಗೆ ತಿಳಿಸು.
ಭೀಷ್ಮಃ
ಚಾತುರ್ವರ್ಣ್ಯಸ್ಯ ಕರ್ಮಾಣಿ ಚಾತುರ್ವರ್ಣ್ಯಂ ಚ ಕೇವಲಮ್ |
ಅಸೃಜತ್ ಸ ಹ ಯಜ್ಞಾರ್ಥೇ ಪೂರ್ವಮೇವ ಪ್ರಜಾಪತಿಃ ॥3॥
ಭೀಷ್ಮ ಬ್ರಹ್ಮದೇವರು ಯಜ್ಞದ ಸಲುವಾಗಿ ನಾಲ್ಕು ವರ್ಣಗಳನ್ನು ಸೃಷ್ಟಿಸಿ ನಾಲ್ಕು ವರ್ಣಕ್ಕೆ ಸಂಬಂಧಪಟ್ಟ ಧರ್ಮವನ್ನು ಅವರಿಗೇ ವಿಧಿಸಿದ್ದಾರೆ.
ಭಾರ್ಯಾಶ್ಚತಸ್ರೋ ವಿಪ್ರಸ್ಯ ದ್ವಯೋರಾತ್ಮಾಸ್ಯ ಜಾಯತೇ |
ಆನುಪೂರ್ವ್ಯಾದ್ ದ್ವಯೋರ್ಹೀನೌ ಮಾತೃಜಾತ್ಯೌ ಪ್ರಸೂಯತಃ ॥4॥
ಬ್ರಾಹ್ಮಣರಿಗೆ ನಾಲ್ಕು ವರ್ಣದವರು ಭಾರ್ಯೆಯರು. ಅವರಲ್ಲಿ ಮೊದಲನೆಯ ಎರಡು ವರ್ಣದಲ್ಲಿ ತಾನೇ ಜನಿಸುತ್ತಾನೆ. ಕೊನೆಯ ಎರಡು ವರ್ಣಗಳಲ್ಲಿ ಹೀನನಾದ ಮಾತೃಜಾತಿಗೆ ಸೇರಿದ ಪುತ್ರರನ್ನು ಪಡೆಯುತ್ತಾನೆ.
ಪರಂ ಶವಾದ್ ಬ್ರಾಹ್ಮಣಸ್ಯೈಷ ಪುತ್ರಃ
ಶೂದ್ರಾಪುತ್ರಂ ಪಾರಶವಂ ತಮಾಹುಃ |
ಶುಶ್ರೂಷಕಃ ಸ್ವಸ್ಯ ಕುಲಸ್ಯ ಸ ಸ್ಯಾತ್
ಸ್ವಂ ಚಾರಿತ್ರಂ ನಿತ್ಯಮಥೋ ನ ಜಹ್ಯಾತ್ ॥5॥
ಬ್ರಾಹ್ಮಣನಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಪುತ್ರನನ್ನು ಪಾರಶವ ಎಂದು ಕರೆಯುತ್ತಾರೆ. ಶೂದ್ರನಿಗೆ ಶವ ಎಂದು ಹೆಸರು. ಆ ಪುತ್ರನು ಶೂದ್ರನಿಗಿಂತ ಶ್ರೇಷ್ಠನಾದುದರಿಂದ ಪಾರಶವ ಎಂದು ಕರೆಯುತ್ತಾರೆ. ಅವನು ತನ್ನ ಕುಲದ ಶುಶ್ರೂಷೆಯನ್ನು ಮಾಡಬೇಕು ಮತ್ತು ತನ್ನ ಶೀಲವನ್ನು ಯಾವಾಗಲೂ ಬಿಡದೆ ರಕ್ಷಿಸಿಕೊಳ್ಳಬೇಕು.

ಸರ್ವಾನುಪಾಯಾನಪಿ ಸಂಪ್ರಧಾರ್ಯ
ಸಮುದ್ಧರೇತ್ ಸ್ವಸ್ಯ ಕುಲಸ್ಯ ತಂತುಮ್ |
ಜ್ಯೇಷ್ಠೋ ಯವೀಯಾನಥ ವೈ ದ್ವಿಜೇಭ್ಯಃ
ಶುಶ್ರೂಷವಾನ್ ದಾನಪರಾಯಣಃ ಸ್ಯಾತ್ ||6||

ಎಲ್ಲ ಉಪಾಯಗಳನ್ನೂ ಪರೀಕ್ಷಿಸಿ ತನ್ನ ಕುಲದ ತಂತುವನ್ನು ಬೆಳೆಸಬೇಕು. ಬ್ರಾಹ್ಮಣನಿಗೆ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ ಪುತ್ರನು ವಯಸ್ಸಿನಲ್ಲಿ ಜ್ಯೇಷ್ಠನಾಗಿದ್ದರೂ ಬ್ರಾಹ್ಮಣ ಜಾತಿಯಲ್ಲಿ ಅನಂತರ ಹುಟ್ಟಿದ ಪುತ್ರನಿಗಿಂತ ಕನಿಷ್ಠನಾದವನು.

ತಿಸ್ರಃ ಕ್ಷತ್ರಿಯಸಂಬಾಧಾದ್ ದ್ವಯೋರಾತ್ಮಾಸ್ಯ ಜಾಯತೇ |
ಹೀನವರ್ಣಸ್ತೃತೀಯಾಯಾಂ ಶೂದ್ರ ಉಗ್ರ ಇತಿ ಸ್ಮೃತಃ ||7||

ಕ್ಷತ್ರಿಯನಿಗೆ ಮೂರುವರ್ಣದ ಸ್ತ್ರೀಯರ ಸಮಾಗಮವಾಗಬಹುದು. ಕ್ಷತ್ರಿಯ ಮತ್ತು ವೈಶ್ಯ ಸ್ತ್ರೀಯರಲ್ಲಿ ತಾನೇ ಜನಿಸುತ್ತಾನೆ. ಶೂದ್ರಸ್ತ್ರೀಯಲ್ಲಿ ಕ್ಷತ್ರಿಯನಿಗೆ ಜನಿಸಿದ ಶೂದ್ರನನ್ನು ಉಗ್ರನೆಂದು ಕರೆಯುತ್ತಾರೆ.

ದ್ವೇ ಚಾಪಿ ಭಾರ್ಯೇ ವೈಶ್ಯಸ್ಯ ದ್ವಯೋರಾತ್ಮಾಸ್ಯ ಜಾಯತೇ |
ಶೂದ್ರಾ ಶೂದ್ರಸ್ಯ ಚಾಪ್ಯೇಕಾ ಶೂದ್ರಮೇವ ಪ್ರಜಾಯತೇ ||8||

ವೈಶ್ಯನಿಗೆ ವೈಶ್ಯಸ್ತ್ರೀ ಮತ್ತು ಶೂದ್ರ ಸ್ತ್ರೀ ಇಬ್ಬರು ಭಾರ್ಯೆಯರು. ಅವರಲ್ಲಿ ವೈಶ್ಯಸ್ತ್ರೀಯಲ್ಲಿ ತಾನೇ ಜನಿಸುತ್ತಾನೆ. ಶೂದ್ರನಿಗೆ ಶೂದ್ರಸ್ತ್ರೀಯೊಬ್ಬಳೇ ಭಾರ್ಯೆ. ಅವಳು ಶೂದ್ರನೊಬ್ಬನನ್ನೇ ಪ್ರಸವಿಸುತ್ತಾಳೆ (ಲಕ್ಷಾಲಂಕಾರ).

ಅತೋಽವಿಶಿಷ್ಟಸ್ತ್ವಧಮೋ ಗುರುದಾರಪ್ರಧರ್ಷಕಃ |
ಬಾಹ್ಯಂ ವರ್ಣಂ ಜನಯತಿ ಚಾತುರ್ವರ್ಣ್ಯವಿಗರ್ಹಿತಮ್ ||9||

ಆದ್ದರಿಂದ ಯಾವ ಗುಣವನ್ನು ಹೊಂದದ ಅಧಮನಾದವನು ತನಗಿಂತ ಉತ್ತಮ ವರ್ಣದ ಸ್ತ್ರೀಯನ್ನು ಸ್ಪರ್ಶ ಮಾಡಿದರೆ ಚಾತುರ್ವರ್ಣ್ಯನಿಂದಿತನಾದ, ವರ್ಣ ಬಾಹ್ಯನಾದ ಪುತ್ರನನ್ನು ಪಡೆಯುತ್ತಾನೆ.

ಅಯಾಜ್ಯಂ ಕ್ಷತ್ರಿಯೋ ವ್ರಾತ್ಯಂ ಸೂತಂ ಸ್ತೋಮಕ್ರಿಯಾಪರಮ್ |
ವೈಶ್ಯೋ ವೈದೇಹಕಂ ಚಾಪಿ ಮೌದ್ಗಲ್ಯಮಪವರ್ಜಿತಮ್ ||10||

ಕ್ಷತ್ರಿಯನು ಬ್ರಾಹ್ಮಣ ಸ್ತ್ರೀಯಲ್ಲಿ ಯಾಗಕ್ಕೆ ಅರ್ಹನಲ್ಲದ ವ್ರಾತ್ಯನೆಂಬ ಸೂತನನ್ನು ಪಡೆಯುತ್ತಾನೆ. ಅವನು ರಥವನ್ನು ನಡೆಸುವುದು ಮತ್ತು ರಾಜರನ್ನು ಸ್ತೋತ್ರ ಮಾಡುವುದು ಇಂತಹ ಕಾರ್ಯಗಳಲ್ಲಿ ನಿರತನಾಗಿರುತ್ತಾನೆ. ವೈಶ್ಯನು ಬ್ರಾಹ್ಮಣ ಕನ್ಯೆಯಲ್ಲಿ ಮುದ್ಗಲನೆಂಬ ಹೀನಜಾತಿಯ ಪುತ್ರನನ್ನು ಪಡೆಯುತ್ತಾನೆ. ಮುಗಿಲ ಎಂದು ಆ ಜಾತಿಗೆ ಬಳಕೆಯಲ್ಲಿರುವ ಹೆಸರು. ಅಂತಹ ಪುತ್ರನಿಗೆ ವೈದೇಹಕ ಎಂದು ಹೆಸರು ಅವನು ಅಂತಃಪುರದ ಸ್ತ್ರೀಯರ ಸೇವಾಕಾರ್ಯದಲ್ಲಿ ನಿರತನಾಗಿರುತ್ತಾನೆ - (ಲಕ್ಷಾಲಂಕಾರ).

ಶೂದ್ರಶ್ಚಂಡಾಲಮತ್ಯುಗ್ರಂ ವಧ್ಯಘ್ನಂ ಬಾಹ್ಯವಾಸಿನಮ್ |
ಬ್ರಾಹ್ಮಣ್ಯಾಂ ಸಂಪ್ರಜಾಯಂತ ಇತ್ಯೇತೇ ಕುಲಪಾಂಸನಾಃ |
ಏತೇ ಮತಿಮತಾಂ ಶ್ರೇಷ್ಠ ವರ್ಣಸಂಕರಜಾಃ ಪ್ರಭೋ ||11||

ಶೂದ್ರನು ಬ್ರಾಹ್ಮಣಸ್ತ್ರೀ ಸಮಾಗಮವನ್ನು ಮಾಡಿದರೆ ಅತ್ಯಂತ ಉಗ್ರನಾದ ಅಪರಾಧ ಮಾಡಿ ವಧ್ಯರಾದವರನ್ನು ವಧೆ ಮಾಡುವ, ಊರಿನ ಹೊರಗೆ ವಾಸಿಸುವ ಪುತ್ರನನ್ನು ಪಡೆಯುತ್ತಾನೆ. ಎಲೈ ಮೇಧಾವಿಗಳಲ್ಲಿ ಶ್ರೇಷ್ಠನೇ, ಪ್ರಭುವೇ, ಇವರೆಲ್ಲರೂ ಬ್ರಾಹ್ಮಣ ಸ್ತ್ರೀಯಲ್ಲಿ ವರ್ಣಸಂಕರದಿಂದ ಹುಟ್ಟಿದ ಕುಲನಾಶಕರು.

ಬಂದೀ ತು ಜಾಯತೇ ವೈಶ್ಯಾನ್ಮಾಗಧೋ ವಾಕ್ಯಜೀವನಃ |
ಶೂದ್ರಾನ್ನಿಷಾದೋ ಮತ್ಸ್ಯಘ್ನಃ ಕ್ಷತ್ರಿಯಾಯಾಂ ವ್ಯತಿಕ್ರಮಾತ್ ||12||

ವೈಶ್ಯನಿಗೆ ಕ್ಷತ್ರಿಯ ಸ್ತ್ರೀಯಲ್ಲಿ ಹುಟ್ಟಿದ ಪುತ್ರನ ಜಾತಿಗೆ ಮಾಗಧ ಎಂದು ಹೆಸರು. ಅವರು ರಾಜನನ್ನು ದೊಡ್ಡವಾಕ್ಯಗಳಿಂದ ಹೊಗಳಿ ಜೀವಿಸುವವರು. ಶೂದ್ರನಿಗೆ ಕ್ಷತ್ರಿಯ ಸ್ತ್ರೀಯಲ್ಲಿ ಹುಟ್ಟಿದವನು ನಿಷಾದನೆನಿಸುತ್ತಾನೆ. ಅವನು ಮತ್ಸ್ಯಗಳನ್ನು ಕೊಲ್ಲುವ ವೃತ್ತಿಯನ್ನು ಹೊಂದಿರುತ್ತಾನೆ.

ಶೂದ್ರಾದಾಯೋಗವಶ್ಚಾಪಿ ವೈಶ್ಯಾಯಾಂ ಗ್ರಾಮಧರ್ಮಿಣಃ |
ಬ್ರಾಹ್ಮಣೈರಪ್ರತಿಗ್ರಾಹ್ಯಸ್ತಕ್ಷಾ ಸ ವನಜೀವನಃ ||13||

ಶೂದ್ರನು ವೈಶ್ಯಸ್ತ್ರೀ ಜೊತೆಯಲ್ಲಿ ಸಮಾಗಮವನ್ನು ಮಾಡಿದರೆ ಅಯೋಗವನೆಂಬ ಜಾತಿಯ ಪುತ್ರನು ಹುಟ್ಟುತ್ತಾನೆ. ಅವನು ಬ್ರಾಹ್ಮಣರಿಂದ ಸ್ವೀಕೃತನಾಗುವುದಿಲ್ಲ. ಕಾಡಿನಲ್ಲಿ ವಾಸಿಸಿ ಬಡಗಿಯ ವೃತ್ತಿಯನ್ನು ಮಾಡುತ್ತಾನೆ.

ಏತೇಽಪಿ ಸದೃಶಂ ವರ್ಣಂ ಜನಯಂತಿ ಸ್ವಯೋನಿಷು |
ಮಾತೃಜಾತ್ಯಾಂ ಪ್ರಸೂಯಂತೇ ಪ್ರವರಾ ಹೀನಯೋನಿಷು ||14||

ಈ ಸಂಕರ ಜಾತಿಯವರೂ ಕೂಡ ತಮ್ಮ ಜಾತಿಯ ಸ್ತ್ರೀಯರಲ್ಲಿ ಸಮಾಗಮವನ್ನು ಮಾಡಿದರೆ ಜನಿಸುವ ಪುತ್ರರು ತಮ್ಮ ಜಾತಿಯವರೇ ಆಗಿರುತ್ತಾರೆ. ತಮಗಿಂತ ಹೀನ ಜಾತಿಯವರ ಜೊತೆಯಲ್ಲಿ ಸಮಾಗಮವನ್ನು ಮಾಡಿದರೆ ಜನಿಸುವ ಪುತ್ರನು ಆ ತಾಯಿಯ ಜಾತಿಗೆ ಸೇರಿದವರಾಗುತ್ತಾರೆ.

ಯಥಾ ಚತುರ್ಷು ವರ್ಣೇಷು ದ್ವಯೋರಾತ್ಮಾಸ್ಯ ಜಾಯತೇ |
ಆನಂತರ್ಯಾತ್ತು ಜಾಯಂತೇ ತಥಾ ಬಾಹ್ಯಾಃ ಪ್ರಧಾನತಃ ||15||

ನಾಲ್ಕು ವರ್ಣದವರಲ್ಲಿ ಮೊದಲನೆಯ ಎರಡು ವರ್ಣಗಳಲ್ಲಿ ತಾನೇ ಜನಿಸುತ್ತಾನೆ. ಅನಂತರದ ವರ್ಣಗಳಲ್ಲಿ ಪ್ರಧಾನವಾಗಿ ಬಾಹ್ಯರೇ ಜನಿಸುತ್ತಾರೆ (ಬ್ರಾಹ್ಮಣನಿಗೆ ಬ್ರಾಹ್ಮಣ-ಕ್ಷತ್ರಿಯರಲ್ಲಿ ಜನಿಸುವವರು ಬ್ರಾಹ್ಮಣರೂ, ವೈಶ್ಯ ಸ್ತ್ರೀಯಲ್ಲಿ ಹುಟ್ಟುವವನು ವೈಶ್ಯನೂ, ಶೂದ್ರಸ್ತ್ರೀಯಲ್ಲಿ ಹುಟ್ಟುವವನು ಶೂದ್ರನೂ ಆಗುತ್ತಾನೆ).

ತೇ ಚಾಪಿ ಸದೃಶಂ ವರ್ಣಂ ಜನಯಂತಿ ಸ್ವಯೋನಿಷು |

ಪರಸ್ಪರಸ್ಯ ವರ್ತಂತೋ ಜನಯಂತಿ ವಿಗರ್ಹಿತಾನ್ ॥16॥
ಈ ಸಂಕರ ಜಾತಿಯಲ್ಲಿ ಜನಿಸುವವರೂ ಸಹ ತಮ್ಮ ತಮ್ಮ ಜಾತಿಗೆ ಸೇರಿದ ಸ್ತ್ರೀಯರಲ್ಲಿ ತಮ್ಮ ತಮ್ಮ ಜಾತಿಗೆ ಸೇರಿದ ಪುತ್ರರನ್ನೇ ಪಡೆಯುತ್ತಾರೆ. ಅವರು ಪರಸ್ಪರವಾಗಿ ಸಹಾಯವನ್ನು ಮಾಡಿಕೊಂಡು ವೇದವರ್ಗದಿಂದ ನಿಂದಿತರಾದ ಪುತ್ರರನ್ನು ಪಡೆಯುತ್ತಾರೆ.
ಯಥಾ ಚ ಶೂದ್ರೋ ಬ್ರಾಹ್ಮಣ್ಯಾಂ ಜಂತುಂ ಬಾಹ್ಯಂ ಪ್ರಸೂಯತೇ |
ಏವಂ ಬಾಹ್ಯತರಾದ್ ಬಾಹ್ಯಶ್ಚಾತುರ್ವರ್ಣ್ಯಾತ್ ಪ್ರಸೂಯತೇ ॥17॥
ಹೇಗೆ ಶೂದ್ರನು ಬ್ರಾಹ್ಮಣ ಸ್ತ್ರೀಯ ಸಂಪರ್ಕವನ್ನು ಮಾಡಿದರೆ ಜನಿಸುವ ಪುತ್ರನು ಚಂಡಾಲನಾಗುತ್ತಾನೆಯೋ ಅದರಂತೆ ಚಾತುರ್ವರ್ಣದಿಂದ ಹೊರಗೆ ಇರುವವನು ಚಾತುರ್ವರ್ಣದ ಸ್ತ್ರೀಯನ್ನು ಸಂಪರ್ಕಿಸಿದರೆ ಚಂಡಾಲನಿಗಿಂತಲೂ ಬಾಹ್ಯನಾದ ಪುತ್ರನನ್ನು ಪಡೆಯುತ್ತಾನೆ.
ಪ್ರತಿಲೋಮಂ ತು ವರ್ತಂತೋ ಬಾಹ್ಯಾದ್ ಬಾಹ್ಯತರಂ ಪುನಃ |
ಹೀನಾ ಹೀನಾತ್ ಪ್ರಸೂಯಂತೇ ವರ್ಣಾಃ ಪಂಚದಶೈವ ತೇ ॥18॥
ಅವರೂ ಸಹ ಪ್ರತಿಲೋಮವಾಗಿ ನಡೆದುಕೊಂಡರೆ (ಪ್ರತಿಲೋಮವೆಂದರೆ ತಮಗಿಂತ ಉತ್ತಮ ಜಾತಿಯ ಸ್ತ್ರೀಯ ಸಂಪರ್ಕವನ್ನು ಮಾಡುವುದು) ಹೀನರಿಗಿಂತಲೂ ಹೀನರಾದ ಜಾತಿಗೆ ಸೇರಿದ ಪುತ್ರರನ್ನು ಪಡೆಯುತ್ತಾರೆ. ಹೀಗೆ ಸಂಕರ ಜಾತಿಗೆ ಸೇರಿದ ಜಾತಿಗಳು (ಸ್ಥೂಲವಾಗಿ) ಹದಿನೈದು ಆಗುತ್ತವೆ.
ಅಗಮ್ಯಾಗಮನಾಚ್ಚೈವ ವರ್ತತೇ ವರ್ಣಸಂಕರಃ |
ವ್ರಾತ್ಯಾನಾಮತ್ರ ಜಾಯಂತೇ ಸೈರಂಧ್ರಾ ಮಾಗಧೇಷು ಚ |
ಪ್ರಸಾಧನೋಪಚಾರಜ್ಞಮದಾಸಂ ದಾಸಜೀವನಮ್ ॥19॥
ಅಗಮ್ಯಳಾದ ಸ್ತ್ರೀಯನ್ನು ಗಮನ ಮಾಡುವುದರಿಂದಲೂ ವರ್ಣಸಂಕರವು ಉಂಟಾಗುತ್ತದೆ. ಕ್ಷತ್ರಿಯನಿಗೆ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದ ವ್ರಾತ್ಯನಿಗೆ ಮಾಗಧ ಜಾತಿಯ ಸ್ತ್ರೀಯಲ್ಲಿ ಸೈರಂಧ್ರ ಜಾತಿಗೆ ಸೇರಿದವರು ಹುಟ್ಟುತ್ತಾರೆ. ಅವರು ದಾಸರಾಗದೆ ಸ್ತ್ರೀಯರಿಗೆ ಅಲಂಕಾರ ಮಾಡುವುದು ಮುಂತಾದ ಕಾರ್ಯಗಳಲ್ಲಿ ದಾಸಜೀವನವನ್ನು ನಡೆಸುತ್ತಾರೆ.
ಅತಶ್ಚಾಯೋಗವಂ ಸೂತೇ ವಾಗುರಾವನಜೀವನಮ್ |
ಮೈರೇಯಕಂ ಚ ವೈದೇಹಃ ಸಂಪ್ರಸೂತೇऽಥ ಮಾಧುಕಮ್ ॥20॥
ಸೈರಂಧ್ರಜಾತಿಯ ಸ್ತ್ರೀಯು ಅಯೋಗವಜಾತಿಯ ಪುರುಷನೊಡನೆ ಸಮಾಗಮವನ್ನು ಮಾಡಿದರೆ ಅಯೋಗವ ಜಾತಿಯವನನ್ನೇ ಪ್ರಸವಿಸುತ್ತಾಳೆ. ಅವನು ಬಲೆಗಳಿಂದ ಪ್ರಾಣಿಗಳನ್ನು ಹಿಡಿದು ಕಾಡಿನಲ್ಲಿ ಜೀವಿಸುವವನು. ಈ ಸೈರಂಧ್ರ ಸ್ತ್ರೀಯೊಡನೆ ವೈದೇಹಕನು ಸಂಪರ್ಕ ಮಾಡಿದರೆ ಮೈರೇಯ ಮತ್ತು ಮಾಧುಕರೆಂಬ ಜಾತಿಗೆ ಸೇರಿದ ಪುತ್ರರನ್ನು ಪಡೆಯುತ್ತಾನೆ. ಇವರಿಬ್ಬರೂ ಮದ್ಯವನ್ನು ಮಾಡಿ, ಮಾರಿ ಜೀವಿಸುವವರು.
ನಿಷಾದೋ ಮುದ್ಗರಂ ಸೂತೇ ದಾಶಂ ನಾವೋಪಜೀವಿನಮ್ |
ಮೃತಪಂ ಚಾಪಿ ಚಂಡಾಲಃ ಶ್ವಪಾಕಮತಿಕುತ್ಸಿತಮ್ ॥21॥
ನಿಷಾದನು ಸೈರಂಧ್ರಜಾತಿಯ ಸ್ತ್ರೀಯೊಡನೆ ಸಂಪರ್ಕ ಮಾಡಿದರೆ ಅವಳಲ್ಲಿ ಮುದ್ಗರ ಜಾತಿಯ ಪುತ್ರನು ಹುಟ್ಟುತ್ತಾನೆ. ಅವನು ನಾವೆಯನ್ನು ನಡೆಸುವವನು ಮತ್ತು ಅದರಿಂದಲೇ ಜೀವನವನ್ನು ಮಾಡುವವನು. ಅವನಿಗೆ ದಾಶ ಎಂದು ಹೆಸರು. ಚಂಡಾಲನು ಸೈರಂಧ್ರಿಯೊಡನೆ ಸಮಾಗಮ ಮಾಡಿದರೆ ಮೃತಪ ಎಂಬ ಅತೀ ಕುತ್ಸಿತನಾದ ಶ್ವಪಾಕ ಎಂಬ ಪುತ್ರನನ್ನು ಪಡೆಯುತ್ತಾನೆ.
ಚತುರೋ ಮಾಗಧೀ ಸೂತೇ ಕ್ರೂರಾನ್ ಮಾಯೋಪಜೀವಿನಃ |
ಮಾಂಸಂ ಸ್ವಾದುಕರಂ ಸೂದಂ ಸೌಗಂಧಮಿತಿ ಸಂಜ್ಞಿತಮ್ ॥22॥
ಮಾಗಧ ಜಾತಿಗೆ ಸೇರಿದ ಸ್ತ್ರೀಯು ಕಪಟದಿಂದ ಜೀವಿಸುವ ಕ್ರೂರರಾದ ನಾಲ್ಕು ಜಾತಿಯ ಮಕ್ಕಳನ್ನು ಪಡೆಯುತ್ತಾಳೆ. ಅವರಿಗೆ ಕ್ರಮವಾಗಿ ಮಾಂಸ-ಸ್ವಾದುಕರ-ಸೂದ ಮತ್ತು ಸೌಗಂಧ ಎಂದು ಹೆಸರು.
ವೈದೇಹಕಾಚ್ಚ ಪಾಪಿಷ್ಠಂ ಕ್ರೂರಂ ಭಾರ್ಯೋಪಜೀವಿನಮ್ |
ನಿಷಾದಾನ್ ಮದ್ರನಾಭಂ ಚ ಖರಯಾನಪ್ರಯಾಯಿನಮ್ ॥23॥
ಅಯೋಗವ ಜಾತಿಗೆ ಸೇರಿದ ಸ್ತ್ರೀಯು ವೈದೇಹಕನಿಂದ ಪಾಪಿಷ್ಠನೂ, ಕ್ರೂರನೂ, ಹೆಂಡತಿಯನ್ನು ಉಪಜೀವಿಸುವವನೂ ಆದ ಪುತ್ರನನ್ನು ಪಡೆಯುತ್ತಾಳೆ. ಅವಳು ನಿಷಾದನೊಡನೆ ಸಂಪರ್ಕವನ್ನು ಮಾಡಿದರೆ ಕತ್ತೆಯ ಯಾನವನ್ನು ಹೊಡೆಯುವ ಮದ್ರನಾಭನೆಂಬ ಜಾತಿಯ ಪುತ್ರನನ್ನು ಪಡೆಯುತ್ತಾಳೆ.
ಚಂಡಾಲಾತ್ ಪುಲ್ಕಸಂ ಚಾಪಿ ಖರಾಶ್ವಗಜಭೋಜಿನಮ್ |
ಮೃತಚೇಲಪ್ರತಿಚ್ಛನ್ನಂ ಭಿನ್ನಭಾಜನಭೋಜಿನಮ್ ॥24॥
ಅಯೋಗವ ಕನ್ಯೆಯು ಚಂಡಾಲನ ಸಂಪರ್ಕವನ್ನು ಮಾಡಿದರೆ ಪುಲ್ಕಸ ಜಾತಿಯ (ಮೃತವಾದ) ಕತ್ತೆ, ಕುದುರೆ ಮತ್ತು ಆಡುಗಳನ್ನು ಭಕ್ಷಿಸುವ, ಶವವಸ್ತ್ರವನ್ನು ಧರಿಸುವ, ಒಡೆದ ಪಾತ್ರೆಗಳಲ್ಲಿ ಭುಂಜಿಸುವ ಪುತ್ರನನ್ನು ಪಡೆಯುತ್ತಾಳೆ.
ಆಯೋಗವೀಷು ಜಾಯಂತೇ ಹೀನವರ್ಣಾಸು ತೇ ತ್ರಯಃ |
ಕ್ಷುದ್ರೋ ವೈದೇಹಕಾದಂಧ್ರೋ ಬಹಿರ್ಗ್ರಾಮಪ್ರತಿಶ್ರಯಃ ॥25॥
ಅಯೋಗವ ಸ್ತ್ರೀಯಲ್ಲಿ ವೈದೇಹಕನಿಂದ ಶೂದ್ರ, ಅಂಧ್ರ ಮತ್ತು ಕಾರಾವರ ಜಾತಿಗೆ ಸೇರಿದ ಗ್ರಾಮದ ಹೊರಗೆ ವಾಸಿಸುವ ಮೂರು ಹೀನವರ್ಣದ ಪುತ್ರರು ಜನಿಸುತ್ತಾರೆ.
ಕಾರಾವರೋ ನಿಷಾದ್ಯಾಂ ತು ಚರ್ಮಕಾರಾತ್ ಪ್ರಜಾಯತೇ |
ಚಂಡಾಲಾತ್ ಪಾಂಡುಸೌಪಾಕಸ್ತ್ವಕ್ಸಾರವ್ಯವಹಾರವಾನ್ ॥26॥
ಕಾರಾವರನಿಂದ ನಿಷಾದಿಯಲ್ಲಿ ಚರ್ಮಕಾರರು ಜನಿಸುತ್ತಾರೆ. ಚಂಡಾಲ ಪುರುಷನಿಂದ ನಿಷಾದಿಯಲ್ಲಿ ಹುಟ್ಟಿದ ಸುತನು

ಪಾಂಡುಸೌಪಾಕ ಜಾತಿಗೆ ಸೇರಿದವನಾಗುತ್ತಾನೆ. ಅವನು ಚರ್ಮಗಳ ವ್ಯವಹಾರವನ್ನು ಮಾಡಿ ಜೀವಿಸುತ್ತಾನೆ.
ಆಹಿಂಡಿಕೋ ನಿಷಾದೇನ ವೈದೇಹ್ಯಾಂ ಸಂಪ್ರಜಾಯತೇ |
ಚಂಡಾಲೇನ ತು ಸೌಪಾಕೋ ಮೌದ್ಗಲ್ಯಸಮವೃತ್ತಿಮಾನ್ ॥27॥
ನಿಷಾದನಿಂದ ವೈದೇಹಿಕ ಸ್ತ್ರೀಯಲ್ಲಿ ಹುಟ್ಟುವ ಪುತ್ರನು ಆಹಿಂಡಿಕನೆನಿಸುತ್ತಾನೆ. ಅವನಿಗೆ ಚಂಡಾಲನಿಂದ ಹುಟ್ಟಿದ ಪುತ್ರನು ಸೌಪಾಕನೆನಿಸಿ ಮೌದ್ಗಲ್ಯಜಾತಿಗೆ ಸಮವಾದ ವೃತ್ತಿಯನ್ನು ಹೊಂದಿರುತ್ತಾನೆ.
ನಿಷಾದೀ ಚಾಪಿ ಚಂಡಾಲಾತ್ ಪುತ್ರಮಂತಾವಸಾಯಿನಮ್ |
ಶ್ಮಶಾನಗೋಚರಂ ಸೂತೇ ಬಾಹ್ಯೈರಪಿ ಬಹಿಷ್ಕೃತಮ್ ॥28॥
ನಿಷಾದಸ್ತ್ರೀಯು ಚಂಡಾಲನಿಂದ ಊರಿನ ಹೊರಗೆ ವಾಸಿಸುವ, ವರ್ಣಬಾಹ್ಯರಿಂದಲೂ ಬಹಿಷ್ಕೃತನಾದ, ಶ್ಮಶಾನದಲ್ಲಿ ವಾಸಿಸುವ ಪುತ್ರನನ್ನು ಪಡೆಯುತ್ತಾಳೆ.
ಇತ್ಯೇತಾಃ ಸಂಕರೇ ಜಾತ್ಯಃ ಪಿತೃಮಾತೃವ್ಯತಿಕ್ರಮಾತ್ |
ಪ್ರಚ್ಛನ್ನಾ ವಾ ಪ್ರಕಾಶಾ ವಾ ವೇದಿತವ್ಯಾಃ ಸ್ವಕರ್ಮಭಿಃ ॥29॥
ಇವು ತಂದೆ-ತಾಯಿಗಳ ಅಪಚಾರದಿಂದ ಉಂಟಾಗುವ ಸಂಕರ ಜಾತಿಗಳು. ಕೆಲವು ರಹಸ್ಯವಾಗಿರುತ್ತವೆ. ಕೆಲವು ಸ್ಪಷ್ಟವಾಗಿ ಗೋಚರಿಸುತ್ತವೆ. ಅವರನ್ನು (ಜಾತಿ) ಅವರ ಕರ್ಮದಿಂದ ತಿಳಿಯಬೇಕು.
ಚತುರ್ಣಾಮೇವ ವರ್ಣಾನಾಂ ಧರ್ಮೋ ನಾನ್ಯಸ್ಯ ವಿದ್ಯತೇ |
ವರ್ಣಾನಾಂ ಧರ್ಮಹೀನೇಷು ಸಂಜ್ಞಾ ನಾಸ್ತೀಹ ಕಸ್ಯಚಿತ್ ॥30॥
ಎಲ್ಲ ಧರ್ಮಗಳೂ ನಾಲ್ಕು ವರ್ಣದವರಿಗೆ ಹೇಳಲ್ಪಟ್ಟಿವೆ. ವರ್ಣಬಾಹ್ಯರಾಗಿ ಧರ್ಮಹೀನರಾದವರ ವರ್ಣಗಳಿಗೆ ಹೆಸರೇ ಇರುವುದಿಲ್ಲ (ಹೀಗೆ ಸಂಕರ ಜಾತಿಯವರು ಬೆಳೆಯುತ್ತಾ ಹೋಗುವುದರಿಂದ ಅದಕ್ಕೆ ಸಂಖ್ಯೆಯೇ ಇಲ್ಲ).
ಯದೃಚ್ಛಯೋಪಸಂಪನ್ನೈರ್ಯಜ್ಞಸಾಧುಬಹಿಷ್ಕೃತೈಃ |
ಬಾಹ್ಯಾ ಬಾಹ್ಯೈಸ್ತು ಜಾಯಂತೇ ಯಥಾವೃತ್ತಿ ಯಥಾಶ್ರಯಮ್ ॥31॥
ಯಜ್ಞದಿಂದಲೂ, ಸಜ್ಜನರಿಂದಲೂ ಬಹಿಷ್ಕೃತರಾದವರು ತಮಗೆ ಸಹಜವಾಗಿ ದೊರಕಿದ ಬಾಹ್ಯಸ್ತ್ರೀಯ ಜೊತೆಯಲ್ಲಿ ಸಮಾಗಮವನ್ನು ಮಾಡಿದರೆ ಅವರ ವೃತ್ತಿಗೆ ಮತ್ತು ಆಶ್ರಯಕ್ಕೆ ಅನುಗುಣವಾದ ಪುತ್ರರು ಜನಿಸುತ್ತಾರೆ.
ಕಾರ್ಷ್ಣಾಯಸಮಲಂಕಾರಂ ಪರಿಗೃಹ್ಯ ಚ ನಿತ್ಯಶಃ |
ವಸೇಯುರೇತೇ ಪಿತೃೈಸ್ತು ವರ್ತಯಂತಃ ಸ್ವಕರ್ಮಭಿಃ ॥32॥
ಅವರು ಕಬ್ಬಿಣದ (ಉಕ್ಕಿನ) ಆಭರಣಗಳಿಂದ ಅಲಂಕಾರವನ್ನು ಮಾಡಿಕೊಂಡು ಪಿತೃವೃತ್ತಿಯನ್ನೇ ಅನುಸರಿಸಿ ವಾಸಿಸುತ್ತಾರೆ. ಅವರ ಜಾತಿಯನ್ನು ಅವರ ಕರ್ಮಗಳಿಂದಲೇ ತಿಳಿಯಬೇಕು.
ಚತುಷ್ಪಥಶ್ಮಶಾನಾನಿ ಶೈಲಾಂಶ್ಚಾನ್ಯಾನ್ ವನಸ್ಪತೀನ್ |
ಯುಂಜಂತೇ ಚಾಪ್ಯಲಂಕಾರಾಂಸ್ತಥೋಪಕರಣಾನಿ ಚ ॥33॥
ನಾಲ್ಕು ಬೀದಿಗಳು ಕೂಡುವ ಸ್ಥಳಗಳನ್ನೂ, ಶ್ಮಶಾನಗಳನ್ನೂ, ವನಸ್ಪತಿಗಳನ್ನೂ, ಬೇರೆ ವೃಕ್ಷಗಳನ್ನು ಕಾಯ್ದುಕೊಂಡು ವಾಸಿಸುತ್ತಿರುತ್ತಾರೆ. ಅಂತಹ ಅಲಂಕಾರಗಳನ್ನೇ ಮತ್ತು ಉಪಕರಣಗಳನ್ನೇ ಧರಿಸಿರುತ್ತಾರೆ.
ಗೋಬ್ರಾಹ್ಮಣಾರ್ಥೇ ಸಾಹಾಯ್ಯಂ ಕುರ್ವಾಣಾ ವೈ ನ ಸಂಶಯಃ |
ಆನೃಶಂಸ್ಯಮನುಕ್ರೋಶಃ ಸತ್ಯವಾಕ್ಯಮಥ ಕ್ಷಮಾ ॥34॥
ಸ್ವಶರೀರೈಃ ಪರಿತ್ರಾಣಂ ಬಾಹ್ಯಾನಾಂ ಸಿದ್ಧಿಕಾರಕಮ್ |
ಮನುಜವ್ಯಾಘ್ರ ಭವತಿ ತತ್ರ ಮೇ ನಾಸ್ತಿ ಸಂಶಯಃ ॥35॥
ಅವರೂ ಸಹ ಗೋ-ಬ್ರಾಹ್ಮಣರ ಸಲುವಾಗಿ ಸಹಾಯವನ್ನು ಮಾಡಿ ದಯಾಪರರಾಗಿ, ಸತ್ಯವಚನರಾಗಿ, ಕ್ಷಮಾಶೀಲರಾಗಿ ನಡೆದುಕೊಂಡರೆ ಅವರಿಗೂ ಸಹ ಸಿದ್ಧಿಯುಂಟಾಗುತ್ತದೆ (ಮುಂದೆ ಉತ್ತಮ ಜನ್ಮವು ದೊರೆಯುತ್ತದೆ). ಎಲೈ ಮನುಜವ್ಯಾಘ್ರನೇ, ಈ ವಿಷಯದಲ್ಲಿ ನಿನಗೆ ಸಂಶಯವು ಬೇಡ.
ಯಥೋಪದೇಶಂ ಪರಿಕೀರ್ತಿತಾಸು
ನರಃ ಪ್ರಜಾಯೇತ ವಿಚಾರ್ಯ ಬುದ್ಧಿಮಾನ್ |
ವಿಹೀನಯೋನಿರ್ಹಿ ಸುತೋಽವಸಾದಯೇತ್
ತಿತೀರ್ಷಮಾಣಂ ಸಲಿಲೇ ಯಥೋಪಲಮ್ ॥36॥
ವಿವೇಕಿಯಾದ ಮನುಷ್ಯನಾದವನು ವಿಚಾರ ಮಾಡಿ, ಶಾಸ್ತ್ರದಲ್ಲಿ ಹೇಳಲ್ಪಟ್ಟ ಜಾತಿಗಳನ್ನು ಗಮನಿಸಿ ಪುತ್ರರನ್ನು ಪಡೆಯಬೇಕು. ಹೀನಯೋನಿಯಲ್ಲಿ ಹುಟ್ಟಿದ ಪುತ್ರನು ನೀರನ್ನು ದಾಟಲು ಬಯಸುವವನನ್ನು ಕಲ್ಲು ಮುಳುಗಿಸುವಂತೆ ತಂದೆಯನ್ನೂ, ಕುಲವನ್ನೂ ನಾಶಗೊಳಿಸುತ್ತಾನೆ.
ಅವಿದ್ವಾಂಸಮಲಂ ಲೋಕೇ ವಿದ್ವಾಂಸಮಪಿ ವಾ ಪುನಃ |
ನಯಂತೇ ಹ್ಯುತ್ಪಥಂ ನಾರ್ಯಃ ಕಾಮಕ್ರೋಧವಶಾನುಗಮ್ ॥37॥
ನಾರಿಯರು ಕಾಮ-ಕ್ರೋಧವಶನಾದ ಪುರುಷನು ವಿದ್ವಾಂಸನಾಗಿರಲಿ ಅಥವಾ ಅವಿದ್ವಾಂಸನಾಗಿರಲಿ ಅವನನ್ನು ದುರ್ಮಾರ್ಗಕ್ಕೆ ಎಳೆಯುತ್ತಾರೆ.
ಸ್ವಭಾವಶ್ಚೈವ ನಾರೀಣಾಂ ನರಾಣಾಮಿಹ ದೂಷಣಮ್ |
ಅತ್ಯರ್ಥಂ ನ ಪ್ರಸಜ್ಜಂತೇ ಪ್ರಮದಾಸು ವಿಪಶ್ಚಿತಃ ॥38॥
ಪುರುಷರನ್ನು ದೂಷಿಸುವುದೇ ಈ ಲೋಕದಲ್ಲಿ ನಾರಿಯರ ಸ್ವಭಾವ. ಆದ್ದರಿಂದ ವಿವೇಕಿಗಳಾದ ಪುರುಷರು ನಾರಿಯರಲ್ಲಿ

ಬಹಳವಾದ ಸ್ನೇಹವನ್ನು ಹೊಂದುವುದಿಲ್ಲ.
ಯುಧಿಷ್ಠಿರಃ
ವರ್ಣಾಪೇತಮವಿಜ್ಞಾತಂ ನರಂ ಕಲುಷಯೋನಿಜಮ್ ।
ಆರ್ಯರೂಪಮಿವಾನಾರ್ಯಂ ಕಥಂ ವಿದ್ಯಾಮಹೇ ನೃಪ ॥39॥
ಯುಧಿಷ್ಠಿರ ದುಷ್ಟಯೋನಿಯಲ್ಲಿ ಜನಿಸಿ, ವರ್ಣಬಾಹಿರನಾಗಿ ಅದನ್ನು ತೋರಿಸಿಕೊಳ್ಳದೆ ಶ್ರೇಷ್ಠರೂಪವನ್ನು ತೋರಿಸುವ ಅನಾರ್ಯರನ್ನು ಎಲೈ ರಾಜನೇ, ನಾವು ಹೇಗೆ ತಿಳಿಯಬೇಕು?
ಭೀಷ್ಮಃ
ಯೋನಿಸಂಕಲುಷೇ ಜಾತಂ ನಾನಾಚಾರಸಮಾಹಿತಮ್ ।
ಕರ್ಮಭಿಃ ಸಜ್ಜನಾಚೀರ್ಣೈರ್ವಿಜ್ಞೇಯಾ ಯೋನಿಶುದ್ಧತಾ ॥40॥
ಭೀಷ್ಮ ಸಜ್ಜನರ ಆಚಾರವನ್ನು ನೋಡಿ, ಯೋನಿಸಂಕರದಿಂದ ಜನಿಸಿದವನು ಅನೇಕ ವಿಧವಾದ ಆಚಾರವನ್ನು ಹೊಂದಿರುವುದನ್ನು ನೋಡಿ ಅವನ ಯೋನಿಯ ಶುದ್ಧಿ-ಅಶುದ್ಧಿಗಳನ್ನು ತಿಳಿಯಬೇಕು.
ಅನಾರ್ಯತ್ವಮನಾಚಾರಃ ಕ್ರೂರತ್ವಂ ನಿಷ್ಕ್ರಿಯಾತ್ಮತಾ ।
ಪುರುಷಂ ವ್ಯಂಜಯಂತೀಹ ಲೋಕೇ ಕಲುಷಯೋನಿಜಮ್ ॥41॥
ನೀಚವರ್ತನೆ, ಆಚಾರರಾಹಿತ್ಯ, ಕ್ರೂರತನ, ಆಲಸ್ಯ- ಇವುಗಳು ಹೀನ ಯೋನಿಯಲ್ಲಿ ಜನಿಸಿದ ಪುರುಷರನ್ನು ತೋರಿಸಿಕೊಡುತ್ತವೆ.
ಪಿತ್ರ್ಯಂ ವಾ ಭಜತೇ ಶೀಲಂ ಮಾತೃಜಂ ವಾ ತಥೋಭಯಮ್ ।
ನ ಕಥಂಚನ ಸಂಕೀರ್ಣಃ ಪ್ರಕೃತಿಂ ಸ್ವಾಂ ನಿಯಚ್ಛತಿ ॥42॥
ಅಂತಹವನು ತಂದೆಯ ಶೀಲವನ್ನಾಗಲೀ ಅಥವಾ ತಾಯಿಯ ಶೀಲವನ್ನಾಗಲೀ ಹೊಂದಿರುತ್ತಾನೆ. ಸಂಕರಜಾತಿಯಲ್ಲಿ ಜನಿಸಿದವನಿಗೆ ತನ್ನ ಸ್ವತಂತ್ರವಾದ ಸ್ವಭಾವ ಎಂಬುದು ಇರುವುದಿಲ್ಲ.
ಯಥೈವ ಸದೃಶೋ ರೂಪೇ ಮಾತಾಪಿತ್ರೋರ್ಹಿ ಜಾಯತೇ ।
ವ್ಯಾಘ್ರಶ್ಚಿತ್ರೈಸ್ತಥಾ ಯೋನಿಂ ಪುರುಷಃ ಸ್ವಾಂ ನಿಯಚ್ಛತಿ ॥43॥
ಹೇಗೆ ಮಾತಾ-ಪಿತೃಗಳಿಗೆ ಸದೃಶವಾದ ಚಿತ್ರರೂಪದಿಂದ ವ್ಯಾಘ್ರಶಿಶುವು ಜನಿಸುತ್ತದೆಯೋ ಹಾಗೆಯೇ ಪುರುಷನು ತನ್ನ ಯೋನಿಗೆ ಸ್ವಾಭಾವಿಕವಾದ ಗುಣಗಳಿಂದ ಕೂಡಿ ತನ್ನನ್ನು ತೋರಿಸಿಕೊಳ್ಳುತ್ತಾನೆ.
ಕುಲಸ್ರೋತಸಿ ಸಂಛಿನ್ನೇ ಯಸ್ಯ ಸ್ಯಾದ್ ಯೋನಿಸಂಕರಃ ।
ಸಂಶ್ರಯತ್ಯೇವ ತಚ್ಛೀಲಂ ನರೋಽಲ್ಪಮಪಿ ವಾ ಬಹು ॥44॥
ಕುಲಮೂಲವು ತಿಳಿಯದೆ ಇದ್ದಾಗ ಯೋನಿಸಂಕರದಿಂದ ಜನಿಸಿದ ನರನು ಸ್ವಲ್ಪವಾಗಲೀ ಅಥವಾ ಬಹಳವಾಗಲೀ ತನ್ನ ಜನಕರ ಯೋನಿಗಳ ಶೀಲಗಳನ್ನೇ ಆಶ್ರಯಿಸಿರುತ್ತಾನೆ.
ಆರ್ಯರೂಪಸಮಾಚಾರಂ ಚರಂತಂ ಕೃತಕೇ ಪಥಿ ।
ಸ್ವವರ್ಣಮನ್ಯವರ್ಣಂ ವಾ ಸ್ವಶೀಲಂ ಶಾಸ್ತಿ ನಿಶ್ಚಯೇ ॥45॥
ಸ್ವತಃ ಅನಾರ್ಯನಾದವನು ಆರ್ಯನಾದವನ ನಡವಳಿಕೆಯನ್ನು ಕೃತಕವಾಗಿ ನಡೆಸುತ್ತಾ ಇದ್ದರೆ ಅವನು ಆರ್ಯವರ್ಣದವನೋ ಅಥವಾ ಅನ್ಯವರ್ಣದವನೋ ಎಂದು ನಿಶ್ಚಯಿಸಲು ಅವನ ಶೀಲವೇ ಸಮರ್ಥವಾಗುತ್ತದೆ.
ನಾನಾವೃತ್ತೇಷು ಭೂತೇಷು ನಾನಾಕರ್ಮರತೇಷು ಚ ।
ಜನ್ಮವೃತ್ತಸಮಂ ಲೋಕೇ ಸುಶ್ಲಿಷ್ಟಂ ನ ವಿರಜ್ಯತೇ ॥46॥
ಪ್ರಾಣಿಗಳು ಅನೇಕ ನಡತೆಯನ್ನು ಹೊಂದಿದ್ದರೂ ಅಥವಾ ಅನೇಕ ಕರ್ಮಗಳಲ್ಲಿ ನಿರತರಾಗಿದ್ದರೂ ಜನ್ಮದಿಂದ ಬಂದ ಅವನಿಗೆ ಬಹಳವಾಗಿ ಅಂಟಿಕೊಂಡಿರುವ ಅವನ ಸ್ವಭಾವವು ಅವನನ್ನು ಬಿಟ್ಟುಹೋಗುವುದಿಲ್ಲ.
ಶರೀರಮಿಹ ಸತ್ತ್ವೇನ ನರಸ್ಯ ಪರಿಕೃಷ್ಯತೇ ।
ಜ್ಯೇಷ್ಠಮಧ್ಯಾವರಂ ಸತ್ತ್ವಂ ತುಲ್ಯಸತ್ತ್ವಂ ಪ್ರಮೋದತೇ ॥47॥
ಭೂಮಿಯಲ್ಲಿ ಮನುಷ್ಯನ ಶರೀರವು ಅವನ ಸ್ವಭಾವಕ್ಕೆ ಅನುಗುಣವಾಗಿ ಯೋನಿಗಳಲ್ಲಿ ಸಂಚರಿಸುತ್ತವೆ. ಶ್ರೇಷ್ಠ, ಮಧ್ಯಮ ಮತ್ತು ನೀಚ ಸ್ವಭಾವಗಳಿರುತ್ತವೆ. ತನ್ನ ಸ್ವಭಾವಕ್ಕನುಗುಣವಾದ ಸ್ವಭಾವವುಳ್ಳವರಲ್ಲಿ ಮನುಷ್ಯನು ಸಂತೋಷಪಡುತ್ತಾನೆ.
ಜ್ಯಾಯಾಂಸಮಪಿ ಶೀಲೇನ ವಿಹೀನಂ ನೈವ ಪೂಜಯೇತ್ ।
ಅಪಿ ಶೂದ್ರಂ ತು ಸದ್ವೃತ್ತಂ ಧರ್ಮಜ್ಞಮಭಿಪೂಜಯೇತ್ ॥48॥
ಉತ್ತಮ ಜಾತಿಯಲ್ಲಿ ಜನಿಸಿದ್ದರೂ ಶೀಲವಿಲ್ಲದವನನ್ನು ಪೂಜಿಸಬಾರದು. ಶೂದ್ರನೂ ಸಹ ಅವನು ಒಳ್ಳೆಯ ನಡತೆಯುಳ್ಳವನೂ, ಧರ್ಮಜ್ಞನೂ ಆಗಿದ್ದರೆ ಅವನನ್ನು ಪೂಜಿಸಬೇಕು.
ಆತ್ಮಾನಮಾಖ್ಯಾತಿ ಹಿ ಕರ್ಮಭಿರ್ನರಃ
ಸ್ವಶೀಲಚಾರಿತ್ರಕೃತೈಃ ಶುಭಾಶುಭೈಃ ।
ಪ್ರನಷ್ಟಮಪ್ಯಾತ್ಮಕುಲಂ ತಥಾ ನರಃ
ಪುನಃ ಪ್ರಕಾಶಂ ಕುರುತೇ ಸ್ವಕರ್ಮಭಿಃ ॥49॥
ಮನುಷ್ಯನು ಶುಭಾಶುಭವಾದ ತನ್ನ ಶೀಲ, ಚಾರಿತ್ರ್ಯ ಮತ್ತು ಕರ್ಮಗಳಿಂದ ತನ್ನನ್ನು ವ್ಯಕ್ತಪಡಿಸಿಕೊಳ್ಳುತ್ತಾನೆ. ಹಾಗೆಯೇ ಅವನ ಕುಲದ ಮೂಲವು ನಷ್ಟವಾಗಿದ್ದರೂ ಸಹ ತನ್ನ ಕರ್ಮಗಳಿಂದ ಅದನ್ನು ಪುನಃ ಪ್ರಕಾಶಗೊಳಿಸುತ್ತಾನೆ.
ಯೋನಿಷ್ವೇತಾಸು ಸರ್ವಾಸು ಸಂಕೀರ್ಣಾಸ್ವಿತರಾಸು ಚ ।
ಯತ್ರಾತ್ಮಾನಂ ನ ಜನಯೇದ್ ಬುಧಸ್ತಾಃ ಪರಿವರ್ಜಯೇತ್ ॥50॥

ಈ ಸಂಕರಯೋನಿಗಳಲ್ಲಿ ಮತ್ತು ಇತರ ಯೋನಿಗಳಲ್ಲಿ ಎಲ್ಲಿ ಪುರುಷನು ತಾನೇ ಪುತ್ರನಾಗಿ ಜನಿಸುವುದಿಲ್ಲವೋ (ಎಲ್ಲಿ ಪುತ್ರನಿಗೆ ತನ್ನ ಜಾತಿಯು ಬರುವುದಿಲ್ಲವೋ) ಅಂತಹ ಜಾತಿಗಳನ್ನು ವಿವೇಕಿಯಾದವನು ಪರಿತ್ಯಜಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ವರ್ಣಸಂಕರವರ್ಣನಂ ನಾಮ ಅಷ್ಟಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೊಂಬತ್ತನೆಯ ಅಧ್ಯಾಯ
ಪುತ್ರಪ್ರಭೇದ ಕಥನ.
ಯುಧಿಷ್ಠಿರಃ
ಬ್ರೂಹಿ ಪುತ್ರಾನ್ ಕುರುಶ್ರೇಷ್ಠ ವರ್ಣಾನಾಂ ತ್ವಂ ಪೃಥಕ್ಪೃಥಕ್ |
ಕೀದೃಶ್ಯಾಂ ಕೀದೃಶಾಶ್ಚಾಪಿ ಪುತ್ರಾಃ ಕಸ್ಯ ಚ ಕೇ ಚ ತೇ ॥1॥
ವಿಪ್ರವಾದಾಃ ಸುಬಹುಶಃ ಶ್ರೂಯಂತೇ ಪುತ್ರಕಾರಿತಾಃ |
ಅತ್ರ ನೋ ಮುಹ್ಯತಾಂ ರಾಜನ್ ಸಂಶಯಂ ಛೇತ್ತುಮರ್ಹಸಿ ॥2॥
ಯುಧಿಷ್ಠಿರ ಎಲೈ ಕುರುಶ್ರೇಷ್ಠನೇ, ವರ್ಣಗಳಲ್ಲಿ ಜನಿಸಿದ ಪುತ್ರರ ಪ್ರಭೇದಗಳನ್ನು ಬೇರೆ ಬೇರೆಯಾಗಿ ಹೇಳು. ಯಾವ ವರ್ಣದವರಲ್ಲಿ ಎಂತಹ ಪುತ್ರರು ಜನಿಸುತ್ತಾರೆ? ಅವರು ಯಾರಿಗೆ ಸೇರಿದವರು ಮತ್ತು ಅವರು ಯಾರು? (ಅವರ ವಿಶೇಷ ಹೆಸರುಗಳೇನು?) ಎಲೈ ರಾಜನೇ, ಪುತ್ರರ ವಿಷಯದಲ್ಲಿ ಬ್ರಾಹ್ಮಣರು ಅನೇಕ ವಿಧವಾಗಿ ಮಾತನಾಡುವುದು ಕೇಳಿಬರುತ್ತದೆ. ಈ ವಿಷಯದಲ್ಲಿ ಮೋಹ ಹೊಂದಿರುವ ನಮಗೆ ನಮ್ಮ ಸಂಶಯವನ್ನು ನೀನು ಪರಿಹರಿಸಬೇಕು.
ಭೀಷ್ಮಃ
ಆತ್ಮಾ ಪುತ್ರಸ್ತು ವಿಜ್ಞೇಯಃ ಪ್ರಥಮೋ ಬಹುಧಾ ಪರೇ |
ಸ್ವೇ ಕ್ಷೇತ್ರೇ ಸಂಸ್ಕೃತೇ ಯಸ್ತು ಪುತ್ರಮುತ್ಪಾದಯೇತ್ ಸ್ವಯಮ್ |
ತಮೌರಸಂ ವಿಜಾನೀಯಾತ್ ಪುತ್ರಂ ಪ್ರಥಮಕಲ್ಪಿತಮ್ ॥3॥
ಭೀಷ್ಮ ಪ್ರಥಮಪುತ್ರನನ್ನು ಎಂದರೆ ಶ್ರೇಷ್ಠನಾದ ಪುತ್ರನನ್ನು ಆತ್ಮನೆಂದೇ ತಿಳಿಯಬೇಕು. ಉಳಿದ ಪುತ್ರರು ಅನೇಕ ರೀತಿಯಲ್ಲಿ ಇರುತ್ತಾರೆ. ತನ್ನ ಪತ್ನಿಯಲ್ಲಿ ಸಂಸ್ಕಾರಪೂರ್ವಕವಾಗಿ ತಾನೇ ಪಡೆದ ಮಗನನ್ನು ಔರಸಪುತ್ರನೆಂದು ತಿಳಿಯಬೇಕು. ಅವನು ಎಲ್ಲ ಪುತ್ರರಿಗಿಂತ ಶ್ರೇಷ್ಠನಾದವನೆಂದು ಹೇಳಲ್ಪಟ್ಟಿದ್ದಾನೆ.
ಅಗ್ನಿಂ ಪ್ರಜಾಪತಿಂ ಚೇಷ್ಟ್ವಾ ವರಾಯ ಪ್ರತಿಪಾದಿತಾ |
ಪುತ್ರಿಕಾ ಸ್ಯಾದ್ ದುಹಿತರಿ ಸಂಕಲ್ಪೇನಾಪಿ ವಾ ಸುತಃ ॥4॥
ಅಗ್ನಿ ಮತ್ತು ಪ್ರಜಾಪತಿಗಳನ್ನು ಕುರಿತು ಹೋಮವನ್ನು ಮಾಡಿ ವರನಿಗೆ ಸಂಕಲ್ಪಪೂರ್ವಕವಾಗಿ ದಾನ ಕೊಟ್ಟ ಪುತ್ರಿಯಲ್ಲಿ ಜನಿಸುವ ಸುತನು ಪುತ್ರಿಕಾ ಪುತ್ರನೆಂದು ಕರೆಯಲ್ಪಡುತ್ತಾನೆ.
ತಲ್ಪೇ ಜಾತಃ ಪ್ರಮೀತಸ್ಯ ಕ್ಲೀಬಸ್ಯ ಪತಿತಸ್ಯ ವಾ |
ಸ್ವಧರ್ಮೇಣ ನಿಯುಕ್ತೋ ಯಃ ಸ ಪುತ್ರಃ ಕ್ಷೇತ್ರಜಃ ಸ್ಮೃತಃ ॥5॥
ಮೃತಹೊಂದಿದವನ, ನಪುಂಸಕನ ಅಥವಾ ಪತಿತನಾದವನ ಪತ್ನಿಯಲ್ಲಿ ಧರ್ಮಕ್ಕೆ ಅನುಸಾರವಾಗಿ ನಿಯೋಗಪದ್ಧತಿಯಿಂದ ಜನಿಸಿದ ಪುತ್ರನು ಕ್ಷೇತ್ರಜ ಎಂದು ಕರೆಯಲ್ಪಡುತ್ತಾನೆ.
ಮಾತಾ ಪಿತಾ ಚ ದದ್ಯಾತಾಂ ಯಮದ್ಭಿಃ ಪುತ್ರಮಾಪದಿ |
ಸದೃಶಂ ಪ್ರೀತಿಸಂಯುಕ್ತೌ ವಿಜ್ಞೇಯೋ ದತ್ತಕಃ ಸುತಃ ॥6॥
ಆಪತ್ತಿಗೆ ಸಿಲುಕಿದ ಮಾತಾಪಿತೃಗಳು ತಮಗೆ ಸದೃಶನಾದ ಯಾವ ಪುತ್ರನನ್ನು ಪ್ರೀತಿಯಿಂದ ಧಾರಾ ಪೂರ್ವಕವಾಗಿ ಕೊಡುತ್ತಾರೋ ಅವನನ್ನು ದತ್ತಪುತ್ರನೆಂದು ತಿಳಿಯಬೇಕು.
ಸದೃಶಂ ತು ಪ್ರಕುರ್ಯಾದ್ ಯಂ ಗುಣದೋಷವಿಚಕ್ಷಣಮ್ |
ಪುತ್ರಂ ಪುತ್ರಗುಣೈರ್ಯುಕ್ತಂ ವಿಜ್ಞೇಯಸ್ತು ಸ ಕೃತ್ರಿಮಃ ॥7॥
ಗುಣ-ದೋಷ ವಿವೇಚನವುಳ್ಳ, ಉತ್ತಮಗುಣಗಳಿಂದ ಕೂಡಿದ, ತನಗೆ ಸದೃಶನಾದ ಯಾವನನ್ನು ಯಾವನು ಪುತ್ರನನ್ನಾಗಿ ಸ್ವೀಕರಿಸುತ್ತಾನೆಯೋ ಅವನನ್ನು ಕೃತ್ರಿಮಪುತ್ರ ಎಂದು ಕರೆಯುತ್ತಾರೆ.
ಉತ್ಪದ್ಯತೇ ಯಸ್ತು ಗೂಢಂ ನ ಚ ಜ್ಞಾಯೇತ ಕಸ್ಯಚಿತ್ |
ಸ ಭವೇದ್ ಗೂಢಜೋ ನಾಮ ತಸ್ಯ ಸ್ಯಾದ್ ಯಸ್ಯ ತಲ್ಪತಃ ॥8॥
ಯಾವನ ತಂದೆಯು ಗೂಢನಾಗಿದ್ದು ಇಂತಹವನೆಂದು ತಿಳಿಯದೆ ಜನಿಸುತ್ತಾನೆಯೋ ಅವನನ್ನು ಗೂಢಜ ಪುತ್ರನೆಂದು ಕರೆಯುತ್ತಾರೆ. ಅವನು ಆ ಗೂಢನಾದ ತಂದೆಗೇ ಸೇರುತ್ತಾನೆ.
ಮಾತಾಪಿತೃಭ್ಯಾಮುತ್ಸೃಷ್ಟಃ ತಯೋರನ್ಯತರೇಣ ವಾ |
ಯಂ ಪುತ್ರಂ ಪ್ರತಿಗೃಹ್ಣೀಯಾದಪವಿದ್ಧಃ ಸ ಉಚ್ಯತೇ ॥9॥
ತಂದೆ-ತಾಯಿಗಳಿಂದಲಾಗಲೀ ಅಥವಾ ಒಬ್ಬೊಬ್ಬರಿಂದಾಗಲೀ ತ್ಯಜಿಸಲ್ಪಟ್ಟವನನ್ನು ಯಾರು ಪುತ್ರನನ್ನಾಗಿ ಸ್ವೀಕರಿಸುತ್ತಾರೆಯೋ ಅವನನ್ನು ಅಪವಿದ್ಧ ಪುತ್ರನೆಂದು ಕರೆಯುತ್ತಾರೆ.
ಪಿತೃವೇಶ್ಮನಿ ಕನ್ಯಾ ತು ಯಂ ಪುತ್ರಂ ಜನಯೇದ್ ರಹಃ |
ಕಾನೀನಂ ತಂ ವದೇನ್ನಾಮ್ನಾ ವೋಢುಃ ಕನ್ಯಾಸಮುದ್ಭವಃ ॥10॥

ತಂದೆಯ ಮನೆಯಲ್ಲಿ ವಿವಾಹವಾಗುವುದಕ್ಕಿಂತ ಮೊದಲೇ ಕನ್ಯೆಯು ರಹಸ್ಯವಾಗಿ ಯಾವ ಪುತ್ರನನ್ನು ಪಡೆಯುತ್ತಾಳೆಯೋ ಅವನನ್ನು ಕಾನೀನ ಎಂದು ಕರೆಯುತ್ತಾರೆ. ಅವನು ಮುಂದೆ ಆ ಕನ್ಯೆಯನ್ನು ಮದುವೆಯಾಗುವವನಿಗೆ ಸೇರುತ್ತಾನೆ.
ಯಾ ಗರ್ಭಿಣೀ ಸಂಸ್ಕ್ರಿಯತೇ ಜ್ಞಾತಾಽಜ್ಞಾತಾಪಿ ವಾ ಸತೀ |
ವೋಢುಃ ಸ ಗರ್ಭೋ ಭವತಿ ಸಹೋಢ ಇತಿ ಚೋಚ್ಯತೇ ॥11॥
ಯಾವಳು ಗರ್ಭಿಣಿಯಾದಮೇಲೆ ಅದನ್ನು ತಿಳಿದು ಅಥವಾ ತಿಳಿಯದೆ ವಿವಾಹ ಸಂಸ್ಕಾರವನ್ನು ಹೊಂದುತ್ತಾಳೆಯೋ ಅವಳಲ್ಲಿ ಜನಿಸುವವನು ಅವಳನ್ನು ವಿವಾಹವಾಗುವವನಿಗೆ ಸೇರುತ್ತಾನೆ. ಆ ಪುತ್ರನಿಗೆ ಸಹೋಢ ಎಂದು ಹೆಸರು.
ಯಾ ಪತ್ಯಾ ಪರಿತ್ಯಕ್ತಾ ಅಥವಾ ಸ್ವೇಚ್ಛಯಾಽಪಿ ವಾ |
ಉತ್ಪಾದಯೇದಕ್ಷತಾ ಯಾ ಸ ಪೌನರ್ಭವ ಉಚ್ಯತೇ ॥12॥
ಅಕ್ಷತಯೋನಿಯಾದ ಯಾವ ಕನ್ಯೆಯು ವಿವಾಹವಾದ ಮೇಲೆ ಪತಿಯಿಂದ ಪರಿತ್ಯಕ್ತಳಾಗಿ ಅಥವಾ ತನ್ನ ಸ್ವಂತ ಇಚ್ಛೆಯಿಂದಲೇ ಪುತ್ರನನ್ನು ಪಡೆಯುತ್ತಾಳೆಯೋ ಅವನಿಗೆ ಪೌನರ್ಭವ ಎಂದು ಹೆಸರು.
ಮಾತಾಪಿತೃವಿಹೀನೋ ವಾ ತ್ಯ(ಸ)ಕ್ತೋ ವಾ ಸ್ಯಾದಕಾರಣಾತ್ |
ಆತ್ಮಾನಂ ಸ್ಪರ್ಶಯೇದ್ ಯಸ್ತು ಸ್ವಯಂದತ್ತಃ ಸ ಉಚ್ಯತೇ ॥13॥
ಮಾತಾ-ಪಿತೃರಹಿತನಾಗಿ ಅಥವಾ ಅವರಿಂದ ನಿಷ್ಕಾರಣವಾಗಿ ಪರಿತ್ಯಕ್ತನಾಗಿ ಯಾವನು ತಾನೇ ಇನ್ನೊಬ್ಬನ ಬಳಿಗೆ ಹೋಗಿ ನಾನು ನಿಮ್ಮ ಪುತ್ರ ಎಂದು ಹೇಳಿಕೊಳ್ಳುತ್ತಾನೆಯೋ ಅವನನ್ನು ಸ್ವಯಂದತ್ತಪುತ್ರ ಎಂದು ಕರೆಯುತ್ತಾರೆ.
ಕ್ರೀಣೀಯಾದ್ ಯಸ್ತ್ವಪತ್ಯಾರ್ಥಂ ಮಾತಾಪಿತ್ರೋರ್ಯಮಂತಿಕಾತ್ |
ಸ ಸುತಸ್ತಸ್ಯ ಸದೃಶಃ ಕ್ರೀತೋ ನಾಮ ಬುಧೈಃ ಸ್ಮೃತಃ |
ದ್ವಾದಶೈತೇ ಪರೇ ಪ್ರಾಹುರೇವಂ ಧರ್ಮಸ್ಯ ಪಾಲಕಾಃ ॥14॥
ತಂದೆ-ತಾಯಿಗಳ ಸಮೀಪಕ್ಕೆ ಹೋಗಿ ಮಕ್ಕಳಿಲ್ಲದ ಯಾವನು ಅವರ ಪುತ್ರನನ್ನು ಕ್ರಯಕ್ಕೆ ಪಡೆಯುತ್ತಾನೆಯೋ ಆ ಪುತ್ರನು ಕ್ರಯಪಡೆದವನಿಗೆ ಸದೃಶನಾಗಿ ಜ್ಞಾನಿಗಳಿಂದ ಕ್ರೀತಪುತ್ರ ಎಂದು ಕರೆಯಲ್ಪಡುತ್ತಾನೆ. ಧರ್ಮದ ರಕ್ಷಕರಾದ ಜ್ಞಾನಿಗಳು ಈ ಹನ್ನೆರಡು ರೀತಿಯ ಪುತ್ರರು ಇರುತ್ತಾರೆಂದು ಹೇಳುತ್ತಾರೆ.
ಆತ್ಮಾ ಪುತ್ರಸ್ತು ವಿಜ್ಞೇಯಸ್ತಸ್ಯಾನಂತರಜಶ್ಚ ಯಃ |
ನಿಯುಕ್ತಜಶ್ಚ ವಿಜ್ಞೇಯಃ ಸುತಃ ಪ್ರಸೃತಜಸ್ತಥಾ ॥15॥
ಪತಿತಸ್ಯ ಚ ಭಾರ್ಯಾಯಾಂ ಭರ್ತ್ರಾ ಸುಸಮವೇತಯಾ |
ತಥಾ ದತ್ತಕೃತೌ ಪುತ್ರಾವಧ್ಯೂಢಶ್ಚ ತಥಾಪರಃ ॥16॥
ಷಡಪಧ್ವಂಸಜಾಶ್ಚಾಪಿ ಕಾನೀನಾಪಶದಾಸ್ತಥಾ |
ಇತ್ಯೇತೇ ತೇ ಸಮಾಖ್ಯಾತಾಸ್ತಾನ್ ವಿಜಾನೀಹಿ ಭಾರತ ॥17॥
ತನ್ನ ವೀರ್ಯದಿಂದ ತನ್ನ ಪತ್ನಿಯಲ್ಲಿ ಹುಟ್ಟಿದವನು ಔರಸಪುತ್ರ. ಅವನನ್ನು ತಿಳಿಯಬೇಕು. ಅವನ ಅನಂತರದಲ್ಲಿ ಜನಿಸುವ ನಿಯೋಗಜ ಪುತ್ರನನ್ನೂ, ಹಾಗೆಯೇ ಪ್ರಸೃತಜ ಪುತ್ರನನ್ನೂ ತಿಳಿಯಬೇಕು (ತನ್ನ ಪತ್ನಿಯಲ್ಲದವಳಲ್ಲಿ ಪಡೆದ ಪುತ್ರನಿಗೆ ಪ್ರಸೃತಜ ಪುತ್ರನೆಂದು ಹೆಸರು). ಪತಿತನ ಭಾರ್ಯೆಯಲ್ಲಿ ಸಮಾಗಮವನ್ನು ಹೊಂದಿ ಜನಿಸಿದ ಪುತ್ರನು ಕ್ಷೇತ್ರಜನಾದವನು. ಅವನನ್ನು ತಿಳಿಯಬೇಕು. ದತ್ತಪುತ್ರ, ಕೃತಕಪುತ್ರ ಮತ್ತು ಇನ್ನೊಬ್ಬನಾದ ಅಧ್ಯೂಢಪುತ್ರ ಇವರನ್ನೂ ತಿಳಿಯಬೇಕು. ಈ ಎಂಟು ಪುತ್ರರಲ್ಲದೆ ಆರು ಅಪಧ್ವಂಸಜ ಪುತ್ರರನ್ನೂ ಕಾನೀನನನ್ನೂ, ಆರು ಅಪಶದರನ್ನೂ ತಿಳಿಯಬೇಕು. ಎಲೈ ಭಾರತನೇ, ಈ ಪುತ್ರರ ಪ್ರಭೇದವನ್ನು ನಿನಗೆ ಹೇಳಿದ್ದೇನೆ. ಅವರನ್ನು ತಿಳಿದುಕೊ.
ಯುಧಿಷ್ಠಿರಃ
ಷಡಪಧ್ವಂಸಜಾಃ ಕೇ ಸ್ಯುಃ ಕೇ ವಾಪ್ಯಪಶದಾಸ್ತಥಾ |
ಏತತ್ ಸರ್ವಂ ಯಥಾತತ್ತ್ವಂ ವ್ಯಾಖ್ಯಾತುಂ ಮೇ ತ್ವಮರ್ಹಸಿ ॥18॥
ಯುಧಿಷ್ಠಿರ ಅಪಧ್ವಂಸರ ಆರು ಪುತ್ರರು ಯಾರು? ಅಪಶದರು ಯಾರು? ಇವೆಲ್ಲವನ್ನೂ ನನಗೆ ಸರಿಯಾಗಿ ಹೇಳಬೇಕು.
ಭೀಷ್ಮಃ
ತ್ರಿಷು ವರ್ಣೇಷು ಯೇ ಪುತ್ರಾ ಬ್ರಾಹ್ಮಣಸ್ಯ ಯುಧಿಷ್ಠಿರ |
ವರ್ಣಯೋಶ್ಚ ದ್ವಯೋಃ ಸ್ಯಾತಾಂ ಯೌ ರಾಜನ್ಯಸ್ಯ ಭಾರತ ॥19॥
ಏಕೋ ವಿಡ್ವರ್ಣ ಏವಾಥ ತಥಾತ್ರೈವೋಪಲಕ್ಷಿತಃ |
ಷಡಪಧ್ವಂಸಜಾಸ್ತೇ ಹಿ ತಥೈವಾಪಶದಾನ್ ಶೃಣು ॥20॥
ಭೀಷ್ಮ ಎಲೈ ಯುಧಿಷ್ಠಿರನೇ, ಬ್ರಾಹ್ಮಣನಿಗೆ ಬ್ರಾಹ್ಮಣವರ್ಣವನ್ನು ಬಿಟ್ಟು ಉಳಿದ ಮೂರು ವರ್ಣಗಳಲ್ಲಿ ಜನಿಸಿದ ಪುತ್ರರು, ಕ್ಷತ್ರಿಯನಿಗೆ ಕ್ಷತ್ರಿಯಳನ್ನು ಬಿಟ್ಟು ಉಳಿದ ಎರಡು ವರ್ಣಗಳಲ್ಲಿ ಜನಿಸಿದ ಪುತ್ರರು, ವೈಶ್ಯನಿಗೆ ವೈಶ್ಯಳನ್ನು ಬಿಟ್ಟು ಶೂದ್ರನಲ್ಲಿ ಜನಿಸಿದ ಪುತ್ರನು ಸೇರಿ ಈ ಆರು ಪುತ್ರರು ಅಪಧ್ವಂಸಜಪುತ್ರರೆಂದು ಕರೆಯಲ್ಪಡುತ್ತಾರೆ. ಹಾಗೆಯೇ ಅಪಶದಪುತ್ರರನ್ನೂ ಕೇಳು.
ಚಂಡಾಲೋ ವ್ರಾತ್ಯವೇನೌ ಚ ಬ್ರಾಹ್ಮಣ್ಯಾಂ ಕ್ಷತ್ರಿಯಾಸು ಚ |
ವೈಶ್ಯಾಯಾಂ ಚೈವ ಶೂದ್ರಸ್ಯ ಲಕ್ಷ್ಯಂತೇಽಪಸದಾಸ್ತ್ರಯಃ ॥21॥
ಮಾಗಧೋ ವಾಮಕಶ್ಚೈವ ದ್ವೌ ವೈಶ್ಯಸ್ಯೋಪಲಕ್ಷಿತೌ |
ಬ್ರಾಹ್ಮಣ್ಯಾಂ ಕ್ಷತ್ರಿಯಾಯಾಂ ಚ ಕ್ಷತ್ರಿಯಸ್ಯೈಕ ಏವ ತು ॥22॥
ಬ್ರಾಹ್ಮಣ್ಯಾಂ ಲಕ್ಷ್ಯತೇ ಸೂತ ಇತ್ಯೇತೇಽಪಶದಾಃ ಸ್ಮೃತಾಃ |
ಪುತ್ರರೇತೋ ನ ಶಕ್ಯಂ ಹಿ ಮಿಥ್ಯಾ ಕರ್ತುಂ ನರಾಧಿಪ ॥23॥

ಶೂದ್ರನಿಗೆ ಬ್ರಾಹ್ಮಣಿಯಲ್ಲಿ ಚಂಡಾಲನೂ, ಕ್ಷತ್ರಿಯ ಸ್ತ್ರೀಯಲ್ಲಿ ವ್ರಾತ್ಯನೂ, ವೈಶ್ಯ ಸ್ತ್ರೀಯಲ್ಲಿ ವೇನನೂ ಪ್ರತಿಲೋಮದಿಂದ ಜನಿಸುತ್ತಾರೆ. ಇವರು ಮೂವರು ಅಪಶದರು. ವೈಶ್ಯನಿಗೆ ಬ್ರಾಹ್ಮಣಿಯಲ್ಲಿ ಮಾಗಧನೂ, ಕ್ಷತ್ರಿಯ ಸ್ತ್ರೀಯಲ್ಲಿ ವಾಮಕನು ಜನಿಸುತ್ತಾರೆ (ಮಾಗಧನನ್ನು ಹಿಂದಿನ ಅಧ್ಯಾಯದಲ್ಲಿ ವೈದೇಹಕ ಎಂಬ ಹೆಸರಿನಿಂದ ಹೇಳಿದ್ದಾರೆ). ಕ್ಷತ್ರಿಯನಿಗೆ ಬ್ರಾಹ್ಮಣಿಯಲ್ಲಿ ಒಬ್ಬನೇ ಜನಿಸುತ್ತಾನೆ (ಇವನು ಸೂತ). ಈ ಆರು ಜನ ಪುತ್ರರು ಅಪಶದ ಪುತ್ರರೆಂದು ಕರೆಯಲ್ಪಡುತ್ತಾರೆ. ಎಲೈ ರಾಜನೇ, ಪುತ್ರರನ್ನು ಪಡೆಯುವ ರೇತಸ್ಸನ್ನು ವ್ಯರ್ಥವನ್ನು ಮಾಡಲು ಸಾಧ್ಯವಿಲ್ಲ (ಇವರನ್ನು ಪುತ್ರರಲ್ಲವೆಂದು ಹೇಳಲು ಸಾಧ್ಯವಿಲ್ಲ).

ಶೂದ್ರಸ್ಯ ಪ್ರತಿಲೋಮೇನ ಚಂಡಾಲಾಃ ಕ್ರಮಶೋಧಮಾಃ |
ತ್ರಯಸ್ತೇ ದ್ವೌ ತು ವೈಶ್ಯಸ್ಯ ಕ್ಷತ್ರಿಯಸ್ಯೈಕ ಏವ ಚ ॥24॥

ಶೂದ್ರನಿಗೆ ಪ್ರತಿಲೋಮದಿಂದ ಜನಿಸಿದ ಚಂಡಾಲರು ಮೂರು ಜನರು ಕ್ರಮವಾಗಿ ಅಧಮರಾಗುತ್ತಾರೆ. ವೈಶ್ಯನಿಗೆ ಪ್ರತಿಲೋಮದಿಂದ ಜನಿಸಿದ ಇಬ್ಬರು ಮತ್ತು ಕ್ಷತ್ರಿಯನಿಗೆ ಪ್ರತಿಲೋಮದಿಂದ ಜನಿಸಿದ ಒಬ್ಬನೂ ಸಹ ಅಧಮರಾಗುತ್ತಾರೆ (ಇಲ್ಲಿ ಯಾವ ಕ್ರಮವೆಂದು ಹೇಳಿಲ್ಲ).

ಯುಧಿಷ್ಠಿರಃ

ಕ್ಷೇತ್ರಜಂ ಕೇಚಿದೇವಾಹುಃ ಸುತಂ ಕೇಚಿತ್ತು ಶುಕ್ಲಜಮ್ |
ತುಲ್ಯಾವೇತೌ ಸುತೌ ಕಸ್ಯ ತನ್ಮೇ ಬ್ರೂಹಿ ಪಿತಾಮಹ ॥25॥

ಯುಧಿಷ್ಠಿರ ಎಲೈ ಪಿತಾಮಹನೇ, ಕೆಲವರು ಕ್ಷೇತ್ರಜನನ್ನು ಪುತ್ರನೆಂದು ಹೇಳುತ್ತಾರೆ. ಕೆಲವರು ತನ್ನ ವೀರ್ಯದಿಂದ ಹುಟ್ಟಿದವನನ್ನೇ ಪುತ್ರನೆಂದು ಹೇಳುತ್ತಾರೆ. ಇಬ್ಬರು ಪುತ್ರರೂ ಸಮಾನರೇ? ಇವರು ಯಾರಿಗೆ ಸೇರುತ್ತಾರೆ ಎಂದು ನನಗೆ ಹೇಳು.

ಭೀಷ್ಮಃ

ರೇತಜೋ ವಾ ಭವೇತ್ ಪುತ್ರಸ್ತ್ಯಕ್ತೋ ವಾ ಕ್ಷೇತ್ರಜೋ ಭವೇತ್ |
ಅಧ್ಯೂಢಃ ಸಮಯಂ ಭಿತ್ತ್ವೇತ್ಯೇತದೇವ ನಿಬೋಧ ಮೇ ॥26॥

ಭೀಷ್ಮ ರೇತಸ್ಸಿನಿಂದ ಹುಟ್ಟಿದವನೂ, ತ್ಯಕ್ತನಾದವನೂ, ಕ್ಷೇತ್ರಜನಾದವನೂ, ಅಧ್ಯೂಢನಾದವನೂ ಪುತ್ರನಾಗಬಹುದು. ಅವನನ್ನು ನನ್ನಿಂದ ತಿಳಿ (ಇಲ್ಲಿ ಅಧ್ಯೂಢನೆಂದರೆ ತಂದೆಯ ಸಂಕೇತವನ್ನು ಮೀರಿ ಇನ್ನೊಬ್ಬ ಶ್ರೇಷ್ಠನಿಂದ ಅಧಿಕೃತನಾದ ಪುತ್ರ - ಲಕ್ಷ್ಯಾಲಂಕಾರ).

ಯುಧಿಷ್ಠಿರಃ

ರೇತೋಜಂ ವಿದ್ಮ ವೈ ಪುತ್ರಂ ಕ್ಷೇತ್ರಜಸ್ಯಾಗಮಃ ಕಥಮ್ |
ಅಧ್ಯೂಢಂ ವಿದ್ಮ ವೈ ಪುತ್ರಂ ಭಿತ್ತ್ವಾ ಚ ಸಮಯಂ ಕಥಮ್ ॥27॥

ಯುಧಿಷ್ಠಿರ ವೀರ್ಯದಿಂದ ಹುಟ್ಟಿದ ಪುತ್ರನನ್ನು ತಿಳಿದಿದ್ದೇವೆ. ಕ್ಷೇತ್ರಜಪುತ್ರನನ್ನು ತಿಳಿಯುವ ರೀತಿ ಯಾವುದು? ತಂದೆಯ ಸಮಯವನ್ನು ಮೀರಿ ಅಧ್ಯೂಢನಾದ ಪುತ್ರನನ್ನು ತಿಳಿಯುವ ಬಗೆ ಹೇಗೆ?

ಭೀಷ್ಮಃ

ಆತ್ಮಜಂ ಪುತ್ರಮುತ್ಪಾದ್ಯ ಯಸ್ತ್ಯಜೇತ್ ಕಾರಣಾಂತರೇ |
ನ ತತ್ರ ಕಾರಣಂ ರೇತಃ ಸ ಕ್ಷೇತ್ರಸ್ವಾಮಿನೋ ಭವೇತ್ ॥28॥

ಭೀಷ್ಮ ತನ್ನ ಮಗನನ್ನು ಉತ್ಪಾದಿಸಿ ಕಾರಣಾಂತರದಿಂದ ಅವನನ್ನು ತ್ಯಜಿಸಿದರೆ ಅಲ್ಲಿ ಪುತ್ರನ ಮೇಲೆ ಸಾಮ್ಯವನ್ನು ಪಡೆಯುವುದಕ್ಕೆ ಅಲ್ಲಿ ರೇತಸ್ಸು ಕಾರಣವಲ್ಲ. ಅದು ಆ ಕ್ಷೇತ್ರದ ಸ್ವಾಮಿಗೆ (ಆ ತಾಯಿಯನ್ನು ವಿವಾಹವಾಗುವ ಇನ್ನೊಬ್ಬನಿಗೆ) ಸೇರುತ್ತದೆ.

ಪುತ್ರಕಾಮೋ ಹಿ ಪುತ್ರಾರ್ಥೇ ಯಾಂ ವೃಣೀತೇ ವಿಶಾಂಪತೇ |
ತತ್ರ ಕ್ಷೇತ್ರಂ ಪ್ರಮಾಣಂ ಸ್ಯಾನ್ನ ವೈ ತತ್ರಾತ್ಮಜಃ ಸುತಃ ॥29॥

ಎಲೈ ರಾಜನೇ, ಪುತ್ರಕಾಮನಾದವನು ಕೆಲವು ಸಂದರ್ಭದಲ್ಲಿ ಪುತ್ರಾರ್ಥವಾಗಿ ಗರ್ಭಿಣಿಯನ್ನು ಮದುವೆಯಾದರೆ ಆ ಪುತ್ರನು ಕ್ಷೇತ್ರವನ್ನು ಮದುವೆ ಮಾಡಿಕೊಂಡವನಿಗೇ ಸೇರುತ್ತಾನೆ ಹೊರತು ವೀರ್ಯಸೇಕ ಮಾಡಿದವನಿಗೆ ಸೇರುವುದಿಲ್ಲ.

ಅನ್ಯಸ್ತು ಕ್ಷೇತ್ರಜಃ ಪುತ್ರೋ ಲಕ್ಷ್ಯತೇ ಭರತರ್ಷಭ |
ನ ಹ್ಯಾತ್ಮಾ ಶಕ್ಯತೇ ಹಂತುಂ ದೃಷ್ಟಾಂತೋಪಗತೋ ಹ್ಯಸೌ ॥30॥

ಎಲೈ ಭರತಶ್ರೇಷ್ಠನೇ, ಭರ್ತೃವಿನ ಅನುಮತಿ ಇಲ್ಲದೆ ಕ್ಷೇತ್ರದಲ್ಲಿ ಜನಿಸಿದ ಕ್ಷೇತ್ರಜನಾದ ಪುತ್ರನಿರುತ್ತಾನೆ. ಅಲ್ಲಿ ರೇತಸ್ಸೇಕ ಮಾಡಿದವನ ಹೋಲಿಕೆಯು ಸ್ಪಷ್ಟವಾಗಿರುವುದರಿಂದ ಅವನು ಅದನ್ನು ನಿರಾಕರಣೆ ಮಾಡಲು ಸಾಧ್ಯವಿಲ್ಲ.

ಕಶ್ಚಿಚ್ಚ ಕೃತಕಃ ಪುತ್ರಃ ಸಂಗ್ರಹಾದೇವ ಲಕ್ಷ್ಯತೇ |
ನ ತತ್ರ ರೇತಃ ಕ್ಷೇತ್ರಂ ವಾ ಪ್ರಮಾಣಂ ಸ್ಯಾದ್ ಯುಧಿಷ್ಠಿರ ॥31॥

ಕೆಲವು ಸಂದರ್ಭಗಳಲ್ಲಿ ಕೃತಕ ಪುತ್ರನು ಅವನನ್ನು ಸಂಗ್ರಹಿಸುವುದರಿಂದಲೇ ತಿಳಿಯಲ್ಪಡುತ್ತಾನೆ. ಎಲೈ ಯುಧಿಷ್ಠಿರನೇ, ಅಲ್ಲಿ ರೇತಸ್ಸಾಗಲೀ, ಕ್ಷೇತ್ರವಾಗಲೀ ಪ್ರಮಾಣವಾಗುವುದಿಲ್ಲ (ಅವನನ್ನು ಸಾಕ್ಷಾತ್ತಾಗಿ ಪಡೆದ ಮಾತಾ-ಪಿತೃಗಳು ಅವನ ಮೇಲೆ ಅಧಿಕಾರವನ್ನು ಹೊಂದಿರುವುದಿಲ್ಲ).

ಯುಧಿಷ್ಠಿರಃ

ಕೀದೃಶಃ ಕೃತಕಃ ಪುತ್ರಃ ಸಂಗ್ರಹಾದೇವ ಲಕ್ಷ್ಯತೇ |
ಶುಕ್ರಂ ಕ್ಷೇತ್ರಂ ಪ್ರಮಾಣಂ ವಾ ಯತ್ರ ಲಕ್ಷ್ಯೇತ ಭಾರತ ॥32॥

ಯುಧಿಷ್ಠಿರ ಎಲೈ ಭಾರತನೇ, ಎಂತಹ ಕೃತಕಪುತ್ರನು ಸ್ವೀಕಾರದಿಂದ ತಿಳಿಯಲ್ಪಡುತ್ತಾನೆ? ಶುಕ್ರವಾಗಲೀ, ಕ್ಷೇತ್ರವಾಗಲೀ ಎಲ್ಲಿ ಪುತ್ರನ ಮೇಲೆ ಅಧಿಕಾರಕ್ಕೆ ಕಾರಣವಾಗುತ್ತದೆ?

ಭೀಷ್ಮಃ

ಮಾತಾಪಿತೃಭ್ಯಾಂ ಸಂತ್ಯಕ್ತಂ ಪಥಿ ಯಂ ತು ಪುಲಕ್ಷಯೇತ್ |
ನ ಚಾಸ್ಯ ಮಾತಾಪಿತರೌ ಜ್ಞಾಯೇತೇ ಸ ಹಿ ಕೃತ್ರಿಮಃ ॥33॥
ತಂದೆ-ತಾಯಿಗಳಿಂದ ಪರಿತ್ಯಜಿಸಲ್ಪಟ್ಟು ಮಾರ್ಗದಲ್ಲಿ ಬಿದ್ದಿರುವ ಬಾಲಕನನ್ನು ಅವನ ಮಾತಾ-ಪಿತೃಗಳು ತಿಳಿಯದಿದ್ದಾಗ ಕೃತ್ರಿಮ ಪುತ್ರನೆಂದು ಕರೆಯುತ್ತಾರೆ.
ಅಸ್ವಾಮಿಕಸ್ಯ ಸ್ವಾಮಿತ್ವಂ ಯಸ್ಮಿನ್ ಸಂಪ್ರತಿ ಲಕ್ಷಯೇತ್ |
ಸವರ್ಣಸ್ತಂ ಚ ಪೋಷೇತ ಸವರ್ಣಸ್ತಸ್ಯ ಜಾಯತೇ ॥34॥
ಸ್ವಾಮಿ ಇಲ್ಲದಿರುವ ಆ ಶಿಶುವಿಗೆ ಯಾರಲ್ಲಿ ಸ್ವಾಮಿತ್ವವು ಕಂಡುಬರುತ್ತದೆಯೋ ಅವನ ವರ್ಣವು ಉಂಟಾಗುತ್ತದೆ. ಅವನೂ ಅವನನ್ನು ಸವರ್ಣನಂತೇ ಪೂಜಿಸಬೇಕು. ಅವನಲ್ಲಿ ಸವರ್ಣನೇ ಜನಿಸುತ್ತಾನೆ.
ಯುಧಿಷ್ಠಿರಃ
ಕಥಮಸ್ಯ ಪ್ರಯೋಕ್ತವ್ಯಃ ಸಂಸ್ಕಾರಃ ಕಸ್ಯ ವಾ ಕಥಮ್ |
ದೇಯಾ ಕನ್ಯಾ ಕಥಂ ಚೇತಿ ತನ್ಮೇ ಬ್ರೂಹಿ ಪಿತಾಮಹ ॥35॥
ಯುಧಿಷ್ಠಿರ ಎಲೈ ಪಿತಾಮಹನೇ, ಅಂತಹ ಕೃತ್ರಿಮ ಪುತ್ರನಿಗೆ ಹೇಗೆ ಸಂಸ್ಕಾರವನ್ನು ಮಾಡಬೇಕು? ಅಥವಾ ಅವನಿಗೆ ಹೇಗೆ ಕನ್ಯೆಯನ್ನು ಕೊಡಬೇಕು? ಈ ವಿಷಯವನ್ನು ನನಗೆ ತಿಳಿಸು.
ಭೀಷ್ಮಃ
ಆತ್ಮವತ್ತಸ್ಯ ಕುರ್ವೀತ ಸಂಸ್ಕಾರಂ ಸ್ವಾಮಿವತ್ ತಥಾ |
ತ್ಯಕ್ತೋ ಮಾತಾಪಿತೃಭ್ಯಾಂ ಯಃ ಸವರ್ಣಂ ಪ್ರತಿಪದ್ಯತೇ |
ತದ್ಗೋತ್ರವರ್ಣತಸ್ತಸ್ಯ ಕುರ್ಯಾತ್ ಸಂಸ್ಕಾರಮಚ್ಯುತ ॥36॥
ಭೀಷ್ಮ ಮಾತಾ-ಪಿತೃಗಳಿಂದ ತ್ಯಕ್ತನಾದವನಿಗೆ ಯಾವನ ಸವರ್ಣತ್ವವು ಉಂಟಾಗುತ್ತದೆಯೋ ಅವನು ಅವನಿಗೆ ಸ್ವಾಮಿಯಾದ ತನಗೆ ಮಾಡಿಕೊಳ್ಳುವ ಸಂಸ್ಕಾರದಂತೆ ಅವನಿಗೂ ಸಂಸ್ಕಾರವನ್ನು ಮಾಡಬೇಕು. ಎಲೈ ಅಚ್ಯುತನೇ, ಎಲ್ಲ ಸಂಸ್ಕಾರಗಳನ್ನೂ ತನಗೋಸ್ಕರ ತನ್ನ ವರ್ಣದವರಿಗೆ ಮಾಡುವಂತೆ ಮಾಡಬೇಕು.
ಅಥ ದೇಯಾ ತು ಕನ್ಯಾ ಸ್ಯಾತ್ ತದ್ವರ್ಣೇನ ಯುಧಿಷ್ಠಿರ ॥37॥
ಎಲೈ ಯುಧಿಷ್ಠಿರನೇ, ಅವನಿಗೆ ಕನ್ಯೆಯನ್ನೂ ಸಹ ಆ ವರ್ಣದವನೇ ಕೊಡಬೇಕು.
ಸಂಸ್ಕರ್ತುಂ ಮಾತೃಗೋತ್ರಂ ಚ ಮಾತೃವರ್ಣವಿನಿಶ್ಚಯೇ |
ಕಾನೀನಾಧ್ಯೂಢಜೌ ಚಾಪಿ ವಿಜ್ಞೇಯೌ ಪುತ್ರಕಿಲ್ಬಿಷೌ |
ತಾವಪಿ ಸ್ವಾವಿವ ಸುತೌ ಸಂಸ್ಕಾರ್ಯಾವಿತಿ ನಿಶ್ಚಯಃ ॥38॥
ಕಾನೀನ ಮತ್ತು ಅಧ್ಯೂಢಜ ಪುತ್ರನಿಗೆ ಹುಟ್ಟಿದ ಪುತ್ರನನ್ನು ಪುತ್ರಕಿಲ್ಬಿಷ ಎಂದು ತಿಳಿಯಬೇಕು. ಮಾತೃವರ್ಣವು ತಿಳಿದಿದ್ದರೆ ಅವರಿಗೂ ಸಹ ತನ್ನ ಔರಸ ಪುತ್ರರಿಗೆ ಮಾಡುವಂತೆ ಸಂಸ್ಕಾರವನ್ನು ಮಾಡಬೇಕೆಂಬುದು ನಿಶ್ಚಿತವಾದುದು.
ಕ್ಷೇತ್ರಜೋ ವಾಪ್ಯಪಶದೋ ಯೇಽಧ್ಯೂಢಾಸ್ತೇಷು ಚಾಪ್ಯಥ |
ಆತ್ಮವದ್ ವೈ ಪ್ರಯುಂಜೀರನ್ ಸಂಸ್ಕಾರಂ ಬ್ರಾಹ್ಮಣಾದಯಃ ॥39॥
ಬ್ರಾಹ್ಮಣಾದಿಗಳು ಆ ಪುತ್ರನು ಕ್ಷೇತ್ರಜನಾಗಲಿ, ಅಪಶದನಾಗಿರಲಿ ಅಥವಾ ಅಧ್ಯೂಢನಾಗಿರಲಿ ಅವನಿಗೆ ತಮ್ಮಂತೆಯೇ ಸಂಸ್ಕಾರವನ್ನು ಮಾಡಬೇಕು.
ಧರ್ಮಶಾಸ್ತ್ರೇಷು ವರ್ಣಾನಾಂ ನಿಶ್ಚಯೋಽಯಂ ಪ್ರದೃಶ್ಯತೇ |
ಏತತ್ ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥40॥
ಧರ್ಮಶಾಸ್ತ್ರದಲ್ಲಿ ವರ್ಣಗಳ ವಿಷಯದಲ್ಲಿ ಈ ರೀತಿಯ ನಿರ್ಣಯವು ಕಂಡುಬರುತ್ತದೆ. ಇವೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪುತ್ರಭೇದಕಥನಂ ನಾಮ ಏಕೋನಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತನೆಯ ಅಧ್ಯಾಯ
ಚ್ಯವನೋಪಾಖ್ಯಾನ ಪ್ರಾರಂಭ. ಮೀನಿನ ಬಲೆಯಲ್ಲಿ ಚ್ಯವನರ ಗ್ರಹಣ.
ಯುಧಿಷ್ಠಿರಃ
ದರ್ಶನೇ ಕೀದೃಶಃ ಸ್ನೇಹಃ ಸಂವಾಸೇ ಚ ಪಿತಾಮಹ |
ಮಹಾಭಾಗ್ಯಂ ಗವಾಂ ಚೈವ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಸಜ್ಜನರ ದರ್ಶನದಿಂದ ಎಂತಹ ಸ್ನೇಹ ಉಂಟಾಗುತ್ತದೆ? ಅವರ ಜೊತೆಯಲ್ಲಿ ವಾಸ ಮಾಡುವುದರಿಂದ ಎಂತಹ ಸ್ನೇಹ ಉಂಟಾಗುತ್ತದೆ? ಗೋವುಗಳ ಮಹಾಭಾಗ್ಯವೇನು? ಇವುಗಳನ್ನು ನನಗೆ ಹೇಳಿ.
ಭೀಷ್ಮಃ
ಹಂತ ತೇ ಕಥಯಿಷ್ಯಾಮಿ ಪುರಾವೃತ್ತಂ ಮಹಾದ್ಯುತೇ |
ನಹುಷಸ್ಯ ಚ ಸಂವಾದಂ ಮಹರ್ಷೇಶ್ಚ್ಯವನಸ್ಯ ಚ ॥2॥
ಭೀಷ್ಮ ಎಲೈ ಮಹಾದ್ಯುತಿಯೇ, ನಹುಷನಿಗೂ ಮತ್ತು ಮಹರ್ಷಿಯಾದ ಚ್ಯವನರಿಗೂ ಹಿಂದೆ ನಡೆದ ಸಂವಾದರೂಪವಾದ

ಕಥೆಯನ್ನು ನಿನಗೆ ಹೇಳುತ್ತೇನೆ.
ಪುರಾ ಮಹರ್ಷಿಶ್ಚ್ಯವನೋ ಭಾರ್ಗವೋ ಭರತರ್ಷಭ |
ಉದವಾಸಕೃತಾರಂಭೋ ಬಭೂವ ಸುಮಹಾವ್ರತಃ ॥3॥
ಎಲೈ ಭರತಶ್ರೇಷ್ಠನೇ, ಹಿಂದೆ ಭೃಗುಕುಲೋತ್ಪನ್ನರಾದ, ದೊಡ್ಡ ವ್ರತಗಳನ್ನು ಮಾಡುವ ಚ್ಯವನ ಮಹರ್ಷಿಗಳು ಜಲದಲ್ಲಿದ್ದು ತಪಸ್ಸನ್ನು ಮಾಡಲು ಪ್ರಾರಂಭಿಸಿದರು.
ನಿಹತ್ಯ ಮಾನಂ ಕ್ರೋಧಂ ಚ ಪ್ರಹರ್ಷಂ ಶೋಕಮೇವ ಚ |
ವರ್ಷಾಣಿ ದ್ವಾದಶ ಮುನಿರ್ಜಲವಾಸೇ ಧೃತವ್ರತಃ ॥4॥
ಅಹಂಕಾರ-ಕ್ರೋಧಗಳನ್ನೂ, ಹರ್ಷ-ಶೋಕಗಳನ್ನೂ ತ್ಯಜಿಸಿ ಹನ್ನೆರಡು ವರ್ಷಗಳ ಕಾಲ ಅವರು ಜಲವಾಸವ್ರತವನ್ನು ಮಾಡಲು ನಿಶ್ಚಯಿಸಿದರು.
ಆದಧತ್ ಸರ್ವಭೂತೇಷು ವಿಸ್ರಂಭಂ ಪರಮಂ ಶುಭಮ್ |
ಜಲೇಚರೇಷು ಸತ್ತ್ವೇಷು ಶೀತರಶ್ಮಿರಿವ ಪ್ರಭುಃ ॥5॥
ಪ್ರಭುಗಳಾದ ಅವರು ಎಲ್ಲ ಜಲಚರ ಪ್ರಾಣಿಗಳಲ್ಲಿ ಶೀತರಶ್ಮಿಯಾದ ಚಂದ್ರನಂತೆ ಶುಭವಾದ ಪರಮವಿಶ್ವಾಸವನ್ನು ಉಂಟುಮಾಡಿದರು.
ಸ್ಥಾಣುಭೂತಃ ಶುಚಿರ್ಭೂತ್ವಾ ದೈವತೇಭ್ಯಃ ಪ್ರಣಮ್ಯ ಚ |
ಗಂಗಾಯಮುನಯೋರ್ಮಧ್ಯೇ ಜಲಂ ಸಂಪ್ರವಿವೇಶ ಹ ॥6॥
ಶುಚಿಯಾಗಿ, ದೇವತೆಗಳಿಗೆ ನಮಸ್ಕರಿಸಿ, ಗಂಗಾ-ಯಮುನಾ ಸಂಗಮದಲ್ಲಿ ಆ ಎರಡು ನದಿಗಳ ಮಧ್ಯದಲ್ಲಿ ಮರದ ತುಂಡಿನಂತೆ ಜಲವನ್ನು ಪ್ರವೇಶಿಸಿದರಷ್ಟೆ?
ಗಂಗಾಯಮುನಯೋರ್ವೇಗಂ ಸುಭೀಮಂ ಭೀಮನಿಸ್ವನಮ್ |
ಪ್ರತಿಜಗ್ರಾಹ ಶಿರಸಾ ವಾತವೇಗಸಮಂ ಜವೇ ॥7॥
ಗಂಗಾ-ಯಮುನೆಯರ ವಾಯುವೇಗಕ್ಕೆ ಸಮವಾದ ವೇಗವನ್ನೂ, ಭಯಂಕರವಾದ ಘೋಷವನ್ನೂ ಅವರು ಶಿರಸಾ ಸ್ವೀಕರಿಸಿದರು.
ಗಂಗಾ ಚ ಯಮುನಾ ಚೈವ ಸರಿತಶ್ಚಾನುಗಾಸ್ತಯೋಃ |
ಪ್ರದಕ್ಷಿಣಮೃಷಿಂ ಚಕ್ರುರ್ನ ಚೈನಂ ಪರ್ಯಪೀಡಯನ್ ॥8॥
ಗಂಗಾಯಮುನಾ ನದಿಗಳು ಮತ್ತು ಅವುಗಳಿಗೆ ಬಂದು ಸೇರುವ ಉಪನದಿಗಳು ಅವರಿಗೆ ಪ್ರದಕ್ಷಿಣೆಯನ್ನು ಮಾಡಿ ಹರಿದವು. ಅವರಿಗೆ ಹಿಂಸೆಯನ್ನು ಉಂಟು ಮಾಡಲಿಲ್ಲ.
ಅಂತರ್ಜಲೇ ಸ ಸುಷ್ವಾಪ ಕಾಷ್ಠಭೂತೋ ಮಹಾಮುನಿಃ |
ತತಶ್ಚೋರ್ಧ್ವಸ್ಥಿತೋ ಧೀಮಾನಭವದ್ ಭರತರ್ಷಭ ॥9॥
ಮಹರ್ಷಿಗಳಾದ ಅವರು ಒಂದು ಕಾಷ್ಠದಂತೆ ನೀರಿನ ಮಧ್ಯದಲ್ಲಿಯೇ ನಿದ್ರೆಯನ್ನು ಮಾಡುತ್ತಿದ್ದರು. ಎಲೈ ಭರತರ್ಷಭನೇ, ಮೇಧಾವಿಗಳಾದ ಅವರು ಅಲ್ಲಿಯೇ ಏಳುತ್ತಿದ್ದರು.
ಜಲೌಕಸಾಂ ಸ ಸತ್ತ್ವಾನಾಂ ಬಭೂವ ಪ್ರಿಯದರ್ಶನಃ |
ಉಪಾಜಿಘ್ರಂತ ಚ ತದಾ ಮತ್ಸ್ಯಾಸ್ತಂ ಹೃಷ್ಟಮಾನಸಾಃ |
ತತ್ರ ತಸ್ಯಾಸತಃ ಕಾಲಃ ಸಮತೀತೋಽಭವನ್ಮಹಾನ್ ॥10॥
ಜಲಚರಪ್ರಾಣಿಗಳಿಗೆ ಅವರ ದರ್ಶನವು ಪ್ರಿಯವಾಯಿತು. ಮೀನುಗಳು ಅವರ ಬಳಿಗೆ ಬಂದು ಸಂತೋಷದಿಂದ ಅವರನ್ನು ಮೂಸಿ ನೋಡಿದವು. ಅಲ್ಲಿಯೇ ವಾಸ ಮಾಡುವ ಅವರಿಗೆ ಬಹಳ ಕಾಲವು ಕಳೆದು ಹೋಯಿತು.
ತತಃ ಕದಾಚಿತ್ಸಮಯೇ ಕಸ್ಮಿಂಶ್ಚಿನ್ಮತ್ಸ್ಯಜೀವಿನಃ |
ತಂ ದೇಶಂ ಸಮುಪಾಜಗ್ಮುರ್ಜಾಲಹಸ್ತಾ ಮಹಾದ್ಯುತೇ ॥11॥
ಎಲೈ ಮಹಾದ್ಯುತಿಯೇ, ಅನಂತರ ಒಂದು ಸಮಯದಲ್ಲಿ ಮತ್ಸ್ಯಜೀವಿಗಳು ಕೈಯಲ್ಲಿ ಬಲೆಯನ್ನು ಹಿಡಿದು ಆ ಪ್ರದೇಶಕ್ಕೆ ಬಂದರು.
ನಿಷಾದಾ ಬಹವಸ್ತತ್ರ ಮತ್ಸ್ಯೋದ್ಧರಣನಿಶ್ಚಿತಾಃ |
ವ್ಯಾಯತಾ ಬಲಿನಃ ಶೂರಾಃ ಸಲಿಲೇಷ್ವನಿವರ್ತಿನಃ |
ಅಭ್ಯಾಯಯುಶ್ಚ ತಂ ದೇಶಂ ನಿಶ್ಚಿತಾ ಜಾಲಕರ್ಮಣಿ ॥12॥
ಮೀನನ್ನು ಹಿಡಿದು ಜೀವನವನ್ನು ಮಾಡುವ ಬಲಿಷ್ಠರೂ, ಶೂರರೂ, ಒಳ್ಳೆಯ ಮೈಕಟ್ಟುಳ್ಳವರೂ, ನೀರಿಗೆ ಹೆದರಿ ಹಿಂದಿರುಗದವರೂ ಆದ, ಬಲೆಯನ್ನು ಬೀಸಿ ಮೀನುಗಳನ್ನು ಹಿಡಿಯುವುದರಲ್ಲಿ ಪರಿಣತರಾದ ಅನೇಕ ಬೆಸ್ತರ ಜಾತಿಯವರು ಅಲ್ಲಿಗೆ ಬಂದರು.
ಜಾಲಂ ಚ ಯೋಜಯಾಮಾಸುರ್ವಿಶೇಷೇಣ ಜನಾಧಿಪ |
ಮತ್ಸ್ಯೋದಕಂ ಸಮಾಸಾದ್ಯ ತದಾ ಭರತಸತ್ತಮ ॥13॥
ಎಲೈ ಜನಾಧಿಪನೇ, ಭರತಶ್ರೇಷ್ಠನೇ, ಅವರು ಮೀನುಗಳಿರುವ ನೀರಿನ ಸ್ಥಳಕ್ಕೆ ಬಂದು ವಿಶೇಷವಾಗಿ ಬಲೆಯನ್ನು ಬೀಸಿದರು.
ತತಸ್ತೇ ಬಹುಭಿರ್ಯೋಗೈಃ ಕೈವರ್ತಾ ಮತ್ಸ್ಯಕಾಂಕ್ಷಿಣಃ |
ಗಂಗಾಯಮುನಯೋರ್ವಾರಿ ಜಾಲೈರಭ್ಯಕಿರಂಸ್ತತಃ ॥14॥
ಅನಂತರ ಮೀನುಗಳನ್ನು ಹಿಡಿಯಲು ಬಯಸಿದ ಆ ಬೆಸ್ತರು ಬಹಳ ಉಪಾಯಗಳಿಂದ ಗಂಗಾ-ಯಮುನೆಯರ ಜಲದಲ್ಲಿ ಬಲೆಯನ್ನು ಬೀಸಿದರು.
ಜಾಲಂ ಸುವಿತತಂ ತೇಷಾಂ ನವಸೂತ್ರಕೃತಂ ತಥಾ |
ವಿಸ್ತಾರಾಯಾಮಸಂಪನ್ನಂ ಯತ್ ತತ್ರ ಸಲಿಲೇ ಕ್ಷಮಮ್ ॥15॥

ಆ ಬಲೆಯು ಹೊಸದಾರಗಳಿಂದ ಹೆಣೆಯಲ್ಪಟ್ಟಿದ್ದು, ಒಳ್ಳೆಯ ಉದ್ದಗಲಗಳನ್ನು ಹೊಂದಿದ್ದು, ನೀರಿನ ವೇಗವನ್ನು ತಡೆಯುವುದಾಗಿದ್ದು ಬಹಳ ವಿಸ್ತಾರವಾಗಿದ್ದಿತು.
ತತಸ್ತೇ ಸುಮಹಚ್ಚೈವ ಬಲವಚ್ಚ ಸುವರ್ತಿತಮ್ |
ಪ್ರಕೀರ್ಯ ಸರ್ವತಃ ಸರ್ವೇ ಜಾಲಂ ಚಕೃಷಿರೇ ತದಾ ॥16॥
ಅನಂತರ ಅವರು ಬಲಿಷ್ಠವೂ, ದೊಡ್ಡದೂ, ಚೆನ್ನಾಗಿ ಬೀಸಲ್ಪಟ್ಟದ್ದೂ ಆದ ಆ ಬಲೆಯನ್ನು ಎಲ್ಲರೂ ಸೇರಿ ಎಲ್ಲ ಕಡೆಗಳಿಂದಲೂ ಎಳೆದರು.
ಅಭೀತರೂಪಾಃ ಸಂಹೃಷ್ಟಾಸ್ತೇಽನ್ಯೋನ್ಯವಶವರ್ತಿನಃ |
ಬಬಂಧುಸ್ತತ್ರ ಮತ್ಸ್ಯಾಂಶ್ಚ ತಥಾನ್ಯಾನ್ ಜಲಚಾರಿಣಃ ॥17॥
ಭಯರಹಿತರಾದ, ಪರಸ್ಪರ ವಶವರ್ತಿಗಳಾದ, ಸಂತೋಷದಿಂದ ಕೂಡಿದ ಅವರು ಆ ಬಲೆಯಲ್ಲಿ ಮೀನುಗಳನ್ನೂ, ಬೇರೆ ಜಲಚರ ಪ್ರಾಣಿಗಳನ್ನೂ ಅಲ್ಲಿ ಬಂಧಿಸಿದರು.
ತಥಾ ಮತ್ಸ್ಯೈಃ ಪರಿವೃತಂ ಚ್ಯವನಂ ಭೃಗುನಂದನಮ್ |
ಆಕರ್ಷಂತ ಮಹಾರಾಜ ಜಾಲೇನಾಥ ಯದೃಚ್ಛಯಾ ॥18॥
ಎಲೈ ಮಹಾರಾಜನೇ, ಹಾಗೆಯೇ ಅವರು ಅನಿರೀಕ್ಷಿತವಾಗಿ ಮತ್ಸ್ಯಗಳಿಂದ ಪರಿವೃತರಾದ ಭೃಗುನಂದನರಾದ ಚ್ಯವನರನ್ನೂ ಬಲೆಯಲ್ಲಿ ಎಳೆದರು.
ನದೀಶೈವಲದಿಗ್ಧಾಂಗಂ ಹರಿಶ್ಮಶ್ರುಜಟಾಧರಮ್ |
ಲಗ್ನೈಃ ಶಂಖಗಣೈರ್ಗಾತ್ರೈಃ ಕೋಷ್ಠೈಶ್ಚಿತ್ರೈರಿವಾವೃತಮ್ ॥19॥
ತಂ ಜಾಲೇನೋದ್ಧೃತಂ ದೃಷ್ಟ್ವಾ ತೇ ತದಾ ವೇದಪಾರಗಮ್ |
ಸರ್ವೇ ಪ್ರಾಂಜಲಯೋ ದಾಶಾಃ ಶಿರೋಭಿಃ ಪ್ರಾಪತನ್ ಭುವಿ ॥20॥
ನದಿಯ ಪಾಚಿಗಳಿಂದ ಶರೀರವೆಲ್ಲಾ ತುಂಬಿದ್ದ, ಹಸಿರುಬಣ್ಣದ ಮೀಸೆ ಮತ್ತು ಜಟೆಗಳನ್ನು ಹೊಂದಿದ್ದ, ದೇಹದಲ್ಲೆಲ್ಲಾ ವಿಚಿತ್ರವಾದ ಕೋಶಗಳಂತೆ ಶಂಖಗಳು ಅಂಟಿಕೊಂಡಿದ್ದ, ವೇದಪಾರಂಗತರಾದ ಅವರು ಬಲೆಯಲ್ಲಿ ಸಿಕ್ಕಿದುದನ್ನು ನೋಡಿ ಎಲ್ಲ ಬೆಸ್ತರು ಕೈಗಳನ್ನು ಮುಗಿದು ಭೂಮಿಯ ಮೇಲೆ ಶಿರಸಾ ನಮಸ್ಕಾರವನ್ನು ಮಾಡಿದರು.
ಪರಿಖೇದಪರಿತ್ರಾಸಾಜ್ಜಾಲಸ್ಯಾಕರ್ಷಣೇನ ಚ |
ಮತ್ಸ್ಯಾ ಬಭೂವುರ್ವ್ಯಾಪನ್ನಾಃ ಸ್ಥಲಸಂಕರ್ಷಣೇನ ಚ ॥21॥
ಆ ಮೀನುಗಳು ಬಲೆಯಲ್ಲಿ ಸಿಕ್ಕಿದ ದುಃಖದಿಂದಲೂ, ಬಲೆಯನ್ನು ಎಳೆಯುವಾಗ ಉಂಟಾದ ಆಯಾಸದಿಂದಲೂ ಮತ್ತು ಭೂಮಿಯ ಮೇಲೆ ಬಂದು ಬಿದ್ದುದರಿಂದಲೂ ಮರಣವನ್ನು ಹೊಂದಿದವು.
ಸ ಮುನಿಸ್ತತ್ತದಾ ದೃಷ್ಟ್ವಾ ಮತ್ಸ್ಯಾನಾಂ ಕದನಂ ಕೃತಮ್ |
ಬಭೂವ ಕೃಪಯಾಽಽವಿಷ್ಟೋ ನಿಃಶ್ವಸಂಶ್ಚ ಪುನಃ ಪುನಃ ॥22॥
ಆ ಋಷಿಗಳು ಆಗ ಮತ್ಸ್ಯಗಳ ದುರವಸ್ಥೆಯನ್ನು ನೋಡಿ ಕೃಪೆಯಿಂದ ಕೂಡಿದವರಾಗಿ ಪುನಃ ಪುನಃ ನಿಟ್ಟುಸಿರನ್ನು ಬಿಟ್ಟರು.
ನಿಷಾದಾಃ
ಅಜ್ಞಾನಾದ್ ಯತ್ಕೃತಂ ಪಾಪಂ ಪ್ರಸಾದಂ ತತ್ರ ನಃ ಕುರು |
ಕರವಾಮ ಪ್ರಿಯಂ ಕಿಂ ತೇ ತನ್ನೋ ಬ್ರೂಹಿ ಮಹಾಮುನೇ ॥23॥
ನಿಷಾದರು ಮಹರ್ಷಿಗಳೇ, ನಾವು ಅಜ್ಞಾನದಿಂದ ಅಪರಾಧವನ್ನು ಮಾಡಿದ್ದೇವೆ. ನಮ್ಮ ಮೇಲೆ ಅನುಗ್ರಹವನ್ನು ಮಾಡಿ. ನಿಮಗೆ ನಾವು ಯಾವ ಪ್ರಿಯವನ್ನು ಮಾಡಬಹುದು ಎಂದು ಹೇಳಿ.
ಭೀಷ್ಮಃ
ಇತ್ಯುಕ್ತೋ ಮತ್ಸ್ಯಮಧ್ಯಸ್ಥಶ್ಚ್ಯವನೋ ವಾಕ್ಯಮಬ್ರವೀತ್ |
ಯೋ ಮೇಽದ್ಯ ಪರಮಃ ಕಾಮಸ್ತಂ ಶೃಣುಧ್ವಂ ಸಮಾಹಿತಾಃ ॥24॥
ಪ್ರಾಣೋತ್ಸರ್ಗಂ ವಿಕ್ರಯಂ ವಾ ಮತ್ಸ್ಯೈರ್ಯಾಸ್ಯಾಮ್ಯಹಂ ಸಹ |
ಸಂವಾಸಾನ್ನೋತ್ಸಹೇ ತ್ಯಕ್ತುಂ ಸಲಿಲಾಧ್ಯುಷಿತಾನಿಮಾನ್ ॥25॥
ಭೀಷ್ಮ ಹೀಗೆ ಹೇಳಲ್ಪಟ್ಟ ಚ್ಯವನರು ಮೀನುಗಳ ಮಧ್ಯದಲ್ಲೇ ಇದ್ದವರಾಗಿ ಎಲೈ ಬೆಸ್ತರೇ, ನನ್ನ ಶ್ರೇಷ್ಠವಾದ ಆಸೆಯನ್ನು ಮನಸ್ಸಮಾಧಾನದಿಂದ ಕೇಳಿ. ನಾನು ಪ್ರಾಣತ್ಯಾಗವನ್ನಾಗಲೀ ಅಥವಾ ವಿಕ್ರಯವನ್ನಾಗಲೀ ಈ ಮತ್ಸ್ಯಗಳ ಜೊತೆಯಲ್ಲೇ ಹೊಂದುವೆನು. ಬಹುಕಾಲದವರೆಗೆ ನೀರಿನಲ್ಲಿ ಇವುಗಳ ಜೊತೆಯಲ್ಲಿ ವಾಸ ಮಾಡಿದ ನಾನು ಇವುಗಳನ್ನು ಪರಿತ್ಯಾಗ ಮಾಡಲಾರೆ ಎಂದು ಹೇಳಿದರು.
ಇತ್ಯುಕ್ತಾಸ್ತೇ ನಿಷಾದಾಸ್ತು ಸುಭೃಶಂ ಭಯಕಂಪಿತಾಃ |
ಸರ್ವೇ ವಿಷಣ್ಣವದನಾ ನಹುಷಾಯ ನ್ಯವೇದಯನ್ ॥26॥
ಹೀಗೆ ಹೇಳಲ್ಪಟ್ಟ ಆ ಬೆಸ್ತರು ಬಹಳ ಭಯದಿಂದ ನಡುಗಿ ಎಲ್ಲರೂ ವಿಷಣ್ಣ ವದನರಾಗಿ ಮಹಾರಾಜನಾದ ನಹುಷನ ಬಳಿಗೆ ಹೋಗಿ ಈ ವಿಷಯವನ್ನು ನಿವೇದಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚ್ಯವನಜಾಲಗ್ರಹಣಂ ನಾಮ
ಅಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ಎಂಬತ್ತೊಂದನೆಯ ಅಧ್ಯಾಯ

ಚ್ಯವನ-ನಹುಷ ಸಂವಾದ. ಗೋವಿನಿಂದ ಚ್ಯವನರ ಕ್ರಯಣ
ಮತ್ತು ಗೋವುಗಳ ಮಹಿಮೆ.

ಭೀಷ್ಮಃ
ನಹುಷಸ್ತು ತತಃ ಶ್ರುತ್ವಾ ಚ್ಯವನಂ ತಂ ತಥಾಗತಮ್ |
ತ್ವರಿತಃ ಪ್ರಯಯೌ ತತ್ರ ಸಹಾಮಾತ್ಯಪುರೋಹಿತಃ ||1||
ಭೀಷ್ಮ ನಹುಷನು ಆ ರೀತಿಯಲ್ಲಿ ಬಂದ ಚ್ಯವನರ ವಾರ್ತೆಯನ್ನು ಕೇಳಿ ಅಮಾತ್ಯ-ಪುರೋಹಿತರ ಜೊತೆಯಲ್ಲಿ ಅಲ್ಲಿಗೆ ಶೀಘ್ರವಾಗಿ ಬಂದನು.
ಶೌಚಂ ಕೃತ್ವಾ ಯಥಾನ್ಯಾಯಂ ಪ್ರಾಂಜಲಿಃ ಪ್ರಯತೋ ನೃಪಃ |
ಆತ್ಮಾನಮಾಚಚಕ್ಷೇ ಚ ಚ್ಯವನಾಯ ಮಹಾತ್ಮನೇ ||2||
ಅವನು ಶುಚಿಯಾಗಿ ಕೈಗಳನ್ನು ಮುಗಿದು, ಶ್ರದ್ಧೆಯಿಂದ ಕೂಡಿದವನಾಗಿ, ನ್ಯಾಯಕ್ಕೆ ಅನುಗುಣವಾಗಿ ಮಹಾತ್ಮರಾದ ಚ್ಯವನರನ್ನು ಕುರಿತು ತನ್ನನ್ನು ನಿವೇದಿಸಿಕೊಂಡನು.
ಅರ್ಚಯಾಮಾಸ ತಂ ಚಾಪಿ ತಸ್ಯ ರಾಜ್ಞಃ ಪುರೋಹಿತಃ |
ಸತ್ಯವ್ರತಂ ಮಹಾಭಾಗಂ ದೇವಕಲ್ಪಂ ವಿಶಾಂಪತೇ ||3||
ಎಲೈ ರಾಜನೇ, ಆ ರಾಜಪುರೋಹಿತನೂ ಸಹ ಸತ್ಯವ್ರತರೂ, ಮಹಾನುಭಾವರೂ, ದೇವತೆಗಳಂತೆ ಇರುವವರೂ ಆದ ಚ್ಯವನರನ್ನು ಪೂಜಿಸಿದರು.

ನಹುಷಃ
ಕರವಾಣಿ ಪ್ರಿಯಂ ಕಿಂ ತೇ ತನ್ಮೇ ವ್ಯಾಖ್ಯಾತುಮರ್ಹಸಿ |
ಸರ್ವಂ ಕರ್ತಾಸ್ಮಿ ಭಗವನ್ ಯದ್ಯಪಿ ಸ್ಯಾತ್ ಸುದುಷ್ಕರಮ್ ||4||
ನಹುಷ ಪೂಜ್ಯರೇ, ನಿಮಗೆ ನಾನು ಯಾವ ಪ್ರಿಯವನ್ನು ಮಾಡಲಿ ಎಂಬುದನ್ನು ಹೇಳಬೇಕು. ಅದು ದುಸ್ಸಾಧ್ಯವಾಗಿದ್ದರೂ ನಾನು ಅದನ್ನು ಮಾಡುವೆನು.

ಚ್ಯವನಃ
ಶ್ರಮೇಣ ಮಹತಾ ಯುಕ್ತಾಃ ಕೈವರ್ತಾ ಮತ್ಸ್ಯಜೀವಿನಃ |
ಮಮ ಮೂಲ್ಯಂ ಪ್ರಯಚ್ಛೈಭ್ಯೋ ಮತ್ಸ್ಯಾನಾಂ ವಿಕ್ರಯೈಃ ಸಹ ||5||
ಚ್ಯವನ ಮತ್ಸ್ಯಜೀವಿಗಳಾದ ಬೆಸ್ತರು ಬಹಳ ಶ್ರಮದಿಂದ ನನ್ನನ್ನು ಎಳೆದಿದ್ದಾರೆ. ನೀನು ಮತ್ಸ್ಯಗಳ ಬೆಲೆಗಳ ಜೊತೆಯಲ್ಲಿ ನನ್ನ ಬೆಲೆಯನ್ನು ಅವರಿಗೆ ಕೊಡು.

ನಹುಷಃ
ಸಹಸ್ರಂ ದೀಯತಾಂ ಮೂಲ್ಯಂ ನಿಷಾದೇಭ್ಯಃ ಪುರೋಹಿತ |
ನಿಷ್ಕ್ರಯಾರ್ಥಂ ಭಗವತೋ ಯಥಾಹ ಭೃಗುನಂದನಃ ||6||
ನಹುಷ ಎಲೈ ಪುರೋಹಿತನೇ, ಭೃಗುನಂದನರಾದ  ಚ್ಯವನರು ಹೇಳಿದಂತೆ ಕೊಂಡುಕೊಳ್ಳುವ ಸಲುವಾಗಿ ನಿಷಾದರಿಗೆ ಒಂದು ಸಹಸ್ರ ನಿಷ್ಕಗಳನ್ನು ಕೊಡು.

ಚ್ಯವನಃ
ಸಹಸ್ರಂ ನಾಹಮರ್ಹಾಮಿ ಕಿಂ ವಾ ತ್ವಂ ಮನ್ಯಸೇ ನೃಪ |
ಸದೃಶಂ ದೀಯತಾಂ ಮೂಲ್ಯಂ ಸ್ವಬುದ್ಧ್ಯಾ ನಿಶ್ಚಯಂ ಕುರು ||7||
ಚ್ಯವನ ರಾಜನೇ, ಸಹಸ್ರನಿಷ್ಕಗಳು ನನಗೆ ಯೋಗ್ಯವಾದ ಬೆಲೆಯಲ್ಲ. ನಿನ್ನ ಅಭಿಪ್ರಾಯವೇನು? ನಿನ್ನ ಬುದ್ಧಿಯಿಂದ ನಿಶ್ಚಯಿಸಿ ನನಗೆ ಉಚಿತವಾದ ಬೆಲೆಯನ್ನು ಕೊಡು.

ನಹುಷಃ
ಸಹಸ್ರಾಣಾಂ ಶತಂ ಕ್ಷಿಪ್ರಂ ನಿಷಾದೇಭ್ಯಃ ಪ್ರದೀಯತಾಮ್ |
ಸ್ಯಾದೇತತ್ತು ಭವೇನ್ಮೂಲ್ಯಂ ಕಿಂ ವಾನ್ಯನ್ಮನ್ಯತೇ ಭವಾನ್ ||8||
ನಹುಷ ಒಂದು ಲಕ್ಷ ನಿಷ್ಕಗಳನ್ನು ಶೀಘ್ರವಾಗಿ ಈ ಬೆಸ್ತರಿಗೆ ಕೊಡಿ. ಮಹರ್ಷಿಗಳೇ, ಇದು ನಿಮಗೆ ಸದೃಶವಾದ ಬೆಲೆಯಾಗುತ್ತದೆಯೇ? ಅಥವಾ ನಿಮ್ಮ ಅಭಿಪ್ರಾಯವೇನು?

ಚ್ಯವನಃ
ನಾಹಂ ಶತಸಹಸ್ರೇಣ ನಿಮೇಯಃ ಪಾರ್ಥಿವರ್ಷಭ |
ದೀಯತಾಂ ಸದೃಶಂ ಮೂಲ್ಯಮಮಾತ್ಯೈಃ ಸಹ ಚಿಂತಯ ||9||
ಚ್ಯವನ ಎಲೈ ರಾಜನೇ, ನನ್ನನ್ನು ಒಂದು ಲಕ್ಷ ನಿಷ್ಕಗಳಿಂದ ವಿನಿಮಯ ಮಾಡಿಕೊಳ್ಳಲು ಸಾಧ್ಯವಿಲ್ಲ. ನನಗೆ ಯೋಗ್ಯವಾದ ಬೆಲೆಯನ್ನು ಕೊಡು. ನಿನ್ನ ಅಮಾತ್ಯರ ಜೊತೆಯಲ್ಲಿ ವಿಚಾರ ಮಾಡು.

ನಹುಷಃ
ಕೋಟಿಃ ಪ್ರದೀಯತಾಂ ಮೂಲ್ಯಂ ನಿಷಾದೇಭ್ಯಃ ಪುರೋಹಿತ |
ಯದೇತದಪಿ ನೌಪಮ್ಯಮತೋ ಭೂಯಃ ಪ್ರದೀಯತಾಮ್ ||10||

ನಹುಷ ಎಲೈ ಪುರೋಹಿತನೇ, ನಿಷಾದರಿಗೆ ಒಂದುಕೋಟಿ ನಿಷ್ಕಗಳನ್ನು ಕೊಡು. ಅದೂ ಸಾಲದಿದ್ದರೆ ಅದಕ್ಕಿಂತಲೂ ಹೆಚ್ಚಿನ ಧನವನ್ನು ಕೊಡು.
ಚ್ಯವನಃ
ರಾಜನ್ನಾರ್ಹಾಮ್ಯಹಂ ಕೋಟಿಂ ಭೂಯೋ ವಾಪಿ ಮಹಾದ್ಯುತೇ |
ಸದೃಶಂ ದೀಯತಾಂ ಮೂಲ್ಯಂ ಬ್ರಾಹ್ಮಣೈಃ ಸಹ ಚಿಂತಯ ॥11॥
ಚ್ಯವನ ರಾಜನೇ, ಮಹಾದ್ಯುತಿಯೇ, ಒಂದು ಕೋಟಿಯಾಗಲೀ ಅಥವಾ ಅದಕ್ಕಿಂತ ಹೆಚ್ಚು ಧನವಾಗಲೀ ನನಗೆ ಸಮವಾದುದಲ್ಲ. ಬ್ರಾಹ್ಮಣರ ಜೊತೆಯಲ್ಲಿ ವಿಚಾರ ಮಾಡಿ ನನಗೆ ಯೋಗ್ಯವಾದ ಬೆಲೆಯನ್ನು ಕೊಡುವವನಾಗು.
ನಹುಷಃ
ಅರ್ಧರಾಜ್ಯಂ ಸಮಗ್ರಂ ವಾ ನಿಷಾದೇಭ್ಯಃ ಪ್ರದೀಯತಾಮ್ |
ಏತನ್ಮೂಲ್ಯಮಹಂ ಮನ್ಯೇ ಕಿಂ ವಾನ್ಯನ್ಮನ್ಯಸೇ ದ್ವಿಜ ॥12॥
ನಹುಷ ನಿಷಾದರಿಗೆ ಅರ್ಧರಾಜ್ಯವನ್ನಾಗಲೀ ಅಥವಾ ಸಮಗ್ರ ರಾಜ್ಯವನ್ನಾಗಲೀ ಕೊಡಿ. ಇದು ಮಹರ್ಷಿಗಳಿಗೆ ಉಚಿತವಾಗುವುದೆಂದು ಭಾವಿಸುತ್ತೇನೆ. ಎಲೈ ಬ್ರಾಹ್ಮಣರೇ, ನಿಮ್ಮ ಅಭಿಪ್ರಾಯವೇನು?
ಚ್ಯವನಃ
ಅರ್ಧರಾಜ್ಯಂ ಸಮಗ್ರಂ ವಾ ನಾಹಮರ್ಹಾಮಿ ಪಾರ್ಥಿವ |
ಸದೃಶಂ ದೀಯತಾಂ ಮೂಲ್ಯಮೃಷಿಭಿಃ ಸಹ ಚಿಂತ್ಯತಾಮ್ ॥13॥
ರಾಜನೇ, ಅರ್ಧರಾಜ್ಯವಾಗಲೀ, ಸಮಗ್ರರಾಜ್ಯವಾಗಲೀ ನನಗೆ ಯೋಗ್ಯವಾದ ಬೆಲೆಯಲ್ಲ. ಋಷಿಗಳ ಜೊತೆಯಲ್ಲಿ ವಿಚಾರ ಮಾಡಿ ನನಗೆ ಯೋಗ್ಯವಾದ ಬೆಲೆಯನ್ನು ಕೊಡು.
ಭೀಷ್ಮಃ
ಮಹರ್ಷೇರ್ವಚನಂ ಶ್ರುತ್ವಾ ನಹುಷೋ ದುಃಖಕರ್ಶಿತಃ |
ಸ ಚಿಂತಯಾಮಾಸ ತದಾ ಸಹಾಮಾತ್ಯಪುರೋಹಿತಃ ॥14॥
ಭೀಷ್ಮ ಮಹರ್ಷಿಗಳ ವಚನವನ್ನು ಕೇಳಿ ನಹುಷನು ದುಃಖತಪ್ತನಾದನು. ಆಗ ಅವನು ಅಮಾತ್ಯರ ಮತ್ತು ಪುರೋಹಿತರ ಜೊತೆಯಲ್ಲಿ ಸೇರಿ ವಿಚಾರ ಮಾಡಿದನು.
ತತ್ರ ತ್ವನ್ಯೋ ವನಚರಃ ಕಶ್ಚಿನ್ಮೂಲಫಲಾಶನಃ |
ನಹುಷಸ್ಯ ಸಮೀಪಸ್ಥೋ ಗವಿಜಾತೋಽಭವನ್ಮುನಿಃ ॥15॥
ಅಲ್ಲಿ ನಹುಷನ ಸಮೀಪದಲ್ಲಿ ಮೂಲಫಲಾಹಾರನಾದ, ವನಚರನಾದ, ಗೋವಿನಲ್ಲಿ ಜನಿಸಿದ ಇನ್ನೊಬ್ಬ ಋಷಿ ಇದ್ದನು.
ಸ ಸಮಾಭಾಷ್ಯ ರಾಜಾನಮಬ್ರವೀದ್ ದ್ವಿಜಸತ್ತಮಃ |
ತೋಷಯಿಷ್ಯಾಮ್ಯಹಂ ವಿಪ್ರಂ ಯಥಾ ತುಷ್ಟೋ ಭವಿಷ್ಯತಿ ॥16॥
ನಾಹಂ ಮಿಥ್ಯಾವಚೋ ಬ್ರೂಯಾಂ ಸ್ವೈರೇಷ್ವಪಿ ಕುತೋಽನ್ಯಥಾ |
ಭವತೋ ಯದಹಂ ಬ್ರೂಯಾಂ ತತ್ಕಾರ್ಯಮವಿಶಂಕಯಾ ॥17॥
ಆ ದ್ವಿಜಶ್ರೇಷ್ಠನು ರಾಜನ ಜೊತೆಯಲ್ಲಿ ಮಾತನಾಡಿ ಅವನನ್ನು ಕುರಿತು, ನಾನು ಬ್ರಹ್ಮರ್ಷಿಗಳಾದ ಚ್ಯವನರನ್ನು ಸಂತೋಷಪಡಿಸುತ್ತೇನೆ. ನಾನು ವಿನೋದಕ್ಕಾಗಿಯೂ ಸುಳ್ಳು ಮಾತನಾಡುವವನಲ್ಲ. ಬೇರೆ ಸಂದರ್ಭದಲ್ಲಿ ಏಕೆ ಸುಳ್ಳನ್ನು ಹೇಳಲಿ? ನಾನು ನಿಮಗೆ ಹೇಳುವ ಕಾರ್ಯವನ್ನು ನೀವು ನಿಶ್ಶಂಕೆಯಿಂದ ಮಾಡಬೇಕು ಎಂದು ಹೇಳಿದನು.
ನಹುಷಃ
ಬ್ರವೀತು ಭಗವಾನ್ಮೂಲ್ಯಂ ಮಹರ್ಷೇಃ ಸದೃಶಂ ಭೃಗೋಃ |
ಪರಿತ್ರಾಯಸ್ವ ಮಾಮಸ್ಮಾದ್ವಿಷಯಂ ಚ ಕುಲಂ ಚ ಮೇ ॥18॥
ನಹುಷ ಪೂಜ್ಯರೂ ಮಹರ್ಷಿಗಳೂ ಆದ ಭೃಗುಗಳಿಗೆ ಯೋಗ್ಯವಾದ ಬೆಲೆಯನ್ನು ಹೇಳಬೇಕು. ಈ ಸಂಕಟದಿಂದ ನನ್ನನ್ನೂ, ನನ್ನ ಕುಲವನ್ನೂ, ನನ್ನ ರಾಜ್ಯವನ್ನೂ ಪಾರು ಮಾಡಿ.
ಹನ್ಯಾದ್ಧಿ ಭಗವಾನ್ ಕ್ರುದ್ಧಸ್ತ್ರೈಲೋಕ್ಯಮಪಿ ಕೇವಲಮ್ |
ಕಿಂ ಪುನರ್ಮಾಂ ತಪೋಹೀನಂ ಬಾಹುವೀರ್ಯಪರಾಯಣಮ್ ॥19॥
ಚ್ಯವನರು ಕೋಪಗೊಂಡರೆ ಪೂಜ್ಯರಾದ ಅವರು ಮೂರು ಲೋಕಗಳನ್ನೂ ದಹಿಸಿಯಾರು. ಇನ್ನು ಕೇವಲ ಬಾಹುಬಲವನ್ನೇ ಆಶ್ರಯಿಸಿದ ತಪೋಹೀನನಾದ ನನ್ನನ್ನು ದಹಿಸುವ ವಿಷಯದಲ್ಲಿ ಏನು ಹೇಳಬೇಕು?
ಅಗಾಧೇಽಂಭಸಿ ಮಗ್ನಸ್ಯ ಸಾಮಾತ್ಯಸ್ಯ ಸಹರ್ತ್ವಿಜಃ |
ಪ್ಲವೋ ಭವ ಮಹರ್ಷೇ ತ್ವಂ ಕುರು ಮೂಲ್ಯವಿನಿಶ್ಚಯಮ್ ॥20॥
ಎಲೈ ಮಹರ್ಷಿಗಳೇ, ಅಮಾತ್ಯರ ಮತ್ತು ಋತ್ವಿಜರ ಜೊತೆಯಲ್ಲಿ ಅಗಾಧವಾದ ಜಲದಲ್ಲಿ ಮುಳುಗುತ್ತಿರುವ ನನ್ನನ್ನು ಚ್ಯವನರ ಮೌಲ್ಯವನ್ನು ನಿಶ್ಚಯ ಮಾಡಿ ದೋಣಿಯಾಗಿ ಜಲದಿಂದ ದಾಟಿಸಿ.
ಭೀಷ್ಮಃ
ನಹುಷಸ್ಯ ವಚಃ ಶ್ರುತ್ವಾ ಗವಿಜಾತಃ ಪ್ರತಾಪವಾನ್ |
ಉವಾಚ ಹರ್ಷಯನ್ ಸರ್ವಾನಮಾತ್ಯಾನ್ ಪಾರ್ಥಿವಂ ಚ ತಮ್ ॥
ಭೀಷ್ಮ ನಹುಷನ ಮಾತುಗಳನ್ನು ಕೇಳಿ ಗೋವಿನಲ್ಲಿ ಜನಿಸಿದ ಆ ಪ್ರತಾಪಶಾಲಿಯಾದ ಋಷಿಯು ನಹುಷನಿಗೂ ಮತ್ತು ಅವನ ಅಮಾತ್ಯರಿಗೂ ಸಂತೋಷವನ್ನು ನೀಡುತ್ತಾ ಮಾತನಾಡಿದನು.

ಅನರ್ಘೇಯಾ ಮಹಾರಾಜ ದ್ವಿಜಾ ವರ್ಣಮಹತ್ತಮಾಃ |
ಗಾವಶ್ಚ ಪೃಥಿವೀಪಾಲ ಗೌರ್ಮೂಲ್ಯಂ ಪರಿಕಲ್ಪ್ಯತಾಮ್ ॥22॥
ಎಲ್ಲೈ ಮಹಾರಾಜನೇ, ವರ್ಣಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರಿಗೆ ಬೆಲೆಯನ್ನು ಕಟ್ಟಲು ಸಾಧ್ಯವಿಲ್ಲ. ಎಲ್ಲೈ ಪೃಥಿವೀಪಾಲನೇ, ಗೋವುಗಳಿಗೂ ಬೆಲೆಯನ್ನು ಕಟ್ಟಲು ಸಾಧ್ಯವಿಲ್ಲ. ಆದ್ದರಿಂದ ಚ್ಯವನರಿಗೆ ಉಚಿತ ಬೆಲೆಯಾಗಿ ಒಂದು ಗೋವನ್ನು ನಿರ್ಧರಿಸು.
ನಹುಷಸ್ತು ತತಃ ಶ್ರುತ್ವಾ ಮಹರ್ಷೇರ್ವಚನಂ ನೃಪ |
ಹರ್ಷೇಣ ಮಹತಾ ಯುಕ್ತಃ ಸಹಾಮಾತ್ಯಪುರೋಹಿತಃ ॥23॥
ಎಲ್ಲೈ ರಾಜನೇ, ನಹುಷನಾದರೂ ಆ ಮಹರ್ಷಿಯ ವಚನವನ್ನು ಕೇಳಿ ಅಮಾತ್ಯ- ಪುರೋಹಿತರಿಂದ ಕೂಡಿ ಬಹಳ ಸಂತುಷ್ಟನಾದನು.
ಅಭಿಗಮ್ಯ ಭೃಗೋಃ ಪುತ್ರಂ ಚ್ಯವನಂ ಸಂಶಿತವ್ರತಮ್ |
ಇದಂ ಪ್ರೋವಾಚ ನೃಪತೇ ವಾಚಾ ಸಂತರ್ಪಯನ್ನಿವ ॥24॥
ಉತ್ತಿಷ್ಠೋತ್ತಿಷ್ಠ ವಿಪ್ರರ್ಷೇ ಗವಾ ಕ್ರೀತೋಽಸಿ ಭಾರ್ಗವ |
ಏತನ್ಮೂಲ್ಯಮಹಂ ಮನ್ಯೇ ತವ ಧರ್ಮಭೃತಾಂ ವರ ॥25॥
ಭೃಗುಪುತ್ರರಾದ, ಶ್ರೇಷ್ಠವ್ರತಧಾರಿಗಳಾದ ಚ್ಯವನರ ಬಳಿಗೆ ಹೋಗಿ ಮಾತಿನಿಂದ ಅವರನ್ನು ತೃಪ್ತಿಪಡಿಸುವಂತೆ- `ಎಲ್ಲೈ ಬ್ರಹ್ಮರ್ಷಿಗಳೇ, ಭೃಗುಕುಲೋತ್ಪನ್ನರೇ, ಎದ್ದೇಳಿ, ಎದ್ದೇಳಿ. ಒಂದು ಗೋವನ್ನು ನಿಮ್ಮ ಬೆಲೆಯೆಂದು ನಿರ್ಧರಿಸಿ ನಿಮ್ಮನ್ನು ಕೊಂಡುಕೊಂಡಿದ್ದೇನೆ. ಎಲ್ಲೈ ಧರ್ಮಿಷ್ಠರಲ್ಲಿ ಶ್ರೇಷ್ಠರೇ, ಈ ಬೆಲೆಯು ನಿಮಗೆ ಯೋಗ್ಯವಾದುದೆಂದು ಭಾವಿಸುತ್ತೇನೆ' ಎಂದು ಹೇಳಿದನು.
ಚ್ಯವನಃ
ಉತ್ತಿಷ್ಠಾಮ್ಯೇಷ ರಾಜೇಂದ್ರ ಸಮ್ಯಕ್ ಕ್ರೀತೋಽಸ್ಮಿ ತೇಽನಘ |
ಗೋಭಿಸ್ತುಲ್ಯಂ ನ ಪಶ್ಯಾಮಿ ಧನಂ ಕಿಂಚಿದಿಹಾಚ್ಯುತ ॥26॥
ಚ್ಯವನ ಎಲ್ಲೈ ರಾಜೇಂದ್ರನೇ, ಅನಘನೇ, ಇಗೋ ಏಳುತ್ತೇನೆ. ಸರಿಯಾದ ಬೆಲೆಯಿಂದ ನನ್ನನ್ನು ಕೊಂಡುಕೊಂಡಿದ್ದೀಯೆ. ಗೋವುಗಳಿಗೆ ಸಮಾನವಾದ ಬೆಲೆಯನ್ನು ನಾನು ಎಲ್ಲಿಯೂ ಕಾಣುವುದಿಲ್ಲ.
ಕೀರ್ತನಂ ಶ್ರವಣಂ ದಾನಂ ದರ್ಶನಂ ಚಾಪಿ ಪಾರ್ಥಿವ |
ಗವಾಂ ಪ್ರಶಸ್ಯತೇ ವೀರ ಸರ್ವಪಾಪಹರಂ ಶಿವಮ್ ॥27॥
ಎಲ್ಲೈ ರಾಜನೇ, ವೀರನೇ, ಗೋವುಗಳ ಕೀರ್ತನ, ಶ್ರವಣ, ದರ್ಶನ, ದಾನ ಎಲ್ಲವೂ ಪ್ರಶಸ್ತವಾದುದು, ಮಂಗಳಕರವಾದುದು ಮತ್ತು ಸರ್ವಪಾಪ ಪರಿಹಾರಕವಾದುದು.
ಗಾವೋ ಲಕ್ಷ್ಮ್ಯಾಃ ಸದಾ ಮೂಲಂ ಗೋಷು ಪಾಪ್ಮಾ ನ ವಿದ್ಯತೇ |
ಅನ್ನಮೇವ ಸದಾ ಗಾವೋ ದೇವಾನಾಂ ಪರಮಂ ಹವಿಃ ॥28॥
ಗೋವುಗಳು ಯಾವಾಗಲೂ ಲಕ್ಷ್ಮಿಯ ಮೂಲಸ್ಥಾನ. ಗೋವುಗಳಲ್ಲಿ ಪಾಪ ಇರುವುದಿಲ್ಲ. ಅವು ಮನುಷ್ಯರಿಗೆ ಆಹಾರವನ್ನು ಮತ್ತು ದೇವತೆಗಳಿಗೆ ಶ್ರೇಷ್ಠವಾದ ಹವಿಸ್ಸನ್ನು ಕೊಡುತ್ತದೆ.
ಸ್ವಾಹಾಕಾರವಷಟ್ಕಾರೌ ಗೋಷು ನಿತ್ಯಂ ಪ್ರತಿಷ್ಠಿತೌ |
ಗಾವೋ ಯಜ್ಞಪ್ರಣೇತ್ರ್ಯೋ ವೈ ತಥಾ ಯಜ್ಞಸ್ಯ ತಾ ಮುಖಮ್ ॥
ಸ್ವಾಹಾಕಾರ, ವಷಟ್ಕಾರಗಳು ಗೋವುಗಳಲ್ಲಿ ನಿತ್ಯವೂ ಆಶ್ರಯಿಸಿಕೊಂಡಿರುತ್ತವೆ. ಗೋವುಗಳು ಯಜ್ಞಗಳನ್ನು ನಿರ್ವಾಹ ಮಾಡುತ್ತವೆ ಮತ್ತು ಯಜ್ಞಗಳಲ್ಲಿ ಪ್ರಧಾನವಾದವುಗಳು.
ಅಮೃತಂ ಹ್ಯಕ್ಷಯಂ ದಿವ್ಯಂ ಕ್ಷರಂತಿ ಚ ವಹಂತಿ ಚ |
ಅಮೃತಾಯತನಂ ಚೈತಾಃ ಸರ್ವಲೋಕನಮಸ್ಕೃತಾಃ ॥30॥
ದಿವ್ಯವಾದ, ಅಮೃತಸಮಾನವಾದ ಕ್ಷೀರವನ್ನು ಅವು ಕೊಡುತ್ತವೆ. ಭಾರವನ್ನು ಹೊರುತ್ತವೆ. ಅವು ಅಮೃತಕ್ಕೆ ಆಶ್ರಯವಾದವುಗಳು ಮತ್ತು ಎಲ್ಲ ಜನರಿಂದಲೂ ನಮಸ್ಕೃತವಾದವುಗಳು.
ತೇಜಸಾ ವಪುಷಾ ಚೈವ ಗಾವೋ ವಹ್ನಿಸಮಾ ಭುವಿ |
ಗಾವೋ ಹಿ ಸುಮಹತ್ತೇಜಃ ಪ್ರಾಣಿನಾಂ ಚ ಸುಖಪ್ರದಾಃ ॥31॥
ತೇಜಸ್ಸಿನಿಂದಲೂ ಮತ್ತು ದೇಹದಿಂದಲೂ ಭೂಮಿಯಲ್ಲಿ ಗೋವುಗಳು ಅಗ್ನಿಗೆ ಸಮಾನವಾದವುಗಳು. ಗೋವುಗಳು ಮಹಾತೇಜಸ್ಸನ್ನು ಹೊಂದಿವೆ ಮತ್ತು ಪ್ರಾಣಿಗಳಿಗೆ ಸುಖವನ್ನು ಕೊಡುತ್ತವೆ.
ನಿವಿಷ್ಟಂ ಗೋಕುಲಂ ಯತ್ರ ಶ್ವಾಸಂ ಮುಂಚತಿ ನಿರ್ಭಯಮ್ |
ವಿರಾಜಯತಿ ತಂ ದೇಶಂ ಪಾಪ್ಮಾನಂ ಚಾಪಕರ್ಷತಿ ॥32॥
ಎಲ್ಲಿ ಗೋವುಗಳು ಮಲಗಿ ಸುಖವಾಗಿ ಉಸಿರಾಡುತ್ತವೋ ಅವು ಆ ದೇಶವನ್ನೇ ಶೋಭಿಸುತ್ತವೆ ಮತ್ತು ಅಲ್ಲಿರುವ ಎಲ್ಲ ದೋಷಗಳನ್ನೂ ನಿವಾರಿಸುತ್ತವೆ.
ಗಾವಃ ಸ್ವರ್ಗಸ್ಯ ಸೋಪಾನಂ ಗಾವಃ ಸ್ವರ್ಗೇಽಪಿ ಪೂಜಿತಾಃ |
ಗಾವಃ ಕಾಮದುಘಾ ದೇವ್ಯೋ ನಾನ್ಯತ್ ಕಿಂಚಿತ್ಪರಂ ಸ್ಮೃತಮ್ ॥33॥
ಗೋವುಗಳು ಸ್ವರ್ಗಕ್ಕೆ ಸೋಪಾನ. ಅವು ಸ್ವರ್ಗದಲ್ಲಿಯೂ ಪೂಜಿಸಲ್ಪಡುತ್ತವೆ. ಅವು ಇಷ್ಟವಾದ ಕಾಮವನ್ನು ಕೊಡುವ ದೇವತೆಗಳು. ಗೋವುಗಳಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.
ಇತ್ಯೇತದ್ಗೋಷು ಮೇ ಪ್ರೋಕ್ತಂ ಮಾಹಾತ್ಮ್ಯಂ ಪಾರ್ಥಿವರ್ಷಭ |
ಗುಣೈಕದೇಶವಚನಂ ಶಕ್ಯಂ ಪಾರಾಯಣಂ ನ ತು ॥34॥

ಎಲ್ಲೈ ರಾಜಶ್ರೇಷ್ಠನೇ, ನಾನು ಹೇಳಿದ ಈ ಗೋ ಮಹಿಮೆಯು ಅವುಗಳ ಗುಣದ ಒಂದಂಶ ಮಾತ್ರ. ಅವುಗಳ ಎಲ್ಲಾ ಗುಣಗಳನ್ನು ಹೇಳಿ ಪೂರೈಸಲು ಸಾಧ್ಯವಿಲ್ಲ.
ನಿಷಾದಾಃ
ದರ್ಶನಂ ಕಥನಂ ಚೈವ ಸಹಾಸ್ಮಾಭಿಃ ಕೃತಂ ಮುನೇ |
ಸತಾಂ ಸಪ್ತಪದಂ ಮಿತ್ರಂ ಪ್ರಸಾದಂ ನಃ ಕುರು ಪ್ರಭೋ ॥35॥
ನಿಷಾದರು ಋಷಿಗಳೇ, ಪ್ರಭುಗಳೇ, ನಾವು ನಿಮ್ಮ ದರ್ಶನವನ್ನೂ, ನಿಮ್ಮ ಜೊತೆಯಲ್ಲಿ ಸಂಭಾಷಣೆಯನ್ನೂ ಮಾಡಿದ್ದೇವೆ. ಸಜ್ಜನರಿಗೆ ಏಳು ಹೆಜ್ಜೆಗಳಲ್ಲಿ ಸ್ನೇಹ ಉಂಟಾಗುತ್ತದೆ. ನಮ್ಮ ಮೇಲೆ ಅನುಗ್ರಹವನ್ನು ಮಾಡಿ.
ಹವೀಂಷಿ ಸರ್ವಾಣಿ ಯಥಾ ಹ್ಯುಪಭುಂಕ್ತೇ ಹುತಾಶನಃ |
ಏವಂ ತ್ವಮಪಿ ಧರ್ಮಾತ್ಮನ್ ಪುರುಷಾಗ್ನಿಃ ಪ್ರತಾಪವಾನ್ ॥36॥
ಅಗ್ನಿಯು ತನ್ನಲ್ಲಿ ಹಾಕಿದ ಹವಿಸ್ಸನ್ನು ಉಪಭುಂಜಿಸುವಂತೆ ಎಲ್ಲೈ ಧರ್ಮಾತ್ಮರೇ, ನೀವೂ ಸಹ ಪ್ರತಾಪಶಾಲಿಗಳಾದ ಪುರುಷಾಗ್ನಿಯಾಗಿರುವವರು.
ಪ್ರಸಾದಯಾಮಹೇ ವಿದ್ವನ್ ಭವಂತಂ ಪ್ರಣತಾ ವಯಮ್ |
ಅನುಗ್ರಹಾರ್ಥಮಸ್ಮಾಕಮಿಯಂ ಗೌಃ ಪ್ರತಿಗೃಹ್ಯತಾಮ್ ॥37॥
ಜ್ಞಾನಿಗಳೇ, ನಿಮಗೆ ನಾವು ನಮಸ್ಕಾರವನ್ನು ಮಾಡಿ ಪ್ರಸನ್ನರಾಗಿ ಎಂದು ಹೇಳುತ್ತಿದ್ದೇವೆ. ನಮ್ಮಲ್ಲಿ ಅನುಗ್ರಹವನ್ನು ಮಾಡಲು ಈ ಗೋವನ್ನು ಸ್ವೀಕರಿಸಿ.
ಚ್ಯವನಃ
ಕೃಪಣಸ್ಯ ಚ ಯಚ್ಚಕ್ಷುರ್ಮುನೇರಾಶೀವಿಷಸ್ಯ ಚ |
ನರಂ ಸಮೂಲಂ ದಹತಿ ಕಕ್ಷಮಗ್ನಿರಿವ ಜ್ವಲನ್ ॥38॥
ಚ್ಯವನ ಕಷ್ಟದಲ್ಲಿರುವವನ ದೃಷ್ಟಿ, ಋಷಿಯ ದೃಷ್ಟಿ ಮತ್ತು ಸರ್ಪಗಳ ದೃಷ್ಟಿಗಳು ಯಾವ ಮನುಷ್ಯನ ಮೇಲೆ ಬೀಳುತ್ತವೆಯೋ ಅವು ಅವನನ್ನು ಅಗ್ನಿಯು ಹುಲ್ಲನ್ನು ಸುಡುವಂತೆ ಮೂಲ ಸಹಿತವಾಗಿ ಸುಡುತ್ತವೆ.
ಪ್ರತಿಗೃಹ್ಣಾಮಿ ವೋ ಧೇನುಂ ಕೈವರ್ತಾ ಮುಕ್ತಕಿಲ್ಬಿಷಾಃ |
ದಿವಂ ಗಚ್ಛತ ವೈ ಕ್ಷಿಪ್ರಂ ಮತ್ಸ್ಯೈರ್ಜಾಲೋದ್ಧೃತೈಃ ಸಹ ॥39॥
ಎಲ್ಲೈ ಕೈವರ್ತರೇ, ನಿಮ್ಮ ಗೋವನ್ನು ಸ್ವೀಕರಿಸುತ್ತೇನೆ. ನೀವು ಅಪರಾಧದಿಂದ ನಿರ್ಮುಕ್ತರಾಗಿದ್ದೀರಿ. ನೀವು ಶೀಘ್ರವಾಗಿ ಬಲೆಯಲ್ಲಿ ಹಿಡಿದ ಮೀನುಗಳ ಜೊತೆಯಲ್ಲಿ ಸ್ವರ್ಗಕ್ಕೆ ಹೋಗಿ.
ಭೀಷ್ಮಃ
ತತಸ್ತಸ್ಯ ಪ್ರಸಾದಾತ್ ತೇ ಮಹರ್ಷೇರ್ಭಾವಿತಾತ್ಮನಃ |
ನಿಷಾದಾಸ್ತೇನ ವಾಕ್ಯೇನ ಸಹ ಮತ್ಸ್ಯೈರ್ದಿವಂ ಯಯುಃ ॥40॥
ಭೀಷ್ಮ ಶುದ್ಧಮನಸ್ಸಿನ ಆ ಮಹರ್ಷಿಗಳ ಅನುಗ್ರಹದಿಂದ ಆಗ ಆ ನಿಷಾದರು ಋಷಿಗಳ ಮಾತಿನಂತೆ ಮತ್ಸ್ಯಗಳ ಜೊತೆಯಲ್ಲಿ ಸ್ವರ್ಗಕ್ಕೆ ಹೋದರು.
ತತಃ ಸ ರಾಜಾ ನಹುಷೋ ವಿಸ್ಮಿತಃ ಪ್ರೇಕ್ಷ್ಯ ಧೀವರಾನ್ |
ಆರೋಹಮಾಣಾಂಸ್ತ್ರಿದಿವಂ ಮತ್ಸ್ಯಾಂಶ್ಚ ಭರತರ್ಷಭ ॥41॥
ಎಲ್ಲೈ ಭರತರ್ಷಭನೇ, ರಾಜನು ಮತ್ಸ್ಯಗಳ ಜೊತೆಯಲ್ಲಿ ಸ್ವರ್ಗವನ್ನು ಏರುತ್ತಿದ್ದ ಆ ಬೆಸ್ತರನ್ನು ನೋಡಿ ವಿಸ್ಮಯಗೊಂಡನು.
ತತಸ್ತೌ ಗವಿಜಶ್ಚೈವ ಚ್ಯವನಶ್ಚ ಭೃಗೂದ್ವಹಃ |
ವರಾಭ್ಯಾಮನುರೂಪಾಭ್ಯಾಂ ಛಂದಯಾಮಾಸತುರ್ನೃಪಮ್ ॥42॥
ಅನಂತರ ಭೃಗೂದ್ವಹರಾದ ಚ್ಯವನರೂ ಮತ್ತು ಗೋಜಾತನಾದ ಇನ್ನೊಬ್ಬ ಋಷಿಯೂ ರಾಜನಿಗೆ ಅನುರೂಪವಾದ ವರಗಳನ್ನು ಕೇಳುವಂತೆ ಹೇಳಿದರು.
ತತೋ ರಾಜಾ ಮಹಾವೀರ್ಯೋ ನಹುಷಃ ಪೃಥಿವೀಪತಿಃ |
ಪರಮಿತ್ಯಬ್ರವೀತ್ ಪ್ರೀತಸ್ತದಾ ಭರತಸತ್ತಮ ॥43॥
ಎಲ್ಲೈ ಭರತಶ್ರೇಷ್ಠನೇ, ಆಗ ಮಹಾಪರಾಕ್ರಮಿಯೂ, ಪೃಥಿವೀಪತಿಯೂ ಆದ ನಹುಷನು ಸಂತೋಷಗೊಂಡು ಬಹಳ ಒಳ್ಳೆಯದು ಎಂದು ಹೇಳಿದನು.
ತತೋ ಜಗ್ರಾಹ ಧರ್ಮೇ ಸ ಸ್ಥಿತಿಮಿಂದ್ರನಿಭೋ ನೃಪಃ |
ತಥೇತಿ ಚೋದಿತಃ ಪ್ರೀತಸ್ತಾವೃಷೀ ಪ್ರತ್ಯಪೂಜಯತ್ ॥44॥
ಆಗ ಇಂದ್ರನಿಗೆ ಸಮಾನನಾದ ಆ ರಾಜನು ಧರ್ಮದಲ್ಲಿ ಅಚಲವಾದ ಸ್ಥಿತಿಯನ್ನು ವರವಾಗಿ ಬೇಡಿದನು. ಆ ಋಷಿಗಳು ಹಾಗೆಯೇ ಆಗಲಿ ಎಂದು ಹೇಳಿದ ಮೇಲೆ ಸಂತೋಷಗೊಂಡ ರಾಜನು ಆ ಇಬ್ಬರು ಋಷಿಗಳನ್ನು ಪೂಜಿಸಿದನು.
ಸಮಾಪ್ತದೀಕ್ಷಶ್ಚ್ಯವನಸ್ತತೋಽಗಚ್ಛತ್ ಸ್ವಮಾಶ್ರಮಮ್ |
ಗವಿಜಶ್ಚ ಮಹಾತೇಜಾಃ ಸ್ವಮಾಶ್ರಮಪದಂ ಯಯೌ ॥45॥
ಚ್ಯವನರು ತಮ್ಮ ಹನ್ನೆರಡು ವರ್ಷಗಳ ದೀಕ್ಷೆಯನ್ನು ಮುಗಿಸಿ ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ಮಹಾತೇಜಸ್ವಿಯಾದ ಗೋಜಾತನಾದ ಋಷಿಯೂ ತನ್ನ ಆಶ್ರಮಕ್ಕೆ ಹಿಂದಿರುಗಿದನು.
ನಿಷಾದಾಶ್ಚ ದಿವಂ ಜಗ್ಮುಸ್ತೇ ಚ ಮತ್ಸ್ಯಾ ಜನಾಧಿಪ |
ನಹುಷೋಽಪಿ ವರಂ ಲಬ್ಧ್ವಾ ಪ್ರವಿವೇಶ ಪುರಂ ಸ್ವಕಮ್ ॥46॥

ಎಲೈ ರಾಜನೇ, ಆ ಬೆಸ್ತರು ಮತ್ತು ಮತ್ಸ್ಯಗಳು ಸ್ವರ್ಗಕ್ಕೆ ಹೋದರು. ನಹುಷನೂ ಸಹ ಋಷಿಗಳಿಂದ ವರಗಳನ್ನು ಪಡೆದು ತನ್ನ ಪಟ್ಟಣವನ್ನು ಪ್ರವೇಶಿಸಿದನು.
ಏತತ್ತೇ ಕಥಿತಂ ತಾತ ಯನ್ಮಾಂ ತ್ವಂ ಪರಿಪೃಚ್ಛಸಿ |
ದರ್ಶನೇ ಯಾದೃಶಃ ಸ್ನೇಹಃ ಸಂವಾಸೇ ಚ ಯುಧಿಷ್ಠಿರ ॥47॥
ಪ್ರೀತಿಪಾತ್ರನಾದ ಯುಧಿಷ್ಠಿರನೇ, ದರ್ಶನ ಮತ್ತು ಸಹವಾಸಗಳಿಂದ ಎಂತಹ ಪ್ರೀತಿಯುಂಟಾಗುತ್ತದೆ ಎಂದು ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾನು ಇದನ್ನು ನಿನಗೆ ಹೇಳಿದ್ದೇನೆ.
ಮಹಾಭಾಗ್ಯಂ ಗವಾಂ ಚೈವ ತಥಾ ಧರ್ಮವಿನಿಶ್ಚಯಮ್ |
ಕಿಂ ಭೂಯಃ ಕಥ್ಯತಾಂ ವೀರ ಕಿಂ ತೇ ಹೃದಿ ವಿವಕ್ಷಿತಮ್ ॥48॥
ಗೋವುಗಳ ಮಹಾಭಾಗ್ಯವನ್ನೂ ಮತ್ತು ಧರ್ಮನಿಶ್ಚಯವನ್ನೂ ಹೇಳಿದ್ದೇನೆ. ಎಲೈ ವೀರನೇ, ನಿನ್ನ ಮನಸ್ಸಿನಲ್ಲಿ ಕೇಳಬೇಕೆಂದಿರುವ ಯಾವ ಬೇರೆ ವಿಷಯವನ್ನು ಹೇಳಲಿ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚ್ಯವನೋಪಾಖ್ಯಾನಂ ನಾಮ ಏಕಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆರಡನೆಯ ಅಧ್ಯಾಯ
ಚ್ಯವನ-ಕುಶಿಕರ ಸಂವಾದ. ಕುಶಿಕರ ಗೃಹದಲ್ಲಿ ಚ್ಯವನರಿಗೆ ಆತಿಥ್ಯ.
ಯುಧಿಷ್ಠಿರಃ
ಸಂಶಯೋ ಮೇ ಮಹಾಪ್ರಾಜ್ಞ ಸುಮಹಾನ್ ಸಾಗರೋಪಮಃ |
ತನ್ಮೇ ಶೃಣು ಮಹಾಬಾಹೋ ಶ್ರುತ್ವಾ ಚಾಖ್ಯಾತುಮರ್ಹಸಿ ॥1॥
ಯುಧಿಷ್ಠಿರ ಎಲೈ ಮಹಾಪ್ರಾಜ್ಞನೇ, ನನಗೆ ಸಾಗರದಷ್ಟು ದೊಡ್ಡದಾದ ಸಂಶಯವಿದೆ. ಎಲೈ ಮಹಾಬಾಹುವೇ, ಅದನ್ನು ಕೇಳಿ ಪರಿಹರಿಸಬೇಕು.
ಕೌತೂಹಲಂ ಮೇ ಸುಮಹಜ್ಜಾಮದಗ್ನ್ಯಂ ಪ್ರತಿ ಪ್ರಭೋ |
ರಾಮಂ ಧರ್ಮಭೃತಾಂ ಶ್ರೇಷ್ಠಂ ತನ್ಮೇ ವ್ಯಾಖ್ಯಾತುಮರ್ಹಸಿ ॥2॥
ಎಲೈ ಪ್ರಭುವೇ, ಜಮದಗ್ನಿಪುತ್ರರೂ, ಧರ್ಮಿಷ್ಠರಲ್ಲಿ ಶ್ರೇಷ್ಠರೂ ಆದ ಪರಶುರಾಮರ ವಿಷಯದಲ್ಲಿ ನನಗೆ ದೊಡ್ಡ ಕುತೂಹಲವಿದೆ. ಅದನ್ನು ಸರಿಯಾಗಿ ವಿವರಿಸಬೇಕು.
ಕಥಮೇಷ ಸಮುತ್ಪನ್ನೋ ರಾಮಃ ಸತ್ಯಪರಾಕ್ರಮಃ |
ಕಥಂ ಬ್ರಹ್ಮರ್ಷಿವಂಶೇ ಚ ಕ್ಷತ್ರಧರ್ಮಾ ವ್ಯಜಾಯತ ॥3॥
ಸತ್ಯಪರಾಕ್ರಮರಾದ ಈ ಪರಶುರಾಮರು ಹೇಗೆ ಜನಿಸಿದರು? ಬ್ರಹ್ಮರ್ಷಿಗಳ ವಂಶದಲ್ಲಿ ಜನಿಸಿದ ಅವರು ಹೇಗೆ ಕ್ಷತ್ರಿಯ ಧರ್ಮವನ್ನು ಆಚರಿಸಿದರು?
ತದಸ್ಯ ಸಂಭವಂ ರಾಜನ್ ನಿಖಿಲೇನಾನುಕೀರ್ತಯ |
ಕೌಶಿಕಾಚ್ಚ ಕಥಂ ವಂಶಾತ್ ಕ್ಷತ್ರಾದ್ ವೈ ಬ್ರಾಹ್ಮಣೋಽಭವತ್ ॥4॥
ಎಲೈ ರಾಜನೇ, ಅವರ ಉತ್ಪತ್ತಿಯನ್ನು ಸಮಗ್ರವಾಗಿ ವಿವರಿಸು. ಕ್ಷತ್ರಿಯ ವಂಶವಾದ ಕೌಶಿಕ ವಂಶದಲ್ಲಿ ಜನಿಸಿದ ವಿಶ್ವಾಮಿತ್ರರು ಹೇಗೆ ಬ್ರಾಹ್ಮಣರಾದರು?
ಅಹೋ ಪ್ರಭಾವಃ ಸುಮಹಾನಾಸೀದ್ ವೈ ಸುಮಹಾತ್ಮನೋಃ |
ರಾಮಸ್ಯ ಚ ನರವ್ಯಾಘ್ರ ವಿಶ್ವಾಮಿತ್ರಸ್ಯ ಚೈವ ಹ ॥5॥
ಎಲೈ ನರವ್ಯಾಘ್ರನೇ, ಮಹಾತ್ಮರಾದ ಪರಶುರಾಮ ಮತ್ತು ವಿಶ್ವಾಮಿತ್ರರಿಗೆ ಎಂತಹ ಮಹಾಸಾಮರ್ಥ್ಯವಿದ್ದಿತು!
ಕಥಂ ಪುತ್ರಾನತಿಕ್ರಮ್ಯ ತೇಷಾಂ ನಪ್ತೃಷ್ವಥಾಭವತ್ |
ಏಷ ದೋಷಃ ಸುತಾನ್ ಹಿತ್ವಾ ತನ್ಮೇ ವ್ಯಾಖ್ಯಾತುಮರ್ಹಸಿ ॥6॥
ಋಚೀಕಪುತ್ರರಾದ ಜಮದಗ್ನಿಗಳಲ್ಲಿಲ್ಲದೆ, ಕುಶಿಕಪುತ್ರನಾದ ಗಾಧಿಯಲ್ಲಿಲ್ಲದೆ, ಅವರ ಪುತ್ರರಾದ ಪರಶುರಾಮ-ವಿಶ್ವಾಮಿತ್ರರಲ್ಲಿ ಈ ವರ್ಣ ವ್ಯತ್ಯಾಸರೂಪವಾದ ದೋಷವು ಹೇಗೆ ಉಂಟಾಯಿತೆಂಬುದನ್ನು ನನಗೆ ತಿಳಿಸು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಚ್ಯವನಸ್ಯ ಚ ಸಂವಾದಂ ಕುಶಿಕಸ್ಯ ಚ ಭಾರತ ॥7॥
ಭೀಷ್ಮ ಎಲೈ ಭಾರತನೇ, ಈ ವಿಷಯದಲ್ಲಿಯೂ ಸಹ ಚ್ಯವನರಿಗೂ ಮತ್ತು ಕುಶಿಕನಿಗೂ ನಡೆದ ಸಂವಾದರೂಪವಾದ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಏತಂ ದೋಷಂ ಪುರಾ ದೃಷ್ಟ್ವಾ ಭಾರ್ಗವಶ್ಚ್ಯವನಸ್ತದಾ |
ಆಗಾಮಿನಂ ಮಹಾಬುದ್ಧಿಃ ಸ್ವವಂಶೇ ಮುನಿಪುಂಗವಃ ॥8॥
ಸಂಚಿಂತ್ಯ ಮನಸಾ ಸರ್ವಂ ಗುಣದೋಷಬಲಾಬಲಮ್ |
ದಗ್ಧುಕಾಮಃ ಕುಲಂ ಸರ್ವಂ ಕುಶಿಕಾನಾಂ ತಪೋಧನಃ ॥9॥
ಚ್ಯವನಸ್ತಮನುಪ್ರಾಪ್ಯ ಕುಶಿಕಂ ವಾಕ್ಯಮಬ್ರವೀತ್ |

ವಸ್ತುಮಿಚ್ಛಾ ಸಮುತ್ಪನ್ನಾ ತ್ವಯಾ ಸಹ ಮಮಾನಘ ॥10॥
ಭೃಗುಕುಲೋತ್ಪನ್ನರಾದ, ಮಹಾಬುದ್ಧಿಯನ್ನು ಹೊಂದಿದ, ಮುನಿಶ್ರೇಷ್ಠರಾದ ಚ್ಯವನರು ತಮ್ಮ ವಂಶದಲ್ಲಿ ಮುಂದೆ ಉಂಟಾಗಲಿರುವ ಈ ವ್ಯತ್ಯಾಸವನ್ನು ಮೊದಲೇ ತಿಳಿದು ಅದರ ಎಲ್ಲ ಗುಣದೋಷಗಳನ್ನೂ, ಬಲಾಬಲಗಳನ್ನೂ ಮನಸ್ಸಿನಲ್ಲಿಯೇ ಚಿಂತಿಸಿ ತಪೋಧನರಾದ ಅವರು ಕುಶಿಕರ ವಂಶವನ್ನೇ ಸುಟ್ಟುಹಾಕಲು ಇಚ್ಛಿಸಿ ಕುಶಿಕನ ಬಳಿಗೆ ಬಂದು ಅವನನ್ನು ಕುರಿತು- `ಎಲೈ ಅನಘನೇ, ನಿನ್ನ ಜೊತೆಯಲ್ಲಿ ವಾಸಿಸಲು ನನಗೆ ಇಚ್ಛೆಯುಂಟಾಗಿದೆ' ಎಂದು ಹೇಳಿದರು.
ಕುಶಿಕಃ
ಭಗವನ್ ಸಹಧರ್ಮೋಽಯಂ ಪಂಡಿತೈರಿಹ ಧಾರ್ಯತೇ |
ಪ್ರದಾನಕಾಲೇ ಕನ್ಯಾನಾಮುಚ್ಯತೇ ಚ ಸದಾ ಬುಧೈಃ ॥11॥
ಯತ್ತು ತಾವದತಿಕ್ರಾಂತಂ ಧರ್ಮದ್ವಾರಂ ತಪೋಧನ |
ತತ್ಕಾರ್ಯಂ ಪ್ರಕರಿಷ್ಯಾಮಿ ತದನುಜ್ಞಾತುಮರ್ಹಸಿ ॥12॥
ಕುಶಿಕ ಪೂಜ್ಯರೇ, ಪಂಡಿತರು ಯಾವಾಗಲೂ ಇಂತಹ ಸಹಧರ್ಮವನ್ನು ಆಶ್ರಯಿಸಿ ಧರಿಸಿರುತ್ತಾರೆ. ಕನ್ಯೆಯ ಪ್ರದಾನ ಕಾಲದಲ್ಲಿಯೂ ಸಹ ದಾನಿಗಳು ಸಹಧರ್ಮವನ್ನು ಆದೇಶಿಸಿರುತ್ತಾರೆ. ಎಲೈ ತಪೋಧನರೇ, ಧರ್ಮದ್ವಾರವಾದ ಇಂತಹ ಸಹಧರ್ಮವನ್ನು ನಾನು ಇದುವರೆಗೂ ಆಚರಿಸಿಲ್ಲ. ಈಗ ಆಚರಿಸುವೆನು. ಅದಕ್ಕೆ ತಾವು ಅನುಮತಿಯನ್ನು ಕೊಡಬೇಕು.
ಭೀಷ್ಮಃ
ಅಥಾಸನಮುಪಾದಾಯ ಚ್ಯವನಸ್ಯ ಮಹಾಮುನೇಃ |
ಕುಶಿಕೋ ಭಾರ್ಯಯಾ ಸಾರ್ಧಮಾಜಗಾಮ ಯತೋ ಮುನಿಃ ॥13॥
ಭೀಷ್ಮ ಅನಂತರ ಕುಶಿಕನು ಮಹರ್ಷಿಗಳಾದ ಚ್ಯವನರನ್ನು ಪತ್ನೀ ಸಹಿತನಾಗಿ ಸಮೀಪಿಸಿ ಅವರಿಗೆ ಆಸನವನ್ನು ನೀಡಿದನು.
ಪ್ರಗೃಹ್ಯ ರಾಜಾ ಭೃಂಗಾರಂ ಪಾದ್ಯಮಸ್ಮೈ ನ್ಯವೇದಯತ್ |
ಕಾರಯಾಮಾಸ ಸರ್ವಾಶ್ಚ ಕ್ರಿಯಾಸ್ತಸ್ಯ ಮಹಾತ್ಮನಃ ॥14॥
ರಾಜನು ಪೂರ್ಣಕುಂಭವನ್ನು ಹಿಡಿದು ಅವರಿಗೆ ಪಾದ್ಯವನ್ನು ನಿವೇದಿಸಿದನು. ಮಹಾತ್ಮರಾದ ಅವರಿಗೆ ಎಲ್ಲ ಉಚಿತವಾದ ಉಪಚಾರಗಳನ್ನೂ ಮಾಡಿದನು.
ತತಃ ಸ ರಾಜಾ ಚ್ಯವನಂ ಮಧುಪರ್ಕಂ ಯಥಾವಿಧಿ |
ಪ್ರತ್ಯಗ್ರಾಹಯದವ್ಯಗ್ರೋ ಮಹಾತ್ಮಾ ನಿಯತವ್ರತಃ ॥15॥
ಅನಂತರ ಆ ರಾಜನು ಮಹಾತ್ಮರೂ, ನಿಯತವ್ರತರೂ ಆದ ಅವರಿಗೆ ಶಾಸ್ತ್ರೋಕ್ತ ರೀತಿಯಲ್ಲಿ ಮಧುಪರ್ಕವನ್ನು ಸಮರ್ಪಿಸಿದನು. ಋಷಿಗಳು ಅವ್ಯಗ್ರರಾಗಿ ಅದನ್ನು ಸ್ವೀಕರಿಸಿದರು.
ಸತ್ಕೃತ್ಯ ಸ ತಥಾ ವಿಪ್ರಮಿದಂ ವಚನಮಬ್ರವೀತ್ |
ಭಗವನ್ ಪರವಂತೌ ಸ್ವೋ ಬ್ರೂಹಿ ಕಿಂ ಕರವಾವಹೇ ॥16॥
ಯದಿ ರಾಜ್ಯಂ ಯದಿ ಧನಂ ಯದಿ ಗಾಃ ಸಂಶಿತವ್ರತ |
ಯಜ್ಞದಾನಾನಿ ಚ ತಥಾ ಬ್ರೂಹಿ ಸರ್ವಂ ದದಾಮಿ ತೇ ॥17॥
ಇದಂ ಗೃಹಮಿದಂ ರಾಜ್ಯಮಿದಂ ಧರ್ಮಾಸನಂ ಚ ತೇ |
ರಾಜಾ ತ್ವಮಸಿ ಶಾಧ್ಯುರ್ವೀಂ ಭೃತ್ಯೋಽಹಂ ಪರವಾಂಸ್ತ್ವಯಿ ॥18॥
ಹೀಗೆ ಆ ಋಷಿಗಳನ್ನು ಸತ್ಕರಿಸಿ ಅವರನ್ನು ಕುರಿತು- `ಪೂಜ್ಯರೇ, ನಾವಿಬ್ಬರೂ ನಿಮ್ಮ ಅಧೀನರಾಗಿದ್ದೇವೆ. ನಿಮಗೆ ಯಾವ ಸೇವೆಯನ್ನು ಮಾಡಬೇಕು? ಎಲೈ ವ್ರತಧಾರಿಗಳೇ, ನಿಮಗೆ ರಾಜ್ಯವಾಗಲೀ, ಧನವಾಗಲೀ, ಗೋವುಗಳಾಗಲೀ ಅಥವಾ ಯಜ್ಞೋಪಯೋಗಿಯಾದ ದಾನವಾಗಲೀ ಅಪೇಕ್ಷಿತವಾಗಿದೆಯೇ? ಅದನ್ನು ಹೇಳಿ. ನಿಮಗೆ ಎಲ್ಲವನ್ನೂ ಕೊಡುತ್ತೇನೆ. ಈ ನನ್ನ ರಾಜ್ಯ, ಈ ಗೃಹ, ಈ ಧರ್ಮಾಸನ ಎಲ್ಲವೂ ನಿಮ್ಮದೆ. ನೀವೇ ರಾಜರು. ನೀವೇ ಭೂಮಿಯನ್ನು ಆಳುವವರಾಗಿ. ನಾನು ನಿಮಗೆ ಅಧೀನನಾದ ನಿಮ್ಮ ಸೇವಕ' ಎಂದು ಹೇಳಿದನು.
ಏವಮುಕ್ತೇ ತತೋ ವಾಕ್ಯೇ ಚ್ಯವನೋ ಭಾರ್ಗವಸ್ತದಾ |
ಕುಶಿಕಂ ಪ್ರತ್ಯುವಾಚೇದಂ ಮುದಾ ಪರಮಯಾ ಯುತಃ ॥19॥
ನ ರಾಜ್ಯಂ ಕಾಮಯೇ ರಾಜನ್ನ ಧನಂ ನ ಚ ಯೋಷಿತಃ |
ನ ಚ ಗಾ ನ ಚ ತೇ ದೇಶಾನ್ನ ಯಜ್ಞಾನ್ ಶ್ರೂಯತಾಮಿದಮ್ ॥20॥
ನಿಯಮಂ ಕಂಚಿದಾರಪ್ಸ್ಯೇ ಯುವಯೋರ್ಯದಿ ರೋಚತೇ |
ಪರಿಚರ್ಯೋಽಸ್ಮಿ ಯತ್ತಾಭ್ಯಾಂ ಯುವಾಭ್ಯಾಮವಿಶಂಕಯಾ ॥21॥
ರಾಜನು ಹೀಗೆ ಹೇಳುತ್ತಿರಲು ಭಾರ್ಗವರಾದ ಚ್ಯವನರು ಬಹಳ ಸಂತೋಷದಿಂದ ಕೂಡಿದವರಾಗಿ ಅವನನ್ನು ಕುರಿತು- `ಎಲೈ ರಾಜನೇ, ನನಗೆ ರಾಜ್ಯವಾಗಲೀ, ಧನವಾಗಲೀ, ಸ್ತ್ರೀಯರಾಗಲೀ ಬೇಕಾಗಿಲ್ಲ. ಗೋವುಗಳಾಗಲೀ, ನಿನ್ನ ದೇಶವಾಗಲೀ, ಯಜ್ಞಗಳಾಗಲೀ ಅಪೇಕ್ಷಿತವಲ್ಲ. ಈ ಮಾತನ್ನು ಕೇಳು. ನಿಮ್ಮಿಬ್ಬರಿಗೂ ಸಮ್ಮತವಾದರೆ ನಾನು ಒಂದು ವ್ರತವನ್ನು ಆರಂಭಿಸುವೆನು. ನೀವಿಬ್ಬರೂ ನಿಶ್ಶಂಕೆಯಾಗಿ, ಪ್ರಯತ್ನ ಪೂರ್ವಕವಾಗಿ ನನ್ನ ಪರಿಚರ್ಯೆಯನ್ನು ಮಾಡಬೇಕು' ಎಂದು ಹೇಳಿದರು.
ಏವಮುಕ್ತೇ ತದಾ ತೇನ ದಂಪತೀ ತೌ ಜಹರ್ಷತುಃ |
ಪ್ರತ್ಯಬ್ರೂತಾಂ ಚ ತಮೃಷಿಮೇವಮಸ್ತ್ವಿತಿ ಭಾರತ ॥22॥
ಚ್ಯವನರು ಹೀಗೆ ಹೇಳುತ್ತಿರಲು ಆ ದಂಪತಿಗಳು ಸಂತೋಷಪಟ್ಟರು. ಎಲೈ ಭಾರತನೇ, ಆ ಋಷಿಗಳನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದರು.

ಅಥ ತಂ ಕುಶಿಕೋ ಹೃಷ್ಟಃ ಪ್ರಾವೇಶಯದನುತ್ತಮಮ್ |
ಗೃಹೋದ್ದೇಶಂ ತತಸ್ತತ್ರ ದರ್ಶನೀಯಮದರ್ಶಯತ್ ||23||
ಅನಂತರ ಕುಶಿಕನು ಸಂತೋಷಗೊಂಡು ಅವರನ್ನು ಒಂದು ಶ್ರೇಷ್ಠವಾದ ಗೃಹಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವರಿಗೆ ಸುಂದರವಾದ ಪದಾರ್ಥಗಳೆಲ್ಲವನ್ನೂ ತೋರಿಸಿದನು.
ಇಯಂ ಶಯ್ಯಾ ಭಗವತೋ ಯಥಾಕಾಮಮಿಹೋಷ್ಯತಾಮ್ |
ಪ್ರಯತಿಷ್ಯಾವಹೇ ಪ್ರೀತಿಮಾಹರ್ತುಂ ತೇ ತಪೋಧನ ||24||
ಎಲೈ ತಪೋಧನರೇ, ಇದು ಪೂಜ್ಯರಾದ ನಿಮ್ಮ ಹಾಸಿಗೆ. ನಿಮ್ಮ ಇಚ್ಛೆಗೆ ಅನುಗುಣವಾಗಿ ಇಲ್ಲಿ ವಾಸವನ್ನು ಮಾಡಿ. ನಾವಿಬ್ಬರೂ ನಿಮಗೆ ಸಂತೋಷವನ್ನುಂಟು ಮಾಡಲು ಪ್ರಯತ್ನಿಸುತ್ತೇವೆ ಎಂದು ಹೇಳಿದನು.
ಅಥ ಸೂರ್ಯೋಽತಿಚಕ್ರಾಮ ತೇಷಾಂ ಸಂವದತಾಂ ತಥಾ |
ಅಥರ್ಷಿಶ್ಚೋದಯಾಮಾಸ ಪಾನಮನ್ನಂ ತಥೈವ ಚ ||25||
ಅವರು ಹಾಗೆ ಮಾತನಾಡುತ್ತಿರಲು ಸೂರ್ಯನು ಆಕಾಶದಲ್ಲಿ ಬಹಳ ದೂರಕ್ಕೆ ಬಂದನು. ಆಗ ಋಷಿಗಳು ತಮಗೆ ಅನ್ನ-ಪಾನಗಳು ಬೇಕೆಂದು ಅವನಿಗೆ ಹೇಳಿದರು.
ತಮಪೃಚ್ಛತ್ತತೋ ರಾಜಾ ಕುಶಿಕಃ ಪ್ರಣತಸ್ತದಾ |
ಕಿಮನ್ನಜಾತಮಿಷ್ಟಂ ತೇ ಕಿಮುಪಸ್ಥಾಪಯಾಮ್ಯಹಮ್ ||26||
ರಾಜನಾದ ಕುಶಿಕನು ಅವರಿಗೆ ನಮಸ್ಕಾರವನ್ನು ಮಾಡಿ ತಮಗಿಷ್ಟವಾದ ಅನ್ನವು ಯಾವುದು? ಯಾವ ಅನ್ನವನ್ನು ತರಲಿ? ಎಂದು ಕೇಳಿದನು.
ತತಃ ಸ ಪರಯಾ ಪ್ರೀತ್ಯಾ ಪ್ರತ್ಯುವಾಚ ಜನಾಧಿಪಮ್ |
ಔಪಪತ್ತಿಕಮಾಹಾರಂ ಪ್ರಯಚ್ಛಸ್ವೇತಿ ಭಾರತ ||27||
ಎಲೈ ಭಾರತನೇ, ಆಗ ಅವರು ಬಹಳ ಸಂತೋಷದಿಂದ ರಾಜನನ್ನು ಕುರಿತು ಈ ಸಮಯದಲ್ಲಿ ಸಿದ್ಧವಾಗಿರುವ ಆಹಾರವನ್ನು ನೀಡು ಎಂದು ಹೇಳಿದರು.
ತದ್ವಚಃ ಪೂಜಯಿತ್ವಾ ತು ತಥೇತ್ಯಾಹ ಸ ಪಾರ್ಥಿವಃ |
ಯಥೋಪಪನ್ನಂ ಚಾಹಾರಂ ತಸ್ಮೈ ಪ್ರಾದಾಜ್ಜನಾಧಿಪಃ ||28||
ರಾಜನು ಆ ಮಾತನ್ನು ಗೌರವಿಸಿ ಹಾಗೆಯೇ ಆಗಲಿ ಎಂದು ಹೇಳಿ ಸಿದ್ಧವಾದ ಆಹಾರವನ್ನು ತಂದು ಅವರಿಗೆ ನೀಡಿದನು.
ತತಃ ಸ ಭಗವಾನ್ ಭುಕತ್ವ ದಂಪತೀ ಪ್ರಾಹ ಧರ್ಮವಿತ್ |
ಸ್ವಪ್ತುಮಿಚ್ಛಾಮ್ಯಹಂ ನಿದ್ರಾ ಬಾಧತೇ ಮಾಮಿತಿ ಪ್ರಭೋ ||29||
ಆಗ ಪೂಜ್ಯರೂ, ಧರ್ಮಜ್ಞರೂ ಆದ ಅವರು ಆಹಾರವನ್ನು ಸ್ವೀಕರಿಸಿ ದಂಪತಿಗಳನ್ನು ಕುರಿತು- `ಪ್ರಭುವೇ, ನಿದ್ರೆಯು ನನ್ನನ್ನು ಬಾಧಿಸುತ್ತಿದೆ. ನಾನು ನಿದ್ರೆ ಮಾಡಲು ಅಪೇಕ್ಷಿಸುತ್ತೇನೆ' ಎಂದು ಹೇಳಿದರು.
ತತಃ ಶಯ್ಯಾಗೃಹಂ ಪ್ರಾಪ್ಯ ಭಗವಾನೃಷಿಸತ್ತಮಃ |
ಸಂವಿವೇಶ ನರೇಂದ್ರಸ್ತು ಸಪತ್ನೀಕಃ ಸ್ಥಿತೋಽಭವತ್ ||30||
ಅನಂತರ ಪೂಜ್ಯರಾದ ಋಷಿಶ್ರೇಷ್ಠರು ಶಯ್ಯಾಗೃಹವನ್ನು ಪ್ರವೇಶಿಸಿ ಮಲಗಿಕೊಂಡರು. ರಾಜನು ಪತ್ನೀ ಸಹಿತನಾಗಿ ಹಾಗೆಯೇ ನಿಂತಿದ್ದನು.
ನ ಪ್ರಬೋಧ್ಯೋಽಸ್ಮಿ ಸಂಸುಪ್ತ ಇತ್ಯುವಾಚಾಥ ಭಾರ್ಗವಃ |
ಸಂವಾಹಿತವ್ಯೌ ಪಾದೌ ಮೇ ಜಾಗರ್ತವ್ಯಂ ಚ ವಾಂ ನಿಶಿ ||31||
ಭಾರ್ಗವರು ಅವರನ್ನು ಕುರಿತು, ನಿದ್ರೆಯಲ್ಲಿರುವ ನನ್ನನ್ನು ಎಬ್ಬಿಸಬಾರದು. ರಾತ್ರಿಯ ಕಾಲದಲ್ಲಿ ನೀವಿಬ್ಬರೂ ಜಾಗರಣೆಯನ್ನು ಮಾಡಿ ನನ್ನ ಪಾದಗಳನ್ನು ಒತ್ತುತ್ತಿರಬೇಕು ಎಂದು ಹೇಳಿದರು.
ಅವಿಶಂಕಶ್ಚ ಕುಶಿಕಸ್ತಥೇತ್ಯಾಹ ಸ ಧರ್ಮವಿತ್ |
ನ ಪ್ರಾಬೋಧಯತಾಂ ತಂ ಚ ತೌ ತದಾ ರಜನೀಕ್ಷಯೇ ||32||
ಧರ್ಮಜ್ಞನಾದ ಕುಶಿಕನು ಯಾವ ಶಂಕೆಯೂ ಇಲ್ಲದೆ ಹಾಗೆಯೇ ಆಗಲಿ ಎಂದು ಹೇಳಿದನು. ಆ ದಂಪತಿಗಳು ರಾತ್ರಿಯ ಕಾಲದಲ್ಲಿ ಅವರನ್ನು ಎಬ್ಬಿಸಲಿಲ್ಲ.
ಯಥಾದೇಶಂ ಮಹರ್ಷೇಸ್ತು ಶುಶ್ರೂಷಾಪರಮೌ ತದಾ |
ಬಭೂವತುರ್ಮಹಾರಾಜ ಪ್ರಯತಾವಥ ದಂಪತೀ ||33||
ಎಲೈ ಮಹಾರಾಜನೇ, ಆ ದಂಪತಿಗಳು ಶ್ರದ್ಧಾಯುಕ್ತರಾಗಿ ಆ ಮಹರ್ಷಿಗಳ ಆಜ್ಞೆಯಂತೆ ಅವರ ಸೇವೆಯಲ್ಲಿ ನಿರತರಾದರು.
ತತಃ ಸ ಭಗವಾನ್ ವಿಪ್ರಃ ಸಮಾದಿಶ್ಯ ನರಾಧಿಪಮ್ |
ಸುಷ್ವಾಪೈಕೇನ ಪಾರ್ಶ್ವೇನ ದಿವಸಾನೇಕವಿಂಶತಿಮ್ ||34||
ರಾಜನಿಗೆ ಹೀಗೆ ಆದೇಶವನ್ನು ನೀಡಿ ಅನಂತರ ಪೂಜ್ಯರಾದ ಆ ಬ್ರಾಹ್ಮಣರು ಒಂದು ಮಗ್ಗುಲಿನಲ್ಲಿ ಇಪ್ಪತ್ತೊಂದು ದಿವಸಗಳವರೆಗೆ ಮಲಗಿ ನಿದ್ರೆಯನ್ನು ಮಾಡಿದರು.
ಸ ತು ರಾಜಾ ನಿರಾಹಾರಃ ಸಭಾರ್ಯಃ ಕುರುನಂದನ |
ಪರ್ಯುಪಾಸತ ತಂ ಹೃಷ್ಟಶ್ಚ್ಯವನಾರಾಧನೇ ರತಃ ||35||
ಎಲೈ ಕುರುನಂದನನೇ, ರಾಜನು ಪತ್ನಿಯೊಡನೆ ನಿರಾಹಾರನಾಗಿ ಅವರನ್ನು ಸಂತೋಷಪಡಿಸುವುದರಲ್ಲಿ ನಿರತನಾಗಿ ಅವರ ಸೇವೆಯನ್ನು ಮಾಡಿದನು.

ಭಾರ್ಗವಸ್ತು ಸಮುತ್ತಸ್ಥೌ ಸ್ವಯಮೇವ ತಪೋಧನಃ |
ಅಕಿಂಚಿದುಕತ್ವ ತು ಗೃಹಾತ್ ನಿಶ್ಚಕ್ರಾಮ ಮಹಾತಪಾಃ ||36||
ತಪೋಧನರಾದ ಭಾರ್ಗವರು ಇಪ್ಪತ್ತೊಂದು ದಿನಗಳು ಕಳೆದ ಮೇಲೆ ತಾವಾಗಿಯೇ ಎದ್ದರು. ಮಹಾತಪಸ್ವಿಗಳಾದ ಅವರು ಯಾವ ಮಾತನ್ನೂ ಆಡದೆ ಗೃಹದಿಂದ ಹೊರಗೆ ನಡೆದರು.
ತಮನ್ವಗಚ್ಛತಾಂ ತೌ ತು ಕ್ಷುಧಿತೌ ಶ್ರಮಕರ್ಶಿತೌ |
ಭಾರ್ಯಾಪತೀ ಮುನಿಶ್ರೇಷ್ಠೋ ನ ಚ ತಾವವಲೋಕಯತ್ ||37||
ಹಸಿವು ಮತ್ತು ಶ್ರಮದಿಂದ ಬಳಲಿದ ಆ ದಂಪತಿಗಳು ಅವರನ್ನು ಹಿಂಬಾಲಿಸಿದರು. ಆದರೆ ಆ ಮುನಿಶ್ರೇಷ್ಠರು ಅವರನ್ನು ನೋಡಲೇ ಇಲ್ಲ.
ತಯೋಽಸ್ತು ಪ್ರೇಕ್ಷತೋರೇವ ಭಾರ್ಗವಾಣಾಂ ಕುಲೋದ್ವಹಃ |
ಅಂತರ್ಹಿತೋಽಭೂದ್ ರಾಜೇಂದ್ರ ತತೋ ರಾಜಾಽಪತತ್ ಕ್ಷಿತೌ ||
ಆ ದಂಪತಿಗಳು ನೋಡುತ್ತಿರುವಂತೆಯೇ ಭಾರ್ಗವ ಕುಲೋದ್ವಹರಾದ ಚ್ಯವನರು ಅಂತರ್ಧಾನವನ್ನು ಹೊಂದಿದರು. ಎಲೈ ರಾಜೇಂದ್ರನೇ, ಆಗ ರಾಜನು ಭೂಮಿಯ ಮೇಲೆ ಕುಸಿದು ಬಿದ್ದನು.
ಸ ಮುಹೂರ್ತಂ ಸಮಾಶ್ವಸ್ಯ ಸಹ ದೇವ್ಯಾ ಮಹಾದ್ಯುತಿಃ |
ಪುನರನ್ವೇಷಣೇ ಯತ್ನಮಕರೋತ್ ಪರಮಂ ತದಾ ||39||
ಮಹಾಕಾಂತಿಯನ್ನು ಹೊಂದಿದ್ದ ಅವನು ಒಂದು ಮುಹೂರ್ತದ ಕಾಲ ಸುಧಾರಿಸಿಕೊಂಡು ಪುನಃ ಅವರನ್ನು ಅನ್ವೇಷಿಸಲು ತನ್ನ ಪತ್ನಿಯ ಜೊತೆಯಲ್ಲಿ ಪರಮ ಪ್ರಯತ್ನವನ್ನು ಮಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಚ್ಯವನಕುಶಿಕಸಂವಾದೋನಾಮ ದ್ವ್ಯಶೀತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ಮೂರನೆಯ ಅಧ್ಯಾಯ
ಕುಶಿಕನಿಗೆ ಚ್ಯವನರ ಅನುಗ್ರಹ
ಯುಧಿಷ್ಠಿರಃ
ತಸ್ಮಿನ್ನಂತರ್ಹಿತೇ ವಿಪ್ರೇ ರಾಜಾ ಕಿಮಕರೋತ್ ತದಾ |
ಭಾರ್ಯಾ ಚಾಸ್ಯ ಮಹಾಭಾಗಾ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲೈ ಪಿತಾಮಹನೇ, ಬ್ರಾಹ್ಮಣರಾದ ಆ ಚ್ಯವನರು ಅದೃಶ್ಯರಾದ ಮೇಲೆ ರಾಜನು ಏನು ಮಾಡಿದನು? ಮಹಾನುಭಾವಳಾದ ಅವನ ಪತ್ನಿಯು ಏನು ಮಾಡಿದಳು ಎಂಬುದನ್ನು ನನಗೆ ಹೇಳು.
ಭೀಷ್ಮಃ
ಅದೃಷ್ಟ್ವಾ ಸ ಮಹೀಪಾಲಸ್ತಮೃಷಿಂ ಸಹ ಭಾರ್ಯಯಾ |
ಪರಿಶ್ರಾಂತೋ ನಿವವೃತೇ ವ್ರೀಡಿತೋ ನಷ್ಟಚೇತನಃ ||2||
ಭೀಷ್ಮ ಪತ್ನಿಯಿಂದ ಕೂಡಿದ ಆ ರಾಜನು ಆ ಋಷಿಗಳನ್ನು ಕಾಣದೆ ಬಳಲಿ ನಾಚಿಕೆಯಿಂದ ಜ್ಞಾನಶೂನ್ಯನಾಗಿ ಹಿಂದಿರುಗಿದನು.
ಸ ಪ್ರವಿಶ್ಯ ಪುರೀಂ ದೀನೋ ನಾಭ್ಯಭಾಷತ ಕಿಂಚನ |
ತದೇವ ಚಿಂತಯಾಮಾಸ ಚ್ಯವನಸ್ಯ ವಿಚೇಷ್ಟಿತಮ್ ||3||
ಅವನು ಪಟ್ಟಣಕ್ಕೆ ಹಿಂದಿರುಗಿ ದೀನನಾಗಿ ಯಾರ ಜೊತೆಯಲ್ಲೂ ಮಾತನಾಡಲಿಲ್ಲ. ಚ್ಯವನರ ಆ ಚರ್ಯೆಯನ್ನೇ ಚಿಂತಿಸಿದನು.
ಅಥ ಶೂನ್ಯೇನ ಮನಸಾ ಪ್ರವಿವೇಶ ಗೃಹಂ ನೃಪಃ |
ದದರ್ಶ ಶಯನೇ ತಸ್ಮಿನ್ ಶಯಾನಂ ಭೃಗುನಂದನಮ್ ||4||
ಅನಂತರ ರಾಜನು ಶೂನ್ಯಮನಸ್ಸಿನಿಂದ ಚ್ಯವನರು ಇದ್ದ ಗೃಹವನ್ನು ಪ್ರವೇಶಿಸಿದನು. ಅಲ್ಲಿ ಹಾಸಿಗೆಯಲ್ಲಿ ಮಲಗಿದ ಭೃಗುನಂದನರಾದ ಚ್ಯವನರನ್ನು ನೋಡಿದನು.
ವಿಸ್ಮಿತೌ ತೌ ತು ದೃಷ್ಟ್ವಾ ತಂ ತದಾಶ್ಚರ್ಯಂ ವಿಚಿಂತ್ಯ ಚ |
ದರ್ಶನಾತ್ ತಸ್ಯ ಚ ಮುನೇರ್ವಿಶ್ರಾಂತೌ ಸಂಬಭೂವತುಃ ||5||
ಅವರಿಬ್ಬರೂ ಅವರನ್ನು ನೋಡಿ ಆ ಆಶ್ಚರ್ಯವನ್ನು ಚಿಂತಿಸಿ ವಿಸ್ಮಿತರಾದರು. ಆ ಋಷಿಗಳ ದರ್ಶನದಿಂದಲೇ ಅವರು ಶ್ರಮವನ್ನೆಲ್ಲ ಕಳೆದುಕೊಂಡರು.
ಯಥಾಸ್ಥಾನಂ ತು ತೌ ಸ್ಥಿತ್ವಾ ಭೂಯಸ್ತಂ ಸಂವವಾಹತುಃ |
ಅಥಾಪರೇಣ ಪಾರ್ಶ್ವೇನ ಸುಷ್ವಾಪ ಸ ಮಹಾಮುನಿಃ ||6||
ಪುನಃ ಮೊದಲಿನಂತೆಯೇ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತು ಅವರ ಪಾದವನ್ನು ಒತ್ತಿದರು. ಆಗ ಮಹಾಮುನಿಗಳು ಇನ್ನೊಂದು ಮಗ್ಗುಲಿಗೆ ತಿರುಗಿ ನಿದ್ದೆಯನ್ನು ಮಾಡಿದರು.
ತೇನೈವ ಚ ಸ ಕಾಲೇನ ಪ್ರತ್ಯಬುಧ್ಯತ ವೀರ್ಯವಾನ್ |
ನ ಚ ತೌ ಚಕ್ರತುಃ ಕಿಂಚಿದ್ ವಿಕಾರಂ ಭಯಶಂಕಿತೌ ||7||
ಪರಾಕ್ರಮಶಾಲಿಗಳಾದ ಅವರು ಮೊದಲಿನಂತೆ ಇಪ್ಪತ್ತೊಂದು ದಿನಗಳು ಕಳೆದ ಮೇಲೆ ಎಚ್ಚರಗೊಂಡರು. ಭಯದಿಂದ ಕೂಡಿದ ರಾಜ

ದಂಪತಿಗಳು ಯಾವ ವಿಕಾರವನ್ನೂ ತೋರಿಸಲಿಲ್ಲ.
ಪ್ರತಿಬುದ್ಧಸ್ತು ಸ ಮುನಿಸ್ತೌ ಪ್ರೋವಾಚ ವಿಶಾಂಪತೇ |
ತೈಲಾಭ್ಯಂಗೋ ದೀಯತಾಂ ಮೇ ಸ್ನಾಸ್ಯೇಽಹಮಿತಿ ಭಾರತ ॥8॥
ಎಲೈ ರಾಜನೇ, ಎಚ್ಚರಗೊಂಡ ಆ ಋಷಿಗಳು ಅವರಿಬ್ಬರನ್ನು ಕುರಿತು ನನಗೆ ತೈಲಾಭ್ಯಂಗವನ್ನು ಸಿದ್ಧಪಡಿಸಿ, ನಾನು ಸ್ನಾನವನ್ನು ಮಾಡುವೆನು ಎಂದು ಹೇಳಿದರು.
ತಥೇತಿ ತೌ ಪ್ರತಿಶ್ರುತ್ಯ ಕ್ಷುಧಿತೌ ಶ್ರಮಕರ್ಶಿತೌ |
ಶೃತಪಾಕೇನ ತೈಲೇನ ಮಹಾರ್ಹೇಣೋಪತಸ್ಥತುಃ ॥9॥
ಹಸಿದು, ಶ್ರಮದಿಂದ ಬಳಲಿದ ಅವರು ಹಾಗೆಯೇ ಆಗಲಿ ಎಂದು ಹೇಳಿ ಕಾಯಿಸಿ ಪಾಕವನ್ನು ಮಾಡಿದ ಮಹಾಬೆಲೆಬಾಳುವ ತೈಲವನ್ನು ಅವರಿಗೆ ತಂದರು.
ತತಃ ಸುಖಾಸೀನಮೃಷಿಂ ವಾಗ್ಯತೌ ಸಂವವಾಹತುಃ |
ನ ಚ ಪರ್ಯಾಪ್ತಮಿತ್ಯಾಹ ಭಾರ್ಗವಃ ಸುಮಹಾತಪಾಃ ॥10॥
ಅವರಿಬ್ಬರು ಮೌನವಾಗಿ ಕುಳಿತು ಸುಖಾಸೀನರಾದ ಋಷಿಗಳ ಪಾದಗಳನ್ನು ಒತ್ತಿದರು. ಮಹಾತಪಸ್ವಿಗಳಾದ ಭಾರ್ಗವರು ಇನ್ನೂ ಸಾಲದು ಎಂದು ಹೇಳಿದರು.
ಯದಾ ತೌ ನಿರ್ವಿಕಾರೌ ತು ಲಕ್ಷಯಾಮಾಸ ಭಾರ್ಗವಃ |
ತತ ಉತ್ಥಾಯ ಸಹಸಾ ಸ್ನಾನಶಾಲಾಂ ವಿವೇಶ ಹ |
ಕ್ಲಪ್ತಮೇವ ತು ತತ್ರಾಸೀತ್ ಸ್ನಾನೀಯಂ ಪಾರ್ಥಿವೋಚಿತಮ್ ॥11॥
ಚ್ಯವನರು ಅವರು ನಿರ್ವಿಕಾರವಾಗಿರುವುದನ್ನು ನೋಡಿ ಅಲ್ಲಿಂದ ಎದ್ದು ಸ್ನಾನ ಶಾಲೆಯನ್ನು ಪ್ರವೇಶಿಸಿದರು. ಅಲ್ಲಿ ರಾಜೋಚಿತವಾದ ಸ್ನಾನದ್ರವ್ಯಗಳು ಸಿದ್ಧವಾಗಿದ್ದವು.
ಅಸತ್ಕೃತ್ಯ ತು ತತ್ಸರ್ವಂ ತತ್ರೈವಾಂತರಧೀಯತ |
ಸ ಮುನಿಃ ಪುನರೇವಾಥ ನೃಪತೇಃ ಪಶ್ಯತಸ್ತದಾ |
ನಾಸೂಯಾಂ ಚಕ್ರತುಸ್ತೌ ಚ ದಂಪತೀ ಭರತರ್ಷಭ ॥12॥
ಆ ಋಷಿಗಳು ರಾಜನು ನೋಡುತ್ತಿರುವಂತೆಯೇ ಅದೆಲ್ಲವನ್ನೂ ತಿರಸ್ಕರಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು. ಎಲೈ ಭರತರ್ಷಭನೇ, ಆ ರಾಜ ದಂಪತಿಗಳು ಅಸೂಯೆಯನ್ನು ಪಡಲಿಲ್ಲ.
ಅಥ ಸ್ನಾತಃ ಸ ಭಗವಾನ್ ಸಿಂಹಾಸನಗತಃ ಪ್ರಭುಃ |
ದರ್ಶಯಾಮಾಸ ಕುಶಿಕಂ ಸಭಾರ್ಯಂ ಭೃಗುನಂದನಃ ॥13॥
ಅನಂತರ ಪೂಜ್ಯರಾದ, ಪ್ರಭುಗಳಾದ ಋಷಿಗಳು ಸ್ನಾನವನ್ನು ಮಾಡಿ ಸಿಂಹಾಸನದಲ್ಲಿ ಕುಳಿತು ಪತ್ನೀ ಸಹಿತನಾದ ರಾಜನಿಗೆ ದರ್ಶನವನ್ನು ನೀಡಿದರು.
ಸಂಹೃಷ್ಟವದನೋ ರಾಜಾ ಸಭಾರ್ಯಃ ಕುಶಿಕೋ ಮುನಿಮ್ |
ಸಿದ್ಧಮನ್ನಮಿತಿ ಪ್ರಹ್ವೋ ನಿರ್ವಿಕಾರೋ ನ್ಯವೇದಯತ್ ॥14॥
ಪತ್ನೀ ಸಹಿತನಾದ ರಾಜನು ಸಂತೋಷಗೊಂಡ ಮುಖವುಳ್ಳವನಾಗಿ ಋಷಿಗಳನ್ನು ಕುರಿತು ವಿನಯದಿಂದ ಕೂಡಿ, ನಿರ್ವಿಕಾರನಾಗಿ, ಅನ್ನವು ಸಿದ್ಧವಾಗಿದೆ ಎಂದು ನಿವೇದಿಸಿದನು.
ಆನೀಯತಾಮಿತಿ ಮುನಿಸ್ತಂ ಚೋವಾಚ ನರಾಧಿಪಮ್ |
ರಾಜಾ ಚ ಸಮುಪಾಜಹ್ರೇ ತದನ್ನಂ ಸಹ ಭಾರ್ಯಯಾ ॥15॥
ಋಷಿಗಳು ರಾಜನನ್ನು ಕುರಿತು ತೆಗೆದುಕೊಂಡು ಬಾ ಎಂದು ಹೇಳಿದರು. ರಾಜನು ರಾಣಿಯ ಜೊತೆಯಲ್ಲಿ ಆ ಅನ್ನವನ್ನು ತೆಗೆದುಕೊಂಡು ಬಂದನು.
ಮಾಂಸಪ್ರಕಾರಾನ್ ವಿವಿಧಾನ್ ಶಾಕಾನಿ ವಿವಿಧಾನಿ ಚ |
ವೇಸವಾರವಿಕಾರಾಂಶ್ಚ ಪಾನಕಾನಿ ಲಘೂನಿ ಚ ॥16॥
ರಸಾಲಾಪೂಪಕಾಂಶ್ಚಿತ್ರಾನ್ ಮೋದಕಾನಥ ಷಾಡವಾನ್ |
ರಸಾನ್ನಾನಾಪ್ರಕಾರಾಂಶ್ಚ ವನ್ಯಂ ಚ ಮುನಿಭೋಜನಮ್ ॥17॥
ಫಲಾನಿ ಚ ವಿಚಿತ್ರಾಣಿ ತಥಾ ಭೋಜ್ಯಾನಿ ಭೂರಿಶಃ |
ಬದರೇಂಗುದಕಾಶ್ಮರ್ಯಭಲ್ಲಾತಕವಟಾನಿ ಚ ॥18॥
ಗೃಹಸ್ಥಾನಾಂ ಚ ಯದ್ಭೋಜ್ಯಂ ಯಚ್ಚಾಪಿ ವನವಾಸಿನಾಮ್ |
ಸರ್ವಮಾಹಾರಯಾಮಾಸ ರಾಜಾ ಶಾಪಭಯಾನ್ಮುನೇಃ ॥19॥
ಅನೇಕ ವಿಧವಾದ ಮಾಂಸಗಳು ಮತ್ತು ತರಕಾರಿಗಳು, ಪಾನಕಗಳು, ಅಪೂಪಗಳು, ವಿಚಿತ್ರವಾದ ಕಡುಬುಗಳು, ಷಾಡವಗಳು, ನಾನಾ ಪ್ರಕಾರವಾದ ರಸಗಳು, ವನದಲ್ಲಿ ದೊರೆಯುವ ಮುನಿಭೋಜನಕ್ಕೆ ಅರ್ಹವಾದ ವಸ್ತುಗಳು, ವಿಚಿತ್ರವಾದ ಫಲಗಳು, ಅನೇಕ ಭೋಜ್ಯಗಳು, ಬದರ, ಇಂಗುದ, ಕಾಶ್ಮೀರ್ಯ, ಭಲ್ಲಾತಕ, ವಟ ಫಲಗಳು, ಗೃಹಸ್ಥರಿಗೆ ಯೋಗ್ಯವಾದ ಭೋಜ್ಯ ಪದಾರ್ಥಗಳು, ವಾನಪ್ರಸ್ಥರಿಗೆ ಯೋಗ್ಯವಾದ ಪದಾರ್ಥಗಳು ಎಲ್ಲವನ್ನೂ ರಾಜನು ಮುನಿಗಳು ಕೊಡಬಹುದಾದ ಶಾಪಕ್ಕೆ ಹೆದರಿ ತೆಗೆದುಕೊಂಡು ಬಂದನು.
ಅಥ ಸರ್ವಮುಪನ್ಯಸ್ತಮಗ್ರತಶ್ಚ್ಯವನಸ್ಯ ತತ್ |
ತತಃ ಸರ್ವಂ ಸಮಾನೀಯ ತಚ್ಚ ಶಯ್ಯಾಸನಂ ಮುನಿಃ ॥20॥

ವಸ್ತ್ರೈಃ ಶುಭ್ರೈರವಚ್ಛಾದ್ಯ ಭೋಜನೋಪಸ್ಕರೈಃ ಸಹ |
ಸರ್ವಮಾದೀಪಯಾಮಾಸ ಚ್ಯವನೋ ಭೃಗುನಂದನಃ ॥21॥
ಅವೆಲ್ಲವೂ ಚ್ಯವನರ ಮುಂದೆ ಇಡಲ್ಪಟ್ಟಿತು. ಚ್ಯವನರು ಅದೆಲ್ಲವನ್ನು ಇಟ್ಟು ಅದರ ಜೊತೆಯಲ್ಲಿ ಶಯ್ಯಾಸನವನ್ನು ಇಟ್ಟು ಭೋಜನ ಉಪಕರಣಗಳು ಮತ್ತು ಭೋಜನ ಪದಾರ್ಥಗಳನ್ನು ಶುಭ್ರವಸ್ತ್ರದಿಂದ ಮುಚ್ಚಿ ಎಲ್ಲದಕ್ಕೂ ಅಗ್ನಿಯನ್ನು ಹೊತ್ತಿಸಿದರು.
ನ ಚ ತೌ ಚಕ್ರತುಃ ಕೋಪಂ ದಂಪತೀ ಸುಮಹಾವ್ರತೌ |
ತಯೋಃ ಸಂಪ್ರೇಕ್ಷತೋರೇವ ಪುನರಂತರ್ಹಿತೋಽಭವತ್ ॥22॥
ಮಹಾವ್ರತವನ್ನು ಧರಿಸಿದ ಆ ದಂಪತಿಗಳು ಕೋಪವನ್ನು ಮಾಡಲಿಲ್ಲ. ಚ್ಯವನರು ಅವರು ನೋಡುತ್ತಿರುವಂತೆಯೆ ಪುನಃ ಅಂತರ್ಧಾನವನ್ನು ಹೊಂದಿದರು.
ತತ್ರೈವ ಚ ಸ ರಾಜರ್ಷಿಸ್ತಸ್ಥೌ ತಾಂ ರಜನೀಂ ತದಾ |
ಸಭಾರ್ಯೋ ವಾಗ್ಯತಃ ಶ್ರೀಮಾನ್ನ ಚ ತಂ ಕೋಪ ಆವಿಶತ್ ॥23॥
ಸಂಪದ್ಯುಕ್ತನಾದ ರಾಜನು ಆ ರಾತ್ರಿಯಲ್ಲಿ ತನ್ನ ಪತ್ನಿಯ ಜೊತೆಯಲ್ಲಿ ಮೌನದಿಂದ ಅಲ್ಲಿಯೇ ನಿಂತನು. ಅವನಿಗೆ ಕೋಪವುಂಟಾಗಲಿಲ್ಲ.
ನಿತ್ಯಂ ಸಂಸ್ಕೃತಮನ್ನಂ ತು ವಿವಿಧಂ ರಾಜವೇಶ್ಮನಿ |
ಶಯನಾನಿ ಚ ಮುಖ್ಯಾನಿ ಪರಿಷೇಕಾಶ್ಚ ಪುಷ್ಕಲಾಃ ॥24॥
ವಸ್ತ್ರಂ ಚ ವಿವಿಧಾಕಾರಮಭವತ್ ಸಮುಪಾರ್ಜಿತಮ್ |
ನ ಶಶಾಕ ತತೋ ದ್ರಷ್ಟುಮಂತರಂ ಚ್ಯವನಸ್ತದಾ ॥25॥
ಹೀಗೆ ರಾಜನ ಅರಮನೆಯಲ್ಲಿ ನಿತ್ಯವೂ ಚೆನ್ನಾಗಿ ಸಿದ್ಧಪಡಿಸಿದ ವಿವಿಧವಾದ ಅನ್ನಗಳು, ಶ್ರೇಷ್ಠವಾದ ಶಯನಗಳು, ಪುಷ್ಕಲವಾದ ಪದಾರ್ಥಗಳು, ವಿವಿಧಾಕಾರವಾದ ವಸ್ತುಗಳು ಎಲ್ಲವೂ ತರಲ್ಪಡುತ್ತಿದ್ದವು. ಚ್ಯವನರು ರಾಜನ ಸೇವೆಯಲ್ಲಿ ಸಣ್ಣ ಛಿದ್ರವನ್ನೂ ಕಾಣಲು ಸಾಧ್ಯವಾಗಲಿಲ್ಲ.
ಪುನರೇವ ಚ ವಿಪ್ರರ್ಷಿಃ ಪ್ರೋವಾಚ ಕುಶಿಕಂ ನೃಪಮ್ |
ಸಭಾರ್ಯೋ ಮಾಂ ರಥೇನಾಶು ವಹ ಯತ್ರ ಬ್ರವೀಮ್ಯಹಮ್ ॥26॥
ಆಗ ವಿಪರ್ಷಿಗಳಾದ ಚ್ಯವನರು ಪುನಃ ಕುಶಿಕನನ್ನು ಕುರಿತು ನನ್ನನ್ನು ರಥದಲ್ಲಿ ಕುಳ್ಳಿರಿಸಿ ನಾನು ಹೇಳಿದ ಸ್ಥಳಕ್ಕೆ ನಿನ್ನ ಪತ್ನಿಯ ಜೊತೆಯಲ್ಲಿ ಶೀಘ್ರವಾಗಿ ರಥವನ್ನು ಎಳೆದುಕೊಂಡು ಹೋಗು ಎಂದು ಹೇಳಿದರು.
ತಥೇತಿ ಚ ಪ್ರಾಹ ನೃಪೋ ನಿರ್ವಿಶಂಕಸ್ತಪೋಧನಮ್ |
ಕ್ರೀಡಾರಥೋಽಸ್ತು ಭಗವನ್ನುತ ಸಾಂಗ್ರಾಮಿಕೋ ರಥಃ ॥27॥
ರಾಜನು ಯಾವ ಶಂಕೆಯೂ ಇಲ್ಲದೆ ಆ ತಪೋಧನರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ, ನಿಮಗೆ ಕ್ರೀಡಾರಥವಾಗಬಹುದೋ ಅಥವಾ ಯುದ್ಧ ರಥವಾಗಬಹುದೋ ಎಂದು ಕೇಳಿದನು.
ಇತ್ಯುಕ್ತಃ ಸ ಮುನಿಸ್ತೇನ ರಾಜ್ಞಾ ಹೃಷ್ಟೇನ ತದ್ವಚಃ |
ಚ್ಯವನಃ ಪ್ರತ್ಯುವಾಚೇದಂ ಹೃಷ್ಟಃ ಪರಪುರಂಜಯಮ್ ॥28॥
ಸಂತೋಷಗೊಂಡ ಆ ರಾಜನಿಂದ ಹೀಗೆ ಕೇಳಲ್ಪಟ್ಟ ಆ ಚ್ಯವನ ಋಷಿಗಳು ಸಂತೋಷಗೊಂಡು ಪರಪುರಂಜಯನಾದ ಅವನನ್ನು ಕುರಿತು ಹೀಗೆ ಹೇಳಿದರು.
ಸಜ್ಜೀಕುರು ರಥಂ ಕ್ಷಿಪ್ರಂ ಯಸ್ತೇ ಸಾಂಗ್ರಾಮಿಕೋ ಮತಃ |
ಸಾಯುಧಃ ಸಪತಾಕಶ್ಚ ಸಶಕ್ತಿಃ ಕಣಯಷ್ಟಿಮಾನ್ ॥29॥
ಕಿಂಕಿಣೀಶತನಿರ್ಘೋಷೋ ಯುಕ್ತಸ್ತೋಮರಕಂಪನೈಃ |
ಗದಾಖಡ್ಗನಿಬದ್ಧಶ್ಚ ಪರಮೇಷುಶತಾನ್ವಿತಃ ॥30॥
ನಿನ್ನ ಯುದ್ಧದ ರಥವಿದೆಯಷ್ಟೆ? ಅದನ್ನು ಆಯುಧಗಳು, ಪತಾಕೆಗಳು, ಶಕ್ತಿಗಳು, ಕಣಯಷ್ಟಿಗಳು ಇವುಗಳಿಂದಲೂ, ತೋಮರ, ಕಂಪನ, ಗದೆ, ಖಡ್ಗ, ಶ್ರೇಷ್ಠವಾದ ನೂರಾರು ಬಾಣಗಳು ಇವುಗಳಿಂದಲೂ ತುಂಬಿ ನೂರು ಕಿಂಕಿಣಿ ನಾದದಿಂದ ಕೂಡಿರುವಂತೆ ಮಾಡಿ ಶೀಘ್ರವಾಗಿ ಸಿದ್ಧಪಡಿಸು ಎಂದು ಹೇಳಿದರು.
ತತಃ ಸ ತಂ ತಥೇತ್ಯುಕ್ತ್ವಾ ಕಲ್ಪಯಿತ್ವಾ ಮಹಾರಥಮ್ |
ಭಾರ್ಯಾಂ ವಾಮೇ ಧುರಿ ತದಾ ಚಾತ್ಮಾನಂ ದಕ್ಷಿಣೇ ತಥಾ ॥31॥
ತ್ರಿದಂಷ್ಟ್ರಂ ವಜ್ರಸೂಚ್ಯಗ್ರಂ ಪ್ರತೋದಂ ತತ್ರ ಚಾದಧತ್ |
ಸರ್ವಮೇತತ್ತತೋ ದತ್ತ್ವಾ ನೃಪೋ ವಾಕ್ಯಮಥಾಬ್ರವೀತ್ ॥32॥
ಭಗವನ್ ಕ್ವ ರಥೋ ಯಾತು ಬ್ರವೀತು ಭೃಗುನಂದನಃ |
ಯತ್ರ ವಕ್ಷ್ಯಸಿ ವಿಪ್ರರ್ಷೇ ತತ್ರ ಯಾಸ್ಯತಿ ತೇ ರಥಃ ॥33॥
ಆಗ ರಾಜನು ಹಾಗೆಯೇ ಆಗಲಿ ಎಂದು ಹೇಳಿ ಅಂತಹ ದೊಡ್ಡ ರಥವನ್ನು ಸಿದ್ಧಪಡಿಸಿ ರಥದ ಎಡಭಾಗದಲ್ಲಿ ತನ್ನ ಪತ್ನಿಯನ್ನು ಸಂಯೋಜಿಸಿ ತಾನೂ ದಕ್ಷಿಣ ಭಾಗದಲ್ಲಿ ರಥದ ನೊಗವನ್ನು ಹೊತ್ತು ಮೂರು ತುದಿಗಳಿರುವ ವಜ್ರದಿಂದ ಮಾಡಿದ ಸೂಜಿಗಳಂತೆ ತೀಕ್ಷ್ಣವಾಗಿರುವ ಚಾವಟಿಯನ್ನು ಅವರ ಕೈಯಲ್ಲಿ ನೀಡಿದನು. ಇದೆಲ್ಲವನ್ನೂ ಕೊಟ್ಟು ರಾಜನು ಅವರನ್ನು ಕುರಿತು- `ಪೂಜ್ಯರೇ, ಭೃಗುನಂದನರಾದ ತಾವು ರಥವು ಎಲ್ಲಿಗೆ ಹೋಗಬೇಕೆಂದು ಹೇಳಬೇಕು. ಎಲೈ ವಿಪ್ರರ್ಷಿಗಳೇ, ನೀವು ಎಲ್ಲಿಗೆ ಹೋಗಬೇಕೆಂದು ಹೇಳುತ್ತೀರೋ, ಅಲ್ಲಿಗೆ ತಮ್ಮ ರಥವು ಹೋಗುತ್ತದೆ' ಎಂದು ಹೇಳಿದನು.
ಏವಮುಕ್ತಸ್ತು ಭಗವಾನ್ ಪ್ರತ್ಯುವಾಚಾಥ ತಂ ನೃಪಮ್ |

ಇತಃಪ್ರಭೃತಿ ಯಾತವ್ಯಂ ಪದಕಂ ಪದಕಂ ಶನೈಃ ॥34॥
ಹೀಗೆ ಹೇಳಲ್ಪಟ್ಟ ಪೂಜ್ಯರಾದ ಚ್ಯವನರು ಆ ರಾಜನನ್ನು ಕುರಿತು ಇಲ್ಲಿಂದ ಹೆಜ್ಜೆ ಹೆಜ್ಜೆಯ ಕ್ರಮದಿಂದ ರಥವು ನಿಧಾನವಾಗಿ ಚಲಿಸಬೇಕು.
ಶ್ರಮೋ ಮಮ ಯಥಾ ನ ಸ್ಯಾತ್ ತಥಾ ಮೇ ಛಂದಚಾರಿಣೌ |
ಸುಖಂ ಚೈವಾಸ್ಮಿ ವೋಢವ್ಯೋ ಜನಃ ಸರ್ವಶ್ಚ ಪಶ್ಯತು ॥35॥
ನನ್ನ ಮನಸ್ಸಿನ ಅಭಿಪ್ರಾಯಕ್ಕೆ ಅನುಗುಣವಾಗಿ ನನಗೆ ಶ್ರಮವಾಗದಂತೆ ರಥವನ್ನು ಸುಖವಾಗಿ ಎಳೆದುಕೊಂಡು ಹೋಗಬೇಕು. ಎಲ್ಲ ಜನರು ನೋಡಲಿ.
ನೋತ್ಸಾರ್ಯಃ ಪಥಿಕಃ ಕಶ್ಚಿತ್ ತೇಭ್ಯೋ ದಾಸ್ಯಾಮ್ಯಹಂ ವಸು |
ಬ್ರಾಹ್ಮಣೇಭ್ಯಶ್ಚ ಯೇ ಕಾಮಾನರ್ಥಯಿಷ್ಯಂತಿ ಮಾಂ ಪಥಿ ॥36॥
ದಾರಿಯಲ್ಲಿರುವ ಯಾರನ್ನೂ ತಳ್ಳಬಾರದು. ಅವರಿಗೆ ನಾನು ಧನ-ದಾನವನ್ನು ಮಾಡಬೇಕಾಗಿದೆ. ನನ್ನನ್ನು ಬೇಡುವ ಬ್ರಾಹ್ಮಣರಿಗೂ ಸಹ ಮಾರ್ಗದಲ್ಲಿ ಬೇಡಿದುದನ್ನು ಕೊಡಬೇಕಾಗಿದೆ.
ಸರ್ವಂ ದಾಸ್ಯಾಮ್ಯಶೇಷೇಣ ಧನಂ ರತ್ನಾನಿ ಚೈವ ಹಿ |
ಕ್ರಿಯತಾಂ ನಿಖಿಲೇನೈತನ್ಮಾ ವಿಚಾರಯ ಪಾರ್ಥಿವ ॥37॥
ನಾನು ಧನವನ್ನು ಮತ್ತು ರತ್ನಗಳನ್ನು ಸಂಪೂರ್ಣವಾಗಿ ಕೊಡುತ್ತೇನೆ. ಎಲೈ ರಾಜನೇ, ಅದಕ್ಕೆ ಬೇಕಾದ ಎಲ್ಲ ವ್ಯವಸ್ಥೆಯನ್ನೂ ಮಾಡು. ಏನನ್ನೂ ಶಂಕಿಸಬೇಡ' ಎಂದು ಹೇಳಿದರು.
ತಸ್ಯ ತದ್ವಚನಂ ಶ್ರುತ್ವಾ ರಾಜಾ ಭೃತ್ಯಾನಥಾಬ್ರವೀತ್ |
ಯದ್ಯದ್ ಬ್ರೂಯಾನ್ಮುನಿಸ್ತತ್ತತ್ಸರ್ವಂ ದೇಯಮಶಂಕಿತೈಃ ॥38॥
ಅವರ ಆ ಮಾತನ್ನು ಕೇಳಿ ರಾಜನು ಭೃತ್ಯರನ್ನು ಕುರಿತು ಋಷಿಗಳು ಏನೇನು ಹೇಳುತ್ತಾರೆಯೋ ಅವೆಲ್ಲವನ್ನೂ ನಿಶ್ಶಂಕೆಯಿಂದ ಕೊಡಿ ಎಂದು ಹೇಳಿದನು.
ತತೋ ರತ್ನಾನ್ಯನೇಕಾನಿ ಸ್ತ್ರಿಯೋ ಯುಗ್ಯಮಜಾವಿಕಮ್ |
ಕೃತಾಕೃತಂ ಚ ಕನಕಮ್ ಆದಾಯಾನುವ್ರಜಂತಿ ತಮ್ ॥39॥
ಆಗ ಅನೇಕ ರತ್ನಗಳನ್ನೂ, ಸ್ತ್ರೀಯರನ್ನೂ, ರಥಕ್ಕೆ ಹೂಡುವ ಕುದುರೆಗಳನ್ನೂ, ಆಡು-ಕುರಿಗಳನ್ನೂ, ಆಭರಣರೂಪವಾದ ಮತ್ತು ಆಭರಣವಾಗದಿದ್ದ ಚಿನ್ನವನ್ನೂ ತೆಗೆದುಕೊಂಡು ಅನೇಕರು ಅವನನ್ನು ಹಿಂಬಾಲಿಸಿದರು.
ಅನ್ವಗಚ್ಛಂತ ತಮೃಷಿಂ ರಾಜಾಮಾತ್ಯಾಶ್ಚ ಸರ್ವಶಃ |
ಹಾಹಾಭೂತಂ ಚ ತತ್ಸರ್ವಮಾಸೀನ್ನಗರಮಾರ್ತಿಮತ್ ॥40॥
ರಾಜನು ಮತ್ತು ಎಲ್ಲಾ ಅಮಾತ್ಯರು ಆ ಋಷಿಯನ್ನು ಹಿಂಬಾಲಿಸಿದರು. ಆ ನಗರವೆಲ್ಲವೂ ದುಃಖದಿಂದ ಕೂಡಿ ಹಾಹಾಕಾರವನ್ನು ಮಾಡಿತು.
ತೌ ತೀಕ್ಷ್ಣಾಗ್ರೇಣ ಸಹಸಾ ಪ್ರತೋದೇನ ಪ್ರಚೋದಿತೌ |
ಪೃಷ್ಠೇ ವಿದ್ಧೌ ಕಟೇ ಚೈವ ನಿರ್ವಿಕಾರೌ ತಮೂಹತುಃ ॥41॥
ಋಷಿಯು ಹರಿತವಾದ ತುದಿಯುಳ್ಳ ಚಾವಟಿಯಿಂದ ಅವರಿಗೆ ಬೆನ್ನಿನಲ್ಲಿಯೂ, ಕಟಿಯಲ್ಲಿಯೂ ಹೊಡೆದು ಅವರನ್ನು ಪ್ರಚೋದಿಸುತ್ತಿದ್ದನು. ರಾಜದಂಪತಿಗಳು ನಿರ್ವಿಕಾರವಾಗಿ ರಥವನ್ನು ಎಳೆದರು.
ವೇಪಮಾನೌ ನಿರಾಹಾರೌ ಪಂಚಾಶದ್ರಾತ್ರಕರ್ಶಿತೌ |
ಕಥಂಚಿದೂಹತುರ್ವೀರೌ ದಂಪತೀ ತಂ ರಥೋತ್ತಮಮ್ ॥42॥
ಐವತ್ತು ದಿನಗಳ ಕಾಲ ನಿರಾಹಾರರಾಗಿ ನಡುಗುತ್ತಾ ವೀರರಾದ ಆ ದಂಪತಿಗಳು ಆ ಶ್ರೇಷ್ಠವಾದ ರಥವನ್ನು ಹೇಗೋ ಮಾಡಿ ಎಳೆದರು.

ಬಹುಶೋ ಭೃಶವಿದ್ಧೌ ತೌ ಕ್ಷರಮಾಣೌ ಕ್ಷತೋದ್ಭವಮ್ |
ದದೃಶಾತೇ ಮಹಾರಾಜ ಪುಷ್ಪಿತಾವಿವ ಕಿಂಶುಕೌ ॥43॥
ಎಲೈ ಮಹಾರಾಜನೇ, ಅನೇಕ ಬಾರಿ ಬೆನ್ನಿನ ಮೇಲೆ ಚಾವಟಿ ಏಟನ್ನು ತಿಂದು ಉಂಟಾದ ಗಾಯದಿಂದ ರಕ್ತವನ್ನು ಸುರಿಸುತ್ತಾ ಹೂವರಳಿದ ಮುತ್ತುಗದ ಮರದಂತೆ ಅವರು ಕಾಣುತ್ತಿದ್ದರು.
ತೌ ದೃಷ್ಟ್ವಾ ಪೌರವರ್ಗಸ್ತು ಭೃಶಂ ಶೋಕಪರಾಯಣಃ |
ಅಭಿಶಾಪಭಯಾತ್ ತ್ರಸ್ತೋ ನ ಚ ಕಿಂಚಿದುವಾಚ ಹ ॥44॥
ಆ ದಂಪತಿಗಳನ್ನು ನೋಡಿದ ಪೌರವರ್ಗವು ಬಹಳ ಶೋಕದಿಂದ ಕೂಡಿದ್ದಾಯಿತು. ಋಷಿಗಳು ಕೊಡಬಹುದಾದ ಶಾಪದ ಭಯದಿಂದ ಯಾರೂ ಮಾತನಾಡಲಿಲ್ಲ.
ದ್ವಂದ್ವಶಶ್ಚಾಬ್ರುವನ್ಸರ್ವೇ ಪಶ್ಯಧ್ವಂ ತಪಸೋ ಬಲಮ್ |
ಕ್ರುದ್ಧಾ ಅಪಿ ಮುನಿಶ್ರೇಷ್ಠಂ ವೀಕ್ಷಿತುಂ ನೈವ ಶಕ್ನುಮಃ ॥45॥
ಅಹೋ ಭಗವತೋ ವೀರ್ಯಂ ಮಹರ್ಷೇರ್ಭಾವಿತಾತ್ಮನಃ |
ರಾಜ್ಞಶ್ಚಾಪಿ ಸಭಾರ್ಯಸ್ಯ ಧೈರ್ಯಂ ಪಶ್ಯತ ಯಾದೃಶಮ್ ॥46॥
ಇಬ್ಬಿಬ್ಬರು ಪೌರರು ಜೊತೆಯಾಗಿ ಕೂಡಿ ಎಲ್ಲರೂ ತಪಸ್ಸಿನ ಬಲವನ್ನು ನೋಡಿ, ನಮಗೆ ಕೋಪವುಂಟಾಗಿದ್ದರೂ ಆ ಮುನಿಶ್ರೇಷ್ಠರನ್ನು ನೋಡಲು ಸಾಧ್ಯವಾಗುತ್ತಿಲ್ಲ. ಪೂಜ್ಯರೂ ಇಂದ್ರಿಯಜಯವುಳ್ಳವರೂ ಆದ ಮಹರ್ಷಿಗಳ ಸಾಮರ್ಥ್ಯವನ್ನು ನೋಡಿ. ಪತ್ನೀ ಸಹಿತನಾದ ರಾಜನ ಧೈರ್ಯವು ಎಂತಹದು ಎಂದು ನೋಡಿ (ಎಂದು ಮಾತನಾಡಿದರು).

ಶ್ರಾಂತಾವಪಿ ಹಿ ಕೃಚ್ಛ್ರೇಣ ರಥಮೇತಂ ಸಮೂಹತುಃ |
ನ ಚೈತಯೋರ್ವಿಕಾರಂ ವೈ ದದರ್ಶ ಭೃಗುನಂದನಃ ॥47॥
ಅವರು ದಣಿದಿದ್ದರೂ ಆ ರಥವನ್ನು ಬಹಳ ಕಷ್ಟಪಟ್ಟು ಎಳೆದರು. ಭೃಗುನಂದನರಾದ ಚ್ಯವನರು ಅವರಲ್ಲಿ ಯಾವ ವಿಕಾರವನ್ನೂ ಕಾಣಲಿಲ್ಲ.
ತತಃ ಸ ನಿರ್ವಿಕಾರೌ ತೌ ದೃಷ್ಟ್ವಾ ಭೃಗುಕುಲೋದ್ವಹಃ |
ವಸು ವಿಶ್ರಾಣಯಾಮಾಸ ಯಥಾ ವೈಶ್ರವಣಸ್ತಥಾ ॥48॥
ಅನಂತರ ಅವರು ನಿರ್ವಿಕಾರರಾಗಿರುವುದನ್ನು ನೋಡಿದ ಭೃಗುಕುಲಶ್ರೇಷ್ಠರಾದ ಚ್ಯವನರು ಕುಬೇರನಂತೆ ಧನವನ್ನು ದಾನ ಮಾಡಿದರು.
ತತ್ರಾಪಿ ರಾಜಾ ಪ್ರೀತಾತ್ಮಾ ಯಥಾಜ್ಞಪ್ತಮಥಾಕರೋತ್ |
ತತೋಽಸ್ಯ ಭಗವಾನ್ ಪ್ರೀತೋ ಬಭೂವ ಮುನಿಸತ್ತಮಃ ॥49॥
ಅಲ್ಲಿಯೂ ಸಹ ರಾಜನು ಸಂತೋಷದಿಂದಲೇ ಕೂಡಿ ಅವರು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು. ಆಗ ಆ ಮುನಿಶ್ರೇಷ್ಠರಾದ ಪೂಜ್ಯರು ರಾಜನ ಮೇಲೆ ಪ್ರಸನ್ನರಾದರು.
ಅವತೀರ್ಯ ರಥಶ್ರೇಷ್ಠಾದ್ ದಂಪತೀ ತೌ ಮುಮೋಚ ಹ |
ವಿಮೋಚ್ಯ ಚೈತೌ ವಿಧಿವತ್ ತತೋ ವಾಕ್ಯಮುವಾಚ ಹ ॥50॥
ಸ್ನಿಗ್ಧಗಂಭೀರಯಾ ವಾಚಾ ಭಾರ್ಗವಃ ಸುಪ್ರಸನ್ನಯಾ |
ದದಾನಿ ವಾಂ ವರಂ ಶ್ರೇಷ್ಠಂ ತದ್ ಬ್ರೂತಾಮಿತಿ ಭಾರತ ॥51॥
ಅವರು ಆ ಶ್ರೇಷ್ಠವಾದ ರಥದಿಂದ ಇಳಿದು ದಂಪತಿಗಳನ್ನು ನೊಗದಿಂದ ಬಿಡಿಸಿದರು. ಅವರನ್ನು ನ್ಯಾಯದಂತೆ ರಥದಿಂದ ಬಿಡಿಸಿ ಅನಂತರ ಅವರನ್ನು ಕುರಿತು ಸ್ನಿಗ್ಧಗಂಭೀರವಾದ, ಅತ್ಯಂತ ಪ್ರಸನ್ನವಾದ ತಮ್ಮ ವಾಣಿಯಿಂದ ನಿಮಗೆ ಶ್ರೇಷ್ಠವಾದ ವರವನ್ನು ಕೊಡುವೆನು ಎಂದು ಹೇಳಿದರು.
ಸುಕುಮಾರೌ ಚ ತೌ ವಿದ್ವಾನ್ ಕರಾಭ್ಯಾಂ ಮುನಿಸತ್ತಮಃ |
ಪಸ್ಪರ್ಶಾಮೃತಕಲ್ಪಾಭ್ಯಾಂ ಸ್ನೇಹಾದ್ ಭರತಸತ್ತಮ ॥52॥
ಎಲೈ ಭರತಶ್ರೇಷ್ಠನೇ, ಅವರಿಬ್ಬರೂ ಸುಕುಮಾರಶರೀರರೆಂದು ತಿಳಿದ ಆ ಮುನಿಶ್ರೇಷ್ಠರು ತಮ್ಮ ಎರಡು ಕೈಗಳಿಂದಲೂ ಅವರಿಬ್ಬರನ್ನು ಸ್ನೇಹದಿಂದ ಸ್ಪರ್ಶಿಸಿದರು.
ಅಥಾಬ್ರವೀನ್ನೃಪೋ ವಾಕ್ಯಂ ಶ್ರಮೋ ನಾಸ್ತ್ಯಾವಯೋರಿಹ |
ವಿಶ್ರಾಂತೌ ಸ್ವಃ ಪ್ರಭಾವಾತ್ ತೇ ಧ್ಯಾನೇನೈವೇತಿ ಭಾರ್ಗವ ॥53॥
ಆಗ ರಾಜನು ಋಷಿಗಳನ್ನು ಕುರಿತು- `ಎಲೈ ಭಾರ್ಗವರೇ, ನಮಗೆ ಈಗ ಯಾವ ಶ್ರಮವೂ ಇಲ್ಲ. ನಿಮ್ಮ ಸಾಮರ್ಥ್ಯದಿಂದ ಮತ್ತು ಧ್ಯಾನದಿಂದ (ನಮಗೆ ಶುಭವನ್ನು ಬಯಸುವುದರಿಂದ) ನಾವು ಶ್ರಮರಹಿತರಾಗಿದ್ದೇವೆ' ಎಂದು ಹೇಳಿದನು.
ಅಥ ತೌ ಭಗವಾನ್ ಪ್ರಾಹ ಪ್ರಹೃಷ್ಟಶ್ಚ್ಯವನಸ್ತದಾ |
ನ ವೃಥಾ ವ್ಯಾಹೃತಂ ಪೂರ್ವಂ ಯನ್ಮಯಾ ತದ್ಭವಿಷ್ಯತಿ ॥54॥
ರಮಣೀಯಃ ಸಮುದ್ದೇಶೋ ಗಂಗಾತೀರಮಿದಂ ಶುಭಮ್ |
ಕಂಚಿತ್ಕಾಲಂ ವ್ರತಪರೋ ನಿವತ್ಸ್ಯಾಮೀಹ ಪಾರ್ಥಿವ ॥55॥
ಆಗ ಪೂಜ್ಯರಾದ ಚ್ಯವನರು ಸಂತೋಷದಿಂದ ಕೂಡಿದವರಾಗಿ ಅವರನ್ನು ಕುರಿತು- `ನಾನು ಆಡಿದ ಮಾತು ಎಂದೂ ವ್ಯರ್ಥವಾಗುವುದಿಲ್ಲ. ಇದು ರಮಣೀಯವಾದ, ಪವಿತ್ರವಾದ ಗಂಗಾತೀರ. ಎಲೈ ರಾಜನೇ, ಇನ್ನು ಕೆಲವು ಕಾಲದವರೆಗೆ ಇಲ್ಲಿ ವ್ರತನಿಷ್ಠನಾಗಿ ವಾಸ ಮಾಡುವೆನು ಎಂದು ಹೇಳಿದರು.
ಗಮ್ಯತಾಂ ಸ್ವಪುರಂ ಪುತ್ರ ವಿಶ್ರಾಂತಃ ಪುನರೇಷ್ಯಸಿ |
ಇಹಸ್ಥಂ ಮಾಂ ಸಭಾರ್ಯಸ್ತ್ವಂ ದ್ರಷ್ಟಾಸಿ ಶ್ವೋ ನರಾಧಿಪ ॥56॥
ಎಲೈ ಪುತ್ರನೇ, ನಿನ್ನ ಪಟ್ಟಣಕ್ಕೆ ಹಿಂದಿರುಗು. ನೀನು ವಿಶ್ರಾಂತಿಯನ್ನು ಪಡೆದು ಪುನಃ ಇಲ್ಲಿಗೆ ಬರುವಿ. ಎಲೈ ರಾಜನೇ, ನಾಳೆಯ ದಿವಸ ನೀನು ನಿನ್ನ ಪತ್ನಿಯ ಜೊತೆಯಲ್ಲಿ ಇಲ್ಲಿಗೆ ಬಂದು ನನ್ನನ್ನು ನೋಡುವಿ.
ನ ಚ ಮನ್ಯುಸ್ತ್ವಯಾ ಕಾರ್ಯಃ ಶ್ರೇಯಸ್ತೇ ಸಮುಪಸ್ಥಿತಮ್ |
ಯತ್ಕಾಂಕ್ಷಿತಂ ಹೃದಿಸ್ಥಂ ತೇ ತತ್ಸರ್ವಂ ಸಂಭವಿಷ್ಯತಿ ॥57॥
ನೀನು ಕೋಪವನ್ನು ಮಾಡಬೇಡ. ನಿನಗೆ ಶ್ರೇಯಸ್ಸು ಉಂಟಾಗಲಿದೆ. ನಿನ್ನ ಮನಸ್ಸಿನಲ್ಲಿ ಬಯಸಿದುದೆಲ್ಲಾ ನಿನಗೆ ಸಿದ್ಧಿಸುತ್ತದೆ' ಎಂದು ಹೇಳಿದರು.
ಇತ್ಯೇವಮುಕ್ತಃ ಕುಶಿಕಃ ಪ್ರಹೃಷ್ಟೇನಾಂತರಾತ್ಮನಾ |
ಪ್ರೋವಾಚ ಮುನಿಶಾರ್ದೂಲಮಿದಂ ವಚನಮರ್ಥವತ್ ॥58॥
ಹೀಗೆ ಹೇಳಲ್ಪಟ್ಟ ಕುಶಿಕನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಆ ಮುನಿಶ್ರೇಷ್ಠರನ್ನು ಕುರಿತು ಅರ್ಥಭರಿತವಾದ ಈ ಮಾತನ್ನು ಆಡಿದನು.
ಕುಶಿಕಃ
ನ ಮೇ ಮನ್ಯುರ್ಮಹಾಭಾಗ ಪೂತೋಽಸ್ಮಿ ಭಗವಂಸ್ತ್ವಯಾ |
ನ ಮೇ ಮನ್ಯುರ್ಧೂತಪಾಪ್ಮಾ ತಾರಿತಃ ಸ್ವಕುಲೇನ ಮೇ ॥59॥
ಸಂವೃತ್ತೌ ಯೌವನಸ್ಥೌ ಸ್ವೋ ವಪುಷ್ಮಂತೌ ಬಲಾನ್ವಿತೌ ॥60॥

ಕುಶಿಕ ಮಹಾನುಭಾವರೇ, ನನಗೆ ಕೋಪವಿಲ್ಲ. ಪೂಜ್ಯರೇ, ನಾನು ಪವಿತ್ರನಾಗಿದ್ದೇನೆ. ಪಾಪಗಳನ್ನು ಕಳೆದುಕೊಂಡಿದ್ದೇನೆ. ನನ್ನ ಕುಲವು ನಿಮ್ಮಿಂದ ಉದ್ಧರಿಸಲ್ಪಟ್ಟಿದೆ. ನಾವು ಯೌವನಸ್ಥರೂ, ಪೂರ್ಣ ಆರೋಗ್ಯವಂತರೂ, ಒಳ್ಳೆಯ ಶರೀರ ಮತ್ತು ಬಲವುಳ್ಳವರೂ ಆಗಿದ್ದೇವೆ.
ಪ್ರತೋದೇನ ವ್ರಣಾ ಯೇ ಮೇ ಸಭಾರ್ಯಸ್ಯ ಕೃತಾಸ್ತ್ವಯಾ |
ತಾನ್ನ ಪಶ್ಯಾಮಿ ಗಾತ್ರೇಷು ಸ್ವಸ್ಥೋಽಸ್ಮಿ ಸಹ ಭಾರ್ಯಯಾ ||61||
ನೀವು ಪತ್ನೀ ಸಹಿತನಾದ ನನಗೆ ಚಾವಟಿಯಿಂದ ಹೊಡೆದ ವ್ರಣಗಳು ಈಗ ಶರೀರದಲ್ಲಿ ಕಾಣಿಸುತ್ತಿಲ್ಲ. ನಾನು ಪತ್ನಿಯಿಂದ ಒಡಗೂಡಿ ಸುಖವಾಗಿದ್ದೇನೆ.
ಇಮಾಂ ಚ ದೇವೀಂ ಪಶ್ಯಾಮಿ ಮುನೇ ದಿವ್ಯಾಪ್ಸರೋಪಮಾಮ್ |
ಶ್ರಿಯಾ ಪರಮಯಾ ಯುಕ್ತಾಂ ಯಥಾದೃಷ್ಟಾ ಮಯಾ ಪುರಾ ||62||
ಎಲೈ ಋಷಿಗಳೇ, ಈ ನನ್ನ ರಾಣಿಯು ದಿವ್ಯ ಅಪ್ಸರೆಯಂತೆ ಇರುವುದನ್ನು ನೋಡುತ್ತಿದ್ದೇನೆ. ನಾನು ಹಿಂದೆ ನೋಡಿದಂತೆ ಅವಳು ಶ್ರೇಷ್ಠವಾದ ಕಾಂತಿಯಿಂದ ಕೂಡಿದವಳಾಗಿದ್ದಾಳೆ.
ತವ ಪ್ರಸಾದಾತ್ಸಂವೃತ್ತಮಿದಂ ಸರ್ವಂ ಮಹಾಮುನೇ |
ನೈತಚ್ಚಿತ್ರಂ ತು ಭಗವಂಸ್ತ್ವಯಿ ಸತ್ಯಪರಾಕ್ರಮ ||63||
ಎಲೈ ಮಹರ್ಷಿಗಳೇ, ಇವೆಲ್ಲವೂ ನಿಮ್ಮ ಅನುಗ್ರಹದಿಂದ ಉಂಟಾದುದು. ಪೂಜ್ಯರೇ, ಸತ್ಯಪರಾಕ್ರಮವುಳ್ಳವರೇ ನಿಮ್ಮಲ್ಲಿ ಇದು ಯಾವುದೂ ಆಶ್ಚರ್ಯಕರವಲ್ಲ' ಎಂದು ಹೇಳಿದನು.
ಭೀಷ್ಮಃ
ಇತ್ಯುಕ್ತಃ ಪ್ರತ್ಯುವಾಚೇದಂ ಚ್ಯವನಃ ಕುಶಿಕಂ ತದಾ |
ಆಗಚ್ಛೇಥಾಃ ಸಭಾರ್ಯಶ್ಚ ತ್ವಮಿಹೇತಿ ನರಾಧಿಪ ||64||
ಭೀಷ್ಮ ರಾಜನು ಹೀಗೆ ಹೇಳಿದಾಗ ಚ್ಯವನರು ಅವನನ್ನು ಕುರಿತು- `ಎಲೈ ರಾಜನೇ, ನಾಳೆಯ ದಿವಸ ನೀನು ನಿನ್ನ ಪತ್ನಿಯ ಜೊತೆಯಲ್ಲಿ ಬಾ' ಎಂದು ಹೇಳಿದರು.
ಇತ್ಯುಕ್ತಃ ಸಮನುಜ್ಞಾತೋ ರಾಜರ್ಷಿರಭಿವಾದ್ಯ ತಮ್ |
ಪ್ರಯಯೌ ವಪುಷಾ ಯುಕ್ತೋ ನಗರಂ ದೇವರಾಜವತ್ ||65||
ಹೀಗೆ ಹೇಳಿ ಅವರ ಅನುಮತಿಯನ್ನು ಪಡೆದ ರಾಜರ್ಷಿಯಾದ ಕುಶಿಕನು ಅವರಿಗೆ ನಮಸ್ಕಾರವನ್ನು ಮಾಡಿ ಬೆಳಗುತ್ತಿದ್ದಂತಹ ತನ್ನ ಶರೀರದಿಂದ ಯುಕ್ತನಾಗಿ ಇಂದ್ರನಂತೆ ನಗರವನ್ನು ಪ್ರವೇಶಿಸಿದನು.
ತತ ಏನಮುಪಾಜಗ್ಮುರಮಾತ್ಯಾಃ ಸಪುರೋಹಿತಾಃ |
ಬಲಸ್ಥಾ ಗಣಿಕಾಯುಕ್ತಾಃ ಸರ್ವಾಃ ಪ್ರಕೃತಯಸ್ತಥಾ ||66||
ಆಗ ಅವನ ಅಮಾತ್ಯರೂ, ಪುರೋಹಿತರೂ, ಸೈನಿಕರೂ, ಗಣಿಕೆಯರೂ, ಎಲ್ಲಾ ಪ್ರಜೆಗಳೂ ಅವನ ಸಮೀಪಕ್ಕೆ ಬಂದರು.
ತೈರ್ವೃತಃ ಕುಶಿಕೋ ರಾಜಾ ಶ್ರಿಯಾ ಪರಮಯಾ ಜ್ವಲನ್ |
ಪ್ರವಿವೇಶ ಪುರಂ ಹೃಷ್ಟಃ ಪೂಜ್ಯಮಾನೋಽಥ ಬಂದಿಭಿಃ ||67||
ಅವರಿಂದ ಸುತ್ತುವರಿಯಲ್ಪಟ್ಟ ಕುಶಿಕರಾಜನು ಬಂದಿಗಳಿಂದ ಪೂಜಿಸಲ್ಪಡುತ್ತಾ ಸಂತೋಷದಿಂದ ತನ್ನ ಪಟ್ಟಣವನ್ನು ಪ್ರವೇಶಿಸಿದನು.
ತತಃ ಪ್ರವಿಶ್ಯ ನಗರಂ ಕೃತ್ವಾ ಸರ್ವಾಹ್ನಿಕಕ್ರಿಯಾಃ |
ಭುಕತತ್ವ ಸಭಾರ್ಯೋ ರಜನೀಮುವಾಸ ಸ ಮಹೀಪತಿಃ ||68||
ರಾಜನು ನಗರವನ್ನು ಪ್ರವೇಶಿಸಿ ಹಗಲಲ್ಲಿ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಿ ಭೋಜನವನ್ನು ಮಾಡಿ ಪತ್ನಿಯ ಜೊತೆಯಲ್ಲಿ ರಾತ್ರಿಯನ್ನು ಕಳೆದನು.
ತತಸ್ತು ತೌ ನವಮಭಿವೀಕ್ಷ್ಯ ಯೌವನಂ
ಪರಸ್ಪರಂ ವಿಗತಜರಾವಿವಾಮರೌ |
ನನಂದತುಃ ಶಯನಗತೌ ವಪುರ್ಧರೌ
ಶ್ರಿಯಾ ಯುತೌ ದ್ವಿಜವರದತ್ತಯಾ ತಯಾ ||69||
ಆಗ ಶಯನಗತರಾದ ಆ ರಾಜದಂಪತಿಗಳು ಒಳ್ಳೆಯ ದೇಹವನ್ನು ಹೊಂದಿದವರಾಗಿ ಹೊಸದಾದ ಯೌವನವನ್ನು ತಮ್ಮ ಶರೀರದಲ್ಲಿ ಕಾಣುತ್ತಾ ಜರೆಯಿಲ್ಲದ ಅಮರರಂತೆ ಋಷಿಶ್ರೇಷ್ಠರು ಕೊಟ್ಟ ವರದಿಂದ ಕಾಂತಿಯುಕ್ತರಾಗಿ ರಾತ್ರಿಯನ್ನು ಕಳೆದರು.
ಸ ಚಾಪ್ಯೃಷಿರ್ಭೃಗುಕುಲಕೀರ್ತಿವರ್ಧನಃ
ತಪೋಧನೋ ವನಮಭಿರಾಮಮೃದ್ಧಿಮತ್ |
ಮನೀಷಯಾ ಬಹುವಿಧರತ್ನಭೂಷಿತಂ
ಸಸರ್ಜ ಯನ್ನಾಸ್ತಿ ಶತಕ್ರತೋರಪಿ ||70||
ಭೃಗುಕುಲ ಕೀರ್ತಿವರ್ಧನರಾದ, ತಪೋಧನರಾದ ಚ್ಯವನ ಋಷಿಗಳೂ ಸಹ ಸಹಜವಾಗಿ ಸುಂದರವಾಗಿ ವೃದ್ಧಿಯಿಂದ ಕೂಡಿದ ಆ ವನವನ್ನು ತಮ್ಮ ಜ್ಞಾನ ಶಕ್ತಿಯಿಂದ ಇಂದ್ರನಿಗೂ ಇರದಂತಹ ಬಹುವಿಧ ರತ್ನಗಳಿಂದ ಭೂಷಿತವನ್ನಾಗಿ ಮಾಡಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚ್ಯವನಕುಶಿಕಸಮಾಗಮೋ ನಾಮ ತ್ರ್ಯಶೀತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೂರನೆಯ ಅಧ್ಯಾಯ ಮುಗಿಯಿತು.

* * * * *

ಎಂಬತ್ನಾಲ್ಕನೆಯ ಅಧ್ಯಾಯ

ಪ್ರಾತಃಕಾಲದಲ್ಲಿ ರಾಜನಿಂದ ಚ್ಯವನರ ದರ್ಶನ. ವನದರ್ಶನ ಮತ್ತು ವಿಸ್ಮಯ.

ಭೀಷ್ಮಃ

ತತಃ ಸ ರಾಜಾ ರಾತ್ರ್ಯಂತೇ ಪ್ರತಿಬುದ್ಧೋ ಮಹಾಮನಾಃ |
ಕೃತಪೂರ್ವಾಹ್ಣಿಕಃ ಪ್ರಾಯಾತ್ ಸಭಾರ್ಯಸ್ತದ್ವನಂ ಪ್ರತಿ ||1||
ಭೀಷ್ಮ ಅನಂತರ ಧೈರ್ಯಶಾಲಿಯಾದ ರಾಜನು ರಾತ್ರಿಯು ಕಳೆಯುತ್ತಿರಲು ಎದ್ದು ಪೂರ್ವಾಹ್ಣಿಕ ಕ್ರಿಯೆಗಳನ್ನು ಮಾಡಿ, ಪತ್ನಿಯ ಜೊತೆಯಲ್ಲಿ ಆ ವನಕ್ಕೆ ಹೊರಟನು.
ತತೋ ದದರ್ಶ ನೃಪತಿಃ ಪ್ರಾಸಾದಂ ಸರ್ವಕಾಂಚನಮ್ |
ಮಣಿಸ್ತಂಭಸಹಸ್ರಾಢ್ಯಂ ಗಂಧರ್ವನಗರೋಪಮಮ್ |
ತತ್ರ ದಿವ್ಯಾನಭಿಪ್ರಾಯಾನ್ ದದರ್ಶ ಕುಶಿಕಸ್ತದಾ ||2||
ಆಗ ರಾಜನು ಸರ್ವಕಾಂಚನಮಯವಾದ, ಸಹಸ್ರ ಮಣಿಸ್ತಂಭಗಳಿಂದ ಕೂಡಿದ, ಗಂಧರ್ವನಗರ ಸದೃಶವಾದ, ದಿವ್ಯವಾದ ವಸ್ತುಗಳನ್ನು ಹೊಂದಿದ ಪ್ರಾಸಾದವನ್ನು ನೋಡಿದನು.
ಪರ್ವತಾನ್ ರಮ್ಯಸಾನೂಂಶ್ಚ ನಳಿನೀಶ್ಚ ಸಪಂಕಜಾಃ |
ಚಿತ್ರಶಾಲಾಶ್ಚ ವಿವಿಧಾಸ್ತೋರಣಾನಿ ಚ ಭಾರತ |
ಶಾದ್ವಲೋಪಚಿತಾಂ ಭೂಮಿಂ ತಥಾ ಕಾಂಚನಕುಟ್ಟಿಮಾಮ್ ||3||
ಸಹಕಾರಾನ್ ಪ್ರಫುಲ್ಲಾಂಶ್ಚ ಕೇತಕೋದ್ದಾಲಕಾನ್ ಧವಾನ್ |
ಅಶೋಕಾನ್ ಮುಚುಕುಂದಾಂಶ್ಚ ಫುಲ್ಲಾಂಶ್ಚೈವಾತಿಮುಕ್ತಕಾನ್ ||4||
ಚಂಪಕಾಂಸ್ತಿಲಕಾನ್ ಭವ್ಯಾನ್ ಪನಸಾನ್ ವಂಜುಲಾನಪಿ |
ಪುಷ್ಪಿತಾನ್ ಕರ್ಣಿಕಾರಾಂಶ್ಚ ತತ್ರ ತತ್ರ ದದರ್ಶ ಹ ||5||
ಎಲೈ ಭಾರತನೇ, ರಮ್ಯ ಶಿಖರಗಳಿಂದ ಕೂಡಿದ ಸಣ್ಣ ಸಣ್ಣ ಪರ್ವತಗಳು, ಪದ್ಮ ಸರೋವರಗಳು, ಚಿತ್ರಶಾಲೆಗಳು, ವಿವಿಧವಾದ ತೋರಣಗಳು, ಮೃದುವಾದ ಭೂಮಿ, ಸುವರ್ಣಮಯವಾದ ವೇದಿಕೆಗಳು, ಅರಳಿದ ಚೂತವೃಕ್ಷಗಳು, ಕೇತಕ, ಉದ್ದಾಲಕ ಮತ್ತು ಧವ ವೃಕ್ಷಗಳು, ಅಶೋಕ ವೃಕ್ಷಗಳು, ಮುಚುಕುಂದ ವೃಕ್ಷಗಳು, ಹೂ ಅರಳಿದ ವೃಕ್ಷಗಳು, ಚಂಪಕ, ತಿಲಕ, ಭವ್ಯ, ಪನಸ, ವಂಜುಲ ವೃಕ್ಷಗಳು, ಪುಷ್ಪಿತವಾದ ಕರ್ಣಿಕಾರ ವೃಕ್ಷಗಳು- ಇವುಗಳನ್ನು ಅಲ್ಲಲ್ಲಿ ಅವನು ನೋಡಿದನು.
ಶ್ಯಾಮಾಂ ವಾರಣಪುಷ್ಪೀಂ ಚ ತಥಾಷ್ಟಾಪದಿಕಾಂ ಲತಾಮ್ |
ತತ್ರ ತತ್ರ ಪರಿಕ್ಲೃಪ್ತಾಂ ದದರ್ಶ ಸ ಮಹೀಪತಿಃ ||6||
ಕಪ್ಪು ಬಣ್ಣದ ವಾರಣ ಪುಷ್ಪಿ ಲತೆಯನ್ನು, ಅಷ್ಟಪಾದಿಕಾ ಲತೆಗಳನ್ನು ರಾಜನು ಅಲ್ಲಲ್ಲಿ ನೋಡಿದನು.
ವೃಕ್ಷಾನ್ ಪದ್ಮೋತ್ಪಲಧರಾನ್ ಸರ್ವರ್ತುಕುಸುಮಾಂಸ್ತಥಾ |
ವಿಮಾನಚ್ಛಂದಕಾಂಶ್ಚಾಪಿ ಪ್ರಾಸಾದಾನ್ ಪದ್ಮಸನ್ನಿಭಾನ್ ||7||
ಶೀತಲಾನಿ ಚ ತೋಯಾನಿ ಕ್ವಚಿದುಷ್ಣಾನಿ ಭಾರತ |
ಆಸನಾನಿ ವಿಚಿತ್ರಾಣಿ ಶಯನಪ್ರವರಾಣಿ ಚ ||8||
ಪರ್ಯಂಕಾನ್ ಸರ್ವಸೌವರ್ಣಾನ್ ಪರಾರ್ಧ್ಯಾಸ್ತರಣಾಸ್ತೃತಾನ್ |
ಭಕ್ಷ್ಯಭೋಜ್ಯಮನಂತಂ ಚ ತತ್ರ ತತ್ರೋಪಕಲ್ಪಿತಮ್ ||9||
ವಾಣೀವಾದಾಂಛುಕಾಂಶ್ಚಾಪಿ ಶಾರಿಕಾಭೃಂಗರಾಜಕಾನ್ |
ಕೋಕಿಲಾಂಛತಪತ್ರಾಂಶ್ಚ ಕೋಯಷ್ಟಿಮಕಕುಕ್ಕುಟಾನ್ ||10||
ಮಯೂರಾನ್ ಕುಕ್ಕುಟಾಂಶ್ಚಾಪಿ ಪುತ್ರಕಾನ್ ಜೀವಜೀವಕಾನ್ |
ಚಕೋರಾನ್ ವಾನರಾನ್ ಹಂಸಾನ್ ಸಾರಸಾಂಶ್ಚಕ್ರಸಾಹ್ವಯಾನ್ ||11||
ಸಮಂತತಃ ಪ್ರಣದಿತಾನ್ ದದರ್ಶ ಸುಮನೋಹರಾನ್ |
ಪದ್ಮೋತ್ಪಲಗಳನ್ನು ಧರಿಸಿದ ವೃಕ್ಷಗಳು, ಎಲ್ಲ ಋತುಗಳಲ್ಲಿಯೂ ಪುಷ್ಪಿತವಾದ ವೃಕ್ಷಗಳು, ಎತ್ತರವಾದ ಪದ್ಮವರ್ಣೋಪೇತವಾದ ಪ್ರಾಸಾದಗಳು, ಶೀತಲವಾದ ಜಲ, ಕೆಲವು ಕಡೆ ಉಷ್ಣ ಜಲ, ವಿಚಿತ್ರವಾದ ಆಸನಗಳು ಮತ್ತು ಶ್ರೇಷ್ಠವಾದ ಶಯನಗಳು, ಪೂರ್ಣವಾಗಿ ಸುವರ್ಣಮಯವಾದ ಮಂಚಗಳು, ಬೆಲೆ ಬಾಳುವ ಹೊದಿಕೆಗಳು, ಅಲ್ಲಲ್ಲಿ ಕಲ್ಪಿತವಾದ ಅನೇಕ ಭಕ್ಷ್ಯ-ಭೋಜ್ಯಗಳು, ಮನುಷ್ಯರ ವಾಣಿಯಲ್ಲಿ ಮಾತನಾಡುವ ಗಿಣಿಗಳು, ಸಾರಿಕ ಮತ್ತು ಭೃಂಗರಾಜ ಪಕ್ಷಿಗಳು, ಕೋಕಿಲ, ಶತಪತ್ರ, ಕೋಯಷ್ಟಿ, ಮಕ, ಕುಕ್ಕುಟ ಪಕ್ಷಿಗಳು, ನವಿಲುಗಳು, ಕುಕ್ಕುಟ ಪ್ರಭೇದಗಳು, ಪುತ್ರಕಗಳು, ಚಕೋರಗಳು, ಕಪಿಗಳು, ಹಂಸಗಳು, ಸಾರಸ, ಚಕ್ರಸ ಪಕ್ಷಿಗಳು- ಎಲ್ಲ ಕಡೆಗಳಲ್ಲಿಯೂ ಮನೋಹರ ನಾದವನ್ನು ಮಾಡುತ್ತಿರುವ ಇವುಗಳೆಲ್ಲವನ್ನೂ ಅವನು ನೋಡಿದನು.
ಕ್ವಚಿದಪ್ಸರಸಾಂ ಸಂಘಾನ್ ಗಂಧರ್ವಾಣಾಂ ಚ ಪಾರ್ಥಿವ ||12||
ಕಾಂತಾಭಿರಪರಾಂಸ್ತತ್ರ ಪರಿಷ್ವಕ್ತಾನ್ ದದರ್ಶ ಹ |
ನ ದದರ್ಶ ಚ ತಾನ್ ಭೂಯೋ ದದರ್ಶ ಚ ಪುನರ್ನೃಪಃ ||13||
ಗೀತಧ್ವನಿಂ ಸುಮಧುರಂ ತಥೈವಾಧ್ಯಯನಧ್ವನಿಮ್ |
ಹಂಸಾನ್ ಸುಮಧುರಾಂಶ್ಚಾಪಿ ತತ್ರ ಶುಶ್ರಾವ ಪಾರ್ಥಿವಃ ||14||
ಕೆಲವು ಕಡೆ ಅಪ್ಸರೆಯರ ಸಮೂಹವನ್ನೂ, ಕೆಲವು ಕಡೆ ಗಂಧರ್ವರ ಸಮೂಹವನ್ನೂ, ಕೆಲವು ಕಡೆ ತಮ್ಮ ಕಾಂತೆಯರಿಂದ

ಆಲಿಂಗಿತರಾದ ಗಂಧರ್ವರನ್ನೂ ಅವನು ನೋಡಿದನು. ಅವನು ಪುನಃ ನೋಡುವಾಗ ಅದಾವುದೂ ಯಾವುದೂ ಕಾಣಲಿಲ್ಲ.
ಅತ್ಯಂತ ಮೃದುವಾದ ಗೀತಧ್ವನಿಯನ್ನೂ, ವೇದಾಧ್ಯಯನ ಧ್ವನಿಯನ್ನೂ, ಹಂಸ ಧ್ವನಿಗಳನ್ನೂ ಅವನು ಕೇಳಿದನು.
ತಂ ದೃಷ್ಟ್ವಾತ್ಯದ್ಭುತಂ ರಾಜಾ ಮನಸಾ ಚಿಂತಯತ್ತದಾ |
ಸ್ವಪ್ನೋಽಯಂ ಚಿತ್ತವಿಭ್ರಂಶ ಉತಾಹೋ ಸತ್ಯಮೇವ ತು ॥15॥
ಆ ಅದ್ಭುತವನ್ನು ನೋಡಿ ರಾಜನು ಮನಸ್ಸಿನಲ್ಲಿ ಇದೇನು ಸ್ವಪ್ನವೋ ಅಥವಾ ನನ್ನ ಮನಸ್ಸಿನ ಭ್ರಾಂತಿಯೋ ಅಥವಾ ಸತ್ಯವೋ ಎಂದು ಚಿಂತಿಸಿದನು.
ಅಹೋ ಸಹ ಶರೀರೇಣ ಪ್ರಾಪ್ತೋಽಸ್ಮಿ ಪರಮಾಂ ಗತಿಮ್ |
ಉತ್ತರಾನ್ ವಾ ಕುರೂನ್ ಪುಣ್ಯಾನಥ ವಾಪ್ಯಮರಾವತೀಮ್ ॥16॥
ಅಥವಾ ನಾನು ಶರೀರ ಸಹಿತನಾಗಿ ಪರಮಗತಿಯನ್ನು ಹೊಂದಿದ್ದೇನೆಯೋ ಅಥವಾ ಪವಿತ್ರವಾದ ಉತ್ತರಕುರು ಖಂಡಕ್ಕೆ ಬಂದಿದ್ದೇನೆಯೋ ಅಥವಾ ಇಂದ್ರನ ನಗರವಾದ ಅಮರಾವತಿಗೆ ಬಂದಿದ್ದೇನೆಯೋ.
ಕಿಂ ನ್ವಿದಂ ಮಹದಾಶ್ಚರ್ಯಂ ಸಂಪಶ್ಯಾಮೀತ್ಯಚಿಂತಯತ್ |
ಏವಂ ಸಂಚಿಂತಯನ್ನೇವ ದದರ್ಶ ಮುನಿಪುಂಗವಮ್ ॥17॥
ಇದೇನು ಮಹದಾಶ್ಚರ್ಯವನ್ನು ನೋಡುತ್ತಿದ್ದೇನೆ ಎಂದು ಚಿಂತಿಸಿದನು. ಅವನು ಹಾಗೆ ಯೋಚಿಸುತ್ತಿರುವಾಗಲೇ ಮುನಿಶ್ರೇಷ್ಠರಾದ ಚ್ಯವನರನ್ನು ನೋಡಿದನು.
ತಸ್ಮಿನ್ ವಿಮಾನೇ ಸೌವರ್ಣೇ ಮಣಿಸ್ತಂಭಸಮಾಕುಲೇ |
ಮಹಾರ್ಹೇ ಶಯನೇ ದಿವ್ಯೇ ಶಯಾನಂ ಭೃಗುನಂದನಮ್ ॥18॥
ಅಲ್ಲಿ ಮಣಿಸ್ತಂಭಗಳಿಂದ ನಿರ್ಮಿತವಾದ, ಸುವರ್ಣಮಯವಾದ ಒಂದು ಉಪ್ಪರಿಗೆಯ ಮನೆಯಲ್ಲಿ ಬೆಲೆ ಬಾಳುವ ದಿವ್ಯಶಯನದಲ್ಲಿ ಮಲಗಿರುವ ಭೃಗು ನಂದನರನ್ನು ನೋಡಿದನು.
ತಮಭ್ಯಯಾತ್ ಪ್ರಹರ್ಷೇಣ ನರೇಂದ್ರಃ ಸಹ ಭಾರ್ಯಯಾ |
ಅಂತರ್ಹಿತಸ್ತತೋ ಭೂಯಶ್ಚ್ಯವನಃ ಶಯನಂ ಚ ತತ್ ॥19॥
ಬಹಳ ಹರ್ಷದಿಂದ ಕೂಡಿದ ರಾಜನು ತನ್ನ ಪತ್ನಿಯ ಜೊತೆಯಲ್ಲಿ ವೇಗದಿಂದ ಅವರ ಕಡೆಗೆ ಸಾಗಿದನು. ಆಗ ಪುನಃ ಚ್ಯವನರೂ ಆ ಶಯನವೂ ಅಂತರ್ಧಾನವನ್ನು ಹೊಂದಿದವು.
ತತೋಽನ್ಯಸ್ಮಿನ್ ವನೋದ್ದೇಶೇ ಪುನರೇವ ದದರ್ಶ ತಮ್ |
ಕೌಶ್ಯಾಂ ಬೃಸ್ಯಾಂ ಸಮಾಸೀನಂ ಜಪಮಾನಂ ಮಹಾವ್ರತಮ್ |
ಏವಂ ಯೋಗಬಲಾದ್ ವಿಪ್ರೋ ಮೋಹಯಾಮಾಸ ಪಾರ್ಥಿವಮ್ ॥
ಅನಂತರ ಆ ವನದ ಇನ್ನೊಂದು ಪ್ರದೇಶದಲ್ಲಿ ದರ್ಭಾಸನದಲ್ಲಿ ಕುಳಿತು ಜಪವನ್ನು ಮಾಡುತ್ತಿದ್ದ ಮಹಾವ್ರತರಾದ ಅವರನ್ನು ಪುನಃ ನೋಡಿದನು. ಹೀಗೆ ಬ್ರಹ್ಮರ್ಷಿಗಳಾದ ಚ್ಯವನರು ಯೋಗಬಲದಿಂದ ರಾಜನನ್ನು ಮರುಳು ಮಾಡಿದರು.
ಕ್ಷಣೇನ ತದ್ವನಂ ಚೈವ ತೇ ಚೈವಾಪ್ಸರಸಾಂ ಗಣಾಃ |
ಗಂಧರ್ವಾಃ ಪಾದಪಾಶ್ಚೈವ ಸರ್ವಮಂತರಧೀಯತ ॥21॥
ಇನ್ನೊಂದು ಕ್ಷಣದಲ್ಲಿ ಆ ವನ, ಅಪ್ಸರೆಯ ಸಮೂಹಗಳು, ಗಂಧರ್ವರು, ವೃಕ್ಷಗಳು ಎಲ್ಲವೂ ಅಂತರ್ಧಾನವನ್ನು ಹೊಂದಿದವು.
ಗಂಗಾಕೂಲವನಂ ಚೈವ ದದರ್ಶ ಸ ಯಥಾಪುರಮ್ |
ನಿಃಶಬ್ದಮಭವಚ್ಚಾಪಿ ಗಂಗಾಕೂಲಂ ಪುನರ್ನೃಪ |
ಕುಶವಲ್ಮೀಕಭೂಯಿಷ್ಠಂ ಬಭೂವ ಚ ಯಥಾ ಪುರಾ ॥22॥
ಮೊದಲಿನಂತೆಯೇ ಇದ್ದ ಗಂಗಾತೀರದ ವನವನ್ನು ಅವನು ನೋಡಿದನು. ಎಲೈ ರಾಜನೇ, ಆ ಗಂಗಾತೀರವು ಮೊದಲಿನಂತೆ ಕುಶವಲ್ಮೀಕಗಳಿಂದ ನಿಬಿಡವಾಗಿದ್ದು ನಿಶ್ಶಬ್ದವಾಯಿತು.
ತತಃ ಸ ರಾಜಾ ಕುಶಿಕಃ ಸಭಾರ್ಯಸ್ತೇನ ಕರ್ಮಣಾ |
ವಿಸ್ಮಯಂ ಪರಮಂ ಪ್ರಾಪ್ತಸ್ತದ್‌ದೃಷ್ಟ್ವಾ ಮಹದದ್ಭುತಮ್ ॥23॥
ಆಗ ಪತ್ನೀ ಸಹಿತನಾದ ಕುಶಿಕರಾಜನು ಆ ಮಹದದ್ಭುತವಾದ ದೃಶ್ಯಗಳನ್ನು ನೋಡಿ ಋಷಿಗಳ ಕರ್ಮದಿಂದ ಬಹಳ ವಿಸ್ಮಯವನ್ನು ಹೊಂದಿದನು.
ತತಃ ಪ್ರೋವಾಚ ಕುಶಿಕೋ ಭಾರ್ಯಾಂ ಹರ್ಷಸಮನ್ವಿತಃ |
ಪಶ್ಯ ಭದ್ರೇ ಯಥಾ ಭಾವಾಶ್ಚಿತ್ರಾ ದೃಷ್ಟಾಃ ಸುದುರ್ಲಭಾಃ ॥24॥
ಪ್ರಸಾದಾದ್ ಭೃಗುಮುಖ್ಯಸ್ಯ ಕಿಮನ್ಯತ್ರ ತಪೋಬಲಾತ್ |
ತಪಸಾ ತದವಾಪ್ಯಂ ಹಿ ಯನ್ನ ಶಕ್ಯಂ ಮನೋರಥೈಃ ॥25॥
ದಿವ್ಯಾಭಿಪ್ರಾಯಸಂಯುಕ್ತಾನ್ ಪ್ರಾಸಾದಾದೀನ್ ವಿಲೋಕಯ |
ತ್ರೈಲೋಕ್ಯರಾಜ್ಯಾದಪಿ ಹಿ ತಪ ಏವ ವಿಶಿಷ್ಯತೇ |
ತಪಸಾ ಹಿ ಸುತಪ್ತೇನ ಕ್ರೀಡತ್ಯೇಷ ತಪೋಧನಃ ॥26॥
ಆಗ ಕುಶಿಕನು ಹರ್ಷದಿಂದ ಕೂಡಿ ತನ್ನ ಪತ್ನಿಯನ್ನು ಕುರಿತು ಎಲೌ ಶುಭಸ್ವರೂಪಳೇ, ದುರ್ಲಭವಾದ ಮತ್ತು ವಿಚಿತ್ರವಾದ ಪದಾರ್ಥಗಳನ್ನು ನಾವು ನೋಡಿದುದನ್ನು ಗಮನಿಸು. ಭೃಗುಶ್ರೇಷ್ಠರಾದ ಚ್ಯವನರ ತಪೋಬಲ ಮತ್ತು ಅನುಗ್ರಹವನ್ನು ಬಿಟ್ಟು ಇದಕ್ಕೆ ಬೇರೆ ಕಾರಣವೇನಿದೆ? ಯಾವುದನ್ನು ಮನೋರಥಗಳಿಂದ ಹೊಂದಲು ಸಾಧ್ಯವಿಲ್ಲವೋ ಅದನ್ನು ತಪಸ್ಸಿನಿಂದ ಪಡೆಯಬಹುದು. ದಿವ್ಯ ಯೋಜನೆಗಳಿಂದ ಕೂಡಿದ ಪ್ರಾಸಾದಗಳನ್ನು ನೋಡು. ಮೂರು ಲೋಕದ ಆಧಿಪತ್ಯಕ್ಕಿಂತಲೂ ತಪಸ್ಸೇ

ಶ್ರೇಷ್ಠವಾದುದು. ತಪೋಧನರಾದ ಚ್ಯವನರು ತಮ್ಮ ಶ್ರೇಷ್ಠವಾದ ತಪಸ್ಸಿನ ಬಲದಿಂದ ಆಟವಾಡುತ್ತಿದ್ದಾರೆ.
ಅಹೋ ಪ್ರಭಾವೋ ಬ್ರಹ್ಮರ್ಷೇಶ್ಚ್ಯವನಸ್ಯ ಮಹಾತ್ಮನಃ |
ಇಚ್ಛನ್ನೇಷ ತಪೋವೀರ್ಯಾದನ್ಯಾಲ್ಲೋಕಾನ್ ಸೃಜೇದಪಿ ॥27॥
ಬ್ರಾಹ್ಮಣಾ ಏವ ಜಾಯೇರನ್ ಪುಣ್ಯವಾಗ್ಬುದ್ಧಿಕರ್ಮಣಃ |
ಉತ್ಸಹೇದಿಹ ಕರ್ತುಂ ಹಿ ಕೋಽನ್ಯೋ ವೈ ಚ್ಯವನಾದೃತೇ ॥28॥
ಬ್ರಾಹ್ಮಣ್ಯಂ ದುರ್ಲಭಂ ಲೋಕೇ ರಾಜ್ಯಂ ಹಿ ಸುಲಭಂ ನರೈಃ |
ಬ್ರಾಹ್ಮಣ್ಯಸ್ಯ ಪ್ರಭಾವಾದ್ಧಿ ರಥೇ ಯುಕ್ತೌ ಸ್ವಧುರ್ಯವತ್ ॥29॥
ಮಹಾತ್ಮರಾದ ಬ್ರಹ್ಮರ್ಷಿಗಳಾದ ಚ್ಯವನರ ಪ್ರಭಾವವು ಎಂತಹದು! ಅವರು ಬಯಸಿದರೆ ತಮ್ಮ ತಪಸ್ಸಿನ ಪ್ರಭಾವದಿಂದ ಬೇರೆ ಲೋಕಗಳನ್ನೇ ಸೃಷ್ಟಿಸಿಯಾರು! ಬ್ರಾಹ್ಮಣರೇ ಪವಿತ್ರವಾದ ವಾಗ್ಬುದ್ಧಿ-ಕರ್ಮಗಳಿಂದ ಜನಿಸುವರು. ಚ್ಯವನರನ್ನು ಬಿಟ್ಟು ಬೇರೆ ಯಾವನು ಇಂತಹ ಕಾರ್ಯಗಳನ್ನು ಮಾಡಲು ಸಮರ್ಥನಾದಾನು? ಮನುಷ್ಯನು ರಾಜ್ಯವನ್ನು ಪಡೆಯುವುದು ಸುಲಭ. ಆದರೆ ಲೋಕದಲ್ಲಿ ಬ್ರಾಹ್ಮಣ್ಯವನ್ನು ಪಡೆಯುವುದು ಬಹಳ ಕಷ್ಟವಾದುದು. ಬ್ರಾಹ್ಮಣ್ಯದ ಪ್ರಭಾವದಿಂದಲೇ ನಾವಿಬ್ಬರೂ ರಥದಲ್ಲಿ ಅಶ್ವಗಳಂತೆ ಹೂಡಲ್ಪಟ್ಟೆವು (ಎಂದು ಚಿಂತಿಸಿದನು).
ಇತ್ಯೇವಂ ಚಿಂತಯಾನಃ ಸ ವಿದಿತಶ್ಚ್ಯವನಸ್ಯ ವೈ |
ಸಂಪ್ರೇಕ್ಷ್ಯೋವಾಚ ಸ ನೃಪಂ ಕ್ಷಿಪ್ರಮಾಗಮ್ಯತಾಮಿತಿ ॥30॥
ಹೀಗೆ ಚಿಂತಿಸುತ್ತಿರುವ ಅವನನ್ನು ತಿಳಿದು ಚ್ಯವನರು ಅವನನ್ನು ನೋಡಿ ಅವನನ್ನು ಕುರಿತು ಬೇಗ ಇಲ್ಲಿಗೆ ಬಾ ಎಂದು ಹೇಳಿದರು.
ಇತ್ಯುಕ್ತಃ ಸಹಭಾರ್ಯಸ್ತಮಭ್ಯಗಚ್ಛನ್ ಮಹಾಮುನಿಮ್ |
ಶಿರಸಾ ವಂದನೀಯಂ ತಮವಂದತ ಸ ಪಾರ್ಥಿವಃ ॥31॥
ಋಷಿಗಳಿಂದ ಹೀಗೆ ಹೇಳಲ್ಪಟ್ಟ ಕುಶಿಕನು ಪತ್ನೀ ಸಹಿತನಾಗಿ ಶೀಘ್ರವಾಗಿ ಆ ಮಹರ್ಷಿಗಳ ಬಳಿಗೆ ಹೋಗಿ ನಮಸ್ಕಾರಕ್ಕೆ ಅರ್ಹರಾದ ಅವರಿಗೆ ಶಿರಸಾ ಪ್ರಣಾಮವನ್ನು ಮಾಡಿದನು.
ತಸ್ಯಾಶಿಷಃ ಪ್ರಯುಜ್ಯಾಥ ಸ ಮುನಿಸ್ತಂ ನರಾಧಿಪಮ್ |
ನಿಷೀದೇತ್ಯಬ್ರವೀದ್ಧೀಮಾನ್ ಸಾಂತ್ವಯನ್ ಪುರುಷರ್ಷಭ ॥32॥
ಎಲೈ ಪುರುಷಶ್ರೇಷ್ಠನೇ, ಆ ಮೇಧಾವಿಗಳಾದ ಋಷಿಗಳು ರಾಜನಿಗೆ ಆಶೀರ್ವಾದಗಳನ್ನು ಉಚ್ಚರಿಸಿ ಸಮಾಧಾನ ಪಡಿಸುತ್ತಾ ಕುಳಿತುಕೋ ಎಂದು ಹೇಳಿದರು.
ತತಃ ಪ್ರಕೃತಿಮಾಪನ್ನೋ ಭಾರ್ಗವೋ ನೃಪತೇ ನೃಪಮ್ |
ಉವಾಚ ಶ್ಲಕ್ಷ್ಣಯಾ ವಾಚಾ ತರ್ಪಯನ್ನಿವ ಭಾರತ ॥33॥
ಎಲೈ ರಾಜನೇ, ಭಾರತನೇ, ಅನಂತರ ಚ್ಯವನರು ತಮ್ಮ ಸ್ವಾಭಾವಿಕ ಸ್ಥಿತಿಗೆ ಬಂದವರಾಗಿ ರಾಜನನ್ನು ಕುರಿತು ಮಧುರವಾದ ಮಾತುಗಳಿಂದ ಹೀಗೆ ಹೇಳಿದರು.
ರಾಜನ್ ಸಮ್ಯಗ್ ಜಿತಾನೀಹ ಪಂಚ ಪಂಚಸು ಯತ್ತ್ವಯಾ |
ಮನಃಷಷ್ಠಾನೀಂದ್ರಿಯಾಣಿ ಕೃಚ್ಛ್ರಾನ್ಮುಕ್ತೋಽಸಿ ತೇನ ವೈ ॥34॥
ಎಲೈ ರಾಜನೇ, ನೀನು ಪಂಚೇಂದ್ರಿಯಗಳನ್ನು ಅವುಗಳ ವಿಷಯವಾದ ಶಬ್ದ- ಸ್ಪರ್ಶ-ರೂಪ-ರಸ-ಗಂಧಗಳ ವಿಷಯದಲ್ಲಿ ಚೆನ್ನಾಗಿ ಜಯಿಸಿದ್ದೀಯೆ. ಮನಸ್ಸೇ ಮೊದಲಾದ ಆರು ಜ್ಞಾನೇಂದ್ರಿಯಗಳನ್ನು ಜಯಿಸಿದ್ದೀಯೆ. ಆ ಕಾರಣದಿಂದ ನೀನು ಕಷ್ಟಗಳಿಂದ ನಿರ್ಮುಕ್ತನಾಗಿರುವಿ.
ಸಮ್ಯಗಾರಾಧಿತಃ ಪುತ್ರ ತ್ವಯಾಽಹಂ ವದತಾಂ ವರ |
ನ ಹಿ ತೇ ವೃಜಿನಂ ಕಿಂಚಿತ್ ಸುಸೂಕ್ಷ್ಮಮಪಿ ವಿದ್ಯತೇ ॥35॥
ಎಲೈ ಪುತ್ರನೇ, ಮಾತನಾಡುವವರಲ್ಲಿ ಶ್ರೇಷ್ಠನೇ, ನೀನು ನನ್ನನ್ನು ಚೆನ್ನಾಗಿ ಆರಾಧಿಸಿದ್ದೀಯೆ. ನಿನ್ನಲ್ಲಿ ಅತ್ಯಂತ ಅಲ್ಪವಾದ ಪಾಪವೂ (ದೋಷವೂ) ಇಲ್ಲ.
ಅನುಜಾನೀಹಿ ಮಾಂ ರಾಜನ್ ಗಮಿಷ್ಯಾಮಿ ಯಥಾಗತಮ್ |
ಪ್ರೀತೋಽಸ್ಮಿ ತವ ರಾಜೇಂದ್ರ ವರಶ್ಚ ಪ್ರತಿಗೃಹ್ಯತಾಮ್ ॥36॥
ರಾಜನೇ, ನನಗೆ ಅನುಮತಿಯನ್ನು ಕೊಡು. ನಾನು ಬಂದಂತೆಯೇ ಹೊರಟು ಹೋಗುವೆನು. ರಾಜೇಂದ್ರನೇ, ಪ್ರಸನ್ನನಾಗಿದ್ದೇನೆ. ವರವನ್ನು ಕೇಳು (ಎಂದು ಹೇಳಿದರು).
ಕುಶಿಕಃ
ಅಗ್ನಿಮಧ್ಯಗತೇನೇದಂ ಭಗವತ್ಸನ್ನಿಧೌ ಮಯಾ |
ವರ್ತಿತಂ ಭೃಗುಶಾರ್ದೂಲ ಯನ್ನ ದಗ್ಧೋಽಸ್ಮಿ ತದ್ಬಹು ॥37॥
ಕುಶಿಕ ಎಲೈ ಭೃಗುಶಾರ್ದೂಲರೇ, ಪೂಜ್ಯರಾದ ನಿಮ್ಮ ಸನ್ನಿಧಿಯಲ್ಲಿ ನಾನು ಅಗ್ನಿಯ ಮಧ್ಯದಲ್ಲಿ ಇದ್ದಂತೆ ಇದ್ದೆನು. ನಾನು ದಗ್ಧನಾಗದಿರುವುದು ದೊಡ್ಡ ಸಂಗತಿ.
ಏಷ ಏವ ವರೋ ಮುಖ್ಯಃ ಪ್ರಾಪ್ತೋ ಮೇ ಭೃಗುನಂದನ |
ಯತ್ಪ್ರೀತೋಽಸಿ ಸಮಾಚಾರಾತ್ ಕುಲಂ ಪೂತಂ ಮಮಾನಘ ॥38॥
ಎಲೈ ಭೃಗುನಂದನರೇ, ಅನಘರೇ, ನೀವು ನನ್ನ ಆಚಾರದಿಂದ ಪ್ರಸನ್ನರಾಗಿರುವುದೇ ನಾನು ಪಡೆದಿರುವ ದೊಡ್ಡ ವರ. ನನ್ನ ಕುಲವು ಪವಿತ್ರವಾಗಿದೆ.
ಏಷ ಮೇಽನುಗ್ರಹೋ ವಿಪ್ರ ಜೀವಿತೇ ಚ ಪ್ರಯೋಜನಮ್ |

ಏತದ್ರಾಜ್ಯಫಲಂ ಚೈವ ತಪಶ್ಚೈತತ್ ಪರಂ ಮಮ ॥39॥
ಎಲ್ಲೈ ಬ್ರಾಹ್ಮಣರೇ, ನೀವು ಮಾಡಿದ ಈ ಅನುಗ್ರಹವು ನನ್ನ ಜೀವನದ ಫಲ. ಈ ರಾಜ್ಯರೂಪವಾದ ಫಲ, ನನ್ನ ತಪೋರೂಪವಾದ ಫಲ ಎಲ್ಲವೂ ನಿಮ್ಮ ಅನುಗ್ರಹದಿಂದಲೇ.
ಯದಿ ತು ಪ್ರೀತಿಮಾನ್ ವಿಪ್ರ ಮಯಿ ತ್ವಂ ಭೃಗುನಂದನ |
ಅಸ್ತಿ ಮೇ ಸಂಶಯಃ ಕಶ್ಚಿತ್ತನ್ಮೇ ವ್ಯಾಖ್ಯಾತುಮರ್ಹಸಿ ॥40॥
ಎಲ್ಲೈ ಭೃಗುನಂದನರೇ, ಬ್ರಾಹ್ಮಣರೇ, ನನ್ನಲ್ಲಿ ನಿಮಗೆ ಪ್ರೀತಿ ಇದ್ದರೆ ನನಗೆ ಒಂದು ಸಂಶಯವಿದೆ. ಅದನ್ನು ನೀವು ಪರಿಹರಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚ್ಯವನಕುಶಿಕಸಂವಾದೇ ಚ್ಯವನಾನುಭಾವದರ್ಶನಂ ನಾಮ ಚತುರಶೀತಿತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೈದನೆಯ ಅಧ್ಯಾಯ
ಚ್ಯವನರಿಂದ ಕುಶಿಕನಿಗೆ ಬ್ರಾಹ್ಮಣ್ಯ ವರಲಾಭ.
ಚ್ಯವನಃ
ವರಶ್ಚ ಗೃಹ್ಯತಾಂ ಮತ್ತೋ ಯಶ್ಚ ತೇ ಸಂಶಯೋ ಹೃದಿ |
ತಂ ಚ ಬ್ರೂಹಿ ನರಶ್ರೇಷ್ಠ ಸರ್ವಂ ಸಂಪಾದಯಾಮಿ ತೇ ॥1॥
ಚ್ಯವನ ನನ್ನಿಂದ ಒಂದು ವರವನ್ನೂ ಪಡೆದುಕೋ, ನಿನ್ನ ಮನಸ್ಸಿನಲ್ಲಿರುವ ಸಂಶಯವನ್ನೂ ಹೇಳು. ಎಲ್ಲೈ ನರಶ್ರೇಷ್ಠನೇ, ನಾನು ನಿನಗೆ ಎಲ್ಲವನ್ನೂ ಸಾಧಿಸಿ ಕೊಡುತ್ತೇನೆ.
ಕುಶಿಕಃ
ಯದಿ ಪ್ರೀತೋಽಸಿ ಭಗವಂಸ್ತತೋ ಮೇ ವದ ಭಾರ್ಗವ |
ಕಾರಣಂ ಶ್ರೋತುಮಿಚ್ಛಾಮಿ ಮದ್ಗೃಹೇ ವಾಸಕಾರಿತಮ್ ॥2॥
ಕುಶಿಕ ಎಲ್ಲೈ ಭಾರ್ಗವರೇ, ಪೂಜ್ಯರೇ, ನೀವು ನನ್ನ ಮೇಲೆ ಪ್ರಸನ್ನರಾಗಿದ್ದರೆ ನನ್ನ ಗೃಹದಲ್ಲಿ ವಾಸ ಮಾಡುವುದಕ್ಕೆ ಕಾರಣವನ್ನು ಕೇಳಲು ಬಯಸುತ್ತೇನೆ.
ಶಯನಂ ಚೈಕಪಾರ್ಶ್ವೇನ ದಿವಸಾನೇಕವಿಂಶತಿಮ್ |
ಅಕಿಂಚಿದುಕತ್ವ ಗಮನಂ ಬಹಿಶ್ಚ ಮುನಿಪುಂಗವ ॥3॥
ಅಂತರ್ಧಾನಮಕಸ್ಮಾಚ್ಚ ಪುನರೇವ ಚ ದರ್ಶನಮ್ |
ಪುನಶ್ಚ ಶಯನಂ ವಿಪ್ರ ದಿವಸಾನೇಕವಿಂಶತಿಮ್ ॥4॥
ತೈಲಾಭ್ಯಕ್ತಸ್ಯ ಗಮನಂ ಭೋಜನಂ ಚ ಗೃಹೇ ಮಮ |
ಸಮುಪಾನೀಯ ವಿವಿಧಂ ಯದ್ದಗ್ಧಂ ಜಾತವೇದಸಾ |
ನಿರ್ಯಾಣಂ ಚ ರಥೇನಾಶು ಸಹಸಾ ಯತ್ಕೃತಂ ತ್ವಯಾ ॥5॥
ಧನಾನಾಂ ಚ ವಿಸರ್ಗಸ್ಯ ವನಸ್ಯಾಪಿ ಚ ದರ್ಶನಮ್ |
ಪ್ರಾಸಾದಾನಾಂ ಬಹೂನಾಂ ಚ ಕಾಂಚನಾನಾಂ ಮಹಾಮುನೇ ॥6॥
ಮಣಿವಿದ್ರುಮಪಾದಾನಾಂ ಪರ್ಯಂಕಾನಾಂ ಚ ದರ್ಶನಮ್ |
ಪುನಶ್ಚಾದರ್ಶನಂ ತಸ್ಯ ಶ್ರೋತುಮಿಚ್ಛಾಮಿ ಕಾರಣಮ್ ॥7॥
ಎಲ್ಲೈ ಮುನಿಪುಂಗವರೇ, ಒಂದೇ ಮಗ್ಗುಲಿನಲ್ಲಿ ಇಪ್ಪತ್ತೊಂದು ದಿವಸಗಳ ಕಾಲ ಶಯನ, ಏನೂ ಮಾತನಾಡದೆ ಅಲ್ಲಿಂದ ಗಮನ, ಇದ್ದಕ್ಕಿದ್ದಂತೆಯೇ ಅಲ್ಲಿಂದ ಅಂತರ್ಧಾನ, ಪುನಃ ದರ್ಶನ, ಪುನಃ ಇಪ್ಪತ್ತೊಂದು ದಿನಗಳ ಕಾಲ ಶಯನ, ತೈಲಾಭ್ಯಂಗವನ್ನು ಮಾಡಿಕೊಂಡು ಗಮನ, ನನ್ನ ಗೃಹದಲ್ಲಿ ಭೋಜನ, ಭೋಜನಕ್ಕೆ ಇಟ್ಟಂತಹ ವಿವಿಧ ಸಾಮಗ್ರಿಗಳ ದಹನ, ಇದ್ದಕ್ಕಿದ್ದಂತೆಯೇ ನೀವು ಮಾಡಿದ ರಥದ ಪ್ರಯಾಣ, ಧನ ದಾನ, ವನದರ್ಶನ, ಅನೇಕ ಸುವರ್ಣಮಯವಾದ ಪ್ರಾಸಾದಗಳ ದರ್ಶನ, ಮಣಿಪ್ರವಾಳ ಪಾದಗಳಿರುವ ಪರ್ಯಂಕಗಳ ದರ್ಶನ, ಪುನಃ ಅದರ್ಶನ ಇವೆಲ್ಲದಕ್ಕೂ ಕಾರಣವನ್ನು ಕೇಳಲು ಬಯಸುತ್ತೇನೆ.
ಅತೀವ ಹ್ಯತ್ರ ಮುಹ್ಯಾಮಿ ಚಿಂತಯಾನೋ ದಿವಾನಿಶಮ್ |
ನ ಚೈವಾತ್ರಾಧಿಗಚ್ಛಾಮಿ ಸರ್ವಸ್ಯಾಸ್ಯ ವಿನಿಶ್ಚಯಮ್ |
ಏತದಿಚ್ಛಾಮಿ ಕಾರ್ತ್ಸ್ನ್ಯೇನ ಸತ್ಯಂ ಶ್ರೋತುಂ ತಪೋಧನ ॥8॥
ಎಲ್ಲೈ ತಪೋಧನರೇ, ಹಗಲೂ-ರಾತ್ರಿಯೂ ಚಿಂತಿಸಿದರೂ ಈ ವಿಷಯದಲ್ಲಿ ನನಗೆ ಏನೂ ತಿಳಿಯುತ್ತಿಲ್ಲ. ಈ ಎಲ್ಲದಕ್ಕೂ ಕಾರಣ-ನಿರ್ಣಯವನ್ನು ನಾನು ಮಾಡಲು ಸಾಧ್ಯವಾಗುತ್ತಿಲ್ಲ. ಇವೆಲ್ಲವನ್ನೂ ನಾನು ಸಂಪೂರ್ಣವಾಗಿ ಸತ್ಯವಾಗಿ ಕೇಳಲು ಬಯಸುತ್ತೇನೆ.
ಚ್ಯವನಃ
ಶೃಣು ಸರ್ವಮಶೇಷೇಣ ಯದಿದಂ ಯೇನ ಹೇತುನಾ |
ನ ಹಿ ಶಕ್ಯಮನಾಖ್ಯಾತುಮೇವಂ ಪೃಷ್ಟೇನ ಪಾರ್ಥಿವ ॥9॥
ಚ್ಯವನ ಎಲ್ಲೈ ರಾಜನೇ, ನಾನು ಏನು ಮಾಡಿದೆ, ಯಾವ ಕಾರಣಕ್ಕಾಗಿ ಮಾಡಿದೆ ಎಂಬುದೆಲ್ಲವನ್ನೂ ಸಮಗ್ರವಾಗಿ ಕೇಳು. ನಿನ್ನಂತಹವನು ಪ್ರಶ್ನೆ ಮಾಡಿದಾಗ ಉತ್ತರವನ್ನು ಹೇಳದಿರುವುದು ಸಾಧ್ಯವಿಲ್ಲ.
ಪಿತಾಮಹಸ್ಯ ವದತಃ ಪುರಾ ದೇವಸಮಾಗಮೇ |

ಶ್ರುತವಾನಸ್ಮಿ ಯದ್ರಾಜಂಸ್ತನ್ಮೇ ನಿಗದತಃ ಶೃಣು ॥10॥
ಬ್ರಹ್ಮದೇವರು ಹಿಂದೆ ದೇವಸಭೆಯಲ್ಲಿ ಮಾತನಾಡುವಾಗ ನಾನು ಏನನ್ನು ಕೇಳಿದೆನೋ ಅದನ್ನು ನಿನಗೆ ಹೇಳುತ್ತೇನೆ, ಕೇಳು.
ಬ್ರಹ್ಮಕ್ಷತ್ರವಿರೋಧೇನ ಭವಿತಾ ಕುಲಸಂಕರಃ |
ಪೌತ್ರಸ್ತೇ ಭವಿತಾ ರಾಜಂಸ್ತೇಜೋವೀರ್ಯಸಮನ್ವಿತಃ ॥11॥
ಬ್ರಾಹ್ಮಣ, ಕ್ಷತ್ರಿಯರ ವಿರೋಧದಿಂದ ಕುಲಸಾಂಕರ್ಯವು ಉಂಟಾಗುತ್ತದೆ. ನಿನಗೆ ತೇಜೋವೀರ್ಯ ಸಮನ್ವಿತನಾದ ಪೌತ್ರನು ಜನಿಸುವನು.
ತತಃ ಸ್ವಕುಲರಕ್ಷಾರ್ಥಮಹಂ ತ್ವಾ ಸಮುಪಾಗಮಮ್ |
ಚಿಕೀರ್ಷನ್ ಕುಶಿಕೋಚ್ಛೇದಂ ಸಂದಿಧಕ್ಷುಃ ಕುಲಂ ತವ ॥12॥
ಆದ್ದರಿಂದ ನಾನು ನನ್ನ ಕುಲವನ್ನು ರಕ್ಷಿಸುವ ಸಲುವಾಗಿ ಕುಶಿಕರನ್ನು ಸಂಪೂರ್ಣವಾಗಿ ದಹಿಸಿ ನಿನ್ನ ಕುಲನಾಶವನ್ನು ಮಾಡುವುದಕ್ಕಾಗಿ ನಿನ್ನ ಬಳಿಗೆ ಬಂದೆನು.
ತತೋಽಹಮಾಗಮ್ಯ ಪುರಾ ತ್ವಾಮವೋಚಂ ಮಹೀಪತೇ |
ನಿಯಮಂ ಕಂಚಿದಾರಪ್ಸ್ಯೇ ಶು(ಶಿ)ಶ್ರೂಷಾ ಕ್ರಿಯತಾಮಿತಿ ॥13॥
ಎಲೈ ರಾಜನೇ, ಹಾಗೆ ನಾನು ನಿನ್ನ ಬಳಿಗೆ ಬಂದು ಒಂದು ನಿಯಮವನ್ನು ಆರಂಭಿಸುವೆನು ನನ್ನ ಪರಿಚರ್ಯವನ್ನು ಮಾಡು ಎಂದು ಹೇಳಿದೆನು.
ನ ಚ ತೇ ದುಷ್ಕೃತಂ ಕಿಂಚಿದಹಮಾಸಾದಯಂ ಗೃಹೇ |
ತೇನ ಜೀವಸಿ ರಾಜರ್ಷೇ ನ ಭವೇಥಾಸ್ತತೋಽನ್ಯಥಾ ॥14॥
ಎಲೈ ರಾಜರ್ಷಿಯೇ, ನಾನು ನಿನ್ನ ಮನೆಯಲ್ಲಿ ನಿನ್ನಲ್ಲಿ ಒಂದು ಅಪರಾಧವನ್ನೂ ಕಾಣಲಿಲ್ಲ. ಆದ್ದರಿಂದ ನೀನು ಬದುಕಿದ್ದೀಯೆ. ಹಾಗಿಲ್ಲದಿದ್ದರೆ ನೀನು ಬದುಕಿರುತ್ತಿರಲಿಲ್ಲ.
ಏತಾಂ ಬುದ್ಧಿಂ ಸಮಾಸ್ಥಾಯ ದಿವಸಾನೇಕವಿಂಶತಿಮ್ |
ಸುಪ್ತೋಽಸ್ಮಿ ಯದಿ ಮಾಂ ಕಶ್ಚಿದ್ ಬೋಧಯೇದಿತಿ ಪಾರ್ಥಿವ ॥15॥
ಎಲೈ ರಾಜನೇ, ಇದೇ ಬುದ್ಧಿಯನ್ನು ಆಶ್ರಯಿಸಿ ನನ್ನನ್ನು ಯಾರಾದರೂ ಎಬ್ಬಿಸಿದರೆ ನಾನು ಕೋಪಗೊಂಡು ಶಾಪವನ್ನು ಕೊಡುವೆನೆಂದು ಭಾವಿಸಿ ಇಪ್ಪತ್ತೊಂದು ದಿವಸಗಳ ಕಾಲ ಮಲಗಿದೆನು.
ಯದಾ ತ್ವಯಾ ಸಭಾರ್ಯೇಣ ಸಂಸುಪ್ತೋ ನ ಪ್ರಬೋಧಿತಃ |
ಅಹಂ ತದೈವ ತೇ ಪ್ರೀತೋ ಮನಸಾ ರಾಜಸತ್ತಮ ॥16॥
ಎಲೈ ರಾಜಶ್ರೇಷ್ಠನೇ, ಪತ್ನೀ ಸಹಿತನಾದ ನೀನು ನನ್ನನ್ನು ಎಬ್ಬಿಸಲಿಲ್ಲ. ಆಗಲೇ ನಾನು ನನ್ನ ಮನಸ್ಸಿನಲ್ಲಿ ನಿನ್ನಲ್ಲಿ ಸಂತೋಷವನ್ನು ಹೊಂದಿದೆನು.
ಉತ್ಥಾಯ ಚಾಸ್ಮಿ ನಿಷ್ಕ್ರಾಂತೋ ಯದಿ ಮಾಂ ತ್ವಂ ಮಹೀಪತೇ |
ಪೃಚ್ಛೇಃ ಕ್ವ ಯಾಸ್ಯಸೀತ್ಯೇವಂ ಶಪೇಯಂ ತ್ವಾಮಿತಿ ಪ್ರಭೋ ॥17॥
ಎಲೈ ರಾಜನೇ, ಪ್ರಭುವೇ, ನಿದ್ರೆಯಿಂದ ಎದ್ದು ನಾನು ಹೊರಟೆ. ನೀನೇನಾದರೂ ಎಲ್ಲಿಗೆ ಹೋಗುವಿ ಎಂದು ಕೇಳಿದ್ದರೆ ನಿನಗೆ ಶಾಪವನ್ನು ಕೊಡಬೇಕೆಂದು ನನ್ನ ಅಭಿಪ್ರಾಯವಿದ್ದಿತು.
ಅಂತರ್ಹಿತಶ್ಚಾಸ್ಮಿ ಪುನಃ ಪುನರೇವ ಚ ತೇ ಗೃಹೇ |
ಯೋಗಮಾಸ್ಥಾಯ ಸಂವಿಷ್ಟೋ ದಿವಸಾನೇಕವಿಂಶತಿಮ್ ॥18॥
ನಿನ್ನ ಮನೆಯಲ್ಲಿ ನಾನು ಪುನಃ ಪುನಃ ಅಂತರ್ಧಾನವನ್ನು ಹೊಂದಿದೆ. ಯೋಗವನ್ನು ಅವಲಂಬಿಸಿ ಪುನಃ ಇಪ್ಪತ್ತೊಂದು ದಿನಗಳ ಕಾಲ ಮಲಗಿದೆ.
ಕ್ಷುಧಿತೋ ಮಾಮಸೂಯೇಥಾಃ ಶ್ರಮಾದ್ವೇತಿ ನರಾಧಿಪ |
ಏತಾಂ ಬುದ್ಧಿ ಸಮಾಸ್ಥಾಯ ಕರ್ಶಿತೌ ವಾಂ ಮಯಾ ಕ್ಷುಧಾ ॥19॥
ಎಲೈ ನರಾಧಿಪನೇ, ಹಸಿವಿನಿಂದ ಅಥವಾ ಶ್ರಮದಿಂದ ನನ್ನ ಮೇಲೆ ಅಸೂಯೆಯನ್ನು ಮಾಡಬಹುದು ಎಂಬ ಬುದ್ಧಿಯನ್ನು ಹೊಂದಿ ನಿಮ್ಮಿಬ್ಬರನ್ನೂ ನಾನು ಹಸಿವಿನಿಂದ ಬಳಲಿಸಿದೆ.
ನ ಚ ತೇಽಭೂತ್ಸುಸೂಕ್ಷ್ಮೋಽಪಿ ಮನ್ಯುರ್ಮನಸಿ ಪಾರ್ಥಿವ |
ಸಭಾರ್ಯಸ್ಯ ನರಶ್ರೇಷ್ಠ ತೇನ ತೇ ಪ್ರೀತಿಮಾನಹಮ್ ॥20॥
ಎಲೈ ರಾಜನೇ, ನರಶ್ರೇಷ್ಠನೇ, ಪತ್ನೀ ಸಹಿತನಾದ ನಿನಗೆ ಮನಸ್ಸಿನಲ್ಲಿ ಅತ್ಯಲ್ಪವಾದ ಕೋಪವೂ ಉಂಟಾಗಲಿಲ್ಲ. ಅದರಿಂದ ನಾನು ನಿನ್ನಲ್ಲಿ ಸಂತೋಷವನ್ನು ಹೊಂದಿದೆ.
ಭೋಜನಂ ಚ ಸಮಾನಾಯ್ಯ ಯತ್ತದಾದೀಪಿತಂ ಮಯಾ |
ಕ್ರುಧ್ಯೇಥಾ ಯದಿ ಮಾತ್ಸರ್ಯಾದಿತಿ ತನ್ಮರ್ಷಿತಂ ಚ ತೇ ॥21॥
ಭೋಜನವನ್ನು ತರಿಸಿ ನೀನು ಮಾತ್ಸರ್ಯದಿಂದ ಕೋಪಗೊಳ್ಳಲಿ ಎಂದು ಅದನ್ನು ಅಗ್ನಿಗೆ ಸಮರ್ಪಿಸಿದೆ. ನೀನು ಕೋಪಗೊಳ್ಳದೆ ಅದನ್ನು ಸಹಿಸಿದೆ.
ತತೋಽಹಂ ರಥಮಾರುಹ್ಯ ತ್ವಾಮವೋಚಂ ನರಾಧಿಪ |
ಸಭಾರ್ಯೋ ಮಾಂ ವಹಸ್ವೇತಿ ತಚ್ಚ ತ್ವಂ ಕೃತವಾಂಸ್ತಥಾ ॥22॥
ಅವಿಶಂಕೋ ನರಪತೇ ಪ್ರೀತೋಽಹಂ ಚಾಪಿ ತೇನ ತೇ |
ಧನೋತ್ಸರ್ಗೇಽಪಿ ಚ ಕೃತೇ ನ ತ್ವಾಂ ಕ್ರೋಧಃ ಪ್ರಧರ್ಷಯತ್ ॥23॥

ಎಲೈ ನರಾಧಿಪನೇ, ಅನಂತರ ನಾನು ರಥವನ್ನೇರಿ ಪತ್ನೀ ಸಹಿತನಾದ ನೀನು ನನ್ನ ರಥವನ್ನು ಎಳೆದುಕೊಂಡು ಹೋಗು ಎಂದು ನಿನಗೆ ಹೇಳಿದೆ. ಎಲೈ ರಾಜನೇ, ಅದನ್ನೂ ನೀನು ನಿಶ್ಶಂಕೆಯಿಂದ ಮಾಡಿದೆ. ಅದರಿಂದಲೂ ನಾನು ನಿನಗೆ ಪ್ರಸನ್ನನಾಗಿದ್ದೇನೆ. ನಿನ್ನ ಹಣವನ್ನು ನಾನು ಬೇಕಾದಂತೆ ದಾನ ಮಾಡಿದರೂ ನಿನ್ನಲ್ಲಿ ಕ್ರೋಧವು ಆವರಿಸಲಿಲ್ಲ.
ತತಃ ಪ್ರೀತೇನ ತೇ ರಾಜನ್ ಪುನರೇತತ್ಕೃತಂ ತವ |
ಸಭಾರ್ಯಸ್ಯ ವನಂ ಭೂಯಸ್ತದ್ವಿದ್ಧಿ ಮನುಜಾಧಿಪ ||24||
ಎಲೈ ರಾಜನೇ, ಮನುಜಾಧಿಪನೇ, ಆಗ ಪ್ರಸನ್ನನಾದ ಪತ್ನೀ ಸಹಿತನಾದ ನಿನಗೆ ಈ ವರವನ್ನು ಸೃಷ್ಟಿಸಿದೆ ಎಂದು ತಿಳಿ.
ಪ್ರೀತ್ಯರ್ಥಂ ತವ ಚೈತನ್ಮೇ ಸ್ವರ್ಗಸಂದರ್ಶನಂ ಕೃತಮ್ |
ಯತ್ ತೇ ವನೇಽಸ್ಮಿನ್ ನೃಪತೇ ದೃಷ್ಟಂ ದಿವ್ಯಂ ನಿದರ್ಶನಮ್ ||25||
ನಿನ್ನಲ್ಲಿ ಸಂತೋಷಪಡಿಸುವ ಸಲುವಾಗಿ ನಿನಗೆ ಸ್ವರ್ಗದ ದರ್ಶನವನ್ನು ಮಾಡಿಸಿದೆ. ರಾಜನೇ, ನೀನು ಈ ವನದಲ್ಲಿ ಏನು ನೋಡಿದೆಯೋ ಅದೆಲ್ಲಾ ಸ್ವರ್ಗದ ಒಂದು ನಿದರ್ಶನ.
ಸ್ವರ್ಗೋದ್ದೇಶಸ್ತ್ವಯಾ ರಾಜನ್ ಸಶರೀರೇಣ ಪಾರ್ಥಿವ |
ಮುಹೂರ್ತಮನುಭೂತೋಽಸೌ ಸಭಾರ್ಯೇಣ ನೃಪೋತ್ತಮ ||26||
ಎಲೈ ನೃಪೋತ್ತಮನೇ, ನೀನು ಪತ್ನೀ ಸಹಿತನಾಗಿ ಒಂದು ಮುಹೂರ್ತದ ಕಾಲ ಸಶರೀರನಾಗಿ ಸ್ವರ್ಗ ಸುಖವನ್ನು ಅನುಭವಿಸಿದೆ.
ನಿದರ್ಶನಾರ್ಥಂ ತಪಸೋ ಧರ್ಮಸ್ಯ ಚ ನರಾಧಿಪ |
ತಪೋಬ್ರಹ್ಮಬಲಂ ಜ್ಞಾತುಂ ತವಾಂತರ್ಹಿತಮತ್ರ ತತ್ |
ತತ್ರ ಯಾಽಸೀತ್ ಸ್ಪೃಹಾ ರಾಜಂಸ್ತಚ್ಚಾಪಿ ವಿದಿತಂ ಮಮ ||27||
ಎಲೈ ರಾಜನೇ, ತಪಸ್ಸಿನ ಮತ್ತು ಧರ್ಮದ ಬಲವನ್ನು ತೋರಿಸುವುದಕ್ಕಾಗಿ, ಬ್ರಾಹ್ಮಣ್ಯದ ಬಲವನ್ನು ತಿಳಿಸುವುದಕ್ಕಾಗಿ ನಾನು ಅಂತರ್ಧಾನವನ್ನು ಹೊಂದಿದೆ. ಎಲೈ ರಾಜನೇ, ನಿನ್ನ ಮನಸ್ಸಿನಲ್ಲಿ ಯಾವ ಆಸೆ ಇದ್ದಿತೋ ಅದು ನನಗೆ ತಿಳಿದಿದೆ.
ಬ್ರಾಹ್ಮಣ್ಯಂ ಕಾಂಕ್ಷಸೇ ಹಿ ತ್ವಂ ತಪಶ್ಚ ಪೃಥಿವೀಪತೇ |
ಅವಮನ್ಯ ನರೇಂದ್ರತ್ವಂ ದೇವೇಂದ್ರತ್ವಂ ಚ ಪಾರ್ಥಿವ ||28||
ಎಲೈ ಪೃಥಿವೀಪತಿಯೇ, ನೀನು ರಾಜತ್ವವನ್ನೂ, ಇಂದ್ರ ಪದವಿಯನ್ನೂ ತಿರಸ್ಕರಿಸಿ ಬ್ರಾಹ್ಮಣ್ಯವನ್ನು ಮತ್ತು ತಪಸ್ಸನ್ನು ಬಯಸುತ್ತಿದ್ದೀಯೆ.
ಏವಮೇತದ್ ಯಥಾತ್ಥ ತ್ವಂ ಬ್ರಾಹ್ಮಣ್ಯಂ ತಾತ ದುರ್ಲಭಮ್ |
ಬ್ರಾಹ್ಮಣ್ಯೇ ಸತಿ ಚರ್ಷಿತ್ವಮೃಷಿತ್ವೇ ಚ ತಪಸ್ವಿತಾ ||29||
ಎಲೈ ಪ್ರೀತಿಪಾತ್ರನೇ, ನೀನು ಹೇಳುವಂತೆ ಬ್ರಾಹ್ಮಣ್ಯವು ದುರ್ಲಭವಾದುದು. ಬ್ರಾಹ್ಮಣನಾದ ಮೇಲೆ ಋಷಿಯಾಗುವುದು, ಋಷಿಯಾದ ಮೇಲೆ ತಪಸ್ವಿಯಾಗುವುದು ಇನ್ನೂ ದುರ್ಲಭವಾದುದು.
ಭವಿಷ್ಯತ್ಯೇಷ ತೇ ಕಾಮಃ ಕುಶಿಕಾತ್ಕೌಶಿಕೋ ದ್ವಿಜಃ |
ತೃತೀಯಂ ಪುರುಷಂ ಪ್ರಾಪ್ಯ ಬ್ರಾಹ್ಮಣತ್ವಂ ಗಮಿಷ್ಯತಿ ||30||
ನಿನ್ನ ಈ ಆಸೆಯು ಪೂರ್ಣವಾಗುವುದು. ಕುಶಿಕನಾದ ನಿನ್ನಿಂದ ಕೌಶಿಕನಾದ ದ್ವಿಜನು ಜನಿಸಿ, ಅವನಿಂದ ಜನಿಸುವ ಪುರುಷನು ಬ್ರಾಹ್ಮಣ್ಯವನ್ನು ಹೊಂದುವನು.
ವಂಶಸ್ತೇ ಪಾರ್ಥಿವಶ್ರೇಷ್ಠ ಭೃಗೂಣಾಮೇವ ತೇಜಸಾ |
ಪೌತ್ರಸ್ತೇ ಭವಿತಾ ವಿಪ್ರ ತಪಸ್ವೀ ಪಾವಕದ್ಯುತಿಃ ||31||
ಎಲೈ ಪಾರ್ಥಿವಶ್ರೇಷ್ಠನೇ, ಭೃಗುಗಳ ತೇಜಸ್ಸಿನಿಂದ (ಅನುಗ್ರಹದಿಂದ) ನಿನ್ನ ವಂಶವು ಬ್ರಾಹ್ಮಣ್ಯವನ್ನು ಪಡೆಯುತ್ತದೆ. ನಿನ್ನ ಪೌತ್ರನು ತಪಸ್ವಿಯೂ, ಅಗ್ನಿಗೆ ಸಮಾನವಾದ ತೇಜಸ್ಸುಳ್ಳವನೂ ಆಗುವನು.
ಯಃ ಸ ದೇವಮನುಷ್ಯಾಣಾಂ ಭಯಮುತ್ಪಾದಯಿಷ್ಯತಿ |
ತ್ರಯಾಣಾಂ ಚೈವ ಲೋಕಾನಾಂ ಸತ್ಯಮೇತದ್ ಬ್ರವೀಮಿ ತೇ ||32||
ಅವನು ದೇವತೆಗಳಿಗೂ ಮತ್ತು ಮನುಷ್ಯರಿಗೂ ಮತ್ತು ಮೂರು ಲೋಕಗಳಿಗೂ ಭಯವನ್ನುಂಟು ಮಾಡುವನು. ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ವರಂ ಗೃಹಾಣ ರಾಜರ್ಷೇ ಯಸ್ತೇ ಮನಸಿ ವರ್ತತೇ |
ತೀರ್ಥಯಾತ್ರಾಂ ಗಮಿಷ್ಯಾಮಿ ಪುರಾ ಕಾಲೋಽತಿವರ್ತತೇ ||33||
ಎಲೈ ರಾಜರ್ಷಿಯೇ, ನಿನ್ನ ಮನಸ್ಸಿನಲ್ಲಿರುವ ವರವನ್ನು ನನ್ನಿಂದ ಕೇಳಿ ಪಡೆ. ತೀರ್ಥಯಾತ್ರೆಗೆ ಹೋಗುವೆನು. ಕಾಲವು ಮೀರುತ್ತಿದೆ.
ಕುಶಿಕಃ
ಏಷ ಏವ ವರೋ ಮೇಽದ್ಯ ಯತ್ತ್ವಂ ಪ್ರೀತೋ ಮಹಾಮುನೇ |
ಭವತ್ವೇತದ್ಯಥಾತ್ಥ ತ್ವಂ ತಪಃ ಪೌತ್ರೇ ಮಮಾನಘ |
ಬ್ರಾಹ್ಮಣ್ಯಂ ಮೇ ಕುಲಸ್ಯಾಸ್ತು ಭಗವನ್ನೇಷ ಮೇ ವರಃ ||34||
ಕುಶಿಕ ಎಲೈ ಮಹಾಮುನಿಯೇ, ನೀವು ಪ್ರಸನ್ನರಾಗಿರುವುದೇ ಈ ದಿನ ನನಗೆ ನೀಡಿದ ಶ್ರೇಷ್ಠವಾದ ವರ. ಎಲೈ ಅನಘರೇ, ನೀವು ಹೇಳಿದಂತೆಯೇ ಎಲ್ಲವೂ ಆಗಲಿ. ನನ್ನ ಪೌತ್ರನಿಗೆ ಅಂತಹ ತಪಸ್ಸಿರಲಿ. ನನ್ನ ಕುಲವು ಬ್ರಾಹ್ಮಣ್ಯವನ್ನು ಪಡೆಯಲಿ. ಪೂಜ್ಯರೇ ಇದೇ ನಾನು ಕೇಳುವ ವರ.
ಪುನಶ್ಚಾಖ್ಯಾತುಮಿಚ್ಛಾಮಿ ಭಗವನ್ ವಿಸ್ತರೇಣ ವೈ |
ಕಥಮೇಷ್ಯತಿ ವಿಪ್ರತ್ವಂ ಕುಲಂ ಮೇ ಭೃಗುನಂದನ |

ಕಶ್ಚಾಸೌ ಭವಿತಾ ಬಂಧುರ್ಮಮ ಕಶ್ಚಾಪಿ ಸಮ್ಮತಃ ॥35॥
ಪೂಜ್ಯರೇ, ಪುನಃ ನಾನು ನಿಮ್ಮಿಂದ ಈ ವಿಷಯಗಳನ್ನು ವಿಸ್ತಾರವಾಗಿ ಕೇಳಲು ಬಯಸುತ್ತೇನೆ. ಎಲೈ ಭೃಗುನಂದನರೇ, ನನ್ನ ಕುಲವು ಹೇಗೆ ಬ್ರಾಹ್ಮಣ್ಯವನ್ನು ಹೊಂದುತ್ತದೆ? ನನಗೆ ಪೌತ್ರನಾಗಿ ಜನಿಸುವ ಬಂಧುವು ಯಾರು? ಅವನು ಯಾರಿಗೆ ಸಮ್ಮತನಾಗಿರುತ್ತಾನೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚ್ಯವನಕುಶಿಕಸಂವಾದೇ ಕುಶಿಕಸ್ಯ ಬ್ರಾಹ್ಮಣ್ಯವರಲಾಭೋ ನಾಮ ಪಂಚಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ಎಂಬತ್ತಾರನೆಯ ಅಧ್ಯಾಯ
ಚ್ಯವನರಿಂದ ಕುಶಿಕನಿಗೆ ಪರಶುರಾಮರ ಉತ್ಪತ್ತಿಯನ್ನು ಹೇಳಿ
ತೀರ್ಥಯಾತ್ರಾಗಮನ.
ಚ್ಯವನಃ
ಅವಶ್ಯಂ ಕಥನೀಯಂ ಮೇ ತವೈತನ್ನರಪುಂಗವ |
ಯದರ್ಥಂ ತ್ವಾಹಮುಚ್ಛೇತ್ತುಂ ಸಂಪ್ರಾಪ್ತೋ ಮನುಜಾಧಿಪ ॥1॥
ಚ್ಯವನ ಎಲೈ ನರಪುಂಗವನೇ, ಮನುಜಾಧಿಪನೇ, ನಾನು ಯಾವ ಉದ್ದೇಶದಿಂದ ನಿನ್ನನ್ನು ನಿರ್ಮೂಲಗೊಳಿಸಲು ಬಂದೆನೆಂಬುದನ್ನು ಅವಶ್ಯವಾಗಿ ನಿನಗೆ ಹೇಳಬೇಕು.
ಭೃಗೂಣಾಂ ಕ್ಷತ್ರಿಯಾ ಯಾಜ್ಯಾ ನಿತ್ಯಮೇವ ಜನಾಧಿಪ |
ತೇ ಚ ಭೇದಂ ಗಮಿಷ್ಯಂತಿ ದೈವಯುಕ್ತೇನ ಹೇತುನಾ ॥2॥
ಎಲೈ ಜನಾಧಿಪನೇ, ಕ್ಷತ್ರಿಯರಿಗೆ ಯಾವಾಗಲೂ ಭೃಗು ವಂಶದವರು ಪುರೋಹಿತರು. ದೈವಸಂಕಲ್ಪಕ್ಕೆ ಅನುಸಾರವಾಗಿ ಭೃಗುಗಳಿಗೂ ಮತ್ತು ಕ್ಷತ್ರಿಯರಿಗೂ ವಿರೋಧ ಉಂಟಾಗುವುದು.
ಕ್ಷತ್ರಿಯಾಶ್ಚ ಭೃಗೂನ್ ಸರ್ವಾನ್ ವಧಿಷ್ಯಂತಿ ನರಾಧಿಪ |
ಆ ಗರ್ಭಾದನುಕೃಂತಂತೋ ದೈವದಂಡನಿಪೀಡಿತಾಃ ॥3॥
ಎಲೈ ನರಾಧಿಪನೇ, ದೈವದಂಡದಿಂದ ಪೀಡಿತರಾದ ಕ್ಷತ್ರಿಯರು ಗರ್ಭದ ಒಳಗಿರುವವರಿಂದ ಹಿಡಿದು ಎಲ್ಲಾ ಭೃಗುಗಳನ್ನೂ ಕೊಲ್ಲುವರು.
ತತ ಉತ್ಪತ್ಸ್ಯತೇಽಸ್ಮಾಕಂ ಕುಲೇ ಗೋತ್ರವಿವರ್ಧನಃ |
ಔರ್ವೋ ನಾಮ ಮಹಾತೇಜಾ ಜ್ವಲನಾರ್ಕಸಮದ್ಯುತಿಃ ॥4॥
ಆಗ ನಮ್ಮ ಭೃಗುಕುಲದಲ್ಲಿ ಗೋತ್ರವನ್ನು ಬೆಳೆಸುವ ಮಹಾತೇಜಸ್ವಿಯೂ, ಜ್ವಲಿಸುವ ಅಗ್ನಿಗೆ ಮತ್ತು ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನೂ ಆದ ಔರ್ವನೆಂಬುವನು ಜನಿಸುತ್ತಾನೆ.
ಸ ತ್ರೈಲೋಕ್ಯವಿನಾಶಾಯ ಕೋಪಾಗ್ನಿಂ ಜನಯಿಷ್ಯತಿ |
ಮಹೀಂ ಸಪರ್ವತವನಾಂ ಯಃ ಕರಿಷ್ಯತಿ ಭಸ್ಮಸಾತ್ ॥5॥
ಅವನು ಮೂರುಲೋಕದ ನಾಶಕ್ಕಾಗಿ ಕೋಪಾಗ್ನಿಯನ್ನು ಸೃಷ್ಟಿಸುವನು. ಅವನು ಪರ್ವತ-ವನ ಸಹಿತವಾದ ಭೂಮಿಯನ್ನು ಭಸ್ಮ ಮಾಡುವನು.
ಕಂಚಿತ್ಕಾಲಂ ತು ತಂ ವಹ್ನಿಂ ಸ ಏವ ಶಮಯಿಷ್ಯತಿ |
ಸಮುದ್ರೇ ವಡವಾವಕ್ತ್ರೇ ಪ್ರಕ್ಷಿಪ್ಯ ಮುನಿಸತ್ತಮಃ ॥6॥
ಮುನಿಶ್ರೇಷ್ಠನಾದ ಅವನು ಸ್ವಲ್ಪ ಕಾಲವಾದ ನಂತರ ಆ ಅಗ್ನಿಯನ್ನು ಸಮುದ್ರದಲ್ಲಿ ವಡವಾಮುಖದಲ್ಲಿ ಹಾಕಿ ತಾನೇ ಶಮನಗೊಳಿಸುವನು.
ಪುತ್ರಂ ತಸ್ಯ ಮಹಾಭಾಗಮೃಚೀಕಂ ಭೃಗುನಂದನಮ್ |
ಸಾಕ್ಷಾತ್ಕೃತ್ಸ್ನೋ ಧನುರ್ವೇದಃ ಸಮುಪಸ್ಥಾಸ್ಯತೇಽನಘ ॥7॥
ಅವನ ಪುತ್ರ ಭೃಗುನಂದನನೂ, ಮಹಾನುಭಾವನೂ ಆದ ಋಚೀಕ. ಎಲೈ ಅನಘನೇ, ಸಮಗ್ರವಾದ ಚತುರ್ವೇದವು ಅವನನ್ನು ಒಲೈಸಿ ಆಶ್ರಯಿಸುತ್ತದೆ.
ಕ್ಷತ್ರಿಯಾಣಾಮಭಾವಾಯ ದೈವಯುಕ್ತೇನ ಹೇತುನಾ |
ಸ ತು ತಂ ಪ್ರತಿಗೃಹ್ಯೈವ ಪುತ್ರೇ ಸಂಕ್ರಾಮಯಿಷ್ಯತಿ ॥8॥
ಜಮದಗ್ನೌ ಮಹಾಭಾಗೇ ತಪಸಾ ಭಾವಿತಾತ್ಮನಿ |
ಸ ಚಾಪಿ ಭೃಗುಶಾರ್ದೂಲಸ್ತಂ ವೇದಂ ಧಾರಯಿಷ್ಯತಿ ॥9॥
ದೈವ ಸಂಕಲ್ಪಕ್ಕೆ ಅನುಸಾರವಾಗಿ, ಕ್ಷತ್ರಿಯರ ವಿನಾಶಕ್ಕಾಗಿ ಅವನು ಆ ಧನುರ್ವೇದವನ್ನು ಸ್ವೀಕರಿಸಿ ತನ್ನ ಪುತ್ರನೂ, ಮಹಾನುಭಾವನೂ, ತಪಸ್ಸಿನಿಂದ ಶುದ್ಧವಾದ ಅಂತಃಕರಣವುಳ್ಳವನೂ ಆದ ಜಮದಗ್ನಿಗೆ ಅದನ್ನು ಉಪದೇಶಿಸುವನು.
ಭೃಗುಶಾರ್ದೂಲನಾದ ಜಮದಗ್ನಿಯೂ ಸಹ ಆ ಧನುರ್ವೇದವನ್ನು ಧರಿಸುವನು.
ಕುಲಾತ್ತು ತವ ಧರ್ಮಾತ್ಮನ್ ಕನ್ಯಾಂ ಸೋಽಧಿಗಮಿಷ್ಯತಿ |
ಉದ್ಭಾವನಾರ್ಥಂ ಭವತೋ ವಂಶಸ್ಯ ನೃಪಸತ್ತಮ ॥10॥

ಎಲ್ಲೈ ಧರ್ಮಾತ್ಮನೇ, ನೃಪಶ್ರೇಷ್ಠನೇ, ಅವನು ನಿನ್ನ ಕುಲವನ್ನು ಉದ್ಧಾರ ಮಾಡುವುದಕ್ಕಾಗಿ ನಿನ್ನ ಕುಲದಿಂದ ಬಂದ ಕನ್ಯೆಯನ್ನು ಸ್ವೀಕರಿಸುವನು.
ಗಾಧೇರ್ದುಹಿತರಂ ಪ್ರಾಪ್ಯ ಪೌತ್ರೀಂ ತವ ಮಹಾತಪಾಃ |
ಬ್ರಾಹ್ಮಣಂ ಕ್ಷತ್ರಧರ್ಮಾಣಂ ರಾಮಮುತ್ಪಾದಯಿಷ್ಯತಿ ॥11॥
ಮಹಾತಪಸ್ವಿಯಾದ ಅವನು ಗಾಧಿಯ ಪುತ್ರಿಯೂ, ನಿನ್ನ ಪೌತ್ರಿಯೂ ಆದ ಕನ್ಯೆಯನ್ನು ಪತ್ನಿಯಾಗಿ ಪಡೆದು ಕ್ಷತ್ರಿಯ ಧರ್ಮವನ್ನು ಹೊಂದಿದ ಬ್ರಾಹ್ಮಣನಾದ ಪರಶುರಾಮನನ್ನು ಪುತ್ರನಾಗಿ ಪಡೆಯುವನು.
ಕ್ಷತ್ರಿಯಂ ವಿಪ್ರಕರ್ಮಾಣಂ ಬೃಹಸ್ಪತಿಮಿವೌಜಸಾ |
ವಿಶ್ವಾಮಿತ್ರಂ ತವ ಕುಲೇ ಗಾಧೇಃ ಪುತ್ರಂ ಸುಧಾರ್ಮಿಕಮ್ |
ತಪಸಾ ಮಹತಾ ಯುಕ್ತಂ ಪ್ರದಾಸ್ಯತಿ ಮಹಾದ್ಯುತೇ ॥12॥
ಎಲ್ಲೈ ಮಹಾದ್ಯುತಿಯೇ, ವಿಪ್ರಕರ್ಮವನ್ನು ಮಾಡುವ ಕ್ಷತ್ರಿಯನಾದ ಮತ್ತು ಪರಾಕ್ರಮದಲ್ಲಿ ಬೃಹಸ್ಪತಿಗೆ ಸಮನಾದ ಗಾಧಿಯ ಪುತ್ರನಾದ ಅತ್ಯಂತ ಧಾರ್ಮಿಕನಾದ, ದೊಡ್ಡ ತಪಸ್ಸಿನಿಂದ ಯುಕ್ತನಾದ ವಿಶ್ವಾಮಿತ್ರನನ್ನು ನಿನ್ನ ಕುಲಕ್ಕೆ ಕೊಡುವನು.
ಸ್ತ್ರಿಯೌ ತು ಕಾರಣಂ ತತ್ರ ಪರಿವರ್ತೇ ಭವಿಷ್ಯತಃ |
ಪಿತಾಮಹನಿಯೋಗಾದ್ ವೈ ನಾನ್ಯಥೈತದ್ ಭವಿಷ್ಯತಿ ॥13॥
ಈ ಬ್ರಾಹ್ಮಣ-ಕ್ಷತ್ರಿಯ ಪರಿವರ್ತನೆಗೆ ಅಲ್ಲಿ ಸ್ತ್ರೀಯರು ಕಾರಣರಾಗುವರು. ಬ್ರಹ್ಮದೇವರ ಆಜ್ಞೆಯಂತೆ ಇದು ಬೇರೆ ರೀತಿಯಲ್ಲಿ ನಡೆಯಲಾರದು.
ತೃತೀಯೇ ಪುರುಷೇ ತುಭ್ಯಂ ಬ್ರಾಹ್ಮಣತ್ವಮುಪೈಷ್ಯತಿ |
ಭವಿತಾ ತ್ವಂ ಚ ಸಂಬಂಧೀ ಭೃಗೂಣಾಂ ಭಾವಿತಾತ್ಮನಾಮ್ ॥14॥
ನಿನ್ನಿಂದ ಮೂರನೆಯ ಪುರುಷನು ಬ್ರಾಹ್ಮಣ್ಯವನ್ನು ಹೊಂದುವನು. ನೀನೂ ಸಹ ಶುದ್ಧ ಮನಸ್ಕರಾದ ಭಾರ್ಗವರ ಸಂಬಂಧಿಯಾಗುವಿ.
ಭೀಷ್ಮಃ
ಕುಶಿಕಸ್ತು ಮುನೇರ್ವಾಕ್ಯಂ ಚ್ಯವನಸ್ಯ ಮಹಾತ್ಮನಃ |
ಶ್ರುತ್ವಾ ಹೃಷ್ಟೋಽಭವದ್ ರಾಜಾ ವಾಕ್ಯಂ ಚೇದಮುವಾಚ ಹ |
ಏವಮಸ್ತ್ವಿತಿ ಧರ್ಮಾತ್ಮಾ ತದಾ ಭರತಸತ್ತಮ ॥15॥
ಭೀಷ್ಮ ಎಲ್ಲೈ ಭರತಸತ್ತಮನೇ, ಕುಶಿಕನಾದರೂ ಮಹಾತ್ಮರಾದ ಚ್ಯವನ ಋಷಿಗಳ ಮಾತನ್ನು ಕೇಳಿ ಸಂತೋಷಗೊಂಡು ಧರ್ಮಾತ್ಮನಾದ ಅವನು ಹಾಗೆಯೇ ಆಗಲಿ ಎಂದು ಹೇಳಿದನು.
ಚ್ಯವನಸ್ತು ಮಹಾತೇಜಾಃ ಪುನರೇವ ನರಾಧಿಪಮ್ |
ವರಾರ್ಥಂ ಚೋದಯಾಮಾಸ ತಮುವಾಚ ಸ ಪಾರ್ಥಿವಃ ॥16॥
ಮಹಾತೇಜಸ್ವಿಗಳಾದ ಚ್ಯವನರಾದರೂ ರಾಜನನ್ನು ಕುರಿತು ಪುನಃ ವರವನ್ನು ಕೇಳುವಂತೆ ಒತ್ತಾಯ ಮಾಡಿದರು. ಆಗ ರಾಜನು ಅವರನ್ನು ಕುರಿತು ಹೇಳಿದನು.
ಬಾಢಮೇವಂ ಗ್ರಹೀಷ್ಯಾಮಿ ಕಾಮಂ ತ್ವತ್ತೋ ಮಹಾಮುನೇ |
ಬ್ರಹ್ಮಭೂತಂ ಕುಲಂ ಮೇಽಸ್ತು ಧರ್ಮೇ ಚಾಸ್ಯ ಮನೋ ಭವೇತ್ ॥
ಎಲ್ಲೈ ಮಹರ್ಷಿಗಳೇ, ಒಳ್ಳೆಯದು. ನಿಮ್ಮಿಂದ ವರವನ್ನು ಪಡೆಯುವೆನು. ನಮ್ಮ ಕುಲಕ್ಕೆ ಬ್ರಾಹ್ಮಣ್ಯ ಉಂಟಾಗಲಿ ಮತ್ತು ಧರ್ಮದಲ್ಲಿ ಮನಸ್ಸುಂಟಾಗಲಿ (ಎಂದು ಹೇಳಿದನು).
ಏವಮುಕ್ತಸ್ತಥೇತ್ಯೇವಂ ಪ್ರತ್ಯುಕ್ತ್ವಾ ಚ್ಯವನೋ ಮುನಿಃ |
ಅಭ್ಯನುಜ್ಞಾಯ ನೃಪತಿಂ ತೀರ್ಥಯಾತ್ರಾಂ ಯಯೌ ತದಾ ॥18॥
ಹೀಗೆ ನೃಪತಿಯು ಹೇಳುತ್ತಿರಲು ಚ್ಯವನ ಮುನಿಗಳು ಹಾಗೆಯೇ ಆಗಲಿ ಎಂದು ಹೇಳಿ ಅವನಿಂದ ಅನುಮತಿಯನ್ನು ಪಡೆದು ತೀರ್ಥಯಾತ್ರೆಗೆ ಹೊರಟರು.
ಏತತ್ತೇ ಕಥಿತಂ ಸರ್ವಮಶೇಷೇಣ ಮಯಾ ನೃಪ |
ಭೃಗೂಣಾಂ ಕುಶಿಕಾನಾಂ ಚ ಪ್ರತಿ ಸಂಬಂಧಕಾರಣಮ್ ॥19॥
ಎಲ್ಲೈ ರಾಜನೇ, ಭಾರ್ಗವರಿಗೂ ಮತ್ತು ಕುಶಿಕರಿಗೂ ಹೇಗೆ ಪರಸ್ಪರ ಸಂಬಂಧ ಉಂಟಾಯಿತು ಎಂಬುದನ್ನು ನಾನು ನಿನಗೆ ಸಮಗ್ರವಾಗಿ ತಿಳಿಸಿದ್ದೇನೆ.
ಯಥೋಕ್ತಂ ಮುನಿನಾ ಚಾಪಿ ತಥಾ ತದಭವನ್ನೃಪ |
ಜನ್ಮ ರಾಮಸ್ಯ ಚ ಮುನೇರ್ವಿಶ್ವಾಮಿತ್ರಸ್ಯ ಚೈವ ಹ ॥20॥
ಎಲ್ಲೈ ಯುಧಿಷ್ಠಿರನೇ, ಚ್ಯವನರು ಹೇಳಿದಂತೆಯೇ ಪರಶುರಾಮರ ಉತ್ಪತ್ತಿಯೂ ಮತ್ತು ವಿಶ್ವಾಮಿತ್ರ ಋಷಿಗಳ ಉತ್ಪತ್ತಿಯೂ ಉಂಟಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚ್ಯವನಕುಶಿಕಸಂವಾದೇ ವಿಶ್ವಾಮಿತ್ರರಾಮಜನ್ಮಕಾರಣಕಥನಂ ನಾಮ
ಷಡಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ಎಂಬತ್ತೇಳನೆಯ ಅಧ್ಯಾಯ
ಯಮನಿಯಮದಾನಫಲಗಳು.
ಯುಧಿಷ್ಠಿರಃ
ಮುಹ್ಯಾಮೀವ ನಿಶಮ್ಯಾದ್ಯ ಚಿಂತಯಾನಃ ಪುನಃ ಪುನಃ |
ಹೀನಾಂ ಪಾರ್ಥಿವಸಂಘಾತೈಃ ಶ್ರೀಮದ್ಭಿಃ ಪೃಥಿವೀಮಿಮಾಮ್ ॥1॥
ಯುಧಿಷ್ಠಿರ ನಾನು ಶ್ರೀಮಂತರಾದ ಕ್ಷತ್ರಿಯ ಸಮೂಹದಿಂದ ರಹಿತವಾದ ಈ ಭೂಮಿಯನ್ನು ನೋಡಿ ಪುನಃ ಪುನಃ ಚಿಂತಿಸುತ್ತಾ ಈ ದಿನ ಮೋಹಕ್ಕೆ ಒಳಗಾಗುತ್ತಿದ್ದೇನೆ.
ಪ್ರಾಪ್ಯ ರಾಜ್ಯಾನಿ ಶತಶೋ ಮಹೀಂ ಜಿತ್ವಾಪಿ ಭಾರತ |
ಕೋಟಿಶಃ ಪುರುಷಾನ್ ಹತ್ವಾ ಪರಿತಪ್ಯೇ ಪಿತಾಮಹ ॥2॥
ಎಲೈ ಭಾರತನೇ, ಪಿತಾಮಹನೇ, ಭೂಮಿಯನ್ನು ಗೆದ್ದು ನೂರಾರು ರಾಜ್ಯಗಳನ್ನು ಪಡೆದರೂ ಕೋಟಿಗಟ್ಟಲೆ ಪುರುಷರನ್ನು ಕೊಂದು ಪರಿತಪಿಸುತ್ತಿದ್ದೇನೆ.
ಕಾ ನು ತಾಸಾಂ ವರಸ್ತ್ರೀಣಾಮವಸ್ಥಾಽದ್ಯ ಭವಿಷ್ಯತಿ |
ಯಾ ಹೀನಾಃ ಪತಿಭಿಃ ಪುತ್ರೈರ್ಮಾತುಲೈರ್ಭ್ರಾತೃಭಿಸ್ತಥಾ ॥3॥
ಪತಿಗಳಿಂದಲೂ, ಪುತ್ರರಿಂದಲೂ, ಸೋದರಮಾವಂದಿರಿಂದಲೂ, ಸಹೋದರರಿಂದಲೂ ಹೀನರಾದ ಸುಂದರ ಸ್ತ್ರೀಯರಿಗೆ ಈ ದಿನ ಎಂತಹ ಅವಸ್ಥೆಯು ಉಂಟಾಗುವುದು!
ವಯಂ ಹಿ ತಾನ್ ಗುರೂನ್ ಹತ್ವಾ ಜ್ಞಾತೀಂಶ್ಚ ಸುಹೃದೋಽಪಿ ಚ |
ಅವಾಕ್‌ಶೀರ್ಷಾಃ ಪತಿಷ್ಯಾಮೋ ನರಕೇ ನಾತ್ರ ಸಂಶಯಃ ॥4॥
ನಾವಾದರೂ ಆ ಗುರುಗಳನ್ನೂ, ಬಾಂಧವರನ್ನೂ, ಸುಹೃದರನ್ನೂ ಕೊಂದು ತಲೆಕೆಳಗಾಗಿ ನರಕದಲ್ಲಿ ಬೀಳುವೆವು. ಇದರಲ್ಲಿ ಸಂಶಯವಿಲ್ಲ.
ಶರೀರಂ ಯೋಕ್ತುಮಿಚ್ಛಾಮಿ ತಪಸೋಗ್ರೇಣ ಭಾರತ |
ಉಪದಿಷ್ಟಮಿಹೇಚ್ಛಾಮಿ ತತ್ತ್ವತೋಽಹಂ ವಿಶಾಂಪತೇ ॥5॥
ಎಲೈ ಭಾರತನೇ, ನಾನು ನನ್ನ ಶರೀರವನ್ನು ಉಗ್ರವಾದ ತಪಸ್ಸಿನಲ್ಲಿ ತೊಡಗಿಸಲು ಬಯಸುತ್ತೇನೆ. ಎಲೈ ರಾಜನೇ, ಈ ವಿಷಯದಲ್ಲಿ ನಿನ್ನ ಸತ್ಯವಾದ ಉಪದೇಶವನ್ನು ಕೇಳಲು ಬಯಸುತ್ತೇನೆ.
ವೈಶಂಪಾಯನಃ
ಯುಧಿಷ್ಠಿರಸ್ಯ ತದ್ವಾಕ್ಯಂ ಶ್ರುತ್ವಾ ಭೀಷ್ಮೋ ಮಹಾಮನಾಃ |
ಪರೀಕ್ಷ್ಯ ನಿಪುಣಂ ಬುದ್ಧ್ಯಾ ಯುಧಿಷ್ಠಿರಮಭಾಷತ ॥6॥
ವೈಶಂಪಾಯನ ಯುಧಿಷ್ಠಿರನ ಆ ಮಾತನ್ನು ಕೇಳಿ ಧೈರ್ಯಶಾಲಿಗಳಾದ ಭೀಷ್ಮರು ಅವರ ಬುದ್ಧಿಯಿಂದ ವಿಷಯವನ್ನು ಚೆನ್ನಾಗಿ ಪರೀಕ್ಷಿಸಿ ಯುಧಿಷ್ಠಿರನನ್ನು ಕುರಿತು ಮಾತನಾಡಿದರು.
ಭೀಷ್ಮಃ
ರಹಸ್ಯಮದ್ಭುತಂ ಚೈವ ಶೃಣು ವಕ್ಷ್ಯಾಮಿ ಯತ್ ತ್ವಯಿ |
ಯಾ ಗತಿಃ ಪ್ರಾಪ್ಯತೇ ಯೇನ ಪ್ರೇತ್ಯಭಾವೇಷು ಭಾರತ ॥7॥
ಭೀಷ್ಮ ಎಲೈ ಭಾರತನೇ, ಮರಣವನ್ನು ಹೊಂದಿದ ಮೇಲೆ ಯಾರು ಯಾವ ಗತಿಯನ್ನು ಹೊಂದುತ್ತಾರೆಂಬ ಅದ್ಭುತವಾದ ವಿಷಯವನ್ನು ಹೇಳುವೆನು, ಅದನ್ನು ನೀನು ಕೇಳುವವನಾಗು.
ತಪಸಾ ಪ್ರಾಪ್ಯತೇ ಸ್ವರ್ಗಸ್ತಪಸಾ ಪ್ರಾಪ್ಯತೇ ಯಶಃ |
ಆಯುಃಪ್ರಕರ್ಷೋ ಭೋಗಾಶ್ಚ ಲಭ್ಯಂತೇ ತಪಸಾ ವಿಭೋ ॥8॥
ತಪಸ್ಸಿನಿಂದ ಸ್ವರ್ಗಪ್ರಾಪ್ತಿಯಾಗುತ್ತದೆ, ಕೀರ್ತಿಪ್ರಾಪ್ತಿಯಾಗುತ್ತದೆ. ಎಲೈ ವಿಭುವೇ, ಆಯುಷ್ಯ ವೃದ್ಧಿ, ಭೋಗಗಳು ತಪಸ್ಸಿನಿಂದ ಲಭಿಸುತ್ತವೆ.
ಜ್ಞಾನಂ ವಿಜ್ಞಾನಮಾರೋಗ್ಯಂ ರೂಪಂ ಸಂಪತ್ ತಥೈವ ಚ |
ಸೌಭಾಗ್ಯಂ ಚೈವ ತಪಸಾ ಪ್ರಾಪ್ಯತೇ ಭರತರ್ಷಭ ॥9॥
ಎಲೈ ಭರತರ್ಷಭನೇ, ಜ್ಞಾನ, ವಿಜ್ಞಾನ, ಆರೋಗ್ಯ, ರೂಪ, ಐಶ್ವರ್ಯ, ಸೌಭಾಗ್ಯ ಎಲ್ಲವೂ ತಪಸ್ಸಿನಿಂದ ದೊರೆಯುತ್ತವೆ.
ಧನಂ ಪ್ರಾಪ್ನೋತಿ ತಪಸಾ ಮೌನಂ ಜ್ಞಾನಂ ಪ್ರಯಚ್ಛತಿ |
ಉಪಭೋಗಾಂಸ್ತು ದಾನೇನ ಬ್ರಹ್ಮಚರ್ಯೇಣ ಜೀವಿತಮ್ ॥10॥
ತಪಸ್ಸಿನಿಂದ ಧನವನ್ನು ಪಡೆಯುತ್ತಾನೆ. ಮೌನವು ಜ್ಞಾನವನ್ನು ಕೊಡುತ್ತವೆ. ದಾನವು ಉಪಭೋಗಗಳನ್ನೂ, ಬ್ರಹ್ಮಚರ್ಯವು ದೀರ್ಘಾಯುಷ್ಯವನ್ನೂ ಕೊಡುತ್ತವೆ.
ಅಹಿಂಸಾಯಾಃ ಫಲಂ ರೂಪಂ ದೀಕ್ಷಾಯಾ ಜನ್ಮ ವೈ ಕುಲೇ |
ಫಲಮೂಲಾಶಿನಾಂ ರಾಜ್ಯಂ ಸ್ವರ್ಗಃ ಪರ್ಣಾಶಿನಾಂ ಭವೇತ್ ॥11॥
ಅಹಿಂಸೆಯ ಫಲವು ರೂಪ. ದೀಕ್ಷೆಯ ಫಲವು ಸತ್ಕುಲದಲ್ಲಿ ಜನ್ಮ. ಫಲಮೂಲಗಳನ್ನು ಸ್ವೀಕರಿಸಿ ತಪಸ್ಸನ್ನು ಮಾಡುವವರಿಗೆ ರಾಜ್ಯವೂ ಮತ್ತು ಎಲೆಗಳನ್ನು ಆಹಾರವಾಗಿ ಸ್ವೀಕರಿಸಿ ತಪಸ್ಸನ್ನು ಮಾಡುವವರಿಗೆ ಸ್ವರ್ಗವೂ ಫಲವಾಗಿ ದೊರೆಯುತ್ತವೆ.
ಪಯೋಭಕ್ಷೋ ದಿವಂ ಯಾತಿ ಸ್ನಾನೇನ ದ್ರವಿಣಾಧಿಕಃ |
ಗುರುಶು(ಶಿ)ಶ್ರೂಷಯಾ ವಿದ್ಯಾ ನಿತ್ಯಶ್ರಾದ್ಧೇನ ಸಂತತಿಃ ॥12॥

ಕ್ಷೀರ ಪಾನ ಮಾಡಿ ತಪಸ್ಸನ್ನು ಮಾಡುವವನು ಸ್ವರ್ಗಕ್ಕೆ ಹೋಗುತ್ತಾನೆ. ಸ್ನಾನದಿಂದ ಅಧಿಕ ದ್ರವ್ಯಶಾಲಿಯಾಗುತ್ತಾನೆ. ಗುರುಶುಶ್ರೂಷೆಯಿಂದ ವಿದ್ಯೆಯನ್ನೂ, ನಿತ್ಯಶ್ರಾದ್ಧದಿಂದ ಸಂತತಿಯನ್ನೂ ಪಡೆಯುತ್ತಾನೆ.
ಗವಾಢ್ಯಃ ಶಾಕದೀಕ್ಷಾಭಿಃ ಸ್ವರ್ಗಮಾಹುಸ್ತೃಣಾಶನಾತ್ |
ಸ್ತ್ರಿಯಸ್ತ್ರಿಷವಣಸ್ನಾನಾದ್ ವಾಯುಂ ಪೀತ್ವಾ ಕ್ರತುಂ ಲಭೇತ್ ॥13॥
ಶಾಕವ್ರತವನ್ನು ಮಾಡುವುದರಿಂದ ಗೋಸಂಪತ್ತಿಯನ್ನು ಪಡೆಯುತ್ತಾನೆ. ಹುಲ್ಲನ್ನು ತಿಂದು ತಪಸ್ಸನ್ನು ಮಾಡುವುದರಿಂದ ಸ್ವರ್ಗವನ್ನು ಪಡೆಯುತ್ತಾನೆಂದು ಹೇಳುತ್ತಾರೆ. ಮೂರು ಕಾಲದಲ್ಲಿಯೂ ಸ್ನಾನವನ್ನು ಪಡೆಯುವುದರಿಂದ ಒಳ್ಳೆಯ ಶೀಲವನ್ನು ಪಡೆಯುತ್ತಾನೆ. ವಾಯುಭಕ್ಷನಾಗಿ ತಪಸ್ಸನ್ನು ಮಾಡಿದರೆ ಯಾಗವನ್ನು ಮಾಡುವವನಾಗುತ್ತಾನೆ (ಯಾಗದಿಂದ ಉಂಟಾಗುವ ಫಲವನ್ನು ಪಡೆಯುತ್ತಾನೆ).
ನಿತ್ಯಸ್ನಾಯೀ ಭವೇದ್ ದಕ್ಷಃ ಸಂಧ್ಯೇ ತು ದ್ವೇ ಜಪನ್ ದ್ವಿಜಃ |
ಮರುಂ ಸಾಧಯತೋ ರಾಜ್ಯಂ ನಾಕಪೃಷ್ಠಮನಾಶಕೇ ॥14॥
ನಿತ್ಯವೂ ಸ್ನಾನವನ್ನು ಮಾಡುವವನು ದಕ್ಷನಾಗುತ್ತಾನೆ. ಎರಡು ಸಂಧ್ಯಾಕಾಲದಲ್ಲಿ ಜಪವನ್ನು ಮಾಡುವವನು ಬ್ರಾಹ್ಮಣನಾಗುತ್ತಾನೆ. ಮರುಭೂಮಿಯನ್ನು ಹದಗೊಳಿಸಿ ವ್ಯವಸಾಯವನ್ನು ಮಾಡುವವನು ರಾಜ್ಯವನ್ನು ಪಡೆಯುತ್ತಾನೆ. ಆಹಾರವನ್ನು ಸ್ವೀಕರಿಸದೆ ತಪಸ್ಸನ್ನು ಮಾಡುವವನು ಸ್ವರ್ಗವನ್ನು ಪಡೆಯುತ್ತಾನೆ.
ಸ್ಥಂಡಿಲೇ ಶಯಮಾನಾನಾಂ ಗೃಹಾಣಿ ಶಯನಾನಿ ಚ |
ಚೀರವಲ್ಕಲವಾಸೋಭಿರ್ವಾಸಾಂಸ್ಯಾಭರಣಾನಿ ಚ ॥15॥
ಭೂಮಿಯ ಮೇಲೆ ಮಲಗುವವನು ಗೃಹಗಳನ್ನು ಮತ್ತು ಶಯನಗಳನ್ನು ಪಡೆಯುತ್ತಾನೆ. ನಾರುಮಡಿ ಮತ್ತು ತೊಗಟೆಗಳನ್ನು ಉಡುವವನು ವಸಹತ್ರಭರಣಗಳನ್ನು ಪಡೆಯುತ್ತಾನೆ.
ಶಯ್ಯಾಸನಾನಿ ಯಾನಾನಿ ಯೋಗಯುಕ್ತೇ ತಪೋಧನೇ |
ಅಗ್ನಿಪ್ರವೇಶೇ ನಿಯತಂ ಬ್ರಹ್ಮಲೋಕೋ ವಿಧೀಯತೇ ॥16॥
ಯೋಗಯುಕ್ತನಾದ ತಪಸ್ವಿಗೆ ಶಯ್ಯಾಸನ ಯಾನಗಳು ದೊರೆಯುತ್ತವೆ. ಅಗ್ನಿ ಪ್ರವೇಶ ಮಾಡುವವನಿಗೆ ನಿಶ್ಚಿತವಾಗಿ ಬ್ರಹ್ಮಲೋಕವು ದೊರೆಯುತ್ತದೆ.
ರಸಾನಾಂ ಪ್ರತಿಸಂಹಾರಾತ್ ಸೌಭಾಗ್ಯಮಿಹ ವಿಂದತಿ |
ಆಮಿಷಪ್ರತಿಸಂಹಾರಾತ್ ಪ್ರಜಾಽಸ್ಯಾಯುಷ್ಮತೀ ಭವೇತ್ ॥17॥
ರಸ ಪದಾರ್ಥಗಳನ್ನು ದಾನ ಮಾಡುವುದರಿಂದ ಈ ಲೋಕದಲ್ಲಿ ಸೌಭಾಗ್ಯವು ದೊರೆಯುತ್ತದೆ. ಮಾಂಸವನ್ನು ದಾನ ಮಾಡುವುದರಿಂದ ಅವನ ಪ್ರಜೆಗಳು ಆಯುಷ್ಯ ವೃದ್ಧಿಯನ್ನು ಪಡೆಯುತ್ತಾರೆ.
ಉದವಾಸಂ ವಸೇದ್ ಯಸ್ತು ಸ ನರಾಧಿಪತಿರ್ಭವೇತ್ |
ಸತ್ಯವಾದೀ ನರಶ್ರೇಷ್ಠ ದೈವತೈಃ ಸಹ ಮೋದತೇ ॥18॥
ನೀರಿನಲ್ಲಿ ವಾಸ ಮಾಡಿ ತಪಸ್ಸನ್ನು ಮಾಡುವವನು ರಾಜನಾಗುತ್ತಾನೆ. ಎಲೈ ನರಶ್ರೇಷ್ಠನೇ, ಸತ್ಯವನ್ನು ನುಡಿಯುವವನು ದೇವತೆಗಳ ಜೊತೆಯಲ್ಲಿ ಸಂತೋಷವನ್ನು ಪಡುತ್ತಾನೆ.
ಕೀರ್ತಿರ್ಭವತಿ ದಾನೇನ ತಥಾಽರೋಗ್ಯಮಹಿಂಸಯಾ |
ದ್ವಿಜಶು(ಶಿ)ಶ್ರೂಷಯಾ ರಾಜ್ಯಂ ದ್ವಿಜತ್ವಂ ವಾಪಿ ಪುಷ್ಕಳಮ್ ॥19॥
ದಾನದಿಂದ ಕೀರ್ತಿಯೂ, ಅಹಿಂಸೆಯಿಂದ ಆರೋಗ್ಯವೂ, ಬ್ರಾಹ್ಮಣರ ಸೇವೆಯಿಂದ ರಾಜ್ಯವೂ ಮತ್ತು ಶ್ರೇಷ್ಠವಾದ ದ್ವಿಜತ್ವವೂ ದೊರೆಯುತ್ತವೆ.
ಪಾನೀಯಸ್ಯ ಪ್ರದಾನೇನ ಕೀರ್ತಿರ್ಭವತಿ ಶಾಶ್ವತೀ |
ಅನ್ನಪಾನಪ್ರದಾನೇನ ತೃಪ್ಯತೇ ಕಾಮಭೋಗತಃ ॥20॥
ಜಲದಾನದಿಂದ ಶಾಶ್ವತವಾದ ಕೀರ್ತಿಯುಂಟಾಗುತ್ತದೆ. ಅನ್ನಪಾನಗಳ ದಾನದಿಂದ ತೃಪ್ತಿಯಾಗುವಷ್ಟು ಕಾಮಭೋಗವನ್ನು ಅನುಭವಿಸುತ್ತಾನೆ.
ಸಾಂತ್ವದಃ ಸರ್ವಭೂತಾನಾಂ ಸರ್ವಶೋಕೈರ್ವಿಮುಚ್ಯತೇ |
ದೇವಶುಶ್ರೂಷಯಾ ರಾಜ್ಯಂ ದಿವ್ಯಂ ರೂಪಂ ನಿಗಚ್ಛತಿ ॥21॥
ಎಲ್ಲ ಪ್ರಾಣಿಗಳಿಗೂ ಸಾಂತ್ವನವನ್ನು ಕೊಡುವವನು ಎಲ್ಲ ಶೋಕಗಳಿಂದಲೂ ನಿರ್ಮುಕ್ತನಾಗುತ್ತಾನೆ. ದೇವತಾ ಸೇವೆಯಿಂದ ರಾಜ್ಯವನ್ನೂ ಮತ್ತು ದಿವ್ಯರೂಪವನ್ನೂ ಪಡೆಯುತ್ತಾನೆ.
ದೀಪಾಲೋಕಪ್ರದಾನೇನ ಚಕ್ಷುಷ್ಮಾನ್ ಭವತೇ ನರಃ |
ಪ್ರೇಕ್ಷಣೀಯಪ್ರದಾನೇನ ಸ್ಮೃತಿಂ ಮೇಧಾಂ ಚ ವಿಂದತಿ ॥22॥
ಪ್ರಕಾಶಮಾನವಾದ ದೀಪ ಪ್ರದಾನದಿಂದ ಮನುಷ್ಯನು ಒಳ್ಳೆಯ ಚಕ್ಷುಸ್ಸನ್ನು ಪಡೆಯುತ್ತಾನೆ. ಸುಂದರವಾದ ವಸ್ತುಗಳ ದಾನದಿಂದ ಸ್ಮೃತಿಶಕ್ತಿಯನ್ನು ಮತ್ತು ಮೇಧಾಶಕ್ತಿಯನ್ನು ಪಡೆಯುತ್ತಾನೆ.
ಗಂಧಮಾಲ್ಯನಿವೃತ್ತ್ಯಾ ತು ಕೀರ್ತಿರ್ಭವತಿ ಪುಷ್ಕಳಾ |
ಕೇಶಶ್ಮಶ್ರೂನ್ ಧಾರಯತಾಮಗ್ರ್ಯಾ ಭವತಿ ಸಂತತಿಃ ॥23॥
ಗಂಧಮಾಲ್ಯಗಳ ದಾನದಿಂದ ಪುಷ್ಕಳವಾದ ಕೀರ್ತಿಯುಂಟಾಗುತ್ತದೆ. ಗಡ್ಡ- ಮೀಸೆಗಳನ್ನು ಧರಿಸಿದವರಿಗೆ ಶ್ರೇಷ್ಠವಾದ ಸಂತತಿಯುಂಟಾಗುತ್ತದೆ.
ಉಪವಾಸಂ ಚ ದೀಕ್ಷಾಂ ಚ ಅಭಿಷೇಕಂ ಚ ಪಾರ್ಥಿವ |

ಕೃತ್ವಾ ದ್ವಾದಶ ವರ್ಷಾಣಿ ವೀರಸ್ಥಾನಾದ್ ವಿಶಿಷ್ಯತೇ ॥24॥
ಎಲೈ ರಾಜನೇ, ಉಪವಾಸ (ಭೋಗದ ತ್ಯಾಗ), ದೀಕ್ಷೆ ಮತ್ತು ಸ್ನಾನಗಳನ್ನು ಹನ್ನೆರಡು ವರ್ಷ ಮಾಡಿದರೆ ಅದು ಯುದ್ಧದಲ್ಲಿ ವೀರ ಮರಣವನ್ನು ಪಡೆಯುವುದಕ್ಕಿಂತ ಅಧಿಕವಾದ ಸ್ಥಾನವನ್ನು ಕೊಡುತ್ತದೆ.
ದಾಸೀದಾಸಮಲಂಕಾರಾನ್ ಕ್ಷೇತ್ರಾಣಿ ಚ ಗೃಹಾಣಿ ಚ |
ಬ್ರಹ್ಮದೇಯಾಂ ಸುತಾಂ ದತ್ತ್ವಾ ಪ್ರಾಪ್ನೋತಿ ಮನುಜರ್ಷಭ ॥25॥
ಎಲೈ ರಾಜನೇ, ಬ್ರಾಹ್ಮಪದ್ಧತಿಯಲ್ಲಿ ವಿವಾಹ ಮಾಡಿ ಕನ್ಯೆಯನ್ನು ಬ್ರಾಹ್ಮಣನಿಗೆ ಕೊಟ್ಟು ದಾಸಿ-ದಾಸರನ್ನು, ಅಲಂಕಾರಗಳನ್ನು, ಕ್ಷೇತ್ರ ಮತ್ತು ಗೃಹಗಳನ್ನು ಪಡೆಯುತ್ತಾನೆ.
ಕ್ರತುಭಿಶ್ಚೋಪವಾಸೈಶ್ಚ ತ್ರಿದಿವಂ ಯಾತಿ ಭಾರತ |
ಲಭತೇ ಚ ಚಿರಂ ಸ್ಥಾನಂ ಬಲಿಪುಷ್ಪಪ್ರದೋ ನರಃ ॥26॥
ಕ್ರತುಗಳು, ಉಪವಾಸಗಳು ಇವುಗಳನ್ನು ಮಾಡಿದವನು ಸ್ವರ್ಗವನ್ನು ಪಡೆಯುತ್ತಾನೆ. ಆಹಾರವನ್ನು ಮತ್ತು ಪುಷ್ಪಗಳನ್ನು ದಾನ ಮಾಡುವವನು ಶಾಶ್ವತವಾದ ದಾನವನ್ನು ಹೊಂದುತ್ತಾನೆ.
ಸುವರ್ಣಶೃಂಗೈಸ್ತು ವಿಭೂಷಿತಾನಾಂ
ಗವಾಂ ಸಹಸ್ರಸ್ಯ ನರಃ ಪ್ರದಾತಾ |
ಪ್ರಾಪ್ನೋತಿ ಪುಣ್ಯಂ ದಿವಿ ದೇವಲೋಕ-
ಮಿತ್ಯೇವಮಾಹುರ್ಮುನಿದೇವಸಂಘಾಃ ॥27॥
ಸುವರ್ಣಶೃಂಗಗಳಿಂದ ಭೂಷಿತವಾದ ಸಹಸ್ರ ಗೋವುಗಳನ್ನು ದಾನ ಮಾಡುವ ಮನುಷ್ಯನು ಸ್ವರ್ಗದಲ್ಲಿ ಪವಿತ್ರವಾದ ದೇವಲೋಕವನ್ನು ಪಡೆಯುವನೆಂದು ಮುನಿ- ದೇವಸಮೂಹಗಳು ಹೇಳುತ್ತವೆ.
ಪ್ರಯಚ್ಛತೇ ಯಃ ಕಪಿಲಾಂ ಸಚೈಲಾಂ
ಕಾಂಸ್ಯೋಪದೋಹಾಂ ಕನಕಾಗ್ರಶೃಂಗೀಮ್ |
ತೈಸ್ತೈರ್ಗುಣೈಃ ಕಾಮದುಘಾಽಸ್ಯ ಭೂತ್ವಾ
ನರಂ ಪ್ರದಾತಾರಮುಪೈತಿ ಸಾ ಗೌಃ ॥28॥
ಯಾವನು ವಸ್ತ್ರ, ಕಂಚಿನಪಾತ್ರೆ ಮತ್ತು ಕನಕ ಶೃಂಗಾಗಳಿಂದ ಕೂಡಿದ ಕಪಿಲ ಧೇನುವನ್ನು ದಾನ ಮಾಡುತ್ತಾನೆಯೋ ಅವನಿಗೆ ಆ ಧೇನುವು ಆಯಾ ಗುಣಗಳಿಂದ ಕೂಡಿದ ಕಾಮಧೇನುವಾಗಿ ದಾನ ಮಾಡಿದವನ ಸಮೀಪಕ್ಕೆ ಬರುತ್ತದೆ.
ಯಾವಂತಿ ಲೋಮಾನಿ ಭವಂತಿ ಧೇನ್ವಾಃ
ತಾವತ್ಫಲಂ ಪ್ರಾಪ್ನುತೇ ಗೋಪ್ರದಾತಾ |
ಪುತ್ರಾಂಶ್ಚ ಪೌತ್ರಾಂಶ್ಚ ಕುಲಂ ಚ ಸರ್ವಮ್
ಆಸಪ್ತಮಂ ತಾರಯತೇ ಪರತ್ರ ॥29॥
ಗೋವಿನ ದೇಹದಲ್ಲಿ ಎಷ್ಟು ರೋಮಗಳಿರುತ್ತವೆಯೋ ಗೋದಾನವನ್ನು ಮಾಡುವವನು ಅಷ್ಟು ಫಲವನ್ನು ಪಡೆಯುತ್ತಾನೆ. ಈ ಲೋಕದಲ್ಲಿ ಪುತ್ರ-ಪೌತ್ರರನ್ನು ಪಡೆದು ಏಳು ತಲೆಗಳವರೆಗೆ ಪರಲೋಕದಲ್ಲಿ ತನ್ನ ಕುಲದ ಎಲ್ಲರನ್ನೂ ಉದ್ಧರಿಸುತ್ತಾನೆ.
ಸದಕ್ಷಿಣಾಂ ಕಾಂಚನಚಾರುಶೃಂಗೀಂ
ಕಾಂಸ್ಯೋಪದೋಹಾಂ ದ್ರವಿಣೋತ್ತರೀಯಾಮ್ |
ಧೇನುಂ ತಿಲಾನಾಂ ದದತೋ ದ್ವಿಜಾಯ
ಲೋಕಾ ವಸೂನಾಂ ಸುಲಭಾ ಭವಂತಿ ॥30॥
ದಕ್ಷಿಣೆ ಸಹಿತವಾದ ಸುವರ್ಣಮಯ ಅಲಂಕಾರದಿಂದ ಕೂಡಿದ ಶೃಂಗಗಳುಳ್ಳ, ಕಂಚಿನ ಪಾತ್ರೆಯನ್ನುಳ್ಳ, ಒಳ್ಳೆಯ ಉತ್ತರೀಯವನ್ನು ಹೊದಿಸಿದ ಗೋವನ್ನು ಮತ್ತು ತಿಲಗಳನ್ನು ಬ್ರಾಹ್ಮಣನಿಗೆ ಕೊಡುವವರಿಗೆ ವಸುಗಳ ಲೋಕವು ಅನಾಯಾಸದಿಂದ ದೊರೆಯುತ್ತದೆ.
ಸ್ವಕರ್ಮಭಿರ್ಮಾನವಂ ಸನ್ನಿಬದ್ಧಂ
ತೀವ್ರಾಂಧಕಾರೇ ನರಕೇ ಪತಂತಮ್ |
ಮಹಾರ್ಣವೇ ನೌರಿವ ವಾಯುಯುಕ್ತಾ
ದಾನಂ ಗವಾಂ ತಾರಯತೇ ಪರತ್ರ ॥31॥
ತನ್ನ ಕರ್ಮಗಳಿಂದ ನರಕದ ತೀವ್ರಾಂಧಕಾರದಲ್ಲಿ ಬಿದ್ದು ಕಟ್ಟಲ್ಪಟ್ಟ ಮನುಷ್ಯನನ್ನು ಮಹಾಸಮುದ್ರದಲ್ಲಿ ವಾಯುವಿನಿಂದ ಪ್ರೇರಿಸಲ್ಪಟ್ಟ ನಾವೆಯಂತೆ ಗೋದಾನವು ಪರಲೋಕದಲ್ಲಿ ದಾಟಿಸುತ್ತದೆ.
ಯೋ ಬ್ರಹ್ಮದೇಯಾಂ ತು ದದಾತಿ ಕನ್ಯಾಂ
ಭೂಮಿಪ್ರದಾನಂ ಚ ಕರೋತಿ ವಿಪ್ರೇ |
ದದಾತಿ ಚಾನ್ನಂ ವಿಧಿವಚ್ಚ ಯಶ್ಚ
ಸ ಲೋಕಮಾಪ್ನೋತಿ ಪುರಂದರಸ್ಯ ॥32॥
ಬ್ರಾಹ್ಮ ಪದ್ಧತಿಯಿಂದ ಕನ್ಯಾದಾನವನ್ನು ಮಾಡುವವನೂ, ಬ್ರಾಹ್ಮಣನಿಗೆ ಭೂಮಿ ಪ್ರದಾನವನ್ನು ಮಾಡುವವನೂ ಮತ್ತು ಬ್ರಾಹ್ಮಣನಿಗೆ ವಿಧಿಪ್ರಕಾರವಾಗಿ ಅನ್ನದಾನವನ್ನು ಮಾಡುವವನೂ ಸಹ ಇಂದ್ರಲೋಕವನ್ನು ಪಡೆಯುತ್ತಾರೆ.
ನೈವೇಶಿಕಂ ಸರ್ವಗುಣೋಪಪನ್ನಂ
ದದಾತಿ ವೈ ಯಸ್ತು ನರೋ ದ್ವಿಜಾಯ |
ಸ್ವಾಧ್ಯಾಯಚಾರಿತ್ರಗುಣಾನ್ವಿತಾಯ

ತಸ್ಯಾಪಿ ಲೋಕಾಃ ಕುರುಷೂತ್ತರೇಷು ॥33॥
ಯಾವ ಮನುಷ್ಯನು ಸ್ವಾಧ್ಯಾಯ ಚಾರಿತ್ರ್ಯ ಸಂಪನ್ನನಾದ ಬ್ರಾಹ್ಮಣನಿಗೆ ಸರ್ವೋಪಸ್ಕರಗಳಿಂದ ಸಹಿತವಾದ ಗೃಹವನ್ನು ದಾನ ಮಾಡುತ್ತಾನೆಯೋ ಅವನು ಉತ್ತರಕುರುದೇಶದಲ್ಲಿ ಜನ್ಮವನ್ನು ಪಡೆಯುತ್ತಾನೆ.
ಧುರ್ಯಪ್ರದಾನೇನ ಗವಾಂ ತಥಾಶ್ವೈ-
ರ್ಲೋಕಾನವಾಪ್ನೋತಿ ನರೋ ವಸೂನಾಮ್ ।
ಸ್ವರ್ಗಾಯ ಚಾಹುರ್ಹಿ ಹಿರಣ್ಯದಾನಂ
ತತೋ ವಿಶಿಷ್ಟಂ ಕನಕಪ್ರದಾನಮ್ ॥34॥
ಭಾರವನ್ನು ಹೊರುವ ಎತ್ತುಗಳನ್ನು, ಗೋವುಗಳನ್ನು ಮತ್ತು ಅಶ್ವಗಳನ್ನು ದಾನ ಮಾಡುವವನು ವಸುಗಳ ಲೋಕವನ್ನು ಹೊಂದುತ್ತಾನೆ. ಹಿರಣ್ಯದಾನವು ಸ್ವರ್ಗಪ್ರಾಪ್ತಿಗೆ ಕಾರಣವೆಂದೂ, (ಆಭರಣರೂಪವಾದ) ಕನಕದಾನವು ಅದಕ್ಕಿಂತ ಶ್ರೇಷ್ಠವಾದುದೆಂದೂ ಹೇಳುತ್ತಾರೆ.
ಛತ್ರಪ್ರದಾನೇನ ಗೃಹಂ ವರಿಷ್ಠಂ
ಯಾನಂ ತಥೋಪಾನಹಸಂಪ್ರದಾನೇ ।
ವಸ್ತ್ರಪ್ರದಾನೇನ ಫಲಂ ಸುರೂಪಂ
ಗಂಧಪ್ರದಾನೇ ಸುರಭಿರ್ನರಃ ಸ್ಯಾತ್ ॥35॥
ಛತ್ರದಾನದಿಂದ ಶ್ರೇಷ್ಠವಾದ ಗೃಹವನ್ನೂ, ಪಾದರಕ್ಷೆಗಳ ದಾನದಿಂದ ಯಾನವನ್ನೂ, ವಸ್ತ್ರಪ್ರದಾನದಿಂದ ಒಳ್ಳೆಯ ರೂಪವನ್ನೂ ಪಡೆಯುತ್ತಾನೆ. ಗಂಧಪ್ರದಾನದಿಂದ ಮನುಷ್ಯನು ಸುಗಂಧಯುಕ್ತನಾಗುತ್ತಾನೆ.
ಪುಷ್ಪೋಪಗಂ ವಾಥ ಫಲೋಪಗಂ ವಾ
ಯಃ ಪಾದಪಂ ಸ್ಪರ್ಶಯತೇ ದ್ವಿಜಾಯ ।
ಸ ಸ್ತ್ರೀಸಮೃದ್ಧಂ ಬಹುರತ್ನಪೂರ್ಣಂ
ಲಭತ್ಯಯತ್ನೋಪಗತಂ ಗೃಹಂ ವೈ ॥36॥
ಸದ್ಯದಲ್ಲಿಯೇ ಪುಷ್ಪ-ಫಲವನ್ನು ಕೊಡಲಿರುವ ವೃಕ್ಷಗಳನ್ನು ಬ್ರಾಹ್ಮಣನಿಗೆ ದಾನ ಮಾಡುವವನು ಸ್ತ್ರೀಸಮೃದ್ಧವಾದ, ಬಹುರತ್ನಪೂರ್ಣವಾದ ಗೃಹವನ್ನು ತನ್ನ ಯತ್ನವಿಲ್ಲದೆಯೇ ಪಡೆಯುತ್ತಾನೆ.
ಭಕ್ಷಾನ್ನಪಾನೀಯರಸಪ್ರದಾತಾ
ಸರ್ವಾನವಾಪ್ನೋತಿ ರಸಾನ್ ಪ್ರಕಾಮಮ್ ।
ಪ್ರತಿಶ್ರಯಾಚ್ಛಾದನಸಂಪ್ರದಾತಾ
ಪ್ರಾಪ್ನೋತಿ ತಾನೇವ ನ ಸಂಶಯೋಽತ್ರ ॥37॥
ಭಕ್ಷ್ಯ, ಅನ್ನಪಾನೀಯ ಮತ್ತು ರಸಗಳನ್ನು ಕೊಡುವವನು ಎಲ್ಲ ರಸಗಳನ್ನು ಹೇರಳವಾಗಿ ಪಡೆಯುತ್ತಾನೆ. ಮನೆಯನ್ನು ಮತ್ತು ವಸ್ತ್ರವನ್ನು ದಾನ ಮಾಡುವವನು ಶ್ರೇಷ್ಠವಾದ ಮನೆಯನ್ನು, ವಸ್ತ್ರವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಸ್ರಗ್ಧೂಪಗಂಧಾನ್ಯನುಲೇಪನಾನಿ
ಸ್ನಾನಾನಿ ಮಾಲ್ಯಾನಿ ಚ ಮಾನವೋ ಯಃ ।
ದದ್ಯಾದ್ ದ್ವಿಜೇಭ್ಯಃ ಸ ಭವೇದರೋಗ-
ಸ್ತಥಾಭಿರೂಪಶ್ಚ ನರೇಂದ್ರ ಲೋಕೇ ॥38॥
ಯಾವ ಮನುಷ್ಯನು ಹೂ-ಮಾಲೆಗಳು, ಗಂಧಲೇಪ ಮತ್ತು ಅಡುಗೆ ಪಾತ್ರೆಗಳು, ಸಾಮಗ್ರಿಗಳು ಇವುಗಳನ್ನು ಬ್ರಾಹ್ಮಣರಿಗೆ ಕೊಡುತ್ತಾನೆಯೋ ಅವನು ಎಲೈ ನರೇಂದ್ರನೇ, ಲೋಕದಲ್ಲಿ ರೋಗರಹಿತನಾಗಿ ಒಳ್ಳೆಯ ರೂಪವನ್ನು ಹೊಂದುತ್ತಾನೆ.
ಬೀಜೈರಶೂನ್ಯಂ ಶಯನೈರುಪೇತಂ
ದದ್ಯಾದ್ ಗೃಹಂ ಯಃ ಪುರುಷೋ ದ್ವಿಜಾಯ ।
ಪುಣ್ಯಾಭಿರಾಮಂ ಬಹುರತ್ನಪೂರ್ಣಂ
ಲಭತ್ಯಧಿಷ್ಠಾನವರಂ ಸ ರಾಜನ್ ॥39॥
ಶಯನಗಳಿಂದಲೂ ಮತ್ತು ಧಾನ್ಯಗಳಿಂದಲೂ ಪೂರ್ಣವಾದ ಗೃಹವನ್ನು ಯಾವನು ಬ್ರಾಹ್ಮಣನಿಗೆ ಕೊಡುತ್ತಾನೆಯೋ ಅವನು ಪುಣ್ಯವೂ, ಮನೋಹರವೂ, ಬಹುರತ್ನ ಪೂರ್ಣವೂ ಆದ ಶ್ರೇಷ್ಠವಾದ ಗೃಹವನ್ನು ಪಡೆಯುತ್ತಾನೆ.
ಸುಗಂಧಚಿತ್ರಾಸ್ತರಣೋಪಪನ್ನಂ
ದದ್ಯಾನ್ನರೋ ಯಃ ಶಯನಂ ದ್ವಿಜಾಯ ।
ರೂಪಾನ್ವಿತಾಂ ಪಕ್ಷವತೀಂ ಮನೋಜ್ಞಾಂ
ಭಾರ್ಯಾಮಯತ್ನೋಪಗತಾಂ ಲಭೇತ್ ಸಃ ॥40॥
ಸುಗಂಧ ದ್ರವ್ಯಗಳಿಂದಲೂ, ಚಿತ್ರಾಸನದಿಂದಲೂ ಸಹಿತವಾದ ಹಾಸಿಗೆಯನ್ನು ಬ್ರಾಹ್ಮಣನಿಗೆ ಕೊಡುವವನು ಒಳ್ಳೆಯ ರೂಪದಿಂದ ಕೂಡಿದ, ಮನೋಹರಳಾದ, ಸತ್ಕುಲಪ್ರಸೂತಳಾದ ಭಾರ್ಯೆಯನ್ನು ಯತ್ನವಿಲ್ಲದೆಯೇ ಪಡೆಯುತ್ತಾನೆ.
ಪಿತಾಮಹಸ್ಯಾನುಚರೋ ವೀರಶಾಯೀ ಭವೇನ್ನರಃ ।
ನಾಧಿಕಂ ವಿದ್ಯತೇ ತಸ್ಮಾದಿತ್ಯಾಹುಃ ಪರಮರ್ಷಯಃ ॥41॥
ಯುದ್ಧದಲ್ಲಿ ಮಡಿದು ಮಣಿಯುವವನು ಬ್ರಹ್ಮದೇವರ ಅನುಚರನಾಗುತ್ತಾನೆ. ಇದಕ್ಕಿಂತ ಶ್ರೇಷ್ಠವಾದ ಫಲವು ಯಾವುದೂ ಇಲ್ಲ ಎಂದು ಪರಮರ್ಷಿಗಳು ಹೇಳುತ್ತಾರೆ.

ಪುಸ್ತಕಂ ಚ ತಥಾ ಗಾವಃ ಕನ್ಯಾದಾನಂ ತಥೈವ ಚ |
ಯೇ ನ ದಾಸ್ಯಂತಿ ಪುರುಷಾಸ್ತೇಷಾಂ ಸೌಖ್ಯಂ ಕುತೋ ಭವೇತ್ ॥42॥
ಯಾವ ಮನುಷ್ಯರು ಪುಸ್ತಕವನ್ನಾಗಲೀ, ಗೋವುಗಳನ್ನಾಗಲೀ ಅಥವಾ ಕನ್ಯೆಯನ್ನಾಗಲೀ ದಾನ ಮಾಡುವುದಿಲ್ಲವೋ ಅವರಿಗೆ ಪರಲೋಕದಲ್ಲಿ ಸುಖವು ಎಲ್ಲಿಂದ ಬರಬೇಕು?
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಪ್ರೀತಾತ್ಮಾ ಕುರುನಂದನಃ |
ನಾಶ್ರಮೇಽರೋಚಯದ್ ವಾಸಂ ವೀರಮಾರ್ಗಾಭಿಕಾಂಕ್ಷಯಾ ॥43॥
ವೈಶಂಪಾಯನ ಅವರ ಆ ಮಾತುಗಳನ್ನು ಕೇಳಿ ಸಂತೋಷಗೊಂಡ ಕುರುನಂದನನಾದ ಯುಧಿಷ್ಠಿರನು ವೀರ ಮಾರ್ಗವನ್ನು ಹೊಂದಲು ಬಯಸಿದನು. ಆಶ್ರಮ ವಾಸವನ್ನು ಬಯಸಲಿಲ್ಲ.
ತತೋ ಯುಧಿಷ್ಠಿರಃ ಪ್ರಾಹ ಪಾಂಡವಾನ್ ಭರತರ್ಷಭ |
ಪಿತಾಮಹಸ್ಯ ಯದ್ವಾಕ್ಯಂ ತದ್ವೋ ರೋಚತ್ವಿತಿ ಪ್ರಭುಃ ॥44॥
ಎಲೈ ಭರತರ್ಷಭನೇ, ಆಗ ಪ್ರಭುವಾದ ಯುಧಿಷ್ಠಿರನು ಪಾಂಡವರನ್ನು ಕುರಿತು ಪಿತಾಮಹನ ಮಾತುಗಳು ನಿಮಗೆ ಇಷ್ಟವಾಗಲಿ ಎಂದು ಹೇಳಿದನು.
ತತಸ್ತು ಪಾಂಡವಾಃ ಸರ್ವೇ ದ್ರೌಪದೀ ಚ ಯಶಸ್ವಿನೀ |
ಯುಧಿಷ್ಠಿರಸ್ಯ ತದ್ವಾಕ್ಯಂ ಬಾಢಮಿತ್ಯಭ್ಯಪೂಜಯನ್ ॥45॥
ಆಗ ಎಲ್ಲ ಪಾಂಡವರೂ ಮತ್ತು ಕೀರ್ತಿವಂತಳಾದ ದ್ರೌಪದಿಯು ಯುಧಿಷ್ಠಿರನ ಆ ವಾಕ್ಯವನ್ನು ಹಾಗೆಯೇ ಆಗಲಿ ಎಂದು ಹೇಳಿ ಗೌರವಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಬಹುದಾನಪ್ರಶಂಸಾನಾಮ ಸಪ್ತಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆಂಟನೆಯ ಅಧ್ಯಾಯ
ಆರಾಮತಟಾಕಾದಿನಿರ್ಮಾಣಫಲ.
ಯುಧಿಷ್ಠಿರಃ
ಆರಾಮಾಣಾಂ ತಟಾಕಾನಾಂ ಯತ್ಫಲಂ ಕುರುಪುಂಗವ |
ತದಹಂ ಶ್ರೋತುಮಿಚ್ಛಾಮಿ ತ್ವತ್ತೋಽದ್ಯ ಭರತರ್ಷಭ ॥1॥
ಯುಧಿಷ್ಠಿರ ಎಲೈ ಕುರುಪುಂಗವನೇ, ಭರತರ್ಷಭನೇ, ಉದ್ಯಾನವನಗಳ ಮತ್ತು ತಟಾಕಗಳ ನಿರ್ಮಾಣದ ಫಲವನ್ನು ಈಗ ನಿನ್ನಿಂದ ಕೇಳಲು ಬಯಸುತ್ತೇನೆ.
ಭೀಷ್ಮಃ
ಸುಪ್ರದರ್ಶಾ ಬಲವತೀ ಚಿತ್ರಾ ಧಾತುವಿಭೂಷಿತಾ |
ಉಪೇತಾ ಸರ್ವಭೂತೈಶ್ಚ ಶ್ರೇಷ್ಠಾ ಭೂಮಿರಿಹೋಚ್ಯತೇ ॥2॥
ಭೀಷ್ಮ ನೋಡಲು ಸುಂದರವಾಗಿದ್ದು, ಬಲಿಷ್ಠವೂ, ಅನೇಕ ಪ್ರಕಾರಗಳಿಂದ ವಿಚಿತ್ರವೂ,
ಚಿನ್ನ-ಬೆಳ್ಳಿ-ತಾಮ್ರ-ಸೀಸಾ-ತವರ-ಪಾದರಸ-ಕಬ್ಬಿಣ ಈ ಧಾತುಗಳಿಂದ ವಿಭೂಷಿತವಾದುದೂ, ಎಲ್ಲ ರೀತಿಯ ಪ್ರಾಣಿಗಳಿಂದ ಕೂಡಿದುದೂ ಆದ ಭೂಮಿಯು ಶ್ರೇಷ್ಠವಾದುದೆಂದು ಹೇಳುತ್ತಾರೆ.
ತಸ್ಯಾಃ ಕ್ಷೇತ್ರವಿಶೇಷಾಶ್ಚ ತಟಾಕಾನಾಂ ಚ ಬಂಧನಮ್ |
ಔದಕಾನಿ ಚ ಸರ್ವಾಣಿ ಪ್ರವಕ್ಷ್ಯಾಮ್ಯನುಪೂರ್ವಶಃ ॥3॥
ಅದರಲ್ಲಿ ಉದ್ಯಾನಾದಿ ಕ್ಷೇತ್ರವಿಶೇಷಗಳನ್ನೂ, ತಟಾಕ ನಿರ್ಮಾಣವನ್ನೂ, ಎಲ್ಲ ರೀತಿಯ ಸರೋವರಾದಿ ನಿರ್ಮಾಣದ ಫಲವನ್ನೂ ಕ್ರಮವಾಗಿ ಹೇಳುವೆನು.
ತಟಾಕಾನಾಂ ಚ ವಕ್ಷ್ಯಾಮಿ ಕೃತಾನಾಂ ಚಾಪಿ ಯೇ ಗುಣಾಃ |
ತ್ರಿಷು ಲೋಕೇಷು ಸರ್ವತ್ರ ಪೂಜನೀಯಸ್ತಟಾಕವಾನ್ ॥4॥
ತಟಾಕ ನಿರ್ಮಾಣದಲ್ಲಿ ಇರುವ ಗುಣಗಳನ್ನು ಹೇಳುವೆನು. ತಟಾಕ ನಿರ್ಮಾಣ ಮಾಡುವವನು ಮೂರುಲೋಕಗಳಲ್ಲಿಯೂ ಪೂಜಿಸಲ್ಪಡುತ್ತಾನೆ.
ಅಥವಾ ಮಿತ್ರಸದನಂ ಮೈತ್ರಂ ಮಿತ್ರವಿವರ್ಧನಮ್ |
ಕೀರ್ತಿಸಂಜನನಂ ಶ್ರೇಷ್ಠಂ ತಟಾಕಾನಾಂ ನಿವೇಶನಮ್ ॥5॥
ತಟಾಕವು ಎಲ್ಲ ಪ್ರಾಣಿಗಳಿಗೂ ಸ್ನೇಹಿತನ ಮನೆಯಂತಿರುತ್ತದೆ. ಅದು ಸ್ನೇಹಮಯವಾದುದು ಮತ್ತು ಮಿತ್ರರನ್ನು ಹೆಚ್ಚಿಸುವಂತಹದು. ತಟಾಕವು ಶ್ರೇಷ್ಠವಾದ ಕೀರ್ತಿಯನ್ನು ತಂದುಕೊಡುತ್ತದೆ.
ಧರ್ಮಸ್ಯಾರ್ಥಸ್ಯ ಕಾಮಸ್ಯ ಫಲಮಾಹುರ್ಮನೀಷಿಣಃ |
ತಟಾಕಸುಕೃತಂ ದೇಶೇ ಕ್ಷೇತ್ರಮೇಕಂ ಮಹಾಶ್ರಯಮ್ ॥6॥
ತಟಾಕದಿಂದ ಕೂಡಿದ ದೇಶದಲ್ಲಿ ಎಲ್ಲ ಪ್ರಾಣಿಗಳಿಗೂ ಆಶ್ರಯವಾದ ಒಂದು ಉದ್ಯಾನ ನಿರ್ಮಾಣವು ಧರ್ಮಾರ್ಥಕಾಮಗಳಿಗೆ ಕಾರಣವಾಗುತ್ತದೆಂದು ಜ್ಞಾನಿಗಳು ಹೇಳುತ್ತಾರೆ.

ಚತುರ್ವಿಧಾನಾಂ ಭೂತಾನಾಂ ತಟಾಕಮುಪಲಕ್ಷಯೇತ್ |
ತಟಾಕಾನಿ ಚ ಸರ್ವಾಣಿ ದಿಶಂತಿ ಶ್ರಿಯಮುತ್ತಮಾಮ್ ॥7॥
ತಟಾಕವು ಜರಾಯುಜಾದಿ ನಾಲ್ಕು ವಿಧದ ಪ್ರಾಣಿಗಳಿಗೂ ಆಶ್ರಯವೆಂಬುದನ್ನು ಗಮನಿಸಬೇಕು. ಎಲ್ಲ ತಟಾಕಗಳೂ ಒಳ್ಳೆಯ ಸಂಪತ್ತನ್ನು ತಂದುಕೊಡುತ್ತವೆ.
ದೇವಾ ಮನುಷ್ಯಗಂಧರ್ವಾಃ ಪಿತರೋರಗರಾಕ್ಷಸಾಃ |
ಸ್ಥಾವರಾಣಿ ಚ ಭೂತಾನಿ ಸಂಶ್ರಯಂತಿ ಜಲಾಶಯಮ್ ॥8॥
ದೇವತೆಗಳೂ, ಮನುಷ್ಯರೂ, ಗಂಧರ್ವರೂ, ಪಿತೃಗಳೂ, ಸರ್ಪಗಳೂ, ರಾಕ್ಷಸರೂ, ಮರ-ಗಿಡಗಳೂ ಎಲ್ಲರೂ ಜಲಾಶಯವನ್ನು ಆಶ್ರಯಿಸುತ್ತಾರೆ.
ತಸ್ಮಾತ್ ತಾಂಸ್ತೇ ಪ್ರವಕ್ಷ್ಯಾಮಿ ತಟಾಕೇ ಯೇ ಗುಣಾಃ ಸ್ಮೃತಾಃ |
ಯಾ ಚ ತತ್ರ ಫಲಾವಾಪ್ತಿರ್ಋಷಿಭಿಃ ಸಮುದಾಹೃತಾ ॥9॥
ಆದ್ದರಿಂದ ತಟಾಕದಲ್ಲಿರುವ ಆ ಗುಣಗಳನ್ನೂ ತಟಾಕನಿರ್ಮಾಣದಿಂದ ಉಂಟಾಗುವ ಋಷಿಗಳಿಂದ ಹೇಳಲ್ಪಟ್ಟ ಫಲಪ್ರಾಪ್ತಿಯನ್ನೂ ನಿನಗೆ ಹೇಳುವೆನು.
ವರ್ಷಾಕಾಲೇ ತಟಾಕೇ ತು ಸಲಿಲಂ ಯಸ್ಯ ತಿಷ್ಠತಿ |
ಅಗ್ನಿಹೋತ್ರಫಲಂ ತಸ್ಯ ಫಲಮಾಹುರ್ಮನೀಷಿಣಃ ॥10॥
ಯಾವನು ನಿರ್ಮಿಸಿದ ತಟಾಕದಲ್ಲಿ ಮಳೆಗಾಲದಲ್ಲಿ ಜಲವಿರುತ್ತದೆಯೋ ಅವನಿಗೆ ಅಗ್ನಿಹೋತ್ರಫಲವು ಉಂಟಾಗುವುದೆಂದು ಜ್ಞಾನಿಗಳು ಹೇಳುತ್ತಾರೆ.
ಶರತ್ಕಾಲೇ ತು ಸಲಿಲಂ ತಟಾಕೇ ಯಸ್ಯ ತಿಷ್ಠತಿ |
ಗೋಸಹಸ್ರಸ್ಯ ಸ ಪ್ರೇತ್ಯ ಲಭತೇ ಫಲಮುತ್ತಮಮ್ ॥11॥
ಯಾವನು ನಿರ್ಮಿಸಿದ ಕೆರೆಯಲ್ಲಿ ಶರತ್ಕಾಲದಲ್ಲಿ ಜಲವಿರುತ್ತದೆಯೋ ಅವನು ಮರಣವನ್ನು ಹೊಂದಿ ಸಹಸ್ರಗೋದಾನ ಮಾಡಿದ ಶ್ರೇಷ್ಠವಾದ ಫಲವನ್ನು ಹೊಂದುತ್ತಾನೆ.
ಹೇಮಂತಕಾಲೇ ಸಲಿಲಂ ತಟಾಕೇ ಯಸ್ಯ ತಿಷ್ಠತಿ |
ಸ ವೈ ಬಹುಸುವರ್ಣಸ್ಯ ಯಜ್ಞಸ್ಯ ಲಭತೇ ಫಲಮ್ ॥12॥
ಯಾವನು ನಿರ್ಮಿಸಿದ ತಟಾಕದಲ್ಲಿ ಹೇಮಂತಕಾಲದಲ್ಲಿ ಜಲವಿರುತ್ತದೆಯೋ ಅವನು ಬಹುಸುವರ್ಣದಾನದಿಂದ ಕೂಡಿದ ಯಜ್ಞದ ಫಲವನ್ನು ಹೊಂದುತ್ತಾನೆ.
ಯಸ್ಯ ವೈ ಶೈಶಿರೇ ಕಾಲೇ ತಟಾಕೇ ಸಲಿಲಂ ಭವೇತ್ |
ತಸ್ಯಾಗ್ನಿಷ್ಟೋಮಯಜ್ಞಸ್ಯ ಫಲಮಾಹುರ್ಮನೀಷಿಣಃ ॥13॥
ಯಾರ ತಟಾಕದಲ್ಲಿ ಶಿಶಿರ ಕಾಲದಲ್ಲಿ ಜಲವಿರುತ್ತದೆಯೋ ಅವನಿಗೆ ಅಗ್ನಿಷ್ಟೋಮ ಯಾಗದ ಫಲವು ದೊರೆಯುವುದೆಂದು ಜ್ಞಾನಿಗಳು ಹೇಳುತ್ತಾರೆ.
ತಟಾಕಂ ಸುಕೃತಂ ಯಸ್ಯ ವಸಂತೇ ತು ಮಹಾಶ್ರಯಮ್ |
ಅತಿರಾತ್ರಸ್ಯ ಯಜ್ಞಸ್ಯ ಫಲಂ ಸ ಸಮುಪಾಶ್ನುತೇ ॥14॥
ಚೆನ್ನಾಗಿ ನಿರ್ಮಿಸಿದ ಯಾವನ ತಟಾಕವು ವಸಂತ ಕಾಲದಲ್ಲಿ ಎಲ್ಲ ಪ್ರಾಣಿಗಳಿಗೂ ಆಶ್ರಯವಾಗುತ್ತದೆಯೋ ಅವನು ಅತಿರಾತ್ರ ಯಾಗದ ಫಲವನ್ನು ಹೊಂದುತ್ತಾನೆ.
ನಿದಾಘಕಾಲೇ ಪಾನೀಯಂ ತಟಾಕೇ ಯಸ್ಯ ತಿಷ್ಠತಿ |
ವಾಜಿಮೇಧಫಲಂ ತಸ್ಯ ಫಲಂ ವೈ ಮುನಯೋ ವಿದುಃ ॥15॥
ಯಾವನ ತಟಾಕದಲ್ಲಿ ಬೇಸಿಗೆಯ ಕಾಲದಲ್ಲಿ ಜಲವಿರುತ್ತದೆಯೋ ಅವನು ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆಂದು ಋಷಿಗಳು ತಿಳಿದಿದ್ದಾರೆ.
ಸ ಕುಲಂ ತಾರಯೇತ್ ಸರ್ವಂ ಯಸ್ಯ ಖಾತೇ ಜಲಾಶಯೇ |
ಗಾವಃ ಪಿಬಂತಿ ಸಲಿಲಂ ಸಾಧವಶ್ಚ ನರಾಃ ಸದಾ ॥16॥
ಯಾವನು ನಿರ್ಮಿಸಿದ ತಟಾಕದಲ್ಲಿ ಗೋವುಗಳು ಮತ್ತು ಸಜ್ಜನರು ನೀರನ್ನು ಕುಡಿಯುತ್ತಾರೆಯೋ ಅವನು ತನ್ನ ಕುಲವೆಲ್ಲವನ್ನೂ ಉದ್ಧರಿಸುತ್ತಾನೆ.
ತಟಾಕೇ ಯಸ್ಯ ಗಾವಸ್ತು ಪಿಬಂತಿ ತೃಷಿತಾ ಜಲಮ್ |
ಮೃಗಪಕ್ಷಿಮನುಷ್ಯಾಶ್ಚ ಸೋಽಶ್ವಮೇಧಫಲಂ ಲಭೇತ್ ॥17॥
ಯಾವನ ತಟಾಕದಲ್ಲಿ ಬಾಯಾರಿದ ಗೋವುಗಳು ಮತ್ತು ಮೃಗ-ಪಕ್ಷಿ-ಮನುಷ್ಯರು ಜಲಪಾನವನ್ನು ಮಾಡುತ್ತಾರೆಯೋ ಅವನು ಅಶ್ವಮೇಧಫಲವನ್ನು ಹೊಂದುತ್ತಾನೆ.
ಯತ್ಪಿಬಂತಿ ಜಲಂ ತತ್ರ ಸ್ನಾಯಂತೇ ವಿಶ್ರಮಂತಿ ಚ |
ತಟಾಕೇ ಯಸ್ಯ ತತ್ಸರ್ವಂ ಪ್ರೇತ್ಯಾನಂತ್ಯಾಯ ಕಲ್ಪತೇ ॥18॥
ತಟಾಕದಲ್ಲಿ ಜಲಪಾನ ಮಾಡುವುದು, ಸ್ನಾನ ಮಾಡುವುದು, ವಿಶ್ರಾಂತಿಯನ್ನು ಪಡೆಯುವುದು ಇವೆಲ್ಲವೂ ತಟಾಕ ನಿರ್ಮಾಣ ಮಾಡಿದವನ ಮರಣಾನಂತರದ ಅನಂತ ಸುಖಕ್ಕೆ ಕಾರಣವಾಗುತ್ತವೆ.
ದುರ್ಲಭಂ ಸಲಿಲಂ ತಾತ ವಿಶೇಷೇಣ ಪರತ್ರ ವೈ |
ಪಾನೀಯಸ್ಯ ಪ್ರದಾನೇನ ಪ್ರೀತಿರ್ಭವತಿ ಶಾಶ್ವತೀ ॥19॥

ಎಲೈ ಪ್ರೀತಿಪಾತ್ರನೇ, ಜಲವು ದುರ್ಲಭವಾದುದು ಅದರಲ್ಲಿಯೂ ಪರಲೋಕದಲ್ಲಿ ವಿಶೇಷವಾಗಿ ದುರ್ಲಭವಾದುದು. ಜಲದಾನವನ್ನು ಮಾಡುವುದರಿಂದ ಶಾಶ್ವತವಾದ ಸುಖವುಂಟಾಗುತ್ತದೆ.

ತಿಲಾನ್ ದದತ ಪಾನೀಯಂ ದೀಪಾನ್ ದದತ ಜಾಗೃತ |
ಜ್ಞಾತಿಭಿಃ ಸಹ ಮೋದಧ್ವಮೇತತ್ಪ್ರೇತ್ಯ ಸುದುರ್ಲಭಮ್ ॥20॥

ತಿಲದಾನವನ್ನು ಮಾಡಿ, ಜಲದಾನವನ್ನು, ದೀಪದಾನಗಳನ್ನು ಮಾಡಿ. ಈ ವಿಷಯದಲ್ಲಿ ಎಚ್ಚರಿಕೆಯಿಂದಿರಿ. ಬಂಧುಗಳೊಂದಿಗೆ ಸಂತೋಷದಿಂದಿರಿ. ಮರಣವನ್ನು ಹೊಂದಿದ ಮೇಲೆ ಇವೆಲ್ಲವೂ ದುರ್ಲಭವಾದವುಗಳು.

ಸರ್ವದಾನೈರ್ಗುರುತರಂ ಸರ್ವದಾನೈರ್ವಿಶಿಷ್ಯತೇ |
ಪಾನೀಯಂ ನರಶಾರ್ದೂಲ ತಸ್ಮಾದ್ ದಾತವ್ಯಮೇವ ಹಿ ॥21॥

ಎಲೈ ನರಶಾರ್ದೂಲನೇ, ಜಲದಾನವು ಎಲ್ಲ ದಾನಗಳಿಗಿಂತ ದೊಡ್ಡ ದಾನ ಮತ್ತು ಎಲ್ಲ ದಾನಗಳಿಗಿಂತಲೂ ಶ್ರೇಷ್ಠವಾದುದು. ಆದ್ದರಿಂದ ಅವಶ್ಯವಾಗಿ ಕೊಡಬೇಕು.

ಏವಮೇತತ್ ತಟಾಕಸ್ಯ ಕೀರ್ತಿತಂ ಫಲಮುತ್ತಮಮ್ |
ಅತ ಊರ್ಧ್ವಂ ಪ್ರವಕ್ಷ್ಯಾಮಿ ವೃಕ್ಷಾಣಾಮವರೋಪಣಮ್ ॥22॥

ಈ ರೀತಿಯಲ್ಲಿ ತಟಾಕನಿರ್ಮಾಣದ ಶ್ರೇಷ್ಠವಾದ ಫಲವನ್ನು ಹೇಳಿದ್ದೇನೆ. ಇನ್ನು ಮುಂದೆ ಮರಗಳನ್ನು ನೆಡುವುದರ ಫಲವನ್ನು ಹೇಳುವೆನು.

ಸ್ಥಾವರಾಣಾಂ ಚ ಭೂತಾನಾಂ ಜಾತಯಃ ಷಟ್ ಪ್ರಕೀರ್ತಿತಾಃ |
ವೃಕ್ಷಗುಲ್ಮಲತಾವಲ್ಲ್ಯಸ್ತ್ವಕ್ಸಾರಾಸ್ತೃಣಜಾತಯಃ ॥23॥

ಸ್ಥಾವರಗಳ ಜಾತಿಗಳು ಆರು ಎಂದು ಹೇಳಲ್ಪಡುತ್ತವೆ. ಅವು ಮರಗಳು, ಪೊದೆಗಳು, ಮರಕ್ಕೆ ಹಬ್ಬುವ ಬಳ್ಳಿಗಳು, ನೆಲದ ಮೇಲೆ ಹರಡುವ ಬಳ್ಳಿಗಳು, ಬೆನ್ನುಸಿಪ್ಪೆಯಲ್ಲಿಯೇ (ತೊಗಟೆಯಲ್ಲಿಯೇ) ಬಲವುಳ್ಳ ಬಿದಿರು ಮೊದಲಾದವುಗಳು ಮತ್ತು ತೃಣ ಜಾತಿಗೆ ಸೇರಿದ ಹುಲ್ಲು, ಭತ್ತ ಮೊದಲಾದವುಗಳು.

ಏತಾ ಜಾತ್ಯಸ್ತು ವೃಕ್ಷಾಣಾಂ ತೇಷಾಂ ರೋಪೇ ಗುಣಾಸ್ತ್ವಮೇ |
ಕೀರ್ತಿಶ್ಚ ಮಾನುಷೇ ಲೋಕೇ ಪ್ರೇತ್ಯ ಚೈವ ಫಲಂ ಶುಭಮ್ ॥24॥

ಇವು ವೃಕ್ಷಗಳ ಜಾತಿಗಳು. ಅವುಗಳನ್ನು ನೆಡುವುದರಿಂದ ಮನುಷ್ಯಲೋಕದಲ್ಲಿ ಕೀರ್ತಿ ಮತ್ತು ಮರಣಾನಂತರದಲ್ಲಿ ಶುಭ ಫಲಗಳು ಉಂಟಾಗುತ್ತವೆ.

ಲಭತೇ ನಾಮ ಲೋಕೇ ಚ ಪಿತೃಭಿಶ್ಚ ಮಹೀಯತೇ |
ದೇವಲೋಕೇ ಗತಸ್ಯಾಪಿ ನಾಮ ತಸ್ಯ ನ ನಶ್ಯತಿ ॥25॥

ಮನುಷ್ಯಲೋಕದಲ್ಲಿ ಒಳ್ಳೆಯ ಹೆಸರು. ಪಿತೃಗಳ ಜೊತೆಯಲ್ಲಿ ಪೂಜನೀಯತ್ವ. ದೇವಲೋಕಕ್ಕೆ ಹೋದರೆ ಮೇಲೆಯೇ ಕೀರ್ತಿಯ ನಾಶವಿಲ್ಲದಿರುವುದು (ಇವೆಲ್ಲ ಫಲಗಳು).

ಅತೀತಾನಾಗತೇ ಚೋಭೇ ಪಿತೃವಂಶಂ ಚ ಭಾರತ |
ತಾರಯೇದ್ ವೃಕ್ಷರೋಪೀ ಚ ತಸ್ಮಾದ್ ವೃಕ್ಷಾಂಶ್ಚ ರೋಪಯೇತ್ ॥26॥

ಎಲೈ ಭಾರತನೇ, ಮರಗಳನ್ನು ನೆಡುವವನು ತನ್ನ ಹಿಂದಿನ ಮತ್ತು ಮುಂದಿನ ಎರಡು ಪಿತೃವಂಶಗಳನ್ನೂ ಸಂಕಷ್ಟದಿಂದ ಪಾರುಮಾಡುತ್ತಾನೆ. ಆದ್ದರಿಂದ ಮರಗಳನ್ನು ನೆಡಬೇಕು.

ತಸ್ಯ ಪುತ್ರಾ ಭವಂತ್ಯೇತೇ ಪಾದಪಾ ನಾತ್ರ ಸಂಶಯಃ |
ಪರಲೋಕಗತಃ ಸ್ವರ್ಗಂ ಲೋಕಾಂಶ್ಚಾಪ್ನೋತಿ ಸೋಽವ್ಯಯಾನ್ ॥27॥

ತಾನು ನೆಟ್ಟ ಮರಗಳು ತನಗೆ ಪುತ್ರರಾಗುತ್ತಾರೆ, ಇದರಲ್ಲಿ ಸಂಶಯವಿಲ್ಲ. ಅಂತಹವನು ಪರಲೋಕಕ್ಕೆ ಹೋಗಿ ಶಾಶ್ವತವಾದ ಸ್ವರ್ಗಲೋಕವನ್ನು ಹೊಂದುತ್ತಾನೆ.

ಪುಷ್ಪೈಃ ಸುರಗಣಾನ್ ವೃಕ್ಷಾಃ ಫಲೈಶ್ಚಾಪಿ ತಥಾ ಪಿತೄನ್ |
ಛಾಯಯಾ ಚಾತಿಥಿಂ ತಾತ ಪೂಜಯಂತಿ ಮಹೀರುಹಾಃ ॥28॥

ಎಲೈ ಪ್ರೀತಿಪಾತ್ರನೇ, ವೃಕ್ಷಗಳು ಪುಷ್ಪಗಳಿಂದ ದೇವತೆಗಳನ್ನೂ, ಫಲಗಳಿಂದ ಪಿತೃಗಳನ್ನೂ, ನೆರಳಿನಿಂದ ಅತಿಥಿಯನ್ನೂ ಸತ್ಕರಿಸುತ್ತವೆ.

ಕಿನ್ನರೋರಗರಕ್ಷಾಂಸಿ ದೇವಗಂಧರ್ವಮಾನವಾಃ |
ತಥಾ ಋಷಿಗಣಾಶ್ಚೈವ ಸಂಶ್ರಯಂತಿ ಮಹೀರುಹಾನ್ ॥29॥

ಕಿನ್ನರರು, ಸರ್ಪಗಳು, ರಾಕ್ಷಸರು, ದೇವತೆಗಳು, ಗಂಧರ್ವರು, ಮನುಷ್ಯರು, ಋಷಿಗಳು ಎಲ್ಲರೂ ವೃಕ್ಷಗಳನ್ನು ಆಶ್ರಯಿಸುತ್ತಾರೆ.

ಪುಷ್ಪಿತಾಃ ಫಲವಂತಶ್ಚ ತರ್ಪಯಂತೀಹ ಮಾನವಾನ್ |
ವೃಕ್ಷದಂ ಪುತ್ರವದ್ ವೃಕ್ಷಾಸ್ತಾರಯಂತಿ ಪರತ್ರ ತು ॥30॥

ಫಲಪುಷ್ಪಗಳನ್ನು ಕೊಟ್ಟು ವೃಕ್ಷಗಳು ಮನುಷ್ಯರನ್ನು ಈ ಲೋಕದಲ್ಲಿ ಸಂತೋಷ ಪಡಿಸುತ್ತವೆ. ಮತ್ತು ಪರಲೋಕಕ್ಕೆ ಹೋದವನನ್ನು ಪುತ್ರನಂತೆ ದುಃಖದಿಂದ ಪಾರು ಮಾಡುತ್ತವೆ.

ತಸ್ಮಾತ್ ತಟಾಕೇ ಸದ್ವೃಕ್ಷಾಃ ರೋಪ್ಯಾಃ ಶ್ರೇಯೋರ್ಥಿನಾ ಸದಾ |
ಪುತ್ರವತ್ ಪರಿಪಾಲ್ಯಾಶ್ಚ ಪುತ್ರಾಸ್ತೇ ಧರ್ಮತಃ ಸ್ಮೃತಾಃ ॥31॥

ಆದ್ದರಿಂದ ಶ್ರೇಯೋರ್ಥಿಯಾದವನು ಯಾವಾಗಲೂ ತಟಾಕದಲ್ಲಿ ಒಳ್ಳೆಯ ಮರಗಳನ್ನು ನೆಡಬೇಕು. ಅವುಗಳನ್ನು ಪುತ್ರರಂತೆ ರಕ್ಷಿಸಬೇಕು. ಧರ್ಮದ ದೃಷ್ಟಿಯಿಂದ ಅವುಗಳು ಪುತ್ರರೇ ಸರಿ.

ತಟಾಕಕೃದ್ ವೃಕ್ಷರೋಪೀ ಇಷ್ಟಯಜ್ಞಶ್ಚ ಯೋ ದ್ವಿಜಃ |
ಏತೇ ಸ್ವರ್ಗೇ ಮಹೀಯಂತೇ ಯೇ ಚಾನ್ಯೇ ಸತ್ಯವಾದಿನಃ ॥32॥
ತಟಾಕನಿರ್ಮಾಣವನ್ನು ಮಾಡಿದವನು, ಮರಗಳನ್ನು ನೆಟ್ಟವನು, ಯಜ್ಞಗಳನ್ನು ಮಾಡಿದವನು, ಸತ್ಯವಚನವನ್ನು ನುಡಿಯುವವನು - ಇವರೆಲ್ಲರೂ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾರೆ.
ತಸ್ಮಾತ್ ತಟಾಕಂ ಕುರ್ವೀತ ಆರಾಮಾಂಶ್ಚೈವ ರೋಪಯೇತ್ |
ಯಜೇಚ್ಚ ವಿವಿಧೈರ್ಯಜ್ಞೈಃ ಸತ್ಯಂ ಚ ಸತತಂ ವದೇತ್ ॥33॥
ಆದ್ದರಿಂದ ತಟಾಕವನ್ನು ನಿರ್ಮಾಣ ಮಾಡಬೇಕು. ಉದ್ಯಾನವನ್ನು ಬೆಳೆಸಬೇಕು. ವಿವಿಧವಾದ ಯಜ್ಞವನ್ನು ಮಾಡಬೇಕು ಮತ್ತು ಸತತವಾಗಿ ಸತ್ಯವನ್ನು ನುಡಿಯಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಆರಾಮತಟಾಕಾದಿಪ್ರಶಂಸಾ ನಾಮ ಅಷ್ಟಾಶೀತಿತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂಬತ್ತನೆಯ ಅಧ್ಯಾಯ
ಬ್ರಾಹ್ಮಣ ಪೂಜಾ ಪ್ರಶಂಸೆ
ಯುಧಿಷ್ಠಿರಃ
ಯಾನೀಮಾನಿ ಬಹಿರ್ವೇದ್ಯಾಂ ದಾನಾನಿ ಪರಿಚಕ್ಷತೇ |
ತೇಭ್ಯೋ ವಿಶಿಷ್ಟಂ ಕಿಂ ದಾನಂ ಮತಂ ತೇ ಕುರುಪುಂಗವ ॥1॥
ಕೌತೂಹಲಂ ಹಿ ಪರಮಂ ತತ್ರ ಮೇ ವರ್ತತೇ ಪ್ರಭೋ |
ದಾತಾರಂ ದತ್ತಮನ್ವೇತಿ ಯದ್ದಾನಂ ತತ್ ಪ್ರಚಕ್ಷ್ವ ಮೇ ॥2॥
ಯುಧಿಷ್ಠಿರ ಎಲೈ ಕುರುಪುಂಗವನೇ, ವೇದಿಯ ಹೊರಭಾಗದಲ್ಲಿ ಯಾವ ದಾನಗಳು ಹೇಳಲ್ಪಡುತ್ತದೆಯೋ ಅವುಗಳಿಗಿಂತ ಶ್ರೇಷ್ಠ ದಾನವು ಯಾವುದೆಂದು ನಿನ್ನ ಅಭಿಪ್ರಾಯ? ಎಲೈ ಪ್ರಭುವೇ, ನನಗೆ ಈ ವಿಷಯದಲ್ಲಿ ಬಹಳ ಕುತೂಹಲವಿದೆ. ಯಾವ ದಾನವು ದಾತೃವನ್ನು ಹಿಂಬಾಲಿಸುತ್ತದೆಯೋ ಅದನ್ನು ನನಗೆ ಹೇಳು.
ಭೀಷ್ಮಃ
ಅಭಯಂ ಸರ್ವಭೂತೇಭ್ಯೋ ವ್ಯಸನೇ ಚಾಪ್ಯನುಗ್ರಹಮ್ |
ಯಚ್ಚಾಭಿಲಷಿತಂ ದದ್ಯಾದ್ ತೃಷಿತಾಯಾಭಿಯಾಚತೇ ॥3॥
ಭೀಷ್ಮ ಸರ್ವಪ್ರಾಣಿಗಳಿಗೂ ಅಭಯ ದಾನ, ಕಷ್ಟದಲ್ಲಿರುವವರಿಗೆ ಸಹಾಯ, ಯಾಚನೆ ಮಾಡುವವರಿಗೆ ಅಪೇಕ್ಷಿತವಾದ ದಾನ, ಬಾಯಾರಿದವನಿಗೆ ಜಲದಾನ (ಇವು ಶ್ರೇಷ್ಠವಾದವುಗಳು).
ದತ್ತಂ ಮನ್ಯೇತ ಯದ್ದತ್ತತ್ವ ತದ್ದಾನಂ ಶ್ರೇಷ್ಠಮುಚ್ಯತೇ |
ದತ್ತಂ ದಾತಾರಮನ್ವೇತಿ ಯದ್ದಾನಂ ಭರತರ್ಷಭ ॥4॥
ದಾನವನ್ನು ಕೊಟ್ಟು ಇದು ನನ್ನದಲ್ಲ ಎಂದು ತಿಳಿಯುವ ದಾನವು ಶ್ರೇಷ್ಠವಾದ ದಾನ. ಎಲೈ ಭರತರ್ಷಭನೇ, ಅಂತಹ ದಾನವು ದಾನ ಕೊಡುವವನನ್ನು ಹಿಂಬಾಲಿಸುತ್ತದೆ.
ಹಿರಣ್ಯದಾನಂ ಗೋದಾನಂ ಪೃಥಿವೀದಾನಮೇವ ಚ |
ಏತಾನಿ ವೈ ಪವಿತ್ರಾಣಿ ತಾರಯಂತ್ಯಪಿ ದುಷ್ಕೃತಮ್ ॥5॥
ಹಿರಣ್ಯದಾನ, ಗೋದಾನ ಮತ್ತು ಭೂದಾನ ಇವು ಪವಿತ್ರವಾದವುಗಳು ಮತ್ತು ದುಷ್ಕರ್ಮ ಮಾಡಿದವನನ್ನು ಉದ್ಧಾರ ಮಾಡುತ್ತವೆ.
ಏತಾನಿ ಪುರುಷವ್ಯಾಘ್ರ ಸಾಧುಭ್ಯೋ ದೇಹಿ ನಿತ್ಯದಾ |
ದಾನಾನಿ ಹಿ ನರಂ ಪಾಪಾನ್ಮೋಕ್ಷಯಂತಿ ನ ಸಂಶಯಃ ॥6॥
ಎಲೈ ಪುರುಷವ್ಯಾಘ್ರನೇ, ಇವುಗಳನ್ನು ಯಾವಾಗಲೂ ಸಜ್ಜನರಿಗೆ ಕೊಡು. ದಾನಗಳು ಮನುಷ್ಯನನ್ನು ಪಾಪದಿಂದ ನಿರ್ಮುಕ್ತಗೊಳಿಸುತ್ತವೆ. ಇದರಲ್ಲಿ ಸಂಶಯವಿಲ್ಲ.
ಯದ್ಯದಿಷ್ಟತಮಂ ಲೋಕೇ ಯಚ್ಚಾಸ್ಯ ದಯಿತಂ ಗೃಹೇ |
ತತ್ತದ್ಗುಣವತೇ ದೇಯಂ ತದೇವಾಕ್ಷಯಮಿಚ್ಛತಾ ॥7॥
ತನಗೆ ಲೋಕದಲ್ಲಿ ಯಾವ ಯಾವುದು ಇಷ್ಟವೋ ಮತ್ತು ಮನೆಯಲ್ಲಿ ಯಾವುದು ಪ್ರೀತಿ ವಿಷಯವೋ ಅವೆಲ್ಲವನ್ನೂ ಗುಣವಂತನಾದವನಿಗೆ ನೀಡಿದರೆ ಅಕ್ಷಯ ಫಲವು ಲಭಿಸುತ್ತದೆ.
ಪ್ರಿಯಾಣಿ ಲಭತೇ ಲೋಕೇ ಪ್ರಿಯದಃ ಪ್ರಿಯಕೃತ್ ತಥಾ |
ಪ್ರಿಯೋ ಭವತಿ ಭೂತಾನಾಮಿಹ ಚೈವ ಪರತ್ರ ಚ ॥8॥
ಪ್ರಿಯವಾದ ವಸ್ತುವನ್ನು ದಾನ ಮಾಡಿ ಇನ್ನೊಬ್ಬರಿಗೆ ಪ್ರಿಯವನ್ನುಂಟು ಮಾಡುವವನು ಲೋಕದಲ್ಲಿ ಪ್ರಿಯವಸ್ತುಗಳನ್ನು ಪಡೆಯುತ್ತಾನೆ ಮತ್ತು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಎಲ್ಲರಿಗೂ ಪ್ರಿಯನಾಗುತ್ತಾನೆ.
ಯಾಚಮಾನಮಭೀಮಾನಾದಾಶಾವಂತಮಕಿಂಚನಮ್ |
ಯೋ ನಾರ್ಚತಿ ಯಥಾಶಕ್ತಿ ಸ ನೃಶಂಸೋ ಯುಧಿಷ್ಠಿರ ॥9॥
ಎಲೈ ಯುಧಿಷ್ಠಿರನೇ, ದರಿದ್ರನಾಗಿ ಆಸೆಯಿಂದ ಕೂಡಿ ಯಾಚನೆ ಮಾಡುವವನನ್ನು ಯಾವನು ಅಹಂಕಾರದಿಂದ ತನ್ನ ಶಕ್ತಿಗೆ

ಅನುಸಾರವಾಗಿ ಪೂಜಿಸುವುದಿಲ್ಲವೋ ಅವನು ಕ್ರೂರಿಯಾದವನು.
ಅಮಿತ್ರಮಪಿ ಚೇದ್ ದೀನಂ ಶರಣೈಷಿಣಮಾಗತಮ್ |
ವ್ಯಸನೇ ಯೋಽನುಗೃಹ್ಣಾತಿ ಸ ವೈ ಪುರುಷಸತ್ತಮಃ॥10॥
ಶತ್ರುವು ವ್ಯಸನದಲ್ಲಿ ಸಿಲುಕಿ ದೀನನಾಗಿ ಶರಣಾಗತನಾಗಿ ಬಂದರೆ ಅವನನ್ನೂ ಅನುಗ್ರಹಿಸುವವನು ಶ್ರೇಷ್ಠನಾದ ಪುರುಷ.
ಕೃಶಾಯ ಹ್ರೀಮತೇ ತಾತ ವೃತ್ತಿಕ್ಷೀಣಾಯ ಸೀದತೇ |
ಅಪಹನ್ಯಾತ್ ಕ್ಷುಧಂ ಯಸ್ತು ನ ತೇನ ಪುರುಷಃ ಸಮಃ ॥11॥
ಎಲೈ ಪ್ರೀತಿಪಾತ್ರನೇ, ಕೃಶನಾದವನೂ, ನಾಚಿಕೆಯುಳ್ಳವನೂ, ಜೀವನೋಪಾಯ ಕಳೆದುಕೊಂಡು ಕಷ್ಟಪಡುವವನೂ ಆದವನ ಹಸಿವನ್ನು ಯಾವನು ನೀಗಿಸುತ್ತಾನೆಯೋ ಅವನಿಗೆ ಸಮಾನನಾದ ಪುರುಷನಿಲ್ಲ.
ಹ್ರಿಯಾ ತು ನಿಯತಾನ್ ಸಾಧೂನ್ ಪುತ್ರದಾರೈಶ್ಚ ಕರ್ಶಿತಾನ್ |
ಅಯಾಚಮಾನಾನ್ ಕೌಂತೇಯ ಸರ್ವೋಪಾಯೈರ್ನಿಮಂತ್ರಯ ॥12॥
ಎಲೈ ಕೌಂತೇಯನೇ, ನಾಚಿಕೆಯಿಂದ ಹಿಂದುಳಿಯುವ, ಪತ್ನೀಪುತ್ರರ ಭಾರದಿಂದ ಬಳಲಿದ, ಯಾಚನೆ ಮಾಡದ ಸಜ್ಜನರನ್ನು ಎಲ್ಲ ಉಪಾಯಗಳಿಂದಲೂ ತಿಳಿದು ಅವರನ್ನು ಆಹ್ವಾನಿಸು.
ಆಶಿಷಂ ಯೇ ನ ದೇವೇಷು ನ ಮರ್ತ್ಯೇಷು ಚ ಕುರ್ವತೇ |
ಅರ್ಹಂತೋ ನಿತ್ಯಸತ್ತ್ವಸ್ಥಾ ಯಥಾಲಬ್ಧೋಪಜೀವಿನಃ ॥13॥
ಆಶೀವಿಷಸಮೇಭ್ಯಶ್ಚ ತೇಭ್ಯೋ ರಕ್ಷಸ್ವ ಭಾರತ |
ತಾನ್ ಯುಕ್ತೈರುಪಜಿಜ್ಞಾಸ್ಯ ತಥಾ ದ್ವಿಜವರೋತ್ತಮಾನ್ ॥14॥
ಕೃತೈರಾವಸಥೈರ್ನಿತ್ಯಂ ಸಪ್ರೇಷ್ಯೈಃ ಸಪರಿಚ್ಛದೈಃ |
ನಿಮಂತ್ರಯೇಥಾಃ ಕೌರವ್ಯ ಸರ್ವಕಾಮಸುಖಾವಹೈಃ ॥15॥
ಯದಿ ತೇ ಪ್ರತಿಗೃಹ್ಣೀಯುಃ ಶ್ರದ್ಧಾಪೂತಂ ಯುಧಿಷ್ಠಿರ |
ಕಾರ್ಯಮಿತ್ಯೇವ ಮನ್ವಾನಾ ಧಾರ್ಮಿಕಾಃ ಪುಣ್ಯಕರ್ಮಿಣಃ ॥16॥
ಯಾರು ದೇವತೆಗಳಲ್ಲಾಗಲೀ ಅಥವಾ ಮನುಷ್ಯರಲ್ಲಾಗಲೀ ಯಾವುದನ್ನೂ ಪ್ರಾರ್ಥಿಸುವುದಿಲ್ಲವೋ, ಯೋಗ್ಯರಾಗಿದ್ದರೂ ನಿತ್ಯವೂ ಧೈರ್ಯದಲ್ಲಿದ್ದು ಲಬ್ಧವಾದುದರಲ್ಲಿಯೇ ಜೀವನವನ್ನು ಮಾಡುತ್ತಾರೆಯೋ. ಸರ್ಪಸದೃಶರಾದ ಅಂತಹವರಿಂದ ನಿನ್ನನ್ನು ರಕ್ಷಿಸಿಕೋ. ಅಂತಹ ಬ್ರಾಹ್ಮಣೋತ್ತಮೋತ್ತಮರನ್ನು ನಿನ್ನಿಂದ ನಿಯುಕ್ತರಾದ ಸೇವಕರಿಂದ ತಿಳಿದು ಅವರನ್ನು ಉಪಸ್ಕರ ಸಹಿತವಾದ ಸೇವಕರಿಂದ ಕೂಡಿದ ಸರ್ವ ಕಾಮಗಳಿಂದ ಸುಖರೂಪವಾದ ಮನೆಗಳನ್ನು ನಿರ್ಮಾಣ ಮಾಡಿ ಅವರನ್ನು ಪ್ರತಿಗ್ರಹಕ್ಕಾಗಿ ಆಮಂತ್ರಿಸು. ಅವರು ಆ ಸ್ಥಿತಿಯಲ್ಲಿದ್ದರೂ ಸಹ ಪ್ರತಿಗ್ರಹವನ್ನು ಮಾಡುವುದಾದರೆ ಅದು ನಿನಗೆ ಶ್ರೇಯಸ್ಕರವಾದುದು (ಏಕೆಂದರೆ ಅಂತಹವರು ಪ್ರಾಯಶಃ ಯಾವ ದಾನವನ್ನೂ ಸ್ವೀಕರಿಸುವುದಿಲ್ಲ). ಎಲೈ ಯುಧಿಷ್ಠಿರನೇ, ಶ್ರದ್ಧೆಯಿಂದ ಕೊಡುವ ದಾನವನ್ನು ತೆಗೆದುಕೊಳ್ಳುವುದು ಒಂದು ಧಾರ್ಮಿಕ ಕಾರ್ಯ ಎಂದು ತಿಳಿದು ಪುಣ್ಯಕರ್ಮವನ್ನು ಮಾಡುವ ಅವರು ದಾನವನ್ನು ತೆಗೆದುಕೊಳ್ಳುವುದಾದರೆ ಅದು ಬಹಳ ಶ್ರೇಯಸ್ಕರವಾದುದು.
ವಿದ್ಯಾಸ್ನಾತಾ ವ್ರತಸ್ನಾತಾ ಯೇ ವ್ಯಪಾಶ್ರಿತ್ಯಜೀವಿನಃ |
ಗೂಢಸ್ವಾಧ್ಯಾಯತಪಸೋ ಬ್ರಾಹ್ಮಣಾಃ ಸಂಶಿತವ್ರತಾಃ ॥17॥
ತೇಷು ಶುದ್ಧೇಷು ದಾಂತೇಷು ಸ್ವದಾರನಿರತೇಷು ಚ |
ಯತ್ಕರಿಷ್ಯಸಿ ಕಲ್ಯಾಣಂ ತತ್ ತ್ವಾ ಲೋಕೇಷು ಧಾಸ್ಯತಿ ॥18॥
ವಿದ್ಯಾಪಾರಂಗತರಾಗಿ, ವ್ರತಪಾರಂಗತರಾಗಿ ಇನ್ನೊಬ್ಬರನ್ನು ಆಶ್ರಯಿಸಿ ಜೀವಿಸುವ, ರಹಸ್ಯವಾಗಿ ತಪಸ್ಸು ಮತ್ತು ಸ್ವಾಧ್ಯಾಯಗಳಲ್ಲಿ ಪ್ರವೃತ್ತರಾದ ಬ್ರಾಹ್ಮಣರು ಶ್ರೇಷ್ಠ ವ್ರತಧಾರಿಗಳು. ಅಂತಹ ಇಂದ್ರಿಯನಿಗ್ರಹವುಳ್ಳ, ಶುದ್ಧರಾದ, ತಮ್ಮ ಪತ್ನಿಯಲ್ಲಿ ನಿರತರಾದ ಬ್ರಾಹ್ಮಣರಿಗೆ ಯಾವ ಶುಭವನ್ನು ಮಾಡುವಿಯೋ ಅದು ನಿನಗೆ ಎಲ್ಲ ಲೋಕಗಳಲ್ಲಿಯೂ ಧಾರಣೆ, ಪೋಷಣೆಯನ್ನು ಮಾಡುತ್ತದೆ.
ಯಥಾಽಗ್ನಿಹೋತ್ರಂ ಸುಹುತಂ ಸಾಯಂ ಪ್ರಾತರ್ದ್ವಿಜಾತಿನಾ |
ತಥಾ ಭವತಿ ದತ್ತಂ ವೈ ದ್ವಿಜೇಭ್ಯೋಽಥ ಕೃತಾತ್ಮನಾ ॥19॥
ಬ್ರಾಹ್ಮಣನು ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಮಾಡಿದ ಅಗ್ನಿಹೋತ್ರವು ರಕ್ಷಿಸುವಂತೆ ಒಳ್ಳೆಯ ಮನಸ್ಸಿನಿಂದ ಬ್ರಾಹ್ಮಣರಿಗೆ ಕೊಟ್ಟ ದಾನವು ರಕ್ಷಿಸುತ್ತದೆ.
ಏಷ ತೇ ವಿತತೋ ಯಜ್ಞಃ ಶ್ರದ್ಧಾಪೂತಃ ಸದಕ್ಷಿಣಃ |
ವಿಶಿಷ್ಟಃ ಸರ್ವಯಜ್ಞೇಭ್ಯೋ ದದತಸ್ತಾತ ವರ್ತತಾಮ್ ॥20॥
ಎಲೈ ಪ್ರೀತಿಪಾತ್ರನೇ, ಈ ವಿಸ್ತಾರವಾದ, ಶ್ರದ್ಧೆಯಿಂದ ಕೂಡಿದ, ಒಳ್ಳೆಯ ದಕ್ಷಿಣೆಯಿಂದ ಕೂಡಿದ, ಎಲ್ಲ ಯಜ್ಞಗಳಿಗಿಂತಲೂ ಶ್ರೇಷ್ಠವಾದ ದಾನಯಜ್ಞವು ನಿನ್ನಿಂದ ಯಾವಾಗಲೂ ನಡೆಯಲಿ.
ನಿವಾಪೋ ದಾನಸದೃಶಸ್ತಾದೃಶೇಷು ಯುಧಿಷ್ಠಿರ |
ನಿವಪನ್ ಪೂಜಯಂಶ್ಚೈವ ತೇಷ್ವಾನೃಣ್ಯಂ ನಿಗಚ್ಛತಿ ॥21॥
ಎಲೈ ಯುಧಿಷ್ಠಿರನೇ, ಅಂತಹ ಬ್ರಾಹ್ಮಣರಿಗೆ ದಾನವನ್ನು ಕೊಟ್ಟು ಪೂಜಿಸುವಾಗ ಕೃಷ್ಣಾರ್ಪಣವಾಗಿ ಬಿಡುವ ಜಲವೇ ಪಿತೃಋಣವನ್ನು ಪರಿಹರಿಸುತ್ತದೆ.
ಯ ಏವ ನೋ ನ ಕುಪ್ಯಂತಿ ನ ಲುಭ್ಯಂತಿ ತೃಣೇಷ್ವಪಿ |
ತ ಏವ ನಃ ಪೂಜ್ಯತಮಾ ಯೇ ಚಾನ್ಯೇ ಪ್ರಿಯವಾದಿನಃ ॥22॥
ಯಾರು ನಮ್ಮ ಮೇಲೆ ಕೋಪಗೊಳ್ಳುವುದಿಲ್ಲವೋ ಮತ್ತು ನಮ್ಮಿಂದ ತೃಣವನ್ನೂ ಆಶಿಸುವುದಿಲ್ಲವೋ ಮತ್ತು ಯಾರು ನಮಗೆ

ಪ್ರಿಯವನ್ನೇ ನುಡಿಯುತ್ತಾರೆಯೋ ಅವರು ನಮಗೆ ಅತ್ಯಂತ ಪೂಜ್ಯರಾದವರು.
ಯೇ ನೋ ನ ಬಹು ಮನ್ಯಂತೇ ನ ಪ್ರವರ್ತಂತಿ ಚಾಪರೇ |
ಪುತ್ರವತ್ ಪರಿಪಾಲ್ಯಾಸ್ತೇ ನಮಸ್ತೇಭ್ಯಸ್ತಥಾಭಯಮ್ ॥23॥
ಯಾರು ದಾನವನ್ನು ಕೊಡುವ ನಮ್ಮನ್ನು ಒಲ್ಲೆಯಸುವುದಿಲ್ಲವೋ, ಸ್ವತಃ ಪ್ರತಿಗ್ರಹಕ್ಕಾಗಿ ಪ್ರವೃತ್ತರಾಗುವುದಿಲ್ಲವೋ ಅವರನ್ನು ಪುತ್ರರಂತೆ ರಕ್ಷಿಸಬೇಕು. ಅವರಿಗೆ ನಮ್ಮ ನಮಸ್ಕಾರ ಮತ್ತು ನಮ್ಮಿಂದ ಅಭಯವು ಯಾವಾಗಲೂ ಇರಲಿ.
ಋತ್ವಿಕ್ಪುರೋಹಿತಾಚಾರ್ಯಾ ಮೃದುಬ್ರಹ್ಮಧರಾ ಹಿ ತೇ |
ಕ್ಷತ್ರೇಣಾಪಿ ಹಿ ಸಂಸೃಷ್ಟಂ ತೇಜಃ ಶಾಮ್ಯತಿ ವೈ ದ್ವಿಜೇ ॥24॥
ಅವರು ಋತ್ವಿಜರು, ಪುರೋಹಿತರು, ಆಚಾರ್ಯರು ಮತ್ತು ವೇದವನ್ನು ಧರಿಸಿದ ಮೃದುವಾದ ಬ್ರಾಹ್ಮಣರು. ಕ್ಷತ್ರಿಯ ತೇಜಸ್ಸು ಅಂತಹ ಬ್ರಾಹ್ಮಣರಲ್ಲಿ ಉಪಶಮನಗೊಳ್ಳುತ್ತದೆ.
ಅಸ್ತಿ ಮೇ ಬಲವಾನಸ್ಮಿ ರಾಜಾಸ್ಮೀತಿ ಯುಧಿಷ್ಠಿರ |
ಬ್ರಾಹ್ಮಣಾನ್ ಮಾ ಸ್ಮ ಪರ್ಯಶ್ನೀರ್ವಾಸೋಭಿರಶನೇನ ಚ ॥25॥
ಎಲೈ ಯುಧಿಷ್ಠಿರನೇ, ನಾನು ರಾಜನಾಗಿದ್ದೇನೆ, ಬಲಿಷ್ಠನಾಗಿದ್ದೇನೆ ಎಂದು ತಿಳಿದು ಬ್ರಾಹ್ಮಣರ ಎದುರಿಗೆ ಶ್ರೇಷ್ಠವಾದ ವಸ್ತ್ರವನ್ನು ಉಟ್ಟು, ಆಹಾರವನ್ನು ಸೇವಿಸಿ ಅವರನ್ನು ಅವಮಾನಗೊಳಿಸಬೇಡ.
ಯಚ್ಚೋಭಾರ್ಥಂ ಬಲಾರ್ಥಂ ವಾ ವಿತ್ತಮಸ್ತಿ ತವಾನಘ |
ತೇನ ತೇ ಬ್ರಾಹ್ಮಣಾಃ ಪೂಜ್ಯಾಃ ಸ್ವಧರ್ಮಮನುತಿಷ್ಠತಾ ॥26॥
ಎಲೈ ಅನಘನೇ, ಅಲಂಕಾರಕ್ಕಾಗಿ ಅಥವಾ ಬಲದ ವೃದ್ಧಿಗಾಗಿ ನಿನ್ನ ಬಳಿಯಲ್ಲಿ ಯಾವ ಧನವಿದೆಯೋ ಅದರಿಂದ ಸ್ವಧರ್ಮಾನುಷ್ಠಾನ ಮಾಡುವ ನೀನು ಬ್ರಾಹ್ಮಣರನ್ನು ಪೂಜಿಸು.
ನಮಸ್ಕಾರ್ಯಾಸ್ತ್ವಯಾ ವಿಪ್ರಾ ವರ್ತಮಾನಾ ಯಥಾತಥಮ್ |
ಯಥಾಸುಖಂ ಯಥೋತ್ಸಾಹಂ ಲಲಂತು ತ್ವಯಿ ಪುತ್ರವತ್ ॥27॥
ಯಾವುದೇ ಸ್ಥಿತಿಯಲ್ಲಿರುವ ಬ್ರಾಹ್ಮಣರು ನಿನ್ನಿಂದ ನಮಸ್ಕಾರಕ್ಕೆ ಅರ್ಹರಾದವರು. ಅವರು ತಮ್ಮ ಉತ್ಸಾಹ ಮತ್ತು ಮನೋಧರ್ಮಗಳಿಗೆ ಅನುಗುಣವಾಗಿ ನಿನ್ನ ಜೊತೆಯಲ್ಲಿ ನಿನ್ನನ್ನು ಪುತ್ರನಂತೆ ತಿಳಿದು ಸಂತೋಷದಿಂದಿರಲಿ.
ಕೋ ಹ್ಯನ್ಯಃ ಸುಪ್ರಸಾದಾನಾಂ ಸುಹೃದಾಮಲ್ಪತೋಷಿಣಾಮ್ |
ವೃತ್ತಿಮರ್ಹತ್ಯುಪಕ್ಷೇಪ್ತುಂ ತ್ವದನ್ಯಃ ಕುರುಸತ್ತಮ ॥28॥
ಎಲೈ ಕುರುಶ್ರೇಷ್ಠನೇ, ನಿನ್ನನ್ನು ಬಿಟ್ಟು ಬೇರೆ ಯಾವನು ತಾನೇ ಅತ್ಯಂತ ಪ್ರಸನ್ನರಾದ, ಸುಹೃದಯರಾದ, ಅಲ್ಪತೃಪ್ತರಾದ ಅಂತಹವರಿಗೆ ವೃತ್ತಿಯನ್ನು ಕಲ್ಪಿಸಿಕೊಟ್ಟಾನು!
ಯಥಾ ಪತ್ಯಾಶ್ರಯೋ ಧರ್ಮಃ ಸ್ತ್ರೀಣಾಂ ಲೋಕೇ ಸನಾತನಃ |
ಸ ದೇವಃ ಸಾ ಗತಿರ್ನಾನ್ಯಾ ತಥಾಽಸ್ಮಾಕಂ ದ್ವಿಜಾತಯಃ ॥29॥
ಲೋಕದಲ್ಲಿ ಪತಿಯನ್ನು ಆಶ್ರಯಿಸುವುದು ಸ್ತ್ರೀಯರಿಗೆ ಹೇಗೆ ಸನಾತನ ಧರ್ಮವೋ, ಅವಳಿಗೆ ಅವನೇ ದೇವರು, ಅವನೇ ಗತಿ, ಇನ್ನೊಂದು ಗತಿಯಿಲ್ಲವೋ ಅದರಂತೆ ನಮಗೆ ಬ್ರಾಹ್ಮಣರು.
ಯದಿ ನೋ ಬ್ರಾಹ್ಮಣಾಸ್ತಾತ ಸಂತ್ಯಜೇಯುರಪೂಜಿತಾಃ |
ಪಶ್ಯಂತೋ ದಾರುಣಂ ಕರ್ಮ ಸತತಂ ಕ್ಷತ್ರಿಯೇ ಸ್ಥಿತಮ್ ॥30॥
ಅವೇದಾನಾಮಕೀರ್ತೀನಾಮಲೋಕಾನಾಮಯಜ್ವನಾಮ್ |
ಕೋಽಸ್ಮಾಕಂ ಜೀವಿತೇನಾರ್ಥಸ್ತದ್ಧಿ ನೋ ಬ್ರಾಹ್ಮಣಾಶ್ರಯಮ್ ॥31॥
ಎಲೈ ಪ್ರೀತಿಪಾತ್ರನೇ, ಬ್ರಾಹ್ಮಣರು ನಮ್ಮಿಂದ ಸತ್ಕರಿಸಲ್ಪಡದೆ ನಮ್ಮ ಕ್ಷತ್ರಿಯ ಸಹಜವಾದ ದಾರುಣ ಕರ್ಮಗಳನ್ನು ನೋಡಿ ನಮ್ಮನ್ನು ಪರಿತ್ಯಜಿಸಿದರೆ ವೇದ ಹೀನರಾದ, ಕೀರ್ತಿಹೀನರಾದ, ಲೋಕಹೀನರಾದ ನಮಗೆ ಬದುಕಿ ಏನು ಪ್ರಯೋಜನವಿದೆ? ನಮ್ಮ ವೇದ, ಕೀರ್ತಿ, ಲೋಕಗಳು ಮತ್ತು ಯಾಗಗಳು ಎಲ್ಲವೂ ಬ್ರಾಹ್ಮಣರನ್ನು ಆಶ್ರಯಿಸಿವೆ.
ಅತ್ರ ತೇ ವರ್ತಯಿಷ್ಯಾಮಿ ಯಥಾ ಧರ್ಮಃ ಸನಾತನಃ |
ರಾಜನ್ಯೋ ಬ್ರಾಹ್ಮಣಂ ರಾಜನ್ ಪುರಾ ಪರಿಚಚಾರ ಹ |
ವೈಶ್ಯೋ ರಾಜನ್ಯಮಿತ್ಯೇವ ಶೂದ್ರೋ ವೈಶ್ಯಮಿತಿ ಶ್ರುತಿಃ ॥32॥
ಸನಾತನಧರ್ಮವು ಹೇಗಿದ್ದಿತೆಂದು ನಾನು ನಿನಗೆ ಹೇಳುವೆನು. ಎಲೈ ರಾಜನೇ, ಹಿಂದೆ ಕ್ಷತ್ರಿಯನು ಬ್ರಾಹ್ಮಣನ ಪರಿಚರ್ಯವನ್ನು ಮಾಡುತ್ತಿದ್ದನು. ವೈಶ್ಯನು ಕ್ಷತ್ರಿಯನ ಪರಿಚರ್ಯೆಯನ್ನು ಮಾಡುತ್ತಿದ್ದನು. ಶೂದ್ರನು ವೈಶ್ಯನ ಪರಿಚರ್ಯೆಯನ್ನು ಮಾಡುತ್ತಿದ್ದನು ಎಂದು ಕೇಳಿದ್ದೇವೆ.
ದೂರಾಚ್ಛೂದ್ರೇಣೋಪಚರ್ಯೋ ಬ್ರಾಹ್ಮಣೋಽಗ್ನಿರಿವ ಜ್ವಲನ್ |
ಸಂಸ್ಪರ್ಶಪರಿಚರ್ಯಸ್ತು ವೈಶ್ಯೇನ ಕ್ಷತ್ರಿಯೇಣ ಚ ॥33॥
ಅಗ್ನಿಯಂತೆ ಜ್ವಲಿಸುವ ಬ್ರಾಹ್ಮಣನನ್ನು ಶೂದ್ರನು ದೂರದಿಂದಲೇ ಉಪಚರಿಸಬೇಕು. ವೈಶ್ಯ ಮತ್ತು ಕ್ಷತ್ರಿಯನು ಬ್ರಾಹ್ಮಣನನ್ನು ಸ್ಪರ್ಶ ಮಾಡಿ ಪರಿಚರ್ಯೆಯನ್ನು ಮಾಡುತ್ತಾನೆ.
ಮೃದುಭಾವಾನ್ ಸತ್ಯಶೀಲಾನ್ ಸತ್ಯಧರ್ಮಾನುಪಾಲಕಾನ್ |
ಆಶೀವಿಷಾನಿವ ಕ್ರುದ್ಧಾಂಸ್ತಾನುಪಾಚರತ ದ್ವಿಜಾನ್॥34॥
ಮೃದುಸ್ವಭಾವದ, ಸತ್ಯಶೀಲರಾದ, ಸತ್ಯಧರ್ಮಪಾಲಕರಾದ ಬ್ರಾಹ್ಮಣರನ್ನು ಕೋಪಗೊಂಡ ಸರ್ಪಗಳಂತೆ ಉಪಚರಿಸು.
ಅಪರೇಷಾಂ ಪರೇಷಾಂ ಚ ಪರೇಭ್ಯಶ್ಚೈವ ಯೇ ಪರೇ |

ಕ್ಷತ್ರಿಯಾಣಾಂ ಪ್ರತಪತಾಂ ತೇಜಸಾ ಚ ಬಲೇನ ಚ |
ಬ್ರಾಹ್ಮಣೇಷ್ವೇವ ಶಾಮ್ಯಂತಿ ತೇಜಾಂಸಿ ಚ ತಪಾಂಸಿ ಚ ॥35॥
ತೇಜಸ್ಸು ಮತ್ತು ಬಲಗಳಿಂದ ಜ್ವಲಿಸುವ ಶ್ರೇಷ್ಠ-ಶ್ರೇಷ್ಠ ಕ್ಷತ್ರಿಯರ ತೇಜಸ್ಸು ಮತ್ತು ತಪಸ್ಸುಗಳೂ ಸಹ ಬ್ರಾಹ್ಮಣರನ್ನು ಹೊಂದಿ ಶಾಂತವಾಗುತ್ತವೆ.
ನ ಮೇ ಪಿತಾ ಪ್ರಿಯತರೋ ನ ತ್ವಂ ತಾತ ತಥಾ ಪ್ರಿಯಃ |
ನ ಮೇ ಪಿತುಃ ಪಿತಾ ರಾಜನ್ನ ಚಾತ್ಮಾ ನ ಚ ಜೀವಿತಮ್ ॥36॥
ತ್ವತ್ತಶ್ಚ ಮೇ ಪ್ರಿಯತರಃ ಪೃಥಿವ್ಯಾಂ ನಾಸ್ತಿ ಕಶ್ಚನ |
ತ್ವತ್ತೋಽಪಿ ಮೇ ಪ್ರಿಯತರಾ ಬ್ರಾಹ್ಮಣಾ ಭರತರ್ಷಭ ॥37॥
ಎಲೈ ಪ್ರೀತಿಪಾತ್ರನೇ, ನನಗೆ ತಂದೆಯೂ ಅಷ್ಟು ಪ್ರಿಯತರನಲ್ಲ. ಹಾಗೆ ನೀನೂ ಪ್ರಿಯನಲ್ಲ. ನನಗೆ ತಂದೆಯ ತಂದೆಯು ಪ್ರಿಯನಲ್ಲ. ನನಗೆ ನಾನೇ ಆಗಲಿ, ಜೀವವಾಗಲೀ ಪ್ರಿಯವಲ್ಲ. ಭೂಮಿಯಲ್ಲಿ ನನಗೆ ನಿನಗಿಂತ ಹೆಚ್ಚು ಪ್ರಿಯನಾದವನು ಯಾವನೂ ಇಲ್ಲ. ಎಲೈ ಭರತರ್ಷಭನೇ, ಆದರೆ ಬ್ರಾಹ್ಮಣರು ನಿನಗಿಂತಲೂ ಹೆಚ್ಚು ಪ್ರಿಯರಾದವರು.
ಬ್ರವೀಮಿ ಸತ್ಯಮೇತಚ್ಚ ಯಥಾಹಂ ಪಾಂಡುನಂದನ |
ತೇನ ಸತ್ಯೇನ ಗಚ್ಛೇಯಂ ಲೋಕಾನ್ ಯತ್ರ ಸ ಶಂತನುಃ ॥38॥
ಎಲೈ ಪಾಂಡುನಂದನನೇ, ನಾನು ನುಡಿಯುತ್ತಿರುವ ಈ ಮಾತು ಸತ್ಯವಾದರೆ ಆ ಸತ್ಯದಿಂದ ಶಂತನುವು ಇರುವ ಲೋಕಗಳಿಗೆ ಹೋದೇನು!
ಪಶ್ಯೇಯಂ ಚ ಸತಾಂ ಲೋಕಾಂಛುಚೀನ್ ಬ್ರಹ್ಮಪುರಸ್ಕೃತಾನ್ |
ತತ್ರ ಮೇ ತಾತ ಗಂತವ್ಯಮಹ್ನಾಯ ಚ ಚಿರಾಯ ಚ ॥39॥
ಬ್ರಾಹ್ಮಣರಿಂದ ಪುರಸ್ಕೃತವಾದ, ಸಜ್ಜನರು ಹೊಂದುವ, ಶುಭಲೋಕಗಳನ್ನು ಹೊಂದಿಯೇನು! ಎಲೈ ಪ್ರೀತಿಪಾತ್ರನೇ, ಅಂತಹ ಲೋಕಕ್ಕೆ ನಾನು ಶೀಘ್ರವಾಗಿ ಮತ್ತು ಶಾಶ್ವತವಾಗಿ ಹೋಗಬೇಕು.
ಸೋಽಹಮೇತಾದೃಶಾಲ್ಲೋಕಾನ್ ದೃಷ್ಟ್ವಾ ಭರತಸತ್ತಮ |
ಯನ್ಮೇ ಕೃತಂ ಬ್ರಾಹ್ಮಣೇಷು ನ ತಪ್ಯೇ ತೇನ ಪಾರ್ಥಿವ ॥40॥
ಎಲೈ ಭರತಶ್ರೇಷ್ಠನೇ, ನಾನು ಅಂತಹ ಲೋಕಗಳನ್ನು ನೋಡಿ ಬ್ರಾಹ್ಮಣರಿಗೆ ಮಾಡಿದ ಉಪಕಾರದ ವಿಷಯದಲ್ಲಿ ಎಂದೂ ಸಂತಾಪ ಪಡುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಏಕೋನನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತನೆಯ ಅಧ್ಯಾಯ
ಅತಿಥಿಯಜ್ಞ. ಪಾತ್ರವಿಮರ್ಶೆ.
ಯುಧಿಷ್ಠಿರಃ
ಯೌ ತು ಸ್ಯಾತಾಂ ಚರಣೇನೋಪಪನ್ನೌ
ಯೌ ವಿದ್ಯಯಾ ಸದೃಶೌ ಜನ್ಮನಾ ಚ |
ತಾಭ್ಯಾಂ ದಾನಂ ಕತರಸ್ಮೈ ವಿಶಿಷ್ಟಮ್
ಅಯಾಚಮಾನಾಯ ಚ ಯಾಚತೇ ಚ ॥1॥
ಯುಧಿಷ್ಠಿರ ಇಬ್ಬರು ಬ್ರಾಹ್ಮಣರು ಸದಾಚಾರದಿಂದ ಸಹಿತರಾಗಿದ್ದು, ವಿದ್ಯೆಯಿಂದಲೂ, ಕುಲದಿಂದಲೂ ಸದೃಶರಾಗಿದ್ದು ಒಬ್ಬನು ಯಾಚಿಸುವವನು, ಇನ್ನೊಬ್ಬನು ಯಾಚಿಸದೆ ಇರುವವನೂ ಆದರೆ ಅವರಲ್ಲಿ ಯಾರಿಗೆ ಕೊಟ್ಟ ದಾನವು ಶ್ರೇಷ್ಠವಾದುದು?
ಭೀಷ್ಮಃ
ಶ್ರೇಯೋ ವೈ ಯಾಚತಃ ಪಾರ್ಥ ದತ್ತಮಾಹುರಯಾಚತೇ |
ಅರ್ಹತ್ತಮೋ ವೈ ಧೃತಿಮಾನ್ ಕೃಪಣಾದಧೃತಾತ್ಮನಃ ॥2॥
ಭೀಷ್ಮ ಎಲೈ ಪಾರ್ಥನೇ, ಯಾಚಿಸುವವನಿಗಿಂತಲೂ, ಯಾಚಿಸದೆ ಇರುವವನಿಗೆ ಕೊಟ್ಟ ದಾನವು ಶ್ರೇಯಸ್ಕರವಾದುದು.
ಮನೋಧೈರ್ಯವಿಲ್ಲದ ಕೃಪಣನಿಗಿಂತಲೂ, ಧೈರ್ಯಶಾಲಿಯಾದವನು ಹೆಚ್ಚು ಅರ್ಹನಾದವನು.
ಕ್ಷತ್ರಿಯೋ ರಕ್ಷಣಧೃತಿರ್ಬ್ರಾಹ್ಮಣೋಽನರ್ಥನಾಧೃತಿಃ |
ಬ್ರಾಹ್ಮಣೋ ಧೃತಿಮಾನ್ ವಿದ್ವಾನ್ ದೇವಾನ್ ಪ್ರೀಣಾತಿ ತುಷ್ಟಿಮಾನ್ ॥
ಕ್ಷತ್ರಿಯನ ಧೈರ್ಯವೆಂದರೆ ರಕ್ಷಣೆ. ಬ್ರಾಹ್ಮಣನ ಧೈರ್ಯವೆಂದರೆ ಅಯಾಚನೆ. ವಿದ್ವಾಂಸನೂ, ಧೈರ್ಯಶಾಲಿಯೂ ಆದ ಬ್ರಾಹ್ಮಣನು ತೃಪ್ತಿಯಿಂದ ಇದ್ದು ದೇವತೆಗಳನ್ನು ಸಂತೋಷಪಡಿಸುತ್ತಾನೆ.
ಯಾಚ್ಞಾಮಾಹುರನೀಶಸ್ಯ ಅಭಿಹಾರಂ ಚ ಭಾರತ |
ಉದ್ವೇಜಯತಿ ಯಾಚನ್ ಹಿ ಸದಾ ಭೂತಾನಿ ದಸ್ಯುವತ್ ॥4॥
ಎಲೈ ಭಾರತನೇ, ಯಾಚನೆಯು ಮತ್ತು ಇನ್ನೊಬ್ಬರ ಬಳಿಗೆ ಹೋಗುವುದು ಅಸಮರ್ಥನಾದವನಿಗೆ ಎಂದು ಹೇಳಲ್ಪಡುತ್ತದೆ.
ಯಾಚಿಸುವವನು ಕಳ್ಳನಂತೆ ಇನ್ನೊಬ್ಬರನ್ನು ಉದ್ವೇಗಕ್ಕೆ ಒಳಪಡಿಸುತ್ತಾನೆ.
ಮ್ರಿಯತೇ ಯಾಚಮಾನೋ ವೈ ತಮನು ಮ್ರಿಯತೇ ದದತ್ |

ದದತ್ ಸಂಜೀವಯತ್ಯೇನಮಾತ್ಮಾನಂ ಚ ಯುಧಿಷ್ಠಿರ ॥5॥
ಎಲೈ ಯುಧಿಷ್ಠಿರನೇ, ಯಾಚಿಸುವವನೂ ಮರಣವನ್ನು ಹೊಂದುತ್ತಾನೆ, ದಾನವನ್ನು ಮಾಡುವವನೂ ಮರಣವನ್ನು ಹೊಂದುತ್ತಾನೆ. ಆದರೆ ದಾನವನ್ನು ಮಾಡುವವನು ಯಾಚಿಸುವವನನ್ನು ಉದ್ಧರಿಸುತ್ತಾನೆ, ತನ್ನನ್ನೂ ಉದ್ಧಾರ ಮಾಡಿಕೊಳ್ಳುತ್ತಾನೆ.
ಆನೃಶಂಸ್ಯಂ ಪರೋ ಧರ್ಮೋ ಯಾಚತೇ ಯತ್ ಪ್ರದೀಯತೇ |
ಅಯಾಚತಃ ಸೀದಮಾನಾನ್ ಸರ್ವೋಪಾಯೈರ್ನಿಮಂತ್ರಯ ॥6॥
ಯಾಚಿಸುವವನಿಗೆ ದಾನ ಮಾಡುವುದರಲ್ಲಿ ಶ್ರೇಷ್ಠವಾದ ದಯಾರೂಪವಾದ ಧರ್ಮವಿದೆ. ಸಂಕಟಕ್ಕೆ ಒಳಗಾದರೂ ಯಾಚನೆ ಮಾಡದಿರುವವರನ್ನು ನೀನು ಎಲ್ಲ ಉಪಾಯಗಳಿಂದ ತಿಳಿದು ನಿಮಂತ್ರಿಸು.
ಯದಿ ವೈ ತಾದೃಶಾ ರಾಷ್ಟ್ರೇ ವಸೇಯುಸ್ತೇ ದ್ವಿಜೋತ್ತಮಾಃ |
ಭಸ್ಮಚ್ಛನ್ನಾನಿವಾಗ್ನೀಂಸ್ತಾನ್ ಬುಧ್ಯೇಥಾಸ್ತ್ವಂ ಪ್ರಯತ್ನತಃ ॥7॥
ಅಂತಹ ಶ್ರೇಷ್ಠ ಬ್ರಾಹ್ಮಣರು ನಿನ್ನ ರಾಷ್ಟ್ರದಲ್ಲಿ ಬೂದಿ ಮುಚ್ಚಿದ ಅಗ್ನಿಯಂತೆ ವಾಸ ಮಾಡುತ್ತಿದ್ದರೆ ಪ್ರಯತ್ನಪಟ್ಟು ಅಂತಹವರು ಯಾರೆಂದು ತಿಳಿದುಕೋ.
ತಪಸಾ ದೀಪ್ಯಮಾನಾಸ್ತೇ ದಹೇಯುಃ ಪೃಥಿವೀಮಪಿ |
ಪೂಜ್ಯಾ ಹಿ ಜ್ಞಾನವಿಜ್ಞಾನತಪೋಯೋಗಸಮನ್ವಿತಾಃ ॥8॥
ತಪಸ್ಸಿನಿಂದ ಜ್ವಲಿಸುವ ಅವರು ಪೃಥಿವಿಯನ್ನೂ ಸುಟ್ಟಾರು. ಜ್ಞಾನ-ವಿಜ್ಞಾನ, ತಪೋಯೋಗ ಸಮನ್ವಿತರಾದ ಅವರು ಪೂಜನೀಯರಷ್ಟೆ?
ತೇಭ್ಯಃ ಪೂಜಾಂ ಪ್ರಯುಂಜೀಥಾ ಬ್ರಾಹ್ಮಣೇಭ್ಯಃ ಪರಂತಪ |
ದದದ್ ಬಹುವಿಧಾನ್ ದಾಯಾನುಪಚ್ಛಂದಾನಯಾಚತಾಮ್ ॥9॥
ಎಲೈ ಪರಂತಪನೇ, ಯಾಚನೆಯನ್ನು ಮಾಡದಿರುವ ಅಂತಹ ಬ್ರಾಹ್ಮಣರಿಗೆ ಅವರ ಅಭಿಪ್ರಾಯವನ್ನು ತಿಳಿದು ಅದಕ್ಕೆ ಅನುಗುಣವಾದ ಬಹುವಿಧವಾದ ದಾನಗಳನ್ನು ಕೊಟ್ಟು ಪೂಜಿಸುವವನಾಗು.
ಯದಗ್ನಿಹೋತ್ರೇ ಸುಹುತೇ ಸಾಯಂಪ್ರಾತರ್ಭವೇತ್ ಫಲಮ್ |
ವಿದ್ಯಾವೇದವ್ರತವತಿ ತದ್ ದಾನಫಲಮುಚ್ಯತೇ ॥10॥
ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಚೆನ್ನಾಗಿ ಅಗ್ನಿಹೋತ್ರವನ್ನು ಮಾಡುವವನಿಗೆ ಯಾವ ಫಲವೋ, ವಿದ್ಯಾವ್ರತಧಾರಿಯಾದ ಬ್ರಾಹ್ಮಣನಿಗೆ ಕೊಟ್ಟ ದಾನವು ಅದೇ ಫಲವನ್ನು ಕೊಡುವುದೆಂದು ಹೇಳಲ್ಪಡುತ್ತದೆ.
ವಿದ್ಯಾವೇದವ್ರತಸ್ನಾತಾನವ್ಯಪಾಶ್ರಯಜೀವಿನಃ |
ಗೂಢಸ್ವಾಧ್ಯಾಯತಪಸೋ ಬ್ರಾಹ್ಮಣಾನ್ ಸಂಶಿತವ್ರತಾನ್ ॥11॥
ಕೃತೈರಾವಸಥೈರ್ಹೃದ್ಯೈಃ ಸಪ್ರೇಷ್ಯೈಃ ಸಪರಿಚ್ಛದೈಃ |
ನಿಮಂತ್ರಯೇಥಾಃ ಕೌಂತೇಯ ಕಾಮ್ಯೈಶ್ಚಾನ್ಯೈರ್ದ್ವಿಜೋತ್ತಮಾನ್ ॥12॥
ಎಲೈ ಕೌಂತೆಯನೇ, ವಿದ್ಯಾವೇದವ್ರತಸ್ನಾತರಾಗಿ, ಇನ್ನೊಬ್ಬರನ್ನು ಆಶ್ರಯಿಸದೆ ಜೀವಿಸಿ, ಯಾರಿಗೂ ತಿಳಿಯದಂತೆ ಸ್ವಾಧ್ಯಾಯ ಮತ್ತು ತಪಸ್ಸುಗಳಲ್ಲಿ ನಿರತರಾಗಿ ಶ್ರೇಷ್ಠವಾದ ವ್ರತಧಾರಿಗಳಾದ ಬ್ರಾಹ್ಮಣರನ್ನು ನಿಮಂತ್ರಿಸಿ ಪರಿಷ್ಕೃತವಾದ ಮನೋಹರವಾದ, ಸೇವಕರಿಂದ ಸಹಿತವಾದ ಮನೆಗಳನ್ನು ಮತ್ತು ಉಳಿದ ಪದಾರ್ಥಗಳನ್ನು ಕೊಟ್ಟು ಪೂಜಿಸು.
ಅಪಿ ತೇ ಪ್ರತಿಗೃಹ್ಣೀಯುಃ ಶ್ರದ್ಧಾಪೂತಂ ಯುಧಿಷ್ಠಿರ |
ಕಾರ್ಯಮಿತ್ಯೇವ ಮನ್ವಾನಾ ಧರ್ಮಜ್ಞಾಃ ಸೂಕ್ಷ್ಮದರ್ಶಿನಃ ॥13॥
ಎಲೈ ಯುಧಿಷ್ಠಿರನೇ, ಅವರು ಧರ್ಮಜ್ಞರು ಮತ್ತು ಸೂಕ್ಷ್ಮದರ್ಶಿಗಳು. ಶ್ರದ್ಧೆಯಿಂದ ದಾನ ಮಾಡಿದುದನ್ನು ಪ್ರತಿಗ್ರಹ ಮಾಡುವುದು ಧರ್ಮವೆಂದು ತಿಳಿದು ಅವರು ತೆಗೆದುಕೊಂಡಾರು.
ಅಪಿ ತೇ ಬ್ರಾಹ್ಮಣಾ ಭುಕತ್ವ ಗತಾಃ ಸೋದ್ಧರಣಾ ಗೃಹಾನ್ |
ಯೇಷಾಂ ದಾರಾಃ ಪ್ರತೀಕ್ಷಂತೇ ಪರ್ಜನ್ಯಮಿವ ಕರ್ಷಕಾಃ ॥14॥
ಯಾರ ಪತ್ನಿಯರು ಪತಿಯ ಆಗಮನವನ್ನು ಕರ್ಷಕರು ಮಳೆಯನ್ನು ನಿರೀಕ್ಷಿಸುವಂತೆ ನಿರೀಕ್ಷಿಸುತ್ತಾರೆಯೋ ಅಂತಹ ಬ್ರಾಹ್ಮಣರು ನಿನ್ನ ಮನೆಯಲ್ಲಿ ಭೋಜನವನ್ನು ಮಾಡಿ ತಮ್ಮ ಮನೆಗೆ ಬೇಕಾದ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಾರೆಯೇ?
ಅನ್ನಾನಿ ಪ್ರಾತಃಸವನೇ ನಿಯತಾ ಬ್ರಹ್ಮಚಾರಿಣಃ |
ಬ್ರಾಹ್ಮಣಾಸ್ತಾತ ಭುಂಜನಾಸ್ತ್ರೇತಾಗ್ನೀನ್ ಪ್ರೀಣಯಂತು ತೇ ॥15॥
ಎಲೈ ಪ್ರೀತಿಪಾತ್ರನೇ, ನಿನ್ನ ಮನೆಯಲ್ಲಿ ಪ್ರಾತಃಕಾಲದಲ್ಲಿ ನಿಯಮಧಾರಿಗಳಾದ ಬ್ರಹ್ಮಚಾರಿ ಬ್ರಾಹ್ಮಣರು ಅನ್ನಗಳನ್ನು ಊಟ ಮಾಡಿ ನಿನ್ನ ತ್ರೇತಾಗ್ನಿಗಳನ್ನು ಸಂತೋಷ ಪಡಿಸಲಿ.
ಮಾಧ್ಯಂದಿನಂ ತೇ ಸವನಂ ದದತಸ್ತಾತ ವರ್ತತಾಮ್ |
ಗಾ ಹಿರಣ್ಯಾನಿ ವಾಸಾಂಸಿ ತೇನೇಂದ್ರಃ ಪ್ರೀಯತಾಂ ತವ ॥16॥
ಎಲೈ ಪ್ರೀತಿಪಾತ್ರನೇ, ಮಧ್ಯಾಹ್ನ ಕಾಲದಲ್ಲಿ (ಮಾಧ್ಯಂದಿನ ಸವನದ ಕಾಲದಲ್ಲಿ) ನಿನ್ನ ಮನೆಯಲ್ಲಿ ಗೋದಾನ, ಹಿರಣ್ಯದಾನ ಮತ್ತು ವಸ್ತ್ರದಾನಗಳು ನಡೆಯಲಿ. ಅದರಿಂದ ಇಂದ್ರನು ನಿನಗೆ ಪ್ರಸನ್ನನಾಗಲಿ.
ತೃತೀಯಂ ಸವನಂ ತತ್ತೇ ವೈಶ್ವದೇವಂ ಯುಧಿಷ್ಠಿರ |
ಯದ್ ದೇವೇಭ್ಯಃ ಪಿತೃಭ್ಯಶ್ಚ ವಿಪ್ರೇಭ್ಯಶ್ಚ ಪ್ರಯಚ್ಛಸಿ ॥17॥
ಅಹಿಂಸಾ ಸರ್ವಭೂತೇಭ್ಯಃ ಸಂವಿಭಾಗಶ್ಚ ಸರ್ವಶಃ |
ದಮಸ್ತ್ಯಾಗೋ ಧೃತಿಃ ಸತ್ಯಂ ಭವತ್ವವಭೃಥಾಯ ತೇ ॥18॥

ಎಲೈ ಯುಧಿಷ್ಠಿರನೇ, ಮೂರನೆಯ ಸಾಯಂ ಸವನವೇನಿದೆಯೋ ಆಗ ದೇವತೆಗಳಿಗೆ, ಪಿತೃಗಳಿಗೆ ಮತ್ತು ಬ್ರಾಹ್ಮಣರಿಗೆ ಏನು ಕೊಡುತ್ತೀಯೋ ಅವು ವಿಶ್ವೇದೇವ ಸಂಬಂಧಿಯಾದುದು. ಎಲ್ಲ ಪ್ರಾಣಿಗಳಲ್ಲಿಯೂ ಅಹಿಂಸೆ, ತನ್ನ ಸಂಪತ್ತನ್ನು ಹಂಚಿಕೊಂಡು ಭೋಗಿಸುವುದು, ಇಂದ್ರಿಯನಿಗ್ರಹ, ತ್ಯಾಗ, ಧೈರ್ಯ, ಸತ್ಯ ಇವು ನಿನಗೆ ಅವಭೃಥಸ್ನಾನವಾಗಲಿ.

ಏಷ ತೇ ವಿತತೋ ಯಜ್ಞಃ ಶ್ರದ್ಧಾಪೂತಃ ಸದಕ್ಷಿಣಃ |
ವಿಶಿಷ್ಟಃ ಸರ್ವಯಜ್ಞೇಭ್ಯೋ ನಿತ್ಯಂ ತಾತ ಪ್ರವರ್ತತಾಮ್ ॥19॥

ಈ ವಿಸ್ತಾರವಾದ, ದಕ್ಷಿಣಾ ಸಹಿತವಾದ, ಶ್ರದ್ಧೆಯಿಂದ ಕೂಡಿದ ನಿನ್ನ ಯಜ್ಞವು ಉಳಿದ ಎಲ್ಲಾ ಯಜ್ಞಗಳಿಗಿಂತಲೂ ಶ್ರೇಷ್ಠವಾಗುತ್ತದೆ. ಎಲೈ ಪ್ರೀತಿಪಾತ್ರನೇ, ಅಂತಹ ಯಜ್ಞವು ನಿತ್ಯವೂ ನಿನ್ನಿಂದ ನಡೆಯಲಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪಾತ್ರಪರೀಕ್ಷಣಂ ನಾಮ ನವತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ತೊಂಬತ್ತೊಂದನೆಯ ಅಧ್ಯಾಯ

ರಾಜಧರ್ಮಗಳು

ಯುಧಿಷ್ಠಿರಃ

ದಾನಂ ಯಜ್ಞಕ್ರಿಯಾ ಚೇಹ ಕಿಂಸ್ವಿತ್ ಪ್ರೇತ್ಯ ಮಹಾಫಲಮ್ |
ಕಸ್ಯ ಜ್ಯಾಯಃ ಫಲಂ ಪ್ರೋಕ್ತಂ ಕೀದೃಶೇಭ್ಯಃ ಕಥಂ ಕದಾ ॥1॥

ಯುಧಿಷ್ಠಿರ ದಾನ ಮತ್ತು ಯಜ್ಞ ಈ ಎರಡರಲ್ಲಿ ಮರಣಾನಂತರದಲ್ಲಿ ಯಾವುದರಲ್ಲಿ ಮಹಾಫಲವಿದೆ? ಅವುಗಳಲ್ಲಿ ಯಾವುದರ ಫಲವು ಶ್ರೇಷ್ಠವಾದುದು ಮತ್ತು ದಾನವನ್ನು ಕೊಡುವುದಾದರೆ ಎಂತಹವರಿಗೆ ಯಾವಾಗ ಕೊಟ್ಟ ದಾನವು ಶ್ರೇಷ್ಠವಾದ ಫಲವನ್ನು ಕೊಡುತ್ತದೆ?

ಏತದಿಚ್ಛಾಮಿ ವಿಜ್ಞಾತುಂ ಯಾಥಾತಥ್ಯೇನ ಭಾರತ |
ವಿದ್ವನ್ ಜಿಜ್ಞಾಸಮಾನಾಯ ದಾನಧರ್ಮಾನ್ ಪ್ರಚಕ್ಷ್ವ ಮೇ ॥2॥

ಎಲೈ ಭಾರತನೇ, ಇದನ್ನು ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ. ವಿದ್ವಾಂಸನೇ, ಇದನ್ನು ತಿಳಿಯಲು ಅಪೇಕ್ಷಿಸುವ ನನಗೆ ದಾನ-ಧರ್ಮಗಳನ್ನು ಹೇಳು.

ಅಂತರ್ವೇದ್ಯಾಂ ಚ ಯದ್ ದತ್ತಂ ಶ್ರದ್ಧಯಾ ಚಾನೃಶಂಸ್ಯತಃ |
ಕಿಂ ಸ್ವಿನ್ನಿಃಶ್ರೇಯಸಂ ತಾತ ತನ್ಮೇ ಬ್ರೂಹಿ ಪಿತಾಮಹ ॥3॥

ಯಜ್ಞದಲ್ಲಿ ಅಂತರ್ವೇದಿಯಲ್ಲಿ ಕೊಡುವ ದಾನ ಮತ್ತು ಶ್ರದ್ಧಾಪೂರ್ವಕವಾಗಿ ಮಾರ್ದವದಿಂದ ಬಹಿರ್ವೇದಿಯಲ್ಲಿ ಕೊಡುವ ದಾನ ಇವುಗಳಲ್ಲಿ ಯಾವುದು ನಿಶ್ರೇಯಸ್ಕರವೆಂದು ಪ್ರೀತಿಪಾತ್ರನೇ, ಪಿತಾಮಹನೇ, ನನಗೆ ಹೇಳು.

ಭೀಷ್ಮಃ

ರೌದ್ರಂ ಕರ್ಮ ಕ್ಷತ್ರಿಯಸ್ಯ ಸತತಂ ತಾತ ವರ್ತತೇ |
ತಸ್ಯ ವೈತಾನಿಕಂ ಕರ್ಮ ದಾನಂ ಚೈವೇಹ ಪಾವನಮ್ ॥4॥

ಭೀಷ್ಮ ಪ್ರೀತಿಪಾತ್ರನೇ, ಕ್ಷತ್ರಿಯನೇ, ಯಾವಾಗಲೂ ಘೋರವಾದ ಕರ್ಮವೇ ಇರುತ್ತದೆ. ಅವನು ಯಜ್ಞ ಕರ್ಮ ಮತ್ತು ದಾನಗಳು ಇಲ್ಲಿ ಅವನನ್ನು ಪವಿತ್ರೀಕರಿಸುತ್ತದೆ.

ನ ತು ಪಾಪಕೃತಾಂ ರಾಜ್ಞಾಂ ಪ್ರತಿಗೃಹ್ಣಂತಿ ಸಾಧವಃ |
ಏತಸ್ಮಾತ್ ಕಾರಣಾದ್ ಯಜ್ಞೈರ್ಯಜೇದ್ ರಾಜಾಽಽಪ್ತದಕ್ಷಿಣೈಃ ॥5॥

ಪಾಪಿಷ್ಠರಾದ ರಾಜರು ಮಾಡಿದ ಯಜ್ಞಗಳನ್ನು ಸಜ್ಜನರು ಸ್ವೀಕರಿಸುವುದಿಲ್ಲ. ಆದ್ದರಿಂದ ನ್ಯಾಯದಿಂದ ಸಂಪಾದಿಸಿದ ಧನದಿಂದ ದಕ್ಷಿಣೆಯನ್ನು ಕೊಟ್ಟು ಯಜ್ಞಗಳನ್ನು ಮಾಡಬೇಕು.

ಅಥ ಚೇತ್ ಪ್ರತಿಗೃಹ್ಣೀಯುರ್ದದ್ಯಾದಹರಹರ್ನೃಪಃ |
ಶ್ರದ್ಧಾಮಾಸ್ಥಾಯ ಪರಮಾಂ ಪಾವನಂ ಹ್ಯೇತದುತ್ತಮಮ್ ॥6॥

ಆಗ ರಾಜನು ಪ್ರತಿದಿನವೂ ಶ್ರದ್ಧೆಯಿಂದ ಕೊಡುವ ದಾನಗಳನ್ನು ಬ್ರಾಹ್ಮಣರು ಸ್ವೀಕರಿಸಿದರೆ ಅದು ಬಹಳ ಶ್ರೇಷ್ಠವಾದುದು ಮತ್ತು ರಾಜನನ್ನು ಪವಿತ್ರಗೊಳಿಸುವುದು.

ಬ್ರಾಹ್ಮಣಾಂಸ್ತರ್ಪಯೇದ್ ದ್ರವ್ಯೈಸ್ತತೋ ಯಜ್ಞೇ ಯತವ್ರತಃ |
ಮೈತ್ರಾನ್ ಸಾಧೂನ್ ವೇದವಿದಃ ಶೀಲವೃತ್ತತಪೋನ್ವಿತಾನ್ ॥7॥

ಆದ್ದರಿಂದ ಯಜ್ಞದಲ್ಲಿ ದೀಕ್ಷೆಯುಳ್ಳವನಾಗಿ ರಾಜನು ಸ್ನೇಹಶೀಲರೂ, ಸಾಧುಗಳೂ, ವೇದಜ್ಞನೂ, ಶೀಲವೃತ್ತ-ತಪಸ್ಸಿನಿಂದ ಕೂಡಿದವರೂ ಆದ ಬ್ರಾಹ್ಮಣರನ್ನು ಸಂತೋಷ ಪಡಿಸಬೇಕು.

ಯತ್ರೈತೇನ ಕರಿಷ್ಯಂತಿ ಕೃತಂ ತೇನ ಭವಿಷ್ಯತಿ |
ಯಜ್ಞಾನ್ ಸಾಧಯ ಸಾಧುಭ್ಯಃ ಸ್ವಾದ್ವನ್ನಾನ್ ದಕ್ಷಿಣಾವತಃ ॥8॥

ಎಲ್ಲಿ ದಾನ ಮತ್ತು ಯಜ್ಞಗಳಿಂದ ಬ್ರಾಹ್ಮಣರನ್ನು ಸಂತೋಷಪಡಿಸುತ್ತಾನೆಯೋ ಅಲ್ಲಿ ಎಲ್ಲವೂ ಸಂಪೂರ್ಣವಾಗುತ್ತದೆ. ಆದ್ದರಿಂದ ಯಜ್ಞಗಳನ್ನು ಮಾಡು. ಸಜ್ಜನರಿಗೆ ದಕ್ಷಿಣೆಯಿಂದ ಕೂಡಿದ ಸಾಧುಭೋಜನವನ್ನು ನೀಡು (ಲಕ್ಷಾಲಂಕಾರ).

ಇಷ್ಟೇ ದತ್ತೇ ಚ ಮನ್ಯೇಥಾ ಆತ್ಮಾನಂ ದಾನಕರ್ಮಣಾಮ್ |
ಪೂಜಯೇಥಾ ಯಾಯಜೂಕಾಂಸ್ತವಾಪ್ಯಂಶೋ ಭವೇದ್ ಯಥಾ ॥9॥

ದಾನವನ್ನು ಅಂಗವಾಗಿ ಹೊಂದಿದ ಯಜ್ಞವು ಮಾಡಲ್ಪಟ್ಟಾಗ, ದಾನವನ್ನು ಕೊಡುವಾಗ ಪರಮಾತ್ಮನನ್ನು ಚಿಂತಿಸಬೇಕು. ಋತ್ವಿಜರನ್ನು ಗೌರವಿಸಬೇಕು. ಆಗ ಅವರ ಪುಣ್ಯದ ಒಂದು ಭಾಗವು ನಿನಗೂ ಬರುತ್ತದೆ (ಲಕ್ಷಾಲಂಕಾರ).

ವಿದ್ವದ್ಭ್ಯಃ ಸಂಪ್ರದಾನೇನ ತತ್ರಾಪ್ಯಂಶೋಽಸ್ಯ ಪೂಜಯಾ |
ಯಜ್ವಭ್ಯಶ್ಚಾಥ ವಿದ್ವದ್ಭ್ಯೋ ದತತ್ವ ಲೋಕಂ ಪ್ರದಾಪಯೇತ್ |
ಪ್ರದದ್ಯಾದ್ ಜ್ಞಾನದಾತೃಣಾಂ ಜ್ಞಾನದಾನಾಂಶಭಾಗ್ ಭವೇತ್ ॥10॥

ವಿದ್ವಾಂಸರಿಗೆ ದಾನವನ್ನು ಮಾಡುವುದರಿಂದ ಮತ್ತು ಪೂಜೆಯನ್ನು ಮಾಡುವುದರಿಂದ ಅವರ ಪುಣ್ಯದ ಒಂದಂಶವು ದೊರೆಯುತ್ತದೆ. ಋತ್ವಿಜರಿಗೂ ಮತ್ತು ವಿದ್ವಾಂಸರಿಗೂ ಧನವನ್ನು ನೀಡಿ ಉಳಿದವರಿಗೆ ದಾನವನ್ನು ಮಾಡಿಸಬೇಕು. ಜ್ಞಾನವನ್ನು ಉಪದೇಶ ಮಾಡುವ ಆಚಾರ್ಯರಿಗೆ ದಕ್ಷಿಣೆಯನ್ನು ಕೊಡಬೇಕು. ಆಗ ಜ್ಞಾನದಾನದ ಪುಣ್ಯದಲ್ಲಿ ಒಂದಂಶವು ನಿನಗೂ ಬರುತ್ತದೆ.

ಪ್ರಜಾವತೋ ಭರೇಥಾಶ್ಚ ಬ್ರಾಹ್ಮಣಾನ್ ಬಹುಭಾರಿಣಃ |
ಪ್ರಜಾವಾಂಸ್ತೇನ ಭವತಿ ಯಥಾ ಜನಯಿತಾ ತಥಾ ॥11॥

ಬಹುಕುಟುಂಬಿಗಳಾದ ಪ್ರಜಾವಂತರಾದ ಬ್ರಾಹ್ಮಣರನ್ನು ಪೋಷಿಸು. ಅದರಿಂದ ಪ್ರಜಾಪತಿಯಾದ ಬ್ರಹ್ಮನಂತೆ ನೀನೂ ಪ್ರಜಾಪತಿಯಾಗುವಿ.

ಯಾವತೋ ವೈ ಸಾಧುಧರ್ಮಾನ್ ಸಂತಃ ಸಂವರ್ತಯಂತ್ಯುತ |
ಸರ್ವೇ ತೇ ಚಾಪಿ ಭರ್ತವ್ಯಾ ನರಾ ಯೇ ಬಹುಭಾರಿಣಃ ॥12॥

ಎಷ್ಟು ಸಜ್ಜನರು ನಿನ್ನ ರಾಜ್ಯದಲ್ಲಿ ಸದ್ಧರ್ಮಗಳನ್ನು ಪ್ರವೃತ್ತಿಸುತ್ತಾರೆಯೋ ಅವರೆಲ್ಲರನ್ನೂ ಮತ್ತು ದೊಡ್ಡ ಕುಟುಂಬವುಳ್ಳವರೆಲ್ಲರನ್ನೂ ಪೋಷಿಸುವವನಾಗು.

ಸಮೃದ್ಧಃ ಸಂಪ್ರಯಚ್ಛಸ್ವ ಬ್ರಾಹ್ಮಣೇಭ್ಯೋ ಯುಧಿಷ್ಠಿರ |
ಧೇನೂರನಡುಹೋಽನ್ನಾನಿ ಚ್ಛತ್ರಂ ವಾಸಾಂಸ್ಯುಪಾನಹೌ ॥13॥

ಎಲೈ ಯುಧಿಷ್ಠಿರನೇ, ಸಮೃದ್ಧನಾದ ನೀನು ಬ್ರಾಹ್ಮಣರಿಗೆ ಗೋವುಗಳನ್ನೂ, ಎತ್ತುಗಳನ್ನೂ, ಅನ್ನ-ಛತ್ರ-ವಸ್ತ್ರ-ಪಾದರಕ್ಷೆಗಳನ್ನೂ ಕೊಡು.

ಆಜ್ಯಾನಿ ಯಜಮಾನೇಭ್ಯಸ್ತಥಾನ್ನಾದ್ಯಾನಿ ಭಾರತ |
ಅಶ್ವವಂತಿ ಚ ಯಾನಾನಿ ವೇಶ್ಮಾನಿ ಶಯನಾನಿ ಚ ॥14॥

ಎಲೈ ಭಾರತನೇ, ಯಾಗವನ್ನು ಮಾಡಿಸುವ ಋತ್ವಿಜರಿಗೆ ಆಜ್ಯವನ್ನೂ, ಅನ್ನವನ್ನೂ, ಅಶ್ವವು ಹೂಡಿದ ಯಾನಗಳನ್ನೂ, ಗೃಹ ಮತ್ತು ಶಯನಗಳನ್ನೂ ಕೊಡು.

ಏತೇ ದೇಯಾ ವ್ಯುಷ್ಟಿಮತೋ ಲಘೂಪಾಯಾಶ್ಚ ಭಾರತ |
ಅಜುಗುಪ್ಸಾಂಶ್ಚ ವಿಜ್ಞಾಯ ಬ್ರಾಹ್ಮಣಾನ್ ವೃತ್ತಿಕರ್ಶಿತಾನ್ ॥15॥

ಎಲೈ ಭಾರತನೇ, ಸಮೃದ್ಧಿಯುಳ್ಳ ರಾಜನಿಗೆ ಇವುಗಳನ್ನು ಕೊಡುವುದು ಬಹಳ ಸುಲಭವಾದುದು. ರಕ್ಷಣೆಯಿಲ್ಲದ, ಜೀವನವೃತ್ತಿಯಿಲ್ಲದೆ ಕರ್ಶಿತರಾದ ಬ್ರಾಹ್ಮಣರನ್ನು ತಿಳಿದು ಅವರಿಗೆ ಈ ದಾನಗಳನ್ನು ಕೊಡುವುದು ಬಹಳ ಸುಲಭ ಸಾಧ್ಯವಾದುದು.

ಉಪಚ್ಛನ್ನಂ ಪ್ರಕಾಶಂ ವಾ ವೃತ್ತ್ಯಾ ತಾನ್ ಪ್ರತಿಪಾದಯ |
ರಾಜಸೂಯಾಶ್ವಮೇಧಾಭ್ಯಾಂ ಶ್ರೇಯಸ್ತತ್ಕ್ಷತ್ರಿಯಾನ್ ಪ್ರತಿ ॥16॥

ಪ್ರಚ್ಛನ್ನವಾಗಿ ಅಥವಾ ಪ್ರಕಾಶವಾಗಿ ಅವರಿಗೆ ವೃತ್ತಿಯನ್ನು ನೀಡಿ ಅವರನ್ನು ರಕ್ಷಿಸು. ರಾಜಸೂಯ-ಅಶ್ವಮೇಧ ಯಾಗಗಳು ಕ್ಷತ್ರಿಯರಿಗೆ ಶ್ರೇಯಸ್ಕರವೆಂದು ವಿಹಿತವಾದವುಗಳು (ಲಕ್ಷಾಲಂಕಾರ).

ಏವಂ ಪಾಪೈರ್ವಿಮುಕ್ತಸ್ತ್ವಂ ಪೂತಃ ಸ್ವರ್ಗಮವಾಪ್ಸ್ಯಸಿ |
ಸ್ರಂಸಯಿತ್ವಾ ಪುನಃ ಕೋಶಂ ಯದ್ರಾಷ್ಟ್ರಂ ಪಾಲಯಿಷ್ಯಸಿ ॥17॥

ಹೀಗೆ ಮಾಡುವುದರಿಂದಲೂ ಮತ್ತು ಕೋಶದಲ್ಲಿರುವ ಧನವನ್ನು ವ್ಯಯಮಾಡಿ ರಾಷ್ಟ್ರದ ಪಾಲನೆಯನ್ನು ಮಾಡುವುದರಿಂದಲೂ ನೀನು ಪಾಪಗಳಿಂದ ವಿಮುಕ್ತನಾಗಿ ಪವಿತ್ರನಾಗಿ ಸ್ವರ್ಗವನ್ನು ಹೊಂದುವಿ.

ತತಶ್ಚ ಬ್ರಹ್ಮಭೂಯಸ್ತ್ವಮವಾಪ್ಸ್ಯಸಿ ಧನಾನಿ ಚ |
ಆತ್ಮನಶ್ಚ ಪರೇಷಾಂ ಚ ವೃತ್ತಿಂ ಸಂರಕ್ಷ ಭಾರತ ॥18॥

ಎಲೈ ಭಾರತನೇ, ಅದರಿಂದ ನೀನು ವೇದಜ್ಞಾನವನ್ನು ಮತ್ತು ಸಂಪತ್ತನ್ನು ಪಡೆಯುವಿ. ನಿನ್ನ ಮತ್ತು ಪರರ ವೃತ್ತಿಯನ್ನು ರಕ್ಷಿಸುವವನಾಗು.

ಪುತ್ರವಚ್ಚಾಪಿ ಭೃತ್ಯಾನ್ ಸ್ವಾನ್ ಪ್ರಜಾಶ್ಚ ಪರಿಪಾಲಯ |
ಯೋಗಕ್ಷೇಮಶ್ಚ ತೇ ನಿತ್ಯಂ ಬ್ರಾಹ್ಮಣೇಷ್ವಸ್ತು ಭಾರತ ॥19॥

ಎಲೈ ಭಾರತನೇ, ನಿನ್ನ ಪ್ರಜೆಗಳನ್ನು ಮತ್ತು ಭೃತ್ಯರನ್ನು ಸ್ವಂತ ಮಕ್ಕಳಂತೆ ಪರಿಪಾಲಿಸು. ಬ್ರಾಹ್ಮಣರ ಯೋಗಕ್ಷೇಮವನ್ನು ಯಾವಾಗಲೂ ನೋಡಿಕೋ.

ತದರ್ಥಂ ಜೀವಿತಂ ತೇಽಸ್ತು ಮಾ ತೇಭ್ಯೋಽಪ್ರತಿಪಾಲನಮ್ |
ಅನರ್ಥೋ ಬ್ರಾಹ್ಮಣಸ್ಯೈಷ ಯದ್ ವಿತ್ತನಿಚಯೋ ಮಹಾನ್ ॥20॥

ನಿನ್ನ ಜೀವನವು ಅವರ ಸಲುವಾಗಿ ಇರಲಿ. ನೀನು ಅವರನ್ನು ರಕ್ಷಿಸದಿರುವುದು ಬೇಡ. ಬ್ರಾಹ್ಮಣರ ಬಳಿ ಬಹಳ ಧನ ಸಂಗ್ರಹವಾದರೆ ಅದು ಅವನಿಗೆ ಅನರ್ಥಕಾರಿಯಾದುದು.

ಶ್ರಿಯಾ ಹ್ಯಭೀಕ್ಷ್ಣಂ ಸಂವಾಸೋ ದರ್ಪಯೇತ್ ಸಂಪ್ರಮೋಹಯೇತ್ |
ಬ್ರಾಹ್ಮಣೇಷು ಪ್ರಮೂಢೇಷು ಧರ್ಮೋ ವಿಪ್ರಣಶೇದ್ ಧ್ರುವಮ್ |

ಧರ್ಮಪ್ರಣಾಶೇ ಭೂತಾನಾಮಭಾವಃ ಸ್ಯಾನ್ನ ಸಂಶಯಃ ॥21॥
ಸತತವಾಗಿ ಸಂಪತ್ತಿನ ಸಹವಾಸವು ದರ್ಪವನ್ನು ಮತ್ತು ಮೋಹವನ್ನು ತಂದುಕೊಡುತ್ತದೆ. ಬ್ರಾಹ್ಮಣರು ಮೂಢರಾದರೆ ಧರ್ಮವು ಶೀಘ್ರವಾಗಿ ನಾಶವನ್ನು ಹೊಂದುತ್ತದೆ. ಧರ್ಮವು ನಾಶವನ್ನು ಹೊಂದಿದರೆ ಎಲ್ಲ ಪ್ರಜೆಗಳ ನಾಶ ಉಂಟಾಗುವುದರಲ್ಲಿ ಸಂಶಯವಿಲ್ಲ.
ಯೋ ರಕ್ಷಿಭ್ಯಃ ಸಂಪ್ರದಾಯ ರಾಜಾ ರಾಷ್ಟ್ರಂ ವಿಲುಂಪತಿ |
ಯಕ್ಷ್ಯೇಯೇ ರಾಷ್ಟ್ರಾದ್ ಧನಂ ತಸ್ಮಾದಾನಯಧ್ವಮಿತಿ ಬ್ರುವನ್ ॥22॥
ಯಚ್ಚಾದಾಯ ತದಾಜ್ಞಪ್ತಂ ಭೀತಂ ದತ್ತಂ ಸುದಾರುಣಮ್ |
ಯಜೇದ್ ರಾಜಾ ನ ತಂ ಯಜ್ಞಂ ಪ್ರಶಂಸಂತ್ಯಸ್ಯ ಸಾಧವಃ ॥23॥
ಯಾವ ರಾಜನು ತನ್ನ ರಕ್ಷಕರಿಗೆ ನಾನು ಯಜ್ಞವನ್ನು ಮಾಡಬೇಕು, ನೀವು ಧನವನ್ನು ತನ್ನಿ ಎಂದು ಅವರ ಮೂಲಕವಾಗಿ ರಾಷ್ಟ್ರದ ಪ್ರಜೆಗಳ ಸಂಪತ್ತನ್ನು ದೋಚುತ್ತಾನೆಯೋ ಅಥವಾ ಪ್ರಜೆಗಳೇ ಅವನ ಆಜ್ಞೆಯನ್ನು ನೋಡಿ ಹೆದರಿ ಧನವನ್ನು ಕೊಡುತ್ತಾರೆಯೋ ಅದು ಅತ್ಯಂತ ಘೋರವಾದುದು. ಅಂತಹ ಧನದಿಂದ ರಾಜನು ಯಜ್ಞವನ್ನು ಮಾಡಬಾರದು. ಅದನ್ನು ಸಜ್ಜನರು ಪ್ರಶಂಸಿಸುವುದಿಲ್ಲ.
ಅಪೀಡಿತಾಃ ಸುಸಂವೃದ್ಧಾ ಯೇ ದದತ್ಯನುಕೂಲತಃ |
ತಾದೃಶೇನಾಪ್ಯುಪಾಯೇನ ಯಷ್ಟವ್ಯಂ ನೋದ್ಯಮಾಹೃತೈಃ ॥24॥
ಪ್ರಜೆಗಳಿಗೆ ಪೀಡೆಯನ್ನು ಮಾಡದೆ ಸಮೃದ್ಧರಾದ ಪ್ರಜೆಗಳು ತಾವಾಗಿಯೇ ಕೊಟ್ಟ ಧನರೂಪ ಸಾಧನದಿಂದ ಯಾಗವನ್ನು ಮಾಡಬೇಕು. ಬಲಾತ್ಕಾರದಿಂದ ಸೆಳೆದು ತಂದ ಧನದಿಂದ ಮಾಡಬಾರದು.
ಯದಾ ಪರಿನಿಷಿಚ್ಯೇತ ನಿಹಿತೋ ವೈ ಯಥಾವಿಧಿ |
ತದಾ ರಾಜಾ ಮಹಾಯಜ್ಞೈರ್ಯಜೇತ ಬಹುದಕ್ಷಿಣೈಃ ॥25॥
ಹಾಗೆ ಪ್ರಜೆಗಳು ತಾವಾಗಿಯೇ ಶಾಸ್ತ್ರಾನುಸಾರವಾಗಿ ಕೊಟ್ಟ ಧನವು ಯಾವಾಗ ಪೂರ್ಣವಾಗುತ್ತದೆಯೋ ಆಗ ರಾಜನು ಬಹುದಕ್ಷಿಣೆಯನ್ನು ಕೊಟ್ಟು ಮಹಾಯಜ್ಞವನ್ನು ಮಾಡಬೇಕು.
ವೃದ್ಧಬಾಲಧನಂ ರಕ್ಷ್ಯಮಂಧಸ್ಯ ಕೃಪಣಸ್ಯ ಚ |
ನ ಖಾತಪೂರ್ವಂ ಕುರ್ವೀತ ನ ರುದಂತೀಧನಂ ಹರೇತ್ ॥26॥
ವೃದ್ಧರ, ಬಾಲಕರ, ಅಂಧರ, ಕೃಪಣರ, ಅಳುತ್ತಿರುವ ಸ್ತ್ರೀಯರ ಧನವನ್ನು ತೆಗೆದುಕೊಳ್ಳಬಾರದು.
ಹೃತಂ ಕೃಪಣವಿತ್ತಂ ಹಿ ರಾಷ್ಟ್ರಂ ಹಂತಿ ನೃಪಶ್ರಿಯಮ್ |
ದದ್ಯಾಚ್ಚ ಮಹತೋ ಭೋಗಾನ್ ಕ್ಷುದ್ಭಯಂ ಪ್ರಣುದೇತ್ ಸತಾಮ್ ॥
ಎಲೈ ರಾಜನೇ, ಕಾರ್ಪಣ್ಯದಲ್ಲಿದ್ದವರ ಧನವನ್ನು ತೆಗೆದುಕೊಂಡರೆ ಅದು ರಾಷ್ಟ್ರವನ್ನು ಮತ್ತು ಸಂಪತ್ತನ್ನು ವಿನಾಶಗೊಳಿಸುತ್ತದೆ. ಅಂತಹ ಕೃಪಣರಾದ ಸಜ್ಜನರಿಗೆ ಶ್ರೇಷ್ಠವಾದ ಭೋಗಗಳನ್ನು ನೀಡಿ ಅವರ ಹಸಿವಿನ ಭಯವನ್ನು ನೀಗಿಸಬೇಕು.
ಯೇಷಾಂ ಸ್ವದೂನಿ ಭೋಜ್ಯಾನಿ ಸಮವೇಕ್ಷ್ಯಂತಿ ಬಾಲಕಾಃ |
ನಾಶ್ನಂತಿ ವಿಧಿವತ್ತಾನಿ ಕಿನ್ನು ಪಾಪತರಂ ತತಃ ॥28॥
ಯಾರು ಊಟ ಮಾಡುವ ರುಚಿಕರವಾದ ಪದಾರ್ಥಗಳನ್ನು ಬಾಲಕರು ನೋಡುತ್ತಾರೆಯೋ ಮತ್ತು ಬಾಲಕರಿಗೆ ಅದು ಕೊಡಲ್ಪಡುವುದಿಲ್ಲವೋ ಭುಂಜಿಸುವವರಿಗೆ ಅದಕ್ಕಿಂತ ಹೆಚ್ಚು ಪಾಪಕರವಾದುದು ಯಾವುದಿದೆ?
ಯದಿ ತೇ ತಾದೃಶೋ ರಾಷ್ಟ್ರೇ ವಿದ್ವಾನ್ ಸೀದೇತ್ ಕ್ಷುಧಾ ದ್ವಿಜಃ |
ಭ್ರೂಣಹತ್ಯಾಂ ಚ ಗಚ್ಛೇಥಾಃ ಕೃತ್ವಾ ಪಾಪಮಿವೋತ್ತಮಮ್ ॥29॥
ನಿನ್ನ ರಾಜ್ಯದಲ್ಲಿ ವಿದ್ವಾಂಸನಾದ ಅಂತಹ ಒಬ್ಬ ಸದ್ಬ್ರಾಹ್ಮಣನು ಹಸಿವಿನಿಂದ ಬಳಲುತ್ತಿದ್ದರೆ ದೊಡ್ಡ ಪಾಪವನ್ನು ಮಾಡಿದವನಂತೆ ನಿನಗೆ ಭ್ರೂಣಹತ್ಯಾ ದೋಷವು ಬರುತ್ತದೆ.
ಧಿಕ್ ತಸ್ಯ ಜೀವಿತಂ ರಾಜ್ಞೋ ರಾಷ್ಟ್ರೇ ಯಸ್ಯಾವಸೀದತಿ |
ದ್ವಿಜೋಽನ್ಯೋ ವಾ ಮನುಷ್ಯೋಽಪಿ ಶಿಬಿರಾಹ ವಚೋ ಯಥಾ ॥
ಶಿಬಿಯು ಹೇಳಿದಂತೆ ಯಾವ ರಾಜನ ರಾಷ್ಟ್ರದಲ್ಲಿ ಬ್ರಾಹ್ಮಣನೇ ಆಗಲಿ ಬೇರೆ ಮನುಷ್ಯನೇ ಆಗಲಿ ಹಸಿವಿನಿಂದ ಸಂಕಟಪಡುತ್ತಾನೆಯೋ ಅಂತಹ ರಾಜನಿಗೆ ಧಿಕ್ಕಾರವಿರಲಿ.
ಯಸ್ಯ ಸ್ಮ ವಿಷಯೇ ರಾಜ್ಞಃ ಸ್ನಾತಕಃ ಸೀದತಿ ಕ್ಷುಧಾ |
ಅವೃದ್ಧಿಮೇತಿ ತದ್ ರಾಷ್ಟ್ರಂ ವಿಂದತೇ ಸಹರಾಜಕಮ್ ॥31॥
ಯಾವ ರಾಜನ ರಾಷ್ಟ್ರದಲ್ಲಿ ವೇದವಿದ್ಯಾಪಾರಂಗತನಾದ ಬ್ರಾಹ್ಮಣನು ಹಸಿವಿನಿಂದ ಕಂಗೆಡುತ್ತಾನೆಯೋ ಅವನ ರಾಷ್ಟ್ರವು ವೃದ್ಧಿಯನ್ನು ಹೊಂದುವುದಿಲ್ಲ ಮತ್ತು ಶತ್ರುಗಳ ವಶವಾಗುತ್ತದೆ.
ಕ್ರೋಶಂತ್ಯೋ ಯಸ್ಯ ವೈ ರಾಷ್ಟ್ರಾದ್ ಹ್ರಿಯಂತೇ ತರಸಾ ಸ್ತ್ರಿಯಃ |
ಕ್ರೋಶತಾಂ ಪತಿಪುತ್ರಾಣಾಂ ಮೃತೋಽಸೌ ನ ಚ ಜೀವತಿ ॥32॥
ಯಾವನ ರಾಷ್ಟ್ರದಲ್ಲಿ ಪತಿ-ಪುತ್ರರು ದುಃಖದಿಂದ ಕಿರುಚುತ್ತಿರುವಾಗ ಸ್ತ್ರೀಯರು ಬಲಾತ್ಕಾರದಿಂದ ಎಳೆಯಲ್ಪಡುತ್ತಾರೆಯೋ ಅಂತಹ ರಾಜನು ಸತ್ತವನು. ಅವನು ಬದುಕಿಲ್ಲ.
ಅರಕ್ಷಿತಾರಂ ಹರ್ತಾರಂ ವಿಲೋಪ್ತಾರಮದಾಯಕಮ್ |
ತಂ ಸ್ಮ ರಾಜಕಲಿಂ ಹನ್ಯುಃ ಪ್ರಜಾಃ ಸಂಭೂಯ ನಿರ್ಘೃಣಮ್ ॥33॥
ಪ್ರಜೆಗಳ ಧನವನ್ನು ತೆಗೆದುಕೊಂಡು ಅವರನ್ನು ರಕ್ಷಿಸದಿರುವ, ದಾನವನ್ನು ಕೊಡದಿರುವ, ಧರ್ಮವಿಲೋಪವನ್ನು ಮಾಡುವ,

ದಯಾರಹಿತನಾದ ರಾಜರೂಪನಾದ ಕಲಿಯನ್ನು ಪ್ರಜೆಗಳು ಒಟ್ಟಿಗೆ ಸೇರಿ ಕೊಂದಾರು!
ಅಹಂ ವೋ ರಕ್ಷಿತೇತ್ಯುಕತ್ವಾ ಯೋ ನ ರಕ್ಷತಿ ಭೂಮಿಪಃ |
ಸ ಸಂಹತ್ಯ ನಿಹಂತವ್ಯಃ ಶ್ವೇವ ಸೋನ್ಮಾದ ಆತುರಃ ॥34॥
ಯಾವ ರಾಜನು ನಾನು ನಿಮ್ಮನ್ನು ರಕ್ಷಿಸುತ್ತೇನೆ ಎಂದು ಹೇಳಿ ರಕ್ಷಿಸುವುದಿಲ್ಲವೋ ಅವನನ್ನು ರೋಗ ಹಿಡಿದ ಹುಚ್ಚುನಾಯಿಯನ್ನು ಕೊಂದಂತೆ ಎಲ್ಲರೂ ಒಟ್ಟಾಗಿ ಕೊಲ್ಲಬೇಕು.
ಪಾಪಂ ಕುರ್ವಂತಿ ಯತ್ಕಿಂಚಿತ್ ಪ್ರಜಾ ರಾಜ್ಞಾ ಹ್ಯರಕ್ಷಿತಾಃ |
ಚತುರ್ಥಂ ತಸ್ಯ ಪಾಪಸ್ಯ ರಾಜಾ ಭಾರತ ವಿಂದತಿ ॥35॥
ಎಲೈ ಭಾರತನೇ, ರಾಜನಿಂದ ರಕ್ಷಿಸಲ್ಪಡದ ಪ್ರಜೆಗಳು ಯಾವ ಪಾಪವನ್ನು ಮಾಡುತ್ತಾರೆಯೋ ಆ ಪಾಪದ ನಾಲ್ಕನೆಯ ಒಂದು ಭಾಗವು ರಾಜನನ್ನು ಸೇರುತ್ತದೆ.
ಅಪ್ಯಾಹುಃ ಸರ್ವಮೇವೇತಿ ಭೂಯೋಽರ್ಧಮಿತಿ ನಿಶ್ಚಯಃ |
ಚತುರ್ಥಂ ಮತಮಸ್ಮಾಕಂ ಮನೋಃ ಶ್ರುತ್ವಾಽನುಶಾಸನಮ್ ॥36॥
ಕೆಲವರು ಪೂರ್ಣವಾಗಿ ಪಾಪವು ರಾಜನಿಗೆ ಬರುತ್ತದೆ ಎಂದು ಹೇಳುತ್ತಾರೆ. ಇನ್ನು ಕೆಲವರು ಅರ್ಧಭಾಗ ಬರುತ್ತದೆ ಎಂದು ಹೇಳುತ್ತಾರೆ. ಆದರೆ ಮನುವಿನ ಅನುಶಾಸನದಂತೆ ನನ್ನ ಅಭಿಪ್ರಾಯ ನಾಲ್ಕನೆಯ ಒಂದು ಭಾಗವು ಬರುತ್ತದೆ ಎಂಬುದಾಗಿ.
ಶುಭಂ ವಾ ಯತ್ಪ್ರಕುರ್ವಂತಿ ಪ್ರಜಾ ರಾಜ್ಞಾ ಸುರಕ್ಷಿತಾಃ |
ಚತುರ್ಥಂ ತಸ್ಯ ಪುಣ್ಯಸ್ಯ ರಾಜಾ ಚಾಪ್ನೋತಿ ಭಾರತ ॥37॥
ರಾಜನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ ಪ್ರಜೆಗಳು ಸದ್ಧರ್ಮವನ್ನು ಮಾಡಿದರೂ ಆ ಪುಣ್ಯದ ನಾಲ್ಕನೆಯ ಒಂದು ಭಾಗವು ರಾಜನಿಗೆ ಸೇರುತ್ತದೆ.
ಜೀವಂತಂ ತ್ವಾಽನುಜೀವಂತು ಪ್ರಜಾಃ ಸರ್ವಾ ಯುಧಿಷ್ಠಿರ |
ಪರ್ಜನ್ಯಮಿವ ಭೂತಾನಿ ಮಹಾದ್ರುಮಮಿವ ದ್ವಿಜಾಃ ॥38॥
ಎಲೈ ಯುಧಿಷ್ಠಿರನೇ, ಎಲ್ಲಾ ಪ್ರಾಣಿಗಳೂ ಪರ್ಜನ್ಯವನ್ನು ಅವಲಂಬಿಸುವಂತೆ, ಪಕ್ಷಿಗಳು ಮಹಾವೃಕ್ಷವನ್ನು ಅವಲಂಬಿಸುವಂತೆ, ಜೀವಿಸುವ ನಿನ್ನನ್ನು ಅವಲಂಬಿಸಿ ಎಲ್ಲಾ ಪ್ರಜೆಗಳೂ ಜೀವಿಸಲಿ.
ಕುಬೇರಮಿವ ರಕ್ಷಾಂಸಿ ಶತಕ್ರತುಮಿವಾಮರಾಃ |
ಜ್ಞಾತಯಸತ್ವಾನುಜೀವಂತು ಸುಹೃದಶ್ಚ ಪರಂತಪ ॥39॥
ಎಲೈ ಪರಂತಪನೇ, ರಾಕ್ಷಸರು ಕುಬೇರನನ್ನು ಆಶ್ರಯಿಸಿದಂತೆ, ದೇವತೆಗಳು ಇಂದ್ರನನ್ನು ಆಶ್ರಯಿಸಿದಂತೆ, ಸುಹೃದರು ಮತ್ತು ಬಂಧುಗಳು ನಿನ್ನನ್ನು ಆಶ್ರಯಿಸಿ ಜೀವಿಸಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ರಾಜಧರ್ಮಾನುವರ್ಣನಂ ನಾಮ ಏಕನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆರಡನೆಯ ಅಧ್ಯಾಯ
ಭೂಮಿದಾನ ಪ್ರಶಂಸೆ
ಯುಧಿಷ್ಠಿರಃ
ಇದಂ ದೇಯಮಿದಂ ದೇಯಮಿತೀಯಂ ಶ್ರುತಿಚೋದನಾ |
ಬಹುದೇಯಾಶ್ಚ ರಾಜಾನಃ ಕಿಂ ಸ್ವಿದ್ ದೇಯಮನುತ್ತಮಮ್ ॥1॥
ಯುಧಿಷ್ಠಿರ ಇದನ್ನು ಕೊಡಬೇಕು, ಇದನ್ನು ಕೊಡಬೇಕು ಎಂದು ಶ್ರುತಿಯ ಚೋದನೆ ಇದೆ. ರಾಜರು ಬಹಳ ವಸ್ತುಗಳನ್ನು ಕೊಡಬೇಕು. ದಾನ ಮಾಡುವ ವಸ್ತುಗಳಲ್ಲಿ ಅತ್ಯಂತ ಶ್ರೇಷ್ಠವಾದುದು ಯಾವುದು?
ಭೀಷ್ಮಃ
ಅತಿ ದಾನಾನಿ ಸರ್ವಾಣಿ ಪೃಥಿವೀದಾನಮುಚ್ಯತೇ |
ಅಚಲಾ ಹ್ಯಕ್ಷಯಾ ಭೂಮಿರ್ದೋಗ್ಧ್ರೀ ಕಾಮಾನನುತ್ತಮಾನ್ ॥2॥
ಭೀಷ್ಮ ಎಲ್ಲ ದಾನಗಳಲ್ಲಿಯೂ ಭೂದಾನವು ಅತ್ಯಂತ ಶ್ರೇಷ್ಠವಾದುದು. ಭೂಮಿಯು ಸ್ಥಿರವಾದುದು, ನಾಶ ಹೊಂದದಿರುವುದು ಮತ್ತು ಶ್ರೇಷ್ಠವಾದ ಕಾಮವನ್ನು ಕೊಡುವಂತಹದು.
ದೋಗ್ಧ್ರೀ ವಾಸಾಂಸಿ ರತ್ನಾನಿ ಪಶೂನ್ವ್ರೀಹಿಯವಾಂಸ್ತಥಾ |
ಭೂಮಿದಃ ಸರ್ವಭೂತೇಷು ಶಾಶ್ವತೀರೇಧತೇ ಸಮಾಃ ॥3॥
ವಸ್ತ್ರಗಳು, ರತ್ನಗಳು, ಪಶುಗಳು, ವ್ರೀಹಿಯವಗಳು ಎಲ್ಲವನ್ನೂ ಭೂಮಿಯು ಕೊಡುತ್ತದೆ. ಭೂಮಿಯನ್ನು ದಾನ ಮಾಡುವವನು ಬಹುಕಾಲದವರೆಗೆ ಎಲ್ಲ ಭೂತಗಳಲ್ಲಿಯೂ ಸಮೃದ್ಧಿಯನ್ನು ಹೊಂದುತ್ತಾನೆ.
ಯಾವದ್ ಭೂಮೇರಾಯುರಿಹ ತಾವದ್ ಭೂಮಿದ ಏಧತೇ |
ನ ಭೂಮಿದಾನಾದಸ್ತೀಹ ಪರಂ ಕಿಂಚಿದ್ ಯುಧಿಷ್ಠಿರ ॥4॥
ಭೂಮಿಯ ಆಯುಸ್ಸು ಎಷ್ಟಿದೆಯೋ ಅಷ್ಟು ಕಾಲ ಭೂಮಿಯನ್ನು ದಾನ ಮಾಡಿದವನು ಅಭಿವೃದ್ಧಿಯನ್ನು ಹೊಂದುತ್ತಾನೆ. ಎಲೈ ಯುಧಿಷ್ಠಿರನೇ, ಭೂಮಿ ದಾನಕ್ಕಿಂತ ಶ್ರೇಷ್ಠವಾದ ದಾನವು ಯಾವುದೂ ಇಲ್ಲ.
ಅಪ್ಯಲ್ಪಂ ಪ್ರದದುಃ ಪೂರ್ವೇ ಪೃಥಿವ್ಯಾ ಇತಿ ನಃ ಶ್ರುತಮ್ |

ಭೂಮಿಮೇತೇ ದದುಃ ಸರ್ವೇ ಯೇ ಭೂಮಿಂ ಭುಂಜತೇ ಜನಾಃ ॥5॥
ಪ್ರಾಚೀನರು ಸ್ವಲ್ಪ ಭೂಮಿಯನ್ನಾದರೂ ದಾನ ಮಾಡುತ್ತಿದ್ದರು ಎಂದು ನಾವು ಕೇಳಿದ್ದೇವೆ. ಈಗ ಭೂಮಿಯನ್ನು ಭೋಗಿಸುತ್ತಿರುವವರೆಲ್ಲರೂ ಹಿಂದೆ ಭೂಮಿಯನ್ನು ದಾನ ಮಾಡಿದವರು.
ಸ್ವಕರ್ಮೈರ್ವೋಪಜೀವಂತಿ ನರಾ ಇಹ ಪರತ್ರ ಚ |
ಭೂಮಿರ್ಭೂತಿರ್ಮಹಾದೇವೀ ದಾತಾರಂ ಕುರುತೇ ಪ್ರಿಯಮ್ ॥6॥
ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಪುರುಷರು ತಾವು ಮಾಡಿದ ಕರ್ಮದ ಫಲವನ್ನೇ ಉಪಜೀವಿಸುತ್ತಾರೆ. ಐಶ್ವರ್ಯಪ್ರದಳಾದ ಮಹಾದೇವಿಯಾದ ಭೂಮಿಯು ಭೂದಾನ ಮಾಡುವವನನ್ನು ಪ್ರಿಯನನ್ನಾಗಿ ಮಾಡಿಕೊಳ್ಳುತ್ತಾಳೆ.
ಯ ಏತಾಂ ದಕ್ಷಿಣಾಂ ದದ್ಯಾದಕ್ಷಯಾಂ ಪೃಥಿವೀಪತಿಃ |
ಪುನರ್ನರತ್ವಂ ಸಂಪ್ರಾಪ್ಯ ಭವೇತ್ ಸ ಪೃಥಿವೀಪತಿಃ ॥7॥
ಯಾವ ರಾಜನು ದಕ್ಷಿಣೆ ಸಹಿತವಾಗಿ ಈ ಅಕ್ಷಯವಾದ ಭೂಮಿಯನ್ನು ದಾನ ಮಾಡುತ್ತಾನೆಯೋ ಅವನು ಪುನಃ ಮನುಷ್ಯನಾಗಿ ಹುಟ್ಟಿ ರಾಜನಾಗುತ್ತಾನೆ.
ಯಥಾ ದಾನಂ ತಥಾ ಭೋಗ ಇತಿ ಧರ್ಮೇಷು ನಿಶ್ಚಯಃ |
ಸಂಗ್ರಾಮೇ ವಾ ತನುಂ ಜಹ್ಯಾದ್ ದದ್ಯಾದ್ವಾ ಪೃಥಿವೀಮಿಮಾಮ್ ॥8॥
ಇತ್ಯೇತಾಂ ಕ್ಷತ್ರಬಂಧೂನಾಂ ವದಂತಿ ಪರಮಾಶಿಷಮ್ |
ಪುನಾತಿ ದತ್ತಾ ಪೃಥಿವೀ ದಾತಾರಮಿತಿ ಶುಶ್ರುಮ ॥9॥
ಮನುಷ್ಯನು ದಾನಕ್ಕೆ ಅನುಗುಣವಾದ ಭೋಗವನ್ನು ಅನುಭವಿಸುತ್ತಾನೆ ಎಂಬುದು ಧರ್ಮನಿಶ್ಚಯ. ಕ್ಷತ್ರಿಯರಿಗೆ ಶ್ರೇಷ್ಠವಾದ ಆಶೀರ್ವಾದವನ್ನು ಮಾಡುವವರು ರಣರಂಗದಲ್ಲಿ ಶರೀರವನ್ನು ಪರಿತ್ಯಜಿಸಿ ಅಥವಾ ಭೂಮಿಯನ್ನು ದಾನ ಮಾಡಿ ಎಂದು ಹೇಳುತ್ತಾರೆ. ದಾನ ಮಾಡಿದ ಭೂಮಿಯು ದಾತೃವನ್ನು ಪವಿತ್ರೀಕರಿಸುತ್ತದೆ ಎಂದು ಕೇಳಿದ್ದೇವೆ.
ಅಪಿ ಪಾಪಸಮಾಚಾರಂ ಬ್ರಹ್ಮಘ್ನಮಪಿ ವಾಽನೃತಮ್ |
ಸೈವ ಪಾಪಂ ಪಾವಯತಿ ಸೈವ ಪಾಪಾತ್ ಪ್ರಮೋಚಯೇತ್ ॥10॥
ಪಾಪವನ್ನು ಮಾಡಿದವನನ್ನು, ಬ್ರಹ್ಮಹತ್ಯೆಯನ್ನು ಮಾಡಿದವನನ್ನು, ಅನೃತ ಭಾಷಿಯನ್ನು ದಾನ ಮಾಡಿದ ಭೂಮಿಯು ಶುದ್ಧನನ್ನಾಗಿ ಮಾಡಿ ಪಾಪದಿಂದ ವಿಮುಕ್ತನನ್ನಾಗಿ ಮಾಡುತ್ತದೆ.
ಅಪಿ ಪಾಪಕೃತಾಂ ರಾಜ್ಞಾಂ ಪ್ರತಿಗೃಹ್ಣಂತಿ ಸಾಧವಃ |
ಪೃಥಿವೀಂ ನಾನ್ಯದಿಚ್ಛಂತಿ ಪಾವನಂ ಜನನೀ ಯಥಾ ॥11॥
ರಾಜರು ಪಾಪಕರ್ಮಿಗಳಾದರೂ ಸಜ್ಜನರು ತಾಯಿಯು ಪವಿತ್ರವಾದುದನ್ನೇ ಬಯಸುವಂತೆ ಅವರಿಂದ ಭೂದಾನವನ್ನು ಪಡೆಯಲು ಬಯಸುತ್ತಾರೆ.
ನಾಮಾಸ್ಯಾಃ ಪ್ರಿಯದತ್ತೇತಿ ಗುಹ್ಯಂ ದೇವ್ಯಾಃ ಸನಾತನಮ್ |
ದಾನಂ ಚಾಪ್ಯಥ ಚಾದಾನಂ ನಾಮಾಸ್ಯಾಃ ಪರಮಂ ಪ್ರಿಯಮ್ |
ತಸ್ಮಾತ್ಪ್ರಾಪ್ಯೈವ ಪೃಥಿವೀಂ ದದ್ಯಾದ್ವಿಪ್ರಾಯ ಪಾರ್ಥಿವಃ ॥12॥
ಭೂದೇವಿಗೆ ಪ್ರಿಯದತ್ತಾ ಎಂಬುದು ಸನಾತನವಾದ ರಹಸ್ಯವಾದ ನಾಮ. ಹಾಗೆಯೇ ದಾನ ಮತ್ತು ಆದಾನ (ಸ್ವೀಕಾರ) ಎಂಬ ಶಬ್ದಗಳು ಅವಳಿಗೆ ಪರಮ ಪ್ರಿಯವಾದವುಗಳು. ಆದ್ದರಿಂದ ರಾಜನು ಭೂಮಿಯನ್ನು ಸಂಪಾದಿಸಿ ಅದನ್ನು ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು.
ಯ ಏತಾಂ ವಿದುಷೇ ದದ್ಯಾತ್ ಪೃಥಿವೀಂ ಪೃಥಿವೀಪತಿಃ |
ಪೃಥಿವ್ಯಾಮೇತದಿಷ್ಟಂ ಸ ರಾಜ್ಯಾದ್ ರಾಜ್ಯಮಿತೋ ವ್ರಜೇತ್ |
ಪುನಶ್ಚ ಜನನಂ ಪ್ರಾಪ್ಯ ರಾಜೈವ ಸ್ಯಾನ್ನ ಸಂಶಯಃ ॥13॥
ಯಾವ ರಾಜನು ವಿದ್ವಾಂಸನಾದವನಿಗೆ ಭೂಮಿಯನ್ನು ದಾನ ಮಾಡುತ್ತಾನೆಯೋ ಅವನು ರಾಜ್ಯದಿಂದ ರಾಜ್ಯಕ್ಕೆ ಹೋಗುತ್ತಾನೆ. ಭೂಮಿಯಲ್ಲಿ ಇದು ಇಷ್ಟವಾದುದು. ಎಂದರೆ ಪುನಃ ಜನಿಸಿ ಅವನು ರಾಜನೇ ಆಗುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ.
ನಾಭೂಮಿಪತಿನಾ ಭೂಮಿರಧಿಷ್ಠೇಯಾ ಕಥಂಚನ |
ನ ವಾ ಪಾತ್ರೇಣ ವಾ ಗೂಹೇದಂತರ್ಧಾನೇನ ವಾ ಚರೇತ್ |
ಯೇ ಚಾನ್ಯೇ ಭೂಮಿಮಿಚ್ಛೇಯುಃ ಕುರ್ಯುರೇವಮಸಂಶಯಮ್ ॥
ತನ್ನದಲ್ಲದ ಭೂಮಿಯಲ್ಲಿ ತಾನು ವಾಸ ಮಾಡಬಾರದು. ಅಥವಾ ಅಲ್ಲಿ ತನ್ನನ್ನು ವಸ್ತ್ರದಿಂದ ಮುಚ್ಚಿಕೊಂಡು ಅಥವಾ ಯಾರಿಗೂ ಕಾಣದಂತೆ, ತಿಳಿಯದಂತೆ ಸಂಚರಿಸಲೂ ಬಾರದು. ಹಾಗೆ ಮಾಡಿದರೆ ಭೂಮಿಯನ್ನು ಬಯಸುವ ಇನ್ನೊಬ್ಬರೂ ಹಾಗೆಯೇ ಮಾಡಿ ಯಾರು ಇದರಲ್ಲಿ ಸಂಶಯವಿಲ್ಲ.
ಯಃ ಸಾಧೋರ್ಭೂಮಿಮಾದತ್ತೇ ನ ಭೂಮಿಂ ವಿಂದತೇ ತು ಸಃ |
ಭೂಮಿಂ ತು ದತ್ತಕತ್ವ ಸಾಧುಭ್ಯೋ ವಿಂದತೇ ಭೂಮಿಮೇವ ಹಿ |
ಪ್ರೇತ್ಯೇಹ ಚ ಸ ಧರ್ಮಾತ್ಮಾ ಸಂಪ್ರಾಪ್ನೋತಿ ಮಹದ್ಯಶಃ ॥15॥
ಯಾವನು ಸಜ್ಜನನ ಭೂಮಿಯನ್ನು ಅಪಹರಿಸುತ್ತಾನೆಯೋ ಅವನು ಭೂಮಿಯನ್ನು ಪಡೆಯುವುದಿಲ್ಲ. ಸಜ್ಜನರಿಗೆ ಭೂದಾನ ಮಾಡಿದವನು ಭೂಮಿಯನ್ನು ಪಡೆಯುತ್ತಾನೆ. ಮತ್ತು ಧರ್ಮಾತ್ಮನಾದ ಅವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಮಹಾಕೀರ್ತಿಯನ್ನು ಪಡೆಯುತ್ತಾನೆ.
ಯಸ್ಯ ವಿಪ್ರಾನುಶಾಸಂತಿ ಸಾಧೋರ್ಭೂಮಿಂ ಸದೈವ ಹಿ |

ನ ತಸ್ಯ ಶತ್ರವೋ ರಾಜನ್ ಪ್ರಶಾಸಂತಿ ವಸುಂಧರಾಮ್ ॥16॥
ಯಾವ ಸಜ್ಜನನಾದ ರಾಜನ ಭೂಮಿಯನ್ನು ವಿಪ್ರರು ಆಳುತ್ತಾರೆಯೋ ಆ ರಾಜನ ಭೂಮಿಯು ಶತ್ರುಗಳಿಗೆ ವಶವಾಗುವುದಿಲ್ಲ.
ಯತ್ ಕಿಂಚಿತ್ ಪುರುಷಃ ಪಾಪಂ ಕುರುತೇ ವೃತ್ತಿಕರ್ಶಿತಃ |
ಅಪಿ ಗೋಚರ್ಮಮಾತ್ರೇಣ ಭೂಮಿದಾನೇನ ಪೂಯತೇ ॥17॥
ವ್ಯಕ್ತಿಹೀನನಾದ ಮನುಷ್ಯನು ಏನು ಪಾಪವನ್ನು ಮಾಡಿದ್ದರೂ ಗೋಚರ್ಮದಷ್ಟಾದರೂ ಭೂಮಿಯನ್ನು ದಾನ ಮಾಡುವುದರಿಂದ ಪರಿಶುದ್ಧನಾಗುತ್ತಾನೆ.
ಯೇಽಪಿ ಸಂಕೀರ್ಣಕರ್ಮಾಣೋ ರಾಜಾನೋ ರೌದ್ರಕರ್ಮಿಣಃ |
ತೇಭ್ಯಃ ಪವಿತ್ರಮಾಖ್ಯೇಯಂ ಭೂಮಿದಾನಮನುತ್ತಮಮ್ ॥18॥
ಯಾವ ರಾಜರು ಘೋರಕರ್ಮಗಳನ್ನೂ, ಶುಭಾಶುಭಕರ್ಮಗಳನ್ನೂ ಮಾಡುತ್ತಾರೆಯೋ ಅವರಿಗೆ ಭೂಮಿದಾನವು ಶ್ರೇಷ್ಠವೆಂದು ಹೇಳಬೇಕು.
ಅಲ್ಪಾಂತರಮಿದಂ ಶಶ್ವತ್ ಪುರಾಣಾ ಮೇನಿರೇ ಜನಾಃ |
ಯೋ ಯಜೇದಶ್ವಮೇಧೇನ ದದ್ಯಾದ್ ವಾ ಸಾಧವೇ ಮಹೀಮ್ ॥
ಪುರಾಣವನ್ನು ತಿಳಿದವರು ಅಶ್ವಮೇಧಯಾಗವನ್ನು ಮಾಡುವುದಕ್ಕೂ ಮತ್ತು ಸತ್ಪುರುಷರಿಗೆ ಭೂಮಿದಾನ ಮಾಡುವುದಕ್ಕೂ ಇರುವ ಅಂತರವು ಅಲ್ಪವೆಂದು ಯಾವಾಗಲೂ ತಿಳಿಯುತ್ತಾರೆ.
ಅಪಿ ಚೇತ್ಸುಕೃತಂ ಕೃತ್ವಾ ಶಂಕೇರನ್ನಪಿ ಪಂಡಿತಾಃ |
ಅಶಂಕ್ಯಮೇಕಮೇವೈತದ್ ಭೂಮಿದಾನಮನುತ್ತಮಮ್ ॥20॥
ಪುಣ್ಯವನ್ನು ಮಾಡಿದ್ದರೂ ಸಹ ಪಂಡಿತರು ಶಂಕಿಸಬಹುದು. ಶ್ರೇಷ್ಠವಾದ ಭೂಮಿದಾನವನ್ನು ಮಾಡಿದವನನ್ನು ಶಂಕಿಸಲೂ ಸಾಧ್ಯವಿಲ್ಲ.
ಸುವರ್ಣಂ ರಜತಂ ವಸ್ತ್ರಂ ಮಣಿಮುಕ್ತಾವಸೂನಿ ಚ |
ಸರ್ವಮೇತನ್ಮಹಾಪ್ರಾಜ್ಞ ದದಾತಿ ವಸುಧಾಂ ದದತ್ ॥21॥
ಎಲೈ ಮಹಾಪ್ರಾಜ್ಞನೇ, ಭೂಮಿಯನ್ನು ದಾನ ಮಾಡುವವನು ಸುವರ್ಣ, ರಜತ, ವಸ್ತ್ರ, ಮಣಿ, ಮುತ್ತು, ಧನ ಎಲ್ಲವನ್ನೂ ದಾನ ಮಾಡಿದವನಾಗುತ್ತಾನೆ.
ತಪೋ ಯಜ್ಞಃ ಶ್ರುತಂ ಶೀಲಮಲೋಭಃ ಸತ್ಯಸಂಧತಾ |
ಗುರುದೈವತಪೂಜಾ ಚ ನಾತಿವರ್ತಂತಿ ಭೂಮಿದಮ್ ॥22॥
ತಪಸ್ಸು, ಯಜ್ಞ, ವಿದ್ಯೆ, ಶೀಲ, ಅಲೋಭ, ಸತ್ಯಸಂಧತೆ, ಗುರುದೇವತಾ ಪೂಜೆ ಇದರ ಯಾವ ಫಲವೂ ಭೂಮಿದಾನವನ್ನು ಮಾಡಿದವನನ್ನು ಮೀರಿ ಹೋಗುವುದಿಲ್ಲ.
ಭರ್ತುರ್ನಿಃಶ್ರೇಯಸೇ ಯುಕ್ತಾಸ್ತ್ಯಕ್ತಾತ್ಮಾನೋ ರಣೇ ಹತಾಃ |
ಬ್ರಹ್ಮಲೋಕಗತಾಃ ಸಿದ್ಧಾ ನಾತಿಕ್ರಾಮಂತಿ ಭೂಮಿದಮ್ ॥23॥
ಸ್ವಾಮಿಯ ಶ್ರೇಯಸ್ಸಿನಲ್ಲಿ ನಿರತರಾಗಿ ರಣರಂಗದಲ್ಲಿ ಹತರಾಗಿ ಶರೀರ ತ್ಯಾಗವನ್ನು ಮಾಡಿ ಬ್ರಹ್ಮಲೋಕಕ್ಕೆ ಹೋದ ಸಿದ್ಧರೂ ಸಹ ಭೂಮಿದಾನವನ್ನು ಮಾಡಿದವನನ್ನು ಮೀರುವುದಿಲ್ಲ.
ಯಥಾ ಜನಿತ್ರೀ ಕ್ಷೀರೇಣ ಸ್ವಪುತ್ರಂ ಭರತೇ ಸದಾ |
ಅನುಗೃಹ್ಣಾತಿ ದಾತಾರಂ ತಥಾ ಸರ್ವರಸೈರ್ಮಹೀ ॥24॥
ತಾಯಿಯು ತನ್ನ ಪುತ್ರನನ್ನು ಕ್ಷೀರದಿಂದ ಪೋಷಿಸುವಂತೆ ಭೂಮಿಯು ತನ್ನನ್ನು ದಾನ ಕೊಡುವವರನ್ನು ಎಲ್ಲ ರಸಗಳಿಂದಲೂ ಅನುಗ್ರಹಿಸುತ್ತದೆ.
ಮೃತ್ಯೋರ್ವೈ ಕಿಂಕರೋ ದಂಡಸ್ತಾಪೋ ವಹ್ನೇಃ ಸುದಾರುಣಃ |
ಘೋರಾಶ್ಚ ವಾರುಣಾಃ ಪಾಶಾ ನೋಪಸರ್ಪಂತಿ ಭೂಮಿದಮ್ ॥25॥
ಮೃತ್ಯು ಕಿಂಕರರಾಗಲೀ, ಯಮದಂಡವಾಗಲೀ, ಭಯಂಕರವಾದ ವಹ್ನಿ ತಾಪವಾಗಲೀ, ಘೋರವಾದ ವರುಣನ ಪಾಶವಾಗಲೀ ಭೂಮಿ ದಾನ ಮಾಡಿದವನ ಸಮೀಪಕ್ಕೆ ಬರುವುದಿಲ್ಲ.
ಪಿತೄಂಶ್ಚ ಪಿತೃಲೋಕಸ್ಥಾನ್ ದೇವಲೋಕೇ ಚ ದೇವತಾಃ |
ಸಂತರ್ಪಯತಿ ಶಾಂತಾತ್ಮಾ ಯೋ ದದಾತಿ ವಸುಂಧರಾಮ್ ॥26॥
ಭೂದಾನವನ್ನು ಕೊಡುವ ಶಾಂತಾತ್ಮನಾದವನು ಪಿತೃಲೋಕದಲ್ಲಿರುವ ಪಿತೃಗಳನ್ನೂ, ದೇವಲೋಕದಲ್ಲಿರುವ ದೇವತೆಗಳನ್ನೂ ತೃಪ್ತಿಪಡಿಸುತ್ತಾನೆ.
ಕೃಶಾಯ ಮ್ರಿಯಮಾಣಾಯ ವೃತ್ತಿಮ್ಲಾನಾಯ ಸೀದತೇ |
ಭೂಮಿಂ ವೃತ್ತಿಕರೀಂ ದತ್ವಾ ಸತ್ರೀ ಭವತಿ ಮಾನವಃ ॥27॥
ಕೃಶನೂ, ಮರಣಾವಸ್ಥೆಯಲ್ಲಿರುವವನೂ, ಜೀವನೋಪಾಯವಿಲ್ಲದೆ ಸಂಕಟ ಪಡುತ್ತಿರುವವನೂ ಆದವನಿಗೆ ಜೀವನೋಪಾಯವನ್ನು ಕಲ್ಪಿಸುವ ಭೂಮಿಯನ್ನು ಕೊಟ್ಟವನು ಯಾಗ ಮಾಡಿದ ಫಲವನ್ನು ಹೊಂದುತ್ತಾನೆ.
ಯಥಾ ಧಾವತಿ ಗೌರ್ವತ್ಸಂ ಕ್ಷೀರಮಭ್ಯುತ್ಸೃಜತ್ಯುತ |
ಏವಮೇವ ಮಹಾಭಾಗ ಭೂಮಿರ್ಭವತಿ ಭೂಮಿದಮ್ ॥28॥
ಹೇಗೆ ಧೇನುವು ಕರುವಿನ ಕಡೆಗೆ ಧಾವಿಸಿ ಕ್ಷೀರವನ್ನು ಸುರಿಸುತ್ತದೆಯೋ ಎಲೈ ಮಹಾಭಾಗನೇ, ಅದರಂತೆ ಭೂಮಿಯನ್ನು ದಾನ ಮಾಡುವವನ ವಿಷಯದಲ್ಲಿ ಭೂಮಿಯು ನಡೆದುಕೊಳ್ಳುತ್ತದೆ.

ಹಲಕೃಷ್ಟಾಂ ಮಹೀಂ ದತ್ವಾ ಸಬೀಜಾಂ ಸಫಲಾಮಪಿ |
ಉದೀರ್ಣಂ ವಾಪಿ ಶರಣಂ ತಥಾ ಭವತಿ ಕಾಮದಃ ॥29॥
ಉತ್ತು, ಬಿತ್ತಿ, ಬೀಜ ಮತ್ತು ಫಲ ಸಹಿತವಾದ ಭೂಮಿಯನ್ನು ಮತ್ತು ಶ್ರೇಷ್ಠವಾದ ಗೃಹವನ್ನು ಕೊಡುವವನು ತನ್ನ ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸಿಕೊಂಡು ತಾನೂ ಹಾಗೆಯೇ ಆಗುತ್ತಾನೆ.
ಬ್ರಾಹ್ಮಣಂ ವೃತ್ತಸಂಪನ್ನಮಾಹಿತಾಗ್ನಿಂ ಶುಚಿವ್ರತಮ್ |
ನರಃ ಪ್ರತಿಗ್ರಾಹ್ಯ ಮಹೀಂ ನ ಯಾತಿ ಯಮಸಾದನಮ್ ॥30॥
ಶೀಲಸಂಪನ್ನನೂ, ಆಹಿತಾಗ್ನಿಯೂ, ಶುಚಿವ್ರತನೂ ಆದ ಬ್ರಾಹ್ಮಣನಿಗೆ ಭೂದಾನವನ್ನು ಮಾಡುವ ಮನುಷ್ಯನು ಯಮಪಟ್ಟಣಕ್ಕೆ ಹೋಗುವುದಿಲ್ಲ.
ಯಥಾ ಚಂದ್ರಮಸೋ ವೃದ್ಧಿರಹನ್ಯಹನಿ ಜಾಯತೇ |
ತಥಾ ಭೂಮಿಕೃತಂ ದಾನಂ ಸಸ್ಯೇ ಸಸ್ಯೇ ವಿವರ್ಧತೇ ॥31॥
ಹೇಗೆ ದಿನದಿನಕ್ಕೆ ಚಂದ್ರನಲ್ಲಿ ವೃದ್ಧಿಯುಂಟಾಗುತ್ತದೆಯೋ ಹಾಗೆ ಭೂಮಿದಾನವು ಸಸ್ಯ-ಸಸ್ಯಗಳಲ್ಲಿ ಅಭಿವೃದ್ಧಿಯನ್ನು ಉಂಟುಮಾಡುತ್ತದೆ.
ಅತ್ರ ಗಾಥಾ ಭೂಮಿಗೀತಾಃ ಕೀರ್ತಯಂತಿ ಪುರಾವಿದಃ |
ಯಾಃ ಶ್ರುತ್ವಾ ಜಾಮದಗ್ನ್ಯೇನ ದತ್ತಾ ಭೂಃ ಕಾಶ್ಯಪಾಯ ವೈ ॥32॥
ಯಾವ ಗೀತೆಗಳನ್ನು ಕೇಳಿ ಪರಶುರಾಮರು ಕಾಶ್ಯಪರಿಗೆ ಭೂಮಿಯನ್ನು ದಾನ ಮಾಡಿದರೋ ಅಂತಹ ಭೂಮಿಯು ಹಾಡಿದ ಗೀತೆಗಳನ್ನು ಪ್ರಾಚೀನ ಇತಿಹಾಸವನ್ನು ತಿಳಿದವರು ಹೇಳುತ್ತಾರೆ.
ಮಾಮೇವಾದತ್ತ ಮಾಂ ದತ್ತ ಮಾಂ ದತ್ವಾ ಮಾಮವಾಪ್ಸ್ಯಥ |
ಅಸ್ಮಿನ್ ಲೋಕೇ ಪರೇ ಚೈವ ತತಶ್ಚಾಜನನೇ ಪುನಃ ॥33॥
ನನ್ನನ್ನೇ ಸ್ವೀಕಾರ ಮಾಡಿ, ನನ್ನನ್ನೇ ದಾನವನ್ನಾಗಿ ಕೊಡಿ, ಪುನಃ ನನ್ನನ್ನೇ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಹೊಂದುವವರಾಗಿ. ಪುನಃ ಜನನರಹಿತರಾದ ಮೋಕ್ಷದಲ್ಲಿಯೂ ನನ್ನನ್ನು ಹೊಂದುವವರಾಗಿ.
ಯ ಇಮಾಂ ವ್ಯಾಹೃತಿಂ ವೇದ ಬ್ರಾಹ್ಮಣೋ ಬ್ರಹ್ಮಸಂಶ್ರಿತಃ |
ಶ್ರಾದ್ಧಸ್ಯ ಹೂಯಮಾನಸ್ಯ ಬ್ರಹ್ಮಭೂಯಂ ಸ ಗಚ್ಛತಿ ॥34॥
ಯಾವ ಬ್ರಾಹ್ಮಣನು ವೇದನಿಷ್ಠನಾಗಿ ಭೂಮಿಯು ಹಾಡಿದ ಈ ಗೀತೆಯನ್ನು ತಿಳಿದು ಶ್ರಾದ್ಧ ಸಮಯದಲ್ಲಿ ಅದನ್ನು ಹೇಳುತ್ತಾನೆಯೋ ಅವನು ಜೀವನ್ಮುಕ್ತನಾಗುವನು.
ಕೃತ್ಯಾನಾಮಭಿಶಸ್ತಾನಾಂ ದುರಿಷ್ಟಶಮನಂ ಮಹತ್ |
ಪ್ರಾಯಶ್ಚಿತ್ತಮಹಂ ಕೃತ್ವಾ ಪುನಾತ್ಯುಭಯತೋ ದಶ ॥35॥
ಶತ್ರುಗಳು ಮಾಡುವ ವಾಮಾಚಾರ ಪ್ರಯೋಗಗಳಿಂದ ಉಂಟಾದ ದೊಡ್ಡ ದುರಿಷ್ಟವನ್ನು ಭೂದಾನವು ಶಮನ ಮಾಡುತ್ತದೆ. ಭೂದಾನ ರೂಪವಾದ ಪ್ರಾಯಶ್ಚಿತ್ತ ಮಹೋತ್ಸವವನ್ನು ಮಾಡಿಕೊಂಡವನು ಎರಡು ಕುಲದ ಹತ್ತು ತಲೆಯವರನ್ನು ಪವಿತ್ರೀಕರಿಸುತ್ತಾನೆ.
ಪುನಾತಿ ಯ ಇದಂ ವೇದ ವೇದ ಚಾಹಂ ತಥೈವ ಚ |
ಪ್ರಕೃತಿಃ ಸರ್ವಭೂತಾನಾಂ ಭೂಮಿರ್ವೈ ಶಾಶ್ವತೀ ಮತಾ ॥36॥
ಯಾರು ಈ ಭೂಮಿಯು ಹಾಡಿದ ಗೀತೆಯನ್ನು ತಿಳಿಯುತ್ತಾನೆಯೋ ಅವನೂ ಸಹ ಉಭಯ ಪಕ್ಷದ ಹತ್ತು ತಲೆಮಾರಿನವರನ್ನು ಪವಿತ್ರೀಕರಿಸುತ್ತಾನೆ. ನಾನೂ ಸಹ ಅದನ್ನು ತಿಳಿದಿದ್ದೇನೆ (ಇದು ಭೀಷ್ಮರ ಮಾತು). ಶಾಶ್ವತವಾದ ಕಾಲದಲ್ಲಿ ಎಲ್ಲ ಜೀವರಿಗೂ ಭೂಮಿಯು ಮೂಲಳಾದವಳು.
ಅಭಿಷಿಚ್ಯೈವ ನೃಪತಿಂ ಶ್ರಾವಯೇದಿಮಮಾಗಮಮ್ |
ಯಥಾ ಶ್ರುತ್ವಾ ಮಹೀಂ ದದ್ಯಾನ್ನಾದದ್ಯಾತ್ಸಾಧುತಶ್ಚ ತಾಮ್ ॥37॥
ರಾಜನಿಗೆ ಅಭಿಷೇಕವನ್ನು ಮಾಡಿ ಈ ಗೀತೆಯ ಜ್ಞಾನವನ್ನು ಉಪದೇಶಿಸಬೇಕು. ಅದರಿಂದ ಅವನು ಭೂದಾನವನ್ನು ಮಾಡಿಯಾನು ಮತ್ತು ಸಜ್ಜನರ ಭೂಮಿಯನ್ನು ಅಪಹರಿಸದೆ ಇದ್ದಾನು.
ಸೋಽಯಂ ಕೃತ್ಸ್ನೋ ಬ್ರಾಹ್ಮಣಾರ್ಥೋ ರಾಜಾರ್ಥಶ್ಚಾಪ್ಯಸಂಶಯಮ್
ರಾಜಾ ಹಿ ಧರ್ಮಕುಶಲಃ ಪ್ರಥಮಂ ಭೂತಿಲಕ್ಷಣಮ್ ॥38॥
ಈ ಸಮಗ್ರವಾದ ಭೂದಾನ ಪ್ರಕರಣವೆಲ್ಲವೂ ರಾಜನಿಗೆ ಮತ್ತು ಬ್ರಾಹ್ಮಣರಿಗೆ ಸೇರಿದುದು ಎಂಬುದರಲ್ಲಿ ಸಂಶಯವಿಲ್ಲ. ರಾಜನೇ ಧರ್ಮಕುಶಲನಾದವನು ಮತ್ತು ಐಶ್ವರ್ಯಶ್ರೇಷ್ಠ ಪ್ರತಿನಿಧಿಯಾದವನು.
ಅಥ ಯೇಷಾಮಧರ್ಮಜ್ಞೋ ರಾಜಾ ಭವತಿ ನಾಸ್ತಿಕಃ |
ನ ತೇ ಸುಖಂ ಪ್ರಬುಧ್ಯಂತೇ ನ ಸುಖಂ ಪ್ರಸ್ವಪಂತಿ ಚ ॥39॥
ಯಾರಿಗೆ ಅಧರ್ಮಿಷ್ಠನೂ, ನಾಸ್ತಿಕನೂ ರಾಜನಾಗುತ್ತಾನೆಯೋ ಅವರು ಸುಖವಾಗಿ ಮಲಗುವುದಿಲ್ಲ ಮತ್ತು ಸುಖವಾಗಿ ಎಚ್ಚರಗೊಳ್ಳುವುದಿಲ್ಲ.
ಸದಾ ಭವಂತಿ ಚೋದ್ವಿಗ್ನಾಸ್ತಸ್ಯ ದುಶ್ಚರಿತೈರ್ನರಾಃ |
ಯೋಗಕ್ಷೇಮಾ ಹಿ ಬಹವೋ ರಾಷ್ಟ್ರಂ ನಾಸ್ಯಾವಿಶಂತಿ ತತ್ ॥40॥
ಅವರು ರಾಜನ ದುಶ್ಚರಿತೆಗಳಿಂದ ಯಾವಾಗಲೂ ಉದ್ವಿಗ್ನರಾಗಿರುತ್ತಾರೆ. ಅಂತಹ ರಾಷ್ಟ್ರಕ್ಕೆ ಉಂಟಾಗಬೇಕಾದ ಯೋಗಕ್ಷೇಮಗಳು ಯಾವುವೂ ಉಂಟಾಗುವುದಿಲ್ಲ.

ಅಥ ಯೇಷಾಂ ಪುನಃ ಪ್ರಾಜ್ಞೋ ರಾಜಾ ಭವತಿ ಧಾರ್ಮಿಕಃ |
ಸುಖಂ ತೇ ಪ್ರತಿಬುಧ್ಯಂತೇ ಸುಸುಖಂ ಪ್ರಸ್ವಪಂತಿ ಚ ॥41॥
ಯಾರಿಗೆ ರಾಜನು ಧಾರ್ಮಿಕನೂ ಮತ್ತು ಪ್ರಾಜ್ಞನೂ ಆಗಿರುತ್ತಾನೆಯೋ ಅವರು ಸುಖದಿಂದ ಮಲಗಿ ಸುಖದಿಂದ ಏಳುತ್ತಾರೆ.
ತಸ್ಯ ರಾಜ್ಞಃ ಶುಭೈರಾರ್ಯೈಃ ಕರ್ಮಭಿರ್ನಿರ್ವೃತಾಃ ಪ್ರಜಾಃ |
ಯೋಗಕ್ಷೇಮೇಣ ವೃಷ್ಟ್ಯಾ ಚ ವಿವರ್ಧಂತೇ ಸ್ವಕರ್ಮಭಿಃ ॥42॥
ಆ ರಾಜನ ಉದಾತ್ತವಾದ ಶುಭಕರ್ಮಗಳಿಂದ ಸಂತೋಷಗೊಂಡ ಪ್ರಜೆಗಳು ಯೋಗಕ್ಷೇಮಗಳಿಂದಲೂ, ಮಳೆಯಿಂದಲೂ, ತಮ್ಮ ಕರ್ಮಗಳಿಂದಲೂ ಅಭಿವೃದ್ಧಿಯನ್ನು ಹೊಂದುತ್ತಾರೆ.
ಸ ಕುಲೀನಃ ಸ ಪುರುಷಃ ಸ ಬಂಧುಃ ಸ ಚ ಪುಣ್ಯಕೃತ್ |
ಸ ದಾತಾ ಸ ಚ ವಿಕ್ರಾಂತೋ ಯೋ ದದಾತಿ ವಸುಂಧರಾಮ್ ॥43॥
ಯಾವನು ಭೂದಾನವನ್ನು ಮಾಡುತ್ತಾನೆಯೋ ಅವನೇ ಕುಲೀನನಾದವನು, ಅವನೇ ಪುರುಷನೆನಿಸಿಕೊಳ್ಳುವವನು, ಅವನೇ ಬಂಧು, ಅವನೇ ಪುಣ್ಯಕಾರಿ, ಅವನೇ ದಾನವನ್ನು ಮಾಡಿದವನು, ಅವನೇ ಪರಾಕ್ರಮಶಾಲಿಯಾದವನು.
ಆದಿತ್ಯಾ ಇವ ದೀಪ್ಯಂತೇ ತೇಜಸಾ ಭುವಿ ಮಾನವಾಃ |
ದದಂತಿ ವಸುಧಾಂ ಸ್ಫೀತಾಂ ಯೇ ವೇದವಿದುಷಿ ದ್ವಿಜೇ ॥44॥
ಯಾವ ಮಾನವರು ವೇದವಿದ್ವಾಂಸನಾದ ಬ್ರಾಹ್ಮಣನಿಗೆ ಪರಿಶುದ್ಧವಾದ ಭೂಮಿಯನ್ನು ದಾನ ಮಾಡುತ್ತಾರೆಯೋ ಅವರು ತೇಜಸ್ಸಿನಿಂದ ಭೂಮಿಯಲ್ಲಿ ಸೂರ್ಯನಂತೆ ಬೆಳಗುತ್ತಾರೆ.
ಯಥಾ ಬೀಜಾನಿ ರೋಹಂತಿ ಪ್ರಕೀರ್ಣಾನಿ ಮಹೀತಳೇ |
ತಥಾ ಕಾಮಾಃ ಪ್ರರೋಹಂತಿ ಭೂಮಿದಾನಸಮಾರ್ಜಿತಾಃ ॥45॥
ಭೂಮಿಯಲ್ಲಿ ಚೆಲ್ಲಾಡಿದ ಬೀಜಗಳು ಬೆಳೆಯುವಂತೆ ಭೂಮಿದಾನದಿಂದ ಉಂಟಾದ ಕಾಮಗಳು (ಶುಭ ಪದಾರ್ಥಗಳು) ಅಭಿವೃದ್ಧಿಯನ್ನು ಹೊಂದುತ್ತವೆ.
ಆದಿತ್ಯೋ ವರುಣೋ ವಿಷ್ಣುರ್ಬ್ರಹ್ಮಾ ಸೋಮೋ ಹುತಾಶನಃ |
ಶೂಲಪಾಣಿಶ್ಚ ಭಗವಾನ್ ಪ್ರತಿನಂದಂತಿ ಭೂಮಿದಮ್ ॥46॥
ಭೂದಾನವನ್ನು ಮಾಡುವವನನ್ನು ಸೂರ್ಯ, ವರುಣ, ವಿಷ್ಣು, ಬ್ರಹ್ಮ, ಚಂದ್ರ, ಅಗ್ನಿ, ಪೂಜ್ಯನಾದ ಶೂಲಪಾಣಿಯಾದ ಈಶ್ವರ ಇವರು ಅಭಿನಂದಿಸುತ್ತಾರೆ.
ಭೂಮೌ ಜಾಯಂತಿ ಪುರುಷಾ ಭೂಮೌ ನಿಷ್ಠಾಂ ವ್ರಜಂತಿ ಚ |
ಚತುರ್ವಿಧೋ ಹಿ ಲೋಕೋಽಯಂ ಯೋಽಯಂ ಭೂಮಿಗುಣಾತ್ಮಕಃ ॥
ಪುರುಷರು ಭೂಮಿಯಲ್ಲಿ ಜನಿಸಿರುತ್ತಾರೆ. ಭೂಮಿಯಲ್ಲೇ ಲಯವನ್ನು ಹೊಂದುತ್ತಾರೆ. ಜರಾಯುಜಾದಿ ನಾಲ್ಕು ವಿಧವಾದ ಈ ಪ್ರಾಣಿವರ್ಗವು ಭೂಮಿಯ ಗುಣಗಳನ್ನೇ ಹೊಂದಿರುತ್ತದೆ.
ಏಷಾ ಮಾತಾ ಪಿತಾ ಚೈವ ಜಗತಃ ಪೃಥಿವೀಪತೇ |
ನಾನಯಾ ಸದೃಶಂ ಭೂತಂ ಕಿಂಚಿದಸ್ತಿ ಜನಾಧಿಪ ॥48॥
ಎಲೈ ರಾಜನೇ, ಜನಾಧಿಪತಿಯೇ, ಈ ಭೂಮಿಯು ಜಗತ್ತಿನ ತಾಯಿ, ಅವಳೇ ತಂದೆ. ಅವಳಿಗೆ ಸದೃಶವಾದ ಭೂತವು ಇನ್ನೊಂದು ಇಲ್ಲ.

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬೃಹಸ್ಪತೇಶ್ಚ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ॥49॥
ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೂ ಸಹ ಹಿಂದೆ ಬೃಹಸ್ಪತಿಗೂ ಮತ್ತು ಇಂದ್ರನಿಗೂ ನಡೆದ ಸಂವಾದ ರೂಪವಾದ ಇತಿಹಾಸವನ್ನು ಹೇಳುತ್ತಾರೆ.
ಇಷ್ಟ್ವಾ ಕ್ರತುಶತೇನಾಥ ಮಹತಾ ದಕ್ಷಿಣಾವತಾ |
ಮಘವಾ ವಾಗ್ವಿದಾಂಶ್ರೇಷ್ಠಂ ಪಪ್ರಚ್ಛೇದಂ ಬೃಹಸ್ಪತಿಮ್ ॥50॥
ಭಗವನ್ ಕೇನ ದಾನೇನ ಸ್ವರ್ಗತಃ ಸುಖಮೇಧತೇ |
ಯದಕ್ಷಯಂ ಮಹಾರ್ಘಂ ಚ ತದ್ ಬ್ರೂಹಿ ವದತಾಂವರ ॥51॥
ಬಹಳ ದಕ್ಷಿಣೆಗಳಿಂದ ಕೂಡಿದ ದೊಡ್ಡದಾದ ನೂರು ಯಾಗಗಳನ್ನು ಮಾಡಿ ಇಂದ್ರನು ಮಾತನ್ನು ತಿಳಿದವರಲ್ಲಿ ಶ್ರೇಷ್ಠರಾದ ಬೃಹಸ್ಪತಿಯನ್ನು ಕುರಿತು- `ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ, ಪೂಜ್ಯನೇ, ಯಾವ ದಾನದಿಂದ ಸ್ವರ್ಗದಲ್ಲಿ ಸುಖವನ್ನು ಹೊಂದುತ್ತಾನೆ. ಯಾವ ದಾನವು ಅಕ್ಷಯವಾದುದು ಮತ್ತು ಮಹಾಬೆಲೆ ಬಾಳುವಂತಹದು ಎಂದು ಹೇಳಿ' ಎಂದು ಪ್ರಶ್ನೆ ಮಾಡಿದನು.
ಇತ್ಯುಕ್ತಃ ಸ ಸುರೇಂದ್ರೇಣ ತತೋ ದೇವಪುರೋಹಿತಃ |
ಬೃಹಸ್ಪತಿರ್ಮಹಾತೇಜಾಃ ಪ್ರತ್ಯುವಾಚ ಶತಕ್ರತುಮ್ ॥52॥
ಸುರೇಂದ್ರನಿಂದ ಹೀಗೆ ಪ್ರಶ್ನೆ ಮಾಡಲ್ಪಟ್ಟ ದೇವಪುರೋಹಿತರೂ, ಮಹಾತೇಜಸ್ವಿಗಳೂ ಆದ ಬೃಹಸ್ಪತಿಗಳು ಇಂದ್ರನನ್ನು ಕುರಿತು ಉತ್ತರವನ್ನು ನೀಡಿದರು.
ಸುವರ್ಣದಾನಂ ಗೋದಾನಂ ಭೂಮಿದಾನಂ ಚ ವೃತ್ರಹನ್ |
ವಿದ್ಯಾದಾನಂ ಚ ಕನ್ಯಾನಾಂ ದಾನಂ ಪಾಪಹರಂ ಪರಮ್ |
ದದದೇತಾನ್ ಮಹಾಪ್ರಾಜ್ಞಃ ಸರ್ವಪಾಪೈಃ ಪ್ರಮುಚ್ಯತೇ ॥53॥
ಎಲೈ ವೃತ್ರಹಂತಕನೇ, ಸುವರ್ಣದಾನ, ಗೋದಾನ, ಭೂಮಿದಾನ, ವಿದ್ಯಾದಾನ, ಕನ್ಯಾದಾನ ಇವೆಲ್ಲವೂ ಶ್ರೇಷ್ಠವಾದ

ಪಾಪಪರಿಹಾರಕಗಳು. ಈ ದಾನವನ್ನು ಕೊಡುವ ಮಹಾಪ್ರಾಜ್ಞನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ನ ಭೂಮಿದಾನಾದ್ ದೇವೇಂದ್ರ ಪರಂ ಕಿಂಚಿದಿತಿ ಪ್ರಭೋ |
ವಿಶಿಷ್ಟಮಿತಿ ಮನ್ಯಾಮಿ ಯಥಾ ಪ್ರಾಹುರ್ಮನೀಷಿಣಃ ॥54॥
ಎಲೈ ದೇವೇಂದ್ರನೇ, ಪ್ರಭುವೇ, ಜ್ಞಾನಿಗಳು ಹೇಳುವಂತೆ ಭೂಮಿದಾನವು ಬಹಳ ಶ್ರೇಷ್ಠವಾದುದು. ಭೂಮಿದಾನಕ್ಕಿಂತಲೂ ಶ್ರೇಷ್ಠವಾದ ದಾನವು ಇನ್ನೊಂದು ಇಲ್ಲವೆಂದು ನಾನು ತಿಳಿಯುತ್ತೇನೆ.
ಯೇ ಶೂರಾ ನಿಹತಾ ಯುದ್ಧೇ ಸ್ವರ್ಯಾತಾ ದಾನಗೃದ್ಧಿನಃ |
ಸರ್ವೇ ತೇ ವಿಬುಧಶ್ರೇಷ್ಠ ನಾತಿಕ್ರಾಮಂತಿ ಭೂಮಿದಮ್ ॥55॥
ಎಲೈ ಬುಧಶ್ರೇಷ್ಠನೇ, ಯುದ್ಧದಲ್ಲಿ ಹತರಾಗಿ ಸ್ವರ್ಗಕ್ಕೆ ಹೋದವರು, ವಿವಿಧ ದಾನಗಳನ್ನು ಆಸೆಯಿಂದ ಮಾಡಿ ಸ್ವರ್ಗಕ್ಕೆ ಹೋದವರು ಎಲ್ಲರೂ ಭೂಮಿದಾನ ಮಾಡಿದವನನ್ನು ಮೀರಿ ಹೋಗುವುದಿಲ್ಲ.
ಭರ್ತುರ್ನಿಶ್ರೇಯಸೇ ಯುಕ್ತಾಸ್ತ್ಯಕ್ತಾತ್ಮಾನೋ ರಣೇ ಹತಾಃ |
ಬ್ರಹ್ಮಲೋಕಗತಾಃ ಶೂರಾ ನಾತಿಕ್ರಾಮಂತಿ ಭೂಮಿದಮ್ ॥56॥
ತಮ್ಮ ಸ್ವಾಮಿಯ ಶ್ರೇಯಸ್ಸಿನಲ್ಲಿ ನಿರತರಾಗಿ, ಅದೇ ಉದ್ಯೋಗದಲ್ಲಿದ್ದು, ರಣರಂಗದಲ್ಲಿ ಹತರಾಗಿ ಶರೀರ ತ್ಯಾಗವನ್ನು ಮಾಡಿ ಬ್ರಹ್ಮಲೋಕವನ್ನು ಹೊಂದಿದ ಶೂರರೂ ಭೂಮಿದಾನವನ್ನು ಮಾಡಿದವನನ್ನು ಮೀರಿ ಹೋಗುವುದಿಲ್ಲ.
ಪಂಚ ಪೂರ್ವಾದಿಪುರುಷಾಃ ಷಟ್ ಯೇ ವಸುಧಾಂ ಗತಾಃ |
ಏಕಾದಶ ದದದ್ ಭೂಮಿಂ ಪರಿತ್ರಾತೀಹ ಮಾನವಃ ॥57॥
ಭೂಮಿಯನ್ನು ದಾನ ಮಾಡುವ ಮಾನವನು ಐದು ಮಂದಿ ಪೂರ್ವ ಪುರುಷರನ್ನು ಮತ್ತು ಭೂಮಿಗೆ ಬಂದ ಆರು ತಲೆಮಾರಿನವರನ್ನು ಒಟ್ಟು ತನ್ನ ಕುಲದ ಹನ್ನೊಂದು ತಲೆಗಳನ್ನು ರಕ್ಷಿಸುತ್ತಾನೆ.
ರತ್ನೋಪಕೀರ್ಣಾಂ ವಸುಧಾಂ ಯೋ ದದಾತಿ ಪುರಂದರ |
ಏಕಾದಶ ಪರಿತ್ರಾತಾ ಭೂಮಿಂ ವೃತ್ತಿಕರೀಂ ದದತ್ ॥58॥
ಎಲೈ ಪುರಂದರನೇ, ರತ್ನಪೂರ್ಣವಾದ ಭೂಮಿಯನ್ನು ಅಥವಾ ಜೀವನೋಪಾಯಕ್ಕೆ ಕಾರಣವಾದ ಭೂಮಿಯನ್ನು ಯಾವನು ಕೊಡುತ್ತಾನೆಯೋ ಅವನು ಹನ್ನೊಂದು ತಲೆಮಾರಿನವರನ್ನು ರಕ್ಷಿಸುತ್ತಾನೆ.
ರತ್ನಾವಕೀರ್ಣಾಂ ಸಫಲಾಂ ಸಗೃಹಾಂ ದೀಪಸಂಯುತಾಮ್ |
ದತ್ವಾ ಸ್ವರ್ಗೇ ಪರಂ ಕಾಲಂ ಕ್ರೀಡಿತ್ವಾ ನೃಪತಿರ್ಭವೇತ್ |
ಸ ಮುಕ್ತಃ ಸರ್ವಕುಷ್ಯೈಃ ಸ್ವರ್ಗಲೋಕೇ ಮಹೀಯತೇ ॥59॥
ರತ್ನಗಳು ಇರುವ ಫಲಸಹಿತವಾದ ದೀಪಗಳಿಂದ ಸಹಿತವಾದ, ಗೃಹ ಸಹಿತವಾದ ಭೂಮಿಯನ್ನು ದಾನ ಮಾಡಿದವನು ಸ್ವರ್ಗಲೋಕದಲ್ಲಿ ಬಹುಕಾಲ ಕ್ರೀಡಿಸಿ ಪುನಃ ರಾಜನಾಗುತ್ತಾನೆ. ಅವನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಸ್ವರ್ಗಲೋಕದಲ್ಲಿ ಗೌರವಿಸಲ್ಪಡುತ್ತಾನೆ.
ಮಹೀಂ ಸ್ಫೀತಾಂ ದದದ್ರಾಜಾ ಸರ್ವಕಾಮಗುಣಾನ್ವಿತಾಮ್ |
ರಾಜಾಧಿರಾಜೋ ಭವತಿ ತದ್ಧಿ ದಾನಮನುತ್ತಮಮ್ ॥60॥
ಸರ್ವಕಾಮಗುಣಗಳಿಂದ ಕೂಡಿದ ಪರಿಶುದ್ಧವಾದ ಭೂಮಿಯನ್ನು ದಾನ ಮಾಡುವ ರಾಜನು ರಾಜಾಧಿರಾಜನಾಗುತ್ತಾನೆ. ಆ ದಾನವೇ ಶ್ರೇಷ್ಠವಾದುದಷ್ಟೆ.
ಸರ್ವಕಾಮಸಮಾಯುಕ್ತಾಂ ಕಾಶ್ಯಪೀಂ ಯಃ ಪ್ರಯಚ್ಛತಿ |
ಸರ್ವಭೂತಾನಿ ಮನ್ಯಂತೇ ಮಾಂ ದದಾತೀತಿ ವಾಸವ ॥61॥
ಸರ್ವಕಾಮಯುಕ್ತವಾದ ಭೂಮಿಯನ್ನು ದಾನವನ್ನು ಮಾಡಿದರೆ ಎಲೈ ಇಂದ್ರನೇ, ಪಂಚಭೂತಗಳಲ್ಲಿ ಉಳಿದ ನಾಲ್ಕು ಭೂತಗಳೂ ಸಹ ನನ್ನನ್ನು ದಾನ ಮಾಡುತ್ತಿದ್ದಾನೆ ಎಂದು ತಿಳಿಯುತ್ತವೆ.
ಸರ್ವಕಾಮದುಘಾಂ ಧೇನುಂ ಸರ್ವಕಾಮಪುರೋಗಮಾಮ್ |
ದದಾತಿ ಯಃ ಸಹಸ್ರಾಕ್ಷ ಸ ಸ್ವರ್ಗಂ ಯಾತಿ ಮಾನವಃ ॥62॥
ಸರ್ವಕಾಮಗಳನ್ನು ಕೊಡುವ, ಪುಷ್ಟಿಯನ್ನುಂಟು ಮಾಡುವ, ಸರ್ವಕಾಮಗಳಲ್ಲಿ ಮುಂಭಾಗದಲ್ಲಿರುವ ಭೂಮಿಯನ್ನು ಯಾವ ಮಾನವನು ದಾನ ಮಾಡುತ್ತಾನೆಯೋ ಅವನು ಸ್ವರ್ಗಕ್ಕೆ ಹೋಗುತ್ತಾನೆ.
ಮಧುಸರ್ಪಿಃಪ್ರವಾಹಿನ್ಯಃ ಪಯೋದಧಿವಹಾಸ್ತಥಾ |
ಸರಿತಸ್ತರ್ಪಯಂತೀಹ ಸುರೇಂದ್ರ ವಸುಧಾಪ್ರದಮ್ ॥63॥
ಎಲೈ ಸುರೇಂದ್ರನೇ, ಭೂದಾನವನ್ನು ಮಾಡುವವನನ್ನು ಜೇನು, ಘೃತ, ಹಾಲು, ಮೊಸರು ಹರಿಯುವ ಹೊಳೆಗಳು ತೃಪ್ತಿಪಡಿಸುತ್ತವೆ.
ಭೂಮಿಪ್ರದಾನಾನ್ನೃಪತಿರ್ಮುಚ್ಯತೇ ರಾಜಕಿಲ್ಬಿಷಾತ್ |
ಸ್ವನಿರ್ಜಿತಾಂ ಸ್ವಯಂಕ್ರೀತಾಂ ಭೃತಾಂ ವಾ ಚಾರ್ಪಯೇನ್ನೃಪ |
ನ ಹಿ ಭೂಮಿಪ್ರದಾನೇನ ದಾನಮನ್ಯದ್ ವಿಶಿಷ್ಯತೇ ॥64॥
ಭೂಮಿಪ್ರದಾನವನ್ನು ಮಾಡುವುದರಿಂದ ರಾಜನು ತನ್ನ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ. ತಾನು ಸಂಪಾದಿಸಿದ ಅಥವಾ ಕ್ರಯಕ್ಕೆ ತೆಗೆದುಕೊಂಡ ಅಥವಾ ಸ್ವತಃ ತನ್ನ ಬಳಿ ಇದ್ದ ಭೂಮಿಯನ್ನು ರಾಜನು ದಾನ ಮಾಡಬೇಕು. ಭೂಮಿದಾನಕ್ಕಿಂತ ವಿಶಿಷ್ಟವಾದ ದಾನವು ಇನ್ನೊಂದಿಲ್ಲ.
ದದಾತಿ ಯಃ ಸಮುದ್ರಾಂತಾಂ ಪೃಥಿವೀಂ ಶಸ್ತ್ರನಿರ್ಜಿತಾಮ್ |
ತಂ ಜನಾಃ ಕಥಯಂತೀಹ ಯಾವದ್ ಧರತಿ ಗೌರಿಯಮ್ ॥65॥

ಶಸ್ತ್ರದಿಂದ ಜಯಿಸಿ ಸಮುದ್ರಾಂತವಾದ ಭೂಮಿಯನ್ನು ದಾನ ಮಾಡುವವನನ್ನು ಈ ಭೂಮಿಯು ಇರುವವರೆಗೂ ಜನರು ಪ್ರಶಂಸಿಸುತ್ತಾರೆ.
ಪುಣ್ಯಾಮೃದ್ಧರಸಾಂ ಭೂಮಿಂ ಯೋ ದದಾತಿ ಪುರಂದರ |
ನ ತಸ್ಯ ಲೋಕಾಃ ಕ್ಷೀಯಂತೇ ಭೂಮಿದಾನಗುಣಾರ್ಜಿತಾಃ ॥66॥
ಎಲೈ ಪುರಂದರನೇ, ಪವಿತ್ರವೂ, ರಸಸಮೃದ್ಧವೂ ಆದ ಭೂಮಿಯನ್ನು ದಾನ ಮಾಡುವವನ ಭೂಮಿದಾನದಿಂದ ಉಂಟಾದ ಗುಣಗಳಿಂದ ಸಂಪಾದಿಸಲ್ಪಟ್ಟ ಲೋಕಗಳು ಅವನಿಗೆ ನಾಶವನ್ನು ಹೊಂದುವುದಿಲ್ಲ.
ಸರ್ವಥಾ ಪಾರ್ಥಿವೇನೇಹ ಸತತಂ ಭೂತಿಮಿಚ್ಛತಾ |
ಭೂರ್ದೇಯಾ ವಿಧಿವಚ್ಛಕ್ರ ಪಾತ್ರೇ ಸುಖಮಭೀಪ್ಸತಾ ॥67॥
ಎಲೈ ರಾಜನೇ, ವೈಭವವನ್ನು ಬಯಸುವ, ಸುಖವನ್ನು ಬಯಸುವ ರಾಜನು ಸರ್ವಪ್ರಕಾರವಾಗಿ ವಿಧಿಗೆ ಅನುಗುಣವಾಗಿ ಪಾತ್ರರಲ್ಲಿ ಭೂದಾನವನ್ನು ಮಾಡಬೇಕು.
ಅಪಿ ಕೃತ್ವಾ ನರಃ ಪಾಪಂ ಭೂಮಿಂ ದತ್ತ್ವಾ ದ್ವಿಜಾತಯೇ |
ಸಮುತ್ಸೃಜತಿ ತತ್ಪಾಪಂ ಜೀರ್ಣಾಂ ತ್ವಚಮಿವೋರಗಃ ॥68॥
ಪಾಪವನ್ನು ಮಾಡಿದ ಪುರುಷನೂ ಸಹ ಬ್ರಾಹ್ಮಣರಿಗೆ ದಾನವನ್ನು ಮಾಡಿ ಸರ್ಪವು ಪೊರೆಯನ್ನು ಕಳಚಿದಂತೆ ಆ ಪಾಪವನ್ನು ತ್ಯಜಿಸುತ್ತಾನೆ.
ಸಾಗರಾನ್ ಸರಿತಃ ಶೈಲಾನ್ ಕಾನನಾನಿ ಚ ಸರ್ವಶಃ |
ಸರ್ವಮೇತನ್ನರಃ ಶಕ್ರ ದದಾತಿ ವಸುಧಾಂ ದದತ್ ॥69॥
ಎಲೈ ಇಂದ್ರನೇ, ಭೂದಾನವನ್ನು ಮಾಡುವವನು ಸಾಗರಗಳು, ಪರ್ವತಗಳು, ಕಾನನಗಳು ಎಲ್ಲವನ್ನೂ ದಾನ ಮಾಡುತ್ತಾನೆ.
ತಡಾಗಾನ್ಯುದಪಾನಾನಿ ಸ್ರೋತಾಂಸಿ ಚ ಸರಾಂಸಿ ಚ |
ತಡಾಕಾದನ್ಯಪಾನಾನಿ ಬೀಜಾನಿ ಚ ಫಲಾನಿ ಚ |
ಸ್ನೇಹಾನ್‌ಸರ್ವರಸಾಂಶ್ಚೈವ ದದಾತಿ ವಸುಧಾಂ ದದತ್ ॥70॥
ತಟಾಕಗಳು, ಸರೋವರಗಳು, ಚಿಲುಮೆಗಳು, ಕೆರೆಗಳು, ಕುಂಟೆಗಳು, ಬೀಜಗಳು, ಫಲಗಳು, ಸರ್ವರಸಗಳು, ತೈಲಾದಿಗಳು ಎಲ್ಲವನ್ನೂ ಭೂದಾನ ಮಾಡುವವನು ಕೊಡುತ್ತಾನೆ.
ಓಷಧೀರ್ವೀರ್ಯಸಂಪನ್ನಾ ನಗಾನ್ ಪುಷ್ಪಫಲಾನ್ವಿತಾನ್ |
ಕಾನನೋಪಲಶೈಲಾಂಶ್ಚ ದದಾತಿ ವಸುಧಾಂ ದದತ್ ॥71॥
ವೀರ್ಯಸಂಪನ್ನವಾದ ಓಷಧಿಗಳು, ಫಲಪುಷ್ಪಭರಿತವಾದ ವೃಕ್ಷಗಳು, ಕಾನನಗಳು, ಶಿಲೆಗಳು, ಪರ್ವತಗಳು ಎಲ್ಲವನ್ನೂ ಭೂದಾನ ಮಾಡುವವನು ಕೊಡುತ್ತಾನೆ.
ಅಗ್ನಿಷ್ಟೋಮಪ್ರಭೃತಿಭಿರಿಷ್ಟ್ವಾ ಚ ಸ್ವಾಪ್ತದಕ್ಷಿಣೈಃ |
ನ ತತ್ಫಲಮವಾಪ್ನೋತಿ ಭೂಮಿದಾನಾದ್ ಯದಶ್ನುತೇ ॥72॥
ಭೂಮಿದಾನದಿಂದ ಯಾವ ಫಲ ಉಂಟಾಗುತ್ತದೆಯೋ ಅಂತಹ ಫಲವು ಬಹಳ ದಕ್ಷಿಣೆಯನ್ನು ಕೊಟ್ಟು ಮಾಡಿದ ಅಗ್ನಿಷ್ಟೋಮ ಮೊದಲಾದ ಯಾಗಗಳಿಂದ ದೊರೆಯುವುದಿಲ್ಲ.
ದಾತಾ ದಶಾನುಗೃಹ್ಣಾತಿ ದಶ ಹಂತಿ ತಥಾ ಕ್ಷಿಪನ್ |
ಪೂರ್ವದತ್ತಾಂ ಹರನ್ ಭೂಮಿಂ ನರಕಾಯೋಪಗಚ್ಛತಿ ॥73॥
ಭೂಮಿಯನ್ನು ದಾನವನ್ನು ಮಾಡುವವನು ತನ್ನ ವಂಶದ ಹತ್ತು ತಲೆಗಳನ್ನು ಉದ್ಧಾರ ಮಾಡುತ್ತಾನೆ. ಹಾಗೆಯೇ ಭೂಮಿಯನ್ನು ಅಪಹರಿಸುವವನು ಹತ್ತು ತಲೆಗಳನ್ನು ವಿನಾಶಗೊಳಿಸುತ್ತಾನೆ. ಮೊದಲು ದಾನ ಮಾಡಿದ ಭೂಮಿಯನ್ನು ಹಿಂದಕ್ಕೆ ತೆಗೆದುಕೊಳ್ಳುವವನು ನರಕಕ್ಕೆ ಹೋಗುತ್ತಾನೆ.
ನ ದದಾತಿ ಪ್ರತಿಶ್ರುತ್ಯ ದತ್ತ್ವಾ ವಾ ಹರತೇ ತು ಯಃ |
ಸ ಬದ್ಧೋ ವಾರುಣೈಃ ಪಾಶೈಸ್ತಪ್ಯತೇ ಮೃತ್ಯುಶಾಸನಾತ್ ॥74॥
ಯಾವನು ಭೂದಾನವನ್ನು ಕೊಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ ಕೊಡುವುದಿಲ್ಲವೋ ಅಥವಾ ಕೊಟ್ಟು ಹಿಂದಕ್ಕೆ ತೆಗೆದುಕೊಳ್ಳುತ್ತಾನೆಯೋ ಅವನು ವರುಣಪಾಶದಿಂದ ಬದ್ಧನಾಗಿ ಯಮನ ಶಾಸನದಂತೆ ನರಕದಲ್ಲಿ ತಾಪಕ್ಕೆ ಈಡಾಗುತ್ತಾನೆ.
ಆಹಿತಾಗ್ನಿಂ ಸದಾಯಜ್ಞಂ ಕೃಶಭೃತ್ಯಂ ಪ್ರಿಯಾತಿಥಿಮ್ |
ಯೇ ಭರಂತಿ ದ್ವಿಜಶ್ರೇಷ್ಠಂ ನೋಪಸರ್ಪಂತಿ ತೇ ಯಮಮ್ ॥75॥
ಆಹಿತಾಗ್ನಿಯೂ, ಯಜ್ಞಶೀಲನೂ, ಅಲ್ಪಭೃತ್ಯರುಳ್ಳವನೂ, ಅತಿಥಿ ಪ್ರಿಯನೂ ಆದ ದ್ವಿಜಶ್ರೇಷ್ಠನನ್ನು ಯಾರು ಪೂಜಿಸುತ್ತಾರೆಯೋ ಅವರು ಯಮನ ಬಳಿಗೆ ಹೋಗುವುದಿಲ್ಲ.
ಬ್ರಾಹ್ಮಣೇಷ್ವೃಣಭೂತಂ ಸ್ಯಾತ್ ಪಾರ್ಥಿವಸ್ಯ ಪುರಂದರ |
ಇತರೇಷಾಂ ತು ವರ್ಣಾನಾಂ ತಾರಯೇತ್ ಕೃಶದುರ್ಬಲಾನ್ ॥76॥
ಎಲೈ ಪುರಂದರನೇ, ಬ್ರಾಹ್ಮಣರಿಗೆ ಕೊಟ್ಟ ದಾನವು ಅವರಲ್ಲಿ ಋಣರೂಪವಾಗಿ ಇರುತ್ತದೆ. ಉಳಿದವರಿಗೆ ಕೊಟ್ಟ ಭೂದಾನವು ಕೃಶರೂ, ದುರ್ಬಲರೂ ಆದವರನ್ನು ಸಂಕಟದಿಂದ ಪಾರುಮಾಡುತ್ತದೆ.
ನಾಚ್ಛಿಂದ್ಯಾತ್ ಸ್ಪರ್ಶಿತಾಂ ಭೂಮಿಂ ಪರೇಣ ತ್ರಿದಶಾಧಿಪ |
ಬ್ರಾಹ್ಮಣಾಯ ಸುರಶ್ರೇಷ್ಠ ಕೃಶಭೃತ್ಯಾಯ ಕಶ್ಚನ ॥77॥
ಎಲೈ ಸ್ವರ್ಗಾಧಿಪತಿಯೇ, ಸುರಶ್ರೇಷ್ಠನೇ, ಅಲ್ಪಭೃತ್ಯರನ್ನುಳ್ಳ ಬ್ರಾಹ್ಮಣನಿಗೆ ಇನ್ನೊಬ್ಬನು ದಾನ ಮಾಡಿದ ಭೂಮಿಯನ್ನು ಎಂದೂ

ಅಪಹರಿಸಬಾರದು.
ಅಥಾಶ್ರು ಪತಿತಂ ತೇಷಾಂ ದೀನಾನಾಮವಸೀದತಾಮ್ |
ಬ್ರಾಹ್ಮಣಾನಾಂ ಹೃತೇ ಕ್ಷೇತ್ರೇ ಹನ್ಯಾತ್ ತ್ರಿಪುರುಷಂ ಕುಲಮ್ ॥78॥
ಬ್ರಾಹ್ಮಣರ ಭೂಮಿಯನ್ನು ಅಪಹರಿಸಿದರೆ ದೀನರೂ, ಕಷ್ಟದಲ್ಲಿರುವವರೂ ಆದ ಅವರ ಕಣ್ಣಿನಿಂದ ಕೆಳಗೆ ಬಿದ್ದ ನೀರು ಆ ಕುಲದ ಮೂರು ಪುರುಷರನ್ನು ಕೊಲ್ಲುತ್ತದೆ.
ಭೂಮಿಪಾಲಂ ಚ್ಯುತಂ ರಾಷ್ಟ್ರಾದ್ಯಸ್ತು ಸಂಸ್ಥಾಪಯೇತ್ ಪುನಃ |
ತಸ್ಯ ವಾಸಃ ಸಹಸ್ರಾಕ್ಷ ನಾಕಪೃಷ್ಠೇ ಮಹೀಯತೇ ॥79॥
ಯಾವನು ರಾಷ್ಟ್ರಚ್ಯುತನಾದ ರಾಜನನ್ನು ಪುನಃ ಆ ರಾಷ್ಟ್ರದಲ್ಲಿ ಸ್ಥಾಪಿಸುತ್ತಾನೆಯೋ, ಎಲೈ ಸಹಸ್ರಾಕ್ಷನೇ, ಅವನ ವಾಸಸ್ಥಾನವು ಸ್ವರ್ಗದಲ್ಲಿ ಪೂಜಿಸಲ್ಪಡುತ್ತದೆ.
ಇಕ್ಷುಭಿಃ ಸಂತತಾಂ ಭೂಮಿಂ ಯವಗೋಧೂಮಸಂಕುಲಾಮ್ |
ಗೋಶ್ವವಾಹನಸಂಪೂರ್ಣಾಂ ಬಾಹುವೀರ್ಯಸಮಾರ್ಜಿತಾಮ್॥80॥
ನಿಧಿಗರ್ಭಾಂ ದದದ್ ಭೂಮಿಂ ಸರ್ವರತ್ನಪರಿಚ್ಛದಾಮ್ |
ಅಕ್ಷಯಾನ್ಲಭತೇ ಲೋಕಾನ್ ಭೂಮಿಸತ್ರಂ ಹಿ ತಸ್ಯ ತತ್ ॥81॥
ಯಾವ ರಾಜನು ತನ್ನ ಬಾಹುಪರಾಕ್ರಮದಿಂದ ಸಂಪಾದಿಸಿದ ಕಬ್ಬು, ಗೋದಿ, ಯವ ಮೊದಲಾದವುಗಳಿಂದ ತುಂಬಿದ ಗೋವು, ಅಶ್ವ ಮೊದಲಾದ ವಾಹನಗಳಿಂದ ತುಂಬಿದ ನಿಧಿ ಇರುವ, ಸರ್ವರತ್ನಗಳ ಹೊದಿಕೆಯಂತಿರುವ ಭೂಮಿಯನ್ನು ದಾನ ಮಾಡುತ್ತಾನೆಯೋ ಅವನು ಅಕ್ಷಯವಾದ ಲೋಕವನ್ನು ಪಡೆಯುತ್ತಾನೆ. ಅದು ಅವನಿಗೆ ಭೂಮಿ ಯಜ್ಞ ಎಂದು ಕರೆಯಲ್ಪಡುತ್ತದೆ.
ವಿಧೂಯ ಕಲುಷಂ ಸರ್ವಂ ವಿರಜಾಃ ಸಮ್ಮತಃ ಸತಾಮ್ |
ಲೋಕೇ ಮಹೀಯತೇ ಸದ್ಭಿರ್ಯೋ ದದಾತಿ ವಸುಂಧರಾಮ್ |
ವಿಮುಕ್ತಃ ಸರ್ವಪಾಪೇಭ್ಯಃ ಸ್ವರ್ಗಲೋಕೇ ಮಹೀಯತೇ ॥82॥
ಭೂದಾನವನ್ನು ಮಾಡುವವನು ತನ್ನ ದೋಷಗಳೆಲ್ಲವನ್ನೂ ತ್ಯಜಿಸಿ ನಿರ್ದುಷ್ಟನಾಗಿ, ಸಜ್ಜನರಿಗೆ ಸಮ್ಮತನಾಗಿ ಈ ಲೋಕದಲ್ಲಿ ಸಜ್ಜನರಿಂದ ಗೌರವಿಸಲ್ಪಡುತ್ತಾನೆ ಮತ್ತು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗಿ ಸ್ವರ್ಗಲೋಕದಲ್ಲಿಯೂ ಗೌರವಿಸಲ್ಪಡುತ್ತಾನೆ.
ಯಥಾಪ್ಸು ಪತಿತಃ ಶಕ್ರ ತೈಲಬಿಂದುರ್ವಿಸರ್ಪತಿ |
ತಥಾ ಭೂಮಿಕೃತಂ ದಾನಂ ಸಸ್ಯೇ ಸಸ್ಯೇ ವಿಸರ್ಪತಿ ॥83॥
ಎಲೈ ಇಂದ್ರನೇ, ನೀರಿನಲ್ಲಿ ಬಿದ್ದ ತೈಲಬಿಂದುವು ಹರಡಿಕೊಳ್ಳುವಂತೆ ಭೂಮಿ ದಾನದ ಫಲವು ಸಸ್ಯ-ಸಸ್ಯಗಳಲ್ಲಿಯೂ ಹರಡಿಕೊಳ್ಳುತ್ತದೆ.
ಯೇ ರಣಾಗ್ರೇ ಮಹೀಪಾಲಾಃ ಶೂರಾಃ ಸಮಿತಿಶೋಭನಾಃ |
ವಧ್ಯಂತೇಽಭಿಮುಖಾಃ ಶಕ್ರ ಬ್ರಹ್ಮಲೋಕಂ ವ್ರಜಂತಿ ತೇ ॥84॥
ಎಲೈ ಇಂದ್ರನೇ, ಯುದ್ಧದಲ್ಲಿ ಶೋಭಿಸುವ ಯಾವ ರಾಜರು ಶೂರರಾಗಿ ರಣರಂಗದಲ್ಲಿ ಶತ್ರುಗಳಿಗೆ ಅಭಿಮುಖವಾಗಿ ಮರಣವನ್ನು ಹೊಂದುತ್ತಾರೆಯೋ ಅವರು ಬ್ರಹ್ಮಲೋಕಕ್ಕೆ ಹೋಗುತ್ತಾರೆ.
ನೃತ್ಯಗೀತಪರಾ ನಾರ್ಯೋ ದಿವ್ಯಮಾಲ್ಯವಿಭೂಷಿತಾಃ |
ಉಪತಿಷ್ಠಂತಿ ದೇವೇಂದ್ರ ಸದಾ ಭೂಮಿಪ್ರದಂ ದಿವಿ ॥85॥
ಎಲೈ ದೇವೇಂದ್ರನೇ, ಭೂಮಿದಾನ ಮಾಡುವವನನ್ನು ಸ್ವರ್ಗದಲ್ಲಿ ದಿವ್ಯ ಅಲಂಕಾರ ಮಾಲೆಗಳಿಂದ ಭೂಷಿತರಾದ, ನೃತ್ಯಗೀತ ಕುಶಲರಾದ ನಾರಿಯರು ಪರಿಚರಿಸುತ್ತಾರೆ.
ಮೋದತೇ ಚ ಸುಖಂ ಸ್ವರ್ಗೇ ದೇವಗಂಧರ್ವಪೂಜಿತಃ |
ಯೋ ದದಾತಿ ಮಹೀಂ ಸಮ್ಯಗ್ವಿಧಿನೇಹ ದ್ವಿಜಾತಯೇ ॥86॥
ಯಾವನು ವಿಧಿಗೆ ಅನುಸಾರವಾಗಿ ದ್ವಿಜರಿಗೆ ಭೂದಾನವನ್ನು ಮಾಡುತ್ತಾನೆಯೋ ಅವನು ಸ್ವರ್ಗದಲ್ಲಿ ದೇವ-ಗಂಧರ್ವರಿಂದ ಪೂಜಿತನಾಗಿ ಸಂತೋಷಪಡುತ್ತಾನೆ.
ಶತಮಪ್ಸರಸಶ್ಚೈವ ದಿವ್ಯಮಾಲ್ಯವಿಭೂಷಿತಾಃ |
ಉಪತಿಷ್ಠಂತಿ ದೇವೇಂದ್ರ ಸದಾ ಭೂಮಿಪ್ರದಂ ನರಮ್ ॥87॥
ಶಂಖಂ ಭದ್ರಾಸನಂ ಛತ್ರಂ ವರಾಶ್ವಾ ವರವಾರಣಾಃ |
ಭೂಮಿಪ್ರದಾನಾತ್ ಪುಷ್ಪಾಣಿ ಹಿರಣ್ಯನಿಚಯಾಸ್ತಥಾ ॥88॥
ಆಜ್ಞಾ ಸದಾಽಪ್ರತಿಹತಾ ಜಯಶಬ್ದೋ ಭವತ್ಯಥ |
ಭೂಮಿದಾನಸ್ಯ ಪುಷ್ಪಾಣಿ ಫಲಂ ಸ್ವರ್ಗಃ ಪುರಂದರ ॥89॥
ಎಲೈ ದೇವೇಂದ್ರನೇ, ಭೂಮಿದಾನ ಮಾಡುವ ಮನುಷ್ಯನನ್ನು ದಿವ್ಯಮಾಲೆಗಳಿಂದ ಭೂಷಿತರಾದ ನೂರು ಅಪ್ಸರೆಯರು ಪೂಜಿಸುತ್ತಾರೆ. ಶಂಖ, ಶ್ರೇಷ್ಠವಾದ ಆಸನ, ಛತ್ರ, ಶ್ರೇಷ್ಠವಾದ ಅಶ್ವಗಳು ಮತ್ತು ಗಜಗಳು, ಚಿನ್ನದ ರಾಶಿಗಳು, ಅಪ್ರತಿಹತವಾದ ಆಜ್ಞೆ, ಜಯಶಬ್ದ ಎಲ್ಲವೂ ಭೂಮಿಪ್ರದಾನದಿಂದ ಉಂಟಾಗುತ್ತದೆ. ಎಲೈ ಪುರಂದರನೇ, ಇವು ಭೂಮಿದಾನದ ಪುಷ್ಪಗಳು. ಸ್ವರ್ಗವು ಫಲರೂಪವಾದುದು.
ಹಿರಣ್ಯಪುಷ್ಪಾಶ್ಚೌಷಧ್ಯಃ ಕುಶಕಾಂಚನಶಾದ್ವಲಾಃ |
ಅಮೃತಪ್ರಸವಾಂ ಭೂಮಿಂ ಪ್ರಾಪ್ನೋತಿ ಪುರುಷೋ ದದತ್ ॥90॥
ಭೂದಾನ ಮಾಡುವ ಪುರುಷನು ಸುವರ್ಣಪುಷ್ಪಗಳಿಂದ ಕೂಡಿದ ಓಷಧಿಗಳನ್ನೂ, ಕುಶಕಾಂಚನಗಳಿಂದ ಮೃದುವಾದ

ಅಮೃತವನ್ನೂ ಸುರಿಸುವ ಭೂಮಿಯನ್ನು ಪಡೆಯುತ್ತಾನೆ.
ನಾಸ್ತಿ ಭೂಮಿಸಮಂ ದಾನಂ ನಾಸ್ತಿ ಮಾತೃಸಮೋ ಗುರುಃ |
ನಾಸ್ತಿ ಸತ್ಯಸಮೋ ಧರ್ಮೋ ನಾಸ್ತಿ ದಾನಸಮೋ ನಿಧಿಃ ||91||
ಭೂಮಿಗೆ ಸಮವಾದ ದಾನವಿಲ್ಲ. ತಾಯಿಗೆ ಸಮವಾದ ಗುರುವಿಲ್ಲ. ಸತ್ಯಕ್ಕೆ ಸಮವಾದ ಧರ್ಮವಿಲ್ಲ. ದಾನಕ್ಕೆ ಸಮವಾದ ನಿಧಿ ಇಲ್ಲ.
ಭೀಷ್ಮಃ
ಏತದಾಂಗಿರಸಾಚ್ಛ್ರುತ್ವಾ ವಾಸವೋ ವಸುಧಾಮಿಮಾಮ್ |
ವಸುರತ್ನಸಮಾಕೀರ್ಣಾಂ ದದಾವಾಂಗಿರಸೇ ತದಾ ||92||
ಭೀಷ್ಮ ಇಂದ್ರನು ಆಂಗೀರಸರಿಂದ ಈ ಉಪದೇಶವನ್ನು ಕೇಳಿ ವಸುರತ್ನ ಪೂರ್ಣವಾದ ಈ ಭೂಮಿಯನ್ನು ಆಂಗಿರಸರಿಗೇ ದಾನ ಮಾಡಿದನು.
ಯ ಇಮಂ ಶ್ರಾವಯೇಚ್ಛ್ರಾದ್ಧೇ ಭೂಮಿದಾನಸ್ಯ ಸಂಸ್ತವಮ್ |
ನ ತಸ್ಯ ರಕ್ಷಸಾಂ ಭಾಗೋ ನಾಸುರಾಣಾಂ ಭವತ್ಯುತ ||93||
ಯಾವ ಪುರುಷನು ಶ್ರಾದ್ಧಕಾಲದಲ್ಲಿ ಈ ಭೂದಾನದ ಪ್ರಶಂಸೆಯನ್ನು ಶ್ರವಣ ಮಾಡಿಸುತ್ತಾನೆಯೋ ಅಂತಹವನು ಮಾಡಿದ ಶ್ರಾದ್ಧವು ರಾಕ್ಷಸರ ಅಥವಾ ಅಸುರರ ಭಾಗವಾಗುವುದಿಲ್ಲ.
ಅಕ್ಷಯಂ ಚ ಭವೇದ್ ದತ್ತಂ ಪಿತೃಭ್ಯಸ್ತನ್ನ ಸಂಶಯಃ |
ತಸ್ಮಾಚ್ಛ್ರಾದ್ಧೇಷ್ವಿದಂ ವಿಪ್ರೋ ಭುಂಜತಃ ಶ್ರಾವಯೇದ್ ದ್ವಿಜಾನ್ ||94||
ಅವನು ಪಿತೃಗಳಿಗೆ ನೀಡಿದುದು ಅಕ್ಷಯವಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಆದ್ದರಿಂದ ಶ್ರಾದ್ಧದಲ್ಲಿ ಬ್ರಾಹ್ಮಣರು ಭೋಜನವನ್ನು ಮಾಡುವಾಗ ಬ್ರಾಹ್ಮಣನು ಇದನ್ನು ಶ್ರವಣ ಮಾಡಿಸಬೇಕು.
ಇತ್ಯೇತತ್ಸರ್ವದಾನಾನಾಂ ಶ್ರೇಷ್ಠಮುಕ್ತಂ ತವಾನಘ |
ಮಯಾ ಭರತಶಾರ್ದೂಲ ಕಿಂ ಭೂಯಃ ಶ್ರೋತುಮಿಚ್ಛಸಿ ||95||
ಎಲ್ಲೈ ಅನಘನೇ, ಎಲ್ಲ ದಾನಗಳಲ್ಲೂ ಶ್ರೇಷ್ಠವಾದ ಈ ದಾನವನ್ನು ನಾನು ಹೇಳಿದ್ದೇನೆ. ಎಲ್ಲೈ ಭರತಶಾರ್ದೂಲನೇ, ಇನ್ನೂ ಏನನ್ನು ಕೇಳಲು ಬಯಸುವಿ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಭೂಮಿದಾನಸ್ತವೋ ನಾಮ ದ್ವಿನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೂರನೆಯ ಅಧ್ಯಾಯ
ಅನ್ನದಾನದ ಪ್ರಶಂಸೆ
ಯುಧಿಷ್ಠಿರಃ
ಕಾನಿ ದಾನಾನಿ ಲೋಕೇಽಸ್ಮಿನ್ ದಾತುಕಾಮೋ ಮಹೀಪತಿಃ |
ಗುಣಾಧಿಕೇಭ್ಯೋ ವಿಪ್ರೇಭ್ಯೋ ದದ್ಯಾದ್ ಭರತಸತ್ತಮ ||1||
ಯುಧಿಷ್ಠಿರ ಎಲ್ಲೈ ಭರತಶ್ರೇಷ್ಠನೇ, ಈ ಲೋಕದಲ್ಲಿ ದಾನವನ್ನು ಕೊಡಲು ಬಯಸುವ ರಾಜನು ಯಾವ ದಾನಗಳನ್ನು ಗುಣಾಧಿಕರಾದ ಬ್ರಾಹ್ಮಣರಿಗೆ ಕೊಡಬೇಕು?
ಕೇನ ತುಷ್ಯಂತಿ ತೇ ಸದ್ಯಸ್ತುಷ್ಟಾಃ ಕಿಂ ಪ್ರದಿಶಂತ್ಯುತ |
ಶಂಸ ಮೇ ತನ್ಮಹಾಬಾಹೋ ಫಲಂ ಪುಣ್ಯಕೃತಂ ಮಹತ್ ||2||
ಆ ಬ್ರಾಹ್ಮಣರು ಯಾವುದರಿಂದ ತಕ್ಷಣವೇ ಸಂತುಷ್ಟರಾಗುತ್ತಾರೆ? ಅದರಿಂದ ಅವರು ಏನನ್ನು ಕೊಡುತ್ತಾರೆ? ಎಲ್ಲೈ ಮಹಾಬಾಹುವೇ, ಪುಣ್ಯದಿಂದ ಉಂಟಾಗುವ ಮಹಾಫಲವನ್ನು ನನಗೆ ಹೇಳು.
ದತ್ತಂ ಕಿಂಫಲವದ್ ರಾಜನ್ನಿಹ ಲೋಕೇ ಪರತ್ರ ಚ |
ಭವತಃ ಶ್ರೋತುಮಿಚ್ಛಾಮಿ ತನ್ಮೇ ವಿಸ್ತರತೋ ವದ ||3||
ಎಲ್ಲೈ ರಾಜನೇ, ಮಾಡಿದ ದಾನವು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಯಾವ ಫಲವನ್ನು ಕೊಡುತ್ತದೆ ಎಂದು ನಿನ್ನಿಂದ ಕೇಳಲು ಬಯಸುತ್ತೇನೆ. ಅದನ್ನು ನನಗೆ ವಿಸ್ತಾರವಾಗಿ ಹೇಳು.
ಭೀಷ್ಮಃ
ಇಮಮರ್ಥಂ ಪುರಾ ಪೃಷ್ಟೋ ನಾರದೋ ದೇವದರ್ಶನಃ |
ಯದುಕ್ತವಾನಸೌ ತನ್ಮೇ ಗದತಃ ಶೃಣು ಭಾರತ ||4||
ಭೀಷ್ಮ ನಾನು ಹಿಂದೆ ಪ್ರಶ್ನೆ ಮಾಡಿದಾಗ ದೇವದರ್ಶನಿಗಳಾದ ನಾರದರು ಯಾವ ವಿಷಯವನ್ನು ಹೇಳಿದರೋ ಅದನ್ನು ನಿನಗೆ ತಿಳಿಸುತ್ತೇನೆ. ಎಲ್ಲೈ ಭಾರತನೇ, ಅದನ್ನು ಕೇಳು.
ನಾರದಃ
ಅನ್ನಮೇವ ಪ್ರಶಂಸಂತಿ ದೇವಾಃ ಸರ್ಷಿಗಣಾಃ ಪುರಾ |
ಲೋಕತಂತ್ರಂ ಹಿ ಯಜ್ಞಾಶ್ಚ ಸರ್ವಮನ್ನೇ ಪ್ರತಿಷ್ಠಿತಮ್ ||5||
ನಾರದ ದೇವತೆಗಳು ಮತ್ತು ಋಷಿಗಣಗಳು ಮೊದಲಿನಿಂದಲೂ ಅನ್ನವನ್ನೇ ಪ್ರಶಂಸೆ ಮಾಡುತ್ತಾರೆ. ಲೋಕಯಾತ್ರೆ ಮತ್ತು ಯಜ್ಞಗಳು ಅನ್ನದಲ್ಲಿಯೇ ಪ್ರತಿಷ್ಠಿತವಾಗಿವೆ.

ಅನ್ನೇನ ಸದೃಶಂ ದಾನಂ ನ ಭೂತಂ ನ ಭವಿಷ್ಯತಿ |
ತಸ್ಮಾದನ್ನಂ ವಿಶೇಷೇಣ ದಾತುಮಿಚ್ಛಂತಿ ಮಾನವಾಃ ॥6॥
ಅನ್ನಕ್ಕೆ ಸದೃಶವಾದ ದಾನವು ಹಿಂದೆ ಇರಲಿಲ್ಲ ಮತ್ತು ಮುಂದೆ ಇರುವುದಿಲ್ಲ. ಆದ್ದರಿಂದ ಮನುಷ್ಯರು ವಿಶೇಷವಾಗಿ ಅನ್ನದಾನವನ್ನು ಮಾಡಲು ಬಯಸುತ್ತಾರೆ.
ಅನ್ನಮೂರ್ಜಸ್ಕರಂ ಲೋಕೇ ಪ್ರಾಣಾಶ್ಚಾನ್ನೇ ಪ್ರತಿಷ್ಠಿತಾಃ |
ಅನ್ನೇನ ಧಾರ್ಯತೇ ಸರ್ವಂ ವಿಶ್ವಂ ಜಗದಿದಂ ಪ್ರಭೋ ॥7॥
ಲೋಕದಲ್ಲಿ ಅನ್ನವು ಬಲಪ್ರದವಾದುದು. ಪ್ರಾಣಗಳೂ ಅನ್ನದಲ್ಲಿ ಪ್ರತಿಷ್ಠಿತವಾಗಿವೆ. ಎಲೈ ಪ್ರಭುವೇ, ಈ ಸಮಸ್ತವಾದ ಜಗತ್ತೆಲ್ಲವೂ ಅನ್ನದಿಂದಲೇ ಧರಿಸಲ್ಪಡುತ್ತದೆ.
ಅನ್ನಾದ್ ಗೃಹಸ್ಥಾ ಲೋಕೇಽಸ್ಮಿನ್ ಭಿಕ್ಷವಸ್ತತ ಏವ ಚ |
ಅನ್ನಾತ್ ಪ್ರಭವತಿ ಪ್ರಾಣಃ ಪ್ರತ್ಯಕ್ಷಂ ನಾತ್ರ ಸಂಶಯಃ ॥8॥
ಈ ಲೋಕದಲ್ಲಿ ಗೃಹಸ್ಥರು, ಭಿಕ್ಷುಗಳು ಅನ್ನದಿಂದಲೇ ಜೀವಿಸುತ್ತಾರೆ. ಅನ್ನದಿಂದ ಪ್ರಾಣ ಉಂಟಾಗುವುದು ಪ್ರತ್ಯಕ್ಷವಾಗಿದೆ. ಇದರಲ್ಲಿ ಸಂಶಯವಿಲ್ಲ.
ಕುಟುಂಬಂ ಪೀಡಯಿತ್ವಾಽಪಿ ಬ್ರಾಹ್ಮಣಾಯ ಮಹಾತ್ಮನೇ |
ದಾತವ್ಯಂ ಭಿಕ್ಷವೇ ಚಾನ್ನಮಾತ್ಮನೋ ಭೂತಿಮಿಚ್ಛತಾ ॥9॥
ಕುಟುಂಬಕ್ಕೆ ಪೀಡೆಯುಂಟಾದರೂ ಸಹ ಬ್ರಾಹ್ಮಣನೂ, ಮಹಾತ್ಮನೂ ಆದ ಭಿಕ್ಷುವಿಗೆ ತನ್ನ ಏಳಿಗೆಯನ್ನು ಅಪೇಕ್ಷಿಸುವವನು ಅನ್ನವನ್ನು ಕೊಡಬೇಕು.
ಬ್ರಾಹ್ಮಣಾಯಾಭಿರೂಪಾಯ ಯೋ ದದ್ಯಾದನ್ನಮರ್ಥಿನೇ |
ನಿದಧಾತಿ ನಿಧಿಂ ಶ್ರೇಷ್ಠಂ ಪಾರಲೌಕಿಕಮಾತ್ಮನಃ ॥10॥
ಯಾವನು ಅನ್ನವನ್ನು ಯಾಚಿಸುವ ಯೋಗ್ಯನಾದ ಬ್ರಾಹ್ಮಣನಿಗೆ ಅನ್ನದಾನವನ್ನು ಮಾಡುತ್ತಾನೆಯೋ ಅವನು ತನಗೆ ಪರಲೋಕದಲ್ಲಿ ಶ್ರೇಷ್ಠವಾದ ನಿಧಿಯನ್ನು ಸ್ಥಾಪಿಸಿ ಕೊಳ್ಳುತ್ತಾನೆ.
ಶ್ರಾಂತಮಧ್ವನಿ ವರ್ತಂತಂ ವೃದ್ಧಮರ್ಹಮುಪಸ್ಥಿತಮ್ |
ಅರ್ಚಯೇದ್ ಭೂತಿಮನ್ವಿಚ್ಛನ್ ಗೃಹಸ್ಥೋ ಗೃಹಮಾಗತಮ್ ॥11॥
ಐಶ್ವರ್ಯವನ್ನು ಬಯಸುವ ಗೃಹಸ್ಥನು ದಣಿದ, ಮಾರ್ಗದಲ್ಲಿ ಇರುವ, ವೃದ್ಧನಾದ, ಯೋಗ್ಯನಾದ, ಮನೆಗೆ ಬಂದ, ಬ್ರಾಹ್ಮಣನನ್ನು ಅರ್ಚಿಸಬೇಕು.
ಕ್ರೋಧಮುತ್ಪತಿತಂ ಹಿತ್ವಾ ಸುಶೀಲೋ ವೀತಮತ್ಸರಃ |
ಅನ್ನದಃ ಪ್ರಾಪ್ನುತೇ ರಾಜನ್ ದಿವಿ ಚೇಹ ಚ ಯತ್ಸುಖಮ್ ॥12॥
ಎಲೈ ರಾಜನೇ, ಉಂಟಾಗಬಹುದಾದ ಕ್ರೋಧವನ್ನು ತ್ಯಜಿಸಿ, ಒಳ್ಳೆಯ ನಡತೆಯನ್ನು ಹೊಂದಿ ಮಾತ್ಸರ್ಯರಹಿತನಾಗಿ ಅನ್ನವನ್ನು ಕೊಡುವವನು ಈ ಲೋಕದಲ್ಲಿಯೂ ಸ್ವರ್ಗದಲ್ಲಿಯೂ ಸುಖವನ್ನು ಹೊಂದುತ್ತಾನೆ.
ನಾವಮನ್ಯೇದಭಿಗತಂ ನ ಪ್ರಣುದ್ಯಾತ್ ಕಥಂಚನ |
ಅಪಿ ಶ್ವಪಾಕೇ ಶುನಿ ವಾ ನ ದಾನಂ ವಿಪ್ರಣಶ್ಯತಿ ॥13॥
ಮನೆಗೆ ಬಂದ ಅಭ್ಯಾಗತನನ್ನು ಅವಮಾನ ಮಾಡಬಾರದು. ಹಿಂದಕ್ಕೆ ಕಳುಹಿಸಬಾರದು. ಶ್ವಪಾಕನಿಗೆ ಶ್ವಾನಕ್ಕೆ ನೀಡಿದ ಅನ್ನವೂ ಸಹ ಫಲವನ್ನು ಕೊಡದೆ ನಾಶವನ್ನು ಹೊಂದುವುದಿಲ್ಲ.
ಯೋ ದದ್ಯಾದಪರಿಕ್ಲಿಷ್ಟಮನ್ನಮಧ್ವನಿ ವರ್ತತೇ |
ಶ್ರಾಂತಾಯಾದೃಷ್ಟಪೂರ್ವಾಯ ಸ ಮಹದ್ಧರ್ಮಮಾಪ್ನುಯಾತ್ ॥14॥
ಯಾವನು ದಾರಿಹೋಕನಾದ, ಬಳಲಿದ, ಅಪರಿಚಿತನಾದ ವ್ಯಕ್ತಿಗೆ ಪರಿಕ್ಲೇಶ ರಹಿತನಾಗಿ ಅನ್ನವನ್ನು ಕೊಡುತ್ತಾನೆಯೋ ಅವನು ಶ್ರೇಷ್ಠವಾದ ಧರ್ಮವನ್ನು ಸಂಪಾದಿಸುತ್ತಾನೆ.
ಪಿತೄನ್ ದೇವಾನೃಷೀನ್ ವಿಪ್ರಾನತಿಥೀಂಶ್ಚ ಜನಾಧಿಪ |
ಯೋ ನರಃ ಪ್ರೀಣಯತ್ಯನ್ನೈಸ್ತಸ್ಯ ಪುಣ್ಯಫಲಂ ಮಹತ್ ॥15॥
ಎಲೈ ಜನಾಧಿಪನೇ, ಯಾವ ಮನುಷ್ಯನು ಪಿತೃಗಳನ್ನೂ, ದೇವತೆಗಳನ್ನೂ, ಋಷಿಗಳನ್ನೂ, ಬ್ರಾಹ್ಮಣರನ್ನೂ, ಅತಿಥಿಗಳನ್ನೂ ಅನ್ನದಿಂದ ಸಂತೋಷ ಪಡಿಸುತ್ತಾನೆಯೋ ಅವನ ಪುಣ್ಯಫಲವು ಬಹಳ ದೊಡ್ಡದಾದುದು.
ಕೃತ್ವಾಪಿ ಪಾಪಕಂ ಕರ್ಮ ಯೋ ದದ್ಯಾದನ್ನಮರ್ಥಿನೇ |
ಬ್ರಾಹ್ಮಣಾಯ ವಿಶೇಷೇಣ ನ ಸ ಪಾಪೇನ ಯುಜ್ಯತೇ ॥16॥
ಪಾಪಕರ್ಮವನ್ನು ಮಾಡಿದವನೂ ಸಹ ಬೇಡಿ ಬಂದವನಿಗೆ ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣನಿಗೆ ಅನ್ನವನ್ನು ನೀಡಿದರೆ ಅವನು ಪಾಪದಿಂದ ಯುಕ್ತನಾಗುವುದಿಲ್ಲ.
ಬ್ರಾಹ್ಮಣೇಷ್ವಕ್ಷಯಂ ದಾನಮನ್ನಂ ಶೂದ್ರೇ ಮಹಾಫಲಮ್ |
ಅನ್ನದಾನಂ ಚ ಶೂದ್ರೇ ಚ ಬ್ರಾಹ್ಮಣೇ ಚ ವಿಶಿಷ್ಯತೇ ॥17॥
ಬ್ರಾಹ್ಮಣನಿಗೆ ಕೊಟ್ಟ ಅನ್ನದಾನವು ಅಕ್ಷಯವಾಗುತ್ತದೆ. ಶೂದ್ರನಿಗೆ ಕೊಟ್ಟ ಅನ್ನವು ಮಹಾಫಲವನ್ನು ಕೊಡುತ್ತದೆ. ಶೂದ್ರನಿಗೂ ಮತ್ತು ಬ್ರಾಹ್ಮಣನಿಗೂ ಅನ್ನದಾನ ಮಾಡುವುದು ಬಹಳ ಶ್ರೇಷ್ಠವಾದುದು.
ನ ಪೃಚ್ಛೇದ್ ಗೋತ್ರಚರಣಂ ಸ್ವಾಧ್ಯಾಯಂ ದೇಶಮೇವ ವಾ |
ಭಿಕ್ಷಿತೋ ಬ್ರಾಹ್ಮಣೇನೇಹ ಜನ್ಮ ವಾಽನ್ನಂ ಪ್ರಯಾಚಿತಃ ॥18॥

ಬ್ರಾಹ್ಮಣನು ಅನ್ನವನ್ನು ಯಾಚಿಸಿದಾಗ ಅವನ ಗೋತ್ರವನ್ನಾಗಲೀ, ಜನ್ಮವನ್ನಾಗಲೀ, ಆಚಾರವನ್ನಾಗಲೀ, ಸ್ವಾಧ್ಯಾಯವನ್ನಾಗಲೀ, ದೇಶವನ್ನಾಗಲೀ ಪ್ರಶ್ನಿಸಬಾರದು.
ಅನ್ನದಸ್ಯಾನ್ನವೃಕ್ಷಾಶ್ಚ ಸರ್ವಕಾಮಫಲಾನ್ವಿತಾಃ |
ಭವಂತೀಹಾಥ ವಾಽಮುತ್ರ ನೃಪತೇ ನಾತ್ರ ಸಂಶಯಃ ||19||
ಎಲೈ ರಾಜನೇ, ಅನ್ನವನ್ನು ಕೊಡುವವನಿಗೆ ಈ ಲೋಕದಲ್ಲಿಯಾಗಲೀ ಅಥವಾ ಪರಲೋಕದಲ್ಲಿಯಾಗಲೀ ಕಾಮಿತವಾದ ಸರ್ವಫಲವನ್ನು ಕೊಡುವ, ಅನ್ನವನ್ನು ಕೊಡುವ ಕಲ್ಪವೃಕ್ಷಗಳು ಉಂಟಾಗುವುದರಲ್ಲಿ ಸಂಶಯವಿಲ್ಲ.
ಆಶಂಸಂತೇ ಹಿ ಪಿತರಃ ಸುವೃಷ್ಟಿಮಿವ ಕರ್ಷಕಾಃ |
ಅಸ್ಮಾಕಮಪಿ ಪುತ್ರೋ ವಾ ಪೌತ್ರೋ ವಾಽನ್ನಂ ಪ್ರದಾಸ್ಯತಿ ||20||
ಕೃಷಿಕರು ಒಳ್ಳೆಯ ಮಳೆಯನ್ನು ಬಯಸಿದಂತೆ ಪಿತೃಗಳು ನಮ್ಮ ಪುತ್ರನಾಗಲೀ ಅಥವಾ ಪೌತ್ರನಾಗಲೀ ಅನ್ನದಾನವನ್ನು ಮಾಡುವನೆಂದು ಆಶಿಸುತ್ತಾರೆ.
ಬ್ರಾಹ್ಮಣೋ ಹಿ ಮಹದ್ಭೂತಂ ಸ್ವಯಂ ದೇಹೀತಿ ಯಾಚತೇ |
ಅಕಾಮೋ ವಾ ಸಕಾಮೋ ವಾ ದತ್ತ್ವಾ ಪುಣ್ಯಮವಾಪ್ನುಯಾತ್ ||21||
ಬ್ರಾಹ್ಮಣನು ಒಂದು ಮಹಾಚೇತನ. ತಾನಾಗಿಯೇ ಬಂದು ದೇಹಿ ಎಂದು ಕೇಳುವ ಬ್ರಾಹ್ಮಣನಿಗೆ ಇಷ್ಟವಿರಲಿ, ಇಲ್ಲದಿರಲಿ ಅನ್ನವನ್ನು ಕೊಟ್ಟರೆ ಪುಣ್ಯಪ್ರಾಪ್ತಿಯಾಗುತ್ತದೆ.
ಬ್ರಾಹ್ಮಣಃ ಸರ್ವಭೂತಾನಾಮತಿಥಿಃ ಪ್ರಸೃತಾಗ್ರಭುಕ್ |
ವಿಪ್ರಾ ಯಮಭಿಗಚ್ಛಂತಿ ಭಿಕ್ಷಮಾಣಾ ಗೃಹಂ ಸದಾ ||22||
ಸತ್ಕೃತಾಶ್ಚ ನಿವರ್ತಂತೇ ತದತೀವ ಪ್ರವರ್ಧತೇ |
ಮಹಾಭೋಗೇ ಕುಲೇ ಜನ್ಮ ಪ್ರೇತ್ಯ ಪ್ರಾಪ್ನೋತಿ ಭಾರತ ||23||
ಮೊದಲು ಭೋಜನ ಮಾಡುವ ಬ್ರಾಹ್ಮಣನು ಸರ್ವಭೂತಗಳಿಗೂ ಅತಿಥಿಯಾಗುತ್ತಾನೆ. ಯಾರ ಮನೆಗೆ ಬ್ರಾಹ್ಮಣನು ಹೋಗಿ ಅನ್ನವನ್ನು ಯಾಚಿಸಿ ಅಲ್ಲಿ ಸತ್ಕಾರವನ್ನು ಪಡೆದು ಹಿಂದಿರುಗುತ್ತಾನೆಯೋ ಆ ಮನೆಯು ಅಭಿವೃದ್ಧಿಯನ್ನು ಹೊಂದುತ್ತದೆ. ಎಲೈ ಭಾರತನೇ, ಆ ಅನ್ನದಾತನು ಮರಣವನ್ನು ಹೊಂದಿದ ಮೇಲೆ ಮಹಾಭೋಗವನ್ನು ಹೊಂದಿದ ವಂಶದಲ್ಲಿ ಜನ್ಮವನ್ನು ಪಡೆಯುತ್ತಾನೆ.
ದತ್ತ್ವಾ ತ್ವನ್ನಂ ನರೋ ಲೋಕೇ ತಥಾ ಸ್ಥಾನಮನುತ್ತಮಮ್ |
ಮೃಷ್ಟಮೃಷ್ಟಾನ್ನದಾಯೀ ತು ಸ್ವರ್ಗೇ ವಸತಿ ಸತ್ಕೃತಃ ||24||
ಲೋಕದಲ್ಲಿ ಅನ್ನವನ್ನು ಕೊಡುವ ಮನುಷ್ಯನು ಶ್ರೇಷ್ಠವಾದ ಸ್ಥಾನವನ್ನು ಪಡೆಯುತ್ತಾನೆ. ಅತ್ಯಂತ ಮೃಷ್ಟಾನ್ನವನ್ನು ಕೊಡುವ ಮನುಷ್ಯನು ಸ್ವರ್ಗದಲ್ಲಿ ಸತ್ಕರಿಸಲ್ಪಟ್ಟು ವಾಸಿಸುತ್ತಾನೆ.
ಸತ್ಕೃತಾಚ್ಚ ವಿವರ್ಧಂತೇ ಸಗೃಹೇಣಾಭಿವರ್ಧತೇ |
ಸ್ವರ್ಗತೋ ದೀರ್ಘಕಾಲೇನ ಮಹಾಭೋಗಂ ಕುಲಂ ಭವೇತ್ |
ಅನ್ನದಃ ಪಶುಮಾನ್ ಪುತ್ರೀ ಧನವಾನ್ ಭೋಗವಾನಪಿ ||25||
ಅನ್ನದಃ ಪ್ರಾಣದೋ ಲೋಕೇ ಸರ್ವದಃ ಪ್ರೋಚ್ಯತೇ ತು ಸಃ ||26||
ಸತ್ಕಾರ್ಯಗಳಿಂದ ಅಭಿವೃದ್ಧಿಯನ್ನು ಹೊಂದುತ್ತಾರೆ. ಅವನ ಮನೆಯೂ ಅಭಿವೃದ್ಧಿಯನ್ನು ಹೊಂದುತ್ತದೆ. ಅವನು ದೀರ್ಘಕಾಲ ಸ್ವರ್ಗದಲ್ಲಿ ವಾಸಿಸುತ್ತಾನೆ. ಕುಲಕ್ಕೂ ಮಹಾಭೋಗ ಉಂಟಾಗುತ್ತದೆ. ಅನ್ನದಾನವನ್ನು ಮಾಡುವವನು ಪಶುಗಳನ್ನೂ, ಪುತ್ರರನ್ನೂ, ಧನಗಳನ್ನೂ ಮತ್ತು ಭೋಗವನ್ನೂ ಹೊಂದುತ್ತಾನೆ. ಲೋಕದಲ್ಲಿ ಅನ್ನದಾನವನ್ನು ಮಾಡುವವನು ಪ್ರಾಣದಾನವನ್ನು ಮಾಡುವವನು ಎಂದು ಹೇಳಲ್ಪಡುತ್ತಾನೆ. ಪ್ರಾಣದಾನವನ್ನು ಮಾಡುವವನು ಸರ್ವದಾನ ಮಾಡುವವನು ಎಂದು ಹೇಳಲ್ಪಡುತ್ತಾನೆ.

ಅನ್ನಂ ಹಿ ದತ್ತ್ವಾಽತಿಥಯೇ ಬ್ರಾಹ್ಮಣಾಯ ಯಥಾವಿಧಿ |
ಪ್ರದಾತಾ ಸುಖಮಾಪ್ನೋತಿ ದೇವೈಶ್ಚಾಪ್ಯಭಿಪೂಜ್ಯತೇ ||27||
ಅತಿಥಿಯಾದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ಅನ್ನದಾನವನ್ನು ಮಾಡಿದವನು ಸುಖವನ್ನು ಹೊಂದುತ್ತಾನೆ ಮತ್ತು ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ.
ಬ್ರಾಹ್ಮಣೋ ಹಿ ಮಹದ್ಭೂತಂ ಕ್ಷೇತ್ರಂ ಚರತಿ ಪಾದವತ್ |
ಉಪ್ಯತೇ ತತ್ರ ಯದ್ ಬೀಜಂ ತದ್ಧಿ ಪುಣ್ಯಫಲಂ ಮಹತ್ ||28||
ಬ್ರಾಹ್ಮಣನೆಂದರೆ ದೊಡ್ಡ ಚೇತನ. ಅದು ಪಾದಗಳುಳ್ಳ ಚಲಿಸುವ ಹೊಲದಂತೆ. ಅಲ್ಲಿ ಬಿತ್ತಿದ ದಾನ ಎಂಬ ಬೀಜವು ದೊಡ್ಡ ಪುಣ್ಯ ಎಂಬ ಫಲವನ್ನು ಕೊಡುತ್ತದೆ.
ಪ್ರತ್ಯಕ್ಷಂ ಪ್ರೀತಿಜನನಂ ಭೋಕ್ತೃದಾತ್ರೋರ್ಭವತ್ಯುತ |
ಸರ್ವಾಣ್ಯನ್ಯಾನಿ ದಾನಾನಿ ಪರೋಕ್ಷಫಲವಂತ್ಯುತ ||29||
ಮತ್ತು ಅನ್ನದಾನವು ದಾತೃವಿಗೂ ಮತ್ತು ಭೋಕ್ತೃವಿಗೂ ಪ್ರತ್ಯಕ್ಷವಾಗಿ ಸಂತೋಷವನ್ನುಂಟು ಮಾಡುತ್ತದೆ. ಉಳಿದ ಎಲ್ಲಾ ದಾನಗಳ ಫಲವು ಪರೋಕ್ಷವಾದದು.
ಅನ್ನಾದ್ಧಿ ಪ್ರಸವಂ ವಿದ್ಧಿ ರತಿಮನ್ನಾದ್ಧಿ ಭಾರತ |
ಧರ್ಮಾರ್ಥಾವನ್ನತೋ ವಿದ್ಧಿ ರೋಗನಾಶಂ ತಥಾಽನ್ನತಃ ||30||
ಎಲೈ ಭಾರತನೇ, ಅನ್ನದಿಂದ ಸಂತತಿ, ಅನ್ನದಿಂದ ರತಿಸುಖವೆಂದು ತಿಳಿ. ಹಾಗೆಯೇ ಅನ್ನದಿಂದ ಧರ್ಮಾರ್ಥಗಳು ಮತ್ತು ಅನ್ನದಿಂದ

ರೋಗನಾಶವೆಂದೂ ತಿಳಿ.
ಅನ್ನಂ ಹ್ಯಮೃತಮಿತ್ಯಾಹ ಪುರಾಕಲ್ಪೇ ಪ್ರಜಾಪತಿಃ |
ಅನ್ನಂ ಭುವಂ ದಿವಂ ಖಂ ಚ ಸರ್ವಮನ್ನೇ ಪ್ರತಿಷ್ಠಿತಮ್ ॥31॥
ಪೂರ್ವಸೃಷ್ಟಿಯಲ್ಲಿ ಪ್ರಜಾಪತಿಯು ಅನ್ನವನ್ನು ಅಮೃತವೆಂದು ಹೇಳಿದನು. ಭೂಮಿ, ಸ್ವರ್ಗ, ಅಂತರಿಕ್ಷ ಎಲ್ಲವೂ ಅನ್ನವೇ (ಎಂದರೆ) ಎಲ್ಲವೂ ಅನ್ನದಲ್ಲಿ ಪ್ರತಿಷ್ಠಿತವಾಗಿವೆ.
ಅನ್ನಪ್ರಣಾಶೇ ಭಿದ್ಯಂತೇ ಶರೀರೇ ಪಂಚ ಧಾತವಃ |
ಬಲಂ ಬಲವತೋಽಪೀಹ ಪ್ರಣಶ್ಯತ್ಯನ್ನಹಾನಿತಃ ॥32॥
ಅನ್ನವು ನಾಶ ಹೊಂದಿದರೆ ಶರೀರದಲ್ಲಿರುವ ಪಂಚಧಾತುಗಳು ನಾಶವನ್ನು ಹೊಂದುತ್ತವೆ. ಬಲಶಾಲಿಯ ಬಲವೂ ಸಹ ಅನ್ನಹಾನಿಯಿಂದ ನಾಶವನ್ನು ಹೊಂದುತ್ತವೆ.
ಆವಾಹಾಶ್ಚ ವಿವಾಹಾಶ್ಚ ಯಜ್ಞಾಶ್ಚಾನ್ನಮೃತೇ ತಥಾ |
ನ ವರ್ತಂತೇ ನರಶ್ರೇಷ್ಠ ಬ್ರಹ್ಮ ಚಾತ್ರ ಪ್ರಲೀಯತೇ ॥33॥
ಎಲೈ ನರಶ್ರೇಷ್ಠನೇ, ದೇವತಾ ಆವಾಹನಗಳು, ವಿವಾಹಗಳು, ಯಜ್ಞಗಳು ಅನ್ನವಿಲ್ಲದೆ ನಡೆಯುವುದಿಲ್ಲ. ಅನ್ನವಿಲ್ಲದಿದ್ದರೆ ವೇದವೂ ಲಯವನ್ನು ಹೊಂದುತ್ತದೆ (ಲಕ್ಷ್ಮಾಲಂಕಾರ).
ಅನ್ನತಃ ಸರ್ವಮೇತದ್ಧಿ ಯತ್ ಕಿಂಚಿತ್ ಸ್ಥಾಣು ಜಂಗಮಮ್ |
ತ್ರಿಷು ಲೋಕೇಷು ಧರ್ಮಾರ್ಥಮನ್ನಂ ದೇಯಮತೋ ಬುಧೈಃ ॥34॥
ಸ್ಥಾವರ-ಜಂಗಮವಾದ ಈ ಪ್ರಾಣಿ ಸಮೂಹವು ಏನಿದೆಯೋ ಅದೆಲ್ಲವೂ ಅನ್ನದಿಂದಲೇ ಉಂಟಾಗಿದೆ. ವಿವೇಕಿಗಳಾದವರು ಮೂರುಲೋಕಗಳಲ್ಲಿಯೂ ಕೂಡ ಧರ್ಮಾರ್ಥವಾಗಿ ಅನ್ನವನ್ನು ಕೊಡಬೇಕು.
ಅನ್ನದಸ್ಯ ಮನುಷ್ಯಸ್ಯ ಬಲಮೋಜೋ ಯಶಃ ಸುಖಮ್ |
ಕೀರ್ತಿಶ್ಚ ವರ್ಧತೇ ಶಶ್ವತ್ ತ್ರಿಷು ಲೋಕೇಷು ಪಾರ್ಥಿವ ॥35॥
ಎಲೈ ರಾಜನೇ, ಅನ್ನವನ್ನು ದಾನ ಮಾಡುವ ಮನುಷ್ಯನಿಗೆ ಬಲ, ಓಜಸ್ಸು, ಕೀರ್ತಿ ಸುಖಗಳು ಹೆಚ್ಚುತ್ತವೆ. ಮೂರು ಲೋಕಗಳಲ್ಲಿ ಶಾಶ್ವತವಾದ ಕೀರ್ತಿಯುಂಟಾಗುತ್ತದೆ.
ರೋಗನಾಶೋ ಮನಸ್ತುಷ್ಟಿಃ ಸಮಾಧಿಸ್ತೇಜ ಉತ್ತಮಮ್ |
ತ್ರೈಲೋಕ್ಯಮನ್ನೇ ವಿಧೃತಂ ಧಾತವಶ್ಚಾನ್ನಜಾ ಸ್ಮೃತಾಃ ॥36॥
ಸಂಸ್ಕಾರಾಃ ಸಂ ವಿವಾದಶ್ಚ ಸ್ವಧಾ ಯಜ್ಞೋಽನ್ನಮುತ್ತಮಮ್ |
ವೇದಶಾಸ್ತ್ರಾಣಿ ಧರ್ಮಾಶ್ಚ ವಿನಾಽನ್ನಂ ಸಂಪ್ರಲೀಯತೇ ॥37॥
ರೋಗನಾಶ, ಮನಸ್ಸಂತೋಷ, ಸಮಾಧಾನ, ಉತ್ತಮವಾದ ತೇಜಸ್ಸು, ಮೂರುಲೋಕಗಳು ಎಲ್ಲವೂ ಅನ್ನದಿಂದ ನಿಯಂತ್ರಿಸಲ್ಪಟ್ಟಿವೆ. ಶರೀರ ಧಾತುಗಳೂ ಸಹ ಅನ್ನದಿಂದಲೇ ಉಂಟಾಗುತ್ತವೆ ಎಂದು ಹೇಳಲ್ಪಡುತ್ತದೆ. ಸಂಸ್ಕಾರಗಳು, ಸಂಭಾಷಣೆಗಳು, ಸ್ವಧಾಕಾರಗಳು, ಯಜ್ಞ ಎಲ್ಲವೂ ಶ್ರೇಷ್ಠವಾದ ಅನ್ನವನ್ನು ಅವಲಂಬಿಸಿವೆ. ಅನ್ನವಿಲ್ಲದಿದ್ದರೆ ವೇದಶಾಸ್ತ್ರಗಳು ಮತ್ತು ಧರ್ಮಗಳು ಅದರ್ಶನವನ್ನು ಹೊಂದುತ್ತವೆ.
ಮೇಘೇಷ್ವಂಭಃ ಸನ್ನಿಧತ್ತೇ ಪ್ರಾಣಾನಾಂ ಪವನಃ ಶಿವಃ |
ತಚ್ಚ ಮೇಘಗತಂ ವಾರಿ ಶಕ್ರೋ ವರ್ಷತಿ ಭಾರತ ॥38॥
ಪ್ರಾಣಗಳಿಗೆ ಮಂಗಳಕರನಾದ ವಾಯುವು ಮೇಘಗಳಲ್ಲಿ ನೀರನ್ನು ತಂದಿಡುತ್ತಾನೆ. ಎಲೈ ಭಾರತನೇ, ಮೇಘದಲ್ಲಿರುವ ನೀರನ್ನು ಇಂದ್ರನು ಮಳೆಯ ರೂಪದಲ್ಲಿ ಸುರಿಸುತ್ತಾನೆ.
ಆದತ್ತೇ ಚ ರಸಂ ಭೌಮಮಾದಿತ್ಯಃ ಸ್ವಗಭಸ್ತಿಭಿಃ |
ವಾಯುರಾದಿತ್ಯತಸ್ತಾಂಶ್ಚ ರಸಾನ್ ದೇವಃ ಪ್ರವರ್ಷತಿ ॥39॥
ಸೂರ್ಯನು ತನ್ನ ಕಿರಣಗಳಿಂದ ಭೂಮಿಯ ರಸವನ್ನು ಹೀರುತ್ತಾನೆ. ವಾಯುವು ಆದಿತ್ಯನಿಂದ ಆ ರಸವನ್ನು ತೆಗೆದುಕೊಂಡು ಮಳೆಯಾಗಿ ಸುರಿಸುತ್ತಾನೆ.
ತದ್ ಯದಾ ಮೇಘತೋ ವಾರಿ ಪತಿತಂ ಭವತಿ ಕ್ಷಿತೌ |
ತದಾ ವಸುಮತೀ ದೇವೀ ಸ್ನಿಗ್ಧಾ ಭವತಿ ಭಾರತ ॥40॥
ಎಲೈ ಭಾರತನೇ, ಮೇಘಗಳಿಂದ ಜಲವು ಭೂಮಿಯ ಮೇಲೆ ಬಿದ್ದಾಗ ಭೂದೇವಿಯು ಮೃದುವಾಗುತ್ತಾಳೆ.
ತತಃ ಸಸ್ಯಾನಿ ರೋಹಂತಿ ಯೇನ ವರ್ತಯತೇ ಜಗತ್ |
ಮಾಂಸಮೇದೋಸ್ಥಿಶುಕ್ರಾಣಾಂ ಪ್ರಾದುರ್ಭಾವಸ್ತತಃ ಪುನಃ ॥41॥
ಅದರಿಂದ ಸಸ್ಯಗಳು ಬೆಳೆಯುತ್ತವೆ. ಅದರಿಂದ ಜಗತ್ತು ಮುಂದೆ ಸಾಗುತ್ತದೆ. ಮಾಂಸ, ಮೇದಸ್ಸು, ಅಸ್ಥಿ, ಶುಕ್ರ ಇದೆಲ್ಲದರ ಉತ್ಪತ್ತಿಯೂ ಅನ್ನದಿಂದಲೇ ಆಗುತ್ತದೆ.
ಸಂಭವಂತಿ ತತಃ ಶುಕ್ರಾತ್ ಪ್ರಾಣಿನಃ ಪೃಥಿವೀಪತೇ |
ಅಗ್ನೀಷೋಮೌ ಹಿ ತಚ್ಛುಕ್ರಂ ಪ್ರಜನಃ ಪುಷ್ಯತಶ್ಚ ಹ ॥42॥
ಎಲೈ ರಾಜನೇ, ಶುಕ್ರದಿಂದ ಪ್ರಜೆಗಳು ಜನಿಸುತ್ತಾರೆ. ಅಗ್ನಿ ಮತ್ತು ಚಂದ್ರರು ಆ ಶುಕ್ರವನ್ನು ಉತ್ಪತ್ತಿ ಮಾಡುತ್ತಾರೆ. ಅನ್ನದಿಂದ ಪುಷ್ಟನಾದವನಿಗೆ ಸಂತತಿ ಉಂಟಾಗುವುದಷ್ಟೆ?
ಏವಮನ್ನಂ ಚ ಸೂರ್ಯಶ್ಚ ಪವನಃ ಶುಕ್ರಮೇವ ಚ |
ಏಕ ಏವ ಸ್ಮೃತೋ ರಾಶಿರ್ಯತೋ ಭೂತಾನಿ ಜಜ್ಞಿರೇ ॥43॥

ಹೀಗೆ ಅನ್ನ, ಸೂರ್ಯ, ವಾಯು ಮತ್ತು ಶುಕ್ರ (ವೀರ್ಯ) ಎಲ್ಲವೂ ಒಂದೇ ಗುಂಪಿಗೆ ಸೇರಿದವು. ಅವುಗಳಿಂದ ಪ್ರಾಣಿಗಳು ಜನಿಸುತ್ತವೆ.
ಪ್ರಾಣಾನ್ ದದಾತಿ ಭೂತಾನಾಂ ತೇಜಶ್ಚ ಭರತರ್ಷಭ |
ಗೃಹಮಭ್ಯಾಗತಾಯಾಶು ಯೋ ದದ್ಯಾದನ್ನಮರ್ಥಿನೇ ||44||
ಎಲೈ ಭರತಶ್ರೇಷ್ಠನೇ, ಯಾವನು ಮನೆಗೆ ಬಂದು ಬೇಡುವವನಿಗೆ ಅನ್ನವನ್ನು ಕೊಡುತ್ತಾನೆಯೋ ಅವನು ಜೀವರಿಗೆ ಪ್ರಾಣಗಳನ್ನೂ, ತೇಜಸ್ಸನ್ನೂ ಕೊಡುತ್ತಾನೆ.
ಭೀಷ್ಮಃ
ನಾರದೇನೈವಮುಕ್ತೋಽಹಮದಾಮನ್ನಂ ಸದಾ ನೃಪ |
ಅನಸೂಯುಸ್ತ್ವಮಪ್ಯನ್ನಂ ತಸ್ಮಾದ್ ದೇಹಿ ಗತಜ್ವರಃ ||45||
ಭೀಷ್ಮ ನಾರದರಿಂದ ಹೀಗೆ ಹೇಳಲ್ಪಟ್ಟ ನಾನು ಎಲೈ ರಾಜನೇ, ಯಾವಾಗಲೂ ಯಾವ ಅಸೂಯೆಯೂ ಇಲ್ಲದೆ ಅನ್ನದಾನವನ್ನು ಮಾಡಿದೆ. ಆದ್ದರಿಂದ ನೀನೂ ಸಹ ನಿಶ್ಶಂಕೆಯಿಂದ ಅನ್ನದಾನವನ್ನು ಮಾಡುವವನಾಗು.
ದತ್ತತ್ವಽನ್ನಂ ವಿಧಿವದ್ ರಾಜನ್ ವಿಪ್ರೇಭ್ಯಸ್ತ್ವಮಪಿ ಪ್ರಭೋ |
ಯಥಾವದನುರೂಪೇಭ್ಯಸ್ತತಃ ಸ್ವರ್ಗಮವಾಪ್ಸ್ಯಸಿ ||46||
ಎಲೈ ರಾಜನೇ, ಪ್ರಭುವೇ, ಅನುರೂಪರಾದ ಬ್ರಾಹ್ಮಣರಿಗೆ ವಿಧಿವತ್ತಾಗಿ ಅನ್ನದಾನವನ್ನು ಮಾಡಿ ನೀನು ಅನಂತರ ಸ್ವರ್ಗವನ್ನು ಹೊಂದುವಿ.
ಅನ್ನದಾನಾ ಹಿ ಯೇ ಲೋಕಾಸ್ತಾಂಸ್ತ್ವಂ ಶೃಣು ನರಾಧಿಪ |
ಭವನಾನಿ ಪ್ರಕಾಶಂತೇ ದಿವಿ ತೇಷಾಂ ಮಹಾತ್ಮನಾಮ್ |
ನಾನಾಸಂಸ್ಥಾನರೂಪಾಣಿ ನಾನಾಸ್ತಂಭಾನ್ವಿತಾನಿ ಚ ||47||
ಚಂದ್ರಮಂಡಲಶುಭ್ರಾಣಿ ಕಿಂಕಿಣೀಜಾಲವಂತಿ ಚ |
ತರುಣಾದಿತ್ಯವರ್ಣಾನಿ ಸ್ಥಾವರಾಣಿ ಚರಾಣಿ ಚ ||48||
ಎಲೈ ನರಾಧಿಪನೇ, ಅನ್ನದಾತರಿಗೆ ಉಂಟಾಗುವ ಲೋಕಗಳನ್ನು ಕೇಳು. ಆ ಮಹಾತ್ಮರ ಭವನಗಳು ಸ್ವರ್ಗದಲ್ಲಿ ಶೋಭಿಸುತ್ತವೆ. ಅವು ಅನೇಕ ವಿಧವಾದ ಆಕಾರ, ರೂಪ ಮತ್ತು ನಾನಾ ಸ್ತಂಭಗಳಿಂದ ಕೂಡಿರುತ್ತವೆ. ಚಂದ್ರಮಂಡಲದಂತೆ ಶುಭ್ರವಾಗಿ, ಅನೇಕ ಕಿಂಕಿಣಿಗಳ ಜಾಲದಿಂದ ಆವೃತವಾಗಿ, ಉದಯಿಸುವ ಸೂರ್ಯನ ಬಣ್ಣವನ್ನು ಹೊಂದಿ, ಚಲಿಸಲೂ ಮತ್ತು ಚಲಿಸದಿರಲೂ ಸಮರ್ಥವಾಗಿರುತ್ತವೆ.
ಅನೇಕಶತಭೌಮಾನಿ ಸಾಂತರ್ಜಲವನಾನಿ ಚ |
ವೈಡೂರ್ಯಾರ್ಕಪ್ರಕಾಶಾನಿ ರೌಪ್ಯರುಗ್ಮಮಯಾನಿ ಚ ||49||
ಸರ್ವಕಾಮಫಲಾಶ್ಚಾಪಿ ವೃಕ್ಷಾ ಭವನಸಂಸ್ಥಿತಾಃ |
ವಾಪ್ಯೋ ವೀಥ್ಯಃ ಸಭಾಃ ಕೂಪಾ ದೀರ್ಘಿಕಾಶ್ಚೈವ ಸರ್ವಶಃ ||50||
ಘೋಷವಂತಿ ಚ ಯಾನಾನಿ ಯುಕ್ತಾನ್ಯಥ ಸಹಸ್ರಶಃ |
ಭಕ್ಷ್ಯಭೋಜ್ಯಮಯಾಃ ಶೈಲಾ ವಾಸಾಂಸ್ಯಾಭರಣಾನಿ ಚ ||51||
ಕ್ಷೀರಂ ಸ್ರವಂತ್ಯಃ ಸರಿತಸ್ತಥಾ ಚೈವಾನ್ನಪರ್ವತಾಃ |
ಪ್ರಾಸಾದಾಃ ಪಾಂಡರಾಭ್ರಾಭಾಃ ಶಯ್ಯಾಶ್ಚ ಕನಕೋಜ್ಜ್ವಲಾಃ |
ತಾನನ್ನದಾಃ ಪ್ರಪದ್ಯಂತೇ ತಸ್ಮಾದನ್ನಪ್ರದೋ ಭವ ||52||
ಆ ಭವನಗಳು ಸುವರ್ಣರಜತಮಯವಾಗಿದ್ದು, ಅಂತರ್ಜಲ ಮತ್ತು ವನಗಳಿರುವ ನೂರಾರು ಭೂಪ್ರದೇಶಗಳಿಂದ ಸುತ್ತುವರಿಯಲ್ಪಟ್ಟು ವೈಡೂರ್ಯ ಮತ್ತು ಸೂರ್ಯನ ಪ್ರಕಾಶವನ್ನು ಹೊಂದಿರುತ್ತವೆ. ಆ ಗೃಹದ ಸಮೀಪದಲ್ಲಿರುವ ವೃಕ್ಷಗಳು ಕಾಮಿತವಾದ ಸರ್ವಪದಾರ್ಥಗಳನ್ನೂ ಕೊಡುತ್ತವೆ. ವಾಪಿಗಳು, ವೀಥಿಗಳು, ಸಭೆಗಳು, ಕೂಪಗಳು ಮತ್ತು ದೀರ್ಘಿಕೆಗಳು (ಸಣ್ಣ ಸರೋವರಗಳು) ಎಲ್ಲ ಕಡೆಗಳಲ್ಲಿಯೂ ಇರುತ್ತವೆ. ಒಳ್ಳೆಯ ಘೋಷದಿಂದ ಕೂಡಿರುವ ಸಹಸ್ರಾರು ವಾಹನಗಳಿರುತ್ತವೆ. ಭಕ್ಷ್ಯ-ಭೋಜ್ಯಮಯವಾದ ಪರ್ವತಗಳು, ವಸ್ತ್ರಗಳು ಮತ್ತು ಆಭರಣಗಳು ಇರುತ್ತವೆ. ಕ್ಷೀರವಾಹಿನಿಯಾದ ನದಿಗಳು, ಅನ್ನಪರ್ವತಗಳು, ಶ್ವೇತಾಭ್ರವರ್ಣದ ಪ್ರಾಸಾದಗಳು, ಕನಕೋಜ್ವಲವಾದ ಶಯನಗಳು ಇರುತ್ತವೆ. ಅನ್ನದಾತನು ಇವೆಲ್ಲವನ್ನೂ ಪಡೆಯುತ್ತಾನೆ. ಆದ್ದರಿಂದ ನೀನು ಅನ್ನದಾನವನ್ನು ಮಾಡುವವನಾಗು.
ಏತೇ ಲೋಕಾಃ ಪುಣ್ಯಕೃತಾಮನ್ನದಾನಾಂ ಮಹಾತ್ಮನಾಮ್ |
ತಸ್ಮಾದನ್ನಂ ವಿಶೇಷೇಣ ದಾತವ್ಯಂ ಮಾನವೈರ್ಭುವಿ ||53||
ಇವು ಮಹಾತ್ಮರಾದ ಅನ್ನದಾತರಿಗೆ ಪುಣ್ಯದಿಂದ ಉಂಟಾಗುವ ಲೋಕಗಳು. ಆದ್ದರಿಂದ ಭೂಮಿಯಲ್ಲಿ ಮಾನವರು ವಿಶೇಷವಾಗಿ ಅನ್ನದಾನವನ್ನು ಮಾಡಬೇಕು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅನ್ನದಾನಪ್ರಶಂಸಾ ನಾಮ
ತ್ರಿನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ನಕ್ಷತ್ರಯೋಗದಲ್ಲಿ ದಾನಫಲ

ಯುಧಿಷ್ಠಿರಃ
ಶ್ರುತಂ ಮೇ ಭವತೋ ವಾಕ್ಯಮನ್ನದಾನಸ್ಯ ಯೋ ವಿಧಿಃ |
ನಕ್ಷತ್ರಯೋಗಸ್ಯೇದಾನೀಂ ದಾನಕಲ್ಪಂ ಬ್ರವೀಹಿ ಮೇ ॥1॥
ಯುಧಿಷ್ಠಿರ ಅನ್ನದಾನದ ವಿಷಯದಲ್ಲಿ ನಿನ್ನ ಮಾತನ್ನು ನಾನು ಕೇಳಿದೆನು. ನಕ್ಷತ್ರಯೋಗಗಳಲ್ಲಿ ದಾನ ಮಾಡುವ ವಿಧಿಗಳನ್ನು ಈಗ ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ದೇವಕ್ಯಾಶ್ಚೈವ ಸಂವಾದಂ ದೇವರ್ಷೇರ್ನಾರದಸ್ಯ ಚ ॥2॥
ಭೀಷ್ಮ ಈ ವಿಷಯದಲ್ಲಿಯೂ ಸಹ ದೇವಕಿಗೂ ಮತ್ತು ನಾರದರಿಗೂ ನಡೆದ ಸಂವಾದರೂಪವಾದ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ದ್ವಾರಕಾಮನುಸಂಪ್ರಾಪ್ತಂ ನಾರದಂ ದೇವದರ್ಶನಮ್ |
ಪಪ್ರಚ್ಛೈನಂ ತತಃ ಪ್ರಶ್ನಂ ದೇವಕೀ ಧರ್ಮದರ್ಶಿನೀ ॥3॥
ದೇವದರ್ಶನರಾದ ನಾರದರು ದ್ವಾರಕೆಗೆ ಬಂದಾಗ ಧರ್ಮದರ್ಶಿನಿಯಾದ ದೇವಕಿಯು ಅವರನ್ನು ಈ ಪ್ರಶ್ನೆಯನ್ನು ಕೇಳಿದಳು.
ತಸ್ಯಾಃ ಸಂಪೃಚ್ಛಮಾನಾಯಾ ದೇವರ್ಷಿರ್ನಾರದಸ್ತದಾ |
ಆಚಷ್ಟ ವಿಧಿವತ್ಸರ್ವಂ ಯತ್ತಚ್ಛೃಣು ವಿಶಾಂಪತೇ ॥4॥
ಅವಳ ಪ್ರಶ್ನೆಗೆ ಉತ್ತರವಾಗಿ ದೇವರ್ಷಿಗಳಾದ ನಾರದರು ವಿಧಿಯುಕ್ತವಾಗಿ ಎಲ್ಲವನ್ನೂ ಹೇಳಿದರು. ಎಲೈ ರಾಜನೇ, ಅದನ್ನು ನೀನು ಕೇಳು.
ನಾರದಃ
ಕೃತ್ತಿಕಾಸು ಮಹಾಭಾಗೇ ಪಾಯಸೇನ ಸಸರ್ಪಿಷಾ |
ಸಂತರ್ಪ್ಯ ಬ್ರಾಹ್ಮಣಾನ್ ಸಾಧೂಲ್ಲೋಕಾನಾಪ್ನೋತ್ಯನುತ್ತಮಾನ್ ॥5॥
ನಾರದ ಎಲೈ ಮಹಾನುಭಾವಳೇ, ಕೃತ್ತಿಕಾ ನಕ್ಷತ್ರದಲ್ಲಿ ಘೃತಮಿಶ್ರಿತವಾದ ಪಾಯಸದಿಂದ ಸಜ್ಜನರಾದ ಬ್ರಾಹ್ಮಣರನ್ನು ತೃಪ್ತಿಪಡಿಸಿ ಶ್ರೇಷ್ಠವಾದ ಲೋಕವನ್ನು ಹೊಂದುತ್ತಾನೆ.
ರೋಹಿಣ್ಯಾಂ ಪ್ರಥಿತೈರ್ಮಾಂಸೈರ್ಮಾಷೈರನ್ನೇನ ಸರ್ಪಿಷಾ |
ಪಯೋಽನುಪಾನಂ ದಾತವ್ಯಮಾನೃಣ್ಯಾರ್ಥಂ ದ್ವಿಜಾತಯೇ ॥6॥
ರೋಹಿಣಿ ನಕ್ಷತ್ರದಲ್ಲಿ ಬ್ರಾಹ್ಮಣರಿಗೆ ಋಣಮುಕ್ತನಾಗುವ ಸಲುವಾಗಿ ಪ್ರಸಿದ್ಧವಾದ ಮಾಂಸವನ್ನು, ಉದ್ದನ್ನು, ಘೃತ ಸಹಿತವಾದ ಅನ್ನವನ್ನು, ಕ್ಷೀರಾನುಪಾನವನ್ನು ಕೊಡಬೇಕು.
ದೋಗ್ಧ್ರೀಂ ದತ್ತ್ವಾ ಸವತ್ಸಾಂ ತು ನಕ್ಷತ್ರೇ ಸೋಮದೈವತೇ |
ಗಚ್ಛಂತಿ ಮಾನುಷಾಲ್ಲೋಕಾತ್ ಸ್ವರ್ಗಲೋಕಮನುತ್ತಮಮ್ ॥7॥
ಸೋಮದೇವತವಾದ ಮೃಗಶಿರಾ ನಕ್ಷತ್ರದಲ್ಲಿ ಕರುವಿನಿಂದ ಸಹಿತವಾದ ಹಾಲು ಕರೆಯುವ ಹಸುವನ್ನು ದಾನ ಮಾಡಿ ಮನುಷ್ಯಲೋಕವನ್ನೂ, ಅನಂತರ ಶ್ರೇಷ್ಠವಾದ ಸ್ವರ್ಗಲೋಕವನ್ನೂ ಹೊಂದುತ್ತಾರೆ.
ಆರ್ದ್ರಾಯಾಂ ಕೃಸರಂ ದತ್ತ್ವಾ ತೈಲಮಿಶ್ರಮುಪೋಷಿತಃ |
ನರಸ್ತರತಿ ದುರ್ಗಾಣಿ ಕ್ಷುರಧಾರಾಂಶ್ಚ ಪರ್ವತಾನ್ ॥8॥
ಆರ್ದ್ರಾ ನಕ್ಷತ್ರದಲ್ಲಿ ಉಪವಾಸವನ್ನು ಮಾಡಿ ತೈಲಮಿಶ್ರಿತವಾದ ಚಿತ್ರಾನ್ನವನ್ನು ದಾನ ಮಾಡುವ ಮನುಷ್ಯನು ಕ್ಷುರಧಾರೆಯಂತೆ ತೀಕ್ಷ್ಣವಾದ, ಪರ್ವತಪ್ರಾಯವಾದ ಕಷ್ಟಗಳನ್ನು ದಾಟುತ್ತಾರೆ.
ಪೂಪಾನ್ ಪುನರ್ವಸೌ ದತ್ತ್ವಾ ತಥೈವಾನ್ನಾನಿ ಶೋಭನೇ |
ಯಶಸ್ವೀ ರೂಪಸಂಪನ್ನೋ ಬಹ್ವನ್ನೇ ಜಾಯತೇ ಕುಲೇ ॥9॥
ಎಲೈ ಶೋಭನೆಯೇ, ಪುನರ್ವಸು ನಕ್ಷತ್ರದಲ್ಲಿ ಅಪೂಪಗಳನ್ನು ಮತ್ತು ಅನ್ನಗಳನ್ನು ದಾನ ಮಾಡಿದವನು ಕೀರ್ತಿವಂತನೂ, ರೂಪಸಂಪನ್ನನೂ ಆಗಿ ಸಮೃದ್ಧವಾದ ಅನ್ನವಿರುವ ಕುಲದಲ್ಲಿ ಜನಿಸುತ್ತಾನೆ.
ಪುಷ್ಯೇ ತು ಕನಕಂ ದತ್ತ್ವಾ ಕೃತಂ ಚಾಕೃತಮೇವ ಚ |
ಅನಾಲೋಕೇಷು ಲೋಕೇಷು ಸೋಮವತ್ ಸ ವಿರಾಜತೇ ॥10॥
ಪುಷ್ಯ ನಕ್ಷತ್ರದಲ್ಲಿ ಆಭರಣರೂಪವಾದ ಅಥವಾ ಗಟ್ಟಿಯ ರೂಪವಾದ ಸುವರ್ಣವನ್ನು ದಾನ ಮಾಡುವವನು ಪ್ರಕಾಶರಹಿತವಾದ ಲೋಕಗಳಲ್ಲಿಯೂ ಚಂದ್ರನಂತೆ ಪ್ರಕಾಶಯುಕ್ತನಾಗಿ ಶೋಭಿಸುತ್ತಾನೆ.
ಆಶ್ಲೇಷಾಯಾಂ ತು ಯೋ ರೂಪ್ಯಮೃಷಭಂ ವಾ ಪ್ರಯಚ್ಛತಿ |
ಸ ಸರ್ವಭಯನಿರ್ಮುಕ್ತಃ ಶಾತ್ರವಾನಧಿತಿಷ್ಠತಿ ॥11॥
ಆಶ್ಲೇಷಾ ನಕ್ಷತ್ರದಲ್ಲಿ ಯಾವನು ರಜತವನ್ನಾಗಲೀ, ವೃಷಭವನ್ನಾಗಲೀ ದಾನ ಮಾಡುತ್ತಾನೆಯೋ ಅವನು ಎಲ್ಲ ಭಯಗಳಿಂದಲೂ ನಿರ್ಮುಕ್ತನಾಗಿ ಶತ್ರುಗಳನ್ನು ಮೆಟ್ಟಿನಿಲ್ಲುತ್ತಾನೆ.
ಮಘಾಸು ತಿಲಪೂರ್ಣಾನಿ ವರ್ಧಮಾನಾನಿ ಮಾನವಃ |
ಪ್ರದಾಯ ಪುತ್ರಪಶುಮಾನಿಹ ಪ್ರೇತ್ಯ ಚ ಮೋದತೇ ॥12॥
ಮಘಾ ನಕ್ಷತ್ರದಲ್ಲಿ ತಿಲಪೂರ್ಣವಾದ ಪಾತ್ರೆಗಳನ್ನು ಕೊಡುವ ಮನುಷ್ಯನು ಈ ಲೋಕದಲ್ಲಿ ಪುತ್ರ-ಪಶುಗಳನ್ನು ಹೊಂದಿ ಮರಣಾನಂತರದಲ್ಲಿ ಸ್ವರ್ಗದಲ್ಲಿ ಸುಖ ಪಡುತ್ತಾನೆ.

ಫಲ್ಗುನೀಪೂರ್ವಸಮಯೇ ಬ್ರಾಹ್ಮಣಾನಾಮುಪೋಷಿತಃ |
ಭಕ್ಷಾನ್ ಫಾಣಿತಸಂಯುಕ್ತಾನ್ ದತ್ವಾ ಸೌಭಾಗ್ಯಮೃಚ್ಛತಿ ॥13॥
ಪೂರ್ವಫಲ್ಗುನೀ ನಕ್ಷತ್ರದಲ್ಲಿ ಉಪವಾಸವನ್ನು ಮಾಡಿ ಬ್ರಾಹ್ಮಣರಿಗೆ ಗುಡ ಮಿಶ್ರಿತವಾದ ಭಕ್ಷಗಳನ್ನು ಕೊಡುವವನು ಸೌಭಾಗ್ಯವನ್ನು ಹೊಂದುತ್ತಾನೆ.
ಘೃತಕ್ಷೀರಸಮಾಯುಕ್ತಂ ವಿಧಿವತ್ ಷಷ್ಟಿಕೌದನಮ್ |
ಉತ್ತರಾವಿಷಯೇ ದತ್ವಾ ಸ್ವರ್ಗಲೋಕೇ ಮಹೀಯತೇ ॥14॥
ಉತ್ತರಾ ನಕ್ಷತ್ರದಲ್ಲಿ ಘೃತ-ಕ್ಷೀರ ಮಿಶ್ರಿತವಾದ ಜವೆಗೋಧಿಯ ಅನ್ನವನ್ನು ಕೊಡುವವನು ಸ್ವರ್ಗಲೋಕದಲ್ಲಿ ಶೋಭಿಸುತ್ತಾನೆ (ಲಕ್ಷ್ಮಾಲಂಕಾರ).
ಯದ್ಯತ್ ಪ್ರದೀಯತೇ ದಾನಮುತ್ತರಾವಿಷಯೇ ನರೈಃ |
ಮಹಾಫಲಮನಂತಂ ಚ ಭವತೀತಿ ವಿನಿಶ್ಚಯಃ ॥15॥
ಉತ್ತರಾ ನಕ್ಷತ್ರದಲ್ಲಿ ಮನುಷ್ಯನು ಯಾವ ಯಾವ ದಾನವನ್ನು ಕೊಡುತ್ತಾನೆಯೋ ಅವೆಲ್ಲವೂ ಅನಂತವಾದ ಮಹಾಫಲವುಳ್ಳವುಗಳಾಗುತ್ತವೆ ಎಂಬುದು ನಿಶ್ಚಿತವಾದುದು.
ಹಸ್ತೇ ಹಸ್ತಿರಥಂ ದತ್ವಾ ಚತುರ್ಯುಕ್ತಮುಪೋಷಿತಃ |
ಪ್ರಾಪ್ನೋತಿ ಪರಮಾಲ್ಲೋಕಾನ್ ಪುಣ್ಯಕಾಮಸಮನ್ವಿತಾನ್ ॥16॥
ಹಸ್ತಾ ನಕ್ಷತ್ರದಲ್ಲಿ ಉಪವಾಸವನ್ನು ಮಾಡಿ ನಾಲ್ಕು ವಾಹಗಳಿಂದ ಕೂಡಿದ ಹಸ್ತಿರಥವನ್ನು ದಾನ ಮಾಡಿದವನು ಪುಣ್ಯಕಾಮಸಮನ್ವಿತವಾದ ಶ್ರೇಷ್ಠ ಲೋಕವನ್ನು ಹೊಂದುತ್ತಾನೆ.
ಚಿತ್ರಾಯಾಮೃಷಭಂ ದತ್ವಾ ಪುಣ್ಯಾನ್ ಗಂಧಾಂಶ್ಚ ಭಾರತ |
ಚರತ್ಯಪ್ಸರಸಾಂ ಲೋಕೇ ರಮತೇ ನಂದನೇ ತಥಾ ॥17॥
ಎಲೈ ಭಾರತನೇ, ಚಿತ್ತಾ ನಕ್ಷತ್ರದಲ್ಲಿ ವೃಷಭವನ್ನು ಮತ್ತು ಸುವರ್ಣವನ್ನು ದಾನ ಮಾಡುವವನು ಅಪ್ಸರೆಯರ ಲೋಕದಲ್ಲಿ ಸಂಚರಿಸಿ ನಂದನವನದಲ್ಲಿ ಸಂತೋಷ ಪಡುತ್ತಾನೆ.
ಸ್ವಾತಾವಥ ಧನಂ ದತ್ವಾ ಯದಿಷ್ಟತಮಮಾತ್ಮನಃ |
ಪ್ರಾಪ್ನೋತಿ ಲೋಕಾನ್ ಸ ಶುಭಾನಿಹ ಚೈವ ಮಹದ್ಯಶಃ ॥18॥
ಸ್ವಾತಿ ನಕ್ಷತ್ರದಲ್ಲಿ ತನಗೆ ಇಷ್ಟವಾದ ಧನವನ್ನು ಕೊಡುವ ಮನುಷ್ಯನು ಈ ಲೋಕದಲ್ಲಿ ದೊಡ್ಡ ಕೀರ್ತಿಯನ್ನೂ ಮತ್ತು ಮರಣಾನಂತರದಲ್ಲಿ ಶುಭಲೋಕವನ್ನೂ ಪಡೆಯುತ್ತಾನೆ.
ವಿಶಾಖಾಯಾಮನಡ್ವಾಹಂ ಧೇನುಂ ದತ್ವಾ ಚ ದುಗ್ಧದಾಮ್ |
ಸಪ್ರಾಸಂಗಂ ಚ ಶಕಟಂ ಸಧಾನ್ಯಂ ವಸ್ತ್ರಸಂಯುತಮ್ ॥19॥
ಪಿತೄನ್ ದೇವಾಂಶ್ಚ ಪ್ರೀಣಾತಿ ಪ್ರೇತ್ಯ ಚಾನಂತ್ಯಮಶ್ನುತೇ |
ನ ಚ ದುರ್ಗಾಣ್ಯವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥20॥
ವಿಶಾಖಾ ನಕ್ಷತ್ರದಲ್ಲಿ ಎತ್ತನ್ನೂ, ಹಾಲನ್ನು ಕರೆಯುವ ಹಸುವನ್ನೂ, ಧಾನ್ಯ ಸಹಿತವಾದ, ವಸ್ತ್ರದಿಂದ ಆವೃತವಾದ, ಪಾತ್ರೆಗಳಿಂದ ಕೂಡಿದ, ಗಾಡಿಯನ್ನು ದಾನ ಮಾಡುವವನು ಪಿತೃಗಳನ್ನೂ ಮತ್ತು ದೇವತೆಗಳನ್ನೂ ಸಂತೋಷಪಡಿಸುತ್ತಾನೆ. ಮರಣಾನಂತರದಲ್ಲಿ ಅಂತ್ಯವಿಲ್ಲದ ಶುಭಲೋಕವನ್ನು ಪಡೆಯುತ್ತಾನೆ. ಕಷ್ಟಗಳನ್ನು ಹೊಂದುವುದಿಲ್ಲ. ಸ್ವರ್ಗಲೋಕಕ್ಕೆ ಹೋಗುತ್ತಾನೆ.
ದತ್ವಾ ಯಥೋಕ್ತಂ ವಿಪ್ರೇಭ್ಯೋ ವೃತ್ತಿಮಿಷ್ಟಾಂ ಸ ವಿಂದತಿ |
ನರಕಾದೀಂಶ್ಚ ಸಂಕ್ಲೇಶಾನ್ ನಾಪ್ನೋತೀತಿ ವಿನಿಶ್ಚಯಃ ॥21॥
ವಿಧಿಯುಕ್ತವಾಗಿ ಬ್ರಾಹ್ಮಣರಿಗೆ ದಾನ ಮಾಡುವವನು ತನಗೆ ಇಷ್ಟವಾದ ವೃತ್ತಿಯನ್ನು ಹೊಂದುತ್ತಾನೆ. ನರಕಾದಿ ದುಃಖವನ್ನು ಅನುಭವಿಸುವುದಿಲ್ಲ ಎಂಬುದು ನಿಶ್ಚಿತವಾದುದು.
ಅನುರಾಧಾಸು ಪ್ರಾವಾರಂ ವಸ್ತ್ರಾಂತರಮುಪೋಷಿತಃ |
ದತ್ವಾ ಯುಗಶತಂ ಚಾಪಿ ನರಃ ಸ್ವರ್ಗೇ ಮಹೀಯತೇ ॥22॥
ಅನುರಾಧ ನಕ್ಷತ್ರದಲ್ಲಿ ಉಪವಾಸವನ್ನು ಮಾಡಿ ಅಂತರವಸ್ತ್ರ ಸಹಿತವಾದ ವಸ್ತ್ರವನ್ನು ಕೊಡುವವನು ಸ್ವರ್ಗಲೋಕದಲ್ಲಿ ನೂರು ಯುಗಗಳ ಕಾಲ ಸತ್ಕರಿಸಲ್ಪಡುತ್ತಾನೆ.
ಕಾಲಶಾಕಂ ತು ವಿಪ್ರೇಭ್ಯೋ ದತ್ವಾ ಮರ್ತ್ಯಃ ಸಮೂಲಕಮ್ |
ಜ್ಯೇಷ್ಠಾಯಾಮೃದ್ಧಿಮಿಷ್ಟಾಂ ವೈ ಗತಿಮಿಷ್ಟಾಂ ಚ ವಿಂದತಿ ॥23॥
ಜ್ಯೇಷ್ಠಾ ನಕ್ಷತ್ರದಲ್ಲಿ ಗೆಡ್ಡೆ-ಗೆಣಸುಗಳಿಂದ ಸಹಿತವಾದ ಕಾಲಶಾಕವನ್ನು ಬ್ರಾಹ್ಮಣರಿಗೆ ದಾನ ಮಾಡುವ ಮನುಷ್ಯನು ತನಗೆ ಇಷ್ಟವಾದ ಸಮೃದ್ಧಿಯನ್ನು ಮತ್ತು ಇಷ್ಟವಾದ ಗತಿಯನ್ನು ಹೊಂದುತ್ತಾನೆ.
ಮೂಲೇ ಮೂಲಫಲಂ ದತ್ವಾ ಬ್ರಾಹ್ಮಣೇಭ್ಯಃ ಸಮಾಹಿತಃ |
ಪಿತೄನ್ ಪ್ರೀಣಯತೇ ಚಾಪಿ ಗತಿಮಿಷ್ಟಾಂ ಚ ಗಚ್ಛತಿ ॥24॥
ಮೂಲಾನಕ್ಷತ್ರದಲ್ಲಿ ಬ್ರಾಹ್ಮಣರಿಗೆ ಸಮಾಧಾನದಿಂದ ಗೆಡ್ಡೆ-ಗೆಣಸುಗಳನ್ನು ಅಥವಾ ಫಲಗಳನ್ನು ಕೊಡುವ ಮಾನವನು ಪಿತೃಗಳನ್ನು ಸಂತೋಷಪಡಿಸುತ್ತಾನೆ ಮತ್ತು ಇಷ್ಟವಾದ ಗತಿಯನ್ನು ಹೊಂದುತ್ತಾನೆ.
ಅಥ ಪೂರ್ವಾಸ್ವಷಾಢಾಸು ದಧಿಪಾತ್ರಾಣ್ಯುಪೋಷಿತಃ |
ಕುಲವೃತ್ತೋಪಸಂಪನ್ನೇ ಬ್ರಾಹ್ಮಣೇ ವೇದಪಾರಗೇ |
ಪ್ರದಾಯ ಜಾಯತೇ ಪ್ರೇತ್ಯ ಕುಲೇ ಸುಬಹುಗೋಕುಲೇ ॥25॥

ಅನಂತರ ಪೂರ್ವಾಷಾಢಾ ನಕ್ಷತ್ರದಲ್ಲಿ ಉಪವಾಸವನ್ನು ಮಾಡಿ ದಧಿಪಾತ್ರೆಗಳನ್ನು ಕುಲವೃತ್ತ ಸಂಪನ್ನನೂ, ವೇದಪಾರಂಗತನೂ ಆದ ಬ್ರಾಹ್ಮಣನಿಗೆ ದಾನವನ್ನು ಮಾಡಿ ಮರಣವನ್ನು ಹೊಂದಿದ ಮೇಲೆ ಬಹುಗೋಸಮೂಹವಿರುವ ಕುಲದಲ್ಲಿ ಜನಿಸುತ್ತಾನೆ.
ಉದಮಂಥಂ ಸಸರ್ಪಿಷ್ಕಂ ಪ್ರಭೂತಮಧುಫಾಣಿತಮ್ |
ದತ್ತೋತ್ತರಾಸ್ವಷಾಢಾಸು ಸರ್ವಕಾಮಾನವಾಪ್ನುಯಾತ್ ॥26॥
ಉತ್ತರಾಷಾಢಾ ನಕ್ಷತ್ರದಲ್ಲಿ ಘೃತಸಹಿತವಾದ ಉದಮಂಥವನ್ನು ಬಹಳವಾದ ಜೇನು ಮತ್ತು ಬೆಲ್ಲದ ರಸವನ್ನು ಕೊಟ್ಟವನು ಎಲ್ಲ ಕಾಮಗಳನ್ನೂ ಹೊಂದುತ್ತಾನೆ.
ದುಗ್ಧಂ ತ್ವಭಿಜಿತೇ ಯೋಗೇ ದತ್ತ್ವಾ ಮಧುಘೃತಾಪ್ಲುತಮ್ |
ಧರ್ಮನಿತ್ಯೋ ಮನೀಷಿಭ್ಯಃ ಸ್ವರ್ಗಲೋಕೇ ಮಹೀಯತೇ ॥27॥
ಅಭಿಜಿತ್ ನಕ್ಷತ್ರದಲ್ಲಿ ಮಧು-ಘೃತಗಳಿಂದ ಪೂರ್ಣವಾಗಿ ಮಿಶ್ರಿತವಾದ ಕ್ಷೀರವನ್ನು ದಾನ ಮಾಡಿದವನು ಧರ್ಮನಿತ್ಯನಾಗಿ ಸ್ವರ್ಗಲೋಕದಲ್ಲಿ ವಿವೇಕಿಗಳಿಂದ ಸತ್ಕರಿಸಲ್ಪಡುತ್ತಾನೆ.
ಶ್ರವಣೇ ಕಂಬಲಂ ದತ್ತ್ವಾ ವಸ್ತ್ರಾಂತರಿತಮೇವ ಚ |
ಶ್ವೇತೇನ ಯಾತಿ ಯಾನೇನ ಸರ್ವಲೋಕಾನಸಂವೃತಾನ್ ॥28॥
ಶ್ರವಣಾ ನಕ್ಷತ್ರದಲ್ಲಿ ಅಂತರ್ವಸ್ತ್ರ ಸಹಿತವಾದ ಕಂಬಳಿಯನ್ನು ದಾನ ಮಾಡುವವನು ಶ್ವೇತಯಾನದಿಂದ ತೆರೆದಿರುವ ಸರ್ವಲೋಕಗಳಿಗೂ ಹೋಗುತ್ತಾನೆ.
ಗೋಪ್ರಯುಕ್ತಂ ಧನಿಷ್ಠಾಸು ಯಾನಂ ದತ್ತ್ವಾ ಸಮಾಹಿತಃ |
ವಸ್ತ್ರರಶ್ಮಿಧರಂ ಸದ್ಯಃ ಪ್ರೇತ್ಯ ರಾಜ್ಯಂ ಪ್ರಪದ್ಯತೇ ॥29॥
ಧನಿಷ್ಠಾ ನಕ್ಷತ್ರದಲ್ಲಿ ಗೋವುಗಳು ಎಳೆಯುವ ಹಗ್ಗಗಳನ್ನು ಮತ್ತು ವಸ್ತ್ರವನ್ನು ಹೊಂದಿದ, ಯಾನವನ್ನು ಸಮಾಧಾನದಿಂದ ನೀಡುವವನು ತಕ್ಷಣದಲ್ಲಿಯೇ ಮರಣವನ್ನು ಹೊಂದಿ ರಾಜ್ಯವನ್ನು ಪಡೆಯುತ್ತಾನೆ.
ಗಂಧಾನ್ ಶತಭಿಷಗ್ಯೋಗೇ ದತ್ತ್ವಾ ಸಾಗುರುಚಂದನಾನ್ |
ಪ್ರಾಪ್ನೋತ್ಯಪ್ಸರಸಾಂ ಲೋಕಾನ್ ಪ್ರೇತ್ಯ ಗಂಧಾಂಶ್ಚ ಶಾಶ್ವತಾನ್ ॥30॥
ಅಗರು ಚಂದನ ಮಿಶ್ರಿತವಾದ ಗಂಧವನ್ನು ಶತಭಿಷಾ ನಕ್ಷತ್ರದಲ್ಲಿ ಕೊಡುವವನು ಮರಣವನ್ನು ಹೊಂದಿದ ಮೇಲೆ ಅಪ್ಸರೆಯರ ಲೋಕವನ್ನು ಮತ್ತು ಸುಗಂಧಗಳನ್ನು ಶಾಶ್ವತವಾಗಿ ಪಡೆಯುತ್ತಾನೆ.
ಪೂರ್ವಭಾದ್ರಪದಾಯೋಗೇ ರಾಜಮಾಷಾನ್ ಪ್ರದಾಯ ತು |
ಸರ್ವಭಕ್ಷಫಲೋಪೇತಃ ಸ ವೈ ಪ್ರೇತ್ಯ ಸುಖೀ ಭವೇತ್ ॥31॥
ಪೂರ್ವಾಭಾದ್ರ ನಕ್ಷತ್ರದಲ್ಲಿ ರಾಜಮಾಷಗಳನ್ನು (ಹಲಸಂದೆ) ಕೊಡುವವನು ಮರಣವನ್ನು ಹೊಂದಿದ ಮೇಲೆ ಸರ್ವಭಕ್ಷ ಫಲೋಪೇತನಾಗಿ ಸುಖಿಯಾಗಿರುತ್ತಾನೆ.
ಔರಭ್ರಮುತ್ತರಾಯೋಗೇ ಯಸ್ತು ಮಾಂಸಂ ಪ್ರಯಚ್ಛತಿ |
ಸ ಪಿತೄನ್ ಪ್ರೀಣಯತಿ ವೈ ಪ್ರೇತ್ಯ ಚಾನಂತ್ಯಮಶ್ನುತೇ ॥32॥
ಉತ್ತರಾಭಾದ್ರ ನಕ್ಷತ್ರದಲ್ಲಿ ಪಶುವಿಶೇಷದ (ಕುರಿಯ) ಮಾಂಸವನ್ನು ಕೊಡುವವನು ಪಿತೃಗಳನ್ನು ಸಂತೋಷಪಡಿಸುತ್ತಾನೆ. ಮರಣವನ್ನು ಹೊಂದಿ ಅನಂತ ಸುಖವನ್ನು ಪಡೆಯುತ್ತಾನೆ.
ಕಾಂಸ್ಯೋಪದೋಹನಾಂ ಧೇನುಂ ರೇವತ್ಯಾಂ ಯಃ ಪ್ರಯಚ್ಛತಿ |
ಸಾ ಪ್ರೇತ್ಯ ಕಾಮಾನಾದಾಯ ದಾತಾರಮುಪತಿಷ್ಠತಿ ॥33॥
ರೇವತಿ ನಕ್ಷತ್ರದಲ್ಲಿ ಕಂಚಿನ ಪಾತ್ರೆಯಿಂದ ಸಹಿತವಾದ ಧೇನುವನ್ನು ದಾನ ಮಾಡುವವನಿಗೆ ಮರಣಾನಂತರದಲ್ಲಿ ಆ ಧೇನುವು ಅವನಿಗೆ ಇಷ್ಟವಾದ ಸುಖ ಪದಾರ್ಥಗಳನ್ನು ತೆಗೆದುಕೊಂಡು ಅವನ ಬಳಿಗೆ ಬರುತ್ತದೆ.
ರಥಮಶ್ವಸಮಾಯುಕ್ತಂ ದತ್ತ್ವಾಶ್ವಿನ್ಯಾಂ ನರೋತ್ತಮಃ |
ಹಸ್ತ್ಯಶ್ವರಥಸಂಪನ್ನೇ ವರ್ಚಸ್ವೀ ಜಾಯತೇ ಕುಲೇ ॥34॥
ಅಶ್ವಿನೀ ನಕ್ಷತ್ರದಲ್ಲಿ ಅಶ್ವಸಹಿತವಾದ ರಥವನ್ನು ಕೊಡುವ ನರಶ್ರೇಷ್ಠನು ಗಜಾಶ್ವ- ರಥ ಸಂಪನ್ನವಾದ ಕುಲದಲ್ಲಿ ವರ್ಚಸ್ವಿಯಾಗಿ ಜನಿಸುತ್ತಾನೆ.
ಭರಣೀಷು ದ್ವಿಜಾತಿಭ್ಯಸ್ತಿಲಧೇನುಂ ಪ್ರದಾಯ ವೈ |
ಗಾಃ ಸುಪ್ರಭೂತಾಃ ಪ್ರಾಪ್ನೋತಿ ನರಃ ಪ್ರೇತ್ಯ ಯಶಸ್ತಥಾ ॥35॥
ಭರಣೀ ನಕ್ಷತ್ರದಲ್ಲಿ ಬ್ರಾಹ್ಮಣರಿಗೆ ತಿಲಧೇನುವನ್ನು ಕೊಡುವವನು ಬಹಳ ಗೋವುಗಳನ್ನು ಹೊಂದುತ್ತಾನೆ. ಮರಣವನ್ನು ಹೊಂದಿ ಬಹಳ ಕೀರ್ತಿಯನ್ನು ಪಡೆಯುತ್ತಾನೆ.
ಭೀಷ್ಮಃ
ಇತ್ಯೇಷ ಲಕ್ಷಣೋದ್ದೇಶಃ ಪ್ರೋಕ್ತೋ ನಕ್ಷತ್ರಯೋಗತಃ |
ದೇವಕ್ಯಾ ನಾರದೇನೇಹ ಸಾ ಸ್ನುಷಾಭ್ಯೋಽಬ್ರವೀದಿದಮ್ ॥36॥
ಭೀಷ್ಮ ಇದು ನಾರದರು ದೇವಕಿಗೆ ಹೇಳಿದ ನಕ್ಷತ್ರಯೋಗದಲ್ಲಿ ಮಾಡುವ ದಾನದ ಫಲ. ದೇವಕಿಯು ಇದನ್ನು ತನ್ನ ಸೊಸೆಯರಿಗೆ ಹೇಳಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ನಕ್ಷತ್ರಯೋಗೇ ದಾನಫಕಥನಂ ನಾಮ ಚತುರ್ನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *
తೊಂಬತ್ತೈದನೆಯ ಅಧ್ಯಾಯ
ಕಾಂಚನಾದಿ ದಾನದ ಫಲ.
ಭೀಷ್ಮಃ
ಸರ್ವಾನ್ ಕಾಮಾನ್ ಪ್ರಯಚ್ಛಂತಿ ಯೇ ಪ್ರಯಚ್ಛಂತಿ ಕಾಂಚನಮ್ |
ಇತ್ಯೇವಂ ಭಗವಾನತ್ರಿಃ ಪಿತಾಮಹಸುತೋಽಬ್ರವೀತ್ ॥1॥
ಭೀಷ್ಮ ಯಾರು ಸುವರ್ಣದಾನವನ್ನು ಮಾಡುತ್ತಾರೆಯೋ ಅವರು ಸರ್ವ ದಾನವನ್ನೂ ಮಾಡುತ್ತಾರೆ ಎಂದು ಬ್ರಹ್ಮದೇವರ ಮಕ್ಕಳಾದ ಪೂಜ್ಯರಾದ ಅತ್ರಿಗಳು ಹೇಳಿದರು.
ಪವಿತ್ರಂ ಶುಚ್ಯಥಾಯುಷ್ಯಂ ಪಿತೄಣಾಮಕ್ಷಯಂ ಚ ತತ್ |
ಸುವರ್ಣಂ ಮನುಜೇಂದ್ರೇಣ ಹರಿಶ್ಚಂದ್ರೇಣ ಕೀರ್ತಿತಮ್ ॥2॥
ಸುವರ್ಣವು ಪವಿತ್ರವಾದುದು, ಶುಚಿಯಾದುದು, ಆಯುಷ್ಯಪ್ರದವಾದುದು ಮತ್ತು ಪಿತೃಗಳಿಗೆ ಅಕ್ಷಯವಾದ ಫಲವನ್ನೂ ಉಂಟುಮಾಡುವಂತಹದು ಎಂದು ಮನುಜೇಂದ್ರನಾದ ಹರಿಶ್ಚಂದ್ರನು ಹೇಳಿದ್ದಾನೆ.
ಪಾನೀಯದಾನಂ ಪರಮಂ ದಾನಾನಾಂ ಮನುರಬ್ರವೀತ್ |
ತಸ್ಮಾದ್ ವಾಪೀಶ್ಚ ಕೂಪಾಂಶ್ಚ ತಡಾಗಾನಿ ಚ ಖಾನಯೇತ್ ॥3॥
ಪಾನೀಯದಾನವು ದಾನಗಳಲ್ಲಿ ಶ್ರೇಷ್ಠವಾದುದೆಂದು ಮನುವು ಹೇಳಿದ್ದಾನೆ. ಆದ್ದರಿಂದ ವಾಪಿಗಳನ್ನೂ, ಕೂಪಗಳನ್ನೂ (ಸೇದುವ ಬಾವಿಗಳನ್ನು ಮತ್ತು ನೆಲ ಬಾವಿಗಳನ್ನು) ಮತ್ತು ತಟಾಕಗಳನ್ನೂ ತೋಡಿಸಬೇಕು.
ಅರ್ಧಂ ಪಾಪಸ್ಯ ಹರತಿ ಪುರುಷಸ್ಯೇಹ ಕರ್ಮಣಃ |
ಕೂಪಃ ಪ್ರವೃತ್ತಪಾನೀಯಃ ಸುಪ್ರವೃತ್ತಶ್ಚ ನಿತ್ಯಶಃ ॥4॥
ನಿರ್ಮಾಣ ಮಾಡಿದ ಬಾವಿಯಲ್ಲಿ ಜಲವು ಬಂದು ಜನರು ನಿತ್ಯವೂ ಅದನ್ನು ಉಪಯೋಗಿಸಿದರೆ ಅದು ಬಾವಿಯನ್ನು ತೋಡಿಸಿದ ಪುರುಷನ ದುಷ್ಕರ್ಮಗಳ ಅರ್ಧ ಪಾಪವನ್ನು ಪರಿಹರಿಸುತ್ತದೆ.
ಸರ್ವಂ ತಾರಯತೇ ವಂಶಂ ಯಸ್ಯ ಖಾತೇ ಜಲಾಶಯೇ |
ಗಾವಃ ಪಿಬಂತಿ ವಿಪ್ರಾಶ್ಚ ಸಾಧವಶ್ಚ ನರಾಃ ಸದಾ ॥5॥
ಯಾವನು ತೋಡಿಸಿದ ಜಲಾಶಯದಲ್ಲಿ ಗೋವುಗಳು, ಬ್ರಾಹ್ಮಣರು ಮತ್ತು ಸಜ್ಜನರು ಯಾವಾಗಲೂ ನೀರನ್ನು ಕುಡಿಯುತ್ತಾರೆಯೋ ಅವನ ವಂಶವೆಲ್ಲವೂ ಅದರಿಂದ ದಾಟಿಸಲ್ಪಡುತ್ತದೆ.
ನಿದಾಘಕಾಲೇ ಪಾನೀಯಂ ಯಸ್ಯ ತಿಷ್ಠತ್ಯವಾರಿತಮ್ |
ಸ ದುರ್ಗಂ ವಿಷಮಂ ಕೃಚ್ಛ್ರಂ ನ ಕದಾಚಿದವಾಪ್ನುತೇ ॥6॥
ಯಾವನ ಬಾವಿಯಲ್ಲಿ ಬೇಸಿಗೆ ಕಾಲದಲ್ಲಿ ಬತ್ತಿಹೋಗದ ನೀರಿರುತ್ತದೆಯೋ ಅವನು ದಾಟಲು ಅಸಾಧ್ಯವಾದ ವಿಷಮವಾದ ಕಷ್ಟ ಪರಿಸ್ಥಿತಿಯನ್ನು ಎಂದೂ ಹೊಂದುವುದಿಲ್ಲ.
ಬೃಹಸ್ಪತೇರ್ಭಗವತಃ ಪೂಷ್ಣಶ್ಚೈವ ಭಗಸ್ಯ ಚ |
ಅಶ್ವಿನೋಶ್ಚೈವ ವಹ್ನೇಶ್ಚ ಪ್ರೀತಿರ್ಭವತಿ ಸರ್ಪಿಷಾ ॥7॥
ಘೃತವು ಪೂಜ್ಯನಾದ ಬೃಹಸ್ಪತಿಗೂ, ಪೂಷಣನಿಗೂ, ಭಗನಿಗೂ, ಅಶ್ವಿನಿಗಳಿಗೂ ಮತ್ತು ವಹ್ನಿಗೂ ಸಂತೋಷದಾಯಕವಾದುದು.
ಪರಮಂ ಭೇಷಜಂ ಹ್ಯೇತದ್ ಯಜ್ಞಾನಾಮೇತದುತ್ತಮಮ್ |
ರಸಾನಾಮುತ್ತಮಂ ಚೈತತ್ ಫಲಾನಾಂ ಚೈತದುತ್ತಮಮ್ ॥8॥
ಘೃತವು ಶ್ರೇಷ್ಠವಾದ ಔಷಧಿ. ಯಜ್ಞಗಳಲ್ಲಿ ಇದು ಶ್ರೇಷ್ಠವಾದುದು. ರಸಗಳಲ್ಲಿ ಶ್ರೇಷ್ಠವಾದುದು ಮತ್ತು ಫಲಗಳಲ್ಲಿ ಶ್ರೇಷ್ಠವಾದುದು.
ಫಲಕಾಮೋ ಯಶಸ್ಕಾಮಃ ಪುಷ್ಟಿಕಾಮಶ್ಚ ನಿತ್ಯದಾ |
ಘೃತಂ ದದ್ಯಾದ್ ದ್ವಿಜಾತಿಭ್ಯಃ ಪುರುಷಃ ಶುಚಿರಾತ್ಮವಾನ್ ॥9॥
ಫಲ, ಕೀರ್ತಿ ಮತ್ತು ಪುಷ್ಟಿಗಳನ್ನು ಅಪೇಕ್ಷಿಸುವ ಶುಚಿಯೂ, ಜಿತೇಂದ್ರಿಯನೂ ಆದ ಪುರುಷನು ಬ್ರಾಹ್ಮಣರಿಗೆ ನಿತ್ಯವೂ ಘೃತವನ್ನು ಕೊಡಬೇಕು.
ಘೃತಂ ಮಾಸೇ ಆಶ್ವಯುಜಿ ವಿಪ್ರೇಭ್ಯೋ ಯಃ ಪ್ರಯಚ್ಛತಿ |
ತಸ್ಮೈ ಪ್ರಯಚ್ಛತೋ ರೂಪಂ ಪ್ರೀತೌ ದೇವಾವಿಹಾಶ್ವಿನೌ ॥10॥
ಯಾವನು ಆಶ್ವಯುಜ ಮಾಸದಲ್ಲಿ ಬ್ರಾಹ್ಮಣರಿಗೆ ಘೃತವನ್ನು ಕೊಡುತ್ತಾನೆಯೋ ಅವನಿಗೆ ಅಶ್ವಿನೀದೇವತೆಗಳು ಪ್ರಸನ್ನರಾಗಿ ಇಲ್ಲಿ ಒಳ್ಳೆಯ ರೂಪವನ್ನು ಕೊಡುತ್ತಾರೆ.
ಪಾಯಸಂ ಸರ್ಪಿಷಾ ಮಿಶ್ರಂ ದ್ವಿಜೇಭ್ಯೋ ಯಃ ಪ್ರಯಚ್ಛತಿ |
ಗೃಹಂ ತಸ್ಯ ನ ರಕ್ಷಾಂಸಿ ಧರ್ಷಯಂತಿ ಕದಾಚನ ॥11॥
ಯಾವನು ಘೃತಮಿಶ್ರಿತವಾದ ಪಾಯಸವನ್ನು ಬ್ರಾಹ್ಮಣರಿಗೆ ಕೊಡುತ್ತಾನೆಯೋ ಅವನ ಮನೆಯನ್ನು ರಾಕ್ಷಸರು ಎಂದೂ ಪ್ರವೇಶಿಸಿ ಕೆಡಿಸುವುದಿಲ್ಲ.
ಪಿಪಾಸಯಾ ನ ಮ್ರಿಯತೇ ಸೋಪಚ್ಛಂದಶ್ಚ ದೃಶ್ಯತೇ |
ನ ಪ್ರಾಪ್ನುಯಾಚ್ಚ ವ್ಯಸನಂ ಕರಕಾನ್ ಯಃ ಪ್ರಯಚ್ಛತಿ ॥12॥
ಯಾವನು ಜಲಪೂರ್ಣವಾದ ಕಮಂಡಲುಗಳನ್ನು ಬ್ರಾಹ್ಮಣರಿಗೆ ಕೊಡುತ್ತಾನೆಯೋ ಅವನು ಬಾಯಾರಿಕೆಯಿಂದ ಮರಣವನ್ನು ಹೊಂದುವುದಿಲ್ಲ. ಅವನು ಅಪೇಕ್ಷಿಸಿದ ವಸ್ತುಗಳು ಅವನ ಬಳಿಯಲ್ಲಿ ಯಾವಾಗಲೂ ಕಂಡುಬರುತ್ತವೆ ಮತ್ತು ವ್ಯಸನಕ್ಕೆ

ಸಿಲುಕುವುದಿಲ್ಲ.
ಪ್ರಯತೋ ಬ್ರಾಹ್ಮಣಾಗ್ರೇಭ್ಯಃ ಶ್ರದ್ಧಯಾ ಪರಯಾ ಯುತಃ |
ಉಪಸ್ಪರ್ಶನಷಡ್ಭಾಗಂ ಲಭತೇ ಪುರುಷಃ ಸದಾ ||13||
ಯಾವನು ಪರಮ ಶ್ರದ್ಧೆಯಿಂದ ಕೂಡಿದ ಶ್ರೇಷ್ಠರಾದ ಬ್ರಾಹ್ಮಣರಿಗೆ ದಾನ ಮಾಡಿ ವಿನಯದಿಂದ ಅವರ ಜೊತೆಯಲ್ಲಿ ನಡೆದುಕೊಳ್ಳುತ್ತಾನೆಯೋ ಅವನಿಗೆ ಪುನಃ ಆ ದಾನದ ಆರನೆಯ ಒಂದುಭಾಗದ ಪುಣ್ಯವು ಲಭಿಸುತ್ತದೆ.
ಯಃ ಸಾಧನಾರ್ಥಂ ಕಾಷ್ಠಾನಿ ಬ್ರಾಹ್ಮಣೇಭ್ಯಃ ಪ್ರಯಚ್ಛತಿ |
ಪ್ರತಾಪಾರ್ಥಂ ಚ ರಾಜೇಂದ್ರ ವೃತ್ತವದ್ಭ್ಯಃ ಸದಾ ನರಃ ||14||
ಸಿಧ್ಯಂತ್ಯರ್ಥಾಃ ಸದಾ ತಸ್ಯ ಕಾರ್ಯಾಣಿ ವಿವಿಧಾನಿ ಚ |
ಉಪರ್ಯುಪರಿ ಶತ್ರೂಣಾಂ ವಪುಷಾ ದೀಪ್ಯತೇ ಚ ಸಃ ||15||
ಎಲೈ ರಾಜೇಂದ್ರನೇ, ಯಾವನು ಒಳ್ಳೆಯ ನಡತೆಯುಳ್ಳ ಬ್ರಾಹ್ಮಣರಿಗೆ ಯಜ್ಞಾದಿ ಸಾಧನಕ್ಕಾಗಿ ಅಥವಾ ಪಾಕಾದಿಗಳಿಗಾಗಿ ಕಟ್ಟಿಗೆಯನ್ನು ಕೊಡುತ್ತಾನೆಯೋ ಅವನಿಗೆ ಯಾವಾಗಲೂ ವಿವಿಧವಾದ ಕಾರ್ಯಗಳು ಮತ್ತು ಅರ್ಥಗಳು ಸಿದ್ಧಿಸುತ್ತವೆ. ಶತ್ರುಗಳ ಮೇಲೆ ಅವನು ತನ್ನ ದೇಹದಿಂದ ಜ್ವಲಿಸುತ್ತಾ ನಿಲ್ಲುತ್ತಾನೆ.
ಭಗವಾಂಶ್ಚಾಸ್ಯ ಸುಪ್ರೀತೋ ವಹ್ನಿರ್ಭವತಿ ನಿತ್ಯಶಃ |
ನ ತಂ ತ್ಯಜಂತೇ ಪಶವಃ ಸಂಗ್ರಾಮೇ ಚ ಜಯತ್ಯಪಿ ||16||
ಪೂಜ್ಯನಾದ ಅಗ್ನಿಯು ಅವನಿಗೆ ಸದಾ ಸುಪ್ರೀತನಾಗುತ್ತಾನೆ. ಪಶುಗಳು ಅವನನ್ನು ತ್ಯಜಿಸುವುದಿಲ್ಲ. ಯುದ್ಧದಲ್ಲಿ ಜಯಶೀಲನಾಗುತ್ತಾನೆ.
ಪುತ್ರಾಂಛ್ರಿಯಂ ಚ ಲಭತೇ ಯಶ್ಛತ್ರಂ ಸಂಪ್ರಯಚ್ಛತಿ |
ಚಕ್ಷುರ್ವ್ಯಾಧಿಂ ನ ಲಭತೇ ಯಜ್ಞಭಾಗಮಥಾಶ್ನುತೇ ||17||
ಛತ್ರಿಯನ್ನು ದಾನ ಮಾಡುವವನು ಪುತ್ರರನ್ನು ಮತ್ತು ಸಂಪತ್ತನ್ನು ಪಡೆಯುತ್ತಾನೆ. ನೇತ್ರವ್ಯಾಧಿಯನ್ನು ಪಡೆಯುವುದಿಲ್ಲ. ಯಜ್ಞಭಾಗವನ್ನು ಪಡೆಯುತ್ತಾನೆ.
ನಿದಾಘಕಾಲೇ ವರ್ಷೇ ವಾ ಯಶ್ಛತ್ರಂ ಸಂಪ್ರಯಚ್ಛತಿ |
ನಾಸ್ಯ ಕಶ್ಚಿನ್ಮನೋದಾಹಃ ಕದಾಚಿದಪಿ ಜಾಯತೇ |
ಕೃಚ್ಛ್ರಾತ್ ಸ ವಿಷಮಾಚ್ಚೈವ ವಿಪ್ರಮೋಕ್ಷಮವಾಪ್ನುತೇ ||18||
ಬೇಸಿಗೆ ಕಾಲದಲ್ಲಾಗಲೀ, ಮಳೆಗಾಲದಲ್ಲಾಗಲೀ ಯಾವನು ಛತ್ರಿಯನ್ನು ದಾನ ಮಾಡುತ್ತಾನೆಯೋ ಅವನ ಮನಸ್ಸಿಗೆ ಎಂದೂ ಯಾವ ದಾಹವೂ ಉಂಟಾಗುವುದಿಲ್ಲ. ಕಷ್ಟಕರವಾದ ವಿಷಮ ಪರಿಸ್ಥಿತಿಯಿಂದಲೂ ಅವನು ಬಿಡುಗಡೆಯನ್ನು ಹೊಂದುತ್ತಾನೆ.
ಪ್ರದಾನಂ ಸರ್ವದಾನಾನಾಂ ಶಕಟಸ್ಯ ವಿಶಿಷ್ಯತೇ |
ಏವಮಾಹ ಮಹಾಭಾಗಃ ಶಾಂಡಿಲ್ಯೋ ಭಗವಾನೃಷಿಃ ||19||
ಎಲ್ಲ ದಾನಗಳಿಗಿಂತ ಶಕಟದಾನವು ಶ್ರೇಷ್ಠವಾದುದು ಎಂದು ಮಹಾನುಭಾವರಾದ ಪೂಜ್ಯರಾದ ಶಾಂಡಿಲ್ಯ ಋಷಿಗಳು ಹೇಳಿದ್ದಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ
ಬಹುದಾನಸ್ತುತಿರ್ನಾಮ ಪಂಚನವತಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತಾರನೆಯ ಅಧ್ಯಾಯ
ತಿಲಾದಿದಾನಫಲ
ಯುಧಿಷ್ಠಿರಃ
ದಹ್ಯಮಾನಾಯ ವಿಪ್ರಾಯ ಯಃ ಪ್ರಯಚ್ಛತ್ಯುಪಾನಹೌ |
ಯತ್ಫಲಂ ತಸ್ಯ ಭವತಿ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲೈ ಪಿತಾಮಹನೇ, ಬೇಸಿಗೆಯಲ್ಲಿ ನಡೆದು ಪಾದಗಳು ಸುಡುವ ವಿಪ್ರನಿಗೆ ಪಾದರಕ್ಷೆಯನ್ನು ಕೊಟ್ಟರೆ ಯಾವ ಫಲವು ಉಂಟಾಗುವುದೋ ಅದನ್ನು ನನಗೆ ಹೇಳು.
ಭೀಷ್ಮಃ
ಉಪಾನಹೌ ಪ್ರಯಚ್ಛೇದ್ ಯೋ ಬ್ರಾಹ್ಮಣೇಭ್ಯಃ ಸಮಾಹಿತಃ |
ಮರ್ದತೇ ಕಂಟಕಾನ್ ಸರ್ವಾನ್ ವಿಷಮಾನ್ ನಿಸ್ತರತ್ಯಪಿ |
ಸ ಶತ್ರೂಣಾಮುಪರಿ ಚ ಸಂತಿಷ್ಠತಿ ಯುಧಿಷ್ಠಿರ ||2||
ಭೀಷ್ಮ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಪಾದರಕ್ಷೆಗಳನ್ನು ದಾನ ಮಾಡುವವನು ತನಗೆ ಬರುವ ಎಲ್ಲ ಆಪತ್ತುಗಳನ್ನೂ ಮರ್ದಿಸುತ್ತಾನೆ. ವಿಷಮ ಪರಿಸ್ಥಿತಿಗಳನ್ನು ದಾಟುತ್ತಾನೆ. ಎಲೈ ಯುಧಿಷ್ಠಿರನೇ, ಅವನು ಶತ್ರುಗಳನ್ನು ಮೆಟ್ಟಿ ನಿಲ್ಲುತ್ತಾನೆ.
ಯಾನಂ ಚಾಶ್ವತರೀಯುಕ್ತಂ ತಸ್ಯ ಶುಭ್ರಂ ವಿಶಾಂಪತೇ |
ಉಪತಿಷ್ಠತಿ ಕೌಂತೇಯ ರೂಪ್ಯಕಾಂಚನಭೂಷಣಮ್ |
ಶಕಟಂ ದಮ್ಯಸಂಯುಕ್ತಂ ದತ್ತಂ ಭವತಿ ಚೈವ ಹಿ ||3||
ಎಲೈ ರಾಜನೇ, ಕೌಂತೇಯನೇ, ಅವನಿಗೆ ಸುವರ್ಣ ರಜತ ಭೂಷಿತವಾದ ಹೇಸರಗತ್ತೆಯನ್ನು ಹೂಡಿದ ಶುಭ್ರವಾದ ಯಾನವು

ದೊರೆಯುತ್ತದೆ. ಪಳಗಿದ ವಾಹಗಳನ್ನುಳ್ಳ ಗಾಡಿಯು ಅವನಿಗೆ ಕೊಡಲ್ಪಡುತ್ತದೆ.
ಯುಧಿಷ್ಠಿರಃ
ಯತ್ಫಲಂ ತಿಲದಾನೇ ಚ ಭೂಮಿದಾನೇ ಚ ಕೀರ್ತಿತಮ್ |
ಗೋಪ್ರದಾನೇಽನ್ನದಾನೇ ಚ ಭೂಯಸ್ತದ್ ಬ್ರೂಹಿ ಕೌರವ ॥4॥
ಯುಧಿಷ್ಠಿರ ಎಲೈ ಕೌರವನೇ, ತಿಲದಾನ ಮತ್ತು ಭೂಮಿದಾನ ಫಲಗಳನ್ನು ಹೇಳಿದ್ದೀರಿ. ಗೋದಾನ ಮತ್ತು ಅನ್ನದಾನದ ಫಲವನ್ನು ಇನ್ನೂ ಹೇಳುವವನಾಗು.
ಭೀಷ್ಮಃ
ಶೃಣುಷ್ವ ಮಮ ಕೌಂತೇಯ ತಿಲದಾನಸ್ಯ ಯತ್ಫಲಮ್ |
ನಿಶಮ್ಯ ಚ ಯಥಾನ್ಯಾಯಂ ಪ್ರಯಚ್ಛ ಕುರುಸತ್ತಮ ॥5॥
ಭೀಷ್ಮ ಎಲೈ ಕೌಂತೇಯನೇ, ತಿಲದಾನದ ಫಲವನ್ನು ನನ್ನಿಂದ ಕೇಳು. ಎಲೈ ಕುರುಶ್ರೇಷ್ಠನೇ, ಕೇಳಿದ ಮೇಲೆ ವಿಧಿಯುಕ್ತವಾಗಿ ದಾನವನ್ನು ಮಾಡು.
ಪಿತೄಣಾಂ ಪ್ರಥಮಂ ಭೋಜ್ಯಂ ತಿಲಾಃ ಸೃಷ್ಟಾಃ ಸ್ವಯಂಭುವಾ |
ತಿಲದಾನೇನ ವೈ ತಸ್ಮಾತ್ ಪಿತೃಪಕ್ಷಃ ಪ್ರಮೋದತೇ ॥6॥
ಬ್ರಹ್ಮದೇವರು ಪಿತೃಗಳಿಗೆ ಶ್ರೇಷ್ಠವಾದ ಆಹಾರವಾಗಿ ತಿಲವನ್ನು ಸೃಷ್ಟಿ ಮಾಡಿದ್ದಾರೆ. ಆದ್ದರಿಂದ ತಿಲದಾನದಿಂದ ಪಿತೃಗಳು ಸಂತೋಷಪಡುತ್ತಾರೆ.
ಮಾಘಮಾಸೇ ತಿಲಾನ್ ಯಸ್ತು ಬ್ರಾಹ್ಮಣೇಭ್ಯಃ ಪ್ರಯಚ್ಛತಿ |
ಸರ್ವಸತ್ತ್ವಸಮಾಕೀರ್ಣಂ ನರಕಂ ಸ ನ ಪಶ್ಯತಿ ॥7॥
ಮಾಘಮಾಸದಲ್ಲಿ ಬ್ರಾಹ್ಮಣರಿಗೆ ತಿಲದಾನವನ್ನು ಮಾಡುವವನು ಸರ್ವ ಪ್ರಾಣಿಗಳಿಂದ ತುಂಬಿದ ನರಕವನ್ನು ನೋಡುವುದಿಲ್ಲ.
ಸರ್ವಕಾಮೈಃ ಸ ಯಜತೇ ಯಸ್ತಿಲೈರ್ಯಜತೇ ಪಿತೄನ್ |
ನ ಚಾಕಾಮೇನ ದಾತವ್ಯಂ ತಿಲಶ್ರಾದ್ಧಂ ಕಥಂಚನ ॥8॥
ತಿಲಗಳಿಂದ ಪಿತೃಗಳನ್ನು ಪೂಜಿಸುವವನು ಅವರನ್ನು ಎಲ್ಲ ಕಾಮ್ಯ ಪದಾರ್ಥಗಳಿಂದಲೂ ಪೂಜಿಸಿದವನಾಗುತ್ತಾನೆ. ನಿಷ್ಕಾಮನಾದವನು ಎಂದೂ ತಿಲಶ್ರಾದ್ಧವನ್ನು ಮಾಡಬಾರದು.
ಮಹರ್ಷೇಃ ಕಶ್ಯಪಸ್ಯೈತೇ ಗಾತ್ರೇಭ್ಯಃ ಪ್ರಸೃತಾಸ್ತಿಲಾಃ |
ತತೋ ದಿವ್ಯಂ ಗತಾ ಭಾವಂ ಪ್ರದಾನೇಷು ತಿಲಾಃ ಪ್ರಭೋ ॥9॥
ತಿಲಗಳು ಮಹರ್ಷಿಗಳಾದ ಕಶ್ಯಪರ ದೇಹದಿಂದ ಹೊರಬಂದವು. ಎಲೈ ಪ್ರಭುವೇ, ಆದ್ದರಿಂದ ಅವು ದಾನಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿದವು.
ಪೌಷ್ಟಿಕಾ ರೂಪದಾಶ್ಚೈವ ತಥಾ ಪಾಪವಿನಾಶನಾಃ |
ತಸ್ಮಾತ್ ಸರ್ವಪ್ರದಾನೇಭ್ಯಸ್ತಿಲದಾನಂ ವಿಶಿಷ್ಯತೇ ॥10॥
ಅವು ಪುಷ್ಟಿಯನ್ನೂ, ರೂಪವನ್ನೂ ಕೊಡುವಂತಹವುಗಳು, ಪಾಪಪರಿಹಾರಕಗಳು. ಆದ್ದರಿಂದ ಎಲ್ಲ ದಾನಗಳಿಗಿಂತಲೂ ತಿಲದಾನವು ಶ್ರೇಷ್ಠವಾದುದು.
ಆಪಸ್ತಂಬಶ್ಚ ಮೇಧಾವೀ ಶಂಖಶ್ಚ ಲಿಖಿತಸ್ತಥಾ |
ಮಹರ್ಷಿರ್ಗೌತಮಶ್ಚಾಪಿ ತಿಲದಾನೈರ್ದಿವಂ ಗತಾಃ ॥11॥
ಮೇಧಾವಿಗಳಾದ ಆಪಸ್ತಂಬರು, ಶಂಖ-ಲಿಖಿತರು, ಮಹರ್ಷಿಗಳಾದ ಗೌತಮರು ಎಲ್ಲರೂ ತಿಲದಾನದಿಂದ ಸ್ವರ್ಗಕ್ಕೆ ಹೋದರು.
ತಿಲಹೋಮಪರಾ ವಿಪ್ರಾಃ ಸರ್ವೇ ಸಂಯತಮೈಥುನಾಃ |
ಸಮಾ ಗವ್ಯೇನ ಹವಿಷಾ ಪ್ರವೃತ್ತಿಷು ಚ ಸಂಸ್ಥಿತಾಃ ॥12॥
ಮೈಥುನದ ವಿಷಯದಲ್ಲಿ ನಿಯಮದಿಂದಿದ್ದು ತಿಲಹೋಮ ಪರಾಯಣರಾದ ಎಲ್ಲ ವಿಪ್ರರು ಗೋಘೃತರೂಪವಾದ ಹವಿಸ್ಸಿನಿಂದ ಹೋಮವನ್ನು ಮಾಡಿದವರಿಗೆ ಸಮಾನರಾಗಿರುತ್ತಾರೆ.
ಸರ್ವೇಷಾಮೇವ ದಾನಾನಾಂ ತಿಲದಾನಂ ಪರಂ ಸ್ಮೃತಮ್ |
ಅಕ್ಷಯಂ ಸರ್ವದಾನಾನಾಂ ತಿಲದಾನಮಿಹೋಚ್ಯತೇ ॥13॥
ಎಲ್ಲ ದಾನಗಳಲ್ಲಿ ತಿಲದಾನವು ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಸರ್ವದಾನಗಳಲ್ಲಿ ಅದು ಅಕ್ಷಯದಾನವೆಂದು ಹೇಳಲ್ಪಡುತ್ತದೆ.
ಉತ್ಪನ್ನೇ ಚ ಪುರಾ ಹವ್ಯೇ ಕುಶಿಕರ್ಷಿಃ ಪರಂತಪ |
ತಿಲೈರಗ್ನಿತ್ರಯಂ ಹುತ್ವಾ ಪ್ರಾಪ್ತವಾನ್ ಗತಿಮುತ್ತಮಾಮ್ ॥14॥
ಎಲೈ ಪರಂತಪನೇ, ಹಿಂದೆ ಹವ್ಯ-ದ್ರವ್ಯಗಳು ಉತ್ಪನ್ನವಾದಾಗ ವಿಶ್ವಾಮಿತ್ರರು ತಿಲಗಳಿಂದ ಮೂರು ಅಗ್ನಿಗಳಲ್ಲಿಯೂ ಹೋಮವನ್ನು ಮಾಡಿ ಶ್ರೇಷ್ಠವಾದ ಗತಿಯನ್ನು ಪಡೆದರು.
ಇತಿ ಪ್ರೋಕ್ತಂ ಕುರುಶ್ರೇಷ್ಠ ತಿಲದಾನಮನುತ್ತಮಮ್ |
ವಿಧಾನಂ ಯೇನ ವಿಧಿನಾ ತಿಲಾನಾಮಿಹ ಶಸ್ಯತೇ ॥15॥
ಎಲೈ ಕುರುಶ್ರೇಷ್ಠನೇ, ಶ್ರೇಷ್ಠವಾದ ತಿಲದಾನವನ್ನೂ ಯಾವ ವಿಧಾನದಿಂದ ತಿಲಗಳು ಶ್ರೇಷ್ಠವಾದವು ಎಂಬುದನ್ನೂ ಈ ರೀತಿಯಲ್ಲಿ ನಿನಗೆ ಹೇಳಿದ್ದೇನೆ.
ಅತ ಊರ್ಧ್ವಂ ನಿಬೋಧೇದಂ ದೇವಾನಾಂ ಯಷ್ಟುಮಿಚ್ಛತಾಮ್ |
ಸಮಾಗಮಂ ಮಹಾರಾಜ ಬ್ರಹ್ಮಣಾ ವೈ ಸ್ವಯಂಭುವಾ ॥16॥

ಎಲೈ ಮಹಾರಾಜನೇ, ಇನ್ನು ಮುಂದೆ ಯಜ್ಞವನ್ನು ಮಾಡಲು ಇಚ್ಛಿಸಿದ ದೇವತೆಗಳಿಗೂ ಮತ್ತು ಬ್ರಹ್ಮದೇವರಿಗೂ ಉಂಟಾದ ಸಮಾಗಮವನ್ನು ಕೇಳು.
ದೇವಾಃ ಸಮೇತ್ಯ ಬ್ರಹ್ಮಾಣಂ ಭೂಮಿಭಾಗೇ ಯಿಯಕ್ಷವಃ |
ಶುಭಂ ದೇಶಮಯಾಚಂತ ಯಜೇಮ ಇತಿ ಪಾರ್ಥಿವ ॥17॥
ಭೂಮಿಯ ಒಂದು ಭಾಗದಲ್ಲಿ ಯಾಗವನ್ನು ಮಾಡಲು ಬಯಸಿದ ದೇವತೆಗಳು ಬ್ರಹ್ಮದೇವರನ್ನು ಸಮೀಪಿಸಿ ನಾವು ಯಜ್ಞವನ್ನು ಮಾಡಬೇಕು ಎಂದು ಒಂದು ಶುಭ ದೇಶವನ್ನು ಯಾಚಿಸಿದರು.
ದೇವಾಃ
ಭಗವಂಸ್ತ್ವಂ ಪ್ರಭುರ್ಭೂಮೇಃ ಸರ್ವಸ್ಯ ತ್ರಿದಿವಸ್ಯ ಚ |
ಯಜೇಮಹಿ ಮಹಾಭಾಗ ಯಜ್ಞಂ ಭವದನುಜ್ಞಯಾ |
ನಾನನುಜ್ಞಾತಭೂಮಿರ್ಹಿ ಯಜ್ಞಸ್ಯ ಫಲಮಶ್ನುತೇ ॥18॥
ದೇವತೆಗಳು ಪೂಜ್ಯನೇ, ನೀನು ಭೂಮಿಗೂ, ಸರ್ವಸ್ವರ್ಗಕ್ಕೂ ಅಧಿಪತಿಯಾದವನು. ಮಹಾನುಭಾವನೇ, ನಿನ್ನ ಅನುಜ್ಞೆಯಿಂದ ಯಜ್ಞವನ್ನು ಮಾಡುವೆವು. ಅನುಜ್ಞಾತವಲ್ಲದ ಭೂಮಿಯಲ್ಲಿ ಮಾಡಿದ ಯಜ್ಞವು ಫಲವನ್ನು ಕೊಡುವುದಿಲ್ಲ.
ತ್ವಂ ಹಿ ಸರ್ವಸ್ಯ ಜಗತಃ ಸ್ಥಾವರಸ್ಯ ಚರಸ್ಯ ಚ |
ಪ್ರಭುರ್ಭವಸಿ ತಸ್ಮಾತ್ ತ್ವಂ ಸಮನುಜ್ಞಾತುಮರ್ಹಸಿ ॥19॥
ನೀನು ಸ್ಥಾವರ-ಜಂಗಮಾತ್ಮಕವಾದ ಸರ್ವಪ್ರಪಂಚಕ್ಕೂ ಪ್ರಭುವಾದವನು. ಆದ್ದರಿಂದ ನೀನು ಅನುಮತಿಯನ್ನು ಕೊಡಬೇಕು.
ಬ್ರಹ್ಮಾ
ದದಾಮಿ ಮೇದಿನೀಭಾಗಂ ಭವದ್ಭ್ಯೋಽಹಂ ಸುರರ್ಷಭಾಃ |
ಯಸ್ಮಿನ್ ದೇಶೇ ಕರಿಷ್ಯಧ್ವಂ ಯಜ್ಞಂ ಕಾಶ್ಯಪನಂದನಾಃ ॥20॥
ಬ್ರಹ್ಮಾ ಎಲೈ ಕಾಶ್ಯಪಪುತ್ರರೇ, ಸುರಶ್ರೇಷ್ಠರೇ, ಯಾವ ದೇಶದಲ್ಲಿ ನೀವು ಯಜ್ಞವನ್ನು ಮಾಡುವಿರೋ ಅಂತಹ ಭೂವಿಭಾಗವನ್ನು ನಿಮಗೆ ಕೊಡುತ್ತೇನೆ.
ದೇವಾಃ
ಭಗವನ್ ಕೃತಕಾಮಾಃ ಸ್ಮೋ ಯಕ್ಷ್ಯಾಮಸ್ತ್ವಾಪ್ತದಕ್ಷಿಣೈಃ |
ಇಮಂ ತು ದೇಶಂ ಮುನಯಃ ಪರ್ಯುಪಾಸಂತ ನಿತ್ಯದಾ ॥21॥
ದೇವತೆಗಳು ಪೂಜ್ಯನೇ, ನಾವು ಭೂರಿದಕ್ಷಿಣೆಯುಳ್ಳ ಯಾಗವನ್ನು ಮಾಡಲು ಬಯಸಿದ್ದೇವೆ. ಈ ಹಿಮಾಲಯದ ಪ್ರದೇಶದಲ್ಲಿ ಋಷಿಗಳು ನಿತ್ಯವೂ ವಾಸಿಸಿದರು.
ಭೀಷ್ಮಃ
ತತೋಽಗಸ್ತ್ಯಶ್ಚ ಕಣ್ವಶ್ಚ ಭೃಗುರತ್ರಿರ್ವೃಷಾಕಪಿಃ |
ಅಸಿತೋ ದೇವಲಶ್ಚೈವ ದೇವಯಜ್ಞಮುಪಾಗಮನ್ ॥22॥
ಭೀಷ್ಮ ಆಗ ಅಗಸ್ತ್ಯರು, ಕಣ್ವರು, ಭೃಗು, ಅತ್ರಿ, ವೃಷಾಕಪಿಗಳು, ಅಸಿತರು, ದೇವಲರು ಆ ದೇವಯಜ್ಞಕ್ಕೆ ಬಂದರು.
ತತೋ ದೇವಾ ಮಹಾತ್ಮಾನ ಈಜಿರೇ ಯಜ್ಞಮಚ್ಯುತ |
ತಥಾ ಸಮಾಪಯಾಮಾಸುರ್ಯಥಾಕಾಲಂ ಸುರರ್ಷಭಾಃ ॥23॥
ಎಲೈ ಅಚ್ಯುತನೇ, ಆಗ ಮಹಾತ್ಮರಾದ ದೇವತೆಗಳು ಯಜ್ಞವನ್ನು ಮಾಡಿ ಯೋಗ್ಯವಾದ ಕಾಲದಲ್ಲಿ ಯಜ್ಞವನ್ನು ಸಮಾಪ್ತಿಗೊಳಿಸಿದರು.
ತ ಇಷ್ಟಯಜ್ಞಾಸ್ತ್ರಿದಶಾ ಹಿಮವತ್ಯಚಲೋತ್ತಮೇ |
ಷಷ್ಠಮಂಶಂ ಕ್ರತೋಸ್ತಸ್ಯ ಭೂಮಿದಾನಂ ಪ್ರಚಕ್ರಿರೇ ॥24॥
ಯಜ್ಞವನ್ನು ಮಾಡಿದ ಆ ದೇವತೆಗಳು ಶ್ರೇಷ್ಠವಾದ ಹಿಮಾಲಯ ಪರ್ವತದಲ್ಲಿ ಯಜ್ಞವನ್ನು ಮಾಡಿದ ಭೂಮಿಯ ಆರನೆಯ ಒಂದು ಭಾಗದಷ್ಟು ಭೂಮಿಯ ದಾನವನ್ನು ಮಾಡಿದರು.
ಪ್ರಾದೇಶಮಾತ್ರಂ ಭೂಮೇಸ್ತು ಯೋ ದದ್ಯಾದನುಪಸ್ಕೃತಮ್ |
ನ ಸೀದತಿ ಸ ಕೃಚ್ಛ್ರೇಷು ನ ಚ ದುರ್ಗಾಣ್ಯವಾಪ್ನುತೇ ॥25॥
ಒಂದು ಗೇಣಿನಷ್ಟು ಅಗಲದ ಸಹಜವಾದ ಭೂಮಿಯನ್ನು ದಾನವನ್ನು ಮಾಡಿದವನು ಕಷ್ಟಗಳಲ್ಲಿ ಅವನತಿಯನ್ನು ಹೊಂದುವುದಿಲ್ಲ ಮತ್ತು ವಿಷಮ ಪರಿಸ್ಥಿತಿಯನ್ನು ಹೊಂದುವುದಿಲ್ಲ.
ಶೀತವಾತಾತಪಸಹಾಂ ಗೃಹಭೂಮಿಂ ಸುಸಂಸ್ಕೃತಾಮ್ |
ಪ್ರದಾಯ ಸುರಲೋಕಸ್ಥಃ ಪುಣ್ಯಾಂತೇಽಪಿ ನ ಚಾಲ್ಯತೇ ॥26॥
ಬಿಸಿಲು, ಚಳಿ, ಗಾಳಿಗಳನ್ನು ಸಹಿಸುವ ಸುಸಂಸ್ಕೃತವಾದ ಗೃಹಭೂಮಿಯನ್ನು ದಾನವನ್ನು ಮಾಡುವವನು ಸುರಲೋಕವನ್ನು ಹೊಂದಿ ಪುಣ್ಯವು ಕ್ಷೀಣಿಸಿದರೂ ಅಲ್ಲಿಂದ ಅಲುಗಾಡುವುದಿಲ್ಲ.
ಮುದಿತೋ ವಸತೇ ಪ್ರಾಜ್ಞಃ ಶಕ್ರೇಣ ಸಹ ಪಾರ್ಥಿವ |
ಪ್ರತಿಶ್ರಯಪ್ರದಾತಾ ಚ ಸೋಽಪಿ ಸ್ವರ್ಗೇ ಮಹೀಯತೇ ॥27॥
ಎಲೈ ಪಾರ್ಥಿವನೇ, ಗೃಹವನ್ನು ದಾನ ಮಾಡುವ ಪ್ರಾಜ್ಞನು ಇಂದ್ರನ ಜೊತೆಯಲ್ಲಿ ಸಂತೋಷದಿಂದ ವಾಸಿಸುತ್ತಾನೆ. ಅವನೂ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ಅಧ್ಯಾಪಕಕುಲೇ ಜಾತಃ ಶ್ರೋತ್ರಿಯೋ ನಿಯತೇಂದ್ರಿಯಃ |

ಗೃಹೇ ಯಸ್ಯ ವಸೇತ್ ತುಷ್ಟಃ ಪ್ರಧಾನಂ ಲೋಕಮಶ್ನುತೇ ॥28॥
ಯಾವನು ದಾನಕೊಟ್ಟ ಗೃಹದಲ್ಲಿ ಅಧ್ಯಾಪಕ ಕುಲದಲ್ಲಿ ಜನಿಸಿದ ಶ್ರೋತ್ರಿಯನೂ, ನಿಯತೇಂದ್ರಿಯನೂ ಆದ ಬ್ರಾಹ್ಮಣನು ವಾಸ ಮಾಡುತ್ತಾನೆಯೋ ಅಂತಹವನು ಪ್ರಧಾನವಾದ ಲೋಕವನ್ನು ಹೊಂದುತ್ತಾನೆ.
ತಥಾ ಗವಾರ್ಥೇ ಶರಣಂ ಶೀತವರ್ಷಸಹಂ ಮಹತ್ ।
ಆಸಪ್ತಮಂ ತಾರಯತಿ ಕುಲಂ ಭರತಸತ್ತಮ ॥29॥
ಎಲೈ ಭರತಶ್ರೇಷ್ಠನೇ, ಹಾಗೆಯೇ ಗೋವುಗಳ ಸಲುವಾಗಿ ಚಳಿ, ಮಳೆಗಳನ್ನು ಸಹಿಸುವ ದೊಡ್ಡ ಶಾಲೆಯನ್ನು (ಕೊಟ್ಟಿಗೆಯನ್ನು) ಕಟ್ಟಿಸುವವನು ಏಳು ತಲೆಗಳವರೆಗೆ ತನ್ನ ಕುಲವನ್ನು ಉದ್ಧರಿಸುತ್ತಾನೆ.
ಕ್ಷೇತ್ರಭೂಮಿಂ ದದಲ್ಲೋಕೇ ಪುತ್ರ ಶ್ರಿಯಮವಾಪ್ನುಯಾತ್ ।
ರತ್ನಭೂಮಿಂ ಪ್ರದತ್ತತ್ವ ತು ಕುಲವಂಶಂ ವಿವರ್ಧಯೇತ್ ॥30॥
ಎಲೈ ಪುತ್ರನೇ, ಉಳುವ ಭೂಮಿಯನ್ನು ಕೊಡುವವನು ಲೋಕದಲ್ಲಿ ಸಂಪತ್ತನ್ನು ಹೊಂದುತ್ತಾನೆ. ರತ್ನಸಹಿತವಾದ ಭೂಮಿಯನ್ನು ದಾನ ಮಾಡುವವನು ತನ್ನ ಕುಲವನ್ನು ಮತ್ತು ವಂಶವನ್ನು ಅಭಿವೃದ್ಧಿ ಪಡಿಸುತ್ತಾನೆ.
ನ ಚೋಷರಾಂ ನ ನಿರ್ದಗ್ಧಾಂ ಮಹೀಂ ದದ್ಯಾತ್ ಕಥಂಚನ ।
ನ ಶ್ಮಶಾನಪರೀತಾಂ ಚ ನ ಚ ಪಾಪನಿಷೇವಿತಾಮ್ ॥31॥
ಬಂಜರು ಭೂಮಿಯನ್ನಾಗಲೀ, ಸುಟ್ಟಭೂಮಿಯನ್ನಾಗಲೀ, ಸ್ಮಶಾನದಿಂದ ಸುತ್ತುವರಿಯಲ್ಪಟ್ಟ ಭೂಮಿಯನ್ನಾಗಲೀ, ದುಷ್ಟರು ವಾಸಿಸುವ ಭೂಮಿಯನ್ನಾಗಲೀ ಎಂದೂ ದಾನವನ್ನು ಮಾಡಬಾರದು.
ಪಾರಕ್ಯೇ ಭೂಮಿದೇಶೇ ತು ಪಿತೄಣಾಂ ನಿರ್ವಪೇತ್ ತು ಯಃ ।
ತದ್ಭೂಮಿಸ್ವಾಮಿಪಿತೃಭಿಃ ಶ್ರಾದ್ಧಕರ್ಮ ವಿಹನ್ಯತೇ ॥32॥
ಇನ್ನೊಬ್ಬರ ಭೂಮಿದೇಶದಲ್ಲಿ ಪಿತೃಶ್ರಾದ್ಧವನ್ನು ಮಾಡಿದರೆ ಆ ಭೂಮಿಯ ಒಡೆಯನ ಪಿತೃಗಳು ಆ ಶ್ರಾದ್ಧಕರ್ಮವನ್ನು ವಿನಾಶಗೊಳಿಸುತ್ತಾರೆ.
ತಸ್ಮಾತ್ ಕ್ರೀತ್ವಾ ಮಹೀಂ ದದ್ಯಾತ್ ಸ್ವಲ್ಪಾಮಪಿ ವಿಚಕ್ಷಣಃ ।
ಪಿಂಡಃ ಪಿತೃಭ್ಯೋ ದತ್ತೋ ವೈ ತಸ್ಯಾಂ ಭವತಿ ಶಾಶ್ವತಃ ॥33॥
ಆದ್ದರಿಂದ ವಿವೇಕಿಯಾದವನು ಸ್ವಲ್ಪ ಭೂಮಿಯನ್ನಾದರೂ ಕ್ರಯಕ್ಕೆ ತೆಗೆದುಕೊಂಡು ದಾನವನ್ನು ಕೊಡಬೇಕು. ಆ ಭೂಮಿಯಲ್ಲಿ ಪಿತೃಗಳಿಗೆ ಕೊಟ್ಟ ಪಿಂಡವು ಶಾಶ್ವತವಾಗುತ್ತದೆ.
ಅಟವೀಪರ್ವತಾಶ್ಚೈವ ನದೀತೀರ್ಥಾನಿ ಯಾನಿ ಚ ।
ಸರ್ವಾಣ್ಯಸ್ವಾಮಿಕಾನ್ಯಾಹುರ್ನ ಹಿ ತತ್ರ ಪರಿಗ್ರಹಃ ॥34॥
ಕಾಡು, ಪರ್ವತಗಳು, ನದಿಗಳು, ತೀರ್ಥಗಳು ಇವೆಲ್ಲವೂ ಸ್ವಾಮಿರಹಿತವಾದುದು ಎಂದು ಹೇಳುತ್ತಾರೆ. ಅದನ್ನು ಯಾರೂ ದಾನ ಮಾಡುವಂತಿಲ್ಲ ಮತ್ತು ಪ್ರತಿಗ್ರಹ ಮಾಡುವಂತೆಯೂ ಇಲ್ಲ.
ಇತ್ಯೇತದ್‌ಭೂಮಿದಾನಸ್ಯ ಫಲಮುಕ್ತಂ ವಿಶಾಂಪತೇ ।
ಅತಃ ಪರಂ ತು ಗೋದಾನಂ ಕೀರ್ತಯಿಷ್ಯಾಮಿ ತೇಽನಘ ॥35॥
ಎಲೈ ರಾಜನೇ, ಈ ರೀತಿಯಲ್ಲಿ ನಾನು ಭೂಮಿದಾನದ ಫಲವನ್ನು ಹೇಳಿದೆನು. ಎಲೈ ಅನಘನೇ, ಇನ್ನು ಮುಂದೆ ಗೋದಾನದ ಫಲವನ್ನು ಹೇಳುವೆನು.
ಗಾವೋಽಧಿಕಾಸ್ತಪಸ್ವಿಭ್ಯೋ ಯಸ್ಮಾತ್ ಸರ್ವೇಭ್ಯ ಏವ ಚ ।
ತಸ್ಮಾನ್ಮಹೇಶ್ವರೋ ದೇವಸ್ತಪಸ್ತಾಭಿಃ ಸಮಾಸ್ಥಿತಃ ॥36॥
ಗೋವುಗಳು ಎಲ್ಲಾ ತಪಸ್ವಿಗಳಿಗಿಂತಲೂ ಶ್ರೇಷ್ಠವಾದ ಕಾರಣದಿಂದ ದೇವನಾದ ಮಹೇಶ್ವರನು ಅವುಗಳ ಜೊತೆಯಲ್ಲಿ ಇರುತ್ತಾನೆ.
ಬ್ರಹ್ಮಲೋಕೇ ವಸಂತ್ಯೇತಾಃ ಸೋಮೇನ ಸಹ ಭಾರತ ।
ಆಸಾಂ ಬ್ರಹ್ಮರ್ಷಯಃ ಸಿದ್ಧಾಃ ಪ್ರಾರ್ಥಯಂತಿ ಪರಾಂ ಗತಿಮ್ ॥37॥
ಎಲೈ ಭಾರತನೇ, ಇವು ಬ್ರಹ್ಮಲೋಕದಲ್ಲಿ ಚಂದ್ರನ ಜೊತೆಯಲ್ಲಿ ಇರುತ್ತವೆ. ಬ್ರಹ್ಮರ್ಷಿಗಳು ಮತ್ತು ಸಿದ್ಧರು ಗೋವುಗಳಿಗೆ ಉಂಟಾಗುವ ಶ್ರೇಷ್ಠ ಗತಿಯನ್ನು ಪ್ರಾರ್ಥಿಸುತ್ತಾರೆ.
ಪಯಸಾ ಹವಿಷಾ ದಧ್ನಾ ಶಕೃತಾಪ್ಯಥ ಚರ್ಮಣಾ ।
ಅಸ್ಥಿಭಿಶ್ಚೋಪಕುರ್ವಂತಿ ಶೃಂಗೈರ್ವಾಲೈಶ್ಚ ಭಾರತ ॥38॥
ಎಲೈ ಭಾರತನೇ, ಗೋವುಗಳು ಹಾಲಿನಿಂದಲೂ, ಹವಿಸ್ಸಿನಿಂದಲೂ, ಮೊಸರಿನಿಂದಲೂ, ಗೋಮಯದಿಂದಲೂ, ಚರ್ಮದಿಂದಲೂ, ಅಸ್ಥಿಗಳಿಂದಲೂ, ಕೊಂಬಿನಿಂದಲೂ, ಬಾಲಗಳಿಂದಲೂ ಮನುಷ್ಯರಿಗೆ ಉಪಕಾರವನ್ನು ಮಾಡುತ್ತವೆ.
ನಾಸಾಂ ಶೀತಾತಪೌ ಸ್ಯಾತಾಂ ಸದೈತಾಃ ಕರ್ಮ ಕುರ್ವತೇ ।
ನ ವರ್ಷಂ ವಿಷಮಂ ವಾಪಿ ದುಃಖಮಾಸಾಂ ಭವತ್ಯುತ ॥39॥
ಅವು ಚಳಿ-ಬಿಸಿಲುಗಳನ್ನು ಗಮನಿಸುವುದಿಲ್ಲ. ಯಾವಾಗಲೂ ದುಡಿಯುತ್ತವೆ. ಮಳೆಗಾಲವಾಗಲೀ, ವಿಷಮಪರಿಸ್ಥಿತಿಯಾಗಲೀ ಅವುಗಳಿಗೆ ದುಃಖವನ್ನು ಉಂಟು ಮಾಡುವುದಿಲ್ಲ.
ಬ್ರಾಹ್ಮಣೈಃ ಸಹಿತಾ ಯಾಂತಿ ತಸ್ಮಾತ್ ಪರತರಂ ಪದಮ್ ।
ಏಕಂ ಗೋಬ್ರಾಹ್ಮಣಂ ತಸ್ಮಾತ್ ಪ್ರವದಂತಿ ಮನೀಷಿಣಃ ॥40॥
ಅವು ಬ್ರಾಹ್ಮಣರ ಜೊತೆಯಲ್ಲಿ ಹೋಗುತ್ತವೆ. ಆದ್ದರಿಂದ ಬಹಳ ಶ್ರೇಷ್ಠವಾದವುಗಳು. ಆದ್ದರಿಂದ ಪ್ರಾಜ್ಞರು ಗೋವುಗಳು ಮತ್ತು ಬ್ರಾಹ್ಮಣರು ಒಂದೇ ಎಂದು ಹೇಳುತ್ತಾರೆ.

ರಂತಿದೇವಸ್ಯ ಯಜ್ಞೇ ತಾಃ ಪಶುತ್ವೇನೋಪಕಲ್ಪಿತಾಃ |
ತತಶ್ಚರ್ಮಣ್ವತೀ ರಾಜನ್ ಗೋಚರ್ಮಭ್ಯಃ ಪ್ರವರ್ತಿತಾ ||41||
ರಂತಿದೇವನ ಯಜ್ಞದಲ್ಲಿ ಅವುಗಳನ್ನು ಪಶುಗಳಾಗಿ ಕಲ್ಪಿಸಲಾಯಿತು. ಎಲೈ ರಾಜನೇ, ಆಗ ಅವುಗಳ ಚರ್ಮದಿಂದ ಚರ್ಮಣ್ವತೀ ನದಿಯು ಪ್ರವೃತ್ತವಾಯಿತು.
ಪಶುತ್ವಾಚ್ಚ ವಿನಿರ್ಮುಕ್ತಾಃ ಪ್ರದಾನಾಯೋಪಕಲ್ಪಿತಾಃ |
ತಾ ಇಮಾ ವಿಪ್ರಮುಖ್ಯೇಭ್ಯೋ ಯೋ ದದಾತಿ ಮಹೀಪತೇ |
ನಿಸ್ತರೇದಾಪದಂ ಕೃಚ್ಛ್ರಾಂ ವಿಷಮಸ್ಥೋಽಪಿ ಪಾರ್ಥಿವ ||42||
ಅನಂತರ ಅವು ಪಶುತ್ವವನ್ನು ತೊರೆದು ದಾನಕ್ಕೆ ಶ್ರೇಷ್ಠವಾದ ವಸ್ತುಗಳಾದವು. ಎಲೈ ರಾಜನೇ, ಅಂತಹ ಈ ಗೋವುಗಳನ್ನು ಶ್ರೇಷ್ಠ ಬ್ರಾಹ್ಮಣರಿಗೆ ದಾನವನ್ನು ಮಾಡುವವನು ವಿಷಮ ಪರಿಸ್ಥಿತಿಗೆ ಸಿಕ್ಕಿದರೂ ಎಲ್ಲ ಆಪತ್ತುಗಳನ್ನೂ, ಕಷ್ಟಗಳನ್ನೂ ದಾಟುತ್ತಾನೆ.
ಗವಾಂ ಸಹಸ್ರದಃ ಪ್ರೇತ್ಯ ನರಕಂ ನ ಪ್ರಪಶ್ಯತಿ |
ಸರ್ವತ್ರ ವಿಜಯಂ ಚಾಪಿ ಲಭತೇ ಮನುಜಾಧಿಪ ||43||
ಸಹಸ್ರ ಗೋದಾನವನ್ನು ಮಾಡುವವನು ಮರಣಾನಂತರದಲ್ಲಿ ನರಕವನ್ನು ನೋಡುವುದಿಲ್ಲ. ಎಲೈ ಮನುಜಾಧಿಪನೇ, ಅವನು ಎಲ್ಲ ಕಡೆಗಳಲ್ಲಿಯೂ ಜಯವನ್ನೇ ಪಡೆಯುತ್ತಾನೆ.
ಅಮೃತಂ ವೈ ಗವಾಂ ಕ್ಷೀರಮಿತ್ಯಾಹ ತ್ರಿದಶಾಧಿಪಃ |
ತಸ್ಮಾದ್ ದದಾತಿ ಯೋ ಧೇನುಮಮೃತಂ ಸ ಪ್ರಯಚ್ಛತಿ ||44||
ಸ್ವರ್ಗಾಧಿಪತಿಯಾದ ಇಂದ್ರನು ಗೋವುಗಳ ಕ್ಷೀರವನ್ನು ಅಮೃತವೆಂದು ಹೇಳಿದನು. ಆದ್ದರಿಂದ ಗೋದಾನ ಮಾಡುವವನು ಅಮೃತದಾನವನ್ನು ಮಾಡುತ್ತಾನೆ.
ಅಗ್ನೀನಾಮವ್ಯಯಂ ಹ್ಯೇತದ್ ಹೌಮ್ಯಂ ವೇದವಿದೋ ವಿದುಃ |
ತಸ್ಮಾದ್ ದದಾತಿ ಯೋ ಧೇನುಂ ಸ ಹೌಮ್ಯಂ ಸಂಪ್ರಯಚ್ಛತಿ ||45||
ವೇದವಿದ್ವಾಂಸರು ಕ್ಷೀರವನ್ನು ಅಗ್ನಿಗಳಿಗೆ ಶಾಶ್ವತವಾದ ಹವಿಸ್ಸೆಂದು ತಿಳಿಯುತ್ತಾರೆ. ಆದ್ದರಿಂದ ಯಾವನು ಗೋದಾನವನ್ನು ಮಾಡುತ್ತಾನೆಯೋ ಅವನು ಹೋಮ ದ್ರವ್ಯವನ್ನು ದಾನ ಮಾಡುತ್ತಾನೆ.
ಸ್ವರ್ಗೋ ವೈ ಮೂರ್ತಿಮಾನೇಷ ವೃಷಭಂ ಯೋ ಗವಾಂ ಪತಿಮ್ |
ವಿಪ್ರೇ ಗುಣಯುತೇ ದದ್ಯಾತ್ ಸ ವೈ ಸ್ವರ್ಗೇ ಮಹೀಯತೇ ||46||
ವೃಷಭವು ಶರೀರವನ್ನು ಧರಿಸಿದ ಸ್ವರ್ಗ. ಗೋವುಗಳಿಗೆ ಪತಿಯಾದ ವೃಷಭವನ್ನು ಯಾರು ಗುಣವಂತನಾದ ಬ್ರಾಹ್ಮಣನಿಗೆ ದಾನ ಮಾಡುತ್ತಾನೆಯೋ ಅವನು ಸ್ವರ್ಗದಲ್ಲಿ ಸತ್ಕರಿಸಲ್ಪಡುತ್ತಾನೆ.
ಪ್ರಾಣಾ ವೈ ಪ್ರಾಣಿನಾಮೇತೇ ಪ್ರೋಚ್ಯಂತೇ ಭರತರ್ಷಭ |
ತಸ್ಮಾದ್ ದದಾತಿ ಯೋ ಧೇನುಂ ಪ್ರಾಣಾನ್ ವೈ ಸ ಪ್ರಯಚ್ಛತಿ ||47||
ಎಲೈ ಭರತಶ್ರೇಷ್ಠನೇ, ಗೋವುಗಳನ್ನು ಪ್ರಾಣಿಗಳ ಪ್ರಾಣವೆಂದು ಹೇಳುತ್ತಾರೆ. ಆದ್ದರಿಂದ ಗೋದಾನವನ್ನು ಮಾಡುವವನು ಪ್ರಾಣದಾನವನ್ನು ಮಾಡುತ್ತಾನೆ.
ಗಾವಃ ಶರಣ್ಯಾ ಭೂತಾನಾಮಿತಿ ವೇದವಿದೋ ವಿದುಃ |
ತಸ್ಮಾದ್ ದದಾತಿ ಯೋ ಧೇನುಂ ಶರಣಂ ಸಂಪ್ರಯಚ್ಛತಿ ||48||
ಗೋವುಗಳು ಪ್ರಾಣಿಗಳಿಗೆ ಆಶ್ರಯವನ್ನು ಕೊಡುವಂತಹವು ಎಂದು ವೇದಜ್ಞರು ತಿಳಿದಿದ್ದಾರೆ. ಆದ್ದರಿಂದ ಗೋದಾನವನ್ನು ಮಾಡುವವನು ಗೃಹದಾನವನ್ನು ಮಾಡುವವನಾಗುತ್ತಾನೆ.
ನ ವಧಾರ್ಥಂ ಪ್ರದಾತವ್ಯಾ ನ ಕೀನಾಶೇ ನ ನಾಸ್ತಿಕೇ |
ಗೋಜೀವಿನೇ ನ ದಾತವ್ಯಾ ತಥಾ ಗೌಃ ಪುರುಷರ್ಷಭ ||49||
ಎಲೈ ಪುರುಷಶ್ರೇಷ್ಠನೇ, ಗೋವುಗಳನ್ನು ವಧೆಗಾಗಿ ಕಟುಕರಿಗಾಗಲೀ, ದುಡಿಯುವ ಕೃಷಿಕರಿಗಾಗಲೀ, ನಾಸ್ತಿಕನಿಗಾಗಲೀ, ಗೋವನ್ನು ದುಡಿಸಿ ಜೀವನವನ್ನು ಮಾಡುವವನಿಗಾಗಲೀ ಕೊಡಬಾರದು.
ದದಾತಿ ತಾದೃಶಾನಾಂ ವೈ ನರೋ ಗಾಃ ಪಾಪಕರ್ಮಣಾಮ್ |
ಅಕ್ಷಯಂ ನರಕಂ ಯಾತೀತ್ಯೇವಮಾಹುರ್ಮನೀಷಿಣಃ ||50||
ಅಂತಹ ಪಾಪಕರ್ಮಿಗಳಿಗೆ ಗೋದಾನವನ್ನು ಮಾಡುವವನು ಶಾಶ್ವತವಾದ ನರಕವನ್ನು ಹೊಂದುತ್ತಾನೆ ಎಂದು ಜ್ಞಾನಿಗಳು ಹೇಳುತ್ತಾರೆ.
ನ ಕೃಶಾಂ ನಾಪವತ್ಸಾಂ ವಾ ವಂಧ್ಯಾಂ ರೋಗಾನ್ವಿತಾಂ ತಥಾ |
ನ ವ್ಯಂಗಾಂ ನ ಪರಿಶ್ರಾಂತಾಂ ದದ್ಯಾದ್ ಗಾಂ ಬ್ರಾಹ್ಮಣಾಯ ವೈ ||
ಬ್ರಾಹ್ಮಣನಿಗೆ ಕೃಶವಾದ ಅಥವಾ ಕರು ಇಲ್ಲದ ಅಥವಾ ಬಂಜೆಯಾದ ಅಥವಾ ರೋಗದಿಂದ ಕೂಡಿದ ಅಥವಾ ಅಂಗವಿಹೀನವಾದ ಅಥವಾ ಬಳಲಿದ ಗೋವನ್ನು ದಾನ ಮಾಡಬಾರದು.
ದಶಗೋಸಹಸ್ರದಃ ಸಮ್ಯಕ್ ಶಕ್ರೇಣ ಸಹ ಮೋದತೇ |
ಅಕ್ಷಯಾನ್ ಲಭತೇ ಲೋಕಾನ್ ನರಃ ಶತಸಹಸ್ರದಃ ||52||
ಹತ್ತು ಸಹಸ್ರ ಗೋದಾನವನ್ನು ಮಾಡುವವನು ಇಂದ್ರನ ಜೊತೆಯಲ್ಲಿ ಸಂತೋಷ ಪಡುತ್ತಾನೆ. ಲಕ್ಷ ಗೋದಾನವನ್ನು ಮಾಡುವವನು ಅಕ್ಷಯ ಲೋಕಗಳನ್ನು ಪಡೆಯುತ್ತಾನೆ.
ಇತ್ಯೇತದ್ ಗೋಪ್ರದಾನಂ ಚ ತಿಲದಾನಂ ಚ ಕೀರ್ತಿತಮ್ |

ತಥಾ ಭೂಮಿಪ್ರದಾನಂ ಚ ಶೃಣುಷ್ವಾನ್ನೇ ಚ ಭಾರತ ॥53॥
ಈ ರೀತಿಯಲ್ಲಿ ನಾನು ಗೋದಾನ ಮತ್ತು ತಿಲದಾನದ ಫಲವನ್ನು ಹೇಳಿದ್ದೇನೆ. ಎಲ್ಲೈ ಭಾರತನೇ, ಇನ್ನು ಭೂಮಿಪ್ರದಾನವನ್ನು ಹೇಳುತ್ತೇನೆ, ಅದನ್ನು ಕೇಳು.
ಅನ್ನದಾನಂ ಪ್ರಧಾನಂ ಹಿ ಕೌಂತೇಯ ಪರಿಚಕ್ಷತೇ |
ಅನ್ನಸ್ಯ ಹಿ ಪ್ರದಾನೇನ ರಂತಿದೇವೋ ದಿವಂ ಗತಃ ॥54॥
ಎಲ್ಲೈ ಕೌಂತೇಯನೇ, ಅನ್ನದಾನವು ಪ್ರಧಾನವಾದುದೆಂದು ಹೇಳುತ್ತಾರೆ. ಅನ್ನದಾನದಿಂದಲೇ ರಂತಿದೇವನು ಸ್ವರ್ಗಕ್ಕೆ ಹೋದನಷ್ಟೆ?
ಶ್ರಾಂತಾಯ ಕ್ಷುಧಿತಾಯಾನ್ನಂ ಯಃ ಪ್ರಯಚ್ಛತಿ ಭೂಮಿಪ |
ಸ್ವಾಯಂಭುವಂ ಮಹಾಭಾಗಂ ಸ ಪಶ್ಯತಿ ನರಾಧಿಪ ॥55॥
ಎಲ್ಲೈ ರಾಜನೇ, ದಣಿದು ಹಸಿದವನಿಗೆ ಅನ್ನವನ್ನು ಕೊಡುವವನು ಮಹಾನುಭಾವರಾದ ಬ್ರಹ್ಮದೇವರನ್ನು ನೋಡುತ್ತಾನೆ.
ನ ಹಿರಣ್ಯೈರ್ನ ವಾಸೋಭಿರ್ನಾಶ್ವದಾನೇನ ಭಾರತ |
ಪ್ರಾಪ್ನುವಂತಿ ನರಾಃ ಶ್ರೇಯೋ ಯಥೇಹಾನ್ನಪ್ರದಾಃ ಪ್ರಭೋ ॥56॥
ಎಲ್ಲೈ ಭಾರತನೇ, ಪ್ರಭುವೇ, ಅನ್ನದಾನದಿಂದ ಮಾನವರು ಎಂತಹ ಶ್ರೇಯಸ್ಸನ್ನು ಹೊಂದುತ್ತಾರೋ ಅಂತಹ ಶ್ರೇಯಸ್ಸನ್ನು ಹಿರಣ್ಯದಾನದಿಂದಾಗಲೀ, ವಸ್ತ್ರದಾನದಿಂದಾಗಲೀ, ಅಶ್ವದಾನದಿಂದಾಗಲೀ ಪಡೆಯುವುದಿಲ್ಲ.
ಅನ್ನಂ ವೈ ಪರಮಂ ದ್ರವ್ಯಮನ್ನಂ ಶ್ರೀಶ್ಚ ಪರಾ ಮತಾ |
ಅನ್ನಾತ್ ಪ್ರಾಣಃ ಪ್ರಭವತಿ ತೇಜೋ ವೀರ್ಯಂ ಬಲಂ ತಥಾ ॥57॥
ಅನ್ನವು ಶ್ರೇಷ್ಠವಾದ ದ್ರವ್ಯ. ಅನ್ನವು ಶ್ರೇಷ್ಠವಾದ ಸಂಪತ್ತು. ಅನ್ನದಿಂದ ಪ್ರಾಣವು ಉಂಟಾಗುತ್ತದೆ. ತೇಜಸ್ಸು, ವೀರ್ಯ ಮತ್ತು ಬಲಗಳು ಅನ್ನದಿಂದ ಉಂಟಾಗುತ್ತವೆ.
ಸದ್ಭ್ಯೋ ದದಾತಿ ಯಶ್ಚಾನ್ನಂ ಸದೈಕಾಗ್ರಮನಾ ನರಃ |
ನ ಸ ದುರ್ಗಾಣ್ಯವಾಪ್ನೋತೀತ್ಯೇವಮಾಹ ಪರಾಶರಃ ॥58॥
ಯಾವ ಮನುಷ್ಯನು ಏಕಾಗ್ರಚಿತ್ತದಿಂದ ಸಜ್ಜನರಿಗೆ ಅನ್ನದಾನವನ್ನು ಮಾಡುತ್ತಾನೆಯೋ ಅವನು ಕಷ್ಟವನ್ನು ಹೊಂದುವುದಿಲ್ಲ ಎಂದು ಪರಾಶರರು ಹೇಳಿದ್ದಾರೆ.
ಅರ್ಚಯಿತ್ವಾ ಯಥಾನ್ಯಾಯಂ ದೇವೇಭ್ಯೋಽನ್ನಂ ನಿವೇದಯೇತ್ |
ಯದನ್ನೋ ಹಿ ನರೋ ರಾಜಂಸ್ತದನ್ನಾಸ್ತಸ್ಯ ದೇವತಾಃ ॥59॥
ದೇವತಾ ಪೂಜೆಯನ್ನು ಮಾಡಿ ವಿಧ್ಯುಕ್ತವಾಗಿ ದೇವತೆಗಳಿಗೆ ಅನ್ನವನ್ನು ನಿವೇದನೆ ಮಾಡಬೇಕು. ಮನುಷ್ಯನಿಗೆ ಯಾವ ಅನ್ನವು ವಿಹಿತವಾಗಿದೆಯೋ ದೇವತೆಗಳು ಅವನಿಂದ ಆ ಅನ್ನವನ್ನು ಸ್ವೀಕರಿಸುತ್ತಾರೆ.
ಕೌಮುದ್ಯಾಂ ಶುಕ್ಲಪಕ್ಷೇ ತು ಯೋಽನ್ನದಾನಂ ಕರೋತ್ಯುತ |
ಸ ಸಂತರತಿ ದುರ್ಗಾಣಿ ಪ್ರೇತ್ಯ ಚಾನಂತ್ಯಮಶ್ನುತೇ ॥60॥
ಕಾರ್ತಿಕ ಮಾಸದ ಶುಕ್ಲಪಕ್ಷದಲ್ಲಿ ಅನ್ನದಾನವನ್ನು ಮಾಡುವವನು ಕಷ್ಟಗಳನ್ನು ದಾಟಿ, ಮರಣವನ್ನು ಹೊಂದಿದ ಮೇಲೆ ಅನಂತ ಸುಖವನ್ನು ಪಡೆಯುತ್ತಾನೆ.
ಅಭುಕ್ತ್ವಾತಿಥಯೇ ಚಾನ್ನಂ ಪ್ರಯಚ್ಛೇದ್ ಯಃ ಸಮಾಹಿತಃ |
ಸ ವೈ ಬ್ರಹ್ಮವಿದಾಂ ಲೋಕಾನ್ ಪ್ರಾಪ್ನುಯಾದ್ ಭರತರ್ಷಭ ॥61॥
ತಾನು ಉಪವಾಸದಿಂದ ಇದ್ದು, ಅತಿಥಿಗೆ ಅನ್ನದಾನವನ್ನು ಮಾಡುವವನು ಎಲ್ಲೈ ಭರತರ್ಷಭನೇ, ಬ್ರಹ್ಮಜ್ಞಾನಿಗಳ ಲೋಕವನ್ನು ಹೊಂದುತ್ತಾನೆ.
ಸುಕೃಚ್ಛ್ರಾಮಾಪದಂ ಪ್ರಾಪ್ತಶ್ಚಾನ್ನದಃ ಪುರುಷಸ್ತರೇತ್ |
ಪಾಪಂ ತರತಿ ಚೈವೇಹ ದುಷ್ಕೃತಂ ಚಾಪಕರ್ಷತಿ ॥62॥
ಎಂತಹ ಕಷ್ಟಕ್ಕೆ ಸಿಲುಕಿದ್ದರೂ ಮನುಷ್ಯನು ಅನ್ನದಾನವನ್ನು ಮಾಡಿದರೆ ಆ ಕಷ್ಟವನ್ನು ದಾಟುತ್ತಾನೆ. ಪಾಪವನ್ನು ಮತ್ತು ದುಷ್ಕರ್ಮವನ್ನೂ ಕಳೆದುಕೊಳ್ಳುತ್ತಾನೆ.
ಇತ್ಯೇತದನ್ನದಾನಸ್ಯ ತಿಲದಾನಸ್ಯ ಚೈವ ಹ |
ಭೂಮಿದಾನಸ್ಯ ಚ ಫಲಂ ಗೋದಾನಸ್ಯ ಚ ಕೀರ್ತಿತಮ್ ॥63॥
ಈ ರೀತಿಯಲ್ಲಿ ನಾನು ನಿನಗೆ ಅನ್ನದಾನದ, ತಿಲದಾನದ, ಭೂಮಿದಾನದ ಮತ್ತು ಗೋದಾನದ ಫಲವನ್ನು ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋಭೂತಿಲದಾನ್ನದಾನಪ್ರಶಂಸಾನಾಮ ಷಣ್ಣವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೇಳನೆಯ ಅಧ್ಯಾಯ
ಜಲದಾನಫಲ
ಯುಧಿಷ್ಠಿರಃ
ಶ್ರುತಂ ದಾನಫಲಂ ತಾತ ಯತ್ತ್ವಯಾ ಪರಿಕೀರ್ತಿತಮ್ |
ಅನ್ನಂ ತು ತೇ ವಿಶೇಷೇಣ ಪ್ರಶಸ್ತಮಿಹ ಭಾರತ ॥1॥
ಪಾನೀಯದಾನಂ ಪರಮಂ ಕಥಂ ಚೇಹ ಮಹಾಫಲಮ್ |

ಇತ್ಯೇತಚ್ಛ್ರೋತುಮಿಚ್ಛಾಮಿ ವಿಸ್ತರೇಣ ಪಿತಾಮಹ ॥2॥
ಯುಧಿಷ್ಠಿರ ಎಲ್ಲ ಭಾರತನೇ, ಪ್ರೀತಿಪಾತ್ರನೇ, ನೀನು ಹೇಳಿದ ದಾನದ ಫಲಗಳನ್ನು ಕೇಳಿದೆನು. ಅನ್ನದಾನವು ಬಹಳ ಪ್ರಶಸ್ತವಾದುದು ಎಂದು ಹೇಳಿದ್ದೀಯೆ. ಎಲೈ ಪಿತಾಮಹನೇ, ಪಾನೀಯ ದಾನವು ಹೇಗೆ ಮಹಾಫಲವನ್ನು ಕೊಡುತ್ತದೆ ಎಂದು ವಿಸ್ತಾರವಾಗಿ ಕೇಳಲು ಬಯಸುತ್ತೇನೆ.
ಭೀಷ್ಮಃ
ಹಂತ ತೇ ವರ್ತಯಿಷ್ಯಾಮಿ ಯಥಾವದ್ ಭರತರ್ಷಭ |
ಗದತಸ್ತನ್ಮಮಾದ್ಯೇಹ ಶೃಣು ಸತ್ಯಪರಾಕ್ರಮ |
ಪಾನೀಯದಾನಾತ್ ಪ್ರಭೃತಿ ಸರ್ವಂ ವಕ್ಷ್ಯಾಮಿ ತೇಽನಘ ॥3॥
ಭೀಷ್ಮ ಭರತಶ್ರೇಷ್ಠನೇ, ಸಂತೋಷ. ನಿನಗೆ ಯಥಾರ್ಥವಾಗಿ ಹೇಳುತ್ತೇನೆ. ಸತ್ಯಪರಾಕ್ರಮನೇ, ನಾನು ಹೇಳುವಂತೆ ನನ್ನ ಮಾತನ್ನು ಕೇಳು. ಎಲೈ ಅನಘನೇ, ಜಲದಾನದಿಂದ ಹಿಡಿದು ಎಲ್ಲವನ್ನೂ ನಿನಗೆ ಹೇಳುವೆನು.
ಯದನ್ನಂ ಯಚ್ಚ ಪಾನೀಯಂ ಸಂಪ್ರದಾಯಾಶ್ನುತೇ ನರಃ |
ನ ತಸ್ಮಾತ್ ಪರಮಂ ದಾನಂ ಕಿಂಚಿದಸ್ತೀತಿ ಮೇ ಮತಿಃ ॥4॥
ಮನುಷ್ಯನು ಅನ್ನದಾನವನ್ನು ಮತ್ತು ಜಲದಾನವನ್ನು ಮಾಡಿ ಏನನ್ನು ಪಡೆಯುತ್ತಾನೆಯೋ (ಅದನ್ನು ಬೇರೆ ದಾನದಿಂದ ಪಡೆಯುವುದಿಲ್ಲ). ಆ ಕಾರಣದಿಂದ ಅನ್ನ-ಜಲದಾನಗಳಿಗಿಂತ ಶ್ರೇಷ್ಠವಾದ ದಾನವು ಇನ್ನೊಂದಿಲ್ಲ ಎಂದು ನನ್ನ ಅಭಿಪ್ರಾಯ.
ಅನ್ನಾತ್ ಪ್ರಾಣಭೃತಸ್ತಾತ ಪ್ರವರ್ತಂತೇ ಹಿ ಸರ್ವಶಃ |
ತಸ್ಮಾದನ್ನಂ ಪರಂ ಲೋಕೇ ಸರ್ವದಾನೇಷು ಕಥ್ಯತೇ |
ತಸ್ಮಿನ್ ಭವತಿ ಪಾನೀಯಂ ಸರ್ವದಾನಾತ್ ಪರಂ ತತಃ ॥5॥
ಎಲೈ ಪ್ರೀತಿಪಾತ್ರನೇ, ಅನ್ನದಿಂದ ಎಲ್ಲಾ ಪ್ರಾಣಿಗಳೂ ಪ್ರವೃತ್ತಿಯನ್ನು ಮಾಡುತ್ತವೆ. ಆದ್ದರಿಂದ ಲೋಕದಲ್ಲಿ ಅನ್ನದಾನವು ಎಲ್ಲ ದಾನಗಳಿಗಿಂತ ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಅನ್ನದಾನದಲ್ಲಿ ಪಾನೀಯವೂ ಸೇರಿಕೊಂಡಿದೆ. ಆದ್ದರಿಂದ ಜಲದಾನವೂ ಶ್ರೇಷ್ಠವಾಗುತ್ತದೆ.
ಅನ್ನಾದ್ ಬಲಂ ಚ ತೇಜಶ್ಚ ಪ್ರಾಣಿನಾಂ ವರ್ಧತೇ ಸದಾ |
ಅನ್ನದಾನಮತಸ್ತಸ್ಮಾಚ್ಛ್ರೇಷ್ಠಮಾಹ ಪ್ರಜಾಪತಿಃ ॥6॥
ಅನ್ನದಿಂದ ಪ್ರಾಣಿಗಳ ಬಲವು ಮತ್ತು ತೇಜಸ್ಸು ಹೆಚ್ಚುತ್ತವೆ. ಆದ್ದರಿಂದ ಅನ್ನದಾನವು ಶ್ರೇಷ್ಠವೆಂದು ಪ್ರಜಾಪತಿಯು ಹೇಳಿದ್ದಾನೆ.
ಸಾವಿತ್ರ್ಯಾ ಹ್ಯಪಿ ಕೌಂತೇಯ ಶ್ರುತಂ ತೇ ವಚನಂ ಶುಭಮ್ |
ಯತಶ್ಚೈತದ್ ಯಥಾ ಚೈತದ್ ದೇವಸತ್ರೇ ಮಹಾಮತೇ ॥7॥
ಎಲೈ ಕೌಂತೇಯನೇ, ಮಹಾಮತಿಯೇ, ದೇವಸತ್ರದಲ್ಲಿ ಸಾವಿತ್ರಿಯು ಅನ್ನದಾನವನ್ನು ಏಕೆ ಮಾಡಬೇಕು ಹೇಗೆ ಮಾಡಬೇಕು ಎಂದು ಹೇಳಿದ ಶುಭವಚನಗಳನ್ನು ನೀನು ಕೇಳಿದ್ದೀಯೆ.
ಅನ್ನೇ ದತ್ತೇ ನರೇಣೇಹ ಪ್ರಾಣಾ ದತ್ತಾ ಭವಂತ್ಯುತ |
ಪ್ರಾಣದಾನಾದ್ಧಿ ಪರಮಂ ನ ದಾನಮಿಹ ವಿದ್ಯತೇ ॥8॥
ಮನುಷ್ಯನು ಅನ್ನದಾನವನ್ನು ಮಾಡಿದರೆ ಪ್ರಾಣದಾನವನ್ನು ಮಾಡಿದಂತಾಗುತ್ತದೆ. ಪ್ರಾಣದಾನಕ್ಕಿಂತ ಶ್ರೇಷ್ಠವಾದ ದಾನವು ಯಾವುದೂ ಇಲ್ಲವಷ್ಟೆ?
ಶ್ರುತಂ ಹಿ ತೇ ಮಹಾಬಾಹೋ ಲೋಮಶಸ್ಯಾಪಿ ತದ್ವಚಃ |
ಪ್ರಾಣಾನ್ ದತ್ತ್ವಾ ಕಪೋತಾಯ ಯತ್ಪ್ರಾಪ್ತಂ ಶಿಬಿನಾ ಪುರಾ ॥9॥
ಎಲೈ ಮಹಾಬಾಹುವೇ, ಲೋಮಶರು ಹೇಳಿದ, ಶಿಬಿಯು ಕಪೋತಕ್ಕೆ ಪ್ರಾಣವನ್ನು ಕೊಟ್ಟು ಸಂಪಾದಿಸಿದ, ಪುಣ್ಯದ ಕಥೆಗಳನ್ನು ನೀನು ಕೇಳಿದ್ದೀಯಷ್ಟೆ?
ತಾಂ ಗತಿಂ ಲಭತೇ ದತ್ತ್ವಾ ದ್ವಿಜಸ್ಯಾನ್ನಂ ವಿಶಾಂಪತೇ |
ಗತಿಂ ವಿಶಿಷ್ಟಾಂ ಗಚ್ಛಂತಿ ಪ್ರಾಣದಾ ಇತಿ ನಃ ಶ್ರುತಮ್ ॥10॥
ಎಲೈ ರಾಜನೇ, ಬ್ರಾಹ್ಮಣನಿಗೆ ಅನ್ನದಾನವನ್ನು ಮಾಡಿದರೆ ಅಂತಹ ಗತಿಯು ಲಭ್ಯವಾಗುತ್ತದೆ. ಪ್ರಾಣದಾನವನ್ನು ಮಾಡುವವರಿಗೆ ವಿಶಿಷ್ಟವಾದ ಗತಿಯುಂಟಾಗುವುದೆಂದು ನಾವು ಕೇಳಿದ್ದೇವೆ.
ಅನ್ನಂ ಚಾಪಿ ಪ್ರಭವತಿ ಪಾನೀಯಾತ್ ಕುರುಸತ್ತಮ |
ನೀರಜಾತೇನ ಹಿ ವಿನಾ ನ ಕಿಂಚಿತ್ ಸಂಪ್ರವರ್ತತೇ ॥11॥
ಎಲೈ ಕುರುಶ್ರೇಷ್ಠನೇ, ಆ ಅನ್ನವಾದರೂ ಜಲದಿಂದ ಉಂಟಾಗುತ್ತದೆ. ಜಲದಿಂದ ಹುಟ್ಟಿದುದನ್ನು ಬಿಟ್ಟು ಯಾವುದೂ ಪ್ರವೃತ್ತವಾಗುವುದಿಲ್ಲ.
ನೀರಜಾತಶ್ಚ ಭಗವಾನ್ ಸೋಮೋ ಗ್ರಹಗಣೇಶ್ವರಃ |
ಅಮೃತಂ ಚ ಸುಧಾ ಚೈವ ಸ್ವಾಹಾ ಚೈವ ವಷಟ್ತಥಾ ॥12॥
ಗ್ರಹಗಣೇಶ್ವರನಾದ ಪೂಜ್ಯನಾದ ಚಂದ್ರನು ನೀರಿನಿಂದ ಜನಿಸಿದ್ದಾನೆ. ಅಮೃತ, ಸುಧಾ, ಸ್ವಾಹಾ ಮತ್ತು ವಷಟ್ಕಾರಗಳು ನೀರಿನಿಂದ ಜನಿಸಿವೆ.
ಅನ್ನೌಷಧ್ಯೋ ಮಹಾರಾಜ ವೀರುಧಶ್ಚ ಜಲೋದ್ಭವಾಃ |
ಯತಃ ಪ್ರಾಣಭೃತಾಂ ಪ್ರಾಣಾಃ ಸಂಭವಂತಿ ವಿಶಾಂಪತೇ ॥13॥
ಎಲೈ ಮಹಾರಾಜನೇ, ಅನ್ನಗಳು, ಓಷಧಿಗಳು, ಲತೆಗಳು ನೀರಿನಿಂದ ಜನಿಸಿವೆ. ಎಲೈ ರಾಜನೇ, ಅನ್ನೌಷಧಿ ಲತೆಗಳಿಂದ ಮನುಷ್ಯನ

ಪ್ರಾಣವು ಧರಿಸಲ್ಪಡುತ್ತದೆ.
ದೇವಾನಾಮಮೃತಂ ಚಾನ್ನಂ ನಾಗಾನಾಂ ಚ ಸುಧಾ ತಥಾ |
ಪಿತೄಣಾಂ ಚ ಸ್ವಧಾ ಪ್ರೋಕ್ತಾ ಪಶೂನಾಂ ಚಾಪಿ ವೀರುಧಃ ॥14॥
ದೇವತೆಗಳಿಗೆ ಅಮೃತವು ಅನ್ನ. ನಾಗಗಳಿಗೆ ಕ್ಷೀರವು ಅನ್ನ. ಪಿತೃಗಳಿಗೆ ಸ್ವಧೆಯು ಅನ್ನ. ಪಶುಗಳಿಗೆ ತೃಣಲತಾದಿಗಳು ಅನ್ನ.
ಅನ್ನಮೇವ ಮನುಷ್ಯಾಣಾಂ ಪ್ರಾಣಾನಾಹುರ್ಮನೀಷಿಣಃ |
ತಚ್ಚ ಸರ್ವಂ ನರವ್ಯಾಘ್ರ ಪಾನೀಯಾತ್ ಸಂಪ್ರವರ್ತತೇ ॥15॥
ಮನುಷ್ಯರಿಗೆ ಅನ್ನವೇ ಪ್ರಾಣವೆಂದು ಜ್ಞಾನಿಗಳು ಹೇಳುತ್ತಾರೆ. ಎಲೈ ನರವ್ಯಾಘ್ರನೇ, ಅವೆಲ್ಲವೂ ಜಲದಿಂದ ಉಂಟಾಗುತ್ತವೆ.
ತಸ್ಮಾತ್ ಪಾನೀಯದಾನಾದ್ ವೈ ನ ಪರಂ ವಿದ್ಯತೇ ಕ್ವಚಿತ್ |
ತಚ್ಚ ದದ್ಯಾನ್ನರೋ ನಿತ್ಯಂ ಯ ಇಚ್ಛೇದ್ ಭೂತಿಮಾತ್ಮನಃ ॥16॥
ಆದ್ದರಿಂದ ಜಲದಾನಕ್ಕಿಂತಲೂ ಶ್ರೇಷ್ಠವಾದ ದಾನವು ಇನ್ನೊಂದಿಲ್ಲ. ತನಗೆ ಶ್ರೇಯಸ್ಸನ್ನು ಅಪೇಕ್ಷಿಸುವ ಪುರುಷನು ನಿತ್ಯವೂ ಜಲದಾನವನ್ನು ಮಾಡಬೇಕು.
ಧನ್ಯಂ ಯಶಸ್ಯಮಾಯುಷ್ಯಂ ಜಲದಾನಂ ವಿಶಾಂಪತೇ |
ಶತ್ರೂಂಶ್ಚಾಪ್ಯಧಿ ಕೌಂತೇಯ ಸದಾ ತಿಷ್ಠತಿ ತೋಯದಃ ॥17॥
ಎಲೈ ರಾಜನೇ, ಜಲದಾನವು ಬಲಪ್ರದವಾದುದು, ಕೀರ್ತಿಪ್ರದವಾದುದು ಮತ್ತು ಆಯುಃಪ್ರದವಾದುದು. ಕೌಂತೇಯನೇ, ಜಲದಾನವನ್ನು ಮಾಡುವವನು ಶತ್ರುಗಳನ್ನು ಮೆಟ್ಟಿನಿಲ್ಲುತ್ತಾನೆ.
ಸರ್ವಕಾಮಾನವಾಪ್ನೋತಿ ಕೀರ್ತಿಂ ಚೈವೇಹ ಶಾಶ್ವತೀಮ್ |
ಪ್ರೇತ್ಯ ಚಾನಂತ್ಯಮಾಪ್ನೋತಿ ಪಾಪೇಭ್ಯಶ್ಚ ಪ್ರಮುಚ್ಯತೇ ॥18॥
ಸರ್ವಕಾಮಗಳನ್ನೂ ಹೊಂದುತ್ತಾನೆ. ಈ ಲೋಕದಲ್ಲಿ ಶಾಶ್ವತವಾದ ಕೀರ್ತಿಯನ್ನು ಹೊಂದುತ್ತಾನೆ. ಮರಣವನ್ನು ಹೊಂದಿದ ಮೇಲೆ ಅನಂತ ಸುಖವನ್ನು ಪಡೆಯುತ್ತಾನೆ ಮತ್ತು ಪಾಪಗಳಿಂದ ಮುಕ್ತನಾಗುತ್ತಾನೆ.
ತೋಯದೋ ಮನುಜವ್ಯಾಘ್ರ ಸ್ವರ್ಗಂ ಗತ್ವಾ ಮಹಾದ್ಯುತೇ |
ಅಕ್ಷಯಾನ್ ಸಮವಾಪ್ನೋತಿ ಲೋಕಾನಿತ್ಯಬ್ರವೀನ್ಮನುಃ ॥19॥
ಎಲೈ ಮಹಾದ್ಯುತಿಯೇ, ಮನುಜವ್ಯಾಘ್ರನೇ, ಜಲದಾನ ಮಾಡಿದವನು ಸ್ವರ್ಗಕ್ಕೆ ಹೋಗಿ ಅಕ್ಷಯಲೋಕಗಳನ್ನು ಪಡೆಯುತ್ತಾನೆ ಎಂದು ಮನುವು ಹೇಳಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಜದಾನಪ್ರಶಂಸನಂ ನಾಮ ಸಪ್ತನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆಂಟನೆಯ ಅಧ್ಯಾಯ
ತಿಲಾದಿದಾನಪ್ರಶಂಸೆ - ಯಮದೂತನ ಅಚಾತುರ್ಯ.
ಯುಧಿಷ್ಠಿರಃ
ತಿಲಾನಾಂ ಕೀದೃಶಂ ದಾನಮಥ ದೀಪಸ್ಯ ಚೈವ ಹ |
ಅನ್ನಾನಾಂ ವಾಸಸಾಂ ಚೈವ ಭೂಯ ಏವ ಬ್ರವೀಹಿ ಮೇ ॥1॥
ಯುಧಿಷ್ಠಿರ ತಿಲದಾನವನ್ನು ಹೇಗೆ ಮಾಡಬೇಕು? ದೀಪದಾನ, ಅನ್ನದಾನ ಮತ್ತು ವಸ್ತ್ರದಾನದ ವಿಧಿಯನ್ನು ಪುನಃ ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬ್ರಾಹ್ಮಣಸ್ಯ ಚ ಸಂವಾದಂ ಯಮಸ್ಯ ಚ ಯುಧಿಷ್ಠಿರ ॥2॥
ಭೀಷ್ಮ ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೂ ಯಮನಿಗೂ ಮತ್ತು ಒಬ್ಬ ಬ್ರಾಹ್ಮಣನಿಗೂ ನಡೆದ, ಸಂವಾದರೂಪವಾದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಮಧ್ಯದೇಶೇ ಮಹಾನ್ ಗ್ರಾಮೋ ಬ್ರಾಹ್ಮಣಾನಾಂ ಬಭೂವ ಹ |
ಗಂಗಾಯಮುನಯೋರ್ಮಧ್ಯೇ ಯಾಮುನಸ್ಯ ಗಿರೇರಧಃ ॥3॥
ಪರ್ಣಶಾಲೇತಿ ವಿಖ್ಯಾತೋ ರಮಣೀಯೋ ನರಾಧಿಪ |
ವಿದ್ವಾಂಸಸ್ತತ್ರ ಭೂಯಿಷ್ಠಾ ಬ್ರಾಹ್ಮಣಾಶ್ಚಾವಸಂಸ್ತದಾ ॥4॥
ಮಧ್ಯ ಪ್ರದೇಶದಲ್ಲಿ ಗಂಗಾ-ಯಮುನೆ ನದಿಗಳ ಮಧ್ಯದಲ್ಲಿ, ಯಾಮುನ ಪರ್ವತದ ತಪ್ಪಲಿನಲ್ಲಿ ಬ್ರಾಹ್ಮಣರ ಒಂದು ದೊಡ್ಡ ಗ್ರಾಮವಿದ್ದಿತು. ಎಲೈ ರಾಜನೇ, ಪರ್ಣಶಾಲೆ ಎಂದು ಪ್ರಖ್ಯಾತವಾದ ಆ ಗ್ರಾಮವು ರಮಣೀಯವಾಗಿದ್ದಿತು. ಆ ಗ್ರಾಮದಲ್ಲಿ ಹೆಚ್ಚಾಗಿ ವಿದ್ವಾಂಸರಾದ ಬ್ರಾಹ್ಮಣರೇ ವಾಸವಾಗಿದ್ದರು.
ಅಥ ಪ್ರಾಹ ಯಮಃ ಕಂಚಿತ್ ಪುರುಷಂ ಕೃಷ್ಣವಾಸಸಮ್ |
ರಕ್ತಾಕ್ಷಮೂರ್ಧ್ವರೋಮಾಣಂ ಕಾಕಜಂಘಾಕ್ಷಿನಾಸಿಕಮ್ ॥5॥
ಗಚ್ಛ ತ್ವಂ ಬ್ರಾಹ್ಮಣಗ್ರಾಮಂ ತತೋ ಗತ್ವಾ ತಮಾನಯ |
ಅಗಸ್ತ್ಯಂ ಗೋತ್ರತಶ್ಚಾಪಿ ನಾಮತಶ್ಚಾಪಿ ಶರ್ಮಿಣಮ್ ॥6॥
ಶಮೇ ನಿವಿಷ್ಟಂ ವಿದ್ವಾಂಸಮಧ್ಯಾಪಕಮನಾದೃತಮ್ |

ಮಾ ಚಾನ್ಯಮಾನಯೇಥಾಸ್ತ್ವಂ ಸಗೋತ್ರಂ ತಸ್ಯ ಪಾರ್ಶ್ವತಃ ॥7॥
ಸ ಹಿ ತಾದೃಗ್ಗುಣಸ್ತೇನ ತುಲ್ಯೋಽಧ್ಯಯನಜನ್ಮನಾ |
ಅಪತ್ಯೇಷು ತಥಾ ವೃತ್ತೇ ಸಮಸ್ತೇನೈವ ಧೀಮತಾ |
ತಮಾನಯ ಯಥೋದ್ದಿಷ್ಟಂ ಪೂಜಾ ಕಾರ್ಯಾ ಹಿ ತಸ್ಯ ಮೇ ॥8॥
ಅನಂತರ ಒಮ್ಮೆ ಯಮನು ಕೃಷ್ಣ ವಸ್ತ್ರವನ್ನು ಧರಿಸಿದ ಕೆಂಪಾದ ಕಣ್ಣು, ಊರ್ಧ್ವ ರೋಮಗಳು, ಕಾಗೆಯಂತಹ ಮಂಡಿಗಳು, ಅಕ್ಷಿ ಮತ್ತು ನಾಸಿಕವನ್ನು ಹೊಂದಿದ ತನ್ನ ಒಬ್ಬ ದೂತನನ್ನು ಕುರಿತು- `ನೀನು ಆ ಬ್ರಾಹ್ಮಣಗ್ರಾಮಕ್ಕೆ ಹೋಗಿ, ಅಗಸ್ತ್ಯ ಗೋತ್ರದ ಶರ್ಮೀ ಎಂಬ ಆ ಬ್ರಾಹ್ಮಣನನ್ನು ಕರೆದುಕೊಂಡು ಬಾ. ಅವನು ಶಾಂತಸ್ವಭಾದವನು, ವಿದ್ವಾಂಸನಾದವನು. ಯಾರಿಂದಲೂ ಆದರಿಸಲ್ಪಡದಿದ್ದರೂ ಅಧ್ಯಯನದಲ್ಲಿ ನಿರತನಾದವನು. ಅವನ ಪಕ್ಕದಲ್ಲೇ ಇರುವ ಅದೇ ಗೋತ್ರದವನಾದ ಇನ್ನೊಬ್ಬ ಬ್ರಾಹ್ಮಣನನ್ನು ಕರೆದು ತರಬೇಡ. ಆ ಇನ್ನೊಬ್ಬ ಬ್ರಾಹ್ಮಣನೂ ಸಹ ತನ್ನ ಜನ್ಮ, ಅಧ್ಯಯನ, ಕುಲಪುತ್ರರು, ನಡತೆ - ಈ ಎಲ್ಲ ವಿಷಯಗಳಲ್ಲಿಯೂ ಮೇಧಾವಿಯಾದ ಶರ್ಮಿಗೆ ಸಮಾನನಾದವನು. ನಾನು ಹೇಳಿದ ವ್ಯಕ್ತಿಯನ್ನೇ ಕರೆದುಕೊಂಡು ಬಾ. ನಾನು ಅವನ ಪೂಜೆಯನ್ನು ಮಾಡಬೇಕಾಗಿದೆ' ಎಂದು ಹೇಳಿದನು.
ಸ ಗತ್ವಾ ಪ್ರತಿಕೂಲಂ ತಚ್ಚಕಾರ ಯಮಶಾಸನಮ್ |
ತಮಾಕ್ರಮ್ಯಾನಯಾಮಾಸ ಪ್ರತಿಷಿದ್ಧೋ ಯಮೇನ ಯಃ ॥9॥
ಆ ಯಮದೂತನು ಹೋಗಿ, ಯಮನ ಶಾಸನಕ್ಕೆ ವಿರುದ್ಧವಾಗಿ ಮಾಡಿದನು. ಕರೆತರಬೇಡವೆಂದು ಹೇಳಿದ ಬ್ರಾಹ್ಮಣನನ್ನು ಆಕ್ರಮಿಸಿ ಅವನನ್ನು ಕರೆತಂದನು.
ತಸ್ಮೈ ಯಮಃ ಸಮುತ್ಥಾಯ ಪೂಜಾಂ ಕೃತ್ವಾ ಚ ವೀರ್ಯವಾನ್ |
ಪ್ರೋವಾಚ ನೀಯತಾಮೇಷ ಸೋಽನ್ಯ ಆನೀಯತಾಮಿತಿ ॥10॥
ಪ್ರತಾಪಶಾಲಿಯಾದ ಯಮನು ಎದ್ದು ಅವನಿಗೆ ಗೌರವವನ್ನು ಸಲ್ಲಿಸಿ, ತನ್ನ ದೂತನನ್ನು ಕುರಿತು- `ಇವನನ್ನು ಕರೆದುಕೊಂಡು ಹೋಗು. ಇನ್ನೊಬ್ಬನನ್ನು ಕರೆದುಕೊಂಡು ಬಾ' ಎಂದು ಹೇಳಿದನು.
ಏವಮುಕ್ತೇ ತು ವಚನೇ ಧರ್ಮರಾಜೇನ ಸ ದ್ವಿಜಃ |
ಉವಾಚ ಧರ್ಮರಾಜಾನಂ ನಿರ್ವಿಣ್ಣೋಽಧ್ಯಯನೇನ ವೈ |
ಯೋ ಮೇ ಕಾಲೋ ಭವೇಚ್ಛೇಷಸ್ತಂ ವಸೇಯಮಿಹಾಚ್ಯುತ ॥11॥
ಧರ್ಮರಾಜನು ಹೀಗೆ ಹೇಳುತ್ತಿರಲು ಆ ಬ್ರಾಹ್ಮಣನು ಧರ್ಮರಾಜನನ್ನು ಕುರಿತು- `ನಾನು ಅಧ್ಯಯನದಿಂದ ದಣಿದಿದ್ದೇನೆ. ಎಲೈ ಅಚ್ಯುತನೇ, ನನ್ನ ಆಯುಸ್ಸಿನ ಉಳಿದ ಭಾಗವೇನಿದೆಯೋ ಅದನ್ನು ಇಲ್ಲಿಯೇ ಕಳೆಯುತ್ತೇನೆ' ಎಂದು ಹೇಳಿದನು.
ಯಮಃ
ನಾಹಂ ಕಾಲಸ್ಯ ವಿಹಿತಂ ಪ್ರಾಪ್ನೋಮೀಹ ಕಥಂಚನ |
ಯೋ ಹಿ ಧರ್ಮಂ ಚರತಿ ವೈ ತ್ವಂ ತಂ ತು ಜಾನಾಮಿ ಕೇವಲಮ್ ॥
ಯಮ ನಾನು ನಿನಗೆ ವಿಹಿತವಾದ ಕಾಲವನ್ನು ತಿಳಿದಿರುವುದಿಲ್ಲ. ನೀನು ಮಾಡಿದ ಕರ್ಮಗಳನ್ನು ಮಾತ್ರ ತಿಳಿಯುತ್ತೇನೆ.
ಗಚ್ಛ ವಿಪ್ರ ತ್ವಮದ್ಯೈವ ಆಲಯಂ ಸ್ವಂ ಮಹಾದ್ಯುತೇ |
ಬ್ರೂಹಿ ವಾ ತ್ವಂ ಯಥಾ ಸ್ವೈರಂ ಕರವಾಣಿ ಕಿಮಿತ್ಯುತ ॥13॥
ಎಲೈ ಬ್ರಾಹ್ಮಣನೇ, ಮಹಾದ್ಯುತಿಯೇ, ನೀನು ನಿನ್ನ ಮನೆಗೆ ಈ ದಿನವೇ ಹಿಂದಿರುಗು. ಅಥವಾ ನಿನಗೆ ಯಾವ ಉಪಕಾರವನ್ನು ಮಾಡಲಿ ಎಂದು ಹೇಳು (ಎಂದು ಹೇಳಿದನು).
ಬ್ರಾಹ್ಮಣಃ
ಯತ್ತತ್ರ ಕೃತ್ವಾ ಸುಮಹತ್ಪುಣ್ಯಂ ಸ್ಯಾತ್ ತದ್ ಬ್ರವೀಹಿ ಮೇ |
ಸರ್ವಸ್ಯ ಹಿ ಪ್ರಮಾಣಂ ತ್ವಂ ತ್ರೈಲೋಕ್ಯಸ್ಯಾಪಿ ಸತ್ತಮ ॥14॥
ಬ್ರಾಹ್ಮಣ ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ಅಲ್ಲಿಗೆ ಹೋಗಿ ಏನನ್ನು ಮಾಡಿದರೆ ಬಹಳ ದೊಡ್ಡ ಪುಣ್ಯವುಂಟಾಗುತ್ತದೆಯೋ ಅದನ್ನು ನನಗೆ ಹೇಳು. ಮೂರು ಲೋಕಗಳಲ್ಲಿರುವ ಎಲ್ಲರಿಗೂ ನೀನು ಹೇಳಿದುದೇ ಪ್ರಮಾಣವಷ್ಟೆ?
ಯಮಃ
ಶೃಣು ತತ್ತ್ವೇನ ವಿಪ್ರರ್ಷೇ ಪ್ರದಾನವಿಧಿಮುತ್ತಮಮ್ |
ತಿಲಾಃ ಪರಮಕಂ ದಾನಂ ಪುಣ್ಯಂ ಚೈವೇಹ ಶಾಶ್ವತಮ್ ॥15॥
ಯಮ ಎಲೈ ವಿಪ್ರರ್ಷಿಯೇ, ಶ್ರೇಷ್ಠವಾದ ದಾನವಿಧಿಯನ್ನು ಸರಿಯಾಗಿ ಕೇಳು. ತಿಲದಾನವು ಬಹಳ ಶ್ರೇಷ್ಠವಾದುದು ಮತ್ತು ಈ ಲೋಕದಲ್ಲಿ ಶಾಶ್ವತವಾದ ಪುಣ್ಯವನ್ನು ಕೊಡುವಂತಹದು.
ತಿಲಾಶ್ಚ ಸಂಪ್ರದಾತವ್ಯಾ ಯಥಾಶಕ್ತಿ ದ್ವಿಜರ್ಷಭ |
ನಿತ್ಯದಾನಾತ್ ಸರ್ವಕಾಮಾಂಸ್ತಿಲಾ ನಿರ್ವರ್ತಯಂತ್ಯುತ ॥16॥
ಎಲೈ ದ್ವಿಜಶ್ರೇಷ್ಠನೇ, ತನ್ನ ಶಕ್ತಿಗೆ ಅನುಗುಣವಾಗಿ ತಿಲದಾನವನ್ನು ಮಾಡಬೇಕು. ನಿತ್ಯವೂ ತಿಲವನ್ನು ದಾನ ಮಾಡುವುದರಿಂದ ಎಲ್ಲ ಕಾಮನೆಗಳು ಸಿದ್ಧಿಸುತ್ತವೆ.
ತಿಲಾನ್ ಶ್ರಾದ್ಧೇ ಪ್ರಶಂಸಂತಿ ದಾನಮೇತದ್ಧ್ಯನುತ್ತಮಮ್ |
ತಾನ್ ಪ್ರಯಚ್ಛಸ್ವ ವಿಪ್ರೇಭ್ಯೋ ವಿಧಿದೃಷ್ಟೇನ ಕರ್ಮಣಾ ॥17॥
ಶ್ರಾದ್ಧದಲ್ಲಿ ತಿಲಗಳನ್ನು ಪ್ರಶಂಸಿಸುತ್ತಾರೆ. ಇದು ಶ್ರೇಷ್ಠವಾದ ದಾನ. ವಿಧಿಗೆ ಅನುಸಾರವಾಗಿ ಬ್ರಾಹ್ಮಣರಿಗೆ ತಿಲದಾನವನ್ನು ಮಾಡು.
ತಿಲಾ ಭಕ್ಷಯಿತವ್ಯಾಶ್ಚ ಸದಾ ತ್ವಾಲಭನಂ ಚ ತೈಃ |

ಕಾರ್ಯಂ ಸತತಮಿಚ್ಛದ್ಭಿಃ ಶ್ರೇಯಃ ಸರ್ವಾತ್ಮನಾ ಗೃಹೇ ॥18॥
ಗೃಹದಲ್ಲಿ ಸರ್ವರೀತಿಯಾದ ಶ್ರೇಯಸ್ಸನ್ನು ಬಯಸುವವರು ಯಾವಾಗಲೂ ತಿಲಗಳನ್ನು ಭಕ್ಷಿಸಬೇಕು ಮತ್ತು ಅವುಗಳಿಂದ ಹೋಮವನ್ನು ಮಾಡಬೇಕು.
ತಥಾಽಽಪಃ ಸರ್ವದಾ ದೇಯಾಃ ಪೇಯಾಶ್ಚೈವ ನ ಸಂಶಯಃ |
ಪುಷ್ಕರಿಣ್ಯಸ್ತಡಾಗಾನಿ ಕೂಪಾಂಶ್ಚೈವಾತ್ರ ಖಾನಯೇತ್ ॥19॥
ಹಾಗೆಯೇ ಜಲವನ್ನು ಯಾವಾಗಲೂ ದಾನ ಮಾಡಬೇಕು ಮತ್ತು ಪಾನ ಮಾಡಬೇಕು. ಸರೋವರಗಳನ್ನು, ಕೆರೆಗಳನ್ನು ಮತ್ತು ಬಾವಿಗಳನ್ನು ತೋಡಿಸಬೇಕು.
ಏತತ್ ಸುದುರ್ಲಭತರಮಿಹ ಲೋಕೇ ದ್ವಿಜೋತ್ತಮ |
ಆಪೋ ನಿತ್ಯಂ ಪ್ರದೇಯಾಸ್ತೇ ಪುಣ್ಯಂ ಹ್ಯೇತದನುತ್ತಮಮ್ ॥20॥
ಎಲೈ ದ್ವಿಜೋತ್ತಮನೇ, ಈ ನರಕಲೋಕದಲ್ಲಿ ಜಲವು ಬಹಳ ದುರ್ಲಭವಾದುದು. ಆದ್ದರಿಂದ ನಿತ್ಯವೂ ಜಲದಾನವನ್ನು ಮಾಡಬೇಕು. ಅದರಿಂದ ಶ್ರೇಷ್ಠವಾದ ಪುಣ್ಯ ಉಂಟಾಗುತ್ತದೆ.
ಪ್ರಪಾಶ್ಚ ಕಾರ್ಯಾಃ ಪಾನಾರ್ಥಂ ನಿತ್ಯಂ ತೇ ದ್ವಿಜಸತ್ತಮ |
ಪುಷ್ಕರಿಣ್ಯಸ್ತಟಾಕಾರ್ಥಂ ನಿತ್ಯಂ ತೇ ದ್ವಿಜಸತ್ತಮ |
ಪಾನೀಯಾಭ್ಯರ್ಥಿನಂ ದೃಷ್ಟ್ವಾ ಪ್ರೀತ್ಯಾ ದದ್ಯಾತ್ ತ್ವರಾನ್ವಿತಃ ॥21॥
ಎಲೈ ದ್ವಿಜಶ್ರೇಷ್ಠನೇ, ನೀರನ್ನು ಕುಡಿಯುವ ಸಲುವಾಗಿ ಅರವಟ್ಟಿಗೆಗಳನ್ನು ಕಟ್ಟಿಸಬೇಕು. ಕೆರೆ-ಬಾವಿಗಳನ್ನು ನಿರ್ಮಿಸಬೇಕು. ಬಾಯಾರಿದವನನ್ನು ನೋಡಿ ಶೀಘ್ರವಾಗಿ ಪ್ರೀತಿಯಿಂದ ನೀರನ್ನು ಕೊಡಬೇಕು.
ತಿಲತಂಡುಲಪ್ರದಾನೇನ ವತ್ಸರಾಣಿ ಪ್ರದಾಯಕೌ |
ವಸ್ತ್ರೇ ತಂತುಪ್ರಮಾಣೇನ ದೀಪೇ ನಿಮಿಷವತ್ಸರಮ್ ॥22॥
ಗವಾಂ ರೋಮಪ್ರಮಾಣೇನ ಸ್ವರ್ಗಭೋಗಮುಪಾಶ್ನುತೇ |
ಜಲೇ ಬಿಂದುಪ್ರಮಾಣೇನ ತದೇತಾನ್ಯಪವರ್ಜಯ ॥23॥
ಭುಕ್ತೇಽಪ್ಯಥ ಪ್ರದೇಯಂ ತೇ ಪಾನೀಯಂ ವೈ ವಿಶೇಷತಃ ॥24॥
ತಿಲವನ್ನು ದಾನ ಮಾಡುವವನು ಆ ಕಾಳುಗಳ ಸಂಖ್ಯೆಯಷ್ಟು ಸಂವತ್ಸರಗಳ ಕಾಲ, ವಸ್ತ್ರವನ್ನು ದಾನ ಮಾಡುವವನು ವಸ್ತ್ರದಲ್ಲಿರುವ ನೂಲುಗಳ ಸಂಖ್ಯೆಯಷ್ಟು ವರ್ಷಗಳ ಕಾಲ, ದೀಪವನ್ನು ದಾನ ಮಾಡಿದವನು ದೀಪವು ಮುಗಿಯುವ ನಿಮಿಷಗಳ ಸಂಖ್ಯೆಯಷ್ಟು ವರ್ಷಗಳ ಕಾಲ, ಗೋದಾನವನ್ನು ಮಾಡುವವನು ಗೋವಿನ ದೇಹದಲ್ಲಿರುವ ರೋಮಗಳ ಸಂಖ್ಯೆಯಷ್ಟು ವರ್ಷಗಳ ಕಾಲ, ಜಲದಾನವನ್ನು ಮಾಡಿದವನು ಜಲದ ಬಿಂದುಗಳ ಸಂಖ್ಯೆಯಷ್ಟು ವರ್ಷಗಳ ಕಾಲ ಸ್ವರ್ಗ ಭೋಗವನ್ನು ಅನುಭವಿಸುತ್ತಾನೆ. ಆದ್ದರಿಂದ ಅವುಗಳನ್ನು ದಾನ ಮಾಡು ಮತ್ತು ಭೋಜನ ಕಾಲದಲ್ಲಿಯೂ ವಿಶೇಷವಾಗಿ ಜಲವನ್ನು ದಾನ ಮಾಡಬೇಕು (ಎಂದು ಹೇಳಿದನು).
ಇತ್ಯುಕ್ತೇ ಸ ತದಾ ತೇನ ಯಮದೂತೇನ ವೈ ಗೃಹಾನ್ |
ನೀತಶ್ಚಕಾರ ಚ ತಥಾ ಸರ್ವಂ ತದ್ಯಮಶಾಸನಮ್ ॥25॥
ಯಮದೇವರು ಹೀಗೆ ಹೇಳಿದ ಮೇಲೆ ಆ ಬ್ರಾಹ್ಮಣನು ಯಮದೂತನಿಂದ ತನ್ನ ಗೃಹಕ್ಕೆ ಕರೆತರಲ್ಪಟ್ಟು ಯಮನು ಹೇಳಿದ ಎಲ್ಲವನ್ನೂ ಅನುಷ್ಠಾನ ಮಾಡಿದನು.
ನೀತ್ವಾ ತಂ ಯಮದೂತೋಽಪಿ ಗೃಹೀತ್ವಾ ಶರ್ಮಿಣಂ ತದಾ |
ಯಯೌ ಸ ಧರ್ಮರಾಜಾಯ ನ್ಯವೇದಯತ ಚಾಪಿ ತಮ್ ॥26॥
ಯಮದೂತನಾದರೂ ಅವನನ್ನು ಅವನ ಮನೆಯಲ್ಲಿ ಬಿಟ್ಟು, ಯಮದೇವರು ಮೊದಲು ಹೇಳಿದ ಶರ್ಮಿಯನ್ನು ಕರೆದುಕೊಂಡು ಧರ್ಮರಾಜನ ಬಳಿಗೆ ಹೋಗಿ ಅವನನ್ನು ನಿವೇದಿಸಿದನು.
ತಂ ಧರ್ಮರಾಜೋ ಧರ್ಮಜ್ಞಂ ಪೂಜಯಿತ್ವಾ ಪ್ರತಾಪವಾನ್ |
ಕೃತ್ವಾ ಚ ಸಂವಿದಂ ತೇನ ವಿಸಸರ್ಜ ಯಥಾಗತಮ್ ॥27॥
ಪ್ರತಾಪಶಾಲಿಯಾದ ಧರ್ಮರಾಜನು ಧರ್ಮಜ್ಞನಾದ ಶರ್ಮಿಯನ್ನು ಪೂಜಿಸಿ ಅವನ ಜೊತೆಯಲ್ಲಿ ಸಂಭಾಷಣೆಯನ್ನು ಮಾಡಿ, ಅವನನ್ನು ಬಂದಂತೆಯೇ ಹಿಂದಕ್ಕೆ ಕಳುಹಿಸಿದನು.
ತಸ್ಯಾಪಿ ಚ ಯಮಃ ಸರ್ವಮುಪದೇಶಂ ಚಕಾರ ಹ |
ಪ್ರತ್ಯೇತ್ಯ ಚ ಸ ತತ್ಸರ್ವಂ ಚಕಾರೋಕ್ತಂ ಯಮೇನ ತತ್ ॥28॥
ಯಮನು ಅವನಿಗೂ ಸಹ ಎಲ್ಲ ಉಪದೇಶವನ್ನೂ ಮಾಡಿದನು. ಆ ಬ್ರಾಹ್ಮಣನೂ ಸಹ ಮನೆಗೆ ಹಿಂದಿರುಗಿ ಯಮನು ಹೇಳಿದ ಎಲ್ಲವನ್ನೂ ಆಚರಿಸಿದನು.
ತಸ್ಮಾತ್ ದೀಪಾಃ ಪ್ರದಾತವ್ಯಾ ದೈವೇ ಪಿತ್ರ್ಯೇಥ ಗೌರ್ದ್ವಿಜೇ |
ತಥಾ ಪ್ರಶಂಸತೇ ದೀಪಾನ್ಯಮಃ ಪಿತೃಹಿತೇಪ್ಸಯಾ |
ತಸ್ಮಾದ್ ದೀಪಪ್ರದೋ ನಿತ್ಯಂ ಸಂತಾರಯತಿ ವೈ ಪಿತೄನ್ ॥29॥
ಆದ್ದರಿಂದ ದೈವಕಾರ್ಯದಲ್ಲಿಯೂ ಮತ್ತು ಪಿತೃಕಾರ್ಯದಲ್ಲಿಯೂ ದೀಪವನ್ನು ದಾನ ಮಾಡಬೇಕು ಮತ್ತು ಪಿತೃಕಾರ್ಯಗಳಲ್ಲಿ ಬ್ರಾಹ್ಮಣರಿಗೆ ಗೋದಾನವನ್ನು ಮಾಡಬೇಕು. ಪಿತೃಹಿತವನ್ನು ಮಾಡಲು ಬಯಸಿ ಯಮನು ದೀಪದಾನದ ಪ್ರಶಂಸೆಯನ್ನು ಮಾಡುತ್ತಾನೆ. ಆದ್ದರಿಂದ ನಿತ್ಯವೂ ದೀಪದಾನವನ್ನು ಮಾಡುವವನು ತನ್ನ ಪಿತೃಗಳನ್ನು ಸಂಕಟದಿಂದ ಪಾರು ಮಾಡುತ್ತಾನೆ.
ದಾತವ್ಯಾಃ ಸತತಂ ದೀಪಾಸ್ತಸ್ಮಾದ್ ಭರತಸತ್ತಮ |

ದೇವಾನಾಂ ಚ ಪಿತೃಣಾಂ ಚ ಚಕ್ಷುಷ್ಯಾಸ್ತೇ ಮತಾಃ ಪ್ರಭೋ ॥30॥
ಎಲೈ ಭರತಶ್ರೇಷ್ಠನೇ, ಆದ್ದರಿಂದ ಸತತವಾಗಿ ದೀಪದಾನವನ್ನು ಮಾಡಬೇಕು. ಎಲೈ ಪ್ರಭುವೇ, ದೀಪಗಳು ದೇವತೆಗಳಿಗೂ ಮತ್ತು ಪಿತೃಗಳಿಗೂ ಚಕ್ಷುಸ್ಸಿನ ಸ್ಥಾನದಲ್ಲಿವೆ ಎಂದು ಹೇಳಲ್ಪಡುತ್ತವೆ.
ರತ್ನದಾನಂ ಚ ಸುಮಹತ್ಪುಣ್ಯಮುಕ್ತಂ ಜನಾಧಿಪ |
ತಾನಿ ವಿಕ್ರೀಯ ಯಜತೇ ಬ್ರಾಹ್ಮಣೋ ಹ್ಯಭಯಂಕರಃ ॥31॥
ಎಲೈ ಜನಾಧಿಪನೇ, ರತ್ನದಾನವೂ ಸಹ ಬಹಳ ಪುಣ್ಯಪ್ರದವೆಂದು ಹೇಳಲ್ಪಡುತ್ತದೆ. ಅಂತಹ ರತ್ನವನ್ನು ಮಾರಿ ಅಭಯಪ್ರದನಾದ ಬ್ರಾಹ್ಮಣನು ಯಜ್ಞವನ್ನು ಮಾಡುತ್ತಾನೆ.
ಯದ್ವೈ ದದಾತಿ ವಿಪ್ರೇಭ್ಯೋ ಬ್ರಾಹ್ಮಣಃ ಪ್ರತಿಗೃಹ್ಯ ವೈ |
ಉಭಯೋಃ ಸ್ಯಾತ್ ತದಕ್ಷಯ್ಯಂ ದಾತುರಾದಾತುರೇವ ಚ ॥32॥
ಬ್ರಾಹ್ಮಣನು ಯಾವುದನ್ನು ಸ್ವೀಕರಿಸಿ, ಇನ್ನೊಬ್ಬ ಬ್ರಾಹ್ಮಣನಿಗೆ ದಾನವನ್ನು ಮಾಡುತ್ತಾನೆಯೋ ಅದರಿಂದ ದಾನವನ್ನು ಮಾಡುವವನಿಗೂ, ಸ್ವೀಕರಿಸುವವನಿಗೂ ಅಕ್ಷಯವಾದ ಫಲವುಂಟಾಗುತ್ತದೆ.
ಯೋ ದದಾತಿ ಸ್ಥಿತಃ ಸ್ಥಿತ್ಯಾಂ ತಾದೃಶಾಯ ಪ್ರತಿಗ್ರಹಮ್ |
ಉಭಯೋರಕ್ಷಯಂ ಧರ್ಮಂ ತಂ ಮನುಃ ಪ್ರಾಹ ಧರ್ಮವಿತ್ ॥33॥
ಯಾವನು ತಾನು ಸ್ಥಿತವಂತನಾಗಿ ಸ್ಥಿತಿವಂತನಾದ ಇನ್ನೊಬ್ಬ ಬ್ರಾಹ್ಮಣನಿಗೆ ದಾನವನ್ನು ಮಾಡುತ್ತಾನೆಯೋ ಅಂತಹ ದಾನವು ಇಬ್ಬರಿಗೂ ಅಕ್ಷಯವಾದ ಧರ್ಮವನ್ನುಂಟು ಮಾಡುವುದು ಎಂದು ಧರ್ಮಜ್ಞನಾದ ಮನುವು ಹೇಳುತ್ತಾನೆ.
ವಾಸಸಾಂ ತು ಪ್ರದಾನೇನ ಸ್ವದಾರನಿರತೋ ನರಃ |
ಸುವಸ್ತ್ರಶ್ಚ ಸುವೇಷಶ್ಚ ಭವತೀತ್ಯನುಶುಶ್ರುಮ ॥34॥
ತನ್ನ ಪತ್ನಿಯಲ್ಲೇ ನಿರತನಾದ ಪುರುಷನು ವಸ್ತ್ರದಾನವನ್ನು ಮಾಡುವುದರಿಂದ ಒಳ್ಳೆಯ ವಸ್ತ್ರವನ್ನೂ, ಒಳ್ಳೆಯ ವೇಷವನ್ನೂ ಪಡೆಯುತ್ತಾನೆ ಎಂದು ನಾವು ಕೇಳಿದ್ದೇವೆ.
ಗಾವಃ ಸುವರ್ಣಂ ಚ ತಥಾ ತಿಲಾಶ್ಚೈವಾನುವರ್ಣಿತಾಃ |
ಬಹುಶಃ ಪುರುಷವ್ಯಾಘ್ರ ವೇದಪ್ರಾಮಾಣ್ಯದರ್ಶನಾತ್ ॥35॥
ಎಲೈ ಪುರುಷವ್ಯಾಘ್ರನೇ, ನಾನು ವೇದದ ಅನುಶಾಸನಕ್ಕೆ ಅನುಗುಣವಾಗಿ ನಿನಗೆ ಗೋವುಗಳ (ಗೋದಾನದ), ಸುವರ್ಣದ (ಸುವರ್ಣದಾನದ) ಮತ್ತು ತಿಲಗಳ (ತಿಲದಾನದ) ಮಹಿಮೆಯನ್ನು ಅನೇಕ ರೀತಿಯಲ್ಲಿ ವರ್ಣಿಸಿದ್ದೇನೆ.
ವಿವಾಹಾಂಶ್ಚೈವ ಕುರ್ವೀತ ಪುತ್ರಾನುತ್ಪಾದಯೇತ ಚ |
ಪುತ್ರಲಾಭೋ ಹಿ ಕೌರವ್ಯ ಸರ್ವಲಾಭಾದ್ ವಿಶಿಷ್ಯತೇ ॥36॥
ವಿವಾಹವನ್ನು ಮಾಡಿಕೊಂಡು ಪುತ್ರರನ್ನು ಪಡೆಯಬೇಕು. ಎಲೈ ಕೌರವ್ಯನೇ, ಪುತ್ರಲಾಭವು ಸರ್ವಲಾಭಗಳಿಗಿಂತ ಶ್ರೇಷ್ಠವಾದುದಷ್ಟೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಷ್ಟನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂಬತ್ತನೆಯ ಅಧ್ಯಾಯ
ಗೋದಾನದ ಫಲ
ಯುಧಿಷ್ಠಿರಃ
ಭೂಯ ಏವ ಕುರುಶ್ರೇಷ್ಠ ದಾನಾನಾಂ ವಿಧಿಮುತ್ತಮಮ್ |
ಕಥಯಸ್ವ ಮಹಾಪ್ರಾಜ್ಞ ಭೂಮಿದಾನಂ ವಿಶೇಷತಃ ॥1॥
ಯುಧಿಷ್ಠಿರ ಎಲೈ ಕುರುಶ್ರೇಷ್ಠನೇ, ಪುನಃ ದಾನಗಳ ಶ್ರೇಷ್ಠವಾದ ವಿಧಿಯನ್ನು ಹೇಳು. ಮಹಾಪ್ರಾಜ್ಞನೇ, ಭೂಮಿದಾನದ ವಿಧಿಯನ್ನು ವಿಶೇಷವಾಗಿ ಹೇಳು.
ಪೃಥಿವೀಂ ಕ್ಷತ್ರಿಯೋ ದದ್ಯಾದ್ ಬ್ರಾಹ್ಮಣಸ್ತಾಂ ಸ್ವಕರ್ಮಣಾ |
ವಿಧಿವತ್ ಪ್ರತಿಗೃಹ್ಣೀಯಾನ್ನ ತ್ವನ್ಯೋ ದಾತುಮರ್ಹತಿ ॥2॥
ಭೂಮಿಯನ್ನು ಕ್ಷತ್ರಿಯರು ದಾನ ಮಾಡಬಹುದು. ಸ್ವಕರ್ಮನಿರತರಾದ ಬ್ರಾಹ್ಮಣರು ವಿಧಿಗೆ ಅನುಸಾರವಾಗಿ ಅದನ್ನು ಸ್ವೀಕರಿಸಬಹುದು. ಆದರೆ ಕ್ಷತ್ರಿಯನನ್ನು ಬಿಟ್ಟು ಇನ್ನೊಬ್ಬನು ಭೂದಾನವನ್ನು ಕೊಡಲಾರ.
ಸರ್ವವರ್ಣೈಸ್ತು ಯಚ್ಛಕ್ಯಂ ಪ್ರದಾತುಂ ಫಲಕಾಂಕ್ಷಿಭಿಃ |
ವೇದೇ ವಾ ಯತ್ ಸಮಾಮ್ನಾತಂ ತನ್ಮೇ ವ್ಯಾಖ್ಯಾತುಮರ್ಹಸಿ ॥3॥
ಆದರೆ ಯಾವುದನ್ನು ಶ್ರೇಷ್ಠಫಲವನ್ನು ಬಯಸುವ ಸರ್ವವರ್ಣದವರೂ ದಾನ ಮಾಡಲು ಸಾಧ್ಯವೋ ಮತ್ತು ವೇದದಲ್ಲಿ ವಿಹಿತವಾಗಿದೆಯೋ ಅದನ್ನು ನನಗೆ ಹೇಳು.
ಭೀಷ್ಮಃ
ತುಲ್ಯನಾಮಾನಿ ದೇಯಾನಿ ತ್ರೀಣಿ ತುಲ್ಯಫಲಾನಿ ಚ |
ಸರ್ವಕಾಮಫಲಾನೀಹ ಗಾವಃ ಪೃಥ್ವೀ ಸರಸ್ವತೀ ॥4॥
ಭೀಷ್ಮ ಸಮಾನನಾಮವುಳ್ಳ ಈ ಮೂರು ಪದಾರ್ಥಗಳ ದಾನವು ಸಮಾನ ಫಲವನ್ನು ಕೊಡುತ್ತದೆ. ಗೋವುಗಳು, ಪೃಥಿವಿ ಮತ್ತು

ವೇದವಾಣಿ ಇವುಗಳು ಸರ್ವಕಾಮಫಲವನ್ನೂ ಕೊಡುತ್ತವೆ (ಗೋವುಗಳು, ಪೃಥಿವಿ ಮತ್ತು ವಿದ್ಯೆ ಈ ಮೂರು ಗೋ ಶಬ್ದದಿಂದ ಹೇಳಲ್ಪಡುತ್ತವೆ- ಲಕ್ಷ್ಮಾಲಂಕಾರ).
ಯೋ ಬ್ರೂಯಾಚ್ಚಾಪಿ ಶಿಷ್ಯಾಯ ಧರ್ಮ್ಯಾಂ ಬ್ರಾಹ್ಮೀಂ ಸರಸ್ವತೀಮ್ |
ಪೃಥಿವೀಗೋಪ್ರದಾನಾಭ್ಯಾಂ ಸ ತುಲ್ಯಂ ಫಲಮಶ್ನುತೇ ॥5॥
ಯಾವನು ಶಿಷ್ಯನಿಗೆ ಧರ್ಮಸಂಬಂಧಿಯಾದ ವೇದವಾಣಿಯನ್ನು ಉಪದೇಶ ಮಾಡುತ್ತಾನೆಯೋ ಅವನು ಭೂದಾನ ಮತ್ತು ಗೋದಾನಗಳಿಗೆ ಸಮವಾದ ಫಲವನ್ನು ಹೊಂದುತ್ತಾನೆ.
ತಥೈವ ಗಾಃ ಪ್ರಶಂಸಂತಿ ನ ಚ ದೇಯಂ ತತಃ ಪರಮ್ |
ಸನ್ನಿಕೃಷ್ಟಫಲಾಸ್ತಾ ಹಿ ಲಘ್ವರ್ಥಾಶ್ಚ ಯುಧಿಷ್ಠಿರ |
ಮಾತರಃ ಸರ್ವಭೂತಾನಾಂ ಗಾವಃ ಸರ್ವಸುಖಪ್ರದಾಃ ॥6॥
ಹಾಗೆಯೇ ಗೋವನ್ನು ಪ್ರಶಂಸೆ ಮಾಡುತ್ತಾರೆ. ಗೋವುಗಳಿಗಿಂತ ಶ್ರೇಷ್ಠವಾದ ದಾನ ಕೊಡಬೇಕಾದ ವಸ್ತುವು ಇನ್ನೊಂದಿಲ್ಲ. ಎಲೈ ಯುಧಿಷ್ಠಿರನೇ, ಗೋವುಗಳ ದಾನವನ್ನು ಕೊಡುವುದು ಸುಲಭವಾದುದು ಮತ್ತು ಶೀಘ್ರವಾಗಿ ಫಲವನ್ನು ಕೊಡುವಂತಹದು. ಗೋವುಗಳು ಸರ್ವಪ್ರಾಣಿಗಳಿಗೆ ತಾಯಿಯರಾಗಿದ್ದು ಸರ್ವಸುಖವನ್ನು ಕೊಡುತ್ತವೆ.
ವೃದ್ಧಿಮಾಕಾಂಕ್ಷತಾ ನಿತ್ಯಂ ಗಾವಃ ಕಾರ್ಯಾಃ ಪ್ರದಕ್ಷಿಣಾಃ |
ಮಂಗಲಾಯತನಂ ದೇವ್ಯಸ್ತಸ್ಮಾತ್ ಪೂಜ್ಯಾಃ ಸದೈವ ಹಿ |
ಸಂತಾಡ್ಯಾ ನ ತು ಪಾದೇನ ಗವಾಂ ಮಧ್ಯೇ ಚ ನ ವ್ರಜೇತ್ ॥7॥
ಸಮೃದ್ಧಿಯನ್ನು ಅಪೇಕ್ಷಿಸುವವನು ನಿತ್ಯವೂ ಗೋವುಗಳಿಗೆ ಪ್ರದಕ್ಷಿಣೆಯನ್ನು ಮಾಡಬೇಕು. ಗೋಮಾತೆಯರು ಸರ್ವಮಂಗಳಗಳಿಗೆ ಆಶ್ರಯರಾದವರು. ಆದ್ದರಿಂದ ಯಾವಾಗಲೂ ಪೂಜಿಸಬೇಕು. ಗೋವುಗಳನ್ನು ಪಾದದಿಂದ ಒದೆಯಬಾರದು. ಗೋವುಗಳ ಮಧ್ಯದಲ್ಲಿ ನಡೆದು ಹೋಗಬಾರದು.
ಪ್ರಚೋದನಂ ದೇವಕೃತಂ ಗವಾಂ ಕರ್ಮಸು ವರ್ತತಾಮ್ |
ಪೂರ್ವಮೇವಾಕ್ಷರಂ ನಾನ್ಯದಭಿಧೇಯಂ ಕಥಂಚನ ॥8॥
ವ್ಯವಸಾಯ ಮಾಡುವ ಗೋವುಗಳ ಪ್ರೇರಣೆಯು ದೇವತೆಗಳಿಂದ ನಡೆಯುತ್ತದೆ. ಕೆಲಸ ಮಾಡುವಾಗ ಅವುಗಳಿಗೆ ಮೊದಲನೆಯ ಒಂದು ಅಕ್ಷರವನ್ನು ಮಾತ್ರ ಹೇಳಬೇಕು. ಬೇರೆ ಏನನ್ನೂ ಹೇಳಬಾರದು (ಕೆಲಸ ಮಾಡುವಾಗ ಸಾಮಾನ್ಯವಾಗಿ ಗೋವುಗಳನ್ನು ಮತ್ತು ವೃಷಭಗಳನ್ನು ಬೈಯ್ಯುವುದುಂಟು. ಹಾಗೆ ಮಾಡದೆ ಅವುಗಳಿಗೆ ಪ್ರಿಯವಾದ `ಬಾ, ಯಾ, ಗೋ' ಎಂಬ ಇತ್ಯಾದಿ ಒಂದೇ ಅಕ್ಷರವನ್ನು ಹೇಳಿ ಅವುಗಳನ್ನು ಕಾರ್ಯದಲ್ಲಿ ಪ್ರಚೋದಿಸಬೇಕು- ಲಕ್ಷ್ಮಾಲಂಕಾರ).
ಪ್ರಚಾರೇ ವಾ ನಿಪಾನೇ ವಾ ಬುಧೋ ನೋದ್ವೇಜಯೇತ ಗಾಃ |
ತೃಷಿತಾ ಹ್ಯಭಿವೀಕ್ಷಂತ್ಯೋ ನರಂ ಹನ್ಯುಃ ಸಬಾಂಧವಮ್ ॥9॥
ಗೋವುಗಳು ಹುಲ್ಲನ್ನು ತಿನ್ನುವಾಗ ಅಥವಾ ನೀರನ್ನು ಕುಡಿಯುವಾಗ ವಿವೇಕಿಯಾದವನು ಅವುಗಳಿಗೆ ಭಯವನ್ನು ಉಂಟುಮಾಡಬಾರದು. ಬಾಯಾರಿದ ಗೋವುಗಳು ಭಯದಿಂದ ಮನುಷ್ಯನನ್ನು ನೋಡಿದರೆ ಅವು ಬಾಂಧವರಿಂದ ಸಹಿತರಾದ ಮನುಷ್ಯನನ್ನು ಕೊಂದಾವು.
ಪಿತೃಸದ್ಮಾನಿ ಸತತಂ ದೇವತಾಯತನಾನಿ ಚ |
ಪೂಯಂತೇ ಶಕೃತಾ ಯಾಸಾಂ ಪೂತಂ ಕಿಮಧಿಕಂ ತತಃ ॥10॥
ಯಾವ ಗೋವುಗಳ ಗೋಮಯದಿಂದ ದೇವಾಲಯಗಳು ಮತ್ತು ಶ್ಮಶಾನಗಳು ಪವಿತ್ರವಾಗುತ್ತವೆಯೋ ಅಂತಹ ಗೋವುಗಳಿಗಿಂತ ಅಧಿಕವಾದುದು ಯಾವುದಿದೆ?
ಗ್ರಾಸಮುಷ್ಟಿಂ ಪರಗವೇ ದದ್ಯಾತ್ ಸಂವತ್ಸರಂ ತು ಯಃ |
ಅಕೃತ್ವಾ ಸ್ವಯಮಾಹಾರಂ ವ್ರತಂ ತತ್ ಸಾರ್ವಕಾಮಿಕಮ್ ॥11॥
ಯಾವನು ತಾನು ಆಹಾರವನ್ನು ತೆಗೆದುಕೊಳ್ಳುವುದಕ್ಕಿಂತ ಮೊದಲು ಇನ್ನೊಬ್ಬನ ಗೋವಿಗೆ ಒಂದು ಹಿಡಿ ಹುಲ್ಲನ್ನು ಒಂದು ವರ್ಷದ ಕಾಲ ಕೊಡುತ್ತಾನೆಯೋ ಅದಕ್ಕೆ ಸರ್ವಕಾಮಫಲಪ್ರದವಾದ ವ್ರತವೆಂದು ಹೆಸರು.
ಸ ಹಿ ಪುತ್ರಾನ್ ಯಶೋಽರ್ಥಂ ಚ ಶ್ರಿಯಂ ಚಾಪ್ಯಧಿಗಚ್ಛತಿ |
ನಾಶಯತ್ಯಶುಭಂ ಚೈವ ದುಃಸ್ವಪ್ನಂ ಚ ವ್ಯಪೋಹತಿ ॥12॥
ಅವನು ಪುತ್ರರನ್ನೂ, ಕೀರ್ತಿಯನ್ನೂ, ಧನವನ್ನೂ, ಸಂಪತ್ತನ್ನೂ ಪಡೆಯುತ್ತಾನೆ. ಅಶುಭವನ್ನೂ ಮತ್ತು ದುಃಸ್ವಪ್ನ ಫಲವನ್ನೂ ನಾಶ ಮಾಡುತ್ತಾನೆ.
ಯುಧಿಷ್ಠಿರಃ
ದೇಯಾಃ ಕಿಂಲಕ್ಷಣಾ ಗಾವಃ ಕಾಶ್ಚಾಪಿ ಪರಿವರ್ಜಯೇತ್ |
ಕೀದೃಶಾಯ ಪ್ರದಾತವ್ಯಾ ನ ದೇಯಾಃ ಕೀದೃಶಾಯ ಚ ॥13॥
ಯುಧಿಷ್ಠಿರ ಎಂತಹ ಲಕ್ಷಣವುಳ್ಳ ಗೋವುಗಳನ್ನು ಕೊಡಬೇಕು? ಎಂತಹ ಗೋವುಗಳನ್ನು ಕೊಡಬಾರದು? ಎಂತಹವನಿಗೆ ಕೊಡಬೇಕು? ಮತ್ತು ಎಂತಹವನಿಗೆ ಕೊಡಬಾರದು?
ಭೀಷ್ಮಃ
ಅಸದ್‌ವೃತ್ತಾಯ ಪಾಪಾಯ ಲುಬ್ಧಾಯಾನೃತವಾದಿನೇ |
ಹವ್ಯಕವ್ಯವ್ಯಪೇತಾಯ ನ ದೇಯಾ ಗೌಃ ಕಥಂಚನ ॥14॥
ಭೀಷ್ಮ ದುರ್ನಡತೆಯುಳ್ಳ, ಪಾಪಿಷ್ಠನಾದ, ಲೋಭಿಯಾದ, ಅನೃತಭಾಷಿಯಾದ, ಹವ್ಯ-ಕವ್ಯರಹಿತನಾದ ಮನುಷ್ಯನಿಗೆ ಎಂದೂ

ಗೋದಾನವನ್ನು ಮಾಡಬಾರದು.
ಭಿಕ್ಷವೇ ಬಹುಪುತ್ರಾಯ ಶ್ರೋತ್ರಿಯಾಯಾಹಿತಾಗ್ನಯೇ |
ದತ್ತ್ವಾ ದಶಗವಾಂ ದಾತಾ ಲೋಕಾನಾಪ್ನೋತ್ಯನುತ್ತಮಾನ್ ॥15॥
ಬಹುಪುತ್ರರನ್ನು ಹೊಂದಿದ, ಆಹಿತಾಗ್ನಿಯಾದ, ಯಾಚಿಸುವ ಶ್ರೋತ್ರಿಯನಿಗೆ ಹತ್ತು ಗೋವುಗಳನ್ನು ದಾನ ಮಾಡುವವನು ಶ್ರೇಷ್ಠವಾದ ಲೋಕಗಳನ್ನು ಪಡೆಯುತ್ತಾನೆ.
ಯಂ ಚೈವ ಧರ್ಮಂ ಕುರುತೇ ತಸ್ಯ ಪುಣ್ಯಫಲಂ ಚ ಯತ್ |
ಸರ್ವಸ್ಯೈವಾಂಶಭಾಗ್ ದಾತಾ ತನ್ನಿಮಿತ್ತಂ ಪ್ರವೃತ್ತಯಃ ॥16॥
ದಾನವನ್ನು ಸ್ವೀಕಾರ ಮಾಡುವವನು ಯಾವ ಧರ್ಮವನ್ನು ಮಾಡುತ್ತಾನೆಯೋ ಅವೆಲ್ಲದರ ಪುಣ್ಯಫಲದ ಒಂದು ಅಂಶಗಳನ್ನು ದಾನವನ್ನು ಕೊಟ್ಟವನು ಪಡೆಯುತ್ತಾನೆ. ಅವನು ದಾನ ಕೊಟ್ಟುದುದರಿಂದಲೇ ಸ್ವೀಕಾರ ಮಾಡಿದವನ ಧರ್ಮಪ್ರವೃತ್ತಿಯು ಉಂಟಾಗುತ್ತದೆ.
ಜುಹೋತಿ ಯದ್ ಭೋಜಯತಿ ಯದ್ ದದಾತಿ ಗವಾಂ ರಸೈಃ |
ಅರ್ಥಸ್ಯ ದಶಭಾಗ್ ದಾತಾ ತನ್ನಿವೃತ್ತಪ್ರವೃತ್ತಯೇ ॥17॥
ಪ್ರತಿಗ್ರಹವನ್ನು ಮಾಡಿದವನು ಮಾಡುವ ಹೋಮ, ಗೋರಸಗಳಿಂದ ಮಾಡುವ ಹೋಮ, ಭೋಜನ, ದಾನ ಇವುಗಳೆಲ್ಲದರ ಹತ್ತನೆಯ ಒಂದು ಭಾಗವನ್ನು ದಾನ ಮಾಡಿದವನು ಪಡೆಯುತ್ತಾನೆ.
ಯಶ್ಚೈನಮುತ್ಪಾದಯತಿ ಯಶ್ಚೈನಂ ತ್ರಾಯತೇ ಭಯಾತ್ |
ಯಶ್ಚಾಸ್ಯ ಕುರುತೇ ವೃತ್ತಿಂ ಸರ್ವೇ ತೇ ಪಿತರಸ್ತ್ರಯಃ ॥18॥
ಸಾಕ್ಷಾತ್ ಜನಕನಾದವನು, ಭಯದಿಂದ ರಕ್ಷಿಸುವವನು, ಜೀವನೋಪಾಯವನ್ನು ಕಲ್ಪಿಸಿಕೊಡುವವನು ಈ ಮೂವರೂ ಪಿತೃಗಳೆಂದು ಹೇಳಲ್ಪಡುತ್ತಾರೆ.
ಕಲ್ಮಷಂ ಗುರುಶುಶ್ರೂಷಾ ಹಂತಿ ಮಾನೋ ಮಹದ್ಯಶಃ |
ಅಪುತ್ರತಾಂ ತ್ರಯಃ ಪುತ್ರಾ ಅವೃತ್ತಿಂ ದಶ ಧೇನವಃ ॥19॥
ಗುರುಶುಶ್ರೂಷೆಯು ದೋಷಗಳನ್ನು ಪರಿಹರಿಸುತ್ತದೆ. ಅಹಂಕಾರವು ಕೀರ್ತಿಯನ್ನು ವಿನಾಶಗೊಳಿಸುತ್ತದೆ. ಅಪುತ್ರತ್ವವನ್ನು ಮೂವರು ಪುತ್ರರು ಪರಿಹರಿಸುತ್ತಾರೆ. ಜೀವನೋಪಾಯ ರಾಹಿತ್ಯವನ್ನು ಹತ್ತು ಗೋವುಗಳು ಪರಿಹರಿಸುತ್ತವೆ.
ವೇದಾಂತನಿಷ್ಠಸ್ಯ ಬಹುಶ್ರುತಸ್ಯ
ಪ್ರಜ್ಞಾನತೃಪ್ತಸ್ಯ ಜಿತೇಂದ್ರಿಯಸ್ಯ |
ಶಿಷ್ಟಸ್ಯ ದಾಂತಸ್ಯ ಯತಸ್ಯ ಚೈವ
ಭೂತೇಷು ನಿತ್ಯಂ ಪ್ರಿಯವಾದಿನಶ್ಚ ॥20॥
ಯಃ ಕ್ಷುದ್ಭಯಾದ್ವೈ ನ ವಿಕರ್ಮ ಕುರ್ಯಾತ್
ಮೃದುರ್ದಾಂತಶ್ಚಾತಿಥೇಯಶ್ಚ ನಿತ್ಯಮ್ |
ವೃತ್ತಿಂ ವಿಪ್ರಾಯಾತಿಸೃಜೇತ ತಸ್ಮೈ
ಯಸ್ತುಲ್ಯಶೀಲಶ್ಚ ಸಪುತ್ರದಾರಃ ॥21॥
ವೇದಾಂತನಿಷ್ಠನೂ, ಬಹುವಿದ್ಯಾಸಂಪನ್ನನೂ, ಜ್ಞಾನತೃಪ್ತನೂ, ಜಿತೇಂದ್ರಿಯನೂ, ಶಿಷ್ಟನೂ, ಇಂದ್ರಿಯನಿಗ್ರಹವುಳ್ಳವನೂ, ವ್ರತಧಾರಿಯೂ, ಎಲ್ಲರಿಗೂ ಪ್ರಿಯವಾಗಿ ಮಾತನಾಡುವವನೂ, ಹಸಿವಿನ ಭಯದಿಂದ ದುಷ್ಕರ್ಮವನ್ನು ಮಾಡದವನೂ, ಮೃದುವೂ, ಯಾವಾಗಲೂ ಅತಿಥಿ ಪ್ರಿಯನೂ, ವಿಪ್ರರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡುವವನೂ ಆದವನಿಗೆ ಅಂತಹವನೇ ಆದ ಪುತ್ರ-ಪತ್ನೀ ಸಹಿತನಾದ ಬ್ರಾಹ್ಮಣನು ಗೋವನ್ನು ದಾನ ಮಾಡಬೇಕು.
ಶುಭೇ ಪಾತ್ರೇ ಯೇ ಗುಣಾ ಗೋಪ್ರದಾನೇ
ತಾವಾನ್ ದೋಷೋ ಬ್ರಾಹ್ಮಣಸ್ವಾಪಹಾರೇ |
ಸರ್ವಾವಸ್ಥಂ ಬ್ರಾಹ್ಮಣಸ್ವಾಪಹಾರೋ
ದಾರಾಶ್ಚೈಷಾಂ ದೂರತೋ ವರ್ಜನೀಯಾಃ ॥22॥
ಯೋಗ್ಯವಾದ ಪಾತ್ರನಲ್ಲಿ ಗೋದಾನ ಮಾಡಿದರೆ ಎಷ್ಟು ಗುಣಗಳಿವೆಯೋ ಬ್ರಾಹ್ಮಣರ ಸ್ವತ್ತನ್ನು ಅಪಹಾರ ಮಾಡಿದರೆ ಅಷ್ಟೇ ದೋಷಗಳಿವೆ. ಯಾವ ಅವಸ್ಥೆಯಲ್ಲಿಯೂ ಬ್ರಾಹ್ಮಣಸ್ವತ್ತನ್ನು ಅಪಹರಿಸಬಾರದು. ಅವರ ಪತ್ನಿಯಿಂದ ಯಾವಾಗಲೂ ದೂರದಲ್ಲಿರಬೇಕು.
ಯುಧಿಷ್ಠಿರಃ
ಬ್ರಾಹ್ಮಣಸ್ವಾಪಹಾರೇಣ ಕಿಯಾನ್ ದೋಷೋ ಭವನ್ತ್ಯುತ |
ಬ್ರಹ್ಮಸ್ವಮುಚ್ಯತೇ ಕಿಂ ವಾ ತನ್ಮೇ ಬ್ರೂಹಿ ಪಿತಾಮಹ ॥23॥
ಯುಧಿಷ್ಠಿರ ಬ್ರಾಹ್ಮಣನ ಸ್ವತ್ತನ್ನು ಅಪಹಾರ ಮಾಡಿದರೆ ಎಷ್ಟು ದೋಷ ಉಂಟಾಗುತ್ತದೆ? ಬ್ರಹ್ಮಸ್ವವನ್ನು ಏನೆಂದು ಕರೆಯುತ್ತಾರೆ? ಪಿತಾಮಹನೇ, ಅದನ್ನು ಹೇಳು.
ಭೀಷ್ಮಃ
ವಿಪ್ರದಾರೇ ಪರಹೃತೇ ವಿಪ್ರಸ್ವನಿಚಯೇ ತಥಾ |
ಪರಿತ್ರಾಯಂತಿ ಶಕ್ತಾಸ್ತು ನಮಸ್ತೇಭ್ಯೋ ಮೃತಾಸ್ತು ವಾ ॥24॥
ಭೀಷ್ಮ ಬ್ರಾಹ್ಮಣರ ಪತ್ನಿಯು ಅಥವಾ ಬ್ರಾಹ್ಮಣರ ಧನವು ಅಪಹೃತವಾದರೆ ಶಕ್ತರಾದ ಯಾರು ಅವರನ್ನು ರಕ್ಷಿಸುತ್ತಾರೋ ಅವರು

ಆ ಪ್ರಯತ್ನದಲ್ಲಿ ಮೃತರಾಗಿದ್ದರೂ ಜೀವಿಸಿದ್ದರೂ ಅವರಿಗೆ ನಮಸ್ಕಾರ.
ನ ಪಾಲಯಂತಿ ನಿಹತಾ ಯೇ ತಾನ್ ವೈವಸ್ವತೋ ಯಮಃ |
ದಂಡಯನ್ ಭರ್ತ್ಸಯನ್ನಿತ್ಯಂ ನಿರಯೇಭ್ಯೋ ನ ಮುಂಚತಿ ॥25॥
ಕಷ್ಟಕ್ಕೆ ಒಳಗಾದ ಬ್ರಾಹ್ಮಣರನ್ನು ಯಾವನು ರಕ್ಷಿಸುವುದಿಲ್ಲವೋ ಅವನನ್ನು ವೈವಸ್ವತನಾದ ಯಮನು ನಿತ್ಯವೂ ಶಿಕ್ಷಿಸುತ್ತಾ, ಗದರಿಸುತ್ತಾ ನರಕದಿಂದ ಹೋಗಲು ಬಿಡುವುದೇ ಇಲ್ಲ.
ತಥಾ ಗವಾಂ ಪರಿತ್ರಾಣೇ ಪೀಡನೇ ಚ ಶುಭಾಶುಭೇ |
ವಿಪ್ರಗೋಷು ವಿಶೇಷೇಣ ರಕ್ಷಿತೇಷು ಹೃತೇಷು ವಾ ॥26॥
ಈ ರೀತಿಯಲ್ಲಿ ಗೋವುಗಳ ರಕ್ಷಣೆ ಮತ್ತು ಪೀಡನದಲ್ಲಿ ಶುಭಾಶುಭ ಫಲಗಳಿವೆ. ಅದರಲ್ಲಿಯೂ ಬ್ರಾಹ್ಮಣರ ಗೋವುಗಳು ರಕ್ಷಿಸಲ್ಪಟ್ಟರೆ ಅಥವಾ ಅಪಹರಿಸಲ್ಪಟ್ಟರೆ ವಿಶೇಷವಾದ ಗುಣದೋಷಗಳು ಉಂಟಾಗುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಗೋದಾನಕ್ಷಣಕಥನಂ ನಾಮ ಏಕೋನಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರನೆಯ ಅಧ್ಯಾಯ
ಗೋದಾನ-ನೃಗೋಪಾಖ್ಯಾನ
ಭೀಷ್ಮಃ
ಅತ್ರೈವ ಕೀರ್ತ್ಯತೇ ಸದ್ಭಿರ್ಬ್ರಾಹ್ಮಣಸ್ವಾಭಿಮರ್ಶನೇ |
ನೃಗೇಣ ಸುಮಹತ್ಕೃಚ್ಛ್ರಂ ಯದವಾಪ್ತಂ ಕುರೂದ್ವಹ ॥1॥
ಭೀಷ್ಮ ಎಲೈ ಕುರೂದ್ವಹನೇ, ಬ್ರಾಹ್ಮಣ ಸ್ವಾಪಹಾರದ ಈ ವಿಷಯದಲ್ಲಿ ಸಜ್ಜನರು ನೃಗ ಮಹಾರಾಜನು ಹೊಂದಿದ ಬಹಳ ಕಷ್ಟದ ಅವಸ್ಥೆಯನ್ನು ಹೇಳುತ್ತಾರೆ.
ನಿವಿಶಂತ್ಯಾಂ ಪುರಾ ಪಾರ್ಥ ದ್ವಾರವತ್ಯಾಮಿತಿ ಶ್ರುತಿಃ |
ಅದೃಶ್ಯತ ಮಹಾಕೂಪಸ್ತೃಣವೀರುತ್ಸಮಾವೃತಃ ॥2॥
ಎಲೈ ಪಾರ್ಥನೇ, ಸಮುದ್ರದಲ್ಲಿ ಪ್ರವೇಶಿಸಿರುವ (ದ್ವೀಪವಾಗಿರುವ) ದ್ವಾರಾವತಿಯಲ್ಲಿ ತೃಣ-ಲತೆಗಳಿಂದ ಮುಚ್ಚಲ್ಪಟ್ಟ ಒಂದು ದೊಡ್ಡ ಕೂಪವು ಕಂಡುಬಂದಿತು ಎಂದು ನಾವು ಕೇಳಿದ್ದೇವೆ.
ಪ್ರಯತ್ನಂ ತತ್ರ ಕುರ್ವಾಣಾಸ್ತಸ್ಮಾತ್ ಕೂಪಾಜ್ಜಲಾರ್ಥಿನಃ |
ಶ್ರಮೇಣ ಮಹತಾ ಯುಕ್ತಾಸ್ತಸ್ಮಿಂಸ್ತೋಯೇ ಸುಸಂವೃತೇ ॥3॥
ಆ ಕೂಪದಿಂದ ನೀರನ್ನು ಪಡೆಯಲು ಬಯಸಿದವರು ಅದು ಚೆನ್ನಾಗಿ ಮುಚ್ಚಿ ಹೋದುದರಿಂದ ಪ್ರಯತ್ನವನ್ನು ಪಟ್ಟರೂ ಬಹಳ ಶ್ರಮವನ್ನು ಹೊಂದಿದರು.
ದದೃಶುಸ್ತೇ ಮಹಾಕಾಯಂ ಕೃಕಲಾಸಮವಸ್ಥಿತಮ್ |
ತಸ್ಯ ಚೋದ್ಧರಣೇ ಯತ್ನಮಕುರ್ವಂಸ್ತೇ ಸಹಸ್ರಶಃ ॥4॥
ಅವರು ಬಾವಿಯಲ್ಲಿ ಬಗ್ಗಿ ನೋಡಿದಾಗ ದೊಡ್ಡ ಶರೀರವುಳ್ಳ ಒಂದು ಕೃಕಲಾಸವು (ಓತೀಕೇತ) ಇರುವುದು ಕಂಡುಬಂದಿತು. ಅದನ್ನು ಎತ್ತಲು ಅವರು ಸಹಸ್ರಾರು ಪ್ರಯತ್ನವನ್ನು ಮಾಡಿದರು.
ಪ್ರಗೃಹ್ಯೈಶ್ಚರ್ಮಪಟ್ಟೈಶ್ಚ ತಂ ಬದ್ಧ್ವಾ ಪರ್ವತೋಪಮಮ್ |
ನಾಶಕ್ನುವನ್ ಸಮುದ್ಧರ್ತುಂ ತತೋ ಜಗ್ಮುರ್ಜನಾರ್ದನಮ್ ॥5॥
ಹಗ್ಗಗಳಿಂದಲೂ, ಚರ್ಮಪಟ್ಟಿಗಳಿಂದಲೂ ಕಟ್ಟಿದರೂ ಪರ್ವತದಂತಿದ್ದ ಅದನ್ನು ಮೇಲಕ್ಕೆತ್ತಲು ಸಾಧ್ಯವಾಗದೆ ಅವರು ಜನಾರ್ದನನ ಬಳಿಗೆ ಹೋದರು.
ಖಮಾವೃತ್ಯೋದಪಾನಸ್ಯ ಕೃಕಲಾಸಃ ಸ್ಥಿತೋ ಮಹಾನ್ |
ತಸ್ಯ ನಾಸ್ತಿ ಸಮುದ್ಧರ್ತೇತ್ಯಥ ಕೃಷ್ಣೇ ನ್ಯವೇದಯನ್ ॥6॥
ಬಾವಿಯ ಒಳಗಿನ ಅವಕಾಶವನ್ನೆಲ್ಲ ತುಂಬಿಕೊಂಡು ಒಂದು ದೊಡ್ಡ ಕೃಕಲಾಸವು ಇದೆ. ಅದನ್ನು ಎತ್ತುವವನು ಯಾರೂ ಇಲ್ಲ ಎಂದು ಕೃಷ್ಣನಿಗೆ ನಿವೇದಿಸಿದರು.
ಸ ವಾಸುದೇವೇನ ಸಮುದ್ಧೃತಶ್ಚ
ಪೃಷ್ಟಶ್ಚ ಕಾಮಾನ್ನಿಜಗಾದ ರಾಜಾ |
ನೃಗಸ್ತದಾತ್ಮಾನಮಥೋ ನ್ಯವೇದಯತ್
ಪುರಾತನಂ ಯಜ್ಞಸಹಸ್ರಯಾಜಿನಮ್ ॥7॥
ಆ ಕೃಕಲಾಸವು ವಾಸುದೇವನಾದ ಕೃಷ್ಣನಿಂದ ಮೇಲಕ್ಕೆತ್ತಲ್ಪಟ್ಟಿತು. ಕೃಷ್ಣನಿಂದ ಪ್ರಶ್ನೆಯನ್ನು ಮಾಡಲ್ಪಟ್ಟ ಆ ನೃಗರಾಜನು ಮಾತನಾಡಿದನು. ತನ್ನನ್ನು ಸಹಸ್ರಯಜ್ಞವನ್ನು ಮಾಡಿದ ಪುರಾತನನಾದ ನೃಗರಾಜನೆಂದು ನಿವೇದಿಸಿದನು.
ತಥಾ ಬ್ರುವಾಣಂ ತು ತಮಾಹ ಮಾಧವಃ
ಶುಭಂ ತ್ವಯಾ ಕರ್ಮ ಕೃತಂ ನ ಪಾಪಕಮ್ |
ಕಥಂ ಭವಾನ್ ದುರ್ಗತಿಮೀದೃಶೀಂ ಗತೋ
ನರೇಂದ್ರ ತದ್ ಬ್ರೂಹಿ ಕಿಮೇತದೀದೃಶಮ್ ॥8॥

ಹಾಗೆ ಮಾತನಾಡಿದ ಅವನನ್ನು ಕುರಿತು ಮಾಧವನು ನೀನು ಶುಭಕರ್ಮವನ್ನೇ ಮಾಡಿದ್ದೀಯೆ. ಪಾಪಕರ್ಮವನ್ನು ಮಾಡಿಲ್ಲ. ಇಂತಹ ದುರ್ಗತಿಯನ್ನು ಹೇಗೆ ಪಡೆದೆ? ಎಲೈ ನರೇಂದ್ರನೇ, ಈ ದುರ್ಗತಿಯು ಹೇಗೆ ಪ್ರಾಪ್ತವಾಯಿತು ಎಂದು ಹೇಳು ಎಂದು ಹೇಳಿದನು.
ಶತಂ ಸಹಸ್ರಾಣಿ ಶತಂ ಗವಾಂ ಪುನಃ
ಪುನಃ ಶತಾನ್ಯಷ್ಟ ಶತಾಯುತಾನಿ |
ತ್ವಯಾ ಪುರಾ ದತ್ತಮಿತೀಹ ಶುಶ್ರುಮ
ನೃಪ ದ್ವಿಜೇಭ್ಯಃ ಕ್ವ ನು ತದ್ಗತಂ ತವ ॥9॥
ನೀನು ಮೂರು ಸಹಸ್ರ ಗೋವುಗಳನ್ನು ಪುನಃ ನೂರು ಗೋವುಗಳನ್ನು, ಪುನಃ ಎಂಟುನೂರು ಗೋವುಗಳನ್ನು, ಪುನಃ ನೂರು ಅಯುತ (ಹತ್ತು ಲಕ್ಷ) ಗೋವುಗಳನ್ನು ಹಿಂದೆ ದಾನ ಮಾಡಿದ್ದೀಯೆಂದು ನಾವು ಬ್ರಾಹ್ಮಣರಿಂದ ಕೇಳಿದ್ದೇವೆ. ಎಲೈ ರಾಜನೇ, ನಿನ್ನ ಆ ಪುಣ್ಯವೆಲ್ಲವೂ ಎಲ್ಲಿಗೆ ಹೋಯಿತು ಎಂದು ಕೇಳಿದನು.
ನೃಗಸ್ತತೋಽಬ್ರವೀತ್ ಕೃಷ್ಣಂ ಬ್ರಾಹ್ಮಣಸ್ಯಾಗ್ನಿಹೋತ್ರಿಣಃ |
ಪ್ರೋಷಿತಸ್ಯ ಪರಿಭ್ರಷ್ಟಾ ಗೌರೇಕಾ ಮಮ ಗೋಧನೇ ॥10॥
ಆಗ ನೃಗನು ಕೃಷ್ಣನನ್ನು ಕುರಿತು ಹೀಗೆ ಹೇಳಿದನು- ಅಗ್ನಿಹೋತ್ರಿಯಾದ ಒಬ್ಬ ಬ್ರಾಹ್ಮಣನು ಪ್ರವಾಸಕ್ಕೆ ಹೋಗಿದ್ದಾಗ ಅವನ ಒಂದು ಹಸುವು ತಪ್ಪಿಸಿಕೊಂಡು ನನ್ನ ಗೋವುಗಳಲ್ಲಿ ಸೇರಿತು.
ಗವಾಂ ಸಹಸ್ರೇ ಸಂಖ್ಯಾತಾ ತದಾ ಸಾ ಪಶುಪೈರ್ಮಮ |
ಸಾ ಬ್ರಾಹ್ಮಣಾಯ ಮೇ ದತ್ತಾ ಪ್ರೇತ್ಯಾರ್ಥಮಭಿಕಾಂಕ್ಷತಾ ॥11॥
ನನ್ನ ಪಶುಪಾಲಕರು ಸಹಸ್ರ ಗೋವುಗಳನ್ನು ಎಣಿಸುವಾಗ ಅದನ್ನೂ ಸೇರಿಸಿಕೊಂಡು ಎಣಿಸಿದರು. ನಾನು ಮರಣೋತ್ತರ ಕಾಲದಲ್ಲಿ ಪುಣ್ಯಫಲವನ್ನು ಅನುಭವಿಸಲು ಆಶಿಸಿ ಆ ಗೋವನ್ನು ಇನ್ನೊಬ್ಬ ಬ್ರಾಹ್ಮಣನಿಗೆ ದಾನ ಮಾಡಿದೆ.
ಅಪಶ್ಯತ್ ಪರಿಮಾರ್ಗಂಶ್ಚ ತಾಂ ಯಾಂ ಪರಗೃಹೇ ದ್ವಿಜಃ |
ಮಮೇಯಮಿತಿ ಚೋವಾಚ ಬ್ರಾಹ್ಮಣೋ ಯಸ್ಯ ಸಾಽಭವತ್ ॥12॥
ಮೊದಲನೆಯ ಬ್ರಾಹ್ಮಣನು ತನ್ನ ಗೋವನ್ನು ಹುಡುಕುತ್ತಾ ಅದು ಪರಗೃಹದಲ್ಲಿರುವುದನ್ನು ನೋಡಿದನು. ಆ ಗೋವಿನ ಒಡೆಯನಾದ ಅವನು ಇದು ನನ್ನದು ಎಂದು ಹೇಳಿದನು.
ತಾವುಭೌ ಸಮನುಪ್ರಾಪ್ತೌ ವಿವದಂತೌ ಭೃಶಜ್ವರೌ |
ಭವಾನ್ ದಾತಾ ಭವಾನ್ ಹರ್ತೇತ್ಯಥ ತೌ ಮಾಂ ತದೋಚತುಃ ॥
ಆ ಇಬ್ಬರು ಕೋಪದಿಂದ ವಿವಾದ ಮಾಡುತ್ತಾ ನನ್ನ ಬಳಿಗೆ ಬಂದರು. ನೀನು ದತ್ತಾಪಹಾರವನ್ನು ಮಾಡಿದ್ದೀಯೆ ಎಂದು ಅವರಿಬ್ಬರೂ ನನಗೆ ಹೇಳಿದರು.
ಶತೇನ ಶತಸಂಖ್ಯೇನ ಗವಾಂ ವಿನಿಮಯೇನ ವೈ |
ಯಾಚೇ ಪ್ರತಿಗ್ರಹೀತಾರಂ ಸ ತು ಮಾಮಬ್ರವೀದಿದಮ್ ॥14॥
ನಾನು ಹತ್ತು ಸಾವಿರ ಗೋವುಗಳನ್ನು ತೆಗೆದುಕೊಂಡು ಆ ಗೋವನ್ನು ವಿನಿಮಯ ಮಾಡಿಕೊಂಡು ಕೊಡು ಎಂದು ಪ್ರತಿಗ್ರಹೀತೃವಾದ ಎರಡನೆಯ ಬ್ರಾಹ್ಮಣನಿಗೆ ಬೇಡಿದೆನು. ಅವನು ನನ್ನನ್ನು ಕುರಿತು ಹೀಗೆ ಹೇಳಿದನು.
ದೇಶಕಾಲೋಪಸಂಪನ್ನಾ ದೋಗ್ಧ್ರೀ ಕ್ಷಾಂತಾಽತಿವತ್ಸಲಾ |
ಸ್ವಾದುಕ್ಷೀರಪ್ರದಾ ಧನ್ಯಾ ಮಮ ನಿತ್ಯಂ ನಿವೇಶನೇ ॥15॥
ದೇಶಕಾಲಗಳಿಗೆ ಯೋಗ್ಯವಾದ, ಹಾಲನ್ನು ಕರೆಯುವ, ಸಾಧು ಸ್ವಭಾವವುಳ್ಳ, ಕರುವಿನ ಮೇಲೆ ಬಹಳ ಪ್ರೀತಿಯುಳ್ಳ, ಮೃದುವಾದ, ಕ್ಷೀರಪ್ರದವಾದ ಈ ಗೋವು ನನ್ನ ಮನೆಯಲ್ಲಿ ಯಾವಾಗಲೂ ಧನ್ಯವಾಗಿರಲಿ.
ಕೃಶಂ ಚ ಭರತೇ ಯಾ ಗೌರ್ಮಮ ಪುತ್ರಮಪಸ್ತನಮ್ |
ನ ಸಾ ಶಕ್ಯಾ ಮಯಾ ಹಾತುಮಿತ್ಯುಕ್ತ್ವಾ ಸ ಜಗಾಮ ಹ ॥16॥
ತಾಯಿಯ ಸ್ತನ್ಯವಿಲ್ಲದಿರುವ ನನ್ನ ಕೃಶನಾದ ಪುತ್ರನನ್ನು ಯಾವ ಗೋವು ಪೋಷಿಸುತ್ತಿದೆಯೋ ಆ ಗೋವನ್ನು ನಾನು ಬಿಡಲಾರೆ ಎಂದು ಹೇಳಿ ಅವನು ಹೊರಟು ಹೋದನು.
ತತಸ್ತಮಪರಂ ವಿಪ್ರಂ ಯಾಚೇ ವಿನಿಮಯೇನ ವೈ |
ಗವಾಂ ಶತಸಹಸ್ರಂ ವೈ ತತ್ಕೃತೇ ಗೃಹ್ಯತಾಮಿತಿ ॥17॥
ಆಗ ನಾನು ಮೊದಲನೆಯ ಇನ್ನೊಬ್ಬ ಬ್ರಾಹ್ಮಣನಿಗೆ ಆ ಗೋವಿನ ಬದಲಾಗಿ ಒಂದು ಲಕ್ಷ ಗೋವನ್ನು ತೆಗೆದುಕೊಂಡು ವಿನಿಮಯ ಮಾಡಿಕೋ ಎಂದು ಹೇಳಿದೆನು.
ಬ್ರಾಹ್ಮಣಃ
ನ ರಾಜ್ಞಾಂ ಪ್ರತಿಗೃಹ್ಣಾಮಿ ಶಕ್ತೋಽಹಂ ಸ್ವಸ್ಯ ಮಾರ್ಗಣೇ |
ಸೈವ ಗೌರ್ದೀಯತಾಂ ಶೀಘ್ರಂ ಮಮೇತಿ ಮಧುಸೂದನ ॥18॥
ಬ್ರಾಹ್ಮಣ ಎಲೈ ಮಧುಸೂದನನೇ, ನಾನು ರಾಜನಿಂದ ಇನ್ನು ದಾನವನ್ನೂ ಸ್ವೀಕರಿಸುವುದಿಲ್ಲ. ನನ್ನ ಜೀವನೋಪಾಯವನ್ನು ಹುಡುಕುವುದರಲ್ಲಿ ನಾನು ಸಮರ್ಥನಾಗಿದ್ದೇನೆ. ಅದೇ ಗೋವನ್ನು ನನಗೆ ಶೀಘ್ರವಾಗಿ ಹಿಂದಕ್ಕೆ ಕೊಡು ಎಂದು ಹೇಳಿದನು.
ರುಗ್ಮಮಶ್ವಾಂಶ್ಚ ದದತೋ ರಜತಂ ಸ್ಯಂದನಾಂಸ್ತಥಾ |
ನ ಜಗ್ರಾಹ ಯಯೌ ಚಾಪಿ ತದಾ ಸ ಬ್ರಾಹ್ಮಣರ್ಷಭಃ ॥19॥
ನಾನು ಸುವರ್ಣವನ್ನು, ಅಶ್ವಗಳನ್ನು, ರಜತಗಳನ್ನು, ರಥಗಳನ್ನು ಕೊಡುತ್ತೇನೆ ಎಂದು ಹೇಳಿದರೂ ಆ ಬ್ರಾಹ್ಮಣನು ಸ್ವೀಕರಿಸದೆ

ಹಾಗೆಯೇ ಹೊರಟು ಹೋದನು.
ಏತಸ್ಮಿನ್ನೇವ ಕಾಲೇ ತು ಚೋದಿತಃ ಕಾಲಧರ್ಮಣಾ |
ಪಿತೃಲೋಕಮಹಂ ಪ್ರಾಪ್ಯ ಧರ್ಮರಾಜಮುಪಾಗಮಮ್ ॥20॥
ಆ ಕಾಲದಲ್ಲಿ ನಾನು ಕಾಲಧರ್ಮದಿಂದ ಪ್ರಚೋದಿತನಾಗಿ ಮೃತ್ಯುವಶನಾಗಿ ಪಿತೃಲೋಕಕ್ಕೆ ಬಂದು ಧರ್ಮರಾಜನ ಬಳಿಯಲ್ಲಿ ಹೋದೆನು.
ಯಮಸ್ತು ಪೂಜಯಿತ್ವಾ ಮಾಂ ತತೋ ವಚನಮಬ್ರವೀತ್ |
ನಾಂತಃ ಸಂಖ್ಯಾಯತೇ ರಾಜಂಸ್ತವ ಪುಣ್ಯಸ್ಯ ಕರ್ಮಣಃ ॥21॥
ಅಸ್ತಿ ಚೈವ ಕೃತಂ ಪಾಪಮಜ್ಞಾನಾತ್ ತದಪಿ ತ್ವಯಾ |
ಚರಸ್ವ ಪಾಪಂ ಪಶ್ಚಾದ್ವಾ ಪೂರ್ವಂ ವಾ ತ್ವಂ ಯಥೇಚ್ಛಸಿ ॥22॥
ರಕ್ಷಿತಾಸ್ಮೀತಿ ಚೋಕ್ತಂ ತೇ ಪ್ರತಿಜ್ಞಾ ಚಾನೃತಾ ತವ |
ಬ್ರಾಹ್ಮಣಸ್ವಸ್ಯ ಚಾದಾನಂ ತ್ರಿವಿಧಸ್ತೇ ವ್ಯತಿಕ್ರಮಃ ॥23॥
ಅವನು ನನ್ನನ್ನು ಪೂಜಿಸಿ ನನ್ನನ್ನು ಕುರಿತು- `ರಾಜನೇ, ನೀನು ಮಾಡಿದ ಪುಣ್ಯಕರ್ಮಗಳಿಗೆ ಕೊನೆಯೇ ಕಾಣುವುದಿಲ್ಲ. ನೀನು ಅಜ್ಞಾನದಿಂದ ಮಾಡಿದ ಒಂದು ಪಾಪವು ಮಾತ್ರ ಇದೆ. ನೀನು ಪಾಪದ ಫಲವನ್ನು ಮೊದಲು ಅನುಭವಿಸುತ್ತೀಯೋ ಅಥವಾ ಪುಣ್ಯದ ಫಲವನ್ನು ಮೊದಲು ಅನುಭವಿಸುತ್ತೀಯೋ? ಹೇಗೆ ಇಚ್ಛಿಸುತ್ತೀಯೆ? ಪ್ರಜೆಗಳನ್ನು ರಕ್ಷಿಸುತ್ತೇನೆಂದು ಹೇಳಿ ರಕ್ಷಿಸಲಿಲ್ಲ. ದಾನವನ್ನು ಕೊಡುವಾಗ ನಿನಗೆ ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ನೀಡಿದೆ. ಆ ಪ್ರತಿಜ್ಞೆ ಸುಳ್ಳಾಯಿತು ಮತ್ತು ಬ್ರಾಹ್ಮಣಸ್ವವನ್ನು ಅಪಹಾರ ಮಾಡಿದೆ. ಹೀಗೆ ನಿನ್ನ ದೋಷವು ಮೂರುವಿಧವಾಗಿದೆ' ಎಂದು ಹೇಳಿದನು.
ಪೂರ್ವಂ ಕೃಚ್ಛ್ರಂ ಚರಿಷ್ಯೇಽಹಂ ಪಶ್ಚಾಚ್ಛುಭಮಿತಿ ಪ್ರಭೋ |
ಧರ್ಮರಾಜಂ ಬ್ರುವನ್ನೇವಂ ಪತಿತೋಽಸ್ಮಿ ಮಹೀತಳೇ ॥24॥
ನಾನು ಧರ್ಮರಾಜನನ್ನು ಕುರಿತು- `ಪ್ರಭುವೇ, ನಾನು ಕಷ್ಟವನ್ನು ಮೊದಲು ಅನುಭವಿಸುತ್ತೇನೆ. ಅನಂತರ ಸುಖವನ್ನು ಅನುಭವಿಸುತ್ತೇನೆ' ಎಂದು ಹೇಳುತ್ತಿರುವಾಗಲೇ ಭೂಮಿಯಲ್ಲಿ ಕೃಕಲಾಸನಾಗಿ ಬಿದ್ದೆನು.
ಅಶ್ರೌಷಂ ಪ್ರಚ್ಯುತಶ್ಚಾಹಂ ಯಮಸ್ಯೋಚ್ಚೈಃ ಪ್ರಭಾಷತಃ |
ವಾಸುದೇವಃ ಸಮುದ್ಧರ್ತಾ ಭವಿತಾ ತೇ ಜನಾರ್ದನಃ ॥25॥
ಪೂರ್ಣೇ ವರ್ಷಸಹಸ್ರಾಂತೇ ಕ್ಷೀಣೇ ಕರ್ಮಣಿ ದುಷ್ಕೃತೇ |
ಪ್ರಾಪ್ಸ್ಯಸೇ ಶಾಶ್ವತಾಲ್ಲೋಕಾನ್ ಜಿತಾನ್ ಸ್ವೇನೈವ ಕರ್ಮಣಾ ॥26॥
ಭೂಮಿಗೆ ಬಿದ್ದ ನಾನು ಯಮನು ಗಟ್ಟಿಯಾದ ಸ್ವರದಲ್ಲಿ ಹೇಳಿದ ಜನಾರ್ದನನಾದ ವಾಸುದೇವನು ನಿನ್ನನ್ನು ಉದ್ಧಾರ ಮಾಡುವನು. ಒಂದು ಸಹಸ್ರವರ್ಷಗಳು ಪೂರ್ಣವಾಗಿ ನಿನ್ನ ದುಷ್ಕರ್ಮವು ನಾಶವಾದ ಮೇಲೆ ನಿನ್ನ ಶುಭಕರ್ಮದಿಂದ ಜಿತವಾದ ಶಾಶ್ವತವಾದ ಲೋಕವನ್ನು ಹೊಂದುವಿ ಎಂಬ ಮಾತನ್ನು ಕೇಳಿದೆ.
ಕೂಪೇಽಽತ್ಮಾನಮಧಃಶೀರ್ಷಮಪಶ್ಯಂ ಪತಿತಂ ಚ ಹ |
ತಿರ್ಯಗ್ಯೋನಿಮನುಪ್ರಾಪ್ತಂ ನ ತು ಮಾಮಜಹಾತ್ ಸ್ಮೃತಿಃ ॥27॥
ನಾನು ಕೂಪದಲ್ಲಿ ತಿರ್ಯಗ್ಯೋನಿಯನ್ನು ಹೊಂದಿ ತಲೆಕೆಳಕಾಗಿ ಬಿದ್ದಿರುವುದನ್ನು ಗಮನಿಸಿದೆನು. ನನಗೆ ಹಿಂದಿನ ಸ್ಮೃತಿಯು ಅಳಸಿಹೋಗಲಿಲ್ಲ.
ತ್ವಯಾ ತು ತಾರಿತೋಽಸ್ಮ್ಯದ್ಯ ಕಿಮನ್ಯತ್ರ ತಪೋಬಲಾತ್ |
ಅನುಜಾನೀಹಿ ಮಾಂ ಕೃಷ್ಣ ಗಚ್ಛೇಯಂ ದಿವಮದ್ಯ ವೈ ॥28॥
ಈ ದಿನ ನಿನ್ನಿಂದ ಉದ್ಧರಿಸಲ್ಪಟ್ಟಿದ್ದೇನೆ. ತಪಸ್ಸಿನ ಬಲವನ್ನು ಬಿಟ್ಟು ಬೇರೆ ಯಾವ ಬಲವಿದೆ! ಎಲ್ಯೆ ಕೃಷ್ಣನೇ, ಅನುಮತಿಯನ್ನು ಕೊಡು. ನಾನು ಸ್ವರ್ಗಕ್ಕೆ ಹೋದೇನು ಎಂದು ಹೇಳಿದನು.
ಭೀಷ್ಮಃ
ಅನುಜ್ಞಾತಃ ಸ ಕೃಷ್ಣೇನ ನಮಸ್ಕೃತ್ಯ ಜನಾರ್ದನಮ್ |
ವಿಮಾನಂ ದಿವ್ಯಮಾಸ್ಥಾಯ ಯಯೌ ದಿವಮರಿಂದಮ ॥29॥
ಭೀಷ್ಮ ಎಲ್ಯೆ ಅರಿಂದಮನೇ, ಕೃಷ್ಣನಿಂದ ಅನುಮತಿಯನ್ನು ಪಡೆದು ಅವನು ಅವನಿಗೆ ನಮಸ್ಕರಿಸಿ ವಿಮಾನವನ್ನು ಏರಿ ಸ್ವರ್ಗಕ್ಕೆ ಹೊರಟು ಹೋದನು.
ತತಸ್ತಸ್ಮಿನ್ ದಿವಂ ಪ್ರಾಪ್ತೇ ನೃಗೇ ಭರತಸತ್ತಮ |
ವಾಸುದೇವ ಇಮಂ ಶ್ಲೋಕಂ ಜಗಾದ ಕುರುನಂದನ ॥30॥
ಬ್ರಾಹ್ಮಣಸ್ವಂ ನ ಹರ್ತವ್ಯಂ ಪುರುಷೇಣ ವಿಜಾನತಾ |
ಬ್ರಾಹ್ಮಣಸ್ವಂ ಹೃತಂ ಹಂತಿ ನೃಗಂ ಬ್ರಾಹ್ಮಣಗೌರಿವ ॥31॥
ಎಲ್ಯೆ ಭರತಶ್ರೇಷ್ಠನೇ, ಕುರುನಂದನನೇ, ನೃಗನು ಸ್ವರ್ಗಕ್ಕೆ ಹೋದಮೇಲೆ ವಾಸುದೇವನು ವಿವೇಕಿಯಾದ ಪುರುಷನು ಬ್ರಾಹ್ಮಣ ಸ್ವತ್ತನ್ನು ಅಪಹರಿಸಬಾರದು. ಬ್ರಾಹ್ಮಣನ ಗೋವು ನೃಗನನ್ನು ವಿನಾಶಗೊಳಿಸಿದಂತೆ ಅಪಹರಿಸಲ್ಪಟ್ಟ ಬ್ರಾಹ್ಮಣರ ಸ್ವತ್ತು ವಿನಾಶವನ್ನುಂಟು ಮಾಡುತ್ತದೆ ಎಂಬ ಶ್ಲೋಕವನ್ನು ಹೇಳಿದನು.
ಸತಾಂ ಸಮಾಗಮಃ ಸದ್ಭಿರ್ನಾಫಲಃ ಪಾರ್ಥ ವಿದ್ಯತೇ |
ವಿಮುಕ್ತಂ ನರಕಾತ್ ಪಶ್ಯ ನೃಗಂ ಸಾಧುಸಮಾಗಮಾತ್ ॥32॥
ಎಲ್ಯೆ ಪಾರ್ಥನೇ, ಸಜ್ಜನರ ಸಮಾಗಮವು ಎಂದೂ ನಿಷ್ಫಲವಾಗುವುದಿಲ್ಲ. ಸಜ್ಜನರ ಸಹವಾಸದಿಂದ ನೃಗನು ನರಕದಿಂದ

ಮುಕ್ತನಾದುದನ್ನು ನೋಡು.
ಪ್ರದಾನಂ ಫಲವತ್ ತತ್ರ ದ್ರೋಹಸ್ತತ್ರ ತಥಾಽಫಲಃ |
ಅಪಚಾರಂ ಗವಾಂ ತಸ್ಮಾದ್ ವರ್ಜಯೇತ ಯುಧಿಷ್ಠಿರ ॥33॥
ಗೋವುಗಳ ದಾನವು ಪ್ರಶಸ್ತವಾದ ಫಲವನ್ನು ಕೊಡುವಂತಹದು. ಅವುಗಳಿಗೆ ಮಾಡಿದ ದ್ರೋಹವು ಅದಕ್ಕೆ ವಿರುದ್ಧವಾದ ಫಲವನ್ನು ಕೊಡುವಂತಹದು. ಎಲೈ ಯುಧಿಷ್ಠಿರನೇ, ಆದ್ದರಿಂದ ಗೋವುಗಳಿಗೆ ಎಂದೂ ಅಪಚಾರವನ್ನು ಮಾಡಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ನೃಗೋಪಾಖ್ಯಾನಂ ನಾಮ ಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂದನೆಯ ಅಧ್ಯಾಯ
ಗೋದಾನ- ನಾಚಿಕೇತೋಪಾಖ್ಯಾನ
ಯುಧಿಷ್ಠಿರಃ
ದತ್ತಾನಾಂ ಫಲಸಂಪ್ರಾಪ್ತಿಂ ಗವಾಂ ಪ್ರಬ್ರೂಹಿ ಮೇಽನಘ |
ವಿಸ್ತರೇಣ ಮಹಾಬಾಹೋ ನ ಹಿ ತೃಪ್ಯಾಮಿ ಕಥ್ಯತಾಮ್ ॥1॥
ಯುಧಿಷ್ಠಿರ ಎಲೈ ಅನಘನೇ, ಮಹಾಬಾಹುವೇ, ಗೋದಾನದ ಫಲಪ್ರಾಪ್ತಿಯನ್ನು ವಿಸ್ತಾರವಾಗಿ ಹೇಳು. ನಿನ್ನ ಮಾತನ್ನು ಕೇಳಿ ನಾನು ತೃಪ್ತಿಯನ್ನೇ ಹೊಂದುತ್ತಿಲ್ಲ.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಋಷೇರುದ್ದಾಲಕೇರ್ವಾಕ್ಯಂ ನಾಚಿಕೇತಸ್ಯ ಚೋಭಯೋಃ ॥2॥
ಭೀಷ್ಮ ಈ ವಿಷಯದಲ್ಲೂ ಸಹ ಉದ್ದಾಲಕಿ ಋಷಿಗೂ ನಾಚಿಕೇತನಿಗೂ ನಡೆದ ಸಂವಾದ ರೂಪವಾದ ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ.
ಋಷಿರುದ್ದಾಲಕಿರ್ದೀಕ್ಷಾಮುಪಗಮ್ಯ ತತಃ ಸುತಮ್ |
ತ್ವಂ ಮಾಮುಪಚರಸ್ವೇತಿ ನಾಚಿಕೇತಮಭಾಷತ |
ಸಮಾಪ್ತೇ ನಿಯಮೇ ತಸ್ಮಿನ್ ಮಹರ್ಷಿಃ ಪುತ್ರಮಬ್ರವೀತ್ ॥3॥
ಉಪಸ್ಪರ್ಶನಸಕ್ತಸ್ಯ ಸ್ವಾಧ್ಯಾಯನಿರತಸ್ಯ ಚ |
ಇಧ್ಮಾ ದರ್ಭಾಃ ಸುಮನಸಃ ಕಲಶಶ್ಚಾಭಿತೋ ಜಲಮ್ |
ವಿಸ್ಮೃತಂ ಮೇ ತದಾದಾಯ ನದೀತೀರಾದಿಹಾವ್ರಜ ॥4॥
ಉದ್ದಾಲಕಿ ಋಷಿಯು ದೀಕ್ಷೆಯನ್ನು ಧರಿಸಿ ಪುತ್ರನಾದ ನಾಚಿಕೇತನನ್ನು ಕುರಿತು ನನಗೆ ಪರಿಚರ್ಯೆಯನ್ನು ಮಾಡು ಎಂದು ಹೇಳಿದರು. ಆ ದೀಕ್ಷೆಯು ಸಮಾಪ್ತವಾದ ಮೇಲೆ ಮಹರ್ಷಿಗಳು ಪುತ್ರನನ್ನು ಕುರಿತು ಸ್ವಾಧ್ಯಾಯನಿರತನಾಗಿ ಸ್ನಾನವನ್ನು ಮಾಡುತ್ತಾ ನಾನು ನದೀ ತೀರದಲ್ಲಿಯೇ ಕಟ್ಟಿಗೆಗಳನ್ನೂ, ಪುಷ್ಪಗಳನ್ನೂ, ದರ್ಭೆಗಳನ್ನೂ, ಕಲಶಗಳನ್ನೂ ಮರೆತುಬಿಟ್ಟೆನು. ಅವುಗಳನ್ನು ತೆಗೆದುಕೊಂಡು ಇಲ್ಲಿಗೆ ಬಾ ಎಂದು ಹೇಳಿದರು.
ಗತ್ವಾಽನವಾಪ್ಯ ತತ್ಸರ್ವಂ ನದೀವೇಗಸಮಾಪ್ಲುತಮ್ |
ನ ಪಶ್ಯಾಮಿ ತದಿತ್ಯೇವಂ ಪಿತರಂ ಸೋಽಬ್ರವೀನ್ಮುನಿಃ ॥5॥
ಕ್ಷುತ್ಪಿಪಾಸಾಶ್ರಮಾವಿಷ್ಟೋ ಮುನಿರುದ್ದಾಲಕಿಸ್ತದಾ |
ಯಮಂ ಪಶ್ಯೇತಿ ತಂ ಪುತ್ರಮಶಪತ್ ಸ ಮಹಾತಪಾಃ ॥6॥
ನಾಚಿಕೇತನು ನದಿ ಸಮೀಪಕ್ಕೆ ಹೋಗಿ ಅವೆಲ್ಲವೂ ನದಿಯ ವೇಗದಿಂದ ಕೊಚ್ಚಿಕೊಂಡು ಹೋಗಿದ್ದುದರಿಂದ ಅವುಗಳನ್ನು ಕಾಣದೆ ಹಿಂದಿರುಗಿ ಬಂದು ತಂದೆಯನ್ನು ಕುರಿತು ಯಾವುದೂ ಅಲ್ಲಿ ಕಾಣುತ್ತಿಲ್ಲ ಎಂದು ಹೇಳಿದನು. ಆಗ ಹಸಿವು, ನೀರಡಿಕೆ ಮತ್ತು ಆಯಾಸದಿಂದ ಕೂಡಿದ ಮಹಾತಪಸ್ವಿಗಳಾದ ಉದ್ದಾಲಕಿ ಋಷಿಗಳು ಯಮವನ್ನು ನೋಡು ಎಂದು ಪುತ್ರನಿಗೆ ಶಾಪವನ್ನು ನೀಡಿದರು.
ತಥಾ ಸ ಪಿತ್ರಾಽಭಿಹತೋ ವಾಗ್ವಜ್ರೇಣ ಕೃತಾಂಜಲಿಃ |
ಪ್ರಸೀದೇತಿ ಬ್ರುವನ್ನೇವ ಗತಸತ್ತೊತ್ವಽಪತದ್ ಭುವಿ ॥7॥
ತಂದೆಯಿಂದ ಅಂತಹ ವಾಗ್ವಜ್ರದಿಂದ ಪ್ರಹರಿಸಲ್ಪಟ್ಟ ನಾಚಿಕೇತನು ಕೈಗಳನ್ನು ಮುಗಿದು ಪ್ರಸನ್ನರಾಗಿ ಎಂದು ಹೇಳುತ್ತಿರುವಾಗಲೇ ಪ್ರಾಣಗಳನ್ನು ಕಳೆದುಕೊಂಡು ಭೂಮಿಯ ಮೇಲೆ ಬಿದ್ದನು.
ನಾಚಿಕೇತಂ ಪಿತಾ ದೃಷ್ಟ್ವಾ ಪತಿತಂ ದುಃಖಮೂರ್ಚ್ಛಿತಃ |
ಕಿಂ ಮಯಾ ಕೃತಮಿತ್ಯುಕ್ತ್ವಾ ನಿಪಪಾತ ಮಹೀತಳೇ ॥8॥
ನಾಚಿಕೇತನು ಭೂಮಿಯ ಮೇಲೆ ಬಿದ್ದುದನ್ನು ನೋಡಿದ ತಂದೆಯು ದುಃಖ ಮೂರ್ಛಿತನಾಗಿ ನಾನು ಎಂತಹ ಕೆಲಸವನ್ನು ಮಾಡಿದೆ ಎಂದು ಅವರೂ ಭೂಮಿಯ ಮೇಲೆ ಬಿದ್ದರು.
ತಸ್ಯ ದುಃಖಪರೀತಸ್ಯ ಸ್ವಂ ಪುತ್ರಮುಪಗೂಹತಃ |
ವ್ಯತೀತಂ ತದಹಃಶೇಷಂ ಸಾ ಚೋಗ್ರಾ ತತ್ರ ಶರ್ವರೀ ॥9॥
ದುಃಖದಿಂದ ಪೂರ್ಣವಾಗಿ ಆವೃತರಾಗಿ ತಮ್ಮ ಪುತ್ರನನ್ನು ಆಲಿಂಗಿಸಿಕೊಂಡ ಅವರಿಗೆ ಆ ಹಗಲಿನ ಉಳಿದ ಭಾಗವೂ, ಆ ಉಗ್ರವಾದ

ರಾತ್ರಿಯೂ ಹಾಗೆಯೇ ಕಳೆಯಿತು.
ಪಿತ್ರ್ಯೇಣಾಶ್ರುಪ್ರಪಾತೇನ ನಾಚಿಕೇತಃ ಕುರೂದ್ವಹ |
ಪ್ರಾಸ್ಪಂದಚ್ಛಯನೇ ಕೌಶ್ಯೇ ವೃಷ್ಟ್ಯಾ ಸಸ್ಯಮಿವಾಪ್ಲುತಮ್ ॥10॥
ಎಲೈ ಕುರೂದ್ವಹನೇ, ತಂದೆಯ ಅಶ್ರುಪಾತದಿಂದ ದರ್ಭಾಸನದಲ್ಲಿ ಮಲಗಿದ್ದ ನಾಚಿಕೇತನು ಮಳೆಯಿಂದ ತೊಯ್ದ ಸಸಿಗಳು ಏಳುವಂತೆ ಅಲುಗಾಡಿ ಮೇಲೆದ್ದನು.
ಸ ಪರ್ಯಪೃಚ್ಛತ್ತಂ ಪುತ್ರಂ ಶ್ಲಾಘ್ಯಂ ಪ್ರತ್ಯಾಗತಂ ಪುನಃ |
ದಿವ್ಯೈರ್ಗಂಧೈಃ ಸಮಾದಿಗ್ಧಂ ಕ್ಷೀಣಸ್ವಪ್ನಮಿವೋತ್ಥಿತಮ್ ॥11॥
ದಿವ್ಯಗಂಧಗಳಿಂದ ಲೇಪಿತನಾಗಿ ಸ್ವಪ್ನದಿಂದ ಎದ್ದವನಂತೆ ಹಿಂದಿರುಗಿ ಬಂದ ಶ್ಲಾಘನೀಯನಾದ ತನ್ನ ಪುತ್ರನನ್ನು ಕುರಿತು ತಂದೆಯು ಪುನಃ ಪ್ರಶ್ನೆಯನ್ನು ಮಾಡಿದನು.
ಅಪಿ ಪುತ್ರ ಜಿತಾ ಲೋಕಾಃ ಶುಭಾಸ್ತೇ ಸ್ವೇನ ಕರ್ಮಣಾ |
ದಿಷ್ಟ್ಯಾ ಚಾಸಿ ಪುನಃ ಪ್ರಾಪ್ತೋ ನ ಹಿ ತೇ ಮಾನುಷಂ ವಪುಃ ॥12॥
ಎಲೈ ಪುತ್ರನೇ, ನಿನ್ನ ಶುಭಕರ್ಮಗಳಿಂದ ನೀನು ಲೋಕಗಳನ್ನು ಜಯಿಸಿದ್ದೀಯೆ. ದೇವರ ದಯೆಯಿಂದ ನೀನು ಪುನಃ ಹಿಂದಿರುಗಿದ್ದೀಯೆ. ನಿನ್ನ ದೇಹವು ಮನುಷ್ಯ ದೇಹದಂತೆ ಕಾಣುತ್ತಿಲ್ಲ.
ಪ್ರತ್ಯಕ್ಷದರ್ಶೀ ಸರ್ವಸ್ಯ ಪಿತ್ರಾ ಪೃಷ್ಟೋ ಮಹಾತ್ಮನಾ |
ಅನ್ವರ್ಥಂ ತಂ ಪಿತುರ್ಮಧ್ಯೇ ಮಹರ್ಷೀಣಾಂ ನ್ಯವೇದಯತ್ ॥13॥
ಮಹಾತ್ಮರಾದ ತಂದೆಯಿಂದ ಹೀಗೆ ಕೇಳಲ್ಪಟ್ಟ ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದ ನಚಿಕೇತನು ಮಹರ್ಷಿಗಳ ಮಧ್ಯದಲ್ಲಿ ತಾನು ನೋಡಿದುದಕ್ಕೆ ಅನುಗುಣವಾಗಿ ತಂದೆಗೆ ಎಲ್ಲವನ್ನೂ ನಿವೇದಿಸಿದನು.
ಕುರ್ವನ್ ಭವಚ್ಚಾಸನಮಾಶು ಯಾತೋ
ಹ್ಯಹಂ ವಿಶಾಲಾಂ ರುಚಿರಪ್ರಭಾವಾಮ್ |
ವೈವಸ್ವತೀಂ ಪ್ರಾಪ್ಯ ಸಭಾಮಪಶ್ಯಂ
ಸಹಸ್ರಶೋ ಯೋಜನಹೈಮಭೌಮಾಮ್ ॥14॥
ನಿಮ್ಮ ಆಜ್ಞೆಯನ್ನು ಪಾಲಿಸುತ್ತಾ ನಾನು ವಿಶಾಲವೂ, ಮನೋಹರ ಸಾಮರ್ಥ್ಯ ಉಳ್ಳದ್ದೂ ಆದ ಯಮಪಟ್ಟಣಕ್ಕೆ ಹೋಗಿ ಅಲ್ಲಿ ಸಹಸ್ರಾರು ಯೋಜನದಷ್ಟು ಸುವರ್ಣಭೂಮಿಯಲ್ಲಿದ್ದ ವಿಶಾಲವಾದ ಸಭೆಯನ್ನು ನೋಡಿದೆನು.
ದೃಷ್ಟ್ವೈವ ಮಾಮಭಿಮುಖಮಾಪತಂತಂ
ಗೃಹಂ ನಿವೇದ್ಯಾಸನಮಾದಿದೇಶ |
ವೈವಸ್ವತೋಽರ್ಘ್ಯಾದಿಭಿರರ್ಹಣೈಶ್ಚ
ಭವತ್ಕೃತೇ ಪೂಜಯಾಮಾಸ ಮಾಂ ಸಃ ॥15॥
ತಮ್ಮ ಎದುರಿಗೆ ಬರುತ್ತಿದ್ದ ನನ್ನನ್ನು ನೋಡಿದ ಕೂಡಲೇ ಯಮದೇವರು ತಮ್ಮ ಮನೆಯನ್ನು ನನಗೆ ನಿವೇದಿಸಿ ಆಸನವನ್ನು ನೀಡಿದರು. ಯಮದೇವರು ನಿಮ್ಮ ಮೇಲಿನ ಗೌರವದಿಂದ ನನ್ನನ್ನು ಅರ್ಘ್ಯಾದಿ ಪೂಜಾ ಸಾಮಗ್ರಿಗಳಿಂದ ಪೂಜಿಸಿದರು.
ತತಸ್ತ್ವಹಂ ತಂ ಶನಕೈರವೋಚಂ
ವೃತಂ ಸದಸ್ಯೈರಭಿಪೂಜ್ಯಮಾನಮ್ |
ಪ್ರಾಪ್ತೋಽಸ್ಮಿ ತೇ ವಿಷಯಂ ಧರ್ಮರಾಜ
ಲೋಕಾನರ್ಹೇ ಯಾನ್ ಸ್ಮ ತಾನ್ ಮೇ ವಿಧತ್ಸ್ವ ॥16॥
ಆಗ ನಾನು ಸದಸ್ಯರಿಂದ ಪರಿವೃತವಾಗಿದ್ದ ಮತ್ತು ಪೂಜಿಸಲ್ಪಡುತ್ತಿದ್ದ ಯಮದೇವರನ್ನು ಕುರಿತು ಮೆಲ್ಲನೆ- `ಎಲೈ ಧರ್ಮರಾಜನೇ, ನಾನು ನಿನ್ನ ರಾಜ್ಯಕ್ಕೆ ಬಂದಿದ್ದೇನೆ. ನನಗೆ ಯಾವ ಲೋಕವು ಯೋಗ್ಯವಾದವುಗಳೋ ಅದನ್ನು ಕೊಡುವವರಾಗಿ' ಎಂದು ಹೇಳಿದೆನು.
ಯಮೋಽಬ್ರವೀನ್ಮಾಂ ನ ಮೃತೋಽಸಿ ಸೌಮ್ಯ
ಯಮಂ ಪಶ್ಯೇತ್ಯಾಹ ತು ತ್ವಾಂ ತಪಸ್ವೀ |
ಪಿತಾ ಪ್ರದೀಪ್ತಾಗ್ನಿಸಮಾನತೇಜಾ
ನ ತಚ್ಛಕ್ಯಮನೃತಂ ವಿಪ್ರ ಕರ್ತುಮ್ ॥17॥
ಆಗ ಯಮನು ನನ್ನನ್ನು ಕುರಿತು- `ಎಲೈ ಸೌಮ್ಯನೇ, ನೀನು ಮರಣವನ್ನು ಹೊಂದಿಲ್ಲ. ತಪಸ್ವಿಯಾದ ನಿನ್ನ ತಂದೆಯು ಯಮನನ್ನು ನೋಡು ಎಂದಿಷ್ಟೇ ಹೇಳಿದ್ದಾನೆ. ನಿನ್ನ ತಂದೆಯು ಜ್ವಲಿಸುವ ಅಗ್ನಿಗೆ ಸಮಾನವಾದ ತೇಜಸ್ಸುಳ್ಳವನು. ಎಲೈ ಬ್ರಾಹ್ಮಣನೇ, ಅವನ ಮಾತನ್ನು ಸುಳ್ಳು ಮಾಡಲು ಸಾಧ್ಯವಿಲ್ಲ.
ದೃಷ್ಟಸ್ತೇಽಹಂ ಪ್ರತಿಗಚ್ಛಸ್ವ ತಾತ
ಶೋಚತ್ಯಸೌ ತವ ದೇಹಸ್ಯ ಕರ್ತಾ |
ದದಾಮಿ ಕಿಂ ಚಾಪಿ ಮನಃಪ್ರಣೀತಂ
ಪ್ರಿಯಾತಿಥೇ ತವ ಕಾಮಾನ್ ವೃಣೀಷ್ವ ॥18॥
ಪ್ರೀತಿಪಾತ್ರನೇ, ನನ್ನನ್ನು ನೋಡಿದುದಾಯಿತು, ಹಿಂದಿರುಗು. ನಿನ್ನ ತಂದೆಯು ಶೋಕಪಡುತ್ತಿದ್ದಾನೆ. ಎಲೈ ಪ್ರಿಯಾತಿಥಿಯೇ, ನಿನ್ನ ಮನಸ್ಸಿಗೆ ಪ್ರಿಯವಾದ ಯಾವ ವರವನ್ನು ಕೊಡಲಿ? ನಿನಗೆ ಇಷ್ಟವಾದುದನ್ನು ಕೇಳು' ಎಂದು ಹೇಳಿದನು.
ತೇನೈವಮುಕ್ತಸ್ತಮಹಂ ಪ್ರತ್ಯವೋಚಂ
ಪ್ರಾಪ್ತೋಽಸ್ಮಿ ತೇ ವಿಷಯಂ ದುರ್ನಿವರ್ತ್ಯಮ್ |

ಇಚ್ಛಾಮ್ಯಹಂ ಪುಣ್ಯಕೃತಾಂ ಸಮೃದ್ಧಾ-
ಲ್ಲೋಕಾನ್ ದ್ರಷ್ಟುಂ ಯದಿ ತೇಽಹಂ ವರಾರ್ಹಃ ॥19॥
ಯಮನಿಂದ ಹೀಗೆ ಹೇಳಲ್ಪಟ್ಟ ನಾನು ಅವನನ್ನು ಕುರಿತು- `ಹಿಂದಿರುಗಲಾರದಂತಹ ನಿನ್ನ ರಾಜ್ಯಕ್ಕೆ ಬಂದಿದ್ದೇನೆ. ನಿನ್ನಿಂದ ನಾನು ವರವನ್ನು ಸ್ವೀಕರಿಸಲು ಯೋಗ್ಯನಾದರೆ ಪುಣ್ಯವಂತರು ಗಳಿಸಿದ ಸಮೃದ್ಧವಾದ ಲೋಕಗಳನ್ನು ನೋಡಲು ಬಯಸುತ್ತೇನೆ' ಎಂದು ಹೇಳಿದೆನು.
ಯಾನಂ ಸಮಾರೋಪ್ಯ ತು ಮಾಂ ಸ ದೇವೋ
ವಾಹೈರ್ಯುಕ್ತಂ ಸುಪ್ರಭಂ ಭಾನುಮಂತಮ್ ।
ಸಂದರ್ಶಯಾಮಾಸ ತದಾ ಸ್ಮ ಲೋಕಾನ್
ಸರ್ವಾಂಸ್ತದಾ ಪುಣ್ಯಕೃತಾಂ ದ್ವಿಜೇಂದ್ರ ॥20॥
ಎಲೈ ದ್ವಿಜೇಂದ್ರನೇ, ಆಗ ಯಮದೇವನು ಕಾಂತಿಯುಕ್ತವಾದ, ಪ್ರಕಾಶಮಾನವಾದ, ವಾಹಗಳಿಂದ ಕೂಡಿದ ರಥವನ್ನು ಏರಿಸಿ ಪುಣ್ಯವಂತರು ಸಂಪಾದಿಸಿದ ಲೋಕಗಳನ್ನೆಲ್ಲಾ ನನಗೆ ತೋರಿಸಿದನು.
ಅಪಶ್ಯಂ ತತ್ರ ವೇಶ್ಮಾನಿ ತೈಜಸಾನಿ ಕೃತಾತ್ಮನಾಮ್ ।
ನಾನಾಸಂಸ್ಥಾನರೂಪಾಣಿ ಸರ್ವರತ್ನಮಯಾನಿ ಚ ॥21॥
ಚಂದ್ರಮಂಡಲಶುಭ್ರಾಣಿ ಕಿಂಕಿಣೀಜಾಲವಂತಿ ಚ ।
ಅನೇಕಶತಭೌಮಾನಿ ಸಾಂತರ್ಜಲವನಾನಿ ಚ ॥22॥
ವೈಡೂರ್ಯಾರ್ಕಪ್ರಕಾಶಾನಿ ರೂಪ್ಯರುಗ್ಮಮಯಾನಿ ಚ ।
ತರುಣಾದಿತ್ಯವರ್ಣಾನಿ ಸ್ಥಾವರಾಣಿ ಚರಾಣಿ ಚ ॥23॥
ಭಕ್ಷ್ಯಭೋಜ್ಯಮಯಾನ್ ಶೈಲಾನ್ ವಾಸಾಂಸಿ ಶಯನಾನಿ ಚ ।
ಸರ್ವಕಾಮಫಲಾಂಶ್ಚೈವ ವೃಕ್ಷಾನ್ ಭವನಸಂಸ್ಥಿತಾನ್ ॥24॥
ನದ್ಯೋ ವೀಥ್ಯಃ ಸಭಾ ವಾಪೀ ದೀರ್ಘಿಕಾಶ್ಚೈವ ಸರ್ವಶಃ ।
ಘೋಷವಂತಿ ಚ ಯಾನಾನಿ ಯುಕ್ತಾನ್ಯೇವ ಸಹಸ್ರಶಃ ॥25॥
ಅಲ್ಲಿ ನಾನು ಪುಣ್ಯಪರ ಪ್ರಕಾಶಮಾನವಾದ ನಾನಾ ಆಕಾರಗಳನ್ನು ನಾನಾ ರೂಪಗಳನ್ನು ಹೊಂದಿದ್ದ, ಪೂರ್ಣವಾಗಿ ರತ್ನಮಯವಾದ, ಚಂದ್ರಮಂಡಲದಂತೆ ಶುಭ್ರವಾದ, ಅನೇಕ ಸಣ್ಣ ಗಂಟೆಗಳ ಜಾಲದಿಂದ ಕೂಡಿದ, ಅನೇಕ ಶತ ಭೌಮ ಪದಾರ್ಥಗಳಿಂದ (ರತ್ನಗಳಿಂದ) ಕೂಡಿದ ಒಳಗೆ ಜಲಗಳು ಮತ್ತು ಉದ್ಯಾನಗಳು ಇರುವ, ವೈಢೂರ್ಯದಂತೆ ಸೂರ್ಯನಂತೆ ಪ್ರಕಾಶಿಸುವ, ಸುವರ್ಣರಜತಮಯವಾದ, ಉದಯಿಸುವ ಸೂರ್ಯನ ಕಾಂತಿಯುಳ್ಳ, ಚಲಿಸುವ ಮತ್ತು ಚಲಿಸದಿರುವ ಗೃಹಗಳನ್ನೂ ಮತ್ತು ಅವುಗಳ ಸಮೀಪದಲ್ಲಿ ಭಕ್ಷ್ಯಭೋಜ್ಯಮಯವಾದ ಪರ್ವತಗಳನ್ನೂ, ವಸ್ತ್ರಗಳನ್ನೂ, ಶಯನಗಳನ್ನೂ, ಕಾಮಿತವಾದ ಸರ್ವಫಲಗಳನ್ನು ಕೊಡುವ ವೃಕ್ಷಗಳನ್ನೂ ನೋಡಿದೆನು. ನದಿಗಳು, ಬೀದಿಗಳು, ಸಭೆ, ಬಾವಿ, ಸರೋವರ, ಒಳ್ಳೆಯ ಘೋಷವುಳ್ಳ ಯಾನಗಳು ಎಲ್ಲವೂ ಅಲ್ಲಿ ಸಹಸ್ರ ಸಂಖ್ಯೆಯಲ್ಲಿ ಇದ್ದವು.
ಕ್ಷೀರಸ್ರವಾ ವೈ ಸರಿತೋ ಗಿರೀಂಶ್ಚ
ಸರ್ಪಿಸ್ತಥಾ ವಿಮಲಂ ಚಾಪಿ ತೋಯಮ್ ।
ವೈವಸ್ವತಸ್ಯಾನುಮತಾಂಶ್ಚ ದೇಶಾನ್
ಅದೃಷ್ಟಪೂರ್ವಾನ್ ಸುಬಹೂನಪಶ್ಯಮ್ ॥26॥
ಕ್ಷೀರಪ್ರವಾಹವನ್ನು ಹೊಂದಿದ ನದಿಗಳನ್ನೂ, ಪರ್ವತಗಳನ್ನೂ, ಶುದ್ಧ ಘೃತವನ್ನೂ, ಶುದ್ಧ ಜಲವನ್ನೂ, ಹಿಂದೆ ನೋಡದಿದ್ದ ಯಮದೇವನಿಗೆ ಅನುಮತವಾದ ಅನೇಕ ದೇಶಗಳನ್ನೂ ನಾನು ನೋಡಿದೆನು.
ಸರ್ವಂ ದೃಷ್ಟ್ವಾ ತದಹಂ ಧರ್ಮರಾಜ-
ಮವೋಚಂ ವೈ ಪ್ರಭವಿಷ್ಣುಂ ಪುರಾಣಮ್ ।
ಕ್ಷೀರಸ್ಯೈತಾಃ ಸರ್ಪಿಷಶ್ಚೈವ ನದ್ಯಃ
ಶಶ್ವತ್ಸ್ರೋತಾಃ ಕಸ್ಯ ಭೋಜ್ಯಾಃ ಪ್ರದಿಷ್ಟಾಃ ॥27॥
ಅವೆಲ್ಲವನ್ನೂ ನೋಡಿ ನಾನು ಪ್ರಭುವೂ, ಪ್ರಾಚೀನನೂ ಆದ ಧರ್ಮರಾಜನನ್ನು ಕುರಿತು ಸದಾ ಕಾಲದಲ್ಲಿ ಪ್ರವಾಹವನ್ನು ಹೊಂದಿರುವ ಈ ಕ್ಷೀರ ಮತ್ತು ಘೃತ ನದಿಗಳು ಯಾರಿಂದ ಭೋಗಿಸಲ್ಪಡುತ್ತವೆ ಎಂದು ಕೇಳಿದೆನು.
ಯಮೋಽಬ್ರವೀದ್ ವಿದ್ಧಿ ಭೋಜ್ಯಾಸ್ತ್ವಮೇತಾಂ
ಯೇ ದಾತಾರಃ ಸಾಧವೋ ಗೋರಸಾನಾಮ್ ।
ಅನ್ಯೇ ಲೋಕಾಃ ಶಾಶ್ವತಾ ವೀತಶೋಕಾಃ
ಸಮಾಕೀರ್ಣಾ ಗೋಪ್ರದಾನೇ ರತಾನಾಮ್ ॥28॥
ಯಮನು ನನ್ನನ್ನು ಕುರಿತು ಗೋರಸಗಳನ್ನು ದಾನ ಮಾಡುವ ಸಜ್ಜನರಿಂದ ಇವುಗಳು ಭೋಗಿಸಲ್ಪಡುತ್ತವೆ ಎಂದು ನೀನು ತಿಳಿ. ಗೋಪ್ರದಾನದಲ್ಲಿ ನಿರತರಾದವರಿಗೆ ಶಾಶ್ವತವಾದ, ಶೋಕರಹಿತವಾದ, ಶುಭವಸ್ತುಗಳಿಂದ ತುಂಬಿದ ಬೇರೆ ಲೋಕಗಳೂ ಇವೆ.
ನ ತ್ವೇವಾಸಾಂ ದಾನಮಾತ್ರಂ ಪ್ರಶಸ್ತಂ
ಪಾತ್ರಂ ಕಾಲೋ ಗೋವಿಶೇಷೋ ವಿಧಿಶ್ಚ ।
ಜ್ಞಾತ್ವಾ ದೇಯಂ ವಿಪ್ರ ಗವಾಂತರಂ ಚ
ದುಃಖಂ ಹಾತುಂ ಪಾವಕಾದಿತ್ಯಭೂತಮ್ ॥29॥

ಇವುಗಳ ದಾನಮಾತ್ರವಲ್ಲ. ಪ್ರಶಸ್ತವಾದ ಪಾತ್ರವನ್ನೂ, ಕಾಲವನ್ನೂ, ಗೋ ವಿಶೇಷವನ್ನೂ, ಗೋದಾನ ಪ್ರಕಾರವನ್ನೂ ತಿಳಿದು ದಾನ ಮಾಡಬೇಕು. ಸೂರ್ಯನಿಂದ ಮತ್ತು ಅಗ್ನಿಯಿಂದ ಉಂಟಾಗುವ ಭಯವನ್ನು ತಪ್ಪಿಸಲು ಗೋಶಾಲೆಗೆ ಇರುವ ಅವಕಾಶವನ್ನು ನೋಡಿ ದಾನ ಮಾಡಬೇಕು (ಲಕ್ಷಾಲಂಕಾರ).

ಸ್ವಾಧ್ಯಾಯಾಢ್ಯೋ ಯೋಽತಿಮಾತ್ರಂ ತಪಸ್ವೀ
ವೈತಾನಸ್ಥೋ ಬ್ರಾಹ್ಮಣಃ ಪಾತ್ರಮಾಸಾಮ್ |
ಕೃಚ್ಛ್ರೋತ್ಸೃಷ್ಟಾಃ ಪೋಷಣಾಭ್ಯಾಗತಾಶ್ಚ
ದ್ವಾರೈರೇತೈರ್ಗೋವಿಶೇಷಾಃ ಪ್ರಶಸ್ತಾಃ ॥30॥

ಸ್ವಾಧ್ಯಾಯ ಸಂಪನ್ನನೂ, ಬಹಳವಾಗಿ ತಪಸ್ವಿಯೂ, ಯಜ್ಞಾದಿ ಕರ್ಮಗಳಲ್ಲಿ ನಿರತನಾದವನೂ ಆದ ಬ್ರಾಹ್ಮಣನು ಈ ಗೋವುಗಳನ್ನು ಸ್ವೀಕರಿಸಲು ಪಾತ್ರನಾಗುತ್ತಾನೆ. ಕಷ್ಟಕ್ಕೆ ಸಿಲುಕಿದ ಗೋಸ್ವಾಮಿಯಿಂದ ಪರಿತ್ಯಜಿಸಲ್ಪಟ್ಟು ಪೋಷಣೆಗಾಗಿ ತನ್ನ ಬಳಿಗೆ ಬಂದ ಗೋವಿಶೇಷಗಳು ದಾನಕ್ಕೆ ಪ್ರಶಸ್ತವಾದವುಗಳು.

ತಿಸ್ರೋ ರಾತ್ರೀರದ್ಭಿರುಪೋಷ್ಯ ಭೂಮೌ
ತೃಪ್ತಾ ಗಾವಸ್ತರ್ಪಿತೇಭ್ಯಃ ಪ್ರದೇಯಾಃ |
ವತ್ಸೈಃ ಪ್ರೀತಾಃ ಸುಪ್ರಜಾಃ ಸೋಪಚಾರಾ-
ಸ್ತ್ರ್ಯಹಂ ದತ್ತ್ವಾ ಗೋರಸೈರ್ವರ್ತಿತವ್ಯಮ್ ॥31॥

ಗೋವುಗಳನ್ನು ಮೂರುದಿನಗಳ ಕಾಲ ಸಮೃದ್ಧವಾದ ಹುಲ್ಲು, ನೀರು ಇರುವ ಕಡೆಯಲ್ಲಿ ವಾಸವನ್ನು ಮಾಡಿಸಿ ತೃಪ್ತವಾದ ಆ ಗೋವುಗಳನ್ನು ತೃಪ್ತಿ ಪಡಿಸಲ್ಪಟ್ಟ ಪ್ರಸನ್ನರಾದ ಬ್ರಾಹ್ಮಣರಿಗೆ ಒಳ್ಳೆಯ ವಸ್ತ್ರಗಳ ಜೊತೆಯಲ್ಲಿ ಉಪಚಾರ ಸಹಿತವಾಗಿ ದಾನವನ್ನು ಮಾಡಿ ಅನಂತರ ಮೂರು ದಿನ ಗೋರಸವನ್ನೇ ಆಹಾರವಾಗಿ ಸ್ವೀಕರಿಸಬೇಕು.

ದತ್ತ್ವಾ ಧೇನುಂ ಸುವ್ರತಾಂ ಕಾಂಸ್ಯದೋಹಾಂ
ಕಲ್ಯಾಣವತ್ಸಾಮಪಲಾಯಿನೀಂ ಚ |
ಯಾವಂತಿ ಲೋಮಾನಿ ಭವಂತಿ ತಸ್ಯಾಃ
ತಾವದ್ವರ್ಷಾಣ್ಯಶ್ನುತೇ ಸ್ವರ್ಗಲೋಕಮ್ ॥32॥

ಒಳ್ಳೆಯ ನಡತೆಯುಳ್ಳ, ಒಳ್ಳೆಯ ಕರುಗಳನ್ನು ಹೊಂದಿದ, ಓಡಿ ಹೋಗದಿರುವ ಗೋವನ್ನು ಕಂಚಿನ ಪಾತ್ರೆಗಳ ಜೊತೆಯಲ್ಲಿ ದಾನ ಮಾಡಿದರೆ ಆ ಗೋವಿನ ದೇಹದಲ್ಲಿ ಎಷ್ಟು ರೋಮಗಳಿರುತ್ತವೆಯೋ ಅಷ್ಟು ವರ್ಷಗಳ ಕಾಲ ದಾನ ಮಾಡಿದವನು ಸ್ವರ್ಗವನ್ನು ಹೊಂದುತ್ತಾನೆ.

ತಥಾಽನಡ್ವಾಹಂ ಬ್ರಾಹ್ಮಣಾಯ ಪ್ರದಾಯ
ದಾಂತಂ ಧುರ್ಯಂ ಬಲವಂತಂ ಯುವಾನಮ್ |
ಕುಲಜೀವಂ ವೀರ್ಯವಂತಂ ಬೃಹಂತಂ
ಭುಂಕ್ತೇ ಲೋಕಾನ್ ಸಮ್ಮಿತಾನ್ ಧೇನುದಸ್ಯ ॥33॥

ಹಾಗೆಯೇ ಚೆನ್ನಾಗಿ ಪಳಗಿದ, ಭಾರವನ್ನು ಹೊರಲು ಸಮರ್ಥವಾದ, ಬಲಿಷ್ಠವಾದ, ತರುಣ ವಯಸ್ಸಿನ, ಗೋ ಸಮೂಹದ ಜೊತೆಯಲ್ಲಿ ಚೆನ್ನಾಗಿ ಬದುಕಿದ, ವೀರ್ಯಶಾಲಿಯಾದ ದೊಡ್ಡ ಎತ್ತನ್ನು ಬ್ರಾಹ್ಮಣನಿಗೆ ಕೊಡುವವನು ಗೋದಾನ ಮಾಡಿದವನು ಹೊಂದುವ ಲೋಕಗಳನ್ನೇ ಹೊಂದುತ್ತಾನೆ (ಲಕ್ಷಾಲಂಕಾರ).

ಗೋಷು ಕ್ಷಾಂತಂ ಗೋಶರಣ್ಯಂ ಕೃತಜ್ಞಂ
ವೃತ್ತಿಗ್ಲಾನಂ ತಾದೃಶಂ ಪಾತ್ರಮಾಹುಃ |
ವೃತ್ತಿಗ್ಲಾನೇ ಸಂಭ್ರಮೇ ವಾ ಮಹಾರ್ಥೇ
ಕೃಷ್ಯರ್ಥೇ ವಾ ಹೋಮಹೇತೋಃ ಪ್ರಸೂತ್ಯಾಮ್ ॥34॥

ಗೋವುಗಳ ವಿಷಯದಲ್ಲಿ ಕ್ಷಮೆಯನ್ನು ಹೊಂದಿದ, ಗೋವುಗಳಿಗೆ ಆಶ್ರಯವನ್ನು ಕೊಡಲು ಅರ್ಹನಾದ, ಕೃತಜ್ಞನಾದ, ಜೀವನೋಪಾಯ ರಹಿತನಾದ ಬ್ರಾಹ್ಮಣನು ಶ್ರೇಷ್ಠನಾದ ಪಾತ್ರನೆಂದು ಹೇಳುತ್ತಾರೆ. ಜೀವನೋಪಾಯವು ನಷ್ಟವಾದಾಗ, ಗಾಬರಿಯಾದಾಗ, ದೊಡ್ಡ ಪ್ರಯೋಜನವು ಸನ್ನಿಹಿತವಾದಾಗ, ಕೃಷಿಯನ್ನು ಅಥವಾ ಹೋಮವನ್ನು ಮಾಡಲು ಬೇಕಾದಾಗ ಅಥವಾ ಪುತ್ರೋತ್ಸವವಾದಾಗ ಗೋದಾನವನ್ನು ಮಾಡಬೇಕು.

ಗುರ್ವರ್ಥೇ ವಾ ಬಾಲಪುಷ್ಟ್ಯಭಿಷಂಗಾದ್
ಗಾವೋ ದಾತುಂ ದೇಶಕಾಲೋಽವಿಶಿಷ್ಟಃ |
ಅಂತರ್ಜಾತಾಃ ಸುಕ್ರಿಯಾಜ್ಞಾನಲಬ್ಧಾಃ
ಪ್ರಾಣಕ್ರೀತಾ ನಿರ್ಜಿತಾಶ್ಚೈಕಜಾಶ್ಚ ॥35॥

ಗುರುಗಳ ಸಲುವಾಗಿ ಅಥವಾ ಮಕ್ಕಳ ಪುಷ್ಟಿಯನ್ನು ಆಶಿಸಿ ಗೋದಾನವನ್ನು ಮಾಡಬೇಕು. ಅಂತಹ ಸಂದರ್ಭದಲ್ಲಿ ಗೋದಾನವನ್ನು ಮಾಡಲು ದೇಶಕಾಲಗಳನ್ನು ವಿಮರ್ಶಿಸಬಾರದು. ಮನೆಯಲ್ಲೇ ಹುಟ್ಟಿದ ಅಥವಾ ಯುದ್ಧವನ್ನು ಮಾಡಿ ಸಂಪಾದಿಸಿದ ಅಥವಾ ವೀರ್ಯಬಲವನ್ನು ನೋಡಿ ಕ್ರಯವನ್ನು ಮಾಡಿದ, ತನಗೆ ಅತ್ಯಂತ ವಶವಾದ ಒಂದೇ ಕರುವನ್ನು ಪ್ರಸವಿಸಿರುವ ಗೋವುಗಳನ್ನು ದಾನ ಮಾಡಬೇಕು (ಲಕ್ಷಾಲಂಕಾರ).

ಗಾಂ ವೈ ದದ್ಯಾನ್ನ್ಯಾಯಭೂತಾ ದ್ವಿಜೇಭ್ಯೋ
ಯೋ ಯಾತುಮಾಕಾಂಕ್ಷತಿ ದೇವಲೋಕಮ್ |

ಯಾವನು ದೇವಲೋಕಕ್ಕೆ ಹೋಗಲು ಬಯಸುತ್ತಾನೆಯೋ ಅವನು ನ್ಯಾಯದಿಂದ ಸಂಪಾದಿಸಿದ ಗೋವುಗಳನ್ನು ಬ್ರಾಹ್ಮಣರಿಗೆ ದಾನ

ಮಾಡಬೇಕು.
ನಾಚಿಕೇತಃ
ಶ್ರುತ್ವಾ ವೈವಸ್ವತವಚಸ್ತಮಹಂ ಪುನರಬ್ರುವಮ್ |
ಅಗೋಮೀ ಗೋಪ್ರದಾತ್ರೂಣಾಂ ಕಥಂ ಲೋಕಾನ್ ನಿಗಚ್ಛತಿ ||36||
ನಾಚಿಕೇತ ಯಮನ ಮಾತುಗಳನ್ನು ಕೇಳಿ ನಾನು ಪುನಃ ಅವನನ್ನು ಕುರಿತು ಗೋವುಗಳು ಇಲ್ಲದವನು ಗೋದಾನ ಮಾಡಿದವನು ಹೊಂದುವ ಲೋಕಗಳನ್ನು ಹೇಗೆ ಹೊಂದುತ್ತಾನೆ ಎಂದು ಕೇಳಿದೆನು.
ತತೋ ಯಮೋಽಬ್ರವೀದ್ ಧೀಮಾನ್ ಗೋಪ್ರದಾನೇ ಪರಾಂ ಗತಿಮ್ |
ಗೋಪ್ರದಾನಾನುಕಲ್ಪಂ ತು ಗಾಮೃತೇ ಸಂತಿ ಗೋಪ್ರದಾಃ ||37||
ಆಗ ಯಮನು ನನಗೆ ಗೋಪ್ರದಾನದ ಶ್ರೇಷ್ಠವಾದ ರೀತಿಯನ್ನೂ ಗೋವಿಲ್ಲದೆ ಗೋಪ್ರದಾನಕ್ಕೆ ಅನುಕಲ್ಪವನ್ನು ಮಾಡಿ ಗೋದಾನದ ಫಲವನ್ನು ಅನುಭವಿಸುವವರ ವಿಷಯವನ್ನೂ ಹೇಳಿದನು.
ಅಲಭೇ ಯೋ ಗವಾಂ ದದ್ಯಾದ್ ಘೃತಧೇನುಂ ಯತವ್ರತಃ |
ತಸ್ಯೈತಾ ಘೃತವಾಹಿನ್ಯಃ ಕ್ಷರಂತೇ ವತ್ಸಲಾ ಇವ ||38||
ಸಾಕ್ಷಾತ್ತಾಗಿ ಗೋವು ಲಭಿಸದಿದ್ದರೆ ವ್ರತವನ್ನು ಧರಿಸಿ ಘೃತಧೇನುವನ್ನಾದರೂ ದಾನ ಮಾಡಬೇಕು. ಅಂತಹವನ ಸಲುವಾಗಿ ಪ್ರೀತಿಯಿಂದ ಈ ಘೃತನದಿಗಳು ಹರಿಯುತ್ತವೆ. ಘೃತಧೇನು ಎಂದರೆ ಧೇನುವಿನ ಆಕಾರದ ಪಾತ್ರೆಯಲ್ಲಿ ಘೃತವನ್ನು ತುಂಬಿಸಿದುದು ಎಂದು ಅರ್ಥ. ತಿಲಧೇನು, ಜಲಧೇನು ಎಂದರೂ ಹೀಗೆಯೇ ಅರ್ಥವನ್ನು ಮಾಡಬೇಕು (ಲಕ್ಷ್ಮಾಲಂಕಾರ).
ಘೃತಾಲಾಭೇ ಚ ಯೋ ದದ್ಯಾದ್ ತಿಲಧೇನುಂ ಯತವ್ರತಃ |
ಸ ದುರ್ಗಾತ್ ತಾರಿತೋ ಧೇನ್ವಾ ಕ್ಷೀರನದ್ಯಾಂ ಪ್ರಮೋದತೇ ||39||
ವ್ರತಧಾರಿಯಾದವನು ಘೃತವು ಲಭಿಸದಿದ್ದರೆ ತಿಲಧೇನುವನ್ನಾದರೂ ದಾನವನ್ನು ಮಾಡಬೇಕು. ಅವನು ಧೇನುವಿನಿಂದ ಕಷ್ಟದಿಂದ ದಾಟಿಸಲ್ಪಟ್ಟು ಕ್ಷೀರನದಿಯಲ್ಲಿ ಸಂತೋಷಪಡುತ್ತಾನೆ.
ತಿಲಾಲಾಭೇ ಚ ಯೋ ದದ್ಯಾಜ್ಜಲಧೇನುಂ ಯತವ್ರತಃ |
ಸ ಕಾಮಪ್ರವಹಾಂ ಶೀತಾಂ ನದೀಮೇತಾಮುಪಾಶ್ನುತೇ ||40||
ತಿಲವೂ ದೊರೆಯದಿದ್ದರೆ ಯಾವನು ಜಲಧೇನುವನ್ನಾದರೂ ದಾನ ಮಾಡುತ್ತಾನೆಯೋ ಅವನು ಅವನ ಇಚ್ಛೆಯಂತೆ ಹರಿಯುವ ಈ ಶೀತಲ ಜಲದಿಂದ ಕೂಡಿದ ನದಿಯನ್ನು ಹೊಂದಿ ವಿಹರಿಸುತ್ತಾನೆ (ಎಂದು ಹೇಳಿದನು).
ಏವಮಾದೀನಿ ಮೇ ತತ್ರ ಧರ್ಮರಾಜೋ ನ್ಯದರ್ಶಯತ್ |
ದೃಷ್ಟ್ವಾ ಚ ಪರಮಂ ಹರ್ಷಮವಾಪಮಹಮಚ್ಯುತ ||41||
ಇವೇ ಮೊದಲಾದ ಅನೇಕ ವಸ್ತುಗಳನ್ನು ಧರ್ಮರಾಜನು ನನಗೆ ತೋರಿಸಿದನು. ಎಲೈ ಗುಣಗಳಿಂದ ಚ್ಯುತನಾಗದವನೇ ಅವುಗಳನ್ನು ನೋಡಿ ನಾನು ಬಹಳ ಸಂತೋಷವನ್ನು ಹೊಂದಿದೆನು.
ನಿವೇದಯೇ ಚಾಪಿ ಪ್ರಿಯಂ ಭವತ್ಸು
ಕ್ರತುರ್ಮಹಾನಲ್ಪಧನಪ್ರಚಾರಃ |
ಪ್ರಾಪ್ತೋ ಮಯಾ ತಾತ ಸ ಮತ್ಪ್ರಸೂತಃ
ಪ್ರಪತ್ಸ್ಯತೇ ವೇದವಿಧಿಪ್ರವೃತ್ತಃ ||42||
ನಿಮಗೆ ಒಂದು ಪ್ರಿಯವಾದ ವಿಷಯವನ್ನು ಹೇಳುತ್ತೇನೆ. ತಂದೆಯೇ ಅಲ್ಪಧನವುಳ್ಳ ನಾನು ದೊಡ್ಡ ಕ್ರತುವನ್ನು ಮಾಡಿದ ಫಲವನ್ನು ಹೊಂದಿದ್ದೇನೆ. ವೇದವಿಧಿಯಲ್ಲಿ ಪ್ರವೃತ್ತನಾದ ನನ್ನ ಪುತ್ರನೂ ಸಹ ಅಂತಹ ಫಲವನ್ನು ಪಡೆಯುವನು.
ಶಾಪೋ ಹ್ಯಯಂ ಭವತೋಽನುಗ್ರಹಾಯ
ಪ್ರಾಪ್ತೋ ಮಯಾ ಯತ್ರ ದೃಷ್ಟೋ ಯಮೋ ಮೇ |
ದಾನವ್ಯುಷ್ಟಿಂ ತತ್ರ ದೃಷ್ಟ್ವಾ ಮಹಾರ್ಥಾಂ
ನಿಃಸಂದಿಗ್ಧಂ ದಾನಧರ್ಮಾಂಶ್ಚರಿಷ್ಯೇ ||43||
ನೀವು ಕೊಟ್ಟ ಶಾಪವು ನನಗೆ ಅನುಗ್ರಹವೇ ಆಗಿದೆ. ಏಕೆಂದರೆ ನಾನು ಯಮನನ್ನು ನೋಡಿದೆನು. ಮಹಾಪ್ರಯೋಜನವುಳ್ಳ ದಾನದ ಫಲದ ಸಮೃದ್ಧಿಯನ್ನು ನಾನು ಅಲ್ಲಿ ನೋಡಿ ನಾನು ನಿಸ್ಸಂಶಯವಾಗಿ ದಾನ-ಧರ್ಮಗಳನ್ನು ಆಚರಿಸುವೆನು.
ಇದಂ ಚ ಮಾಮಬ್ರವೀದ್ ಧರ್ಮರಾಜಃ
ಪುನಃ ಪುನಃ ಸಂಪ್ರಹೃಷ್ಟೋ ದ್ವಿಜರ್ಷೇ |
ದಾನೇನ ತಾತ ಪ್ರಯತೋಽಭೂಃ ಸದೈವ
ವಿಶೇಷತೋ ಗೋಪ್ರದಾನಂ ಚ ಕುರ್ಯಾಃ ||44||
ಧರ್ಮರಾಜನು ನನ್ನನ್ನು ಕುರಿತು ದ್ವಿಜರ್ಷಿಯೇ, ಪ್ರೀತಿಪಾತ್ರನೇ, ದಾನದಲ್ಲಿ ಯಾವಾಗಲೂ ಆಸಕ್ತನಾಗಿರುವಿ. ವಿಶೇಷವಾಗಿ ಗೋದಾನವನ್ನು ಮಾಡು ಎಂದು ಸಂತೋಷದಿಂದ ಪುನಃ ಪುನಃ ಹೇಳಿದನು.
ಶುದ್ಧೋ ಹ್ಯರ್ಥೋ ನಾವಮನ್ಯಸ್ವ ಧರ್ಮಾನ್
ಪಾತ್ರೇ ದೇಯಂ ದೇಶಕಾಲೋಪಪನ್ನೇ |
ತಸ್ಮಾದ್ ಗಾವಸ್ತೇ ನಿತ್ಯಮೇವ ಪ್ರದೇಯಾ
ಮಾ ಭೂಚ್ಚ ತೇ ಸಂಶಯಃ ಕಶ್ಚಿದತ್ರ ||45||
ಗೋವೆನ್ನುವುದು ಪರಿಶುದ್ಧವಾದ ವಸ್ತು. ಧರ್ಮವನ್ನು ಅವಮಾನಗೊಳಿಸಬೇಡ. ದೇಶಕಾಲವು ಉಪಪನ್ನವಾದಾಗ ಪಾತ್ರನಿಗೆ

ದಾನವನ್ನು ಮಾಡಬೇಕು. ಆದ್ದರಿಂದ ನೀನು ಯಾವಾಗಲೂ ಗೋದಾನವನ್ನು ಮಾಡು. ಈ ವಿಷಯದಲ್ಲಿ ಸಂಶಯವನ್ನು ಪಡಬೇಡ.
ಏತಾಃ ಪುರಾ ಅದದನ್ನಿತ್ಯಮೇವ
ಶಾಂತಾತ್ಮಾನೋ ದಾನಪಥೇ ನಿವಿಷ್ಟಾಃ |
ತಪಾಂಸ್ಯುಗ್ರಾಣ್ಯಪ್ರತಿಶಂಕಮಾನಾಃ
ತೇ ವೈ ದಾನಂ ಪ್ರದದುಶ್ಚಾಪಿ ಶಕ್ತ್ಯಾ ॥46॥
ಇಲ್ಲಿ ಕಾಣುತ್ತಿರುವ ಶಾಂತಮನಸ್ಸುಳ್ಳವರೂ, ದಾನ ಮಾರ್ಗದಲ್ಲಿ ನಿರತರಾದವರೂ, ಉಗ್ರವಾದ ತಪಸ್ಸಿನಲ್ಲಿ ನಿಶ್ಶಂಕೆಯಿಂದ ಪ್ರವೃತ್ತರಾದವರೂ ಆದ ಇವರು ತಮ್ಮ ಶಕ್ತಿ ಇದ್ದಷ್ಟು ದಾನವನ್ನು ಕೊಟ್ಟಿದ್ದಾರೆ.
ಕಾಲೇ ಶಕ್ತ್ಯಾ ಮತ್ಸರಂ ವರ್ಜಯಿತ್ವಾ
ಶುದ್ಧಾತ್ಮಾನಃ ಶ್ರದ್ಧಿನಃ ಪುಣ್ಯಶೀಲಾಃ |
ದತ್ತ್ವಾ ತಪ್ತ್ವಾ ಲೋಕಮಮುಂ ಪ್ರಪನ್ನಾ
ದೇದೀಪ್ಯಂತೇ ಪುಣ್ಯಶೀಲಾಶ್ಚ ನಾಕೇ ॥47॥
ಯೋಗ್ಯವಾದ ಕಾಲದಲ್ಲಿ ಮತ್ಸರವನ್ನು ಬಿಟ್ಟು ಶುದ್ಧಾತ್ಮರಾಗಿ, ಶ್ರದ್ಧಾಯುಕ್ತರಾಗಿ, ಪುಣ್ಯಶೀಲರಾಗಿ ತಮ್ಮ ಶಕ್ತಿ ಇದ್ದಷ್ಟು ದಾನವನ್ನು ಮಾಡಿ, ತಪಸ್ಸನ್ನು ಮಾಡಿ ಈ ಲೋಕಕ್ಕೆ ಬಂದು ವಿರಾಜಿಸುತ್ತಿದ್ದಾರೆ. ಪುಣ್ಯಶೀಲರಾದ ಇವರು ಸ್ವರ್ಗದಲ್ಲಿಯೂ ವಿರಾಜಿಸುತ್ತಾರೆ.
ಏತದ್ ದಾನಂ ನ್ಯಾಯಲಬ್ಧಂ ದ್ವಿಜೇಭ್ಯಃ
ಪಾತ್ರೇ ದತ್ತಂ ಪ್ರಾಪಣೀಯಂ ಪರೀಕ್ಷ್ಯ |
ಕಾಮ್ಯಾಷ್ಟಮ್ಯಾಂ ವರ್ತಿತವ್ಯಂ ದಶಾಹಂ
ರಸೈರ್ಗವಾಂ ಶಕೃತಾ ಪ್ರಸ್ನವೈರ್ವಾ ॥48॥
ನ್ಯಾಯಮಾರ್ಗದಲ್ಲಿ ಲಬ್ಧವಾದ ಈ ಗೋವನ್ನು ಬ್ರಾಹ್ಮಣರಿಗೆ ದಾನ ಕೊಡಬೇಕು. ಪಾತ್ರವನ್ನು ಪರೀಕ್ಷೆ ಮಾಡಿ ಬ್ರಾಹ್ಮಣರಿಗೆ ಕೊಡಬೇಕಾದುದು. ಹತ್ತು ದಿವಸ ಗೋರಸಗಳಿಂದ ಅಥವಾ ಗೋಮಯದಿಂದ ಅಥವಾ ಗೋಮೂತ್ರದಿಂದ ಜೀವಿಸಿ ಕಾಮ್ಯಾಷ್ಟಮಿಯ (ಕಾರ್ತಿಕಮಾಸದ ಅಷ್ಟಮಿ) ದಿವಸ ಗೋದಾನವನ್ನು ಮಾಡಬೇಕು.
ವೇದವ್ರತೀ ಸ್ಯಾದ್ ವೃಷಭಪ್ರದಾತಾ
ವೇದಾವಾಪ್ತಿರ್ಗೋಯುಗಸ್ಯ ಪ್ರದಾನೇ |
ತೀರ್ಥಾವಾಪ್ತಿರ್ಗೋಪ್ರಯುಕ್ತಪ್ರದಾನೇ
ಪಾಪೋತ್ಸರ್ಗಃ ಕಪಿಲಾಯಾಃ ಪ್ರದಾನೇ ॥49॥
ವೃಷಭದಾನವನ್ನು ಮಾಡಿದವನು ವೇದನಿರತನಾಗುತ್ತಾನೆ. ಎರಡು ಗೋವುಗಳನ್ನು ದಾನ ಮಾಡುವವನಿಗೆ ವೇದದ ಪ್ರಾಪ್ತಿಯಾಗುತ್ತದೆ. ಗೋವಿನಿಂದ ಉಂಟಾದ ರಸಗಳನ್ನು ದಾನ ಮಾಡಿದರೆ ತೀರ್ಥಕ್ಷೇತ್ರ ಪ್ರಾಪ್ತಿಯಾಗುತ್ತದೆ. ಕಪಿಲ ಗೋವನ್ನು ದಾನ ಮಾಡಿದರೆ ಪಾಪಗಳು ಪರಿಹಾರವಾಗುತ್ತವೆ.
ಗಾಮಪ್ಯೇಕಾಂ ಕಪಿಲಾಂ ಸಂಪ್ರದಾಯ
ನ್ಯಾಯೋಪೇತಾಂ ಕಲ್ಮಷಾದ್ ವಿಪ್ರಮುಚ್ಯೇತ್ |
ಗವಾಂ ರಸಾತ್ ಪರಮಂ ನಾಸ್ತಿ ಕಿಂಚಿದ್
ಗವಾಂ ದಾನಂ ಸುಮಹತ್ ತದ್ ವದಂತಿ ॥50॥
ನ್ಯಾಯದಿಂದ ಲಬ್ಧವಾದ ಒಂದು ಕಪಿಲಗೋವನ್ನಾದರೂ ದಾನ ಮಾಡಿದವನು ಎಲ್ಲ ಪಾಪಗಳಿಂದ ಮತ್ತು ದೋಷಗಳಿಂದ ನಿರ್ಮುಕ್ತನಾಗುತ್ತಾನೆ. ಗೋರಸಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಆದ್ದರಿಂದ ಗೋದಾನವನ್ನು ಅತ್ಯಂತ ಶ್ರೇಷ್ಠವಾದುದು ಎಂದು ಹೇಳುತ್ತಾರೆ.
ಗಾವೋ ಲೋಕಾನ್ ಧಾರಯಂತಿ ಕ್ಷರಂತ್ಯೋ
ಗಾವಶ್ಚಾನ್ನಂ ಸಂಜನಯಂತಿ ಲೋಕೇ |
ಯಸ್ತಜ್ಜಾನನ್ನ ಗವಾಂ ಹಾರ್ದಮೇತಿ
ಸ ವೈ ಗಂತಾ ನಿರಯಂ ಪಾಪಚೇತಾಃ ॥51॥
ಗೋವುಗಳು ಕ್ಷೀರವನ್ನು ಸ್ರವಿಸಿ ಲೋಕಗಳನ್ನು ಪಾಲಿಸುತ್ತವೆ. ಗೋವುಗಳು ಲೋಕದಲ್ಲಿ ಅನ್ನವನ್ನು (ಧಾನ್ಯವನ್ನು) ಉತ್ಪಾದಿಸುತ್ತವೆ. ಇದನ್ನು ತಿಳಿದ ಯಾವನು ಗೋವುಗಳಲ್ಲಿ ಪ್ರೀತಿಯನ್ನು ಮಾಡುವುದಿಲ್ಲವೋ ಅಂತಹ ಪಾಪಚೇತನನು ನರಕಕ್ಕೆ ಹೋಗುತ್ತಾನೆ.
ಯತ್ತೇ ದಾತುಂ ಗೋಸಹಸ್ರಂ ಶತಂ ವಾ
ಶತಾರ್ಧಂ ವಾ ದಶ ವಾ ಸಾಧುವತ್ಸಾಃ |
ಅಪ್ಯೇಕಾಂ ವಾ ಸಾಧವೇ ಬ್ರಾಹ್ಮಣಾಯ
ಸಾಽಸ್ಯಾಮುಷ್ಮಿನ್ ಪುಣ್ಯತೀರ್ಥಾ ನದೀ ವೈ ॥52॥
ನಿನಗೆ ಒಳ್ಳೆಯ ಕರುಗಳಿಂದ ಕೂಡಿದ ಸಹಸ್ರಗೋವುಗಳನ್ನಾಗಲೀ, ನೂರು ಗೋವುಗಳನ್ನಾಗಲೀ, ಐವತ್ತು ಗೋವುಗಳನ್ನಾಗಲೀ ಅಥವಾ ಹತ್ತು ಗೋವುಗಳನ್ನಾಗಲೀ ಕೊಡಲು ಸಾಧ್ಯವಿಲ್ಲದಿದ್ದರೆ ಒಂದು ಗೋವನ್ನಾದರೂ ಸಾಧುಬ್ರಾಹ್ಮಣನಿಗೆ ಕೊಡಬೇಕು. ಆ ಗೋವು ಪರಲೋಕದಲ್ಲಿ ಅವನಿಗೆ ಪುಣ್ಯಜಲವುಳ್ಳ ನದಿಯಾಗುತ್ತದೆ.
ಪ್ರಾಪ್ತ್ಯಾ ಪುಷ್ಟ್ಯಾ ಲೋಕಸಂರಕ್ಷಣೇನ

ಗಾವಸ್ತುಲ್ಯಾಃ ಸೂರ್ಯಪಾದ್ಯೈಃ ಪೃಥಿವ್ಯಾಮ್ |
ಶಬ್ದಶ್ಚೈಕಃ ಸಂತತಿಶ್ಚೋಪಭೋಗಃ
ತಸ್ಮಾದ್ ಗೋದಃ ಸೂರ್ಯ ಇವಾಭಿಭಾತಿ ॥53॥
ಸರ್ವತ್ರ ಸಂಚಾರ ಮಾಡುವುದರಿಂದ, ಪುಷ್ಟಿಯನ್ನು ಉಂಟುಮಾಡುವುದರಿಂದ, ಲೋಕಸಂರಕ್ಷಣೆಯನ್ನು ಮಾಡುವುದರಿಂದ ಗೋವುಗಳು ಭೂಮಿಯಲ್ಲಿ ಸೂರ್ಯ ಕಿರಣಗಳಿಗೆ ಸಮಾನವಾದವುಗಳು. ಗೋ ಎಂಬ ಶಬ್ದವು ಒಂದೇ. ಗೋ ಎಂದರೆ ಕಿರಣವೆಂದೂ, ಗೋವು ಎಂದೂ ಎರಡು ಅರ್ಥವಿದೆ. ಮನುಷ್ಯನ ಸಂತತಿ ಮತ್ತು ಉಪಭೋಗಗಳು ಗೋವನ್ನು ಅವಲಂಬಿಸಿವೆ. ಆದ್ದರಿಂದ ಗೋದಾನ ಮಾಡುವವನು ಸೂರ್ಯನಂತೆ ವಿರಾಜಿಸುತ್ತಾನೆ.
ಗುರುಂ ಶಿಷ್ಯೋ ವರಯೇದ್ ಗೋಪ್ರದಾನೇ
ಸ ವೈ ವಕ್ತಾ ನಿಯತಂ ಸ್ವರ್ಗದಾತಾ |
ವಿಧಿಜ್ಞಾನಾಂ ಸುಮಹಾನೇಷ ಧರ್ಮೋ
ವಿಧಿಂ ಹ್ಯಾದ್ಯಂ ವಿಧಯಃ ಸಂಶ್ರಯಂತಿ ॥54॥
ಶಿಷ್ಯನು ಗೋದಾನವನ್ನು ಮಾಡುವಾಗ ಗುರುವನ್ನೇ ಪೂಜಿಸಬೇಕು. ಏಕೆಂದರೆ ಅವನೇ ನಿಯತವಾಗಿ ಜ್ಞಾನೋಪದೇಶವನ್ನು ಮಾಡಿ ಸ್ವರ್ಗವನ್ನು ಕೊಡುವವನು. ವಿಧಿಯನ್ನು ತಿಳಿದವನಿಗೆ ಗೋದಾನವು ಅತ್ಯಂತ ಶ್ರೇಷ್ಠವಾದ ಧರ್ಮ. ಉಳಿದ ವಿಧಿಗಳು ಶ್ರೇಷ್ಠವಾದ ವಿಧಿಯನ್ನು ಅನುಸರಿಸುತ್ತವೆ.
ಏತದ್ ದಾನಂ ನ್ಯಾಯಲಬ್ಧಂ ದ್ವಿಜೇಭ್ಯಃ
ಪಾತ್ರೇ ದತ್ತಂತ್ವ ಪ್ರಾಪಯೇಥಾಃ ಪರೀಕ್ಷ್ಯ |
ತ್ವಯ್ಯಾಶಂಸಂತ್ಯಮರಾ ಮಾನವಾಶ್ಚ
ವಯಂ ಚಾಪಿ ಪ್ರಸೃತೇ ಪುಣ್ಯಶೀಲಾಃ ॥55॥
ನ್ಯಾಯಲಬ್ಧವಾದ ಈ ದಾನವನ್ನು ಪಾತ್ರನಾದ ಬ್ರಾಹ್ಮಣನಿಗೆ ಪರೀಕ್ಷೆ ಮಾಡಿ ಕೊಡುವವನಾಗು. ಪುಣ್ಯಶೀಲರಾದ ಮಾನವರು ಮತ್ತು ದೇವತೆಗಳು ನೀನು ಇಂತಹ ದಾನವನ್ನು ಕೊಡುವಿ ಎಂದು ಆಶಂಸಿಸುತ್ತಾರೆ (ಎಂದು ಯಮನು ಹೇಳಿದನು).
ಇತ್ಯುಕ್ತೋಽಹಂ ಧರ್ಮರಾಜ್ಞಾ ಮಹರ್ಷೇ
ಧರ್ಮಾತ್ಮಾನಂ ಶಿರಸಾಭಿಪ್ರಣಮ್ಯ |
ಅನುಜ್ಞಾತಸ್ತೇನ ವೈವಸ್ವತೇನ
ಪ್ರತ್ಯಾಗಮಂ ಭಗವತ್ಪಾದಮೂಲಮ್ ॥56॥
ಎಲೈ ಮಹರ್ಷಿಯೇ, ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ನಾನು ಧರ್ಮಾತ್ಮನಾದ ಅವನಿಗೆ ಶಿರಸಾ ಪ್ರಣಾಮವನ್ನು ಮಾಡಿ ವಿವಸ್ವಾನ್ ಎಂಬ ಸೂರ್ಯನ ಪುತ್ರನಾದ ಅವನಿಂದ ಅನುಮತಿಯನ್ನು ಪಡೆದು ನಿಮ್ಮ ಪಾದದ ಸಮೀಪಕ್ಕೆ ಹಿಂದಿರುಗಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ನುಶಾಸನಪರ್ವಣಿ ದಾನಧರ್ಮೇ ನಚಿಕೇತಧರ್ಮರಾಜಸಂವಾದೋನಾಮ
ಏಕಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಒಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎರಡನೆಯ ಅಧ್ಯಾಯ
ಗೋದಾನ - ಬ್ರಹ್ಮದೇವರನ್ನು ಕುರಿತು ಇಂದ್ರನಿಂದ ಪ್ರಶ್ನೆ.
ಯುಧಿಷ್ಠಿರಃ
ಉಕ್ತಂ ವೈ ಗೋಪ್ರದಾನಂ ತೇ ನಾಚಿಕೇತಮೃಷಿಂ ಪ್ರತಿ |
ಮಾಹಾತ್ಮ್ಯಮಪಿ ಚೈವೋಕ್ತಮುದ್ದೇಶೇನ ಗವಾಂ ಪ್ರಭೋ ॥1॥
ಯುಧಿಷ್ಠಿರ ಪ್ರಭುವೇ, ನೀನು ನಾಚಿಕೇತ ವಿಷಯ ಸಂಬಂಧಿಸಿದ ಗೋಪ್ರದಾನವನ್ನೂ ಮತ್ತು ಗೋವುಗಳ ಮಹಿಮೆಯನ್ನೂ ಹೇಳಿದ್ದೀಯೆ.
ನೃಗೇಣ ಚ ಯಥಾ ದುಃಖಮನುಭೂತಂ ಮಹಾತ್ಮನಾ |
ಏಕಾಪರಾಧಾದಜ್ಞಾನಾತ್ ಪಿತಾಮಹ ಮಹಾಮತೇ ॥2॥
ಎಲೈ ಪಿತಾಮಹನೇ, ಮಹಾಮತಿಯೇ, ಮಹಾತ್ಮನಾದ ನೃಗನು ಅಜ್ಞಾನದಿಂದ ಮಾಡಿದ ಒಂದು ಅಪರಾಧದಿಂದ ಹೇಗೆ ದುಃಖವನ್ನು ಅನುಭವಿಸಿದನೆಂದು ಹೇಳಿದ್ದೀಯೆ.
ದ್ವಾರವತ್ಯಾಂ ಯಥಾ ಚಾಸೌ ನಿವಿಶಂತ್ಯಾಂ ಸಮುದ್ಧೃತಃ |
ಮೋಕ್ಷಹೇತುರಭೂತ್ ಕೃಷ್ಣಸ್ತದಪ್ಯವಧೃತಂ ಮಯಾ ॥3॥
ಸಮುದ್ರದಲ್ಲಿರುವ ದ್ವಾರಾವತಿಯಲ್ಲಿ ಹೇಗೆ ಅವನು ಎತ್ತಲ್ಪಟ್ಟನು ಅವನ ಮೋಕ್ಷಕ್ಕೆ ಹೇಗೆ ಕೃಷ್ಣನು ಕಾರಣನಾದನು ಎಲ್ಲವನ್ನೂ ನಾನು ಕೇಳಿದೆನು.
ಕಿಂ ತ್ವಸ್ತಿ ಮಮ ಸಂದೇಹೋ ಗವಾಂ ಲೋಕಂ ಪ್ರತಿ ಪ್ರಭೋ |
ತತ್ತ್ವತಃ ಶ್ರೋತುಮಿಚ್ಛಾಮಿ ಗೋದಾ ಯತ್ರ ವಿಶಂತ್ಯುತ ॥4॥
ಎಲೈ ಪ್ರಭುವೇ, ಆದರೆ ನನಗೆ ಗೋಲೋಕದ ವಿಷಯದಲ್ಲಿ ಒಂದು ಸಂದೇಹವಿದೆ. ಗೋದಾನ ಮಾಡುವವರು ಹೋಗುವ ಗೋಲೋಕವನ್ನು ಸರಿಯಾಗಿ ತಿಳಿದುಕೊಳ್ಳಲು ಬಯಸುತ್ತೇನೆ.

ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಯಥಾಪೃಚ್ಛತ್ ಪದ್ಮಯೋನಿಮೇತದೇವ ಶತಕ್ರತುಃ ||5||
ಭೀಷ್ಮ ಈ ವಿಷಯದಲ್ಲೂ ಸಹ ಶತಕ್ರತುವಾದ ಇಂದ್ರನು ಪದ್ಮಯೋನಿಗಳಾದ ಬ್ರಹ್ಮದೇವರನ್ನು ಕುರಿತು ಇದೇ ಪ್ರಶ್ನೆಗಳನ್ನು ಕೇಳಿದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಶಕ್ರಃ
ಸ್ವರ್ಲೋಕವಾಸಿನಾಂ ಲಕ್ಷ್ಮೀಮಭಿಭೂಯ ಸ್ವಯಾ ತ್ವಿಷಾ |
ಗೋಲೋಕವಾಸಿನಃ ಪಶ್ಯೇ ವ್ರಜತಃ ಸಂಶಯೋಽತ್ರ ಮೇ ||6||
ಇಂದ್ರ ಸ್ವರ್ಗನಿವಾಸಿಗಳ ಸಂಪತ್ತನ್ನು ತಮ್ಮ ಕಾಂತಿಯಿಂದ ತಿರಸ್ಕರಿಸಿ ಗೋಲೋಕ ವಾಸಿಗಳು ಮುಂದೆ ಹೋಗುವುದನ್ನು ನೋಡುತ್ತಿದ್ದೇನೆ. ನನಗೆ ಈ ವಿಷಯದಲ್ಲಿ ಸಂಶಯವಿದೆ.
ಕೀದೃಶಾ ಭಗವಲ್ಲೋಕಾ ಗವಾಂ ತದ್ ಬ್ರೂಹಿ ಮೇಽನಘ |
ಯಾನಾವಸಂತಿ ದಾತಾರ ಏತದಿಚ್ಛಾಮಿ ವೇದಿತುಮ್ ||7||
ಎಲೈ ಅನಘರೇ, ಪೂಜ್ಯರೇ, ಗೋದಾನವನ್ನು ಮಾಡಿದವರು ಹೋಗಿ ವಾಸಿಸುವ ಲೋಕಗಳು ಯಾವ ರೀತಿ ಇರುತ್ತವೆ ಎಂಬುದನ್ನು ತಿಳಿಯಲು ಬಯಸುತ್ತೇನೆ.
ಕೀದೃಶಾಃ ಕಿಂಫಲಾಃ ಕಃಸ್ವಿತ್ ಪರಮಸ್ತತ್ರ ವೈ ಗುಣಃ |
ಕಥಂ ಚ ಪುರುಷಾಸ್ತತ್ರ ಗಚ್ಛಂತಿ ವಿಗತಜ್ವರಾಃ ||8||
ಅವು ಹೇಗಿರುತ್ತವೆ? ಅವುಗಳಲ್ಲಿ ಯಾವ ಫಲವಿದೆ? ಅವುಗಳಲ್ಲಿರುವ ಶ್ರೇಷ್ಠವಾದ ಗುಣಗಳೇನು? ಪುರುಷರು ಹೇಗೆ ನಿಶ್ಚಿಂತೆಯಿಂದ ಅಲ್ಲಿಗೆ ಹೋಗುತ್ತಾರೆ?
ಕಿಯತ್ಕಾಲಂ ಪ್ರದಾನಸ್ಯ ದಾತಾ ಚ ಫಲಮಶ್ನುತೇ |
ಕಥಂ ಬಹುವಿಧಂ ದಾನಂ ಸ್ಯಾದಲ್ಪಮಪಿ ವಾ ಕಥಮ್ ||9||
ಗೋದಾನ ಮಾಡುವವನು ಎಷ್ಟು ಕಾಲದವರೆಗೆ ಅದರ ಫಲವನ್ನು ಅನುಭವಿಸುತ್ತಾನೆ? ದಾನವು ಮಹತ್ತಾಗುವುದು ಅಥವಾ ಅಲ್ಪವಾಗುವುದು ಹೇಗೆ?
ಬಹ್ವೀನಾಂ ಕೀದೃಶಂ ದಾನಮಲ್ಪಾನಾಂ ವಾಪಿ ಕೀದೃಶಮ್ |
ಅದತ್ತ್ವಾ ಗೋಪ್ರದಾಃ ಸಂತಿ ಕೇನ ವಾ ತಚ್ಚ ಶಂಸ ಮೇ ||10||
ಬಹುಗೋವುಗಳನ್ನು ಕೊಡುವ ಪ್ರಕಾರವು ಯಾವುದು? ಅಲ್ಪ ಗೋವುಗಳನ್ನು ಕೊಡುವ ಪ್ರಕಾರವು ಯಾವುದು? ಗೋದಾನವನ್ನು ಮಾಡದೆ ಗೋದಾನದ ಫಲವನ್ನು ಹೇಗೆ ಹೊಂದಬಹುದು? ಎಲ್ಲವನ್ನೂ ನನಗೆ ಹೇಳಿ.
ಕಥಂ ಚ ಬಹುದಾತಾ ಸ್ಯಾದಲ್ಪದಾತ್ರಾ ಸಮಃ ಪ್ರಭೋ |
ಅಲ್ಪಪ್ರದಾತಾ ಬಹುದಃ ಕಥಂ ಚ ಸ್ಯಾದಿಹೇಶ್ವರ ||11||
ಎಲೈ ಪ್ರಭುವೇ, ಬಹುದಾನವನ್ನು ಮಾಡಿದವನು ಅಲ್ಪದಾನವನ್ನು ಮಾಡಿದವನಿಗೆ ಹೇಗೆ ಸಮನಾಗುತ್ತಾನೆ? ಎಲೈ ಈಶ್ವರನೇ, ಅಲ್ಪಪ್ರದಾನವನ್ನು ಮಾಡಿದವನು ಹೇಗೆ ಬಹುಪ್ರದಾನವನ್ನು ಮಾಡಿದವನಿಗೆ ಸಮಾನನಾಗುತ್ತಾನೆ?
ಕೀದೃಶೀ ದಕ್ಷಿಣಾ ಚೈವ ಗೋಪ್ರದಾನೇ ವಿಶಿಷ್ಯತೇ |
ಏತತ್ ತಥ್ಯೇನ ಭಗವನ್ ಮಮ ಶಂಸಿತುಮರ್ಹಸಿ ||12||
ಗೋದಾನದಲ್ಲಿ ಎಂತಹ ದಕ್ಷಿಣೆಯು ಶ್ರೇಷ್ಠವಾದುದು? ಪೂಜ್ಯರೇ, ಇದೆಲ್ಲವನ್ನೂ ಯಥಾರ್ಥವಾಗಿ ನನಗೆ ಹೇಳಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಬ್ರಹ್ಮೇಂದ್ರಸಂವಾದೇ ಇಂದ್ರಪಶ್ನೋನಾಮ ದ್ವ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂರನೆಯ ಅಧ್ಯಾಯ
ಗೋದಾನ - ಬ್ರಹ್ಮನ ಉತ್ತರ.
ಬ್ರಹ್ಮಾ
ಯೋಽಯಂ ಪ್ರಶ್ನಸ್ತ್ವಯಾ ಪೃಷ್ಟೋ ಗೋಪ್ರದಾನಾಧಿಕಾರವಾನ್ |
ನಾಸ್ಯ ಪ್ರಷ್ಟಾಽಸ್ತಿ ಲೋಕೇಽಸ್ಮಿಂಸ್ತ್ವತ್ತೋಽನ್ಯೋ ಹಿ ಶತಕ್ರತೋ ||1||
ಬ್ರಹ್ಮಾ ಶತಕ್ರತುವೇ, ನೀನು ಗೋದಾನ ವಿಷಯದಲ್ಲಿ ಯಾವ ಪ್ರಶ್ನೆಯನ್ನು ಕೇಳಿದೆಯೋ ಅಂತಹ ಪ್ರಶ್ನೆಯನ್ನು ಕೇಳುವವರು ಲೋಕದಲ್ಲಿ ನಿನ್ನನ್ನು ಬಿಟ್ಟು ಇನ್ನೊಬ್ಬನಿಲ್ಲ.
ಸಂತಿ ನಾನಾವಿಧಾ ಲೋಕಾ ಯಾಂಸ್ತ್ವಂ ಶಕ್ರ ನ ಪಶ್ಯಸಿ |
ಪಶ್ಯಾಮಿ ಯಾನಹಂ ಲೋಕಾನೇಕಪತ್ನ್ಯಶ್ಚ ಯಾಃ ಸ್ತ್ರಿಯಃ ||2||
ಎಲೈ ಇಂದ್ರನೇ, ನೀನು ನೋಡದಿರುವ ನಾನಾವಿಧವಾದ ದಿವ್ಯಲೋಕಗಳಿವೆ. ನಾನು ಆ ಲೋಕಗಳನ್ನು ನೋಡುತ್ತೇನೆ. ಪತಿವ್ರತೆಯರಾದ ಸ್ತ್ರೀಯರೂ ನೋಡುತ್ತಾರೆ.
ಕರ್ಮಭಿಶ್ಚಾಪಿ ಸುಶುಭೈಃ ಸುವ್ರತಾ ಋಷಯಸ್ತಥಾ |
ಸಶರೀರಾ ಹಿ ತಾನ್ ಯಾಂತಿ ಬ್ರಾಹ್ಮಣಾಃ ಶುಭವೃತ್ತಯಃ ||3||

ಒಳ್ಳೆಯ ಕರ್ಮಗಳನ್ನು ಮಾಡುವ ಮತ್ತು ಒಳ್ಳೆಯ ವ್ರತವನ್ನು ಧರಿಸಿದ ಋಷಿಗಳು, ಶುಭವಾದ ಆಚಾರವುಳ್ಳ ಬ್ರಾಹ್ಮಣರು ಶರೀರ ಸಹಿತರಾಗಿ ಆ ಲೋಕಗಳಿಗೆ ಹೋಗುತ್ತಾರೆ.
ಶರೀರನ್ಯಾಸಮೋಕ್ಷೇಣ ಮನಸಾ ನಿರ್ಮಲೇನ ಚ |
ಸ್ವಪ್ನಭೂತಾಂಶ್ಚ ತಾಲ್ಲೋಕಾನ್ ಪಶ್ಯಂತೀಹಾಪಿ ಸುವ್ರತಾಃ ॥4॥
ಶರೀರಾಭಿಮಾನವನ್ನು ತ್ಯಾಗ ಮಾಡಿದ, ನಿರ್ಮಲವಾದ ಮನಸ್ಸುಳ್ಳ, ಒಳ್ಳೆಯ ವ್ರತವನ್ನು ಧರಿಸಿದ ಪುರುಷರು ಇಲ್ಲಿಂದಲೇ ಸ್ವಪ್ನಪ್ರಾಯವಾದ (ಸ್ವಪ್ನ ಸುಂದರವಾದ) ಆ ಲೋಕಗಳನ್ನು ನೋಡುತ್ತಾರೆ.
ತೇ ತು ಲೋಕಾಃ ಸಹಸ್ರಾಕ್ಷ ಶೃಣು ಯಾದೃಗ್ಗುಣಾನ್ವಿತಾಃ |
ನ ತತ್ರ ಕ್ರಮತೇ ಕಾಲೋ ನ ಜರಾ ನ ಚ ಪಾಪಕಮ್ |
ತಥಾಽನ್ಯನ್ನಾಶುಭಂ ಕಿಂಚಿನ್ನ ವ್ಯಾಧಿಸ್ತತ್ರ ನ ಕ್ಲಮಃ ॥5॥
ಎಲೈ ಸಹಸ್ರಾಕ್ಷನೇ, ಆ ಲೋಕಗಳು ಎಂತಹ ಗುಣಗಳಿಂದ ಕೂಡಿವೆ ಎಂಬುದನ್ನು ಕೇಳು. ಅಲ್ಲಿ ಕಾಲವು ಪರಿಣಾಮವನ್ನು ಮಾಡುವುದಿಲ್ಲ, ಮುಪ್ಪಿಲ್ಲ, ಪಾಪಕರ್ಮಗಳಿಲ್ಲ, ಬೇರೆ ಅಶುಭವಾದುದು ಇಲ್ಲ, ವ್ಯಾಧಿ ಇಲ್ಲ, ದಣಿವಿಲ್ಲ.
ಯದ್ಯಚ್ಚ ಗಾವೋ ಮನಸಾ ತಸ್ಮಿನ್ ವಾಂಛಂತಿ ವಾಸವ |
ತತ್ಸರ್ವಂ ಪ್ರಾಪಯಂತಿ ಸ್ಮ ಮಮ ಪ್ರತ್ಯಕ್ಷದರ್ಶನಾತ್ |
ಕಾಮಗಾಃ ಕಾಮಚಾರಿಣ್ಯಃ ಕಾಮಾತ್ ಕಾಮಾಂಶ್ಚ ಭುಂಜತೇ ॥6॥
ಎಲೈ ವಾಸವನೇ, ಅಲ್ಲಿ ಗೋವುಗಳು ಮನಸ್ಸಿನಲ್ಲಿ ಏನೇನು ಬಯಸುತ್ತವೆಯೋ ಅವೆಲ್ಲವನ್ನೂ ಹೊಂದುತ್ತವೆ. ತಮ್ಮ ಮನಸ್ಸಿಗೆ ಬಂದಂತೆ ಸಂಚರಿಸಿ ಮೇಯುತ್ತಾ ಶ್ರೇಷ್ಠವಾದ ಕಾಮ್ಯಗಳನ್ನು ಹೊಂದುತ್ತವೆ. ಇದನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ.
ವಾಪ್ಯಃ ಸರಾಂಸಿ ಸರಿತೋ ವಿವಿಧಾನಿ ವನಾನಿ ಚ |
ಗೃಹಾಣಿ ಪರ್ವತಾಶ್ಚೈವ ಯಾವದ್ ದ್ರವ್ಯಂ ಚ ಕಿಂಚನ ॥7॥
ಬಾವಿಗಳು, ಸರೋವರಗಳು, ನದಿಗಳು, ವಿವಿಧವಾದ ವನಗಳು, ಗೃಹಗಳು, ಪರ್ವತಗಳು ಮತ್ತು ಉತ್ತಮ ದ್ರವ್ಯಗಳು ಅಲ್ಲಿರುತ್ತವೆ.
ಮನೋಜ್ಞಂ ಸರ್ವಭೂತೇಭ್ಯಃ ಸರ್ವಂ ತತ್ರ ಪ್ರದೃಶ್ಯತೇ |
ಈದೃಶಾನ್ ವಿದ್ಧಿ ತಾಲ್ಲೋಕಾನ್ನಾಸ್ತಿ ಲೋಕಸ್ತತೋಽಧಿಕಃ ॥8॥
ಎಲ್ಲ ಪ್ರಾಣಿಗಳಿಗೂ ಮನೋಜ್ಞವಾದ ಎಲ್ಲ ವಸ್ತುಗಳೂ ಅಲ್ಲಿ ಕಂಡುಬರುತ್ತವೆ. ಆ ಲೋಕಗಳು ಈ ರೀತಿಯಲ್ಲಿರುತ್ತವೆ ಎಂದು ತಿಳಿ. ಅವುಗಳಿಗಿಂತ ಶ್ರೇಷ್ಠವಾದ ಲೋಕವಿಲ್ಲ.
ತತ್ರ ಸರ್ವಸಹಾಃ ಕ್ಷಾಂತಾ ವತ್ಸಲಾ ಗುರುವರ್ತಿನಃ |
ಅಹಂಕಾರೈರ್ವಿರಹಿತಾ ಯಾಂತಿ ಶಕ್ರ ನರೋತ್ತಮಾಃ ॥9॥
ಎಲೈ ಶಕ್ರನೇ, ಅಲ್ಲಿ ಶೀತೋಷ್ಣ ದ್ವಂದ್ವಗಳನ್ನೂ, ಮಾನಾಪಮಾನವನ್ನೂ ಸಹಿಸುವ ಕ್ಷಮಾಶೀಲರಾದ, ವಾತ್ಸಲ್ಯಪೂರ್ಣರಾದ, ಗುರುಶುಶ್ರೂಷೆಯನ್ನು ಮಾಡುವ, ಅಹಂಕಾರ ರಹಿತರಾದ ಶ್ರೇಷ್ಠ ಮನುಷ್ಯರು ಹೋಗುತ್ತಾರೆ.
ಯಃ ಸರ್ವಮಾಂಸಾನಿ ನ ಭಕ್ಷಯೀತ
ಪುಮಾನ್ ಸದಾ ಯಾವದಂತಾಯ ಯುಕ್ತಃ |
ಮಾತಾಪಿತ್ರೋರರ್ಚಿತಾ ಸತ್ಯಯುಕ್ತಃ
ಶುಶ್ರೂಷಿತಾ ಬ್ರಾಹ್ಮಣಾನಾಮನಿಂದ್ಯಃ ॥10॥
ಅಕ್ರೋಧನೋ ಗೋಷು ತಥಾ ದ್ವಿಜೇಷು
ಧರ್ಮೇ ರತೋ ಗುರುಶುಶ್ರೂಷಕಶ್ಚ |
ಯಾವಜ್ಜೀವಂ ಸತ್ಯವೃತ್ತೇ ರತಶ್ಚ
ದಾನೇ ರತೋ ಯಃ ಕ್ಷಮೀ ಚಾಪರಾಧೇ ॥11॥
ಮೃದುರ್ದಾಂತೋ ದೇವಪರಾಯಣಶ್ಚ
ಸರ್ವಾತಿಥಿಶ್ಚಾಪಿ ತಥಾ ದಯಾವಾನ್ |
ಈದೃಗ್ಗುಣೋ ಮಾನವಃ ಸಂಪ್ರಯಾತಿ
ಲೋಕಂ ಗವಾಂ ಶಾಶ್ವತಂ ಚಾವ್ಯಯಂ ಚ ॥12॥
ಎಲ್ಲ ಮಾಂಸಗಳನ್ನು ತ್ಯಜಿಸಿದವನು, ಜೀವನದ ಕೊನೆಯವರೆಗೆ ಒಳ್ಳೆಯ ವ್ರತವನ್ನು ಧರಿಸಿದವನು, ತಂದೆ-ತಾಯಿಗಳ ಸೇವೆಯನ್ನು ಮಾಡಿದವನು, ಸತ್ಯವಚನ ಯುಕ್ತನಾದವನು, ಬ್ರಾಹ್ಮಣರ ಸೇವೆಯನ್ನು ಮಾಡುವವನು, ಅನಿಂದಿತನಾದವನು, ಗೋ-ಬ್ರಾಹ್ಮಣರಲ್ಲಿ ಕ್ರೋಧವನ್ನು ಮಾಡದವನು, ಧರ್ಮದಲ್ಲಿ ರತನಾದವನು, ಗುರುಗಳ ಶುಶ್ರೂಷೆಯನ್ನು ಮಾಡುವವನು, ಜೀವಿಸುವವರೆಗೂ ಶುಭ ನಡತೆಯಲ್ಲಿ ನಿರತನಾದವನು, ದಾನದಲ್ಲಿ ರತನಾದವನು, ಅಪರಾಧ ಮಾಡಿದವರನ್ನು ಕ್ಷಮಿಸುವವನು, ಮೃದುಸ್ವಭಾವದವನು, ಇಂದ್ರಿಯನಿಗ್ರಹವುಳ್ಳವನು, ದೇವತೆಗಳಲ್ಲಿ ಭಕ್ತಿಯುಳ್ಳವನು, ಸರ್ವಾತಿಥಿಯಾದವನು, ದಯಾಯುಕ್ತನಾದವನು - ಇಂತಹ ಮನುಷ್ಯನು ಶಾಶ್ವತವೂ ಮತ್ತು ಅವ್ಯಯವೂ ಆದ ಗೋಲೋಕಕ್ಕೆ ಹೋಗುತ್ತಾನೆ.
ನ ಪಾರದಾರೀ ಪಶ್ಯತಿ ಲೋಕಮೇನಂ
ನ ವೈ ಗುರುಘ್ನೋ ನ ಮೃಷಾಪ್ರಲಾಪೀ |
ಸದಾಽಪವಾದೀ ಬ್ರಾಹ್ಮಣಃ ಶಾಂತವೇದೋ
ದೋಷೈರನ್ಯೈರ್ಯಶ್ಚ ಯುಕ್ತೋ ದುರಾತ್ಮಾ ॥13॥
ಪರಪತ್ನಿಯರ ಸ್ಪರ್ಶವನ್ನು ಮಾಡುವವನು, ಗುರುಹತ್ಯೆಯನ್ನು ಮಾಡುವವವನು, ಅನೃತವನ್ನು ನುಡಿಯುವವನು, ಯಾವಾಗಲೂ

ನಿಂದಿಸುವವನು, ವೇದಾಧ್ಯಯನ ಮಾಡದ ಬ್ರಾಹ್ಮಣ, ಇನ್ನೂ ಬೇರೆ ದೋಷದಿಂದ ಕೂಡಿ ದುಷ್ಟನಾದವನು ಆ ಲೋಕಗಳನ್ನು ನೋಡುವುದಿಲ್ಲ.

ನ ಮಿತ್ರಧ್ರುಗ್ ನೈಕೃತಿಕಃ ಕೃತಘ್ನಃ
ಶಠೋಽನೃಜುರ್ಧರ್ಮವಿದ್ವೇಷಕಶ್ಚ |
ನ ಬ್ರಹ್ಮಹಾ ಮನಸಾಪಿ ಪ್ರಪಶ್ಯೇದ್
ಗವಾಂ ಲೋಕಂ ಪುಣ್ಯಕೃತಾಂ ನಿವಾಸಮ್ ॥14॥

ಮಿತ್ರದ್ರೋಹವನ್ನು ಮಾಡಿದವನು, ಮೋಸಗಾರನಾದವನು, ಕೃತಘ್ನನಾದವನು, ದುರಹಂಕಾರಿಯಾದವನು, ಆರ್ಜವವಿಲ್ಲದವನು, ಧರ್ಮದ್ವೇಷಿಯಾದವನು, ಬ್ರಹ್ಮಹತ್ಯೆಯನ್ನು ಮಾಡಿದವನು ಪುಣ್ಯಕರ್ಮಿಗಳ ನಿವಾಸಸ್ಥಾನವಾದ ಗೋಲೋಕವನ್ನು ಮನಸ್ಸಿನಿಂದಲೂ ನೋಡುವುದಿಲ್ಲ.

ಏತತ್ ತೇ ಸರ್ವಮಾಖ್ಯಾತಂ ನೈಪುಣೇನ ಸುರೇಶ್ವರ |
ಗೋಪ್ರದಾನರತಾನಾಂ ತು ಫಲಂ ಶೃಣು ಶತಕ್ರತೋ ॥15॥

ಎಲೈ ಸುರೇಶ್ವರನೇ, ಇದೆಲ್ಲವನ್ನೂ ನಿನಗೆ ಸೂಕ್ಷ್ಮವಾಗಿ ಹೇಳಿದ್ದೇನೆ. ಎಲೈ ಶತಕ್ರತುವೇ, ಗೋಪ್ರದಾನದಲ್ಲಿ ನಿರತರಾದವರಿಗೆ ದೊರೆಯುವ ಫಲವನ್ನು ಕೇಳು.

ದಾಯಾದ್ಯಲಬ್ಧೈರರ್ಥೈರ್ಯೋ ಗಾಃ ಕ್ರೀತ್ವಾ ಸಂಪ್ರಯಚ್ಛತಿ |
ಧರ್ಮಾರ್ಜಿತಧನಕ್ರೀತಾನ್ ಸ ಲೋಕಾನಶ್ನುತೇಽಕ್ಷಯಾನ್ ॥16॥

ಪಿತ್ರಾರ್ಜಿತವಾದ ಧನದಿಂದ ಯಾವನು ಗೋವುಗಳನ್ನು ಕ್ರಯ ಮಾಡಿ ದಾನ ಮಾಡುತ್ತಾನೆಯೋ ಅವನು ಧರ್ಮದಿಂದ ಸಂಪಾದಿಸಿದ ಧನದಿಂದ ಕ್ರಯ ಮಾಡಿದಂತಹ ಅಕ್ಷಯ ಲೋಕಗಳನ್ನು ಹೊಂದುತ್ತಾನೆ.

ಯೋ ವೈ ದ್ಯೂತೇ ಧನಂ ಜಿತ್ವಾ ಗಾಃ ಕ್ರೀತ್ವಾ ಸಂಪ್ರಯಚ್ಛತಿ |
ಸ ದಿವ್ಯಮಯುತಂ ಶಕ್ರ ವರ್ಷಾಣಾಂ ಫಲಮಶ್ನುತೇ ॥17॥

ಯಾವನು ದ್ಯೂತದಲ್ಲಿ ಧನವನ್ನು ಗೆದ್ದು ಗೋವುಗಳನ್ನು ಕ್ರಯಮಾಡಿ ದಾನ ಮಾಡುತ್ತಾನೆಯೋ ಅವನು ಹತ್ತು ಸಹಸ್ರ ವರ್ಷಗಳ ಕಾಲ ದಿವ್ಯಫಲವನ್ನು ಅನುಭವಿಸುತ್ತಾನೆ.

ದಾಯಾದ್ಯಾ ಯಸ್ಯ ವೈ ಗಾವೋ ನ್ಯಾಯಪೂರ್ವೈರುಪಾರ್ಜಿತಾಃ |
ಪ್ರದತ್ತಾಸ್ತಾಃ ಪ್ರದಾತೄಣಾಂ ಸಂಭವಂತ್ಯಕ್ಷಯಾ ಧ್ರುವಾಃ ॥18॥

ಯಾರಿಗೆ ಗೋವುಗಳು ಪಿತೃವಿನ ಆಸ್ತಿಯಾಗಿ ಬಂದಿವೆಯೋ ಮತ್ತು ಯಾವ ಗೋವುಗಳನ್ನು ನ್ಯಾಯಪೂರ್ವಕವಾದ ಧನದಿಂದ ಗಳಿಸಿದ್ದಾರೆಯೋ ಅಂತಹ ಗೋವುಗಳನ್ನು ದಾನ ಮಾಡುವವರಿಗೆ ಅಕ್ಷಯವೂ, ಶಾಶ್ವತವೂ ಆದ ಲೋಕಗಳು ಉಂಟಾಗುತ್ತದೆ.

ಪ್ರತಿಗೃಹ್ಯ ಚ ಯೋ ದದ್ಯಾದ್ ಗಾಃ ಸುಶುದ್ಧೇನ ಚೇತಸಾ |
ತಸ್ಯಾಪೀಹಾಕ್ಷಯಾಲ್ಲೋಕಾನ್ ಧ್ರುವಾನ್ ವಿದ್ಧಿ ಶಚೀಪತೇ ॥19॥

ಎಲೈ ಶಚೀಪತಿಯೇ, ಯಾವನು ತನಗೆ ದಾನವಾಗಿ ಬಂದ ಗೋವುಗಳನ್ನು ಶುದ್ಧವಾದ ಮನಸ್ಸಿನಿಂದ ದಾನ ಮಾಡುತ್ತಾನೆಯೋ ಅವನಿಗೂ ಸಹ ಶಾಶ್ವತವೂ, ಅಕ್ಷಯವೂ ಆದ ಲೋಕಗಳು ದೊರೆಯುತ್ತವೆ ಎಂದು ತಿಳಿ.

ಜನ್ಮಪ್ರಭೃತಿ ಸತ್ಯಂ ಚ ಯೋ ಬ್ರೂಯಾನ್ನಿಯತೇಂದ್ರಿಯಃ |
ಗುರುದ್ವಿಜಸಹಃ ಕ್ಷಾಂತಸ್ತಸ್ಯ ಗೋಭಿಃ ಸಮಾ ಗತಿಃ ॥20॥

ಯಾವನು ಸತ್ಯವಚನನಾಗಿರುತ್ತಾನೆಯೋ, ನಿಯತೇಂದ್ರಿಯನೋ, ಗುರುಗಳನ್ನೂ ಬ್ರಾಹ್ಮಣರನ್ನೂ ಸಹಿಸಿಕೊಳ್ಳುತ್ತಾನೆಯೋ, ಕ್ಷಮಾಗುಣಯುಕ್ತನಾಗಿರುತ್ತಾನೆಯೋ ಅವನಿಗೆ ಗೋವುಗಳಿಗೆ (ಗೋದಾನ ಮಾಡಿದವನಿಗೆ) ಉಂಟಾದ ಸದ್ಗತಿಯೇ ಉಂಟಾಗುತ್ತದೆ.

ನ ಜಾತು ಬ್ರಾಹ್ಮಣೋ ವಾಚ್ಯೋ ಯದವಾಚ್ಯಂ ಶಚೀಪತೇ |
ಮನಸಾ ಗೋಷು ನ ದ್ರುಹ್ಯೇದ್ ಗೋವೃತ್ತಿರ್ಗೋನುಕಂಪಕಃ ॥21॥
ಸತ್ಯೇ ಧರ್ಮೇ ಚ ನಿರತಸ್ತಸ್ಯ ಶಕ್ರ ಫಲಂ ಶೃಣು |
ಗೋಸಹಸ್ರೇಣ ಸಮಿತಾ ತಸ್ಯ ಧೇನುರ್ಭವತ್ಯುತ ॥22॥

ಎಲೈ ಶಚೀಪತಿಯೇ, ಬ್ರಾಹ್ಮಣನಿಗೆ ಎಂದೂ ಆಡಬಾರದ ಮಾತುಗಳನ್ನು ಆಡದೆ ಗೋವುಗಳಿಗೆ ಮನಸ್ಸಿನಿಂದಲೂ ದ್ರೋಹವನ್ನು ಮಾಡದೆ, ಗೋವುಗಳ ಮೇಲೆ ಅನುಕಂಪವನ್ನು ಹೊಂದಿ, ಗೋವೃತ್ತಿಯನ್ನು ಮಾಡಿ (ಗೋವ್ರತವನ್ನು ಧರಿಸಿ), ಸತ್ಯದಲ್ಲಿಯೂ, ಧರ್ಮದಲ್ಲಿಯೂ ನಿರತನಾದವನ ಫಲವನ್ನು ಕೇಳು. ಎಲೈ ಶಕ್ರನೇ, ಅವನು ದಾನ ಮಾಡುವ ಒಂದೊಂದು ಧೇನುವೂ ಸಹಸ್ರ ಧೇನುವಿಗೆ ಸಮವಾಗುತ್ತದೆ.

ಕ್ಷತ್ರಿಯಸ್ಯ ಗುಣೈರೇಭಿರನ್ವಿತಸ್ಯ ಫಲಂ ಶೃಣು |
ತಸ್ಯಾಪಿ ಶತತುಲ್ಯಾ ಗೌರ್ಭವತೀತಿ ವಿನಿಶ್ಚಯಃ ॥23॥

ಇಂತಹ ಗುಣಗಳಿಂದ ಕೂಡಿದ ಕ್ಷತ್ರಿಯನ ದಾನ ಫಲವನ್ನು ಕೇಳು. ಅವನಿಗೂ ಸಹ ಒಂದೊಂದು ಗೋವೂ ನೂರು ಗೋವುಗಳಿಗೆ ಸಮವಾಗುತ್ತದೆ ಎಂಬುದು ನಿಶ್ಚಿತವಾದುದು.

ವೈಶ್ಯಸ್ಯೈತೇ ಯದಿ ಗುಣಾಸ್ತಸ್ಯ ಪಂಚಾಶತಂ ಭವೇತ್ |
ಶೂದ್ರಸ್ಯಾಪಿ ವಿನೀತಸ್ಯ ಚತುರ್ಭಾಗಫಲಂ ಸ್ಮೃತಮ್ ॥24॥

ವೈಶ್ಯನಲ್ಲಿ ಈ ಗುಣವಿದ್ದರೆ ಆ ಒಂದೊಂದು ಗೋವೂ ಐವತ್ತು ಗೋವುಗಳಿಗೆ ಸಮವಾಗುತ್ತದೆ. ವಿನಯಶಾಲಿಯಾದ ಶೂದ್ರನಿಗೆ ಅದರ ನಾಲ್ಕನೆಯ ಒಂದು ಭಾಗದ ಫಲವು ದೊರೆಯುತ್ತದೆ.

ಏತಚ್ಚೈವಂ ಯೋಽನುತಿಷ್ಠೇತ ಯುಕ್ತಃ

ಸತ್ಯೇನ ಯುಕ್ತೋ ಗುರುಶುಶ್ರೂಷಯಾ ಚ |
ದಾಂತಃ ಕ್ಷಾಂತೋ ದೇವತಾರ್ಚೀ ಪ್ರಶಾಂತಃ
ಶುಚಿರ್ಬುದ್ಧೋ ಧರ್ಮಶೀಲೋಽನಹಂವಾಕ್ ॥25॥
ಮಹತ್ಫಲಂ ಪ್ರಾಪ್ನುತೇ ಸ ದ್ವಿಜಾಯ
ದತ್ತತ್ವ ದೋಗ್ಧ್ರೀಂ ವಿಧಿನಾನೇನ ಧೇನುಮ್ |
ನಿತ್ಯಂ ದದ್ಯಾದೇಕಭಕ್ತಃ ಸದಾ ಚ
ಸತ್ಯೇ ಸ್ಥಿತೋ ಗುರುಶುಶ್ರೂಷಿತಾ ಚ ॥26॥
ಇದೆಲ್ಲವನ್ನೂ ಹೀಗೆ ಅನುಷ್ಠಾನ ಮಾಡಿ ಸತ್ಯವಚನದಿಂದಲೂ, ಗುರು ಶುಶ್ರೂಷೆಯಿಂದಲೂ ಕೂಡಿದವನಾಗಿ, ಇಂದ್ರಿಯನಿಗ್ರಹವನ್ನೂ, ಕ್ಷಮಾಗುಣವನ್ನೂ ಹೊಂದಿ ದೇವತಾರ್ಚನೆಯನ್ನು ಮಾಡುವವನಾಗಿ ಪ್ರಶಾಂತನೂ, ಶುಚಿಯೂ, ವಿವೇಕ ಉಳ್ಳವನೂ ಧರ್ಮಶೀಲನೂ, ಅಹಂಕಾರದ ಮಾತುಗಳನ್ನು ಆಡದವನೂ ಆದವನು ಈ ವಿಧಿಯಿಂದ ಬ್ರಾಹ್ಮಣನಿಗೆ ಹಾಲನ್ನು ಕರೆಯುವ ಹಸುವನ್ನು ದಾನ ಮಾಡಿ ಮಹಾಫಲವನ್ನು ಪಡೆಯುತ್ತಾನೆ. ನಿತ್ಯವೂ ಏಕಭಕ್ತನಾಗಿ (ಒಂದೇ ಹೊತ್ತು ಭೋಜನ ಮಾಡುವವನಾಗಿ) ಸದಾ ಸತ್ಯದಲ್ಲಿ ರತನಾಗಿ ಗುರುಶುಶ್ರೂಷೆಯನ್ನು ಮಾಡುವವನು ಯಾವಾಗಲೂ ಗೋದಾನವನ್ನು ಮಾಡಬೇಕು (ಅಂತಹವನು ಮಹಾಫಲವನ್ನು ಹೊಂದುತ್ತಾನೆ).
ವೇದಾಧ್ಯಾಯೀ ಗೋಷು ಯೋ ಭಕ್ತಿಮಾಂಶ್ಚ
ನಿತ್ಯಂ ದೃಷ್ಟ್ವಾ ಯೋಽಭಿನಂದೇತ ಗಾಶ್ಚ |
ಆ ಜಾತಿತೋ ಯಶ್ಚ ಗವಾಂ ನಮೇತ
ಇದಂ ಫಲಂ ಶಕ್ರ ನಿಬೋಧ ತಸ್ಯ ॥27॥
ವೇದಾಧ್ಯಯನವನ್ನು ಮಾಡಿ, ಗೋವುಗಳಲ್ಲಿ ಯಾವಾಗಲೂ ಭಕ್ತಿಯನ್ನು ಹೊಂದಿ, ಗೋವುಗಳನ್ನು ನೋಡಿ ಯಾವಾಗಲೂ ಸಂತೋಷಪಡುತ್ತಾ, ಜನ್ಮದಾರಭ್ಯಗೋವುಗಳಿಗೆ ನಮಸ್ಕಾರ ಮಾಡುವವನು ಎಲೈ ಶಕ್ರನೇ, ಈ ಫಲವನ್ನು ಹೊಂದುವನೆಂದು ತಿಳಿ.
ಯತ್ ಸ್ಯಾದಿಷ್ಟ್ವಾ ರಾಜಸೂಯೇ ಫಲಂ ತು
ಯತ್ ಸ್ಯಾದಿಷ್ಟ್ವಾ ಬಹುನಾ ಕಾಂಚನೇನ |
ಏತತ್ತುಲ್ಯಂ ಫಲಮಸ್ಯಾಹುರಗ್ರ್ಯಂ
ಸರ್ವೇ ಸಂತಸ್ತ್ವ ೃಷಯೋ ಯೇ ಚ ಸಿದ್ಧಾಃ ॥28॥
ರಾಜಸೂಯ ಯಾಗವನ್ನು ಮಾಡಿದರೆ ಏನು ಫಲವೋ, ಬಹು ಸುವರ್ಣ ದಾನವನ್ನು ಮಾಡಿ ಯಾಗವನ್ನು ಮಾಡಿದರೆ ಏನು ಫಲವೋ, ಅದಕ್ಕೆ ಸಮನಾದ ಶ್ರೇಷ್ಠವಾದ ಫಲವು ಗೋದಾನ ಮಾಡಿದವನಿಗೆ ಬರುವುದೆಂದು ಎಲ್ಲ ಸಜ್ಜನರೂ, ಋಷಿಗಳೂ ಮತ್ತು ಸಿದ್ಧರೂ ಹೇಳುತ್ತಾರೆ.
ಯೋಽಗ್ರಂ ಭಕ್ತಾನ್ ಕಿಂಚಿದಪ್ರಾಶ್ಯ ದದ್ಯಾದ್
ಗೋಭ್ಯೋ ನಿತ್ಯಂ ಗೋವ್ರತೀ ಸತ್ಯವಾದೀ |
ಶಾಂತೋ ಬುದ್ಧೋ ಗೋಸಹಸ್ರಸ್ಯ ಪುಣ್ಯಂ
ಸಂವತ್ಸರೇಣಾಪ್ನುಯಾತ್ ಪುಣ್ಯಶೀಲಃ ॥29॥
ಯಾವನು ತಾನು ಏನನ್ನೂ ತಿನ್ನುವುದಕ್ಕಿಂತ ಮೊದಲೇ ನಿತ್ಯವೂ ಗೋವುಗಳಿಗೆ ಗೋಗ್ರಾಸವನ್ನು ಕೊಟ್ಟು ಗೋವ್ರತವನ್ನು ಧರಿಸುತ್ತಾನೆಯೋ, ಸತ್ಯವನ್ನು ನುಡಿಯುತ್ತಾನೆಯೋ, ಶಾಂತನೂ, ವಿವೇಕಿಯೂ, ಪುಣ್ಯಶೀಲನೂ ಆದ ಅವನು ಒಂದು ಸಂವತ್ಸರದ ಕಾಲ ಹೀಗೆ ಮಾಡಿದರೆ (ಪ್ರತ್ಯಕ್ಷ ಗೋದಾನ ಮಾಡದಿದ್ದರೂ) ಸಹಸ್ರ ಗೋದಾನ ಮಾಡಿದ ಪುಣ್ಯವನ್ನು ಪಡೆಯುತ್ತಾನೆ.
ಯ ಏಕಂ ಭಕ್ತಮಶ್ನೀಯಾದ್ ದದ್ಯಾದೇಕಂ ಗವಾಂ ಚ ಯತ್ |
ದಶ ವರ್ಷಾಣ್ಯನಂತಾನಿ ಗೋವ್ರತೀ ಗೋನುಕಂಪಕಃ ॥30॥
ಯಾವನು ಗೋವುಗಳಲ್ಲಿ ಅನುಕಂಪವನ್ನು ಹೊಂದಿ ಏಕಭಕ್ತನಾಗಿ ಗೋವುಗಳಿಗೆ ಗ್ರಾಸವನ್ನು ಹತ್ತುವರ್ಷಗಳ ಕಾಲ ಕೊಟ್ಟು ಗೋವ್ರತವನ್ನು ಧರಿಸುತ್ತಾನೆಯೋ ಅವನು ಅನಂತ ಸುಖವನ್ನು ಪಡೆಯುತ್ತಾನೆ.
ಏಕೇನೈವ ಚ ಭಕ್ತೇನ ಯಃ ಕ್ರೀತ್ವಾ ಗಾಂ ಪ್ರಯಚ್ಛತಿ |
ಯಾವಂತಿ ತಸ್ಯ ಪ್ರೋಕ್ತಾನಿ ದಿವಸಾನಿ ಶತಕ್ರತೋ |
ತಾವಚ್ಛತಾನಾಂ ಸ ಗವಾಂ ಫಲಮಾಪ್ನೋತಿ ಶಾಶ್ವತಮ್ ॥31॥
ಎಲೈ ಶತಕ್ರತುವೇ, ಯಾವನು ಒಂದೇ ಹೊತ್ತು ಊಟ ಮಾಡಿ ಉಳಿದ ಧನದಿಂದ ಗೋವನ್ನು ಕ್ರಯ ಮಾಡಿ ದಾನ ಮಾಡುತ್ತಾನೆಯೋ ಅವನು ಎಷ್ಟು ದಿನಗಳವರೆಗೆ ಹೀಗೆ ಮಾಡಿರುತ್ತಾನೆಯೋ ಅಷ್ಟು ನೂರು ವರ್ಷಗಳ ಕಾಲ ನಿತ್ಯವೂ ಗೋದಾನ ಮಾಡಿದ ಶಾಶ್ವತವಾದ ಫಲವನ್ನು ಹೊಂದುತ್ತಾನೆ.
ಬ್ರಾಹ್ಮಣಸ್ಯ ಫಲಂ ಹೀದಂ ಕ್ಷತ್ರಿಯೇಽಭಿಹಿತಂ ಶೃಣು |
ಪಂಚವಾರ್ಷಿಕಮೇತತ್ತು ಕ್ಷತ್ರಿಯಸ್ಯ ಫಲಂ ಸ್ಮೃತಮ್ |
ತತೋಽರ್ಧೇನ ತು ವೈಶ್ಯಸ್ಯ ಶೂದ್ರೋ ವೈಶ್ಯಾರ್ಧತಃ ಸ್ಮೃತಃ ॥32॥
ಇದು ಬ್ರಾಹ್ಮಣನಿಗೆ ದೊರೆಯುವ ಫಲ. ಕ್ಷತ್ರಿಯನಿಗೆ ದೊರೆಯುವ ಫಲವನ್ನು ಕೇಳು. ಕ್ಷತ್ರಿಯನಿಗೆ ಐದು ವರ್ಷಗಳ ಕಾಲ ವ್ರತವನ್ನು ಮಾಡಿದರೆ ಈ ಫಲವೆಂದು ಹೇಳಲ್ಪಡುತ್ತದೆ. ಅದರ ಅರ್ಧದಷ್ಟು ವೈಶ್ಯನಿಗೆ, ವೈಶ್ಯನ ಅರ್ಧದಷ್ಟು ಶೂದ್ರನಿಗೆ ಫಲವೆಂದು ಹೇಳಲ್ಪಡುತ್ತದೆ.
ಯಶ್ಚಾತ್ಮವಿಕ್ರಯಂ ಕೃತ್ವಾ ಗಾಃ ಕ್ರೀತ್ವಾ ಸಂಪ್ರಯಚ್ಛತಿ |

ಯಾವತೀಃ ಸ್ಪರ್ಶಯೇದ್ಗಾ ವೈ ತಾವತ್ತು ಫಲಮಶ್ನುತೇ |
ಲೋಮ್ನಿ ಲೋಮ್ನಿ ಮಹಾಭಾಗ ಲೋಕಾಶ್ಚಾಸ್ಯಾಕ್ಷಯಾಃ ಸ್ಮೃತಾಃ ||33||
ಯಾವನು ತನ್ನನ್ನೇ ಮಾರಿಕೊಂಡು ಬಂದ ಧನದಿಂದ ಗೋವುಗಳನ್ನು ಕ್ರಯ ಮಾಡಿ ದಾನ ಮಾಡುತ್ತಾನೆಯೋ ಅವನು ಎಷ್ಟು ಗೋದಾನ ಮಾಡುತ್ತಾನೆಯೋ ಅಷ್ಟು ಫಲವನ್ನು ಹೊಂದುತ್ತಾನೆ. ಎಲೈ ಮಹಾನುಭಾವನೇ, ಆ ಗೋವುಗಳಲ್ಲಿ ಇರುವ ಲೋಮಗಳ ಸಂಖ್ಯೆಗೆ ಸಮಾನವಾದ ವರ್ಷಗಳ ಕಾಲದವರೆಗೂ ಅಕ್ಷಯ ಲೋಕವನ್ನು ಹೊಂದುತ್ತಾನೆ.
ಸಂಗ್ರಾಮೇಷ್ವರ್ಜಯಿತ್ವಾ ತು ಯೋ ವೈ ಗಾಃ ಸಂಪ್ರಯಚ್ಛತಿ |
ಆತ್ಮವಿಕ್ರಯತುಲ್ಯಾಸ್ತಾಃ ಶಾಶ್ವತಾ ವಿದ್ಧಿ ಕೌಶಿಕ ||34||
ಯುದ್ಧದಲ್ಲಿ ಗೆದ್ದು ಸಂಪಾದಿಸಿದ ಗೋವುಗಳನ್ನು ಯಾವನು ದಾನ ಮಾಡುತ್ತಾನೆಯೋ ಎಲೈ ಕೌಶಿಕನೇ, ಅವನ ಆ ದಾನವು ಆತ್ಮವಿಕ್ರಯವನ್ನು ಮಾಡಿಕೊಂಡು ಮಾಡಿದ ಗೋದಾನಕ್ಕೆ ಸಮನಾಗಿ ಶಾಶ್ವತವಾದ ಫಲವನ್ನು ಕೊಡುತ್ತದೆ ಎಂದು ತಿಳಿ.
ಅಲಾಭೇ ಯೋ ಗವಾಂ ದದ್ಯಾತ್ ತಿಲಧೇನುಂ ಯತವ್ರತಃ |
ದುರ್ಗಾತ್ ಸ ತಾರಿತೋ ಧೇನ್ವಾ ಕ್ಷೀರನದ್ಯಾಂ ಪ್ರಮೋದತೇ ||35||
ಗೋವುಗಳು ದೊರೆಯದಿದ್ದರೆ ಯಾವನು ನಿಯತವ್ರತನಾಗಿ ತಿಲಧೇನುವನ್ನು ದಾನ ಮಾಡುತ್ತಾನೆಯೋ ಅಂತಹವನನ್ನು ಆ ಧೇನುವು ಕಷ್ಟಗಳಿಂದ ದಾಟಿಸಿ ಅವನು ಕ್ಷೀರನದಿಯಲ್ಲಿ ಸಂತೋಷಪಡುವಂತೆ ಮಾಡುತ್ತದೆ.
ನ ತ್ವೇವಾಸಾಂ ದಾನಮಾತ್ರಂ ಪ್ರಶಸ್ತಂ
ಪಾತ್ರಂ ಕಾಲೋ ಗೋವಿಶೇಷೋ ವಿಧಿಶ್ಚ |
ಕಾಲಜ್ಞಾನಂ ವಿಪ್ರ ಗವಾಂತರಂ ಹಿ
ದುಃಖಂ ಹಾತುಂ ಪಾವಕಾದಿತ್ಯಭೂತಮ್ ||36||
ಕೇವಲ ಗೋವುಗಳ ದಾನವಷ್ಟೇ ಪ್ರಶಸ್ತವಲ್ಲ. ಪಾತ್ರವನ್ನೂ, ಕಾಲವನ್ನೂ, ಗೋ ವಿಶೇಷವನ್ನೂ, ಗೋದಾನ ಮಾಡುವ ವಿಧಿಯನ್ನೂ ತಿಳಿದು ಮಾಡಬೇಕು. ಎಲೈ ಇಂದ್ರನೇ, ಅಗ್ನಿ-ಸೂರ್ಯರ ಭಯದಿಂದ ಗೋವುಗಳನ್ನು ರಕ್ಷಿಸುವಂತಹ ಗೋಶಾಲೆಯನ್ನು ಕಟ್ಟಿಸಿಕೊಡಬೇಕು.
ಸ್ವಾಧ್ಯಾಯಾಢ್ಯಂ ಶುದ್ಧಯೋನಿಂ ಪ್ರಶಾಂತಂ
ವೈತಾನಸ್ಥಂ ಪಾಪಭೀರುಂ ಕೃತಜ್ಞಮ್ |
ಗೋಷು ಕ್ಷಾಂತಂ ನಾತಿತೀಕ್ಷ್ಣಂ ಶರಣ್ಯಂ
ವೃತ್ತಿಗ್ಲಾನಂ ತಾದೃಶಂ ಪಾತ್ರಮಾಹುಃ ||37||
ಸ್ವಾಧ್ಯಾಯಶೀಲನಾದವನು, ಶುದ್ಧಕುಲದಲ್ಲಿ ಜನಿಸಿದವನು, ಪ್ರಶಾಂತನಾದವನು, ಹೋಮಾದಿ ನಿರತನಾದವನು, ಪಾಪಭೀರುವಾದವನು, ಕೃತಜ್ಞನಾದವನು, ಗೋವುಗಳಲ್ಲಿ ಕ್ಷಮೆಯುಳ್ಳವನು, ತೀಕ್ಷ್ಣಸ್ವಭಾವವಿಲ್ಲದವನು, ಶರಣಾಗತರಾದವರನ್ನು ರಕ್ಷಿಸುವವನು, ಜೀವನೋಪಾಯವಿಲ್ಲದವನು- ಅಂತಹವನು ಗೋದಾನಕ್ಕೆ ಯೋಗ್ಯನಾದ ಪಾತ್ರನೆಂದು ಹೇಳುತ್ತಾರೆ.
ವೃತ್ತಿಗ್ಲಾನೇ ಸೀದತಿ ಚಾತಿಮಾತ್ರಂ
ಕೃಷ್ಯರ್ಥಂ ವಾ ಹೋಮಹೇತೋಃ ಪ್ರಸೂತ್ಯಾಮ್ |
ಗುರ್ವರ್ಥಂ ವಾ ಬಾಲಸಂವೃದ್ಧಯೇ ವಾ
ಧೇನುಂ ದದ್ಯಾದ್ ದೇಶಕಾಲೇ ವಿಶಿಷ್ಟೇ ||38||
ಜೀವನೋಪಾಯವಿಲ್ಲದೆ ಬಹಳವಾಗಿ ಬಳಲಿದವನಿಗೆ ಅಥವಾ ಕೃಷಿಯನ್ನು ಮಾಡುವ ಸಲುವಾಗಿ ಅಥವಾ ಹೋಮವನ್ನು ಮಾಡುವ ಸಲುವಾಗಿ ಅಥವಾ ಪುತ್ರೋತ್ಸವ ನಿಮಿತ್ತವಾಗಿ ಅಥವಾ ಗುರುಗಳ ಹಿತಕ್ಕಾಗಿ ಅಥವಾ ಮಕ್ಕಳನ್ನು ಪೋಷಿಸುವುದಕ್ಕಾಗಿ ವಿಶಿಷ್ಟವಾದ ದೇಶಕಾಲಗಳಲ್ಲಿ ಗೋದಾನವನ್ನು ಮಾಡಬೇಕು.
ಅಂತರ್ಜಾತಾಃ ಸುಕ್ರಯಜ್ಞಾನಲಬ್ಧಾಃ
ಪ್ರಾಣೈಃ ಕ್ರೀತಾಸ್ತೇಜಸಾ ಯೌತಕಾಶ್ಚ |
ಕೃಚ್ಛ್ರೋತ್ಸೃಷ್ಟಾಃ ಪೋಷಣಾಭ್ಯಾಗತಾಶ್ಚ
ದ್ವಾರೈರೇತೈರ್ಗೋವಿಶೇಷಾಃ ಪ್ರಶಸ್ತಾಃ ||39||
ಮನೆಯಲ್ಲೇ ಜನಿಸಿದ, ಒಳ್ಳೆಯ ಕ್ರಯವನ್ನು ಕೊಟ್ಟು ಕೊಂಡುಕೊಂಡ, ಜ್ಞಾನಕ್ಕೆ ಉಡುಗೊರೆಯಾಗಿ ಬಂದ, ಪ್ರಾಣದಿಂದಲೂ ಪರಾಕ್ರಮದಿಂದಲೂ ಕ್ರಯಮಾಡಿದ, ಬಳುವಳಿಯಾಗಿ ಬಂದ, ಯಜಮಾನನಿಂದ ಸಾಕಲಾರದೆ ತ್ಯಜಿಸಲ್ಪಟ್ಟುಪೋಷಣಕ್ಕಾಗಿ ಬಳಿಗೆ ಬಂದ ತನ್ನ ಇಂತಹ ದ್ವಾರಗಳಿಂದ ಬಂದ ಗೋವಿಶೇಷಗಳು ಪ್ರಶಸ್ತವಾದವುಗಳು.
ಬಲಾನ್ವಿತಾಃ ಶೀಲವಯೋಪಪನ್ನಾಃ
ಸರ್ವಾಃ ಪ್ರಶಂಸಂತಿ ಸುಗಂಧವತ್ಯಃ |
ಯಥಾ ಹಿ ಗಂಗಾ ಸರಿತಾಂ ವರಿಷ್ಠಾ
ತಥಾರ್ಜುನೀನಾಂ ಕಪಿಲಾ ವರಿಷ್ಠಾ ||40||
ಬಲದಿಂದ ಕೂಡಿದ, ಒಳ್ಳೆಯ ಶೀಲ ಮತ್ತು ವಯಸ್ಸಿನಿಂದ ಕೂಡಿದ, ಒಳ್ಳೆಯ ಗಂಧವುಳ್ಳ ಗೋವುಗಳನ್ನು ಎಲ್ಲರೂ ಪ್ರಶಂಸೆ ಮಾಡುತ್ತಾರೆ. ಹೇಗೆ ಗಂಗೆಯು ಎಲ್ಲ ನದಿಗಳಲ್ಲೂ ಶ್ರೇಷ್ಠಳೋ ಅದರಂತೆ ಗೋವುಗಳಲ್ಲಿ ಕಪಿಲಾ ಗೋವು ಶ್ರೇಷ್ಠವಾದುದು.
ತಿಸ್ರೋ ರಾತ್ರೀಸ್ತ್ವದ್ಭಿರುಪೋಷ್ಯ ಭೂಮೌ
ತೃಪ್ತಾ ಗಾವಸ್ತರ್ಪಿತೇಭ್ಯಃ ಪ್ರದೇಯಾಃ |
ವತ್ಸೈಃ ಪುಷ್ಟೈಃ ಕ್ಷೀರಪೈಃ ಸುಪ್ರಚಾರಾ-

ಸ್ಪೃಹಂ ದತ್ತ್ವಾ ಗೋರಸೈರ್ವರ್ತಿತವ್ಯಮ್ ॥41॥
ಮೂರು ರಾತ್ರಿಗಳ ಕಾಲ ವಿಶೇಷವಾಗಿ ಹುಲ್ಲು-ನೀರು ಇರುವ ಜಾಗಗಳಲ್ಲಿ ಗೋವುಗಳು ವಾಸ ಮಾಡುವಂತೆ ಮಾಡಿ ಚೆನ್ನಾಗಿ ಆಹಾರವನ್ನು ಸ್ವೀಕರಿಸಿದ ಆ ಗೋವುಗಳನ್ನು ಪುಷ್ಟವಾದ ಮತ್ತು ಹಾಲು ಕುಡಿಯುವ ಕರುಗಳ ಜೊತೆಯಲ್ಲಿ ತೃಪ್ತರಾದ ಬ್ರಾಹ್ಮಣರಿಗೆ ದಾನವನ್ನು ಮಾಡಿ ಮೂರು ದಿವಸಗಳ ಕಾಲ ಗೋರಸವನ್ನೇ ಆಹಾರವಾಗಿ ಸ್ವೀಕರಿಸಬೇಕು.
ದತ್ತ್ವಾ ಧೇನುಂ ಸುವ್ರತಾಂ ಸಾಧುವತ್ಸಾಂ
ಕಲ್ಯಾಣವೃತ್ತಾಮಪಲಾಯಿನೀಂ ಚ |
ಯಾವಂತಿ ಲೋಮಾನಿ ಭವಂತಿ ತಸ್ಯಾಃ
ತಾವಂತಿ ವರ್ಷಾಣಿ ವಸತ್ಯಮುತ್ರ ॥42॥
ಒಳ್ಳೆಯ ಶೀಲವುಳ್ಳ, ಸಾಧುವಾದ ಕರುವುಳ್ಳ, ಓಡಿ ಹೋಗದಿರುವ ಧೇನುವನ್ನು ದಾನ ಮಾಡಿದವನು ಆ ಗೋವಿನ ದೇಹದಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಗಳ ಕಾಲ ಪರಲೋಕದಲ್ಲಿ ವಾಸಿಸುತ್ತಾನೆ.
ತಥಾನಡ್ವಾಹಂ ಬ್ರಾಹ್ಮಣಾಯಾಥ ಧುರ್ಯಂ
ದತ್ತ್ವಾ ಯುವಾನಂ ಬಲಿನಂ ವಿನೀತಮ್ |
ಹಲಸ್ಯ ವೋಢಾರಮನಂತವೀರ್ಯಂ
ಪ್ರಾಪ್ನೋತಿ ಲೋಕಾನ್ ದಶಧೇನುದಸ್ಯ ॥43॥
ಹಾಗೆಯೇ ತರುಣವೂ, ಬಲಿಷ್ಠವೂ, ಪಳಗಿದುದೂ, ಉಳಲು ಸಮರ್ಥವಾದುದೂ, ಬಲಶಕ್ತಿಯುಳ್ಳದುದೂ ಆದ ಎತ್ತನ್ನು ಬ್ರಾಹ್ಮಣನಿಗೆ ದಾನ ಮಾಡಿದವನು ಹತ್ತು ಗೋದಾನವನ್ನು ಮಾಡಿದವನು ಹೊಂದುವ ಲೋಕಗಳನ್ನು ಹೊಂದುತ್ತಾನೆ.
ಕಾಂತಾರೇ ಬ್ರಾಹ್ಮಣಾನ್ ಗಾಶ್ಚ ಯಃ ಪರಿತ್ರಾತಿ ಕೌಶಿಕ |
ಕ್ಷೇಮೇಣ ಚ ವಿಮುಚ್ಯೇತ ತಸ್ಯ ಪುಣ್ಯಫಲಂ ಶೃಣು |
ಅಶ್ವಮೇಧಕ್ರತೋಸ್ತುಲ್ಯಂ ಫಲಂ ಭವತಿ ಶಾಶ್ವತಮ್ ॥44॥
ಎಲೈ ಕೌಶಿಕನೇ, ಕಾಡಿನಲ್ಲಿ ಗೋವುಗಳನ್ನು ಮತ್ತು ಬ್ರಾಹ್ಮಣರನ್ನು ರಕ್ಷಿಸಿ, ಕ್ಷೇಮವನ್ನುಂಟು ಮಾಡಿ ಅವುಗಳನ್ನು ಕಷ್ಟದಿಂದ ಪಾರುಮಾಡುವವನು ಪಡೆಯುವ ಪುಣ್ಯಫಲಗಳನ್ನು ಕೇಳು. ಅವನಿಗೆ ಶಾಶ್ವತವಾದ ಅಶ್ವಮೇಧಯಾಗದ ಫಲವು ದೊರೆಯುತ್ತದೆ.
ಮೃತ್ಯುಕಾಲೇ ಸಹಸ್ರಾಕ್ಷ ಯಾಂ ವೃತ್ತಿಮನುಕಾಂಕ್ಷತೇ |
ಲೋಕಾನ್ ಬಹುವಿಧಾನ್ ದಿವ್ಯಾನ್ ಯದ್ವಾಸ್ಯ ಹೃದಿ ವರ್ತತೇ ॥45॥
ತತ್ಸರ್ವಂ ಸಮವಾಪ್ನೋತಿ ಕರ್ಮಣಾ ತೇನ ಮಾನವಃ |
ಗೋಭಿಶ್ಚ ಸಮನುಜ್ಞಾತಃ ಸರ್ವತ್ರ ಸ ಮಹೀಯತೇ ॥46॥
ಎಲೈ ಸಹಸ್ರಾಕ್ಷನೇ, ಮರಣಕಾಲದಲ್ಲಿ ಅವನು ಯಾವ ವೃತ್ತಿಯನ್ನು ಬಯಸುತ್ತಾನೆಯೋ ಅಥವಾ ಎಂತಹ ದಿವ್ಯಲೋಕಗಳನ್ನು ಬಯಸುತ್ತಾನೆಯೋ ಅಥವಾ ಮನಸ್ಸಿನಲ್ಲಿ ಬೇರೆ ಏನು ಆಸೆ ಇದೆಯೋ ಅವನು ತಾನು ಮಾಡಿದ ಕರ್ಮಗಳಿಂದ ಅವೆಲ್ಲವನ್ನೂ ಹೊಂದುತ್ತಾನೆ. ಗೋವುಗಳಿಂದ ಆಶೀರ್ವದಿಸಲ್ಪಟ್ಟು ಅವನು ಎಲ್ಲ ಕಡೆಯಲ್ಲಿಯೂ ಪೂಜಿಸಲ್ಪಡುತ್ತಾನೆ.
ಯಸ್ತ್ವೇತೇನೈವ ವಿಧಿನಾ ಗಾಂ ವನೇಷ್ವನುಗಚ್ಛತಿ |
ತೃಣಗೋಮಯಪರ್ಣಾಶೀ ನಿಃಸ್ಪೃಹೋ ನಿಯತಃ ಶುಚಿಃ ॥47॥
ಅಕಾಮಂ ತೇನ ವಸ್ತವ್ಯಂ ಮುದಿತೇನ ಶತಕ್ರತೋ |
ಮಮ ಲೋಕೇ ಸುರೈಃ ಸಾರ್ಧಂ ಲೋಕೇ ಯತ್ರಾಪಿ ಚೇಚ್ಛತಿ ॥48॥
ಯಾರು ಇದೇ ರೀತಿಯಿಂದ ತೃಣ, ಗೋಮಯ ಮತ್ತು ಎಲೆಗಳನ್ನು ತಿನ್ನುತ್ತಾ ನಿಸ್ಪೃಹನಾಗಿ ನಿಯತನಾಗಿ, ಶುಚಿಯಾಗಿ ಕಾಡಿನಲ್ಲಿ ಗೋವುಗಳನ್ನು ರಕ್ಷಿಸಲು ಹಿಂಬಾಲಿಸುತ್ತಾನೆಯೋ - ಎಲೈ ಶತಕ್ರತುವೇ, ಅಂತಹ ನಿಷ್ಕಾಮನೆಯಿಂದ ಸಂತೋಷದಿಂದ ಬದುಕುವ ಅವನು ನನ್ನ ಲೋಕದಲ್ಲಿ ದೇವತೆಗಳ ಜೊತೆಯಲ್ಲಿ ಇರುತ್ತಾನೆ ಅಥವಾ ಅವನು ಇಷ್ಟಪಡುವ ಲೋಕಗಳಿಗೆ ಹೋಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ತ್ರ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಾಲ್ಕನೆಯ ಅಧ್ಯಾಯ
ಗೋ ಅಪಹಾರದ ಫಲ
ಇಂದ್ರಃ
ಜಾನನ್ ಯೋ ಗಾಮಪಹರೇದ್ ವಿಕ್ರೀಯಾಽದ್ವಾರ್ಥಕಾರಣಾತ್ |
ಏತದ್ ವಿಜ್ಞಾತುಮಿಚ್ಛಾಮಿ ಕಾ ನು ತಸ್ಯ ಗತಿರ್ಭವೇತ್ ॥1॥
ಇಂದ್ರ ಬುದ್ಧಿಪೂರ್ವಕವಾಗಿ ಯಾವನು ಗೋವನ್ನು ಅಪಹರಿಸುತ್ತಾನೆಯೋ ಅಥವಾ ಧನದ ಪ್ರಾಪ್ತಿಗಾಗಿ ಯಾವನು ಮಾರುತ್ತಾನೆಯೋ ಅವನಿಗೆ ಎಂತಹ ಗತಿಯಾಗುವುದೆಂದು ನಾನು ತಿಳಿಯಲು ಬಯಸುತ್ತೇನೆ.
ಬ್ರಹ್ಮಾ
ಭಕ್ಷಾರ್ಥಂ ವಿಕ್ರಯಾರ್ಥಂ ವಾ ಯೇಽಪಹಾರಂ ಹಿ ಕುರ್ವತೇ |
ದಾನಾರ್ಥಂ ವಾ ಬ್ರಾಹ್ಮಣಾಯ ತತ್ರೇದಂ ಶ್ರೂಯತಾಂ ಫಲಮ್ ॥2॥
ಬ್ರಹ್ಮಾ ಆಹಾರಕ್ಕಾಗಿ (ಭಕ್ಷಿಸುವುದಕ್ಕಾಗಿ) ಅಥವಾ ಮಾರುವುದಕ್ಕಾಗಿ ಅಥವಾ ಬ್ರಾಹ್ಮಣನಿಗೆ ಕೊಡುವುದಕ್ಕಾಗಿ ಯಾರು ಗೋವನ್ನು

ಅಪಹರಿಸುತ್ತಾರೆಯೋ ಅವರಿಗೆ ಉಂಟಾಗುವ ಈ ಫಲವನ್ನು ಕೇಳು.
ವಿಕ್ರಯಾರ್ಥಂ ಹಿ ಯೋ ಹಿಂಸ್ಯಾದ್ ಭಕ್ಷಯೇದ್ವಾ ನಿರಂಕುಶಃ |
ಘಾತಯಾನಂ ಹಿ ಪುರುಷಂ ಯೇಽನುಮನ್ಯೇಯುರರ್ಥಿನಃ ॥3॥
ಘಾತಕಃ ಖಾದಕೋ ವಾಪಿ ತಥಾ ಯಶ್ಚಾನುಮನ್ಯತೇ |
ಯಾವಂತಿ ತಸ್ಯಾ ಲೋಮಾನಿ ತಾವದ್ ವರ್ಷಾಣಿ ಮಜ್ಜತಿ ॥4॥
ಮಾರುವುದಕ್ಕೋಸ್ಕರ ಯಾವನು ಹಿಂಸೆಯನ್ನು ಮಾಡುತ್ತಾನೆಯೋ ಅಥವಾ ಗೋವನ್ನು ನಿಶ್ಶಂಕೆಯಿಂದ ಭಕ್ಷಿಸುತ್ತಾನೆಯೋ ಅಂತಹ ಸಂದರ್ಭದಲ್ಲಿ ಗೋಹತ್ಯೆಯನ್ನು ಮಾಡುವವನೂ, ಗೋಮಾಂಸವನ್ನು ಭಕ್ಷಿಸುವವನೂ, ಅದನ್ನು ಅನುಮೋದಿಸುವವನೂ ಸಹ ಗೋವಿನ ರೋಮದಷ್ಟು ವರ್ಷಗಳ ಕಾಲ ನರಕದಲ್ಲಿ ಮುಳುಗುತ್ತಾನೆ.
ಯೇ ದೋಷಾ ಯಾದೃಶಾಶ್ಚೈವ ದ್ವಿಜಯಜ್ಞೋಪಘಾತಕೇ |
ವಿಕ್ರಯೇ ಚಾಪಹಾರೇ ಚ ತೇ ದೋಷಾ ವೈ ಸ್ಮೃತಾಃ ಪ್ರಭೋ ॥5॥
ಎಲೈ ಪ್ರಭುವೇ, ಬ್ರಾಹ್ಮಣನ ಯಜ್ಞವನ್ನು ತಡೆದರೆ ಎಂತಹ ದೋಷವೋ ಅವೇ ದೋಷಗಳು ಗೋವನ್ನು ಮಾರಿದರೆ ಅಥವಾ ಅಪಹರಿಸಿದರೆ ಉಂಟಾಗುತ್ತವೆ.
ಅಪಹೃತ್ಯ ತು ಯೋ ಗಾಂ ವೈ ಬ್ರಾಹ್ಮಣಾಯ ಪ್ರಯಚ್ಛತಿ |
ಯಾವದ್ದಾನೇ ಫಲಂ ತಸ್ಯಾಸ್ತಾವನ್ನಿರಯಮೃಚ್ಛತಿ ॥6॥
ಕಳ್ಳತನವನ್ನು ಮಾಡಿ ಯಾವನು ಬ್ರಾಹ್ಮಣನಿಗೆ ಗೋದಾನವನ್ನು ಮಾಡುತ್ತಾನೆಯೋ ಅವನು ದಾನವನ್ನು ಮಾಡಿದರೆ ಎಷ್ಟು ವರ್ಷಗಳ ಕಾಲ ಫಲವಿದೆಯೋ ಅಷ್ಟು ವರ್ಷಗಳ ಕಾಲ ನರಕದಲ್ಲಿರುತ್ತಾನೆ.
ಸುವರ್ಣಂ ದಕ್ಷಿಣಾಮಾಹುರ್ಗೋಪ್ರದಾನೇ ಮಹಾದ್ಯುತೇ |
ಸುವರ್ಣಂ ಪರಮಂ ಹ್ಯುಕ್ತಂ ದಕ್ಷಿಣಾರ್ಥಮಸಂಶಯಮ್ ॥7॥
ಎಲೈ ಮಹಾದ್ಯುತಿಯೇ, ಗೋದಾನ ಕಾಲದಲ್ಲಿ ಸುವರ್ಣವನ್ನು ದಾನವಾಗಿ ಕೊಡಬೇಕೆಂದು ಹೇಳುತ್ತಾರೆ. ದಕ್ಷಿಣೆಗಳಲ್ಲಿ ಸುವರ್ಣವೇ ಅತ್ಯಂತ ಶ್ರೇಷ್ಠವಾದುದು. ಇದರಲ್ಲಿ ಸಂಶಯವಿಲ್ಲ.
ಗೋಪ್ರದಾನಂ ತಾರಯತೇ ಸಪ್ತ ಪೂರ್ವಾಂಸ್ತಥಾ ಪರಾನ್ |
ಸುವರ್ಣಂ ದಕ್ಷಿಣಾಂ ದತ್ತ್ವಾ ತಾವದ್ ದ್ವಿಗುಣಮುಚ್ಯತೇ ॥8॥
ಗೋದಾನವು ಹಿಂದಿನ ಏಳು ತಲೆಗಳನ್ನು ಮತ್ತು ಮುಂದಿನ ಏಳು ತಲೆಗಳನ್ನು ದಾಟಿಸುತ್ತದೆ. ಸುವರ್ಣದಕ್ಷಿಣೆಯನ್ನು ಕೊಟ್ಟರೆ ಅದರ ಎರಡರಷ್ಟು ಫಲ ಉಂಟಾಗುತ್ತದೆ.
ಸುವರ್ಣಂ ಪರಮಂ ದಾನಂ ಸುವರ್ಣಂ ದಕ್ಷಿಣಾ ಪರಾ |
ಸುವರ್ಣಂ ಪಾವನಂ ಶಕ್ರ ಪಾವನಾನಾಂ ಪರಂ ಸ್ಮೃತಮ್ ॥9॥
ಸುವರ್ಣದಾನವು ಶ್ರೇಷ್ಠವಾದ ದಾನ. ಸುವರ್ಣದಕ್ಷಿಣೆಯು ಶ್ರೇಷ್ಠವಾದ ದಕ್ಷಿಣೆ. ಎಲೈ ಶಕ್ರನೇ, ಸುವರ್ಣವು ಪವಿತ್ರವಾದುದು ಮತ್ತು ಪವಿತ್ರವಾದ ವಸ್ತುಗಳಲ್ಲಿ ಶ್ರೇಷ್ಠವಾದುದು ಎಂದು ಹೇಳಲ್ಪಡುತ್ತದೆ.
ಕುಲಾನಾಂ ಪಾವನಂ ಪ್ರಾಹುರ್ಜಾತರೂಪಂ ಶತಕ್ರತೋ |
ಏಷಾ ಮೇ ದಕ್ಷಿಣಾ ಪ್ರೋಕ್ತಾ ಸಮಾಸೇನ ಮಹಾದ್ಯುತೇ ॥10॥
ಎಲೈ ಶತಕ್ರತುವೇ, ಸುವರ್ಣರೂಪವಾದ ದಕ್ಷಿಣೆಯು ಕುಲಗಳನ್ನು ಪವಿತ್ರೀಕರಿಸುತ್ತದೆ ಎಂದು ಹೇಳುತ್ತಾರೆ. ಎಲೈ ಮಹಾದ್ಯುತಿಯೇ, ನಾನು ನಿನಗೆ ಸಂಕ್ಷೇಪವಾಗಿ ದಕ್ಷಿಣೆಯ ವಿಷಯವನ್ನು ಹೇಳಿದ್ದೇನೆ.
ಭೀಷ್ಮಃ
ಏತತ್ಪಿತಾಮಹೇನೋಕ್ತಮಿಂದ್ರಾಯ ಭರತರ್ಷಭ |
ಇಂದ್ರೋ ದಶರಥಾಯಾಹ ರಾಮಾಯಾಹ ಪಿತಾ ತಥಾ ॥11॥
ಭೀಷ್ಮ ಎಲೈ ಭರತಶ್ರೇಷ್ಠನೇ, ಇದನ್ನು ಪಿತಾಮಹರಾದ ಬ್ರಹ್ಮದೇವರು ಇಂದ್ರನಿಗೆ ಹೇಳಿದರು. ಇಂದ್ರನು ದಶರಥನಿಗೂ, ದಶರಥನು ರಾಮನಿಗೂ ಹೇಳಿದನು.
ರಾಘವೋಽಪಿ ಪ್ರಿಯಭ್ರಾತ್ರೇ ಲಕ್ಷ್ಮಣಾಯ ಯಶಸ್ವಿನೇ |
ಋಷಿಭ್ಯೋ ಲಕ್ಷ್ಮಣೇನೋಕ್ತಮರಣ್ಯೇ ವಸತಾ ವಿಭೋ ॥12॥
ಎಲೈ ವಿಭುವೇ, ರಾಘವನೂ ಸಹ ತನ್ನ ಪ್ರಿಯ ಸಹೋದರನೂ, ಕೀರ್ತಿವಂತನೂ ಆದ ಲಕ್ಷ್ಮಣನಿಗೆ ಹೇಳಿದನು. ಲಕ್ಷ್ಮಣನು ಅರಣ್ಯದಲ್ಲಿ ವಾಸ ಮಾಡುತ್ತಾ ಋಷಿಗಳಿಗೆ ಹೇಳಿದನು.
ಪಾರಂಪರ್ಯಾಗತಂ ಚೇದಮೃಷಯಃ ಸಂಶಿತವ್ರತಾಃ |
ದುರ್ಧರಂ ಧಾರಯಾಮಾಸೂ ರಾಜಾನಶ್ಚೈವ ಧಾರ್ಮಿಕಾಃ |
ಉಪಾಧ್ಯಾಯೇನ ಗದಿತಂ ಮಮ ಚೇದಂ ಯುಧಿಷ್ಠಿರ ॥13॥
ಪರಂಪರೆಯಿಂದ ಬಂದ ಧರಿಸಲು ಕಷ್ಟವಾದ ಈ ಜ್ಞಾನವನ್ನು ಒಳ್ಳೆಯ ವ್ರತಧಾರಿಗಳಾದ ಮತ್ತು ಧಾರ್ಮಿಕರಾದ ಋಷಿಗಳು ಮತ್ತು ರಾಜರು ಧರಿಸಿದರು. ಎಲೈ ಯುಧಿಷ್ಠಿರನೇ, ನನ್ನ ಗುರುಗಳು ನನಗೆ ಇದನ್ನು ಹೇಳಿದರು.
ಯ ಇದಂ ಬ್ರಾಹ್ಮಣೋ ನಿತ್ಯಂ ವದೇದ್ ಬ್ರಾಹ್ಮಣಸಂಸದಿ |
ಯಜ್ಞೇಷು ಗೋಪ್ರದಾನೇಷು ದ್ವಯೋರಪಿ ಸಮಾಗಮೇ ॥14॥
ತಸ್ಯ ಲೋಕಾಃ ಕಿಲಾಕ್ಷಯ್ಯಾ ದೈವತೈಃ ಸಹ ನಿತ್ಯದಾ |
ಇತಿ ಬ್ರಹ್ಮಾ ಸ ಭಗವಾನುವಾಚ ಪರಮೇಶ್ವರಃ ॥15॥

ಯಾವ ಬ್ರಾಹ್ಮಣನು ಇದನ್ನು ಬ್ರಾಹ್ಮಣ ಸಭೆಯಲ್ಲಿ ಅಥವಾ ಯಜ್ಞಗಳಲ್ಲಿ ಅಥವಾ ಗೋಪ್ರದಾನ ಕಾಲದಲ್ಲಿ ಅಥವಾ ಇಬ್ಬರು ಸಮಾಗಮವನ್ನು ಹೊಂದಿದಾಗ ನಿತ್ಯವೂ ಹೇಳುತ್ತಾನೆಯೋ ಅವನ ಲೋಕಗಳು ದೇವತೆಗಳ ಜೊತೆಯಲ್ಲಿ ಯಾವಾಗಲೂ ಅಕ್ಷಯವಾಗಿರುತ್ತವೆ ಎಂದು ಪರಮಪ್ರಭುಗಳೂ, ಪೂಜ್ಯರೂ ಆದ ಬ್ರಹ್ಮದೇವರು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಬ್ರಹ್ಮೇಂದ್ರಸಂವಾದೇ ಗೋದಾನಪ್ರಶಂಸಾನಾಮ ಚತುರಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐದನೆಯ ಅಧ್ಯಾಯ
ವ್ರತನಿಯಮಫಲ
ಯುಧಿಷ್ಠಿರಃ
ವಿಸ್ರಂಭಿತೋಽಹಂ ಭವತಾ ಧರ್ಮಾನ್ ಪ್ರವದತಾ ವಿಭೋ |
ಪ್ರವಕ್ಷ್ಯಾಮಿ ತು ಸಂದೇಹಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲ್ಲೈ ವಿಭುವೇ, ಧರ್ಮವನ್ನು ನೀನು ಹೇಳುತ್ತಿರುವಂತೆ ನನಗೆ ವಿಶ್ವಾಸವುಂಟಾಗುತ್ತಿದೆ. ಎಲ್ಲೈ ಪಿತಾಮಹನೇ, ನನ್ನ ಸಂಶಯವನ್ನು ಹೇಳುತ್ತೇನೆ, ಅದನ್ನು ಪರಿಹರಿಸು.
ವ್ರತಾನಾಂ ಕಿಂ ಫಲಂ ಪ್ರೋಕ್ತಂ ಕೀದೃಶಂ ವಾ ಮಹಾದ್ಯುತೇ |
ನಿಯಮಾನಾಂ ಫಲಂ ಕಿಂ ಚ ಸ್ವಧೀತಸ್ಯ ಚ ಕಿಂ ಫಲಮ್ ॥2॥
ಮಹಾದ್ಯುತಿಯೇ, ವ್ರತಗಳಿಗೆ ಯಾವ ಮತ್ತು ಎಂತಹ ಫಲ? ನಿಯಮಗಳಿಗೆ ಏನು ಫಲ? ಅಧ್ಯಯನಕ್ಕೆ ಏನು ಫಲ?
ದಮಸ್ಯೇಹ ಫಲಂ ಕಿಂ ಚ ವೇದಾನಾಂ ಧಾರಣೇ ಚ ಕಿಮ್ |
ಅಧ್ಯಾಪನೇ ಫಲಂ ಕಿಂ ಚ ಸರ್ವಮಿಚ್ಛಾಮಿ ವೇದಿತುಮ್ ॥3॥
ಈ ಲೋಕದಲ್ಲಿ ದಮಕ್ಕೆ ಫಲವೇನು? ವೇದಧಾರಣೆಯನ್ನು ಮಾಡಿದುದರ ಫಲವೇನು? ಅಧ್ಯಾಪನ ಮಾಡಿದುದರ ಫಲವೇನು? ನಾನು ಎಲ್ಲವನ್ನೂ ತಿಳಿಯಲು ಬಯಸುತ್ತೇನೆ.
ಅಪ್ರತಿಗ್ರಾಹಕೇ ಕಿಂ ಚ ಫಲಂ ಲೋಕೇ ಪಿತಾಮಹ |
ತಸ್ಯ ಕಿಂ ಚ ಫಲಂ ದೃಷ್ಟಂ ಶ್ರುತಂ ಯಃ ಸಂಪ್ರಯಚ್ಛತಿ ॥4॥
ಎಲ್ಲೈ ಪಿತಾಮಹನೇ, ಲೋಕದಲ್ಲಿ ಪ್ರತಿಗ್ರಹ ಮಾಡದಿರುವವನಿಗೆ ಏನು ಫಲ? ಯಾವನು ದಾನವನ್ನು ಕೊಡುತ್ತಾನೆಯೋ ಅವನಿಗೆ ದೃಷ್ಟವಾದ ಮತ್ತು ಶ್ರುತವಾದ ಫಲವು ಯಾವುದು?
ಸ್ವಕರ್ಮನಿರತಾನಾಂ ಚ ಶೂರಾಣಾಂ ಚಾಪಿ ಕಿಂ ಫಲಮ್ |
ಸತ್ಯೇ ಚ ಕಿಂ ಫಲಂ ಪ್ರೋಕ್ತಂ ಬ್ರಹ್ಮಚರ್ಯೇ ಚ ಕಿಂ ಫಲಮ್ ॥5॥
ಸ್ವಕರ್ಮನಿರತನಾದ ಶೂರನಿಗೆ ಯಾವ ಫಲ? ಸತ್ಯಕ್ಕೆ ಯಾವ ಫಲ? ಬ್ರಹ್ಮಚರ್ಯಕ್ಕೆ ಯಾವ ಫಲ?
ಪಿತೃಶುಶ್ರೂಷಣೇ ಕಿಂ ಚ ಮಾತೃಶುಶ್ರೂಷಣೇ ತಥಾ |
ಆಚಾರ್ಯಗುರುಶುಶ್ರೂಷಾಸ್ವನುಕ್ರೋಶಾನುಕಂಪನೇ ॥6॥
ಪಿತೃಸೇವೆಗೆ ಯಾವ ಫಲ? ಮಾತೃಸೇವೆಗೆ ಯಾವ ಫಲ? ಆಚಾರ್ಯ ಗುರು ಶುಶ್ರೂಷೆಗೂ, ದಯೆ ಮತ್ತು ಭೂತೋಪಕಾರಗಳಿಗೂ ಯಾವ ಫಲ?
ಏತತ್ಸರ್ವಮಶೇಷೇಣ ಪಿತಾಮಹ ಯಥಾತಥಮ್ |
ವೇತ್ತುಮಿಚ್ಛಾಮಿ ಧರ್ಮಜ್ಞ ಪರಂ ಕೌತೂಹಲಂ ಹಿ ಮೇ ॥7॥
ಎಲ್ಲೈ ಪಿತಾಮಹನೇ, ಧರ್ಮಜ್ಞನೇ, ಇದೆಲ್ಲವನ್ನೂ ನಾನು ಸರಿಯಾಗಿ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಈ ವಿಷಯಗಳಲ್ಲಿ ನನಗೆ ಬಹಳ ಕುತೂಹಲವಿದೆ.
ಭೀಷ್ಮಃ
ಯೋ ವ್ರತಂ ವೈ ಯಥೋದ್ದಿಷ್ಟಂ ತಥಾ ಸಂಪ್ರತಿಪದ್ಯತೇ |
ಅಖಂಡಂ ಸಮ್ಯಗಾರಬ್ಧಂ ತಸ್ಯ ಲೋಕಾಃ ಸನಾತನಾಃ ॥8॥
ಭೀಷ್ಮ ಯಾವನು ಶಾಸ್ತ್ರವಿಧಿಗೆ ಅನುಸಾರವಾಗಿ ವ್ರತವನ್ನು ಪ್ರಾರಂಭಿಸಿ ಮಧ್ಯದಲ್ಲಿ ಬಿಡದೆ ಪೂರ್ಣಗೊಳಿಸುತ್ತಾನೆಯೋ ಅವನಿಗೆ ಸನಾತನ ಲೋಕಗಳು ದೊರಕುತ್ತವೆ.
ನಿಯಮಾನಾಂ ಫಲಂ ರಾಜನ್ ಪ್ರತ್ಯಕ್ಷಮಿಹ ದೃಶ್ಯತೇ |
ನಿಯಮಾನಾಂ ಕ್ರತೂನಾಂ ಚ ತ್ವಯಾಽವಾಪ್ತಮಿದಂ ಫಲಮ್ ॥9॥
ಎಲ್ಲೈ ರಾಜನೇ, ನಿಯಮಗಳ ಫಲವು ಈ ಲೋಕದಲ್ಲಿ ಪ್ರತ್ಯಕ್ಷವಾಗಿಯೇ ಕಾಣುತ್ತದೆ. ನಿನ್ನ ನಿಯಮಗಳಿಗೆ ಮತ್ತು ಯಾಗಗಳಿಗೆ ಫಲವಾಗಿ ಇದನ್ನು (ಈ ಜಯವನ್ನು) ನೀನು ಪಡೆದಿರುವಿಯಷ್ಟೆ?
ಸ್ವಧೀತಸ್ಯಾಪಿ ಚ ಫಲಂ ದೃಶ್ಯತೇಽಮುತ್ರ ಚೇಹ ಚ |
ಇಹಲೋಕೇಽರ್ಥವಾನ್ ನಿತ್ಯಂ ಬ್ರಹ್ಮಲೋಕೇ ಚ ಮೋದತೇ ॥10॥
ಅಧ್ಯಯನದ ಫಲವೂ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಕಂಡುಬರುತ್ತದೆ. ಈ ಲೋಕದಲ್ಲಿ ಸಂಪದ್ಯುಕ್ತನಾಗಿ ಬ್ರಹ್ಮಲೋಕದಲ್ಲಿ ನಿತ್ಯವೂ ಸಂಪದ್ಭರಿತನಾಗಿ ಇರುತ್ತಾನೆ.
ದಮಸ್ಯ ತು ಫಲಂ ರಾಜನ್ ಶೃಣು ತ್ವಂ ವಿಸ್ತರೇಣ ಮೇ |

ದಾಂತಾಃ ಸರ್ವತ್ರ ಸುಖಿನೋ ದಾಂತಾಃ ಸರ್ವತ್ರ ನಿರ್ವೃತಾಃ ॥11॥
ಎಲೈ ರಾಜನೇ, ದಮದ ಫಲವನ್ನು ವಿಸ್ತಾರವಾಗಿ ಕೇಳು. ದಾಂತರು ಎಂದರೆ ಇಂದ್ರಿಯನಿಗ್ರಹವುಳ್ಳವರು. ಯಾವಾಗಲೂ ಸುಖವಾಗಿರುತ್ತಾರೆ. ಎಲ್ಲ ವಿಷಯಗಳಲ್ಲಿಯೂ ತೃಪ್ತರಾಗಿರುತ್ತಾರೆ.
ಯತ್ರೇಚ್ಛಾಗಾಮಿನೋ ದಾಂತಾಃ ಸರ್ವಶತ್ರುನಿಷೂದನಾಃ |
ಪ್ರಾರ್ಥಯಂತಿ ಚ ಯದ್ ದಾಂತಾ ಲಭಂತೇ ತನ್ನ ಸಂಶಯಃ ॥12॥
ದಾಂತರು ತಮ್ಮ ಇಚ್ಛೆಗೆ ಬಂದ ಕಡೆಗೆ ಹೋಗುತ್ತಾರೆ. ಸರ್ವಶತ್ರುಗಳನ್ನೂ ನಿವಾರಿಸುತ್ತಾರೆ. ದಾಂತರು ಏನನ್ನು ಪ್ರಾರ್ಥಿಸುತ್ತಾರೆಯೋ ಅದನ್ನು ಪಡೆಯುವುದರಲ್ಲಿ ಸಂಶಯವಿಲ್ಲ.
ಯುಜ್ಯಂತೇ ಸರ್ವಕಾಮೈರ್ಹಿ ದಾಂತಾಃ ಸರ್ವತ್ರ ಪಾಂಡವ |
ಸ್ವರ್ಗೇ ತಥಾ ಪ್ರಮೋದಂತೇ ತಪಸಾ ವಿಕ್ರಮೇಣ ಚ ॥13॥
ಎಲೈ ಪಾಂಡವನೇ, ದಾಂತರು ಈ ಲೋಕದಲ್ಲಿ ಎಲ್ಲ ಕಡೆಗಳಲ್ಲಿಯೂ, ಎಲ್ಲ ಕಾಮಗಳಿಂದಲೂ ಪೂಜಿಸಲ್ಪಡುತ್ತಾರೆ. ಹಾಗೆಯೇ ತಮ್ಮ ತಪಸ್ಸು ಮತ್ತು ವಿಕ್ರಮದಿಂದ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾರೆ.
ದಾನೈರ್ಯಜ್ಞೈಶ್ಚ ವಿವಿಧೈರ್ಯಥಾ ದಾಂತಾಃ ಕ್ಷಮಾನ್ವಿತಾಃ |
ದಾತಾ ಕುಪ್ಯತಿ ನೋ ದಾಂತಸ್ತಸ್ಮಾದ್ ದಾನಾತ್ ಪರೋ ದಮಃ ॥14॥
ದಾಂತರು ಕ್ಷಮೆಯಿಂದ ಕೂಡಿದವರಾಗಿ ವಿವಿಧವಾದ ದಾನ ಮತ್ತು ಯಜ್ಞಗಳಿಂದ (ಶ್ರೇಷ್ಠ ಫಲವನ್ನು ಪಡೆಯುತ್ತಾರೆ). ದಾನ ಮಾಡುವವನು ಕೋಪಗೊಳ್ಳುತ್ತಾನೆ ಆದರೆ ದಾಂತನು ಕೋಪಗೊಳ್ಳುವುದಿಲ್ಲ. ಆದ್ದರಿಂದ ದಾನಕ್ಕಿಂತಲೂ ದಮವು ಶ್ರೇಷ್ಠವಾದುದು.
ಯಸ್ತು ದದ್ಯಾದಕುಪ್ಯನ್ ಹಿ ತಸ್ಯ ಲೋಕಾಃ ಸನಾತನಾಃ |
ಕ್ರೋಧೋ ಹಂತಿ ಹಿ ಯದ್ ದಾನಂ ತಸ್ಮಾದ್ ದಾನಾತ್ ಪರೋ ದಮಃ ॥
ಯಾವನು ಕೋಪಗೊಳ್ಳದೆ ದಾನವನ್ನು ಕೊಡುತ್ತಾನೆಯೋ ಅವನಿಗೆ ಸನಾತನ ಲೋಕಗಳು ದೊರೆಯುತ್ತವೆ. ಕ್ರೋಧವು ದಾನದ ಫಲವನ್ನು ವಿನಾಶಗೊಳಿಸುತ್ತದೆ. ಆದ್ದರಿಂದ ದಾನಕ್ಕಿಂತಲೂ ದಮವು ಶ್ರೇಷ್ಠವಾದುದು.
ಅದೃಶ್ಯಾನಿ ಮಹಾರಾಜ ಸ್ಥಾನಾನ್ಯಯುತಶೋ ದಿವಿ |
ಋಷಯಃ ಸರ್ವಲೋಕೇಷು ಯಾನೀತೋ ಯಾಂತಿ ದೇವತಾಃ ॥16॥
ಎಲೈ ಮಹಾರಾಜನೇ, ನಿನಗೆ ಅದೃಶ್ಯವಾದ ಸ್ಥಾನಗಳು ದೇವಲೋಕದಲ್ಲಿ ಸಾವಿರಾರು ಗಟ್ಟಲೆ ಇವೆ. ಸರ್ವಲೋಕಗಳಲ್ಲಿ ಋಷಿಗಳು ಮತ್ತು ದೇವತೆಗಳು ಇಲ್ಲಿಂದ ಅಂತಹ ಸ್ಥಳಕ್ಕೆ ಹೋಗುತ್ತಾರೆ.
ದಮೇನ ಯಾನಿ ನೃಪತೇ ಗಚ್ಛಂತಿ ಪರಮರ್ಷಯಃ |
ಕಾಮಯಾನಾ ಮಹತ್ಸ್ಥಾನಂ ತಸ್ಮಾದ್ ದಾನಾತ್ ಪರೋ ದಮಃ ॥
ಎಲೈ ರಾಜನೇ, ಶ್ರೇಷ್ಠರಾದ ಋಷಿಗಳು ದೊಡ್ಡ ಸ್ಥಾನವನ್ನು ಬಯಸಿ ದಮದಿಂದ ಆ ಸ್ಥಾನವನ್ನು ಹೊಂದುತ್ತಾರೆ. ಆದ್ದರಿಂದ ದಾನಕ್ಕಿಂತಲೂ ದಮವು ಶ್ರೇಷ್ಠವಾದುದು.
ವಿದ್ಯಾದಾನಾತ್ ಪರಂ ನಾಸ್ತಿ ವೇದವಿದ್ಯಾ ಮಹಾಫಲಾ |
ಅಧ್ಯಾಪಕಃ ಪರಿಕ್ಲೇಶಾದಕ್ಷಯಂ ಫಲಮಶ್ನುತೇ |
ವಿಧಿವತ್ ಪಾವಕಂ ಹುತ್ವಾ ಬ್ರಹ್ಮಲೋಕೇ ನರಾಧಿಪ ॥18॥
ವಿದ್ಯಾದಾನಕ್ಕಿಂತಲೂ ಶ್ರೇಷ್ಠವಾದ ದಾನವಿಲ್ಲ. ಅದರಲ್ಲಿಯೂ ವೇದವಿದ್ಯೆಯು ಮಹಾಫಲಪ್ರದವಾದುದು. ಅಧ್ಯಾಪಕನು ಶಿಷ್ಯನಿಗೆ ಕಷ್ಟಪಟ್ಟು ಉಪದೇಶ ಮಾಡುವುದರಿಂದ ಅಕ್ಷಯವಾದ ಫಲವನ್ನು ಹೊಂದುತ್ತಾನೆ. ಎಲೈ ರಾಜನೇ, ವಿಧಿಗೆ ಅನುಗುಣವಾಗಿ ಅಗ್ನಿಯಲ್ಲಿ ಹೋಮ ಮಾಡುವವನು ಬ್ರಹ್ಮಲೋಕದಲ್ಲಿ ಇರುತ್ತಾನೆ.
ಅಧೀತ್ಯಾಪಿ ಹಿ ಯೋ ವೇದಾನ್ ನ್ಯಾಯವಿದ್ಭ್ಯಃ ಪ್ರಯಚ್ಛತಿ |
ಗುರುಕರ್ಮಪ್ರಶಂಸೀ ಚ ಸೋಽಪಿ ಸ್ವರ್ಗೇ ಮಹೀಯತೇ ॥19॥
ವೇದಗಳನ್ನು ಅಧ್ಯಯನ ಮಾಡಿ, ನ್ಯಾಯಮಾರ್ಗದಲ್ಲಿ ನಡೆಯುವ ಶಿಷ್ಯರಿಗೆ ಯಾವನು ಉಪದೇಶ ಮಾಡುತ್ತಾನೆಯೋ, ಯಾವನು ಇನ್ನೊಬ್ಬನು ಮಾಡಿದ ದೊಡ್ಡ ಕಾರ್ಯವನ್ನು ಪ್ರಶಂಸೆ ಮಾಡುತ್ತಾನೆಯೋ ಅವನೂ ಸಹ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ಕ್ಷತ್ರಿಯೋಽಧ್ಯಯನೇ ಯುಕ್ತೋ ಯಜನೇ ದಾನಕರ್ಮಣಿ |
ಯುದ್ಧೇ ಯಶ್ಚ ಪರಿತ್ರಾತಾ ಸೋಽಪಿ ಸ್ವರ್ಗೇ ಮಹೀಯತೇ ॥20॥
ಅಧ್ಯಯನ, ಯಜನ ಮತ್ತು ದಾನದಲ್ಲಿ ನಿರತರಾದ ಹಾಗೆಯೇ ಯುದ್ಧದಲ್ಲಿ ಪ್ರಜೆಗಳನ್ನು ರಕ್ಷಿಸುವ ಕ್ಷತ್ರಿಯನೂ ಸಹ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ವೈಶ್ಯಃ ಸ್ವಕರ್ಮನಿರತಃ ಪ್ರದಾನಾಲ್ಲಭತೇ ಮಹತ್ |
ಶೂದ್ರಃ ಸ್ವಕರ್ಮನಿರತಃ ಸ್ವರ್ಗಂ ಶುಶ್ರೂಷಯಾಽರ್ಚ್ಛತಿ ॥21॥
ಸ್ವಕರ್ಮನಿರತನಾದ ವೈಶ್ಯನು ದಾನ ಮಾಡುವುದರಿಂದ ದೊಡ್ಡ ಫಲವನ್ನು ಪಡೆಯುತ್ತಾನೆ. ಸ್ವಕರ್ಮದಲ್ಲಿ ನಿರತನಾದ ಶೂದ್ರನು ಉತ್ತಮವರ್ಣದವರ ಶುಶ್ರೂಷೆಯಿಂದ ಸ್ವರ್ಗವನ್ನು ಪಡೆಯುತ್ತಾನೆ.
ಶೂರಾ ಬಹುವಿಧಾಃ ಪ್ರೋಕ್ತಾಸ್ತೇಷಾಮರ್ಥಾಂಶ್ಚ ಮೇ ಶೃಣು |
ಶೂರಾನ್ವಯಾನಾಂ ನಿರ್ದಿಷ್ಟಂ ಫಲಂ ಶೂರಸ್ಯ ಚೈವ ಹ ॥22॥
ಅನೇಕ ವಿಧವಾದ ಶೂರರಿದ್ದಾರೆ. ಅಂತಹವರ ಫಲವನ್ನೂ ಸಹ ನನ್ನಿಂದ ಕೇಳು. ಶೂರರ ಕುಲಗಳಿಗೆ ನಿರ್ದಿಷ್ಟವಾದ ಫಲವು ಶೂರರಿಗೂ ಬರುತ್ತದೆ.
ಯಜ್ಞಶೂರಾ ದಮೇ ಶೂರಾಃ ಸತ್ಯಶೂರಾಸ್ತಥಾಪರೇ |

ಯುದ್ಧಶೂರಾಸ್ತಥೈವೋಕ್ತಾ ದಾನಶೂರಾಶ್ಚ ಮಾನವಾಃ ॥23॥
ಮಾನವರು ಯಜ್ಞಶೂರರೂ, ದಮಶೂರರೂ, ಇನ್ನು ಕೆಲವರು ಸತ್ಯಶೂರರೂ, ಯುದ್ಧಶೂರರೂ ಹಾಗೆಯೇ ದಾನಶೂರರೂ ಇರುತ್ತಾರೆ.
ಬುದ್ಧಿಶೂರಾಸ್ತಥೈವಾನ್ಯೇ ಕ್ಷಮಾಶೂರಾಸ್ತಥಾಪರೇ |
ಆರ್ಜವೇ ಚ ತಥಾ ಶೂರಾಃ ಶಮೇ ವರ್ತಂತಿ ಮಾನವಾಃ ॥24॥
ಕೆಲವರು ಬುದ್ಧಿಶೂರರು, ಕೆಲವರು ಕ್ಷಮಾಶೂರರು, ಕೆಲವರು ಆರ್ಜವ ಶೂರರು, ಇನ್ನು ಕೆಲವರು ಭಗವನ್ನಿಷ್ಠೆಯಲ್ಲಿ ಶೂರರು.
ತೈಸ್ತೈಸ್ತು ನಿಯಮೈಃ ಶೂರಾ ಬಹವಃ ಸಂತಿ ಚಾಪರೇ |
ವೇದಾಧ್ಯಯನಶೂರಾಶ್ಚ ಶೂರಾಶ್ಚಾಧ್ಯಾಪನೇ ರತಾಃ ॥25॥
ಆಯಾ ನಿಯಮಗಳಲ್ಲಿ ಶೂರರಾದ ಇನ್ನೂ ಅನೇಕರು ಇದ್ದಾರೆ. ವೇದಾಧ್ಯಯನದಲ್ಲಿ ಶೂರರು, ಅಧ್ಯಾಪನದಲ್ಲಿ ಶೂರರು (ಇರುತ್ತಾರೆ).
ಗುರುಶುಶ್ರೂಷಯಾ ಶೂರಾಃ ಪಿತೃಶುಶ್ರೂಷಯಾಽಪರೇ |
ಮಾತೃಶುಶ್ರೂಷಯಾ ಶೂರಾ ಭೈಕ್ಷ್ಯಶೂರಾಸ್ತಥಾಽಪರೇ ॥26॥
ಗುರುಶೊಶ್ರೂಷೆಯಲ್ಲಿ ಶೂರರು, ಪಿತೃಶುಶ್ರೂಷೆಯಲ್ಲಿ ಶೂರರು, ಮಾತೃ ಶುಶ್ರೂಷೆಯಲ್ಲಿ ಶೂರರು, ಇನ್ನು ಕೆಲವರು ಭೈಕ್ಷ್ಯವೃತ್ತಿಯಲ್ಲಿ ಶೂರರು.
ಸಾಂಖ್ಯಶೂರಾಶ್ಚ ಬಹವೋ ಯೋಗಶೂರಾಸ್ತಥಾಽಪರೇ |
ಅರಣ್ಯೇ ಗೃಹವಾಸೇ ಚ ಶೂರಾಶ್ಚಾತಿಥಿಪೂಜನೇ |
ಸರ್ವೇ ಯಾಂತಿ ಪರಾಲ್ಲೋಕಾನ್ ಸ್ವಕರ್ಮಫಲನಿರ್ಜಿತಾನ್ ॥27॥
ಕೆಲವರು ಸಾಂಖ್ಯಶಾಸ್ತ್ರದಲ್ಲಿ ಶೂರರು, ಕೆಲವರು ಯೋಗದಲ್ಲಿ ಶೂರರು, ಕೆಲವರು ಅರಣ್ಯಶೂರರು, ಕೆಲವರು ಗೃಹಸ್ಥಾಶ್ರಮ ಶೂರರು, ಕೆಲವರು ಅತಿಥಿ ಪೂಜನೆಯಲ್ಲಿ ಶೂರರು. ಇವರೆಲ್ಲರೂ ತಮ್ಮ ಕರ್ಮಗಳ ಫಲವಾಗಿ ಸಂಪಾದಿಸಿದ ಶ್ರೇಷ್ಠವಾದ ಲೋಕವನ್ನು ಹೊಂದುತ್ತಾರೆ.
ಧಾರಣಂ ಸರ್ವವೇದಾನಾಂ ಸರ್ವತೀರ್ಥಾವಗಾಹನಮ್ |
ಸತ್ಯಂ ಚ ಬ್ರುವತೋ ನಿತ್ಯಂ ಸಮಂ ವಾ ಸ್ಯಾನ್ನ ವಾ ಸಮಮ್ ॥28॥
ಸರ್ವವೇದಗಳ ಧಾರಣೆ, ಸರ್ವತೀರ್ಥಸ್ನಾನ ಇವು ನಿತ್ಯವೂ ಸತ್ಯವನ್ನು ನುಡಿಯುವುದಕ್ಕೆ ಸಮಾನವಾಗಬಹುದು ಅಥವಾ ಆಗದಿರಬಹುದು.
ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ |
ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥29॥
ಸಹಸ್ರ ಅಶ್ವಮೇಧಗಳನ್ನು ಮತ್ತು ಸತ್ಯವಚನವನ್ನು ತಕ್ಕಡಿಯಲ್ಲಿ ತೂಗಿದರೂ ಸಹಸ್ರ ಅಶ್ವಮೇಧಗಳಿಗಿಂತ ಸತ್ಯವೇ ಭಾರವಾಗುತ್ತದೆ (ಶ್ರೇಷ್ಠವಾಗುತ್ತದೆ).
ಸತ್ಯೇನ ಸೂರ್ಯಸ್ತಪತಿ ಸತ್ಯೇನಾಗ್ನಿಃ ಪ್ರದೀಪ್ಯತೇ |
ಸತ್ಯೇನ ಮಾರುತೋ ವಾತಿ ಸರ್ವಂ ಸತ್ಯೇ ಪ್ರತಿಷ್ಠಿತಮ್ ॥30॥
ಸೂರ್ಯನು ಸತ್ಯದಿಂದ ತಾಪವನ್ನು ಕೊಡುತ್ತಾನೆ. ಅಗ್ನಿಯು ಸತ್ಯದಿಂದ ಉರಿಯುತ್ತಾನೆ. ವಾಯುವು ಸತ್ಯದಿಂದ ಬೀಸುತ್ತಾನೆ. ಎಲ್ಲವೂ ಸತ್ಯದಲ್ಲಿ ಪ್ರತಿಷ್ಠಿತವಾಗಿವೆ.
ಸತ್ಯೇನ ದೇವಾನ್ ಪ್ರೀಣಾತಿ ಪಿತೄನ್ ವೈ ಬ್ರಾಹ್ಮಣಾಂಸ್ತಥಾ |
ಸತ್ಯಮಾಹುಃ ಪರಂ ಧರ್ಮಂ ತಸ್ಮಾತ್ಸತ್ಯಂ ನ ಲಂಘಯೇತ್ ॥31॥
ಸತ್ಯದಿಂದ ದೇವತೆಗಳನ್ನೂ, ಪಿತೃಗಳನ್ನೂ ಮತ್ತು ಬ್ರಾಹ್ಮಣರನ್ನೂ ಸಂತೋಷಪಡಿಸುತ್ತಾನೆ. ಸತ್ಯವನ್ನು ಶ್ರೇಷ್ಠವಾದ ಧರ್ಮವೆಂದು ಹೇಳುತ್ತಾರೆ. ಆದ್ದರಿಂದ ಸತ್ಯವನ್ನು ಮೀರಬಾರದು.
ಮುನಯಃ ಸತ್ಯನಿರತಾ ಮುನಯಃ ಸತ್ಯವಿಕ್ರಮಾಃ |
ಮುನಯಃ ಸತ್ಯಶಪಥಾಸ್ತಸ್ಮಾತ್ ಸತ್ಯಂ ವಿಶಿಷ್ಯತೇ |
ಸತ್ಯವಂತಃ ಸ್ವರ್ಗಲೋಕೇ ಮೋದಂತೇ ಭರತರ್ಷಭ ॥32॥
ಋಷಿಗಳು ಸತ್ಯನಿರತರಾದವರು. ಸತ್ಯವಾದ ಪರಾಕ್ರಮವುಳ್ಳವರು. ಸತ್ಯವಾದ ಶಪಥವುಳ್ಳವರು. ಆದ್ದರಿಂದ ಸತ್ಯವು ಶ್ರೇಷ್ಠವೆನಿಸುತ್ತದೆ. ಎಲೈ ಭರತರ್ಷಭನೇ, ಸತ್ಯವಂತನಾದವರು ಸ್ವರ್ಗಲೋಕದಲ್ಲಿ ಸುಖಪಡುತ್ತಾರೆ.
ದಮಃ ಸತ್ಯಫಲಾವಾಪ್ತಿರುಕ್ತಾ ಸರ್ವಾತ್ಮನಾ ಮಯಾ |
ಅಸಂಶಯಂ ವಿನೀತಾತ್ಮಾ ಸರ್ವಃ ಸ್ವರ್ಗೇ ಮಹೀಯತೇ ॥33॥
ದಮ ಮತ್ತು ಸತ್ಯದ ಫಲ ಪ್ರಾಪ್ತಿಯು ನನ್ನಿಂದ ವಿಸ್ತಾರವಾಗಿ ಹೇಳಲ್ಪಟ್ಟಿದೆ. ವಿನಯವುಳ್ಳ ಸರ್ವಪುರುಷನೂ ನಿಸ್ಸಂಶಯವಾಗಿ ಸ್ವರ್ಗದಲ್ಲಿ ಸತ್ಕರಿಸಲ್ಪಡುತ್ತಾನೆ.
ಬ್ರಹ್ಮಚರ್ಯಸ್ಯ ತು ಗುಣಾನ್ ಶೃಣು ಮೇ ವಸುಧಾಧಿಪ |
ಆಜನ್ಮಮರಣಾದ್ ಯಸ್ತು ಬ್ರಹ್ಮಚಾರೀ ಭವೇದಿಹ |
ನ ತಸ್ಯ ಕಿಂಚಿದಪ್ರಾಪ್ಯಮಿತಿ ವಿದ್ಧಿ ಜನಾಧಿಪ ॥34॥
ಎಲೈ ವಸುಧಾಧಿಪನೇ, ಬ್ರಹ್ಮಚರ್ಯಗುಣಗಳನ್ನು ನನ್ನಿಂದ ಕೇಳು. ಯಾವನು ಜನನದಿಂದ ಹಿಡಿದು ಮರಣದವರೆಗೆ ಈ ಲೋಕದಲ್ಲಿ ಬ್ರಹ್ಮಚಾರಿಯಾಗಿರುತ್ತಾನೆಯೋ ಎಲೈ ಜನಾಧಿಪನೇ, ಅವನು ಪಡೆಯಲಾದುದು ಯಾವುದೂ ಇಲ್ಲವೆಂದು ತಿಳಿ.

ಬಹ್ವ್ಯಃ ಕೋಟ್ಯಸ್ತ್ವ ೃಷೀಣಾಂ ತು ಬಹ್ಮಲೋಕೇ ವಸಂತ್ಯುತ |
ಸತ್ಯೇ ರತಾನಾಂ ಸತತಂ ದಾಂತಾನಾಮೂರ್ಧ್ವರೇತಸಾಮ್ ||35||
ಸತ್ಯದಲ್ಲಿ ರತರಾದ, ಸತತವಾಗಿ ದಮವನ್ನು ಹೊಂದಿದ, ಊರ್ಧ್ವರೇತಸ್ಕರಾದ ಅನೇಕ ಕೋಟಿ ಋಷಿಗಳು ಬ್ರಹ್ಮಲೋಕದಲ್ಲಿ ವಾಸ ಮಾಡುತ್ತಾರೆ.
ಬ್ರಹ್ಮಚರ್ಯಂ ದಹೇದ್ ರಾಜನ್ ಸರ್ವಪಾಪಾನ್ಯುಪಾಸಿತಮ್ |
ಬ್ರಾಹ್ಮಣೇನ ವಿಶೇಷೇಣ ಬ್ರಾಹ್ಮಣೋ ಹ್ಯಗ್ನಿರುಚ್ಯತೇ ||36||
ಎಲೈ ರಾಜನೇ, ಬ್ರಹ್ಮಚರ್ಯವನ್ನು ಪಾಲಿಸಿದರೆ, ಅದರಲ್ಲೂ ವಿಶೇಷವಾಗಿ ಬ್ರಾಹ್ಮಣನಿಂದ ಪಾಲಿಸಲ್ಪಟ್ಟರೆ ಅದು ಎಲ್ಲ ಪಾಪಗಳನ್ನೂ ದಹಿಸುತ್ತದೆ. ಬ್ರಾಹ್ಮಣನು ಅಗ್ನಿ ಎಂದು ಕರೆಯುತ್ತಾರೆ.
ಪ್ರತ್ಯಕ್ಷಂ ಚ ತವಾಪ್ಯೇತದ್ ಬ್ರಾಹ್ಮಣೇಷು ತಪಸ್ವಿಷು |
ಬಿಭೇತಿ ಹಿ ಯಥಾ ಶಕ್ರೋ ಬ್ರಹ್ಮಚಾರಿಪ್ರಧರ್ಷಿತಃ |
ತದ್ ಬ್ರಹ್ಮಚರ್ಯಸ್ಯ ಫಲಮೃಷೀಣಾಮಿಹ ದೃಶ್ಯತೇ ||37||
ತಪಸ್ವಿಗಳಾದ ಬ್ರಾಹ್ಮಣರಲ್ಲಿ ಬ್ರಹ್ಮಚಾರಿಯಿಂದ ಅವಮಾನಕ್ಕೊಳಗಾದ ಇಂದ್ರನು ಹೇಗೆ ಹೆದರಿ ನಡೆದುಕೊಳ್ಳುತ್ತಾನೆಂಬುದು ನಿನಗೂ ಪ್ರತ್ಯಕ್ಷವಾದ ವಿಷಯ. ಆದ್ದರಿಂದ ಋಷಿಗಳ ಬ್ರಹ್ಮಚರ್ಯಫಲವು ಪ್ರತ್ಯಕ್ಷವಾಗಿ ಕಂಡುಬರುತ್ತದೆ.
ಮಾತಾಪಿತ್ರೋಃ ಪೂಜನೇ ಯೋ ಧರ್ಮಸ್ತಮಪಿ ಮೇ ಶೃಣು |
ಶುಶ್ರೂಷತೇ ಯಃ ಪಿತರಂ ನ ಚಾಸೂಯೇತ್ ಕಥಂಚನ |
ಮಾತರಂ ವಾಽನಹಂವಾದೀ ಗುರುಮಾಚಾರ್ಯಮೇವ ಚ ||38||
ತಸ್ಯ ರಾಜನ್ ಫಲಂ ವಿದ್ಧಿ ಸ್ವರ್ಗಲೋಕೇ ಸ್ಥಾನಮುತ್ತಮಮ್ |
ನ ಚ ಪಶ್ಯೇತ ನರಕಂ ಗುರುಶುಶ್ರೂಷುರಾತ್ಮವಾನ್ ||39||
ಮಾತಾಪಿತೃಗಳ ಪೂಜೆಯಿಂದ ಯಾವ ಧರ್ಮವು ಉಂಟಾಗುತ್ತದೆ ಎಂಬುದನ್ನು ನನ್ನಿಂದ ಕೇಳು. ಯಾವನು ಅಸೂಯಾ ರಹಿತನಾಗಿ ತಂದೆಯನ್ನೂ, ಅಹಂಕಾರ ರಹಿತನಾಗಿ ತಾಯಿಯನ್ನೂ, ಗುರುವನ್ನೂ ಮತ್ತು ಆಚಾರ್ಯನನ್ನೂ ಪೂಜಿಸುತ್ತಾನೆಯೋ ಎಲೈ ರಾಜನೇ, ಅವನಿಗೆ ಸ್ವರ್ಗಲೋಕದಲ್ಲಿ ಶ್ರೇಷ್ಠವಾದ ಸ್ಥಾನವಿದೆ ಎಂದು ತಿಳಿ. ಗುರುಶುಶ್ರೂಷೆಯನ್ನು ಮಾಡಿದ ಧೈರ್ಯಶಾಲಿಯು ನರಕವನ್ನು ನೋಡಲಾರ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಸತ್ಯಸ್ತುತಿರ್ನಾಮ ಪಂಚಾಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಆರನೆಯ ಅಧ್ಯಾಯ
ಗೋದಾನ ವಿಧಿ
ಯುಧಿಷ್ಠಿರಃ
ವಿಧಿಂ ಗವಾಂ ಪರಮಹಂ ಶ್ರೋತುಮಿಚ್ಛಾಮಿ ತತ್ತ್ವತಃ |
ಯೇನ ತಾನ್ ಶಾಶ್ವತಾಲ್ಲೋಕಾನಖಿಲಾನಶ್ನುವೀಮಹಿ ||1||
ಯುಧಿಷ್ಠಿರ ಯಾವ ವಿಧಿಯನ್ನು ಅನುಸರಿಸಿದರೆ ಎಲ್ಲಾ ಶಾಶ್ವತವಾದ ಲೋಕಗಳನ್ನು ನಾವು ಹೊಂದುವೆವೋ ಅಂತಹ ಗೋದಾನದ ವಿಧಿಯನ್ನು ಸರಿಯಾಗಿ ತಿಳಿದುಕೊಳ್ಳಲು ಬಯಸುತ್ತೇನೆ.
ಭೀಷ್ಮಃ
ನ ಗೋದಾನಾತ್ ಪರಂ ಕಿಂಚಿದ್ ವಿದ್ಯತೇ ವಸುಧಾಧಿಪ |
ಗೌರ್ಹಿ ನ್ಯಾಯಾಗತಾ ದತ್ತಾ ಸದ್ಯಸ್ತಾರಯತೇ ಕುಲಮ್ ||2||
ಭೀಷ್ಮ ಎಲೈ ರಾಜನೇ, ಗೋದಾನಕ್ಕಿಂತಲೂ ಶ್ರೇಷ್ಠವಾದ ದಾನವಿಲ್ಲ. ನ್ಯಾಯದಿಂದ ಸಂಪಾದಿಸಿ ದಾನ ಮಾಡಿದ ಗೋವು ತಕ್ಷಣದಲ್ಲಿಯೇ ಆ ಕುಲವನ್ನು ಸಂಕಟದಿಂದ ಪಾರುಮಾಡುತ್ತದೆ.
ಸತಾಮರ್ಥೇ ಸಮ್ಯಗುತ್ಪಾದಿತೋ ಯಃ
ಸ ವೈ ಕ್ಲೃಪ್ತಃ ಸಮ್ಯಗಿಷ್ಟಃ ಪ್ರಜಾಭ್ಯಃ |
ತಸ್ಮಾತ್ ಪೂರ್ವಂ ಹ್ಯಾದಿಕಾಲೇ ಪ್ರವೃತ್ತಂ
ಗವಾಂ ದಾನೇ ಶೃಣು ರಾಜನ್ ವಿಧಿಂ ಮೇ ||3||
ಸಜ್ಜನರ ಸಲುವಾಗಿ ಸರಿಯಾಗಿ ನಿಷ್ಕರ್ಷಿಸಲ್ಪಟ್ಟ ವಿಧಿಯು ಏನಿದೆಯೋ ಅದೇ ಪ್ರಜೆಗಳಿಗೆ ಇಷ್ಟವಾದುದು ಮತ್ತು ಹಿತವಾದುದು. ಎಲೈ ರಾಜನೇ, ಆದ್ದರಿಂದ ಪೂರ್ವದಲ್ಲೇ ಋಷಿಗಳು ವಿಚಾರ ಮಾಡಿ ನಿರ್ಣಯಿಸಿದ ಆ ಗೋದಾನ ವಿಧಿಯನ್ನು ಕೇಳು.
ಪುರಾ ಗೋಷೂಪನೀತಾಸು ಗೋಷು ಸಂದಿಗ್ಧದರ್ಶಿನಾ |
ಮಾಂಧಾತ್ರಾ ಪ್ರಕೃತಂ ಪ್ರಶ್ನಂ ಬೃಹಸ್ಪತಿರಭಾಷತ ||4||
ದಾನವನ್ನು ಕೊಡಲು ಗೋವುಗಳು ತನ್ನ ಬಳಿಗೆ ತರಲ್ಪಡುತ್ತಿರಲು ದಾನದ ವಿಧಿಯ ವಿಷಯದಲ್ಲಿ ಸಂಶಯವನ್ನು ಹೊಂದಿದ ಮಾಂಧಾತೃವು ನೀನು ಕೇಳಿದ ಈ ಪ್ರಶ್ನೆಯನ್ನೇ ಬೃಹಸ್ಪತಿಗಳನ್ನು ಕೇಳಲಾಗಿ ಬೃಹಸ್ಪತಿಗಳು ಮಾತನಾಡಿದರು.
ದ್ವಿಜಾತಿಮಭಿಸತ್ಕೃತ್ಯ ಶ್ವಃ ಕಾಲಮಭಿವೇದ್ಯ ಚ |
ಪ್ರದಾನಾರ್ಥೇ ನಿಯುಂಜೀತ ರೋಹಿಣೀಂ ನಿಯತವ್ರತಃ ||5||

ಬ್ರಾಹ್ಮಣನನ್ನು ಕರೆದು ಪೂಜಿಸಿ ಮರುದಿನ ಗೋದಾನದ ಸಮಯವನ್ನು ಹೇಳಿ ನಿಯತವ್ರತನಾಗಿ ಕೆಂಪು ಬಣ್ಣದ ಹಸುವನ್ನು ದಾನಕ್ಕಾಗಿ ಸಿದ್ಧಪಡಿಸಬೇಕು.
ಆಹ್ವಾನಂ ಚ ಪ್ರಯುಂಜೀತ ಸಮಂಗೇ ಬಹುಲೇತಿ ಚ |
ಪ್ರವಿಶ್ಯ ಚ ಗವಾಂ ಮಧ್ಯಮಿಮಾಂ ಶ್ರುತಿಮುದಾಹರೇತ್ ॥6॥
ಆ ಗೋವನ್ನು ಸಮಂಗೇ, ಬಹುಲೇ (ಚೆನ್ನಾದ ಅವಯವವುಳ್ಳವಳೇ, ಸಮೃದ್ಧಳಾದವಳೇ) ಎಂದು ಸಂಬೋಧಿಸಿ ಗೋವುಗಳ ಮಧ್ಯವನ್ನು ಪ್ರವೇಶಿಸಿ ಈ ಶ್ರುತಿಯನ್ನು ಹೇಳಬೇಕು.
ಗೌರ್ಮೇ ಮಾತಾ ಗೋವೃಷಭಃ ಪಿತಾ ಮೇ
ದಿವಂ ಶರ್ಮ ಜಗತೀ ಮೇ ಪ್ರತಿಷ್ಠಾ |
ಪ್ರಪದ್ಯೈವಂ ಶರ್ವರೀಮುಷ್ಯ ಗೋಷು
ಮುನಿರ್ವಾಣೀಮುತ್ಸೃಜೇದ್ ಗೋಪ್ರದಾನೇ ॥7॥
ಗೋವು ನನ್ನ ತಾಯಿ, ವೃಷಭವು ನನ್ನ ತಂದೆ. ನನಗೆ ಐಹಿಕ ಸುಖಕ್ಕೂ, ಸ್ವರ್ಗ ಸುಖಕ್ಕೂ ಮತ್ತು ಜಗತ್ತಿಗೂ ಗೋ-ವೃಷಭಗಳೇ ಆಧಾರವಾಗಿವೆ (ಎಂದು ಹೇಳಬೇಕು). ಈ ರೀತಿಯಲ್ಲಿ ಶರಣಾಗತನಾಗಿ ಗೋವುಗಳ ಮಧ್ಯದಲ್ಲಿಯೇ ರಾತ್ರಿಯಲ್ಲಿ ವಾಸ ಮಾಡಿ ಗೋಪ್ರದಾನ ಕಾಲದಲ್ಲಿಯೂ ಗೋವು ನನ್ನ ತಾಯಿ ಇತ್ಯಾದಿ ಮಾತನ್ನೇ ಹೇಳಬೇಕು.
ಸ ತಾಮೇಕಾಂ ನಿಶಾಂ ಗೋಭಿಃ ಸಮಸಖ್ಯಃ ಸಮವ್ರತಃ |
ಐಕಾತ್ಮ್ಯಗಮನಾತ್ ಸದ್ಯಃ ಕಲ್ಮಷಾದ್ ವಿಪ್ರಮುಚ್ಯತೇ ॥8॥
ಅವನು ಒಂದು ರಾತ್ರಿ ಗೋವುಗಳ ಜೊತೆಯಲ್ಲಿ ಸಮಾನವಾದ ಸ್ನೇಹವನ್ನು ಹೊಂದಿ, ಸಮಾನವಾದ ವ್ರತವನ್ನು ಧರಿಸಿ ಗೋವುಗಳ ಜೊತೆಯಲ್ಲಿ ಐಕಾತ್ಮ್ಯವನ್ನು ಹೊಂದಿ ಎಲ್ಲ ದೋಷಗಳಿಂದಲೂ ದೂರನಾಗುತ್ತಾನೆ.
ಉತ್ಸೃಷ್ಟವೃಷವತ್ ಸಾ ಹಿ ಪ್ರದೇಯಾ ಸೂರ್ಯದರ್ಶನೇ |
ತ್ರಿವಿಧಂ ಪ್ರತಿಪತ್ತವ್ಯಮರ್ಥವಾದಾಶಿಷಃ ಸ್ತವಾಃ ॥9॥
ಸೂರ್ಯೋದಯ ಕಾಲದಲ್ಲಿ ಆ ಗೋವನ್ನು ಸ್ವತಂತ್ರವಾಗಿ ಬಿಟ್ಟ ಕರುವಿನೊಂದಿಗೆ ದಾನ ಮಾಡಬೇಕು. ಮೂರುವಿಧವಾದ ಅರ್ಥವಾದಗಳನ್ನು ಆಶೀರ್ವಚನಗಳನ್ನು ಮತ್ತು ಸ್ತೋತ್ರಗಳನ್ನು ಹೇಳಬೇಕು.
ಊರ್ಜಸ್ವಿನ್ಯದೂರ್ಜವಹಾಶ್ಚ ಯಜ್ಞಾಃ
ಗರ್ಭೋಽಮೃತಸ್ಯ ಜಗತಶ್ಚ ಪ್ರತಿಷ್ಠಾ |
ಕ್ಷಿತೌ ರಾಧಃಪ್ರಭವಃ ಶಶ್ವದೇವ
ಪ್ರಾಜಾಪತ್ಯಾಃ ಸರ್ವಮಿತ್ಯರ್ಥವಾದಃ ॥10॥
ಎಲೌ ದೇವಾನ್ನವನ್ನು ಧರಿಸಿದವಳೇ ಯಜ್ಞಗಳೆಲ್ಲವೂ ದೇವಾನ್ನದಿಂದ ನಡೆಯತಕ್ಕವುಗಳು. ನೀನು ಗರ್ಭದಲ್ಲಿ ಅಮೃತವನ್ನು ಧರಿಸಿದ್ದೀಯೆ. ಜಗತ್ತಿಗೆ ಆಧಾರಭೂತಳಾಗಿದ್ದೀಯೆ. ಭೂಮಿಯಲ್ಲಿ ಸಂಪತ್ತಿಗೆ ಯಾವಾಗಲೂ ಕಾರಣಳಾಗಿದ್ದೀಯೆ. ನೀವೆಲ್ಲರೂ ಪ್ರಜಾಪತಿಯ ಮಕ್ಕಳು ಎಂಬುದು ಅರ್ಥವಾದ.
ಗಾವೋ ಮಮೈನಃ ಪ್ರಣುದಂತು ಸೌರ್ಯಾ-
ಸ್ತಥಾ ಸೌಮ್ಯಾಃ ಸ್ವರ್ಗಯಾನಾಯ ಸಂತು |
ಆಮ್ನಾತಾ ಮೇ ದದತೀರಾಶ್ರಯಂತು
ತಥಾನುಕ್ತಾಃ ಸಂತು ಸರ್ವಾಶಿಷೋ ಮೇ ॥11॥
ಗೋವುಗಳು ನನ್ನ ಪಾಪಗಳನ್ನು ಕಳೆಯಲಿ. ಸೂರ್ಯನಂತೆ, ಚಂದ್ರನಂತೆ ಪ್ರಕಾಶಮಾನವಾದ ಗೋವುಗಳು ನಾನು ಸ್ವರ್ಗಕ್ಕೆ ಪ್ರಯಾಣ ಮಾಡಲು ಸಹಾಯಕ- ಗಳಾಗಲಿ. ಸರ್ವಾಭೀಷ್ಟವನ್ನು ಕೊಡುವ ಗೋವುಗಳು ನನ್ನನ್ನು ಆಶ್ರಯಿಸಲಿ. ನಾನು ಕೇಳಿದ ಅಥವಾ ಕೇಳದಿದ್ದ ಎಲ್ಲಾ ಶುಭಗಳು ನನಗೆ ಉಂಟಾಗಲಿ (ಎಂದು ಆಶೀರ್ವಚನ).
ಶೇಷೋತ್ಸರ್ಗೇ ಕರ್ಮಭಿರ್ದೇಹಮೋಕ್ಷೇ
ಸರಸ್ವತ್ಯಃ ಶ್ರೇಯಸಿ ಸಂಪ್ರವೃತ್ತಾಃ |
ಯೂಯಂ ನಿತ್ಯಂ ಪುಣ್ಯಕರ್ಮೋಪವಾಹ್ಯಾ
ದಿಶಧ್ವಂ ಮೇ ಗತಿಮಿಷ್ಟಾಂ ಪ್ರಪನ್ನಾಃ ॥12॥
ಎಲೈ ಗೋವುಗಳೇ, ದೇಹತ್ಯಾಗವನ್ನು ಮಾಡಿದ ಮೇಲೆ ಮಾಡುವ ಉತ್ತರ ಕ್ರಿಯೆಗಳಲ್ಲಿ ವೃಷೋತ್ಸರ್ಗವನ್ನು ಮಾಡಿದಾಗ ದೇಹತ್ಯಾಗವನ್ನು ಮಾಡಿದ ಜೀವನಿಗೆ ನೀವು ಶ್ರೇಯಸ್ಸಿನ ದೊಡ್ಡ ಪ್ರವಾಹವನ್ನೇ ಹರಿಸುವಿರಿ. ನೀವು ಯಾವಾಗಲೂ ಪುಣ್ಯಕರ್ಮಗಳಿಂದಲೇ ಮುಂದೆ ಸಾಗುವವರು. ನಿಮ್ಮನ್ನು ಶರಣು ಹೊಂದಿದ ನನಗೆ ನೀವು ಇಷ್ಟವಾದ ಗತಿಯನ್ನು ಪಾಲಿಸಿ (ಇದು ಸ್ತವ).
ಯಾ ವೈ ಯೂಯಂ ಸೋಽಹಮದ್ಯೈಕಭಾವೋ
ಯುಷ್ಮಾನ್ ದತ್ತ್ವಾ ಚಾಹಮಾತ್ಮಪ್ರದಾತಾ |
ಮನಶ್ಚ್ಯುತಾ ಮನಏವೋಪಪನ್ನಾಃ
ಸಂಧುಕ್ಷಧ್ವಂ ಸೌಮ್ಯರೂಪೋಗ್ರರೂಪಾಃ ॥13॥
ಈ ದಿನ ನಿಮ್ಮ ಜೊತೆಯಲ್ಲಿ ನಾನು ಏಕಭಾವವನ್ನು ಹೊಂದಿದ್ದೇನೆ. ಆದ್ದರಿಂದ ನಿಮ್ಮನ್ನು ಕೊಟ್ಟರೆ ನನ್ನನ್ನೇ ಕೊಟ್ಟಂತೆ. ಯಜಮಾನನಿಂದ ಮನಃಪೂರ್ವಕವಾಗಿ ದಾನ ಮಾಡಲ್ಪಟ್ಟ ನಿಮ್ಮಿಂದ ಪ್ರೀತಿಪೂರ್ವಕವಾಗಿ ಸ್ವೀಕಾರ ಮಾಡಲ್ಪಟ್ಟ ಭಕ್ತರಿಗೆ ಸೌಮ್ಯ ರೂಪವನ್ನೂ, ಹಿಂಸಕರಿಗೆ ಉಗ್ರರೂಪವನ್ನು ಹೊಂದಿದ ನೀವು ನಮಗೆ ಬೇಕಾದ ಇಷ್ಟಾರ್ಥಗಳನ್ನು ಸುರಿಸಿ.

ಏವಂ ತಸ್ಯಾಗ್ರೇ ಪೂರ್ವಮರ್ಧಂ ವದೇತ
ಗವಾಂ ದಾತಾ ವಿಧಿವತ್ ಪೂರ್ವದೃಷ್ಟಮ್ |
ಪ್ರತಿಬ್ರೂಯಾಚ್ಛೇಷಮರ್ಧಂ ದ್ವಿಜಾತಿಃ
ಪ್ರತಿಗೃಹ್ಣನ್ ವೈ ಗೋಪ್ರದಾನೇ ವಿಧಿಜ್ಞಃ ॥14॥
ಹೀಗೆ ಗೋದಾನ ಮಾಡುವವನು ಹಿಂದಿನ ಶ್ಲೋಕದ ಮೊದಲನೆಯ ಅರ್ಧಭಾಗವನ್ನು ಪೂರ್ವಾಭಿಮುಖವಾಗಿ ನಿಂತು ವಿಧಿಗೆ ಅನುಗುಣವಾಗಿ ಹೇಳಬೇಕು. ಮುಂದಿನ ಅರ್ಧಭಾಗವನ್ನು ಗೋಪ್ರದಾನ ವಿಧಿಯನ್ನು ತಿಳಿದ ಗೋವನ್ನು ಪ್ರತಿಗೃಹಿಸುವ ಬ್ರಾಹ್ಮಣನು ಹೇಳಬೇಕು.
ಗಾಂ ದದಾನೀತಿ ವಕ್ತವ್ಯಮರ್ಘ್ಯವಸ್ತ್ರವಸುಪ್ರದಃ |
ಊಧಸ್ಯಾ ಭರಿತವ್ಯಾ ಚ ವೈಷ್ಣವೀತಿ ಚ ಚೋದಯೇತ್ ॥15॥
ಅರ್ಘ್ಯ, ವಸ್ತ್ರ, ಧನಗಳನ್ನು ಕೊಡುವ ಗೋದಾನಿಯು ನಾನು ಗೋವನ್ನು ದಾನ ಮಾಡುತ್ತೇನೆ ಎಂದು ಹೇಳಿ ಊಧಸ್ಯಾ, ಭರಿತವ್ಯಾ, ವೈಷ್ಣವೀ ಎಂದು ಆ ಗೋವನ್ನು ಕರೆಯಬೇಕು.
ನಾಮ ಸಂಕೀರ್ತಯೇತ್ ತಸ್ಯಾ ಯಥಾಸಂಖ್ಯೋತ್ತರಂ ಸ ವೈ |
ಫಲಂ ಷಡ್ವಿಂಶದಷ್ಟೌ ಚ ಸಹಸ್ರಾಣಿ ಚ ವಿಂಶತಿಃ ॥16॥
ಆ ಗೋವಿನ ವಿಶೇಷ ನಾಮವಿದ್ದರೆ ಅದನ್ನೂ ಹೇಳಬೇಕು. ದಾನ ಮಾಡುವ ಗೋವಿಗೆ ಅರ್ಘ್ಯಾದಿಗಳನ್ನು ಕೊಡುವುದರಿಂದ ಮೂವತ್ತಾರು ಸಾವಿರ ವರ್ಷಗಳ ಕಾಲವೂ, ವಸ್ತ್ರವನ್ನು ಕೊಡುವುದರಿಂದ ಎಂಟು ಸಾವಿರ ವರ್ಷಗಳ ಕಾಲವೂ, ದಕ್ಷಿಣೆಯಾಗಿ ಸುವರ್ಣವನ್ನು ಕೊಡುವುದರಿಂದ ಇಪ್ಪತ್ತು ಸಾವಿರ ವರ್ಷಗಳ ಕಾಲವೂ ದಾನ ಮಾಡುವವನು ಪುಣ್ಯಫಲವನ್ನು ಹೊಂದುತ್ತಾನೆ.
ಏವಮೇತಾನ್ ಗುಣಾನ್ ವೃದ್ಧಾನ್ ಗವಾದೀನಾಂ ಯಥಾಕ್ರಮಮ್ |
ಗೋಪ್ರದಾತಾ ಸಮಾಪ್ನೋತಿ ಸಮಸ್ತಾನಷ್ಟಮೇ ಕ್ರಮೇ ॥17॥
ಈ ರೀತಿಯಲ್ಲಿ ಗೋಪ್ರದಾನವನ್ನು ಮಾಡುವವನು ಇಂತಹ ಗೋವಿನ ಗುಣಗಳನ್ನು ಯಥಾಕ್ರಮವಾಗಿ ಸಮೃದ್ಧವಾಗಿ ದಾನವನ್ನು ಸ್ವೀಕರಿಸುವವನ ಎಂಟನೆಯ ಹೆಜ್ಜೆಯಲ್ಲಿ ಪಡೆಯುತ್ತಾನೆ.
ಗೋದಃ ಶೀಲೀ ನಿರ್ಭಯಶ್ಚಾರ್ಘದಾತಾ
ನ ಸ್ಯಾದ್ ದುಃಖೀ ವಸುದಾತಾ ಚ ಕಾಮೀ |
ಊಧಸ್ಯೋಢಾ ಭಾರತ ಯಶ್ಚ ವಿದ್ವಾನ್
ವ್ಯಾಖ್ಯಾತಾಸ್ತೇ ವೈಷ್ಣವಾಶ್ಚಂದ್ರಲೋಕಾಃ ॥18॥
ಗೋದಾನ ಮಾಡುವವನು ಶೀಲವಂತನಾಗಿರಬೇಕು, ನಿರ್ಭಯನಾಗಿರಬೇಕು. ಗೋವನ್ನು ಕೊಡಲಾಗದೆ ಗೋವಿನ ಬೆಲೆಯನ್ನು ಕೊಡುವವನು ದುಃಖಿಯಾಗುವುದಿಲ್ಲ. ಗೋವಿನ ಜೊತೆಯಲ್ಲಿ ದಕ್ಷಿಣೆಯನ್ನು ಕೊಡುವವನು ಅಪೇಕ್ಷಿತವಾದ ವಸ್ತುವನ್ನು ಹೊಂದುತ್ತಾನೆ. ಎಲೈ ಭಾರತನೇ, ಕೆಚ್ಚಲಿನ ತುಂಬಾ ಕ್ಷೀರವನ್ನು ತುಂಬಿಕೊಂಡಿರುವ ಗೋವಿನ ಮಹಿಮೆಯನ್ನು ಚೆನ್ನಾಗಿ ತಿಳಿದವನು ಪ್ರಕಾಶಮಾನವಾದ (ಪ್ರಖ್ಯಾತವಾದ) ವೈಷ್ಣವಲೋಕಗಳಿಗೂ, ಚಂದ್ರಲೋಕಗಳಿಗೂ ಹೋಗುತ್ತಾನೆ.
ಗಾ ವೈ ದತ್ತ್ವಾ ಗೋವ್ರತೀ ಸ್ಯಾತ್ತ್ರಿರಾತ್ರಂ
ನಿಶಾಂ ಚೈಕಾಂ ಸಂವಸೇತೇಹ ತಾಭಿಃ |
ಕಾಮ್ಯಾಷ್ಟಮ್ಯಾಂ ವರ್ತಿತವ್ಯಂ ತ್ರಿರಾತ್ರಂ
ರಸೈರ್ವಾ ಗೋಃ ಶಕೃತಾ ಪ್ರಸ್ನವೈರ್ವಾ ॥19॥
ಗೋದಾನವನ್ನು ಮಾಡಿ ಮೂರು ರಾತ್ರಿ ಗೋವ್ರತವನ್ನು ಧರಿಸಬೇಕು. ಒಂದು ರಾತ್ರಿ ಗೋವುಗಳ ಜೊತೆಯಲ್ಲಿ ವಾಸ ಮಾಡಬೇಕು. ಕಾಮ್ಯಾಷ್ಟಮಿಯ ಸಂದರ್ಭದಲ್ಲಿ (ಕಾರ್ತಿಕ ಶುಕ್ಲ ಅಷ್ಟಮೀ) ಮೂರು ರಾತ್ರಿ ಗೋರಸಗಳಿಂದಾಗಲೀ ಅಥವಾ ಗೋಮಯದಿಂದಾಗಲೀ ಅಥವಾ ಗೋಮಯದಿಂದ ಬಂದ ಧಾನ್ಯಗಳಿಂದಾಗಲೀ ಜೀವಿಸಬೇಕು.
ವೇದವ್ರತೀ ಸ್ಯಾದ್ ವೃಷಭಪ್ರದಾತಾ
ವೇದಾವಾಪ್ತಿರ್ಗೋಯುಗಸ್ಯ ಪ್ರದಾನೇ |
ತಥಾ ಗವಾಂ ವಿಧಿಮಾಸಾದ್ಯ ಯಜ್ವಾ
ಲೋಕಾನಗ್ರ್ಯಾನ್ ವಿಂದತೇ ನಾವಿಧಿಜ್ಞಃ ॥20॥
ವೃಷಭವನ್ನು ದಾನ ಮಾಡುವವನು ವೇದವ್ರತನಾಗುತ್ತಾನೆ. ಎರಡು ಗೋದಾನವನ್ನು ಮಾಡುವವನು ವೇದವನ್ನು ಪಡೆಯುತ್ತಾನೆ. ಹಾಗೆಯೇ ಗೋದಾನದ ವಿಧಿಯನ್ನು ತಿಳಿದು ಯಾಗವನ್ನು ಮಾಡುವವನು ಶ್ರೇಷ್ಠವಾದ ಲೋಕವನ್ನು ಪಡೆಯುತ್ತಾನೆ. ಗೋದಾನದ ವಿಧಿಯನ್ನು ತಿಳಿಯದವನು ಪಡೆಯುವುದಿಲ್ಲ.
ಕಾಮಾನ್ ಸರ್ವಾನ್ ಪಾರ್ಥಿವಾನೇಕಸಂಸ್ಥಾನ್
ಯೋ ವೈ ದದ್ಯಾತ್ ಕಾಮದುಘಾಂ ಚ ಧೇನುಮ್ |
ಸಮ್ಯಕ್ ತಾಃ ಸ್ಯುರ್ಹವ್ಯಕವ್ಯೌಘವತ್ಯಃ
ತಾಸಾಮುಕ್ಷ್ಣಾಂ ಜ್ಯಾಯಸಾಂ ಸಂಪ್ರದಾನಮ್ ॥21॥
ಯಾವನು ಕೇಳುದುದನ್ನೆಲ್ಲಾ ಕೊಡುವ ಧೇನುವನ್ನು ದಾನ ಮಾಡುತ್ತಾನೆಯೋ ಎಲೈ ಪಾರ್ಥಿವನೇ, ಅವನು ಎಲ್ಲಾ ಕಾಮಗಳನ್ನು ಹೊಂದಿ ಸಂಸ್ಥಾನವನ್ನು ಪಡೆಯುತ್ತಾನೆ. ದಾನ ಮಾಡಲ್ಪಟ್ಟ ಗೋವುಗಳು ಹವ್ಯಕವ್ಯದ ಪ್ರವಾಹವನ್ನೇ ಪ್ರವರ್ತಿಸುತ್ತವೆ. ಅಂತಹ ಶ್ರೇಷ್ಠವಾದ ಗೋವುಗಳ ಮತ್ತು ವೃಷಭಗಳ ಸಂಪ್ರದಾನವು (ಶ್ಲಾಘನೀಯವಾದುದು).
ನ ಚಾಶಿಷ್ಯಾಯಾವ್ರತಾಯೋಪಕುರ್ಯಾತ್

ನಾಶ್ರದ್ದಧಾನಾಯ ನ ವಕ್ರಬುದ್ಧಯೇ |
ಗುಹ್ಯೋ ಹ್ಯಯಂ ಸರ್ವಲೋಕಸ್ಯ ಧರ್ಮೋ
ನೇಮಂ ಧರ್ಮಂ ಯತ್ರ ತತ್ರ ಪ್ರಜಲ್ಪೇತ್ ॥22॥
ಈ ಗೋದಾನದ ವಿಧಿಯನ್ನು ಶಿಷ್ಯನಲ್ಲದವನಿಗೆ, ವ್ರತವನ್ನು ಮಾಡದವನಿಗೆ, ಶ್ರದ್ಧೆ ಇಲ್ಲದವನಿಗೆ, ವಕ್ರಬುದ್ಧಿಯುಳ್ಳವನಿಗೆ ಉಪದೇಶ ಮಾಡಬಾರದು. ಇದು ಅತ್ಯಂತ ರಹಸ್ಯವೂ ಮತ್ತು ಸರ್ವಲೋಕಧಾರಕವೂ ಆದುದು. ಈ ಧರ್ಮವನ್ನು ಎಲ್ಲೆಂದರಲ್ಲಿ ಹೇಳಬಾರದು.
ಸಂತಿ ಲೋಕೇ ಶ್ರದ್ದಧಾನಾ ಮನುಷ್ಯಾಃ
ಸಂತಿ ಕ್ಷುದ್ರಾ ರಾಕ್ಷಸಾ ಮಾನುಷೇಷು |
ಯೇಷಾಂ ದಾನಂ ದೀಯಮಾನಂ ಹ್ಯನಿಷ್ಟಂ
ನಾಸ್ತಿಕ್ಯಂ ಚಾಪ್ಯಾಶ್ರಯಂತೇ ಹ್ಯಪುಣ್ಯಾಃ ॥23॥
ಲೋಕದಲ್ಲಿ ಶ್ರದ್ಧೆಯುಳ್ಳ ಪುರುಷರೂ ಇದ್ದಾರೆ. ಕ್ಷುದ್ರರಾದ ರಾಕ್ಷಸರೂ ಮನುಷ್ಯರಲ್ಲಿ ಇದ್ದಾರೆ. ಅಂತಹ ಅಯೋಗ್ಯರಿಗೆ ಗೋವನ್ನಾಗಲೀ, ಗೋದಾನದ ವಿಧಿಯನ್ನಾಗಲೀ ದಾನವನ್ನು ಮಾಡಿದರೆ ಅನಿಷ್ಟವೂ, ನಾಸ್ತಿಕ್ಯವೂ ಮತ್ತು ಪಾಪಗಳೂ ಬಂದು ಸೇರುತ್ತವೆ.
ಬಾರ್ಹಸ್ಪತ್ಯಂ ವಾಕ್ಯಮೇತನ್ನಿಶಮ್ಯ
ಯೇ ರಾಜಾನೋ ಗೋಪ್ರದಾನಾನಿ ಕೃತ್ವಾ |
ಲೋಕಾನ್ ಪ್ರಾಪ್ತಾಃ ಪುಣ್ಯಶೀಲಾಃ ಸುವೃತ್ತಾಃ
ತಾನ್ ಮೇ ರಾಜನ್ ಕೀರ್ತ್ಯಮಾನಾನ್ ನಿಬೋಧ ॥24॥
ಬೃಹಸ್ಪತ್ಯಾಚಾರ್ಯರ ಈ ಮಾತನ್ನು ಕೇಳಿ ಯಾವ ಪುಣ್ಯಶೀಲರಾದ, ಸತ್ಪ್ರವೃತ್ತಿಯುಳ್ಳ ರಾಜರು ಗೋದಾನವನ್ನು ಮಾಡಿ ಶುಭಲೋಕಗಳನ್ನು ಪಡೆದರೋ ಎಲೈ ರಾಜನೇ, ಅಂತಹವರನ್ನು ನಾನು ಹೇಳುತ್ತೇನೆ, ಕೇಳು.
ಉಶೀನರೋ ವಿಶ್ವಗಶ್ವೋ ನೃಗಶ್ಚ
ಭಗೀರಥೋ ವಿಶ್ರುತೋ ಯೌವನಾಶ್ವಃ |
ಮಾಂಧಾತಾ ವೈ ಮುಚುಕುಂದಶ್ಚ ರಾಜಾ
ಭೂರಿದ್ಯುಮ್ನೋ ನೈಷಧಃ ಸೋಮಕಶ್ಚ ॥25॥
ಪುರೂರವಾ ಭರತಶ್ಚಕ್ರವರ್ತೀ
ಯಸ್ಯಾನ್ವಯೇ ಭಾರತಾಃ ಸರ್ವ ಏವ |
ತಥಾ ವೀರೋ ದಾಶರಥಿಶ್ಚ ರಾಮೋ
ಯೇ ಚಾಪ್ಯನ್ಯೇ ವಿಶ್ರುತಾಃ ಕೀರ್ತಿಮಂತಃ ॥26॥
ಉಶೀನರ, ವಿಶ್ವಗಶ್ವ, ನೃಗ, ಭಗೀರಥ, ಪ್ರಖ್ಯಾತನಾದ ಯೌವನಾಶ್ವನಾದ ಮಾಂಧಾತ, ಮುಚುಕುಂದ, ಭೂರಿದ್ಯುಮ್ನ, ನೈಷಧ (ನಳ), ಸೋಮಕ, ಪುರೂರವ, ಯಾರ ವಂಶದಲ್ಲಿ ಎಲ್ಲಾ ಕುರುಪಾಂಡವರು ಬಂದಿದ್ದಾರೆಯೋ ಅಂತಹ ಭರತ ಚಕ್ರವರ್ತಿ, ವೀರನಾದ ದಾಶರಥಿ ರಾಮ, ಇನ್ನೂ ಎಷ್ಟೋ ಮಂದಿ ಕೀರ್ತಿವಂತರಾದ ರಾಜರು (ಇವರುಗಳು ಪುಣ್ಯಲೋಕವನ್ನು ಪಡೆದಿದ್ದಾರೆ).
ತಥಾ ರಾಜಾ ಪೃಥುಕರ್ಮಾ ದಿಲೀಪೋ
ದಿವಂ ಪ್ರಾಪ್ತೋ ಗೋಪ್ರದಾನೇ ವಿಧಿಜ್ಞಃ |
ಯಜ್ಞೈರ್ದಾನೈಸ್ತಪಸಾ ರಾಜಧರ್ಮೈಃ
ಮಾಂಧಾತಾಽಭೂದ್ ಗೋಪ್ರದಾನೈಶ್ಚ ಯುಕ್ತಃ ॥27॥
ಹಾಗೆಯೇ ಮಹತ್ಕರ್ಮಗಳನ್ನು ಮಾಡಿದ ರಾಜನಾದ ದಿಲೀಪನು ಗೋಪ್ರದಾನದ ವಿಧಿಯನ್ನು ತಿಳಿದು ಸ್ವರ್ಗವನ್ನು ಹೊಂದಿದನು. ಯಜ್ಞಗಳನ್ನೂ, ದಾನಗಳನ್ನೂ, ತಪಸ್ಸನ್ನೂ ಮಾಡಿ ರಾಜಧರ್ಮಗಳಿಂದ ಕೂಡಿದ ಮಾಂಧಾತೃವು ಗೋಪ್ರದಾನವನ್ನು ಮಾಡಿ ಪುಣ್ಯಭರಿತನಾದನು.
ತಸ್ಮಾತ್ ಪಾರ್ಥ ತ್ವಮಪೀಮಾಂ ಮಯೋಕ್ತಾಂ
ಬಾರ್ಹಸ್ಪತೀಂ ಭಾರತೀಂ ಧಾರಯಸ್ವ |
ದ್ವಿಜಾಗ್ರ್ಯೇಭ್ಯಃ ಸಂಪ್ರಯಚ್ಛ ಪ್ರತೀತೋ
ಗಾಃ ಪುಣ್ಯಾ ವೈ ಪ್ರಾಪ್ಯ ರಾಜ್ಯಂ ಕುರೂಣಾಮ್ ॥28॥
ಎಲೈ ಪಾರ್ಥನೇ, ಆದ್ದರಿಂದ ನೀನೂ ಸಹ ನಾನು ಹೇಳಿದ ಬೃಹಸ್ಪತ್ಯಾಚಾರ್ಯರ ಈ ಮಾತೆಲ್ಲವನ್ನೂ ಮನಸ್ಸಿನಲ್ಲಿ ಧರಿಸು. ಕುರುಗಳ ರಾಜ್ಯವನ್ನು ಪಡೆದು ಸಂತೋಷದಿಂದ ಶ್ರೇಷ್ಠರಾದ ದ್ವಿಜರಿಗೆ ಪವಿತ್ರವಾದ ಗೋವನ್ನು ದಾನ ಮಾಡು.
ವೈಶಂಪಾಯನಃ
ತಥಾ ಸರ್ವಂ ಕೃತವಾನ್ ಧರ್ಮರಾಜೋ
ಭೀಷ್ಮೇಣೋಕ್ತೋ ವಿಧಿವದ್ ಗೋಪ್ರದಾನೇ |
ಸ ಮಾಂಧಾತುರ್ದೇವದೇವೋಪದಿಷ್ಟಂ
ಸಮ್ಯಗ್ಧರ್ಮಂ ಧಾರಯಾಮಾಸ ರಾಜಾ ॥29॥
ವೈಶಂಪಾಯನ ಭೀಷ್ಮರು ಗೋಪ್ರದಾನವನ್ನು ಯಾವ ವಿಧಿಯಿಂದ ಮಾಡಬೇಕೆಂದು ಹೇಳಿದರೋ ಹಾಗೆಯೇ ಧರ್ಮರಾಜನು ವಿಧಿಗೆ ಅನುಸಾರವಾಗಿ ಎಲ್ಲವನ್ನೂ ಮಾಡಿದನು. ಅವನು (ಧರ್ಮರಾಜನು) ಮಾಂಧಾತೃವಿಗೆ ದೇವಗುರುವಾದ ಬೃಹಸ್ಪತಿಗಳು ಹೇಳಿದಂತೆ ಗೋಧರ್ಮವನ್ನು ಆಚರಣೆ ಮಾಡಿ ಪುಣ್ಯವನ್ನು ಧರಿಸಿದನು.

ಇತಿ ನೃಪ ಸತತಂ ಗವಾಂ ಪ್ರದಾನೇ
ಯವಶಕಲಾನ್ ಸಹ ಗೋಮಯ್ಯೆಃ ಪಿಬಾನಃ |
ಕ್ಷಿತಿತಳಶಯನಃ ಶಿಖೀ ಯತಾತ್ಮಾ
ವೃಷ ಇವ ರಾಜವೃಷಸ್ತದಾ ಬಭೂವ ॥30॥
ಎಲೈ ರಾಜನೇ, ಈ ಮಾತುಗಳನ್ನು ಕೇಳಿ ಧರ್ಮರಾಜನು ಸತತವಾಗಿ ಗೋಪ್ರದಾನದಲ್ಲಿ ಆಸಕ್ತನಾಗಿ ಗೋಮಯದಲ್ಲಿ ಬಂದ ಯವಶಕಲಗಳನ್ನು ಗೋಮಯದ ಜೊತೆಯಲ್ಲಿ ಪಾನ ಮಾಡಿ ಜೀವನವನ್ನು ನಡೆಸುತ್ತಾ ಭೂಮಿಯ ಮೇಲೆ ಮಲಗಿ, ಶಿಖೆಯನ್ನು ಧರಿಸಿ, ಜಿತವಾದ ಮನಸ್ಸುಳ್ಳವನಾಗಿ ವೃಷಭದಂತೆ ಆಗ ಅವನು ರಾಜವೃಷನಾದನು.
ಸ ನೃಪತಿರಭವತ್ ಸದೈವ ತಾಭ್ಯಃ
ಪ್ರಯತಮನಾ ಹ್ಯಭಿಸಂಸ್ತುವಂಶ್ಚ ಗಾ ವೈ |
ನೃಪಧುರಿ ಚ ನ ಗಾಮಯುಂಕ್ತ ಭೂಯಃ
ತುರಗವರೈರಗಮಚ್ಚ ಯತ್ರ ತತ್ರ ॥31॥
ಅವನು (ಧರ್ಮರಾಜನು) ಜಿತಮನಸ್ಕನಾಗಿ ಯಾವಾಗಲೂ ತನ್ನ ತಮ್ಮಂದಿರಿಗೆ ಗೋವುಗಳ ಸ್ತೋತ್ರವನ್ನು ಹೇಳುವವನಾಗಿ ರಾಜಕಾರ್ಯದಲ್ಲಿ ಪುನಃ ಯಾವ ಗೋವನ್ನೂ ತೊಡಗಿಸಲಿಲ್ಲ. ಅಲ್ಲಲ್ಲಿಗೆ ಹೋಗುವಾಗ ಶ್ರೇಷ್ಠವಾದ ಅಶ್ವಗಳಿಂದಲೇ ಹೋದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋದಾನವ್ರತವರ್ಣನಂ ನಾಮ
ಷಡಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಏಳನೆಯ ಅಧ್ಯಾಯ
ಪುನಃ ವಿಸ್ತಾರವಾಗಿ ಗೋದಾನ ಮಹಿಮೆ.
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ಭೂಯಃ ಶಾಂತನವಂ ನೃಪ |
ಗೋದಾನೇ ವಿಸ್ತರಂ ಧೀಮಾನ್ ಪಪ್ರಚ್ಛ ವಿನಯಾನ್ವಿತಃ ॥1॥
ವೈಶಂಪಾಯನ ಎಲೈ ಜನಮೇಜಯನೇ, ಅನಂತರ ಮೇಧಾವಿಯಾದ ಯುಧಿಷ್ಠಿರ ರಾಜನು ವಿನಯದಿಂದ ಕೂಡಿದವನಾಗಿ ಶಂತನು ಪುತ್ರನಾದ ಭೀಷ್ಮರನ್ನು ಕುರಿತು ಗೋದಾನದ ವಿಸ್ತಾರವನ್ನು ಕುರಿತು ಪ್ರಶ್ನೆ ಮಾಡಿದನು.
ಯುಧಿಷ್ಠಿರಃ
ಗೋಪ್ರದಾನೇ ಗುಣಾನ್ ಸಮ್ಯಕ್ ಪುನಃ ಪ್ರಬ್ರೂಹಿ ಭಾರತ |
ನ ಹಿ ತೃಪ್ಯಾಮ್ಯಹಂ ವೀರ ಶೃಣ್ವಾನೋಽಮೃತಮೀದೃಶಮ್ ॥2॥
ಯುಧಿಷ್ಠಿರ ಎಲೈ ಭಾರತನೇ, ಗೋದಾನದ ಗುಣಗಳನ್ನು ಪುನಃ ಚೆನ್ನಾಗಿ ಹೇಳು. ಎಲೈ ವೀರನೇ, ಇಂತಹ ಅಮೃತವನ್ನು ಕೇಳುತ್ತಿರುವ ನಾನು ತೃಪ್ತಿಯನ್ನೇ ಹೊಂದುತ್ತಿಲ್ಲ.
ವೈಶಂಪಾಯನಃ
ಇತ್ಯುಕ್ತೋ ಧರ್ಮರಾಜೇನ ತದಾ ಶಾಂತನವೋ ನೃಪ |
ಸಮ್ಯಗಾಹ ಗುಣಾಂಸ್ತಸ್ಮೈ ಗೋಪ್ರದಾನಸ್ಯ ಕೇವಲಾನ್ ॥3॥
ವೈಶಂಪಾಯನ ಎಲೈ ರಾಜನೇ, ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಭೀಷ್ಮರು ಗೋದಾನದ ಶ್ರೇಷ್ಠವಾದ ಗುಣಗಳನ್ನು ಅವನಿಗೆ ಚೆನ್ನಾಗಿ ಹೇಳಿದರು.
ಭೀಷ್ಮಃ
ವತ್ಸಲಾಂ ಗುಣಸಂಪನ್ನಾಂ ತರುಣೀಂ ವಸ್ತ್ರಸಂವೃತಾಮ್ |
ದತ್ತ್ವೇದೃಶೀಂ ಗಾಂ ವಿಪ್ರಾಯ ಸರ್ವಪಾಪೈಃ ಪ್ರಮುಚ್ಯತೇ ॥4॥
ಭೀಷ್ಮ ವತ್ಸಸಹಿತವಾದ, ಸಾಧುಗುಣದಿಂದ ಕೂಡಿದ, ಚಿಕ್ಕವಯಸ್ಸಿನ, ವಸ್ತ್ರ ಸಂವೃತವಾದ ಗೋವನ್ನು ವಿಪ್ರನಿಗೆ ದಾನ ಮಾಡಿದರೆ ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.
ಅಸುರ್ಯಾ ನಾಮ ತೇ ಲೋಕಾ ಗಾಂ ದತ್ತ್ವಾ ತತ್ರ ಗಚ್ಛತಿ |
ಪೀತೋದಕಾಂ ಜಗ್ಧತೃಣಾಂ ನಷ್ಟದುಗ್ಧಾಂ ನಿರಿಂದ್ರಿಯಾಮ್ ॥5॥
ಇನ್ನು ನೀರು ಕುಡಿಯಲಾಗದ, ಹುಲ್ಲು ತಿನ್ನಲಾಗದ, ಹಾಲನ್ನು ಕೊಡಲಾಗದ, ಇಂದ್ರಿಯಗಳನ್ನು ಕಳೆದುಕೊಂಡಿರುವ ಗೋವನ್ನು ಕೊಟ್ಟರೆ ದುಃಖಮಯವಾದ ಅಸುರ್ಯ ಎಂಬ ಲೋಕಗಳಿಗೆ ಹೋಗುತ್ತಾನೆ.
ಜರೋಗ್ರಾಮುಪಯುಕ್ತಾರ್ಥಾಂ ಜೀರ್ಣಾಂ ಕೂಪಮಿವಾಜಲಮ್ |
ದತ್ತ್ವಾ ತಮಃ ಪ್ರವಿಶತಿ ದ್ವಿಜಂ ಕ್ಲೇಶೇನ ಯೋಜಯೇತ್ ॥6॥
ಮುದಿಯಾದ, ಕ್ರೂರವಾದ, ಉಪಯೋಗವಿಲ್ಲದ, ಬಡಕಲಾದ, ನೀರಿಲ್ಲದ ಬಾವಿಯಂತಿರುವ ಗೋವನ್ನು ದಾನ ಮಾಡಿದರೆ ಸ್ವೀಕರಿಸುವವನನ್ನು ಕ್ಲೇಶಗಳಿಗೆ ಗುರಿಮಾಡುತ್ತಾನೆ ಮತ್ತು ತಾನು ತಮಸ್ಸನ್ನು ಪ್ರವೇಶಿಸುತ್ತಾನೆ.
ದುಷ್ಟಾ ರುಷ್ಟಾ ವ್ಯಾಧಿತಾ ದುರ್ಬಲಾ ವಾ
ನ ದಾತವ್ಯಾ ಯಾಶ್ಚ ಮೂಲ್ಯೈರದತ್ತೈಃ |

ಕ್ಲೇಶೈರ್ವಿಪ್ರಂ ಯೋಽಫಲೈಃ ಸಂಯುನಕ್ತಿ
ತಸ್ಯಾವೀರ್ಯಾಶ್ಚಾಫಲಾಶ್ಚೈವ ಲೋಕಾಃ ॥7॥
ದುಷ್ಟವಾದ, ರೋಷದಿಂದ ಕೂಡಿದ, ವ್ಯಾಧಿಯಿಂದ ಕೂಡಿದ ಅಥವಾ ದುರ್ಬಲವಾದ ಗೋವನ್ನು ದಾನ ಮಾಡಬಾರದು. ಮೌಲ್ಯವನ್ನು ಕೊಡದೆ ಅಪಹರಿಸಿದ ಗೋವನ್ನು ದಾನ ಮಾಡಬಾರದು. ಯಾವನು ನಿಷ್ಪ್ರಯೋಜನವಾದ ಗೋವನ್ನು ಕೊಟ್ಟು ಬ್ರಾಹ್ಮಣನನ್ನು ಕ್ಲೇಶಕ್ಕೆ ಗುರಿಮಾಡುತ್ತಾನೆಯೋ ಅವನು ದುಷ್ಫಲವಾದ ಯಾವ ಸಾಮರ್ಥ್ಯವೂ ಇಲ್ಲದ ಲೋಕಗಳನ್ನು ಹೊಂದುತ್ತಾನೆ.
ಬಲಾನ್ವಿತಾಃ ಶೀಲವಯೋಪಪನ್ನಾಃ
ಸರ್ವಾಃ ಪ್ರಶಂಸಂತಿ ಸುಗಂಧವತ್ಯಃ |
ಯಥಾ ಹಿ ಗಂಗಾ ಸರಿತಾಂ ವರಿಷ್ಠಾ
ತಥಾರ್ಜುನೀನಾಂ ಕಪಿಲಾ ವರಿಷ್ಠಾ ॥8॥
ಬಲದಿಂದ ಕೂಡಿದವುಗಳೂ, ಶೀಲ ಮತ್ತು ವಯಸ್ಸಿನಿಂದ ಕೂಡಿದವುಗಳೂ, ಒಳ್ಳೆಯ ಗಂಧದಿಂದ ಕೂಡಿದವುಗಳೂ ಆದ ಎಲ್ಲಾ ಗೋವುಗಳನ್ನೂ ಪ್ರಶಂಸೆ ಮಾಡುತ್ತಾರೆ. ಹೇಗೆ ಗಂಗೆಯು ಎಲ್ಲಾ ನದಿಗಳಲ್ಲಿ ಶ್ರೇಷ್ಠವೋ ಅದರಂತೆ ಎಲ್ಲಾ ಗೋವುಗಳಲ್ಲಿ ಕಪಿಲ ಗೋವು ಶ್ರೇಷ್ಠವಾದುದು.
ಯುಧಿಷ್ಠಿರಃ
ಕಸ್ಮಾತ್ ಸಮಾನೇ ಬಹುಲಪ್ರದಾನೇ
ಸದ್ಭಿಃ ಪ್ರಶಸ್ತಂ ಕಪಿಲಾಪ್ರದಾನಮ್ |
ವಿಶೇಷಮಿಚ್ಛಾಮಿ ಮಹಾನುಭಾವ
ಶ್ರೋತುಂ ಸಮರ್ಥೋ ಹಿ ಭವಾನ್ ಪ್ರವಕ್ತುಮ್ ॥9॥
ಯುಧಿಷ್ಠಿರ ಎಲ್ಲ ಗೋವುಗಳ ಪ್ರದಾನವೂ ಸಮಾನವಾಗಿರುವಾಗ ಸಜ್ಜನರು ಕಪಿಲ ಗೋದಾನವನ್ನೇ ಏಕೆ ಪ್ರಶಂಸಿಸುತ್ತಾರೆ? ಎಲೈ ಮಹಾನುಭಾವನೇ, ಅದರಲ್ಲಿರುವ ವಿಶೇಷವನ್ನು ಕೇಳಲು ಬಯಸುತ್ತೇನೆ. ನೀನು ಅದಕ್ಕೆ ಉತ್ತರವನ್ನು ಕೊಡಲು ಸಮರ್ಥನಾಗಿದ್ದೀಯೆ.
ಭೀಷ್ಮಃ
ವೃದ್ಧಾನಾಂ ಬ್ರುವತಾಂ ತಾತ ಶ್ರುತಂ ಮೇ ಯತ್ ಪ್ರಭಾಷಸೇ |
ವಕ್ಷ್ಯಾಮಿ ತದಶೇಷೇಣ ರೋಹಿಣ್ಯೋ ನಿರ್ಮಿತಾ ಯಥಾ ॥10॥
ಭೀಷ್ಮ ಎಲೈ ಪ್ರೀತಿಪಾತ್ರನೇ, ನೀನು ಕೇಳಿದ ಪ್ರಶ್ನೆಯ ವಿಷಯದಲ್ಲಿ ವೃದ್ಧರು ಮಾತನಾಡುವುದನ್ನು ಕೇಳಿದ್ದೇನೆ. ಗೋವುಗಳು ಹೇಗೆ ನಿರ್ಮಿತವಾದವು ಎಂಬ ಎಲ್ಲಾ ವಿಷಯವನ್ನೂ ನಿನಗೆ ಹೇಳುವೆನು.
ಪ್ರಜಾಃ ಸೃಜೇತಿ ವ್ಯಾದಿಷ್ಟಃ ಪೂರ್ವಂ ದಕ್ಷಃ ಸ್ವಯಂಭುವಾ |
ಅಸೃಜದ್ ವೃತ್ತಿಮೇವಾಗ್ರೇ ಪ್ರಜಾನಾಂ ಹಿತಕಾಮ್ಯಯಾ ॥11॥
ಪ್ರಜೆಗಳನ್ನು ಸೃಷ್ಟಿಸು ಎಂದು ಬ್ರಹ್ಮದೇವರಿಂದ ಆದೇಶವನ್ನು ಪಡೆದ ದಕ್ಷನು ಪ್ರಜೆಗಳ ಹಿತವನ್ನು ಬಯಸಿ ಮೊದಲು ಪ್ರಜೆಗಳ ವೃತ್ತಿಯನ್ನೇ (ಜೀವನೋಪಾಯ- ವನ್ನೇ) ಸೃಷ್ಟಿಸಿದನು.
ಯಥಾ ಹ್ಯಮೃತಮಾಶ್ರಿತ್ಯ ವರ್ತಯಂತಿ ದಿವೌಕಸಃ |
ತಥಾ ವೃತ್ತಿಂ ಸಮಾಶ್ರಿತ್ಯ ವರ್ತಯಂತಿ ಪ್ರಜಾ ವಿಭೋ ॥12॥
ಎಲೈ ವಿಭುವೇ, ಹೇಗೆ ದೇವತೆಗಳು ಅಮೃತವನ್ನು ಆಶ್ರಯಿಸಿ ಜೀವಿಸುತ್ತಾರೋ ಅದರಂತೆ ಪ್ರಜೆಗಳು ವೃತ್ತಿಯನ್ನು ಅವಲಂಬಿಸಿ ಜೀವಿಸುತ್ತಾರೆ.
ಅಚರೇಭ್ಯಶ್ಚ ಭೂತೇಭ್ಯಶ್ಚರಾಃ ಶ್ರೇಷ್ಠಾಸ್ತತೋ ನರಾಃ |
ಬ್ರಾಹ್ಮಣಾಶ್ಚ ತತಃ ಶ್ರೇಷ್ಠಾಸ್ತೇಷು ಯಜ್ಞಾಃ ಪ್ರತಿಷ್ಠಿತಾಃ ॥13॥
ಚಲಿಸದಿರುವ ಪ್ರಾಣಿಗಳಿಗಿಂತಲೂ ಚಲಿಸುವ ಪ್ರಾಣಿಗಳು ಶ್ರೇಷ್ಠವಾದವು. ಅವುಗಳಲ್ಲಿ ಮನುಷ್ಯರು ಶ್ರೇಷ್ಠನಾದವರು. ಅವರಲ್ಲಿ ಬ್ರಾಹ್ಮಣರು ಶ್ರೇಷ್ಠರಾದವರು. ಆ ಬ್ರಾಹ್ಮಣರಲ್ಲಿ ಯಜ್ಞಗಳು ಪ್ರತಿಷ್ಠಿತವಾಗಿವೆ.
ಯಜ್ಞೈರಾಪ್ಯಾಯತೇ ಸೋಮಃ ಸ ಚ ಗೋಷು ಪ್ರತಿಷ್ಠಿತಃ |
ಸರ್ವೇ ದೇವಾಃ ಪ್ರಮೋದಂತೇ ಪೂರ್ವವೃತ್ತಾಸ್ತತಃ ಪ್ರಜಾಃ ॥14॥
ಯಜ್ಞಗಳಿಂದ ಸೋಮರಸವು ಅಭಿವೃದ್ಧಿಯನ್ನು ಹೊಂದುತ್ತದೆ. ಅದು ಗೋವುಗಳಲ್ಲಿ ಪ್ರತಿಷ್ಠಿತವಾಗಿದೆ. ಅದರಿಂದ ಎಲ್ಲ ದೇವತೆಗಳೂ ಸಂತೋಷ ಪಡುತ್ತಾರೆ. ಆದ್ದರಿಂದ ಮೊದಲು ವೃತ್ತಿಯ ಸೃಷ್ಟಿ ಅನಂತರ ಪ್ರಜೆಗಳ ಸೃಷ್ಟಿ.
ತತಃ ಪ್ರಜಾಸು ಸೃಷ್ಟಾಸು ದಕ್ಷಾದ್ಯೈಃ ಕ್ಷುಧಿತಾಃ ಪ್ರಜಾಃ |
ಪ್ರಜಾಪತಿಮುಪಾಧಾವನ್ ವಿನಿಶ್ಚಿತ್ಯ ಚತುರ್ಮುಖಮ್ ॥15॥
ದಕ್ಷಾದಿಗಳಿಂದ ಪ್ರಜೆಗಳ ಸೃಷ್ಟಿಯಾದ ಮೇಲೆ ಹಸಿವಿನಿಂದ ಬಳಲಿದ ಪ್ರಜೆಗಳು ತಮ್ಮ ಕಷ್ಟ ಪರಿಹಾರಕನು ಚತುರ್ಮುಖನೇ ಎಂದು ನಿಶ್ಚಯಿಸಿ ಅವನ ಬಳಿಗೆ ಓಡಿದರು.
ಏತಾನ್ಯೇವ ತು ಭೂತಾನಿ ಪ್ರಾಕ್ರೋಶನ್ ವೃತ್ತಿಕಾಂಕ್ಷಯಾ |
ವೃತ್ತಿದಂ ಚಾನ್ವಪದ್ಯಂತ ತೃಷಿತಾಃ ಪಿತೃಮಾತೃವತ್ ॥16॥
ಈ ಪ್ರಜೆಗಳೇ ಜೀವನೋಪಾಯವನ್ನು ಹೊಂದಲು ಬಯಸಿ ಕಿರುಚಿದರು. ಬಾಯಾರಿದ ಮಕ್ಕಳು ತಂದೆ-ತಾಯಿಗಳ ಬಳಿಗೆ ಹೋಗುವಂತೆ ವೃತ್ತಿಯನ್ನು ಕಲ್ಪಿಸುವ ಬ್ರಹ್ಮದೇವರ ಬಳಿಗೆ ಹೋದರು.

ಇತೀದಂ ಮನಸಾ ಗತ್ವಾ ಪ್ರಜಾಸರ್ಗಾರ್ಥಮಾತ್ಮನಃ |
ಪ್ರಜಾಪತಿರ್ಬಲಾಧಾನಮಮೃತಂ ಪ್ರಾಪಿಬತ್ ತದಾ ||17||
ತನ್ನ ಪ್ರಜೆಗಳ ಸೃಷ್ಟಿರೂಪವಾದ ಈ ವಿಷಯವನ್ನು ಮನಸ್ಸಿನಲ್ಲಿ ಚಿಂತಿಸಿ ಪ್ರಜಾಪತಿಯಾದ ಬ್ರಹ್ಮದೇವರು ಬಲವನ್ನು ವೃದ್ಧಿಸುವ ಅಮೃತವನ್ನು ಪಾನ ಮಾಡಿದರು.
ಸ ಗತಸ್ತಸ್ಯ ತೃಪ್ತಿಂ ತು ಗಂಧಂ ಸುರಭಿಮುದ್ಗಿರನ್ |
ದದರ್ಶೋದ್ಗಾರಸಂವೃತ್ತಾಂ ಸುರಭಿಂ ಮುಖಜಾಂ ಸುತಾಮ್ ||18||
ಅವರಿಗೆ ಅದರಿಂದ ತೃಪ್ತಿಯಾಯಿತು. ಅವರು ತಮ್ಮ ಮುಖದಿಂದ ಸುರಭಿಯಾದ ಗಂಧವನ್ನು ಹೊರಸೂಸಿದರು. (ತೇಗಿದರು) ಸುರಭಿ ಗಂಧವು ಬಂದಾಗ ಅದರ ಜೊತೆಯಲ್ಲಿ ಬಂದ ಪುತ್ರಿಯಾದ ಸುರಭಿ ಧೇನುವನ್ನು ನೋಡಿದರು.
ಸಾಸೃಜತ್ ಸೌರಭೇಯೀಸ್ತು ಸುರಭಿರ್ಲೋಕಮಾತರಃ |
ಸುವರ್ಣವರ್ಣಾಃ ಕಪಿಲಾಃ ಪ್ರಜಾನಾಂ ವೃತ್ತಿಧೇನವಃ ||19||
ಆ ಸುರಭಿಯು ಲೋಕಮಾತರಳಾದ, ಚಿನ್ನದ ಬಣ್ಣವನ್ನು ಹೊಂದಿದ, ಪ್ರಜೆಗಳ ಜೀವನೋಪಾಯವನ್ನು ಕಲ್ಪಿಸುವ ಕಪಿಲ ಗೋವುಗಳನ್ನು ಸೃಷ್ಟಿಸಿದಳು.
ತಾಸಾಮಮೃತವರ್ಣಾನಾಂ ಕ್ಷರಂತೀನಾಂ ಸಮಂತತಃ |
ಬಭೂವಾಮೃತಜಃ ಫೇನಃ ಸ್ರವಂತೀನಾಮಿವೋರ್ಮಿಜಃ ||20||
ಅಮೃತವರ್ಣದ ಆ ಗೋವುಗಳು ಎಲ್ಲ ಕಡೆಯಲ್ಲೂ ಕ್ಷೀರವನ್ನು ಸುರಿಸುತ್ತಿರಲು ಹರಿಯುವ ನದಿಗಳ ಅಲೆಗಳಿಂದ ನೊರೆಯುಂಟಾಗುವಂತೆ ಕ್ಷೀರದಿಂದ ನೊರೆ ಉಂಟಾಯಿತು.
ಸ ವತ್ಸಮುಖವಿಭ್ರಷ್ಟೋ ಭವಸ್ಯ ಭುವಿ ತಿಷ್ಠತಃ |
ಶಿರಸ್ಯವಾಪ ತತ್ಕ್ರುದ್ಧಃ ಸ ತದೋದೈಕ್ಷತ ಪ್ರಭುಃ |
ಲಲಾಟಪ್ರಭವೇನಾಕ್ಷ್ಣಾ ರೋಹಿಣೀಃ ಪ್ರದಹನ್ನಿವ ||21||
ಕ್ಷೀರವನ್ನು ಪಾನ ಮಾಡುವ ವತ್ಸಗಳ ಬಾಯಿಂದ ಕೆಳಗೆ ಬಿದ್ದ ನೊರೆಯು ಭೂಮಿಯಲ್ಲಿದ್ದ ಶಿವನ ತಲೆಯ ಮೇಲೆ ಬಿದ್ದಿತು. ಪ್ರಭುವಾದ ಶಿವನು ಕೋಪಗೊಂಡು ಹಣೆಗಣ್ಣಿನಿಂದ ಗೋವುಗಳನ್ನು ದಹಿಸುವಂತೆ ನೋಡಿದನು.
ತತ್ತೇಜಸ್ತು ತತೋ ರೌದ್ರಂ ಕಪಿಲಾ ಗಾ ವಿಶಾಂಪತೇ |
ನಾನಾವರ್ಣತ್ವಮನಯನ್ಮೇಘಾನಿವ ದಿವಾಕರಃ ||22||
ಎಲೈ ರಾಜನ್ನೇ, ಶಿವನ ಆ ಉಗ್ರವಾದ ತೇಜಸ್ಸು ಕಪಿಲ ಗೋವನ್ನು ಸೂರ್ಯನು ಮೇಘಗಳನ್ನು ನಾನಾವರ್ಣಗಳಿಂದ ಕೂಡಿದವುಗಳನ್ನಾಗಿ ಮಾಡುವಂತೆ ನಾನಾ ವರ್ಣಗಳಿಂದ ಕೂಡಿದವುಗಳನ್ನಾಗಿ ಮಾಡಿತು.
ಯಾಸ್ತು ತಸ್ಮಾದಪಕ್ರಮ್ಯ ಸೋಮಮೇವಾಭಿಸಂಶ್ರಿತಾಃ |
ಯಥೋತ್ಪನ್ನಾಃ ಸ್ವವರ್ಣಸ್ಥಾಸ್ತಾ ನೀತಾ ನಾನ್ಯವರ್ಣತಾಮ್ ||23||
ಯಾವ ಗೋವುಗಳು ಅಲ್ಲಿಂದ ಹೊರಟು ಚಂದ್ರನನ್ನೇ ಆಶ್ರಯಿಸಿದವೋ ಅವು ಜನನ ಸಮಯದಲ್ಲಿದ್ದಂತೆ ತಮ್ಮ ಸುವರ್ಣವರ್ಣವನ್ನೇ ಉಳಿಸಿಕೊಂಡವು. ಅವುಗಳಿಗೆ ವರ್ಣವ್ಯತ್ಯಾಸವಾಗಲಿಲ್ಲ.
ಅಥ ಕ್ರುದ್ಧಂ ಮಹಾದೇವಂ ಪ್ರಜಾಪತಿರಭಾಷತ |
ಅಮೃತೇನಾವಸಿಕ್ತಸ್ತ್ವಂ ನೋಚ್ಛಿಷ್ಟಂ ವಿದ್ಯತೇ ಗವಾಮ್ ||24||
ಆಗ ಪ್ರಜಾಪತಿಗಳಾದ ಬ್ರಹ್ಮದೇವರು ರುದ್ರದೇವರನ್ನು ಕುರಿತು ನೀನು ಅಮೃತದಿಂದ ತೊಯ್ಯಲ್ಪಟ್ಟಿದ್ದೀಯೆ. ಗೋವುಗಳಲ್ಲಿ ಯಾವ ಉಚ್ಛಿಷ್ಟವೂ ಇರುವುದಿಲ್ಲ.
ಯಥಾ ಹ್ಯಮೃತಮಾದಾಯ ಸೋಮೋ ವಿಷ್ಯಂದತೇ ಪುನಃ |
ತಥಾ ಕ್ಷೀರಂ ಕ್ಷರಂತ್ಯೇತಾ ರೋಹಿಣ್ಯೋಽಮೃತಸಂಭವಾಃ ||25||
ಹೇಗೆ ಚಂದ್ರನು ಅಮೃತವನ್ನು ಸ್ವೀಕಾರ ಮಾಡಿ ಪುನಃ ಅಮೃತವನ್ನು ಕೊಡುತ್ತಾನೆಯೋ ಹಾಗೆಯೇ ಅಮೃತದಿಂದ ಉದಯಿಸಿದ ಈ ಧೇನುಗಳು ಕ್ಷೀರವನ್ನು ಸ್ರವಿಸುತ್ತವೆ.
ನ ದುಷ್ಯತ್ಯನಿಲೋ ನಾಗ್ನಿರ್ನ ಸುವರ್ಣಂ ನ ಚೋದಧಿಃ |
ನಾಮೃತೇನಾಮೃತಂ ಪೀತಂ ವತ್ಸಪೀತಾ ನ ವತ್ಸಲಾ ||26||
ಅಗ್ನಿಗಾಗಲೀ, ವಾಯುವಿಗಾಗಲೀ, ಸುವರ್ಣಕ್ಕಾಗಲೀ, ಸಮುದ್ರಕ್ಕಾಗಲೀ ದೋಷ ಉಂಟಾಗುವುದಿಲ್ಲ. ಪಾನ ಮಾಡಿದ ಅಮೃತದಿಂದ ಅಮೃತಕ್ಕೆ ದೋಷ ಉಂಟಾಗುವುದಿಲ್ಲ. ಕರುವು ಹಾಲು ಕುಡಿಯುವುದರಿಂದ ಹಾಲಿಗೆ ಉಚ್ಛಿಷ್ಟ ದೋಷ ಉಂಟಾಗುವುದಿಲ್ಲ. ಕರುವು ಹಾಲನ್ನು ಕುಡಿದ ಹಸುವಿಗೂ ದೋಷ ವುಂಟಾಗುವುದಿಲ್ಲ.
ಇಮಾಲ್ಲೋಕಾನ್ ಭರಿಷ್ಯಂತಿ ಹವಿಷಾ ಪ್ರಸ್ನವೇನ ಚ |
ಆಸಾಮೈಶ್ವರ್ಯಮಶ್ನೀಹಿ ಸರ್ವಾಮೃತಮಯಂ ಶುಭಮ್ ||27||
ತಾವು ಕೊಡುವ ಹವಿಸ್ಸಿನಿಂದಲೂ ಮತ್ತು ಸಂತತಿಯಿಂದಲೂ ಗೋವುಗಳು ಈ ಲೋಕಗಳನ್ನು ಪೋಷಿಸುತ್ತವೆ. ಇವುಗಳ ಸರ್ವಾಮೃತಮಯವಾದ, ಶುಭವಾದ ಐಶ್ವರ್ಯವನ್ನು (ಕ್ಷೀರಾದಿಗಳನ್ನು) ಭೋಗಿಸುವವನಾಗು (ಎಂದು ಹೇಳಿದನು).
ವೃಷಭಂ ಚ ದದೌ ತಸ್ಮೈ ಸಹ ತಾಭಿಃ ಪ್ರಜಾಪತಿಃ |
ಪ್ರಸಾದಯಾಮಾಸ ಮನಸ್ತೇನ ರುದ್ರಸ್ಯ ಭಾರತ ||28||
ಎಲೈ ಭಾರತನೇ, ಪ್ರಜಾಪತಿಯು ಆ ಗೋವುಗಳ ಜೊತೆಯಲ್ಲಿ ಅವನಿಗೆ ಒಂದು ವೃಷಭವನ್ನೂ ಕೊಟ್ಟನು. ಅದರಿಂದ ರುದ್ರನ ಮನಸ್ಸನ್ನು ಸಂತೋಷಪಡಿಸಿದನು.

ಪ್ರೀತಶ್ಚಾಪಿ ಮಹಾದೇವಶ್ಚಕಾರ ವೃಷಭಂ ತದಾ |
ಧ್ವಜಂ ಚ ವಾಹನಂ ಚೈವ ತಸ್ಮಾತ್ ಸ ವೃಷಭಧ್ವಜಃ ॥29॥
ಪ್ರಸನ್ನನಾದ ಮಹಾದೇವನು ಆಗ ವೃಷಭವನ್ನು ಧ್ವಜವನ್ನಾಗಿಯೂ ಮತ್ತು ವಾಹನವನ್ನಾಗಿಯೂ ಮಾಡಿಕೊಂಡನು. ಆದ್ದರಿಂದ ಅವನು ವೃಷಭಧ್ವಜನಾದನು.
ತತೋ ದೇವೈರ್ಮಹಾದೇವಸ್ತದಾ ಪಶುಪತಿಃ ಕೃತಃ |
ಈಶ್ವರಃ ಸ ಗವಾಂ ಮಧ್ಯೇ ವೃಷಾಂಕ ಇತಿ ಚೋಚ್ಯತೇ ॥30॥
ಆಗ ದೇವತೆಗಳೆಲ್ಲರೂ ಸೇರಿ ರುದ್ರದೇವನನ್ನು ಪಶುಪತಿಯನ್ನಾಗಿ ಮಾಡಿದರು. ಗೋವುಗಳ ಮಧ್ಯದಲ್ಲಿರುವ ಗೋವುಗಳಿಗೆ ಒಡೆಯನಾದ ಅವನು ವೃಷಾಂಕ ಎಂದು ಕರೆಯಲ್ಪಡುತ್ತಾನೆ.
ಏವಮವ್ಯಗ್ರವರ್ಣಾನಾಂ ಕಪಿಲಾನಾಂ ಮಹೌಜಸಾಮ್ |
ಪ್ರದಾನೇ ಪ್ರಥಮಃ ಕಲ್ಪಃ ಸರ್ವಾಸಾಮೇವ ಕೀರ್ತಿತಃ ॥31॥
ಈ ರೀತಿಯಲ್ಲಿ ಮಹಾಸಾಮರ್ಥ್ಯವುಳ್ಳ, ಶ್ರೇಷ್ಠವಾದ ಬಣ್ಣವುಳ್ಳ ಕಪಿಲ ಗೋವುಗಳ ದಾನವನ್ನು ಮಾಡಿದರೆ ಅದು ಎಲ್ಲ ಗೋವುಗಳ ದಾನಕ್ಕಿಂತಲೂ ಶ್ರೇಷ್ಠವಾದ ದಾನವೆಂದು ಹೇಳಲ್ಪಡುತ್ತದೆ.
ಲೋಕಜ್ಯೇಷ್ಠಾ ಲೋಕವೃತ್ತಿಪ್ರವೃತ್ತಾ
ರುದ್ರೋಪೇತಾಃ ಸೋಮವಿಷ್ಯಂದಭೂತಾಃ |
ಸೌಮ್ಯಾಃ ಪುಣ್ಯಾಃ ಕಾಮದಾಃ ಪ್ರಾಣದಾಶ್ಚ
ಗಾ ವೈ ದತ್ತ್ವಾ ಸರ್ವಕಾಮಪ್ರದಃ ಸ್ಯಾತ್ ॥32॥
ಗೋವುಗಳು ಲೋಕಕ್ಕೆ ಹಿರಿದಾದವು. ಲೋಕದ ವೃತ್ತಿಗಾಗಿ ಪ್ರವೃತ್ತವಾದವುಗಳು. ರುದ್ರನ ಸನ್ನಿಧಾನಕ್ಕೆ ಪಾತ್ರವಾದವುಗಳು. ಅಮೃತದ ಪ್ರವಾಹಕ್ಕೆ ಮಾರ್ಗವಾದವುಗಳು. ಶಾಂತಸ್ವಭಾವದವುಗಳು, ಪುಣ್ಯಪ್ರದವಾದವುಗಳು, ಕಾಮಪ್ರದವಾದವುಗಳು ಮತ್ತು ಪ್ರಾಣಪ್ರದವಾದವುಗಳು. ಅಂತಹ ಗೋವನ್ನು ದಾನ ಮಾಡುವವನು ಸರ್ವ ಕಾಮಗಳನ್ನೂ ದಾನ ಮಾಡಿದವನಾಗುತ್ತಾನೆ.
ಇಮಂ ಗವಾಂ ಪ್ರಭವವಿಧಾನಮುತ್ತಮಂ
ಪಠನ್ ಸದಾ ಶುಚಿರತಿಮಂಗಲಪ್ರಿಯಃ |
ವಿಮುಚ್ಯತೇ ಕಲಿಕಲುಷೇಣ ಮಾನವಃ
ಪ್ರಿಯಂ ಸುತಾನ್ ಪಶುಧನಮಾಪ್ನುಯಾತ್ ತಥಾ ॥33॥
ಗೋವುಗಳ ಶ್ರೇಷ್ಠವಾದ ಈ ಉತ್ಪತ್ತಿ ವಿಧಾನವನ್ನು ಶುಚಿಯಾಗಿ ಬಹಳ ಮಂಗಲ ಪ್ರಿಯನಾಗಿ ಸದಾ ಪಠಿಸುವ ಮನುಷ್ಯನು ಕಲಿಯ ದೋಷದಿಂದ ನಿರ್ಮುಕ್ತನಾಗುತ್ತಾನೆ. ಪ್ರಿಯರನ್ನೂ, ಪುತ್ರರನ್ನೂ, ಪಶುವನ್ನೂ, ಧನವನ್ನೂ ಪಡೆಯುತ್ತಾನೆ.
ಹವ್ಯಂ ಕವ್ಯಂ ತರ್ಪಣಂ ಶಾಂತಿಕರ್ಮ
ಯಾನಂ ವಾಸೋ ವೃದ್ಧಬಾಲಸ್ಯ ಪುಷ್ಟಿಮ್ |
ಏತಾನ್ ಸರ್ವಾನ್ ಗೋಪ್ರದಾನೇ ಗುಣಾನ್ ವೈ
ದಾತಾ ರಾಜನ್ನಾಪ್ನುಯಾದ್ ವೈ ಸದೈವ ॥34॥
ಹವ್ಯ, ಕವ್ಯ, ತರ್ಪಣ, ಶಾಂತಿಕರ್ಮ, ವಾಹನ, ವಸ್ತ್ರ, ವೃದ್ಧಬಾಲರ ಪುಷ್ಟಿ- ಎಲೈ ರಾಜನೇ, ಗೋದಾನ ಮಾಡುವವನು ಈ ಎಲ್ಲಾ ಗುಣಗಳನ್ನು ಯಾವಾಗಲೂ ಪಡೆಯುತ್ತಾನೆ.
ವೈಶಂಪಾಯನಃ
ಪಿತಾಮಹಸ್ಯಾಥ ನಿಶಮ್ಯ ವಾಕ್ಯಂ
ರಾಜಾ ಸಹ ಭ್ರಾತೃಭಿರಾಜಮೀಢಃ |
ಸೌವರ್ಣಕಾಂಸ್ಯೋಪದುಹಾಸ್ತತೋ ಗಾಃ
ಪಾರ್ಥೋ ದದೌ ಬ್ರಾಹ್ಮಣಸತ್ತಮೇಭ್ಯಃ ॥35॥
ವೈಶಂಪಾಯನ ಪಿತಾಮಹರಾದ ಭೀಷ್ಮರ ವಾಕ್ಯವನ್ನು ತನ್ನ ಸಹೋದರರ ಜೊತೆ ಕೇಳಿದ ಆಜಮೀಢನಾದ ಧರ್ಮರಾಜನು ಶ್ರೇಷ್ಠರಾದ ಬ್ರಾಹ್ಮಣರಿಗೆ ಸುವರ್ಣ ಮತ್ತು ಕಂಚಿನಿಂದ ಮಾಡಿದ ಪಾತ್ರೆಗಳ ಜೊತೆಯಲ್ಲಿ ಗೋವುಗಳನ್ನು ದಾನ ಮಾಡಿದನು.
ತಥೈವ ತೇಭ್ಯೋಽಭಿದದೌ ದ್ವಿಜೇಭ್ಯೋ
ಗವಾಂ ಸಹಸ್ರಾಣಿ ಶತಾನಿ ಚೈವ |
ಯಜ್ಞಾನ್ ಸಮುದ್ದಿಶ್ಯ ಚ ದಕ್ಷಿಣಾರ್ಥೇ
ಲೋಕಾನ್ ವಿಜೇತುಂ ಪರಮಾಂ ಚ ಕೀರ್ತಿಮ್ ॥36॥
ಬ್ರಾಹ್ಮಣರ ಯಜ್ಞಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಒಳ್ಳೆಯ ಲೋಕಗಳನ್ನು ಜಯಿಸಲು ಮತ್ತು ಶ್ರೇಷ್ಠವಾದ ಕೀರ್ತಿಯನ್ನು ಪಡೆಯಲು ಅಂತಹ ಬ್ರಾಹ್ಮಣರಿಗೆ ಸಹಸ್ರ ಗೋವುಗಳನ್ನೂ, ನೂರು ಗೋವುಗಳನ್ನೂದಾನ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕಪಿಲಾಪ್ರದಾನವರ್ಣನಂ ನಾಮ
ಸಪ್ತಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಟನೆಯ ಅಧ್ಯಾಯ

ಗೋಮಹಿಮೆ - ಸೌದಾಸ-ವಸಿಷ್ಠ ಸಂವಾದ.
ಭೀಷ್ಮಃ
ಏತಸ್ಮಿನ್ನೇವ ಕಾಲೇ ತು ವಸಿಷ್ಠಮೃಷಿಸತ್ತಮಮ್ |
ಇಕ್ಷ್ವಾಕುವಂಶಜೋ ರಾಜಾ ಸೌದಾಸೋ ದದತಾಂ ವರಃ ||1||
ಸರ್ವಲೋಕಚರಂ ಸಿದ್ಧಂ ಬ್ರಹ್ಮಕೋಶಂ ಸನಾತನಮ್ |
ಪುರೋಹಿತಮಿದಂ ಪ್ರಷ್ಟುಮಭಿವಾದ್ಯೋಪಚಕ್ರಮೇ ||2||
ಭೀಷ್ಮ ಈ ಕಾಲದಲ್ಲಿಯೇ ಸರ್ವಲೋಕ ಸಂಚಾರಿಗಳಾದ, ಸಿದ್ಧರಾದ, ವೇದನಿಧಿಗಳಾದ, ಸನಾತನರಾದ, ಪುರೋಹಿತರಾದ, ಋಷಿಶ್ರೇಷ್ಠರಾದ ವಸಿಷ್ಠರನ್ನು ಇಕ್ಷ್ವಾಕುವಂಶದಲ್ಲಿ ಜನಿಸಿದ, ದಾನ ಮಾಡುವವರಲ್ಲಿ ಶ್ರೇಷ್ಠನಾದ ಸೌದಾಸ ರಾಜನು ನಮಸ್ಕರಿಸಿ ಪ್ರಶ್ನೆ ಮಾಡಲು ಪ್ರಾರಂಭಿಸಿದನು.
ಸೌದಾಸಃ
ತ್ರೈಲೋಕ್ಯೇ ಭಗವನ್ ಕಿಂಸ್ವಿತ್ ಪವಿತ್ರಂ ಕಥ್ಯತೇಽನಘ |
ಯತ್ಕೀರ್ತಯನ್ ಸದಾ ಮರ್ತ್ಯಃ ಪ್ರಾಪ್ನುಯಾತ್ ಪುಣ್ಯಮುತ್ತಮಮ್ ||
ಸೌದಾಸ ಪೂಜ್ಯರೇ, ಅನಘರೇ, ಯಾವುದನ್ನು ಚಿಂತಿಸಿದರೆ ಮನುಷ್ಯನು ಯಾವಾಗಲೂ ಶ್ರೇಷ್ಠವಾದ ಪುಣ್ಯವನ್ನು ಹೊಂದಬಹುದೋ ಅಂತಹ ಮೂರು ಲೋಕಗಳಲ್ಲಿಯೂ ಪವಿತ್ರವಾದ ವಸ್ತುವು ಯಾವುದೆಂದು ಹೇಳಲ್ಪಡುತ್ತದೆ?
ಭೀಷ್ಮಃ
ತಸ್ಮೈ ಪ್ರೋವಾಚ ವಚನಂ ಪ್ರಣತಾಯ ಹಿತಂ ತದಾ |
ಗವಾಮುಪನಿಷದ್ ವಿದ್ವಾನ್ ನಮಸ್ಕೃತ್ಯ ಗವಾಂ ಶುಚಿಃ ||4||
ಭೀಷ್ಮ ಆಗ ನಮಸ್ಕರಿಸಿದ ಅವನನ್ನು ಕುರಿತು ವಿದ್ವಾಂಸರಾದ ವಸಿಷ್ಠರು ಶುಚಿಯಾಗಿ ಗೋವುಗಳಿಗೆ ನಮಸ್ಕರಿಸಿ ಅವನ ಹಿತವನ್ನು ಉದ್ದೇಶಿಸಿ ಗೋಮಹಿಮೆಯನ್ನು ಹೇಳಿದರು.
ಗಾವಃ ಸುರಭಿಗಂಧಿನ್ಯಸ್ತಥಾ ಗುಗ್ಗುಲುಗಂಧಿಕಾಃ |
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಮಹತ್ ||5||
ಗೋವುಗಳು ಸುರಭಿಗಂಧವುಳ್ಳವು, ಗುಗ್ಗುಲಗಂಧವುಳ್ಳವು. ಗೋವುಗಳು ಪ್ರಾಣಿಗಳಿಗೆ ಆಶ್ರಯಭೂತವಾದವು ಮತ್ತು ದೊಡ್ಡ ಮಂಗಳಗಳಿಗೆ ಆಶ್ರಯವಾದವು.
ಗಾವೋ ಭೂತಂ ಭವಿಷ್ಯಚ್ಚ ಗಾವಃ ಪುಷ್ಟಿಃ ಸನಾತನೀ |
ಗಾವೋ ಲಕ್ಷ್ಮ್ಯಾಸ್ತಥಾ ಮೂಲಂ ಗೋಷು ದತ್ತಂ ನ ನಶ್ಯತಿ |
ಅನ್ನಂ ಹಿ ಸತತಂ ಗಾವೋ ದೇವಾನಾಂ ಪರಮಂ ಹವಿಃ ||6||
ಭೂತಭವಿಷ್ಯತ್‌ಗಳು ಗೋವುಗಳನ್ನು ಅವಲಂಬಿಸಿವೆ. ಸನಾತನವಾದ ಪುಷ್ಟಿಯು ಗೋವುಗಳಿಂದ ಉಂಟಾಗುತ್ತದೆ. ಗೋವುಗಳು ಸಂಪತ್ತಿಗೆ ಮೂಲವಾದವುಗಳು. ಅವುಗಳಿಗೆ ಕೊಟ್ಟುದುದು ನಾಶವನ್ನು ಹೊಂದುವುದಿಲ್ಲ. ಗೋವುಗಳು ಸತತವಾಗಿ ದೇವತೆಗಳಿಗೆ ಹವಿಸ್ಸಿನ ರೂಪವಾದ ಶ್ರೇಷ್ಠವಾದ ಅನ್ನ.
ಸ್ವಾಹಾಕಾರವಷಟ್ಕಾರೌ ಗೋಷು ನಿತ್ಯಂ ಪ್ರತಿಷ್ಠಿತೌ |
ಗಾವೋ ಯಜ್ಞಸ್ಯ ಹಿ ಫಲಂ ಗೋಷು ಯಜ್ಞಾಃ ಪ್ರತಿಷ್ಠಿತಾಃ ||7||
ಗೋವುಗಳಲ್ಲಿ ಸ್ವಾಹಾಕಾರ, ವಷಟ್ಕಾರಗಳು ಯಾವಾಗಲೂ ಪ್ರತಿಷ್ಠಿತವಾಗಿವೆ. ಗೋವುಗಳು ಯಜ್ಞದ ಫಲ ಮತ್ತು ಯಜ್ಞಕ್ಕೆ ಆಧಾರವಾದವುಗಳು.
ಸಾಯಂ ಪ್ರಾತಶ್ಚ ಸತತಂ ಹೋಮಕಾಲೇ ಮಹಾಮತೇ |
ಗಾವೋ ದದತಿ ವೈ ಹೋಮ್ಯಮೃಷಿಭ್ಯಃ ಪುರುಷರ್ಷಭ ||8||
ಎಲೈ ಮಹಾಮತಿಯೇ, ಪುರುಷಶ್ರೇಷ್ಠನೇ, ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿ ಗೋವುಗಳು ಋಷಿಗಳಿಗೆ ಸತತವಾಗಿ ಹೋಮಕಾಲದಲ್ಲಿ ಹೋಮದ್ರವ್ಯವನ್ನು ಕೊಡುತ್ತವೆ.
ಕಾನಿಚಿದ್ ಯಾನಿ ದುರ್ಗಾಣಿ ದುಷ್ಕೃತಾನಿ ಕೃತಾನಿ ಚ |
ತರಂತಿ ಚೈವ ಪಾಪ್ಮಾನಂ ಧೇನುಂ ಯೇ ದದತಿ ಪ್ರಭೋ ||9||
ಎಲೈ ಪ್ರಭುವೇ, ಯಾರು ಗೋವನ್ನು ದಾನ ಮಾಡುತ್ತಾರೆಯೋ ಅವರು ದಾಟಲು ಅಸಾಧ್ಯವಾದ ತಾವು ಮಾಡಿದ ಎಷ್ಟೋ ದುಷ್ಕರ್ಮಗಳನ್ನು ಮತ್ತು ಪಾಪಗಳನ್ನು ದಾಟುತ್ತಾರೆ.
ಏಕಾಂ ಚ ದಶಗುರ್ದದ್ಯಾದ್ ದಶ ದದ್ಯಾಚ್ಚ ಗೋಶತೀ |
ಶತಂ ಸಹಸ್ರಗುರ್ದದ್ಯಾತ್ ಸರ್ವೇ ತುಲ್ಯಫಲಾ ಹಿ ತೇ ||10||
ಹತ್ತು ಗೋವುಗಳನ್ನು ಹೊಂದಿದವನು ಒಂದನ್ನು ದಾನ ಮಾಡಬೇಕು. ನೂರು ಗೋವನ್ನು ಹೊಂದಿದವನು ಹತ್ತು ಗೋವುಗಳನ್ನು ದಾನ ಮಾಡಬೇಕು. ಸಹಸ್ರ ಗೋವುಗಳನ್ನು ಹೊಂದಿದವನು ನೂರು ಗೋವುಗಳನ್ನು ದಾನ ಮಾಡಬೇಕು. ಅವರೆಲ್ಲರಿಗೂ ಸಮಾನವಾದ ಫಲವು ದೊರಕುತ್ತದೆ.
ಅನಾಹಿತಾಗ್ನಿಃ ಶತಗುರಯಜ್ವಾ ಚ ಸಹಸ್ರಗುಃ |
ಸಮೃದ್ಧೋ ಯಶ್ಚ ಕೀನಾಶೋ ನಾರ್ಘಮರ್ಹಂತಿ ತೇ ತ್ರಯಃ ||11||
ನೂರು ಗೋವುಗಳನ್ನು ಹೊಂದಿ ಅಗ್ನಿಯ ಆಧಾನವನ್ನು ಮಾಡದವನು, ಸಹಸ್ರ ಗೋವುಗಳನ್ನು ಹೊಂದಿ ಯಾಗವನ್ನು ಮಾಡದವನು, ಸಂಪತ್ತನ್ನು ಹೊಂದಿ ಲೋಭ ಹೊಂದಿದವನು - ಈ ಮೂರು ಜನರು ಯಾವ ಬೆಲೆಯೂ ಇಲ್ಲದವರು.

ಕಪಿಲಾಂ ಯೇ ಪ್ರಯಚ್ಛಂತಿ ಸವತ್ಸಾಂ ಕಾಂಸ್ಯದೋಹನಾಮ್ |
ಸುವ್ರತಾಂ ವಸ್ತ್ರಸಂವೀತಾಮುಭೌ ಲೋಕೌ ಜಯಂತಿ ತೇ ॥12॥
ಯಾರು ಕರುವಿನಿಂದ ಮತ್ತು ಕಂಚಿನ ಪಾತ್ರೆಯಿಂದ ಸಹಿತವಾದ ಒಳ್ಳೆಯ ಶೀಲವುಳ್ಳ ವಸ್ತ್ರವು ಹೊದಿಸಲ್ಪಟ್ಟ ಕಪಿಲ ಗೋವನ್ನು ದಾನ ಮಾಡುತ್ತಾರೆಯೋ ಅವರು ಈ ಲೋಕ ಮತ್ತು ಪರಲೋಕಗಳೆರಡನ್ನೂ ಜಯಿಸುತ್ತಾರೆ.
ಯುವಾನಮಿಂದ್ರಿಯೋಪೇತಂ ಶತೇನ ಸಹ ಯೂಥಪಮ್ |
ಗವೇಂದ್ರಂ ಬ್ರಾಹ್ಮಣೇಂದ್ರಾಯ ಭೂರಿಶೃಂಗಮಲಂಕೃತಮ್ ॥13॥
ವೃಷಭಂ ಯೇ ಪ್ರಯಚ್ಛಂತಿ ಶ್ರೋತ್ರಿಯಾಯ ಪರಂತಪ |
ಐಶ್ವರ್ಯಂ ತೇಽಭಿಜಾಯಂತೇ ಜಾಯಮಾನಾಃ ಪುನಃ ಪುನಃ ॥14॥
ಎಲೈ ಪರಂತಪನೇ, ಯಾರು ತರುಣವಯಸ್ಸಿನಿಂದ ಕೂಡಿದ, ಇಂದ್ರಿಯ ಪಾಟವವುಳ್ಳ, ನೂರು ಗೋವುಗಳಿಗೆ ಪತಿಯಾದ, ದೊಡ್ಡ ಕೊಂಬುಗಳನ್ನು ಹೊಂದಿರುವ, ಅಲಂಕೃತವಾದ, ಶ್ರೇಷ್ಠವಾದ ವೃಷಭವನ್ನು ಶ್ರೋತ್ರಿಯನಾದ ಬ್ರಾಹ್ಮಣ ಶ್ರೇಷ್ಠನಿಗೆ ದಾನ ಮಾಡುತ್ತಾರೆಯೋ ಅವರು ಪುನಃ ಪುನಃ ಹುಟ್ಟುವಾಗಲೆಲ್ಲಾ ಐಶ್ವರ್ಯವಂತರಾಗಿಯೇ ಹುಟ್ಟುತ್ತಾರೆ.
ನಾಕೀರ್ತಯಿತ್ವಾ ಗಾಃ ಸುಪ್ಯಾನ್ನಾಸ್ಮೃತ್ಯ ಪುನರುತ್ಪತೇತ್ |
ಸಾಯಂ ಪ್ರಾತರ್ನಮಸ್ಯೇಚ್ಚ ಗಾಸ್ತತಃ ಪುಷ್ಟಿಮಾಪ್ನುಯಾತ್ ॥15॥
ಗೋವುಗಳ ಕೀರ್ತನೆಯನ್ನು ಮಾಡದೆ ಮಲಗಬಾರದು. ಗೋವುಗಳನ್ನು ಸ್ಮರಣೆ ಮಾಡದೆ ಶಯನದಿಂದ ಏಳಬಾರದು. ಗೋವುಗಳಿಗೆ ಸಾಯಂಕಾಲದಲ್ಲಿಯೂ ಮತ್ತು ಪ್ರಾತಃಕಾಲದಲ್ಲಿಯೂ ನಮಸ್ಕರಿಸಬೇಕು. ಅದರಿಂದ ಪುಷ್ಟಿಯುಂಟಾಗುತ್ತದೆ.
ಗವಾಂ ಮೂತ್ರಪುರೀಷಸ್ಯ ನೋದ್ವಿಜೇತ ಕದಾಚನ |
ನ ಚಾಸಾಂ ಮಾಂಸಮಶ್ನೀಯಾದ್ ಗವ್ಯಾಂ ವ್ಯುಷ್ಟಿಂ ತಥಾಶ್ನುತೇ ॥16॥
ಗೋವುಗಳ ಗೋಮಯ ಮತ್ತು ಮೂತ್ರಗಳಿಗೆ ಎಂದೂ ಅಸಹ್ಯ ಪಡಬಾರದು. ಅವುಗಳ ಮಾಂಸವನ್ನು ಭಕ್ಷಿಸಬಾರದು. ಅಂತಹವನು ಗೋ ಮತ್ತು ಗೋರಸಗಳ ಸಮೃದ್ಧಿಯನ್ನು ಪಡೆಯುತ್ತಾನೆ.
ಗಾಶ್ಚ ಸಂಕೀರ್ತಯೇನ್ನಿತ್ಯಂ ನಾವಮನ್ಯೇತ ಗಾಸ್ತಥಾ |
ಅನಿಷ್ಟಂ ಸ್ವಪ್ನಮಾವೀಕ್ಷ್ಯ ಗಾಂ ನರಃ ಸಂಪ್ರಕೀರ್ತಯೇತ್ ॥17॥
ಯಾವಾಗಲೂ ಗೋವುಗಳನ್ನು ಪ್ರಶಂಸಿಸಬೇಕು, ಅವಮಾನ ಮಾಡಬಾರದು. ಅನಿಷ್ಟವಾದ ಸ್ವಪ್ನವನ್ನು ನೋಡಿದರೆ ಮನುಷ್ಯನು ಎದ್ದು ಗೋವುಗಳ ಪ್ರಶಂಸೆಯನ್ನು ಮಾಡಬೇಕು.
ಗೋಮಯೇನ ಸದಾ ಸ್ನಾಯಾದ್ ಗೋಕರೀಷೇ ಚ ಸಂವಿಶೇತ್ |
ಶ್ಲೇಷ್ಮಮೂತ್ರಪುರೀಷಾಣಿ ಪ್ರತಿಘಾತಂ ಚ ವರ್ಜಯೇತ್ ॥18॥
ಗೋಮಯವನ್ನು ಲೇಪಿಸಿಕೊಂಡು ಸ್ನಾನವನ್ನು ಮಾಡಬೇಕು. ಗೋವಿನ ಒಣಗಿದ ಸೆಗಣಿಯ ಮೇಲೆ ಕುಳಿತುಕೊಳ್ಳಬೇಕು. ಗೋವಿನ ಮೇಲೆ ಶ್ಲೇಷ್ಮ, ಮೂತ್ರಪೌರುಷಗಳನ್ನು ವಿಸರ್ಜನೆ ಮಾಡಬಾರದು. ಗೋವುಗಳನ್ನು ಹೊಡೆಯಬಾರದು.
ಸಾರ್ದ್ರಚರ್ಮಣಿ ಭುಂಜೀತ ನಿರೀಕ್ಷನ್ ವಾರುಣೀಂ ದಿಶಮ್ |
ವಾಗ್ಯತಃ ಸರ್ಪಿಷಾ ಭೂಮೌ ಗವ್ಯಾಂ ವ್ಯುಷ್ಟಿಂ ತಥಾಶ್ನುತೇ ॥19॥
ಆರ್ದ್ರವಾದ ಗೋಚರ್ಮದ ಮೇಲೆ ಪಶ್ಚಿಮಾಭಿಮುಖವಾಗಿ ಕುಳಿತು ಮೌನದಿಂದ ಘೃತಸಹಿತವಾದ ಅನ್ನವನ್ನು ಭೂಮಿಯಲ್ಲಿ ಬಡಿಸಿಕೊಂಡು ಭುಂಜಿಸಬೇಕು. ಗೋಸಂಬಂಧಿಯಾದ ಸಮೃದ್ಧಿಯನ್ನು ಅದರಿಂದ ಪಡೆಯುತ್ತಾನೆ.
ಘೃತೇನ ಜುಹುಯಾದಗ್ನಿಂ ಘೃತೇನ ಸ್ವಸ್ತಿ ವಾಚಯೇತ್ |
ಘೃತಂ ದದ್ಯಾದ್ ಘೃತಂ ಪ್ರಾಶೇದ್ ಗವ್ಯಾಂ ವ್ಯುಷ್ಟಿಂ ತಥಾಶ್ನುತೇ ॥20॥
ಅಗ್ನಿಯಲ್ಲಿ ಘೃತದಿಂದ ಹೋಮ ಮಾಡಬೇಕು. ಘೃತದಿಂದ ಸ್ವಸ್ತಿವಾಚನ ಮಾಡಿಸಬೇಕು. ಘೃತವನ್ನು ದಾನ ಕೊಡಬೇಕು. ಘೃತವನ್ನು ಭುಂಜಿಸಬೇಕು. ಆಗ ಗೋಸಂಬಂಧಿಯಾದ ಸಮೃದ್ಧಿಯು ಉಂಟಾಗುತ್ತದೆ.
ಗೋಮತ್ಯಾ ವಿದ್ಯಯಾ ಧೇನುಂ ತಿಲಾನಾಮಭಿಮಂತ್ರ್ಯ ಯಃ |
ರಸರತ್ನಮಯೀಂ ದದ್ಯಾನ್ನ ಸ ಶೋಚೇತ್ ಕೃತಾಕೃತೇ ॥21॥
ಗೋಮತಿ (ಗೋಮಾನ್ ಅಗ್ನಿ, ಇಮಾನ್ ಅಶ್ವಿ) ಎಂಬ ಮಂತ್ರದಿಂದ ತಿಲಧೇನುವನ್ನು ಅಭಿಮಂತ್ರಿಸಿ ಅಥವಾ ರಸಮಯವಾದ, ರತ್ನಮಯವಾದ ಧೇನುವನ್ನು ಅಭಿಮಂತ್ರಿಸಿ ದಾನವನ್ನು ಮಾಡುವವನು ಏನು ಮಾಡಿದರೂ, ಏನು ಮಾಡದಿದ್ದರೂ ಶೋಕ ಪಡುವುದಿಲ್ಲ.
ಗಾವೋ ಮಾಮುಪತಿಷ್ಠಂತು ಹೇಮಶೃಂಗಾಃ ಪಯೋಮುಚಃ |
ಸುರಭ್ಯಃ ಸೌರಭೇಯಾಶ್ಚ ಸರಿತಃ ಸಾಗರಂ ಯಥಾ ॥22॥
ಚಿನ್ನದ ಕೊಂಬುಗಳುಳ್ಳ, ಹಾಲನ್ನು ಕೊಡುವ ಸುರಭಿಗಳೂ, ಸುರಭಿಯ ಸಂತಾನವೂ, ಆದ ಗೋವುಗಳು ನದಿಗಳು ಸಮುದ್ರದ ಕಡೆಗೆ ಬರುವಂತೆ ನನ್ನ ಸಮೀಪಕ್ಕೆ ಬರಲಿ.
ಗಾವಃ ಪಶ್ಯಂತು ಮಾಂ ನಿತ್ಯಂ ಗಾವಃ ಪಶ್ಯಾಮ್ಯಹಂ ತದಾ |
ಗಾವೋಽಸ್ಮಾಕಂ ವಯಂ ತಾಸಾಂ ಯತೋ ಗಾವಸ್ತತೋ ವಯಮ್ ॥
ಗೋವುಗಳು ಯಾವಾಗಲೂ ನನ್ನನ್ನು ನೋಡಲಿ. ನಾನು ಗೋವುಗಳನ್ನು ಯಾವಾಗಲೂ ನೋಡುತ್ತೇನೆ. ಗೋವುಗಳು ನಮ್ಮವು. ನಾವು ಗೋವುಗಳಿಗೆ ಸೇರಿದವರು. ಎಲ್ಲಿ ಗೋವುಗಳಿವೆಯೋ ಅಲ್ಲಿ ನಾವಿದ್ದೇವೆ.
ಏವಂ ರಾತ್ರೌ ದಿವಾ ಚೈವ ಸಮೇಷು ವಿಷಮೇಷು ಚ |
ಮಹಾಭಯೇಷು ಚ ನರಃ ಕೀರ್ತಯನ್ ಮುಚ್ಯತೇ ಭಯಾತ್ ॥24॥

ಈ ರೀತಿಯಲ್ಲಿ ಹಗಲಿನಲ್ಲಿ ಮತ್ತು ರಾತ್ರಿಯಲ್ಲಿ ಸಮ ಪರಿಸ್ಥಿತಿಯಲ್ಲಿ ಮತ್ತು ವಿಷಮಪರಿಸ್ಥಿತಿಯಲ್ಲಿ ಮತ್ತು ಮಹಾಭಯದ ಸಂದರ್ಭದಲ್ಲಿ ಕೀರ್ತಿಸುವ ಮನುಷ್ಯನು ಭಯದಿಂದ ನಿರ್ಮುಕ್ತನಾಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋಮಾಹಾತ್ಮ್ಯವರ್ಣನಂ
ನಾಮ ಅಷ್ಟಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಟನೆಯ ಅಧ್ಯಾಯ ಮುಗಿಯಿತು.
ನೂರ ಒಂಬತ್ತನೆಯ ಅಧ್ಯಾಯ
ಗೋದಾನಫಲ-ವಸಿಷ್ಠರ ಉಪದೇಶ.
ವಸಿಷ್ಠಃ
ಶತಂ ವರ್ಷಸಹಸ್ರಾಣಾಂ ತಪಸ್ತಪ್ತಂ ಸುದುಶ್ಚರಮ್ |
ಗೋಭಿಃ ಪೂರ್ವವಿಸೃಷ್ಟಾಭಿರ್ಗಚ್ಛೇಮ ಶ್ರೇಷ್ಠತಾಮಿತಿ ॥1॥
ವಸಿಷ್ಠರು ಮೊದಲು ಸೃಷ್ಟಿಸಲ್ಪಟ್ಟ ಗೋವುಗಳು ನಾವು ಶ್ರೇಷ್ಠತೆಯನ್ನು ಪಡೆಯಬೇಕೆಂದು ಉದ್ದೇಶಿಸಿ ನೂರು ಸಹಸ್ರವರ್ಷಗಳ ಕಾಲ ದುಷ್ಕರವಾದ ತಪಸ್ಸನ್ನು ಮಾಡಿದವು.
ಲೋಕೇಽಸ್ಮಿನ್ ದಕ್ಷಿಣಾನಾಂ ಚ ಸರ್ವಾಸಾಂ ವಯಮುತ್ತಮಾಃ |
ಭವೇಮ ನ ಚ ಲಿಪ್ಯೇಮ ದೋಷೇಣೇತಿ ಪರಂತಪ ॥2॥
ಈ ಲೋಕದಲ್ಲಿ ನಾವು ಎಲ್ಲ ದಕ್ಷಿಣೆಗಳಿಗಿಂತಲೂ ಉತ್ತಮ ದಕ್ಷಿಣೆಯಾಗಬೇಕು. ಎಲೈ ಪರಂತಪನೇ, ನಾವು ಯಾವ ದೋಷದಿಂದಲೂ ಲಿಪ್ತರಾಗಬಾರದು.
ಸ ಏವ ಚೇತಸಾ ತೇನ ಹತೋ ಲಿಪ್ಯೇತ ಸರ್ವದಾ |
ಶಕೃತಾ ಚ ಪವಿತ್ರಾರ್ಥಂ ಕುರ್ವೀರನ್ ದೇವಮಾನುಷಾಃ ॥3॥
ನಮ್ಮನ್ನು ದುಷ್ಟಬುದ್ಧಿಯಿಂದ ನೋಡುವವನು ದೋಷಗಳ ಲೇಪವನ್ನು ಹೊಂದಬೇಕು. ದೇವತೆಗಳು ಮತ್ತು ಮನುಷ್ಯರು ಪಾವಿತ್ರ್ಯಕ್ಕಾಗಿ ನಮ್ಮ ಗೋಮಯವನ್ನು ಉಪಯೋಗಿಸಬೇಕು.
ತಥಾ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ಪ್ರದಾತಾರಶ್ಚ ಗೋಲೋಕಾನ್ ಗಚ್ಛೇಯುರಿತಿ ಮಾನದ ॥4॥
ಎಲೈ ಮಾನದನೇ, ಹಾಗೆಯೇ ನಮ್ಮನ್ನು ಸತ್ಕರಿಸುವ ಸ್ಥಾವರ-ಜಂಗಮ ಪ್ರಾಣಿಗಳೆಲ್ಲವೂ ಮತ್ತು ಗೋದಾನ ಮಾಡುವವರೂ ಗೋಲೋಕವನ್ನು ಪಡೆಯಬೇಕು.
ತಾಭ್ಯೋ ವರಂ ದದೌ ಬ್ರಹ್ಮಾ ತಪಸೋಽಂತೇ ಸ್ವಯಂ ಪ್ರಭುಃ |
ಏವಂ ಭವತ್ವಿತಿ ವಿಭುರ್ಲೋಕಾಂಸ್ತಾರಯತೇತಿ ಚ ॥5॥
ಪ್ರಭುವೂ, ವಿಭುವೂ ಆದ ಬ್ರಹ್ಮದೇವರು ತಪಸ್ಸಿನ ಕೊನೆಯಲ್ಲಿ ವರವನ್ನು ಕೊಟ್ಟು ಹಾಗೆಯೇ ಆಗಲಿ ಎಂದು ಹೇಳಿ ನೀವು ಲೋಕಗಳನ್ನು ದಾಟಿಸಿ ಎಂದು ಹೇಳಿದರು.
ಉತ್ತಸ್ಥುಃ ಸಿದ್ಧಿಕಾಮಾಸ್ತಾ ಭೂತಭವ್ಯಸ್ಯ ಮಾತರಃ |
ತಪಸೋಽಂತೇ ಮಹಾರಾಜ ಗಾವೋ ಲೋಕಪರಾಯಣಾಃ ॥6॥
ಲೋಕಕ್ಕೆ ಆಧಾರಭೂತವಾದ, ಭೂತ ಮತ್ತು ಭವಿಷ್ಯ ಪ್ರಾಣಿಗಳ ಮಾತೃಗಳಾದ ಗೋವುಗಳು ಎಲೈ ಮಹಾರಾಜನೇ, ತಪಸ್ಸಿನ ಅಂತ್ಯದಲ್ಲಿ ಸಿದ್ಧಿಯನ್ನು ಬಯಸಿ ಮೇಲೆದ್ದವು.
ತಸ್ಮಾದ್ ಗಾವೋ ಮಹಾಭಾಗಾಃ ಪವಿತ್ರಂ ಪರಮುಚ್ಯತೇ |
ತಥೈವ ಸರ್ವಭೂತಾನಾಂ ಗಾವಸ್ತಿಷ್ಠಂತಿ ಮೂರ್ಧನಿ ॥7॥
ಆದ್ದರಿಂದ ಗೋವುಗಳು ಮಹಾಭಾಗ್ಯವನ್ನು ಪಡೆದಿರುವಂತಹವುಗಳು. ಬಹಳ ಪವಿತ್ರವಾದವುಗಳು. ಹಾಗೆಯೇ ಅವು ಎಲ್ಲ ಪ್ರಾಣಿಗಳ ಶಿರಸ್ಸಿನಲ್ಲಿ (ಶ್ರೇಷ್ಠವಾಗಿ) ನಿಲ್ಲುತ್ತವೆ.
ಸಮಾನವತ್ಸಾಂ ಕಪಿಲಾಂ ಧೇನುಂ ದತ್ತ್ವಾ ಪಯಸ್ವಿನೀಮ್ |
ಸುವ್ರತಾಂ ವಸ್ತ್ರಸಂವೀತಾಂ ಬ್ರಹ್ಮಲೋಕೇ ಮಹೀಯತೇ ॥8॥
ಅನುರೂಪವಾದ ಕರ್ಮವನ್ನು ಹೊಂದಿರುವ ಹಾಲನ್ನು ಕೊಡುವ, ಒಳ್ಳೆಯ ಶೀಲವನ್ನು ಹೊಂದಿದ, ವಸ್ತ್ರದಿಂದ ಆಚ್ಛಾದಿತವಾದ ಕಪಿಲಧೇನುವನ್ನು ದಾನ ಮಾಡುವವನು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ರೋಹಿಣೀಂ ತುಲ್ಯವತ್ಸಾಂ ತು ಧೇನುಂ ದತ್ತ್ವಾ ಪಯಸ್ವಿನೀಮ್ |
ಸುವ್ರತಾಂ ವಸ್ತ್ರಸಂವೀತಾಂ ಸೂರ್ಯಲೋಕೇ ಮಹೀಯತೇ ॥9॥
ಅನುರೂಪವಾದ ಕರುವನ್ನುಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವನ್ನು ಹೊಂದಿರುವ, ವಸ್ತ್ರಚ್ಛಾದಿತವಾದ ಕೆಂಪು ಹಸುವನ್ನು ದಾನ ಕೊಡುವವನು ಸೂರ್ಯಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಸಮಾನವತ್ಸಾಂ ಶಬಲಾಂ ಧೇನುಂ ದತ್ತ್ವಾ ಪಯಸ್ವಿನೀಮ್ |
ಸುವ್ರತಾಂ ವಸ್ತ್ರಸಂವೀತಾಂ ಸೋಮಲೋಕೇ ಮಹೀಯತೇ ॥10॥
ಅನುರೂಪವಾದ ಕರುವನ್ನು ಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವುಳ್ಳ, ವಸ್ತ್ರದಿಂದ ಆಚ್ಛಾದಿತವಾದ ಅನೇಕ ವರ್ಣಗಳಿರುವ ಧೇನುವನ್ನು ದಾನ ಮಾಡುವವನು ಚಂದ್ರಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಸಮಾನವತ್ಸಾಂ ಶ್ವೇತಾಂ ತು ಧೇನುಂ ದತ್ತ್ವಾ ಪಯಸ್ವಿನೀಮ್ |

ಸುವ್ರತಾಂ ವಸ್ತ್ರಸಂವೀತಾಮಿಂದ್ರಲೋಕೇ ಮಹೀಯತೇ ॥11॥
ಅನುರೂಪವಾದ ಕರುವನ್ನು ಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವುಳ್ಳ, ವಸ್ತ್ರದಿಂದ ಆಚ್ಛಾದಿತವಾದ ಶ್ವೇತಗೋವನ್ನು ದಾನ ಮಾಡುವವನು ಇಂದ್ರಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಸಮಾನವತ್ಸಾಂ ಕೃಷ್ಣಾಂ ತು ಧೇನುಂ ದತ್ತ್ವಾ ಪಯಸ್ವಿನೀಮ್ |
ಸುವ್ರತಾಂ ವಸ್ತ್ರಸಂವೀತಾಮಗ್ನಿಲೋಕೇ ಮಹೀಯತೇ ॥12॥
ಅನುರೂಪವಾದ ಕರುವನ್ನು ಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವುಳ್ಳ, ವಸ್ತ್ರದಿಂದ ಆಚ್ಛಾದಿತವಾದ ಕಪ್ಪುವರ್ಣದ ಧೇನುವನ್ನು ದಾನ ಮಾಡುವವನು ಅಗ್ನಿ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಸಮಾನವತ್ಸಾಂ ಧೂಮ್ರಾಂ ತು ಧೇನುಂ ದತ್ತ್ವಾ ಪಯಸ್ವಿನೀಮ್ |
ಸುವ್ರತಾಂ ವಸ್ತ್ರಸಂವೀತಾಂ ಯಾಮ್ಯಲೋಕೇ ಮಹೀಯತೇ ॥13॥
ಅನುರೂಪವಾದ ಕರುವನ್ನು ಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವುಳ್ಳ, ವಸ್ತ್ರದಿಂದ ಆಚ್ಛಾದಿತವಾದ ಧೂಮವರ್ಣದ ಧೇನುವನ್ನು ದಾನ ಮಾಡುವವನು ಯಮನ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಅಪಾಂ ಫೇನಸವರ್ಣಾಂ ತು ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂವೀತಾಂ ವಾರುಣಂ ಲೋಕಮಶ್ನುತೇ ॥14॥
ಅನುರೂಪವಾದ ಕರುವನ್ನು ಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವುಳ್ಳ, ವಸ್ತ್ರದಿಂದ ಆಚ್ಛಾದಿತವಾದ ನೀರಿನ ನೊರೆಯ ಬಣ್ಣದ ಗೋವನ್ನು ದಾನ ಮಾಡುವವನು ವರುಣ ಲೋಕವನ್ನು ಹೊಂದುತ್ತಾನೆ.
ವಾತರೇಣುಸವರ್ಣಾಂ ತು ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂವೀತಾಂ ವಾಯುಲೋಕೇ ಮಹೀಯತೇ ॥15॥
ಕರುವಿನಿಂದ ಮತ್ತು ಕಂಚಿನ ಪಾತ್ರೆಯಿಂದ ಕೂಡಿದ, ವಸತ್ರಚ್ಛಾದಿತವಾದ, ಗಾಳಿಯಲ್ಲಿನ ಕಣಗಳಿಗೆ ಸಮಾನವಾದ ವರ್ಣವುಳ್ಳ ಗೋವನ್ನು ದಾನ ಮಾಡುವವನು ವಾಯುಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಹಿರಣ್ಯವರ್ಣಾಂ ಪಿಂಗಾಕ್ಷೀಂ ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂವೀತಾಂ ಕೌಬೇರಂ ಲೋಕಮಶ್ನುತೇ ॥16॥
ಕರುವಿನಿಂದ ಮತ್ತು ಕಂಚಿನ ಪಾತ್ರೆಯಿಂದ ಸಹಿತವಾದ, ಸುವರ್ಣವರ್ಣದ, ಕಂದುಬಣ್ಣದ ಕಣ್ಣುಗಳುಳ್ಳ, ವಸತ್ರಚ್ಛಾದಿತವಾದ ಗೋವನ್ನು ದಾನ ಮಾಡಿ ಕುಬೇರನ ಲೋಕವನ್ನು ಹೊಂದುತ್ತಾನೆ.
ಪಲಾಲಧೂಮ್ರವರ್ಣಾಂ ತು ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂವೀತಾಂ ಪಿತೃಲೋಕೇ ಮಹೀಯತೇ ॥17॥
ಕರುವಿನಿಂದ ಮತ್ತು ಕಂಚಿನ ಕರೆಯುವ ಪಾತ್ರೆಯಿಂದ ಸಹಿತವಾದ, ವಸ್ತ್ರದಿಂದ ಆಚ್ಛಾದಿತವಾದ, ಹುಲ್ಲಿನಿಂದ ಉಂಟಾದ ಧೂಮದ ವರ್ಣದ ಸಮಾನವಾದ ಬಣ್ಣವುಳ್ಳ ಗೋವನ್ನು ದಾನ ಮಾಡಿ ಪಿತೃಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಸವತ್ಸಾಂ ಪೀವರೀಂ ದತ್ತ್ವಾ ಶಿತಿಕಂಠಾಮಲಂಕೃತಾಮ್ |
ವೈಶ್ವದೇವಮಸಂಬಾಧಂ ಸ್ಥಾನಂ ಶ್ರೇಷ್ಠಂ ಪ್ರಪದ್ಯತೇ ॥18॥
ಕರುವಿನಿಂದ ಸಹಿತವಾದ, ಕಪ್ಪು ಕಂಠವನ್ನುಳ್ಳ, ಅಲಂಕೃತವಾದ, ಪುಷ್ಟವಾದ ಗೋವನ್ನು ದಾನ ಮಾಡುವವನು ಜಲಸಂಬಾಧವಿಲ್ಲದಿರುವ ಶ್ರೇಷ್ಠವಾದ ವಿಶ್ವೇದೇವತೆಗಳ ಲೋಕವನ್ನು ಹೊಂದುತ್ತಾನೆ.
ಸಮಾನವತ್ಸಾಂ ಗೌರೀಂ ತು ಧೇನುಂ ದತ್ತ್ವಾ ಪಯಸ್ವಿನೀಮ್ |
ಸುವ್ರತಾಂ ವಸ್ತ್ರಸಂವೀತಾಂ ವಸೂನಾಂ ಲೋಕಮಶ್ನುತೇ ॥19॥
ಅನುರೂಪವಾದ ಕರುವನ್ನು ಹೊಂದಿರುವ, ಹಾಲನ್ನು ಕರೆಯುವ, ಒಳ್ಳೆಯ ಶೀಲವುಳ್ಳ, ವಸ್ತ್ರದಿಂದ ಆಚ್ಛಾದಿತವಾದ ಗೌರವರ್ಣದ (ಬಿಳಿ) ಗೋವನ್ನು ದಾನ ಮಾಡುವವನು ವಸುಗಳ ಲೋಕವನ್ನು ಪಡೆಯುತ್ತಾನೆ.
ಪಾಂಡುಕಂಬಲವರ್ಣಾಂ ತು ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂವೀತಾಂ ಸಾಧ್ಯಾನಾಂ ಲೋಕಮಶ್ನುತೇ ॥20॥
ಕರುವಿನಿಂದ ಮತ್ತು ಕಂಚಿನ ಪಾತ್ರೆಯಿಂದ ಸಹಿತವಾದ, ವಸ್ತ್ರದಿಂದ ಆಚ್ಛಾದಿತವಾದ, ಬಿಳಿಯ ಕಂಬಳಿ ಬಣ್ಣದ ಗೋವನ್ನು ದಾನ ಮಾಡುವವನು ಸಾಧ್ಯರ ಲೋಕವನ್ನು ಹೊಂದುತ್ತಾನೆ.
ವೈರಾಟಪೃಷ್ಠಮುಕ್ಷಾಣಂ ಸರ್ವರತ್ನೈರಲಂಕೃತಮ್ |
ಪ್ರದಾಯ ಮರುತಾಂ ಲೋಕಾನಜರಾನ್ ಪ್ರತಿಪದ್ಯತೇ ॥21॥
ವಿಶಾಲವಾದ ಪೃಷ್ಠಭಾಗವುಳ್ಳ, ಎಲ್ಲ ರತ್ನಗಳಿಂದಲೂ ಅಲಂಕೃತವಾದ ಹೋರಿಯನ್ನು ಕೊಡುವವನು ನಾಶವಾಗದ ಮರುತ್ತಗಳ ಲೋಕವನ್ನು ಹೊಂದುತ್ತಾನೆ.
ವತ್ಸೋಪಪನ್ನಾಂ ನೀಲಾಂಗಾಂ ಸರ್ವರತ್ನಸಮನ್ವಿತಾಮ್ |
ಗಂಧರ್ವಾಪ್ಸರಸಾಂ ಲೋಕಾನ್ ದತ್ತ್ವಾ ಪ್ರಾಪ್ನೋತಿ ಮಾನವಃ ॥22॥
ಕರುವಿನಿಂದ ಕೂಡಿದ, ಸರ್ವರತ್ನ ಸಮನ್ವಿತವಾದ ನೀಲವರ್ಣದ ಗೋವನ್ನು ದಾನ ಮಾಡುವ ಮನುಷ್ಯನು ಗಂಧರ್ವರ ಮತ್ತು ಅಪ್ಸರೆಯರ ಲೋಕಕ್ಕೆ ಹೋಗುತ್ತಾನೆ.
ಶಿತಿಕಂಠಮನಡ್ವಾಹಂ ಸರ್ವರತ್ನೈರಲಂಕೃತಮ್ |
ದತ್ತ್ವಾ ಪ್ರಜಾಪತೇರ್ಲೋಕಾನ್ ವಿಶೋಕಃ ಪ್ರತಿಪದ್ಯತೇ ॥23॥
ಸರ್ವರತ್ನಗಳಿಂದ ಅಲಂಕೃತವಾದ ಕಪ್ಪುಬಣ್ಣದ ಕಂಠವುಳ್ಳ ಎತ್ತನ್ನು ದಾನ ಮಾಡಿದವನು ಶೋಕರಹಿತನಾಗಿ ಪ್ರಜಾಪತಿಯ

ಲೋಕವನ್ನು ಹೊಂದುತ್ತಾನೆ.
ಗೋಪ್ರದಾನರತೋ ಯಾತಿ ಭಿತ್ತ್ವಾ ಜಲದಸಂಚಯಾನ್ |
ವಿಮಾನೇನಾರ್ಕವರ್ಣೇನ ದಿವಿ ರಾಜನ್ ವಿರಾಜತಾ ||24||
ಎಲೈ ರಾಜನೇ, ಗೋದಾನದಲ್ಲಿ ನಿರತನಾದವನು ಶೋಭಿಸುವ ಸೂರ್ಯವರ್ಣದ ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಮೋಡಗಳ ಸಮೂಹವನ್ನು ಭೇದಿಸಿ ಮುಂದೆ ಸಾಗುತ್ತಾನೆ.
ತಂ ಚಾರುವೇಷಾಃ ಸುಶ್ರೋಣ್ಯಃ ಸಹಸ್ರಂ ವರಯೋಷಿತಃ |
ರಮಯಂತಿ ನರಶ್ರೇಷ್ಠ ಗೋಪ್ರದಾನರತಂ ನರಮ್ ||25||
ಗೋದಾನದಲ್ಲಿ ನಿರತನಾದ ಮನುಷ್ಯನನ್ನು ಒಳ್ಳೆಯ ವೇಷವನ್ನು ಧರಿಸಿದ, ಸುಂದರ ನಿತಂಬವುಳ್ಳ ಸಹಸ್ರ ಸುಂದರ ಸ್ತ್ರೀಯರು ಸಂತೋಷಪಡಿಸುತ್ತಾರೆ.
ವೀಣಾನಾಂ ವಲ್ಲಕೀನಾಂ ಚ ನೂಪುರಾಣಾಂ ಚ ಶಿಂಜಿತೈಃ |
ಹಾಸ್ಯೈಶ್ಚ ಹರಿಣಾಕ್ಷೀಣಾಂ ಪ್ರಸುಪ್ತಃ ಪ್ರತಿಬೋಧ್ಯತೇ ||26||
ವೀಣೆಗಳ, ವಲ್ಲಕಿಗಳ ಮತ್ತು ನೂಪುರಗಳ ಝಣಾತ್ಕಾರದಿಂದಲೂ, ಹರಿಣಾಕ್ಷಿಗಳ ಹಾಸಗಳಿಂದಲೂ ಅವನು ನಿದ್ರೆಯಲ್ಲಿ ಎಬ್ಬಿಸಲ್ಪಡುತ್ತಾನೆ.
ಯಾವಂತಿ ಲೋಮಾನಿ ಭವಂತಿ ಧೇನ್ವಾಃ
ತಾವಂತಿ ವರ್ಷಾಣಿ ಮಹೀಯತೇ ಸಃ |
ಸ್ವರ್ಗಾಚ್ಚ್ಯುತಶ್ಚಾಪಿ ತತೋ ನೃಲೋಕೇ
ಕುಲೇ ಸಮುತ್ಪತ್ಸ್ಯತಿ ಗೋಮಿನಾಂ ಸಃ ||27||
ಗೋವಿನ ದೇಹದಲ್ಲಿ ಎಷ್ಟು ರೋಮಗಳಿರುತ್ತವೆಯೋ ಅಷ್ಟು ವರ್ಷಗಳ ಕಾಲ ಅವನು ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ. ಸ್ವರ್ಗದಿಂದ ಕೆಳಗೆ ಭೂಲೋಕಕ್ಕೆ ಬಂದರೂ ಸಹ ಗೋಸಂಪತ್ತನ್ನು ಹೊಂದಿದವರ ವಂಶದಲ್ಲಿಯೇ ಪುನಃ ಜನ್ಮವನ್ನು ಪಡೆಯುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋದಾನಫಲಕೀರ್ತನಂ ನಾಮ
ನವಾಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹತ್ತನೆಯ ಅಧ್ಯಾಯ
ಗೋಮಹಿಮೆ-ವಸಿಷ್ಠರ ವಚನ.
ವಸಿಷ್ಠಃ
ಘೃತಕ್ಷೀರಪ್ರದಾ ಗಾವೋ ಘೃತಯೋನ್ಯೋ ಘೃತೋದ್ಭವಾಃ |
ಘೃತನದ್ಯೋ ಘೃತಾವರ್ತಾಸ್ತಾ ಮೇ ಸಂತು ಸದಾ ಗೃಹೇ ||1||
ವಸಿಷ್ಠರು ಗೋವುಗಳು ಕ್ಷೀರವನ್ನು ಕೊಡುವಂತಹವುಗಳು. ಅವು ಘೃತದಿಂದ ಜನಿಸಿವೆ. ಅವು ಘೃತನದಿಗಳು ಮತ್ತು ಘೃತದ ಸುಳಿಗಳು. ಅಂತಹ ಗೋವುಗಳು ಯಾವಾಗಲೂ ನನ್ನ ಮನೆಯಲ್ಲಿ ಇರಲಿ.
ಘೃತಂ ಮೇ ಹೃದಯೇ ನಿತ್ಯಂ ಘೃತಂ ನಾಭ್ಯಾಂ ಪ್ರತಿಷ್ಠಿತಮ್ |
ಘೃತಂ ಸರ್ವೇಷು ಗಾತ್ರೇಷು ಘೃತಂ ಮೇ ಮನಸಿ ಸ್ಥಿತಮ್ ||2||
ನನ್ನ ಹೃದಯದಲ್ಲಿ ಯಾವಾಗಲೂ ಘೃತವಿದೆ. ಘೃತವು ನನ್ನ ನಾಭಿಯಲ್ಲಿ ಪ್ರತಿಷ್ಠಿತವಾಗಿದೆ. ಘೃತವು ನನ್ನ ಸರ್ವಶರೀರದಲ್ಲಿದೆ. ಘೃತವು ನನ್ನ ಮನಸ್ಸಿನಲ್ಲಿದೆ.
ಗಾವೋ ಮಮಾಗ್ರತೋ ನಿತ್ಯಂ ಗಾವಃ ಪೃಷ್ಠತ ಏವ ಚ |
ಗಾವೋ ಮೇ ಸರ್ವತಶ್ಚೈವ ಗವಾಂ ಮಧ್ಯೇ ವಸಾಮ್ಯಹಮ್ ||3||
ಗೋವುಗಳು ನನ್ನ ಮುಂಭಾಗದಲ್ಲಿ ಇರಲಿ. ನನ್ನ ಹಿಂಭಾಗದಲ್ಲಿ ಇರಲಿ. ನನ್ನ ಸುತ್ತಲೂ ಇರಲಿ. ನಾನು ಗೋವುಗಳ ಮಧ್ಯೆ ವಾಸಿಸುತ್ತೇನೆ.
ಇತ್ಯಾಚಮ್ಯ ಜಪೇತ್ ಸಾಯಂ ಪ್ರಾತಶ್ಚ ಪುರುಷಃ ಸದಾ |
ಯದಹ್ನಾ ಕುರುತೇ ಪಾಪಂ ತಸ್ಮಾತ್ ಸ ಪರಿಮುಚ್ಯತೇ ||4||
ಎಂಬ ಈ ಮಂತ್ರವನ್ನು ಪುರುಷನು ಆಚಮನವನ್ನು ಮಾಡಿ ಸಾಯಂಕಾಲದಲ್ಲಿ, ಪ್ರಾತಃಕಾಲದಲ್ಲಿ ಜಪಿಸಬೇಕು. ಇದರಿಂದ ಹಗಲಿನಲ್ಲಿ ಮಾಡಿದ ಪಾಪವನ್ನು ಸಾಯಂಕಾಲದಲ್ಲಿಯೂ, ರಾತ್ರಿಯಲ್ಲಿ ಮಾಡಿದ ಪಾಪವನ್ನು ಹಗಲಿನಲ್ಲಿಯೂ ಪರಿಹರಿಸಿಕೊಳ್ಳುತ್ತಾನೆ.
ಪ್ರಾಸಾದಾ ಯತ್ರ ಸೌವರ್ಣಾ ವಸೋರ್ಧಾರಾ ಚ ಯತ್ರ ಸಾ |
ಗಂಧರ್ವಾಪ್ಸರಸೋ ಯತ್ರ ತತ್ರ ಯಾಂತಿ ಸಹಸ್ರದಾಃ ||5||
ಸಹಸ್ರ ಗೋವುಗಳನ್ನು ದಾನ ಮಾಡುವವನು ಸುವರ್ಣಮಯವಾದ ಪ್ರಾಸಾದಗಳಿರುವ ಗಂಗೆಯ ಪ್ರವಾಹವಿರುವ ಗಂಧರ್ವಾಪ್ಸರೆಯರು ವಾಸಿಸುವ ಲೋಕಕ್ಕೆ ಹೋಗುತ್ತಾನೆ.
ನವನೀತಪಂಕಾಃ ಕ್ಷೀರೋದಾ ದಧಿಶೈವಾಲಸಂಕುಲಾಃ |

ವಹಂತಿ ಯತ್ರ ನದ್ಯೋ ವೈ ತತ್ರ ಯಾಂತಿ ಸಹಸ್ರದಾಃ ॥6॥
ಸಹಸ್ರ ಗೋದಾನ ಮಾಡುವವನು ಎಲ್ಲಿ ಬೆಣ್ಣೆ ರೂಪವಾದ ಪಂಕವನ್ನೂ, ಕ್ಷೀರರೂಪವಾದ ಜಲವನ್ನೂ, ದಧಿರೂಪವಾದ ನಿಬಿಡವಾದ ಶೈವಲವನ್ನೂ (ಹಾವಸೆ- ಪಾಚಿ) ನದಿಗಳು ತೆಗೆದುಕೊಂಡು ಪ್ರವಹಿಸುತ್ತವೆಯೋ ಅಲ್ಲಿಗೆ ಹೋಗುತ್ತಾನೆ.
ಗವಾಂ ಶತಸಹಸ್ರಂ ತು ಯಃ ಪ್ರಯಚ್ಛೇದ್ ಯಥಾವಿಧಿ |
ಪರಾಮೃದ್ಧಿಮವಾಪ್ಯಾಥ ಸ ಗೋಲೋಕೇ ಮಹೀಯತೇ ॥7॥
ಒಂದು ಲಕ್ಷ ಗೋವುಗಳನ್ನು ವಿಧಿಪ್ರಕಾರವಾಗಿ ದಾನ ಮಾಡುವವನು ಬಹಳ ಸಮೃದ್ಧಿಯನ್ನು ಪಡೆದು ಗೋಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ದಶ ಚೋಭಯತಃ ಪ್ರೇತ್ಯ ಮಾತಾಪಿತ್ರೋಃ ಪಿತಾಮಹಾನ್ |
ದಧಾತಿ ಸುಕೃತಾಲ್ಲೋಕಾನ್ ಪುನಾತಿ ಚ ಕುಲಂ ನರಃ ॥8॥
ಅವನು ತನ್ನ ಹಿಂದಿನ ಹತ್ತು ಜನ್ಮಗಳ ಉಭಯಕುಲದ ಮಾತಾ-ಪಿತೃಗಳನ್ನೂ, ಪಿತಾಮಹರನ್ನೂ ಪುಣ್ಯಲೋಕಗಳಲ್ಲಿ ಇರಿಸುತ್ತಾನೆ. ತನ್ನ ಕುಲವನ್ನು ಪವಿತ್ರಗೊಳಿಸುತ್ತಾನೆ.
ಧೇನ್ವಾಃ ಪ್ರಮಾಣೇನ ಸಮಪ್ರಮಾಣಾಂ
ಧೇನುಂ ತಿಲಾನಾಮಪಿ ಚ ಪ್ರದಾಯ |
ಪಾನೀಯದಾತಾ ಚ ಯಮಸ್ಯ ಲೋಕೇ
ನ ಯಾತನಾಂ ಕಾಂಚಿದುಪೈತಿ ತತ್ರ ॥9॥
ಗೋವಿನ ಸಮಾನಪ್ರಮಾಣ ತಿಲಧೇನುವನ್ನು ದಾನ ಮಾಡಿ ಜಲದಾನವನ್ನು ಮಾಡುವವನು ಯಮಲೋಕದಲ್ಲಿ ಯಾವ ಯಾತನೆಯನ್ನೂ ಹೊಂದುವುದಿಲ್ಲ.
ಪವಿತ್ರಮಗ್ರ್ಯಂ ಜಗತಃ ಪ್ರತಿಷ್ಠಾ
ದಿವೌಕಸಾಂ ಮಾತರೋಽಥಾಪ್ರಮೇಯಾಃ |
ಅನ್ವಾಲಭೇದ್ ದಕ್ಷಿಣತೋ ವ್ರಜೇಚ್ಚ
ದದ್ಯಾಚ್ಚ ಪಾತ್ರೇ ಪ್ರಸಮೀಕ್ಷ್ಯ ಕಾಲಮ್ ॥10॥
ಗೋವುಗಳು ಬಹಳ ಪವಿತ್ರವಾದವುಗಳು, ಜಗತ್ತಿಗೆ ಆಧಾರಭೂತವಾದವುಗಳು. ದೇವತೆಗಳಿಗೂ ಮಾತೃಸ್ಥಾನದಲ್ಲಿ ಇರುವಂತಹವುಗಳು. ತಿಳಿಯಲು ಅಸಾಧ್ಯವಾದ ಮಹಿಮೆಯನ್ನು ಹೊಂದಿರುವಂತಹವುಗಳು. ಅವುಗಳನ್ನು ಸ್ಪರ್ಶಿಸಬೇಕು. ಬಲಕ್ಕೆ ಮಾಡಿಕೊಂಡು ನಡೆಯಬೇಕು. ಒಳ್ಳೆಯ ಕಾಲದಲ್ಲಿ ಪಾತ್ರರಿಗೆ ದಾನ ಮಾಡಬೇಕು.
ಧೇನುಂ ಸವತ್ಸಾಂ ಕಪಿಲಾಂ ಭೂರಿಶೃಂಗಾಂ
ಕಾಂಸ್ಯೋಪದೋಹಾಂ ವಸನೋತ್ತರೀಯಾಮ್ |
ಪ್ರದಾಯ ತಾಂ ಗಾಹತಿ ದುರ್ವಿಗಾಹ್ಯಾಂ
ಯಾಮ್ಯಾಂ ಸಭಾಂ ವೀತಭಯೋ ಮನುಷ್ಯಃ ॥11॥
ಕರುವಿನಿಂದ ಸಹಿತವಾದ, ದೊಡ್ಡ ಕೊಂಬುಗಳಿರುವ, ವಸ್ತ್ರದ ಉತ್ತರೀಯವನ್ನು ಹೊದಿಸಿದ ಕಪಿಲಧೇನುವನ್ನು ಕಂಚಿನ ಪಾತ್ರೆಯ ಜೊತೆಯಲ್ಲಿ ದಾನವನ್ನು ಮಾಡುವವನು ಪ್ರವೇಶಿಸಲು ಅಸಾಧ್ಯವಾದ ಯಮಸಭೆಯನ್ನು ನಿರ್ಭಯವಾಗಿ ಪ್ರವೇಶಿಸುತ್ತಾನೆ.
ಸುರೂಪಾ ಬಹುರೂಪಾಶ್ಚ ವಿಶ್ವರೂಪಾಶ್ಚ ಮಾತರಃ |
ಗಾವೋ ಮಾಮುಪತಿಷ್ಠಂತಾಮಿತಿ ನಿತ್ಯಂ ಪ್ರಕೀರ್ತಯೇತ್ ॥12॥
ಸುರೂಪ, ಬಹುರೂಪ, ವಿಶ್ವರೂಪ ಎಂದು ಕರೆಯಲ್ಪಡುವ ತಾಯಿಗಳಾದ ಗೋವುಗಳು ಯಾವಾಗಲೂ ನನ್ನ ಸಮೀಪದಲ್ಲಿರಲಿ ಎಂದು ನಿತ್ಯವೂ ಕೀರ್ತಿಸಬೇಕು.
ನಾತಃ ಪುಣ್ಯತರಂ ದಾನಂ ನಾತಃ ಪುಣ್ಯತರಂ ಫಲಮ್ |
ನಾತೋ ವಿಶಿಷ್ಟಂ ಲೋಕೇಷು ಭೂತಂ ಭವಿತುಮರ್ಹತಿ ॥13॥
ಗೋದಾನಕ್ಕಿಂತ ಪುಣ್ಯತರವಾದ ದಾನವಿಲ್ಲ. ಗೋದಾನ ಫಲಕ್ಕಿಂತ ಪುಣ್ಯತರವಾದ ಫಲವಿಲ್ಲ. ಲೋಕದಲ್ಲಿ ಗೋವುಗಳಿಗಿಂತ ಶ್ರೇಷ್ಠವಾದ ವಸ್ತುವು ಯಾವುದೂ ಇರಲು ಸಾಧ್ಯವಿಲ್ಲ.
ತ್ವಚಾ ಲೋಮ್ನಾಽಥ ಶೃಂಗೈಶ್ಚ ವಾಲೈಃ ಕ್ಷೀರೇಣ ಮೇದಸಾ |
ಯಜ್ಞಂ ವಹಂತಿ ಸಂಭೂಯ ಕಿಮಸ್ತ್ಯಭ್ಯಧಿಕಂ ತತಃ ॥14॥
ಗೋವುಗಳು ಒಟ್ಟಾಗಿ ತಮ್ಮ ಚರ್ಮದಿಂದಲೂ, ರೋಮದಿಂದಲೂ, ಕೊಂಬಿನಿಂದಲೂ, ಬಾಲದಿಂದಲೂ, ಕ್ಷೀರದಿಂದಲೂ ಮತ್ತು ಘೃತದಿಂದಲೂ ಯಜ್ಞವನ್ನು ನಿರ್ವಾಹ ಮಾಡುತ್ತವೆ. ಗೋವುಗಳಿಗಿಂತ ಶ್ರೇಷ್ಠವಾದುದು ಯಾವುದಿದೆ?
ಯಯಾ ಸರ್ವಮಿದಂ ವ್ಯಾಪ್ತಂ ಜಗತ್ಸ್ಥಾವರಜಂಗಮಮ್ |
ತಾಂ ಧೇನುಂ ಶಿರಸಾ ವಂದೇ ಭೂತಭವ್ಯಸ್ಯ ಮಾತರಮ್ ॥15॥
ಯಾವ ಗೋವು ಸ್ಥಾವರ-ಜಂಗಮಾತ್ಮಕವಾದ ಈ ಸರ್ವಜಗತ್ತನ್ನು ವ್ಯಾಪಿಸಿದೆಯೋ ಅಂತಹ ಭೂತ-ಭವಿಷ್ಯತ್-ವರ್ತಮಾನ ಕಾಲದ ವಸ್ತುಗಳಿಗೆ ತಾಯಿಯಾದ ಗೋವನ್ನು ಶಿರಸಾ ನಮಸ್ಕರಿಸುತ್ತೇನೆ.
ಗುಣವಚನಸಮುಚ್ಚಯೈಕದೇಶೋ
ನೃವರ ಮಯೈಷ ಗವಾಂ ಪ್ರಕೀರ್ತಿತಸ್ತೇ |
ನ ಹಿ ಪರಮಿಹ ದಾನಮಸ್ತಿ ಗೋಭ್ಯೋ
ಭವತಿ ನ ಚಾಪಿ ಪರಾಯಣಂ ತಥಾನ್ಯತ್ ॥16॥

ಎಲೈ ನರಶ್ರೇಷ್ಠನೇ, ನಾನು ಗೋವುಗಳ ಗುಣಸಮೂಹದ ಅಲ್ಪಭಾಗವನ್ನು ಮಾತ್ರ ನಿನಗೆ ಹೇಳಿದ್ದೇನೆ. ಗೋದಾನಕ್ಕಿಂತ ಶ್ರೇಷ್ಠವಾದ ದಾನವು ಇನ್ನೊಂದು ಇಲ್ಲ. ಗೋವುಗಳಿಗಿಂತ ಶ್ರೇಷ್ಠವಾದ ಆಶ್ರಯವೂ ಇನ್ನೊಂದಿಲ್ಲ.
ಭೀಷ್ಮ:
ಪರಮಿದಮಿತಿ ಭೂಮಿಪೋ ವಿಚಿಂತ್ಯ
ಪ್ರವರಮೃಷೇರ್ವಚನಂ ತತೋ ಮಹಾತ್ಮಾ |
ವ್ಯಸೃಜತ ನಿಯತಾತ್ಮವಾನ್ ದ್ವಿಜೇಭ್ಯಃ
ಸುಬಹು ಚ ಗೋಧನಮಾಪ್ತವಾಂಶ್ಚ ಲೋಕಾನ್ ॥17॥
ಭೀಷ್ಮ ಮಹಾತ್ಮನಾದ ಸೌದಾಸರಾಜನು ಈ ಋಷಿವಚನಗಳು ಬಹಳ ಶ್ರೇಷ್ಠವೆಂದು ಚಿಂತಿಸಿ ಮನೋಜಯವನ್ನು ಹೊಂದಿದವನಾಗಿ ಬ್ರಾಹ್ಮಣರಿಗೆ ಬಹಳ ಗೋಧನವನ್ನು ದಾನ ಮಾಡಿ ಒಳ್ಳೆಯ ಲೋಕಗಳನ್ನು ಪಡೆದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋದಾನಮಹಿಮಕಥನಂ ನಾಮ
ದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೊಂದನೆಯ ಅಧ್ಯಾಯ
ಗೋ ಮಹಿಮೆ - ವ್ಯಾಸ-ಶುಕ ಸಂವಾದ
ಯುಧಿಷ್ಠಿರಃ
ಪವಿತ್ರಾಣಾಂ ಪವಿತ್ರಂ ಯಚ್ಛ್ರೇಷ್ಠಂ ಲೋಕೇ ಚ ಯದ್ಭವೇತ್ |
ಪಾವನಂ ಪರಮಂ ಚೈವ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಲೋಕದಲ್ಲಿ ಪವಿತ್ರವಾದುದಕ್ಕಿಂತ ಯಾವುದು ಪವಿತ್ರವೋ, ಯಾವುದು ಶ್ರೇಷ್ಠವೋ, ಯಾವುದು ಪರಮ ಪಾವನವೋ ಅದನ್ನು ನನಗೆ ಹೇಳು.
ಭೀಷ್ಮ:
ಗಾವೋ ಮಹಾರ್ಥಾಃ ಪುಣ್ಯಾಶ್ಚ ತಾರಯಂತಿ ಚ ಮಾನವಾನ್ |
ಧಾರಯಂತಿ ಪ್ರಜಾಶ್ಚೇಮಾಃ ಪಯಸಾ ಹವಿಷಾ ತಥಾ ॥2॥
ಭೀಷ್ಮ ಗೋವುಗಳು ದೊಡ್ಡ ವಸ್ತುಗಳು, ಪುಣ್ಯಪ್ರದವಾದವುಗಳು. ಮನುಷ್ಯರನ್ನು ಕಷ್ಟದಿಂದ ಪಾರುಮಾಡುತ್ತವೆ. ಕ್ಷೀರದಿಂದಲೂ ಮತ್ತು ಹವಿಸ್ಸಿನಿಂದಲೂ ಈ ಪ್ರಜೆಗಳನ್ನು ಪೋಷಿಸುತ್ತವೆ.
ನ ಹಿ ಪುಣ್ಯತಮಂ ಕಿಂಚಿದ್ ಗೋಭ್ಯೋ ಭರತಸತ್ತಮ |
ಏತಾಃ ಪವಿತ್ರಾಃ ಪುಣ್ಯಾಶ್ಚ ತ್ರಿಷು ಲೋಕೇಷ್ವನುತ್ತಮಾಃ ॥3॥
ಎಲೈ ಭರತಶ್ರೇಷ್ಠನೇ, ಗೋವುಗಳಿಗಿಂತ ಪುಣ್ಯತಮವಾದುದು ಯಾವುದೂ ಇಲ್ಲ. ಇವು ಪವಿತ್ರವೂ, ಪುಣ್ಯಪ್ರದವೂ ಮತ್ತು ಮೂರುಲೋಕದಲ್ಲೂ ಶ್ರೇಷ್ಠವಾದವುಗಳು.
ದೇವಾನಾಮುಪರಿಷ್ಟಾಚ್ಚ ಗಾವಃ ಪ್ರತಿವಸಂತಿ ವೈ |
ದತ್ತ್ವಾ ಚೈತಾ ನರಪತೇ ಯಾಂತಿ ಸ್ವರ್ಗಂ ಮನೀಷಿಣಃ ॥4॥
ಗೋವುಗಳು ದೇವತೆಗಳ (ದೇವಲೋಕದ) ಮೇಲ್ಭಾಗದಲ್ಲಿ ವಾಸಮಾಡುತ್ತವೆ. ಎಲೈ ರಾಜನೇ, ಮೇಧಾವಿಗಳು ಗೋವುಗಳನ್ನು ದಾನ ಮಾಡಿ ಸ್ವರ್ಗಕ್ಕೆ ಹೋಗುತ್ತಾರೆ.
ಮಾಂಧಾತಾ ಯೌವನಾಶ್ವಶ್ಚ ಯಯಾತಿರ್ನಹುಷಸ್ತಥಾ |
ಗಾವೋ ದದಂತಃ ಸತತಂ ಸಹಸ್ರಶತಸಮ್ಮಿತಾಃ |
ಗತಾಃ ಪರಮಕಂ ಸ್ಥಾನಂ ದೇವೈರಪಿ ಸುದುರ್ಲಭಮ್ ॥5॥
ಅಪಿ ಚಾತ್ರ ಪುರಾವೃತ್ತಂ ಕಥಯಿಷ್ಯಾಮಿ ತೇಽನಘ ॥6॥
ಯುವನಾಶ್ವನ ಪುತ್ರನಾದ ಮಾಂಧಾತ, ಯಯಾತಿ, ನಹುಷ ಇವರು ಲಕ್ಷಾಂತರ ಗೋವುಗಳನ್ನು ಸತತವಾಗಿ ದಾನ ಮಾಡಿ ದೇವತೆಗಳಿಗೂ ಅತ್ಯಂತ ದುರ್ಲಭವಾದ ಶ್ರೇಷ್ಠವಾದ ಸ್ಥಾನವನ್ನು ಹೊಂದಿದರು. ಎಲೈ ಅನಘನೇ, ಈ ವಿಷಯದಲ್ಲಿ ಹಿಂದೆ ನಡೆದ ಒಂದು ಸಂವಾದವನ್ನು ನಿನಗೆ ಹೇಳುವೆನು.
ಋಷೀಣಾಮುತ್ತಮಂ ಧೀಮಾನ್ ಕೃಷ್ಣದ್ವೈಪಾಯನಂ ಶುಕಃ |
ಅಭಿವಾದ್ಯಾಹ್ನಿಕಂ ಕೃತ್ವಾ ಶುಚಿಃ ಪ್ರಯತಮಾನಸಃ |
ಪಿತರಂ ಪರಿಪಪ್ರಚ್ಛ ದೃಷ್ಟಲೋಕಪರಾವರಮ್ ॥7॥
ಶುಕಾಚಾರ್ಯರು ಶುಚಿಯಾಗಿ, ಜಿತಮನಸ್ಕರಾಗಿ ಆಹ್ನಿಕವನ್ನು ಮಾಡಿ ತಂದೆಯೂ ಪರಾವರಲೋಕಗಳನ್ನು ನೋಡಿದವರೂ, ಶ್ರೇಷ್ಠ ಋಷಿಗಳೂ ಆದ ಕೃಷ್ಣದ್ವೈಪಾಯನರನ್ನು ಧರ್ಮಗಳನ್ನು ಕುರಿತು ಪ್ರಶ್ನೆ ಮಾಡಿದರು.
ಕೋ ಯಜ್ಞಃ ಸರ್ವಯಜ್ಞಾನಾಂ ವರಿಷ್ಠ ಉಪಲಕ್ಷ್ಯತೇ |
ಕಿಂ ಚ ಕೃತ್ವಾ ಪರಂ ಸ್ವರ್ಗಂ ಪ್ರಾಪ್ನುವಂತಿ ಮನೀಷಿಣಃ ॥8॥
ಯಾವ ಯಜ್ಞವು ಎಲ್ಲ ಯಜ್ಞಗಳಿಗಿಂತಲೂ ಶ್ರೇಷ್ಠವೆಂದು ಹೇಳಲ್ಪಡುತ್ತದೆ? ಏನನ್ನು ಮಾಡಿ ಮೇಧಾವಿಗಳಾದವರು ಶ್ರೇಷ್ಠವಾದ ಸ್ವರ್ಗವನ್ನು ಹೊಂದುತ್ತಾರೆ?

ಕೇನ ದೇವಾಃ ಪವಿತ್ರೇಣ ಸ್ವರ್ಗಮಶ್ನಂತಿ ವಾ ವಿಭೋ |
ಕಿಂ ಚ ಯಜ್ಞಸ್ಯ ಯಜ್ಞತ್ವಂ ಕ್ವ ಚ ಯಜ್ಞಃ ಪ್ರತಿಷ್ಠಿತಃ ॥9॥
ಎಲೈ ವಿಭುವೇ, ಯಾವ ಪವಿತ್ರಕಾರ್ಯದಿಂದ ದೇವತೆಗಳು ಸ್ವರ್ಗಸುಖವನ್ನು ಅನುಭವಿಸುತ್ತಾರೆ? ಯಜ್ಞವು ಯಜ್ಞವಾಗುವುದು ಹೇಗೆ? ಯಜ್ಞವು ಎಲ್ಲಿ ಪ್ರತಿಷ್ಠಿತವಾಗಿದೆ?
ದಾನಾನಾಮುತ್ತಮಂ ಕಿಂ ಚ ಕಿಂ ಚ ಸತ್ರಮತಃ ಪರಮ್ |
ಪವಿತ್ರಾಣಾಂ ಪವಿತ್ರಂ ಚ ಯತ್ತದ್ ಬ್ರೂಹಿ ಮಮಾನಘ ॥10॥
ಶ್ರೇಷ್ಠವಾದ ದಾನವು ಯಾವುದು? ಶ್ರೇಷ್ಠವಾದ ಸತ್ರವು ಯಾವುದು? ಎಲೈ ಅನಘರೇ, ಪವಿತ್ರವಾದ ವಸ್ತುಗಳಿಗಿಂತಲೂ ಪವಿತ್ರವಾದುದು ಯಾವುದು ಎಂದು ನನಗೆ ಹೇಳಿ (ಎಂದು ಕೇಳಿದರು).
ಏತಚ್ಛ್ರುತ್ವಾ ತು ವಚನಂ ವ್ಯಾಸಃ ಪರಮಧರ್ಮವಿತ್ |
ಪುತ್ರಾಯಾಕಥಯತ್ ಸರ್ವಂ ತತ್ತ್ವೇನ ಭರತರ್ಷಭ ॥11॥
ಈ ಮಾತುಗಳನ್ನು ಕೇಳಿದ ಪರಮಧರ್ಮಜ್ಞರಾದ ವ್ಯಾಸರು ಎಲೈ ಭರತರ್ಷಭನೇ, ತಮ್ಮ ಪುತ್ರನಿಗೆ ಎಲ್ಲವನ್ನೂ ಯಥಾರ್ಥವಾಗಿ ಹೇಳಿದರು.
ವ್ಯಾಸಃ
ಗಾವಃ ಪ್ರತಿಷ್ಠಾ ಭೂತಾನಾಂ ತಥಾ ಗಾವಃ ಪರಾಯಣಮ್ |
ಗಾವಃ ಪುಣ್ಯಾಃ ಪವಿತ್ರಾಶ್ಚ ಪಾವನಂ ಧರ್ಮ ಏವ ಚ ॥12॥
ವ್ಯಾಸರು ಗೋವುಗಳು ಎಲ್ಲ ಪ್ರಾಣಿಗಳಿಗೂ ಆಧಾರಭೂತವಾದವುಗಳು. ಅವು ಶ್ರೇಷ್ಠವಾದ ಆಶ್ರಯ. ಗೋವುಗಳು ಪುಣ್ಯಪ್ರದವಾದವುಗಳು, ಸ್ವತಃ ಪವಿತ್ರವಾದವುಗಳು. ಪಾವನಧರ್ಮಸ್ವರೂಪವಾದವುಗಳು.
ಪೂರ್ವಮಾಸನ್ನಶೃಂಗಾ ವೈ ಗಾವ ಇತ್ಯನುಶುಶ್ರುಮಃ |
ಶೃಂಗಾರ್ಥೇ ಸಮುಪಾಸಂತ ತಾಃ ಕಿಲ ಪ್ರಭುಮವ್ಯಯಮ್ ॥13॥
ಹಿಂದೆ ಗೋವುಗಳಿಗೆ ಶೃಂಗವಿರಲಿಲ್ಲವೆಂದು ನಾವು ಕೇಳಿದ್ದೇವೆ. ಅವುಗಳು ಶೃಂಗವನ್ನು ಪಡೆಯುವ ಸಲುವಾಗಿ ಶಾಶ್ವತರಾದ ಪ್ರಭುಗಳಾದ ಬ್ರಹ್ಮದೇವರನ್ನು ಉಪಾಸನೆ ಮಾಡಿದವು.
ತತೋ ಬ್ರಹ್ಮಾ ತು ಗಾಃ ಪ್ರಾಯಮುಪವಿಷ್ಟಾಃ ಸಮೀಕ್ಷ್ಯ ಹ |
ಈಪ್ಸಿತಂ ಪ್ರದದೌ ತಾಭ್ಯೋ ಗೋಭ್ಯಃ ಪ್ರತ್ಯೇಕಶಃ ಪ್ರಭುಃ ॥14॥
ಬ್ರಹ್ಮದೇವರು ಪ್ರಾಯೋಪವೇಶಕ್ಕೆ ಕುಳಿತ ಗೋವುಗಳನ್ನು ನೋಡಿ ಅವುಗಳಿಗೆ ಪ್ರತ್ಯೇಕವಾಗಿ ಅಭೀಷ್ಟವಾದ ವರವನ್ನು ಕೊಟ್ಟರು.
ತಾಸಾಂ ಶೃಂಗಾಣ್ಯಜಾಯಂತ ಯಸ್ಯಾ ಯಾದೃಗ್ಮನೋಗತಮ್ |
ನಾನಾವರ್ಣಾಃ ಶೃಂಗವಂತ್ಯಸ್ತಾ ವ್ಯರೋಚಂತ ಪುತ್ರಕ ॥15॥
ಅವುಗಳಿಗೆ ತಮ ತಮಗೆ ಬೇಕಾದಂತಹ ಶೃಂಗಗಳು ಹುಟ್ಟಿದವು. ಎಲೈ ಪುತ್ರನೇ, ಅನೇಕ ವರ್ಣದ ಶೃಂಗಗಳನ್ನು ಹೊಂದಿ ಗೋವುಗಳು ಶೋಭಿಸಿದವು.
ಬ್ರಹ್ಮಣಾ ವರದತ್ತಾಸ್ತಾ ಹವ್ಯಕವ್ಯಪ್ರದಾಃ ಶುಭಾಃ |
ಪುಣ್ಯಾಃ ಪವಿತ್ರಾಃ ಸುಭಗಾ ದಿವ್ಯಸಂಸ್ಥಾನಲಕ್ಷಣಾಃ |
ಗಾವಸ್ತೇಜೋ ಮಹದ್ ದಿವ್ಯಂ ಗವಾಂ ದಾನಂ ಪ್ರಶಸ್ಯತೇ ॥16॥
ಬ್ರಹ್ಮದೇವರಿಂದ ವರವನ್ನು ಪಡೆದ ಆ ಗೋವುಗಳು ಹವ್ಯಕವ್ಯಗಳನ್ನು ನಡೆಸಿಕೊಡುತ್ತವೆ. ಅವು ಪುಣ್ಯವಾದವುಗಳು, ಶುಭವಾದವುಗಳು, ಪವಿತ್ರವಾದವುಗಳು, ಸುಂದರವಾದವುಗಳು, ದಿವ್ಯರೂಪವನ್ನು ಧರಿಸಿದವುಗಳು. ಗೋವುಗಳೇ ದೊಡ್ಡ ದಿವ್ಯವಾದ ತೇಜಸ್ಸು, ಗೋದಾನವು ಪ್ರಶಸ್ತವಾದುದು.
ಯೇ ಚೈತಾಃ ಸಂಪ್ರಯಚ್ಛಂತಿ ಸಾಧವೋ ವೀತಮತ್ಸರಾಃ |
ತೇ ವೈ ಸುಕೃತಿನಃ ಪ್ರೋಕ್ತಾಃ ಸರ್ವದಾನಪ್ರದಾಶ್ಚ ತೇ |
ಗವಾಂ ಲೋಕಂ ತಥಾ ಪುಣ್ಯಮಾಪ್ನುವಂತಿ ಚ ತೇಽನಘ ॥17॥
ಯಾವ ಸಾಧುಗಳು ಮಾತ್ಸರ್ಯರಹಿತರಾಗಿ ಗೋದಾನವನ್ನು ಮಾಡುತ್ತಾರೆಯೋ ಅವರು ಪುಣ್ಯವಂತರು ಮತ್ತು ಸರ್ವದಾನವನ್ನು ನೀಡಿದವರು ಎಂದು ಹೇಳಲ್ಪಡುತ್ತಾರೆ. ಎಲೈ ಅನಘನೇ, ಮತ್ತು ಅವರು ಪವಿತ್ರವಾದ ಗೋಲೋಕವನ್ನು ಹೊಂದುತ್ತಾರೆ.
ಯತ್ರ ವೃಕ್ಷಾ ಮಧುಫಲಾ ದಿವ್ಯಪುಷ್ಪಫಲೋಪಗಾಃ |
ಪುಷ್ಪಾಣಿ ಚ ಸುಗಂಧೀನಿ ದಿವ್ಯಾನಿ ದ್ವಿಜಸತ್ತಮ ॥18॥
ಎಲೈ ದ್ವಿಜಶ್ರೇಷ್ಠನೇ, ಅಲ್ಲಿ ಮಧುರಫಲಗಳನ್ನು ಹೊಂದಿರುವ, ಯಾವಾಗಲೂ ದಿವ್ಯವಾದ ಪುಷ್ಪಫಲಗಳನ್ನು ಧರಿಸಿರುವ ವೃಕ್ಷಗಳಿರುತ್ತವೆ. ದಿವ್ಯವಾದ ಸುಗಂಧಯುಕ್ತವಾದ ಪುಷ್ಪಗಳಿರುತ್ತವೆ.
ಸರ್ವಾ ಮಣಿಮಯೀ ಭೂಮಿಃ ಸೂಕ್ಷ್ಮಕಾಂಚನವಾಲುಕಾ |
ಸರ್ವತ್ರ ಸುಖಸಂಸ್ಪರ್ಶಾ ನಿಷ್ಪಂಕಾ ನೀರಜಾ ಶುಭಾ ॥19॥
ಭೂಮಿ ಎಲ್ಲವೂ ಮಣಿಮಯವಾಗಿದ್ದು ಚಿನ್ನದ ಪುಡಿಯಂತಹ ಸಣ್ಣ ಮರಳುಗಳಿಂದ ಕೂಡಿದೆ. ಎಲ್ಲ ಕಡೆಯಲ್ಲಿಯೂ ಸುಖಸ್ಪರ್ಶವುಳ್ಳದ್ದಾಗಿ ಕೆಸರಿನಿಂದಲೂ, ಧೂಳಿನಿಂದಲೂ ರಹಿತವಾಗಿ ಶುಭವಾಗಿವೆ.
ರಕ್ತೋತ್ಪಲವನೈಶ್ಚೈವ ಮಣಿದಂಡೈರ್ಹಿರಣ್ಮಯೈಃ |
ತರುಣಾದಿತ್ಯಸಂಕಾಶೈರ್ಭಾಂತಿ ತತ್ರ ಜಲಾಶಯಾಃ ॥20॥
ಅಲ್ಲಿ ಜಲಾಶಯಗಳು ಮಣಿಮಯವಾದ ನಾಳವನ್ನು ಹೊಂದಿರುವ, ಉದಯಿಸುವ ಸೂರ್ಯನ ಪ್ರಭೆಯನ್ನು ಹೊಂದಿರುವ,

ಸುವರ್ಣಮಯವಾದ ರಕ್ತೋತ್ಪಲಗಳಿಂದ ಕೂಡಿದ ವನಗಳಿಂದ ಶೋಭಿಸುತ್ತವೆ.
ಮಹಾರ್ಹಮಣಿಪತ್ರೈಶ್ಚ ಕಾಂಚನಪ್ರಭಕೇಸರೈಃ |
ನೀಲೋತ್ಪಲವಿಮಿಶ್ರೈಶ್ಚ ಸರೋಭಿರ್ಬಹುಪಂಕಜೈಃ ॥21॥
ಬೆಲೆಬಾಳುವ ಮಣಿಮಯವಾದ ದಳಗಳನ್ನುಳ್ಳ, ಚಿನ್ನದ ಪ್ರಭೆಯನ್ನು ಹೊಂದಿರುವ ಕೇಸರಗಳನ್ನು ಹೊಂದಿದ, ನೀಲೋತ್ಪಲಗಳಿಂದ ಮಿಶ್ರಿತವಾದ, ಅನೇಕ ಕಮಲಗಳಿಂದ ಕೂಡಿದ ಸರೋವರಗಳಿಂದ ಶೋಭಿಸುತ್ತದೆ.
ಕರವೀರವನೈಃ ಫುಲ್ಲೈಃ ಸಹಸ್ರಾವರ್ತಸಂವೃತೈಃ |
ಸಂತಾನಕವನೈಃ ಫುಲ್ಲೈರ್ವೃಕ್ಷೈಶ್ಚ ಸಮಲಂಕೃತಾ ॥22॥
ಅರಳಿದ ಪುಷ್ಪವುಳ್ಳ ಕರವೀರವನಗಳಿಂದಲೂ, ಸಹಸ್ರಾವರ್ತ ವೃಕ್ಷಗಳಿಂದ ಕೂಡಿದ ಸಂತಾನಕವೃಕ್ಷದ ವನಗಳಿಂದಲೂ, ಅರಳಿದ ಪುಷ್ಪವುಳ್ಳ ಬೇರೆ ವೃಕ್ಷಗಳಿಂದಲೂ ಭೂಮಿಯು ಅಲ್ಲಿ ಅಲಂಕೃತವಾಗಿದೆ.
ನಿರ್ಮಲಾಭಿಶ್ಚ ಮುಕ್ತಾಭಿರ್ಮಣಿಭಿಶ್ಚ ಮಹಾಧನೈಃ |
ಉದ್ಧೂತಪುಳಿನಾಸ್ತತ್ರ ಜಾತರೂಪೈಶ್ಚ ನಿಮ್ನಗಾಃ ॥23॥
ಅಲ್ಲಿ ನದಿಗಳು ನಿರ್ಮಲವಾದ ಮುತ್ತುಗಳಿಂದಲೂ, ಮಹಾಬೆಲೆಬಾಳುವ ಮಣಿಗಳಿಂದಲೂ, ಸುವರ್ಣಗಳಿಂದಲೂ ಮಿಶ್ರಿತವಾದ ಮರಳುಗಳನ್ನು ಹೊಂದಿ ಹರಿಯುತ್ತವೆ.
ಸರ್ವರತ್ನಮಯೈಶ್ಚಿತ್ರೈರವಗಾಢಾ ನಗೋತ್ತಮೈಃ |
ಜಾತರೂಪಮಯೈಶ್ಚಾನ್ಯೈರ್ಹುತಾಶನಸಮಪ್ರಭೈಃ ॥24॥
ಸರ್ವರತ್ನಮಯವಾದ, ವಿಚಿತ್ರವಾದ ಶ್ರೇಷ್ಠ ಪರ್ವತಗಳಿಂದಲೂ, ಬೇರೆ ಅಗ್ನಿ ಸಮಾನಕಾಂತಿಯುಳ್ಳ ಸುವರ್ಣಮಯವಾದ ಪರ್ವತಗಳಿಂದಲೂ ಆ ಭೂಮಿಯು ನಿಬಿಡವಾಗಿದೆ.
ಸೌವರ್ಣಗಿರಯಸ್ತತ್ರ ಮಣಿರತ್ನಶಿಲೋಚ್ಚಯಾಃ |
ಸರ್ವರತ್ನಮಯೈರ್ಭಾಂತಿ ಶೃಂಗೈಶ್ಚಾರುಭಿರುಚ್ಛ್ರಿತೈಃ ॥25॥
ಅಲ್ಲಿರುವ ಸುವರ್ಣಪರ್ವತಗಳು ಮಣಿಮಯವಾದ ಮತ್ತು ರತ್ನಮಯವಾದ ಕೋಡುಗಳನ್ನು ಹೊಂದಿ ಸರ್ವರತ್ನಮಯವಾದ ಎತ್ತರವಾದ ಅನೇಕ ಶಿಖರಗಳಿಂದ ಶೋಭಿಸುತ್ತವೆ.
ನಿತ್ಯಪುಷ್ಪಫಲಾಸ್ತತ್ರ ನಗಾಃ ಪತ್ರರಥಾಕುಲಾಃ |
ದಿವ್ಯಗಂಧರಸೈಃ ಪುಷ್ಪೈಃ ಫಲೈಶ್ಚ ಭರತರ್ಷಭ ॥26॥
ಎಲೈ ಭರತರ್ಷಭನೇ, ಅಲ್ಲಿರುವ ವೃಕ್ಷಗಳು ನಿತ್ಯವೂ ಪುಷ್ಪಫಲಗಳಿಂದ ಕೂಡಿ ಪಕ್ಷಿಗಳಿಂದಲೂ, ದಿವ್ಯಗಂಧರಸವುಳ್ಳ ಪುಷ್ಪಗಳಿಂದಲೂ ಮತ್ತು ಫಲಗಳಿಂದಲೂ ತುಂಬಿರುತ್ತವೆ.
ರಮಂತೇ ಪುಣ್ಯಕರ್ಮಾಣಸ್ತತ್ರ ನಿತ್ಯಂ ಯುಧಿಷ್ಠಿರ |
ಸರ್ವಕಾಮಸಮೃದ್ಧಾರ್ಥಾ ನಿಃಶೋಕಾ ಗತಮನ್ಯವಃ ॥27॥
ಎಲೈ ಯುಧಿಷ್ಠಿರನೇ, ಅಲ್ಲಿ ಪುಣ್ಯಕರ್ಮವನ್ನು ಮಾಡಿದವರು ಸರ್ವಕಾಮಿತ ಪದಾರ್ಥಗಳನ್ನು ಸಮೃದ್ಧವಾಗಿ ಪಡೆದು ಶೋಕರಹಿತರಾಗಿ, ಕೋಪರಹಿತರಾಗಿ ನಿತ್ಯವೂ ಸಂತೋಷಪಡುತ್ತಾರೆ.
ವಿಮಾನೇಷು ವಿಚಿತ್ರೇಷು ರಮಣೀಯೇಷು ಭಾರತ |
ಮೋದಂತೇ ಪುಣ್ಯಕರ್ಮಾಣೋ ವಿಹರಂತೋ ಯಶಸ್ವಿನಃ ॥28॥
ಎಲೈ ಭಾರತನೇ, ವಿಚಿತ್ರವಾದ ಉಪ್ಪರಿಗೆ ಮನೆಗಳಲ್ಲಿ ಪುಣ್ಯಕರ್ಮವನ್ನು ಮಾಡಿದ ಕೀರ್ತಿವಂತರಾದ ಪುರುಷರು ವಿಹಾರವನ್ನು ಮಾಡಿ ಸಂತೋಷ ಪಡುತ್ತಾರೆ.
ಉಪಕ್ರೀಡಂತಿ ತಾನ್ ರಾಜನ್ ಶುಭಾಶ್ಚಾಪ್ಸರಸಾಂ ಗಣಾಃ |
ಏತಾಲ್ಲೋಕಾನವಾಪ್ನೋತಿ ಗಾಂ ದತ್ತ್ವಾ ವೈ ಯುಧಿಷ್ಠಿರ ॥29॥
ಎಲೈ ರಾಜನೇ, ಅಪ್ಸರೆಯರ ಶುಭವಾದ ಸಮೂಹಗಳು ಅವರ ಬಳಿ ಆಟವಾಡುತ್ತವೆ. ಎಲೈ ಯುಧಿಷ್ಠಿರನೇ, ಗೋದಾನ ಮಾಡಿದವನು ಇಂತಹ ಲೋಕವನ್ನು ಪಡೆಯುತ್ತಾನೆ.
ಯಾಸಾಮಧಿಪತಿಃ ಪೂಷಾ ಮಾರುತೋ ಬಲವಾನ್ ಬಲೀ |
ಐಶ್ವರ್ಯೇ ವರುಣೋ ರಾಜಾ ತಾ ಮಾಂ ಪಾಂತು ಯುಗಂಧರಾಃ ॥
ಯಾವ ಗೋವುಗಳಿಗೆ ಪೂಷದೇವತೆಯು ಅಧಿಪತಿಯೋ, ಬಲಿಷ್ಠನಾದ ವಾಯುವು ರಕ್ಷಕನೋ, ಯಾರ ಐಶ್ವರ್ಯಕ್ಕೆ ರಾಜನಾದ ವರುಣನು ಅಧಿಪತಿಯೋ ಅಂತಹ ಯುಗಂಧರರೂಪವಾದ ಗೋವುಗಳು ನನ್ನನ್ನು ರಕ್ಷಿಸಲಿ.
ಸುರೂಪಾ ಬಹುರೂಪಾಶ್ಚ ವಿಶ್ವರೂಪಾಶ್ಚ ಮಾತರಃ |
ಪ್ರಾಜಾಪತ್ಯಾ ಇತಿ ಬ್ರಹ್ಮನ್ ಜಪೇನ್ನಿತ್ಯಂ ಯತವ್ರತಃ ॥31॥
ಎಲೈ ಬ್ರಾಹ್ಮಣನೇ, ಸುರೂಪ, ಬಹುರೂಪ, ವಿಶ್ವರೂಪ ಎಂಬ ಪ್ರಭೇದದಿಂದ ಕೂಡಿದ ಲೋಕಮಾತೆಗಳಾದ ಗೋವುಗಳು ಪ್ರಜಾಪತಿಯ ಪುತ್ರಿಯರು ಎಂದು ನಿತ್ಯವೂ ವ್ರತಶೀಲರಾಗಿ ಜಪಿಸಬೇಕು.
ಗಾಸ್ತು ಶುಶ್ರೂಷತೇ ಯಶ್ಚ ಸಮನ್ವೇತಿ ಚ ಸರ್ವಶಃ |
ತಸ್ಮೈ ತುಷ್ಟಾಃ ಪ್ರಯಚ್ಛಂತಿ ವರಾನಪಿ ಸುದುರ್ಲಭಾನ್ ॥32॥
ಯಾವನು ಗೋವುಗಳ ಸೇವೆಯನ್ನು ಮಾಡುತ್ತಾನೆಯೋ, ಎಲ್ಲ ಕಡೆಗಳಲ್ಲಿಯೂ ಅವುಗಳನ್ನು ಹಿಂಬಾಲಿಸುತ್ತಾನೆಯೋ ಅವನಿಗೆ ಸಂತುಷ್ಟವಾದ ಗೋವುಗಳು ಅತ್ಯಂತ ದುರ್ಲಭವಾದ ವರಗಳನ್ನು ಕೊಡುತ್ತವೆ.
ನ ದ್ರುಹ್ಯೇನ್ಮನಸಾ ಚಾಪಿ ಗೋಷು ತಾ ಹಿ ಸುಖಪ್ರದಾಃ |

ಅರ್ಚಯೇತ ಸದಾ ಚೈವ ನಮಸ್ಕಾರೈಶ್ಚ ಪೂಜಯೇತ್ |
ದಾಂತಃ ಪ್ರೀತಮನಾ ನಿತ್ಯಂ ಗವಾಂ ವ್ಯುಷ್ಟಿಂ ತಥಾಶ್ನುತೇ ॥33॥
ಗೋವುಗಳಿಗೆ ಮನಸ್ಸಿನಲ್ಲಿಯೂ ದ್ರೋಹವನ್ನು ಮಾಡಬಾರದು. ಅವುಗಳು ಸುಖಪ್ರದವಾದವುಗಳು. ಯಾವಾಗಲೂ ಅವುಗಳನ್ನು ಅರ್ಚಿಸಿ ನಮಸ್ಕರಿಸಿ ಪೂಜಿಸಬೇಕು. ಇಂದ್ರಿಯನಿಗ್ರಹ ಹೊಂದಿ ಸಂತೋಷದಿಂದ ನಿತ್ಯವೂ ಹೀಗೆ ಮಾಡುವವನು ಗೋಸಮೃದ್ಧಿಯನ್ನು ಹೊಂದುತ್ತಾನೆ.
ಯೇನ ದೇವಾಃ ಪವಿತ್ರೇಣ ಭುಂಜತೇ ಲೋಕಮುತ್ತಮಮ್ |
ಯತ್ಪವಿತ್ರಂ ಪವಿತ್ರಾಣಾಂ ತದ್ ಘೃತಂ ಶಿರಸಾ ವಹೇತ್ ॥34॥
ಯಾವ ಪವಿತ್ರವಾದ ಗೋದಾನದಿಂದ ದೇವತೆಗಳು ಶ್ರೇಷ್ಠವಾದ ಲೋಕಗಳನ್ನು ಅನುಭವಿಸುತ್ತಾರೆಯೋ, ಯಾವುದು ಪವಿತ್ರಗಳಿಗಿಂತಲೂ ಪವಿತ್ರವೋ ಅಂತಹ ಗೋವುಗಳಿಂದ ಉಂಟಾದ ಘೃತವನ್ನು ಶಿರಸ್ಸಿನಲ್ಲಿ ಧರಿಸಬೇಕು.
ಘೃತೇನ ಜುಹುಯಾದಗ್ನಿಂ ಘೃತೇನ ಸ್ವಸ್ತಿ ವಾಚಯೇತ್ |
ಘೃತಂ ಪ್ರಾಶೇದ್ ಘೃತಂ ದದ್ಯಾದ್ ಗವಾಂ ವ್ಯುಷ್ಟಿಂ ತಥಾಶ್ನುತೇ ॥35॥
ಅಗ್ನಿಗೆ ಘೃತದಿಂದ ಹೋಮವನ್ನು ಮಾಡಬೇಕು. ಸ್ವಸ್ತಿವಾಚನವನ್ನು ಘೃತದಿಂದ ಮಾಡಿಸಬೇಕು. ಘೃತವನ್ನು ಪಾನ ಮಾಡಬೇಕು. ದಾನ ಮಾಡಬೇಕು. ಅಂತಹವನು ಗೋಸಮೃದ್ಧಿಯನ್ನು ಹೊಂದುತ್ತಾನೆ.
ತ್ರ್ಯಹಮುಷ್ಣಂ ಪಿಬೇನ್ಮೂತ್ರಂ ತ್ರ್ಯಹಮುಷ್ಣಂ ಪಿಬೇತ್ ಪಯಃ |
ಗವಾಮುಷ್ಣಂ ಪಯಃ ಪೀತ್ವಾ ತ್ರ್ಯಹಮುಷ್ಣಂ ಘೃತಂ ಪಿಬೇತ್ |
ತ್ರ್ಯಹಮುಷ್ಣಂ ಘೃತಂ ಪೀತ್ವಾ ವಾಯುಭಕ್ಷೋ ಭವೇತ್ ತ್ರ್ಯಹಮ್ ॥
ಮೂರುದಿವಸ ಬಿಸಿಯಾದ ಗೋಮೂತ್ರವನ್ನು ಪಾನ ಮಾಡಬೇಕು. ಮೂರು ದಿವಸ ಬಿಸಿಯಾದ ಕ್ಷೀರವನ್ನು ಪಾನ ಮಾಡಬೇಕು. ಬಿಸಿಯಾದ ಕ್ಷೀರಪಾನ ಮಾಡಿದ ನಂತರ ಮೂರು ದಿವಸ ಬಿಸಿಯಾದ ತುಪ್ಪವನ್ನು ಪಾನ ಮಾಡಬೇಕು. ಬಿಸಿಯಾದ ತುಪ್ಪವನ್ನು ಪಾನ ಮಾಡಿ ಅನಂತರ ಮೂರು ದಿನ ಕೇವಲ ವಾಯುಭಕ್ಷನಾಗಿರಬೇಕು.
ನಿರ್ಹೃತೈಶ್ಚ ಯವೈರ್ಗೋಭಿರ್ಮಾಸಂ ಪ್ರಸೃತಯಾವಕಃ |
ಬ್ರಹ್ಮಹತ್ಯಾಸಮಂ ಪಾಪಂ ಸರ್ವಮೇತೇನ ಶುದ್ಧ್ಯತಿ ॥37॥
ಅನಂತರ ಒಂದು ತಿಂಗಳ ಕಾಲ ಗೋವುಗಳಿಗೆ ಗೋದಿಯನ್ನು ಕೊಟ್ಟು ಗೋಮಯದಲ್ಲಿ ಬಂದ ಗೋದಿಗಳ ಕಾಳುಗಳಿಂದ ಗಂಜಿಯನ್ನು ಮಾಡಿ ಅದರಿಂದ ಜೀವಿಸಬೇಕು. ಈ ವ್ರತವು ಬ್ರಹ್ಮಹತ್ಯೆಗೆ ಸಮವಾದ ಎಲ್ಲ ಪಾಪಗಳನ್ನೂ ಪರಿಹರಿಸಿ ಶುದ್ಧಗೊಳಿಸುತ್ತದೆ.
ಪರಾಭವಾರ್ಥಂ ದೈತ್ಯಾನಾಂ ದೇವೈಃ ಶೌಚಮಿದಂ ಕೃತಮ್ |
ದೇವತ್ವಮಪಿ ಚ ಪ್ರಾಪ್ತಾಃ ಸಂಸಿದ್ಧಾಶ್ಚ ಮಹಾಬಲಾಃ ॥38॥
ದೈತ್ಯರನ್ನು ಪರಾಭವಗೊಳಿಸಲು ದೇವತೆಗಳು ಈ ವ್ರತವನ್ನು ಮಾಡಿದರು. ದೈತ್ಯರನ್ನು ಪರಾಭವಗೊಳಿಸಿ, ಜೊತೆಗೆ ದೇವತ್ವವನ್ನೂ ಹೊಂದಿ ಸಂಸಿದ್ಧರೂ, ಮಹಾಬಲರೂ ಆದರು.
ಗಾವಃ ಪವಿತ್ರಾಃ ಪುಣ್ಯಾಶ್ಚ ಪಾವನಂ ಪರಮಂ ಮಹತ್ |
ತಾಶ್ಚ ದತ್ತ್ವಾ ದ್ವಿಜಾತಿಭ್ಯೋ ನರಃ ಸ್ವರ್ಗಮುಪಾಶ್ನುತೇ ॥39॥
ಗೋವುಗಳು ಪವಿತ್ರವಾದವುಗಳು, ಪುಣ್ಯಪ್ರದವಾದವುಗಳು, ಪರಮ ಪಾವನವಾದವುಗಳು. ಬ್ರಾಹ್ಮಣರಿಗೆ ಅವುಗಳನ್ನು ದಾನ ಮಾಡುವ ಮನುಷ್ಯನು ಸ್ವರ್ಗವನ್ನು ಹೊಂದುತ್ತಾನೆ.
ಗವಾಂ ಮಧ್ಯೇ ಶುಚಿರ್ಭೂತ್ವಾ ಗೋಮತೀಂ ಮನಸಾ ಜಪೇತ್ |
ಪೂತಾಭಿರದ್ಭಿರಾಚಮ್ಯ ಶುಚಿರ್ಭವತಿ ನಿರ್ಮಲಃ ॥40॥
ಗೋವುಗಳ ಮಧ್ಯದಲ್ಲಿಯೇ ಶುಚಿಯಾಗಿ ನಿಂತು ಗೋಮತೀ ಮಂತ್ರವನ್ನು ಮನಸ್ಸಿನಲ್ಲಿ ಜಪಿಸಬೇಕು. ಅನಂತರ ಪವಿತ್ರವಾದ ನೀರಿನಿಂದ ಆಚಮನ ಮಾಡಿ ಮನುಷ್ಯನು ನಿರ್ಮಲನಾಗಿ ಶುಚಿಯಾಗುತ್ತಾನೆ.
ಅಗ್ನಿಮಧ್ಯೇ ಗವಾಂ ಮಧ್ಯೇ ಬ್ರಾಹ್ಮಣಾನಾಂ ಚ ಸಂಸದಿ |
ವಿದ್ಯಾವೇದವ್ರತಸ್ನಾತಾ ಬ್ರಾಹ್ಮಣಾಃ ಪುಣ್ಯಕರ್ಮಿಣಃ ॥41॥
ಅಧ್ಯಾಪಯೇರನ್ ಶಿಷ್ಯಾನ್ ವೈ ಗೋಮತೀಂ ಯಜ್ಞಸಮ್ಮಿತಾಮ್ |
ತ್ರಿರಾತ್ರೋಪೋಷಿತಃ ಶ್ರುತ್ವಾ ಗೋಮತೀಂ ಲಭತೇ ವರಮ್ ॥42॥
ಯಜ್ಞಕ್ಕೆ ಸಮವಾದ ಗೋಮತೀ ಮಂತ್ರವನ್ನು ಪುಣ್ಯಕರ್ಮಿಗಳಾದ, ವಿದ್ಯಾ ವೇದ ವ್ರತಗಳಲ್ಲಿ ಸ್ನಾತರಾದ ಬ್ರಾಹ್ಮಣರು ಅಗ್ನಿಮಧ್ಯದಲ್ಲಿ, ಗೋಮಧ್ಯದಲ್ಲಿ, ಬ್ರಾಹ್ಮಣರ ಮಧ್ಯದಲ್ಲಿ ಶಿಷ್ಯರಿಗೆ ಉಪದೇಶ ಮಾಡಬೇಕು. ಮೂರು ರಾತ್ರಿ ಉಪವಾಸವನ್ನು ಮಾಡಿ ಗೋಮತೀ ಮಂತ್ರವನ್ನು ಶ್ರವಣ ಮಾಡುವವನು ಅಭೀಷ್ಟವಾದ ವರಗಳನ್ನು ಪಡೆಯುತ್ತಾನೆ.
ಪುತ್ರಕಾಮಶ್ಚ ಲಭತೇ ಪುತ್ರಂ ಧನಮಥಾಪಿ ಚ |
ಪತಿಕಾಮಾ ಚ ಭರ್ತಾರಂ ಸರ್ವಕಾಮಾಂಶ್ಚ ಮಾನವಃ |
ಗಾವಸ್ತುಷ್ಟಾಃ ಪ್ರಯಚ್ಛಂತಿ ಸೇವಿತಾ ವೈ ನ ಸಂಶಯಃ ॥43॥
ಪುತ್ರಕಾಮನಾದವನು ಪುತ್ರನನ್ನು ಮತ್ತು ಧನವನ್ನು ಪಡೆಯುತ್ತಾನೆ. ಪತಿಕಾಮನೆಯುಳ್ಳ ಕನ್ಯೆಯು ಪತಿಯನ್ನು ಪಡೆಯುತ್ತಾಳೆ. ಮನುಷ್ಯನು ಎಲ್ಲ ಕಾಮಗಳನ್ನೂ ಪಡೆಯುತ್ತಾನೆ. ಗೋವುಗಳನ್ನು ಸೇವೆ ಮಾಡಿದರೆ ಅವು ಸಂತೋಷದಿಂದ ಎಲ್ಲವನ್ನೂ ಕೊಡುತ್ತವೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಏವಮೇತಾ ಮಹಾಭಾಗಾ ಯಜ್ಞಯಾಃ ಸರ್ವಕಾಮದಾಃ |

ರೋಹಿಣ್ಯ ಇತಿ ಜಾನೀಹಿ ನೈತಾಭ್ಯೋ ವಿದ್ಯತೇ ಪರಮ್ ॥44॥
ಈ ರೀತಿಯಲ್ಲಿ ಈ ಗೋವುಗಳು ಮಹಾಭಾಗ್ಯವಂತವಾದವುಗಳು, ಯಜ್ಞ ಪ್ರವರ್ತಕವಾದವುಗಳು, ಸರ್ವಕಾಮಪ್ರದವಾದವುಗಳು ಎಂದು ತಿಳಿ. ಇವುಗಳಿಗಿಂತ ಶ್ರೇಷ್ಠವಾದುದು ಇನ್ನೊಂದಿಲ್ಲ.
ಇತ್ಯುಕ್ತಃ ಸ ಮಹಾತೇಜಾಃ ಶುಕಃ ಪಿತ್ರಾ ಮಹಾತ್ಮನಾ |
ಪೂಜಯಾಮಾಸ ಗಾ ನಿತ್ಯಂ ತಸ್ಮಾತ್ ತ್ವಮಪಿ ಪೂಜಯ ॥45॥
ಎಲೈ ಯುಧಿಷ್ಠಿರನೇ, ಮಹಾತ್ಮರಾದ ತಂದೆಯಿಂದ ಹೀಗೆ ಉಪದೇಶಿಸಲ್ಪಟ್ಟ ಮಹಾತೇಜಸ್ವಿಗಳಾದ ಶುಕಾಚಾರ್ಯರು ನಿತ್ಯವೂ ಗೋಪೂಜೆಯನ್ನು ಮಾಡಿದರು. ಆದ್ದರಿಂದ ನೀನೂ ಸಹ ಗೋವನ್ನು ಪೂಜಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವ್ಯಾಸಶುಕಸಂವಾದೋ ನಾಮ
ಏಕಾದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೆರಡನೆಯ ಅಧ್ಯಾಯ
ಗೋಲೋಕಸ್ಥಿತಿ
ಯುಧಿಷ್ಠಿರಃ
ಸುರಾಣಾಮಸುರಾಣಾಂ ಚ ಭೂತಾನಾಂ ಚ ಪಿತಾಮಹ |
ಪ್ರಭುಃ ಸ್ರಷ್ಟಾ ಚ ಭಗವಾನ್ ಮುನಿಭಿಃ ಸ್ತೂಯತೇ ಭುವಿ ॥1॥
ತಸ್ಯೋಪರಿ ಕಥಂ ಹ್ಯೇಷ ಗೋಲೋಕಃ ಸ್ಥಾನತಾಂ ಗತಃ |
ಸಂಶಯೋ ಮೇ ಮಹಾನೇಷ ತನ್ಮೇ ವ್ಯಾಖ್ಯಾತುಮರ್ಹಸಿ ॥2॥
ಯುಧಿಷ್ಠಿರ ಎಲೈ ಪಿತಾಮಹನೇ, ದೇವತೆಗಳನ್ನೂ, ಅಸುರರನ್ನೂ ಮತ್ತು ಎಲ್ಲಾ ಪ್ರಾಣಿಗಳನ್ನು ಸೃಷ್ಟಿ ಮಾಡುವವರು ಮತ್ತು ಅವರಿಗೆ ಪ್ರಭುವಾದವರು ಪೂಜ್ಯರಾದ ಬ್ರಹ್ಮದೇವರು ಎಂದು ಭೂಮಿಯಲ್ಲಿ ಋಷಿಗಳಿಂದ ಸ್ತೋತ್ರ ಮಾಡಲ್ಪಡುತ್ತಾರೆ. ಈ ಗೋಲೋಕವು ಅವರ ಮೇಲೆ ಹೇಗೆ ಸ್ಥಾನವನ್ನು ಹೊಂದಿತು? ನನಗೆ ಈ ವಿಷಯದಲ್ಲಿ ದೊಡ್ಡ ಸಂಶಯವಿದೆ. ಅದನ್ನು ಪರಿಹರಿಸಬೇಕು.
ಭೀಷ್ಮಃ
ಮನೋವಾಗ್ಬುದ್ಧ್ಯಯಸ್ತಾವದೇಕಸ್ಥಾಃ ಕುರು ಸತ್ತಮ |
ತತೋ ಮೇ ಶೃಣು ಕಾರ್ತ್ಸ್ನ್ಯೇನ ಗೋಮಹಾಭಾಗ್ಯಮುತ್ತಮಮ್ ॥
ಭೀಷ್ಮ ಎಲೈ ಶ್ರೇಷ್ಠನೇ, ಮನೋವಾಗ್ಬುದ್ಧಿಗಳನ್ನು ಒಂದು ಕಡೆಯಲ್ಲಿ ನಿಲ್ಲಿಸಿ ಅನಂತರ ನಾನು ಹೇಳುವ ಗೋವುಗಳ ಶ್ರೇಷ್ಠವಾದ ಮಹಾಭಾಗ್ಯವನ್ನು ಪೂರ್ಣವಾಗಿ ಕೇಳುವವನಾಗು.
ಪುಣ್ಯಂ ಯಶಸ್ಯಮಾಯುಷ್ಯಂ ತಥಾ ಸ್ವಸ್ತ್ಯಯನಂ ಮಹತ್ |
ಕೀರ್ತಿರ್ವಿಹರತಾಂ ಲೋಕೇ ಗವಾಂ ಯೋಗೇ ತು ಭಕ್ತಿಮಾನ್ ॥4॥
ಈ ಆಖ್ಯಾನವು ಗೋವುಗಳಲ್ಲಿ ಭಕ್ತಿಯುಳ್ಳವನಿಗೆ ಪುಣ್ಯವನ್ನೂ, ಕೀರ್ತಿಯನ್ನೂ, ಆಯುಷ್ಯವನ್ನೂ, ದೊಡ್ಡ ಮಂಗಳವನ್ನೂ ತಂದುಕೊಡುತ್ತದೆ. ಗಂಧರ್ವಾದಿ ವಿಹರಿಸುವ ಲೋಕದಲ್ಲಿಯೂ ಕೀರ್ತಿಯುಂಟಾಗುತ್ತದೆ.
ಶ್ರೂಯತೇ ಹಿ ಪುರಾಣೇಷು ಮಹರ್ಷೀಣಾಂ ಮಹಾತ್ಮನಾಮ್ |
ಸಂಸ್ಥಾನೇ ಸರ್ವಲೋಕಾನಾಂ ದೇವಾನಾಂ ಚಾಪಿ ಸಂಭವೇ ॥5॥
ದೇವತಾರ್ಥೇಽಮೃತಾರ್ಥೇ ಚ ಯಜ್ಞಾರ್ಥೇ ಚೈವ ಭಾರತ |
ಸುರಭಿರ್ನಾಮ ವಿಖ್ಯಾತಾ ರೋಹಿಣೀ ಕಾಮರೂಪಿಣೀ ॥6॥
ಸಂಕಲ್ಪ್ಯ ಮನಸಾ ಪೂರ್ವಂ ರೋಹಿಣೀ ಹ್ಯಮೃತಾನನಾ |
ಘೋರಂ ತಪಃ ಸಮಾಸ್ಥಾಯ ನಿರ್ಮಿತಾ ವಿಶ್ವಕರ್ಮಣಾ ॥7॥
ಪುರಾಣಗಳಲ್ಲಿ ಈ ವಿಷಯವು ಕೇಳಿಬರುತ್ತದೆ. ಮಹಾತ್ಮರಾದ ಮಹರ್ಷಿಗಳ ಸಂಸ್ಥಾಪನೆಗೋಸ್ಕರವಾಗಿ ಸರ್ವಲೋಕಗಳ ಮತ್ತು ದೇವತೆಗಳ ಉತ್ಪತ್ತಿಗಾಗಿ, ದೇವತೆಗಳ ಸಲುವಾಗಿ, ಅಮೃತದ ಸಲುವಾಗಿ, ಯಜ್ಞಗಳ ಸಲುವಾಗಿ, ಸುರಭಿ ಎಂಬ ಪ್ರಖ್ಯಾತಳಾದ ಕಾಮರೂಪವನ್ನು ಧರಿಸಿ ಧೇನುವನ್ನು ಎಲ್ಲವನ್ನೂ ಸೃಷ್ಟಿಸುವ ಬ್ರಹ್ಮದೇವರು ಘೋರ ತಪಸ್ಸನ್ನು ಆಚರಿಸಿ ಮನಸ್ಸಿನಿಂದ ಸಂಕಲ್ಪವನ್ನು ಮಾಡಿ ಮುಖದಲ್ಲಿ ಅಮೃತವನ್ನು ಹೊಂದಿದ್ದ ಅವಳನ್ನು ಸೃಷ್ಟಿ ಮಾಡಿದರು (ಕಾಮ ರೂಪಿಣಿಯಾದುದರಿಂದ ಅವಳಿಗೆ ಗೋರೂಪವೂ, ಕನ್ಯಾರೂಪವೂ ಇದೆ).
ಪುರುಷಂ ಚಾಸೃಜದ್ ಭೂಯಸ್ತೇಜಸಾ ತಪಸಾ ಚ ಹ |
ದೇದೀಪ್ಯಮಾನಂ ವಪುಷಾ ಸಮಿದ್ಧಮಿವ ಪಾವಕಮ್ ॥8॥
ಪುನಃ ಬ್ರಹ್ಮದೇವರು ತಮ್ಮ ತೇಜಸ್ಸಿನಿಂದಲೂ, ತಪಸ್ಸಿನಿಂದಲೂ ಜ್ವಲಿಸುವ ಅಗ್ನಿಯಂತೆ ತನ್ನ ದೇಹದಿಂದ ಪ್ರಕಾಶಿಸುವ ಪುರುಷನನ್ನು ಸೃಷ್ಟಿಸಿದರು.
ಸೋಽಪಶ್ಯದ್ ದಿವ್ಯರೂಪಾಂ ತಾಂ ಸುರಭಿಂ ರೋಹಿಣೀಂ ತದಾ |
ದೃಷ್ಟ್ವೈವ ಚಾತಿವಿಮನಾಃ ಸೋಽಭವತ್ ಕಾಮಮೋಹಿತಃ ॥9॥
ಆ ಪುರುಷನು ದಿವ್ಯರೂಪವನ್ನು ಧರಿಸಿದ ಆ ರೋಹಿಣಿಯಾದ ಸುರಭಿ ಕನ್ಯೆಯನ್ನು ನೋಡಿದನು. ನೋಡಿದ ತಕ್ಷಣವೇ ಮನಸ್ಸಿನ

ಸ್ಥೈರ್ಯವನ್ನು ಕಳೆದುಕೊಂಡು ಅವಳಲ್ಲಿ ಅವನು ಕಾಮಮೋಹಿತನಾದನು.
ತಂ ಕಾಮಾರ್ತಮಥೋ ಜ್ಞಾತ್ವಾ ಸ್ವಯಂ ಭೂಲೋಕಭಾವನಃ |
ಮಾಽಽರ್ತೋರ್ಭವ ತಥಾ ಚೈಷ ಭಗವಾನಭ್ಯಭಾಷತ ॥10॥
ಭೂಲೋಕವನ್ನು ಸೃಷ್ಟಿಸಿದ ಪೂಜ್ಯರಾದ ಈ ಬ್ರಹ್ಮದೇವರು ಕಾಮಾರ್ತನಾದ ಅವನನ್ನು ನೋಡಿ ಅವನಿಗೆ ಆರ್ತನಾಗಬೇಡ ಎಂದು ಹೇಳಿದರು.
ತತಃ ಸ ಭಗವಾಂಸ್ತತ್ರ ಮಾರ್ತಂಡ ಇತಿ ವಿಶ್ರುತಃ |
ಚಕಾರ ನಾಮ ತಂ ದೃಷ್ಟ್ವಾ ತಸ್ಯಾರ್ತೀಭಾವಮುತ್ತಮಮ್ ॥11॥
ಅನಂತರ ಪ್ರಖ್ಯಾತರಾದ ಪೂಜ್ಯರಾದ ಬ್ರಹ್ಮದೇವರು ಅವನ ಆರ್ತಭಾವವನ್ನು ನೋಡಿ ಅವನಿಗೆ ಮಾರ್ತಂಡ ಎಂದು ನಾಮಕರಣ ಮಾಡಿದರು.
ಸೋಽದದಾದ್ ಭಗವಾಂಸ್ತಸ್ಮೈ ಮಾರ್ತಂಡಾಯ ಮಹಾತ್ಮನೇ |
ಸುರೂಪಾಂ ಸುರಭಿಂ ಕನ್ಯಾಂ ತಪಸ್ತೇಜೋಮಯೀಂ ಶುಭಾಮ್ ॥
ಪೂಜ್ಯರಾದ ಬ್ರಹ್ಮದೇವರು ಮಹಾತ್ಮನಾದ ಮಾರ್ತಂಡನಿಗೆ ಸುರೂಪಳಾದ, ಶುಭಳಾದ, ತಪಸ್ಸಾರರೂಪಳಾದ ಸುರಭಿಯನ್ನು ಕೊಟ್ಟರು.
ಯಥಾ ಮಯ್ಯೈಷಾ ಚೋದ್ಭೂತಸ್ತ್ವಂ ಚೈವೈಷಾ ಚ ರೋಹಿಣೀ |
ಮೈಥುನಂ ಗತವಂತೌ ಚ ತಥಾ ಚೋತ್ಪತ್ಸ್ಯತಿ ಪ್ರಜಾ ॥13॥
ಪ್ರಜಾ ಭವಿಷ್ಯತೇ ಪುಣ್ಯಾ ಪವಿತ್ರಂ ಪರಮಂ ಚ ವಾಮ್ |
ನ ಚಾಪ್ಯಗಮ್ಯಾಗಮನಾದ್ ದೋಷಂ ಪ್ರಾಪ್ಸ್ಯಸಿ ಕರ್ಹಿಚಿತ್ ॥14॥
ನೀನು ನನ್ನಿಂದ ಜನಿಸಿದಂತೆಯೇ ಈ ರೋಹಿಣಿಯೂ (ಸುರಭಿ) ನನ್ನಿಂದ ಜನಿಸಿದ್ದಾಳೆ. ನೀನು ಮೈಥುನವನ್ನು ಮಾಡಿ ಪ್ರಜೆಗಳನ್ನು ಪಡೆ. ನಿಮಗೆ ಶ್ರೇಷ್ಠವಾದ, ಪವಿತ್ರವಾದ ಪುಣ್ಯಪ್ರದರಾದ ಪ್ರಜೆಗಳು ಜನಿಸುತ್ತಾರೆ. ನಿನಗೆ ಅಗಮ್ಯಾಗಮನ ದೋಷವು ಬರುವುದಿಲ್ಲ.
ತ್ವತ್ಪ್ರಜಾಸಂಭವಂ ಕ್ಷೀರಂ ಭವಿಷ್ಯತಿ ಪರಂ ಹವಿಃ |
ಯಜ್ಞೇಷು ಚಾಜ್ಯಭಾಗಾನಾಂ ತ್ವತ್ಪ್ರಜಾಮೂಲಜೋ ವಿಧಿಃ ॥15॥
ನಿಮ್ಮ ಪ್ರಜೆಗಳಿಂದ ಉಂಟಾಗುವ ಕ್ಷೀರವು ಶ್ರೇಷ್ಠವಾದ ಹವಿಸ್ಸಾಗುವುದು. ಯಜ್ಞಗಳಲ್ಲಿ ಆಜ್ಯಭಾಗಗಳಿಗೆ ನಿಮ್ಮ ಪ್ರಜೆಗಳಿಂದ ಬಂದ ಆಜ್ಯವೇ ವಿಹಿತವಾಗುವುದು.
ಪ್ರಜಾಶಿಶ್ರೂಷವಶ್ಚೈವ ಯೇ ಭವಿಷ್ಯಂತಿ ರೋಹಿಣಿ |
ತವ ತೇನೈವ ಪುಣ್ಯೇನ ಗೋಲೋಕಂ ಯಾಂತು ಮಾನವಾಃ ॥16॥
ಎಲೌ ರೋಹಿಣಿಯೇ, ಯಾರು ನಿನ್ನ ಪ್ರಜೆಗಳ ಸೇವೆಯನ್ನು ಮಾಡುವರೋ ಆ ಮಾನವರು ಆ ಪುಣ್ಯದಿಂದ ಗೋಲೋಕಕ್ಕೆ ಹೋಗುವವರಾಗಲಿ.
ಇದಂ ಪವಿತ್ರಂ ಪರಮಮೃಷಭಂ ನಾಮ ಕರ್ಹಿಚಿತ್ |
ಯದ್ವೈ ಜ್ಞಾತ್ವಾ ದ್ವಿಜಾ ಲೋಕೇ ಮೋಕ್ಷ್ಯಂತೇ ಯೋನಿಸಂಕರಾತ್ ॥
ಈ ಆಖ್ಯಾನವು ಶ್ರೇಷ್ಠವಾದುದು ಮತ್ತು ಪವಿತ್ರವಾದುದು. ಇದು ವೃಷಭ ಎಂದು ಹೇಳಲ್ಪಡುತ್ತದೆ. ಇದನ್ನು ತಿಳಿದ ಬ್ರಾಹ್ಮಣರು ಯೋನಿಸಂಕರ ದೋಷದಿಂದ ಮುಕ್ತರಾಗುತ್ತಾರೆ.
ಏತತ್ಕ್ರಿಯಾಃ ಪ್ರಪತ್ಸ್ಯಂತೇ ಮಂತ್ರಬ್ರಾಹ್ಮಣಸಂಸ್ಕೃತಾಃ |
ದೇವತಾನಾಂ ಪಿತೄಣಾಂ ಚ ಹವ್ಯಕವ್ಯಪುರೋಗಮಾಃ ॥18॥
ದೇವತೆಗಳನ್ನು, ಪಿತೃಗಳನ್ನು ಉದ್ದೇಶಿಸಿ ಮಾಡುವ ಹವ್ಯಕವ್ಯ ಮೊದಲಾದ ಕ್ರಿಯೆಗಳಲ್ಲೆವೂ ಪ್ರಜೆಗಳಿಂದ ಮಂತ್ರಬ್ರಾಹ್ಮಣ ಸಂಸ್ಕೃತಗಳಾಗಿ (ನಿಮ್ಮ ಸಹಕಾರದಿಂದ) ಮಾಡಲ್ಪಡುತ್ತವೆ.
ತತ ಏತೇನ ಪುಣ್ಯೇನ ಪ್ರಜಾಸ್ತವ ತು ರೋಹಿಣಿ |
ಊರ್ಧ್ವಂ ಮಮಾಪಿ ಲೋಕಸ್ಯ ವತ್ಸ್ಯಂತೇ ನಿರುಪದ್ರವಾಃ ॥19॥
ಎಲೌ ರೋಹಿಣಿಯೇ, ಈ ಪುಣ್ಯದಿಂದ ನಿನ್ನ ಪ್ರಜೆಗಳು ನನ್ನ ಲೋಕಕ್ಕಿಂತ ಮೇಲಿನ ಸ್ಥಾನದಲ್ಲಿ ಯಾವ ಉಪದ್ರವವೂ ಇಲ್ಲದೆ ವಾಸ ಮಾಡುತ್ತಾರೆ.
ಭದ್ರಂ ತೇಭ್ಯಶ್ಚ ಭದ್ರಂ ತೇ ಯೇ ಪ್ರಜಾಸು ಭವಂತಿ ವೈ |
ಯುಗಂಧರಾಶ್ಚ ತೇ ಪುತ್ರಾಃ ಸಂತು ಲೋಕಸ್ಯ ಧಾರಣೇ ॥20॥
ನಿನ್ನ ಪ್ರಜೆಗಳಿಗೆ ಮಂಗಳವಾಗಲಿ. ನಿನ್ನ ಪ್ರಜೆಗಳ ಸೇವೆಯನ್ನೂ ಮಾಡುವವರಿಗೆ ಮಂಗಳವಾಗಲಿ. ಯುಗಂಧರರೆನಿಸುವ ನಿನ್ನ ಪುತ್ರರು ಲೋಕಧಾರಣೆಯನ್ನು ಮಾಡುವವರಾಗಲಿ.
ಯಾನ್ ಯಾನ್ ಕಾಮಯಸೇ ಲೋಕಾಂಸ್ತಾಲ್ಲೋಕಾನನುಯಾಸ್ಯಸಿ |
ಸರ್ವದೇವಗಣಾಶ್ಚೈವ ತವ ಯಾಸ್ಯಂತಿ ಪುತ್ರತಾಮ್ |
ತವ ಸ್ತನಸಮುದ್ಭೂತಂ ಪಿಬಂತೋಽಮೃತಮುತ್ತಮಮ್ ॥21॥
ನೀನು ಬಯಸಿದ ಲೋಕಗಳನ್ನೆಲ್ಲಾ ನೀನು ಹೊಂದುವಿ. ಎಲ್ಲ ದೇವತೆಗಳು ನಿನ್ನ ಪ್ರಜೆಗಳಿಂದ ಉದ್ಭವಿಸಿದ ಶ್ರೇಷ್ಠವಾದ ಅಮೃತವನ್ನು ಪಾನ ಮಾಡಿ ನಿನ್ನ ಪುತ್ರರಾಗುವರು.
ಏವಮೇತಾನ್ ವರಾನ್ ಸರ್ವಾನಗೃಹ್ಣಾತ್ ಸುರಭಿಸ್ತದಾ |
ಬ್ರುವತಃ ಸರ್ವಲೋಕೇಶಾನ್ನಿರ್ವೃತಿಂ ಚಾಗಮತ್ ಪರಾಮ್ ॥22॥

ಈ ರೀತಿಯಲ್ಲಿ ಸುರಭಿಯು ಆಗ ಸರ್ವಲೋಕೇಶ್ವರನಾದ ಬ್ರಹ್ಮನಿಂದ ಎಲ್ಲ ವರಗಳನ್ನೂ ಸ್ವೀಕರಿಸಿ ಶ್ರೇಷ್ಠವಾದ ತೃಪ್ತಿಯನ್ನು ಹೊಂದಿದಳು.
ಸೃಷ್ಟ್ವಾ ಪ್ರಜಾಶ್ಚ ವಿಪುಲಾ ಲೋಕಸಂಧಾರಣಾಯ ವೈ |
ಬ್ರಹ್ಮಣಾ ಸಮನುಜ್ಞಾತಾ ಸುರಭಿರ್ಲೋಕಮಾವಿಶತ್ ॥23॥
ಲೋಕವನ್ನು ಧರಿಸುವ ವಿಪುಲರಾದ ಪ್ರಜೆಗಳನ್ನು ಸೃಷ್ಟಿಸಿ ಬ್ರಹ್ಮದೇವರ ಅನುಮತಿಯನ್ನು ಪಡೆದು ಸುರಭಿಯು ಆ ಲೋಕವನ್ನು ಪ್ರವೇಶಿಸಿದಳು.
ಏವಂ ವರಪ್ರದಾನೇನ ಸ್ವಯಂಭೋರೇವ ಭಾರತ |
ಉಪರಿಷ್ಟಾದ್ ಗವಾಂ ಲೋಕಂ ಪ್ರೋಕ್ತಂ ತೇ ಸರ್ವಮಾದಿತಃ ॥24॥
ಎಲೈ ಭಾರತನೇ, ಹೀಗೆ ಬ್ರಹ್ಮದೇವರ ವರಪ್ರದಾನದಿಂದ ಗೋಲೋಕವು ಬ್ರಹ್ಮಲೋಕಕ್ಕಿಂತ ಮೇಲ್ಭಾಗದಲ್ಲಿದೆ. ನಾನು ಎಲ್ಲವನ್ನೂ ಮೊದಲಿನಿಂದಲೂ ನಿನಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ದ್ವಾದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿಮೂರನೆಯ ಅಧ್ಯಾಯ
ಸುರಭಿಯ ಸಂತತಿ
ಯುಧಿಷ್ಠಿರಃ
ಸುರಭೇಃ ಕಾಃ ಪ್ರಜಾಃ ಪೂರ್ವಂ ಮಾರ್ತಾಂಡಾದಭವನ್ ಪುರಾ |
ಏತನ್ಮೇ ಶಂಸ ತತ್ತ್ವೇನ ಗೋಷು ಮೇ ಪ್ರೀಯತೇ ಮನಃ ॥1॥
ಯುಧಿಷ್ಠಿರ ಸುರಭಿಗೆ ಮಾರ್ತಾಂಡನಿಂದ ಮೊದಲು ಯಾವ ಪ್ರಜೆಗಳು ಜನಿಸಿದರು? ಈ ವಿಷಯವನ್ನು ನನಗೆ ಸರಿಯಾಗಿ ಹೇಳಿ. ಗೋವುಗಳ ವಿಷಯದಲ್ಲಿ ನನ್ನ ಮನಸ್ಸು ಬಹಳ ಸಂತೋಷಪಡುತ್ತದೆ.
ಭೀಷ್ಮಃ
ಶೃಣು ನಾಮಾನಿ ದಿವ್ಯಾನಿ ಗೋಮಾತೄಣಾಂ ವಿಶೇಷತಃ |
ಯಾಭಿರ್ವ್ಯಾಪ್ತಾಸ್ತ್ರಯೋ ಲೋಕಾಃ ಕಲ್ಯಾಣೀಭಿರ್ಜನಾಧಿಪ ॥2॥
ಭೀಷ್ಮ ಎಲೈ ಜನಾಧಿಪನೇ, ಯಾವ ಗೋಮಾತೆಯರಿಂದ ಮೂರು ಲೋಕಗಳೂ ತುಂಬಿ ಹೋದವೋ ಅಂತಹ ಗೋಮಾತೆಯರ ದಿವ್ಯನಾಮಗಳನ್ನು ಕೇಳು.
ಸುರಭ್ಯಃ ಪ್ರಥಮೋದ್ಭೂತಾ ಯಾಶ್ಚ ಸ್ಯುಃ ಪ್ರಥಮಾಃ ಪ್ರಜಾಃ |
ಮಯೋಚ್ಯಮಾನಾಃ ಶೃಣು ತಾಃ ಪ್ರಾಪ್ಸ್ಯಸೇ ವಿಪುಲಂ ಯಶಃ ॥3॥
ಸುರಭಿಯಿಂದ ಮೊದಲು ಜನಿಸಿದ ಪ್ರಜೆಗಳು ಯಾರು ಎಂಬುದನ್ನು ನನ್ನಿಂದ ಕೇಳು. ಅದರಿಂದ ವಿಪುಲವಾದ ಕೀರ್ತಿಯನ್ನು ಹೊಂದುವಿ.
ತಪಃತಪ್ತ್ವಾ ತಪೋ ಘೋರತಪಾಃ ಸುರಭಿರ್ದೀಪ್ತತೇಜಸೀ |
ಸುಷಾವೈಕಾದಶ ಸುತಾನ್ ರುದ್ರಾ ಯೇ ಛಂದಸಿ ಸ್ತುತಾಃ ॥4॥
ಘೋರ ತಪಸ್ಸನ್ನು ಮಾಡುವ, ದೀಪ್ತವಾದ ತೇಜಸ್ಸುಳ್ಳ ಸುರಭಿಯು ತಪಸ್ಸನ್ನು ಮಾಡಿ ಏಕಾದಶ ರುದ್ರರನ್ನು ಪುತ್ರರನ್ನಾಗಿ ಪಡೆದಳು. ಅವರು ವೇದದಲ್ಲಿ ರುದ್ರರೆಂದು ಹೇಳಲ್ಪಡುತ್ತಾರೆ.
ಅಜೈಕಪಾದಹಿರ್ಬುಧ್ನ್ಯಸ್ತ್ರ್ಯಂಬಕಶ್ಚ ಮಹಾಯಶಾಃ |
ವೃಷಾಕಪಿಶ್ಚ ಶಂಭುಶ್ಚ ಕಪಾಲೀ ರೈವತಸ್ತಥಾ ॥5॥
ಹರಶ್ಚ ಬಹುರೂಪಶ್ಚ ಉಗ್ರ ಉಗ್ರೋಽಥ ವೀರ್ಯವಾನ್ |
ತಸ್ಯ ಚೈವಾತ್ಮಜಃ ಶ್ರೀಮಾನ್ ವಿಶ್ವರೂಪೋ ಮಹಾಯಶಾಃ ॥6॥
ಅಜೈಕಪಾತ್, ಅಹಿರ್ಬುಧ್ನ್ಯ, ತ್ರ್ಯಂಬಕ, ಮಹಾಯಶ, ವೃಷಾಕಪಿ, ಶಂಭು, ಕಪಾಲಿ, ರೈವತ, ಹರ, ಬಹುರೂಪ, ಉಗ್ರ. ವೀರಶಾಲಿಯಾದ ಉಗ್ರನು ಮಹಾಕೀರ್ತಿವಂತನಾದ, ಕಾಂತಿಯುಕ್ತನಾದ ವಿಶ್ವರೂಪನನ್ನು ಪುತ್ರನನ್ನಾಗಿ ಪಡೆದನು.
ಏಕಾದಶೈತೇ ಕಥಿತಾಃ ರುದ್ರಾಸ್ತೇ ನಾಮ ನಾಮತಃ |
ಮಹಾತ್ಮಾನೋ ಮಹಾಯೋಗಾಸ್ತೇಜೋಯುಕ್ತಾ ಮಹಾಬಲಾಃ ॥7॥
ನಾನು ಈ ಏಕಾದಶ ರುದ್ರರನ್ನು ಅವರ ನಾಮಗಳಿಂದ ಹೇಳಿದ್ದೇನೆ. ಅವರೆಲ್ಲರೂ ಮಹಾತ್ಮರು, ಮಹಾಯೋಗಿಗಳು, ತೇಜೋಯುಕ್ತರಾದವರು ಮತ್ತು ಮಹಾಬಲ ಉಳ್ಳವರು.
ಏತೇ ವರಿಷ್ಠಜನ್ಮಾನೋ ದೇವಾನಾಂ ಬ್ರಹ್ಮವಾದಿನಾಮ್ |
ವಿಪ್ರಾಣಾಂ ಪ್ರಕೃತಿರ್ಲೋಕೇ ಏತ ಏವ ಹಿ ವಿಶ್ರುತಾಃ ॥8॥
ಬ್ರಹ್ಮವಾದಿಗಳಾದ ದೇವತೆಗಳಲ್ಲಿ ಇವರು ಶ್ರೇಷ್ಠ ಜನ್ಮವನ್ನು ಹೊಂದಿದವರು. ಲೋಕದಲ್ಲಿ ಇವರೇ ಬ್ರಾಹ್ಮಣರಿಗೆ ಮೂಲವೆಂದು ವಿಖ್ಯಾತರಾಗಿದ್ದಾರೆ.
ಏತ ಏಕಾದಶ ಪ್ರೋಕ್ತಾಃ ರುದ್ರಾಸ್ತ್ರಿಭುವನೇಶ್ವರಾಃ |
ಶತಂ ತ್ವೇತತ್ಸಮಾಖ್ಯಾತಂ ಶತರುದ್ರಂ ಮಹಾತ್ಮನಾಮ್ ॥9॥

ಆದ್ದರಿಂದ ತ್ರಿಭುವನೇಶ್ವರರಾದ ಇವರು ಏಕಾದಶ ರುದ್ರರೆಂದು ಕರೆಯಲ್ಪಡುತ್ತಾರೆ. ಈ ಮಹಾತ್ಮರ ಮೂರು ನಾಮಗಳು ಶತರುದ್ರರೆಂದು ವೇದದಲ್ಲಿ ಹೇಳಲ್ಪಡುತ್ತದೆ.
ಸುಷುವೇ ಪ್ರಥಮಾಂ ಕನ್ಯಾಂ ಸುರಭಿಃ ಪೃಥಿವೀಂ ತದಾ |
ವಿಶ್ವಕಾಮದುಘಾ ಧೇನುರ್ಯಾ ಧಾರಯತಿ ದೇಹಿನಃ ॥10॥
ಸರ್ವಕಾಮಗಳನ್ನೂ ಕೊಡುವ ಮತ್ತು ಎಲ್ಲ ಪ್ರಜೆಗಳನ್ನೂ ಪೋಷಿಸುವ ಧೇನುವಾದ ಸುರಭಿಯು ಪ್ರಥಮ ಕನ್ಯಾ ಪ್ರಜೆಯಾಗಿ ಪೃಥಿವಿಯನ್ನು ಪಡೆದಳು.
ಸುತಂ ಗೋಬ್ರಾಹ್ಮಣಂ ರಾಜನ್ನೇಕಮಿತ್ಯಭಿಧೀಯತೇ |
ಗೋಬ್ರಾಹ್ಮಣಸ್ಯ ಜನನೀ ಸುರಭಿಃ ಪರಿಕೀರ್ತ್ಯತೇ ॥11॥
ಎಲೈ ರಾಜನೇ, ಪುತ್ರರಾದ, ಗೋ ಮತ್ತು ಬ್ರಾಹ್ಮಣರನ್ನು ಒಂದೇ ಎಂದು ಕರೆಯುತ್ತಾರೆ. ಸುರಭಿಯೇ ಗೋಬ್ರಾಹ್ಮಣರ ಜನನಿ ಎಂದು ಹೇಳಲ್ಪಡುತ್ತಾಳೆ.
ಸೃಷ್ಟ್ವಾ ತು ಪ್ರಥಮಂ ರುದ್ರಾನ್ ವರದಾನ್ ಬ್ರಹ್ಮಸಂಭವಾನ್ |
ಪಶ್ಚಾತ್ ಪ್ರಭುಂ ಗೃಹಪತಿಂ ಸುಷುವೇ ಲೋಕಸಮ್ಮತಮ್ ॥12॥
ಮೊದಲು ವರಪ್ರದರೂ, ವೇದಪ್ರವರ್ತಕರೂ ಆದ ರುದ್ರರನ್ನು ಸೃಷ್ಟಿಸಿ ಸುರಭಿಯು ಅನಂತರ ಲೋಕಸಮ್ಮತನೂ, ಗೃಹಪತಿಯೂ ಆದ ಚಂದ್ರನನ್ನು ಪಡೆದರು.
ಸೋಮರಾಜಾನಮಮೃತಂ ಯಜ್ಞಸರ್ವಸ್ವಮುತ್ತಮಮ್ |
ಓಷಧೀನಾಂ ರಸಾನಾಂ ಚ ದೇವಾನಾಂ ಜೀವಿತಸ್ಯ ಚ ॥13॥
ಚಂದ್ರನು ಸೋಮರಾಜನೆಂದೂ, ಅಮೃತನೆಂದೂ ಕರೆಯಲ್ಪಡುತ್ತಾನೆ. ಶ್ರೇಷ್ಠವಾದ ಯಜ್ಞವೆಲ್ಲವೂ ಅವನನ್ನು ಅವಲಂಬಿಸಿದೆ. ಓಷಧಿಗಳಿಗೆ, ರಸಗಳಿಗೆ, ದೇವತೆಗಳಿಗೆ ಮತ್ತು ಮನುಷ್ಯರ ಜೀವನಕ್ಕೆ ಅವನು ಅಧಿಪತಿಯಾದವನು.
ತತಃ ಶ್ರಿಯಂ ಚ ಮೇಧಾಂ ಚ ಕೀರ್ತಿಂ ದೇವೀಂ ಸರಸ್ವತೀಮ್ |
ಚತಸ್ರಃ ಸುಷುವೇ ಕನ್ಯಾ ಯೋಗೇಷು ನಿಯತಾಃ ಸ್ಥಿತಾಃ ॥14॥
ಅನಂತರ ಸುರಭಿಯು ಶ್ರೀ, ಮೇಧಾ, ಕೀರ್ತಿ ಮತ್ತು ಸರಸ್ವತೀ ಎಂಬ ಯೋಗನಿಷ್ಠರಾದ ನಾಲ್ಕು ಕನ್ಯೆಯರನ್ನು ಪ್ರಸವಿಸಿದಳು.
ಏತಾಃ ಸೃಷ್ಟ್ವಾ ಪ್ರಜಾ ಏಷಾ ಸುರಭಿಃ ಕಾಮರೂಪಿಣೀ |
ಸುಷುವೇ ಪರಮಾಂ ಭೂಯೋ ದಿವ್ಯಾ ಗೋಮಾತರಃ ಶುಭಾಃ ॥15॥
ಈ ಕನ್ಯೆಯರನ್ನು ಪಡೆದ ಕಾಮರೂಪಿಣಿಯಾದ ಈ ಸುರಭಿಯು ಪುನಃ ದಿವ್ಯವಾದ ಮತ್ತು ಶುಭವಾದ ಗೋಮಾತೆಯರನ್ನು ಪ್ರಸವಿಸಿದಳು.
ಪುಣ್ಯಾಂ ಮಾಯಾಂ ಮಧುಶ್ಚ್ಯೋತಾಂ ಶಿವಾಂ ಶೀಘ್ರಾಂ ಸರಿದ್ವರಾಮ್ |
ಹಿರಣ್ಯವರ್ಣಾಂ ಸುಭಗಾಂ ಗವ್ಯಾಂ ಪೃಶ್ನೀಂ ಕುಥಾವತೀಮ್ ॥16॥
ಅಂಗಾವತೀಂ ಘೃತವತೀಂ ದಧಿಕ್ಷೀರಪಯೋವತೀಮ್ |
ಅಮೋಘಾಂ ಸುರಸಾಂ ಸತ್ಯಾಂ ರೇವತೀಂ ಮಾರುತೀಂ ರಸಾಮ್ ॥
ಅಜಾಂ ಚ ಸಿಕತಾಂ ಚೈವ ಶುದ್ಧಧೂಮಾಮಧಾರಿಣೀಮ್ |
ಜೀವಾಂ ಪ್ರಾಣವತೀಂ ಧನ್ಯಾಂ ಶುದ್ಧಾಂ ಧೇನುಂ ಧನಾವಹಾಮ್ ॥
ಇಂದ್ರಾಮೃದ್ಧಿಂ ಚ ಶಾಂತಿಂ ಚ ಶಾಂತಪಾಪಾಂ ಸರಿದ್ವರಾಮ್ |
ಚತ್ವಾರಿಂಶತಮೇಕಾಂ ಚ ಧನ್ಯಾಸ್ತಾ ದಿವಿ ಪೂಜಿತಾಃ ॥19॥
ಪುಣ್ಯಾ, ಮಾಯಾ, ಮಧುಶ್ಚ್ಯೋತಾ, ಶಿವಾ, ಶೀಘ್ರಾ, ಸರಿದ್ವರಾ, ಹಿರಣ್ಯವರ್ಣಾ, ಸುಭಗಾ, ಗವ್ಯಾ, ಪೃಶ್ನೀ, ಕುಥಾವತೀ, ಅಂಗಾವತೀ, ಘೃತವತೀ, ದಧಿಮತೀ, ಕ್ಷೀರವತೀ, ಪಯೋವತೀ, ಅಮೋಘಾ, ಸುರಸಾ, ಸತ್ಯಾ, ರೇವತೀ, ಮಾರುತೀ, ರಸಾ, ಅಜಾ, ಸಿಕತಾ, ಶುದ್ಧಧೂಮಾ, ಅಧಾರಿಣೀ, ಜೀವಾ, ಪ್ರಾಣವತೀ, ಧನ್ಯಾ, ಶುದ್ಧಾ, ಧೇನು, ಧನಾವಹಾ, ಇಂದ್ರಾ, ಋದ್ಧಿ, ಶಾಂತಿ, ಶಾಂತಪಾಪಾ, ಸರಿದ್ವರಾ - ಈ ನಲವತ್ತೊಂದು ಕನ್ಯೆಯರು ಧನ್ಯರು ಮತ್ತು ದೇವಲೋಕದಲ್ಲಿ ಪೂಜಿತರಾದವರು.
ಭೂಯೋ ಜಜ್ಞೇ ಸುರಭ್ಯಾಶ್ಚ ಶ್ರೀಮಾಂಶ್ಚಂದ್ರಾಂಶುಸಪ್ರಭಃ |
ವೃಷೋ ದಕ್ಷ ಇತಿ ಖ್ಯಾತಃ ಕಂಠೇ ಮಣಿತಳಪ್ರಭಃ ॥20॥
ಪುನಃ ಸುರಭಿಯಲ್ಲಿ ಚಂದ್ರನಿಗೆ ಸಮಾನವಾದ ಕಾಂತಿಯುಳ್ಳ, ಕಾಂತಿಯುಕ್ತನಾದ ಶ್ರೇಷ್ಠನಾದ ದಕ್ಷನು ಕಂಠದಲ್ಲಿ ಮಣಿಯ ಪ್ರಭೆಯನ್ನು ಹೊಂದಿ ವೃಷಭನಾಗಿ ಜನಿಸಿದನು.
ಸ್ರಗ್ವೀ ಕಕುದ್ಮಾನ್ ದ್ಯುತಿಮಾನ್ ಮೃಣಾಲಸದೃಶಪ್ರಭಃ |
ಸುರಭ್ಯನುಮತೇ ದತ್ತೋ ಧ್ವಜೋ ಮಾಹೇಶ್ವರಸ್ತು ಸಃ ॥21॥
ಅವನು ಹೂಮಾಲೆಯನ್ನು ಹಾಕಿಕೊಂಡು ಎತ್ತರದ ಭುಜವನ್ನು ಹೊಂದಿ ಕಾಂತಿಯುಕ್ತನಾಗಿ ಬಿಸನಾಳಕ್ಕೆ ಸಮಾನವಾಗಿದ್ದನು. ಸುರಭಿಯ ಅಭಿಪ್ರಾಯದಂತೆ ಅವನನ್ನು ಮಹೇಶ್ವರನಿಗೆ ಧ್ವಜವಾಗಿ ಕೊಡಲ್ಪಟ್ಟಿತು.
ಸುರಭ್ಯಃ ಕಾಮರೂಪಿಣ್ಯೋ ಗಾವಃ ಪುಣ್ಯಾರ್ಥಮುತ್ತಮಾಃ |
ಆದಿತ್ಯೇಭ್ಯೋ ವಸುಭ್ಯಶ್ಚ ವಿಶ್ವೇಭ್ಯಶ್ಚ ದದುರ್ವರಾನ್ ॥22॥
ಕಾಮರೂಪಿಣಿಯರಾದ ಸುರಭಿ ಧೇನುಗಳು ಪುಣ್ಯದ ಸಲುವಾಗಿ ಎಲ್ಲಾ ವಸು- ರುದ್ರಾದಿತ್ಯರಿಗೆ ವರಗಳನ್ನು ಕೊಟ್ಟವು.
ಸುರಭಿಸ್ತು ತಪಸ್ತಪ್ತ್ವಾ ಸುಷುವೇ ಗಾಸ್ತತಃ ಪುನಃ |
ಯಾ ದತ್ತಾ ಲೋಕಪಾಲಾನಾಮಿಂದ್ರಾದೀನಾಂ ಯುಧಿಷ್ಠಿರ ॥23॥

ಎಲೈ ಯುಧಿಷ್ಠಿರನೇ, ಸುರಭಿಯು ತಪಸ್ಸನ್ನು ಮಾಡಿ ಪುನಃ ಗೋವುಗಳನ್ನು ಪಡೆದಳು. ಆ ಗೋವುಗಳು ಲೋಕಪಾಲಕರಾದ ಇಂದ್ರಾದಿಗಳಿಗೆ ಕೊಡಲ್ಪಟ್ಟವು.
ಸುಷ್ಬುತಾಂ ಕಪಿಲಾಂ ಚೈವ ರೋಹಿಣೀಂ ಚ ಯಶಸ್ವಿನೀಮ್ |
ಸರ್ವಕಾಮದುಘಾಂ ಚೈವ ಮರುತಾಂ ಕಾಮರೂಪಿಣೀಮ್ ॥24॥
ಗಾವೋ ಮೃಷ್ಟದುಘಾ ಹ್ಯೇತಾಶ್ಚತಸ್ರೋಽಮೃತಸಂಸ್ಕೃತಾಃ |
ಯಾಸಾಂ ಭೂತ್ವಾ ಪುರಾ ವತ್ಸಾಃ ಪಿಬಂತ್ಯಮೃತಮುತ್ತಮಮ್ ॥25॥
ಸುಷ್ಬುತಾ, ಕಪಿಲಾ, ಕೀರ್ತಿವಂತಳಾದ ರೋಹಿಣಿ, ಕಾಮರೂಪವನ್ನು ಹೊಂದಿದ ಸರ್ವಕಾಮದುಘಾ - ಈ ನಾಲ್ಕು ಗೋವುಗಳನ್ನು ಪಡೆದಳು. ಈ ನಾಲ್ಕು ಗೋವುಗಳು ಶ್ರೇಷ್ಠವಾದ ವಸ್ತುಗಳನ್ನು ಕರೆಯುವವುಗಳಾಗಿ ಅಮೃತದಿಂದ ಸತ್ಕರಿಸಲ್ಪಟ್ಟವು. ದೇವತೆಗಳು ಅವುಗಳಿಗೆ ಮಕ್ಕಳಾಗಿ ಅವುಗಳ ಅಮೃತಪ್ರಾಯವಾದ ಶ್ರೇಷ್ಠವಾದ ಕ್ಷೀರವನ್ನು ಪಾನ ಮಾಡುತ್ತಾರೆ.
ಸುಷ್ಬುತಾಂ ದೇವರಾಜಾಯ ವಾಸವಾಯ ಮಹಾತ್ಮನೇ |
ಕಪಿಲಾಂ ಧರ್ಮರಾಜಾಯ ವರುಣಾಯ ಚ ರೋಹಿಣೀಮ್ ॥26॥
ಸರ್ವಕಾಮದುಘಾಂ ಧೇನುಂ ರಾಜ್ಞೇ ವೈಶ್ರವಣಾಯ ಚ |
ಇತ್ಯೇತಾ ಲೋಕಮಹಿತಾ ವಿಶ್ರುತಾ ಸುರಭೇಃ ಪ್ರಜಾಃ ॥27॥
ಸುಷ್ಬುತಾ ಎಂಬ ಗೋವನ್ನು ದೇವರಾಜನಾದ ಮತ್ತು ಮಹಾತ್ಮನಾದ ಇಂದ್ರನಿಗೂ, ಕಪಿಲಾ ಗೋವನ್ನು ಧರ್ಮರಾಜನಿಗೂ, ರೋಹಿಣಿ ಎಂಬ ಗೋವನ್ನು ವರುಣನಿಗೂ, ಸರ್ವಕಾಮದುಘಾ ಎಂಬ ಧೇನುವನ್ನು ಕುಬೇರನಿಗೂ ಕೊಟ್ಟರು. ಇವು ಲೋಕ ಪೂಜಿತವಾದ ಪ್ರಖ್ಯಾತವಾದ ಸುರಭಿಯ ಪ್ರಜೆಗಳು.
ಏತಾಸಾಂ ಪ್ರಜಯಾ ಪೂರ್ಣಾ ಪೃಥಿವೀ ಮುನಿಪುಂಗವ |
ಗೋಭ್ಯಃ ಪ್ರಭವತೇ ಸರ್ವಂ ಯತ್ಕಿಂಚಿದಿಹ ಶೋಭನಮ್ ॥28॥
ಎಲೈ ಮುನಿಪುಂಗವನೇ, ಇವುಗಳ ಸಂತತಿಯಿಂದ ಭೂಮಿಯು ಪೂರ್ಣವಾಗಿ ತುಂಬಿಹೋಗಿದೆ. ಈ ಲೋಕದಲ್ಲಿ ಯಾವ ಮಂಗಳಕಾರ್ಯವಾದರೂ ಅದು ಗೋವುಗಳಿಂದ ಪ್ರವರ್ತಿಸಲ್ಪಡುತ್ತದೆ.
ಸುರಭ್ಯಪತ್ಯಮಿತ್ಯೇತನ್ನಾಮತಸ್ತೇಽನುಪೂರ್ವಶಃ |
ಕೀರ್ತಿತಂ ಬ್ರೂಹಿ ರಾಜೇಂದ್ರ ಕಿಂ ಭೂಯಃ ಕಥಯಾಮಿ ತೇ ॥29॥
ಸುರಭಿಯ ಪುತ್ರ-ಪುತ್ರಿಯರ ನಾಮವನ್ನು ಕ್ರಮವಾಗಿ ನಿನಗೆ ಹೇಳಿದ್ದೇನೆ. ಎಲೈ ರಾಜೇಂದ್ರನೇ, ಇನ್ನೂ ಏನು ಹೇಳಲಿ ಎಂದು ನೀನು ಹೇಳುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಸುರಭಿಸಂತತಿವರ್ಣನಂ ನಾಮ
ತ್ರಯೋದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹದಿಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾಲ್ಕನೆಯ ಅಧ್ಯಾಯ
ಸುರಭಿಯ ಶರೀರದಲ್ಲಿ ಸರ್ವದೇವತೆಗಳ ಪ್ರವೇಶ.
ಯುಧಿಷ್ಠಿರಃ
ಸುರಭ್ಯಾಸ್ತು ತದಾ ದೇವ್ಯಾಃ ಕೀರ್ತಿಲಕ್ಷ್ಮೀಃ ಸರಸ್ವತೀ |
ಮೇಧಾ ಚ ಪ್ರವರಾ ದೇವೀ ಯಾಶ್ಚತಸ್ರೋಽಭಿವಿಶ್ರುತಾಃ ॥1॥
ಪೃಥಗ್ಗೋಭ್ಯಃ ಕಿಮೇತಾಃ ಸ್ಯುರುತಾಹೋ ಗೋಷು ಸಂಶ್ರಿತಾಃ |
ದೇವಾಃ ಕೇ ವಾಽಽಶ್ರಿತಾ ಗೋಷು ತನ್ಮೇ ಬ್ರೂಹಿ ಪಿತಾಮಹ ॥2॥
ಯುಧಿಷ್ಠಿರ ಸುರಭಿಯಿಂದ ಹೊರಬಂದ ಕೀರ್ತಿ, ಲಕ್ಷ್ಮೀ, ಸರಸ್ವತೀ, ಮೇಧಾ ಎಂಬ ಪ್ರಖ್ಯಾತರಾದ ಈ ನಾಲ್ಕು ದೇವಿಯರು ಇವರು ಗೋವುಗಳಿಗಿಂತ ಭಿನ್ನರಾದವರೋ ಅಥವಾ ಗೋವುಗಳನ್ನು ಆಶ್ರಯಿಸಿಕೊಂಡಿರುವವರೋ? ಎಲೈ ಪಿತಾಮಹನೇ, ಗೋವುಗಳಲ್ಲಿ ಯಾವ ದೇವತೆಗಳು ಆಶ್ರಯಿಸಿಕೊಂಡಿರುವವರೆಂದು ನನಗೆ ಹೇಳು.
ಭೀಷ್ಮಃ
ಯಂ ದೇವಂ ಸಂಶ್ರಿತಾ ಗಾವಸ್ತಂ ದೇವಂ ದೇವಸಂಜ್ಞಿತಮ್ |
ಯದ್ಯದ್ದೇವಾಶ್ರಿತಂ ದೈವಂ ತತ್ತದ್ದೈವಂ ದ್ವಿಜಾ ವಿದುಃ ॥3॥
ಸರ್ವೇಷಾಮೇವ ದೇವಾನಾಂ ಪೂರ್ವಂ ಕಿಲ ಸಮುದ್ಭವೇ |
ಅಮೃತಾರ್ಥೇ ಸುರಪತಿಃ ಸುರಭಿಂ ಸಮುಪಸ್ಥಿತಃ ॥4॥
ಭೀಷ್ಮ ಗೋವುಗಳು ಯಾವ ದೇವತೆಯನ್ನು ಆಶ್ರಯಿಸಿರುತ್ತಾರೋ ಅವನನ್ನು ಗೋವುಗಳು ಆಶ್ರಯಿಸಿದ ಕಾರಣದಿಂದ ದೇವ ಎಂದು ಹೇಳುತ್ತಾರೆ. ದೇವಾಶ್ರಿತವಾದುದು ಏನೇನಿದೆಯೋ ಅದನ್ನು ದೈವವೆಂದು ಬ್ರಾಹ್ಮಣರು ಹೇಳುತ್ತಾರೆ. ಹಿಂದೆ ಎಲ್ಲ ದೇವತೆಗಳ ಉತ್ಪತ್ತಿಯ ಕಾಲದಲ್ಲಿ ಸುರಪತಿಯಾದ ದೇವೇಂದ್ರನು ಅಮೃತದ ಸಲುವಾಗಿ ಸುರಭಿಯನ್ನು ಸಮೀಪಿಸಿದನು.
ಇಂದ್ರಃ
ಇಚ್ಛೇಯಮಮೃತಂ ದತ್ತಂ ತ್ವಯಾ ದೇವಿ ರಸಾಧಿಕಮ್ |

ತ್ವತ್ಪ್ರಸಾದಾಚ್ಛಿವಂ ಮಹ್ಯಮಮರತ್ವಂ ಭವೇದಿತಿ ॥5॥
ಇಂದ್ರ ಎಲೌ ದೇವಿಯೇ, ನಿನ್ನಿಂದ ನಾನು ಶ್ರೇಷ್ಠ ರಸಗಳನ್ನು ಹೊಂದಿರುವ ಅಮೃತವನ್ನು ಪಡೆಯಲು ಇಚ್ಛಿಸುತ್ತೇನೆ. ನಿನ್ನ ಅನುಗ್ರಹದಿಂದ ನನಗೆ ಮಂಗಳವು ಮತ್ತು ಅಮರತ್ವವು ಉಂಟಾದೀತು.
ಸುರಭಿಃ
ವತ್ಸೋ ಭೂತ್ವಾ ಸುರಪತೇ ಪಿಬಸ್ವ ಪ್ರಸ್ರವಂ ಮಮ |
ತತೋಽಽಮರತ್ವಮಪಿ ತತ್ಸ್ವಾನಮೈಂದ್ರಮವಾಪ್ಸ್ಯಸಿ ॥6॥
ನ ಚ ತೇ ವೃತ್ರಹನ್ ಯುದ್ಧೇ ವ್ಯಥಾಽರಿಭ್ಯೋ ಭವಿಷ್ಯತಿ |
ಬಲಾರ್ಥಮಾತ್ಮನಃ ಶಕ್ರ ಪ್ರಸ್ರವಂ ಪಿಬ ಮೇ ವಿಭೋ ॥7॥
ಸುರಭಿ ಎಲೈ ಸುರಪತಿಯೇ, ನೀನು ವತ್ಸನಾಗಿ ನನ್ನ ಕ್ಷೀರವನ್ನು ಕುಡಿ. ಅನಂತರ ಅಮರತ್ವವನ್ನೂ, ಇಂದ್ರಪದವಿಯನ್ನೂ ಪಡೆಯುವಿ. ಎಲೈ ವೃತ್ರಹಂತಕನೇ, ನಿನಗೆ ಯುದ್ಧದಲ್ಲಿ ಶತ್ರುಗಳಿಂದ ವ್ಯಥೆಯುಂಟಾಗುವುದಿಲ್ಲ. ಎಲೈ ಇಂದ್ರನೇ, ವಿಭುವೇ, ನೀನು ಬಲವನ್ನು ಸಂಪಾದಿಸಲು ನನ್ನ ಕ್ಷೀರವನ್ನು ಪಾನ ಮಾಡು.
ಭೀಷ್ಮಃ
ತತೋಽಧಯತ್ಸ್ತನಂ ತಸ್ಯಾಃ ಸುರಭ್ಯಾಃ ಸುರಸತ್ತಮಃ |
ಅಮರತ್ವಂ ಸುರೂಪತ್ವಂ ಬಲಂ ಚ ಪದಮುತ್ತಮಮ್ ॥8॥
ಪುರಂದರೋಽಮೃತಂ ಪೀತ್ವಾ ಪ್ರಹೃಷ್ಟಃ ಸಮುಪಸ್ಥಿತಃ |
ಪುತ್ರೋಽಹಂ ತವ ಭದ್ರಂ ತೇ ಬ್ರೂಹಿ ಕಿಂ ಕರವಾಣಿ ತೇ ॥9॥
ಭೀಷ್ಮ ಅನಂತರ ಸುರಶ್ರೇಷ್ಠನಾದ ಇಂದ್ರನು ಸುರಭಿಯ ಸ್ತನದಿಂದ ಉಂಟಾದ ಸ್ತನ್ಯವನ್ನು ಪಾನ ಮಾಡಿ ಅಮರತ್ವವನ್ನೂ, ಒಳ್ಳೆಯ ರೂಪವನ್ನೂ, ಬಲವನ್ನೂ ಮತ್ತು ಇಂದ್ರಪದವಿಯನ್ನೂ ಹೊಂದಿದನು. ಪುರಂದರನು ಅಮೃತವನ್ನು ಪಾನ ಮಾಡಿ ಸಂತೋಷದಿಂದ ಕೂಡಿದವನಾಗಿ ಸುರಭಿಯನ್ನು ಕುರಿತು- `ಎಲೌ ಮಂಗಳಸ್ವರೂಪಳೇ, ನಾನು ನಿನ್ನ ಪುತ್ರ. ನಿನಗೆ ಏನು ಮಾಡಲಿ ಎಂದು ಹೇಳು' ಎಂದು ಕೇಳಿದನು.
ಸುರಭಿಃ
ಕೃತಂ ಪುತ್ರ ತ್ವಯಾ ಸರ್ವಮುಪಯಾಹಿ ತ್ರಿವಿಷ್ಟಪಮ್ |
ಪಾಲಯಸ್ವ ಸುರಾನ್ ಸರ್ವಾನ್ ಜಹಿ ಯೇ ಸುರಶತ್ರವಃ ॥10॥
ಸುರಭಿ ಪುತ್ರನೇ, ನೀನು ಎಲ್ಲವನ್ನೂ ಮಾಡಿದ್ದೀಯೆ. ಸ್ವರ್ಗಕ್ಕೆ ಹಿಂದಿರುಗು. ಎಲ್ಲ ದೇವತೆಗಳನ್ನು ಪಾಲಿಸು. ದೇವಶತ್ರುಗಳನ್ನು ಸೋಲಿಸುವವನಾಗು.
ನ ಚ ಗೋಬ್ರಾಹ್ಮಣೇಽವಜ್ಞಾ ಕಾರ್ಯಾ ತೇ ಶಾಂತಿಮಿಚ್ಛತಾ |
ಗೋಬ್ರಾಹ್ಮಣಸ್ಯ ನಿಃಶ್ವಾಸಃ ಶೋಷಯೇದಪಿ ದೇವತಾಃ ॥11॥
ಶಾಂತಿಯನ್ನು ಬಯಸುವ ನೀನು ಎಂದೂ ಗೋಬ್ರಾಹ್ಮಣರಿಗೆ ಅವಮಾನವನ್ನು ಮಾಡಬೇಡ. ಗೋಬ್ರಾಹ್ಮಣರ ನಿಟ್ಟುಸಿರು ದೇವತೆಗಳನ್ನೂ ಒಣಗಿಸುತ್ತದೆ.
ಗೋಬ್ರಾಹ್ಮಣಪ್ರಿಯೋ ನಿತ್ಯಂ ಸ್ವಸ್ತಿಶಬ್ದಮುದಾಹರನ್ |
ಪೃಥಿವ್ಯಾಮಂತರಿಕ್ಷೇ ಚ ನಾಕಪೃಷ್ಠೇ ಚ ವಿಕ್ರಮೇತ್ ॥12॥
ನಿತ್ಯವೂ ಗೋಬ್ರಾಹ್ಮಣರಿಗೆ ಪ್ರಿಯನಾಗಿ ಒಳ್ಳೆಯ ಮಾತುಗಳನ್ನು ಆಡುತ್ತಾ ಭೂಮಿಯಲ್ಲಿ, ಅಂತರಿಕ್ಷದಲ್ಲಿ ಮತ್ತು ಸ್ವರ್ಗದಲ್ಲಿ ಪರಾಕ್ರಮವನ್ನು ಮಾಡಬೇಕು.
ಯಚ್ಚ ತೇಽನ್ಯದ್ ಭವೇತ್ ಕೃತ್ಯಂ ತನ್ಮೇ ಬ್ರೂಯಾಃ ಸಮಾಸತಃ |
ತತ್ತೇ ಸರ್ವಂ ಕರಿಷ್ಯಾಮಿ ಸತ್ಯೇನೈತದ್ ಬ್ರವೀಮಿ ತೇ ॥13॥
ನಿನಗೆ ಆಗಬೇಕಾದ ಬೇರೆ ಏನಾದರೂ ಕಾರ್ಯವಿದ್ದರೆ ಅದನ್ನೂ ನನಗೆ ಸಂಕ್ಷೇಪವಾಗಿ ಹೇಳು. ಅವೆಲ್ಲವನ್ನೂ ನಾನು ಮಾಡುವೆನು. ಇದನ್ನು ನಿನಗೆ ಸತ್ಯವಾಗಿ ಹೇಳುತ್ತಿದ್ದೇನೆ.
ಇಂದ್ರಃ
ಇಚ್ಛೇಯಂ ಗೋಷು ನಿಯತಂ ವಸ್ತುಂ ದೇವಿ ಬ್ರವೀಮಿ ತೇ |
ಏಭಿಃ ಸುರಗಣೈಃ ಸಾರ್ಧಂ ಮಮಾನುಗ್ರಹಮಾಚರ ॥14॥
ಇಂದ್ರ ಎಲೌ ದೇವಿಯೇ, ನಾನು ಈ ದೇವತೆಗಳ ಸಮೂಹದ ಜೊತೆಯಲ್ಲಿ ಯಾವಾಗಲೂ ಗೋವುಗಳಲ್ಲಿ ವಾಸಿಸಬೇಕೆಂದು ನನ್ನ ಇಚ್ಛೆ ಎಂದು ನಿನಗೆ ಹೇಳುತ್ತಿದ್ದೇನೆ. ನನಗೆ ಅನುಗ್ರಹವನ್ನು ಮಾಡು.
ಸುರಭಿಃ
ಗವಾಂ ಶರೀರಂ ಪ್ರತ್ಯಕ್ಷಮೇತತ್ ಕೌಶಿಕ ಲಕ್ಷಯೇ |
ಯೋ ಯತ್ರೋತ್ಸಹತೇ ವಸ್ತುಂ ಸ ತತ್ರ ವಸತಾಂ ಸುರಃ ॥15॥
ಸರ್ವಂ ಪವಿತ್ರಂ ಪರಮಂ ಗವಾಂ ಗಾತ್ರಂ ಸುಪೂಜಿತಮ್ |
ತಥಾ ಕುರುಷ್ವ ಭದ್ರಂ ತೇ ಯಯಾ ತ್ವಂ ಶಕ್ರ ಮನ್ಯಸೇ ॥16॥
ಸುರಭಿ ಎಲೈ ಇಂದ್ರನೇ, ಗೋವಿನ ಈ ಶರೀರವು ಪ್ರತ್ಯಕ್ಷವಾಗಿ ಕಂಡುಬರುತ್ತಿದೆ. ಯಾವ ದೇವತೆಗೆ ಎಲ್ಲಿ ವಾಸಮಾಡಲು ಇಷ್ಟವೋ ಅವನು ಅಲ್ಲಿ ಪ್ರವೇಶಿಸಿ ವಾಸಿಸಲಿ. ಗೋವಿನ ಎಲ್ಲ ಶರೀರವೂ ಶ್ರೇಷ್ಠವಾದುದು, ಪವಿತ್ರವಾದುದು ಮತ್ತು ಅತ್ಯಂತ ಪೂಜಿತವಾದುದು. ಎಲೈ ಶಕ್ರನೇ, ನಿನಗೆ ಮಂಗಳವಾಗಲಿ. ನೀನು ಬಯಸಿದಂತೆ ಮಾಡು.

ಭೀಷ್ಮಃ
ತಸ್ಯಾಸ್ತದ್ವಚನಂ ಶ್ರುತ್ವಾ ಸುರಭ್ಯಾಃ ಸುರಸತ್ತಮಃ |
ಸಹ ಸರ್ವೈಃ ಸುರಗಣೈರಭಜತ್ ಸೌರಭೀಂ ಪ್ರಜಾಮ್ ॥17॥
ಭೀಷ್ಮ ಸುರಶ್ರೇಷ್ಠನಾದ ಇಂದ್ರನು ಸುರಭಿಯ ಆ ಮಾತುಗಳನ್ನು ಕೇಳಿ ಎಲ್ಲ ಸುರಗಣಗಳ ಜೊತೆಯಲ್ಲಿ ಸುರಭಿಯ ಸಂತತಿಯನ್ನು ಪ್ರವೇಶಿಸಿದನು.
ಶೃಂಗೇ ವಕ್ತ್ರೇ ಚ ಜಿಹ್ವಾಯಾಂ ದೇವರಾಜಃ ಸಮಾವಿಶತ್ |
ಸರ್ವಚ್ಛಿದ್ರೇಷು ಪವನಃ ಪಾದೇಷು ಮರುತಾಂ ಗಣಾಃ ॥18॥
ಕೊಂಬುಗಳಲ್ಲಿ, ವದನದಲ್ಲಿ ಮತ್ತು ನಾಲಿಗೆಯಲ್ಲಿ ದೇವರಾಜನಾದ ಇಂದ್ರನು ಪ್ರವೇಶಿಸಿದನು. ಸರ್ವಚ್ಛಿದ್ರಗಳಲ್ಲಿ ವಾಯುವೂ, ಪಾದಗಳಲ್ಲಿ ಮರುದ್ಗಣಗಳೂ ಪ್ರವೇಶಿಸಿದವು.
ಕಕುದಂ ಸರ್ವಗೋ ರುದ್ರಃ ಕುಕ್ಷೌ ಚೈವ ಹುತಾಶನಃ |
ಸರಸ್ವತೀಂ ಸ್ತನೇಷ್ವಗ್ರ್ಯಾ ಶ್ರೀಃ ಪುರೀಷೇ ಜಗತ್ಪ್ರಿಯಾ ॥19॥
ಸರ್ವತ್ರ ವ್ಯಾಪ್ತನಾದ ರುದ್ರನು ಹಿಣಿಲನ್ನು ಪ್ರವೇಶಿಸಿದನು. ಅಗ್ನಿಯು ಕುಕ್ಷಿಯನ್ನೂ, ಶ್ರೇಷ್ಠಳಾದ ಸರಸ್ವತಿಯು ಸ್ತನಗಳನ್ನೂ, ಜಗತ್ಪ್ರಿಯಳಾದ ಲಕ್ಷ್ಮಿಯು ಗೋಮಯವನ್ನೂ ಪ್ರವೇಶಿಸಿದರು.
ಮೂತ್ರೇ ಕೀರ್ತಿಃ ಸುಮಹತೀ ಮೇಧಾ ಪಯಸಿ ಶಾಶ್ವತೀ |
ವಕ್ತ್ರೇ ಸೋಮಶ್ಚ ವೈ ದೇವೋ ಹೃದಯೇ ಭಗವಾನ್ ಯಮಃ ॥20॥
ಗೋಮೂತ್ರದಲ್ಲಿ ಬಹಳ ದೊಡ್ಡವಳಾದ ಕೀರ್ತಿಯೂ, ಶೀಲದಲ್ಲಿ ಶಾಶ್ವತಳಾದ ಮೇಧಾ ದೇವಿಯೂ, ಮುಖದಲ್ಲಿ ಚಂದ್ರನೂ, ಹೃದಯದಲ್ಲಿ ಪೂಜ್ಯನಾದ ಯಮನೂ ಪ್ರವೇಶಿಸಿದರು.
ಧರ್ಮಃ ಪುಚ್ಛೇ ಕ್ರಿಯಾ ಲೋಮ್ನಿ ಭಾಸ್ಕರಶ್ಚಕ್ಷುಷೀ ಶ್ರಿತಃ |
ಸಿದ್ಧಾ ಸಂಧಿಷು ಸಿದ್ಧಿಶ್ಚ ತಪಸ್ತೇಜಶ್ಚ ಚೇಷ್ಟನೇ ॥21॥
ಧರ್ಮ ಮತ್ತು ಕ್ರಿಯೆಗಳು ಪುಚ್ಛದಲ್ಲಿ ಮತ್ತು ಲೋಮಗಳಲ್ಲಿ ಪ್ರವೇಶಿಸಿದವು. ಸೂರ್ಯನು ಚಕ್ಷುಸ್ಸುಗಳಲ್ಲಿ ಪ್ರವೇಶಿಸಿದನು. ಸಿದ್ಧರು ಮತ್ತು ಸಿದ್ಧಿಗಳು ಸಂಧಿಗಳಲ್ಲಿ ಪ್ರವೇಶಿಸಿದರು. ಜಪ ಮತ್ತು ತೇಜಸ್ಸುಗಳು ಕ್ರಿಯೆಗಳಲ್ಲಿ ಪ್ರವೇಶಿಸಿದವು.
ಏವಂ ಸರ್ವೇ ಸುರಗಣಾ ನಿಯತಾ ಗಾತ್ರವರ್ತ್ಮಸು |
ಮಹತೀ ದೇವತಾ ಗಾವೋ ಬ್ರಾಹ್ಮಣೈಃ ಪರಿಸಂಸ್ಕೃತಾಃ ॥22॥
ಹೀಗೆ ಎಲ್ಲ ದೇವತಾಗಣಗಳು ಗೋವಿನ ಶರೀರ ಮಾರ್ಗಗಳಲ್ಲಿ ನಿಯತವಾಗಿವೆ. ಆದ್ದರಿಂದ ದೊಡ್ಡ ದೇವತೆಯಾದ ಗೋವು ಬ್ರಾಹ್ಮಣರಿಂದ ಪೂಜಿಸಲ್ಪಡುತ್ತದೆ.
ಗಾಮಾಶ್ರಯಂತಿ ಸಹಿತಾ ದೇವಾ ಹಿ ಪ್ರಭವಿಷ್ಣವಃ |
ಕಿಮನ್ಯತ್ ಸರ್ವಕಾಮೇನ ನ ವಿದಧ್ಯಾದ್ ಭಗವಾನ್ ಪ್ರಿಯಮ್ ॥
ಅಭಿವೃದ್ಧಿಯನ್ನು ಅಪೇಕ್ಷಿಸುವ ದೇವತೆಗಳು ಒಟ್ಟಾಗಿ ಗೋವನ್ನು ಆಶ್ರಯಿಸಿರುತ್ತಾರೆ. ಇವುಗಳಿಗೆ ಭಗವಂತನು ಸರ್ವರೀತಿಯಿಂದ ಯಾವ ಪ್ರಿಯವನ್ನು ಮಾಡಬೇಕು?
ಭಾವತಃ ಪರಯಾ ಭಕ್ತ್ಯಾ ಪೂಜಯಸ್ವ ನರೇಶ್ವರ |
ಗಾವಸ್ತು ಪರಮಂ ಲೋಕೇ ಪವಿತ್ರಂ ಪಾವನಂ ಹವಿಃ ॥24॥
ಎಲೈ ನರೇಶ್ವರನೇ, ಒಳ್ಳೆಯ ಭಾವದಿಂದ ಮತ್ತು ಭಕ್ತಿಯಿಂದ ಗೋವುಗಳನ್ನು ಪೂಜಿಸು. ಗೋವುಗಳೇ ಶ್ರೇಷ್ಠವಾದ ಲೋಕಗಳಿಗೂ, ಪವಿತ್ರವಾದ ಹವಿಸ್ಸಿಗೂ ಕಾರಣವಾದವುಗಳು.
ನಿಪಾತ್ಯ ಭರ್ಜಿತಂ ಸ್ವರ್ಗಾದ್ ಭಾರ್ಗವಃ ಫೇನಪಃ ಕಿಲ |
ಸ್ವರ್ಗೋಃ ಪ್ರಾಣಾನ್ ಪುನರ್ಲಬ್ಧ್ವಾ ಪ್ರೀತೋ ಗೋಲೋಕಮಾಶ್ರಿತಃ ॥
ಫೇನವನ್ನು ಪಾನ ಮಾಡುವ ಭಾರ್ಗವನು ಸ್ವರ್ಗಲೋಕದಿಂದ ಭೂಮಿಗೆ ಬಿದ್ದು ತಾನು ಪಾಲಿಸಿದ ಗೋವಿನಿಂದಲೇ ತಿವಿತ ಮತ್ತು ತುಳಿತಗಳಿಂದ ಘಾಸಿಗೆ ಒಳಗಾಗಿ, ಸ್ವರ್ಗದಿಂದ ಬಂದ ಗೋವುಗಳಿಂದ ಪುನಃ ಪ್ರಾಣಗಳನ್ನು ಪಡೆದು ಸಂತೋಷದಿಂದ ಗೋಲೋಕಕ್ಕೆ ಹೋದನು (ಲಕ್ಷ್ಯಾಲಂಕಾರ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ದೇವಾನಾಂ ಸುರಭಿಶರೀರಪ್ರವೇಶೋ ನಾಮ ಚತುರ್ದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೈದನೆಯ ಅಧ್ಯಾಯ
ಫೇನಪೋಪಾಖ್ಯಾನ ಆರಂಭ.
ಯುಧಿಷ್ಠಿರಃ
ಕಃ ಫೇನಪೇತಿ ನಾಮ್ನಾಸೌ ಕಥಂ ವಾ ಭಕ್ಷಿತಃ ಪುರಾ |
ಮೃತ ಉಜ್ಜೀವಿತಃ ಕಸ್ಮಾತ್ ಕಥಂ ಗೋಲೋಕಮಾಶ್ರಿತಃ ॥1॥
ಯುಧಿಷ್ಠಿರ ಫೇನಪನೆಂಬುವನು ಯಾರು? ಅವನು ಹಿಂದೆ ಹೇಗೆ ಗೋವುಗಳಿಂದ ಘಾಸಿಗೊಳಿಸಲ್ಪಟ್ಟನು? ಮೃತನಾದ ಅವನು ಹೇಗೆ ಪುನಃ ಪ್ರಾಣಗಳನ್ನು ಪಡೆದನು? ಮತ್ತು ಗೋಲೋಕಕ್ಕೆ ಹೇಗೆ ಹೋದನು?
ವಿರುದ್ಧೇ ಮಾನುಷೇ ಲೋಕೇ ತಥಾ ಸಮಯವರ್ತ್ಮಸು |

ಋತೇ ದೈವಂ ಹಿ ದುಷ್ಪ್ರಾಪಂ ಮಾನುಷೇಷು ವಿಶೇಷತಃ |
ಸಂಶಯೋ ಮೇ ಮಹಾನತ್ರ ತನ್ಮೇ ವ್ಯಾಖ್ಯಾತುಮರ್ಹಸಿ ॥2॥
ದೇವತೆಗಳನ್ನು ಬಿಟ್ಟು ದೇವತಾ ಸ್ವಭಾವಕ್ಕೆ ವಿರುದ್ಧವಾದ ಮನುಷ್ಯಲೋಕದಲ್ಲಿ ಬೇರೆ ಬೇರೆ ಮಾರ್ಗಗಳಲ್ಲಿ ಸಂಚರಿಸುವವರಿಗೆ ಗೋಲೋಕವನ್ನು ಹೊಂದುವುದು ಅಶಕ್ಯವಾದುದು. ನನಗೆ ಈ ವಿಷಯದಲ್ಲಿ ಸಂಶಯವಿದೆ. ಅದನ್ನು ಪರಿಹರಿಸಬೇಕು.
ಭೀಷ್ಮಃ
ಶ್ರೂಯತೇ ಭಾರ್ಗವೇ ವಂಶೇ ಸುಮಿತ್ರೋ ನಾಮ ಭಾರತ |
ವೇದಾಧ್ಯಯನಸಂಪನ್ನೋ ವಿಪುಲೇ ತಪಸಿ ಸ್ಥಿತಃ ॥3॥
ವಾನಪ್ರಸ್ಥಾಶ್ರಮೇ ಯುಕ್ತಃ ಸ್ವಕರ್ಮನಿರತಃ ಸದಾ |
ವಿನಯಾಚಾರತತ್ತ್ವಜ್ಞಃ ಸರ್ವಧರ್ಮಾರ್ಥಕೋವಿದಃ ॥4॥
ಯತ್ತ್ರಿಷವಣಸ್ನಾಯೀ ಸಂಧ್ಯೋಪಾಸನತತ್ಪರಃ |
ಅಗ್ನಿಹೋತ್ರರತಃ ಕ್ಷಾಂತೋ ಜಪನ್ ಜುಹ್ವಚ್ಚ ನಿತ್ಯದಾ ॥5॥
ಪಿತೄನ್ ದೇವಾಂಶ್ಚ ನಿಯತಮತಿಥೀಂಶ್ಚೈವ ಪೂಜಯನ್ |
ಪ್ರಾಣಸಂಧಾರಣಾರ್ಥಂ ಚ ಯತ್ಕಿಂಚಿದುಪಹಾರಯನ್ ॥6॥
ಭೀಷ್ಮ ಎಲೈ ಭಾರತನೇ, ಭಾರ್ಗವವಂಶದಲ್ಲಿ ಸುಮಿತ್ರನೆಂಬ ಋಷಿ ಇದ್ದನು. ಅವನು ವೇದಾಧ್ಯಯನ ಸಂಪನ್ನನಾಗಿ ದೊಡ್ಡ ತಪಸ್ಸಿನಲ್ಲಿ ನಿರತನಾಗಿದ್ದನು. ವಾನಪ್ರಸ್ಥಾಶ್ರಮವನ್ನು ಸಂಪಾದನೆ ಮಾಡಿ ಯಾವಾಗಲೂ ತನ್ನ ಕರ್ಮದಲ್ಲಿ ನಿರತನಾಗಿದ್ದನು. ವಿನಯಾಚಾರಗಳ ತತ್ತ್ವವನ್ನು ತಿಳಿದವನೂ, ಸರ್ವಧರ್ಮಾರ್ಥ ಕೋವಿದನೂ ಆಗಿದ್ದನು. ಮೂರುಕಾಲದಲ್ಲಿ ಸ್ನಾನವನ್ನು ಮಾಡಿ ಸಂಧ್ಯೋಪಾಸನೆಯನ್ನು ಮಾಡುವುದರಲ್ಲಿ ತತ್ಪರನಾಗಿದ್ದನು. ಅಗ್ನಿಹೋತ್ರ ದೀಕ್ಷೆಯನ್ನು ಹೊಂದಿ ಕ್ಷಮಾಗುಣ ಯುಕ್ತನಾಗಿ ಯಾವಾಗಲೂ ಜಪಹೋಮಗಳನ್ನು ಮಾಡುತ್ತಿದ್ದನು. ಪಿತೃಗಳನ್ನೂ, ದೇವತೆಗಳನ್ನೂ ಮತ್ತು ಅತಿಥಿಗಳನ್ನೂ ನಿಯತವಾಗಿ ಪೂಜಿಸುತ್ತಿದ್ದನು. ಪ್ರಾಣಗಳನ್ನು ಉಳಿಸಿಕೊಳ್ಳುವ ಸಲುವಾಗಿ ಏನಾದರೂ ಅಲ್ಪಾಹಾರವನ್ನು ಸೇವಿಸುತ್ತಿದ್ದನು.
ಗಿರಿಸ್ತ್ರಿಶಿಖರೋ ನಾಮ ಯತಃ ಪ್ರಭವತೇ ನದೀ |
ಕುಲಹೇತಿ ಪುರಾಣೇಷು ವಿಶ್ರುತಾ ರುದ್ರನಿರ್ಮಿತಾ ॥7॥
ತಸ್ಯಾಸ್ತೀರೇ ಸಮೇ ದೇಶೇ ಪುಷ್ಪಮಾಲಾಸಮಾಕುಲೇ |
ವನ್ಯೌಷಧಿದ್ರುಮೋಪೇತೇ ನಾನಾಪಕ್ಷಿಮೃಗಾಯುತೇ ॥8॥
ವ್ಯಪೇತದಂಶಮಶಕೇ ಧ್ವಾಂಕ್ಷಗೃಧ್ರೈರಸೇವಿತೇ |
ಕೃಷ್ಣದರ್ಭತೃಣಪ್ರಾಯೇ ಸುರಮ್ಯೇ ಜ್ಯೋತಿರಶ್ಮನಿ ॥9॥
ಸರ್ವೋನ್ನತೈಃ ಸಮ್ಯೈಃ ಶ್ಯಾಮೈರ್ಯಾಜ್ಞೀಯೈಸ್ತರುಭಿರ್ವೃತೇ |
ತತ್ರಾಶ್ರಮಪದಂ ಪುಣ್ಯಂ ಭೃಗೂಣಾಮಭವತ್ ಪುರಾ ॥10॥
ಕಪ್ಪಾದ ದರ್ಭೆಹುಲ್ಲುಗಳು ಹೆಚ್ಚಾಗಿ ಬೆಳೆದಿರುವ ಅತ್ಯಂತ ಮನೋಹರವಾದ, ಪ್ರಕಾಶಮಾನವಾದ, ಎತ್ತರವಾದ, ಯಾಜ್ಞೀಯ ವೃಕ್ಷಗಳಿಂದ ಕೂಡಿದ ಸಮತಟ್ಟಾದ ಸೊಳ್ಳೆ-ನೊಣ ಮುಂತಾದವುಗಳಿಲ್ಲದ ಹದ್ದು ಕಾಗೆಗಳಿಂದ ಸೇವಿಸಲ್ಪಡದ ದೇಶದಲ್ಲಿ ಹಿಂದೆ ಭೃಗುಗಳ ಪವಿತ್ರವಾದ ಆಶ್ರಮವು ಇದ್ದಿತು.
ಉವಾಸ ತತ್ರ ನಿಯತಃ ಸುಮಿತ್ರೋ ನಾಮ ಭಾರ್ಗವಃ |
ಯಥೋದ್ದಿಷ್ಟೇನ ಪೂರ್ವೇಷಾಂ ಭೃಗೂಣಾಂ ಸಾಧುವರ್ತ್ಮನಾಮ್ ॥
ಅಲ್ಲಿ ನಿಯಮಸಂಪನ್ನನಾದ ಸುಮಿತ್ರನೆಂಬ ಭಾರ್ಗವನು ಪೂರ್ವಜರಾದ ಭೃಗುಗಳು ಉಪದೇಶಿಸಿದ ಸನ್ಮಾರ್ಗದಲ್ಲಿ ನಡೆಯುತ್ತಾ ವಾಸಿಸುತ್ತಿದ್ದನು.
ತಸ್ಮಾ ಆಂಗಿರಸಃ ಕಶ್ಚಿದ್ ದದೌ ಗಾಂ ಶಕ್ವರೀಂ ಶುಭಾಮ್ |
ವರ್ಷಾಸು ಪಶ್ಚಿಮೇ ಮಾಸಿ ಪೌರ್ಣಮಾಸ್ಯಾಂ ಶುಚಿವ್ರತಃ ॥12॥
ಅವನಿಗೆ ಆಂಗಿರಸ ಗೋತ್ರದ ಒಬ್ಬ ಬ್ರಾಹ್ಮಣನು ವರ್ಷಾಕಾಲದ ಎರಡನೆಯ ಮಾಸದ ಪೌರ್ಣಿಮೆಯಂದು (ಭಾದ್ರಪದ ಪೌರ್ಣಮಾಸ್ಯ) ಶುಚಿವ್ರತನಾಗಿ ಶುಭವಾದ ಒಂದು ಗೋವನ್ನು ದಾನ ಮಾಡಿದನು.
ಸ ತಾಂ ಲಬ್ಧ್ವಾ ಧರ್ಮಶೀಲಶ್ಚಿಂತಯಾಮಾಸ ತತ್ಪರಃ |
ಸುಮಿತ್ರಃ ಪರಯಾ ಭಕ್ತ್ಯಾ ಜನನೀಮಿವ ಮಾತರಮ್ ॥13॥
ಧರ್ಮಶೀಲನಾದ ಸುಮಿತ್ರನು ಅದನ್ನು ಪಡೆದು ಶ್ರೇಷ್ಠವಾದ ಭಕ್ತಿಯಿಂದ ಜನ್ಮಕೊಟ್ಟ ತಾಯಿಯಂತೆ ಅದರಲ್ಲಿ ಆಸಕ್ತನಾಗಿ ಅದನ್ನೇ ಚಿಂತಿಸಿದನು.
ತೇನ ಸಂಧುಕ್ಷ್ಯಮಾಣಾ ಸಾ ರೋಹಿಣೀ ಕಾಮಚಾರಿಣೀ |
ವಿವೃದ್ಧಿಮಗಮಚ್ಛ್ರೇಷ್ಠಾ ಪ್ರಾಣತಶ್ಚ ಸುದರ್ಶನಾ ॥14॥
ಅವನಿಂದ ಪೋಷಿಸಲ್ಪಟ್ಟ, ಮನಸ್ಸಿಗೆ ಬಂದ ಕಡೆ ತಿರುಗುವ, ಆ ಧೇನುವು ಬಹಳ ಬೇಗ ಬೆಳೆದು ಒಳ್ಳೆಯ ಮನೋಹರವಾದ ರೂಪವನ್ನು ಹೊಂದಿತು.
ಸಿರಾವಿಮುಕ್ತಪಾರ್ಶ್ವಾಂತಾ ವಿಪುಲಾಂ ಕಾಂತಿಮುದ್ವಹತ್ |
ಶ್ಯಾಮಪಾರ್ಶ್ವಾಂತಪೃಷ್ಠಾಂತಾ ಸುರಭಿರ್ಮಧುಪಿಂಗಲಾ ॥15॥
ಪಾರ್ಶ್ವಗಳಿಂದ ನರನಾಳಗಳು ಅಡಗಿ ವಿಪುಲವಾದ ಕಾಂತಿಯನ್ನು ಹೊಂದಿ ಶ್ಯಾಮವರ್ಣದ ಪಾರ್ಶ್ವಗಳನ್ನೂ, ತುಂಬಿದ ಪೃಷ್ಠಗಳನ್ನೂ ಹೊಂದಿ ಮಧುಪಿಂಗಲ ವರ್ಣವನ್ನೂ, ಸುಗಂಧವನ್ನೂ ಹೊಂದಿದ್ದಿತು.

ಬೃಹತೀ ಸೂಕ್ಷ್ಮರೋಮಾಂತಾ ರೂಪೋದಗ್ರಾ ತನುತ್ವಚಾ |
ಕೃಷ್ಣಪುಚ್ಛಾ ಶ್ವೇತವಕ್ತ್ರಾ ಸಮವೃತ್ತಪಯೋಧರಾ ||16||
ಪೃಷ್ಠೋನ್ನತಾ ಪೂರ್ವನತಾ ಶಂಕುಕರ್ಣೀ ಸುಲೋಚನಾ |
ದೀರ್ಘಜಿಹ್ವಾ ಹ್ರಸ್ವಶೃಂಗೀ ಸಂಪೂರ್ಣದಶನಾಂತರಾ ||17||
ಮಾಂಸಾಧಿಕಗಲಾಂತಾ ಸಾ ಪ್ರಸನ್ನಾ ಶುಭದರ್ಶನಾ |
ನಿತ್ಯಂ ಶಮಯುತಾ ಸ್ನಿಗ್ಧಾ ಸಂಪೂರ್ಣೋದಾತ್ತನಿಸ್ವನಾ ||18||
ಪ್ರಾಜಾಪತ್ಯೈರ್ಗವಾಂ ನಿತ್ಯಂ ಪ್ರಶಸ್ತೈರ್ಲಕ್ಷಣೈರ್ಯುತಾ |
ಯೌವನಸ್ಥೇವ ವನಿತಾ ಶುಶುಭೇ ರೂಪಶೋಭಯಾ ||19||
ದೊಡ್ಡ ಶರೀರ, ಸಣ್ಣ ರೋಮಗಳು, ಶ್ರೇಷ್ಠವಾದ ರೂಪ, ಮೃದುವಾದ ಚರ್ಮ, ಕಪ್ಪು ಬಣ್ಣದ ಬಾಲ, ಬಿಳಿಯ ಮುಖ, ಸಮಾನವಾಗಿ ದುಂಡಾದ ಮೊಲೆಗಳು, ಎತ್ತರವಾದ ಪೃಷ್ಠಭಾಗ, ತಗ್ಗಾದ ಮುಂಭಾಗ, ತ್ರಿಕೋಣಾಕಾರವಾದ ಕಿವಿಗಳು, ಒಳ್ಳೆಯ ಕಣ್ಣುಗಳು, ದೀರ್ಘವಾದ ನಾಲಿಗೆ, ಹ್ರಸ್ವವಾದ ಕೊಂಬುಗಳು, ಬಾಯಲ್ಲಿ ಸಂಪೂರ್ಣವಾಗಿ ತುಂಬಿದ ದಂತಗಳು, ಮಾಂಸಾಧಿಕವಾದ ಗಂಗೆದೊಗಲು ಇವುಗಳಿಂದ ಕೂಡಿ ನೋಡುವುದಕ್ಕೆ ಮಂಗಳವಾದ ಆ ಧೇನುವು ಯಾವಾಗಲೂ ಪ್ರಸನ್ನವಾಗಿ ಶಾಂತಿಯಿಂದಲೂ, ಸ್ನೇಹದಿಂದಲೂ ಕೂಡಿ ಪೂರ್ಣವಾದ ಉದಾತ್ತವಾದ ಧ್ವನಿಯಿಂದ ಕೂಡಿದ್ದಿತು. ಪ್ರಾಜಾಪತ್ಯಗೋವಿನ ಎಲ್ಲ ಶುಭಲಕ್ಷಣಗಳನ್ನೂ ಹೊಂದಿದ್ದಿತು. ಯೌವನದಲ್ಲಿರುವ ವನಿತೆಯಂತೆ ತನ್ನ ರೂಪದ ಕಾಂತಿಯಿಂದ ಶೋಭಿಸುತ್ತಿದ್ದಿತು.
ವೃಷೇಣೋಪಗತಾ ಸಾ ತು ಕಲ್ಯಾ ಮಧುರದರ್ಶನಾ |
ಮಿಥುನಂ ಜನಯಾಮಾಸ ತುಲ್ಯರೂಪಮಿವಾತ್ಮನಃ ||20||
ಮಧುರದರ್ಶನವನ್ನು ಹೊಂದಿದ್ದ, ಪ್ರಶಸ್ತವಾದ ಆ ಗೋವು ಒಂದು ವೃಷಭದ ಸಂಸರ್ಗವನ್ನು ಮಾಡಿ ತನಗೆ ಸದೃಶವಾದ ರೂಪವನ್ನು ಹೊಂದಿದ್ದ ಎರಡು ಕರುಗಳನ್ನು ಸಂಪಾದಿಸಿತು.
ಸಂವರ್ಧಯಾಮಾಸ ಸ ತಾಂ ಸವತ್ಸಾಂ ಭಾರ್ಗವೋ ಋಷಿಃ |
ತಯೋಃ ಪ್ರಜಾಧಿಸಂಸರ್ಗಾತ್ ಸಹಸ್ರಂ ಚ ಗವಾಮಭೂತ್ ||21||
ಭಾರ್ಗವ ಋಷಿಯು ವತ್ಸಗಳಿಂದ ಸಹಿತವಾದ ಆ ಧೇನುವನ್ನು ಪೋಷಿಸಿದನು. ಹೀಗೆ ಅವುಗಳ ಸಂತತಿಯು ಬೆಳೆದು ಸಹಸ್ರ ಗೋವುಗಳಾದವು.
ಗವಾಂ ಜಾತಿಸಹಸ್ರಾಣಿ ಸಂಭೂತಾನಿ ಪರಸ್ಪರಮ್ |
ಋಷಭಾಣಾಂ ಚ ರಾಜೇಂದ್ರ ನೈವಾಂತಃ ಪ್ರತಿದೃಶ್ಯತೇ ||22||
ಎಲೈ ರಾಜೇಂದ್ರನೇ, ಆ ಗೋವುಗಳ ಮತ್ತು ವೃಷಭಗಳ ಪರಸ್ಪರ ಸಮಾಗಮದಿಂದ ಸಹಸ್ರಾರು ಜಾತಿಯ ಗೋವುಗಳು ಜನಿಸಿದವು. ಅವುಗಳಿಗೆ ಅಂತವೇ ಕಾಣುತ್ತಿರಲಿಲ್ಲ.
ತೈರಾಶ್ರಮಪದಂ ರಮ್ಯಮರಣ್ಯಂ ಚೈವ ಸರ್ವಶಃ |
ಸಮಾಕುಲಂ ಸಮಭವನ್ಮೇಘೈರಿವ ನಭಃಸ್ಥಲಮ್ ||23||
ಕಾನಿಚಿತ್ ಪದ್ಮವರ್ಣಾನಿ ಕಿಂಶುಕಾಭಾನಿ ಕಾನಿಚಿತ್ |
ರುಗ್ಮವರ್ಣಾನಿ ಚಾನ್ಯಾನಿ ಚಂದ್ರಾಂಶುಸದೃಶಾನಿ ಚ ||24||
ತಥಾ ರಾಜತವರ್ಣಾನಿ ಕಾನಿಚಿಲ್ಲೋಹಿತಾನಿ ವೈ |
ನೀಲಲೋಹಿತತಾಮ್ರಾಣಿ ಕೃಷ್ಣಾನಿ ಕಪಿಲಾನಿ ಚ |
ನಾನಾರಾಗವಿಚಿತ್ರಾಣಿ ಯೂಥಾನಿ ಬಹುಲಾನಿ ಚ ||25||
ಮೇಘಗಳಿಂದ ನಭಸ್ಥಳವು ನಿಬಿಡವಾದಂತೆ ಆ ಗೋವುಗಳಿಂದ ಆ ಸುಂದರವಾದ ಅರಣ್ಯ ಮತ್ತು ಆಶ್ರಮಸ್ಥಾನವು ತುಂಬಿಹೋಯಿತು. ಕೆಲವು ಗೋವುಗಳು ಪದ್ಮ ವರ್ಣದವುಗಳು, ಕೆಲವು ಮುತ್ತುಗದ ಹೂವಿನ ಬಣ್ಣವನ್ನು ಹೊಂದಿದವು, ಕೆಲವು ಚಿನ್ನದ ಬಣ್ಣವನ್ನೂ, ಕೆಲವು ಚಂದ್ರಕಿರಣಗಳಿಗೆ ಸಮಾನವಾದ ಬಣ್ಣವನ್ನೂ, ಇನ್ನು ಕೆಲವು ಬೆಳ್ಳಿಯ ಬಣ್ಣವನ್ನೂ, ಇನ್ನು ಕೆಲವು ಕೆಂಪುಬಣ್ಣವನ್ನೂ, ಇನ್ನು ಕೆಲವು ನೀಲ, ಲೋಹಿತ, ತಾಮ್ರ, ಕೃಷ್ಣ, ಕಪಿಲ ಬಣ್ಣಗಳನ್ನೂ ಹೊಂದಿ ಅನೇಕ ಬಣ್ಣಗಳಿಂದ ವಿಚಿತ್ರವಾಗಿ ಕಾಣುತ್ತಿದ್ದ ಅನೇಕ ಗೋವಿನ ಗುಂಪುಗಳು ಅಲ್ಲಲ್ಲಿ ಕಂಡುಬಂದವು.
ನ ಚ ಕ್ಷೀರಂ ಘೃತಂ ಸ್ನೇಹಾದ್ ವತ್ಸಾನಾಮುಪಜೀವತಿ |
ಭಾರ್ಗವಃ ಕೇವಲಂ ಚಾಸೀದ್ ಗವಾಂ ಪ್ರಾಣಯನೇ ರತಃ ||26||
ಭಾರ್ಗವನು ಕರುಗಳ ಮೇಲಿನ ಪ್ರೀತಿಯಿಂದ ಗೋವುಗಳ ಕ್ಷೀರವನ್ನಾಗಲೀ ಅಥವಾ ಘೃತವನ್ನಾಗಲೀ ಸೇವಿಸುತ್ತಿರಲಿಲ್ಲ. ಗೋವುಗಳನ್ನು ಅಲ್ಲಿಂದಿಲ್ಲಿಗೆ ಕರೆದುಕೊಂಡು ಹೋಗುವುದರಲ್ಲಿ ಮಾತ್ರ ನಿರತನಾಗಿದ್ದನು.
ತಥಾ ಶುಶ್ರೂಷತಸ್ತಸ್ಯ ಗವಾಂ ಹಿತಮವೇಕ್ಷತಃ |
ವ್ಯತೀಯಾತ್ ಸುಮಹಾನ್ ಕಾಲೋ ವತ್ಸೋಚ್ಛಿಷ್ಟೇನ ವರ್ತತಃ ||27||
ಹಾಗೆಯೇ ಗೋವುಗಳ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಕರುಗಳ ಬಾಯಿಂದ ಬಂದ ಹಾಲಿನ ನೊರೆಯನ್ನು ಮಾತ್ರ ಆಹಾರವಾಗಿ ಸೇವಿಸುತ್ತಿದ್ದ ಗೋವುಗಳ ಸೇವೆಯನ್ನು ಮಾಡುತ್ತಿದ್ದ ಅವನಿಗೆ ಬಹಳ ಕಾಲವು ಕಳೆದು ಹೋಯಿತು.
ಕ್ಷುತ್ಪಿಪಾಸಾಪರಿಶ್ರಾಂತಃ ಸತತಂ ಪ್ರಸ್ರವಂ ಗವಾಮ್ |
ವತ್ಸೈರುಚ್ಛಿಷ್ಟಮುದಿತಂ ಬಹುಕ್ಷೀರತಯಾ ಬಹು ||28||
ಪೀತವಾಂಸ್ತೇನ ನಾಮಾಸ್ಯ ಫೇನಪೇತ್ಯಭಿವಿಶ್ರುತಮ್ |
ಭಾರ್ಗವಸ್ಯಾಭಿನಿಷ್ಪನ್ನಮೇವಂ ನಾಮ ಯುಧಿಷ್ಠಿರ ||29||

ಹಸಿವು ಮತ್ತು ಬಾಯಾರಿಕೆಗಳಿಂದ ಬಳಲಿದ ಅವನು ಗೋವುಗಳಿಗೆ ಬಹಳ ಕ್ಷೀರವಿದ್ದುದರಿಂದ ಕರುಗಳ ಬಾಯಿಂದ ಬಂದ ಬಹುಕ್ಷೀರ ನೊರೆಯನ್ನು ಪಾನ ಮಾಡುತ್ತಿದ್ದನು. ಅದರಿಂದ ಅವನಿಗೆ ಫೇನಪ (ನೊರೆಯನ್ನು ಕುಡಿಯುವವನು) ಎಂಬ ಹೆಸರು ಪ್ರಖ್ಯಾತವಾಯಿತು. ಎಲೈ ಯುಧಿಷ್ಠಿರನೇ, ಭಾರ್ಗವ ಮುನಿಗೆ ಫೇನಪ ಎಂಬ ನಾಮವು ಈ ರೀತಿಯಾಗಿ ಬಂದಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಭಾರ್ಗವಸ್ಯ ಫೇನಪನಾಮಲಾಭಪ್ರಕಾರಕಥನಂ
ನಾಮ ಪಂಚಾದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನಾರನೆಯ ಅಧ್ಯಾಯ
ಗೋವುಗಳ ಸಂವಾದ. ಭಾರ್ಗವನನ್ನು ವಧಿಸಲು ನಿರ್ಧಾರ.
ಭೀಷ್ಮಃ
ಕದಾಚಿತ್ ಕಾಮರೂಪಿಣ್ಯೋ ಗಾವಃ ಸ್ತ್ರೀವೇಷಮಾಸ್ಥಿತಾಃ |
ಹ್ರದೇ ಕ್ರೀಡಂತಿ ಸಂಹೃಷ್ಟಾ ಗಾಯಂತ್ಯಃ ಪುಣ್ಯಲಕ್ಷಣಾಃ ॥1॥
ದದೃಶುಸ್ತಸ್ಯ ಗಾವೋ ವೈ ವಿಸ್ಮಯೋತ್ಫುಲ್ಲಲೋಚನಾಃ |
ಊಚುಶ್ಚ ಕಾ ಯೂಯಮಿತಿ ಸ್ತ್ರಿಯೋ ಮಾನುಷಯಾ ಗಿರಾ ॥2॥
ಭೀಷ್ಮ ಒಮ್ಮೆ ಕಾಮರೂಪವನ್ನು ಹೊಂದಿದ ಪುಣ್ಯಶಾಲಿಯಾದ ಗೋವುಗಳು ಸ್ತ್ರೀವೇಷವನ್ನು ಧರಿಸಿ ಸಂತೋಷದಿಂದ ಒಂದು ಸರೋವರದಲ್ಲಿ ಹಾಡುತ್ತಾ ಆಟವಾಡುತ್ತಿದ್ದರು. ಅದನ್ನು ಆಶ್ಚರ್ಯದ ಕಣ್ಣುಗಳುಳ್ಳ ಗೋವುಗಳು ನೋಡಿ ಆ ಸ್ತ್ರೀಯರನ್ನು ಕುರಿತು ಮನುಷ್ಯವಾಣಿಯಿಂದ ನೀವು ಯಾರು ಎಂದು ಪ್ರಶ್ನೆ ಮಾಡಿದವು.
ಸ್ತ್ರಿಯಃ
ಗಾವ ಏವ ವಯಂ ಸರ್ವಾ ಕರ್ಮಭಿಃ ಶೋಭನೈರ್ಯುತಾಃ |
ಸರ್ವಾ ಸ್ತ್ರೀವೇಷಧಾರಿಣ್ಯೋ ಯಥಾಕಾಮಂ ಚರಾಮಹೇ ॥3॥
ಸ್ತ್ರೀಯರು ನಾವೆಲ್ಲರೂ ಸತ್ಕರ್ಮಗಳನ್ನು ಮಾಡಿದ ಗೋವುಗಳು. ಎಲ್ಲರೂ ಸ್ತ್ರೀವೇಷವನ್ನು ಧರಿಸಿ ನಮ್ಮ ಮನಸ್ಸಿಗೆ ಬಂದಂತೆ ಸಂಚರಿಸುತ್ತೇವೆ.
ಗಾವಃ
ಗವಾಂ ಗಾವಃ ಪರಂ ದೈವಂ ಗವಾಂ ಗಾವಃ ಪರಾ ಗತಿಃ |
ಕಥಯಧ್ವಮಿಹಾಸ್ಮಾಕಂ ಕೇನ ವಃ ಸುಕೃತಾಂ ಗತಿಃ ॥4॥
ಗೋವುಗಳು ಗೋವುಗಳಿಗೆ ಗೋವುಗಳೇ ಶ್ರೇಷ್ಠದೇವತೆ. ಗೋವುಗಳೇ ಶ್ರೇಷ್ಠವಾದ ಗತಿ. ನಿಮಗೆ ಯಾವ ಕರ್ಮದಿಂದ ಪುಣ್ಯಶಾಲಿಗಳ ಗತಿಯುಂಟಾಯಿತು ಎಂದು ನಮಗೆ ಹೇಳಿ.
ಸ್ತ್ರಿಯಃ
ಅಸ್ಮಾಕಂ ಹವಿಷಾ ದೇವಾ ಬ್ರಾಹ್ಮಣಾಸ್ತರ್ಪಿತಾಸ್ತಥಾ |
ಕವ್ಯೇನ ಪಿತರಶ್ಚೈವ ಹವ್ಯೇನಾಗ್ನಿಶ್ಚ ತರ್ಪಿತಃ ॥5॥
ಸ್ತ್ರೀಯರು ನಮ್ಮ ಹವಿಸ್ಸಿನಿಂದ ದೇವತೆಗಳು ಮತ್ತು ಬ್ರಾಹ್ಮಣರು ತೃಪ್ತಿಯನ್ನು ಹೊಂದುತ್ತಾರೆ. ಕವ್ಯದಿಂದ ಪಿತೃಗಳು, ಹವ್ಯದಿಂದ ಅಗ್ನಿಯು ತೃಪ್ತಿಯನ್ನು ಹೊಂದುತ್ತಾನೆ.
ಪ್ರಜಯಾ ಚ ತಥಾಽಸ್ಮಾಕಂ ಕೃಷಿರಭ್ಯುದ್ಧೃತಾ ಸದಾ |
ಶಕಟೈಶ್ಚಾಪಿ ಸಂಯುಕ್ತಾ ದಶವಾಹಶತೇನ ವೈ ॥6॥
ನಮ್ಮ ಸಂತತಿಯಿಂದ ಕೃಷಿಯು ಅಭಿವೃದ್ಧಿಯನ್ನು ಹೊಂದುತ್ತದೆ. ಹತ್ತು ಜನರನ್ನು, ನೂರು ಜನರನ್ನು ಎಳೆಯುವ ಗಾಡಿಗಳಲ್ಲಿ ಅವುಗಳನ್ನು ಹೂಡುತ್ತಾರೆ.
ತದೇತೈಃ ಸುಕೃತೈಃ ಸ್ಪೀತೈರ್ವಯಂ ಯಾಶ್ಚೈವ ನಃ ಪ್ರಜಾಃ |
ಗೋಲೋಕಮನುಸಂಪ್ರಾಪ್ತಾ ಯಃ ಪರಃ ಕಾಮಗೋಚರಃ ॥7॥
ಇಂತಹ ಪರಿಶುದ್ಧವಾದ ಸತ್ಕರ್ಮಗಳಿಂದ ನಾವು ಮತ್ತು ನಮ್ಮ ಸಂತತಿಯು ನಮ್ಮ ಇಚ್ಛೆಯಂತೆ ಸಂಚರಿಸಬಹುದಾದ ಶ್ರೇಷ್ಠವಾದ ಗೋಲೋಕವನ್ನು ಪಡೆದಿದ್ದೇವೆ.
ಯೂಯಂ ತು ಸರ್ವಾ ರೋಹಿಣ್ಯಃ ಸಪ್ರಜಾಃ ಸಹಪುಂಗವಾಃ |
ಅಧೋಗಾಮಿನ್ಯ ಇತ್ಯೇವ ಪಶ್ಯಾಮೋ ದಿವ್ಯಚಕ್ಷುಷಾ ॥8॥
ನಿಮ್ಮ ಪ್ರಜೆಗಳಿಂದ ಮತ್ತು ಸಂಗತವಾದ ವೃಷಭಗಳಿಂದ ಕೂಡಿದ ಗೋವುಗಳಾದ ನೀವೆಲ್ಲರೂ ಅಧೋಗತಿಯನ್ನು ಹೊಂದುತ್ತೀರಿ ಎಂದು ನಾವು ದಿವ್ಯದೃಷ್ಟಿಯಿಂದ ನೋಡುತ್ತಿದ್ದೇವೆ.
ಗಾವಃ
ಏವಂ ಗವಾಂ ಪರಂ ದೈವಂ ಗಾವ ಏವ ಪರಾಯಣಮ್ |
ಸ್ವಪಕ್ಷ್ಯಾಸ್ತಾರಣೀಯಾ ವಃ ಶರಣಾಯ ಗತಾ ವಯಮ್ ॥9॥
ಕಿಮಸ್ಮಾಭಿಃ ಕರಣೀಯಂ ವರ್ತಿತವ್ಯಂ ಕಥಂಚನ |
ಪ್ರಾಪ್ನುಯಾಮ ಚ ಗೋಲೋಕಂ ಭವಾಮ ನ ಚ ಗರ್ಹಿತಾಃ ॥10॥

ಗೋವುಗಳು ಈ ರೀತಿಯಲ್ಲಿ ಗೋವುಗಳಿಗೆ ಗೋವುಗಳೇ ಶ್ರೇಷ್ಠದೇವತೆ ಮತ್ತು ಶ್ರೇಷ್ಠವಾದ ಆಶ್ರಯ. ನಿಮ್ಮ ಗುಂಪಿಗೆ ಸೇರಿದ ನಮ್ಮನ್ನು ದಾಟಿಸಬೇಕು. ನಾವು ನಿಮಗೆ ಶರಣಾಗತರಾಗಿದ್ದೇವೆ. ನಾವು ಹೇಗೆ ನಿಂದಿತರಾಗುವುದಿಲ್ಲ ಮತ್ತು ಹೇಗೆ ಗೋಲೋಕವನ್ನು ಪಡೆಯುತ್ತೇವೆ?
ಸ್ತ್ರಿಯಃ
ವರ್ತತೇ ರಂತಿದೇವಸ್ಯ ಸತ್ರಂ ವರ್ಷಸಹಸ್ರಕಮ್ |
ತತ್ರ ತಸ್ಯ ನೃಪಸ್ಯಾಶು ಪಶುತ್ವಮುಪಗಚ್ಛತ ||11||
ತತಸ್ತಸ್ಯೋಪಯೋಗೇನ ಪಶುತ್ವೇ ಯಜ್ಞಸಂಸ್ಕೃತಾಃ |
ಗೋಲೋಕಾನ್ ಪ್ರಾಪ್ಸ್ಯಥ ಶುಭಾಂಸ್ತೇನ ಪುಣ್ಯೇನ ಸಂಯುತಾಃ ||12||
ಸ್ತ್ರೀಯರು ರಂತಿದೇವನು ಸಹಸ್ರವರ್ಷ ಪರ್ಯಂತವಾಗಿ ಸತ್ರಯಾಗವನ್ನು ನಡೆಸುತ್ತಿದ್ದಾನೆ. ನೀವು ಆ ರಾಜನ ಬಳಿಗೆ ಶೀಘ್ರವಾಗಿ ಹೋಗಿ ಅವನ ಯಜ್ಞಪಶುಗಳಾಗಿ. ಅವನು ನಿಮ್ಮನ್ನು ಯಜ್ಞದಲ್ಲಿ ಪಶುಗಳಾಗಿ ಉಪಯೋಗಿಸಿದರೆ ಯಜ್ಞದಿಂದ ಸಂಸ್ಕೃತರಾದ ನೀವು ಶುಭಪುಣ್ಯದಿಂದ ಯುಕ್ತರಾಗಿ ಗೋಲೋಕವನ್ನು ಹೊಂದುವಿರಿ.
ಭೀಷ್ಮಃ
ಏತತ್ ತಾಸಾಂ ವಚಃ ಶ್ರುತ್ವಾ ಗವಾಂ ಸಂಹೃಷ್ಟಮಾನಸಾಃ |
ಗಮನಾಯ ಮನಶ್ಚಕ್ರುರೌತ್ಸುಕ್ಯಂ ಚಾಗಮನ್ ಪರಮ್ ||13||
ಭೀಷ್ಮ ಆ ಸ್ತ್ರೀರೂಪದ ಗೋವುಗಳ ಈ ಮಾತನ್ನು ಕೇಳಿ ಗೋವುಗಳು ಮನಸ್ಸಿನಲ್ಲಿ ಸಂತೋಷಗೊಂಡು ರಂತಿದೇವನ ಬಳಿಗೆ ಹೋಗಲು ಅಪೇಕ್ಷಿಸಿದವು. ಬಹಳ ಉತ್ಸುಕತೆಯನ್ನು ಹೊಂದಿದವು.
ನ ಹಿ ನೋ ಭಾರ್ಗವೋ ದಾತಾ ಪಶುತ್ವೇನೋಪಯೋಜನಮ್ |
ಯಜ್ಞಸ್ತಸ್ಯ ನರೇಂದ್ರಸ್ಯ ವರ್ತತೇ ಧರ್ಮತಸ್ತಥಾ ||14||
ಭಾರ್ಗವನು ನಮ್ಮನ್ನು ಯಜ್ಞದಲ್ಲಿ ಪಶುವಾಗಿ ಉಪಯೋಗಿಸುವುದಕ್ಕೆ ಅವಕಾಶವನ್ನು ಕೊಡುವುದಿಲ್ಲ. ಆ ನರೇಂದ್ರನ ಯಜ್ಞವಾದರೂ ಧರ್ಮದಿಂದ ನಡೆಯುತ್ತಿದೆ.
ವಯಂ ನ ಚಾನನುಜ್ಞಾತಾಃ ಶಕ್ತಾ ಗಂತುಂ ಕಥಂಚನ |
ಅವೋಚನ್ನಥ ತತ್ರತ್ಯಾ ಭಾರ್ಗವೋ ವಧ್ಯತಾಮಯಮ್ ||15||
ನಾವಾದರೂ ಭಾರ್ಗವನ ಅನುಮತಿ ಇಲ್ಲದೆ ಅಲ್ಲಿಗೆ ಹೋಗಲಾರೆವು (ಎಂದು ಚಿಂತಿಸಿದವು). ಆಗ ಅಲ್ಲಿದ್ದ ಕೆಲವು ಗೋವುಗಳು ಈ ಭಾರ್ಗವವನ್ನು ಕೊಲ್ಲೋಣ ಎಂದು ಹೇಳಿದವು.
ಏತತ್ ಸರ್ವಾ ರೋಚಯತ ನ ಹಿ ಶಕ್ಯಮತೋಽನ್ಯಥಾ |
ಲೋಕಾನ್ ಪ್ರಾಪ್ತುಂ ಸಹಾಸ್ಮಾಭಿರ್ನಿಶ್ಚಯಃ ಕ್ರಿಯತಾಮಯಮ್ ||16||
ಈ ಸಲಹೆಯನ್ನು ಎಲ್ಲರೂ ಒಪ್ಪಿ ಅದನ್ನು ಬಿಟ್ಟು ನಾವು ಬೇರೆ ರೀತಿಯಲ್ಲಿ ಇಲ್ಲಿಂದ ಹೋಗುವುದಾಗಲೀ, ಎಲ್ಲರೂ ಒಟ್ಟಿಗೆ ಶುಭಲೋಕವನ್ನು ಹೊಂದುವುದಾಗಲೀ ಸಾಧ್ಯವಿಲ್ಲ. ಎಲ್ಲರೂ ಸೇರಿ ಈ ನಿಶ್ಚಯವನ್ನು ಮಾಡಿ (ಎಂದು ಹೇಳಿದವು).
ನ ತು ತಾಸಾಂ ಸಮೇತಾನಾಂ ಕಾಚಿದ್ ಘೋರೇಣ ಚಕ್ಷುಷಾ |
ಶಕ್ನೋತಿ ಭಾರ್ಗವಂ ದ್ರಷ್ಟುಂ ಸತ್ಕೃತೇನೋಪಸಂಯುತಾ ||17||
ಅಲ್ಲಿ ಸೇರಿದ ಗೋವುಗಳಲ್ಲಿ ಎಲ್ಲವೂ ಭಾರ್ಗವನಿಂದ ಸತ್ಕರಿಸಲ್ಪಟ್ಟು ಯಾವ ಗೋವೂ ಸಹ ಭಾರ್ಗವನನ್ನು ಘೋರವಾದ ದೃಷ್ಟಿಯಿಂದ ನೋಡಲು ಸಾಧ್ಯವಾಗಲಿಲ್ಲ.
ಅಥ ಪದ್ಮಸವರ್ಣಾಭಾ ಭಾಸ್ಕರಾಂಶುಸಮಪ್ರಭಾಃ |
ಜಪಾಲೋಹಿತತಾಮ್ರಾಕ್ಷ್ಯೋ ನಿರ್ಮಾಂಸಕಠಿನಾನನಾಃ ||18||
ರೋಹಿಣ್ಯಃ ಕಪಿಲಾಃ ಪ್ರಾಹುಃ ಸರ್ವಾಸಾಂ ವೈ ಸಮಕ್ಷತಃ |
ಮೇಘಸ್ತನಿತನಿರ್ಘೋಷಾಸ್ತೇಜೋಭಿರಭಿರಂಜಿತಾಃ ||19||
ವಯಂ ಹಿ ತಂ ವಧಿಷ್ಯಾಮಃ ಸುಮಿತ್ರಂ ನಾತ್ರ ಸಂಶಯಃ |
ಸುಕೃತಂ ಪೃಷ್ಠತಃ ಕೃತ್ವಾ ಕಿಂ ನಃ ಶ್ರೇಯೋ ವಿಧಾಸ್ಯಥ ||20||
ಆಗ ಪದ್ಮಕಾಂತಿಯನ್ನು ಹೊಂದಿದ್ದ, ಸೂರ್ಯಕಿರಣಗಳಂತಹ ಪ್ರಭೆಯನ್ನು ಹೊಂದಿದ್ದ, ದಾಸವಾಳ ಬಣ್ಣದಂತಹ ಕೆಂಪುಬಣ್ಣವುಳ್ಳ, ಮಾಂಸರಹಿತವಾದ, ಕಠಿನವಾದ ಮುಖವುಳ್ಳ ಕಪಿಲಧೇನುಗಳು ಉಳಿದ ಎಲ್ಲಾ ಧೇನುಗಳ ಸಮಕ್ಷಮದಲ್ಲಿ ಮೇಘಗರ್ಜನೆಯಂತಹ ಧ್ವನಿಯನ್ನು ಹೊಂದಿ, ತೇಜೋಯುಕ್ತವಾಗಿ ನಾವು ಸುಮಿತ್ರನು ಮಾಡಿದ ಉಪಕಾರವನ್ನು ಹಿಂದೆ ತಳ್ಳಿ, ಅವನನ್ನು ಕೊಲ್ಲುವೆವು. ಇದರಲ್ಲಿ ಸಂಶಯವಿಲ್ಲ. ನೀವು ನಮಗೆ ಯಾವ ಶ್ರೇಯಸ್ಸನ್ನು ಉಂಟುಮಾಡುತ್ತೀರಿ ಎಂದು ಕೇಳಿದವು.
ಗಾವಃ
ಕಪಿಲಾ ಸರ್ವವರ್ಣೇಷು ಪ್ರಧಾನತ್ವಮವಾಪ್ಸ್ಯಥ |
ಗವಾಂ ಶತಫಲಾಚ್ಚೈಕಾಂ ದತ್ತ್ವಾ ಫಲಮವಾಪ್ಸ್ಯತಿ ||21||
ಗೋವುಗಳು ಕಪಿಲಗೋವುಗಳಾದ ನೀವು ಎಲ್ಲ ಗೋವುಗಳಲ್ಲಿ ಪ್ರಧಾನ್ಯವನ್ನೂ ಹೊಂದುವವರಾಗಿ. ನೂರು ಗೋವುಗಳನ್ನು ದಾನ ಮಾಡಿದ ಫಲವು ಒಂದೇ ಕಪಿಲಗೋವನ್ನು ದಾನ ಮಾಡುವುದರಿಂದ ಉಂಟಾಗಲಿ.
ಭೀಷ್ಮಃ
ಏತದ್ ಗವಾಂ ವಚಃ ಶ್ರುತ್ವಾ ಕಪಿಲಾ ಹೃಷ್ಟಮಾನಸಾಃ |
ಚಕ್ರುಃ ಸರ್ವಾ ಭಾರ್ಗವಸ್ಯ ಸುಮಿತ್ರಸ್ಯ ವಧೇ ಮತಿಮ್ ||22||

ಭೀಷ್ಮ ಗೋವುಗಳ ಈ ಮಾತನ್ನು ಕೇಳಿ ಕಪಿಲಗೋವುಗಳು ಸಂತೋಷದಿಂದ ಕೂಡಿದ ಮನಸ್ಸುಳ್ಳವುಗಳಾಗಿ ಅವೆಲ್ಲವೂ ಭಾರ್ಗವನಾದ ಸುಮಿತ್ರನ ವಧೆಯನ್ನು ಮಾಡುವುದಾಗಿ ನಿಶ್ಚಯಿಸಿದವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಭಾರ್ಗವವಧನಿಶ್ಚಯೋ ನಾಮ
ಷೋಡಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೇಳನೆಯ ಅಧ್ಯಾಯ
ಗೋಮಾತೆಯರಿಂದ ಭಾರ್ಗವನ ರಕ್ಷಣೆ.
ಭೀಷ್ಮಃ
ಯಾಸ್ತು ಗೋಮಾತರಸ್ತಸ್ಯ ಕಾಮಚಾರಿಣ್ಯ ಆಗತಾಃ |
ಸಮೀಪಂ ಹಿ ಸುಮಿತ್ರಸ್ಯ ಕೃತಜ್ಞಾಃ ಸಮುಪಸ್ಥಿತಾಃ ॥1॥
ಭೀಷ್ಮ ಸ್ವರ್ಗದಿಂದ ಬಂದ ಕಾಮಚಾರಿಗಳಾದ ಗೋಮಾತೆಯರು ಕೃತಜ್ಞತೆಯಿಂದ ಸುಮಿತ್ರನ ಸಮೀಪಕ್ಕೆ ಬಂದವು.
ಅಭಿಪ್ರಶಸ್ಯ ಚೈವಾಹುಸ್ತಮೃಷಿಂ ಪುಣ್ಯದರ್ಶನಾಃ |
ಗೋಲೋಕಾದಾಗತಾ ವೇದ ಋಷೇ ಗೋಮಾತರೋ ವಯಮ್ ॥2॥
ಸುಪ್ರೀತಾಃ ಸ್ಮ ವರಂ ಗೃಹ್ಣ ಯಮಿಚ್ಛಸಿ ಮಹಾಮುನೇ |
ಯದ್ದಿ ಗೋಷು ಪರಾಂ ಬುದ್ಧಿಂ ಕೃತವಾನಸಿ ನಿತ್ಯದಾ ॥3॥
ಪುಣ್ಯದರ್ಶನರಾದ ಆ ಗೋಮಾತೆಯರು ಆ ಋಷಿಯನ್ನು ಹೊಗಳಿ- `ಎಲೈ ಋಷಿಯೇ, ನಾವು ಗೋಲೋಕದಿಂದ ಬಂದ ಗೋಮಾತೆಯರು. ಮಹಾಮುನಿಯೇ, ನೀನು ಯಾವಾಗಲೂ ಗೋವುಗಳಲ್ಲಿ ಹೊಂದಿದ ಶ್ರೇಷ್ಠವಾದ ಬುದ್ಧಿಯ ಕಾರಣದಿಂದಾಗಿ ನಾವು ಸಂತೋಷಗೊಂಡಿದ್ದೇವೆ. ನೀನು ಬಯಸಿದ ವರವನ್ನು ಕೇಳು' ಎಂದು ಹೇಳಿದವು.
ಸುಮಿತ್ರಃ
ಪ್ರೀತೋಽಸ್ಮ್ಯನುಗೃಹೀತೋಽಸ್ಮಿ ಯನ್ಮಾಂ ಗೋಮಾತರಃ ಶುಭಾಃ |
ಸುಪ್ರೀತಮನಸಃ ಸರ್ವಾಸ್ತಿಷ್ಠಂತೇ ಚ ವರಪ್ರದಾಃ ॥4॥
ಭವೇದ್ ಗೋಷ್ವೇವ ಮೇ ಭಕ್ತಿರ್ಯಥೈವಾದ್ಯ ತಥಾ ಸದಾ |
ಗೋಘ್ನಾಶ್ಚೈವಾವಸೀದಂತು ನರಾ ಬ್ರಹ್ಮದ್ವಿಷಶ್ಚ ಯೇ ॥5॥
ಸುಮಿತ್ರ ಪವಿತ್ರರಾದ ಗೋಮಾತೆಯರೆಲ್ಲರೂ ಸಂತೋಷಗೊಂಡ ಮನಸ್ಸಿನಿಂದ ವರಪ್ರದರಾಗಿ ನನ್ನ ಬಳಿ ಇರುವುದರಿಂದ ನಾನು ಸಂತುಷ್ಟನಾಗಿದ್ದೇನೆ ಮತ್ತು ಅನುಗೃಹೀತನಾಗಿದ್ದೇನೆ. ಈ ದಿನ ನನಗಿರುವಂತೆ ಯಾವಾಗಲೂ ಗೋವುಗಳಲ್ಲಿ ಭಕ್ತಿ ಇರಲಿ. ಗೋಹತ್ಯೆಯನ್ನು ಮಾಡುವವರು ನಾಶವನ್ನು ಹೊಂದಲಿ. ಬ್ರಹ್ಮದ್ವೇಷಿಗಳು ನಾಶವನ್ನು ಹೊಂದಲಿ.
ಗೋಮಾತರಃ
ಏವಮೇತದೃಷಿಶ್ರೇಷ್ಠ ಹಿತಂ ವದಸಿ ನಃ ಪ್ರಿಯಮ್ |
ಏಹಿ ಗಚ್ಛ ಸಹಾಸ್ಮಾಭಿರ್ಗೋಲೋಕಮೃಷಿಸತ್ತಮ ॥6॥
ಗೋಮಾತೆಯರು ಎಲೈ ಋಷಿಶ್ರೇಷ್ಠನೇ, ನೀನು ಈ ರೀತಿಯಾಗಿ ನಮಗೆ ಹಿತವೂ, ಪ್ರಿಯವೂ ಆದ ಮಾತನ್ನೇ ಆಡುತ್ತಿದ್ದೀಯೆ. ಎಲೈ ಋಷಿಸತ್ತಮನೇ, ನಮ್ಮ ಜೊತೆಯಲ್ಲಿ ಗೋಲೋಕಕ್ಕೆ ಬಾ.
ಸುಮಿತ್ರಃ
ಯೂಯಮಿಷ್ಟಾಂ ಗತಿಂ ಯಾಂತು ನ ಹ್ಯಹಂ ಗಂತುಮುತ್ಸಹೇ |
ಇಮಾ ಗಾವಃ ಸಮುತ್ಸೃಜ್ಯ ತಪಸ್ವಿನ್ಯೋ ಮಮ ಪ್ರಿಯಾಃ ॥7॥
ಸುಮಿತ್ರ ನಿಮಗಿಷ್ಟವಾದ ಕಡೆಗೆ ನೀವು ಹೋಗಿ. ನಾನು ನನಗೆ ಪ್ರಿಯವಾದ, ಶೋಚನೀಯವಾದ ಈ ಗೋವುಗಳನ್ನು ಬಿಟ್ಟು ಬರಲು ಇಷ್ಟಪಡುವುದಿಲ್ಲ.
ಭೀಷ್ಮಃ
ತಾಸ್ತು ತಸ್ಯ ವಚಃ ಶ್ರುತ್ವಾ ಕಪಿಲಾನಾಂ ಸುದಾರುಣಮ್ |
ನಿನ್ಯುಸ್ತಮೃಷಿಮುತ್ಕ್ಷಿಪ್ಯ ಭಾರ್ಗವಂ ನಭ ಉದ್ವಹನ್ ॥8॥
ಭೀಷ್ಮ ಗೋಮಾತೆಯರು ಕಪಿಲಗೋವುಗಳ ದಾರುಣವಾದ ಮಾತುಗಳನ್ನು ಕೇಳಿ ಆ ಋಷಿಶ್ರೇಷ್ಠನಾದ ಭಾರ್ಗವನನ್ನು ಆಕಾಶಕ್ಕೆ ಎತ್ತಿಕೊಂಡು ಹೋದರು.
ಕಳೇವರಂ ತು ತತ್ರೈವ ತಸ್ಯ ಸನ್ನ್ಯಸ್ಯ ಮಾತರಃ |
ನಿಷ್ಕೃಷ್ಯ ಕರಣಂ ಯೋಗಾದಾನಯನ್ ಭಾರ್ಗವಸ್ಯ ವೈ ॥9॥
ಗೋಮಾತೆಯರು ಅವನ ಶರೀರವನ್ನು ಅಲ್ಲಿಯೇ ಬಿಟ್ಟು ತಮ್ಮ ಯೋಗಶಕ್ತಿಯಿಂದ ಭಾರ್ಗವನ ಸೂಕ್ಷ್ಮಶರೀರವನ್ನು ಎಳೆದುಕೊಂಡು ಹೊರಟರು.
ಸರ್ವಂ ಚಾಸ್ಯ ತದಾಚಖ್ಯುಃ ಕಪಿಲಾನಾಂ ವಿಚೇಷ್ಟಿತಮ್ |
ಯದರ್ಥಂ ಹರಣಂ ಗೋಭಿರ್ಗೋಲೋಕಂ ಲೋಕಮಾತರಃ ॥10॥
ಅವರು ಅವನಿಗೆ ಕಪಿಲ ಗೋವುಗಳ ಎಲ್ಲ ಅಭಿಪ್ರಾಯವನ್ನೂ, ಲೋಕ ಮಾತೆಯರಾದ ತಾವು ಗೋವುಗಳ ಜೊತೆಯಲ್ಲಿ

ಗೋಲೋಕಕ್ಕೆ ಕರೆದುಕೊಂಡು ಹೋಗುವ ಕಾರಣವನ್ನೂ ಹೇಳಿದರು.
ತತಸ್ತು ಕಪಿಲಾಸ್ತತ್ರ ತಸ್ಯ ದೃಷ್ಟ್ವಾ ಕಳೇವರಮ್ |
ತಥಾಪ್ರತಿಜ್ಞಂ ಶೃಂಗೈಶ್ಚ ಖುರೈಶ್ಚಾಪ್ಯವಚೂರ್ಣಯನ್ ॥11॥
ಆಗ ಕಪಿಲ ಗೋವುಗಳು ಅಲ್ಲಿ ಬಿದ್ದಿದ್ದ ಭಾರ್ಗವನ ಶರೀರವನ್ನು ನೋಡಿ ತಾವು ಮೊದಲು ಪ್ರತಿಜ್ಞೆಯನ್ನು ಮಾಡಿದಂತೆ ಕೊಂಬುಗಳಿಂದಲೂ ಮತ್ತು ಗೊರಸುಗಳಿಂದಲೂ ಅದನ್ನು ಪುಡಿ ಮಾಡಿದವು.
ತತಃ ಸಂಭಿದ್ಯ ಬಹುಧಾ ಭಾರ್ಗವಂ ನೃಪಸತ್ತಮ |
ಯಯುರ್ಯತ್ರೇತರಾ ಗಾವಸ್ತಚ್ಚ ಸರ್ವಂ ನ್ಯವೇದಯನ್ ॥12॥
ಎಲೈ ನೃಪಶ್ರೇಷ್ಠನೇ, ಅನಂತರ ಭಾರ್ಗವನ ದೇಹವನ್ನು ಬಹಳವಾಗಿ ಪುಡಿ ಮಾಡಿ ಬೇರೆ ಗೋವುಗಳಿದ್ದಲ್ಲಿಗೆ ಹೋಗಿ ಎಲ್ಲವನ್ನೂ ನಿವೇದಿಸಿದವು.
ಅಥ ಗೋಮಾತೃಭಿಃ ಶಪ್ತಾಸ್ತಾ ಗಾವಃ ಪೃಥಿವೀಚರಾಃ |
ಅಮೇಧ್ಯವದನಾಃ ಕ್ಷಿಪ್ರಂ ಭವಧ್ವಂ ಬ್ರಹ್ಮಘಾತಕಾಃ ॥13॥
ಆಗ ಪೃಥಿವಿಯಲ್ಲಿ ಚಲಿಸುವ ಆ ಗೋವುಗಳಿಗೆ ಗೋಮಾತೆಯರು ಬ್ರಹ್ಮಹತ್ಯೆಯನ್ನು ಮಾಡಿದ ನೀವು ಶೀಘ್ರವಾಗಿ ಅಮೇಧ್ಯಮುಖವುಳ್ಳವರಾಗಿ ಎಂದು ಶಾಪವನ್ನು ನೀಡಿದರು.
ಏವಂ ಕೃತಜ್ಞಾ ಗಾವೋ ಹಿ ಯಥಾ ಗೋಮಾತರೋ ನೃಪ |
ಋಷಿಶ್ಚ ಪ್ರಾಪ್ತವಾಲ್ಲೋಕಂ ಗಾವಶ್ಚ ಪರಿಮೋಕ್ಷಿತಾಃ ॥14॥
ಹೀಗೆ ಗೋವುಗಳು ಗೋಮಾತೆಯರಂತೆ ಕೃತಜ್ಞವಾದವುಗಳು. ಭಾರ್ಗವ ಋಷಿಯೂ, ಗೋಲೋಕವನ್ನು ಹೊಂದಿದನು. ಗೋವುಗಳೂ ಬಿಡಿಸಲ್ಪಟ್ಟವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಭಾರ್ಗವಸ್ಯ ಗೋಲೋಕಪ್ರಾಪ್ತಿರ್ನಾಮ
ಸಪ್ತದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೆಂಟನೆಯ ಅಧ್ಯಾಯ
ರಂತಿದೇವನ ಯಜ್ಞದಲ್ಲಿ ಗೋವುಗಳ ವಿನಿಯೋಗ ಮತ್ತು ಅವುಗಳಿಗೆ ಸದ್ಗತಿ. ಭಾರ್ಗವೋಪಾಖ್ಯಾನ ಸಮಾಪ್ತಿ.
ಭೀಷ್ಮಃ
ತಾ ಗಾವೋ ರಂತಿದೇವಸ್ಯ ಗತ್ವಾ ಯಜ್ಞಂ ಮನೀಷಿಣಃ |
ಆತ್ಮಾನಂ ಜ್ಞಾಪಯಾಮಾಸುರ್ಮಹರ್ಷೀಣಾಂ ಸಮಕ್ಷತಃ ॥1॥
ರಂತಿದೇವಸ್ತತೋ ರಾಜಾ ಪ್ರಯತಃ ಪ್ರಾಂಜಲಿಃ ಶುಚಿಃ |
ಉವಾಚ ಗಾವಃ ಪ್ರಣತಃ ಕಿಮಾಗಮನಮಿತ್ಯಪಿ ॥2॥
ಭೀಷ್ಮ ಆ ಗೋವುಗಳು ಮೇಧಾವಿಯಾದ ರಂತಿದೇವನ ಯಜ್ಞದ ಬಳಿಗೆ ಹೋಗಿ ಋಷಿಗಳ ಬಳಿಯಲ್ಲಿ ತಮ್ಮನ್ನು ನಿವೇದಿಸಿಕೊಂಡವು. ರಾಜನಾದ ರಂತಿದೇವನು ಆಗ ಶುಚಿಯಾಗಿ ಕೈಗಳನ್ನು ಮುಗಿದು ಶ್ರದ್ಧೆಯಿಂದ ಕೂಡಿ ಗೋವುಗಳಿಗೆ ನಮಸ್ಕಾರವನ್ನು ಮಾಡಿ ನಿಮ್ಮ ಆಗಮನದ ಉದ್ದೇಶವೇನು ಎಂದು ಕೇಳಿದನು.
ಗಾವಃ
ಇಚ್ಛಾಮಸ್ತ್ವ ರಾಜೇಂದ್ರ ಸತ್ರೇಽಸ್ಮಿನ್ ವಿನಿಯೋಜನಮ್ |
ಪಶುತ್ವಮುಪಸಂಪ್ರಾಪ್ತುಂ ಪ್ರಸಾದಂ ಕರ್ತುಮರ್ಹಸಿ ॥3॥
ಗೋವುಗಳು ಎಲೈ ರಾಜೇಂದ್ರನೇ, ನಿನ್ನ ಯಾಗದಲ್ಲಿ ನಾವು ವಿನಿಯೋಗವನ್ನು ಹೊಂದಲು ಬಯಸುತ್ತೇವೆ. ನಾವು ಯಜ್ಞಪಶುತ್ವವನ್ನು ಹೊಂದಲು ಬಯಸುತ್ತೇವೆ. ನೀನು ಅನುಗ್ರಹಿಸಬೇಕು.
ರಂತಿದೇವಃ
ನಾಸ್ಮಿ ಶಕ್ತೋ ಗವಾಂ ಘಾತಂ ಕರ್ತುಂ ಶತಸಹಸ್ರಶಃ |
ಘಾತಯಿತ್ವಾ ತ್ವಹಂ ಯುಷ್ಮಾನ್ ಕಥಮಾತ್ಮಾನಮುದ್ಧರೇ ॥4॥
ಯಃ ಪಶುತ್ವೇನ ಸಂಯೋಜ್ಯ ಯುಷ್ಮಾನ್ ಸ್ವರ್ಗಂ ನಯೇದಿಹ |
ಆತ್ಮಾನಂ ಚೈವ ತಪಸಾ ಗಾವಃ ಸಮುಪಗಮ್ಯತಾಮ್ ॥5॥
ರಂತಿದೇವ ನೂರರ ಸಂಖ್ಯೆಯಲ್ಲಿ, ಸಾವಿರದ ಸಂಖ್ಯೆಯಲ್ಲಿ ಗೋಹತ್ಯೆಯನ್ನು ಮಾಡಲು ನಾನು ಶಕ್ತನಲ್ಲ. ನಿಮ್ಮನ್ನು ಹತ್ಯೆ ಮಾಡಿದರೆ ನಾನು ನನ್ನನ್ನು ಹೇಗೆ ಉದ್ಧರಿಸಿಕೊಳ್ಳುವೆನು? ಎಲೈ ಗೋವುಗಳೇ, ಯಾವನು ನಿಮ್ಮನ್ನು ಪಶುಗಳನ್ನಾಗಿ ಸಂಯೋಜಿಸಿ ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಾನೆಯೋ ಮತ್ತು ತಪಸ್ಸಿನಿಂದ ತನ್ನನ್ನು ಉದ್ಧರಿಸಿಕೊಳ್ಳುತ್ತಾನೆಯೋ ಅಂತಹವನ ಬಳಿಗೆ ಹೋಗಿ.
ಗಾವಃ
ಅಸ್ಮಾಕಂ ತಾರಣೇ ಯುಕ್ತೋ ಧರ್ಮಾತ್ಮಾ ತಪಸಿ ಸ್ಥಿತಃ |
ಶ್ರುತೋಽಸ್ಮಾಭಿರ್ಭವಾನ್ ರಾಜನ್ ತತಸ್ತು ಸ್ವಯಮಾಗತಾಃ ॥6॥
ಗೋವುಗಳು ಎಲೈ ರಾಜನೇ, ನಮ್ಮನ್ನು ಉದ್ಧರಿಸಲು ಶಕ್ತನಾದ ಧರ್ಮಾತ್ಮನೂ, ತಪಸ್ವಿಯೂ ಆದವನು ನೀನೇ ಎಂದು ಕೇಳಿದ್ದೇವೆ.

ಆದ್ದರಿಂದ ನಾವಾಗಿಯೇ ನಿನ್ನ ಬಳಿಗೆ ಬಂದಿದ್ದೇವೆ.
ರಂತಿದೇವಃ
ಮಮ ಸತ್ರೇ ಪಶುತ್ವಂ ವೋ ಯದ್ಯೇವಂ ಹಿ ಮನೀಷಿತಮ್ |
ಸಮಯೇನಾಹಮೇತೇನ ಜುಹುಯಾಂ ವೋ ಹುತಾಶನೇ ॥7॥
ಕದಾಚಿದ್ ಯದಿ ವಃ ಕಾಚಿದಕಾಮಾ ವಿನಿಯುಜ್ಯತೇ |
ತದಾ ಸಮಾಪ್ತಿಃ ಸತ್ರಸ್ಯ ಗವಾಂ ಸ್ಯಾದಿತಿ ನೈಷ್ಠಿಕೀ ॥8॥
ರಂತಿದೇವ ನಿಮಗೆ ಹೀಗೆ ನನ್ನ ಸತ್ರದಲ್ಲಿ ಪಶುವಾಗುವುದು ಇಷ್ಟವಾದರೆ ನಾನು ಒಂದು ನಿಬಂಧನೆಯ ಮೇಲೆ ನಿಮ್ಮನ್ನು ಅಗ್ನಿಯಲ್ಲಿ ಹೋಮ ಮಾಡುತ್ತೇನೆ. ನಿಮ್ಮಲ್ಲಿ ಯಾರಾದರೂ ಯಾವಾಗಲಾದರೂ ಒಮ್ಮೆ ಪಶುತ್ವವನ್ನು ಬಯಸದಿದ್ದರೆ ಆಗ ಖಂಡಿತವಾಗಿ ಗೋಸತ್ರಯಾಗದ ಸಮಾಪ್ತಿಯಾಗುತ್ತದೆ.
ಗಾವಃ
ಏವಮಸ್ತು ಮಹಾರಾಜ ಯಥಾ ತ್ವಂ ಪ್ರಬ್ರವೀಷಿ ನಃ |
ಅಕಾಮಾ ಸ್ಯುರ್ಯದಾ ಗಾವಸ್ತದಾ ಸತ್ರಂ ಸಮಾಪ್ಯತಾಮ್ ॥9॥
ಗೋವುಗಳು ಎಲ್ಲೈ ಮಹಾರಾಜನೇ, ನೀನು ನಮಗೆ ಹೇಳುವಂತೆಯೇ ಆಗಲಿ. ಗೋವುಗಳು ಯಾವಾಗ ಪಶುತ್ವದ ಆಸೆಯನ್ನು ತೊರೆಯುತ್ತವೆಯೋ ಆಗ ಯಜ್ಞವು ಸಮಾಪ್ತಿಗೊಳ್ಳಲಿ.
ಭೀಷ್ಮಃ
ತತಃ ಪ್ರವೃತ್ತೇ ಗೋಸತ್ರೇ ರಂತಿದೇವಸ್ಯ ಧೀಮತಃ |
ಗೋಸಹಸ್ರಾಣ್ಯಹರಹರ್ನಿಯುಜ್ಯಂತೇ ಶಮಿತೃಭಿಃ ॥10॥
ಭೀಷ್ಮ ಅನಂತರ ಮೇಧಾವಿಯಾದ ರಂತಿದೇವನ ಗೋಸತ್ರವು ಪ್ರವೃತ್ತವಾಗುತ್ತಿರಲು ಶಮಿತೃಗಳು (ಯಜ್ಞಪಶುವನ್ನು ವಧೆ ಮಾಡುವವರು) ಪ್ರತಿದಿನವೂ ಸಹಸ್ರಗೋವುಗಳನ್ನು ಯಜ್ಞಕ್ಕಾಗಿ ಉಪಯೋಗಿಸಿದರು.
ಏವಂ ಬಹೂನಿ ವರ್ಷಾಣಿ ವ್ಯತೀತಾನಿ ನರಾಧಿಪ |
ಗವಾಂ ವೈ ವಧ್ಯಮಾನಾನಾಂ ನ ಚಾಂತಃ ಪ್ರತ್ಯದೃಶ್ಯತ ॥11॥
ಎಲ್ಲೈ ರಾಜನೇ, ಹೀಗೆ ಅನೇಕ ವರ್ಷಗಳು ಕಳೆದವು. ವಧಿಸಲ್ಪಡುವ ಗೋವುಗಳಿಗೆ ಕೊನೆಯೇ ಕಾಣಲಿಲ್ಲ.
ಗವಾಂ ಚರ್ಮಸಹಸ್ರೈಸ್ತು ರಾಶಯಃ ಪರ್ವತೋಪಮಾಃ |
ಬಭೂವುಃ ಕುರುಶಾರ್ದೂಲ ಬಹುಧಾ ಮೇಘಸನ್ನಿಭಾಃ ॥12॥
ಎಲ್ಲೈ ಕುರುಶಾರ್ದೂಲನೇ, ಗೋವುಗಳ ಸಹಸ್ರಾರು ಚರ್ಮಗಳ ರಾಶಿಗಳು ಮೇಘದ ಕಾಂತಿಯನ್ನು ಹೊಂದಿ ಪರ್ವತದಂತಾದವು.
ಮೇದಃಕ್ಲೇದವಹಾ ಚೈವ ಪ್ರಾವರ್ತತ ಮಹಾನದೀ |
ಅದ್ಯಾಪಿ ಭುವಿ ವಿಖ್ಯಾತಾ ನದೀ ಚರ್ಮಣ್ವತೀ ಶುಭಾ ॥13॥
ಗೋವುಗಳ ಮೇದಸ್ಸು ಮತ್ತು ರಕ್ತವು ಮಹಾನದಿಯ ರೂಪದಲ್ಲಿ ಹರಿಯಲು ಪ್ರಾರಂಭವಾಯಿತು. ಆ ಶುಭವಾದ ನದಿಯು ಈಗಲೂ ಭೂಮಿಯಲ್ಲಿ ಚರ್ಮಣ್ವತೀ ಎಂದೇ ಪ್ರಖ್ಯಾತವಾಗಿದೆ.
ತದಾ ಕದಾಚಿತ್ ಸ್ವಂ ವತ್ಸಂ ಗೌರುಪಾಮಂತ್ರ್ಯ ದುಃಖಿತಾ |
ಏಹಿ ವತ್ಸ ಸ್ತನಂ ಪಿಬ ಮಾ ತ್ವಂ ಪಶ್ಚಾತ್ ಕ್ಷುಧಾರ್ದಿತಃ ॥14॥
ತಪ್ಸ್ಯಸೇ ವಿಮನಾ ದುಃಖಂ ಘಾತಿತಾಯಾಂ ಮಯಿ ಧ್ರುವಮ್ |
ಏತೇ ಹ್ಯಾಯಾಂತಿ ಚಂಡಾಲಾಃ ಸಶಸ್ತ್ರಾ ಮಾಂ ಜಿಘಾಂಸವಃ ॥15॥
ಆಗ ಒಮ್ಮೆ ಒಂದು ಹಸುವು ದುಃಖದಿಂದ ತನ್ನ ಕರುವನ್ನು ಕರೆದು ವತ್ಸ ಬಾ, ನನ್ನ ಸ್ತನವನ್ನು ಪಾನ ಮಾಡು. ಅನಂತರ ಹಸಿವಿನಿಂದ ಖೇದಗೊಂಡು ದುಃಖಪಡಬೇಡ. ನನ್ನನ್ನು ಕೊಂದಮೇಲೆ ಖಂಡಿತವಾಗಿ ನಿನಗೆ ದುಃಖವಾಗುತ್ತದೆ. ಈ ಚಂಡಾಲರು ಕೈಯಲ್ಲಿ ಶಸ್ತ್ರವನ್ನು ಹಿಡಿದು ನನ್ನನ್ನು ಕೊಲ್ಲಲು ಬರುತ್ತಿದ್ದಾರೆ ಎಂದು ಹೇಳಿತು.
ಅಥ ಶುಶ್ರಾವ ತಾಂ ವಾಣೀಂ ಮಾನುಷೀಂ ಸಮುದಾಹೃತಾಮ್ |
ರಂತಿದೇವೋ ಮಹಾರಾಜ ತತಸ್ತಾಂ ಸಮವಾರಯತ್ ॥16॥
ಎಲ್ಲೈ ಮಹಾರಾಜನೇ, ಮನುಷ್ಯರ ವಾಣಿಯಿಂದ ಆಡಿದ ಆ ಮಾತುಗಳನ್ನು ರಂತಿದೇವನು ಕೇಳಿ, ಶೀಘ್ರವಾಗಿ ಆ ಗೋವನ್ನು ತಡೆದನು.

ಸ್ಥಾಪಯಾಮಾಸ ಗೋಸತ್ರಮಥ ತಂ ಪಾರ್ಥಿವರ್ಷಭಃ |
ಸತ್ರೋತ್ಸೃಷ್ಟಾಃ ಪರಿತ್ಯಕ್ತಾ ಗಾವೋಽನ್ಯಾ ಸಮುಪಾಶ್ರಿತಾಃ ॥17॥
ಅನಂತರ ಆ ಪಾರ್ಥಿವಶ್ರೇಷ್ಠನು ಗೋಸತ್ರವನ್ನು ಅಲ್ಲಿಗೆ ನಿಲ್ಲಿಸಿದನು. ಸತ್ರದಲ್ಲಿ ಉಪಯೋಗಿಸದೆ ಪರಿತ್ಯಕ್ತವಾದ ಬೇರೆ ಗೋವುಗಳು ಅವನ ಬಳಿ ಹಾಗೆಯೇ ಉಳಿದವು.
ಯಾಸ್ತಸ್ಯ ಗಾವೋ ನಿಹತಾಃ ಗಾವೋ ಯಜ್ಞೇ ಮಹಾತ್ಮನಃ |
ತಾ ಗೋಲೋಕಮುಪಾಜಗ್ಮುಃ ಪ್ರೋಕ್ಷಿತಾ ಬ್ರಹ್ಮವಾದಿಭಿಃ ॥18॥
ಆ ಮಹಾತ್ಮನ ಯಜ್ಞದಲ್ಲಿ ಹತವಾದ ಗೋವುಗಳು ಬ್ರಹ್ಮವಾದಿಗಳಿಂದ ಮಂತ್ರಗಳಿಂದ ಪ್ರೋಕ್ಷಿಸಲ್ಪಟ್ಟು ಗೋಲೋಕವನ್ನು ಸೇರಿದವು.
ರಂತಿದೇವೋಽಪಿ ರಾಜರ್ಷಿರಿಷ್ಟ್ವಾ ಯಜ್ಞಂ ಯಥಾವಿಧಿ |
ತತಃ ಸಖ್ಯಂ ಸುರಪತೇಸ್ತ್ರಿದಿವಂ ಚಾಕ್ಷಯಂ ಯಯೌ ॥19॥

ರಾಜರ್ಷಿಯಾದ ರಂತಿದೇವನೂ ಕೂಡ ವಿಧಿಪ್ರಕಾರವಾಗಿ ಯಜ್ಞವನ್ನು ಮಾಡಿ ಇಂದ್ರನ ಸಖ್ಯವನ್ನು ಸಂಪಾದಿಸಿ ಅಕ್ಷಯವಾದ ಸ್ವರ್ಗಕ್ಕೆ ಹೋದನು.
ಫೇನಪೋ ದಿವಿ ಗೋಲೋಕೇ ಮುಮುದೇ ಶಾಶ್ವತೀಃ ಸಮಾಃ |
ಅವಶಿಷ್ಟಾಶ್ಚ ಯಾ ಗಾವಸ್ತಾ ಬಭೂವುರ್ವನೇಚರಾಃ ॥20॥
ಫೇನಪನಾದ ಭಾರ್ಗವನು ಸ್ವರ್ಗದಲ್ಲಿ ಗೋಲೋಕದಲ್ಲಿ ಬಹುಕಾಲದವರೆಗೆ ಸಂತೋಷದಿಂದ ಇದ್ದನು. ಉಳಿದ ಗೋವುಗಳು ಭೂಮಿಯಲ್ಲಿ ಕಾಡಿನಲ್ಲಿ ತಿರುಗಾಡಿದವು.
ಫೇನಪಾಖ್ಯಾನಮೇತತ್ ತೇ ಗವಾಂ ಮಾಹಾತ್ಮ್ಯಮೇವ ಚ |
ಕಥಿತಂ ಪಾವನಂ ಪುಣ್ಯಂ ಕೃಷ್ಣದ್ವೈಪಾಯನೇರಿತಮ್ ॥21॥
ನಾನು ಕೃಷ್ಣದ್ವೈಪಾಯನರು ಹೇಳಿದ ಈ ಪವಿತ್ರವಾದ, ಪುಣ್ಯವಾದ ಫೇನಪಾಖ್ಯಾನವನ್ನು ಮತ್ತು ಗೋವಿನ ಮಾಹಾತ್ಮ್ಯೆಯನ್ನು ನಿನಗೆ ಹೇಳಿದ್ದೇನೆ.
ನಾರಾಯಣೋಽಪಿ ಭಗವಾನ್ ದೃಷ್ಟ್ವಾ ಗೋಷು ಪರಂ ಯಶಃ |
ಶು(ಶಿ)ಶ್ರೂಷಾಂ ಪರಮಾಂ ಚಕ್ರೇ ಭಕ್ತಿಂ ಚ ಭರತರ್ಷಭ ॥22॥
ಭಗವಂತನಾದ ನಾರಾಯಣನೂ ಸಹ ಗೋವುಗಳ ಮಾಹಾತ್ಮ್ಯೆಯನ್ನು ನೋಡಿ ಗೋವುಗಳ ಸೇವೆಯನ್ನು ಮತ್ತು ಗೋವಿನಲ್ಲಿ ಭಕ್ತಿಯನ್ನು ಮಾಡಿದನು.
ತಸ್ಮಾತ್ ತ್ವಮಪಿ ರಾಜೇಂದ್ರ ಗಾ ವೈ ಪೂಜಯ ಭಾರತ |
ದ್ವಿಜೇಭ್ಯಶ್ಚೈವ ಸತತಂ ಪ್ರಯಚ್ಛ ಕುರುಸತ್ತಮ ॥23॥
ಎಲೈ ರಾಜೇಂದ್ರನೇ, ಆದ್ದರಿಂದ ನೀನೂ ಸಹ ಗೋವುಗಳನ್ನು ಪೂಜಿಸು. ಎಲೈ ಭಾರತನೇ, ಕುರುಶ್ರೇಷ್ಠನೇ, ಬ್ರಾಹ್ಮಣರಿಗೆ ಸತತವಾಗಿ ಗೋದಾನವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಭಾರ್ಗವೋಪಾಖ್ಯಾನಸಮಾಪ್ತಿರ್ನಾಮ
ಅಷ್ಟಾದಶಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹತ್ತೊಂಬತ್ತನೆಯ ಅಧ್ಯಾಯ
ಗೋಮಹಿಮೆ. ಶ್ರೇಷ್ಠದಾನ ವಿಷಯದಲ್ಲಿ ವ್ಯಾಸ-ಶುಕ ಸಂವಾದ.
ಯುಧಿಷ್ಠಿರಃ
ಪವಿತ್ರಾಣಾಂ ಪವಿತ್ರಂ ಯಚ್ಛ್ರೇಷ್ಠಂ ಲೋಕೇಷು ಪೂಜಿತಮ್ |
ಮಹಾವ್ರತಂ ಮಹಾಭಾಗ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಮಹಾನುಭಾವನೇ, ಪಿತಾಮಹನೇ, ಪವಿತ್ರವಾದವುಗಳಲ್ಲಿ ಪವಿತ್ರವಾದ, ಲೋಕದಲ್ಲಿ ಪೂಜಿತವಾದ, ಶ್ರೇಷ್ಠವಾದ ಮಹಾವ್ರತವನ್ನು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪಿತುಃ ಪುತ್ರಸ್ಯ ಸಂವಾದಂ ವ್ಯಾಸಸ್ಯ ಚ ಶುಕಸ್ಯ ಚ ॥2॥
ಭೀಷ್ಮ ಈ ವಿಷಯದಲ್ಲಿಯೂ ಸಹ ತಂದೆ-ಮಗನಾದ ವ್ಯಾಸ-ಶುಕರಿಗೆ ನಡೆದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಋಷೀಣಾಮುತ್ತಮಂ ಕೃಷ್ಣಂ ಭಾವಿತಾತ್ಮಾನಮಚ್ಯುತಮ್ |
ಪಾರಂಪರ್ಯವಿಶೇಷಜ್ಞಂ ಸರ್ವಶಾಸ್ತ್ರಾರ್ಥಕೋವಿದಮ್ ॥3॥
ಕೃತಶೌಚಃ ಶುಕಸ್ತತ್ರ ಕೃತಜಪ್ಯಃ ಕೃತಾಹ್ನಿಕಃ |
ಪರಂ ನಿಯಮಮಾಸ್ಥಾಯ ಪರಂ ಧರ್ಮಮುಪಾಶ್ರಿತಃ ॥4॥
ಪ್ರಣಮ್ಯ ಶಿರಸಾ ವ್ಯಾಸಂ ಸೂಕ್ಷ್ಮತತ್ತ್ವಾರ್ಥದರ್ಶಿನಮ್ |
ಶುಕಃ ಪಪ್ರಚ್ಛ ವೈ ಪ್ರಶ್ನಂ ದಾನಧರ್ಮಕುತೂಹಲಃ ॥5॥
ಋಷಿಗಳಲ್ಲಿ ಶ್ರೇಷ್ಠರಾದ, ಪರಿಶುದ್ಧ ಮನಸ್ಸುಳ್ಳ, ಅಚ್ಯುತರಾದ, ಸಂಪ್ರದಾಯ ವಿಶೇಷಗಳನ್ನು ತಿಳಿದ, ಸರ್ವಶಾಸ್ತ್ರಾರ್ಥಕೋವಿದರಾದ, ಸರ್ವತತ್ತ್ವಾರ್ಥ ನಿಶ್ಚಯವುಳ್ಳ ವೇದವ್ಯಾಸರನ್ನು ಕುರಿತು ಬಹಳ ನಿಯಮವನ್ನು ಆಚರಿಸುವ, ಶ್ರೇಷ್ಠವಾದ ಧರ್ಮವನ್ನು ಅನುಸರಿಸುವ ಶುಕರು ಸ್ನಾನವನ್ನು ಮಾಡಿ ಶುಚಿಯಾಗಿ ಆಹ್ನಿಕ ಮತ್ತು ಜಪಗಳನ್ನು ಮುಗಿಸಿ, ಶಿರಸಾ ಪ್ರಣಾಮವನ್ನು ಮಾಡಿ ದಾನಧರ್ಮಗಳಲ್ಲಿ ಕುತೂಹಲವನ್ನು ಹೊಂದಿ ಪ್ರಶ್ನೆಯನ್ನು ಮಾಡಿದರು.
ಬಹುಚಿತ್ರಾಣಿ ದಾನಾನಿ ಬಹುಶಃ ಶಂಸಸೇ ಮುನೇ |
ಮಹಾರ್ಥಂ ಪಾವನಂ ಪುಣ್ಯಂ ಕಿಂಸ್ವಿದ್ ದಾನಂ ಮಹಾಫಲಮ್ ॥6॥
ಎಲೈ ಋಷಿಗಳೇ, ನೀವು ವಿಚಿತ್ರವಾದ ಅನೇಕ ದಾನಗಳನ್ನು ಅನೇಕ ಬಾರಿ ಹೊಗಳುತ್ತಿದ್ದೀರಿ. ಮಹಾಫಲಪ್ರದವೂ, ಪವಿತ್ರವೂ, ಪುಣ್ಯಪ್ರದವೂ ಆದ ದಾನವು ಯಾವುದು?
ಕೇನ ದುರ್ಗಾಣಿ ತರತಿ ಕೇನ ದುರ್ಗಾನವಾಪ್ನುತೇ |
ಕೇನ ವಾ ಮಹದಾಪ್ನೋತಿ ಇಹ ಲೋಕೇ ಪರತ್ರ ಚ ॥7॥

ಯಾವ ದಾನದಿಂದ ಕಷ್ಟಗಳನ್ನು ದಾಟುತ್ತಾನೆ? ಯಾವ ದಾನಗಳಿಂದ ಪಡೆಯಲು ಅಸಾಧ್ಯವಾದ ದೇವಲೋಕವನ್ನು ಹೊಂದುತ್ತಾನೆ? ಯಾವ ದಾನದಿಂದ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಮಹತ್ವವನ್ನು ಪಡೆಯುತ್ತಾನೆ? (ಲಕ್ಷಾಲಂಕಾರ).
ಕೇ ವಾ ಯಜ್ಞಸ್ಯ ವೋಢಾರಃ ಕೇಷು ಯಜ್ಞಃ ಪ್ರತಿಷ್ಠಿತಃ |
ಕಿಂಚ ಯಜ್ಞಸ್ಯ ಯಜ್ಞತ್ವಂ ಕಿಂಚ ಯಜ್ಞಸ್ಯ ಭೇಷಜಮ್ |
ಯಜ್ಞಾನಾಮುತ್ತಮಂ ಕಿಂಚ ತದ್ ಭವಾನ್ ಪ್ರಬ್ರವೀತು ಮೇ ॥8॥
ಯಜ್ಞವನ್ನು ನಿರ್ವಹಿಸುವವರು ಯಾರು? ಯಜ್ಞವು ಯಾರಲ್ಲಿ ಪ್ರತಿಷ್ಠಿತವಾಗಿದೆ? ಯಜ್ಞವೆಂದರೇನು? ಯಜ್ಞಕ್ಕೆ ಯಾವ ಔಷಧಿ ಇದೆ? ಯಜ್ಞಗಳಲ್ಲಿ ಯಾವುದು ಶ್ರೇಷ್ಠವಾದುದು? ಇದನ್ನು ನೀವು ನನಗೆ ಹೇಳಬೇಕು.
ಭೀಷ್ಮಃ
ಸ ತಸ್ಮೈ ಭಜಮಾನಾಯ ಜಾತಕೌತೂಹಲಾಯ ಚ |
ವ್ಯಾಸೋ ವ್ರತನಿಧಿಃ ಪ್ರಾಹ ಗವಾಮಿದಮನುತ್ತಮಮ್ ॥9॥
ಭೀಷ್ಮ ವ್ರತನಿಧಿಗಳಾದ ವ್ಯಾಸರು ಕುತೂಹಲದಿಂದ ತಮ್ಮನ್ನು ಭಜಿಸಿ ಪ್ರಶ್ನೆ ಮಾಡುತ್ತಿದ್ದ ಶುಕರನ್ನು ಕುರಿತು ಶ್ರೇಷ್ಠವಾದ ಈ ಗೋದಾನವನ್ನು ಹೇಳಿದರು.
ಧನ್ಯಂ ಯಶಸ್ಯಮಾಯುಷ್ಯಂ ಲೋಕೇ ಶ್ರುತಿಸುಖಾವಹಮ್ |
ಯತ್ ಪವಿತ್ರಂ ಪವಿತ್ರಾಣಾಂ ಮಂಗಲಾನಾಂ ಚ ಮಂಗಲಮ್ ॥10॥
ಸರ್ವಪಾಪಪ್ರಶಮನಂ ತತ್ ಸಮಾಸೇನ ಮೇ ಶೃಣು ॥11॥
ಧನ್ಯವೂ, ಕೀರ್ತಿಪ್ರದವೂ, ಆಯುಃಪ್ರದವೂ ಲೋಕದಲ್ಲಿ ಶ್ರವಣದಿಂದ ಸುಖವನ್ನು ಕೊಡುವುದೂ ಆದ, ಪವಿತ್ರಗಳಲ್ಲಿ ಪವಿತ್ರವಾದ, ಮಂಗಳಗಳಲ್ಲಿ ಮಂಗಳವಾದ, ಸರ್ವಪಾಪ ಪರಿಹಾರಕವಾದ ವಿಷಯವನ್ನು ಸಂಕ್ಷೇಪವಾಗಿ ನನ್ನಿಂದ ಕೇಳು.
ಯದಿದಂ ತಿಷ್ಠತೇ ಲೋಕೇ ಜಗತ್ ಸ್ಥಾವರಜಂಗಮಮ್ |
ಗಾವಸ್ತಾಃ ಪ್ರಾಪ್ಯ ತಿಷ್ಠಂತೇ ಗೋಲೋಕೇ ಪುಣ್ಯದರ್ಶನಾಃ ॥12॥
ಸ್ಥಾವರ-ಜಂಗಮಾತ್ಮಕವಾದ ಈ ಲೋಕವು ಏನಿದೆಯೋ ಗೋವುಗಳು ಅವುಗಳನ್ನು ಗೋಲೋಕದಲ್ಲಿ ಹೊಂದಿ ಪುಣ್ಯದರ್ಶನಗಳಾಗಿ ಬದುಕಿವೆ.
ಮಾತರಃ ಸರ್ವಭೂತಾನಾಂ ವಿಶ್ವಸ್ಯ ಜಗತಶ್ಚ ಹ |
ರುದ್ರಾಣಾಮಥ ಸಾಧ್ಯಾನಾಂ ಗಾವ ಏವ ತು ಮಾತರಃ ॥13॥
ಗೋವುಗಳೇ ಎಲ್ಲ ಪ್ರಾಣಿಗಳಿಗೂ, ಎಲ್ಲ ಜಗತ್ತಿಗೂ, ರುದ್ರರಿಗೂ, ಸಾಧ್ಯರಿಗೂ ಮಾತೆಯರು.
ರುದ್ರಾಣಾಂ ಮಾತರೋ ಹ್ಯೇತಾ ಆದಿತ್ಯಾನಾಂ ಸ್ವಸಾ ಸ್ಮೃತಾಃ |
ವಸೂನಾಂ ಚ ದುಹಿತ್ರ್ಯಸ್ತಾ ಬ್ರಹ್ಮಸಂತಾನಮೂಲಜಾಃ ॥14॥
ಇವು ರುದ್ರರ ತಾಯಿಯರು, ಸೂರ್ಯನ ತಂಗಿಯರು, ವಸುಗಳ ಪುತ್ರಿಯರು ಮತ್ತು ಬ್ರಹ್ಮಸಂತತಿಯಲ್ಲಿ ಬಂದವರು ಎಂದು ಹೇಳಲ್ಪಡುತ್ತದೆ.
ಯಾಸಾಮಧಿಪತಿಃ ಪೂಷಾ ಮರುತೋ ಬಾಲಬಂಧನಾಃ |
ಐಶ್ವರ್ಯಂ ವರುಣೋ ರಾಜಾ ವಿಶ್ವೇದೇವಾ ಸಮಾಶ್ರಿತಾಃ ॥15॥
ಅವುಗಳಿಗೆ ಪೂಷಾ ದೇವತೆಯು ಅಧಿಪತಿ. ಬಾಲದಲ್ಲಿ ವಾಯುದೇವನಿದ್ದಾನೆ. ಅವುಗಳ ಐಶ್ವರ್ಯದಲ್ಲಿ ವರುಣನಿದ್ದಾನೆ. ವಿಶ್ವೇದೇವತೆಗಳು ಎಲ್ಲ ದೇಹದಲ್ಲಿ ಇದ್ದಾರೆ.
ಯ ಏವಂ ವೇದ ತಾ ಗಾವೋ ಮಾತರೋ ದೇವಪೂಜಿತಾಃ |
ಸ ವಿಪ್ರೋ ಬ್ರಹ್ಮಲೋಕಾಯ ಗವಾಂ ಲೋಕಾಯ ವಾ ಧ್ರುವಃ ॥16॥
ಯಾವನು ಹೀಗೆ ಗೋವುಗಳು ದೇವತೆಗಳೆಂದು ಪೂಜಿಸುತ್ತಾನೆಯೋ, ತಾಯಿಯರು ಎಂದು ತಿಳಿಯುತ್ತಾನೆಯೋ ಅಂತಹ ಬ್ರಾಹ್ಮಣನು ಬ್ರಹ್ಮಲೋಕಕ್ಕಾಗಲೀ ಗೋಲೋಕಕ್ಕಾಗಲೀ ನಿಶ್ಚಿತವಾಗಿ ಹೋಗುತ್ತಾನೆ.
ಗಾವಸ್ತು ನಾವಮನ್ಯೇತ ಕರ್ಮಣಾ ಮನಸಾ ಗಿರಾ |
ಗವಾಂ ಸ್ಥಾನಂ ಪರಂ ಲೋಕೇ ಪ್ರಾರ್ಥಯೇದ್ ಯಃ ಪರಾಂ ಗತಿಮ್|
ನ ಪದ್ಭ್ಯಾಂ ತಾಡಯೇದ್ ಗಾವೋ ನ ದಂಡೇನ ನ ಮುಷ್ಟಿನಾ ॥17॥
ಗೋವುಗಳನ್ನು ಕರ್ಮದಿಂದಾಗಲೀ, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ ಅವಮಾನಗೊಳಿಸಬಾರದು. ಯಾವನು ಶ್ರೇಷ್ಠವಾದ ಗತಿಯನ್ನು ಬಯಸುತ್ತಾನೆಯೋ ಅವನಿಗೆ (ಅನುಷ್ಠಾನವನ್ನು ಮಾಡಲು) ಗೋವುಗಳ ಸ್ಥಾನವು (ಗೋಶಾಲೆಯು) ಶ್ರೇಷ್ಠವಾದುದು. ಗೋವುಗಳನ್ನು ಪಾದದಿಂದಾಗಲೀ, ಮುಷ್ಟಿಯಿಂದಾಗಲೀ ಅಥವಾ ದಂಡದಿಂದಾಗಲೀ ಹೊಡೆಯಬಾರದು.
ಇಮಾಂ ವಿದ್ಯಾಮುಪಾಶ್ರಿತ್ಯ ಪಾವನೀಂ ಬ್ರಹ್ಮನಿರ್ಮಿತಾಮ್ |
ಮಾತೄಣಾಮನುಪಾತೇ ಚ ನ ಗೋಮಧ್ಯೇ ನ ಗೋವ್ರಜೇ ॥18॥
ನರೋ ಮೂತ್ರಪುರೀಷಸ್ಯ ದೃಷ್ಟ್ವಾ ಕುರ್ಯಾದ್ ವಿಸರ್ಜನಮ್ ॥19॥
ಬ್ರಹ್ಮದೇವರಿಂದ ಬೋಧಿಸಲ್ಪಟ್ಟ ಪವಿತ್ರವಾದ ಈ ವಿದ್ಯೆಯನ್ನು ತಿಳಿದು ಆಶ್ರಯಿಸಿದವನು ತಾಯಿಯರಾದ ಅವುಗಳ ಮಾರ್ಗದಲ್ಲಿ ಅಥವಾ ಗೋವುಗಳ ಮಧ್ಯದಲ್ಲಿ ಅಥವಾ ಗೋವುಗಳ ಸಮೂಹದಲ್ಲಿ ಮೂತ್ರ-ಮಲ ವಿಸರ್ಜನೆಯನ್ನು ಮಾಡಬಾರದು.
ಶುದ್ಧಾಶ್ಚಂದನಶೀತಾಂಗ್ಯಶ್ಚಂದ್ರರಶ್ಮಿಸಮಪ್ರಭಾಃ |
ಸೌಮ್ಯಾಃ ಸುರಭ್ಯಃ ಸುಭಗಾ ಗಾವೋ ಗುಗ್ಗುಳುಗಂಧಯಃ ॥20॥

ಗೋವುಗಳು ಶುದ್ಧವಾದವುಗಳು, ಚಂದನದಂತೆ ತಂಪಾದ ಅವಯವವುಳ್ಳವು. ಚಂದ್ರನ ಕಿರಣದಂತೆ ಕಾಂತಿಯನ್ನು ಹೊಂದಿರುವಂತಹವುಗಳು. ಸೌಮ್ಯ ಸ್ವಭಾವವನ್ನು ಹೊಂದಿರುವಂತಹವುಗಳು. ಸುಗಂಧವನ್ನೂ, ಸೌಮ್ಯರೂಪವನ್ನೂ, ಕೆಲವು ಗೋವುಗಳು ಗುಗ್ಗುಳ ಗಂಧವನ್ನೂ ಹೊಂದಿರುವಂತಹವುಗಳು.

ಸರ್ವೇ ದೇವಾವಿಶನ್ ಗಾವಃ ಸಮುದ್ರಮಿವ ಸಿಂಧವಃ |
ದಿವಂ ಚೈವಾಂತರಿಕ್ಷಂ ಚ ಗವಾಂ ವ್ಯುಷ್ಟಿಂ ಸಮಶ್ನುತೇ ॥21॥

ಸಮುದ್ರವನ್ನು ನದಿಗಳು ಪ್ರವೇಶಿಸುವಂತೆ ಎಲ್ಲ ದೇವತೆಗಳೂ, ದ್ಯುಲೋಕವೂ ಮತ್ತು ಅಂತರಿಕ್ಷಲೋಕವೂ ಗೋವುಗಳನ್ನು ಪ್ರವೇಶಿಸಿದರು. ಇದನ್ನು ತಿಳಿದವರು ಗೋಸಮೃದ್ಧಿಯನ್ನು ಹೊಂದುತ್ತಾರೆ.

ದಧಿನಾ ಜುಹುಯಾದಗ್ನಿಂ ದಧಿನಾ ಸ್ವಸ್ತಿ ವಾಚಯೇತ್ |
ದಧಿ ದದ್ಯಾಚ್ಚ ಪ್ರಾಶೇತ ಗವಾಂ ವ್ಯುಷ್ಟಿಂ ಸಮಶ್ನುತೇ ॥22॥

ಮೊಸರಿನಿಂದ ಹೋಮವನ್ನು ಮಾಡಬೇಕು, ಸ್ವಸ್ತಿವಾಚನವನ್ನು ಮಾಡಿಸಬೇಕು. ದಧಿಯನ್ನು ದಾನ ಕೊಡಬೇಕು. ದಧಿಯನ್ನು ಪ್ರಾಶನ ಮಾಡಬೇಕು. ಇದರಿಂದ ಗೋಸಮೃದ್ಧಿಯು ಉಂಟಾಗುತ್ತದೆ.

ಘೃತೇನ ಜುಹುಯಾದಗ್ನಿಂ ಘೃತೇನ ಸ್ವಸ್ತಿ ವಾಚಯೇತ್ |
ಘೃತಮಾಲಭ್ಯ ಪ್ರಾಶ್ನೀಯಾದ್ ಗವಾಂ ವ್ಯುಷ್ಟಿಂ ಸಮಶ್ನುತೇ ॥23॥

ಘೃತದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಘೃತದಿಂದ ಸ್ವಸ್ತಿವಾಚನವನ್ನು ಮಾಡಿಸಬೇಕು. ಘೃತವನ್ನು ಪಾನಮಾಡಬೇಕು. ಇದರಿಂದ ಗೋಸಮೃದ್ಧಿಯು ಉಂಟಾಗುತ್ತದೆ.

ಗಾವಃ ಸಂಜೀವನಾ ಯಾಸ್ತು ಗಾವೋ ದಾನಮನುತ್ತಮಮ್ |
ತಾಃ ಪುಣ್ಯಗೋಪಾಃ ಸುಫಲಾ ಭಜಮಾನಂ ಭಜಂತು ಮಾಮ್ ॥24॥

ಯಾವ ಗೋವುಗಳು ಜೀವನಪ್ರದವಾಗಿವೆಯೋ, ಯಾವ ಗೋದಾನವು ಶ್ರೇಷ್ಠವಾದ ದಾನವಾಗಿದೆಯೋ ಅಂತಹ ಪುಣ್ಯವನ್ನು ರಕ್ಷಿಸುವ, ಒಳ್ಳೆಯ ಫಲವನ್ನು ಕೊಡುವ ಗೋವುಗಳು ಅವುಗಳನ್ನು ಭಜಿಸುವ ನನ್ನನ್ನು ಭಜಿಸಲಿ (ಎಂದು ಪ್ರಾರ್ಥಿಸಬೇಕು).

ಯೇನ ದೇವಾಃ ಪವಿತ್ರೇಣ ಸ್ವರ್ಗಲೋಕಮಿತೋ ಗತಾಃ |
ತತ್ ಪವಿತ್ರಂ ಪವಿತ್ರಾಣಾಂ ಮಮ ಮೂರ್ಧ್ನಿ ಪ್ರತಿಷ್ಠಿತಮ್ ॥25॥

ಯಾವ ಪವಿತ್ರಗಳಲ್ಲಿ ಪವಿತ್ರವಾದ ವಸ್ತುವಿನಿಂದ ದೇವತೆಗಳು ಇಲ್ಲಿಂದ ಸ್ವರ್ಗಲೋಕಕ್ಕೆ ಹೋದರೋ ಅಂತಹ ಪವಿತ್ರವಾದ ಗೋವುಗಳು ಯಾವಾಗಲೂ ನನ್ನ ತಲೆಯ ಮೇಲೆ ಇರಲಿ.

ವೀಣಾಮೃದಂಗಪಣವಾ ಗವಾಂ ಗಾತ್ರಂ ಪ್ರತಿಷ್ಠಿತಾಃ |
ಕ್ರೀಡಾರತಿವಿಹಾರಾರ್ಥೇ ತ್ರಿಷು ಲೋಕೇಷು ವರ್ತತೇ ॥26॥

ಗೋವುಗಳ ಕ್ರೀಡೆಗಾಗಿ, ಸಂತೋಷಕ್ಕಾಗಿ, ವಿಹಾರಕ್ಕಾಗಿ ಮಂತ್ರಪೂರ್ವಕವಾಗಿ ಸ್ಥಾಪಿಸಲ್ಪಟ್ಟ ವೀಣೆ, ಮೃದಂಗ, ಪಣವಗಳು ಮೂರುಲೋಕಗಳಲ್ಲಿಯೂ ಇವೆ.

ನ ತತ್ರ ದೇವಾ ವರ್ತಂತೇ ನಾಗ್ನಿಹೋತ್ರಾಣಿ ಜುಹ್ವತಿ |
ನ ಯಜ್ಞೈರಿಜ್ಯತೇ ಚಾತ್ರ ಯತ್ರ ಗೌರ್ವೈ ನ ದುಹ್ಯತೇ ॥27॥

ಎಲ್ಲಿ ಗೋವು ಹಾಲು ಕರೆಯುವುದಿಲ್ಲವೋ ಅಲ್ಲಿ ದೇವತೆಗಳು ಇರುವುದಿಲ್ಲ. ಅಗ್ನಿಹೋತ್ರವು ನಡೆಯುವುದಿಲ್ಲ ಮತ್ತು ಯಜ್ಞಗಳೂ ನಡೆಯುವುದಿಲ್ಲ.

ಕ್ಷೀರಂ ದಧಿ ಘೃತಂ ಯಾಸಾಂ ರಸಾನಾಮುತ್ತಮೋ ರಸಃ |
ಅಮೃತಪ್ರಭವಾ ಗಾವಃ ತ್ರೈಲೋಕ್ಯಂ ಯೇನ ಜೀವತಿ ॥28॥

ಯಾವ ಗೋವುಗಳ ದಧಿ, ಘೃತ, ಕ್ಷೀರಗಳು ರಸಗಳಲ್ಲಿ ಉತ್ತಮವಾದ ರಸವೋ ಅಂತಹ ಅಮೃತವನ್ನು ಕೊಡುವ ಗೋವುಗಳಿಂದ ಮೂರುಲೋಕವೂ ಜೀವಿಸುತ್ತದೆ.

ಇಡಾಮಾಹೂಯ ಧೇನುಂ ಚ ಸವತ್ಸಾಂ ಯಜ್ಞಮಾತರಮ್ |
ಉಪಾಹ್ವಯಂತಿ ಯಂ ವಿಪ್ರಾ ಗಾವೋ ಯಜ್ಞಹವಿಷ್ಕೃತಾಃ ॥29॥

ಅನ್ನಪ್ರದವಾದ, ವತ್ಸಸಹಿತವಾದ, ಯಜ್ಞಮಾತೃವಾದ ಗೋವನ್ನು ಯಜ್ಞದಲ್ಲಿ ಆಹ್ವಾನಿಸುತ್ತಾರೆ. ಗೋವುಗಳು ಯಜ್ಞದ ಹವಿಸ್ಸಿಗೆ ಕಾರಣವಾದವುಗಳು.

ಯಾ ಮೇಧ್ಯಾ ಪ್ರಥಮಂ ಕರ್ಮ ಇಯಂ ಧೇನುಃ ಸರಸ್ವತೀ |
ಪೌರ್ಣಮಾಸ್ಯೇನ ವತ್ಸೇನ ಕಾಮಂ ಕಾಮಗುಣಾನ್ವಿತಾ ॥30॥

ಪೂರ್ಣವಾಗಿ ಹತ್ತು ತಿಂಗಳು ತುಂಬಿದ ಕರುವಿನಿಂದ ಸಹಿತವಾದ ಧೇನುವು ಶ್ರೇಷ್ಠವಾದ ಯಜ್ಞಾದಿಕರ್ಮೋಪಯೋಗಿ. ಅಂತಹ ಧೇನುವನ್ನು ಸರಸ್ವತೀ ಎಂದು ಹೇಳುತ್ತಾರೆ. ಬಯಸುವ ಎಲ್ಲಾ ಗುಣಗಳಿಂದ ಕೂಡಿದ ಆ ಧೇನುವು ಎಲ್ಲ ಕಾಮಗಳನ್ನೂ ಕೊಡುತ್ತದೆ (ಲಕ್ಷ್ಯಾಲಂಕಾರ).

ಯತ್ರ ಸರ್ವಮಿದಂ ಪ್ರೋತಂ ಯತ್ ಕಿಂಚಿತ್ ಜಂಗಮಂ ಜಗತ್ |
ಸಾ ಗೌರ್ವೈ ಪ್ರಥಮಾ ಪುಣ್ಯಾ ಸರ್ವಭೂತಹಿತೇ ರತಾ ॥31॥

ಈ ಜಂಗಮವಾದ ಪ್ರಪಂಚವು ಯಾವುದನ್ನು ಆಶ್ರಯಿಸಿಕೊಂಡಿದೆ ಎಂದರೆ ಅದು ಗೋವು. ಅದು ಶ್ರೇಷ್ಠವಾದ, ಪುಣ್ಯಪ್ರದವಾದ, ಸರ್ವಭೂತಹಿತದಲ್ಲಿ ರತವಾದ ವಸ್ತು.

ಧಾರಣಾಃ ಪಾವನಾಃ ಪುಣ್ಯಾ ಭಾವನಾ ಭೂತಭಾವನಾಃ |
ಗಾವೋ ಮಾಮಭಿರಕ್ಷಂತು ಇಹ ಲೋಕೇ ಪರತ್ರ ಚ ॥32॥

ಲೋಕವನ್ನು ಧರಿಸುವ, ಪವಿತ್ರೀಕರಿಸುವ, ಪುಣ್ಯವನ್ನು ಕೊಡುವ, ಶುದ್ಧಿಯನ್ನು ಉಂಟುಮಾಡುವ, ಪ್ರಾಣಿಗಳನ್ನು ಸೃಷ್ಟಿಸುವ ಗೋವುಗಳು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ನನ್ನನ್ನು ರಕ್ಷಿಸಲಿ.
ಏಷ ಯಜ್ಞಃ ಸಹೋಪಾಂಗಃ ಸ್ವಿಷ್ಟಶ್ಚೈವ ಸದಕ್ಷಿಣಃ |
ವೇದಾ ಸಹೋಪನಿಷದೋ ಗವಾಂ ರೂಪೇ ಪ್ರತಿಷ್ಠಿತಾಃ ॥33॥
ಅಂಗಗಳಿಂದ ಕೂಡಿ ಒಳ್ಳೆಯ ದಕ್ಷಿಣೆಯಿಂದ ಕೂಡಿದ ಈ ಯಜ್ಞ, ಉಪನಿಷತ್ ಸಹಿತವಾದ ವೇದಗಳು ಎಲ್ಲವೂ ಗೋವಿನ ಶರೀರದಲ್ಲಿ ಪ್ರತಿಷ್ಠಿತವಾಗಿವೆ.
ಏತತ್ ತಾತ ಮಯಾ ಪ್ರೋಕ್ತಂ ಗವಾಮಿಹ ಪರಂ ಮತಮ್ |
ಸರ್ವತಃ ಶ್ರಾವಯೇನ್ನಿತ್ಯಂ ಪ್ರಯತೋ ಬ್ರಹ್ಮಸಂಸದಿ ॥34॥
ಎಲೈ ಪ್ರೀತಿಪಾತ್ರನೇ, ನಾನು ಗೋವಿನ ವಿಷಯದಲ್ಲಿ ಹೇಳಿದುದು ಅತ್ಯಂತ ಶ್ರೇಷ್ಠವಾದುದು ಎಂದು ತಿಳಿಯಲ್ಪಡುತ್ತದೆ. ಈ ಗೋಮಹಿಮೆಯನ್ನು ಬ್ರಾಹ್ಮಣರ ಸಭೆಯಲ್ಲಿ ಶ್ರದ್ಧೆಯಿಂದ ನಿತ್ಯವೂ ಶ್ರವಣ ಮಾಡಿಸಬೇಕು.
ಶ್ರುತ್ವಾ ಲಭೇತ ತಾನ್ ಲೋಕಾನ್ ಯೇ ಮಯಾ ಪರಿಕೀರ್ತಿತಾಃ |
ಶ್ರಾವಯಿತ್ವಾಽಪಿ ಪ್ರೀತಾತ್ಮಾ ಲೋಕಾಂಸ್ತಾನ್ ಪ್ರತಿಪದ್ಯತೇ ॥35॥
ಶ್ರದ್ಧೆಯಿಂದ ಕೇಳುವವನು ನಾನು ಹೇಳಿದ ಎಲ್ಲಾ ಫಲಗಳನ್ನೂ ಪಡೆಯುತ್ತಾನೆ. ಸಂತೋಷದಿಂದ ಶ್ರವಣ ಮಾಡಿಸುವವನೂ ಸಹ ಆ ಲೋಕಗಳನ್ನು ಹೊಂದುತ್ತಾನೆ.
ಧೇನುಮೇಕಾಂ ಸದಾ ದದ್ಯಾದಹನ್ಯಹನಿ ಪಾವನೀಮ್ |
ತತ್ತಥಾ ಪ್ರಾಪ್ನುಯಾದ್ ವಿಪ್ರಃ ಪಠನ್ ವೈ ಗೋಮತೀಂ ಸದಾ ॥36॥
ಪ್ರತಿದಿವಸವೂ ಪವಿತ್ರವಾದ ಒಂದು ಧೇನುವನ್ನಾದರೂ ದಾನ ಮಾಡಬೇಕು. ಸ್ವೀಕಾರ ಮಾಡುವವನೂ ಸಹ ಗೋಮಹಿಮೆಯ ಕಥೆಯನ್ನು ಹೇಳುತ್ತಾ ಸ್ವೀಕಾರ ಮಾಡಬೇಕು (ಲಕ್ಷ್ಯಾಲಂಕಾರ).
ಅಥ ಧೇನುರ್ನ ವಿದ್ಯೇತ ತಿಲಧೇನುಮನುತ್ತಮಾಮ್ |
ದದ್ಯಾದ್ ಗೋಮತಿಕಲ್ಪೇನ ತಾಂ ಧೇನುಂ ಸರ್ವಪಾವನೀಮ್ ॥37॥
ಒಂದು ಪಕ್ಷ ಧೇನುವು ಇಲ್ಲದಿದ್ದರೆ ಶ್ರೇಷ್ಠವಾದ, ಸರ್ವಪಾವನವಾದ ತಿಲ ಧೇನುವನ್ನಾದರೂ ಗೋಮತೀ ಮಂತ್ರ ಉಚ್ಛಾರಪೂರ್ವಕವಾಗಿ ದಾನ ಮಾಡಬೇಕು.
ಆಹ್ನಿಕಂ ಗೋಮತೀಂ ನಿತ್ಯಂ ಯಃ ಪಠೇತ ಸದಾ ನರಃ |
ಸರ್ವಪಾಪಾತ್ ಪ್ರಮುಚ್ಯೇತ ಪ್ರಯತಾತ್ಮಾ ಯ ಆಚರೇತ್ ॥38॥
ಯಾವ ಮನುಷ್ಯನು ಆಹ್ನಿಕದಂತೆ ನಿತ್ಯವೂ ಗೋಮತೀ ಮಂತ್ರವನ್ನು ಪಠಿಸುತ್ತಾನೆಯೋ ಅಂತಹ ಶ್ರದ್ಧಾಳುವಾದ ಮನುಷ್ಯನು ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುವನು.
ಘೃತಂ ವಾ ನಿತ್ಯಮಾಲಭ್ಯ ಪ್ರಾಶ್ಯ ವಾ ಗೋಮತೀಂ ಜಪೇತ್ |
ಸ್ನಾತ್ವಾ ವಾ ಗೋಕರೀಷೇಣ ಪಠನ್ ಪಾಪಾತ್ ಪ್ರಮುಚ್ಯತೇ ॥39॥
ಘೃತವನ್ನು ನಿತ್ಯವೂ ಪಡೆದು ಪ್ರಾಶನವನ್ನು ಮಾಡಿ, ಗೋಮತೀ ಮಂತ್ರವನ್ನು ಜಪಿಸಬೇಕು. ಅಥವಾ ಗೋಮಯವನ್ನು ಲೇಪಿಸಿಕೊಂಡು ಸ್ನಾನವನ್ನು ಮಾಡಿ ಪಠಿಸುವವನು ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.
ಮನಸಾ ಗೋಮತೀಂ ಜಪ್ಯೇದ್ ಗೋಮತ್ಯಾ ನಿತ್ಯಮಾಹ್ನಿಕಮ್ |
ನ ತ್ವೇವ ದಿವಸಂ ಕುರ್ಯಾದ್ ವ್ಯರ್ಥಂ ಗೋಮತಿಪಾಠಕಃ ॥40॥
ಗೋಮತಿಯನ್ನು ಮನಸ್ಸಿನಲ್ಲಿ ಜಪಿಸಬೇಕು. ಗೋಮತೀಮಂತ್ರವನ್ನು ಹೇಳಿ ನಿತ್ಯವೂ ಆಹ್ನಿಕವನ್ನು ಮಾಡಬೇಕು. ಗೋಮತಿಯನ್ನು ಜಪಿಸುವವನು ದಿವಸವನ್ನು ವ್ಯರ್ಥವಾಗಿ ಕಳೆಯಬಾರದು.
ಗೋಮತೀಂ ಜಪಮಾನಾ ಹಿ ದೇವಾ ದೇವತ್ವಮಾಪ್ನುವನ್ |
ಋಷಿತ್ವಮೃಷಯಶ್ಚಾಪಿ ಗೋಮತ್ಯಾ ಸರ್ವಮಾಪ್ನುವನ್ ॥41॥
ದೇವತೆಗಳು ಗೋಮತಿಯ ಜಪವನ್ನು ಮಾಡಿಯೇ ದೇವತ್ವವನ್ನು ಹೊಂದಿದರು. ಋಷಿಗಳೂ ಸಹ ಗೋಮತಿಯ ಜಪದಿಂದ ಋಷಿತ್ವವನ್ನೂ ಮತ್ತು ಸರ್ವಕಾಮಗಳನ್ನು ಹೊಂದಿದರು.
ಬದ್ಧೋ ಬಂಧಾತ್ ಪ್ರಮುಚ್ಯೇತ ಕೃಚ್ಛ್ರಾನ್ಮುಚ್ಯೇತ ಸಂಕಟಾತ್ |
ಗೋಮತೀಂ ಸೇವತೇ ಯಸ್ತು ಲಭತೇ ಪ್ರಿಯಸಂಗಮಮ್ ॥42॥
ಗೋಮತಿಯ ಸೇವೆಯನ್ನು ಮಾಡುವ ಬದ್ಧನಾದವನು ಬಂಧದಿಂದ ಮುಕ್ತನಾಗುತ್ತಾನೆ. ಕಷ್ಟದಲ್ಲಿರುವವನು ಕಷ್ಟದಿಂದ ಮುಕ್ತನಾಗುತ್ತಾನೆ ಮತ್ತು ಪ್ರಿಯಸಂಗಮವನ್ನು ಹೊಂದುತ್ತಾನೆ.
ಭೀಷ್ಮಃ
ಏತತ್ ಪವಿತ್ರಂ ಕಾರ್ತ್ಸ್ನ್ಯೇನ ಏತದ್ ವ್ರತಮನುತ್ತಮಮ್ |
ಏತ್ತತ್ ತು ಪೃಥಿವೀಪಾಲ ಪಾವನಂ ಶೃಣ್ವತಾಂ ಸದಾ ॥43॥
ಭೀಷ್ಮ ಇದು ಪೂರ್ಣವಾಗಿ ಪವಿತ್ರವಾದುದು. ಇದು ಶ್ರೇಷ್ಠವಾದ ವ್ರತ. ಎಲೈ ರಾಜನೇ, ಇದನ್ನು ಕೇಳುವವರಿಗೆ ಬಹಳ ಪಾವಿತ್ರ್ಯವನ್ನು ಉಂಟುಮಾಡುವಂತಹದು.
ಪುತ್ರಕಾಮಾಶ್ಚ ಯೇ ಕೇಚಿದ್ ಧನಕಾಮಾಶ್ಚ ಮಾನವಾಃ |
ಅಧ್ವಾನೇ ಚೋರವೈರಿಭ್ಯೋ ಮುಚ್ಯತೇ ಗೋಮತೀಂ ಪಠನ್ ॥44॥
ಪುತ್ರಕಾಮರಾದವರು ಪುತ್ರರನ್ನೂ, ಧನಕಾಮರಾದ ಮಾನವರು ಧನವನ್ನೂ ಪಡೆಯುತ್ತಾರೆ. ದಾರಿಯಲ್ಲಿ ಹೋಗುವವರು

ಗೋಮತಿಯನ್ನು ಪಠಿಸಿ ಚೋರರಿಂದಲೂ, ವೈರಿಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ.
ಪೂರ್ವವೈರಾನುಬಂಧೇಷು ರಣೇ ಚಾಪ್ಯಾತತಾಯಿನಃ |
ಲಭತೇ ಜಯಮೇವಾಶು ಸದಾ ಗೋಮತಿಪಾಠತಃ ॥45॥
ಪೂರ್ವವೈರದ ನಿಮಿತ್ತದಿಂದಾಗಿ ರಣರಂಗದಲ್ಲಿ ಶಸ್ತ್ರವನ್ನು ಹಿಡಿದು ಯುದ್ಧವನ್ನು ಮಾಡುವ ಕ್ಷತ್ರಿಯನು ಗೋಮತಿಯ ಪಾಠವನ್ನು ಮಾಡಿದರೆ ಶೀಘ್ರವಾಗಿ ಯಾವಾಗಲೂ ಜಯವನ್ನೇ ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ವ್ಯಾಸಶುಕಸಂವಾದೋ ನಾಮ
ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಹತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತನೆಯ ಅಧ್ಯಾಯ
ಕಪಿಲೋಪಜೀವನವಿಷಯದಲ್ಲಿ ವ್ಯಾಸ-ಶುಕ ಸಂವಾದ.
ಶುಕಃ
ಕ್ಷತ್ರಿಯಾಶ್ಚೈವ ಶೂದ್ರಾಶ್ಚ ಮಂತ್ರಹೀನಾಶ್ಚ ಯೇ ದ್ವಿಜಾಃ |
ಕಪಿಲಾಮುಪಜೀವಂತಿ ಕಥಮೇತತ್ ಪಿತರ್ಭವೇತ್ ॥1॥
ಶುಕ ಕ್ಷತ್ರಿಯರು, ಶೂದ್ರರು ಮತ್ತು ಮಂತ್ರಹೀನರಾದ ಬ್ರಾಹ್ಮಣರು ಕಪಿಲ ಗೋವನ್ನು ಉಪಜೀವಿಸುತ್ತಾರೆ. ತಂದೆಯೇ, ಇದು ಹೇಗಾಗುತ್ತದೆ?
ವ್ಯಾಸಃ
ಕ್ಷತ್ರಿಯಾಶ್ಚೈವ ಶೂದ್ರಾಶ್ಚ ಮಂತ್ರಹೀನಾಶ್ಚ ಯೇ ದ್ವಿಜಾಃ |
ಕಪಿಲಾಮುಪಜೀವಂತಿ ತೇಷಾಂ ವಕ್ಷ್ಯಾಮಿ ನಿರ್ಣಯಮ್ ॥2॥
ವ್ಯಾಸರು ಕ್ಷತ್ರಿಯರು, ಶೂದ್ರರು, ಮಂತ್ರಹೀನರಾದ ಬ್ರಾಹ್ಮಣರು ಕಪಿಲ ಗೋವನ್ನು ಉಪಜೀವಿಸುತ್ತಾರೆ. ಅವರ ವಿಷಯದಲ್ಲಿ ನಿರ್ಣಯವನ್ನು ಹೇಳುವೆನು.
ಕಪಿಲಾಸ್ತೂತ್ತಮಾ ಲೋಕೇ ಗೋಷು ಚೈವೋತ್ತಮಾ ಮತಾಃ |
ತಾಸಾಂ ದಾತಾ ಲಭೇತ್ ಸ್ವರ್ಗಂ ವಿಧಿನಾ ಯಶ್ಚ ಸೇವತೇ ॥3॥
ಕಪಿಲಗೋವುಗಳು ಗೋವುಗಳಲ್ಲಿಯೂ ಶ್ರೇಷ್ಠವಾದವುಗಳು ಮತ್ತು ಲೋಕದಲ್ಲಿಯೂ ಶ್ರೇಷ್ಠವಾದವುಗಳು. ಯಾವನು ವಿಧಿಗೆ ಅನುಸಾರವಾಗಿ ಅವುಗಳನ್ನು ದಾನ ಮಾಡುತ್ತಾನೆಯೋ, ವಿಧಿಗೆ ಅನುಸಾರವಾಗಿ ಅವುಗಳ ಸೇವೆಯನ್ನು ಮಾಡುತ್ತಾನೆಯೋ ಅವನು ಸ್ವರ್ಗವನ್ನು ಹೊಂದುತ್ತಾನೆ.
ಸ್ಪೃಶೇತ ಕಪಿಲಾಂ ಯಸ್ತು ದಂಡೇನ ಚರಣೇನ ವಾ |
ತೇನ ಸ್ಪರ್ಶನಮಾತ್ರೇಣ ನರಕಾಯೋಪಪದ್ಯತೇ ॥4॥
ಯಾವನು ಕಪಿಲೆಯನ್ನು ದಂಡದಿಂದಾಗಲೀ, ಪಾದದಿಂದಾಗಲೀ ಮುಟ್ಟುತ್ತಾನೆಯೋ ಅವನು ಸ್ಪರ್ಶಮಾತ್ರದಿಂದ ನರಕವನ್ನು ಹೊಂದುತ್ತಾನೆ.
ಮಂತ್ರೇಣ ಯುಂಜ್ಯಾತ್ ಕಪಿಲಾಂ ಮಂತ್ರೇಣೈವ ಪ್ರಮುಂಚತೇ |
ಮಂತ್ರಹೀನಂ ತು ಯೋ ಯುಂಜ್ಯಾತ್ ಕೃಮಿಯೋನೌ ಪ್ರಸೂಯತೇ ॥
ಕಪಿಲಗೋವನ್ನು ಮಂತ್ರದಿಂದಲೇ ಕಟ್ಟಬೇಕು, ಮಂತ್ರದಿಂದಲೇ ಬಿಚ್ಚಬೇಕು. ಮಂತ್ರಹೀನವಾಗಿ ಕಟ್ಟುವವನು ಕ್ರಿಮಿಯಾಗಿ ಜನಿಸುತ್ತಾನೆ.
ಪ್ರಹಾರಹತಮರ್ಮಾಂಗಾ ದುಃಖೇನ ಚ ಜಡೀಕೃತಾ |
ಪದಾನಿ ಯಾವದ್ ಗಚ್ಛೇತ ತಾವಲ್ಲೋಕಾನ್ ಕೃಮಿರ್ಭವೇತ್ ॥6॥
ಮರ್ಮಾಂಗಗಳಲ್ಲಿ ಏಟುಗಳನ್ನು ತಿಂದು ದುಃಖದಿಂದ ಜಡವಾದ ಕಪಿಲ ಗೋವು ಎಷ್ಟು ಹೆಜ್ಜೆಗಳನ್ನು ಇಡುತ್ತದೆಯೋ ಅಷ್ಟು ಲೋಕಗಳಲ್ಲಿ ಕ್ರಿಮಿಯಾಗುತ್ತಾನೆ.
ಯಾವಚ್ಚ ಬಿಂದವಸ್ತಸ್ಯಾಃ ಶೋಣಿತಸ್ಯ ಕ್ಷಿತಿಂ ಗತಾಃ |
ತಾವದ್ ವರ್ಷಸಹಸ್ರಾಣಿ ನರಕಂ ಪ್ರತಿಪದ್ಯತೇ ॥7॥
ಪ್ರಹಾರವನ್ನು ತಿಂದ ಕಪಿಲಗೋವಿನ ರಕ್ತದ ಎಷ್ಟು ಬಿಂದುಗಳು ಭೂಮಿಯಲ್ಲಿ ಬೀಳುತ್ತವೆಯೋ ಅಷ್ಟು ಸಹಸ್ರ ವರ್ಷಗಳ ಕಾಲ ನರಕವನ್ನು ಹೊಂದುತ್ತಾನೆ.
ಮಂತ್ರೇಣ ಯುಂಜ್ಯಾತ್ ಕಪಿಲಾಂ ಮಂತ್ರೇಣ ವಿನಿಯೋಜಯೇತ್ |
ಮಂತ್ರಹೀನೈರನುಯುತೋ ಮಜ್ಜಯೇತ್ ತಮಸಿ ಪ್ರಭೋ ॥8॥
ಕಪಿಲ ಗೋವನ್ನು ಮಂತ್ರದಿಂದ ಕಟ್ಟಬೇಕು. ಮಂತ್ರದಿಂದ ವಿನಿಯೋಗಿಸಬೇಕು. ಎಲೈ ಪ್ರಭುವೇ, ಮಂತ್ರಹೀನರಾದವರು ಕಪಿಲಗೋವಿನ ಜೊತೆಯಲ್ಲಿ ವ್ಯವಹರಿಸಿದರೆ ಅವರು ತಮಸ್ಸಿನಲ್ಲಿ ಮುಳುಗುತ್ತಾರೆ.
ಕಪಿಲಾಂ ಯೇಽಪಿ ಜೀವಂತಿ ಬುದ್ಧಿಮೋಹಾನ್ವಿತಾ ನರಾಃ |
ತೇಽಪಿ ವರ್ಷಸಹಸ್ರಾಣಿ ಪತಂತಿ ನರಕೇ ನೃಪ ॥9॥

ಎಲೈ ರಾಜನೇ, ಯಾವ ಮಾನವರು ಬುದ್ಧಿಮೋಹದಿಂದ ಕಪಿಲಗೋವಿನಿಂದ ದುಡಿಸಿ ಜೀವಿಸುತ್ತಾರೆಯೋ ಅವರೂ ಸಹ ಸಹಸ್ರಾರು ವರ್ಷಗಳ ಕಾಲ ನರಕದಲ್ಲಿ ಬೀಳುತ್ತಾರೆ.
ಅಥ ನ್ಯಾಯೇನ ಯೇ ವಿಪ್ರಾಃ ಕಪಿಲಾಮುಪಯುಂಜತೇ |
ತಸ್ಮಿನ್ ಲೋಕೇ ಪ್ರಮೋದಂತೇ ಲೋಕಾಶ್ಚೈಷಾಮನಾಮಯಾಃ ॥10॥
ವಿಧಿನಾ ಯೇ ನ ಕುರ್ವಂತಿ ಶೂದ್ರಾಂಸ್ತಾನುಪಧಾರಯ ॥11॥
ಇನ್ನು ಕಪಿಲಗೋವನ್ನು ನ್ಯಾಯಕ್ಕೆ ಅನುಗುಣವಾಗಿ ಉಪಯೋಗಿಸುವ ಬ್ರಾಹ್ಮಣರು ನಿರ್ದುಷ್ಟವಾದ ಲೋಕಗಳನ್ನು ಹೊಂದಿ ಅಲ್ಲಿ ಸಂತೋಷಪಡುತ್ತಾರೆ. ವಿಧಿಗೆ ಅನುಗುಣವಾಗಿ ಮಾಡದಿರುವವರನ್ನು ನೀನು ಶೂದ್ರರೆಂದು ಗಮನಿಸುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕಪಿಲೋಪಜೀವನಂ ನಾಮ
ವಿಂಶತ್ಯಧಿಕಶತತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂದನೆಯ ಅಧ್ಯಾಯ
ಕಪಿಲ ಗೋವಿನ ಶ್ರೇಷ್ಠತ್ವದ ಕಥನ.
ಶುಕಃ
ನಾನಾವರ್ಣೈರುಪೇತಾನಾಂ ಗವಾಂ ಕಿಂ ಮುನಿಸತ್ತಮ |
ಕಪಿಲಾಃ ಸರ್ವವರ್ಣೇಷು ವರಿಷ್ಠತ್ವಮವಾಪ್ನುವನ್ ॥1॥
ಶುಕ ಎಲೈ ಮುನಿಶ್ರೇಷ್ಠರೇ, ಗೋವುಗಳು ನಾನಾ ವರ್ಣಗಳಿಂದ ಕೂಡಿರುವಾಗ ಕಪಿಲವರ್ಣದ ಗೋವುಗಳೇ ಹೇಗೆ ಸರ್ವವರ್ಣಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿದವು?
ವ್ಯಾಸಃ
ಶೃಣು ಪುತ್ರ ಯಥಾ ಗೋಷು ವರಿಷ್ಠಾಃ ಕಪಿಲಾಃ ಸ್ಮೃತಾಃ |
ಕಪಿಲತ್ವಂ ಚ ಸಂಪ್ರಾಪ್ತಾಃ ಪೂಜ್ಯಾಶ್ಚ ಸತತಂ ನೃಷು ॥2॥
ವ್ಯಾಸರು ಪುತ್ರನೇ, ಕಪಿಲ ಗೋವುಗಳು ಗೋವುಗಳಲ್ಲಿ ಹೇಗೆ ಶ್ರೇಷ್ಠವಾದವು? ಕಪಿಲತ್ವವನ್ನು ಹೇಗೆ ಹೊಂದಿದವು ಮತ್ತು ಹೇಗೆ ಸತತವಾಗಿ ಪೂಜ್ಯವಾದವು ಎಂಬುದನ್ನು ಕೇಳು.
ಅಗ್ನಿಃ ಪುರಾऽಪಚಕ್ರಾಮ ದೇವೇಭ್ಯ ಇತಿ ನಃ ಶ್ರುತಮ್ |
ದೇವೇಭ್ಯೋ ಮಾಂ ಛಾದಯತ ಶರಣ್ಯಾಃ ಶರಣಂ ಗತಮ್ ॥3॥
ಹಿಂದೆ ಅಗ್ನಿಯು ದೇವತೆಗಳಿಂದ ಹೊರಬಂದನೆಂದು ನಾವು ಕೇಳಿದ್ದೇವೆ. ಅವನು ಗೋವುಗಳನ್ನು ಕುರಿತು ನಾನು ನಿಮಗೆ ಶರಣಾಗತನಾಗಿದ್ದೇನೆ. ಶರಣವತ್ಸಲರಾದ ನೀವು ದೇವತೆಗಳಿಂದ ನನ್ನನ್ನು ಮುಚ್ಚಿಡಿ ಎಂದು ಕೇಳಿದನು.
ಊಚುಸ್ತಾಃ ಸಹಿತಾಸ್ತತ್ರ ಸ್ವಾಗತಂ ತವ ಪಾವಕ |
ಇಹ ಗುಪ್ತಸ್ತ್ವಮಸ್ಮಾಭಿರ್ನ ದೇವೈರುಪಲಪ್ಸ್ಯಸೇ ॥4॥
ಆ ಗೋವುಗಳೆಲ್ಲವೂ ಒಟ್ಟಾಗಿ ಅಗ್ನಿಯೇ ನಿನಗೆ ಸ್ವಾಗತ. ಇಲ್ಲಿ ನೀನು ನಮ್ಮಿಂದ ಅಡಗಿಸಲ್ಪಡುವಾಗ ದೇವತೆಗಳಿಗೆ ನೀನು ಸಿಗುವುದಿಲ್ಲ ಎಂದು ಹೇಳಿದವು.
ಅಥ ದೇವಾ ವಿವಿತ್ಸಂತಃ ಪಾವಕಂ ಪರಿಚಕ್ರಮುಃ |
ಗೋಷು ಗುಪ್ತಂ ಚ ವಿಜ್ಞಾಯ ತಾಃ ಕ್ಷಿಪ್ರಮುಪತಸ್ಥಿರೇ ॥5॥
ಅನಂತರ ದೇವತೆಗಳು ಅಗ್ನಿಯನ್ನು ತಿಳಿಯಲು ಇಚ್ಛಿಸಿ ಎಲ್ಲ ಕಡೆಯಲ್ಲಿಯೂ ಸಂಚಾರ ಮಾಡಿದರು. ಅವನು ಗೋವುಗಳಲ್ಲಿ ಅಡಗಿದ್ದಾನೆಂದು ತಿಳಿದು ಅವರು ಶೀಘ್ರವಾಗಿ ಗೋವುಗಳನ್ನು ಸ್ತೋತ್ರ ಮಾಡಿದರು.
ಯುಷ್ಮಾಸು ನಿವಸತ್ಯಗ್ನಿರಿತಿ ಗಾಃ ಸಮಚೂಚುದನ್ |
ಪ್ರಕಾಶ್ಯತಾಂ ಹುತವಹೋ ಲೋಕಾನ್ ನ ಚ್ಛೇತ್ತುಮರ್ಹಥ ॥6॥
ಏವಮಸ್ತ್ವಿತ್ಯನುಜ್ಞಾಯ ಪಾವಕಂ ಸಮದರ್ಶಯನ್ ॥7॥
ಅಗ್ನಿಯು ನಿಮ್ಮಲ್ಲಿ ವಾಸ ಮಾಡುತ್ತಿದ್ದಾನೆ. ಅವನನ್ನು ಪ್ರಕಾಶಕ್ಕೆ ತನ್ನಿ. ನೀವು ಲೋಕಗಳನ್ನು ವಿನಾಶಗೊಳಿಸಬಾರದು ಎಂದು ಗೋವುಗಳಿಗೆ ಒತ್ತಾಯ ಮಾಡಿದರು. ಗೋವುಗಳು ಹಾಗೆಯೇ ಆಗಲಿ ಎಂದು ಹೇಳಿ ಅಗ್ನಿಯನ್ನು ತೋರಿಸಿದವು.
ಅಧಿಗಮ್ಯ ಪಾವಕಂ ತುಷ್ಟಾಸ್ತೇ ದೇವಾಃ ಸದ್ಯ ಏವ ತು |
ಅಗ್ನಿಂ ಪ್ರಚೋದಯಾಮಾಸುಃ ಕ್ರಿಯತಾಂ ಗೋಷ್ವನುಗ್ರಹಃ ॥8॥
ಅಗ್ನಿಯನ್ನು ಪಡೆದ ದೇವತೆಗಳು ಸಂತೋಷಗೊಂಡು ಅಗ್ನಿಯನ್ನು ಕುರಿತು ಗೋವುಗಳಿಗೆ ಅನುಗ್ರಹವನ್ನು ಮಾಡು ಎಂದು ಒತ್ತಾಯ ಮಾಡಿದರು.
ಗವಾಂ ತು ಯಾಸಾಂ ಗಾತ್ರೇಷು ಪಾವಕಃ ಸಮವಸ್ಥಿತಃ |
ಕಪಿಲತ್ವಮನುಪ್ರಾಪ್ತಾಃ ಸರ್ವಶ್ರೇಷ್ಠತ್ವಮೇವ ಚ |
ಮಹಾಫಲತ್ವಂ ಲೋಕೇ ಚ ದದೌ ತಾಸಾಂ ಹುತಾಶನಃ ॥9॥
ಯಾವ ಗೋವುಗಳಲ್ಲಿ ಅಗ್ನಿಯು ಅಡಗಿ ಕುಳಿತಿದ್ದನೋ ಆ ಗೋವುಗಳು ಕಪಿಲ ವರ್ಣವನ್ನೂ, ಸರ್ವಶ್ರೇಷ್ಠತ್ವವನ್ನೂ ಹೊಂದಿದವು. ಅಗ್ನಿಯು ಅವುಗಳಿಗೆ ಮಹಾಫಲತ್ವವನ್ನೂ ಕೊಟ್ಟನು.

ತಸ್ಮಾದ್ಧಿ ಸರ್ವವರ್ಣಾನಾಂ ಕಪಿಲಾಂ ಗಾಂ ಪ್ರದಾಪಯ |
ಶ್ರೋತ್ರಿಯಾಯ ಪ್ರಶಾಂತಾಯ ಪ್ರಯತಾಯಾಗ್ನಿಹೋತ್ರಿಣೇ ||10||
ಆದ್ದರಿಂದ ಎಲ್ಲ ವರ್ಣಗಳಲ್ಲಿ ಕಪಿಲವರ್ಣದ ಗೋವುಗಳನ್ನೇ ನೀನು ಶ್ರೋತ್ರಿಯನಾದ, ಪ್ರಶಾಂತನಾದ, ಇಂದ್ರಿಯನಿಗ್ರಹವುಳ್ಳ ಅಗ್ನಿಹೋತ್ರಿಗೆ ದಾನ ಮಾಡಿಸು.
ಯಾವಂತಿ ರೋಮಾಣಿ ಭವಂತಿ ಧೇನ್ವಾ
ಯುಗಾನಿ ತಾವಂತಿ ಪುನಾತಿ ದಾತೄನ್ |
ಪ್ರತಿಗ್ರಹೀತ್ರೂಂಶ್ಚ ಪುನಾತಿ ದತ್ತಾ
ಶಿಷ್ಯೇ ತು ಗೌರ್ವ್ಯೈ ಪ್ರತಿಪಾದನೇನ ||11||
ಗೋವಿನ ದೇಹದಲ್ಲಿ ಎಷ್ಟು ರೋಮವಿರುತ್ತದೆಯೋ ಅಷ್ಟು ಯುಗಗಳ ಕಾಲ ಗೋವುಗಳು ದಾನ ಮಾಡುವವನನ್ನು ಪವಿತ್ರೀಕರಿಸುತ್ತದೆ. ಶಿಷ್ಯನಾದವನಿಗೆ ಗೋವನ್ನು ದಾನ ಮಾಡಿದರೆ ಗೋದಾನವನ್ನು ಸ್ವೀಕರಿಸುವವನನ್ನೂ ಸಹ ಪವಿತ್ರೀಕರಿಸುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕಪಿಲಾಶ್ರೈಷ್ಟ್ಯಕಥನಂ ನಾಮ
ಏಕವಿಂಶತ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೆರಡನೆಯ ಅಧ್ಯಾಯ
ಕಪಿಲ ಗೋವುಗಳ ಪ್ರಭೇದ. ಅವುಗಳನ್ನು ಪೀಡಿಸಿದರೆ ಉಂಟಾಗುವ ಅನರ್ಥ.
ಶುಕಃ
ಕೇನ ವರ್ಣವಿಭಾಗೇನ ವಿಜ್ಞೇಯಾ ಕಪಿಲಾ ಭವೇತ್ |
ಕತಿ ವಾ ಲಕ್ಷಣಾನ್ಯಸ್ಯ ದೃಷ್ಟಾನಿ ಮುನಿಭಿಃ ಪುರಾ ||1||
ಶುಕ ಯಾವ ವರ್ಣವಿಭಾಗದಿಂದ ಕಪಿಲೆಯನ್ನು ತಿಳಿಯಬೇಕು? ಕಪಿಲ ಗೋವುಗಳಲ್ಲಿ ಮುನಿಗಳು ಹಿಂದೆ ಎಷ್ಟು ಲಕ್ಷಣಗಳನ್ನು ನೋಡಿದ್ದಾರೆ?
ವ್ಯಾಸಃ
ಶೃಣು ತಾತ ಯಥಾ ಗೋಷು ವಿಜ್ಞೇಯಾ ಕಪಿಲಾ ಭವೇತ್ ||2||
ನೇತ್ರಯೋಃ ಶೃಂಗಯೋಶ್ಚೈವ ಖುರೇಷು ವೃಷಣೇಷು ಚ |
ಕರ್ಣತೋ ಘ್ರಾಣತಶ್ಚಾಪಿ ಷಡ್ವಿಧಾಃ ಕಪಿಲಾಃ ಸ್ಮೃತಾಃ ||3||
ವ್ಯಾಸರು ಪ್ರೀತಿಪಾತ್ರನೇ, ಗೋವುಗಳಲ್ಲಿ ಕಪಿಲ ಗೋವನ್ನು ತಿಳಿಯುವ ರೀತಿಯನ್ನು ಕೇಳು. ನೇತ್ರಗಳಲ್ಲಿ ಕಪಿಲವರ್ಣದಿಂದ ಕೂಡಿರುವುದು, ಶೃಂಗಗಳಲ್ಲಿ ಕಪಿಲ ವರ್ಣದಿಂದ ಕೂಡಿರುವುದು, ಗೊರಸುಗಳಲ್ಲಿ ಕಪಿಲ ವರ್ಣದಿಂದ ಕೂಡಿರುವುದು, ಹೋರಿಯಲ್ಲಿ ವೃಷಣವಿರುವ ಸ್ಥಾನದಲ್ಲಿ ಕಪಿಲ ವರ್ಣದಿಂದ ಕೂಡಿರುವುದು, ಕರ್ಣ ಪ್ರದೇಶದಲ್ಲಿ ಕಪಿಲ ವರ್ಣದಿಂದ ಕೂಡಿರುವುದು, ಘ್ರಾಣ ಪ್ರದೇಶದಲ್ಲಿ ಕಪಿಲ ವರ್ಣದಿಂದ ಕೂಡಿರುವುದು ಎಂದು ಕಪಿಲ ಗೋವುಗಳು ಆರು ವಿಧವಾಗಿರುತ್ತವೆ.
ಏತೇಷಾಂ ಲಕ್ಷಣಾನಾಂ ತು ಯದ್ಯೇಕಮಪಿ ದೃಶ್ಯತೇ |
ಕಪಿಲಾಂ ತಾಂ ವಿಜಾನೀಯಾದ್ ಏವಮಾಹುರ್ಮನೀಷಿಣಃ ||4||
ಈ ಲಕ್ಷಣಗಳಲ್ಲಿ ಯಾವುದಾದರೂ ಒಂದು ಲಕ್ಷಣವಿದ್ದರೂ ಅವುಗಳನ್ನು ಕಪಿಲ ಗೋವೆಂದು ತಿಳಿಯಬೇಕೆಂದು ಜ್ಞಾನಿಗಳು ಹೇಳುತ್ತಾರೆ.
ಆಗ್ನೇಯೀ ನೇತ್ರಕಪಿಲಾ ಖುರೈರ್ಮಾಹೇಶ್ವರೀ ಭವೇತ್ |
ಗ್ರೀವಾಯಾಂ ವೈಷ್ಣವೀ ಜ್ಞೇಯಾ ಪೂಷ್ಣೋ ಘ್ರಾಣಾದಜಾಯತ ||5||
ಕರ್ಣತಸ್ತು ವಸಂತೇನ ಸ್ವಯೋನಿಮಭಿಜಾಯತೇ |
ಗಾಯತ್ರ್ಯಾಶ್ಚ ವೃಷಣಯೋರುತ್ಪತ್ತಿಃ ಷಡ್ಗುಣಾ ಸ್ಮೃತಾ ||6||
ನೇತ್ರಕಪಿಲೆಯು ಅಗ್ನಿಯಿಂದ ಹುಟ್ಟಿದುದು. ಖುರ ಕಪಿಲೆಯು ಮಹೇಶ್ವರನಿಂದ ಹುಟ್ಟಿದುದು. ಗ್ರೀವಾ ಕಪಿಲೆಯು ವಿಷ್ಣುವಿನಿಂದ ಜನಿಸಿದೆ. ಘ್ರಾಣ ಕಪಿಲೆಯು ಪೂಷಣನಿಂದ ಜನಿಸಿದೆ ಎಂದು ತಿಳಿಯಬೇಕು. ಕರ್ಣ ಕಪಿಲೆಯು ವಸಂತನಿಂದ ತನ್ನ ಯೋನಿಯಲ್ಲಿ ಹುಟ್ಟುತ್ತದೆ. ವೃಷಣ ಕಪಿಲೆಯು ಗಾಯತ್ರಿಯಿಂದ ಉಂಟಾಗುತ್ತದೆ. ಹೀಗೆ ಕಪಿಲೆಗಳು ಆರು ಗುಣಗಳಿಂದ ಕೂಡಿರುತ್ತವೆ.
ಏವಂ ಗಾವಶ್ಚ ವಿಪ್ರಾಶ್ಚ ಗಾಯತ್ರೀ ಸತ್ಯಮೇವ ಚ |
ವಸಂತಶ್ಚ ಸುವರ್ಣಂ ಚ ಏಕತಃ ಸಮಜಾಯತ ||7||
ಈ ರೀತಿಯಲ್ಲಿ ಉಳಿದ ಗೋವುಗಳು, ವಿಪ್ರರು, ಗಾಯತ್ರೀ, ಸತ್ಯ, ವಸಂತ ಮತ್ತು ಸುವರ್ಣ ಒಂದು ಭಾಗದಿಂದ ಜನಿಸಿದವು. ಕಪಿಲೆಯೊಂದೇ ಇನ್ನೊಂದು ಭಾಗದಿಂದ ಜನಿಸಿತು. ಆದ್ದರಿಂದ ಒಂದು ಕಪಿಲೆಯು ವಿಪ್ರಾದಿ ಪಂಚಕಕ್ಕೆ ಸಮಾನವಾದುದು (ಲಕ್ಷ್ಯಾಲಂಕಾರ).
ನೇತ್ರಯೋಃ ಕಪಿಲಾಯಾಸ್ತು ವಾಹಯೇತ ದುಹೇತ ವಾ |
ಸ ಪಾಪಕರ್ಮಾ ನರಕಂ ಪ್ರತಿಷ್ಠಾಂ ಪ್ರತಿಪದ್ಯತೇ ||8||
ನೇತ್ರ ಕಪಿಲೆಯು ಭಾರವನ್ನು ಹೊರುವಂತೆ ಮಾಡಿದರೆ ಅಥವಾ ಅದರಿಂದ ಹಾಲನ್ನು ಕರೆದರೆ ಪಾಪಕರ್ಮವನ್ನು ಮಾಡುವ

ಅಂತಹ ಪುರುಷನು ನರಕದಲ್ಲಿ ನೆಲೆಸುತ್ತಾನೆ.
ನರಕಾದ್ ವಿಪ್ರಮುಕ್ತಸ್ತು ತಿರ್ಯಗ್ಯೋನಿಂ ನಿಷೇವತೇ |
ಯದಾ ಲಭೇತ ಮಾನುಷ್ಯೇ ಜಾತ್ಯಂಧೋ ಜಾಯತೇ ನರಃ ||9||
ನರಕದಿಂದ ಹೊರಬಂದವನು ನೀಚಯೋನಿಯನ್ನು ಹೊಂದುತ್ತಾನೆ. ಮನುಷ್ಯ ಜನ್ಮವು ಬಂದಾಗ ಅವನು ಹುಟ್ಟುಕುರುಡನಾಗಿ ಜನಿಸುತ್ತಾನೆ.
ಶೃಂಗಯೋಃ ಕಪಿಲಾಂ ಯಸ್ತು ವಾಹಯೇತ ದುಹೇತ ವಾ |
ತಿರ್ಯಗ್ಯೋನಿಂ ಸ ಲಭತೇ ಜಾಯಮಾನಃ ಪುನಃ ಪುನಃ ||10||
ಶೃಂಗ ಕಪಿಲೆಯನ್ನು ಯಾವನು ಭಾರವನ್ನು ಹೊರುವಂತೆ ಮಾಡುತ್ತಾನೆಯೋ ಅಥವಾ ಅದರಿಂದ ಹಾಲನ್ನು ಕರೆಯುತ್ತಾನೆಯೋ ಅವನು ಪುನಃ ಪುನಃ ಹುಟ್ಟಿದರೋ ಅವನು ತಿರ್ಯಗ್ಯೋನಿಯನ್ನೇ ಪಡೆಯುತ್ತಾನೆ.
ಖುರೇಷು ಕಪಿಲಾಂ ಯಸ್ತು ವಾಹಯೇತ ದುಹೇತ ವಾ |
ತಮಸ್ಯಪಾರೇ ಮಜ್ಜೇತ ಧನಹೀನೋ ನರಾಧಮಃ ||11||
ಖುರಕಪಿಲೆಯನ್ನು ಯಾವನು ಭಾರ ಹೊರುವಂತೆ ಮಾಡುತ್ತಾನೆಯೋ ಅಥವಾ ಅದರ ಹಾಲನ್ನು ಕರೆಯುತ್ತಾನೆಯೋ ಅಂತಹ ನರಾಧಮನು ಈ ಲೋಕದಲ್ಲಿ ಧನಹೀನನಾಗಿ ಪರಲೋಕದಲ್ಲಿ ಅಪಾರವಾದ ತಮಸ್ಸಿನಲ್ಲಿ ಮುಳುಗುತ್ತಾನೆ.
ಕಪಿಲಾಂ ವಾಲಧಾನೇಷು ವಾಹಯೇತ ದುಹೇತ ವಾ |
ನಿರಾಶ್ರಯಃ ಸದಾ ಚೈವ ಜಾಯತೇ ಯದಿ ಚೇತ್ ಕ್ರಿಮಿಃ ||12||
ವೃಷಣ ಪ್ರದೇಶದಲ್ಲಿ ಕಪಿಲೆಯನ್ನು ಯಾವನು ಭಾರ ಹೊರುವಂತೆ ಮಾಡುತ್ತಾನೆಯೋ ಅಥವಾ ಅದರ ಹಾಲನ್ನು ಕರೆಯುತ್ತಾನೆಯೋ ಅವನು ಯಾವಾಗಲೂ ನಿರಾಶ್ರಯನಾಗುತ್ತಾನೆ. ಪುನಃ ಹುಟ್ಟಿದರೆ ಕ್ರಿಮಿಯಾಗಿ ಹುಟ್ಟುತ್ತಾನೆ.
ಕರ್ಣೇನ ಕಪಿಲಾಂ ಯಸ್ತು ಜಾನನ್ನಪ್ಯುಪಜೀವತಿ |
ಸಹಸ್ರಶಃ ಕ್ರಿಮಿರ್ಭೂತ್ವಾ ಮಾನುಷ್ಯಂ ಪ್ರಾಪ್ನುಯಾದಥ |
ಚಂಡಾಲಃ ಪಾಪಕರ್ಮಾ ವಾ ಜಾಯತೇ ಸ ನರಾಧಮಃ ||13||
ಕರ್ಣ ಕಪಿಲೆಯನ್ನು ಯಾವನು ತಿಳಿದೂ ಉಪಜೀವಿಸುತ್ತಾನೆಯೋ ಅವನು ಸಾವಿರ ಬಾರಿ ಕ್ರಿಮಿಯಾಗಿ ಹುಟ್ಟಿ ಅನಂತರ ಮನುಷ್ಯನಾಗುತ್ತಾನೆ. ಆ ನರಾಧಮನು ಮನುಷ್ಯನಾದರೂ ಚಂಡಾಲನಾಗಿ ಅಥವಾ ಪಾಪಯೋನಿಯಲ್ಲಿ ಜನ್ಮವನ್ನು ಹೊಂದುತ್ತಾನೆ.
ಘ್ರಾಣೇನ ಕಪಿಲಾಂ ಯಸ್ತು ಪ್ರಮಾದಾದುಪಜೀವತಿ |
ಸೋಽಪಿ ವರ್ಷಸಹಸ್ರಾಣಿ ತಿರ್ಯಗ್ಯೋನೌ ಪ್ರಜಾಯತೇ ||14||
ವ್ಯಾಧಿಗ್ರಸ್ತೋ ಜಡೋ ರೋಗೀ ಭವೇನ್ಮಾನುಷ್ಯಮಾಗತಃ ||15||
ಘ್ರಾಣ ಕಪಿಲೆಯನ್ನು ಯಾವನು ಪ್ರಮಾದದಿಂದ ಉಪಜೀವಿಸುತ್ತಾನೆಯೋ ಅವನು ಸಹಸ್ರ ವರ್ಷಗಳ ಕಾಲ ತಿರ್ಯಗ್ಯೋನಿಯಲ್ಲಿ ಜನಿಸುತ್ತಾನೆ ಮತ್ತು ಮನುಷ್ಯತ್ವವನ್ನು ಹೊಂದಿದಾಗ ವ್ಯಾಧಿಗ್ರಸ್ತನೂ, ಬುದ್ಧಿಹೀನನೂ ಮತ್ತು ರೋಗಿಯೂ ಆಗುತ್ತಾನೆ.
ಮಧುಸರ್ಪಿಃಸುಗಂಧಾಸ್ತು ಕಪಿಲಾಃ ಶಾಸ್ತ್ರತಃ ಸ್ಮೃತಾಃ |
ಏತಾಃ ಸಮುಪಜೀವೇತ ಸೋಽಪಿ ತಿರ್ಯಕ್ಷು ಜಾಯತೇ ||16||
ಕಪಿಲ ಗೋವುಗಳು ಜೇನಿನ ಮತ್ತು ತುಪ್ಪದ ಸುಗಂಧವನ್ನು ಹೊಂದಿರುತ್ತವೆ ಎಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ. ಯಾವನು ಇವುಗಳನ್ನು ಉಪಜೀವಿಸುತ್ತಾನೆಯೋ ಅವನೂ ತಿರ್ಯಗ್ಯೋನಿಯಲ್ಲಿ ಜನಿಸುತ್ತಾನೆ.
ಸ್ಥಾವರತ್ವಮನುಪ್ರಾಪ್ತೋ ಯದಿ ಮಾನುಷ್ಯತಾಂ ಲಭೇತ್ |
ಅಲ್ಪಾಯುಃ ಸ ಭವೇಜ್ಜಾತೋ ಹೀನವರ್ಣಕುಲೋದ್ಭವಃ ||17||
ಅನಂತರ ವೃಕ್ಷಾದಿ ಜನ್ಮವನ್ನು ಹೊಂದಿ, ಅನಂತರ ಮನುಷ್ಯತ್ವವನ್ನು ಹೊಂದಿದರೂ ಹೀನವರ್ಣಕುಲಗಳಲ್ಲಿ ಹುಟ್ಟಿ ಅಲ್ಪಾಯುಷ್ಯವುಳ್ಳವನಾಗುತ್ತಾನೆ.
ಯೇ ತು ಪಾಪಾ ಹ್ಯಸೂಯಂತೇ ಕಪಿಲಾಂ ವಾಹಯಂತಿ ಚ |
ನಿರಯೇಷು ಪ್ರತಿಷ್ಠಂತೇ ಯಾವದಾಭೂತಸಂಪ್ಲವಮ್ ||18||
ಯಾವ ಪಾಪಿಗಳು ಕಪಿಲೆಗೆ ಭಾರವನ್ನು ಹೊರಿಸುತ್ತಾರೋ ಅವರು ಪ್ರಳಯ ಕಾಲದವರೆಗೆ ನರಕದಲ್ಲಿಯೇ ಇರುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕಪಿಲಾಪ್ರಭೇದವರ್ಣನಂ ನಾಮ
ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೆರಡನೆಯ ಅಧ್ಯಾಯಮುಗಿಯಿತು.
* * * * *
ನೂರ ಇಪ್ಪತ್ಮೂರನೆಯ ಅಧ್ಯಾಯ
ಶ್ರೀ-ಗೋಸಂವಾದ
ಯುಧಿಷ್ಠಿರಃ
ಮಯಾ ಗವಾಂ ಪುರೀಷಂ ವೈ ಶ್ರಿಯಾ ಜುಷ್ಟಮಿತಿ ಶ್ರುತಮ್ |
ಏತದಿಚ್ಛಾಮ್ಯಹಂ ಶ್ರೋತುಂ ಸಂಶಯೋಽತ್ರ ಹಿ ಮೇ ಮಹಾನ್ ||1||
ಯುಧಿಷ್ಠಿರ ನಾನು ಲಕ್ಷ್ಮಿಯು ಗೋವುಗಳ ಸಗಣಿಯನ್ನು ಆಶ್ರಯಿಸಿದಳೆಂದು ಕೇಳಿದ್ದೇನೆ. ಈ ವಿಷಯದಲ್ಲಿ ನನಗೆ ದೊಡ್ಡ

ಸಂಶಯವಿದೆ. ಇದನ್ನು ನಿನ್ನಿಂದ ಕೇಳಲು ಬಯಸುತ್ತೇನೆ.
ಭೀಷ್ಮ:
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೋಭಿರ್ನೃಪೇಹ ಸಂವಾದಂ ಶ್ರಿಯಾ ಭರತಸತ್ತಮ ||2||
ಶ್ರೀಃ ಕೃತ್ವೇಹ ವಪುಃ ಕಾಂತಂ ಗೋಮಧ್ಯಂ ಪ್ರವಿವೇಶ ಹ |
ಗಾವೋಽಥ ವಿಸ್ಮಿತಾಸ್ತಸ್ಯಾ ದೃಷ್ಟ್ವಾ ರೂಪಸ್ಯ ಸಂಪದಮ್ ||3||
ಭೀಷ್ಮ ಎಲೈ ಭರತಸತ್ತಮನೇ, ಈ ವಿಷಯದಲ್ಲಿಯೂ ಗೋವುಗಳಿಗೂ ಮತ್ತು ಶ್ರೀದೇವಿಗೂ ನಡೆದ ಸಂವಾದರೂಪವಾದ ಪುರಾತನ ಇತಿಹಾಸವನ್ನು ಹೇಳುತ್ತಾರೆ. ಲಕ್ಷ್ಮಿಯು ಒಂದು ಸುಂದರರೂಪವನ್ನು ತೆಗೆದುಕೊಂಡು ಗೋವುಗಳ ಮಧ್ಯದಲ್ಲಿ ಪ್ರವೇಶಿಸಿದಳು. ಗೋವುಗಳು ಅವಳ ರೂಪಸಂಪತ್ತನ್ನು ನೋಡಿ ವಿಸ್ಮಯಗೊಂಡವು.
ಗಾವಃ
ಕಾಽಸಿ ದೇವಿ ಕುತೋ ವಾ ತ್ವಂ ರೂಪೇಣಾಪ್ರತಿಮಾ ಭುವಿ |
ವಿಸ್ಮಿತಾಃ ಸ್ಮ ಮಹಾಭಾಗೇ ತವ ರೂಪಸ್ಯ ಸಂಪದಾ ||4||
ಇಚ್ಛಾಮಸ್ತ್ವಾಂ ವಯಂ ಜ್ಞಾತುಂ ಕಾ ತ್ವಂ ಕ್ವ ಚ ಗಮಿಷ್ಯಸಿ |
ತತ್ತ್ವೇನ ಚ ಸುವರ್ಣಾಭೇ ಸರ್ವಮೇತದ್ ಬ್ರವೀಹಿ ನಃ ||5||
ಗೋವುಗಳು ಎಲೌ ದೇವಿಯೇ, ನೀನು ಯಾರು? ಭೂಮಿಯಲ್ಲಿ ರೂಪದಲ್ಲಿ ಅಸದೃಶಳಾದ ನೀನು ಎಲ್ಲಿಂದ ಬಂದೆ? ಮಹಾನುಭಾವಳೇ, ನಿನ್ನ ರೂಪಸಂಪತ್ತಿನಿಂದ ನಾವು ವಿಸ್ಮಿತರಾಗಿದ್ದೇವೆ. ನೀನು ಯಾರು ಮತ್ತು ಎಲ್ಲಿಗೆ ಹೋಗುವಿ ಎಂದು ತಿಳಿಯಲು ನಾವು ಬಯಸುತ್ತೇವೆ. ಎಲೌ ಸುವರ್ಣಕಾಂತಿಯುಳ್ಳವಳೇ, ಇದೆಲ್ಲವನ್ನೂ ನಮಗೆ ಸರಿಯಾಗಿ ಹೇಳು.
ಶ್ರೀಃ
ಲೋಕಕಾಂತಾಽಸ್ಮಿ ಭದ್ರಂ ವಃ ಶ್ರೀರ್ನಾಮ್ನೇಹ ಪರಿಶ್ರುತಾ |
ಮಯಾ ದೈತ್ಯಾಃ ಪರಿತ್ಯಕ್ತಾ ವಿನಷ್ಟಾಃ ಶಾಶ್ವತೀಃ ಸಮಾಃ ||6||
ಶ್ರೀದೇವಿ ನಿಮಗೆ ಮಂಗಳವಾಗಲಿ. ನಾನು ಲೋಕಪ್ರಿಯಳಾಗಿದ್ದೇನೆ. ಶ್ರೀ ಎಂಬ ಹೆಸರಿನಿಂದ ಪ್ರಖ್ಯಾತಳಾಗಿದ್ದೇನೆ. ನನ್ನಿಂದ ಪರಿತ್ಯಕ್ತರಾದ ದೈತ್ಯರು ಶಾಶ್ವತ ಕಾಲದಲ್ಲಿ ವಿನಷ್ಟರಾದರು.
ಇಂದ್ರೋ ವಿವಸ್ವಾನ್ ಸೋಮಶ್ಚ ವಿಷ್ಣುರಾಪೋಽಗ್ನಿರೇವ ಚ |
ಮಯಾಽಭಿಪನ್ನಾ ಋಧ್ಯಂತೇ ಋಷಯೋ ದೇವತಾಸ್ತಥಾ ||7||
ಇಂದ್ರ, ಸೂರ್ಯ, ಚಂದ್ರ, ವಿಷ್ಣು, ವರುಣ, ಅಗ್ನಿ ಇವರು, ಹಾಗೆಯೇ ಋಷಿಗಳು ಮತ್ತು ದೇವತೆಗಳು ನನ್ನ ಸನ್ನಿಧಾನದಿಂದ ಸಮೃದ್ಧಿಯನ್ನು ಹೊಂದುತ್ತಾರೆ.
ಯಾಂಶ್ಚ ದ್ವಿಷಾಮ್ಯಹಂ ಗಾವಸ್ತೇ ವಿನಶ್ಯಂತಿ ಸರ್ವಶಃ |
ಧರ್ಮಾರ್ಥಕಾಮಹೀನಾಶ್ಚ ತೇ ಭವಂತ್ಯಸುಖಾನ್ವಿತಾಃ ||8||
ಎಲೈ ಗೋವುಗಳೇ, ನಾನು ಯಾರನ್ನು ದ್ವೇಷಿಸುತ್ತೇನೆಯೋ ಅವರು ಸರ್ವ ಪ್ರಕಾರದಿಂದ ವಿನಾಶವನ್ನು ಹೊಂದುತ್ತಾರೆ. ಅವರು ಧರ್ಮಾರ್ಥಕಾಮ ಹೀನರಾಗಿ ದುಃಖದಿಂದ ಕೂಡಿರುತ್ತಾರೆ.
ಏವಂಪ್ರಭಾವಾಂ ಮಾಂ ಗಾವೋ ವಿಜಾನೀತ ಸುಖಪ್ರದಾಮ್ |
ಇಚ್ಛಾಮಿ ಚಾಪಿ ಯುಷ್ಮಾಸು ವಸ್ತುಂ ಸರ್ವಾಸು ನಿತ್ಯದಾ |
ಆಗತಾ ಪ್ರಾರ್ಥಯಾನಾಹಂ ಶ್ರೀಜುಷ್ಟಾ ಭವತಾದ್ಯ ವೈ ||9||
ಎಲೌ ಗೋವುಗಳೇ, ಸುಖಪ್ರದಳಾದ ನನ್ನನ್ನು ಇಂತಹ ಸಾಮರ್ಥ್ಯವುಳ್ಳವಳು ಎಂದು ತಿಳಿಯಿರಿ. ನಿಮ್ಮೆಲ್ಲರಲ್ಲೂ ನಾನು ಯಾವಾಗಲೂ ವಾಸಮಾಡಲು ಇಚ್ಛಿಸುತ್ತೇನೆ. ನಿಮ್ಮನ್ನು ಪ್ರಾರ್ಥನೆ ಮಾಡುತ್ತಾ ಬಂದಿದ್ದೇನೆ. ಈ ದಿನ ನೀವು ಶ್ರೀಸನ್ನಿಧಾನಕ್ಕೆ ಪಾತ್ರರಾಗಿ.
ಗಾವಃ
ಅಧ್ರುವಾಂ ಚಂಚಲಂ ಚ ತ್ವಾಂ ಸಾಮಾನ್ಯಾಂ ಬಹುಭಿಃ ಸಹ |
ನ ತ್ವಾಮಿಚ್ಛಾಮ ಭದ್ರಂ ತೇ ಗಮ್ಯತಾಂ ಯತ್ರ ರೋಚತೇ ||10||
ವಪುಷ್ಮಂತ್ಯೋ ವಯಂ ಸರ್ವಾಃ ಕಿಮಸ್ಮಾಕಂ ತ್ವಯಾಽದ್ಯ ವೈ |
ಯತ್ರೇಷ್ಟಂ ಗಮ್ಯತಾಂ ತತ್ರ ಕೃತಕಾರ್ಯಾ ವಯಂ ತ್ವಯಾ ||11||
ಗೋವುಗಳು ನೀನು ಅಧ್ರುವಳು, ಚಂಚಲಳಾದವಳು ಮತ್ತು ಅನೇಕರ ಜೊತೆಯಲ್ಲಿ ಸಾಧಾರಣಳಾದವಳು. ನಿನಗೆ ಶುಭವಾಗಲಿ. ನಾವು ನಿನ್ನನ್ನು ಬಯಸುವುದಿಲ್ಲ. ನಿನಗೆ ಇಷ್ಟಬಂದ ಕಡೆಗೆ ಹೋಗು. ನಮಗೆಲ್ಲರಿಗೂ ಒಳ್ಳೆಯ ಶರೀರವಿದೆ. ನಿನ್ನಿಂದ ನಮಗೆ ಈ ದಿನ ಆಗಬೇಕಾದುದೇನು? ನಿನ್ನ ಇಷ್ಟ ಬಂದಲ್ಲಿಗೆ ಹೋಗು. ನಿನ್ನಿಂದ ಆಗಬೇಕಾದ ಕಾರ್ಯವು ಏನೂ ಇಲ್ಲ.
ಶ್ರೀಃ
ಕಿಮೇತದ್ ಧಕ್ಷಣಂ ಗಾವೋ ಯನ್ಮಾಂ ನೇಹಾಭ್ಯನಂದಥ |
ನ ಮಾಂ ಸಂಪ್ರತಿ ಗೃಹ್ಣೀಥ ಕಸ್ಮಾದ್ವೈ ದುರ್ಲಭಾಂ ಸತೀಮ್ ||12||
ಶ್ರೀದೇವಿ ಗೋವುಗಳೇ, ಇಲ್ಲಿ ನನ್ನನ್ನು ಅಭಿನಂದಿಸದೆ ಏಕೆ ಇಂತಹ ದಹಿಸುವ ಮಾತುಗಳನ್ನು ಆಡುತ್ತಿದ್ದೀರಿ? ದುರ್ಲಭಳೂ, ಪತಿವ್ರತೆಯೂ ಆದ ನನ್ನನ್ನು ನೀವು ಏಕೆ ಸ್ವೀಕರಿಸುವುದಿಲ್ಲ?
ಸತ್ಯಶ್ಚ ಲೋಕವಾದೋಽಯಂ ಲೋಕೇ ಚರತಿ ಸುವ್ರತಾಃ |

ಸ್ವಯಂ ಪ್ರಾಪ್ತೇ ಪರಿಭವೋ ಭವತೀತಿ ವಿನಿಶ್ಚಯಃ ॥13॥
ಎಲೌ ಒಳ್ಳೆಯ ವ್ರತವುಳ್ಳವರೇ, ತಾನಾಗಿಯೇ ಬಂದರೆ ಅವಮಾನವಾಗುವುದು ನಿಶ್ಚಿತ ಎಂದು ಲೋಕದಲ್ಲಿ ಪ್ರಚಾರದಲ್ಲಿರುವ ಈ ಲೋಕವಾದವು ಸತ್ಯವಾದುದು.
ಮಹದುಗ್ರಂ ತಪಃ ಕೃತ್ವಾ ಮಾಂ ನಿಷೇವಂತಿ ಮಾನವಾಃ |
ದೇವದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ ॥14॥
ದೊಡ್ಡ ಉಗ್ರ ತಪಸ್ಸನ್ನು ಮಾಡಿ ಮಾನವರು, ದೇವ-ದಾನವ-ಗಂಧರ್ವರು, ಪಿಶಾಚ-ಸರ್ಪ-ರಾಕ್ಷಸರು ನನ್ನ ಸೇವೆಯನ್ನು ಮಾಡುತ್ತಾರೆ.
ಕ್ಷಮಮೇತದ್ಧಿ ವೋ ಗಾವಃ ಪ್ರತಿಗೃಹ್ಣೀತ ಮಾಮಿಹ |
ನಾವಮನ್ಯಾ ಹ್ಯಹಂ ಸೌಮ್ಯಾಸ್ತ್ರೈಲೋಕ್ಯೇ ಸಚರಾಚರೇ ॥15॥
ಎಲೌ ಗೋವುಗಳೇ, ನನಗೆ ಆಶ್ರಯವನ್ನು ಕೊಡಲು ನೀವು ಸಮರ್ಥರಾಗಿದ್ದೀರಿ. ನೀವು ನಮ್ಮನ್ನು ಸ್ವೀಕರಿಸಿ. ಎಲೌ ಸೌಮ್ಯರೇ, ಚರಾಚರ ಪ್ರಾಣಿಗಳಿಂದ ಸೇರಿದ ಮೂರು ಲೋಕಗಳಲ್ಲಿಯೂ ನಾನು ಅವಮಾನಕ್ಕೆ ಅರ್ಹಳಾದವಳಲ್ಲ.
ಗಾವಃ
ನಾವಮನ್ಯಾಮಹೇ ದೇವಿ ನ ತ್ವಾಂ ಪರಿಭವಾಮಹೇ |
ಅಧ್ರುವಾ ಚಲಚಿತ್ತಾಽಸಿ ತತಸ್ತ್ವಾಂ ವರ್ಜಯಾಮಹೇ ॥16॥
ಬಹುನಾಽತ್ರ ಕಿಮುಕ್ತೇನ ಗಮ್ಯತಾಂ ಯತ್ರ ವಾಂಛಸಿ |
ವಪುಷ್ಮತ್ಯೋ ವಯಂ ಸರ್ವಾಃ ಕಿಮಸ್ಮಾಕಂ ತ್ವಯಾಽನಘೇ ॥17॥
ಗೋವುಗಳು ಎಲೌ ದೇವಿಯೇ, ನಾವು ನಿನಗೆ ಅವಮಾನವನ್ನು ಮಾಡುತ್ತಿಲ್ಲ. ಸೋಲನ್ನು ಉಂಟುಮಾಡುತ್ತಿಲ್ಲ. ನೀನು ಚಂಚಲಳಾದವಳು ಮತ್ತು ಚಂಚಲ ಚಿತ್ತವುಳ್ಳವಳೆಂದು ನಿನ್ನನ್ನು ಪರಿತ್ಯಜಿಸುತ್ತಿದ್ದೇವೆ. ಬಹಳ ಮಾತುಗಳನ್ನಾಡಿ ಏನು ಪ್ರಯೋಜನ? ನಿನಗೆ ಇಷ್ಟಬಂದಲ್ಲಿಗೆ ಹೋಗು. ನಮ್ಮೆಲ್ಲರಿಗೂ ಒಳ್ಳೆಯ ಶರೀರವಿದೆ. ಎಲೌ ಅನಘೇ, ನಮಗೆ ನಿನ್ನಿಂದ ಆಗಬೇಕಾದುದು ಏನು?
ಶ್ರೀಃ
ಅವಜ್ಞಾತಾ ಭವಿಷ್ಯಾಮಿ ಸರ್ವಲೋಕೇಷು ಮಾನದಾಃ |
ಪ್ರತ್ಯಾಖ್ಯಾನೇನ ಯುಷ್ಮಾಭಿಃ ಪ್ರಸಾದಃ ಕ್ರಿಯತಾಮಿತಿ ॥18॥
ಶ್ರೀದೇವಿ ಎಲೌ ಮಾನದರೇ, ನೀವು ನಿರಾಕರಣೆಯನ್ನು ಮಾಡಿದರೆ ನಾನು ಎಲ್ಲ ಲೋಕಗಳಲ್ಲಿಯೂ ಅವಮಾನಕ್ಕೊಳಗಾಗುವೆನು. ಆದ್ದರಿಂದ ಪ್ರಸನ್ನರಾಗಿ.
ಮಹಾಭಾಗಾ ಭವತ್ಯೋ ವೈ ಶರಣ್ಯಾಃ ಶರಣಾಗತಾಮ್ |
ಪರಿತ್ರಾಯಂತು ಮಾಂ ನಿತ್ಯಂ ಭಜಮಾನಾಮನಿಂದಿತಾಮ್ |
ಮಾನನಾಂ ತ್ವಹಮಿಚ್ಛಾಮಿ ಭವತ್ಯಃ ಸತತಂ ಶುಭಾಃ ॥19॥
ನೀವು ಮಹಾನುಭಾವರು, ಶರಣವತ್ಸಲರಾದವರು. ಶರಣಾಗತಳಾದ, ನಿತ್ಯವೂ ನಿಮ್ಮನ್ನು ಸೇವಿಸುವ ಅನಿಂದಿತಳಾದ ನನ್ನನ್ನು ರಕ್ಷಿಸಿ. ಎಲೌ ಪೂಜ್ಯರೇ, ಸತತವಾಗಿ ಶುಭರಾದವರೇ, ನಾನು ನಿಮ್ಮಿಂದ ಸಮ್ಮಾನವನ್ನು ಇಚ್ಛಿಸುತ್ತೇನೆ.
ಅಪ್ಯೇಕಾಂಗೇ ತು ವೋ ವಸ್ತುಮಿಚ್ಛಾಮಿ ಚ ಸುಕುತ್ಸಿತೇ |
ನ ವೋಽಸ್ತಿ ಕುತ್ಸಿತಂ ಕಿಂಚಿದಂಗೇಷ್ವಾಲಕ್ಷ್ಯತೇಽನಘಾಃ ॥20॥
ನಿಮ್ಮ ಅತ್ಯಂತ ಕುತ್ಸಿತವಾದ ಒಂದು ಅವಯವದಲ್ಲಾದರೂ ವಾಸ ಮಾಡಲು ಇಚ್ಛಿಸುತ್ತೇನೆ. ಎಲೌ ಅನಘರೇ, ನಿಮ್ಮ ಅಂಗಗಳಲ್ಲಿ ಯಾವುದೂ ಕುತ್ಸಿತವಾಗಿರುವುದು ಕಂಡುಬರುವುದಿಲ್ಲ.
ಪುಣ್ಯಾಃ ಪವಿತ್ರಾಃ ಸುಭಗಾ ಮಮಾದೇಶಂ ಪ್ರಯಚ್ಛತ |
ವಸೇಯಂ ಯತ್ರ ಚಾಂಗೇಽಹಂ ತನ್ಮೇ ವ್ಯಾಖ್ಯಾತುಮರ್ಹಥ ॥21॥
ಪುಣ್ಯಪ್ರದರೇ, ಪವಿತ್ರರಾದವರೇ, ಸೌಭಾಗ್ಯವಂತರೇ, ನನಗೆ ಆದೇಶವನ್ನು ನೀಡಿ. ನಾನು ನಿಮ್ಮ ಯಾವ ಅವಯವದಲ್ಲಿ ಇರಬಹುದೆಂದು ನನಗೆ ನೀವು ಹೇಳಬೇಕು.
ಭೀಷ್ಮಃ
ಏವಮುಕ್ತಾಸ್ತು ತಾ ಗಾವಃ ಶುಭಾಃ ಕರುಣವತ್ಸಲಾಃ |
ಸಮ್ಮಂತ್ರ್ಯ ಸಹಿತಾಃ ಸರ್ವಾಃ ಶ್ರಿಯಮೂಚುರ್ನರಾಧಿಪ ॥22॥
ಭೀಷ್ಮ ಎಲೈ ನರಾಧಿಪನೇ, ಹೀಗೆ ಹೇಳಲ್ಪಟ್ಟ ಸಾಧುಸ್ವರೂಪದ ಮತ್ತು ಕರುಣವತ್ಸಲರಾದ ಆ ಗೋವುಗಳು ಒಟ್ಟಿಗೆ ವಿಚಾರ ಮಾಡಿ ಎಲ್ಲವೂ ಲಕ್ಷ್ಮಿಯನ್ನು ಕುರಿತು ಹೇಳಿದವು.
ಅವಶ್ಯಂ ಮಾನನಾ ಕಾರ್ಯಾ ತವಾಸ್ಮಾಭಿರ್ಯಶಸ್ವಿನಿ |
ಶಕೃನ್ಮೂತ್ರೇ ನಿವಸ ನಃ ಪುಣ್ಯಮೇತದ್ಧಿ ನಃ ಶುಭೇ ॥23॥
ಎಲೌ ಯಶಸ್ವಿನಿಯೇ, ನಿನಗೆ ಅವಶ್ಯವಾಗಿ ನಾವು ಮರ್ಯಾದೆಯನ್ನು ಮಾಡಬೇಕು. ನೀನು ನಮ್ಮ ಮಲ-ಮೂತ್ರಗಳಲ್ಲಿ ವಾಸ ಮಾಡು. ಎಲೌ ಶುಭಳಾದವಳೇ, ಇದು ನಮಗೆ ಪುಣ್ಯಪ್ರದವಾದುದು.
ಶ್ರೀಃ
ದಿಷ್ಟ್ಯಾ ಪ್ರಸಾದೋ ಯುಷ್ಮಾಭಿಃ ಕೃತೋ ಮೇಽನುಗ್ರಹಾತ್ಮಕಃ |
ಏವಂ ಭವತು ಭದ್ರಂ ವಃ ಪೂಜಿತಾಽಸ್ಮಿ ಸುಖಪ್ರದಾಃ ॥24॥

ಶ್ರೀ ದೇವರದಯದಿಂದ ನೀವು ನನಗೆ ಅನುಗ್ರಹರೂಪವಾದ ಪ್ರಸಾದವನ್ನು ಮಾಡಿದ್ದೀರಿ. ಹಾಗೆಯೇ ಆಗಲಿ. ನಿಮಗೆ ಮಂಗಳವಾಗಲಿ. ಎಲೌ ಸುಖಪ್ರದರೇ, ನಿಮ್ಮಿಂದ ನಾನು ಪೂಜಿಸಲ್ಪಟ್ಟಿದ್ದೇನೆ.
ಭೀಷ್ಮಃ
ಏವಂ ಕೃತ್ವಾ ತು ಸಮಯಂ ಶ್ರೀರ್ಗೋಭಿಃ ಸಹ ಭಾರತ |
ಪಶ್ಯಂತೀನಾಂ ತತಸ್ತಾಸಾಂ ತತ್ರೈವಾಂತರಧೀಯತ ||25||
ಏತದ್ ಗೋಶಕೃತಃ ಪುತ್ರ ಮಾಹಾತ್ಮ್ಯಂ ತೇಽನುವರ್ಣಿತಮ್ |
ಮಾಹಾತ್ಮ್ಯಂ ಚ ಗವಾಂ ಭೂಯಃ ಶ್ರೂಯತಾಂ ಗದತೋ ಮಮ ||
ಭೀಷ್ಮ ಎಲೈ ಭಾರತನೇ, ಹೀಗೆ ಲಕ್ಷ್ಮಿಯು ಗೋವುಗಳ ಜೊತೆಯಲ್ಲಿ ಒಪ್ಪಂದ ಮಾಡಿಕೊಂಡು ಗೋವುಗಳು ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು. ಎಲೈ ಪುತ್ರನೇ, ಗೋಮಯದ ಈ ಮಾಹಾತ್ಮ್ಯವನ್ನು ನಿನಗೆ ವರ್ಣಿಸಿದ್ದೇನೆ. ಗೋವುಗಳ ಮಾಹಾತ್ಮ್ಯವನ್ನು ಇನ್ನೂ ವರ್ಣಿಸುತ್ತೇನೆ. ಅದನ್ನು ನೀನು ನನ್ನಿಂದ ಕೇಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋಶಕೃನ್ಮಹಿಮವರ್ಣನಂ ನಾಮ
ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ನಾಲ್ಕನೆಯ ಅಧ್ಯಾಯ
ಗೋಲೋಕ ವಿಷಯದಲ್ಲಿ ಬ್ರಹ್ಮೇಂದ್ರರ ಸಂವಾದ.
ಭೀಷ್ಮಃ
ಯೇ ಚ ಗಾಃ ಸಂಪ್ರಯಚ್ಛಂತಿ ಹುತಶಿಷ್ಟಾಶಿನಶ್ಚ ಯೇ |
ತೇಷಾಂ ಸತ್ರಾಣಿ ಯಜ್ಞಾಶ್ಚ ನಿತ್ಯಮೇವ ಯುಧಿಷ್ಠಿರ ||1||
ಭೀಷ್ಮ ಎಲೈ ಯುಧಿಷ್ಠಿರನೇ, ಯಾರು ಗೋದಾನವನ್ನು ಮಾಡುತ್ತಾರೆಯೋ ಮತ್ತು ಯಜ್ಞಶೇಷವನ್ನು ಭುಂಜಿಸುತ್ತಾರೆಯೋ ಅವರು ನಿತ್ಯವೂ ಎಲ್ಲ ಸತ್ರಗಳನ್ನೂ ಮತ್ತು ಯಜ್ಞಗಳನ್ನೂ ಮಾಡಿದಂತೆಯೇ.
ಋತೇ ದಧಿಘೃತೇನೇಹ ನ ಯಜ್ಞಃ ಸಂಪ್ರವರ್ತತೇ |
ತೇನ ಯಜ್ಞಸ್ಯ ಯಜ್ಞತ್ವಮತೋಮೂಲಂ ಚ ಲಕ್ಷ್ಯತೇ ||2||
ದಧಿ-ಘೃತಗಳಿಲ್ಲದೆ ಯಜ್ಞಗಳು ನೆರವೇರುವುದಿಲ್ಲ. ದಧಿ-ಘೃತಗಳಿಂದ ಯಜ್ಞವು ನಿಷ್ಪನ್ನವಾಗುತ್ತದೆ. ಆದ್ದರಿಂದ ಯಜ್ಞಗಳಿಗೆ ದಧಿ-ಘೃತಗಳು ಮೂಲವೆಂದು ತಿಳಿದು ಬರುತ್ತದೆ.
ದಾನಾನಾಮಪಿ ಸರ್ವೇಷಾಂ ಗವಾಂ ದಾನಂ ಪ್ರಶಸ್ಯತೇ |
ಗಾವಃ ಶ್ರೇಷ್ಠಾಃ ಪವಿತ್ರಾಶ್ಚ ಪಾವನಂ ಹ್ಯೇತದುತ್ತಮಮ್ ||3||
ಎಲ್ಲ ದಾನಗಳಲ್ಲಿಯೂ ಗೋದಾನವು ಶ್ರೇಷ್ಠವಾದುದು. ಗೋವುಗಳು ಪವಿತ್ರವಾದವುಗಳು ಮತ್ತು ಶ್ರೇಷ್ಠವಾದವುಗಳು. ಆದ್ದರಿಂದ ಗೋದಾನವು ಪರಮ ಪವಿತ್ರವಾದುದು.
ಪುಷ್ಟ್ಯರ್ಥಮೇತಾಃ ಸೇವೇತ ಶಾಂತ್ಯರ್ಥಮಪಿ ಚೈವ ಹ |
ಪಯೋ ದಧಿ ಘೃತಂ ಯಾಸಾಂ ಸರ್ವಪಾಪಪ್ರಮೋಚನಮ್ ||4||
ಪೌಷ್ಟಿಕಕರ್ಮಗಳಿಗಾಗಿ ಮತ್ತು ಶಾಂತಿಕರ್ಮಗಳಿಗಾಗಿ ಗೋವುಗಳನ್ನು ಸೇವಿಸಬೇಕು. ಅವುಗಳ ಕ್ಷೀರ-ದಧಿ-ಘೃತಗಳು ಎಲ್ಲ ಪಾಪಗಳನ್ನೂ ಪರಿಹರಿಸುತ್ತವೆ.
ಗಾವಸ್ತೇಜಃ ಪರಂ ಪ್ರೋಕ್ತಮಿಹ ಲೋಕೇ ಪರತ್ರ ಚ |
ನ ಗೋಭ್ಯಃ ಪರಮಂ ಕಿಂಚಿತ್ ಪವಿತ್ರಂ ಪುರುಷರ್ಷಭ ||5||
ಗೋವುಗಳು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಶ್ರೇಷ್ಠವಾದ ತೇಜಸ್ಸೆಂದು ಹೇಳಲ್ಪಡುತ್ತವೆ. ಎಲೈ ಪುರುಷಶ್ರೇಷ್ಠನೇ, ಗೋವುಗಳಿಗಿಂತಲೂ ಪವಿತ್ರವಾದುದು ಇನ್ನೊಂದಿಲ್ಲ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪಿತಾಮಹಸ್ಯ ಸಂವಾದಮಿಂದ್ರಸ್ಯ ಚ ಯುಧಿಷ್ಠಿರ ||6||
ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿಯೂ ಸಹ ಬ್ರಹ್ಮದೇವರಿಗೂ ಮತ್ತು ಇಂದ್ರನಿಗೂ ನಡೆದ ಸಂವಾದ ರೂಪವಾದ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಪರಾಭೂತೇಷು ದೈತ್ಯೇಷು ಶಕ್ರೇ ತ್ರಿಭುವನೇಶ್ವರೇ |
ಪ್ರಜಾಃ ಸಮುದಿತಾಃ ಸರ್ವಾಃ ಸತ್ಯಧರ್ಮಪರಾಯಣಾಃ ||7||
ಅಥರ್ಷಯಃ ಸಗಂಧರ್ವಾಃ ಕಿನ್ನರೋರಗರಾಕ್ಷಸಾಃ |
ದೇವಾಸುರಸುಪರ್ಣಾಶ್ಚ ಪ್ರಜಾನಾಂ ಪತಯಸ್ತಥಾ |
ಪರ್ಯುಪಾಸಂತ ಕೌರವ್ಯ ಕದಾಚಿದ್ ವೈ ಪಿತಾಮಹಮ್ ||8||
ದೈತ್ಯರು ಪರಾಜಿತರಾಗಿ ಇಂದ್ರನು ಮೂರುಲೋಕಗಳಿಗೆ ಅಧಿಪತಿಯಾದ ಮೇಲೆ ಸತ್ಯಧರ್ಮಪರಾಯಣರಾದ ಪ್ರಜೆಗಳೆಲ್ಲರೂ ಒಟ್ಟು ಸೇರಿದರು. ಎಲೈ ಕೌರವ್ಯನೇ, ಆಗ ಋಷಿಗಳು, ಗಂಧರ್ವರು, ಕಿನ್ನರೋರಗ-ರಾಕ್ಷಸರು, ದೇವಾಸುರ-ಸುಪರ್ಣರು, ಪ್ರಜಾಪತಿಗಳು, ಬ್ರಹ್ಮದೇವರನ್ನು ಓಲೈಸಿದರು.

ನಾರದಃ ಪರ್ವತಶ್ಚೈವ ವಿಶ್ವಾವಸುಹಹಾಹುಹೂ |
ದಿವ್ಯತಾನೇಷು ಗಾಯಂತಃ ಪರ್ಯುಪಾಸಂತ ತಂ ಪ್ರಭುಮ್ ॥9॥
ನಾರದ, ಪರ್ವತ, ವಿಶ್ವಾವಸು, ಹಹಾ-ಹುಹೂ ಇವರು ದಿವ್ಯವಾದ ಗಾನ ಮಾಡುತ್ತಾ ಪ್ರಭುವಾದ ಬ್ರಹ್ಮದೇವರನ್ನು ಸೇವಿಸಿದರು.
ತತ್ರ ದಿವ್ಯಾನಿ ಪುಷ್ಪಾಣಿ ಪ್ರಾವಹತ್ ಪವನಸ್ತಥಾ |
ಆಜಹ್ರುರ್ಋತವಶ್ಚಾಪಿ ಸುಗಂಧೀನಿ ಪೃಥಕ್ಪೃಥಕ್ ॥10॥
ಅಲ್ಲಿಗೆ ವಾಯುವು ದಿವ್ಯಪುಷ್ಪಗಳನ್ನು ಹಾರಿಸಿಕೊಂಡು ಬಂದನು. ಋತುಗಳೂ ಸಹ ಬೇರೆ ಬೇರೆಯಾಗಿ ಸುಗಂಧಯುಕ್ತ ಪುಷ್ಪಗಳನ್ನು ತಂದವು.
ತಸ್ಮಿನ್ ದೇವಸಮಾವಾಯೇ ಸರ್ವಭೂತಸಮಾಗಮೇ |
ದಿವ್ಯವಾದಿತ್ರಸಂಘುಷ್ಟೇ ದಿವ್ಯಸ್ತ್ರೀಚಾರಣಾವೃತೇ |
ಇಂದ್ರಃ ಪಪ್ರಚ್ಛ ದೇವೇಶಮಭಿವಾದ್ಯ ಪ್ರಣಮ್ಯ ಚ ॥11॥
ದೇವಸಮೂಹವೂ, ಸರ್ವಭೂತಸಮೂಹವೂ ಇದ್ದ ದಿವ್ಯವಾದ್ಯ ಸಂಗೀತಗಳಿಂದ ಕೂಡಿದ, ದಿವ್ಯಸ್ತ್ರೀ-ಚಾರಣರಿಂದ ಕೂಡಿದ ಆ ಸಭೆಯಲ್ಲಿ ದೇವೇಶನಾದ ಇಂದ್ರನು ಬ್ರಹ್ಮದೇವರಿಗೆ ನಮಸ್ಕರಿಸಿ ಪ್ರಶ್ನೆಯನ್ನು ಮಾಡಿದನು.
ದೇವಾನಾಂ ಭಗವನ್ ಕಸ್ಮಾಲ್ಲೋಕೇಶಾನಾಂ ಪಿತಾಮಹ |
ಉಪರಿಷ್ಟಾದ್ ಗವಾಂ ಲೋಕ ಏತದಿಚ್ಛಾಮಿ ವೇದಿತುಮ್ ॥12॥
ಎಲೈ ಪಿತಾಮಹನೇ, ಪೂಜ್ಯನೇ, ಗೋಲೋಕವು ಯಾವ ಕಾರಣದಿಂದ ಲೋಕೇಶ್ವರರಾದ ದೇವತೆಗಳ ಲೋಕದ ಮೇಲೆ ಇದೆ? ಇದನ್ನು ತಿಳಿಯಲು ಬಯಸುತ್ತೇನೆ.
ಕಿಂ ತಪೋ ಬ್ರಹ್ಮಚರ್ಯಂ ವಾ ಗೋಭಿಃ ಕೃತಮಿಹೇಶ್ವರ |
ದೇವಾನಾಮುಪರಿಷ್ಟಾದ್ ಯದ್ ವಸಂತ್ಯರಜಸಃ ಸುಖಮ್ ॥13॥
ಎಲೈ ಈಶ್ವರನೇ, ದೇವತೆಗಳಿಗಿಂತ ಮೇಲ್ಭಾಗದಲ್ಲಿ ಯಾವ ದೋಷವೂ ಇಲ್ಲದೆ ಸುಖವಾಗಿ ವಾಸಿಸುವುದಕ್ಕೆ ಗೋವುಗಳು ಯಾವ ತಪಸ್ಸನ್ನು ಅಥವಾ ಬ್ರಹ್ಮಚರ್ಯವನ್ನು ಮಾಡಿದವು?
ತತಃ ಪ್ರೋವಾಚ ತಂ ಬ್ರಹ್ಮಾ ಶಕ್ರಂ ಬಲನಿಸೂದನಮ್ |
ಅವಜ್ಞಾತಾಸ್ತ್ವಯಾ ನಿತ್ಯಂ ಗಾವೋ ಬಲನಿಸೂದನ ॥14॥
ತೇನ ತ್ವಮಾಸಾಂ ಮಾಹಾತ್ಮ್ಯಂ ನ ವೇತ್ಥ ಶೃಣು ತತ್ಪ್ರಭೋ |
ಗವಾಂ ಪ್ರಭಾವಂ ಪರಮಂ ಮಾಹಾತ್ಮ್ಯಂ ಚ ಸುರರ್ಷಭ ॥15॥
ಆಗ ಬ್ರಹ್ಮದೇವರು ಬಲನಿಸೂದನನಾದ ಇಂದ್ರನನ್ನು ಕುರಿತು ಮಾತನಾಡಿದರು. ಎಲೈ ಬಲನಿಸೂದನನೇ, ನೀನು ಯಾವಾಗಲೂ ಗೋವುಗಳನ್ನು ತಿರಸ್ಕರಿಸಿದ್ದೀಯೆ. ಆದ್ದರಿಂದ ಗೋವುಗಳ ಮಾಹಾತ್ಮ್ಯೆಯನ್ನು ತಿಳಿದಿಲ್ಲ. ಎಲೈ ಪ್ರಭುವೇ, ಸುರಪತಿಯೇ, ಗೋವುಗಳ ಸಾಮರ್ಥ್ಯವನ್ನೂ ಮತ್ತು ಶ್ರೇಷ್ಠವಾದ ಮಾಹಾತ್ಮ್ಯೆಯನ್ನೂ ಕೇಳು.
ಯಜ್ಞಾಂಗಂ ಕಥಿತಾ ಗಾವೋ ಯಜ್ಞ ಏವ ಚ ವಾಸವ |
ಏತಾಭಿಶ್ಚಾಪ್ಯತೇ ಯಜ್ಞೋ ನ ಪ್ರವರ್ತೇತ್ ಕಥಂಚನ ॥16॥
ಎಲೈ ವಾಸವನೇ, ಗೋವುಗಳು ಯಜ್ಞಾಂಗವೆಂದು ಹೇಳಲ್ಪಡುತ್ತವೆ. ಅವೇ ಯಜ್ಞಗಳೂ ಸಹ. ಗೋವುಗಳಿಲ್ಲದೆ ಯಾವ ಯಜ್ಞವೂ ಯಾವ ರೀತಿಯಿಂದಲೂ ನಡೆಯುವುದಿಲ್ಲ.
ಧಾರಯಂತಿ ಪ್ರಜಾಶ್ಚೈವ ಪಯಸಾ ಹವಿಷಾ ತಥಾ |
ಏತಾಸಾಂ ತನಯಾಶ್ಚಾಪಿ ಕೃಷಿಯೋಗಮುಪಾಸತೇ ॥17॥
ಹಾಗೆಯೇ ತಮ್ಮ ಹಾಲಿನಿಂದಲೂ ಮತ್ತು ಹವಿಸ್ಸಿನಿಂದಲೂ ಅವು ಪ್ರಜೆಗಳನ್ನು ಪೋಷಿಸುತ್ತವೆ. ಇವುಗಳ ಪುತ್ರರೂ ಸಹ ಕೃಷಿಯೋಗದಲ್ಲಿ ತೊಡಗಿರುತ್ತಾರೆ.
ಜನಯಂತಿ ಚ ಧಾನ್ಯಾನಿ ಬೀಜಾನಿ ವಿವಿಧಾನಿ ಚ |
ತತೋ ಯಜ್ಞಾಃ ಪ್ರವರ್ತಂತೇ ಹವ್ಯಂ ಕವ್ಯಂ ಚ ಸರ್ವಶಃ ॥18॥
ಅವರು ಧಾನ್ಯಗಳನ್ನೂ, ವಿವಿಧ ಬೀಜಗಳನ್ನೂ ಉತ್ಪಾದಿಸುತ್ತಾರೆ. ಅವುಗಳಿಂದ ಯಜ್ಞಗಳೂ, ಹವ್ಯಕವ್ಯಗಳೂ ಎಲ್ಲ ಕಡೆಗಳಲ್ಲಿಯೂ ನಡೆಯುತ್ತವೆ.
ಪಯೋ ದಧಿ ಘೃತಂ ಚೈವ ಪುಣ್ಯಾಶ್ಚೈತಾಃ ಸುರಾಧಿಪ |
ವಹಂತಿ ವಿವಿಧಾನ್ ಭಾರಾನ್ ಕ್ಷುತ್ತೃಷ್ಣಾಪರಿಪೀಡಿತಾಃ ॥19॥
ಎಲೈ ಸುರಾಧಿಪನೇ, ಗೋವುಗಳು ಪಯೋ-ದಧಿ-ಘೃತಗಳನ್ನೂ ಕೊಡುತ್ತವೆ. ಅವು ಪವಿತ್ರವಾದವುಗಳು. ಗೋವುಗಳ ಪುತ್ರರು ಹಸಿವು-ನೀರಡಿಕೆಯಿಂದ ಪೀಡಿತರಾಗಿ ವಿವಿಧವಾದ ಭಾರವನ್ನು ಹೊರುತ್ತಾರೆ.
ಮುನೀಂಶ್ಚ ಧಾರಯಂತೀಹ ಪ್ರಜಾಶ್ಚೈವಾಪಿ ಕರ್ಮಣಾ |
ವಾಸವಾಕೂಟವಾಹಿನ್ಯಃ ಕರ್ಮಣಾ ಸುಕೃತೇನ ಚ |
ಉಪರಿಷ್ಟಾತ್ ತತೋಽಸ್ಮಾಕಂ ವಸಂತ್ಯೇತಾಃ ಸದೈವ ಹಿ ॥20॥
ಗೋವುಗಳು ಋಷಿಗಳನ್ನೂ ಮತ್ತು ಪ್ರಜೆಗಳನ್ನೂ ಧರಿಸಿ ಪೋಷಿಸುತ್ತವೆ. ಎಲೈ ಇಂದ್ರನೇ, ಮೋಸವಿಲ್ಲದೆ ಭಾರಗಳನ್ನು ಎಳೆಯುತ್ತವೆ. ತಮ್ಮ ಕರ್ಮದಿಂದಲೂ ಮತ್ತು ಪುಣ್ಯದಿಂದಲೂ ಗೋವುಗಳು ನಮ್ಮ ಲೋಕಕ್ಕಿಂತ ಮೇಲ್ಭಾಗದಲ್ಲಿ ವಾಸ ಮಾಡುತ್ತವೆ.
ಏತತ್ ತೇ ಕಾರಣಂ ಶಕ್ರ ನಿವಾಸಕೃತಮದ್ಯ ವೈ |
ಗವಾಂ ದೇವೋಪರಿಷ್ಟಾದ್ಧಿ ಸಮಾಖ್ಯಾತಂ ಶತಕ್ರತೋ ॥21॥

ಎಲೈ ಶತಕ್ರತುವೇ, ನೀನು ಕೇಳಿದ ನಿವಾಸದ ಪ್ರಶ್ನೆಗೆ ಇದು ಉತ್ತರ. ಆದ್ದರಿಂದ ಎಲೈ ಶಕ್ರನೇ, ಗೋವುಗಳ ಸ್ಥಾನವು ದೇವತೆಗಳ ಸ್ಥಾನದ ಮೇಲ್ಭಾಗದಲ್ಲಿದೆ ಎಂದು ಹೇಳಲ್ಪಡುತ್ತದೆ.
ಏತಾ ಹಿ ವರದತ್ತಾಶ್ಚ ವರದಾಶ್ಚೈವ ವಾಸವ |
ಸೌರಭ್ಯಃ ಪುಣ್ಯಕರ್ಮಿಣ್ಯಃ ಪಾವನಾಃ ಶುಭಲಕ್ಷಣಾಃ ॥22॥
ಎಲೈ ಇಂದ್ರನೇ, ಇವು ವರಗಳನ್ನು ಸ್ವೀಕರಿಸಿವೆ ಮತ್ತು ವರಗಳನ್ನು ಕೊಡುತ್ತವೆ. ಗೋವುಗಳು ಪುಣ್ಯಕರ್ಮಗಳನ್ನು ಮಾಡುತ್ತವೆ, ಪವಿತ್ರವಾಗಿರುತ್ತವೆ ಮತ್ತು ಶುಭಲಕ್ಷಣಗಳನ್ನು ಹೊಂದಿರುತ್ತವೆ.
ಯದರ್ಥಂ ಗಾ ಗತಾಶ್ಚೈವಂ ಸೌರಭ್ಯಃ ಸುರಸತ್ತಮ |
ತಚ್ಚ ಮೇ ಶೃಣು ಕಾತ್ಸ್ನ್ಯೇನ ವದತೋ ಬಲಸೂದನ ॥23॥
ಎಲೈ ಸುರಶ್ರೇಷ್ಠನೇ, ಬಲಸೂದನನೇ, ಗೋವುಗಳು ಯಾವ ಕಾರಣದಿಂದ ಉನ್ನತ ಸ್ಥಿತಿಯನ್ನು ಪಡೆದವು ಎಂಬುದನ್ನು ಸಮಗ್ರವಾಗಿ ನನ್ನಿಂದ ಕೇಳು.
ಪುರಾ ದೇವಯುಗೇ ತಾತ ದೈತ್ಯೇಂದ್ರೇಷು ಮಹಾತ್ಮಸು |
ತ್ರೀಲ್ಲೋಕಾನನುಶಾಸತ್ಸು ವಿಷ್ಣೌ ಗರ್ಭತ್ವಮಾಗತೇ ॥24॥
ಅದಿತ್ಯಾಸ್ತಪ್ಯಮಾನಾಯಾಸ್ತಪೋ ಘೋರಂ ಸುದುಶ್ಚರಮ್ |
ಪುತ್ರಾರ್ಥಮಮರಶ್ರೇಷ್ಠ ಪಾದೇನೈಕೇನ ನಿತ್ಯದಾ ॥25॥
ತಾಂ ತು ದೃಷ್ಟ್ವಾ ಮಹಾದೇವೀಂ ತಪ್ಯಮಾನಾಂ ಮಹತ್ತಪಃ |
ದಕ್ಷಸ್ಯ ದುಹಿತಾ ದೇವೀ ಸುರಭಿರ್ನಾಮ ನಾಮತಃ ॥26॥
ಅತಪ್ಯತ ತಪೋ ಘೋರಂ ಹೃಷ್ಟಾ ಧರ್ಮಪರಾಯಣಾ |
ಕೈಲಾಸಶಿಖರೇ ರಮ್ಯೇ ದೇವಗಂಧರ್ವಸೇವಿತೇ ॥27॥
ಪ್ರೀತಿಪಾತ್ರನೇ, ಹಿಂದೆ ದೇವಯುಗದಲ್ಲಿ ಮಹಾತ್ಮರಾದ ದೈತ್ಯೇಂದ್ರರು ಮೂರು ಲೋಕಗಳನ್ನೂ ಆಳುತ್ತಿರಲು ವಿಷ್ಣುವು ಗೂಢನಾಗಿರಲು, ಅದಿತಿಯು ತನ್ನ ಪುತ್ರರ ಸಲುವಾಗಿ ಒಂದು ಪಾದದ ಮೇಲೆ ನಿಂತು ಘೋರವೂ, ಸುದುಶ್ಚರವೂ ಆದ ತಪಸ್ಸನ್ನು ಮಾಡುತ್ತಿರಲು ಆ ಮಹಾದೇವಿಯು ತಪಸ್ಸನ್ನು ಮಾಡುತ್ತಿರುವುದನ್ನು ನೋಡಿ ದಕ್ಷನ ಪುತ್ರಿಯಾದ ಧರ್ಮಪರಾಯಣೆಯಾದ ಸುರಭಿಯೂ ಮನೋಹರವಾದ, ದೇವಗಂಧರ್ವಸೇವಿತವಾದ ಕೈಲಾಸ ಶಿಖರದಲ್ಲಿ ಘೋರವಾದ ತಪಸ್ಸನ್ನು ಮಾಡಿದಳು.
ವ್ಯತಿಷ್ಠದೇಕಪಾದೇನ ಪರಮಂ ಯೋಗಮಾಸ್ಥಿತಾ |
ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ॥28॥
ಶ್ರೇಷ್ಠವಾದ ಯೋಗವನ್ನು ಅವಲಂಬಿಸಿ, ಒಂದು ಪಾದದ ಮೇಲೆ ನಿಂತು ಹತ್ತುಸಾವಿರ ವರ್ಷಗಳು ಮತ್ತು ಹತ್ತು ನೂರು ವರ್ಷಗಳ ಕಾಲ ತಪಸ್ಸನ್ನು ಮಾಡಿದಳು.
ಸಂತಪ್ತಾಸ್ತಪಸಾ ತಸ್ಯಾ ದೇವಾಃ ಸರ್ಷಿಮಹೋರಗಾಃ |
ತತ್ರ ಗತ್ವಾ ಮಯಾ ಸಾರ್ಧಂ ಪರ್ಯುಪಾಸಂತ ತಾಂ ಶುಭಾಮ್ ॥
ಅವಳ ತಪಸ್ಸಿನಿಂದ ಸಂತಪ್ತರಾದ ದೇವತೆಗಳು, ಋಷಿಗಳು ಮತ್ತು ಮಹೋರಗಗಳು ನನ್ನ ಜೊತೆಯಲ್ಲಿ ಅವಳ ಬಳಿಗೆ ಹೋಗಿ ಶುಭಳಾದ ಅವಳನ್ನು ಉಪಾಸನೆ ಮಾಡಿದರು.
ಅಥಾಹಮಬ್ರುವಂ ತತ್ರ ದೇವೀಂ ತಾಂ ತಪಸಾಽನ್ವಿತಾಮ್ |
ಕಿಮರ್ಥಂ ತಪ್ಯತೇ ದೇವಿ ತಪೋ ಘೋರಮನಿಂದಿತೇ ॥30॥
ಪ್ರೀತಸ್ತೇಽಹಂ ಮಹಾಭಾಗೇ ತಪಸಾಽನೇನ ಶೋಭನೇ |
ವರಯಸ್ವ ವರಂ ದೇವಿ ದಾತಾಸ್ಮೀತಿ ಪುರಂದರ ॥31॥
ಎಲೈ ಪುರಂದರನೇ, ಆಗ ನಾನು ತಪೋನಿಷ್ಠಳಾದ ಆ ದೇವಿಯನ್ನು ಕುರಿತು- `ದೇವಿಯೇ, ಅನಿಂದಿತೆಯೇ, ಏಕೆ ಘೋರವಾದ ತಪಸ್ಸನ್ನು ಆಚರಿಸುತ್ತಿದ್ದೀಯೆ? ಮಹಾನುಭಾವಳೇ, ನಾನು ನಿನ್ನ ತಪಸ್ಸಿನಿಂದ ಪ್ರಸನ್ನನಾಗಿದ್ದೇನೆ. ಎಲೌ ಶೋಭನೆಯೇ, ದೇವಿಯೇ, ವರವನ್ನು ಕೇಳು. ನಾನು ಕೊಡುವೆನು' ಎಂದು ಹೇಳಿದೆನು.
ಸುರಭೀ
ವರೇಣ ಭಗವನ್ ಮಹ್ಯಂ ಕೃತಂ ಲೋಕಪಿತಾಮಹ |
ಏಷ ಏವ ವರೋ ಮೇಽದ್ಯ ಯತ್ಪ್ರೀತೋಽಸಿ ಮಮಾನಘ ॥32॥
ಸುರಭೀ ಪೂಜ್ಯನೇ, ಲೋಕಪಿತಾಮಹನೇ, ನನಗೆ ವರವು ಬೇಕಾಗಿಲ್ಲ. ಅನಘನೇ, ನೀನು ಈ ದಿನ ಪ್ರಸನ್ನನಾಗಿರುವುದೇ ನನಗೆ ದೊಡ್ಡ ವರ.
ಬ್ರಹ್ಮಾ
ತಾಮೇವಂ ಬ್ರುವತೀಂ ದೇವೀಂ ಸುರಭೀಂ ತ್ರಿದಶೇಶ್ವರ |
ಪ್ರತ್ಯಬ್ರುವಂ ಯದ್ ದೇವೇಂದ್ರ ತನ್ನಿಬೋಧ ಶಚೀಪತೇ ॥33॥
ಬ್ರಹ್ಮಾ ಎಲೈ ತ್ರಿದಶೇಶ್ವರನೇ, ಶಚೀಪತಿಯೇ, ಹೀಗೆ ಹೇಳುತ್ತಿದ್ದ ದೇವಿಯಾದ ಸುರಭಿಯನ್ನು ಕುರಿತು ನಾನು ಪುನಃ ಮಾತನಾಡಿದೆನು. ಎಲೈ ದೇವೇಂದ್ರನೇ, ಅದನ್ನು ಕೇಳು.
ಅಲೋಭಕಾಮ್ಯಯಾ ದೇವಿ ತಪಸಾ ಚ ಶುಭೇನ ತೇ |
ಪ್ರಸನ್ನೋಽಹಂ ವರಂ ತಸ್ಮಾದಮರತ್ವಂ ದದಾನಿ ತೇ ॥34॥
ಎಲೌ ದೇವಿಯೇ, ಯಾವ ಕಾಮವೂ ಅಥವಾ ಲೋಭವೂ ಇಲ್ಲದೆ ನೀನು ಮಾಡಿದ ಶುಭವಾದ ತಪಸ್ಸಿನಿಂದ ನಾನು

ಪ್ರಸನ್ನನಾಗಿದ್ದೇನೆ. ಆದ್ದರಿಂದ ನಿನಗೆ ಅಮರತ್ವವನ್ನು ವರವಾಗಿ ಕೊಡುವೆನು.
ತ್ರಯಾಣಾಮಪಿ ಲೋಕಾನಾಮುಪರಿಷ್ಟಾನ್ನಿವತ್ಸ್ಯಸಿ |
ಮತ್ಪ್ರಸಾದಾಚ್ಚ ವಿಖ್ಯಾತೋ ಗೋಲೋಕಃ ಸ ಭವಿಷ್ಯತಿ ॥35॥
ನೀನು ಮೂರುಲೋಕಗಳಿಗಿಂತಲೂ ಮೇಲ್ಭಾಗದಲ್ಲಿರುವ ಲೋಕದಲ್ಲಿ ವಾಸಿಸುವಿ. ನನ್ನ ಅನುಗ್ರಹದಿಂದ ಅದು ಗೋಲೋಕವೆಂದು ಪ್ರಸಿದ್ಧವಾಗುತ್ತದೆ.
ಮಾನುಷೇಷು ಚ ಕುರ್ವಾಣಾಃ ಪ್ರಜಾಃ ಕರ್ಮ ಸುತಾಸ್ತವ |
ನಿವತ್ಸ್ಯಂತಿ ಮಹಾಭಾಗೇ ಸರ್ವಾ ದುಹಿತರಶ್ಚ ತೇ ॥36॥
ಎಲೌ ಮಹಾನುಭಾವಳೇ, ಮನುಷ್ಯಲೋಕದಲ್ಲಿ ಮನುಷ್ಯರಿಗಾಗಿ ದುಡಿಯುವ ನಿನ್ನ ಪುತ್ರರು ಮತ್ತು ಪುತ್ರಿಯರು ಆ ಲೋಕದಲಿ ವಾಸಮಾಡುವರು.
ಮನಸಾ ಚಿಂತಿತಾ ಭೋಗಾಸ್ತ್ವಯಾ ವೈ ದಿವ್ಯಮಾನುಷಾಃ |
ಯಚ್ಚ ಸ್ವರ್ಗಸುಖಂ ದೇವಿ ತತ್ ತೇ ಸಂಪತ್ಸ್ಯತೇ ಶುಭೇ ॥37॥
ಎಲೌ ದೇವಿಯೇ, ಶುಭಳಾದವಳೇ, ನೀನು ಮನಸ್ಸಿನಲ್ಲಿ ಚಿಂತಿಸಿದ ದೇವಲೋಕದ ಮತ್ತು ಮನುಷ್ಯಲೋಕದ ಭೋಗಗಳೆಲ್ಲವೂ ಮತ್ತು ಸ್ವರ್ಗಸುಖವೂ ನಿನಗೆ ಉಂಟಾಗುವುದು (ಎಂದು ಹೇಳಿದೆನು).
ತಸ್ಯಾ ಲೋಕಾಃ ಸಹಸ್ರಾಕ್ಷ ಸರ್ವಕಾಮಸಮನ್ವಿತಾಃ |
ನ ತತ್ರ ಕ್ರಮತೇ ಮೃತ್ಯುರ್ನ ಜರಾ ನ ಚ ಪಾವಕಃ |
ನ ದೈನ್ಯಂ ನಾಶುಭಂ ಕಿಂಚಿದ್ ವಿದ್ಯತೇ ತತ್ರ ವಾಸವ ॥38॥
ಎಲೈ ಇಂದ್ರನೇ, ಗೋವುಗಳ ಲೋಕಗಳು ಸರ್ವಕಾಮಸಮನ್ವಿತವಾಗಿವೆ. ಅಲ್ಲಿ ಮೃತ್ಯುವಾಗಲೀ, ಜರೆಯಾಗಲೀ, ಅಗ್ನಿಭಯವಾಗಲೀ ಇಲ್ಲ. ಎಲೈ ವಾಸವನೇ, ಅಲ್ಲಿ ಸ್ವಲ್ಪವಾದರೂ ದೈನ್ಯವಾಗಲೀ, ಅಶುಭವಾಗಲೀ ಇಲ್ಲ.
ತತ್ರ ದಿವ್ಯಾನ್ಯರಣ್ಯಾನಿ ದಿವ್ಯಾನಿ ಭವನಾನಿ ಚ |
ವಿಮಾನಾನಿ ಚ ಯುಕ್ತಾನಿ ಕಾಮಗಾನಿ ಚ ವಾಸವ ॥39॥
ಎಲೈ ವಾಸವನೇ, ದಿವ್ಯವಾದ ಅರಣ್ಯಗಳು ಮತ್ತು ದಿವ್ಯವಾದ ಭವನಗಳು ಇವೆ. ಇಚ್ಛೆ ಬಂದ ಕಡೆಗೆ ಹೋಗುವ ಸಿದ್ಧವಾದ ವಿಮಾನಗಳು ಇವೆ.
ವ್ರತೈಶ್ಚ ವಿವಿಧೈಃ ಪುಣ್ಯೈಸ್ತಥಾ ತೀರ್ಥಾನುಸೇವನಾತ್ |
ತಪಸಾ ಮಹತಾ ಚೈವ ಸುಕೃತೇನ ಚ ಕರ್ಮಣಾ |
ಶಕ್ಯಃ ಸಮಾಸಾದಯಿತುಂ ಗೋಲೋಕಃ ಪುಷ್ಕರೇಕ್ಷಣ ॥40॥
ಎಲೈ ಪುಷ್ಕರೇಕ್ಷಣನೇ, ಪವಿತ್ರವಾದ ನಾನಾವಿಧವಾದ ವ್ರತಗಳಿಂದಲೂ, ತೀರ್ಥಯಾತ್ರೆಯಿಂದಲೂ, ದೊಡ್ಡ ತಪಸ್ಸಿನಿಂದಲೂ ಮತ್ತು ಶುಭಕರ್ಮಗಳಿಂದಲೂ ಗೋಲೋಕಕ್ಕೆ ಹೋಗಲು ಸಾಧ್ಯ.
ಏತತ್ ತೇ ಸರ್ವಮಾಖ್ಯಾತಂ ಮಯಾ ಶಕ್ರಾನುಪೃಚ್ಛತೇ |
ನ ತೇ ಪರಿಭವಃ ಕಾರ್ಯೋ ಗವಾಮರಿನಿಷೂದನ ॥41॥
ಎಲೈ ಶಕ್ರನೇ, ನಿನ್ನ ಪ್ರಶ್ನೆಗೆ ಉತ್ತರವಾಗಿ ನಾನು ಎಲ್ಲವನ್ನೂ ಹೇಳಿದ್ದೇನೆ. ಎಲೈ ಶತ್ರುನಿಷೂದನನೇ, ನೀನು ಗೋವುಗಳನ್ನು ಅವಮಾನಗೊಳಿಸಬಾರದು.
ಭೀಷ್ಮಃ
ಏತಚ್ಛ್ರುತ್ವಾ ಸಹಸ್ರಾಕ್ಷಃ ಪೂಜಯಾಮಾಸ ನಿತ್ಯದಾ |
ಗಾಶ್ಚಕ್ರೇ ಬಹುಮಾನಂ ಚ ತಾಸು ನಿತ್ಯಂ ಯುಧಿಷ್ಠಿರ ॥42॥
ಭೀಷ್ಮ ಇದನ್ನು ಕೇಳಿ ಸಹಸ್ರಾಕ್ಷನಾದ ಇಂದ್ರನು ನಿತ್ಯವೂ ಗೋವುಗಳನ್ನು ಪೂಜಿಸಿದನು. ಎಲೈ ಯುಧಿಷ್ಠಿರನೇ, ಗೋವುಗಳಲ್ಲಿ ನಿತ್ಯವೂ ಬಹುಮಾನವನ್ನು ತಾಳಿದನು.
ಏತತ್ತೇ ಸರ್ವಮಾಖ್ಯಾತಂ ಪಾವನಂ ಚ ಮಹಾದ್ಯುತೇ |
ಪವಿತ್ರಂ ಪರಮಂ ಚಾಪಿ ಗವಾಂ ಮಾಹಾತ್ಮ್ಯಮುತ್ತಮಮ್ |
ಕೀರ್ತಿತಂ ಪುರುಷವ್ಯಾಘ್ರ ಸರ್ವಪಾಪವಿನಾಶನಮ್ ॥43॥
ಎಲೈ ಮಹಾದ್ಯುತಿಯೇ, ಪವಿತ್ರವಾದ ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಗೋವುಗಳ ಶ್ರೇಷ್ಠವಾದ ಮಾಹಾತ್ಮ್ಯವು ಪರಮಪವಿತ್ರವಾದುದು. ಎಲೈ ಪುರುಷವ್ಯಾಘ್ರನೇ, ಇದನ್ನು ಕೀರ್ತನೆ ಮಾಡಿದರೆ ಸರ್ವಪಾಪಗಳೂ ಪರಿಹಾರವನ್ನು ಹೊಂದುತ್ತವೆ.
ಯ ಇದಂ ಕಥಯೇನ್ನಿತ್ಯಂ ಬ್ರಾಹ್ಮಣೇಭ್ಯಃ ಸಮಾಹಿತಃ |
ಹವ್ಯಕವ್ಯೇಷು ಯಜ್ಞೇಷು ಪಿತೃಕಾರ್ಯೇಷು ಚೈವ ಹ |
ಸಾರ್ವಕಾಮಿಕಮಕ್ಷಯ್ಯಂ ಪಿತೄಂಸ್ತಸ್ಯೋಪತಿಷ್ಠತಿ ॥44॥
ಯಾವನು ಸಮಾಹಿತರಾಗಿ ಹವ್ಯ-ಕವ್ಯಗಳಲ್ಲಿಯೂ, ಯಜ್ಞಗಳಲ್ಲಿಯೂ, ಪಿತೃಕಾರ್ಯದಲ್ಲಿಯೂ ಇದನ್ನು ಯಾವಾಗಲೂ ಬ್ರಾಹ್ಮಣರಿಗೆ ಶ್ರವಣ ಮಾಡಿಸುತ್ತಾನೆಯೋ ಅವನು ಮಾಡಿದ ಕರ್ಮಗಳೆಲ್ಲವೂ ಎಲ್ಲ ಕಾಮ್ಯಗಳನ್ನೂ ಕೊಡುತ್ತವೆ ಮತ್ತು ಅವನ ಪಿತೃಗಳನ್ನು ತಲುಪುತ್ತದೆ.
ಗೋಷು ಭಕ್ತಶ್ಚ ಲಭತೇ ಯದ್ಯದಿಚ್ಛತಿ ಮಾನವಃ |
ಸ್ತ್ರಿಯೋಽಪಿ ಭಕ್ತಾ ಯಾ ಗೋಷು ತಾಶ್ಚ ಕಾಮಾನವಾಪ್ನುಯುಃ ॥45॥
ಗೋವುಗಳಲ್ಲಿ ಭಕ್ತಿಯುಳ್ಳವನು ಬಯಸಿದುದೆಲ್ಲವನ್ನೂ ಪಡೆಯುತ್ತಾನೆ. ಗೋವುಗಳಲ್ಲಿ ಭಕ್ತಿಯುಳ್ಳ ಸ್ತ್ರೀಯರೂ ಸಹ ತಾವು

ಬಯಸಿದುದನ್ನು ಪಡೆಯುತ್ತಾರೆ.
ಪುತ್ರಾರ್ಥೀ ಲಭತೇ ಪುತ್ರಂ ಕನ್ಯಾ ಪತಿಮವಾಪ್ನುಯಾತ್ |
ಧನಾರ್ಥೀ ಲಭತೇ ವಿತ್ತಂ ಧರ್ಮಾರ್ಥೀ ಧರ್ಮಮಾಪ್ನುಯಾತ್ ||46||
ಪುತ್ರನನ್ನು ಅಪೇಕ್ಷಿಸುವವನು ಪುತ್ರನನ್ನು ಪಡೆಯುತ್ತಾನೆ. ಕನ್ಯೆಯು ಪತಿಯನ್ನು ಪಡೆಯುತ್ತಾಳೆ. ಧನವನ್ನು ಬಯಸುವವನು ಧನವನ್ನು ಪಡೆಯುತ್ತಾನೆ. ಧರ್ಮವನ್ನು ಬಯಸುವವನು ಧರ್ಮವನ್ನು ಹೊಂದುತ್ತಾನೆ.
ವಿದ್ಯಾರ್ಥೀ ಪ್ರಾಪ್ನುಯಾದ್ ವಿದ್ಯಾಂ ಸುಖಾರ್ಥೀ ಪ್ರಾಪ್ನುಯಾತ್ ಸುಖಮ್|
ನ ಕಿಂಚಿದ್ ದುರ್ಲಭಂ ಚೈವ ಗವಾಂ ಭಕ್ತಸ್ಯ ಭಾರತ ||47||
ವಿದ್ಯಾರ್ಥಿಯು ವಿದ್ಯೆಯನ್ನೂ, ಸುಖಾರ್ಥಿಯು ಸುಖವನ್ನೂ ಪಡೆಯುತ್ತಾನೆ. ಎಲೈ ಭಾರತನೇ, ಗೋವುಗಳಲ್ಲಿ ಭಕ್ತಿಯುಳ್ಳವನಿಗೆ ಯಾವುದೂ ದುರ್ಲಭವಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಗೋಲೋಕಮಾಹಾತ್ಮ್ಯಕಥನಂ ನಾಮ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೈದನೆಯ ಅಧ್ಯಾಯ
ಸುವರ್ಣೋತ್ಪತ್ತಿ ಮತ್ತು ಸುವರ್ಣದಕ್ಷಿಣೆ
ಯುಧಿಷ್ಠಿರಃ
ಉಕ್ತಂ ಪಿತಾಮಹೇನೇದಂ ಗವಾಂ ದಾನಮನುತ್ತಮಮ್ |
ವಿಶೇಷೇಣ ನರೇಂದ್ರಾಣಾಮಿತಿ ಧರ್ಮಮವೇಕ್ಷತಾಮ್ ||1||
ಯುಧಿಷ್ಠಿರ ಬ್ರಹ್ಮದೇವರಿಂದ ವಿಶೇಷವಾಗಿ ಧರ್ಮಿಷ್ಠರಾದ ರಾಜರನ್ನು ಗಮನಿಸಿ ಶ್ರೇಷ್ಠವಾದ ಈ ಗೋದಾನವನ್ನು ಹೇಳಲ್ಪಟ್ಟಿದೆ.
ರಾಜ್ಯಂ ಹಿ ಸತತಂ ದುಃಖಮಾಶ್ರಮಾಶ್ಚ ಸುದುರ್ವಿದಾಃ |
ಪರಿವಾರೇಣ ವೈ ದುಃಖಂ ದುರ್ಧರಂ ಚಾಕೃತಾತ್ಮಭಿಃ |
ಭೂಯಿಷ್ಠಂ ಚ ನರೇಂದ್ರಾಣಾಂ ವಿದ್ಯತೇ ನ ಶುಭಾ ಗತಿಃ ||2||
ರಾಜ್ಯವು ಯಾವಾಗಲೂ ದುಃಖದಾಯಕವಾದುದು. ಆಶ್ರಮವನ್ನು ತಿಳಿಯುವುದು ಕಷ್ಟಸಾಧ್ಯವಾದುದು. ಪರಿವಾರದಿಂದಲೂ ದುಃಖವುಂಟಾಗುವುದು. ಅದನ್ನು ಮನೋಧೈರ್ಯವಿಲ್ಲದವರು ಧರಿಸಲು ಸಾಧ್ಯವಿಲ್ಲ. ರಾಜರಿಗೆ ಹೆಚ್ಚಾಗಿ ಶುಭಗತಿಯು ಇರುವುದಿಲ್ಲ.

ಪೂಯಂತೇ ತೇಽತ್ರ ನಿಯತಂ ಪ್ರಯಚ್ಛಂತೋ ವಸುಂಧರಾಮ್ |
ಪೂರ್ವಂ ಚ ಕಥಿತಾ ಧರ್ಮಾಸ್ತ್ವಯಾ ಮೇ ಕುರುನಂದನ ||3||
ಅವರು ಭೂದಾನವನ್ನು ಮಾಡಿದರೆ ಇಲ್ಲಿ ನಿಯಮೇನ ಶುದ್ಧರಾಗುತ್ತಾರೆ. ಎಲೈ ಕುರುನಂದನನೇ, ಹಿಂದೆ ನೀನು ನನಗೆ ಧರ್ಮಗಳನ್ನು ಹೇಳಿದ್ದೀಯೆ.
ಏವಮೇವ ಗವಾಮುಕ್ತಂ ಪ್ರದಾನಂ ತೇ ನೃಗೇಣ ಹ |
ಋಷಿಣಾ ನಾಚಿಕೇತೇನ ಪೂರ್ವಮೇವ ನಿದರ್ಶಿತಮ್ ||4||
ಹಾಗೆಯೇ ನೃಗನು ಮಾಡಿದ ಗೋದಾನವನ್ನೂ, ನಾಚಿಕೇತ ಋಷಿಯ ನಿದರ್ಶನವನ್ನೂ ಹೇಳಿದ್ದೀಯೆ.
ವೇದೋಪನಿಷದೇ ಚೈವ ಸರ್ವಕರ್ಮಸು ದಕ್ಷಿಣಾ |
ಸರ್ವಕ್ರತುಷು ಚೋದ್ದಿಷ್ಟಂ ಭೂಮಿರ್ಗಾವೋಽಥ ಕಾಂಚನಮ್ ||5||
ವೇದೋಪನಿಷತ್ತುಗಳಲ್ಲಿ ಎಲ್ಲ ಕರ್ಮಗಳಲ್ಲಿಯೂ, ಎಲ್ಲ ಭೂಮಿ, ಗೋವು ಮತ್ತು ಸುವರ್ಣವೆಂಬುದು ದಕ್ಷಿಣೆಯೆಂದು ನಿರ್ದಿಷ್ಟವಾಗಿದೆ.
ತತ್ರ ಶ್ರುತಿಸ್ತು ಪರಮಾ ಸುವರ್ಣಂ ದಕ್ಷಿಣೇತಿ ವೈ |
ಏತದಿಚ್ಛಾಮ್ಯಹಂ ಶ್ರೋತುಂ ಪಿತಾಮಹ ಯಥಾತಥಮ್ ||6||
ಈ ವಿಷಯದಲ್ಲಿ ಸುವರ್ಣವು ದಕ್ಷಿಣೆ ಎಂಬ ಶ್ರೇಷ್ಠವಾದ ಶ್ರುತಿಯು ಇದೆ. ಎಲೈ ಪಿತಾಮಹನೇ, ಇದನ್ನು ಸರಿಯಾಗಿ ಕೇಳಲು ಬಯಸುತ್ತೇನೆ.
ಕಿಂ ಸುವರ್ಣಂ ಕಥಂ ಜಾತಂ ಕಸ್ಮಿನ್ ಕಾಲೇ ಕಿಮಾತ್ಮಕಮ್ |
ಕಿಂ ದಾನಂ ಕಿಂ ಫಲಂ ಚೈವ ಕಸ್ಮಾಚ್ಚ ಪರಮುಚ್ಯತೇ ||7||
ಸುವರ್ಣ ಯಾವುದು? ಅದು ಯಾವ ಕಾಲದಲ್ಲಿ ಹೇಗೆ ಜನಿಸಿತು? ಅದರ ಸ್ವರೂಪವು ಎಂತಹದು? ಅದನ್ನು ದಾನ ಮಾಡುವ ರೀತಿ ಹೇಗೆ? ಅದರ ಫಲವೇನು? ಏತಕ್ಕೆ ಅದನ್ನು ಶ್ರೇಷ್ಠವೆಂದು ಹೇಳುತ್ತಾರೆ?
ಕಸ್ಮಾದ್ ದಾನಂ ಸುವರ್ಣಸ್ಯ ಪೂಜಯಂತಿ ಮನೀಷಿಣಃ |
ಕಸ್ಮಾಚ್ಚ ದಕ್ಷಿಣಾರ್ಥಂ ತದ್ ಯಜ್ಞಕರ್ಮಸು ಶಸ್ಯತೇ ||8||
ಜ್ಞಾನಿಗಳು ಏಕೆ ಸುವರ್ಣದಾನವನ್ನು ಪೂಜಿಸುತ್ತಾರೆ? ಯಾವ ಕಾರಣದಿಂದ ಯಜ್ಞಗಳಲ್ಲಿ ಅದು ದಕ್ಷಿಣೆ ಎಂದು ಹೇಳಲ್ಪಡುತ್ತದೆ?
ಕಸ್ಮಾಚ್ಚ ಪಾವನಂ ಶ್ರೇಷ್ಠಂ ಭೂಮೇರ್ಗೋಭ್ಯಶ್ಚ ಕಾಂಚನಮ್ |
ಪರಮಂ ದಕ್ಷಿಣಾರ್ಥೇ ಚ ತದ್ ಬ್ರವೀಹಿ ಪಿತಾಮಹ ||9||
ಎಲೈ ಪಿತಾಮಹನೇ, ಸುವರ್ಣವು ಯಾವ ಕಾರಣದಿಂದ ಭೂಮಿಗಿಂತಲೂ ಮತ್ತು ಗೋವುಗಳಿಗಿಂತಲೂ ಪವಿತ್ರ ಮತ್ತು

ಶ್ರೇಷ್ಠವಾದುದು ಮತ್ತು ದಕ್ಷಿಣೆಯ ವಿಷಯದಲ್ಲಿ ಶ್ರೇಷ್ಠವಾಯಿತು ಎಂದು ಹೇಳು.
ಭೀಷ್ಮಃ
ಶೃಣು ರಾಜನ್ನವಹಿತೋ ಬಹುಕಾರಣವಿಸ್ತರಮ್ |
ಜಾತರೂಪಸಮುತ್ಪತ್ತಿಮನುಭೂತಂ ಚ ಯನ್ಮಯಾ ॥10॥
ಭೀಷ್ಮ ಎಲೈ ರಾಜನೇ, ಅನೇಕ ಕಾರಣಗಳಿಂದ ವಿಸ್ತಾರವಾಗಿರುವ ಈ ಸುವರ್ಣದ ಉತ್ಪತ್ತಿಯ ಕಥೆಯನ್ನೂ ಮತ್ತು ನನ್ನ ಅನುಭವವನ್ನೂ ಅವಧಾನದಿಂದ ಕೇಳು.
ಪಿತಾ ಮಮ ಮಹಾತೇಜಾಃ ಶಂತನುರ್ನಿಧನಂ ಗತಃ |
ತಸ್ಯ ದಿತ್ಸುರಹಂ ಶ್ರಾದ್ಧಂ ಗಂಗಾದ್ವಾರಮುಪಾಗಮಮ್ ॥11॥
ಮಹಾತೇಜಸ್ವಿಯಾದ ನನ್ನ ತಂದೆಯಾದ ಶಂತನುವು ಮೃತನಾದನು. ಅವನಿಗೆ ಶ್ರಾದ್ಧವನ್ನು ಕೊಡಲು ಬಯಸಿ ನಾನು ಗಂಗಾದ್ವಾರಕ್ಕೆ ಹೋದೆನು.
ತತ್ರಾಗಮ್ಯ ಪಿತುಃ ಪುತ್ರ ಶ್ರಾದ್ಧಕರ್ಮ ಸಮಾರಭಮ್ |
ಮಾತಾ ಮೇ ಜಾಹ್ನವೀ ಚೈವ ಸಾಹಾಯ್ಯಮಕರೋತ್ ತದಾ ॥12॥
ಎಲೈ ಪುತ್ರನೇ, ಅಲ್ಲಿಗೆ ಹೋಗಿ ತಂದೆಯ ಸಲುವಾಗಿ ಶ್ರಾದ್ಧಕರ್ಮವನ್ನು ಪ್ರಾರಂಭಿಸಿದೆನು. ನನ್ನ ತಾಯಿಯಾದ ಗಂಗೆಯು ಆಗ ನನಗೆ ಸಹಾಯವನ್ನು ಮಾಡಿದಳು.
ತತೋಽಗ್ರತಸ್ತಪಃಸಿದ್ಧಾನುಪವೇಶ್ಯ ಬಹೂನೃಷೀನ್ |
ತೋಯಪ್ರದಾನಾತ್ ಪ್ರಭೃತಿ ಕಾರ್ಯಾಣ್ಯಹಮಥಾರಭಮ್ ॥13॥
ಅನಂತರ ನಾನು ತಪಃಸಿದ್ಧರಾದ ಅನೇಕ ಋಷಿಗಳನ್ನು ಎದುರಿಗೆ ಕುಳ್ಳಿರಿಸಿ ಜಲದಾನದಿಂದ ಹಿಡಿದು ಎಲ್ಲ ಕಾರ್ಯಗಳನ್ನೂ ಆರಂಭಿಸಿದೆನು.
ತತ್ಸಮಾಪ್ಯ ಯಥೋದ್ದಿಷ್ಟಂ ಪೂರ್ವಕರ್ಮ ಸಮಾಹಿತಃ |
ದಾತುಂ ನಿರ್ವಪಣಂ ಸಮ್ಯಗ್ಯಥಾವದಹಮಾರಭಮ್ ॥14॥
ಉದ್ದೇಶಕ್ಕನುಸಾರವಾಗಿ ಆ ಪೂರ್ವಕರ್ಮಗಳನ್ನು ಮುಗಿಸಿ ಸಮಾಧಾನದಿಂದ ಸರಿಯಾಗಿ ಪಿಂಡಪ್ರದಾನವನ್ನು ಮಾಡಲು ನಾನು ಉಪಕ್ರಮಿಸಿದೆನು.
ತತಸ್ತಂ ದರ್ಭವಿನ್ಯಾಸಂ ಭಿತ್ತ್ವಾ ಸುರುಚಿರಾಂಗದಃ |
ಪ್ರಲಂಬಾಭರಣೋ ಬಾಹುರುದತಿಷ್ಠದ್ ವಿಶಾಂಪತೇ ॥15॥
ಎಲೈ ರಾಜನೇ, ಆಗ ಪಿಂಡಪ್ರದಾನಕ್ಕಾಗಿ ಹರಡಿದ ದರ್ಭೆಯನ್ನು ಭೇದಿಸಿ ಒಳ್ಳೆಯ ಅಂಗದವನ್ನೂ ಮತ್ತು ಲಂಬಿಸುವ ಆಭರಣಗಳನ್ನೂ ಹೊಂದಿದ ಬಾಹುವು ಮೇಲೆದ್ದಿತು.
ತಮುತ್ಥಿತಮಹಂ ದೃಷ್ಟ್ವಾ ಪರಂ ವಿಸ್ಮಯಮಾಗಮಮ್ |
ಪ್ರತಿಗ್ರಹೀತಾ ಸಾಕ್ಷಾನ್ಮೇ ಪಿತೇತಿ ಭರತರ್ಷಭ ॥16॥
ಎಲೈ ಭರತರ್ಷಭನೇ, ಅದನ್ನು ನೋಡಿ ನನ್ನ ತಂದೆಯೇ ಸಾಕ್ಷಾತ್ತಾಗಿ ಸ್ವೀಕರಿಸುತ್ತಿದ್ದಾನೆ ಎಂದು ನನಗೆ ಬಹಳ ವಿಸ್ಮಯವಾಯಿತು.
ತತೋ ಮೇ ಪುನರೇವಾಸೀತ್ ಸಂಜ್ಞಾ ಸಂಚಿಂತ್ಯ ಶಾಸ್ತ್ರತಃ |
ನಾಯಂ ವೇದೇಷು ವಿಹಿತೋ ವಿಧಿರ್ಹಸ್ತ ಇತಿ ಪ್ರಭೋ |
ಪಿಂಡೋ ದೇಯೋ ನರೇಣೇಹ ತತೋ ಮತಿರಭೂನ್ಮಮ ॥17॥
ಆಗ ಪುನಃ ಶಾಸ್ತ್ರಕ್ಕನುಸಾರವಾಗಿ ಚಿಂತಿಸಿ, ಎಲೈ ಪ್ರಭುವೇ, ವೇದಗಳಲ್ಲಿ ಹಸ್ತದಲ್ಲಿ ಪಿಂಡಪ್ರದಾನ ಮಾಡುವುದು ವಿಹಿತವಾಗಿಲ್ಲ ಎಂದು ನನಗೆ ಜ್ಞಾನೋದಯವಾಯಿತು.
ಸಾಕ್ಷಾನ್ನೇಹ ಮನುಷ್ಯಸ್ಯ ಪಿತರೋಽಂತರ್ಹಿತಾಃ ಕ್ವಚಿತ್ |
ಗೃಹ್ಣಂತಿ ವಿಹಿತಂ ತ್ವೇವಂ ಪಿಂಡೋ ದೇಯಃ ಕುಶೇಷ್ವಿತಿ ॥18॥
ಅಂತರ್ಧಾನ ಹೊಂದಿದ ಪಿತೃಗಳು ಮನುಷ್ಯನು (ಪುತ್ರನು) ಕೊಟ್ಟ ಪಿಂಡಗಳನ್ನು ಸಾಕ್ಷಾತ್ತಾಗಿ ಸ್ವೀಕರಿಸುವುದಿಲ್ಲ. ಪಿಂಡವನ್ನು ಕುಶಗಳ ಮೇಲೆಯೇ ಕೊಡಬೇಕು ಎಂಬ ಬುದ್ಧಿಯುಂಟಾಯಿತು.
ತತೋಽಹಂ ತದನಾದೃತ್ಯ ಪಿತುರ್ಹಸ್ತನಿದರ್ಶನಮ್ |
ಶಾಸ್ತ್ರಪ್ರಮಾಣಾತ್ ಸೂಕ್ಷ್ಮಂ ತು ವಿಧಿಂ ಪಾರ್ಥಿವ ಸಂಸ್ಮರನ್ ॥19॥
ತತೋ ದರ್ಭೇಷು ತತ್ಸರ್ವಮದದಂ ಭರತರ್ಷಭ |
ಶಾಸ್ತ್ರಮಾರ್ಗಾನುಸಾರೇಣ ತದ್ವಿದ್ಧಿ ಮನುಜರ್ಷಭ ॥20॥
ಆಗ ನಾನು ತಂದೆಯು ತೋರಿಸಿದ ಆ ಹಸ್ತವನ್ನು ತಿರಸ್ಕರಿಸಿ ಶಾಸ್ತ್ರ ಪ್ರಮಾಣವನ್ನೂ, ಸೂಕ್ಷ್ಮವಾದ ವಿಧಿಯನ್ನೂ ಸ್ಮರಿಸಿ ಎಲೈ ಭರತರ್ಷಭನೇ, ದರ್ಭೆಯಲ್ಲಿ ಅದೆಲ್ಲವನ್ನೂ ನೀಡಿದೆನು. ಎಲೈ ಮನುಜಶ್ರೇಷ್ಠನೇ, ಅದು ಶಾಸ್ತ್ರ ಮಾರ್ಗಕ್ಕೆ ಅನುಸಾರವೆಂದು ತಿಳಿ.
ತತಃ ಸೋಽಂತರ್ಹಿತೋ ಬಾಹುಃ ಪಿತುರ್ಮಮ ನರಾಧಿಪ |
ತತೋ ಮಾಂ ದರ್ಶಯಾಮಾಸುಃ ಸ್ವಪ್ನಾಂತೇ ಪಿತರಸ್ತದಾ ॥21॥
ಎಲೈ ನರಾಧಿಪನೇ, ಆಗ ನನ್ನ ತಂದೆಯ ಬಾಹುವು ಅದೃಶ್ಯವಾಯಿತು. ಅನಂತರ ಸ್ವಪ್ನದಲ್ಲಿ ನನ್ನ ಪಿತೃಗಳು ನನಗೆ ಹೀಗೆ ತೋರಿಸಿದರು.
ಪ್ರೀಯಮಾಣಾಸ್ತು ಮಾಮೂಚುಃ ಪ್ರೀತಾಃ ಸ್ಮ ಭರತರ್ಷಭ |
ವಿಜ್ಞಾನೇನ ತವಾನೇನ ಯನ್ನ ಮುಹ್ಯಸಿ ಧರ್ಮತಃ ॥22॥

ಎಲೈ ಭರತಶ್ರೇಷ್ಠನೇ, ಸಂತೋಷಗೊಂಡ ಅವರು ನಿನ್ನ ಇಂತಹ ಜ್ಞಾನದಿಂದ ನಾವು ಪ್ರಸನ್ನರಾಗಿದ್ದೇವೆ. ಏಕೆಂದರೆ ನೀನು ಧರ್ಮದ ವಿಷಯದಲ್ಲಿ ಭ್ರಾಂತನಾಗಲಿಲ್ಲ.

ತ್ವಯಾ ಹಿ ಕುರ್ವತಾ ಶಾಸ್ತ್ರಂ ಪ್ರಮಾಣಮಿಹ ಪಾರ್ಥಿವ |
ಆತ್ಮಾ ಧರ್ಮಃ ಶ್ರುತಂ ವೇದಾಃ ಪಿತರಶ್ಚ ಮಹರ್ಷಿಭಿಃ ॥23॥
ಸಾಕ್ಷಾತ್ಪಿತಾಮಹೋ ಬ್ರಹ್ಮಾ ಗುರವೋಽಥ ಪ್ರಜಾಪತಿಃ |
ಪ್ರಮಾಣಮುಪನೀತಾ ವೈ ಸ್ಥಿತಿಶ್ಚ ನ ವಿಚಾಲಿತಾ ॥24॥

ಎಲೈ ರಾಜನೇ, ನೀನು ನಿನ್ನ ಆಚರಣೆಗೆ ಶಾಸ್ತ್ರವನ್ನು ಪ್ರಮಾಣವಾಗಿ ಮಾಡಿಕೊಂಡು ನಿನ್ನನ್ನು, ಧರ್ಮ, ವಿದ್ಯೆ, ವೇದ, ಪಿತೃಗಳು, ಮಹರ್ಷಿಗಳು, ಸಾಕ್ಷಾತ್ ಪಿತಾಮಹನಾದ ಬ್ರಹ್ಮ, ಗುರುಗಳು, ಪ್ರಜಾಪತಿ ಎಲ್ಲರನ್ನೂ ಪ್ರಮಾಣವಾಗಿ ಸ್ವೀಕರಿಸಿದೆ ಮತ್ತು ನಿನ್ನ ಧರ್ಮದ ಸ್ಥಿತಿಯೂ ವಿಚಲಿತವಾಗಲಿಲ್ಲ.

ತದಿದಂ ಸಮ್ಯಗಾರಬ್ಧಂ ತ್ವಯಾಽದ್ಯ ಭರತರ್ಷಭ |
ಕಿಂ ತು ಭೂಮೇರ್ಗವಾಂ ಚಾರ್ಥೇ ಸುವರ್ಣಂ ದೀಯತಾಮಿತಿ ॥25॥

ಎಲೈ ಭರತರ್ಷಭನೇ, ಆದ್ದರಿಂದ ಈ ದಿನ ನೀನು ಸರಿಯಾಗಿ ಆರಂಭಿಸಿದ್ದೀಯೆ. ಆದರೆ ಭೂಮಿಯ ಅಥವಾ ಗೋವಿನ ಸಲುವಾಗಿ ಸುವರ್ಣವನ್ನು ದಕ್ಷಿಣೆಯಾಗಿ ಕೊಡು.

ಏವಂ ವಯಂ ಚ ಧರ್ಮಶ್ಚ ಸರ್ವೇ ಚಾಸ್ಮತ್ಪಿತಾಮಹಾಃ |
ಪಾವಿತಾ ವೈ ಭವಿಷ್ಯಂತಿ ಪಾವನಂ ಪರಮಂ ಹಿ ತತ್ ॥26॥

ಹೀಗೆ ಮಾಡಿದರೆ ನಾವು, ನಮ್ಮ ಪಿತಾಮಹರು ಮತ್ತು ಧರ್ಮವು ಪವಿತ್ರರಾಗುತ್ತೇವೆ. ಅಂತಹ ದಾನವು ಪರಮಪವಿತ್ರವಾದುದು.

ದಶ ಪೂರ್ವಾನ್ ದಶ ಪರಾಂಸ್ತಥಾ ಸಂತಾರಯಂತಿ ತೇ |
ಸುವರ್ಣಂ ಯೇ ಪ್ರಯಚ್ಛಂತಿ ಏವಂ ಮೇ ಪಿತರೋಽಬ್ರುವನ್ ॥27॥

ಸುವರ್ಣವನ್ನು ದಾನ ಮಾಡುವವರು ಹಿಂದಿನ ಹತ್ತು ತಲೆಗಳನ್ನು ಮತ್ತು ಮುಂದಿನ ಹತ್ತು ತಲೆಗಳನ್ನು ಕಷ್ಟದಿಂದ ಮತ್ತು ನರಕದಿಂದ ಪಾರುಮಾಡುತ್ತಾರೆ ಎಂದು ಸ್ವಪ್ನದಲ್ಲಿ ಪಿತೃಗಳು ನನಗೆ ಹೇಳಿದರು.

ತತೋಽಹಂ ವಿಸ್ಮಿತೋ ರಾಜನ್ ಪ್ರತಿಬುದ್ಧೋ ವಿಶಾಂಪತೇ |
ಸುವರ್ಣದಾನೇಽಕರವಂ ಮತಿಂ ಭರತಸತ್ತಮ ॥28॥

ಎಲೈ ರಾಜನೇ, ಭರತಶ್ರೇಷ್ಠನೇ, ಅನಂತರ ನಾನು ಎದ್ದು ವಿಸ್ಮಿತನಾಗಿ ಸುವರ್ಣದಾನವನ್ನು ಮಾಡಲು ನಿಶ್ಚಯಿಸಿದೆ.

ಇತಿಹಾಸಮಿಮಂ ಚಾಪಿ ಶೃಣು ರಾಜನ್ ಪುರಾತನಮ್ |
ಜಾಮದಗ್ನ್ಯಂ ಪ್ರತಿ ವಿಭೋ ಧನ್ಯಮಾಯುಷ್ಯಮೇವ ಚ ॥29॥

ಎಲೈ ರಾಜನೇ, ವಿಭುವೇ, ಪರಶುರಾಮನ ವಿಷಯದಲ್ಲಿ ನಡೆದ ಧನ್ಯವೂ, ಆಯುಃಪ್ರದವೂ ಆದ ಪುರಾತನವಾದ ಈ ಇತಿಹಾಸವನ್ನು ಕೇಳು.

ಜಾಮದಗ್ನ್ಯೇನ ರಾಮೇಣ ತೀವ್ರರೋಷಾನ್ವಿತೇನ ವೈ |
ತ್ರಿಃಸಪ್ತಕೃತ್ವಃ ಪೃಥಿವೀ ಕೃತಾ ನಿಃಕ್ಷತ್ರಿಯಾ ಪುರಾ ॥30॥

ತೀವ್ರರೋಷಾನ್ವಿತರಾದ ಜಮದಗ್ನಿ ಪುತ್ರರಾದ ಪರಶುರಾಮರು ಹಿಂದೆ ಇಪ್ಪತ್ತೊಂದು ಬಾರಿ ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿದರು.

ತತೋ ಜಿತ್ವಾ ಮಹೀಂ ಕೃತ್ಸ್ನಾಂ ರಾಮೋ ರಾಜೀವಲೋಚನಃ |
ಆಜಹಾರ ಕ್ರತುಂ ವೀರೋ ಬ್ರಹ್ಮಕ್ಷತ್ರೇಣ ಪೂಜಿತಮ್ ॥31॥
ವಾಜಿಮೇಧಂ ಮಹಾರಾಜ ಸರ್ವಕಾಮಸಮನ್ವಿತಮ್ |
ಪಾವನಂ ಸರ್ವಭೂತಾನಾಂ ತೇಜೋದ್ಯುತಿವಿವರ್ಧನಮ್ ॥32॥

ಅನಂತರ ರಾಜೀವ ಲೋಚನರಾದ ಪರಶುರಾಮರು ಸಮಸ್ತವಾದ ಭೂಮಿಯನ್ನು ಗೆದ್ದು ವೀರರಾದ ಅವರು ಬ್ರಾಹ್ಮಣರಿಂದಲೂ, ಕ್ಷತ್ರಿಯರಿಂದಲೂ ಪೂಜಿತವಾದ ಸರ್ವಕಾಮ ಸಮನ್ವಿತವಾದ, ಪವಿತ್ರವಾದ, ಸರ್ವಭೂತಗಳಿಗೂ ತೇಜಸ್ಸನ್ನು ಮತ್ತು ಕಾಂತಿಯನ್ನು ಹೆಚ್ಚಿಸುವ ಅಶ್ವಮೇಧ ಯಾಗವನ್ನು ಮಾಡಿದರು.

ವಿಪಾಪ್ಮಾಽಪಿ ಸ ತೇಜಸ್ವೀ ತೇನ ಕ್ರತುಫಲೇನ ವೈ |
ನೈವಾತ್ಮನೋಽಥ ಲಘುತಾಂ ಜಾಮದಗ್ನ್ಯೋಽಭ್ಯಗಚ್ಛತ ॥33॥

ಪಾಪರಹಿತನಾದರೂ ತೇಜಸ್ವಿಯಾದ ಪರಶುರಾಮರು ಅಂತಹ ಕ್ರತುಫಲವನ್ನು ಹೊಂದಿ ತಮ್ಮ ಮನಸ್ಸಿನಲ್ಲಿದ್ದ ಭಾರವು ಕಡಿಮೆಯಾಯಿತೆಂದು ಭಾವಿಸಲಿಲ್ಲ.

ಸ ತು ಕ್ರತುವರೇಣೇಷ್ಟ್ವಾ ಮಹಾತ್ಮಾ ದಕ್ಷಿಣಾವತಾ |
ಪಪ್ರಚ್ಛಾಗಮಸಂಪನ್ನಾನೃಷೀನ್ ದೇವಾಂಶ್ಚ ಭಾರ್ಗವಃ ॥34॥
ಪಾವನಂ ಯತ್ ಪರಂ ನೃಣಾಮುಗ್ರೇ ಕರ್ಮಣಿ ವರ್ತತಾಮ್ |
ತದುಚ್ಯತಾಂ ಮಹಾಭಾಗಾ ಇತಿ ಜಾತಘೃಣೋಽಬ್ರವೀತ್ |
ಇತ್ಯುಕ್ತಾ ವೇದಶಾಸ್ತ್ರಜ್ಞಾಸ್ತೇ ತಮೂಚುರ್ಮಹರ್ಷಯಃ ॥35॥

ಮಹಾತ್ಮರಾದ ಆ ಭಾರ್ಗವರು ಶ್ರೇಷ್ಠವಾದ ಅಂತಹ ಯಾಗವನ್ನು ಮಾಡಿ ಆಗಮ ಸಂಪನ್ನರಾದ ಋಷಿಗಳನ್ನು ಮತ್ತು ದೇವತೆಗಳನ್ನು ಕುರಿತು ಕರ್ಮವನ್ನು ಮಾಡುವ ಮನುಷ್ಯರಿಗೆ ಯಾವುದು ಶ್ರೇಷ್ಠ ರೀತಿಯಲ್ಲಿ ಪವಿತ್ರೀಕರಿಸುತ್ತದೆ? ಎಲೈ ಮಹಾನುಭಾವರೇ ಅದನ್ನು ಹೇಳಿ ಎಂದು ಮನುಷ್ಯರ ಮೇಲಿನ ದಯೆಯಿಂದ ಕೇಳಿದರು. ಹೀಗೆ ಹೇಳಲ್ಪಟ್ಟ ವೇದಶಾಸ್ತ್ರಜ್ಞರಾದ ಆ

ಮಹರ್ಷಿಗಳು ಅವರನ್ನು ಕುರಿತು ಹೇಳಿದರು.
ವಸಿಷ್ಠಃ
ದೇವತಾಸ್ತೇ ಪ್ರಯಚ್ಛಂತಿ ಸುವರ್ಣಂ ಯೇ ದದತ್ಯುತ |
ಅಗ್ನಿರ್ಹಿ ದೇವತಾಃ ಸರ್ವಾಃ ಸುವರ್ಣಂ ಚ ತದಾತ್ಮಕಮ್ ॥36॥
ತಸ್ಮಾತ್ಸುವರ್ಣಂ ದದತಾ ದತ್ತಾಃ ಸರ್ವಾಶ್ಚ ದೇವತಾಃ |
ಭವಂತಿ ಪುರುಷವ್ಯಾಘ್ರ ನ ಹ್ಯತಃ ಪರಮಂ ವಿದುಃ ॥37॥
ವಸಿಷ್ಠ ಯಾರು ಸುವರ್ಣವನ್ನು ದಾನ ಮಾಡುತ್ತಾರೆಯೋ ಅವರು ದೇವತೆಗಳನ್ನೇ ದಾನ ಮಾಡುತ್ತಾರೆ. ಅಗ್ನಿಯು ಸರ್ವದೇವತಾ ಸನ್ನಿಧಾನಕ್ಕೆ ಪಾತ್ರನಾದವನು. ಸುವರ್ಣವಾದರೂ ಅಗ್ನಿ ಸ್ವರೂಪವನ್ನು ಹೊಂದಿರುವಂತಹದು. ಎಲೈ ಪುರುಷವ್ಯಾಘ್ರನೇ, ಆದ್ದರಿಂದ ಸುವರ್ಣವನ್ನು ದಾನ ಮಾಡುವವನು ಎಲ್ಲ ದೇವತೆಗಳನ್ನೂ ದಾನ ಮಾಡುತ್ತಾನೆ. ಆದ್ದರಿಂದ ಜ್ಞಾನಿಗಳು ಅದಕ್ಕಿಂತ ಶ್ರೇಷ್ಠವಾದುದನ್ನು ತಿಳಿಯುವುದಿಲ್ಲ.
ಭೂಯ ಏವ ಚ ಮಾಹಾತ್ಮ್ಯಂ ಸುವರ್ಣಸ್ಯ ನಿಬೋಧ ಮೇ |
ಗದತೋ ಮಮ ವಿಪ್ರರ್ಷೇ ಸರ್ವಶಸ್ತ್ರಭೃತಾಂವರ ॥38॥
ಎಲೈ ವಿಪ್ರರ್ಷಿಯೇ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೇ, ನಾನು ಹೇಳುವ ಸುವರ್ಣ ಮಹಿಮೆಯನ್ನು ನನ್ನಿಂದ ಇನ್ನೂ ಕೇಳುವವನಾಗು.
ಮಯಾ ಶ್ರುತಮಿದಂ ಪೂರ್ವಂ ಪುರಾಣೇ ಭೃಗುನಂದನ |
ಪ್ರಜಾಪತೇಃ ಕಥಯತೋ ಮನೋಃ ಸ್ವಾಯಂಭುವಸ್ಯ ವೈ ॥39॥
ಶೂಲಪಾಣೇರ್ಭಗವತೋ ರುದ್ರಸ್ಯ ಚ ಮಹಾತ್ಮನಃ |
ಗಿರೌ ಹಿಮವತಿ ಶ್ರೇಷ್ಠೇ ತದಾ ಭೃಗುಕುಲೋದ್ವಹ ॥40॥
ಎಲೈ ಭೃಗುನಂದನನೇ, ಭೃಗುಕುಲೋದ್ವಹನೇ, ಹಿಂದೆ ಶ್ರೇಷ್ಠವಾದ ಹಿಮಾಲಯ ಪರ್ವತದಲ್ಲಿ ಪ್ರಜಾಪತಿಯಾದ ಬ್ರಹ್ಮನು ಸ್ವಾಯಂಭುವ ಮನುವಿಗೂ, ಮಹಾತ್ಮನಾದ ಭಗವಂತನಾದ ಶೂಲಪಾಣಿಯಾದ ರುದ್ರನಿಗೂ ಈ ವಿಷಯವನ್ನು ಹೇಳುವಾಗ ನಾನೂ ಕೇಳಿದೆನು.
ದೇವ್ಯಾ ವಿವಾಹೇ ನಿರ್ವೃತ್ತೇ ರುದ್ರಾಣ್ಯಾ ಭೃಗುನಂದನ |
ಸಮಾಗಮೇ ಭಗವತೋ ದೇವ್ಯಾ ಸಹ ಮಹಾತ್ಮನಃ |
ತತಃ ಸರ್ವೇ ಸಮುದ್ವಿಗ್ನಾ ಭಗವಂತಮುಪಾಗಮನ್ ॥41॥
ಎಲೈ ಭೃಗುನಂದನನೇ, ಪಾರ್ವತಿದೇವಿಯ ವಿವಾಹವು ಮುಗಿದು ಮಹಾತ್ಮನಾದ ಶಿವನು ದೇವಿಯ ಜೊತೆಯಲ್ಲಿ ಸಮಾಗಮವನ್ನು ಹೊಂದುತ್ತಿರಲು ಎಲ್ಲರೂ ಉದ್ವಿಗ್ನರಾಗಿ ಮಹಾದೇವನ ಬಳಿಗೆ ಬಂದರು.
ತೇ ಮಹಾದೇವಮಾಸೀನಂ ದೇವೀಂ ಚ ವರದಾಮುಮಾಮ್ |
ಪ್ರಸಾದ್ಯ ಶಿರಸಾ ಸರ್ವೇ ರುದ್ರಮೂಚುರ್ಭೃಗೂದ್ವಹ ॥42॥
ಎಲೈ ಭೃಗೂದ್ವಹನೇ, ಅವರು ಕುಳಿತಿದ್ದ ಮಹಾದೇವನನ್ನೂ ಮತ್ತು ವರಪ್ರದಳಾದ ಉಮಾದೇವಿಯನ್ನೂ ಶಿರಸಾ ನಮಸ್ಕರಿಸಿ ಸಂತೋಷ ಪಡಿಸಿ ಎಲ್ಲರೂ ರುದ್ರನನ್ನು ಕುರಿತು ಹೇಳಿದರು.
ಅಯಂ ಸಮಾಗಮೋ ದೇವ ದೇವ್ಯಾ ಸಹ ತವಾನಘ |
ತಪಸ್ವಿನಸ್ತಪಸ್ವಿನ್ಯಾ ತೇಜಸ್ವಿನ್ಯಾऽತಿತೇಜಸಃ |
ಅಮೋಘತೇಜಾಸ್ತ್ವಂ ದೇವ ದೇವೀ ಚೇಯಮುಮಾ ತಥಾ ॥43॥
ಎಲೈ ಅನಘನೇ, ನಿನ್ನ ಮತ್ತು ದೇವಿಯ ಸಮಾಗಮವು ತಪಸ್ವಿಗೆ ತಪಸ್ವಿನಿಯ ಮತ್ತು ಅತಿ ತೇಜಸ್ವಿಗೆ ತೇಜಸ್ವಿನಿಯ ಸಮಾಗಮರೂಪವಾಗಿದೆ. ಎಲೈ ದೇವನೇ, ನೀನು ಅಮೋಘವಾದ ತೇಜಸ್ಸುಳ್ಳವನು. ಉಮಾದೇವಿಯೂ ಹಾಗೆಯೇ.
ಅಪತ್ಯಂ ಯುವಯೋರ್ದೇವ ಬಲವದ್ ಭವಿತಾ ಪ್ರಭೋ |
ತನ್ನೂನಂ ತ್ರಿಷು ಲೋಕೇಷು ನ ಕಿಂಚಿಚ್ಛೇಷಯಿಷ್ಯತಿ ॥44॥
ಎಲೈ ಪ್ರಭುವೇ, ನಿಮಗೆ ಜನಿಸುವ ಪುತ್ರನು ಬಹಳ ಬಲಿಷ್ಠನಾಗಿರುವನು. ಅವನು ಖಂಡಿತವಾಗಿ ಮೂರುಲೋಕಗಳಲ್ಲಿ ಏನನ್ನೂ ಉಳಿಸುವುದಿಲ್ಲ.
ತದೇಭ್ಯಃ ಪ್ರಣತೇಭ್ಯಸ್ತ್ವಂ ದೇವೇಭ್ಯಃ ಪೃಥುಲೋಚನ |
ವರಂ ಪ್ರಯಚ್ಛ ಲೋಕೇಶ ತ್ರೈಲೋಕ್ಯಹಿತಕಾಮ್ಯಯಾ |
ಅಪತ್ಯಾರ್ಥಂ ನಿಗೃಹ್ಣೀಷ್ವ ತೇಜೋ ಜ್ವಲಿತಮುತ್ತಮಮ್ ॥45॥
ಎಲೈ ವಿಸ್ತಾರವಾದ ಕಣ್ಣುಳ್ಳವನೇ, ಲೋಕೇಶನೇ, ಆದ್ದರಿಂದ ನಿನಗೆ ನಮಸ್ಕಾರ ಮಾಡಿದ ದೇವತೆಗಳಾದ ಈ ನಮಗೆ ಮೂರುಲೋಕಗಳಿಗೆ ಹಿತವನ್ನು ಮಾಡುವ ದೃಷ್ಟಿಯಿಂದ ವರವನ್ನು ಕೊಡು. ಪುತ್ರನನ್ನು ಪಡೆಯುವ ಸಲುವಾಗಿ ಜ್ವಲಿಸುತ್ತಿರುವ ನಿನ್ನ ಶ್ರೇಷ್ಠವಾದ ವೀರ್ಯ ರೂಪವಾದ ತೇಜಸ್ಸನ್ನು ತಡೆದುಹಿಡಿದುಕೋ ಎಂದು ಹೇಳಿದರು.
ಇತಿ ತೇಷಾಂ ಕಥಯತಾಂ ಭಗವಾನ್ ಗೋವೃಷಧ್ವಜಃ |
ಏವಮಸ್ತ್ವಿತಿ ದೇವಾಂಸ್ತಾನ್ ವಿಪ್ರರ್ಷೇ ಪ್ರತ್ಯಭಾಷತ ॥46॥
ದೇವತೆಗಳು ಹೀಗೆ ಹೇಳುತ್ತಿರಲು ಎಲೈ ವಿಪ್ರರ್ಷಿಯೇ, ಭಗವಂತನಾದ ವೃಷಭಧ್ವಜನು ದೇವತೆಗಳನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದನು.
ಇತ್ಯುಕ್ತಸ್ತ್ವ ಚೋರ್ಧ್ವಮನಯತ್ ತದ್ ರೇತೋ ವೃಷವಾಹನಃ |
ಊರ್ಧ್ವರೇತಾಃ ಸಮಭವತ್ ತತಃಪ್ರಭೃತಿ ಚಾಪಿ ಸಃ ॥47॥

ಹೀಗೆ ಹೇಳಿ ತನ್ನ ರೇತಸ್ಸನ್ನು ವೃಷವಾಹನನಾದ ಅವನು ಊರ್ಧ್ವಮುಖವನ್ನಾಗಿ ಮಾಡಿಕೊಂಡನು. ಅಂದಿನಿಂದ ಅವನು ಊರ್ಧ್ವರೇತಸ್ಕನಾದನು.
ರುದ್ರಾಣೀ ತು ತತಃ ಕ್ರುದ್ಧಾ ಪ್ರಜೋಚ್ಛೇದೇ ತಥಾ ಕೃತೇ |
ದೇವಾನಥಾಬ್ರವೀತ್ ತತ್ರ ಸ್ತ್ರೀಭಾವಾತ್ ಪರುಷಂ ವಚಃ ||48||
ತನಗೆ ಜನಿಸಲಿರುವ ಪ್ರಜೆಯ ಪ್ರತಿಬಂಧದಿಂದ ಉಂಟಾದ ಕೋಪದಿಂದಲೂ, ಸ್ತ್ರೀ ಸ್ವಭಾವದಿಂದಲೂ ದೇವಿಯಾದ ಪಾರ್ವತಿಯು ದೇವತೆಗಳನ್ನು ಕುರಿತು ಉಗ್ರವಾದ ಮಾತುಗಳನ್ನು ಆಡಿದಳು.
ಯಸ್ಮಾದಪತ್ಯಕಾಮೋ ವೈ ಭರ್ತಾ ಮೇ ವಿನಿವರ್ತಿತಃ |
ತಸ್ಮಾತ್ ಸರ್ವೇ ಸುರಾ ಯೂಯಮನಪತ್ಯಾ ಭವಿಷ್ಯಥ ||49||
ಪುತ್ರನನ್ನು ಪಡೆಯಲು ಬಯಸಿದ ನನ್ನ ಪತಿಯನ್ನು ನೀವು ಹಿಂದಿರುಗಿಸಿದುದರಿಂದ ಎಲ್ಲ ದೇವತೆಗಳೇ, ನೀವೆಲ್ಲರೂ ಪುತ್ರಹೀನರಾಗಿ.

ಪ್ರಜೋಚ್ಛೇದೋ ಮಮ ಕೃತೋ ಯಸ್ಮಾದ್ ಯುಷ್ಮಾಭಿರದ್ಯ ವೈ |
ತಸ್ಮಾತ್ ಪ್ರಜಾ ವಃ ಖಗಮಾಃ ಸರ್ವೇಷಾಂ ನ ಭವಿಷ್ಯತಿ ||50||
ಎಲೈ ಆಕಾಶಸಂಚಾರಿಗಳೇ, ನೀವು ಈ ದಿನ ನನಗೆ ಪ್ರಜಾನಾಶವನ್ನು ಮಾಡಿದ ಕಾರಣದಿಂದ ನಿಮಗೂ ಪ್ರಜೆಗಳು ಜನಿಸುವುದಿಲ್ಲ (ಎಂದು ಹೇಳಿದಳು).
ಪಾವಕಸ್ತು ನ ತತ್ರಾಸೀಚ್ಛಾಪಕಾಲೇ ಭೃಗೂದ್ವಹ |
ದೇವಾ ದೇವ್ಯಾಸ್ತಥಾ ಶಾಪಾದನಪತ್ಯಾಸ್ತದಾಽಭವನ್ ||51||
ಎಲೈ ಭೃಗೂದ್ವಹನೇ, ಆ ಶಾಪಕಾಲದಲ್ಲಿ ಅಗ್ನಿಯು ಮಾತ್ರ ಅಲ್ಲಿ ಇರಲಿಲ್ಲ. ದೇವಿಯ ಆ ಶಾಪದಿಂದ ದೇವತೆಗಳು ಪುತ್ರಹೀನರಾದರು.
ರುದ್ರಸ್ತು ತೇಜೋಽಪ್ರತಿಮಂ ಧಾರಯಾಮಾಸ ತತ್ ತದಾ |
ಪ್ರಸ್ಕನ್ನಂ ತು ತತಸ್ತಸ್ಮಾತ್ ಕಿಂಚಿತ್ ತತ್ರಾಪತದ್ ಭುವಿ ||52||
ರುದ್ರನು ತನ್ನ ಅಸದೃಶವಾದ ತೇಜಸ್ಸನ್ನು ಆಗ ತಡೆದುಕೊಂಡನು. ಆದರೂ ಅದರ ಸ್ವಲ್ಪ ಭಾಗವು ಜಾರಿ ಭೂಮಿಯಲ್ಲಿ ಬಿದ್ದಿತು.
ತತ್ ಪಪಾತ ತದಾ ಚಾಗ್ನೌ ವವೃಧೇ ಚಾದ್ಭುತೋಪಮಮ್ |
ತೇಜಸ್ತೇಜಸಿ ಸಂಪೃಕ್ತಮೇಕಯೋನಿತ್ವಮಾಗತಮ್ ||53||
ಅದು ಅಗ್ನಿಯಲ್ಲಿ ಬಿದ್ದು ಅದ್ಭುತವಾಗಿ ಬೆಳೆಯಿತು. ತೇಜಸ್ಸಿನ ಜೊತೆಯಲ್ಲಿ ಸಂಬಂಧವನ್ನು ಹೊಂದಿ ಒಂದೇ ಯೋನಿಯಲ್ಲಿ ಬೆರೆತು ಒಂದೇ ಮೂಲದಿಂದ ಬಂದಂತಾಯಿತು.
ಏತಸ್ಮಿನ್ನೇವ ಕಾಲೇ ತು ದೇವಾಃ ಶಕ್ರಪುರೋಗಮಾಃ |
ಅಸುರಸ್ತಾರಕೋ ನಾಮ ತೇನ ಸಂತಾಪಿತಾ ಭೃಶಮ್ ||54||
ಅದೇ ಕಾಲದಲ್ಲಿ ಇಂದ್ರ ಮೊದಲಾದ ದೇವತೆಗಳು ತಾರಕನೆಂಬ ಅಸುರನಿಂದ ಪೀಡೆಗೆ ಒಳಗಾದರು.
ಆದಿತ್ಯಾ ವಸವೋ ರುದ್ರಾ ಮರುತೋಽಥಾಶ್ವಿನಾವಪಿ |
ಸಾಧ್ಯಾಶ್ಚ ಸರ್ವೇ ಸಂತ್ರಸ್ತಾ ದೈತೇಯಸ್ಯ ಪರಾಕ್ರಮಾತ್ ||55||
ಆ ದೈತ್ಯನ ಪರಾಕ್ರಮದಿಂದ ವಸು-ರುದ್ರಾದಿತ್ಯರು, ಮರುತ್ತುಗಳು, ಅಶ್ವಿನಿಗಳು, ಸಾಧ್ಯರು ಎಲ್ಲರೂ ಹೆದರಿದರು.
ಸ್ಥಾನಾನಿ ದೇವತಾನಾಂ ಹಿ ವಿಮಾನಾನಿ ಪುರಾಣಿ ಚ |
ಋಷೀಣಾಮಾಶ್ರಮಾಶ್ಚೈವ ಬಭೂವುರಸುರೈರ್ಹೃತಾಃ ||56||
ಅಸುರರು ದೇವತೆಗಳ ಸ್ಥಾನವನ್ನೂ, ವಿಮಾನಗಳನ್ನೂ, ಪಟ್ಟಣಗಳನ್ನೂ, ಋಷಿಗಳ ಆಶ್ರಮಗಳನ್ನೂ ಅಪಹರಿಸಿದರು.
ತೇ ದೀನಮನಸಃ ಸರ್ವೇ ದೇವಾಶ್ಚ ಋಷಯಶ್ಚ ಹ |
ಪ್ರಜಗ್ಮುಃ ಶರಣಂ ದೇವಂ ಬ್ರಹ್ಮಾಣಮಜರಂ ಪ್ರಭುಮ್ ||57||
ಆಗ ಎಲ್ಲ ದೇವತೆಗಳು ಮತ್ತು ಋಷಿಗಳು ದೀನ ಮನಸ್ಸನ್ನು ಹೊಂದಿದವರಾಗಿ ಜರಾರಹಿತರೂ, ಪ್ರಭುವೂ ಆದ ಬ್ರಹ್ಮದೇವರನ್ನು ಶರಣುಹೊಂದಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಸುವರ್ಣೋತ್ಪತ್ತಿಕಥನಂ ನಾಮ
ಪಂಚವಿಂಶತ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತಾರನೆಯ ಅಧ್ಯಾಯ
ಕಾರ್ತಿಕೇಯೋತ್ಪತ್ತಿ.
ದೇವಾಃ
ಅಸುರಸ್ತಾರಕೋ ನಾಮ ತ್ವಯಾ ದತ್ತವರಃ ಪ್ರಭೋ |
ಸುರಾನೃಷೀಂಶ್ಚ ಕ್ಲಿಶ್ನಾತಿ ವಧಸ್ತಸ್ಯ ವಿಧೀಯತಾಮ್ ||1||
ತಸ್ಮಾದ್ ಭಯಂ ಸಮುತ್ಪನ್ನಮಸ್ಮಾಕಂ ವೈ ಪಿತಾಮಹ |
ಪರಿತ್ರಾಯಸ್ವ ನೋ ದೇವ ನ ಹ್ಯನ್ಯಾ ಗತಿರಸ್ತಿ ನಃ ||2||

ದೇವತೆಗಳು ಎಲೈ ಪ್ರಭುವೇ, ನಿನ್ನಿಂದ ವರವನ್ನು ಪಡೆದ ತಾರಕನೆಂಬ ಅಸುರನು ದೇವತೆಗಳನ್ನೂ ಮತ್ತು ಋಷಿಗಳನ್ನೂ ಬಾಧಿಸುತ್ತಿದ್ದಾನೆ. ಅವನ ವಧೆಯನ್ನು ಮಾಡುವವನಾಗು. ಎಲೈ ಪಿತಾಮಹನೇ, ನಮಗೆ ಅವನಿಂದ ಭಯವುಂಟಾಗಿದೆ. ಎಲೈ ದೇವನೇ, ನಮ್ಮನ್ನು ರಕ್ಷಿಸು. ನಮಗೆ ನಿನ್ನನ್ನು ಬಿಟ್ಟು ಬೇರೆ ಗತಿಯಿಲ್ಲ.
ಬ್ರಹ್ಮಾ
ಸಮೋಽಹಂ ಸರ್ವಭೂತಾನಾಮಧರ್ಮಂ ನೇಹ ರೋಚಯೇ |
ಹನ್ಯತಾಂ ತಾರಕಃ ಕ್ಷಿಪ್ರಂ ಸುರರ್ಷಿಗಣಬಾಧಕಃ ||3||
ಬ್ರಹ್ಮಾ ನಾನು ಎಲ್ಲ ಪ್ರಾಣಿಗಳಿಗೂ ಸಮನಾದವನು. ಆದರೆ ಅಧರ್ಮವನ್ನು ನಾನು ಇಷ್ಟಪಡುವುದಿಲ್ಲ. ದೇವತೆಗಳಿಗೂ ಮತ್ತು ಋಷಿಗಳಿಗೂ ಬಾಧೆಯನ್ನು ಕೊಡುವ ತಾರಕನು ಶೀಘ್ರವಾಗಿ ಕೊಲ್ಲಲ್ಪಡಲಿ.
ವೇದಾ ಧರ್ಮಾಶ್ಚ ನೋತ್ಸಾದಂ ಗಚ್ಛೇಯುಃ ಸುರಸತ್ತಮಾಃ |
ವಿಹಿತಂ ಪೂರ್ವಮೇವಾತ್ರ ಮಯಾ ವೈ ವ್ಯೇತು ವೋ ಜ್ವರಃ ||4||
ಎಲೈ ಸುರಶ್ರೇಷ್ಠರೇ, ವೇದಗಳು ಮತ್ತು ಧರ್ಮಗಳು ವಿನಾಶವನ್ನು ಹೊಂದಬಾರದು. ನಾನು ತಾರಕಾಸುರನ ವಧೆಯ ವಿಷಯದಲ್ಲಿ ಮೊದಲೇ ಯೋಜನೆಯನ್ನು ಮಾಡಿದ್ದೇನೆ. ನೀವು ಆತಂಕಪಡುವುದು ಬೇಡ.
ದೇವಾಃ
ವರದಾನಾದ್ ಭಗವತೋ ದೈತೇಯೋ ಬಲಗರ್ವಿತಃ |
ದೇವೈರ್ನ ಶಕ್ಯತೇ ಹಂತುಂ ಸ ಕಥಂ ಪ್ರಶಮಂ ವ್ರಜೇತ್ ||5||
ದೇವತೆಗಳು ನಿನ್ನಿಂದ ಪಡೆದ ವರದಾನದಿಂದ ದರ್ಪಿಷ್ಠನಾದ ದೈತ್ಯನು ದೇವತೆಗಳಿಂದ ಹತನಾಗುವುದಿಲ್ಲ. ಅವನು ಹೇಗೆ ವಿನಾಶವನ್ನು ಹೊಂದಿಯಾನು?
ಸ ಹಿ ನೈವ ಸ್ಮ ದೇವಾನಾಂ ನಾಸುರಾಣಾಂ ನ ರಕ್ಷಸಾಮ್ |
ವಧ್ಯಃ ಸ್ಯಾಮಿತಿ ಜಗ್ರಾಹ ವರಂ ತ್ವತ್ತಃ ಪಿತಾಮಹ ||6||
ಎಲೈ ಪಿತಾಮಹನೇ, ನಾನು ದೇವತೆಗಳಿಂದಾಗಲೀ, ಅಸುರರಿಂದಾಗಲೀ, ರಾಕ್ಷಸರಿಂದಾಗಲೀ ವಧ್ಯನಾಗಬಾರದೆಂದು ಅವನು ನಿನ್ನಿಂದ ವರವನ್ನು ಪಡೆದಿದ್ದಾನೆ.
ದೇವಾಶ್ಚ ಶಪ್ತಾ ರುದ್ರಾಣ್ಯಾ ಪ್ರಜೋಚ್ಛೇದೇ ಪುರಾಕೃತೇ |
ನ ಭವಿಷ್ಯತಿ ವೋಽಪತ್ಯಮಿತಿ ಸರ್ವಜಗತ್ಪತೇ ||7||
ಎಲೈ ಸರ್ವಜಗತ್ಪತಿಯೇ, ದೇವತೆಗಳು ಹಿಂದೆಯೇ ಪಾರ್ವತಿಯಿಂದ ನಿಮ್ಮ ಪ್ರಜೆಗಳು ಉಚ್ಛೇದವನ್ನು ಹೊಂದಲಿ, ನಿಮಗೆ ಪ್ರಜೆಗಳು ಉಂಟಾಗುವುದಿಲ್ಲ ಎಂದು ಶಪಿಸಲ್ಪಟ್ಟಿದ್ದಾರೆ.
ಬ್ರಹ್ಮಾ
ಹುತಾಶನೋ ನ ತತ್ರಾಸೀಚ್ಛಾಪಕಾಲೇ ಸುರೋತ್ತಮಾಃ |
ಸ ಉತ್ಪಾದಯಿತಾಪತ್ಯಂ ವಧಾರ್ಥಂ ತ್ರಿದಶದ್ವಿಷಾಮ್ ||8||
ಬ್ರಹ್ಮಾ ಎಲೈ ಸುರೋತ್ತಮರೇ, ಪಾರ್ವತಿಯು ಶಾಪವನ್ನು ಕೊಟ್ಟ ಸಮಯದಲ್ಲಿ ಅಗ್ನಿಯು ಅಲ್ಲಿ ಇರಲಿಲ್ಲ. ಅವನು ದೇವಶತ್ರುವನ್ನು ವಧೆ ಮಾಡುವುದಕ್ಕಾಗಿ ಪುತ್ರನನ್ನು ಪಡೆಯುವನು.
ತದ್ವೈ ಸರ್ವಾನತಿಕ್ರಮ್ಯ ದೇವದಾನವರಾಕ್ಷಸಾನ್ |
ಮಾನುಷಾನಥ ಗಂಧರ್ವಾನ್ ನಾಗಾನಥ ಚ ಪಕ್ಷಿಣಃ ||9||
ಅಸ್ತ್ರೇಣಾಮೋಘಪಾತೇನ ಶಕ್ತ್ಯಾ ತಂ ಘಾತಯಿಷ್ಯತಿ |
ಯತೋ ವೋ ಭಯಮುತ್ಪನ್ನಂ ಯೇ ಚಾನ್ಯೇ ಸುರಶತ್ರವಃ ||10||
ಆ ಪುತ್ರನು ದೇವತೆಗಳನ್ನೂ, ದಾನವರನ್ನೂ, ರಾಕ್ಷಸರನ್ನೂ, ಮನುಷ್ಯರನ್ನೂ, ಗಂಧರ್ವರನ್ನೂ, ಸರ್ಪಗಳನ್ನೂ, ಪಕ್ಷಿಗಳನ್ನೂ ಮೀರಿ ಅಮೋಘವಾದ ಒಂದು ಶಕ್ತಿರೂಪವಾದ ಅಸ್ತ್ರದಿಂದ ನಿಮಗೆ ಯಾವನಿಂದ ಭಯವುಂಟಾಗಿದೆಯೋ ಅವನನ್ನೂ ಮತ್ತು ಬೇರೆ ದೇವಶತ್ರುಗಳನ್ನೂ ಸಂಹರಿಸುವನು.
ಸನಾತನೋ ಹಿ ಸಂಕಲ್ಪಃ ಕಾಮ ಇತ್ಯಭಿಧೀಯತೇ |
ರುದ್ರಸ್ಯ ತೇಜಃ ಪ್ರಸ್ಕನ್ನಮಗ್ನೌ ನಿಪತಿತಂ ಚ ತತ್ ||11||
ತತ್ತೇಜೋಽಗ್ನಿರ್ಮಹದ್ಭೂತಂ ದ್ವಿತೀಯಮಿವ ಪಾವಕಮ್ |
ವಧಾರ್ಥಂ ದೇವಶತ್ರೂಣಾಂ ಗಂಗಾಯಾಂ ಜನಯಿಷ್ಯತಿ ||12||
ಸನಾತನವಾದ ಸಂಕಲ್ಪಕ್ಕೆ ಕಾಮವೆಂದು ಹೆಸರು. (ಅವನಿಗೆ ಮನ್ಮಥ) ರುದ್ರದೇವರ ಆ ವೀರ್ಯವು ಜಾರಿ ಅಗ್ನಿಯಲ್ಲಿ ಬಿದ್ದಿದೆ. ಅಗ್ನಿ ಆ ತೇಜಸ್ಸನ್ನು ಎರಡನೆಯ ಅಗ್ನಿಯಂತೆ ದೇವಶತ್ರುಗಳ ವಿನಾಶಕ್ಕಾಗಿ ಒಂದು ದೊಡ್ಡ ಭೂತವನ್ನಾಗಿ (ದೊಡ್ಡ ಚೇತನವನ್ನಾಗಿ) ಗಂಗೆಯಲ್ಲಿ ಪಡೆಯುತ್ತಾನೆ.
ಸ ತು ನಾವಾಪ ತಂ ಶಾಪಂ ನಷ್ಟಃ ಸ ಹುತಭುಕ್ ತದಾ |
ತಸ್ಮಾದ್ ವೋ ಭಯಹೃದ್ ದೇವಾಃ ಸಮುತ್ಪತ್ಸ್ಯತಿ ಪಾವಕಿಃ ||13||
ಅಗ್ನಿಯು ಆಗ ಅಲ್ಲಿ ಇಲ್ಲದಿದ್ದುದರಿಂದ ಅವನಿಗೆ ಆ ಶಾಪವು ಬರಲಿಲ್ಲ. ಆದ್ದರಿಂದ ಎಲೈ ದೇವತೆಗಳೇ ನಿಮ್ಮ ಭಯವನ್ನು ಪರಿಹರಿಸುವ ಅಗ್ನಿಪುತ್ರನು ಜನಿಸುವನು.
ಅನ್ವಿಷ್ಯತಾಂ ವೈ ಜ್ವಲನಸ್ತಥಾ ಚಾದ್ಯ ನಿಯುಜ್ಯತಾಮ್ |
ತಾರಕಸ್ಯ ವಧೋಪಾಯಃ ಕಥಿತೋ ವೈ ಮಯಾಽನಘಾಃ ||14||

ಎಲೈ ಅನಘರೇ, ತಾರಕನ ವಧೋಪಾಯವನ್ನು ನಾನು ನಿಮಗೆ ಹೇಳಿದ್ದೇನೆ. ಅಗ್ನಿಯನ್ನು ಹುಡುಕಿ ಆ ಕಾರ್ಯದಲ್ಲಿ ಅವನನ್ನು ಈ ದಿನ ನಿಯೋಜಿಸಿ.
ನ ಹಿ ತೇಜಸ್ವಿನಾಂ ಶಾಪಾಸ್ತೇಜಃಸು ಪ್ರಭವಂತಿ ವೈ |
ಬಲಾನ್ಯತಿಬಲಂ ಪ್ರಾಪ್ಯ ನಬಲಾನಿ ಭವಂತಿ ವೈ ॥15॥
ತೇಜಸ್ವಿಗಳ ಶಾಪಗಳು ಅತಿತೇಜಸ್ವಿಗಳಿಗೆ ತಟ್ಟುವುದಿಲ್ಲ. ಬಲಗಳು ತಮಗಿಂತ ಉತ್ತಮ ಬಲಗಳನ್ನು ಎದುರಿಸಿದರೆ ದುರ್ಬಲವಾಗುತ್ತವೆ.

ಹನ್ಯಾದವಧ್ಯಾನ್ ವರದಾನಪಿ ಚೈವ ತಪಸ್ವಿನಃ |
ಸಂಕಲ್ಪಾಭಿರುಚಿಃ ಕಾಮಃ ಸನಾತನತಮೋಽನಲಃ ॥16॥
ಜಗತ್ಪತಿರನಿರ್ದೇಶ್ಯಃ ಸರ್ವಗಃ ಸರ್ವಭಾವನಃ |
ಹೃಚ್ಛಯಃ ಸರ್ವಭೂತಾನಾಂ ಜ್ಯೇಷ್ಠೋ ರುದ್ರಾದಪಿ ಪ್ರಭುಃ ॥17॥
ತಪಸ್ವಿಗಳು ವರದಾನದಿಂದ ಅವಧ್ಯರಾದವರನ್ನೂ ಮತ್ತು ವರವನ್ನು ನೀಡಿದವರನ್ನೂ ಕೊಂದಾರು. ಸಂಕಲ್ಪರೂಪವಾದ ಕಾಮವು ಸನಾತನನಾದ, ಜಗತ್ಪತಿಯಾದ, ನಿರ್ದೇಶ ಮಾಡಲು ಸಾಧ್ಯವಿಲ್ಲದ, ಸರ್ವತ್ರವ್ಯಾಪ್ತನಾದ, ಸರ್ವೋತ್ಪಾದಕನಾದ, ಸರ್ವಭೂತ ಹೃದಯವಾಸಿಯಾದ ಅಗ್ನಿರೂಪವಾದುದು. ಆ ಕಾಮವು ರುದ್ರನಿಗಿಂತ ಹಿರಿದಾದುದು.
ಅನ್ವಿಷ್ಯತಾಂ ಸ ತು ಕ್ಷಿಪ್ರಂ ತೇಜೋರಾಶಿರ್ಹುತಾಶನಃ |
ಸ ವೋ ಮನೋಗತಂ ಕಾಮಂ ದೇವಃ ಸಂಪಾದಯಿಷ್ಯತಿ ॥18॥
ತೇಜೋರಾಶಿಯಾದ ಅಗ್ನಿಯು ನಿಮ್ಮಿಂದ ಶೀಘ್ರವಾಗಿ ಹುಡುಕಲ್ಪಡಲಿ. ಆ ದೇವನು ನಿಮ್ಮ ಮನಸ್ಸಿನ ಅಭಿಲಾಷೆಯನ್ನು ನೆರವೇರಿಸುವನು (ಎಂದು ಹೇಳಿದರು).
ಏತದ್ವಾಕ್ಯಮುಪಶ್ರುತ್ಯ ತತೋ ದೇವಾ ಮಹಾತ್ಮನಃ |
ಜಗ್ಮುಃ ಸಂಸಿದ್ಧಸಂಕಲ್ಪಾಃ ಪರ್ಯೇಷಂತೋ ವಿಭಾವಸುಮ್ ॥19॥
ಮಹಾತ್ಮನಾದ ಬ್ರಹ್ಮದೇವರ ಈ ಮಾತುಗಳನ್ನು ಕೇಳಿದ ದೇವತೆಗಳು ತಮ್ಮ ಸಂಕಲ್ಪವು ಪೂರ್ಣವಾಗುತ್ತಿರಲು ಅಗ್ನಿಯನ್ನು ಹುಡುಕಿಕೊಂಡು ಹೊರಟರು.
ತತಸ್ತ್ರೈಲೋಕ್ಯಮೃಷಯೋ ವ್ಯಚಿನ್ವಂತ ಸುರೈಃ ಸಹ |
ಕಾಂಕ್ಷಂತೋ ದರ್ಶನಂ ವಹ್ನೇಃ ಸರ್ವೇ ತದ್ಗತಮಾನಸಾಃ ॥20॥
ಋಷಿಗಳು ದೇವತೆಗಳ ಜೊತೆಯಲ್ಲಿ ಅಗ್ನಿಯನ್ನು ನೋಡಲು ಬಯಸುತ್ತಾ ಅಗ್ನಿಯಲ್ಲೇ ನೆಟ್ಟ ಮನಸ್ಸುಳ್ಳವರಾಗಿ ಮೂರುಲೋಕಗಳಲ್ಲಿಯೂ ಹುಡುಕಿದರು.
ಪರೇಣ ತಪಸಾ ಯುಕ್ತಾಃ ಶ್ರೀಮಂತೋ ಲೋಕವಿಶ್ರುತಾಃ |
ಲೋಕಾನನ್ವಚರನ್ ಸಿದ್ಧಾಃ ಸರ್ವ ಏವ ಭೃಗೂದ್ವಹ |
ನಷ್ಟಮಾತ್ಮನಿ ಸಂಲೀನಂ ನಾಧಿಜಗ್ಮುರ್ಹುತಾಶನಮ್ ॥21॥
ಎಲೈ ಭೃಗೂದ್ವಹನೇ, ಶ್ರೇಷ್ಠ ತಪಸ್ಸಿನಿಂದ ಕೂಡಿದವರೂ, ಕಾಂತಿಯುಕ್ತರೂ, ಲೋಕವಿಖ್ಯಾತರೂ, ಸಿದ್ಧರೂ ಆದ ಅವರೆಲ್ಲರೂ ಲೋಕಗಳಲ್ಲಿ ಸಂಚರಿಸಿದರು. ನಷ್ಟನಾಗಿ ತನ್ನಲ್ಲಿಯೇ ಅಡಗಿಕೊಂಡಿದ್ದ ಅಗ್ನಿಯನ್ನು ಅವರು ಕಾಣಲಿಲ್ಲ.
ತತಃ ಸಂಜಾತಸಂತ್ರಾಸಾನಗ್ನೇರ್ದರ್ಶನಲಾಲಸಾನ್ |
ಜಲೇಚರಃ ಕ್ಲಾಂತಮನಾಸ್ತೇಜಸಾಗ್ನೇಃ ಪ್ರದೀಪಿತಃ |
ಉವಾಚ ದೇವಾನ್ ಮಂಡೂಕೋ ರಸಾತಳತಳೋತ್ಥಿತಃ ॥22॥
ಆಗ ಅಗ್ನಿದರ್ಶನ ಲಾಲಸರಾದ, ಹೆದರಿದ ಅವರನ್ನು ಕುರಿತು ಅಗ್ನಿಯ ತಾಪಕ್ಕೆ ಒಳಗಾಗಿ ದಣಿದ ಮನಸ್ಸಿನಿಂದ ಕೂಡಿದ ರಸಾತಳ ಲೋಕದ ಕೆಳಭಾಗದಿಂದ ಮೇಲೆ ಬಂದ ಜಲಸಂಚಾರಿಯಾದ ಒಂದು ಮಂಡೂಕವು ದೇವತೆಗಳನ್ನು ಕುರಿತು ಹೇಳಿತು.
ರಸಾತಳತಳೇ ದೇವಾ ವಸತ್ಯಗ್ನಿರಿತಿ ಪ್ರಭೋ |
ಸಂತಾಪಾದಿಹ ಸಂಪ್ರಾಪ್ತಃ ಪಾವಕಪ್ರಭವಾದಹಮ್ ॥23॥
ಎಲೈ ಪ್ರಭುವೇ, ದೇವತೆಗಳೇ, ಅಗ್ನಿಯು ರಸಾತಳ ಲೋಕದ ಕೆಳಭಾಗದಲ್ಲಿ ವಾಸಿಸುತ್ತಿದ್ದಾನೆ. ಅಗ್ನಿಯಿಂದ ಉಂಟಾದ ಸಂತಾಪದಿಂದ ನಾನು ಇಲ್ಲಿಗೆ ಬಂದಿದ್ದೇನೆ.
ಸ ಸಂಸುಪ್ತೋ ಜಲೇ ದೇವಾ ಭಗವಾನ್ ಹವ್ಯವಾಹನಃ |
ಅಪಃ ಸಂಸೃಜ್ಯ ತೇಜೋಭಿಸ್ತೇನ ಸಂತಾಪಿತಾ ವಯಮ್ ॥24॥
ಪೂಜ್ಯನಾದ ಅಗ್ನಿಯು ತನ್ನ ತೇಜಸ್ಸನ್ನು ಜಲದ ಜೊತೆಯಲ್ಲಿ ಬೆರೆಸಿ ಜಲದಲ್ಲಿ ಮಲಗಿದ್ದಾನೆ. ಅದರಿಂದ ನಾವು ಸಂತಪ್ತರಾಗಿದ್ದೇವೆ.
ತಸ್ಯ ದರ್ಶನಮಿಷ್ಟಂ ವೋ ಯದಿ ದೇವಾ ವಿಭಾವಸೋಃ |
ತತ್ರೈನಮಭಿಗಚ್ಛಧ್ವಂ ಕಾರ್ಯಂ ವೋ ಯದಿ ವಹ್ನಿನಾ ॥25॥
ಅಗ್ನಿದೇವನ ದರ್ಶನವು ನಿಮಗೆ ಇಷ್ಟವಾದರೆ ಅಗ್ನಿಯಿಂದ ಏನಾದರೂ ಕಾರ್ಯವಾಗಬೇಕಾದರೆ ಅಲ್ಲಿ ನೀವು ಅವನನ್ನು ಸಂಧಿಸಿ.
ಗಮ್ಯತಾಂ ಸಾಧಯಿಷ್ಯಾಮೋ ವಯಂ ಹ್ಯಗ್ನಿಭಯಾತ್ ಸುರಾಃ |
ಏತಾವದುಕತ್ವಾ ಮಂಡೂಕಸ್ತ್ವರಿತೋ ಜಲಮಾವಿಶತ್ ॥26॥
ಎಲೈ ದೇವತೆಗಳೇ, ನೀವು ಹೊರಡಿ. ನಾವೂ ಸಹ ಅಗ್ನಿಭಯದಿಂದ ಬೇರೆ ಕಡೆಗೆ ಹೋಗುತ್ತೇವೆ (ಎಂದು ಹೇಳಿತು). ಇಷ್ಟು ಹೇಳಿ ಆ ಮಂಡೂಕವು ಶೀಘ್ರವಾಗಿ ಜಲವನ್ನು ಪ್ರವೇಶಿಸಿತು.
ಹುತಾಶನಸ್ತು ಬುಬುಧೇ ಮಂಡೂಕಸ್ಯಾಥ ಪೈಶುನಮ್ |

ಶಶಾಪ ಸ ತಮಾಸಾದ್ಯ ನ ರಸಾನ್ ವೇತ್ಸ್ಯಸೀತಿ ವೈ ॥27॥
ಮಂಡೂಕವು ಚಾಡಿ ಹೇಳಿದ ವಿಷಯವು ಅಗ್ನಿಗೆ ತಿಳಿಯಿತು. ಅವನು ಅದರ ಬಳಿಗೆ ಬಂದು ನಿನಗೆ ರಸಜ್ಞಾನವುಂಟಾಗುವುದಿಲ್ಲ ಎಂದು ಶಾಪವನ್ನು ಕೊಟ್ಟನು.
ತಂ ಸ ಸಂಯುಜ್ಯ ಶಾಪೇನ ಮಂಡೂಕಂ ಪಾವಕೋ ಯಯೌ |
ಅನ್ಯತ್ರ ವಾಸಾಯ ವಿಭುರ್ನ ಚ ದೇವಾನದರ್ಶಯತ್ ॥28॥
ಮಂಡೂಕಕ್ಕೆ ಶಾಪವನ್ನು ಕೊಟ್ಟು ವಿಭುವಾದ ಅಗ್ನಿಯು ವಾಸ ಮಾಡುವುದಕ್ಕೆ ಇನ್ನೊಂದು ಕಡೆಗೆ ಹೋದನು. ದೇವತೆಗಳಿಗೆ ತನ್ನ ದರ್ಶನವನ್ನು ಕೊಡಲಿಲ್ಲ.
ದೇವಾಸ್ತ್ವನುಗ್ರಹಂ ಚಕ್ರುರ್ಮಂಡೂಕಾನಾಂ ಭೃಗೂದ್ವಹ |
ಯತ್ತಚ್ಛೃಣು ಮಹಾಬಾಹೋ ಗದತೋ ಮಮ ಸರ್ವಶಃ ॥29॥
ಎಲೈ ಭೃಗೂದ್ವಹನೇ, ಮಹಾಬಾಹುವೇ, ದೇವತೆಗಳು ಮಂಡೂಕಗಳಿಗೆ ಯಾವ ಅನುಗ್ರಹವನ್ನು ಮಾಡಿದರೋ ಅದನ್ನು ನನ್ನಿಂದ ಕೇಳು.
ಅಗ್ನಿಶಾಪಾದಜಿಹ್ವಾಪಿ ರಸಜ್ಞಾನಬಹಿಷ್ಕೃತಾಃ |
ಸರಸ್ವತೀಂ ಬಹುವಿಧಾಂ ಯೂಯಮುಚ್ಚಾರಯಿಷ್ಯಥ ॥30॥
ಅಗ್ನಿಶಾಪದಿಂದ ಜಿಹ್ವಾಹೀನರಾಗಿ ರಸಜ್ಞಾನರಹಿತರಾದರೂ, ಬಹುವಿಧವಾದ ಶಬ್ದವನ್ನು ನೀವು ಮಾಡುವವರಾಗುವಿರಿ.
ಬಿಲವಾಸಗತಾಂಶ್ಚೈವ ನಿರಾದಾನಾನಚೇತಸಃ |
ಗತಾಸೂನಪಿ ವಃ ಶುಷ್ಕಾನ್ ಭೂಮಿಃ ಸಂಧಾರಯಿಷ್ಯತಿ |
ತಮೋಗತಾಯಾಮಪಿ ಚ ನಿಶಾಯಾಂ ವಿಚರಿಷ್ಯಥ ॥31॥
ನೀವು ಬಿಲವಾಸವನ್ನು ಮಾಡಿ ಆಹಾರರಹಿತರಾಗಿ, ಪ್ರಜ್ಞಾಹೀನರಾಗಿ ಪ್ರಾಣಗಳನ್ನು ಬಿಟ್ಟರೂ ಭೂಮಿಯು ನಿಮ್ಮನ್ನು ಧರಿಸುವುದು. (ಬದುಕಿಸುವುದು) ರಾತ್ರಿಯು ಕತ್ತಲೆಯಿಂದ ತುಂಬಿದ್ದರೂ ನೀವು ಸಂಚಾರವನ್ನು ಮಾಡುವಿರಿ.
ಇತ್ಯುಕತ್ವ ತಾಂಸ್ತತೋ ದೇವಾಃ ಪುನರೇವ ಮಹೀಮಿಮಾಮ್ |
ಪರೀಯುರ್ಜ್ವಲನಸ್ಯಾರ್ಥೇ ನ ಚಾವಿಂದನ್ ಹುತಾಶನಮ್ ॥32॥
ಮಂಡೂಕಗಳನ್ನು ಕುರಿತು ಹೀಗೆ ಹೇಳಿ ದೇವತೆಗಳು ಪುನಃ ಅಗ್ನಿಯನ್ನು ಹುಡುಕಲು ಈ ಭೂಮಿಯಲ್ಲೆಲ್ಲಾ ಸಂಚರಿಸಿದರು. ಆದರೆ ಅಗ್ನಿಯು ಅವರಿಗೆ ದೊರೆಯಲಿಲ್ಲ.
ಅಥ ತಾನ್ ದ್ವಿರದಃ ಕಶ್ಚಿತ್ ಸುರೇಂದ್ರದ್ವಿರದೋಪಮಃ |
ಅಶ್ವತ್ಥಸ್ಥೋಽಗ್ನಿರಿತ್ಯೇವಂ ಪ್ರಾಹ ದೇವಾನ್ ಭೃಗೂದ್ವಹ ॥33॥
ಎಲೈ ಭೃಗೂದ್ವಹನೇ, ಆಗ ದೇವೇಂದ್ರನ ಆನೆಯಾದ ಐರಾವತದಂತಿದ್ದ ಒಂದು ಆನೆಯು ದೇವತೆಗಳನ್ನು ಕುರಿತು ಅಗ್ನಿಯು ಅಶ್ವತ್ಥವೃಕ್ಷದಲ್ಲಿದ್ದಾನೆ ಎಂದು ಹೇಳಿತು.
ಶಶಾಪ ಜ್ವಲನಃ ಸರ್ವಾನ್ ದ್ವಿರದಾನ್ ಕ್ರೋಧಮೂರ್ಚ್ಛಿತಃ |
ಪ್ರತೀಪಾ ಭವತಾಂ ಜಿಹ್ವಾ ಭವಿತ್ರೀತಿ ಭೃಗೂದ್ವಹ ॥34॥
ಎಲೈ ಭೃಗೂದ್ವಹನೇ, ಕ್ರೋಧಮೂರ್ಛಿತನಾದ ಅಗ್ನಿಯು ಎಲ್ಲಾ ಆನೆಗಳಿಗೂ ನಿಮ್ಮ ನಾಲಿಗೆಯು ನಿಮಗೆ ವಿರುದ್ಧವಾಗಲಿ ಎಂದು ಶಾಪವನ್ನು ಕೊಟ್ಟನು.
ಇತ್ಯುಕತ್ವ ನಿಃಸೃತೋಽಶ್ವತ್ಥಾದಗ್ನಿರ್ವಾರಣಸೂಚಿತಃ |
ಪ್ರವಿವೇಶ ಶಮೀಗರ್ಭಮಥ ವಹ್ನಿಃ ಸುಷುಪ್ಸಯಾ ॥35॥
ಆನೆಗಳಿಂದ ಸೂಚಿಸಲ್ಪಟ್ಟ ಅಗ್ನಿಯು ಹೀಗೆ ಹೇಳಿ ಅಶ್ವತ್ಥದಿಂದ ಹೊರಗೆ ಬಂದು ಮಲಗಲು ಬಯಸಿ ಶಮೀಗರ್ಭವನ್ನು ಪ್ರವೇಶಿಸಿದನು.
ಅನುಗ್ರಹಂ ತು ನಾಗಾನಾಂ ಯಂ ಚಕ್ರುಃ ಶೃಣು ತಂ ಪ್ರಭೋ |
ದೇವಾ ಭೃಗುಕುಲಶ್ರೇಷ್ಠ ಪ್ರೀತಾಃ ಸತ್ಯಪರಾಕ್ರಮಾಃ॥36॥
ಎಲೈ ಪ್ರಭುವೇ, ಭೃಗುಕುಲಶ್ರೇಷ್ಠನೇ, ಸತ್ಯಪರಾಕ್ರಮರಾದ ದೇವತೆಗಳು ಆನೆಗಳಿಗೆ ಸಂತೋಷದಿಂದ ಏನು ಅನುಗ್ರಹವನ್ನು ಮಾಡಿದರು ಎಂಬುದನ್ನು ಕೇಳು.
ಪ್ರತೀಪಯಾ ಜಿಹ್ವಯಾಪಿ ಸರ್ವಾಹಾರಾನ್ ಕರಿಷ್ಯಥ |
ವಾಚಂ ಚೋಚ್ಚಾರಯಿಷ್ಯಧ್ವಮುಚ್ಚೈರವ್ಯಂಜಿತಾಕ್ಷರಮ್ |
ಇತ್ಯುಕತ್ವ ಪುನರೇವಾಗ್ನಿಮನುಸಸ್ರುರ್ದಿವೌಕಸಃ ॥37॥
ನಿಮ್ಮ ನಾಲಿಗೆಯು ನಿಮಗೆ ಅನುಕೂಲವಾಗಿಲ್ಲದಿದ್ದರೂ ನೀವು ಎಲ್ಲಾ ಆಹಾರಗಳನ್ನು ಸ್ವೀಕರಿಸುವಿರಿ. ಅಕ್ಷರಗಳನ್ನು ವ್ಯಕ್ತಪಡಿಸದೆ ದೊಡ್ಡ ಧ್ವನಿಯನ್ನು ಉತ್ಪಾದಿಸುವಿರಿ ಎಂದು ಹೇಳಿ ದೇವತೆಗಳು ಪುನಃ ಅಗ್ನಿಯನ್ನು ಹುಡುಕಲು ಪ್ರಾರಂಭಿಸಿದರು.
ಅಶ್ವತ್ಥಾನ್ನಿಃಸೃತಶ್ಚಾಗ್ನಿಃ ಶಮೀಗರ್ಭಗತಸ್ತದಾ |
ಶುಕೇನ ಖ್ಯಾಪಿತೋ ವಿಪ್ರ ತಂ ದೇವಾಃ ಸಮುಪಾದ್ರವನ್ ॥38॥
ಅಶ್ವತ್ಥದಿಂದ ಹೊರಗೆ ಬಂದು ಶಮೀಗರ್ಭವನ್ನು ಪ್ರವೇಶಿಸಿದ ಅಗ್ನಿಯನ್ನು ಒಂದು ಗಿಣಿಯು ಪ್ರಕಾಶಪಡಿಸಿತು. ಎಲೈ ವಿಪ್ರನೇ, ಆಗ ದೇವತೆಗಳು ಅಲ್ಲಿಗೆ ಓಡಿದರು.
ಶಶಾಪ ಶುಕಮಗ್ನಿಸ್ತು ವಾಗ್ವಿಹೀನೋ ಭವಿಷ್ಯಸಿ |
ಜಿಹ್ವಾಂ ಚಾವರ್ತಯಾಮಾಸ ತಸ್ಯಾಪಿ ಹುತಭುಕ್ ತದಾ ॥39॥

ಆಗ ಅಗ್ನಿಯು ಶುಕವನ್ನು ಕುರಿತು ನೀನು ವಾಗ್ವಿಹೀನನಾಗುವಿ (ಮಾತನಾಡದಂತೆ ಆಗುವಿ) ಎಂದು ಹೇಳಿ ಅದರ ನಾಲಿಗೆಯನ್ನು ಹೊರಳಿಸಿ ತಿರುಗಿಸಿದನು.
ದೃಷ್ಟ್ವಾ ತು ಜ್ವಲನಂ ದೇವಾಃ ಶುಕಮೂಚುರ್ದಯಾನ್ವಿತಾಃ |
ಭವಿತಾ ನ ತ್ವಮತ್ಯಂತಂ ಶಕುನೇ ನಷ್ಟವಾಗಿತಿ ॥40॥
ಆವೃತ್ತಜಿಹ್ವಸ್ಯ ಸತೋ ವಾಕ್ಯಂ ಕಾಂತಂ ಭವಿಷ್ಯತಿ |
ಬಾಲಸ್ಯೇವ ಪ್ರವೃದ್ಧಸ್ಯ ಕಲಮವ್ಯಕ್ತಮದ್ಭುತಮ್ ॥41॥
ಅಗ್ನಿಯನ್ನು ನೋಡಿದ ದೇವತೆಗಳು ಶುಕದ ಮೇಲೆ ದಯೆಯಿಂದ ಕೂಡಿ ಅದನ್ನು ಕುರಿತು- `ಎಲೈ ಪಕ್ಷಿಯೇ, ನೀನು ಮಾತನಾಡುವುದನ್ನು ಪೂರ್ಣವಾಗಿ ಕಳೆದುಕೊಳ್ಳುವುದಿಲ್ಲ. ಆದರೂ ನಾಲಿಗೆಯನ್ನು ಹೊರಳಿಸಿದರೂ ನಿನ್ನಿಂದ ಮನೋಹರವಾದ ಮಾತು ಹೊರಬರುವುದು. ಚೆನ್ನಾಗಿ ಬೆಳೆದ ಬಾಲಕನಂತೆ ಆ ವಾಣಿಯು ಮಧುರವೂ, ಅದ್ಭುತವೂ ಆಗಿರುವುದು' ಎಂದು ಹೇಳಿದರು.
ಇತ್ಯುಕತ್ವ ತಂ ಶಮೀಗರ್ಭೇ ವಹ್ನಿಮಾಲಕ್ಷ್ಯ ದೇವತಾಃ |
ತದೇವಾಯತನಂ ಚಕ್ರುಃ ಪುಣ್ಯಂ ಸರ್ವಕ್ರಿಯಾಸ್ವಪಿ ॥42॥
ದೇವತೆಗಳು ಹೀಗೆ ಹೇಳಿ ಶಮೀಗರ್ಭದಲ್ಲಿ ಅಗ್ನಿಯನ್ನು ನೋಡಿ ಎಲ್ಲ ಪುಣ್ಯ ಕಾರ್ಯಗಳಲ್ಲಿಯೂ ಅದನ್ನೇ ಒಂದು ಆಶ್ರಯಸ್ಥಾನವನ್ನಾಗಿ ಮಾಡಿಕೊಂಡರು.
ತತಃಪ್ರಭೃತಿ ಚಾಪ್ಯಗ್ನಿಃ ಶಮೀಗರ್ಭೇಷು ದೃಶ್ಯತೇ |
ಉತ್ಪಾದನೇ ತಥೋಪಾಯಮನುಜಗ್ಮುಶ್ಚ ಮಾನವಾಃ ॥43॥
ಅಲ್ಲಿಂದ ಆರಂಭಿಸಿ ಅಗ್ನಿಯು ಶಮೀಗರ್ಭದಲ್ಲಿ ಕಂಡುಬರುತ್ತಾನೆ. ಹಾಗೆಯೇ ಮನುಷ್ಯರು ಅಗ್ನಿಯನ್ನು ಉತ್ಪಾದಿಸಲು ಆಗಿನಿಂದಲೂ ಶಮೀರೂಪವಾದ ಒಂದು ಉಪಾಯವನ್ನು ಕಂಡುಕೊಂಡರು.
ಆಪೋ ರಸಾತಳೇ ಯಾಸ್ತು ಸಂಸೃಷ್ಟಾಶ್ಚಿತ್ರಭಾನುನಾ |
ತಾಃ ಪರ್ವತಪ್ರಸ್ರವಣೈರೂಷ್ಮಾಂ ಮುಂಚಂತಿ ಭಾರ್ಗವ |
ಪಾವಕೇನಾಧಿಶಯತಾ ಸಂತಪ್ತಾಸ್ತಸ್ಯ ತೇಜಸಾ ॥44॥
ಎಲೈ ಭಾರ್ಗವನೇ, ರಸಾತಳ ಲೋಕದಲ್ಲಿದ್ದ ಜಲವು ತಮ್ಮಲ್ಲಿ ಮಲಗಿದ ಅಗ್ನಿಯ ತೇಜಸ್ಸಿನಿಂದ ಸಂತಪ್ತವಾಗಿ ಪರ್ವತದ ಜಲಪಾತಗಳಿಂದ ಹಬೆಯನ್ನು ಉಂಟು ಮಾಡುತ್ತವೆ.
ತತೋಽಗ್ನಿರ್ದೇವತಾ ದೃಷ್ಟ್ವಾ ಬಭೂವ ವ್ಯಥಿತಸ್ತದಾ |
ಕಿಮಾಗಮನಮಿತ್ಯೇವಂ ತಾನಪೃಚ್ಛತ ಪಾವಕಃ ॥45॥
ಆಗ ಅಗ್ನಿಯು ದೇವತೆಗಳನ್ನು ನೋಡಿ ವ್ಯಥೆಯನ್ನು ಹೊಂದಿ ನಿಮ್ಮ ಆಗಮನದ ಉದ್ದೇಶವೇನು ಎಂದು ಅವರನ್ನು ಕೇಳಿದನು.
ತಮೂಚುರ್ವಿಬುಧಾಃ ಸರ್ವೇ ತೇ ಚೈವ ಪರಮರ್ಷಯಃ |
ತ್ವಾಂ ನಿಯೋಕ್ಷ್ಯಾಮಹೇ ಕಾರ್ಯೇ ತದ್ ಭವಾನ್ ಕರ್ತುಮರ್ಹತಿ |
ಕೃತೇ ಚ ತಸ್ಮಿನ್ ಭವಿತಾ ತವಾಪಿ ಸುಮಹಾನ್ ಗುಣಃ ॥46॥
ದೇವತೆಗಳು ಮತ್ತು ಪರಮರ್ಷಿಗಳು ಎಲ್ಲರೂ ಅವನನ್ನು ಕುರಿತು ನಿನಗೆ ಒಂದು ಕಾರ್ಯವನ್ನು ಹೇಳುವೆವು. ಅದನ್ನು ನೀನು ಮಾಡಬೇಕು. ಆ ಕಾರ್ಯವನ್ನು ಮಾಡಿದರೆ ನಿನಗೂ ಮಹಾಗುಣ ಪ್ರಾಪ್ತಿಯಾಗುವುದು ಎಂದು ಹೇಳಿದರು.
ಅಗ್ನಿಃ
ಬ್ರೂತ ಯದ್ ಭವತಾಂ ಕಾರ್ಯಂ ಸರ್ವಂ ಕರ್ತಾಸ್ಮಿ ತತ್ಸುರಾಃ |
ಭವತಾಂ ಹಿ ನಿಯೋಜ್ಯೋಽಹಂ ಮಾ ವೋಽತ್ರಾಸ್ತು ವಿಚಾರಣಾ ॥
ಅಗ್ನಿ ದೇವತೆಗಳೇ, ನಿಮಗೆ ಏನು ಮಾಡಬೇಕೆಂದು ಹೇಳಿ. ಎಲ್ಲವನ್ನೂ ಮಾಡುವೆನು. ನಾನು ನಿಮಗೆ ಅಧೀನನಾದವನು. ಈ ವಿಷಯದಲ್ಲಿ ಸಂಶಯ ಪಡುವುದು ಬೇಡ.
ದೇವಾಃ
ಅಸುರಸ್ತಾರಕೋ ನಾಮ ಬ್ರಹ್ಮಣೋ ವರದರ್ಪಿತಃ |
ಅಸ್ಮಾನ್ ಪ್ರಬಾಧತೇ ವೀರ್ಯಾದ್ ವಧಸ್ತಸ್ಯ ವಿಧೀಯತಾಮ್ ॥48॥
ದೇವತೆಗಳು ತಾರಕನೆಂಬ ಅಸುರನು ಬ್ರಹ್ಮದೇವರ ವರದಿಂದ ದರ್ಪಿಷ್ಠನಾಗಿ ತನ್ನ ಪರಾಕ್ರಮದಿಂದ ನಮ್ಮನ್ನು ಬಾಧಿಸುತ್ತಿದ್ದಾನೆ. ಅವನ ವಧೆಯನ್ನು ಮಾಡಬೇಕು.
ಇಮಾನ್ ದೇವಗಣಾಂಸ್ತಾತ ಪ್ರಜಾಪತಿಗಣಾಂಸ್ತಥಾ |
ಋಷೀಂಶ್ಚಾಪಿ ಮಹಾಭಾಗಾನ್ ಪರಿತ್ರಾಯಸ್ವ ಪಾವಕ ॥49॥
ಎಲೈ ಅಗ್ನಿಯೇ, ಪ್ರೀತಿಪಾತ್ರನೇ, ಮಹಾನುಭಾವರಾದ ಋಷಿಗಳನ್ನೂ, ದೇವತಾ ಸಮೂಹವನ್ನೂ ಮತ್ತು ಪ್ರಜಾಪತಿ ಸಮೂಹವನ್ನೂ ರಕ್ಷಿಸುವವನಾಗು.
ಅಪತ್ಯಂ ತೇಜಸಾ ಯುಕ್ತಂ ಪ್ರವೀರಂ ಜನಯ ಪ್ರಭೋ |
ಯದ್ ಭಯಂ ನೋಽಸುರಾತ್ ತಸ್ಮಾನ್ನಾಶಯೇದ್ ಹವ್ಯವಾಹನ ॥
ಎಲೈ ಪ್ರಭುವೇ, ಹವ್ಯವಾಹನನೇ, ನಮಗೆ ಅಸುರನಿಂದ ಉಂಟಾದ ಭಯವನ್ನು ನಾಶಪಡಿಸುವಂತಹ ವೀರನಾದ ಮತ್ತು ನಿನ್ನ ತೇಜಸ್ಸಿನಿಂದ ಕೂಡಿದ ಪುತ್ರನನ್ನು ಪಡೆಯುವವನಾಗು.
ಶಪ್ತಾನಾಂ ನೋ ಮಹಾದೇವ್ಯಾ ನಾನ್ಯದಸ್ತಿ ಪರಾಯಣಮ್ |
ಅನ್ಯತ್ರ ಭವತೋ ವೀರ್ಯಂ ತಸ್ಮಾತ್ ತ್ರಾಯಸ್ವ ನಸ್ತತಃ ॥51॥

ಮಹಾದೇವಿಯಾದ ಪಾರ್ವತಿಯ ಶಾಪಕ್ಕೆ ಒಳಗಾದ ನಮಗೆ ನಿನ್ನ ಪರಾಕ್ರಮವನ್ನು ಬಿಟ್ಟು ಬೇರೆ ಉಪಾಯವಿಲ್ಲ. ಆದ್ದರಿಂದ ನಮ್ಮನ್ನು ಆ ಭಯದಿಂದ ರಕ್ಷಿಸು.
ಇತ್ಯುಕ್ತಃ ಸ ತಥೇತ್ಯುಕತ್ವ ಭಗವಾನ್ ಹವ್ಯಕವ್ಯಭುಕ್ |
ಜಗಾಮಾಥ ದುರಾಧರ್ಷೋ ಗಂಗಾಂ ಭಾಗೀರಥೀಂ ಪ್ರತಿ ॥52॥
ಹೀಗೆ ಹೇಳಲ್ಪಟ್ಟ ಹವ್ಯಕವ್ಯಭೋಜಿಯಾದ ಪೂಜ್ಯನಾದ ಅಗ್ನಿಯು ಹಾಗೆಯೇ ಆಗಲಿ ಎಂದು ಹೇಳಿ ದುರಾಧರ್ಷನಾದ ಅವನು ಭಾಗೀರಥಿಯ ಬಳಿಗೆ ಹೋದನು.
ತಯಾ ಚಾಪ್ಯಭವನ್ ಮಿಶ್ರೋ ಗರ್ಭಶ್ಚಾಸ್ಯಾಭವತ್ ತದಾ |
ವವೃಧೇ ಸ ತದಾ ಗರ್ಭಃ ಕಕ್ಷೇ ಕೃಷ್ಣಗತಿರ್ಯಥಾ ॥53॥
ಅವನು ಅವಳ ಜೊತೆಯಲ್ಲಿ ಸಂಯೋಗವನ್ನು ಹೊಂದಿದನು. ಆಗ ಭಾಗೀರಥಿಗೆ ಗರ್ಭವುಂಟಾಗಿ ಹುಲ್ಲುಗಾವಲಿನಲ್ಲಿ ಬಿದ್ದ ಅಗ್ನಿಯಂತೆ ಅದು ವೃದ್ಧಿಯನ್ನು ಹೊಂದಿತು.
ತೇಜಸಾ ತಸ್ಯ ಗರ್ಭಸ್ಯ ಗಂಗಾ ವಿಹ್ವಲಚೇತನಾ |
ಸಂತಾಪಮಗಮತ್ ತೀವ್ರಂ ಸಾ ಸೋಢುಂ ನ ಶಶಾಕ ಹ ॥54॥
ಆ ಗರ್ಭದ ತೇಜಸ್ಸಿನಿಂದ ಗಂಗೆಯು ವಿಹ್ವಲಳಾದಳು. ತೀವ್ರ ಸಂತಾಪವನ್ನು ಹೊಂದಿದ ಅವಳಿಗೆ ಆ ತೇಜಸ್ಸನ್ನು ಸಹಿಸಲು ಸಾಧ್ಯವಾಗಲಿಲ್ಲ.
ಆಹಿತೇ ಜ್ವಲನೇನಾಥ ಗರ್ಭೇ ತೇಜಃಸಮನ್ವಿತೇ |
ಗಂಗಾಯಾಮಸುರಃ ಕಶ್ಚಿದ್ ಭೈರವಂ ನಾದಮುತ್ಸೃಜತ್ ॥55॥
ಗಂಗೆಯಲ್ಲಿ ಅಗ್ನಿಯಿಂದ ತೇಜೋಯುಕ್ತವಾದ ಗರ್ಭವು ಅರ್ಪಿಸಲ್ಪಡುತ್ತಿರಲು ಒಬ್ಬ ಅಸುರನು ಭೈರವನಾದವನ್ನು ಮಾಡಿದನು.
ಅಬುದ್ಧಿಪತಿತೇನಾಥ ನಾದೇನ ವಿಪುಲೇನ ಸಾ |
ವಿತ್ರಸ್ತೋದ್ಭ್ರಾಂತನಯನಾ ಗಂಗಾ ವಿಪ್ಲುತಲೋಚನಾ |
ವಿಸಂಜ್ಞಾ ನಾಶಕದ್ ಗರ್ಭಂ ಸಂಧಾರಯಿತುಮಾತ್ಮನಾ ॥56॥
ಅಕಸ್ಮಾತ್ತಾಗಿ ಹೊರಬಂದ ವಿಪುಲವಾದ ಆ ನಾದದಿಂದ ಹೆದರಿದ ಜ್ವಲಿಸುವ ಕಣ್ಣುಗಳುಳ್ಳ ವಿಶಾಲಾಕ್ಷಿಯಾದ ಗಂಗೆಯು ವಿಸಂಜ್ಞಳಾಗಿ ಆಗ ಗರ್ಭವನ್ನು ಧರಿಸಲು ಶಕ್ತಳಾಗಲಿಲ್ಲ.
ಸಾ ತು ತೇಜಃಪರೀತಾಂಗೀ ಕಂಪಮಾನಾ ಚ ಜಾಹ್ನವೀ |
ಉವಾಚ ವಚನಂ ವಿಪ್ರ ತದಾ ಗರ್ಭಬಲೋದ್ಧತಾ |
ನ ತೇ ಶಕ್ತಾಸ್ಮಿ ಭಗವಂಸ್ತೇಜಸೋಽಸ್ಯ ವಿಧಾರಣೇ ॥57॥
ಆ ಗರ್ಭದ ತೇಜಸ್ಸು ತನ್ನ ಶರೀರದಲ್ಲಿ ವ್ಯಾಪಿಸಿದ್ದರಿಂದ ಮತ್ತು ಅಸುರನ ನಾದದಿಂದ ನಡುಗುತ್ತಿದ್ದ ಅವಳು ಅಗ್ನಿಯನ್ನು ಕುರಿತು ಪೂಜ್ಯನೇ, ಈ ಗರ್ಭವನ್ನು ಧರಿಸಲು ನನಗೆ ಸಾಧ್ಯವಿಲ್ಲ ಎಂದು ಹೇಳಿದಳು.
ವಿಮೂಢಾಽಸ್ಮಿ ಕೃತಾಽನೇನ ತಥಾಽಸ್ವಾಸ್ಥ್ಯಂ ಕೃತಂ ಪರಮ್ |
ವಿಹ್ವಲಾ ಚಾಸ್ಮಿ ಭಗವಂಸ್ತೇಜೋ ನಷ್ಟಂ ಚ ಮೇಽನಘ ॥58॥
ಈ ಗರ್ಭದಿಂದ ನಾನು ವಿಮೂಢಳಾಗಿದ್ದೇನೆ, ಅಸ್ವಸ್ಥಳಾಗಿದ್ದೇನೆ, ವಿಹ್ವಲಳೂ ಆಗಿದ್ದೇನೆ. ಪೂಜ್ಯನೇ, ಅನಘನೇ, ನನ್ನ ತೇಜಸ್ಸನ್ನು ಕಳೆದುಕೊಂಡಿದ್ದೇನೆ.
ಧಾರಣೇ ನಾಸ್ಯ ಶಕ್ತಾಽಹಂ ಗರ್ಭಸ್ಯ ತಪತಾಂವರ |
ಉತ್ಸ್ರಕ್ಷ್ಯೇಽಹಮಿಮಂ ದುಃಖಾನ್ನ ತು ಕಾಮಾತ್ ಕಥಂಚನ ॥59॥
ಎಲೈ ಜ್ವಲಿಸುವವರಲ್ಲಿ ಶ್ರೇಷ್ಠನೇ, ನಾನು ಈ ಗರ್ಭವನ್ನು ಧರಿಸಲಾರೆ. ನಾನು ತಡೆಯಲಾರದೆ ಇದನ್ನು ವಿಸರ್ಜಿಸುತ್ತಿದ್ದೇನೆ. ಮನಃಪೂರ್ವಕವಾಗಿ ಅಲ್ಲ.
ನ ಚೇತಸೋಽಸ್ತಿ ಸಂಸ್ಪರ್ಶೋ ಮಮ ದೇವ ವಿಭಾವಸೋ |
ಆಪದರ್ಥೇ ಹಿ ಸಂಬಂಧಃ ಸುಸೂಕ್ಷ್ಮೋಽಪಿ ಮಹಾದ್ಯುತೇ ॥60॥
ಎಲೈ ಅಗ್ನಿಯೇ, ಎಲೈ ಮಹಾದ್ಯುತಿಯೇ, ನನ್ನ ಮನಸ್ಸಿಗೂ ಈ ಗರ್ಭಕ್ಕೂ ಯಾವ ಸೂಕ್ಷ್ಮವಾದ ಸಂಬಂಧವೂ ಇಲ್ಲ. ಆಪದ್ಧರ್ಮವಾಗಿ ಮಾತ್ರ ಸಂಬಂಧವಿದೆ.
ಯದತ್ರ ಗುಣಸಂಪನ್ನಮಿತರಂ ವಾ ಹುತಾಶನ |
ತ್ವಯ್ಯೇವ ತದಹಂ ಮನ್ಯೇ ಧರ್ಮಾಧರ್ಮೌ ಚ ಕೇವಲೌ ॥61॥
ಎಲೈ ಅಗ್ನಿಯೇ, ಇದರಲ್ಲಿ ಯಾವ ಗುಣದೋಷಗಳಿದ್ದರೂ, ಧರ್ಮಾಧರ್ಮಗಳಿದ್ದರೂ ಅದು ನಿನಗೇ ಸೇರಿದುದು ಎಂದು ನಾನು ಭಾವಿಸುತ್ತೇನೆ.
ತಾಮುವಾಚ ತತೋ ವಹ್ನಿರ್ಧಾರ್ಯತಾಂ ಧಾರ್ಯತಾಮಯಮ್ |
ಗರ್ಭೋ ಮತ್ತೇಜಸಾ ಯುಕ್ತೋ ಮಹಾಗುಣಫಲೋದಯಃ ॥62॥
ಆಗ ಅಗ್ನಿಯು ಅವಳನ್ನು ಕುರಿತು ಈ ಗರ್ಭವನ್ನು ಧರಿಸು. ನನ್ನ ತೇಜಸ್ಸಿನಿಂದ ಕೂಡಿದ ಈ ಗರ್ಭವು ನಿನಗೆ ಮಹಾಫಲವನ್ನು ಕೊಡುತ್ತದೆ (ಎಂದು ಹೇಳಿದನು).
ಶಕ್ತಾ ಹ್ಯಸಿ ಮಹೀಂ ಕೃತ್ಸ್ನಾಂ ವೋಢುಂ ಧಾರಯಿತುಂ ತಥಾ |
ನ ಹಿ ತೇ ಕಿಂಚಿದಪ್ರಾಪ್ಯಂ ಮದ್ರೇತೋಧಾರಣಾದೃತೇ ॥63॥
ಈ ಸಮಸ್ತವಾದ ಭೂಮಿಯನ್ನು ಹೊರಲು ಮತ್ತು ಧರಿಸಲು ನೀನು ಶಕ್ತಳಾಗಿದ್ದೀಯೆ. ನನ್ನ ಗರ್ಭವನ್ನು ಧಾರಣ ಮಾಡುವುದರಿಂದ

ನಿನಗೆ ಅಪ್ರಾಪ್ಯವಾದ ಫಲವು ಯಾವುದೂ ಇಲ್ಲ (ಎಂದು ಹೇಳಿದನು).
ಸಾ ವಹ್ನಿನಾ ವಾರ್ಯಮಾಣಾ ದೇವೈಶ್ಚಾಪಿ ಸರಿದ್ವರಾ |
ಸಮುತ್ಸಸರ್ಜ ತಂ ಗರ್ಭಂ ಮೇರೌ ಗಿರಿವರೇ ತದಾ ॥64॥
ಅಗ್ನಿಯಿಂದಲೂ ಮತ್ತು ದೇವತೆಗಳಿಂದಲೂ ಹೀಗೆ ನಿಷೇಧಿಸಲ್ಪಡುತ್ತಿದ್ದರೂ ಸರಿತ್ಶ್ರೇಷ್ಠಳಾದ ಗಂಗೆಯು ಆ ಗರ್ಭವನ್ನು ಶ್ರೇಷ್ಠವಾದ ಮೇರುಪರ್ವತದಲ್ಲಿ ವಿಸರ್ಜಿಸಿದಳು.
ಸಮರ್ಥಾ ಧಾರಣೇ ಚಾಪಿ ರುದ್ರತೇಜಃಪ್ರಧರ್ಷಿತಾ |
ನಾಶಕತ್ ತಂ ತದಾ ಗರ್ಭಂ ಸಂಧಾರಯಿತುಮೋಜಸಾ ॥65॥
ಅವಳು ಧಾರಣೆಯನ್ನು ಮಾಡಲು ಸಮರ್ಥಳಾದರೂ ರುದ್ರದೇವರ ತೇಜಸ್ಸಿನಿಂದ ಸಂತಪ್ತಳಾಗಿ ತನ್ನ ಸಾಮರ್ಥ್ಯದಿಂದ ಗರ್ಭವನ್ನು ಧರಿಸಲು ಆಗ ಶಕ್ತಳಾಗಲಿಲ್ಲ.
ಸಾ ಸಮುತ್ಸೃಜ್ಯ ತಂ ದುಃಖಾದ್ ದೀಪ್ತವೈಶ್ವಾನರಪ್ರಭಮ್ |
ದರ್ಶಯಾಮಾಸ ಚಾಗ್ನಿಸ್ತಾಂ ತದಾ ಗಂಗಾಂ ಭೃಗೂದ್ವಹ |
ಪಪ್ರಚ್ಛ ಸರಿತಾಂ ಶ್ರೇಷ್ಠಾಂ ಕಚ್ಚಿದ್ ಗರ್ಭಃ ಸುಖೋದಯಃ ॥66॥
ಜ್ವಲಿಸುವ ಅಗ್ನಿಯ ಕಾಂತಿಯನ್ನು ಹೊಂದಿದ ಆ ಗರ್ಭವನ್ನು ಅವಳು ದುಃಖದಿಂದ ವಿಸರ್ಜಿಸಿದಳು. ಎಲೈ ಭೃಗೂದ್ವಹನೇ, ಅನಂತರ ಅಗ್ನಿಯು ಅವಳಿಗೆ ದರ್ಶನವನ್ನು ಕೊಟ್ಟು ಆ ಶ್ರೇಷ್ಠ ನದಿಯನ್ನು ಕುರಿತು ಗರ್ಭವು ಸುಖವಾಗಿ ಉದಯಿಸಿತೆ ಎಂದು ಪ್ರಶ್ನೆಯನ್ನು ಮಾಡಿದನು.
ಕೀದೃಗ್ವರ್ಣೋಽಪಿ ವಾ ದೇವಿ ಕೀದೃಗ್ರೂಪಶ್ಚ ದೃಶ್ಯತೇ |
ತೇಜಸಾ ಕೇನ ವಾ ಯುಕ್ತಃ ಸರ್ವಮೇತದ್ ಬ್ರುವೀಹಿ ಮೇ ॥67॥
ದೇವಿಯೇ, ಶಿಶುವಿನ ವರ್ಣವೇನು? ರೂಪವೇನು? ಎಂತಹ ತೇಜಸ್ಸಿನಿಂದ ಕೂಡಿದೆ? ಎಲ್ಲವನ್ನೂ ನನಗೆ ಹೇಳು (ಎಂದು ಕೇಳಿದನು).
ಗಂಗಾ
ಜಾತರೂಪಃ ಸ ಗರ್ಭೋ ವೈ ತೇಜಸಾ ತ್ವಮಿವಾನಲ |
ಸುವರ್ಣೋ ವಿಮಲೋ ದೀಪ್ತಃ ಪರ್ವತಂ ಚಾವಭಾಸಯತ್ ॥68॥
ಗಂಗಾ ಆ ಗರ್ಭವು ಸುವರ್ಣಮಯವಾಗಿದೆ. ಎಲೈ ಅಗ್ನಿಯೇ, ತೇಜಸ್ಸಿನಲ್ಲಿ ನಿನ್ನಂತಿದೆ. ಪರಿಶುದ್ಧವಾದ ಪ್ರಕಾಶಿಸುವ ಆ ಸುವರ್ಣವು ತನ್ನ ಕಾಂತಿಯಿಂದ ಪರ್ವತವನ್ನು ಬೆಳಗಿಸಿತು.
ಪದ್ಮೋತ್ಪಲವಿಮಿಶ್ರಾಣಾಂ ಹ್ರದಾನಾಮಿವ ಶೀತಲಃ |
ಗಂಧೋಽಸ್ಯ ಸ ಕದಂಬಾನಾಂ ತುಲ್ಯೋ ವೈ ತಪತಾಂವರ ॥69॥
ಪದ್ಮೋತ್ಪಲ ಮಿಶ್ರಿತವಾದ ಸರೋವರದಂತೆ ಅದರ ಸ್ಪರ್ಶವು ಶೀತಲವಾಗಿದೆ. ಎಲೈ ಅಗ್ನಿಯೇ, ಆ ಶಿಶುವಿನ ಗಂಧವು ಕದಂಬ ಪುಷ್ಪಗಳ ಗಂಧಕ್ಕೆ ಸಮವಾಗಿದೆ.
ತೇಜಸಾ ತಸ್ಯ ಗರ್ಭಸ್ಯ ಭಾಸ್ಕರಸ್ಯೇವ ರಶ್ಮಿಭಿಃ |
ಯದ್ ದ್ರವ್ಯಂ ಪರಿಸಂಸೃಷ್ಟಂ ಪೃಥಿವ್ಯಾಂ ಪರ್ವತೇಷು ವಾ |
ತತ್ಸರ್ವಂ ಕಾಂಚನೀಭೂತಂ ಸಮಂತಾತ್ ಪ್ರತ್ಯದೃಶ್ಯತ ॥70॥
ಸೂರ್ಯಕಿರಣಗಳನ್ನು ಹೋಲುವ ಆ ಗರ್ಭದ ತೇಜಸ್ಸಿನಿಂದ ಭೂಮಿಯಲ್ಲಿ ಮತ್ತು ಪರ್ವತಗಳಲ್ಲಿ ಯಾವ ದ್ರವ್ಯವು ಸಂಯೋಗವನ್ನು ಹೊಂದಿತೋ ಅದೆಲ್ಲವೂ ಸುತ್ತಲೂ ಸುವರ್ಣವಾಗಿಯೇ ತೋರುತ್ತಿದ್ದಿತು.
ಪರ್ಯಧಾವತ ಶೈಲಾಂಶ್ಚ ನದೀಃ ಪ್ರಸ್ರವಣಾನಿ ಚ |
ವ್ಯದೀಪಯತ್ ತೇಜಸಾ ಚ ತ್ರೈಲೋಕ್ಯಂ ಸಚರಾಚರಮ್ ॥71॥
ಆ ಶಿಶುವು ಓಡಾಡುತ್ತಾ ತನ್ನ ತೇಜಸ್ಸಿನಿಂದ ಪರ್ವತಗಳನ್ನೂ, ನದಿಗಳನ್ನೂ, ಝರಿಗಳನ್ನೂ, ಚರಾಚರ ಮೂರು ಲೋಕವನ್ನೂ ಬೆಳಗಿಸಿತು.
ಏವಂರೂಪಃ ಸ ಭಗವಾನ್ ಪುತ್ರಸ್ತೇ ಹವ್ಯವಾಹನ |
ಸೂರ್ಯವೈಶ್ವಾನರಸಮಃ ಕಾಂತ್ಯಾ ಸೋಮ ಇವಾಪರಃ |
ಏವಮುಕತ್ವ ತು ಸಾ ದೇವೀ ತತ್ರೈವಾಂತರಧೀಯತ ॥72॥
ಎಲೈ ಹವ್ಯವಾಹನನೇ, ನಿನ್ನ ಪೂಜ್ಯನಾದ ಪುತ್ರನು ಇಂತಹ ಗುಣವುಳ್ಳವನು. ತೇಜಸ್ಸಿನಲ್ಲಿ ಸೂರ್ಯನಿಗೂ, ಅಗ್ನಿಗೂ ಸಮಾನನಾದವನು. ಕಾಂತಿಯಲ್ಲಿ ಇನ್ನೊಬ್ಬ ಚಂದ್ರನಂತಿರುವವನು. ಹೀಗೆ ಹೇಳಿ ಗಂಗಾದೇವಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು.
ಪಾವಕಶ್ಚಾಪಿ ತೇಜಸ್ವೀ ಕೃತ್ವಾ ಕಾರ್ಯಂ ದಿವೌಕಸಾಮ್ |
ಜಗಾಮೇಷ್ಟಂ ತತೋ ದೇಶಂ ತದಾ ಭಾರ್ಗವನಂದನ ॥73॥
ಎಲೈ ಭಾರ್ಗವನಂದನನೇ, ತೇಜಸ್ವಿಯಾದ ಅಗ್ನಿಯೂ ಕೂಡ ದೇವತೆಗಳ ಕಾರ್ಯವನ್ನು ನೆರವೇರಿಸಿ ತನಗೆ ಇಷ್ಟವಾದ ದೇಶಕ್ಕೆ ಹೊರಟು ಹೋದನು.
ಏತೈಃ ಕರ್ಮಗುಣೈರ್ಲೋಕೇ ನಾಮಾಗ್ನೇಃ ಪರಿಗೀಯತೇ |
ಹಿರಣ್ಯರೇತಾ ಇತಿ ವೈ ಋಷಿಭಿರ್ವಿಬುಧೈಸ್ತಥಾ |
ಪೃಥಿವೀ ಚ ತದಾ ದೇವೀ ಖ್ಯಾತಾ ವಸುಮತೀತಿ ವೈ ॥74॥
ಈ ಕರ್ಮಗಳಿಂದಲೂ ಮತ್ತು ಗುಣಗಳಿಂದಲೂ ಲೋಕದಲ್ಲಿ ಅಗ್ನಿಯ ಹೆಸರು ಗಾನ ಮಾಡಲ್ಪಡುತ್ತದೆ. ಋಷಿಗಳು ಮತ್ತು

ದೇವತೆಗಳು ಅವನನ್ನು ಹಿರಣ್ಯರೇತ ಎಂದು ಕರೆಯುತ್ತಾರಷ್ಟೇ? ಆಗ ಭೂದೇವಿಯೂ ಸಹ ವಸುಮತೀ ಎಂದು ಪ್ರಖ್ಯಾತಳಾದಳು.
ಸ ತು ಗರ್ಭೋ ಮಹಾತೇಜಾ ಗಾಂಗೇಯಃ ಪಾವಕೋದ್ಭವಃ |
ದಿವ್ಯಂ ಶರವಣಂ ಪ್ರಾಪ್ಯ ವವೃಧೇಽದ್ಭುತದರ್ಶನಃ ||75||
ಅಗ್ನಿಯಿಂದ ಗಂಗೆಯಲ್ಲಿ ಉಂಟಾದ ಮಹಾತೇಜಸ್ವಿಯಾದ ಆ ಶಿಶುವು ದಿವ್ಯವಾದ ಶರವಣಕ್ಕೆ ಹೋಗಿ ಅದ್ಭುತ ದರ್ಶನವನ್ನು ಹೊಂದಿ ಬೆಳೆಯಿತು.
ದದೃಶುಃ ಕೃತ್ತಿಕಾಸ್ತಂ ತು ಬಾಲಾರ್ಕಸದೃಶದ್ಯುತಿಮ್ |
ಜಾತಸ್ನೇಹಾಶ್ಚ ತಂ ಬಾಲಂ ಪುಪುಷುಃ ಸ್ತನ್ಯವಿಸ್ರವೈಃ ||76||
ಬಾಲಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಆ ಶಿಶುವನ್ನುನೋಡಿ ಕೃತ್ತಿಕೆಯರು ಅದರಲ್ಲಿ ಸ್ನೇಹವನ್ನು ಹೊಂದಿ ತಮ್ಮ ಸ್ತನ್ಯಗಳಿಂದ ಆ ಶಿಶುವನ್ನು ಪೋಷಿಸಿದರು.
ತತಃ ಸ ಕಾರ್ತ್ತಿಕೇಯತ್ವಮವಾಪ ಪರಮದ್ಯುತಿಃ |
ಸ್ಕನ್ನತ್ವಾತ್ ಸ್ಕಂದತಾಂ ಚಾಪಿ ಗುಹಾವಾಸಾದ್ ಗುಹೋಽಭವತ್ ||77||
ಆ ಕಾರಣದಿಂದ ಪರಮದ್ಯುತಿಯುಳ್ಳ ಅವನು ಕಾರ್ತಿಕೇಯನೆನಿಸಿಕೊಂಡನು. ರುದ್ರನ ದೇಹದಿಂದ ಜಾರಿದುದರಿಂದ ಸ್ಕಂದನೆಂದೂ, ಗುಹೆಯಲ್ಲಿ ವಾಸ ಮಾಡಿದುದರಿಂದ ಗುಹನೆಂದೂ ಕರೆಯಲ್ಪಟ್ಟನು.
ಏವಂ ಸುವರ್ಣಮುತ್ಪನ್ನಮಪತ್ಯಂ ಜಾತವೇದಸಃ |
ತತ್ರ ಜಾಂಬೂನದಂ ಶ್ರೇಷ್ಠಂ ದೇವಾನಾಮಪಿ ಭೂಷಣಮ್ ||78||
ಹೀಗೆ ಸುವರ್ಣವು ಅಗ್ನಿಯ ಪುತ್ರರೂಪದಲ್ಲಿ ಉದ್ಭವಿಸಿತು (ಆ ಸುವರ್ಣದಲ್ಲಿ ಅನೇಕ ಪ್ರಭೇದಗಳಿವೆ). ಅದರಲ್ಲಿ ಜಾಂಬೂನದವೆಂಬ ಸುವರ್ಣವು ಶ್ರೇಷ್ಠವಾದುದು ಮತ್ತು ದೇವತೆಗಳಿಗೂ ಭೂಷಣವಾದುದು.
ತತಃಪ್ರಭೃತಿ ಚಾಪ್ಯೇತಜ್ಜಾತರೂಪಮುದಾಹೃತಮ್ |
ಯತ್ಸುವರ್ಣಂ ಸ ಭಗವಾನಗ್ನಿರೀಶಃ ಪ್ರಜಾಪತಿಃ ||79||
ಆಗಿನಿಂದ ಪ್ರಾರಂಭಿಸಿ ಸುವರ್ಣವನ್ನು ಜಾತರೂಪವೆಂದು ಕರೆಯುತ್ತಾರೆ. ಸುವರ್ಣವು ಪೂಜ್ಯನಾದ ಅಗ್ನಿಯ ರೂಪವನ್ನು ಹೊಂದಿರುವುದು. ಈಶ್ವರನ ರೂಪವನ್ನು ಹೊಂದಿರುವುದು ಮತ್ತು ಪ್ರಜಾಪತಿಯ ರೂಪವನ್ನು ಹೊಂದಿರುವುದು.
ಪವಿತ್ರಾಣಾಂ ಪವಿತ್ರಂ ಹಿ ಕನಕಂ ದ್ವಿಜಸತ್ತಮ |
ಅಗ್ನೀಷೋಮಾತ್ಮಕಂ ಚೈವ ಜಾತರೂಪಮುದಾಹೃತಮ್ ||80||
ಎಲೈ ದ್ವಿಜಶ್ರೇಷ್ಠನೇ, ಸುವರ್ಣವು ಪವಿತ್ರಗಳಲ್ಲಿ ಪವಿತ್ರವಾದುದು. ಅದನ್ನು ಅಗ್ನಿ ಮತ್ತು ಚಂದ್ರಾತ್ಮಕವಾದುದು ಎಂದು ಕರೆಯುತ್ತಾರೆ.
ರತ್ನಾನಾಮುತ್ತಮಂ ರತ್ನಂ ಭೂಷಣಾನಾಂ ತಥೋತ್ತಮಮ್ |
ಪವಿತ್ರಂ ಚ ಪವಿತ್ರಾಣಾಂ ಮಂಗಲಾನಾಂ ಚ ಮಂಗಲಮ್ ||81||
ಅದು ರತ್ನಗಳಲ್ಲಿ ಉತ್ತಮವಾದ ರತ್ನ. ಭೂಷಣಗಳಲ್ಲಿ ಉತ್ತಮವಾದ ಭೂಷಣ. ಪವಿತ್ರಗಳಲ್ಲಿ ಉತ್ತಮವಾದ ಪವಿತ್ರ ಮತ್ತು ಮಂಗಳಗಳಲ್ಲಿ ಉತ್ತಮವಾದ ಮಂಗಳ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಕಾರ್ತಿಕೇಯೋತ್ಪತ್ತಿರ್ನಾಮ
ಷಟ್‌ವಿಂಶತ್ಯಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೇಳನೆಯ ಅಧ್ಯಾಯ
ಸುವರ್ಣ ಮಹಿಮೆ
ವಸಿಷ್ಠಃ
ಅಪಿ ಚೇದಂ ಪುರಾ ರಾಮ ಶ್ರುತಂ ಮೇ ಬ್ರಹ್ಮದರ್ಶನಮ್ |
ಪಿತಾಮಹಸ್ಯ ಯದ್ ವೃತ್ತಂ ಬ್ರಹ್ಮಣಃ ಪರಮೇಷ್ಠಿನಃ ||1||
ದೇವಸ್ಯ ಮಹತಸ್ತಾತ ವಾರುಣೀಂ ಬಿಭ್ರತಸ್ತನುಮ್ |
ಐಶ್ವರ್ಯೇ ವಾರುಣೇ ರಾಮ ರುದ್ರಸ್ಯೇಶಸ್ಯ ವೈ ಪ್ರಭೋ ||2||
ವಸಿಷ್ಠ ಎಲೈ ಪರಶುರಾಮನೇ, ಪ್ರೀತಿಪಾತ್ರನೇ, ಹಿಂದೆ ರುದ್ರನು ಯಾಗ ಮಾಡುವ ಸಮಯದಲ್ಲಿ ಮಹತತ್ತ್ವಾಭಿಮಾನಿಗಳಾದ ಬ್ರಹ್ಮದೇವರಿಗೆ ಏನಾಯಿತು ಎಂಬುದನ್ನು ನಾನು ಕೇಳಿದ್ದೇನೆ. ಹಾಗೆಯೇ ರುದ್ರನು ವರುಣನ ದೇಹವನ್ನು ಧರಿಸಿ ಯಾಗವನ್ನು ಮಾಡುವಾಗ ವರುಣನ ಯಜ್ಞೈಶ್ವರ್ಯ ವಿಷಯದಲ್ಲಿ ಏನು ನಡೆಯಿತೆಂಬುದನ್ನೂ ನಾನು ಕೇಳಿದ್ದೇನೆ. ಎಲೈ ಪ್ರಭುವೇ, ಅದನ್ನು ನಿನಗೆ ಹೇಳುವೆನು.
ಆಜಗ್ಮುರ್ಮುನಯಃ ಸರ್ವೇ ದೇವಾಶ್ಚಾಗ್ನಿಪುರೋಗಮಾಃ |
ಯಜ್ಞಾಂಗಾನಿ ಚ ಸರ್ವಾಣಿ ವಷಟ್ಕಾರಶ್ಚ ಮೂರ್ತಿಮಾನ್ ||3||
ಆ ಯಜ್ಞಕ್ಕೆ ಎಲ್ಲ ಋಷಿಗಳೂ, ಅಗ್ನಿ ಮೊದಲಾದ ದೇವತೆಗಳೂ, ಯಜ್ಞಾಂಗಗಳೂ, ವಷಟ್ಕಾರವೂ ದೇಹವನ್ನು ಧರಿಸಿ ಬಂದವು.
ಮೂರ್ತಿಮಂತಿ ಚ ಸಾಮಾನಿ ಯಜೂಂಷಿ ಚ ಸಹಸ್ರಶಃ |
ಋಗ್ವೇದಶ್ಚಾಗಮತ್ ತತ್ರ ಪದಕ್ರಮವಿಭೂಷಿತಃ ||4||

ಪದಕ್ರಮಸಹಿತವಾದ ಋಗ್ವೇದ, ಯಜುರ್ವೇದ, ಸಾಮವೇದಗಳು ದೇಹವನ್ನು ಧರಿಸಿ ಅಲ್ಲಿಗೆ ಬಂದವು.
ಲಕ್ಷಣಾನಿ ಸ್ವರಾಃ ಸ್ತೋಭಾ ನಿರುಕ್ತಂ ಸ್ವರಭಕ್ತಯಃ |
ಓಂಕಾರಶ್ಚಾವಸನ್ ನೇತ್ರೇ ನಿಗ್ರಹಪ್ರಗ್ರಹೌ ತಥಾ ॥5॥
ಪ್ರಾತಿಶಾಖ್ಯ ಮೊದಲಾದ ಲಕ್ಷಣಶಾಸ್ತ್ರಗಳೂ, ಸ್ವರಗಳೂ, ಸ್ತೋಭಾಕ್ಷರಗಳೂ, ನಿರುಕ್ತ, ಸಾಮಸ್ವರಭಕ್ತಿಗಳು ಎಲ್ಲವೂ ದೇಹವನ್ನು ಧರಿಸಿ ಅಲ್ಲಿಗೆ ಬಂದವು. ಓಂಕಾರ, ನಿಗ್ರಹ ಮತ್ತು ಪ್ರಗ್ರಹಗಳು ರುದ್ರನ ಕಣ್ಣುಗಳಲ್ಲಿ ವಾಸ ಮಾಡಿದವು.
ವೇದಾಶ್ಚ ಸೋಪನಿಷದೋ ವಿದ್ಯಾ ಸಾವಿತ್ರ್ಯಥಾಪಿ ಚ |
ಭೂತಂ ಭವ್ಯಂ ಭವಿಷ್ಯಚ್ಚ ದಧಾರ ಭಗವಾನ್ ಶಿವಃ |
ಜುಹ್ವಚ್ಚಾತ್ಮನ್ಯಥಾತ್ಮಾನಂ ಸ್ವಯಮೇವ ತದಾ ಪ್ರಭೋ ॥6॥
ಭಗವಂತನಾದ ಶಿವನು ವೇದಗಳನ್ನೂ, ಉಪನಿಷತ್ತುಗಳನ್ನೂ, ವಿದ್ಯೆಗಳನ್ನೂ ತನ್ನ ಅಂತರ್ಯಾಮಿಯಾದ ಪರಮಾತ್ಮನಿಗೆ ತನ್ನನ್ನೂ ತಾನೇ ಹೋಮ ಮಾಡಿಕೊಂಡನು.
ದೇವಪತ್ನ್ಯಶ್ಚ ಕನ್ಯಾಶ್ಚ ದೇವಾನಾಂ ಚೈವ ಮಾತರಃ |
ಆಜಗ್ಮುಃ ಸಹಿತಾಸ್ತತ್ರ ತದಾ ಭೃಗುಕುಲೋದ್ವಹ ॥7॥
ಯಜ್ಞಂ ಪಶುಪತೇಃ ಪ್ರೀತಾ ವರುಣಸ್ಯ ಮಹಾತ್ಮನಃ |
ಸ್ವಯಂಭುವಸ್ತು ತಾ ದೃಷ್ಟ್ವಾ ರೇತಃ ಸಮಪತದ್ ಭುವಿ ॥8॥
ಎಲೈ ಭೃಗುಕುಲೋದ್ವಹನೇ, ಪಶುಪತಿಯು ಮಾಡಿದ ಮಹಾತ್ಮನಾದ ವರುಣನ ಯಜ್ಞಕ್ಕೆ ದೇವಪತ್ನಿಯರು, ದೇವಮಾತೆಯರು ಮತ್ತು ದೇವಕನ್ಯೆಯರು ಎಲ್ಲರೂ ಸಂತೋಷದಿಂದ ಬಂದರು. ಆ ಕನ್ಯೆಯರನ್ನು ನೋಡಿದ ಬ್ರಹ್ಮದೇವರಿಗೆ ರೇತಃಸ್ಖಲನವಾಗಿ ಅದು ಭೂಮಿಯಲ್ಲಿ ಬಿದ್ದಿತು.
ಈ ಯಜ್ಞದಲ್ಲಿ ವರುಣನು ನಿಮಿತ್ತ ಮಾತ್ರ. ವರುಣನ ಒಳಗೆ ನಿಯಾಮಕನಾಗಿದ್ದು ವರುಣಪದವಾಚ್ಯನಾದ ಮಹಾತ್ಮನಾದ ಪಶುಪತಿಯೇ ಯಜ್ಞವನ್ನು ಮಾಡುವವನು ಎಂಬ ಅಭಿಪ್ರಾಯದಿಂದ ವರುಣನ ಯಜ್ಞ, ರುದ್ರನ ಯಜ್ಞ ಎಂಬ ಆಪತತಃ ಸಂಶಯಕಾರಕವಾದ ವಚನವಿದೆ - ಲಕ್ಷಾಲಂಕಾರ.
ತಸ್ಯ ಶುಕ್ರಸ್ಯ ನಿಷ್ಯಂದಾತ್ ಪಾಂಸೂನ್ ಸಂಗೃಹ್ಯ ಭೂಮಿತಃ |
ಪ್ರಾಸ್ಯತ್ ಪೂಷಾ ಕರಾಭ್ಯಾಂ ವೈ ತಸ್ಮಿನ್ನೇವ ಹುತಾಶನೇ ॥9॥
ಪೂಷಾ ದೇವತೆಯು ಕೆಳಗೆ ಭೂಮಿಯಲ್ಲಿ ಬಿದ್ದ ಆ ವೀರ್ಯದ ಜೊತೆಯಲ್ಲಿ ಸ್ವಲ್ಪ ಧೂಳನ್ನೂ ತೆಗೆದುಕೊಂಡು ಎರಡು ಕೈಗಳಿಂದ ಅದೇ ಅಗ್ನಿಯಲ್ಲಿ ಹೋಮ ಮಾಡಿದನು.
ತತಸ್ತಸ್ಮಿನ್ ಸಂಪ್ರವೃತ್ತೇ ಸತ್ರೇ ಜ್ವಲಿತಪಾವಕೇ |
ಬ್ರಹ್ಮಣೋ ಜುಹ್ವತಸ್ತತ್ರ ಪ್ರಾದುರ್ಭಾವೋ ಬಭೂವ ಹ ॥10॥
ಆ ಯಾಗದಲ್ಲಿ ಜ್ವಲಿಸುವ ಅಗ್ನಿಯಲ್ಲಿ ಹಾಗೆ ಹೋಮ ಮಾಡುತ್ತಿರಲು ಬ್ರಹ್ಮದೇವರಿಗೆ ಪುನಃ ವೀರ್ಯದ ಪ್ರಾದುರ್ಭಾವವುಂಟಾಯಿತು.
ಸ್ಕನ್ನಮಾತ್ರಂ ಚ ತಚ್ಛುಕ್ರಂ ಸ್ರುವೇಣ ಪ್ರತಿಗೃಹ್ಯ ಸಃ |
ಆಜ್ಯವನ್ಮಂತ್ರವಚ್ಚಾಪಿ ಸೋಽಜುಹೋದ್ ಭೃಗುನಂದನ ॥11॥
ಎಲೈ ಭೃಗುನಂದನನೇ, ಆ ವೀರ್ಯವನ್ನು ಬ್ರಹ್ಮದೇವರು ಸ್ರುವದಲ್ಲಿ ತೆಗೆದುಕೊಂಡು ಆಜ್ಯಭಾಗದಿಂದ ಹೋಮವನ್ನು ಮಾಡುವಂತೆ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದರು.
ತತಃ ಸಂಜನಯಾಮಾಸ ಭೂತಗ್ರಾಮಂ ಸ ವೀರ್ಯವಾನ್ |
ತತಸ್ತು ತೇಜಸಸ್ತಸ್ಮಾಜ್ಜಜ್ಞೇ ಲೋಕೇಷು ತೈಜಸಮ್ ॥12॥
ಪ್ರಶಸ್ತವಾದ ವೀರ್ಯವುಳ್ಳ ಅವರು ಆ ಪ್ರಕ್ರಿಯೆಯಿಂದ ಎಲ್ಲ ಪ್ರಾಣಿಗಳ ಸಮೂಹವನ್ನು ಸೃಷ್ಟಿಸಿದರು. ವೀರ್ಯದಲ್ಲಿದ್ದ ತೇಜಸ್ಸಿನಿಂದ ಲೋಕದಲ್ಲಿ ರಜೋಗುಣವು ಜನಿಸಿತು.
ತಮಸಸ್ತಾಮಸಾ ಭಾವಾ ವ್ಯಾಪಿ ಸತ್ತ್ವಂ ತಥೋಭಯಮ್ |
ಸಗುಣಸ್ತೇಜಸೋ ನಿತ್ಯಂ ತಮಸ ಆಕಾಶ ಏವ ಚ ॥13॥
ವೀರ್ಯದಲ್ಲಿದ್ದ ತಮೋಭಾಗದಿಂದ ತಮೋಗುಣವೂ ಮತ್ತು ತಾಮಸ ಪದಾರ್ಥಗಳೂ ಹುಟ್ಟಿದವು. ಸತ್ವಗುಣವು ರಜೋಗುಣ ಮತ್ತು ತಮೋಗುಣವನ್ನು ವ್ಯಾಪಿಸಿಕೊಂಡಿದ್ದಿತು. ಶಬ್ದಗುಣ ಸಹಿತವಾದ ಆಕಾಶವು ತಮೋಗುಣದಿಂದಲೂ ಮತ್ತು ರಜೋಗುಣದಿಂದಲೂ ಜನಿಸಿತು. ರಜೋಗುಣದಿಂದ ಶಬ್ದರೂಪವಾದ ಗುಣವೂ, ತಮೋಗುಣದಿಂದ ಆಕಾಶರೂಪವಾದ ದ್ರವ್ಯವೂ ಜನಿಸಿತು ಎಂದು ವಿಶ್ಲೇಷಣೆ - ಲಕ್ಷಾಲಂಕಾರ.
ಸರ್ವಭೂತೇಷ್ವಥ ತಥಾ ಸತ್ತ್ವಂ ತೇಜಸ್ತಥಾ ತಮಃ |
ಶುಕ್ರೇ ಹುತೇಽಗ್ನೌ ತಸ್ಮಿಂಸ್ತು ಪ್ರಾದುರಾಸಂಸ್ತ್ರಯಃ ಪ್ರಭೋ ॥14॥
ಪುರುಷಾ ವಪುಷಾ ಯುಕ್ತಾ ಯುಕ್ತಾಃ ಪ್ರಸವಜೈರ್ಗುಣೈಃ |
ಭೃಗಿತ್ಯೇವ ಭೃಗುಃ ಪೂರ್ವಮಂಗಾರೇಭ್ಯೋಽಂಗಿರಾಭವತ್ ॥15॥
ಹಾಗೆಯೇ ಜನಿಸಿದ ಎಲ್ಲ ಪ್ರಾಣಿಗಳಲ್ಲಿಯೂ ಸತ್ವ-ರಜಸ್-ತಮೋಗುಣಗಳು ಸೇರಿಕೊಂಡವು. ಎಲೈ ಪ್ರಭುವೇ, ವೀರ್ಯವು ಆ ಅಗ್ನಿಯಲ್ಲಿ ಹೋಮ ಮಾಡಲ್ಪಡುತ್ತಿರಲು ಆ ಅಗ್ನಿಯಿಂದ ತಮ್ಮ ಸ್ವಾಭಾವಿಕ ಗುಣಗಳಿಂದ ಕೂಡಿದ ಶರೀರಯುಕ್ತರಾದ ಮೂರು ಪುರುಷರು ಪ್ರಾದುರ್ಭೂತರಾದರು. ಅಗ್ನಿಯಲ್ಲಿ ಹವಿಸ್ಸನ್ನು ಹಾಕುವಾಗ ಅಗ್ನಿಯು ಅದನ್ನು ಹಿಡಿಯುವಾಗ ಉಂಟಾಗುವ ಭುಕ್ ಶಬ್ದದಿಂದ ಭೃಗುವೂ, ಕೆಂಡಗಳಿಂದ ಅಂಗಿರಸರೂ ಪ್ರಾದುರ್ಭೂತರಾದರು.

ಅಂಗಾರಸಂಶ್ರಯಾಚ್ಚೈವ ಕವಿರಿತ್ಯಪರೋಽಭವತ್ |
ಸಹ ಜ್ವಾಲಾಭಿರುತ್ಪನ್ನೋ ಭೃಗುಸ್ತಸ್ಮಾದ್ ಭೃಗುಃ ಸ್ಮೃತಃ ॥16॥
ಕೆಂಡಗಳ ಜೊತೆಯಲ್ಲಿ ಜ್ವಾಲೆಯಿಂದಲೂ ಕೂಡಿ ಕವಿ ಎಂಬ ಇನ್ನೊಬ್ಬ ಪುರುಷನು ಪ್ರಾದುರ್ಭೂತನಾದನು. ಮೇಲೆ ಹೇಳಿದ ಕಾರಣದಿಂದ ಭೃಗುವು ಭೃಗುವೆಂದು ಕರೆಸಿಕೊಳ್ಳಲ್ಪಡುತ್ತಾರೆ.
ಮರೀಚಿಭ್ಯೋ ಮರೀಚಿಸ್ತು ಮಾರೀಚಃ ಕಶ್ಯಪೋ ಹ್ಯಭೂತ್ |
ಅಂಗಿರೇಭ್ಯೋಽಂಗಿರಾಸ್ತಾತ ವಾಲಖಿಲ್ಯಾಃ ಶಿಲೋಚ್ಚಯಾತ್ |
ಅತ್ರೈವಾತ್ರೇತಿ ಚ ವಿಭೋ ಜಾತಮತ್ರಿಂ ವದಂತ್ಯಪಿ ॥17॥
ಹೋಮಾಗ್ನಿಯ ಕಿರಣಗಳಿಂದ ಮರೀಚಿ ಋಷಿಯು ಜನಿಸಿದನು. ಕಶ್ಯಪರು ಮರೀಚಿಯ ಪುತ್ರರಾಗಿ ಜನಿಸಿದರು. ಎಲೈ ಪ್ರೀತಿಪಾತ್ರನೇ, ಅಂಗಿರಸರು ಅಗ್ನಿಯ ಕೆಂಡಗಳಿಂದಲೂ, ವಾಲಖಿಲ್ಯರು ದರ್ಭೆಯ ಸಮೂಹದಿಂದಲೂ ಜನಿಸಿದರು. ಜ್ವಾಲೆಯನ್ನು ಉಂಟುಮಾಡುವುದಕ್ಕಾಗಿ ಇಲ್ಲಿ ಆಹುತಿಯನ್ನು ಹಾಕಿ, ಇಲ್ಲಿ ಆಹುತಿಯನ್ನು ಹಾಕಿ (ಅತ್ರ ಅತ್ರ) ಎಂದು ಹೇಳುತ್ತಿರುವಾಗ ಅತ್ರಿಗಳು ಜನಿಸಿದರು.
ತಥಾ ಭಸ್ಮವ್ಯಪೋಹೇಭ್ಯೋ ಬ್ರಹ್ಮರ್ಷಿಗಣಸಮ್ಮಿತಾಃ |
ವೈಖಾನಸಾಃ ಸಮುತ್ಪನ್ನಾಸ್ತಪಃಶ್ರುತಗುಣೇಪ್ಸವಃ |
ಅಶ್ರುಭ್ಯೋಽಸ್ಯ ಸಮುತ್ಪನ್ನಾವಶ್ವಿನೌ ರೂಪಸಮ್ಮತೌ ॥18॥
ಹಾಗೆಯೇ ಭಸ್ಮಸಮೂಹದಿಂದ ಬ್ರಹ್ಮರ್ಷಿಗಣ ಸಮಾನರಾದ, ತಪಸ್ಸನ್ನು, ವಿದ್ಯೆಯನ್ನು, ಗುಣಗಳನ್ನು ಪಡೆಯಲು ಅಪೇಕ್ಷಿಸುವ ವೈಖಾನಸರು ಜನಿಸಿದರು. ಅಗ್ನಿಯು ಅನೇಕ ಸೋಮಲತೆಗಳನ್ನು ಆಸ್ವಾದಿಸಿ ಸುರಿಸಿದ ಸಂತೋಷದ ಕಣ್ಣೀರುಗಳಿಂದ ರೂಪಸಮ್ಮತರಾದ ಅಶ್ವಿನೀದೇವತೆಗಳು ಜನಿಸಿದರು.
ಶೇಷಾಃ ಪ್ರಜಾನಾಂ ಪತಯಃ ಸ್ರೋತೋಭ್ಯಸ್ತಸ್ಯ ಜಜ್ಞಿರೇ |
ಋಷಯೋ ಲೋಮಕೂಪೇಭ್ಯಃ ಸ್ವೇದಾಚ್ಛಂದೋಽಮಲಾತ್ಮಕಮ್ ॥19॥
ಉಳಿದ ಪ್ರಜಾಪತಿಗಳು ಅಗ್ನಿಯ ಸ್ರೋತಸ್ಸುಗಳಿಂದ ಜನಿಸಿದರು. ರೋಮ ಕೂಪಗಳಿಂದ ಋಷಿಗಳು ಜನಿಸಿದರು. ಪವಿತ್ರವಾದ ಛಂದಸ್ಸುಗಳು ಸ್ವೇದದಿಂದ ಜನಿಸಿದವು.
ಏತಸ್ಮಾತ್ಕಾರಣಾದಾಹುರಗ್ನಿಂ ಸರ್ವಾಸ್ತು ದೇವತಾಃ |
ಋಷಯಃ ಶ್ರುತಸಂಪನ್ನಾ ವೇದಪ್ರಾಮಾಣ್ಯದರ್ಶನಾತ್ ॥20॥
ಈ ಕಾರಣದಿಂದ (ಅಗ್ನಿಯಿಂದಲೇ ಎಲ್ಲ ದೇವತೆಗಳು ಹೊರಬಂದ ಕಾರಣದಿಂದ) ವೇದಪ್ರಾಮಾಣ್ಯವನ್ನು ಅನುಸರಿಸಿ ವಿದ್ಯಾವಂತರಾದ ಋಷಿಗಳು ಅಗ್ನಿಯೇ ಸರ್ವದೇವತೆಗಳು ಎಂದು ಹೇಳುತ್ತಾರೆ.
ಯಾನಿ ದಾರೂಣಿ ತೇ ಮಾಸಾ ನಿರ್ಯಾಸಾಃ ಪಕ್ಷಸಂಜ್ಞಿತಾಃ |
ಅಹೋರಾತ್ರಾ ಮುಹೂರ್ತಾಸ್ತು ಪಿತ್ತಂ ಜ್ಯೋತಿಶ್ಚ ವಾರುಣಮ್ ॥21॥
ಹೋಮದ ಕಟ್ಟಿಗೆಗಳು ಮಾಸಗಳು, ಕಟ್ಟಿಗೆಗಳಲ್ಲಿ ಬರುವ ದ್ರವವು ಪಕ್ಷಗಳು. ಅಹೋರಾತ್ರಿ ಮತ್ತು ಮುಹೂರ್ತಗಳು ಅಗ್ನಿಯ ಪಿತ್ತರಸವಾದವು. ಅಗ್ನಿಯಲ್ಲಿರುವ ಜ್ಯೋತಿಯು ವರುಣನ ಸಂಬಂಧಿಯಾದುದು (ಮಾಸಾದಿ ಅಭಿಮಾನಿ ದೇವತೆಗಳು ಅಗ್ನಿಯಿಂದ ಹೊರಬಂದರು ಎಂದು ಅಭಿಪ್ರಾಯ).
ರೌದ್ರಂ ಲೋಹಿತಮಿತ್ಯಾಹುರ್ಲೋಹಿತಾತ್ ಕನಕಂ ಸ್ಮೃತಮ್ |
ತನ್ಮೈತ್ರಮಿತಿ ವಿಜ್ಞೇಯಂ ಧೂಮಾಚ್ಚ ವಸವಃ ಸ್ಮೃತಾಃ ॥22॥
ಅಗ್ನಿಯ ಲೋಹಿತವು ರುದ್ರಸಂಬಂಧಿಯಾದುದು ಎಂದು ಹೇಳುತ್ತಾರೆ. ಲೋಹಿತದಿಂದ ಕನಕವು (ಸುವರ್ಣವು) ಉಂಟಾಯಿತು. ಸುವರ್ಣವನ್ನು ಅನ್ಯೋನ್ಯ ಪ್ರೀತಿಜನಕವೆಂದು ತಿಳಿಯಬೇಕು. ಧೂಮದಿಂದ ವಸುಗಳು ಜನಿಸಿದರು -ಲಕ್ಷಾಲಂಕಾರ.
ಅರ್ಚಿಷೋ ಯಾಶ್ಚ ತೇ ರುದ್ರಾಸ್ತಥಾಽದಿತ್ಯಾ ಮಹಾಪ್ರಭಾಃ |
ಉದ್ದಿಷ್ಟಾಸ್ತೇ ತಥಾಂಗಾರಾ ಯೇ ಧಿಷ್ಣ್ಯೇಷು ದಿವಿ ಸ್ಥಿತಾಃ ॥23॥
ಅಗ್ನಿಯ ಕಿಡಿಗಳು ಏಕಾದಶ ರುದ್ರರಾದರು. ಆದಿತ್ಯರು ಅಗ್ನಿಯ ಮಹಾಪ್ರಭೆ ಎಂದು ಹೇಳಲ್ಪಡುತ್ತಾರೆ. ಕೆಂಡಗಳು (ಅಂಗಾರಗಳು) ಆಕಾಶದಲ್ಲಿ ತಮ್ಮ ತಮ್ಮ ಸ್ಥಾನದಲ್ಲಿರುವ ನಕ್ಷತ್ರಗಳು. (ಇಲ್ಲಿ ಎಲ್ಲ ಕಡೆಯಲ್ಲಿಯೂ ಜನಿಸಿದವು ಎಂದೇ ಅರ್ಥವನ್ನು ಮಾಡಬೇಕು).
ಆದಿನಾಥಶ್ಚ ಲೋಕಸ್ಯ ತತ್ಪರಂ ಬ್ರಹ್ಮ ತದ್ ಧ್ರುವಮ್ |
ಸರ್ವಕಾಮದಮಿತ್ಯಾಹುಸ್ತತ್ರ ಹವ್ಯಮುದಾವಹತ್ ॥24॥
ಲೋಕಕ್ಕೆ ಮೊದಲನೆ ಸ್ವಾಮಿಯಾದ ಬ್ರಹ್ಮದೇವರು ಶಾಶ್ವತ, ಸರ್ವಕಾಮಪ್ರದ ಎಂದು ಹೇಳಲ್ಪಡುವ ಪರಬ್ರಹ್ಮನಿಗೆ ಆ ಹವ್ಯವನ್ನು ಸಮರ್ಪಿಸಿದರು.
ತತೋಽಬ್ರವೀನ್ಮಹಾದೇವೋ ವರುಣಃ ಪರಮಾತ್ಮನಃ |
ಮಮ ಸತ್ರಮಿದಂ ದಿವ್ಯಮಹಂ ಗೃಹಪತಿಸ್ತ್ವಿಹ ॥25॥
ತ್ರೀಣಿ ಪೂರ್ವಾಣ್ಯಪತ್ಯಾನಿ ಮಮ ತಾನಿ ನ ಸಂಶಯಃ |
ಇತಿ ಜಾನೀತ ಖಗಮಾ ಮಮ ಯಜ್ಞಫಲಂ ಹಿ ತತ್ ॥26॥
ಆಗ ವರುಣನ ಅಂತರ್ನಿಯಾಮಕನಾದ ಮಹಾದೇವನು ಪರಮಾತ್ಮನನ್ನು ಕುರಿತು ದಿವ್ಯವಾದ ಈ ಸತ್ರವು ನನ್ನದು. ಇದರಲ್ಲಿ ನಾನೇ ಯಜಮಾನ. ಆದ್ದರಿಂದ ಮೊದಲು ಜನಿಸಿದ ಮೂರು ಪುತ್ರರು ನನ್ನವರೇ ಎಂಬುದರಲ್ಲಿ ಸಂಶಯವಿಲ್ಲ. ಎಲೈ ಆಕಾಶಸಂಚಾರಿಯಾದ ದೇವತೆಗಳೇ ಆ ಮೂವರು ಪುತ್ರರು ನನ್ನ ಯಜ್ಞದ ಫಲವೆಂದು ತಿಳಿಯಿರಿ ಎಂದು ಹೇಳಿದನು.
ಅಗ್ನಿಃ

ಮದಂಗೇಭ್ಯಃ ಪ್ರಸೂತಾನಿ ಮದಾಶ್ರಯಕೃತಾನಿ ಚ |
ಮಮೈವ ತಾನ್ಯಪತ್ಯಾನಿ ವರುಣೋ ಹ್ಯವಶಾತ್ಮಕಃ ॥27॥
ಅಗ್ನಿ ಈ ಮೂರು ಮಕ್ಕಳು ನನ್ನ ದೇಹದ ಅವಯವಗಳಿಂದ ಸೃಷ್ಟರಾದವರು. ನನ್ನನ್ನೇ ಆಶ್ರಯಿಸಿಕೊಂಡಿರುವವರು. ಆದ್ದರಿಂದ ವರುಣನು ಹೇಳುವ ಮಾತುಗಳು ಸರಿಯಲ್ಲ. ಅವನ ಮನಸ್ಸು ಸರಿಯಾದ ಸ್ಥಿತಿಯಲ್ಲಿಲ್ಲ.
ಅಥಾಬ್ರವೀಲ್ಲೋಕಗುರುರ್ಬ್ರಹ್ಮಾ ಲೋಕಪಿತಾಮಹಃ |
ಮಮೈವ ತಾನ್ಯಪತ್ಯಾನಿ ಮಮ ಶುಕ್ರಂ ಹುತಂ ಹಿ ತತ್ ॥28॥
ಅಹಂ ವಕ್ತಾ ಚ ಮಂತ್ರಸ್ಯ ಹೋತಾ ಶುಕ್ರಸ್ಯ ಚೈವ ಹ |
ಯಸ್ಯ ಬೀಜಂ ಫಲಂ ತಸ್ಯ ಶುಕ್ರಂ ಚೇತ್ಕಾರಣಂ ಮತಮ್ ॥29॥
ಆಗ ಲೋಕಪಿತಾಮಹರೂ, ಸರ್ವಲೋಕಗುರುಗಳೂ ಆದ ಬ್ರಹ್ಮದೇವರು ಆ ಮೂವರು ನನ್ನ ಮಕ್ಕಳೇ. ನನ್ನ ವೀರ್ಯವೇ ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟಿದೆಯಷ್ಟೆ. ನಾನೇ ಮಂತ್ರವನ್ನು ಹೇಳುವವನು ಮತ್ತು ವೀರ್ಯವನ್ನು ಹೋಮ ಮಾಡುವವನೂ ನಾನೇ. ಬೀಜವು ಯಾವನದೋ ಫಲವೂ ಅವನಿಗೇ ಸೇರಬೇಕು. ವೀರ್ಯವು ಕಾರಣವಾದರೆ ಆ ಮಕ್ಕಳು ನನಗೇ ಸೇರಬೇಕು ಎಂದು ಹೇಳಿದರು.
ತತೋಽಬ್ರುವನ್ ದೇವಗಣಾಃ ಪಿತಾಮಹಮುಪೇತ್ಯ ವೈ |
ಕೃತಾಂಜಲಿಪುಟಾಃ ಸರ್ವೇ ಶಿರೋಭಿರಭಿವಂದ್ಯ ಚ ॥30॥
ವಯಂ ಚ ಭಗವನ್ ಸರ್ವೇ ಜಗಚ್ಚ ಸಚರಾಚರಮ್ |
ತವೈವ ಪ್ರಸವಾಃ ಸರ್ವೇ ತಸ್ಮಾದಗ್ನಿರ್ವಿಭಾವಸುಃ |
ವರುಣಶ್ಚೇಶ್ವರೋ ದೇವೋ ಲಭತಾಂ ಕಾಮಮೀಪ್ಸಿತಮ್ ॥31॥
ಆಗ ಎಲ್ಲ ದೇವತೆಗಳು ಪಿತಾಮಹರಾದ ಬ್ರಹ್ಮದೇವರನ್ನು ಸಮೀಪಿಸಿ ಎಲ್ಲರೂ ಕೈಗಳನ್ನು ಮುಗಿದು ಶಿರಸಾ ನಮಸ್ಕರಿಸಿ ಪೂಜ್ಯರೇ ನಾವು ಮತ್ತು ಚರಾಚರವಾದ ಸರ್ವಜಗತ್ತು ನಿಮ್ಮ ಸಂತಾನವೇ ಸರಿ. ಆದ್ದರಿಂದ ವಿಭಾವಸುವಾದ ಅಗ್ನಿಯೂ, ಇಲ್ಲಿ ಯಜ್ಞದಲ್ಲಿ ಈಶ್ವರನಾದ ವರುಣನೂ ತಮಗೆ ಈಪ್ಸಿತವಾದ ಅಭಿಪ್ರಾಯವನ್ನು ಹೊಂದಲಿ (ಪುತ್ರರನ್ನು ಹೊಂದಲಿ) ಎಂದು ಹೇಳಿದರು.
ನಿಸರ್ಗಾದ್ ವರುಣಶ್ಚಾಪಿ ಬ್ರಹ್ಮಣೋ ಯಾದಸಾಂ ಪತಿಃ |
ಜಗ್ರಾಹ ವೈ ಭೃಗುಂ ಪೂರ್ವಮಪತ್ಯಂ ಸೂರ್ಯವರ್ಚಸಮ್ ॥32॥
ಬ್ರಹ್ಮದೇವರ ಆದೇಶದಂತೆ ಯಾದೋಗಣಗಳಿಗೆ ಒಡೆಯನಾದ ವರುಣನು ಮೊದಲು ಜನಿಸಿದ ಸೂರ್ಯನ ಕಾಂತಿಯುಳ್ಳ ಭೃಗುವನ್ನು ತನ್ನ ಪುತ್ರನಾಗಿ ಸ್ವೀಕರಿಸಿದನು (ಅನಂತರ ರುದ್ರನೂ ಸ್ವೀಕರಿಸಿದನು ಎಂದು ತಿಳಿಯಬೇಕು - ಲಕ್ಷಾಲಂಕಾರ).
ಈಶ್ವರೋಽಂಗಿರಸಂ ಚಾಗ್ನೇರಪತ್ಯಾರ್ಥೇಽಭ್ಯಕಲ್ಪಯತ್ |
ಪಿತಾಮಹಸ್ತ್ವಪತ್ಯಂ ವೈ ಕವಿಂ ಜಗ್ರಾಹ ತತ್ತ್ವವಿತ್ ॥33॥
ಅನಂತರ ಪ್ರಭುವಾದ ಬ್ರಹ್ಮದೇವರು ಅಂಗಿರಸರನ್ನು ಅಗ್ನಿಯ ಪುತ್ರನನ್ನಾಗಿ ನಿರ್ಧರಿಸಿದರು. ತತ್ತ್ವಜ್ಞಾನಿಗಳಾದ ಬ್ರಹ್ಮದೇವರು ಕವಿಯನ್ನು ಪುತ್ರನನ್ನಾಗಿ ಸ್ವೀಕರಿಸಿದರು.
ತದಾ ಸ ವಾರುಣಃ ಖ್ಯಾತೌ ಭೃಗುಃ ಪ್ರಸವಕರ್ಮಕೃತ್ |
ಆಗ್ನೇಯಸ್ತ್ವಂಗಿರಾಃ ಶ್ರೀಮಾನ್ ಕವಿರ್ಬ್ರಾಹ್ಮೋ ಮಹಾಯಶಾಃ |
ಭಾರ್ಗವಾಂಗಿರಸೌ ಲೋಕೇ ಲೋಕಸಂತಾನಲಕ್ಷಣೌ ॥34॥
ಆಗ ವರುಣ ಪುತ್ರನಾದ ಭೃಗುವು ತನ್ನ ಪತ್ನಿಯಾದ ಖ್ಯಾತಿಯಲ್ಲಿ ಸಂತತಿಯನ್ನು ಬೆಳೆಸಿದನು. ಅಂಗಿರಸರಿಂದ ಅಗ್ನಿಯ ಸಂತತಿ ಮುಂದುವರೆಯಿತು. ಕಾಂತಿಯುಕ್ತನಾದ ಬ್ರಹ್ಮಪುತ್ರನಾದ, ಮಹಾಕೀರ್ತಿವಂತನಾದ ಕವಿಯು ತನ್ನ ಸಂತಾನವನ್ನು ಬೆಳೆಸಿದನು. ಭೃಗುಗಳು ಮತ್ತು ಅಂಗಿರಸರು ಲೋಕದಲ್ಲಿ ಸಂತತಿಯನ್ನು ಬೆಳೆಸಿದವರೆಂದು ಪ್ರಸಿದ್ಧರಾಗಿದ್ದಾರೆ.
ಏತೇ ವಿಪ್ರವರಾಃ ಸರ್ವೇ ಪ್ರಜಾನಾಂ ಪತಯಸ್ತ್ರಯಃ |
ಸರ್ವಂ ಸಂತಾನಮೇತೇಷಾಮಿದಮಿತ್ಯುಪಧಾರಯ ॥35॥
ಈ ಎಲ್ಲಾ ವಿಪ್ರಶ್ರೇಷ್ಠರು ಪ್ರಜಾಪತಿಗಳೆಂದು ಖ್ಯಾತರಾಗಿದ್ದಾರೆ. ಈ ಪ್ರಪಂಚದಲ್ಲಿರುವ ಪ್ರಜಾಸಂತತಿಗಳೆಲ್ಲವೂ ಇವರಿಗೇ ಸೇರಿದುದೆಂದು ತಿಳಿಯುವವನಾಗು.
ಭೃಗೋಸ್ತು ಪುತ್ರಾಸ್ತತ್ರಾಸನ್ ಸಪ್ತ ತುಲ್ಯಾ ಭೃಗೋರ್ಗುಣೈಃ |
ಚ್ಯವನೋ ವಜ್ರಶೀರ್ಷಶ್ಚ ಶುಚಿರೌರ್ವಸ್ತಥೈವ ಚ ॥36॥
ಶುಕ್ರೋ ವರೇಣ್ಯಶ್ಚ ವಿಭುಃ ಸವನಶ್ಚೇತಿ ಸಪ್ತ ತೇ |
ಭಾರ್ಗವಾ ವಾರುಣಾಃ ಸರ್ವೇ ಯೇಷಾಂ ವಂಶೇ ಭವಾನಪಿ ॥37॥
ಭೃಗುವಿಗೆ ತನ್ನ ಗುಣಕ್ಕೆ ಸಮಾನವಾದ ಗುಣವುಳ್ಳ ಏಳು ಜನ ಪುತ್ರರಾದರು. ಅವರು ಚ್ಯವನ, ವಜ್ರಶೀರ್ಷ, ಶುಚಿ, ಔರ್ವ, ಶುಕ್ರ, ವರೇಣ್ಯ ಮತ್ತು ಸಮರ್ಥನಾದ ಸವನ. ಈ ಭಾರ್ಗವರೆಲ್ಲರೂ ವರುಣನ ಸಂತತಿಯಲ್ಲಿ ಬಂದವರು. ಎಲೈ ಪರಶುರಾಮನೇ, ನೀನೂ ಸಹ ಅವರ ವಂಶದಲ್ಲಿಯೇ ಬಂದಿದ್ದೀಯೆ.
ಅಷ್ಟೌ ಚಾಂಗಿರಸಃ ಪುತ್ರಾ ವಾರುಣಾಸ್ತೇಽಪ್ಯುದಾಹೃತಾಃ |
ಬೃಹಸ್ಪತಿರುಚಥ್ಯಶ್ಚ ವಯಸ್ಯಃ ಶಾಂತಿರೇವ ಚ ॥38॥
ಘೋರೋ ವಿರೂಪಃ ಸಂವರ್ತಃ ಸುಧನ್ವಾ ಚಾಷ್ಟಮಃ ಸ್ಮೃತಃ |
ಏತೇಽಷ್ಟಾವಗ್ನಿಜಾಃ ಸರ್ವೇ ಜ್ಞಾನನಿಷ್ಠಾ ನಿರಾಮಯಾಃ ॥39॥
ಅಂಗಿರಸರ ಪುತ್ರರು ಎಂಟುಮಂದಿ. ಅವರೂ ವರುಣ ಸಂತತಿಗೇ ಸೇರಿದವರು ಎಂದು ಹೇಳಲ್ಪಡುತ್ತಾರೆ. ಬೃಹಸ್ಪತಿ, ಉಚಥ್ಯ,

ವಯಸ್ಯ, ಶಾಂತಿ, ಘೋರ, ವಿರೂಪ, ಸಂವರ್ತ, ಸುಧನ್ವಾ ಇವರು ಆ ಎಂಟು ಪುತ್ರರು. ಈ ಎಂಟು ಪುತ್ರರೂ ಅಗ್ನಿಯ ಪುತ್ರರು, ಜ್ಞಾನನಿಷ್ಠರು ಮತ್ತು ರೋಗಾದಿ ದೋಷರಹಿತರು.
ಬ್ರಾಹ್ಮಣಸ್ಯ ಕವೇಃ ಪುತ್ರಾ ವಾರುಣಾಸ್ತೇಽಪ್ಯುದಾಹೃತಾಃ |
ಅಷ್ಟೌ ಪ್ರಸವಜೈರ್ಯುಕ್ತಾ ಗುಣೈರ್ಬ್ರಹ್ಮವಿದಃ ಶುಭಾಃ ॥40॥
ಕವಿಃ ಕಾವ್ಯಶ್ಚ ವಿಷ್ಣುಶ್ಚ ಬುದ್ಧಿಮಾನುಶನಾಸ್ತಥಾ |
ಭೃಗುಶ್ಚ ವಿರಜಾಶ್ಚೈವ ಕಾಶೀ ಚೋಗ್ರಶ್ಚ ಧರ್ಮವಿತ್ ॥41॥
ಬ್ರಹ್ಮಪುತ್ರರಾದ ಕವಿಯ ಪುತ್ರರೂ ವರುಣನ ಸಂತತಿಗೇ ಸೇರಿದವರು. ತಮ್ಮ ಪುತ್ರರಿಂದ ಕೂಡಿದ ಆ ಎಂಟು ಪುತ್ರರು ಶುಭರಾದವರು ಮತ್ತು ಬ್ರಹ್ಮಜ್ಞಾನಿಗಳಿಗೆ ಸಮರಾದವರು. ಅವರು ಕವಿ, ಕಾವ್ಯ, ವಿಷ್ಣು, ಮೇಧಾವಿಯಾದ ಉಶನಾ, ಭೃಗು, ವಿರಜಾ, ಕಾಶೀ ಮತ್ತು ಧರ್ಮಜ್ಞನಾದ ಉಗ್ರ.
ಅಷ್ಟೌ ಕವಿಸುತಾ ಹ್ಯೇತೇ ಸರ್ವಮೇಭಿರ್ಜಗತ್ ತತಮ್ |
ಪ್ರಜಾಪತಯ ಏತೇ ಹಿ ಪ್ರಜಾನಾಂ ಯೈರಿಮಾಃ ಪ್ರಜಾಃ ॥42॥
ಈ ಎಂಟು ಮಂದಿ ಕವಿಯ ಪುತ್ರರು. ಇವರಿಂದ ಎಂದರೆ ಭೃಗು, ಅಂಗಿರಸರು ಮತ್ತು ಕವಿಯ ಸಂತತಿಯಿಂದ ಜಗತ್ತು ತುಂಬಿಹೋಗಿದೆ. ಇವರು ಪ್ರಜಾಪತಿಗಳು. ಅವರ ಪ್ರಜೆಗಳಿಂದ ಈಗಿನ ಪ್ರಜೆಗಳು ಉಂಟಾಗಿದ್ದಾರೆ.
ಏವಮಂಗಿರಸಶ್ಚೈವ ಕವೇಶ್ಚ ಪ್ರಸವಾನ್ವಯೈಃ |
ಭೃಗೋಶ್ಚ ಭೃಗುಶಾರ್ದೂಲ ವಂಶಜೈಃ ಸಂತತಂ ಜಗತ್ ॥43॥
ಎಲೈ ಭೃಗುಶಾರ್ದೂಲನೇ, ಹೀಗೆ ಅಂಗಿರಸರ, ಕವಿಯ ಮತ್ತು ಭೃಗುವಿನ ಪುತ್ರ ಸಂತತಿಯಿಂದ ಮತ್ತು ಆ ವಂಶದಲ್ಲಿ ಜನಿಸಿದವರಿಂದ ಜಗತ್ತು ತುಂಬಿಹೋಗಿದೆ.
ವರುಣಶ್ಚಾದಿತೋ ವಿಪ್ರ ಜಗ್ರಾಹ ಪ್ರಭುರೀಶ್ವರಃ |
ಕವಿಂ ತಾತ ಭೃಗುಂ ಚೈವ ತಸ್ಮಾತ್ ತೌ ವಾರುಣೌ ಸ್ಮೃತೌ ॥44॥
ಎಲೈ ಪ್ರೀತಿಪಾತ್ರನೇ, ಬ್ರಾಹ್ಮಣನೇ, ಸಮರ್ಥನೂ, ಪ್ರಭುವೂ ಆದ ವರುಣನು ಮೊದಲು ಕವಿ ಮತ್ತು ಭೃಗು ಇಬ್ಬರನ್ನು ಸ್ವೀಕರಿಸಿದನು. ಆದ್ದರಿಂದ ಅವರು ವರುಣಪುತ್ರರೆಂದು ಹೇಳಲ್ಪಡುತ್ತಾರೆ.
ಜಗ್ರಾಹಾಂಗಿರಸಂ ದೇವಃ ಶಿಖೀ ತಸ್ಮಾದ್ಧುತಾಶನಃ |
ತಸ್ಮಾದಂಗಿರಸೋ ಜ್ಞೇಯಾಃ ಸರ್ವ ಏವ ತದನ್ವಯಾಃ ॥45॥
ಶಿಖಿಯಾದ ಅಗ್ನಿದೇವನು ಅಂಗಿರಸರನ್ನು ಸ್ವೀಕರಿಸಿದನು. ಆದ್ದರಿಂದ ಎಲ್ಲಾ ಅಂಗಿರಸರೂ ಅಗ್ನಿಯ ಸಂತತಿಯಲ್ಲಿ ಬಂದವರೆಂದು ತಿಳಿಯಬೇಕು.
ಬ್ರಹ್ಮಾ ಪಿತಾಮಹಃ ಪೂರ್ವಂ ದೇವತಾಭಿಃ ಪ್ರಸಾದಿತಃ |
ಇಮೇ ನಃ ಸಂತರಿಷ್ಯಂತಿ ಪ್ರಜಾಭಿರ್ಜಗದೀಶ್ವರಾಃ ॥46॥
ಸರ್ವೇ ಪ್ರಜಾನಾಂ ಪತಯಃ ಸರ್ವೇ ಚಾತಿತಪಸ್ವಿನಃ |
ತ್ವತ್ಪ್ರಸಾದಾದಿಮಂ ಲೋಕಂ ತಾರಯಿಷ್ಯಂತಿ ಶಾಶ್ವತಮ್ ॥47॥
ತಥೈವ ವಂಶಕರ್ತಾರಸ್ತವ ತೇಜೋವಿವರ್ಧನಾಃ |
ಭವೇಯುರ್ವೇದವಿದುಷಃ ಸರ್ವೇ ವಾಕ್ಪತಯಸ್ತಥಾ ॥48॥
ದೇವತೆಗಳು ಹಿಂದೆಯೇ ಪಿತಾಮಹರಾದ ಬ್ರಹ್ಮದೇವರನ್ನು ಹೀಗೆ ಪ್ರಸನ್ನಗೊಳಿಸಿದರು - ಈ ಜಗತ್ ಪ್ರಭುಗಳಾದ ಪ್ರಜಾಪತಿಗಳು ನಮ್ಮನ್ನು ಪಾರು ಮಾಡುತ್ತಾರೆ. ಇವರೆಲ್ಲರೂ ಬಹಳ ತಪಸ್ವಿಗಳು. ನಿಮ್ಮ ಅನುಗ್ರಹದಿಂದ ಈ ಶಾಶ್ವತವಾದ ಲೋಕವನ್ನು ಸಮಗ್ರವಾಗಿ ಪಾರುಮಾಡುತ್ತಾರೆ. ಹಾಗೆಯೇ ವಂಶವನ್ನು ಬೆಳೆಸಿ ನಿಮ್ಮ ತೇಜಸ್ಸನ್ನು ಅಭಿವೃದ್ಧಿಗೊಳಿಸುತ್ತಾರೆ. ಇವರೆಲ್ಲರೂ ವೇದವಿದ್ವಾಂಸರೂ ಮತ್ತು ವಾಕ್ಪತಿಗಳೂ ಆಗುತ್ತಾರೆ.
ದೇವಪಕ್ಷಧರಾಃ ಸೌಮ್ಯಾಃ ಪ್ರಾಜಾಪತ್ಯಾ ಮಹರ್ಷಯಃ |
ಆಪ್ನುವಂತಿ ತಪಶ್ಚೈವ ಬ್ರಹ್ಮಚರ್ಯಂ ಪರಂ ತಥಾ ॥49॥
ಪ್ರಜಾಪತಿಗಳಾದ ಈ ಮಹರ್ಷಿಗಳು ದೇವತೆಗಳ ಪಕ್ಷದಲ್ಲಿ ಇರುವವರು, ಶಾಂತಸ್ವಭಾವದವರು. ತಪಸ್ಸನ್ನು ಮತ್ತು ಶ್ರೇಷ್ಠವಾದ ಬ್ರಹ್ಮಚರ್ಯವನ್ನು ಆಚರಿಸುತ್ತಾರೆ.
ಸರ್ವೇ ಹಿ ವಯಮೇತೇ ಚ ತವೈವ ಪ್ರಸವಃ ಪ್ರಭೋ |
ದೇವಾನಾಂ ಬ್ರಾಹ್ಮಣಾನಾಂ ಚ ತ್ವಂ ಹಿ ಕರ್ತಾ ಪಿತಾಮಹ ॥50॥
ಎಲೈ ಪ್ರಭುವೇ, ನಾವೂ, ಈ ಪ್ರಜಾಪತಿಗಳೂ ಎಲ್ಲರೂ ನಿನ್ನ ಮಕ್ಕಳು. ಎಲೈ ಪಿತಾಮಹನೇ, ದೇವತೆಗಳಿಗೂ ಮತ್ತು ಬ್ರಾಹ್ಮಣರಿಗೂ ನೀನೇ ಜನಕನಾದವನು.
ಮರೀಚಿಮಾದಿತಃ ಕೃತ್ವಾ ಸರ್ವೇ ಚೈವಾಥ ಭಾರ್ಗವಾಃ |
ಅಪತ್ಯಾನೀತಿ ಸಂಪ್ರೇಕ್ಷ್ಯ ಕ್ಷಮಯಾಮ ಪಿತಾಮಹ ॥51॥
ಎಲೈ ಪಿತಾಮಹನೇ, ಮರೀಚಿ ಋಷಿಗಳಿಂದ ಹಿಡಿದು ಎಲ್ಲ ಭಾರ್ಗವರೂ ನಿಮ್ಮ ಮಕ್ಕಳೆಂದು ತಿಳಿ. ನಿಮ್ಮನ್ನು ಪ್ರಸನ್ನರಾಗಿ ಎಂದು ಕೇಳುತ್ತಿದ್ದೇವೆ.
ತೇ ತ್ವನೇನೈವ ರೂಪೇಣ ಪ್ರಜನಿಷ್ಯಂತಿ ವೈ ಪ್ರಜಾಃ |
ಸ್ಥಾಪಯಿಷ್ಯಂತಿ ಚಾತ್ಮಾನಂ ಯುಗಾದಿನಿಧನೇ ತಥಾ ॥52॥
ಈ ಪ್ರಜಾಪತಿಗಳು ದಿವ್ಯರೂಪದಿಂದ ಪ್ರಜೆಗಳನ್ನು ಸೃಷ್ಟಿಸುವರು. ಪ್ರಜೆಗಳ ರೂಪದಲ್ಲಿ ತಮ್ಮನ್ನು ಯುಗದ ಆರಂಭದಿಂದ

ಅಂತ್ಯಕಾಲದವರೆಗೂ ಸ್ಥಾಪಿಸಿಕೊಳ್ಳುತ್ತಾರೆ (ಎಂದು ಬ್ರಹ್ಮದೇವರನ್ನು ಸ್ತೋತ್ರ ಮಾಡಿದರು).
ಏವಮೇತತ್ಪುರಾ ವೃತ್ತಂ ತಸ್ಯ ಯಜ್ಞೇ ಮಹಾತ್ಮನಃ |
ದೇವಶ್ರೇಷ್ಠಸ್ಯ ಲೋಕಾದೌ ವಾರುಣೀಂ ಬಿಭ್ರತಸ್ತನುಮ್ ॥53॥
ಹೀಗೆ ಮಹಾತ್ಮರಾದ, ವರುಣದೇಹವನ್ನು ಧರಿಸಿದ, ದೇವಶ್ರೇಷ್ಠರಾದ ರುದ್ರದೇವರ ಯಜ್ಞದಲ್ಲಿ ಪ್ರಪಂಚದ ಆದಿಯಲ್ಲಿ ಇಂತಹ ಘಟನೆಯು ನಡೆಯಿತು.
ಅಗ್ನಿರ್ಬ್ರಹ್ಮಾ ಪಶುಪತಿಃ ಶರ್ವೋ ರುದ್ರಃ ಪ್ರಜಾಪತಿಃ |
ಅಗ್ನೇರಪತ್ಯಮೇತದ್ವೈ ಸುವರ್ಣಮಿತಿ ಧಾರಣಾ ॥54॥
ಅಗ್ನಿ, ಬ್ರಹ್ಮಾ, ಪಶುಪತಿ, ಶರ್ವ, ರುದ್ರ, ಪ್ರಜಾಪತಿ ಮತ್ತು ಸುವರ್ಣ ಎಲ್ಲವೂ ಅಗ್ನಿಯ ಅಪತ್ಯರೆಂದು ನಿಶ್ಚಿತವಾದುದು.
ಅಗ್ನ್ಯಭಾವೇ ಚ ಕುರ್ವಂತಿ ವಹ್ನಿಸ್ಥಾನೇಷು ಕಾಂಚನಮ್ |
ಜಾಮದಗ್ನ್ಯ ಪ್ರಮಾಣಜ್ಞಾ ವೇದಶ್ರುತಿನಿದರ್ಶನಾತ್ ॥55॥
ಎಲೈ ಪರಶುರಾಮನೇ, ವೇದಪ್ರಾಮಾಣ್ಯವನ್ನು ತಿಳಿದವರು ಅಗ್ನಿ ಇಲ್ಲದಿದ್ದರೆ ಅಗ್ನಿಯ ಸ್ಥಾನದಲ್ಲಿ ಸುವರ್ಣವನ್ನು ಇಡುತ್ತಾರೆ.
ಕುಶಸ್ತಂಬೇ ಜುಹೋತ್ಯಗ್ನಿಂ ಸುವರ್ಣಂ ತತ್ರ ಸಂಸ್ಥಿತಮ್ |
ಹುತೇ ಪ್ರೀತಿಕರೀಮೃದ್ಧಿಂ ಭಗವಾಂಸ್ತತ್ರ ಮನ್ಯತೇ ॥56॥
ದರ್ಭೆಯ ಸಮೂಹದಲ್ಲಿ ಅಗ್ನಿಗೆ ಹೋಮವನ್ನು ಮಾಡುತ್ತಾರೆ. ಅಲ್ಲಿ ಸುವರ್ಣವಿದೆ. ಅಲ್ಲಿ ಹೋಮವನ್ನು ಮಾಡಿದರೆ ಅಗ್ನಿಯು ಅದು ತನಗೆ ಪ್ರೀತಿಕರವಾದ ಆಹುತಿ ಎಂದು ತಿಳಿಯುತ್ತಾನೆ.
ತಸ್ಮಾದಗ್ನಿಪರಾಃ ಸರ್ವಾ ದೇವತಾ ಇತಿ ಶುಶ್ರುಮ |
ಬ್ರಹ್ಮಣೋ ಹಿ ಪ್ರಸೂತೋಽಗ್ನಿರಗ್ನೇರಪಿ ಚ ಕಾಂಚನಮ್ ॥57॥
ಆದ್ದರಿಂದ ಎಲ್ಲ ದೇವತೆಗಳೂ ಅಗ್ನಿಯನ್ನು ಪೂಜಿಸುತ್ತಾರೆ ಎಂದು ಕೇಳಿದ್ದೇವೆ. ಬ್ರಹ್ಮನಿಂದ ಜನಿಸಿದವನು ಅಗ್ನಿ. ಅಗ್ನಿಯಿಂದ ಜನಿಸಿದುದು ಸುವರ್ಣ.
ತಸ್ಮಾದ್ ಯೇ ವೈ ಪ್ರಯಚ್ಛಂತಿ ಸುವರ್ಣಂ ಧರ್ಮದರ್ಶಿನಃ |
ದೇವತಾಸ್ತೇ ಪ್ರಯಚ್ಛಂತಿ ಸಮಸ್ತಾ ಇತಿ ನಃ ಶ್ರುತಮ್ ॥58॥
ಆದ್ದರಿಂದ ಯಾವ ಧರ್ಮದರ್ಶಿಗಳು ಸುವರ್ಣವನ್ನು ದಾನ ಮಾಡುತ್ತಾರೆಯೋ ಅವರು ಸಮಸ್ತ ದೇವತೆಗಳನ್ನೂ ದಾನ ಮಾಡುತ್ತಾರೆ ಎಂಬುದನ್ನು ನಾವು ಕೇಳಿದ್ದೇವೆ.
ತಸ್ಯ ಚಾತಮಸೋ ಲೋಕಾನ್ ಗಚ್ಛತಃ ಪರಮಾಂ ಗತಿಮ್ |
ಸ್ವರ್ಗಲೋಕೇ ರಾಜರಾಜ್ಯೇನ ಸೋಽಭಿಷಿಚ್ಯೇತ ಭಾರ್ಗವ ॥59॥
ಎಲೈ ಭಾರ್ಗವನೇ, ಸುವರ್ಣದಾನವನ್ನು ಮಾಡಿ ಶ್ರೇಷ್ಠವಾದ ಗತಿಯನ್ನು ಪಡೆಯುವವನಿಗೆ ಅಂಧಕಾರ ರಹಿತವಾದ ಲೋಕಗಳು ದೊರೆಯುತ್ತವೆ. ಸ್ವರ್ಗ ಲೋಕದಲ್ಲಿ ಅವನು ಸಾಧನೆಗೆ ಯೋಗ್ಯವಾದ ಸಂಪತ್ತಿನೊಡನೆ ಅಭಿಷೇಕ ಮಾಡಲ್ಪಡುತ್ತಾನೆ.
ಆದಿತ್ಯೋದಯನೇ ಪ್ರಾಪ್ತೇ ವಿಧಿಮಂತ್ರಪುರಸ್ಕೃತಮ್ |
ದದಾತಿ ಕಾಂಚನಂ ಯೋ ವೈ ದುಃಸ್ವಪ್ನಂ ಪ್ರತಿಹಂತಿ ಸಃ ॥60॥
ಸೂರ್ಯೋದಯದ ಸಮಯದಲ್ಲಿ ಯಾವನು ವಿಧಿಮಂತ್ರ ಪುರಸ್ಸರವಾಗಿ ಸುವರ್ಣದಾನವನ್ನು ಮಾಡುತ್ತಾನೆಯೋ ಅವನು ದುಃಸ್ವಪ್ನದ ಫಲವನ್ನು ನಾಶ ಪಡಿಸುತ್ತಾನೆ.
ದದಾತ್ಯುದಿತಮಾತ್ರೇ ಯಸ್ತಸ್ಯ ಪಾಪ್ಮಾ ವಿಧೂಯತೇ |
ಮಧ್ಯಾಹ್ನೇ ದದತೋ ರುಗ್ಮಂ ಹಂತಿ ಪಾಪಮನಾಗತಮ್ ॥61॥
ಸೂರ್ಯನು ಉದಯಿಸಿದ ತಕ್ಷಣ ದಾನವನ್ನು ಮಾಡುವವನು ತನ್ನ ಎಲ್ಲಾ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಮಧ್ಯಾಹ್ನ ಕಾಲದಲ್ಲಿ ಸುವರ್ಣದಾನವನ್ನು ಮಾಡಿದರೆ ಅದು ಮುಂದೆ ಬರಲಿರುವ ಪಾಪಗಳನ್ನು ವಿನಾಶಗೊಳಿಸುತ್ತದೆ.
ದದಾತಿ ಪಶ್ಚಿಮಾಂ ಸಂಧ್ಯಾಂ ಯಃ ಸುವರ್ಣಂ ಧೃತವ್ರತಃ |
ಬ್ರಹ್ಮವಾಯ್ವಗ್ನಿಸೋಮಾನಾಂ ಸಾಲೋಕ್ಯಮುಪಯಾತಿ ಸಃ ॥62॥
ಯಾವನು ಒಳ್ಳೆಯ ವ್ರತವನ್ನು ಧರಿಸಿ ಸಾಯಂಕಾಲದ ಸಂಧ್ಯಾಕಾಲದಲ್ಲಿ ಸುವರ್ಣ ದಾನವನ್ನು ಮಾಡುತ್ತಾನೆಯೋ ಅವನು ಬ್ರಹ್ಮ-ವಾಯು-ಅಗ್ನಿ-ಚಂದ್ರರ ಸಾಲೋಕ್ಯವನ್ನು ಹೊಂದುತ್ತಾನೆ.
ಸೇಂದ್ರೇಷು ಚೈವ ಲೋಕೇಷು ಪ್ರತಿಷ್ಠಾಂ ಪ್ರಾಪ್ನುತೇ ಶುಭಾಮ್ |
ಇಹ ಲೋಕೇ ಯಶಃ ಪ್ರಾಪ್ಯ ಶಾಂತಪಾಪ್ಮಾ ಪ್ರಮೋದತೇ ॥63॥
ಇಂದ್ರನಿಂದ ಅಧಿಷ್ಠಿತವಾದ ಲೋಕಗಳಲ್ಲಿ ಶುಭವಾದ ಸ್ಥಾನವನ್ನು ಪಡೆಯುತ್ತಾನೆ. ಈ ಲೋಕದಲ್ಲಿ ಪಾಪವನ್ನು ಕಳೆದುಕೊಂಡು ಕೀರ್ತಿಯನ್ನು ಪಡೆದು ಸಂತೋಷ ಪಡುತ್ತಾನೆ.
ತತಃ ಸಂಪದ್ಯತೇಽನ್ಯೇಷು ಲೋಕೇಷ್ವಪ್ರತಿಮಃ ಸದಾ |
ಅನಾವೃತಗತಿಶ್ಚೈವ ಕಾಮಚಾರೀ ಭವತ್ಯುತ ॥64॥
ಅನಂತರ ಅನ್ಯಲೋಕಗಳಿಗೆ ಹೋಗಿ ಅಲ್ಲಿ ಅಸದೃಶನಾಗುತ್ತಾನೆ. ಅವನು ಆ ಲೋಕದಿಂದ ಹಿಂದಿರುಗದೆ ತನ್ನ ಇಚ್ಛೆಗೆ ಅನುಗುಣವಾಗಿ ಅಲ್ಲಿ ಸಂಚರಿಸುತ್ತಾನೆ.
ನ ಚ ಕ್ಷರತಿ ತೇಭ್ಯಃ ಸ ಶಶ್ವಚ್ಚೈವಾಪ್ನುತೇ ಮಹತ್ |
ಸುವರ್ಣಮಕ್ಷಯಂ ದತ್ತ್ವಾ ಲೋಕಾನಾಪ್ನೋತಿ ಪುಷ್ಕಳಾನ್ ॥65॥
ಅವನು ಆ ಲೋಕಗಳಿಂದ ಚ್ಯುತನಾಗುವುದಿಲ್ಲ. ಅವನು ಶಾಶ್ವತವಾಗಿ ಮಹತ್ವವನ್ನು ಪಡೆಯುತ್ತಾನೆ. ಅಕ್ಷಯವಾದ

ಸುವರ್ಣದಾನವನ್ನು ಮಾಡಿ ಪುಷ್ಕಳವಾದ ಲೋಕಗಳನ್ನು ಪಡೆಯುತ್ತಾನೆ.
ಯಸ್ತು ಸಂಜನಯಿತ್ವಾಽಗ್ನಿಮಾದಿತ್ಯೋದಯನಂ ಪ್ರತಿ |
ದದ್ಯಾದ್ ವೈ ವ್ರತಮುದ್ದಿಶ್ಯ ಸರ್ವಾನ್ ಕಾಮಾನ್ ಸಮಶ್ನುತೇ ॥66॥
ಯಾವನು ಸೂರ್ಯೋದಯದ ಸಮಯದಲ್ಲಿ ವ್ರತವನ್ನು ಉದ್ದೇಶಿಸಿ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ ಸುವರ್ಣದಾನವನ್ನು ಮಾಡುತ್ತಾನೆಯೋ ಅವನು ಎಲ್ಲಾ ಕಾಮಗಳನ್ನೂ ಪಡೆಯುತ್ತಾನೆ.
ಅಗ್ನಿರಿತ್ಯೇವ ತತ್ ಪ್ರಾಹುಃ ಪ್ರದಾನಂ ವೈ ಸುಖಾವಹಮ್ |
ಯಥೇಷ್ಟಗುಣಸಂಪನ್ನಂ ಪ್ರವರ್ತಕಮಿತಿ ಸ್ಮೃತಮ್ ॥67॥
ಸುವರ್ಣವನ್ನು ಅಗ್ನಿ ಎಂದೇ ಹೇಳುತ್ತಾರೆ. ಸುವರ್ಣದಾನವು ಯಾವಾಗಲೂ ಸುಖವನ್ನು ತಂದುಕೊಡುವಂತಹದು ಮತ್ತು ದಾನ ಮಾಡಿದವನನ್ನು ಅವನಿಗೆ ಇಷ್ಟವಾದ ಗುಣಗಳಿಂದ ಸಂಪನ್ನನಾಗಿ ಮಾಡುವುದು ಎಂದೂ ಹೇಳುತ್ತಾರೆ.
ಭೀಷ್ಮಃ
ಇತ್ಯುಕ್ತಃ ಸ ವಸಿಷ್ಠೇನ ಜಾಮದಗ್ನ್ಯಃ ಪ್ರತಾಪವಾನ್ |
ದದೌ ಸುವರ್ಣಂ ವಿಪ್ರೇಭ್ಯೋ ವ್ಯಮುಚ್ಯತ ಚ ಕಿಲ್ಬಿಷಾತ್ ॥68॥
ಭೀಷ್ಮ ವಸಿಷ್ಠರಿಂದ ಹೀಗೆ ಹೇಳಲ್ಪಟ್ಟ ಪ್ರತಾಪಶಾಲಿಯಾದ ಪರಶುರಾಮನು ಬ್ರಾಹ್ಮಣರಿಗೆ ಸುವರ್ಣದಾನವನ್ನು ಮಾಡಿ ತನ್ನ ದೋಷದಿಂದ ನಿರ್ಮುಕ್ತನಾದನು.
ಏತತ್ ತೇ ಸರ್ವಮಾಖ್ಯಾತಂ ಸುವರ್ಣಸ್ಯ ಮಹೀಪತೇ |
ಪ್ರದಾನಸ್ಯ ಫಲಂ ಚೈವ ಜನ್ಮ ಚಾಗ್ರ್ಯಮನುತ್ತಮಮ್ ॥69॥
ಎಲೈ ಯುಧಿಷ್ಠಿರರಾಜನೇ, ಸುವರ್ಣಕ್ಕೆ ಸಂಬಂಧಿಸಿದ ಈ ಎಲ್ಲವನ್ನೂ ನಿನಗೆ ಹೇಳಿದ್ದೇನೆ. ಸುವರ್ಣದ ಶ್ರೇಷ್ಠವಾದ ಉತ್ಪತ್ತಿಯನ್ನೂ, ಅದರ ದಾನದ ಫಲವನ್ನೂ ಹೇಳಿದ್ದೇನೆ.
ತಸ್ಮಾತ್ ತ್ವಮಪಿ ವಿಪ್ರೇಭ್ಯಃ ಪ್ರಯಚ್ಛ ಕನಕಂ ಬಹು |
ದದತ್ಸುವರ್ಣಂ ನೃಪತೇ ಕಿಲ್ಬಿಷಾದ್ ವಿಪ್ರಮೋಕ್ಷ್ಯಸಿ ॥70॥
ಆದ್ದರಿಂದ ನೀನೂ ಸಹ ಬ್ರಾಹ್ಮಣರಿಗೆ ಬಹಳ ಸುವರ್ಣವನ್ನು ದಾನ ಮಾಡು. ಎಲೈ ರಾಜನೇ, ಸುವರ್ಣದಾನವನ್ನು ಮಾಡಿದರೆ ನೀನು ದೋಷಗಳಿಂದ ನಿರ್ಮುಕ್ತನಾಗುವಿ.
ಏವಮೇತನ್ಮಹಾರಾಜ ಸುವರ್ಣಸ್ಯ ಮಹಾತ್ಮನಃ |
ಜನ್ಮ ತೇ ಕಥಿತಂ ಪುಣ್ಯಂ ಪ್ರದಾನಂ ಚ ಯುಧಿಷ್ಠಿರ ॥71॥
ಎಲೈ ಮಹಾರಾಜನೇ, ಯುಧಿಷ್ಠಿರನೇ, ಹೀಗೆ ನಾನು ನಿನಗೆ ಮಹಾತ್ಮನಾದ ಸುವರ್ಣದ ಉತ್ಪತ್ತಿಯನ್ನೂ, ಪುಣ್ಯಪ್ರದಾನವಾದ ದಾನವನ್ನೂ ಹೇಳಿದ್ದೇನೆ.
ಇತಿ ರಾಮಮುವಾಚೇದಂ ವಸಿಷ್ಠಃ ಶ್ರೇಷ್ಠವಾಗೃಷಿಃ |
ಸುವರ್ಣದಾನೇ ಮಾಹಾತ್ಮ್ಯಂ ತತ್ಕುರುಷ್ವ ಯುಧಿಷ್ಠಿರ ॥72॥
ಎಲೈ ಯುಧಿಷ್ಠಿರನೇ, ಸುವರ್ಣದಾನದ ಮಹಾತ್ಮೆಯನ್ನು ಶ್ರೇಷ್ಠವಚನರಾದ ವಸಿಷ್ಠರು ಪರಶುರಾಮನಿಗೆ ಹೇಳಿದರು. ನೀನೂ ಸಹ ಸುವರ್ಣದಾನವನ್ನು ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಸುವರ್ಣಜನ್ಮಾದಿಕಥನಂ ನಾಮ
ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೆಂಟನೆಯ ಅಧ್ಯಾಯ
ತಾರಕ ವಧೆ.
ಯುಧಿಷ್ಠಿರಃ
ಉಕ್ತಾಃ ಪಿತಾಮಹೇನೇಹ ಸುವರ್ಣಸ್ಯ ವಿಧಾನತಃ |
ವಿಸ್ತರೇಣ ಪ್ರದಾನಸ್ಯ ಯೇ ಗುಣಾಃ ಶ್ರುತಿಲಕ್ಷಣಾಃ ॥1॥
ಯತ್ತು ಕಾರಣಮುತ್ಪತ್ತೇಃ ಸುವರ್ಣಸ್ಯೇಹ ಕೀರ್ತಿತಮ್ |
ಸ ಕಥಂ ತಾರಕಃ ಪ್ರಾಪ್ತೋ ನಿಧನಂ ತದ್ ಬ್ರುವೀಹಿ ಮೇ ॥2॥
ಯುಧಿಷ್ಠಿರ ಪಿತಾಮಹರಾದ ಬ್ರಹ್ಮದೇವರು ಶ್ರುತಿಗೆ ಅನುಸಾರವಾಗಿ ಸುವರ್ಣ ದಾನದ ವಿಧಿಯನ್ನು ಮತ್ತು ಸುವರ್ಣದಾನದ ಗುಣಗಳನ್ನು ಹೇಳಿದ್ದಾರೆ. ಆದರೆ ಸುವರ್ಣದ ಉತ್ಪತ್ತಿಗೆ ಕಾರಣವೆಂದು ಹೇಳಲಾದ ಆ ತಾರಕಾಸುರನು ಹೇಗೆ ನಿಧನವನ್ನು ಹೊಂದಿದನೆಂದು ನನಗೆ ಹೇಳು.
ಉಕ್ತಃ ಸ ದೇವತಾನಾಂ ಹಿ ಅವಧ್ಯ ಇತಿ ಪಾರ್ಥಿವ |
ನ ಚ ತಸ್ಯೇಹ ತೇ ಮೃತ್ಯುರ್ವಿಸ್ತರೇಣ ಪ್ರಕೀರ್ತಿತಃ ॥3॥
ಏತದಿಚ್ಛಾಮ್ಯಹಂ ಶ್ರೋತುಂ ತ್ವತ್ತಃ ಕುರುಕುಲೋದ್ವಹ |
ಕಾರ್ತ್ಸ್ನ್ಯೇನ ತಾರಕವಧಂ ಪರಂ ಕೌತೂಹಲಂ ಹಿ ಮೇ ॥4॥
ಎಲೈ ರಾಜನೇ, ಅವನು ದೇವತೆಗಳಿಂದ ಅವಧ್ಯನಾದವನು ಎಂದು ಹೇಳಿದೆ. ಆದರೆ ಅವನ ವಧೆಯನ್ನು ವಿಸ್ತಾರವಾಗಿ ಹೇಳಲಿಲ್ಲ.

ಎಲೈ ಕುರುಕುಲೋದ್ವಹನೇ, ತಾರಕವಧೆಯನ್ನು ಸಂಪೂರ್ಣವಾಗಿ ಕೇಳಲು ಬಯಸುತ್ತೇನೆ. ನನಗೆ ಈ ವಿಷಯದಲ್ಲಿ ಬಹಳ ಕುತೂಹಲವಿದೆ.
ಭೀಷ್ಮಃ
ವಿಪನ್ನಕೃತ್ಯಾ ರಾಜೇಂದ್ರ ದೇವತಾ ಋಷಯಸ್ತಥಾ |
ಕೃತ್ತಿಕಾಶ್ಚೋದಯಾಮಾಸುರಪತ್ಯಭರಣಾಯ ವೈ ॥5॥
ಭೀಷ್ಮ ಎಲೈ ರಾಜೇಂದ್ರನೇ, ತಮ್ಮ ಕಾರ್ಯವು ಕೆಡುತ್ತಿರಲು ಆಗ ದೇವತೆಗಳು ಮತ್ತು ಋಷಿಗಳು ಕೃತ್ತಿಕೆಯರನ್ನು ಆ ಗರ್ಭವನ್ನು ಪೋಷಿಸುವಂತೆ ಒತ್ತಾಯಪಡಿಸಿದರು.
ನ ದೇವತಾನಾಂ ಕಾಚಿದ್ಧಿ ಸಮರ್ಥಾ ಜಾತವೇದಸಃ |
ಏಕಾಪಿ ಶಕ್ತಾ ತಂ ಗರ್ಭಂ ಸಂಧಾರಯಿತುಮೋಜಸಾ ॥6॥
ಅಗ್ನಿಯಿಂದ ಉಂಟಾದ ಆ ಗರ್ಭವನ್ನು ತಮ್ಮ ಸಾಮರ್ಥ್ಯದಿಂದ ಧರಿಸಲು ದೇವತೆಗಳಲ್ಲಿ ಒಬ್ಬರೂ ಸಮರ್ಥರಾಗಲಿಲ್ಲ.
ಷಣ್ಣಾಂ ತಾಸಾಂ ತತಃ ಪ್ರೀತಃ ಪಾವಕೋ ಗರ್ಭಧಾರಣಾತ್ |
ಸ್ವೇನ ತೇಜೋವಿಸರ್ಗೇಣ ವೀರ್ಯೇಣ ಪರಮೇಣ ಚ ॥7॥
ತನ್ನ ತೇಜಸ್ಸಿನಿಂದಲೂ, ಶ್ರೇಷ್ಠವಾದ ಪರಾಕ್ರಮದಿಂದಲೂ ಉಂಟಾದ ಆ ಗರ್ಭವನ್ನು ಧರಿಸಲು ಕೃತ್ತಿಕೆಯರು ಒಪ್ಪಿದುದರಿಂದ ಅಗ್ನಿಯು ಅವರಿಗೆ ಪ್ರಸನ್ನನಾದನು.
ತಾಸ್ತು ಷಟ್‌ಕೃತ್ತಿಕಾ ಗರ್ಭಂ ಪುಪುಷುರ್ಜಾತವೇದಸಃ |
ಷಟ್‌ಸು ವರ್ತ್ಮಸು ತೇಜೋಽಗ್ನೇಃ ಸಕಲಂ ನಿಹಿತಂ ಪ್ರಭೋ ॥8॥
ಆ ಷಟ್‌ಕೃತ್ತಿಕೆಯರು ಅಗ್ನಿಯ ಗರ್ಭವನ್ನು ಪೋಷಿಸಿದರು. ಎಲೈ ಪ್ರಭುವೇ, ಅಗ್ನಿಯ ಪೂರ್ಣವಾದ ತೇಜಸ್ಸು ಆರು ಮಾರ್ಗಗಳಲ್ಲಿ ಸ್ಥಾಪಿತವಾಯಿತು.
ತತಸ್ತಾ ವರ್ಧಮಾನಸ್ಯ ಕುಮಾರಸ್ಯ ಮಹಾತ್ಮನಃ |
ತೇಜಸಾಽಭಿಪರೀತಾಂಗ್ಯೋ ನ ಕ್ವಚಿಚ್ಛರ್ಮ ಲೇಭಿರೇ ॥9॥
ಮಹಾತ್ಮನಾದ ಅಗ್ನಿಯ ಗರ್ಭನಾದ ಕುಮಾರನು ಹಾಗೆಯೇ ಗರ್ಭದಲ್ಲಿ ಬೆಳೆಯುತ್ತಿರಲು ಅವನ ತೇಜಸ್ಸಿನಿಂದ ತಪ್ತವಾದ ಶರೀರವುಳ್ಳ ಕೃತ್ತಿಕೆಯರು ಸುಖವನ್ನು ಹೊಂದಲಿಲ್ಲ.
ತತಸ್ತೇಜಃಪರೀತಾಂಗ್ಯಃ ಸರ್ವಾಃ ಕಾಲ ಉಪಸ್ಥಿತೇ |
ಸಮಂ ಗರ್ಭಂ ಸುಷುವಿರೇ ಕೃತ್ತಿಕಾಸ್ತಾ ನರರ್ಷಭ ॥10॥
ಎಲೈ ನರರ್ಷಭನೇ, ಆ ಕುಮಾರನ ತೇಜಸ್ಸು ಹಾಗೆ ತಾಪಗೊಳಿಸುತ್ತಿರಲು ಆ ಕೃತ್ತಿಕೆಯರೆಲ್ಲರೂ ಏಕಕಾಲದಲ್ಲಿ ಗರ್ಭವನ್ನು ಪ್ರಸವಿಸಿದರು.
ತತಸ್ತಂ ಷಡಧಿಷ್ಠಾನಂ ಗರ್ಭಮೇಕತ್ವಮಾಗತಮ್ |
ಪೃಥಿವೀ ಪ್ರತಿಜಗ್ರಾಹ ಕೃತ್ತಿಕಾನಾಂ ಸಮೀಪತಃ ॥11॥
ಆರು ಅಧಿಷ್ಠಾನದಲ್ಲಿದ್ದ ಆ ಗರ್ಭವು ಜನಿಸಿ ಹೊರಗೆ ಬಂದು ಒಂದೇ ಮೂರ್ತಿಯಾಯಿತು. ಆಗ ಕೃತ್ತಿಕೆಯರ ಸಮೀಪದಿಂದ ಪೃಥಿವಿಯು ಆ ಶರೀರವನ್ನು ತೆಗೆದುಕೊಂಡಳು.
ಸ ಗರ್ಭೋ ದಿವ್ಯಸಂಸ್ಥಾನೋ ದೀಪ್ತಿಮಾನ್ ಪಾವಕಪ್ರಭಃ |
ದಿವ್ಯಂ ಶರವಣಂ ಪ್ರಾಪ್ಯ ವವೃಧೇ ಪ್ರಿಯದರ್ಶನಃ ॥12॥
ಅಗ್ನಿಯ ಪ್ರಭೆಯನ್ನು ಹೊಂದಿದ್ದ, ಕಾಂತಿಯುಕ್ತವಾದ, ದಿವ್ಯವಾದ ಆಕಾರವನ್ನು ಹೊಂದಿದ್ದ ಆ ಗರ್ಭವು (ಶಿಶುವು) ದಿವ್ಯವಾದ ಶರವಣಕ್ಕೆ ಹೋಗಿ ನೋಡಲು ಮನೋಹರವಾಗಿ ಬೆಳೆಯಿತು.
ದದೃಶುಃ ಕೃತ್ತಿಕಾಸ್ತಂ ತು ಬಾಲಂ ವಹ್ನಿಸಮದ್ಯುತಿಮ್ |
ಜಾತಸ್ನೇಹಾಶ್ಚ ಸೌಹಾರ್ದಾತ್ ಪುಪುಷುಃ ಸ್ತನ್ಯವಿಸ್ರವೈಃ ॥13॥
ಅಗ್ನಿಗೆ ಸಮಾನವಾದ ಕಾಂತಿಯುಳ್ಳ ಆ ಶಿಶುವನ್ನು ಕೃತ್ತಿಕೆಯರು ನೋಡಿದರು. ಶಿಶುವಿನಲ್ಲಿ ಸ್ನೇಹವುಂಟಾಗಿ ಅವರು ತಮ್ಮ ಸ್ತನ್ಯಕ್ಷೀರದಿಂದ ಅದನ್ನು ಪೋಷಿಸಿದರು.
ಅಭವತ್ ಕಾರ್ತಿಕೇಯಃ ಸ ತ್ರೈಲೋಕ್ಯೇ ಸಚರಾಚರೇ |
ಸ್ಕನ್ನತ್ವಾತ್ ಸ್ಕಂದತಾಂ ಚಾಪ ಗುಹಾವಾಸಾದ್ ಗುಹೋಽಭವತ್ ॥14॥
ಆದ್ದರಿಂದ ಅವನು ಚರಾಚರ ಸಹಿತವಾದ ಮೂರುಲೋಕಗಳಲ್ಲಿ ಕಾರ್ತಿಕೇಯ ಎಂದು ಹೆಸರನ್ನು ಹೊಂದಿದನು. ವೀರ್ಯವು ಜಾರಿ ಗರ್ಭರೂಪವನ್ನು ಪಡೆದುದರಿಂದ ಸ್ಕಂದನೆನಿಸಿದನು. ಗುಹೆಯಲ್ಲಿ ವಾಸ ಮಾಡಿದುದರಿಂದ ಗುಹ ಎನಿಸಿಕೊಂಡನು.
ತತೋ ದೇವಾಸ್ತ್ರಯಸ್ತ್ರಿಂಶಂದ್ ದಿಶಶ್ಚ ಸದಿಗೀಶ್ವರಾಃ |
ರುದ್ರೋ ಧಾತಾ ಚ ವಿಷ್ಣುಶ್ಚ ಯಜ್ಞಃ ಪೂಷಾಽರ್ಯಮಾ ಭಗಃ ॥15॥
ಅಂಶೋ ಮಿತ್ರಶ್ಚ ಸಾಧ್ಯಾಶ್ಚ ವಸವೋ ವಾಸವೋಽಶ್ವಿನೌ |
ಆಪೋ ವಾಯುರ್ನಭಶ್ಚಂದ್ರೋ ನಕ್ಷತ್ರಾಣಿ ಗ್ರಹಾ ರವಿಃ ॥16॥
ಪೃಥಗ್ಭೂತಾನಿ ಚಾನ್ಯಾನಿ ಯಾನಿ ದೇವಗಣಾನಿ ವೈ |
ಆಜಗ್ಮುಸ್ತತ್ರ ತಂ ದ್ರಷ್ಟುಂ ಕುಮಾರಂ ಜ್ವಲನಾತ್ಮಜಮ್ |
ಋಷಯಸ್ತುಷ್ಟುವುಶ್ಚೈವ ಗಂಧರ್ವಾಶ್ಚ ಜಗುಸ್ತಥಾ ॥17॥
ಆಗ ಮೂವತ್ತೂರು ದೇವತೆಗಳು, ದಿಕ್ಕುಗಳು, ದಿಕ್ಪಾಲಕರು, ರುದ್ರ, ಬ್ರಹ್ಮ, ವಿಷ್ಣು, ಯಜ್ಞ, ಪೂಷ, ಅರ್ಯಮಾ, ಭಗ, ವರುಣ, ಮಿತ್ರ,

ಸಾಧ್ಯರು, ವಸುಗಳು, ಇಂದ್ರ, ಅಶ್ವಿನಿಗಳು, ಜಲ, ವಾಯು, ಆಕಾಶ, ಚಂದ್ರ, ನಕ್ಷತ್ರಗಳು, ಗ್ರಹಗಳು, ಸೂರ್ಯ ಮತ್ತು ಉಳಿದ ಬೇರೆ ಬೇರೆ ದೇವತಾ ಗಣಗಳು ಅಗ್ನಿಪುತ್ರನಾದ ಆ ಕುಮಾರನನ್ನು ನೋಡಲು ಅಲ್ಲಿಗೆ ಬಂದರು. ಋಷಿಗಳು ಅಲ್ಲಿ ಸ್ತೋತ್ರವನ್ನು ಮಾಡಿದರು. ಗಂಧರ್ವರು ಗಾನ ಮಾಡಿದರು.
ಷಡಾನನಂ ಕುಮಾರಂ ತಂ ದ್ವಿಷಡಕ್ಷಂ ದ್ವಿಜಪ್ರಿಯಮ್ |
ಪೀನಾಂಸಂ ದ್ವಾದಶಭುಜಂ ಪಾವಕಾದಿತ್ಯವರ್ಚಸಮ್ ॥18॥
ಶಯಾನಂ ಶರಗುಲ್ಮಸ್ಥಂ ದೃಷ್ಟ್ವಾ ದೇವಾಃ ಸಹರ್ಷಿಭಿಃ |
ಲೇಭಿರೇ ಪರಮಂ ಹರ್ಷಂ ಮೇನಿರೇ ಚಾಸುರಂ ಹತಮ್ ॥19॥
ಆರು ಮುಖಗಳು, ಹನ್ನೆರಡು ಕಣ್ಣುಗಳು, ಎತ್ತರವಾದ ವಕ್ಷಸ್ಸ್ಥಲ, ಹನ್ನೆರಡು ಭುಜಗಳು ಇವುಗಳನ್ನು ಹೊಂದಿದ್ದ ದ್ವಿಜಪ್ರಿಯನೂ, ಸೂರ್ಯಾಗ್ನಿ ಪ್ರಭೆಯುಳ್ಳವನೂ ಆದ, ಶರ ಎಂಬ ತೃಣಗಳ ಪೊದೆಯಲ್ಲಿ ಮಲಗಿರುವ ಕುಮಾರನನ್ನು ದೇವತೆಗಳು ಋಷಿಗಳ ಜೊತೆಯಲ್ಲಿ ನೋಡಿ ಪರಮಹರ್ಷವನ್ನು ತಾಳಿ ತಾರಕಾಸುರನು ಹತನಾದನು ಎಂದು ತಿಳಿದರು.
ತತೋ ದೇವಾಃ ಪ್ರಿಯಾಣ್ಯಸ್ಯ ಸರ್ವ ಏವ ಸಮಾಚರನ್ |
ಕ್ರೀಡತಃ ಕ್ರೀಡನೀಯಾನಿ ದದುಃ ಪಕ್ಷಿಗಣಾಂಶ್ಚ ಹ ॥20॥
ಅನಂತರ ಎಲ್ಲ ದೇವತೆಗಳೂ ಆ ಕುಮಾರನಿಗೆ ಪ್ರಿಯವನ್ನುಂಟು ಮಾಡಿದರು. ಆಟವಾಡುವ ಅವನಿಗೆ ಕ್ರೀಡಾಸಾಮಗ್ರಿಗಳನ್ನು ಮತ್ತು ಪಕ್ಷಿಗಣಗಳನ್ನು ಕೊಟ್ಟರು.
ಸುಪರ್ಣೋಽಸ್ಯ ದದೌ ಪತ್ರಂ ಮಯೂರಂ ಚಿತ್ರಬರ್ಹಿಣಮ್ |
ರಾಕ್ಷಸಾಶ್ಚ ದದುಸ್ತಸ್ಮೈ ವರಾಹಮಹಿಷಾವುಭೌ ॥21॥
ಗರುಡನು ವಿಚಿತ್ರವಾದ ಗರಿಗಳನ್ನು ಹೊಂದಿದ್ದ ಮಯೂರ ಪಕ್ಷಿಯನ್ನು ಕೊಟ್ಟನು. ರಾಕ್ಷಸರು ಅವನಿಗೆ ವರಾಹ-ಮಹಿಷಗಳನ್ನು ಕೊಟ್ಟರು.
ಕುಕ್ಕುಟಂ ಚಾಗ್ನಿಸಂಕಾಶಂ ಪ್ರದದೌ ವರುಣಃ ಸ್ವಯಮ್ |
ಚಂದ್ರಮಾಃ ಪ್ರದದೌ ಮೇಷಮಾದಿತ್ಯೋ ರುಚಿರಾಂ ಪ್ರಭಾಮ್ ॥22॥
ವರುಣನು ಅಗ್ನಿಯಂತೆ ಇದ್ದ ಕೆಂಪುಬಣ್ಣದ ಕುಕ್ಕುಟವನ್ನು ತಾನೇ ಕೊಟ್ಟನು. ಚಂದ್ರನು ಟಗರನ್ನೂ, ಸೂರ್ಯನು ದಿವ್ಯಕಾಂತಿಯನ್ನೂ ಕೊಟ್ಟನು.
ಗವಾಂ ಮಾತಾ ಚ ಗಾ ದೇವೀ ದದೌ ಶತಸಹಸ್ರಶಃ |
ಛಾಗಮಗ್ನಿರ್ಗುಣೋಪೇತಮಿಲಾ(ಳಾ) ಪುಷ್ಪಫಲಂ ಬಹು ॥23॥
ಗೋಮಾತೆಯಾದ ಸುರಭಿದೇವಿಯು ನೂರಾರು ಸಾವಿರಾರು ಸಂಖ್ಯೆಯಲ್ಲಿ ಗೋವುಗಳನ್ನು ಕೊಟ್ಟಳು. ಅಗ್ನಿಯು ಒಳ್ಳೆಯ ಗುಣದಿಂದ ಕೂಡಿದ ಹೋತವನ್ನು ಕೊಟ್ಟನು. ಭೂಮಿಯು ಬಹಳ ಪುಷ್ಪ-ಫಲಗಳನ್ನು ನೀಡಿದಳು.
ಸುಧನ್ವಾ ಶಕಟಂ ಚೈವ ರಥಂ ಚಾಮಿತಕೂಬರಮ್ |
ವರುಣೋ ವಾರಣಾನ್ ದಿವ್ಯಾನ್ ಭುಜಂಗಾನ್ ಪ್ರದದೌ ಶುಭಾನ್ |
ಸಿಂಹಾನ್ ಸುರೇಂದ್ರೋ ವ್ಯಾಘ್ರಾಂಶ್ಚ ದ್ವೀಪಿನೋನ್ಯಾಂಶ್ಚ ದಂಷ್ಟ್ರಿಣಃ ॥
ಸುಧನ್ವನು ಗಾಡಿಯನ್ನೂ ಮತ್ತು ವಿಸ್ತಾರವಾದ ಕೂಬರವುಳ್ಳ ರಥವನ್ನೂ ಕೊಟ್ಟನು. ವರುಣನು ದಿವ್ಯವಾದ ಗಜಗಳನ್ನೂ ಮತ್ತು ಶುಭವಾದ ಸರ್ಪಗಳನ್ನೂ ಕೊಟ್ಟನು. ಸುರೇಂದ್ರನು ಸಿಂಹಗಳನ್ನೂ, ವ್ಯಾಘ್ರಗಳನ್ನೂ, ಚಿರತೆಗಳನ್ನೂ ಉಳಿದ ದಂಷ್ಟ್ರವುಳ್ಳ ಪ್ರಾಣಿಗಳನ್ನೂ ಕೊಟ್ಟನು.
ಶ್ವಾಪದಾಂಶ್ಚ ಬಹೂನ್ ಘೋರಾಂಶ್ಚತ್ರಾಣಿ ವಿವಿಧಾನಿ ಚ |
ರಾಕ್ಷಸಾಸುರಸಂಘಾಶ್ಚ ಯೇಽನುಜಗ್ಮುಸ್ತಮೀಶ್ವರಮ್ ॥25॥
ಪ್ರಭುವಾದ ಆ ಸ್ಕಂದನ ಬಳಿಗೆ ಬಂದ ಅಸುರ ರಾಕ್ಷಸ ಸಮೂಹಗಳು ಘೋರವೂ, ವಿಚಿತ್ರವೂ, ವಿವಿಧವೂ ಆದ ಅನೇಕವಾದ ಮಾಂಸಾಹಾರಿ ಪ್ರಾಣಿಗಳನ್ನು ಕೊಟ್ಟವು.
ವರ್ಧಮಾನಂ ತು ತಂ ದೃಷ್ಟ್ವಾ ಪ್ರಾರ್ಥಯಾಮಾಸ ತಾರಕಃ |
ಉಪಾಯೈರ್ಬಹುಭಿರ್ಹಂತುಂ ನಾಶಕಚ್ಚಾಪಿ ತಂ ವಿಭುಮ್ ॥26॥
ಅವನು ಬೆಳೆಯುತ್ತಿರುವುದನ್ನು ನೋಡಿ ತಾರಕನು ಅನೇಕ ಉಪಾಯಗಳಿಂದ ಅವನನ್ನು ಕೊಲ್ಲಲು ಪ್ರಯತ್ನಿಸಿದನು. ಆದರೆ ವಿಭುವಾದ ಅವನನ್ನು ಕೊಲ್ಲಲು ಸಮರ್ಥನಾಗಲಿಲ್ಲ.
ಸೇನಾಪತ್ಯೇನ ತಂ ದೇವಾಃ ಪೂಜಯಿತ್ವಾ ಗುಹಾಲಯಮ್ |
ಶಶಂಸುರ್ವಿಪ್ರಕಾರಂ ತಂ ತಸ್ಮೈ ತಾರಕಕಾರಿತಮ್ ॥27॥
ದೇವತೆಗಳು ಗುಹಾವಾಸಿಯಾದ ಸ್ಕಂದನನ್ನು ಸೇನಾಪತ್ಯವನ್ನು ಕೊಟ್ಟು ಪೂಜಿಸಿ ಅವನಿಗೆ ತಾರಕನು ಮಾಡಿದ ಅಪಚಾರಗಳನ್ನು ತಿಳಿಸಿದರು.
ಸ ವಿವೃದ್ಧೋ ಮಹಾವೀರ್ಯೋ ದೇವಸೇನಾಪತಿಃ ಪ್ರಭುಃ |
ಜಘಾನಾಮೋಘಯಾ ಶಕ್ತ್ಯಾ ದಾನವಂ ತಾರಕಂ ಗುಹಃ ॥28॥
ದೇವಸೇನಾಪತಿಯೂ, ಪ್ರಭುವೂ, ಮಹಾಪರಾಕ್ರಮಶಾಲಿಯೂ ಆದ ಗುಹನು ಚೆನ್ನಾಗಿ ಬೆಳೆದು ಅಮೋಘವಾದ ಶಕ್ತಿಯಿಂದ ತಾರಕಾಸುರನನ್ನು ಸಂಹಾರ ಮಾಡಿದನು.
ತೇನ ತಸ್ಮಿನ್ ಕುಮಾರೇಣ ಕ್ರೀಡತಾ ನಿಹತೇಽಸುರೇ |
ಸುರೇಂದ್ರಃ ಸ್ಥಾಪಿತೋ ರಾಜ್ಯೇ ದೇವಾನಾಂ ಪುನರೀಶ್ವರಃ ॥29॥

ಆ ಕುಮಾರನಿಂದ (ಗುಹನಿಂದ) ಕ್ರೀಡೆಯಿಂದ ತಾರಕಾಸುರನು ಕೊಲ್ಲಲ್ಪಡುತ್ತಿರಲು ಸುರೇಂದ್ರನು ಪುನಃ ತನ್ನ ರಾಜ್ಯದಲ್ಲಿ ಪ್ರತಿಷ್ಠಿತನಾಗಿ ದೇವತೆಗಳ ಒಡೆಯನಾದನು.
ಸ ಸೇನಾಪತಿರೇವಾಥ ಬಭೌ ಸ್ಕಂದಃ ಪ್ರತಾಪವಾನ್ |
ಈಶೋ ಗೋಪ್ತಾ ಚ ದೇವಾನಾಂ ಪ್ರಿಯಕೃಚ್ಛಂಕರಸ್ಯ ಚ ॥30॥
ಆ ಪ್ರತಾಪಶಾಲಿಯಾದ ಗುಹನಾದರೂ ಸೇನಾಪತಿಯಾಗಿಯೇ ಮುಂದುವರೆದು ದೇವತೆಗಳಿಗೆ ಪ್ರಭುವೂ, ದೇವತೆಗಳಿಗೆ ರಕ್ಷಕನೂ ಮತ್ತು ಶಂಕರನಿಗೆ ಪ್ರಿಯಕಾರಿಯೂ ಆದನು.
ಹಿರಣ್ಯಮೂರ್ತಿರ್ಭಗವಾನೇಷ ಏವ ಚ ಪಾವಕಿಃ |
ಸದಾಕುಮಾರೋ ದೇವಾನಾಂ ಸೇನಾಪತ್ಯಮವಾಪ್ತವಾನ್ ॥31॥
ಅಗ್ನಿಪುತ್ರನಾದ ಪೂಜ್ಯನಾದ ಗುಹನು ಸುವರ್ಣಮೂರ್ತಿಯಾದವನು. ಸದಾಕುಮಾರನಾದ ಅವನು ದೇವತೆಗಳಿಗೆ ಸೇನಾಪತಿಯಾದನು.
ತಸ್ಮಾತ್ ಸುವರ್ಣಂ ಮಂಗಲ್ಯಂ ರತ್ನಮಕ್ಷಯ್ಯಮುತ್ತಮಮ್ |
ಸಹಜಂ ಕಾರ್ತ್ತಿಕೇಯಸ್ಯ ವಹ್ನೇಸ್ತೇಜಃ ಪರಂ ಮತಮ್ ॥32॥
ಆದ್ದರಿಂದ ಸುವರ್ಣವು ಮಂಗಳಪ್ರದವಾದುದು. ಶ್ರೇಷ್ಠವಾದ ಅಕ್ಷಯವಾದ ರತ್ನರೂಪವಾದುದು. ವಹ್ನಿಯ ತೇಜೋರೂಪವಾದುದು ಮತ್ತು ಗುಹನ ಜೊತೆಯಲ್ಲಿಯೇ ಜನಿಸಿದುದು.
ಏವಂ ರಾಮಾಯ ಕೌರವ್ಯ ವಸಿಷ್ಠೋಽಕಥಯತ್ ಪುರಾ |
ತಸ್ಮಾತ್ ಸುವರ್ಣದಾನಾಯ ಪ್ರಯತಸ್ವ ನರಾಧಿಪ ॥33॥
ಎಲೈ ಕೌರವ್ಯನೇ (ಯುಧಿಷ್ಠಿರನೇ), ಹೀಗೆ ಹಿಂದೆ ವಸಿಷ್ಠರು ಪರಶುರಾಮರಿಗೆ ಹೇಳಿದರು. ಎಲೈ ನರಾಧಿಪನೇ, ಆದ್ದರಿಂದ ನೀನೂ ಸುವರ್ಣದಾನವನ್ನು ಮಾಡಲು ಪ್ರಯತ್ನ ಪಡು.
ರಾಮಃ ಸುವರ್ಣಂ ದತ್ತ್ವಾ ಹಿ ವಿಮುಕ್ತಃ ಸರ್ವಕಿಲ್ಬಿಷೈಃ |
ತ್ರಿವಿಷ್ಟಪೇ ಮಹತ್ಸ್ಥಾನಮವಾಪಾಸುಲಭಂ ನರೈಃ ॥34॥
ಪರಶುರಾಮರು ಸುವರ್ಣದಾನವನ್ನು ಮಾಡಿ ಎಲ್ಲ ದೋಷಗಳಿಂದಲೂ ನಿರ್ಮುಕ್ತರಾಗಿ ಸ್ವರ್ಗಲೋಕದಲ್ಲಿ ಮನುಷ್ಯರು ಪಡೆಯಲು ಸಾಧ್ಯವಿಲ್ಲದ ಶ್ರೇಷ್ಠವಾದ ಸ್ಥಾನವನ್ನು ಪಡೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ತಾರಕವಧೋ ನಾಮ
ಅಷ್ಟವಿಂಶತ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ
ಶ್ರಾದ್ಧಕಲ್ಪ
ಯುಧಿಷ್ಠಿರಃ
ಚಾತುರ್ವರ್ಣ್ಯಸ್ಯ ಧರ್ಮಾತ್ಮನ್ ಧರ್ಮಃ ಪ್ರೋಕ್ತಸ್ತ್ವಯಾಽನಘ |
ತಥೈವ ಮೇ ಶ್ರಾದ್ಧವಿಧಿಂ ಕೃತ್ಸ್ನಂ ಪ್ರಬ್ರೂಹಿ ಪಾರ್ಥಿವ ॥1॥
ಯುಧಿಷ್ಠಿರ ಎಲೈ ಧರ್ಮಾತ್ಮನೇ, ಅನಘನೇ, ನೀನು ನಾಲ್ಕುವರ್ಣಗಳ ಧರ್ಮವನ್ನು ಹೇಳಿದ್ದೀಯೆ. ಎಲೈ ಧರ್ಮಾತ್ಮನೇ, ಹಾಗೆ ನನಗೆ ಸಮಗ್ರವಾದ ಶ್ರಾದ್ಧವಿಧಿಯನ್ನು ಹೇಳು.
ವೈಶಂಪಾಯನಃ
ಯುಧಿಷ್ಠಿರೇಣೈವಮುಕ್ತೋ ಭೀಷ್ಮಃ ಶಾಂತನವಸ್ತದಾ |
ಇಮಂ ಶ್ರಾದ್ಧವಿಧಿಂ ಕೃತ್ಸ್ನಂ ಪ್ರವಕ್ತುಮುಪಚಕ್ರಮೇ ॥2॥
ವೈಶಂಪಾಯನ ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ಶಂತನುಪುತ್ರರಾದ ಭೀಷ್ಮರು ಈ ಸಮಗ್ರವಾದ ಶ್ರಾದ್ಧವಿಧಿಯನ್ನು ಹೇಳಲು ಉಪಕ್ರಮಿಸಿದರು.
ಭೀಷ್ಮಃ
ಶೃಣುಷ್ವಾವಹಿತೋ ರಾಜನ್ ಶ್ರಾದ್ಧಕಲ್ಪಮಿಮಂ ಶುಭಮ್ |
ಧನ್ಯಂ ಯಶಸ್ಯಂ ಪುತ್ರೀಯಂ ಪಿತೃಯಜ್ಞಂ ಪರಂತಪ ॥3॥
ಭೀಷ್ಮ ಎಲೈ ರಾಜನೇ, ಈ ಪವಿತ್ರವಾದ ಶ್ರಾದ್ಧಕಲ್ಪವನ್ನು ಅವಧಾನದಿಂದ ಕೇಳು. ಎಲೈ ಪರಂತಪನೇ, ಪಿತೃಯಜ್ಞವು ಧನಪ್ರದವಾದುದು, ಕೀರ್ತಿಪ್ರದವಾದುದು ಮತ್ತು ಪುತ್ರಪ್ರದವಾದುದು.
ದೇವಾಸುರಮನುಷ್ಯಾಣಾಂ ಗಂಧರ್ವೋರಗರಕ್ಷಸಾಮ್ |
ಪಿಶಾಚಕಿನ್ನರಾಣಾಂ ಚ ಪೂಜ್ಯಾ ವೈ ಪಿತರಃ ಸದಾ ॥4॥
ಪಿತೃಗಳು ದೇವಾಸುರ-ಮನುಷ್ಯರಿಗೂ, ಗಂಧರ್ವೋರಗ-ರಾಕ್ಷಸರಿಗೂ, ಪಿಶಾಚ-ಕಿನ್ನರರಿಗೂ ಯಾವಾಗಲೂ ಪೂಜ್ಯರಾದವರು.
ಪಿತ್ರೂನ್ ಪೂಜ್ಯಾದಿತಃ ಪಶ್ಚಾದ್ ದೇವಾನ್ ಸಂತರ್ಪಯಂತಿ ವೈ |
ತಸ್ಮಾತ್ ಸರ್ವಪ್ರಯತ್ನೇನ ಪುರುಷಃ ಪೂಜಯೇತ್ ಸದಾ ॥5॥
ಮೊದಲು ಪಿತೃಗಳನ್ನು ಪೂಜಿಸಿ ಅನಂತರ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಆದ್ದರಿಂದ ಪುರುಷನು ಸರ್ವಪ್ರಯತ್ನದಿಂದ

ಯಾವಾಗಲೂ ಪಿತೃಗಳನ್ನು ಪೂಜಿಸಬೇಕು.
ಅನ್ವಾಹಾರ್ಯಂ ಮಹಾರಾಜ ಪಿತೄಣಾಂ ಶ್ರಾದ್ಧಮುಚ್ಯತೇ |
ತಚ್ಚಾಮಿಷೇಣ ವಿಧಿನಾ ವಿಧಿಃ ಪ್ರಥಮಕಲ್ಪಿತಃ ॥6॥
ಎಲೈ ಮಹಾರಾಜನೇ, ಪಿತೃಗಳ ಶ್ರಾದ್ಧಕ್ಕೆ ಅನ್ವಾಹಾರ್ಯ ಎಂದು ಹೇಳುತ್ತಾರೆ. ಮಾಂಸವಿಧಿಯಿಂದ ಶ್ರಾದ್ಧವನ್ನು ಮಾಡುವುದು ಬಹಳ ಶ್ರೇಷ್ಠವಾದುದು.
ಸರ್ವೇಷ್ವಹಃಸು ಪ್ರೀಯಂತೇ ಕೃತೈಃ ಶ್ರಾದ್ಧೈಃ ಪಿತಾಮಹಾಃ |
ಪ್ರವಕ್ಷ್ಯಾಮಿ ತು ತೇ ಸರ್ವಾಂಸ್ತಿಥ್ಯಾಂ ತಿಥ್ಯಾಂ ಗುಣಾಗುಣಾನ್ ॥7॥
ಯೇಷ್ವಹಃಸು ಕೃತೈಃ ಶ್ರಾದ್ಧೈರ್ಯತ್ಫಲಂ ಪ್ರಾಪ್ಯತೇಽನಘ |
ತತ್ಸರ್ವಂ ಕೀರ್ತಯಿಷ್ಯಾಮಿ ಯಥಾವತ್ ತನ್ನಿಬೋಧ ಮೇ ॥8॥
ಪಿತಾಮಹರು ಎಲ್ಲ ದಿನಗಳಲ್ಲಿಯೂ ಮಾಡಿದ ಶ್ರಾದ್ಧಗಳಿಂದ ಸಂತೋಷ ಪಡುತ್ತಾರೆ. ನಾನು ಒಂದೊಂದು ತಿಥಿಯಲ್ಲೂ ಮಾಡುವ ಶ್ರಾದ್ಧಗಳಿಗೆ ಗುಣ- ದೋಷಗಳನ್ನು ಹೇಳುವೆನು. ಎಲೈ ಅನಘನೇ, ಯಾವ ದಿನದಲ್ಲಿ ಮಾಡಿದ ಶ್ರಾದ್ಧಕ್ಕೆ ಏನು ಫಲವೆಂದು ಎಲ್ಲವನ್ನೂ ನಾನು ಸರಿಯಾಗಿ ಹೇಳುವೆನು ಅದನ್ನು ಕೇಳು.
ಪಿತೄನರ್ಚ್ಯ ಪ್ರತಿಪದಿ ಪ್ರಾಪ್ನುಯಾತ್ ಸ್ವಗೃಹೇ ಸ್ತ್ರಿಯಃ |
ಅಭಿರೂಪಪ್ರಜಾಯಿನ್ಯೋ ದರ್ಶನೀಯಾ ಬಹುಪ್ರಜಾಃ ॥9॥
ಪಾಡ್ಯದ ದಿನದಂದು ಪಿತೃಗಳನ್ನು ಪೂಜಿಸಿದರೆ ತನ್ನ ಗೃಹದಲ್ಲಿ ಸುಂದರವಾದ ಪ್ರಜೆಗಳನ್ನು ಪಡೆಯುವ, ಅನೇಕ ಪುತ್ರರನ್ನು ಹೊಂದುವ, ಒಳ್ಳೆಯ ಸ್ತ್ರೀಯರನ್ನು ಪಡೆಯುವನು.
ಸ್ತ್ರಿಯೋ ದ್ವಿತೀಯಾಂ ಜಾಯಂತೇ ತೃತೀಯಾಯಾಂ ತು ವಂದಿನಃ |
ಚತುರ್ಥ್ಯಾಂ ಕ್ಷುದ್ರಪಶವೋ ಭವಂತಿ ಬಹವೋ ಗೃಹೇ ॥10॥
ದ್ವಿತೀಯಾ ತಿಥಿಯ ಶ್ರಾದ್ಧದಿಂದ ಪುತ್ರಿಯರೂ, ತೃತೀಯಾ ಶ್ರಾದ್ಧದಿಂದ ವಂದಿಗಳೂ ಉಂಟಾಗುತ್ತಾರೆ. ಚತುರ್ಥೀ ಶ್ರಾದ್ಧದಿಂದ ಗೃಹದಲ್ಲಿ ಅನೇಕ ಕ್ಷುದ್ರಪಶುಗಳೂ ಉಂಟಾಗುತ್ತವೆ.
ಪಂಚಮ್ಯಾಂ ಬಹವಃ ಪುತ್ರಾ ಜಾಯಂತೇ ಕುರ್ವತಾಂ ನೃಪ |
ಕುರ್ವಾಣಾಸ್ತು ನರಾಃ ಷಷ್ಠ್ಯಾಂ ಭವಂತಿ ದ್ಯುತಿಭಾಗಿನಃ ॥11॥
ಎಲೈ ರಾಜನೇ, ಪಂಚಮಿಯಲ್ಲಿ ಶ್ರಾದ್ಧ ಮಾಡುವವರಿಗೆ ಅನೇಕ ಪುತ್ರರು ಜನಿಸುತ್ತಾರೆ. ಷಷ್ಠಿಯಲ್ಲಿ ಶ್ರಾದ್ಧವನ್ನು ಮಾಡುವವರು ಕಾಂತಿಯುಕ್ತರಾಗುತ್ತಾರೆ.
ಕೃಷಿಭಾಗೀ ಭವೇಚ್ಛ್ರಾದ್ಧಂ ಕುರ್ವಾಣಃ ಸಪ್ತಮೀಂ ನೃಪ |
ಅಷ್ಟಮ್ಯಾಂ ತು ಪ್ರಕುರ್ವಾಣೋ ವಾಣಿಜ್ಯೇ ಲಾಭಮಾಪ್ನುಯಾತ್ ॥
ಸಪ್ತಮಿಯಂದು ಶ್ರಾದ್ಧವನ್ನು ಮಾಡುವವನು ಕೃಷಿನಿರತನಾಗುತ್ತಾನೆ. ಅಷ್ಟಮಿಯಂದು ಶ್ರಾದ್ಧ ಮಾಡಿದರೆ ವ್ಯಾಪಾರದಲ್ಲಿ ಲಾಭವುಂಟಾಗುವುದು.
ನವಮ್ಯಾಂ ಕುರ್ವತಃ ಶ್ರಾದ್ಧಂ ಭವತ್ಯೇಕಶಫಫಲಂ ಬಹು |
ವಿವರ್ಧಂತೇ ತು ದಶಮೀಂ ಗಾವಃ ಶ್ರಾದ್ಧಾನಿ ಕುರ್ವತಃ ॥13॥
ನವಮಿಯಲ್ಲಿ ಶ್ರಾದ್ಧ ಮಾಡಿದರೆ ಅವನ ಮನೆಯಲ್ಲಿ ಒಂದು ಗೊರಸಿನ ಅನೇಕ ಪ್ರಾಣಿಗಳು ಉಂಟಾಗುತ್ತವೆ. ದಶಮಿಯಂದು ಶ್ರಾದ್ಧವನ್ನು ಮಾಡಿದವನಿಗೆ ಗೋವುಗಳು ಅಭಿವೃದ್ಧಿಯನ್ನು ಹೊಂದುತ್ತವೆ.
ಕುಪ್ಯಭಾಗೀ ಭವೇನ್ಮರ್ತ್ಯಃ ಕುರ್ವನ್ನೇಕಾದಶೀಂ ನೃಪ |
ಬ್ರಹ್ಮವರ್ಚಸ್ವಿನಃ ಪುತ್ರಾ ಜಾಯಂತೇ ತಸ್ಯ ವೇಶ್ಮನಿ ॥14॥
ಎಲೈ ರಾಜನೇ, (ವಿದ್ಧ) ಏಕಾದಶಿಯಂದು ಶ್ರಾದ್ಧ ಮಾಡುವವನಿಗೆ ವಸ್ತ್ರ-ಪಾತ್ರೆಗಳು ಲಭಿಸುತ್ತವೆ. ಅವನ ಮನೆಯಲ್ಲಿ ಬ್ರಹ್ಮವರ್ಚಸ್ಸನ್ನು ಹೊಂದಿದ ಪುತ್ರರು ಜನಿಸುತ್ತಾರೆ (ಲಕ್ಷ್ಯಾಲಂಕಾರ).
ದ್ವಾದಶ್ಯಾಮೀಹಮಾನಸ್ಯ ನಿತ್ಯಮೇವ ಪ್ರದೃಶ್ಯತೇ |
ರಜತಂ ಬಹು ಚಿತ್ರಂ ಚ ಸುವರ್ಣಂ ಚ ಮನೋರಮಮ್ ॥15॥
ದ್ವಾದಶಿಯಂದು ಶ್ರಾದ್ಧ ಮಾಡುವವನ ಮನೆಯಲ್ಲಿ ಬಹುವಿಧವಾದ, ವಿಚಿತ್ರವಾದ ಬೆಳ್ಳಿಯೂ ಮತ್ತು ಮನೋಹರವಾದ ಸುವರ್ಣವೂ ಕಂಡುಬರುತ್ತದೆ.
ಜ್ಞಾತೀನಾಂ ತು ಭವೇಚ್ಛ್ರೇಷ್ಠಃ ಕುರ್ವನ್ ಶ್ರಾದ್ಧಂ ತ್ರಯೋದಶೀಮ್ |
ಅವಶ್ಯಂ ತು ಯುವಾನೋಽಸ್ಯ ಪ್ರಮೀಯಂತೇ ನರಾ ಗೃಹೇ ॥16॥
ತ್ರಯೋದಶಿಯಂದು ಶ್ರಾದ್ಧ ಮಾಡುವವನು ತನ್ನ ಬಂಧುಗಳೊಂದಿಗೆ ಶ್ರೇಷ್ಠನಾಗುತ್ತಾನೆ. ಆದರೆ ಅವನ ಮನೆಯಲ್ಲಿ ಅವಶ್ಯವಾಗಿ ಯುವಕರು ಮೃತರಾಗುತ್ತಾರೆ.
ಯುದ್ಧಭಾಗೀ ಭವೇನ್ಮರ್ತ್ಯಃ ಶ್ರಾದ್ಧಂ ಕುರ್ವಂಶ್ಚತುರ್ದಶೀಮ್ |
ಅಮಾವಾಸ್ಯಾಂ ತು ನಿವಪನ್ ಸರ್ವಾನ್ ಕಾಮಾನವಾಪ್ನುಯಾತ್ ॥
ಚತುರ್ದಶಿಯಂದು ಶ್ರಾದ್ಧ ಮಾಡುವವನು ಯುದ್ಧದಲ್ಲಿ ಭಾಗವಹಿಸುತ್ತಾನೆ. ಅಮಾವಾಸ್ಯೆಯಂದು ಶ್ರಾದ್ಧ ಮಾಡುವವನು ಎಲ್ಲಾ ಕಾಮಗಳನ್ನೂ ಹೊಂದುವನು.
ಕೃಷ್ಣಪಕ್ಷೇ ದಶಮ್ಯಾದೌ ವರ್ಜಯಿತ್ವಾ ಚತುರ್ದಶೀಮ್ |
ಶ್ರಾದ್ಧಕರ್ಮಣಿ ತಿಥ್ಯಃ ಸ್ಯುಃ ಪ್ರಶಸ್ತಾ ನ ತಥೇತರಾಃ ॥18॥

ಕೃಷ್ಣಪಕ್ಷದಲ್ಲಿ ಚತುರ್ದಶಿಯನ್ನು ಬಿಟ್ಟು ದಶಮ್ಯಾದಿ ತಿಥಿಗಳು ಶ್ರಾದ್ಧಕರ್ಮಕ್ಕೆ ಪ್ರಶಸ್ತವಾಗುತ್ತವೆ. ಇತರ ತಿಥಿಗಳು ಅಷ್ಟು ಪ್ರಶಸ್ತವಲ್ಲ.
ಯಥಾ ಚೈವಾಪರಃ ಪಕ್ಷಃ ಪೂರ್ವಪಕ್ಷಾದ್ ವಿಶಿಷ್ಯತೇ |
ತಥಾ ಶ್ರಾದ್ಧಸ್ಯ ಪೂರ್ವಾಹ್ಣಾದಪರಾಹ್ಣೋ ವಿಶಿಷ್ಯತೇ ॥19॥
ಹೇಗೆ ತಿಂಗಳಿನ ಪೂರ್ವಪಕ್ಷಕ್ಕಿಂತಲೂ ಅಪರಪಕ್ಷವು ಶ್ರೇಷ್ಠವೋ ಅದರಂತೆ ಪೂರ್ವಾಹ್ಣದಲ್ಲಿ ಮಾಡಿದ ಶ್ರಾದ್ಧಕಿಂತಲೂ ಅಪರಾಹ್ಣದಲ್ಲಿ ಮಾಡಿದ ಶ್ರಾದ್ಧವು ಶ್ರೇಷ್ಠವಾಗುತ್ತದೆ.
ಪೌರ್ಣಿಮಾಂತ ಮಾಸಗಳನ್ನು ಎಣಿಸುವಾಗ ಪ್ರತಿಯೊಂದು ಮಾಸದಲ್ಲಿಯೂ ಮೊದಲು ಕೃಷ್ಣಪಕ್ಷ ಅನಂತರ ಶುಕ್ಲಪಕ್ಷವು ಬರುತ್ತದೆ. ಸ್ನಾನಾದಿಗಳಿಗೆ ಮತ್ತು ಉತ್ತರ ಭಾರತದಲ್ಲಿ ಎಷ್ಟೋ ಪಂಚಾಂಗದಲ್ಲಿ ಇದೇ ಕ್ರಮವನ್ನು ಅನುಸರಿಸುತ್ತಾರೆ. ಏಕಾದಶಿಗಳ ಮಹಿಮೆಗಳನ್ನು ಹೇಳುವಾಗಲೂ ಇದೇ ರೀತಿ ಅನುಸರಿಸಲ್ಪಡುತ್ತದೆ - ಲಕ್ಷ್ಮಾಲಂಕಾರ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಶ್ರಾದ್ಧಹವಿಧಿನಿರೂಪಣಂ ನಾಮ
ಏಕೋನತ್ರಿಂಶತ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತನೆಯ ಅಧ್ಯಾಯ
ಶ್ರಾದ್ಧದಲ್ಲಿ ಹವಿಸ್ಸಿನ ನಿರೂಪಣೆ
ಯುಧಿಷ್ಠಿರಃ
ಕಿಂಸ್ವಿದ್ ದತ್ತಂ ಪಿತೃಭ್ಯೋ ವೈ ಭವತ್ಯಕ್ಷಯಮೀಶ್ವರ |
ಕಿಂ ಹವಿಶ್ಚಿರರಾತ್ರಾಯ ಕಿಮಾನಂತ್ಯಾಯ ಕಲ್ಪತೇ ॥1॥
ಯುಧಿಷ್ಠಿರ ಎಲೈ ಪ್ರಭುವೇ, ಶ್ರಾದ್ಧದಲ್ಲಿ ಕೊಟ್ಟ ಯಾವ ಪದಾರ್ಥವು ಪಿತೃಗಳಿಗೆ ಅಕ್ಷಯವಾಗುತ್ತದೆ? ಯಾವ ಹವಿಸ್ಸು ಬಹುಕಾಲದವರೆಗೆ ಸಂತೋಷವನ್ನು ಕೊಡುತ್ತದೆ? ಯಾವುದು ಅನಂತವಾಗುತ್ತದೆ?
ಭೀಷ್ಮಃ
ಹವೀಂಷಿ ಶ್ರಾದ್ಧಕಲ್ಪೇ ತು ಯಾನಿ ಶ್ರಾದ್ಧವಿದೋ ವಿದುಃ |
ತಾನಿ ಮೇ ಶೃಣು ಕಾಮ್ಯಾನಿ ಫಲಂ ಚೈಷಾಂ ಯುಧಿಷ್ಠಿರ ॥2॥
ಭೀಷ್ಮ ಎಲೈ ಯುಧಿಷ್ಠಿರನೇ, ಶ್ರಾದ್ಧವನ್ನು ತಿಳಿದಂತಹ ಶ್ರಾದ್ಧವಿಧಿಯ ಹವಿಸ್ಸುಗಳನ್ನು ಮತ್ತು ಅವುಗಳ ಫಲವನ್ನು ಹೇಳುತ್ತೇನೆ. ಅದನ್ನು ಕೇಳು.
ತಿಲೈರ್ವ್ರೀಹಿಯವೈರ್ಮಾಷೈರದ್ಭಿರ್ಮೂಲಫಲೈಸ್ತಥಾ |
ದತ್ತೇನ ಮಾಸಂ ಪ್ರೀಯಂತೇ ಶ್ರಾದ್ಧೇನ ಪಿತರೋ ನೃಪ ॥3॥
ಎಲೈ ರಾಜನೇ, ಎಳ್ಳು, ಬತ್ತ, ಗೋಧಿ, ಜಲ, ಗೆಡ್ಡೆ-ಗೆಣಸುಗಳು ಮತ್ತು ಫಲ ಇವುಗಳನ್ನು ಶ್ರಾದ್ಧದಲ್ಲಿ ಕೊಟ್ಟರೆ ಪಿತೃಗಳು ಒಂದು ತಿಂಗಳ ಕಾಲ ಸಂತೋಷದಿಂದ ಇರುತ್ತಾರೆ.
ವರ್ಧಮಾನತಿಲಂ ಶ್ರಾದ್ಧಮಕ್ಷಯಂ ಮನುರಬ್ರವೀತ್ |
ಸರ್ವೇಷ್ವೇವ ತು ಭೋಜ್ಯೇಷು ತಿಲಾಃ ಪ್ರಾಧಾನ್ಯತಃ ಸ್ಮೃತಾಃ ॥4॥
ಸಮೃದ್ಧವಾದ ಎಳ್ಳನ್ನು ಹೊಂದಿರುವ ಶ್ರಾದ್ಧವು ಅಕ್ಷಯಫಲವನ್ನು ಕೊಡುತ್ತದೆ ಎಂದು ಮನುವು ಹೇಳಿದ್ದಾನೆ. ಎಲ್ಲ ಭೋಜ್ಯಗಳಲ್ಲಿಯೂ ತಿಲವು ಪ್ರಧಾನವಾದುದು ಎಂದು ಹೇಳಲ್ಪಡುತ್ತದೆ.
ದ್ವೌ ಮಾಸೌ ತು ಭವೇತ್ ತೃಪ್ತಿರ್ಮತ್ಸ್ಯೈಃ ಪಿತೃಗಣಸ್ಯ ಹ |
ತ್ರೀನ್ಮಾಸಾನಾವಿಕೇನಾಹುಶ್ಚಾತುರ್ಮಾಸ್ಯಂ ಶಶೇನ ತು ॥5॥
ಮೀನುಗಳನ್ನು ಹವಿಸ್ಸಾಗಿ ಕೊಡುವುದರಿಂದ ಪಿತೃಗಳಿಗೆ ಎರಡು ತಿಂಗಳ ಕಾಲ ಸಂತೋಷವಿರುತ್ತದೆ. ಕುರಿಮಾಂಸದ ಹವಿಸ್ಸಿನಿಂದ ಮೂರುತಿಂಗಳು, ಮೊಲದ ಮಾಂಸದ ಹವಿಸ್ಸಿನಿಂದ ನಾಲ್ಕು ತಿಂಗಳು ಸಂತೋಷವುಂಟಾಗುತ್ತದೆ.
ಆಜೇನ ಮಾಸಾನ್ ಪ್ರೀಯಂತೇ ಪಂಚೈವ ಪಿತರೋ ನೃಪ |
ವಾರಾಹೇಣ ತು ಷಣ್ಮಾಸಾನ್ ಸಪ್ತ ವೈ ಶಾಕುನೇನ ತು ॥6॥
ಎಲೈ ರಾಜನೇ, ಆಡಿನ ಮಾಂಸದಿಂದ ಪಿತೃಗಳು ಐದುತಿಂಗಳು ಸಂತೋಷದಿಂದ ಇರುತ್ತಾರೆ. ಹಂದಿಮಾಂಸದಿಂದ ಆರುತಿಂಗಳುಗಳ ಕಾಲ ಮತ್ತು ಪಕ್ಷಿಯ ಮಾಂಸದಿಂದ ಏಳು ತಿಂಗಳುಗಳ ಕಾಲ ಸಂತೋಷದಿಂದ ಇರುತ್ತಾರೆ.
ಮಾಸಾನಷ್ಟೌ ಪಾರ್ಷತೇನ ರೌರವೇಣ ನವೈವ ತು |
ಗವಯಸ್ಯ ತು ಮಾಂಸೇನ ತೃಪ್ತಿಃ ಸ್ಯಾದ್ ದಶಮಾಸಿಕೀ ॥7॥
ಜಿಂಕೆಯ ಮಾಂಸದಿಂದ ಎಂಟು ತಿಂಗಳು, ರೌರವ ಮಾಂಸದಿಂದ ಒಂಬತ್ತು ತಿಂಗಳು, ಗವಯ (ಕಾಡುದನ) ಮಾಂಸದಿಂದ ಹತ್ತು ತಿಂಗಳು ತೃಪ್ತಿಯುಂಟಾಗುತ್ತದೆ.
ಮಾಸಾನೇಕಾದಶ ಪ್ರೀತಿಃ ಪಿತೄಣಾಂ ಮಾಹಿಷೇಣ ತು |
ಗವ್ಯೇನ ದತ್ತೇ ಶ್ರಾದ್ಧೇ ತು ಸಂವತ್ಸರಮಿಹೋಚ್ಯತೇ ॥8॥
ಎಮ್ಮೆಯ ಮಾಂಸದಿಂದ ಪಿತೃಗಳಿಗೆ ಹನ್ನೊಂದು ತಿಂಗಳು, ಗವ್ಯದಿಂದ (ಗೋ ಸಂಬಂಧಿಪದಾರ್ಥದಿಂದ-ಗೋಮಾಂಸದಿಂದ

ಶ್ರಾದ್ಧವನ್ನು ಮಾಡಿದರೆ ಒಂದು ವರ್ಷದ ಕಾಲ ತೃಪ್ತಿಯನ್ನು ಹೊಂದುತ್ತಾರೆ.
ಯಥಾ ಗವ್ಯಂ ತಥಾ ಯುಕ್ತಂ ಪಾಯಸಂ ಸರ್ಪಿಷಾ ಸಹ |
ವಾಧ್ರಾರ್ಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥9॥
ಗವ್ಯವು ಪಿತೃಗಳಿಗೆ ತೃಪ್ತಿಪಡಿಸಿದಂತೆ ಘೃತ ಸಹಿತವಾದ ಪಾಯಸವು ತೃಪ್ತಿಯನ್ನು ಉಂಟುಮಾಡುತ್ತದೆ. ಕಾಡೆಮ್ಮೆಯ ಮಾಂಸದಿಂದ ಪಿತೃಗಳಿಗೆ ಹನ್ನೆರಡು ವರ್ಷಗಳ ಕಾಲ ತೃಪ್ತಿಯುಂಟಾಗುತ್ತದೆ.
ಆನಂತ್ಯಾಯ ಭವೇದ್ದತ್ತಂ ಖಡ್ಗಮಾಂಸಂ ಪಿತೃಕ್ಷಯೇ |
ಕಾಲಶಾಕಂ ಚ ಲೌಹಂ ಚಾಪ್ಯಾನಂತ್ಯೇಂ ಛಾಗ ಉಚ್ಯತೇ ॥10॥
ಪಿತೃಗಳ ಶ್ರಾದ್ಧದಲ್ಲಿ ಖಡ್ಗಮೃಗ ಮಾಂಸವನ್ನು ಕೊಟ್ಟರೆ ಅನಂತಕಾಲದಲ್ಲಿ ಪಿತೃಗಳು ತೃಪ್ತಿಯನ್ನು ಹೊಂದುತ್ತಾರೆ. ಕಾಲಶಾಕ (ಕರೀಬೇವು) ಹಾಗೂ ಹೋತದ ಮಾಂಸ ಇವು ಅನಂತಫಲವನ್ನು ಕೊಡುತ್ತದೆ.
ಗಾಥಾಶ್ಚಾಪ್ಯತ್ರ ಗಾಯಂತಿ ಪಿತೃಗೀತಾ ಯುಧಿಷ್ಠಿರ |
ಸನತ್ಕುಮಾರೋ ಭಗವಾನ್ ಪುರಾ ಮಯ್ಯಭ್ಯಭಾಷತ ॥11॥
ಎಲೈ ಯುಧಿಷ್ಠಿರನೇ, ಈ ವಿಷಯದಲ್ಲಿ ಪಿತೃಗಳು ಹಾಡಿದ ಒಂದು ಗೀತೆಯನ್ನು ಪೂಜ್ಯರಾದ ಸನತ್ಕುಮಾರರು ಹಿಂದೆ ನನಗೆ ಹೇಳಿದರು.
ಅಪಿ ನಃ ಸ ಕುಲೇ ಜಾಯಾದ್ ಯೋ ನೋ ದದ್ಯಾತ್ ತ್ರಯೋದಶೀಮ್ |
ಮಘಾಸು ಸರ್ಪಿಷಾ ಯುಕ್ತಂ ಪಾಯಸಂ ದಕ್ಷಿಣಾಯನೇ ॥12॥
ಆಜೇನ ವಾಪಿ ಲೌಹೇನ ಮಘಾಸ್ವೇವ ಯತವ್ರತಃ |
ಹಸ್ತಿಚ್ಛಾಯಾಸು ವಿಧಿವತ್ಕರ್ಣವ್ಯಜನವೀಜಿತಮ್ ॥13॥
ನಮ್ಮ ಕುಲದಲ್ಲಿ ದಕ್ಷಿಣಾಯನ ತ್ರಯೋದಶಿಯಂದು ಮಘಾನಕ್ಷತ್ರದಲ್ಲಿ ಘೃತ ಮಿಶ್ರವಾದ ಪಾಯಸವನ್ನು ಪಿತೃಗಳಿಗಾಗಿ ಕೊಡುವ ಯಾವನಾದರೂ ಜನಿಸಲಿ. ಮಘಾನಕ್ಷತ್ರದಲ್ಲಿಯೇ ವ್ರತನಿಯಮಾಸಕ್ತನಾಗಿ ಆಡಿನ ರಸ ಮಾಂಸದಿಂದ ವಟವೃಕ್ಷದ ಛಾಯೆಯಲ್ಲಿ ಬೀಸಣಿಗೆಯಿಂದ (ಕರ್ಣವ್ಯಜನದಿಂದ) ಶ್ರಾದ್ಧವನ್ನು ಮಾಡುವವನು ನಮ್ಮ ಕುಲದಲ್ಲಿ ಜನಿಸಲಿ (ಎಂಬುದು ಆ ಗೀತೆ).
ಹಸ್ತಿಚ್ಛಾಯಾ ಎಂದರೆ ಹಸ್ತದಂತೆ ಚಾಚಿಕೊಂಡಿರುವ ಬಿಳಿಲುಗಳು. ಅದನ್ನು ಹೊಂದಿರುವ ವಟವೃಕ್ಷವು ಹಸ್ತಿ.
ವಟವೃಕ್ಷಛಾಯೆಯಲ್ಲಿ ಎಂದು ಅರ್ಥ - ಲಕ್ಷ್ಮಾಲಂಕಾರ.
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ |
ಯತ್ರಾಸೌ ಪ್ರಥಿತೋ ಲೋಕೇಷ್ವಕ್ಷಯ್ಯಕರಣೋ ವಟಃ ॥14॥
ಲೋಕಗಳಲ್ಲಿ ಪ್ರಸಿದ್ಧವಾದ, ಮಾಡಿದುದಕ್ಕೆ ಅಕ್ಷಯ ಫಲವನ್ನು ಕೊಡುವ ಅಕ್ಷಯವಟವಿರುವ ಗಯಾಕ್ಷೇತ್ರಕ್ಕೆ ಯಾವನಾದರೂ ಹೋಗಿ ಶ್ರಾದ್ಧವನ್ನು ಮಾಡಬಹುದು ಎಂಬ ಅಭಿಪ್ರಾಯದಿಂದ ಅನೇಕ ಪುತ್ರರನ್ನು ಅಪೇಕ್ಷಿಸಬೇಕು.
ಆಪೋ ಮೂಲಂ ಫಲಂ ಮಾಂಸಮನ್ನಂ ವಾಪಿ ಪಿತೃಕ್ಷಯೇ |
ಯತ್ಕಿಂಚಿನ್ಮಧುಸಮ್ಮಿಶ್ರಂ ತದಾನಂತ್ಯಾಯ ಕಲ್ಪತೇ ॥15॥
ಜಲ, ಗೆಡ್ಡೆ-ಗೆಣಸುಗಳು, ಫಲ, ಮಾಂಸ, ಅನ್ನ- ಇವು ಪಿತೃಶ್ರಾದ್ಧದಲ್ಲಿ ಮುಖ್ಯವಾದವುಗಳು. ಜೇನು ಮಿಶ್ರಿತವಾಗಿ ಯಾವುದು ಕೊಡಲ್ಪಡುತ್ತದೆಯೋ ಅವೆಲ್ಲವೂ ಅನಂತ ಫಲವನ್ನು ಕೊಡುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಶ್ರಾದ್ಧಹವಿರ್ನಿರೂಪಣಂ ನಾಮ
ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೊಂದನೆಯ ಅಧ್ಯಾಯ
ನಕ್ಷತ್ರಯೋಗದಲ್ಲಿ ಶ್ರಾದ್ಧಫಲ ಕಥನ.
ಭೀಷ್ಮಃ
ಯಮಸ್ತು ಯಾನಿ ಶ್ರಾದ್ಧಾನಿ ಪ್ರೋವಾಚ ಶಶಬಿಂದವೇ |
ತಾನಿ ಮೇ ಶೃಣು ಕಾಮ್ಯಾನಿ ನಕ್ಷತ್ರೇಷು ಪೃಥಕ್ಪೃಥಕ್ ॥1॥
ಭೀಷ್ಮ ಯಮದೇವರು ಶಶಬಿಂದುವಿಗೆ ಬೇರೆ ಬೇರೆ ನಕ್ಷತ್ರಯೋಗಗಳಲ್ಲಿ ಕಾಮ್ಯ ಶ್ರಾದ್ಧಗಳಿಗೆ ಯಾವ ಫಲವನ್ನು ಹೇಳಿದರೋ ಅದನ್ನು ನನ್ನಿಂದ ಕೇಳು.
ಶ್ರಾದ್ಧಂ ಯಃ ಕೃತ್ತಿಕಾಯೋಗೇ ಕುರ್ವೀತ ಸತತಂ ನರಃ |
ಅಗ್ನೀನಾಧಾಯ ಸಾಪತ್ಯೋ ಯಜೇತ ವಿಗತಜ್ವರಃ ॥2॥
ಯಾವ ಮನುಷ್ಯನು ಕೃತ್ತಿಕಾ ನಕ್ಷತ್ರದಲ್ಲಿ ಸತತವೂ ಶ್ರಾದ್ಧವನ್ನು ಮಾಡುತ್ತಾನೋ ಅವನು ಅಗ್ನಿಯ ಆಧಾನವನ್ನು ಮಾಡಿ ಪುತ್ರರ ಜೊತೆಯಲ್ಲಿ ನಿಶ್ಚಿಂತೆಯಾಗಿ ಯಾಗವನ್ನು ಮಾಡುತ್ತಾನೆ.
ಅಪತ್ಯಕಾಮೋ ರೋಹಿಣ್ಯಾಮೋಜಸ್ಕಾಮೋ ಮೃಗೋತ್ತಮೇ |
ಕ್ರೂರಕರ್ಮಾ ದದಚ್ಛ್ರಾದ್ಧಮಾರ್ದ್ರಾಯಾಂ ಮಾನವೋ ಭವೇತ್ ॥3॥
ಪುತ್ರರನ್ನು ಬಯಸುವ ಮಾನವನು ರೋಹಿಣಿ ನಕ್ಷತ್ರದಲ್ಲಿಯೂ, ಶರೀರದ ಶಕ್ತಿಯನ್ನು ಬಯಸುವ ಮನುಷ್ಯನು ಮೃಗಶಿರಾನಕ್ಷತ್ರದಲ್ಲಿಯೂ ಶ್ರಾದ್ಧವನ್ನು ಮಾಡಬೇಕು. ಆರ್ದ್ರಾನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಕ್ರೂರಕರ್ಮಿ ಆಗುತ್ತಾನೆ.

ಕೃಷಿಭಾಗೀ ಭವೇತ್ ಮರ್ತ್ಯಃ ಕುರ್ವನ್ ಶ್ರಾದ್ಧಂ ಪುನರ್ವಸೌ ।
ಪುಷ್ಟಿಕಾಮೋಽಥ ಪುಷ್ಯೇಣ ಶ್ರಾದ್ಧಮೀಹೇತ ಮಾನವಃ ॥4॥
ಪುನರ್ವಸು ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವ ಮನುಷ್ಯನು ಕೃಷಿಕನಾಗುತ್ತಾನೆ. ಪುಷ್ಟಿಯನ್ನು ಬಯಸುವ ಮನುಷ್ಯನು ಪುಷ್ಯಾನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡಬೇಕು.
ಆಶ್ಲೇಷಾಯಾಂ ದದಚ್ಛ್ರಾದ್ಧಂ ವೀರಾನ್ ಪುತ್ರಾನ್ ಪ್ರಜಾಯತೇ ।
ಜ್ಞಾತೀನಾಂ ತು ಭವೇಚ್ಛ್ರೇಷ್ಠೋ ಮಘಾಸು ಶ್ರಾದ್ಧಮಾವಪನ್ ॥5॥
ಆಶ್ಲೇಷಾ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ವೀರರಾದ ಪುತ್ರರನ್ನು ಪಡೆಯುತ್ತಾನೆ. ಮಘಾನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಬಂಧುಗಳಲ್ಲಿ ಶ್ರೇಷ್ಠನಾಗುತ್ತಾನೆ.
ಫಲ್ಗುನೀಷು ದದಚ್ಛ್ರಾದ್ಧಂ ಸುಭಗಃ ಶ್ರಾದ್ಧದೋ ಭವೇತ್ ।
ಅಪತ್ಯಭಾಗುತ್ತರಾಸು ಹಸ್ತೇನ ಫಲಭಾಗ್ ಭವೇತ್ ॥6॥
ಪೂರ್ವಫಲ್ಗುಣಿ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಸೌಭಾಗ್ಯಯುಕ್ತ- ನಾಗುತ್ತಾನೆ. ಉತ್ತರಾ ನಕ್ಷತ್ರದಲ್ಲಿ ಪುತ್ರರನ್ನೂ, ಹಸ್ತಾ ನಕ್ಷತ್ರದಲ್ಲಿ ಫಲಗಳನ್ನೂ ಪಡೆಯುತ್ತಾರೆ.
ಚಿತ್ರಾಯಾಂ ತು ದದಚ್ಛ್ರಾದ್ಧಂ ಲಭೇದ್ ರೂಪವತಃ ಸುತಾನ್ ।
ಸ್ವಾತಿಯೋಗೇ ಪಿತೄನರ್ಚ್ಯ ವಾಣಿಜ್ಯಮುಪಜೀವತಿ ॥7॥
ಚಿತ್ತಾ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ರೂಪವಂತರಾದ ಪುತ್ರರನ್ನು ಪಡೆಯುತ್ತಾರೆ. ಸ್ವಾತೀ ನಕ್ಷತ್ರದಲ್ಲಿ ಪಿತೃಗಳನ್ನು ಅರ್ಚಿಸುವವನು ವಾಣಿಜ್ಯವನ್ನು ಅವಲಂಬಿಸುತ್ತಾನೆ.
ಬಹುಪುತ್ರೋ ವಿಶಾಖಾಸು ಪಿತ್ರ್ಯಮೀಹನ್ ಭವೇನ್ನರಃ ।
ಅನುರಾಧಾಸು ಕುರ್ವಾಣೋ ರಾಜಚಕ್ರಂ ಪ್ರವರ್ತಯೇತ್ ॥8॥
ವಿಶಾಖಾ ನಕ್ಷತ್ರದಲ್ಲಿ ಪಿತೃಯಜ್ಞವನ್ನು ಮಾಡುವವನು ಅನೇಕ ಪುತ್ರರನ್ನು ಪಡೆಯುತ್ತಾರೆ. ಅನುರಾಧಾ ನಕ್ಷತ್ರದಲ್ಲಿ ಮಾಡುವವನು ರಾಜಚಕ್ರ ಪ್ರವರ್ತಕನಾಗುತ್ತಾನೆ.
ಆಧಿಪತ್ಯಂ ವ್ರಜೇನ್ಮರ್ತ್ಯೋ ಜ್ಯೇಷ್ಠಾಯಾಮಪವರ್ಜಯನ್ ।
ನರಃ ಕುರುಕುಲಶ್ರೇಷ್ಠ ಶ್ರದ್ಧಾದಮಪುರಃಸರಃ ॥9॥
ಎಲೈ ಕುರುಕುಲಶ್ರೇಷ್ಠನೇ, ಶ್ರದ್ಧಾ ಮತ್ತು ನಿಯಮಯುಕ್ತನಾಗಿ ಜ್ಯೇಷ್ಠಾ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವ ಮಾನವನು ಅಧಿಪತಿಯಾಗುತ್ತಾನೆ.
ಮೂಲೇ ತ್ವಾರೋಗ್ಯಮರ್ಚ್ಛೇತ ಯಶೋಽಷಾಢಾಸ್ವನುತ್ತಮಮ್ ।
ಉತ್ತರಾಸು ತ್ವಷಾಢಾಸು ವೀತಶೋಕಶ್ಚರೇನ್ಮಹೀಮ್ ॥10॥
ಮೂಲಾ ನಕ್ಷತ್ರದಲ್ಲಿ ಆರೋಗ್ಯವನ್ನು ಹೊಂದುತ್ತಾನೆ. ಪೂರ್ವಾಷಾಢಾ ನಕ್ಷತ್ರದಲ್ಲಿ ಕೀರ್ತಿಯನ್ನು ಪಡೆಯುತ್ತಾನೆ. ಉತ್ತರಾಷಾಢಾ ನಕ್ಷತ್ರದಲ್ಲಿ ಶೋಕರಹಿತನಾಗಿ ತೀರ್ಥಯಾತ್ರೆಯನ್ನು ಮಾಡುತ್ತಾನೆ.
ಶ್ರಾದ್ಧಂ ತ್ವಭಿಜಿತೇ ಕುರ್ವನ್ ವಿದ್ಯಾಂ ಶ್ರೇಷ್ಠಾಮವಾಪ್ನುಯಾತ್ ।
ಶ್ರವಣೇ ತು ದದಚ್ಛ್ರಾದ್ಧಂ ಪ್ರೇತ್ಯ ಗಚ್ಛೇತ್ ಪರಾಂ ಗತಿಮ್ ॥11॥
ಅಭಿಜಿತ್ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಶ್ರೇಷ್ಠವಾದ ವಿದ್ಯೆಯನ್ನು ಪಡೆಯುತ್ತಾನೆ. ಶ್ರವಣ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಮರಣಾನಂತರದಲ್ಲಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ (ಲಕ್ಷಾಲಂಕಾರ).
ರಾಜ್ಯಭಾಗೀ ಧನಿಷ್ಠಾಯಾಂ ಪ್ರಾಪ್ನುಯಾನ್ನಾಪದಂ ನರಃ ।
ನಕ್ಷತ್ರೇ ವಾರುಣೇ ಕುರ್ವನ್ ಭಿಷಕ್ಸಿದ್ಧಿಮವಾಪ್ನುಯಾತ್ ॥12॥
ಧನಿಷ್ಠಾ ನಕ್ಷತ್ರದಲ್ಲಿ ರಾಜ್ಯವನ್ನು ಪಡೆಯುತ್ತಾನೆ ಮತ್ತು ಆಪತ್ತುಗಳು ಬರುವುದಿಲ್ಲ. ವರುಣದೇವತಾಕವಾದ ಶತಭಿಷಾ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಔಷಧ ಸಿದ್ಧಿಯನ್ನು ಪಡೆಯುತ್ತಾನೆ.
ಪೂರ್ವಪ್ರೋಷ್ಠಪದಾಃ ಕುರ್ವನ್ ಬಹು ವಿಂಧೇದಜಾವಿಕಮ್ ।
ಉತ್ತರಾಸ್ವಥ ಕುರ್ವಾಣೋ ವಿಂದತೇ ಗಾಃ ಸಹಸ್ರಶಃ ॥13॥
ಪೂರ್ವಾಭಾದ್ರಾನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಬಹಳ ಆಡು-ಕುರಿಗಳನ್ನು ಪಡೆಯುತ್ತಾನೆ. ಉತ್ತರಾಭಾದ್ರಾ ನಕ್ಷತ್ರದಲ್ಲಿ ಮಾಡುವವನು ಸಹಸ್ರಾರು ಗೋವುಗಳನ್ನು ಪಡೆಯುತ್ತಾನೆ.
ಬಹುರೂಪ್ಯಕೃತಂ ವಿತ್ತಂ ವಿಂದತೇ ರೇವತೀಂ ಶ್ರಿತಃ ।
ಅಶ್ವಾಂಶ್ಚಾಶ್ವಯುಜೇ ವೇತ್ತಿ ಭರಣೀಷ್ವಾಯುರುತ್ತಮಮ್ ॥14॥
ರೇವತೀ ನಕ್ಷತ್ರವನ್ನು ಆಶ್ರಯಿಸಿ ಶ್ರಾದ್ಧವನ್ನು ಮಾಡುವವನು ಸುವರ್ಣ ಸಂಬಂಧಿಯಾದ ಬಹಳ ಧನವನ್ನು ಹೊಂದುತ್ತಾನೆ. ಅಶ್ವಿನೀ ನಕ್ಷತ್ರದಲ್ಲಿ ಅಶ್ವಗಳನ್ನೂ, ಭರಣೀ ನಕ್ಷತ್ರದಲ್ಲಿ ಶ್ರೇಷ್ಠವಾದ ಆಯುಸ್ಸನ್ನು ಹೊಂದುತ್ತಾನೆ.
ಇಮಂ ಶ್ರಾದ್ಧವಿಧಿಂ ಶ್ರುತ್ವಾ ಶಶಬಿಂದುಸ್ತಥಾಽಕರೋತ್ ।
ಅಕ್ಲೇಶೇನಾಜಯಚ್ಚಾಪಿ ಮಹೀಂ ಸೋಽನುಶಶಾಸ ಹ ॥15॥
ಈ ಶ್ರಾದ್ಧವಿಧಿಯನ್ನು ಕೇಳಿ ಶಶಬಿಂದುವು ಹಾಗೆಯೇ ಮಾಡಿದನು ಮತ್ತು ಅನಾಯಾಸವಾಗಿ ಭೂಮಿಯನ್ನು ಗೆದ್ದು ಆಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ನಕ್ಷತ್ರಯೋಗೇ ಕಾಮ್ಯಶ್ರಾದ್ಧವಿಧಿನಿರೂಪಣಂ
ನಾಮ ಏಕತ್ರಿಂಶತ್ಯಧಿಕಶತತಮೋಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.

* * * * *

॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥

ಮಹಾಭಾರತ

ಅನುಶಾಸನ ಪರ್ವ

ನೂರ ಮೂವತ್ತೆರಡನೆಯ ಅಧ್ಯಾಯ

ಶ್ರಾದ್ಧದಲ್ಲಿ ಪಾಂಕ್ತೇಯರ ವಿಚಾರ.

ಯುಧಿಷ್ಠಿರಃ

ಕೀದೃಶೇಭ್ಯಃ ಪ್ರದಾತವ್ಯಂ ಭವೇಚ್ಛ್ರಾದ್ಧಂ ಪಿತಾಮಹ |
ದ್ವಿಜೇಭ್ಯಃ ಕುರುಶಾರ್ದೂಲ ತನ್ಮೇ ವ್ಯಾಖ್ಯಾತುಮರ್ಹಸಿ ॥1॥

ಯುಧಿಷ್ಠಿರ ಪಿತಾಮಹನೇ, ಕುರುಶಾರ್ದೂಲನೇ, ಶ್ರಾದ್ಧದಲ್ಲಿ ಎಂತಹ ಬ್ರಾಹ್ಮಣರನ್ನು ನಿಮಂತ್ರಿಸಬೇಕು ಎಂದು ನನಗೆ ಹೇಳಬೇಕು.

ಭೀಷ್ಮಃ

ಬ್ರಾಹ್ಮಣಾನ್ನ ಪರೀಕ್ಷೇತ ಕ್ಷತ್ರಿಯೋ ದಾನಧರ್ಮವಿತ್ |
ದೈವೇ ಕರ್ಮಣಿ ಪಿತ್ರ್ಯೇ ತು ನ್ಯಾಯ್ಯಮಾಹುಃ ಪರೀಕ್ಷಣಮ್ ॥2॥

ಭೀಷ್ಮ ದಾನ-ಧರ್ಮವನ್ನು ಅರಿತ ಕ್ಷತ್ರಿಯನು ದೈವ-ಪಿತೃಕರ್ಮಗಳನ್ನು ಬಿಟ್ಟು ಉಳಿದ ದಾನಗಳಲ್ಲಿ ಬ್ರಾಹ್ಮಣನನ್ನು ಪರೀಕ್ಷಿಸಬಾರದು. ದೈವ-ಪಿತೃ ಕಾರ್ಯಗಳಲ್ಲಿ ಪರೀಕ್ಷಿಸುವುದು ನ್ಯಾಯವಾಗುತ್ತದೆ ಎಂದು ಹೇಳುತ್ತಾರೆ (ಲಕ್ಷ್ಮಾಲಂಕಾರ).

ದೇವತಾಃ ಪೂಜಯಂತೀಹ ದೈವೇನೈವೇಹ ತೇಜಸಾ |
ಉಪೇತ್ಯ ತಸ್ಮಾದ್ ದೇವೇಭ್ಯಃ ಸರ್ವೇಭ್ಯೋ ದಾಪಯೇನ್ನರಃ ॥3॥

ದೈವೇಚ್ಛೆಯಿಂದ ಲಬ್ಧವಾದ ಧನದಿಂದ ದೇವತೆಗಳನ್ನು ಪೂಜಿಸುತ್ತಾರೆ. ಆದ್ದರಿಂದ ದೇವತೆಗಳ ಅನುಗ್ರಹದಿಂದ ಧನವನ್ನೂ (ದ್ರವ್ಯವನ್ನೂ) ಪಡೆದು. ಎಲ್ಲರಿಗೂ ದಾನ ಮಾಡಬೇಕು.

ಶ್ರಾದ್ಧೇ ತ್ವಥ ಮಹಾರಾಜ ಪರೀಕ್ಷೇದ್ ಬ್ರಾಹ್ಮಣಾನ್ ಬುಧಃ |
ಕುಲಶೀಲವಯೋರೂಪೈರ್ವಿದ್ಯಯಾಽಭಿಜನೇನ ಚ ॥4॥

ಎಲೈ ಮಹಾರಾಜನೇ, ವಿವೇಕಿಯಾದವನು ಶ್ರಾದ್ಧದಲ್ಲಿ ಬ್ರಾಹ್ಮಣರ ಗುಣ-ಶೀಲ- ವಯೋ-ರೂಪ-ವಿದ್ಯೆ ಮತ್ತು ಜನ್ಮಗಳನ್ನು ಪರೀಕ್ಷಿಸಬೇಕು.

ಏಷಾಮನ್ಯೇ ಪಂಕ್ತಿದೂಷಾಸ್ತಥಾನ್ಯೇ ಪಂಕ್ತಿಪಾವನಾಃ |
ಅಪಾಂಕ್ತೇಯಾಸ್ತು ಯೇ ರಾಜನ್ ಕೀರ್ತಯಿಷ್ಯಾಮಿ ತಾನ್ ಶೃಣು ॥5॥

ಎಲೈ ರಾಜನೇ, ಈ ಬ್ರಾಹ್ಮಣರಲ್ಲಿ ಕೆಲವರು ಪಂಕ್ತಿದೂಷಕರು, ಕೆಲವರು ಪಂಕ್ತಿ ಪಾವನರು, ಕೆಲವರು ಅಪಾಂಕ್ತೇಯರು (ಪಂಕ್ತಿಗೆ ಅನರ್ಹರು) ಇರುತ್ತಾರೆ. ಅವರನ್ನು ಹೇಳುವೆನು ಕೇಳು.

ಕಿತವೋ ಭ್ರೂಣಹಾ ಯಕ್ಷ್ಮೀ ಪಶುಪಾಲೋ ನಿರಾಕೃತಿಃ |
ಗ್ರಾಮಪ್ರೇಷ್ಯೋ ವಾರ್ಧುಷಿಕೋ ಗಾಯನಃ ಸರ್ವವಿಕ್ರಯೀ ॥6॥
ಅಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ |
ಸಾಮುದ್ರಿಕೋ ರಾಜಭೃತ್ಯಸ್ತೈಲಿಕಃ ಕೂಟಕಾರಕಃ ॥7॥
ಪಿತ್ರಾ ವಿವದಮಾನಶ್ಚ ಯಸ್ಯ ಚೋಪಪತಿರ್ಗೃಹೇ |
ಅಭಿಶಸ್ತಸ್ತಥಾ ಸ್ತೇನಃ ಶಿಲ್ಪಂ ಯಶ್ಚೋಪಜೀವತಿ ॥8॥
ಪರ್ವಕಾರಶ್ಚ ಸೂಚೀ ಚ ಮಿತ್ರಧ್ರುಕ್ ಪಾರದಾರಿಕಃ |
ಅವ್ರತಾನಾಮುಪಾಧ್ಯಾಯಃ ಕಾಂಡಪೃಷ್ಠಸ್ತಥೈವ ಚ ॥9॥
ಶ್ವಭಿರ್ಯಶ್ಚ ಪರಿಕ್ರಾಮೇದ್ ಯಃ ಶುನಾ ದಷ್ಟ ಏವ ಚ |
ಪರಿವಿತ್ತಿಶ್ಚ ಯಶ್ಚ ಸ್ಯಾದ್ ದುಶ್ಚರ್ಮಾ ಗುರುತಲ್ಪಗಃ |
ಕುಶೀಲವೋ ದೇವಲಕೋ ನಕ್ಷತ್ರೈರ್ಯಶ್ಚ ಜೀವತಿ ॥10॥
ಈದೃಶೈರ್ಬ್ರಾಹ್ಮಣೈರ್ಭುಕ್ತಮಪಾಂಕ್ತೇಯೈರ್ಯುಧಿಷ್ಠಿರ |
ರಕ್ಷಾಂಸಿ ಗಚ್ಛತೇ ಹವ್ಯಮಿತ್ಯಾಹುರ್ಬ್ರಹ್ಮವಾದಿನಃ ॥11॥

ಮೋಸಗಾರ, ಭ್ರೂಣಘಾತಕ, ತೊನ್ನುರೋಗಿ, ಪಶುಪಾಲ, ವಿದ್ಯಾಹೀನ, ಗ್ರಾಮ ಸೇವಕ, ಬಡ್ಡಿಯಿಂದ ಜೀವನ ಮಾಡುವವನು, ಸಂಗೀತಗಾರ, ಎಲ್ಲ ವಸ್ತುಗಳನ್ನು ಮಾರುವವನು, ಮನೆಗೆ ಬೆಂಕಿಯನ್ನು ಹಚ್ಚಿದವನು, ವಿಷವನ್ನು ಕೊಟ್ಟವನು, ಮಣ್ಣಿನ ಪಾತ್ರೆಯಲ್ಲಿ ಭೋಜನ ಮಾಡುವವನು, ಸೋಮಲತೆಯನ್ನು ಮಾರುವವನು, ಸಮುದ್ರ ಯಾನವನ್ನು ಮಾಡಿದವನು, ರಾಜಸೇವಕ, ಎಣ್ಣೆಯನ್ನು ಮಾರುವವನು, ಸುಳ್ಳು ಸಾಕ್ಷಿಯನ್ನು ಹೇಳುವವನು, ತಂದೆಯ ಜೊತೆಯಲ್ಲಿ ಜಗಳ ಮಾಡುವವನು, ಪತ್ನಿಗೆ ಉಪಪತಿಯನ್ನು ಹೊಂದಲು ಅವಕಾಶ ನೀಡಿದವನು, ನಿಂದಿತನಾದವನು, ಕಳ್ಳ, ಶಿಲ್ಪವಿದ್ಯೆಯಿಂದ ಜೀವಿಸುವವನು, ಪರ್ವಕಾಲದಲ್ಲಿ ಪತ್ನಿಯ ಸಮಾಗಮವನ್ನು ಮಾಡುವವನು, ಚಾಡಿಕೋರ, ಮಿತ್ರದ್ರೋಹಿ, ಪರಪತ್ನಿಯ ಸಂಬಂಧವನ್ನು ಹೊಂದಿದವನು, ವ್ರತಹೀನರಿಗೆ ಉಪದೇಶ ಮಾಡುವವನು, ಯಾವಾಗಲೂ ಆಯುಧವನ್ನು ಹಿಡಿದವನು (ಆಯುಧವನ್ನು ತಯಾರಿಸುವವನು), ನಾಯಿಗಳ ಜೊತೆಯಲ್ಲಿ ಸಂಚರಿಸುವವನು, ನಾಯಿಯಿಂದ ಕಚ್ಚಲ್ಪಟ್ಟವನು, ಅಣ್ಣನ ವಿವಾಹವಾಗದೆ

ವಿವಾಹ ಮಾಡಿಕೊಂಡವನು, ಚರ್ಮರೋಗಿ, ಗುರುತಲ್ಪಗಾಮಿ, ನಾಟಕಗಳಲ್ಲಿ ಪಾತ್ರವಹಿಸುವವನು, ಸಂಬಳಕ್ಕಾಗಿ ದೇವರಪೂಜೆಯನ್ನು ಮಾಡುವವನು, ನಕ್ಷತ್ರಫಲಗಳನ್ನು ಹೇಳಿ ಜೀವಿಸುವವನು - ಎಲೈ ಯುಧಿಷ್ಠಿರನೇ, ಇಂತಹ ಬ್ರಾಹ್ಮಣರು ಭೋಜನವನ್ನು ಮಾಡಿದರೆ ಆ ಹವ್ಯವು ರಾಕ್ಷಸರನ್ನು ಸೇರುತ್ತದೆ ಎಂದು ಬ್ರಹ್ಮವಾದಿಗಳು ಹೇಳುತ್ತಾರೆ.

ಶ್ರಾದ್ಧಂ ಭುಕತ್ವ ತ್ವಧೀಯೀತ ವೃಷಲೀತಲ್ಪಗಶ್ಚ ಯಃ |
ಪುರೀಷೇ ತಸ್ಯ ತಂ ಮಾಸಂ ಪಿತರಸ್ತಸ್ಯ ಸೇವತೇ ॥12॥

ಯಾವನು ಶ್ರಾದ್ಧ ಭೋಜನವನ್ನು ಮಾಡಿ ವೇದಾಧ್ಯಯನವನ್ನು ಮಾಡುತ್ತಾನೆಯೋ ಶೂದ್ರಸ್ತ್ರೀ ಸಂಪರ್ಕವನ್ನು ಮಾಡುತ್ತಾನೆಯೋ ಅಂತಹವನಿಗೆ ಶ್ರಾದ್ಧದಾನವನ್ನು ಮಾಡಿದರೆ ಯಜಮಾನನ ಪಿತೃಗಳು ಒಂದು ತಿಂಗಳುಗಳ ಕಾಲ ಅಮೇಧ್ಯದಲ್ಲಿ ವಾಸಿಸುತ್ತಾರೆ.

ಸೋಮವಿಕ್ರಯಿಣೇ ವಿಷ್ಠಾ ಭಿಷಜೇ ಪೂಯಶೋಣಿತಮ್ |
ನಷ್ಟಂ ದೇವಲಕೇ ದತ್ತಮಪ್ರತಿಷ್ಠಂ ಚ ವಾರ್ಧುಷೇ ॥13॥

ಸೋಮವನ್ನು ಮಾರುವವನಿಗೆ ಶ್ರಾದ್ಧ ದಾನವನ್ನು ಮಾಡಿದರೆ ಮಲದಲ್ಲಿಯೂ, ವೈದ್ಯನಿಗೆ ಮಾಡಿದರೆ ಕೀವು ರಕ್ತಗಳಲ್ಲಿಯೂ ಪಿತೃಗಳು ವಾಸ ಮಾಡುತ್ತಾರೆ. ದೇವಲಕನಿಗೆ (ಸಂಬಳಕ್ಕಾಗಿ ದೇವರ ಪೂಜೆಯನ್ನು ಮಾಡುವವನಿಗೆ) ನೀಡಿದ ಶ್ರಾದ್ಧವು ನಷ್ಟವಾಗುತ್ತದೆ. ಬಡ್ಡಿಯಿಂದ ಜೀವನ ಮಾಡುವವನಿಗೆ ಕೊಟ್ಟ ಶ್ರಾದ್ಧದ ಫಲವು ಬೇಗ ನಾಶವನ್ನು ಹೊಂದುತ್ತದೆ.

ಯತ್ತು ವಾಣಿಜಕೇ ದತ್ತಂ ನೇಹ ನಾಮುತ್ರ ತದ್ಭವೇತ್ |
ಭಸ್ಮನೀವ ಹುತಂ ಹವ್ಯಂ ತಥಾ ಪೌನರ್ಭವೇ ದ್ವಿಜೇ ॥14॥

ವ್ಯಾಪಾರವನ್ನು ಮಾಡುವವನಿಗೆ ಕೊಟ್ಟ ದಾನವು ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಫಲವನ್ನು ಕೊಡುವುದಿಲ್ಲ. ಎರಡನೆಯ ಮದುವೆಯನ್ನು ಮಾಡಿಕೊಂಡವಳ ಪುತ್ರನಿಗೆ ದಾನವನ್ನು ಮಾಡಿದರೆ ಹವ್ಯವು ಭಸ್ಮದಲ್ಲಿ ಹೋಮ ಮಾಡಿದಂತೆ ಆಗುತ್ತದೆ.

ಯೇ ತು ಧರ್ಮವ್ಯಪೇತೇಷು ಚಾರಿತ್ರಾಪಗತೇಷು ಚ |
ಹವ್ಯಂ ಕವ್ಯಂ ಪ್ರಯಚ್ಛಂತಿ ತೇಷಾಂ ತತ್ಪ್ರೇತ್ಯ ನಶ್ಯತಿ ॥15॥

ಧರ್ಮಹೀನರಾದವರಿಗೂ, ಚಾರಿತ್ರಹೀನರಾದವರಿಗೂ ಹವ್ಯ-ಕವ್ಯಗಳನ್ನು ದಾನ ಮಾಡಿದರೆ ಅವರು ಮರಣವನ್ನು ಹೊಂದಿದ ಮೇಲೆ ಯಾವ ಫಲವನ್ನೂ ಪಡೆಯುವುದಿಲ್ಲ.

ಜ್ಞಾನಪೂರ್ವಂ ತು ಯೇ ತೇಭ್ಯಃ ಪ್ರಯಚ್ಛಂತ್ಯೇಲ್ಪಬುದ್ಧಯಃ |
ಪುರೀಷಂ ಭುಂಜತೇ ತಸ್ಯ ಪಿತರಃ ಪ್ರೇತ್ಯ ನಿಶ್ಚಯಃ ॥16॥

ಅಲ್ಪಬುದ್ಧಿಯುಳ್ಳವರು ಜ್ಞಾನಪೂರ್ವಕವಾಗಿ ಅಂತಹವರಿಗೆ ಶ್ರಾದ್ಧದಾನವನ್ನು ಮಾಡಿದರೆ ಅವರ ಪಿತೃಗಳು ಅಮೇಧ್ಯವನ್ನು ಭಕ್ಷಿಸುವುದರಲ್ಲಿ ಸಂಶಯವಿಲ್ಲ.

ಏತಾನಿಹ ವಿಜಾನೀಯಾದಪಾಂಕ್ತೇಯಾನ್ ದ್ವಿಜಾಧಮಾನ್ |
ಶೂದ್ರಾಣಾಮುಪದೇಶಂ ಚ ಯೇ ಕುರ್ವಂತ್ಯಲ್ಪಚೇತಸಃ ॥17॥

ಈ ದ್ವಿಜಾಧಮರನ್ನು ಪಂಕ್ತಿಗೆ ಅನರ್ಹರಾದವರು ಎಂದು ತಿಳಿಯಬೇಕು. ಶೂದ್ರರಿಗೆ ಉಪದೇಶವನ್ನು ಮಾಡುವ ಅಲ್ಪಚೇತನರು ಪಂಕ್ತಿಗೆ ಅನರ್ಹರು.

ಷಷ್ಟಿಂ ಕಾಣಃ ಶತಂ ಷಂಡಃ ಶ್ವಿತ್ರೀ ಯಾವತ್ ಪ್ರಪಶ್ಯತಿ |
ಪಂಕ್ತ್ಯಾಂ ಸಮುಪವಿಷ್ಟಾಯಾಂ ತಾವದ್ ದೂಷಯತೇ ನೃಪ ॥18॥

ಒಂದು ಕಣ್ಣು ಕುರುಡನಾದವನು ಪಂಕ್ತಿಯಲ್ಲಿರುವ ಅರವತ್ತು ಜನರನ್ನೂ, ನಪುಂಸಕನು ನೂರು ಜನರನ್ನೂ, ತೊನ್ನು ರೋಗಿಯು ಪಂಕ್ತಿಯಲ್ಲಿ ಕುಳಿತ ತಾನು ನೋಡುವ ಎಲ್ಲರನ್ನೂ ದೂಷಿಸುತ್ತಾನೆ.

ಯದ್ ವೇಷ್ಟಿತಶಿರಾ ಭುಂಕ್ತೇ ಯದ್ ಭುಂಕ್ತೇ ದಕ್ಷಿಣಾಮುಖಃ |
ಸೋಪಾನತ್ಕಶ್ಚ ಯದ್‌ಭುಂಕ್ತೇ ಸರ್ವಂ ವಿದ್ಯಾತ್ ತದಾಸುರಮ್ ॥19॥

ತಲೆಗೆ ಬಟ್ಟೆಯನ್ನು ಕಟ್ಟಿಕೊಂಡು ಅಥವಾ ದಕ್ಷಿಣಾಭಿಮುಖವಾಗಿ ಅಥವಾ ಪಾದರಕ್ಷೆಗಳನ್ನು ಧರಿಸಿ ಮಾಡಿದ ಭೋಜನವೆಲ್ಲವೂ ಅಸುರರನ್ನು ಸೇರುತ್ತದೆ.

ಅಸೂಯತಾ ಚ ಯದ್ದತ್ತಂ ಯಚ್ಚ ಶ್ರದ್ಧಾವಿವರ್ಜಿತಮ್ |
ಸರ್ವಂ ತದಸುರೇಂದ್ರಾಯ ಬ್ರಹ್ಮಾ ಭಾಗಮಕಲ್ಪಯತ್ ॥20॥

ಅಸೂಯೆಯಿಂದ ನೀಡಿದ ದಾನ, ಶ್ರದ್ಧೆಯಿಲ್ಲದೆ ನೀಡಿದ ದಾನ ಎಲ್ಲವೂ ಅಸುರ ಶ್ರೇಷ್ಠನಿಗೆ ಹೋಗುತ್ತದೆ ಎಂದು ಬ್ರಹ್ಮದೇವರು ಅವರ ಭಾಗವಾಗಿ ಕಲ್ಪಿಸಿದ್ದಾರೆ.

ಶ್ವಾನಶ್ಚ ಪಂಕ್ತಿದೂಷಾಶ್ಚ ನಾವೇಕ್ಷೇರನ್ ಕಥಂಚನ |
ತಸ್ಮಾತ್ ಪರಿವೃತೇ ದದ್ಯಾತ್ ತಿಲಾಂಶ್ಚಾನ್ವವಕೀರಯೇತ್ ॥21॥

ನಾಯಿಗಳು ಮತ್ತು ಪಂಕ್ತಿದೂಷಕರಾದವರು ಪಂಕ್ತಿಯನ್ನು ಎಂದೂ ನೋಡಬಾರದು. ಆದ್ದರಿಂದ ನಾಯಿಗಳು ನೋಡಲಾರದ ಆವರಣಯುಕ್ತವಾದ ಸ್ಥಳದಲ್ಲಿ ತಿಲಗಳನ್ನು ಎರಚಿ ಶ್ರಾದ್ಧವನ್ನು ಮಾಡಬೇಕು.

ತಿಲಾದಾನೇ ಚ ಕ್ರವ್ಯಾದಾ ಯೇ ಚ ಕ್ರೋಧವಶಾ ಗಣಾಃ |
ಯಾತುಧಾನಾಃ ಪಿಶಾಚಾಶ್ಚ ವಿಪ್ರಲುಂಪಂತಿ ತದ್ಧವಿಃ ॥22॥

ತಿಲಗಳನ್ನು ಕೊಡದಿದ್ದರೆ ರಾಕ್ಷಸರು, ಕ್ರೋಧವಶದೈತ್ಯರು, ಯಾತುಧಾನರು, ಪಿಶಾಚಿಗಳು ಆ ಶ್ರಾದ್ಧವನ್ನು ಕೆಡಿಸುತ್ತಾರೆ.

ಯಾವದ್ಧ್ಯಪಂಕ್ತ್ಯಃ ಪಂಕ್ತ್ಯಾಂ ವೈ ಭುಂಜಾನಾನನುಪಶ್ಯತಿ |
ತಾವತ್ಫಲಾದ್ ಭ್ರಂಶಯತಿ ದಾತಾರಂ ತಸ್ಯ ಬಾಲಿಶಮ್ ॥23॥

ಪಂಕ್ತಿಯಲ್ಲಿ ಕುಳಿತ ಅಪಾಂಕ್ತೇಯನು ಭೋಜನವನ್ನು ಮಾಡುವ ಎಷ್ಟು ಜನರನ್ನು ನೋಡುತ್ತಾನೆಯೋ ಯಜಮಾನನು ಅಷ್ಟು ಫಲಗಳಿಂದ ಹೀನನಾಗುತ್ತಾನೆ.
ಇಮೇ ತು ಭರತಶ್ರೇಷ್ಠ ವಿಜ್ಞೇಯಾಃ ಪಂಕ್ತಿಪಾವನಾಃ |
ಯೇ ತ್ವತಸ್ತಾನ್ ಪ್ರವಕ್ಷ್ಯಾಮಿ ಪರೀಕ್ಷಸ್ವೇಹ ತಾನ್ ದ್ವಿಜಾನ್ ॥24॥
ಎಲೈ ಭರತಶ್ರೇಷ್ಠನೇ, ನಾನು ಮುಂದೆ ಹೇಳುವ ಬ್ರಾಹ್ಮಣರು ಪಂಕ್ತಿಪಾವನರೆಂದು ತಿಳಿಯಬೇಕು. ಅಂತಹ ಬ್ರಾಹ್ಮಣರನ್ನು ಪರೀಕ್ಷಿಸಿ ಅವರಿಗೆ ಶ್ರಾದ್ಧವನ್ನು ಕೊಡಬೇಕು.
ವೇದವಿದ್ಯಾವ್ರತಸ್ನಾತಾ ಬ್ರಾಹ್ಮಣಾಃ ಸರ್ವ ಏವ ಹಿ |
ಪಾಂಕ್ತೇಯಾನ್ ಯಾಂಸ್ತು ವಕ್ಷ್ಯಾಮಿ ಜ್ಞೇಯಾಸ್ತೇ ಪಂಕ್ತಿಪಾವನಾಃ ॥25॥
ವೇದವಿದ್ಯಾಸ್ನಾತರಾದ ಮತ್ತು ವ್ರತಸ್ನಾತರಾದ ಬ್ರಾಹ್ಮಣರೆಲ್ಲರೂ ಪಾಂಕ್ತೇಯರು. ಅವರನ್ನು ಪಂಕ್ತಿಪಾವನರೆಂದು ತಿಳಿಯಬೇಕು.
ತ್ರಿಣಾಚಿಕೇತಃ ಪಂಚಾಗ್ನಿಸ್ತ್ರಿಸುಪರ್ಣಃ ಷಡಂಗವಿತ್ |
ಬ್ರಹ್ಮದೇವಾನುಸಂತಾನಶ್ಛಂದೋಗೋ ಜ್ಯೇಷ್ಠಸಾಮಗಃ ॥26॥
ಮಾತಾಪಿತ್ರೋರ್ಯಶ್ಚ ವಶ್ಯಃ ಶ್ರೋತ್ರಿಯೋ ದಶಪೂರುಷಃ |
ಋತುಕಾಲಾಭಿಗಾಮೀ ಚ ಧರ್ಮಪತ್ನೀಷು ಯಃ ಸದಾ |
ವೇದವಿದ್ಯಾವ್ರತಸ್ನಾತೋ ವಿಪ್ರಃ ಪಂಕ್ತಿಂ ಪುನಾತ್ಯುತ ॥27॥
ಅಥರ್ವಶಿರಸೋಽಧ್ಯೇತಾ ಬ್ರಹ್ಮಚಾರೀ ಯತವ್ರತಃ |
ಸತ್ಯವಾದೀ ಧರ್ಮಶೀಲಃ ಸ್ವಕರ್ಮನಿರತಶ್ಚ ಯಃ ॥28॥
ಯೇ ಚ ಪುಣ್ಯೇಷು ತೀರ್ಥೇಷು ಅಭಿಷೇಕಕೃತಶ್ರಮಾಃ |
ಮಖೇಷು ಚ ಸಮಂತ್ರೇಷು ಭವಂತ್ಯೇವಭೃಥಾಪ್ಲುತಾಃ ॥29॥
ಅಕ್ರೋಧನಾ ಅಚಪಲಾಃ ಕ್ಷಾಂತಾ ದಾಂತಾ ಜಿತೇಂದ್ರಿಯಾಃ |
ಸರ್ವಭೂತಹಿತಾ ಯೇ ಚ ಶ್ರಾದ್ಧೇಷ್ವೇತಾನ್ ನಿಮಂತ್ರಯೇತ್ |
ಏತೇಷು ದತ್ತಮಕ್ಷಯ್ಯಮೇತೇ ವೈ ಪಂಕ್ತಿಪಾವನಾಃ ॥30॥
ಮೂರು ಬಾರಿ ನಾಚಿಕೇತಾಗ್ನಿಯನ್ನು ಆಧಾನ ಮಾಡಿದವರು, ಗಾರ್ಹಪತ್ಯ, ಆಹವನೀಯ ಮೊದಲಾದ ಪಂಚಾಗ್ನಿಗಳನ್ನು ಪೂಜಿಸಿದವರು, ಆರು ವೇದಾಂಗಗಳನ್ನು ತಿಳಿದವರು, ವೇದನಿಷ್ಠರಾದ ಬ್ರಾಹ್ಮಣರ ಕುಲದಲ್ಲಿ ಜನಿಸಿದವರು, ಸಾಮಗಾನ ಮಾಡುವವರು, ಜ್ಯೇಷ್ಠ ಸಾಮವನ್ನು ಗಾನ ಮಾಡುವವರು, ಮಾತಾ-ಪಿತೃಗಳಿಗೆ ಅಧೀನರಾಗಿರುವವರು, ಹತ್ತು ತಲೆಮಾರಿನಿಂದ ಶ್ರೋತ್ರಿಯರಾಗಿರುವವರು, ಋತುಕಾಲದಲ್ಲಿ ಧರ್ಮಪತ್ನಿಯನ್ನು ಗಮನ ಮಾಡುವವರು, ಅಥರ್ವವೇದವನ್ನು ಅಧ್ಯಯನ ಮಾಡುವವರು, ಬ್ರಹ್ಮಚಾರಿಗಳು, ವ್ರತನಿಷ್ಠರು, ಸತ್ಯವಾದಿಗಳು, ಧರ್ಮಶೀಲರು, ತಮ್ಮ ಕರ್ಮಗಳಲ್ಲಿ ನಿರತರಾದವರು, ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುವವರು, ಯಾಗಗಳಲ್ಲಿ ಅವಭೃಥಸ್ನಾನ ಮಾಡಿದವರು, ಕ್ರೋಧವಿಲ್ಲದವರು, ಚಾಂಚಲ್ಯವಿಲ್ಲದವರು, ಸಹನೆಯುಳ್ಳವರು, ಇಂದ್ರಿಯಜಯವನ್ನು ಹೊಂದಿದವರು, ಸರ್ವಭೂತಗಳಲ್ಲಿ ಹಿತಬುದ್ಧಿಯುಳ್ಳವರು ಇಂತಹವರನ್ನು ಶ್ರಾದ್ಧದಲ್ಲಿ ನಿಮಂತ್ರಿಸಬೇಕು. ಇವರಿಗೆ ನೀಡಿದ ದಾನವು ಅಕ್ಷಯವಾಗುತ್ತದೆ. ಇವರೇ ಪಂಕ್ತಿಪಾವನರು.
ಇಮೇ ಪರೇ ಮಹಾರಾಜ ವಿಜ್ಞೇಯಾಃ ಪಂಕ್ತಿಪಾವನಾಃ |
ಯತಯೋ ಮೋಕ್ಷಧರ್ಮಜ್ಞಾ ಯೋಗಾಃ ಸುಚರಿತವ್ರತಾಃ ॥31॥
ಎಲೈ ಮಹಾರಾಜನೇ, ಮೋಕ್ಷಧರ್ಮವನ್ನು ಅನುಸರಿಸುವ ಯತಿಗಳು, ಒಳ್ಳೆಯ ವ್ರತವನ್ನು ನಡತೆಯನ್ನು ಹೊಂದಿದ ಯೋಗಿಗಳು ಪಂಕ್ತಿಪಾವನರೆಂದು ತಿಳಿಯಬೇಕು.
ಯೇ ಚೇತಿಹಾಸಂ ಪ್ರಯತಾಃ ಶ್ರಾವಯಂತಿ ದ್ವಿಜೋತ್ತಮಾನ್ |
ಯೇ ಚ ಭಾಷ್ಯವಿದಃ ಕೇಚಿದ್ ಯೇ ಚ ವ್ಯಾಕರಣೇ ರತಾಃ ॥32॥
ಅಧೀಯತೇ ಪುರಾಣಂ ಯೇ ಧರ್ಮಶಾಸ್ತ್ರಾಣ್ಯಥಾಪಿ ಚ |
ಅಧೀತ್ಯ ಚ ಯಥಾನ್ಯಾಯಂ ವಿಧಿವತ್ ತಸ್ಯ ಕಾರಿಣಃ ॥33॥
ಉಪಪನ್ನೋ ಗುರುಕುಲೇ ಸತ್ಯವಾದೀ ಸಹಸ್ರದಃ |
ಅಗ್ರ್ಯಃ ಸರ್ವೇಷು ವೇದೇಷು ಸರ್ವಪ್ರವಚನೇಷು ಚ ॥34॥
ಯಾವದೇತೇ ಪ್ರಪಶ್ಯಂತಿ ಪಂಕ್ತ್ಯಾಸ್ತಾವತ್ ಪುನಂತ್ಯುತ |
ತತೋ ಹಿ ಪಾವನಾತ್ ಪಂಕ್ತ್ಯಾಃ ಪಂಕ್ತಿಪಾವನ ಉಚ್ಯತೇ ॥35॥
ಬ್ರಾಹ್ಮಣರಿಗೆ ಶ್ರದ್ಧೆಯಿಂದ ಭಾರತ ಇತಿಹಾಸವನ್ನು ಪ್ರವಚನ ಮಾಡುವವರು, ವೇದಭಾಷ್ಯವನ್ನು ತಿಳಿದವರು, ವ್ಯಾಕರಣ ಶಾಸ್ತ್ರದಲ್ಲಿ ನಿರತರಾದವರು, ಪುರಾಣ ಮತ್ತು ಧರ್ಮಶಾಸ್ತ್ರಗಳ ಅಧ್ಯಯನವನ್ನು ಮಾಡುವವರು, ಅಧ್ಯಯನವನ್ನು ಮಾಡಿ ಶಾಸೊತ್ರೀಕ್ತ ರೀತಿಯಲ್ಲಿ ಕರ್ಮಗಳನ್ನು ಮಾಡುವವರು, ಗುರುಕುಲವಾಸವನ್ನು ಮಾಡಿದವರು, ಸತ್ಯವನ್ನು ನುಡಿಯುವವರು, ಸಹಸ್ರ ದಕ್ಷಿಣೆಯನ್ನು ಕೊಡುವವರು, ಎಲ್ಲ ವೇದಪ್ರಚನಕಾರರಲ್ಲಿ ಮತ್ತು ಶಾಸ್ತ್ರಪ್ರವಚನಕಾರರಲ್ಲಿ ಶ್ರೇಷ್ಠರಾದವರು - ಇವರು ಪಂಕ್ತಿಯಲ್ಲಿರುವ ಎಷ್ಟು ಜನರನ್ನು ನೋಡುತ್ತಾರೆಯೋ ಅಷ್ಟು ಜನರನ್ನು ಪವಿತ್ರೀಕರಿಸುತ್ತಾರೆ. ಪಂಕ್ತಿಯನ್ನು ಪವಿತ್ರೀಕರಿಸುವ ಕಾರಣದಿಂದ ಇವರನ್ನು ಪಂಕ್ತಿಪಾವನರೆಂದು ಹೇಳುತ್ತಾರೆ.
ಕ್ರೋಶಾದರ್ಧಂ ತೃತೀಯಾತ್ತು ಪಾವಯೇದೇಕ ಏವ ಹಿ |
ಬ್ರಹ್ಮದೇಯಾನುಸಂತಾನ ಇತಿ ಬ್ರಹ್ಮವಿದೋ ವಿದುಃ ॥36॥
ವೇದಾಧ್ಯಯನಕ್ಕೆ ಅನುಕೂಲವಾದ ಸಂತತಿಯಲ್ಲಿ ಬಂದವರು ತಾವು ಮೂರು ಕ್ರೋಶಗಳವರೆಗೆ ನೋಡುವ ಪಂಕ್ತಿಯಲ್ಲಿ

ಅರ್ಧಭಾಗವನ್ನು ಪವಿತ್ರೀಕರಿಸುತ್ತಾರೆ.
ಅನೃತ್ವಿಗನುಪಾಧ್ಯಾಯಃ ನ ಚೇದಗ್ರಾಸನಂ ವ್ರಜೇತ್ ।
ಋತ್ವಿಗ್ಭಿರನನುಜ್ಞಾತಃ ಪಂಕ್ತ್ಯಾ ಹರತಿ ದುಷ್ಕೃತಮ್ ॥37॥
ಋತ್ವಿಜನಲ್ಲದವನು, ಉಪಾಧ್ಯಾಯನಲ್ಲದವನು ಅಗ್ರಾಸನದಲ್ಲಿ ಕುಳಿತು- ಕೊಳ್ಳದಿದ್ದರೆ, ಋತ್ವಿಜನಿಂದ ಅನುಮತಿಯನ್ನು ಪಡೆಯದವನು ಪಂಕ್ತಿಯಲ್ಲಿ ಕುಳಿತು- ಕೊಳ್ಳದಿದ್ದರೆ ಪಂಕ್ತಿದೋಷಗಳು ಪರಿಹಾರಗೊಳ್ಳುತ್ತವೆ.
ಅಥ ಚೇದ್ ವೇದವಿತ್ ಸರ್ವೈಃ ಪಂಕ್ತಿದೋಷೈರ್ವಿವರ್ಜಿತಃ ।
ನ ಚ ಸ್ಯಾತ್ ಪತಿತೋ ರಾಜನ್ ಪಂಕ್ತಿಪಾವನ ಏವ ಸಃ ॥38॥
ಪಂಕ್ತಿದೋಷರಹಿತನಾಗಿ ಪತಿತನಾಗದಿದ್ದರೆ ವೇದವನ್ನು ತಿಳಿದ ಬ್ರಾಹ್ಮಣನು ಪಂಕ್ತಿಪಾವನನೇ ಆಗುತ್ತಾನೆ.
ತಸ್ಮಾತ್ ಸರ್ವಪ್ರಯತ್ನೇನ ಪರೀಕ್ಷ್ಯಾಮಂತ್ರಯೇದ್ ದ್ವಿಜಾನ್ ।
ಸ್ವಕರ್ಮನಿರತಾನ್ ದಾಂತಾನ್ ಕುಲೇ ಜಾತಾನ್ ಬಹುಶ್ರುತಾನ್ ॥
ಆದ್ದರಿಂದ ಸರ್ವಪ್ರಯತ್ನದಿಂದಲೂ ಸ್ವಕರ್ಮನಿರತರಾದ, ಜಿತೇಂದ್ರಿಯರಾದ, ಸತ್ಕುಲಪ್ರಸೂತರಾದ, ವಿದ್ಯಾವಂತರಾದ ಬ್ರಾಹ್ಮಣನನ್ನು ಪರೀಕ್ಷಿಸಿ ನಿಮಂತ್ರಿಸಬೇಕು.
ಯಸ್ಯ ಮಿತ್ರಪ್ರಧಾನಾನಿ ಶ್ರಾದ್ಧಾನಿ ಚ ಹವೀಂಷಿ ಚ ।
ನ ಪ್ರೀಣಾತಿ ಪಿತೄನ್ ದೇವಾನ್ ಸ್ವರ್ಗಂ ಚ ನ ಸ ಗಚ್ಛತಿ ॥40॥
ಯಾವನ ಶ್ರಾದ್ಧಗಳು ಮತ್ತು ದೇವತಾಕಾರ್ಯಗಳು ಮಿತ್ರಪ್ರಧಾನವಾಗಿ- ರುತ್ತವೆಯೋ ಅವನು ಮಾಡಿದ ಕರ್ಮವು ದೇವತೆಗಳಿಗಾಗಲೀ, ಪಿತೃಗಳಿಗಾಗಲೀ ಸಂತೋಷವನ್ನು ಕೊಡುವುದಿಲ್ಲ. ಅಂತಹ ಯಜಮಾನನು ಸ್ವರ್ಗವನ್ನು ಪಡೆಯುವುದಿಲ್ಲ.
ಯಸ್ತು ಶ್ರಾದ್ಧೇ ಕುರುತೇ ಸಂಗತಾನಿ
ನ ದೇವಯಾನೇನ ಪಥಾ ಸ ಯಾತಿ ।
ಸ ವೈ ಯುಕ್ತಃ ಪಿಪ್ಪಲಬಂಧನಾದ್ವಾ
ಸ್ವರ್ಗಾಲ್ಲೋಕಾಚ್ಚ್ಯವತೇ ಶ್ರಾದ್ಧಮಿತ್ರಃ ॥41॥
ಯಾರು ಶ್ರಾದ್ಧದಲ್ಲಿ ಮಿತ್ರರನ್ನು ಆಹ್ವಾನಿಸುತ್ತಾನೆಯೋ ಅವನು ದೇವಯಾನದಿಂದ ಸ್ವರ್ಗಕ್ಕೆ ಹೋಗುವುದಿಲ್ಲ. ದೇಹಸಂಬಂಧವುಳ್ಳವರನ್ನೇ ಶ್ರಾದ್ಧಕ್ಕೆ ನಿಮಂತ್ರಿಸುವವನು ಅಥವಾ ತಾನು ಮಾಡುವ ಶ್ರಾದ್ಧದಲ್ಲಿ ಮಿತ್ರನಿಗೆ ಭೋಜನವನ್ನು ಮಾಡಿಸಿ, ಮಿತ್ರನ ಮನೆಯಲ್ಲಿ ಶ್ರಾದ್ಧವಾದಾಗ ತಾನು ಭೋಜನವನ್ನು ಮಾಡುವವನು ಅಂತಹ ಶ್ರಾದ್ಧ ಮಿತ್ರನು ಸ್ವರ್ಗಲೋಕದಿಂದ ಚ್ಯುತನಾಗುತ್ತಾನೆ.
ತಸ್ಮಾನ್ಮಿತ್ರಂ ಶ್ರಾದ್ಧಕೃನ್ನಾದ್ರಿಯೇತ
ದದ್ಯಾನ್ಮಿತ್ರೇಭ್ಯಃ ಸಂಗ್ರಹಾರ್ಥಂ ಧನಾನಿ ।
ಯಂ ಮನ್ಯತೇ ನೈವ ಶತ್ರುಂ ನ ಮಿತ್ರಂ
ತಂ ಮಧ್ಯಸ್ಥಂ ಭೋಜಯೇದ್ಧವ್ಯಕವ್ಯೇ ॥42॥
ಆದ್ದರಿಂದ ಶ್ರಾದ್ಧದಲ್ಲಿ ಮಿತ್ರರನ್ನು ಪುರಸ್ಕರಿಸಬಾರದು. ಮಿತ್ರರಿಗೆ ಧರ್ಮಕ್ಕಾಗಿ ಧನವನ್ನು ಕೊಡಬಹುದು. ಯಾವನು ಶತ್ರುವೂ ಅಲ್ಲವೋ, ಮಿತ್ರನೂ ಅಲ್ಲವೋ ಅಂತಹ ಮಧ್ಯಸ್ಥನನ್ನು ಹವ್ಯಕವ್ಯಗಳಲ್ಲಿ ಆಹ್ವಾನಿಸಿ ಭೋಜನವನ್ನು ನೀಡಬೇಕು.
ಯಥೋಷರೇ ಬೀಜಮುಪ್ತಂ ನ ರೋಹೇತ್
ನ ಚಾಸ್ಯೋಪ್ತಾ ಪ್ರಾಪ್ನುಯಾದ್ ಬೀಜಭಾಗಮ್ ।
ಏವಂ ಶ್ರಾದ್ಧಂ ಭುಕ್ತಮನರ್ಹಮಾಣೈಃ
ನ ಚೇಹ ನಾಮುತ್ರ ಫಲಂ ದದಾತಿ ॥43॥
ಮರುಭೂಮಿಯಲ್ಲಿ ಬಿತ್ತಿದ ಬೀಜವು ಹೇಗೆ ಬೆಳೆಯುವುದಿಲ್ಲವೋ, ಬೀಜವನ್ನು ಬಿತ್ತಿದವನು ಬೀಜದಷ್ಟು ಫಲವನ್ನು ಪಡೆಯುವುದಿಲ್ಲವೋ ಹಾಗೆ ಅನರ್ಹರಾದವರು ಭೋಜನವನ್ನು ಮಾಡಿದರೆ ಶ್ರಾದ್ಧವು ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಫಲವನ್ನು ಕೊಡುವುದಿಲ್ಲ.
ಬ್ರಾಹ್ಮಣೋ ಹ್ಯನಧೀಯಾನಸ್ತೃಣಾಗ್ನಿರಿವ ಶಾಮ್ಯತಿ ।
ತಸ್ಮೈ ಶ್ರಾದ್ಧಂ ನ ದಾತವ್ಯಂ ನ ಹಿ ಭಸ್ಮನಿ ಹೂಯತೇ ॥44॥
ಅಧ್ಯಯನವನ್ನು ಮಾಡದಿರುವ ಬ್ರಾಹ್ಮಣನು ಹುಲ್ಲುಕಡ್ಡಿಯ ಬೆಂಕಿಯಂತೆ ಬೇಗ ಆರಿಹೋಗುತ್ತಾನೆ. ಅಂತಹವನಿಗೆ ಶ್ರಾದ್ಧವನ್ನು ಕೊಡಬಾರದು. ಬೂದಿಯಲ್ಲಿ ಹೋಮವನ್ನು ಮಾಡುವುದಿಲ್ಲವಷ್ಟೆ?
ಸಂಭೋಜನೀ ನಾಮ ಪಿಶಾಚಭಿಕ್ಷಾ
ಸಾ ನೈವ ದೇವಾನ್ನ ಪಿತೄನುಪೈತಿ ।
ಇಹೈವ ಸಾ ಭ್ರಾಮ್ಯತಿ ಕ್ಷೀಣಪುಣ್ಯಾ
ಶಾಲಾಂತರೇ ಗೌರಿವ ನಷ್ಟವತ್ಸಾ ॥45॥
ಹಿಂದೆ ಹೇಳಿದ ಮಿತ್ರಶ್ರಾದ್ಧವು ಪಿಶಾಚಿಗಳಿಗೆ ಸೇರುತ್ತದೆ. ಅದು ದೇವತೆಗಳನ್ನಾಗಲೀ, ಪಿತೃಗಳನ್ನಾಗಲೀ ತಲುಪುವುದಿಲ್ಲ. ಹಾಗೆ ಮಾಡುವ ಯಜಮಾನನು ಪುಣ್ಯವನ್ನು ಕಳೆದುಕೊಂಡು ಕರುವನ್ನು ಕಳೆದುಕೊಂಡ ಹಸುವು ಕೊಟ್ಟಿಗೆಯಲ್ಲಿ ತಿರುಗುವಂತೆ ಇದೇ ಸಂಸಾರದಲ್ಲಿ ತಿರುಗುತ್ತಿರುತ್ತಾನೆ.
ಯಥಾಽಗ್ನೌ ಶಾಂತೇ ಘೃತಮಾಜುಹೋತಿ
ತನ್ನೈವ ದೇವಾನ್ನ ಪಿತೄನುಪೈತಿ ।

ತಥಾ ದತ್ತಂ ನರ್ತನೇ ಗಾಯನೇ ಚ
ಯಾಂ ಚಾನೃಚೇ ದಕ್ಷಿಣಾಮಾವೃಣೋತಿ ॥46॥
ಹೇಗೆ ಶಾಂತವಾದ ಅಗ್ನಿಯಲ್ಲಿ ಹೋಮಮಾಡಿದ ಘೃತವು ಪಿತೃಗಳನ್ನಾಗಲೀ, ದೇವತೆಗಳನ್ನಾಗಲೀ ತಲುಪುವುದಿಲ್ಲವೋ ಅದರಂತೆ ನರ್ತನವನ್ನು ಮಾಡುವವನಿಗೆ, ಗಾಯನದಿಂದ ಜೀವನವನ್ನು ಮಾಡುವವನಿಗೆ ಮತ್ತು ವೇದಾಧ್ಯಯನವನ್ನು ಮಾಡದವನಿಗೆ ನೀಡಿದ ದಕ್ಷಿಣೆಯು ನಷ್ಟವಾಗುತ್ತದೆ.
ಉಭೌ ಹಿನಸ್ತಿ ನ ಭುನಕ್ತಿ ಚೈಷಾ
ಯಾ ಚಾನೃಚೇ ದಕ್ಷಿಣಾ ದೀಯತೇ ವೈ |
ಆಘಾತನೀ ಗರ್ಹಿತೈಷಾ ಪತಂತೀ
ತೇಷಾಂ ಪ್ರೇತಾನ್ ಪಾತಯೇದ್ ದೇವಯಾನಾತ್ ॥47॥
ವೇದಹೀನನಾದವನಿಗೆ ನೀಡಿದ ದಕ್ಷಿಣೆಯು ಯಜಮಾನನನ್ನು ಮತ್ತು ದಕ್ಷಿಣೆಯನ್ನು ತೆಗೆದುಕೊಳ್ಳುವವನನ್ನು ಇಬ್ಬರನ್ನೂ ರಕ್ಷಿಸುವುದಿಲ್ಲ. ಅದು ನಿಂದಿತವಾದುದು. ಪಿತೃಗಳಿಗೆ ಹಿಂಸೆಯನ್ನು ಮಾಡುವಂತಹದು. ಆ ದಕ್ಷಿಣೆಯು ಯಜಮಾನನ ಪಿತೃಗಳನ್ನು ದೇವಯಾನದಿಂದ ಕೆಳಗೆ ಬೀಳಿಸುತ್ತದೆ.
ಋಷೀಣಾಂ ಸಮಯಂ ನಿತ್ಯಂ ಯೇ ಚರಂತಿ ಯುಧಿಷ್ಠಿರ |
ನಿಶ್ಚಿತಾಃ ಸರ್ವಧರ್ಮಜ್ಞಾಸ್ತಾನ್ ದೇವಾ ಬ್ರಾಹ್ಮಣಾನ್ ವಿದುಃ ॥48॥
ಎಲೈ ಯುಧಿಷ್ಠಿರನೇ, ಯಾರು ಋಷಿಗಳು ಹಾಕಿದ ನಿಯಮವನ್ನು ಯಾವಾಗಲೂ ಪಾಲಿಸುತ್ತಾರೆಯೋ, ಸರ್ವಧರ್ಮಗಳನ್ನು ತಿಳಿದಿರುತ್ತಾರೆಯೋ ಅಂತಹವರನ್ನು ದೇವತೆಗಳು ಬ್ರಾಹ್ಮಣರೆಂದು ತಿಳಿಯುತ್ತಾರೆ.
ಸ್ವಾಧ್ಯಾಯನಿಷ್ಠಾ ಋಷಯೋ ಜ್ಞಾನನಿಷ್ಠಾಸ್ತಥೈವ ಚ |
ತಪೋನಿಷ್ಠಾಶ್ಚ ಬೋದ್ಧವ್ಯಾಃ ಕರ್ಮನಿಷ್ಠಾಶ್ಚ ಭಾರತ ॥49॥
ಎಲೈ ಭಾರತನೇ, ಸ್ವಾಧ್ಯಾಯನಿಷ್ಠರಾದ ಬ್ರಾಹ್ಮಣರನ್ನೂ, ಋಷಿಗಳನ್ನೂ ಹಾಗೆಯೇ ಜ್ಞಾನನಿಷ್ಠರಾದವರನ್ನೂ, ತಪೋನಿಷ್ಠರಾದವರನ್ನೂ, ಧರ್ಮನಿಷ್ಠರಾದವರನ್ನೂ ತಿಳಿಯಬೇಕು.
ಕವ್ಯಾನಿ ಜ್ಞಾನನಿಷ್ಠೇಭ್ಯಃ ಪ್ರತಿಷ್ಠಾಪ್ಯಾನಿ ಭಾರತ |
ತತ್ರ ಯೇ ಬ್ರಾಹ್ಮಣಾಃ ಕೇಚಿತ್ ನ ನಿಂದಂತಿ ಹಿ ತೇ ವರಾಃ ॥50॥
ಎಲೈ ಭಾರತನೇ, ಜ್ಞಾನನಿಷ್ಠರಾದವರಿಗೆ ಶ್ರಾದ್ಧಗಳಲ್ಲಿ ದಾನವನ್ನು ಮಾಡಬೇಕು. ಅವರಲ್ಲಿಯೂ ಇನ್ನೊಬ್ಬರನ್ನು ನಿಂದಿಸದವರು ಶ್ರೇಷ್ಠರಾದವರು.
ಯೇ ತು ನಿಂದಂತಿ ಜಲ್ಪೇಷು ನ ತಾನ್ ಶ್ರಾದ್ಧೇಷು ಭೋಜಯೇತ್ |
ಬ್ರಾಹ್ಮಣಾ ನಿಂದಿತಾ ರಾಜನ್ ಹನ್ಯುಸ್ತ್ರಿಪುರುಷಂ ಕುಲಮ್ ॥51॥
ಮಾತನಾಡುವಾಗ ಇನ್ನೊಬ್ಬರನ್ನು ನಿಂದಿಸುವವರನ್ನು ಶ್ರಾದ್ಧದಲ್ಲಿ ಭೋಜನಕ್ಕೆ ನಿಮಂತ್ರಿಸಬಾರದು. ಎಲೈ ರಾಜನೇ, ನಿಂದಿಸುವ ಬ್ರಾಹ್ಮಣರು ಆ ಕುಲದ ಮೂರು ಪುರುಷರನ್ನು ಕೊಲ್ಲುತ್ತಾರೆ (ಘಾಸಿಗೊಳಿಸುತ್ತಾರೆ).
ವೈಖಾನಸಾನಾಂ ವಚನಮೃಷೀಣಾಂ ಶ್ರೂಯತೇ ನೃಪ |
ದೂರಾದೇವ ಪರೀಕ್ಷೇತ ಬ್ರಾಹ್ಮಣಾನ್ ವೇದಪಾರಗಾನ್ |
ಪ್ರಿಯಾನ್ ವಾ ಯದಿ ವಾ ದ್ವೇಷ್ಯಾಂಸ್ತೇಷು ತಚ್ಛ್ರಾದ್ಧಮಾವಪೇತ್ ॥
ಎಲೈ ರಾಜನೇ, ವೇದಪಾರಂಗತರಾದ ಬ್ರಾಹ್ಮಣರನ್ನು ಅವರು ಪ್ರಿಯರೇ ಅಥವಾ ಶತ್ರುಗಳೇ ಎಂದು ದೂರದಿಂದಲೇ ಪರೀಕ್ಷೆಯನ್ನು ಮಾಡಿ ಅವರಿಗೆ ಶ್ರಾದ್ಧವನ್ನು ಕೊಡಬೇಕು ಎಂಬ ವೈಖಾನಸ ಋಷಿಗಳ ವಚನವು ಕೇಳಿಬರುತ್ತದೆ.
ಯಃ ಸಹಸ್ರಂ ಸಹಸ್ರಾಣಾಂ ಭೋಜಯೇದನೃಚಾಂ ನರಃ |
ಏಕಸ್ತಾನ್ ಮಂತ್ರವಿತ್ ಪ್ರೀತಃ ಸರ್ವಾನರ್ಹತಿ ಭಾರತ ॥53॥
ಎಲೈ ಭಾರತನೇ, ಮನುಷ್ಯನು ವೇದಾಧ್ಯಯನ ಸಂಪನ್ನರಲ್ಲದ ಒಂದು ಲಕ್ಷಜನರ ಭೋಜನವನ್ನು ಮಾಡಿಸುವುದಕ್ಕಿಂತಲೂ, ವೇದಮಂತ್ರ ಅಭಿಜ್ಞನಾದ ಒಬ್ಬ ಬ್ರಾಹ್ಮಣನನ್ನು ಪೂಜಿಸಿ ಅವನನ್ನು ಪ್ರಸನ್ನಗೊಳಿಸುವುದಾದರೆ ಅಂತಹ ಮಂತ್ರಜ್ಞನಾದವನು ಎಲ್ಲ ದಾನಗಳಿಗೂ ಅರ್ಹನಾಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಶ್ರಾದ್ಧವಿಕಲ್ಪೇ ಪಾಂಕ್ತೇಯವಿಭಾಗೋ ನಾಮ
ದ್ವಾತ್ರಿಂಶತ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ಮೂರನೆಯ ಅಧ್ಯಾಯ
ಶ್ರಾದ್ಧವಿಧಿಯಲ್ಲಿ ಅತ್ರಿಗಳ ಅಭಿಪ್ರಾಯ.
ಯುಧಿಷ್ಠಿರಃ
ಕೇನ ಸಂಕಲ್ಪಿತಂ ಶ್ರಾದ್ಧಂ ಕಸ್ಮಿನ್ಕಾಲೇ ಕಿಮಾತ್ಮಕಮ್ |
ಭೃಗ್ವಂಗಿರಸಕೇ ಕಾಲೇ ಮುನಿನಾ ಕತರೇಣ ವಾ ॥1॥
ಯುಧಿಷ್ಠಿರ ಭೃಗು-ಅಂಗಿರಸರು ಪ್ರವೃತ್ತಿ ಮಾಡುತ್ತಿದ್ದ ಕಾಲದಲ್ಲಿ ಯಾವ ಋಷಿಗಳಿಂದ ಯಾವ ಕಾಲದಲ್ಲಿ ಯಾವ ರೀತಿಯಲ್ಲಿ

ಶ್ರಾದ್ಧವು ಸಂಕಲ್ಪಿಸಲ್ಪಟ್ಟಿತು?
ಕಾನಿ ಶ್ರಾದ್ಧೇಷು ವರ್ಜ್ಯಾನಿ ತಥಾ ಮೂಲಫಲಾನಿ ಚ |
ಧಾನ್ಯಜಾತಿಶ್ಚ ಕಾ ವರ್ಜ್ಯಾ ತನ್ಮೇ ಬ್ರೂಹಿ ಪಿತಾಮಹ ॥2॥
ಶ್ರಾದ್ಧದಲ್ಲಿ ವರ್ಜಿಸಬೇಕಾದುದು ಯಾವುವು? ವರ್ಜಿಸಬೇಕಾದ ಮೂಲಫಲಗಳು ಯಾವುವು? ಎಲೈ ಪಿತಾಮಹನೇ, ಶ್ರಾದ್ಧಕಾಲದಲ್ಲಿ ವರ್ಜಿಸಬೇಕಾದ ಧಾನ್ಯ ಜಾತಿಗಳನ್ನು ನನಗೆ ಹೇಳು.
ಭೀಷ್ಮಃ
ಯಥಾ ಶ್ರಾದ್ಧಂ ಸಂಪ್ರವೃತ್ತಂ ಯಸ್ಮಿನ್ ಕಾಲೇ ಯದಾತ್ಮಕಮ್ |
ಯೇನ ಸಂಕಲ್ಪಿತಂ ಚೈವ ತನ್ಮೇ ಶೃಣು ಜನಾಧಿಪ ॥3॥
ಭೀಷ್ಮ ಎಲೈ ಜನಾಧಿಪನೇ, ಯಾವ ಕಾಲದಲ್ಲಿ ಯಾವ ರೀತಿಯಲ್ಲಿ ಶ್ರಾದ್ಧವು ಹೇಗೆ ಸಂಕಲ್ಪಿತವಾಗಿ ಪ್ರವೃತ್ತವಾಯಿತೆಂದು ನನ್ನಿಂದ ಕೇಳು.
ಸ್ವಾಯಂಭುವೋಽತ್ರಿಃ ಕೌರವ್ಯ ಪರಮರ್ಷಿಃ ಪ್ರತಾಪವಾನ್ |
ತಸ್ಯ ವಂಶೇ ಮಹಾರಾಜ ದತ್ತಾತ್ರೇಯ ಇತಿ ಸ್ಮೃತಃ ॥4॥
ಎಲೈ ಕೌರವ್ಯನೇ, ಪ್ರತಾಪಶಾಲಿಗಳೂ, ಶ್ರೇಷ್ಠ ಋಷಿಗಳೂ ಆದ ಅತ್ರಿಗಳು ಬ್ರಹ್ಮದೇವರ ಪುತ್ರರು. ಎಲೈ ಮಹಾರಾಜನೇ, ಆ ವಂಶದಲ್ಲಿ ದತ್ತಾತ್ರೇಯರು ಪ್ರಸಿದ್ಧರಾಗಿ ಬಂದರು.
ದತ್ತಾತ್ರೇಯಸ್ಯ ಪುತ್ರೋಽಭೂನ್ನಿಮಿರ್ನಾಮ ತಪೋಧನಃ |
ನಿಮೇಶ್ಚಾಪ್ಯಭವತ್ ಪುತ್ರಃ ಶ್ರೀಮಾನ್ನಾಮ ಶ್ರಿಯಾ ವೃತಃ ॥5॥
ನಿಮಿ ಎಂಬ ತಪೋಧನನು ದತ್ತಾತ್ರೇಯರ ಪುತ್ರನು. ನಿಮಿಗೆ ಶ್ರೀಮಂತನೆಂಬ ಕಾಂತಿಯುಕ್ತನಾದ ಪುತ್ರನು ಜನಿಸಿದನು.
ಪೂರ್ಣೇ ವರ್ಷಸಹಸ್ರಾಂತೇ ಸ ಕೃತ್ವಾ ದುಷ್ಕರಂ ತಪಃ |
ಕಾಲಧರ್ಮಪರೀತಾತ್ಮಾ ನಿಧನಂ ಸಮುಪಾಗತಃ ॥6॥
ಆ ಶ್ರೀಮಂತನು ದುಷ್ಕರವಾದ ತಪಸ್ಸನ್ನು ಮಾಡಿ ಸಹಸ್ರ ವರ್ಷಗಳು ಪೂರ್ಣವಾಗಲು ಕಾಲಧರ್ಮಕ್ಕೆ ವಶನಾಗಿ ನಿಧನವನ್ನು ಹೊಂದಿದನು.
ನಿಮಿಸ್ತು ಕೃತ್ವಾ ಶೌಚಾನಿ ವಿಧಿದೃಷ್ಟೇನ ಕರ್ಮಣಾ |
ಸಂತಾಪಮಗಮತ್ ತೀವ್ರಂ ಪುತ್ರಶೋಕಪರಾಯಣಃ ॥7॥
ನಿಮಿಯಾದರೂ ಶಾಸ್ತ್ರದೃಷ್ಟವಾದ ರೀತಿಯಲ್ಲಿ ಶುದ್ಧಿಕರ್ಮಗಳನ್ನು ಮಾಡಿ ಪುತ್ರಶೋಕಪರಾಯಣನಾಗಿ ತೀವ್ರವಾದ ಸಂತಾಪವನ್ನು ಹೊಂದಿದನು.
ಅಥ ಕೃತ್ವೋಪಹಾರ್ಯಾಣಿ ಚತುರ್ದಶ್ಯಾಂ ಮಹಾಮತಿಃ |
ತಮೇವ ಗಣಯನ್ ಶೋಕಂ ವಿರಾತ್ರೇ ಪ್ರತ್ಯಬುಧ್ಯತ ॥8॥
ಮಹಾಮತಿಯಾದ ಅವನು ಚತುರ್ದಶಿಯ ದಿವಸ ಪೂಜೆಗಳನ್ನು ಮಾಡಿ ಮಗನನ್ನೇ ಚಿಂತಿಸಿ ಶೋಕಪಡುತ್ತಾ ಅಪರಾತ್ರಿಯಲ್ಲಿ ಎಚ್ಚರಗೊಂಡನು.
ತಸ್ಯಾಸೀತ್ ಪ್ರತಿಬುದ್ಧಸ್ಯ ಶೋಕೇನ ಪಿಹಿತಾತ್ಮನಃ |
ಮನಃ ಸಂಹೃತ್ಯ ವಿಷಯೇ ಬುದ್ಧಿರ್ವಿಸ್ತರಗಾಮಿನೀ ॥9॥
ಶೋಕದಿಂದ ಆವೃತವಾದ ಮನಸ್ಸುಳ್ಳವನಾಗಿ ಅವನು ಎಚ್ಚರಗೊಂಡು ಮನಸ್ಸನ್ನು ವಿಷಯಗಳಿಂದ ಹಿಂದೆ ಸೆಳೆದು ವಿಶಾಲವಾದ ಬುದ್ಧಿಯನ್ನು ಹೊಂದಿದನು.
ತತಃ ಸಂಚಿಂತಯಾಮಾಸ ಶ್ರಾದ್ಧಕಲ್ಪಂ ಸಮಾಹಿತಃ |
ಯಾನಿ ತಸ್ಯೈವ ಭೋಜ್ಯಾನಿ ಮೂಲಾನಿ ಚ ಫಲಾನಿ ಚ ॥10॥
ಅನಂತರ ಸಮಾಧಾನವನ್ನು ಹೊಂದಿ ಶ್ರಾದ್ಧ ಕಲ್ಪವನ್ನು ಚಿಂತಿಸಿದನು. ತನ್ನ ಪುತ್ರನಿಗೆ ಇಷ್ಟವಾದ ಭೋಜ್ಯಗಳನ್ನೂ, ಮೂಲಫಲಗಳನ್ನೂ ಚಿಂತಿಸಿದನು.
ಉಕ್ತಾನಿ ಯಾನಿ ಚಾನ್ಯಾನಿ ಯಾನಿ ಚೇಷ್ಟಾನಿ ತಸ್ಯ ಹ |
ತಾನಿ ಸರ್ವಾಣಿ ಮನಸಾ ವಿನಿಶ್ಚಿತ್ಯ ತಪೋಧನಃ ॥11॥
ಅಮಾವಾಸ್ಯಾಂ ಮಹಾಪ್ರಾಜ್ಞ ವಿಪ್ರಾನಾನಾಯ್ಯ ಪೂಜಿತಾನ್ |
ದಕ್ಷಿಣಾವರ್ತಿಕಾಃ ಸರ್ವಾ ಬೃಸೀಃ ಸ್ವಯಮಥಾಕರೋತ್ ॥12॥
ಅವನಿಗೆ ಇಷ್ಟವಾದ ಮತ್ತು ಶಾಸ್ತ್ರವಿಹಿತವಾದ ವಸ್ತುಗಳನ್ನು ಯೋಚಿಸಿ ತಪೋಧನನಾದ ಅವನು ಮನಸ್ಸಿನಲ್ಲಿ ಎಲ್ಲವನ್ನೂ ನಿಶ್ಚಯಿಸಿ, ಮಹಾಪ್ರಾಜ್ಞನಾದ ಅವನು ಅಮಾವಾಸ್ಯೆಯಂದು ಪೂಜ್ಯರಾದ ವಿಪ್ರರನ್ನು ಕರೆಸಿ ದಕ್ಷಿಣಕ್ಕೆ ತಿರುಗಿಸಿ, ತಯಾರಿಸಿದ ದರ್ಭೆಯ ಚಾಪೆಗಳನ್ನು ಸ್ವತಃ ತಾನೇ ಮಾಡಿದನು.
ಸಪ್ತ ವಿಪ್ರಾಂಸ್ತತೋ ಭೋಜ್ಯೇ ಯುಗಪತ್ ಸಮುಪಾನಯತ್ |
ಋತೇ ಚ ಲವಣಂ ಭೋಜ್ಯಂ ಶ್ಯಾಮಾಕಾನ್ನಂ ದದೌ ಪ್ರಭುಃ ॥13॥
ಪ್ರಭುವಾದ ಅವನು ಒಟ್ಟಿಗೆ ಭೋಜನಕ್ಕಾಗಿ ಏಳು ಬ್ರಾಹ್ಮಣರನ್ನು ಕರೆಸಿ ಲವಣವನ್ನು ಬಿಟ್ಟು ಶ್ಯಾಮಕಾನ್ನವನ್ನು ಆಹಾರವಾಗಿ ನೀಡಿದನು.
ದಕ್ಷಿಣಾಗ್ರಾಸ್ತತೋ ದರ್ಭಾ ವಿಷ್ಟರೇಷು ನಿವೇಶಿತಾಃ |
ಪಾದಯೋಶ್ಚೈವ ವಿಪ್ರಾಣಾಂ ಯೇ ತ್ವನ್ನಮುಪಭುಂಜತೇ ॥14॥

ಆಗ ಅವನು ದಕ್ಷಿಣಕ್ಕೆ ತುದಿಯುಳ್ಳ ದರ್ಭೆಗಳನ್ನು ಭೋಜನ ಮಾಡುವ ಬ್ರಾಹ್ಮಣರ ಆಸನಗಳಲ್ಲಿಯೂ ಮತ್ತು ಪಾದಗಳಲ್ಲಿಯೂ ಇರಿಸಿದನು.
ಕೃತ್ವಾ ಚ ದಕ್ಷಿಣಾಗ್ರಾನ್ ವೈ ದರ್ಭಾನ್ ಸುಪ್ರಯತಃ ಶುಚಿಃ |
ಪ್ರದದೌ ಶ್ರೀಮತೇ ಪಿಂಡಂ ನಾಮಗೋತ್ರಮುದಾಹರನ್ ॥15॥
ಅವನು ಶುಚಿಯಾಗಿ ನಿಯಮದಿಂದ ಕೂಡಿ ದಕ್ಷಿಣಾಗ್ರವಾದ ದರ್ಭೆಗಳನ್ನು ಹರಡಿ ಅದರ ಮೇಲೆ ನಾಮಗೋತ್ರಗಳನ್ನು ಉಚ್ಚರಿಸಿ ಶ್ರೀಮಂತನಿಗೆ ಪಿಂಡಪ್ರದಾನವನ್ನು ಮಾಡಿದನು.
ತತ್ಕೃತ್ವಾ ಸ ಮುನಿಶ್ರೇಷ್ಠೋ ಧರ್ಮಸಂಕರಮಾತ್ಮನಃ |
ಪಶ್ಚಾತ್ತಾಪೇನ ಮಹತಾ ತಪ್ಯಮಾನೋಽಭ್ಯಚಿಂತಯತ್ ॥16॥
ಅದನ್ನು ಮಾಡಿದ ಆ ಮುನಿಶ್ರೇಷ್ಠನು ನಾನು ಧರ್ಮಸಂಕರವನ್ನು ಮಾಡಿದ್ದೇನೆ ಎಂಬ ಶಂಕೆಗೆ ಒಳಗಾಗಿ ಬಹಳ ಪಶ್ಚಾತ್ತಾಪಪಟ್ಟು ಚಿಂತಾಪರನಾದನು.
ಅಕೃತಂ ಮುನಿಭಿಃ ಪೂರ್ವಂ ಕಿಂ ಮಯ್ಯೈತದನುಷ್ಠಿತಮ್ |
ಕಥಂ ನು ಶಾಪೇನ ನ ಮಾಂ ದಹೇಯುರ್ಬ್ರಾಹ್ಮಣಾ ಇತಿ ॥17॥
ಹಿಂದೆ ಯಾವ ಋಷಿಗಳೂ ಮಾಡದಿದ್ದ ಈ ಕರ್ಮವನ್ನು ನಾನು ಏಕೆ ಮಾಡಿದೆ? ಬ್ರಾಹ್ಮಣರು ನನಗೆ ಶಾಪವನ್ನು ಕೊಟ್ಟು ಏಕೆ ನನ್ನ ದಹಿಸಲಾರರು? (ಎಂದು ಚಿಂತಿಸಿದನು).
ತತಃ ಸಂಚಿಂತಯಾಮಾಸ ವಂಶಕರ್ತಾರಮಾತ್ಮನಃ |
ಧ್ಯಾತಮಾತ್ರಸ್ತಥಾ ಚಾತ್ರಿರಾಜಗಾಮ ತಪೋಧನಃ ॥18॥
ಆಗ ಅವನು ತನ್ನ ವಂಶದ ಮೂಲಪುರುಷರಾದ ತಪೋಧನರಾದ ಅತ್ರಿಗಳನ್ನು ಚಿಂತಿಸಿದನು. ಅವನು ಚಿಂತಿಸಿದ ತಕ್ಷಣವೇ ಅತ್ರಿಗಳು ಬಂದರು.
ಅಥಾತ್ರಿಸ್ತಂ ತಥಾ ದೃಷ್ಟ್ವಾ ಪುತ್ರಶೋಕೇನ ಕರ್ಶಿತಮ್ |
ಭೃಶಮಾಶ್ವಾಸಯಾಮಾಸ ವಾಗ್ಭಿರಿಷ್ಟಾಭಿರವ್ಯಯಃ ॥19॥
ಅನಂತರ ಅವ್ಯಯರಾದ ಅತ್ರಿಗಳು ಪುತ್ರಶೋಕದಿಂದ ಬಳಲಿದ ಅವನನ್ನು ನೋಡಿ ಪ್ರಿಯವಾದ ಮಾತುಗಳಿಂದ ಅವನನ್ನು ಚೆನ್ನಾಗಿ ಸಮಾಧಾನಗೊಳಿಸಿದರು.
ಅತ್ರಿ
ನಿಮೇ ಸಂಕಲ್ಪಿತಸ್ತೇಽಯಂ ಪಿತೃಯಜ್ಞಸ್ತಪೋಧನ |
ಮಾ ತೇ ಭೂದ್ಭೀಃ ಪೂರ್ವದೃಷ್ಟೋ ಧರ್ಮೋಽಯಂ ಬ್ರಹ್ಮಣಾ ಸ್ವಯಮ್ ॥
ಅತ್ರಿ ಎಲೈ ನಿಮಿಯೇ, ತಪೋಧನನಾದ ನೀನು ಈ ಪಿತೃಯಜ್ಞವನ್ನು ಸಂಕಲ್ಪಿಸಿದ್ದೀಯೆ, ಭಯಪಡಬೇಡ. ಬ್ರಹ್ಮದೇವರೇ ಈ ವಿಧಾನವನ್ನು ಮೊದಲೇ ಕಂಡುಕೊಂಡಿದ್ದಾರೆ.
ಸೋಽಯಂ ಸ್ವಯಂಭುವಿಹಿತೋ ಧರ್ಮಃ ಸಂಕಲ್ಪಿತಸ್ತ್ವಯಾ |
ಋತೇ ಸ್ವಯಂಭುವಃ ಕೋಽನ್ಯಃ ಶ್ರಾದ್ಧೇಯಂ ವಿಧಿಮಾಹರೇತ್ ॥21॥
ಬ್ರಹ್ಮದೇವರಿಂದ ವಿಹಿತವಾದ ಈ ಧರ್ಮದ ವಿಷಯದಲ್ಲಿ ನೀನು ಸಂಕಲ್ಪವನ್ನು ಮಾಡಿದ್ದೀಯೆ. ಬ್ರಹ್ಮದೇವರನ್ನು ಬಿಟ್ಟು ಬೇರೆ ಯಾರು ತಾನೇ ಶ್ರಾದ್ಧವಿಧಿಯನ್ನು ಹೇಳಬಲ್ಲರು?
ಆಖ್ಯಾಸ್ಯಾಮಿ ಚ ತೇ ಭೂಯಃ ಶ್ರಾದ್ಧೇಯಂ ವಿಧಿಮುತ್ತಮಮ್ |
ಸ್ವಯಂಭುವಿಹಿತಂ ಪುತ್ರ ತತ್ಪುರುಷ್ವ ನಿಬೋಧ ಮೇ ॥22॥
ಎಲೈ ಪುತ್ರನೇ, ಬ್ರಹ್ಮದೇವರು ವಿಧಾನ ಮಾಡಿದ ಶ್ರೇಷ್ಠವಾದ ಶ್ರಾದ್ಧವಿಧಿಯನ್ನು ನಿನಗೆ ಇನ್ನೂ ಹೇಳುತ್ತೇನೆ. ಅದನ್ನು ತಿಳಿದು ಅದರಂತೆ ಮಾಡು.
ಕೃತ್ವಾಽಗ್ನಿಕರಣಂ ಪೂರ್ವಂ ಮಂತ್ರಪೂರ್ವಂ ತಪೋಧನ |
ತತೋಽರ್ಯಮ್ಣೇ ಚ ಸೋಮಾಯ ವರುಣಾಯ ಚ ನಿತ್ಯಶಃ ॥23॥
ವಿಶ್ವೇದೇವಾಶ್ಚ ಯೇ ನಿತ್ಯಂ ಪಿತೃಭಿಃ ಸಹ ಗೋಚರಾಃ |
ತೇಭ್ಯಃ ಸಂಕಲ್ಪಿತಾ ಭಾಗಾಃ ಸ್ವಯಮೇವ ಸ್ವಯಂಭುವಾ ॥24॥
ಎಲೈ ತಪೋಧನನೇ, ಮೊದಲು ಮಂತ್ರಪೂರ್ವಕವಾಗಿ ಅಗ್ನಿಮುಖವನ್ನು ಮಾಡಿ ಅನಂತರ ಪಿತೃಗಳ ಜೊತೆಯಲ್ಲಿ ಇರುವ ಅರ್ಯಮನಿಗೂ, ಸೋಮನಿಗೂ, ವರುಣನಿಗೂ, ವಿಶ್ವೇದೇವತೆಗಳಿಗೂ ಭಾಗಗಳನ್ನು ಬ್ರಹ್ಮದೇವರೇ ಸ್ವತಃ ಕಲ್ಪಿಸಿದ್ದಾರೆ.
ಸ್ತೋತವ್ಯಾ ಚೇಹ ಪೃಥಿವೀ ನಿವಾಪಸ್ಯೇಹ ಧಾರಿಣೀ |
ವೈಷ್ಣವೀ ಕಾಶ್ಯಪೀ ಚೇತಿ ತಥೈವೇಹಾಕ್ಷಯೇತಿ ಚ ॥25॥
ಶ್ರಾದ್ಧಕ್ಕೆ ಆಧಾರವಾದ ಭೂಮಿಯನ್ನು ವೈಷ್ಣವೀ, ಕಾಶ್ಯಪೀ, ಅಕ್ಷಯ ಎಂದು ಸ್ತೋತ್ರ ಮಾಡಬೇಕು.
ಉದಕಾನಯನೇ ಚೈವ ಸ್ತೋತವ್ಯೋ ವರುಣೋ ವಿಭುಃ |
ತತೋಽಗ್ನಿಶ್ಚೈವ ಸೋಮಶ್ಚ ಆಪ್ಯಾಯ್ಯಾವಿಹ ತೇಽನಘ ॥26॥
ಎಲೈ ಅನಘನೇ, ಅರ್ಚನೋದಕಪಾತ್ರದಲ್ಲಿ ವಿಭುವಾದ ವರುಣನನ್ನು ಸ್ತೋತ್ರ ಮಾಡಬೇಕು. ಅನಂತರ ಅಗ್ನಿಯನ್ನು ಮತ್ತು ಸೋಮನನ್ನು ಪೂಜಿಸಬೇಕು.
ದೇವಾಸ್ತು ಪಿತರೋ ನಾಮ ನಿರ್ಮಿತಾ ವೈ ಸ್ವಯಂಭುವಾ |
ಊಷ್ಮಪಾಃ ಸುಮಹಾಭಾಗಾಸ್ತೇಷಾಂ ಭಾಗಾಃ ಪ್ರಕಲ್ಪಿತಾಃ ॥27॥

ಬ್ರಹ್ಮದೇವರು ಊಷ್ಮಪರು ಎಂಬ ಮಹಾನುಭಾವರಾದ ದೇವಪಿತೃಗಳನ್ನು ಕಲ್ಪಿಸಿದ್ದಾರೆ. ಅವರಿಗೆ ಭಾಗಗಳನ್ನು ಕೊಡಬೇಕು.
ತೇ ಶ್ರಾದ್ಧೇನಾರ್ಚ್ಯಮಾನಾ ವೈ ವಿಮುಚ್ಯಂತೇ ಹ ಕಿಲ್ಬಿಷಾತ್ |
ಸಪ್ತಕಃ ಪಿತೃವಂಶಸ್ತು ಪೂರ್ವದೃಷ್ಟಃ ಸ್ವಯಂಭುವಾ ॥28॥
ಶ್ರಾದ್ಧವಿಧಿಯಿಂದ ಅವರನ್ನು ಪೂಜಿಸುವವರು ತಮ್ಮ ದೋಷಗಳಿಂದ ಮುಕ್ತರಾಗುತ್ತಾರೆ. ಪಿತೃವಂಶದಲ್ಲಿ ಅಗ್ನಿಷ್ವಾತ್ತಾದಿ ಸಪ್ತ ಪಿತೃಗಳನ್ನು ಬ್ರಹ್ಮದೇವರು ಮೊದಲೇ ಸೃಷ್ಟಿಸಿದ್ದಾರೆ.
ವಿಶ್ವೇ ಚಾಗ್ನಿಮುಖಾ ದೇವಾಃ ಸಂಖ್ಯಾತಾಃ ಪೂರ್ವಮೇವ ತೇ |
ತೇಷಾಂ ನಾಮಾನಿ ವಕ್ಷ್ಯಾಮಿ ಭಾಗಾರ್ಹಾಣಾಂ ಮಹಾತ್ಮನಾಮ್ ॥
ಅಗ್ನಿಮುಖ ದೇವತೆಗಳ ಸಂಖ್ಯೆಯನ್ನು ಮತ್ತು ವಿಶ್ವೇದೇವತೆಗಳ ಸಂಖ್ಯೆಯನ್ನು ನಿನಗೆ ಮೊದಲೇ ಹೇಳಿದ್ದೇನೆ. ಶ್ರಾದ್ಧಭಾಗಕ್ಕೆ ಅರ್ಹರಾದ ಮಹಾನುಭಾವರಾದ ಅವರ ಹೆಸರುಗಳನ್ನು ಹೇಳುವೆನು.
ಸಹಃ ಕೃತಿರ್ವಿಪಾಪ್ಮಾ ಚ ಪುಣ್ಯಕೃತ್ ಪಾವನಸ್ತಥಾ |
ಗ್ರಾಮ್ನಿಃ ಕ್ಷೇಮಃ ಸಮೂಹಶ್ಚ ದಿವ್ಯಸಾನುಸ್ತಥೈವ ಚ ॥30॥
ವಿವಸ್ವಾನ್ ವೀರ್ಯವಾನ್ ಹ್ರೀಮಾನ್ ಕೀರ್ತಿಮಾನ್ ಕೃತ ಏವ ಚ |
ವಿಪೂರ್ವಃ ಸೋಮಪೂರ್ವಶ್ಚ ಸೂರ್ಯಶ್ರೀಶ್ಚೇತಿ ನಾಮತಃ ॥31॥
ಸೋಮಪಃ ಸೂರ್ಯಸಾವಿತ್ರೋ ದತ್ತಾತ್ಮಾ ಪುಷ್ಕರೀಯಕಃ |
ಉಷ್ಣೀನಾಭೋ ನಭೋದಶ್ಚ ವಿಶ್ವಾಯುರ್ದೀಪ್ತಿರೇವ ಚ ॥32॥
ಚಮೂಹರಃ ಸುವೇಷಶ್ಚ ವ್ಯೋಮಾರಿಃ ಶಂಕರೋ ಭವಃ |
ಈಶಃ ಕರ್ತಾ ಕೃತಿರ್ದಕ್ಷೋ ಭುವನೋ ದಿವ್ಯಕರ್ಮಕೃತ್ ॥33॥
ಗಣಿತಃ ಪಂಚವೀರ್ಯಶ್ಚ ಆದಿತ್ಯೋ ರಶ್ಮಿಮಾಂಸ್ತಥಾ |
ಸಪ್ತಕೃತ್ ಸೋಮವರ್ಚಾಶ್ಚ ವಿಶ್ವಕೃತ್ ಕವಿರೇವ ಚ ॥34॥
ಅನುಗೋಪ್ತಾ ಸುಗೋಪ್ತಾ ಚ ನಪ್ತಾ ಚೇಶ್ವರ ಏವ ಚ |
ಜಿತಾತ್ಮಾ ಮುನಿವೀರ್ಯಶ್ಚ ದೀಪ್ತಲೋಮಾ ಭಯಂಕರಃ ॥35॥
ಅತಿಕರ್ಮಾ ಪ್ರತೀತಶ್ಚ ಪ್ರದಾತಾ ಚಾಂಶುಮಾಂಸ್ತಥಾ |
ಶೈಲಾಭಃ ಪರಮಕ್ರೋಧೀ ಧೀರೋಷ್ಣೀ ಭೂಪತಿಸ್ತಥಾ ॥36॥
ಸ್ರಜೀ ವಜ್ರೀ ವರೀ ಚೈವ ವಿಶ್ವೇದೇವಾಃ ಸನಾತನಾಃ |
ಕೀರ್ತಿತಾಸ್ತೇ ಮಹಾಭಾಗಾಃ ಕಾಲಸ್ಯ ಗತಿಗೋಚರಾಃ ॥37॥
ಸಹ, ಕೃತಿ, ವಿಪಾಪ್ಮ, ಪುಣ್ಯಕೃತ್, ಪಾವನ, ಗ್ರಾಮ್ನಿ, ಕ್ಷೇಮ, ಸಮೂಹ, ದಿವ್ಯಸಾನು, ವಿವಸ್ವಾನ್, ವೀರ್ಯವಾನ್, ಹ್ರೀಮಾನ್, ಕೀರ್ತಿಮಾನ್, ಕೃತ, ವಿಪೂರ್ವ, ಸೋಮಪೂರ್ವ, ಸೂರ್ಯಶ್ರೀ, ಸೋಮಪ, ಸೂರ್ಯಸಾವಿತ್ರ, ದತ್ತಾತ್ಮ, ಪುಷ್ಕರೀಯಕ, ಉಷ್ಣೀನಾಭ, ನಭೋದ, ವಿಶ್ವಾಯು, ದೀಪ್ತಿ, ಚಮೂಹರ, ಸುವೇಷ, ವ್ಯೋಮಾರಿ, ಶಂಕರ, ಭವ, ಈಶ, ಕರ್ತಾ, ಕೃತಿ, ದಕ್ಷ, ಭುವನ, ದಿವ್ಯಕರ್ಮಕೃತ್, ಗಣಿತ, ಪಂಚವೀರ್ಯ, ಆದಿತ್ಯ, ರಶ್ಮಿಮಾನ್, ಸಪ್ತಕೃತ್, ಸೋಮವರ್ಚಾ, ವಿಶ್ವಕೃತ್, ಕವಿ, ಅನುಭೋಕ್ತಾ, ಸುಭೋಕ್ತಾ, ನಕ್ತಾ, ಈಶ್ವರ, ಜಿತಾತ್ಮ, ಮುನಿವೀರ್ಯ, ದೀಪ್ತಲೋಮ, ಭಯಂಕರ, ಅತಿಕರ್ಮಾ, ಪ್ರತೀತ, ಪ್ರದಾತಾ, ಅಂಶುಮಾನ್, ಶೈಲಾಭ, ಪರಮಕ್ರೋಧೀ, ಧೀರೋಷ್ಣೀ, ಭೂಪತಿ, ಸ್ರಜೀ, ವಜ್ರೀ, ವರೀ - ಇವರು ಸನಾತನರೂ, ಮಹಾನುಭಾವರೂ ಆದ ವಿಶ್ವೇದೇವತೆಗಳು. ಕಾಲಗತಿಯನ್ನು ತಿಳಿದ ಇವರೆಲ್ಲರನ್ನೂ ನಿನಗೆ ಹೇಳಿದ್ದೇನೆ.
ಅಶ್ರಾದ್ಧೇಯಾನಿ ಧಾನ್ಯಾನಿ ಕೋದ್ರವಾಃ ಪುಲಕಾಸ್ತಥಾ |
ಹಿಂಗು ದ್ರವ್ಯೇಷು ಶಾಕೇಷು ಪಲಾಂಡುಂ ಲಶುನಂ ತಥಾ ॥38॥
ಶ್ರಾದ್ಧದಲ್ಲಿ ಉಪಯೋಗಿಸಬಾರದಾದ ಧಾನ್ಯಗಳು ಹಾರಕ ಮತ್ತು ಕ್ಷುದ್ರ ಧಾನ್ಯಗಳು (ಜೋಳ, ರಾಗಿ ಮೊದಲಾದವು). ದ್ರವ್ಯಗಳಲ್ಲಿ ಇಂಗನ್ನೂ, ಶಾಕಗಳಲ್ಲಿ ಈರುಳ್ಳಿ ಮತ್ತು ಬೆಳುಳ್ಳಿಗಳನ್ನೂ ಉಪಯೋಗಿಸಬಾರದು.
ಪಲಾಂಡುಃ ಸೌಭಂಜನಕಸ್ತಥಾ ಗೃಂಜನಕಾದಯಃ |
ಕೂಷ್ಮಾಂಡಜಾತ್ಯಲಾಬುಂ ಚ ಕೃಷ್ಣಂ ಲವಣಮೇವ ಚ ॥39॥
ಗ್ರಾಮ್ಯಂ ವಾರಾಹಮಾಂಸಂ ಚ ಯಚ್ಚೈವಾಪ್ರೋಕ್ಷಿತಂ ಭವೇತ್ |
ಕೃಷ್ಣಾಜಾಜೀ ವಿಡಶ್ಚೈವ ಶೀತಪಾಕೀ ತಥೈವ ಚ |
ಅಂಕುರಾದ್ಯಾಸ್ತಥಾ ವರ್ಜ್ಯಾ ಇಹ ಶೃಂಗಾಟಕಾನಿ ಚ ॥40॥
ಈರುಳ್ಳಿ, ಕೆಂಚನಾಳದ ಕಾಯಿ ಮೊದಲಾದವುಗಳು, ಸೋರೆಕಾಯಿ, ಕಪ್ಪಾದ ಉಪ್ಪು, ಗ್ರಾಮವಾಸಿಯಾದ ಹಂದಿಯ ಮಾಂಸ, ಶುದ್ಧಿಪಡಿಸದ ಯಾವುದೇ ಒಂದು ವಸ್ತು, ಕರೀ ಜೀರಿಗೆ, ನಿಂಬೆಯ ಉಪ್ಪು, ಶೀತಪಾಕಿ ಎಂಬ ತರಕಾರಿ, ಮೊಳಕೆ ಬಂದ ಧಾನ್ಯಗಳು, ಶೃಂಗಾಟಕಗಳು ಇವೆಲ್ಲವೂ ವರ್ಜ್ಯವಾದವುಗಳು.
ವರ್ಜಯೇಲ್ಲವಣಂ ಸರ್ವಂ ತಥಾ ಜಂಬೂಫಲಾನಿ ಚ |
ಅವಕ್ಷುತಾವರುದಿತಂ ತಥಾ ಶ್ರಾದ್ಧೇಷು ವರ್ಜಯೇತ್ ॥41॥
ಶ್ರಾದ್ಧದಲ್ಲಿ ಎಲ್ಲ ರೀತಿಯ ಲವಣಗಳನ್ನು ಮತ್ತು ನಿಂಬೆಹಣ್ಣನ್ನು ವರ್ಜಿಸಬೇಕು. ಕ್ಷುತದಿಂದ (ಸೀನಿನಿಂದ) ಮತ್ತು ರೋದನದಿಂದ ಉಂಟಾದ ಕಣ್ಣೀರಿನಿಂದ ಮಿಶ್ರವಾದ ಪದಾರ್ಥಗಳನ್ನು ಶ್ರಾದ್ಧದಲ್ಲಿ ವರ್ಜಿಸಬೇಕು.
ನಿವಾಪೇ ಹವ್ಯಕವ್ಯೇ ವಾ ಗರ್ಹಿತಂ ಚ ಶ್ವದರ್ಶನಮ್ |
ಪಿತರಶ್ಚೈವ ದೇವಾಶ್ಚ ನಾಭಿನಂದಂತಿ ತದ್ಧವಿಃ ॥42॥

ಹವ್ಯಕವ್ಯಗಳಲ್ಲಿ ಮತ್ತು ಶ್ರಾದ್ಧದಲ್ಲಿ ನಾಯಿಗಳ ದರ್ಶನವು ನಿಂದನೀಯವಾದುದು. ನಾಯಿಗಳು ನೋಡಿದ ಹವಿಸ್ಸನ್ನು ಪಿತೃಗಳಾಗಲೀ, ದೇವತೆಗಳಾಗಲೀ ಅಭಿನಂದಿಸುವುದಿಲ್ಲ.
ಚಂಡಾಲಶ್ವಪಚೌ ವರ್ಜ್ಯೌ ನಿವಾಪೇ ಸಮುಪಸ್ಥಿತೇ |
ಕಾಷಾಯವಾಸೀ ಕುಷ್ಠೀ ವಾ ಪತಿತೋ ಬ್ರಹ್ಮಹಾಪಿ ವಾ ॥43॥
ಸಂಕೀರ್ಣಯೋನಿರ್ವಿಪ್ರಶ್ಚ ಸಂಬಂಧೀ ಪತಿತಶ್ಚ ಯಃ |
ವರ್ಜನೀಯಾ ಬುಧೈರೇತೇ ನಿವಾಪೇ ಸಮುಪಸ್ಥಿತೇ ॥44॥
ಶ್ರಾದ್ಧಕಾಲದಲ್ಲಿ ಚಂಡಾಲ ಮತ್ತು ಶ್ವಪಚರನ್ನೂ, ಹಾಗೆಯೇ ಕಾವಿಯನ್ನು ಧರಿಸಿದವರನ್ನೂ, ಕುಷ್ಠರೋಗಿಯನ್ನೂ, ಪತಿತನನ್ನೂ, ಬ್ರಹ್ಮಹತ್ಯೆ ಮಾಡಿದವನನ್ನೂ ವರ್ಜಿಸಬೇಕು. ಕುಲಶುದ್ಧಿ ಇಲ್ಲದ ಬ್ರಾಹ್ಮಣನನ್ನೂ, ಸಂಬಂಧಿಯನ್ನೂ, ಪತಿತನನ್ನೂ ವಿವೇಕಿಗಳಾದವರು ಶ್ರಾದ್ಧಕಾಲದಲ್ಲಿ ವರ್ಜಿಸಬೇಕು.
ಇತ್ಯೇವಮುಕತ್ತ್ವ ಭಗವಾನ್ ಸ್ವವಂಶಜಮೃಷಿಂ ಪುರಾ |
ಪಿತಾಮಹಸಭಾಂ ದಿವ್ಯಾಂ ಜಗಾಮಾತ್ರಿಸ್ತಪೋಧನಃ ॥45॥
ಹೀಗೆ ತಪೋಧನರಾದ ಪೂಜ್ಯರಾದ ಅತ್ರಿಗಳು ತಮ್ಮ ವಂಶದಲ್ಲಿ ಜನಿಸಿದ ಋಷಿಯಾದ ನಿಮಿಗೆ ಉಪದೇಶವನ್ನು ಮಾಡಿ ದಿವ್ಯವಾದ ಬ್ರಹ್ಮದೇವರ ಸಭೆಗೆ ಹೊರಟುಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಶ್ರಾದ್ಧಧರ್ಮೇ ಅತ್ರಿಮತಂ ನಾಮ ತ್ರಯಸ್ತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ನಾಲ್ಕನೆಯ ಅಧ್ಯಾಯ
ಶ್ರಾದ್ಧದಲ್ಲಿ ಅಗ್ನಿಕರಣಾದಿ ವಿಧಿ
ಭೀಷ್ಮಃ
ತಥಾ ವಿಧೌ ಪ್ರವೃತ್ತೇ ತು ಸರ್ವ ಏವ ಮಹರ್ಷಯಃ |
ಪಿತೃಯಜ್ಞಾನಕುರ್ವಂತ ವಿಧಿದೃಷ್ಟೇನ ಕರ್ಮಣಾ ॥1॥
ಭೀಷ್ಮ ಶ್ರಾದ್ಧದ ವಿಧಿಯು ಈ ರೀತಿಯಲ್ಲಿ ಪ್ರವೃತ್ತವಾಗುತ್ತಿರಲು ಎಲ್ಲ ಮಹರ್ಷಿಗಳು ವಿಧಿಗೆ ಅನುಗುಣವಾಗಿ ಪಿತೃಯಜ್ಞಗಳನ್ನು ಮಾಡಿದರು.
ಋಷಯೋ ಧರ್ಮನಿತ್ಯಾಸ್ತು ಕೃತ್ವಾ ನಿವಪನಾನ್ಯುತ |
ತರ್ಪಣಂ ಚಾಪ್ಯಕುರ್ವಂತ ತೀರ್ಥಾಂಭೋಭಿರ್ಯತವ್ರತಾಃ ॥2॥
ನಿಯತವ್ರತರೂ, ನಿತ್ಯವೂ ಧರ್ಮಾನುಷ್ಠಾನ ಮಾಡುವವರೂ ಆದ ಋಷಿಗಳು ಪಿಂಡಪ್ರದಾನವನ್ನು ಮಾಡಿ ತೀರ್ಥಜಲದಿಂದ ತರ್ಪಣವನ್ನೂ ನೀಡಿದರು.
ನಿವಾಪೈರ್ದೀಯಮಾನೈಶ್ಚ ಚಾತುರ್ವರ್ಣ್ಯೇನ ಭಾರತ |
ತರ್ಪಿತಾಃ ಪಿತರೋ ದೇವಾಸ್ತೇ ನಾನ್ನಂ ಜರಯಂತಿ ವೈ ॥3॥
ಎಲೈ ಭಾರತನೇ, ನಾಲ್ಕುವರ್ಣದ ಪುರುಷರಿಂದ ಕೊಡಲ್ಪಟ್ಟ ಪಿಂಡಪ್ರದಾನದಿಂದ ತೃಪ್ತಿಹೊಂದಿದ ಪಿತೃಗಳಿಗೆ ಮತ್ತು ದೇವತೆಗಳಿಗೆ ಆ ಅನ್ನವು ಅರಗಲಿಲ್ಲ.
ಅಜೀರ್ಣೇನಾಭಿಹನ್ಯಂತೇ ತೇ ದೇವಾಃ ಪಿತೃಭಿಃ ಸಹ |
ಸೋಮಮೇವಾಭ್ಯಪದ್ಯಂತ ನಿವಾಪಾನ್ನಾಭಿಪೀಡಿತಾಃ ॥4॥
ಆಗ ಅಜೀರ್ಣದಿಂದ ಪೀಡಿತರಾದ ದೇವತೆಗಳು ಪಿತೃಗಳ ಜೊತೆಯಲ್ಲಿ ಚಂದ್ರನ ಬಳಿಗೆ ಹೋದರು.
ತೇಽಬ್ರುವನ್ ಸೋಮಮಾಸಾದ್ಯ ಪಿತರೋಽಜೀರ್ಣಪೀಡಿತಾಃ |
ನಿವಾಪಾನ್ನೇನ ಪೀಡ್ಯಾಮಃ ಶ್ರೇಯೋ ನೋಽತ್ರ ವಿಧೀಯತಾಮ್ ॥5॥
ಅಜೀರ್ಣಪೀಡಿತರಾದ ಪಿತೃಗಳು ಸೋಮನ ಬಳಿಗೆ ಹೋಗಿ ನಾವು ನಿವಾಪಾನ್ನದಿಂದ ಪೀಡಿತರಾಗಿದ್ದೇವೆ. ನಮಗೆ ಶ್ರೇಯಸ್ಸನ್ನು ಮಾಡು ಎಂದು ಕೇಳಿದರು.
ತಾನ್ ಸೋಮಃ ಪ್ರತ್ಯುವಾಚಾಥ ಶ್ರೇಯಶ್ಚೇದೀಪ್ಸಿತಂ ಸುರಾಃ |
ಸ್ವಯಂಭೂಸದನಂ ಯಾತ ಸ ವಃ ಶ್ರೇಯೋ ವಿಧಾಸ್ಯತಿ ॥6॥
ಚಂದ್ರನು ಅವರನ್ನು ಕುರಿತು- `ಎಲೈ ದೇವತೆಗಳೇ, ನಿಮಗೆ ಶ್ರೇಯಸ್ಸು ಬೇಕಾದರೆ ಬ್ರಹ್ಮದೇವರ ಸದನಕ್ಕೆ ಹೋಗಿ. ಅವರು ನಿಮಗೆ ಶ್ರೇಯಸ್ಸನ್ನು ಉಂಟುಮಾಡುವರು' ಎಂದು ಹೇಳಿದನು.
ತೇ ಸೋಮವಚನಾದ್ ದೇವಾಃ ಪಿತೃಭಿಃ ಸಹ ಭಾರತ |
ಮೇರುಶೃಂಗೇ ಸಮಾಸೀನಂ ಪಿತಾಮಹಮುಪಾಗಮನ್ ॥7॥
ಎಲೈ ಭಾರತನೇ, ಚಂದ್ರನ ವಚನದಂತೆ ಪಿತೃಗಳ ಜೊತೆಯಲ್ಲಿ ದೇವತೆಗಳು ಹೊರಟು ಮೇರುಶೃಂಗದಲ್ಲಿ ಆಸೀನರಾಗಿದ್ದ ಬ್ರಹ್ಮದೇವರ ಬಳಿಗೆ ಬಂದರು.
ಪಿತರಃ
ನಿವಾಪಾನ್ನೇನ ಭಗವನ್ ಭೃಶಂ ಪೀಡ್ಯಾಮಹೇ ವಯಮ್ |

ಪ್ರಸಾದಂ ಕುರು ನೋ ದೇವ ಶ್ರೇಯೋ ನಃ ಸಂವಿಧೀಯತಾಮ್ ॥8॥
ಪಿತೃಗಳು ಪೂಜ್ಯನೇ, ನಿವಾಪಾನ್ನದಿಂದ ಬಹಳವಾಗಿ ಪೀಡಿತರಾಗಿದ್ದೇವೆ. ದೇವನೇ ಅನುಗ್ರಹವನ್ನು ಮಾಡು. ನಮಗೆ ಶ್ರೇಯಸ್ಸನ್ನು ಕರುಣಿಸು.
ಇತಿ ತೇಷಾಂ ವಚಃ ಶ್ರುತ್ವಾ ಸ್ವಯಂಭೂರಿದಮಬ್ರವೀತ್ |
ಏಷ ಮೇ ಪಾರ್ಶ್ವತೋ ವಹ್ನಿರ್ಯುಷ್ಮಚ್ಛ್ರೇಯೋ ವಿಧಾಸ್ಯತಿ ॥9॥
ಅವರ ಮಾತನ್ನು ಕೇಳಿದ ಬ್ರಹ್ಮದೇವರು ನನ್ನ ಪಕ್ಕದಲ್ಲಿಯೇ ಈ ಅಗ್ನಿ ಇದ್ದಾನೆ. ಅವನು ನಿಮಗೆ ಶ್ರೇಯಸ್ಸನ್ನು ಉಂಟುಮಾಡುವನು ಎಂದು ಹೇಳಿದರು.
ಅಗ್ನಿಃ
ಸಹಿತಾಸ್ತಾತ ಭೋಕ್ಷ್ಯಾಮೋ ನಿವಾಪೇ ಸಮುಪಸ್ಥಿತೇ |
ಜರಯಿಷ್ಯಥ ಚಾಪ್ಯನ್ನಂ ಮಯಾ ಸಾರ್ಧಂ ನ ಸಂಶಯಃ ॥10॥
ಅಗ್ನಿ ಎಲೈ ಪ್ರೀತಿಪಾತ್ರರೇ, ನಿವಾಪಾನ್ನವನ್ನು ನೀಡಿದಾಗ ನಾವು ಜೊತೆಯಲ್ಲಿಯೇ ಭೋಜನವನ್ನು ಮಾಡೋಣ. ನನ್ನ ಜೊತೆಯಲ್ಲಿ ಭೋಜನವನ್ನು ಮಾಡುವಾಗ ನೀವು ಅನ್ನವನ್ನು ಅರಗಿಸಿಕೊಳ್ಳುವಿರಿ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಏತಚ್ಛ್ರುತ್ವಾ ತು ಪಿತರಸ್ತತಸ್ತೇ ವಿಜ್ವರಾಭವನ್ |
ಏತಸ್ಮಾತ್ಕಾರಣಾಚ್ಚಾಗ್ನೇಃ ಪ್ರಾಕ್ತನಂ ದೀಯತೇ ನೃಪ ॥11॥
ಈ ಮಾತನ್ನು ಕೇಳಿದ ಪಿತೃಗಳು ನಿಶ್ಚಿಂತರಾದರು. ಎಲೈ ರಾಜನೇ, ಈ ಕಾರಣದಿಂದ ಅಗ್ನಿಗೆ ಮೊದಲನೆಯ ಹವಿರ್ಭಾಗವು ಕೊಡಲ್ಪಡುತ್ತದೆ.
ನಿವಪ್ತೇ ಚಾಗ್ನಿಪೂರ್ವೇ ವೈ ನಿವಾಪೇ ಪುರುಷರ್ಷಭ |
ನ ಬ್ರಹ್ಮರಾಕ್ಷಸಾಸ್ತಂ ವೈ ನಿವಾಪಂ ಧರ್ಷಯಂತ್ಯುತ |
ರಕ್ಷಾಂಸಿ ಚಾಪವರ್ತಂತೇ ಸ್ಥಿತೇ ದೇವೇ ವಿಭಾವಸೌ ॥12॥
ಎಲೈ ಪುರುಷಶ್ರೇಷ್ಠನೇ, ಅಗ್ನಿಗೆ ಮೊದಲನೆಯ ಭಾಗವನ್ನು ಸಮರ್ಪಿಸಿದರೆ ಆ ಶ್ರಾದ್ಧವನ್ನು ಬ್ರಹ್ಮರಾಕ್ಷಸರು ವಿನಾಶ ಮಾಡುವುದಿಲ್ಲ. ಅಗ್ನಿದೇವನು ಅಲ್ಲಿರುವಾಗ ರಾಕ್ಷಸರು ಹಿಂದಕ್ಕೆ ಹೋಗುತ್ತಾರೆ.
ಪೂರ್ವಂ ಪಿಂಡಂ ಪಿತುರ್ದದ್ಯಾತ್ ತತೋ ದದ್ಯಾತ್ ಪಿತಾಮಹೇ |
ಪ್ರಪಿತಾಮಹಾಯ ಚ ತತ ಏಷ ಶ್ರಾದ್ಧವಿಧಿಃ ಸ್ಮೃತಃ ॥13॥
ಮೊದಲನೆಯ ಪಿಂಡವನ್ನು ಪಿತೃವಿಗೂ, ಎರಡನೆಯ ಪಿಂಡವನ್ನು ಪಿತಾಮಹನಿಗೂ, ಮೂರನೆಯ ಪಿಂಡವನ್ನು ಪ್ರಪಿತಾಮಹನಿಗೂ ಕೊಡಬೇಕು. ಇದು ಶ್ರಾದ್ಧವಿಧಿ ಎಂದು ಹೇಳಲಾಗಿದೆ.
ಬ್ರೂಯಾಚ್ಛ್ರಾದ್ಧೇ ಚ ಸಾವಿತ್ರೀಂ ಪಿಂಡೇ ಪಿಂಡೇ ಸಮಾಹಿತಃ |
ಸೋಮಾಯೇತಿ ಚ ವಕ್ತವ್ಯಂ ತಥಾ ಪಿತೃಮತೇತಿ ಚ ॥14॥
ಶ್ರಾದ್ಧದಲ್ಲಿ ಪ್ರತಿ ಪಿಂಡವನ್ನು ಕೊಡುವಾಗಲೂ ಗಾಯತ್ರಿಯನ್ನು ಉಚ್ಚರಿಸಬೇಕು. `ಸೋಮಾಯ ಪಿತೃಮತೇ ಸ್ವಾಹಾ' ಎಂದು ಎರಡನೆಯ ಭಾಗವನ್ನು ಕೊಡಬೇಕು. (ಮೊದಲನೆಯ ಹವ್ಯಭಾಗವನ್ನು `ಅಗ್ನಯೇ ಹವ್ಯವಾಹನಾಯ ಸ್ವಾಹಾ' ಎಂದು ಅಗ್ನಿಗೆ ಕೊಡಬೇಕು).
ರಜಸ್ವಲಾ ಚ ಯಾ ನಾರೀ ವ್ಯಂಗಿತಾ ಕರ್ಣಯೋಶ್ಚ ಯಾ |
ನಿವಾಪೇ ನೋಪತಿಷ್ಠೇತ ಸಂಗ್ರಾಹ್ಯಾ ನಾನ್ಯವಂಶಜಾಃ ॥15॥
ಶ್ರಾದ್ಧ ಪ್ರದೇಶದಲ್ಲಿ ರಜಸ್ವಲೆಯಾದ ನಾರಿಯೂ, ಕಿವುಡಿಯಾದವಳೂ ಇರಬಾರದು. ಹಾಗೆಯೇ ಬೇರೆ ವಂಶಕ್ಕೆ ಸೇರಿದ ಸ್ತ್ರೀಯರೂ ಇರಬಾರದು.
ಜಲಂ ಪ್ರತರಮಾಣಶ್ಚ ಕೀರ್ತಯೇತ ಪಿತಾಮಹಾನ್ |
ನದೀಮಾಸಾದ್ಯ ಕುರ್ವೀತ ಪಿತೄಣಾಂ ಪಿಂಡತರ್ಪಣಮ್ ॥16॥
ನೀರನ್ನು ದಾಟುವಾಗ ಪಿತಾಮಹರ ಹೆಸರನ್ನು ಹೇಳಬೇಕು. ನದಿಗೆ ಹೋಗಿ ಪಿತೃಗಳಿಗೆ ಪಿಂಡ, ತರ್ಪಣವನ್ನು ಕೊಡಬೇಕು.
ಪೂರ್ವಂ ಸ್ವವಂಶಜಾನಾಂ ತು ಕೃತ್ವಾದ್ಭಿಸ್ತರ್ಪಣಂ ಪುನಃ |
ಸುಹೃತ್ಸಂಬಂಧಿವರ್ಗಾಣಾಂ ತತೋ ದದ್ಯಾಜ್ಜಲಾಂಜಲಿಮ್ ॥17॥
ಮೊದಲು ತನ್ನ ವಂಶದವರಿಗೂ, ಅನಂತರ ತನ್ನ ಸಂಬಂಧಿಗಳಿಗೂ, ಅನಂತರ ಸುಹೃದರಿಗೂ ಜಲಾಂಜಲಿಯನ್ನು ಕೊಡಬೇಕು.
ಕುಲ್ಮಾಷಗೋಯುಗೇನಾಥ ಯುಕ್ತಂ ತತ್ರ ರಸಾಜಲಮ್ |
ಪಿತರೋಽಭಿಲಷಂತೇ ವೈ ನಾವಂ ಚಾಪ್ಯಧಿರೋಹತಃ |
ಸದಾ ನಾವಂ ಜಲಂ ತಜ್ಜ್ಞಾಃ ಪ್ರಯಚ್ಛಂತಿ ಸಮಾಹಿತಾಃ ॥18॥
ಕುಲ್ಮಾಷ ಎಂದರೆ ವನ್ಯಮಾಷ (ಕಾಡುದ್ದು), ಗೋಯುಗವೆಂದರೆ ಮಂತ್ರರೂಪವಾದ ಗೋವು ಮತ್ತು ದೃಷ್ಟಿರೂಪವಾದ ಗೋವು. ಜಲವನ್ನು ಪವಿತ್ರೀಕರಿಸುವುದಕ್ಕೆ ಒಂದು ಮಂತ್ರ ಮತ್ತು ಜಲವನ್ನು ಶೋಧಿಸುವುದಕ್ಕೆ ದೃಷ್ಟಿ ಎಂದು ತಿಳಿಯಬೇಕು. ಅಥವಾ ಗೋಯುಗ ಎಂದರೆ ಪಿತ್ರಾದಿ ಅಂತರ್ಗತವಾದ ಪ್ರದ್ಯುಮ್ನಾದಿ ನಾಮ ಎಂದು ಅಭಿಪ್ರಾಯ. ರಸಾಜಲವೆಂದರೆ ಭೂಮಿಯಲ್ಲಿ ಹರಿಯುತ್ತಿರುವ ನೀರು - ನದಿ. ಮೇಲಕ್ಕೆತ್ತಿದ ನೀರಿನಿಂದ ತರ್ಪಣವನ್ನು ಕೊಡಬಾರದು. ವನ್ಯಮಾಷದಿಂದ ಪಿಂಡಪ್ರದಾನವನ್ನು ಮಾಡಿ, ನದಿಗೆ ಹೋಗಿ ಮಂತ್ರಪೂರ್ವಕವಾಗಿ ಜಲವನ್ನು ಸ್ಪರ್ಶ ಮಾಡಿ ದೃಷ್ಟಿಯಿಂದ ಅದನ್ನು ಪವಿತ್ರೀಕರಿಸಿ ಆ ಹರಿಯುವ ನೀರಿನಲ್ಲಿ ತರ್ಪಣವನ್ನು ಕೊಡಬೇಕು ಎಂದು ಅಭಿಪ್ರಾಯ. ಅಂತಹ ತರ್ಪಣವನ್ನು ಪಿತೃಗಳು ಅಪೇಕ್ಷಿಸುತ್ತಾರೆ. ಆಗ ಪಿತೃಗಳು ಸ್ವರ್ಗ ಮಾರ್ಗದಲ್ಲಿ ಹೋಗಲು ನಾವೆಯನ್ನು ಹತ್ತುತ್ತಾರೆ. ಇದನ್ನು ತಿಳಿದವರು ಸಮಾಧಾನದಿಂದ ಒಂಬತ್ತು ತರ್ಪಣಗಳನ್ನು

ಕೊಡಬೇಕು. `ಸೋಮಃ, ಪಿತೃಮಾನ್, ಅಂಗೀರಸ್ವಾನ್, ಅಗ್ನಿಃ, ಕವ್ಯವಾಹನಾದಯ ಯೇ ಪಿತರಃ ತಾನ್ ಪಿತ್ರೂಂಸ್ತರ್ಪಯಾಮಿ, ಭೂಃ ಪಿತ್ರೂಂಸ್ತರ್ಪಯಾಮಿ, ಭುವಃ ಪಿತ್ರೂಂಸ್ತರ್ಪಯಾಮಿ, ಸ್ವಃ ಪಿತ್ರೂಂಸ್ತರ್ಪಯಾಮಿ, ಭೂರ್ಭುವಃಸ್ವಃ ಪಿತ್ರೂಂಸ್ತರ್ಪಯಾಮಿ, ಸರ್ವಾನ್ ಪಿತ್ರೂಂಸ್ತರ್ಪಯಾಮಿ, ಸರ್ವಪಿತೃಪತ್ನೀಸ್ತರ್ಪಯಾಮಿ, ಸರ್ವಪಿತೃಪುತ್ರಾಂಸ್ತರ್ಪ- ಯಾಮಿ, ಸರ್ವಪಿತೃಗಣಾಂಸ್ತರ್ಪಯಾಮಿ' ಎಂದು ಒಂಬತ್ತು ಜನ ಪಿತೃಸಂಬಂಧಿಯಾದವರಿಗೆ ಜಲಾಂಜಲಿಯನ್ನು ಕೊಡಬೇಕು. ನಾವಂ ಎನ್ನುವುದಕ್ಕೆ ನವಸಂಬಂಧಿ ಎಂದೂ, ಹೊಸದಾದ ಎಂದೂ ಅರ್ಥ. ಈ ಒಂಬತ್ತು ಪಿತೃಗಳಿಗೆ ಹೊಸ ಜಲದಿಂದ ಕೊಡುವ ಜಲಾಂಜಲಿಯನ್ನು ಪಿತೃಗಳು ನಿರೀಕ್ಷಿಸುತ್ತಾರೆ ಎಂದು ಅಭಿಪ್ರಾಯ - ಲಕ್ಷಾಲಂಕಾರ.

ಮಾಸಾರ್ಧೇ ಕೃಷ್ಣಪಕ್ಷಸ್ಯ ಕುರ್ಯಾನ್ನಿವಪನಾನಿ ವೈ |
ಪುಷ್ಟಿರಾಯುಸ್ತಥಾ ವೀರ್ಯಂ ಶ್ರೀಶ್ಚೈವ ಪಿತೃವರ್ತಿನಃ ॥19॥

ಕೃಷ್ಣಪಕ್ಷದ ಅಮಾವಾಸ್ಯೆಯಂದು ಪಿಂಡಪ್ರದಾನಾದಿಗಳನ್ನು ಮಾಡಬೇಕು. ಈ ರೀತಿಯಲ್ಲಿ ಪಿತೃಯಜ್ಞವನ್ನು ಮಾಡುವವನಿಗೆ ಪುಷ್ಟಿ, ಆಯುಸ್ಸು, ವೀರ್ಯ ಮತ್ತು ಸಂಪತ್ತು ಉಂಟಾಗುತ್ತದೆ.

ಪಿತಾಮಹಃ ಪುಲಸ್ತ್ಯಶ್ಚ ವಸಿಷ್ಠಃ ಪುಲಹಸ್ತಥಾ |
ಅಂಗಿರಾಶ್ಚ ಕ್ರತುಶ್ಚೈವ ಕಶ್ಯಪಶ್ಚ ಮಹಾನೃಷಿಃ |
ಏತೇ ಕುರುಕುಲಶ್ರೇಷ್ಠ ಮಹಾಯೋಗೇಶ್ವರಾಃ ಸ್ಮೃತಾಃ ॥20॥

ಎಲೈ ಕುರುಕುಲಶ್ರೇಷ್ಠನೇ, ಬ್ರಹ್ಮದೇವರು, ಪುಲಸ್ತ್ಯ, ವಸಿಷ್ಠ, ಪುಲಹ, ಅಂಗಿರಸ, ಕ್ರತು, ಮಹರ್ಷಿಗಳಾದ ಕಶ್ಯಪರು ಇವರು ಮಹಾಯೋಗೇಶ್ವರರೆಂದು ಹೇಳಲ್ಪಡುತ್ತಾರೆ.

ಏತೇ ಚ ಪಿತರೋ ರಾಜನ್ನೇಷ ಶ್ರಾದ್ಧವಿಧಿಃ ಪರಃ |
ಪ್ರೇತಾಸ್ತು ಪಿಂಡಸಂಬಂಧಾನ್ಮುಚ್ಯಂತೇ ತೇನ ಕರ್ಮಣಾ ॥21॥

ಎಲೈ ರಾಜನೇ, ಇವರೂ ಸಹ ಪಿತೃಗಳು. ನಾನು ಹೇಳಿದುದೇ ಶ್ರೇಷ್ಠವಾದ ಶ್ರಾದ್ಧವಿಧಿ. ಪಿಂಡಪ್ರದಾನವನ್ನು ಮಾಡಿದ ತಕ್ಷಣ ಪಿಂಡದ ಸಂಬಂಧದಿಂದ ಮೃತರಾದ ಪಿತೃಗಳು ತಮ್ಮ ಕರ್ಮದಿಂದ ಉಂಟಾದ ಪ್ರೇತತ್ವದ ವಿಮುಕ್ತಿಯನ್ನು ಹೊಂದುತ್ತಾರೆ.

ಇತ್ಯೇಷಾ ಪುರುಷಶ್ರೇಷ್ಠ ಶ್ರಾದ್ಧೋತ್ಪತ್ತಿರ್ಯಥಾಗಮಮ್ |
ಖ್ಯಾಪಿತಾ ಪೂರ್ವನಿರ್ದಿಷ್ಟಾ ದಾನಂ ವಕ್ಷ್ಯಾಮ್ಯತಃ ಪರಮ್ ॥22॥

ಎಲೈ ಪುರುಷಶ್ರೇಷ್ಠನೇ, ಇದು ಶಾಸ್ತ್ರಕ್ಕೆ ಅನುಸಾರಿಯಾದ ಶ್ರಾದ್ಧೋತ್ಪತ್ತಿವಿಧಿ. ಇದು ಬ್ರಹ್ಮದೇವರಿಂದ ಮೊದಲೇ ನಿರ್ದಿಷ್ಟವಾಗಿದೆ. ಇದನ್ನು ನಿನಗೆ ಹೇಳಿದ್ದೇನೆ. ಇನ್ನು ಮುಂದೆ ದಾನವನ್ನು ಹೇಳುವೆನು.

॥ ಇತಿ ದಾನಧರ್ಮೇ ಶ್ರಾದ್ಧೇ ಅಗ್ನಿಕರಣಾದಿವಿಧಿನಿರೂಪಣಂ ನಾಮ ಚತುಸ್ತ್ರಿಂಶೋತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.

* * * * *

## ನೂರ ಮೂವತ್ತೈದನೆಯ ಅಧ್ಯಾಯ

### ಉಪವಾಸಾದಿ ವ್ರತವಿಶೇಷಗಳು

ಯುಧಿಷ್ಠಿರಃ

ದ್ವಿಜಾತಯೋ ವ್ರತೋಪೇತಾ ಹವಿಸ್ತೇ ಯದಿ ಭುಂಜತೇ |
ಅನ್ನಂ ಬ್ರಾಹ್ಮಣಕಾಮಾಯ ಕಥಮೇತತ್ ಪಿತಾಮಹ ॥1॥

ಯುಧಿಷ್ಠಿರ ಎಲೈ ಪಿತಾಮಹನೇ, ಬ್ರಾಹ್ಮಣರಿಗೆ ಅನ್ನದಾನವನ್ನು ಮಾಡಿ ಕಾಮ್ಯಫಲವನ್ನು ಬಯಸುವ ಯಜಮಾನನ ಹವಿಸ್ಸನ್ನು ವ್ರತನಿಷ್ಠರಾದ ದ್ವಿಜರು ಭುಂಜಿಸಿದರೆ ಏನು ಫಲ ಉಂಟಾಗುತ್ತದೆ?

ಭೀಷ್ಮಃ

ಅವೇದೋಕ್ತವ್ರತಾಶ್ಚೈವ ಭುಂಜಾನಾಃ ಕಾರ್ಯಕಾರಿಣಃ |
ವೇದೋಕ್ತೇಷು ತು ಭುಂಜಾನಾ ವ್ರತಲುಪ್ತಾ ಯುಧಿಷ್ಠಿರ ॥2॥

ಭೀಷ್ಮ ವೇದವಿಹಿತವಲ್ಲದ ವ್ರತಗಳನ್ನು ಧರಿಸಿದವರು ಅಂತಹ ಬ್ರಾಹ್ಮಣನ ಅನ್ನವನ್ನು ಭೋಜನ ಮಾಡಿದರೆ ಬ್ರಾಹ್ಮಣನ ಆಸೆಯು ಫಲಿಸುತ್ತದೆ. ಎಲೈ ಯುಧಿಷ್ಠಿರನೇ, ವೇದೋಕ್ತವ್ರತವನ್ನು ಧರಿಸಿ ಭೋಜನವನ್ನು ಮಾಡುವವನು ವ್ರತಲೋಪವನ್ನು ಹೊಂದುತ್ತಾರೆ.

ಯುಧಿಷ್ಠಿರಃ

ಯದಿದಂ ತಪ ಇತ್ಯಾಹುರುಪವಾಸಂ ಪೃಥಗ್ಜನಾಃ |
ತಪಃ ಸ್ಯಾದೇತದಿಹ ವೈ ತಪೋಽನ್ಯದ್ವಾಪಿ ಕಿಂ ಭವೇತ್ ॥3॥

ಯುಧಿಷ್ಠಿರ ಸಾಮಾನ್ಯಜನರು ಉಪವಾಸವನ್ನೇ ತಪಸ್ಸು ಎಂದು ಹೇಳುತ್ತಾರಷ್ಟೆ? ಇದೇ ತಪಸ್ಸೋ ಅಥವಾ ಇದಕ್ಕಿಂತ ಬೇರೆಯಾದ ತಪಸ್ಸಿದೆಯೋ?

ಭೀಷ್ಮಃ

ಮಾಸಾರ್ಧಮಾಸೌ ನೋಪವಸೇದ್ ಯತ್ತಪೋ ಮನ್ಯತೇ ಜನಃ |
ಆತ್ಮತಂತ್ರೋಪಘಾತೀ ಯೋ ನ ತಪಸ್ವೀ ನ ಧರ್ಮವಿತ್ ॥4॥

ಭೀಷ್ಮ ತಪಸ್ಸು ಎಂದು ತಿಳಿದು ಒಂದು ತಿಂಗಳು ಅಥವಾ ಹದಿನೈದು ದಿವಸಗಳ ಕಾಲ ಉಪವಾಸವನ್ನು ಮಾಡಬಾರದು. ಅಂತಹವನು ತನ್ನ ಶರೀರಯಾತ್ರೆಯನ್ನೇ ಹಾಳು ಮಾಡಿಕೊಳ್ಳುತ್ತಾನೆ. ಅವನು ತಪಸ್ವಿಯೂ ಅಲ್ಲ, ಧರ್ಮಜ್ಞನೂ ಅಲ್ಲ.

ತ್ಯಾಗಸ್ಯಾಪಿ ಚ ಸಂಪತ್ತಿಃ ಶಿಷ್ಯತೇ ತಪ ಉತ್ತಮಮ್ |
ಸದೋಪವಾಸೀ ಚ ಭವೇದ್ ಬ್ರಹ್ಮಚಾರೀ ತಥೈವ ಚ ॥5॥
ತ್ಯಾಗವನ್ನು ಮಾಡುವುದು ಶ್ರೇಷ್ಠವಾದ ತಪಸ್ಸೆಂದು ಹೇಳಲ್ಪಡುತ್ತದೆ. ತಪಸ್ಸನ್ನು ಮಾಡುವವನು ಯಾವಾಗಲೂ ಉಪವಾಸವನ್ನು ಮಾಡಿ ಬ್ರಹ್ಮಚಾರ್ಯದಿಂದ ಇರಬೇಕು.
ಮುನಿಶ್ಚ ಸ್ಯಾತ್ ಸದಾ ವಿಪ್ರೋ ದೇವಾಂಶ್ಚೈವ ಸದಾ ಯಜೇತ್ |
ಕುಟುಂಬಿಕೋ ಧರ್ಮಕಾಮಃ ಸದಾಽಸ್ವಪ್ನಶ್ಚ ಭಾರತ ॥6॥
ಯಾವಾಗಲೂ ಮನನಶೀಲನಾಗಿರಬೇಕು. ದೇವತೆಗಳನ್ನು ಯಾವಾಗಲೂ ಅರ್ಚಿಸಬೇಕು. ಎಲೈ ಭಾರತನೇ, ಗೃಹಸ್ಥನಾಗಿ ಧರ್ಮವನ್ನು ಬಯಸುವವನು ಯಾವಾಗಲೂ ಅಸ್ವಪ್ನನಾಗಿರಬೇಕು.
ಅಮೃತಾಶೀ ಸದಾ ಚ ಸ್ಯಾತ್ ಪವಿತ್ರೀ ಚ ಸದಾ ಭವೇತ್ |
ಋತವಾದೀ ಸದಾ ಚ ಸ್ಯಾನ್ನಿಯತಶ್ಚ ಸದಾ ಭವೇತ್ ॥7॥
ಅಮೃತಾಶಿಯಾಗಿರಬೇಕು, ಪವಿತ್ರಿಯಾಗಿರಬೇಕು, ಋತವಾದಿಯಾಗಿರಬೇಕು, ನಿಯಮಬದ್ಧನಾಗಿರಬೇಕು.
ವಿಘಸಾಶೀ ಸದಾ ಚ ಸ್ಯಾತ್ ಸದಾ ಚೈವಾತಿಥಿಪ್ರಿಯಃ |
ಅಮಾಂಸಾಶೀ ಸದಾ ಚ ಸ್ಯಾತ್ ಪವಿತ್ರೀ ಚ ಸದಾ ಭವೇತ್ ॥8॥
ವಿಘಸಾಶಿಯಾಗಿರಬೇಕು, ಅತಿಥಿಪ್ರಿಯನಾಗಿರಬೇಕು, ಮಾಂಸವನ್ನು ತಿನ್ನಬಾರದು ಮತ್ತು ಯಾವಾಗಲೂ ಪವಿತ್ರನಾಗಿರಬೇಕು.
ಯುಧಿಷ್ಠಿರಃ
ಕಥಂ ಸದೋಪವಾಸೀ ಸ್ಯಾದ್ ಬ್ರಹ್ಮಚಾರೀ ಚ ಪಾರ್ಥಿವ |
ವಿಘಸಾಶೀ ಕಥಂ ಚ ಸ್ಯಾತ್ ಕಥಂ ಚೈವಾತಿಥಿಪ್ರಿಯಃ ॥9॥
ಯುಧಿಷ್ಠಿರ ಎಲೈ ರಾಜನೇ, ಸದಾ ಉಪವಾಸಿಯಾಗಿರುವುದು ಹೇಗೆ? ಸದಾ ಬ್ರಹ್ಮಚಾರಿಯಾಗಿರುವುದು ಹೇಗೆ? ವಿಘಸಾಶಿಯಾಗುವುದು ಹೇಗೆ? ಮತ್ತು ಅತಿಥಿ ಪ್ರಿಯನಾಗುವುದು ಹೇಗೆ?
ಭೀಷ್ಮಃ
ಅಂತರಾ ಸಾಯಮಾಶಂ ಚ ಪ್ರಾತರಾಶಂ ತಥೈವ ಚ |
ಸದೋಪವಾಸೀ ಭವತಿ ಯೋ ನ ಭುಂಕ್ತೇಽಂತರಾ ಪುನಃ ॥10॥
ಭೀಷ್ಮ ಪ್ರಾತಃಕಾಲದ ಭೋಜನ ಮತ್ತು ಸಾಯಂಕಾಲದ ಭೋಜನಗಳ ಮಧ್ಯೆ ಯಾವ ಆಹಾರವನ್ನೂ ಸೇವಿಸದವನು ಸದೋಪವಾಸಿಯಾಗುತ್ತಾನೆ.
ಭಾರ್ಯಾಂ ಗಚ್ಛನ್ ಬ್ರಹ್ಮಚಾರೀ ಸದಾ ಭವತಿ ಚೈವ ಹ |
ಋತವಾದೀ ಸದಾ ಚ ಸ್ಯಾದ್ ದಾನಶೀಲಶ್ಚ ಮಾನವಃ ॥11॥
ಋತುಕಾಲದಲ್ಲಿ ಮಾತ್ರ ಭಾರ್ಯಾಸಂಗವನ್ನು ಮಾಡುವವನು ಸದಾ ಬ್ರಹ್ಮಚಾರಿಯಾಗುತ್ತಾನೆ. ದಾನಶೀಲನಾದ ಮಾನವನು ಯಾವಾಗಲೂ ಸತ್ಯವನ್ನೇ ನುಡಿಯಬೇಕು (ಅವನು ಋತವಾದಿ ಎನಿಸುತ್ತಾನೆ).
ಅಭಕ್ಷಯನ್ ವೃಥಾ ಮಾಂಸಮಮಾಂಸಾಶೀ ಭವತ್ಯುತ |
ದಾನಂ ದದತ್ ಪವಿತ್ರೀ ಸ್ಯಾದಸ್ವಪ್ನಶ್ಚ ದಿವಾಽಸ್ವಪನ್ ॥12॥
ವ್ಯರ್ಥವಾಗಿ ಮಾಂಸವನ್ನು ಭಕ್ಷಿಸದವನು (ಶ್ರಾದ್ಧಾದಿ ವಿಶೇಷ ಸಂದರ್ಭವನ್ನು ಬಿಟ್ಟು ಬೇರೆ ಸಮಯದಲ್ಲಿ ಮಾಂಸಭಕ್ಷಣೆಯನ್ನು ಮಾಡದವನು) ಅಮಾಂಸಾಶಿ ಆಗುತ್ತಾನೆ. ದಾನವನ್ನು ಕೊಡುವವನು ಪವಿತ್ರನಾಗುತ್ತಾನೆ. ಹಗಲು ನಿದ್ರೆಯನ್ನು ಮಾಡದವನು ಅಸ್ವಪ್ನನಾಗುತ್ತಾನೆ.
ಭೃತ್ಯಾತಿಥಿಷು ಯೋ ಭುಂಕ್ತೇ ಭುಕ್ತವತ್ಸು ನರಃ ಸದಾ |
ಅಮೃತಂ ಕೇವಲಂ ಭುಂಕ್ತೇ ಇತಿ ವಿದ್ಧಿ ಯುಧಿಷ್ಠಿರ ॥13॥
ಎಲೈ ಯುಧಿಷ್ಠಿರನೇ, ಅತಿಥಿಗಳು ಮತ್ತು ಭೃತ್ಯರು ಭೋಜನವನ್ನು ಮಾಡಿದ ಮೇಲೆ ಯಾವ ಮನುಷ್ಯನು ಸದಾ ಭೋಜನವನ್ನು ಮಾಡುತ್ತಾನೆಯೋ ಅವನು ಕೇವಲ ಅಮೃತವನ್ನು ಭೋಜನವನ್ನು ಮಾಡುತ್ತಾನೆಂದು ತಿಳಿ.
ಅಭುಕ್ತವತ್ಸು ನಾಶ್ನಾತಿ ಬ್ರಾಹ್ಮಣೇಷು ತು ಯೋ ನರಃ |
ಅಭೋಜನೇನ ತೇನಾಸ್ಯ ಜಿತಃ ಸ್ವರ್ಗೋ ಭವತ್ಯುತ ॥14॥
ಬ್ರಾಹ್ಮಣರು ಊಟಮಾಡುವುದಕ್ಕಿಂತ ಮೊದಲು ಯಾವ ಮನುಷ್ಯನು ಭೋಜನವನ್ನು ಮಾಡುವುದಿಲ್ಲವೋ ಅವನು ಅದರಿಂದ ಸ್ವರ್ಗವನ್ನು ಜಯಿಸುತ್ತಾನೆ.
ದೇವೇಭ್ಯಶ್ಚ ಪಿತೃಭ್ಯಶ್ಚ ಭೃತ್ಯೇಭ್ಯೋಽತಿಥಿಭಿಃ ಸಹ |
ಅವಶಿಷ್ಟಾನಿ ಯೋ ಭುಂಕ್ತೇ ತಮಾಹುರ್ವಿಘಸಾಶಿನಮ್ ॥15॥
ದೇವತೆಗಳಿಗೂ, ಪಿತೃಗಳಿಗೂ, ಭೃತ್ಯರಿಗೂ, ಅತಿಥಿಗಳಿಗೂ ಅನ್ನವನ್ನು ನೀಡಿ ಉಳಿದ ಅನ್ನವನ್ನು ಸೇವಿಸುವವನು ವಿಘಸಾಶಿ ಎನಿಸುತ್ತಾನೆ.
ತೇಷಾಂ ಲೋಕಾ ಹ್ಯಪರ್ಯಂತಾಃ ಸದನೇ ಬ್ರಹ್ಮಣಃ ಸ್ಮೃತಾಃ |
ಉಪಸ್ಥಿತಾ ಹ್ಯಪ್ಸರೋಭಿರ್ಗಂಧರ್ವೈಶ್ಚ ಜನಾಧಿಪ ॥16॥
ಎಲೈ ಜನಾಧಿಪನೇ, ಅವರಿಗೆ ಬ್ರಹ್ಮಲೋಕದಲ್ಲಿ ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಸಹಿತವಾದ ಕೊನೆಯೇ ಇಲ್ಲದ ಲೋಕಗಳು ಸಿದ್ಧವಾಗಿವೆ.
ದೇವತಾತಿಥಿಭಿಃ ಸಾರ್ಧಂ ಪಿತೃಭಿಶ್ಚೋಪಭುಂಜತೇ |

ರಮಂತೇ ಪುತ್ರಪೌತ್ರೈಶ್ಚ ತೇಷಾಂ ಗತಿರನುತ್ತಮಾ ॥17॥
ದೇವತಾತಿಥಿಗಳ ಜೊತೆಯಲ್ಲಿ ಅಥವಾ ಪಿತೃಗಳ ಜೊತೆಯಲ್ಲಿ ಯಾರು ಆಹಾರವನ್ನು ಸ್ವೀಕರಿಸುತ್ತಾರೆಯೋ ಅವರು ಪುತ್ರ-ಪೌತ್ರರ ಜೊತೆಯಲ್ಲಿ ಸಂತೋಷಪಡುತ್ತಾನೆ. ಮರಣವನ್ನು ಹೊಂದಿದ ಅವರಿಗೆ ಶ್ರೇಷ್ಠವಾದ ಗತಿ ಉಂಟಾಗುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಉಪವಾಸಾದಿವ್ರತಕಥನಂ ನಾಮ ಪಂಚತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತಾರನೆಯ ಅಧ್ಯಾಯ
ಪ್ರತಿಗ್ರಹದ ದೋಷಗಳು
ಯುಧಿಷ್ಠಿರಃ
ಬ್ರಾಹ್ಮಣೇಭ್ಯಃ ಪ್ರಯಚ್ಛಂತಿ ದಾನಾನಿ ವಿವಿಧಾನಿ ಚ |
ದಾತೃಪ್ರತಿಗ್ರಹೀತ್ರೋರ್ವಾ ಕೋ ವಿಶೇಷಃ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಬ್ರಾಹ್ಮಣರಿಗೆ ವಿವಿಧ ದಾನಗಳನ್ನು ಕೊಡುತ್ತಾರೆ. ಅಲ್ಲಿ ದಾತೃಗಳಿಗೂ ಮತ್ತು ಸ್ವೀಕಾರ ಮಾಡುವವರಿಗೂ ಯಾವ ವಿಶೇಷವು ಉಂಟಾಗುತ್ತದೆ.
ಭೀಷ್ಮಃ
ಸಾಧೋರ್ಯಃ ಪ್ರತಿಗೃಹ್ಣೀಯಾತ್ ತಥೈವಾಸಾಧುತೋ ದ್ವಿಜಃ |
ಗುಣವತ್ಯಲ್ಪದೋಷಃ ಸ್ಯಾನ್ನಿರ್ಗುಣೇ ತು ನಿಮಜ್ಜತಿ ॥2॥
ಭೀಷ್ಮ ಸಜ್ಜನರಿಂದ ಸ್ವೀಕಾರ ಮಾಡಬಹುದು ಅಥವಾ ಬ್ರಾಹ್ಮಣನು ದುಷ್ಟರಿಂದಲೂ ಸ್ವೀಕಾರ ಮಾಡಬಹುದು. ಸಜ್ಜನರಿಂದ ದಾನವನ್ನು ಸ್ವೀಕಾರ ಮಾಡಿದರೆ ಸ್ವೀಕಾರ ಮಾಡಿದವನಿಗೆ ಅಲ್ಪದೋಷವುಂಟಾಗುತ್ತದೆ. ದುರ್ಜನರಿಂದ ದಾನವನ್ನು ಸ್ವೀಕಾರ ಮಾಡಿದರೆ ಸ್ವೀಕಾರ ಮಾಡಿದವನು ಮುಳುಗಿ ಹೋಗುತ್ತಾನೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ವೃಷಾದರ್ಭೇಶ್ಚ ಸಂವಾದಂ ಸಪ್ತರ್ಷೀಣಾಂ ಚ ಭಾರತ ॥3॥
ಎಲೈ ಭಾರತನೇ, ಈ ವಿಷಯದಲ್ಲಿಯೂ ಸಹ ವೃಷಾದರ್ಭಿಗೂ ಮತ್ತು ಸಪ್ತರ್ಷಿಗಳಿಗೂ ನಡೆದ ಸಂವಾದರೂಪವಾದ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಕಶ್ಯಪೋಽತ್ರಿರ್ವಸಿಷ್ಠಶ್ಚ ಭರದ್ವಾಜೋಽಥ ಗೌತಮಃ |
ವಿಶ್ವಾಮಿತ್ರೋ ಜಮದಗ್ನಿಃ ಸಾಧ್ವೀ ಚೈವಾಪ್ಯರುಂಧತೀ ॥4॥
ಸರ್ವೇಷಾಮಥ ತೇಷಾಂ ತು ಗಂಡಾಽಭೂತ್ಕರ್ಮಕಾರಿಕಾ |
ಶೂದ್ರಃ ಪಶುಸಖಶ್ಚೈವ ಭರ್ತಾ ಚಾಸ್ಯಾ ಬಭೂವ ಹ ॥5॥
ಕಶ್ಯಪ, ಅತ್ರಿ, ವಸಿಷ್ಠ, ಭರದ್ವಾಜ, ಗೌತಮ, ವಿಶ್ವಾಮಿತ್ರ, ಜಮದಗ್ನಿ, ಸಾಧ್ವಿಯಾದ ಅರುಂಧತಿ - ಇವರೆಲ್ಲರಿಗೂ ಗಂಡಾ ಎಂಬ ಹೆಸರಿನ ಶೂದ್ರವನಿತೆಯು ಸೇವಕಿಯಾಗಿದ್ದಳು. ಅವಳಿಗೆ ಪಶುಸಖನೆಂಬ ಪತಿಯಿದ್ದನು.
ತೇ ವೈ ಸರ್ವೇ ತಪಸ್ಯಂತಃ ಪುರಾ ಚೇರುರ್ಮಹೀಮಿಮಾಮ್ |
ಸಮಾಧಿನೋಪಶಿಕ್ಷಂತೋ ಬ್ರಹ್ಮಲೋಕಂ ಸನಾತನಮ್ ॥6॥
ಆ ಸಪ್ತರ್ಷಿಗಳೆಲ್ಲರೂ ತಪಸ್ಸನ್ನು ಮಾಡುತ್ತಾ ಸಮಾಧಿಯಿಂದ ಸನಾತನವಾದ ಬ್ರಹ್ಮಲೋಕವನ್ನು ಪಡೆಯಲು ಇಚ್ಛಿಸುತ್ತಾ ಈ ಭೂಮಿಯಲ್ಲಿ ಸಂಚರಿಸಿದರು.
ಅಥಾಭವದನಾವೃಷ್ಟಿರ್ಮಹತೀ ಕುರುನಂದನ |
ಕೃಚ್ಛ್ರಪ್ರಾಣೋಽಭವದ್ ಯತ್ರ ಲೋಕೋಽಯಂ ವೈ ಕ್ಷುಧಾನ್ವಿತಃ ॥7॥
ಎಲೈ ಕುರುನಂದನನೇ, ಒಮ್ಮೆ ದೊಡ್ಡ ಅನಾವೃಷ್ಟಿಯುಂಟಾಯಿತು. ಲೋಕದಲ್ಲಿ ಎಲ್ಲರೂ ಹಸಿವಿನಿಂದ ಬಳಲಿ ಪ್ರಾಣವನ್ನು ಉಳಿಸಿಕೊಳ್ಳುವುದೇ ಕಷ್ಟವಾಯಿತು.
ಕಸ್ಮಿಂಶ್ಚಿಚ್ಚ ಪುರಾ ಯಜ್ಞೇ ಯಾಜ್ಯೇನ ಶಿಬಿಸೂನುನಾ |
ದಕ್ಷಿಣಾರ್ಥೇಽಥ ಋತ್ವಿಗ್ಭ್ಯೋ ದತ್ತಃ ಪುತ್ರೋ ನಿಜಃ ಕಿಲ ॥8॥
ಹಿಂದೆ ಒಮ್ಮೆ ಶಿಬಿಪುತ್ರನಾದ ವೃಷಾದರ್ಭಿಯು ಒಂದು ಯಾಗದ ಸಂದರ್ಭದಲ್ಲಿ ಋತ್ವಿಜರಿಗೆ ದಕ್ಷಿಣಾರೂಪವಾಗಿ ತನ್ನ ಸ್ವಂತ ಪುತ್ರನನ್ನೇ ಕೊಟ್ಟಿದ್ದನಷ್ಟೆ?
ತಸ್ಮಿನ್ಕಾಲೇಽಥ ಸೋಽಲ್ಪಾಯುರ್ದಿಷ್ಟಾಂತಮಗಮತ್ ಪ್ರಭೋ |
ತೇ ತಂ ಕ್ಷುಧಾಭಿಸಂತಪ್ತಾಃ ಪರಿವಾರ್ಯೋಪತಸ್ಥಿರೇ ॥9॥
ಎಲೈ ಪ್ರಭುವೇ, ಆ ಕಾಲದಲ್ಲಿ ಅವನು ಅಲ್ಪಾಯುವಾದ ಕಾರಣದಿಂದ ಮರಣವನ್ನು ಹೊಂದಿದನು. ಆ ಸಪ್ತರ್ಷಿಗಳೆಲ್ಲರೂ ಹಸಿವಿನಿಂದ ತಪ್ತರಾಗಿ ಆ ಶವವನ್ನು ಸುತ್ತುಗಟ್ಟಿ ನಿಂತರು.
ಯಾಜ್ಯಾತ್ಮಜಮಥೋ ದೃಷ್ಟ್ವಾ ಗತಾಸುಮೃಷಿಸತ್ತಮಾಃ |
ಅಪಚಂತ ತದಾ ಸ್ಥಾಲ್ಯಾಂ ಕ್ಷುಧಾರ್ತಾಃ ಕಿಲ ಭಾರತ ॥10॥
ಎಲೈ ಭಾರತನೇ, ಹಿಂದೆ ಯಾಜ್ಯ ಎಂಬ ಋಷಿಗೆ ದಕ್ಷಿಣೆರೂಪವಾಗಿ ಕೊಟ್ಟ ಕಾರಣದಿಂದ ಯಾಜ್ಯ ಪುತ್ರನೆನಿಸಿಕೊಂಡ ಆ

ರಾಜಕುಮಾರನು ಮರಣವನ್ನು ಹೊಂದಿದುದನ್ನು ನೋಡಿ ಆ ಋಷಿಶ್ರೇಷ್ಠರು ಹಸಿವಿನಿಂದ ಬಳಲಿ ಒಂದು ಪಾತ್ರೆಯಲ್ಲಿ ಅವನ ಮಾಂಸವನ್ನು ಬೇಯಿಸಿದರು.
ನಿರಾದ್ಯೇ ಮರ್ತ್ಯಲೋಕೇಽಸ್ಮಿನ್ನಾತ್ಮಾನಂ ತೇ ಪರೀಪ್ಸವಃ |
ಕೃಚ್ಛ್ರಾಮಾಪೇದಿರೇ ವೃತ್ತಿಮನ್ನಹೇತೋಸ್ತಪಸ್ವಿನಃ ||11||
ಲೋಕದಲ್ಲಿ ಎಲ್ಲೂ ಅನ್ನವೇ ದೊರೆಯದಿದ್ದಾಗ ತಮ್ಮ ದೇಹವನ್ನು ಉಳಿಸಿಕೊಳ್ಳುವ ಸಲುವಾಗಿ ತಪಸ್ವಿಗಳಾದ ಅವರು ತಿನ್ನಬಾರದ ವಸ್ತುವನ್ನು ತಿನ್ನುವ ಇಂತಹ ಕೆಟ್ಟ ವೃತ್ತಿಯನ್ನು ಮಾಡಬೇಕಾಯಿತು.
ಅಟಮಾನೋಽಥ ತಾನ್ ಮಾರ್ಗೇ ಪಚಮಾನಾನ್ ಮಹೀಪತಿಃ |
ರಾಜಾ ಶೈಬ್ಯೋ ವೃಷಾದರ್ಭಿಃ ಕ್ಲಿಶ್ಯಮಾನಾನ್ ದದರ್ಶ ಹ ||12||
ರಾಜನಾದ ವೃಷಾದರ್ಭಿಯು ಸಂಚಾರ ಮಾಡುತ್ತಾ ಮಾರ್ಗದಲ್ಲಿ ಕ್ಲೇಶಪಡುತ್ತಾ ಮಾಂಸವನ್ನು ಬೇಯಿಸುತ್ತಿದ್ದ ಆ ಋಷಿಗಳನ್ನು ನೋಡಿದನು.
ವೃಷಾದರ್ಭಿಃ
ಪ್ರತಿಗ್ರಹಸ್ತಾರಯತಿ ಪುಷ್ಟಿರ್ವೈ ಪ್ರತಿಗೃಹ್ಣತಾಮ್ |
ಮಯಿ ಯದ್ ವಿದ್ಯತೇ ವಿತ್ತಂ ತಚ್ಛೃಣುಧ್ವಂ ತಪೋಧನಾಃ ||13||
ವೃಷಾದರ್ಭಿ ಪ್ರತಿಗ್ರಹವು ಸಂಕಟದಿಂದ ಪಾರುಮಾಡುತ್ತದೆ. ಪ್ರತಿಗ್ರಹ ಮಾಡುವವರಿಗೆ ಪುಷ್ಟಿಯುಂಟಾಗುತ್ತದೆ. ಎಲೈ ತಪೋಧನರೇ, ನನ್ನಲ್ಲಿರುವ ಧನವನ್ನು ನೀಡುತ್ತೇನೆ. ಅದನ್ನು ಕೇಳಿ.
ಪ್ರಿಯೋ ಹಿ ಮೇ ಬ್ರಾಹ್ಮಣೋ ಯಾಚಮಾನೋ
ದದ್ಯಾಮಹಂ ವೋಽಶ್ವತರೀಸಹಸ್ರಮ್ |
ಏಕೈಕಶಃ ಸವೃಷಾಃ ಸಂಪ್ರಸೂತಾಃ
ಸರ್ವೇಷಾಂ ವೈ ಶೀಘ್ರಗಾಃ ಶ್ವೇತಲೋಮಾಃ ||14||
ನನಗೆ ಯಾಚಿಸುವ ಬ್ರಾಹ್ಮಣನು ಪ್ರಿಯನಾದವನು. ನಾನು ಅವನಿಗೆ ಸಹಸ್ರ ಹೇಸರಗತ್ತೆಗಳನ್ನು ಕೊಟ್ಟೇನು. ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಒಂದೇ ಕರುವನ್ನು ಹಾಕಿರುವ ಹೋರಿಯಿಂದ ಕೂಡಿರುವ ಬಿಳಿಯ ಬಣ್ಣದ ಲೋಮವುಳ್ಳ, ಶೀಘ್ರವಾಗಿ ಸಂಚರಿಸುವ ಗೋವುಗಳನ್ನೂ ಕೊಡುತ್ತೇನೆ.
ಕುಲಂಭರಾನನಡುಹಃ ಶತಾನ್‌ಶತಾನ್
ಧುರ್ಯಾನ್ ಶುಭಾನ್ ಸರ್ವಶೋಽಹಂ ದದಾನಿ |
ಪೃಷ್ಠೌಹೀನಾಂ ಪೀವರಾಂಶ್ಚೈವ ತಾವತ್
ಅಗ್ರ್ಯಾ ಗೃಷ್ಟ್ಯೋ ಧೇನವಃ ಸುವ್ರತಾಶ್ಚ ||15||
ಕುಲವನ್ನು ಪೋಷಿಸುವ, ಭಾರವನ್ನು ಹೊರುವ, ಗಾಡಿಗೆ ಕಟ್ಟಲು ಯೋಗ್ಯವಾದ, ಶುಭವಾದ ನೂರು-ನೂರು ಎತ್ತುಗಳನ್ನು ಎಲ್ಲರಿಗೂ ಕೊಟ್ಟೇನು. ಚಿಕ್ಕವಯಸ್ಸಿನಲ್ಲೇ ಗರ್ಭವನ್ನು ಧರಿಸಿದ, ಪುಷ್ಟವಾದ, ಶ್ರೇಷ್ಠವಾದ, ಒಳ್ಳೆಯ ನಡತೆಯಿಂದ ಕೂಡಿದ, ಒಂದೇ ಬಾರಿ ಕರುವನ್ನು ಹಾಕಿರುವ ಧೇನುಗಳನ್ನೂ ಕೊಟ್ಟೇನು.
ವರಾನ್ ಗ್ರಾಮಾನ್ ವ್ರೀಹಿಯವಂ ರಸಾಂಶ್ಚ
ರತ್ನಂ ಚಾನ್ಯದ್ ದುರ್ಲಭಂ ಕಿಂ ದದಾನಿ |
ಮಾ ಸ್ಮಾಭಕ್ಷ್ಯೇ ಭಾವಮೇವಂ ಕುರುಧ್ವಂ
ಪುಷ್ಟ್ಯರ್ಥಂ ವೈ ಕಿಂ ಪ್ರಯಚ್ಛಾಮ್ಯಹಂ ವಃ ||16||
ಶ್ರೇಷ್ಠವಾದ ಗ್ರಾಮಗಳನ್ನೂ, ವ್ರೀಹಿಯವಗಳನ್ನೂ, ರಸಗಳನ್ನೂ ಮತ್ತು ರತ್ನಗಳನ್ನೂ ಕೊಡುವೆನು. ದುರ್ಲಭವಾದ ಬೇರೆ ಏನನ್ನು ಕೊಡಲಿ? ನೀವು ದೇಹವನ್ನು ಪೋಷಿಸುವುದಕ್ಕಾಗಿ ಅಭಕ್ಷ್ಯವಾದ ನರಮಾಂಸದಲ್ಲಿ ಇಚ್ಛೆಯನ್ನು ಹೊಂದಬೇಡಿ. ನಿಮಗೆ ಏನು ಕೊಡಲಿ ಎಂದು ಹೇಳಿ.
ಋಷಯಃ
ರಾಜನ್ ಪ್ರತಿಗ್ರಹೋ ರಾಜ್ಞೋ ಮಧ್ವಾಸ್ವಾದೋ ವಿಷೋಪಮಃ |
ತಜ್ಜಾನಮಾನಃ ಕಸ್ಮಾತ್ ತ್ವಂ ಕುರುಷೇ ನಃ ಪ್ರಲೋಭನಮ್ ||17||
ಋಷಿಗಳು ಎಲೈ ರಾಜನೇ, ರಾಜನಿಂದ ಸ್ವೀಕರಿಸುವುದು ಮೇಲೆ ನೋಡಲು ಜೇನುತುಪ್ಪವಿದ್ದಂತೆ ಆದರೆ ಪರಿಣಾಮದಲ್ಲಿ ಅದು ವಿಷಪ್ರಾಯವಾದುದು. ಅದನ್ನು ತಿಳಿದ ನೀನು ಏಕೆ ನಮ್ಮನ್ನು ಪ್ರಲೋಭನಗೊಳಿಸುತ್ತಿದ್ದೀಯೆ?
ಕ್ಷತ್ರಂ ಹಿ ದೈವತಮಿವ ಬ್ರಾಹ್ಮಣಂ ಸಮುಪಾಶ್ರಿತಮ್ |
ಅಮಲೋ ಹ್ಯೇಷ ತಪಸಾ ಪ್ರೀತಃ ಪ್ರೀಣಾತಿ ದೇವತಾಃ ||18||
ಕ್ಷತ್ರಿಯರು ಬ್ರಾಹ್ಮಣರನ್ನು ದೇವತೆಯಂತೆ ಆಶ್ರಯಿಸಿರುತ್ತಾರೆ. ನಮ್ಮ ಈ ಋಷಿವರ್ಗವು ತಪಸ್ಸಿನಿಂದ ಯುಕ್ತರಾಗಿ ದೇವತೆಗಳನ್ನು ತೃಪ್ತಿಪಡಿಸುತ್ತಿದೆ (ಲಕ್ಷಾಲಂಕಾರ).
ಅಹ್ನಾಪೀಹ ತಪೋ ಜಾತು ಬ್ರಾಹ್ಮಣಸ್ಯೋಪಜಾಯತೇ |
ತದ್ ದಾವ ಇವ ನಿರ್ದಹ್ಯಾತ್ ಪ್ರಾಪ್ತೋ ರಾಜಪ್ರತಿಗ್ರಹಃ ||19||
ಬ್ರಾಹ್ಮಣರ ತಪಸ್ಸು ತಕ್ಷಣದಲ್ಲಿಯೇ ಫಲವನ್ನು ಕೊಡುತ್ತದೆ. ಆದರೆ ರಾಜನಿಂದ ಸ್ವೀಕಾರ ಮಾಡುವುದು (ರಾಜಪ್ರತಿಗ್ರಹವು) ಅದು ದಾವಾಗ್ನಿಯಂತೆ ದಹಿಸುತ್ತದೆ.
ಕುಶಲಂ ಸಹ ದಾನೇನ ರಾಜನ್ನಸ್ತು ಸದಾ ತವ |

ಅರ್ಥಿಭ್ಯೋ ದೀಯತಾಂ ಸರ್ವಮಿತ್ಯುಕತ್ವ ತೇ ತತೋ ಯಯುಃ ॥
ಎಲೈ ರಾಜನೇ, ನಿನಗೂ ಮತ್ತು ನಿನ್ನ ದಾನಗಳಿಗೂ ಕ್ಷೇಮವಾಗಲಿ. ಅದನ್ನು ಬಯಸುವವರಿಗೆ ಅದೆಲ್ಲವನ್ನೂ ಕೊಡು ಎಂದು ಹೇಳಿ ಆ ಋಷಿಗಳು ಅಲ್ಲಿಂದ ಹೊರಟರು.
ಅಪಕ್ವಮೇವ ತನ್ಮಾಂಸಮಭೂತ್ ತೇಷಾಂ ಚ ಧೀಮತಾಮ್ |
ಅಥ ಹಿತ್ವಾ ಯಯುಃ ಸರ್ವೇ ವನಮಾಹಾರಕಾಂಕ್ಷಿಣಃ ॥21॥
ಮೇಧಾವಿಗಳಾದ ಅವರು ಆ ಮಾಂಸವನ್ನು ಇನ್ನೂ ಪೂರ್ಣವಾಗಿ ಬೆಂದಿರಲಿಲ್ಲ. ಅವರೆಲ್ಲರೂ ಅದನ್ನು ಬಿಟ್ಟು ಕಾಡಿನಲ್ಲಿ ಸಿಗುವ ಆಹಾರವನ್ನು ಹುಡುಕುತ್ತಾ ಹೊರಟರು.
ತತಃ ಪ್ರಚೋದಿತಾ ರಾಜ್ಞಾ ವನಂ ಗತ್ವಾಽಸ್ಯ ಮಂತ್ರಿಣಃ |
ಪ್ರಚೀಯೋದುಂಬರಾಣಿ ಸ್ಮ ದಾನಂ ದಾತುಂ ಪ್ರಚಕ್ರಮುಃ ॥22॥
ಅನಂತರ ರಾಜನಿಂದ ಪ್ರೇರಿತರಾದ ಮಂತ್ರಿಗಳು ಕಾಡಿಗೆ ಹೋಗಿ ಅತ್ತಿ ಹಣ್ಣುಗಳನ್ನು ತೆಗೆದುಕೊಂಡು ಅದನ್ನು ದಾನವಾಗಿ ಕೊಡಲು ಉಪಕ್ರಮಿಸಿದರು.
ಉದುಂಬರಾಣ್ಯಥಾನ್ಯಾನಿ ಹೇಮಗರ್ಭಾಣ್ಯುಪಾಹರನ್ |
ಭೃತ್ಯಾಸ್ತೇಷಾಂ ತತಸ್ತಾನಿ ಪ್ರಗ್ರಾಹಿತುಮುಪಾದ್ರವನ್ ॥23॥
ಅತ್ತಿಹಣ್ಣುಗಳೊಳಗೆ ಚಿನ್ನವನ್ನಿಟ್ಟು ಭೃತ್ಯರು ತರುತ್ತಿರಲು ಮಂತ್ರಿಗಳು ಅದನ್ನು ಋಷಿಗಳಿಗೆ ಕೊಡಲು ಧಾವಿಸಿದರು.
ಗುರೂಣೀತಿ ವಿದಿತ್ವಾಥ ನ ಗ್ರಾಹ್ಯಾಣ್ಯತ್ರಿರಬ್ರವೀತ್ |
ನ ಸ್ಮಹೇ ಮೂಢವಿಜ್ಞಾನಾ ನ ಸ್ಮಹೇ ಮಂದಬುದ್ಧಯಃ |
ಹೈಮಾನೀಮಾನಿ ಜಾನೀಮಃ ಪ್ರತಿಬುದ್ಧಾಃ ಸ್ಮ ಜಾಗೃಮಃ ॥24॥
ಅವು ಭಾರವಾಗಿದೆ ಎಂದು ತಿಳಿದ ಅತ್ರಿಗಳು ಇದನ್ನು ಸ್ವೀಕರಿಸಬಾರದು. ನಾವು ಜ್ಞಾನಶೂನ್ಯರಾಗುವುದು ಬೇಡ. ಮಂದಬುದ್ಧಿಗಳಾಗುವುದು ಬೇಡ. ಈ ಹಣ್ಣುಗಳು ಸುವರ್ಣದಿಂದ ಕೂಡಿವೆ ಎಂದು ನಾವು ತಿಳಿದಿದ್ದೇವೆ. ನಾವು ಎಚ್ಚರವಾಗಿದ್ದೇವೆ ಎಂದು ಹೇಳಿದರು.
ಇಹ ಹ್ಯೇತದುಪಾದತ್ತಂ ಪ್ರೇತ್ಯ ಸ್ಯಾತ್ ಕಟುಕೋದಯಮ್ |
ಅಪ್ರತಿಗ್ರಾಹ್ಯಮೇವೈತತ್ ಪ್ರೇತ್ಯ ಚೇಹ ಸುಖೇಪ್ಸುನಾ ॥25॥
ಇಲ್ಲಿ ಇದನ್ನು ಸ್ವೀಕರಿಸಿದರೆ ಮರಣಾನಂತರದಲ್ಲಿ ದುಃಖಫಲವುಂಟಾಗುತ್ತದೆ. ಮರಣಾನಂತರದಲ್ಲಿ ಸುಖವನ್ನು ಬಯಸುವವನು ಇದನ್ನು ಸ್ವೀಕರಿಸಲೇಬಾರದು (ಎಂದು ಹೇಳಿದರು).
ವಸಿಷ್ಠಃ
ಶತೇನ ನಿಷ್ಕಂ ಗಣಿತಂ ಸಹಸ್ರೇಣ ಚ ಸಮ್ಮಿತಮ್ |
ಯಥಾ ಬಹು ಪ್ರತೀಚ್ಛನ್ ಹಿ ಪಾಪಿಷ್ಠಾಂ ಲಭತೇ ಗತಿಮ್ ॥26॥
ಸಾವಿರ ನಿಷ್ಕಗಳನ್ನು ನೂರು ಎಂದು ಎಣಿಸಿ ಕೊಡಲಾಗುತ್ತಿದೆ. ಹೆಚ್ಚು ಹೆಚ್ಚು ಪ್ರತಿಗ್ರಹ ಮಾಡಿದಂತೆಲ್ಲಾ ಹೆಚ್ಚು ಹೆಚ್ಚು ಪಾಪದ ಗತಿಯನು ಹೊಂದಬೇಕಾಗುತ್ತದೆ.
ಕಶ್ಯಪಃ
ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ |
ಸರ್ವಂ ತನ್ನಾಲಮೇಕಸ್ಯ ತಸ್ಮಾದ್ ವಿದ್ವಾನ್ ಶಮಂ ವ್ರಜೇತ್ ॥27॥
ಕಶ್ಯಪ ಭೂಮಿಯಲ್ಲಿ ಎಷ್ಟು ಹಿರಣ್ಯವಿದೆಯೋ, ಎಷ್ಟು ಪಶುಗಳು ಮತ್ತು ಸ್ತ್ರೀಯರಿದ್ದಾರೆಯೋ ಅವರೆಲ್ಲರೂ ಒಬ್ಬನ ಭೋಗಕ್ಕೆ ಸಾಕಾಗುವುದಿಲ್ಲ (ಒಬ್ಬನಿಗೆ ತೃಪ್ತಿಯನ್ನುಂಟು ಮಾಡುವುದಿಲ್ಲ). ಆದ್ದರಿಂದ ವಿದ್ವಾಂಸನಾದವನು ವೈರಾಗ್ಯವನ್ನು ಹೊಂದಬೇಕು.
ಭರದ್ವಾಜಃ
ಉತ್ಪನ್ನಸ್ಯ ರುರೋಃ ಶೃಂಗಂ ವರ್ಧಮಾನಸ್ಯ ವರ್ಧತೇ |
ಪ್ರಾರ್ಥನಾ ಪುರುಷಸ್ಯೇವ ತಸ್ಯ ಮಾತ್ರಾ ನ ವಿದ್ಯತೇ ॥28॥
ಭರದ್ವಾಜರು ರುರುವಿನ ಮರಿಯು ಜನಿಸಿದ ಮೇಲೆ ಅದು ಬೆಳೆದಂತೆ ಅದರ ಕೊಂಬು ಬೆಳೆಯುತ್ತದೆ. ಪುರುಷನ ಆಸೆಯೂ ಹಾಗೆಯೇ. ಅದಕ್ಕೆ ಒಂದು ಮಿತಿಯಿಲ್ಲ.
ಗೌತಮಃ
ನ ತಲ್ಲೋಕೇ ದ್ರವ್ಯಮಸ್ತಿ ಯಲ್ಲೋಕಂ ಪ್ರತಿಪೂರಯೇತ್ |
ಸಮುದ್ರಕಲ್ಪಃ ಪುರುಷೋ ನ ಕದಾಚನ ಪೂರ್ಯತೇ ॥29॥
ಗೌತಮರು ಲೋಕವನ್ನು ಪೂರ್ಣಗೊಳಿಸುವಂತಹ ದ್ರವ್ಯವು ಲೋಕದಲ್ಲಿ ಯಾವುದೂ ಇಲ್ಲ. ಪುರುಷನು ಸಮುದ್ರದಂತೆ ಎಂದೂ ತುಂಬುವುದಿಲ್ಲ.
ವಿಶ್ವಾಮಿತ್ರಃ
ಕಾಮಂ ಕಾಮಯಮಾನಸ್ಯ ಯದಾ ಕಾಮಃ ಸಮೃಧ್ಯತೇ |
ಅಥೈನಮಪರಃ ಕಾಮಸ್ತೃಷ್ಣಾ ವಿಧ್ಯತಿ ಬಾಣವತ್ ॥30॥
ವಿಶ್ವಾಮಿತ್ರ ವಿಷಯಗಳನ್ನು ಅಪೇಕ್ಷಿಸುವ ಮನುಷ್ಯನಿಗೆ ಯಾವಾಗ ಆ ಅಪೇಕ್ಷಿತ ವಿಷಯಗಳ ಸಮೃದ್ಧಿಯುಂಟಾಗುತ್ತದೆಯೋ ಆಗ ಅವನಿಗೆ ಇನ್ನೊಂದು ಆಸೆಯು ಬಾಣದಂತೆ ಅವನ ಮನಸ್ಸಿನಲ್ಲಿ ನಾಟಿ ಗಾಯಗೊಳಿಸುತ್ತದೆ.
ಜಮದಗ್ನಿಃ

ಪ್ರತಿಗ್ರಹೇ ಸಂಯಮೋ ವೈ ತಪೋ ಧಾರಯತೇ ಧ್ರುವಮ್ |
ತದ್ ಧನಂ ಬ್ರಾಹ್ಮಣಸ್ಯೇಹ ಲುಭ್ಯಮಾನಸ್ಯ ವಿಸ್ರವೇತ್ ||31||
ಜಮದಗ್ನಿ ಪ್ರತಿಗ್ರಹವನ್ನು ಮಾಡದಿರುವುದು ತಪಸ್ಸನ್ನು ನಿಶ್ಚಿತವಾಗಿ ಉಳಿಸುತ್ತದೆ. ತಪಸ್ಸೇ ಈ ಲೋಕದಲ್ಲಿ ಬ್ರಾಹ್ಮಣನ ಧನ. ಆಸೆಯನ್ನು ಮಾಡುವವನಿಗೆ ಆ ಧನವು ಸೋರಿ ಹೋಗುತ್ತದೆ.
ಅತ್ರಿಃ
ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ |
ಹವಿಷಾ ಕೃಷ್ಣವರ್ತ್ಮೇವ ಭೂಯಸೇವಾಭಿವರ್ಧತೇ ||32||
ಅತ್ರಿ ಆಸೆಯು ಆಶಿಸಿದ ಪದಾರ್ಥಗಳ ಭೋಗದಿಂದ ಎಂದೂ ಉಪಶಮನವನ್ನು ಹೊಂದುವುದಿಲ್ಲ. ಹವಿಸ್ಸನ್ನು ಹಾಕಿದ ಅಗ್ನಿಯಂತೆ ಪುನಃ ಅಭಿವೃದ್ಧಿಯನ್ನೇ ಹೊಂದುತ್ತದೆ.
ಅರುಂಧತೀ
ಧರ್ಮಾರ್ಥಂ ಸಂಚಯೋ ಯೋ ವೈ ದ್ರವ್ಯಾಣಾಂ ಪಕ್ಷಸಮ್ಮತಃ |
ತಪಃಸಂಚಯ ಏವೇಹ ವಿಶಿಷ್ಟೋ ದ್ರವ್ಯಸಂಚಯಾತ್ ||33||
ಅರುಂಧತೀ ಧರ್ಮಾರ್ಥವಾಗಿ ದ್ರವ್ಯಸಂಚಯವು ಒಂದು ಪಕ್ಷದವರಿಗೆ ಮಾತ್ರ ಸಮ್ಮತವಾದುದು. ಈ ಲೋಕದಲ್ಲಿ ದ್ರವ್ಯಸಂಚಯಕ್ಕಿಂತಲೂ ತಪಸ್ಸಿನ ಸಂಚಯವೇ ಶ್ರೇಷ್ಠವಾದುದು.
ಗಂಡಾ
ಉಗ್ರಾದಿತೋ ಭಯಾದ್ ಯಸ್ಮಾದ್ ಬಿಭ್ಯತೀಮೇ ಮಮೇಶ್ವರಾಃ |
ಬಲೀಯಾಂಸೋ ದುರ್ಬಲವದ್ ಬಿಭೇಮ್ಯಹಮತಃ ಪರಮ್ ||34||
ಗಂಡಾ ನನ್ನ ಪ್ರಭುಗಳಾದ ಈ ಋಷಿಗಳು ತಪೋಬಲವನ್ನು ಹೊಂದಿದ್ದರೂ ತೀವ್ರವಾದ ಈ ಪ್ರತಿಗ್ರಹದ ಭಯದಿಂದ ದುರ್ಬಲರಂತೆ ಭಯಪಡುತ್ತಿದ್ದಾರೆ. ಆದ್ದರಿಂದ ನಾನೂ ಪ್ರತಿಗ್ರಹಕ್ಕೆ ಭಯಪಡುತ್ತೇನೆ.
ಪಶುಸಖಃ
ಯದ್ವೈ ಧರ್ಮೇ ಪರಂ ನಾಸ್ತಿ ಬ್ರಾಹ್ಮಣಾಸ್ತದ್ ಧನಂ ವಿದುಃ |
ವಿನಯಾರ್ಥಂ ಸುವಿದ್ವಾಂಸಮುಪಾಸೇಯಂ ಯಥಾತಥಮ್ ||35||
ಪಶುಸಖ ಧರ್ಮದ ವಿಷಯದಲ್ಲಿ ಯಾವುದಕ್ಕಿಂತ ಇನ್ನೊಂದು ಶ್ರೇಷ್ಠವಾದುದಿಲ್ಲವೋ ಅಂತಹದನ್ನೇ ಬ್ರಾಹ್ಮಣರು ಧನವೆಂದು ತಿಳಿಯುತ್ತಾರೆ. ನಾನೂ ಸಹ ಅಂತಹ ಯಥಾರ್ಥವಾದ ಜ್ಞಾನವನ್ನು ಸಂಪಾದಿಸಿ ಈ ವಿದ್ವಾಂಸರ ಸೇವೆಯನ್ನು ಮಾಡಲು ಬಯಸುತ್ತೇನೆ.
ಋಷಯಃ
ಕುಶಲಂ ಸಹ ದಾನಾಯ ತಸ್ಮೈ ಯಸ್ಯ ಪ್ರಜಾ ಇಮಾಃ |
ಫಲಾನ್ಯುಪಧಿಯುಕ್ತಾನಿ ಯ ಏವಂ ನಃ ಪ್ರಯಚ್ಛಸಿ ||36||
ಋಷಿಗಳು ಯಾವ ರಾಜನ ಭೃತ್ಯರು ಹೀಗೆ ಸುವರ್ಣದಿಂದ ಕೂಡಿದ ಫಲಗಳನ್ನು ನಮಗೆ ಕೊಡಲು ಬಯಸುತ್ತಿದ್ದಾರೆಯೋ ಅಂತಹ ರಾಜನಿಗೂ, ಅವನ ದಾನಕ್ಕೂ ಸಹ ಕ್ಷೇಮವಿರಲಿ.
ಭೀಷ್ಮಃ
ಇತ್ಯುಕ್ತ್ವಾ ಹೇಮಗರ್ಭಾಣಿ ಹಿತ್ವಾ ತಾನಿ ಫಲಾನಿ ತೇ |
ಋಷಯೋ ಜಗ್ಮುರನ್ಯತ್ರ ಸರ್ವ ಏವ ಧೃತವ್ರತಾಃ ||37||
ಭೀಷ್ಮ ಹೀಗೆ ಹೇಳಿ ಹೇಮಗರ್ಭವುಳ್ಳ ಫಲಗಳನ್ನು ತ್ಯಜಿಸಿ ವ್ರತವನ್ನು ಧರಿಸಿದ ಎಲ್ಲ ಋಷಿಗಳೂ ಬೇರೆ ಸ್ಥಳಕ್ಕೆ ಹೋದರು.
ಮಂತ್ರಿಣಃ
ಉಪಧಿಂ ಶಂಕಮಾನಾಸ್ತೇ ಹಿತ್ವೇಮಾನಿ ಫಲಾನಿ ವೈ |
ತತೋಽನ್ಯೇನೈವ ಗಚ್ಛಂತಿ ವಿದಿತಂ ತೇಽಸ್ತು ಪಾರ್ಥಿವ ||38||
ಮಂತ್ರಿಗಳು ಈ ಫಲಗಳಲ್ಲಿ ಏನೋ ಮೋಸವಿದೆ ಎಂದು ಶಂಕಿಸಿದ ಈ ಋಷಿಗಳು ಬೇರೆ ಮಾರ್ಗದಲ್ಲೇ ಹೋಗುತ್ತಿದ್ದಾರೆ. ರಾಜನೇ, ಈ ವಿಷಯವು ನಿನಗೆ ತಿಳಿದಿರಲಿ.
ಇತ್ಯುಕ್ತಃ ಸ ತು ಭೃತ್ಯೈಸ್ತೈರ್ವೃಷಾದರ್ಭಿಶ್ಚುಕೋಪ ಹ |
ತೇಷಾಂ ಸಂಪ್ರತಿಕರ್ತುಂ ಚ ಸರ್ವೇಷಾಮಗಮದ್ ಗೃಹಮ್ ||39||
ಭೃತ್ಯರಾದ ಆ ಮಂತ್ರಿಗಳ ಮಾತನ್ನು ಕೇಳಿ ವೃಷಾದರ್ಭಿಯು ಕೋಪಗೊಂಡನು. ಅವನು ಅವರೆಲ್ಲರಿಗೂ ಚೆನ್ನಾಗಿ ಪ್ರತೀಕಾರವನ್ನು ಮಾಡಲು ತನ್ನ ಅರಮನೆಗೆ ಹೋದನು.
ಸ ಗತ್ವಾಽಹವನೀಯೇಽಗ್ನೌ ತೀವ್ರಂ ನಿಯಮಮಾಸ್ಥಿತಃ |
ಜುಹಾವ ಸಂಸ್ಕೃತಾಂ ಮಂತ್ರೈರೇಕೈಕಾಮಾಹುತಿಂ ನೃಪಃ ||40||
ಅವನು ಅರಮನೆಗೆ ಹೋಗಿ ತೀವ್ರವಾದ ನಿಯಮವನ್ನು ಪಾಲಿಸಿ ಆಹವನಾಗ್ನಿಯಲ್ಲಿ ಮಂತ್ರಪೂತವಾದ ಒಂದೊಂದು ಆಹುತಿಯನ್ನು ಕೊಡಲು ಪ್ರಾರಂಭಿಸಿದನು.
ತಸ್ಮಾದಗ್ನೇಃ ಸಮುತ್ತಸ್ಥೌ ಕೃತ್ಯಾ ಲೋಕಭಯಂಕರೀ |
ತಸ್ಯಾ ನಾಮ ವೃಷಾದರ್ಭಿರ್ಯಾತುಧಾನೀತ್ಯಥಾಕರೋತ್ ||41||
ಆ ಅಗ್ನಿಯಿಂದ ಲೋಕಭಯಂಕರನಾದ ಒಂದು ಭೂತವು ಎದ್ದುಬಂದಿತು. ಅದಕ್ಕೆ ವೃಷಾದರ್ಭಿಯು ಯಾತುಧಾನೀ ಎಂದು

ನಾಮಕರಣವನ್ನು ಮಾಡಿದನು.
ಸಾ ಕೃತ್ಯಾ ಕಾಲರಾತ್ರೀವ ಕೃತಾಂಜಲಿರುಪಸ್ಥಿತಾ |
ವೃಷಾದರ್ಭಿಂ ನರಪತಿಂ ಕಿಂ ಕರೋಮೀತಿ ಚಾಬ್ರವೀತ್ ॥42॥
ಕಾಲರಾತ್ರಿಯಂತಿದ್ದ ಆ ಭೂತವು ಕೈಗಳನ್ನು ಮುಗಿದು ವೃಷಾದರ್ಭಿಯ ಸಮೀಪದಲ್ಲಿ ನಿಂತು ರಾಜನಾದ ಅವನನ್ನು ಕುರಿತು ಏನು ಮಾಡಲಿ ಎಂದು ಕೇಳಿತು.
ವೃಷಾದರ್ಭಿಃ
ಋಷೀಣಾಂ ಗಚ್ಛ ಸಪ್ತಾನಾಮರುಂಧತ್ಯಾಸ್ತಥೈವ ಚ |
ದಾಸೀಭರ್ತುಶ್ಚ ದಾಸ್ಯಾಶ್ಚ ಮನಸಾ ನಾಮ ಧಾರಯ ॥43॥
ವೃಷಾದರ್ಭಿ ಸಪ್ತರ್ಷಿಗಳ ಮತ್ತು ಅರುಂಧತಿಯ ಮತ್ತು ಸೇವಕಿಯ ಮತ್ತು ಸೇವಕಿಯ ಪತಿಯ ಸಮೀಪಕ್ಕೆ ಹೋಗು. ಅವರ ಹೆಸರುಗಳನ್ನು ಮನಸ್ಸಿನಲ್ಲಿಯೇ ಚೆನ್ನಾಗಿ ಇಟ್ಟುಕೋ.
ಜ್ಞಾತ್ವಾ ನಾಮಾನಿ ಚೈತೇಷಾಂ ಸರ್ವಾನೇತಾನ್ ವಿನಾಶಯ |
ವಿನಷ್ಟೇಷು ಯಥಾ ಸ್ವೈರಂ ಗಚ್ಛ ಯತ್ರೇಪ್ಸಿತಂ ತವ ॥44॥
ಅವರ ಹೆಸರುಗಳನ್ನು ತಿಳಿದು ಅವರೆಲ್ಲರನ್ನೂ ವಿನಾಶಗೊಳಿಸು. ಅವರು ವಿನಾಶವನ್ನು ಹೊಂದಿದ ಮೇಲೆ ನಿನ್ನ ಮನಸ್ಸಿಗೆ ಬಂದಂತೆ ನೀನು ಹೋಗು.
ಸಾ ತಥೇತಿ ಪ್ರತಿಶ್ರುತ್ಯ ಯಾತುಧಾನೀ ಸ್ವರೂಪಿಣೀ |
ಜಗಾಮ ತದ್ವನಂ ಯತ್ರ ವಿಚೇರುಸ್ತೇ ಮಹರ್ಷಯಃ ॥45॥
ಆ ಭೂತವು ಹಾಗೆಯೇ ಆಗಲಿ ಎಂದು ಹೇಳಿ ತನ್ನ ನಿಜರೂಪವನ್ನೇ ತೆಗೆದುಕೊಂಡು ಆ ಮಹರ್ಷಿಗಳು ಸಂಚರಿಸುತ್ತಿದ್ದ ವನಕ್ಕೆ ಹೋಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪ್ರತಿಗ್ರಹದೂಷಣಂ ನಾಮ
ಷಟ್ತ್ರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೇಳನೆಯ ಅಧ್ಯಾಯ
ಪ್ರಚ್ಛನ್ನವೇಷದಿಂದ ಬಂದ ಇಂದ್ರನಿಂದ ಯಾತುಧಾನಿಯ ವಿನಾಶ.
ಭೀಷ್ಮಃ
ಅಥಾತ್ರಿಪ್ರಮುಖಾ ರಾಜನ್ ವನೇ ತಸ್ಮಿನ್ ಮಹರ್ಷಯಃ |
ವ್ಯಚರನ್ ಭಕ್ಷಯಂತೋ ವೈ ಮೂಲಾನಿ ಚ ಫಲಾನಿ ಚ ॥1॥
ಭೀಷ್ಮ ಎಲೈ ರಾಜನೇ, ಅನಂತರ ಅತ್ರಿ ಮೊದಲಾದ ಮಹರ್ಷಿಗಳು ಆ ವನದಲ್ಲಿ ಗೆಡ್ಡೆ-ಗೆಣಸುಗಳನ್ನು ಭಕ್ಷಿಸುತ್ತಾ ಸಂಚರಿಸಿದರು.
ಅಥಾಪಶ್ಯನ್ ಸುಪೀನಾಂಸಪಾಣಿಪಾದಮುಖೋದರಮ್ |
ಪರಿವ್ರಜಂತಂ ಸ್ಥೂಲಾಂಗಂ ಪರಿವ್ರಾಜಂ ಶುನಃಸಖಮ್ ॥2॥
ಆಗ ಅವರು ಅತ್ಯಂತ ಪುಷ್ಟವಾದ ಭುಜ, ಪಾಣಿ, ಮುಖ, ಉದರಗಳನ್ನು ಹೊಂದಿದ್ದ, ಸ್ಥೂಲಶರೀರವನ್ನು ಧರಿಸಿ ಸಂಚರಿಸುತ್ತಿದ್ದ ನಾಯಿಯ ಸಖನಾದ ಒಬ್ಬ ಪರಿವ್ರಾಜಕನನ್ನು ನೋಡಿದರು. (ಋಷಿಗಳ ರಕ್ಷಣೆಗಾಗಿ ಇಂದ್ರನು ತ್ರಿದಂಡೀ ಸಂನ್ಯಾಸಿ ವೇಷದಲ್ಲಿ ಅಲ್ಲಿಗೆ ಬಂದನೆಂದು ತಿಳಿಯಬೇಕು) - ಲಕ್ಷಾಲಂಕಾರ.
ಅರುಂಧತೀ ತು ತಂ ದೃಷ್ಟ್ವಾ ಸರ್ವಾಂಗೋಪಚಿತಂ ಶುಭಾ |
ಭವಿತಾರೋ ಭವಂತೋ ವೈ ನೈವಮಿತ್ಯಬ್ರವೀದೃಷೀನ್ ॥3॥
ಶುಭಳಾದ ಅರುಂಧತಿಯು ಸರ್ವಾಂಗಗಳಲ್ಲಿಯೂ ಪುಷ್ಟನಾದ ಅವನನ್ನು ನೋಡಿ ನೀವು ಹೀಗೆ ಆಗುವುದಿಲ್ಲ ಎಂದು ಆ ಋಷಿಗಳಿಗೆ ಹೇಳಿದಳು.
ವಸಿಷ್ಠಃ
ನೈತಸ್ಯೇಹ ಯಥಾಽಸ್ಮಾಕಮಗ್ನಿಹೋತ್ರಮನಿರ್ಹುತಮ್ |
ಸಾಯಂ ಪ್ರಾತಶ್ಚ ಹೋತವ್ಯಂ ತೇನ ಪೀವಾನ್ ಶುನಃಸಖಃ ॥4॥
ವಸಿಷ್ಠ ನಮಗಿರುವಂತೆ ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ಇವನಿಗೆ ಅಗ್ನಿಹೋತ್ರವನ್ನು ಮಾಡಲಿಲ್ಲ, ಮಾಡಬೇಕು ಎಂಬ ಚಿಂತೆಯಿಲ್ಲ. ಆದ್ದರಿಂದ ಶುನಃಸಖನಾದ ಇವನು ಪುಷ್ಟನಾಗಿದ್ದಾನೆ.
ಅತ್ರಿಃ
ನೈತಸ್ಯೇಹ ಯಥಾಽಸ್ಮಾಕಂ ಕ್ಷುಧಾ ವೀರ್ಯಂ ಸಮಾಹತಮ್ |
ಕೃಚ್ಛ್ರಾಧೀತಂ ಪ್ರನಷ್ಟಂ ಚ ತೇನ ಪೀವಾನ್ ಶುನಃಸಖಃ ॥5॥
ಅತ್ರಿ ನಮ್ಮಂತೆ ಇವನಿಗೆ ಹಸಿವಿನಿಂದ ಸಾಮರ್ಥ್ಯವು ನಾಶಹೊಂದಿ ಕಷ್ಟಪಟ್ಟು ಮಾಡಿದ ಅಧ್ಯಯನವು ನಾಶವನ್ನು ಹೊಂದಿಲ್ಲ. ಆದ್ದರಿಂದ ಶುನಃಸಖನು ಪುಷ್ಟನಾಗಿದ್ದಾನೆ.
ವಿಶ್ವಾಮಿತ್ರಃ

ನೈತಸ್ಯೇಹ ಯಥಾಽಸ್ಮಾಕಂ ಶಶ್ವಚ್ಛಾಸ್ತ್ರಂ ಜರದ್ಗವಃ |
ಅಲಸಃ ಕ್ಷುತ್ಪರೋ ಮೂರ್ಖಸ್ತೇನ ಪೀವಾನ್ ಶುನಃಸಖಃ ॥6॥
ವಿಶ್ವಾಮಿತ್ರ ನಮ್ಮಂತೆ ಇವನಿಗೆ ಶಾಸ್ತ್ರವು ಅಪ್ರಯೋಜಕವಾಗಿಲ್ಲ. ಜೊತೆಗೆ ಇವನು ಆಲಸ್ಯವುಳ್ಳವನು, ಹಸಿವಿನ ನಿವಾರಣೆಯಲ್ಲಿಯೇ ಪ್ರಯತ್ನಶೀಲನಾದವನು ಮತ್ತು ಮೂರ್ಖ. ಆದ್ದರಿಂದ ಶುನಃಸಖನು ಪುಷ್ಟನಾಗಿದ್ದಾನೆ.
ಜಮದಗ್ನಿಃ
ನೈತಸ್ಯೇಹ ಯಥಾಽಸ್ಮಾಕಂ ಭಕ್ತಮಿಂಧನಮೇವ ಚ |
ಸಂಚಿಂತ್ಯಂ ವಾರ್ಷಿಕಂ ಕಿಂಚಿತ್ ತೇನ ಪೀವಾನ್ ಶುನಃಸಖಃ ॥7॥
ಜಮದಗ್ನಿ ನಮ್ಮಂತೆ ಇವನು ಒಂದು ವರ್ಷಕ್ಕಾಗುವಷ್ಟು ಆಹಾರ ಮತ್ತು ಕಟ್ಟಿಗೆಯನ್ನು ಸಂಗ್ರಹ ಮಾಡಿ ಇಡಬೇಕಾಗಿಲ್ಲ. ಆದ್ದರಿಂದ ಶುನಃಸಖನು ಪುಷ್ಟನಾಗಿದ್ದಾನೆ.
ಕಶ್ಯಪಃ
ನೈತಸ್ಯೇಹ ಯಥಾಽಸ್ಮಾಕಂ ಚತ್ವಾರಶ್ಚ ಸಹೋದರಾಃ |
ದೇಹಿದೇಹೀತಿ ಭಿಕ್ಷಂತಿ ತೇನ ಪೀವಾನ್ ಶುನಃಸಖಃ ॥8॥
ಕಶ್ಯಪರು ನಮ್ಮಂತೆ ಇವನಿಗೆ ನಾಲ್ಕು ಜನ ಸಹೋದರರು ದೇಹಿ-ದೇಹಿ ಎಂದು ಕಾಡುವುದಿಲ್ಲ. ಆದ್ದರಿಂದ ಶುನಃಸಖನು ಪುಷ್ಟನಾಗಿದ್ದಾನೆ.
ಭರದ್ವಾಜಃ
ನೈತಸ್ಯೇಹ ಯಥಾಽಸ್ಮಾಕಂ ಬ್ರಹ್ಮಬಂಧೋರಚೇತಸಃ |
ಶೋಕೋ ಭಾರ್ಯಾಪವಾದೇನ ತೇನ ಪೀವಾನ್ ಶುನಃಸಖಃ ॥9॥
ನಮ್ಮಂತೆ ಬ್ರಹ್ಮಬಂಧುವೂ, ಚೇತನ ಹೀನನೂ ಆದ ಇವನಿಗೆ ಪತ್ನಿಯ ಅಪವಾದದಿಂದ ಶೋಕವಿಲ್ಲ. ಆದ್ದರಿಂದ ಶುನಃಸಖನು ಪುಷ್ಟನಾಗಿದ್ದಾನೆ.
ಗೌತಮಃ
ನೈತಸ್ಯೇದ್ಯ ಯಥಾಽಸ್ಮಾಕಂ ತ್ರಿಕಾಲೋಹ್ಯಂ ಹಿ ರಾಂಕವಮ್ |
ಏಕೈಕಂ ಹಿ ತ್ರಿಚರ್ಮೀಯಂ ತೇನ ಪೀವಾನ್ ಶುನಃಸಖಃ ॥10॥
ಗೌತಮರು ನಮ್ಮಂತೆ ಇವನು ಮೂರು-ಮೂರು ಕೃಷ್ಣಚರ್ಮವನ್ನು ಒಟ್ಟಿಗೆ ಮಾಡಿದ. ಮೂರುಚರ್ಮಗಳನ್ನು ಮೂರು ಕಾಲದಲ್ಲಿಯೂ ಹೊರಬೇಕಾಗಿಲ್ಲ. ಆದ್ದರಿಂದ ಶುನಃಸಖನು ಪುಷ್ಟನಾಗಿದ್ದಾನೆ.
ಭೀಷ್ಮಃ
ಅಥ ದೃಷ್ಟ್ವಾ ಪರಿವ್ರಾಟ್ ಸ ತಾನ್ ಮಹರ್ಷೀನ್ ಶುನಃಸಖಃ |
ಅಭಿಗಮ್ಯ ಯಥಾನ್ಯಾಯಂ ಪಾಣಿಸ್ಪರ್ಶಮಥಾಽಚರತ್ ॥11॥
ಭೀಷ್ಮ ಆಗ ಶುನಃಸಖನಾದ ಆ ಪರಿವ್ರಾಜಕನು ಆ ಮಹರ್ಷಿಗಳನ್ನು ನೋಡಿ ಅವನ ಬಳಿಗೆ ಹೋಗಿ ನ್ಯಾಯಾನುಗುಣವಾಗಿ ಅವರನ್ನು ತನ್ನ ಹಸ್ತದಿಂದ ಸ್ಪರ್ಶಿಸಿದನು.
ಪರಿಚರ್ಯಾಂ ವನೇ ತಾಂ ತು ಕ್ಷುತ್ಪ್ರತೀಘಾತಕಾರಿಕಾಮ್ |
ಅನ್ಯೋನ್ಯೇನ ನಿವೇದ್ಯಾಥ ಪ್ರಾತಿಷ್ಠಂತ ಸಹೈವ ತೇ ॥12॥
ಅವರು ಕಾಡಿನಲ್ಲಿ ಹಸಿವನ್ನು ಇಂಗಿಸಿಕೊಳ್ಳಲು ತಿರುಗಾಡುತ್ತಿರುವುದನ್ನು ಪರಸ್ಪರವಾಗಿ ಮಾತನಾಡಿಕೊಂಡು ಅಲ್ಲಿಂದ ಶುನಃಸಖನ ಜೊತೆಯಲ್ಲಿ ಎಲ್ಲರೂ ಹೊರಟರು.
ಏಕನಿಶ್ಚಯಕಾರ್ಯಾಶ್ಚ ವ್ಯಚರಂತ ವನಾನಿ ತೇ |
ಆದದಾನಾಃ ಸಮುದ್ಧೃತ್ಯ ಮೂಲಾನಿ ಚ ಫಲಾನಿ ಚ ॥13॥
ಒಂದೇ ನಿರ್ಧಾರ ಮತ್ತು ಒಂದೇ ಉದ್ದೇಶವನ್ನು ಹೊಂದಿದ ಅವರು ಕಾಡುಗಳಲ್ಲಿ ಮೂಲಫಲಗಳನ್ನು ತೆಗೆದುಕೊಳ್ಳುತ್ತಾ ಸಂಚರಿಸಿದರು.
ಕದಾಚಿದ್ ವಿಚರಂತಸ್ತೇ ವೃಕ್ಷೈರವಿರಲೈರ್ವೃತಾಮ್ |
ಶುಚಿವಾರಿಪ್ರಸನ್ನೋದಾಂ ದದೃಶುಃ ಪದ್ಮಿನೀಂ ಶುಭಾಮ್ ॥14॥
ಬಾಲಾದಿತ್ಯವಪುಃಪ್ರಖ್ಯೈಃ ಪುಷ್ಕರೈರುಪಶೋಭಿತಾಮ್ |
ವೈಡೂರ್ಯವರ್ಣಸದೃಶೈಃ ಪದ್ಮಪತ್ರೈರಥಾವೃತಾಮ್ ॥15॥
ನಾನಾವಿಧೈಶ್ಚ ವಿಹಗೈರ್ಜಲಪ್ರಕರಸೇವಿಭಿಃ |
ಏಕದ್ವಾರಾಮನಾದೇಯಾಂ ಸೂಪತೀರ್ಥಾಮಕರ್ದಮಾಮ್ ॥16॥
ಹೀಗೆ ತಿರುಗಾಡುತ್ತಾ ಅವರು ನಿಬಿಡವಾದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟ ಶುಚಿಯಾದ ಮತ್ತು ಪ್ರಸನ್ನವಾದ ಜಲವನ್ನು ಹೊಂದಿದ ಶುಭವಾದ ಪದ್ಮಸರೋವರ ಒಂದನ್ನು ನೋಡಿದರು. ಅದು ಉದಯಿಸುವ ಸೂರ್ಯನ ಶರೀರದ ಕಾಂತಿಯನ್ನು ಹೊಂದಿದ್ದ ಕಮಲಗಳಿಂದ ಶೋಭಿತವಾಗಿ ವೈಡೂರ್ಯವರ್ಣಕ್ಕೆ ಸಮಾನವಾದ ಪದ್ಮಪತ್ರಗಳಿಂದ ಆವೃತವಾಗಿದ್ದಿತು. ನಾನಾವಿಧವಾದ ಜಲಪಕ್ಷಿಗಳಿಂದ ಸೇವಿತವಾಗಿದ್ದಿತು. ಅದಕ್ಕೆ ಒಂದೇ ಪ್ರವೇಶದ್ವಾರವು ಇದ್ದಿತು. ಅಲ್ಲಿಂದ ಯಾರೂ ಏನನ್ನೂ ತೆಗೆದುಕೊಳ್ಳುವಂತಿರಲಿಲ್ಲ. ಕೆಸರಿರಲಿಲ್ಲ. ಸುತ್ತಲೂ ಸಣ್ಣ-ಸಣ್ಣ ಒಳ್ಳೆಯ ತೀರ್ಥಗಳಿದ್ದವು.
ವೃಷಾದರ್ಭಿಪ್ರಯುಕ್ತಾ ತು ಕೃತ್ಯಾ ವಿಕೃತದರ್ಶನಾ |
ಯಾತುಧಾನೀತಿ ವಿಖ್ಯಾತಾ ಪದ್ಮಿನೀಂ ತಾಮರಕ್ಷತ ॥17॥

ವೃಷಾದರ್ಭಿಯಿಂದ ನಿರ್ಮಿಸಲ್ಪಟ್ಟ ವಿಕೃತರೂಪವನ್ನು ಹೊಂದಿದ ಯಾತುಧಾನಿ ಎಂಬ ಹೆಸರಿನ ಭೂತವು ಆ ಪದ್ಮಸರೋವರವನ್ನು ರಕ್ಷಿಸುತ್ತಿದ್ದಿತು.
ಶುನಃಸಖಸಹಾಯಾಸ್ತು ಬಿಸಾರ್ಥಂ ತೇ ಮಹರ್ಷಯಃ |
ಪದ್ಮಿನೀಮಭಿಜಗ್ಮುಸ್ತೇ ಸರ್ವೇ ಕೃತ್ಯಾಭಿರಕ್ಷಿತಾಮ್ ॥18॥
ಶುನಃಸಖನ ಸಹಾಯವುಳ್ಳ ಆ ಮಹರ್ಷಿಗಳು ಎಲ್ಲರೂ ಕಮಲದ ದಂಟುಗಳನ್ನು ತೆಗೆದುಕೊಳ್ಳಲು ಆ ಭೂತದಿಂದ ರಕ್ಷಿತವಾದ ಪದ್ಮಸರೋವರಕ್ಕೆ ಬಂದರು.
ತತಸ್ತೇ ಯಾತುಧಾನೀಂ ತಾಂ ದೃಷ್ಟ್ವಾ ವಿಕೃತದರ್ಶನಾಮ್ |
ಸ್ಥಿತಾಂ ಕಮಲಿನೀತೀರೇ ಕೃತ್ಯಾಮೂಚುರ್ಮಹರ್ಷಯಃ ॥19॥
ಆಗ ಆ ಮಹರ್ಷಿಗಳು ಸರೋವರದ ಜಲದಲ್ಲಿ ವಿಕೃತರೂಪವನ್ನು ಹೊಂದಿ ನಿಂತಿದ್ದ ಯಾತುದಾನನನ್ನು ನೋಡಿ ಮಾತನಾಡಿದರು.
ಏಕಾ ತಿಷ್ಠಸಿ ಕಾ ನು ತ್ವಂ ಕಸ್ಯಾರ್ಥೇ ಕಿಂ ಪ್ರಯೋಜನಮ್ |
ಪದ್ಮಿನೀತೀರಮಾಶ್ರಿತ್ಯ ಬ್ರೂಹಿ ತ್ವಂ ಕಿಂ ಚಿಕೀರ್ಷಸಿ ॥20॥
ನೀನೊಬ್ಬಳೇ ನಿಂತಿದ್ದೀಯೆ. ನೀನು ಯಾರು? ನಿನ್ನ ಉದ್ದೇಶವೇನು? ಪದ್ಮಸರೋವರದ ತೀರದಲ್ಲಿ ನಿಂತು ಏನನ್ನು ಮಾಡಲು ಬಯಸುತ್ತಿದ್ದೀಯೆ ಎಂದು ಹೇಳು (ಎಂದು ಕೇಳಿದರು).
ಯಾತುಧಾನೀ
ಯಾಽಸ್ಮಿ ಸಾಽಸ್ಮ್ಯನುಯೋಗೋ ಮೇ ನ ಕರ್ತವ್ಯಃ ಕಥಂಚನ |
ಆರಕ್ಷಿಣೀಂ ಮಾಂ ಪದ್ಮಿನ್ಯಾ ವಿತ್ತ ಸರ್ವೇ ತಪೋಧನಾಃ ॥21॥
ಯಾತುಧಾನಿ ನಾನು ಯಾವಳೋ ಅವಳೇ ಆಗಿದ್ದೇನೆ. ನನ್ನನ್ನು ಯಾವ ರೀತಿಯಿಂದಲೂ ಪ್ರಶ್ನೆ ಮಾಡಬಾರದು. ಎಲೈ ತಪೋಧನರೇ, ನಾನು ಈ ಪದ್ಮಸರೋವರದ ರಕ್ಷಕಿ ಎಂದು ನೀವೆಲ್ಲರೂ ತಿಳಿಯಿರಿ.
ಋಷಯಃ
ಸರ್ವ ಏವ ಕ್ಷುಧಾರ್ತಾಃ ಸ್ಮ ನ ಚಾನ್ಯತ್ ಕಿಂಚಿದಸ್ತಿ ನಃ |
ಭವತ್ಯಾಃ ಸಮ್ಮತೇ ಸರ್ವೇ ಗೃಹ್ಣೀಮಹಿ ಬಿಸಾನ್ಯುತ ॥22॥
ಋಷಿಗಳು ನಾವೆಲ್ಲರೂ ಹಸಿವಿನಿಂದ ಪೀಡಿತರಾಗಿದ್ದೇವೆ. ನಮ್ಮ ಬಳಿ ಬೇರೆ ಏನೂ ಇಲ್ಲ. ನಿನ್ನ ಅನುಮತಿಯಿಂದ ನಾವೆಲ್ಲರೂ ಕಮಲದ ದಂಟುಗಳನ್ನು ತೆಗೆದುಕೊಳ್ಳುತ್ತೇವೆ.
ಯಾತುಧಾನೀ
ಸಮಯೇನ ಬಿಸಾನೀತೋ ಗೃಹ್ಣೀಧ್ವಂ ಕಾಮಕಾರತಃ |
ಏಕೈಕೋ ನಾಮ ಮೇ ಪ್ರೋಕ್ತ್ವಾ ತತೋ ಗೃಹ್ಣೀತ ಮಾಚಿರಮ್ ॥23॥
ಯಾತುಧಾನಿ ಒಂದು ಷರತ್ತಿನ ಮೇಲೆ ಇಲ್ಲಿಂದ ನಿಮ್ಮ ಇಚ್ಛೆಯಂತೆ ಕಮಲದ ದಂಟುಗಳನ್ನು ತೆಗೆದುಕೊಳ್ಳಬಹುದು. ಒಬ್ಬೊಬ್ಬರೂ ನನಗೆ ನಿಮ್ಮ ನಾಮಗಳನ್ನು ಹೇಳಿ ಅನಂತರ ಶೀಘ್ರವಾಗಿ ತೆಗೆದುಕೊಳ್ಳಿ.
ಭೀಷ್ಮಃ
ವಿಜ್ಞಾಯ ಯಾತುಧಾನೀಂ ತಾಂ ಕೃತ್ಯಾಮೃಷಿವಧೈಷಿಣೀಮ್ |
ಅತ್ರಿಃ ಕ್ಷುಧಾಪರೀತಾತ್ಮಾ ತತೋ ವಚನಮಬ್ರವೀತ್ ॥24॥
ಭೀಷ್ಮ ಅವಳು ಋಷಿಗಳನ್ನು ಕೊಲ್ಲಲು ಬಯಸುವ ಯಾತುಧಾನಿ ಎಂದು ತಿಳಿದ ಹಸಿವಿನಿಂದ ಪೀಡಿತರಾದ ಅತ್ರಿಗಳು ಅವಳನ್ನು ಕುರಿತು ಹೇಳಿದರು.
ಅರಾತ್ರಿರತ್ರೇಃ ಸಾ ರಾತ್ರಿರ್ಯಾಂ ನಾಧೀತೇ ತ್ರಿರದ್ಯ ವೈ |
ಅರಾತ್ರಿರತ್ರಿರಿತ್ಯೇವ ನಾಮ ಮೇ ವಿದ್ಧಿ ಶೋಭನೇ ॥25॥
ಯಾವ ರಾತ್ರಿಯಲ್ಲಿ (ದಿನದಲ್ಲಿ) ಮೂರು ಬಾರಿ ಅಧ್ಯಯನವನ್ನು ಮಾಡುವುದಿಲ್ಲವೋ ಆ ರಾತ್ರಿಯನ್ನು ಅರಾತ್ರಿ ಎಂದು ತಿಳಿ. ಎಲೌ ಶೋಭನೆಯೇ, ನನ್ನ ಹೆಸರು. ಅರಾತ್ರಿರತ್ರಿ ಎಂಬುದಾಗಿ ತಿಳಿ.
ಯಾತುಧಾನೀ
ಯಥೋದಾಹೃತಮೇತತ್ ತೇ ಮಯಿ ನಾಮ ಮಹಾಮುನೇ |
ದುರ್ಧಾರ್ಯಮೇತನ್ಮನಸಾ ಗಚ್ಛಾವತರ ಪದ್ಮಿನೀಮ್ ॥26॥
ಯಾತುಧಾನಿ ಮಹಾಮುನಿಯೇ, ನೀನು ನನಗೆ ಹೇಳಿದಂತೆ ನಿನ್ನ ಹೆಸರನ್ನು ಮನಸ್ಸಿನಲ್ಲಿ ಧರಿಸುವುದು (ಅರ್ಥಮಾಡಿಕೊಳ್ಳುವುದು) ದುಸ್ಸಾಧ್ಯವಾದುದು. ನೀನು ಹೋಗಿ ಪದ್ಮಸರೋವರದಲ್ಲಿ ಇಳಿ.
ವಸಿಷ್ಠಃ
ವಸಿಷ್ಠೋಽಸ್ಮಿ ವರಿಷ್ಠೋಽಸ್ಮಿ ವಸೇ ವಾಸಂ ಗೃಹೇಷ್ವಪಿ |
ವರಿಷ್ಠತ್ವಾಚ್ಚ ವಾಸಾಚ್ಚ ವಸಿಷ್ಠ ಇತಿ ವಿದ್ಧಿ ಮಾಮ್ ॥27॥
ವಸಿಷ್ಠರು ನಾನು ವಸಿಷ್ಠನಾಗಿದ್ದೇನೆ (ವಾಸಮಾಡುವವರಲ್ಲಿ ಶ್ರೇಷ್ಠನಾಗಿದ್ದೇನೆ). ಶ್ರೇಷ್ಠನಾಗಿದ್ದೇನೆ. ಗೃಹಗಳಲ್ಲಿಯೂ ವಾಸಮಾಡುತ್ತೇನೆ. ಶ್ರೇಷ್ಠನಾದುದರಿಂದ ಮತ್ತು ವಾಸಮಾಡುವುದರಿಂದ ನನ್ನನ್ನು ವಸಿಷ್ಠ ಎಂದು ತಿಳಿ.
ಯಾತುಧಾನೀ
ನಾಮನೈರುಕ್ತಮೇತತ್ ತೇ ದುಃಖವ್ಯಾಭಾಷಿತಾಕ್ಷರಮ್ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥28॥

ಯಾತುಧಾನಿ ನೀನು ಹೇಳಿದ ನಿನ್ನ ನಾಮದ ಅಕ್ಷರಗಳ ಅರ್ಥವನ್ನು ತಿಳಿಯಲು ಬಹಳ ಕಷ್ಟವಾದುದು. ಅದನ್ನು ಅರ್ಥಮಾಡಿಕೊಳ್ಳಲಾರೆ. ಹೋಗಿ ಪದ್ಮಸರೋವರದಲ್ಲಿ ಇಳಿ.
ಕಶ್ಯಪಃ
ಕುಲಾತ್ ಕುಲಂ ಚ ಗಚ್ಛಾಮಿ ಕುಪಯಃ ಕಶ್ಯಪೋ ದ್ವಿಜಃ |
ಕಾಶ್ಯಃ ಕಾಶನಿಕಾಶತ್ವಾದೇತನ್ಮೇ ನಾಮ ಧಾರಯ ॥29॥
ಕಶ್ಯಪರು ನಾನು ಒಂದು ಕುಲದಿಂದ ಒಂದು ಕುಲಕ್ಕೆ ಹೋಗುತ್ತೇನೆ. ಕಾಶ ದರ್ಭೆಯ ಕಾಂತಿಯನ್ನು ಹೊಂದಿರುವುದರಿಂದ ನಾನು ಕಾಶ್ಯ. ಆದ್ದರಿಂದ ನನ್ನ ನಾಮವನ್ನು ಕಶ್ಯಪರೆಂದು ತಿಳಿ.
ಕಾಶ್ಯ ಎಂದರೆ ಪ್ರಕಾಶಯೋಗ್ಯವಾದ ಕುಲ. ಕಶ್ಯಪರು ದೇವಕುಲದಿಂದ ದೈತ್ಯ-ನಾಗ-ಸರ್ಪಾದಿ ಕುಲಕ್ಕೆ ಹೋಗುತ್ತಾರೆ.
ಕಾಶ್ಯರೂಪವಾದ ಕುಲವನ್ನು ಪಾಲನೆ ಮಾಡುವುದರಿಂದ ಕಾಶ್ಯಪ ಎಂದು ಹೆಸರು- ಲಕ್ಷ್ಮಾಲಂಕಾರ.
ಯಾತುಧಾನೀ
ಯಥೋದಾಹೃತಮೇತತ್ ತೇ ಮಯಿ ನಾಮ ಮಹಾಮುನೇ |
ದುರ್ಧಾರ್ಯಮೇತನ್ಮನಸಾ ಗಚ್ಛಾವತರ ಪದ್ಮಿನೀಮ್ ॥30॥
ಯಾತುಧಾನಿ ಎಲೈ ಮಹಾಮುನಿಯೇ, ನೀನು ಹೇಳಿದಂತೆ ನಿನ್ನ ನಾಮವನ್ನು ನನ್ನ ಮನಸ್ಸಿನಲ್ಲಿ ಧರಿಸಲಾರೆ. ಹೋಗಿ ಪದ್ಮಸರೋವರದಲ್ಲಿ ಇಳಿ.
ಭರದ್ವಾಜಃ
ಭರೇ ಸುತಾನ್ ಭರೇ ಶಿಷ್ಯಾನ್ ಭರೇ ದೇವಾನ್ ಭರೇ ದ್ವಿಜಾನ್ |
ಭರೇ ಭಾರ್ಯಾಮನವ್ಯಾಜೋ ಭರದ್ವಾಜೋಽಸ್ಮಿ ಶೋಭನೇ ॥31॥
ಭರದ್ವಾಜರು ಪುತ್ರರನ್ನು ಭರಿಸುತ್ತೇನೆ, ಶಿಷ್ಯರನ್ನು ಭರಿಸುತ್ತೇನೆ, ದೇವತೆಗಳನ್ನು ಭರಿಸುತ್ತೇನೆ, ದ್ವಿಜರನ್ನು ಭರಿಸುತ್ತೇನೆ, ಒಂದು ನಿಮಿತ್ತದಿಂದಾಗಿ ಭಾರ್ಯೆಯನ್ನು ಭರಿಸುತ್ತೇನೆ. ಎಲೌ ಶೋಭನೆಯೇ, ನಾನು ಭರದ್ವಾಜನಾಗಿದ್ದೇನೆ.
ಯಾತುಧಾನೀ
ನಾಮನೈರುಕ್ತಮೇತತ್ ತೇ ದುಃಖವ್ಯಾಭಾಷಿತಾಕ್ಷರಮ್ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥32॥
ಯಾತುಧಾನಿ ನೀನು ಹೇಳಿದ ನಿನ್ನ ನಾಮನಿರ್ವಚನವನ್ನು ಕಷ್ಟಪಟ್ಟರೂ ನನ್ನ ಮನಸ್ಸಿನಲ್ಲಿ ಧರಿಸಲಾರೆ. ಹೋಗಿ ಪದ್ಮಿನಿಯಲ್ಲಿ ಇಳಿ.
ಗೌತಮಃ
ಗೋದಮೋ ದಮಗೋಽಧೂಮೋಽದಮೋ ದುರ್ದರ್ಶನಶ್ಚ ತೇ |
ವಿದ್ಧಿ ಮಾಂ ಗೌತಮಂ ಕೃತ್ಯೇ ಯಾತುಧಾನಿ ನಿಬೋಧ ಮೇ ॥33॥
ಗೌತಮರು ನಾನು ಗೋವುಗಳನ್ನು ನಿಯಂತ್ರಿಸುತ್ತೇನೆ. ನಾನು ಧೂಮವಿಲ್ಲದ ಅಗ್ನಿಯಂತಿದ್ದೇನೆ. ನಿನಗೆ ಅದಮ್ಯನಾಗಿಯೂ ನೋಡಲು ಅಸಾಧ್ಯವಾಗಿಯೂ ಇದ್ದೇನೆ. ಆದ್ದರಿಂದ ಎಲೌ ಯಾತುಧಾನಿಯೇ, ನನ್ನನ್ನು ಗೌತಮನೆಂದು ತಿಳಿ.
ಯಾತುಧಾನೀ
ಯಥೋದಾಹೃತಮೇತತ್ ತೇ ಮಯಿ ನಾಮ ಮಹಾಮುನೇ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥34॥
ಯಾತುಧಾನಿ ಎಲೈ ಮಹಾಮುನಿಯೇ, ನೀನು ಹೇಳಿದಂತೆ ನಿನ್ನ ನಾಮವನ್ನು ನಾನು ಧರಿಸಲಾರೆ. ಹೋಗಿ ಪದ್ಮಿನಿಯೊಳಗೆ ಇಳಿ.
ವಿಶ್ವಾಮಿತ್ರಃ
ವಿಶ್ವೇದೇವಾಶ್ಚ ಮೇ ಮಿತ್ರಂ ಮಿತ್ರಮಸ್ಮಿ ಗವಾಂ ತಥಾ |
ವಿಶ್ವಾಮಿತ್ರಮಿತಿ ಖ್ಯಾತಂ ಯಾತುಧಾನಿ ನಿಬೋಧ ಮೇ ॥35॥
ವಿಶ್ವಾಮಿತ್ರ ವಿಶ್ವೇದೇವತೆಗಳು ನನ್ನ ಮಿತ್ರರು. ನಾನು ಗೋವುಗಳಿಗೆ ಮಿತ್ರನಾಗಿದ್ದೇನೆ. ಎಲೌ ಯಾತುಧಾನಿಯೇ, ನಾನು ವಿಶ್ವಾಮಿತ್ರನೆಂದು ಪ್ರಖ್ಯಾತನಾದವನೆಂದು ತಿಳಿ.
ಯಾತುಧಾನೀ
ನಾಮನೈರುಕ್ತಮೇತತ್ ತೇ ದುಃಖವ್ಯಾಭಾಷಿತಾಕ್ಷರಮ್ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥36॥
ಯಾತುಧಾನಿ ನೀನು ಹೇಳಿದ ನಿನ್ನ ನಾಮನಿರ್ವಚನವು ಬಹಳ ಕ್ಲಿಷ್ಟವಾದ ಅಕ್ಷರಗಳಿಂದ ಕೂಡಿದೆ. ಇದನ್ನು ನಾನು ಧರಿಸಲಾರೆ. ಹೋಗಿ ಪದ್ಮಿನಿಯಲ್ಲಿ ಇಳಿ.
ಜಮದಗ್ನಿಃ
ಜಾಜಮದ್ಯಜನಾಯಾಗ್ನೇರ್ಜಿಹಾನೀಹ ಜಿಜಾಯಿಷೇ |
ಜಮದಗ್ನಿರಿತಿ ಖ್ಯಾತಮತೋ ಮಾಂ ವಿದ್ಧಿ ಶೋಭನೇ ॥37॥
ಜಮದಗ್ನಿ ನಾನು ಅಗ್ನಿಯ ಪೂಜೆಗಾಗಿ ಗೃಹದಲ್ಲಿ ಜನಿಸಿದ ದಧಿಯನ್ನೂ, ಸುತ್ತಲೂ ಜನಿಸಿದ ಅರಣಿರೂಪವಾದ ದಾರುವನ್ನೂ ಮಥನ ಮಾಡುತ್ತೇನೆ. ಅಗ್ನಿಯನ್ನು ಉದ್ದೇಶಿಸಿ ಎರಡನ್ನೂ ಮಥನ ಮಾಡುವುದರಿಂದ ನನಗೆ ಜಮದಗ್ನಿ ಎಂದು ಹೆಸರು. ಹಾಗೆಯೇ ಅಗ್ನಿಯನ್ನು ಪೂಜಿಸುವುದಕ್ಕೋಸ್ಕರವಾಗಿ ನಾನು ದಿನೇ ದಿನೇ ಉಂಟಾದ ಪಾಪವನ್ನು ಪ್ರಾಣಾಯಾಮಾದಿಗಳಿಂದ ದಹಿಸುತ್ತೇನೆ. ಅದರಿಂದ ಅಗ್ನಿಯನ್ನು ಉದ್ದೇಶಿಸಿ ಜಾತವಾದ ಪಾಪವನ್ನು ಮಥನ ಮಾಡುವುದರಿಂದ ಜಮದಗ್ನಿ ಎಂದು ಹೆಸರು. ಎಲೌ

ಶೋಭನೆಯೇ, ಯಾತುಧಾನಿಯೇ, ನನ್ನನ್ನು ಜಮದಗ್ನಿ ಎಂದು ತಿಳಿ.
ಯಾತುಧಾನೀ
ಯಥೋದಾಹೃತಮೇತತ್ ತೇ ಮಯಿ ನಾಮ ಮಹಾಮುನೇ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥38॥
ಯಾತುಧಾನಿ ಎಲೈ ಮಹಾಮುನಿಯೇ, ನೀನು ಹೇಳಿದಂತೆ ನಿನ್ನ ನಾಮವನ್ನು ನನ್ನ ಮನಸ್ಸಿನಲ್ಲಿ ಧರಿಸಲಾರೆ. ಹೋಗಿ ಪದ್ಮಿನಿಯಲ್ಲಿ ಇಳಿ.
ಅರುಂಧತೀ
ಧರಾಂ ಧರಿತ್ರೀಂ ವಸುಧಾಂ ಭರ್ತುಸ್ತಿಷ್ಠಾಮ್ಯನಂತರಮ್ |
ಮನೋಽನುರುಂಧತೀ ಭರ್ತುರಿತಿ ಮಾಂ ವಿದ್ಧ್ಯರುಂಧತೀಮ್ ॥39॥
ಅರುಂಧತೀ ನಾನು ಭೂಮಿಯಲ್ಲಿ ಪತಿಯ ಮನಸ್ಸನ್ನು ಅನುಸರಿಸುತ್ತಾ ಪತಿಯ ಜೊತೆಯಲ್ಲಿಯೇ ಇರುತ್ತೇನೆ. ನನ್ನನ್ನು ಅರುಂಧತಿ ಎಂದು ತಿಳಿ.
ಧತಿ ಎಂದರೆ ಧರಿತ್ರೀ -ಭೂಮಿ. ಅರು ಎಂದರೆ ಅರೋಚಮಾನ ಇಷ್ಟಪ್ರದಗಳು. ಪತಿ ಇಲ್ಲದೆ ಧರಿತ್ರಿಯನ್ನು ಅರು ಇಷ್ಟವಡುವುದಿಲ್ಲವಾದ ಕಾರಣ ನನಗೆ ಅರುಂಧತೀ ಎಂದು ಹೆಸರು - ಲಕ್ಷಾಲಂಕಾರ.
ಯಾತುಧಾನೀ
ನಾಮನೈರುಕ್ತಮೇತತ್ ತೇ ದುಃಖವ್ಯಾಭಾಷಿತಾಕ್ಷರಮ್ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥40॥
ಯಾತುಧಾನಿ ನಿನ್ನ ಹೆಸರಿನ ಅಕ್ಷರಗಳನ್ನು ಬಹಳ ಕಷ್ಟಪಡುವಂತೆ ಹೇಳಿದ್ದೀಯೆ. ಇದನ್ನು ನಾನು ಮನಸ್ಸಿನಲ್ಲಿ ಧರಿಸಲಾರೆ. ಹೋಗಿ ಪದ್ಮಿನಿಯಲ್ಲಿ ಇಳಿ.
ಗಂಡಃ
ಗಂಡಂ ಗಂಡಂ ಗತವತೀ ಗಂಡಗಂಡೇತಿ ಸಂಜ್ಞಿತಾ |
ಗಂಡಗಂಡೇವ ಗಂಡೇತಿ ವಿದ್ಧಿ ಮಾಽನಲಸಂಭವೇ ॥41॥
ಗಂಡ ಸ್ಥೂಲವಾದ ಕಪೋಲವುಳ್ಳ ನಾರಿಗೆ ಗಂಡಗಂಡ ಎಂದು ಹೆಸರು. ಎಲೌ ಅಗ್ನಿಜಾತೆಯೇ ಅಂತಹ ಗಂಡಗಂಡಳಂತಿರುವ ನನ್ನನ್ನು ಗಂಡಾ ಎಂದು ತಿಳಿ.
ಯಾತುಧಾನೀ
ನಾಮನೈರುಕ್ತಮೇತತ್ ತೇ ದುಃಖವ್ಯಾಭಾಷಿತಾಕ್ಷರಮ್ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥42॥
ಯಾತುಧಾನಿ ನಿನ್ನ ನಾಮದ ನಿರ್ವಚನವು ಕಷ್ಟಕರವಾದ ಅಕ್ಷರಗಳಿಂದ ಕೂಡಿದೆ. ಇದನ್ನು ನಾನು ಮನಸ್ಸಿನಲ್ಲಿ ಧರಿಸಲಾರೆ. ಹೋಗಿ ಪದ್ಮಿನಿಯಲ್ಲಿ ಇಳಿ.
ಪಶುಸಖಃ
ಸಖಾ ಸಖೇ ಯಃ ಸಖ್ಯೇಯಃ ಪಶೂನಾಂ ಚ ಸಖಾ ಸದಾ |
ಗೌಣಂ ಪಶುಸಖೇತ್ಯೇವಂ ವಿದ್ಧಿ ಮಾಮಗ್ನಿಸಂಭವೇ ॥43॥
ಪಶುಸಖ ನಾನು ಪಶುಗಳನ್ನು ನೋಡಿ ಸಂತೋಷಪಡುತ್ತೇನೆ. ಅವುಗಳನ್ನು ಸಂತೋಷಪಡಿಸುತ್ತೇನೆ. ಪಶುಗಳಿಗೆ ಯಾವಾಗಲೂ ಸ್ನೇಹಿತನಾಗಿರುತ್ತೇನೆ. ನನ್ನ ಈ ಗುಣದಿಂದ ಎಲೌ ಅಗ್ನಿಸಂಭವೆಯೇ, ನನ್ನನ್ನು ಪಶುಸಖನೆಂದು ತಿಳಿ.
ಯಾತುಧಾನೀ
ನಾಮನೈರುಕ್ತಮೇತತ್ ತೇ ದುಃಖವ್ಯಾಭಾಷಿತಾಕ್ಷರಮ್ |
ನೈತದ್ ಧಾರಯಿತುಂ ಶಕ್ಯಂ ಗಚ್ಛಾವತರ ಪದ್ಮಿನೀಮ್ ॥44॥
ಯಾತುಧಾನಿ ನಿನ್ನ ಈ ನಾಮನಿರ್ವಚನವು ತಿಳಿಯಲು ಕಷ್ಟಸಾಧ್ಯವಾದ ಅಕ್ಷರಗಳಿಂದ ಕೂಡಿದೆ. ಇದನ್ನು ನಾನು ಧರಿಸಲಾರೆ. ಹೋಗಿ ಪದ್ಮಿನಿಯಲ್ಲಿ ಇಳಿ.
ಶುನಃಸಖಃ
ಏಭಿರುಕ್ತಂ ಯಥಾ ನಾಮ ನಾಹಂ ವಕ್ತುಮಿಹೋತ್ಸಹೇ |
ಶುನಃಸಖಸಖಾಯಂ ಮಾಂ ಯಾತುಧಾನ್ಯುಪಧಾರಯ ॥45॥
ಶುನಃಸಖ ಇವರು ಹೆಸರುಗಳನ್ನು ಹೇಳಿದಂತೆ ನಾನು ಹೇಳಲಾರೆ. ಎಲೌ ಯಾತುಧಾನಿಯೇ, ನನ್ನನ್ನು ಶುನಃಸಖಸಖಾ ಎಂದು ತಿಳಿ.
ಯಾತುಧಾನೀ
ನಾಮ ತೇಽವ್ಯಕ್ತಮುಕ್ತಂ ವೈ ವಾಕ್ಯಂ ಸಂದಿಗ್ಧಯಾ ಗಿರಾ |
ತಸ್ಮಾತ್ ಸಕೃದಿದಾನೀಂ ತ್ವಂ ಬ್ರೂಹಿ ಯನ್ನಾಮ ತೇ ದ್ವಿಜ ॥46॥
ಯಾತುಧಾನಿ ನೀನು ನಿನ್ನ ನಾಮವನ್ನು ಅಸ್ಪಷ್ಟವಾಗಿ ಹೇಳಿದ್ದೀಯೆ. ಸಂದಿಗ್ಧವಾದ ಮಾತುಗಳಿಂದ ಹೇಳಿದ್ದೀಯೆ. ಎಲೈ ಬ್ರಾಹ್ಮಣನೇ, ಆದ್ದರಿಂದ ನೀನು ಒಮ್ಮೆ ನಿನ್ನ ನಾಮವನ್ನು ಸರಿಯಾಗಿ ಹೇಳು.
ಶುನಃಸಖಃ
ಸಕೃದುಕ್ತಂ ಮಯಾ ನಾಮ ನ ಗೃಹೀತಂ ಯದಾ ತ್ವಯಾ |
ತಸ್ಮಾತ್ ತ್ರಿದಂಡಾಭಿಹತಾ ಗಚ್ಛ ಭಸ್ಮೇತಿ ಮಾಚಿರಮ್ ॥47॥

ಶುನಃಸಖ ಒಂದು ಬಾರಿ ನಾನು ನಮ್ಮ ನಾಮವನ್ನು ಹೇಳಿದೆ. ನೀನು ಅದನ್ನು ಗ್ರಹಿಸಲಿಲ್ಲ. ಆದ್ದರಿಂದ ನನ್ನ ತ್ರಿದಂಡದಿಂದ ಅಭಿಹತಳಾಗಿ ನೀನು ಶೀಘ್ರವಾಗಿ ಭಸ್ಮವಾಗಿ ಹೋಗು.
ಭೀಷ್ಮ:
ಸಾ ಬ್ರಹ್ಮದಂಡಕಲ್ಪೇನ ತೇನ ಮೂರ್ಧ್ನಿ ಹತಾ ತದಾ |
ಕೃತ್ಯಾ ಪಪಾತ ಮೇದಿನ್ಯಾಂ ಭಸ್ಮಸಾಚ್ಚ ಜಗಾಮ ಹ ||48||
ಭೀಷ್ಮ ಆಗ ಅವಳು ಬ್ರಹ್ಮದಂಡದಂತಿದ್ದ ಆ ಸಂನ್ಯಾಸಿಯ ತ್ರಿದಂಡದಿಂದ ತಲೆಯ ಮೇಲೆ ಹೊಡೆಯಲ್ಪಟ್ಟಳು. ಆ ಯಾತುಧಾನಿಯು ಭೂಮಿಯಲ್ಲಿ ಬಿದ್ದು ಭಸ್ಮವಾಗಿ ಹೋದಳು.
ಶುನಃಸಖಶ್ಚ ಹತ್ವಾ ತಾಂ ಯಾತುಧಾನೀಂ ಮಹಾಬಲಾಮ್ |
ಭುವಿ ತ್ರಿದಂಡಂ ವಿಷ್ಟಭ್ಯ ಶಾದ್ವಲೇ ಸಮುಪಾವಿಶತ್ ||49||
ಶುನಃಸಖನಾದರೂ ಮಹಾಬಲಳಾದ ಆ ಯಾತುಧಾನಿಯನ್ನು ಸಂಹರಿಸಿ ತನ್ನ ದಂಡವನ್ನು ಭೂಮಿಯಲ್ಲಿ ನೆಟ್ಟು ಮೃದುವಾದ ಭೂಮಿಯಲ್ಲಿ ಕುಳಿತುಕೊಂಡನು.
ತತಸ್ತೇ ಮುನಯಃ ಸರ್ವೇ ಪುಷ್ಕರಾಣಿ ಬಿಸಾನಿ ಚ |
ಯಥಾಕಾಮಮುಪಾದಾಯ ಸಮುತ್ತಸ್ಥುರ್ಮುದಾನ್ವಿತಾಃ ||50||
ಅನಂತರ ಆ ಋಷಿಗಳೆಲ್ಲರೂ ಕಮಲಪುಷ್ಪಗಳನ್ನು ಮತ್ತು ದಂಟುಗಳನ್ನು ತಮ್ಮ ಮನಸ್ಸಿಗೆ ಬಂದಂತೆ ತೆಗೆದುಕೊಂಡು ಸಂತೋಷದಿಂದ ಮೇಲೆದ್ದರು.
ಶ್ರಮೇಣ ಮಹತಾ ಯುಕ್ತಾಸ್ತೇ ಬಿಸಾನಿ ಕಲಾಪಶಃ |
ತೀರೇ ನಿಕ್ಷಿಪ್ಯ ಪದ್ಮಿನ್ಯಾಸ್ತರ್ಪಣಂ ಚಕ್ರುರಂಭಸಾ ||51||
ಬಹಳ ಶ್ರಮದಿಂದ ಕೂಡಿದ ಅವರು ಕಮಲ ದಂಟುಗಳನ್ನು ಪದ್ಮಿನಿಯ ತೀರದಲ್ಲಿ ಬೇರೆ ಬೇರೆಯಾಗಿಟ್ಟು ನೀರಿನಿಂದ ತರ್ಪಣವನ್ನು ನೀಡಿದರು.
ಅಥೋತ್ಥಾಯ ಜಲಾತ್ ತಸ್ಮಾತ್ ಸರ್ವೇ ತೇ ವೈ ಸಮಾಗಮನ್ |
ನಾಪಶ್ಯಂಶ್ಚಾಪಿ ತೇ ತಾನಿ ಬಿಸಾನಿ ಪುರುಷರ್ಷಭ ||52||
ಅನಂತರ ನೀರಿನಿಂದ ಎದ್ದುಬಂದು ನೋಡಿದಾಗ ಎಲೈ ಪುರುಷಶ್ರೇಷ್ಠನೇ, ಅವರು ತಾವು ಇರಿಸಿದ್ದ ಕಮಲದ ದಂಟುಗಳನ್ನು ಕಾಣಲಿಲ್ಲ.
ಋಷಯಃ
ಕೇನ ಕ್ಷುಧಾಭಿಭೂತಾನಾಮಸ್ಮಾಕಂ ಪಾಪಕರ್ಮಣಾ |
ನೃಶಂಸೇನಾಪನೀತಾನಿ ಬಿಸಾನ್ಯಾಹಾರಕಾಂಕ್ಷಿಣಾಮ್ ||53||
ಋಷಿಗಳು ಹಸಿವಿನಿಂದ ಪೀಡಿತರಾದ ಬಿಸರೂಪವಾದ ಆಹಾರವನ್ನು ಬಯಸಿದ ನಮ್ಮ ಬಿಸಗಳನ್ನು ಯಾವ ಕ್ರೂರಿಯು, ಪಾಪಕರ್ಮಿಯೂ ಆದವನು ಅಪಹರಿಸಿದ್ದಾನೆ?
ತೇ ಶಂಕಮಾನಾಸ್ತ್ವನ್ಯೋನ್ಯಂ ಪಪ್ರಚ್ಛುರ್ದ್ವಿಜಸತ್ತಮಾಃ |
ತ ಊಚುಃ ಶಪಥಂ ಸರ್ವೇ ಕುರ್ಮ ಇತ್ಯರಿಕರ್ಶನ ||54||
ಎಲೈ ಶತ್ರುಕರ್ಶನನೇ, ಆ ದ್ವಿಜಶ್ರೇಷ್ಠರು ಪರಸ್ಪರವಾಗಿ ಶಂಕಿಸಿ ಎಲ್ಲರೂ ಹಾಗಾದರೆ ನಾವು ಶಪಥ(ಪ್ರಮಾಣ)ವನ್ನು ಮಾಡೋಣ ಎಂದು ನಿಶ್ಚಯಿಸಿದರು.
ತ ಉಕ್ತತ್ವ ಬಾಢಮಿತ್ಯೇವ ಸರ್ವ ಏವ ಶುನಃಸಖಮ್ |
ಕ್ಷುಧಾರ್ತಾಃ ಸುಪರಿಶ್ರಾಂತಾಃ ಶಪಥಾಯೋಪಚಕ್ರಮುಃ ||55||
ಅವರೆಲ್ಲರೂ ಹಾಗೆಯೇ ಆಗಲಿ ಎಂದು ಒಪ್ಪಿ ಹಸಿವಿನಿಂದ ಪೀಡಿತರಾಗಿ ಬಹಳ ದಣಿದು ಶಪಥವನ್ನು ಮಾಡಲು ಶುನಃಸಖನ ಬಳಿಗೆ ಬಂದರು.
ಅತ್ರಿಃ
ಸ ಗಾಂ ಸ್ಪೃಶತು ಪಾದೇನ ಸೂರ್ಯಂ ಚ ಪ್ರತಿಮೇಹತು |
ಅನಧ್ಯಾಯೇಷ್ವಧೀಯೀತ ಬಿಸಸ್ತೈನ್ಯಂ ಕರೋತಿ ಯಃ ||56||
ಅತ್ರಿ ಬಿಸಸ್ತೈನ್ಯವನ್ನು ಮಾಡಿದವನು ಗೋವನ್ನು ಪಾದದಿಂದ ಒದೆಯಲಿ. ಸೂರ್ಯನಿಗೆ ಎದುರಾಗಿ ಮೂತ್ರವಿಸರ್ಗವನ್ನು ಮಾಡಲಿ. ಅನಧ್ಯಯನತಿಥಿಗಳಲ್ಲಿ ಅಧ್ಯಯನವನ್ನು ಮಾಡಲಿ.
ವಸಿಷ್ಠಃ
ಅನಧ್ಯಾಯಪರೋ ಲೋಕೇ ಶುನಃ ಸ ಪರಿಕರ್ಷತು |
ಪರಿವ್ರಾಟ್ ಕಾಮವೃತ್ತೋಽಸ್ತು ಬಿಸಸ್ತೈನ್ಯಂ ಕರೋತಿ ಯಃ ||57||
ಶರಣಾಗತಂ ಹಂತು ಮಿತ್ರಂ ಸ್ವಸುತಾಂ ಚೋಪಜೀವತು |
ಅರ್ಥಾನ್ ಕಾಂಕ್ಷತು ಕೀನಾಶಾದ್ ಬಿಸಸ್ತೈನ್ಯಂ ಕರೋತಿ ಯಃ ||58||
ವಸಿಷ್ಠರು ಬಿಸಸ್ತೈನ್ಯವನ್ನು ಮಾಡಿದವನು ಲೋಕದಲ್ಲಿ ಅಧ್ಯಯನ ವಿಮುಖನಾಗಿ ನಾಯಿಗಳನ್ನು ಎಳೆದುಕೊಂಡು ಓಡಾಡಲಿ. ಪರಿವ್ರಾಜಕನಾದವನು ಕಾಮದ ನಡತೆಯನ್ನು ಹೊಂದಲಿ. ಶರಣಾಗತನಾದ ಮಿತ್ರನನ್ನು ವಧೆ ಮಾಡಲಿ. ತನ್ನ ಮಗಳ ದ್ರವ್ಯದಿಂದ ಜೀವಿಸಲಿ. ದರಿದ್ರನಿಂದ ಧನವನ್ನು ಅಪೇಕ್ಷಿಸಲಿ.
ಕಶ್ಯಪಃ

ಸರ್ವತ್ರ ಸರ್ವಂ ಪಣತು ನ್ಯಾಸಲೋಪಂ ಕರೋತು ಚ |
ಕೂಟಸಾಕ್ಷಿತ್ವಮಭ್ಯೇತು ಬಿಸಸ್ತೈನ್ಯಂ ಕರೋತಿ ಯಃ ॥59॥
ವೃಥಾಮಾಂಸಂ ಸಮಶ್ನಾತು ವೃಥಾದಾನಂ ಕರೋತು ಚ |
ಯಾತು ಸ್ತ್ರಿಯಂ ದಿವಾ ಚೈವ ಬಿಸಸ್ತೈನ್ಯಂ ಕರೋತಿ ಯಃ ॥60॥
ಕಶ್ಯಪರು ಬಿಸಸ್ತೈನ್ಯವನ್ನು ಮಾಡಿದವನು ಜೂಜಿನಲ್ಲಿ ಎಲ್ಲವನ್ನೂ ಪಣವಾಗಿ ಇಡಲಿ. ನ್ಯಾಸವಾಗಿಟ್ಟ ವಸ್ತುವನ್ನು ಅಪಹರಿಸಲಿ. ಸುಳ್ಳು ಸಾಕ್ಷಿಯನ್ನು ಹೇಳಲಿ. ವ್ಯರ್ಥವಾಗಿ ಮಾಂಸವನ್ನು ತಿನ್ನಲಿ. ವ್ಯರ್ಥವಾದ ದಾನವನ್ನು ಮಾಡಲಿ. ಹಗಲಿನಲ್ಲಿ ಸ್ತ್ರೀಸಂಗವನ್ನು ಮಾಡಲಿ.
ಭರದ್ವಾಜಃ
ನೃಶಂಸಸ್ತ್ಯಕ್ತಧರ್ಮಾಽಸ್ತು ಸ್ತ್ರೀಷು ಜ್ಞಾತಿಷು ಗೋಷು ಚ |
ಬ್ರಾಹ್ಮಣಂ ಚಾಪಿ ಜಯತಾಂ ಬಿಸಸ್ತೈನ್ಯಂ ಕರೋತಿ ಯಃ ॥61॥
ಉಪಾಧ್ಯಾಯಮಧಃ ಕೃತ್ವಾ ಋಚೋಽಧ್ಯೇತು ಯಜೂಂಷಿ ಚ |
ಜುಹೋತು ಚ ಸ ಕಕ್ಷಾಗ್ನೌ ಬಿಸಸ್ತೈನ್ಯಂ ಕರೋತಿ ಯಃ ॥62॥
ಭರದ್ವಾಜರು ಬಿಸಸ್ತೈನ್ಯವನ್ನು ಮಾಡಿದ ಕ್ರೂರಿಯು, ಸ್ತ್ರೀಯರ, ಜ್ಞಾತಿಗಳ ಮತ್ತು ಗೋವುಗಳ ವಿಷಯದಲ್ಲಿ ಧರ್ಮತ್ಯಾಗಿಯಾಗಲಿ. ಬ್ರಾಹ್ಮಣರನ್ನು ಜಯಿಸಲಿ. ಉಪಾಧ್ಯಾಯರನ್ನು ತಿರಸ್ಕರಿಸಿ ಋಗ್ವೇದವನ್ನು ಮತ್ತು ಯಜುರ್ವೇದವನ್ನು ಅಧ್ಯಯನ ಮಾಡಲಿ. ಹುಲ್ಲಿನಿಂದ ಮಾಡಿದ ಅಗ್ನಿಯಲ್ಲಿ ಹೋಮವನ್ನು ಮಾಡಲಿ.
ಜಮದಗ್ನಿಃ
ಪುರೀಷಮುತ್ಸೃಜತ್ವಪ್ಸು ಹಂತು ಗಾಂ ಚಾಪಿ ದೋಹಿನೀಮ್ |
ಅನೃತೌ ಮೈಥುನಂ ಯಾತು ಬಿಸಸ್ತೈನ್ಯಂ ಕರೋತಿ ಯಃ ॥63॥
ದ್ವೇಷ್ಯೋ ಭಾರ್ಯೋಪಜೀವೀ ಸ್ಯಾದ್ ದೂರಬಂಧುಶ್ಚ ವೈರವಾನ್ |
ಅನ್ಯೋನ್ಯಸ್ಯಾತಿಥಿಶ್ಚಾಸ್ತು ಬಿಸಸ್ತೈನ್ಯಂ ಕರೋತಿ ಯಃ ॥64॥
ಜಮದಗ್ನಿ ಬಿಸಸ್ತೈನ್ಯವನ್ನು ಮಾಡಿದವನು ನೀರಿನಲ್ಲಿ ಮಲವಿಸರ್ಜನೆಯನ್ನು ಮಾಡಲಿ. ಹಾಲುಕರೆಯುವ ಹಸುವನ್ನು ವಧೆ ಮಾಡಲಿ. ಋತುಕಾಲವಲ್ಲದ ಸಮಯದಲ್ಲಿ ಮೈಥುನವನ್ನು ಮಾಡಲಿ. ಎಲ್ಲರಿಂದಲೂ ದ್ವೇಷ್ಯನಾಗಲಿ. ಭಾರ್ಯೆಯನ್ನು ಉಪಜೀವಿಸಿಕೊಂಡು ಬದುಕಲಿ. ಬಂಧುಗಳನ್ನು ದೂರ ಮಾಡಲಿ. ಎಲ್ಲರ ಜೊತೆಯಲ್ಲೂ ವೈರವನ್ನು ಮಾಡಲಿ. ಪರಸ್ಪರ ಆತಿಥ್ಯವನ್ನು ಹೊಂದಲಿ.
ಗೌತಮಃ
ಅಧೀತ್ಯ ವೇದಾಂಸ್ತ್ಯಜತು ತ್ರೀನಗ್ನೀನಪವಿಧ್ಯತು |
ವಿಕ್ರೀಣಾತು ತಥಾ ಸೋಮಂ ಬಿಸಸ್ತೈನ್ಯಂ ಕರೋತಿ ಯಃ ॥65॥
ಉದಪಾನಪ್ಲವೇ ಗ್ರಾಮೇ ಬ್ರಾಹ್ಮಣೋ ವೃಷಲೀಪತಿಃ |
ತಸ್ಯ ಸಾಲೋಕ್ಯತಾಂ ಯಾತು ಬಿಸಸ್ತೈನ್ಯಂ ಕರೋತಿ ಯಃ ॥66॥
ಗೌತಮರು ಬಿಸಸ್ತೈನ್ಯವನ್ನು ಮಾಡಿದವನು ವೇದಾಧ್ಯಯನವನ್ನು ಮಾಡಿ ವೇದವನ್ನು ಪರಿತ್ಯಜಿಸಲಿ. ಮೂರು ಅಗ್ನಿಗಳನ್ನು ನಾಶಗೊಳಿಸಲಿ. ಸೋಮವಿಕ್ರಯವನ್ನು ಮಾಡಲಿ. ನೀರನ್ನು ದಾಟಿಸುವ ತೆಪ್ಪದಂತೆ ಗ್ರಾಮಸ್ಥರೆಲ್ಲರನ್ನೂ ರಕ್ಷಿಸುವ ಒಂದೇ ಬಾವಿಯಿರುವ ಗ್ರಾಮದಲ್ಲಿ ವೃಷಲೀಪತಿಯಾದ ಬ್ರಾಹ್ಮಣನಿಗೆ ಉಂಟಾಗುವ ಲೋಕವು ಅವನಿಗೆ ಆಗಲಿ.
ವಿಶ್ವಾಮಿತ್ರಃ
ಜೀವತೋ ವೈ ಗುರೂನ್ ಭೃತ್ಯಾನ್ ಭರಂತ್ವಸ್ಯ ಪರೇ ಜನಾಃ |
ಅಗತಿರ್ಬಹುಪುತ್ರಃ ಸ್ಯಾದ್ ಬಿಸಸ್ತೈನ್ಯಂ ಕರೋತಿ ಯಃ ॥67॥
ಅಶುಚಿರ್ಬ್ರಹ್ಮಕೂಟೋಽಸ್ತು ಋದ್ಧ್ಯಾ ಚೈವಾಪ್ಯಹಂಕೃತಃ |
ಕರ್ಷಕೋ ಮತ್ಸರೀ ಚಾಸ್ತು ಬಿಸಸ್ತೈನ್ಯಂ ಕರೋತಿ ಯಃ ॥68॥
ವರ್ಷಾನ್ ಕರೋತು ಭೃತಕೋ ರಾಜ್ಞಶ್ಚಾಸ್ತು ಪುರೋಹಿತಃ |
ಅಯಾಜ್ಯಸ್ಯ ಭವೇದೃತ್ವಿಗ್ ಬಿಸಸ್ತೈನ್ಯಂ ಕರೋತಿ ಯಃ ॥69॥
ವಿಶ್ವಾಮಿತ್ರ ಬಿಸಸ್ತೈನ್ಯವನ್ನು ಮಾಡಿದವನು ತಾನು ಬದುಕಿರುವಾಗ ಅವನ ಹಿರಿಯರನ್ನು ಮತ್ತು ಭೃತ್ಯರನ್ನು ಇನ್ನೊಬ್ಬರು ಪೋಷಿಸಲಿ. ಜೀವನೋಪಾಯವಿಲ್ಲದೆ ಬಹುಪುತ್ರನಾಗಲಿ. ವೇದಗಳ ರಾಶಿಗೆ ಆಶ್ರಯನಾಗಿದ್ದರೂ ಅಶುಚಿಯಾಗಲಿ. ಸಂಪತ್ತಿನಿಂದ ಅಹಂಕಾರವನ್ನು ಹೊಂದಲಿ. ಕೃಷಿಕರನೂ, ಮತ್ಸರಿಯೂ ಆಗಲಿ. ಅನೇಕ ವರ್ಷಗಳ ಕಾಲ ಸಂಬಳವನ್ನು ತೆಗೆದುಕೊಂಡು ಕೆಲಸವನ್ನು ಮಾಡಲಿ. ರಾಜನಿಗೆ ಪುರೋಹಿತನಾಗಲಿ. ಯಾಗವನ್ನು ಮಾಡಲು ಯೋಗ್ಯತೆ ಇಲ್ಲದವನಿಗೆ ಯಾಗವನ್ನು ಮಾಡಿಸುವ ಋತ್ವಿಜನಾಗಲಿ.
ಅರುಂಧತೀ
ನಿತ್ಯಂ ಪರಿವದೇಚ್ಛ್ವಶ್ರೂಂ ಭರ್ತುರ್ಭವತು ದುರ್ಮನಾಃ |
ಏಕಾ ಸ್ವಾದು ಸಮಶ್ನಾತು ಬಿಸಸ್ತೈನ್ಯಂ ಕರೋತಿ ಯಾ ॥70॥
ಜ್ಞಾತೀನಾಂ ಗೃಹಮಧ್ಯಸ್ಥಾ ಸಕ್ತೂನತ್ತು ದಿನಕ್ಷಯೇ |
ಅಭಾಗ್ಯಾಽವೀರಸೂರಸ್ತು ಬಿಸಸ್ತೈನ್ಯಂ ಕರೋತಿ ಯಾ ॥71॥
ಅರುಂಧತೀ ಬಿಸಸ್ತೈನ್ಯವನ್ನು ಮಾಡಿದವಳು ನಿತ್ಯವೂ ಅತ್ತೆಯ ಜೊತೆಯಲ್ಲಿ ಜಗಳವಾಡಲಿ. ಪತಿಗೆ ವಿರೋಧ ಮಾಡುವವಳಾಗಲಿ.

ಒಬ್ಬಳೇ ಒಳ್ಳೆಯ ಅಡುಗೆಯನ್ನು ಊಟಮಾಡುವವಳಾಗಲಿ. ಜ್ಞಾತಿಗಳ ಗೃಹಮಧ್ಯದಲ್ಲಿ ಸಾಯಂಕಾಲದಲ್ಲಿ ಕೇವಲ ಹಿಟ್ಟನ್ನು ತಿನ್ನುವಷ್ಟು ದರಿದ್ರಳಾಗಲಿ. ಭಾಗ್ಯಹೀನಳಾಗಲಿ. ವೀರರಾದ ಮಕ್ಕಳನ್ನು ಪಡೆಯದಿರಲಿ.
ಗಂಡಾ
ಅನೃತಂ ಭಾಷತು ಸದಾ ಸಾಧುಭಿಶ್ಚ ವಿರುಧ್ಯತು |
ದದಾತು ಕನ್ಯಾಂ ಶುಲ್ಕೇನ ಬಿಸಸ್ತೈನ್ಯಂ ಕರೋತಿ ಯಾ ॥72॥
ಸಾಧಯಿತ್ವಾ ಸ್ವಯಂ ಪ್ರಾಶೇದ್ ದಾಸ್ಯೇ ಜೀವತು ಚೈವ ಹ |
ವಿಕರ್ಮಣಾ ಪ್ರಮೀಯೇತ ಬಿಸಸ್ತೈನ್ಯಂ ಕರೋತಿ ಯಾ ॥73॥
ಗಂಡಾ ಬಿಸಸ್ತೈನ್ಯವನ್ನು ಮಾಡಿದವಳು ಯಾವಾಗಲೂ ಅನೃತವನ್ನು ಮಾತನಾಡಲಿ. ಸಜ್ಜನರ ಜೊತೆಯಲ್ಲಿ ವಿರೋಧವನ್ನು ಮಾಡಲಿ. ಕನ್ಯೆಯನ್ನು ಹಣಕ್ಕಾಗಿ ಮಾರಿಕೊಳ್ಳಲಿ. ಅಡುಗೆಯನ್ನು ಮಾಡಿ ತಾನೊಬ್ಬಳೇ ಊಟವನ್ನು ಮಾಡಲಿ. ಯಾವಾಗಲೂ ದಾಸಿಯಾಗಿಯೇ ಜೀವಿಸಲಿ. ದುಷ್ಕರ್ಮವನ್ನು ಮಾಡಿ ಮರಣವನ್ನು ಹೊಂದಲಿ.
ಪಶುಸಖಃ
ದಾಸ್ಯ ಏವ ಪ್ರಜಾಯೇತ ಸೋಽಪ್ರಸೂತಿರಕಿಂಚನಃ |
ದೈವತೇಷ್ವನಮಸ್ಕಾರೋ ಬಿಸಸ್ತೈನ್ಯಂ ಕರೋತಿ ಯಃ ॥74॥
ಪಶುಸಖ ಬಿಸಸ್ತೈನ್ಯವನ್ನು ಮಾಡಿದವನು ದಾಸ್ಯದಲ್ಲಿಯೇ ಜನಿಸಲಿ. ಅವನಿಗೆ ಮಕ್ಕಳಿಲ್ಲದೆ ದರಿದ್ರನಾಗಲಿ. ದೇವತೆಗಳಿಗೆ ನಮಸ್ಕಾರವನ್ನು ಮಾಡದಿರಲಿ.
ಶುನಃಸಖಃ
ಅಧ್ವರ್ಯವೇ ದುಹಿತರಂ ದದಾತು
ಚ್ಛಂದೋಗೇ ವಾ ಚರಿತಬ್ರಹ್ಮಚರ್ಯೇ |
ಆಥರ್ವಣಂ ವೇದಮಧೀತ್ಯ ವಿಪ್ರಃ
ಸ್ನಾಯೀತ ಯೋ ವೈ ಹರತೇ ಬಿಸಾನಿ ॥75॥
ಶುನಃಸಖ ಬಿಸವನ್ನು ಅಪಹರಿಸಿದವನು ಅಧ್ವರ್ಯುವಿಗೆ ಮಗಳನ್ನು ಕೊಡಲಿ. ಬ್ರಹ್ಮಚರ್ಯವನ್ನು ಆಚರಿಸಿದ ಸಾಮವೇದ ಪಾಠಕನಿಗಾದರೂ ಮಗಳನ್ನು ಕೊಡಲಿ. ಅಥವಾ ಅಥರ್ವಣ ವೇದವನ್ನು ಓದಿ ಸ್ನಾತಕನಾದವನಿಗಾದರೂ ಕನ್ಯೆಯನ್ನು ಕೊಡಲಿ.
ಋಷಯಃ
ಇಷ್ಟಮೇತದ್ ದ್ವಿಜಾತೀನಾಂ ಯೋಽಯಂ ತೇ ಶಪಥಃ ಕೃತಃ |
ತ್ವಯಾ ಕೃತಂ ಬಿಸಸ್ತೈನ್ಯಂ ಸರ್ವೇಷಾಂ ನಃ ಶುನಃಸಖ ॥76॥
ಋಷಿಗಳು ಎಲೈ ಶುನಃಸಖನೇ, ನೀನು ಮಾಡುತ್ತಿರುವ ಶಪಥವು ಬ್ರಾಹ್ಮಣರಿಗೆ ಪ್ರಿಯವಾದುದು. ಆದ್ದರಿಂದ ನಮ್ಮೆಲ್ಲರ ಬಿಸಗಳನ್ನು ನೀನೇ ಕದ್ದಿದ್ದೀಯೆ.
ಶುನಃಸಖಃ
ನ್ಯಸ್ತಮಾದ್ಯಮಪಶ್ಯದ್ಭಿರ್ಯದುಕ್ತಂ ಕೃತಕರ್ಮಭಿಃ |
ಸತ್ಯಮೇತನ್ನ ಮಿಥ್ಯೈತದ್ ಬಿಸಸ್ತೈನ್ಯಂ ಕೃತಂ ಮಯಾ ॥77॥
ಶುನಃಸಖ ನಿಮ್ಮ ಆಹ್ನಿಕಕಾರ್ಯಗಳನ್ನು ಮುಗಿಸಿ ತೀರದಲ್ಲಿಟ್ಟಿದ್ದ ಬಿಸರೂಪವಾದ ಆಹಾರವನ್ನು ಕಾಣದೆ ನೀವು ಹೇಳಿದ ಮಾತು ಸತ್ಯವಾದುದು, ಸುಳ್ಳಲ್ಲ. ಬಿಸಗಳನ್ನು ಕದ್ದವನು ನಾನು.
ಮಯಾ ಹ್ಯಂತರ್ಹಿತಾನೀಹ ಬಿಸಾನೀಮಾನಿ ಪಶ್ಯತ |
ಪರೀಕ್ಷಾರ್ಥಂ ಭಗವತಾಂ ಕೃತಮೇತನ್ಮಯಾಽನಘಾಃ |
ರಕ್ಷಣಾರ್ಥಂ ಚ ಸರ್ವೇಷಾಂ ಭವತಾಮಹಮಾಗತಃ ॥78॥
ನಾನು ಅದೃಶ್ಯಗಳನ್ನಾಗಿ ಮಾಡಿದ ಈ ಬಿಸಗಳನ್ನು ನೋಡಿ. ಎಲೈ ಅನಘರೇ, ಪೂಜ್ಯರಾದ ನಿಮ್ಮನ್ನು ಪರೀಕ್ಷೆ ಮಾಡಲು ನಾನು ಈ ಕಾರ್ಯವನ್ನು ಮಾಡಿದೆ ಮತ್ತು ನಿಮ್ಮೆಲ್ಲರನ್ನೂ ರಕ್ಷಿಸುವ ಸಲುವಾಗಿ ನಾನು ಇಲ್ಲಿಗೆ ಬಂದೆನು.
ಯಾತುಧಾನೀ ಹ್ಯತಿಕ್ರುದ್ಧಾ ಕೃತ್ಯೈಷಾ ವೋ ವಧೈಷಿಣೀ |
ವೃಷಾದರ್ಭಿಪ್ರಯುಕ್ತೈಷಾ ನಿಹತಾ ಮೇ ತಪೋಧನಾಃ ॥79॥
ವೃಷಾದರ್ಭಿಯು ಸೃಷ್ಟಿ ಮಾಡಿದ ಈ ಯಾತುಧಾನಿಯೂ ಬಹಳ ಕೋಪ ಉಳ್ಳವಳಾಗಿ ನಿಮ್ಮನ್ನು ಕೊಲ್ಲಲು ಬಯಸಿದಳು. ಎಲೈ ತಪೋಧನರೇ, ನಾನು ಅವಳನ್ನು ಸಂಹರಿಸಿದೆ.
ದುಷ್ಟಾ ಹಿಂಸ್ಯಾದಿಯಂ ಪಾಪಾ ಯುಷ್ಮಾನ್ ಪ್ರತ್ಯಗ್ನಿಸಂಭವಾ |
ತಸ್ಮಾದಸ್ಮ್ಯಾಗತೋ ವಿಪ್ರಾ ವಾಸವಂ ಮಾಂ ನಿಬೋಧತ ॥80॥
ಎಲೈ ಬ್ರಾಹ್ಮಣರೇ, ದುಷ್ಟಳೂ, ಪಾಪಿಯೂ, ಅಗ್ನಿಸಂಭವಳೂ ಆದ ಇವಳು ನಿಮ್ಮನ್ನು ಹಿಂಸಿಸಬಹುದು ಎಂದು ನಾನು ಇಲ್ಲಿಗೆ ಬಂದೆ. ಬ್ರಾಹ್ಮಣರೇ, ನನ್ನನ್ನು ಇಂದ್ರನೆಂದು ತಿಳಿಯಿರಿ.
ಅಲೋಭಾದಕ್ಷಯಾ ಲೋಕಾಃ ಪ್ರಾಪ್ತಾ ವಃ ಸಾರ್ವಕಾಮಿಕಾಃ |
ಉತ್ತಿಷ್ಠಧ್ವಮಿತಃ ಕ್ಷಿಪ್ರಂ ತಾನವಾಪ್ನುತ ವೈ ದ್ವಿಜಾಃ ॥81॥
ಲೋಭವನ್ನು ತ್ಯಜಿಸಿದುದರಿಂದ ಸರ್ವಕಾಮಪ್ರದವಾದ ಅಕ್ಷಯ ಲೋಕಗಳನ್ನು ನೀವು ಜಯಿಸಿದ್ದೀರಿ. ಬ್ರಾಹ್ಮಣರೇ, ಎದ್ದು ಇಲ್ಲಿಂದ ಶೀಘ್ರವಾಗಿ ಆ ಲೋಕವನ್ನು ಹೊಂದುವವರಾಗಿ.
ಭೀಷ್ಮಃ

ತತೋ ಮಹರ್ಷಯಃ ಪ್ರೀತಾಸ್ತಥೇತ್ಯುಕ್ತ್ವಾ ಪುರಂದರಮ್ |
ಸಹೈವ ತ್ರಿದಶೇಂದ್ರೇಣ ಸರ್ವೇ ಜಗ್ಮುಸ್ತ್ರಿವಿಷ್ಟಪಮ್ ||82||
ಭೀಷ್ಮ ಆಗ ಆ ಮಹರ್ಷಿಗಳು ಸಂತೋಷಗೊಂಡು ಇಂದ್ರನಿಗೆ ಹಾಗೆಯೇ ಆಗಲಿ ಎಂದು ಹೇಳಿ ಇಂದ್ರನ ಜೊತೆಯಲ್ಲಿ ಎಲ್ಲರೂ ಸ್ವರ್ಗಕ್ಕೆ ಹೋದರು.
ಏವಮೇತೇ ಮಹಾತ್ಮಾನೋ ಭೋಗೈರ್ಬಹುವಿಧೈರಪಿ |
ಕ್ಷುಧಾ ಪರಮಯಾ ಯುಕ್ತಾಶ್ಛಂದ್ಯಮಾನಾ ಮಹಾತ್ಮಭಿಃ |
ನೈವ ಲೋಭಂ ತದಾ ಚಕ್ರುಸ್ತತಃ ಸ್ವರ್ಗಮವಾಪ್ನುವನ್ ||83||
ಹೀಗೆ ಈ ಮಹಾತ್ಮರು ತೀವ್ರವಾದ ಹಸಿವಿನಿಂದ ಕೂಡಿದ್ದರೂ ಮಹಾತ್ಮರಿಂದ ಬಹುವಿಧ ಭೋಗಗಳಿಂದ ಪ್ರಲೋಭನಗೊಳಿಸಲ್ಪಟ್ಟರೂ ಲೋಭವನ್ನು ಮಾಡಲಿಲ್ಲ. ಆದ್ದರಿಂದ ಸ್ವರ್ಗವನ್ನು ಹೊಂದಿದರು.
ತಸ್ಮಾತ್ ಸರ್ವಾಸ್ವವಸ್ಥಾಸು ನರೋ ಲೋಭಂ ವಿವರ್ಜಯೇತ್ |
ಏಷ ಧರ್ಮಃ ಪರೋ ರಾಜನ್ ಅಲೋಭ ಇತಿ ವಿಶ್ರುತಃ ||84||
ಆದ್ದರಿಂದ ಮನುಷ್ಯನು ಯಾವ ಅವಸ್ಥೆಯಲ್ಲಿಯೂ ಲೋಭವನ್ನು ಮಾಡಬಾರದು. ಎಲೈ ರಾಜನೇ, ಅಲೋಭ ಎಂದು ವಿಖ್ಯಾತವಾದ ಇದು ಶ್ರೇಷ್ಠವಾದ ಧರ್ಮ.
ಇದಂ ನರಃ ಸಚ್ಚರಿತಂ ಸಮವಾಯೇಷು ಕೀರ್ತಯೇತ್ |
ಸುಖಭಾಗೀ ಚ ಭವತಿ ನ ಚ ದುರ್ಗಾಣ್ಯವಾಪ್ನುತೇ ||85||
ಈ ಸಚ್ಚರಿತೆಯನ್ನು ಮಾನವನು ಸಜ್ಜನ ಸಮೂಹದಲ್ಲಿ ಹೇಳಬೇಕು. ಅಂತಹವನು ಸುಖಭಾಗಿಯಾಗುತ್ತಾನೆ ಮತ್ತು ಕಷ್ಟಗಳನ್ನು ಹೊಂದುವುದಿಲ್ಲ.
ಪ್ರೀಯಂತೇ ಪಿತರಶ್ಚಾಸ್ಯ ಋಷಯೋ ದೇವತಾಸ್ತಥಾ |
ಯಶೋಧರ್ಮಾರ್ಥಭಾಗೀ ಚ ಭವತಿ ಪ್ರೇತ್ಯ ಮಾನವಃ ||86||
ಅಂತಹ ಮನುಷ್ಯನಿಗೆ ಪಿತೃಗಳು, ಋಷಿಗಳು ಮತ್ತು ದೇವತೆಗಳು ಪ್ರಸನ್ನರಾಗುತ್ತಾರೆ. ಅವನು ಮರಣವನ್ನು ಹೊಂದಿದ ಮೇಲೆ ಕೀರ್ತಿಗೂ, ಧರ್ಮಕ್ಕೂ, ಶುಭವಾದ ಅರ್ಥಗಳಿಗೂ ಭಾಜನನಾಗುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದಾನಕಥನೇ ಸಪ್ತರ್ಷಿವೃಷಾದರ್ಭಿಸಂವಾದೋ ನಾಮ ಸಪ್ತತ್ರಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೆಂಟನೆಯ ಅಧ್ಯಾಯ
ಋಷಿಗಳಿಂದ ಶಪಥನಿಮಿತ್ತದಿಂದ ಧರ್ಮೋಪದೇಶ
ಭೀಷ್ಮಃ
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |
ಯದ್ ವೃತ್ತಂ ತೀರ್ಥಯಾತ್ರಾಯಾಂ ಶಪಥಂ ಪ್ರತಿ ತಚ್ಛೃಣು ||1||
ಭೀಷ್ಮ ಶಪಥವನ್ನು ಮಾಡಿ (ಪ್ರಮಾಣವನ್ನು ಮಾಡಿ) ಧರ್ಮವನ್ನು ಉಪದೇಶ ಮಾಡುವ ಈ ವಿಷಯದಲ್ಲಿ ಹಿಂದೆ ತೀರ್ಥಯಾತ್ರೆಯ ಸಮಯದಲ್ಲಿ ನಡೆದ ಶಪಥ ರೂಪವಾದ ಪುರಾತನವಾದ ಇತಿಹಾಸವನ್ನು ಕೇಳು.
ಪುಷ್ಕರಾರ್ಥಂ ಕೃತಂ ಸ್ತೈನ್ಯಂ ಪುರಾ ಭರತಸತ್ತಮ |
ರಾಜರ್ಷಿಭಿರ್ಮಹಾರಾಜ ತಥೈವ ಚ ದ್ವಿಜರ್ಷಿಭಿಃ ||2||
ಎಲೈ ಭರತಶ್ರೇಷ್ಠನೇ, ಮಹಾರಾಜನೇ, ಹಿಂದೆ ರಾಜರ್ಷಿಗಳಿಂದಲೂ ಮತ್ತು ವಿಪ್ರರ್ಷಿಗಳಿಂದಲೂ ಕಮಲಗಳ ಸಲುವಾಗಿ ಕಳ್ಳತನವು ಮಾಡಲ್ಪಟ್ಟಿತು.
ಋಷಯಃ ಸಮೇತಾಃ ಪಶ್ಚಿಮೇ ವೈ ಪ್ರಭಾಸೇ
ಸಮಾಗತಾ ಮಂತ್ರಮಮಂತ್ರಯಂತ |
ಚರಾಮ ಸರ್ವೇ ಪೃಥಿವೀಂ ಪುಣ್ಯತೀರ್ಥಾಂ
ತನ್ನಃ ಕಾರ್ಯಂ ಹಂತ ಗಚ್ಛಾಮ ಸರ್ವೇ ||3||
ಋಷಿಗಳು ಪಶ್ಚಿಮಪ್ರಭಾಸ ಕ್ಷೇತ್ರದಲ್ಲಿ ಒಟ್ಟಿಗೆ ಸೇರಿ ನಾವೆಲ್ಲರೂ ಪುಣ್ಯತೀರ್ಥವನ್ನು ಹೊಂದಿರುವ ಭೂಮಿಯಲ್ಲಿ ತೀರ್ಥಯಾತ್ರೆಯನ್ನು ಮಾಡೋಣ. ಅದು ನಾವು ಮಾಡಬೇಕಾದ ಕಾರ್ಯ. ಆದ್ದರಿಂದ ಎಲ್ಲರೂ ಹೊರಡೋಣ ಎಂದು ಮಂತ್ರಾಲೋಚನೆಯನ್ನು ಮಾಡಿದರು.
ಶುಕ್ರೋಽಂಗಿರಾಶ್ಚೈವ ಕವಿಶ್ಚ ವಿದ್ವಾಂ-
ಸ್ತಥಾಽಗಸ್ತ್ಯೋ ನಾರದಪರ್ವತೌ ಚ |
ಭೃಗುರ್ವಸಿಷ್ಠಃ ಕಶ್ಯಪೋ ಗೌತಮಶ್ಚ
ವಿಶ್ವಾಮಿತ್ರೋ ಜಮದಗ್ನಿಶ್ಚ ರಾಜನ್ ||4||
ಋಷಿಸ್ತಥಾ ಗಾಲವೋಽಥಾಷ್ಟಕಶ್ಚ
ಭರದ್ವಾಜೋಽರುಂಧತೀ ವಾಲಖಿಲ್ಯಾಃ |

ಶಿಬಿರ್ದಿಲೀಪೋ ನಹುಷೋಽಂಬರೀಷೋ
ರಾಜಾ ಯಯಾತಿರ್ಧುಂಧುಮಾರೋಽಥ ಪೂರುಃ ||5||
ಜಗ್ಮುಃ ಪುರಸ್ಕೃತ್ಯ ಮಹಾನುಭಾವಂ
ಶತಕ್ರತುಂ ವೃತ್ರಹಣಂ ನರೇಂದ್ರ |
ತೀರ್ಥಾನಿ ಸರ್ವಾಣಿ ಪರಿಕ್ರಮಂತೋ
ಮಾಘ್ಯಾಂ ಯಯುಃ ಕೌಶಿಕೀಂ ಪುಣ್ಯತೀರ್ಥಾಮ್ ||6||

ಎಲೈ ನರೇಂದ್ರನೇ, ಶುಕ್ರ, ಅಂಗಿರಸ, ಕವಿ, ಅಗಸ್ತ್ಯ, ನಾರದ, ಪರ್ವತ, ಭೃಗು, ವಸಿಷ್ಠ, ಕಶ್ಯಪ, ಗೌತಮ, ವಿಶ್ವಾಮಿತ್ರ, ಜಮದಗ್ನಿ, ಗಾಲವ, ಅಷ್ಟಕ, ಭರದ್ವಾಜ, ಅರುಂಧತೀ, ವಾಲಖಿಲ್ಯರು, ಶಿಬಿ, ದಿಲೀಪ, ನಹುಷ, ಅಂಬರೀಶ, ಯಯಾತಿ, ಧುಂಧುಮಾರ, ಪುರು - ಇವರೆಲ್ಲರೂ ಮಹಾನುಭಾವನೂ, ಶತಕ್ರತುವೂ, ವೃತಸಂಹಾರಕನೂ ಆದ ಇಂದ್ರನನ್ನು ಮುಂದೆ ಮಾಡಿಕೊಂಡು ಎಲ್ಲಾ ತೀರ್ಥಗಳಲ್ಲಿ ಸಂಚಾರ ಮಾಡುತ್ತಾ ಮಾಘಮಾಸದಲ್ಲಿ ಪುಣ್ಯತೀರ್ಥವಾದ ಕೌಶಿಕೀ ನದಿಗೆ ಬಂದರು.

ಸರ್ವೇಷು ತೀರ್ಥೇಷ್ವಥ ಧೂತಪಾಪಾ
ಜಗ್ಮುಸ್ತತೋ ಬ್ರಹ್ಮಸರಃ ಸುಪುಣ್ಯಮ್ |
ದೇವಸ್ಯ ತೀರ್ಥೇ ಜಲಮಗ್ನಿಕಲ್ಪಾ
ವಿಗಾಹ್ಯ ತೇ ಭುಕ್ತಬಿಸಪ್ರಸೂನಾಃ ||7||

ಎಲ್ಲ ತೀರ್ಥಗಳಲ್ಲಿಯೂ ತಮ್ಮ ಪಾಪಗಳನ್ನು ಕಳೆದುಕೊಂಡು ಅನಂತರ ಬಹಳ ಪುಣ್ಯಪ್ರದವಾದ ಬ್ರಹ್ಮಸರೋವರಕ್ಕೆ ಬಂದರು. ಅಗ್ನಿ ಸದೃಶರಾದ ಅವರು ಬ್ರಹ್ಮದೇವರ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಕಮಲದ ದಂಟುಗಳನ್ನು ಆಹಾರವಾಗಿ ಸೇವಿಸಿದರು.

ಕೇಚಿದ್ ಬಿಸಾನ್ಯಖನಂಸ್ತತ್ರ ರಾಜನ್
ಅನ್ಯೇ ಮೃಣಾಲಾನ್ಯಖನಂಸ್ತತ್ರ ವಿಪ್ರಾಃ |
ಅಥಾಪಶ್ಯನ್ ಪುಷ್ಕರಂ ತೇ ಹ್ರಿಯಂತಂ
ಹ್ರದಾದಗಸ್ತ್ಯೇನ ಸಮುದ್ಧೃತಂ ವೈ ||8||

ಎಲೈ ರಾಜನೇ, ಅಲ್ಲಿ ಕೆಲವು ಋಷಿಗಳು ಕಮಲಗಳನ್ನೂ, ಇನ್ನು ಕೆಲವು ಋಷಿಗಳು ಕಮಲದ ನಾಳಗಳನ್ನೂ ತೀರದಲ್ಲಿ ಹುಗಿದಿಟ್ಟರು. ಅನಂತರ ಅಗಸ್ತ್ಯರು ತಂದಿಟ್ಟಿದ್ದ ಕಮಲಗಳು ಕಳುವಾಗಿರುವುದನ್ನು ನೋಡಿದರು.

ತಾನಾಹ ಸರ್ವಾನೃಷಿಮುಖ್ಯಾನಗಸ್ತ್ಯಃ
ಕೇನಾದತ್ತಂ ಪುಷ್ಕರಂ ಮೇ ಸುಜಾತಮ್ |
ಯುಷ್ಮಾನ್ ಶಂಕೇ ದೀಯತಾಂ ಪುಷ್ಕರಂ ಮೇ
ನ ವೈ ಭವಂತೋ ಹರ್ತುಮರ್ಹಂತಿ ಪದ್ಮಮ್ ||9||

ಅಗಸ್ತ್ಯರು ಆ ಎಲ್ಲ ಋಷಿಶ್ರೇಷ್ಠರನ್ನು ಕುರಿತು- `ನಾನು ಸಂಗ್ರಹಿಸಿಟ್ಟಿದ್ದ ಒಳ್ಳೆಯ ಕಮಲಗಳನ್ನು ಯಾರು ಕದ್ದಿದ್ದೀರಿ? ನಿಮ್ಮ ಮೇಲೆಯೇ ನನಗೆ ಸಂಶಯವಿದೆ. ನನ್ನ ಕಮಲಗಳನ್ನು ಕೊಟ್ಟುಬಿಡಿ. ನೀವು ಕಮಲವನ್ನು ಕದಿಯುವುದು ಯೋಗ್ಯವಲ್ಲ' ಎಂದು ಹೇಳಿದರು.

ಶೃಣೋಮಿ ಕಾಲೋ ಹಿಂಸತೇ ಧರ್ಮವೀರ್ಯಂ
ಸೇಯಂ ಪ್ರಾಪ್ತಾ ವರ್ಧತೇ ಧರ್ಮಪೀಡಾ |
ಪುರಾಽಧರ್ಮೋ ವರ್ಧತೇ ನೇಹ ಯಾವತ್
ತಾವದ್ ಗಚ್ಛಾಮಿ ಪರಲೋಕಂ ಚಿರಾಯ ||10||

ಕಾಲವು ಧರ್ಮದ ಸಾಮರ್ಥ್ಯವನ್ನು ನಾಶಮಾಡುತ್ತದೆ ಎಂದು ಕೇಳಿದ್ದೇನೆ. ಈಗ ಅಂತಹ ಧರ್ಮಪೀಡೆಯು ಪ್ರಾಪ್ತವಾಗಿ ಹೆಚ್ಚಾಗುತ್ತಿದೆ. ಇಲ್ಲಿ ಅಧರ್ಮವು ಹೆಚ್ಚಾಗುವುದಕ್ಕಿಂತ ಮೊದಲೇ ನಾನು ಶಾಶ್ವತವಾಗಿ ಪರಲೋಕಕ್ಕೆ ಹೋಗುತ್ತೇನೆ.

ಪುರಾ ವೇದಾನ್ ಬ್ರಾಹ್ಮಣಾ ಗ್ರಾಮಮಧ್ಯೇ
ಘುಷ್ಟಸ್ವರಾ ವೃಷಲಾನ್ ಶ್ರಾವಯಂತಿ |
ಪುರಾ ರಾಜಾ ವ್ಯವಹಾರಾನಧರ್ಮ್ಯಾನ್
ಪಶ್ಯತ್ಯಹಂ ಪರಲೋಕಂ ವ್ರಜಾಮಿ ||11||

ಗ್ರಾಮಮಧ್ಯದಲ್ಲಿ ಕುಳಿತು ಉಚ್ಚಸ್ವರದಲ್ಲಿ ವೇದಗಳನ್ನು ಶೂದ್ರರಿಗೆ ಕೇಳಿಸುವುದಕ್ಕಿಂತ ಮೊದಲೇ, ರಾಜನು ಶುದ್ಧವಾದ ವ್ಯವಹಾರಗಳನ್ನು ಅನ್ಯಾಯದ ವ್ಯವಹಾರಗಳೆಂದು ನೋಡುವುದಕ್ಕಿಂತ ಮೊದಲೇ, ನಾನು ಪರಲೋಕಕ್ಕೆ ಹೋಗುತ್ತೇನೆ.

ಪುರಾ ವರಾನ್ ಪ್ರತ್ಯವರಾನ್ ಗರೀಯಸೋ
ಯಾವನ್ನರಾ ನಾವಮಂಸ್ಯಂತಿ ಸರ್ವೇ |
ತಮೋತ್ತರಂ ಯಾವದಿದಂ ನ ವರ್ತತೇ
ತಾವದ್ ವ್ರಜಾಮಿ ಪರಲೋಕಂ ಚಿರಾಯ ||12||

ನೀಚರಾದ ಜನರು ಶ್ರೇಷ್ಠರಾದ ಮತ್ತು ಹಿರಿಯರಾದವರನ್ನು ಅವಮಾನ ಮಾಡುವುದಕ್ಕಿಂತ ಮೊದಲೇ ಈ ಪ್ರಪಂಚದಲ್ಲಿ ತಮೋಗುಣವು ಅಭಿವೃದ್ಧಿಯನ್ನು ಹೊಂದುವುದಕ್ಕಿಂತ ಮೊದಲೇ ನಾನು ಪರಲೋಕಕ್ಕೆ ಹೋಗುತ್ತೇನೆ.

ಪುರಾ ಪ್ರಪಶ್ಯಾಮಿ ಪರೇಣ ಮರ್ತ್ಯಾನ್
ಬಲೀಯಸಾ ದುರ್ಬಲಾನ್ ಭುಜ್ಯಮಾನಾನ್ |
ತಸ್ಮಾದ್ ಯಾಸ್ಯಾಮಿ ಪರಲೋಕಂ ಚಿರಾಯ

ನ ಹ್ಯುತ್ಸಹೇ ದ್ರಷ್ಟುಮೀದೃಙ್ ನೃಲೋಕೇ ॥13॥
ಬಲಿಷ್ಠರಾದ ಮನುಷ್ಯರು ದುರ್ಬಲರನ್ನು ವಶಪಡಿಸಿಕೊಂಡು ಅವರಿಂದ ದುಡಿಸಿಕೊಳ್ಳುವುದನ್ನು ನೋಡುವುದಕ್ಕಿಂತ ಮೊದಲೇ ನಾನು ಪರಲೋಕಕ್ಕೆ ಹೋಗುವೆನು. ಮನುಷ್ಯಲೋಕದಲ್ಲಿ ಇಂತಹ ದೃಶ್ಯವನ್ನು ನಾನು ನೋಡಲಾರೆ (ಎಂದು ಹೇಳಿದರು).
ಭೀಷ್ಮಃ
ತಮಾಹುರಾರ್ತಾ ಋಷಯೋ ಮಹರ್ಷಿಂ
ನ ತೇ ವಯಂ ಪುಷ್ಕರಂ ಚೋರಯಾಮಃ |
ಮಿಥ್ಯಾಭಿಷಂಗೋ ಭವತಾ ನ ಕಾರ್ಯಃ
ಶಪಾಮ ತೀಕ್ಷ್ಣಾನ್ ಶಪಥಾನ್ ಮಹರ್ಷೇ ॥14॥
ಭೀಷ್ಮ ಆರ್ತರಾದ ಋಷಿಗಳು ಮಹರ್ಷಿಗಳಾದ ಅಗಸ್ತ್ಯರನ್ನು ಕುರಿತು ನಾವು ನಿಮ್ಮ ಕಮಲವನ್ನು ಕದ್ದಿಲ್ಲ. ನೀವು ಸುಳ್ಳು ಆರೋಪವನ್ನು ಮಾಡಬಾರದು. ಎಲೈ ಮಹರ್ಷಿಗಳೇ, ಬೇಕಾದರೆ ತೀಕ್ಷ್ಣವಾದ ಶಪಥಗಳನ್ನು (ಪ್ರಮಾಣಗಳನ್ನು) ಮಾಡಿಯೇವು ಎಂದು ಹೇಳಿದರು.
ತೇ ನಿಶ್ಚಿತಾಸ್ತತ್ರ ಮಹರ್ಷಯಸ್ತು
ಸಮ್ಮನ್ಯಂತೋ ಧರ್ಮಮೇವಂ ನರೇಂದ್ರ |
ತತೋಽಶಪನ್ ಶಪಥಾನ್ ಪರ್ಯಯೇಣ
ಸಹೈವ ತೇ ಪಾರ್ಥಿವ ಪುತ್ರಪೌತ್ರೈಃ ॥15॥
ಎಲೈ ನರೇಂದ್ರನೇ, ಆ ಮಹರ್ಷಿಗಳು ಹೀಗೆ ಮಾಡುವುದು ಧರ್ಮವೆಂದು ನಿಶ್ಚಯಿಸಿ ಒಬ್ಬರ ಅನಂತರ ಇನ್ನೊಬ್ಬರು ತಮ್ಮ ಪುತ್ರಪೌತ್ರರನ್ನೂ ಸೇರಿಸಿ ಕ್ರೂರವಾದ ಪ್ರಮಾಣಗಳನ್ನು ಮಾಡಿದರು (ಶಪಥವನ್ನು ಮಾಡಿ ತಮ್ಮನ್ನೇ ಶಪಿಸಿಕೊಂಡರು).
ಭೃಗುಃ
ಪ್ರತ್ಯಾಕ್ರೋಶೇದಿಹಾಕ್ರುಷ್ಟಸ್ತಾಡಿತಃ ಪ್ರತಿತಾಡಯೇತ್ |
ಖಾದೇಚ್ಚ ಪೃಷ್ಠಮಾಂಸಾನಿ ಯಸ್ತೇ ಹರತಿ ಪುಷ್ಕರಮ್ ॥16॥
ಭೃಗು ನಿಮ್ಮ ಕಮಲವನ್ನು ಕದ್ದವನು ದೊಡ್ಡವರು ನಿಂದಿಸಿದಾಗ ಅವರನ್ನು ಪ್ರತಿಯಾಗಿ ಕಿರುಚಿ ನಿಂದಿಸಲಿ. ಅವರು ಹೊಡೆದಾಗ ಪ್ರತಿಯಾಗಿ ಹೊಡೆಯಲಿ. ಪ್ರಾಣಿಗಳ ಪೃಷ್ಠಮಾಂಸವನ್ನು ತಿನ್ನಲಿ.
ವಸಿಷ್ಠಃ
ಅಸ್ವಾಧ್ಯಾಯಪರೋ ಲೋಕೇ ಶ್ವಾನಂ ಚ ಪರಿಕರ್ಷತು |
ಪುರೇ ಚ ಭಿಕ್ಷುರ್ಭವತು ಯಸ್ತೇ ಹರತಿ ಪುಷ್ಕರಮ್ ॥17॥
ನಿನ್ನ ಕಮಲವನ್ನು ಕದ್ದವನು ಲೋಕದಲ್ಲಿ ಸ್ವಾಧ್ಯಾಯವನ್ನು ತ್ಯಜಿಸಿ ನಾಯಿಗಳನ್ನು ಎಳೆದುಕೊಂಡು ತಿರುಗಲಿ. ಪಟ್ಟಣದಲ್ಲಿ ವಾಸಿಸುವ ಸಂನ್ಯಾಸಿಯಾಗಲಿ.
ಕಶ್ಯಪಃ
ಸರ್ವತ್ರ ಸರ್ವಂ ಪಣತು ನ್ಯಾಸೇ ಲೋಭಂ ಕರೋತು ಚ |
ಕೂಟಸಾಕ್ಷಿತ್ವಮಭ್ಯೇತು ಯಸ್ತೇ ಹರತಿ ಪುಷ್ಕರಮ್ ॥18॥
ಕಶ್ಯಪ ನಿಮ್ಮ ಕಮಲವನ್ನು ಕದ್ದವನು ಜೂಜಿಲ್ಲಿ ಎಲ್ಲವನ್ನೂ ಪಣವಾಗಿ ಒಡ್ಡಲಿ. ಇನ್ನೊಬ್ಬರು ರಕ್ಷಣೆಗಾಗಿ ತಂದು ಇಟ್ಟಿದ್ದ ಪದಾರ್ಥದಲ್ಲಿ ಆಸೆಯನ್ನು ಹೊಂದಲಿ. ಸುಳ್ಳು ಸಾಕ್ಷಿಯನ್ನು ಹೇಳಲಿ.
ಗೌತಮಃ
ಜೀವತ್ವಹಂಕೃತೋ ಬುದ್ಧ್ಯಾ ವಿಪಣತ್ವಧಮೇನ ಸಃ |
ಕರ್ಷಕೋ ಮತ್ಸರೀ ಚಾಸ್ತು ಯಸ್ತೇ ಹರತಿ ಪುಷ್ಕರಮ್ ॥19॥
ಗೌತಮರು ನಿಮ್ಮ ಕಮಲವನ್ನು ಕದ್ದವನು ಅಹಂಕಾರ ಬುದ್ಧಿಯಿಂದ ಜೀವಿಸಲಿ. ಅಧಮರ ಜೊತೆಯಲ್ಲಿ ವ್ಯವಹಾರವನ್ನು ಮಾಡಲಿ. ಭೂವ್ಯವಸಾಯವನ್ನು ಮಾಡುವವನಾಗಿ ಮಾತ್ಸರ್ಯದಿಂದ ಕೂಡಿರಲಿ.
ಅಂಗಿರಾಃ
ಅಶುಚಿರ್ಬ್ರಹ್ಮಕೂಟೋಽಸ್ತು ಶ್ವಾನಂ ಚ ಪರಿಕರ್ಷತು |
ಬ್ರಹ್ಮಹಾನಿಕೃತಿಶ್ಚಾಸ್ತು ಯಸ್ತೇ ಹರತಿ ಪುಷ್ಕರಮ್ ॥20॥
ಅಂಗಿರಸರು ನಿಮ್ಮ ಕಮಲವನ್ನು ಕದ್ದವನು ವೇದಗಳ ರಾಶಿಗೆ ಆಶ್ರಯನಾಗಿ ಅಶುಚಿಯಾಗಲಿ. ನಾಯಿಗಳನ್ನು ಎಳೆದುಕೊಂಡು ಓಡಾಡಲಿ. ಬ್ರಹ್ಮಹತ್ಯೆಯನ್ನು ಮಾಡುವವನಾಗಲಿ.
ಧುಂಧುಮಾರಃ
ಅಕೃತಜ್ಞೋಽಸ್ತು ಮಿತ್ರಾಣಾಂ ಶೂದ್ರಾಯಾಂ ತು ಪ್ರಜಾಯತು |
ಏಕಃ ಸಂಪನ್ನಮಶ್ನಾತು ಯಸ್ತೇ ಹರತಿ ಪುಷ್ಕರಮ್ ॥21॥
ಧುಂಧುಮಾರ ನಿಮ್ಮ ಕಮಲವನ್ನು ಕದ್ದವನು ಮಿತ್ರರಿಗೆ ಕೃತಘ್ನನಾಗಲಿ. ಶೂದ್ರಸ್ತ್ರೀಯಲ್ಲಿ ಮಕ್ಕಳನ್ನು ಪಡೆಯಲಿ. ಒಬ್ಬನೇ ಕುಳಿತು ಒಳ್ಳೆಯ ಊಟವನ್ನು ಮಾಡಲಿ.
ಪೂರುಃ
ಚಿಕಿತ್ಸಾಯಾಂ ಪ್ರಚರತು ಭಾರ್ಯಯಾ ಚೈವ ಪುಷ್ಯತು |
ಶ್ವಶುರಾತ್ತಸ್ಯ ವೃತ್ತಿಃ ಸ್ಯಾದ್ ಯಸ್ತೇ ಹರತಿ ಪುಷ್ಕರಮ್ ॥22॥

ಪೂರು ನಿಮ್ಮ ಕಮಲವನ್ನು ಕದ್ದವನು ವೈದ್ಯವೃತ್ತಿಯಿಂದ ಜೀವನ ಮಾಡಲಿ. ಭಾರ್ಯೆಯಿಂದ ಪೋಷಿಸಲ್ಪಡಲಿ. ಮಾವನಿಂದ ಜೀವನೋಪಾಯವನ್ನು ಸಂಪಾದಿಸಲಿ.
ದಿಲೀಪಃ
ಉದಪಾನಪ್ಲವೇ ಗ್ರಾಮೇ ಬ್ರಾಹ್ಮಣೋ ವೃಷಲೀಪತಿಃ |
ತಸ್ಯ ಲೋಕಾನ್ ಸ ವ್ರಜತು ಯಸ್ತೇ ಹರತಿ ಪುಷ್ಕರಮ್ ॥23॥
ದಿಲೀಪ ನಿಮ್ಮ ಕಮಲವನ್ನು ಕದ್ದವನಿಗೆ ನೀರನ್ನು ದಾಟಿಸುವ ತೆಪ್ಪದಂತೆ ಎಲ್ಲ ಜನರನ್ನೂ ರಕ್ಷಿಸುವ ಒಂದೇ ಬಾವಿ ಇರುವ ಗ್ರಾಮದಲ್ಲಿ ವಾಸ ಮಾಡುವ ಶೂದ್ರ ಸ್ತ್ರೀಪತಿಯಾದ ಬ್ರಾಹ್ಮಣನಿಗೆ ಉಂಟಾಗುವ ಲೋಕಗಳು ಉಂಟಾಗಲಿ.
ಶುಕ್ರಃ
ಪೃಷ್ಠಮಾಂಸಂ ಸಮಶ್ನಾತು ದಿವಾ ಗಚ್ಛತು ಮೈಥುನಮ್ |
ಪ್ರೇಷ್ಯೋ ಭವತು ರಾಜ್ಞಶ್ಚ ಯಸ್ತೇ ಹರತಿ ಪುಷ್ಕರಮ್ ॥24॥
ಶುಕ್ರ ನಿಮ್ಮ ಕಮಲವನ್ನು ಕದ್ದವನು ಪೃಷ್ಠಮಾಂಸವನ್ನು ತಿನ್ನಲಿ. ಹಗಲಿನಲ್ಲಿ ಮೈಥುನವನ್ನು ಮಾಡಲಿ. ರಾಜನ ಸೇವಕನಾಗಲಿ.
ಜಮದಗ್ನಿಃ
ಅನಧ್ಯಾಯೇಷ್ವಧೀಯೀತ ಮಿತ್ರಂ ಶ್ರಾದ್ಧೇ ಚ ಭೋಜಯೇತ್ |
ಶ್ರಾದ್ಧೇ ಶೂದ್ರಸ್ಯ ಚಾಶ್ನೀಯಾದ್ ಯಸ್ತೇ ಹರತಿ ಪುಷ್ಕರಮ್ ॥25॥
ಜಮದಗ್ನಿ ನಿಮ್ಮ ಕಮಲವನ್ನು ಕದ್ದವನು ಅನಧ್ಯಾಯನದ ದಿನಗಳಲ್ಲಿ ಅಧ್ಯಯನವನ್ನು ಮಾಡಲಿ. ಶ್ರಾದ್ಧದಲ್ಲಿ ಮಿತ್ರನಿಗೆ ಭೋಜನವನ್ನು ಮಾಡಿಸಲಿ. ಶೂದ್ರನು ಮಾಡುವ ಶ್ರಾದ್ಧದಲ್ಲಿ ತಾನು ಭೋಜನವನ್ನು ಮಾಡಲಿ.
ಶಿಬಿಃ
ಅನಾಹಿತಾಗ್ನಿರ್ಮ್ರಿಯತಾಂ ಯಜ್ಞೇ ವಿಘ್ನಂ ಕರೋತು ಚ |
ತಪಸ್ವಿಭಿರ್ವಿರುಧ್ಯೇತ ಯಸ್ತೇ ಹರತಿ ಪುಷ್ಕರಮ್ ॥26॥
ಶಿಬಿ ನಿಮ್ಮ ಕಮಲವನ್ನು ಕದ್ದವನು ಅಗ್ನ್ಯಾಧಾನವನ್ನು ಮಾಡದೆ ಮರಣವನ್ನು ಹೊಂದಲಿ. ಯಜ್ಞಗಳಿಗೆ ವಿಘ್ನವನ್ನು ಉಂಟುಮಾಡಲಿ. ತಪಸ್ವಿಗಳ ಜೊತೆಯಲ್ಲಿ ಜಗಳವಾಡಲಿ.
ಯಯಾತಿಃ
ಅನೃತೌ ಜಟೀ ವ್ರತಿನ್ಯಾಂ ವೈ ಭಾರ್ಯಾಯಾಂ ಸಂಪ್ರಜಾಯತು |
ನಿರಾಕರೋತು ವೇದಾಂಶ್ಚ ಯಸ್ತೇ ಹರತಿ ಪುಷ್ಕರಮ್ ॥27॥
ಯಯಾತಿ ನಿಮ್ಮ ಕಮಲವನ್ನು ಕದ್ದವನು ಋತುಕಾಲವಲ್ಲದ ಕಾಲದಲ್ಲಿ ಶಿಖೆಯನ್ನು ಕಟ್ಟಿ ವ್ರತವನ್ನು ಧರಿಸಿದ ಪತ್ನಿಯ ಸಮಾಗಮವನ್ನು ಮಾಡಲಿ. ವೇದಗಳನ್ನು ತಿರಸ್ಕರಿಸಲಿ.
ನಹುಷಃ
ಅತಿಥಿಂ ಗೃಹಸ್ಥೋ ನುದತು ಕಾಮವೃತ್ತೋಽಸ್ತು ದೀಕ್ಷಿತಃ |
ವಿದ್ಯಾಂ ಪ್ರಯಚ್ಛತು ಭೃತೋ ಯಸ್ತೇ ಹರತಿ ಪುಷ್ಕರಮ್ ॥28॥
ನಹುಷ ನಿಮ್ಮ ಕಮಲವನ್ನು ಕದ್ದ ಗೃಹಸ್ಥನು ಅತಿಥಿಯನ್ನು ದೂರ ತಳ್ಳಲಿ. ದೀಕ್ಷೆಯನ್ನು ಹೊಂದಿ ಸ್ವೇಚ್ಛಾಚಾರಿಯಾಗಲಿ. ಸಂಬಳಕ್ಕಾಗಿ ವಿದ್ಯಾದಾನವನ್ನು ಮಾಡಲಿ.
ಅಂಬರೀಷಃ
ನೃಶಂಸಸ್ತ್ಯಕ್ತಧರ್ಮೋಽಸ್ತು ಸ್ತ್ರೀಷು ಜ್ಞಾತಿಷು ಗೋಷು ಚ |
ಬ್ರಾಹ್ಮಣಂ ಚಾಪಿ ಜಹತು ಯಸ್ತೇ ಹರತಿ ಪುಷ್ಕರಮ್ ॥29॥
ಅಂಬರೀಷ ನಿಮ್ಮ ಕಮಲವನ್ನು ಕದ್ದವನು ಕ್ರೂರಿಯಾಗಲಿ. ಸ್ತ್ರೀಯರ ವಿಷಯದಲ್ಲಿ, ಜ್ಞಾತಿಗಳ ವಿಷಯದಲ್ಲಿ ಮತ್ತು ಗೋವುಗಳ ವಿಷಯದಲ್ಲಿ ಧರ್ಮವನ್ನು ತ್ಯಜಿಸಲಿ. ತನ್ನನ್ನು ಆಶ್ರಯಿಸಿದ ಬ್ರಾಹ್ಮಣನನ್ನು ಪರಿತ್ಯಜಿಸಲಿ.
ನಾರದಃ
ಗೂಢೋಽಜ್ಞಾನೀ ಬಹಿಃ ಶಾಸ್ತ್ರಂ ಪಠತಾಂ ವಿಸ್ವರಂ ಪದಮ್ |
ಗರೀಯಸೋಽವಜಾನಾತು ಯಸ್ತೇ ಹರತಿ ಪುಷ್ಕರಮ್ ॥30॥
ನಾರದ ನಿಮ್ಮ ಕಮಲವನ್ನು ಕದ್ದವನು ಅಜ್ಞಾನಿಯಾಗಿ ಗೂಢನಾಗಿ ಬಾಹ್ಯ ಪ್ರದೇಶದಲ್ಲಿ ಅಪಸ್ವರ ಮತ್ತು ಅಪಪದಗಳಿಂದ ಶಾಸ್ತ್ರಪಾರಾಯಣವನ್ನು ಮಾಡಲಿ. ದೊಡ್ಡವರನ್ನು ಅವಮಾನ ಮಾಡಲಿ.
ನಾಭಾಗಃ
ಅನೃತಂ ಭಾಷತು ಸದಾ ಸದ್ಭಿಶ್ಚೈವ ವಿರುಧ್ಯತು |
ಶುಲ್ಕೇನ ಕನ್ಯಾಂ ದದತು ಯಸ್ತೇ ಹರತಿ ಪುಷ್ಕರಮ್ ॥31॥
ನಾಭಾಗ ನಿಮ್ಮ ಕಮಲವನ್ನು ಕದ್ದವರು ಯಾವಾಗಲೂ ಸುಳ್ಳು ಮಾತನಾಡಲಿ. ಸಜ್ಜನರ ಜೊತೆಯಲ್ಲಿ ವಿರೋಧವನ್ನು ಮಾಡಲಿ. ಶುಲ್ಕವನ್ನು ತೆಗೆದುಕೊಂಡು ಕನ್ಯಾದಾನವನ್ನು ಮಾಡಲಿ.
ಕವಿಃ
ಪದಾ ಸ ಗಾಂ ತಾಡಯತು ಸೂರ್ಯಂ ಚ ಪ್ರತಿಮೇಹತು |
ಶರಣಾಗತಂ ಚ ತ್ಯಜತು ಯಸ್ತೇ ಹರತಿ ಪುಷ್ಕರಮ್ ॥32॥
ಕವಿ ನಿಮ್ಮ ಕಮಲವನ್ನು ಕದ್ದವನು ಕಾಲಿನಿಂದ ಗೋವನ್ನು ಒದೆಯಲಿ. ಸೂರ್ಯನಿಗೆ ಎದುರಾಗಿ ಮೂತ್ರವಿಸರ್ಜನೆಯನ್ನು

ಮಾಡಲಿ. ಶರಣಾಗತನಾದವನನ್ನು ಪರಿತ್ಯಜಿಸಲಿ.
ವಿಶ್ವಾಮಿತ್ರಃ
ಕರೋತು ಭೃತಕೋಽವರ್ಷಾಂ ರಾಜ್ಞಶ್ಚಾಸ್ತು ಪುರೋಹಿತಃ |
ಋತ್ವಿಗಸ್ತು ಹ್ಯಯಾಜ್ಯಸ್ಯ ಯಸ್ತೇ ಹರತಿ ಪುಷ್ಕರಮ್ ॥33॥
ವಿಶ್ವಾಮಿತ್ರ ನಿಮ್ಮ ಕಮಲವನ್ನು ಕದ್ದವನು ಕೃಷೀವಲನಾಗಿ ಮಳೆಯನ್ನು ತಡೆಯಲಿ. ರಾಜನಿಗೆ ಪುರೋಹಿತನಾಗಲಿ. ಯಾಗವನ್ನು ಮಾಡಲು ಯೋಗ್ಯತೆ ಇಲ್ಲದವನಿಗೆ ಯಾಗವನ್ನು ಮಾಡಿಸುವ ಋತ್ವಿಜನಾಗಲಿ.
ಪರ್ವತಃ
ಗ್ರಾಮೇ ಚಾಧಿಕೃತಃ ಸೋಽಸ್ತು ಖರಯಾನೇನ ಗಚ್ಛತು |
ಶುನಃ ಕರ್ಷತು ವೃತ್ತ್ಯರ್ಥೇ ಯಸ್ತೇ ಹರತಿ ಪುಷ್ಕರಮ್ ॥34॥
ಪರ್ವತ ನಿಮ್ಮ ಕಮಲವನ್ನು ಕದ್ದವನು ಗ್ರಾಮಾಧಿಕಾರಿಯಾಗಲಿ. ಕತ್ತೆಯ ವಾಹನದಲ್ಲಿ ಸಂಚರಿಸಲಿ. ಜೀವನೋಪಾಯಕ್ಕಾಗಿ ನಾಯಿಗಳನ್ನು ಎಳೆದುಕೊಂಡು ತಿರುಗಲಿ.
ಭರದ್ವಾಜಃ
ಸರ್ವಪಾಪಸಮಾದಾನಂ ನೃಶಂಸೇ ಚಾನೃತೇ ಚ ಯತ್ |
ತತ್ ತಸ್ಯಾಸ್ತು ಸದಾ ಪಾಪಂ ಯಸ್ತೇ ಹರತಿ ಪುಷ್ಕರಮ್ ॥35॥
ಭರದ್ವಾಜರು ಕ್ರೂರಿಯೂ ಮತ್ತು ಅನೃತಭಾಷಿಯಾದವನಲ್ಲಿ ಎಷ್ಟು ಪಾಪಗಳಿವೆಯೋ ನಿಮ್ಮ ಕಮಲವನ್ನು ಕದ್ದವನಿಗೆ ಅಷ್ಟು ಪಾಪಗಳು ಉಂಟಾಗಲಿ.
ಸದಾ ವಸತು ಸನ್ನ್ಯಾಸೀ ಗ್ರಾಮೇ ವಾ ನಗರೇಪಿ ವಾ |
ಬಂಧುಭಿಃ ಸಹವಾಸೋಽಸ್ತು ಯಸ್ತೇ ಹರತಿ ಪುಷ್ಕರಮ್ ॥36॥
ನಿಮ್ಮ ಕಮಲವನ್ನು ಕದ್ದವನು ಸಂನ್ಯಾಸಿಯಾಗಿ ಯಾವಾಗಲೂ ಗ್ರಾಮದಲ್ಲಿ ಅಥವಾ ಪಟ್ಟಣದಲ್ಲಿ ವಾಸಮಾಡಲಿ. ಅವನು ಬಂಧುಗಳ ಜೊತೆಯಲ್ಲಿ ವಾಸ ಮಾಡುವವನಾಗಲಿ.
ಅಷ್ಟಕಃ
ಸ ರಾಜಾಸ್ತ್ವಕೃತಪ್ರಜ್ಞಃ ಕಾಮವೃತ್ತಿಶ್ಚ ಪಾಪಕೃತ್ |
ಅಧರ್ಮೇಣಾನುಶಾಸ್ತೂರ್ವೀಂ ಯಸ್ತೇ ಹರತಿ ಪುಷ್ಕರಮ್ ॥37॥
ಅಷ್ಟಕ ನಿಮ್ಮ ಕಮಲವನ್ನು ಕದ್ದವನು ಅವಿವೇಕಿಯಾದ ರಾಜನಾಗಲಿ. ಪಾಪವನ್ನು ಮಾಡುವವನಾಗಿ ಸ್ವೇಚ್ಛಾಚಾರಿಯಾಗಲಿ. ಅಧರ್ಮದಿಂದ ಭೂಮಿಯನ್ನು ಆಳಲಿ.
ಗಾಲವಃ
ಪಾಪಿಷ್ಠೇಭ್ಯಸ್ತ್ವನರ್ಘಾರ್ಹಃ ಸ ನರೋಽಸ್ತು ಸ್ವಪಾಪಕೃತ್ |
ದತ್ತತ್ವ ದಾನಂ ಕೀರ್ತಯತು ಯಸ್ತೇ ಹರತಿ ಪುಷ್ಕರಮ್ ॥38॥
ಗಾಲವರು ನಿಮ್ಮ ಕಮಲವನ್ನು ಕದ್ದವನು ಪಾಪಿಷ್ಠರಿಂದ ಪೂಜಿಸಲ್ಪಡಲಿ. ಸ್ವತಃ ಪಾಪವನ್ನು ಮಾಡುವವನಾಗಲಿ. ದಾನವನ್ನು ಮಾಡಿ ಅದನ್ನು ಹೇಳಿಕೊಳ್ಳಲಿ.
ಅರುಂಧತೀ
ಶ್ವಶ್ರ್ವಾಽಪವಾದಂ ವದತು ಭರ್ತುರ್ಭವತು ದುರ್ಮನಾಃ |
ಏಕಾ ಸ್ವಾದು ಸಮಶ್ನಾತು ಯಾ ತೇ ಹರತಿ ಪುಷ್ಕರಮ್ ॥39॥
ಅರುಂಧತೀ ನಿಮ್ಮ ಕಮಲವನ್ನು ಕದ್ದವಳು ಅತ್ತೆಯ ಜೊತೆಯಲ್ಲಿ ಯಾವಾಗಲೂ ಜಗಳವಾಡಲಿ. ಗಂಡನ ಮೇಲೆ ಕೋಪಿಸಿಕೊಳ್ಳಲಿ. ಒಬ್ಬಳೇ ವಿಚಿತ್ರವಾದ ಊಟವನ್ನು ಮಾಡಲಿ.
ವಾಲಖಿಲ್ಯಾಃ
ಏಕಪಾದೇನ ವೃತ್ತ್ಯರ್ಥಂ ಗ್ರಾಮದ್ವಾರೇ ಸ ತಿಷ್ಠತು |
ಧರ್ಮಜ್ಞಸ್ತ್ಯಕ್ತಧರ್ಮೋಽಸ್ತು ಯಸ್ತೇ ಹರತಿ ಪುಷ್ಕರಮ್ ॥40॥
ವಾಲಖಿಲ್ಯರು ನಿಮ್ಮ ಕಮಲವನ್ನು ಕದ್ದವನು ಗ್ರಾಮದ್ವಾರದಲ್ಲಿ ಜೀವನೋಪಾಯಕ್ಕಾಗಿ ಒಂದು ಕಾಲಿನಲ್ಲಿ ನಿಲ್ಲಲಿ (ನಿಂತು ಬೇಡಲಿ). ಧರ್ಮವನ್ನು ತಿಳಿದು ಧರ್ಮತ್ಯಾಗವನ್ನು ಮಾಡುವವನಾಗಲಿ.
ಪಶುಸಖಃ
ಅಗ್ನಿಹೋತ್ರಮನಾದೃತ್ಯ ಸುಖಂ ಸ್ವಪತು ಸ ದ್ವಿಜಃ |
ಪರಿವ್ರಾಟ್ ಕಾಮವೃತ್ತೋಽಸ್ತು ಯಸ್ತೇ ಹರತಿ ಪುಷ್ಕರಮ್ ॥41॥
ಪಶುಸಖ ನಿಮ್ಮ ಕಮಲವನ್ನು ಕದ್ದ ಬ್ರಾಹ್ಮಣನು ಅಗ್ನಿಹೋತ್ರ ಸಮಯದಲ್ಲಿ ಅಗ್ನಿಹೋತ್ರವನ್ನು ತಿರಸ್ಕರಿಸಿ ಸುಖವಾಗಿ ನಿದ್ರೆಯನ್ನು ಮಾಡಲಿ. ಸಂನ್ಯಾಸಿಯಾಗಿ ಸ್ವೇಚ್ಛಾಚಾರಿಯಾಗಲಿ.
ಸುರಭೀ
ಬಾಲ್ವಜೇನ ನಿದಾನೇನ ಕಾಂಸ್ಯಂ ಭವತು ದೋಹನಮ್ |
ದುಹ್ಯೇತ ಪರವತ್ಸೇನ ಯಾ ತೇ ಹರತಿ ಪುಷ್ಕರಮ್ ॥42॥
ಸುರಭೀ ನಿಮ್ಮ ಕಮಲವನ್ನು ಕದ್ದವನು ಬಲ್ವಜ ಎಂಬ ಹಗ್ಗದಿಂದ ಹಸುವಿನ ಕಾಲುಗಳನ್ನು ಕಟ್ಟಿ ಕಂಚಿನ ಪಾತ್ರೆಯಲ್ಲಿ ಬೇರೆ ಹಸುವಿನ ಕರುವಿನಿಂದ ಹಾಲನ್ನು ಕರೆಯುವವನಾಗಲಿ.

ಭೀಷ್ಮ:
ತತಸ್ತು ತೈಃ ಶಪಥೈಃ ಶಪ್ಯಮಾನೈಃ
ನಾನಾವಿಧೈರ್ಬಹುಭಿಃ ಕೌರವೇಂದ್ರ |
ಸಹಸ್ರಾಕ್ಷೋ ದೇವರಾಟ್ ಸಂಪ್ರಹೃಷ್ಟಃ
ಸಮೀಕ್ಷ್ಯ ತಂ ಕೋಪನಂ ವಿಪ್ರಮುಖ್ಯಮ್ ॥42॥
ಭೀಷ್ಮ ಎಲೈ ಕೌರವೇಂದ್ರನೇ, ಆ ಋಷಿಗಳು ನಾನಾವಿಧವಾಗಿ ಅನೇಕ ಶಪಥಗಳನ್ನು ಮಾಡುತ್ತಿರಲು ದೇವರಾಜನಾದ ಸಹಸ್ರಾಕ್ಷನಾದ ಇಂದ್ರನು ಬಹಳ ಸಂತೋಷಗೊಂಡು ಕೋಪಗೊಂಡಿದ್ದ ದ್ವಿಜಶ್ರೇಷ್ಠರಾದ ಅಗಸ್ತ್ಯರನ್ನು ನೋಡಿ ಮಾತನಾಡಿದನು.
ಅಥಾಬ್ರುವೀನ್ಮಘವಾ ಪ್ರತ್ಯಯಂ ಸ್ವಂ
ಸಮಾಭಾಷ್ಯ ತಮೃಷಿಂ ಜಾತರೋಷಮ್ |
ಬ್ರಹ್ಮರ್ಷಿದೇವರ್ಷಿನೃಪರ್ಷಿಮಧ್ಯೇ
ಯತ್ ತನ್ನಿಬೋಧೇಹ ಮಮಾದ್ಯ ರಾಜನ್ ॥43॥
ಆಗ ಇಂದ್ರನು ತನ್ನ ನಿರ್ಧಾರವನ್ನು ಹೇಳುತ್ತಾ ಕೋಪಗೊಂಡ ಆ ಋಷಿಗಳನ್ನು ಸಂಬೋಧಿಸಿ ಬ್ರಹ್ಮರ್ಷಿಗಳ, ದೇವರ್ಷಿಗಳ ಮತ್ತು ಮನುಷ್ಯ ಋಷಿಗಳ ಮಧ್ಯದಲ್ಲಿ ಏನು ಹೇಳಿದನೆಂದು ಎಲೈ ರಾಜನೇ, ನನ್ನಿಂದ ಕೇಳು.
ಶಕ್ರಃ
ಅಧ್ವರ್ಯವೇ ದುಹಿತರಂ ದದಾತು
ಚ್ಛಂದೋಗೇ ವಾ ಚರಿತಬ್ರಹ್ಮಚರ್ಯೇ |
ಆಥರ್ವಣಂ ವೇದಮಧೀತ್ಯ ವಿಪ್ರಃ
ಸ್ನಾಯೀತ ಯಃ ಪುಷ್ಕರಮಾದದಾತಿ ॥44॥
ಶಕ್ರ ನಿಮ್ಮ ಕಮಲವನ್ನು ಅಪಹರಿಸಿದವನು ತನ್ನ ಮಗಳನ್ನು ಅಧ್ವರ್ಯುವಿಗೆ ದಾನ ಮಾಡಲಿ ಅಥವಾ ಬ್ರಹ್ಮಚರ್ಯವ್ರತವನ್ನು ಆಚರಿಸಿದ ಛಂದೋಗನಿಗೆ (ಸಾಮವೇದವನ್ನು ಕಲಿತ ಉದ್ಗಾತೃವಿಗೆ) ದಾನವನ್ನು ಮಾಡಲಿ. ಅಥರ್ವಣ ವೇದವನ್ನು ಅಧ್ಯಯನ ಮಾಡಿ ವೇದಸ್ನಾತನಾಗಲಿ.
ಸರ್ವಾನ್ ವೇದಾನಧೀಯೀತ ಪುಣ್ಯಶೀಲೋಽಸ್ತು ಧಾರ್ಮಿಕಃ |
ಬ್ರಹ್ಮಣಃ ಸದನಂ ಯಾತು ಯಸ್ತೇ ಹರತಿ ಪುಷ್ಕರಮ್ ॥45॥
ನಿಮ್ಮ ಕಮಲವನ್ನು ಕದ್ದವನು ಎಲ್ಲ ವೇದಗಳನ್ನು ಅಧ್ಯಯನ ಮಾಡಲಿ. ಧಾರ್ಮಿಕನೂ, ಪುಣ್ಯಶೀಲನೂ ಆಗಲಿ. ಅವನು ಬ್ರಹ್ಮಲೋಕಕ್ಕೆ ಹೋಗುವವನಾಗಲಿ.
ಅಗಸ್ತ್ಯಃ
ಆಶೀರ್ವಾದಸ್ತ್ವಯಾ ಪ್ರೋಕ್ತಃ ಶಪಥೋ ಬಲಸೂದನ |
ದೀಯತಾಂ ಪುಷ್ಕರಂ ಮಹ್ಯಮೇಷ ಧರ್ಮಃ ಸನಾತನಃ ॥46॥
ಅಗಸ್ತ್ಯರು ಎಲೈ ಬಲಸೂದನನೇ, ನಿನ್ನ ಶಪಥವು ಆಶೀರ್ವಾದರೂಪವಾಗಿದೆ (ಆದ್ದರಿಂದ ನೀನೇ ಕಮಲಗಳನ್ನು ಅಪಹರಿಸಿದವನು). ನನ್ನ ಕಮಲಗಳನ್ನು ನನಗೇ ಕೊಟ್ಟುಬಿಡು. ಇದು ಸನಾತನವಾದ ಧರ್ಮ.
ಇಂದ್ರಃ
ನ ಮಯಾ ಭಗವನ್ ಲೋಭಾದ್ ಹೃತಂ ಪುಷ್ಕರಮದ್ಯ ವೈ |
ಧರ್ಮಂ ತು ಶ್ರೋತುಕಾಮೇನ ಹೃತಂ ನ ಕ್ರೋದ್ಧುಮರ್ಹಸಿ ॥47॥
ಧರ್ಮಃ ಶ್ರುತಃ ಸಮುತ್ಕೃಷ್ಟೋರ್ ಧರ್ಮಸೇತುರನಾಮಯಃ |
ಆರ್ಷೋ ವೈ ಶಾಶ್ವತೋ ನಿತ್ಯಮವ್ಯಯೋಽಯಂ ಮಯಾ ಶ್ರುತಃ ॥
ತದಿದಂ ಗೃಹ್ಯತಾಂ ವಿದ್ವನ್ ಪುಷ್ಕರಂ ಮುನಿಸತ್ತಮ |
ಅತಿಕ್ರಮಂ ಮೇ ಭಗವನ್ ಕ್ಷಂತುಮರ್ಹಸ್ಯನಿಂದಿತ ॥49॥
ಇಂದ್ರ ಪೂಜ್ಯನೇ, ಕಮಲದ ಮೇಲಿನ ಆಸೆಯಿಂದ ನಾನು ಈ ದಿನ ನಿಮ್ಮ ಕಮಲವನ್ನು ಅಪಹರಿಸಲಿಲ್ಲ. ನಿಮ್ಮ ಮುಖದಿಂದ ಧರ್ಮವನ್ನು ಕೇಳುವ ಆಸೆಯಿಂದ ಅಪಹರಿಸಿದೆ. ಕೋಪವನ್ನು ಮಾಡಬೇಡಿ. ಉತ್ಕೃಷ್ಟವಾದ ಧರ್ಮವನ್ನು ಕೇಳಿದ್ದಾಯಿತು. ಧರ್ಮಸೇತುವೆಗಳು ನಿರ್ದುಷ್ಟವಾಗಿವೆ. ಋಷಿಸಮ್ಮತವೂ, ಶಾಶ್ವತವೂ, ಅವ್ಯಯವೂ ಆದ ಈ ಧರ್ಮವನ್ನು ನಾನು ಕೇಳಿದ್ದಾಯಿತು. ವಿದ್ವಾಂಸರೇ, ಮುನಿಶ್ರೇಷ್ಠರೇ, ಈ ನಿಮ್ಮ ಕಮಲವನ್ನು ತೆಗೆದುಕೊಳ್ಳಿ. ಪೂಜ್ಯರೇ, ಅನಿಂದಿತರೇ, ನನ್ನ ಅಪರಾಧವನ್ನು ಕ್ಷಮಿಸಿ.
ಭೀಷ್ಮ:
ಇತ್ಯುಕ್ತಃ ಸ ಮಹೇಂದ್ರೇಣ ತಪಸ್ವೀ ಕೋಪನೋ ಭೃಶಮ್ |
ಜಗ್ರಾಹ ಪುಷ್ಕರಂ ಧೀಮಾನ್ ಪ್ರಸನ್ನಶ್ಚಾಭವನ್ಮುನಿಃ ॥50॥
ಭೀಷ್ಮ ಮಹೇಂದ್ರನಿಂದ ಹೀಗೆ ಹೇಳಲ್ಪಟ್ಟ ಬಹಳ ಕೋಪಶೀಲರಾದ ತಪಸ್ವಿಗಳಾದ, ಮೇಧಾವಿಗಳಾದ ಅಗಸ್ತ್ಯರು ಕಮಲಗಳನ್ನು ತೆಗೆದುಕೊಂಡು ಪ್ರಸನ್ನರಾದರು.
ಪ್ರಯಯುಸ್ತೇ ತತೋ ಭೂಯಸ್ತೀರ್ಥಾನಿ ವನಗೋಚರಾಃ |
ಪುಣ್ಯತೀರ್ಥೇಷು ಚ ತಥಾ ಗಾತ್ರಾಣ್ಯಾಪ್ಲಾವಯಂತಿ ತೇ ॥51॥
ಅವರು ಪುನಃ ಅಲ್ಲಿಂದ ಹೊರಟು ಕಾಡಿನಲ್ಲಿ ಸಂಚಾರ ಮಾಡುತ್ತಾ ಪುಣ್ಯ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದರು.
ಆಖ್ಯಾನಂ ಯ ಇದಂ ಯುಕ್ತಃ ಪಠೇತ್ ಪರ್ವಣಿಪರ್ವಣಿ |

ನ ಮೂರ್ಖಂ ಜನಯೇತ್ ಪುತ್ರಂ ನ ಭವೇಚ್ಚ ನಿರಾಕೃತಿಃ ॥52॥
ಈ ಆಖ್ಯಾನವನ್ನು ಯಾವನು ಶ್ರದ್ಧಾಯುಕ್ತನಾಗಿ ಪರ್ವಪರ್ವಗಳಲ್ಲಿ ಪಠಿಸುತ್ತಾನೋ ಅವನ ಪುತ್ರನು ಮೂರ್ಖನಾಗುವುದಿಲ್ಲ. ಅವನು ಯಾರಿಂದಲೂ ತಿರಸ್ಕರಿಸಲ್ಪಡುವುದಿಲ್ಲ.
ನ ತಮಾಪತ್ ಸ್ಪೃಶೇತ್ ಕಾಚಿನ್ನ ಜ್ವರೋ ನ ರುಜಶ್ಚ ಹ |
ವಿರಜಾಃ ಶ್ರೇಯಸಾ ಯುಕ್ತಃ ಪ್ರೇತ್ಯ ಸ್ವರ್ಗಮವಾಪ್ನುಯಾತ್ ॥53॥
ಅವನಿಗೆ ಆಪತ್ತಾಗಲೀ, ಜ್ವರವಾಗಲೀ, ಬೇರೆ ರೋಗವಾಗಲೀ ಬರುವುದಿಲ್ಲ. ದೋಷದೂರನಾಗಿ ಶ್ರೇಯೋಭಾಗಿಯಾಗಿ ಮರಣವನ್ನು ಹೊಂದಿದ ಮೇಲೆ ಸ್ವರ್ಗವನ್ನು ಪಡೆಯುತ್ತಾನೆ.
ಯಶ್ಚ ಶಾಸ್ತ್ರಮನುಧ್ಯಾಯೇದೃಷಿಭಿಃ ಪರಿಪಾಲಿತಮ್ |
ಸ ಗಚ್ಛೇದ್ ಬ್ರಹ್ಮಣೋ ಲೋಕಮವ್ಯಯಂ ಚ ನರೋತ್ತಮ ॥54॥
ಋಷಿಗಳಿಂದ ಪರಿಪಾಲಿತವಾದ ಈ ಧರ್ಮೋಪದೇಶ ರೂಪವಾದ ಶಾಸ್ತ್ರವನ್ನು ಅಧ್ಯಯನ ಮಾಡುವವನು ಎಲ್ಲೈ ನರೋತ್ತಮನೇ, ಶಾಶ್ವತವಾದ ಬ್ರಹ್ಮಲೋಕಕ್ಕೆ ಹೋಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪುಷ್ಕರಸ್ತೈನ್ಯಕಥನಂ ನಾಮ ಅಷ್ಟತ್ರಿಂಶೋತ್ತರಶತತಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಮೂವತ್ತೊಂಬತ್ತನೆಯ ಅಧ್ಯಾಯ
ಛತ್ರಿ ಮತ್ತು ಪಾದರಕ್ಷೆಗಳ ಉತ್ಪತ್ತಿ
ಯುಧಿಷ್ಠಿರಃ
ಯದಿದಂ ಶ್ರಾದ್ಧಧರ್ಮೇಷು ದೀಯತೇ ಭರತರ್ಷಭ |
ಛತ್ರಂ ಚೋಪಾನಹೌ ಚೈವ ಕೇನೈತತ್ ಸಂಪ್ರವರ್ತಿತಮ್ |
ಕಥಂ ಚೈತತ್ ಸಮುತ್ಪನ್ನಂ ಕಿಮರ್ಥಂ ಚ ಪ್ರದೀಯತೇ ॥1॥
ನ ಕೇವಲಂ ಶ್ರಾದ್ಧಧರ್ಮೇ ಪುಣ್ಯಕೇಷ್ವಪಿ ದೀಯತೇ |
ಏತದ್ ವಿಸ್ತರತೋ ರಾಜನ್ ಶ್ರೋತುಮಿಚ್ಛಾಮಿ ತತ್ತ್ವತಃ ॥2॥
ಯುಧಿಷ್ಠಿರ ಎಲ್ಲೈ ಭರತಶ್ರೇಷ್ಠನೇ, ಶ್ರಾದ್ಧವಿಧಿಗಳಲ್ಲಿ ಛತ್ರಿ ಮತ್ತು ಪಾದರಕ್ಷೆಗಳು ದಾನ ಮಾಡಲ್ಪಡುತ್ತವೆಯಷ್ಟೆ? ಇದು ಯಾರಿಂದ ಪ್ರವರ್ತಿತವಾಯಿತು? ಇದು ಹೇಗೆ ಉತ್ಪತ್ತಿಯನ್ನು ಹೊಂದಿತು? ಕೊಡುವುದರಿಂದ ಉಂಟಾಗುವ ಪ್ರಯೋಜನವೇನು? ಕೇವಲ ಶ್ರಾದ್ಧವಿಧಿಗಳಲ್ಲಿಯಲ್ಲ ಪುಣ್ಯಕಾರ್ಯಗಳಲ್ಲಿಯೂ ಇವು ಕೊಡಲ್ಪಡುತ್ತವೆ. ಎಲೈ ರಾಜನೇ, ಇದನ್ನು ವಿಸ್ತಾರವಾಗಿ ಸರಿಯಾಗಿ ತಿಳಿದುಕೊಳ್ಳಲು ಬಯಸುತ್ತೇನೆ.
ಭೀಷ್ಮಃ
ಶೃಣು ರಾಜನ್ನವಹಿತಶ್ಛತ್ರೋಪಾನಹವಿಸ್ತರಮ್ |
ಯಥೈತತ್ ಪ್ರಥಿತಂ ಲೋಕೇ ಯೇನ ಚೈತತ್ ಪ್ರವರ್ತಿತಮ್ ॥3॥
ಭೀಷ್ಮ ರಾಜನೇ, ಛತ್ರಿ-ಪಾದರಕ್ಷೆಗಳು ಹೇಗೆ ಲೋಕದಲ್ಲಿ ಪ್ರಸಿದ್ಧವಾದವು. ಯಾರು ಇದನ್ನು ಪ್ರವರ್ತಿಸಿದರು ಎಂಬುದನ್ನು ವಿಸ್ತಾರವಾಗಿ ಹೇಳುತ್ತೇನೆ, ಅವಧಾನದಿಂದ ಕೇಳು.
ಯಥಾ ಚಾಕ್ಷಯ್ಯತಾಂ ಪ್ರಾಪ್ತಂ ಪುಣ್ಯತಾಂ ಚ ಯಥಾ ಗತಮ್ |
ಸರ್ವಮೇತದಶೇಷೇಣ ಪ್ರವಕ್ಷ್ಯಾಮಿ ಜನಾಧಿಪ ॥4॥
ಎಲೈ ಜನಾಧಿಪನೇ, ಹೇಗೆ ಅದು ಅಕ್ಷಯಫಲವನ್ನೂ, ಪುಣ್ಯಫಲವನ್ನೂ ಹೊಂದಿತು ಎಂಬುದನ್ನು ಪೂರ್ಣವಾಗಿ ಹೇಳುತ್ತೇನೆ.
ಇತಿಹಾಸಂ ಪುರಾವೃತ್ತಮಿಮಂ ಶೃಣು ನರಾಧಿಪ |
ಜಮದಗ್ನೇಶ್ಚ ಸಂವಾದಂ ಸೂರ್ಯಸ್ಯ ಚ ಮಹಾತ್ಮನಃ ॥5॥
ಎಲೈ ರಾಜನೇ, ಮಹಾತ್ಮನಾದ ಸೂರ್ಯನಿಗೂ ಮತ್ತು ಜಮದಗ್ನಿಗೂ ಹಿಂದೆ ನಡೆದ ಸಂವಾದರೂಪವಾದ ಇತಿಹಾಸವನ್ನು ಕೇಳು.
ಪುರಾ ಸ ಭಗವಾನ್ ಸಾಕ್ಷಾದ್ ಧನುಷಾಽಕ್ರೀಡತ ಪ್ರಭೋ |
ಸಂಧಾಯ ಸಂಧಾಯ ಶರಾನ್ ಚಿಕ್ಷೇಪ ಕಿಲ ಭಾರ್ಗವಃ ॥6॥
ಎಲೈ ಪ್ರಭುವೇ, ಹಿಂದೆ ಪೂಜ್ಯರೂ ಭಾರ್ಗವರೂ ಆದ ಜಮದಗ್ನಿಗಳು ಧನುಸ್ಸಿನಿಂದ ಆಟವಾಡುತ್ತಾ ಬಾಣಗಳನ್ನು ಮತ್ತೆ ಮತ್ತೆ ಹೂಡಿ ಪ್ರಯೋಗಿಸುತ್ತಿದ್ದರು.
ತಾನ್ ಕ್ಷಿಪ್ತಾನ್ ರೇಣುಕಾ ಸರ್ವಾಂಸ್ತಸ್ಯೇಷೂನ್ ದೀಪ್ತತೇಜಸಃ |
ಆನಾಯ್ಯ ಸಾ ತದಾ ತಸ್ಮೈ ಪ್ರಾದಾದಸಕೃದಚ್ಯುತ ॥7॥
ಎಲೈ ಅಚ್ಯುತನೇ, ಈ ದೀಪ್ತವಾದ ತೇಜಸ್ಸನ್ನು ಹೊಂದಿದ ಅವರು ಪ್ರಯೋಗಿಸಿದ ಬಾಣಗಳೆಲ್ಲವನ್ನೂ ರೇಣುಕೆಯು ಅನೇಕ ಬಾರಿ ತಂದು ಅವರಿಗೆ ಕೊಡುತ್ತಿದ್ದಳು.
ಅಥ ತೇನ ಸ ಶಬ್ದೇನ ಜ್ಯಾತಳಸ್ಯ ಶರಸ್ಯ ಚ |
ಪ್ರಹೃಷ್ಟಃ ಸಂಪ್ರಚಿಕ್ಷೇಪ ಸಾ ಚ ಪ್ರತ್ಯಾಜಹಾರ ತಾನ್ ॥8॥
ಜಮದಗ್ನಿಗಳು ಹೆದೆಯ ಶಬ್ದದಿಂದಲೂ, ಪ್ರಯೋಗಿಸುವ ಬಾಣಗಳ ಶಬ್ದದಿಂದಲೂ ಸಂತೋಷಗೊಂಡು ಪುನಃ ಅವುಗಳನ್ನು

ಪ್ರಯೋಗಿಸುತ್ತಿದ್ದರು. ರೇಣುಕೆಯಾದರೂ ಪುನಃ ಅವುಗಳನ್ನು ತಂದುಕೊಡುತ್ತಿದ್ದಳು.
ತತೋ ಮಧ್ಯಾಹ್ನಮಾರೂಢೇ ಜ್ಯೇಷ್ಠಾಮೂಲೇ ದಿವಾಕರೇ |
ಸ ಸಾಯಕಾನ್ ದ್ವಿಜೋ ವಿದ್ಧ್ವಾ ರೇಣುಕಾಮಿದಮಬ್ರವೀತ್ ॥9॥
ಗಚ್ಛಾನಯ ವಿಶಾಲಾಕ್ಷಿ ಶರಾನೇತಾನ್ ಧನುಶ್ಚ್ಯುತಾನ್ |
ಯಾವದೇತಾನ್ ಪುನಃ ಸುಭ್ರು ಕ್ಷಿಪಾಮೀತಿ ಜನಾಧಿಪ ॥10॥
ಅನಂತರ ಒಮ್ಮೆ ಜ್ಯೇಷ್ಠಾ ನಕ್ಷತ್ರದಲ್ಲಿ ಸೂರ್ಯನು ಮಧ್ಯಾಹ್ನ ಕಾಲಕ್ಕೆ ಬಂದಿರುವಾಗ ಆ ಜ್ಞಾನಿಗಳು ಬಾಣಗಳನ್ನು ಪ್ರಯೋಗಿಸಿ ರೇಣುಕೆಯನ್ನು ಕುರಿತು- `ಎಲೌ ವಿಶಾಲಾಕ್ಷಿಯೇ, ನನ್ನ ಧನುಸ್ಸಿನಿಂದ ಹೊರಹೊಮ್ಮಿದ ಈ ಬಾಣಗಳನ್ನು ತೆಗೆದುಕೊಂಡು ಬಾ. ಎಲೌ ಸುಭ್ರುವೇ, ನಾನು ಆ ಬಾಣಗಳನ್ನು ಪುನಃ ಪ್ರಯೋಗಿಸುತ್ತೇನೆ' ಎಂದು ಹೇಳಿದರು.
ಸಾ ಗಚ್ಛತ್ಯಂತರಾ ಛಾಯಾವೃಕ್ಷಮಾಶ್ರಿತ್ಯ ಭಾಮಿನೀ |
ತಸ್ಥೌ ತಸ್ಯಾ ಹಿ ಸಂತಪ್ತಂ ಶಿರಃ ಪಾದೌ ತಥೈವ ಚ ॥11॥
ಸುಂದರಿಯಾದ ರೇಣುಕೆಯು ಹೋಗುತ್ತಾ ಮಧ್ಯದಲ್ಲಿ ಒಂದು ಮರದ ನೆರಳನ್ನು ಆಶ್ರಯಿಸಿ ನಿಂತಳು. ಅವಳ ಶಿರಸ್ಸು ಮತ್ತು ಪಾದಗಳು ಸೂರ್ಯನ ಶಾಖದಿಂದ ಕಾದುಹೋಗಿದ್ದವು.
ಸ್ಥಿತಾ ಸಾ ತು ಮುಹೂರ್ತಂ ವೈ ಭರ್ತುಃ ಶಾಪಭಯಾಚ್ಛುಭಾ |
ಯಯಾವಾನಯಿತುಂ ಭೂಯಃ ಸಾಯಕಾನಸಿತೇಕ್ಷಣಾ |
ಪ್ರತ್ಯಾಜಗಾಮ ಚ ಶರಾಂಸ್ತಾನಾದಾಯ ಯಶಸ್ವಿನೀ ॥12॥
ಒಂದು ಮುಹೂರ್ತದ ಕಾಲ ಅಲ್ಲಿಯೇ ನಿಂತ ಶುಭಳಾದ ಅವಳು ಪತಿಯ ಶಾಪದ ಭಯದಿಂದ ಪುನಃ ಬಾಣಗಳನ್ನು ತರಲು ಹೊರಟಳು. ಕಪ್ಪಾದ ಕಣ್ಣುಳ್ಳವಳೂ, ಯಶಸ್ವಿನಿಯೂ ಆದ ಅವಳು ಆ ಬಾಣಗಳನ್ನು ತೆಗೆದುಕೊಂಡು ಹಿಂದೆ ಬಂದಳು.
ಸಾ ಪ್ರಸ್ವಿನ್ನಾ ಸುಚಾರ್ವಂಗೀ ಪದ್ಭ್ಯಾಂ ದುಃಖಂ ನಿಯಚ್ಛತೀ |
ಉಪಾಜಗಾಮ ಭರ್ತಾರಂ ಭಯಾದ್ ಭರ್ತುಃ ಪ್ರವೇಪತೀ ॥13॥
ಅತ್ಯಂತ ಸುಂದರಿಯಾದ ಅವಳು ಮೈಯೆಲ್ಲಾ ಬೆವರಿ ಕಾಲಿಗೆ ಉಂಟಾಗುತ್ತಿದ್ದ ವೇದನೆಯನ್ನು ತಡೆದುಕೊಂಡು ಪತಿಯ ಭಯದಿಂದ ನಡುಗುತ್ತಾ ಪತಿಯ ಸಮೀಪಕ್ಕೆ ಬಂದಳು.
ಸ ತಾಮೃಷಿಸ್ತತಃ ಕ್ರುದ್ಧೋ ವಾಕ್ಯಮಾಹ ಶುಭಾನನಾಮ್ |
ರೇಣುಕೇ ಕಿಂ ಚಿರೇಣ ತ್ವಮಾಗತೇತಿ ಪುನಃ ಪುನಃ ॥14॥
ಆಗ ಋಷಿಗಳು ಕ್ರುದ್ಧರಾಗಿ ಶುಭಾನನೆಯಾದ ಅವಳನ್ನು ಕುರಿತು- `ಎಲೌ ರೇಣುಕೆಯೇ, ಏಕೆ ತಡವಾಗಿ ಬಂದೆ?' ಎಂದು ಪುನಃ ಪುನಃ ಕೇಳಿದರು.
ರೇಣುಕಾ
ಶಿರಸ್ತಾವತ್ ಪ್ರದೀಪ್ತಂ ಮೇ ಪಾದೌ ಚೈವ ತಪೋಧನ |
ಸೂರ್ಯತೇಜೋನಿರುದ್ಧಾಽಹಂ ವೃಕ್ಷಚ್ಛಾಯಾಮುಪಾಶ್ರಿತಾ ॥15॥
ಏತಸ್ಮಾತ್ ಕಾರಣಾದ್ ಬ್ರಹ್ಮನ್ ಚಿರಮೇತತ್ ಕೃತಂ ಮಯಾ |
ಏತಜ್ಜ್ಞಾತ್ವಾ ಮಮ ವಿಭೋ ಮಾ ಕ್ರುಧಸ್ತ್ವಂ ತಪೋಧನ ॥16॥
ರೇಣುಕಾ ಎಲೈ ತಪೋಧನರೇ, ನನ್ನ ಶಿರಸ್ಸು ಮತ್ತು ಪಾದಗಳು ಕಾದು ಹೋದವು. ಸೂರ್ಯನ ತೇಜಸ್ಸಿನಿಂದ ತಡೆಯಲ್ಪಟ್ಟ ನಾನು ಒಂದು ವೃಕ್ಷದ ನೆರಳನ್ನು ಆಶ್ರಯಿಸಿದೆ. ಪೂಜ್ಯರೇ, ಈ ಕಾರಣದಿಂದ ನಾನು ಬರುವುದು ತಡವಾಯಿತು. ಎಲೈ ವಿಭುವೇ, ತಪೋಧನರೇ, ಇದನ್ನು ತಿಳಿದು ನನ್ನ ಮೇಲೆ ಕೋಪವನ್ನು ಮಾಡಬೇಡಿ.
ಜಮದಗ್ನಿಃ
ಅದ್ಯೈನಂ ದೀಪ್ತಕಿರಣಂ ರೇಣುಕೇ ತವ ದುಃಖದಮ್ |
ಶರೈರ್ನಿಪಾತಯಿಷ್ಯಾಮಿ ಸೂರ್ಯಮಸ್ತ್ರಾಗ್ನಿತೇಜಸಾ ॥17॥
ಜಮದಗ್ನಿ ಎಲೌ ರೇಣುಕೆಯೇ, ನಿನಗೆ ದುಃಖವನ್ನು ನೀಡಿದ ತೀಕ್ಷ್ಣವಾದ ಕಿರಣಗಳುಳ್ಳ ಈ ಸೂರ್ಯನನ್ನು ನನ್ನ ಅಸ್ತ್ರಗಳೆಂಬ ಅಗ್ನಿತೇಜಸ್ಸಿನಿಂದ ಕೂಡಿದ ಬಾಣಗಳಿಂದ ಈಗ ಹೊಡೆದು ಉರುಳಿಸುತ್ತೇನೆ.
ಭೀಷ್ಮಃ
ಸ ವಿಸ್ಫಾರ್ಯ ಧನುರ್ದಿವ್ಯಂ ಗೃಹೀತ್ವಾ ಚ ಬಹೂನ್ ಶರಾನ್ |
ಅತಿಷ್ಠತ್ ಸೂರ್ಯಮಭಿತೋ ಯತೋ ಯಾತಿ ತತೋಮುಖಃ ॥18॥
ಭೀಷ್ಮ ಅವರು ತಮ್ಮ ದಿವ್ಯವಾದ ಧನುಸ್ಸನ್ನು ಎಳೆದು ಅನೇಕ ಬಾಣಗಳನ್ನು ಹಿಡಿದು ಸೂರ್ಯನು ಎಲ್ಲೆಲ್ಲಿ ಹೋಗುತ್ತಾನೆಯೋ ಅಲ್ಲಲ್ಲಿ ಅವನಿಗೆ ಅಭಿಮುಖವಾಗಿ ನಿಂತರು.
ಅಥ ತಂ ಪ್ರಹರಿಷ್ಯಂತಂ ಸೂರ್ಯೋಽಭ್ಯೇತ್ಯ ವಚೋಽಬ್ರವೀತ್ |
ದ್ವಿಜರೂಪೇಣ ಕೌಂತೇಯ ಕಿಂ ತೇ ಸೂರ್ಯೋಽಪರಾಧ್ಯತೇ ॥19॥
ಎಲೈ ಕೌಂತೇಯನೇ, ಹೊಡೆಯುವುದರಲ್ಲಿದ್ದ ಅವರ ಬಳಿಗೆ ಸೂರ್ಯನು ಬ್ರಾಹ್ಮಣ ರೂಪದಿಂದ ಬಂದು ಸೂರ್ಯನು ನಿಮಗೆ ಯಾವ ಅಪರಾಧವನ್ನು ಮಾಡಿದ್ದಾನೆ ಎಂದು ಕೇಳಿದನು.
ಆದತ್ತೇ ರಶ್ಮಿಭಿಃ ಸೂರ್ಯೋ ದಿವಿ ವಿದ್ವನ್ ತತಸ್ತತಃ |
ರಸಂ ಸ ತಂ ವೈ ವರ್ಷಾಸು ಪ್ರವರ್ಷತಿ ದಿವಾಕರಃ ॥20॥
ಎಲೈ ವಿದ್ವಾಂಸರೇ, ಹಗಲಿಗೆ ಕಾರಣನಾದ ಸೂರ್ಯನು ಅಲ್ಲಲ್ಲಿರುವ ರಸವನ್ನು ಎಳೆದುಕೊಂಡು ಅದನ್ನು ಮಳೆಗಾಲದಲ್ಲಿ ಮಳೆಯ

ರೂಪದಲ್ಲಿ ಹಿಂದೆ ಕೊಡುತ್ತಾನೆ.
ತತೋಽನ್ನಂ ಜಾಯತೇ ವಿಪ್ರ ಮನುಷ್ಯಾಣಾಂ ಸುಖಾವಹಮ್ |
ಅನ್ನಂ ಪ್ರಾಣಾ ಇತಿ ಯಥಾ ವೇದೇಷು ಪರಿಪಠ್ಯತೇ ||21||
ಎಲೈ ಬ್ರಾಹ್ಮಣರೇ, ಅದರಿಂದ ಮನುಷ್ಯರಿಗೆ ಸುಖಪ್ರದವಾದ ಅನ್ನವು ಉತ್ಪತ್ತಿಯಾಗುತ್ತದೆ. ಅನ್ನವೇ ಪ್ರಾಣ ಎಂದು ಯಥಾರ್ಥವಾಗಿ ವೇದಗಳಲ್ಲಿ ಹೇಳಲ್ಪಟ್ಟಿದೆ.
ಅಥಾಭ್ರೇಷು ನಿಗೂಢಶ್ಚ ರಶ್ಮಿಭಿಃ ಪರಿವಾರಿತಃ |
ಸಪ್ತ ದ್ವೀಪಾನಿಮಾನ್ ಬ್ರಹ್ಮನ್ ವರ್ಷೇಣಾಭಿಪ್ರವರ್ಷತಿ ||22||
ಎಲೈ ಬ್ರಾಹ್ಮಣರೇ, ಅನಂತರದಲ್ಲಿ ಮೋಡಗಳಲ್ಲಿ ಅವಿತುಕೊಂಡು ಕಿರಣಗಳಿಂದ ಪರಿವೃತನಾಗಿ ಈ ಏಳು ದ್ವೀಪಗಳನ್ನೂ ಮಳೆಯಿಂದ ನೆನೆಸುತ್ತಾನೆ.
ತತಸ್ತದೌಷಧೀನಾಂ ಚ ವೀರುಧಾಂ ಪತ್ರಪುಷ್ಪಜಮ್ |
ಸರ್ವಂ ವರ್ಷಾಭಿನಿರ್ವೃತ್ತಮನ್ನಂ ಸಂಭವತಿ ಪ್ರಭೋ ||23||
ಎಲೈ ಪ್ರಭುವೇ, ಅನಂತರ ಉಂಟಾದ ಮಳೆಯಿಂದ ತೃಪ್ತವಾದ ಓಷಧಿ ಮತ್ತು ಲತೆಗಳ ಪತ್ರ-ಪುಷ್ಪಗಳಲ್ಲಿ ಅನ್ನವುಂಟಾಗುತ್ತದೆ.
ಜಾತಕರ್ಮಾಣಿ ಸರ್ವಾಣಿ ವ್ರತೋಪನಯನಾನಿ ಚ |
ಗೋದಾನಾನಿ ವಿವಾಹಾಶ್ಚ ತಥಾ ಯಜ್ಞಸಮೃದ್ಧಯಃ ||24||
ಸತ್ರಾಣಿ ದಾನಾನಿ ತಥಾ ಸಂಯೋಗಾ ವಿತ್ತಸಂಚಯಾಃ |
ಅನ್ನತಃ ಸಂಪ್ರವರ್ತಂತೇ ಯಥಾ ತ್ವಂ ವೇತ್ಥ ಭಾರ್ಗವ ||25||
ಜಾತಕರ್ಮಗಳು, ವ್ರತೋಪನಯನಗಳು, ಗೋದಾನಗಳು, ವಿವಾಹಗಳು, ಸಮೃದ್ಧವಾದ ಯಜ್ಞಗಳು, ಸತ್ರಗಳು, ವಿವಿಧ ದಾನಗಳು, ಸಮಾಗಮಗಳು, ಧನಸಂಗ್ರಹ ಎಲ್ಲವೂ ಎಲೈ ಭಾರ್ಗವರೇ, ನೀವು ತಿಳಿದಿರುವಂತೆ ಅನ್ನದಿಂದಲೇ ಉಂಟಾಗುತ್ತವೆ.
ರಮಣೀಯಾನಿ ಯಾವಂತಿ ಯಾವದಾರಂಭಕಾಣಿ ಚ |
ಸರ್ವಮನ್ನಾತ್ ಪ್ರಭವತಿ ವಿದಿತಂ ಕೀರ್ತಯಾಮಿ ತೇ ||26||
ಸರ್ವಂ ಹಿ ವೇತ್ಥ ವಿಪ್ರ ತ್ವಂ ಯದೇತತ್ ಕೀರ್ತಿತಂ ಮಯಾ |
ಪ್ರಸಾದಯೇ ತ್ವಾ ವಿಪ್ರರ್ಷೇ ಕಿಂ ತೇ ಸೂರ್ಯೋ ನಿಪಾತ್ಯತೇ ||27||
ರಮಣೀಯವಾದ ವಸ್ತುಗಳು ಎಷ್ಟಿವೆಯೋ ಮತ್ತು ಉತ್ಪತ್ತಿ ಹೊಂದುವ ವಸ್ತುಗಳು ಎಷ್ಟಿವೆಯೋ ಅವೆಲ್ಲವೂ ಅನ್ನದಿಂದಲೇ ಉಂಟಾಗುತ್ತವೆ. ನಿಮಗೆ ತಿಳಿದಿರುವುದನ್ನೇ ನಾನು ಹೇಳುತ್ತಿದ್ದೇನೆ. ಎಲೈ ಬ್ರಾಹ್ಮಣರೇ, ನಾನು ಹೇಳುವುದೆಲ್ಲವನ್ನೂ ನೀವು ತಿಳಿದಿದ್ದೀರಿ. ಎಲೈ ವಿಪ್ರರ್ಷಿಗಳೇ, ನಿಮ್ಮನ್ನು ಪ್ರಸನ್ನರಾಗಿ ಎಂದು ಕೇಳುತ್ತಿದ್ದೇನೆ. ನೀವು ಏತಕ್ಕೆ ಸೂರ್ಯನನ್ನು ಕೆಡವುತ್ತಿದ್ದೀರಿ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅನ್ನಪ್ರಶಂಸಾ ನಾಮ ಏಕೋನಚತ್ವಾರಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಮೂವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತನೆಯ ಅಧ್ಯಾಯ
ಛತ್ರಿ ಮತ್ತು ಪಾದರಕ್ಷೆಗಳ ದಾನ
ಯುಧಿಷ್ಠಿರಃ
ಏವಂ ತದಾ ಪ್ರಯಾಚಂತಂ ಭಾಸ್ಕರಂ ಮುನಿಸತ್ತಮಃ |
ಜಮದಗ್ನಿರ್ಮಹಾತೇಜಾಃ ಕಿಂ ಕಾರ್ಯಂ ಪ್ರತ್ಯಪದ್ಯತ ||1||
ಯುಧಿಷ್ಠಿರ ಹಾಗೆ ಯಾಚನೆಯನ್ನು ಮಾಡುತ್ತಿದ್ದ ಸೂರ್ಯನ ವಿಷಯದಲ್ಲಿ ಮುನಿಶ್ರೇಷ್ಠರೂ, ಮಹಾತೇಜಸ್ವಿಗಳೂ ಆದ ಜಮದಗ್ನಿಗಳು ಏನು ಮಾಡಿದರು?
ಭೀಷ್ಮಃ
ತಥಾ ಪ್ರಯಾಚಮಾನಸ್ಯ ಮುನಿರಗ್ನಿಸಮಪ್ರಭಃ |
ಜಮದಗ್ನಿಃ ಶಮಂ ನೈವ ಜಗಾಮ ಕುರುನಂದನ ||2||
ಭೀಷ್ಮ ಎಲೈ ಕುರುನಂದನನೇ, ಸೂರ್ಯನು ಆ ರೀತಿಯಲ್ಲಿ ಯಾಚಿಸುತ್ತಿದ್ದರೂ ಅಗ್ನಿಗೆ ಸಮಾನವಾದ ತೇಜಸ್ಸುಳ್ಳ ಜಮದಗ್ನಿಗಳು ಶಾಂತರಾಗಲಿಲ್ಲ.
ತತಃ ಸೂರ್ಯೋ ಮಧುರಯಾ ವಾಚಾ ತಮಿದಮಬ್ರವೀತ್ |
ಕೃತಾಂಜಲಿರ್ವಿಪ್ರರೂಪೀ ಪ್ರಣಮ್ಯೇದಂ ವಿಶಾಂಪತೇ ||3||
ಎಲೈ ರಾಜನೇ, ಆಗ ವಿಪ್ರರೂಪವನ್ನು ಧರಿಸಿದ್ದ ಸೂರ್ಯನು ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದು ಮಧುರವಾದ ಮಾತುಗಳಿಂದ ಹೀಗೆ ಹೇಳಿದನು.
ಚಲಂ ನಿಮಿತ್ತಂ ವಿಪ್ರರ್ಷೇ ಸದಾ ಸೂರ್ಯಸ್ಯ ಗಚ್ಛತಃ |
ಕಥಂ ಚಲಂ ವೇತ್ಸ್ಯಸಿ ತ್ವಂ ಸದಾ ಯಾಂತಂ ದಿವಾಕರಮ್ ||4||
ಎಲೈ ವಿಪ್ರರ್ಷಿಯೇ, ಸದಾ ಚಲಿಸುವ ಸೂರ್ಯನ ಗುರಿಯು ಚಂಚಲವಾದುದು. ಸದಾ ಚಲಿಸುವ ಸೂರ್ಯನನ್ನು ನೀವು ಬಾಣದಿಂದ ಹೇಗೆ ಹೊಡೆಯುವಿರಿ?

ಜಮದಗ್ನಿಃ
ಸ್ಥಿರಂ ವಾಪಿ ಚಲಂ ವಾಪಿ ಜಾನೇ ತ್ವಾಂ ಜ್ಞಾನಚಕ್ಷುಷಾ |
ಅವಶ್ಯಂ ವಿನಯಾಧಾನಂ ಕಾರ್ಯಮದ್ಯ ಮಯಾ ತವ ॥5॥
ಅಪರಾಹ್ಣೇ ನಿಮೇಷಾರ್ಧಂ ತಿಷ್ಠಸಿ ತ್ವಂ ದಿವಾಕರ |
ತತ್ರ ವೇತ್ಸ್ಯಾಮಿ ಸೂರ್ಯ ತ್ವಾಂ ನ ಮೇಽತ್ರಾಸ್ತಿ ವಿಚಾರಣಾ ॥6॥
ಜಮದಗ್ನಿ ನೀನು ಸ್ಥಿರವಾಗಿರು ಅಥವಾ ಚಲಿಸುತ್ತಿರು. ನೀನು ಯಾರೆಂದು ನಾನು ಜ್ಞಾನದೃಷ್ಟಿಯಿಂದ ತಿಳಿದಿದ್ದೇನೆ. ನಾನು ನಿನಗೆ ಈ ದಿನ ಅವಶ್ಯವಾಗಿ ವಿನಯದ ಪಾಠವನ್ನು ಕಲಿಸಬೇಕಾಗಿದೆ. ಎಲೈ ದಿವಾಕರನೇ, ನೀನು ಅಪರಾಹ್ಣದಲ್ಲಿ ಅರ್ಧ ನಿಮಿಷದ ಕಾಲ ಸ್ಥಿರವಾಗಿ ನಿಲ್ಲುತ್ತೀಯೆ. ಆಗ ನಿನಗೆ ಸರಿಯಾಗಿ ಹೊಡೆಯುವೆನು. ಇದರಲ್ಲಿ ಬೇರೆ ವಿಚಾರವೇ ಇಲ್ಲ.
ಸೂರ್ಯಃ
ಅಸಂಶಯಂ ಮಾಂ ವಿಪ್ರರ್ಷೇ ವೇತ್ಸ್ಯಸೇ ಧನ್ವಿನಾಂ ವರ |
ಅಪಕಾರಿಣಂ ತು ಮಾಂ ವಿದ್ಧಿ ಭಗವನ್ ಶರಣಾಗತಮ್ ॥7॥
ಸೂರ್ಯ ಎಲೈ ಧನುರ್ಧಾರಿಗಳಲ್ಲಿ ಶ್ರೇಷ್ಠರೇ, ವಿಪ್ರರ್ಷಿಗಳೇ, ನಿಸ್ಸಂಶಯವಾಗಿ ನೀವು ನನ್ನನ್ನು ಹೊಡೆಯುವಿರಿ. ಆದರೆ ಪೂಜ್ಯರೇ, ಅಪಕಾರವನ್ನು ಮಾಡಿದ ನಾನು ನಿಮಗೆ ಶರಣಾಗತನಾಗಿದ್ದೇನೆಂದು ತಿಳಿಯಿರಿ.
ಭೀಷ್ಮಃ
ತತಃ ಪ್ರಹಸ್ಯ ಭಗವಾನ್ ಜಮದಗ್ನಿರುವಾಚ ತಮ್ |
ನ ಭೀಃ ಸೂರ್ಯ ತ್ವಯಾ ಕಾರ್ಯಾ ಪ್ರಣಿಪಾತಗತೋ ಹ್ಯಸಿ ॥8॥
ಭೀಷ್ಮ ಆಗ ಪೂಜ್ಯರಾದ ಜಮದಗ್ನಿಗಳು ನಕ್ಕು ಅವನನ್ನು ಕುರಿತು- `ನೀನು ನಮಸ್ಕರಿಸಿದ್ದೀಯೆ. ಹೆದರಬೇಕಾದ ಅವಶ್ಯಕತೆ ಇಲ್ಲ.
ಬ್ರಾಹ್ಮಣೇಷ್ವಾರ್ಜವಂ ಯಚ್ಚ ಸ್ಥೈರ್ಯಂ ಚ ಧರಣೀತಳೇ |
ಸೌಮ್ಯತಾಂ ಚೈವ ಸೋಮಸ್ಯ ಗಾಂಭೀರ್ಯಂ ವರುಣಸ್ಯ ಚ ॥9॥
ದೀಪ್ತಿಮಗ್ನೇಃ ಪ್ರಭಾಂ ಮೇರೋಃ ಪ್ರತಾಪಂ ತಪನಸ್ಯ ಚ |
ಏತಾನ್ಯತಿಕ್ರಮೇದ್ ಯೋ ವೈ ಸ ಹನ್ಯಾಚ್ಛರಣಾಗತಮ್ ॥10॥
ಬ್ರಾಹ್ಮಣರ ಆರ್ಜವ, ಭೂಮಿಯ ಸ್ಥೈರ್ಯ, ಚಂದ್ರನ ಸೌಮ್ಯತೆ, ವರುಣನ ಗಾಂಭೀರ್ಯ, ಅಗ್ನಿಯ ಪ್ರಕಾಶ, ಮೇರುವಿನ ಕಾಂತಿ, ಸೂರ್ಯನ ತಾಪ ಇವುಗಳನ್ನು ಯಾವನು ಬದಲಾಯಿಸುವನೋ ಅವನು ಶರಣಾಗತನನ್ನು ಕೊಂದಾನು.
ಭವೇತ್ ಸ ಗುರುತಲ್ಪೀ ಚ ಬ್ರಹ್ಮಹಾ ಚ ತಥಾ ಭವೇತ್ |
ಸುರಾಪಾನಂ ಚ ಕುರ್ಯಾತ್ ಸ ಯೋ ಹನ್ಯಾಚ್ಛರಣಾಗತಮ್ ॥11॥
ಶರಣಾಗತನನ್ನು ಕೊಲ್ಲುವವನು (ಹಿಂಸಿಸುವವನು) ಗುರುತಲ್ಪಗಾಮಿಯಾದಾನು. ಬ್ರಹ್ಮಹತ್ಯೆಯನ್ನು ಮತ್ತು ಸುರಾಪಾನವನ್ನು ಮಾಡಿಯಾನು.
ಏತಸ್ಯ ತ್ವಪನೀತಸ್ಯ ಸಮಾಧಿಂ ತಾತ ಚಿಂತಯ |
ಯಥಾ ಸುಖಗಮಃ ಪಂಥಾ ಭವೇತ್ ತ್ವದ್ರಶ್ಮಿತಾಪಿತಃ ॥12॥
ಎಲೈ ಪ್ರೀತಿಪಾತ್ರನೇ, ನೀನು ಮಾಡಿದ ಈ ಅಪಚಾರಕ್ಕೆ ಪರಿಹಾರವನ್ನು ಚಿಂತಿಸು. ನಿನ್ನ ಕಿರಣಗಳಿಂದ ತಪ್ತವಾದ ಮಾರ್ಗವು ಹೇಗೆ ಸುಖವಾಗಿ ಸಂಚರಿಸಲು ಯೋಗ್ಯವೋ ಹಾಗೆ ಮಾಡು'.
ಭೀಷ್ಮಃ
ಏತಾವದುಕ್ತ್ವಾ ಸ ತದಾ ತೂಷ್ಣೀಮಾಸೀದ್ ಭೃಗೂದ್ವಹಃ |
ಅಥ ಸೂರ್ಯೋ ದದೌ ತಸ್ಮೈ ಛತ್ರೋಪಾನಹಮಾಶು ವೈ ॥13॥
ಭೀಷ್ಮ ಭೃಗೂದ್ವಹರಾದ ಜಮದಗ್ನಿಗಳು ಇಷ್ಟು ಮಾತನ್ನು ಹೇಳಿ ಸುಮ್ಮನಾದರು. ಆಗ ಸೂರ್ಯನು ಅವರಿಗೆ ಶೀಘ್ರವಾಗಿ ಛತ್ರಿ ಮತ್ತು ಪಾದರಕ್ಷೆಗಳನ್ನು ಕೊಟ್ಟನು.
ಸೂರ್ಯಃ
ಮಹರ್ಷೇ ಶಿರಸಸ್ತ್ರಾಣಂ ಛತ್ರಂ ಮದ್ರಶ್ಮಿವಾರಣಮ್ |
ಪ್ರತಿಗೃಹ್ಯತಾಂ ಪದ್ಭ್ಯಾಂ ಚ ತ್ರಾಣಾರ್ಥಂ ಚರ್ಮಪಾದುಕೇ ॥14॥
ಅದ್ಯಪ್ರಭೃತಿ ಚೈವೈತಲ್ಲೋಕೇ ಸಂಪ್ರಚರಿಷ್ಯತಿ |
ಪುಣ್ಯದಾನೇಷು ಸರ್ವೇಷು ಪರಮಕ್ಷಯ್ಯಮೇವ ಚ ॥15॥
ಸೂರ್ಯ ಮಹರ್ಷಿಗಳೇ, ಶಿರಸ್ಸಿನ ತ್ರಾಣರೂಪವಾಗಿರುವ ಈ ಛತ್ರಿಯು ನನ್ನ ಕಿರಣಗಳನ್ನು ನಿವಾರಿಸುವುದು. ಪಾದಗಳ ರಕ್ಷಣೆಗಾಗಿ ಈ ಚರ್ಮದಿಂದ ಮಾಡಿದ ಪಾದುಕೆಗಳಿವೆ. ಇವುಗಳನ್ನು ಸ್ವೀಕರಿಸು. ಇಂದಿನಿಂದ ಪ್ರಾರಂಭಿಸಿ ಲೋಕದಲ್ಲಿ ಎಲ್ಲ ಪ್ರಾಣಿಗಳಲ್ಲಿಯೂ ಛತ್ರಿ ಮತ್ತು ಪಾದರಕ್ಷೆಗಳ ದಾನವು ಪ್ರವೃತ್ತವಾಗುತ್ತದೆ. ಅದು ಅಕ್ಷಯವಾದ ಫಲವನ್ನು ಕೊಡುವಂತಹದ್ದು.
ಭೀಷ್ಮಃ
ಉಪಾನಚ್ಛತ್ರಮೇತದ್ ವೈ ಸೂರ್ಯೇಣೇಹ ಪ್ರವರ್ತಿತಮ್ |
ಪುಣ್ಯಮೇತದಭಿಖ್ಯಾತಂ ತ್ರಿಷು ಲೋಕೇಷು ಭಾರತ॥16॥
ಭೀಷ್ಮ ಎಲೈ ಭಾರತನೇ, ಪಾದುಕೆ ಮತ್ತು ಛತ್ರಿಗಳು ಸೂರ್ಯನಿಂದ ಪ್ರವರ್ತಿತವಾದವು. ಅದರ ದಾನವು ಮೂರುಲೋಕಗಳಲ್ಲಿಯೂ ಪುಣ್ಯಪ್ರದವೆಂದು ಹೇಳಲ್ಪಡುತ್ತದೆ.
ತಸ್ಮಾತ್ ಪ್ರಯಚ್ಛ ವಿಪ್ರೇಭ್ಯಶ್ಛತ್ರೋಪಾನಹಮುತ್ತಮಮ್ |

ಧರ್ಮಸ್ತೇ ಸುಮಹಾನ್ ಭಾವೀ ನ ಮೇಽತ್ರಾಸ್ತಿ ವಿಚಾರಣಾ ॥17॥
ಆದ್ದರಿಂದ ಬ್ರಾಹ್ಮಣರಿಗೆ ಶ್ರೇಷ್ಠವಾದ ಛತ್ರಿ ಮತ್ತು ಪಾದುಕೆಗಳನ್ನು ಕೊಡು. ನಿನಗೆ ಬಹಳ ದೊಡ್ಡ ಧರ್ಮವುಂಟಾಗುವುದು. ಇದರಲ್ಲಿ ನಿನಗೆ ಯಾವ ಸಂಶಯವೂ ಇಲ್ಲ.
ಛತ್ರಂ ಹಿ ಭರತಶ್ರೇಷ್ಠ ಯಃ ಪ್ರದದ್ಯಾದ್ ದ್ವಿಜಾತಯೇ |
ಶುಭ್ರಂ ಶತಶಲಾಕಂ ವೈ ಸ ಪ್ರೇತ್ಯ ಸುಖಮೇಧತೇ ॥18॥
ಎಲೈ ಭರತಶ್ರೇಷ್ಠನೇ, ಯಾವನು ದ್ವಿಜರಿಗೆ ನೂರುಕಡ್ಡಿಗಳಿರುವ ಶುಭವಾದ ಛತ್ರಿಯನ್ನು ದಾನ ಮಾಡುತ್ತಾನೆಯೋ ಅವನು ಮರಣವನ್ನು ಹೊಂದಿದ ಮೇಲೆ ಸುಖವನ್ನು ಅನುಭವಿಸುತ್ತಾನೆ.
ಸ ಶಕ್ರಲೋಕೇ ವಸತಿ ಪೂಜ್ಯಮಾನೋ ದ್ವಿಜಾತಿಭಿಃ |
ಅಪ್ಸರೋಭಿಶ್ಚ ಸತತಂ ದೇವೈಶ್ಚ ಭರತರ್ಷಭ ॥19॥
ಎಲೈ ಭರತಶ್ರೇಷ್ಠನೇ, ಅವನು ಇಂದ್ರಲೋಕದಲ್ಲಿ ದೇವತೆಗಳಿಂದಲೂ, ಅಪ್ಸರೆಯರಿಂದಲೂ ಮತ್ತು ದ್ವಿಜರಿಂದಲೂ ಪೂಜಿತನಾಗಿ ವಾಸಮಾಡುತ್ತಾನೆ.
ದಹ್ಯಮಾನಾಯ ವಿಪ್ರಾಯ ಯಃ ಪ್ರಯಚ್ಛತ್ಯುಪಾನಹೌ |
ಸ್ನಾತಕಾಯ ಮಹಾಬಾಹೋ ಸಂಶಿತಾಯ ದ್ವಿಜಾತಯೇ ॥20॥
ಸೋಽಪಿ ಲೋಕಾನವಾಪ್ನೋತಿ ದೈವತೈರಭಿಪೂಜಿತಾನ್ |
ಗೋಲೋಕೇ ಸ ಮುದಾ ಯುಕ್ತೋ ವಸತಿ ಪ್ರೇತ್ಯ ಭಾರತ ॥21॥
ಎಲೈ ಮಹಾಬಾಹುವೇ, ಬಿಸಿಲಿನಿಂದ ಶಿರಸ್ಸು ಮತ್ತು ಪಾದಗಳು ಸುಡುವ ಸ್ನಾತಕನಾದ ಶ್ರೇಷ್ಠವ್ರತಧಾರಿಯಾದ ದ್ವಿಜನಿಗೆ ಯಾವನು ಛತ್ರಿ ಮತ್ತು ಪಾದುಕೆಗಳನ್ನು ಕೊಡುತ್ತಾನೆಯೋ ಅವನೂ ಸಹ ದೇವತೆಗಳಿಂದ ಪೂಜಿತವಾದ ಲೋಕಗಳನ್ನು ಪಡೆಯುತ್ತಾನೆ. ಎಲೈ ಭಾರತನೇ, ಮರಣವನ್ನು ಹೊಂದಿದ ಮೇಲೆ ಅವನು ಗೋಲೋಕದಲ್ಲಿ ಸಂತೋಷದಿಂದ ವಾಸಿಸುತ್ತಾನೆ.
ಏತತ್ತೇ ಭರತಶ್ರೇಷ್ಠ ಮಯಾ ಕಾರ್ತ್ಸ್ನ್ಯೇನ ಕೀರ್ತಿತಮ್ |
ಛತ್ರೋಪಾನಹದಾನಸ್ಯ ಫಲಂ ಭರತಸತ್ತಮ |
ಸೂರ್ಯೇಣ ವಿಹಿತಂ ಪೂರ್ವಮೃಷಯೇ ಜಮದಗ್ನಯೇ ॥22॥
ಎಲೈ ಭರತಶ್ರೇಷ್ಠನೇ, ಸೂರ್ಯನಿಂದ ಪ್ರವರ್ತಿತವಾದ ಮೊದಲು ಜಮದಗ್ನಿ ಋಷಿಗಳಿಗೆ ಕೊಡಲ್ಪಟ್ಟ ಈ ಛತ್ರಿ ಮತ್ತು ಪಾದುಕೆಗಳ ದಾನದ ಫಲವನ್ನು ನಾನು ನಿನಗೆ ಪೂರ್ಣವಾಗಿ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಇತಿ ದಾನಧರ್ಮೇ ಛತ್ರೋಪಾನಹದಾನಫಕಥನಂ ನಾಮ ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೊಂದನೆಯ ಅಧ್ಯಾಯ
ಪರಾಶರಗೀತೆ - ಶೂದ್ರಧರ್ಮಗಳು, ತ್ರೈವರ್ಣಿಕರ ಸೇವಾ.
ಯುಧಿಷ್ಠಿರಃ
ಶೂದ್ರಾಣಾಮಿಹ ಶುಶ್ರೂಷಾ ನಿತ್ಯಮೇವಾನುವರ್ಣಿತಾ |
ಕೈಃ ಕಾರಣೈಃ ಕತಿವಿಧಾ ಶುಶ್ರೂಷಾ ಸಮುದಾಹೃತಾ ॥1॥
ಕೇ ಚ ಶುಶ್ರೂಷಯಾ ಲೋಕಾ ವಿಹಿತಾ ಭರತರ್ಷಭ |
ಶೂದ್ರಾಣಾಂ ಭರತಶ್ರೇಷ್ಠ ಬ್ರೂಹಿ ಮೇ ಧರ್ಮಲಕ್ಷಣಮ್ ॥2॥
ಯುಧಿಷ್ಠಿರ ಶೂದ್ರರು ನಿತ್ಯವೂ ತ್ರೈವರ್ಣಿಕರ ಸೇವೆಯನ್ನು ಮಾಡಬೇಕೆಂದು ಹೇಳಲಾಯಿತು. ಯಾವ ಸಾಧನೆಗಳಿಂದ ಎಷ್ಟು ವಿಧವಾಗಿ ಆ ಸೇವೆಯು ಹೇಳಲ್ಪಡುತ್ತದೆ? ಎಲೈ ಭರತರ್ಷಭನೇ, ಭರತಶ್ರೇಷ್ಠನೇ, ಶುಶ್ರೂಷೆಯಿಂದ ಶೂದ್ರರಿಗೆ ಲಭಿಸುವ ಲೋಕಗಳು ಯಾವುವು? ಅವರ ಧರ್ಮಸ್ವರೂಪವನ್ನು ನನಗೆ ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶೂದ್ರಾಣಾಮನುಕಂಪಾರ್ಥಂ ಯದುಕ್ತಂ ಬ್ರಹ್ಮವಾದಿನಾ ॥3॥
ಭೀಷ್ಮ ಈ ವಿಷಯದಲ್ಲಿಯೂ ಸಹ ಬ್ರಹ್ಮವಾದಿಗಳಾದ ಪರಾಶರರು ಶೂದ್ರರ ಮೇಲಿನ ಅನುಕಂಪದಿಂದ ಹೇಳಿದ ಧರ್ಮಗಳ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ವೃದ್ಧಃ ಪರಾಶರಃ ಪ್ರಾಹ ಧರ್ಮಂ ಶುಭ್ರಮನಾಮಯಮ್ |
ಅನುಗ್ರಹಾರ್ಥಂ ವರ್ಣಾನಾಂ ಶೌಚಾಚಾರಸಮನ್ವಿತಮ್ ॥4॥
ವೃದ್ಧ ಪರಾಶರರು ಎಲ್ಲ ವರ್ಣದವರಿಗೂ ಅನುಗ್ರಹ ಮಾಡಲು ಶೌಚಾಚಾರ ಸಹಿತವಾದ ನಿರ್ದೋಷವಾದ ಮತ್ತು ಶುದ್ಧವಾದ ಧರ್ಮವನ್ನು ಹೇಳಿದರು.
ಧರ್ಮೋಪದೇಶಮಖಿಲಂ ಯಥಾವದನುಪೂರ್ವಶಃ |
ಶಿಷ್ಯಾನಧ್ಯಾಪಯಾಮಾಸ ಶಾಸ್ತ್ರಮರ್ಥವದರ್ಥವಿತ್ ॥5॥
ಎಲ್ಲ ವಿಷಯವನ್ನೂ ತಿಳಿದ ಅವರು ಗ್ರಂಥರೂಪದಲ್ಲಿದ್ದ ತಮ್ಮ ಉಪದೇಶ ರೂಪವಾದ ಶಾಸ್ತ್ರವೆಲ್ಲವನ್ನೂ ಕ್ರಮವಾಗಿ ಶಿಷ್ಯರಿಗೆ ಬೋಧಿಸಿದರು.

ಕ್ಷಾಂತೇಂದ್ರಿಯೇಣ ಮಾನೇನ ಶುಚಿನಾಽಚಾಪಲೇನ ವೈ |
ಅದುರ್ಬಲೇನ ಧೀರೇಣ ನೋತ್ತರೋತ್ತರವಾದಿನಾ ||6||
ಅಲುಬ್ಧೇನಾನೃಶಂಸೇನ ಋಜುನಾ ಬ್ರಹ್ಮವಾದಿನಾ |
ಚಾರಿತ್ರತತ್ಪರೇಣೈವ ಸರ್ವಭೂತಹಿತಾತ್ಮನಾ ||7||
ಅರಯಃ ಷಡ್ ವಿಜೇತವ್ಯಾ ನಿತ್ಯಂ ಸ್ವಂ ದೇಹಮಾಶ್ರಿತಾಃ |
ಕಾಮಕ್ರೋಧೌ ಚ ಲೋಭಶ್ಚ ಮಾನಮೋಹೌ ಮದಸ್ತಥಾ ||8||
ಇಂದ್ರಿಯ ನಿಯಂತ್ರಣವನ್ನು ಹೊಂದಿ, ಮಾನವನ್ನು ಹೊಂದಿ, ಶುಚಿಯಾಗಿ, ಚಾಂಚಲ್ಯವನ್ನು ಬಿಟ್ಟು, ದೌರ್ಬಲ್ಯವನ್ನು ತ್ಯಜಿಸಿ, ಧೀರನಾಗಿ, ಹಿರಿಯರ ಮಾತಿಗೆ ಮೇಲೆ ಮೇಲೆ ಉತ್ತರವನ್ನು ಕೊಡದೆ, ಲೋಭವನ್ನು ಬಿಟ್ಟು, ಕೌರ್ಯವನ್ನು ಬಿಟ್ಟು, ಆರ್ಜವವನ್ನು ಹೊಂದಿ, ಬ್ರಹ್ಮವಾದಿಯಾಗಿ, ಶೀಲವನ್ನು ರಕ್ಷಿಸಿಕೊಂಡು, ಸರ್ವಭೂತಗಳಿಗೆ ಹಿತವನ್ನು ಮಾಡಿ ತನ್ನ ದೇಹದಲ್ಲೇ ಯಾವಾಗಲೂ ಇರುವ ಕಾಮ- ಕ್ರೋಧ-ಲೋಭ-ಮೋಹ-ಅಹಂಕಾರ ಮತ್ತು ಮದಗಳೆಂಬ ಆರು ಶತ್ರುಗಳನ್ನು ಗೆಲ್ಲಬೇಕು.
ವಿಧಿನಾ ಧೃತಿಮಾಸ್ಥಾಯ ಶುಶ್ರೂಷುರನಹಂಕೃತಃ |
ವರ್ಣತ್ರಯಸ್ಯಾನುಮತೋ ಯಥಾಶಕ್ತಿ ಯಥಾಬಲಮ್ ||9||
ಕರ್ಮಣಾ ಮನಸಾ ವಾಚಾ ಚಕ್ಷುಷಾ ಚ ಚತುರ್ವಿಧಮ್ |
ಆಸ್ಥಾಯ ನಿಯಮಂ ಧೀಮಾನ್ ಶಾಂತೋ ದಾಂತೋ ಜಿತೇಂದ್ರಿಯಃ ||
ರಕ್ಷೋಯಕ್ಷಜನದ್ವೇಷೀ ಶೇಷಾನ್ನಕೃತಭೋಜನಃ |
ವರ್ಣತ್ರಯಂ ಮಧು ಯಥಾ ಭ್ರಮರೋ ಧರ್ಮಮಾಚರೇತ್ ||11||
ಶೂದ್ರನಾದವನು ಧೈರ್ಯವನ್ನು ವಹಿಸಿ, ಅಹಂಕಾರವನ್ನು ತ್ಯಜಿಸಿ, ವಿಧಿಗೆ ಅನುಗುಣವಾಗಿ ತನ್ನ ಶಕ್ತಿಗೆ ಮತ್ತು ಬಲಕ್ಕೆ ಅನುಗುಣವಾಗಿ ತ್ರೈವರ್ಣಿಕರ ಅನುಮತಿಯನ್ನು ಪಡೆದು ಕರ್ಮದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ಚಕ್ಷುಸ್ಸಿನಿಂದಲೂ ನಾಲ್ಕು ವಿಧವಾದ ನಿಯಮಗಳನ್ನು ಹೊಂದಿ, ಶಾಂತನೂ, ದಾಂತನೂ, ಜಿತೇಂದ್ರಿಯನೂ ಆಗಿ ರಾಕ್ಷಸ ಮತ್ತು ಯಕ್ಷರನ್ನು ಪೂಜಿಸುವ ಜನರನ್ನು ದ್ವೇಷಿಸಿ, ಶೇಷಾನ್ನ ಭೋಜನವನ್ನು ಮಾಡಿ ಮಧುವನ್ನು ಅನುಸರಿಸಿ ಭ್ರಮರವು ಪುಷ್ಪಗಳನ್ನು ಸೇವಿಸುವಂತೆ ಧರ್ಮವನ್ನು ಅನುಸರಿಸಿ ವರ್ಣತ್ರಯದವರ ಪರಿಚರ್ಯವನ್ನು ಮಾಡಬೇಕು.
ಯದಿ ಶೂದ್ರಸ್ತಪಃ ಕುರ್ಯಾದ್ ವೇದದೃಷ್ಟೇನ ಕರ್ಮಣಾ |
ಇಹ ಚಾಸ್ಯ ಪರಿಕ್ಲೇಶಃ ಪ್ರೇತ್ಯ ಚಾಸ್ಯಾಶುಭಾ ಗತಿಃ ||12||
ಶೂದ್ರನು ಒಂದು ಪಕ್ಷ ವೇದೋಕ್ತ ಮಾರ್ಗದಿಂದ ತಪಸ್ಸನ್ನು ಮಾಡಿದರೆ ಈ ಲೋಕದಲ್ಲಿ ಕ್ಲೇಶವೂ, ಮರಣಾನಂತರದಲ್ಲಿ ಅಶುಭವಾದ ಗತಿಯೂ ಉಂಟಾಗುತ್ತದೆ.
ಅಧರ್ಮ್ಯಮಯಶಸ್ಯಂ ಚ ತಪಃ ಶೂದ್ರೇ ಪ್ರತಿಷ್ಠಿತಮ್ |
ಅಮಾರ್ಗೇಣ ತಪಸ್ತಪ್ತ್ವಾ ಮ್ಲೇಚ್ಛೇಷು ಫಲಮಶ್ನುತೇ ||13||
ಶೂದ್ರನನ್ನು ಆಶ್ರಯಿಸಿದ ತಪಸ್ಸು ಧರ್ಮಬಾಹಿರವಾದುದು ಮತ್ತು ಅಕೀರ್ತಿಕರವಾದುದು. ಅಮಾರ್ಗದಿಂದ ತಪಸ್ಸನ್ನು ಮಾಡಿದರೆ ಮ್ಲೇಚ್ಛ ಯೋನಿಯಲ್ಲಿ ಜನ್ಮವುಂಟಾಗುತ್ತದೆ.
ಅನ್ಯಥಾ ವರ್ತಮಾನೋ ಹಿ ನ ಶೂದ್ರೋ ಧರ್ಮಮರ್ಹತಿ |
ಅಮಾರ್ಗೇಣ ಪ್ರಯಾತಾನಾಂ ಪ್ರತ್ಯಕ್ಷಾದುಪಲಭ್ಯತೇ |
ಚಾತುರ್ವರ್ಣ್ಯವ್ಯಪೇತಾನಾಂ ಜಾತಿಮೂರ್ತಿಪರಿಗ್ರಹಃ ||14||
ಬೇರೆ ರೀತಿಯಲ್ಲಿ ಬದುಕುವ ಶೂದ್ರನಿಗೆ ಧರ್ಮಾನುಷ್ಠಾನ ಯೋಗ್ಯತೆ ಇಲ್ಲ. ಅಮಾರ್ಗದಿಂದ ಹೋಗುವವರಿಗೆ ಚಾತುರ್ವರ್ಣ್ಯದಿಂದ ಹೊರಗಿರುವ ಮ್ಲೇಚ್ಛಾದಿ ಜಾತಿಯೂ, ಅಂತಹ ಆಕಾರವೂ ಪ್ರತ್ಯಕ್ಷದಿಂದಲೇ ಕಂಡುಬರುತ್ತದೆ.
ತಥಾ ತೇ ಹಿ ಶಕಾಶ್ಚೀನಾಃ ಕಾಂಬೋಜಾಃ ಪಾರದಾಸ್ತಥಾ |
ಶಬರಾಃ ಪಪ್ಲವಾಶ್ಚೈವ ತುಷಾರಯವನಾಸ್ತಥಾ ||15||
ದಾರ್ವಾಶ್ಚ ದರದಾಶ್ಚೈವ ಉಜ್ಜಿಹಾನಾಸ್ತಥೇತರಾಃ |
ವೇಣಾಶ್ಚ ಕಂಕಣಾಶ್ಚೈವ ಸಿಂಹಲಾ ಮದ್ರಕಾಸ್ತಥಾ ||16||
ಕಿಷ್ಕಿಂಧಕಾಃ ಪುಳಿಂದಾಶ್ಚ ಕಹ್ವಾಶ್ಚಾಂಧ್ರಾಃ ಸನೀರಗಾಃ |
ಗಂಧಿಕಾ ದ್ರಮಿಡಾಶ್ಚೈವ ಬರ್ಬರಾಶ್ಚೂಚುಕಾಸ್ತಥಾ ||17||
ಕಿರಾತಾಃ ಪಾರ್ವತೇಯಾಶ್ಚ ಕೋಲಾಶ್ಚೋಳಾಃ ಸಖಾಷಕಾಃ |
ಆರೂಕಾಶ್ಚೈವ ದೋಹಾಶ್ಚ ಯಾಶ್ಚಾನ್ಯಾ ಮ್ಲೇಚ್ಛಜಾತಯಃ ||18||
ವಿಕೃತಾ ವಿಕೃತಾಚಾರಾ ದೃಶ್ಯಂತೇ ಕ್ರೂರಬುದ್ಧಯಃ |
ಅಮಾರ್ಗೇಣಾಶ್ರಿತಾ ಧರ್ಮಂ ತತೋ ಜಾತ್ಯಂತರಂ ಗತಾಃ ||19||
ಹಾಗೆಯೇ ಶಕರೂ, ಚೀನರೂ, ಕಾಂಬೋಜರೂ, ಪಾರದರೂ, ಶಬರರೂ, ಪಪ್ಲವರೂ, ತುಷಾರರೂ, ಯವನರೂ, ದಾರ್ವರೂ, ದರದರೂ, ಉಜ್ಜಿಹಾನರೂ ಮತ್ತು ಉಳಿದ ವೀರರೂ, ಕಂಕಣರೂ, ಸಿಂಹಲರೂ, ಮದ್ರಕರೂ, ಕಿಷ್ಕಿಂಧಕರೂ, ಪುಳಿಂದರೂ, ಕಹ್ವರೂ, ಆಂಧ್ರರೂ, ನೀರದರೂ, ಗಂಧಿಕರೂ, ದ್ರವಿಡರೂ, ಬರ್ಬರರೂ, ಚೂಚುಕರೂ, ಕಿರಾತರೂ, ಪಾರ್ವತೇಯರೂ, ಕೋಲರೂ, ಚೋಳರೂ, ಖಾಷಕರೂ, ಆರೂಕರೂ, ದೋಹರೂ ಮತ್ತು ಉಳಿದ ಮ್ಲೇಚ್ಛ ಜಾತಿಯವರೂ ವಿಕಾರವಾದ ರೂಪವನ್ನೂ, ವಿಕಾರವಾದ ಆಕಾರವನ್ನು ಹೊಂದಿ ಕ್ರೂರ ಬುದ್ಧಿಯವರಾಗಿ ಕಂಡುಬರುತ್ತಾರೆ. ಅಮಾರ್ಗದಿಂದ ಧರ್ಮವನ್ನು ಸಾಧಿಸಲು ಹೋದ ಅವರು ಆ ಕಾರಣದಿಂದ ಹೀನಯೋನಿಗಳಲ್ಲಿ ಜನಿಸಿದರು.

ಅಮಾರ್ಗೋಪಾರ್ಜಿತಸ್ಯೈತತ್ ತಪಸೋ ವಿದಿತಂ ಫಲಮ್ |
ನ ನಶ್ಯತಿ ಕೃತಂ ಕರ್ಮ ಶುಭಂ ವಾ ಯದಿ ವಾಽಶುಭಮ್ ॥20॥
ಅಮಾರ್ಗದಿಂದ ಗಳಿಸಿದ ತಪಸ್ಸಿಗೆ ಇಂತಹ ಫಲವು ಪ್ರಸಿದ್ಧವಾಗಿದೆ. ಮಾಡಿದ ಕರ್ಮವು ಶುಭವಾಗಲೀ ಅಥವಾ ಅಶುಭವಾಗಲೀ ಅದು ಫಲವನ್ನು ಕೊಡದೆ ನಾಶವನ್ನು ಹೊಂದುವುದಿಲ್ಲ.
ಅತ್ರಾಪ್ಯೇತೇ ವಸು ಪ್ರಾಪ್ಯ ವಿಕರ್ಮತಪಸಾರ್ಜಿತಮ್ |
ಪಾಷಂಡಾನರ್ಚಯಿಷ್ಯಂತಿ ಧರ್ಮಕಾಮಾ ವೃಥಾಶ್ರಮಾಃ ॥21॥
ಇಂದಿಗೂ ಕೂಡ ಇಂತಹವರು ವಿಕರ್ಮರೂಪವಾದ ತಪಸ್ಸಿನಿಂದ ಗಳಿಸಿದ ಧನದಿಂದ ಧರ್ಮವನ್ನು ಗಳಿಸಲು ಬಯಸಿ ವ್ಯರ್ಥಶ್ರಮವನ್ನು ಪಟ್ಟು ಪಾಷಂಡರನ್ನು ಪೂಜಿಸುತ್ತಾರೆ.
ಏವಂ ಚತುರ್ಣಾಂ ವರ್ಣಾನಾಮಾಶ್ರಮಾಣಾಂ ಚ ಪಾರ್ಥಿವ |
ವಿಪರೀತಂ ವರ್ತಮಾನಾ ಮ್ಲೇಚ್ಛಾ ಜಾಯಂತೇಽಬುದ್ಧಯಃ ॥22॥
ಎಲೈ ರಾಜನೇ, ಹೀಗೆ ನಾಲ್ಕು ವರ್ಣದವರೂ ಮತ್ತು ಆಶ್ರಮದವರೂ ತಮ್ಮ ವರ್ಣಾಶ್ರಮಗಳಿಗೆ ವಿರುದ್ಧವಾಗಿ ನಡೆದುಕೊಂಡರೆ ಅವಿವೇಕಿಗಳಾಗಿ ಮ್ಲೇಚ್ಛರಾಗಿ ಜನಿಸುತ್ತಾರೆ.
ಅಧ್ಯಾಯಧನಿನೋ ವಿಪ್ರಾಃ ಕ್ಷತ್ರಿಯಾಣಾಂ ಬಲಂ ಧನಮ್ |
ವಣಿಕ್ಕೃಷಿಶ್ಚ ವೈಶ್ಯಾನಾಂ ಶೂದ್ರಾಣಾಂ ಪರಿಚಾರಿಕಾ ॥23॥
ವಿಪ್ರರಿಗೆ ಅಧ್ಯಯನವೇ ಧನ. ಕ್ಷತ್ರಿಯರಿಗೆ ಬಲವೇ ಧನ. ವೈಶ್ಯರಿಗೆ ವಾಣಿಜ್ಯ ಮತ್ತು ಕೃಷಿಯೂ, ಶೂದ್ರರಿಗೆ ಪರಿಚರ್ಯೆಯೂ ಧನ.
ವ್ಯುಚ್ಛೇದಾತ್ ತಸ್ಯ ಧರ್ಮಸ್ಯ ನಿರಯಾಯೋಪಪದ್ಯತೇ |
ತತೋ ಮ್ಲೇಚ್ಛಾ ಭವಂತ್ಯೇತೇ ನಿರ್ಘೃಣಾ ಧರ್ಮವರ್ಜಿತಾಃ |
ಪುನಶ್ಚ ನಿರಯಸ್ತೇಷಾಂ ತಿರ್ಯಗ್ಯೋನಿಶ್ಚ ಶಾಶ್ವತೀ ॥24॥
ಆ ಧರ್ಮವನ್ನು ಲೋಪ ಮಾಡುವುದರಿಂದ ನರಕಪ್ರಾಪ್ತಿಯಾಗುತ್ತದೆ. ಅನಂತರ ಅವರು ದಯಾರಹಿತರೂ, ಧರ್ಮವರ್ಜಿತರೂ ಆದ ಮ್ಲೇಚ್ಛರಾಗಿ ಜನಿಸುತ್ತಾರೆ. ಅವರಿಗೆ ಪುನಃ ನರಕವೂ ಮತ್ತು ಪುನಃ ಶಾಶ್ವತವಾದ ತಿರ್ಯಗ್ಯೋನಿಯೂ ಉಂಟಾಗುತ್ತದೆ.
ಯೇ ತು ಸತ್ಪಥಮಾಸ್ಥಾಯ ವರ್ಣಾಶ್ರಮಕೃತಂ ಪುರಾ |
ಸರ್ವಾನ್ ವಿಮಾರ್ಗಾನುತ್ಸೃಜ್ಯ ಸ್ವಧರ್ಮವಿಧಿಮಾಶ್ರಿತಾಃ ॥25॥
ಸರ್ವಭೂತದಯಾವಂತೋ ದೈವತದ್ವಿಜಪೂಜಕಾಃ |
ಶಾಸ್ತ್ರದೃಷ್ಟೇನ ವಿಧಿನಾ ಶ್ರದ್ಧಯಾ ಜಿತಮನ್ಯವಃ ॥26॥
ತೇಷಾಂ ವಿಧಿಂ ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ |
ಉಪಾದಾನವಿಧಿಂ ಕೃತ್ಸ್ನಂ ಶುಶ್ರೂಷಾಧಿಗಮಂ ತಥಾ ॥27॥
ಯಾರು ವರ್ಣಾಶ್ರಮಗಳಿಗೆ ವಿಹಿತವಾದ ಸನ್ಮಾರ್ಗವನ್ನು ಅವಲಂಬಿಸಿ, ಎಲ್ಲ ದುರ್ಮಾರ್ಗಗಳನ್ನೂ ಪರಿತ್ಯಜಿಸಿ ತಮ್ಮ ಧರ್ಮವಿಧಿಯನ್ನೇ ಆಶ್ರಯಿಸಿ, ಎಲ್ಲ ಪ್ರಾಣಿಗಳಲ್ಲಿಯೂ ದಯೆಯನ್ನು ಹೊಂದಿ, ಶಾಸ್ತ್ರದೃಷ್ಟ ವಿಧಾನದಿಂದ ದೇವ-ಬ್ರಾಹ್ಮಣ ಪೂಜಕರಾಗಿ ಶ್ರದ್ಧೆಯಿಂದ ಕೂಡಿ ಕೋಪವನ್ನು ಜಯಿಸಿರುತ್ತಾರೆಯೋ ಅಂತಹವರಿಗೆ ಧರ್ಮದ ವಿಧಿಯನ್ನು ಕ್ರಮವಾಗಿ ಹೇಳುವೆನು. ಅಂತಹವರನ್ನು ಶಿಷ್ಯರಾಗಿ ಸ್ವೀಕಾರ ಮಾಡುವ ಪ್ರಕಾರವನ್ನೂ ಮತ್ತು ಅವರಿಂದ ಪರಿಚರ್ಯವನ್ನು ಪಡೆಯುವ ವಿಧಾನವನ್ನೂ ಹೇಳುವೆನು.
ಶಿಷ್ಯೋಪನಯನಂ ಚೈವ ಮಂತ್ರಾಣಿ ವಿವಿಧಾನಿ ಚ |
ತಥಾ ಶಿಷ್ಯಪರೀಕ್ಷಾಂ ಚ ಶಾಸ್ತ್ರಪ್ರಾಮಾಣ್ಯದರ್ಶನಾತ್ ॥28॥
ಪ್ರವಕ್ಷ್ಯಾಮಿ ಯಥಾತತ್ವಂ ಯಥಾವದನುಪೂರ್ವಶಃ |
ಶೌಚಕೃತ್ಯಸ್ಯ ಶೌಚಾರ್ಥಾನ್ಸರ್ವಾನೇವ ವಿಶೇಷತಃ ॥29॥
ಶಿಷ್ಯಪರೀಕ್ಷೆ, ಶಿಷ್ಯನಿಗೆ ಉಪನಯನ, ಶಿಷ್ಯನಿಗೆ ಮಾಡುವ ಮಂತ್ರೋಪದೇಶ ಎಲ್ಲವನ್ನೂ ಕ್ರಮವಾಗಿ ಶಾಸ್ತ್ರಪ್ರಾಮಾಣ್ಯಕ್ಕೆ ಅನುಸಾರವಾಗಿ ಹೇಳುವೆನು. ಶೌಚಕೃತ್ಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನೂ ವಿಶೇಷವಾಗಿ ಹೇಳುವೆನು.
ಮಹಾಶೌಚಪ್ರಭೃತಯೋ ದೃಷ್ಟಾಸ್ತತ್ತ್ವಾರ್ಥದರ್ಶಿಭಿಃ |
ತತ್ರಾಪಿ ಶೂದ್ರೋ ಭಿಕ್ಷೂಣಾಮಿದಂ ಶೇಷಂ ಚ ಕಲ್ಪಯೇತ್ ॥30॥
ಮಹಾಶೌಚ ಮೊದಲಾದವುಗಳು ತತ್ತ್ವದರ್ಶಿಗಳಿಂದ ದೃಷ್ಟವಾಗಿವೆ. ಶೂದ್ರನು ಯತಿಗಳಿಗೆ ಆ ವಿಷಯದಲ್ಲಿಯೂ ಮತ್ತು ಬೇರೆ ವಿಷಯದಲ್ಲಿಯೂ ಪರಿಚರ್ಯೆಯನ್ನು ಮಾಡಬೇಕು.
ಭಿಕ್ಷುಭಿಃ ಸುಕೃತಪ್ರಜ್ಞೈಃ ಕೇವಲಂ ಧರ್ಮಮಾಶ್ರಿತೈಃ |
ಸಮ್ಯಗ್ ದರ್ಶನಸಂಪನ್ನೈರ್ಗತಾಧ್ವನಿ ಹಿತಾರ್ಥಿಭಿಃ |
ಅವಕಾಶಮಿಮಂ ಮೇಧ್ಯಂ ನಿರ್ಮಿತಂ ಕಾಮವೀರುಧಮ್ ॥31॥
ಒಳ್ಳೆಯ ಪ್ರಜ್ಞೆಯುಳ್ಳವರೂ, ಕೇವಲ ಧರ್ಮವನ್ನು ಆಶ್ರಯಿಸಿದವರೂ, ದಿವ್ಯ ಜ್ಞಾನವನ್ನು ಹೊಂದಿದವರೂ, ಜೀವರ ಹಿತವನ್ನು ಬಯಸುವವರೂ ಆದ ಭಿಕ್ಷುಗಳಿಂದ (ಯತಿಗಳಿಂದ) ನಡೆದ ಮಾರ್ಗದಲ್ಲಿ ಈ ಶುಭವಾದ, ಕೇಳಿದ ಕಾಮವೆಲ್ಲವನ್ನೂ ಕೊಡುವ, ಅವಕಾಶವು ನಿರ್ಮಿತವಾಗಿದೆ.
ನಿರ್ಜನಂ ಸಂವೃತಂ ಬುದ್ಧ್ವಾ ನಿಯತಾತ್ಮಾ ಜಿತೇಂದ್ರಿಯಃ |
ಸಜಲಂ ಭಾಜನಂ ಸ್ಥಾಪ್ಯ ಮೃತ್ತಿಕಾಂ ಚ ಪರೀಕ್ಷಿತಾಮ್ ॥32॥
ಪರೀಕ್ಷ್ಯ ಭೂಮಿಂ ಮೂತ್ರಾರ್ಥೀ ತತ ಆಸೀತ ವಾಗ್ಯತಃ |

ಉದಙ್ಮುಖೋ ದಿವಾ ಕುರ್ಯಾದ್ ರಾತ್ರೌ ಚೇದ್ ದಕ್ಷಿಣಾಮುಖಃ ॥
ನಿರ್ಜನವಾದ, ಮರೆಯಾಗಿರುವ ಸ್ಥಳವನ್ನು ನೋಡಿ ಜಿತೇಂದ್ರಿಯನೂ, ಮನೋನಿಗ್ರಹವುಳ್ಳವನೂ ಆದವನು ಜಲಪೂರ್ಣವಾದ ಪಾತ್ರೆಯನ್ನೂ ಮತ್ತು ಪರೀಕ್ಷಿತವಾದ ಮೃತ್ತಿಕೆಯನ್ನೂ ಸ್ವಲ್ಪ ದೂರದಲ್ಲಿಟ್ಟು ಭೂಮಿಯನ್ನು ಪರೀಕ್ಷಿಸಿ ಅಲ್ಲಿ ಮೂತ್ರ ವಿಸರ್ಜನೆಯನ್ನು ಮಾಡಲು ಮೌನವಾಗಿ ಕುಳಿತುಕೊಳ್ಳಬೇಕು. ಹಗಲಿನಲ್ಲಿ ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ ಕುಳಿತುಕೊಳ್ಳಬೇಕು.
ಅಂತರ್ಹಿತಾಯಾಂ ಭೂಮೌ ತು ಅಂತರ್ಹಿತಶಿರಾಸ್ತಥಾ |
ಅಸಮಾಪ್ತೇ ತಥಾ ಶೌಚೇ ನ ವಾಚಂ ಕಿಂಚಿದೀರಯೇತ್ ॥34॥
ಭೂಮಿಯನ್ನು ತೃಣಪರ್ಣಗಳಿಂದ ಮುಚ್ಚಿ, ತನ್ನ ಶಿರಸ್ಸನ್ನು ವಸ್ತ್ರದಿಂದ ಆಚ್ಛಾದಿಸಿ ಶೌಚ ಮುಗಿಯುವವರೆಗೂ ಮಾತನಾಡಬಾರದು.
ಕೃತಕೃತ್ಯಸ್ತಥಾಽಽಚಮ್ಯ ಗಚ್ಛನ್ನೋದೀರಯೇದ್ ವಚಃ |
ಶೌಚಾರ್ಥಮುಪವಿಷ್ಟಸ್ತು ಮೃದ್ಭಾಜನಪುರಸ್ಕೃತಃ ॥35॥
ಸರ್ವೇ ಕಮಂಡಲುಂ ಗೃಹ್ಯ ಪಾರ್ಶ್ವೇ ದಿಗ್ಭ್ಯಾಮವಾಂತರಮ್ |
ಶೌಚಂ ಕುರ್ಯಾಚ್ಛನೈರ್ವೀರೋ ಬುದ್ಧಿಪೂರ್ವಮಸಂಕರಮ್ ॥36॥
ಕಾರ್ಯವು ಮುಗಿದ ಮೇಲೆ ಆಚಮನ ಮಾಡಿ ಹೋಗುತ್ತಾ ಮಾತನಾಡಬಹುದು. ಶೌಚಾರ್ಥವಾಗಿ ಕುಳಿತವನು ಮೃತ್ತಿಕೆ ಮತ್ತು ಜಲಪೂರ್ಣವಾದ ಪಾತ್ರೆಯನ್ನು ಪಾರ್ಶ್ವದಲ್ಲಿ ಇಟ್ಟು ಅವಾಂತರ ದಿಕ್ಕುಗಳಿಗೆ ಅಭಿಮುಖವಾಗಿ ಬುದ್ಧಿಪೂರ್ವಕವಾಗಿ ಏನೂ ಸಿಡಿಸಿಕೊಳ್ಳದೆ ಶೌಚವನ್ನು ಮಾಡಬೇಕು. ಪ್ರಧಾನ ದಿಕ್ಕುಗಳಾದ ಉತ್ತರ ಮತ್ತು ದಕ್ಷಿಣ ದಿಕ್ಕುಗಳಿಗೆ ಅಭಿಮುಖವಾಗಿ ಮಾಡಬಾರದು. ವಿದಿಕ್ಕುಗಳಾದ ಈಶಾನ್ಯ, ನೈಋತ್ಯಗಳಿಗೆ ತಿರುಗಿ ಮಾಡಬೇಕು ಎಂದು ಅಭಿಪ್ರಾಯ (ಲಕ್ಷ್ಮಾಲಂಕಾರ).
ಪಾಣಿನಾ ಶುದ್ಧಮುದಕಂ ಸಂಗೃಹ್ಯ ವಿಧಿಪೂರ್ವಕಮ್ |
ವಿಪ್ರುಷಶ್ಚ ಯಥಾ ನ ಸ್ಯುರ್ಯಥಾ ಚೋರೂ ನ ಸಂಸ್ಪೃಶೇತ್ ॥37॥
ಹಸ್ತದಿಂದ ಶುದ್ಧವಾದ ನೀರನ್ನು ವಿಧಿಪೂರ್ವಕವಾಗಿ ತೆಗೆದುಕೊಂಡು ಸಣ್ಣ ಹನಿಗಳು ಹಾರಿ ತೊಡೆಗಳಿಗೆ ತಾಕದಂತೆ ಶೌಚವನ್ನು ಮಾಡಬೇಕು.
ಅಪಾನೇ ಮೃತ್ತಿಕಾಸ್ತಿಸ್ರಃ ಪ್ರದೇಯಾಸ್ತ್ವನುಪೂರ್ವಶಃ |
ಹಸ್ತಾಭ್ಯಾಂ ಚ ತಥಾ ವಿಪ್ರೋ ಹಸ್ತಂ ಹಸ್ತೇನ ಸಂಸ್ಪೃಶೇತ್ ॥38॥
ಅಪಾನ ದ್ವಾರದಲ್ಲಿ ಮೂರು ಬಾರಿ ಮೃತ್ತಿಕೆಗಳನ್ನು ಒಂದಾದ ಮೇಲೆ ಒಂದರಂತೆ ಕೊಡಬೇಕು. ಹಾಗೆ ಹಸ್ತದಿಂದ ಉಜ್ಜಿ ಅಲ್ಲಿಯೂ ಮೂರು ಮೃತ್ತಿಕೆಗಳನ್ನು ಕೊಡಬೇಕು.
ಅಪಾನೇ ನವ ದೇಯಾಃ ಸ್ಯುರಿತಿ ವೃದ್ಧಾನುಶಾಸನಮ್ |
ಮೃತ್ತಿಕಾ ದೀಯಮಾನಾ ಹಿ ಶೋಧಯೇದ್ ದೇಶಮಂಜಸಾ ॥39॥
ಅಪಾನ ದ್ವಾರದಲ್ಲಿ ಒಂಬತ್ತು ಮೃತ್ತಿಕೆಗಳನ್ನು ಕೊಡಬೇಕು ಎಂದು ಹಿರಿಯರ ಆದೇಶವಿದೆ. ಮೃತ್ತಿಕೆಯನ್ನು ಲೇಪಿಸುವುದರಿಂದ ಆ ಭಾಗವು ಶುದ್ಧವಾಗುತ್ತದೆ (ಒಂದು ಮೃತ್ತಿಕೆ ಎಂದರೆ ನೆಲ್ಲಿಕಾಯಿ ಪ್ರಮಾಣದ ಒಂದು ಸಣ್ಣ ಮಣ್ಣಿನ ಮುದ್ದೆ).
ತಸ್ಮಾತ್ ಪಾಣಿತಳೇ ದೇಯಾ ಮೃತ್ತಿಕಾಸ್ತು ಪುನಃ ಪುನಃ |
ಬೃದ್ಧಿಪೂರ್ವಂ ಪ್ರಯತ್ನೇನ ಯಥಾ ನೈವ ಸ್ಪೃಶೇತ್ ಸ್ಫಿಜೌ ॥40॥
ಅನಂತರ ಪಾಣಿತಳದಲ್ಲಿ ಪುನಃ ಪುನಃ ಪ್ರಯತ್ನಪೂರ್ವಕವಾಗಿ, ಬುದ್ಧಿಪೂರ್ವಕವಾಗಿ ಪೃಷ್ಠಗಳಿಗೆ ತಾಕದಂತೆ ಮೃತ್ತಿಕೆಯನ್ನು ಕೊಡಬೇಕು.
ಯಥೋದ್ಧಾತೋ ಹಿ ನ ಭವೇತ್ ಕ್ಲೇದಜಃ ಪರಿಧಾನಕೇ |
ತಥಾ ಗುದಂ ಪ್ರಮಾರ್ಜೇತ ಶೌಚಾರ್ಥಂ ತು ಪುನಃಪುನಃ ॥41॥
ಗುದ ಪ್ರಕ್ಷಾಳನೆಯನ್ನು ಮಾಡಿದ ನೀರು ಕಟಿಗಳನ್ನಾಗಲೀ ಅಥವಾ ವಸ್ತ್ರವನ್ನಾಗಲೀ ಸ್ಪರ್ಶ ಮಾಡದಂತೆ ಎಚ್ಚರಿಕೆಯಿಂದ ಪುನಃ ಪುನಃ ಮೃತ್ತಿಕೆ ಮತ್ತು ಜಲದಿಂದ ಶುದ್ಧಿಯನ್ನು ಮಾಡಬೇಕು.
ಪ್ರತಿಪಾದಂ ತತಸ್ತ್ವೇಕತತ್ವ ಶೌಚಮುತ್ಥಾಯ ಕಾರಯೇತ್ |
ಸವ್ಯೇ ದ್ವಾದಶ ದೇಯಾಃ ಸ್ಯುಃ ತಿಸ್ರಸ್ತಿಸ್ರಃ ಪುನಃ ಪುನಃ |
ದೇಯಾ ಕೂರ್ಪರಕೇ ಹಸ್ತೇ ಪೃಷ್ಠೇ ಬಂಧೇ ಪುನಃ ಪನಃ ॥42॥
ಅನಂತರ ಎದ್ದು ಪ್ರತಿ ಪಾದವನ್ನು ಶುದ್ಧ ಮಾಡಬೇಕು. ಒಂದೊಂದು ಬಾರಿಗೆ ಮೂರರಂತೆ ಎಡಭಾಗಕ್ಕೆ ಹನ್ನೆರಡು ಮೃತ್ತಿಕೆಗಳನ್ನು ಕೊಡಬೇಕು. ಹಸ್ತದಲ್ಲಿ ಮೊಣಕೈಯಿಂದ ಹಿಡಿದು ಮಣಿಬಂಧದವರೆಗೆ ಮತ್ತು ಹಸ್ತದ ಅಗ್ರ ಮತ್ತು ಪೃಷ್ಠ ಭಾಗದಲ್ಲಿ ಪುನಃ ಪುನಃ ಮೃತ್ತಿಕೆಯನ್ನು ಕೊಡಬೇಕು.
ತಥೈವ ದಶಕೇ ತ್ವರ್ಧಚತಸ್ರಸ್ತೂಭಯೋರಪಿ |
ಉಭಯೋರ್ಹಸ್ತಯೋಃ ಸರ್ವಾಸ್ತತ್ರ ಸಪ್ತ ಪ್ರಭಾವಯೇತ್ ॥43॥
ಹಾಗೆಯೇ ವಾಮಹಸ್ತದಲ್ಲಿ ಹತ್ತರ ಅರ್ಧ ಮತ್ತು ನಾಲ್ಕು ಎಂದರೆ ಒಂಬತ್ತು ಮೃತ್ತಿಕೆಗಳನ್ನು ಕೊಡಬೇಕು. ಅನಂತರ ಎರಡು ಕೈಗಳಿಗೂ ಏಳೇಳು ಮೃತ್ತಿಕಾ ಪಿಂಡಗಳಿಂದ ಮೊಣಕೈಯಿಂದ ಹಿಡಿದು ಅಂಗೈಯವರೆಗೆ ಹಸ್ತಗಳನ್ನು ಶುಚೀಕರಿಸಬೇಕು (ಲಕ್ಷ್ಮಾಲಂಕಾರ).
ತತೋಽನ್ಯಾಂ ಮೃತ್ತಿಕಾಂ ಗೃಹ್ಯ ಕಾರ್ಯಂ ಶೌಚಂ ಪುನಸ್ತಯೋಃ |
ಹಸ್ತಯೋರೇವಮೇತದ್ಧಿ ಮಹಾಶೌಚಂ ವಿಧೀಯತೇ |

ತತೋಽನ್ಯಥಾ ನ ಕುರ್ವೀತ ವಿಧಿರೇಷ ಸನಾತನಃ ॥44॥
ಅನಂತರ ಮೊದಲು ಇಟ್ಟಿದ್ದ ಮೃತ್ತಿಕೆಯನ್ನು ಬಿಟ್ಟು ಬೇರೆ ಮೃತ್ತಿಕೆಯನ್ನು ತೆಗೆದುಕೊಂಡು ಪುನಃ ಎರಡು ಹಸ್ತಗಳಿಗೆ ಶೌಚವನ್ನು ಮಾಡಬೇಕು. ಇದು ಮಹಾಶೌಚವೆಂದು ವಿಧಿಸಲ್ಪಡುತ್ತದೆ. ಇದು ಸನಾತನವಾದ ವಿಧಿ. ಈ ಕ್ರಮವನ್ನು ಬಿಟ್ಟು ಬೇರೆ ಕ್ರಮದಲ್ಲಿ ಮಾಡಬಾರದು.
ಉಪಸ್ಥೇ ಮೂತ್ರಶೌಚಂ ಸ್ಯಾದತ ಊರ್ಧ್ವಂ ವಿಧೀಯತೇ |
ಅತೋಽನ್ಯಥಾ ತು ಯಃ ಕುರ್ಯಾತ್ ಪ್ರಾಯಶ್ಚಿತ್ತೀಯತೇ ತು ಸಃ ॥
ಮೂತ್ರವಿಸರ್ಜನೆಯನ್ನು ಮಾಡಿದರೂ ಉಪಸ್ಥಕ್ಕೆ ಇಂತಹ ಶೌಚವು ಹೇಳಲ್ಪಡುತ್ತದೆ. ಇದನ್ನು ಬಿಟ್ಟು ಬೇರೆ ರೀತಿಯಲ್ಲಿ ಮಾಡುವವರಿಗೆ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ.
ಮಲೋಪಹತತಾ ಚೇತ್ ಸ್ಯಾತ್ ದ್ವಿಗುಣಂ ತು ವಿಧೀಯತೇ |
ಸಹಪಾದಮಥೋರುಭ್ಯಾಂ ಹಸ್ತಶೌಚಮಸಂಶಯಮ್ ॥46॥
ಹಸ್ತ-ಪಾದಗಳಿಗೆ ಮಲದ ನೇರ ಸಂಪರ್ಕ ಉಂಟಾದರೆ ಇದಕ್ಕೆ ಎರಡರಷ್ಟು ಮೃತ್ತಿಕೆಯಿಂದ ಶುದ್ಧಿಯನ್ನು ಮಾಡಬೇಕು. ಮೊದಲು ತೊಡೆಯವರೆಗೂ ಪಾದಗಳನ್ನು ಶುದ್ಧಿ ಮಾಡಿ ಅನಂತರ ಹಸ್ತಶುದ್ಧಿಯನ್ನು ಮಾಡಬೇಕು ಎಂಬುದರಲ್ಲಿ ಸಂಶಯವಿಲ್ಲ.
ಅವಧೀರಯಮಾಣಸ್ಯ ಸಂಯೋಗ ಉಪಜಾಯತೇ |
ಯಥಾಯಥಾ ವಿಶುದ್ಧ್ಯೇತ ತತ್ತಥಾ ತದುಪಕ್ರಮೇತ್ ॥47॥
ಶೌಚವಿಧಿಯನ್ನು ನಿರಾಕರಿಸುವವರಿಗೆ ಮಲಸಂಯೋಗ ಉಂಟಾಗುತ್ತದೆ (ಅವರು ಮಾಡಿದ ಯಾವ ಸತ್ಕಾರ್ಯವೂ ಫಲವನ್ನು ಕೊಡುವುದಿಲ್ಲ). ಮುಖ್ಯವಾಗಿ ಶುದ್ಧವಾಗುವವರೆಗೆ ಮೃತ್ತಿಕಾ ಜಲಗಳಿಂದ ಶೋಧನೆ ಮಾಡಬೇಕು.
ಸಕರ್ದಮಾಶುಭಾರ್ದ್ರಾಸು ಗೃಹ್ಯಮಾವಿಶ್ಯ ಸಂಕಟಮ್ |
ಹಸ್ತಯೋರ್ಮೃತ್ತಿಕಾಸ್ತಿಸ್ರಃ ಪಾದಯೋಃ ಷಟ್ ಪ್ರದಾಪಯೇತ್ ॥48॥
ಶೌಚ ಪಾತ್ರೆಗೆ ಮಲಸಂಪರ್ಕವಾಗಿ ಹಸಿಯಾದರೆ ಗ್ರಹಣ ಯೋಗ್ಯವಾದ ಆ ಪಾತ್ರೆಯನ್ನು ತೆಗೆದುಕೊಂಡು ಶುದ್ಧ ಮಾಡಿ ಅನಂತರ ಹಸ್ತಗಳನ್ನು ಮೂರು ಮೃತ್ತಿಕೆಗಳಿಂದಲೂ, ಪಾದಗಳನ್ನು ಆರು ಮೃತ್ತಿಕೆಗಳಿಂದಲೂ ಶೋಧಿಸಬೇಕು (ಲಕ್ಷ್ಮಾಲಂಕಾರ).
ವಾಮೇ ಕೃತ್ವಾ ಗುದೇ ದದ್ಯಾತ್ ತಿಸ್ರಃ ಪದ್ಭ್ಯಾಂ ತಥೈವ ಚ |
ಹಸ್ತಶೌಚಂ ಪ್ರಕರ್ತವ್ಯಂ ಮೂತ್ರಶೌಚವಿಧೇಸ್ತಥಾ ॥49॥
ಮೊದಲು ಎಡಗಾಲಿಗೆ ಶೌಚವನ್ನು ಮಾಡಿ, ಅನಂತರ ಗುದಕ್ಕೆ ಮೂರು ಬಾರಿ ಮೃತ್ತಿಕಾಶೌಚವನ್ನು ಮಾಡಿ ಅನಂತರ ಎರಡು ಪಾದಗಳಿಗೂ ಮೃತ್ತಿಕಾ ಶೌಚವನ್ನು ಮಾಡಿ, ಅನಂತರ ಹಸ್ತಗಳಿಗೆ ಶೌಚವನ್ನು ಮಾಡಬೇಕು. ಇದು ಮೂತ್ರ ಶೌಚವಿಧಿಗೆ ಅನುಗುಣವಾದುದು.
ಮೂತ್ರಶೌಚೇ ತಥಾ ಹಸ್ತೌ ಪಾದಾಭ್ಯಾಂ ಚಾನುಪೂರ್ವಶಃ |
ನೈಷ್ಠಿಕೇ ಸ್ನಾನಶೌಚೇ ತು ಮಹಾಶೌಚಂ ವಿಧೀಯತೇ ॥50॥
ಮೂತ್ರಶೌಚದಲ್ಲಿ ಈ ರೀತಿಯಾಗಿ ಕ್ರಮವಾಗಿ ಹಸ್ತಪಾದಗಳನ್ನು ಮೃಜ್ಜಲಗಳಿಂದ ಶುದ್ಧೀಕರಿಸಬೇಕು. ನೈಷ್ಠಿಕವಾದ ಸ್ನಾನಶೌಚವಾದರೆ ಇದಕ್ಕಿಂತ ದೊಡ್ಡ ಶೌಚವು ವಿಧಿಸಲ್ಪಡುತ್ತದೆ.
ಕ್ಷಾರೌಷರಾಭ್ಯಾಂ ವಸ್ತ್ರಸ್ಯ ಕುರ್ಯಾಚ್ಛೌಚಂ ಮೃದಾ ಸಹ |
ಲೇಪಗಂಧಾಪನಯನಮಮೇಧ್ಯಸ್ಯ ವಿಧೀಯತೇ ॥51॥
ವಸ್ತ್ರಕ್ಕೆ ಮಲಸಂಪರ್ಕವಾದರೆ ಉಪ್ಪು, ಮರಳು ಮತ್ತು ಮಣ್ಣುಗಳಿಂದ ಲೇಪ ಗಂಧವು ನಾಶವನ್ನು ಹೊಂದುವವರೆಗೂ ಶೌಚವು ವಿಧಿಸಲ್ಪಡುತ್ತದೆ.
ಸ್ನಾನಶಾಟ್ಯಾಂ ಮೃದಸ್ತಿಸ್ರೋ ಹಸ್ತಾಭ್ಯಾಂ ಚಾನುಪೂರ್ವಶಃ |
ಶೌಚಂ ಪ್ರಯತ್ನತಃ ಕೃತ್ವಾ ಕಂಪಮಾನಃ ಸಮುದ್ಧರೇತ್ ॥52॥
ಸ್ನಾನಶಾಟಿಯಲ್ಲಿ (ಉಟ್ಟ ವಸ್ತ್ರದಲ್ಲಿ ಅಂತಹ ಸಂದರ್ಭದಲ್ಲಿ) ಮೂರು ಮೃತ್ತಿಕೆಗಳನ್ನು ಮತ್ತು ಹಸ್ತಗಳಿಗೆ ಕ್ರಮವಾಗಿ ಮೂರು ಮೃತ್ತಿಕೆಗಳನ್ನು ಕೊಟ್ಟು ಪ್ರಯತ್ನ ಪೂರ್ವಕವಾಗಿ ಶುದ್ಧ ಮಾಡಿ ವಸ್ತ್ರವನ್ನು ಜಾಡಿಸಿ ಮೇಲಕ್ಕೆತ್ತಬೇಕು.
ದೇಯಾಶ್ಚತಸ್ರಸ್ತಿಸ್ರೋ ವಾ ದ್ವೇ ವಾಽಪ್ಯೇಕಾಂ ತಥಾಽಽಪದಿ |
ಕಾಲಮಾಸಾದ್ಯ ದೇಶಂ ಚ ಶೌಚಸ್ಯ ಗುರುಲಾಘವಮ್ ॥53॥
ಶೌಚದ ಗೌರವಲಾಘವಗಳನ್ನು ತಿಳಿದುಕೊಂಡು, ಕಾಲದ ಮಿತಿಯನ್ನು ತಿಳಿದುಕೊಂಡು ಕೆಲವೊಮ್ಮೆ ನಾಲ್ಕು, ಕೆಲವೊಮ್ಮೆ ಮೂರು, ಕೆಲವೊಮ್ಮೆ ಎರಡು, ಆಪತ್ತಿನಲ್ಲಿ ಒಂದು ಹೀಗೆ ಮೃತ್ತಿಕೆಯನ್ನುಪಯೋಗಿಸಿ ಶೌಚವನ್ನು ಮಾಡಬೇಕು.
ವಿಧಿನಾಽನೇನ ಶೌಚಂ ತು ನಿತ್ಯಂ ಕುರ್ಯಾದತಂದ್ರಿತಃ |
ಅವಿಪ್ರೇಕ್ಷನ್ನಸಮ್ಭ್ರಾಂತಃ ಪಾದೌ ಪ್ರಕ್ಷಾಲ್ಯ ತತ್ಪರಃ ॥54॥
ಸೋಮಾರಿತನವಿಲ್ಲದೆ ದಿಕ್ಕುಗಳನ್ನು ನೋಡದೆ, ಗಾಬರಿಗೊಳ್ಳದೆ ಈ ರೀತಿಯಿಂದ ಶೌಚವನ್ನು ಮಾಡಿ, ಶೌಚದಲ್ಲೇ ತಾತ್ಪರ್ಯವುಳ್ಳವನಾಗಿ ಪಾದಗಳನ್ನು ತೊಳೆದುಕೊಳ್ಳಬೇಕು.
ಅಪ್ರಕ್ಷಾಲಿತಪಾದಸ್ತು ಪಾಣಿನಾಽಽಪಾದಬಂಧನಾತ್ |
ಅಧಸ್ತಾದುಪರಿಷ್ಟಾಚ್ಚ ತತಃ ಪಾಣಿಮುಪಸ್ಪೃಶೇತ್ ॥55॥
ಪಾದಗಳನ್ನು ತೊಳೆದುಕೊಳ್ಳದಿದ್ದವನು ಮೊದಲು ಹಸ್ತದಿಂದ ಗುಲ್ಫದವರೆಗೂ (ಮಣಿಗಂಟಿನವರೆಗೂ) ಶೋಧಿಸಿಕೊಂಡು ಅನಂತರ ಹಸ್ತಗಳನ್ನು ಅಧೋಭಾಗದಲ್ಲಿಯೂ ಮತ್ತು ಊರ್ಧ್ವಭಾಗದಲ್ಲಿಯೂ ಶೋಧಿಸಬೇಕು.
ಮನೋಗತಾಸ್ತು ನಿಶ್ಶಬ್ದಾ ನಿಶ್ಶಬ್ದಂ ತ್ರಿರಪಃ ಪಿಬೇತ್ |

ದ್ವಿರ್ಮುಖಂ ಪರಿಮೃಜ್ಯಾಚ್ಚ ಖಾನಿ ಚೋಪಸ್ಪೃಶೇದ್ ಬುಧಃ ॥56॥
ಮನಸ್ಸಿನಲ್ಲಿಯೇ ಹೇಳುವ ಮಂತ್ರಗಳು (ವಿದ್ಯೆಗಳು) ನಿಶ್ಶಬ್ದವಾಗಿರುತ್ತವೆ. ಹಾಗೆಯೇ ನಿಶ್ಶಬ್ದವಾಗಿ ಮೂರು ಬಾರಿ ನೀರನ್ನು ಕುಡಿಯಬೇಕು (ಆಚಮನವನ್ನು ಮಾಡಬೇಕು). ಎರಡು ಬಾರಿ ಮುಖವನ್ನು ಒರೆಸಿಕೊಂಡು ವಿವೇಕಿಯಾದವನು ಇಂದ್ರಿಯಗಳನ್ನು ಸ್ಪರ್ಶಿಸಬೇಕು.
ಋಗ್ವೇದಂ ತೇನ ಪ್ರೀಣಾತಿ ಪ್ರಥಮಂ ಯಃ ಪಿಬೇದಪಃ |
ದ್ವಿತೀಯಂ ತು ಯಜುರ್ವೇದಂ ತೃತೀಯಂ ಸಾಮ ಏವ ಚ ॥57॥
ಮೊದಲನೆಯ ಜಲಪಾನದಿಂದ ಅವನು ಋಗ್ವೇದವನ್ನು ಸಂತೋಷಪಡಿಸುತ್ತಾನೆ. ದ್ವೀತಿಯ ಜಲಪಾನದಿಂದ ಯಜುರ್ವೇದವನ್ನೂ, ತೃತೀಯ ಜಲಪಾನದಿಂದ ಸಾಮವೇದವನ್ನೂ ಸಂತೋಷಪಡಿಸುತ್ತಾನೆ.
ಮೃಜ್ಯತೇ ಪ್ರಥಮಂ ತೇನ ಅಥರ್ವಾ ಪ್ರೀತಿಮಾಪ್ನುಯಾತ್ |
ದ್ವಿತೀಯೇನೇತಿಹಾಸಂ ಚ ಪುರಾಣಸ್ಮೃತಿದೇವತಾಃ ॥58॥
ಮೊದಲನೆಯ ಹಸ್ತಪ್ರಕ್ಷಾಳನೆಯನ್ನು ಮಾಡಿಕೊಳ್ಳುವುದರಿಂದ ಅಥರ್ವವೇದವನ್ನು ಸಂತೋಷಪಡಿಸುತ್ತಾನೆ. ಎರಡನೆಯ ಬಾರಿ ಮಾಡುವುದರಿಂದ ಇತಿಹಾಸ- ಪುರಾಣ ಮತ್ತು ದೇವತೆಗಳನ್ನು ಸಂತೋಷಪಡಿಸುತ್ತಾನೆ.
ಯಚ್ಚಕ್ಷುಷಿ ಸಮಾಧತ್ತೇ ತೇನಾದಿತ್ಯಂ ತು ಪ್ರೀಣಯೇತ್ |
ಪ್ರೀಣಾತಿ ವಾಯುಂ ಘ್ರಾಣಂ ಚ ದಿಶಶ್ಚಾಪ್ಯಥ ಶ್ರೋತ್ರಯೋಃ ॥59॥
ಕಣ್ಣುಗಳಿಗೆ ನೀರನ್ನು ಹಚ್ಚಿಕೊಳ್ಳುವುದರಿಂದ ಸೂರ್ಯನನ್ನು ಸಂತೋಷ ಪಡಿಸುತ್ತಾನೆ. ಘ್ರಾಣಕ್ಕೆ ಹಚ್ಚಿಕೊಳ್ಳುವುದರಿಂದ ವಾಯುವನ್ನೂ, ಶ್ರೋತ್ರಕ್ಕೆ ಹಚ್ಚಿಕೊಳ್ಳುವುದರಿಂದ ದಿಗ್ದೇವತೆಗಳನ್ನೂ ಸಂತೋಷಪಡಿಸುತ್ತಾನೆ.
ಬ್ರಹ್ಮಾಣಂ ತೇನ ಪ್ರೀಣಾತಿ ಯನ್ಮೂರ್ಧನಿ ಸಮಾಪಯೇತ್ |
ಸಮುತ್ಕ್ಷಿಪತಿ ಚಾಪೋರ್ಧ್ವಮಾಕಾಶಂ ತೇನ ಪ್ರೀಣಯೇತ್ ॥60॥
ಶಿರಸ್ಸನ್ನು ಸ್ಪರ್ಶ ಮಾಡುವುದರಿಂದ ಬ್ರಹ್ಮದೇವರನ್ನು ಸಂತೋಷ ಪಡಿಸುತ್ತಾನೆ. ಜಲವನ್ನು ಮೇಲ್ಮುಖವಾಗಿ ಎರಚುವುದರಿಂದ ಆಕಾಶವನ್ನು ಸಂತೋಷಪಡಿಸುತ್ತಾನೆ.
ಪ್ರೀಣಾತಿ ವಿಷ್ಣುಂ ಪದ್ಭ್ಯಾಂ ತು ಸಲಿಲಂ ವೈ ಸಮಾದಧತ್ |
ಪ್ರಾಙ್ಮುಖೋದಙ್ಮುಖೋ ವಾಽಪಿ ಅಂತರ್ಜಾನುರುಪಸ್ಪೃಶೇತ್ ॥61॥
ಪಾದಗಳಿಗೆ ನೀರನ್ನು ಸ್ಪರ್ಶಿಸುವುದರಿಂದ ವಿಷ್ಣುವನ್ನು ಸಂತೋಷ ಪಡಿಸುತ್ತಾನೆ. ಆಚಮನವನ್ನು ಮಾಡುವವನು ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕುಳಿತು ಮಂಡಿಗಳ ಮಧ್ಯೆ ಕೈಯನ್ನು ತಂದು ಆಚಮನ ಮಾಡಬೇಕು.
ವ್ಯಾಖ್ಯಾನ ವಿಶೇಷ ಈ ಆಚಮನ ಕ್ರಮವು ಉಡುಪಿಯ ಕಡೆಯಲ್ಲಿ ಮಾಡುವ ಆಚಮನ ಕ್ರಮಕ್ಕೆ ಸರಿ ಹೊಂದುವುದಾಗಿದೆ. ಆ ಆಚಮನ ಕ್ರಮವು ಹೀಗಿದೆ `ಋಗ್ವೇದಾಯ ಸ್ವಾಹಾ | ಯಜುರ್ವೇದಾಯ ಸ್ವಾಹಾ | ಸಾಮವೇದಾಯ ಸ್ವಾಹಾ |' ಎಂದು ಹೇಳಿ ಮೂರು ಬಾರಿ ನೀರಿನ ಪ್ರಾಶನ. `ಅಥರ್ವಣ ವೇದಾಯ ನಮಃ | ಇತಿಹಾಸ-ಪುರಾಣೇಭ್ಯೋ ನಮಃ' ಎಂದು ಕರತಲ ಕರಪೃಷ್ಠಗಳಿಗೆ ನೀರಿನಿಂದ ಮಾರ್ಜನ. `ಅಗ್ನಯೇ ನಮಃ ಅಗ್ನಯೇ ನಮಃ' ಎಂದು ಮುಖ, `ವಾಯವೇ ನಮಃ ವಾಯವೇ ನಮಃ' ಎಂದು ನಾಸಿಕ, `ಸೂರ್ಯಾಯ ನಮಃ, ಚಂದ್ರಾಯ ನಮಃ' ಎಂದು ಕಣ್ಣುಗಳು, `ದಿಗ್ಭ್ಯೋ ನಮಃ ದಿಗ್ಭ್ಯೋ ನಮಃ' ಎಂದು ಶ್ರೋತ್ರಗಳು, `ಇಂದ್ರಾಯ ನಮಃ ಇಂದ್ರಾಯ ನಮಃ' ಎಂದು ಹಸ್ತಗಳು, `ವಿಷ್ಣವೇ ನಮಃ ವಿಷ್ಣವೇ ನಮಃ' ಎಂದು ಜಾನುಗಳು, `ಪೃಥಿವ್ಯೈ ನಮಃ ಪೃಥಿವ್ಯೈ ನಮಃ' ಎಂದು ಪಾದಗಳು, `ಆತ್ಮನೇ ನಮಃ ಅಂತರಾತ್ಮನೇ ನಮಃ ಪರಮಾತ್ಮನೇ ನಮಃ' ಎಂದು ನಾಭಿ, ಹೃದಯ ಮತ್ತು ಶಿರಸ್ಸನ್ನು ಸ್ಪರ್ಶಿಸುವುದು. ಈ ರೀತಿ ಇಲ್ಲಿ ಹೇಳಿದ ಕ್ರಮಕ್ಕೆ ಸ್ವಲ್ಪ ವ್ಯತ್ಯಾಸದಿಂದ ಅನುಗುಣವಾಗಿದೆ.
ಸರ್ವತ್ರ ವಿಧಿರಿತ್ಯೇಷ ಭೋಜನಾದಿಷು ನಿತ್ಯಶಃ |
ಅನ್ನೇಷು ದಂತಲಗ್ನೇಷು ಉಚ್ಛಿಷ್ಟಃ ಪುನರಾಚಮೇತ್ ॥62॥
ಭೋಜನಾದಿಗಳಲ್ಲಿಯೂ ಸಹ ಯಾವಾಗಲೂ ಇದೇ ವಿಧಿಯಿದೆ. ಆಹಾರ ಪದಾರ್ಥಗಳು ಹಲ್ಲಿನಲ್ಲಿ ಸಿಕ್ಕಿಕೊಂಡಿದ್ದರೆ ಅದು ಉಚ್ಛಿಷ್ಟವಾಗುತ್ತದೆ. ಅದನ್ನು ಉಗುಳಿ ಬಾಯನ್ನು ಶುದ್ಧ ಮಾಡಿಕೊಂಡು ಪುನಃ ಆಚಮನ ಮಾಡಬೇಕು.
ವಿಧಿರೇಷ ಸಮುದ್ದಿಷ್ಟಃ ಶೌಚೇ ಚಾಭ್ಯುಕ್ಷಣಂ ಸ್ಮೃತಮ್ |
ಶೂದ್ರಸ್ಯೈಷ ವಿಧಿರ್ದೃಷ್ಟೋ ಗೃಹಾನ್ನಿಷ್ಕ್ರಮತಸ್ತತಃ ॥63॥
ಇದು ಶೌಚದಲ್ಲಿ ಹೇಳಲ್ಪಟ್ಟ ವಿಧಿ. ನೀರನ್ನು ಚುಮುಕಿಸುವುದು ಶೌಚದಲ್ಲಿ ಹೇಳಲ್ಪಡುತ್ತದೆ. ಈ ವಿಧಿಯು ಶೂದ್ರನಿಗೂ ಮತ್ತು ಗೃಹಸ್ಥಾಶ್ರಮವನ್ನು ತೊರೆದ ಯತಿಗೂ ಸಮಾನವಾಗಿದೆ.
ನಿತ್ಯಂ ತ್ವಲುಪ್ತಶೌಚೇನ ವರ್ತಿತವ್ಯಂ ಕೃತಾತ್ಮನಾ |
ಯಶಸ್ಕಾಮೇನ ಭಿಕ್ಷುಭ್ಯಃ ಶುದ್ರೇಣಾತ್ಮಹಿತಾರ್ಥಿನಾ ॥64॥
ಯತಿಗಳಿಂದ ತನ್ನ ಹಿತವನ್ನು ಬಯಸಿ ಕೀರ್ತಿಯನ್ನು ಬಯಸುವ ಶೂದ್ರನು ನಿತ್ಯವೂ ಶೌಚವನ್ನು ಬಿಡದೆ ಶರೀರವನ್ನು ಶೋಧಿಸಿಕೊಂಡು ಇರಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಏಕಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತೆರಡನೆಯ ಅಧ್ಯಾಯ

ಪರಾಶರಗೀತೆ- ಶೂದ್ರಶುಶ್ರೂಷೆಯ ಪ್ರಕಾರಕಥನ
ಪರಾಶರಃ
ಕ್ಷತ್ರಾ ಆರಂಭಯಜ್ಞಾಸ್ತು ವೀರ್ಯಯಜ್ಞಾ ವಿಶಃ ಸ್ಮೃತಾಃ |
ಶೂದ್ರಾ ಪರಿಚರಾಯಜ್ಞಾ ಜಪಯಜ್ಞಾಸ್ತು ಬ್ರಾಹ್ಮಣಾಃ ॥1॥
ಪರಾಶರ ಕ್ಷತ್ರಿಯರು ಆರಂಭ ಯಜ್ಞವುಳ್ಳವರು (ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಯೇ ಕ್ಷತ್ರಿಯರ ಯಜ್ಞ). ವೈಶ್ಯರು ವೀರ್ಯಯಜ್ಞರು, ಶೂದ್ರರು ಪರಿಚಾರಯಜ್ಞರು, ಬ್ರಾಹ್ಮಣರು ಜಪಯಜ್ಞರು.
ಶುಶ್ರೂಷಾಜೀವಿನಃ ಶೂದ್ರಾ ವೈಶ್ಯಾ ವಿಪಣಿಜೀವಿನಃ |
ಅನಿಷ್ಟನಿಗ್ರಹಾಃ ಕ್ಷತ್ರಾ ವಿಪ್ರಾಃ ಸ್ವಾಧ್ಯಾಯಜೀವಿನಃ ॥2॥
ಶೂದ್ರರು ಶುಶ್ರೂಷೆಯಿಂದ ಜೀವಿಸುವವರು. ವೈಶ್ಯರು ವ್ಯಾಪಾರದಿಂದ ಜೀವಿಸುವವರು. ಕ್ಷತ್ರಿಯರು ದುಷ್ಟನಿಗ್ರಹದಿಂದ ಜೀವಿಸುವವರು. ಬ್ರಾಹ್ಮಣರು ವೇದಶಾಸ್ತ್ರಾಧ್ಯಯನದಿಂದ ಜೀವಿಸುವವರು.
ತಪಸಾ ಶೋಭತೇ ವಿಪ್ರೋ ರಾಜನ್ಯಃ ಪಾಲನಾದಿಭಿಃ |
ಆತಿಥ್ಯೇನ ತಥಾ ವೈಶ್ಯಃ ಶೂದ್ರೋ ದಾಸ್ಯೇನ ಶೋಭತೇ ॥3॥
ಬ್ರಾಹ್ಮಣನು ತಪಸ್ಸಿನಿಂದ ಶೋಭಿಸುತ್ತಾನೆ, ಕ್ಷತ್ರಿಯನು ಪಾಲನದಿಂದ ಶೋಭಿಸುತ್ತಾನೆ, ವೈಶ್ಯನು ಆತಿಥ್ಯದಿಂದ ಶೋಭಿಸುತ್ತಾನೆ, ಶೂದ್ರನು ದಾಸ್ಯದಿಂದ ಶೋಭಿಸುತ್ತಾನೆ.
ಯತಾತ್ಮನಾ ತು ಶೂದ್ರೇಣ ಶುಶ್ರೂಷಾ ನಿತ್ಯಮೇವ ಚ |
ಕರ್ತವ್ಯಾ ತ್ರಿಷು ವರ್ಣೇಷು ಪ್ರಾಯೇಣಾಶ್ರಮವಾಸಿಷು ॥4॥
ಮನೋಜಯವುಳ್ಳ ಶೂದ್ರನು ಯಾವಾಗಲೂ ಮೂರು ವರ್ಣದವರ ಅದರಲ್ಲಿಯೂ ಆಶ್ರಮವಾಸಿಗಳ ಸೇವೆಯನ್ನು ಮಾಡಬೇಕು.
ಅಶಕ್ತೇನ ತ್ರಿವರ್ಗಸ್ಯ ಸೇವ್ಯಾ ಹ್ಯಾಶ್ರಮವಾಸಿನಃ |
ಯಥಾಶಕ್ಯಂ ಯಥಾಪ್ರಜ್ಞಂ ಯಥಾಧರ್ಮಂ ಯಥಾಶ್ರುತಮ್ ॥5॥
ವಿಶೇಷೇಣೈವ ಕರ್ತವ್ಯಾ ಶುಶ್ರೂಷಾ ಭಿಕ್ಷುಕಾಶ್ರಮೇ ॥6॥
ಸ್ವತಃ ಧರ್ಮಾರ್ಥಕಾಮರೂಪವಾದ ತ್ರಿವರ್ಗವನ್ನು ಸಂಪಾದಿಸಲು ಅಶಕ್ತನಾದವನು ಆಶ್ರಮವಾಸಿಗಳನ್ನು ತನ್ನ ಶಕ್ತಿಗೆ, ತನ್ನ ಬುದ್ಧಿಗೆ, ತನ್ನ ಧರ್ಮಕ್ಕೆ, ತನ್ನ ವಿದ್ಯೆಗೆ ಅನುಗುಣವಾಗಿ ಸೇವಿಸಬೇಕು. ವಿಶೇಷವಾಗಿ ಸಂನ್ಯಾಸಿಗಳ ಆಶ್ರಮದಲ್ಲಿ ಸೇವೆಯನ್ನು ಮಾಡಬೇಕು.
ಆಶ್ರಮಾಣಾಂ ತು ಸರ್ವೇಷಾಂ ಚತುರ್ಣಾಂ ಭಿಕ್ಷುಕಾಶ್ರಮಮ್ |
ಪ್ರಧಾನಮಿತಿ ವರ್ಣ್ಯಂತೇ ಶಿಷ್ಟಾಃ ಶಾಸ್ತ್ರವಿನಿಶ್ಚಯೇ ॥7॥
ನಾಲ್ಕು ಆಶ್ರಮಗಳಲ್ಲಿ ಸಂನ್ಯಾಸಾಶ್ರಮವೇ ಶ್ರೇಷ್ಠವಾದುದೆಂದು ಶಿಷ್ಟರು ಶಾಸ್ತ್ರ ನಿರ್ಣಯದಿಂದ ಹೇಳಿರುತ್ತಾರೆ.
ಯಚ್ಚೋಪದಿಶ್ಯತೇ ಶಿಷ್ಟೈಃ ಶ್ರುತಿಸ್ಮೃತಿವಿಧಾನತಃ |
ತಥಾ ಸ್ವೇಯಮಶಕ್ತೇನ ಸ ಧರ್ಮ ಇತಿ ನಿಶ್ಚಿತಃ ॥8॥
ತಾನೇ ತಿಳಿಯಲು ಅಸಮರ್ಥನಾದವನು ಶಿಷ್ಟರು ಶ್ರುತಿ-ಸ್ಮೃತಿಗೆ ಅನುಸಾರವಾಗಿ ಏನು ಉಪದೇಶವನ್ನು ಮಾಡಿದ್ದಾರೋ ಅದರಂತೆ ಇರುವುದು ಧರ್ಮ ಎಂದು ಸಿದ್ಧವಾಗಿದೆ.
ಅತೋಽನ್ಯಥಾ ತು ಕುರ್ವಾಣಃ ಶ್ರೇಯೋ ನಾಪ್ನೋತಿ ಮಾನವಃ |
ತಸ್ಮಾದ್ ಭಿಕ್ಷುಷು ಶೂದ್ರೇಣ ಕಾರ್ಯಮಾತ್ಮಹಿತಂ ಸದಾ ॥9॥
ಮನುಷ್ಯನು ಬೇರೆ ರೀತಿಯಲ್ಲಿ ನಡೆದುಕೊಂಡರೆ ಶ್ರೇಯಸ್ಸನ್ನು ಹೊಂದುವುದಿಲ್ಲ. ಆದ್ದರಿಂದ ಶೂದ್ರನು ಯತಿಗಳ ಸೇವೆಯನ್ನು ಮಾಡಿ ತನ್ನ ಹಿತವನ್ನು ಮಾಡಿಸಿಕೊಳ್ಳಬೇಕು.
ಇಹ ಯತ್ ಕುರುತೇ ಶ್ರೇಯಸ್ತತ್ ಪ್ರೇತ್ಯ ಸಮುಪಾಶ್ನುತೇ |
ತಚ್ಚಾನಸೂಯತಾ ಕಾರ್ಯಂ ಕರ್ತವ್ಯಂ ಯದ್ಧಿ ಮನ್ಯತೇ |
ಅಸೂಯತಾ ಕೃತಸ್ಯೇಹ ಫಲಂ ದುಃಖಾದವಾಪ್ಯತೇ ॥10॥
ಈ ಲೋಕದಲ್ಲಿ ಯಾವ ಸತ್ಕಾರ್ಯವನ್ನು ಮಾಡುತ್ತಾನೆಯೋ ಅದರ ಫಲವನ್ನು ಮರಣಾನಂತರದಲ್ಲಿ ಅನುಭವಿಸುತ್ತಾನೆ. ತಾನು ಏನು ಮಾಡಬೇಕೆಂದು ಇಚ್ಛಿಸುತ್ತಾನೆಯೋ ಅದನ್ನು ಅಸೂಯೆ ಪಡದೆ ಮಾಡಬೇಕು. ಅಸೂಯೆಯಿಂದ ಮಾಡಿದ ಕರ್ಮದ ಫಲವು ದುಃಖದಿಂದ ಪ್ರಾಪ್ತವಾಗುತ್ತದೆ.
ಪ್ರಿಯವಾದೀ ಜಿತಕ್ರೋಧೋ ವೀತತಂದ್ರಿರಮತ್ಸರಃ ॥11॥
ಕ್ಷಮಾವಾನ್ ಶೀಲಸಂಪನ್ನಃ ಸತ್ಯಧರ್ಮಪರಾಯಣಃ |
ಆಪದ್ಭಾವೇನ ಕುರ್ಯಾದ್ಧಿ ಶುಶ್ರೂಷಾಂ ಭಿಕ್ಷುಕಾಶ್ರಮೇ ॥12॥
ಪ್ರಿಯವನ್ನು ಮಾತನಾಡುವವನಾಗಿ, ಕ್ರೋಧವನ್ನು ಜಯಿಸಿ, ಆಲಸ್ಯ ಮತ್ತು ಮಾತ್ಸರ್ಯದಿಂದ ರಹಿತನಾಗಿ, ಕ್ಷಮಾಶೀಲ ಸಂಪನ್ನನಾಗಿ, ಸತ್ಯಧರ್ಮ ಪರಾಯಣನಾಗಿ, ಆಪತ್ತು ಒದಗಿದಾಗ ಮಾಡುವಂತೆ ಯತಿಗಳ ಆಶ್ರಮದಲ್ಲಿ ಸೇವೆಯನ್ನು ಮಾಡಬೇಕು.
ಅಯಂ ಮೇ ಪರಮೋ ಧರ್ಮಸ್ತ್ವನೇನೇಮಂ ಸುದುಸ್ತರಮ್ |
ಸಂಸಾರಸಾಗರಂ ಘೋರಂ ತರಿಷ್ಯಾಮಿ ನ ಸಂಶಯಃ ॥13॥
ವಿಭಯೋ ದೇಹಮುತ್ಸೃಜ್ಯ ಯಾಸ್ಯಾಮಿ ಪರಮಾಂ ಗತಿಮ್ |
ನಾತಃ ಪರಂ ಮಮಾಪ್ಯನ್ಯ ಏಷ ಧರ್ಮಃ ಸನಾತನಃ ॥14॥
ಏವಂ ಸಂಚಿಂತ್ಯ ಮನಸಾ ಶೂದ್ರೋ ಬುದ್ಧಿಸಮಾಧಿನಾ |

ಕುರ್ಯಾದವಿಮನಾ ನಿತ್ಯಂ ಶುಶ್ರೂಷಾಧರ್ಮಮುತ್ತಮಮ್ ॥15॥
ಇದು ನನ್ನ ಶ್ರೇಷ್ಠವಾದ ಧರ್ಮ. ದಾಟಲು ಅಸಾಧ್ಯವಾದ ಘೋರವಾದ ಸಂಸಾರ ಸಾಗರವನ್ನು ಇದರಿಂದ ದಾಟುವೆನು. ಇದರಲ್ಲಿ ಸಂಶಯವಿಲ್ಲ. ನಾನು ಭಯವಿಲ್ಲದೆ ದೇಹವನ್ನು ತ್ಯಜಿಸಿ ಶ್ರೇಷ್ಠವಾದ ಗತಿಯನ್ನು ಹೊಂದುವೆನು. ನನಗೆ ಇದಕ್ಕಿಂತ ಭಿನ್ನವಾದ ಶ್ರೇಷ್ಠವಾದ ಸನಾತನ ಧರ್ಮವಿಲ್ಲ - ಹೀಗೆ ಸಮಾಧಾನದಿಂದ ಮನಸ್ಸಿನಲ್ಲಿ ಚಿಂತಿಸಿ ಶೂದ್ರನು ಬೇಸರಗೊಳ್ಳದೆ ನಿತ್ಯವೂ ಶ್ರೇಷ್ಠವಾದ ಶುಶ್ರೂಷಾ ಧರ್ಮವನ್ನು ಆಚರಿಸಬೇಕು.
ಶುಶ್ರೂಷಾನಿಯಮೇನೇಹ ಭಾವ್ಯಂ ಶಿಷ್ಟಾಶಿನಾ ಸದಾ |
ಶಮಾನ್ವಿತೇನ ದಾಂತೇನ ಕಾರ್ಯಾಕಾರ್ಯವಿದಾ ಸದಾ ॥16॥
ಸೇವೆಯ ನಿಯಮವನ್ನು ಹೊಂದಿದವನು, ಅನಿಷಿದ್ಧ ಭೋಜನವನ್ನು ಮಾಡಿ ಯಾವಾಗಲೂ ಶಾಂತನೂ, ದಾಂತನೂ, ಕಾರ್ಯಾಕಾರ್ಯವನ್ನು ತಿಳಿದವನೂ ಆಗಿರಬೇಕು.
ಸರ್ವಕಾರ್ಯೇಷು ಕೃತ್ಯಾನಿ ಕೃತಾನ್ಯೇವ ತು ದರ್ಶಯೇತ್ |
ಯಥಾ ಪ್ರಿಯೋ ಭವೇದ್ ಭಿಕ್ಷುಸ್ತಥಾ ಕಾರ್ಯಂ ಪ್ರಸಾಧಯೇತ್ ॥
ಅವನು ಎಲ್ಲ ಕಾರ್ಯಗಳಲ್ಲಿಯೂ ತಾನು ಮುಗಿಸಿದ ಕಾರ್ಯಗಳನ್ನೇ ಯತಿಗಳಿಗೆ ತೋರಿಸಬೇಕು. ಯತಿಗೆ ಸಂತೋಷವಾಗುವಂತೆ ಕಾರ್ಯಗಳನ್ನು ಮಾಡಬೇಕು.
ಯದಕಲ್ಯಂ ಭವೇದ್ ಭಿಕ್ಷೋರ್ನ ತತ್ಕಾರ್ಯಂ ಸಮಾಚರೇತ್ |
ಯಥಾಽಽಶ್ರಮಸ್ಯಾವಿರುದ್ಧಂ ಧರ್ಮಮಾತ್ರಾಭಿಸಂಹಿತಮ್ ॥18॥
ತತ್ಕಾರ್ಯಮವಿಚಾರೇಣ ನಿತ್ಯಮೇವ ಶುಭಾರ್ಥಿನಾ |
ಮನಸಾ ಕರ್ಮಣಾ ವಾಚಾ ನಿತ್ಯಮೇವ ಪ್ರಸಾಧಯೇತ್ ॥19॥
ಯತಿಗಳಿಗೆ ಇಷ್ಟವಾಗದುದ್ದನ್ನು ಮಾಡಬಾರದು. ಶುಭವನ್ನು ಬಯಸುವ ಶೂದ್ರನು ಆಶ್ರಮಕ್ಕೆ ವಿರುದ್ಧವಾದ ಧರ್ಮಕ್ಕೆ ಅನುಗುಣವಾದ ಕಾರ್ಯವನ್ನು ನಿತ್ಯವೂ ಸಂಶಯ ಪಡದೆ ಮಾಡಬೇಕು. ಮನಸ್ಸಿನಿಂದಲೂ, ಕರ್ಮದಿಂದಲೂ ಮತ್ತು ಮಾತಿನಿಂದಲೂ ನಿತ್ಯವೂ ಅಂತಹ ಕಾರ್ಯವನ್ನು ಸಾಧಿಸಬೇಕು.
ಸ್ಥಾತವ್ಯಂ ತಿಷ್ಠಮಾನೇಷು ಗಚ್ಛಮಾನಾನನುವ್ರಜೇತ್ |
ಆಸೀನೇಷ್ವಾಸಿತವ್ಯಂ ಚ ನಿತ್ಯಮೇವಾನುವರ್ತತಾ ॥20॥
ಯತಿಗಳನ್ನು ಅನುಸರಿಸುವವನು ಅವರು ನಿಂತಾಗ ನಿಲ್ಲಬೇಕು, ನಡೆದಾಗ ಹಿಂಬಾಲಿಸಬೇಕು. ಅವರು ಕುಳಿತುಕೊಂಡಾಗ ಕುಳಿತುಕೊಳ್ಳಬೇಕು.
ಧರ್ಮಲಬ್ಧೇನ ಸ್ನೇಹೇನ ಪಾದೌ ಸಂಪೀಡಯೇತ್ ಸದಾ |
ಉದ್ವರ್ತನಾದೀಂಶ್ಚ ತಥಾ ಕುರ್ಯಾದಪ್ರತಿಚೋದಿತಃ ॥21॥
ಧರ್ಮಲಬ್ಧವಾದ ತೈಲದಿಂದ ಅವರಿಗೆ ಅಚೋದಿತನಾಗಿ (ಹೇಳಿಸಿಕೊಳ್ಳದೆ) ಪಾದ ಮೊದಲಾದ ಶರೀರಭಾಗದ ಉದ್ವರ್ತನೆಯನ್ನು ಮಾಡಬೇಕು.
ನೈಶಕಾರ್ಯಾಣಿ ಕೃತ್ವಾ ತು ನಿತ್ಯಂ ಚೈವಾನುಚೋದಿತಃ |
ಯಥಾವಿಧಿರುಪಸ್ಪೃಶ್ಯ ಸನ್ನ್ಯಸ್ಯ ಜಲಭಾಜನಮ್ ॥22॥
ಭಿಕ್ಷೂಣಾಂ ನಿಲಯಂ ಗತ್ವಾ ಪ್ರಣಮ್ಯ ವಿಧಿಪೂರ್ವಕಮ್ |
ಬ್ರಹ್ಮಪೂರ್ವಾನ್ ಗುರೂಂಸ್ತತ್ರ ಪ್ರಣಮ್ಯ ನಿಯತೇಂದ್ರಿಯಃ ॥23॥
ರಾತ್ರಿಯ ಕಾರ್ಯಗಳನ್ನು ಮುಗಿಸಿ ನಿತ್ಯವೂ ಹೇಳಿಸಿಕೊಳ್ಳದೆ ವಿಧಿಗೆ ಅನುಸಾರವಾಗಿ ಮುಖಪ್ರಕ್ಷಾಳನಾದಿಗಳನ್ನು ಮಾಡಿ, ಜಲಪಾತ್ರೆಯನ್ನು ದೂರದಲ್ಲಿಟ್ಟು ಯತಿಗಳ ನಿವಾಸಕ್ಕೆ ಹೋಗಿ ವಿಧಿಪೂರ್ವಕವಾಗಿ ನಿಯತೇಂದ್ರಿಯನಾಗಿ ಅಲ್ಲಿ ಬ್ರಾಹ್ಮಣ ಪೂರ್ವಕರಾದ ಗುರುಗಳನ್ನು ನಮಸ್ಕರಿಸಬೇಕು.
ತಥಾಽಽಚಾರ್ಯಪುರೋಗಾಣಾಮನುಕುರ್ಯಾನ್ನಮಸ್ಕ್ರಿಯಾಮ್ |
ಸ್ವಧರ್ಮಚಾರಿಣಾಂ ಚಾಪಿ ಸುಖಂ ಪೃಷ್ಟ್ವಾಽಭಿವಾದ್ಯ ಚ ॥24॥
ತಮ್ಮ ಧರ್ಮಾಚರಣೆಯನ್ನು ಮಾಡುವ ಆಶ್ರಮವಾಸಿಗಳ ಸುಖವನ್ನು ವಿಚಾರಿಸಿ (ಕುಶಲಪ್ರಶ್ನೆಯನ್ನು ಮಾಡಿ) ನಮಸ್ಕರಿಸಿ ಆಚಾರ್ಯ ಮೊದಲಾದವರಿಗೂ ನಮಸ್ಕಾರ ಮಾಡಬೇಕು.
ಯೋ ಭವೇತ್ ಪೂರ್ವಸಂಸಿದ್ಧಸ್ತುಲ್ಯಕರ್ಮಾ ಭವೇತ್ ಸದಾ |
ತಸ್ಮೈ ಪ್ರಣಾಮಃ ಕರ್ತವ್ಯೋ ನೇತರೇಷು ಕದಾಚನ ॥25॥
ತನಗಿಂತ ಮೊದಲಿನಿಂದ ಸೇವಾ ಕರ್ಮದಲ್ಲಿ ನಿರತನಾದ ಶೂದ್ರನಿಗೂ ನಮಸ್ಕಾರವನ್ನು ಮಾಡಬೇಕು. ಉಳಿದವರಿಗೆ ನಮಸ್ಕಾರವನ್ನು ಮಾಡಬಾರದು.
ಅನುಕತತ್ವ ತೇಷು ಚೋತ್ಥಾಯ ನಿತ್ಯಮೇವ ಯತವ್ರತಃ |
ಸಮ್ಮಾರ್ಜನಮಥೋ ಗತ್ವಾ ಕೃತ್ವಾ ಚಾಪ್ಯುಪಲೇಪನಮ್ ॥26॥
ತತಃ ಪುಷ್ಪಬಲಿಂ ದದ್ಯಾತ್ ಪುಷ್ಪಾಣ್ಯಾದಾಯ ಧರ್ಮತಃ |
ನಿಷ್ಕ್ರಮ್ಯಾವಸಥಾತ್ ತೂರ್ಣಮನ್ಯತ್ ಕರ್ಮ ಸಮಾಚರೇತ್ ॥27॥
ಮಾತನಾಡದೆ ಅಲ್ಲಿಂದ ಎದ್ದು ವ್ರತಧಾರಿಯಾದ ಶೂದ್ರನು ಸಮ್ಮಾರ್ಜನ, ಅನುಲೇಪನವನ್ನು ಮಾಡಿ ಧರ್ಮಕ್ಕೆ ಅನುಸಾರವಾಗಿ ಪುಷ್ಪಗಳನ್ನು ತೆಗೆದುಕೊಂಡು ಬಂದು ಪುಷ್ಪಗಳನ್ನು ಸಮರ್ಪಿಸಬೇಕು. ಅನಂತರ ನಿವಾಸದಿಂದ (ಆಶ್ರಮದಿಂದ) ಹೊರಗೆ ಬಂದು ಶೀಘ್ರವಾಗಿ ಬೇರೆ ಕಾರ್ಯವನ್ನು ಮಾಡಬೇಕು.

ಯಥೋಪಘಾತೋ ನ ಭವೇತ್ ಸ್ವಾಧ್ಯಾಯೇಽಽಶ್ರಮಿಣಾಂ ತಥಾ |
ಉಪಘಾತಂ ತು ಕುರ್ವಾಣ ಏನಸಾ ಸಂಪ್ರಯುಜ್ಯತೇ |
ತಥಾಽಽತ್ಮಾ ಪ್ರಣಿಧಾತವ್ಯೋ ಯಥಾ ತೇ ಪ್ರೀತಿಮಾಪ್ನುಯುಃ ॥28॥
ಸ್ವಾಧ್ಯಾಯವನ್ನು ಮಾಡುವ ಆಶ್ರಮವಾಸಿಗಳಿಗೆ ತೊಂದರೆಯಾಗದಂತೆ ತನ್ನ ಕಾರ್ಯವನ್ನು ಮಾಡಬೇಕು. ಸ್ವಾಧ್ಯಾಯಕ್ಕೆ ತೊಂದರೆ ಉಂಟಾದರೆ ಪಾಪ ಉಂಟಾಗುತ್ತದೆ. ಯತಿಗಳು ತನ್ನ ಮೇಲೆ ಪ್ರೀತಿಯನ್ನು ಹೊಂದುವಂತೆ ತನ್ನನ್ನು ನಡೆಸಿಕೊಳ್ಳಬೇಕು.
ಪರಿಚಾರಕೋಽಹಂ ವರ್ಣಾನಾಂ ತ್ರಯಾಣಾಂ ಧರ್ಮತಃ ಸ್ಮೃತಃ |
ಕಿಮುತಾಶ್ರಮವೃದ್ಧಾನಾಂ ಯಥಾಲಬ್ಧೋಪಜೀವಿನಾಮ್ ॥29॥
ಭಿಕ್ಷೂಣಾಂ ಗತರಾಗಾಣಾಂ ಕೇವಲಂ ಜ್ಞಾನದರ್ಶಿನಾಮ್ |
ವಿಶೇಷೇಣ ಮಯಾ ಕಾರ್ಯಾ ಶುಶ್ರೂಷಾ ನಿಯತಾತ್ಮನಾ ॥30॥
ತೇಷಾಂ ಪ್ರಸಾದಾತ್ ತಪಸಾ ಪ್ರಾಪ್ಸ್ಯಾಮೀಷ್ಟಾಂ ಶುಭಾಂ ಗತಿಮ್ |
ಏವಮೇತದ್ ವಿನಿಶ್ಚಿತ್ಯ ಯದಿ ಸೇವೇತ ಭಿಕ್ಷುಕಾನ್ |
ವಿಧಿನಾ ಸ್ವೋಪದಿಷ್ಟೇನ ಪ್ರಾಪ್ನೋತಿ ಪರಮಾಂ ಗತಿಮ್ ॥31॥
ನಾನು ಧರ್ಮದ ದೃಷ್ಟಿಯಿಂದ ಮೂರು ವರ್ಣದವರಿಗೂ ಪರಿಚಾರಕನಾದವನು. ಇನ್ನು ಆಶ್ರಮವಾಸಿಗಳಾದ ದೇವಲಬ್ಧ ಆಹಾರದಿಂದ ಜೀವಿಸುವ ರಾಗಾದಿ-ದೋಷ ರಹಿತರಾದ, ಜ್ಞಾನನಿಷ್ಠರಾದ, ಭಿಕ್ಷುಗಳ ಪರಿಚರ್ಯೆಯನ್ನು ನಿಯಂತ್ರಿತವಾದ ಮನಸ್ಸಿನಿಂದ ನಾನು ವಿಶೇಷವಾಗಿ ಮಾಡಬೇಕೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರ ಅನುಗ್ರಹದಿಂದಲೂ ಮತ್ತು ತಪಸ್ಸಿನಿಂದಲೂ ನಾನು ಇಷ್ಟವಾದ ಶುಭಗತಿಯನ್ನು ಹೊಂದಬೇಕು- ಹೀಗೆ ನಿಶ್ಚಯಿಸಿ ತನಗೆ ವಿಹಿತವಾದ ಮಾರ್ಗದಿಂದ ಯತಿಗಳ ಸೇವೆಯನ್ನು ಮಾಡುವವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಶೂದ್ರಸ್ಯ ಭಿಕ್ಷುಶುಶ್ರೂಷಾನಾಮ ದ್ವಿಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ಮೂರನೆಯ ಅಧ್ಯಾಯ
ಪರಾಶರಗೀತೆ- ಶೂದ್ರಶುಶ್ರೂಷಾ
ಪರಾಶರಃ
ನ ತಥಾ ಸಂಪ್ರದಾನೇನ ನೋಪವಾಸಾದಿಭಿಸ್ತಥಾ |
ಇಷ್ಟಾಂ ಗತಿಮವಾಪ್ನೋತಿ ಯಥಾ ಶುಶ್ರೂಷಕರ್ಮಣಾ ॥1॥
ಪರಾಶರ ಶುಶ್ರೂಷಾ ಕರ್ಮದಿಂದ ಪಡೆಯಬಹುದಾದ ಅಭೀಷ್ಟವಾದ ಗತಿಯನ್ನು ದಾನದಿಂದಾಗಲೀ ಅಥವಾ ಉಪವಾಸಾದಿಗಳಿಂದಾಗಲೀ ಪಡೆಯಲು ಸಾಧ್ಯವಿಲ್ಲ.
ಯಾದೃಶೇನ ತು ತೋಯೇನ ಶುದ್ಧಿಂ ಪ್ರಕುರುತೇ ನರಃ |
ತಾದೃಗ್ಭವತಿ ತದ್ಧೌತಮುದಕಸ್ಯ ಪ್ರಭಾವತಃ ॥2॥
ಮನುಷ್ಯನು ಎಂತಹ ಜಲದಿಂದ ಶುದ್ಧಿ ಮಾಡುತ್ತಾನೆಯೋ ತೊಳೆಯಲ್ಪಟ್ಟ ವಸ್ತುವು ಅಂತಹ ಗುಣವನ್ನೇ ಹೊಂದುತ್ತದೆ.
ಶೂದ್ರೋಽಪ್ಯೇತೇನ ಮಾರ್ಗೇಣ ಯಾದೃಶಂ ಸೇವತೇ ಜನಮ್ |
ತಾದೃಗ್ಭವತಿ ಸಂಸರ್ಗಾದಚಿರೇಣ ನ ಸಂಶಯಃ ॥3॥
ಶೂದ್ರನೂ ಸಹ ಇದೇ ರೀತಿಯಲ್ಲಿ ಎಂತಹ ಗುರುವನ್ನು ಸೇವಿಸುತ್ತಾನೆಯೋ ಅವರ ಸಂಸರ್ಗದಿಂದ ಶೀಘ್ರವಾಗಿ ಅಂತಹ ಗುಣವನ್ನು ಹೊಂದುವುದರಲ್ಲಿ ಸಂಶಯವಿಲ್ಲ.
ತಸ್ಮಾತ್ ಪ್ರಯತ್ನತಃ ಸೇವ್ಯಾ ಭಿಕ್ಷವೋ ನಿಯತಾತ್ಮನಾ |
ಉದಕಗ್ರಹಣಾದ್ಯೇನ ಸ್ನಪನೋದ್ವರ್ತನೈಸ್ತಥಾ ॥4॥
ಆದ್ದರಿಂದ ನೀರನ್ನು ತರುವುದು, ಸ್ನಾನವನ್ನು ಮಾಡಿಸುವುದು, ದೇಹವನ್ನು ಒತ್ತುವುದು ಮೊದಲಾದ ಕರ್ಮಗಳಿಂದ ಶೂದ್ರನು ಪ್ರಯತ್ನಪೂರ್ವಕವಾಗಿ ಮನೋಜಯವನ್ನು ಹೊಂದಿ ಯತಿಗಳ ಸೇವೆಯನ್ನು ಮಾಡಬೇಕು.
ಅಧ್ವನಾ ಕರ್ಶಿತಾನಾಂ ಚ ವ್ಯಾಧಿತಾನಾಂ ತಥೈವ ಚ |
ಶುಶ್ರೂಷಾಂ ನಿಯತಂ ಕುರ್ಯಾತ್ ತೇಷಾಮಾಪದಿ ಯತ್ನತಃ ॥5॥
ಮಾರ್ಗಾಯಾಸದಿಂದ ಬಳಲಿದ ಮತ್ತು ವ್ಯಾಧಿಗ್ರಸ್ತರಾದವರ ಮತ್ತು ಆಪತ್ತಿನಲ್ಲಿ ಸಿಲುಕಿದವರ ಸೇವೆಯನ್ನು ವಿಶೇಷವಾಗಿ ಮಾಡಬೇಕು.
ದರ್ಭಾಜಿನಾನ್ಯವೇಕ್ಷೇತ ಭೈಕ್ಷಭಾಜನಮೇವ ಚ |
ಯಥಾಕಾಮಂ ಚ ಕಾರ್ಯಾಣಿ ಸರ್ವಾಣ್ಯೇವೋಪಸಾಧಯೇತ್ |
ಪ್ರಾಯಶ್ಚಿತ್ತಂ ಯಥಾ ನ ಸ್ಯಾತ್ ತಥಾ ಸರ್ವಂ ಸಮಾಚರೇತ್ ॥6॥
ಅವರ ದರ್ಭಾಜಿನಗಳನ್ನು ನೋಡಿಕೊಳ್ಳಬೇಕು. ಭಿಕ್ಷಾಪಾತ್ರೆಗಳನ್ನೂ ನೋಡಿಕೊಳ್ಳಬೇಕು. ಅವರಿಗೆ ಇಷ್ಟವಾಗುವಂತೆ ಎಲ್ಲ ಕಾರ್ಯಗಳನ್ನೂ ಮಾಡಬೇಕು. ಎಲ್ಲಾದರೂ ಅವರ ನಿಯಮಕ್ಕೆ ತೊಂದರೆಯುಂಟಾಗಿ ಅವರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಂತೆ ಎಲ್ಲಾ ಕಾರ್ಯಗಳನ್ನೂ ಸಾಧಿಸಬೇಕು.

ವ್ಯಾಧಿತಾನಾಂ ತು ಪ್ರಯತಶ್ಚೈಲಪ್ರಕ್ಷಾಲನಾದಿಭಿಃ |
ಪ್ರತಿಕರ್ಮಕ್ರಿಯಾ ಕಾರ್ಯಾ ಭೇಷಜಾನಯನೈಸ್ತಥಾ ॥7॥
ಅವರು ವ್ಯಾಧಿಗ್ರಸ್ತರಾದರೆ ಅವರ ವಸ್ತ್ರಗಳನ್ನು ಒಗೆದು, ಔಷಧಿಗಳನ್ನು ತಂದು ಪರಿಹಾರಕಾರ್ಯವನ್ನು ಮಾಡಬೇಕು.
ಪಿಂಷಣಾಲೇಪನಂ ಚೂರ್ಣಂ ಕಷಾಯಮಥ ಸಾಧನಮ್ |
ನಾನ್ಯಸ್ಯ ಪ್ರತಿಚಾರೇಷು ಸುಖಾರ್ಥಮುಪಪಾದಯೇತ್ ॥8॥
ಅರೆಯುವುದು, ಲೇಪನ ಮಾಡುವುದು, ಚೂರ್ಣವನ್ನು ಮಾಡುವುದು, ಕಷಾಯವನ್ನು ತಯಾರಿಸುವುದು ಅಥವಾ ಬೇರೆ ಏನಾದರೂ ಸಾಧನವನ್ನು ಮಾಡುವುದು ಇವುಗಳನ್ನು ಮಾಡಬೇಕು. ಅಂತಹ ಸಂದರ್ಭದಲ್ಲಿ ತಿರುಗಾಡುತ್ತಾ ಇನ್ನೊಬ್ಬರ ಸುಖಾರ್ಥವಾಗಿ ಪ್ರಯತ್ನವನ್ನು ಪಡಬಾರದು.
ಭಿಕ್ಷಾಟನೋಽಭಿಗಚ್ಛೇತ ಭಿಷಜಶ್ಚ ವಿಪಶ್ಚಿತಃ |
ತತೋ ವಿನಿಷ್ಕ್ರಿಯಾರ್ಥಾನಿ ದ್ರವ್ಯಾಣಿ ಸಮುಪಾರ್ಜಯೇತ್ ॥9॥
ಭಿಕ್ಷಾಟನೆಯನ್ನು ಮಾಡಿ ವೈದ್ಯರ ಮತ್ತು ಜ್ಞಾನಿಗಳ ಮನೆಗೆ ಹೋಗಿ ಅಲ್ಲಿಂದ ವಸ್ತುಗಳನ್ನು ಸಂಪಾದಿಸಬೇಕು.
ಯಶ್ಚ ಪ್ರೀತಮನಾ ದದ್ಯಾದಾದದ್ಯಾದ್ ಭೇಷಜಂ ನರಃ |
ಅಶ್ರದ್ಧಯಾ ಹಿ ದತ್ತಾನಿ ತಾನ್ಯಭೋಜ್ಯಾಣಿ ಭಿಕ್ಷುಭಿಃ ॥10॥
ಪ್ರೀತಿಯಿಂದ ಕೊಟ್ಟ ಔಷಧವನ್ನು ಮಾತ್ರ ಮನುಷ್ಯನು (ಯತಿಯು) ತೆಗೆದುಕೊಳ್ಳಬೇಕು. ಅಶ್ರದ್ಧೆಯಿಂದ ಕೊಟ್ಟದನ್ನು ಭಿಕ್ಷುಗಳು ತೆಗೆದುಕೊಳ್ಳಬಾರದು.
ಶ್ರದ್ಧಯಾ ಯದುಪಾದತ್ತಂ ಶ್ರದ್ಧಯಾ ಚೋಪಪಾದಿತಮ್ |
ತಸ್ಯೋಪಭೋಗಾದ್ ಧರ್ಮಃ ಸ್ಯಾದ್ ವ್ಯಾಧಿಭಿಶ್ಚ ನಿವರ್ತ್ಯತೇ ॥11॥
ಶ್ರದ್ಧೆಯಿಂದ ಸಂಪಾದನೆ ಮಾಡಿ, ಶ್ರದ್ಧೆಯಿಂದ ನೀಡಿದರೆ ಯತಿಗಳು ಅದನ್ನು ಸ್ವೀಕರಿಸುವುದರಿಂದ ಧರ್ಮವುಂಟಾಗುತ್ತದೆ ಮತ್ತು ವ್ಯಾಧಿಯೂ ನಾಶವಾಗುತ್ತದೆ.
ಆ ದೇಹಪತನಾದೇವಂ ಶುಶ್ರೂಷೇದ್ ವಿಧಿಪೂರ್ವಕಮ್ |
ನ ತ್ವೇವಂ ಧರ್ಮಮುತ್ಸೃಜ್ಯ ಕುರ್ಯಾತ್ ತೇಷಾಂ ಪ್ರತಿಕ್ರಿಯಾಮ್ ॥
ಶೂದ್ರನು ದೇಹಪಾತವಾಗುವವರೆಗೂ ಹೀಗೆ ವಿಧವಿಧವಾಗಿ ಸೇವೆಯನ್ನು ಮಾಡಬೇಕೇ ಹೊರತು ಧರ್ಮವನ್ನು ಬಿಟ್ಟು ಅವರಿಗೆ ಪ್ರತೀಕಾರವನ್ನು ಮಾಡಬಾರದು.
ಸ್ವಭಾವತೋ ಹಿ ದ್ವಂದ್ವಾನಿ ವಿಪ್ರಯಾಂತ್ಯುಪಯಾಂತಿ ಚ |
ಸ್ವಭಾವತಃ ಸರ್ವಭಾವಾ ಭವಂತಿ ನ ಭವಂತಿ ಚ |
ಸಾಗರಸ್ಯೋರ್ಮಿಸದೃಶಾ ವಿಜ್ಞಾತವ್ಯಾ ಗುಣಾತ್ಮಕಾಃ ॥13॥
ಶೀತೋಷ್ಣ, ಸುಖ-ದುಃಖ ಮೊದಲಾದ ದ್ವಂದ್ವಗಳು ಸ್ವಾಭಾವಿಕವಾಗಿ ಬರುತ್ತವೆ ಮತ್ತು ಹೋಗುತ್ತವೆ. ಎಲ್ಲ ವಸ್ತುಗಳೂ ಹೀಗೆಯೇ ಬಂದು ಹೋಗುವಂತಹವುಗಳು. ಗುಣಕಾರ್ಯವಾದ ವಸ್ತುಗಳು ಸಾಗರದ ಅಲೆಗಳಂತೆ ಯಾವಾಗಲೂ ಬಂದು-ಹೋಗುವಂತಹವುಗಳು ಎಂದು ತಿಳಿಯಬೇಕು.
ವಿದ್ಯಾದೇವಂ ಹಿ ಯೋ ಧೀಮಾಂಸ್ತತ್ವವಿತ್ತತ್ವದರ್ಶನಃ |
ನ ಸ ಲಿಪ್ಯೇತ ಪಾಪೇನ ಪದ್ಮಪತ್ರಮಿವಾಂಭಸಾ ॥14॥
ಯಾವ ಮೇಧಾವಿಯು ತತ್ತ್ವ ಜ್ಞಾನವನ್ನು ಹೊಂದಿ ಹೀಗೆ ತಿಳಿಯುತ್ತಾನೆಯೋ ಅವನು ಪದ್ಮಪತ್ರವು ನೀರಿನ ಲೇಪವನ್ನು ಹೊಂದದಂತೆ ಪಾಪದ ಲೇಪವನ್ನು ಹೊಂದಲಾರ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ತ್ರಿಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ನಾಲ್ಕನೆಯ ಅಧ್ಯಾಯ
ಪರಾಶರಗೀತೆ-ಶೂದ್ರಶುಶ್ರೂಷಾ
ಪರಾಶರಃ
ಏವಂ ಪ್ರಯತಿತವ್ಯಂ ಹಿ ಶುಶ್ರೂಷಾರ್ಥಮತಂದ್ರಿತೈಃ |
ಸರ್ವಾಭಿರೂಪಸೇವಾಭಿಸ್ತುಷ್ಯಂತಿ ಯತಯೋ ಯಥಾ ॥1॥
ಪರಾಶರ ಈ ರೀತಿಯಲ್ಲಿ ಆಲಸ್ಯವನ್ನು ಬಿಟ್ಟು ಯತಿಗಳು ಸಂತೋಷಪಡುವಂತೆ ಎಲ್ಲಾ ರೀತಿಯಲ್ಲೂ ಅನುರೂಪವಾದ ಎಲ್ಲಾ ಸೇವೆಯನ್ನೂ ಮಾಡಬೇಕು.
ನಾಪರಾಧ್ಯೇತ ಭಿಕ್ಷೋಸ್ತು ನ ಚೈನಮವಧೀರಯೇತ್ |
ಉತ್ತರಂ ಚ ನ ಸಂದದ್ಯಾತ್ ಕ್ರುದ್ಧಂ ಚೈವ ಪ್ರಸಾದಯೇತ್ ॥2॥
ಯತಿಗಳಿಗೆ ಅಪರಾಧವನ್ನು ಮಾಡಬಾರದು. ಅವರನ್ನು ತಿರಸ್ಕರಿಸಬಾರದು. ಎದುರು ಮಾತನಾಡಬಾರದು. ಅವರು ಕೋಪಗೊಂಡರೆ ಪ್ರಸನ್ನೀಕರಿಸಿಕೊಳ್ಳಬೇಕು.
ಶ್ರೇಯ ಏವಾಭಿಧಾತವ್ಯಂ ಕರ್ತವ್ಯಂ ಚ ಪ್ರಹೃಷ್ಟವತ್ |

ತೂಷ್ಣೀಂಭಾವೇನ ವೈ ತತ್ರ ನ ಕ್ರುದ್ಧಮಭಿಸಂವದೇತ್ ॥3॥
ಅವರಿಗೆ ಹಿತವಾದುದನ್ನೇ ಮಾತನಾಡಬೇಕು. ಎಲ್ಲ ಕಾರ್ಯಗಳನ್ನು ಸಂತೋಷದಿಂದ ಮೌನವಾಗಿ ಮಾಡಬೇಕು. ಯತಿಗಳು ಕೋಪಗೊಂಡಿದ್ದಾಗ ಎದುರು ಮಾತನಾಡಬಾರದು.
ನಾದದೀತ ಪರಸ್ವಾನಿ ನ ಗೃಹ್ಣೀಯಾದಯಾಚಿತಮ್ |
ಲಬ್ಧಾಲಬ್ಧೇನ ಜೀವೇತ ತಥೈವ ಪರಿತೋಷಯೇತ್ ॥4॥
ಇನ್ನೊಬ್ಬರ ಪದಾರ್ಥವನ್ನು ತೆಗೆದುಕೊಳ್ಳಬಾರದು. ಕೇಳದೆಯೂ ಯಾವ ಪದಾರ್ಥವನ್ನು ತೆಗೆದುಕೊಳ್ಳಬಾರದು. ನ್ಯಾಯವಾಗಿ ಲಬ್ಧವಾದುದರಿಂದ ಅಥವಾ ದೈವಲಬ್ಧವಾದುದರಿಂದ ಜೀವಿಸಿ ಇನ್ನೊಬ್ಬರನ್ನು ಸಂತೋಷಪಡಿಸಬೇಕು.
ಕೋಪಿನಂ ತು ನ ಯಾಚೇತ ಜ್ಞಾನವಿದ್ವೇಷಕಾರಿತಃ |
ಸ್ಥಾವರೇಷು ದಯಾಂ ಕುರ್ಯಾಜ್ಜಂಗಮೇಷು ಚ ಪ್ರಾಣಿಷು ॥5॥
ಕೋಪಗೊಂಡವನನ್ನು ಹಾಗೆಯೇ ಜ್ಞಾನವಿದ್ವೇಷಿಯನ್ನು ಯಾಚಿಸಬಾರದು. ಸ್ಥಾವರ-ಜಂಗಮ ಪ್ರಾಣಿಗಳಲ್ಲಿ ದಯೆಯನ್ನು ಮಾಡಬೇಕು.
ಯಥಾಽಽತ್ಮನಿ ತಥಾಽನ್ಯೇಷು ಸಮಾಂ ದೃಷ್ಟಿಂ ನಿಪಾತಯೇತ್ |
ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ |
ಸಂಪಶ್ಯಮಾನೋ ವಿಚರನ್ ಬ್ರಹ್ಮಭೂಯಾಯ ಕಲ್ಪತೇ ॥6॥
ತನ್ನಂತೆಯೇ ಇನ್ನೊಬ್ಬರನ್ನು ಸಮಾನ ದೃಷ್ಟಿಯಿಂದ ನೋಡಬೇಕು. ಎಲ್ಲ ಜೀವರಲ್ಲಿಯೂ ಪರಮಾತ್ಮನನ್ನೂ, ಪರಮಾತ್ಮನಲ್ಲಿ ಎಲ್ಲ ಜೀವರನ್ನೂ ಅನುಸಂಧಾನ ಮಾಡುತ್ತಾ ಸಂಚರಿಸುವವನು ಜೀವನ್ಮುಕ್ತನಾಗುವನು.
ಹಿಂಸಾಂ ವಾ ಯದಿ ವಾಽಹಿಂಸಾಂ ನ ಕುರ್ಯಾದಾತ್ಮಕಾರಣಾತ್ |
ಯತ್ರೇತರೋ ಭವೇನ್ನಿತ್ಯಂ ದೋಷಂ ತತ್ರ ನ ಕಾರಯೇತ್ ॥7॥
ತನ್ನ ಸಲುವಾಗಿ ಹಿಂಸೆಯನ್ನಾಗಲೀ, ಅಹಿಂಸೆಯನ್ನಾಗಲೀ ಮಾಡಬಾರದು (ಹಿಂಸೆಯಿಂದಾಗಲೀ, ಅಹಿಂಸೆಯಿಂದಾಗಲೀ ತನಗಾಗಿ ಏನನ್ನೂ ಸಂಪಾದಿಸಬಾರದು) ಇನ್ನೊಬ್ಬರಿಂದ ದುಷ್ಟಕಾರ್ಯವನ್ನು ಮಾಡಿಸಬಾರದು (?)
ಏವಂ ಸ ಮುಚ್ಯತೇ ದೋಷಾತ್ ಪರಾನಾಶ್ರಿತ್ಯ ವರ್ತಯನ್ |
ಆತ್ಮಾಶ್ರಯೇಣ ದೋಷೇಣ ಲಿಪ್ಯತೇ ಹ್ಯಲ್ಪಬುದ್ಧಿಮಾನ್ ॥8॥
ಹೀಗೆ ಮಾಡಿದರೆ ಇನ್ನೊಬ್ಬರನ್ನು ಆಶ್ರಯಿಸಿ ಜೀವಿಸುವವನು ದೋಷದಿಂದ ನಿರ್ಮುಕ್ತನಾಗುತ್ತಾನೆ. ವಿವೇಕವಿಲ್ಲದವನು ತನ್ನ ದೋಷದಿಂದ ಲಿಪ್ತನಾಗುತ್ತಾನೆ.
ಜರಾಯುಜಾಂಡಜಾಶ್ಚೈವ ಉದ್ಭಿಜ್ಜಾಃ ಸ್ವೇದಜಾಶ್ಚ ಯೇ |
ಅವಧ್ಯಾಃ ಸರ್ವ ಏವೈತೇ ಬುಧೈಃ ಸಮನುವರ್ಣಿತಾಃ ॥9॥
ಜರಾಯುಜ, ಅಂಡಜ, ಉದ್ಭಿಜ ಮತ್ತು ಸ್ವೇದಜ - ಈ ನಾಲ್ಕು ವಿಧವಾದ ಪ್ರಾಣಿಗಳು ಅವಧ್ಯವೆಂದು ಜ್ಞಾನಿಗಳು ಹೇಳಿದ್ದಾರೆ.
ನಿಶ್ಚಯಾರ್ಥಂ ವಿಬುದ್ಧಾನಾಂ ಪ್ರಾಯಶ್ಚಿತ್ತಂ ವಿಧೀಯತೇ |
ಹಿಂಸಾ ಯಥಾಽನ್ಯಾವಿಹಿತಾ ತಥಾ ದೋಷಂ ಪ್ರಯೋಜಯೇತ್ ॥
ಹಿಂಸೆಯನ್ನು ಮಾಡಿ ಪಶ್ಚಾತ್ತಾಪ ಪಡುವವರಿಗೆ ಪ್ರಾಯಶ್ಚಿತ್ತವು ಹೇಳಲ್ಪಡಲ್ಪಡುತ್ತದೆ. ಅವಿಹಿತವಾದ ಬೇರೆ ಹಿಂಸೆಯು ದೋಷವನ್ನುಂಟು ಮಾಡುತ್ತದೆ.
ತಥೋಪದಿಷ್ಟಂ ಗುರುಣಾ ಶಿಷ್ಯಸ್ಯ ಚರತೋ ವಿಧಿಮ್ |
ನ ಹಿ ಲೋಭಃ ಪ್ರಭವತಿ ಹಿಂಸಾ ವಾಽಪಿ ತದಾತ್ಮಿಕಾ |
ಶಾಸ್ತ್ರದರ್ಶನಮೇತದ್ಧಿ ವಿಹಿತಂ ವಿಶ್ವಯೋನಿನಾ ॥11॥
ಗುರುಗಳು ಹೇಳಿದಂತೆ ನಡೆದುಕೊಳ್ಳುವ ಶಿಷ್ಯನಿಗೆ ಲೋಭವಾಗಲೀ, ಹಿಂಸಾ ದೋಷವಾಗಲೀ ಬರುವುದಿಲ್ಲ. ಇದು ಶಾಸ್ತ್ರಸಿದ್ಧವಾದುದು ಮತ್ತು ಬ್ರಹ್ಮದೇವರಿಂದ ವಿಹಿತವಾದುದು.
ಯದ್ಯೇತದೇವಂ ಮನ್ಯೇತ ಶೂದ್ರೋ ಹ್ಯಪಿ ಚ ಬುದ್ಧಿಮಾನ್ |
ಕೃತಂ ಕೃತವತಾಂ ಗಚ್ಛೇತ್ ಕಿಂಪುನರ್ಯೋ ನಿಷೇವತೇ ॥12॥
ಬುದ್ಧಿವಂತನಾದ ಶೂದ್ರನೂ ಹೀಗೆ ತಿಳಿದರೆ ಅವನು ಕೃತಕೃತ್ಯರಲ್ಲಿ ಶ್ರೇಷ್ಠನಾಗುತ್ತಾನೆ. ಇನ್ನು ತಿಳಿದು ಸೇವೆಯನ್ನು ಮಾಡುವವನ ವಿಷಯದಲ್ಲಿ ಏನು ಹೇಳಬೇಕು?
ನ ಶೂದ್ರಃ ಪತತೇ ಕಶ್ಚಿನ್ನ ಚ ಸಂಸ್ಕಾರಮರ್ಹತಿ |
ನಾಸ್ಯಾಧಿಕಾರೋ ಧರ್ಮೇಽಸ್ತಿ ನ ಧರ್ಮಾತ್ ಪ್ರತಿಷೇಧನಮ್ ॥13॥
ಶೂದ್ರನು ಪತನವನ್ನು ಹೊಂದುವುದಿಲ್ಲ. ಅವನಿಗೆ ಯಾವ ಸಂಸ್ಕಾರವೂ ಇಲ್ಲ. ಧರ್ಮದಲ್ಲಿ ಅಧಿಕಾರವಿಲ್ಲ. ನಿಷೇಧವೂ ಇಲ್ಲ.
ಅನುಗ್ರಹಾರ್ಥಂ ಮನುನಾ ಸರ್ವವರ್ಣೇಷು ವರ್ಣಿತಮ್ |
ಯದೋಪಯಾತಂ ತು ಭವೇತ್ ಸ್ತ್ರೀಕೃತಃ ಪರಿಚಾರಕೇ ॥14॥
ಅನ್ನಾವಕಾಶಶಯನಂ ತಸ್ಯ ಸಂವತ್ಸರಂ ಸ್ಮೃತಮ್ |
ತೇನ ತಸ್ಯ ಭವೇಚ್ಛಾಂತಿಸ್ತತೋ ಭೂಯೋಽಪ್ಯಪಾವ್ರಜೇತ್ ॥15॥
ಸರ್ವವರ್ಣಗಳ ಅನುಗ್ರಹಕ್ಕೋಸ್ಕರ ಮನುವು ಹೀಗೆ ಹೇಳಿದ್ದಾನೆ. ಪರಿಚಾರಕನು, ಪರಿಸ್ಥಿತಿಯ ಬಲಾತ್ಕಾರದಿಂದ ಸ್ತ್ರೀ ಸಹವಾಸವನ್ನು ಮಾಡಿದರೆ ಅವನಿಗೆ ಒಂದು ವರ್ಷದ ಕಾಲ ಅಲ್ಪಾಹಾರವನ್ನು ಕೊಟ್ಟು ಅವನನ್ನು ನೆಲದ ಮೇಲೆ ಮಲಗುವಂತೆ ಮಾಡಬೇಕು. ಅದರಿಂದ ಅವನಿಗೆ ಪಾಪ ಪರಿಹಾರವಾಗುತ್ತದೆ. ಅನಂತರ ಅವನು ಪುನಃ ತನ್ನ ಸೇವೆಯನ್ನು ಮುಂದುವರಿಸಬೇಕು (ಲಕ್ಷಾಲಂಕಾರ).

ಸವರ್ಣಾಯಾ ಭವೇದೇತದ್ ಹೀನಾಯಾಸ್ತ್ವರ್ಧಮರ್ಹತಿ |
ವರ್ಷತ್ರಯಂ ತು ವೈಶ್ಯಾಯಾಃ ಕ್ಷತ್ರಿಯಾಯಾಸ್ತು ಷಟ್ ಸಮಾಃ |
ಬ್ರಾಹ್ಮಣ್ಯಾ ತು ಸಮೇತಸ್ಯ ಸಮಾ ದ್ವಾದಶ ಕೀರ್ತಿತಾಃ ॥16॥
ತನ್ನ ವರ್ಣದವಳ ಸಮಾಗಮವನ್ನು ಹೊಂದಿದರೆ ಶೂದ್ರನಿಗೆ ಇದು ಪ್ರಾಯಶ್ಚಿತ್ತ, ಹೀನಳಾದವಳ ಸಮಾಗಮವನ್ನು ಹೊಂದಿದರೆ ಇದರ ಅರ್ಧದಷ್ಟು ಪ್ರಾಯಶ್ಚಿತ್ತ. ವೈಶ್ಯ ಸ್ತ್ರೀ ಸಮಾಗಮವಾದರೆ ಮೂರು ವರ್ಷಗಳ ಕಾಲ, ಕ್ಷತ್ರಿಯ ಸ್ತ್ರೀ ಸಮಾಗಮವಾದರೆ ಆರು ವರ್ಷಗಳ ಕಾಲ, ಬ್ರಾಹ್ಮಣ ಸ್ತ್ರೀ ಸಮಾಗಮವಾದರೆ ಹನ್ನೆರಡು ವರ್ಷಗಳ ಕಾಲ ಈ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ.
ಕಟಾಗ್ನಿನಾ ವಾ ದಗ್ಧವ್ಯಸ್ತಸ್ಮಿನ್ನೇವ ಕ್ಷಣೇ ಭವೇತ್ |
ಶಿಶ್ನಾವಪಾತನಾದ್ ವಾಽಪಿ ವಿಶುದ್ಧಿಂ ಸಮವಾಪ್ನುಯಾತ್ ॥17॥
ಅಥವಾ ಅವನನ್ನು ಆ ಕ್ಷಣದಲ್ಲಿಯೇ ಚಿತಾಗ್ನಿಯಲ್ಲಿ ದಹಿಸಬೇಕು ಅಥವಾ ಶಿಶ್ನವನ್ನು ಕತ್ತರಿಸಬೇಕು. ಇದರಿಂದ ಅವನಿಗೆ ಶುದ್ಧಿಯಾಗುತ್ತದೆ.
ಅನಸ್ಥಿಬಂಧಮೇಕಂ ತು ಯದಿ ಪ್ರಾಣೈರ್ವಿಯೋಜಯೇತ್ |
ಉಪೋಷ್ಯೈಕಾಹಮಾದದ್ಯಾತ್ ಪ್ರಾಣಾಯಾಮಾಂಸ್ತು ದ್ವಾದಶ ॥18॥
ತ್ರಿಃ ಸ್ನಾನಮುದಕೇ ಕೃತ್ವಾ ತಸ್ಮಾತ್ ಪಾಪಾತ್ ಪ್ರಮುಚ್ಯತೇ |
ಅಸ್ಥಿಬಂಧೇಷು ದ್ವಿಗುಣಂ ಪ್ರಾಯಶ್ಚಿತ್ತಂ ವಿಧೀಯತೇ ॥19॥
ಅಸ್ಥಿಶೂನ್ಯವಾದ ಪ್ರಾಣಿಯನ್ನು ಕೊಂದರೆ ಒಂದು ದಿವಸ ಉಪವಾಸವನ್ನು ಮಾಡಿ ಹನ್ನೆರಡು ಪ್ರಾಣಾಯಾಮವನ್ನು ಮಾಡಬೇಕು. ನಂತರ ನೀರಿನಲ್ಲಿ ಮೂರು ಸ್ನಾನವನ್ನು ಮಾಡಿ ಆ ಪಾಪದಿಂದ ಮುಕ್ತನಾಗುತ್ತಾನೆ. ಅಸ್ಥಿ ಇರುವ ಪ್ರಾಣಿಗಳ ವಿಷಯದಲ್ಲಿ ಇದರ ಎರಡರಷ್ಟು ಪ್ರಾಯಶ್ಚಿತ್ತವು ಹೇಳಲ್ಪಡುತ್ತದೆ.
ಅನೇನ ವಿಧಿನಾ ವಾಽಪಿ ಸ್ಥಾವರೇಷು ನ ಸಂಶಯಃ |
ಕಾಯೇನ ಪದ್ಭ್ಯಾಂ ಹಸ್ತಾಭ್ಯಾಮಪರಾಧಾತ್ ತು ಮುಚ್ಯತೇ ॥20॥
ಇದೇ ರೀತಿಯಲ್ಲಿ ಸ್ಥಾವರಗಳ ವಿಷಯದಲ್ಲಿಯೂ ಕೂಡ ಎಂಬುದರಲ್ಲಿ ಸಂಶಯವಿಲ್ಲ. ಹೀಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ದೇಹದಿಂದ, ಪಾದದಿಂದ ಅಥವಾ ಹಸ್ತದಿಂದ ಮಾಡಿದ ಪಾಪವು ನಾಶವನ್ನು ಹೊಂದುತ್ತದೆ.
ಅದುಷ್ಟಂ ಕ್ಷಪಯೇದ್ ಯಸ್ತು ಸರ್ವವರ್ಣೇಷು ವಾಚಯೇತ್ |
ತಸ್ಯಾಪ್ಯಷ್ಟಗುಣಂ ವಿದ್ಯಾತ್ ಪ್ರಾಯಶ್ಚಿತ್ತಂ ತದೇವ ತು ॥21॥
ಚತುರ್ಗುಣಂ ಕರ್ಮಕೃತೇ ದ್ವಿಗುಣಂ ವಾಕ್ಪ್ರದೂಷಿತೇ |
ಕೃತ್ವಾ ತು ಮಾನಸಂ ಪಾಪಂ ತಥೈವೈಕಗುಣಂ ಸ್ಮೃತಮ್ ॥22॥
ಅದುಷ್ಟ ಪ್ರಾಣಿಯನ್ನು ಕೊಂದರೆ ಅವನು ಎಲ್ಲ ವರ್ಣದವರಿಗೂ ಅದನ್ನು ಹೇಳಬೇಕು. ಅವನಿಗೂ ಹಿಂದೆ ಹೇಳಿದ ಪ್ರಾಯಶ್ಚಿತ್ತದ ಎಂಟು ಪಟ್ಟು ಪ್ರಾಯಶ್ಚಿತ್ತವೆಂದು ತಿಳಿಯಬೇಕು. ಕರ್ಮವನ್ನು ಮಾಡಿದರೆ ನಾಲ್ಕುಪಟ್ಟು ಪ್ರಾಯಶ್ಚಿತ್ತ, ಕೇವಲ ವಾಕ್ಯದಿಂದ ಹೇಳಿದರೆ ಎರಡರಷ್ಟು ಪ್ರಾಯಶ್ಚಿತ್ತ, ಮನಸ್ಸಿನಿಂದ ಮಾಡಿದರೆ ಒಂದರಷ್ಟು ಪ್ರಾಯಶ್ಚಿತ್ತ ಎಂದು ಹೇಳಲ್ಪಡುತ್ತದೆ.
ತಸ್ಮಾದೇತಾನಿ ಸರ್ವಾಣಿ ವಿದಿತ್ವಾ ನ ಸಮಾಚರೇತ್ |
ಸರ್ವಭೂತಹಿತಾರ್ಥಂ ಹಿ ಕುಶಲಾನಿ ಸಮಾಚರೇತ್ ॥23॥
ಆದ್ದರಿಂದ ಇವುಗಳೆಲ್ಲವನ್ನೂ ತಿಳಿದು ಅಂತಹ ಅಪರಾಧವನ್ನು ಮಾಡಬಾರದು. ಎಲ್ಲ ಪ್ರಾಣಿಗಳ ಹಿತಕ್ಕಾಗಿ ಶುಭವಾದುದನ್ನೇ ಮಾಡಬೇಕು.
ಏವಂ ಸಮಾಹಿತಮನಾಃ ಸೇವತೇ ಯದಿ ಸತ್ತಮಾನ್ |
ತದ್ಗತಿಸ್ತತ್ಸಮಾಚಾರಸ್ತನ್ಮನಾಸ್ತತ್ಪರಾಯಣಃ ॥24॥
ಹೀಗೆ ಮನಸ್ಸಮಾಧಾನದಿಂದ ಅವರಲ್ಲೇ ಮನಸ್ಸನ್ನಿಟ್ಟು, ಅವರನ್ನೇ ಮನಸ್ಸಿನಿಂದ ಶ್ರೇಷ್ಠವಾದ ಆಶ್ರಯವೆಂದು ತಿಳಿದು ಶ್ರೇಷ್ಠ ಪುರುಷರ ಸೇವೆಯನ್ನು ಮಾಡಿದರೆ ಅವರು ಮಾಡುವ ಆಚಾರವನ್ನೇ ಮಾಡುವವನಾಗಿ ಅವರು ಹೊಂದುವ ಗತಿಯನ್ನೇ ಹೊಂದುತ್ತಾನೆ.
ನಾಭಿನಂಧೇತ ಮರಣಂ ನಾಭಿನಂಧೇತ ಜೀವಿತಮ್ |
ಕಾಲಮೇವ ಪ್ರತೀಕ್ಷೇತ ನಿರ್ವೇಶಂ ಭೃತಕೋ ಯಥಾ ॥25॥
ಮರಣವನ್ನು ಅಭಿನಂದಿಸಬಾರದು, ಜೀವನವನ್ನೂ ಅಭಿನಂದಿಸಬಾರದು. ಕೂಲಿ ಮಾಡುವವನು ಸಂಬಳವನ್ನು ನಿರೀಕ್ಷಿಸುವ ಹಾಗೆ ಕಾಲವನ್ನು ನಿರೀಕ್ಷಿಸಬೇಕು.
ಏವಂ ಪ್ರವರ್ತಮಾನಸ್ತು ವಿನೀತಃ ಪ್ರಯತಾತ್ಮವಾನ್ |
ನಿರ್ಣಯಂ ಪುಣ್ಯಪಾಪಾಭ್ಯಾಮಚಿರೇಣೋಪಗಚ್ಛತಿ ॥26॥
ಹೀಗೆ ಮನೋನಿಗ್ರಹವನ್ನು ಹೊಂದಿ ನಿರ್ಣಯದಿಂದ ಪ್ರವೃತ್ತನಾಗುವವನು ಪುಣ್ಯ-ಪಾಪಗಳಿಂದ ನಿರ್ಲಿಪ್ತನಾಗಿ ಶೀಘ್ರವಾಗಿ ಮುಕ್ತಿಸ್ಥಾನವನ್ನು ಪಡೆಯುತ್ತಾನೆ (ಲಕ್ಷ್ಮಾಲಂಕಾರ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಪರಾಶರಗೀತಾಯಾಂ ಚತುಶ್ಚತ್ವಾರಿಂಶೋತ್ತರಶತತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *

ನೂರ ನಲವತ್ತೈದನೆಯ ಅಧ್ಯಾಯ
ಪರಾಶರಗೀತೆ- ಧರ್ಮಿಷ್ಠನಾದ ಶೂದ್ರನಿಗೆ ಕ್ರಮವಾಗಿ
ವೈಶ್ಯ-ಕ್ಷತ್ರಿಯ ಜನ್ಮಪ್ರಾಪ್ತಿ.
ಪರಾಶರಃ
ಶುಶ್ರೂಷಾನಿರತೋ ನಿತ್ಯಮರಿಷ್ಟಾನ್ಯುಪಲಕ್ಷಯೇತ್ |
ತ್ರೈವಾರ್ಷಿಕಂ ದ್ವಿವಾರ್ಷಿಕಂ ವಾ ವಾರ್ಷಿಕಂ ವಾ ಸಮುತ್ಥಿತಮ್ ॥1॥
ಪರಾಶರ ಶುಶ್ರೂಷಾನಿರತನಾದವನು ಮೂರು ವರ್ಷ, ಎರಡು ವರ್ಷ ಅಥವಾ ಒಂದು ವರ್ಷ ನಂತರದಲ್ಲಿ ಒದಗುವ ಅರಿಷ್ಟಗಳನ್ನು ಯಾವಾಗಲೂ ಮೊದಲೇ ಗಮನಿಸಬೇಕು.
ಷಾಣ್ಮಾಸಿಕಂ ಮಾಸಿಕಂ ವಾ ಸಾಪ್ತರಾತ್ರಿಕಮೇವ ವಾ |
ಸರ್ವಾಂಸ್ತದರ್ಥಾನ್ ವಾ ವಿದ್ಯಾತ್ ತೇಷಾಂ ಚಿಹ್ನಾನಿ ಲಕ್ಷಯೇತ್ ॥
ಆರು ತಿಂಗಳುಗಳಲ್ಲಿ ಒಂದು ತಿಂಗಳಿನಲ್ಲಿ ಅಥವಾ ಏಳು ದಿನಗಳಲ್ಲಿ ಒದಗುವ ಅರಿಷ್ಟಗಳ ಎಲ್ಲಾ ಚಿಹ್ನೆಗಳನ್ನೂ ಗಮನಿಸಬೇಕು.
ಪುರುಷಂ ಹಿರಣ್ಮಯಂ ಯಸ್ತು ತಿಷ್ಠಂತಂ ದಕ್ಷಿಣಾಮುಖಮ್ |
ಲಕ್ಷಯೇದುತ್ತರೇಣೈವ ಮೃತ್ಯುಸ್ತ್ರೈವಾರ್ಷಿಕೋ ಭವೇತ್ ॥3॥
ತಾನು ಉತ್ತರದಲ್ಲಿ ನಿಂತು ದಕ್ಷಿಣಾಭಿಮುಖವಾಗಿ ನಿಂತಿರುವ ಹಿರಣ್ಮಯ ಪುರುಷನನ್ನು ಸ್ವಪ್ನದಲ್ಲಿ ನೋಡಿದರೆ ಮೂರು ವರ್ಷಗಳಲ್ಲಿ ಮೃತ್ಯುವೆಂದು ತಿಳಿಯಬೇಕು.
ಶುದ್ಧಮಂಡಲಮಾದಿತ್ಯಮರಶ್ಮಿಂ ಸಂಪ್ರಪಶ್ಯತಃ |
ಸಂವತ್ಸರದ್ವಯೇನೈವ ತಸ್ಯ ಮೃತ್ಯುಂ ಸಮಾದಿಶೇತ್ ॥4॥
ರಶ್ಮಿರಹಿತನಾದ, ಶುದ್ಧವಾದ ಸೂರ್ಯಮಂಡಲವನ್ನು ನೋಡಿದರೆ ಎರಡು ವರ್ಷಗಳಲ್ಲಿ ಮೃತ್ಯುವೆಂದು ನಿರ್ದೇಶಿಸಬೇಕು.
ಜ್ಯೋತ್ಸ್ನಾಯಾಮಾತ್ಮನಶ್ಛಾಯಾಂ ಸಚ್ಛಿದ್ರಾಂ ಯಃ ಪ್ರಪಶ್ಯತಿ |
ಮೃತ್ಯುಂ ಸಂವತ್ಸರೇಣೈವ ಜಾನೀಯಾತ್ ಸುವಿಚಕ್ಷಣಃ ॥5॥
ಬೆಳುದಿಂಗಳಿನಲ್ಲಿ ತನ್ನ ನೆರಳಿನಲ್ಲಿ ಛಿದ್ರವನ್ನು ನೋಡಿದರೆ ಕುಶಲನಾದವನು ಒಂದು ವರ್ಷದಲ್ಲಿ ಮೃತ್ಯುವೆಂದು ತಿಳಿಯಬೇಕು.
ವಿಶಿರಸ್ಕಾಂ ಯದಾ ಛಾಯಾಂ ಪಶ್ಯೇತ್ ಪುರುಷ ಆತ್ಮನಃ |
ಜಾನೀಯಾದಾತ್ಮನೋ ಮೃತ್ಯುಂ ಷಾಣ್ಮಾಸೇನೇಹ ಬುದ್ಧಿಮಾನ್ ॥6॥
ಹಗಲಿನಲ್ಲಿ ತನ್ನ ಛಾಯೆಯಲ್ಲಿ ಶಿರಸ್ಸು ಕಾಣದಿದ್ದರೆ ಮೇಧಾವಿಯಾದ ಪುರುಷನು ಆರು ತಿಂಗಳಿನಲ್ಲಿ ತನ್ನ ಮೃತ್ಯುವಿದೆ ಎಂದು ತಿಳಿಯಬೇಕು.
ಕರ್ಣೌ ಪಿಧಾಯ ಹಸ್ತಾಭ್ಯಾಂ ಶಬ್ದಂ ನ ಶೃಣುತೇ ಯದಿ |
ಜಾನೀಯಾದಾತ್ಮನೋ ಮೃತ್ಯುಂ ಮಾಸೇನೈವ ವಿಚಕ್ಷಣಃ ॥7॥
ಹಸ್ತಗಳಿಂದ ಕಿವಿಗಳನ್ನು ಮುಚ್ಚಿಕೊಂಡು ಶಬ್ದವು ಕೇಳದಿದ್ದರೆ ವಿಚಕ್ಷಣನಾದವನು ಒಂದು ತಿಂಗಳಿನಲ್ಲಿ ತನ್ನ ಮೃತ್ಯುವಿದೆ ಎಂದು ತಿಳಿಯಬೇಕು.
ಶವಗಂಧಮುಪಾಘ್ರಾತಿ ಅನ್ಯದ್ವಾಽಸುರಭಿಂ ನರಃ |
ದೇವತಾಯತನಸ್ಥೋ ವೈ ಸಪ್ತರಾತ್ರೇಣ ಮೃತ್ಯುಭಾಕ್ ॥8॥
ದೇವಾಲಯದಲ್ಲಿ ಇರುವ ಪುರುಷನು ಶವಗಂಧವನ್ನಾಗಲೀ ಅಥವಾ ಬೇರೆ ದುರ್ಗಂಧವನ್ನಾಗಲೀ ಆಘ್ರಾಣಿಸಿದರೆ ಏಳು ದಿವಸಗಳಲ್ಲಿ ಮೃತ್ಯುವನ್ನು ಹೊಂದುವನು.
ಕರ್ಣನಾಸಾಪನಯನಂ ದಂತದೃಷ್ಟಿರಿವಾಗತಾ |
ಲುಪ್ತಸಂಜ್ಞಂ ಹಿ ಕರಣಂ ಸದ್ಯೋ ಮೃತ್ಯುಂ ಸಮಾದಿಶೇತ್ ॥9॥
ಕರ್ಣ-ನಾಸಿಕಗಳ ಅಭಾವ, ಕಳೆದು ಹೋದ ದಂತ ಮತ್ತು ದೃಷ್ಟಿಗಳ ಪುನರಾಗಮನ, ಕರಣಗಳಲ್ಲಿ ತಮ್ಮ ವ್ಯಾಪಾರ ಇಲ್ಲದಿರುವಿಕೆ ಇವುಗಳು ಉಂಟಾದರೆ ಸದ್ಯದಲ್ಲಿಯೇ ಮೃತ್ಯುವಿದೆ ಎಂದು ತಿಳಿಯಬೇಕು.
ಏವಮೇಷಾಮರಿಷ್ಟಾನಾಂ ಪಶ್ಯೇದನ್ಯತಮಂ ಯದಿ |
ನ ತಂ ಕಾಲಂ ಪರೀಕ್ಷೇತ ಯಥಾಽರಿಷ್ಟಂ ಪ್ರಕಲ್ಪಿತಮ್ ॥10॥
ಇಂತಹ ಅನಿಷ್ಟಗಳಲ್ಲಿ ಯಾವುದನ್ನಾದರೂ ನೋಡಿದರೆ ಸೂಚಿತವಾದ ಕಾಲದವರೆಗೂ ಕಾಯಬಾರದು.
ಅಭ್ಯಾಶೇನ ತು ಕಾಲಸ್ಯ ಗಚ್ಛೇತ ಪುಲಿನಂ ಶುಚಿ |
ತತ್ರ ಪ್ರಾಣಾನ್ ಪ್ರಮುಂಚೇತ ತಮೀಶಾನಮನುಸ್ಮರನ್ ॥11॥
ಕಾಲವು ಸಮೀಪದಲ್ಲಿದೆ ಎಂದು ತಿಳಿದು ಒಂದು ನದಿಯ ತೀರಕ್ಕೆ ಹೋಗಿ ಶುಚಿಯಾಗಿ ದೇವರಸ್ಮರಣೆಯನ್ನು ಮಾಡುತ್ತಾ ಪ್ರಾಣವನ್ನು ತ್ಯಜಿಸಬೇಕು.
ತತೋಽನ್ಯಂ ದೇಹಮಾಸಾದ್ಯ ಗಾಂಧರ್ವಂ ಸ್ಥಾನಮಾಪ್ನುಯಾತ್ |
ತತ್ರಸ್ಥೋ ವಸತೇ ವಿಂಶತ್ ಪದ್ಮಾನಿ ಸ ಮಹಾದ್ಯುತಿಃ ॥12॥
ಆಗ ಅವನು ಇನ್ನೊಂದು ದೇಹವನ್ನು ಪಡೆದು ಗಂಧರ್ವಲೋಕಕ್ಕೆ ಹೋಗುತ್ತಾನೆ. ಅಲ್ಲಿ ಮಹಾಕಾಂತಿಯಿಂದ ಕೂಡಿದವನಾಗಿ ಇಪ್ಪತ್ತು ಪದ್ಮ ವರ್ಷಗಳ ಕಾಲ ವಾಸ ಮಾಡುತ್ತಾನೆ.
ಗಂಧರ್ವೈಶ್ಚಿತ್ರಸೇನಾದ್ಯೈಃ ಸಹಿತಃ ಸತ್ಕೃತಸ್ತಥಾ |
ನೀಲವೈಡೂರ್ಯವರ್ಣೇನ ವಿಮಾನೇನಾವಭಾಸಯನ್ ॥13॥

ನಭಸ್ಥಳಮದೀನಾತ್ಮಾ ಸಾರ್ಧಮಪ್ಸರಸಾಂ ಗಣೈಃ |
ಛಂದಕಾಮಾನುಸಾರೀ ಚ ತತ್ರತತ್ರ ಮಹೀಯತೇ ॥14॥
ಚಿತ್ರಸೇನ ಮೊದಲಾದ ಗಂಧರ್ವರಿಂದ ಪೂಜಿತನಾಗಿ ಮತ್ತು ಸಹಿತನಾಗಿ ನೀಲ ವೈಡೂರ್ಯಬಣ್ಣದ ವಿಮಾನದಿಂದ ಆಕಾಶವನ್ನು ಬೆಳಗುತ್ತಾ ಯಾವ ದೈನ್ಯವನ್ನೂ ಹೊಂದದೆ, ಅಪ್ಸರೆಯರ ಸಮೂಹದ ಜೊತೆಯಲ್ಲಿ ತನ್ನ ಮನಸ್ಸಿಗೆ ಬಂದಂತೆ ಸಂಚಾರ ಮಾಡುತ್ತಾ ಅಲ್ಲಲ್ಲಿ ಪೂಜಿಸಲ್ಪಡುತ್ತಾನೆ.
ಮೋದತೇಽಮರತುಲ್ಯಾತ್ಮಾ ಸದಾಽಮರಗಣೈಃ ಸಹ |
ಪತಿತಶ್ಚ ಕ್ಷಯೇ ಕಾಲೇ ಕ್ಷಣೇನ ವಿಮಲದ್ಯುತಿಃ ॥15॥
ವೈಶ್ಯಸ್ಯ ಬಹುವಿತ್ತಸ್ಯ ಕುಲೇಽಗ್ರ್ಯೇ ಬಹುಗೋಧನೇ |
ಅವಾಪ್ಯ ತತ್ರ ವೈ ಜನ್ಮ ಸ ಪೂತೋ ದೇವಕರ್ಮಣಾ ॥16॥
ಛಂದಸಾ ಜಾಗತೇನೈವ ಪ್ರಾಪ್ಯೋಪನಯನಂ ತತಃ |
ಕ್ಷೌಮವಸೋತ್ರೇಪಕರಣಂ ದ್ವಿಜತ್ವಂ ಸಮವಾಪ್ಯ ತು ॥17॥
ಅಧೀಯಮಾನೋ ವೇದಾರ್ಥಾನ್ ಗುರುಶುಶ್ರೂಷಣೇ ರತಃ |
ಬ್ರಹ್ಮಚಾರೀ ಜಿತಕ್ರೋಧಸ್ತಪಸ್ವೀ ಜಾಯತೇ ತತಃ ॥18॥
ದೇವತೆಗಳಿಗೆ ಸದೃಶನಾಗಿ ದೇವತೆಗಳ ಜೊತೆಯಲ್ಲಿ ಸಂತೋಷಪಡುತ್ತಾನೆ. ಪುಣ್ಯವು ಕ್ಷಯವಾದಾಗ ವಿಮಲದ್ಯುತಿಯನ್ನು ಹೊಂದಿದ ಅವನು ಒಂದು ಕ್ಷಣದಲ್ಲಿ ಪತಿತನಾಗಿ ಶ್ರೀಮಂತನಾದ, ಬಹುಗೋಧನವನ್ನು ಹೊಂದಿದ ವೈಶ್ಯರ ಶ್ರೇಷ್ಠವಾದ ಕುಲದಲ್ಲಿ ಜನ್ಮವನ್ನು ತಾಳಿ ದೇವಕಾರ್ಯಗಳಿಂದ ಅಲ್ಲಿ ಪವಿತ್ರನಾಗುತ್ತಾನೆ. ಜಗತೀ ಛಂದಸ್ಸಿನ ಮಂತ್ರಗಳಿಂದ ಉಪನಯನವನ್ನು ಹೊಂದಿ ರೇಶ್ಮೆಯ ವಸ್ತ್ರಗಳನ್ನು ಧರಿಸಿ ದ್ವಿಜತ್ವವನ್ನು ಹೊಂದಿ, ವೇದಾಧ್ಯಯನವನ್ನು ಮಾಡಿ ಗುರುಶುಶ್ರೂಷಾರತನಾಗುತ್ತಾನೆ. ಬ್ರಹ್ಮಚಾರಿಯಾಗಿ ಕ್ರೋಧವನ್ನು ಜಯಿಸಿ ತಪಸ್ವಿಯಾಗುತ್ತಾನೆ.
ಅಧೀತ್ಯ ದಕ್ಷಿಣಾಂ ದತ್ತ್ವಾ ಗುರವೇ ವಿಧಿಪೂರ್ವಕಮ್ |
ಕೃತದಾರಃ ಸಮುಪೈತಿ ಗೃಹಸ್ಥವ್ರತಮುತ್ತಮಮ್ ॥19॥
ಅಧ್ಯಯನವನ್ನು ಮುಗಿಸಿ, ಗುರುಗಳಿಗೆ ವಿಧಿಪೂರ್ವಕವಾಗಿ ದಕ್ಷಿಣೆಯನ್ನು ನೀಡಿ ವಿವಾಹವನ್ನು ಮಾಡಿಕೊಂಡು ಶ್ರೇಷ್ಠವಾದ ಗೃಹಸ್ಥಾಶ್ರಮವ್ರತವನ್ನು ಅನುಷ್ಠಾನ ಮಾಡುತ್ತಾನೆ.
ದದಾತಿ ಯಜತೇ ಚೈವ ಯಜ್ಞೈರ್ವಿಪುಲದಕ್ಷಿಣೈಃ |
ಅಗ್ನಿಹೋತ್ರಮುಪಾಸನ್ ವೈ ಜುಹ್ವಚ್ಚೈವ ಯಥಾವಿಧಿ ॥20॥
ಧರ್ಮಂ ಸಂಚಿನುತೇ ನಿತ್ಯಂ ಮೃದುಗಾಮೀ ಜಿತೇಂದ್ರಿಯಃ |
ಸ ಕಾಲಪರಿಣಾಮಾತ್ ತು ಮೃತ್ಯುನಾ ಸಂಪ್ರಯುಜ್ಯತೇ ॥21॥
ದಾನವನ್ನು ಮಾಡುತ್ತಾನೆ. ವಿಪುಲದಕ್ಷಿಣೆಗಳನ್ನು ಕೊಟ್ಟು ಯಜ್ಞಗಳನ್ನು ಮಾಡುತ್ತಾನೆ. ವಿಧಿಗೆ ಅನುಗುಣವಾಗಿ ಅಗ್ನಿಹೋತ್ರವನ್ನು ಮಾಡಿ ಧರ್ಮವನ್ನು ಗಳಿಸುತ್ತಾನೆ. ನಿತ್ಯವೂ ಜಿತೇಂದ್ರಿಯನಾಗಿಯೂ, ಮೃದುವಾಗಿಯೂ ಇದ್ದು, ಕಾಲ ಪರಿಣಾಮದಿಂದ ಮೃತ್ಯುವನ್ನು ಹೊಂದುತ್ತಾನೆ.
ಸಂಸ್ಕೃತಶ್ಚಾಗ್ನಿಹೋತ್ರೇಣ ಕೃತಪಾತ್ರೋಪಧಾನವಾನ್ |
ಸಂಸ್ಕೃತೋ ದೇಹಮುತ್ಸೃಜ್ಯ ಮರುದ್ಭಿರುಪಪದ್ಯತೇ ॥22॥
ತಾನು ಮಾಡಿದ ಅಗ್ನಿಹೋತ್ರದಿಂದಲೂ, ಪಾತ್ರರಿಗೆ ಕೊಟ್ಟ ದಾನದಿಂದಲೂ ಉಂಟಾದ ಪುಣ್ಯದಿಂದ ಕೂಡಿದವನಾಗಿ ದೇಹವನ್ನು ತ್ಯಜಿಸಿ ಮರುತ್ತುಗಳ ಜೊತೆಯಲ್ಲಿ ಸೇರುತ್ತಾನೆ.
ಮರುದ್ಭಿಃ ಸಹಿತಶ್ಚಾಪಿ ತುಲ್ಯತೇಜಾ ಮಹಾದ್ಯುತಿಃ |
ಬಾಲಾರ್ಕಸಮವರ್ಣೇನ ವಿಮಾನೇನ ವಿರಾಜತಾ ॥23॥
ಸುಖಂ ಚರತಿ ತತ್ರಸ್ಥೋ ಗಂಧರ್ವಾಪ್ಸರಸಾಂ ಗಣೈಃ |
ವಿರಜೋಂಬರಸಂವೀತಸ್ತಪ್ತಕಾಂಚನಭೂಷಣಃ ॥24॥
ಛಂದಕಾಮಾನುಸಾರೀ ಚ ದ್ವಿಗುಣಂ ಕಾಲಮಾವಸೇತ್ |
ಸನ್ನಿವರ್ತೇತ ಕಾಲೇನ ಸ್ಥಾನಾತ್ ತಸ್ಮಾತ್ ಪರಿಚ್ಯುತಃ ॥25॥
ಅವಿತೃಪ್ತವಿಹಾರಾರ್ಥೋ ದಿವ್ಯಭೋಗಾನ್ ವಿಹಾಯ ತು |
ಸ ಜಾಯತೇ ನೃಪಕುಲೇ ಗಜಾಶ್ವರಥಸಂಕುಲೇ ॥26॥
ಮರುತ್ತುಗಳಿಗೆ ಸಮಾನವಾದ ತೇಜಸ್ಸು ಮತ್ತು ಕಾಂತಿಯನ್ನು ಹೊಂದಿ ಮರುತ್ತುಗಳ ಜೊತೆಯಲ್ಲಿ ಬಾಲಸೂರ್ಯನ ವರ್ಣವನ್ನು ಹೊಂದಿರುವ ಶೋಭಿಸುವ ವಿಮಾನದಲ್ಲಿ ಗಂಧರ್ವ-ಅಪ್ಸರೆಯರ ಗಣಗಳ ಜೊತೆಯಲ್ಲಿ ಸಂಚರಿಸುತ್ತಾನೆ. ಧೂಳಿಲ್ಲದ ವಸ್ತ್ರಗಳನ್ನು ಧರಿಸಿ ಸುವರ್ಣಾಭರಣ ಭೂಷಿತನಾಗಿ ತನ್ನ ಮನಸ್ಸಿಗೆ ಬಂದ ಸುಖಗಳನ್ನು ಅನುಭವಿಸುತ್ತಾ ಮೊದಲಿನ ಎರಡು ಪಟ್ಟು ಕಾಲ (ನಲವತ್ತು ಪದ್ಮ ವರ್ಷಗಳ ಕಾಲ) ವಾಸ ಮಾಡುತ್ತಾನೆ. ಆ ಕಾಲವು ಮುಗಿದ ಮೇಲೆ ಆ ಸ್ಥಾನದಿಂದ ಭ್ರಷ್ಟನಾಗಿ ಸುಖವಿಹಾರಗಳಲ್ಲಿ ತೃಪ್ತಿಯನ್ನು ಹೊಂದದೆ ದಿವ್ಯಭೋಗಗಳನ್ನು ಬಿಟ್ಟು ಪುನಃ ಭೂಮಿಗೆ ಬರುತ್ತಾನೆ. ಅವನು ಗಜಾಶ್ವ-ರಥಗಳಿಂದ ಸಮೃದ್ಧವಾದ ರಾಜಕುಲದಲ್ಲಿ ಜನಿಸುತ್ತಾನೆ.
ಪಾರ್ಥಿವೀಂ ಶ್ರಿಯಮಾಪನ್ನಃ ಶ್ರೀಮಾನ್ ಧರ್ಮಪತಿರ್ಯಥಾ |
ಜನ್ಮಪ್ರಭೃತಿ ಸಂಸ್ಕಾರಂ ಚೌಲೋಪನಯನಾನಿ ಚ ॥27॥
ಪ್ರಾಪ್ಯ ರಾಜಕುಲೇ ತತ್ರ ಯಥಾವದ್ ವಿಧಿಪೂರ್ವಕಮ್ |

ಛಂದಸಾ ತ್ರೈಷ್ಟುಭೇನೇಹ ದ್ವಿಜತ್ವಮುಪನೀಯತೇ ॥28॥
ರಾಜಕುಲದಲ್ಲಿ ಜನಿಸಿ ಧರ್ಮಪತಿಯಂತೆ ಕಾಂತಿಯುಕ್ತನೂ, ಸಂಪದ್ಯುಕ್ತನೂ ಆಗಿ ಜಾತಕರ್ಮಾದಿ ಸಂಸ್ಕಾರಗಳನ್ನೂ, ಚೌಲೋಪನಯನಾದಿ ಸಂಸ್ಕಾರಗಳನ್ನೂ ಪಡೆದು ಅದೇ ರಾಜಕುಲದಲ್ಲಿ ತ್ರಿಷ್ಟುಪ್ಛಂದಸ್ಸಿನ ಮಂತ್ರಗಳಿಂದ ಉಪನಯನವನ್ನು ಹೊಂದಿ ದ್ವಿಜನಾಗುತ್ತಾನೆ.
ಅಧೀತ್ಯ ವೇದಮಖಿಲಂ ಧನುರ್ವೇದಂ ಚ ಮುಖ್ಯಶಃ |
ಸಮಾವೃತ್ತಸ್ತತಃ ಪಿತ್ರಾ ಯೌವರಾಜ್ಯೇಽಭಿಷಿಚ್ಯತೇ ॥29॥
ಸಮಗ್ರವಾದ ವೇದವನ್ನು ಮತ್ತು ಮುಖ್ಯವಾಗಿ ಧನುರ್ವೇದವನ್ನು ಅಧ್ಯಯನವನ್ನು ಮಾಡಿ ಮನೆಗೆ ಹಿಂದಿರುಗಿ ತಂದೆಯಿಂದ ಯೌವರಾಜ್ಯದಲ್ಲಿ ಸ್ಥಾಪಿಸಲ್ಪಡುತ್ತಾನೆ.
ಕೃತದಾರಕ್ರಿಯಃ ಶ್ರೀಮಾನ್ ರಾಜ್ಯಂ ಸಂಪ್ರಾಪ್ಯ ಧರ್ಮತಃ |
ಪ್ರಜಾಃ ಪಾಲಯತೇ ಸಮ್ಯಕ್ ಷಡ್ಭಾಗಕೃತಸಂವಿಧಿಃ ॥30॥
ಸಂಪದ್ಯುಕ್ತನಾದ ಅವನು ವಿವಾಹವನ್ನು ಮಾಡಿಕೊಂಡು ಧರ್ಮದಿಂದ ರಾಜ್ಯವನ್ನು ಪಡೆದು ಪ್ರಜೆಗಳನ್ನು ಧರ್ಮದಿಂದ ಪಾಲಿಸಿ ಪ್ರಜೆಗಳ ಆದಾಯದ ಆರನೆಯ ಒಂದು ಭಾಗದ ಕರದಿಂದ ಜೀವಿಸುತ್ತಾನೆ.
ಯಜ್ಞೈರ್ಬಹುಭಿರೀಜಾನಃ ಸಮ್ಯಗಾಪ್ತಾರ್ಥದಕ್ಷಿಣೈಃ |
ಪ್ರಶಾಸತಿ ಮಹೀಂ ಶ್ರೀಮಾನ್ ರಾಜ್ಯಮಿಂದ್ರಸಮದ್ಯುತಿಃ ॥31॥
ಬಹುದಕ್ಷಿಣೆಗಳನ್ನು ನೀಡಿದ ಅನೇಕ ವಿಧವಾದ ಯಜ್ಞಗಳನ್ನು ಚೆನ್ನಾಗಿ ಅನುಷ್ಠಾನ ಮಾಡಿ ಸಂಪದ್ಯುಕ್ತನಾದ ಅವನು ಇಂದ್ರನಿಗೆ ಸಮಾನವಾದ ಕಾಂತಿಯನ್ನು ಹೊಂದಿ ಭೂಮಿಯ ರಾಜ್ಯವನ್ನು ಆಳುತ್ತಾನೆ.
ಸ್ವಧರ್ಮನಿರತೋ ನಿತ್ಯಂ ಪುತ್ರಪೌತ್ರಸಹಾಯವಾನ್ |
ಕಾಲಸ್ಯ ವಶಮಾಪನ್ನಃ ಪ್ರಾಣಾಂಸ್ತ್ಯಜತಿ ಸಂಯುಗೇ ॥32॥
ಸ್ವಧರ್ಮನಿರತನಾಗಿ, ಪುತ್ರಪೌತ್ರಾದಿ ಸಂಪತ್ತನ್ನು ಪಡೆದು ಪುನಃ ಕಾಲಕ್ಕೆ ವಶನಾಗಿ ಯುದ್ಧದಲ್ಲಿ ಅಥವಾ ಬೇರೆ ರೀತಿಯಲ್ಲಿ ಪ್ರಾಣಗಳನ್ನು ತ್ಯಜಿಸುತ್ತಾನೆ.
ದೇವರಾಜಸ್ಯ ಭವನಮಿಂದ್ರಲೋಕಮವಾಪ್ನುತೇ |
ಸಂಪೂಜ್ಯಮಾನಸ್ತ್ರಿದಿವೈರ್ವಿಚಚಾರ ಯಥಾಸುಖಮ್ ॥33॥
ಅವನು ಇಂದ್ರಲೋಕದಲ್ಲಿ ದೇವರಾಜನಾದ ಇಂದ್ರನ ಭವನವನ್ನು ಹೊಂದಿ ದೇವತೆಗಳಿಂದ ಪೂಜಿಸಲ್ಪಟ್ಟು ಸುಖವಾಗಿ ಸಂಚರಿಸುತ್ತಾನೆ.
ರಾಜರ್ಷಿಭಿಃ ಪುಣ್ಯಕೃದ್ಭಿರ್ಯಥಾ ದೇವಪತಿಸ್ತಥಾ |
ತೈಃ ಸ್ತೂಯತೇ ಬಂದಿಭಿಸ್ತು ನಾನಾವಾದ್ಯೈಃ ಪ್ರಬೋಧ್ಯತೇ ॥34॥
ದೇವತೆಯಾದ ಇಂದ್ರನಂತೆ ಪುಣ್ಯವಂತರಾದ ರಾಜರ್ಷಿಗಳಿಂದ ಪೂಜಿಸಲ್ಪಟ್ಟು ಬಂಧುಗಳಿಂದಲೂ, ಸ್ತ್ರೀಯರಿಂದಲೂ ಮತ್ತು ನಾನಾವಿಧವಾದ ವಾದ್ಯಘೋಷದಿಂದಲೂ ನಿದ್ರೆಯಿಂದ ಎಚ್ಚರಗೊಳಿಸಲ್ಪಡುತ್ತಾನೆ.
ದಿವ್ಯಜಾಂಬೂನದಮಯಂ ಭ್ರಾಜಮಾನಂ ಸಮಂತತಃ |
ವರಾಪ್ಸರೋಭಿಃ ಸಂಪೂರ್ಣಂ ದೇವಗಂಧರ್ವಸೇವಿತಮ್ ॥35॥
ಯಾನಮಾರುಹ್ಯ ವಿಚರೇದ್ ಯಥಾ ಶಕ್ರಃ ಶಚೀಪತಿಃ |
ಸ ತತ್ರ ವಸತೇ ಷಷ್ಟಿಂ ಪದ್ಮಾನೀಹ ಮುದಾನ್ವಿತಃ ॥36॥
ಸರ್ವಾಲ್ಲೋಕಾನನುಚರನ್ ಮಹದ್ಧಿಮವಭಾಸಯನ್ |
ಅಥ ಪುಣ್ಯಕ್ಷಯಾತ್ ತಸ್ಮಾತ್ ಸ್ಥಾಪ್ಯತೇ ಭುವಿ ಭಾರತ |
ಜಾಯತೇ ಚ ದ್ವಿಜಕುಲೇ ವೇದವೇದಾಂಗಪಾರಗೇ ॥37॥
ದಿವ್ಯಜಾಂಬೂನದಮಯವಾದ, ಎಲ್ಲ ಕಡೆಯಲ್ಲಿಯೂ ಪ್ರಕಾಶಿಸುವ, ಅಪ್ಸರೆಯರಿಂದ ಪೂಜಿತವಾದ, ದೇವಗಂಧರ್ವರಿಂದ ಸೇವಿತವಾದ, ಯಾನವನ್ನು ಏರಿ ಶಚೀಪತಿಯಾದ ಶಕ್ರನಂತೆ ಸಂಚರಿಸುತ್ತಾನೆ. ಅಲ್ಲಿ ಅವನು ಸಂತೋಷದಿಂದ ಕೂಡಿ ಅರವತ್ತು ಪದ್ಮ ವರ್ಷಗಳ ಕಾಲ ಎಲ್ಲ ಲೋಕಗಳಲ್ಲಿಯೂ ಸಂಚರಿಸುತ್ತಾ ತನ್ನ ಮಹಾಭಾಗ್ಯವನ್ನು ಪ್ರದರ್ಶಿಸುತ್ತಾ ವಾಸ ಮಾಡುತ್ತಾನೆ. ಅನಂತರ ಪುಣ್ಯವು ನಾಶವನ್ನು ಹೊಂದಿದ ಮೇಲೆ ಆ ಸ್ಥಾನದಿಂದ ಭೂಮಿಗೆ ಬಂದು ವೇದವೇದಾಂಗ ಪಾರಂಗತರಾದ ಬ್ರಾಹ್ಮಣರ ಕುಲದಲ್ಲಿ ಜನ್ಮವನ್ನು ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪರಾಶರಗೀತಾಯಾಂ
ಪಂಚಚತ್ವಾರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ನಲವತ್ತಾರನೆಯ ಅಧ್ಯಾಯ
ಪರಾಶರಗೀತೆ-ಬ್ರಾಹ್ಮಣಜನ್ಮಪ್ರಾಪ್ತಿ ಮತ್ತು ಅದರ ಅನುಷ್ಠಾನ.
ಪರಾಶರಃ
ತತಃ ಶ್ರುತಿಸಮಾಪನ್ನಃ ಸಂಸ್ಕೃತಶ್ಚ ಯಥಾವಿಧಿ |

ಚೌಲೋಪನಯನಂ ತಸ್ಯ ಯಥಾವತ್ ಕ್ರಿಯತೇ ದ್ವಿಜೈಃ ॥1॥
ಪರಾಶರ ಅನಂತರ ಅವನು ವೇದಸಂಪನ್ನನಾಗುತ್ತಾನೆ. ಬ್ರಾಹ್ಮಣರಿಂದ ಅವನಿಗೆ ವಿಧಿಗೆ ಅನುಸಾರವಾಗಿ ಚೌಲೋಪನಯನವು ಮಾಡಲ್ಪಡುತ್ತದೆ.
ತತೋಽಷ್ಟಮೇ ಸ ವರ್ಷೇ ತು ವ್ರತೋಪನಯನಾದಿಭಿಃ।
ಕ್ರಿಯಾಭಿರ್ವಿಧಿದೃಷ್ಟಾಭಿರ್ಬ್ರಹ್ಮತ್ವಮುಪನೀಯತೇ ॥2॥
ಅನಂತರ ಎಂಟನೆಯ ವರ್ಷದಲ್ಲಿ ಶಾಸ್ತ್ರದೃಷ್ಟವಾದ ವ್ರತ-ಉಪನಯನಾದಿ ಕ್ರಿಯೆಗಳಿಂದ ಅವನು ಬ್ರಾಹ್ಮಣ್ಯವನ್ನು ಪಡೆಯುತ್ತಾನೆ.

ಗಾಯತ್ರೇಣ ಛಂದಸಾ ತು ಸಂಸ್ಕೃತಶ್ಚರಿತವ್ರತಃ।
ಅಧೀಯಮಾನೋ ಮೇಧಾವೀ ಶುದ್ಧಾತ್ಮಾ ನಿಯತವ್ರತಃ ॥3॥
ಅಚಿರೇಣೈವ ಕಾಲೇನ ಸಾಂಗಾನ್ ವೇದಾನವಾಪ್ನುತೇ।
ಸಮಾವೃತ್ತಃ ಸ ಧರ್ಮಾತ್ಮಾ ಸಮಾವೃತ್ತಿಕ್ರಿಯಸ್ತಥಾ ॥4॥
ಯಾಜನಾಧ್ಯಾಪನರತಃ ಕುಶಲೇ ಕರ್ಮಣಿ ಸ್ಥಿತಃ।
ಅಗ್ನಿಹೋತ್ರಪರೋ ನಿತ್ಯಂ ದೇವತಾತಿಥಿಪೂಜಕಃ ॥5॥
ಯಜತೇ ವಿವಿಧೈರ್ಯಜ್ಞೈರ್ಜಪಯಜ್ಞೈಸ್ತಥೈವ ಚ।
ನ್ಯಾಯಾಗತಧನಾನ್ವೇಷೀ ನ್ಯಾಯವೃತ್ತಸ್ತಪೋಧನಃ ॥6॥
ಗಾಯತ್ರಿಮಂತ್ರದಿಂದ ಸಂಸ್ಕೃತನಾಗಿ ಒಳ್ಳೆಯ ವ್ರತವನ್ನು ಮಾಡುತ್ತಾ, ಅಧ್ಯಯನ ಶೀಲನಾಗಿ, ಮೇಧಾವಿಯೂ, ಶುದ್ಧಾಂತಃಕರಣನೂ, ವ್ರತನಿಷ್ಠನೂ ಆಗಿ, ಅಲ್ಪಕಾಲದಲ್ಲಿಯೇ ಅಂಗಸಹಿತವಾದ ವೇದಗಳನ್ನು ಹೊಂದುತ್ತಾನೆ. ಸಮಾವರ್ತನ ಕ್ರಿಯೆಯನ್ನು ಮಾಡಿ ಗುರುಗಳಿಂದ ಮನೆಗೆ ಹಿಂದಿರುಗಿ ಧರ್ಮಾತ್ಮನಾದ ಅವನು ಯಾಜನ, ಅಧ್ಯಾಪನ, ಕುಶಲ ಕರ್ಮಗಳಲ್ಲಿ ನಿರತನಾಗುತ್ತಾನೆ. ನಿತ್ಯವೂ ಅಗ್ನಿಹೋತ್ರವನ್ನು ಮಾಡುವವನಾಗಿ, ದೇವತಾ ಪೂಜೆಯನ್ನು ಮಾಡಿ ವಿವಿಧ ಯಜ್ಞಗಳಿಂದಲೂ, ಜಪಯಜ್ಞದಿಂದಲೂ ದೇವತೆಗಳನ್ನು ಆರಾಧಿಸುತ್ತಾನೆ. ತಪೋಧನನಾದ ಅವನು ನ್ಯಾಯದಿಂದ ಪಡೆಯುವ ಧನವನ್ನು ಅನ್ವೇಷಣೆ ಮಾಡುತ್ತಾ ನ್ಯಾಯರೂಪವಾದ ನಡತೆಯನ್ನು ಹೊಂದುವವನಾಗುತ್ತಾನೆ.
ಸರ್ವಭೂತಹಿತಶ್ಚೈವ ಸರ್ವಶಾಸ್ತ್ರವಿಶಾರದಃ।
ಸ್ವದಾರಪರಿತುಷ್ಟಾತ್ಮಾ ಋತುಗಾಮೀ ಜಿತೇಂದ್ರಿಯಃ ॥7॥
ಪರಾಪವಾದವಿರತಃ ಸತ್ಯವ್ರತಪರಃ ಸದಾ।
ಸ ಕಾಲಪರಿಣಾಮಾತ್ತು ಸಂಯುಕ್ತಃ ಕಾಲಧರ್ಮಣಾ ॥8॥
ಸಂಸ್ಕೃತಶ್ಚಾಗ್ನಿಹೋತ್ರೇಣ ಯಥಾವದ್ ವಿಧಿಪೂರ್ವಕಮ್।
ಸೋಮಲೋಕಮವಾಪ್ನೋತಿ ದೇಹನ್ಯಾಸಾನ್ನ ಸಂಶಯಃ ॥9॥
ಸರ್ವಪ್ರಾಣಿಗಳ ಹಿತದಲ್ಲಿ ರತನಾಗಿ, ಸರ್ವಶಾಸ್ತ್ರಗಳಲ್ಲಿ ವಿಶಾರದನಾಗಿ, ತನ್ನ ಪತ್ನಿಯಲ್ಲಿಯೇ ಋತುಗಾಮಿಯಾಗಿ ತೃಪ್ತನಾಗಿ, ಜಿತೇಂದ್ರಿಯನಾಗಿ, ಇನ್ನೊಬ್ಬರನ್ನು ದೂಷಿಸದೆ ಯಾವಾಗಲೂ ಸತ್ಯವ್ರತಪರನಾಗಿದ್ದು ಕಾಲಕ್ರಮದಲ್ಲಿ ಮರಣವನ್ನು ಹೊಂದಿ ಅಗ್ನಿಹೋತ್ರಾಗ್ನಿಯಿಂದ ವಿಧಿಪೂರ್ವಕವಾಗಿ ಸಂಸ್ಕಾರವನ್ನು ಹೊಂದಿ ದೇಹ ತ್ಯಾಗವನ್ನು ಮಾಡಿದ ಮೇಲೆ ಚಂದ್ರಲೋಕಕ್ಕೆ ಹೋಗುತ್ತಾನೆ. ಇದರಲ್ಲಿ ಸಂಶಯವಿಲ್ಲ.
ತತ್ರ ಸೋಮಪ್ರಭೈರ್ದೇವೈರಗ್ನಿಷ್ವಾತ್ತೈಶ್ಚ ಭಾಸ್ವರೈಃ।
ತಥಾ ಬರ್ಹಿಷದೈಶ್ಚೈವ ದೇವೈರಾಂಗಿರಸೈರಪಿ ॥10॥
ವಿಶ್ವೇಭಿಶ್ಚೈವ ದೇವೈಶ್ಚ ತಥಾ ಬ್ರಹ್ಮರ್ಷಿಭಿಃ ಪುನಃ।
ದೇವರ್ಷಿಭಿಶ್ಚಾಪ್ರತಿಮೈಸ್ತಥೈವಾಪ್ಸರಸಾಂ ಗಣೈಃ।
ಸಾಧ್ಯೈಃ ಸಿದ್ಧೈಶ್ಚ ಸತತಂ ಸತ್ಕೃತಸ್ತತ್ರ ಮೋದತೇ ॥11॥
ಅಲ್ಲಿ ಚಂದ್ರನ ಕಾಂತಿಯನ್ನು ಹೊಂದಿದ ದೇವತೆಗಳಿಂದಲೂ, ಪ್ರಕಾಶಮಾನರಾದ ಅಗ್ನಿಷ್ವಾತ್ತ ಮೊದಲಾದ ಪಿತೃಗಳಿಂದಲೂ, ಬರ್ಹಿಷದರಿಂದಲೂ, ಅಂಗಿರಸರಿಂದಲೂ, ವಿಶ್ವೇದೇವತೆಗಳಿಂದಲೂ, ಬ್ರಹ್ಮರ್ಷಿಗಳಿಂದಲೂ, ಅಸದೃಶರಾದ ದೇವರ್ಷಿಗಳಿಂದಲೂ, ಹಾಗೆಯೇ ಅಪ್ಸರೆಯರ ಗಣದಿಂದಲೂ, ಸಾಧ್ಯರಿಂದಲೂ, ಸಿದ್ಧರಿಂದಲೂ ಸತತವಾಗಿ ಪೂಜಿತನಾಗಿ ಸುಖವನ್ನು ಅನುಭವಿಸುತ್ತಾನೆ.
ಜಾತರೂಪಮಯಂ ದಿವ್ಯಮರ್ಕತುಲ್ಯಂ ಮನೋಜವಮ್।
ದೇವಗಂಧರ್ವಸಂಕೀರ್ಣಂ ವಿಮಾನಮಧಿರೋಹತಿ ॥12॥
ಸುವರ್ಣಮಯವಾದ, ಸೂರ್ಯದ್ಯುತಿಯನ್ನು ಹೊಂದಿದ, ಮನೋಜಯವನ್ನು ಹೊಂದಿದ, ದೇವಗಂಧರ್ವರಿಂದ ತುಂಬಿದ ದಿವ್ಯವಾದ ವಿಮಾನವನ್ನು ಏರಿ ಸಂಚರಿಸುತ್ತಾನೆ.
ಸೌಮ್ಯರೂಪಾ ಮನಃಕಾಂತಾಸ್ತಪ್ತಕಾಂಚನಭೂಷಣಾಃ।
ಸೋಮಕನ್ಯಾ ವಿಮಾನಸ್ಥಂ ರಮಯಂತಿ ಮುದಾನ್ವಿತಾಃ ॥13॥
ಸೌಮ್ಯರೂಪವನ್ನು ಧರಿಸಿದ, ಮನೋಹರರಾದ, ಸುವರ್ಣಾಭರಣ ಭೂಷಿತರಾದ ಚಂದ್ರಕನ್ಯೆಯರು ಸಂತೋಷಭರಿತರಾಗಿ ವಿಮಾನದಲ್ಲಿ ಕುಳಿತ ಅವನನ್ನು ಸಂತೋಷಪಡಿಸುತ್ತಾರೆ.
ಸ ತತ್ರ ರಮತೇ ಪ್ರೀತಃ ಸಹ ದೇವೈಃ ಸಹರ್ಷಿಭಿಃ।
ಲೋಕಾನ್ ಸರ್ವಾನನುಚರನ್ ದೀಪ್ತತೇಜಾ ಮನೋಜವಃ ॥14॥
ಅಲ್ಲಿ ಅವನು ದೀಪ್ತವಾದ ತೇಜಸ್ಸನ್ನು ಹೊಂದಿ, ಮನೋಜಯವನ್ನು ಹೊಂದಿ, ಋಷಿಗಳ ಜೊತೆಯಲ್ಲಿ ಎಲ್ಲ ಲೋಕಗಳಲ್ಲಿಯೂ

ಸಂಚರಿಸುತ್ತಾ ದೇವತೆಗಳ ಜೊತೆಯಲ್ಲಿ ಸಂತೋಷದಿಂದ ಇರುತ್ತಾನೆ.
ಸಭಾಂ ಕಾಮಜವೀಂ ಚಾಪಿ ನಿತ್ಯಮೇವಾಭಿಗಚ್ಛತಿ |
ಸರ್ವಲೋಕೇಶ್ವರಮೃಷಿಂ ನಮಸ್ಕೃತ್ಯ ಪಿತಾಮಹಮ್ ॥15॥
ಪರಮೇಷ್ಠಿರನಂತಶ್ರೀರ್ಲೋಕಾನಾಂ ಪ್ರಭವಾಪ್ಯಯಃ |
ಯತಃ ಸರ್ವಾಃ ಪ್ರವರ್ತಂತೇ ಸರ್ಗಪ್ರಲಯವಿಕ್ರಿಯಾಃ |
ಸ ತತ್ರ ವರ್ತತೇ ಶ್ರೀಮಾನ್ ದ್ವಿಶತಂ ದ್ವಿಜಸತ್ತಮಃ ॥16॥
ಕಾಮಜವವುಳ್ಳ ಸಭೆಯನ್ನು ನಿತ್ಯವೂ ಪ್ರವೇಶಿಸುತ್ತಾನೆ. ಸರ್ವಲೋಕೇಶ್ವರರೂ, ಋಷಿಗಳೂ, ಸರ್ವಜೀವೋತ್ತಮರೂ, ಅನಂತಸಂಪತ್ತನ್ನು ಹೊಂದಿದವರೂ, ಎಲ್ಲ ಲೋಕಗಳ ಸೃಷ್ಟಿ, ಪ್ರಳಯಗಳಿಗೆ ಕಾರಣರಾದವರೂ ಆದ ಪಿತಾಮಹರಾದ ಬ್ರಹ್ಮದೇವರಿಗೆ ನಮಸ್ಕರಿಸಿ ಅಲ್ಲಿ ಆ ದ್ವಿಜಶ್ರೇಷ್ಠನು ಎರಡು ನೂರು ಪದ್ಮವರ್ಷಗಳ ಕಾಲ ವಾಸ ಮಾಡುತ್ತಾನೆ.
ಅಥ ಕಾಲಕ್ಷಯಾತ್ ತಸ್ಮಾತ್ ಸ್ಥಾನಾದಾವರ್ತತೇ ಪುನಃ |
ಜಾತಿಧರ್ಮಾಂಸ್ತಥಾ ಸರ್ವಾನ್ ಸರ್ಗಾದಾವರ್ತನಾನಿ ಚ ॥17॥
ಅಶಾಶ್ವತಮಿದಂ ಸರ್ವಮಿತಿ ಚಿಂತ್ಯೋಪಲಭ್ಯ ಚ |
ಶಾಶ್ವತಂ ದಿವ್ಯಮಚಲಮದೀನಮಪುನರ್ಭವಮ್ ॥18॥
ಆಸ್ಥಾಸ್ಯತ್ಯಭಯಂ ನಿತ್ಯಂ ಯತ್ರಾವೃತ್ತಿರ್ನ ವಿದ್ಯತೇ |
ಯತ್ರ ಗತ್ವಾ ನ ಮ್ರಿಯತೇ ಜನ್ಮ ಚಾಪಿ ನ ವಿದ್ಯತೇ ॥19॥
ಅನಂತರ ಕಾಲಕ್ರಮದಲ್ಲಿ ಪುಣ್ಯಕ್ಷಯವಾದ ಮೇಲೆ ಆ ಸ್ಥಾನದಿಂದ ಇಲ್ಲಿಗೆ ಹಿಂದಿರುಗಿ ಬರುತ್ತಾನೆ. ಬೇರೆ ಬೇರೆ ಜಾತಿಯ ಧರ್ಮಗಳನ್ನೂ, ಸ್ವರ್ಗದಿಂದ ಹಿಂದಿರುಗುವುದನ್ನೂ ನೋಡಿ ಅವನು ಇವೆಲ್ಲವೂ ಅಶಾಶ್ವತವೆಂದು ಚಿಂತಿಸಿ, ಸ್ವತಃ ಅನುಭವಿಸಿ, ಶಾಶ್ವತವೂ, ದಿವ್ಯವೂ, ಅಚಲವೂ, ದೈನ್ಯರಹಿತವೂ ಆದ ಮೋಕ್ಷವನ್ನು ಉದ್ದೇಶಿಸಿ, ಎಲ್ಲಿ ಹೋದರೆ ಪುನರಾವೃತ್ತಿ ಇಲ್ಲವೋ, ಮರಣವಿಲ್ಲವೋ, ಜನ್ಮವಿಲ್ಲವೋ ಅಂತಹ ಮೋಕ್ಷಕ್ಕಾಗಿ ಪ್ರಯತ್ನಪಡುತ್ತಾನೆ.
ಗರ್ಭಕ್ಲೇಶಾಮಯಾಃ ಪ್ರಾಪ್ತಾ ಜಾಯತಾ ಚ ಪುನಃ ಪುನಃ |
ಕಾಯಕ್ಲೇಶಾಶ್ಚ ವಿವಿಧಾ ದ್ವಂದ್ವಾನಿ ವಿವಿಧಾನಿ ಚ ॥20॥
ಶೀತೋಷ್ಣಸುಖದುಃಖಾನಿ ಈರ್ಷ್ಯಾದ್ವೇಷಕೃತಾನಿ ಚ |
ತತ್ರತತ್ರೋಪಭುಕ್ತಾನಿ ನ ಕ್ವಚಿಚ್ಛಾಶ್ವತೀ ಸ್ಥಿತಿಃ ॥21॥
ಅವನು ಪುನಃ ಪುನಃ ಹುಟ್ಟಿ ಗರ್ಭವಾಸ ದುಃಖಗಳನ್ನೂ ಮತ್ತು ಅನೇಕ ದುಃಖಗಳನ್ನೂ ಹೊಂದಿದವನಾಗಿ, ಅನೇಕ ವಿಧವಾದ ಶರೀರ ಕ್ಲೇಶಗಳನ್ನೂ, ವಿಧವಿಧವಾದ ಶೀತೋಷ್ಣ ಸುಖದುಃಖಾದಿ ದ್ವಂದ್ವಗಳನ್ನೂ, ದ್ವೇಷಾಸೂಯೆಗಳಿಂದ ಉಂಟಾದ ದ್ವಂದ್ವಗಳನ್ನೂ ಅಲ್ಲಲ್ಲಿ ಅನುಭವಿಸಿದನು. ಇವುಗಳಲ್ಲಿ ಯಾವುದೂ ಸ್ಥಿರವಾದುದಲ್ಲ.
ಏವಂ ಸ ನಿಶ್ಚಯಂ ಕೃತ್ವಾ ನಿರ್ಮುಚ್ಯ ಗೃಹಬಂಧನಾತ್ |
ಛಿತ್ತ್ವಾ ಭಾರ್ಯಾಮಯಂ ಪಾಶಂ ತಥೈವಾಪತ್ಯಸಂಭವಮ್ ॥22॥
ಯತಿಧರ್ಮಮುಪಾಶ್ರಿತ್ಯ ಗುರುಶುಶ್ರೂಷಣೇ ರತಃ |
ಅಚಿರೇಣೈವ ಕಾಲೇನ ಶ್ರೇಯಃ ಸಮಧಿಗಚ್ಛತಿ ॥23॥
ಈ ರೀತಿಯಲ್ಲಿ ನಿಶ್ಚಯಿಸಿ ಅವನು ಗೃಹಬಂಧನವನ್ನು ಕಳೆದುಕೊಂಡು ಪತ್ನಿ ಎಂಬ ಪಾಶವನ್ನೂ, ದುಃಖವೆಂಬ ಪಾಶವನ್ನೂ ಕತ್ತರಿಸಿ ಯತಿಧರ್ಮವನ್ನು ಆಶ್ರಯಿಸಿ ಗುರು ಶುಶ್ರೂಷೆಯಲ್ಲಿ ರತನಾಗುತ್ತಾನೆ. ಅಲ್ಪವಾದ ಕಾಲದಲ್ಲಿಯೇ ಅವನು ಶ್ರೇಯಸ್ಸನ್ನು ಹೊಂದುತ್ತಾನೆ.
ಯೋಗಶಾಸ್ತ್ರಂ ಚ ಸಾಂಖ್ಯಂ ಚ ವಿದಿತ್ವಾ ಸೋಽರ್ಥತತ್ತ್ವತಃ |
ಅನುಜ್ಞಾತಶ್ಚ ಗುರುಣಾ ಯಥಾಶಾಸ್ತ್ರಮವಸ್ಥಿತಃ ॥24॥
ಪುಣ್ಯತೀರ್ಥಾನುಸೇವೀ ಚ ನದೀನಾಂ ಪುಲಿನಾಶ್ರಯಃ |
ಶೂನ್ಯಾಗಾರನಿಕೇತಶ್ಚ ವನವೃಕ್ಷಗುಹಾಶಯಃ ॥25॥
ಯೋಗಶಾಸ್ತ್ರ, ಸಾಂಖ್ಯಶಾಸ್ತ್ರ, ಅವುಗಳ ಅರ್ಥವನ್ನು ಸರಿಯಾಗಿ ತಿಳಿದು ಗುರುವಿನ ಅನುಮತಿಯನ್ನು ಪಡೆದು, ಶಾಸ್ತ್ರಾನುಸಾರ ಆಚಾರವುಳ್ಳವನಾಗಿ, ಪುಣ್ಯತೀರ್ಥಗಳನ್ನು ಸೇವಿಸುತ್ತಾ, ನದಿಗಳ ತೀರದಲ್ಲಿಯೂ, ಶೂನ್ಯಾಗಾರಗಳಲ್ಲಿಯೂ, ವನ-ವೃಕ್ಷಗಳು ಮತ್ತು ಗುಹೆಗಳಲ್ಲಿಯೂ ವಾಸ ಮಾಡುತ್ತಾನೆ.
ಅರಣ್ಯಾನುಚರೋ ನಿತ್ಯಂ ದೇವಾರಣ್ಯನಿಕೇತನಃ |
ಏಕರಾತ್ರಂ ದ್ವಿರಾತ್ರಂ ವಾ ನ ಕ್ವಚಿತ್ ಸಜ್ಜತೇ ದ್ವಿಜಃ ॥26॥
ದೇವಾರಣ್ಯಗಳಲ್ಲಿ ವಾಸಿಸುವವನಾಗಿ, ಅರಣ್ಯಸಂಚಾರಿಯಾಗಿ ಆ ಬ್ರಾಹ್ಮಣನು ಒಂದು ಸ್ಥಳದಲ್ಲಿ ಒಂದು ರಾತ್ರಿ ಅಥವಾ ಎರಡು ರಾತ್ರಿಯಾಗಲೀ ಇರುವುದಿಲ್ಲ.
ಶೀರ್ಣಪರ್ಣಪುಟೇ ಚಾಪಿ ವ್ಯಹ್ನೇ ಚರತಿ ಭಿಕ್ಷುಕಃ |
ನ ಭೋಗಾರ್ಥಮನುಪ್ರೇತ್ಯ ಯಾತ್ರಾಮಾತ್ರಂ ಸಮಶ್ನುತೇ ॥27॥
ಒಣಗಿದ ಎಲೆಯ ಹರಿದ ದೊನ್ನೆಯಲ್ಲಿ ಭಿಕ್ಷೆಯನ್ನು ಬೇಡುತ್ತಾನೆ. ಅದು ಭೋಗಾರ್ಥವಾಗಿ ಅಲ್ಲ. ಸಂಚರಿಸಿ ಶರೀರಯಾತ್ರೆಗೆ ಮಾತ್ರ ಆಹಾರವನ್ನು ಸ್ವೀಕರಿಸುತ್ತಾನೆ.
ಧರ್ಮಲಬ್ಧಂ ಸಮಶ್ನಾತಿ ನ ಕಾಮಾತ್ ಕಿಂಚಿದಶ್ನುತೇ |
ಯುಗಮಾತ್ರದೃಗಧ್ವಾನಂ ಕ್ರೋಶಾದೂರ್ಧ್ವಂ ನ ಗಚ್ಛತಿ ॥28॥

ಧರ್ಮಲಬ್ಧವಾದುದನ್ನು ಮಾತ್ರ ಭುಂಜಿಸುತ್ತಾನೆ. ಆಸೆಯಿಂದ ಯಾವುದನ್ನೂ ಭುಂಜಿಸುವುದಿಲ್ಲ. ಎರಡು ಹೆಜ್ಜೆ ಮಾತ್ರದಷ್ಟು ಭೂಮಿಯನ್ನು ಪರೀಕ್ಷಿಸಿ ಮುಂದೆ ಸಾಗುತ್ತಾನೆ. ಒಂದು ಕ್ರೋಶಕ್ಕಿಂತ ಹೆಚ್ಚಿನ ದೂರವನ್ನು ನಡೆಯುವುದಿಲ್ಲ.
ಸಮೋ ಮಾನಾವಮಾನಾಭ್ಯಾಂ ಸಮಲೋಷ್ಟಾಶ್ಮಕಾಂಚನಃ |
ಸರ್ವಭೂತಾಭಯಕರಸ್ತಥೈವಾಭಯದಕ್ಷಿಣಃ ॥29॥
ನಿರ್ದ್ವಂದ್ವೋ ನಿರ್ನಮಸ್ಕಾರೋ ನಿರಾನಂದಪರಿಗ್ರಹಃ |
ನಿರ್ಮಮೋ ನಿರಹಂಕಾರಃ ಸರ್ವಭೂತನಿರಾಶ್ರಯಃ ॥30॥
ಮಾನಾವಮಾನಗಳಲ್ಲಿ, ಲೋಷ್ಟಾಶ್ಮಕಾಂಚನದಲ್ಲಿಯೂ ಸಮಾನನಾಗಿರುತ್ತಾನೆ. ಸರ್ವಭೂತಗಳಿಗೂ ಅಭಯವನ್ನು ಕೊಡುತ್ತಾನೆ ಮತ್ತು ಆ ಅಭಯವೇ ಅವನು ಕೊಡುವ ದಕ್ಷಿಣೆಯಾಗಿರುತ್ತದೆ. ದ್ವಂದ್ವಾತೀತನಾಗಿ ಯಾರಿಗೂ ನಮಸ್ಕಾರವನ್ನು ಮಾಡದೆ ಪರಿಗ್ರಹದಲ್ಲಿ ಸುಖವನ್ನು ಹೊಂದದೆ, ಅಹಂಕಾರ-ಮಮಕಾರಗಳನ್ನು ತ್ಯಜಿಸಿ, ಯಾವ ಪ್ರಾಣಿಗಳನ್ನೂ ಆಶ್ರಯಿಸದೆ ಇರುತ್ತಾನೆ.
ಪರಿಸಂಖ್ಯಾನತತ್ವಜ್ಞಸ್ತದಾ ಸತ್ಯರತಃ ಸದಾ |
ಊರ್ಧ್ವಂ ನಾಧೋ ನ ತಿರ್ಯಕ್ಚ ನ ಕಿಂಚಿದಭಿಕಾಮಯೇತ್ ॥31॥
ತತ್ವಪರಿಸಂಖ್ಯಾನಕುಶಲನಾಗಿ, ಯಾವಾಗಲೂ ಸತ್ಯದಲ್ಲಿ ರತನಾಗಿ, ಊರ್ಧ್ವ ಲೋಕದಲ್ಲಿ ಅಧೋಲೋಕದಲ್ಲಿ ಅಥವಾ ಎಡಬಲಗಳಲ್ಲಿರುವ ಯಾವ ವಿಷಯವನ್ನೂ ಆಶಿಸುವುದಿಲ್ಲ.
ಏವಂ ಹಿ ರಮಮಾಣಸ್ತು ಯತಿಧರ್ಮಂ ಯಥಾವಿಧಿ |
ಕಾಲಸ್ಯ ಪರಿಣಾಮಾತ್ತು ಯಥಾ ಪಕ್ವಫಲಂ ತಥಾ ॥32॥
ಸ ವಿಸೃಜ್ಯ ಸ್ವಕಂ ದೇಹಂ ಪ್ರವಿಶೇದ್ ಬ್ರಹ್ಮ ಶಾಶ್ವತಮ್ |
ನಿರಾಮಯಮನಾದ್ಯಂತಂ ಗುಣಸೌಮ್ಯಮಚೇತನಮ್ ॥33॥
ಹೀಗೆ ಶಾಸ್ತ್ರಸಮ್ಮತವಾದ ರೀತಿಯಲ್ಲಿ ಯತಿಧರ್ಮವನ್ನು ಆಚರಿಸಿ ಸಂತೋಷ ಪಡುತ್ತಾ ಕಾಲಪರಿಣಾಮದಿಂದ ಪಕ್ವವಾದ ಫಲದಂತೆ ತನ್ನ ದೇಹವನ್ನು ಪರಿತ್ಯಾಗ ಮಾಡಿ ಶಾಶ್ವತನೂ, ನಿರಾಮಯನೂ, ಆದ್ಯಂತರಹಿತನೂ, ಗುಣಪರಿಪೂರ್ಣನೂ, ಪ್ರಾಕೃತ ಜ್ಞಾನರಹಿತನೂ ಆದ ಬ್ರಹ್ಮನನ್ನು ಪ್ರವೇಶಿಸುತ್ತಾನೆ.
ನಿರಕ್ಷರಮಬೀಜಂ ಚ ನಿರಿಂದ್ರಿಯಮಜಂ ತಥಾ |
ಅಜಯ್ಯಮಕ್ಷಯಂ ಯತ್ ತದಭೇದ್ಯಂ ಸೂಕ್ಷ್ಮಮೇವ ಚ ॥34॥
ನಿರ್ಗುಣಂ ಚ ಪ್ರಕೃತಿಮನ್ನಿರ್ವಿಕಾರಂ ಚ ಸರ್ವಶಃ |
ಭೂತಭವ್ಯಭವಿಷ್ಯಸ್ಯ ಕಾಲಸ್ಯ ಪರಮೇಶ್ವರಮ್ |
ಅವ್ಯಕ್ತಂ ಪುರುಷಂ ಕ್ಷೇತ್ರಮಾನಂತ್ಯಾಯ ಪ್ರಪದ್ಯತೇ ॥35॥
ಶಬ್ದಗಳನ್ನು ಮೀರಿದ, ಕಾಲಶೂನ್ಯನಾದ, ಪ್ರಾಕೃತದಿಂದ ರಹಿತನಾದ, ಜನನ ರಹಿತನಾದ, ಅಜೇಯನಾದ, ಅಕ್ಷಯನಾದ, ಸೂಕ್ಷ್ಮನಾದ, ಅಭೇದ್ಯನಾದ, ಪ್ರಾಕೃತ ಗುಣರಹಿತನಾದ, ಪ್ರಕೃತಿಗೆ ಸ್ವಾಮಿಯಾದ, ಸರ್ವಥಾ ನಿರ್ವಿಕಾರನಾದ, ಭೂತ-ವರ್ತಮಾನ-ಭವಿಷ್ಯತ್ ಕಾಲಗಳಿಗೆ ಒಡೆಯನಾದ, ಅವ್ಯಕ್ತನಾದ, ಎಲ್ಲದಕ್ಕೂ ಆಶ್ರಯನಾದ ಪರಮಪುರುಷನನ್ನು ಪಡೆದು ಅನಂತ ಕಾಲದಲ್ಲಿ ಅಲ್ಲಿಯೇ ಇರುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಷಟ್ಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *

## ನೂರ ನಲವತ್ತೇಳನೆಯ ಅಧ್ಯಾಯ

ಪರಾಶರಗೀತೆ-ಶೂದ್ರನ ಬ್ರಹ್ಮಪ್ರಾಪ್ತಿಕಥನ.
ಪರಾಶರಃ
ಏವಂ ಸ ಭಿಕ್ಷುರ್ನಿರ್ವಾಣಂ ಪ್ರಾಪ್ನುಯಾದ್ ದಗ್ಧಕಿಲ್ಬಿಷಃ |
ಇಹಸ್ಥೋ ದೇಹಮುತ್ಸೃಜ್ಯ ನೀಡಂ ಶಕುನಿವದ್ ಯಥಾ ॥1॥
ಪರಾಶರ ಹೀಗೆ ಶೂದ್ರಜನ್ಮದಿಂದ ಕ್ರಮವಾಗಿ ಮೇಲೆ ಬಂದ ಆ ಯತಿಯು ತನ್ನ ದೋಷಗಳನ್ನೆಲ್ಲ ಕಳೆದುಕೊಂಡು ಪಕ್ಷಿಯು ಗೂಡನ್ನು ಬಿಡುವಂತೆ ಈ ದೇಹವನ್ನು ತ್ಯಜಿಸಿ ಮೋಕ್ಷವನ್ನು ಪಡೆಯುತ್ತಾನೆ.
ಸತ್ಪಥಾಲಂಬನಾದೇವ ಶೂದ್ರಃ ಪ್ರಾಪ್ನೋತಿ ಸದ್ಗತಿಮ್ |
ಬ್ರಹ್ಮಣಃ ಸ್ಥಾನಮಚಲಂ ಸ್ಥಾನಾತ್ ಸ್ಥಾನಮವಾಪ್ನುಯಾತ್ ॥2॥
ಸನ್ಮಾರ್ಗವನ್ನು ಆಶ್ರಯಿಸುವುದರಿಂದಲೇ ಶೂದ್ರನು ಒಂದು ಸ್ಥಾನದಿಂದ ಮತ್ತೊಂದು ಉನ್ನತವಾದ ಸ್ಥಾನಕ್ಕೆ ಹೋಗಿ ಸದ್ಗತಿಯನ್ನು ಹೊಂದಿ ಪರಮಾತ್ಮನ ಅಚಲವಾದ ಸ್ಥಾನವನ್ನು ಪಡೆಯುತ್ತಾನೆ.
ಯಥಾ ಖನನ್ ಖನಿತ್ರೇಣ ಜಾಂಗಲೇ ವಾರಿ ವಿಂದತಿ |
ಅನಿರ್ವೇದಾತ್ ತತಃ ಸ್ಥಾನಮೀಪ್ಸಿತಂ ಪ್ರತಿಪದ್ಯತೇ ॥3॥
ಹೇಗೆ ಭೂಮಿಯನ್ನು ಅಗೆಯುವವನು ಬೇಸರಗೊಳ್ಳದೆ ಗುದ್ದಲಿಯಿಂದ ಅಗೆಯುವುದರಿಂದ ನೀರನ್ನು ಪಡೆಯುತ್ತಾನೆಯೋ ಅದರಂತೆ ಕ್ಷುದ್ರನಾಗಿದ್ದವನೂ ಸಹ ಬೇಸರಗೊಳ್ಳದೆ ಸಾಧನೆಯನ್ನು ಮಾಡುವುದರಿಂದ ಅಭೀಷ್ಟವಾದ ಸ್ಥಾನವನ್ನು ಪಡೆಯುತ್ತಾನೆ.
ಸೈಷಾ ಗತಿರನಾದ್ಯಂತಾ ಸರ್ವೈರಪ್ಯುಪಧಾರಿತಾ |

ತಸ್ಮಾಚ್ಛೂದ್ರೈರನಿರ್ವೇದಾತ್ ಶ್ರದ್ದಧಾನೈಸ್ತು ನಿತ್ಯದಾ |
ವರ್ತಿತವ್ಯಂ ಯಥಾಶಕ್ತ್ಯಾ ಯಥಾ ಪ್ರೋಕ್ತಂ ಮನೀಷಿಭಿಃ ॥4॥
ಯತ್ಕರೋತಿ ತದಶ್ನಾತಿ ಶುಭಂ ವಾ ಯದಿ ವಾಽಶುಭಮ್ |
ನಾಕೃತಂ ಭುಜ್ಯತೇ ಕರ್ಮ ನ ಕೃತಂ ನಶ್ಯತೇ ಫಲಮ್ ॥5॥
ಇಂತಹ ಪ್ರಾಪ್ತಿಯು ಆದ್ಯಂತರಹಿತವಾದುದೆಂದು ಎಲ್ಲರೂ ನಿರ್ಧರಿಸಿದ್ದಾರೆ. ಆದ್ದರಿಂದ ಶೂದ್ರರು ಬೇಸರಗೊಳ್ಳದೆ ಯಾವಾಗಲೂ ಶ್ರದ್ಧಾಯುಕ್ತರಾಗಿ ಜ್ಞಾನಿಗಳು ಹೇಳಿದಂತೆ ತಮ್ಮ ಶಕ್ತಿಗೆ ಅನುಸಾರವಾಗಿ ನಡೆದುಕೊಳ್ಳಬೇಕು. ಶುಭವಾಗಲೀ ಅಥವಾ ಅಶುಭವಾಗಲೀ ಏನು ಮಾಡುತ್ತಾನೋ ಅಥವಾ ಏನು ಭೋಗಿಸುತ್ತಾನೆಯೋ ಅದಕ್ಕೆ ಕಾರಣವಾದ ಕರ್ಮವನ್ನು ಮಾಡದೆ ಭೋಗಿಸುವುದಿಲ್ಲ. ಮಾಡಿದ ಕರ್ಮಕ್ಕೆ ಫಲವೂ ನಷ್ಟವಾಗುವುದಿಲ್ಲ.
ತಥಾ ಶುಭಸಮಾಚಾರಃ ಶುಭಮೇವಾಪ್ನುತೇ ಫಲಮ್ |
ತಥಾಽಶುಭಸಮಾಚಾರೋ ಹ್ಯಶುಭಂ ಸಮವಾಪ್ನುತೇ ॥6॥
ಆದ್ದರಿಂದ ಶುಭಾಚಾರವುಳ್ಳವನು ಶುಭಫಲವನ್ನೇ ಹೊಂದುತ್ತಾನೆ. ಅಶುಭಾಚಾರ ಉಳ್ಳವನು ಅಶುಭಫಲವನ್ನೇ ಹೊಂದುತ್ತಾನೆ.
ತಥಾ ಶುಭಸಮಾಚಾರೋ ಹ್ಯಶುಭಾನಿ ವಿವರ್ಜಯೇತ್ |
ಶುಭಾನ್ಯೇವ ಸಮಾದದ್ಯಾದ್ ಯ ಇಚ್ಛೇದ್ ಭೂತಿಮಾತ್ಮನಃ ॥7॥
ಆದ್ದರಿಂದ ಯಾವನು ತನಗೆ ಶ್ರೇಯಸ್ಸನ್ನು ಅಪೇಕ್ಷಿಸುತ್ತಾನೆಯೋ ಅವನು ಶುಭಾಚಾರದಿಂದ ಕೂಡಿದ್ದು ಅಶುಭವೆಲ್ಲವನ್ನೂ ಪರಿತ್ಯಜಿಸಬೇಕು. ಶುಭವಾದುದನ್ನೇ ಸ್ವೀಕರಿಸಬೇಕು.
ಭೂತಿಶ್ಚ ನಾನ್ಯತಃ ಶಕ್ಯಾ ಶೂದ್ರಾಣಾಮಿತಿ ನಿಶ್ಚಯಃ |
ಋತೇ ಯತೀನಾಂ ಶುಶ್ರೂಷಾಮಿತಿ ಸಂತೋ ವ್ಯವಸ್ಥಿತಾಃ ॥8॥
ತಸ್ಮಾದಾಗಮಸಂಪನ್ನೋ ಭವೇತ್ ಸುನಿಯತೇಂದ್ರಿಯಃ |
ಶಕ್ಯತೇ ಹ್ಯಾಗಮಾದೇವ ಗತಿಂ ಪ್ರಾಪ್ತುಮನಾಮಯಾಮ್ ॥9॥
ಶೂದ್ರರಿಗೆ ಯತಿಗಳ ಶುಶ್ರೂಷೆಯನ್ನು ಬಿಟ್ಟು ಬೇರೆ ಮಾರ್ಗದಿಂದ ಶ್ರೇಯಸ್ಸು ಲಭ್ಯವಾಗುವುದಿಲ್ಲವೆಂದು ಸಜ್ಜನರು ನಿರ್ಧರಿಸಿದ್ದಾರೆ. ಆದ್ದರಿಂದ ವೇದಸಂಪನ್ನನಾಗಿ ಇಂದ್ರಿಯಜಯವನ್ನು ಹೊಂದಿದವನಾಗಿರಬೇಕು. ವೇದಶಾಸ್ತ್ರಗಳಿಂದ ನಿರ್ದುಷ್ಟವಾದ ಗತಿಯನ್ನು ಹೊಂದಲು ಸಾಧ್ಯವಾಗುತ್ತದೆ.
ಪರಾ ಚೈಷಾಂ ಗತಿರ್ದೃಷ್ಟ್ವಾ ಯಾಮನ್ವೇಷಂತಿ ಸಾಧವಃ |
ಯತ್ರಾಮೃತತ್ವಂ ಲಭತೇ ತ್ಯಕತ್ವ ದುಃಖಮನಂತಕಮ್ ॥10॥
ಸಾಧುಗಳು ಯಾವ ಗತಿಯನ್ನು ಹುಡುಕುತ್ತಾರೆಯೋ (ಅಪೇಕ್ಷಿಸುತ್ತಾರೆಯೋ), ಎಲ್ಲಿ ಮರಣವಿಲ್ಲವೋ, ಅನಂತವಾದ ದುಃಖವಿಲ್ಲವೋ ಅಂತಹ ಪರಗತಿಯು ಶೂದ್ರನಿಗೂ ಲಭಿಸುವುದು ಕಂಡಿದೆ.
ಇಮಂ ಹಿ ಧರ್ಮಮಾಸ್ಥಾಯ ಯೇಪಿ ಸ್ಯುಃ ಪಾಪಯೋನಯಃ |
ಸ್ತ್ರಿಯೋ ವೈಶ್ಯಾಶ್ಚ ಶೂದ್ರಾಶ್ಚ ಪ್ರಾಪ್ನುಯುಃ ಪರಮಾಂ ಗತಿಮ್ |
ಕಿಂ ಪುನರ್ಬ್ರಾಹ್ಮಣೋ ವಿದ್ವಾನ್ ಕ್ಷತ್ರಿಯೋ ವಾ ಬಹುಶ್ರುತಃ ॥11॥
ಈ ಧರ್ಮವನ್ನು ತಿಳಿದವರು ಪಾಪಯೋನಿಯಲ್ಲಿ ಜನಿಸಿದರೂ ತಮಗೆ ಯೋಗ್ಯವಾದ ಧರ್ಮವನ್ನು ಮಾಡಿದರೆ ಅವರು ಸ್ತ್ರೀಯರಾಗಲೀ, ವೈಶ್ಯರಾಗಲೀ ಅಥವಾ ಶೂದ್ರರಾಗಲೀ ಅವರು ಶ್ರೇಷ್ಠವಾದ ಗತಿಯನ್ನು ಹೊಂದುವರು. ಇನ್ನು ವಿದ್ವಾಂಸನಾದ ಬ್ರಾಹ್ಮಣನೂ, ಬಹುಶ್ರುತನಾದ ಕ್ಷತ್ರಿಯನೂ ಶ್ರೇಷ್ಠವಾದ ಗತಿಯನ್ನು ಪಡೆಯುವುದರಲ್ಲಿ ಏನು ಆಶ್ಚರ್ಯವಿದೆ?
ನ ಚಾಪ್ಯಕ್ಷೀಣಪಾಪಸ್ಯ ಜ್ಞಾನಂ ಭವತಿ ದೇಹಿನಃ |
ಜ್ಞಾನೋಪಲಬ್ಧಿರ್ಭವತಿ ಕೃತಕೃತ್ಯೋ ಯದಾ ಭವೇತ್ ॥12॥
ಪಾಪಪರಿಹಾರವನ್ನು ಹೊಂದದ ಜೀವನಿಗೆ ಜ್ಞಾನವುಂಟಾಗುವುದಿಲ್ಲ. ಜ್ಞಾನವು ಲಭ್ಯವಾಗಬೇಕಾದರೆ ತನ್ನ ಧರ್ಮವನ್ನು ಸರಿಯಾಗಿ ಆಚರಿಸಬೇಕು.
ಉಪಲಭ್ಯ ತ್ರಿಭಿರ್ಜ್ಞಾನಂ ಜ್ಞಾನಂ ವಾಽಪ್ಯನಸೂಯಕಃ |
ತಥೈವ ವರ್ತೇದ್ ಗುರುಷು ಭೂಯಾಂಸಂ ವಾ ಸಮಾಹಿತಃ ॥13॥
ಮೂರುವೇದಗಳಿಂದ ಜ್ಞಾನವನ್ನು ಪಡೆದು ದೊಡ್ಡವರಲ್ಲಿ ಅಸೂಯೆಯನ್ನು ಮಾಡದೆ ಗುರುಗಳಲ್ಲಿ ವಿನಯದಿಂದ ವರ್ತಿಸಬೇಕು. ದೊಡ್ಡವರನ್ನು ಆಶ್ರಯಿಸಬೇಕು.
ಅಥಾವಮನ್ಯೇತ ಗುರುಂ ತಥಾ ತೇಷು ಪ್ರವರ್ತತೇ |
ವ್ಯರ್ಥಮಸ್ಯ ಶ್ರುತಂ ಭವತಿ ಜ್ಞಾನಮಜ್ಞಾನತಾಂ ವ್ರಜೇತ್ ॥14॥
ಹಾಗಿಲ್ಲದೆ ಗುರುಗಳನ್ನು ಅವಮಾನ ಮಾಡಿ ಅವರಲ್ಲಿ ನಡೆದುಕೊಂಡರೆ ಅವನ ವಿದ್ಯೆಯು ವ್ಯರ್ಥವಾಗುತ್ತದೆ ಮತ್ತು ಅವನ ಜ್ಞಾನವು ಅಜ್ಞಾನವಾಗುತ್ತದೆ.
ಗತಿಂ ಚಾಪ್ಯಶುಭಾಂ ಗಚ್ಛೇತ್ ನಿರಯಾಯ ನ ಸಂಶಯಃ |
ಪ್ರಕ್ಷೀಯತೇ ತಸ್ಯ ಪುಣ್ಯಂ ಜ್ಞಾನಮಸ್ಯ ವಿರುದ್ಧ್ಯತೇ ॥15॥
ಅವನು ಅಶುಭವಾದ ಗತಿಯನ್ನು ಹೊಂದಿ ನರಕಕ್ಕೆ ಹೋಗುವುದರಲ್ಲಿ ಸಂಶಯವಿಲ್ಲ. ಅವನ ಪುಣ್ಯವು ನಾಶಹೊಂದುತ್ತದೆ. ಅವನ ಜ್ಞಾನವು ಅವನಿಗೇ ವಿರೋಧಿಯಾಗುತ್ತದೆ.
ಅದೃಷ್ಟಪೂರ್ವಕಲ್ಯಾಣೋ ಯಥಾ ದೃಷ್ಟ್ವಾ ನಿಧಿಂ ನರಃ |
ಉತ್ಸೇಕಾನ್ಮೋಹಮಾಪದ್ಯ ತತ್ತ್ವಜ್ಞಾನಂ ನ ಚಾಪ್ತವಾನ್ ॥16॥

ಏವಮೇವ ಹಿ ನೋತ್ಸೇಕಃ ಕರ್ತವ್ಯೋ ಜ್ಞಾನಸಂಭವಃ |
ಫಲಂ ಜ್ಞಾನಸ್ಯ ಹಿ ಶಮಃ ಪ್ರಶಮಾಯ ಯತೇತ್ ಸದಾ ॥17॥
ಮೊದಲು ಭಾಗ್ಯವನ್ನು ನೋಡದಿದ್ದ ಮನುಷ್ಯನು ನಿಧಿಯನ್ನು ನೋಡಿ ಪಡೆದು ಅಹಂಕಾರಕ್ಕೆ ಒಳಗಾಗಿ, ಮೋಹವನ್ನು ಹೊಂದಿ ಹೇಗೆ ತತ್ತ್ವಜ್ಞಾನವನ್ನು ಪಡೆಯುವುದಿಲ್ಲವೋ ಹಾಗೆಯೇ ಜ್ಞಾನವನ್ನು ಪಡೆದು ಅಹಂಕಾರಕ್ಕೆ ಒಳಗಾದರೆ ಆ ಜ್ಞಾನದ ಫಲವನ್ನು ಪಡೆಯುವುದಿಲ್ಲ. ವಿನಯವು ಜ್ಞಾನದ ಫಲ. ಆ ವಿನಯವನ್ನು ಸಂಪಾದಿಸಲು ಯಾವಾಗಲೂ ಪ್ರಯತ್ನಿಸಬೇಕು.
ಉಪಶಾಂತೇನ ದಾಂತೇನ ಕ್ಷಮಾಯುಕ್ತೇನ ಸರ್ವದಾ |
ಶುಶ್ರೂಷಾ ಪ್ರತಿಪತ್ತವ್ಯಾ ನಿತ್ಯಮೇವಾನಸೂಯತಾ ॥18॥
ಉಪಶಾಂತನೂ, ಇಂದ್ರಿಯನಿಗ್ರಹವುಳ್ಳವನೂ, ಕ್ಷಮಾಗುಣವುಳ್ಳವನೂ ಆದವನು ಯಾವಾಗಲೂ ಅಸೂಯೆಯನ್ನು ಪಡದೆ ಹಿರಿಯರ ಶುಶ್ರೂಷೆಯನ್ನು ಮಾಡಬೇಕು.
ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ |
ಇಂದ್ರಿಯಾರ್ಥಾಂಶ್ಚ ಮನಸಾ ಮನೋ ಬುದ್ಧೌ ಸಮಾದಧೇತ್ ॥19॥
ಧೈರ್ಯವನ್ನು ಅವಲಂಬಿಸಿ ಶಿಶ್ನೋದರಗಳನ್ನು ರಕ್ಷಿಸಬೇಕು. ಕಣ್ಣಿನ ದೃಷ್ಟಿಯಿಂದ ಪಾಣಿಪಾದಗಳನ್ನು ರಕ್ಷಿಸಬೇಕು. ಮನಸ್ಸಿನಿಂದ ಇಂದ್ರಿಯಾರ್ಥಗಳನ್ನು ರಕ್ಷಿಸಬೇಕು. ಮನಸ್ಸನ್ನು ಬುದ್ಧಿಗೆ ಅಧೀನವನ್ನಾಗಿ ಮಾಡಬೇಕು.
ಧೃತ್ಯಾಽಽಸೀತ ತತೋ ಗತ್ವಾ ಶುದ್ಧದೇಶಂ ಸುಸಂವೃತಮ್ |
ಲಬ್ಧಾಸನಂ ಯಥಾ ದೃಷ್ಟಂ ವಿಧಿಪೂರ್ವಂ ಸಮಾಚರೇತ್ ॥20॥
ಆದ್ದರಿಂದ ದೇಹತ್ಯಾಗವನ್ನು ಮಾಡುವ ಅಂತಹ ಯತಿಯು ಏಕಾಂತವಾದ ಶುದ್ಧ ದೇಶಕ್ಕೆ ಹೋಗಿ ಧೈರ್ಯವನ್ನು ಹೊಂದಿ ಒಂದು ಆಸನದಲ್ಲಿ ಕುಳಿತು ಹಿಂದೆ ಶಾಸ್ತ್ರದಲ್ಲಿ ನೋಡಿದಂತೆ ಆಚರಿಸಬೇಕು.
ಜ್ಞಾನಯುಕ್ತಸ್ತಥಾ ದೇವಂ ಹೃದಿಸ್ಥಮುಪಲಕ್ಷಯೇತ್ |
ಆದೀಪ್ಯಮಾನಂ ವಪುಷಾ ವಿಧೂಮಮನಲಂ ಯಥಾ ॥21॥
ಶಾಸ್ತ್ರದಲ್ಲಿ ಹೇಳಲ್ಪಟ್ಟಂತಹ ಜ್ಞಾನದಿಂದ ಯುಕ್ತನಾಗಿ ಹೃದಯದಲ್ಲಿರುವ ತನ್ನ ದೇಹದಿಂದ ಧೂಮರಹಿತವಾದ ಅಗ್ನಿಯಂತೆ ಬೆಳಗುತ್ತಿರುವ ದೇವನನ್ನು ನೋಡಬೇಕು.
ರಶ್ಮಿಮಂತಮಿವಾದಿತ್ಯಂ ವೈದ್ಯುತಾಗ್ನಿಮಿವಾಂಬರೇ |
ಸಂಸ್ಥಿತಂ ಹೃದಯೇ ಪಶ್ಯೇದೀಶಂ ಶಾಶ್ವತಮವ್ಯಯಮ್ ॥22॥
ಕಿರಣಗಳಿಂದ ಕೂಡಿದ ಸೂರ್ಯನಂತೆ, ಆಕಾಶದಲ್ಲಿ ಕಾಣುವ ಮಿಂಚಿನ ಅಗ್ನಿಯಂತೆ ಹೃದಯದಲ್ಲಿ ಸ್ಥಿತನಾದ ಶಾಶ್ವತನೂ, ಅವ್ಯಯನೂ ಆದ ಪ್ರಭುವನ್ನು ನೋಡಬೇಕು.
ನ ಚಾಯುಕ್ತೇನ ಶಕ್ಯೇತ ದ್ರಷ್ಟುಂ ದೇಹೇ ಮಹೇಶ್ವರಃ |
ಯುಕ್ತಸ್ತು ಪಶ್ಯತೇ ಬುದ್ಧ್ಯಾ ಸನ್ನಿವೇಶ್ಯ ಮನೋ ಹೃದಿ ॥23॥
ಯೋಗರಹಿತನಾದವನು ದೇಹದಲ್ಲಿ ಹೃದಯದಲ್ಲಿ ಆ ಮಹೇಶ್ವರನನ್ನು ಕಾಣಲು ಸಾಧ್ಯವಿಲ್ಲ. ಅಧ್ಯಾತ್ಮಯೋಗಯುಕ್ತನಾದವನು ಮಾತ್ರ ತನ್ನ ಬುದ್ಧಿಯನ್ನು ಹೃದಯದಲ್ಲಿ (ಹೃನ್ನಾಮಕ ಪರಮಾತ್ಮನಲ್ಲಿ) ನೆಲೆಸಿ ಬುದ್ಧಿಯಿಂದ ಅವನನ್ನು ನೋಡುತ್ತಾನೆ.
ಅಥ ತ್ವೇವಂ ನ ಶಕ್ನೋತಿ ಕರ್ತುಂ ಹೃದಯಧಾರಣಮ್ |
ಯಥಾಸಾಂಖ್ಯಮುಪಾಸೀತ ಯಥಾವದ್ ಯೋಗಮಾಸ್ಥಿತಃ ॥24॥
ಹೀಗೆ ಧ್ಯಾನವನ್ನು ಮಾಡಿ ಹೃದಯದಲ್ಲಿ ಪರಮಾತ್ಮನ ರೂಪವನ್ನು ಧರಿಸಲು ಸಾಧ್ಯವಾಗದಿದ್ದರೆ ಯೋಗವನ್ನು ಆಶ್ರಯಿಸಿ ಸಾಂಖ್ಯಶಾಸ್ತ್ರದಲ್ಲಿ ಹೇಳಿದಂತೆ ಯಥಾರ್ಥವಾಗಿ ಪರಮಾತ್ಮನನ್ನು ಚಿಂತಿಸಬೇಕು.
ಪಂಚ ಬುದ್ಧೀಂದ್ರಿಯಾಣೀಹ ಪಂಚ ಕರ್ಮೇಂದ್ರಿಯಾಣಿ ವೈ |
ಪಂಚ ಭೂತವಿಶೇಷಾಶ್ಚ ಮನಶ್ಚೈವ ತು ಷೋಡಶ ॥25॥
ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಮಹಾಭೂತಗಳು ಮತ್ತು ಮನಸ್ಸು ಸೇರಿ ಹದಿನಾರು ತತ್ತ್ವಗಳಾಗುತ್ತವೆ.
ತನ್ಮಾತ್ರಾಣ್ಯಪಿ ಪಂಚೈವ ಮನೋಽಹಂಕಾರ ಏವ ಚ |
ಅಷ್ಟಮಂ ಚಾಪ್ಯಥಾವ್ಯಕ್ತಮೇತಾಃ ಪ್ರಕೃತಿಸಂಜ್ಞಿತಾಃ |
ಏತಾಃ ಪ್ರಕೃತಯಶ್ಚಾಷ್ಟೌ ವಿಕಾರಾಶ್ಚಾಪಿ ಷೋಡಶ ॥26॥
ಇಂದ್ರಿಯಗಳ ವಿಷಯಗಳಾದ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಐದು. ಮನಸ್ಸು-ಅಹಂಕಾರ ಮತ್ತು ಎಂಟನೆಯದ್ದಾದ ಅವ್ಯಕ್ತತತ್ತ್ವ ಇವೆಲ್ಲವೂ ಪ್ರಕೃತಿ ಎಂದು ಕರೆಸಿಕೊಳ್ಳುತ್ತವೆ. ಇವು ಎಂಟು ಪ್ರಕೃತಿಗಳು ಹಿಂದೆ ಹೇಳಿದ ಹದಿನಾರು ವಿಕಾರಗಳು.
ಏವಮೇತದಿಹಸ್ಥೇನ ವಿಜ್ಞೇಯಂ ತತ್ತ್ವಬುದ್ಧಿನಾ |
ಏವಂ ವರ್ತ್ಮ ಸಮುತ್ತೀರ್ಯ ತೀರ್ಣೋ ಭವತಿ ನಾನ್ಯಥಾ |
ಪರಿಸಂಖ್ಯಾನಮೇವ್ಯೈತನ್ಮಂತವ್ಯಂ ಜ್ಞಾನಬುದ್ಧಿನಾ ॥27॥
ತತ್ತ್ವಬುದ್ಧಿಯುಳ್ಳ ಪುರುಷನು ಇಲ್ಲಿಯೇ ಇದ್ದು ಈ ಇಪ್ಪತ್ನಾಲ್ಕು ತತ್ತ್ವಗಳನ್ನು ಸರಿಯಾಗಿ ತಿಳಿಯಬೇಕು. ಹಾಗೆ ಮಾಡಿದಲ್ಲಿ ಈ ದೇಹವನ್ನು ತ್ಯಜಿಸಿ ಸಂಸಾರದಿಂದ ದಾಟುತ್ತಾನೆ. ಬೇರೆ ರೀತಿಯಲ್ಲಿ ದಾಟಲು ಸಾಧ್ಯವಿಲ್ಲ. ಈ ತತ್ತ್ವಗಳ ಪರಿಸಂಖ್ಯಾನವನ್ನು ಜ್ಞಾನನಿಷ್ಠನಾಗಿ ಮನನ ಮಾಡಬೇಕು.
ಅಹನ್ಯಹನಿ ಶಾಂತಾತ್ಮಾ ಪಾವನಾಯ ಹಿತಾಯ ಚ |
ಏವಮೇವ ಪ್ರಸಂಖ್ಯಾಯ ತತ್ತ್ವಬುದ್ಧಿರ್ವಿಮುಚ್ಯತೇ |
ನಿಷ್ಕಲಂ ಕೇವಲಂ ಭವತಿ ಶುದ್ಧತತತತ್ವರ್ಥತತ್ವವಿತ್ ॥28॥

ಪ್ರತಿದಿವಸವೂ ಶಾಂತನಾಗಿ, ಪವಿತ್ರವಾದ ಮತ್ತು ಹಿತವಾದ ಮುಂದಿನ ಗತಿಗೋಸ್ಕರ ಹೀಗೆಯೇ ತತ್ತ್ವವನ್ನು ಎಣಿಸುವವನು ಮೋಕ್ಷವನ್ನು ಪಡೆಯುತ್ತಾನೆ. ಶುದ್ಧ ತತತ್ತ್ವಾರ್ಥ ಜ್ಞಾನವುಳ್ಳ ಅವನು ಪ್ರಾಕೃತವಾದ ಹದಿನಾರು ಕಲೆಗಳಿಂದ ರಹಿತನಾಗಿ, ಜಡ-ಅಮಿಶ್ರನಾಗಿ ಶುದ್ಧ ಚೇತನನಾಗುತ್ತಾನೆ.

ಭಿಕ್ಷುಕಾಶ್ರಮಮಾಸ್ಥಾಯ ಶುಶ್ರೂಷಾನಿರತೋ ಬುಧಃ |
ಶೂದ್ರೋ ನಿರ್ಮುಚ್ಯತೇ ಸತ್ತ್ವಸಂಸರ್ಗಾದೇವ ನಾನ್ಯಥಾ ॥29॥

ಹೀಗೆ ಕ್ರಮವಾಗಿ ಉನ್ನತಸ್ಥಾನಕ್ಕೆ ಬಂದ ಶೂದ್ರನು ವಿವೇಕಿಯಾಗಿ, ಶುಶ್ರೂಷಾ ನಿರತನಾಗಿ ಯತಿಯಾಶ್ರಮವನ್ನು ಆಶ್ರಯಿಸಿ ಸದ್ಗುಣಗಳ ಸಂಪತ್ತಿನಿಂದಲೇ ಮೋಕ್ಷವನ್ನು ಪಡೆಯುತ್ತಾನೆ. ಬೇರೆಯ ಮಾರ್ಗವಿಲ್ಲ.

ಸತ್ಸನ್ನಿಕರ್ಷೇ ಪರಿವರ್ತಿತವ್ಯಂ
ವಿದ್ಯಾಧಿಕಾಶ್ಚಾಪಿ ನಿಷೇವಿತವ್ಯಾಃ |
ಸವರ್ಣತಾಂ ಗಚ್ಛತಿ ಸನ್ನಿಕರ್ಷಾತ್
ನೀಲಃ ಖಗೋ ಮೇರುಮಿವಾಶ್ರಯನ್ ವೈ ॥30॥

ಆದ್ದರಿಂದ ಸಜ್ಜನರ ಸಂಪರ್ಕದಲ್ಲಿಯೇ ಇರಬೇಕು. ಅಧಿಕ ವಿದ್ಯೆಯನ್ನು ಗಳಿಸಿದವರನ್ನು ಸೇವಿಸಬೇಕು. ಕಪ್ಪಾದ ಪಕ್ಷಿಯು ಮೇರುವಿನ ಸಂಪರ್ಕದಿಂದ ಮೇರುವಿನ ಬಣ್ಣವನ್ನು ಹೊಂದಿದಂತೆ ಸಜ್ಜನರನ್ನು ಆಶ್ರಯಿಸಿದರೆ ಪುರುಷನು ಅವರ ಸಮಾನಶೀಲವುಳ್ಳವನಾಗುತ್ತಾನೆ.

ಭೀಷ್ಮಃ

ಇತ್ಯೇವಮಾಖ್ಯಾಯ ಮಹಾಮುನಿಸ್ತದಾ
ಚತುರ್ಷು ವರ್ಣೇಷು ವಿಧಾನಮರ್ಥವಿತ್ |
ಶುಶ್ರೂಷಯಾ ವೃತ್ತಗತಿಂ ಸಮಾಧಿನಾ
ಸಮಾಧಿಯುಕ್ತಃ ಪ್ರಯಯೌ ಸ್ವಮಾಶ್ರಮಮ್ ॥31॥

ಭೀಷ್ಮ ಮಹಾಮುನಿಗಳಾದ ಪರಾಶರರು ನಾಲ್ಕು ವರ್ಣಗಳ ವಿಧಿಗಳನ್ನು ಮತ್ತು ಅದರ ಪ್ರಯೋಜನವನ್ನು ತಿಳಿದವರಾಗಿ ಈ ರೀತಿಯಲ್ಲಿ ಶುಶ್ರೂಷೆಯಿಂದ ಉಂಟಾಗುವ ಗತಿಯನ್ನು ಸಮಾಧಿ ಭಾಷೆಯಿಂದ ಹೇಳಿ ತಾವೂ ಸಮಾಧಾನದಿಂದ ಕೂಡಿದವರಾಗಿ ತಮ್ಮ ಆಶ್ರಮಕ್ಕೆ ಹೋದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಸಪ್ತಚತ್ವಾರಿಂಶೋತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರಅರವತ್ತೇಳನೆಯ ಅಧ್ಯಾಯ ಮುಗಿಯಿತು.

॥ ಪರಾಶರಗೀತಾ ಸಮಾಪ್ತಾ ॥

* * * * *

ನೂರ ಅರವತ್ತೆಂಟನೆಯ ಅಧ್ಯಾಯ

ನಮಸ್ಕಾರಾರ್ಹರಾದವರ ವಿಷಯದಲ್ಲಿ ಇಂದ್ರ-ಮಾತಲಿಯ ಸಂವಾದ

ಯುಧಿಷ್ಠಿರಃ

ಕೇಷಾಂ ದೇವಾ ಮಹಾಭಾಗಾಃ ಸನ್ನಮಂತೇ ಮಹಾತ್ಮನಾಮ್ |
ಲೋಕೇಽಸ್ಮಿನ್ ತಾನೃಷೀನ್ ಸರ್ವಾನ್ ಶ್ರೋತುಮಿಚ್ಛಾಮಿ ಸತ್ತಮ ॥1॥

ಯುಧಿಷ್ಠಿರ ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಮಹಾಭಾಗ್ಯವಂತರಾದ ದೇವತೆಗಳು ಈ ಲೋಕದಲ್ಲಿ ಯಾವ ಮಹಾತ್ಮರಾದವರಿಗೆ ನಮಸ್ಕಾರವನ್ನು ಮಾಡುತ್ತಾರೆ? ಅಂತಹ ಎಲ್ಲ ಋಷಿಗಳನ್ನು ಕೇಳಲು ಬಯಸುತ್ತೇನೆ.

ಭೀಷ್ಮಃ

ಇತಿಹಾಸಮಿಮಂ ವಿಪ್ರಾಃ ಕೀರ್ತಯಂತಿ ಪುರಾವಿದಃ |
ಅಸ್ಮಿನ್ನರ್ಥೇ ಮಹಾಪ್ರಾಜ್ಞಾಸ್ತಂ ನಿಬೋಧ ಯುಧಿಷ್ಠಿರ ॥2॥

ಭೀಷ್ಮ ಎಲೈ ಯುಧಿಷ್ಠಿರನೇ, ಪುರಾಣವನ್ನು ತಿಳಿದ ಮಹಾಪ್ರಾಜ್ಞರಾದ ಬ್ರಾಹ್ಮಣರು ಈ ವಿಷಯದಲ್ಲಿ ಈ ಇತಿಹಾಸವನ್ನು ಹೇಳುತ್ತಾರೆ. ಅದನ್ನು ಕೇಳು.

ವೃತ್ರಂ ಹತ್ವಾಽಪ್ಯುಪಾವೃತ್ತಂ ತ್ರಿದಶಾನಾಂ ಪುರಸ್ಕೃತಮ್ |
ಮಹೇಂದ್ರಮನುಸಂಪ್ರಾಪ್ತಂ ಸ್ತೂಯಮಾನಂ ಮಹರ್ಷಿಭಿಃ ॥3॥
ಶ್ರಿಯಾ ಪರಮಯಾ ಯುಕ್ತಂ ರಥಸ್ಥಂ ಹರಿವಾಹನಮ್ |
ಮಾತಲಿಃ ಪ್ರಾಂಜಲಿರ್ಭೂತ್ವಾ ದೇವಮಿಂದ್ರಮುವಾಚ ಹ ॥4॥
ನಮಸ್ಕೃತಾನಾಂ ಸರ್ವೇಷಾಂ ಭಗವಂಸ್ತ್ವಂ ಪುರಸ್ಕೃತಃ |
ಯೇಷಾಂ ಲೋಕೇ ನಮಸ್ಕುರ್ಯಾತ್ ತಾನ್ ಬ್ರವೀತು ಭವಾನ್ ಮಮ ॥

ವೃತ್ರಾಸುರನನ್ನು ಕೊಂದು ಹಿಂದಿರುಗಿ, ದೇವತೆಗಳಿಂದ ಪೂಜಿತನಾದ ಮಹರ್ಷಿಗಳಿಂದ ಸ್ತೋತ್ರ ಮಾಡಲ್ಪಡುತ್ತಿದ್ದ, ಪರಮವೈಭವದಿಂದ ಕೂಡಿದ, ರಥದಲ್ಲಿ ಕುಳಿತ, ಹರಿವಾಹನನಾದ ದೇವೇಂದ್ರನನ್ನು ಕುರಿತು ಅವನ ಸಾರಥಿಯಾದ ಮಾತಲಿಯು ಕೈಗಳನ್ನು ಮುಗಿದು ಲೋಕದಲ್ಲಿ ಯಾರಿಗೆ ನಮಸ್ಕಾರವನ್ನು ಮಾಡಬೇಕು ಅಂತಹವರನ್ನು ನನಗೆ ಹೇಳು ಎಂದು ಕೇಳಿದನು.

ಭೀಷ್ಮಃ

ತಸ್ಯ ತದ್ವಚನಂ ಶ್ರುತ್ವಾ ದೇವರಾಜಃ ಶಚೀಪತಿಃ |

ಯಂತಾರಂ ಪರಿಪೃಚ್ಛಂತಂ ತಮಿಂದ್ರಃ ಪ್ರತ್ಯುವಾಚ ಸಃ ॥6॥
ಭೀಷ್ಮ ಅವನ ಆ ಮಾತುಗಳನ್ನು ಕೇಳಿ ದೇವರಾಜನೂ, ಶಚೀಪತಿಯೂ ಆದ ಇಂದ್ರನು ಪ್ರಶ್ನೆಯನ್ನು ಕೇಳಿದ ಆ ಸಾರಥಿಯನ್ನು ಕುರಿತು ಉತ್ತರವನ್ನು ಹೇಳಿದನು.
ಧರ್ಮಂ ಚಾರ್ಥಂ ಚ ಕಾಮಂ ಚ ಯೇಷಾಂ ಚಿಂತಯತಾಂ ಮತಿಃ|
ನಾಧರ್ಮೇ ವರ್ತತೇ ನಿತ್ಯಂ ತಾನ್ ನಮಸ್ಯಾಮಿ ಮಾತಲೇ ॥7॥
ಯಾರ ಬುದ್ಧಿಯು ಧರ್ಮಾರ್ಥಕಾಮಗಳನ್ನೇ ಚಿಂತಿಸುತ್ತದೆಯೋ, ಅಧರ್ಮದ ಕಡೆಗೆ ಹೋಗುವುದಿಲ್ಲವೋ ಎಲೈ ಮಾತಲಿಯೇ, ಅಂತಹವರನ್ನು ನಾನು ನಮಸ್ಕರಿಸುವೆನು.
ಯೇ ರೂಪಗುಣಸಂಪನ್ನಾಃ ಪ್ರಮದಾಹೃದಯಂಗಮಾಃ|
ನಿವೃತ್ತಾಃ ಕಾಮಭೋಗೇಷು ತಾನ್ ನಮಸ್ಯಾಮಿ ಮಾತಲೇ ॥8॥
ಯಾರು ರೂಪಗುಣಸಂಪನ್ನನಾಗಿದ್ದರೂ, ಸ್ತ್ರೀಯರಿಗೆ ಹೃದಯಾಂಗಮರಾಗಿದ್ದರೂ ಕಾಮಭೋಗಗಳಿಂದ ನಿವೃತ್ತರಾಗಿರುತ್ತಾರೆಯೋ ಅಂತಹವರನ್ನು ನಮಸ್ಕರಿಸುವೆನು.
ಸ್ವೇಷು ಭೋಗೇಷು ಸಂತುಷ್ಟಾಃ ಸುವಾಚೋ ವಚನಕ್ಷಮಾಃ|
ಅಮಾನಕಾಮಾಶ್ಚಾರ್ಘಾರ್ಹಾಃ ತಾನ್ ನಮಸ್ಯಾಮಿ ಮಾತಲೇ ॥9॥
ತಮ್ಮ ಭೋಗಗಳಲ್ಲಿ ತೃಪ್ತಿಯನ್ನು ಹೊಂದಿ ಒಳ್ಳೆಯ ಮಾತನ್ನಾಡುವ ಸನ್ಮಾನವನ್ನು ಅಪೇಕ್ಷಿಸದಿರುವ, ಪೂಜಾರ್ಹರಾಗಿರುವವರನ್ನು ಎಲೈ ಮಾತಲಿಯೇ ನಾನು ನಮಸ್ಕರಿಸುವೆನು.
ಧನಂ ವಿದ್ಯಾಸ್ತಥೈಶ್ವರ್ಯಂ ಯೇಷಾಂ ನ ಚಲಯೇನ್ಮತಿಮ್|
ಚಲಿತಾಂ ಯೇ ನಿಗೃಹ್ಣಂತಿ ತಾನ್ನಿತ್ಯಂ ಪೂಜಯಾಮ್ಯಹಮ್ ॥10॥
ಧನ, ವಿದ್ಯೆ ಮತ್ತು ಐಶ್ವರ್ಯಗಳು ಯಾರನ್ನು ಅಲುಗಾಡಿಸುವುದಿಲ್ಲವೋ ಅಥವಾ ಅಲುಗಾಡಿದರೂ ಯಾರು ನಿಗ್ರಹಿಸುತ್ತಾರೋ ಅಂತಹವರನ್ನು ನಿತ್ಯವೂ ಪೂಜಿಸುತ್ತೇನೆ.
ಇಷ್ಟೈರ್ದಾರೈರುಪೇತಾನಾಂ ಶುಚೀನಾಮಗ್ನಿಹೋತ್ರಿಣಾಮ್|
ಚತುಷ್ಪಾದಕುಟುಮ್ಬಾನಾಂ ಮಾತಲೇ ಪ್ರಣಮಾಮ್ಯಹಮ್ ॥11॥
ಎಲೈ ಮಾತಲಿಯೇ, ಇಷ್ಟರಾದ ಪತ್ನಿಯರನ್ನು ಹೊಂದಿ, ಶುಚಿಗಳಾಗಿ, ಅಗ್ನಿಹೋತ್ರಿಗಳಾಗಿ, ಗೋವುಗಳನ್ನು ತಮ್ಮ ಕುಟುಂಬದಲ್ಲಿ ಪೋಷಿಸುವವರನ್ನು ನಾನು ನಮಸ್ಕರಿಸುತ್ತೇನೆ.
ಮಹತಸ್ತಪಸಾ ಪ್ರಾಪ್ತೌ ಧನಸ್ಯ ವಿಪುಲಸ್ಯ ಚ|
ತ್ಯಾಗಸ್ತಸ್ಯ ನ ವೈ ಕಾರ್ಯೋ ಯೋಽಽತ್ಮಾನಂ ನಾಽವಬುಧ್ಯತೇ ॥12॥
ದೊಡ್ಡ ತಪಸ್ಸಿನಿಂದ ವಿಪುಲವಾದ ಧನದ ಪ್ರಾಪ್ತಿಯಾದರೂ ತನ್ನನ್ನು ತಿಳಿದವನು ಆ ತಪಸ್ಸನ್ನು ತ್ಯಾಗ ಮಾಡಬಾರದು.
ಯೇಷಾಮರ್ಥಸ್ತಥಾ ಕಾಮೋ ಧರ್ಮಮೂಲವಿವರ್ಧಿತಃ|
ಧರ್ಮಾರ್ಥೌ ತಸ್ಯ ನಿಯತೌ ತಾನ್ ನಮಸ್ಯಾಮಿ ಮಾತಲೇ ॥13॥
ಯಾರ ಅರ್ಥ-ಕಾಮಗಳು ಧರ್ಮಮೂಲವಾಗಿ ಅಭಿವೃದ್ಧಿಯನ್ನು ಹೊಂದುತ್ತವೆಯೋ, ಯಾರ ಧರ್ಮಾರ್ಥಗಳು ನಿಯತವಾಗಿವೆಯೋ ಎಲೈ ಮಾತಲಿಯೇ ಅವರನ್ನು ನಮಸ್ಕರಿಸುವೆನು.
ಧರ್ಮಮೂಲಾರ್ಥಕಾಮಾನಾಂ ಬ್ರಾಹ್ಮಣಾನಾಂ ಗವಾಮಪಿ|
ಪತಿವ್ರತಾನಾಂ ನಾರೀಣಾಂ ಪ್ರಣಾಮಂ ಪ್ರಕರೋಮ್ಯಹಮ್ ॥14॥
ಧರ್ಮಮೂಲವಾದ ಅರ್ಥಕಾಮಗಳನ್ನು ಹೊಂದಿರುವ ಬ್ರಾಹ್ಮಣರಿಗೂ, ಗೋವುಗಳಿಗೂ, ಪತಿವ್ರತೆಯರಾದ ಸ್ತ್ರೀಯರಿಗೂ ನಾನು ನಮಸ್ಕಾರವನ್ನು ಮಾಡುತ್ತೇನೆ.
ಯೇ ಭುಕತ್ವ ಮಾನುಷಾನ್ ಭೋಗಾನ್ ಪೂರ್ವೇ ವಯಸಿ ಮಾತಲೇ|
ತಪಸಾ ಸ್ವರ್ಗಮಾಯಾಂತಿ ಶಶ್ವತ್ ತಾನ್ ಪೂಜಯಾಮ್ಯಹಮ್ ॥15॥
ಎಲೈ ಮಾತಲಿಯೇ ಯಾರು ಪೂರ್ವವಯಸ್ಸಿನಲ್ಲಿ ಮಾನುಷ ಭೋಗಗಳನ್ನು ಭೋಗಿಸಿ ಅನಂತರ ತಪಸ್ಸನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾರೆಯೋ ಅವರನ್ನು ಯಾವಾಗಲೂ ನಮಸ್ಕರಿಸುತ್ತೇನೆ.
ಅಸಂಭೋಗಾನ್ನ ಚಾಸಕ್ತಾನ್ ಧರ್ಮನಿತ್ಯಾನ್ ಜಿತೇಂದ್ರಿಯಾನ್|
ಸನ್ನ್ಯಸ್ತಾನಚಲಪ್ರಖ್ಯಾನ್ ಮನಸಾ ಪೂಜಯಾಮಿ ತಾನ್ ॥16॥
ಯಾರು ಸಂಭೋಗವನ್ನು ತ್ಯಜಿಸಿ, ವಿಷಯಗಳಲ್ಲಿ ಆಸಕ್ತರಾಗದೆ, ನಿತ್ಯವೂ ಧರ್ಮಾನುಷ್ಠಾನ ಮಾಡುತ್ತಾ, ಜಿತೇಂದ್ರಿಯರಾಗಿ ಸಂನ್ಯಾಸವನ್ನು ಸ್ವೀಕರಿಸಿ ಪರ್ವತದಂತೆ ಸ್ಥಿರವಾಗಿರುತ್ತಾರೆಯೋ ಅಂತಹವರನ್ನು ಮನಸ್ಸಿನಿಂದಲೇ ಪೂಜಿಸುತ್ತೇನೆ.
ಜ್ಞಾನಪ್ರಸನ್ನವಿದ್ಯಾನಾಂ ನಿರೂಢಂ ಧರ್ಮಮೀಪ್ಸಿತಮ್|
ಪರೈಃ ಕೀರ್ತಿತಶೌಚಾನಾಂ ಮಾತಲೇ ತಾನ್ ನಮಾಮ್ಯಹಮ್ |17॥|
ಜ್ಞಾನವಿದ್ಯೆಗಳಿಂದ ಪ್ರಸನ್ನರಾದ, ಸ್ಥಿರವಾದ ಧರ್ಮವನ್ನು ಅಪೇಕ್ಷಿಸುವ, ಇನ್ನೊಬ್ಬರಿಂದ ಶ್ಲಾಘಿತವಾದ ಶೌಚವನ್ನು ಹೊಂದಿದ ಪುರುಷರನ್ನು ಎಲೈ ಮಾತಲಿಯೇ ನಾನು ನಮಸ್ಕರಿಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಷ್ಟಚತ್ವಾರಿಂಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೆಂಟನೆಯ
ಅಧ್ಯಾಯ ಮುಗಿಯಿತು.

* * * * *

## ನೂರ ನಲವತ್ತೊಂಬತ್ತನೆಯ ಅಧ್ಯಾಯ

### ತಟಾಕ-ವನಗಳ ನಿರ್ಮಾಣಫಲ.

ಯುಧಿಷ್ಠಿರಃ
ಆರಾಮಾಣಾಂ ತಡಾಗಾನಾಂ ಯತ್ಫಲಂ ಕುರುನಂದನ |
ಸಂಸ್ಕೃತಾನಾಂ ಯಥಾಕಾಮಂ ತತ್ಫಲಂ ಬ್ರೂಹಿ ಸತ್ತಮ |
ತದಹಂ ಶ್ರೋತುಮಿಚ್ಛಾಮಿ ತ್ವತ್ತೋಽದ್ಯ ಭರತರ್ಷಭ ॥1॥
ಯುಧಿಷ್ಠಿರ ಎಲೈ ಕುರುನಂದನನೇ, ಸಜ್ಜನರಲ್ಲಿ ಶ್ರೇಷ್ಠನೇ, ವನಗಳನ್ನು ಮತ್ತು ತಟಾಕಗಳನ್ನು ನಿರ್ಮಾಣ ಮಾಡಿದ ಸುಸಂಕೃತರಾದ ಪುರುಷರಿಗೆ ಏನು ಫಲವೆಂದು ಹೇಳು. ಎಲೈ ಭರತಶ್ರೇಷ್ಠನೇ, ಈ ದಿನ ಅದನ್ನು ನಿನ್ನಿಂದ ಕೇಳಲು ಬಯಸುತ್ತೇನೆ.
ಭೀಷ್ಮಃ
ಸುಪ್ರದರ್ಶಾ ವನವತೀ ಚಿತ್ರಧಾತುವಿಭೂಷಿತಾ |
ಉಪೇತಾ ಸರ್ವಬೀಜೈಶ್ಚ ಶ್ರೇಷ್ಠಾ ಭೂಮಿರಿಹೋಚ್ಯತೇ ॥2॥
ಭೀಷ್ಮ ನೋಡಲು ಸುಂದರವಾದ ವೃಕ್ಷಗಳು ಬೆಳೆದ, ವಿಚಿತ್ರವಾದ ಧಾತುಗಳಿಂದ ವಿಭೂಷಿತವಾದ ಮತ್ತು ಸರ್ವಬೀಜಗಳಿಂದ ಕೂಡಿದ ಭೂಮಿಯು ಶ್ರೇಷ್ಠವೆಂದು ಹೇಳಲ್ಪಡುತ್ತದೆ.
ತಸ್ಯಾಃ ಕ್ಷೇತ್ರವಿಶೇಷಂ ಚ ತಡಾಗಾನಾಂ ನಿವೇಶನಮ್ |
ಔದಕಾನಿ ಚ ಸರ್ವಾಣಿ ಪ್ರವಕ್ಷ್ಯಾಮ್ಯನುಪೂರ್ವಶಃ ॥3॥
ಆ ಭೂಮಿಯ ಕ್ಷೇತ್ರ ವಿಶೇಷಗಳನ್ನು, ತಟಾಕಗಳ ನಿರ್ಮಾಣವನ್ನು, ಎಲ್ಲಾ ಜಲಾಶಯಗಳ ನಿರ್ಮಾಣವನ್ನು ಕುರಿತು ಕ್ರಮವಾಗಿ ಹೇಳುತ್ತೇನೆ.
ತಡಾಗಾನಾಂ ಚ ವಕ್ಷ್ಯಾಮಿ ಕೃತಾನಾಂ ಚಾಪಿ ಯೇ ಗುಣಾಃ |
ತ್ರಿಷು ಲೋಕೇಷು ಸರ್ವತ್ರ ಪೂಜಿತೋ ಯಸ್ತಡಾಗವಾನ್ ॥4॥
ತಟಾಕ ನಿರ್ಮಾಣ ಮಾಡುವುದರಿಂದ ಉಂಟಾಗುವ ಗುಣಗಳನ್ನು ಹೇಳುವೆನು. ತಟಾಕ ನಿರ್ಮಾಣವನ್ನು ಮಾಡಿದವನು ಮೂರು ಲೋಕಗಳಲ್ಲಿ ಎಲ್ಲ ಕಡೆಯಲ್ಲಿಯೂ ಪೂಜಿಸಲ್ಪಡುತ್ತಾನೆ.
ಅಥವಾ ಮಿತ್ರಸದನಂ ಮೈತ್ರಂ ಮಿತ್ರವಿವರ್ಧನಮ್ |
ಕೀರ್ತಿಸಂಜನನಂ ಶ್ರೇಷ್ಠಂ ತಡಾಗಾನಾಂ ನಿವೇಶನಮ್ ॥5॥
ಮತ್ತು ತಟಾಕವು ಮಿತ್ರರಿಗೆ ಆಶ್ರಯವಾಗುತ್ತದೆ. ಮಿತ್ರರನ್ನು ಹೆಚ್ಚಿಸುತ್ತದೆ ಮತ್ತು ತಟಾಕವು ಶ್ರೇಷ್ಠವಾದ ಕೀರ್ತಿಯನ್ನು ಉಂಟುಮಾಡಿಕೊಡುತ್ತದೆ.
ಧರ್ಮಸ್ಯಾರ್ಥಸ್ಯ ಕಾಮಸ್ಯ ಫಲಮಾಹುರ್ಮನೀಷಿಣಃ |
ತಡಾಗಂ ಸುಕೃತಂ ದೇಶೇ ಕ್ಷೇತ್ರಮೇವ ಮಹಾಶ್ರಯಮ್ ॥6॥
ಧರ್ಮಾರ್ಥ ಕಾಮಗಳಿಗೆ ಫಲವೆಂದರೆ ವ್ಯವಸಾಯವನ್ನು ಮಾಡುವ ದೊಡ್ಡ ಭೂಮಿಗೆ ಆಶ್ರಯವಾದ ತಟಾಕವನ್ನು ಒಳ್ಳೆಯ ಪ್ರದೇಶದಲ್ಲಿ ನಿರ್ಮಿಸುವುದೆಂದು ಜ್ಞಾನಿಗಳು ಹೇಳುತ್ತಾರೆ.
ಚತುರ್ವಿಧಾನಾಂ ಭೂತಾನಾಂ ತಡಾಗಮುಪಲಕ್ಷಯೇತ್ |
ತಡಾಗಾನಿ ಚ ಸರ್ವಾಣಿ ದಿಶಂತಿ ಶ್ರಿಯಮುತ್ತಮಾಮ್ ॥7॥
ತಟಾಕ ನಿರ್ಮಾಣ ಮಾಡುವವನು ಜರಾಯುಜಾದಿ ನಾಲ್ಕು ವಿಧವಾದ ಪ್ರಾಣಿಗಳನ್ನು ಗಮನಿಸಬೇಕು. ಎಲ್ಲಾ ತಟಾಕಗಳೂ ಶ್ರೇಷ್ಠವಾದ ಸಂಪತ್ತನ್ನು ಕೊಡುತ್ತವೆ.
ದೇವಾ ಮನುಷ್ಯಾ ಗಂಧರ್ವಾಃ ಪಿತರೋರಗರಾಕ್ಷಸಾಃ |
ಸ್ಥಾವರಾಣಿ ಚ ಭೂತಾನಿ ಸಂಶ್ರಯಂತಿ ಜಲಾಶಯಮ್ ॥8॥
ದೇವತೆಗಳು, ಮನುಷ್ಯರು, ಗಂಧರ್ವರು, ಪಿತೃಗಳು, ಸರ್ಪಗಳು, ರಾಕ್ಷಸರು, ವೃಕ್ಷಗಳು ಎಲ್ಲರೂ ಜಲಾಶಯವನ್ನು ಆಶ್ರಯಿಸುತ್ತಾರೆ.
ತಸ್ಮಾತ್ ತಾಂಸ್ತೇ ಪ್ರವಕ್ಷ್ಯಾಮಿ ತಡಾಗೇ ಯೇ ಗುಣಾಃ ಸ್ಮೃತಾಃ |
ಯಾ ಚ ತತ್ರ ಫಲಾವಾಪ್ತಿರ್ಋಷಿಭಿಃ ಸಮುದಾಹೃತಾ ॥9॥
ಆದ್ದರಿಂದ ತಟಾಕ ನಿರ್ಮಾಣದಲ್ಲಿ ಯಾವ ಗುಣಗಳಿದೆ ಮತ್ತು ಅವುಗಳಿಂದ ಉಂಟಾಗುವ ಫಲಪ್ರಾಪ್ತಿಯು ಏನೆಂಬುದನ್ನು ಋಷಿಗಳು ಹೇಳಿರುವಂತೆ ನಿನಗೆ ಹೇಳುವೆನು.
ವರ್ಷಮಾತ್ರೇ ತಡಾಗೇ ತು ಸಲಿಲಂ ಯಸ್ಯ ತಿಷ್ಠತಿ |
ಅಗ್ನಿಹೋತ್ರಫಲಂ ತಸ್ಯ ಫಲಮಾಹುರ್ಮನೀಷಿಣಃ ॥10॥
ಯಾವನು ನಿರ್ಮಿಸಿದ ತಟಾಕದಲ್ಲಿ ಮಳೆಗಾಲದಲ್ಲಿ ಮಾತ್ರ ನೀರಿರುತ್ತದೆಯೋ ಅವನು ಅಗ್ನಿಹೋತ್ರ ಫಲವನ್ನು ಪಡೆಯುವನೆಂದು ಜ್ಞಾನಿಗಳು ಹೇಳುತ್ತಾರೆ.
ಶರತ್ಕಾಲೇ ತು ಸಲಿಲಂ ತಡಾಗೇ ಯಸ್ಯ ತಿಷ್ಠತಿ |
ಗೋಸಹಸ್ರಸ್ಯ ಸ ಪ್ರೇತ್ಯ ಲಭತೇ ಫಲಮುತ್ತಮಮ್ ॥11॥
ಯಾವನ ತಟಾಕದಲ್ಲಿ ಶರತ್ಕಾಲದಲ್ಲಿ ಜಲವಿರುತ್ತದೆಯೋ ಅವನು ಮರಣವನ್ನು ಹೊಂದಿದ ಮೇಲೆ ಸಹಸ್ರ ಗೋವುಗಳನ್ನು ದಾನ ಮಾಡಿದ ಶ್ರೇಷ್ಠವಾದ ಫಲವನ್ನು ಹೊಂದುತ್ತಾನೆ.
ಹೇಮಂತಕಾಲೇ ಸಲಿಲಂ ತಡಾಗೇ ಯಸ್ಯ ತಿಷ್ಠತಿ |

ಸ ವೈ ಬಹುಸುವರ್ಣಸ್ಯ ಯಜ್ಞಸ್ಯ ಲಭತೇ ಫಲಮ್ ॥12॥
ಯಾವನ ತಟಾಕದಲ್ಲಿ ಹೇಮಂತಕಾಲದಲ್ಲಿ ಜಲವಿರುತ್ತದೆಯೋ ಅವನು ಬಹು ಸುವರ್ಣದಾನ ಮಾಡಿ ಆಚರಿಸಿದ ಯಜ್ಞಫಲವನ್ನು ಹೊಂದುತ್ತಾನೆ.
ಯಸ್ಯ ವೈ ಶೈಶಿರೇ ಕಾಲೇ ತಡಾಗೇ ಸಲಿಲಂ ಭವೇತ್ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಮಾಹುರ್ಮನೀಷಿಣಃ ॥13॥
ಯಾರ ತಟಾಕದಲ್ಲಿ ಶಿಶಿರ ಕಾಲದಲ್ಲಿ ಜಲವಿರುತ್ತದೆಯೋ ಅವನು ಅಗ್ನಿಷ್ಟೋಮಯಾಗ ಫಲವನ್ನು ಹೊಂದುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ.
ತಡಾಗಂ ಸುಕೃತಂ ಯಸ್ಯ ವಸಂತೇ ತು ಮಹಾಶ್ರಯಮ್ ।
ಅತಿರಾತ್ರಸ್ಯ ಯಜ್ಞಸ್ಯ ಫಲಂ ಸ ಸಮುಪಾಶ್ನುತೇ ॥14॥
ಚೆನ್ನಾಗಿ ನಿರ್ಮಿಸಿದ ಯಾರ ತಟಾಕದಲ್ಲಿ ವಸಂತ ಕಾಲದಲ್ಲಿ ನೀರಿರುತ್ತದೆಯೋ ಅಂತಹವನು ಅತಿರಾತ್ರಯಾಗದ ಫಲವನ್ನು ಹೊಂದುತ್ತಾನೆ.
ನಿದಾಘಕಾಲೇ ಪಾನೀಯಂ ತಡಾಗೇ ಯಸ್ಯ ತಿಷ್ಠತಿ ।
ವಾಜಪೇಯಸಮಂ ತಸ್ಯ ಫಲಂ ವೈ ಮುನಯೋ ವಿದುಃ ॥15॥
ಯಾರ ತಟಾಕದಲ್ಲಿ ಬೇಸಿಗೆಯ ಕಾಲದಲ್ಲಿ ನೀರಿರುತ್ತದೆಯೋ ಅವನು ವಾಜಪೇಯ ಯಾಗದ ಫಲವನ್ನು ಹೊಂದುತ್ತಾನೆಂದು ಋಷಿಗಳು ಹೇಳುತ್ತಾರೆ.
ಸ ಕುಲಂ ತಾರಯೇತ್ ಸರ್ವಂ ಯಸ್ಯ ಖಾತೇ ಜಲಾಶಯೇ ।
ಗಾವಃ ಪಿಬಂತಿ ಪಾನೀಯಂ ಸಾಧವಶ್ಚ ನರಾಃ ಸದಾ ॥16॥
ಯಾವನು ನಿರ್ಮಾಣ ಮಾಡಿದ ಜಲಾಶಯದಲ್ಲಿ ಗೋವುಗಳು ಮತ್ತು ಸಜ್ಜನರು ಯಾವಾಗಲೂ ಜಲಪಾನ ಮಾಡುತ್ತಾರೆಯೋ ಅಂತಹವನು ನಿರ್ಮಿಸಿದ ಜಲಾಶಯವು ಅವನ ಕುಲವನ್ನೆಲ್ಲಾ ಉದ್ಧರಿಸುತ್ತದೆ.
ತಡಾಗೇ ಯಸ್ಯ ಗಾವಸ್ತು ಪಿಬಂತಿ ತೃಷಿತಾ ಜಲಮ್ ।
ಮೃಗಪಕ್ಷಿಮನುಷ್ಯಾಶ್ಚ ಸೋಽಶ್ವಮೇಧಫಲಂ ಲಭೇತ್ ॥17॥
ಯಾವನ ತಟಾಕದಲ್ಲಿ ಬಾಯಾರಿದ ಗೋವುಗಳು, ಮೃಗ-ಪಕ್ಷಿ-ಮನುಷ್ಯರು ಜಲಪಾನ ಮಾಡುತ್ತಾರೆಯೋ ಅವನು ಅಶ್ವಮೇಧ ಫಲವನ್ನು ಹೊಂದುತ್ತಾನೆ.
ಯತ್ ಪಿಬಂತಿ ಜಲಂ ತತ್ರ ಸ್ನಾಯಂತೇ ವಿಶ್ರಮಂತಿ ಚ ।
ತಡಾಗದಸ್ಯ ತತ್ ಸರ್ವಂ ಪ್ರೇತ್ಯಾನಂತ್ಯಾಯು ಕಲ್ಪತೇ ॥18॥
ತಟಾಕದಲ್ಲಿ ಜಲಪಾನ ಮಾಡುವುದು, ಸ್ನಾನ ಮಾಡುವುದು, ವಿಶ್ರಾಂತಿಯನ್ನು ತೆಗೆದುಕೊಳ್ಳುವುದು ಇವೆಲ್ಲವೂ ತಟಾಕ ನಿರ್ಮಾಣ ಮಾಡಿದವನಿಗೆ ಮರಣಾನಂತರದಲ್ಲಿ ಅನಂತ ಸುಖಪ್ರಾಪ್ತಿಗೆ ಕಾರಣವಾಗುತ್ತವೆ.
ದುರ್ಲಭಂ ಸಲಿಲಂ ತಾತ ವಿಶೇಷೇಣ ಪರತ್ರ ವೈ ।
ಪಾನೀಯಸ್ಯ ಪ್ರದಾನೇನ ಪ್ರೀತಿರ್ಭವತಿ ಶಾಶ್ವತೀ ॥19॥
ಎಲೈ ಪ್ರೀತಿಪಾತ್ರನೇ, ಈ ಲೋಕದಲ್ಲಿ ಜಲವು ದುರ್ಲಭವಾದುದು. ವಿಶೇಷವಾಗಿ ಪರಲೋಕದಲ್ಲಿ ಇನ್ನೂ ದುರ್ಲಭವಾದುದು. ಆದ್ದರಿಂದ ಜಲದಾನದಿಂದ ಶಾಶ್ವತವಾದ ಸಂತೋಷವುಂಟಾಗುತ್ತದೆ.
ತಿಲಾನ್ ದದತ ಪಾನೀಯಂ ದೀಪಾನ್ ದದತ ಜಾಗ್ರತ ।
ಜ್ಞಾತಿಭಿಃ ಸಹ ಮೋದಧ್ವಮೇತತ್ ಪ್ರೇತೇಷು ದುರ್ಲಭಮ್ ॥20॥
ತಿಲಗಳನ್ನು ದಾನ ಮಾಡಿ. ಎಚ್ಚರಿಕೆಯಿಂದ ದೀಪವನ್ನು ದಾನ ಮಾಡಿ. ಬಂಧುಗಳ ಜೊತೆಯಲ್ಲಿ ಸಂತೋಷದಿಂದಿರಿ. ಮರಣ ಹೊಂದಿದ ಮೇಲೆ ಇವೆಲ್ಲವೂ ದುರ್ಲಭವಾದವುಗಳು.
ಸರ್ವದಾನೈರ್ಗುರುತರಂ ಸರ್ವದಾನೈರ್ವಿಶಿಷ್ಯತೇ ।
ಪಾನೀಯಂ ನರಶಾರ್ದೂಲ ತಸ್ಮಾದ್ ದಾತವ್ಯಮೇವ ಹಿ ॥21॥
ಎಲೈ ನರಶಾರ್ದೂಲನೇ, ಜಲದಾನವು ಸರ್ವದಾನಗಳಿಗಿಂತಲೂ ದೊಡ್ಡದು ಮತ್ತು ಸರ್ವದಾನಗಳಿಗಿಂತಲೂ ಶ್ರೇಷ್ಠವಾದುದು. ಆದ್ದರಿಂದ ಜಲದಾನವನ್ನು ಮಾಡಲೇಬೇಕು.
ಏವಮೇತತ್ ತಡಾಗೇಷು ಕೀರ್ತಿತಂ ಫಲಮುತ್ತಮಮ್ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ವೃಕ್ಷಾಣಾಮಪಿ ರೋಪಣೇ ॥22॥
ಈ ರೀತಿಯಲ್ಲಿ ತಟಾಕನಿರ್ಮಾಣದ ಶ್ರೇಷ್ಠವಾದ ಫಲವನ್ನು ಹೇಳಿದ್ದೇನೆ. ಇನ್ನು ಮುಂದೆ ವೃಕ್ಷಗಳನ್ನು ನೆಡುವುದರಿಂದ ಉಂಟಾಗುವ ಫಲಗಳನ್ನು ಹೇಳುವೆನು.
ಸ್ಥಾವರಾಣಾಂ ಚ ಭೂತಾನಾಂ ಜಾತಯಃ ಷಟ್ಪ್ರಕೀರ್ತಿತಾಃ ।
ವೃಕ್ಷಗುಲ್ಮಲತಾವಲ್ಲ್ಯಸ್ತ್ವಕ್ಸಾರಾಸ್ತೃಣಜಾತಯಃ ॥23॥
ಸ್ಥಾವರ ಜಾತಿಗಳು, ವೃಕ್ಷ, ಗುಲ್ಮ, ಲತಾ, ಬಳ್ಳಿ, ತ್ವಕ್ಸಾರ, ತೃಣ ಎಂದು ಆರು ವಿಧ.
ಏತಾ ಜಾತ್ಯಸ್ತು ವೃಕ್ಷಾಣಾಂ ತೇಷಾಂ ರೋಪೇ ಗುಣಾಸ್ತ್ವಮೇ ।
ಕೀರ್ತಿಶ್ಚ ಮಾನುಷೇ ಲೋಕೇ ಪ್ರೇತ್ಯ ಚೈವ ಫಲಂ ಶುಭಮ್ ॥24॥
ಇವು ವೃಕ್ಷಜಾತಿಗಳು. ಇವುಗಳನ್ನು ನೆಡುವುದರಿಂದ ಮನುಷ್ಯಲೋಕದಲ್ಲಿ ಕೀರ್ತಿ, ಮರಣಾನಂತರದಲ್ಲಿ ಶುಭಫಲ. ಈ ಗುಣಗಳು ಉಂಟಾಗುತ್ತವೆ.

ಲಭತೇ ನಾಮ ಲೋಕೇ ಚ ಪಿತೃಭಿಶ್ಚ ಮಹೀಯತೇ |
ದೇವಲೋಕಗತಸ್ಯಾಪಿ ನಾಮ ತಸ್ಯ ನ ನಶ್ಯತಿ ॥25॥
ಲೋಕದಲ್ಲಿ ಅವನ ನಾಮವು ನಾಶವನ್ನು ಹೊಂದುವುದಿಲ್ಲ. ಅವನು ಪಿತೃಗಳಿಂದ ಪೂಜಿಸಲ್ಪಡುತ್ತಾನೆ. ದೇವಲೋಕಕ್ಕೆ ಹೋದರೂ ಅವನ ಕೀರ್ತಿಯು ನಾಶವನ್ನು ಹೊಂದುವುದಿಲ್ಲ.
ಅತೀತಾನಾಗತೇ ಚೋಭೇ ಪಿತೃವಂಶಂ ಚ ಭಾರತ |
ತಾರಯೇದ್ ವೃಕ್ಷರೋಪೀ ಚ ತಸ್ಮಾದ್ ವೃಕ್ಷಾನ್ ಪ್ರರೋಪಯೇತ್ ॥
ಎಲೈ ಭಾರತನೇ, ವೃಕ್ಷಗಳನ್ನು ನೆಡುವವನು ಹಿಂದೆ ಬಂದ ಮತ್ತು ಮುಂದೆ ಬರಲಿರುವ ತನ್ನ ಪಿತೃವಂಶವನ್ನು ದಾಟಿಸುತ್ತಾನೆ. ಆದ್ದರಿಂದ ಮರಗಳನ್ನು ನೆಡಬೇಕು.
ತಸ್ಯ ಪುತ್ರಾ ಭವಂತ್ಯೇತೇ ಪಾದಪಾ ನಾತ್ರ ಸಂಶಯಃ |
ಪರಲೋಕಗತಃ ಸ್ವರ್ಗಂ ಲೋಕಾಂಶ್ಚಾಪ್ನೋತಿ ಸೋಽವ್ಯಯಾನ್ ॥27॥
ಈ ವೃಕ್ಷಗಳು ಅವನ ಪುತ್ರರಾಗುತ್ತವೆ. ಅವು ಅವನ ಪುತ್ರರೇ ಎಂಬುದರಲ್ಲಿ ಸಂಶಯವಿಲ್ಲ. ಅಂತಹವನು ಪರಲೋಕಕ್ಕೆ ಹೋಗಿ ಸ್ವರ್ಗವನ್ನೂ, ಶಾಶ್ವತವಾದ ಲೋಕವನ್ನೂ ಹೊಂದುತ್ತಾನೆ.
ಪುಷ್ಪೈಃ ಸುರಗಣಾನ್ ವೃಕ್ಷಾಃ ಫಲೈಶ್ಚಾಪಿ ತಥಾ ಪಿತೄನ್ |
ಛಾಯಯಾ ಚಾತಿಥೀಂಸ್ತಾತ ಪೂಜಯಂತಿ ಮಹೀರುಹಾಃ ॥28॥
ಎಲೈ ಪ್ರೀತಿಪಾತ್ರನೇ, ವೃಕ್ಷಗಳು ಪುಷ್ಪಗಳಿಂದ ಸುರಗಣಗಳನ್ನೂ, ಫಲಗಳಿಂದ ಪಿತೃಗಳನ್ನೂ, ಛಾಯೆಯಿಂದ ಅತಿಥಿಗಳನ್ನೂ ಪೂಜಿಸುತ್ತವೆ.
ಕಿನ್ನರೋರಗರಕ್ಷಾಂಸಿ ದೇವಗಂಧರ್ವಮಾನವಾಃ |
ತಥಾ ಋಷಿಗಣಾಶ್ಚೈವ ಸಂಶ್ರಯಂತಿ ಮಹೀರುಹಾನ್ ॥29॥
ಕಿನ್ನರೋರಗ-ರಾಕ್ಷಸರು, ದೇವ-ಗಂಧರ್ವ-ಮಾನವರು ಮತ್ತು ಋಷಿಗಣಗಳು ವೃಕ್ಷಗಳನ್ನು ಆಶ್ರಯಿಸುತ್ತಾರೆ.
ಪುಷ್ಪಿತಾಃ ಫಲವಂತಶ್ಚ ತರ್ಪಯಂತೀಹ ಮಾನವಾನ್ |
ವೃಕ್ಷದಂ ಪುತ್ರವದ್ ವೃಕ್ಷಾಸ್ತಾರಯಂತಿ ಪರತ್ರ ಚ ॥30॥
ವೃಕ್ಷಗಳು ಪುಷ್ಪ-ಫಲಗಳನ್ನು ನೀಡಿ ಮಾನವರನ್ನು ತೃಪ್ತಿಪಡಿಸುತ್ತವೆ. ವೃಕ್ಷಗಳು ತಮ್ಮನ್ನು ಬೆಳೆಸಿದವನನ್ನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಪುತ್ರರಂತೆ ಕಷ್ಟದಿಂದ ಪಾರು ಮಾಡುತ್ತವೆ.
ತಸ್ಮಾತ್ ತಡಾಗೇ ವೃಕ್ಷಾ ವೈ ರೋಪ್ಯಾಃ ಶ್ರೇಯೋರ್ಥಿನಾ ಸದಾ |
ಪುತ್ರವತ್ ಪರಿಪಾಲ್ಯಾಶ್ಚ ಪುತ್ರಾಸ್ತೇ ಧರ್ಮತಃ ಸ್ಮೃತಾಃ ॥31॥
ಆದ್ದರಿಂದ ಶ್ರೇಯಸ್ಕಾಮಿಯಾದವನು ತಟಾಕದಲ್ಲಿ ವೃಕ್ಷಗಳನ್ನೂ ನೆಡಬೇಕು. ಅವುಗಳನ್ನು ಪುತ್ರರಂತೆ ಪರಿಪಾಲಿಸಬೇಕು. ಧರ್ಮದ ದೃಷ್ಟಿಯಿಂದ ವೃಕ್ಷಗಳು ಪುತ್ರರೇ ಸರಿ.
ತಡಾಗಕೃದ್ ವೃಕ್ಷರೋಪೀ ಇಷ್ಟಯಜ್ಞಶ್ಚ ಯೋ ದ್ವಿಜಃ |
ಏತೇ ಸ್ವರ್ಗೇ ಮಹೀಯಂತೇ ಯೇ ಚಾನ್ಯೇ ಸತ್ಯವಾದಿನಃ ॥32॥
ತಟಾಕ ನಿರ್ಮಾಣ ಮಾಡಿದ, ವೃಕ್ಷಗಳನ್ನೂ ನೆಟ್ಟ, ಯಜ್ಞಗಳನ್ನು ಮಾಡಿದ ಈ ದ್ವಿಜರು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾರೆ. ಹಾಗೆಯೇ ಸತ್ಯವಾದಿಗಳೂ ಪೂಜಿಸಲ್ಪಡುತ್ತಾರೆ.
ತಸ್ಮಾತ್ ತಡಾಗಂ ಕುರ್ವೀತ ಆರಾಮಾಂಶ್ಚೈವ ರೋಪಯೇತ್ |
ಯಜೇಚ್ಚ ವಿವಿಧೈರ್ಯಜ್ಞೈಃ ಸತ್ಯಂ ಚ ಸತತಂ ವದೇತ್ ॥33॥
ಆದ್ದರಿಂದ ತಟಾಕವನ್ನು ನಿರ್ಮಾಣ ಮಾಡಬೇಕು. ಉದ್ಯಾನಗಳನ್ನು ಬೆಳೆಸಬೇಕು. ವಿವಿಧ ಯಜ್ಞಗಳನ್ನು ಆಚರಿಸಬೇಕು ಮತ್ತು ಸತತವಾಗಿ ಸತ್ಯವನ್ನು ನುಡಿಯಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಆರಾಮತಡಾಗಾದಿನಿರ್ಮಾಣಫಕಥನಂ ನಾಮ ಏಕೋನಪಂಚಾಶದಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ನಲವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತನೆಯ ಅಧ್ಯಾಯ
ವೈಶ್ವದೇವ, ಬಲಿಪ್ರದಾನಾದಿ ಗೃಹಸ್ಥಧರ್ಮ
ಯುಧಿಷ್ಠಿರಃ
ಗಾರ್ಹಸ್ಥ್ಯಂ ಧರ್ಮಮಖಿಲಂ ಪ್ರಬ್ರೂಹಿ ಭರತರ್ಷಭ |
ಋದ್ಧಿಮಾಪ್ನೋತಿ ಕಿಂ ಕೃತ್ವಾ ಮನುಷ್ಯ ಇಹ ಪಾರ್ಥಿವ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ, ಗೃಹಸ್ಥಾಶ್ರಮ ಧರ್ಮವೆಲ್ಲವನ್ನೂ ನನಗೆ ಹೇಳು. ಎಲೈ ಪಾರ್ಥಿವನೇ, ಮನುಷ್ಯನು ಇಲ್ಲಿ ಏನನ್ನು ಮಾಡಿ ಸಮೃದ್ಧಿಯನ್ನು ಪಡೆಯುತ್ತಾನೆ?
ಭೀಷ್ಮಃ
ಅತ್ರ ತೇ ವರ್ತಯಿಷ್ಯಾಮಿ ಪುರಾವೃತ್ತಂ ಜನಾಧಿಪ |
ವಾಸುದೇವಸ್ಯ ಸಂವಾದಂ ಪೃಥಿವ್ಯಾಶ್ಚೈವ ಭಾರತ ॥2॥

ಸಂಸ್ತೂಯ ಪೃಥಿವೀಂ ದೇವೀಂ ವಾಸುದೇವಃ ಪ್ರತಾಪವಾನ್ |
ಪಪ್ರಚ್ಛ ಭರತಶ್ರೇಷ್ಠ ಯದೇತತ್ಪೃಚ್ಛಸೇಽದ್ಯ ಮಾಮ್ ||3||
ಭೀಷ್ಮ ಎಲೈ ಜನಾಧಿಪನೇ, ಭಾರತನೇ, ಈ ವಿಷಯದಲ್ಲಿ ಹಿಂದೆ ವಾಸುದೇವನಿಗೂ ಮತ್ತು ಪೃಥಿವಿಗೂ ನಡೆದ ಸಂವಾದವನ್ನು ನಿನಗೆ ಹೇಳುವೆನು. ಎಲೈ ಭರತಶ್ರೇಷ್ಠನೇ, ಪ್ರತಾಪಶಾಲಿಯಾದ ವಾಸುದೇವನು ಭೂದೇವಿಯನ್ನು ಸ್ತೋತ್ರ ಮಾಡಿ ನೀನು ನನ್ನನ್ನು ಕೇಳಿದ ಪ್ರಶ್ನೆಯನ್ನೇ ಕೇಳಿದನು.
ವಾಸುದೇವಃ
ಗಾರ್ಹಸ್ಥ್ಯಂ ಧರ್ಮಮಾಶ್ರಿತ್ಯ ಮಯಾ ವಾ ಮದ್ವಿಧೇನ ವಾ |
ಕಿಮವಶ್ಯಂ ಧರೇ ಕಾರ್ಯಂ ಕಿಂ ವಾ ಕೃತ್ವಾ ಸುಖೀ ಭವೇತ್ ||4||
ವಾಸುದೇವ ಎಲೌ ಭೂಮಿಯೇ, ನಾನು ಅಥವಾ ನನ್ನಂತಹವನು ಗಾರ್ಹಸ್ಥ್ಯ ಧರ್ಮವನ್ನು ಅವಲಂಬಿಸಿ ಏನನ್ನು ಅವಶ್ಯವಾಗಿ ಮಾಡಬೇಕು? ಏನನ್ನು ಮಾಡಿದರೆ ಸುಖವನ್ನು ಪಡೆಯುತ್ತಾನೆ?
ಪೃಥಿವೀ
ಋಷಯಃ ಪಿತರೋ ದೇವಾ ಮನುಷ್ಯಾಶ್ಚೈವ ಮಾಧವ |
ಇಜ್ಯಾಶ್ಚೈವಾರ್ಚನೀಯಾಶ್ಚ ಯಥಾ ಚೈವಂ ನಿಬೋಧ ಮೇ ||5||
ಪೃಥಿವೀ ಎಲೈ ಮಾಧವನೇ, ಋಷಿಗಳು, ಪಿತೃಗಳು, ದೇವತೆಗಳು ಮತ್ತು ಮನುಷ್ಯರು - ಇವರನ್ನು ಹೇಗೆ ಪೂಜಿಸಬೇಕೆಂಬುದನ್ನು ನನ್ನಿಂದ ಕೇಳು.
ಸದಾ ಯಜ್ಞೇನ ದೇವಾಂಶ್ಚ ಆತಿಥ್ಯೇನ ಚ ಮಾನವಾನ್ |
ಛಂದತಶ್ಚ ಯಥಾನಿತ್ಯಮರ್ಹಾನ್ ಭುಂಜೀತ ನಿತ್ಯಶಃ |
ತೇನ ಹ್ಯಷಿಗಣಾಃ ಪ್ರೀತಾ ಭವಂತಿ ಮಧುಸೂದನ ||6||
ಸದಾ ಯಜ್ಞದಿಂದ ದೇವತೆಗಳನ್ನೂ, ಆತಿಥ್ಯದಿಂದ ಮನುಷ್ಯರನ್ನೂ, ವೇದಾಧ್ಯಯನದಿಂದ ಋಷಿಗಣಗಳನ್ನೂ, ತರ್ಪಣ ಮತ್ತು ಯೋಗ್ಯ ಬ್ರಾಹ್ಮಣ ಭೋಜನಗಳಿಂದ ಪಿತೃಗಳನ್ನೂ ಸಂತೋಷಪಡಿಸಬೇಕು. ಎಲೈ ಮಧುಸೂದನನೇ, ಅದರಿಂದ ಋಷಿಗಣಗಳು ಪ್ರಸನ್ನರಾಗುತ್ತಾರೆ.
ನಿತ್ಯಮಗ್ನಿಂ ಪರಿಚರೇದಭುಕ್ತ್ವಾ ಬಲಿಕರ್ಮ ಚ |
ಕುರ್ಯಾತ್ ತಥೈವ ದೇವಾ ವೈ ಪ್ರೀಯಂತೇ ಮಧುಸೂದನ ||7||
ಎಲೈ ಮಧುಸೂದನನೇ, ನಿತ್ಯವೂ ಏನನ್ನಾದರೂ ತಿನ್ನುವುದಕ್ಕಿಂತ ಮೊದಲೇ ಬಲಿಕರ್ಮವನ್ನು ಮತ್ತು ದೇವತಾ ಕಾರ್ಯವನ್ನು ಮಾಡಬೇಕು. ಅದರಿಂದ ದೇವತೆಗಳು ಪ್ರಸನ್ನರಾಗುತ್ತಾರೆ.
ಕುರ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ವಾ |
ಪಯೋಮೂಲಫಲೈರ್ವಾಪಿ ಪಿತೃಣಾಂ ಪ್ರೀತಿಮಾಹರನ್ ||8||
ಪಿತೃಗಳಿಗೆ ಸಂತೋಷವನ್ನುಂಟು ಮಾಡುವ ಉದ್ದೇಶದಿಂದ ಪ್ರತಿನಿತ್ಯವೂ ಅನ್ನದಿಂದಾಗಲೀ, ಉದಕದಿಂದಾಗಲೀ, ಕ್ಷೀರ-ಮೂಲ ಫಲಗಳಿಂದಾಗಲೀ ಶ್ರಾದ್ಧವನ್ನು ಮಾಡಬೇಕು.
ಸಿದ್ಧಾನ್ನಾದ್ ವೈಶ್ವದೇವಂ ವೈ ಕುರ್ಯಾದಗ್ನೌ ಯಥಾವಿಧಿ |
ಅಗ್ನೀಷೋಮಂ ವೈಶ್ವದೇವಂ ಧಾನ್ವಂತರ್ಯಮನಂತರಮ್ ||9||
ಸಿದ್ಧವಾದ ಅನ್ನದಿಂದ ಅಗ್ನಿಯಲ್ಲಿ ಶಾಸ್ತ್ರವಿಧಿಗೆ ಅನುಸಾರವಾಗಿ ವೈಶ್ವದೇವವನ್ನು ಮಾಡಬೇಕು. ಅದರಲ್ಲಿ ಅಗ್ನೀಷೋಮರಿಗೂ, ವಿಶ್ವೇದೇವತೆಗಳಿಗೂ ಅನಂತರ ಧನ್ವಂತರಿಗೂ ಆಹುತಿಯನ್ನು ಕೊಡಬೇಕು.
ಪ್ರಜಾನಾಂ ಪತಯೇ ಚೈವ ಪೃಥಗ್ ಹೋಮೋ ವಿಧೀಯತೇ |
ತಥೈವ ಚಾನುಪೂರ್ವ್ಯೇಣ ಬಲಿಕರ್ಮ ಪ್ರಯೋಜಯೇತ್ ||10||
ಪ್ರಜಾಪತಿಗೂ ಸಹ ಪ್ರತ್ಯೇಕವಾದ ಹವಿಸ್ಸನ್ನು ಕೊಡಬೇಕು. ವೈಶ್ವದೇವಾಹುತಿಗಳನ್ನು ಕೊಟ್ಟ ಕ್ರಮದಿಂದಲೇ ಬಲಿಕರ್ಮವನ್ನೂ ಮಾಡಬೇಕು.
ದಕ್ಷಿಣಾಯಾಂ ಯಮಾಯೇಹ ಪ್ರತೀಚ್ಯಾಂ ವರುಣಾಯ ಚ |
ಸೋಮಾಯ ಚಾಪ್ಯುದೀಚ್ಯಾಂ ವೈ ವಾಸ್ತುಮಧ್ಯೇ ದ್ವಿಜಾತಯೇ ||11||
ದಕ್ಷಿಣ ದಿಕ್ಕಿನಲ್ಲಿ ಯಮನಿಗೂ, ಪಶ್ಚಿಮ ದಿಕ್ಕಿನಲ್ಲಿ ವರುಣನಿಗೂ, ಉತ್ತರ ದಿಕ್ಕಿನಲ್ಲಿ ಚಂದ್ರನಿಗೂ ಮತ್ತು ಗೃಹಮಧ್ಯದಲ್ಲಿ ಬ್ರಾಹ್ಮಣರಿಗೂ (ಮನುಷ್ಯರಿಗೂ) ಬಲಿಯನ್ನು ಕೊಡಬೇಕು.
ಧನ್ವಂತರೇಃ ಪ್ರಾಗುದೀಚ್ಯಾಂ ಪ್ರಾಚ್ಯಾಂ ಶಕ್ರಾಯ ಮಾಧವ |
ಮನೋರ್ವೈ ಇತಿ ಚ ಪ್ರಾಹುರ್ಬಲಿಂ ದ್ವಾರೇ ಗೃಹಸ್ಯ ವೈ |
ಮರುದ್ಭ್ಯೋ ದೇವತಾಭ್ಯಶ್ಚ ಬಲಿಮಂತರ್ಗೃಹೇ ಹರೇತ್ ||12||
ಎಲೈ ಮಾಧವನೇ, ಧನ್ವಂತರಿಗೆ ಈಶಾನ್ಯದಿಕ್ಕಿನಲ್ಲಿಯೂ, ಇಂದ್ರನಿಗೆ ಪೂರ್ವ ದಿಕ್ಕಿನಲ್ಲಿಯೂ, ಗೃಹದ್ವಾರದಲ್ಲಿ ಮನುವಿಗೂ ಮತ್ತು ಗೃಹದ ಮಧ್ಯಭಾಗದಲ್ಲಿ ಮರುತ್ತುಗಳಿಗೂ ಮತ್ತು ಉಳಿದ ದೇವತೆಗಳಿಗೂ ಬಲಿಪ್ರಧಾನವನ್ನು ಮಾಡಬೇಕು.
ತಥೈವ ವಿಶ್ವೇದೇವೇಭ್ಯೋ ಬಲಿಮಾಕಾಶತೋ ಹರೇತ್ |
ನಿಶಾಚರೇಭ್ಯೋ ಭೂತೇಭ್ಯೋ ಬಲಿಂ ನಕ್ತಂ ತಥಾ ಹರೇತ್ ||13||
ಹಾಗೆ ವಿಶ್ವೇದೇವತೆಗಳಿಗೆ ಬಲಿಯನ್ನು ಆಕಾಶದ ಕಡೆಗೆ ತೋರಿಸಿ ಕೊಡಬೇಕು. ನಿಶಾಚರರಿಗೂ ಮತ್ತು ಭೂತಗಳಿಗೂ ರಾತ್ರಿಯ ಕಾಲದಲ್ಲಿ ಬಲಿಯನ್ನು ಕೊಡಬೇಕು.

ಏವಂ ಕೃತ್ವಾ ಬಲಿಂ ಸಮ್ಯಗ್ ದದ್ಯಾದ್ ಭಿಕ್ಷಾಂ ದ್ವಿಜಾತಯೇ |
ಅಲಭೇ ಬ್ರಾಹ್ಮಣಸ್ಯಾಗ್ರ್ಯಾವಗ್ರಮುತ್ಕ್ಷಿಪ್ಯ ನಿಕ್ಷಿಪೇತ್ ||14||
ಹೀಗೆ ಬಲಿಹರಣವನ್ನು ಸರಿಯಾಗಿ ಮಾಡಿ ಅನಂತರ ಬ್ರಾಹ್ಮಣ ಸಂನ್ಯಾಸಿಗೆ ಭಿಕ್ಷೆಯನ್ನು ನೀಡಬೇಕು. ಅಂತಹ ಬ್ರಾಹ್ಮಣನು ದೊರೆಯದಿದ್ದರೆ ಅನ್ನದಿಂದ ಅಗ್ರಭಾಗವನ್ನು ತೆಗೆದು ಅದನ್ನು ಅಗ್ನಿಯಲ್ಲಿ ಹಾಕಬೇಕು.
ಯದಾ ಶ್ರಾದ್ಧಂ ಪಿತೃಭ್ಯಶ್ಚ ದಾತುಮಿಚ್ಛೇತ ಮಾನವಃ |
ತದಾ ಪಶ್ಚಾತ್ ಪ್ರಕುರ್ವೀತ ನಿವೃತ್ತೇ ಶ್ರಾದ್ಧಕರ್ಮಣಿ ||15||
ಮನುಷ್ಯನು ಪಿತೃಗಳಿಗೆ ಶ್ರಾದ್ಧವನ್ನು ಕೊಡಲು ಬಯಸಿದರೆ ಆಗ ಶ್ರಾದ್ಧ ಕರ್ಮವು ಮುಗಿದ ಮೇಲೆ ಬಲಿಹರಣವನ್ನು ಮಾಡಬೇಕು.
ಪಿತ್ರೂನ್ ಸಂತರ್ಪಯಿತ್ವಾ ತು ಬಲಿಂ ಕುರ್ಯಾದ್ ವಿಧಾನತಃ |
ವೈಶ್ವದೇವಂ ತತಃ ಕುರ್ಯಾತ್ ಪಶ್ಚಾದ್ ಬ್ರಾಹ್ಮಣಭೋಜನಮ್ ||16||
ವೈಶ್ವದೇವವನ್ನು ಮಾಡಿ ಅನಂತರ ಪಿತೃಗಳನ್ನು ತೃಪ್ತಿ ಪಡಿಸಿ ಅನಂತರ ವಿಧಿಗೆ ಅನುಸಾರವಾಗಿ ಬಲಿಹರಣವನ್ನು ಮಾಡಿ, ಅನಂತರ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು.
ತತೋಽನ್ನೇನಾವಶೇಷೇಣ ಭೋಜಯೇದತಿಥೀನಪಿ |
ಅರ್ಚಾಪೂರ್ವಂ ಮಹಾರಾಜ ತತಃ ಪ್ರೀಣಾತಿ ಮಾನುಷಾನ್ ||17||
ಎಲೈ ಮಹಾರಾಜನೇ, ಅತಿಥಿಗಳನ್ನು ಪೂಜಿಸಿ ಉಳಿದ ಅನ್ನಶೇಷದಿಂದ ಅವರಿಗೆ ಭೋಜನವನ್ನು ಮಾಡಿಸಬೇಕು. ಅದರಿಂದ ಮನುಷ್ಯರು ಪ್ರಸನ್ನರಾಗುತ್ತಾರೆ.
ಅನಿತ್ಯಂ ಹಿ ಸ್ಥಿತೋ ಯಸ್ಮಾತ್ ತಸ್ಮಾದತಿಥಿರುಚ್ಯತೇ |
ಆಚಾರ್ಯಸ್ಯ ಪಿತುಶ್ಚೈವ ಸಖ್ಯುರಾಪ್ತಸ್ಯ ಚಾತಿಥೇಃ |
ಇದಮಸ್ತಿ ಗೃಹೇ ಮಹ್ಯಮಿತಿ ನಿತ್ಯಂ ನಿವೇದಯೇತ್ ||19||
ಅನಿತ್ಯವಾದ ಸ್ಥಿತಿ ಇರುವ ಕಾರಣದಿಂದ ಅಂತಹವನನ್ನು ಅತಿಥಿ ಎಂದು ಕರೆಯುತ್ತಾರೆ. ಗುರುಗಳಿಗೂ, ಪಿತೃಗಳಿಗೂ, ಸ್ನೇಹಿತನಿಗೂ, ಆಪ್ತನಿಗೂ ಮತ್ತು ಅತಿಥಿಗೂ ನನ್ನ ಮನೆಯಲ್ಲಿ ಇಷ್ಟು ದ್ರವ್ಯವಿದೆ ಎಂದು ನಿತ್ಯವೂ ನಿವೇದಿಸಬೇಕು.
ತೇ ಯದ್ವದೇಯುಸ್ತತ್ಕುರ್ಯಾದಿತಿ ಧರ್ಮೋ ವಿಧೀಯತೇ |
ಗೃಹಸ್ಥಃ ಪುರುಷಃ ಕೃಷ್ಣ ಶಿಷ್ಟಾಶೀ ಚ ಸದಾ ಭವೇತ್ ||20||
ಅವರು ಏನನ್ನು ಮಾಡಬೇಕೆಂದು ಹೇಳುತ್ತಾರೋ ಅದನ್ನು ಮಾಡುವುದು ಧರ್ಮದಲ್ಲಿ ಹೇಳಲ್ಪಡುತ್ತದೆ. ಎಲೈ ಕೃಷ್ಣನೇ, ಗೃಹಸ್ಥನಾದ ಪುರುಷನು ಯಾವಾಗಲೂ ಇಂತಹ ಅವಶಿಷ್ಟಾನ್ನವನ್ನೇ ಭುಂಜಿಸಬೇಕು.
ರಾಜರ್ತ್ವಿಜಂ ಸ್ನಾತಕಂ ಚ ಗುರುಂ ಶ್ವಶುರಮೇವ ಚ |
ಅರ್ಚಯೇನ್ಮಧುಪರ್ಕೇಣ ಪರಿಸಂವತ್ಸರೋಷಿತಾನ್ ||21||
ರಾಜ, ಋತ್ವಿಜರು, ಸ್ನಾತಕರು, ಗುರುಗಳು, ಮಾವ ಇವರೆಲ್ಲರೂ ಒಂದು ಸಂವತ್ಸರದಷ್ಟು ಕಾಲ ದೂರದಲ್ಲಿದ್ದರೆ (ಬಂದಿಲ್ಲದಿದ್ದರೆ) ಅವರಿಗೆ ಮಧುಪರ್ಕವನ್ನು ಕೊಟ್ಟು ಪೂಜಿಸಬೇಕು.
ಶ್ವಭ್ಯಶ್ಚ ಶ್ವಪಚೇಭ್ಯಶ್ಚ ವಯೋಭ್ಯಶ್ಚಾವಪೇದ್ ಭುವಿ |
ವೈಶ್ವದೇವಂ ಹಿ ನಾಮೈತತ್ ಸಾಯಂಪ್ರಾತರ್ವಿಧೀಯತೇ ||22||
ನಾಯಿಗಳಿಗೂ, ಶ್ವಪಚರಿಗೂ, ಪಕ್ಷಿಗಳಿಗೂ ಭೂಮಿಯಲ್ಲಿ ಬಲಿಯನ್ನು ಹಾಕಬೇಕು. ಇದಕ್ಕೆ ವೈಶ್ವದೇವವೆಂದು ಹೆಸರು. ಇದು ಸಾಯಂಕಾಲದಲ್ಲಿಯೂ ಮತ್ತು ಪ್ರಾತಃ ಕಾಲದಲ್ಲಿಯೂ ವಿಹಿತವಾಗಿದೆ.
ಏತಾಂಸ್ತು ಧರ್ಮಾನ್ ಗಾರ್ಹಸ್ಥ್ಯಾನ್ಯಃ ಕುರ್ಯಾದನಸೂಯಕಃ |
ಸ ಇಹರ್ದ್ಧಿಂ ಪರಾಂ ಪ್ರಾಪ್ಯ ಪ್ರೇತ್ಯ ನಾಕೇ ಮಹೀಯತೇ ||23||
ಯಾವ ಗೃಹಸ್ಥನು ಅಸೂಯಾ ರಹಿತನಾಗಿ ಈ ರೀತಿ ಗಾರ್ಹಸ್ಥ್ಯಧರ್ಮವನ್ನು ಅನುಷ್ಠಾನ ಮಾಡುತ್ತಾನೆಯೋ ಅವನು ಈ ಲೋಕದಲ್ಲಿ ಶ್ರೇಷ್ಠವಾದ ಸಮೃದ್ಧಿಯನ್ನು ಹೊಂದಿ ಮರಣಾನಂತರದಲ್ಲಿ ಸ್ವರ್ಗವನ್ನು ಪಡೆಯುತ್ತಾನೆ.
ಭೀಷ್ಮಃ
ಇತಿ ಭೂಮೇರ್ವಚಃ ಶ್ರುತ್ವಾ ವಾಸುದೇವಃ ಪ್ರತಾಪವಾನ್ |
ತಥಾ ಚಕಾರ ಸತತಂ ತ್ವಮಪ್ಯೇವಂ ಸಮಾಚರ ||24||
ಭೀಷ್ಮ ಪ್ರತಾಪಶಾಲಿಯಾದ ವಾಸುದೇವನು ಭೂಮಿಯ ಈ ಮಾತುಗಳನ್ನು ಕೇಳಿ ಸತತವಾಗಿ ಹಾಗೆಯೇ ಮಾಡಿದನು. ನೀನೂ ಸಹ ಈ ಧರ್ಮಗಳನ್ನು ಆಚರಿಸು.
ಏವಂ ಗೃಹಸ್ಥಧರ್ಮಂ ತ್ವಂ ಚೇತಯಾನೋ ನರಾಧಿಪ |
ಇಹಲೋಕೇ ಯಶಃ ಪ್ರಾಪ್ಯ ಪ್ರೇತ್ಯ ಸ್ವರ್ಗಮವಾಪ್ಸ್ಯಸಿ ||25||
ಎಲೈ ನರಾಧಿಪನೇ, ಹೀಗೆ ಗ್ರಹಸ್ಥ ಧರ್ಮವನ್ನು ತಿಳಿದು, ಆಚರಿಸಿ ನೀನು ಈ ಲೋಕದಲ್ಲಿ ಕೀರ್ತಿಯನ್ನೂ ಮತ್ತು ಮರಣಾನಂತರದಲ್ಲಿ ಸ್ವರ್ಗವನ್ನೂ ಹೊಂದುವಿ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಗಾರ್ಹಸ್ಥ್ಯಧರ್ಮನಿರೂಪಣಂ ನಾಮ
ಪಂಚಾಶದಧಿಕಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತನೆಯ
ಅಧ್ಯಾಯ ಮುಗಿಯಿತು.

* * * * *

नूರ ಐವತ್ತೊಂದನೆಯ ಅಧ್ಯಾಯ

ದೀಪಾದಿದಾನವಿಧಿ

ಯುಧಿಷ್ಠಿರಃ

ಆಲೋಕದಾನಂ ನಾಮ್ಯೈತತ್ ಕೀದೃಶಂ ಭರತರ್ಷಭ |
ಕಥಮೇತತ್ ಸಮುತ್ಪನ್ನಂ ಫಲಂ ಚಾತ್ರ ಬ್ರವೀಹಿ ಮೇ ॥1॥

ಯುಧಿಷ್ಠಿರ ಎಲೈ ಭರತರ್ಷಭನೇ, ಆಲೋಕದಾನವೆಂದರೆ ಎಂತಹದು? ಇದು ಹೇಗೆ ಪ್ರವೃತ್ತವಾಯಿತು? ಇದರ ಫಲವನ್ನು ನನಗೆ ಹೇಳು.

ಭೀಷ್ಮಃ

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮನೋಃ ಪ್ರಜಾಪತೇರ್ವಾದಂ ಸುವರ್ಣಸ್ಯ ಚ ಭಾರತ ॥2॥

ಭೀಷ್ಮ ಈ ವಿಷಯದಲ್ಲಿಯೂ ಸಹ ಎಲೈ ಭಾರತನೇ, ಪ್ರಜಾಪತಿಯಾದ ಸ್ವಾಯಂಭುವ ಮನುವಿಗೂ ಮತ್ತು ಸುವರ್ಣನೆಂಬ ತಪಸ್ವಿಗೂ ನಡೆದ ಸಂವಾದ ರೂಪವಾದ ಇತಿಹಾಸವನ್ನು ಹೇಳುತ್ತಾರೆ.

ತಪಸ್ವೀ ಕಶ್ಚಿದಭವತ್ ಸುವರ್ಣೋ ನಾಮ ನಾಮತಃ |
ವರ್ಣತೋ ಹೇಮವರ್ಣಃ ಸ ಸುವರ್ಣ ಇತಿ ಪಪ್ರಥೇ ॥3॥

ಸುವರ್ಣನೆಂಬ ತಪಸ್ವಿ ಇದ್ದನು. ಅವನು ಚಿನ್ನದ ಬಣ್ಣವನ್ನು ಹೊಂದಿದ್ದುದರಿಂದ ಸುವರ್ಣನೆಂದೇ ಪ್ರಸಿದ್ಧನಾದನು.

ಕುಲಶೀಲಗುಣೋಪೇತಃ ಸ್ವಾಧ್ಯಾಯೇ ಚ ಪರಂ ಗತಃ |
ಬಹೂನ್ ಸ್ವವಂಶಪ್ರಭವಾನ್ ಸಮತೀತಃ ಸ್ವಕೈರ್ಗುಣೈಃ ॥4॥

ಕುಲಶೀಲಗುಣಗಳಿಂದ ಕೂಡಿದ ಅವನು ಸ್ವಾಧ್ಯಾಯದಲ್ಲಿ ಪಾರಂಗತನಾಗಿ ತನ್ನ ಗುಣಗಳಿಂದ ತನ್ನ ವಂಶದ ಅನೇಕರನ್ನು ಮೀರಿದನು.

ಸ ಕದಾಚಿನ್ಮನುಂ ವಿಪ್ರೋ ದದರ್ಶೋಪಸಸರ್ಪ ಚ |
ಕುಶಲಪ್ರಶ್ನಮನ್ಯೋನ್ಯಂ ತೌ ಚ ತತ್ರ ಪ್ರಚಕ್ರತುಃ ॥5॥

ಅವನು ಒಮ್ಮೆ ಮನುವನ್ನು ನೋಡಿ ಅವನ ಸಮೀಪಕ್ಕೆ ಹೋದನು. ಅವರಿಬ್ಬರೂ ಪರಸ್ಪರವಾಗಿ ಕುಶಲಪ್ರಶ್ನೆಯನ್ನು ಮಾಡಿದರು.

ತತಸ್ತೌ ಸಿದ್ಧಸಂಕಲ್ಪೌ ಮೇರೌ ಕಾಂಚನಪರ್ವತೇ |
ರಮಣೀಯೇ ಶಿಲಾಪೃಷ್ಠೇ ಸಹಿತೌ ಸನ್ನ್ಯಷೀದತಾಮ್ ॥6॥

ಅನಂತರ ಸಂಕಲ್ಪಸಿದ್ಧಿಯುಳ್ಳ ಅವರಿಬ್ಬರೂ ಸುವರ್ಣಮಯ ಪರ್ವತವಾದ ಮೇರುವಿನಲ್ಲಿ ರಮಣೀಯವಾದ ಒಂದು ಶಿಲಾತಳದ ಮೇಲೆ ಜೊತೆಯಲ್ಲಿ ಕುಳಿತುಕೊಂಡರು.

ತತ್ರ ತೌ ಕಥಯಾಮಾಸ್ತಾಂ ಕಥಾ ನಾನಾವಿಧಾಶ್ರಯಾಃ |
ಬ್ರಹ್ಮರ್ಷಿದೇವದೈತ್ಯಾನಾಂ ಪುರಾಣಾನಾಂ ಮಹಾತ್ಮನಾಮ್ ॥7॥

ಅಲ್ಲಿ ಅವರು ಪ್ರಾಚೀನರಾದ, ಮಹಾತ್ಮರಾದ, ಬ್ರಹ್ಮರ್ಷಿದೇವತೆಗಳಿಗೆ ಮತ್ತು ದೈತ್ಯರಿಗೆ ಸಂಬಂಧಿಸಿದ ನಾನಾ ವಿಧವಾದ ಕಥೆಗಳನ್ನು ಹೇಳಿದರು.

ಸುವರ್ಣಸ್ತ್ವಬ್ರವೀದ್ ವಾಕ್ಯಂ ಮನುಂ ಸ್ವಾಯಂಭುವಂ ಪ್ರಭುಮ್ |
ಹಿತಾರ್ಥಂ ಸರ್ವಭೂತಾನಾಂ ಪ್ರಶ್ನಂ ಮೇ ವಕ್ತುಮರ್ಹಸಿ ॥8॥

ಆಗ ಸುವರ್ಣನು ಪ್ರಭುವಾದ ಸ್ವಾಯಂಭುವ ಮನುವನ್ನು ಕುರಿತು ಸರ್ವಭೂತಗಳ ಹಿತಕ್ಕಾಗಿ ನನ್ನ ಪ್ರಶ್ನೆಗೆ ಉತ್ತರವನ್ನು ಕೊಡಬೇಕು ಎಂದು ಹೇಳಿದನು.

ಸುಮನೋಭಿರ್ಯದಿಜ್ಯಂತೇ ದೈವತಾನಿ ಪ್ರಜೇಶ್ವರ |
ಕಿಮೇತತ್ ಕಥಮುತ್ಪನ್ನಂ ಫಲಯೋಗಂ ಚ ಶಂಸ ಮೇ ॥9॥

ಎಲೈ ಪ್ರಜಾಪತಿಯೇ, ದೇವತೆಗಳು ಪುಷ್ಪಗಳಿಂದ ಪೂಜಿಸಲ್ಪಡುತ್ತಾರಷ್ಟೆ? ಇದು ಹೇಗೆ ಉತ್ಪನ್ನವಾಯಿತು ಮತ್ತು ಇದರ ಫಲವೇನು ಎಂಬುದನ್ನು ನನಗೆ ಹೇಳು (ಎಂದು ಕೇಳಿದನು).

ಮನುಃ

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶುಕ್ರಸ್ಯ ಚ ಬಲೇಶ್ಚೈವ ಸಂವಾದಂ ವೈ ಸಮಾಗಮೇ ॥10॥

ಮನು ಈ ವಿಷಯದಲ್ಲಿಯೂ ಸಹ ಶುಕ್ರ ಮತ್ತು ಬಲಿ ಇವರು ಸಮಾಗಮವನ್ನು ಹೊಂದಿದಾಗ ನಡೆದ ಸಂವಾದ ರೂಪವಾದ ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ.

ಬಲೇರ್ವೈರೋಚನಸ್ಯೇಹ ತ್ರೈಲೋಕ್ಯಮನುಶಾಸತಃ |
ಸಮೀಪಮಾಜಗಾಮಾಶು ಶುಕ್ರೋ ಭೃಗುಕುಲೋದ್ವಹಃ ॥11॥

ಭೃಗುಕುಲೋದ್ವಹರಾದ ಶುಕ್ರಾಚಾರ್ಯರು ಮೂರುಲೋಕಗಳನ್ನೂ ಆಳುತ್ತಿದ್ದಂತಹ ವಿರೋಚನ ಪುತ್ರನಾದ ಬಲಿಯ ಬಳಿಗೆ ಬಂದರು.

ತಮರ್ಘ್ಯಾದಿಭಿರಭ್ಯರ್ಚ್ಯ ಭಾರ್ಗವಂ ಸೋಽಸುರಾಧಿಪಃ |
ನಿಷಸಾದಾಸನೇ ಪಶ್ಚಾದ್ ವಿಧಿವದ್ ಭೂರಿದಕ್ಷಿಣಃ ॥12॥

ಕಥೇಯಮಭವತ್ ತತ್ರ ಯಾ ತ್ವಯಾ ಪರಿಕೀರ್ತಿತಾ |
ಸುಮನೋಧೂಪದೀಪಾನಾಂ ಸಂಪ್ರದಾನೇ ಫಲಂ ಪ್ರತಿ ||13||
ಅಸುರ ಶ್ರೇಷ್ಠನಾದ ಬಲಿಯು ಭಾರ್ಗವರಾದ ಶುಕ್ರಾಚಾರ್ಯರನ್ನು ಅರ್ಘ್ಯಾದಿಗಳಿಂದ ಪೂಜಿಸಿ ವಿಧಿಗೆ ಅನುಸಾರವಾಗಿ ಬಹಳ ದಕ್ಷಿಣೆಯನ್ನು ಕೊಟ್ಟು ಆಸನದಲ್ಲಿ ಕುಳಿತುಕೊಂಡನು. ಆಗ ಅಲ್ಲಿ ನೀನು ಕೇಳಿದ ಪುಷ್ಪ-ಧೂಪ-ದೀಪಗಳ ದಾನ ಮತ್ತು ಫಲದ ವಿಷಯದಲ್ಲಿ ಕಥೆಯು ನಡೆಯಿತು.
ತತಃ ಪಪ್ರಚ್ಛ ದೈತ್ಯೇಂದ್ರಃ ಕವೀಂದ್ರಂ ಪ್ರಶ್ನಮುತ್ತಮಮ್ |
ಸುಮನೋಧೂಪದೀಪಾನಾಂ ಕಿಂ ಫಲಂ ಬ್ರಹ್ಮವಿತ್ತಮ |
ಪ್ರದಾನಸ್ಯ ದ್ವಿಜಶ್ರೇಷ್ಠ ತದ್ಭವಾನ್ ವಕ್ತುಮರ್ಹತಿ ||14||
ಆಗ ದೈತ್ಯೇಂದ್ರನಾದ ಬಲಿಯು ಕವೀಂದ್ರರಾದ ಶುಕ್ರರನ್ನು ಕುರಿತು- `ಎಲ್ಯೆ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೇ, ಎಲ್ಯೆ ದ್ವಿಜಶ್ರೇಷ್ಠರೇ, ಪುಷ್ಪ-ಧೂಪ-ದೀಪಗಳ ದಾನದಿಂದ ಏನು ಫಲವೆಂದು ನೀವು ಹೇಳಬೇಕು' ಶ್ರೇಷ್ಠವಾದ ಪ್ರಶ್ನೆಯನ್ನು ಎಂದು ಕೇಳಿದನು.
ಶುಕ್ರಃ
ತಪಃ ಪೂರ್ವಂ ಸಮುತ್ಪನ್ನಂ ಧರ್ಮಸ್ತಸ್ಮಾದನಂತರಮ್ |
ಏತಸ್ಮಿನ್ನಂತರೇ ಚೈವ ವೀರುಧೋಷಧ್ಯ ಏವ ಚ ||15||
ಸೋಮಸ್ಯಾತ್ಮಾ ಚ ಬಹುಧಾ ಸಂಭೂತಃ ಪೃಥಿವೀತಳೇ |
ಅಮೃತಂ ಚ ವಿಷಂ ಚೈವ ಯಾಶ್ಚಾನ್ಯಾಸ್ತುಲ್ಯಜಾತಯಃ ||16||
ಶುಕ್ರ ತಪಸ್ಸು ಮೊದಲು ಜನಿಸಿತು. ಅನಂತರ ಧರ್ಮವು ಜನಿಸಿತು. ಇವೆರಡರ ಮಧ್ಯದಲ್ಲಿ ಚಂದ್ರನಿಗೆ ಶರೀರದಂತಿರುವ ಓಷಧಿಗಳು ಮತ್ತು ಬಳ್ಳಿಗಳು ಭೂಮಿಯಲ್ಲಿ ಬಹಳವಾಗಿ ಜನಿಸಿದವು. ಅಮೃತ, ವಿಷ ಮತ್ತು ಇವುಗಳ ಜಾತಿಗೆ ಸಮಾನವಾದ ಜಾತಿಯ ಅನೇಕ ವಸ್ತುಗಳು ಜನಿಸಿದವು.
ಅಮೃತಂ ಮನಸಃ ಪ್ರೀತಿಂ ಸದ್ಯಃ ಪುಷ್ಟಿಂ ದದಾತಿ ಚ |
ಮನೋ ಗ್ಲಾಪಯತೇ ತೀವ್ರಂ ವಿಷಂ ಗಂಧೇನ ಸರ್ವಶಃ ||17||
ಅಮೃತವು ಮನಸ್ಸಿಗೆ ಸಂತೋಷವನ್ನು ಮತ್ತು ತಕ್ಷಣ ಪುಷ್ಟಿಯನ್ನೂ ಕೊಡುತ್ತದೆ. ವಿಷವು ಎಲ್ಲ ಕಡೆ ಹರಡಿ ತನ್ನ ಗಂಧದಿಂದಲೇ ಮನಸ್ಸಿಗೆ ತೀವ್ರವಾಗಿ ಸಂತಾಪವನ್ನು ಉಂಟುಮಾಡುತ್ತದೆ.
ಅಮೃತಂ ಮಂಗಳಂ ವಿದ್ಧಿ ಮಹದ್ ವಿಷಮಮಂಗಲಮ್ |
ಓಷಧ್ಯೋ ಹ್ಯಮೃತಂ ಸರ್ವಂ ವಿಷಂ ತೇಜೋಽಗ್ನಿಸಂಭವಮ್ ||18||
ಅಮೃತವನ್ನು ದೊಡ್ಡ ಮಂಗಳವೆಂದು ತಿಳಿ. ವಿಷವು ಅಮಂಗಳವಾದುದು. ಎಲ್ಲ ಓಷಧಿಗಳೂ ಅಮೃತ. ಅಗ್ನಿಯಿಂದ ಉಂಟಾದ ತೇಜಸ್ಸು ವಿಷರೂಪವಾದುದು.
ಮನೋ ಹ್ಲಾದಯತೇ ಯಸ್ಮಾಚ್ಛ್ರಿಯಂ ಚಾಪಿ ದಧಾತಿ ಹ |
ತಸ್ಮಾತ್ ಸುಮನಸಃ ಪ್ರೋಕ್ತಾ ನರೈಃ ಸುಕೃತಕರ್ಮಭಿಃ ||19||
ಪುಷ್ಪಗಳು ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತವೆ ಮತ್ತು ಸಂಪತ್ತನ್ನುಂಟು ಮಾಡುತ್ತವೆ. ಆದ್ದರಿಂದ ಶುಭಕರ್ಮವನ್ನು ಮಾಡುವ ಮನುಷ್ಯರು ಅವುಗಳನ್ನು ಸುಮನಸ್ ಎಂದು ಕರೆಯುತ್ತಾರೆ.
ದೇವತಾಭ್ಯಃ ಸುಮನಸೋ ಯೋ ದದಾತಿ ನರಃ ಶುಚಿಃ |
ದೇವಾಃ ಸುಮನಸಃ ತಸ್ಮೈ ತಸ್ಮಾತ್ ಸಮುನಸಃ ಸ್ಮೃತಾಃ ||20||
ಯಾವ ಮನುಷ್ಯನು ಶುಚಿಯಾಗಿ ದೇವತೆಗಳಿಗೆ ಪುಷ್ಪಗಳನ್ನು ಅರ್ಪಿಸುತ್ತಾನೋ ಅವನ ವಿಷಯದಲ್ಲಿ ದೇವತೆಗಳು ಒಳ್ಳೆಯ ಮನಸ್ಸನ್ನು (ಸುಮನಸ್) ಹೊಂದುತ್ತಾರೆ. ಆದ್ದರಿಂದಲೂ ಪುಷ್ಪಗಳಿಗೆ ಸುಮನಸ್ ಎಂದು ಕರೆಯುತ್ತಾರೆ.
ಯಂ ಯಮುದ್ದಿಶ್ಯ ದೀಯೇರನ್ ದೇವಂ ಸುಮನಸಃ ಪ್ರಭೋ |
ಮಂಗಳಾರ್ಥಂ ಸ ತೇನಾಸ್ಯ ಪ್ರೀತೋ ಭವತಿ ದೈತ್ಯಪ ||21||
ಎಲ್ಯೆ ದೈತ್ಯರಾಜನೇ, ಪ್ರಭುವೇ, ಮಾಂಗಲ್ಯಕ್ಕಾಗಿ ಯಾವ ಯಾವ ದೇವತೆಗಳನ್ನು ಉದ್ದೇಶಿಸಿ ಪುಷ್ಪಗಳನ್ನು ಅರ್ಪಿಸುತ್ತಾರೆಯೋ ಅದರಿಂದ ಆ ದೇವತೆಯು ಪ್ರಸನ್ನನಾಗುತ್ತಾನೆ.
ಜ್ಞೇಯಾಸ್ತೂಗ್ರಾಶ್ಚ ಸೌಮ್ಯಾಶ್ಚ ತೇಜಸ್ವಿನ್ಯಶ್ಚ ತಾಃ ಪೃಥಕ್ |
ಓಷಧ್ಯೋ ಬಹುವೀರ್ಯಾಶ್ಚ ಬಹುರೂಪಾಸ್ತಥೈವ ಚ ||22||
ಓಷಧಿಗಳು (ವೃಕ್ಷ-ಲತೆಗಳು) ಕೆಲವು ಉಗ್ರವಾದವುಗಳು, ಕೆಲವು ಸೌಮ್ಯವಾದವುಗಳು ಮತ್ತು ಕೆಲವು ತೀಕ್ಷ್ಣವಾದವುಗಳು. ಅವುಗಳಿಗೆ ಬಹಳ ಸಾಮರ್ಥ್ಯವೂ ಮತ್ತು ಬಹುರೂಪವೂ ಇರುತ್ತವೆ. ಅವುಗಳನ್ನು ಬೇರೆ ಬೇರೆಯಾಗಿ ತಿಳಿಯಬೇಕು.
ಯಜ್ಞಿಯಾನಾಂ ಚ ವೃಕ್ಷಾಣಾಮಯಜ್ಞಿಯಾನ್ ನಿಬೋಧ ಮೇ |
ಆಸುರಾಣಿ ಚ ಮಾಲ್ಯಾನಿ ದೈವತೇಭ್ಯೋ ಹಿತಾನಿ ಚ ||23||
ಯಜ್ಞೋಪಯೋಗಿಯಾದ ವೃಕ್ಷಗಳನ್ನೂ, ಯಜ್ಞೋಪಯೋಗವಿಲ್ಲದ ವೃಕ್ಷಗಳನ್ನೂ ನನ್ನಿಂದ ತಿಳಿ. ಹಾಗೆಯೇ ದೇವತೆಗಳಿಗೆ ಪ್ರಿಯವಾದ ಮಾಲ್ಯಗಳನ್ನೂ, ಅಸುರರಿಗೆ ಪ್ರಿಯವಾದ ಮಾಲ್ಯಗಳನ್ನೂ ತಿಳಿಯುವವನಾಗು.
ರಾಕ್ಷಸಾನಾಂ ಸುರಾಣಾಂ ಚ ಯಕ್ಷಾಣಾಂ ಚ ತಥಾ ಪ್ರಿಯಾಃ |
ಪಿತೄಣಾಂ ಮಾನುಷಾಣಾಂ ಚ ಕಾಂತಾಯಾಸ್ತ್ವನುಪೂರ್ವಶಃ ||24||
ರಾಕ್ಷಸರಿಗೆ, ದೇವತೆಗಳಿಗೆ, ಯಕ್ಷರಿಗೆ, ಪಿತೃಗಳಿಗೆ, ಮನುಷ್ಯರಿಗೆ ಹಾಗೂ ಸ್ತ್ರೀಯರಿಗೆ ಪ್ರಿಯವಾದ ಮಾಲೆಗಳನ್ನು ಕ್ರಮವಾಗಿ ಕೇಳು.
ವನ್ಯಾ ಗ್ರಾಮ್ಯಾಶ್ಚೇಹ ತಥಾ ಕೃಷ್ಟೋಪ್ತಾಃ ಪರ್ವತಾಶ್ರಯಾಃ |

ಅಕಂಟಕಾಃ ಕಂಟಕಿನ್ಯೋ ಗಂಧರೂಪರಸಾನ್ವಿತಾಃ ॥25॥
ಕಾಡಿನಲ್ಲಿ ಬೆಳೆದ, ಗ್ರಾಮದಲ್ಲಿ ಬೆಳೆದ, ಬಿತ್ತಿ ಬೆಳೆಸಿದ ಮತ್ತು ಪರ್ವತಗಳಲ್ಲಿ ತಾನಾಗಿಯೇ ಬೆಳೆದ, ಮುಳ್ಳಿನಿಂದ ಕೂಡಿದ, ಗಂಧರೂಪ ರಸಗಳನ್ನು ಹೊಂದಿದ ಪುಷ್ಪಗಳನ್ನೂ ತಿಳಿಯುವವನಾಗು.
ದ್ವಿವಿಧೋ ಹಿ ಸ್ಮೃತೋ ಗಂಧ ಇಷ್ಟೋಽನಿಷ್ಟಶ್ಚ ಪುಷ್ಪಜಃ |
ಇಷ್ಟಗಂಧಾನಿ ದೇವಾನಾಂ ಪುಷ್ಪಾಣೀತಿ ವಿಭಾವಯೇತ್ ॥26॥
ಪುಷ್ಪದ ಗಂಧವು ಇಷ್ಟ ಮತ್ತು ಅನಿಷ್ಟ ಎಂದು ಎರಡು ವಿಧವಾದುದು. ಇಷ್ಟವಾದ ಗಂಧವುಳ್ಳ ಪುಷ್ಪಗಳು ದೇವತೆಗಳಿಗೆ ಪ್ರಿಯವಾದವುಗಳು ಎಂದು ತಿಳಿಯಬೇಕು.
ಅಕಂಟಕಾನಾಂ ವೃಕ್ಷಾಣಾಂ ಶ್ವೇತಪ್ರಾಯಾಶ್ಚ ವರ್ಣತಃ |
ತೇಷಾಂ ಪುಷ್ಪಾಣಿ ದೇವಾನಾಮಿಷ್ಟಾನಿ ಸತತಂ ಪ್ರಭೋ ॥27॥
ಮುಳ್ಳಿಲ್ಲದ ವೃಕ್ಷಗಳ, ಪ್ರಾಯಶಃ ಶ್ವೇತವರ್ಣದಿಂದ ಕೂಡಿದ ಪುಷ್ಪಗಳು, ಎಲೈ ಪ್ರಭುವೇ, ದೇವತೆಗಳಿಗೆ ಸತತವಾಗಿ ಇಷ್ಟವಾದವುಗಳು.

ಜಲಜಾನಿ ಚ ಮಾಲ್ಯಾನಿ ಪದ್ಮಾದೀನಿ ಚ ಯಾನಿ ಚ |
ಗಂಧರ್ವನಾಗಯಕ್ಷೇಭ್ಯಸ್ತಾನಿ ದದ್ಯಾದ್ ವಿಚಕ್ಷಣಃ॥28॥
ನೀರಿನಲ್ಲಿ ಬೆಳೆದ ಪದ್ಮ, ಉತ್ಪಲ ಮೊದಲಾದ ಪುಷ್ಪಗಳನ್ನು ವಿಚಕ್ಷಣನಾದವನು ಗಂಧರ್ವರಿಗೂ, ಸರ್ಪಗಳಿಗೂ, ಯಕ್ಷರಿಗೂ ಕೊಡಬೇಕು.
ಓಷಧ್ಯೋ ರಕ್ತಪುಷ್ಪಾಶ್ಚ ಕಟುಕಾಃ ಕಂಟಕಾನ್ವಿತಾಃ |
ಶತ್ರೂಣಾಮಭಿಚಾರಾರ್ಥಮಥರ್ವಸು ನಿದರ್ಶಿತಾಃ ॥29॥
ಕೆಂಪು ಬಣ್ಣದ ಪುಷ್ಪವುಳ್ಳ ತೀಕ್ಷ್ಣವಾದ ಮುಳ್ಳಿನಿಂದ ಕೂಡಿದ ವೃಕ್ಷಗಳು ಅಥರ್ವಣ ವೇದದಲ್ಲಿ ಶತ್ರುಗಳನ್ನುದ್ದೇಶಿಸಿ ಅಭಿಚಾರ ಪ್ರಯೋಗವನ್ನು ಮಾಡಲು ಹೇಳಲ್ಪಟ್ಟಿವೆ.
ತೀಕ್ಷ್ಣವೀರ್ಯಾಸ್ತು ಭೂತಾನಾಂ ದುರಾಲಂಭಾಃ ಸಕಂಟಕಾಃ |
ರಕ್ತಭೂಯಿಷ್ಠವರ್ಣಾಶ್ಚ ಕೃಷ್ಣಾ ರಕ್ಷೋಗಣೇಷ್ವಿಹ ॥30॥
ತೀಕ್ಷ್ಣವಾದ ಸಾಮರ್ಥ್ಯವುಳ್ಳ, ಪ್ರಾಣಿಗಳು ಹತ್ತಲು ಕಷ್ಟವಾದ, ಕಂಟಕ ಸಹಿತವಾದ, ಕಡುಕೆಂಪು ಬಣ್ಣದಿಂದ ಕೂಡಿದ ಪುಷ್ಪಗಳನ್ನುಳ್ಳ, ವೃಕ್ಷಗಳ ಪುಷ್ಪಗಳನ್ನೂ ಹಾಗೂ ಕೃಷ್ಣ ವರ್ಣದ ಪುಷ್ಪಗಳನ್ನೂ ರಾಕ್ಷಸರ ಸಮೂಹಕ್ಕೆ ಸಮರ್ಪಿಸಬೇಕು.
ಮನೋಹೃದಯನಂದಿನ್ಯೋ ವಿಮರ್ದೇ ಮಧುರಾಶ್ಚ ಯಾಃ |
ಚಾರುರೂಪಾಃ ಸುಮನಸೋ ಮಾನುಷ್ಯಾಂಶ್ಚ ಸ್ಮೃತಾ ವಿಭೋ ॥31॥
ಎಲೈ ವಿಭುವೇ, ಮನಸ್ಸಿಗೆ ಸಂತೋಷವನ್ನು ನೀಡುವ, ಸ್ವಲ್ಪ ತೀಡಿದರೂ ಮಧುರವಾದ ಗಂಧವನ್ನು ಸೂಸುವ, ನೋಡಲು ಸುಂದರವಾಗಿ ಕಾಣುವ ಪುಷ್ಪಗಳು ಮನುಷ್ಯರಿಗೆ ಪ್ರಿಯವಾದವುಗಳು ಎಂದು ತಿಳಿ.
ನ ತು ಶ್ಮಶಾನಸಂಭೂತಾ ನ ದೇವಾಯತನೋದ್ಭವಾಃ |
ಸನ್ನಯೇತ್ ಪುಷ್ಟಿಯುಕ್ತೇಷು ವಿವಾಹೇಷು ರಹಃಸು ಚ ॥32॥
ಪೌಷ್ಟಿಕ ಕಾರ್ಯದಲ್ಲಾಗಲೀ, ವಿವಾಹದಲ್ಲಾಗಲೀ ಅಥವಾ ರಹಸ್ಯ ಕಾರ್ಯ- ಗಳಲ್ಲಾಗಲೀ ಸ್ಮಶಾನದಲ್ಲಿ ಬೆಳೆದ ಅಥವಾ ದೇವಾಲಯದಲ್ಲಿ ಬೆಳೆದ ಪುಷ್ಪಗಳನ್ನು ತರಬಾರದು.
ಗಿರಿಸಾನುರುಹಾಃ ಸೌಮ್ಯಾ ದೇವಾನಾಮುಪಪಾದಯೇತ್ |
ಪ್ರೋಕ್ಷಿತಾಭ್ಯುಕ್ಷಿತಾಃ ಸೌಮ್ಯಾ ಯಥಾಯೋಗಂ ಯಥಾಸ್ಮೃತಿ ॥33॥
ಪರ್ವತಶಿಖರಗಳಲ್ಲಿ ಬೆಳೆದ, ಸೌಮ್ಯವಾದ, ಶಾಸ್ತ್ರದ ವಿಧಿಯಂತೆ ಪ್ರೋಕ್ಷಣೆಯನ್ನು ಮಾಡಿದ ಅಥವಾ ನೀರಿನಲ್ಲಿ ತೊಳೆದ ಪುಷ್ಪಗಳನ್ನು ದೇವತೆಗಳಿಗೆ ಅರ್ಪಿಸಬೇಕು.
ಗಂಧೇನ ದೇವಾಸ್ತುಷ್ಯಂತಿ ದರ್ಶನಾದ್ ಯಕ್ಷರಾಕ್ಷಸಾಃ |
ನಾಗಾಃ ಸಮುಪಭೋಗೇನ ತ್ರಿಭಿರೇತೈಸ್ತು ಮಾನುಷಾಃ ॥34॥
ಪುಷ್ಪಗಳ ಗಂಧದಿಂದ ದೇವತೆಗಳು ಸಂತೋಷಪಡುತ್ತಾರೆ. ಪುಷ್ಪಗಳ ದರ್ಶನದಿಂದ ಯಕ್ಷ-ರಾಕ್ಷಸರು ಸಂತೋಷಪಡುತ್ತಾರೆ. ಪುಷ್ಪಗಳ ಉಪಭೋಗದಿಂದ ಸರ್ಪಗಳು ಸಂತೋಷಪಡುತ್ತವೆ. ಮನುಷ್ಯರು ಈ ಮೂರರಿಂದಲೂ ಸಂತೋಷ ಪಡುತ್ತಾರೆ.
ಸದ್ಯಃ ಪ್ರೀಣಾತಿ ದೇವಾನ್ ವೈ ತೇ ಪ್ರೀತಾ ಭಾವಯಂತ್ಯುತ |
ಸಂಕಲ್ಪಸಿದ್ಧಿರ್ಭೂತಾನಾಂ ಪುಷ್ಪೈರ್ಭಾವ್ಯಾಽಸುರೈಃ ಸದಾ ॥35॥
ಪುಷ್ಪಗಳು ದೇವತೆಗಳನ್ನು ತಕ್ಷಣದಲ್ಲಿಯೇ ಪ್ರಸನ್ನಗೊಳಿಸುತ್ತವೆ. ಆ ದೇವತೆಗಳು ಪ್ರಸನ್ನರಾಗಿ ಪೂಜಿಸುವವನನ್ನು ಶುದ್ಧಿಗೊಳಿಸುತ್ತಾರೆ ಅಥವಾ ಸಂಪದ್ಯುಕ್ತನನ್ನಾಗಿ ಮಾಡುತ್ತಾರೆ. ಆದರಿಂದ ಮನುಷ್ಯರಿಗೆ ಸಂಕಲ್ಪ ಸಿದ್ಧಿಯಾಗುತ್ತದೆ. ಅಂತಹ ಸಂಕಲ್ಪ ಸಿದ್ಧಿಯನ್ನು ಮನುಷ್ಯರು ಮತ್ತು ಅಸುರರು ಪುಷ್ಪಗಳಿಂದ ಯಾವಾಗಲೂ ಸಾಧಿಸಬಹುದು.
ದೇವಾಃ ಪ್ರೀಣಂತಿ ಸತತಂ ಮಾನಿತಾ ಮಾನಯಂತಿ ಚ |
ಅವಜ್ಞಾತಾವಧೂತಾಶ್ಚ ನಿರ್ದಹಂತ್ಯಧಮಾನ್ ನರಾನ್ ॥36॥
ದೇವತೆಗಳ ಪೂಜೆಯನ್ನು ಮಾಡಿದರೆ ಅವರು ಸತತವಾಗಿ ಪ್ರಸನ್ನರಾಗಿ ಪೂಜೆ ಮಾಡುವವನನ್ನು ಸನ್ಮಾನಗೊಳಿಸುತ್ತಾರೆ. ಅವರನ್ನು ಅವಮಾನ ಮಾಡಿ ತಿರಸ್ಕರಿಸುವ ಅಧಮ ಮನುಷ್ಯರನ್ನು ಅವರು ಸುಟ್ಟುಬಿಡುತ್ತಾರೆ (ನಾಶ ಮಾಡುತ್ತಾರೆ).
ಅತ ಊರ್ಧ್ವಂ ಪ್ರವಕ್ಷ್ಯಾಮಿ ಧೂಪದಾನವಿಧೌ ಫಲಮ್ |
ಧೂಪಾಂಶ್ಚ ವಿವಿಧಾನ್ ಸಾಧೂನಸಾಧೂಂಶ್ಚ ನಿಬೋಧ ಮೇ ॥37॥

ಇನ್ನು ಮುಂದೆ ಧೂಪದಾನ ವಿಧಿಯನ್ನೂ ಮತ್ತು ಅದರ ಫಲವನ್ನೂ ಹೇಳುವೆನು. ವಿಧವಿಧವಾದ ಒಳ್ಳೆಯ ಮತ್ತು ಕೆಟ್ಟಧೂಪಗಳನ್ನು ನನ್ನಿಂದ ತಿಳಿ.
ನಿರ್ಯಾಸಃ ಸಾರಿಣಶ್ಚೈವ ಕೃತ್ರಿಮಶ್ಚೈವ ತೇ ತ್ರಯಃ |
ಇಷ್ಟಾನಿಷ್ಟೋ ಭವೇದ್ ಗಂಧಸ್ತನ್ಮೇ ವಿಸ್ತರತಃ ಶೃಣು ॥38॥
ನಿರ್ಯಾಸ (ವೃಕ್ಷರಸ- ಗೋಂದು), ಸಾರಿ, ಕೃತ್ರಿಮ ಎಂದು ಗಂಧಗಳು ಮೂರು ಬಗೆಯಾದವು. ಆ ಮೂರೂ ಸಹ ಇಷ್ಟ ಮತ್ತು ಅನಿಷ್ಟ ಎಂಬ ಪ್ರಭೇದಗಳಿಂದ ಎರಡೆರಡು ಬಗೆಯಾದವು. ಅದನ್ನು ವಿಸ್ತಾರವಾಗಿ ಕೇಳು.
ನಿರ್ಯಾಸಾಃ ಸಲ್ಲಕೀವರ್ಜ್ಯಾ ದೇವಾನಾಂ ದಯಿತಾಸ್ತು ತೇ |
ಗುಗ್ಗುಲುಃ ಪ್ರವರಸ್ತೇಷಾಂ ಸರ್ವೇಷಾಮಿತಿ ನಿಶ್ಚಯಃ ॥39॥
ಸಲ್ಲಕೀ ವೃಕ್ಷ (ಆನೆಬೇಲ) ನಿರ್ಯಾಸವನ್ನು ಬಿಟ್ಟು ಉಳಿದ ನಿರ್ಯಾಸಗಳು ದೇವತೆಗಳಿಗೆ ಪ್ರಿಯವಾದವುಗಳು. ಅವೆಲ್ಲದರಲ್ಲಿ ಗುಗ್ಗುಳವು ಶ್ರೇಷ್ಠವಾದುದೆಂದು ನಿಶ್ಚಿತವಾದುದು.
ಅಗರುಃ ಸಾರಿಣಾಂ ಶ್ರೇಷ್ಠೋ ಯಕ್ಷಗಂಧರ್ವರಕ್ಷಸಾಮ್ |
ದೈತ್ಯಾನಾಂ ಸಲ್ಲಕೀಜಶ್ಚ ಕಾಂಕ್ಷಿತೋ ಯಶ್ಚ ತದ್ವಿಧಃ ॥40॥
ಸಾರಿಗಂಧಗಳಲ್ಲಿ ಅಗರು ಶ್ರೇಷ್ಠವಾದುದು. ಅದು ಯಕ್ಷ-ಗಂಧರ್ವ-ರಾಕ್ಷಸರಿಗೆ ಪ್ರಿಯವಾದುದು. ದೈತ್ಯರಿಗೆ ಸಲ್ಲಕೀ ವೃಕ್ಷದ ಗಂಧ ಮತ್ತು ಅದೇ ಜಾತಿಯ ಗಂಧಗಳು ಪ್ರಿಯವಾದವುಗಳು. (ಸಾರಿ ಎಂದರೆ ಗಟ್ಟಿಯಾದ ಮರಗಳ ಗಂಧವೆಂದು ಲಕ್ಷಾಲಂಕಾರದ ಅಭಿಪ್ರಾಯ. ಅಗ್ನಿಗೆ ಹಾಕಿದರೆ ಹರಡುವ ಗಂಧವೆಂದು ಉಳಿದ ವ್ಯಾಖ್ಯಾನಕಾರರ ಅಭಿಪ್ರಾಯ).
ಅಥ ಸರ್ಜರಸಾದೀನಿ ಗಂಧ್ಯೈಃ ಪಾರ್ಥಿವದಾರವೈಃ |
ಫಾಣಿತಾಸವಸಂಯುಕ್ತೈರ್ಮನುಷ್ಯಾಣಾಂ ವಿಧೀಯತೇ ॥41॥
ಇನ್ನು ಸರ್ಜರಸ ಮೊದಲಾದ ಗಂಧವು ಕೃತ್ರಿಮ ಎನಿಸುತ್ತದೆ. ಭೂಮಿಯಲ್ಲಿ ಸಿಗುವ ಲಾಳವೇ ಮೊದಲಾದ ಸುಗಂಧ ದ್ರವ್ಯದಿಂದ ಮತ್ತು ಚಂದನಾದಿ ವೃಕ್ಷಗಳ ಸುವರ್ಣರೂಪ ದ್ರವ್ಯಗಳಿಂದ ಮತ್ತು ಸುಗಂಧ ರಸಗಳಿಂದ ಮಿಶ್ರಿತವಾದ ಅವು ಮನುಷ್ಯರಿಗೆ ಪ್ರಿಯವಾದುದೆಂದು ಹೇಳಲ್ಪಡುತ್ತವೆ.
ದೇವದಾನವಭೂತಾನಾಂ ಸದ್ಯಸ್ತುಷ್ಟಿಕರಃ ಸ್ಮೃತಃ |
ಯೇಽನ್ಯೇ ವೈಹಾರಿಕಾಸ್ತೇ ತು ಮಾನುಷಾಣಾಮಿತಿ ಸ್ಮೃತಾಃ ॥42॥
ಮೊದಲು ಹೇಳಿದ ಗಂಧಗಳು ದೇವ-ದಾನವ-ಭೂತಗಳಿಗೆ ತಕ್ಷಣದಲ್ಲಿಯೇ ಸಂತೋಷವನ್ನುಂಟು ಮಾಡುವಂತಹವುಗಳು. ಇನ್ನು ವಿಹಾರಾದಿ ಸಮಯಗಳಲ್ಲಿ ಉಪಯೋಗಿಸುವ ಗಂಧವು ಮನುಷ್ಯರಿಗೆ ಪ್ರಿಯವಾದುದೆಂದು ತಿಳಿಯಬೇಕು.
ಯ ಏವೋಕ್ತಾಃ ಸುಮನಸಾಂ ಪ್ರದಾನೇ ಗುಣಹೇತವಃ |
ಧೂಪೇಷ್ವಪಿ ಪರಿಜ್ಞೇಯಾಸ್ತ ಏವ ಪ್ರೀತಿವರ್ಧನಾಃ ॥43॥
ಪುಷ್ಪದಾನದಲ್ಲಿ ಯಾವ ಯಾವ ಗುಣಗಳನ್ನು ಹೇಳಿದೆಯೋ ಧೂಪದಾನದಲ್ಲಿಯೂ ಅವೇ ಗುಣಗಳು ಸಂತೋಷಕ್ಕೆ ಕಾರಣಗಳೆಂದು ತಿಳಿಯಬೇಕು.
ದೀಪದಾನೇ ಪ್ರವಕ್ಷ್ಯಾಮಿ ಫಲಯೋಗಮನುತ್ತಮಮ್ |
ಯಥಾ ಯೇನ ಯದಾ ಚೈವ ಪ್ರದೇಯಾ ಯಾದೃಶಾಶ್ಚ ತೇ ॥44॥
ಇನ್ನು ದೀಪದಾನದಿಂದ ಉಂಟಾಗುವ ಶ್ರೇಷ್ಠವಾದ ಫಲಗಳನ್ನು ಹೇಳುವೆನು. ಹೇಗೆ, ಯಾರು, ಯಾವಾಗ, ಎಂತಹ ದೀಪವನ್ನು ದಾನ ಮಾಡಬೇಕೆಂಬುದನ್ನು ನಿನಗೆ ಹೇಳುವೆನು.
ಜ್ಯೋತಿಸ್ತೇಜಃ ಪ್ರಕಾಶಶ್ಚಾಪ್ಯೂರ್ಧ್ವಗಂ ಚಾಪಿ ವರ್ಣ್ಯತೇ |
ಪ್ರದಾನಂ ತೇಜಸೋ ತಸ್ಮಾತ್ ತೇಜೋ ವರ್ಧಯತೇ ನೃಣಾಮ್ ॥
ದೀಪವನ್ನು ಜ್ಯೋತಿಸ್ಸೆಂದೂ, ತೇಜಸ್ಸೆಂದೂ, ಪ್ರಕಾಶವೆಂದೂ, ಊರ್ಧ್ವಗ (ಮೇಲ್ಮುಖವಾಗಿ ಹೋಗುವುದು) ಎಂದೂ ವರ್ಣಿಸುತ್ತಾರೆ. ಆದ್ದರಿಂದ ತೇಜಸ್ಸಿನ ದಾನವು ಮನುಷ್ಯನ ತೇಜಸ್ಸನ್ನು ಹೆಚ್ಚಿಸುತ್ತದೆ.
ಅಂಧಂ ತಮಸ್ತಮಿಸ್ರಂ ಚ ದಕ್ಷಿಣಾಯನಮೇವ ಚ |
ಉತ್ತರಾಯಣಮೇತಸ್ಮಾಜ್ಜ್ಯೋತಿರ್ದಾನಂ ಪ್ರಶಸ್ಯತೇ ॥46॥
ದಕ್ಷಿಣಾಯನ, ಅಂಧಂತಮಸ್ಸಿನ ರೂಪವಾದ ನರಕ ಎಲ್ಲವೂ ಕತ್ತಲಿನ ರೂಪವಾದುದು. ಆ ಕಾರಣದಿಂದ ಉತ್ತರಾಯಣದಲ್ಲಿ ದೀಪದಾನವು ಪ್ರಶಂಸಿಸಲ್ಪಡುತ್ತದೆ.
ಯಸ್ಮಾದೂರ್ಧ್ವಗಮೇತತ್ ತು ತಮಸಶ್ಚೈವ ಭೇಷಜಮ್ |
ತಸ್ಮಾದೂರ್ಧ್ವಗತೇರ್ದಾತಾ ಭವೇದಿತಿ ವಿನಿಶ್ಚಯಃ ॥47॥
ದೀಪಕ್ಕೆ ಊರ್ಧ್ವಮುಖವಾಗಿ ಹೋಗುವ ಸ್ವಭಾವವಿರುವುದರಿಂದ ಮತ್ತು ದೀಪವು ಅಂಧಕಾರಕ್ಕೆ ವಿನಾಶಕವಾಗಿರುವುದರಿಂದ ದೀಪದಾನವನ್ನು ಮಾಡುವವನು ಊರ್ಧ್ವಗತಿಯನ್ನು ಹೊಂದುತ್ತದೆ ಎಂಬುದು ನಿಶ್ಚಿತವಾದುದು.
ದೇವಾಸ್ತೇಜಸ್ವಿನೋ ಯಸ್ಮಾತ್ ಪ್ರಭಾವಂತಃ ಪ್ರಕಾಶಕಾಃ |
ತಾಮಸಾ ರಾಕ್ಷಸಾಶ್ಚೇತಿ ತಸ್ಮಾದ್ ದೀಪಂ ಪ್ರದೀಪಯೇತ್ ॥48॥
ದೇವತೆಗಳು ತೇಜಸ್ವಿಗಳಾದವರು. ಪ್ರಕಾಶಕರಾದವರು ಮತ್ತು ಕಾಂತಿಯುಕ್ತರಾದವರು. ರಾಕ್ಷಸರು ತಾಮಸರಾದವರು. ಆದ್ದರಿಂದ ದೀಪದಾನವನ್ನು ಮಾಡಬೇಕು.
ಆಲೋಕದಾನಾತ್ ಚಕ್ಷುಷ್ಮಾನ್ ಪ್ರಭಾಯುಕ್ತೋ ಭವೇನ್ನರಃ |
ತಾನ್ ದತ್ತ್ವಾ ನೋಪಹಿಂಸೇತ ನ ಹರೇನ್ನೋಪನಾಶಯೇತ್ ॥49॥

ದೀಪದಾನವನ್ನು ಮಾಡುವವನು ಒಳ್ಳೆಯ ಕಣ್ಣುಳ್ಳವನೂ, ಕಾಂತಿಯುಕ್ತನೂ ಆಗುತ್ತಾನೆ. ದೀಪವನ್ನು ದಾನ ಮಾಡಿ ಅದನ್ನು ಆರಿಸಬಾರದು, ಬೇರೆ ಕಡೆಗೆ ತೆಗೆದೊಯ್ಯಬಾರದು, ಅಲುಗಾಡಿಸಲೂ ಬಾರದು.
ದೀಪಹರ್ತಾ ಭವೇದಂಧಸ್ತಮೋಗತಿರಸುಪ್ರಭಃ |
ದೀಪಪ್ರದಃ ಸ್ವರ್ಗಲೋಕೇ ದೀಪಮಾಲೀ ವಿರಾಜತೇ ॥50॥
ದೀಪವನ್ನು ಕದಿಯುವವನು ಅಂಧನೂ, ಕಾಂತಿರಹಿತನೂ, ತಮೋಗತಿ ಉಳ್ಳವನೂ ಆಗುತ್ತಾನೆ. ದೀಪಪ್ರದಾನವನ್ನು ಮಾಡುವವನು ಸ್ವರ್ಗಲೋಕದಲ್ಲಿ ದೀಪಗಳ ಮಾಲೆಯನ್ನು ಹೊಂದಿ ವಿರಾಜಿಸುತ್ತಾನೆ.
ಹವಿಷಾ ಪ್ರಥಮಃ ಕಲ್ಪೋ ದ್ವಿತೀಯಸ್ತ್ವೌಷಧೀರಸೈಃ |
ವಸಾಮೇದೋಸ್ಥಿನಿರ್ಯಾಸೈರ್ನ ಕಾರ್ಯಃ ಪುಷ್ಟಿಮಿಚ್ಛತಾ ॥51॥
ಗೋಘೃತ ಮೊದಲಾದ ಹವಿಷ್ಯದ್ರವ್ಯದಿಂದ ಕೂಡಿದ ದೀಪವನ್ನು ದಾನ ಮಾಡುವುದು ಶ್ರೇಷ್ಠವಾದ ಮೊದಲನೆಯ ಕಲ್ಪ. ಎಳ್ಳು ಮೊದಲಾದ ಓಷಧಿಯ ರಸವಾದ ಎಣ್ಣೆಯಿಂದ ಯುಕ್ತವಾದ ದೀಪದಾನವು ಎರಡನೆಯ ಕಲ್ಪಕ್ಕೆ ಸೇರುತ್ತದೆ. ಪುಷ್ಟಿಯನ್ನು ಬಯಸುವವನು ವಸಾ-ಮೇದಸ್ಸು ಮತ್ತು ಮಜ್ಜೆಗಳ ದೀಪವನ್ನು ಕೊಡಬಾರದು.
ಗಿರಿಪ್ರಪಾತೇ ಗಹನೇ ಚೈತ್ಯಸ್ಥಾನೇ ಚತುಷ್ಪಥೇ |
ದೀಪದಾತಾ ಭವೇನ್ನಿತ್ಯಂ ಯ ಇಚ್ಛೇದ್ ಭೂತಿಮಾತ್ಮನಃ ॥52॥
ತನಗೆ ವೈಭವವನ್ನು ಅಪೇಕ್ಷಿಸುವವನು ಪರ್ವತದ ಪ್ರಪಾತದಲ್ಲಾಗಲೀ, ಕಾಡಿನಲ್ಲಾಗಲೀ, ದೇವಾಲಯದಲ್ಲಾಗಲೀ, ಚತುಷ್ಪಥದಲ್ಲಾಗಲೀ ನಿತ್ಯವೂ ದೀಪವನ್ನಿಡಬೇಕು.
ಕುಲೋದ್ದ್ಯೋತೋ ವಿಶುದ್ಧಾತ್ಮಾ ಪ್ರಕಾಶತ್ವಂ ಚ ಗಚ್ಛತಿ |
ಜ್ಯೋತಿಷಾಂ ಚೈವ ಸಾಲೋಕ್ಯಂ ದೀಪದಾತಾ ನರಃ ಸದಾ ॥53॥
ದೀಪವನ್ನು ದಾನ ಮಾಡುವ ನರನು ತನ್ನ ಕುಲವನ್ನು ಪ್ರಕಾಶಗೊಳಿಸುತ್ತಾನೆ. ಶುದ್ಧಮನಸ್ಸುಳ್ಳವನಾಗುತ್ತಾನೆ. ಕೀರ್ತಿಯನ್ನು ಹೊಂದುತ್ತಾನೆ ಮತ್ತು ಜ್ಯೋತಿಸ್ಸುಗಳ ಸಾಲೋಕ್ಯವನ್ನು ಹೊಂದುತ್ತಾನೆ.
ಬಲಿಕರ್ಮಸು ವಕ್ಷ್ಯಾಮಿ ಗುಣಾನ್ ಕರ್ಮಫಲೋದಯಾನ್ |
ದೇವಯಕ್ಷೋರಗನೃಣಾಂ ಭೂತಾನಾಮಥ ರಕ್ಷಸಾಮ್ ॥54॥
ಇನ್ನು ದೇವ-ಯಕ್ಷೋರಗ-ಮನುಷ್ಯರಿಗೆ ಮಾಡಿದ ಪೂಜಾಕರ್ಮದಿಂದ ಉಂಟಾಗುವ ಗುಣಗಳನ್ನು ಹೇಳುತ್ತೇನೆ. ಹಾಗೆಯೇ ರಾಕ್ಷಸರಿಗೆ ಮಾಡಿದ ಪೂಜೆಯ ಗುಣಗಳನ್ನೂ ಹೇಳುತ್ತೇನೆ.
ಯೇಷಾಂ ನಾಗ್ರಭುಜೋ ವಿಪ್ರಾ ದೇವತಾತಿಥಿಬಾಲಕಾಃ |
ರಾಕ್ಷಸಾನೇವ ತಾನ್ ವಿದ್ಧಿ ನಿರ್ವಷಟ್ಕಾರಮಂಗಲಾನ್ ॥55॥
ಯಾವ ಗೃಹದಲ್ಲಿ ದೇವತಾತಿಥಿ-ಬಾಲಕರು, ಬ್ರಾಹ್ಮಣರು ಮೊದಲು ಭೋಜನವನ್ನು ಮಾಡುವುದಿಲ್ಲವೋ ಅಂತಹ ಮನುಷ್ಯರು ರಾಕ್ಷಸರೆಂದೇ ತಿಳಿ. ಅವರಿಗೆ ವಷಟ್ಕಾರವಾಗಲೀ, ಮಂಗಳವಾಗಲೀ ಇಲ್ಲ.
ತಸ್ಮಾದಗ್ರಂ ಪ್ರಯಚ್ಛೇತ ದೇವೇಭ್ಯಶ್ಚ ಪ್ರಪೂಜಯೇತ್ |
ಶಿರಸಾ ಪ್ರಣತಶ್ಚಾಪಿ ಹರೇದ್ ಬಲಿಮತಂದ್ರಿತಃ ॥56॥
ಆದ್ದರಿಂದ ದೇವತೆಗಳನ್ನು ಪೂಜಿಸಿ, ಶಿರಸಾ ನಮಸ್ಕರಿಸಿ, ಆಲಸ್ಯವಿಲ್ಲದೆ ಅಗ್ರಭಾಗವನ್ನು ದೇವತೆಗಳಿಗೆ ಸಮರ್ಪಿಸಬೇಕು.
ಗೃಹ್ಯಾ ಹಿ ದೇವತಾ ನಿತ್ಯಮಾಶಂಸಂತಿ ಗೃಹಾನ್ ಸದಾ |
ಬಾಹ್ಯಾಶ್ಚಾಗಂತವೋ ಯೇಽನ್ಯೇ ಯಕ್ಷರಾಕ್ಷಸಪನ್ನಗಾಃ ॥57॥
ಇತೋ ದತ್ತೇನ ಜೀವಂತಿ ದೇವತಾಃ ಪಿತರಸ್ತಥಾ |
ತೇ ಪ್ರೀತಾಃ ಪ್ರೀಣಯಂತ್ಯೇತಾನಾಯುಷಾ ಯಶಸಾ ಧನೈಃ ॥58॥
ಗೃಹದೇವತೆಗಳು, ಗೃಹಕ್ಕೆ ಹೊರಗಿನಿಂದ ಬಂದವರು ಮತ್ತು ಯಕ್ಷ-ರಾಕ್ಷಸ- ಸರ್ಪಗಳು ಗೃಹವನ್ನು ಆಶ್ರಯಿಸಿರುತ್ತಾರೆ. ಅವರಿಗೆ ಬಲಿಯನ್ನು (ನೈವೇದ್ಯವನ್ನು) ಸಮರ್ಪಣೆ ಮಾಡಿದರೆ ಆ ದೇವತೆಗಳು ಮತ್ತು ಪಿತೃಗಳು ಪ್ರಸನ್ನರಾಗಿ ಪೂಜೆಯನ್ನು ಮಾಡುವವನಿಗೆ ಆಯುಸ್ಸನ್ನೂ, ಕೀರ್ತಿಯನ್ನೂ, ಧನವನ್ನೂ ಕೊಟ್ಟು ಅವನನ್ನು ಸಂತೋಷಪಡಿಸುತ್ತಾರೆ.
ಬಲಯಃ ಸಹ ಪುಷ್ಪೈಸ್ತು ದೇವಾನಾಮುಪಹಾರಯೇತ್ |
ದಧಿದ್ರಪ್ಸಯುತಾಃ ಪುಣ್ಯಾಃ ಸುಗಂಧಾಃ ಪ್ರಿಯದರ್ಶನಾಃ ॥59॥
ದೇವತೆಗಳ ಪೂಜೆಯನ್ನು ಮಾಡುವಾಗ ನೀರಾದ ಅಥವಾ ಗಟ್ಟಿಯಾದ ದಧಿ, ಪವಿತ್ರವಾದ, ಮನೋಹರವಾದ ಸುಗಂಧದ್ರವ್ಯಗಳು ಇವುಗಳನ್ನು ಪುಷ್ಪಗಳ ಜೊತೆಯಲ್ಲಿ ಪ್ರದಾನ ಮಾಡಬೇಕು.
ಕಾರ್ಯಾ ರುಧಿರಮಾಂಸಾಢ್ಯಾ ಬಲಯೋ ಯಕ್ಷರಕ್ಷಸಾಮ್ |
ಸುರಾಸವಪುರಸ್ಕಾರಾ ಲಾಜೋಲ್ಲೇಪನಭೂಷಿತಾಃ ॥60॥
ಯಕ್ಷ-ರಾಕ್ಷಸ ಪೂಜೆಯನ್ನು ಮಾಡುವಾಗ ರಕ್ತ-ಮಾಂಸಗಳಿಂದ ಕೂಡಿದ ನೈವೇದ್ಯವನ್ನು ಸಮರ್ಪಿಸಬೇಕು. ಅವು ಸುರೆ ಮತ್ತು ಆಸವಗಳನ್ನು ಪ್ರಧಾನವಾಗಿ ಹೊಂದಿದ್ದು ಅರಳುಗಳಿಂದ ಅಲಂಕರಿಸಲ್ಪಟ್ಟಿರಬೇಕು.
ನಾಗಾನಾಂ ದಯಿತಾ ನಿತ್ಯಂ ಪದ್ಮೋತ್ಪಲವಿಮಿಶ್ರಿತಾಃ |
ತಿಲಪಿಷ್ಟಂ ಸುಸಂಪನ್ನಂ ಭೂತಾನಾಮುಪಹಾರಯೇತ್ ॥61॥
ಸರ್ಪಗಳಿಗೆ ಪದ್ಮೋತ್ಪಲ ವಿಮಿಶ್ರಿತವಾದ ಪೂಜೆಯು ನಿತ್ಯವೂ ಪ್ರಿಯವಾದುದು. ಭೂತಗಳಿಗೆ ತಿಲಪಿಷ್ಟ ಸಹಿತವಾದ ಬಲಿಯನ್ನು ಸಮರ್ಪಿಸಬೇಕು.
ಅಗ್ರದಾತಾಽಗ್ರಭೋಗೀ ಸ್ಯಾದ್ ಬಲವರ್ಣಸಮನ್ವಿತಃ |

ತಸ್ಮಾದಗ್ರಂ ಪ್ರಯಚ್ಛೇತ ದೇವಾದಿಭ್ಯಃ ಸುಪೂಜಿತಮ್ ॥62॥
ಅಗ್ರಭಾಗವನ್ನು ಸಮರ್ಪಿಸುವವನು ಅಗ್ರಭೋಗಿಯೂ, ಬಲರೂಪ ಸಮನ್ವಿತನೂ ಆಗುತ್ತಾನೆ. ಆದ್ದರಿಂದ ದೇವತೆಗಳನ್ನು ಚೆನ್ನಾಗಿ ಪೂಜಿಸಿ ಅವರಿಗೆ ಅಗ್ರಭಾಗವನ್ನು ಕೊಡಬೇಕು.
ಜ್ವಲತ್ಯಹರಹೋ ವೇಶ್ಮ ಯಾಶ್ಚಾಸ್ಯ ಗೃಹದೇವತಾಃ |
ತಾಃ ಪೂಜ್ಯಾ ಭೂತಿಕಾಮೇನ ಪ್ರಸೃತಾಗ್ರಪ್ರದಾಯಿನಾ ॥63॥
ಅಗ್ರತೆಯನ್ನು ಆಶಿಸುವ ನರನು ತನ್ನ ಗೃಹದೇವತೆಗಳನ್ನು ಪೂಜಿಸಬೇಕು. ಶ್ರೇಷ್ಠವಾದ ಅಗ್ರಭಾಗವನ್ನು ದಾನ ಮಾಡುವವನ ಗೃಹವು ದಿನದಿನವೂ ಪ್ರಕಾಶಿಸುತ್ತದೆ.
ಇತ್ಯೇತದಸುರೇಂದ್ರಾಯ ಕಾವ್ಯಃ ಪ್ರೋವಾಚ ಭಾರ್ಗವಃ |
ಸುವರ್ಣಾಯ ಮನುಃ ಪ್ರಾಹ ಸುವರ್ಣೋ ನಾರದಾಯ ಚ ॥64॥
ಇದನ್ನು ಅಸುರೇಂದ್ರನಾದ ಬಲಿಗೆ ಭಾರ್ಗವ ಗೋತ್ರದ ಕವಿಪುತ್ರರಾದ ಶುಕ್ರಾಚಾರ್ಯರು ಹೇಳಿದರು. ಸ್ವಾಯಂಭುವ ಮನುವು ಸುವರ್ಣ ಋಷಿಗೆ ಹೇಳಿದನು. ಸುವರ್ಣ ಋಷಿಯು ನಾರದರಿಗೆ ಹೇಳಿದನು.
ನಾರದೋಽಪಿ ಮಯಿ ಪ್ರಾಹ ಗುಣಾನೇತಾನ್ ಮಹಾದ್ಯುತೇ |
ತ್ವಮಪ್ಯೇತದ್ ವಿದಿತ್ವೇಹ ಸರ್ವಮಾಚರ ಪೌತ್ರಕ ॥65॥
ಎಲೈ ಮಹಾದ್ಯುತಿಯೇ, ನಾರದರು ಈ ದಾನಗಳ ಗುಣಗಳನ್ನು ನನಗೆ ಹೇಳಿದರು. ಎಲೈ ಪೌತ್ರನೇ, ನೀನೂ ಸಹ ಇದೆಲ್ಲವನ್ನೂ ತಿಳಿದು ಇಂತಹ ದಾನವನ್ನು ಮಾಡುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದೀಪಾದಿದಾನವಿಧಿಕಥನಂ ನಾಮ ಏಕಪಂಚಾಶದುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೆರಡನೆಯ ಅಧ್ಯಾಯ
ದೀಪಾದಿದಾನೋಪಯೋಗಿಯಾದ ನಹುಷಾಖ್ಯಾನಪ್ರಾರಂಭ
ಯುಧಿಷ್ಠಿರಃ
ಶ್ರುತಂ ಮೇ ಭರತಶ್ರೇಷ್ಠ ಪುಷ್ಪಧೂಪಪ್ರದಾಯಿನಾಮ್ |
ಫಲಂ ಬಲಿವಿಧಾನೇ ಚ ತದ್ಭೂಯೋ ವಕ್ತುಮರ್ಹಸಿ ॥1॥
ಧೂಪಪ್ರದಾನಸ್ಯ ಫಲಂ ಪ್ರದೀಪಸ್ಯ ತಥೈವ ಚ |
ಬಲಯಶ್ಚ ಕಿಮರ್ಥಂ ವೈ ಕ್ಷಿಪ್ಯಂತೇ ಗೃಹಮೇಧಿಭಿಃ ॥2॥
ಯುಧಿಷ್ಠಿರ ಎಲೈ ಭರತಶ್ರೇಷ್ಠನೇ, ಪುಷ್ಪ, ಧೂಪ ದಾನಗಳ ಫಲವೂ, ಪೂಜಾ ವಿಧಾನವೂ ನನ್ನಿಂದ ಕೇಳಲ್ಪಟ್ಟಿತು. ಧೂಪ ದಾನದ ಮತ್ತು ದೀಪದಾನದ ಫಲವನ್ನು ಪುನಃ ಹೇಳಬೇಕು. ಗೃಹಸ್ಥರಾದವರು ಏಕೆ ದೇವಾದಿಗಳಿಗೆ ಪೂಜೆಯನ್ನು ಮಾಡಿ ನೈವೇದ್ಯವನ್ನು ಅರ್ಪಿಸುತ್ತಾರೆ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಹುಷಂ ಪ್ರತಿ ಸಂವಾದಮಗಸ್ತ್ಯಸ್ಯ ಭೃಗೋಸ್ತಥಾ ॥3॥
ಭೀಷ್ಮ ಈ ವಿಷಯದಲ್ಲಿಯೂ ಸಹ ನಹುಷನ ವಿಷಯದಲ್ಲಿ ಅಗಸ್ತ್ಯರಿಗೂ ಮತ್ತು ಭೃಗುಗಳಿಗೂ ನಡೆದ ಸಂವಾದ ರೂಪವಾದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ನಹುಷೋ ಹಿ ಮಹಾರಾಜ ರಾಜರ್ಷಿಃ ಸುಮಹಾತಪಾಃ |
ದೇವರಾಜ್ಯಮನುಪ್ರಾಪ್ಯ ಸುಕೃತೇನೇಹ ಕರ್ಮಣಾ ॥4॥
ತತ್ರಾಪಿ ಪ್ರಯತೋ ರಾಜನ್ ನಹುಷಸ್ತ್ರಿದಿವೇ ವಸನ್ |
ಮಾನುಷೀಶ್ಚೈವ ದಿವ್ಯಾಶ್ಚ ಕುರ್ವಾಣೋ ವಿವಿಧಾಃ ಕ್ರಿಯಾಃ ॥5॥
ಎಲೈ ಮಹಾರಾಜನೇ, ರಾಜರ್ಷಿಯೂ, ಮಹಾತಪಸ್ವಿಯೂ ಆದ ನಹುಷನು ತನ್ನ ಸತ್ಕರ್ಮಗಳ ಫಲವಾಗಿ ದೇವರಾಜ್ಯವನ್ನು ಪಡೆದು ಅಲ್ಲಿಯೂ ನಿಯಮಬದ್ಧನಾಗಿ ಸ್ವರ್ಗದಲ್ಲಿ ವಾಸಿಸುತ್ತಾ ವಿವಿಧವಾದ ಮನುಷ್ಯಲೋಕದ ಮತ್ತು ದಿವ್ಯಲೋಕದ ಕ್ರಿಯೆಗಳನ್ನು ಮಾಡಿದನು.
ಮಾನುಷ್ಯಸ್ತತ್ರ ಸರ್ವಾಃ ಸ್ಮ ಕ್ರಿಯಾಸ್ತಸ್ಯ ಮಹಾತ್ಮನಃ |
ಪ್ರವೃತ್ತಾಸ್ತ್ರಿದಿವೇ ರಾಜನ್ ದಿವ್ಯಾಶ್ಚೈವ ಸನಾತನಾಃ ॥6॥
ಎಲೈ ರಾಜನೇ, ಮಹಾತ್ಮನಾದ ಅವನು ಅಲ್ಲಿ ವೇದೋಕ್ತವಾದ ಮನುಷ್ಯಲೋಕದ ಕ್ರಿಯೆಗಳನ್ನೂ ಮತ್ತು ದೇವಲೋಕದ ಕ್ರಿಯೆಗಳನ್ನೂ ಮಾಡಿದನು.
ಅಗ್ನಿಕಾರ್ಯಾಣಿ ಸಮಿಧಃ ಕುಶಾಃ ಸುಮನಸಸ್ತಥಾ |
ಬಲಯಶ್ಚಾನ್ನಲಾಜಾಭಿರ್ಧೂಪನಂ ದೀಪಕರ್ಮ ಚ ॥7॥
ಸರ್ವಂ ತಸ್ಯ ಗೃಹೇ ರಾಜ್ಞಃ ಪ್ರಾವರ್ತತ ಮಹಾತ್ಮನಃ |
ಜಪಯಜ್ಞಾನ್ ಮನೋಯಜ್ಞಾನ್ ತ್ರಿದಿವೇಽಪಿ ಚಕಾರ ಸಃ ॥8॥

ಅಗ್ನಿಕಾರ್ಯಗಳು, ಸಮಿತ್ತುಗಳು, ಕುಶಗಳು, ಪುಷ್ಪಗಳು, ಅನ್ನ-ಅರಳು ಮೊದಲಾದವುಗಳ ನೈವೇದ್ಯ, ಧೂಪ-ದೀಪಗಳು ಎಲ್ಲವೂ ಆ ಮಹಾತ್ಮನಾದ ರಾಜನ ಮನೆಯಲ್ಲಿ ನಡೆದವು. ಅವನು ಸ್ವರ್ಗದಲ್ಲಿಯೂ ಜಪಯಜ್ಞಗಳನ್ನು ಮತ್ತು ಮನೋ ಯಜ್ಞಗಳನ್ನು ಮಾಡಿದನು.
ದೈವತಾನ್ಯರ್ಚಯಂಶ್ಚಾಪಿ ವಿಧಿವತ್ ಸ ಸುರೇಶ್ವರಃ |
ಸರ್ವಾಣ್ಯೇವ ಯಥಾನ್ಯಾಯಂ ಯಥಾಪೂರ್ವಮರಿಂದಮ ॥9॥
ಎಲೈ ಅರಿಂದಮನೇ, ಸುರೇಶ್ವರನಾದ ಅವನು ಮೊದಲಿನಂತೆಯೇ ವಿಧಿಗೆ ಅನುಗುಣವಾಗಿ ಎಲ್ಲಾ ದೇವತೆಗಳ ಅರ್ಚನೆಯನ್ನೂ ಮಾಡಿದನು.
ಅಥೇಂದ್ರಸ್ಯ ಭವಿಷ್ಯತ್ವಾದಹಂಕಾರಸ್ತಮಾವಿಶತ್ |
ಸರ್ವಾಶ್ಚೈವ ಕ್ರಿಯಾಸ್ತಸ್ಯ ಪರ್ಯಹೀಯಂತ ಭೂಪತೇ ॥10॥
ಅವನು ಮುಂದಿನ ಮನ್ವಂತರದಲ್ಲಿ ಇಂದ್ರನಾಗಬೇಕಾದುದರಿಂದ ಅವನಿಗೆ ಅಹಂಕಾರ ಉಂಟಾಯಿತು. ಎಲೈ ರಾಜನೇ, ಅವನ ಎಲ್ಲಾ ಕ್ರಿಯೆಗಳೂ ನಷ್ಟವಾದವು.
ಸ ಋಷೀನ್ ವಾಹಯಾಮಾಸ ವರದಾನಮದಾನ್ವಿತಃ |
ಪರಿಹೀನಕ್ರಿಯಶ್ಚಾಪಿ ದುರ್ಬಲತ್ವಮುಪೇಯಿವಾನ್ ॥11॥
ಅವನು ವರದಾನಗಳಿಂದ ದರ್ಪಿತನಾಗಿ ಋಷಿಗಳಿಂದ ತನ್ನ ವಾಹನವನ್ನು ಹೊರಿಸಿದನು. ತನ್ನ ಸತ್ಕರ್ಮಗಳ ಫಲವು ನಾಶವನ್ನು ಹೊಂದಿದುದರಿಂದ ದುರ್ಬಲನಾದನು.
ತಸ್ಯ ವಾಹಯತಃ ಕಾಲೋ ಮುನಿಮುಖ್ಯಾನ್ ತಪೋಧನಾನ್ |
ಅಹಂಕಾರಾಭಿಭೂತಸ್ಯ ಸುಮಹಾನತ್ಯವರ್ತತ ॥12॥
ಅಹಂಕಾರದಿಂದ ಕೂಡಿ ತಪೋಧನರಾದ ಋಷಿಗಳಿಂದ ತನ್ನ ವಾಹನಗಳನ್ನು ಹೊರಿಸುತ್ತಿದ್ದ ಅವನಿಗೆ ಬಹುಕಾಲವು ಕಳೆದು ಹೋಯಿತು.
ಅಥ ಪರ್ಯಾಯಶ ಋಷೀನ್ ವಾಹನಾಯೋಪಚಕ್ರಮೇ |
ಪರ್ಯಾಯಶ್ಚಾಪ್ಯಗಸ್ತ್ಯಸ್ಯ ಸಮಪದ್ಯತ ಭಾರತ ॥13॥
ಅನಂತರ ಅವನು ಋಷಿಗಳನ್ನು ಪರ್ಯಾಯದಿಂದ ತನ್ನ ವಾಹನಕ್ಕೆ ನೇಮಿಸಲು ಪ್ರಾರಂಭ ಮಾಡಿದನು. ಎಲೈ ಭಾರತನೇ, ಆ ರೀತಿಯಲ್ಲಿ ಅಗಸ್ತ್ಯರ ಪರ್ಯಾಯವು ಬಂದಿತು.
ಅಥಾಗಮ್ಯ ಮಹಾತೇಜಾ ಭೃಗುರ್ಬ್ರಹ್ಮವಿದಾಂ ವರಃ |
ಅಗಸ್ತ್ಯಮಾಶ್ರಮಸ್ಥಂ ವೈ ಸಮುಪೇತ್ಯೇದಮಬ್ರವೀತ್ ॥14॥
ಏವಂ ವಯಮಸತ್ಕಾರಂ ದೇವೇಂದ್ರಸ್ಯಾಸ್ಯ ದುರ್ಮತೇಃ |
ನಹುಷಸ್ಯ ಕಿಮರ್ಥಂ ವೈ ಮರ್ಷಯಾಮ ಮಹಾಮುನೇ ॥15॥
ಆಗ ಮಹಾತೇಜಸ್ವಿಗಳೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೂ ಆದ ಭೃಗುಗಳು ಅಗಸ್ತ್ಯರ ಆಶ್ರಮಕ್ಕೆ ಬಂದು ಅಗಸ್ತ್ಯರನ್ನು ಸಮೀಪಿಸಿ ಎಲೈ ಮಹಾಮುನಿಯೇ, ನಾವು ದುರ್ಮತಿಯಾದ ದೇವೇಂದ್ರನಾದ ಈ ನಹುಷನಿಂದ ಉಂಟಾಗುವ ಅಪಮಾನವನ್ನು ಏಕೆ ಸಹಿಸುತ್ತಿದ್ದೇವೆ ಎಂದು ಕೇಳಿದರು.
ಅಗಸ್ತ್ಯಃ
ಕಥಮೇಷ ಮಯಾ ಶಕ್ಯಃ ಶಪ್ತುಂ ಯಸ್ಯ ಮಹಾಮುನೇ |
ವರದೇನ ವರೋ ದತ್ತೋ ವಿದಿತೋ ಭವತಶ್ಚ ಸಃ ॥16॥
ಅಗಸ್ತ್ಯ ಎಲೈ ಮಹಾಮುನಿಯೇ, ಇವನನ್ನು ನಾನು ಹೇಗೆ ಶಪಿಸಲು ಸಾಧ್ಯ? ವರಪ್ರದರಾದ ಬ್ರಹ್ಮದೇವರಿಂದ ಅವನು ವರವನ್ನು ಪಡೆದಿದ್ದಾನಷ್ಟೆ? ಈ ವಿಷಯವು ನಿಮಗೂ ತಿಳಿದಿದೆ.
ಯೋ ಮೇ ದೃಷ್ಟಿಪಥಂ ಗಚ್ಛೇತ್ ಸ ಮೇ ವಶ್ಯೋ ಭವೇದಿತಿ |
ಇತ್ಯನೇನ ವರೋ ದೇವಾನ್ ಯಾಚಿತೋ ಗಚ್ಛತಾ ದಿವಮ್ ॥17॥
ಏವಂ ನ ದಗ್ಧಃ ಸ ಮಯಾ ಭವತಾ ಚ ನ ಸಂಶಯಃ |
ಅನ್ಯೇನಾಪ್ಯೃಷಿಮುಖ್ಯೇನ ನ ಶಪ್ತೋ ನ ಚ ಪಾತಿತಃ ॥18॥
ಯಾವನು ನನ್ನ ದೃಷ್ಟಿಗೋಚರನಾಗುತ್ತಾನೆಯೋ ಅವನು ನನಗೆ ವಶನಾಗಬೇಕು ಎಂದು ನಹುಷನು ಸ್ವರ್ಗಕ್ಕೆ ಹೋಗುತ್ತಾ ದೇವತೆಗಳನ್ನು ವರವನ್ನು ಯಾಚಿಸಿದ್ದಾನೆ. ಆದ್ದರಿಂದ ಅವನು ನಿಮ್ಮಿಂದಲಾಗಲೀ, ನನ್ನಿಂದಲಾಗಲೀ ಅಥವಾ ಬೇರೆ ಶ್ರೇಷ್ಠ ಋಷಿಗಳಿಂದಾಗಲೀ ಶಾಪಕ್ಕೂ ಒಳಗಾಗಿಲ್ಲ ಮತ್ತು ಇಂದ್ರಸ್ಥಾನದಿಂದ ಬೀಳಿಸಲ್ಪಟ್ಟಿಲ್ಲ. ಇದರಲ್ಲಿ ಸಂಶಯವಿಲ್ಲ.
ಅಮೃತಂ ಚೈವ ಪಾನಾಯ ದತ್ತಮಸ್ಮೈ ಪುರಾ ವಿಭೋ |
ಮಹಾತ್ಮನೇ ತದರ್ಥಂ ಚ ನಾಸ್ಮಾಭಿರ್ವಿನಿಪಾತ್ಯತೇ ॥19॥
ಎಲೈ ವಿಭುವೇ, ಈ ಮಹಾತ್ಮನಿಗೆ ಹಿಂದೆ ಪಾನ ಮಾಡಲು ಅಮೃತವೂ ಕೊಡಲ್ಪಟ್ಟಿದೆ. ಆ ಕಾರಣದಿಂದ ನಮ್ಮಿಂದ ಅವನು ಬೀಳಿಸಲ್ಪಡುವುದಿಲ್ಲ.
ಪ್ರಾಯಚ್ಛತ ವರಂ ದೇವಃ ಪ್ರಜಾನಾಂ ದುಃಖಕಾರಕಮ್ |
ದ್ವಿಜೇಷ್ವಧರ್ಮಯುಕ್ತಾನಿ ಸ ಕರೋತಿ ನರಾಧಮಃ ॥20॥
ದೇವನು ಅವನಿಗೆ ಪ್ರಜೆಗಳಿಗೆ ದುಃಖವನ್ನುಂಟು ಮಾಡುವ ವರವನ್ನು ಕೊಟ್ಟಿದ್ದಾನೆ. ಆ ಕಾರಣದಿಂದ ನರಾಧಮನಾದ ಅವನು ಬ್ರಾಹ್ಮಣರನ್ನು ಅಧರ್ಮದಿಂದ ನಡೆಸಿಕೊಳ್ಳುತ್ತಿದ್ದಾನೆ.

ಅತ್ರ ಯತ್ಪ್ರಾಪ್ತಕಾಲಂ ನಸ್ತದ್ ಬ್ರೂಹಿ ವದತಾಂವರ |
ಭವಾಂಶ್ಚಾಪಿ ಯಥಾ ಬ್ರೂಯಾತ್ ತತ್ಕರ್ತಾಸ್ಮಿ ನ ಸಂಶಯಃ ॥21॥
ಎಲೈ ಮಾತನಾಡುವವರಲ್ಲಿ ಶ್ರೇಷ್ಠನೇ, ಆದ್ದರಿಂದ ಈಗ ಏನು ಮಾಡಬಹುದೆಂದು ಹೇಳು. ನೀನು ಹೇಳಿದಂತೆ ನಾನು ಮಾಡುತ್ತೇನೆ, ಇದರಲ್ಲಿ ಸಂಶಯವಿಲ್ಲ.
ಭೃಗುಃ
ಪಿತಾಮಹನಿಯೋಗೇನ ಭವಂತಮಹಮಾಗತಃ |
ಪ್ರತಿಕರ್ತುಂ ಬಲವತಿ ನಹುಷೇ ದರ್ಪಮಾಸ್ಥಿತೇ ॥22॥
ಭೃಗು ಪಿತಾಮಹರಾದ ಬ್ರಹ್ಮದೇವರ ಆದೇಶದಂತೆ ಬಲಿಷ್ಠನೂ, ದರ್ಪಿಷ್ಠನೂ ಆದ ನಹುಷನಿಗೆ ಪ್ರತೀಕಾರವನ್ನು ಮಾಡಲು ನಾನು ನಿನ್ನ ಬಳಿಗೆ ಬಂದಿದ್ದೇನೆ.
ಅದ್ಯ ಹಿ ತ್ವಾ ಸುದುರ್ಬುದ್ಧಿ ರಥೇ ಯೋಕ್ಷ್ಯತಿ ದೇವರಾಟ್ |
ಅದ್ಯೈನಮಹಮುದ್ವೃತ್ತಂ ಕರಿಷ್ಯಾಮೀಂದ್ರಮೋಜಸಾ ॥23॥
ದೇವರಾಜನಾದ ದುರ್ಬುದ್ಧಿಯುಳ್ಳ ಅವನು ಈ ದಿನ ನಿನ್ನನ್ನು ರಥವನ್ನು ಹೊರಲು ಯೋಜಿಸುವನು. ಈ ದಿನ ನಾನು ನನ್ನ ಸಾಮರ್ಥ್ಯದಿಂದ ಆ ಇಂದ್ರನನ್ನು ದುರ್ನಡತೆಯುಳ್ಳವನನ್ನಾಗಿ ಮಾಡುವೆನು.
ಅದ್ಯೇಂದ್ರಂ ಸ್ಥಾಪಯಿಷ್ಯಾಮಿ ಪಶ್ಯತಸ್ತೇ ಶತಕ್ರತುಮ್ |
ಸಂಚಾಲ್ಯ ಪಾಪಕರ್ಮಾಣಮಿಂದ್ರಸ್ಥಾನಾತ್ ಸುದುರ್ಮತಿಮ್ ॥24॥
ಈ ದಿನ ನಾನು ನೀನು ನೋಡುತ್ತಿರುವಂತೆಯೇ ಅತ್ಯಂತ ದುರ್ಮತಿಯಾದ ಮತ್ತು ಪಾಪಕರ್ಮವನ್ನು ಮಾಡುವ ನಹುಷನನ್ನು ಇಂದ್ರನ ಸ್ಥಾನದಿಂದ ಇಳಿಸಿ ಶತಕ್ರತುವಾದ ಪುರಂದರನನ್ನು ಇಂದ್ರಸ್ಥಾನದಲ್ಲಿ ಸ್ಥಾಪಿಸುತ್ತೇನೆ.
ಅದ್ಯ ಚಾಸೌ ಕುದೇವೇಂದ್ರಸ್ತ್ವಾಂ ಪದಾ ಧರ್ಷಯಿಷ್ಯತಿ |
ದೈವೋಪಹತಚಿತ್ತತ್ವಾದಾತ್ಮನಾಶಾಯ ಮಂದಧೀಃ ॥25॥
ಈ ದಿನ ಈ ಕೆಟ್ಟ ದೇವೇಂದ್ರನು ನಿನ್ನನ್ನು ಪಾದದಿಂದ ಒದೆಯುವನು. ದೈವೋಪ- ಹಿತಚಿತ್ತನಾಗಿ, ಮಂದಬುದ್ಧಿಯುಳ್ಳವನಾಗಿ ತನ್ನ ನಾಶಕ್ಕಾಗಿ ಅಂತಹ ಕಾರ್ಯವನ್ನು ಮಾಡುವನು.
ವ್ಯುತ್ಕ್ರಾಂತಧರ್ಮಂ ತಮಹಂ ಧರ್ಷಣಾಮರ್ಷಿತೋ ಭೃಶಮ್ |
ಅಹಿರ್ಭವಸ್ವೇತಿ ರುಷಾ ಶಪ್ಸ್ಯೇ ಪಾಪಂ ದ್ವಿಜದ್ರುಹಮ್ ॥26॥
ಧರ್ಮವನ್ನು ಮೀರಿದ ಅವನ ಮೇಲೆ ನಿನಗೆ ಮಾಡುವ ಈ ಅವಮಾನದಿಂದ ಬಹಳವಾಗಿ ಕೋಪಗೊಂಡು ನಾನು ಆ ಕೋಪದಿಂದ ಸರ್ಪವಾಗು ಎಂದು ಬ್ರಾಹ್ಮಣ ದ್ರೋಹಿಯೂ, ಪಾಪಕರ್ಮವನ್ನು ಮಾಡುವವನೂ ಆದ ಅವನಿಗೆ ಶಾಪವನ್ನು ಕೊಡುವೆನು.
ತತ ಏನಂ ಸುದುರ್ಬುದ್ಧಿಂ ಧಿಕ್ಶಬ್ದಾಭಿಹತತ್ವಿಷಮ್ |
ಧರಣ್ಯಾಂ ಪಾತಯಿಷ್ಯಾಮಿ ಪ್ರೇಕ್ಷತಸ್ತೇ ಮಹಾಮುನೇ ॥27॥
ನಹುಷಂ ಪಾಪಕರ್ಮಾಣಮೈಶ್ವರ್ಯಬಲಮೋಹಿತಮ್ |
ಯಥಾ ಚ ರೋಚತೇ ತುಭ್ಯಂ ತಥಾ ಕರ್ತಾಸ್ಮ್ಯಹಂ ಮುನೇ ॥28॥
ಎಲೈ ಮಹಾಮುನಿಯೇ, ಅನಂತರ ಧಿಕ್ಶಬ್ದದಿಂದ ತನ್ನ ಕಾಂತಿಯನ್ನು ಕಳೆದುಕೊಂಡ ಅತ್ಯಂತ ದುರ್ಬುದ್ಧಿಯಾದ ಪಾಪಕರ್ಮವನ್ನು ಮಾಡಿದ, ಐಶ್ವರ್ಯಬಲ ಮೋಹಿತನಾದ ನಹುಷನನ್ನು ನೀನು ನೋಡುತ್ತಿರುವಂತೆಯೇ ಭೂಮಿಯಲ್ಲಿ ಬೀಳಿಸುವೆನು. ಎಲೈ ಮುನಿಯೇ, ಅಥವಾ ನಿನಗೆ ಹೇಗೆ ಇಷ್ಟವಾಗುತ್ತದೆಯೋ ಹಾಗೆ ಮಾಡುತ್ತೇನೆ.
ಏವಮುಕ್ತಸ್ತು ಭೃಗುಣಾ ಮೈತ್ರಾವರುಣಿರವ್ಯಯಃ |
ಅಗಸ್ತ್ಯಃ ಪರಮಪ್ರೀತೋ ಬಭೂವ ವಿಗತಜ್ವರಃ |
ತಥಾ ಚಕಾರ ತತ್ಸರ್ವಂ ಪಪಾತ ನಹುಷೋ ಯಥಾ ॥29॥
ಹೀಗೆ ಭೃಗುಗಳಿಂದ ಹೇಳಲ್ಪಟ್ಟ ಮೈತ್ರಾವರುಣಿಗಳಾದ, ಅವ್ಯಯರಾದ ಅಗಸ್ತ್ಯರು ಬಹಳ ಸಂತೋಷವನ್ನು ಹೊಂದಿ ಆತಂಕವನ್ನು ತೊರೆದರು ಮತ್ತು ನಹುಷನು ಕೆಳಗೆ ಬೀಳುವಂತೆ ಆ ಎಲ್ಲವನ್ನೂ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಗಸ್ತ್ಯಸಂವಾದೋ ನಾಮ ದ್ವಿಪಂಚಾಶದುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ಮೂರನೆಯ ಅಧ್ಯಾಯ
ನಹುಷನ ಪತನ. ದೀಪಾದಿದಾನಪುಣ್ಯದಿಂದ ಪುನಃ ಸದ್ಗತಿಪ್ರಾಪ್ತಿ
ಯುಧಿಷ್ಠಿರಃ
ಕಥಂ ಸ ವೈ ವಿಪನ್ನಶ್ಚ ಕಥಂ ವೈ ಪಾತಿತೋ ಭುವಿ |
ಕಥಂ ಚಾನಿಂದ್ರತಾಂ ಪ್ರಾಪ್ತಸ್ತದ್ಭವಾನ್ ವಕ್ತುಮರ್ಹತಿ ॥1॥
ಯುಧಿಷ್ಠಿರ ನಹುಷನು ಹೇಗೆ ಪುಣ್ಯಹೀನನಾಗಿ ಭೂಮಿಯಲ್ಲಿ ಬಿದ್ದನು? ಅವನು ಹೇಗೆ ಇಂದ್ರಪದವಿಯನ್ನು ಕಳೆದುಕೊಂಡನೆಂದು ನೀನು ನನಗೆ ಹೇಳಬೇಕು.
ಭೀಷ್ಮಃ

ಏವಂ ತಯೋಃ ಸಂವದತೋಃ ಕ್ರಿಯಾಸ್ತಸ್ಯ ಮಹಾತ್ಮನಃ |
ಸರ್ವಾ ಏವಾಭ್ಯವರ್ತಂತ ಯಾ ದಿವ್ಯಾ ಯಾಶ್ಚ ಮಾನುಷಾಃ ॥2॥
ಭೀಷ್ಮ ಭೃಗು ಮತ್ತು ಅಗಸ್ತ್ಯರು ಹೀಗೆ ಮಾತನಾಡುತ್ತಿರುವಾಗ ನಹುಷನ ಮಾನುಷ ಲೋಕದ ಮತ್ತು ದೇವಲೋಕದ ಎಲ್ಲಾ ಸತ್ಕರ್ಮಗಳು ಮುಂದುವರೆದವು.
ತಥೈವ ದೀಪದಾನಾನಿ ಸರ್ವೋಪಕರಣಾನಿ ಚ |
ಬಲಿಕರ್ಮ ಚ ಯಥಾನ್ಯಾಯಮುತ್ಸವಾಶ್ಚ ಪ್ರಥಕ್ಪೃಥಕ್ |
ಸರ್ವಾಸ್ತಸ್ಯ ಸಮುತ್ಪನ್ನಾ ದೇವರಾಜ್ಞೋ ಮಹಾತ್ಮನಃ ॥3॥
ಹಾಗೆಯೇ ದೀಪದಾನಗಳು, ಸರ್ವೋಪಕರಣ ದಾನಗಳು, ಪೂಜಾಕರ್ಮ, ಬೇರೆ ಬೇರೆ ಉತ್ಸವಗಳು ಎಲ್ಲವೂ ಆ ಮಹಾತ್ಮನಾದ ದೇವರಾಜನಿಂದ ನಡೆಸಲ್ಪಟ್ಟವು.
ದೇವಲೋಕೇ ನೃಲೋಕೇ ಚ ಸದಾಚಾರಾ ಬುಧೈಃ ಸ್ಮೃತಾಃ |
ತೇ ಚೇದ್ ಭವಂತಿ ರಾಜೇಂದ್ರ ಋಧ್ಯಂತೇ ಗೃಹಮೇಧಿನಃ |
ಧೂಪಪ್ರದಾನೈರ್ದೀಪೈಶ್ಚ ನಮಸ್ಕಾರೈಸ್ತಥೈವ ಚ ॥4॥
ಎಲೈ ರಾಜೇಂದ್ರನೇ, ದೇವಲೋಕದಲ್ಲಿ ಮತ್ತು ಮನುಷ್ಯಲೋಕದಲ್ಲಿ ಜ್ಞಾನಿಗಳು ಹೇಳಿದ ಸದಾಚಾರಗಳು ನಡೆದರೆ ಗೃಹಸ್ಥಾಶ್ರಮಿಗಳು ಅಭಿವೃದ್ಧಿಯನ್ನು ಹೊಂದುತ್ತಾರೆ. ಹಾಗೆಯೇ ಧೂಪ-ದೀಪಾದಿ ದಾನಗಳಿಂದಲೂ, ನಮಸ್ಕಾರಗಳಿಂದಲೂ ಅಭಿವೃದ್ಧಿಯನ್ನು ಹೊಂದುತ್ತಾರೆ.
ಯಥಾ ಸಿದ್ಧಸ್ಯ ಚಾನ್ನಸ್ಯ ದ್ವಿಜಾಯಾಗ್ರಂ ಪ್ರದೀಯತೇ |
ಬಲಯಶ್ಚ ಗೃಹೋದ್ದೇಶೇ ಅಥ ಪ್ರೀಯಂತಿ ದೇವತಾಃ ॥5॥
ಹಾಗೆಯೇ ಸಿದ್ಧವಾದ ಅಗ್ರಾನ್ನವನ್ನು ಬ್ರಾಹ್ಮಣರಿಗೆ ನೀಡಿದರೆ ಗೃಹಪ್ರದೇಶದಲ್ಲಿ ಪೂಜೆಗಳನ್ನು ಮಾಡಿದರೆ ದೇವತೆಗಳು ಪ್ರಸನ್ನರಾಗುತ್ತಾರೆ.
ಯಥಾ ಚ ಗೃಹಿಣಸ್ತೋಷೋ ಭವೇದ್ ವೈ ಬಲಿಕರ್ಮಣಾ |
ತಥಾ ಶತಗುಣಾ ಪ್ರೀತಿರ್ದೇವತಾನಾಂ ಸ್ಮ ಜಾಯತೇ ॥6॥
ಅಂತಹ ಪೂಜಾಕರ್ಮಗಳಿಂದ ಗೃಹಸ್ಥನಿಗೆ ಉಂಟಾಗುವ ಸಂತೋಷದ ನೂರು ಪಟ್ಟು ಸಂತೋಷವು ದೇವತೆಗಳಿಗೆ ಉಂಟಾಗುತ್ತದೆ.
ಏವಂ ಧೂಪಪ್ರದಾನಂ ಚ ದೀಪದಾನಂ ಚ ಸಾಧವಃ |
ಪ್ರಶಂಸಂತಿ ನಮಸ್ಕಾರೈರ್ಯುಕ್ತಮಾತ್ಮಗುಣಾವಹಮ್ ॥7॥
ಹಾಗೆಯೇ ತನಗೆ ಸದ್ಗುಣಗಳನ್ನು ತಂದುಕೊಡುವ ನಮಸ್ಕಾರ ಸಹಿತವಾದ ಧೂಪ- ದೀಪ ದಾನಗಳನ್ನು ಸಜ್ಜನರು ಪ್ರಶಂಸೆ ಮಾಡುತ್ತಾರೆ.
ಸ್ನಾನೇನಾದ್ಭಿಶ್ಚ ಯತ್ಕರ್ಮ ಕ್ರಿಯತೇ ವೈ ವಿಪಶ್ಚಿತಾ |
ನಮಸ್ಕಾರಪ್ರಯುಕ್ತೇನ ಪ್ರೀಯತೇ ತೇನ ದೇವತಾಃ |
ಗೃಹ್ಯಾಶ್ಚ ದೇವತಾಃ ಸರ್ವಾಃ ಪ್ರೀಯಂತೇ ವಿಧಿನಾಽರ್ಚಿತಾಃ ॥8॥
ಜ್ಞಾನಿಯಾದವನು ಮಾಡುವ ಕರ್ಮದಿಂದಲೂ, ಜಲದಿಂದ ಮಾಡುವ ನಮಸ್ಕಾರಯುಕ್ತವಾದ ತರ್ಪಣಾದಿ ಕ್ರಿಯೆಗಳಿಂದಲೂ ದೇವತೆಗಳು ಪ್ರಸನ್ನರಾಗುತ್ತಾರೆ. ವಿಧಿಗೆ ಅನುಗುಣವಾಗಿ ಪೂಜಿಸಲ್ಪಟ್ಟ ಗೃಹದೇವತೆಗಳೆಲ್ಲರೂ ಪ್ರಸನ್ನರಾಗುತ್ತಾರೆ.
ಇತ್ಯೇತಾಂ ಬುದ್ಧಿಮಾಸ್ಥಾಯ ನಹುಷಃ ಸ ನರೇಶ್ವರಃ |
ಸುರೇಂದ್ರತ್ವಂ ಮಹತ್ಪ್ರಾಪ್ಯ ಕೃತವಾನೇತದದ್ಭುತಮ್ ॥9॥
ಇಂತಹ ಈ ಬುದ್ಧಿಯನ್ನು ಹೊಂದಿ ನರೇಶ್ವರನಾದ ನಹುಷನು ಶ್ರೇಷ್ಠವಾದ ಇಂದ್ರಪದವಿಯನ್ನು ಹೊಂದಲು ಅವೆಲ್ಲವನ್ನೂ ಅದ್ಭುತವಾಗಿ ಮಾಡಿದನು.
ಕಸ್ಯಚಿತ್ತ್ವಥ ಕಾಲಸ್ಯ ಭಾಗ್ಯಕ್ಷಯ ಉಪಸ್ಥಿತೇ |
ಸರ್ವಮೇತದವಜ್ಞಾಯ ನ ಚಕಾರೈತದೀದೃಶಮ್ ॥10॥
ಎಷ್ಟೋ ಕಾಲವು ಕಳೆದ ಮೇಲೆ ಅವನ ಪುಣ್ಯಕ್ಷಯ ಉಂಟಾಗುವ ಸಮಯ ಬಂದಾಗ ಇವೆಲ್ಲವನ್ನೂ ತಿರಸ್ಕರಿಸಿ ಇಂತಹ ಯಾವ ಕಾರ್ಯವನ್ನೂ ಮಾಡಲಿಲ್ಲ.
ತತಃ ಸ ಪರಿಹೀಣೋಽಭೂತ್ ಸುರೇಂದ್ರೋ ಬಲಿಕರ್ಮತಃ |
ಧೂಪದೀಪೋದಕವಿಧಿಂ ನ ಯಥಾವಚ್ಚಕಾರ ಹ |
ತತೋಽಸ್ಯ ಯಜ್ಞವಿಷಯೋ ರಕ್ಷೋಭಿಃ ಪರ್ಯಬಾಧ್ಯತ ॥11॥
ಸುರೇಂದ್ರನಾದ ಅವನು ಬಲಿಕರ್ಮವನ್ನು ತ್ಯಜಿಸಿದನು. ಧೂಪ-ದೀಪೋದಕ ವಿಧಿಯನ್ನು ಸರಿಯಾಗಿ ಮಾಡಲಿಲ್ಲ. ಆಗ ಅವನು ಯಜ್ಞಪ್ರದೇಶವು ರಾಕ್ಷಸರಿಂದ ಕೆಡಿಸಲ್ಪಟ್ಟಿತು.
ಅಥಾಗಸ್ತ್ಯಮೃಷಿಶ್ರೇಷ್ಠಂ ವಾಹನಾಯಾಜುಹಾವ ಹ |
ದ್ರುತಂ ಸರಸ್ವತೀಕೂಲಾತ್ ಸ್ಮಯನ್ನಿವ ಮಹಾಬಲಃ ॥12॥
ಅನಂತರ ಅವನು ಋಷಿಶ್ರೇಷ್ಠರಾದ ಅಗಸ್ತ್ಯರನ್ನು ತನ್ನ ವಾಹನವನ್ನಾಗಿ ಆಹ್ವಾನ ಮಾಡಿದನು. ಮಹಾಬಲನಾದ ಅವನು ನಗುತ್ತಾ ಸರಸ್ವತೀ ತೀರದಿಂದ ಶೀಘ್ರವಾಗಿ ಎಳೆದುಕೊಂಡು ಹೋಗುವಂತೆ ಅವರನ್ನು ಆಹ್ವಾನಿಸಿದನು.
ತತೋ ಭೃಗುರ್ಮಹಾತೇಜಾ ಮೈತ್ರಾವರುಣಿಮಬ್ರವೀತ್ |
ನಿಮೀಲಯಸ್ವ ನಯನೇ ಜಟಾಯಾಂ ಪ್ರವಿಶಾಮ್ಯಹಮ್ ॥13॥

ಆಗ ಮಹಾತೇಜಸ್ವಿಗಳಾದ ಭೃಗುಗಳು ಮೈತ್ರಾವರುಣಿಗಳಾದ ಅಗಸ್ತ್ಯರನ್ನು ಕುರಿತು ಕಣ್ಣುಗಳನ್ನು ಮುಚ್ಚಿಕೊಳ್ಳಿ ನಾನು ನಿಮ್ಮ ಜಟೆಯಲ್ಲಿ ಪ್ರವೇಶಿಸುತ್ತೇನೆ ಎಂದು ಹೇಳಿದರು.

ಸ್ಥಾಣುಭೂತಸ್ಯ ತಸ್ಯಾಥ ಜಟಾಃ ಪ್ರಾವಿಶದಚ್ಯುತಃ |
ಭೃಗುಃ ಸ ಸುಮಹಾತೇಜಾಃ ಪಾತನಾಯ ನೃಪಸ್ಯ ಹ ॥14॥

ಮರದ ತುಂಡಿನಂತೆ ನಿಶ್ಚಲವಾಗಿ ನಿಂತ ಅಗಸ್ತ್ಯರ ಜಟೆಯನ್ನು ಮಹಾತೇಜಸ್ವಿಗಳೂ, ತಮ್ಮ ಗುಣಗಳಿಂದ ಎಂದೂ ಚ್ಯುತರಾಗದವರೂ ಆದ ಭೃಗುಗಳು ನಹುಷನನ್ನು ಬೀಳಿಸುವುದಕ್ಕೋಸ್ಕರ ಪ್ರವೇಶಿಸಿದರು.

ತತಃ ಸ ದೇವರಾಟ್ ಪ್ರಾಪ್ತಸ್ತಮೃಷಿಂ ವಾಹನಾಯ ವೈ |
ತತೋಽಗಸ್ತ್ಯಃ ಸುರಪತಿಂ ವಾಕ್ಯಮಾಹ ವಿಶಾಂಪತೇ ॥15॥
ಯೋಜಯಸ್ವೇಂದ್ರ ಮಾಂ ಕ್ಷಿಪ್ರಂ ಕಂ ಚ ದೇಶಂ ವಹಾಮಿ ತೇ |
ಯತ್ರ ವಕ್ಷ್ಯಸಿ ತತ್ರ ತ್ವಾಂ ನಯಿಷ್ಯಾಮಿ ಸುರಾಧಿಪ ॥16॥

ಅನಂತರ ಸಮೀಪಕ್ಕೆ ಬಂದ ಆ ಋಷಿಗಳನ್ನು ದೇವರಾಜನಾದ ನಹುಷನು ವಾಹನವನ್ನು ತೆಗೆದುಕೊಂಡು ಹೋಗುವಂತೆ ಪ್ರಚೋದಿಸಿದನು. ಎಲೈ ರಾಜನೇ, ಆಗ ಅಗಸ್ತ್ಯರು ಸುರಪತಿಯಾದ ನಹುಷನನ್ನು ಕುರಿತು- `ಇಂದ್ರನೇ, ನನ್ನನ್ನು ಬೇಗ ಹೂಡುವವನಾಗು. ನಿನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗಲಿ? ಎಲೈ ಸುರಾಧಿಪನೇ, ನೀನು ಹೇಳಿದ ಕಡೆಗೆ ನಿನ್ನನ್ನು ಕರೆದುಕೊಂಡು ಹೋಗುವೆನು' ಎಂದು ಹೇಳಿದರು.

ಇತ್ಯುಕ್ತೋ ನಹುಷಸ್ತೇನ ಯೋಜಯಾಮಾಸ ತಂ ಮುನಿಮ್ |
ಭೃಗುಸ್ತಸ್ಯ ಜಟಾಸಂಸ್ಥೋ ಬಭೂವ ಹೃಷಿತೋ ಭೃಶಮ್ ॥17॥

ಹೀಗೆ ಹೇಳಲ್ಪಟ್ಟ ನಹುಷನು ಆ ಋಷಿಗಳನ್ನು ತನ್ನ ರಥದಲ್ಲಿ ಹೂಡಿದನು. ಅವರ ಜಟೆಯಲ್ಲಿದ್ದ ಭೃಗುಗಳು ಬಹಳ ಸಂತುಷ್ಟರಾದರು.

ನ ಚಾಪಿ ದರ್ಶನಂ ತಸ್ಯ ಚಕಾರ ಸ ಭೃಗುಸ್ತದಾ |
ವರದಾನಪ್ರಭಾವಜ್ಞೋ ನಹುಷಸ್ಯ ಮಹಾತ್ಮನಃ ॥18॥

ಮಹಾತ್ಮನಾದ ನಹುಷನು ಪಡೆದ ವರದ ಸಾಮರ್ಥ್ಯವನ್ನು ತಿಳಿದ ಭೃಗುಗಳು ಅವನಿಗೆ ಆಗ ಗೋಚರವಾಗಲಿಲ್ಲ.

ನ ಚುಕೋಪ ಸ ಚಾಗಸ್ತ್ಯೋ ಯುಕ್ತೋಽಪಿ ನಹುಷೇಣ ವೈ |
ತಂ ತು ರಾಜಾ ಪ್ರತೋದೇನ ಚೋದಯಾಮಾಸ ಭಾರತ ॥19॥

ನಹುಷನಿಂದ ಹೂಡಲ್ಪಟ್ಟರೂ ಅಗಸ್ತ್ಯರು ಕೋಪಗೊಳ್ಳಲಿಲ್ಲ. ಎಲೈ ಭಾರತನೇ, ಆಗ ರಾಜನಾದ ನಹುಷನು ಅವರನ್ನು ಚಾವಟಿಯಿಂದ ಪ್ರಚೋದಿಸಿದನು.

ನ ಚುಕೋಪ ಸ ಧರ್ಮಾತ್ಮಾ ತತಃ ಪಾದೇನ ದೇವರಾಟ್ |
ಅಗಸ್ತ್ಯಸ್ಯ ತದಾ ಕ್ರುದ್ಧೋ ವಾಮೇನಾಭ್ಯಹನಚ್ಛಿರಃ ॥20॥

ಆಗಲೂ ಧರ್ಮಾತ್ಮರಾದ ಅಗಸ್ತ್ಯರು ಕೋಪಗೊಳ್ಳಲಿಲ್ಲ. ಆಗ ದೇವರಾಜನಾದ ನಹುಷನು ಕೋಪಗೊಂಡ ತನ್ನ ಎಡಗಾಲಿನಿಂದ ಅಗಸ್ತ್ಯರ ಶಿರಸ್ಸನ್ನು ಒದ್ದನು.

ತಸ್ಮಿನ್ ಶಿರಸ್ಯಭಿಹತೇ ಸ ಜಟಾಂತರ್ಗತೋ ಭೃಗುಃ |
ಶಶಾಪ ಚಾತಿಕೋಪೇನ ನಹುಷಂ ಪಾಪಚೇತಸಮ್ ॥21॥

ಅವರನ್ನು ಶಿರಸ್ಸಿನಲ್ಲಿ ಆ ರೀತಿಯಲ್ಲಿ ಒದೆಯುತ್ತಿರಲು ಜಟೆಯಲ್ಲಿ ಅಡಗಿದ್ದ ಭೃಗುಗಳು ಬಹಳ ಕೋಪದಿಂದ ಪಾಪಚೇತನನಾದ ನಹುಷನಿಗೆ ಶಾಪವನ್ನು ನೀಡಿದರು.

ಭೃಗುಃ

ಯಸ್ಮಾತ್ ಪದಾಽಹನಃ ಕ್ರೋಧಾಚ್ಛಿರಸೀಮಂ ಮಹಾಮುನಿಮ್ |
ತಸ್ಮಾದಾಶು ಮಹೀಂ ಗಚ್ಛ ಸರ್ಪೋ ಭೂತ್ವಾ ಸುದುರ್ಮತೇ ॥22॥

ಭೃಗು ಎಲೈ ದುರ್ಬುದ್ಧಿಯೇ, ನೀನು ಕೋಪದಿಂದ ಈ ಮಹರ್ಷಿಗಳಿಗೆ ಶಿರಸ್ಸಿನಲ್ಲಿ ಒದ್ದ ಕಾರಣದಿಂದ ಶೀಘ್ರವಾಗಿ ಸರ್ಪವಾಗಿ ಭೂಮಿಗೆ ಹೋಗು (ಎಂದು ಹೇಳಿದರು).

ಇತ್ಯುಕ್ತಃ ಸ ತದಾ ತೇನ ಸರ್ಪೋ ಭೂತ್ವಾ ಪಪಾತ ಹ |
ಅದೃಷ್ಟೇನಾಥ ಭೃಗುಣಾ ಭೂತಳೇ ಭರತರ್ಷಭ ॥23॥

ಎಲೈ ಭರತಶ್ರೇಷ್ಠನೇ, ಅದೃಶ್ಯರಾದ ಭೃಗುಗಳಿಂದ ಹೀಗೆ ಶಪ್ತನಾದ ನಹುಷನು ಸರ್ಪರೂಪವನ್ನು ಧರಿಸಿ ಭೂತಳದಲ್ಲಿ ಬಿದ್ದನು.

ಭೃಗುಂ ಹಿ ಯದಿ ಸೋಽದ್ರಾಕ್ಷೀನ್ನಹುಷಃ ಪೃಥಿವೀಪತೇ |
ನ ಸ ಶಕ್ತೋಽಭವಿಷ್ಯದ್ ವೈ ಪಾತನೇ ತಸ್ಯ ತೇಜಸಾ ॥24॥

ಎಲೈ ರಾಜನೇ, ಒಂದು ಪಕ್ಷ ನಹುಷನು ಭೃಗುಗಳನ್ನು ನೋಡಿದ್ದರೆ ಭೃಗುಗಳಿಗೂ ತಮ್ಮ ಸಾಮರ್ಥ್ಯದಿಂದ ಅವನನ್ನು ಭೂಮಿಗೆ ಬೀಳಿಸಲು ಸಾಧ್ಯವಾಗುತ್ತಿರಲಿಲ್ಲ.

ಸ ತು ತೈಸ್ತೈಃ ಪ್ರದಾನೈಶ್ಚ ತಪೋಭಿರ್ನಿಯಮೈಸ್ತಥಾ |
ಪತಿತೋಽಪಿ ಮಹಾರಾಜ ಭೂತಳೇ ಸ್ಮೃತಿಮಾನಭೂತ್ |
ಪ್ರಸಾದಯಾಮಾಸ ಭೃಗುಂ ಶಾಪಾಂತೋ ಮೇ ಭವೇದಿತಿ ॥25॥

ಎಲೈ ಮಹಾರಾಜನೇ, ಅವನು ಭೂತಳದಲ್ಲಿ ಬಿದ್ದರೂ ಅವನು ಮಾಡಿದ ದಾನ, ತಪಸ್ಸು ಮತ್ತು ನಿಯಮಗಳ ಪುಣ್ಯದಿಂದಾಗಿ ಅವನಿಗೆ ಸ್ಮೃತಿಯು ನಾಶವನ್ನು ಹೊಂದಲಿಲ್ಲ. ಆಗ ಅವನು ಭೃಗುಗಳನ್ನು ಕುರಿತು ಶಾಪ ವಿಮೋಕ್ಷವನ್ನು ಮಾಡಿ ಎಂದು ಕೇಳಿದನು.

ತತೋಽಗಸ್ತ್ಯಃ ಕೃಪಾವಿಷ್ಟಃ ಪ್ರಾಸಾದಯತ ತಂ ಭೃಗುಮ್ |
ಶಾಪಾಂತಾರ್ಥಂ ಮಹಾರಾಜ ಸ ಚ ಪ್ರಾದಾತ್ ಕೃಪಾನ್ವಿತಃ ॥26॥
ಎಲೈ ಮಹಾರಾಜನೇ, ಆಗ ಅಗಸ್ತ್ಯರೂ ಸಹಿತ ಕರುಣೆಯಿಂದ ಕೂಡಿದವರಾಗಿ ಭೃಗುಗಳನ್ನು ಶಾಪವಿಮೋಚನೆಯನ್ನು ಮಾಡಲು ಪ್ರಸನ್ನಗೊಳಿಸಿದರು. ಭೃಗುಗಳಾದರೂ ಕೃಪೆಯಿಂದ ಕೂಡಿ ಶಾಪವಿಮೋಚನೆಯನ್ನು ನೀಡಿದರು.
ರಾಜಾ ಯುಧಿಷ್ಠಿರೋ ನಾಮ ಭವಿಷ್ಯತಿ ಕುರೂದ್ವಹಃ |
ಸ ತ್ವಾಂ ಮೋಕ್ಷಯಿತಾ ಶಾಪಾದಿತ್ಯುಕ್ತ್ವಾಽಂತರಧೀಯತ ॥27॥
ಕುರುವಂಶೋದ್ಧಾರಕನಾದ ಯುಧಿಷ್ಠಿರನೆಂಬ ರಾಜನು ಮುಂದೆ ಜನಿಸುವನು. ಅವನು ನನ್ನ ಶಾಪದಿಂದ ನಿನ್ನನ್ನು ಬಿಡುಗಡೆ ಮಾಡುವನು ಎಂದು ಹೇಳಿ ಭೃಗುಗಳು ಅಂತರ್ಧಾನವನ್ನು ಹೊಂದಿದರು.
ಅಗಸ್ತ್ಯೋಽಪಿ ಮಹಾತೇಜಾಃ ಕೃತ್ವಾ ಕಾರ್ಯಂ ಶತಕ್ರತೋಃ |
ಸ್ವಮಾಶ್ರಮಪದಂ ಪ್ರಾಯಾತ್ ಪೂಜ್ಯಮಾನೋ ದ್ವಿಜಾತಿಭಿಃ ॥28॥
ಮಹಾತೇಜಸ್ವಿಗಳಾದ ಅಗಸ್ತ್ಯರೂ ಸಹ ಶತಕ್ರತುವಾದ ಪುರಂದರನ ಕಾರ್ಯವನ್ನು ನೆರವೇರಿಸಿ ಬ್ರಾಹ್ಮಣರಿಂದ ಪೂಜಿಸಲ್ಪಡುತ್ತಾ ತಮ್ಮ ಆಶ್ರಮಕ್ಕೆ ಹಿಂದಿರುಗಿದರು.
ನಹುಷೋಽಪಿ ತ್ವಯಾ ರಾಜನ್ ತಸ್ಮಾಚ್ಛಾಪಾತ್ ಸಮುದ್ಧೃತಃ |
ಜಗಾಮ ಬ್ರಹ್ಮಸದನಂ ತೇನ ಪುಣ್ಯೇನ ಕರ್ಮಣಾ ॥29॥
ಎಲೈ ರಾಜನೇ, ನಹುಷನೂ ಸಹ ನಿನ್ನಿಂದ ಆ ಶಾಪದಿಂದ ವಿಮೋಚನೆಯನ್ನು ಹೊಂದಿದನು. ಅವನು ಮೊದಲು ಮಾಡಿದ ಪುಣ್ಯಕರ್ಮಗಳಿಂದ ಅವನು ಬ್ರಹ್ಮಲೋಕಕ್ಕೆ ಹೋದನು.
ತದಾ ತು ಪಾತಯಿತ್ವಾ ತಂ ನಹುಷಂ ಭೂತಳೇ ಭೃಗುಃ |
ಜಗಾಮ ಬ್ರಹ್ಮಸದನಂ ಬ್ರಹ್ಮಣೇ ಚ ನ್ಯವೇದಯತ್ ॥30॥
ಭೃಗುಗಳಾದರೂ ನಹುಷನನ್ನು ಭೂತಳದಲ್ಲಿ ಕೆಡವಿ ಬ್ರಹ್ಮಸದನಕ್ಕೆ ಹೋಗಿ ಬ್ರಹ್ಮದೇವರಿಗೆ ಎಲ್ಲವನ್ನೂ ನಿವೇದಿಸಿದರು.
ತತಃ ಶಕ್ರಂ ಸಮಾನಾಯ್ಯ ದೇವಾನಾಹ ಪಿತಾಮಹಃ |
ವರದಾನಾನ್ಮಮ ಸುರಾ ನಹುಷೋ ರಾಜ್ಯಮಾಪ್ತವಾನ್ |
ಸ ಚಾಗಸ್ತ್ಯೇನ ಕ್ರುದ್ಧೇನ ಭ್ರಂಶಿತೋ ಭೂತಳಂ ಗತಃ ॥31॥
ನ ಚ ಶಕ್ಯಂ ವಿನಾ ರಾಜ್ಞಾ ಸುರಾ ವರ್ತಯಿತುಂ ಕ್ವಚಿತ್ |
ತಸ್ಮಾದಯಂ ಪುನಃ ಶಕ್ರೋ ದೇವರಾಜೋಽಭಿಷಿಚ್ಯತಾಮ್ ॥32॥
ಆಗ ಪಿತಾಮಹರಾದ ಬ್ರಹ್ಮದೇವರು ಇಂದ್ರನನ್ನು ಕರೆಸಿ ಎಲ್ಲಾ ದೇವತೆಗಳನ್ನು ಕುರಿತು- `ಎಲೈ ದೇವತೆಗಳೇ, ನನ್ನ ವರದಾನದಿಂದ ನಹುಷನು ಮೂರುಲೋಕದ ರಾಜ್ಯವನ್ನು ಹೊಂದಿದನು. ಅವನು ಕೋಪಗೊಂಡ ಅಗಸ್ತ್ಯರಿಂದ ಸ್ಥಾನಭ್ರಷ್ಟನಾಗಿ ಭೂತಳವನ್ನು ಸೇರಿದನು. ಎಲೈ ದೇವತೆಗಳೇ, ರಾಜನಿಲ್ಲದೆ ಬದುಕಲು ಸಾಧ್ಯವಿಲ್ಲ. ಆದ್ದರಿಂದ ಪುನಃ ಶಕ್ರನನ್ನು ದೇವರಾಜನನ್ನಾಗಿ ಅಭಿಷೇಕ ಮಾಡಿ' ಎಂದು ಹೇಳಿದರು.
ಏವಂ ಸಂಭಾಷಮಾಣಂ ತು ದೇವಾಃ ಪಾರ್ಥ ಪಿತಾಮಹಮ್ |
ಏವಮಸ್ತ್ವಿತಿ ಸಂಹೃಷ್ಟಾಃ ಪ್ರತ್ಯೂಚುಸ್ತೇ ಪಿತಾಮಹಮ್ ॥33॥
ಎಲೈ ಪಾರ್ಥನೇ, ಪಿತಾಮಹರು ಹೀಗೆ ಹೇಳುತ್ತಿರಲು ದೇವತೆಗಳು ಸಂತೋಷದಿಂದ ಅವರನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದರು.
ಸೋಽಭಿಷಿಕ್ತೋ ಭಗವತಾ ದೇವರಾಜ್ಯೇನ ವಾಸವಃ |
ಬ್ರಹ್ಮಣಾ ರಾಜಶಾರ್ದೂಲ ಯಥಾಪೂರ್ವಂ ವ್ಯರೋಚತ ॥34॥
ಎಲೈ ರಾಜಶಾರ್ದೂಲನೇ, ಇಂದ್ರನಾದರೂ ಪೂಜ್ಯರಾದ ಬ್ರಹ್ಮದೇವರಿಂದ ದೇವರಾಜನಾಗಿ ಅಭಿಷೇಕ ಮಾಡಲ್ಪಟ್ಟು ಮೊದಲಿನಂತೆ ಶೋಭಿಸಿದನು.
ಏವಮೇತತ್ ಪುರಾವೃತ್ತಂ ನಹುಷಸ್ಯ ವ್ಯತಿಕ್ರಮಾತ್ |
ಸ ಚ ತೈರೇವ ಸಂಸಿದ್ಧೋ ನಹುಷಃ ಕರ್ಮಭಿಃ ಪುನಃ ॥35॥
ಈ ರೀತಿಯಲ್ಲಿ ಹಿಂದೆ ನಹುಷನ ಅಪಚಾರದಿಂದ ಇದು ನಡೆಯಿತು. ನಹುಷನಾದರೂ ಪುನಃ ಅದೇ ಕರ್ಮಗಳಿಂದ ಸಿದ್ಧಿಯನ್ನು ಪಡೆದನು.
ತಸ್ಮಾದ್ ದೀಪಾಃ ಪ್ರದಾತವ್ಯಾಃ ಸಾಯಂ ವೈ ಗೃಹಮೇಧಿಭಿಃ |
ದಿವ್ಯಂ ಚಕ್ಷುರವಾಪ್ನೋತಿ ಪ್ರೇತ್ಯ ದೀಪಪ್ರದಾಯಕಃ |
ಪೂರ್ಣಚಂದ್ರಪ್ರತೀಕಾಶಾ ದೀಪದಾಶ್ಚ ಭವೇತ್ ಪುನಃ ॥36॥
ಆದ್ದರಿಂದ ಗೃಹಸ್ಥರು ಸಾಯಂಕಾಲದಲ್ಲಿ ದೀಪದಾನವನ್ನು ಮಾಡಬೇಕು. ದೀಪದಾನವನ್ನು ಮಾಡುವವನು ಮರಣಾನಂತರದಲ್ಲಿ ದಿವ್ಯಚಕ್ಷುಸ್ಸನ್ನು ಪಡೆಯುತ್ತಾನೆ ಮತ್ತು ಪುನಃ ಭೂಮಿಯಲ್ಲಿ ಜನಿಸುವಾಗ ಪೂರ್ಣಚಂದ್ರನ ಕಾಂತಿಯನ್ನು ಹೊಂದುತ್ತಾನೆ.
ಯಾವದಕ್ಷಿನಿಮೇಷಾಣಿ ಜ್ವಲತೇ ತಾವತೀಃ ಸಮಾಃ |
ರೂಪವಾನ್ ಧನವಾಂಶ್ಚಾಪಿ ನರೋ ಭವತಿ ದೀಪದಃ ॥37॥
ದಾನ ಮಾಡಿದ ದೀಪವು ಎಷ್ಟು ಸಲ ಕಣ್ಣುಮುಚ್ಚಿ ತೆರೆಯವಷ್ಟು ಕಾಲ ಉರಿಯುತ್ತದೆಯೋ ಅಷ್ಟು ವರ್ಷಗಳ ಕಾಲ ದಾನ ಮಾಡಿದ ಮನುಷ್ಯನು ರೂಪವಂತನೂ, ಧನವಂತನೂ ಆಗುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದೀಪಾದಿದಾನಫಲಕಥನಂ ನಾಮ ತ್ರಿಪಂಚಾಶದುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ನಾಲ್ಕನೆಯ ಅಧ್ಯಾಯ
ಬ್ರಹ್ಮಸ್ವಹರಣಫಲ - ಕ್ಷತ್ರಿಯ-ಚಂಡಾಲಸಂವಾದ
ಯುಧಿಷ್ಠಿರಃ
ಬ್ರಹ್ಮಸ್ವಾನಿ ಚ ಯೇ ಮಂದಾ ಹರಂತಿ ಭರತರ್ಷಭ |
ನೃಶಂಸಕಾರಿಣೋ ಮೂಢಾಃ ಕ್ವ ತೇ ಗಚ್ಛಂತಿ ಮಾನವಾಃ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ, ಮಂದರೂ, ಮೂರ್ಖರೂ ಆದ ಯಾವ ಮಾನವರು ಬ್ರಹ್ಮಸ್ವವನ್ನು ಅಪಹರಿಸುತ್ತಾರೋ, ಕ್ರೂರಕರ್ಮವನ್ನು ಮಾಡುತ್ತಾರೋ ಅವರು ಎಲ್ಲಿಗೆ ಹೋಗುತ್ತಾರೆ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಚಂಡಾಲಸ್ಯ ಚ ಸಂವಾದಂ ಕ್ಷತ್ರಬಂಧೋಶ್ಚ ಭಾರತ ॥2॥
ಭೀಷ್ಮ ಎಲೈ ಭಾರತನೇ, ಈ ವಿಷಯದಲ್ಲಿಯೂ ಸಹ ಒಬ್ಬ ಚಂಡಾಲನಿಗೂ ಮತ್ತು ಕ್ಷತ್ರಿಯನಿಗೂ ನಡೆದ ಸಂವಾದರೂಪವಾದ ಈ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ರಾಜನ್ಯಃ
ವೃದ್ಧರೂಪೋಽಸಿ ಚಂಡಾಲ ಬಾಲವಚ್ಚ ವಿಚೇಷ್ಟಸೇ |
ಶ್ವಖರಾಣಾಂ ರಜಃಸೇವೀ ಕಸ್ಮಾದುದ್ವಿಜಸೇ ಗವಾಮ್ ॥3॥
ರಾಜನ್ಯ ಎಲೈ ಚಂಡಾಲನೇ, ನೀನು ವೃದ್ಧನಾಗಿದ್ದೀಯೆ. ಆದರೂ ಬಾಲನಂತೆ ನಡೆದುಕೊಳ್ಳುತ್ತಿದ್ದೀಯೆ. ನಾಯಿ ಮತ್ತು ಕತ್ತೆಗಳ ಪಾದಧೂಳನ್ನು ಸೇವಿಸುವ ನೀನು ಗೋವುಗಳ ಪಾದಧೂಳಿಗೆ ಏಕೆ ಹೆದರುತ್ತಿದ್ದೀಯೆ?
ಸಾಧುಭಿರ್ಗರ್ಹಿತಂ ಕರ್ಮ ಚಂಡಾಲಸ್ಯ ವಿಧೀಯತೇ |
ಕಸ್ಮಾದ್ ಗೋರಜಸಾ ಧ್ವಸ್ತಮಪಾಂ ಕುಂಡೇ ನಿಷಿಂಚಸಿ ॥4॥
ಚಂಡಾಲನಿಗೆ ಸಜ್ಜನರಿಂದ ನಿಂದಿತವಾದ ಕರ್ಮಗಳು ವಿಧಿಸಲ್ಪಡುತ್ತವೆ. ಗೋವಿನ ಪಾದಧೂಳಿಯು ತಾಕಿದ ನಿನ್ನ ದೇಹವನ್ನು ಏಕೆ ನೀರಿನಿಂದ ತೊಳೆಯುತ್ತಿದ್ದೀಯೆ?
ಚಂಡಾಲಃ
ಬ್ರಾಹ್ಮಣಸ್ಯ ಗವಾಂ ರಾಜನ್ ಹ್ರಿಯತೀನಾಂ ರಜಃ ಪುರಾ |
ಸೋಮಮುದ್ಧ್ವಂಸಯಾಮಾಸ ತಂ ಚ ಸೋಮಂ ಪಪುರ್ದ್ವಿಜಾಃ ॥5॥
ಚಂಡಾಲ ಎಲೈ ರಾಜನೇ, ಯಜ್ಞವನ್ನು ಮಾಡುವ ಒಬ್ಬ ರಾಜನು ಬಲಾತ್ಕಾರದಿಂದ ಬ್ರಾಹ್ಮಣನ ಗೋವುಗಳನ್ನು ಕರೆದುಕೊಂಡು ಹೋದನು. ಆಗ ಆ ಗೋಧೂಳಿಯು ಸೋಮಪಾತ್ರೆಯಲ್ಲಿ ಬಿದ್ದು ಸೋಮವನ್ನು ಕೆಡಿಸಿತು. ಆ ಸೋಮವನ್ನು ಬ್ರಾಹ್ಮಣರು ಪಾನವನ್ನು ಮಾಡಿದರು.
ಯದ್ಯಪಿ ಗೋಧೂಳಿಯು ತಾಕಿದರೆ ಪಾವಿತ್ರ್ಯವೇ ಉಂಟಾಗುತ್ತದೆ. ಆದರೆ ಬಲಾತ್ಕಾರದಿಂದ ತೆಗೆದುಕೊಂಡು ಹೋಗುತ್ತಿರುವ ಗೋವುಗಳು ಮತ್ತು ಅದರ ಧೂಳಿಯೂ ಸಹ ಬ್ರಾಹ್ಮಣ ಸಂಬಂಧಿಯಾದುದರಿಂದ ಬ್ರಹ್ಮಸ್ವರೂಪವೇ ಆಗಿವೆ. ಗೋವು ಬ್ರಹ್ಮಸ್ವರೂಪವಾದುದೆಂದು ಪುನಃ ಏನು ಹೇಳಬೇಕು? ಗೋಧೂಳಿಯು ಬ್ರಹ್ಮಸ್ವರೂಪಿಯಾದುದರಿಂದ ಸೋಮಪಾನ ಮಾಡಿದವನಿಗೆ ಬ್ರಹ್ಮಸ್ವ ಅಪಹಾರ ಮಾಡಿದ ದೋಷವು ಉಂಟಾಯಿತು - ಲಕ್ಷಾಲಂಕಾರ.
ದೀಕ್ಷಿತಶ್ಚ ಸ ರಾಜಾಽಪಿ ಕ್ಷಿಪ್ರಂ ನರಕಮಾವಿಶತ್ |
ಸಹ ತೈರ್ಯಾಜಕೈಃ ಸರ್ವೈರ್ಬ್ರಹ್ಮಸ್ವಮುಪಜೀವ್ಯ ತತ್ ॥6॥
ದೀಕ್ಷಿತನಾದ ರಾಜನೂ ಸಹ ಆ ಋತ್ವಿಜರೆಲ್ಲರ ಜೊತೆಯಲ್ಲಿ ಬ್ರಹ್ಮಸ್ವವನ್ನು ಉಪಜೀವಿಸಿದ ಕಾರಣದಿಂದ ಶೀಘ್ರವಾಗಿ ನರಕಕ್ಕೆ ಹೋದನು.
ಯೇಽಪಿ ತತ್ರಾಪಿಬನ್ ಕ್ಷೀರಂ ಘೃತಂ ದಧಿ ಚ ಮಾನವಾಃ |
ಬ್ರಾಹ್ಮಣಾಃ ಸಹರಾಜನ್ಯಾಃ ಸರ್ವೇ ನರಕಮಾವಿಶನ್ ॥7॥
ಅಲ್ಲಿ ಯಾವ ಮನುಷ್ಯರು ಕ್ಷೀರ, ದಧಿ, ಘೃತಗಳನ್ನು ಉಪಯೋಗಿಸಿದರೋ ಅಂತಹ ಬ್ರಾಹ್ಮಣ, ಕ್ಷತ್ರಿಯರು ಎಲ್ಲರೂ ನರಕಕ್ಕೆ ಹೋದರು.
ಜಘ್ನತುಸ್ತಪಸಾ ಪುತ್ರಾಂಸ್ತಥಾ ಪೌತ್ರಾನ್ ವಿಧುನ್ವತೀಃ |
ಪಶೂನವೇಕ್ಷಮಾಣಾಂಶ್ಚ ಸಾಧುವೃತ್ತೇನ ದಂಪತೀ ॥8॥
ಗೋಸ್ವಾಮಿಗಳಾದ ಬ್ರಾಹ್ಮಣ ದಂಪತಿಗಳು ಎಳೆದುಕೊಂಡು ಹೋಗುವುದನ್ನು ಪ್ರತಿಭಟಿಸುತ್ತಿದ್ದ ಆ ಗೋವುಗಳನ್ನು ನೋಡುತ್ತಿದ್ದವರನ್ನೂ ಮತ್ತು ಎಳೆದುಕೊಂಡು ಹೋದವರ ಪುತ್ರ-ಪೌತ್ರರನ್ನೂ ತಮ್ಮ ಸಮೀಚೀನವಾದ ತಪಸ್ಸಿನಿಂದ ಸಂಹರಿಸಿದರು (ಬ್ರಾಹ್ಮಣರ ತಪಸ್ಸು ಅವರೆಲ್ಲರನ್ನೂ ಸಂಹರಿಸಿತು).
ಅಹಂ ತತ್ರಾವಸಂ ರಾಜನ್ ಬ್ರಹ್ಮಚಾರೀ ಜಿತೇಂದ್ರಿಯಃ |

ತಾಸಾಂ ಮೇ ರಜಸಾ ಧ್ವಸ್ತಂ ಭೈಕ್ಷಮಾಸೀನ್ನರಾಧಿಪ ॥9॥
ಎಲೈ ರಾಜನೇ, ನಾನೂ ಸಹ ಜಿತೇಂದ್ರಿಯನಾಗಿ, ಬ್ರಹ್ಮಚಾರಿಯಾಗಿ ಅಲ್ಲಿದ್ದೆನು. ನನ್ನ ಆಹಾರವು ಗೋರಜಸ್ಸಿನಿಂದ ಮಿಶ್ರಿತವಾಗಿ ಕೆಡಿಸಲ್ಪಟ್ಟಿತು.
ಚಂಡಾಲೋಽಹಂ ತತೋ ರಾಜನ್ ಭುಕ್ತ್ವಾ ತದಭವಂ ಮೃತಃ |
ಬ್ರಹ್ಮಸ್ವಹಾರೀ ಚ ನೃಪ ಸೋಽಪ್ರತಿಷ್ಠಾಂ ಗತಿಂ ಯಯೌ ॥10॥
ರಾಜನೇ, ನಾನು ಅದನ್ನು ಭುಂಜಿಸಿದ ಕಾರಣ ಬ್ರಹ್ಮಸ್ವ ಅಪಹಾರ ಮಾಡಿದ ನಿಮಿತ್ತದಿಂದ ಚಂಡಾಲನಾದೆನು. ಅಪ್ರತಿಷ್ಠಿತವಾದ ಗತಿಯನ್ನು ಹೊಂದಿದೆನು.
ತಸ್ಮಾದ್ ಹರೇನ್ನ ವಿಪ್ರಸ್ವಂ ಕದಾಚಿದಪಿ ಕಿಂಚನ |
ಬ್ರಹ್ಮಸ್ವರಜಸಾ ಧ್ವಸ್ತಂ ಭುಕ್ತ್ವಾ ಮಾಂ ಪಶ್ಯ ಯಾದೃಶಮ್ ॥11॥
ಆದ್ದರಿಂದ ಯಾವಾಗಲೂ ಬ್ರಾಹ್ಮಣ ಸ್ವತ್ತನ್ನು ಸ್ವಲ್ಪವನ್ನೂ ಅಪಹರಿಸಬಾರದು. ಬ್ರಾಹ್ಮಣ ಸ್ವತ್ತಾದ ಗೋಧೂಳಿನಿಂದ ಮಿಶ್ರಿತವಾದ ಆಹಾರವನ್ನು ಸೇವಿಸಿ ನಾನು ಹೇಗಾಗಿದ್ದೇನೆ ಎಂಬುದನ್ನು ನೋಡು.
ತಸ್ಮಾತ್ ಸೋಮೋಽಪ್ಯವಿಕ್ರೇಯಃ ಪುರುಷೇಣ ವಿಪಶ್ಚಿತಾ |
ವಿಕ್ರಯಂ ಹೀಹ ಸೋಮಸ್ಯ ಗರ್ಹಯಂತಿ ಮನೀಷಿಣಃ ॥12॥
ಆದ್ದರಿಂದ ವಿವೇಕಿಯಾದ ಪುರುಷನು ಸೋಮಲತೆಯನ್ನು ಕೊಂಡುಕೊಳ್ಳಬಾರದು. ಸೋಮಲತೆಯ ವಿಕ್ರಯವನ್ನು ಜ್ಞಾನಿಗಳು ನಿಂದಿಸುತ್ತಾರೆ.
ಯೇ ಚೈನಂ ಕ್ರೀಣತೇ ರಾಜನ್ ಯೇ ಚ ವಿಕ್ರೀಣತೇ ಜನಾಃ |
ತೇ ತು ವೈವಸ್ವತಂ ಪ್ರಾಪ್ಯ ರೌರವಂ ಯಾಂತಿ ಸರ್ವಶಃ ॥13॥
ಎಲೈ ರಾಜನೇ, ಯಾರು ಸೋಮಲತೆಯನ್ನು ಮಾರುತ್ತಾರೆಯೋ ಅಥವಾ ಕೊಳ್ಳುತ್ತಾರೆಯೋ ಅವರೆಲ್ಲರೂ ಸಹ ಯಮಪಟ್ಟಣಕ್ಕೆ ಹೋಗಿ ಅಲ್ಲಿ ರೌರವ ನರಕಕ್ಕೆ ಹೋಗುತ್ತಾರೆ.
ಸೋಮಂ ತು ರಜಸಾ ಧ್ವಸ್ತಂ ವಿಕ್ರೀಯಾವಿಧಿಪೂರ್ವಕಮ್ |
ಶ್ರೋತ್ರಿಯೋ ವಾರ್ಧುಷೀ ಭೂತ್ವಾ ಚಿರರಾತ್ರಾಯ ನಶ್ಯತಿ |
ನರಕಂ ತ್ರಿಂಶತಂ ಪ್ರಾಪ್ಯ ಶ್ವವಿಷ್ಠಾಮುಪಜೀವತಿ ॥14॥
ಗೋಧೂಳಿನಿಂದ ಮಿಶ್ರುತವಾದ ಸೋಮವನ್ನು ಅವಿಧಿಪೂರ್ವಕವಾಗಿ ಮಾರಿದರೆ ಶ್ರೋತ್ರಿಯನಾದ ಬ್ರಾಹ್ಮಣನು ಬಡ್ಡಿಯ ವ್ಯವಹಾರವನ್ನು ಮಾಡುವ ವೈಶ್ಯನಾಗಿ ಜನಿಸಿ ಬಹುಕಾಲದ ನಂತರ ನಾಶವನ್ನು ಹೊಂದುತ್ತಾನೆ. ನಂತರ ಮೂವತ್ತು ರೀತಿಯ ನರಕಗಳನ್ನು ಅನುಭವಿಸಿ ನಾಯಿಯ ಮಲವನ್ನು ಉಪಜೀವಿಸುತ್ತಾನೆ.
ಶ್ವಚರ್ಯಾಮತಿಮಾನಂ ಚ ಸಖಿದಾರೇಷು ವಿಪ್ಲವಮ್ |
ತುಲಯಾಽಧಾರಯದ್ ಧರ್ಮೋ ಹ್ಯತಿಮಾನೋಽತಿರಿಚ್ಯತೇ ॥15॥
ಯಮಧರ್ಮನು ನಾಯಿಚರ್ಯೆಯನ್ನು, ದುರಭಿಮಾನವನ್ನು, ಮಿತ್ರಪತ್ನಿಯ ದೂಷಣವನ್ನು ತಕ್ಕಡಿಯಲ್ಲಿ ತೂಗಿದನು. ಆಗ ದುರಭಿಮಾನವು ಉಳಿದವಕ್ಕಿಂತ ಹೆಚ್ಚಾಗಿ ತೂಗಿತು.
ಶ್ವಾನಂ ವೈ ಪಾಪಿನಂ ಪಶ್ಯ ವಿವರ್ಣಂ ಹರಿಣಂ ಕೃಶಮ್ |
ಅತಿಮಾನೇನ ಭೂತಾನಾಮಿಮಾಂ ಗತಿಮುಪಾಗತಮ್ ॥16॥
ವಿವರ್ಣನಾಗಿ, ಬಿಳುಚಿಕೊಂಡು, ಕೃಶನಾಗಿ, ಎಲ್ಲ ಕಡೆಯಲ್ಲಿಯೂ ಓಡುತ್ತಿರುವ ಪಾಪಿಯಾದ ನನ್ನನ್ನು ನೋಡು. ನಾನು ಅತಿಯಾದ ಅಹಂಕಾರವನ್ನು ಹೊಂದಿದುದರಿಂದ ಇಂತಹ ದುರ್ಗತಿಯನ್ನು ಹೊಂದಿದೆನು. (ಶ್ವಿಗತಿವೃದ್ಧ್ಯೋಃ ಎಂದು ಧಾತುವಿರುವುದರಿಂದ ಶ್ವಾನ ಎಂದರೆ ಧಾವಿಸುವಂತಹನು ಎಂದು ಅರ್ಥ).
ಅಹಂ ವೈ ವಿಪುಲೇ ಜಾತಃ ಕುಲೇ ಧನಸಮನ್ವಿತೇ |
ಅನ್ಯಸ್ಮಿನ್ ಜನ್ಮನಿ ವಿಭೋ ಜ್ಞಾನವಿಜ್ಞಾನಪಾರಗಃ ॥17॥
ಎಲೈ ವಿಭುವೇ, ನಾನು ಇನ್ನೊಂದು ಜನ್ಮದಲ್ಲಿ ಧನಾಢ್ಯವಾದ ಇನ್ನೊಂದು ವಿಪುಲವಾದ ಕುಲದಲ್ಲಿ ಜ್ಞಾನ, ವಿಜ್ಞಾನ ಪಾರಂಗತನಾಗಿ ಜನ್ಮವೆತ್ತಿದೆನು.
ಅಭವಂ ತತ್ರ ಜಾನಾನೋ ದೋಷಾನೇತಾನಹಂ ಸದಾ |
ಸಂರಬ್ಧ ಏವ ಭೂತಾನಾಂ ಪೃಷ್ಠಮಾಂಸಾನ್ಯಭಕ್ಷಯಮ್ ॥18॥
ಈ ದೋಷಗಳೆಲ್ಲವನ್ನೂ ತಿಳಿದಿದ್ದರೂ ನಾನು ಸಿಟ್ಟಿನಿಂದ ಕೂಡಿ ಪ್ರಾಣಿಗಳ ಪೃಷ್ಠ ಮಾಂಸವನ್ನು ಭಕ್ಷಿಸಿದೆನು.
ಸೋಽಹಂ ತೇನ ಚ ವೃತ್ತೇನ ಭೋಜನೇನ ಚ ತೇನ ವೈ |
ಇಮಾಮವಸ್ಥಾಂ ಸಂಪ್ರಾಪ್ತಃ ಪಶ್ಯ ಕಾಲಸ್ಯ ಪರ್ಯಯಮ್ ॥19॥
ನಾನು ಮೊದಲನೆಯ ಜನ್ಮದ ಆ ನಡತೆಯಿಂದಲೂ ಮತ್ತು ಪೃಷ್ಠ ಮಾಂಸದ ಭಕ್ಷಣೆಯಿಂದಲೂ ಇಂತಹ ಗತಿಯನ್ನು ಪಡೆದಿದ್ದೇನೆ. ಕಾಲದ ಗತಿಯನ್ನು ನೋಡು.
ಆದೀಪ್ತಮಿವ ತೈಲಾಂತೇ ಭ್ರಮರೈರಿವ ಚಾರ್ದಿತಮ್ |
ಧಾವಮಾನಂ ಸುಸಂರಬ್ಧಂ ಪಶ್ಯ ಮಾಂ ರಜಸಾನ್ವಿತಮ್ ॥20॥
ತೈಲಪಾತ್ರೆಯಲ್ಲಿ ಬೇಯಿಸಿದಂತೆ, ಜೇನುಹುಳುಗಳಿಂದ ಕಚ್ಚಲ್ಪಟ್ಟವನಂತೆ ಎಲ್ಲ ಅಂಗವೂ ಕಪ್ಪಾಗಿ ಧೂಳಿನಿಂದ ಕೂಡಿ ಓಡುತ್ತಾ ಅತ್ಯಂತ ಕೋಪಗೊಂಡಿರುವ ನನ್ನನ್ನು ನೋಡು.
ಸ್ವಾಧ್ಯಾಯೈಸ್ತು ಮಹತ್ ಪಾಪಂ ತರಂತಿ ಗೃಹಮೇಧಿನಃ |

ದಾನ್ಯೈಃ ಪೃಥಗ್ವಿಧೈಶ್ಚಾಪಿ ಯಥಾ ಪ್ರಾಹುರ್ಮನೀಷಿಣಃ ॥21॥
ಗೃಹಸ್ಥರಾದ ಬ್ರಾಹ್ಮಣರು ಸ್ವಾಧ್ಯಾಯದಿಂದಲೂ, ವಿಧವಿಧವಾದ ದಾನದಿಂದಲೂ ಎಲ್ಲ ದೊಡ್ಡಪಾಪವನ್ನೂ ಪರಿಹರಿಸಿಕೊಳ್ಳುತ್ತಾರೆಂದು ಜ್ಞಾನಿಗಳು ಹೇಳುತ್ತಾರೆ.
ತಥಾ ಪಾಪಕೃತಂ ವಿಪ್ರಮಾಶ್ರಮಸ್ಥಂ ಮಹೀಪತೇ |
ಸರ್ವಸಂಗವಿನಿರ್ಮುಕ್ತಂ ಛಂದಾಂಸ್ಯುತ್ತಾರಯಂತ್ಯುತ ॥22॥
ಎಲೈ ರಾಜನೇ, ಮೊದಲು ಪಾಪವನ್ನು ಮಾಡಿದರೂ ಆಶ್ರಮದಲ್ಲಿ ವಾಸಿಸಿ ಸರ್ವಸಂಗವನ್ನು ಪರಿತ್ಯಾಗ ಮಾಡಿದ ಬ್ರಾಹ್ಮಣನನ್ನು ವೇದವು ದಾಟಿಸುತ್ತದೆ.
ಅಹಂ ತು ಪಾಪಯೋನ್ಯಾಂ ವೈ ಪ್ರಸೂತಃ ಕ್ಷತ್ರಿಯರ್ಷಭ |
ನಿಶ್ಚಯಂ ನಾಧಿಗಚ್ಛಾಮಿ ಕಥಂ ಮುಚ್ಯೇಯಮಿತ್ಯುತ ॥23॥
ಎಲೈ ಕ್ಷತ್ರಿಯಶ್ರೇಷ್ಠನೇ, ನಾನಾದರೂ ಪಾಪಯೋನಿಯಲ್ಲಿ ಜನಿಸಿದ್ದೇನೆ. ನಾನು ಇದರಿಂದ ಹೇಗೆ ಪಾರಾದೇನು? ಎಂಬುದು ನನಗೆ ತಿಳಿಯುತ್ತಿಲ್ಲ.
ಜಾತಿಸ್ಮರತ್ವಂ ತು ಮಮ ಕೇನಚಿತ್ ಪೂರ್ವಕರ್ಮಣಾ |
ಶುಭೇನ ಯೇನ ಮೋಕ್ಷಂ ವೈ ಪ್ರಾಪ್ತುಮಿಚ್ಛಾಮ್ಯಹಂ ನೃಪ ॥24॥
ಯಾವುದೋ ಜನ್ಮದ ಪುಣ್ಯದಿಂದ ನನಗೆ ಪೂರ್ವಜನ್ಮದ ಸ್ಮರಣೆ ಇದೆ. ಎಲೈ ರಾಜನೇ, ಆ ಪುಣ್ಯದಿಂದಲೇ ನನಗೆ ಮೋಕ್ಷವನ್ನು ಪಡೆಯುವ ಇಚ್ಛೆಯುಂಟಾಗಿದೆ.
ತ್ವಮಿಮಂ ಮೇ ಪ್ರಪನ್ನಾಯ ಶರಣಂ ಪರಿಪೃಚ್ಛತಃ |
ಚಂಡಾಲತ್ವಾತ್ ಕಥಮಹಂ ಮುಚ್ಯೇಯಮಿತಿ ಸತ್ತಮ ॥25॥
ಎಲೈ ಸಜ್ಜನರಲ್ಲಿ ಶ್ರೇಷ್ಠನೇ, ಶರಣಾಗತನಾಗಿ ನಿನ್ನನ್ನು ಪ್ರಶ್ನಿಸುತ್ತಿರುವ ನನಗೆ ಸಂಶಯವನ್ನು ಪರಿಹರಿಸು. ಚಂಡಾಲಯೋನಿಯಿಂದ ನಾನು ಹೇಗೆ ನಿರ್ಮುಕ್ತನಾದೇನು ಎಂದು ಹೇಳು.
ರಾಜನ್ಯಃ
ಚಂಡಾಲ ಪ್ರತಿಜಾನೀಹಿ ಯೇನ ಮೋಕ್ಷಮವಾಪ್ಸ್ಯಸಿ |
ಬ್ರಾಹ್ಮಣಾರ್ಥೇ ತ್ಯಜನ್ ಪ್ರಾಣಾನ್ ಗತಿಮಿಷ್ಟಾಮವಾಪ್ಸ್ಯಸಿ ॥26॥
ರಾಜನ್ಯ ಎಲೈ ಚಂಡಾಲನೇ, ಹೇಗೆ ಈ ಯೋನಿಯಿಂದ ಮೋಕ್ಷವನ್ನು ಹೊಂದುವಿ ಎಂದು ತಿಳಿ. ಬ್ರಾಹ್ಮಣನ ಸಲುವಾಗಿ ಪ್ರಾಣವನ್ನು ತ್ಯಜಿಸಿದರೆ ನಿನಗೆ ಇಷ್ಟವಾದ ಗತಿಯುಂಟಾಗುವುದು.
ದತ್ತ್ವಾ ಶರೀರಂ ಕ್ರವ್ಯಾದ್ಭ್ಯೋ ರಣಾಗ್ನೌ ದ್ವಿಜಹೇತುಕಮ್ |
ಹುತ್ವಾ ಪ್ರಾಣಾನ್ ಪ್ರಮೋಕ್ಷಸ್ತೇ ನಾನ್ಯಥಾ ಮೋಕ್ಷಮಾಪ್ಸ್ಯಸಿ ॥27॥
ಬ್ರಾಹ್ಮಣನ ಸಲುವಾಗಿ ರಣದಲ್ಲಿ ಮಾಂಸಾಹಾರಿ ಪ್ರಾಣಿಗಳಿಗೆ ಶರೀರವನ್ನು ಕೊಟ್ಟು, ಪ್ರಾಣಗಳನ್ನು ಹೋಮ ಮಾಡಿ ನಿನಗೆ ಮೋಕ್ಷವುಂಟಾಗುತ್ತದೆ. ಬೇರೆ ರೀತಿಯಲ್ಲಿ ಆಗುವುದಿಲ್ಲ.
ಭೀಷ್ಮಃ
ಇತ್ಯುಕ್ತಃ ಸ ತದಾ ರಾಜನ್ ಬ್ರಹ್ಮಸ್ವಾರ್ಥೇ ಪರಂತಪ |
ಹುತ್ವಾ ರಣಮುಖೇ ಪ್ರಾಣಾನ್ ಗತಿಮಿಷ್ಟಾಮವಾಪ ಹ ॥28॥
ತಸ್ಮಾದ್ ರಕ್ಷ್ಯಂ ತ್ವಯಾ ಪುತ್ರ ಬ್ರಹ್ಮಸ್ವಂ ಭರತರ್ಷಭ |
ಯದೀಚ್ಛಸಿ ಮಹಾಬಾಹೋ ಶಾಶ್ವತೀಮುತ್ತಮಾಂ ಗತಿಮ್ ॥29॥
ಎಲೈ ರಾಜನೇ, ಪರಂತಪನೇ, ಹೀಗೆ ಹೇಳಲ್ಪಟ್ಟ ಆ ಚಂಡಾಲನು ಬ್ರಾಹ್ಮಣನ ಸ್ವತ್ತನ್ನು ರಕ್ಷಿಸುವುದಕ್ಕೋಸ್ಕರ ತನ್ನ ಪ್ರಾಣವನ್ನು ಬಿಟ್ಟು ಇಷ್ಟವಾದ ಗತಿಯನ್ನು ಹೊಂದಿದನು. ಎಲೈ ಭರತಶ್ರೇಷ್ಠನೇ, ಪುತ್ರನೇ, ಮಹಾಬಾಹುವೇ, ಆದ್ದರಿಂದ ಶಾಶ್ವತವಾದ ಉತ್ತಮ ಗತಿಯನ್ನು ಹೊಂದಲು ಬಯಸಿದರೆ ಬ್ರಾಹ್ಮಣರ ಸ್ವತ್ತನ್ನು ನೀನು ರಕ್ಷಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಬ್ರಹ್ಮಸ್ವಾಪಹಾರಫಲನಿರೂಪಣಂ ನಾಮ
ಚತುಃಪಂಚಾಶದುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೈದನೆಯ ಅಧ್ಯಾಯ
ಪುಣ್ಯಫಲಕಥನೋದ್ದೇಶದಿಂದ ಶಕ್ರ-ಗೌತಮಸಂವಾದಕಥನ
ಯುಧಿಷ್ಠಿರಃ
ಏಕೋ ಲೋಕಃ ಸುಕೃತಿನಾಂ ಸರ್ವೇ ತ್ವಾಹೋ ಪಿತಾಮಹ |
ಉತ ತತ್ರಾಪಿ ನಾನಾತ್ವಂ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಪಿತಾಮಹನೇ, ಪುಣ್ಯವನ್ನು ಮಾಡಿದವರಿಗೆಲ್ಲ ಒಂದೇ ಲೋಕವೋ ಅಥವಾ ಬೇರೆ ಬೇರೆ ಲೋಕಗಳಿವೆಯೋ ಎಂದು ನನಗೆ ಹೇಳು.
ಭೀಷ್ಮಃ

ಕರ್ಮಭಿಃ ಪಾರ್ಥ ನಾನಾತ್ವಂ ಲೋಕಾನಾಂ ಯಾಂತಿ ಮಾನವಾಃ |
ಪುಣ್ಯಾನ್ ಪುಣ್ಯಕೃತೋ ಯಾಂತಿ ಪಾಪಾನ್ ಪಾಪಕೃತೋ ಜನಾಃ ॥2॥
ಭೀಷ್ಮ ಎಲ್ಲೈ ಪಾರ್ಥನೇ, ಮಾನವರು ತನ್ನ ಕರ್ಮಗಳಿಂದ ಬೇರೆ ಬೇರೆ ಲೋಕಗಳಿಗೆ ಹೋಗುತ್ತಾರೆ. ಪುಣ್ಯವನ್ನು ಮಾಡಿದವರು ಪುಣ್ಯಲೋಕಗಳಿಗೂ, ಪಾಪವನ್ನು ಮಾಡಿದವರು ಪಾಪಲೋಕಗಳಿಗೂ ಹೋಗುತ್ತಾರೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೌತಮಸ್ಯ ಮುನೇಸ್ತಾತ ಸಂವಾದಂ ವಾಸವಸ್ಯ ಚ ॥3॥
ಎಲ್ಲೈ ಪ್ರೀತಿಪಾತ್ರನೇ, ಈ ವಿಷಯದಲ್ಲಿಯೂ ಗೌತಮ ಗೋತ್ರದ ಒಬ್ಬ ಬ್ರಾಹ್ಮಣನಿಗೂ ಮತ್ತು ಇಂದ್ರನಿಗೂ ನಡೆದ ಸಂವಾದ ರೂಪವಾದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ಬ್ರಾಹ್ಮಣೋ ಗೌತಮಃ ಕಶ್ಚಿನ್ಮೃದುರ್ದಾಂತೋ ಜಿತೇಂದ್ರಿಯಃ |
ಮಹಾವನೇ ಹಸ್ತಿಶಿಶುಂ ಪರಿದ್ಯೂನಮಮಾತೃಕಮ್ ॥4॥
ತಂ ದೃಷ್ಟ್ವಾ ಜೀವಯಾಮಾಸ ಸಾನುಕ್ರೋಶೋ ಧೃತವ್ರತಃ |
ಸ ತು ದೀರ್ಘೇಣ ಕಾಲೇನ ಬಭೂವಾತಿಬಲೋ ಮಹಾನ್ ॥5॥
ಮೃದುವೂ, ಇಂದ್ರಿಯನಿಗ್ರಹವುಳ್ಳವನೂ ಆದ ಗೌತಮ ಗೋತ್ರದ ಬ್ರಾಹ್ಮಣನೊಬ್ಬನು ದೊಡ್ಡ ಕಾಡಿನಲ್ಲಿ ತಾಯಿಯನ್ನು ಕಳೆದುಕೊಂಡು ಅನಾಥವಾದ ಒಂದು ಆನೆಯ ಮರಿಯನ್ನು ನೋಡಿ ಧೃತವ್ರತನಾದ ಅವನು ಅದರ ಮೇಲೆ ದಯೆಯನ್ನು ಹೊಂದಿ ಅದನ್ನು ಪೋಷಿಸಿ ಬದುಕಿಸಿದನು. ದೀರ್ಘಕಾಲದಲ್ಲಿ ಅದು ಅತಿ ಬಲವುಳ್ಳ ದೊಡ್ಡ ಆನೆಯಾಯಿತು.
ತಂ ಪ್ರಭಿನ್ನಂ ಮಹಾನಾಗಂ ಪ್ರಸ್ರುತಂ ಸರ್ವತೋ ಮದಮ್ |
ಧೃತರಾಷ್ಟ್ರಸ್ವರೂಪೇಣ ಶಕ್ರೋ ಜಗ್ರಾಹ ಹಸ್ತಿನಮ್ ॥6॥
ಸರ್ವತ್ರ ಮದೋದಕವನ್ನು ಸುರಿಸುವ ಆ ದೊಡ್ಡ ಆನೆಯನ್ನು ಧೃತರಾಷ್ಟ್ರನ ರೂಪವನ್ನು ಧರಿಸಿದ ಇಂದ್ರನು ಬಂದು ಹಿಡಿದುಕೊಂಡನು.
ಹ್ರಿಯಮಾಣಂ ತು ತಂ ದೃಷ್ಟ್ವಾ ಗೌತಮಃ ಸಂಶಿತವ್ರತಃ |
ಅಭ್ಯಭಾಷತ ರಾಜಾನಂ ಧೃತರಾಷ್ಟ್ರಂ ಮಹಾತಪಾಃ ॥7॥
ಮಹಾತಪಸ್ವಿಯೂ, ಶ್ರೇಷ್ಠವ್ರತಧಾರಿಯೂ ಆದ ಗೌತಮನು ಎಳೆದೊಯ್ಯಲ್ಪಡುತ್ತಿದ್ದ ಆನೆಯನ್ನು ನೋಡಿ ಆ ಧೃತರಾಷ್ಟ್ರ ರಾಜನನ್ನು ಕುರಿತು ಮಾತನಾಡಿದನು.
ಮಾ ಮೇ ಹಾರ್ಷೀರ್ಹಸ್ತಿನಂ ಪುತ್ರಮೇನಂ
ದುಃಖಾತ್ ಪುಷ್ಟಂ ಧೃತರಾಷ್ಟ್ರಾಕೃತಜ್ಞ |
ಮಿತ್ರಂ ಸತಾಂ ಸಪ್ತಪದಂ ವದಂತಿ
ಮಿತ್ರದ್ರೋಹೋ ನೈವ ರಾಜನ್ ಸ್ಪೃಶೇತ್ ತ್ವಾಮ್ ॥8॥
ಎಲ್ಲೈ ರಾಜನೇ, ಧೃತರಾಷ್ಟ್ರನೇ, ಅಕೃತಜ್ಞನೇ, ಕಷ್ಟದಿಂದ ಬೆಳೆಸಿ ಪೋಷಿಸಿದ ನನ್ನ ಪುತ್ರನಾದ ಈ ಆನೆಯನ್ನು ಎಳೆದೊಯ್ಯಬೇಡ. ಸಪ್ತಪದಗಳಲ್ಲಿ ಸಜ್ಜನರು ಮಿತ್ರರಾಗುತ್ತಾರೆ ಎಂದು ಹೇಳುತ್ತಾರೆ. ನಿನ್ನನ್ನು ಮಿತ್ರದ್ರೋಹವು ತಟ್ಟದಿರಲಿ.
ಇಧ್ಮೋದಕಪ್ರದಾತಾರಂ ಶೂನ್ಯಪಾಲಕಮಾಶ್ರಮೇ |
ವಿನೀತಮಾಚಾರ್ಯಕುಲೇ ಸುಯುಕ್ತಂ ಗುರುಕರ್ಮಣಿ ॥9॥
ಶಿಷ್ಟಂ ದಾಂತಂ ಕೃತಜ್ಞಂ ಚ ಪ್ರಿಯಂ ಚ ಸತತಂ ಮಮ |
ನ ಮೇ ವಿಕ್ರೋಶತೋ ರಾಜನ್ ಹರ್ತುಮರ್ಹಸಿ ಕುಂಜರಮ್ ॥10॥
ನನಗೆ ಕಟ್ಟಿಗೆ ಮತ್ತು ಜಲಗಳನ್ನು ತಂದುಕೊಡುವ, ಆಶ್ರಮದಲ್ಲಿ ಯಾರೂ ಇಲ್ಲದಿದ್ದಾಗ ಆಶ್ರಮವನ್ನು ರಕ್ಷಿಸುವ, ಆಚಾರ್ಯಕುಲದಲ್ಲಿ ಶಿಕ್ಷಿತವಾದ, ದೊಡ್ಡ ಕಾರ್ಯಗಳನ್ನು ಮಾಡಲು ಚೆನ್ನಾಗಿ ಕಲಿತ, ಕೃತಜ್ಞವೂ, ಒಳ್ಳೆಯ ನಡತೆಯುಳ್ಳದೂ, ನಿಯಂತ್ರಿತವೂ ಮತ್ತು ನನಗೆ ಸತತವಾಗಿ ಪ್ರಿಯವೂ ಆದ ಈ ಆನೆಯನ್ನು ಎಲ್ಲೈ ರಾಜನೇ, ನಾನು ಕಿರುಚುತ್ತಿದ್ದರೂ ನೀನು ಎಳೆದುಕೊಂಡು ಹೋಗುವುದು ಯುಕ್ತವಲ್ಲ (ಎಂದು ಹೇಳಿದನು).
ಧೃತರಾಷ್ಟ್ರಃ
ಗವಾಂ ಸಹಸ್ರಂ ಭವತೇ ದದಾಮಿ
ದಾಸೀಶತಂ ನಿಷ್ಕಶತಾನಿ ಪಂಚ |
ಅನ್ಯಚ್ಚ ವಿತ್ತಂ ವಿವಿಧಂ ಮಹರ್ಷೇ
ಕಿಂ ಬ್ರಾಹ್ಮಣಸ್ಯೇಹ ಗಜೇನ ಕೃತ್ಯಮ್ ॥11॥
ಧೃತರಾಷ್ಟ್ರ ನಿನಗೆ ಸಹಸ್ರಗೋವುಗಳನ್ನು ಕೊಡುತ್ತೇನೆ, ನೂರು ದಾಸಿಯರನ್ನು, ಐದುನೂರು ನಿಷ್ಕಗಳನ್ನು ಕೊಡುತ್ತೇನೆ. ಎಲ್ಲೈ ಮಹರ್ಷಿಯೇ, ನಿನಗೆ ಬೇಕಾದ ವಿವಿಧವಾದ ಧನವನ್ನೂ ಕೊಡುತ್ತೇನೆ. ಬ್ರಾಹ್ಮಣನಿಗೆ ಗಜದಿಂದ ಏನಾಗಬೇಕಾಗಿದೆ?
ಗೌತಮಃ
ತ್ವಾಮೇವ ಗಾವೋ ವಿವಿಧಾ ಭಜಂತು
ದಾಸ್ಯಃ ಸನಿಷ್ಕಾ ವಿವಿಧಂ ಚ ರತ್ನಮ್ |
ಅನ್ಯಚ್ಚ ವಿತ್ತಂ ವಿವಿಧಂ ನರೇಂದ್ರ
ಕಿಂ ಬ್ರಾಹ್ಮಣಸ್ಯೇಹ ಧನೇನ ಕೃತ್ಯಮ್ ॥12॥
ಗೌತಮ ಎಲ್ಲೈ ನರೇಂದ್ರನೇ, ವಿವಿಧವಾದ ಗೋವುಗಳು ನಿನ್ನ ಬಳಿಯಲ್ಲಿಯೇ ಇರಲಿ. ನಿಷ್ಕ ಸಹಿತವಾದ ದಾಸಿಯರು, ವಿವಿಧವಾದ

ರತ್ನ, ವಿವಿಧವಾದ ಧನ ಎಲ್ಲವೂ ನಿನ್ನಲ್ಲಿಯೇ ಇರಲಿ. ಬ್ರಾಹ್ಮಣರಿಗೆ ಇಲ್ಲಿ ಧನದಿಂದ ಏನಾಗಬೇಕಾಗಿದೆ?
ಧೃತರಾಷ್ಟ್ರಃ
ಬ್ರಾಹ್ಮಣಾನಾಂ ಹಸ್ತಿಭಿರ್ನಾಸ್ತಿ ಕೃತ್ಯಂ
ರಾಜನ್ಯಾನಾಂ ನಾಗಕುಲಾನಿ ವಿಪ್ರ |
ಸ್ವಂ ವಾಹನಂ ನಯತೋ ನಾಸ್ತ್ಯಧರ್ಮೋ
ನಾಗಶ್ರೇಷ್ಠಾದ್ ಗೌತಮಾಸ್ಮಾನ್ನಿವರ್ತ ॥13॥
ಧೃತರಾಷ್ಟ್ರ ಎಲೈ ಬ್ರಾಹ್ಮಣನೇ, ಬ್ರಾಹ್ಮಣರಿಗೆ ಆನೆಯಿಂದ ಆಗಬೇಕಾದ ಯಾವ ಕಾರ್ಯವೂ ಇಲ್ಲ. ರಾಜರಿಗೆ ಆನೆಯ ಸಮೂಹವು ಬೇಕು. ನನ್ನ ವಾಹನವನ್ನು ನಾನು ತೆಗೆದುಕೊಂಡು ಹೋಗುವುದರಲ್ಲಿ ಅಧರ್ಮವಿಲ್ಲ. ಗೌತಮನೇ, ಈ ಶ್ರೇಷ್ಠವಾದ ಆನೆಯನ್ನು ಬಿಟ್ಟು ನೀನು ಹಿಂದಿರುಗು.
ಗೌತಮಃ
ಯತ್ರ ಪ್ರೇತೋ ನಂದತಿ ಪುಣ್ಯಕರ್ಮಾ
ಯತ್ರ ಪ್ರೇತಃ ಶೋಚತಿ ಪಾಪಕರ್ಮಾ |
ವೈವಸ್ವತಸ್ಯ ಸದನೇ ಮಹಾತ್ಮನಃ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥14॥
ಗೌತಮ ಎಲ್ಲಿ ಪುಣ್ಯಕರ್ಮವನ್ನು ಮಾಡಿದವನು ಸಂತೋಷಪಡುತ್ತಾನೆಯೋ, ಪಾಪಕರ್ಮವನ್ನು ಮಾಡಿದವನು ದುಃಖಪಡುತ್ತಾನೆಯೋ ಅಂತಹ ಮಹಾತ್ಮನಾದ ಯಮನ ಪಟ್ಟಣಕ್ಕೆ ಆನೆಯನ್ನು ಅಪಹರಿಸುತ್ತಿರುವ ನಿನ್ನನ್ನು ಕಳುಹಿಸುವೆನು (ಲಕ್ಷಾಲಂಕಾರ).
ಧೃತರಾಷ್ಟ್ರಃ
ಯೇ ನಿಷ್ಕ್ರಿಯಾ ನಾಸ್ತಿಕಾ ಶ್ರದ್ದಧಾನಾಃ
ಪಾಪಾತ್ಮಾನ ಇಂದ್ರಿಯಾರ್ಥೇ ನಿವಿಷ್ಟಾಃ |
ಯಮಸ್ಯ ತೇ ಯಾತನಾಂ ಪ್ರಾಪ್ನುವಂತಿ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥15॥
ಧೃತರಾಷ್ಟ್ರ ಯಾರು ಸತ್ಕರ್ಮಗಳನ್ನು ಮಾಡುವುದಿಲ್ಲವೋ, ನಾಸ್ತಿಕರೋ, ಶ್ರದ್ಧಾರಹಿತರೋ, ಪಾಪಾತ್ಮರೋ, ಇಂದ್ರಿಯಸುಖದಲ್ಲಿ ನಿರತರೋ ಅಂತಹವರು ಯಮನ ಯಾತನೆಗಳನ್ನು ಹೊಂದುತ್ತಾರೆ. ಆದರೆ ಧೃತರಾಷ್ಟ್ರನು ಎಂದೂ ಅಲ್ಲಿಗೆ ಹೋಗುವವನಲ್ಲ.
ಗೌತಮಃ
ವೈವಸ್ವತೀ ಸಂಯಮನೀ ಜನಾನಾಂ
ಯತ್ರಾನೃತಂ ನೋಚ್ಯತೇ ಯತ್ರ ಸತ್ಯಮ್ |
ಯತ್ರಾಬಲಾ ಬಲಿನಂ ಯಾತಯಂತಿ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥16॥
ಗೌತಮ ಯಮನ ಪಟ್ಟಣವಾದ, ಪಾಪಿಗಳನ್ನು ದಮನ ಮಾಡುವ, ಸಂಯಮನಿಯಲ್ಲಿ ಸುಳ್ಳು ಹೇಳಲ್ಪಡುವುದಿಲ್ಲ. ಸತ್ಯವೇ ಹೇಳಲ್ಪಡುತ್ತದೆ. ಅಲ್ಲಿ ದುರ್ಬಲರಾದವರು ಅಪರಾಧ ಮಾಡಿದ ಬಲಿಷ್ಠರನ್ನೂ ಯಾತನೆಗೆ ಒಳಪಡಿಸುತ್ತಾರೆ. ನಾನು ಗಜಾಪಹಾರ ಮಾಡುವ ನಿನ್ನನ್ನು ಅಲ್ಲಿಗೆ ಕಳುಹಿಸಿ ಯಾತನೆ ಹೊಂದುವಂತೆ ಮಾಡುತ್ತೇನೆ.
ಧೃತರಾಷ್ಟ್ರಃ
ಜ್ಯೇಷ್ಠಾಂ ಸ್ವಸಾರಂ ಪಿತರಂ ಮಾತರಂ ಚ
ಗುರುಂ ಯಥಾSಮಾನಯಂತಶ್ಚರಂತಿ |
ತಥಾವಿಧಾನಾಮೇಷ ಲೋಕೋ ಮಹರ್ಷೇ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥17॥
ಧೃತರಾಷ್ಟ್ರ ಅಕ್ಕನನ್ನು, ತಂದೆಯನ್ನು, ತಾಯಿಯನ್ನು, ಗುರುಗಳನ್ನು ಗೌರವಿಸದೆ ಯಾರು ನಡೆದುಕೊಳ್ಳುತ್ತಾರೆಯೋ, ಎಲೈ ಮಹರ್ಷಿಯೇ, ಅಂತಹವರಿಗೆ ಆ ಲೋಕ ಉಂಟಾಗುತ್ತದೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.
ಗೌತಮಃ
ಮಂದಾಕಿನೀ ವೈಶ್ರವಣಸ್ಯ ರಾಜ್ಞೋ
ಮಹಾಭೋಗಾ ಭೋಗಿಜನಪ್ರವೇಶ್ಯಾ |
ಗಂಧರ್ವಯಕ್ಷೈರಪ್ಸರೋಭಿಶ್ಚ ಜುಷ್ಟಾ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥18॥
ಗೌತಮ ಕುಬೇರನ ರಾಜಧಾನಿ ಮಂದಾಕಿನೀ. ಅಲ್ಲಿ ಮಹಾಭೋಗಗಳು ಇದ್ದು ಅದು ಭೋಗಿಜನರಿಂದ ಮಾತ್ರ ಪ್ರವೇಶಕ್ಕೆ ಯೋಗ್ಯವಾದುದು. ಗಂಧರ್ವ- ಯಕ್ಷರಿಂದಲೂ, ಅಪ್ಸರೆಯರಿಂದಲೂ ಸೇವಿತವಾದ ಅಂತಹ ಪುಣ್ಯಲೋಕಕ್ಕೆ ಹೋದರೂ ನಾನು ನನ್ನ ಗಜವನ್ನು ಅಪಹರಿಸುವ ನಿನಗೆ ಯಾತನೆಯನ್ನು ಉಂಟು ಮಾಡುವೆನು (ಲಕ್ಷಾಲಂಕಾರ).
ಧೃತರಾಷ್ಟ್ರಃ
ಅತಿಥಿವ್ರತಾಃ ಸುವ್ರತಾ ಯೇ ಜನಾ ವೈ
ಪ್ರತಿಶ್ರಯಂ ದದತೇ ಬ್ರಾಹ್ಮಣೇಭ್ಯಃ |

ಶಿಷ್ಟಾಶಿನಃ ಸಂವಿಭಜ್ಯಾಶ್ರಿತಾಂಶ್ಚ
ಮಂದಾಕಿನೀಂ ತೇಽಪಿ ವಿಭೂಷಯಂತಿ ॥19॥
ಧೃತರಾಷ್ಟ್ರ, ಯಾರು ಒಳ್ಳೆಯ ವ್ರತವನ್ನು ಧರಿಸಿರುತ್ತಾರೆಯೋ, ಅತಿಥಿ ನಿಯಮವನ್ನು ಹೊಂದಿರುತ್ತಾರೆಯೋ, ಬ್ರಾಹ್ಮಣರಿಗೆ ಆಶ್ರಯವನ್ನು ನೀಡುತ್ತಾರೆಯೋ, ಬ್ರಾಹ್ಮಣರು ಊಟ ಮಾಡಿದ ಮೇಲೆ ಶಿಷ್ಟಾನ್ನವನ್ನು ಆಶ್ರಿತರಿಗೂ, ಭೃತ್ಯರಿಗೂ ಕೊಟ್ಟು ಸೇವಿಸುತ್ತಾರೆಯೋ ಅಂತಹವರು ಮಂದಾಕಿನಿಯನ್ನು ಅಲಂಕರಿಸುತ್ತಾರೆ.
ಗೌತಮಃ
ಮೇರೋರಗ್ರೇ ಯದ್ವನಂ ಭಾತಿ ರಮ್ಯಂ
ಸುಪುಷ್ಪಿತಂ ಕಿನ್ನರಗೀತಜುಷ್ಟಮ್ |
ಸುದರ್ಶನಾ ಯತ್ರ ಜಂಬೂರ್ವಿಶಾಲಾ
ತತ್ರ ತ್ವಾಹಂ ಹಸ್ತಿನಂ ಯಾಚಯಿಷ್ಯೇ ॥20॥
ಗೌತಮ ಮೇರುಪರ್ವತದ ಶಿಖರದಲ್ಲಿ ಯಾವ ಸುಪುಷ್ಪಿತವಾದ ಕಿನ್ನರ ಗೀತೆಯಿಂದ ಯುಕ್ತವಾದ ವನವಿದೆಯೋ, ನೋಡಲು ಮನೋಹರವಾದ ವಿಶಾಲವಾದ ಜಂಬೂವೃಕ್ಷವಿದೆಯೋ ಅಲ್ಲಿ ನಾನು ಗಜವನ್ನು ಅಪಹರಿಸುವ ನಿನ್ನನ್ನು ಬೇಡುವಂತೆ ಮಾಡುವೆನು.
ಧೃತರಾಷ್ಟ್ರಃ
ಯೇ ಬ್ರಾಹ್ಮಣಾ ಮೃದವಃ ಸತ್ಯಶೀಲಾ
ಬಹುಶ್ರುತಾಃ ಸರ್ವಭೂತಾಭಿರಾಮಾಃ |
ಯೇಽಧೀಯಂತೇ ಸೇತಿಹಾಸಂ ಪುರಾಣಂ
ಮಧ್ವಾಹುತ್ಯಾ ಜುಹ್ವತಿ ಚ ದ್ವಿಜೇಂದ್ರಾಃ ॥21॥
ತಥಾವಿಧಾನಾಮೇಷ ಲೋಕೋ ಮಹರ್ಷೇ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ |
ಯದ್ ವಿದ್ಯತೇ ವಿದಿತಂ ಸ್ಥಾನಮಸ್ತಿ
ತದ್ ಬ್ರೂಹಿ ತ್ವಂ ತ್ವರಿತೋ ಹ್ಯೇಷ ಯಾಮಿ ॥22॥
ಧೃತರಾಷ್ಟ್ರ, ಮೃದುವೂ, ಸತ್ಯಶೀಲರೂ, ಬಹುವಿದ್ಯಾಸಂಪನ್ನರೂ, ಸರ್ವಭೂತ ಹಿತರೂ ಆದ ಯಾವ ಬ್ರಾಹ್ಮಣರಿದ್ದಾರೆಯೋ, ಯಾರು ಇತಿಹಾಸ-ಪುರಾಣಗಳನ್ನು ಅಧ್ಯಯನ ಮಾಡುತ್ತಾರೆಯೋ, ಯಾವ ದ್ವಿಜಶ್ರೇಷ್ಠರು ಮಧುರವಾದ ಆಹುತಿಗಳಿಂದ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾರೆಯೋ ಎಲೈ ಮಹರ್ಷಿಯೇ, ಅಂತಹವರಿಗೆ ಮಾತ್ರ ನೀನು ಹೇಳುವ ಲೋಕವು ಪ್ರಾಪ್ತವಾಗುತ್ತದೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ. ನನಗೆ ಯಾವ ಕ್ಲಪ್ತವಾದ ಸ್ಥಾನವಿದೆ ಎಂದು ಹೇಳು. ಅಲ್ಲಿಗೆ ನಾನು ಶೀಘ್ರವಾಗಿ ಹೋಗುತ್ತೇನೆ.
ಗೌತಮಃ
ಸುಪುಷ್ಪಿತಂ ಕಿನ್ನರರಾಜಜುಷ್ಟಂ
ಪ್ರಿಯಂ ವನಂ ನಂದನಂ ನಾರದಸ್ಯ |
ಗಂಧರ್ವಾಣಾಮಪ್ಸರಸಾಂ ಚ ಸದ್ಮ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥23॥
ಗೌತಮ ಸುಪುಷ್ಪಿತವಾದ ಶ್ರೇಷ್ಠ ಕಿನ್ನರರಿಂದ ಸಹಿತವಾದ, ನಾರದರಿಗೆ ಪ್ರಿಯವಾದ ನಂದನವನವಿದೆ. ಅಲ್ಲಿ ಗಂಧರ್ವರ ಮತ್ತು ಅಪ್ಸರೆಯರ ಭವನಗಳಿವೆ. ಅಲ್ಲಿ ಆನೆಯ ಅಪಹಾರಕನಾದ ನಿನ್ನನ್ನು ಯಾತನೆಗೆ ಗುರಿ ಮಾಡುತ್ತೇನೆ.
ಧೃತರಾಷ್ಟ್ರಃ
ಯೇ ನೃತ್ತಗೀತೇ ಕುಶಲಾ ಜನಾಃ ಸದಾ
ಹ್ಯಯಾಚಮಾನಾಃ ಸಹಿತಾಶ್ಚರಂತಿ |
ತಥಾವಿಧಾನಾಮೇಷ ಲೋಕೋ ಮಹರ್ಷೇ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥24॥
ಧೃತರಾಷ್ಟ್ರ, ಯಾರು ನೃತ್ಯಗೀತೆಗಳಲ್ಲಿ ಕುಶಲರೋ, ಸದಾ ಯಾಚನೆಯನ್ನು ಮಾಡದೆ ಸಂಚರಿಸುತ್ತಾರೆಯೋ, ಎಲೈ ಮಹರ್ಷಿಯೇ, ಅಂತಹವರಿಗೆ ಆ ಲೋಕಗಳು ದೊರೆಯುತ್ತವೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.
ಗೌತಮಃ
ಯತ್ರೋತ್ತರಾಃ ಕುರವೋ ಭಾಂತಿ ರಮ್ಯಾ
ದೇವೈಃ ಸಾರ್ಧಂ ಮೋದಮಾನಾ ನರೇಂದ್ರ |
ಯತ್ರಾಗ್ನಿಯೌನಾಶ್ಚ ವಸಂತಿ ವಿಪ್ರಾ
ಹ್ಯಯೋನಯಃ ಪರ್ವತಯೋನಯಶ್ಚ ॥25॥
ಯತ್ರ ಶಕ್ರೋ ವರ್ಷತಿ ಸರ್ವಕಾಮಾನ್
ಯತ್ರ ಸ್ತ್ರಿಯಃ ಕಾಮಚಾರಾಶ್ಚರಂತಿ |
ಯತ್ರ ಚೇರ್ಷ್ಯಾ ನಾಸ್ತಿ ನಾರೀಷು ಪುಂಸಾಂ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥26॥

ಗೌತಮ ಎಲೈ ನರೇಂದ್ರನೇ, ಮನೋಹರವಾದ ಉತ್ತರ ಕುರುದೇಶದಲ್ಲಿ ಜನರು ದೇವತೆಗಳ ಜೊತೆಯಲ್ಲಿ ಸಂತೋಷಪಡುತ್ತಾ ಶೋಭಿಸುತ್ತಾರೆ. ಅಲ್ಲಿ ಅಗ್ನಿಯೋನಿಗಳೂ, ಅಯೋನಿಜರೂ ಮತ್ತು ಪರ್ವತಯೋನಿಗಳೂ ಆದ ಪುರುಷರಿದ್ದಾರೆ. ಅಲ್ಲಿ ಇಂದ್ರನು ಎಲ್ಲ ಕಾಮಗಳನ್ನೂ ಸುರಿಸುತ್ತಾನೆ. ಸ್ತ್ರೀಯರು ಕಾಮಚಾರರಾಗಿ ಸಂಚರಿಸುತ್ತಾರೆ. ಸ್ತ್ರೀಯರಲ್ಲಿ ಪುರುಷರಿಗೆ ಅಲ್ಲಿ ಅಸೂಯೆ ಇಲ್ಲ. ಅಂತಹ ಸ್ಥಾನದಲ್ಲಿ ಗಜಾಪಹಾರಕನಾದ ನಿನ್ನನ್ನು ಯಾತನೆಗೆ ಗುರಿ ಮಾಡುವೆನು.

ಧೃತರಾಷ್ಟ್ರಃ

ಯೇ ಸರ್ವಭೂತೇಷು ನಿವೃತ್ತಕಾಮಾ
ಅಮಾಂಸಾದಾ ನ್ಯಸ್ತದಂಡಾಶ್ಚರಂತಿ |
ನ ಹಿಂಸಂತಿ ಸ್ಥಾವರಂ ಜಂಗಮಂ ಚ
ಯೇ ಭೂತಾನಾಂ ಸರ್ವಭೂತಾತ್ಮಭೂತಾಃ ॥27॥
ನಿರಾಶಿಷೋ ನಿರ್ಮಮಾ ವೀತರಾಗಾ
ಲಾಭಾಲಾಭೇ ಯೇ ಸಮಾ ಸತ್ಯಸಂಧಾಃ |
ತಥಾವಿಧಾನಾಮೇಷ ಲೋಕೋ ಮಹರ್ಷೇ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥28॥

ಧೃತರಾಷ್ಟ್ರ ಯಾರು ಮಾಂಸಭಕ್ಷಣೆ ಮಾಡದ ಕಾರಣದಿಂದ ಸರ್ವ ಭೂತಗಳಲ್ಲಿಯೂ ದಂಡ ಪ್ರಹಾರವನ್ನು ಮಾಡದೆ ಆಸೆಯನ್ನು ತೊರೆದಿರುತ್ತಾರೆಯೋ, ಸ್ಥಾವರ-ಜಂಗಮವಾದ ಪ್ರಾಣಿಯನ್ನು ಹಿಂಸಿಸುವುದಿಲ್ಲವೋ, ಯಾರು ಸರ್ವಭೂತಾಂತರ್ಯಾಮಿಯಾದ ಪರಮಾತ್ಮನನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾರೆಯೋ, ಎಲ್ಲಾ ಆಸೆಗಳನ್ನೂ, ಅಹಂಕಾರಗಳನ್ನೂ ಮತ್ತು ರಾಗಗಳನ್ನು ತೊರೆದಿರುತ್ತಾರೆಯೋ, ಲಾಭಾಲಾಭಗಳಲ್ಲಿ ಸಮರಾಗಿ ಸತ್ಯಸಂಧರಾಗಿರುತ್ತಾರೆಯೋ ಅಂತಹವರಿಗೆ ಆ ಲೋಕಗಳು. ಎಲೈ ಮಹರ್ಷಿಯೇ, ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.

ಗೌತಮಃ

ತತಃ ಪರಂ ಭಾಂತಿ ಲೋಕಾಃ ಸನಾತನಾಃ
ಸುಪುಣ್ಯಗಂಧಾ ನಿರ್ಮಲಾ ವೀತಶೋಕಾಃ |
ಸೋಮಸ್ಯ ರಾಜ್ಞಃ ಸದನೇ ಮಹಾತ್ಮನಃ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥29॥

ಗೌತಮ ಓಷಧಿಗಳ ರಾಜನಾದ ಮಹಾತ್ಮನಾದ ಚಂದ್ರನ ಲೋಕವು ಪುಣ್ಯಗಂಧದಿಂದ ಕೂಡಿ ನಿರ್ಮಲವೂ, ಶೋಕರಹಿತವೂ ಆಗಿದ್ದು ಹಿಂದೆ ಹೇಳಿದ ಲೋಕಕ್ಕಿಂತ ಶ್ರೇಷ್ಠವಾದ ಲೋಕವಾಗಿ ಕಂಗೊಳಿಸುತ್ತದೆ. ಅಲ್ಲಿ ನಾನು ನಿನ್ನನ್ನು ಯಾತನೆಗೆ ಗುರಿ ಮಾಡುವೆನು.

ಧೃತರಾಷ್ಟ್ರಃ

ಯೇ ದಾನಶೀಲಾ ನ ಪ್ರತಿಗೃಹ್ಣತೇ ಸದಾ
ನ ಚಾಪ್ಯರ್ಥಾನಾದದತೇ ಪರೇಭ್ಯಃ |
ಯೇಷಾಮದೇಯಮರ್ಹತೇ ನಾಸ್ತಿ ಕಿಂಚಿತ್
ಸರ್ವಾತಿಥ್ಯಾಃ ಸುಪ್ರಸಾದಾ ಜನಾಶ್ಚ ॥30॥
ಯೇ ಕ್ಷಂತಾರೋ ನಾಭಿಜಲ್ಪಂತಿ ಚಾನ್ಯಾನ್
ಸತಾಂ ಭೂತ್ವಾ ಸತತಂ ಪುಣ್ಯಶೀಲಾಃ |
ತಥಾವಿಧಾನಾಮೇಷ ಲೋಕೋ ಮಹರ್ಷೇ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥31॥

ಧೃತರಾಷ್ಟ್ರ ಯಾರು ದಾನಶೀಲರೋ, ಪ್ರತಿಗ್ರಹವನ್ನು ಮಾಡುವುದಿಲ್ಲವೋ, ಇನ್ನೊಬ್ಬರಿಂದ ಯಾವ ವಸ್ತುವನ್ನೂ ಸ್ವೀಕರಿಸುವುದಿಲ್ಲವೋ, ಯಾರಿಗೆ ಯೋಗ್ಯರಿಗೆ ಕೊಡಲಾರದ ವಸ್ತುವು ಯಾವುದೂ ಇರುವುದಿಲ್ಲವೋ, ಯಾರು ಸರ್ವಾತಿಥಿಯಾಗಿ ಪ್ರಸನ್ನವಾದ ಮನಸ್ಸಿನಿಂದ ಕೂಡಿರುತ್ತಾರೆಯೋ, ಯಾರು ಕ್ಷಮಾಶೀಲರಾಗಿದ್ದು ಇನ್ನೊಬ್ಬರನ್ನು ನಿಂದಿಸುವುದಿಲ್ಲವೋ, ಸತತವಾಗಿ ಪುಣ್ಯಶೀಲರಾಗಿರುತ್ತಾರೆಯೋ ಅಂತಹವರಿಗೆ ಆ ಲೋಕಗಳು. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.

ಗೌತಮಃ

ತತಃ ಪರಂ ಭಾಂತಿ ಲೋಕಾಃ ಸನಾತನಾ
ವಿರಜಸೋ ವಿತಮಸ್ಕಾ ವಿಶೋಕಾಃ |
ಆದಿತ್ಯಸ್ಯ ಸುಮಹಾಂತಃ ಸುವೃತ್ತಾಃ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥32॥

ಗೌತಮ ಅದರಿಂದಾಚೆಗೆ ಸನಾತನವಾದ ರಜೋರಹಿತವಾದ, ತಮೋರಹಿತವಾದ, ಶೋಕರಹಿತವಾದ ಸೂರ್ಯನ ಬಹಳ ದೊಡ್ಡದಾದ ಮನೋಹರವಾದ ಲೋಕಗಳು ಕಂಗೊಳಿಸುತ್ತವೆ. ಅಲ್ಲಿ ನಾನು ನಿನ್ನನ್ನು ಯಾತನೆಗೆ ಗುರಿ ಮಾಡುವೆನು.

ಧೃತರಾಷ್ಟ್ರಃ

ಸ್ವಾಧ್ಯಾಯಶೀಲಾ ಗುರುಶುಶ್ರೂಷಣೇ ರತಾಃ
ತಪಸ್ವಿನಃ ಸುವ್ರತಾಃ ಸತ್ಯಸಂಧಾಃ |
ಆಚಾರ್ಯಾಣಾಮಪ್ರತಿಕೂಲಭಾಷಿಣೋ
ನಿತ್ಯೋತ್ಥಿತಾ ಗುರುಕರ್ಮಸ್ವಚೋದ್ಯಾಃ ॥33॥

ತಥಾವಿಧಾನಾಮೇಷ ಲೋಕೋ ಮಹರ್ಷೇ
ವಿಶುದ್ಧಾನಾಂ ಭಾವಿತವಾಙ್ಮತೀನಾಮ್ |
ಸತ್ಯೇ ಸ್ಥಿತಾನಾಂ ವೇದವಿದಾಂ ಮಹಾತ್ಮನಾಂ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥34॥

ಧೃತರಾಷ್ಟ್ರ ಸ್ವಾಧ್ಯಾಯಶೀಲರೂ, ಗುರುಸೇವೆಯಲ್ಲಿ ನಿರತರಾದವರೂ, ತಪಸ್ವಿಗಳೂ, ಒಳ್ಳೆಯ ವ್ರತವನ್ನು ಧರಿಸಿದವರೂ, ಸತ್ಯಸಂಧರೂ, ಆಚಾರ್ಯರಿಗೆ ವಿರುದ್ಧವಾಗಿ ಮಾತನಾಡದವರೂ, ಗುರುಗಳ ಕಾರ್ಯಗಳಲ್ಲಿ ಪ್ರಚೋದಿಸಲ್ಪಡದೆಯೂ ನಿತ್ಯವೂ ಉದ್ಯುಕ್ತರಾಗಿರುವವರೂ ಆದ ವಿಶುದ್ಧರೂ, ವಾಕ್ ಮತ್ತು ಬುದ್ಧಿಗಳನ್ನು ಶೋಧಿಸಿದವರೂ, ಸತ್ಯದಲ್ಲೇ ಇರುವವರೂ, ವೇದಜ್ಞರೂ, ಮಹಾತ್ಮರೂ ಆದವರಿಗೆ ಮಾತ್ರ, ಎಲೈ ಮಹರ್ಷಿಯೇ, ಆ ಲೋಕಗಳು ದೊರೆಯುತ್ತವೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.

ಗೌತಮಃ

ತತಃ ಪರೇ ಭಾಂತಿ ಲೋಕಾಃ ಸನಾತನಾಃ
ಸುಪುಣ್ಯಗಂಧಾ ವಿರಜಾ ವಿಶೋಕಾಃ |
ವರುಣಸ್ಯ ರಾಜ್ಞಃ ಸದನೇ ಮಹಾತ್ಮನಃ
ತತ್ರ ತ್ವಾಹಂ ಹಸ್ತಿನಂ ಯಾಚಯಿಷ್ಯೇ ॥35॥

ಗೌತಮ ಅಲ್ಲಿಂದಾಚೆಗೆ ಶೋಕರಹಿತವೂ, ರಜೋರಹಿತವೂ, ಪುಣ್ಯಗಂಧ ಯುಕ್ತವೂ ಆದ ಮಹಾತ್ಮನಾದ ರಾಜನಾದ ವರುಣನ ಸನಾತನವಾದ ಲೋಕಗಳು ಪ್ರಕಾಶಿಸುತ್ತವೆ. ಅಲ್ಲಿ ನಾನು ನಿನ್ನನ್ನು ಯಾಚಿಸುವಂತೆ ಮಾಡುವೆನು.

ಧೃತರಾಷ್ಟ್ರಃ

ಚಾತುರ್ಮಾಸ್ಯೇ ಯೇ ಯಜಂತೇ ಜನಾಃ ಸದಾ
ತಥೇಷ್ಟೀನಾಂ ದಶಶತಂ ಪ್ರಾಪ್ನುವಂತಿ |
ಯೇ ಚಾಗ್ನಿಹೋತ್ರಂ ಜುಹ್ವತಿ ಶ್ರದ್ದಧಾನಾ
ಯಥಾನ್ಯಾಯಂ ತ್ರೀಣಿ ವರ್ಷಾಣಿ ವಿಪ್ರಾಃ ॥36॥
ಸ್ವದಾರಿಣಾಂ ಧರ್ಮಧುರೇ ಮಹಾತ್ಮನಾಂ
ಯಥೋಚಿತೇ ವರ್ತ್ಮನಿ ಸುಸ್ಥಿತಾನಾಮ್ |
ಧರ್ಮಾತ್ಮನಾಮುದ್ವಹತಾಂ ಗತಿಂ ತಾಂ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥37॥

ಧೃತರಾಷ್ಟ್ರ ಯಾರು ಚಾತುರ್ಮಾಸ್ಯ ಯಾಗಗಳನ್ನು ಮಾಡುತ್ತಾರೆಯೋ, ಸಾವಿರ ಇಷ್ಟಿಗಳನ್ನು ಮಾಡುತ್ತಾರೆಯೋ, ಯಾವ ವಿಪ್ರರು ಶಾಸ್ತ್ರೋಕ್ತವಾದ ರೀತಿಯಿಂದ ಮೂರು ವರ್ಷಗಳ ಕಾಲ ಶ್ರದ್ಧೆಯಿಂದ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾರೆಯೋ, ತಮ್ಮ ಪತ್ನಿಯಲ್ಲಿ ನಿರತರಾಗಿರುತ್ತಾರೆಯೋ, ಯಥೋಚಿತವಾದ ಧರ್ಮಮಾರ್ಗದಲ್ಲಿ ಚೆನ್ನಾಗಿ ಪ್ರತಿಷ್ಠಿತರಾಗಿರುತ್ತಾರೆಯೋ, ಧರ್ಮಾತ್ಮರಾಗಿ ಶ್ರೇಷ್ಠಗತಿಯನ್ನು ಹೊಂದುತ್ತಾರೆಯೋ ಅಂತಹ ಸ್ಥಾನವನ್ನು ಧೃತರಾಷ್ಟ್ರನು ಹೊಂದುವುದಿಲ್ಲ.

ಗೌತಮಃ

ಇಂದ್ರಸ್ಯ ಲೋಕಾ ವಿರಜಾ ವಿಶೋಕಾ
ದುರನ್ವಯಾಃ ಕಾಂಕ್ಷಿತಾ ಮಾನವಾನಾಮ್ |
ತಸ್ಯಾಹಂ ತೇ ಭವನೇ ಭೂರಿತೇಜಸೋ
ರಾಜನ್ನಿಮಂ ಹಸ್ತಿನಂ ಯಾತಯಿಷ್ಯೇ ॥38॥

ಗೌತಮ ಇಂದ್ರನ ಲೋಕವು ರಜೋರಹಿತವಾಗಿ, ಶೋಕರಹಿತವಾಗಿ, ಹೋಗಲು ಅಸಾಧ್ಯವಾಗಿ, ಮಾನವರಿಂದ ಕಾಂಕ್ಷಿತವಾಗುತ್ತದೆ. ರಾಜನೇ, ಅಲ್ಲಿ ಭೂರಿ ತೇಜಸ್ವಿಯಾದ ಇಂದ್ರನ ಮನೆಯಲ್ಲಿ ಗಜಚೋರನಾದ ನಿನ್ನನ್ನು ಯಾತನೆಗೆ ಗುರಿ ಮಾಡುತ್ತೇನೆ.

ಧೃತರಾಷ್ಟ್ರಃ

ಶತವರ್ಷಜೀವೀ ಯಶ್ಚ ಶೂರೋ ಮನುಷ್ಯೋ
ವೇದಾಧ್ಯಾಯೀ ಯಶ್ಚ ಯಜ್ವಾಽಪ್ರಮತ್ತಃ |
ಏತೇ ಸರ್ವೇ ಶಕ್ರಲೋಕಂ ವ್ರಜಂತಿ
ಪರಂ ಗಂತಾ ಧೃತರಾಷ್ಟ್ರೋ ನ ತತ್ರ ॥39॥

ಧೃತರಾಷ್ಟ್ರ ನೂರು ವರ್ಷ ಆಯುಸ್ಸುಳ್ಳವನೂ, ಶೂರನಾದವನೂ, ವೇದಾಧ್ಯಯನ ಮಾಡುವವನೂ, ಯಾಗವನ್ನು ಮಾಡುವವನೂ, ಪ್ರಮಾದರಹಿತ ನಾದವನೂ, ಇಂತಹವರೆಲ್ಲರೂ ಇಂದ್ರಲೋಕಕ್ಕೆ ಹೋಗುತ್ತಾರೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.

ಗೌತಮಃ

ಪ್ರಾಜಾಪತ್ಯಾಃ ಸಂತಿ ಲೋಕಾ ಮಹಾಂತೋ
ನಾಕಸ್ಯ ಪೃಷ್ಠೇ ಪುಷ್ಕಲಾ ವೀತಶೋಕಾಃ |
ಮನೀಷಿತಾಃ ಸರ್ವಲೋಕೋದ್ಭವಾನಾಂ
ತತ್ರ ತ್ವಾಹಂ ಹಸ್ತಿನಂ ಯಾಚಯಿಷ್ಯೇ ॥40॥

ಗೌತಮ ಪ್ರಜಾಪತಿಯ ಶ್ರೇಷ್ಠವಾದ, ಪುಷ್ಕಳವಾದ, ಶೋಕರಹಿತವಾದ ಲೋಕಗಳು ಸ್ವರ್ಗದ ಮೇಲ್ಭಾಗದಲ್ಲಿವೆ. ಸರ್ವಲೋಕದ

ಉತ್ಪತ್ತಿಗೆ ಕಾರಣರಾದ ದೇವತೆಗಳಿಂದ ಅವು ಕಾಂಕ್ಷಿತವಾಗಿವೆ. ಅಲ್ಲಿ ನಾನು ನಿನ್ನನ್ನು ಯಾಚನೆ ಮಾಡುವಂತೆ ಮಾಡುತ್ತೇನೆ.
ಧೃತರಾಷ್ಟ್ರಃ
ಯೇ ರಾಜಾನೋ ರಾಜಸೂಯಾಭಿಷಿಕ್ತಾ
ಧರ್ಮಾತ್ಮಾನೋ ರಕ್ಷಿತಾರಃ ಪ್ರಜಾನಾಮ್ |
ಯೇ ಚಾಶ್ವಮೇಧಾವಭೃಥಾಪ್ಲುತಾಂಗಾಃ
ತೇಷಾಂ ಲೋಕಾ ಧೃತರಾಷ್ಟ್ರೋ ನ ತತ್ರ ॥41॥
ಧೃತರಾಷ್ಟ್ರ ಅವು ರಾಜಸೂಯ ಯಾಗವನ್ನು ಮಾಡಿ ಅವಭೃಥಸ್ನಾತರಾದ ರಾಜರು, ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವಂತಹ ರಾಜರು, ಅಶ್ವಮೇಧ ಯಾಗವನ್ನು ಮಾಡಿ ಅವಭೃಥ ಸ್ನಾನವನ್ನು ಮಾಡಿದವರೂ ಅದವರ ಲೋಕ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.
ಗೌತಮಃ
ತತಃ ಪರಂ ಭಾಂತಿ ಲೋಕಾಃ ಸನಾತನಾಃ
ಸುಪುಣ್ಯಗಂಧಾ ವಿರಜಾ ವೀತಶೋಕಾಃ |
ತಸ್ಮಿನ್ನಹಂ ದುರ್ಲಭೇ ತ್ವಾಪ್ರಧೃಷ್ಯೇ
ಗವಾಂ ಲೋಕೇ ಹಸ್ತಿನಂ ಯಾಚಯಿಷ್ಯೇ ॥42॥
ಗೌತಮ ಅದರಿಂದ ಆಚೆಗೆ ಪುಣ್ಯಗಂಧವನ್ನು ಹೊಂದಿದ ರಜೋರಹಿತವಾದ,, ಶೋಕರಹಿತವಾದ, ದುರ್ಲಭವಾದ, ನಾಶ ಮಾಡಲು ಅಸಾಧ್ಯವಾದ, ಸನಾತನವಾದ ಗೋಲೋಕಗಳಿವೆ. ಅಲ್ಲಿ ನಾನು ನಿನ್ನನ್ನು ಯಾಚನೆ ಮಾಡುವಂತೆ ಮಾಡುವೆನು.
ಧೃತರಾಷ್ಟ್ರಃ
ಯೋ ಗೋಸಹಸ್ರೀ ಶತದಃ ಸಮಾಂ ಸಮಾಂ
ಯೋ ಗೋಶತೀ ದಶ ದದ್ಯಾತ್ ಸ್ವಶಕ್ತ್ಯಾ |
ತಥಾ ದಶಭ್ಯೋ ಯಶ್ಚ ದದ್ಯಾದಿಹೈಕಾಂ
ಪಂಚಭ್ಯೋ ವಾ ದಾನಶೀಲಸ್ತಥೈಕಾಮ್ ॥43॥
ಯೇ ಜೀರ್ಯಂತೇ ಬ್ರಹ್ಮಚರ್ಯೇಣ ವಿಪ್ರಾ
ಬ್ರಾಹ್ಮೀಂ ವಾಚಂ ಪರಿರಕ್ಷಂತಿ ಚೈವ |
ಮನಸ್ವಿನಸ್ತೀರ್ಥಯಾತ್ರಾಪರಾಯಣಾಃ
ತೇ ತತ್ರ ಮೋದಂತಿ ಗವಾಂ ವಿಮಾನೇ ॥44॥
ಧೃತರಾಷ್ಟ್ರ ಗೋಸಹಸ್ರ ಸ್ವಾಮಿಯಾದ ಯಾವನು ಪ್ರತಿ ವರ್ಷವೂ ನೂರು ಗೋದಾನವನ್ನು ಮಾಡುತ್ತಾನೆಯೋ, ನೂರು ಗೋವನ್ನು ಹೊಂದಿದ ಯಾವನು ತನ್ನ ಶಕ್ತಿಗೆ ಅನುಗುಣವಾಗಿ ಹತ್ತು ಗೋವುಗಳನ್ನು ದಾನ ಮಾಡುತ್ತಾನೆಯೋ, ಹಾಗೆಯೇ ಹತ್ತು ಗೋವನ್ನು ಹೊಂದಿದವನು ಒಂದು ಗೋವನ್ನು ದಾನ ಮಾಡುತ್ತಾನೆಯೋ, ಹಾಗೆಯೇ ಐದು ಗೋವನ್ನು ಹೊಂದಿದವನು ದಾನ ಶೀಲನಾಗಿ ಒಂದು ಗೋವನ್ನು ದಾನ ಮಾಡುತ್ತಾನೆಯೋ ಮತ್ತು ಯಾವ ವಿಪ್ರನು ಬ್ರಹ್ಮಚರ್ಯದಿಂದಲೇ ಶರೀರವನ್ನು ಸವೆಸುತ್ತಾರೆಯೋ, ವೇದವಾಣಿಯನ್ನು ರಕ್ಷಿಸುತ್ತಾರೆಯೋ, ಧೈರ್ಯಶಾಲಿಯಾಗಿ ತೀರ್ಥಯಾತ್ರಾ ಪರಾಯಣರಾಗಿರುತ್ತಾರೆಯೋ ಅಂತಹವರು ಗೋಲೋಕದಲ್ಲಿ ವಿಮಾನದಲ್ಲಿ ಸಂತೋಷಪಡುತ್ತಾರೆ.
ಪ್ರಭಾಸಂ ಮಾನಸಂ ಪುಣ್ಯಂ ಪುಷ್ಕರಾಣಿ ಮಹತ್ಸರಃ |
ಪುಣ್ಯಂ ಚ ನೈಮಿಶಂ ತೀರ್ಥಂ ಬಾಹುದಾಂ ನರ್ಮದಾಂ ತದಾ ॥45॥
ಗಯಾಂ ಗಯಶಿರಶ್ಚೈವ ವಿಪಾಶಾಂ ಸ್ಥೂಲವಾಲುಕಾಮ್ |
ಕೃಷ್ಣಾಂ ಗಂಗಾಂ ವೃದ್ಧಗಂಗಾಂ ಮಹಾಹ್ರದಮಥಾಪಿ ಚ ॥46॥
ಪ್ರಭಾಸ, ಪುಣ್ಯವಾದ ಮಾನಸ ಸರೋವರ, ಪುಷ್ಕರಗಳು, ಮಹಾಸರೋವರ, ಪುಣ್ಯವಾದ ನೈಮಿಶ ತೀರ್ಥ, ಬಾಹುದಾ ಮೊದಲಾದ ನದಿಗಳು, ಗಯಾ, ಗಯಶಿರಸ್ಸು, ವಿಪಾಶಾ, ಸ್ಥೂಲವಾಲುಕಾ, ಕೃಷ್ಣಾ, ಗಂಗಾ, ವೃದ್ಧಗಂಗಾ, ಮಹಾಹ್ರದ;
ಗೌತಮೀಂ ಕೌಶಿಕೀಂ ಪಾಕಾಂ ಮಹಾತ್ಮಾನೋ ಧೃತವ್ರತಾಃ |
ಸರಸ್ವತೀದೃಷದ್ವತ್ಯೌ ಯಮುನಾಂ ಯೇ ಪ್ರಯಾಂತಿ ಚ ॥47॥
ತತ್ರ ತೇ ದಿವ್ಯಸಂಸ್ಥಾನಾ ದಿವ್ಯಮಾಲ್ಯಧರಾಃ ಶಿವಾಃ |
ಪ್ರಯಾಂತಿ ಪುಣ್ಯಗಂಧಾಢ್ಯಾ ಧೃತರಾಷ್ಟ್ರೋ ನ ತತ್ರ ವೈ ॥48॥
ಗೌತಮೀ, ಕೌಶಿಕೀ, ಪಾಕಾ, ಸರಸ್ವತೀ, ದೃಷದ್ವತೀ, ಯಮುನಾ - ಈ ಪುಣ್ಯ ಕ್ಷೇತ್ರಗಳಿಗೆ ಮತ್ತು ನದಿಗಳಿಗೆ ಯಾವ ಮಹಾತ್ಮರು ವ್ರತವನ್ನು ಧರಿಸಿ ಹೋಗುತ್ತಾರೆಯೋ ಅಂತಹವರು ಆ ಲೋಕಗಳಲ್ಲಿ ದಿವ್ಯವಾದ ಶರೀರವನ್ನು ಹೊಂದಿ, ದಿವ್ಯವಾದ ಮಾಲೆಗಳನ್ನು ಧರಿಸಿ, ದಿವ್ಯವಾದ ಗಂಧಾಢ್ಯರಾಗಿ ಹೋಗುತ್ತಾರೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವವನಲ್ಲ.
ಗೌತಮಃ
ಯತ್ರ ಶೀತಭಯಂ ನಾಸ್ತಿ ನ ಚೋಷ್ಣಭಯಮಣ್ವಪಿ |
ನ ಕ್ಷುತ್ಪಿಪಾಸೇ ನ ಗ್ಲಾನಿರ್ನ ದುಃಖಂ ನ ಸುಖಂ ತಥಾ ॥49॥
ನ ದ್ವೇಷ್ಯೋ ನ ಪ್ರಿಯಃ ಕಶ್ಚಿನ್ನ ಬಂಧುರ್ನ ರಿಪುಸ್ತಥಾ |
ನ ಜರಾಮರಣೇ ವಾಪಿ ನ ಪುಣ್ಯಂ ನ ಚ ಪಾತಕಮ್ ॥50॥
ಗೌತಮ ಅಲ್ಲಿ ಶೀತಭಯವಿಲ್ಲ, ಉಷ್ಣಭಯವು ಸ್ವಲ್ಪವೂ ಇಲ್ಲ. ಹಸಿವು- ನೀರಡಿಕೆಗಳಿಲ್ಲ, ದಣಿವಿಲ್ಲ, ಶತ್ರುವಿಲ್ಲ, ಬಂಧುವೂ ಇಲ್ಲ,

ಪ್ರಿಯನೂ ಇಲ್ಲ, ದ್ವೇಷ್ಯನೂ ಇಲ್ಲ, ಜರಾ-ಮರಣಗಳಿಲ್ಲ, ಪುಣ್ಯ-ಪಾಪಗಳಿಲ್ಲ.
ತಸ್ಮಿನ್ ವಿರಜಸಿ ಸ್ಥಿತೇ ಪ್ರಜ್ಞಾಸತ್ತ್ವವ್ಯವಸ್ಥಿತೇ |
ಸ್ವಯಂಭುಭವನೇ ಪುಣ್ಯೇ ಹಸ್ತಿನಂ ಮೇ ಯತಿಷ್ಯತಿ ॥51॥
ಅಂತಹ ರಜೋರಹಿತವಾದ, ಪರಿಶುದ್ಧವಾದ, ಪ್ರಜ್ಞೆ ಮತ್ತು ಸತ್ವಗಳಿಂದ ಹೊಂದಲು ಸಾಧ್ಯವಾದ ಪುಣ್ಯಪ್ರದವಾದ ಸ್ವಯಂಭುಭವನದಲ್ಲಿ (ಬ್ರಹ್ಮ ಲೋಕದಲ್ಲಿ) ನೀನು ಯಾತನೆಯನ್ನು ಹೊಂದುವಂತೆ ಮಾಡುವೆನು.
ಧೃತರಾಷ್ಟ್ರಃ
ನಿರ್ಮುಕ್ತಾಃ ಸರ್ವಸಂಗೇಭ್ಯೋ ಕೃತಾತ್ಮಾನೋ ಯತವ್ರತಾಃ |
ಅಧ್ಯಾತ್ಮಯೋಗಸಂಸ್ಥಾನೇ ಯುಕ್ತಾಃ ಸ್ವರ್ಗಗತಿಂ ಗತಾಃ ॥52॥
ತೇ ಬ್ರಹ್ಮಭವನಂ ಪುಣ್ಯಂ ಪ್ರಾಪ್ನುವಂತೀಹ ಸಾತ್ತ್ವಿಕಾಃ |
ನ ತತ್ರ ಧೃತರಾಷ್ಟ್ರಸ್ತೇ ಶಕ್ಯೋ ದ್ರಷ್ಟುಂ ಮಹಾಮುನೇ ॥53॥
ಧೃತರಾಷ್ಟ್ರ ಸರ್ವಸಂಗನಿರ್ಮುಕ್ತರಾಗಿ ಆತ್ಮಜಯವನ್ನು ಹೊಂದಿ, ನಿಯತ ವ್ರತಧಾರಿಗಳಾಗಿ, ಅಧ್ಯಾತ್ಮಯೋಗ ನಿರತರಾಗಿ ಯಾರು ಸ್ವರ್ಗಗತಿಯನ್ನು ಹೊಂದಿರುತ್ತಾರೆಯೋ ಅಂತಹ ಸಾತ್ವಿಕರು ಪವಿತ್ರವಾದ ಬ್ರಹ್ಮಸದನವನ್ನು ಹೊಂದುತ್ತಾರೆ. ಎಲೈ ಮಹಾಮುನಿಯೇ, ನೀನು ಅಲ್ಲಿ ಧೃತರಾಷ್ಟ್ರನನ್ನು ನೋಡಲು ಸಾಧ್ಯವಿಲ್ಲ.
ಗೌತಮಃ
ರಥಂತರಂ ಯತ್ರ ಬೃಹಚ್ಚ ಗೀಯತೇ
ಯತ್ರ ವೇದೀ ಪುಂಡರೀಕೈಃ ಸ್ತೃಣೋತಿ |
ಯತ್ರೋಪಯಾತಿ ಹರಿಭಿಃ ಸೋಮಪೀಥೀ
ತತ್ರ ತ್ವಾಹಂ ಹಸ್ತಿನಂ ಯಾತಯಿಷ್ಯೇ ॥54॥
ಗೌತಮ ಎಲ್ಲಿ ರಥಂತರ ಸಾಮವೂ, ಬೃಹತ್ಸಾಮವೂ ಗಾನ ಮಾಡಲ್ಪಡುತ್ತದೆಯೋ, ಎಲ್ಲಿ ಯಜ್ಞವೇದಿಯು ಕಮಲಗಳಿಂದ ಹರಡಲ್ಪಟ್ಟಿರುತ್ತದೆಯೋ ಎಲ್ಲಿ ಸೋಮಪಾನ ಮಾಡುವ ಇಂದ್ರನು ಅಶ್ವಗಳಲ್ಲಿ ಬರುತ್ತಾನೆಯೋ ಅಲ್ಲಿ ಗಜಾಪಹಾರಿಯಾದ ನಿನ್ನನ್ನು ಯಾತನೆಗೆ ಗುರಿಪಡಿಸುತ್ತೇನೆ.
ಬುಧ್ಯಾಮಿ ತ್ವಾಂ ವೃತ್ರಹಣಂ ಶತಕ್ರತುಂ
ವ್ಯತಿಕ್ರಮಂತಂ ಭುವನಾನಿ ವಿಶ್ವಾ |
ಕಚ್ಚಿನ್ನ ವಾಚಾ ವೃಜಿನಂ ಕದಾಚಿತ್
ನ ಚಾಪ್ಯಕಾರ್ಷಂ ಮನಸೋಭಿಷಂಗಾತ್ ॥55॥
ನಾನು ನಿನ್ನನ್ನು ವೃತ್ರಸಂಹಾರಕನಾದ, ಶತಕ್ರತುವಾದ ಇಂದ್ರನೆಂದೂ, ಎಲ್ಲ ಲೋಕಗಳನ್ನು ರಕ್ಷಿಸಲು ಸಂಚರಿಸುತ್ತಿರುವವನೆಂದೂ ತಿಳಿದಿದ್ದೇನೆ. ನಾನು ನಿನಗೆ ಮಾತಿನಿಂದಾಗಲೀ ಅಥವಾ ಮನಸ್ಸಿನ ದೋಷದಿಂದಾಗಲೀ ಯಾವ ಅಪರಾಧವನ್ನೂ ಮಾಡಿಲ್ಲವಷ್ಟೆ?
ಶಕ್ರಃ
ಯಸ್ಮಾದಿದಂ ಲೋಕಪದಂ ಪ್ರಜಾನಾಮ್
ಅನ್ವಾಗಮಂ ಪರಿಪಾದೇ ಗಜಸ್ಯ |
ತಸ್ಮಾದ್ ಭವಾನ್ ಪ್ರಣತಂ ಮಾಽನುಶಾಸ್ತು
ಬ್ರವೀಷಿ ಯತ್ ಕರವಾಣೀಹ ಸರ್ವಮ್ ॥56॥
ಶಕ್ರ ನಾನು ಆನೆಯ ದೊಡ್ಡ ಪಾದವನ್ನು ಅನುಸರಿಸಿಕೊಂಡು ಪ್ರಜೆಗಳಿಂದ ಈ ಲೋಕ ಅಪವಾದಕ್ಕೆ ಗುರಿಯಾದ ಕಾರಣ ನಿನಗೆ ಪ್ರಣತನಾಗಿರುವ ನನ್ನನ್ನು ಶಾಸನ ಮಾಡಬೇಕು. ನೀನು ಏನು ಹೇಳುತ್ತೀಯೋ ಅದೆಲ್ಲವನ್ನೂ ಮಾಡುವೆನು.
ಗೌತಮಃ
ಶ್ವೇತಂ ಕರೇಣುಂ ಮಮ ಪುತ್ರನಾಗಂ
ಯಂ ಮೇಽಹಾರ್ಷೀರ್ದಶವರ್ಷಾಣಿ ಬಾಲಮ್ |
ಯೋ ಮೇ ವನೇ ವಸತೋಽಭೂದ್ ದ್ವಿತೀಯಃ
ತಮೇವ ಮೇ ದೇಹಿ ಸುರೇಂದ್ರ ನಾಗಮ್ ॥57॥
ಗೌತಮ ನನ್ನ ಶ್ವೇತವರ್ಣದ ಗಜಶಿಶುವನ್ನು ಪುತ್ರನಂತೆ ಹತ್ತು ವರ್ಷಗಳ ಕಾಲ ಪಾಲಿಸಿದೆನು. ಯಾವ ಆ ಚಿಕ್ಕವಯಸ್ಸಿನ ಆನೆಯನ್ನು ನೀನು ಕರೆದುಕೊಂಡು ಹೋಗುತ್ತಿದ್ದೀಯೋ, ಯಾವ ಆನೆಯು ವನವಾಸವನ್ನು ಮಾಡುವ ನನಗೆ ಮಿತ್ರನಾಗಿದ್ದಿತೋ ಎಲೈ ಸುರೇಂದ್ರನೇ, ಆ ಆನೆಯನ್ನೇ ನನಗೆ ಕೊಡು.
ಶಕ್ರಃ
ಅಯಂ ಸುತಸ್ತೇ ದ್ವಿಜಮುಖ್ಯ ನಾಗ-
ಶ್ಚಾಘ್ರಾಯತೇ ತ್ವಾಮಭಿವೀಕ್ಷ್ಯಮಾಣಃ |
ಪಾದೌ ಚ ತೇ ನಾಸಿಕಯೋಪಜಿಘ್ರತೇ
ಶ್ರೇಯೋ ಮಮ ಧ್ಯಾಹಿ ನಮಶ್ಚ ತೇಽಸ್ತು ॥58॥
ಶಕ್ರ ಎಲೈ ದ್ವಿಜಮುಖ್ಯನೇ, ಇದೋ ಈ ನಿನ್ನ ಆನೆ. ನಿನ್ನನ್ನು ನೋಡುತ್ತಾ ಅದು ನಿನ್ನ ಪಾದಗಳನ್ನು ಸೊಂಡಲಿನಿಂದ ಆಘ್ರಾಣಿಸುತ್ತಿದೆ. ನನಗೆ ಶ್ರೇಯಸ್ಸನ್ನು ಆಶಂಸಿಸು. ನಿನಗೆ ನಮಸ್ಕಾರವಿರಲಿ.
ಗೌತಮಃ

ಶಿವಂ ಸದೈವೇಹ ಸುರೇಂದ್ರ ತುಭ್ಯಂ
ಧ್ಯಾಯಾಮಿ ಪೂಜಾಂ ಚ ಸದಾ ಪ್ರಯುಂಜೇ |
ಮಮಾಪಿ ತ್ವಂ ಶಕ್ರ ಶಿವಂ ದದಸ್ವ
ತ್ವಯಾ ದತ್ತಂ ಪ್ರತಿಗೃಹ್ಣಾತಿ ನಾಗಮ್ ||59||
ಗೌತಮ ಎಲೈ ಸುರೇಂದ್ರನೇ, ನಿನಗೆ ಯಾವಾಗಲೂ ಮಂಗಳವಾಗಲಿ. ನಿನ್ನನ್ನು ಯಾವಾಗಲೂ ಧ್ಯಾನ ಮಾಡುತ್ತೇನೆ ಮತ್ತು ಪೂಜಿಸುತ್ತೇನೆ. ಎಲೈ ಶಕ್ರನೇ, ನನಗೂ ಶುಭಾಶೀರ್ವಾದವನ್ನು ಕೊಡು. ನೀನು ಹಿಂದಿರುಗಿಸುವ ಗಜವನ್ನು ನಾನು ಸ್ವೀಕರಿಸುತ್ತೇನೆ (ಗೌತಮನು ಸ್ವೀಕರಿಸುತ್ತಾನೆ).
ಶಕ್ರಃ
ಯೇಷಾಂ ವೇದಾ ನಿಹಿತಾ ವೈ ಗುಹಾಯಾಂ
ಮನೀಷಿಣಾಂ ಸತ್ತ್ವವತಾಂ ಮಹಾತ್ಮನಾಮ್ |
ತೇಷಾಂ ತ್ವಯೈಕೇನ ಮಹಾತ್ಮನಾಸ್ಮಿ
ಬುದ್ಧಸ್ತಸ್ಮಾತ್ ಪ್ರೀತಿಮಾಂಸ್ತೇಽಹಮದ್ಯ ||60||
ಶಕ್ರ ಯಾರು ತಮ್ಮ ಹೃದಯಗುಹೆಯಲ್ಲಿ ವೇದಗಳನ್ನು ಧರಿಸಿರುತ್ತಾರೆಯೋ ಅಂತಹ ಸತ್ಯವಂತರಾದ, ಮೇಧಾವಿಗಳಾದ ಮಹಾತ್ಮರಲ್ಲಿ ಒಬ್ಬನಾದ ನನ್ನಿಂದ ಮಾತ್ರ ನಾನು (ಇಂದ್ರನೆಂದು) ತಿಳಿಯಲ್ಪಟ್ಟಿದ್ದೇನೆ. ಆದ್ದರಿಂದ ನಿನ್ನ ಮೇಲೆ ನಾನು ಬಹಳ ಪ್ರೀತಿಯನ್ನು ಹೊಂದಿದ್ದೇನೆ.
ಹಂತೈಹಿ ಬ್ರಾಹ್ಮಣ ಕ್ಷಿಪ್ರಂ ಸಹ ಪುತ್ರೇಣ ಹಸ್ತಿನಾ |
ಪ್ರಾಪ್ನುಹಿ ತ್ವಂ ಶುಭಾಲ್ಲೋಕಾನಹ್ನಾಯ ಚ ಚಿರಾಯ ಚ ||61||
ಬಹಳ ಸಂತೋಷ. ಎಲೈ ಬ್ರಾಹ್ಮಣನೇ, ಶೀಘ್ರವಾಗಿ ನೀನು ನಿನ್ನ ಪುತ್ರನಾದ ಆನೆಯ ಜೊತೆ ಬಾ. ತಕ್ಷಣ ಮತ್ತು ಬಹುಕಾಲದವರೆಗೆ ಶುಭಲೋಕಗಳನ್ನು ಹೊಂದುವವನಾಗು.
ಭೀಷ್ಮಃ
ಸ ಗೌತಮಂ ಪುರಸ್ಕೃತ್ಯ ಸಹ ಪುತ್ರೇಣ ಹಸ್ತಿನಾ |
ದಿವಮಾಚಕ್ರಮೇ ವಜ್ರೀ ಸದ್ಭಿಃ ಸಹ ದುರಾಸದಮ್ ||62||
ಭೀಷ್ಮ ಆಗ ವಜ್ರಧರನಾದ ಇಂದ್ರನು ಗಜರೂಪ ಪುತ್ರಸಹಿತನಾದ ಗೌತಮನನ್ನು ಮುಂದೆ ಮಾಡಿಕೊಂಡು ಸಜ್ಜನರಿಂದಲೂ ಹೊಂದಲು ಕಷ್ಟಸಾಧ್ಯವಾದ ಸ್ವರ್ಗಕ್ಕೆ ಹೋದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪಂಚಪಂಚಾಶದುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತಾರನೆಯ ಅಧ್ಯಾಯ
ಉಪವಾಸದ ಮಹಾತ್ಮೆ
ಯುಧಿಷ್ಠಿರಃ
ದಾನಂ ಬಹುವಿಧಾಕಾರಂ ಶಾಂತಿಃ ಸತ್ಯಮಹಿಂಸತಾ |
ಸ್ವದಾರತುಷ್ಟಿಶ್ಚೋಕ್ತಾ ತೇ ಫಲಂ ದಾನಸ್ಯ ಚೈವ ಯತ್ ||1||
ಪಿತಾಮಹಸ್ಯ ವಿದಿತಂ ಕಿಮನ್ಯತ್ರ ತಪೋಬಲಾತ್ |
ತಪಸೋ ಯತ್ಪರಂ ತೇಽದ್ಯ ತನ್ಮೇ ವ್ಯಾಖ್ಯಾತುಮರ್ಹಸಿ ||2||
ಯುಧಿಷ್ಠಿರ ಅನೇಕ ವಿಧವಾದ ಶಾಂತಿಯನ್ನೂ, ದಾನವನ್ನೂ, ಸತ್ಯವಚನವನ್ನೂ, ಅಹಿಂಸೆಯನ್ನೂ, ಸ್ವಪತ್ನಿಯಲ್ಲಿ ಸಂತೋಷವನ್ನೂ, ದಾನಫಲಗಳನ್ನೂ ನೀನು ಹೇಳಿದ್ದೀಯೆ. ಪಿತಾಮಹರಾದ ನಿಮಗೆ ತಪೋಬಲಕ್ಕಿಂತ ಬೇರೆ ಯಾವ ಬಲವು ತಿಳಿದಿದೆ? ತಪಸ್ಸಿಗಿಂತಲೂ ಶ್ರೇಷ್ಠವಾದುದು ಯಾವುದೋ ಅದನ್ನು ಈ ದಿನ ನನಗೆ ಹೇಳಬೇಕು.
ಭೀಷ್ಮಃ
ತಪಃ ಪ್ರಚಕ್ಷತೇ ಯಾವತ್ ತಾವಲ್ಲೋಕಾ ಯುಧಿಷ್ಠಿರ |
ಮತಂ ಮಮ ತು ಕೌಂತೇಯ ತಪೋ ನಾನಶನಾತ್ ಪರಮ್ ||3||
ಎಲೈ ಯುಧಿಷ್ಠಿರನೇ, ಎಲ್ಲಿಯವರೆಗೂ ಲೋಕವಿರುತ್ತದೆಯೋ ಅಲ್ಲಿಯವರೆಗೆ ತಪಸ್ಸನ್ನು ಶ್ರೇಷ್ಠವೆಂದು ಹೇಳುತ್ತಾರೆ. ಆದರೆ ಎಲೈ ಕೌಂತೇಯನೇ, ನನ್ನ ಅಭಿಪ್ರಾಯದಲ್ಲಿ ಉಪವಾಸಕ್ಕಿಂತ (ಅನಶನ) ದೊಡ್ಡ ತಪಸ್ಸಿಲ್ಲ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಭಗೀರಥಸ್ಯ ಸಂವಾದಂ ಬ್ರಹ್ಮಣಶ್ಚ ಮಹಾತ್ಮನಃ ||4||
ಈ ವಿಷಯದಲ್ಲಿಯೂ ಸಹ ಭಗೀರಥನಿಗೂ ಮತ್ತು ಮಹಾತ್ಮರಾದ ಬ್ರಹ್ಮದೇವರಿಗೂ ನಡೆಸ ಸಂವಾದ ರೂಪವಾದ ಪುರಾತನವಾದ ಈ ಇತಿಹಾಸವನ್ನು ಹೇಳುತ್ತಾರೆ.
ಅತೀತ್ಯ ಸುರಲೋಕಂ ಚ ಗವಾಂ ಲೋಕಂ ಚ ಭಾರತ |
ಋಷಿಲೋಕಂ ಚ ಸೋಽಗಚ್ಛದ್ ಭಗೀರಥ ಇತಿ ಶ್ರುತಿಃ ||5||
ಎಲೈ ಭಾರತನೇ, ಭಗೀರಥನು ಸುರಲೋಕವನ್ನೂ, ಗೋಲೋಕವನ್ನೂ, ಋಷಿ ಲೋಕವನ್ನೂ ದಾಟಿ ಬ್ರಹ್ಮಲೋಕಕ್ಕೆ ಹೋದನೆಂದು

ನಾವು ಕೇಳಿದ್ದೇವೆ.
ತಂ ದೃಷ್ಟ್ವಾ ಸ ವಚಃ ಪ್ರಾಹ ಬ್ರಹ್ಮಾ ರಾಜನ್ ಭಗೀರಥಮ್ |
ಕಥಂ ಭಗೀರಥಾಗಾಸ್ತ್ವಮಿಮಂ ಲೋಕಂ ದುರಾಸದಮ್ ॥6॥
ನ ಹಿ ದೇವಾ ನ ಗಂಧರ್ವಾ ನ ಮನುಷ್ಯಾ ಭಗೀರಥ |
ಆಯಾಂತ್ಯತಪ್ತತಪಸಃ ಕಥಂ ವೈ ತ್ವಮಿಹಾಗತಃ ॥7॥
ಎಲೈ ರಾಜನೇ, ಆ ಭಗೀರಥನನ್ನು ನೋಡಿ ಬ್ರಹ್ಮದೇವರು `ಎಲೈ ಭಗೀರಥನೇ, ಬರಲು ಕಷ್ಟವಾದ ಈ ಲೋಕಕ್ಕೆ ನೀನು ಹೇಗೆ ಬಂದೆ? ತಪಸ್ಸನ್ನು ಮಾಡದ ದೇವತೆಗಳಾಗಲೀ, ಗಂಧರ್ವರಾಗಲೀ, ಮನುಷ್ಯರಾಗಲೀ ಇಲ್ಲಿಗೆ ಬರುವುದಿಲ್ಲ. ನೀನು ಹೇಗೆ ಬಂದೆ?' ಎಂದು ಹೇಳಿದರು.
ಭಗೀರಥಃ
ನಿಃಶಂಕಮನ್ನಮದದಂ ಬ್ರಾಹ್ಮಣೇಭ್ಯಃ
ಶತಂ ಸಹಸ್ರಾಣಿ ಸದೈವ ದಾನಮ್ |
ಬ್ರಾಹ್ಮಂ ವ್ರತಂ ನಿತ್ಯಮಾಸ್ಥಾಯ ವಿದ್ಧಿ
ನ ತ್ವೇವಾಹಂ ತಸ್ಯ ಫಲಾದಿಹಾಗಾಮ್ ॥8॥
ಭಗೀರಥ ನಾನು ಬ್ರಾಹ್ಮಣರಿಗೆ ನಿಶ್ಶಂಕೆಯಿಂದ ಅನ್ನದಾನವನ್ನು ಮಾಡಿದೆನು. ಯಾವಾಗಲೂ ಲಕ್ಷ ದಾನಗಳನ್ನು ಮಾಡುತ್ತಿದ್ದೆ. ನಿತ್ಯವೂ ಬ್ರಾಹ್ಮಣವ್ರತವನ್ನು ಧರಿಸಿದೆ. ಆದರೆ ಅದರ ಫಲದಿಂದ ನಾನು ಇಲ್ಲಿಗೆ ಬಂದಿಲ್ಲವೆಂದು ತಿಳಿಯಿರಿ.
ದಶೈಕರಾತ್ರಾನ್ ದಶ ಪಂಚರಾತ್ರಾನ್
ಏಕಾದಶೈಕಾದಶಕಾನ್ ಕ್ರತೂಂಶ್ಚ |
ಜ್ಯೋತಿಷ್ಟೋಮಾನಾಂ ಚ ಶತಂ ಯದಿಷ್ಟಂ
ಫಲೇನ ತೇನಾಪಿ ಚ ನಾಗತೋಽಹಮ್ ॥9॥
ಹತ್ತು ದಶರಾತ್ರಗಳನ್ನೂ, ಹತ್ತು ಪಂಚರಾತ್ರಗಳನ್ನೂ, ಹನ್ನೊಂದು ಏಕಾದಶ ದಿನದ ಕ್ರತುಗಳನ್ನೂ, ನೂರು ಜ್ಯೋತಿಷ್ಟೋಮಗಳನ್ನೂ ಮಾಡಿದೆ. ಆ ಫಲದಿಂದಲೂ ನಾನು ಇಲ್ಲಿಗೆ ಬಂದಿಲ್ಲ.
ಯಚ್ಚಾವಸಂ ಜಾಹ್ನವೀತೀರನಿತ್ಯಃ
ಶತಂ ಸಮಾಸ್ತಪ್ಯಮಾನಸ್ತಪೋಽಹಮ್ |
ಅದಾಂ ಚ ತತ್ರಾಶ್ವತರೀಸಹಸ್ರಂ
ನಾರೀಪುರಂ ನ ಚ ತೇನಾಹಮಾಗಾಮ್ ॥10॥
ನಾನು ನೂರು ವರ್ಷಗಳ ಕಾಲ ಗಂಗಾತೀರದಲ್ಲಿ ವಾಸ ಮಾಡಿದೆ. ಘೋರವಾದ ತಪಸ್ಸನ್ನು ಮಾಡಿದೆ. ಅಲ್ಲಿ ಅಶ್ವತರೀ (ಹೇಸರಗತ್ತೆ) ಸಹಸ್ರವನ್ನು ದಾನ ಮಾಡಿದೆ. ಕನ್ಯೆಯರ ಸಮೂಹವನ್ನೇ ದಾನ ಮಾಡಿದೆ. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ದಶಾಯುತಾನಿ ಚಾಶ್ವಾನಾಮಯುತಾನಿ ಚ ವಿಂಶತಿಮ್ |
ಪುಷ್ಕರೇಷು ದ್ವಿಜಾತಿಭ್ಯಃ ಪ್ರಾದಾಂ ಗಾಶ್ಚ ಸಹಸ್ರಶಃ ॥11॥
ಪುಷ್ಕರ ಕ್ಷೇತ್ರದಲ್ಲಿ ಒಂದು ಲಕ್ಷ ಅಶ್ವಗಳನ್ನು ಮತ್ತು ಎರಡು ಲಕ್ಷ ಅಶ್ವಗಳನ್ನು ಮತ್ತು ಸಹಸ್ರಾರು ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದೆ.
ಸುವರ್ಣಚಂದ್ರೋಡುಪಧಾರಿಣೀನಾಂ
ಕನ್ಯೋತ್ತಮಾನಾಮದದಂ ಸ್ರಗ್ವಿಣೀನಾಮ್ |
ಷಷ್ಟಿಂ ಸಹಸ್ರಾಣಿ ಚ ಭೂಷಿತಾನಾಂ
ಜಾಂಬೂನದೈರಾಭರಣೈರ್ನ ತೇನ ॥12॥
ಸುವರ್ಣಚಂದ್ರಹಾರಗಳನ್ನು ಧರಿಸಿದ, ದೋಣಿಯಂತಹ ಸುವರ್ಣಾಭರಣ- ಗಳಿಂದ ಕೂಡಿದ ಹಾರವನ್ನು ಧರಿಸಿದ, ಹೂಮಾಲೆಗಳನ್ನು ಧರಿಸಿದ, ಅರವತ್ತು ಸಾವಿರ ಶ್ರೇಷ್ಠ ಕನ್ಯೆಯರನ್ನು ಸುವರ್ಣಾಲಂಕಾರ ಸಹಿತವಾಗಿ ದಾನ ಮಾಡಿದೆ. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ದಶಾರ್ಬುದಾನ್ಯದದಂ ಗೋಸವೇಜ್ಯಾ-
ಸ್ವೇಕೈಕಶೋ ದಶ ಗಾ ಲೋಕನಾಥ |
ಸಮಾನವತ್ಸಾಃ ಪಯಸಾ ಸಮನ್ವಿತಾಃ
ಸುವರ್ಣಕಾಂಸ್ಯೋಪದುಹಾ ನ ತೇನ ॥13॥
ಎಲೈ ಲೋಕನಾಥನೇ, ಗೋಸವ ಯಾಗಗಳಲ್ಲಿ ಹತ್ತು ಅರ್ಬುದ ಗೋವುಗಳನ್ನು ದಾನ ಮಾಡಿದೆನು. ಒಬ್ಬೊಬ್ಬರಿಗೂ ಸಮಾನವಾದ ಕರುಗಳುಳ್ಳ, ಚೆನ್ನಾಗಿ ಹಾಲನ್ನು ಕರೆಯುವ, ಸುವರ್ಣಮಯವಾದ ಮತ್ತು ಕಂಚಿನ ಕರೆಯುವ ಪಾತ್ರೆಯಿಂದ ಸಹಿತವಾದ ಹತ್ತು ಗೋವುಗಳನ್ನು ದಾನ ಮಾಡಿದೆನು. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ಅಪ್ತೋರ್ಯಾಮೇಷು ನಿಯತಮೇಕೈಕಸ್ಮಿನ್ ದಶಾದದಮ್ |
ಗೃಷ್ಟೀನಾಂ ಕ್ಷೀರದಾತ್ರೀಣಾಂ ರೋಹಿಣೀನಾಂ ನ ತೇನ ಚ ॥14॥
ಆಪ್ತೋರ್ಯಾಮ ಯಾಗಗಳಲ್ಲಿ ನಿಯತವಾಗಿ ಒಬ್ಬೊಬ್ಬರಿಗೂ ಚೆನ್ನಾಗಿ ಹಾಲನ್ನು ಕರೆಯುವ ಒಂದೇ ಸಲ ಕರುವನ್ನು ಹಾಕಿದ ರೋಹಿಣೀ ಜಾತಿಯ ಹತ್ತು ಗೋವುಗಳನ್ನು ದಾನ ಮಾಡಿದೆನು. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ದೋಗ್ಧ್ರೀಣಾಂ ವೈ ಗವಾಂ ಚೈವ ಪ್ರಯುತಾನಿ ದಶೈವ ಹ |

ಪ್ರಾದಾಂ ದಶಗುಣಂ ಬ್ರಹ್ಮನ್ ನ ತೇನಾಹಮಿಹಾಗತಃ ॥15॥
ಬ್ರಹ್ಮನೇ, ಚೆನ್ನಾಗಿ ಹಾಲು ಕರೆಯುವ ಹತ್ತು ಲಕ್ಷ ಗೋವುಗಳನ್ನು ದಾನ ಮಾಡಿದೆನು. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ವಾಜಿನಾಂ ಬಾಹ್ಲಿಜಾತಾನಾಮಯುತಾನ್ಯದದಂ ದಶ |
ಸಿತಾನಾಂ ಹೇಮಮಾಲಾನಾಂ ನ ಚ ತೇನಾಹಮಾಗತಃ ॥16॥
ಬಾಹ್ಲೀಕ ದೇಶದಲ್ಲಿ ಜನಿಸಿದ ಬಿಳಿಯ ಬಣ್ಣದ, ಹೇಮಮಾಲೆಗಳನ್ನು ಧರಿಸಿದ ಒಂದು ಲಕ್ಷ ಅಶ್ವಗಳನ್ನು ದಾನ ಮಾಡಿದೆನು. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ಕೋಟೀಶ್ಚ ಕಾಂಚನಸ್ಯಾಷ್ಟೌ ಪ್ರಾದಾಂ ಬ್ರಹ್ಮನ್ ದಶ ತ್ವಹಮ್ |
ಏಕೈಕಸ್ಮಿನ್ ಕ್ರತೌ ತೇನ ಫಲೇನಾಹಂ ನ ಚಾಗತಃ ॥17॥
ಎಲೈ ಬ್ರಹ್ಮದೇವರೇ, ಒಂದೊಂದು ಯಾಗದಲ್ಲಿ ನಾನು ಎಂಬತ್ತು ಕೋಟಿ ಸುವರ್ಣ ನಿಷ್ಕಗಳನ್ನು ದಾನ ಮಾಡಿದೆನು. ಅದರ ಫಲದಿಂದ ಇಲ್ಲಿಗೆ ಬಂದಿಲ್ಲ.
ವಾಜಿನಾಂ ಶ್ಯಾಮಕರ್ಣಾನಾಂ ಹರಿತಾನಾಂ ಪಿತಾಮಹ |
ಪ್ರಾದಾಂ ಹೇಮಸ್ರಜಾಂ ಬ್ರಹ್ಮನ್ ಕೋಟೀರ್ದಶ ಚ ಸಪ್ತ ಚ ॥18॥
ಎಲೈ ಪಿತಾಮಹರೇ, ಚಿನ್ನದ ಮಾಲೆಗಳನ್ನು ಧರಿಸಿದ, ಕಪ್ಪಾದ ಕಿವಿಯುಳ್ಳ ಹಸಿರು ಬಣ್ಣದ ಹದಿನೇಳು ಕೋಟಿ ಅಶ್ವಗಳನ್ನು ದಾನ ಮಾಡಿದೆನು.
ಈಷಾದಂತಾನ್ ಮಹಾಕಾಯಾನ್ ಕಾಂಚನಸ್ರಗ್ವಿಭೂಷಿತಾನ್ |
ಪತ್ನೀಮತಃ ಸಹಸ್ರಾಣಿ ಪ್ರಾಯಚ್ಛಂ ದಶ ಸಪ್ತ ಚ ॥19॥
ಗಾಡಿಯ ಮೂಕಿಯಂತೆ ಉದ್ದವಾದ ದಂತವುಳ್ಳ, ದೊಡ್ಡ ಶರೀರವನ್ನು ಹೊಂದಿದ, ಸುವರ್ಣ ಮಾಲೆಗಳನ್ನು ಧರಿಸಿದ, ಹದಿನೇಳು ಸಾವಿರ ಆನೆಗಳನ್ನು ಹೆಣ್ಣಾನೆಗಳ ಜೊತೆಯಲ್ಲಿ ದಾನ ಮಾಡಿದೆನು.
ಅಲಂಕೃತಾನಾಂ ದೇವೇಶ ದಿವ್ಯೈಃ ಕನಕಭೂಷಣೈಃ |
ರಥಾನಾಂ ಕಾಂಚನಾಂಗಾನಾಂ ಸಹಸ್ರಾಣ್ಯದದಂ ದಶ |
ಸಪ್ತ ಚಾನ್ಯಾನಿ ಯುಕ್ತಾನಿ ವಾಜಿಭಿಃ ಸಮಲಂಕೃತೈಃ ॥20॥
ಎಲೈ ದೇವೇಶನೇ, ದಿವ್ಯವಾದ ಕನಕಭೂಷಣಗಳಿಂದ ಅಲಂಕೃತವಾದ, ಸುವರ್ಣಮಯವಾದ ಭಾಗಗಳನ್ನು ಹೊಂದಿದ ಅಲಂಕೃತವಾದ ಅಶ್ವಗಳನ್ನು ಹೂಡಿದ, ಹದಿನೇಳು ಸಾವಿರ ರಥಗಳನ್ನು ದಾನ ಮಾಡಿದೆನು.
ದಕ್ಷಿಣಾವಯವಾಃ ಕೇಚಿದ್ ವೇದೈರ್ಯೇ ಸಂಪ್ರಕೀರ್ತಿತಾಃ |
ವಾಜಪೇಯೇಷು ದಶಸು ಪ್ರಾದಾಂ ನ ಚ ತೇನಾಗತೋ ಹ್ಯಹಮ್ ॥
ವೇದಗಳಲ್ಲಿ ದಕ್ಷಿಣೆಯ ಅಂಗವೆಂದು ಏನೇನು ಹೇಳಲ್ಪಟ್ಟಿದೆಯೋ ಅವೆಲ್ಲವನ್ನೂ ಹತ್ತು ವಾಜಪೇಯಗಳಲ್ಲಿ ದಾನ ಮಾಡಿದೆನು. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ಶಕ್ರತುಲ್ಯಪ್ರಭಾವಾನಾಮಿಜ್ಯಯಾ ವಿಕ್ರಮೇಣ ಚ |
ಸಹಸ್ರಂ ನಿಷ್ಕಕಂಠಾನಾಮದದಂ ದಕ್ಷಿಣಾಮಹಮ್ ॥22॥
ಯಜ್ಞದಲ್ಲಿಯೂ ಮತ್ತು ಪರಾಕ್ರಮದಲ್ಲಿಯೂ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ಕಂಠದಲ್ಲಿ ವಿಶ್ವಾಭರಣವನ್ನು ಧರಿಸಿದ ಸಹಸ್ರ (ರಾಜಕುಮಾರರನ್ನು) ದಕ್ಷಿಣೆಯಾಗಿ ಕೊಟ್ಟೆನು.
ವಿಜಿತ್ಯ ನೃಪತೀನ್ ಸರ್ವಾನ್ ಮಖೈರಿಷ್ಟ್ವಾ ಪಿತಾಮಹ |
ಅಷ್ಟಭ್ಯೋ ರಾಜಸೂಯೇಭ್ಯೋ ನ ಚ ತೇನಾಹಮಾಗತಃ ॥23॥
ಎಲೈ ಪಿತಾಮಹರೇ, ಎಲ್ಲ ರಾಜರನ್ನೂ ಗೆದ್ದು ಯಜ್ಞಗಳನ್ನು ಆಚರಿಸಿ ಅನಂತರ ಮಾಡಿದ ಎಂಟು ರಾಜಸೂಯ ಯಾಗಗಳ ಫಲವಾಗಿ ನಾನು ಇಲ್ಲಿಗೆ ಬಂದಿಲ್ಲ.
ಸ್ರೋತಶ್ಚ ಯಾವದ್ ಗಂಗಾಯಾಶ್ಛನ್ನಮಾಸೀಜ್ಜಗತ್ಪತೇ |
ದಕ್ಷಿಣಾಭಿಃ ಪ್ರವೃತ್ತಾಭಿಃ ಮಮ ನಾಗಾಶ್ಚ ತತ್ಕೃತೇ ॥24॥
ಎಲೈ ಜನಪತಿಯೇ, ಗಂಗೆಯ ಪ್ರವಾಹವು ಎಷ್ಟು ದಕ್ಷಿಣೆಯಿಂದ ಮುಚ್ಚಿ ಹೋಗಬಹುದೋ ಅಷ್ಟು (ದಕ್ಷಿಣೆಯನ್ನು ಹೊರುವ) ಆನೆಗಳು ನನ್ನ ಬಳಿ ಇದ್ದವು. ದಕ್ಷಿಣೆಗಾಗಿ ಅವೆಲ್ಲವನ್ನೂ ದಾನ ಮಾಡಿದೆ.
ವಾಜಿನಾಂ ಚ ಸಹಸ್ರೇ ದ್ವೇ ಸುವರ್ಣಶತಭೂಷಿತೇ |
ವರಂ ಗ್ರಾಮಶತಂ ಚಾಹಮೇಕೈಕಸ್ಯ ತ್ರಿಧಾಽದದಮ್ |
ತಪಸ್ವೀ ನಿಯತಾಹಾರಃ ಶಮಮಾಸ್ಥಾಯ ವಾಗ್ಯತಃ ॥25॥
ನೂರು ಸುವರ್ಣಾಭರಣಗಳಿಂದ ಅಲಂಕೃತವಾದ ಎರಡು ಸಹಸ್ರ ಕುದುರೆಗಳನ್ನು ಮತ್ತು ಶ್ರೇಷ್ಠವಾದ ನೂರು ಗ್ರಾಮಗಳನ್ನು ನಾನು ಒಬ್ಬೊಬ್ಬರಿಗೂ ಮೂರು ಬಾರಿ ದಾನ ಮಾಡಿದೆ. ತಪಸ್ಸಿನಿಂದ ಆಹಾರನಿಯಮವನ್ನು ಹೊಂದಿ, ಮೌನದಿಂದ ಶಾಂತನಾಗಿ ದಾನ ಮಾಡಿದೆನು.
ದೀರ್ಘಕಾಲಂ ಹಿಮವತಿ ಗಂಗಾಯಾಶ್ಚ ದುರುತ್ಸಹಾಮ್ |
ಮೂರ್ಧ್ನಾ ಧಾರಾಂ ಮಹಾದೇವಃ ಶಿರಸಾ ಯಾಮಧಾರಯತ್ |
ನ ತೇನಾಪ್ಯಹಮಾಗಚ್ಛಂ ಫಲೇನೇಹ ಪಿತಾಮಹ ॥26॥
ಎಲೈ ಪಿತಾಮಹರೇ, ಹಿಮಾಲಯ ಪರ್ವತದಲ್ಲಿ ದೀರ್ಘಕಾಲದವರೆಗೆ ಮಹಾದೇವನು ತಡೆಯಲು ಅಸಾಧ್ಯವಾದ ಗಂಗೆಯ ಧಾರೆಯನ್ನು ತಡೆಯುವಂತೆ ಮಾಡಿದೆ. ಅದರ ಫಲದಿಂದಲೂ ನಾನು ಇಲ್ಲಿಗೆ ಬಂದಿಲ್ಲ.

ಶಮ್ಯಾಕ್ಷೇಪೈರಯಜಂ ಯಚ್ಚ ದೇವಾನ್
ಸಶಸಹಸ್ರೈಣಾಮಯುತೈಶ್ಚಾಪಿ ಯತ್ರ |
ತ್ರಯೋದಶದ್ವಾದಶಾಹಾಂಶ್ಚ ದೇವ
ಸಪೌಂಡರೀಕಾನ್ನ ಚ ತೇಷಾಂ ಫಲೇನ ॥27॥

ಶಸ್ತ್ರಮಂತ್ರಗಳಿಂದ ಕೂಡಿದ ಹತ್ತು ಸಾವಿರ ಶಮ್ಯಾಕ್ಷೇಪ ಯಾಗಗಳಿಂದ ದೇವತೆಗಳನ್ನು ಪೂಜಿಸಿದೆ (ಶಮ್ಯಾ ಎಂದರೆ ಯಜ್ಞದಲ್ಲಿ ಉಪಯೋಗಿಸುವ ಒಂದು ಆಯುಧ ವಿಶೇಷ. ಅದನ್ನು ಎಸೆದಾಗ ಎಷ್ಟು ದೂರದವರೆಗೆ ಹೋಗುತ್ತದೆಯೋ ಅಲ್ಲಿಯವರೆಗೆ ಯಾಗಶಾಲೆಯನ್ನು ಮಾಡಿ ಮಾಡುವ ಯಾಗವು ಶಮ್ಯಾಪ್ರಾಸ ಎನಿಸುತ್ತದೆ. ಅದನ್ನು ಇಲ್ಲಿ ಶಮ್ಯಾಕ್ಷೇಪ ಎನಿಸಿದೆ). ಎಲೈ ದೇವನೇ, ಹದಿಮೂರು ದಿವಸದ, ಹನ್ನೆರಡು ದಿವಸದ ಯಾಗಗಳನ್ನೂ, ಪೌಂಡರೀಕ ಯಾಗಗಳನ್ನೂ ನಾನು ಮಾಡಿದೆನು. ಅವುಗಳೆಲ್ಲವನ್ನೂ ನಾನು ಮಾಡಿದೆನು. ಅವುಗಳ ಫಲದಿಂದಲೂ ನಾನು ಇಲ್ಲಿಗೆ ಬಂದಿಲ್ಲ.

ಅಷ್ಟೌ ಸಹಸ್ರಾಣಿ ಕಕುದ್ಮಿನಾಮಹಂ
ಶುಕ್ಲರ್ಷಭಾಣಾಮದದಂ ಬ್ರಾಹ್ಮಣೇಭ್ಯಃ |
ಏಕೈಕಂ ವೈ ಕಾಂಚನಂ ಶೃಂಗಮೇಭ್ಯಃ
ಪತ್ನೀಶ್ಚೈಷಾಮದದಂ ಬ್ರಾಹ್ಮಣೇಭ್ಯಃ ॥28॥

ನಾನು ಬ್ರಾಹ್ಮಣರಿಗೆ ಶುಕ್ಲವರ್ಣದ ಒಳ್ಳೆಯ ಹಿಣಿಲನ್ನು ಹೊಂದಿದ ಎಂಟು ಸಹಸ್ರ ವೃಷಭಗಳನ್ನು ಒಂದೊಂದನ್ನೂ ಸುವರ್ಣಶೃಂಗದಿಂದ ಅಲಂಕಾರ ಮಾಡಿ ಗೋ ಸಹಿತವಾಗಿ ಬ್ರಾಹ್ಮಣರಿಗೆ ದಾನವನ್ನು ಮಾಡಿದೆನು.

ಹಿರಣ್ಯರತ್ನನಿಚಿತಾನದದಂ ರತ್ನಪರ್ವತಾನ್ |
ಧನಧಾನ್ಯಸಮೃದ್ಧಾಂಶ್ಚ ಗ್ರಾಮಾನ್ ಶತಸಹಸ್ರಶಃ ॥29॥

ಹಿರಣ್ಯರತ್ನ ರಾಶಿಗಳನ್ನೂ, ರತ್ನಪರ್ವತಗಳನ್ನೂ, ಧನ-ಧಾನ್ಯದಿಂದ ಸಮೃದ್ಧವಾದ ಗ್ರಾಮಗಳನ್ನೂ ನೂರಾರು ಸಾವಿರಾರು ಸಂಖ್ಯೆಯಲ್ಲಿ ದಾನ ಮಾಡಿದೆನು.

ಶತಂ ಶತಾನಾಂ ಗೃಷ್ಟೀನಾಮದದಂ ಚಾಪ್ಯತಂದ್ರಿತಃ |
ಇಷ್ಟ್ವಾಽನೇಕೈರ್ಮಹಾಯಜ್ಞೈರ್ಬ್ರಾಹ್ಮಣೇಭ್ಯೋ ನ ತೇನ ಚ ॥30॥

ಅನೇಕ ಮಹಾಯಜ್ಞಗಳನ್ನು ಮಾಡಿ ಬ್ರಾಹ್ಮಣರಿಗೆ ಆಲಸ್ಯವಿಲ್ಲದೆ ಹತ್ತು ಸಹಸ್ರ ಗೃಷ್ಟಿಗಳನ್ನು (ಒಂದೇ ಬಾರಿ ಕರುವನ್ನು ಹಾಕಿರುವ ಹಸುವಿಗೆ ಗೃಷ್ಟಿ ಎಂದು ಹೆಸರು) ದಾನ ಮಾಡಿದೆನು. ಅದರಿಂದಲೂ ಇಲ್ಲಿಗೆ ಬಂದಿಲ್ಲ.

ಏಕಾದಶಾಹೈರಯಜಂ ಸದಕ್ಷಿಣೈ-
ರ್ದ್ವಿರ್ದ್ವಾದಶಾಹೈರಶ್ವಮೇಧೈಶ್ಚ ದೇವ |
ಅರ್ಕಾಯನೈಃ ಷೋಡಶಭಿಶ್ಚ ಬ್ರಹ್ಮನ್
ತೇಷಾಂ ಫಲೇನೇಹ ನ ಚಾಗತೋಽಸ್ಮಿ ॥31॥

ದಕ್ಷಿಣಾ ಸಹಿತವಾದ ಏಕಾದಶ ಯಾಗದಿಂದಲೂ, ಇಪ್ಪತ್ನಾಲ್ಕು ದಿವಸಗಳ ಯಾಗದಿಂದಲೂ, ಅಶ್ವಮೇಧ ಯಾಗದಿಂದಲೂ, ದಕ್ಷಿಣಾಯನ ಮತ್ತು ಉತ್ತರಾಯಣದಲ್ಲಿ ಮಾಡುವ ಹದಿನಾರು ಯಾಗಗಳಿಂದಲೂ ನಾನು ದೇವತೆಗಳನ್ನು ಪೂಜಿಸಿದೆ. ಎಲೈ ಬ್ರಹ್ಮದೇವನೇ, ನಾನು ಅವುಗಳ ಫಲದಿಂದಲೂ ಇಲ್ಲಿಗೆ ಬಂದಿಲ್ಲ.

ನಿಷ್ಕೈಕಕಂಠಮದದಂ ಯೋಜನಾಯತಂ
ತದ್ವಿಸ್ತೀರ್ಣಂ ಕಾಂಚನಪಾದಪಾನಾಮ್ |
ವನಂ ಚೂತಾನಾಂ ರತ್ನವಿಭೂಷಿತಾನಾಂ
ನ ಚೈವ ತೇಷಾಮಾಗತೋಽಹಂ ಫಲೇನ ॥32॥

ಕಂಠಪ್ರದೇಶಗಳಲ್ಲಿ ನಿಷ್ಕಗಳಿಂದ ಅಲಂಕಾರ ಮಾಡಿದ ಒಂದು ಯೋಜನ ಉದ್ದವಾದ ಮತ್ತು ಅಗಲವಾದ, ರತ್ನವಿಭೂಷಿತವಾದ ಸುವರ್ಣವೃಕ್ಷಗಳಿಂದ ಕೂಡಿದ ಚೂತವನವನ್ನು ದಾನ ಮಾಡಿದೆನು. ಅವುಗಳ ಫಲದಿಂದಲೂ ಇಲ್ಲಿಗೆ ಬಂದಿಲ್ಲ.

ತುರಾಯಣಂ ಹಿ ವ್ರತಮಪ್ರಧೃಷ್ಯಮ್
ಅಕ್ರೋಧನೋಽಕರವಂ ತ್ರಿಂಶತೋಽಬ್ದಾನ್ |
ಶತಂ ಗವಾಮಷ್ಟ ಶತಾನಿ ಚೈವ
ದಿನೇ ದಿನೇ ಹ್ಯದದಂ ಬ್ರಾಹ್ಮಣೇಭ್ಯಃ ॥33॥

ನಾನು ಕೋಪವನ್ನು ತ್ಯಜಿಸಿ ನಡೆಸಲು ಅಸಾಧ್ಯವಾದ ತುರಾಯಣ ಎಂಬ ವ್ರತವನ್ನು ಮೂವತ್ತು ವರ್ಷಗಳ ಕಾಲ ಮಾಡಿದೆನು. ಪ್ರತಿದಿನವೂ ನೂರು ಅನಂತರ ಎಂಟುನೂರು ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದೆ.

ಪಯಸ್ವಿನೀನಾಮಥ ರೋಹಿಣೀನಾಂ
ತಥೈವ ಚಾಪ್ಯನಡುಹಾಂ ಲೋಕನಾಥ |
ಪ್ರಾದಾಂ ನಿತ್ಯಂ ಬ್ರಾಹ್ಮಣೇಭ್ಯಃ ಸುರೇಶ
ನೇಹಾಗತಸ್ತೇನ ಫಲೇನ ಚಾಹಮ್ ॥34॥

ಎಲೈ ಲೋಕನಾಥನೇ, ಸುರೇಶನೇ, ರೋಹಿಣೀ ಜಾತಿಯ ಚೆನ್ನಾಗಿ ಹಾಲನ್ನು ಕೊಡುವ ಧೇನುಗಳನ್ನು ಮತ್ತು ಎತ್ತುಗಳನ್ನು ನಾವು ನಿತ್ಯವೂ ದಾನ ಮಾಡಿದೆ. ಅದರ ಫಲದಿಂದ ನಾನು ಇಲ್ಲಿಗೆ ಬಂದಿಲ್ಲ.

ತ್ರಿಂಶದಗ್ನಿಮಹಂ ಬ್ರಹ್ಮನ್ನಯಜಂ ಯಚ್ಚ ನಿತ್ಯದಾ |
ಅಷ್ಟಾಭಿಃ ಸರ್ವಮೇಧೈಶ್ಚ ನರಮೇಧೈಶ್ಚ ಸಪ್ತಭಿಃ ॥35॥

ಎಲೈ ಬ್ರಹ್ಮದೇವರೇ, ನಾನು ಮೂವತ್ತು ಅಗ್ನಿಗಳನ್ನು ಸ್ಥಾಪಿಸಿ ಎಂಟು ಸರ್ವಮೇಧಗಳನ್ನು ಮತ್ತು ಏಳು ನರಮೇಧಗಳನ್ನು ಮಾಡಿದೆನು.
ದಶಭಿರ್ವಿಶ್ವಜಿದ್ಭಿಶ್ಚ ಶತೈರಷ್ಟಾದಶೋತ್ತರೈಃ |
ನ ಚೈವ ತೇಷಾಂ ದೇವೇಶ ಫಲೇನಾಹಮಿಹಾಗತಃ ॥36॥
ಎಲೈ ದೇವೇಶನೇ, ನಾನು ಹತ್ತು ವಿಶ್ವಜಿತ್ ಯಾಗಗಳನ್ನು, ಪುನಃ ನೂರ ಹದಿನೆಂಟು ವಿಶ್ವಜಿತ್ ಯಾಗಗಳನ್ನು ಮಾಡಿದೆನು. ಅವುಗಳ ಫಲದಿಂದಲೂ ನಾನು ಇಲ್ಲಿಗೆ ಬಂದಿಲ್ಲ.
ಸರಯ್ವಾಂ ಬಾಹುದಾಯಾಂ ಚ ಗಂಗಾಯಾಮಥ ನೈಮಿಶೇ |
ಗವಾಂ ಶತಾನಾಮಯುತಮದದಂ ನ ಚ ತೇನ ವೈ ॥37॥
ಸರಯೂ ನದಿಯಲ್ಲಿಯೂ, ಬಾಹುದಾ ನದಿಯಲ್ಲಿಯೂ, ಗಂಗಾ ನದಿಯಲ್ಲಿಯೂ, ನೈಮಿಶಾರಣ್ಯದಲ್ಲಿಯೂ ನಾನು ಹತ್ತು ಲಕ್ಷ ಗೋವುಗಳನ್ನು ದಾನ ಮಾಡಿದೆ. ಅದರಿಂದಲೂ ಇಲ್ಲಿಗೆ ಬಂದಿಲ್ಲ.
ಇಂದ್ರೇಣ ಗುಹ್ಯಂ ನಿಹಿತಂ ವೈ ಗುಹಾಯಾಂ
ಯದ್ ಭಾರ್ಗವಸ್ತಪಸೇಹಾಭ್ಯವಿಂದತ್ |
ಜಾಜ್ವಲ್ಯಮಾನಮುಶನಾಸ್ತೇಜಸೇಹ
ತತ್ ಸಾಧಯಾಮಾಸಮಹಂ ವರೇಣ ॥38॥
ಇಂದ್ರನು ರಹಸ್ಯವಾಗಿ ಗುಹೆಯಲ್ಲಿ ಅನುಷ್ಠಾನ ಮಾಡಿದ ಅನಶನ ರೂಪವಾದ ಪ್ರಕಾಶಮಾನವಾದ ತಪಸ್ಸೇನಿದೆಯೋ ಮತ್ತು ಯಾವ ತಪಸ್ಸನ್ನು ಭಾರ್ಗವರಾದ ಶುಕ್ರಾಚಾರ್ಯರು ಸಾಧಿಸಿದರೋ ನಾನು ಆ ಬ್ರಾಹ್ಮಣರ ವರಬಲದಿಂದ ಅಂತಹ ಅನಶನ ವ್ರತವನ್ನು ಸಾಧಿಸಿದೆನು (ಲಕ್ಷ್ಯಾಲಂಕಾರ).
ತತೋ ಮೇ ಬ್ರಾಹ್ಮಣಾಸ್ತುಷ್ಟಾಸ್ತಸ್ಮಿನ್ ಕರ್ಮಣಿ ಸಾಧಿತೇ |
ಸಹಸ್ರಮೃಷಯಶ್ಚಾಸನ್ ಯೇ ವೈ ತತ್ರ ಸಮಾಗತಾಃ |
ಉಕ್ತಸ್ತೈರಸ್ಮಿ ಗಚ್ಛ ತ್ವಂ ಬ್ರಹ್ಮಲೋಕಮಿತಿ ಪ್ರಭೋ ॥39॥
ಎಲೈ ಪ್ರಭುವೇ, ನಾನು ಆ ವ್ರತವನ್ನು ಸಾಧಿಸುವಾಗ ಅಲ್ಲಿಗೆ ಸಹಸ್ರ ಋಷಿಗಳು ಬಂದಿದ್ದರು. ಸಂತುಷ್ಟರಾದ ಅವರು ನನ್ನನ್ನು ಕುರಿತು ನೀನು ಬ್ರಹ್ಮಲೋಕಕ್ಕೆ ಹೋಗು ಎಂದು ಹೇಳಿದರು.
ಪ್ರೀತೇನೋಕ್ತಃ ಸಹಸ್ರೇಣ ಬ್ರಾಹ್ಮಣಾನಾಮಹಂ ಪ್ರಭೋ |
ಇಮಂ ಲೋಕಮನುಪ್ರಾಪ್ತೋ ಮಾ ಭೂತ್ ತೇಽತ್ರ ವಿಚಾರಣಾ ॥
ಎಲೈ ಪ್ರಭುವೇ, ಪ್ರಸನ್ನರಾದ ಸಹಸ್ರ ಬ್ರಾಹ್ಮಣರ ಪ್ರೀತಿಯುಕ್ತವಾದ ಆದೇಶದಿಂದ ನಾನು ಈ ಲೋಕಕ್ಕೆ ಬಂದಿದ್ದೇನೆ. ಇದರಲ್ಲಿ ನೀವು ಸಂಶಯಪಡಬೇಕಾದ ಅವಶ್ಯಕತೆ ಇಲ್ಲ.
ಕಾಮಂ ಯಥಾವದ್ ವಿಹಿತಂ ವಿಧಾತ್ರಾ
ಪೃಷ್ಟೇನ ವಾಚ್ಯಂ ತು ಮಯಾ ಯಥಾವತ್ |
ತಪೋ ಹಿ ನಾನ್ಯಚ್ಚಾನಶನಾನ್ಮತಂ ಮೇ
ನಮೋಽಸ್ತು ತೇ ದೇವವರ ಪ್ರಸೀದ ॥41॥
ಬ್ರಹ್ಮದೇವರು ಕೇಳಿದಾಗ ನಾನು ಮಾಡಿದುದನ್ನು ಯಥಾವತ್ತಾಗಿ ಹೇಳಬೇಕು (ನಾನು ಅಹಂಕಾರದಿಂದ ಏನನ್ನೂ ಹೇಳಿಲ್ಲ). ನನ್ನ ಅಭಿಪ್ರಾಯದಲ್ಲಿ ಉಪವಾಸಕ್ಕಿಂತ ದೊಡ್ಡದಾದ ತಪಸ್ಸಿಲ್ಲ. ದೇವಶ್ರೇಷ್ಠನೇ, ನಿನಗೆ ನಮಸ್ಕಾರ. ಪ್ರಸನ್ನನಾಗು.
ಭೀಷ್ಮಃ
ಇತ್ಯುಕ್ತವಂತಂ ತಂ ಬ್ರಹ್ಮಾ ರಾಜಾನಂ ಸ್ಮ ಭಗೀರಥಮ್ |
ಪೂಜಯಾಮಾಸ ಪೂಜಾರ್ಹಂ ವಿಧಿದೃಷ್ಟೇನ ಕರ್ಮಣಾ ॥42॥
ಭೀಷ್ಮ ಭಗೀರಥ ರಾಜನು ಹೀಗೆ ಹೇಳುತ್ತಿರಲು ಬ್ರಹ್ಮದೇವರು ವಿಧಿಗೆ ಅನುಸಾರವಾಗಿ ಪೂಜಾರ್ಹನಾದ ಅವನನ್ನು ಪೂಜಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಕಥನೇ ಪಿತಾಮಹಭಗೀರಥಸಂವಾದೋ ನಾಮ ಷಟ್‌ಪಂಚಾಶದಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೇಳನೆಯ ಅಧ್ಯಾಯ
ದೀರ್ಘಾಯುಷ್ಯ ಮತ್ತು ಅಲ್ಪಾಯುಷ್ಯಕ್ಕೆ ಕಾರಣಗಳ ನಿರೂಪಣೆ
ಯುಧಿಷ್ಠಿರಃ
ಶತಾಯುರುಕ್ತಃ ಪುರುಷಃ ಶತವೀರ್ಯಶ್ಚ ವೈದಿಕೇ |
ಕಸ್ಮಾನ್ ಮ್ರಿಯಂತೇ ಪುರುಷಾ ಬಾಲಾ ಅಪಿ ಪಿತಾಮಹ ॥1॥
ಯುಧಿಷ್ಠಿರ ವೇದಗಳಲ್ಲಿ ಪುರುಷನು ಶತವರ್ಷಾಯುಷ್ಯವುಳ್ಳವನೆಂದೂ, ಶತ ವೀರ್ಯವುಳ್ಳವನೆಂದೂ ಹೇಳಲ್ಪಡುತ್ತಾನೆ. ಎಲೈ ಪಿತಾಮಹನೇ, ಬಾಲಕರೂ ಸಹ ಏಕೆ ಮರಣವನ್ನು ಹೊಂದುತ್ತಾರೆ?
ಆಯುಷ್ಮಾನ್ ಕೇನ ಭವತಿ ಸ್ವಲ್ಪಾಯುರ್ವಾಽಪಿ ಮಾನವಃ |
ಕೇನ ವಾ ಲಭತೇ ಕೀರ್ತಿಂ ಕೇನ ವಾ ಲಭತೇ ಶ್ರಿಯಮ್ ॥2॥
ತಪಸಾ ಬ್ರಹ್ಮಚರ್ಯೇಣ ಜಪ್ಯೈರ್ಹೋಮೈಸ್ತಥೌಷಧೈಃ |

ಕರ್ಮಣಾ ಮನಸಾ ವಾಚಾ ತನ್ಮೇ ಬ್ರೂಹಿ ಪಿತಾಮಹ ॥3॥
ಮನುಷ್ಯನು ದೀರ್ಘಾಯುಸ್ಸನ್ನು ಹೇಗೆ ಪಡೆಯುತ್ತಾನೆ? ಅಲ್ಪಾಯುಸ್ಸನ್ನಾದರೂ ಹೇಗೆ ಪಡೆಯುತ್ತಾನೆ? ಯಾವುದರಿಂದ ಕೀರ್ತಿಯನ್ನು ಮತ್ತು ಸಂಪತ್ತನ್ನು ಪಡೆಯುತ್ತಾನೆ? ಎಲೈ ಪಿತಾಮಹನೇ, ಅದು ತಪಸ್ಸಿನಿಂದಲೋ, ಬ್ರಹ್ಮಚರ್ಯದಿಂದಲೋ, ಜಪದಿಂದಲೋ, ಹೋಮದಿಂದಲೋ, ಔಷಧಿಗಳಿಂದಲೋ ಅಥವಾ ಕರ್ಮ-ಮನಸ್ಸು-ಮಾತುಗಳಿಂದಲೋ ಎಂದು ನನಗೆ ಹೇಳು.
ಭೀಷ್ಮ:
ಅತ್ರ ತೇಽಹಂ ಪ್ರವಕ್ಷ್ಯಾಮಿ ಯನ್ಮಾಂ ತ್ವಮನುಪೃಚ್ಛಸಿ |
ಅಲ್ಪಾಯುರ್ಯೇನ ಭವತಿ ದೀರ್ಘಾಯುರ್ವಾಪಿ ಮಾನವಃ ॥4॥
ಯೇನ ವಾ ಲಭತೇ ಕೀರ್ತಿಂ ಯೇನ ವಾ ಲಭತೇ ಶ್ರಿಯಮ್ |
ಯಥಾ ಚ ವರ್ತನ್ ಪುರುಷಃ ಶ್ರೇಯಸಾ ಸಂಪ್ರಯುಜ್ಯತೇ ॥5॥
ಭೀಷ್ಮ ಮನುಷ್ಯನು ಯಾವುದರಿಂದ ಅಲ್ಪಾಯುಸ್ಸನ್ನು ಹೊಂದುತ್ತಾನೆ, ಯಾವುದರಿಂದ ದೀರ್ಘಾಯುಸ್ಸನ್ನು ಹೊಂದುತ್ತಾನೆ, ಯಾವುದರಿಂದ ಕೀರ್ತಿಯನ್ನು ಪಡೆಯುತ್ತಾನೆ, ಯಾವುದರಿಂದ ಸಂಪತ್ತನ್ನು ಪಡೆಯುತ್ತಾನೆ, ಹೇಗೆ ನಡೆದುಕೊಂಡರೆ ಶ್ರೇಯಸ್ಸನ್ನು ಪಡೆಯುತ್ತಾನೆ ಎಂದು ನೀನು ಕೇಳುತ್ತಿರುವ ಪ್ರಶ್ನೆಗಳಿಗೆ ನಾನು ಉತ್ತರವನ್ನು ಹೇಳುವೆನು.
ಆಚಾರಾಲ್ಲಭತೇ ಹ್ಯಾಯುರಾಚಾರಾಲ್ಲಭತೇ ಶ್ರಿಯಮ್ |
ಆಚಾರಾತ್ ಕೀರ್ತಿಮಾಪ್ನೋತಿ ಪುರುಷಃ ಪ್ರೇತ್ಯ ಚೇಹ ಚ ॥6॥
ಆಚಾರದಿಂದ ಆಯುಸ್ಸು ಉಂಟಾಗುತ್ತದೆ, ಸಂಪತ್ತು ಉಂಟಾಗುತ್ತದೆ. ಪುರುಷನು ಆಚಾರದಿಂದ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಕೀರ್ತಿಯನ್ನು ಪಡೆಯುತ್ತಾನೆ.
ದುರಾಚಾರೋ ಹಿ ಪುರುಷೋ ನೇಹಾಯುರ್ವಿಂದತೇ ಮಹತ್ |
ತ್ರಸಂತಿ ಯಸ್ಮಾದ್ ಭೂತಾನಿ ತಥಾ ಪರಿಭವಂತಿ ಚ ॥7॥
ಯಾವನನ್ನು ನೋಡಿ ಎಲ್ಲರೂ ಹೆದರುತ್ತಾರೋ ಮತ್ತು ಯಾವನನ್ನು ಪರಿಭವಗೊಳಿಸುತ್ತಾರೋ ಅಂತಹ ದುರಾಚಾರಿಯಾದ ಪುರುಷನು ಇಲ್ಲಿ ದೀರ್ಘವಾದ ಆಯುಸ್ಸನ್ನು ಹೊಂದುವುದಿಲ್ಲ.
ತಸ್ಮಾತ್ ಕುರ್ಯಾದಿಹಾಚಾರಂ ಯ ಇಚ್ಛೇದ್ ಭೂತಿಮಾತ್ಮನಃ |
ಅಪಿ ಪಾಪಶರೀರಸ್ಯ ಆಚಾರೋ ಹಂತ್ಯಲಕ್ಷಣಮ್ ॥8॥
ಆದ್ದರಿಂದ ಯಾವನು ತನ್ನ ಏಳಿಗೆಯನ್ನು ಅಪೇಕ್ಷಿಸುತ್ತಾನೆಯೋ ಅವನು ಇಲ್ಲಿ ಒಳ್ಳೆಯ ಆಚಾರವನ್ನು ಮಾಡಬೇಕು. ಆಚಾರವು ಪಾಪಶರೀರವುಳ್ಳವನ ದುರ್ಲಕ್ಷಣಗಳನ್ನೂ ನಾಶಪಡಿಸುತ್ತದೆ.
ಆಚಾರಲಕ್ಷಣೋ ಧರ್ಮಃ ಸಂತಶ್ಚಾಚಾರಲಕ್ಷಣಾಃ |
ಸಾಧೂನಾಂ ಚ ಯಥಾವೃತ್ತಮೇತದಾಚಾರಲಕ್ಷಣಮ್ ॥9॥
ಆಚಾರವು ಧರ್ಮದ ಲಕ್ಷಣ. ಸಜ್ಜನರ ಲಕ್ಷಣವು ಆಚಾರ. ಸಜ್ಜನರ ಯಥಾರ್ಥವಾದ ನಡತೆಯು ಆಚಾರದ ಲಕ್ಷಣ.
ಅಪ್ಯದೃಷ್ಟಂ ಶ್ರುತಂ ವಾಪಿ ಪುರುಷಂ ಧರ್ಮಚಾರಿಣಮ್ |
ಭೂತಿಕರ್ಮಾಣಿ ಕುರ್ವಾಣಂ ತಂ ಜನಾಃ ಕುರ್ವತೇ ಪ್ರಿಯಮ್ ॥10॥
ಧರ್ಮಾಚರಣೆಯನ್ನು ಮಾಡುವ ಪುರುಷನನ್ನು ನೋಡದಿದ್ದರೂ ಸತ್ಕರ್ಮಗಳನ್ನು ಮಾಡುವ ಅವನನ್ನು ಕೇಳುವುದರಿಂದಲೇ ಜನರು ಅವನಲ್ಲಿ ಪ್ರೀತಿಯನ್ನು ಮಾಡುತ್ತಾರೆ.
ಯೇ ನಾಸ್ತಿಕಾ ನಿಷ್ಕ್ರಿಯಾಶ್ಚ ಗುರುಶಾಸ್ತ್ರಾತಿಲಂಘಿನಃ |
ಅಧರ್ಮಜ್ಞಾ ದುರಾಚಾರಾಸ್ತೇ ಭವಂತಿ ಗತಾಯುಷಃ ॥11॥
ನಾಸ್ತಿಕರೂ, ಕ್ರಿಯಾಹೀನರೂ, ಗುರುಗಳನ್ನು ಮತ್ತು ಶಾಸ್ತ್ರಗಳನ್ನು ಉಲ್ಲಂಘಿಸುವವರೂ, ಅಧರ್ಮಜ್ಞರೂ ಮತ್ತು ದುರಾಚಾರವುಳ್ಳವರೂ ಆಯುಸ್ಸನ್ನು ಕಳೆದುಕೊಳ್ಳುತ್ತಾರೆ.
ವಿಶೀಲಾ ಭಿನ್ನಮರ್ಯಾದಾ ನಿತ್ಯಂ ಸಂಕೀರ್ಣಮೈಥುನಾಃ |
ಅಲ್ಪಾಯುಷೋ ಭವಂತೀಹ ನರಾ ನಿರಯಗಾಮಿನಃ ॥12॥
ದುಷ್ಟಶೀಲವುಳ್ಳ, ಧರ್ಮದ ಮರ್ಯಾದೆಯನ್ನು ಮೀರಿದ, ನಿತ್ಯವೂ ವರ್ಣ ಸಂಕರವನ್ನು ಮಾಡಿ ಮೈಥುನದಲ್ಲಿ ಪ್ರಯತ್ನವನ್ನು ಮಾಡುವ ಮನುಷ್ಯರು ಇಲ್ಲಿ ಅಲ್ಪಾಯುಸ್ಸನ್ನು ಹೊಂದಿ ಅನಂತರ ನರಕಕ್ಕೆ ಹೋಗುತ್ತಾರೆ.
ಸರ್ವಲಕ್ಷಣಹೀನೋಽಪಿ ಸಮುದಾಚಾರವಾನ್ ನರಃ |
ಶ್ರದ್ದಧಾನೋಽನಸೂಯಶ್ಚ ಶತಂ ವರ್ಷಾಣಿ ಜೀವತಿ ॥13॥
ಸರ್ವಲಕ್ಷಣ ರಹಿತನಾದ ಮನುಷ್ಯನೂ ಸಹ ಒಳ್ಳೆಯ ಆಚಾರವನ್ನು ಹೊಂದಿ ಶ್ರದ್ಧಾಳುವಾಗಿ ಅಸೂಯೆಯನ್ನು ಹೊಂದದಿದ್ದರೆ ನೂರು ವರ್ಷಗಳ ಕಾಲ ಬದುಕುತ್ತಾನೆ.
ಅಕ್ರೋಧನಃ ಸತ್ಯವಾದೀ ಭೂತಾನಾಮಪ್ಯಹಿಂಸಕಃ |
ಅನಸೂಯುರಜಿಹ್ಮಶ್ಚ ಶತಂ ವರ್ಷಾಣಿ ಜೀವತಿ ॥14॥
ಸಿಟ್ಟನ್ನು ಮಾಡದೆ, ಸತ್ಯವನ್ನು ನುಡಿಯುತ್ತಾ, ಪ್ರಾಣಿಹಿಂಸೆಯನ್ನು ಮಾಡದೆ, ಅಸೂಯೆ ಪಡದೆ, ಕಪಟವನ್ನು ಮಾಡದೆ ಇರುವ ಪುರುಷನು ನೂರು ವರ್ಷಗಳ ಕಾಲ ಜೀವಿಸುತ್ತಾನೆ.
ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ಚ ಯೋ ನರಃ |
ನಿತ್ಯೋಚ್ಛಿಷ್ಟಃ ಸಂಕುಸುಕೋ ನೇಹಾಯುರ್ವಿಂದತೇ ಮಹತ್ ॥15॥
ವ್ಯರ್ಥವಾಗಿ ಮಣ್ಣಿನ ಹೆಂಟೆಗಳನ್ನು ಒಡೆಯುವವನು, ಯಾವಾಗಲೂ ಹುಲ್ಲನ್ನು ತೆಗೆದುಕೊಂಡು ಅದನ್ನು ಸೀಳುವವನು,

ಉಗುರನ್ನು ಕಚ್ಚುವವನು, ನಿತ್ಯವೂ ಉಚ್ಛಿಷ್ಟನಾಗಿರುವವನು (ಮಲ-ಮೂತ್ರ ವಿಸರ್ಜನೆಯನ್ನು ಮಾಡಿ ಕೈ-ಕಾಲುಗಳನ್ನು ತೊಳೆದುಕೊಳ್ಳದಿರುವವನು), ಚಂಚಲ ಸ್ವಭಾವದವನು ದೀರ್ಘಾಯುಸ್ಸನ್ನು ಹೊಂದುವುದಿಲ್ಲ.

ಬ್ರಾಹ್ಮೇ ಮುಹೂರ್ತೇ ಬುಧ್ಯೇತ ಧರ್ಮಾರ್ಥೌ ಚಾನುಚಿಂತಯೇತ್ |
ಉತ್ಥಾಯಾಚಮ್ಯ ತಿಷ್ಠೇತ ಪೂರ್ವಾಂ ಸಂಧ್ಯಾಂ ಕೃತಾಂಜಲಿಃ ॥16॥

ಬ್ರಾಹ್ಮ ಮುಹೂರ್ತದಲ್ಲಿ ಎಚ್ಚರಗೊಂಡು ಧರ್ಮಾರ್ಥಗಳನ್ನು ಚಿಂತಿಸಬೇಕು. ಎದ್ದು ಆಚಮನವನ್ನು ಮಾಡಿ (ಶೌಚ-ಸ್ನಾನಾದಿಗಳನ್ನು ಮುಗಿಸಿ) ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು, ಪ್ರಾತಃಸಂಧ್ಯೆಯನ್ನು ಉಪಾಸನೆ ಮಾಡಬೇಕು.

ಏವಮೇವಾಪರಾಂ ಸಂಧ್ಯಾಂ ಸಮುಪಾಸೀತ ವಾಗ್ಯತಃ |
ನೇಕ್ಷೇತಾದಿತ್ಯಮುದ್ಯಂತಂ ನಾಸ್ತಂ ಯಾಂತಂ ಕಥಂಚನ ॥17॥

ಹೀಗೆ ಸಾಯಂಸಂಧ್ಯೆಯನ್ನೂ ಸಹ ಮೌನವಾಗಿ ಉಪಾಸನೆ ಮಾಡಬೇಕು. ಉದಯಿಸುತ್ತಿರುವ ಅಥವಾ ಅಸ್ತವನ್ನು ಹೊಂದುತ್ತಿರುವ ಸೂರ್ಯನನ್ನು ನೋಡಬಾರದು.

ಋಷಯೋ ದೀರ್ಘಸಂಧ್ಯತ್ವಾದ್ ದೀರ್ಘಮಾಯುರವಾಪ್ನುವನ್ |
ತಸ್ಮಾತ್ ತಿಷ್ಠೇತ್ ಸದಾ ಪೂರ್ವಾಂ ಪಶ್ಚಿಮಾಂ ಚೈವ ವಾಗ್ಯತಃ ॥18॥

ಋಷಿಗಳು ಸಂಧ್ಯಾಲೋಪವನ್ನು ಮಾಡದಿದ್ದುದರಿಂದ ದೀರ್ಘಾಯುಸ್ಸನ್ನು ಹೊಂದಿದರು. ಆದ್ದರಿಂದ ಯಾವಾಗಲೂ ಮೌನವಾಗಿ ಪ್ರಾತಃಸಂಧ್ಯಾ ಮತ್ತು ಸಾಯಂಸಂಧ್ಯಾಗಳನ್ನು ಅನುಷ್ಠಾನ ಮಾಡಬೇಕು.

ಯೇ ನ ಪೂರ್ವಾಮುಪಾಸಂತೇ ದ್ವಿಜಾಃ ಸಂಧ್ಯಾಂ ನ ಪಶ್ಚಿಮಾಮ್ |
ಸರ್ವಾಂಸ್ತಾನ್ ಧಾರ್ಮಿಕೋ ರಾಜಾ ಶೂದ್ರಕರ್ಮಾಣಿ ಕಾರಯೇತ್ ॥

ಯಾವ ದ್ವಿಜರು ಪೂರ್ವ ಮತ್ತು ಪಶ್ಚಿಮ ಸಂಧ್ಯೆಗಳನ್ನು ಮಾಡುವುದಿಲ್ಲವೋ ಅವರೆಲ್ಲರನ್ನೂ ಧಾರ್ಮಿಕನಾದ ರಾಜನು ಶೂದ್ರಕರ್ಮಗಳಲ್ಲಿ ತೊಡಗಿಸಬೇಕು.

ಪರದಾರಾ ನ ಗಂತವ್ಯಾಃ ಸರ್ವವರ್ಣೇಷು ಕರ್ಹಿಚಿತ್ |
ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ |
ಯಾದೃಶಂ ಪುರುಷಸ್ಯೇಹ ಪರದಾರಾಭಿಷೇವನಮ್ ॥20॥

ಯಾವ ವರ್ಣದವನೂ ಇನ್ನೊಬ್ಬನ ಭಾರ್ಯೆಯ ಸಂಗವನ್ನು ಮಾಡಬಾರದು. ಪರಸ್ತ್ರೀ ಸಂಗರೂಪಕ್ಕಿಂತ ಪುರುಷನಿಗೆ ಆಯುಸ್ಸಿನ ಹಾನಿಕರವಾದುದು ಬೇರೆ ಯಾವುದೂ ಇಲ್ಲ.

ಪ್ರಸಾಧನಂ ಚ ಕೇಶಾನಾಮಂಜನಂ ದಂತಧಾವನಮ್ |
ಪೂರ್ವಾಹ್ಣ ಏವ ಕುರ್ವೀತ ದೇವತಾನಾಂ ಚ ಪೂಜನಮ್ ॥21॥

ತಲೆಯನ್ನು ಬಾಚಿಕೊಳ್ಳುವುದು, ತೈಲವನ್ನು ಹಚ್ಚಿಕೊಳ್ಳುವುದು, ದಂತಧಾವನ, ದೇವತಾ ಪೂಜೆ ಇವೆಲ್ಲವನ್ನೂ ಪೂರ್ವಾಹ್ಣದಲ್ಲಿಯೇ ಮಾಡಬೇಕು.

ಪುರೀಷಮೂತ್ರೇ ನೋದೀಕ್ಷೇನ್ನಾಧಿತಿಷ್ಠೇತ್ ಕದಾಚನ |
ಉದಕ್ಯಯಾ ಚ ಸಂಭಾಷಾಂ ನ ಕುರ್ವೀತ ಕದಾಚನ ॥22॥

ಮಲ-ಮೂತ್ರಗಳನ್ನು ನೋಡಬಾರದು ಮತ್ತು ಎಂದೂ ತುಳಿಯಬಾರದು. ರಜಸ್ವಲೆಯ ಜೊತೆಯಲ್ಲಿ ಎಂದೂ ಮಾತನಾಡಬಾರದು.

ನೋತ್ಸೃಜೇತ ಪುರೀಷಂ ಚ ಕ್ಷೇತ್ರೇ ಗ್ರಾಮಸ್ಯ ಚಾಂತಿಕೇ |
ಉಭೇ ಮೂತ್ರಪುರೀಷೇ ತು ನಾಪ್ಸು ಕುರ್ಯಾತ್ ಕದಾಚನ ॥23॥

ಕ್ಷೇತ್ರ ಅಥವಾ ಗ್ರಾಮದ ಸಮೀಪದಲ್ಲಿ ಮಲ-ವಿಸರ್ಜನೆಯನ್ನು ಮಾಡಬಾರದು. ನೀರಿನಲ್ಲಿ ಎಂದೂ ಮಲ-ಮೂತ್ರಗಳ ವಿಸರ್ಜನೆಯನ್ನು ಮಾಡಬಾರದು.

ಪ್ರಾಙ್ಮುಖೋ ನಿತ್ಯಮಶ್ನೀಯಾದ್ ವಾಗ್ಯತೋ ನ ಚ ಕುತ್ಸಯನ್ |
ಪ್ರಸ್ಕಂದಯೇಚ್ಚ ಮನಸಾ ಭುಕತ್ವ ಚಾಗ್ನಿಮುಪಸ್ಪೃಶೇತ್ ॥24॥

ಪೂರ್ವಾಭಿಮುಖವಾಗಿ ಕುಳಿತು ಮೌನದಿಂದ ಯಾರನ್ನೂ ಹೀನಾಯ ಮಾಡುತ್ತಾ ನಿಂದಿಸದೆ ಭೋಜನ ಮಾಡಬೇಕು. ಭೋಜನವನ್ನು ಮಾಡಿದ ಮೇಲೆ ಅಗ್ನಿಸ್ಪರ್ಶವನ್ನು ಮಾಡಬೇಕು.

ಆಯುಷ್ಯಂ ಪ್ರಾಙ್ಮುಖೋ ಭುಂಕ್ತೇ ಯಶಸ್ಯಂ ದಕ್ಷಿಣಾಮುಖಃ |
ಧನ್ಯಂ ಪಶ್ಚಾನ್ಮುಖೋ ಭುಂಕ್ತೇ ಋತಂ ಭುಂಕ್ತೇ ಉದಙ್ಮುಖಃ ॥25॥

ಪೂರ್ವಾಭಿಮುಖವಾಗಿ ಭೋಜನವನ್ನು ಮಾಡಿದರೆ ಆಯುಸ್ಸನ್ನೂ, ದಕ್ಷಿಣಾಭಿಮುಖವಾಗಿ ಭೋಜನ ಮಾಡಿದರೆ ಕೀರ್ತಿಯನ್ನೂ, ಪಶ್ಚಿಮಾಭಿಮುಖವಾಗಿ ಭೋಜನ ಮಾಡಿದರೆ ಧನವನ್ನೂ, ಉತ್ತರಾಭಿಮುಖವಾಗಿ ಭೋಜನ ಮಾಡಿದರೆ ಒಳ್ಳೆಯ ಜ್ಞಾನವನ್ನೂ ಪಡೆಯುತ್ತಾನೆ.

ಅಗ್ನಿಮಾಲಭ್ಯ ತೋಯೇನ ಸರ್ವಾನ್ ಪ್ರಾಣಾನುಪಸ್ಪೃಶೇತ್ |
ಗಾತ್ರಾಣಿ ಚೈವ ಸರ್ವಾಣಿ ನಾಭಿಂ ಪಾಣಿತಳೇನ ತು ॥25.ಅ॥

ಅಗ್ನಿಸ್ಪರ್ಶವನ್ನು ಮಾಡಿ ಜಲದಿಂದ ಎಲ್ಲ ಇಂದ್ರಿಯಗಳನ್ನೂ, ದೇಹವನ್ನೂ ಸ್ಪರ್ಶ ಮಾಡಿ ಅಂಗೈಯಿಂದ ನಾಭಿಯನ್ನು ಸ್ಪರ್ಶ ಮಾಡಬೇಕು.

ನಾಧಿತಿಷ್ಠೇತ್ ತುಷಾಂ ಜಾತು ಕೇಶಭಸ್ಮಕಪಾಲಿಕಾಃ |
ಅನ್ಯಸ್ಯ ಚಾಪ್ಯುಪಸ್ನಾನಂ ದೂರತಃ ಪರಿವರ್ಜಯೇತ್ ॥26॥

ಹೊಟ್ಟು, ಕೇಶ, ಬೂದಿ, ಮೂಳೆಗಳನ್ನು ಎಂದೂ ಮೆಟ್ಟಬಾರದು. ಇನ್ನೊಬ್ಬನನ್ನು ಹೊಗಳುವುದನ್ನೂ ಸಹ ದೂರದಿಂದಲೇ

ಪರಿತ್ಯಜಿಸಬೇಕು.
ಶಾಂತಿಹೋಮಾಂಶ್ಚ ಕುರ್ವೀತ ಪವಿತ್ರಾಣಿ ಚ ಕಾರಯೇತ್ |
ನಿಷಣ್ಣಶ್ಚಾಪಿ ಖಾದೇತ ನ ತು ಗಚ್ಛನ್ ಕಥಂಚನ ॥27॥
ಶಾಂತಿಹೋಮಗಳನ್ನೂ, ಪವಿತ್ರಕಾರ್ಯಗಳನ್ನೂ ಮತ್ತು ಭೋಜನವನ್ನೂ ಕುಳಿತುಕೊಂಡೇ ಮಾಡಬೇಕು. ನಡೆದಾಡುತ್ತಾ ತಿನ್ನಬಾರದು.
ಮೂತ್ರಂ ನ ತಿಷ್ಠತಾ ಕಾರ್ಯಂ ನ ಭಸ್ಮನಿ ನ ಗೋವ್ರಜೇ |
ಆರ್ದ್ರಪಾದಸ್ತು ಭುಂಜೀತ ನಾರ್ದ್ರಪಾದಸ್ತು ಸಂವಿಶೇತ್ |
ಆರ್ದ್ರಪಾದಸ್ತು ಭುಂಜಾನೋ ವರ್ಷಾಣಾಂ ಜೀವತೇ ಶತಮ್ ॥29॥
ನಿಂತುಕೊಂಡು ಮೂತ್ರವಿಸರ್ಜನೆಯನ್ನು ಮಾಡಬಾರದು. ಭಸ್ಮದಲ್ಲಿ ಅಥವಾ ಗೋಶಾಲೆಯಲ್ಲಿ ಮೂತ್ರವಿಸರ್ಗವನ್ನು ಮಾಡಬಾರದು. ಒದ್ದೆಯಾದ ಪಾದದಿಂದ ಭೋಜನವನ್ನು ಮಾಡಬೇಕು. ಪಾದವು ಒದ್ದೆಯಾಗಿರುವಾಗ ಮಲಗಬಾರದು. ಆರ್ದ್ರಪಾದನಾಗಿ ಭೋಜನವನ್ನು ಮಾಡುವವನು ನೂರು ವರ್ಷಗಳ ಕಾಲ ಜೀವಿಸುತ್ತಾನೆ.
ತ್ರೀಣಿ ತೇಜಾಂಸಿ ನೋಚ್ಛಿಷ್ಟ ಆಲಭೇತ ಕದಾಚನ |
ಅಗ್ನಿಂ ಗಾಂ ಬ್ರಾಹ್ಮಣಾಂಶ್ಚೈವ ತಥಾಸ್ಯಾಯುರ್ನ ರಿಷ್ಯತೇ ॥30॥
ಉಚ್ಛಿಷ್ಟನಾದವನು (ಮಲ-ಮೂತ್ರ ವಿಸರ್ಜನೆಯನ್ನು ಮಾಡಿ ಅಥವಾ ಭೋಜನವನ್ನು ಮಾಡಿ ಸರಿಯಾಗಿ ಕೈ-ಕಾಲು ತೊಳೆಯದಿದ್ದವನು) ಅಗ್ನಿ-ಗೋವು- ಬ್ರಾಹ್ಮಣರು ಈ ಮೂರು ತೇಜಸ್ಸನ್ನು ಎಂದೂ ಮುಟ್ಟಬಾರದು. ಮುಟ್ಟದಿದ್ದರೆ ಅಂತಹವನ ಆಯುಸ್ಸು ಕ್ಷಯವನ್ನು ಹೊಂದುವುದಿಲ್ಲ.
ತ್ರೀಣಿ ತೇಜಾಂಸಿ ನೋಚ್ಛಿಷ್ಟ ಉದೀಕ್ಷೇತ ಕದಾಚನ |
ಸೂರ್ಯಾಚಂದ್ರಮಸೌ ಚೈವ ನಕ್ಷತ್ರಾಣಿ ಚ ಸರ್ವಶಃ ॥31॥
ಉಚ್ಛಿಷ್ಟನಾದವನು ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು ಈ ಮೂರು ತೇಜಸ್ಸನ್ನು ಯಾವಾಗಲೂ ನೋಡಬಾರದು.
ಊರ್ಧ್ವಂ ಪ್ರಾಣಾ ಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಗತೇ |
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥32॥
ಹಿರಿಯರು ಬಂದಾಗ ಯುವಕನ ಪ್ರಾಣಗಳು ಊರ್ಧ್ವಮುಖವಾಗಿ ಎದ್ದು ಬರುತ್ತವೆ. ಯುವಕನಾದವನು ಎದ್ದು ಅವರಿಗೆ ನಮಸ್ಕಾರ ಮಾಡಿದರೆ ಆ ಪ್ರಾಣಗಳು ಪುನಃ ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲುತ್ತವೆ.
ಅಭಿವಾದಯೇತ ವೃದ್ಧಾಂಶ್ಚ ಆಸನಂ ಚೈವ ದಾಪಯೇತ್ |
ಕೃತಾಂಜಲಿರುಪಾಸೀತ ಗಚ್ಛಂತಂ ಪೃಷ್ಠತೋಽನ್ವಿಯಾತ್ ॥33॥
ಹಿರಿಯರಿಗೆ ನಮಸ್ಕಾರವನ್ನು ಮಾಡಬೇಕು. ಆಸನವನ್ನು ನೀಡಬೇಕು. ಕೈಗಳನ್ನು ಮುಗಿದು ಸಮೀಪದಲ್ಲಿ ನಿಲ್ಲಬೇಕು. ಅವರು ನಡೆಯುವಾಗ ಅವರನ್ನು ಹಿಂಬಾಲಿಸಬೇಕು.
ನ ಚಾಸೀತಾಸನೇ ಭಿನ್ನೇ ಭಿನ್ನಂ ಕಾಂಸ್ಯಂ ಚ ವರ್ಜಯೇತ್ |
ನೈಕವಸ್ತ್ರೇಣ ಭೋಕ್ತವ್ಯಂ ನ ನಗ್ನಃ ಸ್ನಾತುಮರ್ಹತಿ |
ಸ್ವಪ್ತವ್ಯಂ ನೈವ ನಗ್ನೇನ ನ ಚೋಚ್ಛಿಷ್ಟೋಽಪಿ ಸಂವಿಶೇತ್ ॥34॥
ಒಡೆದು ಹೋದ ಅಥವಾ ಹರಿದುಹೋದ ಆಸನಗಳಲ್ಲಿ ಕುಳಿತುಕೊಳ್ಳಬಾರದು. ಒಡೆದ ಕಂಚಿನ ತಟ್ಟೆಯಲ್ಲಿ ಭೋಜನವನ್ನು ಮಾಡಬಾರದು. ಒಂದೇ ವಸ್ತ್ರವನ್ನು ಧರಿಸಿ ಭೋಜನವನ್ನು ಮಾಡಬಾರದು. ನಗ್ನನಾಗಿ ಸ್ನಾನವನ್ನಾಗಲೀ, ನಿದ್ರೆಯನ್ನಾಗಲೀ ಮಾಡಬಾರದು. ಉಚ್ಛಿಷ್ಟನಾಗಿಯೂ ನಿದ್ರೆಯನ್ನು ಮಾಡಬಾರದು.
ಉಚ್ಛಿಷ್ಟೋ ನ ಸ್ಪೃಶೇಚ್ಛೀರ್ಷಂ ಸರ್ವೇ ಪ್ರಾಣಾಸ್ತದಾಶ್ರಯಾಃ |
ಕೇಶಗ್ರಹಾನ್ ಪ್ರಹಾರಾಂಶ್ಚ ಶಿರಸ್ಯೇತಾನ್ ವಿವರ್ಜಯೇತ್ ॥35॥
ಉಚ್ಛಿಷ್ಟನಾದವನು ತಲೆಯನ್ನು ಮುಟ್ಟಬಾರದು. ಏಕೆಂದರೆ ಎಲ್ಲ ಪ್ರಾಣಗಳು (ಇಂದ್ರಿಯಗಳು) ಅಲ್ಲಿಯೇ ಇರುತ್ತವೆ. ತಲೆಯಲ್ಲಿ ಹೊಡೆಯುವುದನ್ನಾಗಲೀ ಅಥವಾ ತಲೆಗೂದಲುಗಳನ್ನು ಹಿಡಿಯುವುದನ್ನಾಗಲೀ ವರ್ಜಿಸಬೇಕು.
ನ ಪಾಣಿಭ್ಯಾಮುಭಾಭ್ಯಾಂ ಚ ಕಂಡೂಯೇಜ್ಜಾತು ವೈ ಶಿರಃ |
ನ ಚಾಭೀಕ್ಷ್ಣಂ ಶಿರಃಸ್ನಾಯಾತ್ ಆಯುಸ್ತಸ್ಯ ನ ರಿಷ್ಯತೇ ॥36॥
ಎರಡು ಕೈಗಳಿಂದ ತಲೆಯನ್ನು ಕೆರೆದುಕೊಳ್ಳಬಾರದು. ಸತತವಾಗಿ ಪುನಃ ಪುನಃ ಶಿರಸ್ನಾನವನ್ನು ಮಾಡಬಾರದು. ಅಂತಹವನಿಗೆ ಆಯುಸ್ಸು ಕ್ಷಯವನ್ನು ಹೊಂದುವುದಿಲ್ಲ.
ಶಿರಃಸ್ನಾತಶ್ಚ ತೈಲೇನ ನಾಂಗಂ ಕಿಂಚಿದುಪಸ್ಪೃಶೇತ್ |
ತಿಲಪಿಷ್ಟಂ ನ ಚಾಶ್ನೀಯಾತ್ ತಥಾಯುರ್ವಿಂದತೇ ಮಹತ್ ॥37॥
ಶಿರಸ್ನಾನವನ್ನು ಮಾಡಿದ ಮೇಲೆ ತೈಲವನ್ನು ಹಚ್ಚಿಕೊಳ್ಳಬಾರದು. ತಿಲಪಿಷ್ಟವನ್ನು ತಿನ್ನಬಾರದು. ಅದರಿಂದ ಆಯುಸ್ಸು ವೃದ್ಧಿಯನ್ನು ಹೊಂದುತ್ತದೆ.
ನಾಧ್ಯಾಪಯೇತ್ ತಥೋಚ್ಛಿಷ್ಟೋ ನಾಧೀಯೀತ ಕದಾಚನ |
ವಾತೇ ಚ ಪೂತಿಗಂಧೇ ಚ ಮನಸಾಪಿ ನ ಚಿಂತಯೇತ್ |
ಅತ್ರ ಗಾಥಾ ಯಮೋದ್ಗೀತಾಃ ಕೀರ್ತಯಂತಿ ಪುರಾವಿದಃ ॥38॥
ಉಚ್ಛಿಷ್ಟನಾದವನು ಎಂದೂ ಅಧ್ಯಯನವನ್ನಾಗಲೀ ಅಥವಾ ಅಧ್ಯಾಪನವನ್ನಾಗಲೀ ಮಾಡಬಾರದು. ಅಪಾನವಾಯುವು ಹೊರಬಂದರೆ ಅಥವಾ ದುರ್ಗಂಧವು ಬಂದರೆ ಮನಸ್ಸಿನಿಂದಲೂ ಅಧ್ಯಯನವನ್ನು ಚಿಂತಿಸಬಾರದು. ಈ ವಿಷಯದಲ್ಲಿ ಹಿಂದಿನ

ಜ್ಞಾನಿಗಳು ಯಮದೇವರು ಹಾಡಿದ ಒಂದು ಗೀತೆಯನ್ನು ಹೇಳುತ್ತಾರೆ.
ಆಯುರಸ್ಯ ನಿಕೃಂತಾಮಿ ಪ್ರಜಾಮಸ್ಯಾದದೇ ತಥಾ |
ಯ ಉಚ್ಛಿಷ್ಟಃ ಪ್ರವದತಿ ಸ್ವಾಧ್ಯಾಯಂ ಚಾಧಿಗಚ್ಛತಿ ॥39॥
ಯಶ್ಚಾನಧ್ಯಾಯಕಾಲೇಽಪಿ ಮೋಹಾದಭ್ಯಸ್ಯತಿ ದ್ವಿಜಃ |
ತಸ್ಮಾದ್ ಯುಕ್ತೋಽಪ್ಯನಧ್ಯಾಯೇ ನಾಧೀಯೀತ ಕದಾಚನ ॥40॥
ಯಾವನು ಉಚ್ಛಿಷ್ಟನಾಗಿ ಪ್ರವಚನ ಮಾಡುತ್ತಾನೆಯೋ ಅಥವಾ ಸ್ವಾಧ್ಯಾಯ ಮಾಡುತ್ತಾನೆಯೋ ಮತ್ತು ಯಾವ ಬ್ರಾಹ್ಮಣನು ಅನಧ್ಯಯನ ಕಾಲದಲ್ಲಿ ಮೋಹದಿಂದ ಅಧ್ಯಯನ ಮಾಡುತ್ತಾನೆಯೋ ಅಂತಹವನ ಆಯುಸ್ಸನ್ನು ಕತ್ತರಿಸುತ್ತೇನೆ ಮತ್ತು ಅವನ ಸಂತತಿಯನ್ನು ನಾನು ಭಕ್ಷಿಸುತ್ತೇನೆ (ಇದು ಯಮದೇವರ ಗೀತೆ). ಆದ್ದರಿಂದ ಒಳ್ಳೆಯ ಆಚಾರದಿಂದ ಯುಕ್ತನಾದವನೂ ಸಹ ಅನಧ್ಯಯನ ಕಾಲದಲ್ಲಿ ಎಂದೂ ಅಧ್ಯಯನವನ್ನು ಮಾಡಬಾರದು.
ಪ್ರತ್ಯಾದಿತ್ಯಂ ಪ್ರತ್ಯಗ್ನಿಂ ಪ್ರತಿ ಗಾಂ ಚ ಪ್ರತಿ ದ್ವಿಜಾನ್ |
ಯೇ ಮೇಹಂತಿ ಚ ಪಂಥಾನಂ ತೇ ಭವಂತಿ ಗತಾಯುಷಃ ॥41॥
ಯಾರು ಸೂರ್ಯನಿಗೆ ಎದುರಾಗಿ, ಅಗ್ನಿಗೆ ಎದುರಾಗಿ, ಗೋ-ಬ್ರಾಹ್ಮಣರಿಗೆ ಎದುರಾಗಿ, ಮತ್ತು ಮಾರ್ಗದಲ್ಲಿ ಮೂತ್ರವಿಸರ್ಜನೆಯನ್ನು ಮಾಡುತ್ತಾರೆಯೋ ಅವರು ಆಯುಸ್ಸನ್ನು ಕಳೆದುಕೊಳ್ಳುತ್ತಾರೆ.
ಉಭೇ ಮೂತ್ರಪುರೀಷೇ ತು ದಿವಾ ಕುರ್ಯಾದುದಙ್ಮುಖಃ |
ದಕ್ಷಿಣಾಭಿಮುಖೋ ರಾತ್ರೌ ತಥಾಸ್ಯಾಯುರ್ನ ರಿಷ್ಯತೇ ॥42॥
ಹಗಲಿನಲ್ಲಿ ಮೂತ್ರ-ಮಲ ವಿಸರ್ಜನೆ ಎರಡನ್ನೂ ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ ಮಾಡುವವನ ಆಯುಸ್ಸು ಕ್ಷಯವನ್ನು ಹೊಂದುವುದಿಲ್ಲ.
ತ್ರೀನ್ ಸದಾ ನಾವಮನ್ಯೇತ ದೀರ್ಘಮಾಯುರ್ಜಿಜೀವಿಷುಃ |
ಬ್ರಾಹ್ಮಣಂ ಕ್ಷತ್ರಿಯಂ ಸರ್ಪಂ ಸರ್ವೇ ಹ್ಯಾಶೀವಿಷೋಪಮಾಃ ॥43॥
ದೀರ್ಘವಾದ ಆಯುಸ್ಸನ್ನು ಬಯಸುವವನು ಬ್ರಾಹ್ಮಣ-ಕ್ಷತ್ರಿಯ ಮತ್ತು ಸರ್ಪ ಈ ಮೂರು ವಸ್ತುಗಳನ್ನು ಅವಮಾನಗೊಳಿಸಬಾರದು. ಅವರೆಲ್ಲರೂ ದೃಷ್ಟಿ ವಿಷವುಳ್ಳ ಸರ್ಪದಂತೆ.
ದಹತ್ಯಾಶೀವಿಷಃ ಕ್ರುದ್ಧೋ ಯಾವತ್ ಪಶ್ಯತಿ ಚಕ್ಷುಷಾ |
ಕ್ಷತ್ರಿಯೋಽಪಿ ದಹೇತ್ ಕ್ರುದ್ಧೋ ಯಾವತ್ ಸ್ಪೃಶತಿ ತೇಜಸಾ ॥44॥
ಬ್ರಾಹ್ಮಣಸ್ತು ಕುಲಂ ಹನ್ಯಾದ್ ಧ್ಯಾನೇನಾವೇಕ್ಷಿತೇನ ಚ |
ತಸ್ಮಾದೇತತ್ತ್ರಯಂ ಯತ್ನಾದ್ ನಾವಮನ್ಯೇತ ಪಂಡಿತಃ ॥45॥
ಆಶೀವಿಷವುಳ್ಳ ಸರ್ಪವು ತನ್ನ ಕಣ್ಣಿನಿಂದ ಎಲ್ಲಿಯವರೆಗೆ ನೋಡುತ್ತದೆಯೋ ಅಷ್ಟು ಭಾಗವನ್ನು ಸುಡುತ್ತದೆ. ಕ್ಷತ್ರಿಯನಾದವನು ತನ್ನ ತೇಜಸ್ಸಿನಿಂದ ಎಷ್ಟು ಜನರನ್ನು (ಅಥವಾ ಧನವನ್ನು) ಸ್ಪರ್ಶಿಸುತ್ತಾನೆಯೋ ಅಷ್ಟನ್ನೂ ಸುಡುತ್ತಾನೆ. ಬ್ರಾಹ್ಮಣನು ಮಾತ್ರ ದೃಷ್ಟಿಯಿಂದಲೇ ಅಥವಾ ಮನಸ್ಸಿನ ಚಿಂತನೆಯಿಂದಲೇ ಕುಲವನ್ನೇ ವಿನಾಶಗೊಳಿಸುತ್ತಾನೆ. ಆದ್ದರಿಂದ ಪಂಡಿತನಾದವನು ಈ ಮೂವರಿಗೆ ಅವಮಾನವನ್ನು ಮಾಡಬಾರದು.
ಗುರುಣಾ ವೈರನಿರ್ಬಂಧೋ ನ ಕರ್ತವ್ಯಃ ಕದಾಚನ |
ಅನುಮಾನ್ಯಃ ಪ್ರಸಾದ್ಯಶ್ಚ ಗುರುಃ ಕ್ರುದ್ಧೋ ಯುಧಿಷ್ಠಿರ ॥46॥
ಗುರುಗಳ ಜೊತೆಯಲ್ಲಿ ಎಂದೂ ವೈರವನ್ನು ಕಟ್ಟಿಕೊಳ್ಳಬಾರದು. ಎಲೈ ಯುಧಿಷ್ಠಿರನೇ, ಗುರುವು ಕ್ರುದ್ಧನಾದರೂ ಅವನನ್ನು ಒಲೈಸಬೇಕು ಮತ್ತು ಪ್ರಸನ್ನೀಕರಿಸಿಕೊಳ್ಳಬೇಕು.
ಸಮ್ಯಙ್ಮಿಥ್ಯಾಪ್ರವೃತ್ತೇಽಪಿ ವರ್ತಿತವ್ಯಂ ಗುರಾವಿಹ |
ಗುರುನಿಂದಾ ದಹತ್ಯಾಯುರ್ಮನುಷ್ಯಾಣಾಂ ನ ಸಂಶಯಃ ॥47॥
ಗುರುವು ಸರಿಯಾಗಿ ಅಥವಾ ತಪ್ಪಾಗಿ ಪ್ರವೃತ್ತಿಯನ್ನು ಮಾಡಿದರೂ ಶಿಷ್ಯನಾದವನು ಗುರುವೃತ್ತಿಯನ್ನು ಮಾಡಬೇಕು. ಗುರುನಿಂದೆಯು ಮನುಷ್ಯರ ಆಯುಸ್ಸನ್ನು ಸುಟ್ಟುಬಿಡುವುದರಲ್ಲಿ ಸಂಶಯವಿಲ್ಲ.
ದೂರಾದಾವಸಥಾನ್ಮೂತ್ರಂ ದೂರಾತ್ ಪಾದಾವಸೇಚನಮ್ |
ಉಚ್ಛಿಷ್ಟೋತ್ಸರ್ಜನಂ ಚೈವ ದೂರೇ ಕಾರ್ಯಂ ಹಿತೈಷಿಣಾ ॥48॥
ಹಿತವನ್ನು ಬಯಸುವವನು ಮೂತ್ರವಿಸರ್ಜನೆಯನ್ನೂ, ಪಾದಪ್ರಕ್ಷಾಲನೆಯನ್ನೂ ಮತ್ತು ಎಂಜಲೆಲೆಗಳನ್ನು ಬಿಸಾಡುವುದನ್ನೂ ಮನೆಯಿಂದ ದೂರದಲ್ಲಿ ಮಾಡಬೇಕು.
ನಾತಿಕಲ್ಯಂ ನಾತಿಸಾಯಂ ನ ಚ ಮಧ್ಯಂದಿನೇ ಸ್ಥಿತೇ |
ನಾಜ್ಞಾತೈಃ ಸಹ ಗಚ್ಛೇತ ನೈಕೋ ನ ವೃಷಲೈಃ ಸಹ ॥49॥
ಬೆಳಗಿನ ಜಾವದ ಸಮಯದಲ್ಲಿ ಮತ್ತು ಸಾಯಂಕಾಲವು ಮೀರದ ಸಮಯದಲ್ಲಿ ಮತ್ತು ಮಧ್ಯಾಹ್ನದ ಸಮಯದಲ್ಲಿ ಅಪರಿಚಿತ ವ್ಯಕ್ತಿಗಳ ಜೊತೆಯಲ್ಲಾಗಲೀ, ಒಬ್ಬಂಟಿಗನಾಗಲೀ ಅಥವಾ ಶೂದ್ರರ ಜೊತೆಯಲ್ಲಾಗಲೀ ಹೋಗಬಾರದು.
ಪಂಥಾ ದೇಯೋ ಬ್ರಾಹ್ಮಣಾಯ ಗೋಭ್ಯೋ ರಾಜಭ್ಯ ಏವ ಚ |
ವೃದ್ಧಾಯ ಭಾರತಪ್ತಾಯ ಗರ್ಭಿಣ್ಯೈ ದುರ್ಬಲಾಯ ಚ ॥50॥
ಎದುರಿನಿಂದ ಬಂದ ಬ್ರಾಹ್ಮಣನಿಗೆ ದಾರಿಯನ್ನು ಬಿಟ್ಟುಕೊಡಬೇಕು. ಗೋವುಗಳಿಗೆ, ರಾಜರಿಗೆ, ಹಿರಿಯರಿಗೆ, ಭಾರವನ್ನು ಹೊತ್ತವನಿಗೆ, ಗರ್ಭಿಣಿಗೆ ಮತ್ತು ಅಶಕ್ತನಾದವನಿಗೆ ದಾರಿಯನ್ನು ಬಿಟ್ಟುಕೊಡಬೇಕು.
ಪ್ರದಕ್ಷಿಣಂ ಚ ಕುರ್ವೀತ ಪರಿಜ್ಞಾತಾನ್ ವನಸ್ಪತೀನ್ |

ಚತುಷ್ಪಥಾನ್ ಪ್ರಕುರ್ವೀತ ಸರ್ವಾನೇವ ಪ್ರದಕ್ಷಿಣಾನ್ ॥51॥
ನಡೆಯುವಾಗ ಪರಿಚಿತವಾದ ವನಸ್ಪತಿಗಳನ್ನು ಬಲಭಾಗಕ್ಕೆ ಮಾಡಿಕೊಂಡು ನಡೆಯಬೇಕು. ಎಲ್ಲಾ ಚತುಷ್ಪಥಗಳನ್ನು ಬಲಭಾಗಕ್ಕೆ ಬಿಟ್ಟುಕೊಂಡು ಎಡಭಾಗದಲ್ಲಿ ನಡೆಯಬೇಕು.
ಮಧ್ಯಂದಿನೇ ನಿಶಾಕಾಲೇ ಮಧ್ಯರಾತ್ರೇ ಚ ಸರ್ವದಾ ।
ಚತುಷ್ಪಥಾನ್ನ ಸೇವೇತ ಉಭೇ ಸಂಧ್ಯೇ ತಥೈವ ಚ ॥52॥
ಮಧ್ಯಂದಿನ ಸಮಯದಲ್ಲಿ, ಮಧ್ಯರಾತ್ರಿಯ ಸಮಯದಲ್ಲಿ ಮತ್ತು ರಾತ್ರಿಯ ಸಮಯದಲ್ಲಿ ಮತ್ತು ಎರಡು ಸಂಧ್ಯಾಕಾಲಗಳಲ್ಲಿ ಚತುಷ್ಪಥಗಳ ಬಳಿ ಹೋಗಬಾರದು.
ಉಪಾನಹೌ ಚ ವಸ್ತ್ರಂ ಚ ಧೃತಮನ್ಯೈರ್ನ ಧಾರಯೇತ್ ।
ಬ್ರಹ್ಮಚಾರೀ ಚ ನಿತ್ಯಂ ಸ್ಯಾತ್ ಪಾದಂ ಪಾದೇನ ನಾಕ್ರಮೇತ್ ॥53॥
ಇನ್ನೊಬ್ಬರು ಧರಿಸಿದ ಪಾದರಕ್ಷೆಗಳನ್ನು ಮತ್ತು ವಸ್ತ್ರಗಳನ್ನು ಧರಿಸಬಾರದು. ಯಾವಾಗಲೂ ಬ್ರಹ್ಮಚಾರಿಯಾಗಿರಬೇಕು. ಕಾಲಿನಿಂದ ಕಾಲನ್ನು ತುಳಿಯಬಾರದು.
ಅಮಾವಾಸ್ಯಾಂ ಪೌರ್ಣಮಾಸ್ಯಾಂ ಚತುರ್ದಶ್ಯಾಂ ಚ ಸರ್ವಶಃ ।
ಅಷ್ಟಮ್ಯಾಂ ಸರ್ವಪಕ್ಷಾಣಾಂ ಬ್ರಹ್ಮಚಾರೀ ಸದಾ ಭವೇತ್ ॥54॥
ಅಮಾವಾಸ್ಯೆಯಂದು, ಪೌರ್ಣಮಾಸ್ಯೆಯಂದು, ಎರಡು ಚತುರ್ದಶಿಗಳಂದು ಮತ್ತು ಎರಡು ಪಕ್ಷಗಳ ಅಷ್ಟಮಿಯಂದು ಸ್ತ್ರೀಸಂಗವನ್ನು ಮಾಡಬಾರದು.
ವೃಥಾಮಾಂಸಂ ನ ಖಾದೇತ ಪೃಷ್ಠಮಾಂಸಂ ತಥೈವ ಚ ।
ಆಕ್ರೋಶಂ ಪರಿವಾದಂ ಚ ಪೈಶುನ್ಯಂ ಚ ವಿವರ್ಜಯೇತ್ ॥55॥
ವ್ಯರ್ಥವಾಗಿ ಮಾಂಸವನ್ನು ತಿನ್ನಬಾರದು (ಶ್ರಾದ್ಧ ಮತ್ತು ಯಜ್ಞಗಳಲ್ಲಿ ಬಿಟ್ಟು ಉಳಿದ ಕಾಲದಲ್ಲಿ ಮಾಂಸವು ವ್ಯರ್ಥಮಾಂಸ ಎನಿಸಿಕೊಳ್ಳುತ್ತದೆ). ಪೃಷ್ಠಭಾಗದ ಮಾಂಸವನ್ನು ತಿನ್ನಬಾರದು. ದೊಡ್ಡವರ ವಿರುದ್ಧ ಕಿರುಚುವುದು, ನಿಂದಿಸುವುದು ಮತ್ತು ಚಾಡಿ ಹೇಳುವುದನ್ನು ವರ್ಜಿಸಬೇಕು.
ನಾರುಂತುದಃ ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ ।
ಯಯಾಽಸ್ಯ ವಾಚಾ ಪರ ಉದ್ವಿಜೇತ
ನ ತಾಂ ವದೇದ್ ರುಶತೀಂ ಪಾಪಲೋಕ್ಯಾಮ್ ॥56॥
ಮರ್ಮಭೇದಕವಾದ ಮಾತುಗಳನ್ನಾಗಲೀ, ಕ್ರೂರವಾದ ಮಾತುಗಳನ್ನಾಗಲೀ ಆಡಬಾರದು. ಹೀನನಾದ ಮನುಷ್ಯನಿಂದ ಏನನ್ನೂ ಸ್ವೀಕರಿಸಬಾರದು. ತಾನು ಯಾವ ಮಾತನ್ನಾಡಿದರೆ ಇನ್ನೊಬ್ಬನು ಉದ್ವೇಗಕ್ಕೆ ಒಳಗಾಗುತ್ತಾನೆಯೋ ಅಂತಹ ತೀಕ್ಷ್ಣವಾದ, ಪಾಪಲೋಕ ಸಂಪಾದಕವಾದ ಮಾತುಗಳನ್ನು ಆಡಬಾರದು.
ವಾಕ್ಸಾಯಕಾ ವದನಾನ್ನಿಷ್ಪತಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ ।
ಪರಸ್ಯ ನಾಮರ್ಮಸು ತೇ ಪತಂತಿ
ತಾನ್ ಪಂಡಿತೋ ನಾವಸೃಜೇತ್ ಪರೇಷು ॥57॥
ವಾಗ್ಬಾಣಗಳು ಮುಖದಿಂದ ಹೊರಹೊಮ್ಮುತ್ತವೆ. ಅವುಗಳಿಂದ ಗಾಯಗೊಂಡ ಮನುಷ್ಯನು ಹಗಲೂ, ರಾತ್ರಿಯೂ ದುಃಖಪಡುತ್ತಾನೆ. ಅಂತಹ ವಾಗ್ಬಾಣಗಳು ಮರ್ಮಸ್ಥಾನಗಳಲ್ಲಿಯೇ ಬೀಳುತ್ತವೆ (ಮರ್ಮಸ್ಥಾನವಲ್ಲದ ಕಡೆ ಬೀಳುವುದಿಲ್ಲ). ಪಂಡಿತನಾದವನು ಇನ್ನೊಬ್ಬನ ಮೇಲೆ ಅಂತಹ ವಾಗ್ಬಾಣಗಳನ್ನು ಪ್ರಯೋಗಿಸಬಾರದು.
ರೋಹತೇ ಸಾಯಕೈರ್ವಿದ್ಧಂ ವನಂ ಪರಶುನಾ ಹತಮ್ ।
ವಾಚಾ ದುರುಕ್ತಂ ಬೀಭತ್ಸಂ ನ ಸಂರೋಹತಿ ವಾಕ್‌ಕ್ಷತಮ್ ॥58॥
ಬಾಣಗಳಿಂದ ಹೊಡೆಯಲ್ಪಟ್ಟ ಮರವು ಚಿಗುರುತ್ತದೆ. ಕೊಡಲಿಯಿಂದ ಕಡಿಯಲ್ಪಟ್ಟ ಕಾಡು ಚಿಗುರುತ್ತದೆ. ಆದರೆ ದುರ್ವಚನಗಳಿಂದ ಉಂಟಾದ ಭಯಂಕರವಾದ ಗಾಯವು ಮಾತ್ರ ಪುನಃ ಬೆಳೆಯುವುದಕ್ಕೆ ಅವಕಾಶವನ್ನು ಕೊಡುವುದಿಲ್ಲ.
ಹೀನಾಂಗಾನತಿರಿಕ್ತಾಂಗಾನ್ ವಿದ್ಯಾಹೀನಾನ್ ವಯೋಧಿಕಾನ್ ।
ರೂಪದ್ರವಿಣಹೀನಾಂಶ್ಚ ಸತ್ತ್ವಹೀನಾಂಶ್ಚ ನಾಕ್ಷಿಪೇತ್ ॥59॥
ಅಂಗವಿಕಲರಾದವರನ್ನೂ, ಅಧಿಕಾಂಗರಾದವರನ್ನೂ, ವಿದ್ಯಾಹೀನರಾದವರನ್ನೂ, ವಯಸ್ಸಿನಲ್ಲಿ ಹಿರಿಯರಾದವರನ್ನೂ, ರೂಪಹೀನರಾದವರನ್ನೂ, ವಯೋಹೀನ- ರಾದವರನ್ನೂ, ಧೈರ್ಯಹೀನರಾದವರನ್ನೂ ನಿಂದಿಸಬಾರದು.
ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಮ್ ।
ದ್ವೇಷಸ್ತಂಭಾಭಿಮಾನಾಂಶ್ಚ ತೈಕ್ಷ್ಣ್ಯಂ ಚ ಪರಿವರ್ಜಯೇತ್ ॥60॥
ನಾಸ್ತಿಕ್ಯವಾದ, ವೇದನಿಂದೆ, ದೇವತೆಗಳ ಅವಹೇಳನ, ದ್ವೇಷ, ಗರ್ವ, ಅಭಿಮಾನ ಮತ್ತು ಕ್ರೂರತೆಗಳನ್ನು ವರ್ಜಿಸಬೇಕು.
ಪರಸ್ಯ ದಂಡಂ ನೋದ್ಯಚ್ಛೇತ್ ಕ್ರುದ್ಧೋ ನೈನಂ ನಿಪಾತಯೇತ್ ।
ಅನ್ಯತ್ರ ಪುತ್ರಾಚ್ಛಿಷ್ಯಾದ್ ವಾ ಶಿಕ್ಷಾರ್ಥಂ ತಾಡನಂ ಸ್ಮೃತಮ್ ॥61॥
ಇನ್ನೊಬ್ಬನನ್ನು ದಂಡದಿಂದ ಹೊಡೆಯಬಾರದು. ಕೋಪದಿಂದ ತಳ್ಳಿ ಕೆಡವಬಾರದು. ಪುತ್ರನನ್ನು ಮತ್ತು ಶಿಷ್ಯನನ್ನು ಬಿಟ್ಟು ಯಾರನ್ನೂ ಶಿಕ್ಷಿಸಬಾರದು. ಪುತ್ರ- ಶಿಷ್ಯರಿಗೆ ಹೊಡೆದರೂ ಅವರಿಗೆ ಶಿಕ್ಷಣವನ್ನು ಕೊಡುವುದಕ್ಕಾಗಿಯೇ ಇರಬೇಕು.
ನ ಬ್ರಾಹ್ಮಣಾನ್ ಪರಿವದೇನ್ನಕ್ಷತ್ರಾಣಿ ನ ನಿರ್ದಿಶೇತ್ ।

ತಿಥಿಂ ಪಕ್ಷಸ್ಯ ನ ಬ್ರೂಯಾತ್ ತಸ್ಯಾಯುರ್ನ ಚ ರಿಷ್ಯತೇ ॥62॥
ಬ್ರಾಹ್ಮಣರನ್ನು ನಿಂದಿಸಬಾರದು. ನಕ್ಷತ್ರಗಳನ್ನು ಬೆಟ್ಟು ಮಾಡಿ ತೋರಿಸಬಾರದು. ಪಕ್ಷದ ತಿಥಿಯನ್ನು ಹೇಳಬಾರದು. ಅಂತಹವನ ಆಯುಸ್ಸು ಕ್ಷೀಣವಾಗುವುದಿಲ್ಲ.
ಕೃತ್ವಾ ಮೂತ್ರಪುರೀಷೇ ತು ರಥ್ಯಾಮಾಕ್ರಮ್ಯ ವಾ ಪುನಃ।
ಪಾದಪ್ರಕ್ಷಾಲನಂ ಕುರ್ಯಾತ್ ಸ್ವಾಧ್ಯಾಯೇ ಭೋಜನೇ ತಥಾ ॥63॥
ಮಲ-ಮೂತ್ರ ವಿಸರ್ಜನೆಯನ್ನು ಮಾಡಿ ಅಥವಾ ರಸ್ತೆಯಲ್ಲಿ ತುಳಿದು ಪಾದಪ್ರಕ್ಷಾಲನೆಯನ್ನು ಮಾಡಿಕೊಳ್ಳದೆ ಸ್ವಾಧ್ಯಾಯವನ್ನು ಅಥವಾ ಭೋಜನವನ್ನು ಮಾಡಬಾರದು.
ತ್ರೀಣಿ ದೇವಾಃ ಪವಿತ್ರಾಣಿ ಬ್ರಾಹ್ಮಣಾನಾಮಕಲ್ಪಯನ್।
ಅದೃಷ್ಟಮದ್ಭಿರ್ನಿರ್ಣಿಕ್ತಂ ಯಚ್ಚ ವಾಚಾ ಪ್ರಶಸ್ಯತೇ ॥64॥
ಶೂದ್ರಾದಿಗಳ ಅದರ್ಶನ, ಜಲದಿಂದ ಶೋಧನ ಮತ್ತು ಮಾತಿನಿಂದ ಪ್ರಶಂಸೆ ಈ ಮೂರು ಪದಾರ್ಥಗಳನ್ನು ದೇವತೆಗಳು, ಬ್ರಾಹ್ಮಣರಿಗೆ ಪವಿತ್ರವಾದವುಗಳೆಂದು ಕಲ್ಪಿಸಿದರು.
ಸಂಯಾವಂ ಕೃಸರಂ ಮಾಂಸಂ ಶಷ್ಕುಲೀಃ ಪಾಯಸಂ ತಥಾ।
ಆತ್ಮಾರ್ಥಂ ನ ಪ್ರಕರ್ತವ್ಯಂ ದೇವತಾನಾಂ ತು ಕಲ್ಪಯೇತ್ ॥65॥
ಗಂಜಿಯನ್ನಾಗಲೀ, ಗೋಧಿಯ ಪಕ್ವಾನ್ನವನ್ನಾಗಲೀ, ಮಾಂಸವನ್ನಾಗಲೀ, ಚಕ್ಕುಲಿಯನ್ನಾಗಲೀ, ಪಾಯಸವನ್ನಾಗಲೀ ತನ್ನ ಸಲುವಾಗಿ ಮಾಡಿಕೊಳ್ಳಬಾರದು. ದೇವರಿಗಾಗಿ ಮಾಡಬೇಕು.
ನಿತ್ಯಮಗ್ನಿಂ ಪರಿಚರೇದ್ ಭಿಕ್ಷಾಂ ದದ್ಯಾಚ್ಚ ನಿತ್ಯದಾ।
ವಾಗ್ಯತೋ ದಂತಕಾಷ್ಠಂ ಚ ನಿತ್ಯಮೇವ ಸಮಾಚರೇತ್।
ನ ಚಾಭ್ಯುದಿತಶಾಯೀ ಸ್ಯಾತ್ ಪ್ರಾಯಶ್ಚಿತ್ತೀ ತಥಾ ಭವೇತ್ ॥66॥
ನಿತ್ಯವೂ ಅಗ್ನಿಯನ್ನು ಪರಿಚರಿಸಬೇಕು. ಭಿಕ್ಷೆಯನ್ನು ನೀಡಬೇಕು. ಮೌನವಾಗಿ ನಿತ್ಯವಾಗಿ ದಂತಧಾವನವನ್ನು ಮಾಡಿಕೊಳ್ಳಬೇಕು. ಸೂರ್ಯನು ಉದಯಿಸಿದ ಮೇಲೆಯೂ ಮಲಗಿರಬಾರದು. ಹಾಗೆ ಮಾಡಿದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.
ಮಾತಾಪಿತರಮುತ್ಥಾಯ ಪೂರ್ವಮೇವಾಭಿವಾದಯೇತ್।
ಆಚಾರ್ಯಮಥ ವಾಪ್ಯೇನಂ ತಥಾऽऽಯುರ್ವಿಂದತೇ ಮಹತ್ ॥67॥
ತಂದೆ-ತಾಯಿಗಳಿಗಿಂತ ಮೊದಲು ಎದ್ದು, ಅವರನ್ನು ಎಬ್ಬಿಸಿ ಮೊದಲು ನಮಸ್ಕಾರವನ್ನು ಮಾಡಬೇಕು. ಆಚಾರ್ಯರಿಗೆ ನಮಸ್ಕಾರವನ್ನು ಮಾಡಬೇಕು. ಅಂತಹವನು ದೀರ್ಘಾಯುಸ್ಸನ್ನು ಪಡೆಯುತ್ತಾನೆ.
ವರ್ಜಯೇದ್ ದಂತಕಾಷ್ಠಾನಿ ವರ್ಜನೀಯಾನಿ ನಿತ್ಯಶಃ।
ಭಕ್ಷಯೇಚ್ಛಾಸ್ತ್ರದೃಷ್ಟಾನಿ ಪರ್ವಸ್ವಪಿ ಚ ವರ್ಜಯೇತ್ ॥68॥
ನಿತ್ಯದಲ್ಲಿಯೂ ನಿಷಿದ್ಧವಾದ ದಂತಕಾಷ್ಠಗಳನ್ನು ಪರಿತ್ಯಜಿಸಬೇಕು. ಶಾಸ್ತ್ರವಿಹಿತವಾದುದನ್ನೇ ಭುಂಜಿಸಬೇಕು (ದಂತಧಾವನಕ್ಕೆ ಉಪಯೋಗಿಸಬೇಕು). ಪರ್ವಕಾಲದಲ್ಲಿ ಅವುಗಳಲ್ಲಿಯೂ ಕೆಲವನ್ನು ಬಿಡಬೇಕು.
ಉದಙ್ಮುಖಶ್ಚ ಸತತಂ ಶೌಚಂ ಕುರ್ಯಾತ್ ಸಮಾಹಿತಃ।
ಅಕೃತ್ವಾ ದೇವತಾಪೂಜಾಂ ನಾನ್ಯಂ ಗಚ್ಛೇತ್ ಕದಾಚನ।
ಅನ್ಯತ್ರ ತು ಗುರುಂ ವೃದ್ಧಂ ಧಾರ್ಮಿಕಂ ವಾ ವಿಚಕ್ಷಣಃ ॥70॥
ಸತತವಾಗಿ (ಹಗಲಿನಲ್ಲಿ) ಉತ್ತರಾಭಿಮುಖವಾಗಿ ಶೌಚವನ್ನು ಮಾಡಿಕೊಳ್ಳಬೇಕು. ವಿವೇಕಿಯಾದವನು ದೇವತಾಪೂಜೆಯನ್ನು ಮಾಡದೆ ಗುರುಗಳನ್ನು, ಹಿರಿಯರನ್ನು ಅಥವಾ ಧಾರ್ಮಿಕರನ್ನು ಬಿಟ್ಟು ಇನ್ನೊಬ್ಬರ ಕಡೆಗೆ ಹೋಗಬಾರದು.
ಅವಲೋಕ್ಯೋ ನ ಚಾದರ್ಶೋ ಮಲಿನೋ ಬುದ್ಧಿಮತ್ತರೈಃ।
ನ ಚಾಜ್ಞಾತಾಂ ಸ್ತ್ರಿಯಂ ಗಚ್ಛೇದ್ ಗರ್ಭಿಣೀಂ ವಾ ಕದಾಚನ ॥71॥
ಮೇಧಾವಿಯಾದವನು ಮಲಿನನಾಗಿದ್ದಾಗ ಕನ್ನಡಿಯಲ್ಲಿ ತನ್ನನ್ನು ನೋಡಿಕೊಳ್ಳ- ಬಾರದು. ಅಪರಿಚಿತರಾದ ಸ್ತ್ರೀಯರೊಡನೆ ಅಥವಾ ಗರ್ಭಿಣಿಯರೊಡನೆ ಸಮಾಗಮವನ್ನು ಮಾಡಬಾರದು.
ಉದಕ್‌ಶಿರಾ ನ ಸ್ವಪೇತ ತಥಾ ಪ್ರತ್ಯಕ್‌ಶಿರಾ ನ ಚ।
ಪ್ರಾಕ್‌ಶಿರಾಸ್ತು ಸ್ವಪೇದ್ ವಿದ್ವಾನಥ ವಾ ದಕ್ಷಿಣಾಶಿರಾಃ ॥72॥
ಉತ್ತರಾಭಿಮುಖವಾಗಿ ಅಥವಾ ಪಶ್ಚಿಮಾಭಿಮುಖವಾಗಿ ಮಲಗಬಾರದು. ವಿದ್ವಾಂಸನಾದವನು ಪೂರ್ವಾಭಿಮುಖವಾಗಿ ಅಥವಾ ದಕ್ಷಿಣಾಭಿಮುಖವಾಗಿ ಮಲಗಬೇಕು.
ನ ಭಗ್ನೇ ನಾವದೀರ್ಣೇ ವಾ ಶಯನೇ ಪ್ರಸ್ವಪೇತ ಚ।
ನಾಂತರ್ಧಾನೇ ನ ಸಂಯುಕ್ತೇ ನ ಚ ತಿರ್ಯಕ್‌ಕದಾಚನ ॥73॥
ಒಡೆದುಹೋದ ಅಥವಾ ಸೀಳಿ ಹೋದ (ಹರಿದು ಹೋದ) ಹಾಸಿಗೆಯಲ್ಲಿ ಮಲಗಬಾರದು, ಕತ್ತಲೆಯಲ್ಲಿ ಮಲಗಬಾರದು. ಇನ್ನೊಬ್ಬನ ಜೊತೆಯಲ್ಲಿ ಒಂದೇ ಹಾಸಿಗೆಯಲ್ಲಿ ಮಲಗಬಾರದು. ಹಾಸಿಗೆಯಲ್ಲಿ ಅಡ್ಡಲಾಗಿ ಮಲಗಬಾರದು.
ನ ನಗ್ನಃ ಕರ್ಹಿಚಿತ್ ಸ್ನಾಯಾನ್ನ ನಿಶಾಯಾಂ ಕದಾಚನ।
ಸ್ನಾತ್ವಾ ಚ ನಾವಮೃಜ್ಯೇತ ಗಾತ್ರಾಣಿ ಸುವಿಚಕ್ಷಣಃ ॥74॥
ಯಾವ ಕಾರಣದಿಂದಲೂ ನಗ್ನನಾಗಿ ಸ್ನಾನವನ್ನು ಮಾಡಬಾರದು. ರಾತ್ರಿಯಲ್ಲಿ ಸ್ನಾನವನ್ನು ಮಾಡಬಾರದು. ಮೇಧಾವಿಯಾದವನು ಸ್ನಾನವನ್ನು ಮಾಡಿ ಅನಂತರ ದೇಹಕ್ಕೆ ತೈಲವನ್ನು ಹಚ್ಚಿಕೊಳ್ಳಬಾರದು.
ನ ಚಾನುಲಿಂಪೇದಸ್ನಾತ್ವಾ ಸ್ನಾತ್ವಾ ವಾಸೋ ನ ನಿರ್ಧುನೇತ್।

ಆರ್ದ್ರ ಏವ ತು ವಾಸಾಂಸಿ ನಿತ್ಯಂ ಸೇವೇತ ಮಾನವಃ |
ಸ್ರಜಶ್ಚ ನಾವಕರ್ಷೇತ ನ ಬಹಿರ್ಧಾರಯೇತ ಚ ॥75॥
ಸ್ನಾನವನ್ನು ಮಾಡದೆ ತೈಲವನ್ನು ಹಚ್ಚಿಕೊಳ್ಳಬಾರದು. ಸ್ನಾನವನ್ನು ಮಾಡಿದ ಮೇಲೆ ವಸ್ತ್ರವನ್ನು ಕೊಡವಲೂ ಬಾರದು. ಮನುಷ್ಯನು ಆರ್ದ್ರನಾಗಿಯೇ ವಸ್ತ್ರವನ್ನು ಧರಿಸಬೇಕು. ಪುಷ್ಪಮಾಲೆಗಳನ್ನು ಎಳೆದು ಕೀಳಬಾರದು ಮತ್ತು ಹೊರಗೆ ಹಾಕಿಕೊಳ್ಳಬಾರದು.
ರಕ್ತಮಾಲ್ಯಂ ನ ಧಾರ್ಯಂ ಸ್ಯಾಚ್ಛುಕ್ಲಂ ಧಾರ್ಯಂ ತು ಪಂಡಿತೈಃ |
ವರ್ಜಯಿತ್ವಾ ತು ಕಮಲಂ ತಥಾ ಕುವಲಯಂ ವಿಭೋ ॥76॥
ಪಂಡಿತನು ರಕ್ತಪುಷ್ಪಗಳನ್ನು ಮುಡಿಯಬಾರದು. ಕಮಲ ಮತ್ತು ಕುವಲಯಗಳನ್ನು ಬಿಟ್ಟು ಉಳಿದ ಶ್ವೇತಪುಷ್ಪಗಳನ್ನು ಮಾತ್ರ ಧರಿಸಬೇಕು.
ರಕ್ತಂ ಶಿರಸಿ ಧಾರ್ಯಂ ತು ತಥಾ ಕಾಲೇಯಮಿತ್ಯಪಿ |
ಕಾಂಚನೀ ಚೈವ ಯಾ ಮಾಲಾ ನ ಸಾ ದುಷ್ಯತಿ ಕರ್ಹಿಚಿತ್ |
ಸ್ನಾತಸ್ಯ ವರ್ಣಕಂ ನಿತ್ಯಮಾರ್ದ್ರಂ ದದ್ಯಾದ್ ವಿಶಾಂಪತೇ ॥77॥
ಆಯಾ ಕಾಲದಲ್ಲಿ ಸಿಗುವ (ಅಥವಾ ವನದಲ್ಲಿ ಬೆಳೆಯುವ) ರಕ್ತಪುಷ್ಪಗಳನ್ನು ತಲೆಯಲ್ಲಿ ಧರಿಸಬಹುದು (ಅತಿರಕ್ತ ಪುಷ್ಪಗಳಾಗಿರಬಾರದು). ಚಿನ್ನದ ಮಾಲೆಗಳಿಗೆ ಯಾವ ದೋಷವೂ ಇರುವುದಿಲ್ಲ.
ವಿಪರ್ಯಯಂ ನ ಕುರ್ವೀತ ವಾಸಸೋ ಬುದ್ಧಿಮಾನ್ನರಃ |
ತಥಾ ನಾನ್ಯದ್‌ಧೃತಂ ಧಾರ್ಯಂ ನ ಚಾಪದಶಮೇವ ಚ ॥78॥
ವಸ್ತ್ರಗಳನ್ನು ಉಡುವುದನ್ನು ಹೊದೆಯುವುದಕ್ಕೆ, ಹೊದೆಯುವುದನ್ನು ಉಡುವುದಕ್ಕೆ - ಹೀಗೆ ವ್ಯತ್ಯಾಸವನ್ನು ಮಾಡಬಾರದು. ಇನ್ನೊಬ್ಬನ ವಸ್ತ್ರವನ್ನು ಅಥವಾ ಅಂಚಿಲ್ಲದ ವಸ್ತ್ರವನ್ನು ಉಡಬಾರದು.
ಅನ್ಯದೇವ ಭವೇದ್ ವಾಸಃ ಶಯನೀಯೇ ನರೋತ್ತಮ |
ಅನ್ಯದ್ ರಥ್ಯಾಸು ದೇವಾನಾಮರ್ಚಾಯಾಮನ್ಯದೇವ ಹಿ ॥79॥
ಎಲೈ ನರೋತ್ತಮನೇ, ಹಾಸಿಗೆಯಲ್ಲಿ ಬೇರೆ ವಸ್ತ್ರವನ್ನು ಉಪಯೋಗಿಸಬೇಕು. ಪೂಜೆಯಲ್ಲಿ ಬೇರೆ ವಸ್ತ್ರಗಳು ಮತ್ತು ಬೀದಿಗಳಲ್ಲಿ ನಡೆಯುವಾಗ ಬೇರೆ ವಸ್ತ್ರಗಳನ್ನು ಉಪಯೋಗಿಸಬೇಕು.
ಪ್ರಿಯಂಗುಚಂದನಾಭ್ಯಾಂ ಚ ಬಿಲ್ವೇನ ತಗರೇಣ ಚ |
ಪೃಥಗೇವಾನುಲಿಂಪೇತ ಕೇಸರೇಣ ಚ ಬುದ್ಧಿಮಾನ್ ॥80॥
ಪ್ರಿಯಂಗು, ಶ್ರೀಗಂಧ, ಬಿಲ್ವ ಮತ್ತು ನಂದ್ಯಾವರ್ತ ಗಿಡಗಳ ಗಂಧಗಳನ್ನು ಮತ್ತು ಕೇಸರಿಯನ್ನು ಬುದ್ಧಿವಂತನಾದವನು ಪ್ರತ್ಯೇಕವಾಗಿ ಹಚ್ಚಿಕೊಳ್ಳಬೇಕು.
ಉಪವಾಸಂ ಚ ಕುರ್ವೀತ ಸ್ನಾತಃ ಶುಚಿರಲಂಕೃತಃ |
ಪರ್ವಕಾಲೇಷು ಸರ್ವೇಷು ಬ್ರಹ್ಮಚಾರೀ ಸದಾ ಭವೇತ್ ॥81॥
ಎಲ್ಲ ಪರ್ವಕಾಲಗಳಲ್ಲಿಯೂ ಸ್ನಾನವನ್ನು ಮಾಡಿ, ಶುಚಿಯಾಗಿ, ಅಲಂಕೃತನಾಗಿ ಉಪವಾಸವನ್ನು ಮಾಡಬೇಕು ಮತ್ತು ಬ್ರಹ್ಮಚರ್ಯದಿಂದ ಇರಬೇಕು.
ನಾಲೀಢಯಾ ಪರಿಹತಂ ಭಕ್ಷಯೇತ ವಿಚಕ್ಷಣಃ |
ತಥಾ ನೋದ್ಧೃತಸಾರಾಣಿ ಪ್ರೇಕ್ಷತಾಂ ನಾಪ್ರದಾಯ ಚ ॥82॥
ರಜಸ್ವಲೆಯ ದೃಷ್ಟಿಯಿಂದ ದೂಷಿತವಾದ ಅನ್ನವನ್ನು ವಿಚಕ್ಷಣನಾದವನು ಭಕ್ಷಿಸಬಾರದು. ಹಾಗೆಯೇ ಸಾರವನ್ನು ತೆಗೆದ ಪದಾರ್ಥಗಳನ್ನೂ, ನೋಡುವವರಿಗೆ ಕೊಡದಿರುವ ಪದಾರ್ಥಗಳನ್ನೂ ತಿನ್ನಬಾರದು.
ನ ಸನ್ನಿಕೃಷ್ಟೋ ಮೇಧಾವೀ ನಾಶುಚಿರ್ನ ಚ ಸತ್ಸು ಚ |
ಪ್ರತಿಷಿದ್ಧಾನ್ನ ಧರ್ಮೇಷು ಭಕ್ಷಾನ್ ಭುಂಜೀತ ಪೃಷ್ಠತಃ ॥83॥
ಮೇಧಾವಿಯಾದವನು ಅಪವಿತ್ರನ ಸನ್ನಿಕರ್ಷವಿರುವಾಗ ಅಥವಾ ತಾನು ಅಶುಚಿಯಾಗಿರುವಾಗ ಅಥವಾ ಸಜ್ಜನರ ಎದುರಿಗೆ ಕುಳಿತು ತಿನ್ನಬಾರದು. ಧರ್ಮಶಾಸ್ತ್ರದಲ್ಲಿ ಪ್ರತಿಷಿದ್ಧವಾದುದನ್ನು ತಿನ್ನಬಾರದು. ಮರೆಯಲ್ಲಿ ಹೋಗಿ ತಿನ್ನಬಾರದು.
ಪಿಪ್ಪಲಂ ಚ ವಟಂ ಚೈವ ಶಣಶಾಕಂ ತಥೈವ ಚ |
ಉದುಂಬರಂ ನ ಖಾದೇಚ್ಚ ಭವಾರ್ಥೀ ಪುರುಷೋತ್ತಮಃ ॥84॥
ತನ್ನ ಕಲ್ಯಾಣವನ್ನು ಬಯಸುವ ಶ್ರೇಷ್ಠ ಪುರುಷನು ಅರಳಿಯ ಹಣ್ಣು, ಆಲದ ಹಣ್ಣು, ಶಣಶಾಕ (ನುಗ್ಗೇಕಾಯಿ) ಮತ್ತು ಅತ್ತಿಹಣ್ಣುಗಳನ್ನು ತಿನ್ನಬಾರದು.
ಆಜಂ ಗವ್ಯಂ ಚ ಯನ್ಮಾಂಸಂ ಮಾಯೂರಂ ಚೈವ ವರ್ಜಯೇತ್ |
ವರ್ಜಯೇಚ್ಛುಷ್ಕಮಾಂಸಂ ಚ ತಥಾ ಪರ್ಯುಷಿತಂ ಚ ಯತ್ ॥85॥
ಆಡಿನ, ಗೋವಿನ ಮತ್ತು ನವಿಲಿನ ಮಾಂಸಗಳನ್ನು ವರ್ಜಿಸಬೇಕು. ಒಣಗಿದ ಮಾಂಸವನ್ನೂ ಮತ್ತು ಹಳಸಿದ ಮಾಂಸವನ್ನೂ ವರ್ಜಿಸಬೇಕು.
ನ ಪಾಣೌ ಲವಣಂ ವಿದ್ವಾನ್ ಪ್ರಾಶ್ನೀಯಾನ್ನ ಚ ರಾತ್ರಿಷು |
ದಧಿಸಕ್ತೂನ್ನ ಭುಂಜೀತ ವೃಥಾಮಾಂಸಂ ಚ ವರ್ಜಯೇತ್ ॥86॥
ಕೈಯಿಂದ ಲವಣವನ್ನು ತೆಗೆದು (ಹಾಕಿಕೊಂಡು) ತಿನ್ನಬಾರದು. ರಾತ್ರಿಯಲ್ಲಿ ಲವಣವನ್ನು ತಿನ್ನಬಾರದು. ಮೊಸರಿನಲ್ಲಿ ಕಲಸಿದ ಹಿಟ್ಟನ್ನು ಮತ್ತು ವ್ಯರ್ಥವಾದ ಮಾಂಸವನ್ನು ವರ್ಜಿಸಬೇಕು.

ವಾಲೇನ ತು ನ ಭುಂಜೀತ ಪರಶ್ರಾದ್ಧಂ ತಥೈವ ಚ |
ಸಾಯಂ ಪ್ರಾತಶ್ಚ ಭುಂಜೀತ ನಾಂತರಾಲೇ ಸಮಾಹಿತಃ ॥87॥
ಕೂದಲು ಬೆರೆತ ಅನ್ನವನ್ನು ತಿನ್ನಬಾರದು. ಇನ್ನೊಬ್ಬನ ಶ್ರಾದ್ಧದಲ್ಲಿ ಊಟವನ್ನು ಮಾಡಬಾರದು. ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿ ಊಟವನ್ನು ಮಾಡಬೇಕು. ಮಧ್ಯದಲ್ಲಿ ಏನನ್ನೂ ತಿನ್ನಬಾರದು.
ವಾಗ್ಯತೋ ನೈಕವಸ್ತ್ರಶ್ಚ ನಾಸಂವಿಷ್ಟಃ ಕದಾಚನ |
ಭೂಮೌ ಸದೈವ ನಾಶ್ನೀಯಾನ್ನಾನಾಸೀನೋ ನ ಶಬ್ದವತ್ ॥88॥
ಒಂದೇ ವಸ್ತ್ರವನ್ನು ಧರಿಸಿ, ಕುಳಿತುಕೊಳ್ಳದೆ ಊಟವನ್ನು ಮಾಡಬಾರದು. ಮೌನದಿಂದ ಊಟವನ್ನು ಮಾಡಬೇಕು. ಆಸನವಿಲ್ಲದ ಭೂಮಿಯಲ್ಲಿ ಕುಳಿತು ಶಬ್ದ ಸಹಿತವಾಗಿ ತಿನ್ನಬಾರದು.
ತೋಯಪೂರ್ವಂ ಪ್ರದಾಯಾನ್ನಮತಿಥಿಭ್ಯೋ ವಿಶಾಂಪತೇ |
ಪಶ್ಚಾದ್ ಭುಂಜೀತ ಮೇಧಾವೀ ನ ಚಾಪ್ಯನ್ಯಮನಾ ನರಃ ॥89॥
ಎಲೈ ರಾಜನೇ, ಅತಿಥಿಗಳಿಗೆ ಮೊದಲು ನೀರನ್ನು ಕೊಟ್ಟು ಅನಂತರ ಅನ್ನವನ್ನು ಕೊಡಬೇಕು. ಮೇಧಾವಿಯಾದವನು ಅನಂತರ ಏನನ್ನೂ ಯೋಚಿಸದೆ ಭೋಜನವನ್ನು ಮಾಡಬೇಕು.
ಸಮಾನಮೇಕಪಂಕ್ತ್ಯಾಂ ತು ಭುಂಜೀತಾನ್ನಂ ಜನೇಶ್ವರ |
ವಿಷಂ ಹಾಲಾಹಲಂ ಭುಂಕ್ತೇ ಯೋಽಪ್ರದಾಯ ಸುಹೃಜ್ಜನೇ ॥90॥
ಎಲೈ ಜನೇಶ್ವರನೇ, ಒಂದು ಪಂಕ್ತಿಯಲ್ಲಿ ಸಮಾನವಾದ ಭೋಜನವನ್ನು ನೀಡಬೇಕು (ಅಥವಾ ಭುಂಜಿಸಬೇಕು). ಯಾವನು ಪಂಕ್ತಿಯಲ್ಲಿ ಕುಳಿತು ಸುಹೃಜ್ಜನರಿಗೆ ಕೊಡದೆ ತಾನೇ ಭುಂಜಿಸುತ್ತಾನೋ ಅವನು ಹಾಲಾಹಲ ವಿಷವನ್ನು ಭುಂಜಿಸುತ್ತಾನೆ.
ಪಾನೀಯಂ ಪಾಯಸಂ ಸರ್ಪಿರ್ದಧಿಸಕ್ತುಮಧೂನ್ಯಪಿ |
ನಿರಸ್ಯ ದೋಷಮನ್ಯೇಷಾಂ ನ ಪ್ರದೇಯಂ ತು ಕಸ್ಯಚಿತ್ ॥91॥
ನೀರು, ಪಾಯಸ, ಘೃತ, ದಧಿ, ಸಕ್ತು (ಬೋಧಿಭಕ್ಷ್ಯ) ಮತ್ತು ಜೇನುತುಪ್ಪಗಳಲ್ಲಿ ದೋಷವೇನಾದರೂ ಇದ್ದರೆ ಅದನ್ನು ಧಿಕ್ಕರಿಸಿ ಯಾರಿಗೂ ಬಡಿಸಬಾರದು.
ಭುಂಜಾನೋ ಮನುಜವ್ಯಾಘ್ರ ನೈವ ಶಂಕಾಂ ಸಮಾಚರೇತ್ |
ಅಭಿಗಮ್ಯೋದಪಾನಂ ವೈ ನ ಕರ್ತವ್ಯಂ ಭವಾರ್ಥಿನಾ ॥92॥
ಎಲೈ ಮನುಜವ್ಯಾಘ್ರನೇ, ಊಟ ಮಾಡುವವನು ಆಹಾರದ ವಿಷಯದಲ್ಲಿ ಶಂಕಿಸಬಾರದು. ಶ್ರೇಯಸ್ಸನ್ನು ಬಯಸುವವನು ತಿರುಗಾಡುತ್ತಾ ಜಲಪಾನವನ್ನು ಮಾಡಬಾರದು (ಲಕ್ಷ್ಮಾಲಂಕಾರ).
ಆಚಮ್ಯ ಚೈವ ಹಸ್ತೇನ ಪರಿಸ್ರಾವ್ಯ ತಥೋದಕಮ್ |
ಅಂಗುಷ್ಠಂ ಚರಣಸ್ಯಾಥ ದಕ್ಷಿಣಸ್ಯಾವಸೇಚಯೇತ್ ॥93॥
ಭೋಜನಾನಂತರದಲ್ಲಿ ಆಚಮನವನ್ನು ಮಾಡಿ, ಹಸ್ತದ ನೀರನ್ನು ಸೋರಿಸಿ, ಬಲಗೈಯಿಂದ ಬಲಗಾಲಿನ ಅಂಗುಷ್ಠದ ಮೇಲೆ ನೀರನ್ನು ಚುಮುಕಿಸಬೇಕು.
ಪಾಣಿಂ ಮೂರ್ಧ್ನಿ ಸಮಾಧಾಯ ಸ್ಪೃಷ್ಟ್ವಾ ಚಾಗ್ನಿಂ ಸಮಾಹಿತಃ |
ಜ್ಞಾತಿಶ್ರೈಷ್ಠ್ಯಮವಾಪ್ನೋತಿ ಪ್ರಯೋಗಕುಶಲೋ ನರಃ ॥94॥
ಅನಂತರ ತನ್ನ ಶಿರಸ್ಸಿನ ಮೇಲೆ ಕೈಯನ್ನಿಟ್ಟು ಸಮಾಧಾನದಿಂದ ಅಗ್ನಿಸ್ಪರ್ಶವನ್ನು ಮಾಡುವ, ಪ್ರಯೋಗಕುಶಲನಾದ ನರನು ತನ್ನ ಬಂಧುಗಳಲ್ಲಿ ಶ್ರೇಷ್ಠತ್ವವನ್ನು ಪಡೆಯುತ್ತಾನೆ.
ಅದ್ಭಿಃ ಪ್ರಾಣಾನ್ ಸಮಾಲಭ್ಯ ನಾಭಿಂ ಪಾಣಿತಳೇನ ಚ |
ಸ್ಪೃಶಂಶ್ಚೈವ ಪ್ರತಿಷ್ಠೇತ ನ ಚಾಪ್ಯಾರ್ದ್ರೇಣ ಪಾಣಿನಾ ॥95॥
ನೀರಿನಿಂದ ಇಂದ್ರಿಯಗಳನ್ನು ಸ್ಪರ್ಶ ಮಾಡಿ, ಅಂಗೈಯಿಂದ ನಾಭಿಯನ್ನು ಸ್ಪರ್ಶ ಮಾಡಿ ಹೊರಡಬೇಕು. ಆರ್ದ್ರವಾದ ಹಸ್ತದಿಂದ ಹೊರಡಬಾರದು.
ಅಂಗುಷ್ಠಮೂಲಸ್ಯ ತಳೇ ಬ್ರಾಹ್ಮಂ ತೀರ್ಥಮುದಾಹೃತಮ್ |
ಕನಿಷ್ಠಿಕಾಯಾಃ ಪಶ್ಚಾತ್ ತು ದೇವತೀರ್ಥಮಿಹೋಚ್ಯತೇ ॥96॥
ಬಲಗೈ ಹೆಬ್ಬೆಟ್ಟಿನ ಮೂಲದಲ್ಲಿ ಬ್ರಾಹ್ಮತೀರ್ಥವಿದೆ. ಕಿರುಬೆರಳಿನ ಹಿಂಭಾಗದಲ್ಲಿ ಅಥವಾ ಅನಂತರದಲ್ಲಿ ದೇವತೀರ್ಥವಿದೆ (ಇದನ್ನು ಋಷಿತೀರ್ಥವೆಂದೂ ಹೇಳುವುದುಂಟು).
ಅಂಗುಷ್ಠಸ್ಯ ಚ ಯನ್ಮಧ್ಯಂ ಪ್ರದೇಶಿನ್ಯಾಶ್ಚ ಭಾರತ |
ತೇನ ಪಿತ್ರ್ಯಾಣಿ ಕುರ್ವೀತ ಸ್ಪೃಷ್ಟ್ವಾಪೋ ನ್ಯಾಯತಸ್ತಥಾ ॥97॥
ಎಲೈ ಭಾರತನೇ, ಅಂಗುಷ್ಠ ಮತ್ತು ತೋರು ಬೆರಳುಗಳ ಮಧ್ಯದಲ್ಲಿ, ಹಸ್ತತಳದಲ್ಲಿ ಪಿತೃತೀರ್ಥವಿದೆ. ಆ ಪಿತೃತೀರ್ಥದಿಂದಲೇ ಶಾಸ್ತ್ರಸಮ್ಮತವಾದ ರೀತಿಯಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಡಬೇಕು.
ಪರಾಪವಾದಂ ನ ಬ್ರೂಯಾನ್ನಾಪ್ರಿಯಂ ಚ ಕದಾಚನ |
ನ ಮನ್ಯುಃ ಕಶ್ಚಿದುತ್ಪಾದ್ಯಃ ಪುರುಷೇಣ ಭವಾರ್ಥಿನಾ ॥98॥
ಕಲ್ಯಾಣವನ್ನು ಬಯಸುವ ಪುರುಷನು ಇನ್ನೊಬ್ಬರನ್ನು ನಿಂದಿಸಬಾರದು. ಇನ್ನೊಬ್ಬರಿಗೆ ಅಪ್ರಿಯವಾದುದನ್ನು ಮಾತನಾಡಬಾರದು. ಕೋಪವನ್ನು ತಂದುಕೊಳ್ಳಬಾರದು.
ಪತಿತೈಸ್ತು ಕಥಾಂ ನೇಚ್ಛೇದ್ ದರ್ಶನಂ ಚಾಪಿ ವರ್ಜಯೇತ್ |
ಸಂಸರ್ಗಂ ಚ ನ ಗಚ್ಛೇತ ತಥಾಯುರ್ವಿಂದತೇ ಮಹತ್ ॥99॥

ಪತಿತರ ಜೊತೆಯಲ್ಲಿ ಮಾತನಾಡಬಾರದು. ಅವರ ದರ್ಶನವನ್ನೂ ವರ್ಜಿಸಬೇಕು. ಅವರ ಸಹವಾಸವನ್ನು ಹೊಂದಬಾರದು. ಹಾಗೆ ಮಾಡಿದರೆ ಆಯುಸ್ಸು ವೃದ್ಧಿಯನ್ನು ಹೊಂದುತ್ತದೆ.
ನ ದಿವಾ ಮೈಥುನಂ ಗಚ್ಛೇನ್ನ ಕನ್ಯಾಂ ನ ಚ ಬಂಧಕೀಮ್ |
ನ ಚಾಸ್ನಾತಾಂ ಸ್ತ್ರಿಯಂ ಗಚ್ಛೇತ್ ತಥಾಯುರ್ವಿಂದತೇ ಮಹತ್ ||
ಹಗಲಿನಲ್ಲಿ ಮೈಥುನವನ್ನು ಮಾಡಬಾರದು. ಕನ್ಯೆಯ ಅಥವಾ ವ್ಯಭಿಚಾರಿಣಿಯ ಜೊತೆಯಲ್ಲಿ ಮೈಥುನವನ್ನು ಮಾಡಬಾರದು. ಸ್ನಾನವನ್ನು ಮಾಡದಿದ್ದ ಸ್ತ್ರೀಯ ಜೊತೆಯಲ್ಲಿ ಮೈಥುನವನ್ನು ಮಾಡಬಾರದು. ಅದರಿಂದ ದೀರ್ಘಾಯುಷ್ಯವನ್ನು ಹೊಂದುತ್ತಾನೆ.
ಸ್ವೇ ಸ್ವೇ ತೀರ್ಥೇ ಸಮಾಚಮ್ಯ ಕಾರ್ಯೇ ಸಮುಪಕಲ್ಪಿತೇ |
ತ್ರಿಃ ಪೀತ್ವಾಪೋ ದ್ವಿಃ ಪ್ರಮೃಜ್ಯ ಕೃತಶೌಚೋ ಭವೇನ್ನರಃ ||101||
ತಮ್ಮ ತಮ್ಮ ಪಾತ್ರೆಯಲ್ಲಿದ್ದ ಜಲದಿಂದ ಆಚಮನವನ್ನು ಮಾಡಿ ಕಾರ್ಯಗಳನ್ನು ಮಾಡಬೇಕು. ಮೂರು ಬಾರಿ ನೀರನ್ನು ಕುಡಿದು, ಎರಡು ಬಾರಿ ಕೈಗಳನ್ನು ಒರೆಸಿಕೊಂಡರೆ ಮನುಷ್ಯನು ಶುಚಿಯಾಗುತ್ತಾನೆ.
ಇಂದ್ರಿಯಾಣಿ ಸಕೃತ್ ಸ್ಪೃಶ್ಯ ತ್ರಿರಭ್ಯುಕ್ಷ್ಯ ಚ ಮಾನವಃ |
ಕುರ್ವೀತ ಪಿತ್ರ್ಯಂ ದೈವಂ ಚ ವೇದದೃಷ್ಟೇನ ಕರ್ಮಣಾ ||102||
ಇಂದ್ರಿಯಗಳನ್ನು ಒಂದೊಂದು ಬಾರಿ ಸ್ಪರ್ಶ ಮಾಡಿ, ಮೂರು ಬಾರಿ ಜಲಸಿಂಚನೆಯನ್ನು ಮಾಡಿ ವೇದದೃಷ್ಟ ವಿಧಾನದಿಂದ ಮನುಷ್ಯನು ಪಿತೃ ಕಾರ್ಯವನ್ನು ಮತ್ತು ದೇವಕಾರ್ಯವನ್ನು ಮಾಡಬೇಕು.
ಬ್ರಾಹ್ಮಣಾರ್ಥೇ ಚ ಯಚ್ಛೌಚಂ ತಚ್ಚ ಮೇ ಶೃಣು ಕೌರವ |
ಪ್ರವೃತ್ತಂ ಚ ಹಿತಂ ಚೋಕ್ತತ್ವ ಭೋಜನಾದ್ಯಂತಯೋಸ್ತಥಾ ||103||
ಎಲೈ ಕೌರವನೇ, ಬ್ರಾಹ್ಮಣರ ಭೋಜನದ ಸಲುವಾಗಿ ಭೋಜನದ ಮೊದಲಿನಲ್ಲಿ ಮತ್ತು ಕೊನೆಯಲ್ಲಿ ಪ್ರವೃತ್ತವಾಗುವ, ಹಿತವಾದ ವಿಧಿಗಳನ್ನು ಕೇಳುವವನಾಗು.
ಸರ್ವಶೌಚೇಷು ಬ್ರಾಹ್ಮೇಣ ತೀರ್ಥೇನ ಸಮುಪಸ್ಪೃಶೇತ್ |
ನಿಷ್ಠೀವ್ಯ ತು ತಥಾ ಕ್ಷುತ್ವಾ ಸ್ಪೃಶ್ಯಾಪೋ ಹಿ ಶುಚಿರ್ಭವೇತ್ ||104||
ಎಲ್ಲ ಶೌಚಕಾರ್ಯಗಳಲ್ಲಿಯೂ ಹಿಂದೆ ಹೇಳಿದ ಬ್ರಾಹ್ಮತೀರ್ಥದಿಂದಲೇ ಜಲ ಸ್ಪರ್ಶವನ್ನು ಮಾಡಬೇಕು. ಉಗುಳಿದರೆ ಮತ್ತು ಸೀನಿದರೆ ಜಲಸ್ಪರ್ಶವನ್ನು ಮಾಡಿ ಶುದ್ಧನಾಗುತ್ತಾನೆ.
ವೃದ್ಧೋ ಜ್ಞಾತಿಸ್ತಥಾ ಮಿತ್ರಂ ದರಿದ್ರೋ ಯೋ ಭವೇದಪಿ |
ಗೃಹೇ ವಾಸಯಿತವ್ಯಾಸ್ತೇ ಧನ್ಯಮಾಯುಷ್ಯಮೇವ ಚ ||105||
ವೃದ್ಧನಾದವನು, ಜ್ಞಾತಿಯಾದವನು, ಮಿತ್ರನಾದವನು ಮತ್ತು ದರಿದ್ರನಾದವನು ಯಾವನಿದ್ದಾನೆಯೋ ಅವನನ್ನು ನಿನ್ನ ಮನೆಯಲ್ಲಿ ಇಟ್ಟುಕೊಳ್ಳಬೇಕು. ಅದು ಧನಪ್ರದವಾದುದು ಮತ್ತು ಆಯುಃಪ್ರದವಾದುದು.
ಗೃಹೇ ಪಾರಾವತಾ ಧನ್ಯಾಃ ಶುಕಾಶ್ಚ ಸಹಶಾರಿಕಾಃ |
ದೇವತಾ ಪ್ರತಿಮಾದರ್ಶಾಶ್ಚಂದನಾಃ ಪುಷ್ಪವಲ್ಲಿಕಾಃ |
ಶುದ್ಧಂ ಜಲಂ ಸುವರ್ಣಂ ಚ ರಜತಂ ಗೃಹಮಂಗಲಮ್ ||106||
ಗೃಹೇಷ್ವೇತೇ ನ ಪಾಪಾಯ ನಿವಿಷ್ಟಾಸ್ತೈಲಪಾಯಿಕಾಃ ||107||
ಮನೆಯಲ್ಲಿ ಪಾರಿವಾಳಗಳು, ಗಿಣಿಗಳು ಮತ್ತು ಮೈನಾ ಹಕ್ಕಿಗಳು, ದೇವತಾ ಪ್ರತಿಮೆಗಳು, ಕನ್ನಡಿ, ಗಂಧ, ಹೂಬಳ್ಳಿಗಳು, ಶುದ್ಧವಾದ ಜಲ, ಚಿನ್ನ, ಬೆಳ್ಳಿ ಎಲ್ಲವೂ ಶುಭವಾದವುಗಳು ಮತ್ತು ಮಂಗಳಪ್ರದವಾದವುಗಳು. ಮೈನಾ ಹಕ್ಕಿ (ಹೆಣ್ಣು ಗಿಳಿ) ಇವುಗಳು ಅಥವಾ ಹೆಣ್ಣು ಸಾರಸ ಪಕ್ಷಿಗಳು ಮನೆಯಲ್ಲಿ ಇದ್ದರೆ ಯಾವ ಅನಿಷ್ಟವೂ ಉಂಟಾಗುವುದಿಲ್ಲ (ಲಕ್ಷ್ಮಾಲಂಕಾರ).
ಉಪದೀಪಾಶ್ಚ ಗೃಧ್ರಾಶ್ಚ ಕಪೋತಾ ಭ್ರಮರಾಸ್ತಥಾ |
ನಿವಿಶೇಯುರ್ಯದಾ ತತ್ರ ಶಾಂತಿಹೋಮಂ ಸಮಾಚರೇತ್ ||108||
ಪತಂಗಗಳು, ಹದ್ದುಗಳು, ಬಾವಲಿಗಳು, ದುಂಬಿಗಳು ಮನೆಯನ್ನು ಪ್ರವೇಶಿಸಿದರೆ ಶಾಂತಿಹೋಮವನ್ನು ಮಾಡಬೇಕು (ಲಕ್ಷ್ಮಾಲಂಕಾರ).

ಅಮಂಗಲ್ಯಾನಿ ಚೈತಾನಿ ತಥಾಕ್ರೋಶೋ ಮಹಾತ್ಮನಾಮ್ |
ಮಹಾತ್ಮನಾಂ ಚ ಗುಹ್ಯಾನಿ ನ ವಕ್ತವ್ಯಾನಿ ಕರ್ಹಿಚಿತ್ ||109||
ಇವುಗಳು ಅಮಂಗಳವಾದವುಗಳು. ಹಾಗೆಯೇ ಮಹಾತ್ಮರನ್ನು ಕಿರುಚಿ ನಿಂದಿಸುವುದು ಅಮಂಗಳವಾದುದು. ದೊಡ್ಡವರಿಗೆ ಸಂಬಂಧಿಸಿದ ರಹಸ್ಯಗಳನ್ನು ಯಾವ ಕಾರಣದಿಂದಲೂ ಹೇಳಬಾರದು.
ಅಗಮ್ಯಾಶ್ಚ ನ ಗಚ್ಛೇತ ರಾಜಪತ್ನೀಃ ಸಖೀಸ್ತಥಾ |
ವೈದ್ಯಾನಾಂ ಬಾಲವೃದ್ಧಾನಾಂ ಭೃತ್ಯಾನಾಂ ಚ ಯುಧಿಷ್ಠಿರ ||110||
ಎಲೈ ಯುಧಿಷ್ಠಿರನೇ, ಅಗಮ್ಯರಾದ ರಾಜಪತ್ನಿಯರ, ಸ್ನೇಹಿತೆಯರ, ವೈದ್ಯರ, ಬಾಲರ, ವೃದ್ಧರ, ಭೃತ್ಯರ ಸ್ತ್ರೀಯರು - ಇವರ ಸಂಗವನ್ನು ಮಾಡಬಾರದು.
ಬಂಧೂನಾಂ ಬ್ರಾಹ್ಮಣಾನಾಂ ಚ ತಥಾ ಶಾರಣಿಕಸ್ಯ ಚ |
ಸಂಬಂಧಿನಾಂ ಚ ರಾಜೇಂದ್ರ ತಥಾಯುರ್ವಿಂದತೇ ಮಹತ್ ||111||
ಎಲೈ ರಾಜೇಂದ್ರನೇ, ಬಂಧುಗಳ, ಬ್ರಾಹ್ಮಣರ, ಶರಣಾಗತರಾದವರ, ಸಂಬಂಧಿಗಳ ಸ್ತ್ರೀಯರನ್ನು ಸ್ಪರ್ಶಿಸಬಾರದು. ಆ ರೀತಿ ಮಾಡಿ ದೀರ್ಘಾಯುಷ್ಯ- ವನ್ನು ಹೊಂದುತ್ತಾನೆ.
ಬ್ರಾಹ್ಮಣಸ್ಥಪತಿಭ್ಯಾಂ ಚ ನಿರ್ಮಿತಂ ಯನ್ನಿವೇಶನಮ್ |

ತದಾವಸೇತ್ ಸದಾ ಪ್ರಾಜ್ಞೋ ಭವಾರ್ಥೀ ಮನುಜೇಶ್ವರ ॥112॥
ಎಲೈ ಮನುಜೇಶ್ವರನೇ, ಕಲ್ಯಾಣವನ್ನು ಬಯಸುವ ಪ್ರಾಜ್ಞನಾದವನು ಬ್ರಾಹ್ಮಣರಿಂದ ಶುದ್ಧಿಮಾಡಲ್ಪಟ್ಟು, ಬಡಗಿಯಿಂದ ನಿರ್ಮಿತವಾದ ಗೃಹದಲ್ಲಿ ವಾಸವನ್ನು ಮಾಡಬೇಕು.
ಸಂಧ್ಯಾಯಾಂ ನ ಸ್ವಪೇದ್ ರಾಜನ್ ವಿದ್ಯಾಂ ನ ಚ ಸಮಾಚರೇತ್ |
ನ ಭುಂಜೀತ ಚ ಮೇಧಾವೀ ತಥಾಯುರ್ವಿಂದತೇ ಮಹತ್ ॥113॥
ಎಲೈ ರಾಜನೇ, ಸಂಧ್ಯಾಕಾಲದಲ್ಲಿ ನಿದ್ರೆಯನ್ನು ಮಾಡಬಾರದು. ವಿದ್ಯಾಭ್ಯಾಸವನ್ನು ಮಾಡಬಾರದು. ಮೇಧಾವಿಯಾದವನು ಆಗ ಏನನ್ನೂ ತಿನ್ನಬಾರದು. ಅದರಿಂದ ದೀರ್ಘಾಯುಸ್ಸನ್ನು ಹೊಂದುತ್ತಾನೆ.
ನಕ್ತಂ ನ ಕುರ್ಯಾತ್ಪಿತ್ರ್ಯಾಣಿ ರಾತ್ರಿರನ್ಯತ್ರ ದರ್ಶನಮ್ |
ಪಾನೀಯಸ್ಯ ಕ್ರಿಯಾ ನಕ್ತಂ ನ ಕಾರ್ಯಾ ಭೂತಿಮಿಚ್ಛತಾ ॥114॥
ರಾತ್ರಿಯ ವೇಳೆಯಲ್ಲಿ ದರ್ಶನವನ್ನು ಬಿಟ್ಟು ಬೇರೆ ಪಿತೃಕಾರ್ಯವನ್ನು ಮಾಡಬಾರದು. ಐಶ್ವರ್ಯವನ್ನು ಪಡೆಯಲು ಬಯಸುವವನು ರಾತ್ರಿಯ ವೇಳೆಯಲ್ಲಿ ವಿಶೇಷ ಪಾನೀಯಾದಿಗಳನ್ನು ಸ್ವೀಕರಿಸಬಾರದು.
ವರ್ಜನೀಯಾಶ್ಚ ವೈ ನಿತ್ಯಂ ಸಕ್ತವೋ ನಿಶಿ ಭಾರತ |
ಶೇಷಾಣಿ ಚಾವದಾತಾನಿ ಪಾನೀಯಂ ಚೈವ ಭೋಜನೇ ॥115॥
ಎಲೈ ಭಾರತನೇ, ರಾತ್ರಿಯ ವೇಳೆಯಲ್ಲಿ ಸಕ್ತುಗಳನ್ನು (ಹಿಟ್ಟುಗಳನ್ನು) ಯಾವಾಗಲೂ ವರ್ಜಿಸಬೇಕು. ಭೋಜನ ವಿಷಯದಲ್ಲಿ ಬ್ರಾಹ್ಮಣರಿಗೆ ಅನ್ನದಾನವನ್ನು ಮಾಡಿ ಉಳಿದ ಶೇಷವೂ ಮತ್ತು ಪಾನೀಯವೂ ಶುದ್ಧವಾದವುಗಳು.
ಸೌಹಿತ್ಯಂ ಚ ನ ಕರ್ತವ್ಯಂ ರಾತ್ರೌ ಚ ಮನಸಾಚರೇತ್ |
ದ್ವಿಜಚ್ಛೇದಂ ನ ಕುರ್ವೀತ ಭುಕತ್ವ ನ ಚ ಸಮಾಚರೇತ್ ॥116॥
ರಾತ್ರಿಯ ವೇಳೆಯಲ್ಲಿ ಪಿತೃತರ್ಪಣವನ್ನು ಕೊಡಬಾರದು. ಹಲ್ಲುಗಳನ್ನು ಕೀಳಬಾರದು. ಊಟವನ್ನು ಮಾಡಿ ಅನಂತರ ತರ್ಪಣಾದಿಗಳನ್ನು ಕೊಡಬಾರದು.
ಮಹಾಕುಲಪ್ರಸೂತಾಂ ಚ ಪ್ರಶಸ್ತಾಂ ಲಕ್ಷಣೈಸ್ತಥಾ |
ವಯಃಸ್ಥಾಂ ಚ ಮಹಾಪ್ರಾಜ್ಞ ಕನ್ಯಾಮಾವೋಢುಮರ್ಹತಿ ॥117॥
ಎಲೈ ಮಹಾಪ್ರಾಜ್ಞನೇ, ಮಹಾಕುಲದಲ್ಲಿ ಜನಿಸಿದ, ಪ್ರಶಸ್ತಳಾದ, ಶುಭಲಕ್ಷಣಗಳಿಂದ ಕೂಡಿದ, ಒಳ್ಳೆಯ ವಯಸ್ಸಿನ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕು.
ಅಪತ್ಯಮುತ್ಪಾದ್ಯ ತತಃ ಪ್ರತಿಷ್ಠಾಪ್ಯ ಕುಲಂ ತಥಾ |
ಪುತ್ರಾಃ ಪ್ರದೇಯಾ ಜ್ಞಾನೇಷು ಕುಲಧರ್ಮೇಷು ಭಾರತ ॥118॥
ಎಲೈ ಭಾರತನೇ, ಅವಳಿಂದ ಮಕ್ಕಳನ್ನು ಪಡೆದು, ಕುಲವನ್ನು ಪ್ರತಿಷ್ಠಾಪಿಸಿ, ಪುತ್ರರನ್ನು ಜ್ಞಾನಮಾರ್ಗದಲ್ಲಿ ಮತ್ತು ಕುಲಧರ್ಮಗಳಲ್ಲಿ ತೊಡಗಿಸಬೇಕು.
ಕನ್ಯಾ ಚೋತ್ಪಾದ್ಯ ದಾತವ್ಯಾ ಕುಲಪುತ್ರಾಯ ಧೀಮತೇ |
ಪುತ್ರಾ ನಿವೇಶ್ಯಾಶ್ಚ ಕುಲಾದ್ಭೃತ್ಯಾ ಲಭ್ಯಾಶ್ಚ ಶಿಕ್ಷಿತಾಃ ॥119॥
ಜನಿಸಿದ ಪುತ್ರಿಯರನ್ನು ಸತ್ಕುಲ ಪ್ರಸೂತನಾದ, ಮೇಧಾವಿಯಾದವನಿಗೆ ದಾನ ಮಾಡಬೇಕು. ಪುತ್ರರಿಗೂ ಒಳ್ಳೆಯ ಕುಲದಿಂದ ಕನ್ಯೆಯರನ್ನು ತಂದು ವಿವಾಹವನ್ನು ಮಾಡಬೇಕು. ಒಳ್ಳೆಯ ನಡತೆಯುಳ್ಳ ಭೃತ್ಯರನ್ನು ಸಂಪಾದಿಸಬೇಕು.
ಶಿರಃಸ್ನಾತೋಽಥ ಕುರ್ವೀತ ದೈವಂ ಪಿತ್ರ್ಯಮಥಾಪಿ ಚ |
ನಕ್ಷತ್ರೇ ನ ಚ ಕುರ್ವೀತ ಯಸ್ಮಿನ್ ಜಾತೋ ಭವೇನ್ನರಃ |
ನ ಪ್ರೋಷ್ಠಪದಯೋಃ ಕಾರ್ಯಂ ತಥಾಗ್ನೇಯೇ ಚ ಭಾರತ ॥120॥
ಎಲೈ ಭಾರತನೇ, ದೇವಕಾರ್ಯ ಅಥವಾ ಪಿತೃಕಾರ್ಯವನ್ನು ಶಿರಃಸ್ನಾನವನ್ನು ಮಾಡಿ ಆಚರಿಸಬೇಕು. ತನ್ನ ಜನ್ಮ ನಕ್ಷತ್ರದಲ್ಲಿ ಮನುಷ್ಯನು ಶುಭಕಾರ್ಯವನ್ನು ಮಾಡಬಾರದು. ಹಾಗೆಯೇ ಪೂರ್ವಾಭಾದ್ರ ಮತ್ತು ಉತ್ತರಾಭಾದ್ರ ನಕ್ಷತ್ರದಲ್ಲಿಯೂ ಮತ್ತು ಕೃತ್ತಿಕಾ ನಕ್ಷತ್ರದಲ್ಲಿಯೂ ಶುಭಕಾರ್ಯವು ಪ್ರಶಸ್ತವಲ್ಲ.
ದಾರುಣೇಷು ಚ ಸರ್ವೇಷು ಪ್ರತ್ಯಾರಂಭಂ ವಿವರ್ಜಯೇತ್ |
ಜ್ಯೌತಿಷೇ ಯಾನಿ ಚೋಕ್ತಾನಿ ಸರ್ವಾಣಿ ಪರಿವರ್ಜಯೇತ್ ॥121॥
ದಾರುಣವಾದ ಎಲ್ಲಾ ಕಾಲಗಳಲ್ಲಿಯೂ ಶುಭಕರ್ಮವನ್ನು ಆರಂಭಿಸಬಾರದು. ಜ್ಯೌತಿಷ ಶಾಸ್ತ್ರದಲ್ಲಿ ನಿಷಿದ್ಧವಾದ ಕಾಲಗಳನ್ನು ಬಿಡಬೇಕು.
ಪ್ರಾಙ್ಮುಖಃ ಶ್ಮಶ್ರುಕರ್ಮಾಣಿ ಕಾರಯೇತ ಸಮಾಹಿತಃ |
ಉದಙ್ಮುಖೋ ವಾ ರಾಜೇಂದ್ರ ತಥಾಯುರ್ವಿಂದತೇ ಮಹತ್ ॥122॥
ಎಲೈ ರಾಜೇಂದ್ರನೇ, ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕುಳಿತು ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಅದರಿಂದ ಆಯುಸ್ಸು ವೃದ್ಧಿಯನ್ನು ಹೊಂದುತ್ತದೆ.
ಪರಿವಾದಂ ನ ಚ ಬ್ರೂಯಾತ್ ಪರೇಷಾಮಾತ್ಮನಸ್ತಥಾ |
ಪರಿವಾದೋ ನ ಧರ್ಮಾಯ ಪ್ರೋಚ್ಯತೇ ಭರತರ್ಷಭ ॥123॥
ಎಲೈ ಭರತಶ್ರೇಷ್ಠನೇ, ತನ್ನನ್ನಾಗಲೀ, ಇನ್ನೊಬ್ಬನನ್ನಾಗಲೀ ನಿಂದಿಸಬಾರದು. ನಿಂದೆಯು ಎಂದೂ ಧರ್ಮವನ್ನು ಉಂಟುಮಾಡುವುದಿಲ್ಲ.
ವರ್ಜಯೇದ್ವ್ಯಂಗಿನೀಂ ನಾರೀಂ ತಥಾ ಕನ್ಯಾಂ ನರೋತ್ತಮ |

ಸಮಾರ್ಷಾಂ ವ್ಯಂಗಿತಾಂ ಚೈವ ಮಾತುಃ ಸ್ವಕುಲಜಾಂ ತಥಾ ॥124॥
ವೃದ್ಧಾಂ ಪ್ರವ್ರಜಿತಾಂ ಚೈವ ತಥೈವ ಚ ಪತಿವ್ರತಾಮ್ |
ತಥಾತಿಕೃಷ್ಣವರ್ಣಾಂ ಚ ವರ್ಣೋತ್ಕೃಷ್ಟಾಂ ಚ ವರ್ಜಯೇತ್ ॥125॥
ಎಲೈ ನರೋತ್ತಮನೇ, ಅಂಗವಿಕಲರಾದ ಸ್ತ್ರೀಯನ್ನು ಅಥವಾ ಕನ್ಯೆಯನ್ನು ಅಥವಾ ಸಮಾನ ಪ್ರವರದವಳನ್ನು, ಮಾತೃಕುಲದವಳನ್ನು, ತನ್ನ ಕುಲದವಳನ್ನು, ವೃದ್ಧಳಾದವಳನ್ನು, ಸಂನ್ಯಾಸಿನಿಯಾದವಳನ್ನು, ಪತಿವ್ರತೆಯಾದವಳನ್ನು, ಅತಿ ಕಪ್ಪು ಬಣ್ಣದವಳನ್ನು ಮತ್ತು ತನಗಿಂತ ಉತ್ತಮ ವರ್ಣದವಳನ್ನು ವರ್ಜಿಸಬೇಕು.
ಅಯೋನಿಂ ಚ ವಿಯೋನಿಂ ಚ ನ ಗಚ್ಛೇತ ವಿಚಕ್ಷಣಃ |
ಪಿಂಗಲಾಂ ಕುಷ್ಠಿನೀಂ ನಾರೀಂ ನ ತ್ವಮಾವೋಢುಮರ್ಹಸಿ ॥126॥
ವಿಚಕ್ಷಣನಾದವನು ಅಯೋನಿಜೆಯಾದ ಅಥವಾ ವಿರುದ್ಧ ಯೋನಿಯಲ್ಲಿ ಜನಿಸಿದವಳ ಸಮಾಗಮವನ್ನು ಮಾಡಬಾರದು. ಇನ್ನು ಪಿಂಗಳೆ (ಬೂದುವರ್ಣ) ಯನ್ನು, ಕುಷ್ಠ ರೋಗ ಹೊಂದಿದವಳನ್ನು ವಿವಾಹ ಮಾಡಿಕೊಳ್ಳಬಾರದು.
ಅಪಸ್ಮಾರಿಕುಲೇ ಜಾತಾಂ ನಿಹೀನಾಂ ಚೈವ ವರ್ಜಯೇತ್ |
ಶ್ವಿತ್ರಿಣಾಂ ಚ ಕುಲೇ ಜಾತಾಂ ಕ್ಷಯಿಣಾಂ ಮನುಜೇಶ್ವರ ॥127॥
ಎಲೈ ಮನುಜೇಶ್ವರನೇ, ಅಪಸ್ಮಾರರೋಗವನ್ನು ಹೊಂದಿರುವ ಕುಲದಲ್ಲಿ ಜನಿಸಿರುವ ಅಥವಾ ಹೀನ ಜಾತಿಗೆ ಸೇರಿದ ಅಥವಾ ತೊನ್ನು ರೋಗ ಅಥವಾ ಕ್ಷಯ ರೋಗವನ್ನು ಹೊಂದಿದ ಕುಲದಲ್ಲಿ ಜನಿಸಿದ ಸ್ತ್ರೀಯನ್ನು ವಿವಾಹವಾಗಬಾರದು.
ಲಕ್ಷಣೈರನ್ವಿತಾ ಯಾ ಚ ಪ್ರಶಸ್ತಾ ಯಾ ಚ ಲಕ್ಷಣೈಃ |
ಮನೋಜ್ಞಾ ದರ್ಶನೀಯಾ ಚ ತಾಂ ವೈ ವೋಢುಮಿಹಾರ್ಹತಿ ॥128॥
ಯಾವಳು ಪ್ರಶಸ್ತವಾದ ಲಕ್ಷಣಗಳಿಂದ ಕೂಡಿರುತ್ತಾಳೆಯೋ, ಮನೋಹರಳೂ ಮತ್ತು ಸುಂದರಿಯಾಗಿರುತ್ತಾಳೆಯೋ ಅಂತಹವಳನ್ನು ಮದುವೆ ಮಾಡಿಕೊಳ್ಳಬೇಕು.
ಮಹಾಕುಲೇ ನಿವೇಷ್ಟವ್ಯಂ ಸದೃಶೇ ವಾ ಯುಧಿಷ್ಠಿರ |
ಅವರಾ ಪತಿತಾ ಚೈವ ನ ಗ್ರಾಹ್ಯಾ ಭೂತಿಮಿಚ್ಛತಾ ॥129॥
ಎಲೈ ಯುಧಿಷ್ಠಿರನೇ, ಪುತ್ರಿಯನ್ನು ಸದೃಶವಾದ ಮಹಾಕುಲಕ್ಕೆ ಕೊಟ್ಟು ಮದುವೆ ಮಾಡಬೇಕು. ಪತಿತಳೂ, ನೀಚಳೂ ಆದವಳನ್ನು ಕಲ್ಯಾಣವನ್ನು ಬಯಸುವವನು ಮದುವೆ ಮಾಡಿಕೊಳ್ಳಬಾರದು (ಸೊಸೆನ್ನಾಗಿಯೂ ತರಬಾರದು).
ಅಗ್ನೀನುತ್ಪಾದ್ಯ ಯತ್ನೇನ ಕ್ರಿಯಾಃ ಸುವಿಹಿತಾಶ್ಚ ಯಾಃ |
ವೇದೇಷು ಬ್ರಾಹ್ಮಣೈಃ ಪ್ರೋಕ್ತಾಸ್ತಾಶ್ಚ ಸರ್ವಾಃ ಸಮಾಚರೇತ್ ॥130॥
ಅಗ್ನಿಯನ್ನು ಉತ್ಪತ್ತಿ ಮಾಡಿ ವೇದಗಳಲ್ಲಿ ಹೇಳಿರುವ ಕ್ರಿಯೆಗಳನ್ನು ಬ್ರಾಹ್ಮಣರಿಂದ ಚೆನ್ನಾಗಿ ಮಾಡಿಸಿ ವಿವಾಹವಾಗಬೇಕು.
ನ ಚೇರ್ಷ್ಯಾ ಸ್ತ್ರೀಷು ಕರ್ತವ್ಯಾ ದಾರಾ ರಕ್ಷ್ಯಾಶ್ಚ ಸರ್ವಶಃ |
ಅನಾಯುಷ್ಯಾ ಭವೇದೀರ್ಷ್ಯಾ ತಸ್ಮಾದೀರ್ಷ್ಯಾಂ ವಿವರ್ಜಯೇತ್ ॥
ಸ್ತ್ರೀಯರಲ್ಲಿ ಅಸೂಯೆಯನ್ನು ಮಾಡಬಾರದು. ಪತ್ನಿಯರನ್ನು ಎಲ್ಲ ರೀತಿಯಿಂದಲೂ ರಕ್ಷಿಸಬೇಕು. ಈರ್ಷ್ಯೆಯು ಆಯುಸ್ಸನ್ನು ಹಾಳುಮಾಡುತ್ತದೆ. ಆದ್ದರಿಂದ ಅದನ್ನು ವರ್ಜಿಸಬೇಕು.
ಅನಾಯುಷ್ಯೋ ದಿವಾಸ್ವಪ್ನಸ್ತಥಾಭ್ಯುದಿತಶಾಯಿತಾ |
ಪ್ರಾತರ್ನಿಶಾಯಾಂ ಚ ತಥಾ ಯೇ ಚೋಚ್ಛಿಷ್ಟಾಃ ಸ್ವಪಂತಿ ವೈ ॥132॥
ಹಗಲಿನಲ್ಲಿ ಮಲಗುವುದು, ಸೂರ್ಯೋದಯವಾದ ಮೇಲೆಯೂ ಮಲಗಿರುವುದು, ಪ್ರಾತಃಕಾಲ ಮತ್ತು ಸಂಧ್ಯಾಕಾಲದಲ್ಲಿ ಅಥವಾ ರಾತ್ರಿಯಲ್ಲಿ ಉಚ್ಛಿಷ್ಟನಾಗಿ ಮಲಗಿರುವುದು ಎಲ್ಲವೂ ಆಯುಃಕ್ಷಯವನ್ನುಂಟು ಮಾಡುತ್ತದೆ.
ಪಾರದಾರ್ಯಮನಾಯುಷ್ಯಂ ನಾಪಿತೋಚ್ಛಿಷ್ಟತಾ ತಥಾ |
ಯತ್ನತೋ ವೈ ನ ಕರ್ತವ್ಯಮಭ್ಯಾಸಶ್ಚೈವ ಭಾರತ ॥133॥
ಎಲೈ ಭಾರತನೇ, ಪರಸ್ತ್ರೀ ಸಮಾಗಮವನ್ನು ಮಾಡುವುದು, ಕ್ಷೌರವನ್ನು ಮಾಡಿಸಿಕೊಂಡು ಸ್ನಾನವನ್ನು ಮಾಡದೆ ಅಶುಚಿಯಾಗಿರುವುದು, ಅಶುಚಿಯಾಗಿ ವಿದ್ಯಾಭ್ಯಾಸ ಮಾಡುವುದು ಎಲ್ಲವೂ ಆಯುಷ್ಯವನ್ನು ಕಳೆಯುತ್ತವೆ. ಪ್ರಯತ್ನಪಟ್ಟು ಇವುಗಳನ್ನು ತ್ಯಜಿಸಬೇಕು.
ಸಂಧ್ಯಾಂ ನ ಭುಂಜೇನ್ನ ಸ್ನಾಯಾನ್ನ ಪುರೀಷಂ ಸಮುತ್ಸೃಜೇತ್ |
ಪ್ರಯತಶ್ಚ ಭವೇತ್ ತಸ್ಯಾಂ ನ ಕಿಂಚಿತ್ ಸಮುದಾಚರೇತ್ ॥134॥
ಸಂಧ್ಯಾಕಾಲದಲ್ಲಿ ಭೋಜನವನ್ನು ಮಾಡಬಾರದು, ಸ್ನಾನವನ್ನು ಮಾಡಬಾರದು, ಮಲವಿಸರ್ಜನೆಯನ್ನು ಮಾಡಬಾರದು. ಆ ಕಾಲದಲ್ಲಿ ಮೌನವಾಗಿದ್ದು (ಸಂಧ್ಯಾ- ವಂದನೆಯನ್ನು ಬಿಟ್ಟು) ಬೇರೆ ಯಾವ ಸತ್ಕಾರ್ಯವನ್ನೂ ಮಾಡಬಾರದು.
ಬ್ರಾಹ್ಮಣಾನ್ ಪೂಜಯೇಚ್ಚಾಪಿ ತಥಾ ಸ್ನಾತ್ವಾ ನರಾಧಿಪ |
ದೇವಾಂಶ್ಚ ಪ್ರಣಮೇತ್ ಸ್ನಾತೋ ಗುರೂಂಶ್ಚಾಪ್ಯಭಿವಾದಯೇತ್ ॥
ಎಲೈ ನರಾಧಿಪನೇ, ಸ್ನಾನವನ್ನು ಮಾಡಿ ಬ್ರಾಹ್ಮಣರನ್ನು ಪೂಜಿಸಬೇಕು, ಸ್ನಾನವನ್ನು ಮಾಡಿ ದೇವತೆಗಳನ್ನು ನಮಸ್ಕಾರ ಮಾಡಬೇಕು. ಸ್ನಾನವನ್ನು ಮಾಡಿಯೇ ಗುರುಗಳಿಗೆ ನಮಸ್ಕಾರವನ್ನು ಮಾಡಬೇಕು.
ಅನಿಮಂತ್ರಿತೋ ನ ಗಚ್ಛೇತ ಯಜ್ಞಂ ಗಚ್ಛೇತ್ ತು ದರ್ಶಕಃ |
ಅನಿಮಂತ್ರಿತೇ ಹ್ಯನಾಯುಷ್ಯಂ ಗಮನಂ ತತ್ರ ಭಾರತ ॥136॥
ಎಲೈ ಭಾರತನೇ, ಆಹ್ವಾನವಿಲ್ಲದೆ ಎಲ್ಲಿಗೂ ಹೋಗಬಾರದು. ಯಜ್ಞಕ್ಕೆ ಮಾತ್ರ ದರ್ಶನದ ಸಲುವಾಗಿ ಹೋಗಬಹುದು. ಆಹ್ವಾನವಿಲ್ಲದೆ ಹೋಗುವುದು ಆಯುಸ್ಸನ್ನು ಕಳೆಯುತ್ತದೆ.

ನ ಚೈಕೇನ ಪರಿವ್ರಾಜ್ಯಂ ನ ಚೈಕೇನ ಪಥಾ ನಿಶಿ |
ಅನಾಗತಾಯಾಂ ಸಂಧ್ಯಾಯಾಂ ಪಶ್ಚಿಮಾಯಾಂ ಗೃಹೇ ವಸೇತ್ ||137|
ಒಬ್ಬನೇ ಸಂಚರಿಸಬಾರದು. ರಾತ್ರಿಯಲ್ಲಿ ಒಂದೇ ಮಾರ್ಗದಲ್ಲಿ ಒಬ್ಬನೇ ಹೋಗಬಾರದು. ಸಾಯಂಸಂಧ್ಯೆಯು ಪ್ರಾಪ್ತವಾಗುತ್ತಿರುವಾಗ ಮನೆಯಲ್ಲಿಯೇ ಇರಬೇಕು.
ಮಾತುಃ ಪಿತುರ್ಗುರೂಣಾಂ ಚ ಕಾರ್ಯಮೇವಾನುಶಾಸನಮ್ |
ಹಿತಂ ವಾಪ್ಯಹಿತಂ ವಾಪಿ ನ ವಿಚಾರ್ಯಂ ನರರ್ಷಭ ||138||
ತಂದೆಯ, ತಾಯಿಯ ಮತ್ತು ಗುರುಗಳ ಶಾಸನವನ್ನು ಪಾಲಿಸಬೇಕು. ಎಲೈ ನರರ್ಷಭನೇ, ಅದು ಹಿತವಾಗಲಿ ಅಥವಾ ಅಹಿತವಾಗಲಿ ವಿಚಾರ ಮಾಡತಕ್ಕದ್ದಲ್ಲ.
ಧನುರ್ವೇದೇ ಚ ವೇದೇ ಚ ಯತ್ನಃ ಕಾರ್ಯೋ ನರಾಧಿಪ |
ಹಸ್ತಿಪೃಷ್ಠೇಽಶ್ವಪೃಷ್ಠೇ ಚ ರಥಚರ್ಯಾಸು ಚೈವ ಹ |
ಯತ್ನವಾನ್ ಭವ ರಾಜೇಂದ್ರ ಯತ್ನವಾನ್ ಸುಖಮೇಧತೇ ||139||
ಎಲೈ ನರಾಧಿಪನೇ, ಧನುರ್ವೇದ ಮತ್ತು ವೇದಗಳನ್ನು ಅಭ್ಯಾಸ ಮಾಡಲು ಪ್ರಯತ್ನವನ್ನು ಮಾಡಬೇಕು. ಎಲೈ ರಾಜೇಂದ್ರನೇ, ಅಶ್ವಾರೋಹಣ, ಗಜಾರೋಹಣ ಮತ್ತು ರಥಚರ್ಯೆಗಳಲ್ಲಿ ಪ್ರಯತ್ನವನ್ನು ಮಾಡುವವನು ಸುಖವನ್ನು ಹೊಂದುತ್ತಾನೆ.
ಅಪ್ರಧೃಷ್ಯಶ್ಚ ಶತ್ರೂಣಾಂ ಭೃತ್ಯಾನಾಂ ಸ್ವಜನಸ್ಯ ಚ |
ಪ್ರಜಾಪಾಲನಯುಕ್ತಶ್ಚ ನ ಕ್ಷತಿಂ ಲಭತೇ ಕ್ವಚಿತ್ ||140||
ಅಂತಹವನು ಶತ್ರುಗಳಿಂದ ಸೋಲಿಸಲ್ಪಡುವುದಿಲ್ಲ. ಭೃತ್ಯರಿಂದಲೂ, ಸ್ವಜನರಿಂದಲೂ ಅವಮಾನಗೊಳಿಸಲ್ಪಡುವುದಿಲ್ಲ. ಪ್ರಜಾಪಾಲನೆಯಿಂದ ಯುಕ್ತನಾದ ಅವನು ಯಾವ ಹಾನಿಯನ್ನೂ ಹೊಂದುವುದಿಲ್ಲ.
ಯುಕ್ತಿಶಾಸ್ತ್ರಂ ಚ ತೇ ಜ್ಞೇಯಂ ಶಬ್ದಶಾಸ್ತ್ರಂ ಚ ಭಾರತ |
ಗಂಧರ್ವಶಾಸ್ತ್ರಂ ಚ ಕಲಾಃ ಪರಿಜ್ಞೇಯಾ ನರಾಧಿಪ ||141||
ಎಲೈ ಭಾರತನೇ, ನೀನು ಯುಕ್ತಿಶಾಸ್ತ್ರವನ್ನು, ಶಬ್ದಶಾಸ್ತ್ರವನ್ನು ಅಭ್ಯಾಸ ಮಾಡಬೇಕು. ಎಲೈ ನರಾಧಿಪನೇ, ಗಂಧರ್ವಶಾಸ್ತ್ರ, ಮೊದಲಾದ ಕಲಾವಿದ್ಯೆಗಳನ್ನೂ ತಿಳಿಯಬೇಕು.
ಪುರಾಣಮಿತಿಹಾಸಾಶ್ಚ ತಥಾಖ್ಯಾನಾನಿ ಯಾನಿ ಚ |
ಮಹಾತ್ಮನಾಂ ಚ ಚರಿತಂ ಶ್ರೋತವ್ಯಂ ನಿತ್ಯಮೇವ ತೇ ||142||
ಪುರಾಣಗಳು, ಇತಿಹಾಸಗಳು, ಆಖ್ಯಾನಗಳು, ಮಹಾತ್ಮರ ಚರಿತ್ರೆಗಳು ಇವುಗಳನ್ನು ನಿತ್ಯವೂ ಕೇಳಬೇಕು.
ಮಾನ್ಯಾನಾಂ ಮಾನನಂ ಕುರ್ಯಾನ್ನಿಂದ್ಯಾನಾಂ ನಿಂದನಂ ತಥಾ |
ಗೋಬ್ರಾಹ್ಮಣಾರ್ಥೇ ಯುಧ್ಯೇತ ಪ್ರಾಣಾನಪಿ ಪರಿತ್ಯಜೇತ್ ||143||
ಮಾನ್ಯರಾದವರನ್ನು ಸನ್ಮಾನಿಸಬೇಕು. ನಿಂದನೀಯರಾದವರನ್ನು ನಿಂದಿಸಬೇಕು. ಗೋ-ಬ್ರಾಹ್ಮಣರ ಸಲುವಾಗಿ ಯುದ್ಧವನ್ನು ಮಾಡಬೇಕು. ಪ್ರಾಣಗಳನ್ನೂ ಬಿಡಬೇಕು.
ನ ಸ್ತ್ರೀಷು ಸಜ್ಜೇದ್ ದೃಷ್ಟವ್ಯಂ ಶಕ್ತ್ಯಾ ದಾನರುಚಿರ್ಭವೇತ್ |
ನ ಬ್ರಾಹ್ಮಣಾನ್ ಪರಿಭವೇತ್ ಕಾರ್ಪಣ್ಯಂ ಬ್ರಾಹ್ಮಣೇಷು ಚ |
ಪತಿತಾನ್ನಾಭಿಭಾಷೇತ ನಾಹ್ವಯೇತ ರಜಸ್ವಲಾಮ್||144||
ಸ್ತ್ರೀಯರಲ್ಲಿ ಬಹಳವಾಗಿ ಆಸಕ್ತನಾಗಬಾರದು. ತನ್ನ ಶಕ್ತಿಯಿದ್ದಷ್ಟು ದಾನದಲ್ಲಿ ಅಭಿರುಚಿಯನ್ನು ಹೊಂದಬೇಕು. ಬ್ರಾಹ್ಮಣರಿಗೆ ಯಾವಾಗಲೂ ಕಾರ್ಪಣ್ಯವಿರುತ್ತದೆ. ಅವರನ್ನು ಅವಮಾನಗೊಳಿಸಬಾರದು. ಪತಿತರನ್ನು ಮಾತನಾಡಿಸಬಾರದು. ರಜಸ್ವಲೆಯನ್ನು ಆಹ್ವಾನ ಮಾಡಬಾರದು.
ಪತ್ನೀಂ ರಜಸ್ವಲಾಂ ಚೈವ ನಾಭಿಗಚ್ಛೇನ್ನ ಚಾಹ್ವಯೇತ್ |
ಸ್ನಾತಾಂ ಚತುರ್ಥೇ ದಿವಸೇ ರಾತ್ರೌ ಗಚ್ಛೇದ್ವಿಚಕ್ಷಣಃ ||145||
ರಜಸ್ವಲೆಯಾದ ಪತ್ನಿಯ ಗಮನವನ್ನು ಮಾಡಬಾರದು. ಅವಳನ್ನು ಆಹ್ವಾನಿಸಿ ಮಾತನಾಡಬಾರದು. ವಿಚಕ್ಷಣನಾದವನು ಸ್ನಾನಾನಂತರದಲ್ಲಿ ನಾಲ್ಕನೆಯ ದಿವಸ ರಾತ್ರಿಯಲ್ಲಿ (ಅಂದರೆ ರಜೋದರ್ಶನವಾದ ಐದನೆಯ ದಿವಸದ ರಾತ್ರಿಯಲ್ಲಿ) ಮೈಥುನವನ್ನು ಮಾಡಬೇಕು.
ಪಂಚಮೇ ದಿವಸೇ ನಾರೀ ಷಷ್ಠೇಽಹನಿ ಪುಮಾನ್ ಭವೇತ್ |
ಏತೇನ ವಿಧಿನಾ ನಾರೀಮುಪಗಚ್ಛೇತ ಪಂಡಿತಃ |
ಆಷೋಡಶಾದೃತುರ್ಮುಖ್ಯಃ ಪುತ್ರಜನ್ಮನಿ ಶಬ್ದಿತಃ ||146||
ಐದನೆಯ ದಿವಸದಲ್ಲಿ ಕನ್ಯೆಯೂ, ಆರನೆಯ ದಿವಸದಲ್ಲಿ ಪುತ್ರನೂ ಜನಿಸುವರು. ಹದಿನಾರು ದಿವಸಗಳವರೆಗೆ ಮುಖ್ಯವಾದ ಋತುಕಾಲವೆನಿಸುತ್ತದೆ. ಆದ್ದರಿಂದ ಪಂಡಿತನಾದವನು ಈ ಕ್ರಮದಲ್ಲಿ ಪತ್ನಿಯ ಸಮಾಗಮವನ್ನು ಮಾಡಬೇಕು.
ಜ್ಞಾತಿಸಂಬಂಧಿಮಿತ್ರಾಣಿ ಪೂಜನೀಯಾನಿ ನಿತ್ಯಶಃ |
ಯಷ್ಟವ್ಯಂ ಚ ಯಥಾಶಕ್ತಿ ಯಜ್ಞೈರ್ವಿವಿಧದಕ್ಷಿಣೈಃ |
ಅತ ಊರ್ಧ್ವಮರಣ್ಯಂ ಚ ಸೇವಿತವ್ಯಂ ನರಾಧಿಪ ||147||
ದಾಯಾದಿಗಳು, ಬಂಧುಗಳು ಮತ್ತು ಮಿತ್ರರು- ಇವರನ್ನು ಯಾವಾಗಲೂ ಪೂಜಿಸಬೇಕು. ತನ್ನ ಶಕ್ತಿಗೆ ಅನುಗುಣವಾಗಿ ವಿವಿಧವಾದ ದಕ್ಷಿಣೆಗಳನ್ನು ಕೊಟ್ಟು ಯಜ್ಞವನ್ನು ಮಾಡಬೇಕು. ಎಲೈ ನರಾಧಿಪನೇ, ಅಲ್ಲಿಂದ ಮುಂದೆ ವನವಾಸವನ್ನು ಮಾಡಬೇಕು (ಅರಣ್ಯದಲ್ಲಿ ತಪಸ್ಸನ್ನು ಮಾಡಬೇಕು).

ಏಷ ತೇ ಲಕ್ಷಣೋದ್ದೇಶ ಆಯುಷ್ಯಾಣಾಂ ಪ್ರಕೀರ್ತಿತಃ |
ಶೇಷಸ್ತ್ರೈವಿದ್ಯವೃದ್ಧೇಭ್ಯಃ ಪ್ರತ್ಯಾಹಾರ್ಯೋ ಯುಧಿಷ್ಠಿರ ॥148॥
ಆಯುಃಪ್ರದವಾದ ಈ ವಿಷಯಗಳನ್ನು ಸಂಕ್ಷೇಪವಾಗಿ ನಿನಗೆ ಹೇಳಿದ್ದೇನೆ. ಎಲೈ ಯುಧಿಷ್ಠಿರನೇ, ಉಳಿದ ವಿಷಯಗಳನ್ನು ಮೂರು ವೇದಗಳನ್ನು ತಿಳಿದ ವೃದ್ಧರಿಂದ ಕೇಳಿ ಸ್ವೀಕರಿಸಬೇಕು.
ಆಚಾರೋ ಭೂತಿಜನನೋ ಹ್ಯಾಚಾರೋ ಕೀರ್ತಿವರ್ಧನಃ |
ಆಚಾರಾದ್ ವರ್ಧತೇ ಹ್ಯಾಯುರಾಚಾರೋ ಹಂತ್ಯಲಕ್ಷಣಮ್ ॥
ಆಚಾರವು ಐಶ್ವರ್ಯವನ್ನುಂಟು ಮಾಡುತ್ತದೆ, ಕೀರ್ತಿಯನ್ನು ಹೆಚ್ಚಿಸುತ್ತದೆ, ಆಯುಸ್ಸನ್ನು ಹೆಚ್ಚಿಸುತ್ತದೆ ಮತ್ತು ದುರ್ಲಕ್ಷಣಗಳನ್ನು ನಾಶ ಮಾಡುತ್ತದೆ.
ಆಗಮಾನಾಂ ಹಿ ಸರ್ವೇಷಾಮಾಚಾರಃ ಶ್ರೇಷ್ಠ ಉಚ್ಯತೇ |
ಆಚಾರಪ್ರಭವೋ ಧರ್ಮೋ ಧರ್ಮಾದಾಯುರ್ವಿವರ್ಧತೇ ॥150॥
ಎಲ್ಲಾ ಆಗಮಗಳಲ್ಲಿಯೂ ಎಲ್ಲರಿಗೂ ಆಚಾರವು ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ. ಆಚಾರದಿಂದ ಧರ್ಮವೂ ಮತ್ತು ಧರ್ಮದಿಂದ ಆಯುಸ್ಸೂ ಹೆಚ್ಚಾಗುತ್ತದೆ.
ಏತದ್ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ |
ಅನುಕಂಪತಾ ಸರ್ವವರ್ಣಾನ್ ಬ್ರಹ್ಮಣಾ ಸಮುದಾಹೃತಮ್ ॥151॥
ಸರ್ವವರ್ಣಗಳ ಮೇಲಿನ ಅನುಕಂಪೆಯಿಂದ ಬ್ರಹ್ಮದೇವರು ಕೀರ್ತಿಕರವಾದ,, ಆಯುಃಪ್ರದವಾದ, ಸ್ವರ್ಗಪ್ರದವಾದ, ಮಂಗಳಪ್ರದವಾದ ಈ ಶ್ರೇಷ್ಠವಾದ ಆಖ್ಯಾನವನ್ನು ಹೇಳಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಆಯುಷ್ಯಪ್ರಮಾಣಕಥನಂ ನಾಮ ಸಪ್ತಪಂಚಾಶದುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೆಂಟನೆಯ ಅಧ್ಯಾಯ
ಜ್ಯೇಷ್ಠ-ಕನಿಷ್ಠ ವೃತ್ತಿಗಳು
ಯುಧಿಷ್ಠಿರಃ
ಯಥಾ ಜ್ಯೇಷ್ಠಃ ಕನಿಷ್ಠೇಷು ವರ್ತತೇ ಭರತರ್ಷಭ |
ಕನಿಷ್ಠಾಶ್ಚ ಯಥಾ ಜ್ಯೇಷ್ಠೇ ವರ್ತೇರನ್ ತದ್ ಬ್ರವೀಹಿ ಮೇ ॥1॥
ಯುಧಿಷ್ಠಿರ ಎಲೈ ಭರತರ್ಷಭನೇ, ಜ್ಯೇಷ್ಠ (ಹಿರಿಯ)ನಾದವನು ತಮ್ಮಂದಿರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು? ತಮ್ಮಂದಿರೂ ಸಹ ಅಣ್ಣನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ನನಗೆ ಹೇಳು.
ಭೀಷ್ಮಃ
ಜ್ಯೇಷ್ಠವತ್ ತಾತ ವರ್ತಸ್ವ ಜ್ಯೇಷ್ಠೋ ಹಿ ಸತತಂ ಭವಾನ್ |
ಗುರೋರ್ಗರೀಯಸೀ ವೃತ್ತಿರ್ಯಾವತ್ ತುಷ್ಯೇತ ಭಾರತ ॥2॥
ಭೀಷ್ಮ ಎಲೈ ಪ್ರೀತಿಪಾತ್ರನೇ, ನೀನು ಜ್ಯೇಷ್ಠನಾಗಿದ್ದೀಯೆ. ಜ್ಯೇಷ್ಠನಂತೆಯೇ ನಡೆದುಕೊ. ಗುರುವು ತನ್ನ ಶಿಷ್ಯನು ಪ್ರೀತನಾಗುವಂತೆ ಎಂತಹ ಶ್ರೇಷ್ಠವಾದ ನಡತೆಯನ್ನು ಹೊಂದಿರುತ್ತಾನೋ ನೀನೂ ನಿನ್ನ ತಮ್ಮಂದಿರ ವಿಷಯದಲ್ಲಿ ಅಂತಹ ಶ್ರೇಷ್ಠವಾದ ನಡತೆಯನ್ನು ಹೊಂದು.
ನ ಗುರಾವಕೃತಪ್ರಜ್ಞೇ ಶಕ್ಯಂ ಶಿಷ್ಯೇಣ ವರ್ತಿತುಮ್ |
ಗುರೋರ್ಹಿ ದೀರ್ಘದರ್ಶಿತ್ವಂ ಯತ್ತಚ್ಛಿಷ್ಯಸ್ಯ ಭಾರತ ॥3॥
ಗುರುವು ಅವಿವೇಕಿಯಾಗಿದ್ದರೆ ಶಿಷ್ಯನು ಅವನನ್ನು ಅನುಸರಿಸಲು ಸಾಧ್ಯವಿಲ್ಲ. ಎಲೈ ಭಾರತನೇ, ಗುರುವಿಗೆ ದೀರ್ಘದರ್ಶಿತ್ವವಿದ್ದರೆ ಅದು ಶಿಷ್ಯನಿಗೂ ಬರುತ್ತದೆ.
ಅಂಧಃ ಸ್ಯಾದಂಧವೇಲಾಯಾಂ ಜಡಃ ಸ್ಯಾದಪಿ ವಾ ಬುಧಃ |
ಪರಿಹಾರೇಣ ತದ್ ಬ್ರೂಯಾದ್ ಯಸ್ತೇಷಾಂ ಸ್ಯಾದ್ ವ್ಯತಿಕ್ರಮಃ ॥4॥
ವಿವೇಕಿಯಾದ ಹಿರಿಯನಾದವನು ಅಂಧನಾಗಿರಬೇಕಾದಾಗ ಅಂಧನಾಗಿರಬೇಕು. ಜ್ಞಾನಿಯಾಗಿದ್ದರೂ ಜಡನಾಗಿರಬೇಕು. ತಮ್ಮಂದಿರು ಮಾಡಿದ ಅಪಚಾರವನ್ನು ನೇರವಾಗಿ ಹೇಳಬಾರದು. ಪರ್ಯಾಯ ಕ್ರಮದಿಂದ ಹೇಳಬೇಕು.
ಪ್ರತ್ಯಕ್ಷಂ ಭಿನ್ನಹೃದಯಾ ಭೇದಯೇಯುಃ ಕೃತಂ ನರಾಃ |
ಶ್ರಿಯಾಽಭಿತಪ್ತಾಃ ಕೌಂತೇಯ ಭೇದಕಾಮಾಸ್ತಥಾಽರಯಃ ॥5॥
ಎಲೈ ಕೌಂತೇಯನೇ, ಪ್ರತ್ಯಕ್ಷವಾಗಿ ಅಣ್ಣ-ತಮ್ಮಂದಿರು ಭಿನ್ನಾಭಿಪ್ರಾಯಗಳನ್ನು ಹೊಂದಿದರೆ ಅವರ ಸಂಪತ್ತನ್ನು ನೋಡಿ ಅಸೂಯೆಯನ್ನು ಪಡುತ್ತಾ ಅವರನ್ನು ಒಡೆಯಲು ಬಯಸುವ ಶತ್ರುಗಳು ಅವರನ್ನು ಒಡೆಯುತ್ತಾರೆ.
ಜ್ಯೇಷ್ಠಃ ಕುಲಂ ವರ್ಧಯತಿ ವಿನಾಶಯತಿ ವಾ ಪುನಃ |
ಹಂತಿ ಸರ್ವಮಪಿ ಜ್ಯೇಷ್ಠಃ ಪ್ರಾಯೋ ದುರ್ವಿನಯಾದಿಹ ॥6॥
ಜ್ಯೇಷ್ಠ ಪುತ್ರನು ಕುಲವನ್ನು ವರ್ಧಿಸುತ್ತಾನೆ ಅಥವಾ ನಾಶ ಮಾಡುತ್ತಾನೆ. ಅವನು ದುರ್ನಡತೆಯುಳ್ಳವನಾಗಿದ್ದರೆ ಪ್ರಾಯಶಃ ಕುಲವನ್ನೆಲ್ಲಾ ನಾಶ ಮಾಡುತ್ತಾನೆ.

ಅಥ ಯೋ ವಿನಿಕುರ್ವೀತ ಜ್ಯೇಷ್ಠೋ ಭ್ರಾತಾ ಯವೀಯಸಃ |
ಅಜ್ಯೇಷ್ಠಃ ಸ್ಯಾದಭಾಗಶ್ಚ ನಿಯಮ್ಯೋ ರಾಜಭಿಶ್ಚ ಸಃ ॥7॥
ಯಾವ ಅಣ್ಣನು ತಮ್ಮಂದಿರಿಗೆ ಅಪಕಾರವನ್ನು ಮಾಡುತ್ತಾನೆಯೋ ಅವನು ಅಣ್ಣನಲ್ಲ. ಅವನು ತಂದೆಯ ಆಸ್ತಿಯಲ್ಲಿ ಭಾಗಕ್ಕೆ ಅರ್ಹನಲ್ಲ. ಅಂತಹವನನ್ನು ರಾಜರು ದಂಡಿಸಬೇಕು.
ನರೋ ನಿಕೃತಿರ್ಭಿರ್ಲೋಕಾನ್ ಪಾಪಾನ್ ಗಚ್ಛತ್ಯಸಂಶಯಮ್ |
ವಿದುಲಸ್ಯೇವ ತತ್ಪುಷ್ಪಂ ಮೋಘಂ ಜನಯಿತುಃ ಸ್ಮೃತಮ್ ॥8॥
ಮೋಸ ಮಾಡುವವನು ಪಾಪಲೋಕಗಳಿಗೆ ಹೋಗುವುದರಲ್ಲಿ ಸಂಶಯವಿಲ್ಲ. ಅಂತಹ ಪುತ್ರನು ತಂದೆಯ ದೃಷ್ಟಿಯಿಂದ ವಿದುಲಪುಷ್ಪದಂತೆ ವ್ಯರ್ಥನಾದವನು.
ಸರ್ವಾನರ್ಥಃ ಕುಲೇ ಯತ್ರ ಜಾಯತೇ ಪಾಪಪೂರುಷಃ |
ಅಕೀರ್ತಿಂ ಜನಯತ್ಯೇವ ಕೀರ್ತಿಮಂತರ್ದಧಾತಿ ಚ ॥9॥
ಯಾವ ಕುಲದಲ್ಲಿ ಪಾಪಬುದ್ಧಿಯುಳ್ಳ ಪುರುಷನು ಜನಿಸುತ್ತಾನೆಯೋ ಅಲ್ಲಿ ಸರ್ವಾನರ್ಥವೂ ಉಂಟಾಗುತ್ತದೆ. ಅವನು ಕುಲದ ಕೀರ್ತಿಯನ್ನು ನಾಶ ಮಾಡಿ, ಅಪಕೀರ್ತಿಯನ್ನು ಉಂಟುಮಾಡುತ್ತಾನೆ.
ಸರ್ವೇ ಚಾಪಿ ವಿಕರ್ಮಸ್ಥಾ ಭಾಗಂ ನಾರ್ಹಂತಿ ಸೋದರಾಃ |
ನಾಪ್ರದಾಯ ಕನಿಷ್ಠೇಭ್ಯೋ ಜ್ಯೇಷ್ಠಃ ಕುರ್ವೀತ ಯೌತಕಮ್ ॥10॥
ದುಷ್ಕರ್ಮಗಳಲ್ಲಿ ನಿರತರಾದ ಸೋದರರು ತಂದೆಯ ಆಸ್ತಿಯ ಭಾಗಕ್ಕೆ ಅರ್ಹರಾಗುವುದಿಲ್ಲ ಮತ್ತು ಹಿರಿಯನು ತಮ್ಮಂದಿರಿಗೆ ಕೊಡದೆ ತಾನೇ ಪಿತೃಸ್ವವನ್ನು ತೆಗೆದುಕೊಳ್ಳಬಾರದು.
ಅನುಜಸ್ಯ ಪಿತುರ್ದಾಯಂ ಜಂಘಾಶ್ರಯಬಲೋಽಧ್ವಗಃ |
ಸ್ವಯಮೀಹೇತ ಲಬ್ಧಂ ತು ನಾಕಾಮೋ ದಾತುಮರ್ಹತಿ ॥11॥
ತನ್ನ ಜಂಘಾಬಲವನ್ನು ತಿಳಿದ (ತನ್ನ ಆಶ್ರಯಸಾಮರ್ಥ್ಯವನ್ನು ತಿಳಿದ) ಸನ್ಮಾರ್ಗದಲ್ಲಿರುವ ಅಣ್ಣನು ದುಷ್ಕರ್ಮಿಯಾದ ತಮ್ಮನ ಭಾಗವನ್ನು ತಾನೇ ತೆಗೆದುಕೊಳ್ಳಲು ಪ್ರಯತ್ನಿಸಬೇಕು. ತಮ್ಮನ ದುಚ್ಚರಿತೆಯನ್ನು ನೋಡಿ ಅವನಿಗೆ ಭಾಗವನ್ನು ಕೊಡಲು ಇಷ್ಟವಿಲ್ಲದಿದ್ದರೆ ಭಾಗವನ್ನು ಕೊಡಬಾರದು (ಲಕ್ಷ್ಮಾಲಂಕಾರ).
ಭ್ರಾತೄಣಾಮವಿಭಕ್ತಾನಾಮುತ್ಥಾನಮಪಿ ಚೇತ್ಸಹ |
ನ ಪುತ್ರಭಾಗಂ ವಿಷಮಂ ಪಿತಾ ದದ್ಯಾತ್ಕಥಂಚನ ॥12॥
ಅವಿಭಕ್ತರಾದ ಸಹೋದರರು ಒಂದೇ ತಾಯಿಯಲ್ಲಿ ಜನಿಸಿದ್ದರೆ ಅವರಿಗೆ ಸಲ್ಲುವ ಭಾಗಗಳು ವಿಷಮವಾಗಿರುವುದಿಲ್ಲ. ಎಲ್ಲರಿಗೂ ಸಮವಾಗಿರುತ್ತವೆ. ಬೇರೆ ತಾಯಿಯಲ್ಲಿ ಜನಿಸಿದ ಪುತ್ರನು ಇನ್ನೊಬ್ಬ ತಾಯಿಯಲ್ಲಿ ಜನಿಸಿದ ಅನೇಕ ಪುತ್ರರು ತೆಗೆದುಕೊಳ್ಳುವ ಭಾಗಗಳನ್ನು ಒಬ್ಬನೇ ತೆಗೆದುಕೊಳ್ಳುತ್ತಾನೆ (ಲಕ್ಷ್ಮಾಲಂಕಾರ).
ಜ್ಯೇಷ್ಠೋ ನೈವಾವಮನ್ಯೇತ ದುಷ್ಕೃತಃ ಸುಕೃತೋಽಪಿ ವಾ |
ಗುರೂಣಾಮಪರಾಧೋ ಹಿ ಶಕ್ಯಃ ಕ್ಷಂತವ್ಯ ಏವ ಚ॥13॥
ತಮ್ಮಂದಿರು ಜ್ಯೇಷ್ಠರು ಸತ್ಕಾರ್ಯವನ್ನು ಮಾಡಲಿ, ಅಸತ್ಕಾರ್ಯವನ್ನು ಮಾಡಲಿ, ಅವರಿಗೆ ಅವಮಾನವನ್ನು ಮಾಡಬಾರದು. ಹಿರಿಯರಾದವರ ಅಪರಾಧವನ್ನು ಸಹಿಸಿಕೊಳ್ಳಬೇಕು ಮತ್ತು ಕ್ಷಮಿಸಬೇಕು.
ಯದಿ ಸ್ತ್ರಿಯೋ ಹ್ಯವರಜಾಃ ಶ್ರೇಯಃ ಪಶ್ಯೇತ್ ತಥಾಚರೇತ್ |
ಧರ್ಮಂ ಹಿ ಶ್ರೇಯ ಇತ್ಯಾಹುರಿತಿ ಧರ್ಮವಿದೋ ವಿದುಃ ॥13॥
ಹಿರಿಯನಾದವನು ತನ್ನ ಅನಂತರ ಜನಿಸಿದವರು ತಂಗಿಯರಾಗಿದ್ದರೆ ಅವರಿಗೆ ಶ್ರೇಯಸ್ಸಾಗುವ ರೀತಿಯಲ್ಲಿ ನಡೆದುಕೊಳ್ಳಬೇಕು. ಧರ್ಮವೇ ಶ್ರೇಯಸ್ಸಾಧನವೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ.
ದಶಾಚಾರ್ಯಾನುಪಾಧ್ಯಾಯ ಉಪಾಧ್ಯಾಯಾನ್ ಪಿತಾ ದಶ |
ದಶ ಚೈವ ಪಿತೄನ್ ಮಾತಾ ಗೌರವೇಣಾತಿರಿಚ್ಯತೇ ॥14॥
ಗೌರವೇಣಾಭಿಭವತಿ ನಾಸ್ತಿ ಮಾತೃಸಮೋ ಗುರುಃ |
ಮಾತಾ ಗರೀಯಸೀ ಯಚ್ಚ ತೇನೈತಾಂ ಮನ್ಯತೇ ಜನಃ ॥15॥
ಗೌರವವನ್ನು ಸ್ವೀಕರಿಸುವ ವಿಷಯದಲ್ಲಿ ಹತ್ತು ಆಚಾರ್ಯರಿಗಿಂತಲೂ ಒಬ್ಬ ಉಪಾಧ್ಯಾಯನು ಶ್ರೇಷ್ಠನಾದವನು. ಹತ್ತು ಉಪಾಧ್ಯಾಯರಿಗಿಂತಲೂ ತಂದೆಯು ಶ್ರೇಷ್ಠನಾದವನು. ಹತ್ತು ತಂದೆಯರಿಗಿಂತಲೂ ತಾಯಿಯು ಶ್ರೇಷ್ಠಳಾದವಳು. ತಾಯಿಯು ತನಗೆ ಸಲ್ಲುವ ಗೌರವದಿಂದ ಎಲ್ಲರನ್ನೂ ಮೀರಿಸುತ್ತಾಳೆ. ತಾಯಿಗೆ ಸಮಾನವಾದ ಗುರುವಿಲ್ಲ. ತಾಯಿಯು ಅಷ್ಟು ಶ್ರೇಷ್ಠಳಾಗಿರುವುದರಿಂದಲೇ ಜನರು ಅವಳಿಗೆ ಗೌರವವನ್ನು ಕೊಡುತ್ತಾರೆ.
ಜ್ಯೇಷ್ಠೋ ಭ್ರಾತಾ ಪಿತೃಸಮೋ ಮೃತೇ ಪಿತರಿ ಭಾರತ |
ಸ ಹ್ಯೇಷಾಂ ವೃತ್ತಿದಾತಾ ಸ್ಯಾತ್ ಸ ಚೈತಾನ್ ಪರಿಪಾಲಯೇತ್ ॥16॥
ಎಲೈ ಭಾರತನೇ, ತಂದೆಯು ಮರಣವನ್ನು ಹೊಂದಿದ ಮೇಲೆ ಅಣ್ಣನು ತಂದೆಗೆ ಸಮಾನನಾದವನು. ಅವನೇ ತಮ್ಮಂದಿರಿಗೆ ಜೀವನೋಪಾಯಗಳನ್ನು ಕಲ್ಪಿಸಿಕೊಟ್ಟು ಅವರನ್ನು ರಕ್ಷಿಸಬೇಕು.
ಕನಿಷ್ಠಾಸ್ತಂ ನಮಸ್ಯೇರನ್ ಸರ್ವೇ ಛಂದಾನುವರ್ತಿನಃ |
ತಮೇವ ಚೋಪಜೀವೇರನ್ ಯಥೈವ ಪಿತರಂ ತಥಾ ॥17॥
ತಮ್ಮಂದಿರು ಅವನಿಗೆ ನಮಸ್ಕಾರವನ್ನು ಮಾಡಬೇಕು. ಅವನ ಅಭಿಪ್ರಾಯದಂತೆ ನಡೆದುಕೊಳ್ಳಬೇಕು. ತಂದೆಯನ್ನು ಉಪಜೀವಿಸುವಂತೆ ಅವನನ್ನೇ ಉಪಜೀವಿಸಬೇಕು.

ಶರೀರಮೇತೌ ಸೃಜತಃ ಪಿತಾ ಮಾತಾ ಚ ಭಾರತ |
ಆಚಾರ್ಯಶಾಸ್ತಾ ಯಾ ಜಾತಿಃ ಸಾ ದಿವ್ಯಾ ಸಾಽಮರಾಜರಾ ||18||
ಎಲೈ ಭಾರತನೇ, ತಂದೆ-ತಾಯಿಗಳು ಶರೀರವನ್ನು ಮಾತ್ರ ಸೃಷ್ಟಿ ಮಾಡುತ್ತಾರೆ. ಗುರುವಿನ ಉಪದೇಶದಿಂದ ಪಡೆದ ಜ್ಞಾನಜನ್ಮವು ಮಾತ್ರ ದಿವ್ಯವಾದುದು ಮತ್ತು ಅಜರಾಮರವಾದುದು.
ಜ್ಯೇಷ್ಠಾ ಮಾತೃಸಮಾ ಚಾಪಿ ಭಗಿನೀ ಭರತರ್ಷಭ |
ಭ್ರಾತುರ್ಭಾರ್ಯಾ ಚ ತದ್ವತ್ ಸ್ಯಾದ್ ಯಸ್ಯಾ ಬಾಲ್ಯೇ ಸ್ತನಂ ಪಿಬೇತ್ ||
ಎಲೈ ಭರತರ್ಷಭನೇ, ಅಕ್ಕನು ತಾಯಿಗೆ ಸಮಳಾದವಳು. ಅತ್ತಿಗೆಯೂ ಸಹ ಹಾಗೆಯೇ ಮತ್ತು ಬಾಲ್ಯದಲ್ಲಿ ತಾಯಿಯನ್ನು ಬಿಟ್ಟು ಬೇರೆ ಯಾರ ಸ್ತನ್ಯವನ್ನು ಪಾನ ಮಾಡಿರುತ್ತಾನೆಯೋ ಅವಳೂ ಸಹ ತಾಯಿಗೆ ಸಮಳಾದವಳು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಜ್ಯೇಷ್ಠ-ಕನಿಷ್ಠವೃತ್ತಿಕಥನಂ ನಾಮ ಅಷ್ಟಪಂಚಾಶದುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಐವತ್ತೊಂಬತ್ತನೆಯ ಅಧ್ಯಾಯ
ಉಪವಾಸವಿಧಿ
ಯುಧಿಷ್ಠಿರಃ
ಸರ್ವೇಷಾಮೇವ ವರ್ಣಾನಾಂ ಮ್ಲೇಚ್ಛಾನಾಂ ಚ ಪಿತಾಮಹ |
ಉಪವಾಸೇ ಮತಿರಿಯಂ ಕಾರಣಂ ಚ ನ ವಿದ್ಮಹೇ ||1||
ಬ್ರಹ್ಮಕ್ಷತ್ರೇಣ ನಿಯಮಾಶ್ಚರ್ತವ್ಯಾ ಇತಿ ನಃ ಶ್ರುತಮ್ |
ಉಪವಾಸೇ ಕಥಂ ತೇಷಾಂ ಕೃತ್ಯಮಸ್ತಿ ಪಿತಾಮಹ ||2||
ಯುಧಿಷ್ಠಿರ ಎಲೈ ಪಿತಾಮಹನೇ, ಸರ್ವವರ್ಣದವರಿಗೂ ಮತ್ತು ಮ್ಲೇಚ್ಛರಿಗೂ ಉಪವಾಸವನ್ನು ಮಾಡುವ ಬುದ್ಧಿಯಿದೆ. ಇದಕ್ಕೆ ಕಾರಣವು ತಿಳಿಯುವುದಿಲ್ಲ. ಬ್ರಾಹ್ಮಣರು ಮತ್ತು ಕ್ಷತ್ರಿಯರು ನಿಯಮವನ್ನು ಅನುಸರಿಸಬೇಕೆಂದು ನಾವು ಕೇಳಿದ್ದೇವೆ. ಎಲೈ ಪಿತಾಮಹನೇ, ಉಳಿದವರಿಗೆ ಉಪವಾಸದಿಂದ ಏನು ಪ್ರಯೋಜನ?
ನಿಯಮಾಶ್ಚೋಪವಾಸಾಂಶ್ಚ ಸರ್ವೇಷಾಂ ಬ್ರೂಹಿ ಪಾರ್ಥಿವ |
ಅವಾಪ್ನೋತಿ ಗತಿಂ ಕಾಂ ಚ ಉಪವಾಸಪರಾಯಣಃ ||3||
ಉಪವಾಸಃ ಪರಂ ಪುಣ್ಯಮುಪವಾಸಃ ಪರಾಯಣಮ್ |
ಉಪೋಷ್ಯೇಹ ನರಶ್ರೇಷ್ಠ ಕಿಂ ಫಲಂ ಪ್ರತಿಪದ್ಯತೇ ||4||
ಎಲೈ ಪಾರ್ಥಿವನೇ, ಉಳಿದವರಿಗೂ ಇರುವ ಉಪವಾಸಗಳನ್ನು ಮತ್ತು ನಿಯಮಗಳನ್ನು ಹೇಳು. ಉಪವಾಸ ಪರಾಯಣನಾದವನು ಯಾವ ಗತಿಯನ್ನು ಹೊಂದುತ್ತಾನೆ? ಉಪವಾಸವು ಬಹಳ ಪುಣ್ಯಪ್ರದವಾದುದು, ಶ್ರೇಷ್ಠವಾದ ಆಶ್ರಯವಾದುದು. ಇಲ್ಲಿ ಉಪವಾಸವನ್ನು ಮಾಡಿದವನು ಯಾವ ಫಲವನ್ನು ಹೊಂದುತ್ತಾನೆ?
ಅಧರ್ಮಾನ್ ಮುಚ್ಯತೇ ಕೇನ ಧರ್ಮಮಾಪ್ನೋತಿ ವೈ ಕಥಮ್ |
ಸ್ವರ್ಗ್ಯಂ ಪುಣ್ಯಂ ಚ ಲಭತೇ ಕಥಂ ಭರತಸತ್ತಮ ||5||
ಎಲೈ ಭರತಶ್ರೇಷ್ಠನೇ, ಮನುಷ್ಯನು ಯಾವುದರಿಂದ ಅಧರ್ಮದಿಂದ ಮುಕ್ತನಾಗುತ್ತಾನೆ? ಯಾವುದರಿಂದ ಧರ್ಮವನ್ನು ಪಡೆಯುತ್ತಾನೆ? ಪುಣ್ಯವನ್ನು ಮತ್ತು ಸ್ವರ್ಗವನ್ನು ಹೇಗೆ ಪಡೆಯುತ್ತಾನೆ?
ಉಪೋಷ್ಯ ಚಾಪಿ ಕಿಂ ತೇನ ಪ್ರದೇಯಂ ಸ್ಯಾನ್ನರಾಧಿಪ |
ಧರ್ಮೇಣ ಚ ಸುಖಾನರ್ಥಾನ್ ಲಭೇದ್ ಯೇನ ಬ್ರವೀಹಿ ತಮ್ ||
ಎಲೈ ನರಾಧಿಪನೇ, ಉಪವಾಸವನ್ನು ಮಾಡಿದವನು ಯಾವ ದಾನವನ್ನು ಮಾಡಬೇಕು? ಯಾವ ಧರ್ಮದಿಂದ ಅವನು ಸುಖವನ್ನು ಪಡೆಯುವನೆಂದು ನನಗೆ ಹೇಳು.
ವೈಶಂಪಾಯನಃ
ಏವಂ ಬ್ರುವಾಣಂ ಕೌಂತೇಯಂ ಧರ್ಮಜ್ಞಂ ಧರ್ಮತತ್ತ್ವವಿತ್ |
ಧರ್ಮಪುತ್ರಮಿದಂ ವಾಕ್ಯಂ ಭೀಷ್ಮಃ ಶಾಂತನವೋಽಬ್ರವೀತ್ ||7||
ವೈಶಂಪಾಯನ ಹೀಗೆ ಪ್ರಶ್ನೆಯನ್ನು ಕೇಳಿದ ಧರ್ಮಪುತ್ರನಾದ ಕೌಂತೇಯನನ್ನು ಕುರಿತು ಧರ್ಮಜ್ಞರೂ, ಧರ್ಮತತ್ವವನ್ನು ತಿಳಿದವರೂ, ಶಂತನು ಪುತ್ರರೂ ಆದ ಭೀಷ್ಮರು ಈ ಮಾತುಗಳನ್ನು ಆಡಿದರು.
ಇದಂ ಖಲು ಮಹಾರಾಜ ಶ್ರುತಮಾಸೀತ್ ಪುರಾತನಮ್ |
ಉಪವಾಸವಿಧೌ ಶ್ರೇಷ್ಠಾ ಯೇ ಗುಣಾ ಭರತರ್ಷಭ ||8||
ಎಲೈ ಮಹಾರಾಜನೇ, ಭರತರ್ಷಭನೇ, ಉಪವಾಸದ ವಿಧಿಯಲ್ಲಿ ಯಾವ ಶ್ರೇಷ್ಠವಾದ ಗುಣಗಳಿವೆ ಎಂಬುದನ್ನು ನಾನು ಹಿಂದೆ ಕೇಳಿದ್ದೇನೆ.
ಪ್ರಾಜಾಪತ್ಯಂ ಹ್ಯಂಗಿರಸಂ ಪೃಷ್ಟವಾನಸ್ಮಿ ಭಾರತ |
ಯಥಾ ಮಾಂ ತ್ವಂ ತಥೈವಾಹಂ ಪೃಷ್ಟವಾಂಸ್ತಂ ತಪೋಧನಮ್ ||9||
ಎಲೈ ಭಾರತನೇ, ನೀನು ನನಗೆ ಪ್ರಶ್ನೆಯನ್ನು ಕೇಳಿದಂತೆಯೇ ನಾನು ಬ್ರಹ್ಮದೇವರ ಪುತ್ರರಾದ ಅಂಗಿರಸರನ್ನು ಪ್ರಶ್ನೆ ಮಾಡಿದೆನು.

ಪ್ರಶ್ನಮೇತಂ ಮಯಾ ಪೃಷ್ಟೋ ಭಗವಾನಗ್ನಿಸಂಭವಃ |
ಉಪವಾಸವಿಧಿಂ ಪುಣ್ಯಮಾಚಷ್ಟ ಭರತರ್ಷಭ ||10||
ಎಲೈ ಭರತರ್ಷಭನೇ, ನಾನು ಕೇಳಿದ ಈ ಪ್ರಶ್ನೆಗೆ ಉತ್ತರವಾಗಿ ಅಗ್ನಿಪುತ್ರರೂ ಅಗ್ನಿಜನಕರೂ ಆದ, ಪೂಜ್ಯರಾದ ಅಂಗಿರಸರು ಪವಿತ್ರವಾದ ಉಪವಾಸ ವಿಧಿಯನ್ನು ಹೇಳಿದರು.
ಅಂಗಿರಾಃ
ಬ್ರಹ್ಮಕ್ಷತ್ರೇ ತ್ರಿರಾತ್ರಂ ತು ವಿಹಿತಂ ಕುರುನಂದನ |
ದ್ವಿಸ್ತ್ರಿರಾತ್ರಮಥೈಕಾಹಂ ನಿರ್ದಿಷ್ಟಂ ಪುರುಷರ್ಷಭ ||11||
ಅಂಗಿರಸ ಎಲೈ ಕುರುನಂದನನೇ, ಬ್ರಾಹ್ಮಣರಿಗೆ ಮತ್ತು ಕ್ಷತ್ರಿಯರಿಗೆ ಮೂರು ರಾತ್ರಿಗಳ ಉಪವಾಸವು ಹೇಳಲ್ಪಟ್ಟಿದೆ. ಎಲೈ ಪುರುಷರ್ಷಭನೇ, ಹಾಗೆಯೇ ಆರು ರಾತ್ರಿಗಳ ಮತ್ತು ಒಂದು ದಿನದ ಉಪವಾಸವೂ ಹೇಳಲ್ಪಡುತ್ತದೆ.
ವೈಶ್ಯಶೂದ್ರೌ ತು ಯೌ ಮೋಹಾದುಪವಾಸಂ ಪ್ರಕುರ್ವತೇ |
ತ್ರಿರಾತ್ರಂ ದ್ವಿಸ್ತ್ರಿರಾತ್ರಂ ವಾ ತಯೋಃ ಪುಷ್ಟಿರ್ನ ವಿದ್ಯತೇ ||12||
ವೈಶ್ಯರಾಗಲೀ ಶೂದ್ರರಾಗಲೀ ಮೋಹದಿಂದ ಮೂರು ರಾತ್ರಿಗಳ ಉಪವಾಸವನ್ನಾಗಲೀ ಆರು ರಾತ್ರಿಗಳ ಉಪವಾಸವನ್ನಾಗಲೀ ಮಾಡಿದರೆ ಅವರಿಗೆ ಅದರಿಂದ ಯಾವ ಪುಷ್ಟಿಯೂ ಉಂಟಾಗುವುದಿಲ್ಲ.
ಚತುರ್ಥಭಕ್ತಾಕ್ರಮಣಂ ವೈಶ್ಯಶೂದ್ರೇ ವಿಧೀಯತೇ |
ತ್ರಿರಾತ್ರಂ ನ ತು ಧರ್ಮಜ್ಞೈರ್ವಿಹಿತಂ ಬ್ರಹ್ಮವಾದಿಭಿಃ ||13||
ವೈಶ್ಯ-ಶೂದ್ರರಿಗೆ ದಿವಸದ ನಾಲ್ಕನೆಯ ಭಾಗದಲ್ಲಿ ಭೋಜನವು ಹೇಳಲ್ಪಡುತ್ತದೆ. ಅವರಿಗೆ ಮೂಲ ರಾತ್ರಿಗಳ ಉಪವಾಸವು ಧರ್ಮಜ್ಞರಾದ ಬ್ರಹ್ಮವಾದಿಗಳಿಗೆ ಸಮ್ಮತವಲ್ಲ.
ಪಂಚಮ್ಯಾಂ ಚೈವ ಷಷ್ಠ್ಯಾಂ ಚ ಪೌರ್ಣಮಾಸ್ಯಾಂ ಚ ಭಾರತ |
ಕ್ಷಮಾವಾನ್ ರೂಪಸಂಪನ್ನಃ ಶ್ರುತವಾಂಶ್ಚೈವ ಜಾಯತೇ ||14||
ಎಲೈ ಭಾರತನೇ, ಪಂಚಮಿಯ ದಿವಸ ಮತ್ತು ಷಷ್ಠಿಯ ದಿವಸ ಮತ್ತು ಪೌರ್ಣಮಾಸ್ಯೆಯ ದಿವಸ ಉಪವಾಸವನ್ನು ಮಾಡುವವನು ಕ್ಷಮಾವಂತನೂ, ರೂಪಸಂಪನ್ನನೂ, ವಿದ್ಯಾವಂತನೂ ಆಗಿ ಜನಿಸುವನು.
ನಾನಪತ್ಯೋ ಭವೇತ್ ಪ್ರಾಜ್ಞೋ ದರಿದ್ರೋ ವಾ ಕದಾಚನ |
ಯಜಿಷ್ಣುಃ ಪಂಚಮೀಂ ಷಷ್ಠೀಂ ಕುಲೇಭ್ಯೋ ಭೋಜಯೇದ್ ದ್ವಿಜಾನ್ ||
ಯಾವ ಪ್ರಾಜ್ಞನು ಪಂಚಮೀ ಷಷ್ಠೀ ತಿಥಿಗಳಲ್ಲಿ ಯಾಗವನ್ನು ಮಾಡಿ ಪೂಜಜೆಯ ಸತ್ಕುಲ ಪ್ರಸೂತರಾದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುತ್ತಾನೆಯೋ ಅವನು ಎಂದೂ ಪುತ್ರಹೀನನಾಗಲೀ, ದರಿದ್ರನಾಗಲೀ ಆಗುವುದಿಲ್ಲ.
ಅಷ್ಟಮೀಮಥ ಕೌಂತೇಯ ಶುಕ್ಲಪಕ್ಷೇ ಚತುರ್ದಶೀಮ್ |
ಉಪೋಷ್ಯ ವ್ಯಾಧಿರಹಿತೋ ವೀರ್ಯವಾನಭಿಜಾಯತೇ ||16||
ಎಲೈ ಕೌಂತೇಯನೇ, ಶುಕ್ಲಪಕ್ಷದ ಅಷ್ಟಮಿಯಂದು ಮತ್ತು ಚತುರ್ದಶಿಯಂದು ಉಪವಾಸವನ್ನು ಮಾಡಿದವನು ವ್ಯಾಧಿರಹಿತನಾಗಿ, ವೀರ್ಯವಂತನಾಗಿ ಜನಿಸುತ್ತಾನೆ.
ಮಾರ್ಗಶೀರ್ಷಂ ತು ಯೋ ಮಾಸಮೇಕಭುಕ್ತೇನ ಸಂಕ್ಷಿಪೇತ್ |
ಭೋಜಯೇಚ್ಚ ದ್ವಿಜಾನ್ ಭಕ್ತ್ಯಾ ಮುಚ್ಯತೇ ವ್ಯಾಧಿಕಿಲ್ಬಿಷೈಃ ||17||
ಸರ್ವಕಲ್ಯಾಣಸಂಪೂರ್ಣಃ ಸರ್ವೌಷಧಿಸಮನ್ವಿತಃ |
ಕೃಷಿಭಾಗೀ ಬಹುಧನೋ ಬಹುಪುತ್ರಶ್ಚ ಜಾಯತೇ ||18||
ಮಾರ್ಗಶೀರ್ಷಮಾಸದಲ್ಲಿ ಏಕಭುಕ್ತನಾಗಿ ಮಾಸವನ್ನು ಕಳೆದು, ಭಕ್ತಿಯಿಂದ ಬ್ರಾಹ್ಮಣರ ಭೋಜನವನ್ನು ಮಾಡಿಸುವವನು ವ್ಯಾಧಿಗಳಿಂದಲೂ, ಪಾಪಗಳಿಂದಲೂ ಮುಕ್ತನಾಗುತ್ತಾನೆ. ಸರ್ವಕಲ್ಯಾಣಗುಣಗಳಿಂದ ಕೂಡಿದವನಾಗಿ, ಎಲ್ಲ ಓಷಧಿಗಳಿಂದಲೂ ಸಮನ್ವಿತನಾಗಿ ಕೃಷಿಯನ್ನು ಮಾಡಿ ಬಹುಧನವನ್ನೂ, ಬಹುಪುತ್ರರನ್ನೂ ಗಳಿಸುವವನಾಗಿ ಜನಿಸುತ್ತಾನೆ.
ಪೌಷಮಾಸಂ ತು ಕೌಂತೇಯ ಭಕ್ತೇನೈಕೇನ ಯಃ ಕ್ಷಪೇತ್ |
ಸುಭಗೋ ದರ್ಶನೀಯಶ್ಚ ಕುಲೇ ಮಹತಿ ಜಾಯತೇ ||19||
ಎಲೈ ಕೌಂತೇಯನೇ, ಯಾವನು ಪುಷ್ಯಮಾಸವನ್ನು ಏಕಭುಕ್ತದಿಂದ ಕಳೆಯುತ್ತಾನೆಯೋ ಅವನು ಶ್ರೇಷ್ಠವಾದ ಕುಲದಲ್ಲಿ ಸೌಭಾಗ್ಯವಂತನೂ, ಸುಂದರನೂ ಆಗಿ ಜನಿಸುತ್ತಾನೆ.
ಪಿತೃಭಕ್ತೋ ಮಾಘಮಾಸಮೇಕಭಕ್ತೇನ ಯಃ ಕ್ಷಪೇತ್ |
ಶ್ರೀಮತ್ಕುಲೇ ಜ್ಞಾತಿಮಧ್ಯೇ ಸ ಮಹತ್ತ್ವಂ ಪ್ರಪದ್ಯತೇ ||20||
ಪಿತೃಭಕ್ತನಾದ ಯಾವನು ಮಾಘಮಾಸವನ್ನು ಏಕಭಕ್ತದಿಂದ ಕಳೆಯುತ್ತಾನೆಯೋ ಅವನು ಸಂಪದ್ಯುಕ್ತನಾಗಿ ಜನಿಸಿ, ಬಂಧುಗಳ ಮಧ್ಯದಲ್ಲಿ ಶ್ರೇಷ್ಠತ್ವವನ್ನು ಹೊಂದುತ್ತಾನೆ.
ಭಗದೈವಂ ತು ಯೋ ಮಾಸಮೇಕಭಕ್ತೇನ ಯಃ ಕ್ಷಪೇತ್ |
ಸ್ತ್ರೀಷು ವಲ್ಲಭತಾಂ ಯಾತಿ ವಶ್ಯಾಶ್ಚಾಸ್ಯ ಭವಂತಿ ತಾಃ ||21||
ಸೂರ್ಯದೇವತಾಕವಾದ ಫಾಲ್ಗುಣಮಾಸವನ್ನು ಯಾವನು ಏಕಭುಕ್ತದಿಂದ ಕಳೆಯುತ್ತಾನೆಯೋ ಅವನು ಸ್ತ್ರೀಯರಿಗೆ ಪ್ರಿಯನಾಗುತ್ತಾನೆ. ಅವನಿಗೆ ಸ್ತ್ರೀಯರು ವಶರಾಗುತ್ತಾರೆ.
ಚೈತ್ರಂ ತು ನಿಯತೋ ಮಾಸಮೇಕಭಕ್ತೇನ ಯಃ ಕ್ಷಪೇತ್ |
ಸುವರ್ಣಮಣಿಮುಕ್ತಾಢ್ಯೇ ಕುಲೇ ಮಹತಿ ಜಾಯತೇ ||22||

ಯಾವನು ನಿಯಮಬದ್ಧನಾಗಿ ಚೈತ್ರಮಾಸವನ್ನು ಏಕಭುಕ್ತಿಯಿಂದ ಕಳೆಯುತ್ತಾನೆಯೋ ಅವನು ಸುವರ್ಣ-ಮಣಿ-ಮುತ್ತುಗಳಿಂದ ಸಂಪನ್ನವಾದ ದೊಡ್ಡ ಕುಲದಲ್ಲಿ ಜನಿಸುತ್ತಾನೆ.
ನಿಸ್ತರೇದೇಕಭಕ್ತೇನ ವೈಶಾಖಂ ಯೋ ಜಿತೇಂದ್ರಿಯಃ |
ನರೋ ವಾ ಯದಿ ವಾ ನಾರೀ ಜ್ಞಾತೀನಾಂ ಶ್ರೇಷ್ಠತಾಂ ವ್ರಜೇತ್ ॥
ಪುರುಷನಾಗಲೀ ಅಥವಾ ಸ್ತ್ರೀಯಾಗಲೀ ಯಾರು ಜಿತೇಂದ್ರಿಯರಾಗಿ ವೈಶಾಖ ಮಾಸವನ್ನು ಏಕಭುಕ್ತದಿಂದ ಕಳೆಯುತ್ತಾರೆಯೋ ಅವರು ಬಂಧುಗಳ ಮಧ್ಯದಲ್ಲಿ ಶ್ರೇಷ್ಠತ್ವವನ್ನು ಹೊಂದುತ್ತಾರೆ.
ಜ್ಯೇಷ್ಠಾಮೂಲಂ ತು ಯೋ ಮಾಸಮೇಕಭಕ್ತೇನ ಸಂಕ್ಷಪೇತ್ |
ಐಶ್ವರ್ಯಮತುಲಂ ಶ್ರೇಷ್ಠಂ ಪುಮಾನ್ ಸ್ತ್ರೀ ವಾಭಿಪದ್ಯತೇ ॥24॥
ಯಾವ ಪುರುಷ ಅಥವಾ ಸ್ತ್ರೀಯು ಜ್ಯೇಷ್ಠಮಾಸವನ್ನು ಏಕಭುಕ್ತದಿಂದ ಕಳೆಯುತ್ತಾರೆಯೋ ಅವರು ಶ್ರೇಷ್ಠವಾದ ಮತ್ತು ಅತುಲವಾದ ಐಶ್ವರ್ಯವನ್ನು ಪಡೆಯುತ್ತಾರೆ.
ಆಷಾಢಮೇಕಭಕ್ತೇನ ಸ್ಥಿತ್ವಾ ಮಾಸಮತಂದ್ರಿತಃ |
ಬಹುಧಾನ್ಯೋ ಬಹುಧನೋ ಬಹುಪುತ್ರಶ್ಚ ಜಾಯತೇ ॥25॥
ಯಾವನು ಆಲಸ್ಯವಿಲ್ಲದೆ ಆಷಾಢಮಾಸವನ್ನು ಏಕಭಕ್ತದಿಂದ ಕಳೆಯುತ್ತಾನೆಯೋ ಅವನು ಬಹುಧಾನ್ಯವಂತನೂ, ಬಹುಧನವಂತನೂ, ಬಹುಪುತ್ರವಂತನೂ ಆಗಿ ಜನಿಸುತ್ತಾನೆ.
ಶ್ರಾವಣಂ ಮಾಸಮೇಕೇನ ಭಕ್ತೇನ ಯಃ ಕ್ಷಪೇತ್ |
ಯತ್ರ ತತ್ರಾಭಿಷೇಕೇಣ ಯುಜ್ಯತೇ ಜ್ಞಾತಿವರ್ಧನಃ ॥26॥
ಯಾವನು ಶ್ರಾವಣ ಮಾಸವನ್ನು ಏಕಭುಕ್ತಿಯಿಂದ ಕಳೆದು ಅಲ್ಲಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನು ಬಂಧುಗಳ ಅಭಿವೃದ್ಧಿಯನ್ನು ಕುರಿತು ಕಾರಣನಾಗುತ್ತಾನೆ.
ಪ್ರೌಷ್ಠಪದಂ ತು ಯೋ ಮಾಸಮೇಕಾಹಾರೋ ಭವೇನ್ನರಃ |
ಧನಾಢ್ಯಂ ಸ್ಫೀತಮಚಲಮೈಶ್ವರ್ಯಂ ಪ್ರತಿಪದ್ಯತೇ ॥27॥
ಭಾದ್ರಪದ ಮಾಸದಲ್ಲಿ ಒಂದೇ ಬಾರಿ ಆಹಾರವನ್ನು ಸ್ವೀಕರಿಸುವ ಮನುಷ್ಯನು ಧನಾಢ್ಯನಾಗಿ ಪರಿಶುದ್ಧವಾದ, ಸ್ಥಿರವಾದ ಐಶ್ವರ್ಯವನ್ನು ಹೊಂದುತ್ತಾನೆ.
ತಥೈವಾಶ್ವಯುಜಂ ಮಾಸಮೇಕಭಕ್ತೇನ ಯಃ ಕ್ಷಪೇತ್ |
ಪ್ರಜಾವಾನ್ ವಾಹನಾಢ್ಯಶ್ಚ ಬಹುಪುತ್ರಶ್ಚ ಜಾಯತೇ ॥28॥
ಹಾಗೆಯೇ ಅಶ್ವಯುಜ ಮಾಸವನ್ನು ಏಕಭಕ್ತದಿಂದ ಕಳೆಯುವವನು ಪ್ರಜಾವಂತನೂ, ವಾಹನಗಳನ್ನು ಹೊಂದಿ ಸಿರಿವಂತನೂ ಮತ್ತು ಬಹುಪುತ್ರವಂತನೂ ಆಗಿ ಜನಿಸುತ್ತಾನೆ.
ಕಾರ್ತಿಕಂ ತು ನರೋ ಮಾಸಂ ಯಃ ಕುರ್ಯಾದೇಕಭೋಜನಮ್ |
ಶೂರಶ್ಚ ಬಹುಭಾರ್ಯಶ್ಚ ಕೀರ್ತಿಮಾಂಶ್ಚೈವ ಜಾಯತೇ ॥29॥
ಕಾರ್ತಿಕಮಾಸದಲ್ಲಿ ಯಾವನು ಏಕಭೋಜನವನ್ನು ಮಾಡುತ್ತಾನೆಯೋ ಅವನು ಶೂರನೂ, ಬಹುಭಾರ್ಯೆಯರನ್ನು ಹೊಂದುವವನೂ ಮತ್ತು ಕೀರ್ತಿವಂತನೂ ಆಗಿ ಜನಿಸುತ್ತಾನೆ.
ಇತಿ ಮಾಸಾ ನರವ್ಯಾಘ್ರ ಕ್ಷಪತಾಂ ಪರಿಕೀರ್ತಿತಾಃ |
ವಿಧೀನಾಂ ನಿಯಮಾಂಶ್ಚೈವ ಶೃಣು ತಾನಪಿ ಪಾರ್ಥಿವ ॥30॥
ಎಲೈ ನರವ್ಯಾಘ್ರನೇ, ಇವು ಮಾಸಗಳನ್ನು ಉಪವಾಸದಿಂದ ಕಳೆಯುವವರಿಗೆ ಹೇಳಲ್ಪಟ್ಟ ಫಲಗಳು. ಎಲೈ ಪಾರ್ಥಿವನೇ, ವಿಧಿಗಳನ್ನು ಮತ್ತು ನಿಯಮಗಳನ್ನು ಕೇಳುವವನಾಗು.
ಪಕ್ಷೇ ಪಕ್ಷೇ ಗತೇ ಯಸ್ತು ಭಕ್ತಮಶ್ನಾತಿ ಭಾರತ |
ಗವಾಢ್ಯೋ ಬಹುಪುತ್ರಶ್ಚ ದೀರ್ಘಾಯುಶ್ಚ ಸ ಜಾಯತೇ ॥31॥
ಎಲೈ ಭಾರತನೇ, ಯಾವನು ಒಂದು ಪಕ್ಷವು ಕಳೆದ ಮೇಲೆ ಒಂದು ಬಾರಿ ಭೋಜನವನ್ನು ಮಾಡುತ್ತಾನೆಯೋ ಅವನು ಗೋಸಂಪತ್ತಿಯನ್ನು ಹೊಂದಿದವನೂ, ಬಹುಪುತ್ರವಂತನೂ, ದೀರ್ಘಾಯುವೂ ಆಗಿ ಜನಿಸುತ್ತಾನೆ.
ಮಾಸಿ ಮಾಸಿ ತ್ರಿರಾತ್ರಾಣಿ ಕೃತ್ವಾ ವರ್ಷಾಣಿ ದ್ವಾದಶ |
ಗಣಾಧಿಪತ್ಯಂ ಪ್ರಾಪ್ನೋತಿ ನಿಃಸಪತ್ನಮನಾವಿಲಮ್ ॥32॥
ಹನ್ನೆರಡು ವರ್ಷಗಳ ಕಾಲ ಪ್ರತಿಯೊಂದು ಮಾಸದಲ್ಲಿಯೂ ಮೂರು ರಾತ್ರಿ ಉಪವಾಸವನ್ನು ಮಾಡುವವನು ಶತ್ರುರಹಿತವಾದ, ಪ್ರತಿಬಂಧರಹಿತವಾದ ಗಣಾಧಿಪತ್ಯಯನ್ನು ಪಡೆಯುತ್ತಾನೆ.
ಏತೇ ತು ನಿಯಮಾಃ ಸರ್ವೇ ಕರ್ತವ್ಯಾಃ ಶರದೋ ದಶ |
ದ್ವೇ ಚಾನ್ಯೇ ಭರತಶ್ರೇಷ್ಠ ಸ್ವವೃತ್ತಿಮನುತಿಷ್ಠತಾ ॥33॥
ಎಲೈ ಭರತಶ್ರೇಷ್ಠನೇ, ತನ್ನ ವೃತ್ತಿಯನ್ನು ಅನುಸರಿಸುವ ಮನುಷ್ಯನು ಈ ಎಲ್ಲ ನಿಯಮಗಳನ್ನು ಹನ್ನೆರಡು ವರ್ಷಗಳ ಕಾಲ ಮಾಡಬೇಕು.
ಯಸ್ತು ಪ್ರಾತಸ್ತಥಾ ಸಾಯಂ ಭುಂಜಾನೋ ನಾಂತರಾ ಪಿಬೇತ್ |
ಅಹಿಂಸಾನಿರತೋ ನಿತ್ಯಂ ಜುಹ್ವಾನೋ ಜಾತವೇದಸಮ್ ॥34॥
ಷಡ್‌ಭಿಃ ಸ ವರ್ಷೈರ್ನೃಪತೇ ಸಿದ್ಧ್ಯತೇ ನಾತ್ರ ಸಂಶಯಃ |
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥35॥

ಯಾವನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಭೋಜನವನ್ನು ಮಾಡುತ್ತಾ ಮಧ್ಯದಲ್ಲಿ ನೀರನ್ನೂ ಕುಡಿಯದೇ, ಅಹಿಂಸಾನಿರತನಾಗಿ, ನಿತ್ಯದಲ್ಲೂ ಅಗ್ನಿಯಲ್ಲಿ ಹೋಮ ಮಾಡುತ್ತಾನೆಯೋ ಅಂತಹವನು ಆರುವರ್ಷಗಳಲ್ಲಿ ಸಿದ್ಧಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಅಂತಹ ಮನುಷ್ಯನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾನೆ.

ಅಧಿವಾಸೇ ಸೋಽಪ್ಸರಸಾಂ ನೃತ್ಯಗೀತವಿನಾದಿತೇ |
ತಪ್ತಕಾಂಚನವರ್ಣಾಭಂ ವಿಮಾನಮಧಿರೋಹತಿ ॥36॥
ಪೂರ್ಣಂ ವರ್ಷಸಹಸ್ರಂ ತು ಬ್ರಹ್ಮಲೋಕೇ ಮಹೀಯತೇ |
ತತ್ಕ್ಷಯಾದಿಹ ಚಾಗಮ್ಯ ಮಾಹಾತ್ಮ್ಯಂ ಪ್ರತಿಪದ್ಯತೇ ॥37॥

ಅವನು ನೃತ್ಯ-ಗೀತೆಗಳಿಂದ ಕೂಡಿರುವ ಅಪ್ಸರೆಯರ ವಾಸಸ್ಥಳದಲ್ಲಿ ತಪ್ತವಾದ ಸೂರ್ಯನ ಬಣ್ಣವನ್ನು ಹೊಂದಿದ ವಿಮಾನವನ್ನು ಏರುತ್ತಾನೆ. ಒಂದು ಸಹಸ್ರವರ್ಷಗಳ ಕಾಲ ಪೂರ್ಣವಾಗಿ ಬ್ರಹ್ಮಲೋಕದಲ್ಲಿ ಮೆರೆಯುತ್ತಾನೆ. ಪುಣ್ಯಕ್ಷಯವಾದ ಮೇಲೆ ಪುನಃ ಇಲ್ಲಿ ಭೂಮಿಗೆ ಬಂದು ಮಾಹಾತ್ಮ್ಯವನ್ನು ಹೊಂದುತ್ತಾನೆ.

ಯಸ್ತು ಸಂವತ್ಸರಂ ಪೂರ್ಣಮೇಕಾಹಾರೋ ಭವೇನ್ನರಃ |
ಅತಿರಾತ್ರಸ್ಯ ಯಜ್ಞಸ್ಯ ಸ ಫಲಂ ಸಮುಪಾಶ್ನುತೇ ॥38॥
ದಶವರ್ಷಸಹಸ್ರಾಣಿ ಸ್ವರ್ಗೇ ಚ ಸ ಮಹೀಯತೇ |
ತತ್ಕ್ಷಯಾದಿಹ ಚಾಗಮ್ಯ ಮಾಹಾತ್ಮ್ಯಂ ಪ್ರತಿಪದ್ಯತೇ ॥39॥

ಯಾವ ಮನುಷ್ಯನು ಪೂರ್ಣವಾಗಿ ಒಂದು ವರ್ಷಗಳ ಕಾಲ ಏಕಾಹಾರವನ್ನು ಮಾಡುತ್ತಾನೆಯೋ ಅವನು ಅತಿರಾತ್ರ ಯಜ್ಞದ ಫಲವನ್ನು ಹೊಂದುತ್ತಾನೆ. ಹತ್ತು ಸಹಸ್ರ ವರ್ಷಗಳ ಕಾಲ ಅವನು ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾನೆ. ಪುಣ್ಯ ಕ್ಷಯವಾದ ಮೇಲೆ ಇಲ್ಲಿಗೆ ಬಂದು ಮಾಹಾತ್ಮ್ಯವನ್ನು ಹೊಂದುತ್ತಾನೆ.

ಯಸ್ತು ಸಂವತ್ಸರಂ ಪೂರ್ಣಂ ಚತುರ್ಥಂ ಭಕ್ತಮಶ್ನುತೇ |
ಅಹಿಂಸಾನಿರತೋ ನಿತ್ಯಂ ಸತ್ಯವಾಙ್ನಿಯತೇಂದ್ರಿಯಃ ॥40॥
ವಾಜಪೇಯಸ್ಯ ಯಜ್ಞಸ್ಯ ಫಲಂ ವೈ ಸಮುಪಾಶ್ನುತೇ |
ತ್ರಿಂಶದ್ವರ್ಷಸಹಸ್ರಾಣಿ ಸ್ವರ್ಗೇ ಚ ಸ ಮಹೀಯತೇ ॥41॥

ಯಾವನು ಪೂರ್ಣವಾದ ಒಂದು ಸಂವತ್ಸರದ ಕಾಲ ನಾಲ್ಕನೆಯ ಆಹಾರವನ್ನು (ಒಂದು ದಿನ ಪೂರ್ಣ ಉಪವಾಸ, ಎರಡನೆಯ ದಿನ ರಾತ್ರಿ ಆಹಾರ ಸೇವನೆ) ಮಾಡಿ, ನಿತ್ಯವೂ ಅಹಿಂಸಾನಿರತನಾಗಿ, ಸತ್ಯವಚನನಾಗಿ, ಇಂದ್ರಿಯಜಯವನ್ನು ಹೊಂದಿರುತ್ತಾನೆಯೋ ಅವನು ವಾಜಪೇಯ ಯಜ್ಞದ ಫಲವನ್ನು ಹೊಂದುತ್ತಾನೆ. ಮೂವತ್ತು ಸಹಸ್ರ ವರ್ಷಗಳ ಕಾಲ ಸ್ವರ್ಗಸುಖವನ್ನು ಅನುಭವಿಸುತ್ತಾನೆ.

ಷಷ್ಠೇ ಕಾಲೇ ತು ಕೌಂತೇಯ ನರಃ ಸಂವತ್ಸರಂ ಕ್ಷಪೇತ್ |
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಸಂಪ್ರಾಪ್ನುಯಾನ್ನರಃ ॥42॥
ಚಕ್ರವಾಕಪ್ರಯುಕ್ತೇನ ವಿಮಾನೇನ ಸ ಗಚ್ಛತಿ |
ಚತ್ವಾರಿಂಶತ್ಸಹಸ್ರಾಣಿ ವರ್ಷಾಣಾಂ ದಿವಿ ಮೋದತೇ ॥43॥

ಎಲೈ ಕೌಂತೇಯನೇ, ಯಾವನು ಷಷ್ಠಕಾಲದಲ್ಲಿ (ಎರಡು ದಿವಸ ಉಪವಾಸ, ಮೂರನೆಯ ದಿವಸ ರಾತ್ರಿ ಭೋಜನ) ಆಹಾರವನ್ನು ಸ್ವೀಕಾರ ಮಾಡಿ ಒಂದು ಸಂವತ್ಸರವನ್ನು ಕಳೆಯುತ್ತಾನೆಯೋ ಅಂತಹವನು ಅಶ್ವಮೇಧ ಯಜ್ಞದ ಫಲವನ್ನು ಹೊಂದುತ್ತಾನೆ. ಚಕ್ರವಾಕ ಪಕ್ಷಿಗಳನ್ನು ಹೂಡಿರುವ ವಿಮಾನದಲ್ಲಿ ಅವನು ಸಂಚರಿಸುತ್ತಾನೆ. ನಲವತ್ತು ಸಾವಿರ ವರ್ಷಗಳ ಕಾಲ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾನೆ.

ಅಷ್ಟಮೇನ ತು ಭಕ್ತೇನ ಜೀವನ್ ಸಂವತ್ಸರಂ ನೃಪ |
ಗವಾಮಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥44॥
ಹಂಸಸಾರಸಯುಕ್ತೇನ ವಿಮಾನೇನ ಸ ಗಚ್ಛತಿ |
ಪಂಚಾಶತಂ ಸಹಸ್ರಾಣಿ ವರ್ಷಾಣಾಂ ದಿವಿ ಮೋದತೇ ॥45॥

ಎಲೈ ರಾಜನೇ, ಇದೇ ರೀತಿ ಯಾವನು ಅಷ್ಟಮ ಕಾಲದ ಆಹಾರದಿಂದ (ಮೂರು ದಿನ ಪೂರ್ಣವಾಗಿ ಉಪವಾಸ, ನಾಲ್ಕನೆಯ ದಿನ ರಾತ್ರಿ ಭೋಜನ) ಒಂದು ಸಂವತ್ಸರವನ್ನು ಕಳೆಯುತ್ತಾನೆಯೋ ಅವನು ಗವಾಮಯ ಯಜ್ಞದ ಫಲವನ್ನು ಪಡೆಯುತ್ತಾನೆ. ಹಂಸ ಮತ್ತು ಸಾರಸ ಪಕ್ಷಿಗಳನ್ನು ಹೂಡಿದ ವಿಮಾನದಲ್ಲಿ ಸಂಚರಿಸುತ್ತಾನೆ. ಐವತ್ತು ಸಾವಿರ ವರ್ಷಗಳ ಕಾಲ ಸ್ವರ್ಗಸುಖವನ್ನು ಅನುಭವಿಸುತ್ತಾನೆ.

ಪಕ್ಷೇ ಪಕ್ಷೇ ಗತೇ ರಾಜನ್ ಯೋಽಶ್ನೀಯಾದ್ ವರ್ಷಮೇವ ತು |
ಷಣ್ಮಾಸಾನಶನಂ ತಸ್ಯ ಭಗವಾನಂಗಿರಾಬ್ರವೀತ್ |
ಷಷ್ಟಿಂ ವರ್ಷಸಹಸ್ರಾಣಿ ದಿವಮಾವಸತೇ ಚ ಸಃ ॥46॥
ವೀಣಾನಾಂ ವಲ್ಲಕೀನಾಂ ಚ ವೇಣೂನಾಂ ಚ ವಿಶಾಂಪತೇ |
ಸುಘೋಷೈರ್ಮಧುರೈಃ ಶಬ್ದೈಃ ಸುಪ್ತಃ ಸ ಪ್ರತಿಬೋಧ್ಯತೇ ॥47॥

ಒಂದೊಂದು ಪಕ್ಷವು ಕಳೆದ ಮೇಲೆ ಒಂದೊಂದು ಬಾರಿ ಯಾವನು ಆಹಾರ ಸೇವನೆಯನ್ನು ಮಾಡಿ ಒಂದು ವರ್ಷವನ್ನು ಪೂರ್ಣಗೊಳಿಸುತ್ತಾನೆಯೋ ಅದು ಆರು ತಿಂಗಳ ಉಪವಾಸಕ್ಕೆ ಸಮವಾದುದು ಎಂದು ಪೂಜ್ಯರಾದ ಅಂಗಿರಸರು ಹೇಳಿದ್ದಾರೆ. ಅವನು ಅರವತ್ತು ಸಾವಿರ ವರ್ಷಗಳ ಕಾಲ ಸ್ವರ್ಗವಾಸವನ್ನು ಮಾಡುತ್ತಾನೆ. ಎಲೈ ರಾಜನೇ, ಅವನು ವೀಣಾ, ವಲ್ಲಕೀ, ವೇಣುಗಳ ಮಧುರವಾದ ಘೋಷಗಳಿಂದ ನಿದ್ರೆಯಿಂದ ಎಚ್ಚರಿಸಲ್ಪಡುತ್ತಾನೆ.

ಸಂವತ್ಸರಮಿಹೈಕಂ ತು ಮಾಸಿ ಮಾಸಿ ಪಿಬೇತ್ ಪಯಃ |
ಫಲಂ ವಿಶ್ವಜಿತಸ್ತಾತ ಪ್ರಾಪ್ನೋತಿ ಸುಮನೋರಮಮ್ ॥48॥
ಸಿಂಹವ್ಯಾಘ್ರಪ್ರಯುಕ್ತೇನ ವಿಮಾನೇನ ಸ ಗಚ್ಛತಿ |
ಸಪ್ತತಿಂ ಚ ಸಹಸ್ರಾಣಿ ವರ್ಷಾಣಾಂ ದಿವಿ ಮೋದತೇ ॥49॥
ಎಲೈ ಪ್ರೀತಿಪಾತ್ರನೇ, ಯಾವನು ತಿಂಗಳಿಗೆ ಒಂದು ಬಾರಿ ಜಲಪಾನವನ್ನು ಮಾಡಿ ಸಂವತ್ಸರವನ್ನು ಕಳೆಯುತ್ತಾನೆಯೋ ಅವನು ವಿಶ್ವಜಿತ್ ಯಾಗದ ಅತಿಮನೋಹರವಾದ ಫಲವನ್ನು ಪಡೆಯುತ್ತಾನೆ. ಸಿಂಹವ್ಯಾಘ್ರಗಳನ್ನು ಹೂಡಿದ ವಿಮಾನದಲ್ಲಿ ಅವನು ಸಂಚರಿಸುತ್ತಾನೆ. ಎಪ್ಪತ್ತು ಸಾವಿರ ವರ್ಷಗಳ ಕಾಲ ಸ್ವರ್ಗಸುಖವನ್ನು ಅನುಭವಿಸುತ್ತಾನೆ.
ಮಾಸಾದೂರ್ಧ್ವಂ ನರವ್ಯಾಘ್ರ ನೋಪವಾಸೋ ವಿಧೀಯತೇ |
ವಿಧಿಂ ತ್ವನಶನಸ್ಯಾಹುಃ ಪಾರ್ಥ ಧರ್ಮವಿದೋ ಜನಾಃ ॥50॥
ಎಲೈ ನರವ್ಯಾಘ್ರನೇ, ಒಂದು ಮಾಸಕ್ಕಿಂತ ಹೆಚ್ಚು ಉಪವಾಸವು ವಿಹಿತವಾಗುವುದಿಲ್ಲ. ಎಲೈ ಪಾರ್ಥನೇ, ಧರ್ಮವನ್ನು ತಿಳಿದ ಜನರು ಹೀಗೆ ಈ ಉಪವಾಸ ವಿಧಿಯನ್ನು ಹೇಳುತ್ತಾರೆ.
ಅನಾತುರೋ ವ್ಯಾಧಿರಹಿತೋ ಗಚ್ಛೇದನಶನಂ ತು ಯಃ |
ಪದೇ ಪದೇ ಯಜ್ಞಫಲಂ ಪ್ರಾಪ್ನೋತ್ಯೇವ ನ ಸಂಶಯಃ ॥51॥
ದಿವಂ ಹಂಸಪ್ರಯುಕ್ತೇನ ವಿಮಾನೇನ ಸ ಗಚ್ಛತಿ |
ಶತಂ ಚಾಪ್ಸರಸಃ ಕನ್ಯಾ ರಮಯಂತ್ಯೇಪಿ ತಂ ನರಮ್ ॥52॥
ದುಃಖಕ್ಕೆ ಈಡಾಗದೆ, ವ್ಯಾಧಿರಹಿತನಾಗಿ ಯಾವನು ಉಪವಾಸವ್ರತವನ್ನು ಮಾಡುತ್ತಾನೆಯೋ ಅವನು ಹೆಜ್ಜೆ ಹೆಜ್ಜೆಗೆ ಯಜ್ಞಫಲವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಅವನು ಹಂಸಗಳನ್ನು ಹೂಡಿದ ವಿಮಾನದಿಂದ ಸ್ವರ್ಗಕ್ಕೆ ಹೋಗುತ್ತಾನೆ. ಅವನನ್ನು ನೂರು ಜನ ಅಪ್ಸರಕನ್ಯೆಯರು ಸಂತೋಷಪಡಿಸುತ್ತಾರೆ.
ಆರ್ತೋ ವಾ ವ್ಯಾಧಿತೋ ವಾಪಿ ಗಚ್ಛೇದನಶನಂ ತು ಯಃ |
ಶತಂ ವರ್ಷಸಹಸ್ರಾಣಾಂ ಮೋದತೇ ದಿವಿ ಸ ಪ್ರಭೋ |
ಕಾಂಚೀನೂಪುರಶಬ್ದೇನ ಪ್ರಸುಪ್ತಃ ಪ್ರತಿಬುಧ್ಯತೇ ॥53॥
ಆರ್ತನಾಗಿರಲಿ ಅಥವಾ ವ್ಯಾಧಿಗ್ರಸ್ತನಾಗಿರಲಿ ಯಾವನು ಉಪವಾಸವನ್ನು ಮಾಡುತ್ತಾನೆಯೋ ಅವನು ಒಂದು ಲಕ್ಷವರ್ಷಗಳ ಕಾಲ ಸ್ವರ್ಗದಲ್ಲಿ ಸುಖವನ್ನು ಪಡೆಯುತ್ತಾನೆ. ಎಲೈ ಪ್ರಭುವೇ, ಮಲಗಿದ ಅವನು ಕಾಂಚೀನೂಪುರ ಶಬ್ದಗಳಿಂದ ಎಚ್ಚರಿಸಲ್ಪಡುತ್ತಾನೆ.
ಸಹಸ್ರಹಂಸಸಂಯುಕ್ತೇ ವಿಮಾನೇ ಸೋಮವರ್ಚಸಿ |
ಸ ಗತ್ವಾ ಸ್ತ್ರೀಶತಾಕೀರ್ಣೇ ರಮತೇ ಭರತರ್ಷಭ ॥54॥
ಎಲೈ ಭರತಶ್ರೇಷ್ಠನೇ, ಅವನು ಸಹಸ್ರ ಹಂಸಗಳಿಂದ ಯುಕ್ತವಾದ, ಚಂದ್ರನ ಕಾಂತಿಯನ್ನು ಹೊಂದಿದ, ನೂರು ಸ್ತ್ರೀಯರಿಂದ ತುಂಬಿದ ವಿಮಾನದಲ್ಲಿ ಸಂಚರಿಸುತ್ತಾ ಸುಖಪಡುತ್ತಾನೆ.
ಕ್ಷೀಣಸ್ಯಾಪ್ಯಾಯನಂ ದೃಷ್ಟಂ ಕ್ಷತಸ್ಯ ಕ್ಷತರೋಹಣಮ್ |
ವ್ಯಾಧಿತಸ್ಯೌಷಧಗ್ರಾಮಃ ಕ್ರುದ್ಧಸ್ಯ ಚ ಪ್ರಸಾದನಮ್ ॥55॥
ಕ್ಷೀಣನಾದವನಿಗೆ ಉಂಟಾಗುವ ಅಭಿವೃದ್ಧಿಯು ನೋಡಲ್ಪಟ್ಟಿದೆ. ಗಾಯಗೊಂಡವನಿಗೆ ಆ ಗಾಯದ ಪರಿಹಾರವು ದೃಷ್ಟವಾಗಿದೆ. ವ್ಯಾಧಿಗ್ರಸ್ತನಾದವನಿಗೆ ಔಷಧಸಮೂಹಗಳಿಂದ ವ್ಯಾಧಿಪರಿಹಾರವೂ ದೃಷ್ಟವಾಗಿದೆ. ಕೋಪಗೊಂಡವನನ್ನು ಸಮಾಧಾನಪಡಿಸಿ ಕೋಪವನ್ನು ಕಳೆಯುವುದೂ ದೃಷ್ಟವಾಗಿದೆ.
ದುಃಖಿತಸ್ಯಾರ್ಥಮಾನಾಭ್ಯಾಂ ದ್ರವ್ಯಾಣಾಂ ಪ್ರತಿಪಾದನಮ್ |
ನ ಚೈತೇ ಸ್ವರ್ಗಕಾಮಸ್ಯ ರೋಚಂತೇ ಸುಖಮೇಧಸಃ ॥56॥
ದುಃಖಿತನಾದವನಿಗೆ ದ್ರವ್ಯವನ್ನು ನೀಡಿ ಅರ್ಥಮಾನಗಳಿಂದ ದುಃಖವನ್ನು ಪರಿಹರಿಸುವುದು ದೃಷ್ಟವಾಗಿದೆ. ಆದರೆ ಸ್ವರ್ಗಸುಖದಲ್ಲೇ ನೆಟ್ಟ ಮನಸ್ಸುಳ್ಳವನಿಗೆ ಇವು ಯಾವುವೂ ರುಚಿಸುವುದಿಲ್ಲ.
ಅತಃ ಸ ಕಾಮಸಂಯುಕ್ತೋ ವಿಮಾನೇ ಹೇಮಸನ್ನಿಭೇ |
ರಮತೇ ಸ್ತ್ರೀಶತಾಕೀರ್ಣೇ ಪುರುಷೋಽಲಂಕೃತಃ ಶುಭೇ ॥57॥
ಆದ್ದರಿಂದ ಅವನು ಕಾಮದಿಂದ ಕೂಡಿದವನಾಗಿ, ಸುವರ್ಣಕಾಂತಿಯುಳ್ಳ ವಿಮಾನದಲ್ಲಿ ಅಲಂಕೃತನಾಗಿ ನೂರು ಸ್ತ್ರೀಯರಿಂದ ಕೂಡಿದವನಾಗಿ ಸಂತೋಷ ಪಡುತ್ತಾನೆ.
ಸ್ವಸ್ಥಃ ಸಫಲಸಂಕಲ್ಪಃ ಸುಖೀ ವಿಗತಕಲ್ಮಷಃ |
ಅನಶ್ನನ್ ದೇಹಮುತ್ಸೃಜ್ಯ ಫಲಂ ಪ್ರಾಪ್ನೋತಿ ಮಾನವಃ ॥58॥
ಸಮಾಧಾನಚಿತ್ತನಾಗಿ ಅನಶನವ್ರತವನ್ನು ಮಾಡುವವನು ತನ್ನ ದೇಹವನ್ನು ತ್ಯಜಿಸಿ, ಸಂಕಲ್ಪಸಿದ್ಧಿಯನ್ನು ಪಡೆದು, ದೋಷಗಳನ್ನು ಕಳೆದುಕೊಂಡು ಸುಖರೂಪವಾದ ಫಲವನ್ನು ಹೊಂದುತ್ತಾನೆ.
ಬಾಲಸೂರ್ಯಪ್ರತೀಕಾಶೇ ವಿಮಾನೇ ಹೇಮವರ್ಚಸಿ |
ವೈಡೂರ್ಯಮುಕ್ತಾಖಚಿತೇ ವೀಣಾಮುರಜನಾದಿತೇ ॥59॥
ಪತಾಕಾದೀಪಿಕಾಕೀರ್ಣೇ ದಿವ್ಯಘಂಟಾನಿನಾದಿತೇ |
ಸ್ತ್ರೀಸಹಸ್ರಾನುಚರಿತೇ ಸ ನರಃ ಸುಖಮೇಧತೇ ॥60॥
ಬಾಲಸೂರ್ಯನ ಕಾಂತಿಯನ್ನು ಹೊಂದಿದ, ಸುವರ್ಣವರ್ಣೋಪೇತವಾದ, ವೈಡೂರ್ಯಮುಕ್ತಾಮಣಿಗಳಿಂದ ಖಚಿತವಾದ, ವೀಣಾಮುರಜ ವಾದ್ಯಶಬ್ದಗಳಿಂದ ಕೂಡಿದ, ಪತಾಕೆಗಳಿಂದಲೂ ಮತ್ತು ದೀಪಗಳಿಂದಲೂ ನಿಬಿಡವಾದ, ದೇವ ಘಂಟಾನಾದವನ್ನು

ಹೊಂದಿದ, ಸಹಸ್ರ ಸ್ತ್ರೀಯರಿಂದ ತುಂಬಿದ ವಿಮಾನದಲ್ಲಿ ಅವನು ಸುಖವನ್ನು ಹೊಂದುತ್ತಾನೆ.
ಯಾವಂತಿ ರೋಮಕೂಪಾಣಿ ತಸ್ಯ ಗಾತ್ರೇಷು ಪಾಂಡವ |
ತಾವಂತ್ಯೇವ ಸಹಸ್ರಾಣಿ ವರ್ಷಾಣಾಂ ದಿವಿ ಮೋದತೇ ॥61॥
ಎಲೈ ಪಾಂಡವನೇ, ಅವನ ದೇಹದಲ್ಲಿ ಎಷ್ಟು ರೋಮಕೂಪಗಳಿವೆಯೋ ಅಷ್ಟು ಸಹಸ್ರವರ್ಷಗಳ ಕಾಲ ಸ್ವರ್ಗದಲ್ಲಿ ಸುಖಪಡುತ್ತಾನೆ.
ನಾಸ್ತಿ ವೇದಾತ್ ಪರಂ ಶಾಸ್ತ್ರಂ ನಾಸ್ತಿ ಮಾತೃಸಮೋ ಗುರುಃ |
ನ ಧರ್ಮಾತ್ಪರಮೋ ಲಾಭಃ ತಪೋ ನಾನಶನಾತ್ ಪರಮ್ ॥62॥
ವೇದಗಳಿಗಿಂತ ದೊಡ್ಡ ಶಾಸ್ತ್ರವಿಲ್ಲ. ತಾಯಿಗಿಂತ ದೊಡ್ಡ ಗುರುವಿಲ್ಲ. ಧರ್ಮಕ್ಕಿಂತ ಶ್ರೇಷ್ಠವಾದ ಲಾಭವಿಲ್ಲ. ಉಪವಾಸಕ್ಕಿಂತ ಶ್ರೇಷ್ಠವಾದ ತಪಸ್ಸಿಲ್ಲ.
ಬ್ರಾಹ್ಮಣೇಭ್ಯಃ ಪರಂ ನಾಸ್ತಿ ಪಾವನಂ ದಿವಿ ಚೇಹ ಚ |
ಉಪವಾಸೈಸ್ತಥಾ ತುಲ್ಯಂ ತಪಃಕರ್ಮ ನ ವಿದ್ಯತೇ ॥63॥
ಬ್ರಾಹ್ಮಣರಿಗಿಂತ ಶ್ರೇಷ್ಠವಾದುದು, ಹೆಚ್ಚು ಪವಿತ್ರವಾದುದು ಈ ಲೋಕದಲ್ಲಾಗಲೀ ಅಥವಾ ಸ್ವರ್ಗಲೋಕದಲ್ಲಾಗಲೀ ಯಾವುದೂ ಇಲ್ಲ. ಹಾಗೆಯೇ ಉಪವಾಸಕ್ಕೆ ಸಮಾನವಾದ ತಪಸ್ಸೂ ಯಾವುದೂ ಇಲ್ಲ.
ಉಪೋಷ್ಯ ವಿಧಿವದ್ ದೇವಾಸ್ತ್ರಿದಿವಂ ಪ್ರತಿಪೇದಿರೇ |
ಋಷಯಶ್ಚ ಪರಾಂ ಸಿದ್ಧಿಮುಪವಾಸೈರವಾಪ್ನುವನ್ ॥64॥
ವಿಧಿಪೂರ್ವಕವಾಗಿ ಉಪವಾಸವನ್ನು ಮಾಡಿ ದೇವತೆಗಳು ಸ್ವರ್ಗವನ್ನು ಹೊಂದಿದರು. ಋಷಿಗಳೂ ಸಹ ಉಪವಾಸವನ್ನು ಮಾಡಿ ಶ್ರೇಷ್ಠವಾದ ಸಿದ್ಧಿಯನ್ನು ಪಡೆದರು.
ದಿವ್ಯಂ ವರ್ಷಸಹಸ್ರಂ ಹಿ ವಿಶ್ವಾಮಿತ್ರೇಣ ಧೀಮತಾ |
ಕ್ಷಾಂತಮೇಕೇನ ಭಕ್ತೇನ ತೇನ ವಿಪ್ರತ್ವಮಾಗತಃ ॥65॥
ಮೇಧಾವಿಗಳಾದ ವಿಶ್ವಾಮಿತ್ರರು ದಿವ್ಯಮಾನದ ಸಹಸ್ರವರ್ಷಗಳ ಕಾಲ ಕಷ್ಟವನ್ನು ಸಹಿಸಿ ಏಕಭಕ್ತವನ್ನು ಮಾಡಿದರು. ಆದ್ದರಿಂದ ಬ್ರಾಹ್ಮಣ್ಯವನ್ನು ಪಡೆದರು.
ಚ್ಯವನೋ ಜಮದಗ್ನಿಶ್ಚ ವಸಿಷ್ಠೋ ಗೌತಮೋ ಭೃಗುಃ |
ಸರ್ವ ಏವ ದಿವಂ ಪ್ರಾಪ್ತಾಃ ಕ್ಷಮಾವಂತೋ ಮಹರ್ಷಯಃ ॥66॥
ಚ್ಯವನ, ಜಮದಗ್ನಿ, ವಸಿಷ್ಠ, ಗೌತಮ, ಭೃಗು ಈ ಎಲ್ಲ ಮಹರ್ಷಿಗಳು ಉಪವಾಸ ಕಷ್ಟವನ್ನು ಸಹಿಸಿ ಸ್ವರ್ಗವನ್ನು ಹೊಂದಿದರು.
ಇದಮಂಗಿರಸಾ ಪೂರ್ವಂ ಮಹರ್ಷಿಭ್ಯಃ ಪ್ರದರ್ಶಿತಮ್ |
ಯಃ ಪ್ರದರ್ಶಯತೇ ನಿತ್ಯಂ ನ ಸ ದುಃಖಮವಾಪ್ನುಯಾತ್ ॥67॥
ಇದನ್ನು ಹಿಂದೆ ಅಂಗಿರಸರು ಮಹರ್ಷಿಗಳಿಗೆ ಉಪದೇಶಿಸಿದರು. ಇದನ್ನು ನಿತ್ಯವೂ ಯಾವನು ಉಪದೇಶಿಸುತ್ತಾನೆಯೋ ಅವನು ದುಃಖವನ್ನು ಹೊಂದುವುದಿಲ್ಲ.
ಇಮಂ ತು ಕೌಂತೇಯ ಯಥಾಕ್ರಮಂ ವಿಧಿಂ
ಪ್ರವರ್ತಿತಂ ಹ್ಯಂಗಿರಸಾ ಮನೀಷಿಣಾ |
ಪಠೇತ ಯೋ ವೈ ಶೃಣುಯಾಚ್ಚ ನಿತ್ಯದಾ
ನ ವಿದ್ಯತೇ ತಸ್ಯ ನರಸ್ಯ ಕಿಲ್ಬಿಷಮ್ ॥68॥
ಎಲೈ ಕೌಂತೇಯನೇ, ಮೇಧಾವಿಗಳಾದ ಅಂಗಿರಸರಿಂದ ಪ್ರವರ್ತಿತವಾದ ಕ್ರಮಬದ್ಧವಾದ ಈ ಉಪವಾಸವಿಧಿಯನ್ನು ಯಾವನು ನಿತ್ಯವೂ ಹೇಳುತ್ತಾನೆಯೋ ಅಥವಾ ಕೇಳುತ್ತಾನೆಯೋ ಅಂತಹ ಮನುಷ್ಯನ ದೋಷಗಳು ನಾಶವನ್ನು ಹೊಂದುತ್ತವೆ.
ವಿಮುಚ್ಯತೇ ಚಾಪಿ ಸ ಸರ್ವಸಂಕರೈಃ
ನ ಚಾಸ್ಯ ದೋಷೈರಭಿಭೂಯತೇ ಮನಃ |
ವಿಯೋನಿಜಾನಾಂ ಚ ವಿಜಾನತೇ ರುತಂ
ಧ್ರುವಾಂ ಚ ಕೀರ್ತಿಂ ಲಭತೇ ನರೋತ್ತಮಃ ॥69॥
ಅವನು ಸರ್ವಸಂಕರಗಳಿಂದಲೂ ಮುಕ್ತನಾಗುತ್ತಾನೆ. ಅವನ ಮನಸ್ಸಿನಲ್ಲಿ ರಾಗಾದಿ ದೋಷಗಳು ಉಂಟಾಗುವುದಿಲ್ಲ. ಪಶು-ಪಕ್ಷಾದಿಗಳ ಭಾಷೆಯನ್ನೂ ತಿಳಿಯುತ್ತಾನೆ. ಆ ನರೋತ್ತಮನು ಶಾಶ್ವತವಾದ ಕೀರ್ತಿಯನ್ನೂ ಪಡೆಯುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮೇ ಉಪವಾಸವಿಧಿರ್ನಾಮ ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಅರವತ್ತನೆಯ ಅಧ್ಯಾಯ
## ಉಪವಾಸ ಫಲ

ಯುಧಿಷ್ಠಿರಃ
ಪಿತಾಮಹೇನ ವಿಧಿವದ್ ಯಜ್ಞಾಃ ಪ್ರೋಕ್ತಾ ಮಹಾತ್ಮನಾ |
ಗುಣಾಶ್ಚೈಷಾಂ ಯಥಾತತ್ತ್ವಂ ಪ್ರೇತ್ಯ ಚೇಹ ಚ ಸರ್ವಶಃ ॥1॥

ನ ತೇ ಶಕ್ಯಾ ದರಿದ್ರೇಣ ಯಜ್ಞಾಃ ಪ್ರಾಪ್ತುಂ ಪಿತಾಮಹ |
ಬಹೂಪಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ||2||
ಯುಧಿಷ್ಠಿರ ಮಹಾತ್ಮರಾದ ಪಿತಾಮಹರಾದ ನೀವು ವಿಧಿಗೆ ಅನುಸಾರವಾಗಿ ಯಜ್ಞಗಳನ್ನೂ, ಈ ಲೋಕದಲ್ಲಿ ಮತ್ತು ಮರಣಾನಂತರದಲ್ಲಿ ಅವುಗಳಿಂದ ಉಂಟಾಗುವ ಫಲಗಳನ್ನೂ ಸರಿಯಾಗಿ ಹೇಳಿದ್ದೀರಿ. ಎಲ್ಲೈ ಪಿತಾಮಹನೇ, ಯಜ್ಞಗಳು, ಅನೇಕ ದ್ರವ್ಯಗಳಿಂದ, ಅನೇಕ ಸಾಧನಗಳಿಂದ  ವಿಸ್ತಾರವಾದವುಗಳು. ದರಿದ್ರರಾದವರು ಅದನ್ನು ಮಾಡಲು ಸಾಧ್ಯವಿಲ್ಲ.
ಪಾರ್ಥಿವೈ ರಾಜಪುತ್ರೈರ್ವಾ ಶಕ್ಯಾಃ ಪ್ರಾಪ್ತುಂ ಪಿತಾಮಹ |
ನಾರ್ಥನ್ಯೂನೈರವಗುಣೈರೇಕಾತ್ಮಭಿರಸಂಹತೈಃ ||3||
ಯೋ ದರಿದ್ರೈರಪಿ ವಿಧಿಃ ಶಕ್ಯಃ ಪ್ರಾಪ್ತುಂ ಸದಾ ಭವೇತ್ |
ತುಲ್ಯೋ ಯಜ್ಞಫಲೈರೇತೈಸ್ತನ್ಮೇ ಬ್ರೂಹಿ ಪಿತಾಮಹ ||4||
ಎಲ್ಲೈ ಪಿತಾಮಹನೇ, ರಾಜರು ಅಥವಾ ರಾಜಪುತ್ರರು ಯಜ್ಞಗಳನ್ನು ಮಾತ್ರ ಮಾಡಬಹುದು. ಧನವಿಲ್ಲದೆ ಯಜ್ಞೋಪಯೋಗಿಯಾದ ದ್ರವ್ಯಗಳಿಲ್ಲದೆ, ಇನ್ನೊಬ್ಬರ ಜೊತೆ ಇಲ್ಲದೆ ಒಬ್ಬಂಟಿಗರಾಗಿ ಇರುವವರು ಅದನ್ನು ಮಾಡಲಾರರು. ಎಲ್ಲೈ ಪಿತಾಮಹನೇ, ಧನದಿಂದ ದರಿದ್ರರಾದವರೂ ಸಹ ಯಾವ ನಿಯಮವನ್ನು ಮಾಡಲು ಸಾಧ್ಯವೋ ಮತ್ತು ಯಾವ ನಿಯಮವನ್ನು ಮಾಡಿದರೆ ಯಜ್ಞಗಳಿಗೆ ಸಮಾನವಾದ ಫಲವು ಬರುವುದೋ ಅಂತಹದನ್ನು ಹೇಳು.
ಭೀಷ್ಮಃ
ಇದಮಂಗಿರಸಾ ಪ್ರೋಕ್ತಮುಪವಾಸಫಲಾತ್ಮಕಮ್ |
ವಿಧಿಂ ಯಜ್ಞಫಲೈಸ್ತುಲ್ಯಂ ತನ್ನಿಬೋಧ ಯುಧಿಷ್ಠಿರ ||5||
ಭೀಷ್ಮ ಎಲ್ಲೈ ಯುಧಿಷ್ಠಿರನೇ, ಯಜ್ಞಕ್ಕೆ ಸಮಾನವಾದ ಫಲವನ್ನು ನೀಡುವ ಉಪವಾಸದ ವಿಧಿಯನ್ನು, ಅದರ ಫಲವನ್ನು ಅಂಗಿರಸರು ಹೇಳಿದ್ದಾರೆ. ಅದನ್ನು ಕೇಳು.
ಯಸ್ತು ಕಾಲ್ಯಂ ತಥಾ ಸಾಯಂ ಭುಂಜಾನೋ ನಾಂತರಾ ಪಿಬೇತ್ |
ಅಹಿಂಸಾನಿರತೋ ನಿತ್ಯಂ ಜುಹ್ವಾನೋ ಜಾತವೇದಸಮ್ ||6||
ಷಡ್ಭಿರೇವ ತು ವರ್ಷೈಃ ಸ ಸಿಧ್ಯತೇ ನಾತ್ರ ಸಂಶಯಃ |
ತಪ್ತಕಾಂಚನವರ್ಣಂ ಚ ವಿಮಾನಂ ಲಭತೇ ನರಃ ||7||
ಯಾವನು ವಿಹಿತಕಾಲದಲ್ಲಿ ಮಧ್ಯಾಹ್ನದಲ್ಲಿ ಮತ್ತು ಸಾಯಂಕಾಲದಲ್ಲಿ ಭೋಜನವನ್ನು ಮಾಡಿ, ಮಧ್ಯೆ ನೀರನ್ನೂ ಪಾನಮಾಡದೆ, ಅಗ್ನಿಹೋತ್ರವನ್ನು ಮಾಡುವವನೋ ಅವನು ಆರು ವರ್ಷಗಳಲ್ಲಿಯೇ ಸಿದ್ಧಿಯನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ. ಅವನು ಪುಟವಿಟ್ಟ ಚಿನ್ನದ ಬಣ್ಣವುಳ್ಳ ವಿಮಾನವನ್ನು ಪಡೆಯುತ್ತಾನೆ.
ದೇವಸ್ತ್ರೀಣಾಮಧೀವಾಸೇ ನೃತ್ಯಗೀತನಿನಾದಿತೇ |
ಪ್ರಾಜಾಪತ್ಯೇ ವಸೇತ್ ಪದ್ಮಮ್ ಅಗ್ನಿವರ್ಣನಿಭೇ ಶುಭೇ ||8||
ನೃತ್ಯ-ಗಾನ-ಶಂಖಗಳಿಂದ ಕೂಡಿದ, ದೇವಸ್ತ್ರೀಯರ ವಾಸಸ್ಥಾನವಾದ, ಅಗ್ನಿವರ್ಣದ ಶುಭವಾದ ಪ್ರಜಾಪತಿಯ ಲೋಕದಲ್ಲಿ ಒಂದು ಪದ್ಮವರ್ಷಗಳ ಕಾಲ ವಾಸ ಮಾಡುತ್ತಾನೆ (ಏಕ, ದಶ, ಶತಕ, ಸಾವಿರ, ದಶಸಾವಿರ, ಲಕ್ಷ, ದಶಲಕ್ಷ, ಕೋಟಿ, ದಶಕೋಟಿ, ಅರ್ಬುದ, ನಿರ್ಬುದ, ಖರ್ವ, ನಿಖರ್ವ, ಪದ್ಮ, ಶಂಖ ... - ಹೀಗೆ ಹತ್ತೊಂಬತ್ತು ಸ್ಥಾನದವರೆಗೆ ಸಂಖ್ಯೆಗಳು ಪ್ರಾಚೀನ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿವೆ).
ತ್ರೀಣಿ ವರ್ಷಾಣಿ ಯಃ ಪ್ರಾಶೇತ್ ಸತತಂ ತ್ವೇಕಭೋಜನಮ್ |
ಧರ್ಮಪತ್ನೀರತೋ ನಿತ್ಯಮಗ್ನಿಷ್ಟೋಮಫಲಂ ಲಭೇತ್ ||9||
ಮೂರು ವರ್ಷಗಳ ಕಾಲ ಸತತವಾಗಿ ಏಕಭೋಜನವನ್ನು ಮಾಡಿ ಧರ್ಮಪತ್ನೀ ರತನಾಗಿದ್ದರೆ ಅವನು ಅಗ್ನಿಷ್ಟೋಮ ಫಲವನ್ನು ಪಡೆಯುವನು.
ದ್ವಿತೀಯೇ ದಿವಸೇ ಯಸ್ತು ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶಮಾಸಾಂಸ್ತು ಜುಹ್ವಾನೋ ಜಾತವೇದಸಮ್ |
ಯಜ್ಞಂ ಬಹುಸುವರ್ಣಂ ವಾ ವಾಸವಪ್ರಿಯಮಾಹರೇತ್ ||10||
ಎರಡು ದಿವಸಗಳಿಗೊಮ್ಮೆ ರಾತ್ರಿಯಲ್ಲಿ ಒಂದು ಭೋಜನವನ್ನು ಮಾಡುವವನು ಹನ್ನೆರಡು ತಿಂಗಳುಗಳ ಕಾಲ ಹೀಗೆ ಮಾಡಿ ಅಗ್ನಿಹೋತ್ರವನ್ನು ಮಾಡಿದರೆ ಬಹು ಸುವರ್ಣದಾನವನ್ನು ಮಾಡಿದ ಇಂದ್ರನಿಗೆ ಪ್ರಿಯವಾದ ಯಾಗದ ಫಲವನ್ನು ಪಡೆಯುತ್ತಾನೆ.
ಸತ್ಯವಾಗ್ ದಾನಶೀಲಶ್ಚ ಬ್ರಹ್ಮಣ್ಯಶ್ಚಾನಸೂಯಕಃ |
ಕ್ಷಾಂತೋ ದಾಂತೋ ಜಿತಕ್ರೋಧಃ ಸ ಗಚ್ಛೇತ್ ಪರಮಾಂ ಗತಿಮ್ ||
ಪಾಂಡರಾಭ್ರಪ್ರತೀಕಾಶೇ ವಿಮಾನೇ ಹಂಸಲಕ್ಷಣೇ |
ದ್ವೇ ಸಮಾಪ್ತೇ ತತಃ ಪದ್ಮೇ ಸೋಽಪ್ಸರೋಭಿರ್ವಸೇತ್ಸಹ ||12||
ಯಾವನು ಸತ್ಯವಚನನೂ, ದಾನಶೀಲನೂ, ಬ್ರಾಹ್ಮಣವತ್ಸಲನೂ, ಅಸೂಯಾ ರಹಿತನೂ, ಕಷ್ಟಸಹಿಷ್ಣುವೂ, ಇಂದ್ರಿಯನಿಗ್ರಹವುಳ್ಳವನೂ, ಕ್ರೋಧವನ್ನು ಜಯಿಸಿದವನೂ ಆಗಿರುತ್ತಾನೋ ಅವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. ಅವನು ಹಂಸಗಳ ಚಿಹ್ನೆಗಳಿಂದ ಕೂಡಿರುವ ಬಿಳಿಯ ಮೋಡದ ಬಣ್ಣದ ವಿಮಾನದಲ್ಲಿ ಪೂರ್ಣವಾಗಿ ಎರಡು ಪದ್ಮವರ್ಷಗಳ ಕಾಲ ಅಪ್ಸರೆಯರ ಜೊತೆಯಲ್ಲಿ ವಾಸ ಮಾಡುತ್ತಾನೆ.
ತೃತೀಯೇ ದಿವಸೇ ಯಸ್ತು ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶಮಾಸಾಂಸ್ತು ಜುಹ್ವಾನೋ ಜಾತವೇದಸಮ್ ||13||

ಅತಿರಾತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ |
ಮಯೂರಹಂಸಸಂಯುಕ್ತಂ ವಿಮಾನಂ ಲಭತೇ ನರಃ ॥14॥
ಹನ್ನೆರಡು ತಿಂಗಳುಗಳ ಕಾಲ ಮೂರು ದಿವಸದಲ್ಲಿ ಒಮ್ಮೆ ಏಕಭೋಜನವನ್ನು ಮಾಡಿ ಅಗ್ನಿಹೋತ್ರವನ್ನು ಮಾಡುವವನು ಅತಿರಾತ್ರಯಾಗದ ಶ್ರೇಷ್ಠವಾದ ಫಲವನ್ನು ಹೊಂದುತ್ತಾನೆ. ಮಯೂರ ಮತ್ತು ಹಂಸಗಳಿಂದ ಕೂಡಿದ ವಿಮಾನವನ್ನು ಪಡೆಯುತ್ತಾನೆ.
ಸಪ್ತರ್ಷೀಣಾಂ ಸದಾ ಲೋಕೇ ಸೋಽಪ್ಸರೋಭಿರ್ವಸೇತ್ ಸಹ |
ನಿವರ್ತನಂ ಚ ತತ್ರಾಸ್ಯ ತ್ರೀಣಿ ಪದ್ಮಾನಿ ವೈ ವಿದುಃ ॥15॥
ಅವನು ಸಪ್ತರ್ಷಿಗಳ ಲೋಕದಲ್ಲಿ ಅಪ್ಸರೆಯರ ಜೊತೆಯಲ್ಲಿ ವಾಸ ಮಾಡುತ್ತಾನೆ. ಮೂರು ಪದ್ಮವರ್ಷಗಳು ಕಳೆದ ಮೇಲೆ ಅವನು ಅಲ್ಲಿಂದ ಹಿಂದಿರುಗುತ್ತಾನೆ ಎಂದು ಜ್ಞಾನಿಗಳು ಹೇಳುತ್ತಾರೆ.
ದಿವಸೇ ಯಶ್ಚತುರ್ಥೇ ತು ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥16॥
ವಾಜಪೇಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ |
ಇಂದ್ರಕನ್ಯಾಧಿರೂಢಂ ಚ ವಿಮಾನಂ ಲಭತೇ ನರಃ॥17॥
ಸಾಗರಸ್ಯ ಚ ಪರ್ಯಂತೇ ವಾಸವಂ ಲೋಕಮಾವಸೇತ್ |
ದೇವರಾಜಸ್ಯ ಚ ಕ್ರೀಡಾಂ ನಿತ್ಯಕಾಲಮವೇಕ್ಷತೇ ॥18॥
ಯಾವನು ಹನ್ನೆರಡು ತಿಂಗಳುಗಳವರೆಗೆ ನಾಲ್ಕು ದಿವಸಗಳಿಗೊಮ್ಮೆ ಏಕಭೋಜನವನ್ನು ಮಾಡಿ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನು ವಾಜಪೇಯ ಯಾಗದ ಶ್ರೇಷ್ಠವಾದ ಫಲವನ್ನು ಹೊಂದುತ್ತಾನೆ. ಇಂದ್ರಕನ್ಯೆಯರಿಂದ ತುಂಬಿದ ವಿಮಾನವನ್ನು ಪಡೆಯುತ್ತಾನೆ. ಸಾಗರದ ಅಂಚಿನಲ್ಲಿ ಇಂದ್ರಲೋಕದಲ್ಲಿ ವಾಸಮಾಡುತ್ತಾನೆ. ದೇವರಾಜನಾದ ಇಂದ್ರನ ಕ್ರೀಡೆಗಳನ್ನು ನಿತ್ಯವೂ ನೋಡುತ್ತಾನೆ.
ದಿವಸೇ ಪಂಚಮೇ ಯಸ್ತು ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶಮಾಸಾಂಸ್ತು ಜುಹ್ವಾನೋ ಜಾತವೇದಸಮ್ ॥19॥
ಅಲುಬ್ಧಃ ಸತ್ಯವಾದೀ ಚ ಬ್ರಹ್ಮಣ್ಯಶ್ಚಾವಿಹಿಂಸಕಃ |
ಅನಸೂಯುರಪಾಪಸ್ಥೋ ದ್ವಾದಶಾಹಫಲಂ ಲಭೇತ್ ॥20॥
ಹನ್ನೆರಡು ತಿಂಗಳುಕಾಲ ಐದು ದಿವಸಗಳಿಗೊಮ್ಮೆ ಏಕಭೋಜನವನ್ನು ಮಾಡಿ ಅಗ್ನಿಹೋತ್ರವನ್ನು ಮಾಡುತ್ತಾ ಲೋಭವನ್ನು ಜಯಿಸಿ, ಸತ್ಯವಚನನಾಗಿ, ಬ್ರಾಹ್ಮಣ ವತ್ಸಲನಾಗಿ, ಅಹಿಂಸಾನಿರತನಾಗಿ, ಅಸೂಯೆಯನ್ನು ಮಾಡದೆ, ಪಾಪಕರ್ಮಗಳನ್ನು ಆಚರಿಸದೆ ಇರುವವನು ದ್ವಾದಶಾಹ ಯಾಗದ ಫಲವನ್ನು ಹೊಂದುತ್ತಾನೆ.
ಜಾಂಬೂನದಮಯಂ ದಿವ್ಯಂ ವಿಮಾನಮಧಿರೋಹತಿ |
ಸೂರ್ಯಮಾಲಾಸಮಾಭಾಸಮಾರೋಹೇತ್ ಪಾಂಡರಂ ಗೃಹಮ್ ॥
ಆವರ್ತನಾನಿ ಚತ್ವಾರಿ ತಥಾ ಪದ್ಮಾನಿ ದ್ವಾದಶ |
ದಾರಾಗ್ನಿಪರಿಮಾಣಶ್ಚ ತತ್ರಾಸೌ ವಸತೇ ಸುಖಮ್ ॥22॥
ಜಾಂಬೂನದಮಯವಾದ (ದೇವತೆಗಳು ಉಪಯೋಗಿಸುವ ಸುವರ್ಣಕ್ಕೆ ಜಾಂಬೂನದ ಎಂದು ಹೆಸರು) ದಿವ್ಯವಾದ ವಿಮಾನವನ್ನು ಏರುತ್ತಾನೆ. ಸೂರ್ಯನ ಪಂಕ್ತಿಗಳಿಗೆ ಸಮಾನವಾದ ಕಾಂತಿಯುಳ್ಳ ಶ್ವೇತವರ್ಣದ ಗೃಹವನ್ನು ಹೊಂದಿ ವಾಸಿಸುತ್ತಾನೆ. ನಾಲ್ಕು ಶಂಖಗಳು ಮತ್ತು ಹನ್ನೆರಡು ಪದ್ಮವರ್ಷಗಳ ಕಾಲ ಅಲ್ಲಿ ಅವನು ದಾರ ಎಂಬ ಪೊದೆಯ ಅಗ್ನಿಯ ವರ್ಣಕ್ಕೆ ಸಮಾನವಾದ ವರ್ಣದಿಂದ ಪ್ರಕಾಶಿಸುತ್ತಾ ಸುಖವಾಗಿ ವಾಸಮಾಡುತ್ತಾನೆ.
ದಿವಸೇ ಯಸ್ತು ಷಷ್ಠೇ ವೈ ಮುನಿಃ ಪ್ರಾಶೇತ ಭೋಜನಮ್ |
ಸದಾ ದ್ವಾದಶಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥23॥
ಸದಾ ತ್ರಿಷವಣಸ್ನಾಯೀ ಬ್ರಹ್ಮಚಾರ್ಯನಸೂಯಕಃ |
ಗವಾಮಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ ॥24॥
ಹನ್ನೆರಡು ತಿಂಗಳು ಕಾಲ ಯಾವನು ಆರು ದಿವಸಗಳಿಗೆ ಒಮ್ಮೆ ಏಕಭೋಜನವನ್ನು ಮಾಡಿ ಸದಾ ಅಗ್ನಿಹೋತ್ರವನ್ನು ಮಾಡುತ್ತಾ, ಸದಾ ತ್ರಿಕಾಲ ಸ್ನಾನವನ್ನು ಮಾಡಿ ಬ್ರಹ್ಮಚಾರಿಯಾಗಿ, ಅಸೂಯಾ ರಹಿತನಾಗಿರುತ್ತಾನೆಯೋ ಅವನು ಗವಾಮಯ ಯಜ್ಞದ ಶ್ರೇಷ್ಠವಾದ ಫಲವನ್ನು ಹೊಂದುತ್ತಾನೆ.
ಅಗ್ನಿಜ್ವಾಲಾಸಮಾಭಾಸಂ ಹಂಸಬರ್ಹಿಣಸೇವಿತಮ್ |
ಶಾತಕುಂಭಮಯಂ ಯುಕ್ತಂ ಸಾಧಯೇದ್ ಯಾನಮುತ್ತಮಮ್ ॥
ತಥೈವಾಪ್ಸರಸಾಮಂಕೇ ಪ್ರಸುಪ್ತಃ ಪ್ರತಿಬುಧ್ಯತೇ |
ನೂಪುರಾಣಾಂ ನಿನಾದೇನ ಮೇಖಲಾನಾಂ ಚ ನಿಸ್ವನೈಃ ॥26॥
ಅವನು ಅಗ್ನಿಜ್ವಾಲೆಗೆ ಸಮಾನವಾದ ಕಾಂತಿಯಿಂದ, ಹಂಸಗಳಿಂದ ಮತ್ತು ನವಿಲುಗಳಿಂದ ಸೇವಿತವಾದ ಸುವರ್ಣಮಯವಾದ, ಶ್ರೇಷ್ಠವಾದ ವಿಮಾನವನ್ನು ಪಡೆಯುತ್ತಾನೆ. ಹಾಗೆಯೇ ಅಪ್ಸರೆಯರ ತೊಡೆಯ ಮೇಲೆ ಮಲಗಿ ಯಜ್ಞಗಳ ಮತ್ತು ಮೇಖಲೆಗಳ (ಸೊಂಟದಲ್ಲಿ ಧರಿಸುವ ಆಭರಣ) ನಾದದಿಂದ ಎಚ್ಚರಗೊಳ್ಳುತ್ತಾನೆ.
ಕೋಟೀಸಹಸ್ರಂ ವರ್ಷಾಣಾಂ ತ್ರೀಣಿ ಕೋಟಿಶತಾನಿ ಚ |
ಪದ್ಮಾನ್ಯಷ್ಟಾದಶ ತಥಾ ಪತಾಕೇ ದ್ವೇ ತಥೈವ ಚ ॥27॥

ಅಯುತಾನಿ ಚ ಪಂಚಾಶದ್ ಲಕ್ಷಪಂಚಾಶತಸ್ಯ ಚ |
ಲೋಮ್ನಾಂ ಪ್ರಮಾಣೇನ ಸಮಂ ಬ್ರಹ್ಮಲೋಕೇ ಮಹೀಯತೇ ॥28॥
ಅವನು ಸಹಸ್ರಕೋಟಿ ಮತ್ತು ಮುನ್ನೂರು ಕೋಟಿ ಮತ್ತು ಹದಿನೆಂಟು ಪದ್ಮ ಮತ್ತು ಎರಡು ಪತಾಕ ಮತ್ತು ಐವತ್ತು ಅಯುತ (ಹತ್ತು ಸಾವಿರ) ಮತ್ತು ಒಂದು ಲಕ್ಷ ಐದುನೂರು ಮತ್ತು ದೇಹದಲ್ಲಿರುವ ಲೋಮಗಳ ಸಂಖ್ಯೆಗೆ ಸಮಾನವಾದ ವರ್ಷಗಳ ಕಾಲ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ದಿವಸೇ ಸಪ್ತಮೇ ಯಸ್ತು ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥29॥
ಸರಸ್ವತೀಂ ಗೋಪಯಾನೋ ಬ್ರಹ್ಮಚರ್ಯಂ ಸಮಾಚರನ್ |
ಸುಮನೋವರ್ಣಕಂ ಚೈವ ಮಧುಮಾಂಸಂ ಚ ವರ್ಜಯೇತ್ ॥30॥
ಪುರುಷೋ ಮರುತಾಂ ಲೋಕಮಿಂದ್ರಲೋಕಂ ಚ ಗಚ್ಛತಿ |
ತತ್ರ ತತ್ರ ಚ ಸಿದ್ಧಾರ್ಥೋ ದೇವಕನ್ಯಾಭಿರರ್ಚ್ಯತೇ ॥31॥
ಯಾವನು ಏಳುದಿವಸಗಳಿಗೊಮ್ಮೆ ಹನ್ನೆರಡು ತಿಂಗಳುಗಳ ಕಾಲ ಏಕಭೋಜನವನ್ನು ಮಾಡಿ, ಅಗ್ನಿಹೋತ್ರವನ್ನು ಮಾಡಿ, ವೇದವಾಣಿಯನ್ನು ರಕ್ಷಿಸಿಕೊಂಡು ಬ್ರಹ್ಮಚರ್ಯವನ್ನು ಆಚರಿಸುತ್ತಾ ಪುಷ್ಪಗಳನ್ನೂ ಗಂಧಗಳನ್ನೂ ಮಧು-ಮಾಂಸಗಳನ್ನೂ ತ್ಯಜಿಸುತ್ತಾನೆಯೋ ಅಂತಹವನು ಮರುತ್ತುಗಳ ಲೋಕಕ್ಕೂ, ಇಂದ್ರಲೋಕಕ್ಕೂ ಹೋಗುತ್ತಾನೆ. ಅಲ್ಲಲ್ಲಿ ಅವನು ಮನೋಭಿಲಾಷೆಯನ್ನು ಪೂರ್ಣಗೊಳಿಸಿಕೊಂಡು ದೇವಕನ್ಯೆಯರಿಂದ ಅರ್ಚಿಸಲ್ಪಡುತ್ತಾನೆ.
ಫಲಂ ಬಹುಸುವರ್ಣಸ್ಯ ಯಜ್ಞಸ್ಯ ಲಭತೇ ನರಃ |
ಸಂಖ್ಯಾಮತಿಗುಣಾಂ ಚಾಪಿ ತೇಷು ಲೋಕೇಷು ಮೋದತೇ ॥32॥
ಬಹುಸುವರ್ಣವನ್ನು ದಾನ ಮಾಡಿದ ಯಜ್ಞದ ಫಲವನ್ನು ಹೊಂದುತ್ತಾನೆ. ಬಹಳ ದೊಡ್ಡ ಸಂಖ್ಯೆಯಷ್ಟು ವರ್ಷಗಳ ಕಾಲ ಆ ಲೋಕಗಳಲ್ಲಿ ಸಂತೋಷಪಡುತ್ತಾನೆ.
ಯಸ್ತು ಸಂವತ್ಸರಂ ಕ್ಷಾಂತೋ ಭುಂಕ್ತೇಽಹನ್ಯಷ್ಟಮೇ ನರಃ |
ದೇವಕಾರ್ಯಪರೋ ನಿತ್ಯಂ ಜುಹ್ವಾನೋ ಜಾತವೇದಸಮ್ ॥33॥
ಪೌಂಡರೀಕಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ |
ಪದ್ಮವರ್ಣನಿಭಂ ಚೈವ ವಿಮಾನಮಧಿಗಚ್ಛತಿ ॥34॥
ಕೃಷ್ಣಾಃ ಕನಕಗೌರ್ಯಶ್ಚ ನಾರ್ಯಃ ಶ್ಯಾಮಾಸ್ತಥಾಪರಾಃ |
ವಯೋರೂಪವಿಲಾಸಿನ್ಯೋ ಲಭತೇ ನಾತ್ರ ಸಂಶಯಃ ॥35॥
ಯಾವನು ಒಂದು ವರ್ಷದ ಕಾಲ ಕಷ್ಟಸಹಿಷ್ಣುವಾಗಿ ಎಂಟು ದಿನಗಳಿಗೊಮ್ಮೆ ಒಂದು ಭೋಜನವನ್ನು ಮಾಡುತ್ತಾ ನಿತ್ಯವೂ ಅಗ್ನಿಹೋತ್ರವನ್ನು ಮಾಡುತ್ತಾ ದೇವಕಾರ್ಯದಲ್ಲಿ ನಿರತನಾಗಿರುತ್ತಾನೆಯೋ ಅವನು ಪುಂಡರೀಕ ಯಾಗದ ಶ್ರೇಷ್ಠ ಫಲವನ್ನು ಹೊಂದುತ್ತಾನೆ. ಪದ್ಮಕಾಂತಿಯುಳ್ಳ ವಿಮಾನವನ್ನು ಪಡೆಯುತ್ತಾನೆ. ಕೃಷ್ಣ ವರ್ಣದ, ಕನಕರತ್ನಗೌರವರ್ಣದ, ಶ್ಯಾಮವರ್ಣದ, ಒಳ್ಳೆಯ ರೂಪ ಮತ್ತು ವಯಸ್ಸನ್ನು ಹೊಂದಿದ ನಾರಿಯರನ್ನು ಪಡೆಯುವುದರಲ್ಲಿ ಸಂಶಯವಿಲ್ಲ.
ಯಸ್ತು ಸಂವತ್ಸರಂ ಭುಂಕ್ತೇ ನವಮೇ ನವಮೇಽಹನಿ |
ಸದಾ ದ್ವಾದಶಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥36॥
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ |
ಪುಂಡರೀಕಪ್ರಕಾಶಂ ಚ ವಿಮಾನಂ ಲಭತೇ ನರಃ ॥37॥
ಯಾವ ಮನುಷ್ಯನು ಒಂದು ವರ್ಷದ ಕಾಲ ಒಂಬತ್ತು ದಿನಗಳಿಗೊಮ್ಮೆ ಏಕ ಭೋಜನವನ್ನು ಮಾಡಿ ಸದಾ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನು ಅಶ್ವಮೇಧ ಯಾಗದ ಫಲವನ್ನು ಹೊಂದುತ್ತಾನೆ. ಪದ್ಮದ ಪ್ರಕಾಶವನ್ನು ಹೊಂದಿರುವಂತಹ ವಿಮಾನವನ್ನು ಪಡೆಯುತ್ತಾನೆ.
ದೀಪ್ತಸೂರ್ಯಾಗ್ನಿತೇಜೋಭಿರ್ದಿವ್ಯಮಾಲಾಭಿರೇವ ಚ |
ನೀಯತೇ ರುದ್ರಕನ್ಯಾಭಿಃ ಸೋಽಂತರಿಕ್ಷಂ ಸನಾತನಮ್ ॥38॥
ಅಷ್ಟಾದಶಸಹಸ್ರಾಣಿ ವರ್ಷಾಣಾಂ ಕಲ್ಪಮೇವ ಚ |
ಕೋಟೀಶತಸಹಸ್ರಂ ಚ ತೇಷು ಲೋಕೇಷು ಮೋದತೇ ॥39॥
ಜ್ವಲಿಸುವ ಸೂರ್ಯಾಗ್ನಿಗಳ ತೇಜಸ್ಸಿನಂತಹ ತೇಜಸ್ಸನ್ನು ಹೊಂದಿದ, ದಿವ್ಯ ಮಾಲೆಗಳನ್ನು ಧರಿಸಿದ ರುದ್ರಕನ್ಯೆಯರಿಂದ ಅವನು ಅಂತರಿಕ್ಷಕ್ಕೆ ಕರೆದುಕೊಂಡು ಹೋಗಲ್ಪಡುತ್ತಾನೆ. ಒಂದು ಕಲ್ಪ ಹದಿನೆಂಟು ಸಾವಿರ ವರ್ಷಗಳು ಮತ್ತು ನೂರು ಕೋಟಿ ವರ್ಷಗಳ ಕಾಲ ಆ ಲೋಕದಲ್ಲಿ ಸಂತೋಷಪಡುತ್ತಾನೆ.
ಯಸ್ತು ಸಂವತ್ಸರಂ ಭುಂಕ್ತೇ ದಶಮೇಹ್ನಿ ಗತೇ ಸತಿ |
ಸದಾ ದ್ವಾದಶಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥40॥
ಬ್ರಹ್ಮಕನ್ಯಾನಿವೇಶೇ ಚ ಸರ್ವಭೂತಮನೋಹರೇ |
ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ ॥41॥
ಯಾವನು ಒಂದು ವರ್ಷದ ಕಾಲ ಹತ್ತು ದಿವಸಗಳಿಗೊಮ್ಮೆ ಏಕಭೋಜನವನ್ನು ಮಾಡಿ, ಹನ್ನೆರಡು ತಿಂಗಳುಗಳ ಕಾಲ ಯಾವಾಗಲೂ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನು ಸರ್ವಪ್ರಾಣಿ ಮನೋಹರವಾದ ಬ್ರಹ್ಮಕನ್ಯೆಯರ ಗೃಹದಲ್ಲಿ ಸಹಸ್ರ ಅಶ್ವಮೇಧಯಾಗದ ಶ್ರೇಷ್ಠ ಫಲವನ್ನು ಹೊಂದುತ್ತಾನೆ.

ರೂಪವತ್ಯಶ್ಚ ತಂ ಕನ್ಯಾ ರಮಯಂತಿ ಸದಾ ನರಮ್ |
ನೀಲೋತ್ಪಲನಿಭೈರ್ವರ್ಣೈ ರಕ್ತೋತ್ಪಲನಿಭೈಸ್ತಥಾ ॥42॥
ವಿಮಾನಂ ಮಂಡಲಾವರ್ತಮಾವರ್ತಗಹನಾವೃತಮ್ |
ಸಾಗರೋರ್ಮಿಪ್ರತೀಕಾಶಂ ಸ ಲಭೇದ್ ಯಾನಮುತ್ತಮಮ್ ॥43॥
ರೂಪವತಿಯರಾದ ಆ ಕನ್ಯೆಯರು ಅವನನ್ನು ಸಂತೋಷಪಡಿಸುತ್ತಾರೆ. ಮಂಡಲಾಕಾರವಾದ, ಅನೇಕ ಅಂತಸ್ತುಗಳಿಂದ ಕೂಡಿದ, ಸಾಗರದ ಅಲೆಗಳಂತೆ ತೋರುವ ಶ್ರೇಷ್ಠವಾದ ವಿಮಾನವನ್ನು ಅವನು ಪಡೆಯುತ್ತಾನೆ.
ವಿಚಿತ್ರಮಣಿಮಾಲಾಭಿರ್ನಾದಿತಂ ಶಂಖಪುಷ್ಕರೈಃ |
ಸ್ಫಾಟಿಕೈರ್ವಜ್ರಸಾರೈಶ್ಚ ಸ್ತಂಭೈಃ ಸುಕೃತವೇದಿಕಮ್ |
ಆರೋಹತಿ ಮಹದ್ ಯಾನಂ ಹಂಸಸಾರಸವಾಹನಮ್ ॥44॥
ವಿಚಿತ್ರಮಣಿಮಾಲೆಗಳಿಂದ ಕೂಡಿದ, ಶಬ್ದವನ್ನು ಮಾಡುವ ಶಂಖಪುಷ್ಕರ- ಗಳಿಂದಲೂ, ಸ್ಪಟಿಕಮಯವಾದ ಮತ್ತು ವಜ್ರಸಾರಮಯವಾದ ಸ್ತಂಭಗಳಿಂದಲೂ ಕೂಡಿದ, ಒಳ್ಳೆಯ ವೇದಿಕೆಗಳನ್ನು ಹೊಂದಿದ, ಹಂಸ-ಸಾರಸ ಪಕ್ಷಿಗಳಿಂದ ಎಳೆಯಲ್ಪಡುವ ಶ್ರೇಷ್ಠ ವಿಮಾನದಿಂದ ಕರೆದೊಯ್ಯಲ್ಪಡುತ್ತಾನೆ.
ಏಕಾದಶೇ ತು ದಿವಸೇ ಯಃ ಪ್ರಾಪ್ತೇ ಪ್ರಾಶತೇ ಹವಿಃ |
ಸದಾ ದ್ವಾದಶಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥45॥
ಪರಸ್ತ್ರಿಯೋ ನಾಭಿಲಷೇದ್ ವಾಚಾಥ ಮನಸಾಪಿ ವಾ |
ಅನೃತಂ ಚ ನ ಭಾಷೇತ ಗುರೂಣಾಂ ಪೂಜನೇ ನರಃ ॥46॥
ಯಾವನು ಹನ್ನೆರಡು ತಿಂಗಳ ಕಾಲ ಹನ್ನೊಂದು ದಿವಸಕ್ಕೆ ಒಂದು ಬಾರಿ ಹವಿಷ್ಯಾನ್ನವನ್ನು ಭುಂಜಿಸುತ್ತಾ, ನಿತ್ಯ ಅಗ್ನಿಹೋತ್ರವನ್ನು ಮಾಡುತ್ತಾ, ಪರಸ್ತ್ರೀಯರನ್ನು ಮನಸ್ಸಿನಲ್ಲಾಗಲೀ, ಮಾತಿನಲ್ಲಾಗಲೀ ಆಶಿಸದೆ, ಅನೃತವನ್ನು ಮಾತನಾಡದೆ, ಗುರು- ಪೂಜಾ ರತನಾಗಿ ಇರುತ್ತಾನೆಯೋ,
ಅಭಿಗಚ್ಛೇನ್ಮಹಾದೇವಂ ವಿಮಾನಸ್ಥಂ ಮಹಾಬಲಮ್ |
ಸ್ವಯಂಭುವಂ ಚ ಪಶ್ಯೇತ ವಿಮಾನಂ ಸಮುಪಸ್ಥಿತಮ್ ॥47॥
ಕುಮಾರ್ಯಃ ಕಾಂಚನಾಭಾಸಾ ರೂಪವತ್ಯೋ ನಯಂತಿ ತಮ್ |
ರುದ್ರಾಣಾಂ ತಮಧೀವಾಸಂ ದಿವಿ ದಿವ್ಯಂ ಮನೋಹರಮ್ ॥48॥
ವರ್ಷಾಣ್ಯಪರಿಮೇಯಾನಿ ಯುಗಾಂತಮಪಿ ಚಾವಸೇತ್ |
ಕೋಟೀಶತಸಹಸ್ರಂ ಚ ದಶ ಕೋಟಿಶತಾನಿ ಚ ॥49॥
ಅವನು ವಿಮಾನಸ್ಥನಾದ, ಮಹಾಬಲನಾದ ರುದ್ರದೇವರ ಬಳಿಗೆ ಹೋಗುತ್ತಾನೆ. ಬ್ರಹ್ಮದೇವರ ವಿಮಾನವು ತನ್ನ ಸಮೀಪಕ್ಕೆ ಬರುವುದನ್ನು ನೋಡುತ್ತಾನೆ. ಸುವರ್ಣ- ವರ್ಣದ ರೂಪವತಿಯರಾದ ಕುಮಾರಿಯರು ಅವನನ್ನು ಕರೆದುಕೊಂಡು ಹೋಗುತ್ತಾರೆ. ಅಪರಿಮಿತ ವರ್ಷಗಳ ಕಾಲ ಯುಗಾಂತದವರೆಗೆ ಲಕ್ಷಕೋಟಿ ಮತ್ತು ನೂರು ಕೋಟಿ ವರ್ಷಗಳವರೆಗೆ ಅಲ್ಲಿ ವಾಸ ಮಾಡುತ್ತಾನೆ.
ರುದ್ರಂ ನಿತ್ಯಂ ಪ್ರಣಮತೇ ದೇವದಾನವಸಮ್ಮತಮ್ |
ಸ ತಸ್ಮೈ ದರ್ಶನಂ ಪ್ರಾಪ್ತೋ ದಿವಸೇ ದಿವಸೇ ಭವೇತ್ ॥50॥
ದೇವ-ದಾನವಸಮ್ಮತನಾದ ರುದ್ರದೇವನನ್ನು ನಿತ್ಯವೂ ನಮಸ್ಕರಿಸುತ್ತಾನೆ. ರುದ್ರದೇವನು ಅವನಿಗೆ ಪ್ರತಿನಿತ್ಯವೂ ದರ್ಶನವನ್ನು ಕೊಡುತ್ತಾನೆ.
ದಿವಸೇ ದ್ವಾದಶೇ ಯಸ್ತು ಪ್ರಾಪ್ತೇ ವೈ ಪ್ರಾಶತೇ ಹವಿಃ |
ಸದಾ ದ್ವಾದಶಮಾಸಾನ್ ವೈ ಸರ್ವಮೇಧಫಲಂ ಲಭೇತ್ ॥51॥
ಆದಿತ್ಯೈರ್ದ್ವಾದಶೈಸ್ತಸ್ಯ ವಿಮಾನಂ ಸಂವಿಧೀಯತೇ |
ಮಣಿಮುಕ್ತಾಪ್ರವಾಲೈಶ್ಚ ಮಹಾರ್ಹೈರುಪಶೋಭಿತಮ್ ॥52॥
ಯಾವನು ಒಂದು ವರ್ಷಗಳ ಕಾಲ ಹನ್ನೆರಡು ದಿವಸಗಳಿಗೊಮ್ಮೆ ಹವಿಷ್ಯಾನ್ನವನ್ನು ಭೋಜನ ಮಾಡುತ್ತಾನೆಯೋ ಅವನು ಸರ್ವಮೇಧ ಫಲವನ್ನು ಹೊಂದುತ್ತಾನೆ. ಮಹಾಬೆಲೆಬಾಳುವ ಮಣಿ ಮುಕ್ತ ಪ್ರವಾಳಗಳಿಂದ ಶೋಭಿಸುವ ಅವನ ವಿಮಾನವನ್ನು ದ್ವಾದಶಾದಿತ್ಯರು ನಿರ್ವಹಿಸುತ್ತಾರೆ.
ಹಂಸಮಾಲಾಪರಿಕ್ಷಿಪ್ತಂ ನಾಗವೀಥೀಸಮಾಕುಲಮ್ |
ಮಯೂರೈಶ್ಚಕ್ರವಾಕೈಶ್ಚ ಕೂಜದ್ಭಿರುಪಶೋಭಿತಮ್ ॥53॥
ಅಟ್ಟೈರ್ಮಹದ್ಭಿಃ ಸಂಯುಕ್ತಂ ಬ್ರಹ್ಮಲೋಕೇ ಪ್ರತಿಷ್ಠಿತಮ್ |
ನಿತ್ಯಮಾವಸತೇ ರಾಜನ್ ನರನಾರೀಸಮಾವೃತಮ್ |
ಋಷಿರೇವಂ ಮಹಾಭಾಗಸ್ತ್ವಂಗಿರಾಃ ಪ್ರಾಹ ಧರ್ಮವಿತ್ ॥54॥
ಹಂಸಪಂಕ್ತಿಗಳಿಂದ ಸುತ್ತಲೂ ಪರಿವೃತನಾದ, ನಾಗವೀಥಿಗಳಿಂದ ಕೂಡಿದ, ಮನೋಹರವಾಗಿ ಶಬ್ದವನ್ನು ಮಾಡುವ ನವಿಲುಗಳು ಮತ್ತು ಚಕ್ರವಾಕ ಪಕ್ಷಿಗಳಿಂದ ಶೋಭಿತವಾದ, ಅನೇಕ ಉಪ್ಪರಿಗೆಗಳನ್ನು ಹೊಂದಿದ, ಬ್ರಹ್ಮಲೋಕದಲ್ಲಿ ಪ್ರತಿಷ್ಠಿತವಾದ, ನರ-ನಾರೀ ಸಮಾವೃತವಾದ ಗೃಹದಲ್ಲಿ ಯಾವಾಗಲೂ ವಾಸಮಾಡುತ್ತಾನೆ. ಎಲೈ ರಾಜನೇ, ಧರ್ಮಜ್ಞರೂ, ಮಹಾನುಭಾವರೂ ಆದ ಅಂಗಿರಸ ಋಷಿಗಳು ಹೀಗೆ ಹೇಳಿದ್ದಾರೆ.
ತ್ರಯೋದಶೇ ತು ದಿವಸೇ ಯಃ ಪ್ರಾಪ್ತೇ ಪ್ರಾಶತೇ ಹವಿಃ |
ಸದಾ ದ್ವಾದಶ ಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥55॥

ರಕ್ತಪದ್ಮೋದಯಂ ನಾಮ ವಿಮಾನಂ ಸಾಧಯೇನ್ನರಃ |
ಜಾತರೂಪಪ್ರಯುಕ್ತಂ ಚ ರತ್ನಸಂಚಯಭೂಷಿತಮ್ ॥56॥
ಹದಿಮೂರು ದಿವಸಗಳಿಗೊಮ್ಮೆ ಯಾವನು ಹವಿಷ್ಯಾನ್ನವನ್ನು ಭೋಜನ ಮಾಡಿ ಹನ್ನೆರಡು ತಿಂಗಳುಗಳ ಕಾಲ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನು ಸುವರ್ಣಮಯವಾದ, ರತ್ನರಾಶಿಯಿಂದ ಭೂಷಿತವಾದ ರಕ್ತಪದ್ಮೋದಯ ಎಂಬ ವಿಮಾನವನ್ನು ಪಡೆಯುತ್ತಾನೆ.
ದೇವಕನ್ಯಾಭಿರಾಕೀರ್ಣಂ ದಿವ್ಯಾಭರಣಭೂಷಿತಮ್ |
ಪುಣ್ಯಗಂಧೋದಯಂ ದಿವ್ಯಂ ನಿತ್ಯಂ ವಾಯವ್ಯಶೋಭಿತಮ್ ॥57॥
ತತ್ರ ಶಂಕುಪತಾಕಂ ಚ ಯುಗಾಂತಂ ಕಲ್ಪಮೇವ ಚ |
ಅಯುತಾಯುತಂ ತಥಾ ಪದ್ಮಂ ಸಮುದ್ರಂ ಚ ತಥಾ ವಸೇತ್ ॥58॥
ಗೀತಗಂಧರ್ವಘೋಷೈಶ್ಚ ಭೇರೀಪಣವನಿಸ್ವನೈಃ |
ಸದಾ ಪ್ರಮುದಿತಸ್ತಾಭಿರ್ದೇವಕನ್ಯಾಭಿರೀಡ್ಯತೇ ॥59॥
ದೇವಕನ್ಯೆಯರಿಂದ ತುಂಬಿದ, ದಿವ್ಯಾಭರಣ ಭೂಷಿತವಾದ, ಪುಣ್ಯಗಂಧದಿಂದ ಕೂಡಿದ, ದಿವ್ಯವಾದ ವಾಯುದೇವರ ಪುರುಷರಿಂದ ನಿತ್ಯವೂ ಕೂಡಿದ ಗೃಹದಲ್ಲಿ ಶಂಖ, ಪತಾಕ, ಯುಗಾಂತ, ಕಲ್ಪ, ಅಯುತಾಯುತ, ಪದ್ಮ ಮತ್ತು ಸಮುದ್ರ ವರ್ಷಗಳ ಕಾಲದವರೆಗೆ ವಾಸಮಾಡುತ್ತಾನೆ. ಗಂಧರ್ವರ ಗೀತ ಘೋಷಗಳಿಂದಲೂ, ಭೇರೀ-ಪಣವ ಮೊದಲಾದ ವಾದ್ಯಘೋಷದಿಂದಲೂ ಸದಾ ಸಂತೋಷಗೊಂಡು ಆ ದೇವಕನ್ಯೆಯರಿಂದ ಸ್ತೋತ್ರ ಮಾಡಲ್ಪಡುತ್ತಾನೆ.
ಚತುರ್ದಶೇ ತು ದಿವಸೇ ಯಃ ಪೂರ್ಣೇ ಪ್ರಾಶತೇ ಹವಿಃ |
ಸದಾ ದ್ವಾದಶಮಾಸಾನ್ ವೈ ಮಹಾಮೇಧಫಲಂ ಲಭೇತ್ ॥60॥
ಅನಿರ್ದೇಶ್ಯವಯೋರೂಪಾ ದೇವಕನ್ಯಾಃ ಸ್ವಲಂಕೃತಾಃ |
ಮೃಷ್ಟತಪ್ತಾಂಗದಧರಾ ವಿಮಾನೈರನುಯಾಂತಿ ತಮ್ ॥61॥
ಯಾವನು ಹನ್ನೆರಡು ತಿಂಗಳುಗಳ ಕಾಲ ಹದಿನಾಲ್ಕು ದಿನಗಳಿಗೊಮ್ಮೆ ಒಂದು ಬಾರಿ ಹವಿಷ್ಯಾನ್ನವನ್ನು ಭುಂಜಿಸುತ್ತಾನೆಯೋ ಅವನು ಮಹಾಮೇಧಯಾಗದ ಫಲವನ್ನು ಹೊಂದುತ್ತಾನೆ. ವರ್ಣನೆ ಮಾಡಲು ಅಸಾಧ್ಯವಾದ, ಅಲಂಕೃತವಾದ, ಸುವರ್ಣಾಂಗಗಳನ್ನು ಧರಿಸಿದ ದೇವಕನ್ಯೆಯರು ವಿಮಾನಗಳಲ್ಲಿ ಅವನನ್ನು ಅನುಸರಿಸುತ್ತಾರೆ.
ಕಲಹಂಸವಿನಿರ್ಘೋಷೈರ್ನೂಪುರಾಣಾಂ ಚ ನಿಸ್ವನೈಃ |
ಕಾಂಚೀನಾಂ ಚ ಸಮುತ್ಕರ್ಷೈಸ್ತತ್ರ ತತ್ರ ನಿಷೇವ್ಯತೇ ॥62॥
ದೇವಕನ್ಯಾನಿವಾಸೇ ಚ ತಸ್ಮಿನ್ ವಸತಿ ಮಾನವಃ |
ಜಾಹ್ನವೀವಾಲುಕಾಕೀರ್ಣೇ ಪೂರ್ಣಂ ಸಂವತ್ಸರಂ ನರಃ ॥63॥
ಅವನು ಅಲ್ಲಲ್ಲಿ ಕಲಹಂಸಗಳ ನಾದದಿಂದಲೂ, ನೂಪುರಗಳ (ಗೆಜ್ಜೆಗಳ) ನಾದದಿಂದಲೂ, ಕಾಂಚಿ (ಸೊಂಟದಾಭರಣ) ನಾದಗಳಿಂದಲೂ ಸೇವಿಸಲ್ಪಡುತ್ತಾನೆ. ಅವನು ಆ ದೇವಕನ್ಯೆಯರ ನಿವಾಸದಲ್ಲಿ ಗಂಗೆಯ ಮರಳುಗಳ ಕಣದ ಸಂಖ್ಯೆಯಷ್ಟು ವರ್ಷಗಳ ಕಾಲ ವಾಸ ಮಾಡುತ್ತಾನೆ.
ಯಸ್ತು ಪಕ್ಷೇ ಗತೇ ಭುಂಕ್ತೇ ಏಕಭಕ್ತಂ ಜಿತೇಂದ್ರಿಯಃ |
ಸದಾ ದ್ವಾದಶ ಮಾಸಾಂಸ್ತು ಜುಹ್ವಾನೋ ಜಾತವೇದಸಮ್ |
ರಾಜಸೂಯಸಹಸ್ರಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ ॥64॥
ಯಾನಮಾರೋಹತೇ ನಿತ್ಯಂ ಹಂಸಬರ್ಹಿಣಸೇವಿತಮ್ |
ಮಣಿಮಂಡಲಕೈಶ್ಚಿತ್ರಂ ಜಾತರೂಪಸಮನ್ವಿತಮ್ ॥65॥
ಯಾವನು ಒಂದು ಪಕ್ಷಕ್ಕೆ ಒಂದು ಬಾರಿ ಜಿತೇಂದ್ರಿಯನಾಗಿ ಏಕಭೋಜನವನ್ನು ಮಾಡುತ್ತಾ ಹನ್ನೆರಡು ತಿಂಗಳುಗಳ ಕಾಲ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನು ಸಹಸ್ರ ರಾಜಸೂಯಯಾಗಗಳ ಶ್ರೇಷ್ಠವಾದ ಫಲವನ್ನು ಹೊಂದುತ್ತಾನೆ. ಹಂಸ-ನವಿಲುಗಳಿಂದ ಸೇವಿತವಾದ, ಮಣಿಮಂಡಲಗಳಿಂದ ಕೂಡಿ ವಿಚಿತ್ರವಾದ, ಸುವರ್ಣಮಯವಾದ ವಿಮಾನವನ್ನು ಏರುತ್ತಾನೆ.
ದಿವ್ಯಾಭರಣಶೋಭಾಭಿರ್ವರಸ್ತ್ರೀಭಿರಲಂಕೃತಮ್ |
ಏಕಸ್ತಂಭಂ ಚತುರ್ದ್ವಾರಂ ಸಪ್ತಭೌಮಂ ಸುಮಂಗಲಮ್ |
ವೈಜಯಂತೀಸಹಸ್ರೈಶ್ಚ ಶೋಭಿತಂ ಗೀತನಿಸ್ವನೈಃ ॥66॥
ದಿವ್ಯಂ ದಿವ್ಯಗುಣೋಪೇತಂ ವಿಮಾನಮಧಿರೋಹತಿ |
ಮಣಿಮುಕ್ತಾಪ್ರವಾಲೈಶ್ಚ ಭೂಷಿತಂ ವೈದ್ಯುತಪ್ರಭಮ್ |
ವಸೇದ್ ಯುಗಸಹಸ್ರಂ ಚ ಖಡ್ಗಕುಂಜರವಾಹನಃ ॥67॥
ದಿವ್ಯಾಭರಣಗಳನ್ನು ಧರಿಸಿ ಶೋಭಾಯಮಾನವಾದ, ಶ್ರೇಷ್ಠ ಸ್ತ್ರೀಯರಿಂದ ಅಲಂಕೃತವಾದ ಒಂದು ಸ್ತಂಭವನ್ನು, ನಾಲ್ಕು ದ್ವಾರವನ್ನು, ಏಳು ಉಪ್ಪರಿಗೆಗಳನ್ನು ಹೊಂದಿದ, ಮಂಗಳವೂ, ಸಹಸ್ರ ವೈಜಯಂತೀ ಮಾಲೆಗಳಿಂದ ಶೋಭಿತವೂ, ಗೀತಧ್ವನಿಯಿಂದ ಯುಕ್ತವಾದುದೂ, ದಿವ್ಯಗುಣೋಪೇತವೂ ಆದ, ಮುಕ್ತಾಮಣಿ ಹವಳಗಳಿಂದ ಭೂಷಿತವಾದ, ಮಿಂಚಿನಂತಹ ಕಾಂತಿಯುಳ್ಳ ದಿವ್ಯವಾದ ವಿಮಾನವನ್ನು ಏರುತ್ತಾನೆ. ಅವನು ಖಡ್ಗಮೃಗ ಮತ್ತು ಕುಂಜರಗಳಿಂದ ಎಳೆಯಲ್ಪಟ್ಟ ವಾಹನದಲ್ಲಿ ಸಹಸ್ರ ಯುಗಗಳ ಪರ್ಯಂತವಾಗಿ ವಾಸಿಸುತ್ತಾನೆ.
ಷೋಡಶೇ ದಿವಸೇ ಯಸ್ತು ಸಂಪ್ರಾಪ್ತೇ ಪ್ರಾಶತೇ ಹವಿಃ |
ಸದಾ ದ್ವಾದಶ ಮಾಸಾನ್ ವೈ ಸೋಮಯಜ್ಞಫಲಂ ಭವೇತ್ ॥68॥

ಸೋಮಕನ್ಯಾನಿವಾಸೇಷು ಸೋಽಧ್ಯಾವಸತಿ ನಿತ್ಯದಾ |
ಸೌಮ್ಯಗಂಧಾನುಲಿಪ್ತಶ್ಚ ಕಾಮಚಾರಗತಿರ್ಭವೇತ್ ॥69॥
ಯಾವನು ಹದಿನಾರು ದಿವಸಗಳಿಗೊಮ್ಮೆ ಒಂದು ಬಾರಿ ಹವಿಷ್ಯಾನ್ನವನ್ನು ಹನ್ನೆರಡು ತಿಂಗಳುಗಳ ಕಾಲ ಭುಂಜಿಸುತ್ತಾನೆಯೋ ಅವನು ಸೋಮಯಾಗದ ಫಲವನ್ನು ಹೊಂದುತ್ತಾನೆ. ಸೋಮಕನ್ಯೆಯರ ನಿವಾಸಸ್ಥಾನದಲ್ಲಿ ಅವನು ಯಾವಾಗಲೂ ವಾಸಿಸುತ್ತಾನೆ. ಸೌಮ್ಯಗಂಧದಿಂದ ಯುಕ್ತನಾಗಿ ಅವನು ಬಯಸಿದ ಕಡೆ ಹೋಗುವಂತಹ ಗತಿಯನ್ನು ಹೊಂದುತ್ತಾನೆ.
ಸುದರ್ಶನಾಭಿರ್ನಾರೀಭಿರ್ಮಧುರಾಭಿಸ್ತಥೈವ ಚ |
ಅರ್ಚ್ಯತೇ ವೈ ವಿಮಾನಸ್ಥಃ ಕಾಮಭೋಗೈಶ್ಚ ಸೇವ್ಯತೇ ॥70॥
ಫಲಂ ಪದ್ಮಶತಪ್ರಖ್ಯಂ ಮಹಾಕಲ್ಪಂ ದಶಾಧಿಕಮ್ |
ಆವರ್ತನಾನಿ ಚತ್ವಾರಿ ಸಾಗರೇ ಯಾತ್ಯಸೌ ನರಃ ॥71॥
ಸುಂದರಿಯರೂ, ಮಧುರಸ್ವಭಾವದವರೂ ಆದ ನಾರಿಯರು ಅವನನ್ನು ಪೂಜಿಸುತ್ತಾರೆ. ವಿಮಾನದಲ್ಲಿ ಕುಳಿತು ಎಲ್ಲ ಕಾಮಭೋಗಗಳನ್ನೂ ಪಡೆಯುತ್ತಾನೆ. ಅವನು ನೂರು ಪದ್ಮ ಮತ್ತು ಹತ್ತು ಮಹಾಕಲ್ಪಗಳು ಮತ್ತು ನಾಲ್ಕು ಚತುರ್ಯುಗಗಳಿಗೆ ಸಮಾನವಾದ ಕಾಲದವರೆಗೆ ಅಂತಹ ಪುಣ್ಯಫಲವನ್ನು ಅನುಭವಿಸುತ್ತಾ ಸಾಗರದಲ್ಲಿ ಸಂಚರಿಸುತ್ತಾನೆ.
ದಿವಸೇ ಸಪ್ತದಶಮೇ ಪ್ರಾಪ್ತೇ ಯಃ ಪ್ರಾಶಯೇದ್ ಹವಿಃ |
ಸದಾ ದ್ವಾದಶ ಮಾಸಾನ್ ವೈ ಜುಹ್ವಾನೋ ಜಾತವೇದಸಮ್ ॥72॥
ಸ್ಥಾನಂ ವಾರುಣಮೈಂದ್ರಂ ಚ ರೌದ್ರಂ ಚೈವಾಧಿಗಚ್ಛತಿ |
ಮಾರುತೌಶನಸೇ ಚೈವ ಬ್ರಹ್ಮಲೋಕಂ ಚ ಗಚ್ಛತಿ ॥73॥
ಹನ್ನೆರಡು ತಿಂಗಳವರೆಗೆ ಹದಿನೇಳು ದಿವಸಗಳಲ್ಲಿ ಒಂದು ಬಾರಿ ಹವಿಷ್ಯಾನ್ನವನ್ನು ಭೋಜನ ಮಾಡಿ ಅಗ್ನಿಹೋತ್ರವನ್ನು ಮಾಡುವವನು ವರುಣನ, ಇಂದ್ರನ, ರುದ್ರನ, ಮರುತ್ತುಗಳ, ಶುಕ್ರನ ಸ್ಥಾನಕ್ಕೆ ಹೋಗಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ.
ತತ್ರ ದೈವತಕನ್ಯಾಭಿರಾಸನೇನೋಪಚರ್ಯತೇ |
ಭೂರ್ಭುವಂ ಚಾಪಿ ದೇವರ್ಷಿಂ ವಿಶ್ವರೂಪಮವೇಕ್ಷತೇ ॥74॥
ತತ್ರ ದೇವಾಧಿದೇವಸ್ಯ ಕುಮಾರ್ಯೋ ರಮಯಂತಿ ತಮ್ |
ಮನೋಜ್ಞರೂಪಧಾರಿಣ್ಯೋ ಮಧುರಾಃ ಸಮಲಂಕೃತಾಃ ॥75॥
ಚಂದ್ರಾದಿತ್ಯಾವುಭೌ ಯಾವದ್ ಗಗನೇ ಚರತಃ ಪ್ರಭೋ |
ತಾವಚ್ಚರತ್ಯಸೌ ವೀರಃ ಸುಧಾಮೃತರಸಾಶನಃ ॥76॥
ಅಲ್ಲಿ ದೇವತಾಕನ್ಯೆಯರಿಂದ ಆಸನಾದಿ ಉಪಚಾರವನ್ನು ಪಡೆಯುತ್ತಾನೆ. ಭೂಲೋಕವನ್ನೂ, ಅಂತರಿಕ್ಷಲೋಕವನ್ನೂ ಮತ್ತು ದೇವರ್ಷಿಯಾದ ವಿಶ್ವರೂಪರನ್ನು ನೋಡುತ್ತಾನೆ. ಅಲ್ಲಿ ಮನೋಹರ ರೂಪವನ್ನು ಧರಿಸಿದ, ಅಲಂಕೃತರಾದ ದೇವಕನ್ಯೆಯರು ಅವನನ್ನು ಸಂತೋಷಪಡಿಸುತ್ತಾರೆ. ಎಲೈ ಪ್ರಭುವೇ, ಸೂರ್ಯ- ಚಂದ್ರರು ಆಕಾಶದಲ್ಲಿ ಎಲ್ಲಿಯವರೆಗೆ ಸಂಚರಿಸುತ್ತಾರೆಯೋ ಅಲ್ಲಿಯವರೆಗೆ ಆ ವೀರನು ಅಮೃತರಸ ಸದೃಶವಾದ ಆಹಾರವನ್ನು ಹೊಂದಿ ಅಲ್ಲಿರುತ್ತಾನೆ.
ಅಷ್ಟಾದಶೇ ತು ದಿವಸೇ ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶ ಮಾಸಾನ್ ವೈ ಸಪ್ತ ಲೋಕಾನ್ ಸ ಪಶ್ಯತಿ ॥77॥
ರಥೈಃ ಸನಂದಿಘೋಷೈಶ್ಚ ಪೃಷ್ಠತಃ ಸೋಽನುಗಮ್ಯತೇ |
ದೇವಕನ್ಯಾಧಿರೂಢೈಸ್ತು ಭ್ರಾಜಮಾನೈಃ ಸ್ವಲಂಕೃತೈಃ ॥78॥
ಯಾವನು ಹನ್ನೆರಡು ತಿಂಗಳವರೆಗೆ ಹದಿನೆಂಟು ದಿವಸಕ್ಕೆ ಒಮ್ಮೆ ಭೋಜನವನ್ನು ಮಾಡುತ್ತಾನೆಯೋ ಅವನು ಸಪ್ತಲೋಕಗಳನ್ನೂ ನೋಡುತ್ತಾನೆ. ಅಲಂಕೃತರಾದ, ಶೋಭಾಯಮಾನರಾದ ದೇವಕನ್ಯೆಯರಿಂದ ಆರೂಢವಾದ, ನಂದಿಘೋಷ ಸಹಿತವಾದ ರಥಗಳಿಂದ ಅವನು ಹಿಂಬಾಲಿಸಲ್ಪಡುತ್ತಾನೆ.
ವ್ಯಾಘ್ರಸಿಂಹಪ್ರಯುಕ್ತಂ ಚ ಮೇಘಸ್ವನನಿನಾದಿತಮ್ |
ವಿಮಾನಮುತ್ತಮಂ ದಿವ್ಯಂ ಸುಸುಖೀ ಹ್ಯಧಿರೋಹತಿ ॥79॥
ತತ್ರ ಕಲ್ಪಸಹಸ್ರಂ ಸ ಕಾಂತಾಭಿಃ ಸಹ ಮೋದತೇ |
ಸುಧಾರಸಂ ಚ ಭುಂಜೀತ ಹ್ಯಮೃತೋಪಮಮುತ್ತಮಮ್ ॥80॥
ವ್ಯಾಘ್ರ-ಸಿಂಹಗಳನ್ನು ಹೊಂದಿದ, ಮೇಘಸ್ವನದಂತೆ ಗಂಭೀರನಾದವುಳ್ಳ, ದಿವ್ಯವಾದ ಮತ್ತು ಶ್ರೇಷ್ಠವಾದ ವಿಮಾನವನ್ನು ಅತ್ಯಂತ ಸುಖದಿಂದ ಕೂಡಿದ ಅವನು ಏರುತ್ತಾನೆ. ಅಲ್ಲಿ ಮನೋಹರರಾದ ಸ್ತ್ರೀಯರ ಜೊತೆಯಲ್ಲಿ ಅಮೃತಸದೃಶವಾದ, ಶ್ರೇಷ್ಠವಾದ ಸುಧಾರಸವನ್ನು ಭುಂಜಿಸುತ್ತಾ ಕಾಂತೆಯರ ಜೊತೆಯಲ್ಲಿ ಸಂತೋಷಪಡುತ್ತಾನೆ.
ಏಕೋನವಿಂಶೇ ದಿವಸೇ ಯೋ ಭುಂಕ್ತೇ ಏಕಭೋಜನಮ್ |
ಸದಾ ದ್ವಾದಶ ಮಾಸಾನ್ ವೈ ಸತ್ಯವಾದೀ ಧೃತವ್ರತಃ ॥81॥
ಉತ್ತಮಂ ಲಭತೇ ಸ್ಥಾನಮಪ್ಸರೋಗಣಸೇವಿತಮ್ |
ಗಂಧರ್ವೈರುಪಗೀತಂ ಚ ವಿಮಾನಂ ಸೂರ್ಯವರ್ಚಸಮ್ ॥82॥
ತತ್ರಾಮರವರಸ್ತ್ರೀಭಿರ್ಮೋದತೇ ವಿಗತಜ್ವರಃ |
ದಿವ್ಯಾಂಬರಧರಃ ಶ್ರೀಮಾನಯುತಾನಾಂ ಶತಂ ಸಮಾಃ ॥83॥
ಯಾವನು ಹನ್ನೆರಡು ತಿಂಗಳವರೆಗೆ ಹತ್ತೊಂಬತ್ತು ದಿವಸಗಳಲ್ಲಿ ಒಂದು ಭೋಜನವನ್ನು ಮಾಡಿ ಸತ್ಯವಾದಿಯೂ, ವ್ರತಶೀಲನೂ ಆಗಿರುತ್ತಾನೆಯೋ ಅವನು ಅಪ್ಸರೆಯರ ಸಮೂಹದಿಂದ ಸೇವಿತವಾದ ಸ್ಥಾನವನ್ನು ಹೊಂದುತ್ತಾನೆ. ಗಂಧರ್ವರು ಗಾನ

ಮಾಡುತ್ತಿರುವ ಸೂರ್ಯಪ್ರಭೆಯುಳ್ಳ ವಿಮಾನದಲ್ಲಿ ಅವನು ನಿರಾತಂಕನಾಗಿ ದೇವಸ್ತ್ರೀಯರ ಜೊತೆಯಲ್ಲಿ ದಿವ್ಯಾಂಬರವನ್ನು ಧರಿಸಿ, ಕಾಂತಿಯುಕ್ತನಾಗಿ, ನೂರು ಅಯುತ ವರ್ಷಗಳ ಕಾಲ ಸಂತೋಷಪಡುತ್ತಾನೆ.

ಪೂರ್ಣೇಽಥ ದಿವಸೇ ವಿಂಶೇ ಯೋ ಭುಂಕ್ತೇ ಹ್ಯೇಕಭೋಜನಮ್ |
ಸದಾ ದ್ವಾದಶ ಮಾಸಾಂಸ್ತು ಸತ್ಯವಾದೀ ಧೃತವ್ರತಃ ||84||
ಅಮಾಂಸಾಶೀ ಬ್ರಹ್ಮಚಾರೀ ಸರ್ವಭೂತಹಿತೇ ರತಃ |
ಸ ಲೋಕಾನ್ ವಿಪುಲಾನ್ ದಿವ್ಯಾನಾದಿತ್ಯಾನಾಮುಪಾಶ್ನುತೇ ||85||
ಗಂಧರ್ವೈರಪ್ಸರೋಭಿಶ್ಚ ದಿವ್ಯಮಾಲ್ಯಾನುಲೇಪನೈಃ |
ವಿಮಾನೈಃ ಕಾಂಚನೈರ್ದಿವ್ಯೈಃ ಸುಖೀ ಚರತಿ ನಿತ್ಯದಾ ||86||

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತು ದಿವಸಕ್ಕೆ ಒಂದು ಭೋಜನವನ್ನು ಮಾಡಿ ಸತ್ಯವಾದಿಯೂ, ವ್ರತಶೀಲನೂ, ಮಾಂಸವನ್ನು ತ್ಯಜಿಸಿದವನೂ, ಬ್ರಹ್ಮಚಾರಿಯೂ, ಸರ್ವಭೂತ ಹಿತದಲ್ಲಿ ರತನೂ ಆಗಿರುತ್ತಾನೆಯೋ ಅವನು ವಿಪುಲವಾದ ಆದಿತ್ಯನ ಲೋಕವನ್ನು ಹೊಂದುತ್ತಾನೆ. ದಿವ್ಯಮಾಲ್ಯಾನುಲೇಪನವನ್ನು ಹೊಂದಿದ ಗಂಧರ್ವರಿಂದ ಮತ್ತು ಅಪ್ಸರೆಯರಿಂದ ಸಹಿತನಾಗಿ ಸುವರ್ಣಮಯವಾದ ದಿವ್ಯ ವಿಮಾನದಲ್ಲಿ ನಿತ್ಯವೂ ಸಂತೋಷದಿಂದ ಸಂಚರಿಸುತ್ತಾನೆ.

ಏಕವಿಂಶೇ ತು ದಿವಸೇ ಯೋ ಭುಂಕ್ತೇ ಹ್ಯೇಕಭೋಜನಮ್ |
ಸದಾ ದ್ವಾದಶ ಮಾಸಾನ್ ವೈ ಜುಹ್ವಾನೋ ಜಾತವೇದಸಮ್ ||87||
ಲೋಕಮೌಶನಸಂ ದಿವ್ಯಂ ಶಕ್ರಲೋಕಂ ಚ ಗಚ್ಛತಿ |
ಅಶ್ವಿನೋರ್ಮರುತಾಂ ಚೈವ ಸುಖೇಷ್ವಭಿರತಃ ಸದಾ ||88||
ಅನಭಿಜ್ಞಶ್ಚ ದುಃಖಾನಾಂ ವಿಮಾನವರಮಾಸ್ಥಿತಃ |
ಸೇವ್ಯಮಾನೋ ವರಸ್ತ್ರೀಭಿಃ ಕ್ರೀಡತ್ಯಮರವತ್ ಪ್ರಭುಃ ||89||

ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತೊಂದು ದಿವಸದಲ್ಲಿ ಒಂದು ಭೋಜನವನ್ನು ಮಾಡುತ್ತಾ, ಅಗ್ನಿಹೋತ್ರವನ್ನು ಮಾಡುವವನು ದಿವ್ಯವಾದ ಶುಕ್ರಲೋಕಕ್ಕೂ, ಇಂದ್ರಲೋಕಕ್ಕೂ, ಅಶ್ವಿನಿ ಮತ್ತು ಮರುತ್ತುಗಳ ಲೋಕಕ್ಕೂ ಹೋಗುತ್ತಾನೆ. ಅವನು ಯಾವಾಗಲೂ ಸುಖದಲ್ಲಿ ರತನಾಗಿರುತ್ತಾನೆ. ಶ್ರೇಷ್ಠವಾದ ವಿಮಾನದಲ್ಲಿ ಕುಳಿತು ದುಃಖವನ್ನು ಹೊಂದದೆ ಸುಂದರಿಯರಾದ ಸ್ತ್ರೀಯರ ಜೊತೆಯಲ್ಲಿ ಕ್ರೀಡಿಸುತ್ತಾ ದೇವತೆಯಂತೆ ಇರುತ್ತಾನೆ.

ದ್ವಾವಿಂಶೇ ದಿವಸೇ ಪ್ರಾಪ್ತೇ ಯೋ ಭುಂಕ್ತೇ ಹ್ಯೇಕಭೋಜನಮ್ |
ಸದಾ ದ್ವಾದಶ ಮಾಸಾನ್ ವೈ ಜುಹ್ವಾನೋ ಜಾತವೇದಸಮ್ ||90||
ಧೃತಿಮಾನಹಿಂಸಾನಿರತಃ ಸತ್ಯವಾಗನಸೂಯಕಃ |
ರುದ್ರಾಣಾಂ ಲೋಕಮಾಪ್ನೋತಿ ದಿವಾಕರಸಮಪ್ರಭಃ ||91||
ಕಾಮಚಾರೀ ಸುಧಾಹಾರೋ ವಿಮಾನವರಮಾಸ್ಥಿತಃ |
ರಮತೇ ದೇವಕನ್ಯಾಭಿರ್ದಿವ್ಯಾಭರಣಭೂಷಿತಃ ||92||

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತೆರಡು ದಿವಸಗಳಿಗೊಮ್ಮೆ ಭೋಜನವನ್ನು ಮಾಡಿ, ಅಗ್ನಿಹೋತ್ರವನ್ನು ಮಾಡಿ ಧೈರ್ಯವಂತನೂ, ಅಹಿಂಸಾ ನಿರತನೂ, ಸತ್ಯವಚನನೂ, ಅಸೂಯಾರಹಿತನೂ ಆಗಿರುತ್ತಾನೆಯೋ ಅವನು ಸೂರ್ಯನಿಗೆ ಸಮಾನವಾದ ತೇಜಸ್ಸನ್ನು ಹೊಂದಿ ರುದ್ರನ ಲೋಕಕ್ಕೆ ಹೋಗುತ್ತಾನೆ. ತನಗೆ ಇಚ್ಛೆ ಬಂದ ಕಡೆಗೆ ಹೋಗುವ ಸಾಮರ್ಥ್ಯವನ್ನು ಹೊಂದಿ, ಸುಧೆಯನ್ನೇ ಆಹಾರವನ್ನಾಗಿ ಮಾಡಿಕೊಂಡು ಶ್ರೇಷ್ಠವಾದ ವಿಮಾನದಲ್ಲಿ ಕುಳಿತು ದಿವ್ಯಾಭರಣ ಭೂಷಿತನಾಗಿ ದೇವಕನ್ಯೆಯರ ಜೊತೆಯಲ್ಲಿ ಸಂತೋಷಪಡುತ್ತಾನೆ.

ತ್ರಯೋವಿಂಶೇ ತು ದಿವಸೇ ಪ್ರಾಶೇದ್ ಯಸ್ತ್ವೇಕಭೋಜನಮ್ |
ಸದಾ ದ್ವಾದಶ ಮಾಸಾಂಸ್ತು ಮಿತಾಹಾರೋ ಜಿತೇಂದ್ರಿಯಃ ||93||
ವಾಯೋರುಶನಸಶ್ಚೈವ ರುದ್ರಲೋಕಂ ಚ ಗಚ್ಛತಿ |
ಕಾಮಚಾರೀ ಕಾಮಗಮಃ ಪೂಜ್ಯಮಾನೋಽಪ್ಸರೋಗಣೈಃ ||94||
ಅನೇಕಯುಗಪರ್ಯಂತಂ ವಿಮಾನವರಮಾಸ್ಥಿತಃ |
ಮೋದತೇ ದೇವಕನ್ಯಾಭಿರ್ದಿವ್ಯಾಭರಣಭೂಷಿತಃ ||95||

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ಮೂರು ದಿವಸಗಳಲ್ಲಿ ಒಂದು ಭೋಜನವನ್ನು ಮಾಡಿ ಮಿತಾಹಾರನಾಗಿ ಜಿತೇಂದ್ರಿಯನಾಗಿರುತ್ತಾನೆಯೋ ಅವನು ವಾಯುಲೋಕಕ್ಕೂ, ಶುಕ್ರಲೋಕಕ್ಕೂ ಮತ್ತು ರುದ್ರಲೋಕಕ್ಕೂ ಹೋಗುತ್ತಾನೆ. ತನಗೆ ಮನಸ್ಸಿಗೆ ಬಂದ ಕಡೆ ಹೋಗುವವನಾಗಿ, ಅಪ್ಸರೆಯರ ಸಮೂಹದಿಂದ ಪೂಜಿತನಾಗಿ ವಿಮಾನವನ್ನು ಏರಿ, ಅನೇಕ ಯುಗಗಳ ಕಾಲ ದಿವ್ಯಾಭರಣಭೂಷಿತನಾಗಿ ದೇವಕನ್ಯೆಯರ ಜೊತೆಯಲ್ಲಿ ಸುಖಪಡುತ್ತಾನೆ.

ಚತುರ್ವಿಂಶೇ ತು ದಿವಸೇ ಯಃ ಪ್ರಾಶೇದೇಕಭೋಜನಮ್ |
ಸದಾ ದ್ವಾದಶ ಮಾಸಾನ್ ವೈ ಜುಹ್ವಾನೋ ಜಾತವೇದಸಮ್ ||96||
ಆದಿತ್ಯಾನಾಮಧೀವಾಸೇ ಮೋದಮಾನೋ ವಸೇಚ್ಚಿರಮ್ |
ದಿವ್ಯಮಾಲ್ಯಾಂಬರಧರೋ ದಿವ್ಯಗಂಧಾನುಲೇಪನಃ ||97||
ವಿಮಾನೇ ಕಾಂಚನೇ ದಿವ್ಯೇ ಹಂಸಯುಕ್ತೇ ಮನೋರಮೇ |
ರಮತೇ ದೇವಕನ್ಯಾನಾಂ ಸಹಸ್ರೈರಯುತೈಸ್ತದಾ ||98||

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ನಾಲ್ಕು ದಿವಸಗಳಿಗೆ ಒಮ್ಮೆ ಭೋಜನವನ್ನು ಮಾಡಿ ಅಗ್ನಿಹೋತ್ರವನ್ನು

ಮಾಡುತ್ತಾನೆಯೋ ಅವನು ಆದಿತ್ಯರ ಗೃಹದಲ್ಲಿಯೇ ದಿವ್ಯಮಾಲ್ಯವಸ್ತ್ರವನ್ನು ಧರಿಸಿ, ದಿವ್ಯಗಂಧಾನುಲೇಪನದಿಂದ ಸಂತೋಷದಿಂದ ಬಹುಕಾಲ ವಾಸಿಸುತ್ತಾನೆ. ದಿವ್ಯವಾದ ಸುವರ್ಣಮಯವಾದ ಮನೋಹರವಾದ ಹಂಸಯುಕ್ತವಾದ ವಿಮಾನದಲ್ಲಿ ಹತ್ತು ಸಹಸ್ರ ದೇವಕನ್ಯೆಯರಿಂದ ಕೂಡಿ ಸಂತೋಷಪಡುತ್ತಾನೆ.

ಪಂಚವಿಂಶೇ ತು ದಿವಸೇ ಯಃ ಪ್ರಾಶೇದೇಕಭೋಜನಮ್ |
ಸದಾ ದ್ವಾದಶ ಮಾಸಾಂಸ್ತು ಪುಷ್ಕಳಂ ಯಾನಮಾರುಹೇತ್ ॥99॥
ಸಿಂಹವ್ಯಾಘ್ರಪ್ರಯುಕ್ತೈಶ್ಚ ಮೇಘಸ್ವನನಿನಾದಿತೈಃ |
ರಥೈಃ ಸನಂದಿಘೋಷೈಶ್ಚ ಪೃಷ್ಠತಃ ಸೋಽನುಗಮ್ಯತೇ ॥100॥

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತೈದು ದಿನಗಳಿಗೊಮ್ಮೆ ಒಂದು ಭೋಜನವನ್ನು ಮಾಡುತ್ತಾನೆಯೋ ಅವನು ಸಮೃದ್ಧವಾದ ಯಾನವನ್ನು ಏರುತ್ತಾನೆ. ಅವನು ಸಿಂಹ-ವ್ಯಾಘ್ರಗಳನ್ನು ಹೂಡಿದ, ಮೇಘಸ್ವನದಂತೆ ಗಂಭೀರವಾದ ಸ್ವನವುಳ್ಳ ನಂದಿಘೋಷ ಸಹಿತವಾದ ರಥಗಳಿಂದ ಹಿಂಬಾಲಿಸಲ್ಪಡುತ್ತಾನೆ.

ದೇವಕನ್ಯಾಸಮಾರೂಢಂ ರಾಜತಂ ವಿಮಲಂ ಶುಭಂ |
ವಿಮಾನಮುತ್ತಮಂ ದಿವ್ಯಮಾಸ್ಥಾಯ ಸುಮನೋಹರಮ್ ॥101॥
ತತ್ರ ಕಲ್ಪಸಹಸ್ರಂ ವೈ ರಮತೇ ಸ್ತ್ರೀಶತಾವೃತಃ |
ಸುಧಾರಸಂ ಚೋಪಜೀವನ್ನಮೃತೋಪಮಮುತ್ತಮಮ್ ॥102॥

ದೇವಕನ್ಯೆಯರಿಂದ ಆರೂಢವಾದ ಶುದ್ಧವಾದ ರಜತಮಯವಾದ ಶ್ರೇಷ್ಠವಾದ ದಿವ್ಯವಾದ ಮನೋಹರವಾದ ವಿಮಾನವನ್ನೇರಿ ಸಹಸ್ರಕಲ್ಪಗಳವರೆಗೆ ಅಮೃತ- ಪ್ರಾಯವಾದ ಸುಧಾರಸವನ್ನು ಆಹಾರವಾಗಿ ಸ್ವೀಕರಿಸುತ್ತಾ ನೂರು ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟು ಸಂತೋಷಪಡುತ್ತಾನೆ.

ಷಡ್ವಿಂಶೇ ದಿವಸೇ ಯಸ್ತು ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶ ಮಾಸಾಂಸ್ತು ನಿಯತೋ ನಿಯತಾಶನಃ ॥103॥
ಜಿತೇಂದ್ರಿಯೋ ವೀತರಾಗೋ ಜುಹ್ವಾನೋ ಜಾತವೇದಸಮ್ |
ಸ ಪ್ರಾಪ್ನೋತಿ ಮಹಾಭಾಗಃ ಪೂಜ್ಯಮಾನೋಽಪ್ಸರೋಗಣೈಃ ॥104॥

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತಾರು ದಿನಗಳಿಗೆ ಒಮ್ಮೆ ಭೋಜನವನ್ನು ಮಾಡಿ ನಿಯಮಬದ್ಧನೂ, ನಿಯತವಾದ ಆಹಾರವುಳ್ಳವನೂ, ಜಿತೇಂದ್ರಿಯನೂ, ರಾಗರಹಿತನೂ ಆಗಿ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಆ ಮಹಾನುಭಾವನು ಅಪ್ಸರೆಯರ ಗಣದಿಂದ ಪೂಜಿತನಾಗಿ ಉತ್ತಮ ಲೋಕಗಳನ್ನು ಹೊಂದುತ್ತಾನೆ.

ಸಪ್ತಾನಾಂ ಮರುತಾಂ ಲೋಕಾನ್ ವಸೂನಾಂ ಚಾಪಿ ಸೋಽಶ್ನುತೇ |
ವಿಮಾನೇ ಸ್ಫಾಟಿಕೇ ದಿವ್ಯೇ ಸರ್ವರತ್ನೈರಲಂಕೃತೇ ॥105॥
ಗಂಧರ್ವೈರಪ್ಸರೋಭಿಶ್ಚ ಪೂಜ್ಯಮಾನಃ ಪ್ರಮೋದತೇ |
ದ್ವೇ ಯುಗಾನಾಂ ಸಹಸ್ರೇ ತು ದಿವ್ಯೇ ದಿವ್ಯೇನ ತೇಜಸಾ ॥106॥

ಅವನು ಸಪ್ತ ಮರುತ್ತುಗಳ ಲೋಕವನ್ನೂ, ಅಷ್ಟ ವಸ್ತುಗಳ ಲೋಕವನ್ನೂ ಹೊಂದುತ್ತಾನೆ. ಸ್ಫಟಿಕಮಯವಾದ ಸರ್ವರತ್ನಗಳಿಂದ ಅಲಂಕೃತವಾದ ದಿವ್ಯವಾದ ವಿಮಾನದಲ್ಲಿ ಕುಳಿತು ಗಂಧರ್ವರಿಂದಲೂ ಮತ್ತು ಅಪ್ಸರೆಯರಿಂದಲೂ ಪೂಜಿಸಲ್ಪಟ್ಟು ಎರಡು ಸಹಸ್ರ ಯುಗಗಳವರೆಗೆ ದಿವ್ಯವಾದ ತೇಜಸ್ಸನ್ನು ಹೊಂದಿ ಸಂತೋಷಪಡುತ್ತಾನೆ.

ಸಪ್ತವಿಂಶೇ ತು ದಿವಸೇ ಯಃ ಪ್ರಾಶೇದೇಕಭೋಜನಮ್ |
ಸದಾ ದ್ವಾದಶ ಮಾಸಾಂಸ್ತು ಜುಹ್ವಾನೋ ಜಾತವೇದಸಮ್ ॥107॥
ಫಲಂ ಪ್ರಾಪ್ನೋತಿ ವಿಪುಲಂ ದೇವಲೋಕೇ ಚ ಪೂಜ್ಯತೇ |
ಅಮೃತಾಶೀ ವಸಂಸ್ತತ್ರ ಸ ವಿತೃಪ್ತಃ ಪ್ರಮೋದತೇ ॥108॥

ಹನ್ನೆರಡು ತಿಂಗಳುಗಳವರೆಗೆ ಯಾವನು ಇಪ್ಪತ್ತೇಳು ದಿವಸಗಳಲ್ಲಿ ಒಂದು ಭೋಜನವನ್ನು ಮಾಡಿ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನು ಅದಕ್ಕೆ ಅನುಗುಣವಾದ ವಿಪುಲವಾದ ಫಲವನ್ನು ಪಡೆಯುತ್ತಾನೆ. ದೇವಲೋಕದಲ್ಲಿ ಪೂಜಿಸಲ್ಪಡುತ್ತಾನೆ. ಅಲ್ಲಿ ವಾಸ ಮಾಡಿ ಅವನು ಅಮೃತಪ್ರಾಶನವನ್ನು ಮಾಡಿ ಬಹಳ ತೃಪ್ತಿಯನ್ನು ಹೊಂದಿ ಸಂತೋಷಪಡುತ್ತಾನೆ.

ದೇವರ್ಷಿಚರಿತಂ ರಾಜನ್ ರಾಜರ್ಷಿಭಿರಧಿಷ್ಠಿತಮ್ |
ಅಧ್ಯಾವಸತಿ ದಿವ್ಯಾತ್ಮಾ ವಿಮಾನವರಮಾಸ್ಥಿತಃ ॥109॥
ಸ್ತ್ರೀಭಿರ್ಮನೋಭಿರಾಮಾಭೀ ರಮಮಾಣೋ ಮದೋತ್ಕಟಃ |
ಯುಗಕಲ್ಪಸಹಸ್ರಾಣಿ ತ್ರೀಣ್ಯಾವಸತಿ ವೈ ಸುಖಮ್ ॥110॥

ಎಲೈ ರಾಜನೇ, ದೇವರ್ಷಿಗಳು ತಿರುಗಾಡುವ ಮತ್ತು ರಾಜರ್ಷಿಗಳು ಕುಳಿತುಕೊಳ್ಳುವ ಶ್ರೇಷ್ಠವಾದ ವಿಮಾನವನ್ನು ಏರಿ ದಿವ್ಯಾತ್ಮನಾದ ಅವನು ಮದೋತ್ಕಟನಾಗಿ ಮನೋಹರರಾದ ಸ್ತ್ರೀಯರ ಜೊತೆಯಲ್ಲಿ ಸಂತೋಷಪಡುತ್ತಾ ಮೂರು ಸಹಸ್ರ ಯುಗಗಳವರೆಗೆ ಸುಖವನ್ನು ಅನುಭವಿಸುತ್ತಾನೆ.

ಯೋಽಷ್ಟಾವಿಂಶೇ ತು ದಿವಸೇ ಪ್ರಾಶ್ನೀಯಾದೇಕಭೋಜನಮ್ |
ಸದಾ ದ್ವಾದಶ ಮಾಸಾಂಸ್ತು ಜಿತಾತ್ಮಾ ವಿಜಿತೇಂದ್ರಿಯಃ ॥111॥
ಫಲಂ ದೇವರ್ಷಿಚರಿತಂ ವಿಪುಲಂ ಸಮುಪಾಶ್ನುತೇ |
ಭೋಗವಾಂಸ್ತೇಜಸಾ ಭಾತಿ ಸಹಸ್ರಾಂಶುರಿವಾಮಲಃ ॥112॥

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತೆಂಟು ದಿನಗಳಿಗೊಮ್ಮೆ ಭೋಜನವನ್ನು ಮಾಡಿ ಮನೋಜಯವನ್ನು, ಇಂದ್ರಿಯಜಯವನ್ನು ಹೊಂದಿರುತ್ತಾನೆಯೋ ಅವನು ದೇವರ್ಷಿಗಳಿಗೆ ದೊರಕುವ ವಿಪುಲವಾದ ಫಲವನ್ನು ಹೊಂದುತ್ತಾನೆ. ಒಳ್ಳೆಯ ಭೋಗವನ್ನು ಹೊಂದಿ, ತನ್ನ ತೇಜಸ್ಸಿನಿಂದ ಸಹಸ್ರಾಂಶುವಾದ ಸೂರ್ಯನಂತೆ ಪರಿಶುದ್ಧವಾಗಿ ಶೋಭಿಸುತ್ತಾನೆ.

ಸುಕುಮಾರ್ಯಶ್ಚ ನಾರ್ಯಸ್ತಮ್ ಅಮರಾಣಾಂ ಸುವರ್ಚಸಾಮ್ |
ಪೀನಸ್ತನೋರುಜಘನಾ ದಿವ್ಯಾಭರಣಭೂಷಿತಾಃ ॥113॥
ರಮಯಂತಿ ಮನಃಕಾಂತಾ ವಿಮಾನೇ ಸೂರ್ಯಸನ್ನಿಭೇ |
ಸರ್ವಕಾಮಗಮೇ ದಿವ್ಯೇ ಕಲ್ಪಾಯುತಶತಂ ಸಮಾಃ ॥114॥

ಪೀನಸ್ತನಗಳನ್ನೂ ಮತ್ತು ವಿಸ್ತಾರವಾದ ತೊಡೆಗಳನ್ನೂ ಹೊಂದಿದ ಸುಕುಮಾರಿಯರಾದ ಮನೋಹರರಾದ ದೇವನಾರಿಯರು ದಿವ್ಯಾಭರಣಭೂಷಿತರಾಗಿ ಅವನನ್ನು ಸಂತೋಷಪಡಿಸುತ್ತಾರೆ. ಅವನು ಸೂರ್ಯಸದೃಶವಾದ, ಸರ್ವ- ಕಾಮಗಳನ್ನೂ ಹೊಂದಿರುವ ದಿವ್ಯವಾದ ವಿಮಾನದಲ್ಲಿ ಹತ್ತುಲಕ್ಷ ವರ್ಷಗಳವರೆಗೆ ಸುಖವನ್ನು ಅನುಭವಿಸುತ್ತಾನೆ.

ಏಕೋನತ್ರಿಂಶೇ ದಿವಸೇ ಯಃ ಪ್ರಾಶೇದೇಕಭೋಜನಮ್ |
ಸದಾ ದ್ವಾದಶ ಮಾಸಾನ್ ವೈ ಸತ್ಯವ್ರತಪರಾಯಣಃ ॥115॥
ತಸ್ಯ ಲೋಕಾಃ ಶುಭಾ ದಿವ್ಯಾ ದೇವರಾಜರ್ಷಿಪೂಜಿತಾಃ |
ವಿಮಾನಂ ಚಂದ್ರಶುಭ್ರಾಭಂ ದಿವ್ಯಂ ಸಮಧಿಗಚ್ಛತಿ ॥116॥
ಜಾತರೂಪಮಯಂ ಯುಕ್ತಂ ಸರ್ವರತ್ನವಿಭೂಷಿತಮ್ |
ಅಪ್ಸರೋಗಣಸಂಪೂರ್ಣಂ ಗಂಧರ್ವೈರುಪಶೋಭಿತಮ್ ॥117॥

ಯಾವನು ಹನ್ನೆರಡು ತಿಂಗಳುಗಳವರೆಗೆ ಇಪ್ಪತ್ತೊಂಬತ್ತು ದಿವಸಗಳಲ್ಲಿ ಒಂದು ಭೋಜನವನ್ನು ಮಾಡಿ ಸತ್ಯವ್ರತ ಪರಾಯಣನಾಗಿರುತ್ತಾನೆಯೋ ಅವನಿಗೆ ದೇವರ್ಷಿ ರಾಜರ್ಷಿ ಪೂಜಿತವಾದ ಶುಭವಾದ ದಿವ್ಯಲೋಕಗಳು ದೊರೆಯುತ್ತವೆ. ಚಂದ್ರನಂತೆ ಶುಭ್ರವಾದ ಸುವರ್ಣಮಯವಾದ, ಸರ್ವರತ್ನಗಳಿಂದ ವಿಭೂಷಿತವಾದ, ಅಪ್ಸರೆಯರ ಸಮೂಹದಿಂದ ತುಂಬಿದ, ಗಂಧರ್ವರಿಂದ ಶೋಭಿಸುವ ದಿವ್ಯವಾದ ವಿಮಾನವನ್ನು ಅವನು ಹೊಂದುತ್ತಾನೆ.

ತತ್ರ ಚೈನಂ ಶುಭಾ ನಾರ್ಯೋ ದಿವ್ಯಾಭರಣಭೂಷಿತಾಃ |
ಮನೋಭಿರಾಮಾ ಮಧುರಾ ರಮಯಂತಿ ಮದೋತ್ಕಟಾಃ ॥118॥
ಭೋಗವಾಂಸ್ತೇಜಸಾ ಯುಕ್ತೋ ವೈಶ್ವಾನರಸಮಪ್ರಭಃ |
ದಿವ್ಯೋ ದಿವ್ಯೇನ ವಪುಷಾ ಭ್ರಾಜಮಾನ ಇವಾಮರಃ ॥119॥
ವಸೂನಾಂ ಮರುತಾಂ ಚೈವ ಸಾಧ್ಯಾನಾಮಶ್ವಿನೋಸ್ತಥಾ |
ರುದ್ರಾಣಾಂ ಚ ತಥಾ ಲೋಕಾನ್ ಬ್ರಹ್ಮಲೋಕಗತಿರ್ಭವೇತ್ ॥120॥

ಅಲ್ಲಿ ದಿವ್ಯಾಭರಣಭೂಷಿತರಾದ, ಶುಭರಾದ,ಮಧುರರಾದ, ಮನೋಹರರಾದ, ಮದೋತ್ಕಟರಾದ ನಾರಿಯರು ಅವರನ್ನು ಸಂತೋಷಪಡಿಸುತ್ತಾರೆ. ಅವನು ಅಗ್ನಿಗೆ ಸಮಾನವಾದ ಕಾಂತಿಯನ್ನು ಹೊಂದಿ ತೇಜಸ್ಸಿನಿಂದ ಕೂಡಿದವನಾಗಿ ದಿವ್ಯವಾದ ಶರೀರದಿಂದ ದೇವನಂತೆ ಶೋಭಿಸುತ್ತಾ ಒಳ್ಳೆಯ ಭೋಗವನ್ನು ಹೊಂದಿ ವಸುಗಳ ಲೋಕಕ್ಕೂ, ಮರುತ್ತುಗಳ ಲೋಕಕ್ಕೂ, ಸಾಧ್ಯರ ಮತ್ತು ಅಶ್ವಿನಿಗಳ ಲೋಕಕ್ಕೂ, ರುದ್ರ ಲೋಕಕ್ಕೂ ಹೋಗಿ ಅಲ್ಲಿಂದ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

ಯಸ್ತು ಮಾಸೇ ಗತೇ ಭುಂಕ್ತೇ ಏಕಭಕ್ತಂ ಶಮಾತ್ಮಕಃ |
ಸದಾ ದ್ವಾದಶ ಮಾಸಾನ್ ವೈ ಬ್ರಹ್ಮಲೋಕಮವಾಪ್ನುಯಾತ್ ॥121॥
ಸುಧಾರಸಕೃತಾಹಾರಃ ಶ್ರೀಮಾನ್ ಸರ್ವಮನೋಹರಃ |
ತೇಜಸಾ ವಪುಷಾ ಲಕ್ಷ್ಮ್ಯಾ ಭ್ರಾಜತೇ ರಶ್ಮಿವಾನಿವ ॥122॥

ಯಾವನು ಹನ್ನೆರಡು ತಿಂಗಳುಗಳವರೆಗೆ ಒಂದು ತಿಂಗಳಿಗೊಮ್ಮೆ ಒಂದು ಬಾರಿ ಭೋಜನವನ್ನು ಸ್ವೀಕರಿಸಿ ಶಾಂತನಾಗಿರುತ್ತಾನೆಯೋ ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಅವನು ಸುಧಾರಸದ ಆಹಾರವುಳ್ಳವನಾಗಿ, ಸಂಪದ್ಯುಕ್ತನಾಗಿ, ಸರ್ವರಿಗೂ ಮನೋಹರನಾಗಿ ತೇಜಸ್ಸಿನಿಂದಲೂ, ಕಾಂತಿಯಿಂದಲೂ ಸೂರ್ಯನಂತೆ ಕಂಗೊಳಿಸುತ್ತಾನೆ.

ದಿವ್ಯಮಾಲ್ಯಾಂಬರಧರೋ ದಿವ್ಯಗಂಧಾನುಲೇಪನಃ |
ಸುಖೇಷ್ವಭಿರತೋ ಯೋಗೀ ದುಃಖಾನಾಮವಿಜಾನಕಃ ॥123॥
ಸ್ವಯಂಪ್ರಭಾಭಿರ್ನಾರೀಭಿರ್ವಿಮಾನಸ್ಥೋ ಮಹೀಯತೇ |
ರುದ್ರದೇವರ್ಷಿಕನ್ಯಾಭಿಃ ಸತತಂ ಚಾಭಿಪೂಜ್ಯತೇ ॥124॥
ನಾನಾವಿಧಸುರೂಪಾಭಿರ್ನಾನಾರಾಗಾಭಿರೇವ ಚ |
ನಾನಾಮಧುರಭಾಷಾಭಿರ್ನಾನಾರತಿಭಿರೇವ ಚ ॥125॥

ಸ್ವಯಂ ಪ್ರಭೆಯುಳ್ಳ ಸ್ತ್ರೀಯರಿಂದ ವಿಮಾನದಲ್ಲಿ ಪೂಜಿಸಲ್ಪಡುತ್ತಾನೆ. ನಾನಾ ವಿಧವಾದ ಮನೋಹರ ರೂಪಗಳನ್ನು ಹೊಂದಿದ, ನಾನಾ ರೂಪವಾದ ಲೇಪಗಳನ್ನು ಹೊಂದಿದ, ನಾನಾ ರೂಪವಾದ ಮಧುರ ಮಾತುಗಳನ್ನು ಆಡುವ, ಅನೇಕ ವಿಧವಾದ ಅಭಿರುಚಿಯನ್ನೂ ರತಿಯನ್ನೂ ಹೊಂದಿರುವ ರುದ್ರಕನ್ಯೆಯರಿಂದಲೂ, ದೇವಕನ್ಯೆಯರಿಂದಲೂ ಮತ್ತು ಋಷಿಕನ್ಯೆಯರಿಂದಲೂ ಸತತವಾಗಿ ಪೂಜಿಸಲ್ಪಡುತ್ತಾನೆ.

ವಿಮಾನೇ ನಗರಾಕಾರೇ ಸೂರ್ಯವತ್ ಸೂರ್ಯಸನ್ನಿಭೇ |
ಪೃಷ್ಠತಃ ಸೋಮಸಂಕಾಶೇ ಉದರ್ಕೇ ಚಾಭ್ರಸನ್ನಿಭೇ ॥126॥
ದಕ್ಷಿಣಾಯಾಂ ತು ರಕ್ತಾಭೇ ಅಧಸ್ತಾನ್ನೀಲಮಂಡಲೇ |

ಊರ್ಧ್ವಂ ಚಿತ್ರಾಭಿಸಂಕಾಶೇ ನೈಕೋ ವಸತಿ ಪೂಜಿತಃ ॥127॥
ಸೂರ್ಯನಿಗೆ ಸದೃಶವಾದ, ಹಿಂಭಾಗದಲ್ಲಿ ಚಂದ್ರನಿಗೆ ಸದೃಶವಾದ, ಉತ್ತರ ಭಾಗದಲ್ಲಿ ಬಿಳಿಯ ಮೋಡಗಳಿಗೆ ಸದೃಶವಾದ, ದಕ್ಷಿಣ ದಿಕ್ಕಿನಲ್ಲಿ ಕೆಂಪು ಕಾಂತಿಯನ್ನು ಹೊಂದಿದ, ಅಧೋಭಾಗದಲ್ಲಿ ನೀಲಮಂಡಲವನ್ನು ಹೊಂದಿದ, ಊರ್ಧ್ವಭಾಗದಲ್ಲಿ ವಿಚಿತ್ರವಾದ ಕಾಂತಿಯನ್ನು ಹೊಂದಿದ ನಗರಾಕಾರದ ವಿಮಾನದಲ್ಲಿ ಅನೇಕರಿಂದ ಪೂಜಿಸಲ್ಪಟ್ಟು ವಾಸ ಮಾಡುತ್ತಾನೆ.
ಯಾವದ್ವರ್ಷಸಹಸ್ರಂ ತು ಜಂಬೂದ್ವೀಪೇ ಪ್ರವರ್ಷತಿ |
ತಾವತ್ ಸಂವತ್ಸರಾಃ ಪ್ರೋಕ್ತಾ ಬ್ರಹ್ಮಲೋಕಸ್ಯ ಧೀಮತಃ ॥128॥
ವಿಪ್ರುಷಶ್ಚೈವ ಯಾವಂತ್ಯೋ ನಿಪತಂತಿ ನಭಸ್ತಳಾತ್ |
ವರ್ಷಾಸು ವರ್ಷತಸ್ತಾವನ್ನಿವಸತ್ಯಮರಪ್ರಭಃ ॥129॥
ಮಾಸೋಪವಾಸೀ ವರ್ಷೈಸ್ತು ದಶಭಿಃ ಸ್ವರ್ಗಮುತ್ತಮಮ್ |
ಮಹರ್ಷಿತ್ವಮಥಾಸಾದ್ಯ ಸಶರೀರಗತಿರ್ಭವೇತ್ ॥130॥
ಜಂಬೂದ್ವೀಪದಲ್ಲಿ ಸಹಸ್ರ ವರ್ಷಗಳಲ್ಲಿ ಎಷ್ಟು ಮಳೆಯು ಬೀಳುತ್ತದೆಯೋ ಅಷ್ಟು ವರ್ಷಗಳ ಕಾಲ ಮೇಧಾವಿಯಾದ ಅವನಿಗೆ ಬ್ರಹ್ಮಲೋಕದ ಪ್ರಾಪ್ತಿಯಾಗುತ್ತದೆ. ಮಳೆಗಾಲದಲ್ಲಿ ಆಕಾಶದಿಂದ ಎಷ್ಟು ಹನಿ ನೀರು ಬೀಳುತ್ತವೆಯೋ ಅಷ್ಟು ವರ್ಷಗಳ ಕಾಲ ಅವನು ದೇವತಾಕಾಂತಿಯನ್ನು ಹೊಂದಿ ಬ್ರಹ್ಮಲೋಕದಲ್ಲಿ ವಾಸಿಸುತ್ತಾನೆ. ಮಾಸೋಪವಾಸವನ್ನು ಮಾಡಿ ಒಂದು ಊಟವನ್ನು ಮಾಡುವವನು ಹತ್ತು ವರ್ಷಗಳಲ್ಲಿ ಸಶರೀರನಾಗಿ ಶ್ರೇಷ್ಠವಾದ ಸ್ವರ್ಗಕ್ಕೆ ಹೋಗಿ ಮಹರ್ಷಿತ್ವವನ್ನು ಪಡೆಯುತ್ತಾನೆ.
ಮುನಿರ್ದಾಂತೋ ಜಿತಕ್ರೋಧೋ ಜಿತಶಿಶ್ನೋದರಃ ಸದಾ |
ಜುಹ್ವನ್ನಗ್ನೀಂಶ್ಚ ನಿಯತಃ ಸಂಧ್ಯೋಪಾಸನಸೇವಿತಾ ॥131॥
ಬಹುಭಿರ್ನಿಯಮೈರೇವಂ ಮಾಸಾನಶ್ನಾತಿ ಯೋ ನರಃ |
ಅಭ್ರಾವಕಾಶಶೀಲಶ್ಚ ತಸ್ಯ ಭಾನೋರಿವ ತ್ವಿಷಃ ॥132॥
ದಿವಂ ಗತ್ವಾ ಶರೀರೇಣ ಸ್ವೇನ ರಾಜನ್ ಯಥಾಮರಃ |
ಸ್ವರ್ಗಂ ಪುಣ್ಯಂ ಯಥಾಕಾಮಮುಪಭುಂಕ್ತೇ ಯಥಾವಿಧಿ ॥133॥
ಇಂದ್ರಿಯನಿಗ್ರಹವುಳ್ಳವನಾಗಿ, ಕ್ರೋಧವನ್ನು ಜಯಿಸಿ, ಶಿಶ್ನೋದರಗಳನ್ನು ಜಯಿಸಿ, ಮುನಿಯಾಗಿ, ಅಗ್ನಿಹೋತ್ರವನ್ನು ಮಾಡುತ್ತಾ, ನಿಯಮದಿಂದ ಸಂಧ್ಯೋಪಾಸನೆಯನ್ನು ಮಾಡುವವನು ಹೀಗೆ ಅನೇಕ ನಿಯಮಗಳಿಂದ ತಿಂಗಳುಗಳನ್ನು ಕಳೆಯುವವನಿಗೆ ಅಭ್ರ ಮತ್ತು ಆಕಾಶದ ಶೀಲವೂ, ಸೂರ್ಯನ ಕಾಂತಿಯೂ ಉಂಟಾಗುತ್ತದೆ. ಎಲೈ ರಾಜನೇ, ದೇವತೆಗಳಂತೆ ಸಶರೀರವಾಗಿ ಸ್ವರ್ಗಕ್ಕೆ ಹೋಗಿ ತನ್ನ ಮನಸ್ಸಿಗೆ ಬೇಕಾಗುವಂತಹ ವಸ್ತುಗಳನ್ನು ಶಾಸ್ತ್ರವಿಧಿಗೆ ಅನುಸಾರವಾಗಿ ಭೋಗಿಸುತ್ತಾನೆ.
ಏಷ ತೇ ಭರತಶ್ರೇಷ್ಠ ಯಜ್ಞಾನಾಂ ವಿಧಿರುತ್ತಮಃ |
ವ್ಯಾಖ್ಯಾತೋ ಹ್ಯಾನುಪೂರ್ವ್ಯೇಣ ಉಪವಾಸಫಲಾತ್ಮಕಃ ॥134॥
ಎಲೈ ಭರತಶ್ರೇಷ್ಠನೇ, ನಿನಗೆ ಯಜ್ಞಗಳ, ಶ್ರೇಷ್ಠವಾದ ಈ ವಿಧಿಯನ್ನೂ ಮತ್ತು ಕ್ರಮವಾಗಿ ಉಪವಾಸದ ಫಲಗಳನ್ನೂ ಹೇಳಿದ್ದೇನೆ.
ದರಿದ್ರೈರ್ಮನುಜೈಃ ಪಾರ್ಥ ಪ್ರಾಪ್ಯಂ ಯಜ್ಞಫಲಂ ಯಥಾ |
ಉಪವಾಸಮಿಮಂ ಕೃತ್ವಾ ಗಚ್ಛೇಚ್ಚ ಪರಮಾಂ ಗತಿಮ್ |
ದೇವದ್ವಿಜಾತಿಪೂಜಾಯಾಂ ರತೋ ಭರತಸತ್ತಮ ॥135॥
ಎಲೈ ಪಾರ್ಥನೇ, ಭರತಸತ್ತಮನೇ, ದರಿದ್ರರಾದ ಮನುಷ್ಯರೂ ಸಹ ದೇವ- ಬ್ರಾಹ್ಮಣರ ಪೂಜೆಯಲ್ಲಿ ರತರಾಗಿ, ಈ ಉಪವಾಸವನ್ನು ಮಾಡಿ ಯಜ್ಞಫಲವನ್ನು ಹೊಂದಿ ಶ್ರೇಷ್ಠವಾದ ಗತಿಯನ್ನು ಹೊಂದಬಹುದು.
ಉಪವಾಸವಿಧಿಸ್ತ್ವೇಷ ವಿಸ್ತರೇಣ ಪ್ರಕೀರ್ತಿತಃ |
ನಿಯತೇಷ್ವಪ್ರಮತ್ತೇಷು ಶೌಚವತ್ಸು ಮಹತ್ಸು ಚ ॥136॥
ದಂಭದ್ರೋಹನಿವೃತ್ತೇಷು ಕೃತಬುದ್ಧಿಷು ಭಾರತ |
ಅಚಲೇಷ್ವಪ್ರಕಂಪೇಷು ಮಾ ತೇ ಭೂದತ್ರ ಸಂಶಯಃ ॥137॥
ವಿಸ್ತಾರವಾಗಿ ನಾನು ಹೇಳಿದ ಈ ಉಪವಾಸದ ವಿಧಿಯನ್ನು ನಿಯಮಬದ್ಧರಾದ, ಜಾಗರೂಕರಾದ, ಶುಚಿಗಳಾದ, ದಂಭ-ದ್ರೋಹ ರಹಿತರಾದ, ಕೃತಬುದ್ಧಿಯುಳ್ಳ, ಸ್ಥಿರರಾದ, ಧರ್ಮಮಾರ್ಗದಿಂದ ಅಲುಗಾಡದಿರುವ ಜನರಿಗೆ ಮಾತ್ರ ಹೇಳಬೇಕು. ಎಲೈ ಭಾರತನೇ, ಈ ವಿಷಯದಲ್ಲಿ ನೀನು ಸಂಶಯವನ್ನು ಹೊಂದಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *

## ನೂರ ಅರವತ್ತೊಂದನೆಯ ಅಧ್ಯಾಯ

### ಶೌಚಪ್ರಕಾರಗಳು

ಯುಧಿಷ್ಠಿರಃ
ಯದ್ವರಂ ಸರ್ವತೀರ್ಥಾನಾಂ ತದ್ ಬ್ರವೀಹಿ ಪಿತಾಮಹ |
ಯತ್ರ ವೈ ಪರಮಂ ಶೌಚಂ ತನ್ಮೇ ವ್ಯಾಖ್ಯಾತುಮರ್ಹಸಿ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಎಲ್ಲ ತೀರ್ಥಗಳಲ್ಲಿ ಯಾವುದು ಶ್ರೇಷ್ಠವೆಂದು ನನಗೆ ಹೇಳಬೇಕು. ಹಾಗೆಯೇ ಶೌಚಗಳಲ್ಲಿ ಶ್ರೇಷ್ಠವಾದ ಶೌಚವು ಯಾವುದೆಂದೂ ನನಗೆ ಹೇಳು.

ಭೀಷ್ಮಃ
ಸರ್ವಾಣಿ ಖಲು ತೀರ್ಥಾನಿ ಗುಣವಂತಿ ಮನೀಷಿಣಾಮ್ |
ಯತ್ತು ತೀರ್ಥಂ ಚ ಶೌಚಂ ಚ ತನ್ಮೇ ಶೃಣು ಸಮಾಹಿತಃ ॥2॥
ಭೀಷ್ಮ ವಿವೇಕಿಗಳಾದವರಿಗೆ ಎಲ್ಲ ತೀರ್ಥಗಳೂ ಶ್ರೇಷ್ಠವಾದವುಗಳೇ. ಯಾವುದು ಶ್ರೇಷ್ಠವಾದ ತೀರ್ಥ, ಯಾವುದು ಪರಮ ಶೌಚ ಎಂಬುದನ್ನು ಸಮಾಧಾನದಿಂದ ನನ್ನಿಂದ ಕೇಳು.
ಅಗಾಧೇ ವಿಮಲೇ ಶುದ್ಧೇ ಸತ್ಯತೋಯೇ ಧೃತಿಹ್ರದೇ |
ಸ್ನಾತವ್ಯಂ ಮಾನಸೇ ತೀರ್ಥೇ ಸತ್ತ್ವಮಾಲಂಬ್ಯ ಶಾಶ್ವತಮ್ ॥3॥
ಅಗಾಧವಾದ, ಪರಿಶುದ್ಧವಾದ, ಸತ್ಯವೆಂಬ ಜಲವನ್ನೂ, ಧೈರ್ಯವೆಂಬ ಮಡುವನ್ನೂ ಹೊಂದಿದ ಮಾನಸ ತೀರ್ಥದಲ್ಲಿ (ಮನಸ್ಸೆಂಬ ತೀರ್ಥದಲ್ಲಿ) ಸತ್ವವನ್ನು ಆಶ್ರಯಿಸಿ ಯಾವಾಗಲೂ ಸ್ನಾನ ಮಾಡಬೇಕು.
ತೀರ್ಥಶೌಚಮನರ್ಥಿತ್ವಂ ಮಾರ್ದವಂ ಸತ್ಯಮಾರ್ಜವಮ್ |
ಅಹಿಂಸಾ ಸರ್ವಭೂತಾನಾಮಾನೃಶಂಸ್ಯಂ ದಮಃ ಶಮಃ ॥4॥
ತೀರ್ಥಗಳಲ್ಲಿ ಸ್ನಾನ, ಯಾರನ್ನೂ ಬೇಡದಿರುವುದು, ಮೃದುತನ, ಸತ್ಯವಚನ, ಆರ್ಜವ, ಅಹಿಂಸೆ, ಸರ್ವಪ್ರಾಣಿಗಳಲ್ಲಿ ದಯೆ, ಇಂದ್ರಿಯನಿಗ್ರಹ, ಭಗವನ್ನಿಷ್ಠೆ - ಇವು ಶ್ರೇಷ್ಠವಾದ ಶೌಚಗಳು.
ನಿರ್ಮಮಾ ನಿರಹಂಕಾರಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ |
ಶುಚಯಸ್ತೀರ್ಥಭೂತಾಸ್ತೇ ಯೇ ಭೈಕ್ಷಮುಪಭುಂಜತೇ ॥5॥
ಅಹಂಕಾರ-ಮಮಕಾರಗಳನ್ನು ತ್ಯಜಿಸಿ, ಶೀತೋಷ್ಣಾದಿ ದ್ವಂದ್ವಗಳನ್ನು ಮೀರಿ, ಪರಿಗ್ರಹವನ್ನು ಮಾಡದೆ, ಭೈಕ್ಷವೃತ್ತಿಯಿಂದ ಜೀವಿಸಿ ಶುಚಿಯಾಗಿರುವವರು ಅವರೇ ಸ್ವತಃ ತೀರ್ಥದಂತೆ ಇರುವವರು.
ತತ್ತ್ವವಿತ್ತ್ವಮನಹಂಬುದ್ಧಿಸ್ತೀರ್ಥಂ ಪರಮಮುಚ್ಯತೇ |
ನಾರಾಯಣೇಽಥ ರುದ್ರೇ ವಾ ಭಕ್ತಿಸ್ತೀರ್ಥಂ ಪರಂ ಮತಮ್ |
ಶೌಚಲಕ್ಷಣಮೇತತ್ ತೇ ಸರ್ವತ್ರೈವಾನ್ವವೇಕ್ಷಣಮ್ ॥6॥
ತತ್ತ್ವಜ್ಞಾನ ಮತ್ತು ನಿರಹಂಕಾರಗಳು ಶ್ರೇಷ್ಠವಾದ ತೀರ್ಥಗಳೆಂದು ಹೇಳಲ್ಪಡುತ್ತವೆ. ನಾರಾಯಣನಲ್ಲಿ ಅಥವಾ ರುದ್ರನಲ್ಲಿ ಭಕ್ತಿಯು ಶ್ರೇಷ್ಠವಾದ ತೀರ್ಥ. ಈ ಶೌಚ ಲಕ್ಷಣವನ್ನು ಪಾದವಿನ್ಯಾಸ, ಜಲಪಾನ ಮೊದಲಾದ ಎಲ್ಲ ಕಡೆಗಳಲ್ಲಿಯೂ ಗಮನಿಸಬೇಕು (ಲಕ್ಷ್ಮಾಲಂಕಾರ).
ರಜಸ್ತಮಃಸತ್ತ್ವಮಥೋ ಯೇಷಾಂ ನಿರ್ಧೌತಮಾತ್ಮನಃ |
ಶೌಚಾಶೌಚೇ ನ ತೇ ಸಕ್ತಾಃ ಸ್ವಕಾರ್ಯಪರಿಮಾರ್ಗಿಣಃ ॥7॥
ಯಾರು ತಮ್ಮ ಮನಸ್ಸಿನಿಂದ ರಾಜಸ, ತಾಮಸ, ಸಾತ್ವಿಕ ಭಾವಗಳನ್ನು ತೊಡೆದುಕೊಂಡಿರುತ್ತಾರೆಯೋ ಮತ್ತು ತಮ್ಮ ಪರಮಕಾರ್ಯವಾದ ಗುರಿಯನ್ನು ಅನ್ವೇಷಣೆ ಮಾಡುತ್ತಾರೆಯೋ ಅವರಿಗೆ ಶೌಚ-ಅಶೌಚಗಳಲ್ಲಿ ಆಸಕ್ತಿ ಇರುವುದಿಲ್ಲ.
ಸರ್ವತ್ಯಾಗೇಷ್ವಭಿರತಾಃ ಸರ್ವಜ್ಞಾಃ ಸರ್ವದರ್ಶಿನಃ |
ಶೌಚೇನ ವೃತ್ತಶೌಚಾರ್ಥಾಸ್ತೇ ತೀರ್ಥಾಃ ಶುಚಯಶ್ಚ ತೇ ॥8॥
ಸರ್ವತ್ಯಾಗಿಗಳೂ, ಸರ್ವಜ್ಞರೂ, ಸರ್ವದರ್ಶಿಗಳೂ ತಮ್ಮ ಶೌಚದ ಫಲವನ್ನು ಪಡೆದವರೂ ಆದ ಅವರೇ ತೀರ್ಥರಾದವರು ಮತ್ತು ಶುಚಿಗಳಾದವರು.
ನೋದಕಕ್ಲಿನ್ನಗಾತ್ರಸ್ತು ಸ್ನಾತ ಇತ್ಯಭಿಧೀಯತೇ |
ಸ ಸ್ನಾತೋ ಯೋ ದಮಸ್ನಾತಃ ಸ ಬಾಹ್ಯಾಭ್ಯಂತರಃ ಶುಚಿಃ ॥9॥
ನೀರಿನಲ್ಲಿ ಮುಳುಗಿದವನನ್ನು ಸ್ನಾನ ಮಾಡಿದವನು ಎಂದು ಹೇಳುವುದಿಲ್ಲ. ಯಾವನು ಇಂದ್ರಿಯನಿಗ್ರಹವನ್ನು ಹೊಂದಿ ನೀರಿನಲ್ಲಿ ಸ್ನಾನ ಮಾಡುತ್ತಾನೆಯೋ ಅವನೇ ಒಳಗೂ ಮತ್ತು ಹೊರಗೂ ಶುಚಿಯಾದವನು.
ಅತೀತೇಷ್ವನಪೇಕ್ಷಾ ಯೇ ಪ್ರಾಪ್ತೇಷ್ವರ್ಥೇಷು ನಿರ್ಮಮಾಃ |
ಶೌಚಮೇವ ಪರಂ ತೇಷಾಂ ಯೇಷಾಂ ನೋತ್ಪದ್ಯತೇ ಸ್ಪೃಹಾ ॥10॥
ಯಾರಿಗೆ ಕಳೆದುಹೋದ ವಸ್ತುವಿನಲ್ಲಿ ಅಪೇಕ್ಷೆ ಇಲ್ಲವೋ, ಪ್ರಾಪ್ತವಾದ ವಸ್ತುಗಳಲ್ಲಿ ಮಮಕಾರವಿಲ್ಲವೋ, ಯಾರಿಗೆ ಆಸೆಯೇ ಉಂಟಾಗುವುದಿಲ್ಲವೋ ಅಂತಹವರಿಗೆ ಪರಮ ಶೌಚವೇ ಉಂಟಾಗುತ್ತದೆ.
ಪ್ರಜ್ಞಾನಂ ಶೌಚಮೇವೇಹ ಶರೀರಸ್ಯ ವಿಶೇಷತಃ |
ತಥಾ ನಿಷ್ಕಿಂಚನತ್ವಂ ಚ ಮನಸಶ್ಚ ಪ್ರಸನ್ನತಾ ॥11॥
ಶರೀರಕ್ಕೆ ತತ್ತ್ವಜ್ಞಾನವೇ ಶೌಚವಾದುದು. ಹಾಗೆಯೇ ದಾರಿದ್ರ್ಯ ಮತ್ತು ಮನಸ್ಸಿನ ಪ್ರಸನ್ನತೆಗಳು ಶೌಚರೂಪವಾದವುಗಳು.
ವೃತ್ತಶೌಚಂ ಮನಃಶೌಚಂ ತೀರ್ಥಶೌಚಂ ಪರಂ ಹಿ ತತ್ |
ಜ್ಞಾನೋತ್ಪನ್ನಂ ಚ ಯಚ್ಛೌಚಂ ತಚ್ಛೌಚಂ ಪರಮಂ ಮತಮ್ ॥12॥
ನಡತೆಯಿಂದ ಉಂಟಾಗುವ ಶುದ್ಧಿ, ಮನಸ್ಸಿನ ಶುದ್ಧಿ ಮತ್ತು ತೀರ್ಥಸ್ನಾನದಿಂದ ಉಂಟಾಗುವ ಶುದ್ಧಿ ಬೇರೆ ರೀತಿಯಾದುದು. ಜ್ಞಾನದಿಂದ ಉಂಟಾಗುವ ಯಾವ ಶೌಚವಿದೆಯೋ ಅದೇ ಶ್ರೇಷ್ಠವಾದ ಶೌಚವೆಂದು ಹೇಳಲ್ಪಡುತ್ತದೆ.
ಮನಸಾಽಥ ಪ್ರದೀಪೇನ ಬ್ರಹ್ಮಜ್ಞಾನಜಲೇನ ಚ |
ಸ್ನಾತಾ ಯೇ ಮಾನಸೇ ತೀರ್ಥೇ ತಜ್ಜ್ಞಾಃ ಕ್ಷೇತ್ರಜ್ಞದರ್ಶಿನಃ ॥13॥
ಮನಸ್ಸು ಎಂಬ ದೀಪವನ್ನು ಹಿಡಿದು ಬ್ರಹ್ಮಜ್ಞಾನವೆಂಬ ಜಲದಲ್ಲಿ ಮಾನಸ ತೀರ್ಥದಲ್ಲಿ ಯಾರು ಸ್ನಾನವನ್ನು ಮಾಡುತ್ತಾರೆಯೋ ಅವರೇ ಶೌಚದ ಮರ್ಮವನ್ನು ತಿಳಿದವರು ಮತ್ತು ಕ್ಷೇತ್ರಜ್ಞನಾದ ಪರಮಾತ್ಮನನ್ನು ನೋಡುವವರು.

ಸಮಾರೋಪಿತಶೌಚಸ್ತು ನಿತ್ಯಂ ಭಾವಸಮನ್ವಿತಃ |
ಕೇವಲಂ ಗುಣಸಂಪನ್ನಃ ಶುಚಿರೇವ ನರಃ ಸದಾ ॥14॥
ನಿತ್ಯವೂ ಶೌಚವನ್ನು ಮಾಡಿಕೊಂಡು, ಭಕ್ತಿಯಿಂದ ಕೂಡಿದ ಗುಣಸಂಪನ್ನನಾಗಿರುವ ಮನುಷ್ಯನು ಯಾವಾಗಲೂ ಶುಚಿಯೇ.
ಶರೀರಸ್ಥಾನಿ ತೀರ್ಥಾನಿ ಪ್ರೋಕ್ತಾನ್ಯೇತಾನಿ ಭಾರತ |
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನಿ ಶೃಣು ತಾನ್ಯಪಿ ॥15॥
ಎಲೈ ಭಾರತನೇ, ಶರೀರದಲ್ಲಿರುವ ಈ ತೀರ್ಥವನ್ನು ಹೇಳಿದೆ. ಪೃಥಿವಿಯಲ್ಲಿರುವ ಪುಣ್ಯತೀರ್ಥಗಳನ್ನು ಕೇಳುವವನಾಗು.
ಯಥಾ ಶರೀರಸ್ಯೋದ್ದೇಶಾಃ ಶುಚಯಃ ಪರಿನಿರ್ಮಿತಾಃ |
ತಥಾ ಪೃಥಿವ್ಯಾ ಭಾಗಾಶ್ಚ ಪುಣ್ಯಾನಿ ಸಲಿಲಾನಿ ಚ ॥16॥
ಶರೀರದ ಕೆಲವು ಭಾಗಗಳು ಹೇಗೆ ಶುಚಿ ಎಂದು ಹೇಳಲ್ಪಡುತ್ತವೆಯೋ ಹಾಗೆಯೇ ಪೃಥ್ವಿಯ ಕೆಲವು ಭಾಗಗಳು ಮತ್ತು ಕೆಲವು ಜಲಗಳು ಶುಚಿ ಎಂದು ಹೇಳಲ್ಪಡುತ್ತವೆ.
ಪ್ರಾರ್ಥನಾಚ್ಚೈವ ತೀರ್ಥಸ್ಯ ಸ್ನಾನಾಚ್ಚ ಪಿತೃತರ್ಪಣಾತ್ |
ಧುನಂತಿ ಪಾಪಂ ತೀರ್ಥೇಷು ತೇ ಪ್ರಯಾಂತಿ ಸುಖಂ ದಿವಮ್ ॥17॥
ತೀರ್ಥವನ್ನು ಪ್ರಾರ್ಥನೆ ಮಾಡುವುದರಿಂದ (ಸ್ತೋತ್ರ ಮಾಡುವುದರಿಂದ), ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ಮತ್ತು ತೀರ್ಥಗಳಲ್ಲಿ ಪಿತೃತರ್ಪಣ ಕೊಡುವುದರಿಂದ, ತೀರ್ಥಯಾತ್ರೆಯನ್ನು ಮಾಡುವುದರಿಂದ ತಮ್ಮ ಪಾಪಗಳನ್ನು ಕಳೆದುಕೊಂಡು ಸುಖವಾಗಿ ಸ್ವರ್ಗಕ್ಕೆ ಹೋಗುತ್ತಾರೆ.
ಪರಿಗ್ರಹಾಚ್ಚ ಸಾಧೂನಾಂ ಪೃಥಿವ್ಯಾಶ್ಚೈವ ತೇಜಸಾ |
ಅತೀವ ಪುಣ್ಯಾಸ್ತೇ ಭಾಗಾಃ ಸಲಿಲಸ್ಯ ಚ ತೇಜಸಾ ॥18॥
ಭೂಮಿಯ ಅಂತಹ ಭಾಗಗಳು ಸಜ್ಜನರು ಸ್ವೀಕರಿಸಿರುವುದರಿಂದಲೂ, ಪೃಥಿವಿಯ ತೇಜಸ್ಸಿನಿಂದಲೂ ಮತ್ತು ಅಲ್ಲಿರುವ ಜಲದ ತೇಜಸ್ಸಿನಿಂದಲೂ ಅತ್ಯಂತ ಪುಣ್ಯ ಭಾಗಗಳಾಗಿವೆ.
ಮನಸಶ್ಚ ಪೃಥಿವ್ಯಾಶ್ಚ ಪುಣ್ಯತೀರ್ಥಾಸ್ತಥಾಪರೇ |
ಉಭಯೋರೇವ ಯಃ ಸ್ನಾತಃ ಸ ಸಿದ್ಧಿಂ ಶೀಘ್ರಮಾಪ್ನುಯಾತ್ ॥19॥
ಮನಸ್ಸಿನ ಪುಣ್ಯತೀರ್ಥಗಳು ಮತ್ತು ಭೂಮಿಯ ಪುಣ್ಯತೀರ್ಥಗಳು ಬೇರೆ ಬೇರೆಯಾಗಿವೆ. ಯಾವನು ಎರಡರಲ್ಲಿಯೂ ಸ್ನಾನ ಮಾಡುತ್ತಾನೆಯೋ ಅವನು ಶೀಘ್ರವಾಗಿ ಸಿದ್ಧಿಯನ್ನು ಹೊಂದುತ್ತಾನೆ.
ಯಥಾ ಬಲಂ ಕ್ರಿಯಾಹೀನಂ ಕ್ರಿಯಾ ವಾ ಬಲವರ್ಜಿತಾ |
ನೇಹ ಸಾಧಯತೇ ಕಾರ್ಯಂ ಸಮಾಯುಕ್ತಸ್ತು ಸಿದ್ಧ್ಯತಿ ॥20॥
ಏವಂ ಶರೀರಶೌಚೇನ ತೀರ್ಥಶೌಚೇನ ಚಾನ್ವಿತಃ |
ತತಃ ಸಿದ್ಧಿಮವಾಪ್ನೋತಿ ದ್ವಿವಿಧಾ ಶೌಚಲಕ್ಷಣಾ ॥21॥
ಕ್ರಿಯಾಹೀನವಾದ ಬಲವಾಗಲೀ, ಬಲವಿಲ್ಲದ ಕ್ರಿಯೆಯಾಗಲೀ ಹೇಗೆ ಕಾರ್ಯವನ್ನು ಸಾಧಿಸುವುದಿಲ್ಲವೋ, ಎರಡೂ ಸೇರಿದರೆ ಹೇಗೆ ಕಾರ್ಯಸಿದ್ಧಿ ಆಗುತ್ತದೆಯೋ ಅದರಂತೆ ಶರೀರ ಶೌಚ ಮತ್ತು ತೀರ್ಥಶೌಚ ಇವೆರಡರಿಂದ ಕೂಡಿದ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ. ಹೀಗೆ ಶೌಚಸ್ವರೂಪವು ಎರಡು ವಿಧವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದ್ವಿವಿಧಶೌಚಕಥನಂ ನಾಮ ಏಕಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆರಡನೆಯ ಅಧ್ಯಾಯ
ದುಷ್ಕರ್ಮಫಲವಾದ ನೀಚಯೋನಿಗಳು
ಯುಧಿಷ್ಠಿರಃ
ಪಿತಾಮಹ ಮಹಾಬಾಹೋ ಸರ್ವಶಾಸ್ತ್ರವಿದಾಂವರ |
ಶ್ರೋತುಮಿಚ್ಛಾಮಿ ಮರ್ತ್ಯಾನಾಂ ಸಂಸಾರವಿಧಿಮುತ್ತಮಮ್ ॥1॥
ಯುಧಿಷ್ಠಿರ ಎಲೈ ಮಹಾಬಾಹುವೇ, ಸರ್ವಶಾಸ್ತ್ರಜ್ಞರಲ್ಲಿ ಶ್ರೇಷ್ಠನೇ, ಪಿತಾಮಹನೇ, ಮನುಷ್ಯರ ಸಂಸಾರವಿಧಿಗಳನ್ನು ಕೇಳಲು ಬಯಸುತ್ತೇನೆ.
ಕೇನ ವೃತ್ತೇನ ರಾಜೇಂದ್ರ ವರ್ತಮಾನಾ ನರಾ ಭುವಿ |
ಪ್ರಾಪ್ನುವಂತ್ಯುತ್ತಮಂ ಸ್ವರ್ಗಂ ಕಥಂ ಚ ನರಕಂ ನೃಪ ॥2॥
ಎಲೈ ರಾಜೇಂದ್ರನೇ, ಭೂಲೋಕದಲ್ಲಿ ಎಂತಹ ನಡತೆಯಿಂದ ಕೂಡಿದ ಜನರು ಉತ್ತಮವಾದ ಸ್ವರ್ಗವನ್ನು ಪಡೆಯುತ್ತಾರೆ? ಎಲೈ ರಾಜನೇ, ನರಕವನ್ನು ಹೇಗೆ ಪಡೆಯುತ್ತಾರೆ?
ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಜನಾಃ |
ಪ್ರಯಾಂತ್ಯಮುಂ ಲೋಕಮಿತಃ ಕೋ ವೈ ತಾನನುಗಚ್ಛತಿ ॥3॥
ಕಟ್ಟಿಗೆ ಮತ್ತು ಮಣ್ಣುಹೆಂಟೆಗೆ ಸಮಾನವಾದ ಮೃತ ಶರೀರವನ್ನು ತ್ಯಜಿಸಿ ಜನರು ಇಲ್ಲಿಂದ ಪರಲೋಕಕ್ಕೆ ಹೋಗುತ್ತಾರೆ. ಅವರನ್ನು ಯಾರು ಅನುಸರಿಸುತ್ತಾರೆ?

ಭೀಷ್ಮ:
ಅಸಾವಾಯಾತಿ ಭಗವಾನ್ ಬೃಹಸ್ಪತಿರುದಾರಧೀಃ |
ಪೃಚ್ಛೈನಂ ಸುಮಹಾಭಾಗಮೇತದ್ ಗುಹ್ಯಂ ಸನಾತನಮ್ ||4||
ಭೀಷ್ಮ ಪೂಜ್ಯರೂ, ಮೇಧಾವಿಗಳೂ ಆದ ಬೃಹಸ್ಪತಿಗಳು ಇಲ್ಲಿಯೇ ಬರುತ್ತಿದ್ದಾರೆ. ಗುಹ್ಯವೂ, ಸನಾತನವೂ ಆದ ಈ ವಿಷಯವನ್ನು ಕುರಿತು ಆ ಮಹಾನುಭಾವರನ್ನೇ ಪ್ರಶ್ನೆಯನ್ನು ಮಾಡು.
ನೈತದನ್ಯೇನ ಶಕ್ಯಂ ಹಿ ವಕ್ತುಂ ಕೇನಚಿದದ್ಯ ವೈ |
ವಕ್ತಾ ಬೃಹಸ್ಪತಿಸಮೋ ನ ಹ್ಯನ್ಯೋ ವಿದ್ಯತೇ ಕ್ವಚಿತ್ ||5||
ನಿನ್ನ ಪ್ರಶ್ನೆಗೆ ಉತ್ತರವನ್ನು ಈ ದಿನ ಬೇರೆ ಯಾರೂ ಹೇಳಲು ಸಾಧ್ಯವಿಲ್ಲ. ಬೃಹಸ್ಪತಿಗೆ ಸಮರಾದ ಪ್ರತ್ಯುತ್ತರವನ್ನು ಕೊಡುವವನು ಬೇರೆ ಯಾವನೂ ಇಲ್ಲ.
ವೈಶಂಪಾಯನಃ
ತಯೋಃ ಸಂವದತೋರೇವಂ ಪಾರ್ಥಗಾಂಗೇಯಯೋಸ್ತದಾ |
ಆಜಗಾಮ ವಿಶುದ್ಧಾತ್ಮಾ ಭಗವಾನ್ ಸ ಬೃಹಸ್ಪತಿಃ ||6||
ವೈಶಂಪಾಯನ ಯುಧಿಷ್ಠಿರ ಮತ್ತು ಭೀಷ್ಮರು ಹೀಗೆ ಮಾತನಾಡುತ್ತಿರುವಾಗ ವಿಶುದ್ಧಾತ್ಮರಾದ, ಪೂಜ್ಯರಾದ ಬೃಹಸ್ಪತಿಗಳು ಅಲ್ಲಿಗೆ ಬಂದರು.
ತತೋ ರಾಜಾ ಸಮುತ್ಥಾಯ ಧೃತರಾಷ್ಟ್ರಪುರೋಗಮಃ |
ಪೂಜಾಮನುಪಮಾಂ ಚಕ್ರೇ ಸರ್ವೇ ತೇ ಚ ಸಭಾಸದಃ ||7||
ಆಗ ರಾಜನಾದ ಯುಧಿಷ್ಠಿರನು ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ಎದ್ದು ಅವರಿಗೆ ಅಸದೃಶವಾದ ಪೂಜೆಯನ್ನು ಸಲ್ಲಿಸಿದನು. ಆ ಸಭಾಸದರೆಲ್ಲರೂ ಹಾಗೆಯೇ ಮಾಡಿದರು.
ತತೋ ಧರ್ಮಸುತೋ ರಾಜಾ ಭಗವಂತಂ ಬೃಹಸ್ಪತಿಮ್ |
ಉಪಗಮ್ಯ ಯಥಾನ್ಯಾಯಂ ಪ್ರಶ್ನಂ ಪಪ್ರಚ್ಛ ಸುವ್ರತಃ ||8||
ಅನಂತರ ರಾಜನೂ ಸುವ್ರತನೂ ಆದ ಯುಧಿಷ್ಠಿರನು ಪೂಜ್ಯರಾದ ಬೃಹಸ್ಪತಿಗಳನ್ನು ಶಾಸೊತ್ರೀಕ್ತವಾಗಿ ಸಮೀಪಿಸಿ ಪ್ರಶ್ನೆಯನ್ನು ಕೇಳಿದನು.
ಯುಧಿಷ್ಠಿರಃ
ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ |
ಮರ್ತ್ಯಸ್ಯ ಕಃ ಸಹಾಯೋ ವೈ ಪಿತಾ ಮಾತಾ ಸುತೋ ಗುರುಃ ||9||
ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಜನಾಃ |
ಗಚ್ಛಂತ್ಯಮುಂ ಚ ಲೋಕಂ ಚ ಕ ಏನಮನುಗಚ್ಛತಿ ||10||
ಯುಧಿಷ್ಠಿರ ಪೂಜ್ಯರೇ, ಸರ್ವಧರ್ಮಜ್ಞರೇ, ಸರ್ವಶಾಸ್ತ್ರವಿಶಾರದರೇ, ಮರಣಶೀಲನಾದ ಮನುಷ್ಯನಿಗೆ ತಂದೆಯೋ, ತಾಯಿಯೋ, ಪುತ್ರನೋ, ಗುರುವೋ ಯಾರು ಸಹಾಯಕರಾಗುತ್ತಾರೆ? ಜೀವರು ಕಟ್ಟಿಗೆ ಮತ್ತು ಮಣ್ಣಿಗೆ ಸಮಾನವಾದ ಮೃತಶರೀರವನ್ನು ಬಿಟ್ಟು ಪರಲೋಕಕ್ಕೆ ಹೋಗುತ್ತಾರೆ. ಆಗ ಯಾವುದು ಅವನನ್ನು ಹಿಂಬಾಲಿಸುತ್ತದೆ?
ಬೃಹಸ್ಪತಿಃ
ಏಕಃ ಪ್ರಸೂತೋ ರಾಜೇಂದ್ರ ಏಕ ಏವ ಪ್ರಮೀಯತೇ |
ಏಕಸ್ತರತಿ ದುರ್ಗಾಣಿ ಗಚ್ಛತ್ಯೇಕಶ್ಚ ದುರ್ಗತಿಮ್ ||11||
ಬೃಹಸ್ಪತಿ ರಾಜನೇ, ಒಬ್ಬನೇ ಹುಟ್ಟುತ್ತಾನೆ, ಒಬ್ಬನೇ ಸಾಯುತ್ತಾನೆ, ಒಬ್ಬನೇ ಕ್ಲೇಶವನ್ನು ಅನುಭವಿಸುತ್ತಾನೆ, ಒಬ್ಬನೇ ಕ್ಲೇಶಗಳನ್ನು ದಾಟುತ್ತಾನೆ.
ಅಸಹಾಯಃ ಪಿತಾ ಮಾತಾ ತಥಾ ಭ್ರಾತಾ ಸುತೋ ಗುರುಃ |
ಜ್ಞಾತಿಸಂಬಂಧಿವರ್ಗಶ್ಚ ಮಿತ್ರವರ್ಗಸ್ತಥೈವ ಚ ||12||
ತಂದೆ, ತಾಯಿ, ಸಹೋದರ, ಪುತ್ರ, ಗುರು, ಜ್ಞಾತಿ, ದಾಯಾದಿಗಳು, ಸಂಬಂಧಿಗಳು, ಮಿತ್ರರು - ಯಾರೂ ಸಹಾಯಕರಾಗುವುದಿಲ್ಲ.
ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಜನಾಃ |
ಮುಹೂರ್ತಮುಪತಿಷ್ಠಂತಿ ತತೋ ಯಾಂತಿ ಪರಾಙ್ಮುಖಾಃ |
ತೈಃ ಶರೀರಿಣಮುತ್ಸೃಷ್ಟಂ ಧರ್ಮ ಏಕೋಽನುಗಚ್ಛತಿ ||13||
ಜನರು ಕಾಷ್ಠಲೋಷ್ಟಕ್ಕೆ (ಕಟ್ಟಿಗೆ-ಮಣ್ಣಿನ ಹೆಂಟೆ) ಸಮಾನವಾದ ಮೃತಶರೀರದ ಬಳಿ ಒಂದು ಮುಹೂರ್ತ ಇದ್ದು ರೋದನವನ್ನು ಮಾಡಿ, ಮೃತಶರೀರವನ್ನು ಬಿಟ್ಟು, ವಿಮುಖರಾಗಿ ಹೊರಟು ಹೋಗುತ್ತಾರೆ. ಅವರು ತ್ಯಜಿಸಿದ ಶರೀರದಿ (ಹೊರಟ) ಜೀವನ ಧರ್ಮ ಒಂದೇ ಹಿಂಬಾಲಿಸುತ್ತದೆ.
ತಸ್ಮಾದ್ಧರ್ಮಃ ಸಹಾಯಾರ್ಥೇ ಸೇವಿತವ್ಯಃ ಸದಾ ನೃಭಿಃ |
ಪ್ರಾಣೀ ಧರ್ಮಸಮಾಯುಕ್ತೋ ಗಚ್ಛತೇ ಸ್ವರ್ಗತಿಂ ಪರಾಮ್ |
ತಥೈವಾಧರ್ಮಸಂಯುಕ್ತೋ ನರಕಾಯೋಪಪದ್ಯತೇ ||14||
ಆದ್ದರಿಂದ ಸಹಾಯವನ್ನು ಉದ್ದೇಶಿಸುವ ಮನುಷ್ಯನು ಯಾವಾಗಲೂ ಧರ್ಮವನ್ನು ಸಂಪಾದಿಸಬೇಕು. ಧರ್ಮವನ್ನು ಸಂಪಾದಿಸಿದ ಮನುಷ್ಯನು ಶ್ರೇಷ್ಠವಾದ ಸ್ವರ್ಗಗತಿಯನ್ನು ಹೊಂದುತ್ತಾನೆ. ಹಾಗೆಯೇ ಅಧರ್ಮದಿಂದ ಯುಕ್ತನಾದವನು ನರಕಕ್ಕೆ

ಹೋಗುವವನಾಗುತ್ತಾನೆ.
ತಸ್ಮಾನ್ನ್ಯಾಯಗತೈರರ್ಥೈರ್ಧರ್ಮಂ ಸೇವೇತ ಪಂಡಿತಃ |
ಧರ್ಮ ಏಕೋ ಮನುಷ್ಯಾಣಾಂ ಸಹಾಯಃ ಪಾರಲೌಕಿಕಃ ॥15॥
ಆದ್ದರಿಂದ ವಿವೇಕಿಯಾದವನು ನ್ಯಾಯದಿಂದ ಸಂಪಾದಿಸಿದ ಧನದಿಂದ ಧರ್ಮವನ್ನು ಮಾಡಬೇಕು. ಮನುಷ್ಯರಿಗೆ ಪರಲೋಕದಲ್ಲಿ ಸಹಾಯವನ್ನು ಮಾಡುವುದು ಧರ್ಮ ಒಂದೇ.
ಲೋಭಾನ್ಮೋಹಾದನುಕ್ರೋಶಾದ್ ಭಯಾದ್ ವಾಪ್ಯಬಹುಶ್ರುತಃ |
ನರಃ ಕರೋತ್ಯಕಾರ್ಯಾಣಿ ಪರಾರ್ಥೇ ಲೋಭಮೋಹಿತಃ ॥16॥
ಲೋಭದಿಂದ, ಮೋಹದಿಂದ, ದಯೆಯಿಂದ, ಭಯದಿಂದ ಅಥವಾ ಅಜ್ಞಾನದಿಂದ ಅಥವಾ ಇನ್ನೊಬ್ಬರ ದ್ರವ್ಯದಲ್ಲಿ ಆಸೆಯಿಂದ ಮನುಷ್ಯನು ಅಕಾರ್ಯಗಳನ್ನು ಮಾಡುತ್ತಾನೆ.
ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿತಯಂ ಜೀವಿತೇ ಫಲಮ್ |
ಏತತ್ ತ್ರಯಮವಾಪ್ತವ್ಯಮಧರ್ಮಪರಿವರ್ಜಿತಮ್ ॥17॥
ಧರ್ಮ-ಅರ್ಥ-ಕಾಮ - ಈ ಮೂರು ಜೀವನದ ಫಲ. ಇವುಗಳನ್ನು ಅಧರ್ಮದ ಸ್ಪರ್ಶವಿಲ್ಲದಂತೆ ಸಂಪಾದಿಸಬೇಕು.
ಯುಧಿಷ್ಠಿರಃ
ಶ್ರುತಂ ಭಗವತೋ ವಾಕ್ಯಂ ಧರ್ಮಯುಕ್ತಂ ಪರಂ ಹಿತಮ್ |
ಶರೀರವಿಷಯಂ ಜ್ಞಾತುಂ ಬುದ್ಧಿಸ್ತು ಮಮ ಜಾಯತೇ ॥18॥
ಮೃತಂ ಶರೀರರಹಿತಂ ಸೂಕ್ಷ್ಮಮವ್ಯಕ್ತತಾಂ ಗತಮ್ |
ಅಚಕ್ಷುರ್ವಿಷಯಂ ಪ್ರಾಪ್ತಂ ಕಥಂ ಧರ್ಮೋಽನುಗಚ್ಛತಿ ॥19॥
ಯುಧಿಷ್ಠಿರ ಪೂಜ್ಯರಾದ ನಿಮ್ಮ ಧರ್ಮಯುಕ್ತವಾದ ಮತ್ತು ಅತ್ಯಂತ ಹಿತವಾದ ಮಾತನ್ನು ಕೇಳಿ, ಶರೀರವಿಷಯವನ್ನು ತಿಳಿದುಕೊಳ್ಳಬೇಕೆಂದು ನನಗೆ ಬುದ್ಧಿ ಉಂಟಾಗುತ್ತಿದೆ. ಮೃತನಾಗಿ ಶರೀರರಹಿತನಾಗಿ, ಸೂಕ್ಷ್ಮಾವಸ್ಥೆಯನ್ನು ಹೊಂದಿ, ಕಣ್ಣಿಗೆ ಗೋಚರನಾಗದಿದ್ದವನನ್ನು ಧರ್ಮವು ಹೇಗೆ ಅನುಸರಿಸುತ್ತದೆ?
ಬೃಹಸ್ಪತಿಃ
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಬುದ್ಧಿರಾತ್ಮಾ ಚ ಸಹಿತಾ ಧರ್ಮಂ ಪಶ್ಯಂತಿ ನಿತ್ಯಶಃ ॥20॥
ಬೃಹಸ್ಪತಿ ಪೃಥಿವಿ, ಜಲ, ಅಗ್ನಿ, ವಾಯು, ಆಕಾಶ - ಈ ಪಂಚಭೂತಗಳ ಅಭಿಮಾನಿದೇವತೆಗಳು ಬುದ್ಧಿ ಮತ್ತು ಧರ್ಮಾಭಿಮಾನಿಯಾದ ದೇವತೆಗಳು ಯಾವಾಗಲೂ ಎಲ್ಲರೂ (ಜೀವನ) ಧರ್ಮವನ್ನು ನೋಡುತ್ತಾರೆ.
ಪ್ರಾಣಿನಾಮಿಹ ಸರ್ವೇಷಾಂ ಸಾಕ್ಷಿಭೂತಾ ದಿವಾನಿಶಮ್ |
ಏತೈಶ್ಚ ಸ ಹ ಧರ್ಮೋಽಪಿ ತಂ ಜೀವಮನುಗಚ್ಛತಿ ॥21॥
ಇವರು ಹಗಲೂ, ರಾತ್ರಿಯೂ ಜೀವರು ಮಾಡುವ ಎಲ್ಲ ಕಾರ್ಯಗಳಿಗೂ ಸಾಕ್ಷಿಯಾಗಿರುತ್ತಾರೆ. ಜೀವನು ಪರಲೋಕಕ್ಕೆ ಹೋಗುವಾಗ ಅವನ ಜೊತೆಯಲ್ಲಿ ಈ ದೇವತೆಗಳೂ ಮತ್ತು ಧರ್ಮವೂ ಹೋಗುತ್ತದೆ.
ತ್ವಗಸ್ಥಿಮಾಂಸಂ ಶುಕ್ರಂ ಚ ಶೋಣಿತಂ ಚ ಮಹಾಮತೇ |
ಶರೀರಂ ವರ್ಜಿತಂ ಚೈತೈರ್ಜೀವಿತೇನ ವಿವರ್ಜಿತಮ್ ॥22॥
ಎಲೈ ಮಹಾಮತಿಯೇ, ಚರ್ಮ, ಅಸ್ಥಿ, ಮಾಂಸ, ಶುಕ್ರ, ಶೋಣಿತಗಳಿಂದ ಯುಕ್ತವಾದ ಜೀವನಿಂದ ತ್ಯಕ್ತವಾದ ಶರೀರವನ್ನು ಬಿಟ್ಟು ಇವರು ಹೋಗುತ್ತಾರೆ.
ತತೋ ಧರ್ಮಸಮಾಯುಕ್ತಃ ಸ ಜೀವಃ ಸುಖಮೇಧತೇ |
ಇಹ ಲೋಕೇ ಪರೇ ಚೈವ ಕಿಂಭೂಯಃ ಕಥಯಾಮಿ ತೇ ॥23॥
ಆಗ ಧರ್ಮವನ್ನು ಮಾಡಿದ ಜೀವನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾನೆ. ಇನ್ನೂ ನಿನಗೆ ಏನನ್ನು ಹೇಳಲಿ?
ಯುಧಿಷ್ಠಿರಃ
ಅನುದರ್ಶಿತಂ ಭಗವತಾ ಯಥಾ ಧರ್ಮೋಽನುಗಚ್ಛತಿ |
ಏತತ್ತು ಜ್ಞಾತುಮಿಚ್ಛಾಮಿ ಕಥಂ ರೇತಃ ಪ್ರವರ್ತತೇ ॥24॥
ಯುಧಿಷ್ಠಿರ ಪೂಜ್ಯರಾದ ನೀವು ಧರ್ಮವು ಹೇಗೆ ಹಿಂಬಾಲಿಸುತ್ತದೆ ಎಂದು ತೋರಿಸಿದ್ದೀರಿ. ಪುರುಷನ ರೇತಸ್ಸು ಹೇಗೆ ಪ್ರವೃತ್ತವಾಗುತ್ತದೆ ಎಂದು ತಿಳಿಯಲು ಬಯಸುತ್ತೇನೆ.
ಬೃಹಸ್ಪತಿಃ
ಅನ್ನಮಶ್ನಂತಿ ಯೇ ದೇವಾಃ ಶರೀರಸ್ಥಾ ನರೇಶ್ವರ |
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿರ್ಮನಸ್ತಥಾ ॥25॥
ತತಸ್ತೃಪ್ತೇಷು ರಾಜೇಂದ್ರ ತೇಷು ಭೂತೇಷು ಪಂಚಸು |
ಮನಃಷಷ್ಠೇಷು ಶುದ್ಧಾತ್ಮನ್ ರೇತಃ ಸಂಪದ್ಯತೇ ಮಹತ್ ॥26॥
ಬೃಹಸ್ಪತಿ ಎಲೈ ರಾಜನೇ, ಜೀವನು ಆಹಾರವನ್ನು ಭಕ್ಷಿಸುವಾಗ ಶರೀರದಲ್ಲಿ ಇರುವ ಪೃಥಿವ್ಯಾದಿ ಪಂಚಮಹಾಭೂತಗಳೂ, ಮನೋದೇವತೆಯೂ ಆಹಾರವನ್ನು ಭುಂಜಿಸುತ್ತಾರೆ. ಎಲೈ ರಾಜೇಂದ್ರನೇ, ಆ ಐದು ದೇವತೆಗಳು ಮತ್ತು ಆರನೆಯದಾದ ಮನೋದೇವತೆಯು ತೃಪ್ತರಾದಾಗ ಶ್ರೇಷ್ಠವಾದ ರೇತಸ್ಸು ಉಂಟಾಗುತ್ತದೆ.

ತತೋ ಗರ್ಭಃ ಸಂಭವತಿ ಸ್ತ್ರೀಪುಂಸೋಃ ಪಾರ್ಥ ಸಂಗಮೇ |
ಏತತ್ತೇ ಸರ್ವಮಾಖ್ಯಾತಂ ಕಿಂಭೂಯಃ ಕಥಯಾಮಿ ತೇ ||27||
ಸ್ತ್ರೀ-ಪುರುಷರ ಸಮಾಗಮವಾದಾಗ ಆ ರೇತಸ್ಸಿನಿಂದ ಗರ್ಭವುಂಟಾಗುತ್ತದೆ. ನಿನಗೆ ಎಲ್ಲವನ್ನೂ ಹೇಳಿದ್ದೇನೆ. ಇನ್ನೂ ಏನನ್ನು ಹೇಳಲಿ?
ಯುಧಿಷ್ಠಿರಃ
ಆಖ್ಯಾತಮೇತದ್ ಭವತಾ ಗರ್ಭಃ ಸಂಜಾಯತೇ ಯಥಾ |
ಯಥಾ ಜಾತಸ್ತು ಪುರುಷಃ ಪ್ರಪದ್ಯತಿ ತದುಚ್ಯತಾಮ್ ||28||
ಯುಧಿಷ್ಠಿರ ಪೂಜ್ಯರಾದ ನೀವು ಗರ್ಭವು ಹೇಗೆ ಜನಿಸುತ್ತದೆ ಎಂದು ಹೇಳಿದಿರಿ. ಜನಿಸಿದ ಜೀವನು ಮುಂದೆ ಏನಾಗುತ್ತಾನೆ ಎಂಬುದನ್ನು ಹೇಳಿ.
ಬೃಹಸ್ಪತಿಃ
ಆಸನ್ನಮಾತ್ರಃ ಸತತಂ ತೈರ್ಭೂತೈರಭಿಭೂಯತೇ |
ವಿಪ್ರಮುಕ್ತಶ್ಚ ತೈರ್ಭೂತೈಃ ಪುನರ್ಯಾತ್ಯಪರಾಂ ಗತಿಮ್ |
ಸ ತು ಭೂತಸಮಾಯುಕ್ತಃ ಪ್ರಾಪ್ನುತೇ ಜೀವ ಏವ ಹ ||29||
ಬೃಹಸ್ಪತಿ ಜೀವನು ಜನಿಸಿದ ತಕ್ಷಣವೇ ಆ ಭೂತಗಳಿಗೆ ವಶನಾಗುತ್ತಾನೆ. ಆ ಭೂತಗಳಿಂದ ಬಿಡುಗಡೆಯನ್ನು ಹೊಂದದೆಯೇ ಇನ್ನೊಂದು ದೇಹಕ್ಕೆ ಹೋಗುತ್ತಾನೆ. ಜೀವನು ಭೂತಗಳಿಂದ ಸಹಿತನಾಗಿಯೇ ದೇಹದಿಂದ ದೇಹಕ್ಕೆ ಹೋಗುತ್ತಾನೆ.
ತತೋಽಸ್ಯ ಕರ್ಮ ಪಶ್ಯಂತಿ ಶುಭಂ ವಾ ಯದಿ ವಾಶುಭಮ್ |
ದೇವತಾಃ ಪಂಚಭೂತಸ್ಥಾಃ ಕಿಂಭೂಯಃ ಶ್ರೋತುಮಿಚ್ಛಸಿ ||30||
ಅನಂತರ ಜೀವನು ಮಾಡಿದ ಶುಭಕರ್ಮಗಳನ್ನಾಗಲೀ, ಅಶುಭ ಕರ್ಮಗಳನ್ನಾಗಲೀ ಪಂಚಭೂತದೇವತೆಗಳು ನೋಡುತ್ತಾರೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಯುಧಿಷ್ಠಿರಃ
ತ್ವಗಸ್ಥಿಮಾಂಸಮುತ್ಸೃಜ್ಯ ತೈಶ್ಚ ಭೂತೈರ್ವಿವರ್ಜಿತಃ |
ಜೀವಃ ಸ ಭಗವನ್ ಕ್ವಸ್ಥಃ ಸುಖದುಃಖೇ ಸಮಶ್ನುತೇ ||31||
ಯುಧಿಷ್ಠಿರ ಎಲೈ ಪೂಜ್ಯರೇ, ಪಂಚಭೂತಗಳು ಪರಿತ್ಯಜಿಸಿದ ಚರ್ಮ- ಮಾಂಸಾದಿ ರೂಪವಾದ ಶರೀರವನ್ನು ಬಿಟ್ಟು ಜೀವನು ಎಲ್ಲಿ ಇದ್ದವನಾಗಿ ಸುಖ- ದುಃಖಗಳನ್ನು ಅನುಭವಿಸುತ್ತಾನೆ?
ಬೃಹಸ್ಪತಿಃ
ಜೀವೋ ಧರ್ಮಸಮಾಯುಕ್ತಃ ಶೀಘ್ರಂ ರೇತಸ್ತ್ವಮಾಗತಃ |
ಸ್ತ್ರೀಣಾಂ ತು ಪುಷ್ಪಮಾಸಾದ್ಯ ಸೂತೇ ಕಾಲೇನ ಭಾರತ ||32||
ಬೃಹಸ್ಪತಿ ಎಲೈ ಭಾರತನೇ, ಧರ್ಮದಿಂದ ಕೂಡಿದ ಜೀವನು ಶೀಘ್ರವಾಗಿ ಪುರುಷನ ರೇತಸ್ಸಿನಲ್ಲಿ ಸೇರಿ ಸ್ತ್ರೀಯರ ಶೋಣಿತದ ಜೊತೆಯಲ್ಲಿ ಬೆರೆತು ಯೋಗ್ಯವಾದ ಕಾಲದಲ್ಲಿ ಜನನವನ್ನು ಹೊಂದುತ್ತಾನೆ.
ಯಮಸ್ಯ ಪುರುಷೈಃ ಕ್ಲೇಶಂ ಯಮಸ್ಯ ಪುರುಷೈರ್ವಧಮ್ |
ದುಃಖಂ ಸಂಸಾರಚಕ್ರಂ ಚ ನರಃ ಕ್ಲೇಶಂ ಚ ಗಚ್ಛತಿ ||33||
ಮರಣವನ್ನು ಹೊಂದಿದ ಮೇಲೆ ಯಮಭಟರಿಂದ ಕ್ಲೇಶವನ್ನೂ, ವಧೆಯನ್ನೂ ಅನುಭವಿಸಿ, ದುಃಖರೂಪವಾದ ಸಂಸಾರಚಕ್ರಕ್ಕೆ ಪುನಃ ಬಂದು ಕ್ಲೇಶವನ್ನು ಅನುಭವಿಸುತ್ತಾನೆ.
ಇಹಲೋಕೇ ಚ ಸ ಪ್ರಾಣೀ ಜನ್ಮಪ್ರಭೃತಿ ಪಾರ್ಥಿವ |
ಸ್ವಕೃತಂ ಕರ್ಮ ವೈ ಭುಂಕ್ತೇ ಧರ್ಮಸ್ಯ ಫಲಮಾಶ್ರಿತಃ ||34||
ಎಲೈ ರಾಜನೇ, ಈ ಲೋಕಕ್ಕೆ ಬಂದ ಜೀವನು ಹುಟ್ಟಿದಾಗಿನಿಂದ ತಾನು ಮಾಡಿದ ಧರ್ಮ ಅಥವಾ ಅಧರ್ಮದ ಫಲವನ್ನು ಭೋಗಿಸುತ್ತಾನೆ.
ಯದಿ ಧರ್ಮಂ ಯಥಾಶಕ್ತಿ ಜನ್ಮಪ್ರಭೃತಿ ಸೇವತೇ |
ತತಃ ಸ ಪುರುಷೋ ಭೂತ್ವಾ ಸೇವತೇ ನಿತ್ಯದಾ ಸುಖಮ್ ||35||
ಹುಟ್ಟಿದಾಗಿನಿಂದ ತನ್ನ ಶಕ್ತಿಗೆ ಅನುಗುಣವಾಗಿ ಧರ್ಮವನ್ನು ಸೇವಿಸಿದ್ದರೆ ಆ ಪುರುಷನು ಯಾವಾಗಲೂ ಸುಖವನ್ನೇ ಹೊಂದುತ್ತಾನೆ.
ಅಥಾಂತರಾ ತು ಧರ್ಮಸ್ಯ ಅಧರ್ಮಮುಪಸೇವತೇ |
ಸುಖಸ್ಯಾನಂತರಂ ದುಃಖಂ ಸ ಜೀವೋಽಪ್ಯಧಿಗಚ್ಛತಿ ||36||
ಧರ್ಮಗಳ ಮಧ್ಯದಲ್ಲಿ ಅಧರ್ಮವನ್ನು ಮಾಡಿದ್ದರೆ ಸುಖದ ಅನಂತರ ದುಃಖವನ್ನು (ದುಃಖದ ಅನಂತರ ಸುಖವನ್ನು) ಹೊಂದುತ್ತಾನೆ.
ಅಧರ್ಮೇಣ ಸಮಾಯುಕ್ತೋ ಯಮಸ್ಯ ವಿಷಯಂ ಗತಃ |
ಮಹದ್ದುಃಖಂ ಸಮಾಸಾದ್ಯ ತಿರ್ಯಗ್ಯೋನೌ ಪ್ರಜಾಯತೇ ||37||
ಕೇವಲ ಅಧರ್ಮದಿಂದಲೇ ಕೂಡಿದ್ದರೆ ಯಮನ ಪಟ್ಟಣಕ್ಕೆ ಹೋಗಿ, ಬಹಳ ದುಃಖಗಳನ್ನು ಅನುಭವಿಸಿ ನೀಚಯೋನಿಯಲ್ಲಿ ಜನಿಸುತ್ತಾನೆ.
ಕರ್ಮಣಾ ಯೇನ ಯೇನೇಹ ಯಸ್ಯಾಂ ಯೋನೌ ಪ್ರಸೂಯತೇ |
ಜೀವೋ ಮೋಹಸಮಾಯುಕ್ತಸ್ತನ್ಮೇ ನಿಗದತಃ ಶೃಣು ||38||

ಭ್ರಮೆಗಳಿಂದ ಕೂಡಿದ ಜೀವನು ಯಾವ ಯಾವ ಕರ್ಮಗಳಿಂದ ಯಾವ ಯಾವ ಯೋನಿಯಲ್ಲಿ ಜನಿಸುತ್ತಾನೆಂಬುದನ್ನು ನನ್ನಿಂದ ಕೇಳು.
ಯದೇತದುಚ್ಯತೇ ಶಾಸ್ತ್ರೇ ಸೇತಿಹಾಸೇ ಸಛಂದಸಿ |
ಯಮಸ್ಯ ವಿಷಯಂ ಘೋರಂ ಮರ್ತ್ಯಲೋಕಾತ್ ಪ್ರಪದ್ಯತೇ ॥39॥
ಶಾಸ್ತ್ರಗಳಲ್ಲಿ, ಇತಿಹಾಸಗಳಲ್ಲಿ ಮತ್ತು ವೇದಗಳಲ್ಲಿ ಹೇಳುವಂತೆ ಮೃತನಾದವನು ಮರ್ತ್ಯಲೋಕವನ್ನು ಬಿಟ್ಟು ಯಮನ ಘೋರವಾದ ಪಟ್ಟಣಕ್ಕೆ ಹೋಗುತ್ತಾನೆ.
ಅಧೀತ್ಯ ಚತುರೋ ವೇದಾನ್ ದ್ವಿಜೋ ಮೋಹಸಮನ್ವಿತಃ |
ಪತಿತಾತ್ ಪ್ರತಿಗೃಹ್ಯಾಥ ಖರಯೋನೌ ಪ್ರಜಾಯತೇ ॥40॥
ನಾಲ್ಕು ವೇದಗಳನ್ನು ಓದಿ, ಮೋಹಸಮನ್ವಿತನಾದ ದ್ವಿಜನು ಪತಿತರಿಂದ ದಾನ ಸ್ವೀಕಾರವನ್ನು ಮಾಡಿ ಅವರ ಸಹವಾಸವನ್ನು ಮಾಡಿದರೆ ಕತ್ತೆಯಾಗಿ ಜನಿಸುತ್ತಾನೆ.
ಖರೋ ಜೀವತಿ ವರ್ಷಾಣಿ ದಶ ಪಂಚ ಚ ಭಾರತ |
ಖರೋ ಮೃತೋ ಬಲಿವರ್ದಃ ಸಪ್ತ ವರ್ಷಾಣಿ ಜೀವತಿ ॥41॥
ಎಲೈ ಭಾರತನೇ, ಕತ್ತೆಯಾಗಿ ಹದಿನೈದು ವರ್ಷ ಜೀವಿಸುತ್ತಾನೆ. ಕತ್ತೆಯಾಗಿ ಸತ್ತು ಎತ್ತಾಗಿ ಏಳು ವರ್ಷಗಳ ಕಾಲ ಜೀವಿಸುತ್ತಾನೆ.
ಬಲೀವರ್ದೋ ಮೃತಶ್ಚಾಪಿ ಜಾಯತೇ ಬ್ರಹ್ಮರಾಕ್ಷಸಃ |
ಬ್ರಹ್ಮರಕ್ಷಸ್ತು ತ್ರೀನ್ಮಾಸಾನ್ ಜಾಯತೇ ಬ್ರಾಹ್ಮಣಸ್ತತಃ ॥42॥
ಎತ್ತು ಮೃತವಾಗಿ ಮೂರು ತಿಂಗಳಕಾಲ ಬ್ರಹ್ಮರಾಕ್ಷಸನಾಗಿ ಜನಿಸುತ್ತಾನೆ. ಅನಂತರ ಬ್ರಾಹ್ಮಣನಾಗಿ ಜನಿಸುತ್ತಾನೆ.
ಪತಿತಂ ಯಾಜಯಿತ್ವಾ ತು ಕೃಮಿಯೋನೌ ಪ್ರಜಾಯತೇ |
ತತ್ರ ಜೀವತಿ ವರ್ಷಾಣಿ ದಶ ಪಂಚ ಚ ಭಾರತ ॥43॥
ಪತಿತನಾದವನಿಗೆ ಹೋಮಾದಿಗಳನ್ನು ಮಾಡಿಸಿದರೆ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ. ಎಲೈ ಭಾರತನೇ, ಅಲ್ಲಿ ಹದಿನೈದು ವರ್ಷಗಳ ಕಾಲ ಜೀವಿಸುತ್ತಾನೆ.
ಕೃಮಿಭಾವಾತ್ ಪ್ರಮುಕ್ತಸ್ತು ತತೋ ಜಾಯತಿ ಗರ್ದಭಃ |
ಗರ್ದಭಃ ಪಂಚ ವರ್ಷಾಣಿ ಪಂಚ ವರ್ಷಾಣಿ ಸೂಕರಃ |
ಶ್ವಾ ವರ್ಷಮೇಕಂ ಭವತಿ ತತೋ ಜಾಯತಿ ಮಾನವಃ ॥44॥
ಅನಂತರ ಕ್ರಿಮಿಭಾವವನ್ನು ಬಿಟ್ಟು ಕತ್ತೆಯಾಗಿ ಜನಿಸುತ್ತಾನೆ. ಕತ್ತೆಯಾಗಿ ಐದು ವರ್ಷಗಳ ಕಾಲ ಜೀವಿಸಿ ಅನಂತರ ಹಂದಿಯಾಗಿ ಐದು ವರ್ಷಗಳು, ನಾಯಿಯಾಗಿ ಒಂದು ವರ್ಷ ಜೀವಿಸಿ ಅನಂತರ ಮನುಷ್ಯನಾಗುತ್ತಾನೆ.
ಉಪಾಧ್ಯಾಯೇ ತು ಯಃ ಪಾಪಂ ಶಿಷ್ಯಃ ಕುರ್ಯಾದಬುದ್ಧಿಮಾನ್ |
ಸ ಜೀವ ಇಹ ಸಂಸಾರಾಂಸ್ತ್ರೀನಾಪ್ನೋತಿ ನ ಸಂಶಯಃ ॥45॥
ಬುದ್ಧಿಯಿಲ್ಲದ ಶಿಷ್ಯನು ಉಪಾಧ್ಯಾಯರಿಗೆ ಅಪಚಾರವನ್ನು ಮಾಡಿದರೆ ಅಂತಹವನು ಮೂರು ಜನ್ಮಗಳನ್ನು ಪಡೆಯುವುದರಲ್ಲಿ ಸಂಶಯವಿಲ್ಲ.
ಪ್ರಾಕ್‌ಶ್ವಾ ಭವತಿ ರಾಜೇಂದ್ರ ತತಃ ಕ್ರವ್ಯಾತ್ ತತಃ ಖರಃ |
ತತಃ ಪ್ರೇತಃ ಪರಿಕ್ಲಿಷ್ಟಃ ತತೋ ಜಾಯೇತ ಬ್ರಾಹ್ಮಣಃ ॥46॥
ಎಲೈ ರಾಜೇಂದ್ರನೇ, ಮೊದಲು ನಾಯಿಯಾಗುತ್ತಾನೆ ಅನಂತರ ಮಾಂಸಾಹಾರಿ ಪ್ರಾಣಿಯಾಗುತ್ತಾನೆ, ಅನಂತರ ಕತ್ತೆಯಾಗುತ್ತಾನೆ. ಅಲ್ಲಿ ಬಹಳ ಕ್ಲೇಶಗಳನ್ನು ಅನುಭವಿಸಿ ಮರಣವನ್ನು ಹೊಂದಿ ಅನಂತರ ಬ್ರಾಹ್ಮಣನಾಗಿ ಜನಿಸುತ್ತಾನೆ.
ಮನಸಾಪಿ ಗುರೋರ್ಭಾರ್ಯಾಂ ಯಃ ಶಿಷ್ಯೋ ಯಾತಿ ಪಾಪಕೃತ್ |
ಸೋಽಧಮಾನ್ ಯಾತಿ ಸಂಸಾರಾನ್ ಅಧರ್ಮೇಣೇಹ ಕರ್ಮಣಾ ॥
ಪಾಪಕರ್ಮರತನಾದ ಯಾವ ಶಿಷ್ಯನು ಮನಸ್ಸಿನಿಂದಲೂ ಗುರುಪತ್ನಿಯನ್ನು ಸ್ವೀಕರಿಸಿದರೆ ಅಂತಹ ಅಧಮಕರ್ಮದಿಂದ ಅವನು ಅಧಮಯೋನಿಗಳಲ್ಲಿ ಹುಟ್ಟುತ್ತಾನೆ.
ಶ್ವಯೋನೌ ತು ಸ ಸಂಭೂತಸ್ತ್ರೀಣಿ ವರ್ಷಾಣಿ ಜೀವತಿ |
ತತ್ರಾಪಿ ನಿಧನಂ ಪ್ರಾಪ್ತಃ ಕೃಮಿಯೋನೌ ಪ್ರಜಾಯತೇ ॥48॥
ಕೃಮಿಭಾವಮವಾಪ್ನೋತಿ ವರ್ಷಮೇಕಂ ಸ ಜೀವತಿ |
ತತಸ್ತು ನಿಧನಂ ಪ್ರಾಪ್ಯ ಬ್ರಹ್ಮಯೋನೌ ಪ್ರಜಾಯತೇ ॥49॥
ನಾಯಿಯಾಗಿ ಹುಟ್ಟಿ ಅವನು ಒಂದು ವರ್ಷ ಬದುಕುತ್ತಾನೆ. ಅಲ್ಲಿ ನಿಧನವನ್ನು ಹೊಂದಿ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ. ಕ್ರಿಮಿಯೋನಿಯಲ್ಲಿ ಒಂದು ವರ್ಷ ಬದುಕಿ ಅನಂತರ ಮರಣವನ್ನು ಹೊಂದಿ ಬ್ರಹ್ಮಯೋನಿಯಲ್ಲಿ ಜನಿಸುತ್ತಾನೆ.
ಯದಿ ಪುತ್ರಸಮಂ ಶಿಷ್ಯಂ ಗುರುರ್ಹನ್ಯಾದಕಾರಣೇ |
ಆತ್ಮನಃ ಕಾಮಕಾರೇಣ ಸೋಽಪಿ ಹಂಸಃ ಪ್ರಜಾಯತೇ ॥50॥
ಪುತ್ರಸಮಾನನಾದ ಶಿಷ್ಯನನ್ನು ಗುರುವು ನಿಷ್ಕಾರಣವಾಗಿ ಹೊಡೆದರೆ ಅವನು ತನ್ನ ಸ್ವೇಚ್ಛಾಚಾರದೋಷದಿಂದ ಹಂಸವಾಗಿ ಜನಿಸುತ್ತಾನೆ.
ಪಿತರಂ ಮಾತರಂ ವಾಪಿ ಯಸ್ತು ಪುತ್ರೋಽವಮನ್ಯತೇ |
ಸೋಽಪಿ ರಾಜನ್ ಮೃತೋ ಜಂತುಃ ಪೂರ್ವಂ ಜಾಯತಿ ಗರ್ದಭಃ ॥
ಎಲೈ ರಾಜನೇ, ಯಾವ ಪುತ್ರನು ತಂದೆಯನ್ನಾಗಲೀ, ತಾಯಿಯನ್ನಾಗಲೀ ಅಪಮಾನ ಮಾಡುತ್ತಾನೆಯೋ ಅವನು ಮೃತನಾಗಿ

ಮೊದಲು ಕತ್ತೆಯಾಗಿ ಜನಿಸುತ್ತಾನೆ.
ಖರೋ ಜೀವತಿ ಮಾಸಾಂಸ್ತು ದಶ ಶ್ವಾ ಚ ಚತುರ್ದಶ |
ಬಿಡಾಲಃ ಸಪ್ತ ಮಾಸಾಂಸ್ತು ತತೋ ಜಾಯತಿ ಮಾನವಃ ॥52॥
ಕತ್ತೆಯಾಗಿ ಹತ್ತು ತಿಂಗಳು, ಅನಂತರ ನಾಯಿಯಾಗಿ ಹದಿನಾಲ್ಕು ತಿಂಗಳುಗಳು, ಅನಂತರ ಬೆಕ್ಕಾಗಿ ಏಳು ತಿಂಗಳುಗಳು- ಹೀಗೆ ಕಳೆದು ಅನಂತರ ಮನುಷ್ಯನಾಗಿ ಜನಿಸುತ್ತಾನೆ.
ಮಾತಾಪಿತರಮಾಕ್ರುಶ್ಯ ಸಾರಿಕಃ ಸಂಪ್ರಜಾಯತೇ |
ತಾಡಯಿತ್ವಾ ತು ತಾವೇವ ಕಚ್ಛಪಃ ಸಂಪ್ರಜಾಯತೇ ॥53॥
ಮಾತಾ-ಪಿತೃಗಳನ್ನು ಕಿರುಚಿ ನಿಂದಿಸುವವನು ಸಾರಿಕ ಪಕ್ಷಿಯಾಗಿ (ಮೈನಾ ಹಕ್ಕಿ) ಜನಿಸುತ್ತಾನೆ. ಅವರನ್ನು ಹೊಡೆಯುವವನು ಆಮೆಯಾಗಿ ಜನಿಸುತ್ತಾನೆ.
ಕಚ್ಛಪೋ ದಶ ವರ್ಷಾಣಿ ತ್ರೀಣಿ ವರ್ಷಾಣಿ ಶಲ್ಯಕಃ |
ವ್ಯಾಲೋ ಭೂತ್ವಾ ತು ಷಣ್ಮಾಸಾಂಸ್ತತೋ ಜಾಯತಿ ಮಾನುಷಃ ॥54॥
ಆಮೆಯಾಗಿ ಹತ್ತು ವರ್ಷಗಳು, ಅನಂತರ ಮುಳ್ಳುಹಂದಿಯಾಗಿ ಮೂರು ವರ್ಷಗಳು, ಅನಂತರ ಸರ್ಪವಾಗಿ ಆರು ತಿಂಗಳುಗಳು ಇದ್ದು ಅನಂತರ ಮನುಷ್ಯನಾಗುತ್ತಾನೆ.
ಭರ್ತೃಪಿಂಡಮುಪಾಶ್ನನ್ ಯೋ ರಾಜದ್ವಿಷ್ಟಾನಿ ಸೇವತೇ |
ಸೋಽಪಿ ಮೋಹಸಮಾಪನ್ನೋ ಮೃತೋ ಜಾಯತಿ ವಾನರಃ ॥55॥
ಯಾವನು ರಾಜಪಿಂಡವನ್ನು ಉಪಜೀವಿಸಿ, ರಾಜನಿಗೆ ಅನಿಷ್ಟವಾದ ಕಾರ್ಯಗಳನ್ನು ಮಾಡುತ್ತಾನೆಯೋ ಮೋಹಸಮನ್ವಿತನಾದ ಅಂತಹವನು ಮರಣವನ್ನು ಹೊಂದಿ ವಾನರನಾಗುತ್ತಾನೆ.
ವಾನರೋ ದಶ ವರ್ಷಾಣಿ ತ್ರೀಣಿ ವರ್ಷಾಣಿ ಮೂಷಕಃ |
ಶ್ವಾ ಭೂತ್ವಾ ಚಾಥ ಷಣ್ಮಾಸಾಂಸ್ತತೋ ಜಾಯತಿ ಮಾನುಷಃ ॥56॥
ವಾನರನಾಗಿ ಹತ್ತು ವರ್ಷಗಳು, ಅನಂತರ ಇಲಿಯಾಗಿ ಮೂರು ವರ್ಷಗಳು, ಅನಂತರ ನಾಯಿಯಾಗಿ ಆರುತಿಂಗಳುಗಳನ್ನು ಕಳೆದು, ಪುನಃ ಮನುಷ್ಯನಾಗಿ ಹುಟ್ಟುತ್ತಾನೆ.
ನ್ಯಾಸಾಪಹರ್ತಾ ತು ನರೋ ಯಮಸ್ಯ ವಿಷಯಂ ಗತಃ |
ಸಂಸಾರಾಣಾಂ ಶತಂ ಗತ್ವಾ ಕ್ರಿಮಿಯೋನೌ ಪ್ರಜಾಯತೇ ॥57॥
ನ್ಯಾಸವಾಗಿಟ್ಟ ವಸ್ತುವನ್ನು ಅಪಹರಿಸುವವನು ಯಮಪಟ್ಟಣಕ್ಕೆ ಹೋಗಿ, ಅಲ್ಲಿಂದ ನೂರು ನೀಚಯೋನಿಗಳನ್ನು ಎತ್ತಿ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ.
ತತ್ರ ಜೀವತಿ ವರ್ಷಾಣಿ ದಶ ಪಂಚ ಚ ಭಾರತ |
ದುಷ್ಕೃತಸ್ಯ ಕ್ಷಯಂ ಗತ್ವಾ ತತೋ ಜಾಯತಿ ಮಾನುಷಃ ॥58॥
ಎಲೈ ಭಾರತನೇ, ಅಲ್ಲಿ ಹದಿನೈದು ವರ್ಷಗಳ ಕಾಲ ಜೀವಿಸಿ, ದುಷ್ಕರ್ಮಗಳನ್ನು ಕಳೆದುಕೊಂಡು ಪುನಃ ಮನುಷ್ಯನಾಗಿ ಜನಿಸುತ್ತಾನೆ.
ಅಸೂಯಕೋ ನರಶ್ಚಾಪಿ ಮೃತೋ ಜಾಯತಿ ಶಾರ್ಙ್ಗಕಃ |
ವಿಶ್ವಾಸಹರ್ತಾ ತು ನರೋ ಮೀನೋ ಜಾಯತಿ ದುರ್ಮತಿಃ ॥59॥
ಅಸೂಯೆಯನ್ನು ಮಾಡುವ ನರನು ಮೃತನಾಗಿ ಶಾರ್ಙ್ಗಪಕ್ಷಿಯಾಗಿ ಜನಿಸುತ್ತಾನೆ. ವಿಶ್ವಾಸಘಾತವನ್ನು ಮಾಡುವ ಮನುಷ್ಯನು ಮರಣವನ್ನು ಹೊಂದಿ ಮೀನಿನ ಜನ್ಮವನ್ನು ಪಡೆಯುತ್ತಾನೆ.
ಭೂತ್ವಾ ಮೀನೋಽಷ್ಟವರ್ಷಾಣಿ ಮೃಗೋ ಜಾಯತಿ ಭಾರತ |
ಮೃಗಸ್ತು ಚತುರೋ ಮಾಸಾಂಸ್ತತಶ್ಛಾಗಃ ಪ್ರಜಾಯತೇ ॥60॥
ಎಲೈ ಭಾರತನೇ, ಮೀನಾಗಿ ಎಂಟು ವರ್ಷಗಳನ್ನೂ, ಅನಂತರ ಜಿಂಕೆಯಾಗಿ ನಾಲ್ಕು ತಿಂಗಳುಗಳನ್ನೂ ಕಳೆದು, ಅನಂತರ ಹೋತವಾಗುತ್ತಾನೆ.
ಛಾಗಸ್ತು ನಿಧನಂ ಪ್ರಾಪ್ಯ ಪೂರ್ಣೇ ಸಂವತ್ಸರೇ ತತಃ |
ಕೀಟಃ ಸಂಜಾಯತೇ ಜಂತುಸ್ತತೋ ಜಾಯತಿ ಮಾನುಷಃ ॥61॥
ಹೋತವಾಗಿ ಒಂದು ವರ್ಷವು ಪೂರ್ಣವಾದಾಗ ನಿಧನವನ್ನು ಹೊಂದಿ ಕೀಟವಾಗಿ ಜನಿಸಿ ಅನಂತರ ಮನುಷ್ಯನಾಗಿ ಜನಿಸುತ್ತಾನೆ.
ಧಾನ್ಯಾನ್ ಯವಾನ್ ತಿಲಾನ್ ಮಾಷಾನ್-
ಕುಲತ್ಥಾನ್ ಸರ್ಷಪಾನ್ ಚಣಾನ್ |
ಕಲಾಯಾನಥ ಮುದ್ಗಾಂಶ್ಚ ಗೋಧೂಮಾನತಸೀಸ್ತಥಾ ॥62॥
ಯಸ್ತು ಧಾನ್ಯಸ್ಯ ಹರ್ತಾ ತು ಮೋಹಾಜ್ಜಂತುರಚೇತನಃ |
ಸ ಜಾಯತೇ ಮಹಾರಾಜ ಮೂಷಕೋ ನಿರಪತ್ರಪಃ ॥63॥
ಯವ (ಅಕ್ಕಿ), ತಿಲ (ಎಳ್ಳು), ಉದ್ದು, ಹುರುಳಿ, ಸಾಸಿವೆ, ಕಡಲೆ, ಕಲಾಯ (ನೆಲಗಡಲೆ), ಹೆಸರು, ಗೋಧಿ ಅಗಸೆ ಮುಂತಾದ ಧಾನ್ಯಗಳನ್ನು ಮೋಹದಿಂದ ನಾಚಿಕೆಯಿಲ್ಲದೆ, ಪ್ರಜ್ಞಾಶೂನ್ಯನಾಗಿ ಕದಿಯುವವನು ಇಲಿಯಾಗಿ ಜನಿಸುತ್ತಾನೆ.
ತತಃ ಪ್ರೇತ್ಯ ಮಹಾರಾಜ ಪುನರ್ಜಾಯತಿ ಸೂಕರಃ |
ಸೂಕರೋ ಜಾತಮಾತ್ರಸ್ತು ರೋಗೇಣ ಮ್ರಿಯತೇ ನೃಪ ॥64॥
ಎಲೈ ಮಹಾರಾಜನೇ, ಅಲ್ಲಿ ಮರಣವನ್ನು ಹೊಂದಿ ಪುನಃ ಹಂದಿಯಾಗಿ ಜನಿಸುತ್ತಾನೆ. ಎಲೈ ಮಹಾರಾಜನೇ, ಹಂದಿಯಾಗಿ ಹುಟ್ಟಿದ ತಕ್ಷಣ ರೋಗದಿಂದ ಮರಣವನ್ನು ಹೊಂದುತ್ತಾನೆ.

ಶ್ವಾ ತತೋ ಜಾಯತೇ ಮೂಢಃ ಕರ್ಮಣಾ ತೇನ ಪಾರ್ಥಿವ |
ಶ್ವಾ ಭೂತ್ವಾ ಪಂಚ ವರ್ಷಾಣಿ ಜಾಯತೇ ಮಾನುಷಸ್ತತಃ ॥65॥
ಎಲೈ ರಾಜನೇ, ಮೂಢನಾದ ಅವನು ತಾನು ಮಾಡಿದ ಹಿಂದಿನ ಕರ್ಮದಿಂದ ನಾಯಿಯಾಗಿ ಜನಿಸುತ್ತಾನೆ. ನಾಯಿಯಾಗಿ ಐದು ವರ್ಷಗಳ ಕಾಲ ಜೀವಿಸಿ ಅನಂತರ ಮನುಷ್ಯನಾಗುತ್ತಾನೆ.
ಪರದಾರಾಭಿಮರ್ಶಂ ತು ಕೃತ್ವಾ ಜಾಯತಿ ವೈ ವೃಕಃ |
ಶ್ವಾ ಸೃಗಾಲಸ್ತತೋ ಗೃಧ್ರೋ ವ್ಯಾಲಃ ಕಂಕೋ ಬಕಸ್ತಥಾ ॥66॥
ಪರಪತ್ನಿಯನ್ನು ಕೆಡಿಸುವವನು ಮೊದಲು ತೋಳನಾಗುತ್ತಾನೆ. ಅನಂತರ ನಾಯಿ, ನರಿ, ಹದ್ದು, ಸರ್ಪ, ಕಂಕ ಮತ್ತು ಬಕಗಳ ಜನ್ಮವನ್ನು ಪಡೆಯುತ್ತಾನೆ.
ಭ್ರಾತುರ್ಭಾರ್ಯಾಂ ತು ದುರ್ಬುದ್ಧಿರ್ಯೋ ಧರ್ಷಯತಿ ಮೋಹಿತಃ |
ಪುಂಸ್ಕೋಕಿಲತ್ವಮಾಪ್ನೋತಿ ಸೋಽಪಿ ಸಂವತ್ಸರಂ ನೃಪ ॥67॥
ಯಾವನು ಮೋಹ ಮತ್ತು ದುರ್ಬುದ್ಧಿಗೆ ಒಳಗಾಗಿ ಸಹೋದರನ ಭಾರ್ಯೆಯನ್ನು ಧರ್ಷಣವನ್ನು ಮಾಡುತ್ತಾನೆಯೋ ಅವನು ದೊಡ್ಡ ಕೊಕ್ಕರೆಯ ಜನ್ಮವನ್ನು ಪಡೆದು ಒಂದು ವರ್ಷದ ಕಾಲ ಜೀವಿಸುತ್ತಾನೆ.
ಸಖಿಭಾರ್ಯಾಂ ಗುರೋರ್ಭಾರ್ಯಾಂ ರಾಜಭಾರ್ಯಾಂ ತಥೈವ ಚ |
ಪ್ರಧರ್ಷಯಿತ್ವಾ ಕಾಮಾದ್ ಯೋ ಮೃತೋ ಜಾಯತಿ ಸೂಕರಃ ॥68॥
ಕಾಮದಿಂದ ಸ್ನೇಹಿತನ ಭಾರ್ಯೆಯನ್ನು, ಗುರುಭಾರ್ಯೆಯನ್ನು, ರಾಜ ಭಾರ್ಯೆಯನ್ನು ಧರ್ಷಣ ಮಾಡುವವನು ಮೃತನಾಗಿ ಹಂದಿಯಾಗುತ್ತಾನೆ.
ಸೂಕರಃ ಪಂಚ ವರ್ಷಾಣಿ ಪಂಚ ವರ್ಷಾಣಿ ಶ್ವಾವಿಧಃ |
ಪಿಪೀಲಕಸ್ತು ಷಣ್ಮಾಸಾಂಕೀಟಃ ಸ್ಯಾನ್ಮಾಸಮೇವ ಚ |
ಏತಾನಾಸಾದ್ಯ ಸಂಸಾರಾನ್ ಕೃಮಿಯೋನೌ ಪ್ರಜಾಯತೇ ॥69॥
ಹಂದಿಯಾಗಿ ಐದು ವರ್ಷಗಳು, ಮುಳ್ಳು ಹಂದಿಯಾಗಿ ಐದು ವರ್ಷಗಳು, ಇರುವೆಯಾಗಿ ಆರು ತಿಂಗಳು, ಕೀಟವಾಗಿ ಒಂದು ತಿಂಗಳು - ಹೀಗೆ ಅನೇಕ ಜನ್ಮಗಳನ್ನು ಎತ್ತಿ ಅನಂತರ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ.
ತತ್ರ ಜೀವತಿ ಮಾಸಾಂಸ್ತು ಕೃಮಿಯೋನೌ ತ್ರಯೋದಶ |
ತತೋಽಧರ್ಮಕ್ಷಯಂ ಕೃತ್ವಾ ಪುನರ್ಜಾಯತಿ ಮಾನುಷಃ ॥70॥
ಕ್ರಿಮಿಯೋನಿಯಲ್ಲಿ ಹದಿಮೂರು ತಿಂಗಳುಗಳ ಕಾಲ ಜೀವಿಸಿದ್ದು ತನ್ನ ಪಾಪದ ಕ್ಷಯವನ್ನು ಮಾಡಿಕೊಂಡು ಪುನಃ ಮನುಷ್ಯನಾಗುತ್ತಾನೆ.
ಉಪಸ್ಥಿತೇ ವಿವಾಹೇ ತು ದಾನೇ ಯಜ್ಞೇಽಪಿ ವಾಭಿಭೋ |
ಮೋಹಾತ್ ಕರೋತಿ ಯೋ ವಿಘ್ನಂ ಸ ಮೃತೋ ಜಾಯತೇ ಕೃಮಿಃ ॥
ಎಲೈ ಶತ್ರುಜಯವನ್ನು ಸಂಪಾದಿಸುವವನೇ, ವಿವಾಹವಾಗಲೀ, ದಾನವಾಗಲೀ, ಯಜ್ಞವಾಗಲೀ ಉಪಸ್ಥಿತವಾದಾಗ ಯಾವನು ಮೋಹದಿಂದ ವಿಘ್ನವನ್ನು ಮಾಡುತ್ತಾನೆಯೋ ಅವನು ಕ್ರಿಮಿಯಾಗಿ ಜನಿಸುತ್ತಾನೆ.
ಕೃಮಿರ್ಜೀವತಿ ವರ್ಷಾಣಿ ದಶ ಪಂಚ ಚ ಭಾರತ |
ಅಧರ್ಮಸ್ಯ ಕ್ಷಯಂ ಕೃತ್ವಾ ತತೋ ಜಾಯತಿ ಮಾನುಷಃ ॥72॥
ಎಲೈ ಭಾರತನೇ, ಅವನು ಕ್ರಿಮಿಯಾಗಿ ಹದಿನೈದು ವರ್ಷಗಳ ಕಾಲ ಜೀವಿಸಿ ಪಾಪದ ಕ್ಷಯವನ್ನು ಮಾಡಿಕೊಂಡು ಅನಂತರ ಮನುಷ್ಯನಾಗುತ್ತಾನೆ.
ಪೂರ್ವಂ ದತ್ತಕತ್ವಾ ತು ಯಃ ಕನ್ಯಾಂ ದ್ವಿತೀಯೇ ದಾತುಮಿಚ್ಛತಿ |
ಸೋಽಪಿ ರಾಜನ್ ಮೃತೋ ಜಂತುಃ ಕೃಮಿಯೋನೌ ಪ್ರಜಾಯತೇ ॥
ಎಲೈ ರಾಜನೇ, ಮೊದಲು ಒಬ್ಬನಿಗೆ ಕನ್ಯಾದಾನವನ್ನು ಮಾಡಿ ಪುನಃ ಇನ್ನೊಬ್ಬನಿಗೆ ಕೊಡಲು ಇಚ್ಛಿಸುವವನು ಮರಣವನ್ನು ಹೊಂದಿ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ.
ತತ್ರ ಜೀವತಿ ವರ್ಷಾಣಿ ತ್ರಯೋದಶ ಯುಧಿಷ್ಠಿರ |
ಅಧರ್ಮಸಂಕ್ಷಯೇ ಯುಕ್ತಸ್ತತೋ ಜಾಯತಿ ಮಾನುಷಃ ॥74॥
ಎಲೈ ಯುಧಿಷ್ಠಿರನೇ, ಅಲ್ಲಿ ಅವನು ಹದಿಮೂರು ವರ್ಷಗಳ ಕಾಲ ಜೀವಿಸಿದ್ದು, ಪಾಪಕ್ಷಯವಾದ ಮೇಲೆ ಪುನಃ ಮನುಷ್ಯನಾಗಿ ಜನಿಸುತ್ತಾನೆ.
ದೇವಕಾರ್ಯಮುಪಾಕೃತ್ಯ ಪಿತೃಕಾರ್ಯಮಥಾಪಿ ಚ |
ಅನಿರ್ವಾಪ್ಯ ಸಮಶ್ನನ್ ವೈ ತತೋ ಜಾಯತಿ ವಾಯಸಃ ॥75॥
ದೇವತಾ ಕಾರ್ಯವನ್ನಾಗಲೀ, ಪಿತೃಕಾರ್ಯವನ್ನಾಗಲೀ ಪ್ರಾರಂಭಿಸಿ, ಅದು ಮುಗಿಯುವುದಕ್ಕಿಂತ ಮೊದಲೇ ಆಹಾರವನ್ನು ಸೇವಿಸುವವನು ಕಾಗೆಯಾಗಿ ಜನಿಸುತ್ತಾನೆ.
ವಾಯಸೋ ದಶ ವರ್ಷಾಣಿ ತತೋ ಜಾಯತಿ ಕುಕ್ಕುಟಃ |
ಜಾಯತೇ ಲವಕಶ್ಚಾಪಿ ಮಾಸಂ ತಸ್ಮಾತ್ತು ಮಾನುಷಃ ॥76॥
ಕಾಗೆಯಾಗಿ ಹತ್ತು ವರ್ಷ ಕಳೆದು ಅನಂತರ ಕೋಳಿಯಾಗುತ್ತಾನೆ. ಅನಂತರ ಲವಕ (ಮರಕುಟುಕ ಪಕ್ಷಿ)ವಾಗಿ ಒಂದು ತಿಂಗಳನ್ನು ಕಳೆದು ಅನಂತರ ಮನುಷ್ಯನಾಗುತ್ತಾನೆ.
ಜ್ಯೇಷ್ಠಂ ಪಿತೃಸಮಂ ಚಾಪಿ ಭ್ರಾತರಂ ಯೋಽವಮನ್ಯತೇ |

ಸೋಽಪಿ ಮೃತ್ಯುಮುಪಾಗಮ್ಯ ಕ್ರೌಂಚಯೋನೌ ಪ್ರಜಾಯತೇ ॥77॥
ಜ್ಯೇಷ್ಠನೂ ಪಿತೃಸಮಾನನೂ ಆದ ಅಣ್ಣನನ್ನು ಅವಮಾನ ಮಾಡಿದರೆ ಮರಣವನ್ನು ಹೊಂದಿ ಕ್ರೌಂಚಯೋನಿಯಲ್ಲಿ ಜನಿಸುತ್ತಾನೆ.
ಕ್ರೌಂಚೋ ಜೀವತಿ ಮಾಸಾಂಸ್ತು ದಶ ದ್ವೌ ಸಪ್ತ ಪಂಚ ಚ |
ತತೋ ನಿಧನಮಾಪನ್ನೋ ಮಾನುಷತ್ವಮುಪಾಶ್ನುತೇ ॥78॥
ಕ್ರೌಂಚಪಕ್ಷಿಯಾಗಿ ಇಪ್ಪತ್ತ್ನಾಲ್ಕು ತಿಂಗಳುಗಳ ಕಾಲ ಜೀವಿಸಿ ಅಲ್ಲಿ ನಿಧನವನ್ನು ಹೊಂದಿ ಪುನಃ ಮನುಷ್ಯನಾಗುತ್ತಾನೆ.
ವೃಷಲೋ ಬ್ರಾಹ್ಮಣೀಂ ಗತ್ವಾ ಕೃಮಿಯೋನೌ ಪ್ರಜಾಯತೇ |
ತತ್ರಾಪತ್ಯಂ ಸಮುತ್ಪಾದ್ಯ ತತೋ ಭವತಿ ಮಾನುಷಃ ॥79॥
ಶೂದ್ರನು ಬ್ರಾಹ್ಮಣ ಸ್ತ್ರೀ ಗಮನವನ್ನು ಮಾಡಿ ಅಲ್ಲಿ ಮಕ್ಕಳನ್ನು ಪಡೆದರೆ ಕ್ರಿಮಿ ಯೋನಿಯಲ್ಲಿ ಜನಿಸಿ ಅನಂತರ ಮನುಷ್ಯನಾಗುತ್ತಾನೆ.
ಕೃತಘ್ನಸ್ತು ಮೃತೋ ರಾಜನ್ಯಮಸ್ಯ ವಿಷಯಂ ಗತಃ |
ಯಮಸ್ಯ ವಿಷಯೇ ಕ್ರುದ್ಧೈರ್ವಧಂ ಪ್ರಾಪ್ನೋತಿ ದಾರುಣಮ್ ॥80॥
ಎಲೈ ರಾಜನೇ, ಕೃತಘ್ನನಾದವನು ಯಮದೇವರ ರಾಜ್ಯಕ್ಕೆ ಹೋಗಿ ಅಲ್ಲಿ ಕ್ರುದ್ಧರಾದ ಯಮಭಟರಿಂದ ದಾರುಣವಾದ ಹಿಂಸೆಗಳನ್ನು ಅನುಭವಿಸುತ್ತಾನೆ.
ಪಟ್ಟಿಸಂ ಮುದ್ಗರಂ ಶೂಲಮಗ್ನಿಕುಂಭಂ ಚ ದಾರುಣಮ್ |
ಅಸಿಪತ್ರವನಂ ಘೋರಂ ವಾಲುಕಾಂ ಕೂಟಶಾಲ್ಮಲೀಮ್ ॥81॥
ಏತಾಶ್ಚಾನ್ಯಾಶ್ಚ ಬಹ್ವೀಃ ಸ ಯಮಸ್ಯ ವಿಷಯಂ ಗತಃ |
ಯಾತನಾಃ ಪ್ರಾಪ್ಯ ತತ್ರೋಗ್ರಾಸ್ತತೋ ವಧ್ಯತಿ ಭಾರತ ॥82॥
ಪಟ್ಟಿಸ, ಮುದ್ಗರ, ಶೂಲ, ದಾರುಣವಾದ ಅಗ್ನಿಕುಂಭ, ಘೋರವಾದ ವಾಲುಕ, ಕೂಟಶಾಲ್ಮಲೀ ಮೊದಲಾದ ಅನೇಕ ಯಾತನೆಗಳನ್ನು ಅನುಭವಿಸಿ ಅನಂತರ ಅಲ್ಲಿ ಪ್ರಹಾರ ಮಾಡಲ್ಪಡುತ್ತಾನೆ.
ಸಂಸಾರಚಕ್ರಮಾಸಾದ್ಯ ಕೃಮಿಯೋನೌ ಪ್ರಜಾಯತೇ |
ಕೃಮಿರ್ಭವತಿ ವರ್ಷಾಣಿ ದಶ ಪಂಚ ಚ ಭಾರತ |
ತತೋ ಗರ್ಭಂ ಸಮಾಸಾದ್ಯ ತತ್ರೈವ ಮ್ರಿಯತೇ ಶಿಶುಃ ॥83॥
ಅಲ್ಲಿಂದ ಪುನಃ ಸಂಸಾರಚಕ್ರಕ್ಕೆ ಸಿಲುಕಿ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ. ಎಲೈ ಭಾರತನೇ, ಕ್ರಿಮಿಯೋನಿಯಲ್ಲಿ ಹದಿನೈದು ವರ್ಷಗಳ ಕಾಲ ಜೀವಿಸಿ ಅನಂತರ ಮನುಷ್ಯ ಗರ್ಭವನ್ನು ಸೇರಿ ಅಲ್ಲಿಯೇ ಮರಣವನ್ನು ಹೊಂದುತ್ತಾನೆ.
ತತೋ ಗರ್ಭಶತೈರ್ಜಂತುರ್ಬಹುಭಿಃ ಸಂಪ್ರಜಾಯತೇ |
ಸಂಸಾರಾಂಶ್ಚ ಬಹೂನ್ ಗತ್ವಾ ತತಸ್ತಿರ್ಯಕ್ಪ್ರಜಾಯತೇ ॥84॥
ಅನಂತರ ನೂರು ಜನ್ಮಗಳನ್ನು ಧರಿಸಿ, ಸಂಸಾರಚಕ್ರದಲ್ಲಿ ಬಹುವಾಗಿ ತಿರುಗಿ ತಿರ್ಯಗ್ಯೋನಿ (ನೀಚಜನ್ಮ)ಯಲ್ಲಿ ಜನಿಸುತ್ತಾನೆ.
ಮೃತೋ ದುಃಖಮನುಪ್ರಾಪ್ಯ ಬಹುವರ್ಷಗಣಾನಿಹ |
ಅಪುನರ್ಭಾವಸಂಯುಕ್ತಃ ತಿರ್ಯಗ್ಜಂತುಷು ಜಾಯತೇ ॥85॥
ಅಲ್ಲಿ ಮೃತನಾಗಿ ಅನೇಕ ವರ್ಷಗಳ ಕಾಲ ದುಃಖಗಳನ್ನು ಅನುಭವಿಸಿ ಪುನಃ ಮೇಲೇಳದಂತಹ ತಿರ್ಯಗ್ಯೋನಿಗಳಲ್ಲಿ ಜನಿಸುತ್ತಾನೆ.
ಅಶಸ್ತ್ರಂ ಪುರುಷಂ ಹತ್ವಾ ಸಶಸ್ತ್ರಃ ಪುರುಷಾಧಮಃ |
ಅರ್ಥಾರ್ಥೀ ಯದಿ ವಾ ವೈರೀ ಸ ಮೃತೋ ಜಾಯತೇ ಖರಃ ॥86॥
ಧನದ ಕಾರಣದಿಂದಾಗಲೀ ಅಥವಾ ವೈರದಿಂದಾಗಲೀ ಶಸ್ತ್ರವನ್ನು ಹಿಡಿದ ಪುರುಷನು ಶಸ್ತ್ರರಹಿತನಾದವನನ್ನು ಕೊಂದರೆ ಕತ್ತೆಯಾಗಿ ಜನಿಸುತ್ತಾನೆ.
ಖರೋ ಜೀವತಿ ವರ್ಷೇ ದ್ವೇ ತತಃ ಶಸ್ತ್ರೇಣ ವಧ್ಯತೇ |
ಸ ಮೃತೋ ಮೃಗಯೋನೌ ತು ನಿತ್ಯೋದ್ವಿಗ್ನೋಽಭಿಜಾಯತೇ ॥87॥
ಕತ್ತೆಯಾಗಿ ಎರಡು ವರ್ಷ ಜೀವಿಸಿ ಅನಂತರ ಶಸ್ತ್ರದಿಂದ ಕೊಲ್ಲಲ್ಪಡುತ್ತಾನೆ. ಅಲ್ಲಿ ಮೃತನಾಗಿ ನಿತ್ಯವೂ ಭಯಗ್ರಸ್ತವಾದ ಜಿಂಕೆಯ ಯೋನಿಯಲ್ಲಿ ಜನಿಸುತ್ತಾನೆ.
ಮೃಗೋ ವಧ್ಯತಿ ಶಸ್ತ್ರೇಣ ಗತೇ ಸಂವತ್ಸರೇ ತು ಸಃ |
ಹತೋ ಮೃಗಸ್ತತೋ ಮೀನಃ ಸೋಽಪಿ ಜಾಲೇನ ಬಧ್ಯತೇ ॥88॥
ಜಿಂಕೆಯಾಗಿ ಒಂದು ವರ್ಷ ಕಳೆದ ಮೇಲೆ ಶಸ್ತ್ರದಿಂದ ಕೊಲ್ಲಲ್ಪಡುತ್ತಾನೆ. ಜಿಂಕೆಯಾಗಿ ಹತನಾದವನು, ಅನಂತರ ಮೀನಾಗಿ ಹುಟ್ಟಿ ಅಲ್ಲಿಯೂ ಬಲೆಯಲ್ಲಿ ಸಿಲುಕಿ ಮೃತನಾಗುತ್ತಾನೆ.
ಮಾಸೇ ಚತುರ್ಥೇ ಸಂಪ್ರಾಪ್ತೇ ಶ್ವಾಪದಃ ಸಂಪ್ರಜಾಯತೇ |
ಶ್ವಾಪದೋ ದಶ ವರ್ಷಾಣಿ ದ್ವೀಪೀ ವರ್ಷಾಣಿ ಪಂಚ ಚ ॥89॥
ಮೀನಾಗಿ ನಾಲ್ಕು ತಿಂಗಳು ಕಳೆದಾಗ ಆ ದೇಹವನ್ನು ತ್ಯಜಿಸಿ ಮಾಂಸಾಹಾರಿ ಪ್ರಾಣಿಯಾಗಿ ಜನಿಸುತ್ತಾನೆ. ಹತ್ತು ವರ್ಷ ಮಾಂಸಾಹಾರಿ ಪ್ರಾಣಿಯಾಗಿ ನಂತರ ಚಿರತೆಯಾಗಿ ಜನಿಸುತ್ತಾನೆ.
ತತಸ್ತು ನಿಧನಂ ಪ್ರಾಪ್ತಃ ಕಾಲಪರ್ಯಾಯಚೋದಿತಃ |
ಅಧರ್ಮಸ್ಯ ಕ್ಷಯಂ ಕೃತ್ವಾ ತತೋ ಜಾಯತಿ ಮಾನುಷಃ ॥90॥
ಅನಂತರ ಕಾಲಕ್ರಮದಲ್ಲಿ ನಿಧನವನ್ನು ಹೊಂದಿ, ಅಧರ್ಮದ ವಿನಾಶವನ್ನು ಮಾಡಿಕೊಂಡು ಮನುಷ್ಯನಾಗುತ್ತಾನೆ.
ಸ್ತ್ರಿಯಂ ಹತ್ವಾ ತು ದುರ್ಬುದ್ಧಿರ್ಯಮಸ್ಯ ವಿಷಯಂ ಗತಃ |

ಬಹೂನ್ ಕ್ಲೇಶಾನ್ ಸಮಾಸಾದ್ಯ ನರಕಾನೇಕವಿಂಶತಿಮ್ ॥91॥
ತತಃ ಪಶ್ಚಾನ್ಮಹಾರಾಜ ಕೃಮಿಯೋನೌ ಪ್ರಜಾಯತೇ |
ಕೃಮಿರ್ವಿಂಶತಿವರ್ಷಾಣಿ ಭೂತ್ವಾ ಜಾಯತಿ ಮಾನುಷಃ ॥92॥
ದುರ್ಬುದ್ಧಿಯುಳ್ಳ ಮನುಷ್ಯನು ಸ್ತ್ರೀಹತ್ಯೆಯನ್ನು ಮಾಡಿ, ಯಮಪಟ್ಟಣಕ್ಕೆ ಹೋಗಿ ಅಲ್ಲಿ ಅನೇಕ ಕ್ಲೇಶಗಳನ್ನೂ, ಇಪ್ಪತ್ತೊಂದು ವಿಧವಾದ ನರಕಗಳನ್ನೂ ಅನುಭವಿಸಿ ಅನಂತರ ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ. ಎಲೈ ಮಹಾರಾಜನೇ, ಕ್ರಿಮಿ ಯೋನಿಯಲ್ಲಿ ಇಪ್ಪತ್ತು ವರ್ಷಗಳನ್ನು ಕಳೆದು ಅನಂತರ ಮನುಷ್ಯನಾಗಿ ಜನಿಸುತ್ತಾನೆ.
ಭೋಜನಂ ಚೋರಯಿತ್ವಾ ತು ಮಕ್ಷಿಕಾ ಜಾಯತೇ ನರಃ |
ಮಕ್ಷಿಕಾಸಂಘವಶಗೋ ಬಹೂನ್ ಮಾಸಾನ್ ಭವತ್ಯುತ |
ತತಃ ಪಾಪಕ್ಷಯಂ ಕೃತ್ವಾ ಮಾನುಷತ್ವಮವಾಪ್ನುತೇ ॥93॥
ಭೋಜನವನ್ನು ಕದ್ದ ಮನುಷ್ಯನು ನೊಣವಾಗಿ ಜನಿಸುತ್ತಾನೆ. ಅವನು ನೊಣಗಳ ಸಮೂಹದಲ್ಲಿಯೇ ಸಿಲುಕಿ ಅನೇಕ ಮಾಸಗಳನ್ನು ಕಳೆಯುತ್ತಾನೆ. ಅನಂತರ ಪಾಪಕ್ಷಯವನ್ನು ಹೊಂದಿ ಮನುಷ್ಯಜನ್ಮವನ್ನು ಪಡೆಯುತ್ತಾನೆ.
ವಾದ್ಯಂ ಹೃತ್ವಾ ತು ಪುರುಷೋ ಮಶಕಃ ಸಂಪ್ರಜಾಯತೇ |
ತಥಾ ಪಿಣ್ಯಾಕಸಂಮಿಶ್ರಮಶನಂ ಚೋರಯೇನ್ನರಃ |
ಜಾಯತೇ ಶ್ವಭ್ರನಿಯತೋ ದಾರುಣೋ ಮೂಷಕೋ ನರಃ ॥94॥
ವಾದ್ಯವನ್ನು ಕದ್ದ ಪುರುಷನು ಸೊಳ್ಳೆಯಾಗಿ ಜನಿಸುತ್ತಾನೆ. ಹಿಂಡಿಯಿಂದ ಮಿಶ್ರಿತವಾದ ಆಹಾರವನ್ನು ಕದಿಯುವ ನರನು ಯಾವಾಗಲೂ ಹಳ್ಳದಲ್ಲಿ ವಾಸಿಸುವ ದಾರುಣವಾದ ಇಲಿಯಾಗುತ್ತಾನೆ.
ಲವಣಂ ಚೋರಯಿತ್ವಾ ತು ಚೀರೀವಾಕಃ ಪ್ರಜಾಯತೇ |
ದಧಿ ಹೃತ್ವಾ ಬಕಶ್ಚಾಪಿ ಪ್ಲವೋ ಮತ್ಸ್ಯಾನಸಂಸ್ಕೃತಾನ್ ॥95॥
ಲವಣವನ್ನು (ಉಪ್ಪು) ಕದ್ದವನು ಚೀರೀವಾಕವಾಗಿ (ಚಿಮ್ಮಂಡೆ ಹುಳು) ಜನಿಸುತ್ತಾನೆ. ಮೊಸರನ್ನು ಕದ್ದವನು ಬಕಪಕ್ಷಿಯಾಗುತ್ತಾನೆ. ಹಸಿಯ ಮೀನುಗಳನ್ನು ಕದ್ದವನು ಪ್ಲವ ಎಂಬ ಪಕ್ಷಿಯಾಗುತ್ತಾನೆ.
ಚೋರಯಿತ್ವಾ ಪಯಶ್ಚಾಪಿ ಬಲಾಕಾ ಸಂಪ್ರಜಾಯತೇ |
ಯಸ್ತು ಚೋರಯತೇ ತೈಲಂ ತೈಲಪಾಯೀ ಪ್ರಜಾಯತೇ |
ಚೋರಯಿತ್ವಾ ತು ದುರ್ಬುದ್ಧಿರ್ಮಧು ದಂಶಃ ಪ್ರಜಾಯತೇ ॥96॥
ಹಾಲನ್ನು ಕದ್ದವನು ಬಲಾಕಾ ಪಕ್ಷಿಯಾಗುತ್ತಾನೆ. ತೈಲವನ್ನು ಕದ್ದವನು ತೈಲಪಾಯಿ ಎಂಬ ಪಕ್ಷಿಯಾಗುತ್ತಾನೆ. ಜೇನುತುಪ್ಪವನ್ನು ಕದ್ದವನು ಜೇನುಹುಳುವಾಗಿ ಜನಿಸುತ್ತಾನೆ.
ಅಯೋ ಹೃತ್ವಾ ತು ದುರ್ಬುದ್ಧಿರ್ವಾಯಸೋ ಜಾಯತೇ ನರಃ |
ಪಾಯಸಂ ಚೋರಯಿತ್ವಾ ತು ತಿತ್ತಿರಿತ್ವಮವಾಪ್ನುತೇ ॥97॥
ಕಬ್ಬಿಣವನ್ನು ಕದ್ದ ದುರ್ಬುದ್ಧಿಯುಳ್ಳ ಮನುಷ್ಯನು ಕಾಗೆಯಾಗುತ್ತಾನೆ. ಪಾಯಸವನ್ನು ಕದ್ದವನು ತಿತ್ತಿರಿ ಪಕ್ಷಿಯಾಗುತ್ತಾನೆ.
ಹೃತ್ವಾ ಪೈಷ್ಟಮಪೂಪಂ ಚ ಕುಂಭೋಲೂಕಃ ಪ್ರಜಾಯತೇ |
ಫಲಂ ವಾ ಮೂಲಕಂ ಹೃತ್ವಾ ಜಾಯೇತ್ ಪಿಪೀಲಿಕಃ ॥98॥
ಹಿಟ್ಟಿನಿಂದ ಮಾಡಿದ ಅಪೂಪವನ್ನು ಕದ್ದವನು ಗೂಬೆಯಾಗುತ್ತಾನೆ. ಹಣ್ಣನ್ನು ಅಥವಾ ಗೆಡ್ಡೆಗಳನ್ನು ಕದ್ದವನು ಇರುವೆಯಾಗುತ್ತಾನೆ.
ಕಾಂಸ್ಯಂ ಹೃತ್ವಾ ತು ದುರ್ಬುದ್ಧಿರ್ಹಾರೀತೋ ಜಾಯತೇ ನರಃ |
ರಾಜತಂ ಭಾಜನಂ ಹೃತ್ವಾ ಕಪೋತಃ ಸಂಪ್ರಜಾಯತೇ ॥99॥
ಕಂಚಿನ ಪಾತ್ರೆಯನ್ನು ಕದಿಯುವ ದುರ್ಬುದ್ಧಿಯುಳ್ಳ ನರನು ಹಾರೀತ ಪಕ್ಷಿಯಾಗುತ್ತಾನೆ. ಬೆಳ್ಳಿಯ ಪಾತ್ರೆಯನ್ನು ಕದಿಯುವವನು ಪಾರಿವಾಳವಾಗಿ ಜನಿಸುತ್ತಾನೆ.
ಹೃತ್ವಾ ತು ಕಾಂಚನಂ ಭಾಂಡಂ ಕೃಮಿಯೋನೌ ಪ್ರಜಾಯತೇ |
ಕ್ರೌಂಚಃ ಕಾರ್ಪಾಸಿಕಂ ಹೃತ್ವಾ ಮೃತೋ ಜಾಯೇತ ಮಾನುಷಃ ॥100॥
ಚಿನ್ನದ ಪಾತ್ರೆಯನ್ನು ಕದಿಯುವವನು ಕ್ರಿಮಿಯೋನಿಯಲ್ಲಿ ಜನಿಸುತ್ತಾನೆ. ಹತ್ತಿಯ ಬಟ್ಟೆಯನ್ನು ಕದಿಯುವವನು ಕ್ರೌಂಚಪಕ್ಷಿಯಾಗಿ ಮರಣವನ್ನು ಹೊಂದಿ ಮನುಷ್ಯನಾಗುತ್ತಾನೆ.
ಪತ್ರೋರ್ಣಂ ಚೋರಯಿತ್ವಾ ತು ಕೃಕಲತ್ವಂ ನಿಗಚ್ಛತಿ |
ಕೌಶಿಕಂ ತು ತತೋ ಹೃತ್ವಾ ನರೋ ಜಾಯತಿ ವರ್ತಕಃ ॥101॥
ಉಣ್ಣೆಯ ಬಟ್ಟೆಯನ್ನು ಕದಿಯುವವನು ಓತಿಕೇತನ ಜನ್ಮವನ್ನು ಪಡೆಯುತ್ತಾನೆ. ರೇಶ್ಮೆ ವಸ್ತ್ರವನ್ನು ಕದಿಯುವವನು ವರ್ತಕನಾಗಿ ಜನಿಸುತ್ತಾನೆ.
ಅಂಶುಕಂ ಚೋರಯಿತ್ವಾ ತು ಕಪೋತಃ ಸಂಪ್ರಜಾಯತೇ |
ಚೋರಯಿತ್ವಾ ದುಕೂಲಂ ತು ಮೃತೋ ಹಂಸಃ ಪ್ರಜಾಯತೇ ॥102॥
ಸಣ್ಣ ವಸ್ತ್ರವನ್ನು ಕದಿಯುವವನು ಪಾರಿವಾಳವಾಗಿ ಜನಿಸುತ್ತಾನೆ. ಹೊದೆಯುವ ವಸ್ತ್ರವನ್ನು ಕದಿಯುವವನು ಮೃತನಾಗಿ ಹಂಸವಾಗಿ ಜನಿಸುತ್ತಾನೆ.
ಚೋರಯಿತ್ವಾ ನರಃ ಪಟ್ಟಂ ತ್ವಾವಿಕಂ ವಾಪಿ ಭಾರತ |
ಕ್ಷೌಮಂ ಚ ವಸ್ತ್ರಮಾದಾಯ ಶಶೋ ಜಂತುಃ ಪ್ರಜಾಯತೇ ॥103॥

ಎಲೈ ಭಾರತನೇ, ಪಟ್ಟವಸ್ತ್ರವನ್ನೂ, ಶಾಲನ್ನೂ, ರೇಶ್ಮೆಯ ವಸ್ತ್ರವನ್ನೂ ಕದಿಯುವವನು ಮೊಲವಾಗುತ್ತಾನೆ.
ವರ್ಣಾನ್ ಹೃತ್ವಾ ತು ಪುರುಷೋ ಮೃತೋ ಜಾಯತಿ ಬರ್ಹಿಣಃ |
ಹೃತ್ವಾ ರಕ್ತಾನಿ ವಸಾತ್ರುಣಿ ಜಾಯತೇ ಜೀವಜೀವಕಃ ॥104॥
ಅನುಲೇಪನವನ್ನು ಕದಿಯುವ ಮನುಷ್ಯನು ಮರಣವನ್ನು ಹೊಂದಿ ನವಿಲಾಗುತ್ತಾನೆ. ರಕ್ತವಸ್ತ್ರವನ್ನು ಕದಿಯುವವನು ಚಕೋರಪಕ್ಷಿಯಾಗಿ ಜನಿಸುತ್ತಾನೆ.
ವರ್ಣಕಾದೀಂಸ್ತಥಾ ಗಂಧಾಂಶ್ಚೋರಯಿತ್ವಾ ತು ಮಾನವಃ |
ಛುಚ್ಛುಂದರಿತ್ವಮಾಪ್ನೋತಿ ರಾಜನ್ ಲೋಭಪರಾಯಣಃ ॥105॥
ಎಲೈ ರಾಜನೇ, ಅನುಲೇಪನ ಗಂಧವನ್ನು ಕದ್ದು ಲೋಭಪರಾಯಣನಾದ ಮನುಷ್ಯನು ಛುಂಚುಂದರಿ ಪಕ್ಷಿಯಾಗಿ ಜನಿಸುತ್ತಾನೆ.
ವಿಶ್ವಾಸೇನ ತು ನಿಕ್ಷಿಪ್ತಂ ಯೋ ನಿಹ್ನವತಿ ಮಾನವಃ |
ಸ ಗತಾಸುರ್ನರಸ್ತಾದೃಕ್ ಮತ್ಸ್ಯಯೋನೌ ಪ್ರಜಾಯತೇ ॥106॥
ವಿಶ್ವಾಸದಿಂದ ಇಟ್ಟ ಪದಾರ್ಥವನ್ನು ಮುಚ್ಚಿಡುವವನು ಮರಣವನ್ನು ಹೊಂದಿ ಮತ್ಸ್ಯ (ಮೀನಿನ) ಯೋನಿಯಲ್ಲಿ ಜನಿಸುತ್ತಾನೆ.
ಮತ್ಸ್ಯಯೋನಿಮನುಪ್ರಾಪ್ಯ ಮೃತೋ ಜಾಯತಿ ಮಾನುಷಃ |
ಮಾನುಷತ್ವಮನುಪ್ರಾಪ್ಯ ಕ್ಷೀಣಾಯುರುಪಪದ್ಯತೇ ॥107॥
ಮತ್ಸ್ಯಯೋನಿಯನ್ನು ಹೊಂದಿ, ಅಲ್ಲಿ ಮೃತನಾಗಿ ಮನುಷ್ಯಯೋನಿಯಲ್ಲಿ ಜನಿಸುತ್ತಾನೆ. ಮನುಷ್ಯಯೋನಿಯಲ್ಲಿ ಜನಿಸಿ ಅಲ್ಪಾಯುವಾಗುತ್ತಾನೆ.
ಪಾಪಾನಿ ತು ನರಃ ಕೃತ್ವಾ ತಿರ್ಯಗ್ಜಾಯತಿ ಭಾರತ |
ನ ಚಾತ್ಮನಃ ಪ್ರಮಾಣಂ ತೇ ಧರ್ಮಂ ಜಾನಾತಿ ಕಂಚನ ॥108॥
ಎಲೈ ಭಾರತನೇ, ಮನುಷ್ಯನು ಪಾಪವನ್ನು ಮಾಡಿ ತಿರ್ಯಗ್ಯೋನಿಯಲ್ಲಿ ಜನಿಸುತ್ತಾನೆ. ತನ್ನನ್ನು ಉದ್ಧಾರ ಮಾಡುವ ಧರ್ಮವನ್ನು ಯಾವನೂ ತಿಳಿದಿಲ್ಲ.
ಯೇ ಪಾಪಾನಿ ನರಾಃ ಕೃತ್ವಾ ನಿರಸ್ಯಂತಿ ವ್ರತೈಃ ಸದಾ |
ಸುಖದುಃಖಸಮಾಯುಕ್ತಾ ವ್ಯಾಧಿತಾಸ್ತೇ ಭವಂತ್ಯುತ ॥109॥
ಯಾವ ಮನುಷ್ಯರು ಪಾಪಗಳನ್ನು ಮಾಡಿ ಅನಂತರ ವ್ರತಗಳನ್ನು ಮಾಡಿ ಕಳೆದುಕೊಳ್ಳಲು ಪ್ರಯತ್ನಿಸುತ್ತಾರೆಯೋ ಅವರು ಸುಖ-ದುಃಖ ಸಮಾಯುಕ್ತರಾಗಿ, ರೋಗಗ್ರಸ್ತರಾಗಿ ಜನಿಸುತ್ತಾರೆ.
ಅಸಂವಾಸಾಃ ಪ್ರಜಾಯಂತೇ ಮ್ಲೇಚ್ಛಾಶ್ಚಾಪಿ ನ ಸಂಶಯಃ |
ನರಾಃ ಪಾಪಸಮಾಚಾರಾ ಲೋಭಮೋಹಸಮನ್ವಿತಾಃ ॥110॥
ಪಾಪಕರ್ಮವನ್ನು ಆಚರಿಸುವ, ಲೋಭ-ಮೋಹ ಸಮನ್ವಿತರಾದ, ಸರಿಯಾಗಿ ವಸ್ತ್ರವನ್ನು ಹೊದ್ದುಕೊಳ್ಳದಿರುವ ಮನುಷ್ಯರು ಮ್ಲೇಚ್ಛರಾಗಿ ಜನಿಸುತ್ತಾರೆ.
ವರ್ಜಯಂತಿ ಚ ಪಾಪಾನಿ ಜನ್ಮಪ್ರಭೃತಿ ಯೇ ನರಾಃ |
ಅರೋಗಾ ರೂಪವಂತಸ್ತೇ ಧನಿನಶ್ಚ ಭವಂತ್ಯುತ ॥111॥
ಯಾವ ಮನುಷ್ಯರು ಹುಟ್ಟಿದಾಗಿನಿಂದಲೂ ಪಾಪಕಾರ್ಯಗಳನ್ನು ವರ್ಜಿಸುತ್ತಾರೆಯೋ ಅವರು (ಮುಂದಿನ ಜನ್ಮದಲ್ಲಿ) ರೋಗರಹಿತರೂ, ರೂಪವಂತರೂ ಮತ್ತು ಧನವಂತರೂ ಆಗುತ್ತಾರೆ.
ಸ್ತ್ರಿಯೋಽಪ್ಯೇತೇನ ಕಲ್ಪೇನ ಕೃತ್ವಾ ಪಾಪಮವಾಪ್ನುಯುಃ |
ಏತೇಷಾಮೇವ ಜಂತೂನಾಂ ಪತ್ನೀತ್ವಮುಪಯಾಂತಿ ತಾಃ ॥112॥
ಸ್ತ್ರೀಯರೂ ಸಹ ಇದೇ ವಿಧಾನದಿಂದ ಪಾಪವನ್ನು ಸಂಪಾದಿಸುತ್ತಾರೆ. ಅವರೂ ಮುಂದಿನ ಜನ್ಮದಲ್ಲಿ ಅಂತಹ ಜಂತುಗಳ ಪತ್ನೀತ್ವವನ್ನೇ ಹೊಂದುತ್ತಾರೆ.
ಪರಸ್ವಹರಣೇ ದೋಷಾಃ ಸರ್ವ ಏವ ಪ್ರಕೀರ್ತಿತಾಃ |
ಏತದ್ವೈ ಲೇಶಮಾತ್ರೇಣ ಕಥಿತಂ ತೇ ಮಯಾಽನಘ |
ಅಪರಸ್ಮಿನ್ ಕಥಾಯೋಗೇ ಭೂಯಃ ಶ್ರೋಷ್ಯಸಿ ಭಾರತ ॥113॥
ಪರಸ್ವತ್ತನ್ನು ಅಪಹಾರ ಮಾಡಿದರೆ ಉಂಟಾಗುವ ದೋಷಗಳೆಲ್ಲವೂ ನನ್ನಿಂದ ಹೇಳಲ್ಪಟ್ಟಿವೆ. ಎಲೈ ಅನಘನೇ, ನಾನು ಇದನ್ನು ಸ್ವಲ್ಪ ಮಾತ್ರ ಹೇಳಿದ್ದೇನೆ. ಎಲೈ ಭಾರತನೇ, ಇನ್ನೊಂದು ಕಥಾ ಸಂದರ್ಭದಲ್ಲಿ ನೀನು ಇನ್ನೂ ಹೆಚ್ಚಾಗಿ ಕೇಳುವಿ.
ಏತನ್ಮಯಾ ಮಹಾರಾಜ ಬ್ರಹ್ಮಣೋ ವದತಃ ಪುರಾ |
ಸುರರ್ಷೀಣಾಂ ಶ್ರುತಂ ಮಧ್ಯೇ ಪೃಷ್ಟಶ್ಚಾಪಿ ಯಥಾತಥಮ್ ॥114॥
ಎಲೈ ಮಹಾರಾಜನೇ, ದೇವರ್ಷಿಗಳ ಸಭೆಯಲ್ಲಿ ಪ್ರಶ್ನೆ ಮಾಡಲ್ಪಟ್ಟ ಬ್ರಹ್ಮದೇವರು ಈ ವಿಷಯಗಳನ್ನು ಹೇಳುವಾಗ ಅವರ ಮಧ್ಯದಲ್ಲಿ ಕುಳಿತ ನಾನು ಇದನ್ನು ಸರಿಯಾಗಿ ಕೇಳಿದೆನು.
ಮಯಾಽಪಿ ತವ ಕಾರ್ತ್ಸ್ನ್ಯೇನ ಯಥಾವದನುವರ್ಣಿತಮ್ |
ಏತಚ್ಛ್ರುತ್ವಾ ಮಹಾರಾಜ ಧರ್ಮೇ ಕುರು ಮನಃ ಸದಾ ॥115॥
ನಾನೂ ಸಹ ನಿನಗೆ ಕೇಳಿದುದನ್ನು ಪೂರ್ಣವಾಗಿ ವರ್ಣಿಸಿದ್ದೇನೆ. ಎಲೈ ಮಹಾರಾಜನೇ, ಇದನ್ನು ಕೇಳಿ ಯಾವಾಗಲೂ ಧರ್ಮದಲ್ಲಿಯೇ ಮನಸ್ಸನ್ನಿಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಸಂಸಾರಚಕ್ರನಿರೂಪಣಂ ನಾಮ ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ಮೂರನೆಯ ಅಧ್ಯಾಯ
ಅನ್ನದಾನಫಲ
ಯುಧಿಷ್ಠಿರಃ
ಅಧರ್ಮಸ್ಯ ಗತಿರ್ಬ್ರಹ್ಮನ್ ಕಥಿತಾ ಮೇ ತ್ವಯಾಽನಘ |
ಧರ್ಮಸ್ಯ ತು ಗತಿಂ ಶ್ರೋತುಮಿಚ್ಛಾಮಿ ವದತಾಂ ವರ |
ಕೃತ್ವಾ ಪಾಪಾನಿ ಕರ್ಮಾಣಿ ಕಥಂ ಯಾಂತಿ ಶುಭಾಂ ಗತಿಮ್ ॥1॥
ಯುಧಿಷ್ಠಿರ ಪೂಜ್ಯರಾದ ಬೃಹಸ್ಪತಿಗಳೇ, ಅನಘರೇ, ನೀವು ಅಧರ್ಮದ ಗತಿಗಳನ್ನು ಹೇಳಿದಿರಿ. ಮಾತನಾಡುವವರಲ್ಲಿ ಶ್ರೇಷ್ಠರೇ, ಧರ್ಮದ ಗತಿಯನ್ನು ಕೇಳಲು ಬಯಸುತ್ತೇನೆ. ಪಾಪಕರ್ಮವನ್ನು ಮಾಡಿದವನು ಹೇಗೆ ಶುಭಗತಿಯನ್ನು ಹೊಂದುತ್ತಾನೆ?
ಬೃಹಸ್ಪತಿಃ
ಕೃತ್ವಾ ಪಾಪಾನಿ ಕರ್ಮಾಣಿ ಅಧರ್ಮವಶಮಾಗತಃ |
ಮನಸಾ ವಿಪರೀತೇನ ನಿರಯಂ ಪ್ರತಿಪದ್ಯತೇ ॥2॥
ಬೃಹಸ್ಪತಿ ವಿರುದ್ಧವಾದ ಮನಸ್ಸಿನಿಂದ ಅಧರ್ಮಕ್ಕೆ ವಶನಾಗಿ ಪಾಪಕರ್ಮವನ್ನು ಮಾಡಿ ಮನುಷ್ಯನು ನರಕಕ್ಕೆ ಹೋಗುತ್ತಾನೆ.
ಮೋಹಾದಧರ್ಮಂ ಯಃ ಕೃತ್ವಾ ಪುನಃ ಸಮನುತಪ್ಯತೇ |
ಮನಃಸಮಾಧಿಸಂಯುಕ್ತೋ ನ ಸ ಸೇವೇತ ದುಷ್ಕೃತಮ್ ॥3॥
ಮೋಹದಿಂದ ಅಧರ್ಮವನ್ನು ಮಾಡಿ ಪುನಃ ಪಶ್ಚಾತ್ತಾಪವನ್ನು ಪಟ್ಟು ಯಾವನು ಮನಸ್ಸಮಾಧಾನವನ್ನು ಹೊಂದುತ್ತಾನೆಯೋ ಅವನು ಪುನಃ ಪಾಪಕಾರ್ಯವನ್ನು ಮಾಡುವುದಿಲ್ಲ.
ಯಥಾ ಯಥಾ ನರಃ ಸಮ್ಯಗಧರ್ಮಮನುಭಾಷತೇ |
ಸಮಾಹಿತೇನ ಮನಸಾ ವಿಮುಚ್ಯತಿ ತಥಾ ತಥಾ |
ಭುಜಂಗ ಇವ ನಿರ್ಮೋಕಾತ್ ಪೂರ್ವಭುಕ್ತಾಜ್ಜರಾನ್ವಿತಾತ್ ॥4॥
ಮನುಷ್ಯನು ಸಮಾಧಾನಗೊಂಡ ಮನಸ್ಸಿನಿಂದ ಹೇಗೆ ಹೇಗೆ ಅಧರ್ಮವನ್ನು ನಿಂದಿಸುತ್ತಾನೆಯೋ ಹಾಗೆ ಹಾಗೆ ಸರ್ಪವು ಜೀರ್ಣವಾದ ಪೊರೆಯನ್ನು ಬಿಟ್ಟಂತೆ ಹಿಂದೆ ಅನುಭವಿಸಿದ ದುಷ್ಕರ್ಮಗಳಿಂದ ಮುಕ್ತನಾಗುತ್ತಾನೆ.
ದತ್ವಾ ವಿಪ್ರಸ್ಯ ದಾನಾನಿ ವಿವಿಧಾನಿ ಸಮಾಹಿತಃ |
ಮನಃಸಮಾಧಿಸಂಯುಕ್ತಃ ಸುಗತಿಂ ಪ್ರತಿಪದ್ಯತೇ ॥5॥
ಮನಸ್ಸಮಾಧಾನದಿಂದ ಕೂಡಿದವನಾಗಿ ಬ್ರಾಹ್ಮಣರಿಗೆ ವಿವಿಧ ದಾನವನ್ನು ಮಾಡಿ ಸುಗತಿಯನ್ನು ಹೊಂದುತ್ತಾನೆ.
ಪ್ರದಾನಾನಿ ತು ವಕ್ಷ್ಯಾಮಿ ಯಾನಿ ದತ್ತ್ವಾ ಯುಧಿಷ್ಠಿರ |
ನರಃ ಕೃತ್ವಾಪ್ಯಕಾರ್ಯಾಣಿ ತದಾ ಧರ್ಮೇಣ ಯುಜ್ಯತೇ ॥6॥
ಎಲೈ ಯುಧಿಷ್ಠಿರನೇ, ಅಕಾರ್ಯಗಳನ್ನು ಮಾಡಿದರೂ ಯಾವ ದಾನದಿಂದ ಮನುಷ್ಯನು ಧರ್ಮವನ್ನು ಸಂಪಾದಿಸುತ್ತಾನೆಯೋ ಅಂತಹ ದಾನಗಳನ್ನು ನಿನಗೆ ಹೇಳುವೆನು.
ಸರ್ವೇಷಾಮೇವ ದಾನಾನಾಮನ್ನಂ ಶ್ರೇಷ್ಠಮುದಾಹೃತಮ್ |
ಪೂರ್ವಮನ್ನಂ ಪ್ರದಾತವ್ಯಮೃಜುನಾ ಧರ್ಮಮಿಚ್ಛತಾ ॥7॥
ಎಲ್ಲಾ ದಾನಗಳಲ್ಲಿ ಅನ್ನದಾನವು ಶ್ರೇಷ್ಠವೆಂದು ಹೇಳಲಾಗುತ್ತದೆ. ಋಜು ಬುದ್ಧಿಯನ್ನು ಹೊಂದಿ ಧರ್ಮವನ್ನು ಸಂಪಾದಿಸಲು ಬಯಸುವವನು ಮೊದಲು ಅನ್ನದಾನವನ್ನು ಮಾಡಬೇಕು.
ಪ್ರಾಣಾ ಹ್ಯನ್ನಂ ಮನುಷ್ಯಾಣಾಂ ತಸ್ಮಾಜ್ಜಂತುಶ್ಚ ಜಾಯತೇ |
ಅನ್ನೇ ಪ್ರತಿಷ್ಠಿತಾ ಲೋಕಾಸ್ತಸ್ಮಾದನ್ನಂ ಪ್ರಶಂಸ್ಯತೇ ॥8॥
ಮನುಷ್ಯರಿಗೆ ಅನ್ನವೇ ಪ್ರಾಣ. ಅನ್ನದಿಂದಲೇ ಪ್ರಾಣಿಗಳು ಜನಿಸುತ್ತವೆ. ಲೋಕಗಳು ಅನ್ನದಲ್ಲಿ ಪ್ರತಿಷ್ಠಿತವಾಗಿವೆ. ಆದ್ದರಿಂದ ಅನ್ನವು ಪ್ರಶಂಸಿಸಲ್ಪಡುತ್ತದೆ.
ಅನ್ನಮೇವ ಪ್ರಶಂಸಂತಿ ದೇವರ್ಷಿಪಿತೃಮಾನವಾಃ |
ಅನ್ನಸ್ಯ ಹಿ ಪ್ರದಾನೇನ ಸ್ವರ್ಗಮಾಪ್ನೋತಿ ಕೌಶಿಕಃ ॥9॥
ದೇವತೆಗಳು, ಋಷಿಗಳು, ಪಿತೃಗಳು ಮತ್ತು ಮಾನವರು ಅನ್ನವನ್ನೇ ಪ್ರಶಂಸಿಸುತ್ತಾರೆ. ಅನ್ನವನ್ನು ದಾನ ಮಾಡಿದುದರಿಂದ ಇಂದ್ರನು ಸ್ವರ್ಗವನ್ನು ಹೊಂದುತ್ತಾನೆ (ಹೊಂದಿದನು).
ನ್ಯಾಯಲಬ್ಧಂ ಪ್ರದಾತವ್ಯಂ ದ್ವಿಜೇಭ್ಯೋ ಹ್ಯನ್ನಮುತ್ತಮಮ್ |
ಸ್ವಾಧ್ಯಾಯಸಮವೇತೇಭ್ಯಃ ಪ್ರಹೃಷ್ಟೇನಾಂತರಾತ್ಮನಾ ॥10॥
ಸ್ವಾಧ್ಯಾಯಯುಕ್ತರಾದ ಬ್ರಾಹ್ಮಣರಿಗೆ ಸಂತುಷ್ಟವಾದ ಮನಸ್ಸಿನಿಂದ, ನ್ಯಾಯಲಬ್ಧವಾದ, ಶ್ರೇಷ್ಠವಾದ ಅನ್ನವನ್ನು ಕೊಡಬೇಕು.
ಯಸ್ಯ ಹ್ಯನ್ನಮುಪಾಶ್ನಂತಿ ಬ್ರಾಹ್ಮಣಾನಾಂ ಶತಾ ದಶ |
ಹೃಷ್ಟೇನ ಮನಸಾ ದತ್ತಂ ನ ಸ ತಿರ್ಯಗ್ಗತಿರ್ಭವೇತ್ ॥11॥
ಯಾವನು ಸಂತೋಷದಿಂದ ನೀಡಿದ ಅನ್ನವನ್ನು ಸಹಸ್ರ ಬ್ರಾಹ್ಮಣರು ಭುಂಜಿಸುತ್ತಾರೆಯೋ ಅವನು ನೀಚಗತಿಯನ್ನು ಹೊಂದುವುದಿಲ್ಲ.

ಬ್ರಾಹ್ಮಣಾನಾಂ ಸಹಸ್ರಾಣಿ ದಶ ಭೋಜ್ಯ ನರರ್ಷಭ |
ನರೋಽಧರ್ಮಾತ್ ಪ್ರಮುಚ್ಯೇತ ಪಾಪೇಷ್ವಭಿರತಃ ಸದಾ ॥12॥
ಎಲೈ ನರಶ್ರೇಷ್ಠನೇ, ಪಾಪದಲ್ಲಿ ಯಾವಾಗಲೂ ಅಭಿರತನಾದವನು ಹತ್ತು ಸಹಸ್ರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಆ ಅಧರ್ಮದಿಂದ ಮುಕ್ತನಾಗುತ್ತಾನೆ.
ಭೈಕ್ಷೇಣಾನ್ನಂ ಸಮಾಹೃತ್ಯ ವಿಪ್ರೋ ವೇದಪುರಸ್ಕೃತಃ |
ಸ್ವಾಧ್ಯಾಯನಿರತೇ ವಿಪ್ರೇ ದತ್ತ್ವೇಹ ಸುಖಮೇಧತೇ ॥13॥
ವೇದನಿರತನಾದ ಬ್ರಾಹ್ಮಣನು ಭಿಕ್ಷೆಯಿಂದ ಅನ್ನವನ್ನು ತಂದು, ಸ್ವಾಧ್ಯಾಯ ನಿರತನಾದ ಬ್ರಾಹ್ಮಣನಿಗೆ ದಾನವನ್ನು ಮಾಡಿದರೆ ಇಲ್ಲಿ ಸುಖವನ್ನು ಹೊಂದುತ್ತಾನೆ.
ಅಹಿಂಸನ್ ಬ್ರಾಹ್ಮಣಂ ನಿತ್ಯಂ ನ್ಯಾಯೇನ ಪರಿಪಾಲ್ಯ ಚ |
ಕ್ಷತ್ರಿಯಸ್ತರಸಾ ಪ್ರಾಪ್ತಮನ್ನಂ ಯೋ ವೈ ಪ್ರಯಚ್ಛತಿ ॥14॥
ದ್ವಿಜೇಭ್ಯೋ ವೇದವೃದ್ಧೇಭ್ಯಃ ಪ್ರಯತಃ ಸುಸಮಾಹಿತಃ |
ತೇನಾಪಾಪೋ ವಿಶುದ್ಧಾತ್ಮಾ ದುಷ್ಕೃತಂ ಕರ್ಮ ಪಾಂಡವ ॥15॥
ಎಲೈ ಪಾಂಡವನೇ, ಕ್ಷತ್ರಿಯನಾದವನು ಬ್ರಾಹ್ಮಣರಿಗೆ ಹಿಂಸೆಯನ್ನು ಮಾಡದೆ ಯಾವಾಗಲೂ ನ್ಯಾಯದಿಂದ ಅವರನ್ನು ರಕ್ಷಿಸಿ ತನ್ನ ಬಲದಿಂದ ಪ್ರಾಪ್ತವಾದ ಅನ್ನವನ್ನು ನಿಯಮದಿಂದ ಕೂಡಿದ, ವೇದವೃದ್ಧರಾದ ಬ್ರಾಹ್ಮಣರಿಗೆ ಸಮಾಧಾನದಿಂದ ದಾನ ಮಾಡಿ ಧರ್ಮಾತ್ಮನಾಗಿ ಮೊದಲು ಮಾಡಿದ ದುಷ್ಕರ್ಮಗಳನ್ನು ಕಳೆದುಕೊಳ್ಳುತ್ತಾನೆ.
ಷಡ್‌ಭಾಗಪರಿಶುದ್ಧಂ ಚ ಕೃಷೇರ್ಭಾಗಮುಪಾರ್ಜಿತಮ್ |
ವೈಶ್ಯೋ ದದದ್ ದ್ವಿಜಾತಿಭ್ಯಃ ಪಾಪೇಭ್ಯಃ ಪರಿಮುಚ್ಯತೇ ॥16॥
ವೈಶ್ಯನಾದವನು ಕೃಷಿಯನ್ನು ಮಾಡಿ, ಕೃಷಿಯಿಂದ ಬಂದ ಶುದ್ಧವಾದ ದ್ರವ್ಯದಲ್ಲಿ ಆರನೆಯ ಒಂದು ಭಾಗವನ್ನು ಬ್ರಾಹ್ಮಣರಿಗೆ ಕೊಟ್ಟು, ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಅವಾಪ್ಯ ಪ್ರಾಣಸಂದೇಹಂ ಕಾರ್ಕಶ್ಯೇನ ಸಮಾರ್ಜಿತಮ್ |
ಅನ್ನಂ ದತ್ತ್ವಾ ದ್ವಿಜಾತಿಭ್ಯಃ ಶೂದ್ರಃ ಪಾಪಾತ್ ಪ್ರಮುಚ್ಯತೇ ॥17॥
ಶೂದ್ರನಾದವನು ಪ್ರಾಣಸಂಕಟವನ್ನು ಹೊಂದುವವರೆಗೂ ಕಷ್ಟದಿಂದ ದುಡಿದು ಸಂಪಾದಿಸಿದ ಅನ್ನವನ್ನು ಬ್ರಾಹ್ಮಣರಿಗೆ ಕೊಟ್ಟು ಪಾಪದಿಂದ ಮುಕ್ತನಾಗುತ್ತಾನೆ.
ಔರಸೇನ ಬಲೇನಾನ್ನಮಾರ್ಜಯಿತ್ವಾಽವಿಹಿಂಸಕಃ |
ಯಃ ಪ್ರಯಚ್ಛತಿ ವಿಪ್ರೇಭ್ಯೋ ನ ಸ ದುರ್ಗಾಣಿ ಸೇವತೇ ॥18॥
ಇನ್ನೊಬ್ಬರಿಗೆ ಹಿಂಸೆಯನ್ನು ಮಾಡದೆ ತನ್ನ ಸ್ವಂತ ಬಲದಿಂದ ಅನ್ನವನ್ನು ಸಂಪಾದಿಸಿ ಬ್ರಾಹ್ಮಣರಿಗೆ ದಾನ ಮಾಡುವವನು ಕಷ್ಟಗಳನ್ನು ಹೊಂದುವುದಿಲ್ಲ.
ನ್ಯಾಯೇನಾವಾಪ್ತಮನ್ನಂ ತು ನರೋ ಲೋಭವಿವರ್ಜಿತಃ |
ದ್ವಿಜೇಭ್ಯೋ ವೇದವೃದ್ಧೇಭ್ಯೋ ದತ್ತ್ವಾ ಪಾಪಾತ್ ಪ್ರಮುಚ್ಯತೇ ॥19॥
ಮನುಷ್ಯನು ನ್ಯಾಯದಿಂದ ಅನ್ನವನ್ನು ಸಂಪಾದಿಸಿ, ಲೋಭರಹಿತನಾಗಿ ವೇದವಿದ್ವಾಂಸರಾದ ಬ್ರಾಹ್ಮಣರಿಗೆ ದಾನ ಮಾಡಿ ಪಾಪದಿಂದ ಮುಕ್ತನಾಗುತ್ತಾನೆ.
ಅನ್ನಮೂರ್ಜಸ್ಕರಂ ಲೋಕೇ ದತ್ತ್ವೋರ್ಜಸ್ವೀ ಭವೇನ್ನರಃ |
ಸತಾಂ ಪಂಥಾನಮಾಶ್ರಿತ್ಯ ಸರ್ವಪಾಪಾತ್ ಪ್ರಮುಚ್ಯತೇ ॥20॥
ಲೋಕದಲ್ಲಿ ಅನ್ನವು ಬಲಕಾರಿಯಾದುದು. ಅನ್ನವನ್ನು ದಾನ ಮಾಡುವ ಮನುಷ್ಯನು ಬಲಿಷ್ಠನಾಗುತ್ತಾನೆ. ಸಜ್ಜನರು ಹೋದ ಮಾರ್ಗದಲ್ಲಿ ನಡೆದರೆ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ದಾನಕೃದ್ಭಿಃ ಕೃತಃ ಪಂಥಾ ಯೇನ ಯಾಂತಿ ಮನೀಷಿಣಃ |
ತೇ ಸ್ಮ ಪ್ರಾಣಸ್ಯ ದಾತಾರಸ್ತೇಭ್ಯೋ ಧರ್ಮಃ ಸನಾತನಃ ॥21॥
ದಾನವನ್ನು ಕೊಟ್ಟ ಪ್ರಾಚೀನರು ಮಾರ್ಗವನ್ನು ಮಾಡಿದ್ದಾರೆ. ವಿವೇಕಿಗಳಾದವರು ಅದೇ ಮಾರ್ಗದಲ್ಲಿ ಹೋಗುತ್ತಾರೆ. ಅವರು ಪ್ರಾಣವನ್ನು ಬೇಕಾದರೂ ಕೊಡುವವರು. ಅವರಿಗೆ ಸನಾತನ ಧರ್ಮವೇ ಶ್ರೇಷ್ಠವಾದುದು.
ಸರ್ವಾವಸ್ಥಂ ಮನುಷ್ಯೇಣ ನ್ಯಾಯೇನಾನ್ನಮುಪಾರ್ಜಿತಮ್ |
ಕಾರ್ಯಂ ಪಾತ್ರಗತಂ ನಿತ್ಯಮನ್ನಂ ಹಿ ಪರಮಾ ಗತಿಃ ॥22॥
ಸರ್ವಾವಸ್ಥೆಗಳಲ್ಲಿಯೂ ಮನುಷ್ಯನು ನ್ಯಾಯದಿಂದ ಗಳಿಸಿದ ಅನ್ನವನ್ನು ಪಾತ್ರರಿಗೆ (ಯೋಗ್ಯರಿಗೆ) ದಾನವನ್ನು ಮಾಡಬೇಕು. ಅನ್ನದಾನವು ಯಾವಾಗಲೂ ಶ್ರೇಷ್ಠವಾದ ಗತಿಯನ್ನು ಕೊಡುತ್ತದೆ.
ಅನ್ನಸ್ಯ ಹಿ ಪ್ರದಾನೇನ ನರೋ ದುರ್ಗಂ ನ ಸೇವತೇ |
ತಸ್ಮಾದನ್ನಂ ಪ್ರದಾತವ್ಯಮನ್ಯಾಯಪರಿವರ್ಜಿತಮ್ ॥23॥
ಅನ್ನದಾನವನ್ನು ಮಾಡುವ ಮನುಷ್ಯನು ಕಷ್ಟಗಳನ್ನು ಹೊಂದುವುದಿಲ್ಲ. ಆದ್ದರಿಂದ ಅನ್ಯಾಯದ ಸ್ಪರ್ಶವಿಲ್ಲದ ಅನ್ನವನ್ನು ದಾನ ಮಾಡಬೇಕು.
ಯತೇದ್ ಬ್ರಾಹ್ಮಣಪೂರ್ವಂ ಹಿ ಭೋಕ್ತುಮನ್ನಂ ಗೃಹೀ ಸದಾ |
ಅವಂಧ್ಯಂ ದಿವಸಂ ಕುರ್ಯಾದ್ ದಾನಾಧ್ಯಯನಕರ್ಮಭಿಃ ॥24॥
ಗೃಹಸ್ಥನು ಮೊದಲು ಬ್ರಾಹ್ಮಣರಿಗೆ ಅನ್ನವನ್ನು ದಾನ ಮಾಡಿ ಅನಂತರ ಭೋಜನ ಮಾಡಲು ಪ್ರಯತ್ನಿಸಬೇಕು. ದಾನ, ಅಧ್ಯಯನ

ಮತ್ತು ಸಂಧ್ಯಾದಿ ಕರ್ಮಗಳಿಲ್ಲದೆ ದಿವಸವನ್ನು ಬಂಜೆಯನ್ನಾಗಿ ಮಾಡಬಾರದು.
ಭೋಜಯಿತ್ವಾ ದಶಶತಂ ನರೋ ವೇದವಿದಾಂ ನೃಪ |
ನ್ಯಾಯವಿದ್ಧರ್ಮವಿದುಷಾಮಿತಿಹಾಸವಿದಾಂ ತಥಾ ॥25॥
ನ ಯಾತಿ ನರಕಂ ಘೋರಂ ದರಿದ್ರಶ್ಚ ನ ಜಾಯತೇ |
ಸರ್ವಕಾಮಸಮಾಯುಕ್ತಃ ಪ್ರೇತ್ಯ ಚಾಪ್ಯಶ್ನುತೇ ಫಲಮ್ ॥26॥
ಎಲೈ ರಾಜನೇ, ವೇದಜ್ಞರಾದ, ನ್ಯಾಯಜ್ಞರಾದ, ಧರ್ಮಜ್ಞರಾದ, ಇತಿಹಾಸಜ್ಞರಾದ ಸಹಸ್ರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುವ ಮನುಷ್ಯನು ಘೋರವಾದ ನರಕಕ್ಕೆ ಹೋಗುವುದಿಲ್ಲ. ದರಿದ್ರನಾಗಿ ಜನಿಸುವುದಿಲ್ಲ. ಮರಣವನ್ನು ಹೊಂದಿದ ಮೇಲೆ ಎಲ್ಲ ಕಾಮಗಳಿಂದಲೂ ಯುಕ್ತನಾಗಿ ಒಳ್ಳೆಯ ಫಲವನ್ನು ಹೊಂದುತ್ತಾನೆ.
ಏವಂ ಸುಖಸಮಾಯುಕ್ತೋ ರಮತೇ ವಿಗತಜ್ವರಃ |
ರೂಪವಾನ್ ಕೀರ್ತಿಮಾಂಶ್ಚೈವ ಧನವಾಂಶ್ಚೋಪಪದ್ಯತೇ ॥27॥
ಹೀಗೆ ಸುಖದಿಂದ ಕೂಡಿದವನಾಗಿ ನಿರಾತಂಕವಾಗಿ ಸಂತೋಷಪಡುತ್ತಾನೆ. ರೂಪವಂತನೂ, ಕೀರ್ತಿವಂತನೂ ಮತ್ತು ಧನವಂತನೂ ಆಗುತ್ತಾನೆ.
ಏತತ್ತೇ ಸರ್ವಮಾಖ್ಯಾತಮನ್ನದಾನಫಲಂ ಮಹತ್ |
ಮೂಲಮೇತದ್ಧಿ ಧರ್ಮಾರ್ಥೇ ಪ್ರದಾನಂ ಚ ಪರಂತಪ ॥28॥
ಎಲೈ ಪರಂತಪನೇ, ಶ್ರೇಷ್ಠವಾದ ಅನ್ನದಾನ ಫಲವನ್ನೆಲ್ಲಾ ನಿನಗೆ ಹೇಳಿದ್ದೇನೆ. ಈ ಅನ್ನದಾನವೇ ಧರ್ಮವನ್ನು ಸಂಪಾದನೆ ಮಾಡುವುದಕ್ಕೆ ಮೂಲಭೂತವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ನಾಲ್ಕನೆಯ ಅಧ್ಯಾಯ
ಅಹಿಂಸೆಯ ಪ್ರಶಂಸೆ
ಯುಧಿಷ್ಠಿರಃ
ಅಹಿಂಸಾ ವೈದಿಕಂ ಕರ್ಮ ಧ್ಯಾನಮಿಂದ್ರಿಯಸಂಯಮಃ |
ತಪೋಽಥ ಗುರುಶುಶ್ರೂಷಾ ಕಿಂ ಶ್ರೇಯಃ ಪುರುಷಂ ಪ್ರತಿ ॥1॥
ಯುಧಿಷ್ಠಿರ ಅಹಿಂಸೆ, ವೇದೋಕ್ತಕರ್ಮಾನುಷ್ಠಾನ, ದಾನ, ಇಂದ್ರಿಯನಿಗ್ರಹ, ತಪಸ್ಸು ಮತ್ತು ಗುರುಶುಶ್ರೂಷೆ ಇವುಗಳಲ್ಲಿ ಪುರುಷನಿಗೆ ಶ್ರೇಷ್ಠವಾದುದು ಯಾವುದು?
ಬೃಹಸ್ಪತಿಃ
ಸರ್ವಾಣ್ಯೇತಾನಿ ಧರ್ಮಸ್ಯ ಪೃಥಗ್ದ್ವಾರಾಣಿ ಸರ್ವಶಃ |
ಶೃಣು ಸಂಕೀರ್ತ್ಯಮಾನಾನಿ ಷಡೇವ ಭರತರ್ಷಭ ॥2॥
ಬೃಹಸ್ಪತಿ ಎಲೈ ಭರತರ್ಷಭನೇ, ಈ ಆರೂ ಮನುಷ್ಯನಿಗೆ ಧರ್ಮದ ಬೇರೆ ಬೇರೆ ದ್ವಾರಗಳು. ಅವುಗಳನ್ನು ಹೇಳುತ್ತೇನೆ, ಕೇಳು.
ಹಂತ ನಿಃಶ್ರೇಯಸಂ ಜಂತೋರಹಂ ವಕ್ಷ್ಯಾಮ್ಯನುತ್ತಮಮ್ ॥3॥
ಸಂತೋಷ, ಮನುಷ್ಯರಿಗೆ ಶ್ರೇಯಸ್ಕರವಾದ ಧರ್ಮವನ್ನು ನಾನು ಹೇಳುವೆನು.
ಅಹಿಂಸಾಪಾಶ್ರಯಂ ಧರ್ಮಂ ಯಃ ಸಾಧಯತಿ ವೈ ನರಃ|
ತ್ರೀನ್ ದೋಷಾನ್ ಸರ್ವಭೂತೇಷು ನಿಧಾಯ ಪುರುಷಃ ಸದಾ |
ಕಾಮಕ್ರೋಧೌ ಚ ಸಂಯಮ್ಯ ತತಃ ಸಿದ್ಧಿಮುಪಾಶ್ನುತೇ ॥4॥
ಅಹಿಂಸೆಯನ್ನು ಆಶ್ರಯಿಸಿದ ಧರ್ಮವನ್ನು ಯಾವ ಮನುಷ್ಯನು ಸಾಧಿಸುತ್ತಾನೆಯೋ, ಸರ್ವಭೂತಗಳ ವಿಷಯದಲ್ಲಿ ಮೂರು ದೋಷಗಳನ್ನು - ಹಿಂಸೆ, ಅಪರಾಧ ಮತ್ತು ನಿಂದೆಗಳನ್ನು, ದೂರದಲ್ಲಿಟ್ಟು ಕಾಮಕ್ರೋಧಗಳನ್ನು ಜಯಿಸುವವನು ಸಿದ್ಧನೆನಿಸುತ್ತಾನೆ.
ಅಹಿಂಸಕಾನಿ ಭೂತಾನಿ ದಂಡೇನ ವಿನಿಹಂತಿ ಯಃ |
ಆತ್ಮನಃ ಸುಖಮನ್ವಿಚ್ಛನ್ ನ ಸ ಪ್ರೇತ್ಯ ಸುಖೀ ಭವೇತ್ ॥5॥
ತನ್ನ ಸುಖವನ್ನು ಬಯಸಿ ಹಿಂಸೆಯನ್ನು ಮಾಡದಿದ್ದ ಪ್ರಾಣಿಗಳನ್ನು ಯಾವನು ದಂಡದಿಂದ ಹೊಡೆಯುತ್ತಾನೆಯೋ ಅವನು ಮೃತನಾದ ಮೇಲೆ ಸುಖವನ್ನು ಹೊಂದುವುದಿಲ್ಲ.
ಆತ್ಮೋಪಮಶ್ಚ ಭೂತೇಷು ಯೋ ವೈ ಭವತಿ ಪೂರುಷಃ |
ನ್ಯಸ್ತದಂಡೋ ಜಿತಕ್ರೋಧಃ ಸ ಪ್ರೇತ್ಯ ಸುಖಮೇಧತೇ ॥6॥
ಯಾವನು ದಂಡವನ್ನು ತ್ಯಜಿಸಿ, ಕ್ರೋಧವನ್ನು ಜಯಿಸಿ, ತನ್ನಂತೆಯೇ ಎಲ್ಲ ಪ್ರಾಣಿಗಳ ಜೊತೆಯಲ್ಲಿಯೂ ವರ್ತಿಸುತ್ತಾನೆಯೋ ಅವನು ಮರಣವನ್ನು ಹೊಂದಿ ಸುಖವನ್ನು ಪಡೆಯುತ್ತಾನೆ.
ಸರ್ವಭೂತಾತ್ಮಭೂತಸ್ಯ ಸರ್ವಭೂತಾನಿ ಪಶ್ಯತಃ |
ದೇವಾಪಿ ಮಾರ್ಗೇ ಮುಹ್ಯಂತಿ ಅಪದಸ್ಯ ಪದೈಷಿಣಃ ॥7॥

ಸರ್ವಭೂತಗಳು ಸರ್ವಭೂತಗಳ ಅಂತರ್ಯಾಮಿಯಾದ ಪರಮಾತ್ಮನಿಗೆ ಸೇರಿದವುಗಳು ಎಂದು ತಿಳಿಯುವವನು ನಡೆಯುವ ಮಾರ್ಗದಲ್ಲಿ ದಾರಿಯನ್ನು ಕಾಣದೆ ದೇವತೆಗಳೂ ಮೋಹಕ್ಕೆ ಒಳಗಾಗುತ್ತಾರೆ.
ನ ತತ್ಪರಸ್ಯ ಸಂದದ್ಯಾತ್ ಪ್ರತಿಕೂಲಂ ಯದಾತ್ಮನಃ |
ಏಷ ಸಂಕ್ಷೇಪತೋ ಧರ್ಮಃ ಕಾಮಾದನ್ಯಃ ಪ್ರವರ್ತತೇ ॥8॥
ತನಗೆ ಯಾವುದು ಅಪ್ರಿಯವೋ ಅದನ್ನು ಇನ್ನೊಬ್ಬರಿಗೆ ಮಾಡಬಾರದು. ಇದು ಧರ್ಮದ ಸಂಕ್ಷೇಪ. ಉಳಿದೆಲ್ಲವೂ ಕಾಮದಿಂದ ಪ್ರವೃತ್ತವಾಗುತ್ತವೆ.
ಪ್ರತ್ಯಾಖ್ಯಾನೇ ಚ ದಾನೇ ಚ ಸುಖದುಃಖೇ ಪ್ರಿಯಾಪ್ರಿಯೇ |
ಆತ್ಮೌಪಮ್ಯೇನ ಪುರುಷಃ ಸಮಾಧಿಮಧಿಗಚ್ಛತಿ ॥9॥
ನಿರಾಕರಣೆ, ದಾನ, ಸುಖ-ದುಃಖಗಳು, ಪ್ರಿಯಾಪ್ರಿಯಗಳು ಇವುಗಳ ವಿಷಯದಲ್ಲಿ ಯಾವನು ಇನ್ನೊಬ್ಬನನ್ನು ತನ್ನಂತೆ ನೋಡುತ್ತಾನೆಯೋ ಅವನು ಸಮಾಧಿಯನ್ನು ಪಡೆಯುತ್ತಾನೆ.
ಯಥಾ ಪರಃ ಪ್ರಕ್ರಮತೇಽಪರೇಷು
ತಥಾಽಪರಃ ಪ್ರಕ್ರಮತೇ ಪರಸ್ಮಿನ್ |
ಏಷೈವ ತೇಽಸ್ತೂಪಮಾ ಜೀವಲೋಕೇ
ಯಥಾ ಧರ್ಮೋ ನಿಪುಣೇನೋಪದಿಷ್ಟಃ ॥10॥
ಹೇಗೆ ಒಬ್ಬನು ಇನ್ನೊಬ್ಬರ ವಿಷಯದಲ್ಲಿ ನಡೆದುಕೊಳ್ಳುತ್ತಾನೆಯೋ ಆ ಇನ್ನೊಬ್ಬನೂ ಸಹ ತನ್ನ ವಿಷಯದಲ್ಲಿ ಹಾಗೆಯೇ ನಡೆದುಕೊಳ್ಳುತ್ತಾನೆ. ಇದೇ ಜೀವಲೋಕದಲ್ಲಿ ನಡೆಯುವ ರೀತಿ. ಆದ್ದರಿಂದ ವಿವೇಕಿಗಳಾದವರು ಉಪದೇಶ ಮಾಡಿದುದೇ ಧರ್ಮವಾಗುತ್ತದೆಯೇ ಹೊರತು ತನ್ನ ಮನಸ್ಸಿಗೆ ಬಂದಂತೆ ನಡೆದುಕೊಳ್ಳುವುದು ಧರ್ಮವಲ್ಲ (ಲಕ್ಷ್ಯಾಲಂಕಾರ).
ವೈಶಂಪಾಯನಃ
ಇತ್ಯುಕತ್ವ ತಂ ಸುರಗುರುರ್ಧರ್ಮರಾಜಂ ಯುಧಿಷ್ಠಿರಮ್ |
ದಿವಮಾಚಕ್ರಮೇ ಧೀಮಾನ್ ಸರ್ವೇಷಾಮೇವ ಪಶ್ಯತಾಮ್ ॥11॥
ವೈಶಂಪಾಯನ ದೇವಗುರುಗಳಾದ, ಮೇಧಾವಿಗಳಾದ ಬೃಹಸ್ಪತಿಗಳು ಧರ್ಮಪುತ್ರನಾದ ಯುಧಿಷ್ಠಿರನಿಗೆ ಹೀಗೆ ಹೇಳಿ ಎಲ್ಲರೂ ನೋಡುತ್ತಿರುವಂತೆಯೇ ಸ್ವರ್ಗಕ್ಕೆ ಹೊರಟು ಹೋದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
॥ ಇತಿ ಯುಧಿಷ್ಠಿರ-ಬೃಹಸ್ಪತಿಸಂವಾದಃ ಸಮಾಪ್ತಃ ॥
* * * * *
ನೂರ ಅರವತ್ತೈದನೆಯ ಅಧ್ಯಾಯ
ಅಹಿಂಸಾ ಪ್ರಕಾರಗಳು
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ಶರತಲ್ಪೇ ಪಿತಾಮಹಮ್ |
ಪುನರೇವ ಮಹಾತೇಜಾಃ ಪಪ್ರಚ್ಛ ವದತಾಂವರಮ್ ॥1॥
ವೈಶಂಪಾಯನ ಅನಂತರ ಮಹಾತೇಜಸ್ವಿಯಾದ ಯುಧಿಷ್ಠಿರ ರಾಜನು ಶರತಲ್ಪದಲ್ಲಿ ಮಲಗಿದ, ಮಾತನಾಡುವವರಲ್ಲಿ ಶ್ರೇಷ್ಠರಾದ ಪಿತಾಮಹರನ್ನು ಕುರಿತು ಪುನಃ ಪ್ರಶ್ನೆಯನ್ನು ಮಾಡಿದನು.
ಋಷಯೋ ಬ್ರಾಹ್ಮಣಾ ದೇವಾಃ ಪ್ರಶಂಸಂತಿ ಮಹಾಮತೇ |
ಅಹಿಂಸಾಲಕ್ಷಣಂ ಧರ್ಮಂ ವೇದಪ್ರಾಮಾಣ್ಯಲಕ್ಷಣಾತ್ ॥2॥
ಎಲೈ ಮಹಾಮತಿಯೇ, ವೇದಪ್ರಾಮಾಣ್ಯವನ್ನು ಆಧರಿಸಿ ಋಷಿಗಳು, ಬ್ರಾಹ್ಮಣರು ಮತ್ತು ದೇವತೆಗಳು ಅಹಿಂಸಾರೂಪವಾದ ಧರ್ಮವನ್ನು ಪ್ರಶಂಸೆ ಮಾಡುತ್ತಾರೆ.
ಕರ್ಮಣಾ ಮನುಜಃ ಕುರ್ವನ್ ಹಿಂಸಾಂ ಪಾರ್ಥಿವಸತ್ತಮ |
ವಾಚಾ ಚ ಮನಸಾ ಚೈವ ಕಥಂ ದುಃಖಾತ್ ಪ್ರಮುಚ್ಯತೇ ॥3॥
ಎಲೈ ಪಾರ್ಥಿವಶ್ರೇಷ್ಠನೇ, ಕರ್ಮದಿಂದ, ಮಾತಿನಿಂದ, ಮನಸ್ಸಿನಿಂದ ಹಿಂಸೆಯನ್ನು ಮಾಡುವ ಮನುಷ್ಯನು ಹೇಗೆ ದುಃಖದಿಂದ ಪಾರಾಗುತ್ತಾನೆ?
ಭೀಷ್ಮಃ
ಚತುರ್ವಿಧೇಯಂ ನಿರ್ದಿಷ್ಟಾ ಅಹಿಂಸಾ ಬ್ರಹ್ಮವಾದಿಭಿಃ |
ಏಷೈಕತೋಽಪಿ ವಿಭ್ರಷ್ಟಾ ನ ಭವತ್ಯರಿಸೂದನ ॥4॥
ಭೀಷ್ಮ ಈ ಅಹಿಂಸೆಯು ಮನಸ್ಸಿನಿಂದ ಅಹಿಂಸೆ, ಮಾತಿನಿಂದ ಅಹಿಂಸೆ, ದೇಹದಿಂದ ಅಹಿಂಸೆ ಮತ್ತು ಕರ್ಮದಿಂದ ಅಹಿಂಸೆ ಎಂದು ನಾಲ್ಕು ವಿಧವಾದುದೆಂದು ಬ್ರಹ್ಮವಾದಿಗಳು ಹೇಳುತ್ತಾರೆ. ಎಲೈ ಶತ್ರುಸೂದನನೇ, ಅದರಲ್ಲಿ ಒಂದು ವಿಧವಾದುದು ನ್ಯೂನವಾದರೂ ಅಹಿಂಸೆಯು ಪೂರ್ಣವಾಗುವುದಿಲ್ಲ.
ಯಥಾ ಸರ್ವಶ್ಚತುಷ್ಪಾದಸ್ತ್ರಿಭಿಃ ಪಾದೈರ್ನ ತಿಷ್ಠತಿ |

ತಥೈವೇಯಂ ಮಹೀಪಾಲ ಪ್ರೋಚ್ಯತೇ ಕಾರಣೈಸ್ತ್ರಿಭಿಃ ||5||
ಎಲೈ ಮಹೀಪಾಲನೇ, ಹೇಗೆ ನಾಲ್ಕು ಪಾದಗಳುಳ್ಳ ಪ್ರಾಣಿಯು ಮೂರು ಪಾದಗಳಲ್ಲಿ ನಿಲ್ಲಲಾರದೋ ಹಾಗೆ ನಾಲ್ಕು ಅಂಗಗಳನ್ನು ಹೊಂದಿರುವ ಅಹಿಂಸೆಯು ಮೂರೇ ಅಂಗಗಳಿಂದ ಪೂರ್ಣವಾಗಿ ನಿಲ್ಲಲಾರದು.
ಯಥಾ ನಾಗಪದೇऽನ್ಯಾನಿ ಪದಾನಿ ಪದಗಾಮಿನಾಮ್ |
ಸರ್ವಾಣ್ಯೇವಾಪಿಧೀಯಂತೇ ಪದಜಾತಾನಿ ಕೌಂಜರೇ |
ಏವಂ ಲೋಕೇಷ್ವಹಿಂಸಾ ತು ನಿರ್ದಿಷ್ಟಾ ಧರ್ಮತಃ ಪರಾ ||6||
ಹೇಗೆ ಆನೆಯ ಹೆಜ್ಜೆಯಲ್ಲಿ ನಡೆಯುವ ಉಳಿದ ಎಲ್ಲ ಪ್ರಾಣಿಗಳ ಹೆಜ್ಜೆಗಳು ಮುಳುಗಿಹೋಗುತ್ತವೆಯೋ ಅದರಂತೆ ಅಹಿಂಸಾ ರೂಪವಾದ ಧರ್ಮದಲ್ಲಿ ಉಳಿದ ಎಲ್ಲ ಧರ್ಮಗಳೂ ಅಡಗಿ ಹೋಗುತ್ತವೆ.
ಕರ್ಮಣಾ ಲಿಪ್ಯತೇ ಜಂತುರ್ವಾಚಾ ಚ ಮನಸೈವ ಚ ||7||
ಪೂರ್ವಂ ತು ಮನಸಾ ತ್ಯಕ್ತ್ವಾ ತಥಾ ವಾಚಾऽಥ ಕರ್ಮಣಾ |
ತ್ರಿಕಾರಣಂ ತು ನಿರ್ದಿಷ್ಟಂ ಶ್ರೂಯತೇ ಬ್ರಹ್ಮವಾದಿಭಿಃ ||8||
ಮನುಷ್ಯನು ಕರ್ಮದಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ಲೇಪವನ್ನು ಹೊಂದುತ್ತಾನೆ. ಆದ್ದರಿಂದ ಮೊದಲು ಮನಸ್ಸಿನಿಂದ, ಅನಂತರ ಮಾತಿನಿಂದ, ಅನಂತರ ಕರ್ಮದಿಂದ ಅಹಿಂಸೆಯನ್ನು ಜಯಿಸಬೇಕೆಂದು ಬ್ರಹ್ಮವಾದಿಗಳು ಹಿಂಸೆಗೆ ಈ ಮೂರು ಕಾರಣಗಳೆಂದು ಹೇಳಿರುವುದು ಕೇಳಿ ಬರುತ್ತದೆ.
ಮನೋವಾಚಿ ತಥಾಸ್ವಾದೇ ದೋಷಾ ಹ್ಯೇಷು ಪ್ರತಿಷ್ಠಿತಾಃ |
ನ ಭಕ್ಷಯಂತ್ಯತೋ ಮಾಂಸಂ ತಪೋಯುಕ್ತಾ ಮನೀಷಿಣಃ ||9||
ಮನಸ್ಸಿನಲ್ಲಿ, ಮಾತಿನಲ್ಲಿ ಹಾಗೆಯೇ ಆಸ್ವಾದದಲ್ಲಿ (ಆಹಾರದಲ್ಲಿ) ದೋಷಗಳು ಪ್ರತಿಷ್ಠಿತವಾಗಿವೆ. ಆದ್ದರಿಂದ ತಪೋಯುಕ್ತರಾದ ಜ್ಞಾನಿಗಳು ಮಾಂಸವನ್ನು ಭಕ್ಷಿಸುವುದಿಲ್ಲ.
ದೋಷಾಂಸ್ತು ಭಕ್ಷಣೇ ರಾಜನ್ ಮಾಂಸಸ್ಯೇಹ ನಿಬೋಧ ಮೇ |
ಪುತ್ರಮಾಂಸೋಪಮಂ ಜಾನನ್ ಖಾದತೇ ಯೋ ವಿಚೇತನಃ ||10||
ಎಲೈ ರಾಜನೇ, ಮಾಂಸಭಕ್ಷಣದಲ್ಲಿರುವ ದೋಷಗಳನ್ನು ನನ್ನಿಂದ ಕೇಳು. ಯಾವನು ಪ್ರಾಣಿಗಳ ಮಾಂಸವು ತನ್ನ ಪುತ್ರನ ಮಾಂಸಕ್ಕೆ ಸಮಾನವೆಂದು ತಿಳಿದೂ ಮೋಹಪರವಶನಾಗಿ ಮಾಂಸವನ್ನು ತಿನ್ನುತ್ತಾನೆಯೋ ಅವನನ್ನು ಪುರುಷಾಧಮನೆಂದು ಕರೆಯುತ್ತಾರೆ.
ಮಾತಾಪಿತೃಸಮಾಯೋಗೇ ಪುತ್ರತ್ವಂ ಜಾಯತೇ ಯಥಾ |
ರಸಶ್ಚ ಪ್ರತಿಜಿಹ್ವಾಯಾಂ ಪ್ರಜ್ಞಾನಂ ಜಾಯತೇ ತಥಾ |
ತಥಾ ಶಾಸ್ತ್ರೇಷು ನಿಯತಂ ರಾಗೋ ಹ್ಯಾಸ್ವಾದಿತಾದ್ ಭವೇತ್ ||11||
ಮಾತಾ-ಪಿತೃಗಳ ಸಂಯೋಗದಿಂದ ಪುತ್ರನು ಜನಿಸುತ್ತಾನೆ. ರಸಕ್ಕೂ ಮತ್ತು ಜಿಹ್ವೆಗೂ ಸಂಯೋಗ ಉಂಟಾಗುವುದರಿಂದ ಹಾಗೆಯೇ ರಸಜ್ಞಾನವು ಉಂಟಾಗುತ್ತದೆ. ಹಾಗೆಯೇ ಆಸ್ವಾದನೆ ಮಾಡಿದ ಶಾಸ್ತ್ರಗಳಲ್ಲಿ ನಿಯತವಾಗಿ ರಾಗವುಂಟಾಗುತ್ತದೆ (ಲಕ್ಷ್ಮಾಲಂಕಾರ).
ಸಂಸ್ಕೃತಾಸಂಸ್ಕೃತಾ ಪಕ್ವಾ ಲವಣಾಲವಣಾಸ್ತಥಾ |
ಪ್ರಜ್ಞಾಯಂತೇ ಯಥಾ ಭಾವಾಸ್ತಥಾ ಚಿತ್ತಂ ನಿರುಧ್ಯತೇ ||12||
ಅಸಂಸ್ಕೃತವಾದ, ಅಪಕ್ವವಾದ, ಲವಣರಹಿತವಾದ ಆಹಾರದಲ್ಲಿ ಅಸಾರತ್ವ ಬುದ್ಧಿಯಿಂದ ಹೇಗೆ ಮನೋನಿರೋಧವು ಮಾಡಲ್ಪಡುತ್ತದೆಯೋ ಅದರಂತೆ ಸಂಸ್ಕೃತವಾದ, ಪಕ್ವವಾದ, ಲವಣ ಸಹಿತವಾದ ಮಾಂಸದಲ್ಲಿಯೂ ದೋಷವನ್ನು ನೋಡಿ ಮನೋನಿರೋಧವನ್ನು ಮಾಡಬೇಕು (ಲಕ್ಷ್ಮಾಲಂಕಾರ).
ಭೇರೀಶಂಖಮೃದಂಗಾದ್ಯಾಂಸ್ತಂತ್ರೀಶಬ್ದಾಂಶ್ಚ ಪುಷ್ಕಳಾನ್ |
ನಿಷೇವಿಷ್ಯಂತಿ ವೈ ಮಂದಾ ಮಾಂಸಭಕ್ಷಾ ಕಥಂ ನರಾಃ ||13||
ಯಾವ ಮಂದರಾದ ಮನುಷ್ಯರು ಮಾಂಸಭಕ್ಷಣದಲ್ಲಿಯೇ ನಿರತರಾಗಿರುತ್ತಾರೆಯೋ ಅವರು ಪುಷ್ಕಳವಾದ ಭೇರೀ, ಶಂಖ, ಮೃದಂಗ ಶಬ್ದಗಳನ್ನೂ, ತಂತ್ರೀವಾದ್ಯ ಶಬ್ದಗಳನ್ನೂ ಹೇಗೆ ಆಸ್ವಾದಿಸುತ್ತಾರೆ?
ಅಚಿಂತಿತಮನುದ್ದಿಷ್ಟಮಸಂಕಲ್ಪಿತಮೇವ ಚ |
ರಸಂ ಗೃದ್ಧ್ಯಾಭಿಭೂತಾ ವೈ ಪ್ರಶಂಸಂತಿ ಫಲಾರ್ಥಿನಃ |
ಪ್ರಶಂಸಾಮೇವ ಮಾಂಸಸ್ಯ ದೋಷಕರ್ಮಫಲಾನ್ವಿತಾಃ ||14||
ಆಸೆಯಿಂದ ಕೂಡಿದ ಫಲಾರ್ಥಿಗಳಾದವರು ಚಿಂತಿಸದಿದ್ದ, ಉದ್ದೇಶಿಸದಿದ್ದ, ಅಸಂಕಲ್ಪಿತವಾದ ರಸಗಳನ್ನು ಪ್ರಶಂಸಿಸುತ್ತಾರೆ. ದೋಷಕರ್ಮ ಫಲಾನ್ವಿತರಾದವರು ಮಾಂಸದ ಪ್ರಶಂಸೆಯನ್ನೇ ಮಾಡುತ್ತಾರೆ (ಲಕ್ಷ್ಮಾಲಂಕಾರ).
ಜೀವಿತಂ ಹಿ ಪರಿತ್ಯಕ್ತ್ವಾ ಬಹವಃ ಸಾಧವೋ ಜನಾಃ |
ಸ್ವಮಾಂಸೈಃ ಪರಮಾಂಸಾನಿ ಪರಿಪಾಲ್ಯ ದಿವಂ ಗತಾಃ ||15||
ಅನೇಕ ಸಾಧುಜನರು ತಮ್ಮ ಜೀವನವನ್ನು ತ್ಯಾಗ ಮಾಡಿ ತಮ್ಮ ಮಾಂಸಗಳಿಂದ ಇನ್ನೊಬ್ಬರ ಮಾಂಸವನ್ನು ರಕ್ಷಿಸಿ ಸ್ವರ್ಗಕ್ಕೆ ಹೋಗಿದ್ದಾರೆ.
ಏವಮೇಷಾ ಮಹಾರಾಜ ಚತುರ್ಭಿಃ ಕಾರಣೈರ್ವೃತಾ |
ಅಹಿಂಸಾ ತವ ನಿರ್ದಿಷ್ಟಾ ಸರ್ವಧರ್ಮಾರ್ಥಸಂಹಿತಾ ||16||
ಎಲೈ ಮಹಾರಾಜನೇ, ಹೀಗೆ ಈ ಅಹಿಂಸೆಯು ನಾಲ್ಕು ಕಾರಣಗಳಿಂದ ಕೂಡಿದೆ. ಅಹಿಂಸೆಯೇ ಸರ್ವಧರ್ಮಾರ್ಥಗಳ ಸಂಹಿತೆ ಎಂದು ಹೇಳಲ್ಪಡುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್

ಅನುಶಾಸನಪರ್ವಣಿ ದಾನಧರ್ಮೇ ಅಹಿಂಸಾಪ್ರಕಾರೋನಾಮ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತಾರನೆಯ ಅಧ್ಯಾಯ
ಅಹಿಂಸಾದಿಗಳಿಗೆ ಶ್ರೇಯಸ್ತ್ವವನ್ನು ನಿರೂಪಿಸಿದುದು.
ಯುಧಿಷ್ಠಿರಃ
ಅಹಿಂಸಾ ಪರಮೋ ಧರ್ಮ ಇತ್ಯುಕ್ತಂ ಬಹುಶಸ್ತ್ವಯಾ |
ಶ್ರಾದ್ಧೇಷು ಚ ಭವಾನಾಹ ಪಿತೄನಾಮಿಷಕಾಂಕ್ಷಿಣಃ ॥1॥
ಯುಧಿಷ್ಠಿರ ಅಹಿಂಸೆಯು ಶ್ರೇಷ್ಠವಾದ ಧರ್ಮವೆಂದು ಅನೇಕ ಬಾರಿ ಹೇಳಿದ್ದೀಯೆ ಮತ್ತು ಶ್ರಾದ್ಧದಲ್ಲಿ ಪಿತೃಗಳು ಮಾಂಸವನ್ನು ಆಕಾಂಕ್ಷಿಸುತ್ತಾರೆ ಎಂದೂ ಹೇಳಿದ್ದೀಯೆ.
ಮಾಂಸೈರ್ಬಹುವಿಧೈಃ ಪ್ರೋಕ್ತಸ್ತ್ವಯಾ ಶ್ರಾದ್ಧವಿಧಿಃ ಪುರಾ |
ಅಹತ್ವಾ ಚ ಕುತೋ ಮಾಂಸಮ್ ಏತದ್ವಿ ವಿಧಿರುಚ್ಯತೇ ॥2॥
ಅನೇಕ ವಿಧವಾದ ಮಾಂಸಗಳಿಂದ ನೀವು ಹಿಂದೆ ಶ್ರಾದ್ಧವಿಧಿಯನ್ನು ಹೇಳಿದ್ದೀರಿ. ಪ್ರಾಣಿವಧೆಯನ್ನು ಮಾಡದೆ ಮಾಂಸವು ಎಲ್ಲಿಂದ ಬರಬೇಕು? ಮಾಂಸವು ಶ್ರಾದ್ಧದಲ್ಲಿ ವಿಹಿತವಷ್ಟೆ?
ಜಾತೋ ನಃ ಸಂಶಯೋ ಧರ್ಮೇ ಮಾಂಸಸ್ಯ ಪರಿವರ್ಜನೇ |
ದೋಷೋ ಭಕ್ಷಯತಃ ಕಃ ಸ್ಯಾತ್ ಕಶ್ಚಾಭಕ್ಷಯತೋ ಗುಣಃ ॥3॥
ಮಾಂಸಭಕ್ಷಣೆ ಮಾಡಿದವನಿಗೆ ಏನು ದೋಷ? ಭಕ್ಷಣೆ ಮಾಡದಿದ್ದವನಿಗೆ ಏನು ಗುಣ? ಮಾಂಸವನ್ನು ತ್ಯಜಿಸುವುದು ಧರ್ಮವೆಂಬ ವಿಷಯದಲ್ಲಿ ನಮಗೆ ಬಹಳ ಸಂಶಯವುಂಟಾಗಿದೆ.
ಹತ್ವಾ ಭಕ್ಷಯತೋ ವಾಪಿ ಪರೇಣೋಪಹೃತಸ್ಯ ವಾ |
ಹನ್ಯಾದ್ ವಾ ಯಃ ಪರಸ್ಯಾರ್ಥೇ ಕ್ರೀತ್ವಾ ವಾ ಭಕ್ಷಯೇನ್ನರಃ ॥4॥
ತಾನೇ ಕೊಂದು ಭಕ್ಷಿಸುವವನಿಗೆ ಏನು ದೋಷ? ಇನ್ನೊಬ್ಬನಿಂದ ಕೊಲ್ಲಲ್ಪಟ್ಟ ಪ್ರಾಣಿಯ ಮಾಂಸವನ್ನು ಭಕ್ಷಿಸುವವನಿಗೆ ಏನು ದೋಷ? ಇನ್ನೊಬ್ಬನ ಸಲುವಾಗಿ ಕೊಲ್ಲುವವನಿಗೆ ಏನು ದೋಷ? ಕ್ರಯಕ್ಕೆ ಕೊಂಡು ಭಕ್ಷಿಸುವವನಿಗೆ ಏನು ದೋಷ?
ಏತದಿಚ್ಛಾಮಿ ತತ್ತ್ವೇನ ಕಥ್ಯಮಾನಂ ತ್ವಯಾಽನಘ |
ನಿಶ್ಚಯೇನ ಚಿಕೀರ್ಷಾಮಿ ಧರ್ಮಮೇತಂ ಸನಾತನಮ್ ॥5॥
ಎಲ್ಲೈ ಅನಘನೇ, ಇದನ್ನು ನೀನು ಹೇಳಬೇಕು. ಈ ಸನಾತನ ಧರ್ಮವನ್ನು ನಾನು ಖಂಡಿತವಾಗಿಯೂ ಮಾಡಲು ಬಯಸುತ್ತೇನೆ.
ಕಥಮಾಯುರವಾಪ್ನೋತಿ ಕಥಂ ಭವತಿ ಸತ್ತ್ವವಾನ್ |
ಕಥಮವ್ಯಂಗತಾಮೇತಿ ಲಕ್ಷಣ್ಯೋ ಜಾಯತೇ ಕಥಮ್ ॥6॥
ಹೇಗೆ ಆಯುಸ್ಸಿನ ವೃದ್ಧಿಯನ್ನು ಪಡೆಯುತ್ತಾನೆ? ಹೇಗೆ ಬಲಶಾಲಿಯಾಗುತ್ತಾನೆ? ಹೇಗೆ ವ್ಯಂಗತೆಯನ್ನು ಕಳೆದುಕೊಳ್ಳುತ್ತಾನೆ? ಹೇಗೆ ಲಕ್ಷಣವಂತನಾಗುತ್ತಾನೆ?
ಭೀಷ್ಮಃ
ಮಾಂಸಸ್ಯ ಭಕ್ಷಣೇ ರಾಜನ್ ಯೋಽಧರ್ಮಃ ಕುರುಪುಂಗವ |
ತಂ ಮೇ ಶೃಣು ಯಥಾತತ್ತ್ವಂ ಯಶ್ಚಾಸ್ಯ ವಿಧಿರುತ್ತಮಃ ॥7॥
ಭೀಷ್ಮ ಎಲ್ಲೈ ರಾಜನೇ, ಕುರುಶ್ರೇಷ್ಠನೇ, ಮಾಂಸಭಕ್ಷಣೆಯಲ್ಲಿ ಯಾವ ಅಧರ್ಮವಿದೆ ಎಂದೂ ಮಾಂಸದ ಶ್ರೇಷ್ಠವಾದ ವಿಧಿಯು ಯಾವ ರೀತಿಯಿದೆ ಎಂದೂ ಸರಿಯಾಗಿ ಕೇಳುವವನಾಗು.
ರೂಪಮವ್ಯಂಗತಾಮಾಯುರ್ಬುದ್ಧಿಂ ಸತ್ತ್ವಂ ಬಲಂ ಸ್ಮೃತಿಮ್ |
ಪ್ರಾಪ್ತುಕಾಮೈರ್ನರೈರ್ಹಿಂಸಾ ವರ್ಜಿತಾ ವೈ ಮಹಾತ್ಮಭಿಃ ॥8॥
ರೂಪವನ್ನೂ, ಸಕಲಾಂಗಗಳನ್ನೂ, ಆಯುರ್ವೃದ್ಧಿಯನ್ನೂ, ಧೈರ್ಯ-ಬಲ- ಸ್ಮೃತಿಗಳನ್ನೂ ಹಿಂಸೆಯನ್ನು ಪಡೆಯಲು ಬಯಸಿದ ಮಹಾತ್ಮರು ವರ್ಜಿಸಿದರಷ್ಟೆ!
ಋಷೀಣಾಮತ್ರ ಸಂವಾದೋ ಬಹುಶಃ ಕುರುಪುಂಗವ |
ಬಭೂವ ತೇಷಾಂ ತು ಮತಂ ಯತ್ತಚ್ಛೃಣು ಯುಧಿಷ್ಠಿರ ॥9॥
ಎಲ್ಲೈ ಕುರುಪುಂಗವನೇ, ಈ ವಿಷಯದಲ್ಲಿ ಅನೇಕ ಬಾರಿ ಋಷಿಗಳ ಸಂವಾದವು ನಡೆದಿದೆ. ಎಲ್ಲೈ ಯುಧಿಷ್ಠಿರನೇ, ಅವರ ಅಭಿಪ್ರಾಯವೇನೆಂದು ಕೇಳು.
ಯೋ ಯಜೇತಾಶ್ವಮೇಧೇನ ಮಾಸಿ ಮಾಸಿ ಯತವ್ರತಃ |
ವರ್ಜಯೇನ್ಮಧು ಮಾಂಸಂ ಚ ಸಮಮೇತದ್ ಯುಧಿಷ್ಠಿರ ॥10॥
ಎಲ್ಲೈ ಯುಧಿಷ್ಠಿರನೇ, ಯಾವನು ದೃಢವ್ರತನಾಗಿ ಪ್ರತಿ ತಿಂಗಳೂ ಅಶ್ವಮೇಧ ಯಾಗವನ್ನು ಮಾಡುವನೋ ಮತ್ತು ಯಾವನು ಮದ್ಯ-ಮಾಂಸವನ್ನು ವರ್ಜಿಸುವನೋ ಅವರಿಬ್ಬರೂ ಸಮರಾದವರು.
ಸಪ್ತರ್ಷಯೋ ವಾಲಖಿಲ್ಯಾಸ್ತಥೈವ ಚ ಮರೀಚಿಪಾಃ |
ಮಾಂಸಸ್ಯಾಭಕ್ಷಣಂ ರಾಜನ್ ಪ್ರಶಂಸಂತಿ ಮನೀಷಿಣಃ ॥11॥
ಎಲ್ಲೈ ರಾಜನೇ, ಮೇಧಾವಿಗಳಾದ ಸಪ್ತರ್ಷಿಗಳು, ವಾಲಖಿಲ್ಯರು ಮತ್ತು ಮರೀಚಿಪರು ಮಾಂಸವನ್ನು ಭಕ್ಷಿಸದಿರುವುದನ್ನು ಪ್ರಶಂಸೆ

ಮಾಡುತ್ತಾರೆ.
ನ ಭಕ್ಷಯತಿ ಯೋ ಮಾಂಸಂ ನ ಹನ್ಯಾನ್ನ ಚ ಘಾತಯೇತ್ |
ತಂ ಮಿತ್ರಂ ಸರ್ವಭೂತಾನಾಂ ಮನುಃ ಸ್ವಾಯಂಭುವೋಽಬ್ರವೀತ್ ||
ಯಾವನು ಮಾಂಸಭಕ್ಷಣೆಯನ್ನು ಮಾಡುವುದಿಲ್ಲವೋ, ಪ್ರಾಣಿಗಳನ್ನು ಕೊಲ್ಲುವುದಿಲ್ಲವೋ ಅಥವಾ ಕೊಲ್ಲಿಸುವುದಿಲ್ಲವೋ ಅವನು ಸರ್ವಪ್ರಾಣಿಗಳಿಗೂ ಮಿತ್ರನಾದವನು ಎಂದು ಸ್ವಾಯಂಭುವ ಮನುವು ಹೇಳಿದ್ದಾನೆ.
ಅಧೃಷ್ಯಃ ಸರ್ವಭೂತಾನಾಂ ವಿಶ್ವಾಸ್ಯಃ ಸರ್ವಜಂತುಷು |
ಸಾಧೂನಾಂ ಸಮ್ಮತೋ ನಿತ್ಯಂ ಭವೇನ್ಮಾಂಸಸ್ಯ ವರ್ಜನಾತ್ ||13||
ಮಾಂಸವನ್ನು ಪರಿತ್ಯಾಗ ಮಾಡುವುದರಿಂದ ಯಾವ ಪ್ರಾಣಿಯಿಂದಲೂ ಪರಾಭವವನ್ನು ಹೊಂದದೆ, ಎಲ್ಲ ಪ್ರಾಣಿಗಳ ವಿಶ್ವಾಸಕ್ಕೆ ಪಾತ್ರನಾಗಿ ಸಜ್ಜನರಿಗೆ ಯಾವಾಗಲೂ ಸಮ್ಮತನಾಗುತ್ತಾನೆ.
ಸ್ವಮಾಂಸಂ ಪರಮಾಂಸೇನ ಯೋ ವರ್ಧಯಿತುಮಿಚ್ಛತಿ |
ನಾರದಃ ಪ್ರಾಹ ಧರ್ಮಾತ್ಮಾ ನಿಯತಂ ಸೋಽವಸೀದತಿ ||14||
ತನ್ನ ಮಾಂಸವನ್ನು ಇನ್ನೊಂದು ಪ್ರಾಣಿಯ ಮಾಂಸದಿಂದ ಯಾವನು ಅಭಿವೃದ್ಧಿಯನ್ನು ಪಡಿಸಲು ಇಚ್ಛಿಸುತ್ತಾನೆಯೋ ಅವನು ಖಂಡಿತವಾಗಿ ಅವಸಾನವನ್ನು (ನಾಶ) ಹೊಂದುತ್ತಾನೆ ಎಂದು ಧರ್ಮಾತ್ಮರಾದ ನಾರದರು ಹೇಳಿದ್ದಾರೆ.
ದದಾತಿ ಯಜತೇ ಚಾಪಿ ತಪಸ್ವೀ ವಾ ಭವಿಷ್ಯತಿ |
ಮಧುಮಾಂಸನಿವೃತ್ತ್ಯೇತಿ ಪ್ರಾಹೈವಂ ಸ ಬೃಹಸ್ಪತಿಃ ||15||
ಮಧು-ಮಾಂಸವನ್ನು ವರ್ಜಿಸುವುದರಿಂದ ಮನುಷ್ಯನು ದಾನ ಮಾಡಿದವನೂ, ಯಾಗ ಮಾಡಿದವನೂ, ತಪಸ್ಸನ್ನು ಮಾಡಿದವನೂ ಆಗುತ್ತಾನೆ ಎಂದು ಬೃಹಸ್ಪತಿಗಳು ಹೇಳಿದ್ದಾರೆ.
ಮಾಸಿ ಮಾಸ್ಯಶ್ವಮೇಧೇನ ಯೋ ಯಜೇತ ಶತಂ ಸಮಾಃ |
ನ ಖಾದತಿ ಚ ಯೋ ಮಾಂಸಂ ಸಮಮೇತನ್ಮತಂ ಮಮ ||16||
ನೂರು ವರ್ಷಗಳ ಕಾಲ ಪ್ರತಿತಿಂಗಳೂ ಅಶ್ವಮೇಧ ಯಾಗವನ್ನು ಮಾಡಿದವನು ಮತ್ತು ಮಾಂಸಭಕ್ಷಣೆಯನ್ನು ಮಾಡದಿರುವವನು ಇಬ್ಬರೂ ಸಮಾನರೆಂದು ನನ್ನ ಅಭಿಪ್ರಾಯ.
ಸದಾ ಯಜತಿ ಸತ್ರೇಣ ಸದಾ ದಾನಂ ಪ್ರಯಚ್ಛತಿ |
ಸದಾ ತಪಸ್ವೀ ಭವತಿ ಸದಾ ಮಾಂಸವಿವರ್ಜನಾತ್ ||17||
ಯಾವಾಗಲೂ ಮಾಂಸವನ್ನು ವರ್ಜಿಸುವುದರಿಂದ ಸದಾ ಸತ್ರಯಾಗವನ್ನು ಮಾಡಿದವನೂ, ದಾನವನ್ನು ಮಾಡಿದವನೂ ಮತ್ತು ತಪಸ್ಸನ್ನು ಮಾಡಿದವನೂ ಆಗುತ್ತಾನೆ.
ಸರ್ವೇ ವೇದಾ ನ ತತ್ಕುರ್ಯುಃ ಸರ್ವಯಜ್ಞಾಶ್ಚ ಭಾರತ |
ಯೋ ಭಕ್ಷಯಿತ್ವಾ ಮಾಂಸಾನಿ ಪಶ್ಚಾದಪಿ ನಿವರ್ತತೇ ||18||
ಎಲೈ ಭಾರತನೇ, ಯಾವನು ಮೊದಲು ಮಾಂಸವನ್ನು ಭಕ್ಷಿಸಿ, ಅನಂತರ ಅದರಿಂದ ನಿವೃತ್ತನಾಗುತ್ತಾನೆಯೋ ಅದರಿಂದ ಅವನು ಗಳಿಸುವ ಪುಣ್ಯವನ್ನು ಎಲ್ಲ ವೇದಗಳೂ ಮತ್ತು ಎಲ್ಲ ಯಜ್ಞಗಳೂ ಗಳಿಸಿಕೊಡಲಾರವು.
ದುಷ್ಕರಂ ಹಿ ರಸಜ್ಞೇನ ಮಾಂಸಸ್ಯ ಪರಿವರ್ಜನಮ್ |
ಚರ್ತುಂ ವ್ರತಮಿದಂ ಶ್ರೇಷ್ಠಂ ಸರ್ವಪ್ರಾಣ್ಯಭಯಪ್ರದಮ್ ||19||
ಮಾಂಸದ ರುಚಿಯನ್ನು ತಿಳಿದವನಿಗೆ ಮಾಂಸವನ್ನು ಬಿಡುವುದು ಕಷ್ಟಸಾಧ್ಯವಾದುದು. ಆದ್ದರಿಂದ ಸರ್ವಪ್ರಾಣಿಗಳಿಗೆ ಅಭಯವನ್ನು ಕೊಡುವ ಈ ಶ್ರೇಷ್ಠವಾದ ವ್ರತವನ್ನು ಆಚರಿಸುವುದು ಶ್ರೇಷ್ಠವಾದುದು.
ಸರ್ವಭೂತೇಷು ಯೋ ವಿದ್ವಾನ್ ದದಾತ್ಯಭಯದಕ್ಷಿಣಾಮ್ |
ದಾತಾ ಭವತಿ ಲೋಕೇ ಸ ಪ್ರಾಣಾನಾಂ ನಾತ್ರ ಸಂಶಯಃ ||20||
ಜ್ಞಾನಿಯಾದ ಯಾವನು ಸರ್ವಭೂತಗಳಿಗೆ ಅಭಯದಕ್ಷಿಣೆಯನ್ನು ಕೊಡುತ್ತಾನೆಯೋ ಅವನು ಲೋಕದಲ್ಲಿ ಪ್ರಾಣದಾನವನ್ನೇ ಮಾಡುತ್ತಾನೆ ಎಂಬ ವಿಷಯದಲ್ಲಿ ಸಂಶಯವಿಲ್ಲ.
ಏವಂ ವೈ ಪರಮಂ ಧರ್ಮಂ ಪ್ರಶಂಸಂತಿ ಮನೀಷಿಣಃ |
ಪ್ರಾಣಾ ಯಥಾತ್ಮನೋಭೀಷ್ಟಾ ಭೂತಾನಾಮಪಿ ತೇ ತಥಾ ||21||
ವಿವೇಕಿಗಳಾದವರು ಹೀಗೆ ಈ ಶ್ರೇಷ್ಠವಾದ ಅಹಿಂಸಾಧರ್ಮವನ್ನು ಪ್ರಶಂಸೆ ಮಾಡುತ್ತಾರೆ. ತನಗೆ ಹೇಗೆ ತನ್ನ ಪ್ರಾಣವು ಇಷ್ಟವೋ ಅದರಂತೆ ಪ್ರಾಣಿಗಳಿಗೂ ತಮ್ಮ ಪ್ರಾಣಗಳು ಇಷ್ಟವಾದವುಗಳು.
ಆತ್ಮೌಪಮ್ಯೇನ ಗಂತವ್ಯಂ ಬುದ್ಧಿಮದ್ಭಿರ್ಮಹಾತ್ಮಭಿಃ |
ಮೃತ್ಯುತೋ ಭಯಮಸ್ತೀತಿ ವಿದುಷಾಂ ಭೂತಿಮಿಚ್ಛತಾಮ್ ||22||
ಮೃತ್ಯುವಿನ ಭಯವು ನಮಗೂ ಇದೆ ಎಂದು ತಿಳಿದು ಕಲ್ಯಾಣವನ್ನು ಇಚ್ಛಿಸುವ ವಿವೇಕಿಗಳು ತಮ್ಮಂತೆಯೇ ಇನ್ನೊಂದು ಪ್ರಾಣಿಯನ್ನು ನೋಡಬೇಕು.
ಕಿಂ ಪುನರ್ಹನ್ಯಮಾನಾನಾಂ ತರಸಾ ಜೀವಿತಾರ್ಥಿನಾಮ್ |
ಅರೋಗಾಣಾಮಪಾಪಾನಾಂ ಪಾಪೈರ್ಮಾಂಸೋಪಜೀವಿಭಿಃ ||23||
ಹೀಗಿರುವಾಗ ರೋಗವಿಲ್ಲದೆ ಬದುಕಲು ಬಯಸುವ ನಿರಪರಾಧಿಗಳಾದ, ಮಾಂಸೋಪಜೀವಿಗಳಾದ ಪಾಪಿಜನರಿಂದ ಕೊಲ್ಲಲ್ಪಡುವ ಪ್ರಾಣಿಗಳ ವಿಷಯದಲ್ಲಿ ಹೇಳುವುದೇನಿದೆ?
ಮೃತ್ಯುತೋ ಭಯಮಸ್ತೀಹ ಶಂಕಾಯಾಂ ದುಃಖಮುತ್ತರಮ್ |

ಧರ್ಮಸ್ಯಾಯತನಂ ತಸ್ಮಾನ್ಮಾಂಸಸ್ಯ ಪರಿವರ್ಜನಮ್ ॥24॥
ಮೃತ್ಯುವಿನಿಂದ ತನಗೆ ಭಯವಿದೆ ಎಂದೂ, ಅನಂತರ ಕಾಲದಲ್ಲಿ ದುಃಖವಿದೆ ಎಂದೂ ತಿಳಿಯುವ ಮನುಷ್ಯನು ಮಾಂಸವರ್ಜನೆಯ ರೂಪವಾದ ಧರ್ಮಕ್ಕೆ ಆಶ್ರಯನಾಗಬೇಕು.
ತಸ್ಮಾದ್ ವಿದ್ಧಿ ಮಹಾರಾಜ ಮಾಂಸಸ್ಯ ಪರಿವರ್ಜನಮ್ |
ಧರ್ಮಸ್ಯಾಯತನಂ ಶ್ರೇಷ್ಠಂ ಸ್ವರ್ಗಸ್ಯ ಚ ಸುಖಸ್ಯ ಚ ॥25॥
ಎಲೈ ಮಹಾರಾಜನೇ, ಆದ್ದರಿಂದ ಮಾಂಸವರ್ಜನೆಯು ಧರ್ಮಕ್ಕೆ ಆಶ್ರಯವಾದುದು, ಶ್ರೇಷ್ಠವಾದುದು, ಸ್ವರ್ಗಕ್ಕೂ ಮತ್ತು ಸುಖಕ್ಕೂ ಕಾರಣವಾದುದು ಎಂದು ತಿಳಿ.
ಅಹಿಂಸಾ ಪರಮೋ ಧರ್ಮಸ್ತಥಾಽಹಿಂಸಾ ಪರಂ ತಪಃ |
ಅಹಿಂಸಾ ಪರಮಂ ಸತ್ಯಂ ತತೋ ಧರ್ಮಃ ಪ್ರವರ್ತತೇ ॥26॥
ಅಹಿಂಸೆಯು ಶ್ರೇಷ್ಠವಾದ ಧರ್ಮ. ಅಹಿಂಸೆಯು ಶ್ರೇಷ್ಠವಾದ ತಪಸ್ಸು. ಅಹಿಂಸೆಯು ಶ್ರೇಷ್ಠವಾದ ಸತ್ಯ. ಧರ್ಮವು ಅಹಿಂಸೆಯಿಂದ ಪ್ರವೃತ್ತವಾಗುತ್ತದೆ.
ನ ಹಿ ಮಾಂಸಂ ತೃಣಾತ್ ಕಾಷ್ಠಾದುಪಲಾದ್ ವಾಪಿ ಜಾಯತೇ |
ಹತ್ವಾ ಜಂತುಂ ತತೋ ಮಾಂಸಂ ತಸ್ಮಾನ್ಮಾಂಸಂ ವಿವರ್ಜಯೇತ್ ॥
ಮಾಂಸವು ಹುಲ್ಲಿನಿಂದಾಗಲೀ, ಕಟ್ಟಿಗೆಯಿಂದಾಗಲೀ, ಕಲ್ಲಿನಿಂದಾಗಲೀ ಉಂಟಾಗುವುದಿಲ್ಲ. ಪ್ರಾಣಿಯನ್ನು ಕೊಂದೇ ಮಾಂಸವನ್ನು ಪಡೆಯಬೇಕು. ಆದ್ದರಿಂದ ಮಾಂಸವನ್ನು ವರ್ಜಿಸಬೇಕು.
ಸ್ವಾಹಾಸ್ವಧಾಮೃತಭುಜೋ ದೇವಾಃ ಸತ್ಯಾರ್ಜವಪ್ರಿಯಾಃ |
ಕ್ರವ್ಯಾದಾನ್ ರಾಕ್ಷಸಾನ್ ವಿದ್ಧಿ ಜಿಹ್ಮಾನೃತಪರಾಯಣಾನ್ ॥28॥
ಸ್ವಾಹಾ, ಸ್ವಧಾ ಅಮೃತರೂಪವಾದ ಅನ್ನವನ್ನು ಸ್ವೀಕರಿಸುವ ದೇವತೆಗಳು ಸತ್ಯದಲ್ಲಿ ಮತ್ತು ಋಜುತನದಲ್ಲಿ (ಸರಳತೆ) ಪ್ರೀತಿಯುಳ್ಳವರು. ಮಾಂಸವನ್ನು ಭಕ್ಷಿಸುವವರನ್ನು ಮೋಸ ಮತ್ತು ಅನೃತಕ್ಕೆ ಆಶ್ರಯರಾದ ರಾಕ್ಷಸರೆಂದು ತಿಳಿ.
ಕಾಂತಾರೇಷ್ವಥ ಘೋರೇಷು ದುರ್ಗೇಷು ಗಹನೇಷು ಚ |
ರಾತ್ರಾವಹನಿ ಸಂಧ್ಯಾಸು ಚತ್ವರೇಷು ಸಭಾಸು ಚ |
ಅಮಾಂಸಭಕ್ಷಣೇ ರಾಜನ್ ಭಯಮಂತೇ ನ ಗಚ್ಛತಿ ॥29॥
ಎಲೈ ರಾಜನೇ, ಮಾಂಸಭಕ್ಷಣೆಯನ್ನು ಮಾಡದಿದ್ದರೆ ಘೋರ ಅರಣ್ಯಗಳಲ್ಲಿ, ಘನವಾದ ದುರ್ಗಗಳಲ್ಲಿ, ರಾತ್ರಿಯಲ್ಲಿ, ಸಂಧ್ಯಾಕಾಲದಲ್ಲಿ, ಹಗಲಿನಲ್ಲಿ, ಚತುಷ್ಪಥಗಳಲ್ಲಿ, ಸಭೆಗಳಲ್ಲಿ - ಎಲ್ಲೂ ಭಯವುಂಟಾಗುವುದಿಲ್ಲ.
ಯದಿ ಚೇತ್ಖಾದಕೋ ನ ಸ್ಯಾನ್ನ ತದಾ ಘಾತಕೋ ಭವೇತ್ |
ಘಾತಕಃ ಖಾದನಾರ್ಥಾಯ ಯಥಾ ಭವತಿ ವೈ ನರಃ ॥30॥
ಮಾಂಸವನ್ನು ತಿನ್ನದಿದ್ದರೆ ಅವನು ಘಾತಕನೂ ಆಗುವುದಿಲ್ಲ. ಘಾತಕನಾದವನು (ಪ್ರಾಣಿಯನ್ನು ಕೊಲ್ಲುವವನು) ತಾನೂ ಇನ್ನೊಂದು ಪ್ರಾಣಿಗೆ ಆಹಾರವಾಗುತ್ತೇನೆ ಎಂಬುದನ್ನು ಗಮನಿಸಬೇಕು.
ಅಭಕ್ಷ್ಯಮೇತದಿತಿ ವಾ ಇತಿ ಹಿಂಸಾ ನಿವರ್ತತೇ |
ಖಾದಕಾರ್ಥಮತೋ ಹಿಂಸಾ ಮೃಗಾದೀನಾಂ ಪ್ರವರ್ತತೇ ॥31॥
ಇದು ಭಕ್ಷಣೀಯವಲ್ಲ ಎಂದು ತಿಳಿಯುವುದರಿಂದ ಹಿಂಸೆಯು ನಿವೃತ್ತವಾಗುತ್ತದೆ. ಅಂತಹ ಜ್ಞಾನವಿಲ್ಲದಿದ್ದವರು ತಿನ್ನುವ ಸಲುವಾಗಿ ಮೃಗಾದಿಗಳ ಹಿಂಸೆಯಲ್ಲಿ ಪ್ರವೃತ್ತರಾಗುತ್ತಾರೆ.
ಯಸ್ಮಾದ್ ಗ್ರಸತಿ ಚೈವಾಯುರ್ಹಿಂಸಕಾನಾಂ ಮಹಾದ್ಯುತೇ |
ತಸ್ಮಾದ್ ವಿವರ್ಜಯೇನ್ಮಾಂಸಂ ಯ ಇಚ್ಛೇದ್ ಭೂತಿಮಾತ್ಮನಃ ॥32॥
ಎಲೈ ಮಹಾದ್ಯುತಿಯೇ, ಮಾಂಸವು ಹಿಂಸೆ ಮಾಡುವವನ ಆಯುಸ್ಸನ್ನು ನಾಶಪಡಿಸುತ್ತದೆ. ಆದ್ದರಿಂದ ತನ್ನ ಕಲ್ಯಾಣವನ್ನು ಬಯಸುವವನು ಮಾಂಸವನ್ನು ವರ್ಜಿಸಬೇಕು.
ತ್ರಾತಾರಂ ನಾಧಿಗಚ್ಛಂತಿ ರೌದ್ರಾಃ ಪ್ರಾಣಿವಿಹಿಂಸಕಾಃ |
ಉದ್ವೇಜನೀಯಾ ಭೂತಾನಾಂ ಯಥಾ ವ್ಯಾಲಮೃಗಾಸ್ತಥಾ ॥33॥
ಹೇಗೆ ಕೊಲ್ಲಲ್ಪಡುವ ಸರ್ಪಮೃಗಗಳಿಗೆ ಯಾರೂ ರಕ್ಷಕರು ದೊರೆಯುವುದಿಲ್ಲವೋ ಅದರಂತೆ ಪ್ರಾಣಿಗಳಿಗೆ ಭಯವನ್ನುಂಟು ಮಾಡಿ ಪ್ರಾಣಿಗಳನ್ನು ಕೊಲ್ಲುವ ರೌದ್ರ ಪುರುಷರಿಗೆ ಯಾವ ರಕ್ಷಕರೂ ದೊರೆಯುವುದಿಲ್ಲ.
ಲೋಭಾದ್ ವಾ ಬುದ್ಧಿಮೋಹಾದ್ ವಾ ಬಲವೀರ್ಯಾರ್ಥಮೇವ ಚ
ಸಂಸರ್ಗಾದ್ ವಾಥ ಪಾಪಾನಾಮ್ ಅಧರ್ಮೋ ರುಚಿತೋ ನೃಣಾಮ್ ॥
ಲೋಭದಿಂದಲಾಗಲೀ, ಬುದ್ಧಿಮೋಹದಿಂದಾಗಲೀ, ಬಲ-ವೀರ್ಯಗಳ ಅಭಿವೃದ್ಧಿಗಾಗಲೀ ಅಥವಾ ಪಾಪಿಗಳ ಸಂಸರ್ಗದಿಂದಾಗಲೀ ಮನುಷ್ಯರಿಗೆ ಅಧರ್ಮದಲ್ಲಿ ರುಚಿ ಉಂಟಾಗುತ್ತದೆ.
ಸ್ವಮಾಂಸಂ ಪರಮಾಂಸೇನ ಯೋ ವರ್ಧಯಿತುಮಿಚ್ಛತಿ |
ಉದ್ವಿಗ್ನರಾಷ್ಟ್ರೋ ಭವತಿ ಯತ್ರತತ್ರಾಭಿಜಾಯತೇ ॥35॥
ಯಾವ ರಾಜನು ಪರಮಾಂಸದಿಂದ ತನ್ನ ಮಾಂಸವನ್ನು ಅಭಿವೃದ್ಧಿ ಪಡಿಸಲು ಬಯಸುತ್ತಾನೆಯೋ ಅವನ ರಾಷ್ಟ್ರವು ಉದ್ವಿಗ್ನವಾಗುತ್ತದೆ. ಅವನು ಎಲ್ಲೆಲ್ಲಿಯೂ ಜನ್ಮವನ್ನು ಪಡೆಯುತ್ತಾನೆ.
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ |
ಮಾಂಸಸ್ಯಾಭಕ್ಷಣಂ ಪ್ರಾಹುರ್ನಿಯತಾಃ ಪರಮರ್ಷಯಃ ॥36॥

ಮಾಂಸ ಭಕ್ಷಣೆಯನ್ನು ಮಾಡದಿರುವುದು ನಿಯಮೇನ ಧನಪ್ರದವಾದುದು, ಕೀರ್ತಿಪ್ರದವಾದುದು, ಆಯುರ್ವೃದ್ಧಿಕರವಾದುದು, ಸ್ವರ್ಗಪ್ರದವಾದುದು ಮತ್ತು ದೊಡ್ಡ ಕಲ್ಯಾಣ ರೂಪವಾದುದು ಎಂದು ಪರಮರ್ಷಿಗಳು ಹೇಳುತ್ತಾರೆ.
ಇದಂ ತು ಖಲು ಕೌಂತೇಯ ಶ್ರುತಮಾಸೀತ್ ಪುರಾ ಮಯಾ |
ಮಾರ್ಕಂಡೇಯಸ್ಯ ವದತೋ ಯೇ ದೋಷಾ ಮಾಂಸಭಕ್ಷಣೇ ॥37॥
ಯೋ ಹಿ ಖಾದತಿ ಮಾಂಸಾನಿ ಪ್ರಾಣಿನಾಂ ಜೀವಿತಾರ್ಥಿನಾಮ್ |
ಹತಾನಾಂ ವಾ ಮೃತಾನಾಂ ವಾ ಯಥಾ ಹಂತಾ ತಥೈವ ಸಃ ॥38॥
ಎಲೈ ಕೌಂತೇಯನೇ, ಹಿಂದೆ ಮಾಂಸಭಕ್ಷಣ ವಿಷಯದಲ್ಲಿ ಮಾರ್ಕಂಡೇಯರು ಮಾತನಾಡುತ್ತಿದ್ದಾಗ ನಾನು ಈ ವಿಷಯವನ್ನು ಕೇಳಿದೆನು. ಯಾವನು ಬದುಕಲು ಬಯಸುವ ಪ್ರಾಣಿಗಳ ಮಾಂಸವನ್ನು - ಆ ಪ್ರಾಣಿಗಳು ಕೊಲ್ಲಲ್ಪಡಲಿ ಅಥವಾ ತಾವಾಗಿಯೇ ಮೃತವಾಗಿರಲಿ - ತಿನ್ನುತ್ತಾನೆಯೋ ಅವನು ಕೊಲ್ಲುವವನಷ್ಟೇ ಪಾಪಕ್ಕೆ ಗುರಿಯಾಗುತ್ತಾನೆ.
ಧನೇನ ಕ್ರಾಯಕೋ ಹಂತಿ ಖಾದಕಶ್ಚೋಪಭೋಗತಃ |
ಘಾತಕೋ ವಧಬಂಧಾಭ್ಯಾಮಿತ್ಯೇಷ ತ್ರಿವಿಧೋ ವಧಃ ॥39॥
ಕೊಂಡುಕೊಳ್ಳುವವನು ಧನದಿಂದ ಪ್ರಾಣಿಯನ್ನು ಕೊಲ್ಲುತ್ತಾನೆ, ತಿನ್ನುವವನು ಭೋಗದಿಂದ ಪ್ರಾಣಿಯನ್ನು ಕೊಲ್ಲುತ್ತಾನೆ. ಕೊಲ್ಲುವವನು ಶಸ್ತ್ರದಿಂದಾಗಲೀ, ಬಂಧನದಿಂದಾಗಲೀ ಕೊಲ್ಲುತ್ತಾನೆ. ಹೀಗೆ ಈ ವಧೆಯು ಮೂರು ವಿಧವಾದುದು.
ಅಖಾದನ್ನನುಮೋದಂಶ್ಚ ಭಾವದೋಷೇಣ ಮಾನವಃ |
ಯೋಽನುಮನ್ಯೇತ ಹಂತವ್ಯಂ ಸೋಽಪಿ ದೋಷೇಣ ಲಿಪ್ಯತೇ ॥40॥
ಯಾವ ಮನುಷ್ಯನು ತಾನು ತಿನ್ನದಿದ್ದರೂ ಇನ್ನೊಬ್ಬನ ಮಾಂಸಭಕ್ಷಣೆಗೆ ಅನುಮೋದನೆಯನ್ನು ನೀಡುತ್ತಾನೆಯೋ ಅಥವಾ ಪ್ರಾಣಿಯು ಕೊಲ್ಲಲ್ಪಡುವಾಗ ಅನುಮೋದನೆಯನ್ನು ನೀಡುತ್ತಾನೆಯೋ ಅವನೂ ಕೂಡ ದುಷ್ಟವಾದ ಮನಸ್ಸನ್ನು ಹೊಂದಿದ ಕಾರಣದಿಂದ ದೋಷಕ್ಕೆ ಭಾಗಿಯಾಗುತ್ತಾನೆ.
ಅಧೃಷ್ಯಃ ಸರ್ವಭೂತಾನಾಮಾಯುಷ್ಮಾನ್ ನೀರುಜಃ ಸುಖೀ |
ಭವತ್ಯಭಕ್ಷಯನ್ ಮಾಂಸಂ ದಯಾವಾನ್ ಪ್ರಾಣಿನಾಮಿಹ ॥41॥
ಮಾಂಸವನ್ನು ತಿನ್ನದೆ ಪ್ರಾಣಿಗಳಲ್ಲಿ ದಯೆಯನ್ನು ಹೊಂದುವ ಪುರುಷನು ಯಾವ ಪ್ರಾಣಿಗಳಿಂದಲೂ ಪರಾಭವ ಹೊಂದದೆ ದೀರ್ಘಾಯುಷ್ಯವಂತನೂ, ಅರೋಗಿಯೂ ಮತ್ತು ಸುಖಿಯೂ ಆಗುತ್ತಾನೆ.
ಹಿರಣ್ಯದಾನೈರ್ಗೋದಾನೈರ್ಭೂಮಿದಾನೈಶ್ಚ ಸರ್ವಶಃ |
ಮಾಂಸಸ್ಯಾಭಕ್ಷಣೇ ಧರ್ಮೋ ವಿಶಿಷ್ಟಾದಿತಿ ನಃ ಶ್ರುತಿಃ ॥42॥
ಹಿರಣ್ಯದಾನಕ್ಕಿಂತಲೂ, ಗೋದಾನಕ್ಕಿಂತಲೂ, ಭೂದಾನಕ್ಕಿಂತಲೂ ಮಾಂಸದ ಅಭಕ್ಷಣೆಯು ಶ್ರೇಷ್ಠವಾದ ಧರ್ಮವೆಂದು ನಾವು ಕೇಳಿದ್ದೇವೆ.
ಅಪ್ರೋಕ್ಷಿತಂ ವೃಥಾಮಾಂಸಂ ವಿಧಿಹೀನಂ ನ ಭಕ್ಷಯೇತ್ |
ಭಕ್ಷಯನ್ ನಿರಯಂ ಯಾತಿ ನರೋ ನಾಸ್ತ್ಯತ್ರ ಸಂಶಯಃ ॥43॥
ಪ್ರೋಕ್ಷಿತವಲ್ಲದ ಅಥವಾ ವಿಧಿಹೀನವಾದ ಅಥವಾ ವ್ಯರ್ಥವಾದ ಮಾಂಸವನ್ನು ತಿನ್ನಬಾರದು. ಅಂತಹದನ್ನು ತಿನ್ನುವವನು ನರಕಕ್ಕೆ ಹೋಗುವುದರಲ್ಲಿ ಸಂಶಯವಿಲ್ಲ.
ಪ್ರೋಕ್ಷಿತಾಭ್ಯುಕ್ಷಿತಂ ಮಾಂಸಂ ತಥಾ ಬ್ರಾಹ್ಮಣಕಾಮ್ಯಯಾ |
ಅಲ್ಪದೋಷಮಿಹ ಜ್ಞೇಯಂ ವಿಪರೀತೇ ತು ಲಿಪ್ಯತೇ ॥44॥
ಬ್ರಾಹ್ಮಣರಿಗೆ ಕೊಡುವ ಸಲುವಾಗಿ ಪ್ರೋಕ್ಷಣೆಯನ್ನು ಮಾಡಿ ಶುದ್ಧಿಗೊಳಿಸಲ್ಪಟ್ಟ ಮಾಂಸವು ಕಡಿಮೆ ದೋಷವನ್ನುಂಟು ಮಾಡುತ್ತದೆ ಎಂದು ತಿಳಿಯಬೇಕು. ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಬಹಳ ದೋಷಗಳ ಲೇಪವಾಗುತ್ತದೆ.
ಖಾದಕಸ್ಯ ಕೃತೇ ಜಂತುಂ ಯೋ ಹನ್ಯಾತ್ ಪುರುಷೋಽಧಮಃ |
ಮಹಾದೋಷಕರಸ್ತತ್ರ ಖಾದಕೋ ನ ತು ಘಾತಕಃ ॥45॥
ಯಾವ ಅಧಮನಾದ ಪುರುಷನು ಮಾಂಸವನ್ನು ತಿನ್ನುವವನ ಸಲುವಾಗಿ ಪ್ರಾಣಿಯನ್ನು ಕೊಲ್ಲುತ್ತಾನೆಯೋ ಅಲ್ಲಿ ತಿನ್ನುವವನಿಗೇ ಬಹಳ ದೋಷವುಂಟಾಗುತ್ತದೆ, ಕೊಲ್ಲುವವನಿಗಲ್ಲ.
ಇಜ್ಯಾಯಜ್ಞಶ್ರುತಿಕೃತೈರ್ಯೋ ಮಾರ್ಗೈರಬುಧೋ ಜನಃ |
ಹನ್ಯಾಜ್ಜಂತುಂ ಮಾಂಸಗೃಧ್ನುಃ ಸ ವೈ ನರಕಮಾಪ್ತವಾನ್ ॥46॥
ಮಾಂಸದಾಸೆಯನ್ನು ಹೊಂದಿ ಪೂಜೆ, ಯಜ್ಞ ಮತ್ತು ವೈದಿಕ ಕರ್ಮಗಳ ನೆಪದಿಂದ ಯಾವ ಅಜ್ಞಾನಿಯಾದವನು ಪ್ರಾಣಿಯನ್ನು ಕೊಲ್ಲುತ್ತಾನೆಯೋ ಅವನು ನಿಶ್ಚಯವಾಗಿ ನರಕಕ್ಕೆ ಹೋಗುತ್ತಾನೆ.
ಭಕ್ಷಯಿತ್ವಾ ತು ಯೋ ಮಾಂಸಂ ಪಶ್ಚಾದಪಿ ನಿವರ್ತತೇ |
ತಸ್ಯಾಪಿ ಸುಮಹಾನ್ ಧರ್ಮೋ ಯಃ ಪಾಪಾದ್ ವಿನಿವರ್ತತೇ ॥47॥
ಮೊದಲು ಮಾಂಸವನ್ನು ಭಕ್ಷಿಸುತ್ತಿದ್ದು ಅನಂತರ ಅದನ್ನು ತ್ಯಜಿಸುವವನಿಗೂ ಬಹಳ ದೊಡ್ಡ ಧರ್ಮವುಂಟಾಗುತ್ತದೆ. ಏಕೆಂದರೆ ಅವನು ಪಾಪದಿಂದ ನಿವೃತ್ತನಾಗಿರುತ್ತಾನೆ.
ಆಹರ್ತಾ ಚಾನುಮಂತಾ ಚ ವಿಶಸ್ತಾ ಕ್ರಯವಿಕ್ರಯೀ |
ಸಂಸ್ಕರ್ತಾ ಚೋಪಭೋಕ್ತಾ ಚ ಘಾತಕಾಃ ಸರ್ವ ಏವ ತೇ ॥48॥
ಪ್ರಾಣಿಯನ್ನು ಎಳೆದುಕೊಂಡು ಬರುವವನೂ, ಕೊಲ್ಲಲು ಅನುಮತಿಯನ್ನು ಕೊಡುವವನೂ, ಕೊಲ್ಲುವವನೂ, ಮಾಂಸವನ್ನು ಮಾರುವವನೂ, ಕೊಳ್ಳುವವನೂ, ಬೇಯಿಸುವವನೂ ಮತ್ತು ಭಕ್ಷಿಸುವವನೂ ಎಲ್ಲರೂ ಪ್ರಾಣಿಘಾತಕರೇ.

ಇದಮನ್ಯತ್ ತು ವಕ್ಷ್ಯಾಮಿ ಪ್ರಮಾಣಂ ವಿಧಿನಿರ್ಮಿತಮ್ |
ಪುರಾಣಮೃಷಿಭಿರ್ಜುಷ್ಟಂ ವೇದೇಷು ವಿಧಿನಿರ್ಮಿತಮ್ ॥49॥
ವೇದಗಳಲ್ಲಿ ನಿಶ್ಚಿತವಾದ, ಋಷಿಗಳಿಂದ ಸೇವಿತವಾದ, ವಿಧಿಗೆ ಅನುಸಾರವಾದ ಈ ಇನ್ನೊಂದು ವಿಷಯವನ್ನು ಹೇಳುತ್ತೇನೆ.
ಪ್ರವೃತ್ತಿಲಕ್ಷಣೇ ಧರ್ಮೇ ಫಲಾರ್ಥಿಭಿರಭಿದ್ರುತೇ |
ಯಥೋಕ್ತಂ ರಾಜಶಾರ್ದೂಲ ನ ತು ತನ್ಮೋಕ್ಷಕಾಂಕ್ಷಿಣಾಮ್ ॥50॥
ಎಲೈ ರಾಜಶಾರ್ದೂಲನೇ, ಈ ಮಾಂಸಭಕ್ಷಣವು ಫಲವನ್ನು ಬಯಸಿ ಪ್ರವೃತ್ತಿ ಧರ್ಮವನ್ನು ಮಾಡುವ ಪುರುಷರಿಗಾಗಿ ಹೇಳಲ್ಪಟ್ಟಿದೆ. ಮೋಕ್ಷಾಪೇಕ್ಷಿಗಳಾಗಿ ನಿಯತ ಕರ್ಮಾನುಷ್ಠಾನ ಮಾಡುವವರಿಗೆ ಅಲ್ಲ.
ಹವಿರ್ಯತ್ ಸಂಸ್ಕೃತಂ ಮಂತ್ರೈಃ ಪ್ರೋಕ್ಷಿತಾಭ್ಯುಕ್ಷಿತಂ ಶುಚಿ |
ವೇದೋಕ್ತೇನ ಪ್ರಮಾಣೇನ ಪಿತೄಣಾಂ ಪ್ರಕ್ರಿಯಾಸು ಚ |
ಅತೋಽನ್ಯಥಾ ವೃಥಾಮಾಂಸಮಭಕ್ಷ್ಯಂ ಮನುರಬ್ರವೀತ್ ॥51॥
ಪ್ರೋಕ್ಷಿತವಾಗಿ ಮಂತ್ರಗಳಿಂದ ಸಂಸ್ಕರಿಸಲ್ಪಟ್ಟ ಹವಿಸ್ಸೇ ವೇದೋಕ್ತ ಪ್ರಮಾಣಕ್ಕೆ ಅನುಸಾರವಾಗಿ ಯಜ್ಞಗಳಲ್ಲಿಯೂ ಮತ್ತು ಪಿತೃಕಾರ್ಯಗಳಲ್ಲಿಯೂ ಶುದ್ಧವಾದುದು. ಉಳಿದ ಮಾಂಸವು ವೃಥಾ ಮಾಂಸ. ಅದನ್ನು ಭಕ್ಷಿಸಬಾರದು ಎಂದು ಮನುವು ಹೇಳಿದ್ದಾನೆ.
ಅಸ್ವರ್ಗ್ಯಮಯಶಸ್ಯಂ ಚ ರಕ್ಷೋವದ್ ಭರತರ್ಷಭ |
ವಿಧಿನಾ ಹಿ ನರಾಃ ಪೂರ್ವಂ ಮಾಂಸಂ ರಾಜನ್ನಭಕ್ಷಯನ್ ॥52॥
ಎಲೈ ಭರತರ್ಷಭನೇ, ರಾಕ್ಷಸರಂತೆ ಅಂತಹ ಮಾಂಸವನ್ನು ಭಕ್ಷಿಸುವುದು ಸ್ವರ್ಗ ಸಾಧನವಲ್ಲ ಮತ್ತು ಅಕೀರ್ತಿಕರವಾದುದು. ಎಲೈ ರಾಜನೇ, ಹಿಂದೆ ಮನುಷ್ಯರು ವಿಧಿಗೆ ಅನುಸಾರವಾಗಿ ಮಾತ್ರ ಮಾಂಸವನ್ನು ಭಕ್ಷಿಸುತ್ತಿದ್ದರು.
ಯ ಇಚ್ಛೇತ್ ಪುರುಷೋಽತ್ಯಂತಮಾತ್ಮಾನಂ ನಿರುಪದ್ರವಮ್ |
ಸ ವರ್ಜಯೇತ ಮಾಂಸಾನಿ ಪ್ರಾಣಿನಾಮಿಹ ಸರ್ವಶಃ ॥53॥
ಯಾವ ಮನುಷ್ಯನು ತನಗೆ ಯಾವ ಉಪದ್ರವವೂ ಆಗಬಾರದೆಂದು ಬಯಸುತ್ತಾನೋ ಅವನು ಎಲ್ಲ ರೀತಿಯಿಂದಲೂ ಪ್ರಾಣಿಗಳ ಮಾಂಸವನ್ನು ವರ್ಜಿಸಬೇಕು.
ಶ್ರೂಯತೇ ಹಿ ಪುರಾ ಕಲ್ಪೇ ನೃಣಾಂ ವ್ರೀಹಿಮಯಃ ಪಶುಃ |
ಯೇನಾಯಜಂತ ಯಜ್ವಾನಃ ಪುಣ್ಯಲೋಕಪರಾಯಣಾಃ ॥54॥
ಪ್ರಾಚೀನಕಾಲದಲ್ಲಿ ಪುಣ್ಯಲೋಕ ಪರಾಯಣರಾದವರು ಧಾನ್ಯಮಯವಾದ (ಪಿಷ್ಟಮಯವಾದ) ಪಶುವನ್ನು ಮಾಡಿ ಅದರಿಂದ ಯಜ್ಞವನ್ನು ಮಾಡುತ್ತಿದ್ದರು ಎಂದು ಕೇಳಿ ಬರುತ್ತದೆ.
ಋಷಿಭಿಃ ಸಂಶಯಂ ಪೃಷ್ಟೋ ವಸುಶ್ಚೇದಿಪತಿಃ ಪುರಾ |
ಅಭಕ್ಷ್ಯಮಿತಿ ಮಾಂಸಂ ಸ ಪ್ರಾಹ ಭಕ್ಷ್ಯಮಿತಿ ಪ್ರಭೋ ॥55॥
ಆಕಾಶಾನ್ಮೇದಿನೀಂ ಪ್ರಾಪ್ತಸ್ತತಃ ಸ ಪೃಥಿವೀಪತಿಃ |
ಏತದೇವ ಪುನಶ್ಚೋಕ್ತ್ವಾ ವಿವೇಶ ಧರಣೀತಳಮ್ ॥56॥
ಹಿಂದೆ ಋಷಿಗಳು ಚೇದಿರಾಜನಾದ ವಸುವನ್ನು ಮಾಂಸವು ಭಕ್ಷ್ಯವೇ ಅಭಕ್ಷ್ಯವೇ ಎಂದು ತಮ್ಮ ಸಂಶಯವನ್ನು ಕೇಳಿದಾಗ ಅವನು ಭಕ್ಷ್ಯ ಎಂದು ಹೇಳಿದ ತಕ್ಷಣ ಆಕಾಶದಿಂದ ಭೂಮಿಗೆ ಇಳಿದನು. ಅದೇ ಮಾತನ್ನು ಇನ್ನೊಂದು ಬಾರಿ ಹೇಳಿ ಭೂಮಿಯ ಒಳಗೆ ಇಳಿದು ಪಾತಾಳಕ್ಕೆ ಹೋದನು.
ಪ್ರಜಾನಾಂ ಹಿತಕಾಮೇನ ತ್ವಗಸ್ತ್ಯೇನ ಮಹಾತ್ಮನಾ |
ಆರಣ್ಯಾಃ ಸರ್ವದೈವತ್ಯಾಃ ಪ್ರೋಕ್ಷಿತಾಸ್ತಪಸಾ ಮೃಗಾಃ ॥57॥
ಪ್ರಜೆಗಳ ಮೇಲಿನ ಹಿತದೃಷ್ಟಿಯಿಂದ ಮಹಾತ್ಮರಾದ ಅಗಸ್ತ್ಯರು ಅರಣ್ಯದಲ್ಲಿರುವ ಎಲ್ಲಾ ದೇವತೆಗಳಿಗೆ ಸಂಬಂಧಪಟ್ಟ ಪಶುಗಳನ್ನು ತಪಸ್ಸಿನ ಶಕ್ತಿಯಿಂದ ಪ್ರೋಕ್ಷಣೆಯನ್ನು ಮಾಡಿದ್ದಾರೆ (ಆದ್ದರಿಂದ ನೀನು ಹಿಂಸೆ ಮಾಡಬಹುದಾದ ಪಶುಗಳಿಲ್ಲ).
ಕ್ರಿಯಾ ಹ್ಯೇವಂ ನ ಹೀಯಂತೇ ಪಿತೃದೈವತಸಂಶ್ರಿತಾಃ |
ಪ್ರೀಯಂತೇ ಪಿತರಶ್ಚೈವ ನ್ಯಾಯತೋಽಮಾಂಸತರ್ಪಿತಾಃ ॥58॥
ಮಾಂಸವನ್ನು ಉಪಯೋಗಿಸದಿದ್ದರೆ ಪಿತೃಕಾರ್ಯ ಮತ್ತು ದೇವತಾ ಕಾರ್ಯಗಳಲ್ಲಿ ಯಾವ ಹಾನಿಯೂ ಉಂಟಾಗುವುದಿಲ್ಲ. ನ್ಯಾಯಪ್ರಾಪ್ತವಾದ, ಮಾಂಸಭಿನ್ನವಾದ ಆಹಾರದಿಂದಲೇ ತೃಪ್ತಿಯನ್ನು ಹೊಂದಿದ ದೇವತೆಗಳು ಸಂತೋಷಪಡುತ್ತಾರೆ.
ಇದಂ ತು ಶೃಣು ರಾಜೇಂದ್ರ ಕೀರ್ತ್ಯಮಾನಂ ಮಯಾನಘ |
ಅಭಕ್ಷಣೇ ಸರ್ವಸುಖಂ ಮಾಂಸಸ್ಯ ಮನುಜಾಧಿಪ ॥59॥
ಎಲೈ ಅನಘನೇ, ರಾಜೇಂದ್ರನೇ, ನಾನು ಹೇಳುವ ಈ ಇನ್ನೊಂದು ವಿಷಯವನ್ನು ಕೇಳು - ಮಾಂಸವನ್ನು ಭಕ್ಷಿಸದಿದ್ದರೆ ಎಲ್ಲ ಸುಖವೂ ಉಂಟಾಗುತ್ತದೆ.
ಯಸ್ತು ವರ್ಷಶತಂ ಪೂರ್ಣಂ ತಪಸ್ತಪ್ಯೇತ್ ಸುದಾರುಣಮ್ |
ಯಶ್ಚೈಕಂ ವರ್ಜಯೇನ್ಮಾಂಸಂ ಸಮಮೇತನ್ಮತಂ ಮಮ ॥60॥
ಯಾವನು ಪೂರ್ಣವಾಗಿ ನೂರು ವರ್ಷಗಳ ಕಾಲ ದಾರುಣವಾದ ತಪಸ್ಸನ್ನು ಮಾಡುತ್ತಾನೆಯೋ ಮತ್ತು ಯಾವನು ಮಾಂಸವನ್ನು ವರ್ಜಿಸುತ್ತಾನೆಯೋ ಅವರಿಬ್ಬರೂ ಸಮರಾದವರು ಎಂದು ನನ್ನ ಅಭಿಪ್ರಾಯ.
ಕೌಮುದೇ ತು ವಿಶೇಷೇಣ ಶುಕ್ಲಪಕ್ಷೇ ನರಾಧಿಪ |
ವರ್ಜಯೇತ್ ಸರ್ವಮಾಂಸಾನಿ ಧರ್ಮೋ ಹ್ಯತ್ರ ವಿಧೀಯತೇ ॥61॥

ಎಲೈ ರಾಜನೇ, ಕಾರ್ತಿಕಮಾಸದಲ್ಲಿ, ಅದರಲ್ಲಿಯೂ ಶುಕ್ಲಪಕ್ಷದಲ್ಲಿ ಸರ್ವ ಮಾಂಸಗಳನ್ನೂ ವರ್ಜಿಸಿದರೆ ಬಹಳ ಧರ್ಮವುಂಟಾಗುವುದೆಂದು ವಿಧಿಸಲ್ಪಡುತ್ತದೆ.
ಚತುರೋ ವಾರ್ಷಿಕಾನ್ ಮಾಸಾನ್ ಯೋ ಮಾಂಸಂ ಪರಿವರ್ಜಯೇತ್ |
ಚತ್ವಾರಿ ಭದ್ರಾಣ್ಯಾಪ್ನೋತಿ ಕೀರ್ತಿಮಾಯುರ್ಯಶೋ ಬಲಮ್ ॥62॥
ವರ್ಷಾಕಾಲದ ನಾಲ್ಕು ತಿಂಗಳುಗಳಲ್ಲಿ ಯಾವನು ಮಾಂಸವನ್ನು ವರ್ಜಿಸುತ್ತಾನೋ ಅವನು ಮಂಗಳವಾದ ಕೀರ್ತಿಯನ್ನೂ, ಆಯುಸ್ಸನ್ನೂ, ಯಶಸ್ಸನ್ನೂ ಮತ್ತು ಬಲವನ್ನೂ ಹೊಂದುತ್ತಾನೆ.
ಅಥವಾ ಮಾಸಮಪ್ಯೇಕಂ ಸರ್ವಮಾಂಸಾನ್ಯಭಕ್ಷಯನ್ |
ಅತೀತ್ಯ ಸರ್ವದುಃಖಾನಿ ಸುಖೀ ಜೀವೇನ್ನಿರಾಮಯಃ ॥63॥
ಅಥವಾ ಒಂದು ತಿಂಗಳ ಕಾಲವಾದರೂ ಯಾವ ಮಾಂಸವನ್ನೂ ಸೇವಿಸದಿದ್ದರೆ ಮನುಷ್ಯನು ಎಲ್ಲ ದುಃಖಗಳನ್ನೂ ಕಳೆದುಕೊಂಡು ರೋಗರಹಿತನಾಗಿ ಸುಖದಿಂದ ಬದುಕುತ್ತಾನೆ.
ಯೇ ವರ್ಜಯಂತಿ ಮಾಂಸಾನಿ ಮಾಸಶಃ ಪಕ್ಷಶೋಽಪಿ ವಾ |
ತೇಷಾಂ ಹಿಂಸಾನಿವೃತ್ತಾನಾಂ ಬ್ರಹ್ಮಲೋಕೋ ವಿಧೀಯತೇ ॥64॥
ಯಾರು ಮಾಸಗಳವರೆಗೆ ಅಥವಾ ಪಕ್ಷಗಳವರೆಗೆ ಮಾಂಸವನ್ನು ವರ್ಜಿಸುತ್ತಾರೆಯೋ ಅಂತಹವರು ಹಿಂಸೆಯಿಂದ ನಿವೃತ್ತರಾಗುವ ಕಾರಣ ಅವರಿಗೆ ಬ್ರಹ್ಮಲೋಕವು ವಿಧಿಸಲ್ಪಡುತ್ತದೆ.
ಮಾಂಸಂ ತು ಕೌಮುದಂ ಪಕ್ಷಂ ವರ್ಜಿತಂ ಪಾರ್ಥ ರಾಜಭಿಃ |
ಸರ್ವಭೂತಾತ್ಮಭೂತೈಸ್ತೈರ್ವಿಜ್ಞಾತಾರ್ಥಪರಾವರೈಃ ॥65॥
ಎಲೈ ಪಾರ್ಥನೇ, ಸರ್ವಭೂತಾಂತರ್ಯಾಮಿಯಾದ ಪರಮಾತ್ಮನನ್ನು ತಿಳಿದ, ತತ್ತ್ವ ಜ್ಞಾನಿಗಳಾದ ರಾಜರು ಕಾರ್ತಿಕ ಮಾಸದಲ್ಲಿ ಮಾಂಸವನ್ನು ತ್ಯಜಿಸಿದ್ದಾರೆ.
ನಾಭಾಗೇನಾಂಬರೀಷೇಣ ಗಯೇನ ಚ ಮಹಾತ್ಮನಾ |
ಆಯುಷಾ ಚಾನರಣ್ಯೇನ ದಿಲೀಪರಘುಪೂರುಭಿಃ ॥66॥
ಕಾರ್ತವೀರ್ಯಾನಿರುದ್ಧಾಭ್ಯಾಂ ನಹುಷೇಣ ಯಯಾತಿನಾ |
ಆಯುನಾ ವಾ ನರೇಂದ್ರೇಣ ತಥೈವ ಶಶಬಿಂದುನಾ |
ಯೌವನಾಶ್ವೇನ ಚ ತಥಾ ಶಿಬಿನೌಶೀನರೇಣ ಚ ॥67॥
ಶ್ಯೇನಚಿತ್ರೇಣ ರಾಜೇಂದ್ರ ಸೋಮಕೇನ ವೃಕೇಣ ಚ |
ರೈವತೇನ ರಂತಿದೇವೇನ ವಸುನಾ ಸೃಂಜಯೇನ ಚ ॥68॥
ದುಃಷಂತೇನ ಕರೂಷೇಣ ರಾಮಾಲಕನಳೈಸ್ತಥಾ |
ವಿರೂಪಾಶ್ವೇನ ನಿಮಿನಾ ಜನಕೇನ ಚ ಧೀಮತಾ ॥69॥
ಸಿಲೇನ ಪೃಥುನಾ ಚೈವ ವೀರಸೇನೇನ ಚೈವ ಹ |
ಇಕ್ಷ್ವಾಕುಣಾ ಶಂಭುನಾ ಚ ಶ್ವೇತೇನ ಸಗರೇಣ ಚ ॥70॥
ಏತೈಶ್ಚಾನ್ಯೈಶ್ಚ ರಾಜೇಂದ್ರ ಪುರಾ ಮಾಂಸಂ ನ ಭಕ್ಷಿತಮ್ |
ಶಾರದಂ ಕೌಮುದಂ ಮಾಸಂ ತತಸ್ತೇ ಸ್ವರ್ಗಮಾಪ್ನುವನ್ ॥71॥
ನಾಭಾಗ, ಅಂಬರೀಷ, ಮಹಾತ್ಮನಾದ ಗಯ, ಆಯು, ಅರಣ್ಯ, ದಿಲೀಪ, ರಘು, ಪೂರು, ಕಾರ್ತವೀರ್ಯ, ಅನಿರುದ್ಧ, ನಹುಷ, ಯಯಾತಿ, ಶಶಬಿಂದು, ಯೌವನಾಶ್ವ (ಮಾಂಧಾತೃ), ಔಶೀನರನಾದ ಶಿಬಿ, ಶ್ಯೇನಚಿತ್ರ, ಸೋಮಕ, ವೃಕ, ರೈವತ, ರಂತಿದೇವ, ವಸು, ಸೃಂಜಯ, ದುಷ್ಯಂತ, ಕರೂಷ, ರಾಮ, ಅಲಕ, ನಳ, ವಿರೂಪಾಶ್ವ, ನಿಮಿ, ಮೇಧಾವಿಯಾದ ಜನಕ, ಸಿಲ, ಪೃಥು, ವೀರಸೇನನಾದ ಇಕ್ಷ್ವಾಕು, ಶಂಭು, ಶ್ವೇತ, ಸಗರ - ಎಲೈ ರಾಜನೇ, ಇವರು ಯಾರೂ ಶರತ್ಕಾಲದ ಕಾರ್ತಿಕ ಮಾಸದಲ್ಲಿ ಮಾಂಸವನ್ನು ಭಕ್ಷಿಸಲಿಲ್ಲ. ಅದರಿಂದ ಅವರು ಸ್ವರ್ಗವನ್ನು ಹೊಂದಿದರು.
ಬ್ರಹ್ಮಲೋಕೇ ಚ ತಿಷ್ಠಂತಿ ಜ್ವಲಮಾನಾಃ ಶ್ರಿಯಾಽನ್ವಿತಾಃ |
ಉಪಾಸ್ಯಮಾನಾ ಗಂಧರ್ವೈಃ ಸ್ತ್ರೀಸಹಸ್ರೈಃ ಸಮಾವೃತಾಃ ॥72॥
ಇವರು ಗಂಧರ್ವರಿಂದ ಸೇವಿಸಲ್ಪಟ್ಟು, ಸಹಸ್ರ ಸ್ತ್ರೀಯರಿಂದ ಪರಿವೃತರಾಗಿ, ಕಾಂತಿಯಿಂದ ಬೆಳಗುತ್ತಾ ಬ್ರಹ್ಮಲೋಕದಲ್ಲಿ ಇರುತ್ತಾರೆ.
ತದೇತದುತ್ತಮಂ ಧರ್ಮಮಹಿಂಸಾಲಕ್ಷಣಂ ಶುಭಮ್ |
ಯೇ ಚರಂತಿ ಮಹಾತ್ಮಾನೋ ನಾಕಪೃಷ್ಠೇ ವಸಂತಿ ತೇ ॥73॥
ಆದ್ದರಿಂದ ಈ ಅಹಿಂಸಾರೂಪವಾದ ಧರ್ಮವು ಶ್ರೇಷ್ಠವಾದುದು ಮತ್ತು ಶುದ್ಧವಾದುದು. ಅದನ್ನು ಆಚರಣೆ ಮಾಡುವ ಮಹಾತ್ಮರು ಸ್ವರ್ಗಲೋಕದಲ್ಲಿ ವಾಸವನ್ನು ಮಾಡುತ್ತಾರೆ.
ಮಧು ಮಾಂಸಂ ಚ ಯೇ ನಿತ್ಯಂ ವರ್ಜಯಂತೀಹ ಧಾರ್ಮಿಕಾಃ |
ಜನ್ಮಪ್ರಭೃತಿ ಮದ್ಯಂ ಚ ಸರ್ವೇ ತೇ ಮುನಯಃ ಸ್ಮೃತಾಃ |
ವಿಶಿಷ್ಟತಾಂ ಜ್ಞಾತಿಷು ಚ ಲಭಂತೇ ನಾತ್ರ ಸಂಶಯಃ ॥74॥
ಮದ್ಯ-ಮಾಂಸಗಳನ್ನು ಯಾವಾಗಲೂ ವರ್ಜಿಸುವ ಧಾರ್ಮಿಕರು ಮತ್ತು ಜನ್ಮಾರಭ್ಯ ಮದ್ಯವನ್ನು ವರ್ಜಿಸುವವರು - ಇವರೆಲ್ಲರೂ ಮುನಿಗಳೆಂದು ಹೇಳಲ್ಪಡುತ್ತಾರೆ. ಮದ್ಯ-ಮಾಂಸಗಳನ್ನು ವರ್ಜಿಸುವವರು ಜ್ಞಾತಿಗಳಲ್ಲಿ ಶ್ರೇಷ್ಠರಾಗುತ್ತಾರೆ ಎನ್ನುವುದರಲ್ಲಿ ಸಂಶಯವಿಲ್ಲ.
ಇಮಂ ಧರ್ಮಮಮಾಂಸಾದಂ ಯಶ್ಚರೇಚ್ಛ್ರಾವಯೇತ ವಾ |

ಅಪಿ ಚೇತ್ಸುದುರಾಚಾರೋ ನ ಜಾತು ನಿರಯಂ ವ್ರಜೇತ್ ॥75॥
ಈ ಮಾಂಸದ ಅಭಕ್ಷಣೆಗೆ ಸಂಬಂಧಿಸಿದ ಈ ಆಖ್ಯಾನವನ್ನು ಯಾರು ಕೇಳುತ್ತಾರೆಯೋ, ಕೇಳಿಸುತ್ತಾರೆಯೋ ಮತ್ತು ಯಾರು ಮಾಂಸದ ಅಭಕ್ಷಣೆಯನ್ನು ಆಚರಿಸುತ್ತಾರೆಯೋ ಅವರು ದುರಾಚಾರಿಗಳಾಗಿದ್ದರೂ ನರಕಕ್ಕೆ ಹೋಗುವುದಿಲ್ಲ.
ಪಠೇದ್ ವಾ ಯ ಇದಂ ರಾಜನ್ ಶೃಣುಯಾದ್ ವಾಪ್ಯಭೀಕ್ಷ್ಣಶಃ |
ಅಮಾಂಸಭಕ್ಷಣವಿಧಿಂ ಪವಿತ್ರಮೃಷಿಪೂಜಿತಮ್ |
ವಿಮುಕ್ತಃ ಸರ್ವಪಾಪೇಭ್ಯಃ ಸರ್ವಕಾಮೈರ್ಮಹೀಯತೇ ॥76॥
ಎಲೈ ರಾಜನೇ, ಈ ಪವಿತ್ರವಾದ, ಋಷಿಗಳಿಂದ ಪೂಜಿತವಾದ, ಮಾಂಸ ವರ್ಜನ ವಿಧಿಯನ್ನು ಯಾವನು ಸತತವಾಗಿ ಕೇಳುತ್ತಾನೆಯೋ ಅವನು ಸರ್ವಪಾಪಗಳಿಂದ ನಿರ್ಮುಕ್ತನಾಗಿ ಸರ್ವಕಾಮಗಳನ್ನು ಹೊಂದುತ್ತಾನೆ.
ಆಪನ್ನಶ್ಚಾಪದೋ ಮುಚ್ಯೇದ್ ಬದ್ಧೋ ಮುಚ್ಯೇತ ಬಂಧನಾತ್ |
ಮುಚ್ಯೇತ ರೋಗಾದ್ ರೋಗೀ ಚ ದುಃಖಾನ್ಮುಚ್ಯೇತ ದುಃಖಿತಃ ॥77॥
ಆಪತ್ತಿಗೆ ಸಿಲುಕಿದವನು ಆಪತ್ತಿನಿಂದ ಬಿಡುಗಡೆಯನ್ನು ಹೊಂದುತ್ತಾನೆ. ಬದ್ಧನಾದವನು ಬಂಧನದ ಬಿಡುಗಡೆಯನ್ನು ಹೊಂದುತ್ತಾನೆ. ರೋಗಿಯು ರೋಗದ ನಿವೃತ್ತಿಯನ್ನು ಹೊಂದುತ್ತಾನೆ. ದುಃಖಿಯಾದವನು ದುಃಖದ ಪರಿಹಾರವನ್ನು ಹೊಂದುತ್ತಾನೆ.
ತಿರ್ಯಗ್ಯೋನಿಂ ನ ಗಚ್ಛೇತ ರೂಪವಾಂಶ್ಚ ಭವೇನ್ನರಃ |
ಸಿದ್ಧಿಮಾನ್ ವೈ ಕುಲಶ್ರೈಷ್ಠ್ಯಂ ಪ್ರಾಪ್ನುಯಾಚ್ಚ ಮಹದ್ಯಶಃ ॥78॥
ಮಾಂಸದ ಅಭಕ್ಷಣೆಯನ್ನು ಅನುಷ್ಠಾನ ಮಾಡುವ ಮನುಷ್ಯನು ನೀಚಯೋನಿಗಳಿಗೆ ಹೋಗುವುದಿಲ್ಲ. ರೂಪವಂತನಾಗಿ ಜನಿಸಿ, ಸಿದ್ಧಿಯನ್ನು ಪಡೆದು, ತನ್ನ ಕುಲದಲ್ಲಿ ಶ್ರೇಷ್ಠತೆಯನ್ನು ಮತ್ತು ಅಪಾರವಾದ ಕೀರ್ತಿಯನ್ನು ಪಡೆಯುತ್ತಾನೆ.
ಏತತ್ ತೇ ಕಥಿತಂ ರಾಜನ್ ಮಾಂಸಸ್ಯ ಪರಿವರ್ಜನೇ |
ಅಪ್ರವೃತ್ತೌ ನಿವೃತ್ತೌ ಚ ವಿಧಾನಮೃಷಿನಿರ್ಮಿತಮ್ ॥79॥
ಎಲೈ ರಾಜನೇ, ಮಾಂಸಭಕ್ಷಣವರ್ಜನದ ವಿಷಯದಲ್ಲಿ ಪ್ರವೃತ್ತಿಯನ್ನೇ ಮಾಡದಿದ್ದರೆ ಅಥವಾ ಮೊದಲು ಪ್ರವೃತ್ತಿ ಮಾಡಿ ಅನಂತರ ನಿವೃತ್ತಿಯನ್ನು ಮಾಡುವಲ್ಲಿ ಋಷಿಗಳು ಹೇಳಿದ ವಿಧಾನವನ್ನು ನಿನಗೆ ತಿಳಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಮಧುಮಾಂಸಭಕ್ಷಣನಿವೃತ್ತಿರ್ನಾಮ ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಅರವತ್ತೇಳನೆಯ ಅಧ್ಯಾಯ

ಮಾಂಸಭಕ್ಷಣಪ್ರಕರಣದ ಉಪಸಂಹಾರ

ಯುಧಿಷ್ಠಿರಃ
ಇಮೇ ವೈ ಮಾನವಾ ಲೋಕೇ ಭೃಶಂ ಮಾಂಸಸ್ಯ ಗೃದ್ಧಿನಃ |
ವಿಸೃಜ್ಯ ಭಕ್ಷ್ಯಾನ್ ವಿವಿಧಾನ್ ಯಥಾ ರಕ್ಷೋಗಣಾಸ್ತಥಾ ॥1॥
ಯುಧಿಷ್ಠಿರ ಲೋಕದಲ್ಲಿ ಈ ಮನುಷ್ಯರು ವಿವಿಧವಾದ ಭಕ್ಷ್ಯಗಳನ್ನು ಬಿಟ್ಟು ರಾಕ್ಷಸ ಸಮೂಹದಂತೆ ಮಾಂಸವನ್ನು ತಿನ್ನುವುದರಲ್ಲಿ ತೀವ್ರವಾದ ಆಸೆ ಉಳ್ಳವರಾಗಿದ್ದಾರೆ.
ನಾಪೂಪಾನ್ ವಿವಿಧಾಕಾರಾನ್ ಶಾಕಾನಿ ವಿವಿಧಾನಿ ಚ |
ಷಾಡವಾನ್ ರಸಯೋಗಾಂಶ್ಚ ತಥೇಚ್ಛಂತಿ ಯಥಾಽಽಮಿಷಮ್ ॥2॥
ಅವರು ಮಾಂಸವನ್ನು ಬಯಸುವಂತೆ ವಿವಿಧವಾದ ಹಣ್ಣುಗಳನ್ನಾಗಲೀ, ವಿವಿಧವಾದ ತರಕಾರಿಗಳನ್ನಾಗಲೀ ಅಥವಾ ಕಡುಬುಗಳನ್ನಾಗಲೀ ಅಥವಾ ರಸಗಳನ್ನಾಗಲೀ ಬಯಸುವುದಿಲ್ಲ.
ತತ್ರ ಮೇ ಬುದ್ಧಿರತ್ರೈವ ವಿಸರ್ಗೇ ಪರಿಮುಹ್ಯತೇ |
ನ ಮನ್ಯೇ ರಸತಃ ಕಿಂಚಿನ್ಮಾಂಸತೋಽಸ್ತೀಹ ಕಿಂಚನ ॥3॥
ನನಗೆ ಮಾಂಸವನ್ನು ಬಿಡುವ ವಿಷಯದಲ್ಲಿ ಬುದ್ಧಿಯು ಮೋಹಗೊಂಡಿದೆ. ಮಾಂಸಕ್ಕಿಂತಲೂ ರುಚಿಯಾದುದು ಯಾವುದೂ ಇಲ್ಲವೆಂದು ನಾನು ತಿಳಿಯುತ್ತೇನೆ.
ತದಿಚ್ಛಾಮಿ ಗುಣಾನ್ ಶ್ರೋತುಂ ಮಾಂಸಸ್ಯಾಭಕ್ಷಣೇಽಪಿ ವಾ |
ಭಕ್ಷಣೇ ಚೈವ ಯೇ ದೋಷಾಸ್ತಾಂಶ್ಚೈವ ಪುರುಷರ್ಷಭ ॥4॥
ಆದ್ದರಿಂದ ಎಲೈ ಪುರುಷರ್ಷಭನೇ, ಮಾಂಸವನ್ನು ಪರಿತ್ಯಜಿಸುವುದರಲ್ಲಿ ಇರುವ ಗುಣಗಳನ್ನೂ, ಮಾಂಸವನ್ನು ಭಕ್ಷಿಸುವುದರಲ್ಲಿ ಬರುವ ದೋಷಗಳನ್ನೂ ನಾನು ಕೇಳಲು ಬಯಸುತ್ತೇನೆ.
ಸರ್ವಂ ತತ್ತ್ವೇನ ಧರ್ಮಜ್ಞ ಯಥಾವದಿಹ ಧರ್ಮತಃ |
ಕಿಂ ವಾ ಭಕ್ಷ್ಯಮಭಕ್ಷ್ಯಂ ವಾ ಸರ್ವಮೇತದ್ ವದಸ್ವ ಮೇ ॥5॥
ಎಲೈ ಧರ್ಮಜ್ಞನೇ, ಧರ್ಮದೃಷ್ಟಿಯಿಂದ ಎಲ್ಲವನ್ನೂ ಸರಿಯಾಗಿ ಹೇಳು. ಯಾವುದು ಭಕ್ಷ್ಯ, ಯಾವುದು ಅಭಕ್ಷ್ಯ ಎಂಬುದೆಲ್ಲವನ್ನೂ ನನಗೆ ಹೇಳುವವನಾಗು.
ಭೀಷ್ಮಃ
ಏವಮೇತನ್ಮಹಾಬಾಹೋ ಯಥಾ ವದಸಿ ಭಾರತ |

ನ ಮಾಂಸಾತ್ ಪರಮತ್ರಾನ್ಯದ್ ರಸತೋ ವಿದ್ಯತೇ ಭುವಿ ॥6॥
ಎಲೈ ಭಾರತನೇ, ಮಹಾಬಾಹುವೇ, ನೀನು ಹೇಳಿದಂತೆಯೇ ರುಚಿಯ ವಿಷಯದಲ್ಲಿ ಮಾಂಸಕ್ಕಿಂತ ಶ್ರೇಷ್ಠವಾದುದು ಭೂಮಿಯಲ್ಲಿ ಯಾವುದೂ ಇಲ್ಲ.
ಕ್ಷತಕ್ಷೀಣಾಭಿತಪ್ತಾನಾಂ ಗ್ರಾಮ್ಯಧರ್ಮರತಾಶ್ಚ ಯೇ |
ಅಧ್ವನಾ ಕರ್ಶಿತಾನಾಂ ಚ ನ ಮಾಂಸಾದ್ ವಿದ್ಯತೇ ಪರಮ್ ॥7॥
ಗಾಯಗೊಂಡವರಿಗೂ, ರೋಗಿಷ್ಠರಾದವರಿಗೂ, ದಾರಿಹೋಕರಿಗೂ ಮಾಂಸಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.
ಸದ್ಯೋ ವರ್ಧಯತಿ ಪ್ರಾಣಾನ್ ಪುಷ್ಟಿಮಗ್ರ್ಯಾಂ ದದಾತಿ ಚ |
ನ ಭಕ್ಷ್ಯೋಽಭ್ಯಧಿಕಃ ಕಶ್ಚಿನ್ಮಾಂಸಾದಸ್ತಿ ಪರಂತಪ ॥8॥
ಎಲೈ ಪರಂತಪನೇ, ಮಾಂಸವು ತಕ್ಷಣದಲ್ಲಿಯೇ ಇಂದ್ರಿಯಗಳಿಗೆ ಶಕ್ತಿಯನ್ನು ಕೊಡುತ್ತದೆ. ದೇಹಕ್ಕೆ ಶ್ರೇಷ್ಠವಾದ ಪುಷ್ಟಿಯನ್ನು ಕೊಡುತ್ತದೆ. ಆದ್ದರಿಂದ ಮಾಂಸಕ್ಕಿಂತ ದೊಡ್ಡದಾದ ಯಾವ ಭಕ್ಷ್ಯವೂ ಇಲ್ಲ.
ವಿವರ್ಜನೇ ತು ಬಹವೋ ಗುಣಾಃ ಕೌರವನಂದನ |
ಯೇ ಭವಂತಿ ಮನುಷ್ಯಾಣಾಂ ತಾನ್ ಮೇ ನಿಗದತಃ ಶೃಣು ॥9॥
ಎಲೈ ಕೌರವನಂದನನೇ, ಮಾಂಸಭಕ್ಷಣವನ್ನು ಬಿಡುವುದರಿಂದ ಮನುಷ್ಯರಿಗೆ ಯಾವ ಬಹುಗುಣಗಳು ಉಂಟಾಗುತ್ತವೆ ಎಂಬುದನ್ನು ನನ್ನಿಂದ ಕೇಳು.
ಸ್ವಮಾಂಸಂ ಪರಮಾಂಸೈರ್ಯೋ ವಿವರ್ಧಯಿತುಮಿಚ್ಛತಿ |
ನಾಸ್ತಿ ಕ್ಷುದ್ರತರಸ್ತಸ್ಮಾನ್ನ ನೃಶಂಸತರೋ ನರಃ ॥10॥
ಇನ್ನೊಂದು ಪ್ರಾಣಿಯ ಮಾಂಸದಿಂದ ತನ್ನ ಮಾಂಸವನ್ನು ಅಭಿವೃದ್ಧಿ ಪಡಿಸಲು ಇಚ್ಛಿಸುವವನಿಗಿಂತ ಹೆಚ್ಚು ಕ್ಷುದ್ರನಾದವನು ಮತ್ತು ಕ್ರೂರಿಯಾದವನು ಯಾವನೂ ಇಲ್ಲ.
ನ ಹಿ ಪ್ರಾಣಾತ್ ಪ್ರಿಯತರಂ ಲೋಕೇ ಕಿಂಚನ ವಿದ್ಯತೇ |
ತಸ್ಮಾದ್ ದಯಾಂ ನರಃ ಕುರ್ಯಾದ್ ಯಥಾಽಽತ್ಮನಿ ತಥಾ ಪರೇ ॥
ಲೋಕದಲ್ಲಿ ಪ್ರಾಣಕ್ಕಿಂತ ಪ್ರಿಯವಾದ ವಸ್ತುವು ಯಾವುದೂ ಇಲ್ಲ. ಆದ್ದರಿಂದ ಮನುಷ್ಯನು ತನ್ನಲ್ಲಿ ಹೇಗೋ ಹಾಗೆ ಇನ್ನೊಬ್ಬರಲ್ಲಿಯೂ ದಯೆಯನ್ನು ತೋರಿಸಬೇಕು.
ಶುಕ್ರಾಚ್ಚ ತಾತ ಸಂಭೂತಿರ್ಮಾಂಸಸ್ಯೇಹ ನ ಸಂಶಯಃ |
ಭಕ್ಷಣೇ ತು ಮಹಾನ್ ದೋಷೋ ವಧೇನ ಸ ಹಿ ತುಲ್ಯತೇ ॥12॥
ಎಲೈ ಪ್ರೀತಿಪಾತ್ರನೇ, ಮಾಂಸವು ವೀರ್ಯದಿಂದ ಉಂಟಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಮಾಂಸಭಕ್ಷಣೆಯು ಮಹಾದೋಷಕವಾದುದು ಮತ್ತು ವಧೆಗೆ ಸಮಾನವಾದುದು.
ಅಹಿಂಸಾಲಕ್ಷಣೋ ಧರ್ಮ ಇತಿ ವೇದವಿದೋ ವಿದುಃ |
ಯದಹಿಂಸ್ರಂ ಭವೇತ್ಕರ್ಮ ತತ್ಕುರ್ಯಾದಾತ್ಮವಾನ್ ನರಃ ॥13॥
ಅಹಿಂಸೆಯು ಧರ್ಮದ ಲಕ್ಷಣವೆಂದು ವೇದಜ್ಞರು ಹೇಳುತ್ತಾರೆ. ಸ್ಥಿರವಾದ ಮನಸ್ಸುಳ್ಳ ಮನುಷ್ಯರು ಹಿಂಸೆ ಇಲ್ಲದಿದ್ದಂತಹ ಕರ್ಮವನ್ನೇ ಮಾಡಬೇಕು.
ಪಿತೃದೈವತಯಜ್ಞೇಷು ಪ್ರೋಕ್ಷಿತಂ ಹವಿರುಚ್ಯತೇ |
ವಿಧಿನಾ ವೇದದೃಷ್ಟೇನ ತದ್ ಭುಕ್ತ್ವೇಹ ನ ದುಷ್ಯತೇ ॥14॥
ಪಿತೃಕಾರ್ಯದಲ್ಲಿ ಮತ್ತು ದೇವತಾ ಪೂಜೆಯಲ್ಲಿ ಮತ್ತು ಯಜ್ಞದಲ್ಲಿ ಪ್ರೋಕ್ಷಿತವಾದ ಮಾಂಸವು ಹವಿಸ್ಸು ಎಂದು ಹೇಳಲ್ಪಡುತ್ತದೆ. ವೇದವಿಹಿತವಾದ ಮಾರ್ಗದಿಂದ ಅದನ್ನು ಭಕ್ಷಿಸಿದರೆ ದೋಷವುಂಟಾಗುವುದಿಲ್ಲ.
ಯಜ್ಞಾರ್ಥೇ ಪಶವಃ ಸೃಷ್ಟಾ ಇತ್ಯಪಿ ಶ್ರೂಯತೇ ಶ್ರುತಿಃ |
ಅತೋಽನ್ಯಥಾ ಪ್ರವೃತ್ತಾನಾಂ ರಾಕ್ಷಸೋ ವಿಧಿರುಚ್ಯತೇ ॥15॥
ಕ್ಷತ್ರಿಯಾಣಾಂ ತು ಯೋ ದೃಷ್ಟೋ ವಿಧಿಸ್ತಮಪಿ ಮೇ ಶೃಣು |
ವೀರ್ಯೇಣೋಪಾರ್ಜಿತಂ ಮಾಂಸಂ ಯಥಾ ಖಾದನ್ ನ ದುಷ್ಯತಿ ॥
ಯಜ್ಞದ ಸಲುವಾಗಿ ಪಶುಗಳು ಸೃಷ್ಟವಾದವು ಎಂದು ವೇದದಲ್ಲಿ ಕೇಳಿಬರುತ್ತದೆ. ಅದನ್ನು ಬಿಟ್ಟು ಬೇರೆ ರೀತಿಯಲ್ಲಿ ಮಾಂಸಭಕ್ಷಣೆಯಲ್ಲಿ ಪ್ರವೃತ್ತನಾದರೆ ಅದು ರಾಕ್ಷಸರ ನಡತೆ. ಕ್ಷತ್ರಿಯರಿಗೆ ಹೇಳಲ್ಪಟ್ಟಿರುವ ವಿಧಾನವನ್ನೂ ನನ್ನಿಂದ ಕೇಳು. ಪರಾಕ್ರಮದಿಂದ ಬೇಟೆಯಾಡಿ ಸಂಪಾದಿಸಿದ ಮಾಂಸವನ್ನು ತಿಂದರೆ ದೋಷವುಂಟಾಗುವುದಿಲ್ಲ.
ಆರಣ್ಯಾಃ ಸರ್ವದೈವತ್ಯಾಃ ಪ್ರೋಕ್ಷಿತಾಃ ಸರ್ವಶೋ ಮೃಗಾಃ |
ಅಗಸ್ತ್ಯೇನ ಪುರಾ ರಾಜನ್ ಮೃಗಯಾ ಯೇನ ಪೂಜ್ಯತೇ ॥17॥
ಎಲೈ ರಾಜನೇ, ಅರಣ್ಯದಲ್ಲಿರುವ ಬೇರೆ ಬೇರೆ ದೇವತೆಗಳಿಗೆ ಸಂಬಂಧಿಸಿದ ಎಲ್ಲ ಪಶುಗಳೂ ಅಗಸ್ತ್ಯರಿಂದ ಪ್ರೋಕ್ಷಿತವಾಗಿವೆ. ಆದ್ದರಿಂದ ಬೇಟೆಯು ಪೂಜಿಸಲ್ಪಡುತ್ತದೆ (ಅಗಸ್ತ್ಯರಿಂದ ಪ್ರೋಕ್ಷಿತವಾಗಿರುವುದರಿಂದ ಬೇಟೆಯಾಡಿ ಬಂದ ಮಾಂಸವು ಹವಿಸ್ಸಾಗಿರುತ್ತದೆ).
ನಾತ್ಮಾನಮಪರಿತ್ಯಜ್ಯ ಮೃಗಯಾ ನಾಮ ವಿದ್ಯತೇ |
ಸಮತಾಮುಪಸಂಗಮ್ಯ ರೂಪಂ ಹನ್ಯಾನ್ನ ವಾ ನೃಪ ॥18॥
ತನ್ನನ್ನು ಪ್ರಾಣಸಂಕಟಕ್ಕೆ ಸಿಲುಕಿಸಿಕೊಳ್ಳದೆ ಬೇಟೆ ಎಂಬುದಿಲ್ಲ. ತಾನು ಪ್ರಾಣಿಯನ್ನು ಕೊಲ್ಲಬಹುದು ಅಥವಾ ಪ್ರಾಣಿಯೂ ತನ್ನನ್ನು ಕೊಲ್ಲಬಹುದು. ಹೀಗೆ ಪ್ರಾಣಿಯ ಸಾಮ್ಯವನ್ನು ಹೊಂದಿದವನು ಎಲೈ ರಾಜನೇ, ಬೇಟೆಯಲ್ಲಿ ಪ್ರಾಣಿಯನ್ನು ಕೊಲ್ಲಬಹುದು

ಅಥವಾ ಕೊಲ್ಲದಿರಬಹುದು.
ಅತೋ ರಾಜರ್ಷಯಃ ಸರ್ವೇ ಮೃಗಯಾಂ ಯಾಂತಿ ಭಾರತ |
ನ ಹಿ ಲಿಪ್ಯಂತಿ ದೋಷೇಣ ನ ಚೈತತ್ ಪಾತಕಂ ವಿದುಃ ॥19॥
ಎಲ್ಲೈ ಭಾರತನೇ, ಆದ್ದರಿಂದ ಎಲ್ಲ ರಾಜರ್ಷಿಗಳೂ ಬೇಟೆಯಾಡುತ್ತಾರೆ. ಅವರು ದೋಷದಿಂದ ಲಿಪ್ತರಾಗುವುದಿಲ್ಲ. ಬೇಟೆಯನ್ನು ಪಾಪವೆಂದು ಯಾರೂ ಹೇಳುವುದಿಲ್ಲ.
ನ ಹಿ ತತ್ಪರಮಂ ಕಿಂಚಿದಿಹ ಲೋಕೇ ಪರತ್ರ ಚ |
ಕರ್ತವ್ಯಾ ಚೇಹ ಭೂತೇಷು ದಯಾ ಕೌರವನಂದನ ॥20॥
ಆದರೆ ಎಲ್ಲೈ ಕೌರವನಂದನನೇ, ಲೋಕದಲ್ಲಿ ದಯೆಯನ್ನು ಬಿಟ್ಟು ಪ್ರಾಣಿಗಳಿಗೆ ಮಾಡಬಹುದಾದ ಶ್ರೇಷ್ಠವಾದ ಉಪಕಾರವು ಯಾವುದೂ ಇಲ್ಲ.
ನ ಭಯಂ ವಿದ್ಯತೇ ಜಾತು ನರಸ್ಯೇಹ ದಯಾವತಃ |
ದಯಾವತಾಮಿಮೇ ಲೋಕಾಃ ಪರೇ ಚಾಪಿ ತಪಸ್ವಿನಾಮ್ ॥21॥
ದಯಾಪರನಾದ ಮನುಷ್ಯನಿಗೆ ಈ ಲೋಕದಲ್ಲಿ ಯಾವ ಭಯವೂ ಇಲ್ಲ. ದಯಾವಂತರಾದ ತಪಸ್ವಿಗಳಿಗೆ ಈ ಲೋಕವೂ ಪರಲೋಕವೂ ಕ್ಲೃಪ್ತವಾಗಿದೆ.
ಅಭಯಂ ಸರ್ವಭೂತೇಭ್ಯೋ ಯೋ ದದಾತಿ ದಯಾಪರಃ |
ಅಭಯಂ ತಸ್ಯ ಭೂತಾನಿ ದದತೀತ್ಯನುಶುಶ್ರುಮಃ ॥22॥
ಯಾವನು ದಯಾಪರನಾಗಿ ಸಕಲ ಪ್ರಾಣಿಗಳಿಗೂ ಅಭಯವನ್ನು ಕೊಡುತ್ತಾನೆಯೋ ಅವನಿಗೆ ಸಕಲ ಪ್ರಾಣಿಗಳು ಅಭಯವನ್ನು ಕೊಡುತ್ತವೆ ಎಂದು ನಾವು ಕೇಳಿದ್ದೇವೆ.
ಕ್ಷತಂ ಚ ಸ್ಖಲಿತಂ ಚೈವ ಪತಿತಂ ಕ್ಲಿಷ್ಟಮಾಹತಮ್ |
ಸರ್ವಭೂತಾನಿ ರಕ್ಷಂತಿ ಸಮೇಷು ವಿಷಮೇಷು ಚ ॥23॥
ಎಲ್ಲ ಪ್ರಾಣಿಗಳೂ ತಮ್ಮ ಜಾತಿಗೆ ಸೇರಿದ ಇನ್ನೊಂದು ಪ್ರಾಣಿಯು ಗಾಯಗೊಂಡಾಗ, ಎಡವಿದಾಗ, ಬಿದ್ದಾಗ, ಕ್ಲೇಶಗೊಂಡಾಗ, ಹೊಡೆಯಲ್ಪಟ್ಟಾಗ ತಮ್ಮ ಸಮಪರಿಸ್ಥಿತಿಯಲ್ಲಿಯೂ ಮತ್ತು ವಿಷಮ ಪರಿಸ್ಥಿತಿಯಲ್ಲಿಯೂ ಆ ಪ್ರಾಣಿಯನ್ನು ರಕ್ಷಿಸುತ್ತವೆ.
ನೈನಂ ವ್ಯಾಲಮೃಗಾ ಘ್ನಂತಿ ನ ಪಿಶಾಚಾ ನ ರಾಕ್ಷಸಾಃ |
ಮುಚ್ಯಂತೇ ಭಯಕಾಲೇಷು ಮೋಕ್ಷಯಂತಿ ಚ ಯೇ ಪರಾನ್ ॥24॥
ಯಾರು ಸಂಕಟಕ್ಕೆ ಸಿಲುಕಿದ ಇನ್ನೊಬ್ಬನನ್ನು ಸಂಕಟದಿಂದ ಪಾರು ಮಾಡುತ್ತಾರೆಯೋ ಅಂತಹವರನ್ನು ಸರ್ಪಗಳು ಕೊಲ್ಲುವುದಿಲ್ಲ. ಪಿಶಾಚಿಗಳಾಗಲೀ, ರಾಕ್ಷಸರಾಗಲೀ ಕೊಲ್ಲುವುದಿಲ್ಲ. ಅಂತಹವರು ಭಯಸಂದರ್ಭದಲ್ಲಿ ಭಯ ಮುಕ್ತರಾಗುತ್ತಾರೆ.
ಪ್ರಾಣದಾನಾತ್ ಪರಂ ದಾನಂ ನ ಭೂತಂ ನ ಭವಿಷ್ಯತಿ |
ನ ಹ್ಯಾತ್ಮನಃ ಪ್ರಿಯತರಃ ಕಶ್ಚಿದಸ್ತೀತಿ ನಿಶ್ಚಿತಮ್ ॥25॥
ಪ್ರಾಣದಾನಕ್ಕಿಂತ ದೊಡ್ಡ ದಾನವು ಹಿಂದೆ ಇರಲಿಲ್ಲ ಮತ್ತು ಮುಂದೆ ಇರುವುದಿಲ್ಲ. ಹಾಗೆಯೇ ತನಗಿಂತ ಪ್ರಿಯವಾದ ವಸ್ತುವು ಇನ್ನೊಂದು ಇಲ್ಲ ಎಂಬುದು ನಿಶ್ಚಿತವಾದುದು.
ಅನಿಷ್ಟಂ ಸರ್ವಭೂತಾನಾಂ ಮರಣಂ ನಾಮ ಭಾರತ |
ಮೃತ್ಯುಕಾಲೇ ಹಿ ಭೂತಾನಾಂ ಸದ್ಯೋ ಜಾಯತಿ ವೇಪಥುಃ ॥26॥
ಎಲ್ಲೈ ಭಾರತನೇ, ಎಲ್ಲ ಪ್ರಾಣಿಗಳಿಗೂ ಮರಣವು ಅನಿಷ್ಟವಾದುದು. ಮರಣ ಕಾಲದಲ್ಲಿ ಎಲ್ಲ ಪ್ರಾಣಿಗಳಿಗೂ ತಕ್ಷಣವೇ ಶರೀರದಲ್ಲಿ ನಡುಕ ಉಂಟಾಗುತ್ತದೆ.
ಜಾತಿಜನ್ಮಜರಾದುಃಖೇ ನಿತ್ಯಂ ಸಂಸಾರಸಾಗರೇ |
ಜಂತವಃ ಪರಿವರ್ತಂತೇ ಮರಣಾದುದ್ವಿಜಂತಿ ಚ ॥27॥
ಗರ್ಭವಾಸ, ಜನನ, ಮುಪ್ಪು ಮತ್ತು ದುಃಖಗಳಿಂದ ಕೂಡಿದ ಸಂಸಾರ ಸಾಗರದಲ್ಲಿ ಪ್ರಾಣಿಗಳು ನಿತ್ಯವೂ ತೊಳಲಾಡುತ್ತವೆ ಮತ್ತು ಮರಣಕ್ಕೆ ಹೆದರುತ್ತವೆ.
ಗರ್ಭವಾಸೇಷು ಪಚ್ಯಂತೇ ಕ್ಷಾರಾಮ್ಲಕಟುಕೈ ರಸೈಃ |
ಮೂತ್ರಶ್ಲೇಷ್ಮಪುರೀಷಾಣಾಂ ಸ್ಪರ್ಶೈಶ್ಚ ಭೃಶದಾರುಣೈಃ ॥28॥
ಗರ್ಭವಾಸಗಳಲ್ಲಿ ಹುಳಿ-ಉಪ್ಪು-ಖಾರ ಈ ರಸಗಳ ಸ್ಪರ್ಶದಿಂದಲೂ, ಮಲ- ಮೂತ್ರ-ಶ್ಲೇಷ್ಮಾದಿಗಳ ಅತ್ಯಂತ ದಾರುಣವಾದ ಸ್ಪರ್ಶದಿಂದಲೂ ಪೀಡಿಸಲ್ಪಡುತ್ತಾರೆ.
ಜಾತಾಶ್ಚಾಪ್ಯವಶಾಸ್ತತ್ರ ಭಿದ್ಯಮಾನಾಃ ಪುನಃ ಪುನಃ |
ಪಾಟ್ಯಮಾನಾಶ್ಚ ದೃಶ್ಯಂತೇ ವಿವಶಾ ಮಾಂಸಗೃದ್ಧಿಭಿಃ ॥29॥
ಜನಿಸಿದ ಮೇಲೂ ಸಹ ಪ್ರಾಣಿಗಳು ವಿವಶವಾಗಿರುವಾಗಲೇ ಮಾಂಸವನ್ನು ಆಶಿಸುವ ಜನರು ಅವುಗಳನ್ನು ಕತ್ತರಿಸುವುದು ಮತ್ತು ಸೀಳುವುದು ಕಂಡುಬರುತ್ತದೆ.
ಕುಂಭೀಪಾಕೇ ಚ ಪಚ್ಯಂತೇ ತಾಂ ತಾಂ ಯೋನಿಮುಪಾಗತಾಃ |
ಆಕ್ರಮ್ಯ ಮಾರ್ಯಮಾಣಾಶ್ಚ ಭ್ರಾಮ್ಯಂತೇ ವೈ ಪುನಃ ಪುನಃ ॥30॥
ಅಂತಹ ಘಾತಕರು ಕುಂಭೀಪಾಕ ನರಕದಲ್ಲಿ ಬೇಯಿಸಲ್ಪಡುತ್ತಾರೆ ಮತ್ತು ಯಾವ ಪ್ರಾಣಿಗಳನ್ನು ವಧೆ ಮಾಡಿದರೋ ಆ ಯೋನಿಯಲ್ಲಿಯೇ ಜನ್ಮವೆತ್ತಿ ಅಲ್ಲಿ ಬಲಾತ್ಕಾರದಿಂದ ಶಸ್ತ್ರಗಳಿಂದ ಕತ್ತರಿಸಲ್ಪಟ್ಟು ಪುನಃ ಪುನಃ ಸಂಸಾರದಲ್ಲಿ ತಿರುಗಾಡುತ್ತಾರೆ.
ನಾತ್ಮನೋಽಸ್ತಿ ಪ್ರಿಯತರಃ ಪೃಥಿವ್ಯಾಮನುಸೃತ್ಯ ಹ |

ತಸ್ಮಾತ್ಪ್ರಾಣಿಷು ಸರ್ವೇಷು ದಯಾವಾನಾತ್ಮವಾನ್ ಭವೇತ್ ॥31॥
ಭೂಮಿಯಲ್ಲಿ ಎಲ್ಲಿ ಹುಡುಕಿದರೂ ತನಗಿಂತ ಪ್ರಿಯವಾದ ವಸ್ತುವು ಯಾವುದೂ ದೊರೆಯುವುದಿಲ್ಲ. ಆದ್ದರಿಂದ ವಿವೇಕಿಯಾದವನು ಎಲ್ಲ ಪ್ರಾಣಿಗಳಲ್ಲಿಯೂ ದಯೆಯನ್ನು ತೋರಬೇಕು.
ಸರ್ವಮಾಂಸಾನಿ ಯೋ ರಾಜನ್ ಯಾವಜ್ಜೀವಂ ನ ಭಕ್ಷಯೇತ್ |
ಸ್ವರ್ಗೇ ಸ ವಿಪುಲಂ ಸ್ಥಾನಂ ಪ್ರಾಪ್ನುಯಾತ್ ನಾತ್ರ ಸಂಶಯಃ ॥32॥
ಎಲೈ ರಾಜನೇ, ಯಾವನು ತನ್ನ ಜೀವಮಾನ ಕಾಲದಲ್ಲಿ ಯಾವ ಮಾಂಸವನ್ನೂ ಭಕ್ಷಿಸುವುದಿಲ್ಲವೋ ಅವನು ವಿಪುಲವಾದ ಸ್ವರ್ಗಸ್ಥಾನವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.
ಯೇ ಭಕ್ಷಯಂತಿ ಮಾಂಸಾನಿ ಭೂತಾನಾಂ ಜೀವಿತೈಷಿಣಾಮ್ |
ಭಕ್ಷ್ಯಂತೇ ತೇಽಪಿ ತೈರ್ಭೂತೈರಿತಿ ಮೇ ನಾಸ್ತಿ ಸಂಶಯಃ ॥33॥
ಯಾವ ಮನುಷ್ಯನು ಬದುಕಲು ಬಯಸುವ ಪ್ರಾಣಿಗಳ ಮಾಂಸವನ್ನು ತಿನ್ನುತ್ತಾನೆಯೋ ಆ ಪ್ರಾಣಿಗಳೂ ಕೂಡ ನರಕದಲ್ಲಿ ಅಥವಾ ಜೀವಿತದಲ್ಲಿ ಅವನನ್ನು ಭಕ್ಷಿಸುವುದರಲ್ಲಿ ಸಂಶಯವಿಲ್ಲ.
ಮಾಂ ಸ ಭಕ್ಷಯತೇ ಯಸ್ಮಾದ್ ಭಕ್ಷಯಿಷ್ಯೇ ತಮಪ್ಯಹಮ್ |
ಏತನ್ಮಾಂಸಸ್ಯ ಮಾಂಸತ್ವಂ ಗದಿತಂ ಚೇಹ ಭಾರತ ॥34॥
ನನ್ನನ್ನು ಅವನು ತಿನ್ನುತ್ತಾನೆ, ಅವನನ್ನು ನಾನು ತಿನ್ನುವೆನು ಎಂಬ ವ್ಯುತ್ಪತ್ತಿಯಿಂದ ಎಲೈ ಭಾರತನೇ ಮಾಂಸ ಶಬ್ದವು ಹೇಳಲ್ಪಡುತ್ತದೆ. (`ಮಾಂ' ಎಂದರೆ ನನ್ನನ್ನು ತಿನ್ನುತ್ತಾನೆ ಎಂದು ಅರ್ಥ. `ಸಃ' ಎಂದರೆ ನನ್ನಿಂದ ತಿನ್ನಲ್ಪಡುತ್ತಾನೆ ಎಂದು ಅರ್ಥ).
ಘಾತಕೋ ವಧ್ಯತೇ ನಿತ್ಯಂ ತಥಾ ವಧ್ಯೇತ ಬಂಧಕಃ |
ಆಕ್ರೋಷ್ಟಾಕ್ರುಶ್ಯತೇ ರಾಜನ್ ದ್ವೇಷ್ಟಾ ದ್ವೇಷ್ಯತ್ವಮಾಪ್ನುತೇ ॥35॥
ಪ್ರಾಣಿಯನ್ನು ಕೊಲ್ಲುವವನು ಯಾವಾಗಲೂ ವಧೆಯನ್ನು ಹೊಂದುತ್ತಾನೆ. ಪ್ರಾಣಿಗಳನ್ನು ಕಟ್ಟಿಹಾಕುವವನು ವಧಿಸಲ್ಪಡುತ್ತಾನೆ. ಎಲೈ ರಾಜನೇ, ನಿಂದಿಸುವವನು ನಿಂದಿಸಲ್ಪಡುತ್ತಾನೆ ಮತ್ತು ದ್ವೇಷವನ್ನು ಮಾಡುವವನು ದ್ವೇಷಿಸಲ್ಪಡುತ್ತಾನೆ.
ಯೇನ ಯೇನ ಶರೀರೇಣ ಯದ್ಯತ್ ಕರ್ಮ ಕರೋತಿ ಯಃ |
ತೇನ ತೇನ ಶರೀರೇಣ ತತ್ತತ್ಫಲಮುಪಾಶ್ನುತೇ ॥36॥
ಯಾವ ಯಾವ ಶರೀರದಿಂದ ಮನುಷ್ಯನು ಯಾವ ಯಾವ ಕರ್ಮವನ್ನು ಮಾಡುತ್ತಾನೆಯೋ ಅದೇ ಶರೀರದಿಂದ ಆ ಕರ್ಮಗಳ ಫಲವನ್ನು ಅನುಭವಿಸುತ್ತಾನೆ.
ಅಹಿಂಸಾ ಪರಮೋ ಧರ್ಮಸ್ತಥಾಽಹಿಂಸಾ ಪರೋ ದಮಃ |
ಅಹಿಂಸಾ ಪರಮಂ ದಾನಮ್ ಅಹಿಂಸಾ ಪರಮಂ ತಪಃ ॥37॥
ಅಹಿಂಸೆಯು ಶ್ರೇಷ್ಠವಾದ ಧರ್ಮ. ಅಹಿಂಸೆಯು ಶ್ರೇಷ್ಠವಾದ ತಪಸ್ಸು. ಅಹಿಂಸೆಯು ಶ್ರೇಷ್ಠವಾದ ದಾನ. ಅಹಿಂಸೆಯು ಶ್ರೇಷ್ಠವಾದ ಇಂದ್ರಿಯನಿಗ್ರಹ.
ಅಹಿಂಸಾ ಪರಮೋ ಯಜ್ಞಸ್ತಥಾಹಿಂಸಾ ಪರಂ ಬಲಮ್ |
ಅಹಿಂಸಾ ಪರಮಂ ಮಿತ್ರಮಹಿಂಸಾ ಪರಮಂ ಸುಖಮ್ |
ಅಹಿಂಸಾ ಪರಮಂ ಸತ್ಯಮಹಿಂಸಾ ಪರಮಂ ಶ್ರುತಮ್ ॥38॥
ಅಹಿಂಸೆಯು ಶ್ರೇಷ್ಠವಾದ ಯಜ್ಞ. ಅಹಿಂಸೆಯು ಶ್ರೇಷ್ಠವಾದ ಬಲ. ಅಹಿಂಸೆಯು ಶ್ರೇಷ್ಠವಾದ ಮಿತ್ರ. ಅಹಿಂಸೆಯು ಶ್ರೇಷ್ಠವಾದ ಸುಖ. ಅಹಿಂಸೆಯು ಶ್ರೇಷ್ಠವಾದ ಸತ್ಯ ಮತ್ತು ಅಹಿಂಸೆಯು ಶ್ರೇಷ್ಠವಾದ ವಿದ್ಯೆ.
ಸರ್ವಯಜ್ಞೇಷು ವಾ ದಾನಂ ಸರ್ವತೀರ್ಥೇಷು ಚಾಪ್ಲುತಮ್ |
ಸರ್ವದಾನಫಲಂ ವಾಪಿ ನೈತತ್ತುಲ್ಯಮಹಿಂಸಯಾ ॥39॥
ಸರ್ವಯಜ್ಞಗಳಲ್ಲಿ ದಾನವಾಗಲೀ, ಸರ್ವತೀರ್ಥಗಳಲ್ಲಿ ಸ್ನಾನವಾಗಲೀ ಅಥವಾ ಸರ್ವದಾನಗಳಾಗಲೀ ಈ ಅಹಿಂಸೆಗೆ ಸಮಾನವಾದ ಫಲವನ್ನು ಹೊಂದುವುದಿಲ್ಲ. ಅಹಿಂಸೆಯೇ ಅಧಿಕವಾದ ಫಲವನ್ನು ಕೊಡುತ್ತದೆ.
ಅಹಿಂಸ್ರಸ್ಯ ತಪೋಽಕ್ಷಯ್ಯಮಹಿಂಸ್ರೋ ಯಜತೇ ಸದಾ |
ಅಹಿಂಸ್ರಃ ಸರ್ವಭೂತಾನಾಂ ಯಥಾ ಮಾತಾ ಯಥಾ ಪಿತಾ ॥40॥
ಹಿಂಸೆಯನ್ನು ಮಾಡದವನು ಅಕ್ಷಯವಾದ ತಪಸ್ಸನ್ನು ಪಡೆಯುತ್ತಾನೆ. ಹಿಂಸೆಯನ್ನು ಮಾಡದವನು ಯಾವಾಗಲೂ ಯಜ್ಞವನ್ನು ಮಾಡುತ್ತಾನೆ. ಹಿಂಸೆಯನ್ನು ಮಾಡದವನು ಎಲ್ಲ ಪ್ರಾಣಿಗಳಿಗೆ ತಂದೆಯಂತೆಯೂ, ತಾಯಿಯಂತೆಯೂ ಆಗುತ್ತಾನೆ.
ಏತತ್ಫಲಮಹಿಂಸಾಯಾ ಭೂಯಶ್ಚ ಕುರುಪುಂಗವ |
ನ ಹಿ ಶಕ್ಯಾ ಗುಣಾ ವಕ್ತುಮಿಹ ವರ್ಷಶತೈರಪಿ ॥41॥
ಎಲೈ ಕುರುಪುಂಗವನೇ, ಅಹಿಂಸೆಗೆ ಇವೂ ಮತ್ತು ಇನ್ನೂ ಹೆಚ್ಚಿನ ಫಲವೂ ಇದೆ. ಅಹಿಂಸೆಯ ಗುಣಗಳನ್ನು ನೂರು ವರ್ಷಗಳಲ್ಲಿಯೂ ಹೇಳಿ ಮುಗಿಸಲು ಸಾಧ್ಯವಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಹಿಂಸಾಸ್ತುತಿರ್ನಾಮ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಅರವತ್ತೆಂಟನೆಯ ಅಧ್ಯಾಯ

ಕೀಟೋಪಾಖ್ಯಾನ ಪ್ರಾರಂಭ
ಯುಧಿಷ್ಠಿರಃ
ಅಕಾಮಾಶ್ಚ ಸಕಾಮಾಶ್ಚ ಹತಾ ಯೇಽಸ್ಮಿನ್ ಮಹಾಹವೇ |
ಕಾಂ ಗತಿಂ ಪ್ರತಿಪದ್ಯಂತೇ ತನ್ಮೇ ಬ್ರೂಹಿ ಪಿತಾಮಹ ||1||
ಯುಧಿಷ್ಠಿರ ಎಲ್ಲೈ ಪಿತಾಮಹನೇ, ಈ ಮಹಾಯುದ್ಧದಲ್ಲಿ ಇಚ್ಛೆಯಿಂದ ಅಥವಾ ಇಚ್ಛೆಯಿಲ್ಲದೆ ಹತರಾದವರು ಯಾವ ಗತಿಯನ್ನು ಹೊಂದುತ್ತಾರೆ?
ದುಃಖಂ ಪ್ರಾಣಪರಿತ್ಯಾಗಃ ಪುರುಷಾಣಾಂ ಮಹಾಮೃಧೇ |
ಜಾನಾಮಿ ತತ್ತ್ವಂ ಧರ್ಮಜ್ಞ ಪ್ರಾಣತ್ಯಾಗಃ ಸುದುಷ್ಕರಃ ||2||
ದೊಡ್ಡ ಯುದ್ಧದಲ್ಲಿ ಪುರುಷರಿಗೆ ಪ್ರಾಣಪರಿತ್ಯಾಗವು ದುಃಖವೆಂಬ ತತ್ತ್ವವನ್ನು ತಿಳಿದಿದ್ದೇನೆ. ಎಲ್ಲೈ ಧರ್ಮಜ್ಞನೇ, ಪ್ರಾಣತ್ಯಾಗವು ಬಹಳ ಕಠಿಣವಾದುದು.
ಸಮೃದ್ಧೇ ವಾಽಸಮೃದ್ಧೇ ವಾ ಶುಭೇ ವಾ ಯದಿ ವಾಽಶುಭೇ |
ಕಾರಣಂ ತತ್ರ ಮೇ ಬ್ರೂಹಿ ಸರ್ವಜ್ಞೋ ಹ್ಯಸಿ ಮೇ ಮತಃ ||3||
ಶ್ರೀಮಂತನಾಗಿರಲಿ ಇಲ್ಲದಿರಲಿ, ಶುಭಯೋನಿಯಾಗಲಿ ಅಥವಾ ಅಶುಭ ಯೋನಿಯಾಗಲಿ ಪ್ರಾಣತ್ಯಾಗವು ದುಷ್ಕರವಾದುದು. ಅದಕ್ಕೆ ಕಾರಣವನ್ನು ಹೇಳು. ನೀನು ಸರ್ವಜ್ಞನೆಂದು ನನ್ನ ಅಭಿಪ್ರಾಯ.
ಭೀಷ್ಮಃ
ಸಮೃದ್ಧೇ ವಾಽಸಮೃದ್ಧೇ ವಾ ಶುಭೇ ವಾ ಯದಿ ವಾಽಶುಭೇ |
ಸಂಸಾರೇಽಸ್ಮಿನ್ ಸಮಾಜಾತಾಃ ಪ್ರಾಣಿನಃ ಪೃಥಿವೀಪತೇ ||4||
ನಿರತಾ ಯೇನ ಭಾವೇನ ತತ್ರ ಮೇ ಶೃಣು ಕಾರಣಮ್ |
ಸಮ್ಯಕ್ಚಾಯಮನುಪ್ರಶ್ನಸ್ತ್ವಯೋಕ್ತಶ್ಚ ಯುಧಿಷ್ಠಿರ ||5||
ಭೀಷ್ಮ ಎಲ್ಲೈ ಯುಧಿಷ್ಠಿರನೇ, ನೀನು ಮಾಡಿದ ಈ ಪ್ರಶ್ನೆಯು ಬಹಳ ಸರಿಯಾಗಿದೆ. ಸಮೃದ್ಧವಾದ ಅಥವಾ ಸಮೃದ್ಧಿಯಿಂದ ಕೂಡಿರದ ಜನ್ಮಗಳಲ್ಲಿ, ಶುಭವಾದ ಅಥವಾ ಅಶುಭವಾದ ಯೋನಿಗಳಲ್ಲಿ ಈ ಸಂಸಾರಕ್ಕೆ ಬಂದ ಪ್ರಾಣಿಗಳು ಯಾವ ಅಭಿಪ್ರಾಯದಿಂದ ಆ ದೇಹದಲ್ಲಿ ಪ್ರೀತಿಯಿಂದ ಇರುತ್ತಾರೆಂಬುದಕ್ಕೆ ಕಾರಣವನ್ನು ನಿನಗೆ ಹೇಳುತ್ತೇನೆ, ಕೇಳು.
ಅತ್ರ ತೇ ವರ್ತಯಿಷ್ಯಾಮಿ ಪುರಾವೃತ್ತಮಿದಂ ನೃಪ |
ದ್ವೈಪಾಯನಸ್ಯ ಸಂವಾದಂ ಕೀಟಸ್ಯ ಚ ಯುಧಿಷ್ಠಿರ ||6||
ಎಲ್ಲೈ ಯುಧಿಷ್ಠಿರನೇ, ರಾಜನೇ, ಈ ವಿಷಯದಲ್ಲಿ ಹಿಂದೆ ದ್ವೈಪಾಯನರಿಗೂ ಮತ್ತು ಒಂದು ಕೀಟಕ್ಕೂ ನಡೆದ ಸಂವಾದವನ್ನು ನಿನಗೆ ಹೇಳುವೆನು.
ಬ್ರಹ್ಮಭೂತಶ್ಚರನ್ ವಿಪ್ರಃ ಕೃಷ್ಣದ್ವೈಪಾಯನಃ ಪುರಾ |
ದದರ್ಶ ಕೀಟಂ ಧಾವಂತಂ ಶೀಘ್ರಂ ಶಕಟವರ್ತ್ಮನಿ ||7||
ಮನಸ್ಸಿನಿಂದ ಬ್ರಹ್ಮನಲ್ಲಿಯೇ ಇದ್ದ ಬ್ರಾಹ್ಮಣರಾದ ಕೃಷ್ಣದ್ವೈಪಾಯನರು ಹಿಂದೆ ಒಂದು ಗಾಡಿಯು ಹೋಗುತ್ತಿದ್ದ ಮಾರ್ಗದಲ್ಲಿ ಶೀಘ್ರವಾಗಿ ಓಡುತ್ತಿದ್ದ ಒಂದು ಕೀಟವನ್ನು ನೋಡಿದರು.
ಗತಿಜ್ಞಃ ಸರ್ವಭೂತಾನಾಂ ರುತಜ್ಞಶ್ಚ ಶರೀರಿಣಾಮ್ |
ಸರ್ವಜ್ಞಃ ಸರ್ವದರ್ಶೀ ಚ ಕೀಟಂ ವಚನಮಬ್ರವೀತ್ ||8||
ಕೀಟ ಸಂತ್ರಸ್ತರೂಪೋಽಸಿ ತ್ವರಿತಶ್ಚೈವ ಲಕ್ಷ್ಯಸೇ |
ಕ್ವ ಧಾವಸಿ ತದಾಚಕ್ಷ್ವ ಕುತಸ್ತೇ ಭಯಮಾಗತಮ್ ||9||
ಸರ್ವಪ್ರಾಣಿಗಳ ಗಮನವನ್ನು, ಮಾತುಗಳನ್ನು ತಿಳಿದ ಸರ್ವಜ್ಞರೂ, ಸರ್ವದರ್ಶಿಯೂ ಆದ ಅವರು ಕೀಟವನ್ನು ಕುರಿತು- `ಎಲ್ಲೈ ಕೀಟವೇ, ಬಹಳ ಹೆದರಿದಂತೆ ಕಾಣುತ್ತಿದ್ದೀಯೆ ಮತ್ತು ತ್ವರೆಯಿಂದ ಕೂಡಿದಂತೆ ಕಾಣುತ್ತಿದ್ದೀಯೆ! ನಿನಗೆ ಯಾವುದರಿಂದ ಭಯವುಂಟಾಗಿದೆ? ಎಲ್ಲಿಗೆ ಓಡುತ್ತಿದ್ದೀಯೆ ಎಂದು ನನಗೆ ಹೇಳು' ಎಂದು ಕೇಳಿದರು.
ಕೀಟಃ
ಶಕಟಸ್ಯಾಸ್ಯ ಮಹತೋ ಘೋಷಂ ಶ್ರುತ್ವಾ ಭಯಂ ಮಮ |
ಆಗತಂ ವೈ ಮಹಾಬುದ್ಧೇ ಸ್ವನ ಏಷ ಹಿ ದಾರುಣಃ |
ಶ್ರೂಯತೇ ನ ಸ ಮಾಂ ಹನ್ಯಾದಿತಿ ತಸ್ಮಾದಪಾಕ್ರಮೇ ||10||
ಕೀಟ ಎಲ್ಲೈ ಮಹಾಬುದ್ಧಿಯುಳ್ಳವರೇ, ಈ ದೊಡ್ಡ ಗಾಡಿಯ ಘೋಷವನ್ನು ಕೇಳಿ ನನಗೆ ಭಯವುಂಟಾಗಿದೆ. ಈ ಘೋಷವು ಬಹಳ ದಾರುಣವಾಗಿ ಕೇಳಿಬರುತ್ತಿದೆ. ಗಾಡಿಯು ನನ್ನನ್ನು ಕೊಲ್ಲದಿರಲಿ ಎಂದು ನಾನು ಶೀಘ್ರವಾಗಿ ಓಡಿ ಹೋಗುತ್ತಿದ್ದೇನೆ.
ಶ್ವಸತಾಂ ಚ ಶೃಣೋಮ್ಯೇವಂ ಗೋಪುತ್ರಾಣಾಂ ಪ್ರಚೋದ್ಯತಾಮ್ |
ವಹತಾಂ ಸುಮಹಾಭಾರಂ ಸನ್ನಿಕರ್ಷೇ ಸ್ವನಂ ಪ್ರಭೋ |
ನೃಣಾಂ ಚ ಸಂವಾಹಯತಾಂ ಶ್ರೂಯಂತೇ ವಿವಿಧಾಃ ಸ್ವನಾಃ ||11||
ಎಲ್ಲೈ ಪ್ರಭುವೇ, ಬಹಳ ದೊಡ್ಡಭಾರವನ್ನು ಹೊತ್ತು ಗಾಡಿಯನ್ನು ಎಳೆಯುತ್ತಿರುವ ಮತ್ತು ಗಾಡಿಯನ್ನು ಹೊಡೆಯುವವರಿಂದ ಪ್ರಚೋದಿಸಲ್ಪಡುತ್ತಿರುವ ಈ ಗೋಪುತ್ರರ (ಸಣ್ಣ ಎತ್ತುಗಳ) ಉಸಿರಾಡುವ ಸ್ವರವನ್ನು ಸಮೀಪದಲ್ಲಿಯೇ ಕೇಳುತ್ತಿದ್ದೇನೆ. ಗಾಡಿಯನ್ನು ಹೊಡೆಯುವ ಮನುಷ್ಯರ ವಿವಿಧ ಶಬ್ದಗಳು ಕೇಳಿಬರುತ್ತಿವೆ.
ಸೋಢುಮಸ್ಮದ್ವಿಧೇನೈಷ ನ ಶಕ್ಯಃ ಕೀಟಯೋನಿನಾ |

ತಸ್ಮಾದಪಕ್ರಮಾಮ್ಯೇಷ ಭಯಾದಸ್ಮಾತ್ ಸುದಾರುಣಾತ್ ॥12॥
ಕೀಟಯೋನಿಯಲ್ಲಿ ಜನಿಸಿದ ನನ್ನಂಥವರಿಂದ ಇದನ್ನು ಸಹಿಸುವುದು ಸಾಧ್ಯವಿಲ್ಲ. ಆದ್ದರಿಂದ ಈ ದಾರುಣವಾದ ಭಯದಿಂದ ನಾನು ಮಾರ್ಗವನ್ನು ಬಿಟ್ಟು ಓಡಿ ಹೋಗುತ್ತಿದ್ದೇನೆ.
ದುಃಖಂ ಹಿ ಮೃತ್ಯುಭೂತಾನಾಂ ಜೀವಿತಂ ಚ ಸುದುರ್ಲಭಮ್ |
ಅತೋ ಭೀತಃ ಪಲಾಯಾಮಿ ಗಚ್ಛೇಯಂ ನಾಸುಖಂ ಸುಖಾತ್ ॥13॥
ಪ್ರಾಣಿಗಳಿಗೆ ಮರಣವು ದುಃಖಕರವಾದುದು ಮತ್ತು ಜೀವನವು ಅತ್ಯಂತ ದುರ್ಲಭವಾದುದು. ಆದ್ದರಿಂದ ಸುಖದ ಕಡೆಯಿಂದ ದುಃಖದ ಕಡೆಗೆ ನಾನು ಹೋಗಬಾರದೆಂದು ಭಯದಿಂದ ಓಡಿಹೋಗುತ್ತಿದ್ದೇನೆ.
ಭೀಷ್ಮಃ
ಇತ್ಯುಕ್ತಃ ಸ ತು ತಂ ಪ್ರಾಹ ಕುತಃ ಕೀಟ ಸುಖಂ ತವ |
ಮರಣಂ ತೇ ಸುಖಂ ಮನ್ಯೇ ತಿರ್ಯಗ್ಯೋನೌ ಹಿ ವರ್ತಸೇ ॥14॥
ಭೀಷ್ಮ ಹೀಗೆ ಹೇಳಲ್ಪಟ್ಟ ದ್ವೈಪಾಯನರು ಆ ಕೀಟವನ್ನು ಕುರಿತು- `ಎಲೈ ಕೀಟವೇ, ನಿನಗೆಲ್ಲಿಯ ಸುಖ? ತಿರ್ಯಗ್ಯೋನಿಯಲ್ಲಿ ಜನಿಸಿರುವೆಯಷ್ಟೆ! ನಿನಗೆ ಮರಣವೇ ಸುಖವೆಂದು ನಾನು ತಿಳಿಯುತ್ತೇನೆ.
ಶಬ್ದಂ ಸ್ಪರ್ಶಂ ರಸಂ ಗಂಧಂ ಭೋಗಾಂಶ್ಚೋಚ್ಚಾವಚಾನ್ ಬಹೂನ್ |
ನಾಭಿಜಾನಾಸಿ ಕೀಟ ತ್ವಂ ಶ್ರೇಯೋ ಮರಣಮೇವ ತೇ ॥15॥
`ಎಲೈ ಕೀಟವೇ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ಶ್ರೇಷ್ಠವಾದ ಮತ್ತು ಕನಿಷ್ಠವಾದ ಅನೇಕ ಭೋಗಗಳನ್ನು ನೀನು ಅನುಭವಿಸಲಾರೆ. ಆದ್ದರಿಂದ ನಿನಗೆ ಮರಣವೇ ಶ್ರೇಷ್ಠವಾದುದು' ಎಂದು ಹೇಳಿದರು.
ಕೀಟಃ
ಸರ್ವತ್ರ ನಿರತೋ ಜೀವ ಇತೀಹಾಪಿ ಸುಖಂ ಮಮ |
ಚೇತಯಾಮಿ ಮಹಾಪ್ರಾಜ್ಞ ತಸ್ಮಾದಿಚ್ಛಾಮಿ ಜೀವಿತಮ್ ॥16॥
ಕೀಟ ಜೀವನು ತನಗೆ ಬಂದ ಪ್ರತಿಯೊಂದು ಯೋನಿಯಲ್ಲಿಯೂ ಸುಖವನ್ನು ಹೊಂದುತ್ತಾನೆ ಎಂಬ ಕಾರಣದಿಂದ ನಾನು ಈ ಕೀಟಯೋನಿಯಲ್ಲಿಯೂ ಸುಖವನ್ನು ಅನುಭವಿಸುತ್ತಿದ್ದೇನೆ. ಎಲೈ ಮಹಾಪ್ರಾಜ್ಞನೇ, ಆದ್ದರಿಂದ ಬದುಕಲು ಇಚ್ಛಿಸುತ್ತೇನೆ.
ಇಹಾಪಿ ವಿಷಯಃ ಸರ್ವೋ ಯಥಾದೇಹಂ ಪ್ರವರ್ತಿತಃ |
ಮಾನುಷಾಸ್ತಿರ್ಯಗಾಶ್ಚೈವ ಪೃಥಗ್ಭೋಗಾ ವಿಶೇಷತಃ ॥17॥
ಈ ದೇಹದಲ್ಲಿಯೂ ಕೂಡ ದೇಹಕ್ಕೆ ಅನುಗುಣವಾಗಿ ಸರ್ವವಿಷಯ ಭೋಗಗಳೂ ಇವೆ. ಮನುಷ್ಯರ ಭೋಗಕ್ಕಿಂತ ಪ್ರಾಣಿಗಳ ಭೋಗವು ವಿಶೇಷವಾಗಿ ಭಿನ್ನವಾದುದೇ ಆಗಿದೆ.
ಅಹಮಾಸಂ ಮನುಷ್ಯೋ ವೈ ಶೂದ್ರೋ ಬಹುಧನಃ ಪುರಾ |
ಅಬ್ರಹ್ಮಣ್ಯೋ ನೃಶಂಸಶ್ಚ ಕದರ್ಯೋ ವೃದ್ಧಿಜೀವನಃ ॥18॥
ನಾನು ಹಿಂದೆ ಬಹಳ ಧನವುಳ್ಳ ಶೂದ್ರನಾಗಿದ್ದೆನು. ಬ್ರಾಹ್ಮಣರಿಗೆ ಹಿತವನ್ನು ಮಾಡದೆ, ಕ್ರೂರಿಯಾಗಿ, ಜಿಪುಣನಾಗಿ ಬಡ್ಡಿಯಿಂದ ಜೀವನವನ್ನು ಮಾಡಿದೆನು.
ವಾಕ್ತೀಕ್ಷ್ಣೋ ನಿಕೃತಿಪ್ರಜ್ಞೋ ಮೋಷ್ಟಾ ವಿಶ್ವಸ್ಯ ಸರ್ವಶಃ |
ಮಿಥಃಕೃತೋಽಪನಿಧನಃ ಪರಸ್ವಹರಣೇ ರತಃ ॥19॥
ತೀಕ್ಷ್ಣವಾದ ಮಾತನ್ನಾಡುತ್ತಾ, ಮೋಸದ ಬುದ್ಧಿಯನ್ನು ಹೊಂದಿದವನಾಗಿ, ಸಿಕ್ಕಿದ್ದನ್ನೆಲ್ಲ ಕದಿಯುತ್ತಾ, ಸುಳ್ಳು ಮಾತನಾಡುತ್ತಾ, ಧನವನ್ನು ಹೂತಿಡುತ್ತಾ, ಇನ್ನೊಬ್ಬರ ಸ್ವತ್ತನ್ನು ಅಪಹಾರ ಮಾಡುವುದರಲ್ಲಿ ನಿರತನಾಗಿದ್ದೆನು.
ಭೃತ್ಯಾತಿಥಿಜನಶ್ಚಾಪಿ ಗೃಹೇ ಪರ್ಯುಷಿತೋ ಮಯಾ |
ಮಾತ್ಸರ್ಯಾತ್ ಸ್ವಾದುಕಾಮೇನ ನೃಶಂಸೇನ ಬುಭೂಷತಾ ॥20॥
ಒಳ್ಳೆಯ ಊಟವನ್ನು ಮಾಡಲು ಬಯಸುವವನೂ, ಕ್ರೂರನೂ, ಧನ ಸಂಪಾದನೆಯಲ್ಲಿಯೇ ಆಸಕ್ತಿಯುಳ್ಳವನೂ ಆದ ನಾನು ಮಾತ್ಸರ್ಯದಿ ಭೃತ್ಯಾತಿಥಿಗಳಿಗೂ, ಸುಹೃಜ್ಜನರಿಗೂ ಅನ್ನವನ್ನು ನೀಡದೆ ಮೊದಲೇ ಭೋಜನವನ್ನು ಮಾಡುತ್ತಿದ್ದೆ.
ದೇವಾರ್ಥಂ ಪಿತೃಯಜ್ಞಾರ್ಥಮನ್ನಂ ಶ್ರದ್ಧಾಕೃತಂ ಮಯಾ |
ನ ದತ್ತಮರ್ಥಕಾಮೇನ ದತ್ತಮನ್ನಂ ಲುನಾಮಿ ಚ ॥21॥
ದೇವಕಾರ್ಯಕ್ಕಾಗಿ ಮಾಡಿದ ಪೂಜೆಯಲ್ಲಿ ಅಥವಾ ಪಿತೃಕಾರ್ಯದಲ್ಲಿ ಮಾಡಿದ ಶ್ರದ್ಧೆಯಿಂದ ಸಿದ್ಧಪಡಿಸಿದ ಅನ್ನವನ್ನು ಲೋಭದಿಂದ ನಾನು ಯಾರಿಗೂ ದಾನವನ್ನು ಮಾಡುತ್ತಿರಲಿಲ್ಲ. ಪರಿಜನರು ಒಂದು ಪಕ್ಷ ದಾನವನ್ನು ಮಾಡಿದರೆ ಅದನ್ನು ಪುನಃ ಕಿತ್ತುಕೊಳ್ಳುತ್ತಿದ್ದೆ.
ಗುಪ್ತಂ ಶರಣಮಾಶ್ರಿತ್ಯ ಭಯೇಷು ಶರಣಾಗತಾಃ |
ಅಕಸ್ಮಾನ್ಮೋ ಭಯಾತ್ ತ್ಯಕ್ತಾ ನ ಚ ತ್ರಾತಾಽಭಯೈಷಿಣಃ ॥22॥
ಭಯದಿಂದ ಅವಿತುಕೊಂಡು ಅಭಯವನ್ನು ಆಶಿಸಿ ನನ್ನ ಬಳಿಗೆ ಬಂದು ಶರಣಾಗತರಾದವರನ್ನು ನಾನು ರಕ್ಷಿಸದೆ ಪರಿತ್ಯಾಗವನ್ನು ಮಾಡಿದೆ.
ಧನಧಾನ್ಯಂ ಪ್ರಿಯಾ ದಾರಾ ಯಾನಂ ವಾಸಸ್ತಥಾಽದ್ಭುತಮ್ |
ಶ್ರಿಯಂ ದೃಷ್ಟ್ವಾ ಮನುಷ್ಯಾಣಾಮಸೂಯಾಮಿ ನಿರರ್ಥಕಮ್ ॥23॥
ಇನ್ನೊಬ್ಬರ ಧನ-ಧಾನ್ಯ, ಪ್ರಿಯರು, ಪತ್ನಿಯರು, ಅದ್ಭುತವಾದ ವಾಹನ-ವಸ್ತ್ರ, ಮತ್ತು ಸಂಪತ್ತನ್ನು ನೋಡಿ ವ್ಯರ್ಥವಾಗಿ ಅಸೂಯೆ ಪಡುತ್ತಿದ್ದೆ.

ಈರ್ಷ್ಯುಃ ಪರಸುಖಂ ದೃಷ್ಟ್ವಾ ಆತತಾಯ್ಯಬುಭೂಷಕಃ |
ತ್ರಿವರ್ಗಹಂತಾ ಚಾನ್ಯೇಷಾಂ ಮೂರ್ಖಾಣಾಂ ಚಾನುವರ್ತಿತಾ ॥24॥
ಇನ್ನೊಬ್ಬರ ಸುಖವನ್ನು ನೋಡಿ ಮತ್ಸರವನ್ನು ಹೊಂದಿ ಇನ್ನೊಬ್ಬರ ಸುಖವನ್ನು ಹಾಳು ಮಾಡಲು ಬಯಸಿ ಯಾವ ಒಳ್ಳೆಯ ಕಾರ್ಯವನ್ನು ಮಾಡಲೂ ಬಯಸದೆ ಇನ್ನೊಬ್ಬರ ಧರ್ಮಾರ್ಥ ಕಾಮಗಳನ್ನು ನಾಶಗೊಳಿಸಿ ಮೂರ್ಖರನ್ನು ಅನುಸರಿಸಿದೆ.
ನೃಶಂಸಗುಣಭೂಯಿಷ್ಠಂ ಪುರಾ ಕರ್ಮ ಕೃತಂ ಮಯಾ |
ಸ್ಮೃತ್ವಾ ತದನುತಪ್ಯೇಽಹಂ ತ್ಯಕ್ತ್ವಾ ಪ್ರಿಯಮಿವಾತ್ಮಜಮ್ ॥25॥
ನಾನು ಹಿಂದೆ ಹೆಚ್ಚಾಗಿ ಕ್ರೂರಕರ್ಮಗಳನ್ನೇ ಮಾಡಿದ್ದೇನೆ. ಅದನ್ನು ಸ್ಮರಿಸಿ ಈಗ ಪ್ರಿಯಪುತ್ರನನ್ನು ಕಳೆದುಕೊಂಡ ತಂದೆಯಂತೆ ಪಶ್ಚಾತ್ತಾಪ ಪಡುತ್ತಿದ್ದೇನೆ.
ಶುಭಾನಾಮಪಿ ಜಾನಾಮಿ ಕೃತಾನಾಂ ಕರ್ಮಣಾಂ ಫಲಮ್ |
ಮಾತಾ ಚ ಪೂಜಿತಾ ವೃದ್ಧಾ ಬ್ರಾಹ್ಮಣಾಶ್ಚಾರ್ಚಿತಾ ಮಯಾ ॥26॥
ನನಗೆ ನಾನು ಮಾಡಿದ ಅಲ್ಪಸ್ವಲ್ಪ ಶುಭಕರ್ಮಗಳ ಫಲವೂ ತಿಳಿದಿದೆ. ನಾನು ವೃದ್ಧಳಾದ ತಾಯಿಯನ್ನು ಪೂಜಿಸಿದೆ. ಬ್ರಾಹ್ಮಣರು ಪೂಜಿಸಲ್ಪಟ್ಟರು.
ಸಕೃಜ್ಜಾತಿಗುಣೋಪೇತಃ ಸಂಗತ್ಯಾ ಗೃಹಮಾಗತಃ |
ಅತಿಥಿಃ ಪೂಜಿತೋ ಬ್ರಹ್ಮನ್ ತೇನ ಮಾಂ ನಾಜಹಾತ್ ಸ್ಮೃತಿಃ ॥27॥
ಎಲೈ ಬ್ರಹ್ಮರ್ಷಿಗಳೇ, ಒಮ್ಮೆ ಸತ್ಕುಲಪ್ರಸೂತನಾದ, ಸದ್ಗುಣಭರಿತನಾದ ಒಬ್ಬ ಬ್ರಾಹ್ಮಣನು ಮನೆಗೆ ಅತಿಥಿಯಾಗಿ ಬಂದು ನನ್ನಿಂದ ಪೂಜಿಸಲ್ಪಟ್ಟನು. ಅದರಿಂದ ನನಗೆ ಹಿಂದಿನ ಸ್ಮೃತಿಯು ಅಳಿಸಿ ಹೋಗಲಿಲ್ಲ.
ಕರ್ಮಣಾ ತೇನ ಚೈವಾಹಂ ಸುಖಾಶಾಮಿಹ ಲಕ್ಷಯೇ |
ತಚ್ಛ್ರೋತುಮಹಮಿಚ್ಛಾಮಿ ತ್ವತ್ತಃ ಶ್ರೇಯಸ್ತಪೋಧನ ॥28॥
ಅಂತಹ ಶುಭಕರ್ಮವನ್ನು ಮಾಡಿದುದರಿಂದ ನನಗೆ ಇಲ್ಲಿ ಸುಖದ ಆಸೆಯು ಇದೆ. ಎಲೈ ತಪೋಧನನೇ, ನಿನ್ನಿಂದ ಶ್ರೇಯಸ್ಸಾಧನವನ್ನು ಕೇಳಲು ಬಯಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *

## ನೂರ ಅರವತ್ತೊಂಬತ್ತನೆಯ ಅಧ್ಯಾಯ

### ಕೀಟಕ್ಕೆ ವ್ಯಾಸರು ಮಾಡಿದ ಅನುಗ್ರಹ

ವ್ಯಾಸಃ
ಶುಭೇನ ಕರ್ಮಣಾ ಯದ್ವೈ ತಿರ್ಯಗ್ಯೋನೌ ನ ಮುಹ್ಯಸೇ |
ಮಮೈವ ಕೀಟ ತತ್ಕರ್ಮ ಯೇನ ತ್ವಂ ನ ಪ್ರಮುಹ್ಯಸೇ ॥1॥
ವ್ಯಾಸ ಎಲೈ ಕೀಟವೇ, ತಿರ್ಯಗ್ಯೋನಿಯಲ್ಲಿ ಜನಿಸಿದ್ದರೂ ಮಾಡಿದ ಶುಭ ಕರ್ಮದ ಪ್ರಭಾವದಿಂದ ನೀನು ವಿಸ್ಮೃತಿಗೆ ಒಳಗಾಗದಿರುವುದು ನನ್ನ ಅನುಗ್ರಹವೇ. ನನ್ನ ಅನುಗ್ರಹದಿಂದ ನಿನಗೆ ಮೌಢ್ಯವು ಉಂಟಾಗಿಲ್ಲ.
ಅಹಂ ಹಿ ದರ್ಶನಾದೇವ ತಾರಯಾಮಿ ತಪೋಬಲಾತ್ |
ತಪೋಬಲಾದ್ ಹಿ ಬಲವದ್ ಬಲಮನ್ಯನ್ನ ವಿದ್ಯತೇ ॥2॥
ನಾನು ತಪೋಬಲದಿಂದ ನೀನು ನನ್ನನ್ನು ನೋಡಿದ ಕಾರಣದಿಂದಲೇ ನಿನ್ನನ್ನು ಕೀಟಯೋನಿಯಿಂದ ದಾಟಿಸುತ್ತೇನೆ. ತಪೋಬಲಕ್ಕಿಂತ ಅಧಿಕವಾದ ಬಲವು ಇನ್ನೊಂದಿಲ್ಲ.
ಜಾನಾಮಿ ಪಾಪೈಃ ಸ್ವಕೃತೈರ್ಗತಂ ತ್ವಾಂ ಕೀಟ ಕೀಟತಾಮ್ |
ಅವಾಪ್ಸ್ಯಸಿ ಪರಂ ಧರ್ಮಂ ಮಾನುಷ್ಯೇ ಯದಿ ಮನ್ಯಸೇ ॥3॥
ಎಲೈ ಕೀಟವೇ, ನೀನು ಮಾಡಿದ ಪಾಪಗಳ ನಿಮಿತ್ತದಿಂದ ನೀನು ಕೀಟ ಯೋನಿಯನ್ನು ಪಡೆದಿದ್ದೀಯೆ ಎಂದು ನಾನು ತಿಳಿದಿದ್ದೇನೆ. ನಿನಗೆ ಇಷ್ಟವಾದರೆ ಮನುಷ್ಯ ಜನ್ಮವನ್ನು ಕೊಡುತ್ತೇನೆ. ಅಲ್ಲಿ ಶ್ರೇಷ್ಠವಾದ ಧರ್ಮವನ್ನು ಸಂಪಾದಿಸುವಿ.
ಕರ್ಮ ಭೂಮಿಕೃತಂ ದೇವಾ ಭುಂಜತೇ ತಿರ್ಯಗಾಶ್ಚ ಯೇ |
ಧರ್ಮಾದಪಿ ಮನುಷ್ಯೇಷು ಕಾಮೋಽರ್ಥಶ್ಚ ಯಥಾ ಗುಣೈಃ ॥4॥
ಭೂಮಿಯಲ್ಲಿ ಮಾಡಿದ ಕರ್ಮದ ಫಲವನ್ನು ದೇವತೆಗಳು ಅನುಭವಿಸುತ್ತಾರೆ ಮತ್ತು ತಿರ್ಯಗ್ಯೋನಿ ಪ್ರಾಣಿಗಳು ಅನುಭವಿಸುತ್ತವೆ. ಮನುಷ್ಯರಿಗೆ ಧರ್ಮಕ್ಕಿಂತಲೂ ಅರ್ಥ-ಕಾಮಗಳು ಹೆಚ್ಚಿನ ಗುಣವುಳ್ಳವುಗಳೆಂದು ತೋರುತ್ತವೆ.
ವಾಗ್ಬುದ್ಧಿಪಾಣಿಪಾದೈಶ್ಚಾಪ್ಯುಪೇತಸ್ಯ ವಿಪಶ್ಚಿತಃ |
ಕಿಂ ಹೀಯತೇ ಮನುಷ್ಯಸ್ಯ ಮಂತ್ರಾರ್ಥಸ್ಯಾಪಿ ಜೀವತಃ ॥5॥
ವಾಗಾದಿ ಇಂದ್ರಿಯಗಳಿಂದಲೂ, ಬುದ್ಧಿಯಿಂದಲೂ ಯುಕ್ತನಾಗಿ, ವಿವೇಕಿಯಾಗಿ ಮಂತ್ರಾರ್ಥವನ್ನು ತಿಳಿದು ಜೀವಿಸುವ ಮನುಷ್ಯನಿಗೆ ಯಾವ ಪುಣ್ಯವು ಹಾನಿಯನ್ನು ಹೊಂದುತ್ತದೆ? (ಯಾವ ಪುಣ್ಯವು ಪ್ರಾಪ್ತವಾಗುವುದಿಲ್ಲ?)- ಲಕ್ಷಾಲಂಕಾರ.
ಜೀವನ್ ಹಿ ಕುರುತೇ ಪೂಜಾಂ ವಿಪ್ರಾಗ್ರ್ಯಃ ಶಶಿಸೂರ್ಯಯೋಃ |
ಬ್ರುವನ್ನಪಿ ಕಥಾಂ ಪುಣ್ಯಾಂ ತತ್ರ ಕೀಟ ತ್ವಮೇಷ್ಯಸಿ ॥6॥

ಬದುಕಿರುವ ಬ್ರಾಹ್ಮಣನು ಸೂರ್ಯ-ಚಂದ್ರರ ಪೂಜೆಯನ್ನು ಮಾಡುತ್ತಾನೆ. ಪವಿತ್ರವಾದ ಪ್ರವಚನವನ್ನು ಮಾಡುತ್ತಾನೆ. ಎಲೈ ಕೀಟವೇ, ಅಂತಹ ಮನುಷ್ಯಯೋನಿಗೆ ನೀನು ಹೋಗುವಿ.
ಗುಣಭೂತಾನಿ ಭೂತಾನಿ ತತ್ರ ತ್ವಮುಪಭೋಕ್ಷ್ಯಸೇ |
ತತ್ರ ತೇಽಹಂ ವಿನೇಷ್ಯಾಮಿ ಬ್ರಹ್ಮತ್ವಂ ಯತ್ರ ಚೇಚ್ಛಸಿ ॥7॥
ಉಳಿದ ಪ್ರಾಣಿಗಳು (ಮತ್ತು ಮನುಷ್ಯರು) ನಿನಗೆ ಸೇವಕರಾಗಿರುತ್ತಾರೆ. ನಿನ್ನನ್ನು ನೀನು ಇಷ್ಟಪಟ್ಟರೆ ಅಂತಹ ಬ್ರಾಹ್ಮಣನನ್ನಾಗಿ ಮಾಡುವೆನು.
ಸ ತಥೇತಿ ಪ್ರತಿಶ್ರುತ್ಯ ಕೀಟೋ ಸಮವತಿಷ್ಠತ |
ತಮೃಷಿಂ ದ್ರಷ್ಟುಮಗಮತ್ ಸರ್ವಾಸ್ವನ್ಯಾಸು ಯೋನಿಷು ॥8॥
ಆ ಕೀಟವು ಆ ಋಷಿಗಳನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿ ದಾರಿಯಲ್ಲಿ ನಿಂತು ಬೇರೆ ಎಲ್ಲ ಯೋನಿಗಳನ್ನೂ ನೋಡಲು ಹೊರಟಿತು.
ಶ್ವಾವಿದ್ ಗೋಧಾವರಾಹಾಣಾಂ ತಥೈವ ಮೃಗಪಕ್ಷಿಣಾಮ್ |
ಶ್ವಪಾಕಶೂದ್ರವೈಶ್ಯಾನಾಂ ಕ್ಷತ್ರಿಯಾಣಾಂ ಚ ಯೋನಿಷು ॥9॥
ಮುಳ್ಳುಹಂದಿ, ಉಡ, ವರಾಹ, ಮೃಗ-ಪಕ್ಷಿಗಳು, ಶ್ವಪಚ, ಶೂದ್ರ, ವೈಶ್ಯ, ಕ್ಷತ್ರಿಯರ ಯೋನಿಗಳನ್ನು ನೋಡಿತು.
ಸ ಕೀಟ ಏವಮಾಖ್ಯಾತಮ್ ಋಷಿಣಾ ಸತ್ಯವಾದಿನಾ |
ಪ್ರತಿಸ್ಮೃತ್ಯಾಥ ಜಗ್ರಾಹ ಪಾದೌ ಮೂರ್ಧ್ನಿ ಕೃತಾಂಜಲಿಃ ॥10॥
ಕ್ಷತ್ರಿಯ ಯೋನಿಯನ್ನು ನೋಡಿದ ಆ ಕೀಟವು ಸತ್ಯವಾದಿಗಳಾದ ಆ ಋಷಿಗಳು ಹೇಳಿದ ಆ ಮಾತನ್ನು ಸ್ಮರಿಸಿ ಹೋಗಿ ಕೈಗಳನ್ನು ಮುಗಿದು ಅವರ ಪಾದಗಳಿಗೆ ಶಿರಸಾ ನಮಸ್ಕರಿಸಿತು.
ಕೀಟಃ
ಇದಂ ತದತುಲಂ ಸ್ಥಾನಮೀಪ್ಸಿತಂ ದಶಭಿರ್ಗುಣೈಃ |
ಯದಹಂ ಪ್ರಾಪ್ಯ ಕೀಟತ್ವಮಾಗತೋ ರಾಜಪುತ್ರತಾಮ್ ॥11॥
ಕೀಟ ಇದು ನಾನು ಅಪೇಕ್ಷಿಸಿದ ಹತ್ತುಗುಣಗಳಿಂದ ಕೂಡಿದ ಅಸದೃಶವಾದ ಸ್ಥಾನ. ನಾನು ಕೀಟತ್ವವನ್ನು ಹೊಂದಿಯೇ ರಾಜಪುತ್ರತ್ವವು ನನಗೆ ಬೇಕಾಗಿದ್ದಿತು.
ವಹಂತಿ ಮಾಮತಿಬಲಾಃ ಕುಂಜರಾ ಹೇಮಮಾಲಿನಃ |
ಸ್ಯಂದನೇಷು ಚ ಕಾಂಬೋಜಾ ಯುಕ್ತಾಃ ಪರಮವಾಜಿನಃ ॥12॥
ನನ್ನನ್ನು ಚಿನ್ನದ ಮಾಲೆಯನ್ನು ಧರಿಸಿದ ಅತಿಬಲಿಷ್ಠವಾದ ಆನೆಗಳು ಹೊರುತ್ತವೆ. ನನ್ನ ರಥದಲ್ಲಿ ಕಾಂಬೋಜದೇಶದ ಶ್ರೇಷ್ಠವಾದ ಅಶ್ವಗಳು ಹೂಡಲ್ಪಡುತ್ತವೆ.
ಉಷ್ಟ್ರಾಶ್ವತರಯುಕ್ತಾನಿ ಯಾನಾನಿ ಚ ವಹಂತಿ ಮಾಮ್ |
ಸಬಾಂಧವಃ ಸಹಾಮಾತ್ಯಶ್ಚಾಶ್ನಾಮಿ ಪಿಶಿತೌದನಮ್ ॥13॥
ಒಂಟೆಗಳನ್ನು, ಹೇಸರಗತ್ತೆಗಳನ್ನು ಹೂಡಿದ ವಾಹನಗಳು ನನ್ನನ್ನು ಕರೆದುಕೊಂಡು ಹೋಗುತ್ತವೆ. ಅಮಾತ್ಯರಿಂದ ಮತ್ತು ಬಂಧುಗಳಿಂದ ಒಡಗೂಡಿ ನಾನು ಮಾಂಸಭೋಜನವನ್ನು ಮಾಡುತ್ತೇನೆ.
ಗೃಹೇಷು ಸುನಿವಾಸೇಷು ಸುಖೇಷು ಶಯನೇಷು ಚ |
ಪರಾರ್ಧ್ಯೇಷು ಮಹಾಭಾಗ ಸ್ವಪಾಮೀಹ ಸುಪೂಜಿತಃ ॥14॥
ಎಲೈ ಮಹಾಭಾಗನೇ, ಒಳ್ಳೆಯ ರೀತಿಯಿಂದ ನಿರ್ಮಿಸಿದ ಮನೆಗಳಲ್ಲಿ ಸುಖವಾದ ಶಯನಗಳಲ್ಲಿ ಬಹಳ ಪೂಜಿತನಾಗಿ ಮಲಗುತ್ತೇನೆ.
ಸರ್ವೇಷ್ವಪರರಾತ್ರೇಷು ಸೂತಮಾಗಧಬಂದಿನಃ |
ಸ್ತುವಂತಿ ಮಾಂ ಯಥಾ ದೇವಂ ಮಹೇಂದ್ರಮಿವ ಬಂದಿನಃ ॥15॥
ಅಪರರಾತ್ರಿಯ ಕಾಲದಲ್ಲಿ (ಬೆಳಗಿನ ಜಾವದಲ್ಲಿ) ಸೂತಮಾಗಧಬಂದಿಗಳು ಮಹೇಂದ್ರನನ್ನು ವಂದಿಗಳು ಸ್ತೋತ್ರ ಮಾಡುವಂತೆ ನನ್ನನ್ನು ಸ್ತೋತ್ರ ಮಾಡುತ್ತಾರೆ.
ಪ್ರಸಾದಾತ್ ಸತ್ಯಸಂಧಸ್ಯ ಭವತೋಽಮಿತತೇಜಸಃ |
ಯದಹಂ ಕೀಟತಾಂ ಪ್ರಾಪ್ಯ ಸಂಪ್ರಾಪ್ತೋ ರಾಜಪುತ್ರತಾಮ್ ॥16॥
ಅಮಿತತೇಜಸ್ವಿಗಳಾದ, ಸತ್ಯಸಂಧರಾದ ನಿಮ್ಮ ಅನುಗ್ರಹದಿಂದ ನಾನು ಕೀಟತ್ವವನ್ನು ಹೊಂದಿ ಹಾಗೆಯೇ ರಾಜಕುಮಾರನಾಗಿದ್ದೇನೆ.
ನಮಸ್ತೇಽಸ್ತು ಮಹಾಪ್ರಾಜ್ಞ ಕಿಂ ಕರೋಮಿ ಪ್ರಶಾಧಿ ಮಾಮ್ |
ತ್ವತ್ತಪೋಬಲನಿರ್ದಿಷ್ಟಮಿದಂ ಹ್ಯಧಿಗತಂ ಮಯಾ ॥17॥
ಎಲೈ ಮಹಾಪ್ರಾಜ್ಞನೇ, ನಿನಗೆ ನಮಸ್ಕಾರ. ನಾನು ಈಗ ಏನು ಮಾಡಲಿ ಎಂದು ಹೇಳು. ನಿನ್ನ ತಪೋಬಲದಿಂದ ನಾನು ಇಂತಹ ಸ್ಥಾನವನ್ನು ಪಡೆದಿದ್ದೇನೆ.
ವ್ಯಾಸಃ
ಅರ್ಚಿತೋಽಹಂ ತ್ವಯಾ ರಾಜನ್ ವಾಗ್ಭಿರದ್ಯ ಯದೃಚ್ಛಯಾ |
ಅದ್ಯ ತೇ ಕೀಟತಾಂ ಪ್ರಾಪ್ಯ ಸ್ಮೃತಿರ್ಜಾತಾಜುಗುಪ್ಸಿತಾ ॥18॥
ವ್ಯಾಸ ಎಲೈ ರಾಜನೇ, ಈ ದಿನ ನಾನು ನಿನ್ನಿಂದ ಪೂಜಿಸಲ್ಪಟ್ಟಿದ್ದೇನೆ. ಈ ದಿನ ಕೀಟತ್ವವನ್ನು ಹೊಂದಿದ ನಿನಗೆ ದೈವಾನುಗ್ರಹದಿಂದ ಹಿಂದಿನ (ಅ)ಜುಗುಪ್ಸಿತವಾದ ಸ್ಮೃತಿಯು ಉಂಟಾಗಿದೆ.
ನ ತು ನಾಶೋಽಸ್ತಿ ಪಾಪಸ್ಯ ಯತ್ತ್ವಯೋಪಚಿತಂ ಪುರಾ |

ಶೂದ್ರೇಣೈವಾರ್ಥಲುಬ್ಧೇನ ನೃಶಂಸೇನಾತತಾಯಿನಾ ॥19॥
ಆದರೆ ನೀನು ಹಿಂದೆ ಶೂದ್ರನಾಗಿ, ಲೋಭಿಯಾಗಿ, ಕ್ರೂರಿಯಾಗಿ, ಕುಲನಾಶಕನಾಗಿ ಸಂಪಾದಿಸಿದ ಪಾಪಕ್ಕೆ ನಾಶವುಂಟಾಗುವುದಿಲ್ಲ.
ಮಮ ತೇ ದರ್ಶನಂ ಪ್ರಾಪ್ತಂ ತಚ್ಚೈವ ಸುಕೃತಂ ಪುರಾ |
ತಿರ್ಯಗ್ಯೋನೌ ಸ್ಮ ಜಾತೇನ ಮಮ ಚಾಪ್ಯರ್ಚನಾತ್ ತಥಾ ॥20॥
ನೀನು ಹಿಂದೆ ಮಾಡಿದ ಮಾತೃಸೇವಾರೂಪವಾದ ಪುಣ್ಯದಿಂದ ನಿನಗೆ ನನ್ನ ದರ್ಶನವು ಪ್ರಾಪ್ತವಾಯಿತು. ತಿರ್ಯಗ್ಯೋನಿಯಲ್ಲಿ ಜನಿಸಿ ನನ್ನ ಅರ್ಚನೆಯನ್ನು ಮಾಡದಿದ್ದರೂ ಪುಣ್ಯವು ಪ್ರಾಪ್ತವಾಯಿತು.
ಇತಸ್ತ್ವಂ ರಾಜಪುತ್ರತ್ವಾದ್ ಬ್ರಾಹ್ಮಣ್ಯಂ ಸಮವಾಪ್ಸ್ಯಸಿ |
ಗೋಬ್ರಾಹ್ಮಣಕೃತೇ ಪ್ರಾಣಾನ್ ತ್ಯಕ್ತ್ವಾ ರಾಜನ್ ರಣಾಜಿರೇ ॥21॥
ರಾಜಪುತ್ರಸುಖಂ ಪ್ರಾಪ್ಯ ಕ್ರತೂಂಶ್ಚೈವಾಪ್ತದಕ್ಷಿಣಾನ್ |
ಅಥ ಮೋದಿಷ್ಯಸೇ ಸ್ವರ್ಗೇ ಬ್ರಹ್ಮಭೂತೋಽವ್ಯಯಃ ಸುಖೀ ॥22॥
ಇನ್ನು ಮುಂದೆ ನೀನು ಈ ರಾಜಕುಮಾರನ ಅವಸ್ಥೆಯನ್ನು ಬಿಟ್ಟು ಬ್ರಾಹ್ಮಣ್ಯವನ್ನು ಹೊಂದುವಿ. ಎಲೈ ರಾಜನೇ, ಗೋ-ಬ್ರಾಹ್ಮಣರ ಸಲುವಾಗಿ ರಣರಂಗದಲ್ಲಿ ಪ್ರಾಣಗಳನ್ನು ತ್ಯಜಿಸಿ, ರಾಜಪುತ್ರ ಸುಖವನ್ನು ಹೊಂದಿ, ಭೂರಿದಕ್ಷಿಣೆಯುಳ್ಳ ಯಜ್ಞಗಳನ್ನು ಮಾಡಿ, ಸ್ವರ್ಗದಲ್ಲಿ ಪರಮಾತ್ಮನನ್ನೇ ಧ್ಯಾನ ಮಾಡುತ್ತಾ ಸುಖದಿಂದ ಇರುವಿ.
ತಿರ್ಯಗ್ಯೋನ್ಯಾಃ ಶೂದ್ರತಾಮಭ್ಯುಪೈತಿ
ಶೂದ್ರೋ ವೈಶ್ಯತ್ವಂ ಕ್ಷತ್ರಿಯತ್ವಂ ಚ ವೈಶ್ಯಃ |
ವೃತ್ತಶ್ಲಾಘೀ ಕ್ಷತ್ರಿಯೋ ಬ್ರಾಹ್ಮಣತ್ವಂ
ಸ್ವರ್ಗಂ ಪುಣ್ಯಂ ಬ್ರಾಹ್ಮಣಃ ಸಾಧುವೃತ್ತಃ ॥23॥
ತಿರ್ಯಗ್ಯೋನಿಯಲ್ಲಿ ಜನಿಸಿದವನು ಸತ್ಕರ್ಮದಿಂದ ಶೂದ್ರನಾಗುತ್ತಾನೆ. ಶೂದ್ರನಾದವನು ವೈಶ್ಯನೂ, ವೈಶ್ಯನು ಕ್ಷತ್ರಿಯನೂ ಆಗುತ್ತಾನೆ. ಒಳ್ಳೆಯ ನಡತೆಯುಳ್ಳ ಕ್ಷತ್ರಿಯನು ಬ್ರಾಹ್ಮಣನಾಗುತ್ತಾನೆ. ಸದಾಚಾರವುಳ್ಳ ಬ್ರಾಹ್ಮಣನು ಪವಿತ್ರವಾದ ಸ್ವರ್ಗವನ್ನು ಹೊಂದುತ್ತಾನೆ.
ವಿಶೇಷ ಸೂಚನೆ ಈ ಅಧ್ಯಾಯಗಳಲ್ಲಿ ಮೂಲಶ್ಲೋಕಗಳು ಸಂದಿಗ್ಧವಾಗಿವೆ. ಶ್ರೀಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೇಳಿದಂತೆ ಅರ್ಥವನ್ನು ಮಾಡಬೇಕಾದ ಸೂಚನೆಗಳೂ ಇವೆ. ಆದ್ದರಿಂದ ನಾವು ಶ್ರೀಮಧ್ವಾಚಾರ್ಯರ ವಚನಕ್ಕೆ ಅನುಗುಣವಾಗಿ ಅನುವಾದವನ್ನು ಮಾಡಲು ಪ್ರಯತ್ನ ಪಟ್ಟಿದ್ದೇವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಕೀಟಸ್ಯ ವ್ಯಾಸಾನುಗ್ರಹೋ ನಾಮ ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಅರವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತನೆಯ ಅಧ್ಯಾಯ
ಕೀಟದ ಬ್ರಾಹ್ಮಣಜನ್ಮಪ್ರಾಪ್ತಿ ಮತ್ತು ಸದ್ಗತಿ
ಭೀಷ್ಮಃ
ಕ್ಷತ್ರಧರ್ಮಮನುಪ್ರಾಪ್ತಃ ಸ್ಮರನ್ನೇವ ಸ ವೀರ್ಯವಾನ್ |
ತ್ಯಕ್ತ್ವಾ ಸ ಕೀಟತಾಂ ರಾಜನ್ ಚಚಾರ ವಿಪುಲಂ ತಪಃ ॥1॥
ಭೀಷ್ಮ ಎಲೈ ರಾಜನೇ, ಕ್ಷತ್ರಧರ್ಮವನ್ನು ಹೊಂದಿದ ಆ ಪರಾಕ್ರಮಶಾಲಿಯಾದ ಕೀಟವು ತನ್ನ ಕೀಟತ್ವವನ್ನು ಸ್ಮರಿಸುತ್ತಲೇ ಕೀಟತ್ವವನ್ನು ತ್ಯಜಿಸಿ ವಿಪುಲವಾದ ತಪಸ್ಸನ್ನು ಮಾಡಿತು.
ತಸ್ಯ ಧರ್ಮಾರ್ಥವಿದುಷೋ ದೃಷ್ಟ್ವಾ ತದ್ವಿಪುಲಂ ತಪಃ |
ಆಜಗಾಮ ದ್ವಿಜಶ್ರೇಷ್ಠಃ ಕೃಷ್ಣದ್ವೈಪಾಯನಸ್ತದಾ ॥2॥
ಧರ್ಮಾರ್ಥಗಳನ್ನು ತಿಳಿದ ಆ ಕೀಟದ ವಿಪುಲವಾದ ತಪಸ್ಸನ್ನು ನೋಡಿ ದ್ವಿಜಶ್ರೇಷ್ಠರಾದ ಕೃಷ್ಣದ್ವೈಪಾಯನರು ಆಗ ಆಗಮಿಸಿದರು.

ವ್ಯಾಸಃ
ಕ್ಷಾತ್ರಂ ಚೈವ ವ್ರತಂ ಕೀಟ ಭೂತಾನಾಂ ಪರಿಪಾಲನಮ್ |
ಕ್ಷಾತ್ರಂ ಚೈವ ವ್ರತಂ ಧ್ಯಾಯನ್ ತತೋ ವಿಪ್ರತ್ವಮೇಷ್ಯಸಿ ॥3॥
ವ್ಯಾಸ ಎಲೈ ಕೀಟವೇ, ಕ್ಷತ್ರಿಯರ ವ್ರತ ಎಂದರೆ ಪ್ರಜೆಗಳ ರಕ್ಷಣೆಯನ್ನು ಮಾಡುವುದು. ಕ್ಷತ್ರಿಯ ವ್ರತವನ್ನೇ ಚಿಂತಿಸುತ್ತಾ, ಅದನ್ನು ಮಾಡುತ್ತಾ ನೀನು ಅನಂತರ ವಿಪ್ರತ್ವವನ್ನು ಹೊಂದುವಿ.
ಪಾಹಿ ಸರ್ವಾಃ ಪ್ರಜಾಃ ಸಮ್ಯಕ್ ಶುಭಾಶುಭವಿದಾತ್ಮವಾನ್ |
ಶುಭೈಃ ಸಂವಿಭಜನ್ ಕಾಮೈರಶುಭಾನಾಂ ಚ ಪಾವನೈಃ ॥4॥
ಶುಭಾಶುಭಗಳನ್ನು ತಿಳಿದು ಧೈರ್ಯಶಾಲಿಯಾಗಿ ಎಲ್ಲ ಪ್ರಜೆಗಳನ್ನೂ ಚೆನ್ನಾಗಿ ರಕ್ಷಿಸು. ಶುಭವಾದ ಫಲಗಳನ್ನು ಹಂಚಿಕೊಂಡು, ಅಶುಭವಾದ ಫಲಗಳನ್ನು ಪ್ರಾಯಶ್ಚಿತ್ತದಿಂದ ಮತ್ತು ಶುದ್ಧೀಕರಣ ಕಾರ್ಯಗಳಿಂದ ಕಳೆದುಕೊಂಡು (ಪ್ರಜೆಗಳನ್ನು ಚೆನ್ನಾಗಿ ಪಾಲಿಸು).
ಆತ್ಮವಾನ್ ಭವ ಸುಪ್ರೀತಃ ಸ್ವಧರ್ಮಚರಣೇ ರತಃ |

ಕ್ಷಾತ್ರೀಂ ತನುಂ ಸಮುತ್ಸೃಜ್ಯ ತತೋ ವಿಪ್ರತ್ವಮೇಷ್ಯಸಿ ॥5॥
ಧೈರ್ಯಶಾಲಿಯಾಗಿ ಸಂತೋಷದಿಂದ ಕೂಡಿ ನಿನ್ನ ಧರ್ಮಾಚರಣೆಯಲ್ಲಿ ನಿರತನಾಗು. ಈ ಕ್ಷತ್ರಿಯ ಧರ್ಮವನ್ನು ಆಚರಿಸುತ್ತಿರುವ ನಿನ್ನ ದೇಹವನ್ನು ತ್ಯಜಿಸಿ ಅನಂತರ ವಿಪ್ರತ್ವವನ್ನು ಹೊಂದುವಿ.
ಭೀಷ್ಮಃ
ಸೋಽಥಾರಣ್ಯಮಭಿಪ್ರೇತ್ಯ ಪುನರೇವ ಯುಧಿಷ್ಠಿರ |
ಮಹರ್ಷೇರ್ವಚನಂ ಶ್ರುತ್ವಾ ಪ್ರಜಾ ಧರ್ಮೇಣ ಪಾಲ್ಯ ಚ ॥6॥
ಭೀಷ್ಮ ಎಲೈ ಯುಧಿಷ್ಠಿರನೇ, ಮಹರ್ಷಿಗಳ ವಚನವನ್ನು ಕೇಳಿ ಆ ಕೀಟವು ಪ್ರಜೆಗಳನ್ನು ಧರ್ಮದಿಂದ ಪಾಲಿಸಿ ಅರಣ್ಯವನ್ನು ಉದ್ದೇಶಿಸಿ ಹೊರಟು ಅಲ್ಲಿ ತಪಸ್ಸನ್ನು ಮಾಡಿತು.
ಅಚಿರೇಣೈವ ಕಾಲೇನ ಕೀಟಃ ಪಾರ್ಥಿವಸತ್ತಮ |
ಪ್ರಜಾಪಾಲನಧರ್ಮೇಣ ಪ್ರೇತ್ಯ ವಿಪ್ರತ್ವಮಾಗತಃ ॥7॥
ಎಲೈ ಪಾರ್ಥಿವಶ್ರೇಷ್ಠನೇ, ಆ ಕೀಟವು ಶೀಘ್ರವಾಗಿ ತನ್ನ ಕೀಟತ್ವವನ್ನು ತೊರೆದು ಪ್ರಜಾಪಾಲನೆಯನ್ನು ಮಾಡಿದ ಪುಣ್ಯದಿಂದ ವಿಪ್ರತ್ವವನ್ನು ಹೊಂದಿತು.
ತತಸ್ತಂ ಬ್ರಾಹ್ಮಣಂ ದೃಷ್ಟ್ವಾ ಪುನರೇವ ಮಹಾಯಶಾಃ |
ಆಜಗಾಮ ಮಹಾಪ್ರಾಜ್ಞಃ ಕೃಷ್ಣದ್ವೈಪಾಯನಸ್ತದಾ ॥8॥
ಆಗ ಆ ಬ್ರಾಹ್ಮಣನನ್ನು ನೋಡಿ ಮಹಾಕೀರ್ತಿವಂತರೂ, ಮಹಾಪ್ರಾಜ್ಞರೂ ಆದ ಕೃಷ್ಣದ್ವೈಪಾಯನರು ಪುನಃ ಅಲ್ಲಿಗೆ ಬಂದರು.
ವ್ಯಾಸಃ
ಭೋ ಭೋ ವಿಪ್ರರ್ಷಭ ಶ್ರೀಮನ್ ಮಾ ವ್ಯಥಿಷ್ಠಾಃ ಕಥಂಚನ |
ಶುಭಕೃಚ್ಛುಭಯೋನೀಷು ಪಾಪಕೃತ್ ಪಾಪಯೋನಿಷು |
ಉಪಪದ್ಯತಿ ಧರ್ಮಜ್ಞ ಯಥಾಧರ್ಮಂ ಯಥಾಗಮಮ್ ॥9॥
ವ್ಯಾಸ ಎಲೈ ಬ್ರಾಹ್ಮಣಶ್ರೇಷ್ಠನೇ, ಮರಣಕ್ಕೆ ವ್ಯಥೆ ಪಡಬೇಡ. ಎಲೈ ಧರ್ಮಜ್ಞನೇ, ಶುಭವನ್ನು ಮಾಡಿದವನು ಶುಭಯೋನಿಗಳಲ್ಲಿಯೂ, ಪಾಪವನ್ನು ಮಾಡಿದವನು ಪಾಪ ಯೋನಿಗಳಲ್ಲಿಯೂ ತಾನು ಮಾಡಿದ ಧರ್ಮಕ್ಕೆ ಮತ್ತು ಶಾಸ್ತ್ರಕ್ಕೆ ಅನುಗುಣವಾಗಿ ಜನ್ಮವನ್ನು ಪಡೆಯುತ್ತಾನೆ.
ತಸ್ಮಾನ್ಮೃತ್ಯುಭಯಾತ್ ಕೀಟ ಮಾ ವ್ಯಥಿಷ್ಠಾಃ ಕಥಂಚನ |
ಧರ್ಮಲೋಪಾದ್ ಭಯಂ ತೇ ಸ್ಯಾತ್ ತಸ್ಮಾದ್ಧರ್ಮಂ ಚರೋತ್ತಮಮ್ ॥
ಎಲೈ ಕೀಟವೇ, ಆದ್ದರಿಂದ ಮೃತ್ಯುಭಯದಿಂದ ಯಾವ ರೀತಿಯಲ್ಲಿಯೂ ವ್ಯಥೆಯನ್ನು ಹೊಂದಬೇಡ. ಧರ್ಮಲೋಪದಿಂದ ನಿನಗೆ ಭಯವುಂಟಾದೀತು. ಆದ್ದರಿಂದ ಶ್ರೇಷ್ಠವಾದ ಧರ್ಮವನ್ನು ಆಚರಿಸು.
ಕೀಟಃ
ಸುಖಾತ್ ಸುಖತರಂ ಪ್ರಾಪ್ತೋ ಭಗವಂಸ್ತ್ವತ್ಕೃತೇ ಹ್ಯಹಮ್ |
ಧರ್ಮಮೂಲಂ ಶ್ರಿಯಂ ಪ್ರಾಪ್ಯ ಪಾಪ್ಮಾ ನಷ್ಟ ಇಹಾದ್ಯ ಮೇ ॥11॥
ಕೀಟ ಪೂಜ್ಯರೇ, ನಿಮ್ಮ ಅನುಗ್ರಹದಿಂದ ಒಂದು ಸುಖದಿಂದ ನಾನು ಇನ್ನೊಂದು ಹೆಚ್ಚಿನ ಸುಖಕ್ಕೆ ಹೋಗುತ್ತಿದ್ದೇನೆ.
ಧರ್ಮಮೂಲವಾದ ಸಂಪತ್ತನ್ನು ಪಡೆದು ಈ ದಿನ ನನ್ನ ಪಾಪವು ನಷ್ಟವಾಗಿದೆ.
ಭೀಷ್ಮಃ
ಭಗವದ್ವಚನಾತ್ ಕೀಟೋ ಬ್ರಾಹ್ಮಣ್ಯಂ ಪ್ರಾಪ್ಯ ದುರ್ಲಭಮ್ |
ಅಕರೋತ್ ಪೃಥಿವೀಂ ರಾಜನ್ ಯಜ್ಞಯೂಪಶತಾಂಕಿತಾಮ್ |
ತತಃ ಸಾಲೋಕ್ಯಮಗಮದ್ ಬ್ರಹ್ಮಣೋ ಬ್ರಹ್ಮವಿತ್ತಮಃ ॥12॥
ಭೀಷ್ಮ ಎಲೈ ರಾಜನೇ, ಭಗವಂತನಾದ ಕೃಷ್ಣದ್ವೈಪಾಯನರ ವಚನದಂತೆ ಆ ಕೀಟವು ದುರ್ಲಭವಾದ ಬ್ರಾಹ್ಮಣ್ಯವನ್ನು ಹೊಂದಿ, ಭೂಮಿಯನ್ನು ನೂರು ಯಜ್ಞಯೂಪದಿಂದ ಅಂಕಿತವನ್ನಾಗಿ ಮಾಡಿ ಅನಂತರ ಬ್ರಹ್ಮಜ್ಞಾನಿಯಾಗಿ ಪರಮಾತ್ಮನ ಸಾಲೋಕ್ಯವನ್ನು ಪಡೆಯಿತು.
ಅವಾಪ ಚ ಪರಂ ಕೀಟಃ ಪಾರ್ಥ ಬ್ರಹ್ಮ ಸನಾತನಮ್ |
ಸ್ವಕರ್ಮಫಲನಿರ್ವೃತ್ತಂ ವ್ಯಾಸಸ್ಯ ವಚನಂ ಯಥಾ ॥13॥
ಎಲೈ ಪಾರ್ಥನೇ, ಆ ಕೀಟವು ವ್ಯಾಸರ ವಚನದಂತೆ ತನ್ನ ಕರ್ಮಗಳ ಫಲವಾಗಿ ವೇದಪ್ರತಿಪಾದ್ಯನಾದ ಪರಬ್ರಹ್ಮನನ್ನು ಹೊಂದಿತು.
ತೇಽಪಿ ಯಸ್ಮಾತ್ ಸ್ವಭಾವೇನ ಹತಾಃ ಕ್ಷತ್ರಿಯಪುಂಗವಾಃ |
ಸಂಪ್ರಾಪ್ತಾಸ್ತೇ ಗತಿಂ ಪುಣ್ಯಾಂ ತಸ್ಮಾತ್ ಪುತ್ರಕ ಮಾ ಶುಚ ॥14॥
ಯುದ್ಧದಲ್ಲಿ ಹತರಾದ ಕ್ಷತ್ರಿಯಪುಂಗವರೂ ಸಹ ತಮ್ಮ ಕ್ಷತ್ರಿಯಧರ್ಮಕ್ಕೆ ಅನುಸಾರವಾಗಿ ಹತರಾಗಿದ್ದಾರೆ. ಅವರು ಸದ್ಗತಿಯನ್ನು ಹೊಂದಿದ್ದಾರೆ. ಪುತ್ರನೇ, ಆದ್ದರಿಂದ ಶೋಕಪಡಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಕೀಟಸ್ಯ ಸದ್ಗತಿಪ್ರಾಪ್ತಿರ್ನಾಮ ಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತನೆಯ
ಅಧ್ಯಾಯ ಮುಗಿಯಿತು.
* * * * *

ನೂರ ಎಪ್ಪತ್ತೊಂದನೆಯ ಅಧ್ಯಾಯ
ವ್ಯಾಸ ಮೈತ್ರೇಯರ ಸಂವಾದ - ಮೈತ್ರೇಯ ಭಿಕ್ಷಾ
ಯುಧಿಷ್ಠಿರಃ
ವಿದ್ಯಾ ತಪಶ್ಚ ದಾನಂ ಚ ಕಿಮೇತೇಷಾಂ ವಿಶಿಷ್ಯತೇ |
ಪೃಚ್ಛಾಮಿ ತ್ವಾ ಸತಾಂಶ್ರೇಷ್ಠ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ವಿದ್ಯಾ-ತಪಸ್ಸು ಮತ್ತು ದಾನ ಇವುಗಳಲ್ಲಿ ಯಾವುದು ಶ್ರೇಷ್ಠವೆಂದು ನಿನ್ನನ್ನು ಕೇಳುತ್ತಿದ್ದೇನೆ. ಎಲೈ ಸಜ್ಜನರಲ್ಲಿ ಶ್ರೇಷ್ಠನಾದವನೇ, ನನಗೆ ಉತ್ತರವನ್ನು ಹೇಳು.
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಮೈತ್ರೇಯಸ್ಯ ಚ ಸಂವಾದಂ ಕೃಷ್ಣದ್ವೈಪಾಯನಸ್ಯ ಚ ॥2॥
ಭೀಷ್ಮ ಈ ವಿಷಯದಲ್ಲಿಯೂ ಸಹ ಮೈತ್ರೇಯರಿಗೂ ಮತ್ತು ವ್ಯಾಸರಿಗೂ ನಡೆದ ಸಂವಾದ ರೂಪವಾದ, ಪ್ರಾಚೀನವಾದ ಈ ಇತಿಹಾಸವನ್ನು ಹೇಳುತ್ತಾರೆ.
ಕೃಷ್ಣದ್ವೈಪಾಯನೋ ರಾಜನ್ನಜ್ಞಾತಚರಿತಂ ಚರನ್ |
ವಾರಾಣಸ್ಯಾಮುಪಾತಿಷ್ಠನ್ಮೈತ್ರೇಯಂ ಸ್ವೈರಿಣೀಕುಲೇ ॥3॥
ಎಲೈ ರಾಜನೇ, ಕೃಷ್ಣದ್ವೈಪಾಯನರು ಅಜ್ಞಾತಚರಿತೆಯನ್ನು ಮಾಡುತ್ತಾ ವಾರಣಾಸಿಯಲ್ಲಿ ಗಂಗಾತೀರದಲ್ಲಿ ಕುಳಿತಿದ್ದ ಮೈತ್ರೇಯರ ಬಳಿಗೆ ಬಂದರು.
ತಮುಪಸ್ಥಿತಮಾಸೀನಂ ಜ್ಞಾತ್ವಾ ಸ ಮುನಿಸತ್ತಮಮ್ |
ಅರ್ಚಿತ್ವಾ ಭೋಜಯಾಮಾಸ ಮೈತ್ರೇಯೋ ಮುನಿಸತ್ತಮಮ್ ॥4॥
ಸಮೀಪಕ್ಕೆ ಬಂದು ಕುಳಿತ ಮುನಿಶ್ರೇಷ್ಠರಾದ ವ್ಯಾಸರನ್ನು ಗಮನಿಸಿ ಮೈತ್ರೇಯರು ಅವರನ್ನು ಪೂಜಿಸಿ ಅವರಿಗೆ ಭೋಜನವನ್ನು ನೀಡಿದರು.
ತದನ್ನಮುತ್ತಮಂ ಭುಕ್ತ್ವಾ ಗುಣವತ್ ಸಾರ್ವಕಾಮಿಕಮ್ |
ಪ್ರತಿಷ್ಠಮಾನೋಽಸ್ಮಯತ ಪ್ರೀತಃ ಕೃಷ್ಣೋ ಮಹಾಮನಾಃ ॥5॥
ಶ್ರೇಷ್ಠವೂ, ಸರ್ವಕಾಮಪ್ರದವೂ ಆದ ಆ ಅನ್ನವನ್ನು ಭುಂಜಿಸಿ ಹೊರಡುತ್ತಾ ಉದಾರಿಗಳಾದ ವೇದವ್ಯಾಸರು ಸಂತೋಷದಿಂದ ನಕ್ಕರು.
ತಮುತ್ಸ್ಮಯಂತಂ ಸಂಪ್ರೇಕ್ಷ್ಯ ಮೈತ್ರೇಯಃ ಕೃಷ್ಣಮಬ್ರವೀತ್ |
ಕಾರಣಂ ಬ್ರೂಹಿ ಧರ್ಮಾತ್ಮನ್ ಯೋಽಸ್ಮಯಿಷ್ಠಾಃ ಕುತಶ್ಚ ತೇ |
ತಪಸ್ವಿನೋ ಧೃತಿಮತಃ ಪ್ರಮೋದಃ ಸಮುಪಾಗತಃ ॥6॥
ನಗುತ್ತಿದ್ದ ವ್ಯಾಸರನ್ನು ನೋಡಿ ಮೈತ್ರೇಯರು ಧರ್ಮಾತ್ಮರೇ, ನೀವು ನಗುವುದಕ್ಕೆ ಕಾರಣವನ್ನು ಹೇಳಿ. ತಪಸ್ವಿಗಳೂ, ಧೈರ್ಯಶಾಲಿಗಳೂ ಆದ ನಿಮಗೆ ನಗುವುದಕ್ಕೆ ಕಾರಣವಾದ ಸಂತೋಷವು ಎಲ್ಲಿಂದ ಉಂಟಾಯಿತು?
ಏತತ್ಪೃಚ್ಛಾಮಿ ತೇ ವಿದ್ವನ್ನಭಿವಾದ್ಯ ಪ್ರಣಮ್ಯ ಚ |
ಆತ್ಮನಶ್ಚ ತಪೋಭಾಗ್ಯಂ ಮಹಾಭಾಗ್ಯಂ ತಥೈವ ಚ ॥7॥
ಪೃಥಗಾಚರತಸ್ತಾತ ಪೃಥಗಾತ್ಮನಿ ಚಾವಯೋಃ |
ಅಲ್ಪಾಂತರಮಹಂ ಮನ್ಯೇ ವಿಶಿಷ್ಟಮಪಿ ಚಾನ್ವಯಾತ್ ॥8॥
ಎಲೈ ವಿದ್ವಾಂಸರೇ, ನಿಮಗೆ ನಮಸ್ಕಾರವನ್ನು ಮಾಡಿ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ನಾವು ಬೇರೆ ಬೇರೆ ತಪಸ್ಸನ್ನು ಆಚರಿಸಿದರೂ ಎಲೈ ಪ್ರೀತಿಪಾತ್ರರೇ, ನಮ್ಮಿಬ್ಬರಿಗೂ ತಪೋಭಾಗ್ಯದಲ್ಲಿ ಇರುವ ಅಂತರವು ಬಹಳ ಅಲ್ಪವಾದುದೆಂದು, ಆದರೆ ಜ್ಞಾನದಿಂದ ನೀವು ಅಧಿಕರಾದವರೆಂದೂ ತಿಳಿದಿದ್ದೇನೆ (ಲಕ್ಷಾಲಂಕಾರ).
ವ್ಯಾಸಃ
ಅತಿಚ್ಛೇದಾತಿವಾದಾಭ್ಯಾಂ ಸ್ಮಯೋಽಯಂ ಸಮುಪಾಗತಃ |
ಅಸತ್ಯಂ ವೇದವಚನಂ ಕಸ್ಮಾದ್ ವೇದೋಽನೃತಂ ವದೇತ್ ॥9॥
ವ್ಯಾಸರು ಅತಿಚ್ಛೇದ ಮತ್ತು ಅತಿವಾದಗಳಿಂದ ನನಗೆ ನಗುವುಂಟಾಯಿತು. ವೇದವಚನವು ಏಕೆ ಅಸತ್ಯವಾಗುತ್ತದೆ? ವೇದವು ಏಕೆ ಸುಳ್ಳನ್ನು ಹೇಳೀತು?
ಅತಿಶಯವಾದ ಕರ್ಮವು ಅತಿವಾದ. ಅದರ ಫಲವಾದ ಪಾಪನಾಶವು ಅತಿಚ್ಛೇದ. ಅವುಗಳನ್ನು ಈ ರೀತಿಯಲ್ಲಿ ತಿಳಿದ ನನಗೆ ವಿಸ್ಮಯವುಂಟಾಯಿತು (ಲಕ್ಷಾಲಂಕಾರ).
ತ್ರೀಣ್ಯೇವ ತು ಪದಾನ್ಯಾಹುಃ ಪುರುಷಸ್ಯೋತ್ತಮಂ ವ್ರತಮ್ |
ನ ದ್ರುಹ್ಯೇನ್ನೈವ ನಿಂದ್ಯಾಚ್ಚ ಸತ್ಯಂ ಚೈವ ಪರಂ ವದೇತ್ |
ಇದಾನೀಂ ಚೈವ ನಃ ಕೃತ್ಯಂ ಪುರಸ್ತಾಚ್ಚ ಪರಂ ಸ್ಮೃತಮ್ ॥10॥
ಮನುಷ್ಯನ ಶ್ರೇಷ್ಠವಾದ ವ್ರತವನ್ನು ಮೂರು ಪದಗಳು ಹೇಳುತ್ತವೆ - ದ್ರೋಹವನ್ನು ಮಾಡಬಾರದು. ನಿಂದಿಸಬಾರದು. ಸತ್ಯವನ್ನು ನುಡಿಯಬೇಕು. ಇದು ನಾವು ಈಗಲೂ ಮತ್ತು ಮುಂದೆಯೂ ಮಾಡಬೇಕಾದ ಕಾರ್ಯವೆಂದು ಹೇಳಲ್ಪಡುತ್ತದೆ.
ಅಲ್ಪೋಽಪಿ ತಾದೃಶೋ ದಾಯೋ ಭವತ್ಯುತ ಮಹಾಫಲಃ |
ತೃಷಿತಾಯ ಚ ಯದ್ದತ್ತಂ ಹೃದಯೇನಾನಸೂಯತಾ ॥11॥

ಬಾಯಾರಿದವನಿಗೆ ಅಸೂಯೆ ಇಲ್ಲದೆ ಪ್ರೀತಿಯಿಂದ ಕೊಟ್ಟ ಅಲ್ಪಜಲವೂ ಸಹ ಮಹಾಫಲವನ್ನು ಕೊಡುತ್ತದೆ.
ತೃಷಿತಸ್ತೃಷಿತಾಯ ತ್ವಂ ದತ್ತ್ವೇವೃತದಶನಂ ಮಮ |
ಅಜೈಷೀರ್ಮಹತೋ ಲೋಕಾನ್ ಮಹಾಯಜ್ಞೈರಿವಾಭಿಭೋ |
ಅತೋ ದಾನಪವಿತ್ರೇಣ ಪ್ರೀತೋಽಸ್ಮಿ ತಪಸೈವ ಚ ||12||
ಎಲೈ ಶತ್ರುನಿವಾರಕನೇ, ನೀನೇ ಬಾಯಾರಿದ್ದರೂ ಬಾಯಾರಿದ ನನಗೆ ಇಂತಹ ಭೋಜನವನ್ನು ಕೊಟ್ಟು ಮಹಾಯಜ್ಞಗಳಿಂದ ಜಯಿಸುವಂತೆ ಮಹಾಲೋಕಗಳನ್ನು ಜಯಿಸಿದ್ದೀಯೆ. ಆದ್ದರಿಂದ ನಿನ್ನ ಪವಿತ್ರವಾದ ದಾನದಿಂದ ಮತ್ತು ತಪಸ್ಸಿನಿಂದ ನನಗೆ ಸಂತೋಷವುಂಟಾಯಿತು.
ಪುಣ್ಯಸ್ಯೈವ ಹಿ ತೇ ಗಂಧಃ ಪುಣ್ಯಸ್ಯೈವ ಚ ದರ್ಶನಮ್ |
ಪುಣ್ಯಶ್ಚ ವಾತಿ ಗಂಧಸ್ತೇ ಮನ್ಯೇ ಕರ್ಮವಿಧಾನತಃ ||13||
ನಿನ್ನ ದೇಹದಿಂದ ಹೊರಬರುತ್ತಿರುವ ಗಂಧವು ಪುಣ್ಯವಾಗಿದೆ. ನಿನ್ನ ದರ್ಶನವೂ ಪುಣ್ಯವಾಗಿದೆ. ಇದು ನೀನು ಮಾಡಿದ ತಪೋರೂಪದ ಕರ್ಮದ ಫಲದಿಂದ ಎಂದು ನಾನು ಭಾವಿಸುತ್ತೇನೆ.
ಅಧಿಕಂ ಮಾರ್ಜನಾತ್ ತಾತ ತಥೈವಾಪ್ಯನುಲೇಪನಾತ್ |
ಶುಭಂ ಸರ್ವಪವಿತ್ರೇಭ್ಯೋ ದಾನಮೇವ ಪರಂ ಭವೇತ್ ||14||
ಪ್ರೀತಿಪಾತ್ರನೇ, ಸ್ನಾನಗಳಿಗಿಂತಲೂ, ಅನುಲೇಪನಗಳಿಗಿಂತಲೂ ಮತ್ತು ಪವಿತ್ರವಾದ ಎಲ್ಲವುಗಳಿಗಿಂತಲೂ ದಾನವೇ ಅತ್ಯಂತ ಶುಭವಾದುದು.
ಯಾನೀಮಾನ್ಯುತ್ತಮಾನೀಹ ವೇದೋಕ್ತಾನಿ ಪ್ರಶಂಸಸಿ |
ತೇಷಾಂ ಶ್ರೇಷ್ಠತಮಂ ದಾನಮಿತಿ ಮೇ ನಾಸ್ತಿ ಸಂಶಯಃ ||15||
ವೇದಗಳಲ್ಲಿ ಹೇಳಿದ ಯಾವ ಉತ್ತಮ ವ್ರತಗಳನ್ನು ನೀನು ಪ್ರಶಂಸೆ ಮಾಡುತ್ತಿದ್ದೀಯೋ ಅವುಗಳಲ್ಲಿ ದಾನವು ಬಹಳ ಶ್ರೇಷ್ಠವಾದುದು ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ದಾನಕೃದ್ಭಿಃ ಕೃತಃ ಪಂಥಾ ಯೇನ ಯಾಂತಿ ಮನೀಷಿಣಃ |
ತೇ ಹಿ ಪ್ರಾಣಸ್ಯ ದಾತಾರಸ್ತೇಷು ಧರ್ಮಃ ಪ್ರತಿಷ್ಠಿತಃ ||16||
ಪ್ರಾಚೀನರು ದಾನವನ್ನು ಮಾಡಿ (ಪುಣ್ಯಸಂಪಾದನೆಯ) ಮಾರ್ಗವನ್ನು ಮಾಡಿದ್ದಾರೆ. ಆ ಮಾರ್ಗದಲ್ಲಿ ವಿವೇಕಿಗಳಾದವರು ಹೋಗುತ್ತಾರೆ. ಅಂತಹವರು ಪ್ರಾಣವನ್ನೇ ದಾನ ಮಾಡುವವರು. ಅವರಲ್ಲಿ ಧರ್ಮವು ಪ್ರತಿಷ್ಠಿತವಾಗಿದೆ.
ಯಥಾ ವೇದಾಃ ಸ್ವಧೀತಾಶ್ಚ ಯಥಾ ಚೇಂದ್ರಿಯಸಂಯಮಃ |
ಸರ್ವತ್ಯಾಗೋ ಯಥಾ ಚೇಹ ತಥಾ ದಾನಮನುತ್ತಮಮ್ ||17||
ಅಧೀತವಾದ ವೇದದಂತೆ, ಇಂದ್ರಿಯನಿಗ್ರಹದಂತೆ, ಸಂನ್ಯಾಸದಂತೆ ಈ ಲೋಕದಲ್ಲಿ ದಾನವು ಶ್ರೇಷ್ಠವಾದುದು.
ತ್ವಂ ಹಿ ತಾತ ಸುಖಾದೇವ ಸುಖಮೇಷ್ಯಸಿ ಶೋಭನಮ್ |
ಸುಖಾತ್ ಸುಖತರಪ್ರಾಪ್ತಿಂ ಪ್ರಾಪ್ನುತೇ ಪ್ರೀತಿಮಾನ್ ನರಃ ||18||
ಎಲೈ ಪ್ರೀತಿಪಾತ್ರನೇ, ನೀನು ಒಂದು ಸುಖದಿಂದ ಶೋಭನವಾದ ಇನ್ನೊಂದು ಸುಖದ ಅನುಭವಕ್ಕೆ ಹೋಗುವಿ. ಸಂತೋಷವುಳ್ಳ ಮನುಷ್ಯನು ಸುಖದಿಂದ ಹೆಚ್ಚಿನ ಸುಖದ ಪ್ರಾಪ್ತಿಯನ್ನು ಪಡೆಯುತ್ತಾನೆ.
ತನ್ನಃ ಪ್ರತ್ಯಕ್ಷಮೇವೇದಮುಪಲಬ್ಧಮಸಂಶಯಮ್ |
ಶ್ರೀಮಂತಮಾಪ್ನುವಂತ್ಯರ್ಥಾ ದಾನಂ ಯಜ್ಞಸ್ತಥಾ ಸುಖಮ್ ||19||
ಇದು ನಮಗೆ ಪ್ರತ್ಯಕ್ಷಸಿದ್ಧವಾದುದು ಎಂಬುದರಲ್ಲಿ ಸಂಶಯವಿಲ್ಲ. ಶ್ರೀಮಂತನಾದವನನ್ನೇ ಅರ್ಥವೂ, ದಾನವೂ, ಯಜ್ಞವೂ ಮತ್ತು ಸುಖವೂ ಸಮೀಪಿಸುತ್ತವೆ.
ಸುಖಾದೇವ ಪರಂ ದುಃಖಂ ದುಃಖಾದನ್ಯತ್ ಪರಂ ಸುಖಮ್ |
ದೃಶ್ಯತೇ ಹಿ ಮಹಾಪ್ರಾಜ್ಞ ನಿಯತಂ ವೈ ಸ್ವಭಾವತಃ ||20||
ಎಲೈ ಮಹಾಪ್ರಾಜ್ಞನೇ, ಸಾಧಾರಣವಾಗಿ ಸ್ವಾಭಾವಿಕವಾಗಿ ಸುಖದ ಅನಂತರ ದುಃಖ, ದುಃಖದ ಅನಂತರ ಸುಖ ಎಂಬುದು ನಿಯತವಾದುದು ಎಂದು ಕಂಡು ಬರುತ್ತದೆ.
ತ್ರಿವಿಧಾನೀಹ ವೃತ್ತಾನಿ ನರಸ್ಯಾಹುರ್ಮನೀಷಿಣಃ |
ಪುಣ್ಯಮನ್ಯತ್ ಪಾಪಮನ್ಯನ್ನ ಪುಣ್ಯಂ ನ ಚ ಪಾಪಕಮ್ ||21||
ಮನುಷ್ಯನ ಕರ್ಮಗಳು, ಪುಣ್ಯ-ಪಾಪ ಮತ್ತು ಎರಡೂ ಅಲ್ಲದುದು ಎಂದು ಮೂರು ವಿಧವಾಗಿ ಇದೆ ಎಂದು ಜ್ಞಾನಿಗಳು ಹೇಳುತ್ತಾರೆ.
ನ ವೃತ್ತಂ ಮನ್ಯತೇಽನ್ಯಸ್ಯ ಮನ್ಯತೇಽನ್ಯಸ್ಯ ಪಾಪಕಮ್ |
ಯಥಾ ಸ್ವಧರ್ಮನಿರ್ವೃತ್ತಂ ನ ಪುಣ್ಯಂ ನ ಚ ಪಾಪಕಮ್ ||22||
ಬ್ರಹ್ಮಜ್ಞಾನಿಯಾದವನು ಮಾತ್ರ ಇನ್ನೊಬ್ಬನ ನಡತೆಯನ್ನಾಗಲೀ, ಇನ್ನೊಬ್ಬರ ಪಾಪವನ್ನಾಗಲೀ, ತನ್ನ ಧರ್ಮದಿಂದ ಉಂಟಾದ ಪುಣ್ಯ-ಪಾಪಗಳನ್ನಾಗಲೀ ಗಮನಿಸುವುದಿಲ್ಲ.
ರಮಸ್ವೈಧಸ್ವ ಮೋದಸ್ವ ದೇಹಿ ಚೈವ ಯಜಸ್ವ ಚ |
ನ ತ್ವಾಮಭಿಭವಿಷ್ಯಂತಿ ವೈದ್ಯಾ ನ ಚ ತಪಸ್ವಿನಃ ||23||
ಸಂತೋಷದಿಂದ ಇರು. ಅಭಿವೃದ್ಧಿಯನ್ನು ಹೊಂದು. ದಾನವನ್ನು ಮಾಡು. ಯಾಗವನ್ನು ಮಾಡು. ನಿನ್ನನ್ನು ಯಾವ ವಿದ್ವಾಂಸರಾಗಲೀ ಅಥವಾ ತಪಸ್ವಿಗಳಾಗಲೀ ಪರಿಭವಗೊಳಿಸುವುದಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್

ಅನುಶಾಸನಪರ್ವಣಿ ದಾನಧರ್ಮೇ ಮೈತ್ರೇಯಭಿಕ್ಷಾ ನಾಮ ಏಕಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೆರಡನೆಯ ಅಧ್ಯಾಯ
ವ್ಯಾಸ-ಮೈತ್ರೇಯರ ಸಂವಾದ
ಭೀಷ್ಮಃ
ಏವಮುಕ್ತಃ ಪ್ರತ್ಯುವಾಚ ಮೈತ್ರೇಯಃ ಕರ್ಮಪೂಜಕಃ |
ಅತ್ಯಂತಂ ಶ್ರೀಮತಿ ಕುಲೇ ಜಾತಃ ಪ್ರಾಜ್ಞೋ ಬಹುಶ್ರುತಃ ॥1॥
ಅಸಂಶಯಂ ಮಹಾಪ್ರಾಜ್ಞ ಯಥೈವಾತ್ಥ ತಥೈವ ತತ್ |
ಅನುಜ್ಞಾತಸ್ತು ಭವತಾ ಕಿಂಚಿದ್ ಬ್ರೂಯಾಮಹಂ ವಿಭೋ ॥2॥
ಭೀಷ್ಮ ಹೀಗೆ ಹೇಳಲ್ಪಟ್ಟ ಕರ್ಮಪ್ರಶಂಸೆಯನ್ನು ಮಾಡುವ ಮೈತ್ರೇಯರು ವ್ಯಾಸರನ್ನು ಕುರಿತು- `ಮಹಾಪ್ರಾಜ್ಞರೇ, ನಿಸ್ಸಂಶಯವಾಗಿ ಪ್ರಾಜ್ಞನೂ, ಬಹುಶ್ರುತನೂ ಆದವನು ನೀವು ಹೇಳಿದಂತೆಯೇ ಬಹಳ ಶ್ರೀಮಂತರಾದವರ ಕುಲದಲ್ಲಿ ಜನಿಸುತ್ತಾನೆ. ವಿಭುವೇ, ನಿಮ್ಮ ಅನುಮತಿಯನ್ನು ಪಡೆದು ನಾನು ಒಂದು ಅಲ್ಪ ವಿಷಯವನ್ನು ಹೇಳುತ್ತೇನೆ' ಎಂದು ಹೇಳಿದರು.
ವ್ಯಾಸಃ
ಯದ್ಯದಿಚ್ಛಸಿ ಮೈತ್ರೇಯ ಯಾವದ್ಯಾವದ್ ಯಥಾ ತಥಾ |
ಬ್ರೂಹಿ ತತ್ತನ್ಮಹಾಭಾಗ ಶುಶ್ರೂಷೇ ವಚನಂ ತವ ॥3॥
ವ್ಯಾಸ ಎಲೈ ಮಹಾನುಭಾವನೇ, ನೀನು ಏನೇನನ್ನು ಹೇಳಲು ಬಯಸುತ್ತೀಯೋ, ಎಷ್ಟೆಷ್ಟು ಹೇಳಲು ಬಯಸುತ್ತೀಯೋ ಅದೆಲ್ಲವನ್ನೂ ಹೇಳು. ನಾನು ನಿನ್ನ ಮಾತುಗಳನ್ನು ಕೇಳುವ ಆಸೆಯಿಂದಿದ್ದೇನೆ.
ಮೈತ್ರೇಯಃ
ನಿರ್ದೋಷಂ ನಿರ್ಮಲಂ ಚೈವ ವಚನಂ ದಾನಸಂಹಿತಮ್ |
ವಿದ್ಯಾತಪೋಭ್ಯಾಂ ಹಿ ಭವಾನ್ ಭಾವಿತಾತ್ಮಾ ನ ಸಂಶಯಃ ॥4॥
ಮೈತ್ರೇಯ ವಿದ್ಯಾ ಮತ್ತು ತಪಸ್ಸುಗಳಿಂದ ನೀವು ಪರಿಶುದ್ಧವಾದ ಮನಸ್ಸುಳ್ಳವರು ಎಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ದಾನದ ವಿಷಯದಲ್ಲಿ ನೀವು ಹೇಳಿದುದು ನಿರ್ದೋಷವೂ, ನಿರ್ಮಲವೂ ಆಗಿದೆ.
ಭವತೋ ಭಾವಿತಾತ್ಮತ್ವಾದ್ ದಾಯೋಽಯಂ ಸುಮಹಾನ್ ಮಮ |
ಭೂಯೋ ಬುದ್ಧ್ಯಾಽನುಪಶ್ಯಾಮಿ ಸುಸಮೃದ್ಧತಪಾ ಇವ ॥5॥
ನೀವು ಪರಿಶುದ್ಧಾತ್ಮರಾದ್ದರಿಂದ ನನಗೆ ಉಂಟಾದ ಈ ಲಾಭವು ಬಹಳ ದೊಡ್ಡದು. ನನ್ನ ಬುದ್ಧಿಯಿಂದ ಪುನಃ ಸಮೃದ್ಧವಾದ ತಪಸ್ಸನ್ನು ಮಾಡಿದವನಂತೆ ನಿಮ್ಮನ್ನು ನೋಡುತ್ತಿದ್ದೇನೆ.
ಅಪಿ ಮೇ ದರ್ಶನಾದೇವ ಭವತೋ ಹ್ಯುದಯೋ ಭವೇತ್ |
ಮನ್ಯೇ ಭವತ್ಪ್ರಸಾದೋಽಯಂ ತದ್ಧಿ ಕರ್ಮಸ್ವಭಾವತಃ ॥6॥
ಮತ್ತು ನಿಮ್ಮ ದರ್ಶನದಿಂದಲೇ ನನಗೆ ಅಭ್ಯುದಯ ಉಂಟಾದೀತು. ನೀವು ಮಾಡಿದ ಈ ಅನುಗ್ರಹವು ಕರ್ಮದ ಸ್ವಭಾವದಿಂದ ಉಂಟಾದುದು ಎಂದು ನಾನು ತಿಳಿಯುತ್ತೇನೆ.
ತಪಃ ಶ್ರುತಂ ಚ ಯೋನಿಶ್ಚಾಪ್ಯೇತದ್ ಬ್ರಾಹ್ಮಣ್ಯಕಾರಣಮ್ |
ತ್ರಿಭಿರ್ಗುಣೈಃ ಸಮುದಿತಸ್ತತೋ ಭವತಿ ವೈ ದ್ವಿಜಃ ॥7॥
ತಪಸ್ಸು, ವಿದ್ಯೆ ಮತ್ತು ಕುಲ - ಈ ಮೂರು ಬ್ರಾಹ್ಮಣ್ಯಕ್ಕೆ ಕಾರಣವಾದವುಗಳು. ಈ ಮೂರು ಗುಣಗಳನ್ನು ಹೊಂದಿದವನು ಬ್ರಾಹ್ಮಣನಾಗುತ್ತಾನೆ.
ತಸ್ಮಿಂಸ್ತೃಪ್ತೇ ಚ ತೃಪ್ಯಂತೇ ಪಿತರೋ ದೈವತಾನಿ ಚ |
ನ ಹಿ ಶ್ರುತವತಾಂ ಕಿಂಚಿದಧಿಕಂ ಬ್ರಾಹ್ಮಣಾದೃತೇ ॥8॥
ಅವನು ತೃಪ್ತನಾದರೆ ಪಿತೃಗಳು, ದೇವತೆಗಳು ತೃಪ್ತರಾಗುತ್ತಾರೆ. ವಿದ್ಯಾವಂತರಲ್ಲಿ ಬ್ರಾಹ್ಮಣನನ್ನು ಬಿಟ್ಟು ಶ್ರೇಷ್ಠನಾದವನು ಯಾವನೂ ಇಲ್ಲ.
ಯಥಾ ಹಿ ಸುಕೃತೇ ಕ್ಷೇತ್ರೇ ಫಲಂ ವಿಂದಂತಿ ಮಾನವಾಃ |
ಏವಂ ದತ್ತ್ವಾ ಶ್ರುತವತಿ ಫಲಂ ದಾತಾ ಸಮಶ್ನುತೇ ॥9॥
ಹೇಗೆ ಚೆನ್ನಾಗಿ ಹದಮಾಡಿದ ಕ್ಷೇತ್ರದಲ್ಲಿ ಬಿತ್ತಿದ ಬೀಜದಿಂದ ಮನುಷ್ಯರು ಫಲವನ್ನು ಪಡೆಯುತ್ತಾರೆಯೋ ಹಾಗೆ ಜ್ಞಾನಸಂಪನ್ನನಾದವನಿಗೆ ದಾನವನ್ನು ಮಾಡಿ ದಾತೃವು ಪುಣ್ಯವನ್ನು ಸಂಪಾದಿಸುತ್ತಾನೆ.
ಬ್ರಾಹ್ಮಣಶ್ಚೇನ್ನ ವಿದ್ಯೇತ ಶ್ರುತವೃತ್ತೋಪಸಂಹಿತಃ |
ಪ್ರತಿಗ್ರಹೀತಾ ದಾನಸ್ಯ ಮೋಘಂ ಸ್ಯಾದ್ ಧನಿನಾಂ ಧನಮ್ ॥10॥
ವಿದ್ಯೆ ಮತ್ತು ಆಚಾರಗಳಿಂದ ಸಂಪನ್ನನಾಗಿ ದಾನವನ್ನು ಸ್ವೀಕಾರ ಮಾಡುವ ಬ್ರಾಹ್ಮಣನೇ ಇಲ್ಲದಿದ್ದರೆ ಧನಿಕರ ಧನವು ವ್ಯರ್ಥವಾದೀತು.
ಅದನ್ ಹ್ಯವಿದ್ವಾನ್ ಹಂತ್ಯನ್ನಮದ್ಯಮಾನಂ ಚ ಹಂತಿ ತಮ್ |
ತಂ ಚ ಹನ್ಯತಿ ಯಸ್ಯಾನ್ನಂ ಸ ಹತ್ವಾ ಹನ್ಯತೇಽಬುಧಃ ॥11॥

ಜ್ಞಾನಶೂನ್ಯನಾದವನು ತಾನು ತಿನ್ನುವ ಅನ್ನವನ್ನು ಕೊಲ್ಲುತ್ತಾನೆ. ಆ ಅನ್ನವೂ ಅವನನ್ನು ಕೊಲ್ಲುತ್ತದೆ. ಆ ಅನ್ನವು ಆ ಅವಿವೇಕಿಯು ಯಾವನ ಅನ್ನವನ್ನು ತಿನ್ನುತ್ತಾನೆಯೋ ಅವನನ್ನು ಕೊಲ್ಲುತ್ತದೆ.
ಪ್ರಭುರ್ಹ್ಯನ್ನಮದನ್ ವಿದ್ವಾನ್ ಪುನರ್ಜನಯತೀಶ್ವರಃ |
ಸ ಚಾನ್ನಾಜ್ಜಾಯತೇ ತಸ್ಮಾತ್ ಸೂಕ್ಷ್ಮ ಏವ ವ್ಯತಿಕ್ರಮಃ ॥12॥
ಅವನನ್ನು ಕೊಂದು ಅವಿವೇಕಿಯನ್ನೂ ಕೊಲ್ಲುತ್ತದೆ. ಸಮರ್ಥನಾದ ವಿದ್ವಾಂಸನು ಅನ್ನವನ್ನು ಭಕ್ಷಿಸಿ ಪುನಃ ಅನ್ನವನ್ನು ಉಂಟುಮಾಡುತ್ತಾನೆ. ಆ ವಿದ್ವಾಂಸನೂ ಅನ್ನದಿಂದಲೇ ಜನಿಸುತ್ತಾನೆ. ಅನ್ನವನ್ನು ತಿನ್ನುವವನೇ ಅನ್ನವನ್ನು ಸೃಷ್ಟಿಸುವ ಈ ವ್ಯತ್ಯಾಸ ಕ್ರಮವು ಬಹಳ ಸೂಕ್ಷ್ಮವಾದುದು.
ಯದೇವ ದದತಃ ಪುಣ್ಯಂ ತದೇವ ಪ್ರತಿಗೃಹ್ಣತಃ |
ನ ಹ್ಯೇಕಚಕ್ರಂ ವರ್ತೇತ ಇತ್ಯೇವಮೃಷಯೋ ವಿದುಃ ॥13॥
ಸತ್ಪಾತ್ರನಿಗೆ ಅನ್ನವನ್ನು ಕೊಡುವವನಿಗೆ ಯಾವ ಪುಣ್ಯವೋ, ಅನ್ನವನ್ನು ಸ್ವೀಕಾರ ಮಾಡುವವನಿಗೂ ಅದೇ ಪುಣ್ಯವು ಪ್ರಾಪ್ತವಾಗುತ್ತದೆ. ಗಾಡಿಯು ಒಂದೇ ಚಕ್ರದಿಂದ ಚಲಿಸುವುದಿಲ್ಲವಷ್ಟೇ! ಎಂದು ಋಷಿಗಳು ತಿಳಿಯುತ್ತಾರೆ.
ಯತ್ರ ವೈ ಬ್ರಾಹ್ಮಣಾಃ ಸಂತಿ ಶ್ರುತವೃತ್ತೋಪಸಂಹಿತಾಃ |
ತತ್ರ ದಾನಫಲಂ ಪುಣ್ಯಮಿಹ ಚಾಮುತ್ರ ಚಾಶ್ನುತೇ ॥14॥
ವಿದ್ಯೆ ಮತ್ತು ಆಚಾರಗಳಿಂದ ಸಂಪನ್ನರಾದ ಬ್ರಾಹ್ಮಣರು ಎಲ್ಲಿ ಇರುತ್ತಾರೆಯೋ ಅಲ್ಲಿ ಅವರಿಗೆ ಮಾಡಿದ ದಾನಫಲವಾದ ಶುಭವನ್ನು ದಾತೃವು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಅನುಭವಿಸುತ್ತಾನೆ.
ಯೇ ಯೋನಿಶುದ್ಧಾಃ ಸತತಂ ತಪಸ್ಯಭಿರತಾ ಭೃಶಮ್ |
ದಾನಾಧ್ಯಯನಸಂಪನ್ನಾಸ್ತೇ ವೈ ಪೂಜ್ಯತಮಾಃ ಸದಾ ॥15॥
ಯಾರು ಶುದ್ಧವಾದ ಕುಲದಲ್ಲಿ ಜನಿಸಿದ್ದಾರೆಯೋ, ಸತತವಾಗಿ ತೀವ್ರವಾದ ತಪಸ್ಸಿನಲ್ಲಿ ನಿರತರಾಗಿರುತ್ತಾರೆಯೋ, ದಾನಾಧ್ಯಯನಾದಿಗಳಲ್ಲಿ ನಿರತರಾಗಿರುತ್ತಾರೆಯೋ ಅವರು ಯಾವಾಗಲೂ ಅತ್ಯಂತ ಪೂಜ್ಯರಾದವರು.
ತೈರ್ಹಿ ಸದ್ಭಿಃ ಕೃತಃ ಪಂಥಾಶ್ಚೇತಯಾನೋ ನ ಮುಹ್ಯತೇ |
ತೇ ಹಿ ಸ್ವರ್ಗಸ್ಯ ನೇತಾರೋ ಯಜ್ಞವಾಹಾಃ ಸನಾತನಾಃ ॥16॥
ಅಂತಹವರು ಸ್ವರ್ಗಕ್ಕೆ ಹೋಗುವ ದಾರಿಯನ್ನು ನಿರ್ಮಾಣ ಮಾಡಿದ್ದಾರೆ. ಅದನ್ನು ತಿಳಿದವನು ಮೋಹಕ್ಕೆ ಒಳಗಾಗುವುದಿಲ್ಲ. ಅವರೇ ಸ್ವರ್ಗಕ್ಕೆ ಕರೆದುಕೊಂಡು ಹೋಗುವವರು, ಯಜ್ಞಗಳನ್ನು ನಿರ್ವಹಿಸುವವರು ಮತ್ತು ವೇದಪ್ರತಿಪಾದ್ಯರಾದವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಮೈತ್ರೇಯಭಿಕ್ಷಾ ನಾಮ ದ್ವಾಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ಮೂರನೆಯ ಅಧ್ಯಾಯ
ವ್ಯಾಸ-ಮೈತ್ರೇಯರ ಸಂವಾದ
ಭೀಷ್ಮಃ
ಏವಮುಕ್ತಃ ಸ ಭಗವಾನ್ ಮೈತ್ರೇಯಂ ಪ್ರತ್ಯಭಾಷತ |
ದಿಷ್ಟ್ಯೈವಂ ತ್ವಂ ವಿಜಾನಾಸಿ ದಿಷ್ಟ್ಯಾ ತೇ ಬುದ್ಧಿರೀದೃಶೀ |
ಲೋಕೋ ಹ್ಯಾರ್ಯಗುಣಾನೇವ ಭೂಯಿಷ್ಠಂ ತು ಪ್ರಶಂಸತಿ ॥1॥
ಭೀಷ್ಮ ಹೀಗೆ ಹೇಳಲ್ಪಟ್ಟ ಪೂಜ್ಯರಾದ ವ್ಯಾಸರು ಮೈತ್ರೇಯರನ್ನು ಕುರಿತು- ದೇವರ ದಯದಿಂದ ನೀನು ಇಂತಹ ಜ್ಞಾನವನ್ನು ಹೊಂದಿದ್ದೀಯೆ. ದೇವರ ದಯದಿಂದ ನಿನ್ನ ಬುದ್ಧಿಯು ಈ ರೀತಿಯಾಗಿದೆ. ಜನರು ತಮ್ಮಗುಣಕ್ಕಿಂತಲೂ ಹೆಚ್ಚಾಗಿ ದೊಡ್ಡವರ ಗುಣಗಳನ್ನೇ ಪ್ರಶಂಸಿಸುತ್ತಾರೆ.
ರೂಪಮಾನವಯೋಮಾನಶ್ರೀಮಾನಾಶ್ಚಾಪ್ಯಸಂಶಯಮ್ |
ದಿಷ್ಟ್ಯಾ ನಾಭಿಭವಂತಿ ತ್ವಾಂ ದೈವಸ್ತೇಽಯಮನುಗ್ರಹಃ |
ಯತ್ ತೇ ಭೃಶತರಂ ದಾನಾದ್ ವರ್ತಯಿಷ್ಯಾಮಿ ತಚ್ಛೃಣು ॥2॥
ರೂಪಮದ, ವಯಸ್ಸಿನ ಮದ, ಸಂಪತ್ತಿನ ಮದ ಇವುಗಳು ನಿನ್ನನ್ನು ಪರಾಭವಗೊಳಿಸುವುದಿಲ್ಲ. ಇದು ನಿನಗಿರುವ ದೇವತಾನುಗ್ರಹ. ನಿನಗೆ ದಾನಕ್ಕಿಂತಲೂ ಶ್ರೇಷ್ಠವಾದ ಫಲವನ್ನು ಕೊಡುವುದನ್ನು ಹೇಳುವೆನು, ಅದನ್ನು ಕೇಳು.
ಯಾನೀಹಾಗಮಶಾಸ್ತ್ರಾಣಿ ಯಾಶ್ಚ ಕಾಶ್ಚಿತ್ಪ್ರವೃತ್ತಯಃ |
ತಾನಿ ವೇದಂ ಪುರಸ್ಕೃತ್ಯ ಪ್ರವೃತ್ತಾನಿ ಯಥಾಕ್ರಮಮ್ ॥3॥
ಈ ಲೋಕದಲ್ಲಿ ಯಾವ ಆಗಮಶಾಸ್ತ್ರಗಳು ಮತ್ತು ಪ್ರವೃತ್ತಿಗಳು ಇವೆಯೋ ಅವೆಲ್ಲವೂ ವೇದವನ್ನು ಆಧರಿಸಿಕೊಂಡು ಹೊರಟಿವೆ.
ಅಹಂ ದಾನಂ ಪ್ರಶಂಸಾಮಿ ಭವಾನಪಿ ತಪಃಶ್ರುತೇ |
ತಪಃ ಪವಿತ್ರಂ ವೇದಸ್ಯ ತಪಃ ಸ್ವರ್ಗಸ್ಯ ಸಾಧನಮ್ ॥4॥
ನಾನು ದಾನವು ಪ್ರಶಸ್ತವೆಂದು ಹೇಳುತ್ತೇನೆ. ನೀನು ತಪಸ್ಸು ಮತ್ತು ಯಜ್ಞಗಳು ಪ್ರಶಸ್ತವೆಂದು ಹೇಳುತ್ತಿದ್ದೀಯೆ. ತಪಸ್ಸು ಅಧ್ಯಯನ ಮಾಡಿದ ವೇದಕ್ಕೂ ಪಾವಿತ್ರ್ಯವನ್ನು ತಂದುಕೊಡುವಂತಹದು ಮತ್ತು ಸ್ವರ್ಗಕ್ಕೆ ಸಾಧನವಾದುದು.
ತಪಸಾ ಮಹದಾಪ್ನೋತಿ ವಿದ್ಯಯಾ ಚೇತಿ ನಃ ಶ್ರುತಮ್ |

ತಪಸ್ಯೈವ ಚಾಪನುದೇದ್ ಯಚ್ಚಾನ್ಯದಪಿ ದುಷ್ಕೃತಮ್ ॥5॥
ತಪಸ್ಸಿನಿಂದಲೂ, ವಿದ್ಯೆಯಿಂದಲೂ ಮನುಷ್ಯನು ಮಹತ್ವವನ್ನು ಪಡೆಯುತ್ತಾನೆ ಎಂದು ನಾವು ಕೇಳಿದ್ದೇವೆ. ಬೇರೆ ಯಾವ ದುಷ್ಕರ್ಮವಿದ್ದರೂ ಅದನ್ನು ತಪಸ್ಸಿನಿಂದಲೇ ಪರಿಹರಿಸಿಕೊಳ್ಳಬೇಕು.
ಯದ್ಯದ್ ಹಿ ಕಿಂಚಿತ್ ಸಂಧಾಯ ಪುರುಷಸ್ತಪ್ಯತೇ ತಪಃ |
ಸರ್ವಮೇತದವಾಪ್ನೋತಿ ವಿದ್ಯಯಾ ಚೇತಿ ನಃ ಶ್ರುತಮ್ ॥6॥
ಮನುಷ್ಯನು ಏನೇನನ್ನು ಉದ್ದೇಶಿಸಿ ತಪಸ್ಸನ್ನು ಮಾಡುತ್ತಾನೆಯೋ ಅವೆಲ್ಲವನ್ನೂ ವಿದ್ಯೆಯಿಂದಲೂ ಪಡೆಯುತ್ತಾನೆಂದು ನಾವು ಕೇಳಿದ್ದೇವೆ.
ದುರನ್ವಯಂ ದುಷ್ಪ್ರಧೃಷ್ಯಂ ದುರಾಪಂ ದುರತಿಕ್ರಮಮ್ |
ಸರ್ವಂ ವೈ ತಪಸಾಽಭ್ಯೇತಿ ತಪೋ ಹಿ ಬಲವತ್ತರಮ್ ॥7॥
ಸಂಬಂಧವನ್ನು ಪಡೆಯಲು ಸಾಧ್ಯವಿಲ್ಲದ, ಆಕ್ರಮಿಸಲು ಸಾಧ್ಯವಿಲ್ಲದ, ಹೊಂದಲು ಸಾಧ್ಯವಿಲ್ಲದ, ದಾಟಲು ಸಾಧ್ಯವಿಲ್ಲದ ಎಲ್ಲಾ ವಸ್ತುಗಳನ್ನೂ ತಪಸ್ಸಿನಿಂದ ಪಡೆಯುತ್ತಾನೆ. ತಪಸ್ಸು ಅತ್ಯಂತ ಬಲಿಷ್ಠವಾದುದು.
ಸುರಾಪಃ ಸ್ವರ್ಣಹಾರೀ ಚ ಭ್ರೂಣಹಾ ಗುರುತಲ್ಪಗಃ |
ತಪಸಾ ತರತೇ ಸರ್ವಮೇನಸಶ್ಚ ಪ್ರಮುಚ್ಯತೇ ॥8॥
ಸುರಾಪಾನವನ್ನು ಮಾಡಿದವನು, ಸ್ವರ್ಣಾಪಹಾರಕನು, ಭ್ರೂಣಹತ್ಯೆಯನ್ನು ಮಾಡಿದವನು, ಗುರುತಲ್ಪಗಾಮಿಯಾದವನು ತಪಸ್ಸಿನಿಂದಲೇ ಎಲ್ಲವನ್ನೂ ದಾಟಿ ಪಾಪದಿಂದ ನಿರ್ಮುಕ್ತನಾಗುತ್ತಾನೆ.
ಸರ್ವವಿದ್ಯಸ್ತು ಚಕ್ಷುಷ್ಮಾನಪಿ ಯಾದೃಶತಾದೃಶಃ |
ತಪಸ್ವಿನೌ ಚ ತಾವಾಹುಸ್ತಾಭ್ಯಾಂ ಕಾರ್ಯಂ ಸದಾ ನಮಃ ॥9॥
ಸರ್ವವಿದ್ಯಾಸಂಪನ್ನನಾದವನು ಯಾವ ರೀತಿಯಲ್ಲಿದ್ದರೂ ಅವನೇ ಕಣ್ಣುಳ್ಳವನು. ತಪಸ್ವಿಯಾದವನು ಮತ್ತು ಸರ್ವವಿದ್ಯಾಸಂಪನ್ನನು ಇಬ್ಬರೂ ತಪಸ್ವಿಗಳೆಂದೇ ಕರೆಯಲ್ಪಡುತ್ತಾರೆ. ಅವರನ್ನು ಯಾವಾಗಲೂ ನಮಸ್ಕರಿಸಬೇಕು.
ಸರ್ವೇ ಪೂಜ್ಯಾಃ ಶ್ರುತಧನಾಸ್ತಥೈವ ಚ ತಪಸ್ವಿನಃ |
ದಾನಪ್ರದಾಃ ಸುಖಂ ಪ್ರೇತ್ಯ ಪ್ರಾಪ್ನುವಂತೀಹ ಚ ಶ್ರಿಯಮ್ ॥10॥
ತಪೋಧನರೂ ಮತ್ತು ವಿದ್ಯಾಧರರೂ ಆದ ಎಲ್ಲರನ್ನೂ ಪೂಜಿಸಬೇಕು. ಅವರಿಗೆ ದಾನವನ್ನು ಮಾಡುವವರು ಈ ಲೋಕದಲ್ಲಿ ಸಂಪತ್ತನ್ನೂ ಪರಲೋಕದಲ್ಲಿ ಸುಖವನ್ನೂ ಪಡೆಯುತ್ತಾರೆ.
ಇಮಂ ಚ ಬ್ರಹ್ಮಲೋಕಂ ಚ ಲೋಕಂ ಚ ಬಲವತ್ತರಮ್ |
ಅನ್ನದಾನೈಃ ಸುಕೃತಿನಃ ಪ್ರಾಪ್ನುವಂತೀಹ ಲೌಕಿಕಮ್ ॥11॥
ಪುಣ್ಯವಂತರು ಅನ್ನದಾನಗಳಿಂದ ಈ ಲೋಕದಲ್ಲಿ ಸಂಪತ್ತನ್ನೂ ಮತ್ತು ಮರಣಾನಂತರದಲ್ಲಿ ಬ್ರಹ್ಮಲೋಕವನ್ನೂ, ಅದಕ್ಕಿಂತ ಉತ್ತಮವಾದ ಲೋಕಗಳನ್ನೂ ಹೊಂದುತ್ತಾರೆ.
ಪೂಜಿತಾಃ ಪೂಜಯಂತ್ಯೇತಾನ್ ಮಾನಿತಾ ಮಾನಯಂತಿ ಚ |
ಅದಾತಾ ಯತ್ರ ಯತ್ರೈತಿ ಸರ್ವತಃ ಸಂಪ್ರಣುದ್ಯತೇ ॥12॥
ಪೂಜಿಸಲ್ಪಟ್ಟವರು ತಮ್ಮನ್ನು ಪೂಜೆ ಮಾಡಿದವರನ್ನು ಪೂಜಿಸುತ್ತಾರೆ. ಗೌರವಿಸಲ್ಪಟ್ಟವರು ಗೌರವಿಸಿದವನಿಗೆ ಗೌರವವನ್ನು ಕೊಡುತ್ತಾರೆ. ದಾನ ಮಾಡದವನು ಎಲ್ಲೆಲ್ಲಿ ಹೋದರೂ ಎಲ್ಲ ಕಡೆಯಲ್ಲಿಯೂ ತಳ್ಳಲ್ಪಡುತ್ತಾನೆ.
ಅಕರ್ತಾ ಚೈವ ಕರ್ತಾ ಚ ಲಭತೇ ಯಸ್ಯ ಯಾದೃಶಮ್ |
ಯದ್ಯೇವೋರ್ಧ್ವಂ ಯದ್ಯವಾಕ್ಚ ಲೋಕಾನ್ನಯಸಿ ಯಾಸ್ಯಸಿ ॥13॥
ಶುಭಾಶುಭ ಕರ್ಮಗಳನ್ನು ಮಾಡುವವನು ಮತ್ತು ಮಾಡದವನು ತಮ್ಮ ಕರ್ಮಕ್ಕೆ ಅನುಗುಣವಾಗಿ ತಮಗೆ ಯೋಗ್ಯವಾದ ಊರ್ಧ್ವಲೋಕ ಅಥವಾ ಅಧೋ ಲೋಕಗಳಿಗೆ ಹೋಗುತ್ತಾರೆ.
ಪ್ರಾಪ್ಸ್ಯಸೇ ತ್ವನ್ನಪಾನಾನಿ ಯಾನಿ ದಾಸ್ಯಸಿ ಕಾನಿಚಿತ್ |
ಮೇಧಾವ್ಯಸಿ ಕುಲೇ ಜಾತಃ ಶ್ರುತವಾನನೃಶಂಸವಾನ್ ॥14॥
ಯಾವ ಅನ್ನ-ಪಾನಗಳನ್ನು ನೀನು ದಾನ ಮಾಡುವಿಯೋ ಅಂತಹ ಅನ್ನ ಪಾನಗಳನ್ನು ನೀನು ಹೊಂದುವಿ. ನೀನು ಸತ್ಕುಲದಲ್ಲಿ ಜನಿಸಿ ವಿದ್ಯಾವಂತನೂ, ದಯಾಪರನೂ, ಮಾರ್ದವವನ್ನು ಹೊಂದಿದವನೂ ಮತ್ತು ಮೇಧಾವಿಯೂ ಆಗಿದ್ದೀಯೆ.
ಕೌಮಾರದಾರವ್ರತವಾನ್ ಮೈತ್ರೇಯ ನಿರತೋ ಭವ |
ಏತದ್ ಗೃಹಾಣ ಪ್ರಥಮಂ ಪ್ರಶಸ್ತಂ ಗೃಹಮೇಧಿನಾಮ್ ॥15॥
ಎಲೈ ಮೈತ್ರೇಯನೇ, ಕೌಮಾರದಿಂದಲೂ ಪತ್ನೀವ್ರತವನ್ನು ಧರಿಸಿ ಪತ್ನಿಯಲ್ಲಿಯೇ ನಿರತನಾಗಿರು. ಇದು ಗೃಹಸ್ಥರಿಗೆ ಅತ್ಯಂತ ಪ್ರಶಸ್ತವಾದ ವ್ರತವೆಂದು ತಿಳಿ.
ಯೋ ಭರ್ತಾ ವಾಸಿತಾತುಷ್ಟೋ ಭರ್ತುಸ್ತುಷ್ಟಾ ಚ ವಾಸಿತಾ |
ಯಸ್ಮಿನ್ನೇವಂ ಕುಲೇ ಸರ್ವಂ ಕಲ್ಯಾಣಂ ತತ್ರ ವರ್ತತೇ ॥16॥
ಯಾವ ಕುಲದಲ್ಲಿ ಪತಿಯು ಪತ್ನಿಯಿಂದಲೂ, ಪತ್ನಿಯು ಪತಿಯಿಂದಲೂ ಸಂತುಷ್ಟರಾಗಿರುತ್ತಾರೆಯೋ ಅಲ್ಲಿಯೇ ಸರ್ವಕಲ್ಯಾಣಗಳೂ ಸಂಭವಿಸುತ್ತವೆ.
ಅದ್ಭಿರ್ಗಾತ್ರಾನ್ಮಲಮಿವ ತಮೋಽಗ್ನಿಪ್ರಭಯಾ ಯಥಾ |
ದಾನೇನ ತಪಸಾ ಚೈವ ಸರ್ವಪಾಪಮಪೋಹ್ಯತೇ ॥17॥
ನೀರಿನಿಂದ ದೇಹಕಶ್ಮಲವನ್ನು ತೊಳೆದಂತೆ, ಅಗ್ನಿಪ್ರಭೆಯಿಂದ ಅಂಧಕಾರವು ನಾಶವಾದಂತೆ ದಾನದಿಂದಲೂ ಮತ್ತು

ತಪಸ್ಸಿನಿಂದಲೂ ಎಲ್ಲ ಪಾಪಗಳೂ ನಾಶವನ್ನು ಹೊಂದುತ್ತವೆ.
ಸ್ವಸ್ತಿ ಪ್ರಾಪ್ನುಹಿ ಮೈತ್ರೇಯ ಗೃಹಾನ್ ಸಾಧು ವ್ರಜಾಮ್ಯಹಮ್ |
ಏತನ್ಮನಸಿ ಕರ್ತವ್ಯಂ ಶ್ರೇಯ ಏವಂ ಭವಿಷ್ಯತಿ ॥18॥
ಎಲೈ ಮೈತ್ರೇಯನೇ, ನಿನಗೆ ಕ್ಷೇಮವಾಗಲಿ. ನಾನು ಮನೆಗೆ ಹೋಗುತ್ತೇನೆ. ನಾನು ಹೇಳಿದುದನ್ನು ಮನಸ್ಸಿನಲ್ಲಿ ಧರಿಸು. ಅದರಿಂದ ಶ್ರೇಯಸ್ಸು ಉಂಟಾಗುವುದು.
ಭೀಷ್ಮಃ
ತಂ ಪ್ರಣಮ್ಯಾಥ ಮೈತ್ರೇಯಃ ಕೃತ್ವಾ ಚಾಭಿಪ್ರದಕ್ಷಿಣಮ್ |
ಸ್ವಸ್ತಿ ಪ್ರಾಪ್ನೋತು ಭಗವಾನಿತ್ಯುವಾಚ ಕೃತಾಂಜಲಿಃ ॥19॥
ಭೀಷ್ಮ ಅನಂತರ ಮೈತ್ರೇಯರು ವ್ಯಾಸರಿಗೆ ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ, ಪೂಜ್ಯರಾದ ನಿಮಗೆ ಕ್ಷೇಮವಾಗಲಿ ಎಂದು ಕೈಮುಗಿದು ಹೇಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರಎಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ನಾಲ್ಕನೆಯ ಅಧ್ಯಾಯ
ಪತಿವ್ರತಾಧರ್ಮ, ಸುಮನ-ಶಾಂಡಿಲಿಯರ ಸಂವಾದ
ಯುಧಿಷ್ಠಿರಃ
ಸತ್‌ಸ್ತ್ರೀಣಾಂ ಸಮುದಾಚಾರಂ ಸರ್ವಧರ್ಮಭೃತಾಂ ವರ |
ಶ್ರೋತುಮಿಚ್ಛಾಮ್ಯಹಂ ತ್ವತ್ತಸ್ತಂ ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಸರ್ವಧರ್ಮಿಷ್ಠರಲ್ಲಿ ಶ್ರೇಷ್ಠನಾದ ಪಿತಾಮಹನೇ, ಉತ್ತಮ ಸ್ತ್ರೀಯರ ಸಮುದಾಚಾರವನ್ನು ನಿನ್ನಿಂದ ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳು.
ಭೀಷ್ಮಃ
ಸರ್ವಜ್ಞಾಂ ಸರ್ವಧರ್ಮಜ್ಞಾಂ ದೇವಲೋಕೇ ಮನಸ್ವಿನೀಮ್ |
ಕೈಕೇಯೀ ಸುಮನಾ ನಾಮ ಶಾಂಡಿಲೀಂ ಪರ್ಯಪೃಚ್ಛತ ॥2॥
ಭೀಷ್ಮ ದೇವಲೋಕದಲ್ಲಿ ಸುಮನಾ ಎಂಬ ಕೈಕೇಯಿಯು ಸರ್ವಜ್ಞಳೂ, ಸರ್ವಧರ್ಮವನ್ನು ತಿಳಿದವಳೂ ಆದ ಶಾಂಡಿಲಿಯನ್ನು ಪ್ರಶ್ನೆ ಮಾಡಿದಳು.
ಕೇನ ವೃತ್ತೇನ ಕಲ್ಯಾಣಿ ಸದಾಚಾರೇಣ ಕೇನ ವಾ |
ವಿಧೂಯ ಸರ್ವಪಾಪಾನಿ ದೇವಲೋಕಂ ತ್ವಮಾಗತಾ ॥3॥
ಎಲೌ ಕಲ್ಯಾಣಿಯೇ, ಯಾವ ನಡತೆಯಿಂದ ಅಥವಾ ಯಾವ ಸದಾಚಾರದಿಂದ ನೀನು ಎಲ್ಲ ಪಾಪಗಳನ್ನೂ ಕಳೆದುಕೊಂಡು ದೇವಲೋಕಕ್ಕೆ ಬಂದಿದ್ದೀಯೆ?
ಹುತಾಶನಶಿಖೇವ ತ್ವಂ ಜ್ವಲಮಾನಾ ಸ್ವತೇಜಸಾ |
ಸುತಾ ತಾರಾಧಿಪಸ್ಯೇವ ಪ್ರಭಯಾ ದಿವಮಾಗತಾ ॥4॥
ಅಗ್ನಿಶಿಖೆಯಂತೆ ನೀನು ನಿನ್ನ ತೇಜಸ್ಸಿನಿಂದ ಬೆಳಗುತ್ತಾ ಚಂದ್ರನ ಪುತ್ರಿಯಂತೆ ನಿನ್ನ ಪ್ರಭೆಯಿಂದ ಸ್ವರ್ಗಕ್ಕೆ ಬಂದಿದ್ದೀಯೆ.
ಅರಜಾಂಸಿ ಚ ವಸ್ತ್ರಾಣಿ ಧಾರಯಂತೀ ಗತಕ್ಲಮಾ |
ವಿಮಾನಸ್ಥಾ ಶುಭೇ ಭಾಸಿ ಸಹಸ್ರಗುಣಮೋಜಸಾ ॥5॥
ಎಲೌ ಶುಭಳೇ, ಶುಭ್ರವಾದ ವಸ್ತ್ರವನ್ನು ಧರಿಸಿ, ಶ್ರಮರಹಿತಳಾಗಿ, ವಿಮಾನದಲ್ಲಿ ಕುಳಿತು ನೀನು ಸಹಸ್ರಪಟ್ಟು ಕಾಂತಿಯಿಂದ ಕೂಡಿರುವವಳಾಗಿ ತೋರುತ್ತಿದ್ದೀಯೆ.
ನ ತ್ವಮಲ್ಪೇನ ತಪಸಾ ದಾನೇನ ನಿಯಮೇನ ವಾ |
ಇಮಂ ಲೋಕಮನುಪ್ರಾಪ್ತಾ ತಸ್ಮಾತ್ ತತ್ ತ್ವಂ ವದಸ್ವ ಮೇ ॥6॥
ನೀನು ಅಲ್ಪವಾದ ತಪಸ್ಸಿನಿಂದಾಗಲೀ, ದಾನದಿಂದಾಗಲೀ, ನಿಯಮದಿಂದಾಗಲೀ ಈ ಲೋಕಕ್ಕೆ ಬಂದವಳಲ್ಲ. ಆದ್ದರಿಂದ ನೀನು ಇಲ್ಲಿಗೆ ಬಂದುದಕ್ಕೆ ಕಾರಣವನ್ನು ನನಗೆ ಹೇಳು.
ಇತಿ ಪೃಷ್ಟಾ ಸುಮನಯಾ ಮಧುರಂ ಚಾರುಹಾಸಿನೀ |
ಶಾಂಡಿಲೀ ನಿಭೃತಂ ವಾಕ್ಯಂ ಸುಮನಾಮಿದಮಬ್ರವೀತ್ ॥7॥
ಹೀಗೆ ಸುಮನಳಿಂದ ಮಧುರವಾಗಿ ಕೇಳಲ್ಪಟ್ಟ, ಚಾರುಹಾಸಿನಿಯಾದ ಶಾಂಡಿಲಿಯು ಸುಮನಳನ್ನು ಉದ್ದೇಶಿಸಿ ಈ ಮಾತನ್ನು ಆಡಿದಳು.
ನಾಹಂ ಕಾಷಾಯವಸನಾ ನಾಪಿ ವಲ್ಕಲಧಾರಿಣೀ |
ನ ಚ ಮುಂಡಾ ನ ಜಟಿಲಾ ಭೂತ್ವಾ ದೇವತ್ವಮಾಗತಾ ॥8॥
ನಾನು ಕಾವಿಯನ್ನು ಧರಿಸಿ ಅಥವಾ ನಾರುಮಡಿಯನ್ನು ಧರಿಸಿ ಅಥವಾ ಸಂನ್ಯಾಸವನ್ನು ಸ್ವೀಕರಿಸಿ ಅಥವಾ ಕರ್ಕಶವಾದ ಧರ್ಮಚಾರಿಣಿಯಾಗಿ ದೇವಲೋಕಕ್ಕೆ ಬಂದಿಲ್ಲ.
ಅಹಿತಾನಿ ಚ ವಾಕ್ಯಾನಿ ಸರ್ವಾಣಿ ಪರುಷಾಣಿ ಚ |

ಅಪ್ರಮತ್ತಾ ಚ ಭರ್ತಾರಂ ಕದಾಚಿನ್ನಾಹಮಬ್ರುವಮ್ ॥9॥
ನಾನು ಪತಿಯನ್ನು ಕುರಿತು ಜಾಗರೂಕಳಾಗಿ ಎಂದೂ ಅಹಿತವಾದ ವಾಕ್ಯಗಳನ್ನಾಗಲೀ, ಒರಟು ಮಾತುಗಳನ್ನಾಗಲೀ ಆಡಲಿಲ್ಲ.
ದೇವತಾನಾಂ ಪಿತೃಣಾಂ ಚ ಬ್ರಾಹ್ಮಣಾನಾಂ ಚ ಪೂಜನೇ |
ಅಪ್ರಮತ್ತಾ ಸದಾಯುಕ್ತಾ ಶ್ವಶ್ರೂಶ್ವಶುರವರ್ತಿನೀ ॥10॥
ದೇವತೆಗಳ, ಪಿತೃಗಳ ಮತ್ತು ಬ್ರಾಹ್ಮಣರ ಪೂಜೆಯಲ್ಲಿಯೂ ಅತ್ತೆ-ಮಾವಂದಿರ ಸೇವೆಯಲ್ಲಿಯೂ ಎಚ್ಚರಿಕೆಯಿಂದ ಸದಾ ಉದ್ಯುಕ್ತಳಾಗಿರುತ್ತೇನೆ.
ಪೈಶುನ್ಯೇ ನ ಪ್ರವರ್ತಾಮಿ ನ ಮಮೈತನ್ಮನೋಗತಮ್ |
ಪ್ರದ್ವಾರಿ ಚ ನ ತಿಷ್ಠಾಮಿ ಚಿರಂ ನ ಕಥಯಾಮಿ ಚ ॥11॥
ಚಾಡಿಯನ್ನು ಹೇಳುವುದಿಲ್ಲ. ಅದು ನನ್ನ ಮನಸ್ಸಿಗೆ ಇಷ್ಟವೂ ಅಲ್ಲ. ಮನೆಯ ಮುಂಬಾಗಿಲಿನಲ್ಲಿ ನಿಲ್ಲುವುದಿಲ್ಲ. ಯಾರ ಜೊತೆಯಲ್ಲಿಯೂ ಬಹಳ ಹೊತ್ತು ಮಾತನಾಡುವುದಿಲ್ಲ.
ಅಸದ್ವಾ ಹಸಿತಂ ಕಿಂಚಿದಹಿತಂ ವಾಪಿ ಕರ್ಮಣಾ |
ರಹಸ್ಯಮರಹಸ್ಯಂ ವಾ ನ ಪ್ರವರ್ತಾಮಿ ಸರ್ವಥಾ ॥12॥
ಕೆಟ್ಟ ವಿಷಯದಲ್ಲಿ ನಗುವುದನ್ನಾಗಲೀ ಅಥವಾ ಅಹಿತವಾದ ಕರ್ಮವನ್ನಾಗಲೀ ರಹಸ್ಯವಾಗಿ ಅಥವಾ ಪ್ರಕಾಶವಾಗಿ ಸರ್ವಥಾ ಮಾಡುವುದಿಲ್ಲ.
ಕಾರ್ಯಾರ್ಥೇ ನಿರ್ಗತಂ ಚಾಪಿ ಭರ್ತಾರಂ ಗೃಹಮಾಗತಮ್ |
ಆಸನೇನೋಪಸಂಯೋಜ್ಯ ಪೂಜಯಾಮಿ ಸಮಾಹಿತಾ ॥13॥
ಕಾರ್ಯದ ಸಲುವಾಗಿ ಹೊರಗೆ ಹೋಗಿ ಮನೆಗೆ ಹಿಂದಿರುಗಿದ ಪತಿಯನ್ನು ಆಸನವನ್ನು ಕೊಟ್ಟು ಸತ್ಕರಿಸಿ ಸಮಾಧಾನದಿಂದ ಪೂಜಿಸುತ್ತೇನೆ.
ಯದ್ಯಚ್ಚ ನಾಭಿಜಾನಾತಿ ಯದ್ಭೋಜ್ಯಂ ನಾಭಿನಂದತಿ |
ಭಕ್ಷ್ಯಂ ವಾಪ್ಯಥ ವಾ ಲೇಹ್ಯಂ ತತ್ಸರ್ವಂ ವರ್ಜಯಾಮ್ಯಹಮ್ ॥14॥
ಪತಿಯು ಯಾವುದನ್ನು ಇಷ್ಟ ಪಡುವುದಿಲ್ಲವೋ, ಯಾವ ಭಕ್ಷ್ಯ-ಲೇಹ್ಯ ಮೊದಲಾದವುಗಳನ್ನು ಇಷ್ಟ ಪಡುವುದಿಲ್ಲವೋ ಅದೆಲ್ಲವನ್ನೂ ನಾನೂ ವರ್ಜಿಸುತ್ತೇನೆ.
ಕುಟುಂಬಾರ್ಥೇ ಸಮಾನೀತಂ ಯತ್ಕಿಂಚಿತ್ಕಾರ್ಯಮೇವ ತು |
ಪ್ರಾತರುತ್ಥಾಯ ತತ್ಸರ್ವಂ ಕಾರಯಾಮಿ ಕರೋಮಿ ಚ ॥15॥
ಕುಟುಂಬದ ಸಲುವಾಗಿ ಒದಗಿ ಬಂದ ಯಾವ ಕಾರ್ಯವನ್ನೂ ಪ್ರಾತಃಕಾಲದಲ್ಲಿ ಬೇಗ ಎದ್ದು ಎಲ್ಲವನ್ನೂ ಮಾಡುತ್ತೇನೆ ಮತ್ತು ಮಾಡಿಸುತ್ತೇನೆ.
ಪ್ರವಾಸಂ ಯದಿ ಮೇ ಭರ್ತಾ ಯಾತಿ ಕಾರ್ಯೇಣ ಕೇನಚಿತ್ |
ಮಂಗಲ್ಯೈರ್ಬಹುಭಿರ್ಯುಕ್ತಾ ಭವಾಮಿ ನಿಯತಾಸನಾ ॥16॥
ಪತಿಯು ಯಾವುದಾದರೂ ಕಾರ್ಯದ ಸಲುವಾಗಿ ಪ್ರವಾಸಕ್ಕೆ ಹೋದರೆ ನಾನು ಮಂಗಳಕ್ಕೆ ಕಾರಣಗಳಾದ ನಿಯಮಗಳನ್ನು ಮಾಡುತ್ತೇನೆ.
ಅಂಜನಂ ರೋಚನಾಂ ಚೈವ ಸ್ನಾನಂ ಮಾಲ್ಯಾನುಲೇಪನಮ್ |
ಪ್ರಸಾಧನಂ ಚ ನಿಷ್ಕ್ರಾಂತೇ ನಾಭಿನಂದಾಮಿ ಭರ್ತರಿ ॥17॥
ಪತಿಯು ಊರಿನಲ್ಲಿ ಇಲ್ಲದಿದ್ದಾಗ ನಾನು ಅಭ್ಯಂಜನವನ್ನಾಗಲೀ, ಅಲಂಕಾರವನ್ನಾಗಲೀ, ವಿಶೇಷ ಸ್ನಾನವನ್ನಾಗಲೀ, ಮಾಲೆಯನ್ನಾಗಲೀ, ಸುಗಂಧ ಲೇಪನವನ್ನಾಗಲೀ, ಕಾಡಿಗೆ ಮುಂತಾದವನ್ನಾಗಲೀ ಇಷ್ಟಪಡುವುದಿಲ್ಲ.
ನೋತ್ಥಾಪಯಾಮಿ ಭರ್ತಾರಂ ಸುಖಸುಪ್ತಮಹಂ ಸದಾ |
ಆತುರೇಷ್ವಪಿ ಕಾರ್ಯೇಷು ತೇನ ತುಷ್ಯತಿ ಮೇ ಮನಃ ॥18॥
ಆತುರ ಕಾರ್ಯವು ಒದಗಿದರೂ ಸುಖವಾಗಿ ನಿದ್ರಿಸುವ ನನ್ನ ಪತಿಯನ್ನು ಎಂದೂ ಎಬ್ಬಿಸುವುದಿಲ್ಲ. ಅದರಿಂದ ನನ್ನ ಮನಸ್ಸು ಸಂತೋಷಗೊಳ್ಳುತ್ತದೆ.
ನಾಯಾಸಯಾಮಿ ಭರ್ತಾರಂ ಕುಟುಂಬಾರ್ಥೇ ಚ ಸರ್ವದಾ |
ಗುಪ್ತಗುಹ್ಯಾ ಸದಾ ಚಾಸ್ಮಿ ಸುಸಮ್ಮೃಷ್ಟನಿವೇಶನಾ ॥19॥
ಕುಟುಂಬದ ಸಲುವಾಗಿ ಪತಿಗೆ ಎಂದೂ ಉಪದ್ರವವನ್ನು ಕೊಡುವುದಿಲ್ಲ. ರಹಸ್ಯಗಳನ್ನು ಯಾವಾಗಲೂ ಗೌಪ್ಯವಾಗಿಯೇ ಇಡುತ್ತೇನೆ. ಮನೆಯನ್ನು ಚೆನ್ನಾಗಿ ತೊಳೆದು ಇಟ್ಟುಕೊಳ್ಳುತ್ತೇನೆ.
ಇಮಂ ಧರ್ಮಪಥಂ ನಾರೀ ಪಾಲಯಂತೀ ಸಮಾಹಿತಾ |
ಅರುಂಧತೀವ ನಾರೀಣಾಂ ಸ್ವರ್ಗಲೋಕೇ ಮಹೀಯತೇ ॥20॥
ಇಂತಹ ಧರ್ಮಮಾರ್ಗವನ್ನು ಸಮಾಧಾನದಿಂದ ಅನುಸರಿಸುವ ನಾರಿಯು ನಾರಿಯರ ಮಧ್ಯದಲ್ಲಿ ಅರುಂಧತಿಯು ಪೂಜಿಸಲ್ಪಡುವಂತೆ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾಳೆ.
ಭೀಷ್ಮಃ
ಏತದಾಖ್ಯಾಯ ಸಾ ದೇವೀ ಸುಮನಾಯೈ ತಪಸ್ವಿನೀ |
ಪತಿಧರ್ಮಂ ಮಹಾಭಾಗಾ ಜಗಾಮಾದರ್ಶನಂ ತದಾ ॥21॥
ಭೀಷ್ಮ ತಪಸ್ವಿನಿಯಾದ, ಮಹಾನುಭಾವಳಾದ ಆ ಶಾಂಡಿಲಿದೇವಿಯು ಸುಮನೆಗೆ ಹೀಗೆ ಪತಿಧರ್ಮವನ್ನು ನಿರೂಪಿಸಿ ಅದೃಶ್ಯಳಾದಳು.

ಯಶ್ಚೇದಂ ಪಾಂಡವಾಖ್ಯಾನಂ ಪಠೇತ್ ಪರ್ವಣಿ ಪರ್ವಣಿ |
ಸ ದೇವಲೋಕಂ ಸಂಪ್ರಾಪ್ಯ ನಂದನೇ ಸುಸುಖಂ ವಸೇತ್ ||22||
ಎಲೈ ಪಾಂಡವನೇ, ಯಾವನು ಈ ಆಖ್ಯಾನವನ್ನು ಪರ್ವ ಪರ್ವಗಳಲ್ಲಿ ಪಠಿಸುತ್ತಾನೆಯೋ ಅವನು ದೇವಲೋಕವನ್ನು ಪಡೆದು ನಂದನವನದಲ್ಲಿ ಸುಖವಾಗಿ ವಾಸಿಸುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಸುಮನಾ-ಶಾಂಡಿಲೀಸಂವಾದೋ ನಾಮ ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೈದನೆಯ ಅಧ್ಯಾಯ
ನಾರಾಯಣನ ಸರ್ವೋತ್ತಮತ್ವಕಥನ
ಯುಧಿಷ್ಠಿರಃ
ಯಜ್ಜ್ಞೇಯಂ ಪರಮಂ ಕೃತ್ಯಮನುಷ್ಠೇಯಂ ಮಹಾತ್ಮಭಿಃ |
ಸಾರಂ ಮೇ ಸರ್ವಶಾಸ್ತ್ರಾಣಾಂ ವಕ್ತುಮರ್ಹಸ್ಯನುಗ್ರಹಾತ್ ||1||
ಯುಧಿಷ್ಠಿರ ಯಾವುದು ತಿಳಿಯಬೇಕಾದುದರಲ್ಲಿ ಅತ್ಯಂತ ಶ್ರೇಷ್ಠವೋ, ಮಹಾತ್ಮರಿಂದ ಮಾಡಬೇಕಾದುದರಲ್ಲಿ ಅತ್ಯಂತ ಶ್ರೇಷ್ಠವಾದ ಕಾರ್ಯವೋ, ಅಂತಹ ಸರ್ವಶಾಸ್ತ್ರಗಳ ಸಾರವನ್ನು ಅನುಗ್ರಹ ಮಾಡಿ ನನಗೆ ಹೇಳಬೇಕು.
ಭೀಷ್ಮಃ
ಶ್ರೂಯತಾಮಿದಮತ್ಯಂತಂ ಗೂಢಂ ಸಂಸಾರಮೋಚನಮ್ |
ಶ್ರೋತವ್ಯಂ ಚ ತ್ವಯಾ ಸಮ್ಯಗ್ ಜ್ಞಾತವ್ಯಂ ಚ ವಿಶಾಂಪತೇ ||2||
ಭೀಷ್ಮ ಎಲೈ ರಾಜನೇ, ಅತ್ಯಂತ ರಹಸ್ಯವಾದ, ಸಂಸಾರಮೋಚಕವಾದ ಈ ವಿಷಯವನ್ನು ನೀನು ಕೇಳಬೇಕು. ಈ ವಿಷಯವನ್ನು ಕೇಳಿ ಚೆನ್ನಾಗಿ ತಿಳಿದುಕೊಳ್ಳಬೇಕು.
ಪುಂಡರೀಕಃ ಪುರಾ ವಿಪ್ರಃ ಪುಣ್ಯತೀರ್ಥೇ ಜಪಾನ್ವಿತಃ |
ನಾರದಂ ಪರಿಪಪ್ರಚ್ಛ ಶ್ರೇಯೋ ಯೋಗಪರಂ ಮುನಿಮ್ ||3||
ನಾರದಶ್ಚಾಬ್ರವೀದೇನಂ ಬ್ರಹ್ಮಣೋಕ್ತಂ ಮಹಾತ್ಮನಾ ||4||
ಹಿಂದೆ ಪುಂಡರೀಕನೆಂಬ ಬ್ರಾಹ್ಮಣನು ಪುಣ್ಯತೀರ್ಥದಲ್ಲಿ ಜಪವನ್ನು ಮಾಡುತ್ತಾ ಯೋಗಪರರಾದ ನಾರದಋಷಿಯನ್ನು ಕುರಿತು ಶ್ರೇಯಸ್ಸಿನ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದನು. ನಾರದರು ಮಹಾತ್ಮರಾದ ಬ್ರಹ್ಮದೇವರು ತಮಗೆ ಹೇಳಿದುದನ್ನು ಅವನಿಗೆ ಹೇಳಿದರು.
ಶೃಣುಷ್ವಾವಹಿತಸ್ತಾತ ಜ್ಞಾನಯೋಗಮನುತ್ತಮಮ್ |
ಅಪ್ರಭೂತಂ ಪ್ರಭೂತಾರ್ಥಂ ವೇದಶಾಸ್ತ್ರಾರ್ಥಸಾರಕಮ್ ||5||
ಪ್ರೀತಿಪಾತ್ರನೇ, ಶ್ರೇಷ್ಠವಾದ, ಅಲ್ಪವಾದ, ಮಹಾಫಲದಾಯಕವಾದ, ವೇದಶಾಸ್ತ್ರಗಳ ಅರ್ಥಸಾರರೂಪವಾದ ಜ್ಞಾನಯೋಗವನ್ನು ಕೇಳು.
ಯಃ ಪರಃ ಪ್ರಕೃತೇಃ ಪ್ರೋಕ್ತಃ ಪುರುಷಃ ಪಂಚವಿಂಶಕಃ |
ಸ ಏವ ಸರ್ವಭೂತಾತ್ಮಾ ನರ ಇತ್ಯಭಿಧೀಯತೇ ||6||
ಪ್ರಕೃತಿಗಿಂತ ಉತ್ತಮನಾದ, ಇಪ್ಪತ್ತೈದನೆಯ ತತ್ತ್ವವಾದ, ಸರ್ವಭೂತಸ್ವಾಮಿಯಾದ ಯಾವ ಪುರುಷನಿದ್ದಾನೆಯೋ ಅವನೇ ನರನೆಂದು ಹೇಳಲ್ಪಡುತ್ತಾನೆ.
ನರಾಜ್ಜಾತಾನಿ ತತ್ತ್ವಾನಿ ನಾರಾಣೀತಿ ತತೋ ವಿದುಃ |
ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ ||7||
ನರನಿಂದ ಜಾತವಾದ ತತ್ತ್ವಗಳು (ಜಡವು) ನಾರ ಎಂದು ಹೇಳಲ್ಪಡುತ್ತವೆ. ನಾರವೇ (ಜಲವೇ) ಅಯನವಾದ ಕಾರಣದಿಂದ ಅವನನ್ನು ನಾರಾಯಣ ಎಂದು ಹೇಳುತ್ತಾರೆ.
ನಾರಾಯಣಾಜ್ಜಗತ್ಸರ್ವಂ ಸರ್ಗಕಾಲೇ ಪ್ರಜಾಯತೇ |
ತಸ್ಮಿನ್ನೇವ ಪುನಸ್ತಚ್ಚ ಪ್ರಲಯೇ ಸಂಪ್ರಲೀಯತೇ ||8||
ಸೃಷ್ಟಿಕಾಲದಲ್ಲಿ ಜಗತ್ತೆಲ್ಲವೂ ನಾರಾಯಣನಿಂದಲೇ ಜನಿಸುತ್ತದೆ. ಪುನಃ ಪ್ರಳಯಕಾಲದಲ್ಲಿ ಅವನಲ್ಲಿಯೇ ಲಯವನ್ನು ಹೊಂದುತ್ತದೆ.
ನಾರಾಯಣಃ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ |
ಪರಾದಪಿ ಪರಶ್ಚಾಸೌ ತಸ್ಮಾನ್ನಾಸ್ತಿ ಪರಾತ್ಪರಮ್ ||9||
ನಾರಾಯಣನೇ ಪರಬ್ರಹ್ಮ. ಅವನೇ ಪರತತ್ತ್ವ. ಅವನು ಪರಕ್ಕಿಂತಲೂ ಪರನಾದವನು. ಪರನಾದ ಅವನಿಗಿಂತಲೂ ಶ್ರೇಷ್ಠನಾದವನು ಯಾವನೂ ಇಲ್ಲ.
ವಾಸುದೇವಂ ತಥಾ ವಿಷ್ಣುಮಾತ್ಮಾನಂ ಚ ತಥಾ ವಿದುಃ |
ಸಂಜ್ಞಾಭೇದೈಃ ಸ ಏವೈಕಃ ಸರ್ವಶಾಸ್ತ್ರಾಭಿಸಂಸ್ಕೃತಃ ||10||

ಅವನನ್ನು ವಾಸುದೇವನೆಂದೂ, ವಿಷ್ಣುವೆಂದೂ, ಆತ್ಮನೆಂದೂ ಕರೆಯುತ್ತಾರೆ. ಈ ಸಂಜ್ಞಾಭೇದದಿಂದ ಅವನೊಬ್ಬನೇ ಸರ್ವಶಾಸ್ತ್ರಗಳಿಂದಲೂ ಪೂಜಿಸಲ್ಪಡುತ್ತಾನೆ.
ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ |
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥11॥
ಎಲ್ಲ ಶಾಸ್ತ್ರಗಳನ್ನೂ ಆಲೋಡನೆಯನ್ನು ಮಾಡಿ ಪುನಃ ಪುನಃ ವಿಮರ್ಶೆ ಮಾಡಿದರೆ ನಾರಾಯಣನೇ ಸದಾ ಧ್ಯೇಯನಾದವನು ಎಂಬ ಈ ಮುಖ್ಯವಾದ ಒಂದು ತತ್ತ್ವವು ಚೆನ್ನಾಗಿ ಹೊರಬೀಳುತ್ತದೆ.
ತಸ್ಮಾತ್ ತ್ವಂ ಗಹನಾನ್ಸರ್ವಾಂಸ್ತ್ಯಕ್ತ್ವಾ ಶಾಸ್ತ್ರಾರ್ಥವಿಸ್ತರಾನ್ |
ಅನನ್ಯಚೇತಾ ಧ್ಯಾಯಸ್ವ ನಾರಾಯಣಮಜಂ ವಿಭುಮ್ ॥12॥
ಆದ್ದರಿಂದ ನೀನು ಗಹನವಾದ ಎಲ್ಲ ಶಾಸ್ತ್ರಾರ್ಥ ವಿಚಾರವನ್ನು ಬಿಟ್ಟು ಅನನ್ಯವಾದ ಮನಸ್ಸಿನಿಂದ ಜನ್ಮರಹಿತನೂ, ವ್ಯಾಪ್ತನೂ ಆದ ನಾರಾಯಣನನ್ನು ಧ್ಯಾನಿಸು.
ಮುಹೂರ್ತಮಪಿ ಯೋ ಧ್ಯಾಯೇನ್ನಾರಾಯಣಮತಂದ್ರಿತಃ |
ಸೋಽಪಿ ತದ್ಗತಿಮಾಪ್ನೋತಿ ಕಿಂ ಪುನಸ್ತತ್ಪರಾಯಣಃ ॥13॥
ಒಂದು ಮುಹೂರ್ತವಾದರೂ ಆಲಸ್ಯವಿಲ್ಲದೆ ನಾರಾಯಣನನ್ನು ಧ್ಯಾನ ಮಾಡಿದವನೂ ಅವನ ಗತಿಯನ್ನು ಹೊಂದುತ್ತಾನೆ. ಇನ್ನು ನಾರಾಯಣ ಪರಾಯಣರಾದವರ ವಿಷಯದಲ್ಲಿ ಏನು ಹೇಳಬೇಕು?
ನಮೋ ನಾರಾಯಣಾಯೇತಿ ಯೋ ವೇದ ಬ್ರಹ್ಮ ಶಾಶ್ವತಮ್ |
ಅಂತಕಾಲೇ ಜಪನ್ನೇತಿ ತದ್ ವಿಷ್ಣೋಃ ಪರಮಂ ಪದಮ್ ॥14॥
`ನಮೋ ನಾರಾಯಣಾಯ' ಎಂಬ ಶಾಶ್ವತವಾದ ವೇದಮಂತ್ರದ ಅರ್ಥವನ್ನು ತಿಳಿದು, ಅಂತ್ಯಕಾಲದಲ್ಲಿ ಅದನ್ನು ಜಪಿಸುವವನು ವಿಷ್ಣುವಿನ ಪರಮಸ್ಥಾನಕ್ಕೆ ಹೋಗುತ್ತಾನೆ.
ಶ್ರವಣಾತ್ ಮನನಾಚ್ಚೈವ ಗೀತಿಸ್ತುತ್ಯರ್ಚನಾದಿಭಿಃ |
ಆರಾಧ್ಯಂ ಸರ್ವದಾ ಬ್ರಹ್ಮ ಪುರುಷೇಣ ಹಿತೈಷಿಣಾ ॥15॥
ಆತ್ಮಹಿತವನ್ನು ಬಯಸುವ ಪುರುಷನು ಶ್ರವಣದಿಂದ, ಮನನದಿಂದ, ಗಾನದಿಂದ, ಸ್ತೋತ್ರದಿಂದ ಮತ್ತು ಅರ್ಚನಾದಿಗಳಿಂದ ಯಾವಾಗಲೂ ಆ ಬ್ರಹ್ಮನನ್ನು ಆರಾಧಿಸಬೇಕು.
ಲಿಪ್ಯತೇ ನ ಸ ಪಾಪೇನ ನಾರಾಯಣಪರಾಯಣಃ |
ಪುನಾತಿ ಸಕಲಂ ಲೋಕಂ ಸಹಸ್ರಾಂಶುರಿವೋದಿತಃ ॥16॥
ನಾರಾಯಣ ಪರಾಯಣನಾದವನಿಗೆ ಪಾಪಗಳ ಲೇಪವಾಗುವುದಿಲ್ಲ. ಅವನು ಉದಯಿಸಿದ ಸೂರ್ಯನಂತೆ ಎಲ್ಲ ಲೋಕಗಳನ್ನೂ ಪವಿತ್ರಗೊಳಿಸುತ್ತಾನೆ.
ಬ್ರಹ್ಮಚಾರೀ ಗೃಹಸ್ಥೋಽಪಿ ವಾನಪ್ರಸ್ಥೋಽಥ ಭಿಕ್ಷುಕಃ |
ಕೇಶವಾರಾಧನಂ ಹಿತ್ವಾ ನೈವ ಯಾತಿ ಪರಾಂ ಗತಿಮ್ ॥17॥
ಬ್ರಹ್ಮಚಾರಿಯಾಗಲೀ, ಗೃಹಸ್ಥನಾಗಲೀ, ವಾನಪ್ರಸ್ಥನಾಗಲೀ, ಸಂನ್ಯಾಸಿಯಾಗಲೀ ಕೇಶವಾರಾಧನೆಯನ್ನು ಬಿಟ್ಟು ಯಾರೂ ಸದ್ಗತಿಯನ್ನು ಹೊಂದುವುದಿಲ್ಲ.
ಜನ್ಮಾಂತರಸಹಸ್ರೇಷು ದುರ್ಲಭಾ ತದ್ಗತಾ ಮತಿಃ |
ತದ್ ಭಕ್ತವತ್ಸಲಂ ದೇವಂ ಸಮಾರಾಧಯ ಸುವ್ರತ ॥18॥
ಸಹಸ್ರಜನ್ಮಗಳಲ್ಲಿ ನಾರಾಯಣನ ಮತಿಯು ದೊರಕುವುದು ದುರ್ಲಭವಾದುದು. ಆದ್ದರಿಂದ ಎಲೈ ಸುವ್ರತನೇ, ಭಕ್ತವತ್ಸಲನಾದ ಆ ದೇವನನ್ನು ಆರಾಧಿಸು.
ಭೀಷ್ಮಃ
ನಾರದೇನೈವಮುಕ್ತಸ್ತು ಸ ವಿಪ್ರೋಽಭ್ಯರ್ಚಯದ್ ಹರಿಮ್ |
ಸ್ವಪ್ನೇಽಪಿ ಪುಂಡರೀಕಾಕ್ಷಂ ಶಂಖಚಕ್ರಗದಾಧರಮ್ ॥19॥
ಕಿರೀಟಕುಂಡಲಧರಂ ಲಸಚ್ಛ್ರೀವತ್ಸಕೌಸ್ತುಭಮ್ |
ತಂ ದೃಷ್ಟ್ವಾ ದೇವದೇವೇಶಂ ಪ್ರಾಣಮತ್ ಸಂಭ್ರಮಾನ್ವಿತಃ ॥20॥
ಭೀಷ್ಮ ನಾರದರಿಂದ ಹೀಗೆ ಹೇಳಲ್ಪಟ್ಟ ಆ ಪುಂಡರೀಕ ಬ್ರಾಹ್ಮಣನು ಹರಿಯನ್ನು ಅರ್ಚಿಸಿ, ಶಂಖ-ಚಕ್ರ-ಗದಾಧಾರಿಯಾದ, ಕಿರೀಟ-ಕುಂಡಲಧಾರಿಯಾದ ಆ ಪುಂಡರೀಕಾಕ್ಷನನ್ನು ಸ್ವಪ್ನದಲ್ಲಿಯೂ ನೋಡಿ, ದೇವದೇವೇಶನಾದ ಅವನಿಗೆ ಸಂಭ್ರಮದಿಂದ ನಮಸ್ಕಾರವನ್ನು ಮಾಡಿದನು.
ಅಥ ಕಾಲೇನ ಮಹತಾ ತಥಾ ಪ್ರತ್ಯಕ್ಷತಾಂಗತಃ |
ಸಂಸ್ತುತಃ ಸ್ತುತಿಭಿರ್ವೇದ್ಯೈರ್ದೇವಗಂಧರ್ವಕಿನ್ನರೈಃ ॥21॥
ಅನಂತರ ಬಹುಕಾಲವು ಕಳೆದ ಮೇಲೆ ಅದೇ ರೂಪದಲ್ಲಿ ನಾರಾಯಣನು ಅವನಿಗೆ ಪ್ರತ್ಯಕ್ಷನಾದನು. ಅವನು ದೇವ-ಗಂಧರ್ವ-ಕಿನ್ನರರಿಂದ, ವೇದೋಕ್ತ ಸ್ತೋತ್ರಗಳಿಂದ ಸಂಸ್ತುತನಾದನು.
ಅಥ ತೇನೈವ ಭಗವಾನಾತ್ಮಲೋಕಮಧೋಕ್ಷಜಃ |
ಗತಃ ಸಂಪೂಜಿತಃ ಸರ್ವೈಃ ಸ ಯೋಗಿನಿಲಯೋ ಹರಿಃ ॥22॥
ಅನಂತರ ಯೋಗಿನಿಲಯನೂ, ಅಧೋಕ್ಷಜನೂ ಆದ ಹರಿಯು ಎಲ್ಲರಿಂದಲೂ ಪೂಜಿಸಲ್ಪಟ್ಟು, ಪುಂಡರೀಕ ಬ್ರಾಹ್ಮಣನ ಜೊತೆಯಲ್ಲಿ ತನ್ನ ಲೋಕಕ್ಕೆ ಹೋದನು.

ತಸ್ಮಾತ್ ತ್ವಮಪಿ ರಾಜೇಂದ್ರ ತದ್ಭಕ್ತಸ್ತತ್ಪರಾಯಣಃ |
ಅರ್ಚಯಿತ್ವಾ ಯಥಾಯೋಗಂ ಭಜಸ್ವ ಪುರುಷೋತ್ತಮಮ್ ||23||
ಆದ್ದರಿಂದ ಎಲೈ ರಾಜನೇ, ನೀನೂ ಸಹ ನಾರಾಯಣ ಭಕ್ತನಾಗಿ, ನಾರಾಯಣ ಪರಾಯಣನಾಗಿ, ನಿನ್ನ ಯೋಗ್ಯತೆಗೆ ಅನುಗುಣವಾಗಿ ಪುರುಷೋತ್ತಮನನ್ನು ಪೂಜಿಸಿ ಭಜಿಸು.
ಅಜರಮಮರಮೇಕಂ ಧ್ಯೇಯಮಾದ್ಯಂತಶೂನ್ಯಂ
ಸಗುಣಮಗುಣಮಾದ್ಯಂ ಸ್ಥೂಲಮತ್ಯಂತಸೂಕ್ಷ್ಮಮ್ |
ನಿರುಪಮಮುಪಮೇಯಂ ಯೋಗಿವಿಜ್ಞಾನಗಮ್ಯಂ
ತ್ರಿಭುವನಗುರುಮೀಶಂ ತ್ವಂ ಪ್ರಪದ್ಯಸ್ವ ವಿಷ್ಣುಮ್ ||24||
ಜರಾ-ಮರಣರಹಿತನೂ, ಸರ್ವಪ್ರಧಾನನೂ, ಜ್ಞಾನಗೋಚರನೂ, ಆದ್ಯಂತ ಶೂನ್ಯನೂ, ಅಪ್ರಾಕೃತ ಗುಣವಂತನೂ, ಪ್ರಾಕೃತಗುಣರಹಿತನೂ, ಜಗತ್ತಿನ ಸೃಷ್ಟಿಗಿಂತಲೂ ಮೊದಲು ಇರುವವನೂ, ಸ್ಥೂಲನಾದವನೂ, ಅತ್ಯಂತ ಸೂಕ್ಷ್ಮನಾದವನೂ, ಅಸದೃಶನಾದವನೂ, ಎಲ್ಲದಕ್ಕೂ ದೃಷ್ಟಾಂತವಾದವನೂ, ಯೋಗಿಗಳ ಜ್ಞಾನಕ್ಕೆ ವಿಷಯನಾದವನೂ, ಮೂರುಲೋಕದ ಗುರುವೂ ಆದ ಆ ವಿಷ್ಣುವನ್ನು ಶರಣು ಹೊಂದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪುಂಡರೀಕ-ನಾರದಸಂವಾದೇ
ನಾರಾಯಣಸ್ಯ ಸರ್ವೋತ್ತಮತ್ವಕಥನಂ ನಾಮ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತಾರನೆಯ ಅಧ್ಯಾಯ
ಸಾಮೋಪಾಯ ಪ್ರಶಂಸೆ
ಯುಧಿಷ್ಠಿರಃ
ಸಾಮ್ನಾ ವಾಪಿ ಪ್ರದಾನೇ ವಾ ಜ್ಯಾಯಃ ಕಿಂ ಭವತೋ ಮತಮ್ |
ಪ್ರಬ್ರೂಹಿ ಭರತಶ್ರೇಷ್ಠ ಯದತ್ರ ವ್ಯತಿರಿಚ್ಯತೇ ||1||
ಯುಧಿಷ್ಠಿರ ಎಲೈ ಭರತಶ್ರೇಷ್ಠನೇ, ಸಾಮೋಪಾಯ ಮತ್ತು ದಾನೋಪಾಯಗಳಲ್ಲಿ ನಿನ್ನ ಅಭಿಪ್ರಾಯದಲ್ಲಿ ಯಾವುದು ಶ್ರೇಷ್ಠವಾದುದು? ಯಾವುದು ಇನ್ನೊಂದನ್ನು ಮೀರಿಸುತ್ತದೆ?
ಭೀಷ್ಮಃ
ಸಾಮ್ನಾ ಪ್ರಸಾದ್ಯತೇ ಕಶ್ಚಿದ್ ದಾನೇನ ಚ ತಥಾಽಪರಃ |
ಪುರುಷಃ ಪ್ರಕೃತಿಂ ಜ್ಞಾತ್ವಾ ತಯೋರೇಕತರಂ ಭಜೇತ್ ||2||
ಭೀಷ್ಮ ಒಬ್ಬನನ್ನು ಸಾಮೋಪಾಯದಿಂದ ಸಮಾಧಾನಗೊಳಿಸಬಹುದು. ಇನ್ನೊಬ್ಬನನ್ನು ದಾನೋಪಾಯದಿಂದ ಸಮಾಧಾನಗೊಳಿಸಬಹುದು. ಪುರುಷನು ಅವನ ಸ್ವಭಾವವನ್ನು ತಿಳಿದು ಎರಡರಲ್ಲಿ ಒಂದು ಉಪಾಯವನ್ನು ಪ್ರಯೋಗಿಸಬೇಕು.
ಗುಣಾಂಸ್ತು ಶೃಣು ಮೇ ರಾಜನ್ ಸಾಂತ್ವಸ್ಯ ಭರತರ್ಷಭ |
ದಾರುಣಾನ್ಯಪಿ ಭೂತಾನಿ ಸಾಂತ್ವೇನಾರಾಧಯೇದ್ ಯಥಾ ||3||
ಎಲೈ ಭರತರ್ಷಭನೇ, ರಾಜನೇ, ಭಯಂಕರವಾದವರನ್ನೂ ಸಾಮೋಪಾಯದಿಂದ ಸಂತೋಷಪಡಿಸುವಂತಹ ಸಾಮೋಪಾಯದ ಗುಣಗಳನ್ನು ಕೇಳು.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಗೃಹೀತ್ವಾ ರಕ್ಷಸಾ ಮುಕ್ತೋ ದ್ವಿಜಾತಿಃ ಕಾನನೇ ಯಥಾ ||4||
ಈ ವಿಷಯದಲ್ಲಿಯೂ ಸಹ ಕಾಡಿನಲ್ಲಿ ಒಬ್ಬ ಬ್ರಾಹ್ಮಣನು ರಾಕ್ಷಸನಿಂದ ಹಿಡಿಯಲ್ಪಟ್ಟು ಮುಕ್ತನಾದ ಈ ಒಂದು ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ.
ಕಶ್ಚಿತ್ತು ಬುದ್ಧಿಸಂಪನ್ನೋ ಬ್ರಾಹ್ಮಣೋ ವಿಜನೇ ವನೇ |
ಗೃಹೀತಃ ಕೃಚ್ಛ್ರಮಾಪನ್ನೋ ರಕ್ಷಸಾ ಭಕ್ಷಯಿಷ್ಯತಾ ||5||
ಬುದ್ಧಿಸಂಪನ್ನನಾದ ಒಬ್ಬ ಬ್ರಾಹ್ಮಣನು ನಿರ್ಜನವಾದ ವನದಲ್ಲಿ ತನ್ನನ್ನು ತಿನ್ನಲು ಬಯಸಿದ ಒಬ್ಬ ರಾಕ್ಷಸನಿಂದ ಹಿಡಿಯಲ್ಪಟ್ಟು ಕಷ್ಟಕ್ಕೆ ಸಿಲುಕಿದನು.
ಸ ಬುದ್ಧಿಶ್ರುತಸಂಪನ್ನಸ್ತಂ ದೃಷ್ಟ್ವಾಽತೀವ ಭೀಷಣಮ್ |
ಸಾಮ್ಯೆವಾಸ್ಮಿನ್ ಪ್ರಯುಯುಜೇ ನ ಮುಮೋಹ ನ ವಿವ್ಯಥೇ ||6||
ಬುದ್ಧಿವಿದ್ಯಾಸಂಪನ್ನನಾದ ಅವನು ಬಹಳ ಭಯಂಕರನಾದ ರಾಕ್ಷಸನನ್ನು ನೋಡಿ ಮೋಹಗೊಳ್ಳದೆ, ವ್ಯಥೆ ಪಡದೆ ಸಾಮೋಪಾಯವನ್ನೇ ಪ್ರಯೋಗಿಸಿದನು.
ರಕ್ಷಸ್ತು ವಾಚಾ ಸಂಪೂಜ್ಯ ಪ್ರಶ್ನಂ ಪಪ್ರಚ್ಛ ತಂ ದ್ವಿಜಮ್ |
ಮೋಕ್ಷ್ಯಸೇ ಬ್ರೂಹಿ ಮೇ ಪ್ರಶ್ನಂ ಕೇನಾಸ್ಮಿ ಹರಿಣಃ ಕೃಶಃ ||7||
ರಾಕ್ಷಸನು ಮಾತುಗಳಿಂದ ಬ್ರಾಹ್ಮಣನನ್ನು ಪೂಜಿಸಿ ಅವನನ್ನು ಕುರಿತು- `ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿದರೆ ನಿನ್ನನ್ನು ಬಿಡುತ್ತೇನೆ. ನಾನು ಏಕೆ ಕೃಶನೂ, ಹರಿಣನೂ (ಬಿಳುಚಿಕೊಂಡಿರುವವನು), ವರ್ಣಹೀನನಾಗಿರುವವನೂ ಆಗಿದ್ದೇನೆಂದು ಹೇಳು' ಎಂದು

ಕೇಳಿದನು.
ಮುಹೂರ್ತಮಥ ಸಂಚಿಂತ್ಯ ಬ್ರಾಹ್ಮಣಸ್ತಸ್ಯ ರಕ್ಷಸಃ |
ಆಭಿರ್ಗಾಥಾಭಿರವ್ಯಗ್ರಃ ಪ್ರಶ್ನಂ ಪ್ರತಿಜಗಾದ ಹ ॥8॥
ಆ ಬ್ರಾಹ್ಮಣನು ಆ ರಾಕ್ಷಸನ ಪ್ರಶ್ನೆಯನ್ನು ಒಂದು ಮುಹೂರ್ತದ ಕಾಲ ಚಿಂತಿಸಿ ಗಾಬರಿಗೊಳ್ಳದೆ ಈ ಗೀತೆಗಳಿಂದ ಅವನ ಪ್ರಶ್ನೆಗೆ ಉತ್ತರವನ್ನು ಹೇಳಿದನು.
ವಿದೇಶಸ್ಥೋ ವಿಲೋಕಸ್ಥೋ ವಿನಾ ನೂನಂ ಸುಹೃಜ್ಜನೈಃ |
ವಿಷಯಾನತುಲಾನ್ ಭುಂಕ್ಷೇ ತೇನಾಸಿ ಹರಿಣಃ ಕೃಶಃ ॥9॥
ನೀನು ಅನ್ಯಲೋಕದಲ್ಲಿ ಅನ್ಯದೇಶದಲ್ಲಿದ್ದು ಸುಹೃಜ್ಜನರಿಂದ ರಹಿತನಾಗಿ ಒಳ್ಳೆಯ ವಿಷಯಗಳನ್ನು ಭೋಗಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ನೂನಂ ಮಿತ್ರಾಣಿ ತೇ ರಕ್ಷಃ ಸಾಧೂಪಚರಿತಾನ್ಯಪಿ |
ಸ್ವದೋಷಾದಪರಜ್ಯಂತೇ ತೇನಾಸಿ ಹರಿಣಃ ಕೃಶಃ ॥10॥
ಎಲೈ ರಾಕ್ಷಸನೇ, ನೀನು ನಿನ್ನ ಮಿತ್ರರನ್ನು ಚೆನ್ನಾಗಿ ಉಪಚರಿಸಿದರೂ ಅವರು ತಮ್ಮ ದೋಷದಿಂದಲೇ ನಿನ್ನನ್ನು ಬಿಟ್ಟು ಹೋಗುತ್ತಾರೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಧನೈಶ್ವರ್ಯಾಧಿಕಾಃ ಸ್ತಬ್ಧಾಸ್ತ್ವದ್ಗುಣೈಃ ಪರಮಾವರಾಃ |
ಅವಜಾನಂತಿ ನೂನಂ ತ್ವಾಂ ತೇನಾಸಿ ಹರಿಣಃ ಕೃಶಃ ॥11॥
ನಿನಗಿಂತ ಗುಣದಲ್ಲಿ ಅಧಮರಾದವರು ಧನೈಶ್ವರ್ಯಾದಿಗಳಿಂದ ಅಧಿಕರಾಗಿ ಅಹಂಕಾರಿಗಳಾಗಿ ನಿನ್ನನ್ನು ಅವಮಾನ ಮಾಡುತ್ತಾರೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಗುಣವಾನ್ ವಿಗುಣಾನನ್ಯಾನ್ ನೂನಂ ಪಶ್ಯಸಿ ಸತ್ಕೃತಾನ್ |
ಪ್ರಾಜ್ಞೋಽಪ್ರಾಜ್ಞಾನ್ ವಿನೀತಾತ್ಮಾ ತೇನಾಸಿ ಹರಿಣಃ ಕೃಶಃ ॥12॥
ಗುಣವಂತನಾದ ನೀನು ಗುಣಹೀನರಾದ ಅನ್ಯರು ಸತ್ಕರಿಸಲ್ಪಡುವುದನ್ನೂ, ವಿನಯವಂತನೂ ಪ್ರಾಜ್ಞನೂ ಆದ ನೀನು ಅಪ್ರಾಜ್ಞರು ಸತ್ಕರಿಸಲ್ಪಡುವುದನ್ನೂ ನೋಡುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಅವೃತ್ತ್ಯಾ ಕ್ಲಿಶ್ಯಮಾನೋಽಪಿ ವೃತ್ತ್ಯುಪಾಯಾನ್ ವಿಗರ್ಹಯನ್ |
ಮಾಹಾತ್ಮ್ಯಾದ್ ವ್ಯಥಸೇ ನೂನಂ ತೇನಾಸಿ ಹರಿಣಃ ಕೃಶಃ ॥13॥
ಜೀವನೋಪಾಯವಿಲ್ಲದೆ ಕ್ಲೇಶಪಡುತ್ತಿದ್ದರೂ ಜೀವನೋಪಾಯವನ್ನು ಅವಲಂಬಿಸುವುದನ್ನು ನಿನ್ನ ಮಹಾತ್ಮ್ಯೆಯಿಂದ ನಿಂದಿಸುತ್ತಾ ವ್ಯಥೆಪಡುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಸಂಪೀಡ್ಯಾತ್ಮಾನಮಾರ್ಯತ್ವಾತ್ ತ್ವಯಾ ಕಶ್ಚಿದುಪಸ್ಕೃತಃ |
ಜಿತಂ ತ್ವಾಂ ಮನ್ಯತೇ ಸಾಧೋ ತೇನಾಸಿ ಹರಿಣಃ ಕೃಶಃ ॥14॥
ಶ್ರೇಷ್ಠಗುಣವನ್ನು ಹೊಂದಿರುವುದರಿಂದ ನಿನ್ನನ್ನೇ ನೀನು ಕ್ಲೇಶಗೊಳಿಸಿ ಒಬ್ಬರಿಗೆ ಉಪಕಾರವನ್ನು ಮಾಡಿದ್ದೀಯೆ. ಎಲೈ ಸಜ್ಜನನೇ, ಅವನು ನಿನ್ನನ್ನು ಪರಾಜಿತನೆಂದು ತಿಳಿಯುತ್ತಾನೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಕ್ಲಿಶ್ಯಮಾನಾನ್ ವಿಮಾರ್ಗೇಷು ಕಾಮಕ್ರೋಧಾವೃತಾತ್ಮನಃ |
ಮನ್ಯೇ ನು ಧ್ಯಾಯಸಿ ಜನಾಂಸ್ತೇನಾಸಿ ಹರಿಣಃ ಕೃಶಃ ॥15॥
ಕಾಮ-ಕ್ರೋಧಕ್ಕೆ ವಶರಾಗಿ, ದುರ್ಮಾರ್ಗದಲ್ಲಿ ಕ್ಲೇಶಪಡುವ ಜನರನ್ನು ಕುರಿತು ನೀನು ಚಿಂತಿಸುತ್ತಿದ್ದೀಯೆ ಎಂದು ನಾನು ತಿಳಿಯುತ್ತೇನೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಪ್ರಾಜ್ಞೈಃ ಸಂಭಾವಿತೋ ನೂನಂ ನಪ್ರಾಜ್ಞೈರುಪಸಂಹಿತಃ |
ಹ್ರೀಮಾನಮರ್ಷೀ ದುರ್ವೃತ್ತೈಸ್ತೇನಾಸಿ ಹರಿಣಃ ಕೃಶಃ ॥16॥
ಪ್ರಾಜ್ಞರಿಂದ ಸಂಭಾವಿತನಾದ ನೀನು ದುರ್ನಡತೆಯುಳ್ಳವರಿಂದ ಮತ್ತು ಅವಿವೇಕಿಗಳಾದವರಿಂದ ನಿಂದಿಸಲ್ಪಡುತ್ತಿದ್ದೀಯೆ. ನಾಚಿಕೆಯುಳ್ಳವನೂ ಮತ್ತು ಕೋಪವುಳ್ಳವನೂ ಆದ ನೀನು ಹರಿಣನೂ, ಕೃಶನೂ ಆಗಿದ್ದೀಯೆ.
ನೂನಂ ಮಿತ್ರಮುಖಃ ಶತ್ರುಃ ಕಶ್ಚಿದಾರ್ಯವದಾಚರನ್ |
ವಂಚಯಿತ್ವಾ ಗತಸ್ತ್ವಂ ವೈ ತೇನಾಸಿ ಹರಿಣಃ ಕೃಶಃ ॥17॥
ಖಂಡಿತವಾಗಿ ಮಿತ್ರಮುಖವನ್ನು ಹಾಕಿಕೊಂಡು ಒಬ್ಬ ಶತ್ರುವು ಆರ್ಯನಂತೆ ಆಚರಿಸುತ್ತಾ ನಿನಗೆ ಮೋಸವನ್ನು ಮಾಡಿ ಹೋಗಿದ್ದಾನೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಪ್ರಕಾಶಾರ್ಥಗತಿರ್ನೂನಂ ರಹಸ್ಯಕುಶಲಃ ಕೃತೀ |
ತಜ್ಜ್ಞೈರ್ನ ಪೂಜ್ಯಸೇ ನೂನಂ ತೇನಾಸಿ ಹರಿಣಃ ಕೃಶಃ ॥18॥
ಪ್ರಯತ್ನಶೀಲನಾಗಿ ಯಾವುದನ್ನೂ ಮುಚ್ಚಿಡದೆ ಮಾತನಾಡುವ ನೀನು ರಹಸ್ಯ ಮಾತುಗಳಲ್ಲಿ ಕುಶಲನಾಗಿಲ್ಲ. ಅದನ್ನು ತಿಳಿದವರು ನಿನ್ನನ್ನು ಪೂಜಿಸುವುದಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಅಸತ್ಸು ವಿನಿವಿಷ್ಟೇಷು ಬ್ರುವತೋ ಮುಕ್ತಸಂಶಯಮ್ |
ಗುಣಾಸ್ತೇ ನ ವಿರಾಜಂತೇ ತೇನಾಸಿ ಹರಿಣಃ ಕೃಶಃ ॥19॥
ದುಷ್ಟಜನರು ಕುಳಿತಿರುವಲ್ಲಿ ನೀನು ಯಾವ ಸಂಕೋಚವೂ ಇಲ್ಲದೆ ಮಾತನಾಡುತ್ತೀಯೆ. ಅದರಿಂದ ನಿನ್ನ ಗುಣಗಳು ಪ್ರಕಾಶಿಸುವುದಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಧನಬುದ್ಧಿಶ್ರುತೈರ್ಹೀನಃ ಕೇವಲಂ ತೇಜಸಾಽನ್ವಿತಃ |

ಮಹತ್ ಪ್ರಾರ್ಥಯಸೇ ನೂನಂ ತೇನಾಸಿ ಹರಿಣಃ ಕೃಶಃ ॥20॥
ಧನ-ಬುದ್ಧಿ-ವಿದ್ಯೆಗಳಿಂದ ಹೀನನಾಗಿ, ಕೇವಲ ಪರಾಕ್ರಮವನ್ನು ಮಾತ್ರ ಹೊಂದಿ ದೊಡ್ಡವನಾಗಲು ಆಶಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ತಪಃಪ್ರಣಿಹಿತಾತ್ಮಾನಂ ಮನ್ಯೇ ತ್ವಾರಣ್ಯಕಾಂಕ್ಷಿಣಮ್ |
ಬಂಧುವರ್ಗೋ ನ ಗೃಹ್ಣಾತಿ ತೇನಾಸಿ ಹರಿಣಃ ಕೃಶಃ ॥21॥
ತಪಸ್ಸಿನಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಅರಣ್ಯವಾಸವನ್ನು ಬಯಸುವ ನಿನ್ನನ್ನು ನಿನ್ನ ಬಂಧುವರ್ಗವು ಸ್ವೀಕರಿಸುತ್ತಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ನೂನಮರ್ಥವತಾಂ ಮಧ್ಯೇ ತವ ವಾಕ್ಯಮನುತ್ತಮಮ್ |
ನ ಭಾತಿ ಕಾಲೇಽಭಿಹಿತಂ ತೇನಾಸಿ ಹರಿಣಃ ಕೃಶಃ ॥22॥
ಧನವಂತರ ಮಧ್ಯದಲ್ಲಿ ಯೋಗ್ಯವಾದ ಕಾಲದಲ್ಲಿ ನೀನು ಆಡುವ ಶ್ರೇಷ್ಠವಾದ ಮಾತುಗಳು ಅವರಿಗೆ ಹಿಡಿಸುತ್ತಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ದೃಷ್ಟಪೂರ್ವಂ ಶ್ರುತಪೂರ್ವಂ ಕುಪಿತಂ ಹೃದಯಪ್ರಿಯಮ್ |
ಅನುನೇತುಂ ನ ಶಕ್ನೋಷಿ ತೇನಾಸಿ ಹರಿಣಃ ಕೃಶಃ ॥23॥
ಹಿಂದೆ ನೋಡಿದ, ಕೇಳಿದ, ಕುಪಿತನಾದ, ಪ್ರಿಯನಾದ ಸ್ನೇಹಿತನನ್ನು ಸಮಾಧಾನ ಪಡಿಸಲು ನಿನಗೆ ಸಾಧ್ಯವಾಗುತ್ತಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ನೂನಮಾಸಂಜ(ನ್ ಜ)ಯಿತ್ವಾ ತೇ ಕೃತ್ಯೇ ಕಸ್ಮಿಂಶ್ಚಿದೀಪ್ಸಿತೇ |
ಕಶ್ಚಿದರ್ಥಯತೇಽತ್ಯರ್ಥಂ ತೇನಾಸಿ ಹರಿಣಃ ಕೃಶಃ ॥24॥
ಯಾವನೋ ಒಬ್ಬನು ತನಗೆ ಬೇಕಾದ ಕೆಲಸದಲ್ಲಿ ನಿನ್ನನ್ನು ನಿಯೋಜಿಸಿ, ಬೇಗ ಮುಗಿಸುವಂತೆ ಒತ್ತಾಯ ಮಾಡುತ್ತಿದ್ದಾನೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ನೂನಂ ತ್ವಾಂ ಸ್ವಗುಣಾಪೇಕ್ಷಂ ಪೂಜಯಾನಂ ಸುಹೃದ್ ಧ್ರುವಮ್ |
ಮಮಾರ್ಥಮಿತಿ ಜಾನಂತಿ ತೇನಾಸಿ ಹರಿಣಃ ಕೃಶಃ ॥25॥
ನೀನು ನಿನ್ನ ಗುಣಗಳನ್ನೇ ಅಪೇಕ್ಷಿಸಿ ಒಬ್ಬನನ್ನು ಸತ್ಕರಿಸುತ್ತಿದ್ದರೆ ನಿನ್ನ ಮಿತ್ರರು ಅದು ನನ್ನಿಂದಾದ ಕೆಲಸ ಎಂದು ತಿಳಿಯುತ್ತಾರೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಅಂತರ್ಗತಮಭಿಪ್ರಾಯಂ ನೂನಂ ನೇಚ್ಛಸಿ ಲಜ್ಜಯಾ |
ವಿವಕ್ತುಂ ಪ್ರಾಪ್ತಿಶೈಥಿಲ್ಯಾತ್ ತೇನಾಸಿ ಹರಿಣಃ ಕೃಶಃ ॥26॥
ಮನಸ್ಸಿನ ಒಳಗಿರುವ ಅಭಿಪ್ರಾಯವನ್ನು ಅದು ಸಾಧ್ಯವಾಗುತ್ತದೆಯೋ ಇಲ್ಲವೋ ಎಂಬ ಶಂಕೆಯಿಂದ, ಲಜ್ಜೆಯಿಂದ ನೀನು ಹೇಳಲು ಇಷ್ಟಪಡುತ್ತಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ನಾನಾಬುದ್ಧಿರುಚೀಲ್ಲೋಕೇ ಮನುಷ್ಯಾನ್ ನೂನಮಿಚ್ಛಸಿ |
ಗ್ರಹೀತುಂ ಸ್ವಗುಣೈಃ ಸರ್ವಾಂಸ್ತೇನಾಸಿ ಹರಿಣಃ ಕೃಶಃ ॥27॥
ಲೋಕದಲ್ಲಿ ನಾನಾ ಬುದ್ಧಿಗಳನ್ನೂ, ನಾನಾ ಅಭಿರುಚಿಗಳನ್ನೂ ಹೊಂದಿರುವ ಮನುಷ್ಯರೆಲ್ಲರನ್ನೂ ನಿನ್ನ ಗುಣಗಳಿಂದ ನೀನು ಸಂಗ್ರಹಿಸಲು ಇಚ್ಛಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಅವಿದ್ವಾನ್ ಭೀರುರಲ್ಪಾರ್ಥೋ ವಿದ್ಯಾವಿಕ್ರಮದಾನಜಮ್ |
ಯಶಃ ಪ್ರಾರ್ಥಯಸೇ ನೂನಂ ತೇನಾಸಿ ಹರಿಣಃ ಕೃಶಃ ॥28॥
ವಿದ್ಯೆ ಇಲ್ಲದವನೂ, ಭಯಗ್ರಸ್ತನೂ, ಅಲ್ಪದಾನವುಳ್ಳವನೂ ಆದ ನೀನು ವಿದ್ಯೆಯಿಂದ, ಪರಾಕ್ರಮದಿಂದ ಮತ್ತು ದಾನದಿಂದ ಉಂಟಾಗುವ ಯಶಸ್ಸನ್ನು ಖಂಡಿತವಾಗಿ ಪ್ರಾರ್ಥಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಚಿರಾಭಿಲಷಿತಂ ಕಿಂಚಿತ್ ಫಲಮಪ್ರಾಪ್ತಮೇವ ತೇ |
ಕೃತಮನ್ಯೈರಪಹೃತಂ ತೇನಾಸಿ ಹರಿಣಃ ಕೃಶಃ ॥29॥
ನೀನು ಬಹಳ ದಿನದಿಂದ ಬಯಸುತ್ತಿದ್ದ ಒಂದು ಫಲವು ನಿನಗೆ ದೊರಕಿಲ್ಲ. ನೀನು ಸಂಪಾದಿಸಿದ ಒಂದು ಫಲವನ್ನು ಬೇರೆಯವರು ಅಪಹರಿಸಿದ್ದಾರೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ನೂನಮಾತ್ಮಕೃತಂ ದೋಷಮಪಶ್ಯನ್ ಕಿಂಚಿದಾತ್ಮನಿ |
ಅಕಾರಣೇಽಭಿಶಸ್ತೋಽಸಿ ತೇನಾಸಿ ಹರಿಣಃ ಕೃಶಃ ॥30॥
ನಿನ್ನಲ್ಲಿ ನೀನು ಯಾವ ದೋಷವನ್ನೂ ಕಾಣದಿದ್ದರೂ ನಿಷ್ಕಾರಣವಾಗಿ ನಿಂದಿಸಲ್ಪಡುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಸುಹೃದಾಮಪ್ರಮತ್ತಾನಾಮಪ್ರಮೋಕ್ಷ್ಯಾರ್ಥಹಾನಿಜಮ್ |
ದುಃಖಮರ್ಥಗುಣೈರ್ಹೀನಸ್ತೇನಾಸಿ ಹರಿಣಃ ಕೃಶಃ ॥31॥
ಎಚ್ಚರ ತಪ್ಪಿದ ನಿನ್ನ ಸುಹೃಜ್ಜನರಿಗೆ ಅರ್ಥಹಾನಿಯಿಂದ ಉಂಟಾದ ದುಃಖವನ್ನು ಅರ್ಥದಿಂದಲೂ, ಗುಣಗಳಿಂದಲೂ ಹೀನನಾದ ನೀನು ಪರಿಹರಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಸಾಧೂನ್ ಗೃಹಸ್ಥಾನ್ ದೃಷ್ಟ್ವಾ ಚ ತಥಾಽಸಾಧೂನ್ ವನೇಚರಾನ್ |
ಮುಕ್ತಾಂಶ್ಚಾವಸಥೇ ಸಕ್ತಾಂಸ್ತೇನಾಸಿ ಹರಿಣಃ ಕೃಶಃ ॥32॥
ಸಜ್ಜನರು ಮನೆಯಲ್ಲಿರುವುದನ್ನೂ, ಅಸಜ್ಜನರು ಅರಣ್ಯವಾಸಿಗಳಾಗಿರುವುದನ್ನೂ, ಸಂನ್ಯಾಸಿಗಳು ಗೃಹದಲ್ಲಿ ಆಸಕ್ತರಾಗಿರುವುದನ್ನೂ

ನೋಡಿ ಚಿಂತಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಧರ್ಮ್ಯಮರ್ಥಂ ಚ ಕಾಲೇ ಚ ದೇಶೇ ಚಾಭಿಹಿತಂ ವಚಃ |
ನ ಪ್ರಸಿದ್ಧ್ಯತಿ ತೇ ನೂನಂ ತೇನಾಸಿ ಹರಿಣಃ ಕೃಶಃ ||33||
ನೀನು ಯೋಗ್ಯವಾದ ಕಾಲದಲ್ಲಿ, ಯೋಗ್ಯವಾದ ದೇಶದಲ್ಲಿ ಧರ್ಮಕ್ಕೆ ಮತ್ತು ಅರ್ಥಕ್ಕೆ ಅನುಸಾರವಾಗಿ ಆಡಿದ ಮಾತುಗಳು ಪ್ರಸಿದ್ಧಿಯನ್ನು ಪಡೆಯುತ್ತಿಲ್ಲ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ದತ್ತಾನಕುಶಲೈರರ್ಥಾನ್ ಮನೀಷೀ ಸಂಜಿಜೀವಿಷುಃ |
ಪ್ರಾಪ್ಯ ವರ್ತಯಸೇ ನೂನಂ ತೇನಾಸಿ ಹರಿಣಃ ಕೃಶಃ ||34||
ಮೇಧಾವಿಯಾದ ನೀನು ಬದುಕುವ ಇಚ್ಛೆಯಿಂದ ಕುಶಲರಲ್ಲದ ಜನರು ಕೊಟ್ಟ ಪದಾರ್ಥದಿಂದ ಜೀವಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಪಾಪಾನ್ ವಿವರ್ಧತೋ ದೃಷ್ಟ್ವಾ ಕಲ್ಯಾಣಾಂಶ್ಚಾವಸೀದತಃ |
ಧ್ರುವಂ ಮೃಗಯಸೇ ಯೋಗ್ಯಂ ತೇನಾಸಿ ಹರಿಣಃ ಕೃಶಃ ||35||
ಪಾಪಿಗಳು ಹೆಚ್ಚುತ್ತಿರುವುದನ್ನೂ, ಪುಣ್ಯವಂತರು ಕ್ಷೀಣಿಸುತ್ತಿರುವುದನ್ನೂ ನೋಡಿ ಖಂಡಿತವಾಗಿ ಯೋಗ್ಯರಾದವರನ್ನು ಹುಡುಕುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಪರಸ್ಪರವಿರುದ್ಧಾನಾಂ ಪ್ರಿಯಂ ನೂನಂ ಚಿಕೀರ್ಷಸಿ |
ಸುಹೃದಾಮವಿರೋಧೇನ ತೇನಾಸಿ ಹರಿಣಃ ಕೃಶಃ ||36||
ಪರಸ್ಪರ ವಿರುದ್ಧರಾದ ನಿನ್ನ ಸ್ನೇಹಿತರಿಗೆ ವಿರೋಧವನ್ನು ಪರಿಹರಿಸಿ ಅವಿರೋಧವನ್ನು ಮಾಡಲು ಪ್ರಯತ್ನಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಶ್ರೋತ್ರಿಯಾಂಶ್ಚ ವಿಕರ್ಮಸ್ಥಾನ್ ಪ್ರಾಜ್ಞಾಂಶ್ಚಾಪ್ಯಜಿತೇಂದ್ರಿಯಾನ್ |
ಮನ್ಯೇಽನುಧ್ಯಾಯಸಿ ಜನಾಂಸ್ತೇನಾಸಿ ಹರಿಣಃ ಕೃಶಃ ||37||
ದುಷ್ಕರ್ಮನಿರತರಾದ ಶ್ರೋತ್ರಿಯರನ್ನೂ, ಇಂದ್ರಿಯಲೋಲುಪರಾದ ಪ್ರಾಜ್ಞರನ್ನೂ ನೋಡಿ ನೀನು ಚಿಂತಿಸುತ್ತಿದ್ದೀಯೆ. ಆದ್ದರಿಂದ ಹರಿಣನೂ, ಕೃಶನೂ ಆಗಿದ್ದೀಯೆ.
ಭೀಷ್ಮಃ
ಏವಂ ಸಂಪೂಜಿತಂ ರಕ್ಷೋ ವಿಪ್ರಂ ತಂ ಪ್ರತ್ಯಪೂಜಯತ್ |
ಸಖಾಯಮಕರೋಚ್ಚೈನಂ ಸಂಯೋಜ್ಯಾರ್ಥೈರ್ಮುಮೋಚ ಹ ||38||
ಭೀಷ್ಮ ಹೀಗೆ ಪೂಜಿಸಲ್ಪಟ್ಟ ಆ ರಾಕ್ಷಸನು ಆ ಬ್ರಾಹ್ಮಣನನ್ನು ಪೂಜಿಸಿ, ಅವನನ್ನು ಸ್ನೇಹಿತನನ್ನಾಗಿ ಮಾಡಿಕೊಂಡು ಧನವನ್ನು ಕೊಟ್ಟು ಬಿಟ್ಟುಬಿಟ್ಟನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಹರಿಣಕೃಶೀಯಂ ನಾಮ ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತಾರನೆಯ
ಅಧ್ಯಾಯ ಮುಗಿಯಿತು.
* * * * *

## ನೂರ ಎಪ್ಪತ್ತೇಳನೆಯ ಅಧ್ಯಾಯ
## ಶ್ರಾದ್ಧರಹಸ್ಯ ಮತ್ತು ಧರ್ಮರಹಸ್ಯಗಳು

ಯುಧಿಷ್ಠಿರಃ
ಜನ್ಮ ಮಾನುಷ್ಯಕಂ ಪ್ರಾಪ್ಯ ಕರ್ಮಕ್ಷೇತ್ರಂ ಸುದುರ್ಲಭಮ್ |
ಶ್ರೇಯೋರ್ಥಿನಾ ದರಿದ್ರೇಣ ಕಿಂ ಕರ್ತವ್ಯಂ ಪಿತಾಮಹ ||1||
ದಾನಾನಾಮುತ್ತಮಂ ಯಚ್ಚ ದೇಯಂ ಯಚ್ಚ ಯಥಾಯಥಾ |
ಮಾನ್ಯಾನ್ ಪೂಜ್ಯಾಂಶ್ಚ ಗಾಂಗೇಯ ರಹಸ್ಯಂ ವಕ್ತುಮರ್ಹಸಿ ||2||
ಯುಧಿಷ್ಠಿರ ಎಲೈ ಪಿತಾಮಹನೇ, ಮನುಷ್ಯಜನ್ಮವನ್ನು ಪಡೆದು, ದುರ್ಲಭವಾದ ಕರ್ಮಭೂಮಿಯಲ್ಲಿ ಜನಿಸಿ, ಶ್ರೇಯೋರ್ಥಿಯಾದ ದರಿದ್ರನು ಏನು ಮಾಡಬೇಕು? ಎಲೈ ಗಾಂಗೇಯನೇ, ದಾನದಲ್ಲಿ ಶ್ರೇಷ್ಠವಾದುದು ಯಾವುದು? ಯಾವ ಯಾವ ದಾನವನ್ನು ಹೇಗೆ ಮಾಡಬೇಕು? ಮಾನ್ಯರು ಮತ್ತು ಪೂಜ್ಯರಾದವರು ಯಾರು? ಈ ರಹಸ್ಯವನ್ನು ಹೇಳಬೇಕು.
ವೈಶಂಪಾಯನಃ
ಏವಂ ಪೃಷ್ಟೋ ನರೇಂದ್ರೇಣ ಪಾಂಡವೇನ ಯಶಸ್ವಿನಾ |
ಧರ್ಮಾಣಾಂ ಪರಮಂ ಗುಹ್ಯಂ ಭೀಷ್ಮಃ ಪ್ರೋವಾಚ ಪಾರ್ಥಿವಮ್ ||
ವೈಶಂಪಾಯನ ಹೀಗೆ ಕೀರ್ತಿವಂತನೂ, ಪಾಂಡುಪುತ್ರನೂ ಆದ ಯುಧಿಷ್ಠಿರನಿಂದ ಧರ್ಮದ ಪರಮರಹಸ್ಯ ವಿಷಯದಲ್ಲಿ ಪ್ರಶ್ನೆ ಮಾಡಲ್ಪಟ್ಟು ಭೀಷ್ಮರು ಆ ರಾಜನನ್ನು ಕುರಿತು ಹೇಳಿದರು.
ಭೀಷ್ಮಃ
ಶೃಣುಷ್ವಾವಹಿತೋ ರಾಜನ್ ಧರ್ಮಗುಹ್ಯಾನಿ ಭಾರತ |
ಯಥಾಹಿ ಭಗವಾನ್ ವ್ಯಾಸಃ ಪುರಾ ಕಥಿತವಾನ್ ಮಯಿ ||4||
ಭೀಷ್ಮ ಎಲೈ ರಾಜನೇ, ಭಾರತನೇ, ನನಗೆ ಪೂಜ್ಯರಾದ ವ್ಯಾಸರು ಹಿಂದೆ ಹೇಳಿದಂತಹ ಧರ್ಮರಹಸ್ಯಗಳನ್ನು ಅವಧಾನದಿಂದ ಕೇಳು.

ದೇವಗುಹ್ಯಮಿದಂ ರಾಜನ್ ಯಮೇನಾಕ್ಲಿಷ್ಟಕರ್ಮಣಾ |
ನಿಯಮಸ್ಥೇನ ಯುಕ್ತೇನ ತಪಸೋ ಮಹತಃ ಫಲಮ್ ||5||
ಎಲೈ ರಾಜನೇ, ಇದು ದೇವರಹಸ್ಯ. ಇದರ ಜ್ಞಾನವು ಯಮ-ನಿಯಮದಿಂದ ಕೂಡಿದ ಸತ್ಕರ್ಮವನ್ನು ಮಾಡಿ ದೊಡ್ಡ ತಪಸ್ಸನ್ನು ಮಾಡಿದುದರ ಫಲವಾಗಿ ದೊರೆಯುತ್ತದೆ.
ಯೇನ ಯಃ ಪ್ರೀಯತೇ ದೇವಃ ಪ್ರೀಯಂತೇ ಪಿತರಸ್ತಥಾ |
ಋಷಯಃ ಪ್ರಮಥಾಃ ಶ್ರೀಶ್ಚ ಚಿತ್ರಗುಪ್ತೋ ದಿಶಾಂಗಜಾಃ ||6||
ಯಾವ ಮನುಷ್ಯನಿಗೆ ಅವನ ಯಾವ ಒಂದು ಕರ್ಮದಿಂದ ಒಬ್ಬ ದೇವತೆಯು ಪ್ರಸನ್ನನಾದರೆ ಆಗ ಅವನ ಪಿತೃಗಳು, ಋಷಿಗಳು, ಪ್ರಮಥರು, ಲಕ್ಷ್ಮಿಯು, ಚಿತ್ರಗುಪ್ತರು ಮತ್ತು ದಿಗ್ಗಜಗಳು ಪ್ರಸನ್ನವಾಗುತ್ತಾರೆ.
ಋಷಿಧರ್ಮಃ ಸ್ಮೃತೋ ಯತ್ರ ಸರಹಸ್ಯೋ ಮಹಾಫಲಃ |
ಮಹಾದಾನಫಲಂ ಚೈವ ಸರ್ವಯಜ್ಞಫಲಂ ತಥಾ ||7||
ರಹಸ್ಯಗಳಲ್ಲಿ ರಹಸ್ಯವಾದ, ಮಹಾಫಲವನ್ನು ಕೊಡುವ ಋಷಿಧರ್ಮವು ಹೇಳಲ್ಪಟ್ಟಿದೆ. ಹಾಗೆಯೇ ಮಹಾದಾನಫಲವೂ, ಸರ್ವಯಜ್ಞಫಲವೂ ಹೇಳಲ್ಪಟ್ಟಿವೆ.
ಯಶ್ಚೈತದೇವಂ ಜಾನೀಯಾಜ್ಜ್ಞಾತ್ವಾ ವಾ ಕುರುತೇಽನಘ |
ಸದೋಷೋಽದೋಷವಾಂಶ್ಚೇಹ ತೈರ್ಗುಣೈಃ ಸಹ ಯುಜ್ಯತೇ ||8||
ಯಾವನು ಅದನ್ನು ಕೇಳಿ ಅದರಂತೆ ಆಚರಿಸುವನೋ ಅವನು ದೋಷವಿರಲಿ ಇಲ್ಲದಿರಲಿ, ಅಲ್ಲಿ ಹೇಳಿದ ಗುಣಗಳಿಂದ ಯುಕ್ತನಾಗುತ್ತಾನೆ.
ದಶಸೂನಾಸಮಂ ಚಕ್ರಂ ದಶಚಕ್ರಸಮೋ ಧ್ವಜಃ |
ದಶಧ್ವಜಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ |
ಅರ್ಧೇನೈತಾನಿ ಸರ್ವಾಣಿ ನೃಪತಿಃ ಕಥ್ಯತೇಽಧಿಕಃ ||9||
ಹತ್ತು ಕಟುಕರಿಗೆ (ದೋಷ ಮತ್ತು ಪಾಪದ ವಿಷಯದಲ್ಲಿ) ಒಬ್ಬ ಗಾಣಿಗನು ಸಮನಾದವನು. ಹತ್ತು ಗಾಣಿಗರಿಗೆ ಒಬ್ಬ ಈಡಿಗನು (ಮರದಿಂದ ಹೆಂಡವನ್ನು ತೆಗೆಯುವವನು) ಸಮನಾದವನು. ಹತ್ತು ಈಡಿಗರಿಗೆ ಒಬ್ಬ ವೇಶ್ಯೆಯು ಸಮನಾದವಳು. ಹತ್ತು ವೇಶ್ಯೆಯರಿಗೆ ಒಬ್ಬ ರಾಜನು ಸಮನಾದವನು. ಇವರೆಲ್ಲರನ್ನೂ ಸೇರಿಸಿದರೆ ಎಷ್ಟು ಪಾಪವುಂಟಾಗುತ್ತದೆಯೋ ಅದಕ್ಕಿಂತಲೂ ಅರ್ಧಪಟ್ಟು ಹೆಚ್ಚು ಪಾಪಸಂಬಂಧವುಳ್ಳವನು ರಾಜನೆಂದು ಹೇಳಲ್ಪಡುತ್ತದೆ.
ತ್ರಿವರ್ಗಸಹಿತಂ ಶಾಸ್ತ್ರಂ ಪವಿತ್ರಂ ಪುಣ್ಯಲಕ್ಷಣಮ್ ||10||
ಧರ್ಮವ್ಯಾಕರಣಂ ಪುಣ್ಯಂ ರಹಸ್ಯಶ್ರವಣಂ ಮಹತ್ |
ಶ್ರೋತವ್ಯಂ ಧರ್ಮಸಂಯುಕ್ತಂ ವಿಹಿತಂ ತ್ರಿದಶೈಃ ಸ್ವಯಮ್ ||11||
ಧರ್ಮಾರ್ಥಕಾಮಗಳನ್ನು ಬೋಧಿಸುವ ಶಾಸ್ತ್ರವು ಪವಿತ್ರವಾದುದು, ಪುಣ್ಯಪ್ರದವಾದುದು, ಧರ್ಮರೂಪವಾದುದು. ರಹಸ್ಯದಲ್ಲಿ ಕೇಳಬೇಕಾದ ಶ್ರೇಷ್ಠವಾದ ಶಾಸ್ತ್ರವಾದುದು. ದೇವತೆಗಳೇ ಸ್ವತಃ ಉಪದೇಶ ಮಾಡಿರುವ ಧರ್ಮಯುಕ್ತವಾದ ಆ ಶಾಸ್ತ್ರವನ್ನು ಕೇಳಬೇಕು.
ಪಿತೄಣಾಂ ಯತ್ರ ಗುಹ್ಯಾನಿ ಪ್ರೋಚ್ಯಂತೇ ಶ್ರಾದ್ಧಕರ್ಮಣಿ |
ದೇವತಾನಾಂ ಚ ಸರ್ವೇಷಾಂ ರಹಸ್ಯಂ ಕಥ್ಯತೇಽಖಿಲಮ್ ||12||
ಅದರಲ್ಲಿ ಶ್ರಾದ್ಧಕರ್ಮಕ್ಕೂ, ಪಿತೃಗಳಿಗೂ ಹಾಗೂ ದೇವತೆಗಳಿಗೂ ಸಂಬಂಧಿಸಿದ ಎಲ್ಲಾ ರಹಸ್ಯ ವಿಷಯಗಳು ಹೇಳಲ್ಪಡುತ್ತವೆ.
ಋಷಿಧರ್ಮಃ ಸ್ಮೃತೋ ಯತ್ರ ಸರಹಸ್ಯೋ ಮಹಾಫಲಃ |
ಮಹಾಯಜ್ಞಫಲಂ ಚೈವ ಸರ್ವದಾನಫಲಂ ತಥಾ ||13||
ಅದರಲ್ಲಿ ರಹಸ್ಯವಾದ, ಮಹಾಫಲಪ್ರದವಾದ ಋಷಿಧರ್ಮವೂ, ಮಹಾಯಜ್ಞ ಫಲಗಳೂ, ಸರ್ವದಾನಫಲಗಳೂ ಹೇಳಲ್ಪಡುತ್ತವೆ.
ಯೇ ಪಠಂತಿ ಸದಾ ಮರ್ತ್ಯಾ ಯೇಷಾಂ ಚೈವೋಪತಿಷ್ಠತಿ |
ಶ್ರುತ್ವಾ ಚ ಫಲಮಾಚಷ್ಟೇ ಸ್ವಯಂ ನಾರಾಯಣಃ ಪ್ರಭುಃ ||14||
ಯಾವ ಮನುಷ್ಯರು ಅದನ್ನು ಪಠಿಸಿ ಅನುಷ್ಠಾನ ಮಾಡುತ್ತಾರೆಯೋ, ಯಾರು ಶ್ರವಣ ಮಾಡುತ್ತಾರೋ ಅವರಿಗೆ ಪ್ರಭುವಾದ ನಾರಾಯಣನು ಸ್ವತಃ ಫಲಗಳನ್ನು ಹೇಳಿದ್ದಾನೆ.
ಗವಾಂ ಫಲಂ ತೀರ್ಥಫಲಂ ಯಜ್ಞಾನಾಂ ಚೈವ ಯತ್ಫಲಮ್ |
ಏತತ್ಫಲಮವಾಪ್ನೋತಿ ಯೋ ನರೋಽತಿಥಿಪೂಜಕಃ ||15||
ಅತಿಥಿಪೂಜೆಯನ್ನು ಮಾಡುವ ನರನು ಗೋದಾನ ಮಾಡಿದ ಫಲವನ್ನೂ, ತೀರ್ಥ ಸ್ನಾನ ಮಾಡಿದ ಫಲವನ್ನೂ, ಯಜ್ಞವನ್ನು ಮಾಡಿದ ಫಲವನ್ನೂ ಹೊಂದುತ್ತಾನೆ.
ಶ್ರೋತಾರಃ ಶ್ರದ್ಧಧಾನಾಶ್ಚ ಯೇಷಾಂ ಶುದ್ಧಂ ಚ ಮಾನಸಮ್ |
ತೇಷಾಂ ವ್ಯಕ್ತಂ ಜಿತಾ ಲೋಕಾಃ ಶ್ರದ್ಧಧಾನೇನ ಸಾಧುನಾ ||16||
ಶ್ರದ್ಧೆಯಿಂದ ಮತ್ತು ಶುದ್ಧವಾದ ಮನಸ್ಸಿನಿಂದ ಯಾರು ಕೇಳುತ್ತಾರೆಯೋ ಅವರು ಲೋಕಗಳನ್ನು ಜಯಿಸುತ್ತಾರೆ.
ಮುಚ್ಯತೇ ಕಿಲ್ಬಿಷಾಚ್ಚೈವ ನ ಸ ಪಾಪೇನ ಲಿಪ್ಯತೇ |
ಧರ್ಮಂ ಚ ಲಭತೇ ನಿತ್ಯಂ ಪ್ರೇತ್ಯ ಲೋಕಗತೋ ನರಃ ||17||
ದೋಷಗಳಿಂದ ನಿರ್ಮುಕ್ತರಾಗುತ್ತಾರೆ. ಪಾಪಲೇಪವನ್ನು ಹೊಂದುವುದಿಲ್ಲ. ಧರ್ಮವನ್ನು ಸಂಪಾದಿಸುತ್ತಾರೆ ಮತ್ತು

ಮರಣಾನಂತರದಲ್ಲಿ ಶುಭಲೋಕಗಳನ್ನು ಹೊಂದುತ್ತಾರೆ (ಇವು ನಾರಾಯಣನು ಸ್ವತಃ ಹೇಳಿದ ಫಲಗಳು).
ಕಸ್ಯಚಿತ್ತ್ವಥ ಕಾಲಸ್ಯ ದೇವದೂತೋ ಯದೃಚ್ಛಯಾ |
ಸ್ಥಿತೋ ಹ್ಯಂತರ್ಹಿತೋ ಭೂತ್ವಾ ಪರ್ಯಭಾಷತ ವಾಸವಮ್ ॥18॥
ಒಮ್ಮೆ ಒಬ್ಬ ದೇವದೂತನು ಇಂದ್ರನ ಸಮೀಪಕ್ಕೆ ಬಂದು ಅದೃಶ್ಯವಾಗಿ ನಿಂತು ಇಂದ್ರನ ಜೊತೆಯಲ್ಲಿ ಮಾತನಾಡಿದನು.
ಯೋ ತೌ ಕಾಮಗುಣೋಪೇತಾವಶ್ವಿನೌ ಭಿಷಜಾಂ ವರೌ |
ಆಜ್ಞಯಾಽಹಂ ತಯೋಃ ಪ್ರಾಪ್ತಃ ಸನರಾನ್ ಪಿತೃದೈವತಾನ್ ॥19॥
ಕಾಮ, ರೂಪ ಮತ್ತು ಗುಣೋಪೇತರೂ ಶ್ರೇಷ್ಠ ವೈದ್ಯರೂ ಆದ ಅಶ್ವಿನೀದೇವತೆಗಳ ಆಜ್ಞೆಯಿಂದ ನಾನು ಮನುಷ್ಯರ ಬಳಿಗೂ, ಪಿತೃಗಳ ಬಳಿಗೂ ಮತ್ತು ದೇವತೆಗಳ ಬಳಿಗೂ ಬಂದಿದ್ದೇನೆ.
ಕಸ್ಮಾದ್ಧಿ ಮೈಥುನಂ ಶ್ರಾದ್ಧೇ ದಾತುರ್ಭೋಕ್ತುಶ್ಚ ವರ್ಜಿತಮ್ |
ಕಿಮರ್ಥಂ ಚ ತ್ರಯಃ ಪಿಂಡಾಃ ಪ್ರವಿಭಕ್ತಾಃ ಪೃಥಕ್ಪೃಥಕ್ ॥20॥
ಶ್ರಾದ್ಧವನ್ನು ಮಾಡುವವನಿಗೂ, ಶ್ರಾದ್ಧ ಭೋಜನವನ್ನು ಮಾಡುವವನಿಗೂ ಏಕೆ ಮೈಥುನವು ನಿಷಿದ್ಧವಾಗಿದೆ? ಏಕೆ ಮೂರು ಪಿಂಡಗಳನ್ನು ಪ್ರತ್ಯೇಕವಾಗಿ ಕೊಡಬೇಕು?
ಪ್ರಥಮಃ ಕಸ್ಯ ದಾತವ್ಯೋ ಮಧ್ಯಮಃ ಕ್ವ ಚ ಗಚ್ಛತಿ |
ಉತ್ತರಶ್ಚ ಸ್ಮೃತಃ ಕಸ್ಯ ಏತದಿಚ್ಛಾಮಿ ವೇದಿತುಮ್ ॥21॥
ಮೊದಲನೆಯ ಪಿಂಡವನ್ನು ಯಾರಿಗೆ ಕೊಡಬೇಕು? ಮಧ್ಯದ ಪಿಂಡವು ಯಾರನ್ನು ತಲುಪುತ್ತದೆ? ಕೊನೆಯ ಪಿಂಡವು ಯಾರಿಗೆ ಸೇರುತ್ತದೆ? ನಾನು ಇದನ್ನು ತಿಳಿಯಲು ಬಯಸುತ್ತೇನೆ.
ಭೀಷ್ಮಃ
ಶ್ರದ್ಧಧಾನೇನ ದೂತೇನ ಭಾಷಿತಂ ಧರ್ಮಸಂಹಿತಮ್ |
ಪೂರ್ವಸ್ಥಾಸ್ತ್ರಿದಶಾಃ ಸರ್ವೇ ಪಿತರಃ ಪೂಜ್ಯ ಖೇಚರಮ್ ॥22॥
ಭೀಷ್ಮ ಶ್ರದ್ಧೆಯಿಂದ ಕೂಡಿದ ಧರ್ಮಯುಕ್ತವಾದ ದೇವದೂತನ ಮಾತನ್ನು ಕೇಳಿ, ಅವನ ಪೂರ್ವಜರಾದ ಪಿತೃಗಳು ಮತ್ತು ದೇವತೆಗಳು ಅವನನ್ನು ಪೂಜಿಸಿ ಮಾತನಾಡಿದರು.
ಪಿತರಃ
ಸ್ವಾಗತಂ ತೇಽಸ್ತು ಭದ್ರಂ ತೇ ಶ್ರೂಯತಾಂ ಖೇಚರೋತ್ತಮ |
ಗೂಢಾರ್ಥಃ ಪರಮಃ ಪ್ರಶ್ನೋ ಭವತಾ ಸಮುದೀರಿತಃ ॥23॥
ಪಿತೃಗಳು ಎಲೈ ಖೇಚರಶ್ರೇಷ್ಠನೇ, ನಿನಗೆ ಸ್ವಾಗತ. ನಿನಗೆ ಮಂಗಳವಾಗಲಿ. ನೀನು ಗೂಡಾರ್ಥವುಳ್ಳ ಶ್ರೇಷ್ಠವಾದ ಪ್ರಶ್ನೆಯನ್ನು ಕೇಳಿದ್ದೀಯೆ. ಉತ್ತರವನ್ನು ಕೇಳು.
ಶ್ರಾದ್ಧಂ ದತ್ತ್ವಾ ಚ ಭುಕ್ತ್ವಾ ಚ ಪುರುಷೋ ಯಃ ಸ್ತ್ರಿಯಂ ವ್ರಜೇತ್ |
ಪಿತರಸ್ತಸ್ಯ ತಂ ಮಾಸಂ ತಸ್ಮಿನ್ ರೇತಸಿ ಶೇರತೇ ॥24॥
ಶ್ರಾದ್ಧವನ್ನು ಕೊಟ್ಟು ಅಥವಾ ಶ್ರಾದ್ಧ ಭೋಜನವನ್ನು ಮಾಡಿ ಸ್ತ್ರೀಸಂಗವನ್ನು ಮಾಡಿದರೆ ಅವನ ಪಿತೃಗಳು ಒಂದು ತಿಂಗಳ ಕಾಲ ರೇತಸ್ಸಿನಲ್ಲಿ ಮಲಗುತ್ತಾರೆ.
ಪ್ರವಿಭಾಗಂ ತು ಪಿಂಡಾನಾಂ ಪ್ರವಕ್ಷ್ಯಾಮ್ಯನುಪೂರ್ವಶಃ |
ಪಿಂಡೋ ಹ್ಯಧಸ್ತಾದ್ ಗಚ್ಛಂಸ್ತು ಅಪ ಆವಿಶ್ಯ ಭಾವಯೇತ್ ॥25॥
ಪಿಂಡಗಳ ವಿಭಾಗವನ್ನು ಕ್ರಮವಾಗಿ ಹೇಳುತ್ತೇನೆ. ಮೊದಲು ಕೊಡುವ ಕೆಳಗಿನ (ಹತ್ತಿರದ) ಪಿಂಡವನ್ನು ನೀರಿನಲ್ಲಿ ಬಿಡಬೇಕು.
ಪಿಂಡಂ ತು ಮಧ್ಯಮಂ ತತ್ರ ಪತ್ನೀ ತ್ವೇಕಾ ಸಮಶ್ನುತೇ |
ಪಿಂಡಸ್ತೃತೀಯೋ ಯಸ್ತೇಷಾಂ ತಂ ದದ್ಯಾಜ್ಜಾತವೇದಸಿ |
ಏಷ ಶ್ರಾದ್ಧವಿಧಿಃ ಪ್ರೋಕ್ತೋ ಯಥಾ ಧರ್ಮೋ ನ ಲುಪ್ಯತೇ ॥26॥
ಮಧ್ಯಮ ಪಿಂಡವನ್ನು ಯಜಮಾನನ ಪತ್ನಿಯೊಬ್ಬಳೇ ಭುಂಜಿಸಬೇಕು. ಮೂರನೆಯ ಪಿಂಡವನ್ನು ಅಗ್ನಿಗೆ ಆಹುತಿಯನ್ನಾಗಿ ಕೊಡಬೇಕು. ಇದು ಶ್ರಾದ್ಧವಿಧಿ. ಹೀಗೆ ಮಾಡಿದರೆ ಧರ್ಮಲೋಪವಾಗುವುದಿಲ್ಲ.
ಪಿತರಸ್ತಸ್ಯ ತುಷ್ಯಂತಿ ಪ್ರಹೃಷ್ಟಮನಸಃ ಸದಾ |
ಪ್ರಜಾ ವಿವರ್ಧತೇ ಚಾಸ್ಯ ಅಕ್ಷಯಂ ಚೋಪತಿಷ್ಠತಿ ॥27॥
ಅವನ ಪಿತೃಗಳು ತೃಪ್ತರಾಗುತ್ತಾರೆ. ಮನಸ್ಸಂತೋಷವನ್ನು ಹೊಂದುತ್ತಾರೆ. ಸಂತತಿಯು ಅಭಿವೃದ್ಧಿಯನ್ನು ಹೊಂದುತ್ತದೆ ಮತ್ತು ತಾನು ಮಾಡಿದ ಶ್ರಾದ್ಧದ ಫಲವು ಅಕ್ಷಯವಾಗುತ್ತದೆ.
ದೇವದೂತಃ
ಆನುಪೂರ್ವ್ಯೇಣ ಪಿಂಡಾನಾಂ ಪ್ರವಿಭಾಗಃ ಪೃಥಕ್ಪೃಥಕ್ |
ಪಿತೄಣಾಂ ತ್ರಿಷು ಸರ್ವೇಷಾಂ ನಿರುಕ್ತಂ ಕಥಿತಂ ತ್ವಯಾ ॥28॥
ದೇವದೂತ ಕ್ರಮವಾಗಿ ಕೊಡುವ ಪಿಂಡಗಳ ವಿಭಾಗವನ್ನು ಮತ್ತು ಹೇಗೆ ವಿನಿಯೋಗ ಮಾಡಬೇಕೆಂಬುದನ್ನು ನೀನು ಹೇಳಿದ್ದೀಯೆ.
ಏಕಃ ಸಮುದ್ಧೃತಃ ಪಿಂಡೋ ಹ್ಯಧಸ್ತಾತ್ ಕಸ್ಯ ಗಚ್ಛತಿ |
ಕಂ ವಾ ಪ್ರೀಣಯತೇ ದೇವಂ ಕಥಂ ತಾರಯತೇ ಪಿತೄನ್ ॥29॥
ಮೊದಲಿನ ಕೆಳಗಿನ ಪಿಂಡವು ಯಾರಿಗೆ ಸೇರುತ್ತದೆ? ಯಾವ ದೇವತೆಯನ್ನು ಸಂತೋಷಗೊಳಿಸುತ್ತದೆ? ಪಿತೃಗಳನ್ನು ಹೇಗೆ ದಾಟಿಸುತ್ತದೆ?

ಮಧ್ಯಮಂ ತು ತದಾ ಪತ್ನೀ ಭುಂಕ್ತೇಽನುಜ್ಞಾತಮೇವ ಹಿ |
ಕಿಮರ್ಥಂ ಪಿತರಸ್ತಸ್ಯ ಕವ್ಯಮೇವ ಚ ಭುಂಜತೇ ॥30॥
ಮಧ್ಯಮದ ಪಿಂಡವನ್ನು ಋತ್ವಿಜರ ಮತ್ತು ಯಜಮಾನನ ಅನುಮತಿಯಿಂದ ಪತ್ನಿಯು ತಿನ್ನುವಳಷ್ಟೇ! ಆಗ ಅವನ ಪಿತೃಗಳು ಏಕೆ (ಹೇಗೆ) ಆ ಕವ್ಯವನ್ನು ಭುಂಜಿಸುತ್ತಾರೆ?
ಅತ್ರ ಯಸ್ತ್ವಂತಿಮಃ ಪಿಂಡೋ ಗಚ್ಛತೇ ಜಾತವೇದಸಮ್ |
ಭವತೇ ಕಾ ಗತಿಸ್ತಸ್ಯ ಕಂ ವಾ ಸಮನುಗಚ್ಛತಿ ॥31॥
ಅಗ್ನಿಯಲ್ಲಿ ಹಾಕುವ ಮೂರನೆಯ ಪಿಂಡವು ಯಾರನ್ನು ಸೇರುತ್ತದೆ? ಮತ್ತು ಅದರ ಗತಿಯೇನಾಗುತ್ತದೆ?
ಏತದಿಚ್ಛಾಮ್ಯಹಂ ಶ್ರೋತುಂ ಪಿಂಡೇಷು ತ್ರಿಷು ಯಾ ಗತಿಃ |
ಫಲಂ ವೃತ್ತಿಂ ಚ ಮಾರ್ಗಂ ಚ ಯಶ್ಚೈನಂ ಪ್ರತಿಪದ್ಯತೇ ॥32॥
ಮೂರು ಪಿಂಡಗಳ ಗತಿ, ಅವುಗಳ ಫಲ, ಅವುಗಳು ಹೋಗುವ ಮಾರ್ಗ, ಅವುಗಳು ತಲುಪುವ ಸ್ಥಾನ - ಇವುಗಳನ್ನು ನಾನು ಕೇಳಲು ಬಯಸುತ್ತೇನೆ.
ಪಿತರಃ
ಸುಮಹಾನೇಷ ಪ್ರಶ್ನೋ ವೈ ಯಸ್ತ್ವಯಾ ಸಮುದೀರಿತಃ |
ರಹಸ್ಯಮದ್ಭುತಂ ಚಾಪಿ ಪೃಷ್ಟಾಃ ಸ್ಮ ಗಗನೇಚರ ॥33॥
ಪಿತೃಗಳು ನೀನು ಕೇಳಿದ ಪ್ರಶ್ನೆಯು ಬಹಳ ದೊಡ್ಡದಾಗಿದೆ. ಎಲೈ ಗಗನಚರನೇ, ನಮಗೆ ರಹಸ್ಯವೂ ಮತ್ತು ಅದ್ಭುತವೂ ಆದ ಪ್ರಶ್ನೆಯನ್ನು ಕೇಳಿದ್ದೀಯೆ.
ಏತದೇವ ಪ್ರಶಂಸಂತಿ ದೇವಾಶ್ಚ ಮುನಯಸ್ತಥಾ |
ತೇಽಪ್ಯೇವಂ ನಾಭಿಜಾನಂತಿ ಪಿತೃಕಾರ್ಯವಿನಿಶ್ಚಯಮ್ |
ವರ್ಜಯಿತ್ವಾ ಮಹಾತ್ಮಾನಂ ಚಿರಜೀವಿನಮುತ್ತಮಮ್ ॥34॥
ದೇವತೆಗಳು ಮತ್ತು ಪಿತೃಗಳು ಈ ಶ್ರಾದ್ಧಕರ್ಮವನ್ನು ಪ್ರಶಂಸೆ ಮಾಡುತ್ತಾರೆ. ಆದರೆ ಅವರೂ ಪಿತೃಕಾರ್ಯದ ರಹಸ್ಯಗಳನ್ನು ಹೀಗೆ ತಿಳಿದಿಲ್ಲ. ಚಿರಂಜೀವಿಗಳಾದ ಶ್ರೇಷ್ಠರಾದ ಮಾರ್ಕಂಡೇಯರೊಬ್ಬರನ್ನು ಬಿಟ್ಟು ಬೇರೆ ಯಾರೂ ಈ ರಹಸ್ಯವನ್ನು ತಿಳಿದಿಲ್ಲ.
ಪಿತೃಭಕ್ತಸ್ತು ಯೋ ವಿಪ್ರೋ ವರಲಬ್ಧೋ ಮಹಾಯಶಾಃ |
ತ್ರಯಾಣಾಮಪಿ ಪಿಂಡಾನಾಂ ಶ್ರುತ್ವಾ ಭಗವತೋ ಗತಿಮ್ ॥35॥
ಪಿತೃಭಕ್ತನಾದ ಮತ್ತು ದೈವಾನುಗ್ರಹದಿಂದ ಜನಿಸಿದ, ಮಹಾಕೀರ್ತಿವಂತನಾದ ಬ್ರಾಹ್ಮಣನು ಮೂರುಪಿಂಡಗಳ ಗತಿಯನ್ನು ಪೂಜ್ಯರಿಂದ ಕೇಳಿ (ಶ್ರಾದ್ಧವನ್ನು ಮಾಡಬೇಕು).
ದೇವದೂತೇನ ಯಃ ಪೃಷ್ಟಃ ಶ್ರಾದ್ಧಸ್ಯ ವಿಧಿನಿಶ್ಚಯಃ |
ಗತಿಸ್ತ್ರಯಾಣಾಂ ಪಿಂಡಾನಾಂ ಶೃಣುಷ್ವಾವಹಿತೋ ಮಮ ॥36॥
ಶ್ರಾದ್ಧದ ವಿಧಿಯ ವಿಷಯದಲ್ಲಿ, ಅದರಲ್ಲಿಯೂ ಮೂರು ಪಿಂಡಗಳ ಗತಿಯ ವಿಷಯದಲ್ಲಿ ದೇವದೂತನು ಕೇಳಿದ ಪ್ರಶ್ನೆಗೆ ಉತ್ತರವಾಗಿ ನನ್ನ ಮಾತನ್ನು ಅವಧಾನದಿಂದ ಕೇಳು.
ಅಪೋ ಗಚ್ಛತಿ ಯೋ ಹ್ಯತ್ರ ಶಶಿನಂ ಹ್ಯೇಷ ಪ್ರೀಣಯೇತ್ |
ಶಶೀ ಪ್ರೀಣಯತೇ ದೇವಾನ್ ಪಿತೄಂಶ್ಚೈವ ಮಹಾಮತೇ ॥37॥
ನೀರಿನಲ್ಲಿ ವಿಸರ್ಜಿಸುವ ಮೊದಲನೆಯ ಪಿಂಡವು ಚಂದ್ರನನ್ನು ಸಂತೋಷ ಪಡಿಸುತ್ತದೆ. ಎಲೈ ಮಹಾಮತಿಯೇ, ಚಂದ್ರನು ದೇವತೆಗಳನ್ನೂ ಮತ್ತು ಪಿತೃಗಳನ್ನೂ ಸಂತೋಷಪಡಿಸುತ್ತಾನೆ.
ಭುಂಕ್ತೇ ತು ಪತ್ನೀ ಯಂ ಚೈಷಾಮನುಜ್ಞಾತಾ ತು ಮಧ್ಯಮಮ್ |
ಪುತ್ರಕಾಮಾಯ ಪುತ್ರಂ ತು ಪ್ರಯಚ್ಛಂತಿ ಪಿತಾಮಹಾಃ ॥38॥
ಬ್ರಾಹ್ಮಣರ ಅನುಮತಿಯನ್ನು ಪಡೆದು ಪತ್ನಿಯು ಭುಂಜಿಸುವ ಮಧ್ಯಮ ಪಿಂಡವು ಪುತ್ರಕಾಮನಾದ ಯಜಮಾನನಿಗೆ ಪಿತಾಮಹರ ಅನುಗ್ರಹದಿಂದ ಪುತ್ರನು ಜನಿಸುವಂತೆ ಮಾಡುತ್ತದೆ.
ಹವ್ಯವಾಹೇ ತು ಯಃ ಪಿಂಡೋ ದೀಯತೇ ತನ್ನಿಬೋಧ ಮೇ |
ಪಿತರಸ್ತೇನ ತೃಪ್ಯಂತಿ ಪ್ರೀತಾಃ ಕಾಮಾನ್ ದಿಶಂತಿ ಚ |
ಏತತ್ತೇ ಕಥಿತಂ ಸರ್ವಂ ತ್ರಿಷು ಪಿಂಡೇಷು ಯಾ ಗತಿಃ ॥39॥
ಅಗ್ನಿಯಲ್ಲಿ ಹಾಕುವ ಪಿಂಡದ ವಿಷಯವನ್ನು ನನ್ನಿಂದ ಕೇಳು. ಅದರಿಂದ ಪಿತೃಗಳು ತೃಪ್ತರಾಗಿ ಅಪೇಕ್ಷಿತವಾದ ಕಾಮಗಳನ್ನು ಕೊಡುತ್ತಾರೆ. ಮೂರು ಪಿಂಡಗಳ ಗತಿಯನ್ನು ನಿನಗೆ ಹೇಳಿದ್ದೇನೆ.
ಋತ್ವಿಗ್ ಯೋ ಯಜಮಾನಸ್ಯ ಪಿತೃತ್ವಮನುಗಚ್ಛತಿ |
ತಸ್ಮಿನ್ನಹನಿ ಮನ್ಯಂತೇ ಪರಿಹಾರ್ಯಂ ಹಿ ಮೈಥುನಮ್ ॥40॥
ಯಾವ ಋತ್ವಿಜನು ಶ್ರಾದ್ಧ ಮಾಡುವ ಯಜಮಾನನ ಪಿತೃಸ್ಥಾನದಲ್ಲಿ ಕುಳಿತು ಭೋಜನವನ್ನು ಮಾಡುತ್ತಾನೆಯೋ ಆ ದಿವಸ ಮೈಥುನವನ್ನು ವರ್ಜಿಸಬೇಕೆಂದು ಜ್ಞಾನಿಗಳು ತಿಳಿದಿದ್ದಾರೆ.
ಶುಚಿನಾ ತು ಸದಾ ಶ್ರಾದ್ಧಂ ಭೋಕ್ತವ್ಯಂ ಖೇಚರೋತ್ತಮ |
ಯೇ ಮಯಾ ಕಥಿತಾ ದೋಷಾಸ್ತೇ ತಥಾ ಸ್ಯುರ್ನ ಚಾನ್ಯಥಾ ॥41॥
ಎಲೈ ಖೇಚರೋತ್ತಮನೇ, ಶುಚಿಯಾಗಿ ಕುಳಿತು ಶ್ರಾದ್ಧಭೋಜನವನ್ನು ಮಾಡಬೇಕು. ಇಲ್ಲದಿದ್ದರೆ ನಾನು ಹೇಳಿದ ದೋಷಗಳೆಲ್ಲವೂ ಉಂಟಾಗುತ್ತವೆ.

ತಸ್ಮಾತ್ ಸ್ನಾತಃ ಶುಚಿಃ ಕ್ಷಾಂತಃ ಶ್ರಾದ್ಧಂ ಭುಂಜೀತ ವೈ ದ್ವಿಜಃ |
ಪ್ರಜಾ ವಿವರ್ಧತೇ ಚಾಸ್ಯ ಯಶ್ಚೈವಂ ಸಂಪ್ರಯಚ್ಛತಿ ||42||
ಆದ್ದರಿಂದ ಸ್ನಾನವನ್ನು ಮಾಡಿ ಶುಚಿಯಾಗಿ, ಶಾಂತನಾಗಿ ಬ್ರಾಹ್ಮಣನು ಶ್ರಾದ್ಧ ಭೋಜನವನ್ನು ಮಾಡಬೇಕು. ಆಗ ಶ್ರಾದ್ಧವನ್ನು ಕೊಡುವ ಯಜಮಾನನ ಸಂತತಿಯು ಅಭಿವೃದ್ಧಿಯನ್ನು ಹೊಂದುತ್ತದೆ.
ತತೋ ವಿದ್ಯುತ್ಪ್ರಭೋ ನಾಮ ಋಷಿರಾಹ ಮಹಾತಪಾಃ |
ಆದಿತ್ಯತೇಜಸಾ ತಸ್ಯ ತುಲ್ಯಂ ರೂಪಂ ಪ್ರಕಾಶತೇ ||43||
ಆಗ ಮಹಾತಪಸ್ವಿಯಾದ, ವಿದ್ಯುತ್ಪ್ರಭ ಋಷಿಯು ಮಾತನಾಡಿದನು. ಅವನ ರೂಪವು ಸೂರ್ಯನ ತೇಜಸ್ಸಿಗೆ ಸಮಾನವಾಗಿ ಪ್ರಕಾಶಿಸುತ್ತಿದ್ದಿತು.
ಸ ಚ ಧರ್ಮರಹಸ್ಯಾನಿ ಶ್ರುತ್ವಾ ಶಕ್ರಮಥಾಬ್ರವೀತ್ ||44||
ಅವನು ಈ ಧರ್ಮರಹಸ್ಯಗಳನ್ನು ಕೇಳಿ ಇಂದ್ರನನ್ನು ಕುರಿತು ಹೇಳಿದನು.
ತಿರ್ಯಗ್ಯೋನಿಗತಾನ್ ಸತ್ತ್ವಾನ್ ಮರ್ತ್ಯಾ ಹಿಂಸಂತಿ ಮೋಹಿತಾಃ |
ಕೀಟಾನ್ ಪಿಪೀಲಿಕಾನ್ ಸರ್ಪಾನ್ ಮೇಷಾನ್ ಸಮೃಗಪಕ್ಷಿಣಃ |
ಕಿಲ್ಬಿಷಂ ಸುಬಹು ಪ್ರಾಪ್ತಾಃ ಕಿಂಸ್ವಿದೇಷಾಂ ಪ್ರತಿಕ್ರಿಯಾ ||45||
ಮನುಷ್ಯರು ಮೋಹದಿಂದ ಕೂಡಿದವರಾಗಿ ತಿರ್ಯಗ್ಯೋನಿಯಲ್ಲಿರುವ ಕೀಟಗಳು, ಇಲಿಗಳು, ಸರ್ಪಗಳು, ಹೋತಗಳು, ಮೃಗ-ಪಕ್ಷಿಗಳು - ಇವುಗಳನ್ನು ಕೊಲ್ಲುತ್ತಾರೆ. ಬಹಳ ದೋಷವನ್ನು ಸಂಪಾದಿಸುತ್ತಾರೆ. ಅವರಿಗೆ ಪರಿಹಾರೋಪಾಯವೇನು?
ತತೋ ದೇವಗಣಾಃ ಸರ್ವೇ ಋಷಯಶ್ಚ ತಪೋಧನಾಃ |
ಪಿತರಶ್ಚ ಮಹಾಭಾಗಾಃ ಪೂಜಯಂತಿ ಸ್ಮ ತಂ ಮುನಿಮ್ ||46||
ಆಗ ಎಲ್ಲ ದೇವತಾ ಸಮೂಹಗಳೂ, ತಪೋಧನರಾದ ಋಷಿಗಳೂ, ಮಹಾನುಭಾವರಾದ ಪಿತೃಗಳೂ ಆ ಋಷಿಯನ್ನು ಪೂಜಿಸಿದರು.
ಶಕ್ರಃ
ಕುರುಕ್ಷೇತ್ರಂ ಗಯಾಂ ಗಂಗಾಂ ಪ್ರಭಾಸಂ ಪುಷ್ಕರಾಣಿ ಚ |
ಏತಾನಿ ಮನಸಾ ಧ್ಯಾತ್ವಾ ಅವಗಾಹೇತ್ ತತೋ ಜಲಮ್ |
ತಥಾ ಮುಚ್ಯತಿ ಪಾಪೇನ ರಾಹುಣಾ ಚಂದ್ರಮಾ ಯಥಾ ||47||
ಇಂದ್ರ ಕುರುಕ್ಷೇತ್ರ, ಗಯಾ, ಗಂಗೆ, ಪ್ರಭಾಸ, ಪುಷ್ಕರಗಳು ಇವುಗಳನ್ನು ಮನಸ್ಸಿನಲ್ಲಿ ಧ್ಯಾನಿಸಿ ಅನಂತರ ಸ್ನಾನವನ್ನು ಮಾಡಬೇಕು. ಅದರಿಂದ ರಾಹುವಿನಿಂದ ಚಂದ್ರನು ಮುಕ್ತನಾದಂತೆ ಮನುಷ್ಯನು ಪಾಪದಿಂದ ಮುಕ್ತನಾಗುತ್ತಾನೆ.
ತ್ರ್ಯಹಂ ಸ್ನಾತಃ ಸ ಭವತಿ ನಿರಾಹಾರಶ್ಚ ವರ್ತತೇ |
ಸ್ಪೃಶತೇ ಯೋ ಗವಾಂ ಪೃಷ್ಠಂ ವಾಲಧಿಂ ಚ ನಮಸ್ಯತಿ ||48||
ಯಾವನು ನಿರಾಹಾರನಾಗಿ ಗೋವಿನ ಪೃಷ್ಠವನ್ನು ಮತ್ತು ಬಾಲವನ್ನು ಮುಟ್ಟಿ ನಮಸ್ಕರಿಸುತ್ತಾನೆಯೋ ಅವನು ಮೂರು ಸ್ನಾನಗಳನ್ನು ಮಾಡಿದ ಫಲವನ್ನು ಹೊಂದುತ್ತಾನೆ.
ತತೋ ವಿದ್ಯುತ್ಪ್ರಭೋ ವಾಕ್ಯಮಭ್ಯಭಾಷತ ವಾಸವಮ್ |
ಅಯಂ ಸೂಕ್ಷ್ಮತರೋ ಧರ್ಮಸ್ತಂ ನಿಬೋಧ ಶತಕ್ರತೋ ||49||
ಅನಂತರ ವಿದ್ಯುತ್ಪ್ರಭನು ಇಂದ್ರನನ್ನು ಕುರಿತು- `ಎಲೈ ಶತಕ್ರತುವೇ, ಇದು ಅತ್ಯಂತ ಸೂಕ್ಷ್ಮವಾದ ಧರ್ಮ. ಇದನ್ನು ಕೇಳು.
ಘೃಷ್ಟೋ ವಟಕಷಾಯೇಣ ಅನುಲಿಪ್ತಃ ಪ್ರಿಯಂಗುಣಾ |
ಕ್ಷೀರೇಣ ಷಷ್ಟಿಕಾನ್ ಭುಕತ್ವ ಸರ್ವಪಾಪ್ಮೈಃ ಪ್ರಮುಚ್ಯತೇ ||50||
ವಟಕಷಾಯದಿಂದ ಮತ್ತು ಪ್ರಿಯಂಗುವಿನಿಂದ ಲೇಪಿತನಾಗಿ ಕ್ಷೀರಯುಕ್ತವಾದ ಯವಾನ್ನವನ್ನು ಭುಂಜಿಸುವವನು ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಶ್ರೂಯತಾಂ ಚಾಪರಂ ಗುಹ್ಯಂ ರಹಸ್ಯಮೃಷಿಚಿಂತಿತಮ್ |
ಶ್ರುತಂ ಮೇ ಭಾಷಮಾಣಸ್ಯ ಸ್ಥಾಣೋಃ ಸ್ಥಾನೇ ಬೃಹಸ್ಪತೇಃ |
ರುದ್ರೇಣ ಸಹ ದೇವೇಶ ತನ್ನಿಬೋಧ ಶಚೀಪತೇ ||51||
ಎಲೈ ಶಚೀಪತಿಯೇ, ಋಷಿಗಳಿಗೆ ಸಮ್ಮತವಾದ ಬಹಳ ಗುಹ್ಯವಾದ ಇನ್ನೊಂದು ವಿಷಯವನ್ನು ಕೇಳು. ಇದನ್ನು ನಾನು ರುದ್ರನ ಸ್ಥಾನವಾದ ಕೈಲಾಸದಲ್ಲಿ ಬೃಹಸ್ಪತಿಗಳ ಜೊತೆಯಲ್ಲಿ ರುದ್ರನು ಮಾತನಾಡುತ್ತಿದ್ದಾಗ ಕೇಳಿದೆನು.
ಪರ್ವತಾರೋಹಣಂ ಕೃತ್ವಾ ಏಕಪಾದೋ ವಿಭಾವಸುಮ್ |
ನಿರೀಕ್ಷೇತ ನಿರಾಹಾರ ಊರ್ಧ್ವಬಾಹುಃ ಕೃತಾಂಜಲಿಃ |
ತಪಸಾ ಮಹತಾ ಯುಕ್ತ ಉಪವಾಸಫಲಂ ಲಭೇತ್ ||52||
ಪರ್ವತವನ್ನು ಹತ್ತಿ, ಏಕಪಾದದಲ್ಲಿ ನಿಂತು, ನಿರಾಹಾರನಾಗಿ, ಊರ್ಧ್ವಬಾಹುವಾಗಿ ಕೈಗಳನ್ನು ಮುಗಿದು ಸೂರ್ಯನನ್ನು ನೋಡಬೇಕು. ಈ ದೊಡ್ಡ ತಪಸ್ಸಿನಿಂದ ಯುಕ್ತನಾದವನು ಉಪವಾಸಫಲವನ್ನು ಹೊಂದುತ್ತಾನೆ.
ರಶ್ಮಿಭಿಸ್ತಾಪಿತೋಽರ್ಕಸ್ಯ ಸರ್ವಪಾಪಮಪೋಹತಿ |
ಗ್ರೀಷ್ಮಕಾಲೇಽಥವಾ ಶೀತೇ ಏವಂ ಪಾಪಮಪೋಹತಿ ||53||
ಗ್ರೀಷ್ಮಕಾಲದಲ್ಲಿ ಅಥವಾ ಶೀತಕಾಲದಲ್ಲಿ ಸೂರ್ಯನ ಕಿರಣಗಳಿಂದ ತಪ್ತನಾದವನು ಎಲ್ಲ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ.
ತತಃ ಪಾಪಾತ್ ಪ್ರಮುಕ್ತಸ್ಯ ದ್ಯುತಿರ್ಭವತಿ ಶಾಶ್ವತೀ |
ತೇಜಸಾ ಸೂರ್ಯವದ್ ದೀಪ್ತೋ ಭ್ರಾಜತೇ ಸೋಮವತ್ ಪುನಃ ||

ಪಾಪಗಳನ್ನು ಕಳೆದುಕೊಂಡ ಮೇಲೆ ಅವನು ಸೂರ್ಯನಂತೆ ತೇಜಸ್ವಿಯಾಗಿ ಚಂದ್ರನಂತೆ ಬೆಳಗುತ್ತಾನೆ (ಎಂದು ಬೃಹಸ್ಪತಿಗಳು ಹೇಳಿದರು).
ಮಧ್ಯೇ ತ್ರಿದಶವರ್ಗಸ್ಯ ದೇವರಾಜಃ ಶತಕ್ರತುಃ |
ಉವಾಚ ಮಧುರಂ ವಾಕ್ಯಂ ಬೃಹಸ್ಪತಿಮನುತ್ತಮಮ್ ||55||
ದೇವಸಮೂಹದ ಮಧ್ಯದಲ್ಲಿ ದೇವರಾಜನಾದ ಶತಕ್ರತುವು ಶ್ರೇಷ್ಠರಾದ ಬೃಹಸ್ಪತಿಗಳನ್ನು ಮಧುರವಾಗಿ ಪ್ರಶ್ನೆ ಮಾಡಿದನು.
ಧರ್ಮಗುಹ್ಯಂ ತು ಭಗವನ್ ಮಾನುಷಾಣಾಂ ಸುಖಾವಹಮ್ |
ಸರಹಸ್ಯಾಶ್ಚ ಯೇ ದೋಷಾಸ್ತಾನ್ ಯಥಾವದುದೀರಥ ||56||
ಪೂಜ್ಯರೇ, ಮನುಷ್ಯರಿಗೆ ಸುಖವನ್ನುಂಟು ಮಾಡುವ ಗುಹ್ಯವಾದ ಧರ್ಮಗಳನ್ನು ಮತ್ತು ರಹಸ್ಯವಾದ ದೋಷಗಳನ್ನು ಯಥಾರ್ಥವಾಗಿ ನನಗೆ ಹೇಳಿ.
ಬೃಹಸ್ಪತಿಃ
ಪ್ರತಿಮೇಹಂತಿ ಯೇ ಸೂರ್ಯಮನಿಲಂ ದ್ವಿಷತೇ ಚ ಯೇ |
ಹವ್ಯವಾಹೇ ಪ್ರದೀಪ್ತೇ ಚ ಸಮಿಧಂ ಯೇ ನ ಜುಹ್ವತಿ ||57||
ಬಾಲವತ್ಸಾಂ ಚ ಯೇ ಧೇನುಂ ದುಹಂತಿ ಕ್ಷೀರಕಾರಣಾತ್ |
ತೇಷಾಂ ದೋಷಾನ್ ಪ್ರವಕ್ಷ್ಯಾಮಿ ತಾನ್ನಿಬೋಧ ಶಚೀಪತೇ ||58||
ಬೃಹಸ್ಪತಿ ಯಾರು ಸೂರ್ಯನಿಗೆ ಎದುರಾಗಿ ಮೂತ್ರವಿಸರ್ಜನೆಯನ್ನು ಮಾಡುತ್ತಾರೆಯೋ ವಾಯುವನ್ನು ದ್ವೇಷಿಸುತ್ತಾರೆಯೋ, ಪ್ರದೀಪ್ತವಾದ ಅಗ್ನಿಯಲ್ಲಿ ಸಮಿತ್ತುಗಳನ್ನು ಹಾಕಿ ಹೋಮವನ್ನು ಮಾಡುವುದಿಲ್ಲವೋ, ಎಳೆಗರುವಿನ ತಾಯಿಯಾದ ಹಸುವನ್ನು ಕ್ಷೀರಕ್ಕಾಗಿ ದೋಹನವನ್ನು ಮಾಡುತ್ತಾರೆಯೋ ಅವರ ದೋಷವನ್ನು ಹೇಳುವೆನು. ಎಲೈ ಶಚೀಪತಿಯೇ, ಅದನ್ನು ಕೇಳು.
ಭಾನುಮಾನನಿಲಶ್ಚೈವ ಹವ್ಯವಾಹಶ್ಚ ವಾಸವ |
ಲೋಕಾನಾಂ ಮಾತರಶ್ಚೈವ ಗಾವಃ ಸೃಷ್ಟಾಃ ಸ್ವಯಂಭುವಾ ||59||
ಎಲೈ ಇಂದ್ರನೇ, ಸೂರ್ಯ, ಅನಿಲ, ಅಗ್ನಿ, ಲೋಕಮಾತೆಯರಾದ ಗೋವುಗಳು ಎಲ್ಲರೂ ಬ್ರಹ್ಮದೇವನಿಂದ ಸೃಷ್ಟರಾಗಿದ್ದಾರೆ.
ಲೋಕಾಂಸ್ತಾರಯಿತುಂ ಶಕ್ತಾ ಮರ್ತ್ಯೇಷ್ವೇತೇಷು ದೇವತಾಃ |
ಸರ್ವೇ ಭವಂತಃ ಶೃಣ್ವಂತು ಏಕೈಕಂ ಧರ್ಮನಿಶ್ಚಯಮ್ ||60||
ಈ ದೇವತೆಗಳೆಲ್ಲರೂ ಈ ಮನುಷ್ಯರನ್ನು ಪಾಪಗಳಿಂದ ದಾಟಿಸಲು ಸಮರ್ಥರಾಗಿದ್ದಾರೆ. ನೀವೆಲ್ಲರೂ ಒಂದೊಂದು ಧರ್ಮನಿಶ್ಚಯವನ್ನು ಕೇಳಿ.
ವರ್ಷಾಣಿ ಷಡಶೀತಿಂ ತು ದುರ್ವೃತ್ತಾಃ ಕುಲಪಾಂಸನಾಃ |
ಸ್ತ್ರಿಯಃ ಸರ್ವಾಶ್ಚ ದುರ್ವೃತ್ತಾಃ ಪ್ರತಿಮೇಹಂತಿ ಯಾ ರವಿಮ್ ||61||
ದುರ್ನಡತೆಯುಳ್ಳ, ಕುಲಘಾತಕರಾದ ಪುರುಷರು ಮತ್ತು ದುರ್ನಡತೆಯನ್ನು ಹೊಂದಿ, ಸೂರ್ಯನಿಗೆ ಎದುರಾಗಿ ಮೂತ್ರ ಮಾಡುವ ಸ್ತ್ರೀಯರು ಎಂಬತ್ತಾರು ವರ್ಷಗಳ ಕಾಲ (ನರಕದಲ್ಲಿ)ದುಃಖವನ್ನು ಅನುಭವಿಸುತ್ತಾರೆ.
ಅನಿಲದ್ವೇಷಿಣಃ ಶಕ್ರ ಗರ್ಭಸ್ರಾದ್ ಚ್ಯವತೇ ಪ್ರಜಾ |
ಹವ್ಯವಾಹಸ್ಯ ದೀಪ್ತಸ್ಯ ಸಮಿಧಂ ಯೇ ನ ಜುಹ್ವತಿ |
ಅಗ್ನಿಕಾರ್ಯೇಷು ವೈ ತೇಷಾಂ ಹವ್ಯಂ ನಾಶ್ನಾತಿ ಪಾವಕಃ ||62||
ಎಲೈ ಶಕ್ರನೇ, ವಾಯುವನ್ನು ದ್ವೇಷಿಸುವವರ ಸಂತತಿಯು ಗರ್ಭಸ್ರಾವದಿಂದಲೇ ನಾಶ ಹೊಂದುತ್ತದೆ. ದೀಪ್ತವಾದ ಅಗ್ನಿಯಲ್ಲಿ ಯಾರು ಸಮಿತ್ತುಗಳಿಂದ ಹೋಮವನ್ನು ಮಾಡುವುದಿಲ್ಲವೋ ಅಂತಹವರು ಅಗ್ನಿಕಾರ್ಯದಲ್ಲಿ ಕೊಟ್ಟ ಹವಿಸ್ಸನ್ನು ಅಗ್ನಿಯು ಸ್ವೀಕರಿಸುವುದಿಲ್ಲ.
ಕ್ಷೀರಂ ತು ಬಾಲವತ್ಸಾನಾಂ ಯೇ ಪಿಬಂತೀಹ ಮಾನವಾಃ |
ನ ತೇಷಾಂ ಕ್ಷೀರಪಾಃ ಕೇಚಿಜ್ಜಾಯಂತೇ ಕುಲವರ್ಧನಾಃ ||63||
ಎಳೆಗರುಗಳಿರುವ ಧೇನುಗಳ ಹಾಲನ್ನು ಯಾರು ಕರೆಯುತ್ತಾರೆಯೋ ಅವರ ಕುಲದಲ್ಲಿ ಸ್ತನ್ಯಪಾನವನ್ನು ಮಾಡಿ ಕುಲವನ್ನು ಅಭಿವೃದ್ಧಿಪಡಿಸುವ ಶಿಶುಗಳು ಜನಿಸುವುದಿಲ್ಲ.
ಪ್ರಜಾಕ್ಷಯೇಣ ಯುಜ್ಯಂತೇ ಕುಲವಂಶಕ್ಷಯೇಣ ಚ |
ಏವಮೇತತ್ ಪುರಾ ದೃಷ್ಟಂ ಕುಲವೃದ್ಧೈರ್ದ್ವಿಜಾತಿಭಿಃ ||64||
ಪ್ರಜೆಗಳು ನಾಶವನ್ನು ಹೊಂದುತ್ತಾರೆ. ಕುಲವೂ ನಾಶವನ್ನು ಹೊಂದುತ್ತದೆ. ಕುಲವೃದ್ಧರಾದ ಬ್ರಾಹ್ಮಣರು ಹೀಗೆ ಹಿಂದೆಯೇ ತೀರ್ಮಾನಿಸಿದ್ದಾರೆ.
ತಸ್ಮಾದ್ ವರ್ಜ್ಯಾನಿ ವರ್ಜ್ಯಾನಿ ಕಾರ್ಯಂ ಕಾರ್ಯಂ ಚ ನಿತ್ಯಶಃ |
ಭೂತಿಕಾಮೇನ ಮರ್ತ್ಯೇನ ಸತ್ಯಮೇತದ್ ಬ್ರವೀಮಿ ತೇ ||65||
ಆದ್ದರಿಂದ ಕಲ್ಯಾಣವನ್ನು ಬಯಸುವ ಮನುಷ್ಯನು ಬಿಡಬೇಕಾದುದನ್ನು ಬಿಡಬೇಕು. ಮಾಡಬೇಕಾದುದನ್ನು ನಿತ್ಯವೂ ಮಾಡಬೇಕು. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ.
ತತಃ ಸರ್ವೇ ಮಹಾಭಾಗ ದೇವತಾಃ ಸಮರುದ್ಗಣಾಃ |
ಋಷಯಶ್ಚ ಮಹಾಭಾಗಾಃ ಪೃಚ್ಛಂತಿ ಸ್ಮ ಪಿತೄಂಸ್ತತಃ ||66||
ಎಲೈ ಮಹಾನುಭಾವನೇ, ಆಗ ಎಲ್ಲ ದೇವತೆಗಳು ಮತ್ತು ಮರುದ್ಗಣಗಳು, ಮಹಾನುಭಾವರಾದ ಋಷಿಗಳು ಪಿತೃಗಳನ್ನು ಕೇಳಿದರು.
ಪಿತರಃ ಕೇನ ತುಷ್ಯಂತಿ ಮರ್ತ್ಯಾನಾಮಲ್ಪಚೇತಸಾಮ್ |

ಅಕ್ಷಯಂ ಚ ಕಥಂ ದಾನಂ ಭವೇಚ್ಚೈವೌರ್ಧ್ವದೇಹಿಕಮ್ ॥67॥
ಅಲ್ಪಚೇತನರಾದ ಮರ್ತ್ಯರ ಮೇಲೆ ಪಿತೃಗಳು ಹೇಗೆ ಸಂತುಷ್ಟರಾಗುತ್ತಾರೆ? ಮಾನವರು ಮಾಡಿದ ಔರ್ಧ್ವದೈಹಿಕ ದಾನವು ಹೇಗೆ ಅಕ್ಷಯವಾಗುತ್ತದೆ?
ಆನೃಣ್ಯಂ ವಾ ಕಥಂ ಮರ್ತ್ಯಾ ಗಚ್ಛೇಯುಃ ಕೇನ ಕರ್ಮಣಾ |
ಏತದಿಚ್ಛಾಮಹೇ ಶ್ರೋತುಂ ಪರಂ ಕೌತೂಹಲಂ ಹಿ ನಃ ॥68॥
ಮನುಷ್ಯರು ಯಾವ ಕರ್ಮದಿಂದ ಋಣಮುಕ್ತರಾಗುತ್ತಾರೆ? ಇದನ್ನು ನಾವು ಕೇಳಲು ಬಯಸುತ್ತೇವೆ. ನಮಗೆ ಈ ವಿಷಯದಲ್ಲಿ ಬಹಳ ಕುತೂಹಲವಿದೆ.
ಪಿತರಃ
ನ್ಯಾಯತೋ ವೈ ಮಹಾಭಾಗಾಃ ಸಂಶಯಃ ಸಮುದಾಹೃತಃ |
ಶ್ರೂಯತಾಂ ಯೇನ ತುಷ್ಯಾಮೋ ಮರ್ತ್ಯಾನಾಂ ಸಾಧುಕರ್ಮಣಾಮ್ ॥
ಪಿತೃಗಳು ಎಲೈ ಮಹಾನುಭಾವರೇ, ನ್ಯಾಯವಾಗಿಯೇ ನೀವು ಸಂಶಯವನ್ನು ಹೇಳಿದ್ದೀರಿ. ಸತ್ಕರ್ಮವನ್ನು ಮಾಡುವ ಮನುಷ್ಯರ ಮೇಲೆ ನಾವು ಹೇಗೆ ಪ್ರಸನ್ನರಾಗುತ್ತೇವೆ ಎಂಬುದನ್ನು ಕೇಳಿ.
ನೀಲಷಂಡಪ್ರಮೋಕ್ಷೇಣ ಅಮಾವಾಸ್ಯಾಂ ತಿಲೋದಕೈಃ |
ವರ್ಷಾಸು ದೀಪಕೈಶ್ಚೈವ ಪಿತೄಣಾಮನೃಣೋ ಭವೇತ್ ॥70॥
ನೀಲವೃಷೋತ್ಸರ್ಗವನ್ನು ಮಾಡುವುದರಿಂದ, ಅಮಾವಾಸ್ಯೆಯಂದು ತರ್ಪಣ ಕೊಡುವುದರಿಂದ, ಮಳೆಗಾಲದಲ್ಲಿ ದೀಪದಾನ ಮಾಡುವುದರಿಂದ ಮಾನವನು ಪಿತೃ ಋಣದಿಂದ ಮುಕ್ತನಾಗುತ್ತಾನೆ.
ಅಕ್ಷಯಂ ನಿರ್ವ್ಯಲೀಕಂ ಚ ದಾನಮೇತನ್ಮಹಾಫಲಮ್ |
ಅಸ್ಮಾಕಂ ಪರಿತೋಷಶ್ಚ ಅಕ್ಷಯಃ ಪರಿಕೀರ್ತ್ಯತೇ ॥71॥
ನಿಷ್ಕಪಟತನದಿಂದ ಮಾಡುವ ಈ ದಾನವು ಅಕ್ಷಯವಾದ ಮಹಾಫಲವನ್ನು ಕೊಡುತ್ತದೆ. ನಮಗೂ ಸಹ ಅಕ್ಷಯವಾದ ಸಂತೋಷವನ್ನು ಉಂಟು ಮಾಡುತ್ತದೆ ಎಂದೂ ಹೇಳಲ್ಪಡುತ್ತದೆ.
ಶ್ರದ್ದಧಾನಾಶ್ಚ ಯೇ ಮರ್ತ್ಯಾ ಆಹರಿಷ್ಯಂತಿ ಸಂತತಿಮ್ |
ದುರ್ಗಾತ್ ತೇ ತಾರಯಿಷ್ಯಂತಿ ನರಕಾತ್ ಪ್ರಪಿತಾಮಹಾನ್ ॥72॥
ಶ್ರದ್ಧೆಯಿಂದ ಈ ದಾನಾದಿ ಕಾರ್ಯವನ್ನು ಮಾಡುವ ಮನುಷ್ಯರಿಗೆ ಅವರ ದಾನಗಳು ಸಂತತಿಯನ್ನು ಬೆಳೆಸುತ್ತವೆ, ಕಷ್ಟಗಳಿಂದ ದಾಟಿಸುತ್ತವೆ ಮತ್ತು ಅವರ ಪ್ರಪಿತಾಮಹರನ್ನು ನರಕದಿಂದ ಉದ್ಧರಿಸುತ್ತವೆ.
ಪಿತೄಣಾಂ ಭಾಷಿತಂ ಶ್ರುತ್ವಾ ಹೃಷ್ಟರೋಮಾ ತಪೋಧನಃ |
ವೃದ್ಧಗಾರ್ಗ್ಯೋ ಮಹಾತೇಜಾಸ್ತಾನೇವಂ ವಾಕ್ಯಮಬ್ರವೀತ್ ॥73॥
ಕೇ ಗುಣಾ ನೀಲಷಂಡಸ್ಯ ಪ್ರಮುಕ್ತಸ್ಯ ತಪೋಧನಾಃ |
ವರ್ಷಾಸು ದೀಪದಾನೇನ ತಥೈವ ಚ ತಿಲೋದಕೈಃ ॥74॥
ಪಿತೃಗಳ ಮಾತನ್ನು ಕೇಳಿ ರೋಮಾಂಚಗೊಂಡ ತಪೋಧನರಾದ, ಮಹಾತೇಜಸ್ವಿಗಳಾದ ವೃದ್ಧಗಾರ್ಗ್ಯರೆಂಬ ಋಷಿಗಳು ಪಿತೃಗಳನ್ನು ಕುರಿತು- `ಎಲೈ ತಪೋಧನರೇ, ನೀಲ ವೃಷೋತ್ಸರ್ಗದಿಂದ ಏನು ಫಲ ಉಂಟಾಗುತ್ತದೆ? ಮಳೆಗಾಲದಲ್ಲಿ ದೀಪದಾನದಿಂದಲೂ, ಅಮಾವಾಸ್ಯೆಯ ತರ್ಪಣದಿಂದಲೂ ಯಾವ ಫಲ ಉಂಟಾಗುತ್ತದೆ?' ಎಂದು ಕೇಳಿದರು.
ಪಿತರಃ
ನೀಲಷಂಡಸ್ಯ ಲಾಂಗೂಲಂ ತೋಯಮಭ್ಯುದ್ಧರೇದ್ ಯದಿ |
ಷಷ್ಟಿಂ ವರ್ಷಸಹಸ್ರಾಣಿ ಪಿತರಸ್ತೇನ ತರ್ಪಿತಾಃ ॥75॥
ಪಿತೃಗಳು ನೀಲವೃಷವು ತನ್ನ ಬಾಲವನ್ನು ನೀರಿನಲ್ಲಿ ಅದ್ದಿ ಎತ್ತಿದರೆ ಪಿತೃಗಳು ಅರವತ್ತು ಸಹಸ್ರ ವರ್ಷಗಳ ಕಾಲ ತೃಪ್ತಿಯನ್ನು ಹೊಂದುತ್ತಾರೆ.
ಯಸ್ತು ಶೃಂಗಗತಂ ಪಂಕಂ ಕೂಲಾದುದ್ಧೃತ್ಯ ತಿಷ್ಠತಿ |
ಪಿತರಸ್ತೇನ ಗಚ್ಛಂತಿ ಸೋಮಲೋಕಮಸಂಶಯಮ್ ॥76॥
ಆ ವೃಷಭವು ದಡದ ಮಣ್ಣನ್ನು ಕೊಂಬಿನಿಂದ ತಿವಿದು ಎತ್ತಿ ನಿಂತರೆ ಪಿತೃಗಳು ನಿಸ್ಸಂಶಯವಾಗಿ ಚಂದ್ರಲೋಕಕ್ಕೆ ಹೋಗುತ್ತಾರೆ.
ವರ್ಷಾಸು ದೀಪದಾನೇನ ಶಶಿವಚ್ಛೋಭತೇ ನರಃ |
ತಮೋರೂಪಂ ನ ತಸ್ಯಾಸ್ತಿ ದೀಪಕಂ ಯಃ ಪ್ರಯಚ್ಛತಿ ॥77॥
ಮಳೆಗಾಲದಲ್ಲಿ ದೀಪದಾನವನ್ನು ಮಾಡುವ ನರನು ಚಂದ್ರನಂತೆ ಶೋಭಿಸುತ್ತಾನೆ. ದೀಪದಾನ ಮಾಡುವವನಿಗೆ ಯಾವ ತಾಮಸಲೋಕವೂ ಉಂಟಾಗುವುದಿಲ್ಲ.
ಅಮಾವಾಸ್ಯಾಂ ತು ಯೇ ಮರ್ತ್ಯಾಃ ಪ್ರಯಚ್ಛಂತಿ ತಿಲೋದಕಮ್ |
ಪಾತ್ರಮೌದುಂಬರಂ ಗೃಹ್ಯ ಮಧುಮಿಶ್ರಂ ತಪೋಧನ |
ಕೃತಂ ಭವತಿ ತೈಃ ಶ್ರಾದ್ಧಂ ಸರಹಸ್ಯಂ ಯಥಾರ್ಥವತ್ ॥78॥
ಎಲೈ ತಪೋಧನನೇ, ಯಾವ ಮನುಷ್ಯರು ಅಮಾವಾಸ್ಯೆಯಂದು ಔದುಂಬರದಿಂದ ಮಾಡಿದ ಪಾತ್ರೆಯನ್ನು ಹಿಡಿದು ಮಧುಮಿಶ್ರವಾದ ತಿಲೋದಕವನ್ನು ಕೊಡುತ್ತಾರೆಯೋ ಅವರು ರಹಸ್ಯವಾಗಿ, ಯಥಾರ್ಥವಾಗಿ ಶ್ರಾದ್ಧವನ್ನೇ ಮಾಡಿರುತ್ತಾರೆ.
ಹೃಷ್ಟಪುಷ್ಟಮನಾಸ್ತೇಷಾಂ ಪ್ರಜಾ ಭವತಿ ನಿತ್ಯದಾ |
ಕುಲವಂಶಸ್ಯ ವೃದ್ಧಿಸ್ತು ಪಿಂಡದಸ್ಯ ಫಲಂ ಭವೇತ್ |

ಶ್ರದ್ದಧಾನಸ್ತು ಯಃ ಕುರ್ಯಾತ್ ಪಿತೃಣಾಮನೃಣೋ ಭವೇತ್ ॥79॥
ಅವರ ಪ್ರಜೆಗಳು ಯಾವಾಗಲೂ ಹೃಷ್ಟಪುಷ್ಟರಾಗಿ ಇರುತ್ತಾರೆ. ಪಿಂಡಪ್ರದಾನವನ್ನು ಮಾಡುವವನಿಗೆ ಕುಲವೃದ್ಧಿಯುಂಟಾಗುತ್ತದೆ. ಶ್ರದ್ಧೆಯಿಂದ ಮಾಡುವವನು ಪಿತೃ ಋಣದಿಂದ ಮುಕ್ತನಾಗುತ್ತಾನೆ.
ಏವಮೇವ ಸಮುದ್ದಿಷ್ಟಃ ಶ್ರಾದ್ಧಕಾಲಕ್ರಮಸ್ತಥಾ |
ವಿಧಿಃ ಪಾತ್ರಂ ಫಲಂ ಚೈವ ಯಥಾವದನುಕೀರ್ತಿತಮ್ ॥80॥
ಈ ರೀತಿಯಾಗಿಯೇ ಶ್ರಾದ್ಧದ ಕಾಲ, ಕ್ರಮ, ವಿಧಾನ, ಪಾತ್ರ ಮತ್ತು ಫಲಗಳನ್ನು ಯಥಾರ್ಥವಾಗಿ ವರ್ಣಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಶ್ರಾದ್ಧರಹಸ್ಯಕಥನಂ ನಾಮ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೆಂಟನೆಯ ಅಧ್ಯಾಯ
ದೇವತೆಗಳಿಂದ ಶ್ರಾದ್ಧಾದಿಧರ್ಮೋಪದೇಶ
ಭೀಷ್ಮಃ
ಕೇನ ತೇ ಚ ಭವೇತ್ ಪ್ರೀತಿಃ ಕಥಂ ತುಷ್ಟಿಂ ತು ಗಚ್ಛಸಿ |
ಇತಿ ಪೃಷ್ಟಃ ಸುರೇಂದ್ರೇಣ ಪ್ರೋವಾಚ ಹರಿರವ್ಯಯಃ ॥1॥
ಭೀಷ್ಮ ಯಾವುದರಿಂದ ನಿನಗೆ ಪ್ರೀತಿಯುಂಟಾಗುತ್ತದೆ? ಯಾವುದರಿಂದ ಸಂತೋಷವುಂಟಾಗುತ್ತದೆ ಎಂದು ಸುರೇಂದ್ರನಿಂದ ಕೇಳಲ್ಪಟ್ಟ ಅವ್ಯಯನಾದ ಹರಿಯು ಮಾತನಾಡಿದನು.
ಬ್ರಾಹ್ಮಣಾನಾಂ ಪರೀವಾದೋ ಮಮ ವಿದ್ವೇಷಣಂ ಮಹತ್ |
ಬ್ರಾಹ್ಮಣೈಃ ಪೂಜಿತೈರ್ನಿತ್ಯಂ ಪೂಜಿತೋಽಹಂ ನ ಸಂಶಯಃ ॥2॥
ನಿತ್ಯಾಭಿವಾದ್ಯಾ ವಿಪ್ರೇಂದ್ರಾ ಭುಕತ್ವ ಪಾದೌ ತಥಾಽಽತ್ಮನಃ |
ತೇಷಾಂ ತುಷ್ಯಾಮಿ ಮರ್ತ್ಯಾನಾಂ ಯಶ್ಚಕ್ರೇ ಚ ಬಲಿಂ ಹರೇತ್ ॥3॥
ಹರಿ-ಬ್ರಾಹ್ಮಣರ ನಿಂದೆಯು ನನಗೆ ಬಹಳ ವಿದ್ವೇಷಕ್ಕೆ ಕಾರಣವಾದುದು. ನಿತ್ಯವೂ ಬ್ರಾಹ್ಮಣರನ್ನು ಪೂಜಿಸಿದರೆ ನಾನು ಪೂಜಿಸಲ್ಪಡುತ್ತೇನೆ. ಇದರಲ್ಲಿ ಸಂಶಯವಿಲ್ಲ. ನಿತ್ಯವೂ ಬ್ರಾಹ್ಮಣಶ್ರೇಷ್ಠರಿಗೆ ನಮಸ್ಕಾರವನ್ನು ಮಾಡಬೇಕು. ಭೋಜನವಾದ ನಂತರ ತನ್ನ ಕಾಲನ್ನು ಸ್ಪರ್ಶಿಸಬೇಕು ಮತ್ತು ವರ್ತುಲಾಕಾರ ಮಂಡಲದಲ್ಲಿ ಬಲಿಹರಣವನ್ನು ಮಾಡಬೇಕು. ಇದರಿಂದ ನಾನು ಮಾನವರಿಗೆ ಸಂತುಷ್ಟನಾಗುವೆನು (ಲಕ್ಷಾಲಂಕಾರ).
ವಾಮನಂ ಬ್ರಾಹ್ಮಣಂ ದೃಷ್ಟ್ವಾ ವರಾಹಂ ಚ ಜಟೋಚ್ಛ್ರಿತಮ್ |
ಉದ್ಧೃತಾಂ ಧರಣೀಂ ಚೈವ ಮೂರ್ಧ್ನಾ ಧಾರಯತೇ ತು ಯಃ |
ನ ತೇಷಾಮಶುಭಂ ಕಿಂಚಿತ್ ಕಲ್ಮಷಂ ಚೋಪಪದ್ಯತೇ ॥4॥
ಕುಬ್ಜನಾದ ಬ್ರಾಹ್ಮಣನನ್ನು ನೋಡಿ ವಾಮನನಿಗೆ ನಮಸ್ಕಾರ ಮಾಡುವಂತೆ ನಮಸ್ಕಾರ ಮಾಡಬೇಕು. ಜಟೆಯನ್ನು ಹೊಂದಿದ ಬ್ರಾಹ್ಮಣನನ್ನು ನೋಡಿ ವರಾಹನಿಗೆ ನಮಸ್ಕಾರ ಮಾಡುವಂತೆ ನಮಸ್ಕಾರ ಮಾಡಬೇಕು. ವಾಮನ ಮತ್ತು ವರಾಹರ ರೂಪದಿಂದ ಉದ್ಧರಿಸಲ್ಪಟ್ಟ ಭೂಮಿಯನ್ನು ನೋಡಿ ಆ ಮೃತ್ತಿಕೆಯನ್ನು ತಲೆಯ ಮೇಲೆ ಧರಿಸಬೇಕು. ಅಂತಹವರಿಗೆ ಯಾವ ಅಶುಭವಾಗಲೀ, ದೋಷವಾಗಲೀ ಉಂಟಾಗುವುದಿಲ್ಲ.
ಅಶ್ವತ್ಥಂ ರೋಚನಾಂ ಗಾಂ ಚ ಪೂಜಯೇದ್ ಯೋ ನರಃ ಸದಾ |
ಪೂಜಿತಂ ಚ ಜಗತ್ ತೇನ ಸದೇವಾಸುರಮಾನುಷಮ್ ॥5॥
ಅಶ್ವತ್ಥವೃಕ್ಷ, ಗೋರೋಚನ ಮತ್ತು ಗೋವುಗಳನ್ನು ಯಾವ ನರನು ಯಾವಾಗಲೂ ಪೂಜಿಸುತ್ತಾನೋ ಅವನು ದೇವಾಸುರ-ಮನುಷ್ಯರಿಂದ ಕೂಡಿದ ಜಗತ್ತನ್ನೇ ಪೂಜಿಸುತ್ತಾನೆ.
ತೇನ ರೂಪೇಣ ತೇಷಾಂ ಚ ಪೂಜಾಂ ಗೃಹ್ಣಾಮಿ ತತ್ತ್ವತಃ |
ಪೂಜಾ ಮಮೈಷಾ ನಾಸ್ತ್ಯನ್ಯಾ ಯಾವಲ್ಲೋಕಾಃ ಪ್ರತಿಷ್ಠಿತಾಃ ॥6॥
ಆ ರೂಪದಿಂದ ನಾನೇ ಆ ಪೂಜೆಗಳನ್ನು ಸ್ವೀಕರಿಸುತ್ತೇನೆ. ಅವುಗಳು ಲೋಕಗಳು ಇರುವವರೆಗೆ ನನ್ನ ಪೂಜೆಯೇ ಆಗುತ್ತವೆ, ಬೇರೆ ಪೂಜೆಯಾಗುವುದಿಲ್ಲ.
ಅನ್ಯಥಾ ಹಿ ವೃಥಾ ಮರ್ತ್ಯಾಃ ಪೂಜಯಂತ್ಯಲ್ಪಬುದ್ಧಯಃ |
ನಾಹಂ ತತ್ಪ್ರತಿಗೃಹ್ಣಾಮಿ ನ ಸಾ ತುಷ್ಟಿಕರೀ ಮಮ ॥7॥
ಅಲ್ಪಬುದ್ಧಿಯುಳ್ಳ ಮನುಷ್ಯರು ಬೇರೆ ರೀತಿಯಲ್ಲಿ ವ್ಯರ್ಥವಾಗಿ ಪೂಜೆ ಮಾಡುತ್ತಾರೆ. ಅದನ್ನು ನಾನು ಸ್ವೀಕರಿಸುವುದಿಲ್ಲ ಮತ್ತು ಆ ಪೂಜೆಯಿಂದ ನನಗೆ ಸಂತೋಷವೂ ಆಗುವುದಿಲ್ಲ.
ಇಂದ್ರಃ
ಚಕ್ರಂ ಪಾದೌ ವರಾಹಂ ಚ ಬ್ರಾಹ್ಮಣಂ ಚಾಪಿ ವಾಮನಮ್ |
ಉದ್ಧೃತಾಂ ಧರಣೀಂ ಚೈವ ಕಿಮರ್ಥಂ ತ್ವಂ ಪ್ರಶಂಸಸಿ ॥8॥
ಭವಾನ್ಸೃಜತಿ ಭೂತಾನಿ ಭವಾನ್ ಸಂಹರತಿ ಪ್ರಜಾಃ |
ಪ್ರಕೃತಿಃ ಸರ್ವಭೂತಾನಾಂ ಸಮರ್ತ್ಯಾನಾಂ ಸನಾತನೀ ॥9॥

ಇಂದ್ರ ಮಂಡಲ, ಪಾದಗಳು, ವರಾಹ, ಕುಬ್ಜನಾದ ಬ್ರಾಹ್ಮಣ ಮತ್ತು ಉದ್ಧೃತವಾದ ಭೂಮಿ - ಇವುಗಳನ್ನು ನೀನು ಏತಕ್ಕೆ ಪ್ರಶಂಸಿಸುತ್ತಿದ್ದೀಯೆ? ನೀನು ಪ್ರಜೆಗಳನ್ನು ಸೃಷ್ಟಿಸುತ್ತೀಯೆ. ಅವರನ್ನು ಸಂಹಾರ ಮಾಡುತ್ತೀಯೆ. ಮನುಷ್ಯರನ್ನೂ ಸೇರಿ ಎಲ್ಲ ಪ್ರಾಣಿಗಳೂ ಅವರ ಸ್ವಭಾವವೂ ಅನಾದಿಕಾಲದಿಂದಲೂ ಬಂದಿವೆ.
ಭೀಷ್ಮಃ
ಸಂಪ್ರಹಸ್ಯ ತತೋ ವಿಷ್ಣುರಿದಂ ವಚನಮಬ್ರವೀತ್ |
ಚಕ್ರೇಣ ನಿಹತಾ ದೈತ್ಯಾಃ ಪದ್ಭ್ಯಾಂ ಕ್ರಾಂತಾ ವಸುಂಧರಾ ॥10॥
ಭೀಷ್ಮ ವಿಷ್ಣುವು ನಕ್ಕು ಆಗ ಹೀಗೆ ಮಾತನಾಡಿದನು: ನಾನು ಚಕ್ರದಿಂದ ದೈತ್ಯರನ್ನು ಸಂಹಾರ ಮಾಡಿದೆ. ಪಾದಗಳಿಂದ ಭೂಮಿಯನ್ನು ಅಳೆದೆ.
ವಾರಾಹಂ ರೂಪಮಾಸ್ಥಾಯ ಉದ್ಧೃತಾ ಚ ವಸುಂಧರಾ |
ವಾಮನಂ ರೂಪಮಾಸ್ಥಾಯ ಜಿತೋ ರಾಜಾ ಮಯಾ ಬಲಿಃ ॥11॥
ವರಾಹರೂಪವನ್ನು ಧರಿಸಿ ಭೂಮಿಯನ್ನು ಎತ್ತಿದೆ. ವಾಮನ ರೂಪವನ್ನು ಧರಿಸಿ ಬಲಿಯನ್ನು ಜಯಿಸಿದೆ.
ಪರಿತುಷ್ಟೋ ಭವಾಮ್ಯೇವಂ ಮಾನುಷಾಣಾಂ ಮಹಾತ್ಮನಾಮ್ |
ತನ್ಮಾಂ ಯೇ ಪೂಜಯಿಷ್ಯಂತಿ ನಾಸ್ತಿ ತೇಷಾಂ ಪರಾಭವಃ ॥12॥
ಈ ರೀತಿಯಾಗಿ ಮಹಾತ್ಮರಾದ ಬ್ರಾಹ್ಮಣರಿಗೆ ನಾನು ಸಂತುಷ್ಟನಾಗುತ್ತೇನೆ. ಹೀಗೆ ನನ್ನನ್ನು ಯಾರು ಪೂಜಿಸುವರೋ ಅವರಿಗೆ ಪರಾಭವವುಂಟಾಗುವುದಿಲ್ಲ.
ಅಪಿ ವಾ ಬ್ರಾಹ್ಮಣಂ ದೃಷ್ಟ್ವಾ ಬ್ರಹ್ಮಚಾರಿಣಮಾಗತಮ್ |
ಬ್ರಾಹ್ಮಣಾಯಾಹುತಿಂ ದತ್ತ್ವಾ ಅಮೃತಂ ತಸ್ಯ ಭೋಜನಮ್ ॥13॥
ಅಥವಾ ಮನೆಗೆ ಬಂದ ಬ್ರಹ್ಮಚಾರಿಯಾದ ಬ್ರಾಹ್ಮಣನನ್ನು ನೋಡಿ ಅವನಿಗೆ ಮೊದಲಿಗೆ ಆಹುತಿಯನ್ನು ನೀಡಿ ಅನಂತರ ಭೋಜನವನ್ನು ಮಾಡುವವನು ಅಮೃತವನ್ನೇ ಭುಂಜಿಸುತ್ತಾನೆ.
ಐಂದ್ರೀಂ ಸಂಧ್ಯಾಮುಪಾಸಿತ್ವಾ ಆದಿತ್ಯಾಭಿಮುಖಃಸ್ಥಿತಃ |
ಸರ್ವತೀರ್ಥೇಷು ಸ ಸ್ನಾತೋ ಮುಚ್ಯತೇ ಸರ್ವಕಿಲ್ಬಿಷೈಃ ॥14॥
ಸೂರ್ಯನಿಗೆ ಅಭಿಮುಖವಾಗಿ ನಿಂತು ಪ್ರಾತಃಕಾಲ ಸಂಧ್ಯಾವಂದನೆಯನ್ನು ಮಾಡುವವನೂ, ಸರ್ವತೀರ್ಥಗಳಲ್ಲಿ ಸ್ನಾನವನ್ನು ಮಾಡುವವನೂ ಎಲ್ಲ ದೋಷಗಳಿಂದಲೂ ಮುಕ್ತರಾಗುತ್ತಾನೆ.
ಏತದ್ ವಃ ಕಥಿತಂ ಗುಹ್ಯಮಖಿಲೇನ ತಪೋಧನಾಃ |
ಸಂಶಯಂ ಪೃಚ್ಛಮಾನಾನಾಂ ಕಿಂ ಭೂಯಃ ಕಥಯಾಮ್ಯಹಮ್ ॥15॥
ಎಲೈ ತಪೋಧನರೇ, ನಿಮ್ಮ ಸಂಶಯಕ್ಕೆ ಉತ್ತರವಾಗಿ ನಾನು ರಹಸ್ಯವಾದ ಇವೆಲ್ಲವನ್ನೂ ಹೇಳಿದ್ದೇನೆ. ಇನ್ನೂ ಏನು ಹೇಳಲಿ?
ಬಲದೇವಃ
ಶ್ರೂಯತಾಂ ಪರಮಂ ಗುಹ್ಯಂ ಮಾನುಷಾಣಾಂ ಸುಖಾವಹಮ್ |
ಅಜಾನಂತೋ ಯದಬುಧಾಃ ಕ್ಲಿಶ್ಯಂತೇ ಭೂತಪೀಡಿತಾಃ ॥16॥
ಬಲದೇವ ಮನುಷ್ಯರಿಗೆ ಸುಖವನ್ನು ಉಂಟುಮಾಡುವ ಪರಮರಹಸ್ಯವಾದ ಈ ವಿಷಯವನ್ನು ಕೇಳಿ. ಜ್ಞಾನವಿಲ್ಲದವರು ಇದನ್ನು ತಿಳಿಯದೆ ಭೂತಗಳಿಂದ ಪೀಡಿತರಾಗಿ ಕ್ಲೇಶವನ್ನು ಅನುಭವಿಸುತ್ತಾರೆ.
ಕಲ್ಯ ಉತ್ಥಾಯ ಯೋ ಮರ್ತ್ಯಃ ಸ್ಪೃಶೇದ್ ಗಾಂ ವೈ ಘೃತಂ ದಧಿ |
ಸರ್ಷಪಂ ಚ ಪ್ರಿಯಂಗುಂ ಚ ಕಲ್ಮಷಾತ್ ಪ್ರತಿಮುಚ್ಯತೇ ॥17॥
ಮನುಷ್ಯರು ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಗೋವು, ಘೃತ, ದಧಿ, ಸರ್ಷಪ (ಸಾಸಿವೆ) ಮತ್ತು ಪ್ರಿಯಂಗು (ನವಣೆ)ಗಳನ್ನು ಮುಟ್ಟುತ್ತಾನೆಯೋ ಅವನು ದೋಷಗಳಿಂದ ಮುಕ್ತನಾಗುತ್ತಾನೆ.
ಭೂತಾನಿ ಚೈವ ಸರ್ವಾಣಿ ಅಗ್ರತಃ ಪೃಷ್ಠತೋಽಪಿ ವಾ |
ಉಚ್ಛಿಷ್ಟಂ ವಾಽಪಿ ಚ್ಛಿದ್ರೇಷು ವರ್ಜಯಂತಿ ತಪೋಧನಾಃ ॥18॥
ತಪೋಧನರಾದವರು ಪಶುಗಳ ಮುಂಭಾಗದಲ್ಲಿ ಅಥವಾ ಹಿಂಭಾಗದಲ್ಲಿ ನಡೆಯುತ್ತಾರೆ (ಪಶುಗಳ ಮಧ್ಯದಲ್ಲಿ ಹೋಗುವುದಿಲ್ಲ) ಮತ್ತು ಉಚ್ಛಿಷ್ಟವನ್ನು ಗುಂಡಿಗಳಲ್ಲಿ ಹಾಕುತ್ತಾರೆ.
ದೇವಾಃ
ಪ್ರಗೃಹ್ಯೌದುಂಬರಂ ಪಾತ್ರಂ ತೋಯಪೂರ್ಣಮುದಙ್ಮುಖಃ |
ಉಪವಾಸಂ ತು ಗೃಹ್ಣೀಯಾದ್ ಯದ್ವಾ ಸಂಕಲ್ಪಯೇದ್ ವ್ರತಮ್ ॥
ದೇವತೆಗಳು ನೀರನ್ನು ತುಂಬಿದ ಅತ್ತಿಮರದ ಕಮಂಡಲುವನ್ನು ಹಿಡಿದುಕೊಂಡು ಉತ್ತರಾಭಿಮುಖವಾಗಿ ನಿಂತು ಉಪವಾಸ ವ್ರತದ ಸಂಕಲ್ಪವನ್ನಾಗಲೀ ಅಥವಾ ಬೇರೆ ವ್ರತದ ಸಂಕಲ್ಪವನ್ನಾಗಲೀ ಮಾಡಬೇಕು.
ದೇವತಾಸ್ತಸ್ಯ ತುಷ್ಯಂತಿ ಕಾಮಿಕಂ ಚಾಪಿ ಸಿದ್ಧ್ಯತಿ |
ಅನ್ಯಥಾ ಹಿ ವೃಥಾ ಮರ್ತ್ಯಾಃ ಕುರ್ವತೇ ಸ್ವಲ್ಪಬುದ್ಧಯಃ ॥20॥
ಅವನಿಗೆ ದೇವತೆಗಳು ಪ್ರಸನ್ನರಾಗುತ್ತಾರೆ. ಕಾಮಿತಫಲವು ಸಿದ್ಧಿಸುತ್ತದೆ. ಅಲ್ಪಬುದ್ಧಿಯುಳ್ಳ ಮನುಷ್ಯರು ವ್ಯರ್ಥವಾಗಿ ಬೇರೆ ರೀತಿಯಲ್ಲಿ ಮಾಡುತ್ತಾರೆ.
ಉಪವಾಸೇ ಬಲೌ ಚಾಪಿ ತಾಮ್ರಪಾತ್ರಂ ವಿಶಿಷ್ಯತೇ |
ಬಲಿರ್ಭಿಕ್ಷಾ ತಥಾಽರ್ಘ್ಯಂ ಚ ಪಿತ್ರೂಣಾಂ ಚ ತಿಲೋದಕಮ್ ॥21॥

ಉಪವಾಸದಲ್ಲಿ ಮತ್ತು ಭೋಜನದಲ್ಲಿ ತಾಮ್ರಪಾತ್ರೆಯು ಶ್ರೇಷ್ಠವಾದುದು. ಅನ್ನದಾನ, ಭಿಕ್ಷೆ, ಅರ್ಘ್ಯ ಮತ್ತು ತಿಲತರ್ಪಣಗಳು ಪಿತೃಗಳಿಗೆ ಪ್ರೀತಿಕರವಾದುವು.
ತಾಮ್ರಪಾತ್ರೇಣ ದಾತವ್ಯಮನ್ಯಥಾಽಲ್ಪಫಲಂ ಭವೇತ್ |
ಗುಹ್ಯಮೇತತ್ ಸಮುದ್ದಿಷ್ಟಂ ಯಥಾ ತುಷ್ಯಂತಿ ದೇವತಾಃ ॥22॥
ಇವುಗಳನ್ನು ತಾಮ್ರಪಾತ್ರದಲ್ಲಿರುವ ನೀರಿನಿಂದ ಕೊಡಬೇಕು. ಇಲ್ಲದಿದ್ದರೆ ಅಲ್ಪ ಫಲವುಂಟಾಗುತ್ತದೆ. ಇದು ರಹಸ್ಯವಾದುದು. ಇದರಿಂದ ದೇವತೆಗಳು ಪ್ರಸನ್ನರಾಗುತ್ತಾರೆ.
ಧರ್ಮಃ
ರಾಜಪೌರುಷಿಕೇ ವಿಪ್ರೇ ಘಾಂಟಿಕೇ ಪರಿಚಾರಿಕೇ |
ಗೋರಕ್ಷಕೇ ವಾಣಿಜಕೇ ತಥಾ ಕಾರುಕುಶೀಲವೇ ॥23॥
ಮಿತ್ರದ್ರುಹ್ಯನಧೀಯಾನೇ ಯಶ್ಚ ಸ್ಯಾದ್ ವೃಷಲೀಪತಿಃ |
ಏತೇಷು ದೈವಂ ಪಿತ್ರ್ಯಂ ವಾ ನ ದೇಯಂ ಸ್ಯಾತ್ ಕಥಂಚನ |
ಪಿಂಡದಾಸ್ತಸ್ಯ ಹೀಯಂತೇ ನ ಚ ಪ್ರೀಣಾತಿ ವೈ ಪಿತೄನ್ ॥24॥
ಧರ್ಮ ರಾಜಸೇವೆಯನ್ನು ಮಾಡುವ ಬ್ರಾಹ್ಮಣನಿಗೆ, ಘಂಟೆಯನ್ನು ಬಾರಿಸುವವನಿಗೆ, ಸೇವಕನಿಗೆ, ಗೋರಕ್ಷಣೆಯನ್ನು ಮಾಡುವವನಿಗೆ, ವ್ಯಾಪಾರವನ್ನು ಮಾಡುವವನಿಗೆ, ಕಬ್ಬಿಣದ ಕೆಲಸವನ್ನು ಮಾಡುವವನಿಗೆ, ನಾಟಕಗಳಲ್ಲಿ ಪಾತ್ರ ವಹಿಸುವವನಿಗೆ, ಮಿತ್ರದ್ರೋಹಿಯಾದವನಿಗೆ, ಅಧ್ಯಯನವನ್ನು ಮಾಡದಿದ್ದವನಿಗೆ, ಶೂದ್ರಸ್ತ್ರೀ ಪತಿಯಾದವನಿಗೆ ದೇವಕಾರ್ಯದಲ್ಲಿಯೂ, ಪಿತೃಕಾರ್ಯದಲ್ಲಿಯೂ ಏನನ್ನೂ ಕೊಡಬಾರದು. ಅವರಿಗೆ ದಾನ ಮಾಡಿದರೆ ಪಿಂಡದಾನವನ್ನು ಮಾಡುವವನ ಸಂತತಿಯು ಕ್ಷಯವನ್ನು ಹೊಂದುತ್ತದೆ ಮತ್ತು ಪಿತೃಗಳು ಸಂತುಷ್ಟಿಯನ್ನು ಹೊಂದುವುದಿಲ್ಲ.
ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ |
ಪಿತರಸ್ತಸ್ಯ ದೇವಾಶ್ಚ ಅಗ್ನಯಶ್ಚ ತಥೈವ ಹಿ |
ನಿರಾಶಾಃ ಪ್ರತಿಗಚ್ಛಂತಿ ಅತಿಥೇರಪ್ರತಿಗ್ರಹಾತ್ ॥25॥
ಯಾವನ ಮನೆಯಿಂದ ಅತಿಥಿಯು ನಿರಾಶನಾಗಿ ಹೊರಗೆ ಹೋಗುತ್ತಾನೆಯೋ ಅವನಿಗೆ ಪಿತೃಗಳು, ದೇವತೆಗಳು ಮತ್ತು ಅಗ್ನಿಯು ಅತಿಥಿಯನ್ನು ಆದರಿಸದ ಕಾರಣದಿಂದ ನಿರಾಶರಾಗಿ ಹೊರಗೆ ಹೋಗುತ್ತಾರೆ.
ಸ್ತ್ರೀಘ್ನೈರ್ಗೋಘ್ನೈಃ ಕೃತಘ್ನೈಶ್ಚ ಬ್ರಹ್ಮಘ್ನೈರ್ಗುರುತಲ್ಪಗೈಃ |
ತುಲ್ಯದೋಷೋ ಭವತ್ಯೇಭಿರ್ಯಸ್ಯಾತಿಥಿತರನರ್ಚಿತಃ ॥26॥
ಮನೆಗೆ ಬಂದ ಅತಿಥಿಯನ್ನು ಸತ್ಕರಿಸದಿದ್ದವನು ಸ್ತ್ರೀಹತ್ಯೆಯನ್ನು ಮಾಡಿದವನಿಗೆ, ಗೋಹತ್ಯೆಯನ್ನು ಮಾಡಿದವನಿಗೆ, ಕೃತಘ್ನನಿಗೆ, ಬ್ರಹ್ಮಹತ್ಯೆಯನ್ನು ಮಾಡಿದವನಿಗೆ, ಗುರುತಲ್ಪಗಾಮಿಗೆ ಸಮಾನವಾದ ದೋಷವನ್ನು ಹೊಂದುತ್ತಾನೆ.
ಅಗ್ನಿಃ
ಪಾದಮುದ್ಯಮ್ಯ ಯೋ ಮರ್ತ್ಯಃ ಸ್ಪೃಶೇದ್ ಗಾಶ್ಚ ಸುದುರ್ಮತಿಃ |
ಬ್ರಾಹ್ಮಣಂ ವಾ ಮಹಾಭಾಗಂ ದೀಪ್ಯಮಾನಂ ತಥಾಽನಲಮ್ |
ತಸ್ಯ ದೋಷಾನ್ ಪ್ರವಕ್ಷ್ಯಾಮಿ ತಚ್ಛೃಣುಧ್ವಂ ಸಮಾಹಿತಾಃ ॥27॥
ಅಗ್ನಿ ಪಾದವನ್ನು ಎತ್ತಿ ದುರ್ಮತಿಯಾದ ಯಾವನು ಗೋವನ್ನಾಗಲೀ, ಮಹಾನುಭಾವನಾದ ಬ್ರಾಹ್ಮಣನನ್ನಾಗಲೀ ಅಥವಾ ಜ್ವಲಿಸುವ ಅಗ್ನಿಯನ್ನಾಗಲೀ ಸ್ಪರ್ಶ ಮಾಡುತ್ತಾನೆಯೋ ಅವನಿಗೆ ಉಂಟಾಗುವ ದೋಷಗಳನ್ನು ಹೇಳುವೆನು. ಸಮಾಧಾನದಿಂದ ಕೇಳಿ.
ದಿವಂ ಸ್ಪೃಶತ್ಯಶಬ್ದೋಽಸ್ಯ ತ್ರಸ್ಯಂತಿ ಪಿತರಶ್ಚ ವೈ |
ವೈಮನಸ್ಯಂ ಚ ದೇವಾನಾಂ ಕೃತಂ ಭವತಿ ಪುಷ್ಕಳಮ್ |
ಪಾವಕಶ್ಚ ಮಹಾತೇಜಾ ಹವ್ಯಂ ನ ಪ್ರತಿಗೃಹ್ಣತಿ ॥28॥
ಅವನ ಅಪಕೀರ್ತಿಯು ಸ್ವರ್ಗವನ್ನು ಮುಟ್ಟುತ್ತದೆ. ಅವನ ಪಿತೃಗಳು ಹೆದರುತ್ತಾರೆ. ದೇವತೆಗಳು ಪುಷ್ಕಳವಾದ ವೈಮನಸ್ಯವನ್ನು ಹೊಂದುತ್ತಾರೆ. ಮಹಾತೇಜಸ್ವಿಯಾದ ಅಗ್ನಿಯು ಹವಿಸ್ಸನ್ನು ಸ್ವೀಕರಿಸುವುದಿಲ್ಲ.
ಆಜನ್ಮನಾಂ ಶತಂ ಚೈವ ನರಕೇ ಪಚ್ಯತೇ ತು ಸಃ |
ನಿಷ್ಕೃತಿಂ ಚ ನ ತಸ್ಯಾಪಿ ಅನುಮನ್ಯಂತಿ ಕರ್ಹಿಚಿತ್ ॥29॥
ಅವನು ನೂರು ಜನ್ಮಗಳ ಕಾಲ ನರಕದಲ್ಲಿ ಬೇಯಿಸಲ್ಪಡುತ್ತಾನೆ. ಅವನಿಗೆ ಆ ಪಾಪದ ಪರಿಹಾರವನ್ನು ಯಾರೂ ಅನುಮೋದಿಸುವುದಿಲ್ಲ.
ತಸ್ಮಾದ್ ಗಾವೋ ನ ಪಾದೇನ ಸ್ಪ್ರಷ್ಟವ್ಯಾ ವೈ ಕದಾಚನ |
ಬ್ರಾಹ್ಮಣಶ್ಚ ಮಹಾತೇಜಾ ದೀಪ್ಯಮಾನಸ್ತಥಾಽನಲಃ |
ಶ್ರದ್ದಧಾನೇನ ಮರ್ತ್ಯೇನ ಆತ್ಮನೋ ಹಿತಮಿಚ್ಛತಾ ॥30॥
ಏತೇ ದೋಷಾ ಮಯಾ ಪ್ರೋಕ್ತಾಸ್ತ್ರಿಷು ಯಃ ಪಾದಮುತ್ಸೃಜೇತ್ ॥
ಆದ್ದರಿಂದ ಗೋವುಗಳನ್ನು, ಮಹಾತೇಜಸ್ವಿಯಾದ ಬ್ರಾಹ್ಮಣನನ್ನು, ಜ್ವಲಿಸುವ ಅಗ್ನಿಯನ್ನು ತನ್ನ ಹಿತವನ್ನು ಬಯಸುವ ಶ್ರದ್ಧೆಯುಳ್ಳ ಮನುಷ್ಯನು ಪಾದದಿಂದ ಒದೆಯಬಾರದು. ಈ ಮೂರು ವಸ್ತುಗಳನ್ನು ಪಾದದಿಂದ ಸ್ಪರ್ಶ ಮಾಡುವುದರಿಂದ ಉಂಟಾಗುವ ಈ ದೋಷಗಳನ್ನು ನಾನು ಹೇಳಿದ್ದೇನೆ.
ವಿಶ್ವಾಮಿತ್ರಃ

ಶ್ರೂಯತಾಂ ಪರಮಂ ಗುಹ್ಯಂ ರಹಸ್ಯಂ ಧರ್ಮಸಂಹಿತಮ್ |
ಪರಮಾನ್ನೇನ ಯೋ ದದ್ಯಾತ್ ಪಿತೃಣಾಮೌಪಹಾರಿಕಮ್ ॥32॥
ಗಜಚ್ಛಾಯಾಯಾಂ ಪೂರ್ವಸ್ಯಾಂ ಕುತಪೇ ದಕ್ಷಿಣಾಮುಖಃ |
ಯದಾ ಭಾದ್ರಪದೇ ಮಾಸಿ ಭವತೇ ಬಹುಲೇ ಮಘಾ ॥33॥
ಶ್ರೂಯತಾಂ ತಸ್ಯ ದಾನಸ್ಯ ಯಾದೃಶೋ ಗುಣವಿಸ್ತರಃ |
ಕೃತಂ ತೇನ ಮಹಚ್ಛ್ರಾದ್ಧಂ ವರ್ಷಾಣೀಹ ತ್ರಯೋದಶ ॥34॥
ವಿಶ್ವಾಮಿತ್ರ ಪರಮಗುಹ್ಯವೂ, ರಹಸ್ಯವೂ, ಧರ್ಮಸಂಹಿತವೂ ಆದ ಈ ಮಾತನ್ನು ಕೇಳಿ. ಭಾದ್ರಪದ ಮಾಸದ ಕೃಷ್ಣಪಕ್ಷದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು ಆನೆಯ ಶಿರಸ್ಸಿನ ಛಾಯೆಯು ಪೂರ್ವದಿಕ್ಕಿನಲ್ಲಿ ಬಿದ್ದಾಗ (ಸೂರ್ಯನು ಪಶ್ಚಿಮ ದಿಕ್ಕಿಗೆ ತಿರುಗಿದಾಗ) ಪಿತೃಕಾರ್ಯದಲ್ಲಿ ಪಿತೃಗಳನ್ನು ಉದ್ದೇಶಿಸಿ ಯಾವಾತನು ಪರಮಾನ್ನ ಸಹಿತವಾದ ಭೋಜನವನ್ನು ಕೊಡುತ್ತಾನೆಯೋ ಅಂತಹ ದಾನಕ್ಕೆ ಎಂತಹ ವಿಸ್ತಾರವಾದ ಗುಣವಿದೆ ಎಂದು ಕೇಳಿ. ಅವನು ಹದಿಮೂರು ವರ್ಷಗಳ ಕಾಲ ಸತತವಾಗಿ ದೊಡ್ಡ ಶ್ರಾದ್ಧವನ್ನು ಮಾಡಿದ ಫಲಕ್ಕೆ ಭಾಗಿಯಾಗುತ್ತಾನೆ.
ಬಹುಲೇ ಸಮಂಗೇ ಹ್ಯಕುತೋಭಯೇ ಚ
ಕ್ಷೇಮೇ ಚ ಸಖ್ಯೇವ ಹಿ ಭೂಯಸೀ ಚ |
ಯಥಾ ಪುರಾ ಬ್ರಹ್ಮಪುರೇ ಸವತ್ಸಾ
ಶತಕ್ರತೋರ್ವಜ್ರಧರಸ್ಯ ಯಜ್ಞೇ ॥35॥
ಭೂಯಶ್ಚ ಯಾ ವಿಷ್ಣುಪದೇ ಸ್ಥಿತಾ ಯಾ
ವಿಭಾವಸೋಶ್ಚಾಪಿ ಪಥೇ ಸ್ಥಿತಾ ಯಾಃ |
ದೇವಾಶ್ಚ ಸರ್ವೇ ಸಹ ನಾರದೇನ
ಪ್ರಕುರ್ವತೇ ಸರ್ವಸಹೇತಿ ನಾಮ ॥36॥
ಹಿಂದೆ ಶತಕ್ರತುವಾದ, ವಜ್ರಧರನಾದ ಇಂದ್ರನ ಯಜ್ಞದಲ್ಲಿ ಬ್ರಹ್ಮಲೋಕದಲ್ಲಿ ವತ್ಸಸಹಿತಳಾದ ಕಾಮಧೇನುವನ್ನು ಬಹುಲೇ (ವಿಸ್ತೃತಳೇ), ಸಮಂಗೇ (ಒಳ್ಳೆಯ ಅವಯವವನ್ನು ಹೊಂದಿದವಳೇ), ಅಕುತೋಭಯೇ (ಯಾವ ಭಯವೂ ಇಲ್ಲದವಳೇ), ಕ್ಷೇಮೇ (ಕ್ಷೇಮವನ್ನು ಉಂಟುಮಾಡುವವಳೇ), ಸಖಿ (ಸಖಿಯೇ) ಭೂಯಸೀ (ದೊಡ್ಡವಳೇ) ಎಂದು ಸ್ತೋತ್ರ ಮಾಡುತ್ತಿದ್ದರು. ವಿಷ್ಣುಪದದಲ್ಲಿ ಯಾವ ಗೋವುಗಳಿವೆಯೋ ಸೂರ್ಯಪಥದಲ್ಲಿ ಯಾವ ಗೋವುಗಳಿವೆಯೋ ಅವುಗಳಿಗೆ ನಾರದರೂ ಮತ್ತು ಎಲ್ಲಾ ದೇವತೆಗಳೂ `ಸರ್ವಸಹಾ' ಎಂದು ನಾಮಕರಣವನ್ನು ಮಾಡುತ್ತಾರೆ.
ಮಂತ್ರೇಣೈತೇನಾಭಿವಂದೇತ ಯೋ ವೈ
ವಿಮುಚ್ಯತೇ ಪಾಪಕೃತೇನ ಕರ್ಮಣಾ |
ಲೋಕಾನವಾಪ್ನೋತಿ ಪುರಂದರಸ್ಯ
ಗವಾಂ ಫಲಂ ಚಂದ್ರಮಸೋ ದ್ಯುತಿಂ ಚ ॥37॥
ಈ ಮಂತ್ರದಿಂದ ಯಾವನು ಗೋವುಗಳಿಗೆ ನಮಸ್ಕಾರವನ್ನು ಮಾಡುತ್ತಾನೆಯೋ ಅವನು ತನ್ನ ದುಷ್ಕರ್ಮದಿಂದ ಉಂಟಾದ ಪಾಪಗಳಿಂದ ಮುಕ್ತನಾಗುತ್ತಾನೆ. ಇಂದ್ರನ ಲೋಕವನ್ನೂ, ಗೋಲೋಕವನ್ನೂ, ಚಂದ್ರನ ಕಾಂತಿಯನ್ನೂ ಫಲವಾಗಿ ಪಡೆಯುತ್ತಾನೆ.
ಏವಂ ಹಿ ಮಂತ್ರಂ ತ್ರಿದಶಾಭಿಜುಷ್ಟಂ
ಪಠೇತ ಯಃ ಪರ್ವಸು ಗೋಷ್ಠಮಧ್ಯೇ |
ನ ತಸ್ಯ ಪಾಪಂ ನ ಭಯಂ ನ ಶೋಕಃ
ಸಹಸ್ರನೇತ್ರಸ್ಯ ಚ ಯಾತಿ ಲೋಕಮ್ ॥38॥
ದೇವತೆಗಳಿಗೆ ಪ್ರಿಯವಾದ ಈ ಮಂತ್ರವನ್ನು ಪರ್ವಕಾಲದಲ್ಲಿ ಗೋಶಾಲೆಯ ಮಧ್ಯದಲ್ಲಿ ಯಾವನು ಪಠಿಸುತ್ತಾನೆಯೋ ಅವನಿಗೆ ಪಾಪವಾಗಲೀ, ಭಯವಾಗಲೀ, ಶೋಕವಾಗಲೀ ಉಂಟಾಗುವುದಿಲ್ಲ. ಅವನು ಸಹಸ್ರನೇತ್ರನಾದ ಇಂದ್ರನ ಲೋಕಕ್ಕೆ ಹೋಗುತ್ತಾನೆ.
ಭೀಷ್ಮಃ
ಅಥ ಸಪ್ತ ಮಹಾಭಾಗ ಋಷಯೋ ಲೋಕವಿಶ್ರುತಾಃ |
ವಸಿಷ್ಠಪ್ರಮುಖಾಃ ಸರ್ವೇ ಬ್ರಹ್ಮಾಣಂ ಪದ್ಮಸಂಭವಮ್ |
ಪ್ರದಕ್ಷಿಣಮಭಿಕ್ರಮ್ಯ ಸರ್ವೇ ಪ್ರಾಂಜಲಯಃ ಸ್ಥಿತಾಃ ॥39॥
ಭೀಷ್ಮ ಅನಂತರ ಎಲೈ ಮಹಾನುಭಾವನೇ, ಲೋಕವಿಶ್ರುತರಾದ ವಸಿಷ್ಠರೇ ಮೊದಲಾದ ಸಪ್ತರ್ಷಿಗಳೆಲ್ಲರೂ ಪದ್ಮಸಂಭವರಾದ ಬ್ರಹ್ಮದೇವರಿಗೆ ಪ್ರದಕ್ಷಿಣೆಯನ್ನು ಮಾಡಿ ಕೈಗಳನ್ನು ಮುಗಿದು ಎದುರಿಗೆ ನಿಂತರು.
ಉವಾಚ ವಚನಂ ತೇಷಾಂ ವಸಿಷ್ಠೋ ಬ್ರಹ್ಮವಿತ್ತಮಃ |
ಸರ್ವಪ್ರಾಣಿಹಿತಂ ಪ್ರಶ್ನಂ ಬ್ರಹ್ಮಕ್ಷತ್ರೇ ವಿಶೇಷತಃ ॥40॥
ಅವರಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ವಸಿಷ್ಠರು ಸರ್ವಪ್ರಾಣಿಹಿತವೂ, ಬ್ರಾಹ್ಮಣ ಕ್ಷತ್ರಿಯರಿಗೆ ವಿಶೇಷವಾಗಿ ಹಿತವೂ ಆದ ಒಂದು ಪ್ರಶ್ನೆಯನ್ನು ಮಾಡಿದರು.
ದ್ರವ್ಯಹೀನಾಃ ಕಥಂ ಮರ್ತ್ಯಾ ದರಿದ್ರಾಃ ಸಾಧುವೃತ್ತಯಃ |
ಪ್ರಾಪ್ನುವಂತೀಹ ಯಜ್ಞಸ್ಯ ಫಲಂ ಕೇನ ಚ ಕರ್ಮಣಾ ॥41॥
ದ್ರವ್ಯಹೀನರೂ, ದರಿದ್ರರೂ, ಒಳ್ಳೆಯ ನಡತೆಯುಳ್ಳವರೂ ಆದ ಮನುಷ್ಯರು ಯಾವ ಕರ್ಮದಿಂದ ಈ ಲೋಕದಲ್ಲಿ ಯಜ್ಞದ ಫಲವನ್ನು ಪಡೆಯುತ್ತಾರೆ?

ಏತಚ್ಛ್ರುತ್ವಾ ವಚಸ್ತೇಷಾಂ ಬ್ರಹ್ಮಾ ವಚನಮಬ್ರವೀತ್ ॥42॥
ಅಹೋ ಪ್ರಶ್ನೋ ಮಹಾಭಾಗ ಗೂಢಾರ್ಥಃ ಪರಮಃ ಶುಭಃ |
ಸೂಕ್ಷ್ಮಃ ಶ್ರೇಯಾಂಶ್ಚ ಮರ್ತ್ಯಾನಾಂ ಭವದ್ಭಿಃ ಸಮುದಾಹೃತಃ ॥43॥
ಈ ಮಾತನ್ನು ಕೇಳಿದ ಬ್ರಹ್ಮದೇವರು ಉತ್ತರವನ್ನು ನೀಡಿದರು- ಎಲೈ ಮಹಾನುಭಾವನೇ, ಗೂಢಾರ್ಥವಾದ, ಪರಮಮಂಗಳಕರವಾದ ಪ್ರಶ್ನೆಯನ್ನು ಕೇಳಿದ್ದೀಯೆ. ನೀನು ಕೇಳಿದ ಈ ಪ್ರಶ್ನೆಯು ಬಹಳ ಸೂಕ್ಷ್ಮವಾದುದು ಮತ್ತು ಮನುಷ್ಯರಿಗೆ ಶ್ರೇಯಸ್ಕರವಾದುದು.
ಶ್ರೂಯತಾಂ ಸರ್ವಮಾಖ್ಯಾಸ್ಯೇ ನಿಖಿಲೇನ ತಪೋಧನಾಃ |
ಯಥಾ ಯಜ್ಞಫಲಂ ಮರ್ತ್ಯೋ ಲಭತೇ ನಾತ್ರ ಸಂಶಯಃ ॥44॥
ಎಲೈ ತಪೋಧನರೇ, ಹೇಗೆ ಮನುಷ್ಯನು ಯಜ್ಞಫಲವನ್ನು ಪಡೆಯುತ್ತಾನೆ ಎಂಬುದೆಲ್ಲವನ್ನೂ ಸಮಗ್ರವಾಗಿ ಹೇಳುತ್ತೇನೆ. ಇದರಲ್ಲಿ ಸಂಶಯವಿಲ್ಲ. ಅದನ್ನು ಕೇಳಿ.
ಪೌಷಮಾಸಸ್ಯ ಶುಕ್ಲೇ ವೈ ಯದಾ ಯುಜ್ಯೇತ ರೋಹಿಣೀ |
ತೇನ ನಕ್ಷತ್ರಯೋಗೇನ ಆಕಾಶಶಯನೋ ಭವೇತ್ ॥45॥
ಪುಷ್ಯಮಾಸದ ಶುಕ್ಲಪಕ್ಷದಲ್ಲಿ ರೋಹಿಣಿ ನಕ್ಷತ್ರವಿರುವಾಗ ಮನುಷ್ಯನು ಆಕಾಶ ಶಯನನಾಗಬೇಕು.
ಏಕವಸ್ತ್ರಃ ಶುಚಿಃ ಸ್ನಾತಃ ಶ್ರದ್ದಧಾನಃ ಸಮಾಹಿತಃ |
ಸೋಮಸ್ಯ ರಶ್ಮಯಃ ಪೀತ್ವಾ ಮಹಾಯಜ್ಞಫಲಂ ಲಭೇತ್ ॥46॥
ಎಂದರೆ ಸ್ನಾನವನ್ನು ಮಾಡಿ, ಶುಚಿಯಾಗಿ, ಏಕವಸ್ತ್ರವನ್ನುಟ್ಟು, ಶ್ರದ್ಧೆ ಸಮಾಧಾನದಿಂದ ಕೂಡಿ ಚಂದ್ರನ ಕಿರಣಗಳನ್ನು ಪಾನ ಮಾಡುವವನು ಮಹಾಯಜ್ಞ ಫಲವನ್ನು ಹೊಂದುತ್ತಾನೆ.
ಏತದ್ ವಃ ಪರಮಂ ಗುಹ್ಯಂ ಕಥಿತಂ ದ್ವಿಜಸತ್ತಮಾಃ |
ಯನ್ಮಾಂ ಭವಂತಃ ಪೃಚ್ಛಂತಿ ಸೂಕ್ಷ್ಮತತ್ತ್ವಾರ್ಥದರ್ಶಿನಃ ॥47॥
ಎಲೈ ದ್ವಿಜಶ್ರೇಷ್ಠರೇ, ಸೂಕ್ಷ್ಮಾರ್ಥದರ್ಶಿಗಳಾದ ನೀವು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾನು ಅತ್ಯಂತ ರಹಸ್ಯವಾದ ಈ ವಿಷಯವನ್ನು ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದೇವೈರ್ಧರ್ಮೋಪದೇಶೋ ನಾಮ ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ
ಅಗ್ನ್ಯಾದಿ ದೇವತೆಗಳಿಂದ ಧರ್ಮೋಪದೇಶ
ವಿಭಾವಸುಃ
ಸಲಿಲಸ್ಯಾಂಜಲಿಂ ಪೂರ್ಣಮಕ್ಷತಾಶ್ಚ ಧೃತೋತ್ತರಾಃ |
ಸೋಮಸ್ಯೋತ್ತಿಷ್ಠಮಾನಸ್ಯ ತಜ್ಜಲಂ ಚಾಕ್ಷತಾಂಶ್ಚ ತಾನ್ ॥1॥
ಸ್ಥಿತೋ ಹ್ಯಭಿಮುಖೋ ಮರ್ತ್ಯಃ ಪೌರ್ಣಮಾಸ್ಯಾಂ ಬಲಿಂ ಹರೇತ್ |
ಅಗ್ನಿಕಾರ್ಯಂ ಕೃತಂ ತೇನ ಹುತಾಶ್ಚಾಸ್ಯಾಗ್ನಯಸ್ತ್ರಯಃ ॥2॥
ವಿಭಾವಸು ಪೌರ್ಣಮಾಸಿಯ ದಿವಸ ಪೂರ್ಣವಾದ ಜಲಾಂಜಲಿಯನ್ನು ಅಕ್ಷತೆಗಳ ಜೊತೆಯಲ್ಲಿ ತೆಗೆದುಕೊಂಡು ಉತ್ತರಮುಖವಾಗಿ ಎದ್ದು, ಚಂದ್ರೋದಯವಾಗುವ ವೇಳೆಯಲ್ಲಿ ಅಕ್ಷತ ಸಹಿತವಾದ ಜಲವನ್ನು ಚಂದ್ರನಿಗೆ ನೀಡಿ ಅವನನ್ನು ಪೂಜಿಸುವವನು ಅಗ್ನಿಕಾರ್ಯವನ್ನು ಮಾಡಿದವನಾಗುತ್ತಾನೆ. ಅವನಿಂದ ಮೂರು ಅಗ್ನಿಗಳು ಹೋಮಿಸಲ್ಪಡುತ್ತವೆ.
ವನಸ್ಪತಿಂ ಚ ಯೋ ಹನ್ಯಾದಮಾವಾಸ್ಯಾಮಬುದ್ಧಿಮಾನ್ |
ಅಪಿ ಹ್ಯೇಕೇನ ಪತ್ರೇಣ ಲಿಪ್ಯತೇ ಬ್ರಹ್ಮಹತ್ಯಯಾ ॥3॥
ಅಮಾವಾಸ್ಯೆಯ ದಿವಸ ಬುದ್ಧಿ ಇಲ್ಲದ ಯಾವನು ಯಾವುದೇ ಗಿಡದ ಒಂದು ಎಲೆಯನ್ನು ಕಿತ್ತರೂ ಅವನಿಗೆ ಬ್ರಹ್ಮಹತ್ಯಾ ದೋಷದ ಲೇಪವುಂಟಾಗುತ್ತದೆ.
ದಂತಕಾಷ್ಠಂ ತು ಯಃ ಖಾದೇದಮಾವಾಸ್ಯಾಮಬುದ್ಧಿಮಾನ್ |
ಹಿಂಸಿತಶ್ಚಂದ್ರಮಾಸ್ತೇನ ಪಿತರಶ್ಚೋದ್ವಿಜಂತಿ ಚ ॥4॥
ಹವ್ಯಂ ನ ತಸ್ಯ ದೇವಾಶ್ಚ ಪ್ರತಿಗೃಹ್ಣಂತಿ ಪರ್ವಸು |
ಕುಪ್ಯಂತೇ ಪಿತರಶ್ಚಾಸ್ಯ ಕುಲೇ ವಂಶೋಽಸ್ಯ ಹೀಯತೇ ॥5॥
ಅಮಾವಾಸ್ಯೆಯ ದಿವಸ ಬುದ್ಧಿ ಇಲ್ಲದ ಯಾವನು ಬೇವಿನ ಕಡ್ಡಿ ಮೊದಲಾದ ದಂತಕಾಷ್ಠವನ್ನು ಉಪಯೋಗಿಸುತ್ತಾನೆಯೋ ಅವನು ಚಂದ್ರನನ್ನು ಹಿಂಸಿಸುತ್ತಾನೆ. ಅವನ ಪಿತೃಗಳು ಭೀತರಾಗುತ್ತಾರೆ. ಪರ್ವಕಾಲದಲ್ಲಿ ಮಾಡಿದ ಪೂಜೆಯಲ್ಲಿ ದೇವತೆಗಳು ಅವನ ಹವಿಸ್ಸನ್ನು ಸ್ವೀಕರಿಸುವುದಿಲ್ಲ. ಅವನ ಪಿತೃಗಳು ಕುಪಿತರಾಗುತ್ತಾರೆ ಮತ್ತು ವಂಶವು ನಾಶವನ್ನು ಹೊಂದುತ್ತದೆ.
ಶ್ರೀಃ
ಪ್ರಕೀರ್ಣಂ ಭಾಜನಂ ಯತ್ರ ಪಾನಭಾಂಡಮಥಾಸನಮ್ |
ಯೋಷಿತಶ್ಚೈವ ಹನ್ಯಂತೇ ಕಶ್ಮಲೋಪಹತೇ ಗೃಹೇ ॥6॥

ದೇವತಾಃ ಪಿತರಶ್ಚೈವ ಉತ್ಸವೇ ಪರ್ವಣೀಷು ವಾ |
ನಿರಾಶಾಃ ಪ್ರತಿಗಚ್ಛಂತಿ ಕಶ್ಮಲೋಪಹತಾದ್ ಗೃಹಾತ್ ॥7॥
ಲಕ್ಷ್ಮೀ ಯಾವ ಮನೆಯಲ್ಲಿ ಅಡಿಗೆ ಪಾತ್ರೆಗಳು, ಪಾನಪಾತ್ರೆಗಳು, ಆಸನಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುತ್ತವೆಯೋ, ಯಾವ ಮನೆಯು ಕಸದಿಂದ ಕೂಡಿರುತ್ತದೆಯೋ ಯಾವ ಮನೆಯಲ್ಲಿ ಸ್ತ್ರೀಯರು ಹೊಡೆಯಲ್ಪಡುತ್ತಾರೆಯೋ ಅಲ್ಲಿ ಉತ್ಸವ ಕಾಲದಲ್ಲಿಯೂ, ಪರ್ವಕಾಲದಲ್ಲಿಯೂ, ದೇವತೆಗಳು ಮತ್ತು ಪಿತೃಗಳು ಕಸದಿಂದ ತುಂಬಿದ ಆ ಮನೆಯಿಂದ ನಿರಾಶರಾಗಿ ಹೊರಗೆ ಹೋಗುತ್ತಾರೆ.
ಅಂಗಿರಾಃ
ಯಸ್ತು ಸಂವತ್ಸರಂ ಪೂರ್ಣಂ ದದ್ಯಾದ್ ದೀಪಂ ಕರಂಜಕೇ |
ಸುವರ್ಚಲಾಮೂಲಹಸ್ತಃ ಪ್ರಜಾ ತಸ್ಯ ವಿವರ್ಧತೇ ॥8॥
ಅಂಗಿರಸ ಯಾವನು ಒಂದು ವರ್ಷದವರೆಗೆ ಒಳ್ಳೆಯ ಕಾಂತಿಗೆ ಕಾರಣವಾದ ಹಸ್ತಾ ನಕ್ಷತ್ರದ ಯೋಗದಲ್ಲಿ ಹೊಂಗೆಯ ಎಣ್ಣೆಯ ದೀಪವನ್ನು (ಹೊಂಗೆಯ ಮರದ ಕೆಳಗೆ ದೀಪವನ್ನು ದಾನ ಮಾಡುತ್ತಾನೆಯೋ ಅವನ ಸಂತತಿಯು ಅಭಿವೃದ್ಧಿಯನ್ನು ಹೊಂದುತ್ತದೆ.

ಗಾರ್ಗ್ಯಃ
ಆತಿಥ್ಯಂ ಸತತಂ ಕುರ್ಯಾದ್ ದೀಪಂ ದದ್ಯಾತ್ ಪ್ರತಿಶ್ರಯೇ |
ವರ್ಜಯಾನೋ ದಿವಾಸ್ವಾಪಂ ನ ಚ ಮಾಂಸಾನಿ ಭಕ್ಷಯೇತ್ ॥9॥
ಗಾರ್ಗ್ಯ ಸತತವಾಗಿ ಅತಿಥಿಯನ್ನು ಪೂಜಿಸಬೇಕು. ಮನೆಯಲ್ಲಿ ದೀಪವನ್ನು ಇಡಬೇಕು (ಆಶ್ರಿತನಾದವನಿಗೆ ದೀಪದಾನವನ್ನು ಮಾಡಬೇಕು). ದಿವಾಸ್ವಾಪವನ್ನು (ಹಗಲುನಿದ್ರೆ) ಮತ್ತು ಮಾಂಸಭಕ್ಷಣವನ್ನು ವರ್ಜಿಸಬೇಕು.
ಗೋಬ್ರಾಹ್ಮಣಂ ನ ಹಿಂಸ್ಯಾಚ್ಚ ಪುಷ್ಕರಾಣಿ ಚ ಕೀರ್ತಯೇತ್ |
ಏಷ ಶ್ರೇಷ್ಠತಮೋ ಧರ್ಮಃ ಸರಹಸ್ಯೋ ಮಹಾಫಲಃ ॥10॥
ಗೋ-ಬ್ರಾಹ್ಮಣರಿಗೆ ಹಿಂಸೆಯನ್ನು ಮಾಡಬಾರದು. ಪುಷ್ಕರಗಳನ್ನು (ಮೂರು ಪುಷ್ಕರಗಳಿವೆ) ಬಾಯಿಯಿಂದ ಕೀರ್ತನೆ ಮಾಡಬೇಕು. ಇದು ಅತ್ಯಂತ ಶ್ರೇಷ್ಠವಾದ, ರಹಸ್ಯವಾದ, ಮಹಾಫಲವನ್ನು ಕೊಡುವ ಧರ್ಮ.
ಅಪಿ ಕ್ರತುಶತೈರಿಷ್ಟ್ವಾ ಕ್ಷಯಂ ಗಚ್ಛತಿ ತದ್ಧವಿಃ |
ನ ತು ಕ್ಷೀಯಂತಿ ತೇ ಧರ್ಮಾಃ ಶ್ರದ್ಧಧಾನೈಃ ಪ್ರಯೋಜಿತಾಃ ॥11॥
ಶ್ರದ್ಧೆ ಇಲ್ಲದೆ ನೂರು ಯಾಗಗಳನ್ನು ಮಾಡಿದರೂ ಆ ಹವಿಸ್ಸು ನಾಶವನ್ನು ಹೊಂದುತ್ತದೆ. ಆದರೆ ಶ್ರದ್ಧೆಯುಳ್ಳವರು ಮಾಡಿದ ಧರ್ಮವು ನಾಶವನ್ನು ಹೊಂದುವುದಿಲ್ಲ.
ಇದಂ ಚ ಪರಮಂ ಗುಹ್ಯಂ ಸರಹಸ್ಯಂ ನಿಬೋಧತ |
ಶ್ರಾದ್ಧಕಲ್ಪೇ ಚ ದೈವೇ ಚ ತೈರ್ಥಿಕೇ ಪರ್ವಣೀಷು ಚ ॥12॥
ಶ್ರಾದ್ಧವಿಧಿಯಲ್ಲಿ, ದೈವಪೂಜೆಯಲ್ಲಿ, ತೀರ್ಥವಿಧಿಯಲ್ಲಿ ಮತ್ತು ಪರ್ವವಿಧಿಗಳಲ್ಲಿ ಇರುವ ಈ ಅತ್ಯಂತ ಗುಹ್ಯವೂ, ರಹಸ್ಯವೂ ಆದ ವಿಷಯವನ್ನು ತಿಳಿಯಿರಿ.
ರಜಸ್ವಲಾ ಚ ಯಾ ನಾರೀ ಶ್ವಿತ್ರಿಕಾऽಪುತ್ರಿಕಾ ಚ ಯಾ |
ಏತಾಭಿಶ್ಚಕ್ಷುಷಾ ದೃಷ್ಟಂ ಹವಿರ್ನಾಶ್ನಂತಿ ದೇವತಾಃ |
ಪಿತರಶ್ಚ ನ ತುಷ್ಯಂತಿ ವರ್ಷಾಣ್ಯಸ್ಯ ತ್ರಯೋದಶ ॥13॥
ರಜಸ್ವಲೆಯಾದ ಅಥವಾ ತೊನ್ನು ಹಿಡಿದ ಅಥವಾ ಮಕ್ಕಳಿಲ್ಲದ ಸ್ತ್ರೀಯರಿಂದ ನೋಡಲ್ಪಟ್ಟ ಹವಿಸ್ಸನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಪಿತೃಗಳು ಹದಿಮೂರು ವರ್ಷಗಳ ಕಾಲ ಅವನಿಗೆ ಪ್ರಸನ್ನರಾಗುವುದಿಲ್ಲ.
ಶುಕ್ಲವಾಸಾಃ ಶುಚಿರ್ಭೂತ್ವಾ ಬ್ರಾಹ್ಮಣಾನ್ ಸ್ವಸ್ತಿ ವಾಚಯೇತ್ |
ಕೀರ್ತಯೇದ್ ಭಾರತಂ ಚೈವ ತಥಾ ಸ್ಯಾದಕ್ಷಯಂ ಹವಿಃ ॥14॥
ಶುಚಿರ್ಭೂತನಾಗಿ, ಶುಕ್ಲ (ಬಿಳಿಬಟ್ಟೆ) ವಸ್ತ್ರವನ್ನು ಧರಿಸಿ, ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿ, ಭಾರತ ಪ್ರವಚನವನ್ನು ಮಾಡಬೇಕು (ಮಾಡಿಸಬೇಕು). ಆಗ ಹವಿಸ್ಸು ಅಕ್ಷಯವಾಗುತ್ತದೆ.
ಧೌಮ್ಯಃ
ಭಿನ್ನಭಾಂಡಂ ಚ ಖಟ್ವಾಂ ಚ ಕುಕ್ಕುಟಂ ಶುನಕಂ ತಥಾ |
ಅಪ್ರಶಸ್ತಾನಿ ಸರ್ವಾಣಿ ಯಶ್ಚ ವೃಕ್ಷೋ ಗೃಹೇರುಹಃ ॥15॥
ಧೌಮ್ಯ ಒಡೆದ ಪಾತ್ರೆಗಳು, ಮಂಚ, ಕೋಳಿ, ನಾಯಿ, ಮನೆಯಲ್ಲಿ ಬೆಳೆದ ಮರ- ಇವೆಲ್ಲವೂ ಅಪ್ರಶಸ್ತವಾದವುಗಳು.
ಭಿನ್ನಭಾಂಡೇ ಕಲಿಂ ಪ್ರಾಹುಃ ಖಟ್ವಾಯಾಂ ತು ಧನಕ್ಷಯಃ |
ಕುಕ್ಕುಟೇ ಶುನಕೇ ಚೈವ ಹವಿರ್ನಾಶ್ನಂತಿ ದೇವತಾಃ |
ವೃಕ್ಷಮೂಲೇ ಧ್ರುವಂ ಸತ್ವಂ ತಸ್ಮಾದ್ ವೃಕ್ಷಂ ನ ರೋಪಯೇತ್ ॥16॥
ಒಡೆದ ಪಾತ್ರೆಗಳಿದ್ದರೆ ಅವುಗಳಲ್ಲಿ ಕಲಿ ಇರುತ್ತಾನೆ (ಅದರಿಂದ ಜಗಳವಾಗುತ್ತದೆ). ಮಂಚದಿಂದ ಧನಕ್ಷಯವಾಗುತ್ತದೆ. ನಾಯಿ ಮತ್ತು ಕೋಳಿಗಳಿದ್ದರೆ ದೇವತೆಗಳು ಹವಿಸ್ಸನ್ನು ಸ್ವೀಕರಿಸುವುದಿಲ್ಲ. ವೃಕ್ಷಮೂಲಗಳಲ್ಲಿ ಪಿಶಾಚಾದಿಗಳು ಇರುತ್ತವೆ. ಆದ್ದರಿಂದ ಮನೆಯೊಳಗೆ ವೃಕ್ಷಗಳನ್ನು ನೆಡಬಾರದು (ಲಕ್ಷ್ಮಾಲಂಕಾರ).
ಜಮದಗ್ನಿಃ
ಯೋ ಯಜೇದಶ್ವಮೇಧೇನ ವಾಜಪೇಯಶತೇನ ಹ |
ಅವಾಕ್ಶಿರಾ ವಾ ಲಂಬೇತ ಸತ್ರಂ ವಾ ಸ್ಫೀತಮಾಹರೇತ್ ॥17॥

ನ ಯಸ್ಯ ಹೃದಯಂ ಶುದ್ಧಂ ನರಕಂ ಸ ಧ್ರುವಂ ವ್ರಜೇತ್ |
ತುಲ್ಯಂ ಯಜ್ಞಶ್ಚ ಸತ್ಯಂ ಚ ಹೃದಯಸ್ಯ ಚ ಶುದ್ಧತಾ ||18||
ಜಮದಗ್ನಿ ಮನಸ್ಸು ಶುದ್ಧವಾಗಿಲ್ಲದಿದ್ದರೆ ಅಶ್ವಮೇಧಯಾಗವನ್ನು ಮಾಡಿದರೂ, ನೂರು ವಾಜಪೇಯ ಯಾಗಗಳನ್ನು ಮಾಡಿದರೂ, ತಲೆಕೆಳಗಾಗಿ ನಿಂತು ತಪಸ್ಸನ್ನು ಮಾಡಿದರೂ, ಪರಿಶುದ್ಧವಾದ ಸತ್ರಯಾಗವನ್ನು ಮಾಡಿದರೂ ಅವನು ನಿಶ್ಚಯವಾಗಿ ನರಕಕ್ಕೇ ಹೋಗುತ್ತಾನೆ. ಯಜ್ಞ, ಸತ್ಯ ಮತ್ತು ಮನಶ್ಶುದ್ಧಿ- ಇವುಗಳು ಸಮಾನವಾದವುಗಳು.
ಶುದ್ಧೇನ ಮನಸಾ ದತ್ತಸ್ತ್ವ ಸಕ್ತುಪ್ರಸ್ಥಂ ದ್ವಿಜಾತಯೇ |
ಬ್ರಹ್ಮಲೋಕಮನುಪ್ರಾಪ್ತಃ ಪರ್ಯಾಪ್ತಂ ತನ್ನಿದರ್ಶನಮ್ ||19||
ಶುದ್ಧವಾದ ಮನಸ್ಸಿನಿಂದ ಬ್ರಾಹ್ಮಣನಿಗೆ ಒಂದು ಹಿಡಿ ಹಿಟ್ಟನ್ನು ಕೊಟ್ಟು ಬ್ರಹ್ಮಲೋಕಕ್ಕೆ ಹೋದ ಕಥೆಯನ್ನು ಕೇಳಿದ್ದೇವೆ. ಅದೊಂದು ದೃಷ್ಟಾಂತವು ಸಾಕು.
ವಾಯುಃ
ಕಿಂಚಿದ್ಧರ್ಮಂ ಪ್ರವಕ್ಷ್ಯಾಮಿ ಮಾನುಷಾಣಾಂ ಸುಖಾವಹಮ್ |
ಸರಹಸ್ಯಾಶ್ಚ ಯೇ ದೋಷಾಸ್ತಾನ್ ಶೃಣುಧ್ವಂ ಸಮಾಹಿತಾಃ ||20||
ವಾಯು ಮನುಷ್ಯರಿಗೆ ಸುಖವನ್ನು ಕೊಡುವ ಒಂದು ಸಣ್ಣಧರ್ಮವನ್ನು ಮತ್ತು ರಹಸ್ಯಸಹಿತವಾದ ದೋಷಗಳನ್ನು ಹೇಳುತ್ತೇನೆ. ಸಮಾಧಾನದಿಂದ ಅವುಗಳನ್ನು ಕೇಳಿ.
ಅಗ್ನಿಕಾರ್ಯಂ ಚ ಕರ್ತವ್ಯಂ ಪರಮಾನ್ನೇನ ಭೋಜನಮ್ |
ದೀಪಕಶ್ಚಾಪಿ ಕರ್ತವ್ಯಃ ಪಿತೄಣಾಂ ಸತಿಲೋದಕಃ ||21||
ಶ್ರಾದ್ಧದಲ್ಲಿ ಅಗ್ನಿಕಾರ್ಯವನ್ನು (ವೈಶ್ವದೇವವನ್ನು) ಮಾಡಬೇಕು. ಬ್ರಾಹ್ಮಣರಿಗೆ ಪರಮಾನ್ನ ಸಹಿತವಾಗಿ ಭೋಜನವನ್ನು ನೀಡಬೇಕು. ದೀಪವನ್ನೂ ದಾನ ಮಾಡಬೇಕು. ಪಿತೃಗಳಿಗೆ ತಿಲತರ್ಪಣವನ್ನು ಕೊಡಬೇಕು.
ಏತೇನ ವಿಧಿನಾ ಮರ್ತ್ಯಃ ಶ್ರದ್ಧಧಾನಃ ಸಮಾಹಿತಃ |
ಚತುರೋ ವಾರ್ಷಿಕಾನ್ ಮಾಸಾನ್ ಯೋ ದದಾತಿ ತಿಲೋದಕಮ್ ||
ಭೋಜನಂ ಚ ಯಥಾಶಕ್ತ್ಯಾ ಬ್ರಾಹ್ಮಣೇ ವೇದಪಾರಗೇ |
ಪಶುಬಂಧಶತಸ್ಯೇಹ ಫಲಂ ಪ್ರಾಪ್ನೋತಿ ಪುಷ್ಕಳಮ್ ||23||
ಈ ವಿಧಿಯಿಂದ ಯಾವನು ಶ್ರದ್ಧೆ, ಸಮಾಧಾನದಿಂದ ಕೂಡಿದವನಾಗಿ ಮಳೆಗಾಲದಲ್ಲಿ ನಾಲ್ಕು ತಿಂಗಳು ಪಿತೃಗಳಿಗೆ ತರ್ಪಣವನ್ನು ಕೊಟ್ಟು, ವೇದ ಪಾರಂಗತರಾದ ಬ್ರಾಹ್ಮಣರಿಗೆ ಯಥಾಶಕ್ತಿ ಭೋಜನವನ್ನು ಮಾಡಿಸುತ್ತಾನೆಯೋ ಅವನು ನೂರು ಪಶುಯಾಗಗಳನ್ನು ಮಾಡಿದ ಪುಷ್ಕಳವಾದ ಫಲವನ್ನು ಪಡೆಯುತ್ತಾನೆ.
ಇದಂ ಚೈವಾಪರಂ ಗುಹ್ಯಮಪ್ರಶಸ್ತಂ ನಿಬೋಧತ |
ಅಗ್ನೇಸ್ತು ವೃಷಲೋ ನೇತಾ ಹವಿರ್ಮೂಢಾಶ್ಚ ಯೋಷಿತಃ ||24||
ಮನ್ಯತೇ ಧರ್ಮ ಏವೇತಿ ಸ ಚಾಧರ್ಮೇಣ ಲಿಪ್ಯತೇ |
ಅಗ್ನಯಸ್ತಸ್ಯ ಕುಪ್ಯಂತಿ ಶೂದ್ರಯೋನಿಂ ಸ ಗಚ್ಛತಿ ||25||
ಇನ್ನೊಂದು ರಹಸ್ಯವಾದ, ಅಶುಭವಾದ ವಿಷಯವನ್ನು ತಿಳಿಯಿರಿ. ಶೂದ್ರನು ಅಗ್ನಿಯನ್ನು ತೆಗೆದುಕೊಂಡು ಬಂದರೆ, ಸ್ತ್ರೀಯರು ಹವಿಸ್ಸನ್ನು ತೆಗೆದುಕೊಂಡು ಬಂದರೆ ಕೆಲವರು ಅದನ್ನು ಧರ್ಮವೆಂದೇ ತಿಳಿಯುತ್ತಾರೆ. ಆದರೆ ಅದು ಅಧರ್ಮ. ಯಜಮಾನನು ಅಧರ್ಮಲೇಪವನ್ನು ಹೊಂದುತ್ತಾನೆ. ಅವನಿಗೆ ಅಗ್ನಿಗಳು ಕೋಪಗೊಳ್ಳುತ್ತವೆ ಮತ್ತು ಅವನು ಮುಂದೆ ಶೂದ್ರಯೋನಿಗೆ ಹೋಗುತ್ತಾನೆ.
ಪಿತರಶ್ಚ ನ ತುಷ್ಯಂತಿ ಸಹದೇವೈರ್ವಿಶೇಷತಃ |
ಪ್ರಾಯಶ್ಚಿತ್ತಂ ತು ಯತ್ ತತ್ರ ಬ್ರುವತಸ್ತನ್ನಿಬೋಧ ಮೇ |
ಯತ್ಕೃತ್ವಾ ತು ನರಃ ಸಮ್ಯಕ್ಸುಖೀ ಭವತಿ ವಿಜ್ವರಃ ||26||
ವಿಶೇಷವಾಗಿ ಅವನ ಪಿತೃಗಳು ಮತ್ತು ದೇವತೆಗಳು ಸಂತೋಷಗೊಳ್ಳುವುದಿಲ್ಲ. ಯಾವ ಪ್ರಾಯಶ್ಚಿತ್ತವನ್ನು ಮಾಡಿ ಅಂತಹ ಮನುಷ್ಯನು ನಿರಾತಂಕವಾಗಿ ಸುಖವಾಗಿ ಇರುತ್ತಾನೆಯೋ ಅಂತಹ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ, ಅದನ್ನು ಕೇಳಿ.
ಗವಾಂ ಮೂತ್ರಪುರೀಷೇಣ ಪಯಸಾ ಚ ಘೃತೇನ ಚ |
ಅಗ್ನಿಕಾರ್ಯಂ ತ್ರ್ಯಹಂ ಕುರ್ಯಾನ್ನಿರಾಹಾರಃ ಸಮಾಹಿತಃ ||27||
ಉಪವಾಸ ಮತ್ತು ಸಮಾಧಾನದಿಂದಿದ್ದು ಮೂರು ದಿವಸಗಳ ಕಾಲ ಗೋಮೂತ್ರ, ಗೋಮಯ, ಗೋಕ್ಷೀರ ಮತ್ತು ಗೋಘೃತಗಳಿಂದ ಅಗ್ನಿಕಾರ್ಯವನ್ನು ಮಾಡಬೇಕು.
ತತಃ ಸಂವತ್ಸರೇ ಪೂರ್ಣೇ ಪ್ರತಿಗೃಹ್ಣಂತಿ ದೇವತಾಃ |
ಹೃಷ್ಯಂತಿ ಪಿತರಶ್ಚಾಸ್ಯ ಶ್ರಾದ್ಧಕಾಲ ಉಪಸ್ಥಿತೇ ||28||
ಅನಂತರ ಒಂದು ವರ್ಷವು ಕಳೆದ ಮೇಲೆ ದೇವತೆಗಳು ಅವನಿಗೆ ಪ್ರಸನ್ನರಾಗುತ್ತಾರೆ ಮತ್ತು ಶ್ರಾದ್ಧಕಾಲವು ಬಂದಾಗ ಪಿತೃಗಳೂ ಸಂತೋಷ ಪಡುತ್ತಾರೆ.
ಏಷ ಹ್ಯಧರ್ಮೋ ಧರ್ಮಶ್ಚ ರಹಸ್ಯಃ ಸಂಪ್ರಕೀರ್ತಿತಃ |
ಮರ್ತ್ಯಾನಾಂ ಸ್ವರ್ಗಕಾಮಾನಾಂ ಪ್ರೇತ್ಯ ಸ್ವರ್ಗಸುಖಾವಹಃ ||29||
ಸ್ವರ್ಗಕಾಮನೆಯುಳ್ಳ ಮನುಷ್ಯರಿಗೆ ಮರಣಾನಂತರದಲ್ಲಿ ಸುಖವನ್ನು ಕೊಡುವ ರಹಸ್ಯವಾದ ಧರ್ಮಗಳನ್ನೂ ಮತ್ತು ಹಾಗೆಯೇ ಅಧರ್ಮಗಳನ್ನೂ ಹೇಳಿದ್ದೇನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಏಕೋನಾಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತನೆಯ ಅಧ್ಯಾಯ
ಲೋಮಶರಿಂದ ಧರ್ಮೋಪದೇಶ
ಲೋಮಶಃ
ಪರದಾರೇಷು ಯೇ ಸಕ್ತಾ ಅಕೃತ್ವಾ ದಾರಸಂಗ್ರಹಮ್ |
ನಿರಾಶಾಃ ಪಿತರಸ್ತೇಷಾಂ ಶ್ರಾದ್ಧಕಾಲೇ ಭವಂತಿ ವೈ ॥1॥
ಲೋಮಶ ವಿವಾಹವನ್ನು ಮಾಡಿಕೊಳ್ಳದೆ ಪರಪತ್ನಿಯರಲ್ಲಿ ಆಸಕ್ತರಾದವರಿಗೆ ಅವರ ಪಿತೃಗಳು ಶ್ರಾದ್ಧಕಾಲದಲ್ಲಿ ನಿರಾಶರಾಗುತ್ತಾರೆ.
ಪರದಾರರತಿರ್ಯಃ ಸ್ಯಾದ್ ಯಶ್ಚ ವಂಧ್ಯಾಮುಪಾಸತೇ |
ಬ್ರಹ್ಮಸ್ವಂ ಹರತೇ ಯಶ್ಚ ಸಮದೋಷಾ ಭವಂತಿ ತೇ ॥2॥
ಪರದಾರರತಿಯುಳ್ಳವನೂ, ವಂಧ್ಯಾ(ಬಂಜೆ)ಸಂಗವನ್ನು ಮಾಡುವವನೂ, ಬ್ರಹ್ಮಸ್ವವನ್ನು ಅಪಹರಿಸುವವನೂ ಮೂವರೂ
ಸಮಾನದೋಷವುಳ್ಳವರಾಗುತ್ತಾರೆ.
ಅಸಂಭಾಷ್ಯಾ ಭವಂತ್ಯೇತೇ ಪಿತೄಣಾಂ ನಾತ್ರ ಸಂಶಯಃ |
ದೇವತಾಃ ಪಿತರಶ್ಚೈಷಾಂ ನಾಭಿನಂದಂತಿ ತದ್ಧವಿಃ ॥3॥
ಅವರು ಪಿತೃಗಳಿಗೆ ಸಂಭಾಷಣೆಗೆ ಅರ್ಹರಲ್ಲ ಎಂಬುದರಲ್ಲಿ ಸಂಶಯವಿಲ್ಲ. ಅಂತಹವರು ಕೊಡುವ ಹವಿಸ್ಸನ್ನು ದೇವತೆಗಳು ಮತ್ತು
ಪಿತೃಗಳು ಸೇವಿಸುವುದಿಲ್ಲ.
ತಸ್ಮಾತ್ಪರಸ್ಯ ವೈ ದಾರಾಂಸ್ತ್ಯಜೇದ್ ವಂಧ್ಯಾಂ ಚ ಯೋಷಿತಮ್ |
ಬ್ರಹ್ಮಸ್ವಂ ಹಿ ನ ಹರ್ತವ್ಯಮಾತ್ಮನೋ ಹಿತಮಿಚ್ಛತಾ ॥4॥
ಆದ್ದರಿಂದ ತನ್ನ ಹಿತವನ್ನು ಬಯಸುವವನು ಪರಪತ್ನಿಯರನ್ನು ತ್ಯಜಿಸಬೇಕು. ಬಂಜೆಯಾದ ಸ್ತ್ರೀಯನ್ನು ತ್ಯಜಿಸಬೇಕು.
ಬ್ರಹ್ಮಸ್ವವನ್ನು ಅಪಹಾರ ಮಾಡಬಾರದು.
ಶ್ರೂಯತಾಂ ಚಾಪರಂ ಗುಹ್ಯಂ ರಹಸ್ಯಂ ಧರ್ಮಸಂಹಿತಮ್ |
ಶ್ರದ್ಧಧಾನೇನ ಕರ್ತವ್ಯಂ ಗುರೂಣಾಂ ವಚನಂ ಸದಾ ॥5॥
ಧರ್ಮಸಮ್ಮತವಾದ ಈ ಇನ್ನೊಂದು ರಹಸ್ಯವನ್ನು ಕೇಳಿ. ಗುರುಗಳ ಮಾತನ್ನು ಯಾವಾಗಲೂ ಶ್ರದ್ಧೆಯಿಂದ ನಡೆಸಿಕೊಡಬೇಕು.
ದ್ವಾದಶ್ಯಾಂ ಪೌರ್ಣಮಾಸ್ಯಾಂ ಚ ಮಾಸಿಮಾಸಿ ಘೃತಾಕ್ಷತಮ್ |
ಬ್ರಾಹ್ಮಣೇಭ್ಯಃ ಪ್ರಯಚ್ಛೇತ ತಸ್ಯ ಪುಣ್ಯಂ ನಿಬೋಧತ ॥6॥
ದ್ವಾದಶಿಯ ದಿವಸ ಅಥವಾ ಪೌರ್ಣಮಾಸಿಯ ದಿವಸ ಪ್ರತಿ ತಿಂಗಳೂ ಘೃತ ಸಹಿತವಾದ ಅಕ್ಕಿಯನ್ನು ದಾನ ಮಾಡುವವನ
ಪುಣ್ಯವನ್ನು ಕೇಳಿ.
ಸೋಮಶ್ಚ ವರ್ಧತೇ ತೇನ ಸಮುದ್ರಶ್ಚ ಮಹೋದಧಿಃ |
ಅಶ್ವಮೇಧಚತುರ್ಭಾಗಂ ಫಲಂ ಸೃಜತಿ ವಾಸವಃ ॥7॥
ಅದರಿಂದ ಚಂದ್ರನೂ ಮಹಾಸಮುದ್ರವೂ ವೃದ್ಧಿಯನ್ನು ಹೊಂದುತ್ತಾರೆ. ಇಂದ್ರನು ಅವನಿಗೆ ಅಶ್ವಮೇಧಯಾಗದ ನಾಲ್ಕನೆಯ
ಒಂದು ಭಾಗದ ಫಲವನ್ನು ಕೊಡುತ್ತಾನೆ.
ದಾನೇನೈತೇನ ತೇಜಸ್ವೀ ವೀರ್ಯವಾಂಶ್ಚ ಭವೇನ್ನರಃ |
ಪ್ರೀತಶ್ಚ ಭಗವಾನ್ ಸೋಮ ಇಷ್ಟಾನ್ ಕಾಮಾನ್ ಪ್ರಯಚ್ಛತಿ ॥8॥
ಈ ದಾನದಿಂದ ಮನುಷ್ಯನು ತೇಜಸ್ವಿಯೂ, ಸಾಮರ್ಥ್ಯೋಪೇತನೂ ಆಗುತ್ತಾನೆ. ಸಂತುಷ್ಟನಾದ, ಪೂಜ್ಯನಾದ ಚಂದ್ರನು ಅವನಿಗೆ
ಇಷ್ಟವಾದ ಕಾಮಗಳನ್ನು ಕೊಡುತ್ತಾನೆ.
ಶ್ರೂಯತಾಂ ಚಾಪರೋ ಧರ್ಮಃ ಸರಹಸ್ಯೋ ಮಹಾಫಲಃ |
ಇದಂ ಕಲಿಯುಗಂ ಪ್ರಾಪ್ಯ ಮನುಷ್ಯಾಣಾಂ ಸುಖಾವಹಃ ॥9॥
ಪ್ರಾಪ್ತವಾದ ಈ ಕಲಿಯುಗದಲ್ಲಿ ಮನುಷ್ಯರಿಗೆ ಸುಖವನ್ನು ತರುವ ಮತ್ತು ಮಹಾಫಲವನ್ನು ಕೊಡುವ ರಹಸ್ಯವಾದ ಇನ್ನೊಂದು
ಧರ್ಮವನ್ನು ಕೇಳಿ.
ಕಲ್ಯಮುತ್ಥಾಯ ಯೋ ಮರ್ತ್ಯಃ ಸ್ನಾತಃ ಶುಕ್ಲೇನ ವಾಸಸಾ |
ತಿಲಪಾತ್ರಂ ಪ್ರಯಚ್ಛೇತ ಬ್ರಾಹ್ಮಣೇಭ್ಯಃ ಸಮಾಹಿತಃ ॥10॥
ತಿಲೋದಕಂ ಚ ಯೋ ದದ್ಯಾತ್ ಪಿತೄಣಾಂ ಮಧುನಾ ಸಹ |
ದೀಪಕಂ ಕೃಸರಂ ಚೈವ ಶ್ರೂಯತಾಂ ತಸ್ಯ ತತ್ಫಲಮ್ ॥11॥
ಪ್ರಾತಃಕಾಲದಲ್ಲಿ ಎದ್ದು ಸ್ನಾನವನ್ನು ಮಾಡಿ, ಶ್ವೇತವಸ್ತ್ರವನ್ನು ಧರಿಸಿ, ಸಮಾಧಾನದಿಂದ ಯಾವನು ಬ್ರಾಹ್ಮಣನಿಗೆ
ತಿಲಪಾತ್ರೆಯನ್ನು ಕೊಡುತ್ತಾನೆಯೋ ಮತ್ತು ಪಿತೃಗಳಿಗೆ ಮಧುಸಹಿತವಾದ ತಿಲೋದಕವನ್ನೂ, ದೀಪವನ್ನೂ ಮತ್ತು (ಯವಾನ್ನ)
ವನ್ನು ಕೊಡುತ್ತಾನೆಯೋ ಅದರ ಫಲವನ್ನು ಕೇಳಿ.
ತಿಲಪಾತ್ರೇ ಫಲಂ ಪ್ರಾಹ ಭಗವಾನ್ ಪಾಕಶಾಸನಃ |

ಗೋಪ್ರದಾನಂ ಚ ಯಃ ಕುರ್ಯಾದ್ ಭೂಮಿದಾನಂ ಚ ಶಾಶ್ವತಮ್ ॥
ಅಗ್ನಿಷ್ಟೋಮಂ ಚ ಯೋ ಯಜ್ಞಂ ಯಜೇತ ಬಹುದಕ್ಷಿಣಮ್ ।
ತಿಲಪಾತ್ರಂ ಸಹೈತೇನ ಸಮಂ ಮನ್ಯಂತಿ ದೇವತಾಃ ॥13॥
ತಿಲಪಾತ್ರದಾನದ ಫಲವನ್ನು ಪೂಜ್ಯನಾದ ಪಾಕಶಾಸನನಾದ ಇಂದ್ರನು ಹೇಳುತ್ತಾನೆ. ಯಾವನು ಗೋದಾನವನ್ನು ಮಾಡುತ್ತಾನೆಯೋ, ಭೂಮಿದಾನವನ್ನು ಮಾಡುತ್ತಾನೆಯೋ, ಅಗ್ನಿಷ್ಟೋಮವನ್ನು ಮಾಡುತ್ತಾನೆಯೋ, ಬಹುದಕ್ಷಿಣಾ ಸಹಿತವಾದ ಯಾಗವನ್ನು ಮಾಡುತ್ತಾನೆಯೋ ಅವೆಲ್ಲದಕ್ಕೂ ತಿಲಪಾತ್ರವು ಸಮಾನವಾದುದು ಎಂದು ದೇವತೆಗಳು ತಿಳಿಯುತ್ತಾರೆ (ಎಂದು ಇಂದ್ರನು ಹೇಳಿದ್ದಾನೆ).
ತಿಲೋದಕಂ ಸದಾ ಶ್ರಾದ್ಧೇ ಮನ್ಯಂತೇ ಪಿತರೋಽಕ್ಷಯಮ್ ।
ದೀಪೇ ಚ ಕೃಸರೇ ಚೈವ ತುಷ್ಯಂತೇಽಸ್ಯ ಪಿತಾಮಹಾಃ ॥14॥
ಶ್ರಾದ್ಧದಲ್ಲಿ ಕೊಡುವ ತಿಲೋದಕದಿಂದ ಪಿತೃಗಳು ಅಕ್ಷಯಫಲವನ್ನು ಕೊಡುತ್ತಾರೆ. ದೀಪ ಮತ್ತು ತಿಲಾನ್ನದಾನದಿಂದ ಪಿತಾಮಹರು ಸಂತುಷ್ಟರಾಗುತ್ತಾರೆ.
ಸ್ವರ್ಗೇ ಚ ಪಿತೃಲೋಕೇ ಚ ಪಿತೃದೇವಾಭಿಪೂಜಿತಮ್ ।
ಏವಮೇತನ್ಮಯೋದ್ದಿಷ್ಟಮೃಷಿದೃಷ್ಟಂ ಪುರಾತನಮ್ ॥15॥
ಸ್ವರ್ಗದಲ್ಲಿ ಮತ್ತು ಪಿತೃಲೋಕದಲ್ಲಿ ದೇವತೆಗಳಿಂದ ಮತ್ತು ಪಿತೃಗಳಿಂದ ಸತ್ಕರಿಸಲ್ಪಡುವ ಋಷಿದೃಷ್ಟವಾದ, ಪುರಾತನವಾದ ಈ ಧರ್ಮವನ್ನು ನಾನು ನಿಮಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂದನೆಯ ಅಧ್ಯಾಯ
ಅರುಂಧತಿ ಮೊದಲಾದವರಿಂದ ಧರ್ಮೋಪದೇಶ
ಭೀಷ್ಮಃ
ತತಸ್ತ್ವ ೃಷಿಗಣಾಃ ಸರ್ವೇ ಪಿತರಶ್ಚ ಸದೇವತಾಃ ।
ಅರುಂಧತೀಂ ತಪೋವೃದ್ಧಾಮಪೃಚ್ಛಂತ ಸಮಾಹಿತಾಃ ।
ಸಮಾನಶೀಲಾಂ ವೀರ್ಯೇಣ ವಸಿಷ್ಠಸ್ಯ ಮಹಾತ್ಮನಃ ॥1॥
ತ್ವತ್ತೋ ಧರ್ಮರಹಸ್ಯಾನಿ ಶ್ರೋತುಮಿಚ್ಛಾಮಹೇ ವಯಮ್ ।
ಯತ್ತೇ ಗುಹ್ಯತಮಂ ಭದ್ರೇ ತತ್ ಪ್ರಭಾಷಿತುಮರ್ಹಸಿ ॥2॥
ಭೀಷ್ಮ ಅನಂತರ ಎಲ್ಲಾ ಋಷಿಗಳು, ದೇವತೆಗಳು ಮತ್ತು ಪಿತೃಗಳು, ತಪೋ ವೃದ್ಧಳೂ, ಸಾಮರ್ಥ್ಯದಲ್ಲಿ ಮಹಾತ್ಮರಾದ ವಸಿಷ್ಠರಿಗೆ ಸಮಾನಶೀಲಳಾದವಳೂ ಆದ ಅರುಂಧತಿಯನ್ನು ಸಮಾಧಾನದಿಂದ ಎಲೌ ಮಂಗಳಸ್ವರೂಪಳೇ, ನಿನ್ನಿಂದ ನಾವು ಧರ್ಮರಹಸ್ಯಗಳನ್ನು ಕೇಳಲು ಬಯಸುತ್ತೇವೆ. ಯಾವುದು ಅತ್ಯಂತ ರಹಸ್ಯವಾದುದೋ ಅದನ್ನು ಹೇಳಬೇಕು ಎಂದು ಕೇಳಿದರು.
ಅರುಂಧತೀ
ತಪೋವೃದ್ಧಿರ್ಮಯಾ ಪ್ರಾಪ್ತಾ ಭವತಾಂ ಸ್ಮರಣೇನ ವೈ ।
ಭವತಾಂ ಚ ಪ್ರಸಾದೇನ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ॥3॥
ಸಗುಹ್ಯಾನ್ ಸರಹಸ್ಯಾಂಶ್ಚ ತಾನ್ ಶೃಣುಧ್ವಮಶೇಷತಃ ।
ಶ್ರದ್ದಧಾನೇ ಪ್ರಯೋಕ್ತವ್ಯಾ ಯಸ್ಯ ಶುದ್ಧಂ ತಥಾ ಮನಃ ॥4॥
ಅರುಂಧತೀ ನಿಮ್ಮ ಸ್ಮರಣೆಯಿಂದ ನಾನು ತಪೋವೃದ್ಧಿಯನ್ನು ಪಡೆದಿದ್ದೇನೆ. ನಿಮ್ಮ ಅನುಗ್ರಹದಿಂದ ರಹಸ್ಯವಾದ ಮತ್ತು ಗುಹ್ಯವಾದ, ಶಾಶ್ವತವಾದ ಧರ್ಮಗಳನ್ನು ಹೇಳುತ್ತೇನೆ. ಅದನ್ನು ಪೂರ್ಣವಾಗಿ ಕೇಳಿ. ಶ್ರದ್ಧೆಯುಳ್ಳವನಿಗೂ ಮತ್ತು ಶುದ್ಧ ಮನಸ್ಸುಳ್ಳವನಿಗೂ ಧರ್ಮವನ್ನು ಹೇಳಬೇಕಷ್ಟೆ!
ಅಶ್ರದ್ದಧಾನೋ ಮಾನೀ ಚ ಬ್ರಹ್ಮಹಾ ಗುರುತಲ್ಪಗಃ ।
ಅಸಂಭಾಷ್ಯಾ ಹಿ ಚತ್ವಾರೋ ನೈಷಾಂ ಧರ್ಮಂ ಪ್ರಕಾಶಯೇತ್ ॥5॥
ಶ್ರದ್ಧೆ ಇಲ್ಲದವನು, ಅಹಂಕಾರಿಯಾದವನು, ಬ್ರಹ್ಮಹತ್ಯೆಯನ್ನು ಮಾಡಿದವನು, ಗುರುತಲ್ಪಗಾಮಿ - ಈ ನಾಲ್ವರು ಸಂಭಾಷಣೆಗೆ ಅರ್ಹರಲ್ಲ. ಅವರಿಗೆ ಧರ್ಮವನ್ನು ಪ್ರಕಾಶಿಸಬಾರದು.
ಅಹನ್ಯಹನಿ ಯೋ ದದ್ಯಾತ್ ಕಪಿಲಾಂ ದ್ವಾದಶೀಃ ಸಮಾಃ ।
ಮಾಸಿಮಾಸಿ ಚ ಸತ್ರೇಣ ಯೋ ಯಜೇತ ಸದಾ ನರಃ ॥6॥
ಗವಾಂ ಶತಸಹಸ್ರಂ ಚ ಯೋ ದದ್ಯಾಜ್ಜ್ಯೇಷ್ಠಪುಷ್ಕರೇ ।
ನ ತದ್ಧರ್ಮಫಲಂ ತುಲ್ಯಮತಿಥಿರ್ಯಸ್ಯ ತುಷ್ಯತಿ ॥7॥
ಹನ್ನೆರಡು ವರ್ಷಗಳ ಕಾಲ ಯಾವನು ಸತತವಾಗಿ ಪ್ರತಿದಿನವೂ ಕಪಿಲ ಗೋವುಗಳನ್ನು ದಾನ ಮಾಡುತ್ತಾನೆಯೋ ಮತ್ತು ಪ್ರತಿ ತಿಂಗಳೂ ಸತ್ರಯಾಗವನ್ನು ಮಾಡುತ್ತಾನೆಯೋ ಯಾವನು ಜ್ಯೇಷ್ಠಮಾಸದ ಪೌರ್ಣಮಾಸಿಯಂದು ಲಕ್ಷಗೋದಾನ ಮಾಡುತ್ತಾನೆಯೋ ಆ ಧರ್ಮಗಳಿಂದ ಉಂಟಾದ ಫಲವು ಅತಿಥಿಯ ಸಂತೋಷದಿಂದ ಉಂಟಾದ ಫಲಕ್ಕೆ ಸಮನಾದುದಲ್ಲ

(ಲಕ್ಷ್ಮಾಲಂಕಾರ).
ಶ್ರೂಯತಾಂ ಚಾಪರೋ ಧರ್ಮೋ ಮನುಷ್ಯಾಣಾಂ ಸುಖಾವಹಃ |
ಶ್ರದ್ದಧಾನೇನ ಕರ್ತವ್ಯಃ ಸರಹಸ್ಯೋ ಮಹಾಫಲಃ ||8||
ಶ್ರದ್ಧೆಯುಳ್ಳವನು ಮಾಡಬೇಕಾದ ರಹಸ್ಯವಾದ, ಮಹಾಫಲದಾಯಕವಾದ, ಸುಖಪ್ರದವಾದ ಇನ್ನೊಂದು ಧರ್ಮವನ್ನು ಕೇಳಿ.
ಕಲ್ಯಮುತ್ಥಾಯ ಗೋಮಧ್ಯೇ ಗೃಹ್ಯ ದರ್ಭಾನ್ ಸಹೋದಕಾನ್ |
ನಿಷಿಂಚೇತ ಗವಾಂ ಶೃಂಗೇ ಮಸ್ತಕೇನ ಚ ತಜ್ಜಲಮ್ |
ಪ್ರತೀಚ್ಛೇತ ನಿರಾಹಾರಸ್ತಸ್ಯ ಧರ್ಮಫಲಂ ಶೃಣು ||9||
ಪ್ರಾತಃಕಾಲದಲ್ಲಿ ಎದ್ದು ಗೋವುಗಳ ಮಧ್ಯದಲ್ಲಿ ದರ್ಭೆಗಳನ್ನು ಮತ್ತು ಉದಕವನ್ನು ಹಿಡಿದು ಅದರಿಂದ ಗೋವುಗಳ ಶೃಂಗಕ್ಕೆ ಅಭಿಷೇಕವನ್ನು ಮಾಡಿ ನಿರಾಹಾರನಾಗಿ ಆ ಜಲವನ್ನು ತಲೆಯ ಮೇಲೆ ಧರಿಸಬೇಕು. ಅದರಿಂದ ಉಂಟಾಗುವ ಧರ್ಮಫಲವನ್ನು ಕೇಳಿ.
ಶ್ರೂಯಂತೇ ಯಾನಿ ತೀರ್ಥಾನಿ ತ್ರಿಷು ಲೋಕೇಷು ಕಾನಿಚಿತ್ |
ಸಿದ್ಧಚಾರಣಜುಷ್ಟಾನಿ ಸೇವಿತಾನಿ ಮಹರ್ಷಿಭಿಃ |
ಅಭಿಷೇಕಃ ಸಮಸ್ತೇಷಾಂ ಗವಾಂ ಶೃಂಗೋದಕಸ್ಯ ಚ ||10||
ಮೂರುಲೋಕಗಳಲ್ಲಿ ಸಿದ್ಧ-ಚಾರಣರಿಂದಲೂ, ಮಹರ್ಷಿಗಳಿಂದಲೂ ಸೇವಿತವಾದ ಎಷ್ಟು ತೀರ್ಥಗಳಿವೆಯೋ ಅಷ್ಟು ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ಗೋಶೃಂಗೋದಕವನ್ನು ತಲೆಯ ಮೇಲೆ ಧರಿಸುವುದರಿಂದ ಉಂಟಾಗುತ್ತದೆ.
ಭೀಷ್ಮಃ
ಸಾಧುಸಾಧ್ವಿತಿ ಚೋದ್ದಿಷ್ಟಂ ದೈವತೈಃ ಪಿತೃಭಿಸ್ತಥಾ |
ಭೂತೈಶ್ಚೈವ ಸುಸಂಹೃಷ್ಟೈಃ ಪೂಜಿತಾ ಸಾಽಪ್ಯರುಂಧತೀ ||11||
ಭೀಷ್ಮ ಆಗ ದೇವತೆಗಳು ಮತ್ತು ಪಿತೃಗಳು `ಸಾಧು-ಸಾಧು' ಎಂದು ಹೇಳಿದರು. ಬಹಳ ಸಂತೋಷಗೊಂಡ ಪಿತೃಗಳು ಅರುಂಧತಿಯನ್ನು ಪೂಜಿಸಿದರು.
ಪಿತಾಮಹಃ(ಬ್ರಹ್ಮ)
ಅಹೋ ಧರ್ಮೋ ಮಹಾಭಾಗೇ ಸರಹಸ್ಯ ಉದಾಹೃತಃ |
ವರಂ ದದಾಮಿ ತೇ ಧನ್ಯೇ ತಪಸ್ತೇ ವರ್ಧತಾಂ ಸದಾ ||12||
ಬ್ರಹ್ಮ ಎಲೌ ಮಹಾನುಭಾವಳೇ, ಸಂತೋಷ. ರಹಸ್ಯವಾದ ಧರ್ಮವನ್ನು ಹೇಳಿದ್ದೀಯೆ. ಧನ್ಯಳಾದವಳೇ, ನಿನಗೆ ವರವನ್ನು ಕೊಡುತ್ತೇನೆ. ನಿನ್ನ ತಪಸ್ಸು ಯಾವಾಗಲೂ ಅಭಿವೃದ್ಧಿಯನ್ನು ಹೊಂದಲಿ.
ಯಮಃ
ರಮಣೀಯಾ ಕಥಾ ದಿವ್ಯಾ ಯುಷ್ಮತ್ತೋ ಯಾ ಮಯಾ ಶ್ರುತಾ |
ಶ್ರೂಯತಾಂ ಚಿತ್ರಗುಪ್ತಸ್ಯ ಭಾಷಿತಂ ಮಮ ಚ ಪ್ರಿಯಮ್ ||13||
ಯಮ ನಿಮ್ಮಿಂದ ನಾನು ರಮಣೀಯವಾದ ಕಥೆಗಳನ್ನು ಕೇಳಿದ್ದೇನೆ. ನನಗೆ ಪ್ರಿಯವಾದ ಚಿತ್ರಗುಪ್ತರ ಮಾತುಗಳನ್ನೂ ಕೇಳಿ.
ರಹಸ್ಯಂ ಧರ್ಮಸಂಯುಕ್ತಂ ಶಕ್ಯಂ ಶ್ರೋತುಂ ಮಹರ್ಷಿಭಿಃ |
ಶ್ರದ್ದಧಾನೇನ ಮರ್ತ್ಯೇನ ಆತ್ಮನೋ ಹಿತಮಿಚ್ಛತಾ ||14||
ತನ್ನ ಹಿತವನ್ನು ಬಯಸುವ ಶ್ರದ್ಧಾಳುವಾದ ಮನುಷ್ಯನಿಂದಲೂ ಮತ್ತು ಮಹರ್ಷಿಗಳಿಂದಲೂ ಧರ್ಮಸಂಯುಕ್ತವಾದ ಈ ರಹಸ್ಯವನ್ನು ಕೇಳಲು ಸಾಧ್ಯ.
ನ ಹಿ ಪುಣ್ಯಂ ತಥಾ ಪಾಪಂ ಕೃತಂ ಕಿಂಚಿದ್ ವಿನಶ್ಯತಿ |
ಪರ್ವಕಾಲೇ ಚ ಯತ್ ಕಿಂಚಿದಾದಿತ್ಯಂ ಚಾಧಿತಿಷ್ಠತಿ ||15||
ಪರ್ವಕಾಲದಲ್ಲಿ ಮಾಡಿದ ಅಲ್ಪಪುಣ್ಯವಾಗಲೀ, ಪಾಪವಾಗಲೀ ನಾಶವನ್ನು ಹೊಂದುವುದಿಲ್ಲ. ಅದು ಸೂರ್ಯನ ಬಳಿ ಆಶ್ರಿತವಾಗಿರುತ್ತದೆ.
ಪ್ರೇತಲೋಕಂ ಗತೇ ಮರ್ತ್ಯೇ ತತ್ತತ್ಸರ್ವಂ ವಿಭಾವಸುಃ |
ಪ್ರತಿಜಾನಾತಿ ಪುಣ್ಯಾತ್ಮಾ ತಚ್ಚ ತತ್ರೋಪಯುಜ್ಯತೇ ||16||
ಮನುಷ್ಯನು ಮರಣವನ್ನು ಹೊಂದಿ ಯಮಲೋಕಕ್ಕೆ ಹೋದಾಗ ಪುಣ್ಯಾತ್ಮನಾದ ಸೂರ್ಯನು ಅವೆಲ್ಲವನ್ನೂ ತಿಳಿದು ಅದನ್ನು ಹಿಂದೆ ಕೊಡುತ್ತಾನೆ. ಆ ಪುಣ್ಯವು ಅಲ್ಲಿ ಉಪಯೋಗಕ್ಕೆ ಬರುತ್ತದೆ.
ಕಿಂಚಿದ್ಧರ್ಮಂ ಪ್ರವಕ್ಷ್ಯಾಮಿ ಚಿತ್ರಗುಪ್ತಮತಂ ಶುಭಮ್ |
ಪಾನೀಯಂ ಚೈವ ದೀಪಂ ಚ ದಾತವ್ಯಂ ಸತತಂ ತಥಾ ||17||
ಚಿತ್ರಗುಪ್ತರಿಗೆ ಸಮ್ಮತವಾದ ಇನ್ನೊಂದು ಶುಭವಾದ ಧರ್ಮವನ್ನು ಹೇಳುವೆನು. ಜಲದಾನವನ್ನೂ ಮತ್ತು ದೀಪದಾನವನ್ನು ಸತತವಾಗಿ ಮಾಡಬೇಕು.
ಉಪಾನಹೌ ಚ ಚ್ಛತ್ರಂ ಚ ಕಪಿಲಾ ಚ ಯಥಾತಥಮ್ |
ಪುಷ್ಕರೇ ಕಪಿಲಾ ದೇಯಾ ಬ್ರಾಹ್ಮಣೇ ವೇದಪಾರಗೇ ||18||
ಪಾದರಕ್ಷೆಗಳ ದಾನ, ಛತ್ರಿಯ ದಾನ ಮತ್ತು ಕಪಿಲಗೋವುಗಳ ದಾನವನ್ನು ಆಗಾಗ ಮಾಡಬೇಕು. ಜ್ಯೇಷ್ಠ ಪೌರ್ಣಮಾಸಿಯಂದು ವೇದಪಾರಂಗತನಾದ ಬ್ರಾಹ್ಮಣನಿಗೆ ಕಪಿಲ ಗೋದಾನವನ್ನು ಮಾಡಬೇಕು.
ಅಗ್ನಿಹೋತ್ರಂ ಚ ಯತ್ನೇನ ಸರ್ವಶಃ ಪ್ರತಿಪಾಲಯೇತ್ |

ಅಯಂ ಚೈವಾಪರೋ ಧರ್ಮಶ್ಚಿತ್ರಗುಪ್ತೇನ ಭಾಷಿತಃ |
ಫಲಮಸ್ಯ ಪೃಥಕ್ತ್ವೇನ ಶ್ರೋತುಮರ್ಹಂತಿ ಸತ್ತಮಾಃ ॥19॥
ಅಗ್ನಿಹೋತ್ರವನ್ನೂ ಸಹ ಪ್ರಯತ್ನಪೂರ್ವಕವಾಗಿ ಯಾವಾಗಲೂ ರಕ್ಷಿಸಿಕೊಂಡಿರಬೇಕು. ಚಿತ್ರಗುಪ್ತನು ಹೇಳಿದ ಇನ್ನೊಂದು ಧರ್ಮವಿದೆ. ಸಜ್ಜನರಲ್ಲಿ ಶ್ರೇಷ್ಠರಾದ ನೀವು ಅದರ ಫಲವನ್ನು ಪ್ರತ್ಯೇಕವಾಗಿ ಕೇಳಬೇಕು.
ಪ್ರಲಯಂ ಸರ್ವಭೂತೈಶ್ಚ ಗಂತವ್ಯಂ ಕಾಲಪರ್ಯಯಾತ್ ॥20॥
ತತ್ರ ದುರ್ಗಮನುಪ್ರಾಪ್ತಾಃ ಕ್ಷುತ್ತೃಷ್ಣಾಪರಿಪೀಡಿತಾಃ |
ದಹ್ಯಮಾನಾ ವಿಪಚ್ಯಂತೇ ನ ತತ್ರಾಸ್ತಿ ಪಲಾಯನಮ್ ॥21॥
ಕಾಲಕ್ರಮದಲ್ಲಿ ಎಲ್ಲ ಪ್ರಾಣಿಗಳೂ ಮರಣವನ್ನು ಹೊಂದಬೇಕು. ಮರಣವನ್ನು ಹೊಂದಿ ನರಕವನ್ನು ಹೊಂದಿದ ಮೇಲೆ ಹಸಿವು, ನೀರಡಿಕೆಗಳಿಂದ ಪೀಡಿತರಾಗಿ ಜೀವನರು ದುಃಖವನ್ನು ಹೊಂದುತ್ತಾರೆ. ಅಲ್ಲಿ ತಾಪದಿಂದ ಬೇಯಿಸಲ್ಪಡುತ್ತಾರೆ. ಅಲ್ಲಿಂದ ಪಲಾಯನ ಮಾಡಲು ಸಾಧ್ಯವಿಲ್ಲ.
ಅಂಧಕಾರಂ ತಮೋ ಘೋರಂ ಪ್ರವಿಶಂತ್ಯಲ್ಪಬುದ್ಧಯಃ |
ತತ್ರ ಧರ್ಮಂ ಪ್ರವಕ್ಷ್ಯಾಮಿ ಯೇನ ದುರ್ಗಾಣಿ ಸಂತರೇತ್ |
ಅಲ್ಪವ್ಯಯಂ ಮಹಾರ್ಥಂ ಚ ಪ್ರೇತ್ಯ ಚೈವ ಸುಖೋದಯಮ್ ॥22॥
ಅಲ್ಪಬುದ್ಧಿಯುಳ್ಳವರು ಅಲ್ಲಿ ಘೋರವಾದ ಅಂಧಕಾರವನ್ನು ಪ್ರವೇಶಿಸುತ್ತಾರೆ. ಅಂತಹ ಕಷ್ಟಗಳನ್ನು ದಾಟುವ, ಅಲ್ಪವ್ಯಯಸಾಧ್ಯವಾದ, ಮಹಾಫಲಪ್ರದವಾದ, ಮರಣಾನಂತರದಲ್ಲಿ ಸುಖವನ್ನು ಕೊಡುವ ಧರ್ಮವನ್ನು ನಾನು ಹೇಳುವೆನು.
ಪಾನೀಯಸ್ಯ ಗುಣಾ ದಿವ್ಯಾಃ ಪ್ರೇತಲೋಕೇ ವಿಶೇಷತಃ ॥23॥
ತತ್ರ ಪುಣ್ಯೋದಕಾ ನಾಮ ನದೀ ತೇಷಾಂ ವಿಧೀಯತೇ |
ಅಕ್ಷಯಂ ಸಲಿಲಂ ತತ್ರ ಶೀತಲಂ ಹ್ಯಮೃತೋಪಮಮ್ ॥24॥
ಪ್ರೇತಲೋಕದಲ್ಲಿ ವಿಶೇಷವಾಗಿ ಜಲದಾನಕ್ಕೆ ವಿಶೇಷಗುಣಗಳಿವೆ (ಅಲ್ಲಿ ಜಲವು ಬಹಳ ದುರ್ಲಭವಾದುದು). ಜಲದಾನ ಮಾಡಿದವರಿಗೆ ಅಲ್ಲಿ ಪವಿತ್ರವಾದ, ಶೀತಲವಾದ, ಅಮೃತಸದೃಶವಾದ, ಅಕ್ಷಯವಾದ ನೀರಿರುವ ಪುಣ್ಯೋದಕ ಎಂಬ ನದಿಯು ಸಹಾಯವಾಗುತ್ತದೆ.
ಸ ತತ್ರ ತೋಯಂ ಪಿಬತಿ ಪಾನೀಯಂ ಯಃ ಪ್ರಯಚ್ಛತಿ |
ಪ್ರದೀಪಸ್ಯ ಪ್ರದಾನೇನ ಶ್ರೂಯತಾಂ ಗುಣವಿಸ್ತರಃ ॥25॥
ಯಾವನು ಜಲದಾನವನ್ನು ಮಾಡುತ್ತಾನೆಯೋ ಅವನು ಆ ನದಿಯಲ್ಲಿ ಜಲಪಾನವನ್ನು ಮಾಡುತ್ತಾನೆ. ದೀಪದಾನದ ವಿಸ್ತಾರವಾದ ಗುಣವನ್ನು ಕೇಳಿ.
ತಮೋಂಧಕಾರಂ ನಿಯತಂ ದೀಪದೋ ನ ಪ್ರಪಶ್ಯತಿ |
ಪ್ರಭಾಂ ಚಾಸ್ಯ ಪ್ರಯಚ್ಛಂತಿ ಸೋಮಭಾಸ್ಕರಪಾವಕಾಃ |
ದೇವತಾಶ್ಚಾಸ್ಯ ಮನ್ಯಂತೇ ವಿಮಲಾಃ ಸರ್ವತೋ ದಿಶಃ ॥26॥
ದೀಪದಾನವನ್ನು ಮಾಡಿದವನು ಅಲ್ಲಿ ನಿಯತವಾಗಿರುವ ಅಂಧಕಾರವನ್ನು ನೋಡುವುದಿಲ್ಲ. ಸೂರ್ಯ-ಚಂದ್ರಾಗ್ನಿಗಳು ಅವನಿಗೆ ಬೆಳಕನ್ನು ಕೊಡುತ್ತಾರೆ. ದೇವತೆಗಳು ಅವನಿಗೆ ಎಲ್ಲ ಕಡೆಗಳಲ್ಲಿಯೂ ಪರಿಶುದ್ಧವಾದ ದಿಕ್ಕುಗಳನ್ನೇ ತೋರಿಸುತ್ತಾರೆ.
ದ್ಯೋತತೇ ಚ ಯಥಾಽಽದಿತ್ಯಃ ಪ್ರೇತಲೋಕಗತೋ ನರಃ |
ತಸ್ಮಾದ್ ದೀಪಃ ಪ್ರದಾತವ್ಯಃ ಪಾನೀಯಂ ಚ ವಿಶೇಷತಃ ॥27॥
ದೀಪದಾನವನ್ನು ಮಾಡಿ ಪ್ರೇತಲೋಕಕ್ಕೆ ಹೋದ ಮನುಷ್ಯನು ಸೂರ್ಯನಂತೆ ಶೋಭಿಸುತ್ತಾನೆ. ಆದ್ದರಿಂದ ದೀಪದಾನವನ್ನು ಮಾಡಬೇಕು. ವಿಶೇಷವಾಗಿ ಜಲದಾನವನ್ನು ಮಾಡಬೇಕು.
ಕಪಿಲಾಂ ಯೇ ಪ್ರಯಚ್ಛಂತಿ ಬ್ರಾಹ್ಮಣೇ ವೇದಪಾರಗೇ |
ಪುಷ್ಕರೇ ಚ ವಿಶೇಷೇಣ ಶ್ರೂಯತಾಂ ತಸ್ಯ ಯತ್ಫಲಮ್ |
ಗೋಶತಂ ಸವೃಷಂ ತೇನ ದತ್ತಂ ಭವತಿ ಶಾಶ್ವತಮ್ ॥28॥
ವೇದಪಾರಂಗತನಾದ ಬ್ರಾಹ್ಮಣನಿಗೆ ಜ್ಯೇಷ್ಠಮಾಸದ ಪೌರ್ಣಮಾಸಿಯಂದು ಕಪಿಲ ಗೋದಾನವನ್ನು ಮಾಡುವವನಿಗೆ ಉಂಟಾಗುವ ಫಲವನ್ನು ವಿಶೇಷವಾಗಿ ಕೇಳಿ. ಅವನಿಗೆ ಕರುಗಳಿಂದ ಸಹಿತವಾದ ನೂರು ಗೋದಾನವನ್ನು ಮಾಡಿದ ಫಲವು ಉಂಟಾಗುತ್ತದೆ.
ಪಾಪಂ ಕರ್ಮ ಚ ಯತ್ಕಿಂಚಿದ್ ಬ್ರಹ್ಮಹತ್ಯಾಸಮಂ ಭವೇತ್ |
ಶೋಧಯೇತ್ ಕಪಿಲಾ ಹ್ಯೇಕಾ ಪ್ರದತ್ತಂ ಗೋಶತಂ ಯಥಾ ॥29॥
ಅವನು ಬ್ರಹ್ಮಹತ್ಯೆಗೆ ಸಮವಾದ ಯಾವುದಾದರೂ ಪಾಪಕರ್ಮವನ್ನು ಮಾಡಿದ್ದರೂ ನೂರು ಗೋದಾನವನ್ನು ಮಾಡಿದಂತೆ ಒಂದು ಕಪಿಲ ಗೋದಾನವು ಅವನನ್ನು ಶೋಧಿಸುತ್ತದೆ.
ತಸ್ಮಾತ್ತು ಕಪಿಲಾ ದೇಯಾ ಕೌಮುದ್ಯಾಂ ಜ್ಯೇಷ್ಠಪುಷ್ಕರೇ |
ನ ತೇಷಾಂ ವಿಷಮಂ ಕಿಂಚಿನ್ನ ದುಃಖಂ ನ ಚ ಕಂಟಕಾಃ ॥30॥
ಉಪಾನಹೌ ಚ ಯೋ ದದ್ಯಾತ್ ಪಾತ್ರಭೂತೇ ದ್ವಿಜೋತ್ತಮೇ |
ಛತ್ರದಾನೇ ಸುಖಾಂ ಛಾಯಾಂ ಲಭತೇ ಪರಲೋಕಗಃ ॥31॥
ಆದ್ದರಿಂದ ಕಾರ್ತಿಕ ಮಾಸದ ಮತ್ತು ಜ್ಯೇಷ್ಠಮಾಸದ ಪೌರ್ಣಮಾಸಿಯಂದು ಕಪಿಲ ಗೋದಾನವನ್ನು ಮಾಡಬೇಕು ಮತ್ತು ಯಾವನು ಸತ್ಪಾತ್ರನಾದ ದ್ವಿಜೋತ್ತಮನಿಗೆ ಪಾದರಕ್ಷೆಯನ್ನು ದಾನ ಮಾಡುತ್ತಾನೆಯೋ ಅವನಿಗೆ ವಿಷಮವಾದ ಮಾರ್ಗವಾಗಲೀ, ದುಃಖವಾಗಲೀ ಉಂಟಾಗುವುದಿಲ್ಲ. ಅವನ ಮಾರ್ಗದಲ್ಲಿ ಮುಳ್ಳುಗಳಿರುವುದಿಲ್ಲ. ಛತ್ರಿಯನ್ನು ದಾನ ಮಾಡಿದವನು ಪರಲೋಕಕ್ಕೆ

ಹೋಗಿ ಒಳ್ಳೆಯ ಛಾಯೆಯನ್ನು ಹೊಂದುತ್ತಾನೆ.
ನ ಹಿ ದತ್ತಸ್ಯ ದಾನಸ್ಯ ನಾಶೋಽಸ್ತೀಹ ಕದಾಚನ |
ಚಿತ್ರಗುಪ್ತಮತಂ ಶ್ರುತ್ವಾ ಹೃಷ್ಟರೋಮಾ ವಿಭಾವಸುಃ |
ಉವಾಚ ದೇವತಾಃ ಸರ್ವಾಃ ಪಿತೃಂಶ್ಚೈವ ಮಹಾದ್ಯುತಿಃ ||32||
ಈ ಲೋಕದಲ್ಲಿ ಮಾಡಿದ ಯಾವ ದಾನವೂ ನಾಶವನ್ನು ಹೊಂದುವುದಿಲ್ಲ. ಚಿತ್ರಗುಪ್ತನ ಅಭಿಪ್ರಾಯವನ್ನು ಕೇಳಿದ ಅಗ್ನಿಯು ರೋಮಾಂಚಿತನಾಗಿ ದೇವತೆಗಳನ್ನೂ ಮತ್ತು ಎಲ್ಲಾ ಪಿತೃಗಳನ್ನೂ ಕುರಿತು ಮಾತನಾಡಿದನು.
ಶ್ರುತಂ ಹಿ ಚಿತ್ರಗುಪ್ತಸ್ಯ ಧರ್ಮಗುಹ್ಯಂ ಮಹಾತ್ಮನಃ ||33||
ಶ್ರದ್ದಧಾನಾಶ್ಚ ಯೇ ಮರ್ತ್ಯಾ ಬ್ರಾಹ್ಮಣೇಷು ಮಹಾತ್ಮಸು |
ದಾನಮೇತತ್ ಪ್ರಯಚ್ಛಂತಿ ನ ತೇಷಾಂ ವಿದ್ಯತೇ ಭಯಮ್ ||34||
ಮಹಾತ್ಮನಾದ ಚಿತ್ರಗುಪ್ತನ ಧರ್ಮರಹಸ್ಯವಾದ ಮಾತುಗಳನ್ನು ನೀವು ಕೇಳಿದ್ದೀರಿ. ಯಾವ ಮನುಷ್ಯರು ಶ್ರದ್ಧೆಯಿಂದ ಮಹಾತ್ಮರಾದ ಬ್ರಾಹ್ಮಣರಲ್ಲಿ ಈ ದಾನಗಳನ್ನು ಮಾಡುತ್ತಾರೆಯೋ ಅವರಿಗೆ ಭಯವಿಲ್ಲ.
ಧರ್ಮದೋಷಾಸಿತ್ವಮೇ ಪಂಚ ಯೇಷಾಂ ನಾಸ್ತೀಹ ನಿಷ್ಕೃತಿಃ |
ಅಸಂಭಾಷ್ಯಾ ಅನಾಚಾರಾ ವರ್ಜನೀಯಾ ನರಾಧಮಾಃ ||35||
ಈ ಐದು ಮಂದಿ ಧರ್ಮದೋಷವುಳ್ಳವರು. ಅವರಿಗೆ ಪ್ರಾಯಶ್ಚಿತ್ತವಿಲ್ಲ. ಅವರು ಅನಾಚಾರಿಗಳು, ಸಂಭಾಷಣೆಗೆ ಅಯೋಗ್ಯರು ಮತ್ತು ವರ್ಜಿಸಬೇಕಾದ ನರಾಧಮರು.
ಬ್ರಹ್ಮಹಾ ಚೈವ ಗೋಘ್ನಶ್ಚ ಪರದಾರರತಶ್ಚ ಯಃ |
ಅಶ್ರದ್ದಧಾನಶ್ಚ ನರಃ ಸ್ತ್ರಿಯಂ ಯಶ್ಚೋಪಜೀವತಿ ||36||
ಅವರು ಯಾರೆಂದರೆ - ಬ್ರಹ್ಮಹತ್ಯೆಯನ್ನು ಮಾಡಿದವನು, ಗೋಹತ್ಯೆ ಮಾಡಿದವನು, ಪರದಾರತನಾದವನು, ಶ್ರದ್ಧೆಯಿಲ್ಲದವನು ಮತ್ತು ಸ್ತ್ರೀಯನ್ನು ಉಪಜೀವಿಸಿ ಬದುಕುವವನು.
ಪ್ರೇತಲೋಕಗತಾ ಹ್ಯೇತೇ ನರಕೇ ಪಾಪಕರ್ಮಿಣಃ |
ಪಚ್ಯಂತೇ ವೈ ಯಥಾ ಮೀನಾಃ ಪೂಯಶೋಣಿತಭೋಜನಾಃ ||37||
ಪ್ರೇತಲೋಕಕ್ಕೆ ಹೋದ ಈ ಪಾಪಕರ್ಮಿಗಳು ನರಕದಲ್ಲಿ ಪೂಯ, ಶೋಣಿತ ಭೋಜನರಾಗಿ ಮೀನುಗಳಂತೆ ಬೇಯಿಸಲ್ಪಡುತ್ತಾರೆ.
ಅಸಂಭಾಷ್ಯಾಃ ಪಿತೄಣಾಂ ಚ ದೇವಾನಾಂ ಚೈವ ಪಂಚ ತೇ |
ಸ್ನಾತಕಾನಾಂ ಚ ವಿಪ್ರಾಣಾಂ ಯೇ ಚಾನ್ಯೇ ಚ ತಪೋಧನಾಃ ||38||
ಈ ಐದು ಜನರು ಪಿತೃಗಳಿಗೂ, ದೇವತೆಗಳಿಗೂ, ವೇದವಿದ್ಯಾ ಪಾರಂಗತರಾದ ವಿಪ್ರರಿಗೂ ಮತ್ತು ಉಳಿದ ತಪೋಧನರಿಗೂ ಸಂಭಾಷಣೆಗೆ ಅನರ್ಹರಾದವರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಏಕಾಶೀತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೆರಡನೆಯ ಅಧ್ಯಾಯ
ಪ್ರಮಥರ ಉಪದೇಶ
ಭೀಷ್ಮ:
ತತಃ ಸರ್ವೇ ಮಹಾಭಾಗಾ ದೇವಾಶ್ಚ ಪಿತರಶ್ಚ ಹ |
ಋಷಯಶ್ಚ ಮಹಾಭಾಗಾಃ ಪ್ರಮಥಾನ್ ವಾಕ್ಯಮಬ್ರುವನ್ ||1||
ಭೀಷ್ಮ ಆಗ ಮಹಾನುಭಾವರಾದ ಎಲ್ಲಾ ದೇವತೆಗಳು, ಪಿತೃಗಳು ಮತ್ತು ಋಷಿಗಳು ಪ್ರಮಥರನ್ನು ಕುರಿತು ಹೇಳಿದರು.
ಭವಂತೋ ವೈ ಮಹಾಭಾಗಾ ಅಪರೋಕ್ಷನಿಶಾಚರಾಃ |
ಉಚ್ಛಿಷ್ಟಾನಶುಚೀನ್ ಕ್ಷುದ್ರಾನ್ ಕಥಂ ಹಿಂಸಥ ಮಾನವಾನ್ ||2||
ಮಹಾನುಭಾವರಾದ ನೀವೆಲ್ಲರೂ ಪ್ರತ್ಯಕ್ಷರಾಗಿ ನಿಶಾಚರರಾದವರು. ಉಚ್ಛಿಷ್ಟರಾದ, ಅಶುಚಿಗಳಾದ, ಕ್ಷುದ್ರರಾದ ಮನುಷ್ಯರನ್ನು ಹೇಗೆ ಹಿಂಸಿಸುತ್ತೀರಿ?
ಕೇ ಚ ಸ್ಮೃತಾಃ ಪ್ರತೀಘಾತಾ ಯೇನ ಮರ್ತ್ಯಾನ್ನ ಹಿಂಸಥ |
ರಕ್ಷೋಘ್ನಾನಿ ಚ ಕಾನಿ ಸ್ಯುರ್ಯೈರ್ಗೃಹೇಷು ಪ್ರಣಶ್ಯಥ |
ಶ್ರೋತುಮಿಚ್ಛಾಮ ಯುಷ್ಮಾಕಂ ಸರ್ವಮೇತನ್ನಿಶಾಚರಾಃ ||3||
ನೀವು ಮರ್ತ್ಯರನ್ನು ಹಿಂಸಿಸದಂತೆ ಮಾಡಲು ಹೇಳಲ್ಪಟ್ಟ ಪರಿಹಾರೋಪಾಯಗಳೇನು? ಯಾವುದರಿಂದ ನೀವು ನಾಶವನ್ನು ಹೊಂದುವಿರೋ ಅಂತಹ ರಕ್ಷೋಘ್ನವಾದ ಕಾರ್ಯಗಳು ಯಾವವು? ಎಲೈ ನಿಶಾಚರರೇ, ನಿಮಗೆ ಸಂಬಂಧಿಸಿದ ಈ ಎಲ್ಲವನ್ನೂ ನಾವು ಕೇಳಲು ಬಯಸುತ್ತೇವೆ.
ಪ್ರಮಥಾಃ
ಮೈಥುನೇನ ಸದೋಚ್ಛಿಷ್ಟಾಃ ಕೃತೇ ಚೈವಾಧರೋತ್ತರೇ |
ಮೋಹಾನ್ಮಾಂಸಾನಿ ಖಾದೇತ ವೃಕ್ಷಮೂಲೇ ಚ ಯಃ ಸ್ವಪೇತ್ ||4||

ಆಮಿಷಂ ಶೀರ್ಷತೋ ಯಸ್ಯ ಪಾದತೋ ಯಶ್ಚ ಸಂವಿಶೇತ್ |
ತತ ಉಚ್ಛಿಷ್ಟಕಾಃ ಸರ್ವೇ ಬಹುಚ್ಛಿದ್ರಾಶ್ಚ ಮಾನವಾಃ ॥5॥
ಪ್ರಮಥ ಮೈಥುನವನ್ನು ಮಾಡಿ ಯಾವಾಗಲೂ ಉಚ್ಛಿಷ್ಟರಾದವರು, ಹಿರಿಯರ ಮತ್ತು ಕಿರಿಯರ ಜೊತೆಯಲ್ಲಿ ವಿಪರೀತವಾಗಿ ನಡೆದುಕೊಳ್ಳುವವರು, ಮೋಹದಿಂದ ಮಾಂಸವನ್ನು ತಿನ್ನುವವರು, ಮರದ ಬುಡದಲ್ಲಿ ಮಲಗುವವರು, ತಲೆಯ ಮೇಲೆ ಮಾಂಸವನ್ನು ಹೊರುವವರು, ಹಾಸಿಗೆಯಲ್ಲಿ ಪಾದದ ಕಡೆ ತಲೆ ಮಾಡಿ ಮಲಗುವವರು ಇವರೆಲ್ಲರೂ ಉಚ್ಛಿಷ್ಟರಾದ ಮನುಷ್ಯರು. ಇವರು ಬಹುದೋಷಗಳಿಗೆ ಆಸ್ಪದರಾಗುತ್ತಾರೆ.
ಉದಕೇ ಚಾಪ್ಯಮೇಧ್ಯಾನಿ ಶ್ಲೇಷ್ಮಾಣಂ ಚ ಪ್ರಮುಂಚತಿ |
ಏತೇ ಭಕ್ಷ್ಯಾಶ್ಚ ವಧ್ಯಾಶ್ಚ ಮಾನುಷಾ ನಾತ್ರ ಸಂಶಯಃ ॥6॥
ಉದಕದಲ್ಲಿ ಮಲವಿಸರ್ಜನೆ ಮಾಡುವವರು, ಶ್ಲೇಷ್ಮ ವಿಸರ್ಜನೆ ಮಾಡುವವರು ನಮ್ಮಿಂದ ವಧ್ಯರೂ, ಭಕ್ಷ್ಯರೂ ಆಗುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಏವಂಶೀಲಸಮಾಚಾರಾನ್ ಧರ್ಷಯಾಮೋ ಹಿ ಮಾನವಾನ್ |
ಶ್ರೂಯತಾಂ ಚ ಪ್ರತೀಘಾತಾನ್ ಯೈರ್ನ ಶಕ್ನುಮ ಹಿಂಸಿತುಮ್ ॥7॥
ಇಂತಹ ಶೀಲಸಮಾಚಾರವುಳ್ಳ ಮಾನವರನ್ನು ನಾವು ಹಿಂಸಿಸುತ್ತೇವೆ. ನಾವು ಹಿಂಸೆ ಮಾಡಲಾಗದಿರುವಂತಹ ಪ್ರತೀಕಾರೋಪಾಯಗಳನ್ನು ಕೇಳಿ.
ಗೋರೋಚನಾಸಮಾಲಂಭೋ ವಚಾಹಸ್ತಶ್ಚ ಯೋ ಭವೇತ್ |
ಘೃತಾಕ್ಷತಂ ಚ ಯೋ ದದ್ಯಾನ್ಮಸ್ತಕೇ ತತ್ಪರಾಯಣಃ ॥8॥
ಯೇ ಚ ಮಾಂಸಂ ನ ಖಾದಂತಿ ತಾನ್ನ ಶಕ್ನುಮ ಹಿಂಸಿತುಮ್ |
ಯಸ್ಯ ಚಾಗ್ನಿರ್ಗೃಹೇ ನಿತ್ಯಂ ದಿವಾರಾತ್ರೌ ಚ ದೀಪ್ಯತೇ ॥9॥
ತರಕ್ಷೋಶ್ಚರ್ಮದಂಷ್ಟ್ರಾಶ್ಚ ತಥೈವ ಗಿರಿಕಚ್ಛಪಃ |
ಆಜ್ಯಧೂಮೋ ಬಿಡಾಲಶ್ಚ ಚ್ಛಾಗಃ ಕೃಷ್ಣೋಽತ ಪಿಂಗಲಃ ॥10॥
ಯೇಷಾಮೇತಾನಿ ತಿಷ್ಠಂತಿ ಗೃಹೇಷು ಗೃಹಮೇಧಿನಾಮ್ |
ತಾನ್ಯಧೃಷ್ಯಾಣ್ಯಗಾರಾಣಿ ಪಿಶಿತಾಶೈಃ ಸುದಾರುಣೈಃ ॥11॥
ಯಾವನು ಗೋರೋಚನವನ್ನು ಲೇಪಿಸಿಕೊಳ್ಳುತ್ತಾನೆಯೋ, ಕೈಯಲ್ಲಿ ಬಜೆಯನ್ನು ಹಿಡಿಯುತ್ತಾನೆಯೋ, ತುಪ್ಪದಿಂದ ಕಲಸಿದ ಮಂತ್ರಾಕ್ಷತೆಯನ್ನು ತಲೆಯ ಮೇಲೆ ಧರಿಸುತ್ತಾನೆಯೋ, ಮಾಂಸವನ್ನು ತಿನ್ನುವುದಿಲ್ಲವೋ ಅಂತಹವರನ್ನು ನಾವು ಹಿಂಸಿಸಲಾರೆವು. ಯಾವನ ಮನೆಯಲ್ಲಿ ಅಗ್ನಿಹೋತ್ರದ ಅಗ್ನಿಯು ಹಗಲೂ-ರಾತ್ರಿಯೂ ಜ್ವಲಿಸುತ್ತದೆಯೋ, ವ್ಯಾಘ್ರಚರ್ಮ ಮತ್ತು ದಂಷ್ಟ್ರಗಳು ಹಾಗೂ ಪರ್ವತದ ಆಮೆಯು ಇರುತ್ತದೆಯೋ ಹಾಗೆಯೇ ಹೋಮದಿಂದ ಉಂಟಾದ ಆಜ್ಯಧೂಮವು, ಬೆಕ್ಕು, ಕಪ್ಪಾದ ಅಥವಾ ಕಂದುಬಣ್ಣದ ಆಡು ಇರುತ್ತದೆಯೋ ಅಂತಹವರನ್ನು ಅತ್ಯಂತ ಭಯಂಕರರಾದ ಮಾಂಸಾಹಾರಿಗಳು ಹಿಂಸಿಸಲು ಸಾಧ್ಯವಿಲ್ಲ. ಅಂತಹ ಗೃಹಗಳು ಅವರಿಂದ ಆಕ್ರಮಿಸಲ್ಪಡುವುದಿಲ್ಲ.
ಲೋಕಾನಸ್ಮದ್ವಿಧಾ ಯೇ ಚ ವಿಚರಂತಿ ಯಥಾಸುಖಮ್ |
ತಸ್ಮಾದೇತಾನಿ ಗೇಹೇಷು ರಕ್ಷೋಘ್ನಾನಿ ವಿಶಾಂಪತೇ |
ಏತದ್ ವಃ ಕಥಿತಂ ಸರ್ವಂ ಯತ್ರ ವಃ ಸಂಶಯೋ ಮಹಾನ್ ॥12॥
ನಮ್ಮಂತಹ ಅನೇಕ ನಿಶಾಚರರು ಸುಖವಾಗಿ ಲೋಕದಲ್ಲಿ ಸಂಚರಿಸುತ್ತಿರುತ್ತಾರೆ. ಎಲೈ ರಾಜನೇ, ಆದ್ದರಿಂದ ಮನೆಗಳಲ್ಲಿ ಈ ರಕ್ಷೋಘ್ನವಾದ ಕಾರ್ಯವನ್ನು ಮಾಡಿ, ರಕ್ಷೋಘ್ನವಾದ ವಸ್ತುವನ್ನು ಇಟ್ಟುಕೊಳ್ಳಬೇಕು. ನಿಮಗೆ ಬಹಳ ಸಂಶಯವಿದ್ದ ಈ ವಿಷಯವೆಲ್ಲವನ್ನೂ ಹೇಳಿದ್ದೇವೆ.
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ಪ್ರಥಮೋಪದೇಶೋ ನಾಮ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ಮೂರನೆಯ ಅಧ್ಯಾಯ
ದಿಗ್ಗಜಗಳಿಂದ ಧರ್ಮೋಪದೇಶ
ಭೀಷ್ಮಃ
ತತಃ ಪದ್ಮಪ್ರತೀಕಾಶಃ ಪದ್ಮೋದ್ಭೂತಃ ಪಿತಾಮಹಃ |
ಉವಾಚ ವಚನಂ ದೇವಾನ್ ವಾಸವಂ ಚ ಶಚೀಪತಿಮ್ ॥1॥
ಭೀಷ್ಮ ಅನಂತರ ಪದ್ಮಕಾಂತಿಯನ್ನು ಹೊಂದಿದ, ಪದ್ಮದಿಂದ ಜನಿಸಿದ, ಪಿತಾಮಹರಾದ ಬ್ರಹ್ಮದೇವರು ದೇವತೆಗಳನ್ನೂ ಮತ್ತು ಶಚೀಪತಿಯಾದ ಇಂದ್ರನನ್ನೂ ಕುರಿತು ಮಾತನಾಡಿದರು.
ಅಯಂ ಮಹಾಬಲೋ ನಾಗೋ ರಸಾತಳಚರೋ ಬಲೀ |
ತೇಜಸ್ವೀ ರೇಣುಕೋ ನಾಮ ಮಹಾಸತ್ವಪರಾಕ್ರಮಃ ॥2॥
ಈ ರೇಣುಕನೆಂಬ ಗಜವು ರಸಾತಳ ಸಂಚಾರಿಯಾಗಿ ಮಹಾಬಲವುಳ್ಳದ್ದೂ, ತೇಜಸ್ಸುಳ್ಳದ್ದೂ ಮತ್ತು ಧೈರ್ಯ-ಪರಾಕ್ರಮವುಳ್ಳದ್ದೂ ಆಗಿದೆ.
ಅತಿತೇಜಸ್ವಿನಃ ಸರ್ವೇ ಮಹಾವೀರ್ಯಾ ಮಹಾಗಜಾಃ |

ಧಾರಯಂತಿ ಮಹೀಂ ಕೃತ್ಸ್ನಾಂ ಸಶೈಲವನಕಾನನಾಮ್ ॥3॥
ಬಹಳ ಸಾಮರ್ಥ್ಯವನ್ನು ಹೊಂದಿದ, ಪರಾಕ್ರಮಶಾಲಿಗಳಾದ ಮಹಾಗಜಗಳು ಶೈಲ-ವನ-ಕಾನನ ಸಹಿತವಾದ ಸಮಗ್ರವಾದ ಭೂಮಿಯನ್ನು ಹೊರುತ್ತವೆ.
ಭವದ್ಭಿಃ ಸಮನುಜ್ಞಾತೋ ರೇಣುಕಸ್ತಾನ್ ಮಹಾಗಜಾನ್ |
ಧರ್ಮಗುಹ್ಯಾನಿ ಸರ್ವಾಣಿ ಗತ್ವಾ ಪೃಚ್ಛತು ತತ್ರ ವೈ ॥4॥
ರೇಣುಕನು ನಿಮ್ಮ ಅನುಮತಿಯನ್ನು ಪಡೆದು ಆ ಮಹಾಗಜಗಳ ಬಳಿಗೆ ಹೋಗಿ ಎಲ್ಲಾ ಧರ್ಮೋಪದೇಶಗಳನ್ನು ಕೇಳಲಿ (ಎಂದು ಹೇಳಿದರು).
ಪಿತಾಮಹವಚಃ ಶ್ರುತ್ವಾ ತೇ ದೇವಾ ರೇಣುಕಂ ತದಾ |
ಪ್ರೇಷಯಾಮಾಸುರವ್ಯಗ್ರಾ ಯತ್ರ ತೇ ಧರಣೀಧರಾಃ ॥5॥
ಬ್ರಹ್ಮದೇವರ ಮಾತುಗಳನ್ನು ಕೇಳಿ ಆಗ ಆ ದೇವತೆಗಳು ರೇಣುಕನನ್ನು ಭೂಮಿಯನ್ನು ಹೊತ್ತ ಗಜಗಳು ಇರುವಲ್ಲಿಗೆ ಕಳುಹಿಸಿದರು.
ರೇಣುಕಃ
ಅನುಜ್ಞಾತೋಽಸ್ಮಿ ದೇವೈಶ್ಚ ಪಿತೃಭಿಶ್ಚ ಮಹಾಬಲಾಃ |
ಧರ್ಮಗುಹ್ಯಾನಿ ಯುಷ್ಮಾಕಂ ಶ್ರೋತುಮಿಚ್ಛಾಮಿ ತತ್ತ್ವತಃ |
ಕಥಯಧ್ವಂ ಮಹಾಭಾಗಾ ಯದ್ವಸ್ತತ್ತ್ವಂ ಮನೀಷಿತಮ್ ॥6॥
ರೇಣುಕ ಎಲೈ ಮಹಾಬಲರೇ, ದೇವತೆಗಳಿಂದಲೂ ಮತ್ತು ಪಿತೃಗಳಿಂದಲೂ ನಾನು ಅನುಮತಿಯನ್ನು ಪಡೆದಿದ್ದೇನೆ. ನಿಮ್ಮಿಂದ ಧರ್ಮರಹಸ್ಯವನ್ನು ಸರಿಯಾಗಿ ಕೇಳಲು ಬಯಸುತ್ತೇನೆ. ಮಹಾನುಭಾವರೇ, ನಿಮಗೆ ಅಭಿಪ್ರೇತವಾದ ಧರ್ಮತತ್ತ್ವಗಳನ್ನು ಹೇಳಿ.
ದಿಗ್ಗಜಾಃ
ಕಾರ್ತಿಕೇ ಮಾಸಿ ಚಾಶ್ಲೇಷಾ ಬಹುಲಸ್ಯಾಷ್ಟಮೀ ಶಿವಾ |
ತೇನ ನಕ್ಷತ್ರಯೋಗೇನ ಯೋ ದದಾತಿ ಗುಡೌದನಮ್ |
ಇಮಂ ಮಂತ್ರಂ ಜಪನ್ ಶ್ರಾದ್ಧೇ ಯತಾಹಾರೋ ಹ್ಯಕೋಪನಃ ॥7॥
ದಿಗ್ಗಜ ಕಾರ್ತಿಕಮಾಸದ ಕೃಷ್ಣಪಕ್ಷದ ಅಷ್ಟಮಿಯಂದು, ಆಶ್ಲೇಷಾ ನಕ್ಷತ್ರವಿರುವ ಶುಭದಿನದಲ್ಲಿ ಮಾನವನು ನಿಯತಾಹಾರನಾಗಿ, ಕೋಪವನ್ನು ತ್ಯಜಿಸಿದವನಾಗಿ ಈ ಮಂತ್ರವನ್ನು ಹೇಳುತ್ತಾ ಗುಡೋದನವನ್ನು ದಾನ ಮಾಡಬೇಕು.
ಬಲದೇವಪ್ರಭೃತಯೋ ಯೇ ನಾಗಾ ಬಲವತ್ತರಾಃ |
ಅನಂತಾ ಹ್ಯಕ್ಷಯಾ ನಿತ್ಯಂ ಭೋಗಿನಃ ಸುಮಹಾಬಲಾಃ ॥8॥
ತೇಷಾಂ ಕುಲೋದ್ಭವಾ ಯೇ ಚ ಮಹಾಭೂತಾ ಭುಜಂಗಮಾಃ |
ತೇ ಮೇ ಬಲಿಂ ಪ್ರಯಚ್ಛಂತು ಬಲತೇಜೋಭಿವೃದ್ಧಯೇ ॥9॥
ಶೇಷದೇವನ ಮಕ್ಕಳಾದ ಬಲಿಷ್ಠವಾದ ನಾಗಗಳು ಯಾವುವು ಇವೆಯೋ ಅನಂತವಾದ, ಅಕ್ಷಯವಾದ, ದೊಡ್ಡ ಶರೀರವನ್ನು ಹೊಂದಿದ, ಅತ್ಯಂತ ಬಲವನ್ನು ಹೊಂದಿದ ನಾಗಗಳು ಯಾವುವು ಇವೆಯೋ, ಅವುಗಳ ಕುಲದಲ್ಲಿ ಹುಟ್ಟಿದ, ದೊಡ್ಡ ಶರೀರವನ್ನು ಧರಿಸಿದ ನಾಗಗಳು ಏನಿವೆಯೋ ಅವೆಲ್ಲವೂ ನನ್ನ ಬಲ-ತೇಜೋ ಅಭಿವೃದ್ಧಿಗಾಗಿ ನನ್ನ ಈ ಪೂಜೆಯನ್ನು (ನೈವೇದ್ಯವನ್ನು) ಸ್ವೀಕರಿಸಲಿ.
ಯದಾ ನಾರಾಯಣಃ ಶ್ರೀಮಾನುಜ್ಜಹಾರ ವಸುಂಧರಾಮ್ |
ತದ್ಬಲಂ ತಸ್ಯ ದೇವಸ್ಯ ಧರಾಮುದ್ಧರತಸ್ತಥಾ ॥10॥
ಕಾಂತಿಯುಕ್ತನಾದ ನಾರಾಯಣನು ಭೂಮಿಯನ್ನು ಎತ್ತುವಾಗ ಆ ದೇವನಿಗೆ ಎಂತಹ ಬಲವಿದ್ದಿತೋ (ಅಂತಹ ಬಲದ ಒಂದಂಶವು ಉಂಟಾಗಲಿ).
ಏವಮುಕತ್ವ ಬಲಿಂ ತತ್ರ ವಲ್ಮೀಕೇ ತು ನಿವೇದಯೇತ್ ॥11॥
ಎಂಬ ಈ ಮಂತ್ರವನ್ನು ಹೇಳಿ ಹುತ್ತದಲ್ಲಿ ಗುಡೋದನ ಬಲಿಯನ್ನು ಹಾಕಬೇಕು.
ಗಜೇಂದ್ರಕುಸುಮಾಕೀರ್ಣಂ ನೀಲವಸತ್ರನುಲೇಪನಮ್ |
ನಿರ್ವಪೇತ್ ತಂ ತು ವಲ್ಮೀಕೇ ಅಸ್ತಂ ಯಾತೇ ದಿವಾಕರೇ ॥12॥
ಸೂರ್ಯನು ಅಸ್ತಂಗತನಾದಮೇಲೆ ನಾಗಕೇಸರ ಪುಷ್ಪಗಳನ್ನು ಹುತ್ತದ ಮೇಲೆ ಹಾಕಿ, ನೀಲವಸ್ತ್ರವನ್ನು ಹೊದಿಸಿ, ಗಂಧವನ್ನು ಅರ್ಪಿಸಿ ನೈವೇದ್ಯವನ್ನು ಕೊಡಬೇಕು.
ಏವಂ ತುಷ್ಟಾಸ್ತತಃ ಸರ್ವೇ ಅಧಸ್ತಾದ್ ಭಾರಪೀಡಿತಾಃ |
ಶ್ರಮಂ ತಂ ನಾವಬುಧ್ಯಾಮೋ ಧಾರಯಂತೋ ವಸುಂಧರಾಮ್ ॥
ಹೀಗೆ ಮಾಡಿದರೆ ಭೂಮಿಯನ್ನು ಹೊತ್ತು ಭಾರವನ್ನು ಹೊತ್ತಿರುವ ನಮಗೆಲ್ಲರಿಗೂ ಶ್ರಮವೇ ಉಂಟಾಗುವುದಿಲ್ಲ.
ಏವಂ ಮನ್ಯಾಮಹೇ ಧರ್ಮಂ ಭಾರಾರ್ತಾ ನಿರಪೇಕ್ಷಿಣಃ |
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಯದ್ಯುಪೋಷಿತಃ ॥14॥
ಏವಂ ಸಂವತ್ಸರಂ ಕೃತ್ವಾ ದಾನಂ ಬಹುಫಲಂ ಲಭೇತ್ |
ವಲ್ಮೀಕೇ ಬಲಿಮಾದಾಯ ತನ್ನೋ ಬಹುಫಲಂ ಮತಮ್ ॥15॥
ಭಾರಾರ್ತರಾಗಿ ಬೇರೆ ಏನನ್ನೂ ಅಪೇಕ್ಷಿಸದಿರುವ ನಾವು ಇದನ್ನು ಧರ್ಮವೆಂದು ತಿಳಿಯುತ್ತೇವೆ. ಬ್ರಾಹ್ಮಣನಾಗಲೀ, ಕ್ಷತ್ರಿಯನಾಗಲೀ, ವೈಶ್ಯನಾಗಲೀ, ಶೂದ್ರನಾಗಲೀ ಉಪವಾಸದಿಂದಿದ್ದು, ಒಂದು ಸಂವತ್ಸರದ ಕಾಲ ಹೀಗೆ ಗುಡೋದನ ದಾನವನ್ನು ಮಾಡಿದರೆ ಅವನಿಗೆ ಬಹಳ ಫಲ ಉಂಟಾಗುತ್ತದೆ. ಹುತ್ತದಲ್ಲಿ ಬಲಿಯನ್ನು ಹಾಕಿದರೆ ಅದು ನಮಗೂ ಬಹಳ ಫಲವನ್ನು ಕೊಡುತ್ತದೆ.

ಯೇ ಚ ನಾಗಾ ಮಹಾವೀರ್ಯಾಸ್ತ್ರಿಷು ಲೋಕೇಷು ಕೃತ್ಸ್ನಶಃ |
ಕೃತಾತಿಥ್ಯಾ ಭವೇಯುಸ್ತೇ ಶತಂ ವರ್ಷಾಣಿ ತತ್ತ್ವತಃ ||16||
ಮೂರುಲೋಕಗಳಲ್ಲಿರುವ ಮಹಾಸಾಮರ್ಥ್ಯವುಳ್ಳ ಎಲ್ಲ ನಾಗಗಳೂ ಈ ನೈವೇದ್ಯ ದಾನದಿಂದ ನೂರು ವರ್ಷಗಳ ಕಾಲ ಆತಿಥ್ಯವನ್ನು ಸ್ವೀಕರಿಸಿದಂತೆ ಆಗುತ್ತವೆ (ಫಲವನ್ನು ಕೊಡುತ್ತವೆ).
|| ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ಮೂರನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಂಬತ್ನಾಲ್ಕನೆಯ ಅಧ್ಯಾಯ

ಮಹೇಶ್ವರನ ಧರ್ಮೋಪದೇಶ

ಮಹೇಶ್ವರಃ
ಸಾರಮುದ್ಧೃತ್ಯ ಯುಷ್ಮಾಭಿಃ ಸಾಧುಧರ್ಮ ಉದಾಹೃತಃ |
ಧರ್ಮಗುಹ್ಯಮಿದಂ ಮತ್ತಃ ಶೃಣುಧ್ವಂ ಸರ್ವ ಏವ ಹ ||1||
ಮಹೇಶ್ವರ ನಿಮ್ಮಿಂದ ಸಾರವನ್ನು ಉದ್ಧರಿಸಿ ಸದ್ಧರ್ಮವು ಹೇಳಲ್ಪಟ್ಟಿತು. ಎಲ್ಲರೂ ನಾನು ಹೇಳುವ ಈ ಧರ್ಮರಹಸ್ಯವನ್ನು ಕೇಳಿ.
ಯೇಷಾಂ ಧರ್ಮಾಶ್ರಿತಾ ಬುದ್ಧಿಃ ಶ್ರದ್ದಧಾನಾಶ್ಚ ಯೇ ನರಾಃ |
ತೇಷಾಂ ಸ್ಯಾದುಪದೇಷ್ಟವ್ಯಃ ಸರಹಸ್ಯೋ ಮಹಾಫಲಃ ||2||
ಯಾರ ಬುದ್ಧಿಯು ಧರ್ಮವನ್ನೇ ಆಶ್ರಯಿಸಿರುತ್ತದೆಯೋ ಮತ್ತು ಯಾರು ಶ್ರದ್ಧೆಯಿಂದ ಕೂಡಿರುತ್ತಾರೋ ಅಂತಹವರಿಗೆ ರಹಸ್ಯವೂ, ಮಹಾಫಲದಾಯಕವೂ ಆದ ಧರ್ಮವನ್ನು ಉಪದೇಶ ಮಾಡಬೇಕು.
ನಿರುದ್ವಿಗ್ನಸ್ತು ಯೋ ದದ್ಯಾನ್ಮಾಸಮೇಕಂ ಗವಾಹ್ನಿಕಮ್ |
ಏಕಭಕ್ತಂ ತಥಾಽಶ್ನೀಯಾಚ್ಛ್ರೂಯತಾಂ ತಸ್ಯ ಯತ್ಫಲಮ್ ||3||
ಯಾವ ಉದ್ವೇಗವೂ ಇಲ್ಲದೆ ಒಂದು ತಿಂಗಳ ಕಾಲ ಪ್ರತಿದಿನವೂ ಗೋವುಗಳಿಗೆ ಆಹಾರವನ್ನು ನೀಡಿ ಯಾವನು ಒಂದೇ ಹೊತ್ತು ಭೋಜನವನ್ನು ಮಾಡುತ್ತಾನೆಯೋ ಅವನಿಗೆ ಉಂಟಾಗುವ ಫಲವನ್ನು ಕೇಳಿ.
ಇಮಾ ಗಾವೋ ಮಹಾಭಾಗಾಃ ಪವಿತ್ರಂ ಪರಮಂ ಸ್ಮೃತಾಃ |
ತ್ರೀನ್ ಲೋಕಾನ್ ಧಾರಯಂತಿ ಸ್ಮ ಸದೇವಾಸುರಮಾನುಷಾನ್ ||4||
ಎಲೈ ಮಹಾನುಭಾವರೇ, ಈ ಗೋವುಗಳು ಪರಮ ಪವಿತ್ರವಾದವುಗಳು ಎಂದು ಹೇಳಲ್ಪಡುತ್ತವೆ. ಇವು ದೇವಾಸುರ-ಮನುಷ್ಯರಿಂದ ಸಹಿತವಾದ ಮೂರು ಲೋಕಗಳನ್ನೂ ಧರಿಸುತ್ತವೆ.
ತಾಸು ಚೈವ ಮಹಾಪುಣ್ಯಂ ಶುಶ್ರೂಷಾ ಚ ಮಹಾಫಲಮ್ |
ಅಹನ್ಯಹನಿ ಧರ್ಮೇಣ ಯುಜ್ಯತೇ ವೈ ಗವಾಹ್ನಿಕಃ ||5||
ಅವುಗಳಿಗೆ ಮಾಡುವ ಸೇವೆಯು ಮಹಾಪುಣ್ಯಪ್ರದವಾದುದು ಮತ್ತು ಮಹಾಫಲವನ್ನು ಕೊಡುವಂತಹದು. ನಿತ್ಯವೂ ಗೋವಿಗೆ ಗ್ರಾಸವನ್ನು ಕೊಡುವವನು ಧರ್ಮವನ್ನು ಸಂಪಾದಿಸುತ್ತಾನೆ.
ಮಯಾ ಹ್ಯೇತಾ ಹ್ಯನುಜ್ಞಾತಾಃ ಪೂರ್ವಮಾಸನ್ ಕೃತೇ ಯುಗೇ |
ತತೋಽಹಮನುನೀತೋ ವೈ ಬ್ರಹ್ಮಣಾ ಪದ್ಮಯೋನಿನಾ ||6||
ನಾನು ಹಿಂದೆ ಕೃತಯುಗದಲ್ಲಿ ನನ್ನ ಜೊತೆಯಲ್ಲಿರುವಂತೆ ಗೋವುಗಳಿಗೆ ಅನುಮತಿಯನ್ನು ನೀಡಿದ್ದೆ. ಅನಂತರ ಪದ್ಮಯೋನಿಗಳಾದ ಬ್ರಹ್ಮದೇವರು ನನ್ನನ್ನು ಸಮಾಧಾನ ಪಡಿಸಿ ಒಪ್ಪಿಸಿದರು.
ತಸ್ಮಾದ್ ವ್ರಜಸ್ಥಾನಗತಸ್ತಿಷ್ಠತ್ಯುಪರಿ ಮೇ ವೃಷಃ |
ರಮೇಽಹಂ ಸಹ ಗೋಭಿಶ್ಚ ತಸ್ಮಾತ್ ಪೂಜ್ಯಾಃ ಸದೈವ ತಾಃ ||7||
ಆದ್ದರಿಂದ ಗೋಶಾಲೆಯಲ್ಲಿದ್ದ ವೃಷಭವು ಈಗ ನನ್ನ ಧ್ವಜದಲ್ಲಿರುತ್ತದೆ. ನಾನೂ ಸಹ ಗೋವುಗಳ ಜೊತೆಯಲ್ಲಿ ಸಂತೋಷದಿಂದ ಇರುತ್ತೇನೆ. ಆದ್ದರಿಂದ ಗೋವುಗಳನ್ನು ಸದಾ ಪೂಜಿಸಬೇಕು.
ಮಹಾಪ್ರಭಾವಾ ವರದಾ ವರಾನ್ ದದ್ಯುರುಪಾಸಿತಾಃ |
ತಾ ಗಾವೋಽಸ್ಯಾನುಮನ್ಯಂತೇ ಸರ್ವಕರ್ಮಸು ಯತ್ಫಲಮ್ ||8||
ಮಹಾಸಾಮರ್ಥ್ಯವನ್ನು ಹೊಂದಿದ, ವರಪ್ರದವಾದ ಗೋವುಗಳನ್ನು ಉಪಾಸನೆ ಮಾಡಿದರೆ ಅವು ವರಗಳನ್ನು ಕೊಡುವವು. ಆ ಗೋವುಗಳು ಮನುಷ್ಯರು ಮಾಡಿದ ಸರ್ವಕರ್ಮಗಳಿಗೆ ಶಾಸ್ತ್ರದಲ್ಲಿ ಹೇಳಿದ ಫಲಗಳನ್ನು ಅನುಮೋದಿಸುತ್ತವೆ.
ತಸ್ಯ ತತ್ರ ಚತುರ್ಭಾಗೋ ಯೋ ದದಾತಿ ಗವಾಹ್ನಿಕಮ್ ||9||
ನಿತ್ಯವೂ ಗೋಗ್ರಾಸವನ್ನು ಕೊಡುವವನಿಗೆ ಸತತವಾಗಿ ಗೋಸೇವೆಯನ್ನು ಮಾಡುವವನ ನಾಲ್ಕನೆಯ ಒಂದು ಭಾಗದಷ್ಟು ಪುಣ್ಯವು ಬರುತ್ತದೆ.
|| ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ಮಹಾದೇವರಹಸ್ಯಂ ನಾಮ ಚತುರಶೀತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

ನೂರ ಎಂಬತ್ತೈದನೆಯ ಅಧ್ಯಾಯ

ಸ್ಕಂದನ ಉಪದೇಶ ಮತ್ತು ವಿಷ್ಣುವಿನಿಂದ ಸರ್ವಧರ್ಮಗಳ ಅನುಮೋದನೆ
ಸ್ಕಂದಃ
ಮಮಾಪ್ಯನುಮತೋ ಧರ್ಮಸ್ತಂ ಶೃಣುಧ್ವಂ ಸಮಾಹಿತಾಃ |
ನೀಲಷಂಡಸ್ಯ ಶೃಂಗಾಭ್ಯಾಂ ಗೃಹೀತ್ವಾ ಮೃತ್ತಿಕಾಂ ತು ಯಃ ॥1॥
ಅಭಿಷೇಕಂ ತ್ರ್ಯಹಂ ಕುರ್ಯಾತ್ ತಸ್ಯ ಧರ್ಮಂ ನಿಬೋಧತ |
ಶೋಧಯೇದಶುಭಂ ಸರ್ವಮಾಧಿಪತ್ಯಂ ಪರತ್ರ ಚ |
ಯಾವಚ್ಚ ಜಾಯತೇ ಮರ್ತ್ಯಸ್ತಾವಚ್ಛೂರೋ ಭವಿಷ್ಯತಿ ॥2॥
ಸ್ಕಂದ ನನಗೂ ಧರ್ಮವು ಅನುಮತವಾಗಿದೆ. ಅದನ್ನು ಸಮಾಧಾನದಿಂದ ಕೇಳಿ. ಕಪ್ಪಾದ ವೃಷಭವು ಶೃಂಗದಿಂದ ಎತ್ತಿದ ಮೃತ್ತಿಕೆಯನ್ನು ಲೇಪಿಸಿಕೊಂಡು ಯಾವನು ಮೂರು ದಿವಸಗಳಲ್ಲಿ ಸ್ನಾನವನ್ನು ಮಾಡುತ್ತಾನೆಯೋ ಅವನಿಗೆ ಉಂಟಾಗುವ ಧರ್ಮವನ್ನು ತಿಳಿಯಿರಿ. ಅದು ಅವನ ಅಶುಭವೆಲ್ಲವನ್ನೂ ಶೋಧಿಸುತ್ತದೆ. ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸರ್ವಾಧಿಪತ್ಯವನ್ನು ಕೊಡುತ್ತದೆ. ಎಷ್ಟು ಬಾರಿ ಜನಿಸುತ್ತಾನೆಯೋ ಅಷ್ಟು ಬಾರಿ ಶೂರನಾಗುತ್ತಾನೆ.
ಇದಂ ಚಾಪ್ಯಪರಂ ಗುಹ್ಯಂ ಸರಹಸ್ಯಂ ನಿಬೋಧತ ॥3॥
ಪ್ರಗೃಹ್ಯೌದುಂಬರಂ ಪಾತ್ರಂ ಪಕ್ವಾನ್ನಂ ಮಧುನಾ ಸಹ |
ಸೋಮಸ್ಯೋತ್ತಿಷ್ಠಮಾನಸ್ಯ ಪೌರ್ಣಮಾಸ್ಯಾಂ ಬಲಿಂ ಹರೇತ್ ॥4॥
ಇನ್ನೊಂದು ಧರ್ಮರಹಸ್ಯವನ್ನು ತಿಳಿಯಿರಿ. ಅತ್ತಿಯ ಪಾತ್ರೆಯನ್ನು ತೆಗೆದುಕೊಂಡು ಜೇನುತುಪ್ಪವನ್ನು ಬೆರೆಸಿದ ಪಕ್ವಾನ್ನವನ್ನು ಚಂದ್ರೋದಯದ ಸಮಯದಲ್ಲಿ ಪೌರ್ಣಮಾಸಿಯ ದಿವಸ ಚಂದ್ರನಿಗೆ ಸಮರ್ಪಿಸಬೇಕು.
ತಸ್ಯ ಧರ್ಮಫಲಂ ನಿತ್ಯಂ ಶ್ರದ್ದಧಾನಾ ನಿಬೋಧತ |
ಸಾಧ್ಯಾ ರುದ್ರಾಸ್ತಥಾऽऽದಿತ್ಯಾ ವಿಶ್ವೇದೇವಾಸ್ತಥಾऽಶ್ವಿನೌ ॥5॥
ಮರುತೋ ವಸವಶ್ಚೈವ ಪ್ರತಿಗೃಹ್ಣಂತಿ ತಂ ಬಲಿಮ್ |
ಸೋಮಶ್ಚ ವರ್ಧತೇ ತೇನ ಸಮುದ್ರಶ್ಚ ಮಹೋದಧಿಃ ॥6॥
ಏಷ ಧರ್ಮೋ ಮಯೋದ್ದಿಷ್ಟಃ ಸರಹಸ್ಯಃ ಸುಖಾವಹಃ ॥7॥
ಶ್ರದ್ಧೆಯುಳ್ಳ ನೀವು ಅದರಿಂದ ಉಂಟಾಗುವ ಧರ್ಮಫಲವನ್ನು ತಿಳಿಯಿರಿ. ಆ ಪೂಜೆಯನ್ನು ಸಾಧ್ಯರೂ, ರುದ್ರರೂ, ಆದಿತ್ಯರೂ, ವಿಶ್ವೇದೇವತೆಗಳೂ, ಅಶ್ವಿನಿಗಳೂ, ಮರುತ್ತುಗಳೂ ಮತ್ತು ವಸುಗಳೂ ಸ್ವೀಕರಿಸುತ್ತಾರೆ. ಅದರಿಂದ ಚಂದ್ರನು ಅಭಿವೃದ್ಧಿಯನ್ನು ಹೊಂದುತ್ತಾನೆ. ಸಮುದ್ರವು ವೃದ್ಧಿಯನ್ನು ಹೊಂದುತ್ತದೆ. ಇದು ನಾನು ಹೇಳಲು ಉದ್ದೇಶಿಸಿದ್ದ ಸುಖಪ್ರದವಾದ, ರಹಸ್ಯವಾದ ಧರ್ಮ.
ವಿಷ್ಣುಃ
ಧರ್ಮಗುಹ್ಯಾನಿ ಸರ್ವಾಣಿ ದೇವತಾನಾಂ ಮಹಾತ್ಮನಾಮ್ |
ಋಷೀಣಾಂ ಚೈವ ಗುಹ್ಯಾನಿ ಯಃ ಪಠೇದಾಹ್ನಿಕಂ ಸದಾ ॥8॥
ಶೃಣುಯಾದ್ ವಾऽನಸೂಯುರ್ಯಃ ಶ್ರದ್ದಧಾನಃ ಸಮಾಹಿತಃ |
ನಾಸ್ಯ ವಿಘ್ನಃ ಪ್ರಭವತಿ ಭಯಂ ಚಾಸ್ಯ ನ ವಿದ್ಯತೇ ॥9॥
ವಿಷ್ಣು ಯಾವನು ಮಹಾತ್ಮರಾದ ದೇವತೆಗಳು ಮತ್ತು ಋಷಿಗಳು ಹೇಳಿದ ಈ ಎಲ್ಲಾ ಧರ್ಮಗುಹ್ಯಗಳನ್ನೂ ಪ್ರತಿದಿನವೂ ಪಠಿಸುತ್ತಾನೆಯೋ ಅಥವಾ ಶ್ರದ್ಧೆ, ಸಮಾಧಾನದಿಂದ ಕೂಡಿ ಅಸೂಯೆಯನ್ನು ತೊರೆದು ಹೇಳುತ್ತಾನೆಯೋ ಅವನಿಗೆ ಯಾವ ವಿಘ್ನವೂ ಉಂಟಾಗುವುದಿಲ್ಲ. ಯಾವ ಭಯವೂ ಉಂಟಾಗುವುದಿಲ್ಲ.
ಯೇ ಚ ಧರ್ಮಾಃ ಶುಭಾಃ ಪುಣ್ಯಾಃ ಸರಹಸ್ಯಾ ಉದಾಹೃತಾಃ |
ತೇಷಾಂ ಧರ್ಮಫಲಂ ತಸ್ಯ ಯಃ ಪಠೇತ ಜಿತೇಂದ್ರಿಯಃ ॥10॥
ಯಾವನು ಜಿತೇಂದ್ರಿಯನಾಗಿ ಈ ಆಖ್ಯಾನವನ್ನು ಪಠಿಸುತ್ತಾನೆಯೋ ಅವನಿಗೆ ಈ ಆಖ್ಯಾನದಲ್ಲಿ ಹೇಳಿದ ರಹಸ್ಯವಾದ, ಪುಣ್ಯಪ್ರದವಾದ, ಶುಭವಾದ ಎಲ್ಲ ಧರ್ಮಗಳ ಫಲವೂ ಉಂಟಾಗುತ್ತದೆ.
ನಾಸ್ಯ ಪಾಪಂ ಪ್ರಭವತಿ ನ ಚ ಪಾಪೇನ ಲಿಪ್ಯತೇ |
ಪಠೇದ್ ವಾ ಶ್ರಾವಯೇದ್ ವಾಪಿ ಶ್ರುತ್ವಾ ವಾ ಲಭತೇ ಫಲಮ್ ॥
ಅವನನ್ನು ಪಾಪವು ಆಕ್ರಮಿಸುವುದಿಲ್ಲ. ಅವನಿಗೆ ಪಾಪದ ಲೇಪವೂ ಆಗುವುದಿಲ್ಲ. ಇದನ್ನು ಪಠಿಸುವವನೂ, ಕೇಳುವವನೂ ಮತ್ತು ಹೇಳುವವನೂ ಅಂತಹ ಫಲವನ್ನು ಪಡೆಯುತ್ತಾನೆ.
ಭುಂಜತೇ ಪಿತರೋ ದೇವಾ ಹವ್ಯಂ ಕವ್ಯಮಥಾಕ್ಷಯಮ್ |
ಶ್ರಾವಯಂಶ್ಚಾಪಿ ವಿಪ್ರೇಂದ್ರಾನ್ ಪರ್ವಸು ಪ್ರಯತೋ ನರಃ ॥12॥
ಋಷೀಣಾಂ ದೇವತಾನಾಂ ಚ ಪಿತೄಣಾಂ ಚೈವ ನಿತ್ಯದಾ |
ಭವತ್ಯಭಿಮತಃ ಶ್ರೀಮಾನ್ ಧರ್ಮೇಷು ಪ್ರಯತಃ ಸದಾ ॥13॥
ಪಿತೃಗಳು ಮತ್ತು ದೇವತೆಗಳು ಭುಂಜಿಸುವ ಹವ್ಯ-ಕವ್ಯಗಳು ಅಕ್ಷಯವಾಗುತ್ತವೆ. ಶ್ರೇಷ್ಠ ಬ್ರಾಹ್ಮಣರಿಗೆ ಪರ್ವಕಾಲದಲ್ಲಿ ಇದನ್ನು ಪ್ರವಚನ ಮಾಡುವ ಮನುಷ್ಯನು ದೇವತೆಗಳಿಗೂ, ಪಿತೃಗಳಿಗೂ ಮತ್ತು ಋಷಿಗಳಿಗೂ ಯಾವಾಗಲೂ ಸಮ್ಮತನಾಗಿ, ಸಂಪದ್ಯುಕ್ತನಾಗಿ ಧರ್ಮನಿರತನಾಗುತ್ತಾನೆ.
ಕೃತ್ವಾऽಪಿ ಪಾಪಕಂ ಕರ್ಮ ಮಹಾಪಾತಕವರ್ಜಿತಮ್ |
ರಹಸ್ಯಧರ್ಮಂ ಶ್ರುತ್ವೇಮಂ ಸರ್ವಪಾಪೈಃ ಪ್ರಮುಚ್ಯತೇ ॥14॥

ಮಹಾಪಾತಕಗಳನ್ನು ಬಿಟ್ಟು ಬೇರೆ ಪಾಪಗಳನ್ನು ಮಾಡಿದವನೂ ಸಹ ಈ ರಹಸ್ಯಧರ್ಮವನ್ನು ಶ್ರವಣ ಮಾಡಿದರೆ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಭೀಷ್ಮ:
ಏತದ್ ಧರ್ಮರಹಸ್ಯಂ ವೈ ದೇವತಾನಾಂ ನರಾಧಿಪ |
ವ್ಯಾಸೋದ್ದಿಷ್ಟಂ ಮಯಾ ಪ್ರೋಕ್ತಂ ಸರ್ವದೇವನಮಸ್ಕೃತಮ್ ॥15॥
ಭೀಷ್ಮ ಎಲೈ ರಾಜನೇ, ದೇವತೆಗಳು ಹೇಳಿದ ಈ ಧರ್ಮರಹಸ್ಯವು ಸರ್ವದೇವ ನಮಸ್ಕೃತವಾದುದು ಮತ್ತು ವ್ಯಾಸರು ನನಗೆ ಹೇಳಿದುದು. ಅದನ್ನೂ ನಾನು ನಿನಗೆ ಹೇಳಿದ್ದೇನೆ.
ಪೃಥಿವೀ ರತ್ನಸಂಪೂರ್ಣಾ ಜ್ಞಾನಂ ಚೇದಮನುತ್ತಮಮ್ |
ಇದಮೇವ ತತಃ ಶ್ರಾವ್ಯಮಿತಿ ಮನ್ಯೇತ ಧರ್ಮವಿತ್ ॥16॥
ಒಂದು ಕಡೆ ರತ್ನಸಂಪೂರ್ಣವಾದ ಪೃಥಿವಿ. ಇನ್ನೊಂದು ಕಡೆ ಈ ಶ್ರೇಷ್ಠವಾದ ಧರ್ಮಗುಹ್ಯಗಳ ಜ್ಞಾನ. ಹೀಗಿದ್ದರೆ ಧರ್ಮಜ್ಞನಾದವನು ಗುಹ್ಯಧರ್ಮಗಳ ಜ್ಞಾನವನ್ನೇ ಶ್ರವಣದಿಂದ ಪಡೆಯಬೇಕು ಎಂದು ತಿಳಿಯಬೇಕು.
ನಾಶ್ರದ್ದಧಾನಾಯ ನ ನಾಸ್ತಿಕಾಯ ನ ನಷ್ಟಧರ್ಮಾಯ ನ ನಿರ್ಗುಣಾಯ |
ನ ಹೇತುದುಷ್ಟಾಯ ಗುರುದ್ವಿಷೇ ವಾ ನಾನಾತ್ಮಭೂತಾಯ ನಿವೇದ್ಯಮೇತತ್ ॥
ಇದನ್ನು ಶ್ರದ್ಧೆ ಇಲ್ಲದವನಿಗೆ, ನಾಸ್ತಿಕನಿಗೆ, ಧರ್ಮಾಚರಣೆ ಇಲ್ಲದವನಿಗೆ, ಗುಣಹೀನನಾದವನಿಗೆ, ಎಲ್ಲದನ್ನೂ ಪ್ರಯೋಜನ ದೃಷ್ಟಿಯಿಂದ ಮಾಡುವವನಿಗೆ, ಗುರುದ್ವೇಷ ಮಾಡುವವನಿಗೆ, ದೇವರ ಸ್ಮರಣೆ ಇಲ್ಲದವನಿಗೆ ಹೇಳಬಾರದು.
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ಸರ್ವರಹಸ್ಯಂ ನಾಮ ಪಂಚಾಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತಾರನೆಯ ಅಧ್ಯಾಯ
ಭೋಜ್ಯಾಭೋಜ್ಯವಿವೇಕ
ಯುಧಿಷ್ಠಿರಃ
ಕೇ ಭೋಜ್ಯಾ ಬ್ರಾಹ್ಮಣಸ್ಯೇಹ ಕೇ ಭೋಜ್ಯಾಃ ಕ್ಷತ್ರಿಯಸ್ಯ ಹ |
ತಥಾ ವೈಶ್ಯಸ್ಯ ಕೇ ಭೋಜ್ಯಾಃ ಕೇ ಶೂದ್ರಸ್ಯ ಚ ಭಾರತ ॥1॥
ಯುಧಿಷ್ಠಿರ ಎಲೈ ಭಾರತನೇ, ಬ್ರಾಹ್ಮಣನು ಇಲ್ಲಿ ಯಾರಿಗೆ ಭೋಜನವನ್ನು ಮಾಡಿಸಬೇಕು? ಕ್ಷತ್ರಿಯನು ಯಾರಿಗೆ ಭೋಜನವನ್ನು ಮಾಡಿಸಬೇಕು? ವೈಶ್ಯನು ಯಾರಿಗೆ ಭೋಜನವನ್ನು ಮಾಡಿಸಬೇಕು? ಶೂದ್ರನು ಯಾರಿಗೆ ಭೋಜನವನ್ನು ಮಾಡಿಸಬೇಕು?
ಭೀಷ್ಮ:
ಬ್ರಾಹ್ಮಣಾ ಬ್ರಾಹ್ಮಣಸ್ಯೇಹ ಭೋಜ್ಯಾ ಯೇ ಚೈವ ಕ್ಷತ್ರಿಯಾಃ |
ವೈಶ್ಯಾಶ್ಚಾಪಿ ತಥಾ ಭೋಜ್ಯಾಃ ಶೂದ್ರಾಶ್ಚ ಪರಿವರ್ಜಿತಾಃ ॥2॥
ಭೀಷ್ಮ ಬ್ರಾಹ್ಮಣರು ಬ್ರಾಹ್ಮಣರಿಗೆ ಭೋಜನವನ್ನು ಭೋಜನವನ್ನು ಮಾಡಿಸಬೇಕು. ಕ್ಷತ್ರಿಯರಿಗೂ, ವೈಶ್ಯರಿಗೂ ಭೋಜನವನ್ನು ಮಾಡಿಸಬಹುದು. ಆದರೆ ಶೂದ್ರರನ್ನು ಪರಿತ್ಯಜಿಸಬೇಕು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಭೋಜ್ಯಾ ವೈ ಕ್ಷತ್ರಿಯಸ್ಯ ಹ |
ವರ್ಜನೀಯಾಸ್ತು ವೈ ಶೂದ್ರಾಃ ಸರ್ವಭಕ್ಷಾ ವಿಕರ್ಮಿಣಃ ॥3॥
ಕ್ಷತ್ರಿಯನು ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ, ವೈಶ್ಯರಿಗೂ ಭೋಜನವನ್ನು ಮಾಡಿಸಬೇಕು. ಆದರೆ ಸರ್ವಭಕ್ಷಕರಾದ, ವಿಕರ್ಮಗಳಲ್ಲಿ ನಿರತರಾದ ಶೂದ್ರರಿಗೆ ಭೋಜನವನ್ನು ಮಾಡಿಸುವಂತಿಲ್ಲ.
ವೈಶ್ಯಾಸ್ತು ಭೋಜ್ಯಾ ವಿಪ್ರಾಣಾಂ ಕ್ಷತ್ರಿಯಾಣಾಂ ತಥೈವ ಚ |
ನಿತ್ಯಾಗ್ನಯೋ ವಿವಿಕ್ತಾಶ್ಚ ಚಾತುರ್ಮಾಸ್ಯರತಾಶ್ಚ ಯೇ ॥4॥
ನಿತ್ಯಾಗ್ನಿ ಹೋತ್ರಿಗಳಾದ ಏಕಾಂತವಾಸಿಗಳಾದ, ಚಾತುರ್ಮಾಸ್ಯರತರಾದ ವೈಶ್ಯರಿಗೆ ಬ್ರಾಹ್ಮಣರು ಮತ್ತು ಕ್ಷತ್ರಿಯರು ಭೋಜನವನ್ನು ಮಾಡಿಸಬಹುದು.
ಶೂದ್ರಾಣಾಮಥ ಯೋ ಭುಂಕ್ತೇ ಸ ಭುಂಕ್ತೇ ಪೃಥಿವೀಮಲಮ್ |
ಮಲಂ ನೃಣಾಂ ಸ ಪಿಬತಿ ಮಲಂ ಭುಂಕ್ತೇ ಜನಸ್ಯ ಚ ॥5॥
ಶೂದ್ರಾಣಾಂ ಯಸ್ತಥಾ ಭುಂಕ್ತೇ ಸ ಭುಂಕ್ತೇ ಪೃಥಿವೀಮಲಮ್ |
ಪೃಥಿವೀಮಲಮಶ್ನಂತಿ ಯೇ ದ್ವಿಜಾಃ ಶೂದ್ರಭೋಜಿನಃ ॥6॥
ಯಾವ ದ್ವಿಜನು ಶೂದ್ರಾನ್ನವನ್ನು ಭುಂಜಿಸುತ್ತಾನೆಯೋ ಅವನು ಪೃಥಿವೀಮಲವನ್ನೂ, ಸರ್ವಜನರ ಮಲವನ್ನೂ ತಿನ್ನುತ್ತಾನೆ.
ಶೂದ್ರಸ್ಯ ಕರ್ಮನಿಷ್ಠಾಯಾಂ ವಿಕರ್ಮಸ್ಥೋಽಪಿ ಪಚ್ಯತೇ |
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ವಿಕರ್ಮಸ್ಥಶ್ಚ ಪಚ್ಯತೇ ॥7॥
ಶೂದ್ರನು ಕರ್ಮನಿಷ್ಠೆಯನ್ನು ಹೊಂದಿದರೆ ಅವನು ವಿಕರ್ಮಸ್ಥನಾದರೂ ನರಕದಲ್ಲಿ ಬೇಯಿಸಲ್ಪಡುತ್ತಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಶೂದ್ರಕರ್ಮದಲ್ಲಿ ನಿರತರಾದರೆ ಅವರೂ ನರಕದಲ್ಲಿ ಬೇಯಿಸಲ್ಪಡುತ್ತಾರೆ.
ಸ್ವಾಧ್ಯಾಯನಿರತಾ ವಿಪ್ರಾಸ್ತಥಾ ಸ್ವಸ್ತ್ಯಯನೇ ನೃಣಾಮ್ |
ರಕ್ಷಣೇ ಕ್ಷತ್ರಿಯಂ ಪ್ರಾಹುರ್ವೈಶ್ಯಂ ಪುಷ್ಟ್ಯರ್ಥಮೇವ ಚ ॥8॥

ಬ್ರಾಹ್ಮಣರು ಸ್ವಾಧ್ಯಾಯನಿರತರಾದವರು. ಕ್ಷತ್ರಿಯರು ಪ್ರಜೆಗಳ ಕ್ಷೇಮದಲ್ಲಿ ಮತ್ತು ರಕ್ಷಣೆಯಲ್ಲಿ ನಿರತರಾದವರು. ವೈಶ್ಯರು (ಸಮಾಜದ) ಪುಷ್ಟಿಕಾರ್ಯದಲ್ಲಿ ನಿರತರಾದವರು.
ಕರೋತಿ ಕರ್ಮ ಯದ್ವೈಶ್ಯಸ್ತದ್ಗತ್ವಾ ಹ್ಯುಪಜೀವತಿ |
ಕೃಷಿಗೋರಕ್ಷ್ಯವಾಣಿಜ್ಯಮಕುತ್ಸಾ ವೈಶ್ಯಕರ್ಮಣಿ ॥9॥
ವೈಶ್ಯನು ಯಾವ ಕರ್ಮವನ್ನು ಮಾಡುತ್ತಾನೆಯೋ ಅದನ್ನು ಸಮಾಜವು ಉಪಜೀವಿಸುತ್ತದೆ. ಕೃಷಿ, ಗೋರಕ್ಷೆ, ವಾಣಿಜ್ಯ, ವೈಶ್ಯಕರ್ಮದ ಅನಿಂದೆ - ಇವು ವೈಶ್ಯಕರ್ಮಗಳು.
ಶೂದ್ರಕರ್ಮ ತು ಯಃ ಕುರ್ಯಾದವಿಹಾಯ ಸ್ವಕರ್ಮ ಚ |
ಸ ವಿಜ್ಞೇಯೋ ಯಥಾ ಶೂದ್ರೋ ನ ಚ ಭೋಜ್ಯಃ ಕದಾಚನ ॥10॥
ತನ್ನ ಕರ್ಮವನ್ನು ತ್ಯಜಿಸಿ ಯಾವನು ಶೂದ್ರಕರ್ಮವನ್ನು ಮಾಡುತ್ತಾನೆಯೋ ಅವನನ್ನು ಶೂದ್ರನೆಂದೇ ತಿಳಿಯಬೇಕು. ಅವನಿಗೆ ಭೋಜನವನ್ನು ಮಾಡಿಸಬಾರದು.
ಚಿಕಿತ್ಸಕಃ ಕಾಂಡಪೃಷ್ಠಃ ಪುರಾಧ್ಯಕ್ಷಃ ಪುರೋಹಿತಃ |
ಸಾಂವತ್ಸರೋ ವೃಥಾಧ್ಯಾಯೀ ಸರ್ವೇ ತೇ ಶೂದ್ರಸಮ್ಮಿತಾಃ ॥11॥
ವೈದ್ಯ, ಆಯುಧವನ್ನು ತಯಾರಿಸುವವನು, ಗ್ರಾಮಪತಿ, ಗ್ರಾಮ ಪುರೋಹಿತ, ಜ್ಯೋತಿಷಿ, ವ್ಯರ್ಥವಾಗಿ ಅಧ್ಯಯನವನ್ನು ಮಾಡಿದವನು- ಎಲ್ಲರೂ ಶೂದ್ರರಿಗೆ ಸಮಾನರಾದವರು.
ಶೂದ್ರಕರ್ಮಸ್ವಥೈತೇಷು ಯೋ ಭುಂಕ್ತೇ ನಿರಪತ್ರಪಃ |
ಅಭೋಜ್ಯಭೋಜನಂ ಭುಕ್ತತ್ವ ಭಯಂ ಪ್ರಾಪ್ನೋತಿ ದಾರುಣಮ್ ॥12॥
ಕುಲಂ ವೀರ್ಯಂ ಚ ತೇಜಶ್ಚ ತಿರ್ಯಗ್ಯೋನಿತ್ವಮೇವ ಚ |
ಸ ಪ್ರಯಾತಿ ಯಥಾ ಶ್ವಾ ವೈ ನಿಷ್ಕ್ರಿಯೋ ಧರ್ಮವರ್ಜಿತಃ ॥13॥
ಇಂತಹ ಶೂದ್ರಕರ್ಮವನ್ನು ಮಾಡುವವರ ಅನ್ನವನ್ನು ನಾಚಿಕೆಯಿಲ್ಲದೆ ಯಾವನು ಭೋಜನವನ್ನು ಮಾಡುತ್ತಾನೆಯೋ ಅವನು ಅಭಕ್ಷ್ಯಭೋಜನವನ್ನು ಮಾಡಿ ದಾರುಣವಾದ ಭಯಕ್ಕೆ ಗುರಿಯಾಗುತ್ತಾನೆ. ಅವನ ಕುಲ, ವೀರ್ಯ ಮತ್ತು ತೇಜಸ್ಸುಗಳು ಭಯಗ್ರಸ್ತವಾಗುತ್ತವೆ ಮತ್ತು ಮುಂದೆ ತಿರ್ಯಗ್ಯೋನಿಯಲ್ಲಿ ಜನಿಸುತ್ತಾನೆ. ಅವನು ಕ್ರಿಯಾರಹಿತನಾಗಿ, ಧರ್ಮಾನುಷ್ಠಾನ ರಹಿತನಾಗಿ ನಾಯಿಯಂತೆ ತಿರುಗುತ್ತಾನೆ.
ಭುಂಕ್ತೇ ಚಿಕಿತ್ಸಕಸ್ಯಾನ್ನಂ ತದನ್ನಂ ಚ ಪುರೀಷವತ್ |
ಪುಂಶ್ಚಲ್ಯನ್ನಂ ಚ ಮೂತ್ರಂ ಸ್ಯಾತ್ ಕಾರುಕಾನ್ನಂ ಚ ಶೋಣಿತಮ್ ॥
ವೈದ್ಯನ ಅನ್ನವು ಮಲಕ್ಕೆ ಸಮಾನವಾದುದು. ವ್ಯಭಿಚಾರಿಣಿಯ ಅನ್ನವು ಮೂತ್ರಕ್ಕೆ ಸಮಾನವಾದುದು. ಕಮ್ಮಾರನ ಅನ್ನವು ರಕ್ತಕ್ಕೆ ಸಮಾನವಾದುದು.
ವಿದ್ಯೋಪಜೀವಿನೋಽನ್ನಂ ಚ ಯೋ ಭುಂಕ್ತೇ ಸಾಧುಸಮ್ಮತಃ |
ತದಪ್ಯನ್ನಂ ಯಥಾ ಶೌದ್ರಂ ತತ್ಸಾಧುಃ ಪರಿವರ್ಜಯೇತ್ ॥15॥
ಸಾಧುಸಮ್ಮತನಾದವನು ವಿದ್ಯೋಪಜೀವನವನ್ನು ಮಾಡುವವನ ಅನ್ನವನ್ನು ಊಟ ಮಾಡಿದರೆ ಆ ಅನ್ನವು ಶೂದ್ರಾನ್ನಕ್ಕೆ ಸಮಾನವಾದುದು. ಸಾಧುವಾದವನು ಅದನ್ನು ಪರಿತ್ಯಜಿಸಬೇಕು.
ವಚನೀಯಸ್ಯ ಯೋ ಭುಂಕ್ತೇ ತಮಾಹುಃ ಶೋಣಿತಂ ಹ್ರದಮ್ |
ಪಿಶುನಂ ಭೋಜನಂ ಭುಂಕ್ತೇ ಬ್ರಹ್ಮಹತ್ಯಾಸಮಂ ವಿದುಃ ॥16॥
ಅಸತ್ಕೃತಮವಜ್ಞಾತಂ ನ ಭೋಕ್ತವ್ಯಂ ಕದಾಚನ ॥17॥
ವ್ಯಾಧಿಂ ಕುಲಕ್ಷಯಂ ಚೈವ ಕ್ಷಿಪ್ರಂ ಪ್ರಾಪ್ನೋತಿ ಬ್ರಾಹ್ಮಣಃ |
ನಗರೀರಕ್ಷಿಣೋ ಭುಂಕ್ತೇ ಶ್ವಪಚಪ್ರವಣೋ ಭವೇತ್ ॥18॥
ಶೀಲ ಕಳಂಕವುಳ್ಳವನ ಅನ್ನವನ್ನು ಊಟ ಮಾಡುವವನನ್ನು ರಕ್ತದ ಮಡುವೆಂದು ಕರೆಯುತ್ತಾರೆ. ಚಾಡಿಕೋರನ ಅನ್ನವು ಬ್ರಹ್ಮಹತ್ಯೆಯನ್ನು ಮಾಡಿದವನ ಅನ್ನಕ್ಕೆ ಸಮನಾದುದೆಂದು ತಿಳಿಯುತ್ತಾರೆ. ಗೌರವವಿಲ್ಲದೆ ಅವಮಾನ ಮಾಡಿ ನೀಡಿದ ಅನ್ನವನ್ನು ಎಂದೂ ತಿನ್ನಬಾರದು. ಅದರಿಂದ ಬ್ರಾಹ್ಮಣನು ವ್ಯಾಧಿಯನ್ನೂ, ಕುಲಕ್ಷಯವನ್ನೂ ಶೀಘ್ರವಾಗಿ ಹೊಂದುತ್ತಾನೆ. ನಗರರಕ್ಷಕರ ಅನ್ನವನ್ನು ಭುಂಜಿಸುವವನು ಚಂಡಾಲನ ಸ್ನೇಹಿತನಾಗುತ್ತಾನೆ.
ಗೋಘ್ನೇ ಚ ಬ್ರಾಹ್ಮಣಘ್ನೇ ಚ ಸುರಾಪೇ ಗುರುತಲ್ಪಗೇ |
ಭುಕ್ತತ್ವಾಽನ್ನಂ ಜಾಯತೇ ವಿಪ್ರೋ ರಕ್ಷಸಾಂ ಕುಲವರ್ಧನಃ ॥19॥
ಗೋಹತ್ಯೆ ಮಾಡಿದವನ, ಬ್ರಹ್ಮಹತ್ಯೆಯನ್ನು ಮಾಡಿದವನ, ಸುರಾಪಾನವನ್ನು ಮಾಡಿದವನ, ಗುರುತಲ್ಪಗಮನವನ್ನು ಮಾಡಿದವನ ಅನ್ನವನ್ನು ತಿಂದ ಬ್ರಾಹ್ಮಣನು ರಾಕ್ಷಸನಾಗಿ ಜನಿಸಿ ರಾಕ್ಷಸ ಕುಲವನ್ನು ಬೆಳೆಸುತ್ತಾನೆ.
ನ್ಯಾಸಾಪಹಾರಿಣೋ ಭುಕ್ತತ್ವ ಕೃತಘ್ನೇ ಕ್ಲೀಬವರ್ತಿನಿ |
ಜಾಯತೇ ಶಬರಾವಾಸೇ ಮಧ್ಯದೇಶಬಹಿಷ್ಕೃತೇ ॥20॥
ನ್ಯಾಸಾಪಹಾರಿಯ ಅನ್ನವನ್ನೂ, ಕೃತಘ್ನನ ಅನ್ನವನ್ನೂ, ನಪುಂಸಕರ ವರ್ತನೆಯನ್ನು ಹೊಂದಿದವನ ಅನ್ನವನ್ನೂ ತಿಂದವನು ಮಧ್ಯದೇಶದ ಆಚೆಗೆ ಬೇಡರ ಕುಲದಲ್ಲಿ ಜನಿಸುತ್ತಾನೆ.
ಅಭೋಜ್ಯಾಶ್ಚೈವ ಭೋಜ್ಯಾಶ್ಚ ಮಯಾ ಪ್ರೋಕ್ತಾ ಯಥಾವಿಧಿ |
ಕಿಮನ್ಯದದ್ಯ ಕೌಂತೇಯ ಮತ್ತಸ್ತ್ವಂ ಶ್ರೋತುಮಿಚ್ಛಸಿ ॥21॥
ಎಲೈ ಕೌಂತೇಯನೇ, ನಾನು ಶಾಸ್ತ್ರಕ್ಕೆ ಅನುಸಾರವಾಗಿ ಯಾರು ಭೋಜ್ಯರು ಮತ್ತು ಯಾರು ಅಭೋಜ್ಯರು ಎಂದು ಹೇಳಿದ್ದೇನೆ. ಈ

ದಿನ ನನ್ನಿಂದ ನೀನು ಬೇರೆ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ಭೋಜ್ಯಾಭೋಜ್ಯವಿವೇಕೋ ನಾಮ ಷಡಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೇಳನೆಯ ಅಧ್ಯಾಯ
ಪ್ರತಿಗ್ರಹದ ಪ್ರಾಯಶ್ಚಿತ್ತವಿಧಿಗಳು
ಯುಧಿಷ್ಠಿರಃ
ಉಕ್ತಾಸ್ತು ಭವತಾ ಭೋಜ್ಯಾಸ್ತಥಾಽಭೋಜ್ಯಾಶ್ಚ ಸರ್ವಶಃ ।
ಅತ್ರ ಮೇ ಪ್ರಶ್ನಸಂದೇಹಸ್ತನ್ಮೇ ವದ ಪಿತಾಮಹ ॥1॥
ಬ್ರಾಹ್ಮಣಾನಾಂ ವಿಶೇಷೇಣ ಹವ್ಯಕವ್ಯಪ್ರತಿಗ್ರಹೇ ।
ನಾನಾವಿಧೇಷು ಭೋಜ್ಯೇಷು ಪ್ರಾಯಶ್ಚಿತ್ತಾನಿ ಶಂಸ ಮೇ ॥2॥
ಯುಧಿಷ್ಠಿರ ಪಿತಾಮಹನೇ, ಭೋಜ್ಯಾಭೋಜ್ಯ ವಿಭಾಗವನ್ನು ವಿಸ್ತಾರವಾಗಿ ಹೇಳಿದ್ದೀಯೆ. ಇದರಲ್ಲಿ ನನಗೆ ಒಂದು ಸಂಶಯವಿದೆ, ಅದನ್ನು ನಿವಾರಿಸು. ವಿಶೇಷವಾಗಿ ಹವ್ಯ-ಕವ್ಯಗಳಲ್ಲಿ ಬ್ರಾಹ್ಮಣರು ಮಾಡಿದ ಪ್ರತಿಗ್ರಹಕ್ಕೆ ಮತ್ತು ನಾನಾವಿಧ ಭೋಜ್ಯರಿಗೆ ಪ್ರಾಯಶ್ಚಿತ್ತಗಳನ್ನು ನನಗೆ ಹೇಳು.
ಭೀಷ್ಮಃ
ಹಂತ ವಕ್ಷ್ಯಾಮಿ ತೇ ರಾಜನ್ ಬ್ರಾಹ್ಮಣಾನಾಂ ಮಹಾತ್ಮನಾಮ್ ।
ಪ್ರತಿಗ್ರಹೇಷು ಭೋಜ್ಯೇ ಚ ಮುಚ್ಯತೇ ಯೇನ ಪಾಪ್ಮನಃ ॥3॥
ಭೀಷ್ಮ ಎಲೈ ರಾಜನೇ, ಸಂತೋಷ. ಮಹಾತ್ಮರಾದ ಬ್ರಾಹ್ಮಣರಿಗೆ ಪ್ರತಿಗ್ರಹಗಳಲ್ಲಿಯೂ ಮತ್ತು ಭೋಜ್ಯರ ವಿಷಯದಲ್ಲಿಯೂ ಇರುವ ಪಾಪವನ್ನು ಪರಿಹಾರ ಮಾಡುವ ಪ್ರಾಯಶ್ಚಿತ್ತಗಳನ್ನು ಹೇಳುತ್ತೇನೆ.
ಘೃತಪ್ರತಿಗ್ರಹೇ ಚೈವ ಸಾವಿತ್ರೀ ಸಮಿಧಾಹುತಿಃ ।
ತಿಲಪ್ರತಿಗ್ರಹೇ ಚೈವ ಸಮಮೇತದ್ ಯುಧಿಷ್ಠಿರ ॥4॥
ಘೃತವನ್ನು ಸ್ವೀಕಾರ ಮಾಡಿದರೆ ಗಾಯತ್ರೀಮಂತ್ರವನ್ನು ಜಪಿಸಿ ಅಗ್ನಿಯಲ್ಲಿ ಸಮಿತ್ತುಗಳನ್ನು ಹೋಮ ಮಾಡಬೇಕು. ಎಲೈ ಯುಧಿಷ್ಠಿರನೇ, ತಿಲಪ್ರತಿಗ್ರಹವನ್ನು ಮಾಡಿದರೂ ಇದೇ ಪ್ರಾಯಶ್ಚಿತ್ತ.
ಮಾಂಸಪ್ರತಿಗ್ರಹೇ ಚೈವ ಮಧುನೋ ಲವಣಸ್ಯ ಚ ।
ಆದಿತ್ಯೋದಯನಂ ಸ್ಥಿತ್ವಾ ಪೂತೋ ಭವತಿ ಬ್ರಾಹ್ಮಣಃ ॥5॥
ಮಾಂಸ, ಜೇನುತುಪ್ಪ ಮತ್ತು ಲವಣಗಳನ್ನು ಸ್ವೀಕರಿಸಿದರೆ ಸೂರ್ಯೋದಯ ಕಾಲದಲ್ಲಿ ನಿಂತು ಬ್ರಾಹ್ಮಣನು ಪವಿತ್ರನಾಗುತ್ತಾನೆ.
ಕಾಂಚನಂ ಪ್ರತಿಗೃಹ್ಯಾಥ ಜಪಮಾನೋ ಗುರುಶ್ರುತಿಮ್ ।
ಕೃಷ್ಣಾಯಸಂ ಚ ವಿವೃತಂ ಧಾರಯನ್ ಮುಚ್ಯತೇ ದ್ವಿಜಃ ॥6॥
ಸುವರ್ಣ ಪ್ರತಿಗ್ರಹವನ್ನು ಮಾಡಿದವನು ಕಬ್ಬಿಣವನ್ನು ಹಿಡಿದು ಗಾಯತ್ರೀ ಜಪವನ್ನು ಮಾಡುವುದರಿಂದ ದೋಷದಿಂದ ಮುಕ್ತನಾಗುತ್ತಾನೆ.
ಏವಂ ಪ್ರತಿಗೃಹೀತೇಽಥ ಧನೇ ವಸ್ತ್ರೇ ತಥಾ ಸ್ತ್ರಿಯಾಮ್ ।
ಏವಮೇವ ನರಶ್ರೇಷ್ಠ ಸುವರ್ಣಸ್ಯ ಪ್ರತಿಗ್ರಹೇ ॥7॥
ಧನ, ವಸ್ತ್ರ ಮತ್ತು ಸ್ತ್ರೀ ಪ್ರತಿಗ್ರಹವನ್ನು ಮಾಡಿದರೂ ಎಲೈ ನರಶ್ರೇಷ್ಠನೇ, ಸುವರ್ಣ ಪ್ರತಿಗ್ರಹದ ಪ್ರಾಯಶ್ಚಿತ್ತವೇ ಇರುತ್ತದೆ.
ಅನ್ನಪ್ರತಿಗ್ರಹೇ ಚೈವ ಪಾಯಸೇಕ್ಷುರಸೇ ತಥಾ ।
ಇಕ್ಷುತೈಲಪವಿತ್ರಾಣಾಂ ತ್ರಿಸಂಧ್ಯೇಽಪ್ಸು ನಿಮಜ್ಜನಮ್ ॥8॥
ಅನ್ನ, ಪಾಯಸ, ಕಬ್ಬಿನ ರಸ, ಕಬ್ಬು, ತೈಲ, ಘೃತ ಇವುಗಳನ್ನು ಸ್ವೀಕಾರ ಮಾಡಿದರೆ ಸಂಧ್ಯಾಕಾಲದಲ್ಲಿ ಮೂರು ದಿನ ಸ್ನಾನವನ್ನು ಮಾಡಬೇಕು.
ವ್ರೀಹೌ ಪುಷ್ಪೇ ಫಲೇ ಚೈವ ಜಲೇ ಪಿಷ್ಟಮಯೇ ತಥಾ ।
ಯಾವಕೇ ದಧಿದುಗ್ಧೇ ಚ ಸಾವಿತ್ರೀಂ ಶತಶೋಽನ್ವಿತಾಮ್ ॥9॥
ಭತ್ತ, ಪುಷ್ಪ-ಫಲಗಳು, ಜಲ, ಹಿಟ್ಟಿನ ಪದಾರ್ಥಗಳು, ಗೋಧಿ, ಹಾಲು- ಮೊಸರುಗಳು ಇವುಗಳನ್ನು ಸ್ವೀಕರಿಸಿದರೆ ನೂರು ಗಾಯತ್ರೀ ಜಪವನ್ನು ಮಾಡಬೇಕು.
ಉಪಾನಹೌ ಚ ಛತ್ರಂ ಚ ಪ್ರತಿಗೃಹ್ಯೌರ್ಧ್ವದೇಹಿಕಮ್ ।
ಜಪೇಚ್ಛತಂ ಸಮಾಯುಕ್ತಸ್ತೇನ ಮುಚ್ಯೇತ ಪಾಪ್ಮನಾ ॥10॥
ಉತ್ತರಕ್ರಿಯೆಗೆ ಸಂಬಂಧಿಸಿದ ಛತ್ರಿ ಮತ್ತು ಪಾದರಕ್ಷೆಗಳನ್ನು ಪ್ರತಿಗ್ರಹಿಸಿದರೆ ನೂರು ಗಾಯತ್ರೀ ಜಪವನ್ನು ಮಾಡಬೇಕು. ಆಗ ಆ ಪಾಪದಿಂದ ಮುಕ್ತನಾಗುತ್ತಾನೆ.
ಕ್ಷೇತ್ರಪ್ರತಿಗ್ರಹೇ ಚೈವ ಗ್ರಹಸೂತಕಯೋಸ್ತಥಾ ।
ತ್ರೀಣಿ ರಾತ್ರಾಣ್ಯುಪೋಷಿತ್ವಾ ತೇನ ಪಾಪಾದ್ ವಿಮುಚ್ಯತೇ ॥11॥
ಭೂಮಿಯನ್ನು ಪ್ರತಿಗ್ರಹ ಮಾಡಿದರೆ ಅಥವಾ ಗ್ರಹಣ ಮತ್ತು ಸೂತಕದಲ್ಲಿ ಪ್ರತಿಗ್ರಹವನ್ನು ಮಾಡಿದರೆ ಮೂರು ರಾತ್ರಿ

ಉಪವಾಸವನ್ನು ಮಾಡಿ ಆ ಪಾಪದಿಂದ ಶುದ್ಧನಾಗುತ್ತಾನೆ.
ಕೃಷ್ಣಪಕ್ಷೇ ತು ಯಃ ಶ್ರಾದ್ಧಂ ಪಿತೄಣಾಮಶ್ನುತೇ ದ್ವಿಜಃ |
ಅನ್ನಮೇತದಹೋರಾತ್ರಾತ್ ಪೂತೋ ಭವತಿ ಬ್ರಾಹ್ಮಣಃ ॥12॥
ಕೃಷ್ಣಪಕ್ಷದಲ್ಲಿ ಪಿತೃಗಳ ಶ್ರಾದ್ಧಾನ್ನವನ್ನು ಭುಂಜಿಸುವ ಬ್ರಾಹ್ಮಣನು ಒಂದು ಹಗಲು ಮತ್ತು ರಾತ್ರಿಯು ಕಳೆದ ಮೇಲೆ ಶುದ್ಧನಾಗುತ್ತಾನೆ.
ನ ಚ ಸಂಧ್ಯಾಮುಪಾಸೀತ ನ ಚ ಜಾಪ್ಯಂ ಪ್ರವರ್ತಯೇತ್ |
ನ ಸಂಕಿರೇತ್ ತದನ್ನಂ ಚ ತತಃ ಪೂಯೇತ ಬ್ರಾಹ್ಮಣಃ ॥13॥
ಶ್ರಾದ್ಧ ಭೋಜನವನ್ನು ಮಾಡಿದವನು ಸಂಧ್ಯಾವಂದನೆಯನ್ನು ಮಾಡಬಾರದು. ಜಪವನ್ನು ಮಾಡಬಾರದು. ಬೇರೆ ಆಹಾರವನ್ನು ಸ್ವೀಕರಿಸಿ ಶ್ರಾದ್ಧಾನ್ನವನ್ನು ದೂಷಿಸಬಾರದು. ಹಾಗೆ ಮಾಡಿದರೆ ಪವಿತ್ರನಾಗುತ್ತಾನೆ.
ಇತ್ಯರ್ಥಮಪರಾಹ್ಣೇ ತು ಪಿತೄಣಾಂ ಶ್ರಾದ್ಧಮುಚ್ಯತೇ |
ಯಥೋಕ್ತಾನಾಂ ಯದಶ್ನೀಯುರ್ಬ್ರಾಹ್ಮಣಾಃ ಪೂರ್ವಕೇತಿತಾಃ ॥14॥
ಅದಕ್ಕಾಗಿಯೇ ಅಪರಾಹ್ಣದಲ್ಲಿ ಪಿತೃಶ್ರಾದ್ಧವು ವಿಧಿಸಲ್ಪಡುತ್ತದೆ (ರಾತ್ರಿ ಭೋಜನವನ್ನು ಮಾಡಬೇಕಾದ ಅವಶ್ಯಕತೆ ಇರುವುದಿಲ್ಲ) ಮತ್ತು ಬ್ರಾಹ್ಮಣರಿಗೆ ಮೊದಲೇ ನಿಮಂತ್ರಣವನ್ನು ಕೊಟ್ಟಿರಬೇಕು. ಆಗ ಅವರು ಹೇಳಿದ ವಿಧಿಯಿಂದ ಭೋಜನವನ್ನು ಮಾಡಬಹುದು.
ಮೃತಕಸ್ಯ ತೃತೀಯಾಹೇ ಬ್ರಾಹ್ಮಣೋ ಯೋಽನ್ನಮಶ್ನುತೇ |
ಸ ತ್ರಿವೇಲಂ ಸಮುನ್ಮಜ್ಜ್ಯ ದ್ವಾದಶಾಹೇನ ಶುದ್ಧ್ಯತಿ ॥15॥
ಮೃತಕನ ಮನೆಯಲ್ಲಿ ಮೂರನೆಯ ದಿವಸ ಬ್ರಾಹ್ಮಣನು ಊಟವನ್ನು ಮಾಡಿದರೆ ದಿವಸಕ್ಕೆ ಮೂರು ಸಲದಂತೆ ಹನ್ನೆರಡು ದಿವಸ ಸ್ನಾನವನ್ನು ಮಾಡಿ ಶುದ್ಧನಾಗುತ್ತಾನೆ.
ದ್ವಾದಶಾಹೇ ವ್ಯತೀತೇ ತು ಕೃತಶೌಚೋ ವಿಶೇಷತಃ |
ಬ್ರಾಹ್ಮಣೇಭ್ಯೋ ಹವಿರ್ದತ್ತ್ವಾ ಮುಚ್ಯತೇ ತೇನ ಪಾಪ್ಮನಾ ॥16॥
ಹನ್ನೆರಡು ದಿವಸ ಕಳೆದ ಮೇಲೆ ವಿಶೇಷವಾಗಿ ಶುದ್ಧಿಯನ್ನು ಮಾಡಿಕೊಂಡು, ಬ್ರಾಹ್ಮಣರಿಗೆ ಹವಿಸ್ಸನ್ನು ದಾನ ಮಾಡಿದರೆ ಆ ಪಾಪದಿಂದ ಮುಕ್ತನಾಗುತ್ತಾನೆ.
ಮೃತಸ್ಯ ದಶರಾತ್ರೇಣ ಪ್ರಾಯಶ್ಚಿತ್ತಾನಿ ದಾಪಯೇತ್ |
ಸಾವಿತ್ರೀಂ ರೈವತೀಮಿಷ್ಟಿಂ ಕೂಷ್ಮಾಂಡಮಘಮರ್ಷಣಮ್ ॥17॥
ಮೃತರ ಮನೆಯಲ್ಲಿ ಹತ್ತುರಾತ್ರಿಯ ಒಳಗೆ ಭೋಜನವನ್ನು ಮಾಡಿದರೆ ಗಾಯತ್ರೀ ಮಂತ್ರ, ರೈವತೀ ಮಂತ್ರದಿಂದ ಹೋಮ, ಕೂಷ್ಮಾಂಡ ಹೋಮ ಮತ್ತು ಅಘಮರ್ಷಣ ಮಂತ್ರದಿಂದ ಪ್ರಾಯಶ್ಚಿತ್ತವನ್ನು ಮಾಡಬೇಕು.
ಮೃತಕಸ್ಯ ತ್ರಿರಾತ್ರೇ ಯಃ ಸಮುದ್ದಿಷ್ಟೇ ಸಮಶ್ನುತೇ |
ಸಪ್ತ ತ್ರಿಷವಣಂ ಸ್ನಾತ್ವಾ ಪೂತೋ ಭವತಿ ಬ್ರಾಹ್ಮಣಃ ॥18॥
ಸಿದ್ಧಿಮಾಪ್ನೋತಿ ವಿಪುಲಾಮಾಪದಂ ಚೈವ ನಾಪ್ನುಯಾತ್ ॥19॥
ಮೃತಕನ ಮನೆಯಲ್ಲಿ ಮೂರು ರಾತ್ರಿಯ ಒಳಗೆ ಭೋಜನವನ್ನು ಮಾಡುವ ಬ್ರಾಹ್ಮಣನು ಏಳು ದಿವಸ ತ್ರಿಕಾಲ ಸ್ನಾನವನ್ನು ಮಾಡಿ ಪವಿತ್ರನಾಗುತ್ತಾನೆ. ಸಿದ್ಧಿಯನ್ನು ಪಡೆದು ಆಪತ್ತುಗಳನ್ನು ಹೊಂದುವುದಿಲ್ಲ.
ಯಸ್ತು ಶೂದ್ರೈಃ ಸಹಾಶ್ನೀಯಾದ್ ಬ್ರಾಹ್ಮಣೋಽಪ್ಯೇಕಭೋಜನೇ |
ಅಶೌಚಂ ವಿಧಿವತ್ ತಸ್ಯ ಶೌಚಮತ್ರ ವಿಧೀಯತೇ ॥20॥
ಶೂದ್ರನ ಸಹಪಂಕ್ತಿಯಲ್ಲಿ ಭೋಜನವನ್ನು ಮಾಡುವವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಕ್ಷತ್ರಿಯ, ವೈಶ್ಯರಿಗೂ ಸಹ ಭಿನ್ನಪಂಕ್ತಿಯಲ್ಲೇ ಭೋಜನವನ್ನು ನೀಡಬೇಕು. ಶೂದ್ರನ ಜೊತೆಯಲ್ಲಿ ಏಕಪಂಕ್ತಿಯಲ್ಲಿ ಭೋಜನವನ್ನು ಮಾಡಿದವನು ಸೂತಕದ ಮೈಲಿಗೆಯು ಕಳೆಯುವವರೆಗೂ ಪ್ರತಿದಿನವೂ ತ್ರಿಕಾಲ ಸ್ನಾನ ಮತ್ತು ಗಾಯತ್ರೀ ಜಪಗಳನ್ನು ಮಾಡಬೇಕು (ಲಕ್ಷ್ಮಾಲಂಕಾರ).
ಯಸ್ತು ವೈಶ್ಯೈಃ ಸಹಾಶ್ನೀಯಾದ್ ಬ್ರಾಹ್ಮಣೋಽಪ್ಯೇಕಭೋಜನೇ |
ಸ ವೈ ತ್ರಿರಾತ್ರಂ ದೀಕ್ಷಿತ್ವಾ ಮುಚ್ಯತೇ ತೇನ ಕರ್ಮಣಾ ॥21॥
ವೈಶ್ಯರ ಜೊತೆಯಲ್ಲಿ ಏಕಪಂಕ್ತಿಯಲ್ಲಿ ಭೋಜನವನ್ನು ಮಾಡಿದ ಬ್ರಾಹ್ಮಣನು ಮೂರು ದಿನ ವ್ರತವನ್ನು ಮಾಡಿ (ತ್ರಿಕಾಲ ಸ್ನಾನ ಮತ್ತು ಗಾಯತ್ರೀ ಜಪ) ಆ ಕರ್ಮದಿಂದ ಮುಕ್ತನಾಗುತ್ತಾನೆ.
ಕ್ಷತ್ರಿಯೈಃ ಸಹ ಯೋಽಶ್ನೀಯಾದ್ ಬ್ರಾಹ್ಮಣೋಽಪ್ಯೇಕಭೋಜನೇ |
ಆಪ್ಲುತಃ ಸಹ ವಾಸೋಭಿಸ್ತೇನ ಮುಚ್ಯೇತ ಪಾಪ್ಮನಾ ॥22॥
ಕ್ಷತ್ರಿಯರ ಜೊತೆಯಲ್ಲಿ ಏಕಪಂಕ್ತಿಯಲ್ಲಿ ಭೋಜನವನ್ನು ಮಾಡಿದ ಬ್ರಾಹ್ಮಣನು ಸಚೇಲಸ್ನಾನವನ್ನು ಮಾಡಿ, ಆ ಪಾಪದಿಂದ ಮುಕ್ತನಾಗುತ್ತಾನೆ.
ಶೂದ್ರಸ್ಯ ತು ಕುಲಂ ಹಂತಿ ವೈಶ್ಯಸ್ಯ ಪಶುಬಾಂಧವಾನ್ |
ಕ್ಷತ್ರಿಯಸ್ಯ ಶ್ರಿಯಂ ಹಂತಿ ಬ್ರಾಹ್ಮಣಸ್ಯ ಸುವರ್ಚಸಮ್ ॥23॥
ಬ್ರಾಹ್ಮಣ ಪಂಕ್ತಿಯಲ್ಲಿ ಕುಳಿತು ಭೋಜನವನ್ನು ಮಾಡಿದರೆ ಶೂದ್ರನ ಕುಲವು ನಾಶವನ್ನು ಹೊಂದುತ್ತದೆ. ವೈಶ್ಯನು ಪಶು-ಬಾಂಧವರನ್ನು ಕಳೆದುಕೊಳ್ಳುತ್ತಾನೆ. ಕ್ಷತ್ರಿಯನು ಸಂಪತ್ತನ್ನು ಕಳೆದುಕೊಳ್ಳುತ್ತಾನೆ ಮತ್ತು (ಅವರ ಪಂಕ್ತಿಯಲ್ಲಿ ಭೋಜನ ಮಾಡಿದ) ಬ್ರಾಹ್ಮಣನು ತನ್ನ ತೇಜಸ್ಸನ್ನು ಕಳೆದುಕೊಳ್ಳುತ್ತಾನೆ.
ಪ್ರಾಯಶ್ಚಿತ್ತಂ ಚ ಶಾಂತಿಂ ಚ ಜುಹುಯಾತ್ ತೇನ ಮುಚ್ಯತೇ |

ಸಾವಿತ್ರೀಂ ರೈವತೀಮಿಷ್ಟಿಂ ಕೂಷ್ಮಾಂಡಮಘಮರ್ಷಣಮ್ ॥24॥
ಗಾಯತ್ರೀ ಜಪ, ರೈವತೀ ಮಂತ್ರದಿಂದ ಹೋಮ, ಕೂಷ್ಮಾಂಡ ಮಂತ್ರದಿಂದ ಹೋಮ ಮತ್ತು ಅಘಮರ್ಷಣ ಸೂಕ್ತದಿಂದ ಪಾರಾಯಣರೂಪವಾದ ಪ್ರಾಯಶ್ಚಿತ್ತ ಶಾಂತಿಯನ್ನು ಮಾಡಿದರೆ ಆ ದೋಷದಿಂದ ಮುಕ್ತನಾಗುತ್ತಾನೆ.
ಯದ್ಯುಚ್ಛಿಷ್ಟಮಥಾನ್ಯೋನ್ಯಂ ಸಂಪ್ರಾಶೇನ್ನಾತ್ರ ಸಂಶಯಃ।
ರೋಚನಾ ವಿರಜಾ ರಾತ್ರಿರ್ಮಂಗಲಾಲಂಭನಾನಿ ಚ ॥25॥
ಪರಸ್ಪರ ಉಚ್ಛಿಷ್ಟಗಳನ್ನು ತಿಂದರೆ ಗೋರೋಚನ ಧಾರಣ, ಶುಭ್ರವಸ್ತ್ರ ಧಾರಣ, ರಾತ್ರಿಯಲ್ಲಿ ದೂರ್ವಾದಿ ಮಂಗಳದ್ರವ್ಯಗಳ ಸ್ಪರ್ಶ-ಇವುಗಳನ್ನು ಮಾಡಬೇಕು (ಲಕ್ಷಾಲಂಕಾರ).
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ
ಪ್ರಾಯಶ್ಚಿತ್ತವಿಧಿರ್ನಾಮ ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *

## ನೂರ ಎಂಬತ್ತೆಂಟನೆಯ ಅಧ್ಯಾಯ

### ದಾನವನ್ನು ಮಾಡಿ ಸದ್ಗತಿಯನ್ನು ಪಡೆದವರ ಕೀರ್ತನೆ

ಯುಧಿಷ್ಠಿರಃ
ದಾನೇನ ವರ್ತತೇತ್ಯಾಹ ತಪಸಾ ಚೈವ ಭಾರತ।
ತದೇತನ್ಮೇ ಮನೋದುಃಖಂ ವ್ಯಪೋಹ ತ್ವಂ ಪಿತಾಮಹ।
ಕಿಂಸ್ವಿತ್ಪೃಥಿವ್ಯಾಂ ಹ್ಯೇತನ್ಮೇ ಭವಾನ್ ಶಂಸಿತುಮರ್ಹತಿ ॥1॥
ಯುಧಿಷ್ಠಿರ ಎಲೈ ಭಾರತನೇ, ದಾನವನ್ನು ಮಾಡಿ, ತಪಸ್ಸನ್ನು ಮಾಡಿ ಎಂದು ಹೇಳುತ್ತಾರೆ. ಈ ವಿಷಯದಲ್ಲಿ ನನ್ನ ಮನೋದುಃಖವನ್ನು ಪರಿಹರಿಸು. ಎಲೈ ಪಿತಾಮಹನೇ, ಭೂಮಿಯಲ್ಲಿ ಯಾರು, ಏನು ದಾನವನ್ನು ಮಾಡಿ, ಏನನ್ನು ಸಂಪಾದಿಸಿದರು ಎಂದು ನನಗೆ ಹೇಳು.
ಭೀಷ್ಮಃ
ಶೃಣು ಯೈರ್ಧರ್ಮನಿರತೈಸ್ತಪಸಾ ಭಾವಿತಾತ್ಮಭಿಃ।
ಲೋಕಾ ಹ್ಯಸಂಶಯಂ ಪ್ರಾಪ್ತಾ ದಾನಪುಣ್ಯರತೈರ್ನೃಪೈಃ ॥2॥
ಭೀಷ್ಮ ಧರ್ಮನಿರತರಾದವರು, ತಪಸ್ಸಿನಿಂದ ಶುದ್ಧಿಯನ್ನು ಪಡೆದವರು, ದಾನ ಮತ್ತು ಪುಣ್ಯಸಂಪಾದನೆಯಲ್ಲಿ ರತರಾದ ರಾಜರು ನಿಸ್ಸಂಶಯವಾಗಿ ಎಂತಹ ಲೋಕಗಳನ್ನು ಹೊಂದಿದರು ಎಂದು ಕೇಳು.
ಸತ್ಕೃತಶ್ಚ ತಥಾಽಽತ್ರೇಯಃ ಶಿಷ್ಯೇಭ್ಯೋ ಬ್ರಹ್ಮ ನಿರ್ಗುಣಮ್।
ಉಪದಿಶ್ಯ ತದಾ ರಾಜನ್ ಗತೋ ಲೋಕಾನನುತ್ತಮಾನ್ ॥3॥
ಎಲೈ ರಾಜನೇ, ಸತ್ಕೃತರಾದ ಆತ್ರೇಯರು ಶಿಷ್ಯರಿಗೆ ಗುಣಾತೀತನಾದ ಪರಬ್ರಹ್ಮನನ್ನು ಉಪದೇಶ ಮಾಡಿ, ಶ್ರೇಷ್ಠವಾದ ಲೋಕಗಳನ್ನು ಹೊಂದಿದರು.
ಶಿಬಿರೌಶೀನರಃ ಪ್ರಾಣಾನ್ ಪ್ರಿಯಸ್ಯ ತನಯಸ್ಯ ಚ।
ಬ್ರಾಹ್ಮಣಾರ್ಥಮುಪಾಕೃತ್ಯ ನಾಕಪೃಷ್ಠಮಿತೋ ಗತಃ ॥4॥
ಔಶೀನರನಾದ ಶಿಬಿಯು ಬ್ರಾಹ್ಮಣರ ಸಲುವಾಗಿ ತನ್ನ ಪ್ರಿಯಪುತ್ರನ ಪ್ರಾಣವನ್ನು ಕೊಟ್ಟು ಸ್ವರ್ಗಕ್ಕೆ ಹೋದನು.
ಪ್ರತರ್ದನಃ ಕಾಶಿಪತಿಃ ಪ್ರದಾಯ ತನಯಂ ಸ್ವಕಮ್।
ಬ್ರಾಹ್ಮಣಾಯಾತುಲಾಂ ಕೀರ್ತಿಮಿಹ ಚಾಮುತ್ರ ಚಾಶ್ನುತೇ ॥5॥
ಕಾಶೀಪತಿಯಾದ ಪ್ರತರ್ದನನು ಬ್ರಾಹ್ಮಣರಿಗೆ ತನ್ನ ಪುತ್ರನನ್ನು ದಾನ ಮಾಡಿ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಅತುಲವಾದ ಕೀರ್ತಿಯನ್ನು ಹೊಂದಿದನು.
ರಂತಿದೇವಶ್ಚ ಸಾಂಕೃತ್ಯೋ ವಸಿಷ್ಠಾಯ ಮಹಾತ್ಮನೇ।
ಅರ್ಘ್ಯಂ ಪ್ರದಾಯ ವಿಧಿವಲ್ಲೇಭೇ ಲೋಕಾನನುತ್ತಮಾನ್ ॥6॥
ಸಂಕೃತಿಯ ಪುತ್ರನಾದ ರಂತಿದೇವನು ಮಹಾತ್ಮರಾದ ವಸಿಷ್ಠರಿಗೆ ವಿಧಿಪೂರ್ವಕವಾಗಿ ಅರ್ಘ್ಯಪ್ರದಾನವನ್ನು ಮಾಡಿ ಉತ್ತಮ ಲೋಕಗಳನ್ನು ಪಡೆದನು.
ದಿವ್ಯಂ ಶತಶಲಾಕಂ ಚ ಯಜ್ಞಾರ್ಥಂ ಕಾಂಚನಂ ಶುಭಮ್।
ಛತ್ರಂ ದೇವಾವೃಧೋ ದತ್ತ್ವಾ ಬ್ರಾಹ್ಮಣಾಯಾಸ್ಥಿತೋ ದಿವಮ್ ॥7॥
ದೇವಾವೃಧ ರಾಜನು ಯಜ್ಞದ ಸಲುವಾಗಿ ಬ್ರಾಹ್ಮಣರಿಗೆ ನೂರು ಕಡ್ಡಿಗಳಿರುವ ದಿವ್ಯವಾದ ಶುಭ್ರವಾದ ಸುವರ್ಣಮಯವಾದ ಛತ್ರವನ್ನು ಕೊಟ್ಟು ಸ್ವರ್ಗಕ್ಕೆ ಹೋದನು.
ಭಗವಾನಂಬರೀಷಶ್ಚ ಬ್ರಾಹ್ಮಣಾಯಾಮಿತೌಜಸೇ।
ಪ್ರದಾಯ ಸಕಲಂ ರಾಷ್ಟ್ರಂ ಸುರಲೋಕಮವಾಪ್ತವಾನ್ ॥8॥
ಪೂಜ್ಯನಾದ ಅಂಬರೀಷನು ಅಮಿತ ತೇಜಸ್ವಿಯಾದ ಬ್ರಾಹ್ಮಣನಿಗೆ ತನ್ನ ಸಕಲ ರಾಷ್ಟ್ರವನ್ನೂ ಕೊಟ್ಟು ಸುರಲೋಕವನ್ನು ಹೊಂದಿದನು.
ಸಾವಿತ್ರಃ ಕುಂಡಲಂ ದಿವ್ಯಂ ಯಾನಂ ಚ ಜನಮೇಜಯಃ।

ಬ್ರಾಹ್ಮಣಾಯ ಚ ಗಾ ದತ್ತ್ವ ಗತೋ ಲೋಕಾನನುತ್ತಮಾನ್ ॥9॥
ಸಾವಿತ್ರನು ದಿವ್ಯವಾದ ಕುಂಡಲವನ್ನು, ಜನಮೇಜಯನು ದಿವ್ಯವಾದ ವಾಹನ ಮತ್ತು ಭೂಮಿಯನ್ನೂ ಬ್ರಾಹ್ಮಣನಿಗೆ ಕೊಟ್ಟು ಶ್ರೇಷ್ಠವಾದ ಲೋಕವನ್ನು ಹೊಂದಿದರು.
ವೃಷಾದರ್ಭಿಶ್ಚ ರಾಜರ್ಷೀ ರತ್ನಾನಿ ವಿವಿಧಾನಿ ಚ |
ರಮ್ಯಾಂಶ್ಚಾವಸಥಾನ್ ದತ್ತ್ವ ದ್ವಿಜೇಭ್ಯೋ ದಿವಮಾಗತಃ ॥10॥
ರಾಜರ್ಷಿಯಾದ ವೃಷಾದರ್ಭಿಯು ವಿವಿಧವಾದ ರತ್ನಗಳನ್ನೂ, ಮನೋಹರವಾದ ಗೃಹಗಳನ್ನೂ ಬ್ರಾಹ್ಮಣರಿಗೆ ದಾನ ಮಾಡಿ ಸ್ವರ್ಗಕ್ಕೆ ಹೋದನು.
ನಿಮೀ ರಾಷ್ಟ್ರಂ ಚ ವೈದರ್ಭಿಃ ಕನ್ಯಾಂ ದತ್ತ್ವ ಮಹಾತ್ಮನೇ |
ಅಗಸ್ತ್ಯಾಯ ಗತಃ ಸ್ವರ್ಗಂ ಸಪುತ್ರಪಶುಬಾಂಧವಃ ॥11॥
ವಿದರ್ಭಪುತ್ರನಾದ ನಿಮಿಯು ಮಹಾತ್ಮರಾದ ಅಗಸ್ತ್ಯರಿಗೆ ರಾಷ್ಟ್ರವನ್ನೂ, ಕನ್ಯೆಯನ್ನೂ ದಾನ ಮಾಡಿ ಪುತ್ರ-ಪಶು-ಬಾಂಧವರ ಸಹಿತವಾಗಿ ಸ್ವರ್ಗಕ್ಕೆ ಹೋದನು.
ಜಾಮದಗ್ನ್ಯಶ್ಚ ವಿಪ್ರಾಯ ಭೂಮಿಂ ದತ್ತ್ವ ಮಹಾಯಶಾಃ |
ರಾಮೋಽಕ್ಷಯಾಂಸ್ತಥಾ ಲೋಕಾನ್ ಜಗಾಮ ಮನಸೋಽಧಿಕಾನ್ ॥
ಜಮದಗ್ನಿ ಪುತ್ರರಾದ, ಮಹಾಕೀರ್ತಿವಂತರಾದ ಪರಶುರಾಮರು ಬ್ರಾಹ್ಮಣರಿಗೆ ಭೂಮಿಯನ್ನು ದಾನ ಮಾಡಿ ಮನಸ್ಸಿನಿಂದ ಚಿಂತಿಸಲೂ ಅಸಾಧ್ಯವಾದ, ಶ್ರೇಷ್ಠವಾದ ಲೋಕಗಳನ್ನು ಹೊಂದಿದರು.
ಅವರ್ಷತಿ ಚ ಪರ್ಜನ್ಯೇ ಸರ್ವಭೂತಾನಿ ದೇವರಾಟ್ |
ವಸಿಷ್ಠೋ ಜೀವಯಾಮಾಸ ಯೇನ ಯಾತೋಽಕ್ಷಯಾಂ ಗತಿಮ್ ॥
ಪರ್ಜನ್ಯನು ಮಳೆಯನ್ನು ಸುರಿಸದಿದ್ದಾಗ ದೇವರಾಜರಾದ ವಸಿಷ್ಠರು (ಮಳೆಯನ್ನು ಸುರಿಸಿ) ಎಲ್ಲ ಪ್ರಾಣಿಗಳನ್ನೂ ಜೀವಿಸುವಂತೆ ಮಾಡಿ, ಆ ಪುಣ್ಯದಿಂದ ಅಕ್ಷಯವಾದ ಗತಿಯನ್ನು ಪಡೆದರು.
ರಾಮೋ ದಾಶರಥಿಶ್ಚೈವ ಹುತ್ವಾ ಯಜ್ಞೇಷು ವೈ ವಸು |
ಸ ಗತೋ ಹ್ಯಕ್ಷಯಾಲ್ಲೋಕಾನ್ ಯಸ್ಯ ಲೋಕೇ ಮಹದ್ಯಶಃ ॥14॥
ದಾಶರಥಿ ರಾಮನು ಯಜ್ಞಗಳಲ್ಲಿ ಹೋಮವನ್ನು ಮಾಡಿ, ಸಂಪತ್ತೆಲ್ಲವನ್ನೂ ದಾನ ಮಾಡಿ ಅಕ್ಷಯಲೋಕವನ್ನು ಹೊಂದಿದನು. ಅವನ ಮಹಾಕೀರ್ತಿಯು ಈಗಲೂ ಲೋಕದಲ್ಲಿದೆ.
ಕಕ್ಷಸೇನಶ್ಚ ರಾಜರ್ಷಿರ್ವಸಿಷ್ಠಾಯ ಮಹಾತ್ಮನೇ |
ನ್ಯಾಸಂ ಯಥಾವತ್ ಸನ್ನ್ಯಸ್ಯ ಜಗಾಮ ಸುಮಹಾಯಶಾಃ ॥15॥
ರಾಜರ್ಷಿಯಾದ ಕಕ್ಷಸೇನನು ಮಹಾತ್ಮರಾದ ವಸಿಷ್ಠರಿಗೆ ನ್ಯಾಸವನ್ನು (ರಕ್ಷಣೆಗೆ ಇಟ್ಟುಕೊಂಡ ವಸ್ತು) ಸರಿಯಾಗಿ ಹಿಂದಿರುಗಿಸಿ ಮಹಾಕೀರ್ತಿಯನ್ನು ಪಡೆದನು.
ಕರಂಧಮಸ್ಯ ಪೌತ್ರಸ್ತು ಮರುತ್ತೋಽವಿಕ್ಷಿತಃ ಸುತಃ |
ಕನ್ಯಾಮಾಂಗಿರಸೇ ದತ್ತ್ವ ದಿವಾಮಾಶು ಜಗಾಮ ಸಃ ॥16॥
ಕರಂಧಮನ ಪೌತ್ರನೂ, ಅವಿಕ್ಷಿತನ ಪುತ್ರನೂ ಆದ ಮರುತ್ತನು ಅಂಗಿರಸರಿಗೆ ಕನ್ಯಾದಾನವನ್ನು ಮಾಡಿ ಶೀಘ್ರವಾಗಿ ಸ್ವರ್ಗಕ್ಕೆ ಹೋದನು.
ಬ್ರಹ್ಮದತ್ತಶ್ಚ ಪಾಂಚಾಲ್ಯೋ ರಾಜಾ ಧರ್ಮಭೃತಾಂವರಃ |
ನಿಧಿಂ ಶಂಖಮನುಜ್ಞಾಪ್ಯ ಜಗಾಮ ಪರಮಾಂ ಗತಿಮ್ ॥17॥
ಪಾಂಚಾಲ ದೇಶದ ರಾಜನೂ, ಧರ್ಮಿಷ್ಠರಲ್ಲಿ ಶ್ರೇಷ್ಠನೂ ಆದ ಬ್ರಹ್ಮದತ್ತ ರಾಜನು ಕುಬೇರನಿಂದ ಶಂಖನಿಧಿಯನ್ನು ಪಡೆದು, ಅದನ್ನು ಬ್ರಾಹ್ಮಣರಿಗೆ ಕೊಟ್ಟು ಶ್ರೇಷ್ಠವಾದ ಗತಿಯನ್ನು ಹೊಂದಿದನು (ಲಕ್ಷಾಲಂಕಾರ).
ರಾಜಾ ಮಿತ್ರಸಹಶ್ಚೈವ ವಸಿಷ್ಠಾಯ ಮಹಾತ್ಮನೇ |
ಮದಯಂತೀಂ ಪ್ರಿಯಾಂ ಭಾರ್ಯಾಂ ದತ್ತ್ವ ಚ ತ್ರಿದಿವಂ ಗತಃ ॥18॥
ಮಿತ್ರಸಹ ರಾಜನು ಮಹಾತ್ಮರಾದ ವಸಿಷ್ಠರಿಗೆ ತಮ್ಮ ಪ್ರಿಯಪತ್ನಿಯಾದ ಮದಯಂತಿಯನ್ನು ಕೊಟ್ಟು ಸ್ವರ್ಗಕ್ಕೆ ಹೋದನು.
ಮನೋಃ ಪುತ್ರಶ್ಚ ಸುದ್ಯುಮ್ನೋ ಲಿಖಿತಾಯ ಮಹಾತ್ಮನೇ |
ದಂಡಮುದ್ಧೃತ್ಯ ಧರ್ಮೇಣ ಗತೋ ಲೋಕಾನನುತ್ತಮಾನ್ ॥19॥
ಮನುವಿನ ಪುತ್ರನಾದ ಸುದ್ಯುಮ್ನನು ಮಹಾತ್ಮರಾದ ಲಿಖಿತರಿಗೆ ವಿಧಿಸಿದ ದಂಡವನ್ನು ಹಿಂದೆ ತೆಗೆದುಕೊಂಡು, ಆ ಧರ್ಮದಿಂದ ಶ್ರೇಷ್ಠವಾದ ಲೋಕಗಳಿಗೆ ಹೋದನು.
ಸಹಸ್ರಚಿತ್ಯೋ ರಾಜರ್ಷಿಃ ಪ್ರಾಣಾನಿಷ್ಟಾನ್ ಮಹಾಯಶಾಃ |
ಬ್ರಾಹ್ಮಣಾರ್ಥೇ ಪರಿತ್ಯಜ್ಯ ಗತೋ ಲೋಕಾನನುತ್ತಮಾನ್ ॥20॥
ಮಹಾಕೀರ್ತಿವಂತನೂ, ರಾಜರ್ಷಿಯೂ ಆದ ಸಹಸ್ರಚಿತ್ತಿಯು ಇಷ್ಟವಾದ ತನ್ನ ಪ್ರಾಣಗಳನ್ನು ಬ್ರಾಹ್ಮಣರ ಸಲುವಾಗಿ ಪರಿತ್ಯಾಗ ಮಾಡಿ, ಶ್ರೇಷ್ಠವಾದ ಲೋಕಗಳನ್ನು ಪಡೆದನು.
ಸರ್ವಕಾಮೈಶ್ಚ ಸಂಪೂರ್ಣಂ ದತ್ತ್ವ ವೇಶ್ಮ ಹಿರಣ್ಮಯಮ್ |
ಮೌದ್ಗಲ್ಯಾಯ ಗತಃ ಸ್ವರ್ಗಂ ಶತದ್ಯುಮ್ನೋ ಮಹೀಪತಿಃ ॥21॥
ಶತದ್ಯುಮ್ನರಾಜನು ಮೌದ್ಗಲ್ಯರಿಗೆ ಸರ್ವಕಾಮ ಸಂಪೂರ್ಣವಾದ, ಸುವರ್ಣಮಯವಾದ ಗೃಹವನ್ನು ದಾನ ಮಾಡಿ ಸ್ವರ್ಗಕ್ಕೆ ಹೋದನು.

ಭಕ್ಷ್ಯಭೋಜ್ಯಸ್ಯ ಚ ಕೃತಾನ್ ರಾಶಯಃ ಪರ್ವತೋಪಮಾನ್ |
ಶಾಂಡಿಲ್ಯಾಯ ಪುರಾ ದತ್ತ್ವಾ ಸಮನ್ಯುರ್ದಿವಮಾಸ್ಥಿತಃ ॥22॥
ಸಮನ್ಯು ರಾಜನು ಪರ್ವತಗಳಂತಹ ಭಕ್ಷ್ಯ-ಭೋಜ್ಯಗಳ ರಾಶಿಗಳನ್ನು ಶಾಂಡಿಲ್ಯರಿಗೆ ಕೊಟ್ಟು ಸ್ವರ್ಗಕ್ಕೆ ಹೋದನು.
ನಾಮ್ನಾ ಚ ದ್ಯುತಿಮಾನ್ ನಾಮ ಸಾಲ್ವರಾಜೋ ಮಹಾದ್ಯುತಿಃ |
ದತ್ತ್ವಾ ರಾಜ್ಯಮೃಚೀಕಾಯ ಗತೋ ಲೋಕಾನನುತ್ತಮಾನ್ ॥23॥
ದ್ಯುತಿಮಾನ್ ಎಂಬ ಮಹಾಕಾಂತಿಯುಳ್ಳ ಸಾಲ್ವರಾಜನು ಋಚೀಕರಿಗೆ ರಾಜ್ಯವನ್ನು ದಾನ ಮಾಡಿ ಶ್ರೇಷ್ಠವಾದ ಲೋಕಗಳನ್ನು ಹೊಂದಿದನು.
ಮದಿರಾಶ್ವಶ್ಚ ರಾಜರ್ಷಿರ್ದತ್ತ್ವಾ ಕನ್ಯಾಂ ಸುಮಧ್ಯಮಾಮ್ |
ಹಿರಣ್ಯಹಸ್ತಾಯ ಗತೋ ಲೋಕಾನ್ ದೇವೈರಧಿಷ್ಠಿತಾನ್ ॥24॥
ಮದಿರಾಶ್ವನೆಂಬ ರಾಜರ್ಷಿಯು ಸುಮಧ್ಯಮೆಯಾದ (ಸುಂದರಿಯಾದ) ತನ್ನ ಪುತ್ರಿಯನ್ನು ಹಿರಣ್ಯಹಸ್ತ ಋಷಿಗಳಿಗೆ ಕೊಟ್ಟು ದೇವತೆಗಳು ವಾಸ ಮಾಡುವ ಲೋಕಕ್ಕೆ ಹೋದನು.
ಲೋಮಪಾದಶ್ಚ ರಾಜರ್ಷಿಃ ಶಾಂತಾಂ ದತ್ತ್ವಾ ಸುತಾಂ ಪ್ರಭುಃ |
ಋಷ್ಯಶೃಂಗಾಯ ವಿಪುಲೈಃ ಸರ್ವೈಃ ಕಾಮೈರಯುಜ್ಯತ ॥25॥
ಲೋಮಪಾದನೆಂಬ ರಾಜರ್ಷಿಯು ತನ್ನ ಮಗಳಾದ ಶಾಂತಳನ್ನು ಋಷ್ಯಶೃಂಗರಿಗೆ ದಾನ ಮಾಡಿ ವಿಪುಲವಾಗಿ ಸರ್ವಕಾಮಗಳನ್ನೂ ಪಡೆದನು.
ಕೌತ್ಸಾಯ ದತ್ತ್ವಾ ಕನ್ಯಾಂ ತು ಹಂಸೀಂ ನಾಮ ಯಶಸ್ವಿನೀಮ್ |
ಗತೋಽಕ್ಷಯಾನತೋ ಲೋಕಾನ್ ರಾಜರ್ಷಿಶ್ಚ ಭಗೀರಥಃ ॥26॥
ರಾಜರ್ಷಿಯಾದ ಭಗೀರಥನು ಕೌತ್ಸರಿಗೆ ಕೀರ್ತಿವಂತಳಾದ ತನ್ನ ಮಗಳಾದ ಹಂಸಿಯನ್ನು ದಾನ ಮಾಡಿ ಅದರಿಂದ ಅಕ್ಷಯಲೋಕಗಳನ್ನು ಹೊಂದಿದನು.
ದತ್ತ್ವಾ ಶತಸಹಸ್ರಂ ತು ಗವಾಂ ರಾಜಾ ಭಗೀರಥಃ |
ಸವತ್ಸಾನಾಂ ಕಹೋಳಾಯ ಗತೋ ಲೋಕಾನನುತ್ತಮಾನ್ ॥27॥
ಭಗೀರಥ ರಾಜನು ಕಹೋಳರಿಗೆ ವತ್ಸ ಸಹಿತವಾದ ಲಕ್ಷ ಗೋವುಗಳನ್ನು ದಾನ ಮಾಡಿ ಶ್ರೇಷ್ಠವಾದ ಲೋಕಗಳನ್ನು ಹೊಂದಿದನು.
ಏತೇ ಚಾನ್ಯೇ ಚ ಬಹವೋ ದಾನೇನ ತಪಸಾ ಚ ಹ |
ಯುಧಿಷ್ಠಿರ ಗತಾಃ ಸ್ವರ್ಗಂ ನಿವರ್ತಂತೇ ಪುನಃಪುನಃ ॥28॥
ಎಲೈ ಯುಧಿಷ್ಠಿರನೇ, ಇವರೂ ಮತ್ತು ಇನ್ನೂ ಅನೇಕರೂ ತಪಸ್ಸನ್ನು ಮಾಡಿ ದಾನವನ್ನು ಮಾಡಿ ಸ್ವರ್ಗಕ್ಕೆ ಹೋಗಿದ್ದಾರೆ. ಅವರು ಪುನಃ ಪುನಃ ಭೂಮಿಗೆ ಬರುತ್ತಾರೆ.
ತೇಷಾಂ ಪ್ರತಿಷ್ಠಿತಾ ಕೀರ್ತಿರ್ಯಾವತ್ಸ್ಥಾಸ್ಯತಿ ಮೇದಿನೀ |
ಗೃಹಸ್ಥೈರ್ದಾನತಪಸಾ ಯೈರ್ಲೋಕಾ ವೈ ವಿನಿರ್ಜಿತಾಃ ॥29॥
ಯಾವ ಗೃಹಸ್ಥರು ದಾನ ಮತ್ತು ತಪಸ್ಸುಗಳಿಂದ ಉತ್ತಮ ಲೋಕಗಳನ್ನು ಜಯಿಸಿದರೋ ಅಂತಹವರ ಕೀರ್ತಿಯು ಭೂಮಿಯು ಇರುವವರೆಗೂ ಭೂಮಿಯಲ್ಲಿ ಪ್ರತಿಷ್ಠಿತವಾಗಿರುತ್ತದೆ.
ಶಿಷ್ಟಾನಾಂ ಚರಿತಂ ಹ್ಯೇತತ್ ಕೀರ್ತಿತಂ ಮೇ ಯುಧಿಷ್ಠಿರ |
ದಾನಯಜ್ಞಪ್ರಜಾಸರ್ಗೈರೇತೇ ಹಿ ದಿವಮಾಸ್ಥಿತಾಃ ॥30॥
ಎಲೈ ಯುಧಿಷ್ಠಿರನೇ, ಶಿಷ್ಟರಾದವರ ಈ ಚರಿತ್ರೆಯನ್ನು ನಾನು ಹೇಳಿದ್ದೇನೆ. ಇವರು ದಾನದಿಂದ, ಯಜ್ಞಗಳಿಂದ ಮತ್ತು ಸಂತತಿಯಿಂದ ಸ್ವರ್ಗವನ್ನು ಹೊಂದಿದವರು.
ದತ್ತ್ವಾ ತು ಸತತಂ ತೇಽಸ್ತು ಕೌರವಾಣಾಂ ಧುರಂಧರ |
ದಾನಯಜ್ಞಕ್ರಿಯಾಯುಕ್ತಾ ಬುದ್ಧಿರ್ಧರ್ಮೋಪಚಾಯಿನೀ ॥31॥
ಎಲೈ ಕೌರವರ ಧುರಂಧರನೇ, ನಿನಗೆ ಸತತವಾದ ದಾನಗಳನ್ನು ಮಾಡಿ ಧರ್ಮವನ್ನು ಹೆಚ್ಚಿಸುವ ದಾನಯಜ್ಞಕ್ರಿಯಾ ವಿಷಯವಾದ ಬುದ್ಧಿಯು ಉಂಟಾಗಲಿ.
ಯತ್ರ ತೇ ನೃಪಶಾರ್ದೂಲ ಸಂದೇಹೋ ವೈ ಭವಿಷ್ಯತಿ |
ಶ್ವಃ ಪ್ರಭಾತೇ ಹಿ ವಕ್ಷ್ಯಾಮಿ ಸಂಧ್ಯಾ ಹಿ ಸಮುಪಸ್ಥಿತಾ ॥32॥
ಎಲೈ ರಾಜಶಾರ್ದೂಲನೇ, ನಿನಗೆ ಬೇರೆ ಸಂಶಯವಿದ್ದರೆ ಅದನ್ನು ನಾಳೆಯ ಪ್ರಾತಃಕಾಲದಲ್ಲಿ ಹೇಳುವೆನು. ಈಗ ಸಂಧ್ಯಾಸಮಯವು ಪ್ರಾಪ್ತವಾಗುತ್ತಿದೆ.
ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪ್ರಶಂಸಾ ನಾಮ ಅಷ್ಟಾಶೀತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ಎಂಬತ್ತೊಂಬತ್ತನೆಯ ಅಧ್ಯಾಯ
ದಾನದ ಪ್ರಭೇದಗಳು
ಯುಧಿಷ್ಠಿರಃ
ಶ್ರುತಂ ಮೇ ಭವತಸ್ತಾತ ಸತ್ಯವ್ರತಪರಾಕ್ರಮ |

ದಾನಧರ್ಮೇಣ ಮಹತಾ ಯೇ ಪ್ರಾಪ್ತಾಸ್ತ್ರಿದಿವಂ ನೃಪಾಃ ॥1॥
ಯುಧಿಷ್ಠಿರ ಸತ್ಯವ್ರತಪರಾಕ್ರಮನೇ, ಪ್ರೀತಿಪಾತ್ರನೇ, ನಾನು ಮಹಾದಾನ ಧರ್ಮವನ್ನು ಮಾಡಿ ಸ್ವರ್ಗವನ್ನು ಸೇರಿದ ರಾಜರನ್ನು ಕೇಳಿದೆನು.
ಇಮಾಂಸ್ತು ಶ್ರೋತುಮಿಚ್ಛಾಮಿ ಧರ್ಮಾನ್ ಧರ್ಮಭೃತಾಂವರ |
ದಾನಂ ಕತಿವಿಧಂ ದೇಯಂ ಕಿಂ ತಸ್ಯ ಚ ಫಲಂ ಲಭೇತ್ ॥2॥
ಧರ್ಮಿಷ್ಠರಲ್ಲಿ ಶ್ರೇಷ್ಠನೇ, ದಾನವು ಎಷ್ಟು ವಿಧ? ಏನನ್ನು ಕೊಡಬೇಕು? ಅದರ ಫಲವೇನು ಎಂದು ಈ ಧರ್ಮಗಳನ್ನು ಕೇಳಲು ಬಯಸುತ್ತೇನೆ.
ಕಥಂ ಕೇಭ್ಯಶ್ಚ ಧರ್ಮ್ಯಂ ಚ ದಾನಂ ದಾತವ್ಯಮಿಷ್ಯತೇ |
ಕೈಃ ಕಾರಣೈಃ ಕತಿವಿಧಂ ಶ್ರೋತುಮಿಚ್ಛಾಮಿ ತತ್ತ್ವತಃ ॥3॥
ಧರ್ಮಕ್ಕೆ ಅನುಗುಣವಾದ ದಾನವನ್ನು ಹೇಗೆ, ಯಾರಿಗೆ, ಯಾವ ಕಾರಣಗಳಿಂದ ಮಾಡಬೇಕು? ಅದರಲ್ಲಿ ಎಷ್ಟು ವಿಧ? ಎಂದು ಸರಿಯಾಗಿ ಕೇಳಲು ಬಯಸುತ್ತೇನೆ.
ಭೀಷ್ಮಃ
ಶೃಣು ತತ್ತ್ವೇನ ಕೌಂತೇಯ ದಾನಂ ಪ್ರತಿ ಮಮಾನಘ |
ಯಥಾ ದಾನಂ ಪ್ರದಾತವ್ಯಂ ಸರ್ವವರ್ಣೇಷು ಭಾರತ ॥4॥
ಭೀಷ್ಮ ಕೌಂತೇಯನೇ, ಅನಘನೇ, ದಾನದ ವಿಷಯದಲ್ಲಿ ಸರ್ವ ವರ್ಣದವರಿಗೂ ಹೇಗೆ ದಾನವನ್ನು ಮಾಡಬೇಕೆಂಬುದನ್ನು ಸರಿಯಾಗಿ ಕೇಳು.
ಧರ್ಮಾದರ್ಥಾದ್ ಭಯಾತ್ ಕಾಮಾತ್ ಕಾರುಣ್ಯಾದಿತಿ ಭಾರತ |
ದಾನಂ ಪಂಚವಿಧಂ ಜ್ಞೇಯಂ ಕಾರಣೈರ್ಯೈರ್ನಿಬೋಧ ತತ್ ॥5॥
ಎಲೈ ಭಾರತನೇ, ಧರ್ಮದಿಂದ, ಅರ್ಥದಿಂದ, ಭಯದಿಂದ, ಕಾಮದಿಂದ ಮತ್ತು ಕರುಣೆಯಿಂದ ಎಂದು ಹೀಗೆ ದಾನದ ಕಾರಣವು ಐದು ವಿಧವಾಗಿರುವುದರಿಂದ ದಾನವೂ ಐದು ವಿಧವಾದುದೆಂದು ತಿಳಿಯಬೇಕು.
ಇಹ ಕೀರ್ತಿಮವಾಪ್ನೋತಿ ಪ್ರೇತ್ಯ ಚಾನುತ್ತಮಂ ಸುಖಮ್ |
ಇತಿ ದಾನಂ ಪ್ರದಾತವ್ಯಂ ಬ್ರಾಹ್ಮಣೇಭ್ಯೋಽನಸೂಯತಾ ॥6॥
ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ ಸುಖವನ್ನೂ ಕೊಡುವುದೆಂದು ಬ್ರಾಹ್ಮಣರಿಗೆ ಅಸೂಯಾ ರಹಿತನಾಗಿ ದಾನವನ್ನು ಮಾಡಬೇಕು (ಇದು ಧರ್ಮದ ಕಾರಣದಿಂದ ಮಾಡಿದ ದಾನ).
ದದಾತಿ ವಾ ದಾಸ್ಯತಿ ವಾ ಮಹ್ಯಂ ದತ್ತಮನೇನ ವಾ |
ಇತ್ಯರ್ಥಿಭ್ಯೋ ನಿಶಮ್ಯೈವ ಸರ್ವಂ ದಾತವ್ಯಮರ್ಥಿನೇ ॥7॥
ಇವನು ನನಗೆ ದಾನವನ್ನು ಮಾಡುತ್ತಾನೆ, ಮುಂದೆ ಮಾಡುವನು ಅಥವಾ ಹಿಂದೆ ಮಾಡಿದ್ದಾನೆ ಎಂದು ತಿಳಿದು ದಾನವನ್ನು ಪ್ರಾರ್ಥಿಸುವವರಿಂದ ಅವನ ಪರಿಸ್ಥಿತಿಯನ್ನು ತಿಳಿದು ಅಂತಹ ದ್ರವ್ಯದಾನವನ್ನು ಮಾಡಬೇಕು (ಇದು ಅರ್ಥ ಕಾರಣದಿಂದ ಮಾಡಿದ ದಾನ).
ನಾಸ್ಯಾಹಂ ನ ಮದೀಯೋಽಯಂ ಪಾಪಂ ಕುರ್ಯಾದ್ ವಿಮಾನಿತಃ |
ಇತಿ ದದ್ಯಾದ್ ಭಯಾದೇವ ದೃಢಂ ಮೂಢಾಯ ಪಂಡಿತಃ ॥8॥
ಇವನು ನನ್ನವನಲ್ಲ, ನಾನೂ ಇವನಿಗೆ ಸೇರಿದವನಲ್ಲ. ಆದರೆ ಕೊಡದಿದ್ದರೆ ಇವನು ಏನಾದರೂ ಅಪಾಯವನ್ನುಂಟು ಮಾಡಬಹುದು ಎಂಬ ಭಯದಿಂದ ಪಂಡಿತನಾದವನು ಮೂಢನಿಗೂ ಸರಿಯಾಗಿ ದಾನವನ್ನು ಮಾಡಬೇಕು (ಇದು ಭಯದ ಕಾರಣದಿಂದ ಉಂಟಾದ ದಾನ).
ಪ್ರಿಯೋ ಮೇಽಯಂ ಪ್ರಿಯೋಽಸ್ಯಾಹಮಿತಿ ಸಂಪ್ರೇಕ್ಷ್ಯ ಬುದ್ಧಿಮಾನ್ |
ವಯಸ್ಯಾಯೈವಮಕ್ಲಿಷ್ಟಂ ದಾನಂ ದದ್ಯಾದತಂದ್ರಿತಃ ॥9॥
ಇವನು ನನಗೆ ಪ್ರಿಯನಾದವನು, ನಾನೂ ಇವನಿಗೆ ಪ್ರಿಯನಾದವನು ಎಂದು ತಿಳಿದು ವಿವೇಕಿಯಾದವನು ಸ್ನೇಹಿತನಿಗೆ ಆಲಸ್ಯವಿಲ್ಲದೆ, ಕ್ಲೇಶಪಡದೆ ದಾನವನ್ನು ಮಾಡಬೇಕು (ಇದು ಕಾಮದ ಕಾರಣದಿಂದ ಉಂಟಾದ ದಾನ).
ದೀನಶ್ಚ ಯಾಚತೇ ಚಾಯಮಲ್ಪೇನಾಪಿ ಹಿ ತುಷ್ಯತಿ |
ಇತಿ ದದ್ಯಾದ್ ದರಿದ್ರಾಯ ಕಾರುಣ್ಯಾದಿತಿ ಸರ್ವಥಾ ॥10॥
ಇವನು ದೀನನಾದವನು, ಬೇಡುತ್ತಿದ್ದಾನೆ. ಅಲ್ಪದಿಂದಲೂ ಸಂತೋಷವನ್ನು ಪಡುತ್ತಾನೆ ಎಂದು ದರಿದ್ರನಿಗೆ ಕರುಣೆಯಿಂದ ದಾನವನ್ನು ಮಾಡಬೇಕು (ಇದು ಕರುಣಾ ನಿಮಿತ್ತವಾದ ದಾನ).
ಇತಿ ಪಂಚವಿಧಂ ದಾನಂ ಪುಣ್ಯಕೀರ್ತಿವಿವರ್ಧನಮ್ |
ಯಥಾಶಕ್ತ್ಯಾ ಪ್ರದಾತವ್ಯಮೇವಮಾಹ ಪ್ರಜಾಪತಿಃ ॥11॥
ಹೀಗೆ ಪುಣ್ಯವನ್ನೂ, ಕೀರ್ತಿಯನ್ನೂ ಅಭಿವೃದ್ಧಿ ಪಡಿಸುವ ಪಂಚವಿಧವಾದ ದಾನವನ್ನು ತನ್ನ ಶಕ್ತಿಗೆ ಅನುಗುಣವಾಗಿ ಮಾಡಬೇಕೆಂದು ಬ್ರಹ್ಮದೇವರು ಹೇಳಿದ್ದಾರೆ.
ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಪ್ರಭೇದಕಥನಂ ನಾಮ ಏಕೋನನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ಎಂಬತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *

ನೂರ ತೊಂಬತ್ತನೆಯ ಅಧ್ಯಾಯ
ಕೃಷ್ಣನ ದೇಹದಿಂದ ಪ್ರದ್ಯುಮ್ನನ ನಿಷ್ಕ್ರಮಣ ಮತ್ತು ಪುನಃ ಪ್ರವೇಶ
ಯುಧಿಷ್ಠಿರಃ
ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ |
ಶ್ರೂಯತಾಂ ಮೇ ಹಿ ವಚನಮರ್ಥಿತ್ವಾತ್ ಪ್ರಬ್ರವೀಮ್ಯಹಮ್ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಮಹಾಪ್ರಾಜ್ಞನೇ, ಸರ್ವಶಾಸ್ತ್ರ ವಿಶಾರದನೇ, ನಾನು ಅರ್ಥಿಯಾಗಿರುವುದರಿಂದ ಮಾತನಾಡುತ್ತಿದ್ದೇನೆ. ನನ್ನ ಮಾತನ್ನು ಕೇಳು.
ಪರಾವರಜ್ಞೋ ಭೂತಾನಾಂ ದಯಾವಾನ್ ಸರ್ವಜಂತುಷು |
ಆಗಮೈರ್ಬಹುಭಿಃ ಪ್ರೀತೋ ಭವಾನ್ ನಃ ಪರಮಃ ಕುಲೇ ॥2॥
ಜೀವರಲ್ಲಿ ಉಚ್ಛ-ನೀಚ ಭಾವವನ್ನು ತಿಳಿದು, ಎಲ್ಲ ಪ್ರಾಣಿಗಳಲ್ಲಿ ದಯೆಯನ್ನು ಹೊಂದಿ, ಅನೇಕ ಆಗಮಗಳನ್ನು ಸಂತೋಷದಿಂದ ಅಧ್ಯಯನವನ್ನು ಮಾಡಿದ ನೀನು ನಮ್ಮ ಕುಲದಲ್ಲಿ ಬಹಳ ಶ್ರೇಷ್ಠನಾದವನು.
ತ್ವಾದೃಶೋ ದುರ್ಲಭೋ ಲೋಕೇ ಸಾಂಪ್ರತಂ ಜ್ಞಾನಸಂಯುತಃ |
ಭವತಾ ಗುರುಣಾ ಚೈವ ಧನ್ಯಾ ಬತ ವಯಂ ಪ್ರಭೋ ॥3॥
ನಿನ್ನಂತಹ ಜ್ಞಾನಸಂಪನ್ನರು ಲೋಕದಲ್ಲಿ ದುರ್ಲಭರಾದವರು. ನಿನ್ನಂತಹ ಹಿರಿಯನನ್ನು ಹೊಂದಿ ಎಲೈ ಪ್ರಭುವೇ, ನಾವು ಧನ್ಯರಾಗಿದ್ದೇವೆ.
ಅಯಂ ಸ ಕಾಲಃ ಸಂಪ್ರಾಪ್ತೋ ದುರ್ಲಭೋ ಜ್ಞಾತಿಬಾಂಧವೈಃ |
ಶಾಸ್ತಾ ನು ನಾಸ್ತಿ ನಃ ಕಶ್ಚಿತ್ತ್ವದೃತೇ ಪುರುಷರ್ಷಭ ॥4॥
ಎಲೈ ಪುರುಷಶ್ರೇಷ್ಠನೇ, ನಿನ್ನನ್ನು ಬಿಟ್ಟು ನಮಗೆ ಯಾರೂ ಉಪದೇಶವನ್ನು ಮಾಡದಂತಹ ಕಷ್ಟಕಾಲವು ನಮಗೂ ನಮ್ಮ ಜ್ಞಾತಿ-ಬಾಂಧವರಿಗೂ ಒದಗಿದೆ.
ತಸ್ಮಾದ್ ಧರ್ಮಾರ್ಥಸಹಿತಮಾಯತ್ಯಾಂ ಚ ಹಿತೋದಯಮ್ |
ಆಶ್ಚರ್ಯಂ ಪರಮಂ ವಾಕ್ಯಂ ಶ್ರೋತುಮಿಚ್ಛಾಮಿ ಭಾರತ ॥5॥
ಆದ್ದರಿಂದ ಎಲೈ ಭಾರತನೇ, ಧರ್ಮಾರ್ಥಸಂಬಂಧಿಯಾದ, ಭವಿಷ್ಯತ್ಕಾಲದಲ್ಲಿ ಹಿತವನ್ನುಂಟು ಮಾಡುವ, ಆಶ್ಚರ್ಯಕರವಾದ, ಶ್ರೇಷ್ಠವಾದ ವಿಷಯವನ್ನು ನಿನ್ನಿಂದ ಕೇಳಲು ಬಯಸುತ್ತೇನೆ.
ಅಯಂ ನಾರಾಯಣಃ ಶ್ರೀಮಾನ್ ಸರ್ವಪಾರ್ಥಿವಸನ್ನಿಧೌ |
ಭವಂತಂ ಬಹುಮಾನಾಚ್ಚ ಪ್ರಣಯಾಚ್ಚೋಪಸೇವತೇ ॥6॥
ಈ ಶ್ರೀಮನ್ನಾರಾಯಣನು-ಕೃಷ್ಣನು ಸರ್ವರಾಜರ ಸನ್ನಿಧಿಯಲ್ಲಿ ನಿನ್ನನ್ನು ಗೌರವದಿಂದಲೂ ಮತ್ತು ಪ್ರೀತಿಯಿಂದಲೂ ಸೇವಿಸುತ್ತಿದ್ದಾನೆ.
ಅಸ್ಯೈವ ತು ಸಮಕ್ಷಂ ನಃ ಪಾರ್ಥಿವಾನಾಂ ತಥೈವ ಚ |
ಇತಿವೃತ್ತಂ ಪುರಾಣಂ ಚ ಶ್ರೋತೄಣಾಂ ಪರಮಂ ಹಿತಮ್ ॥7॥
ಯದಿ ತೇಽಹಮನುಗ್ರಾಹ್ಯೋ ಭ್ರಾತೃಭಿಃ ಸಹಿತೋಽನಘ |
ಮತ್ಪ್ರಿಯಾರ್ಥಂ ಹಿ ಕೌರವ್ಯ ಸ್ನೇಹಾದ್ ಭಾಷಿತುಮರ್ಹಸಿ ॥8
ನನ್ನ ಮೇಲೆ ನಿನ್ನ ಅನುಗ್ರಹವಿದ್ದರೆ ಎಲೈ ಅನಘನೇ, ಕೌರವ್ಯನೇ, ಈ ಕೃಷ್ಣನ ಮತ್ತು ರಾಜರಾದ ನಮ್ಮೆಲ್ಲರ ಸಮಕ್ಷಮದಲ್ಲಿ ಶ್ರೋತೃಗಳಿಗೆ ಪರಮಹಿತವಾದ ಹಿಂದೆ ನಡೆದ ಒಂದು ಘಟನೆಯನ್ನು ತಮ್ಮಂದಿರಿಂದ ಸಹಿತನಾದ ನನಗೆ ಪ್ರಿಯವನ್ನುಂಟು ಮಾಡಲು ಸ್ನೇಹದಿಂದ ಹೇಳಬೇಕು.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಸ್ನೇಹಾದಾಗತವಿಕ್ಲವಃ |
ಪ್ರಪಿಬನ್ನಿವ ತಂ ದೃಷ್ಟ್ವಾ ಭೀಷ್ಮೋ ವಚನಮಬ್ರವೀತ್ ॥9॥
ವೈಶಂಪಾಯನ ಯುಧಿಷ್ಠಿರನ ಆ ಮಾತುಗಳನ್ನು ಕೇಳಿ, ಸ್ನೇಹದಿಂದ ಮನಸ್ಸಿನಲ್ಲಿ ವೈಕ್ಲವ್ಯವನ್ನು ಹೊಂದಿ ದೃಷ್ಟಿಯಿಂದ ಪಾನ ಮಾಡುವವನಂತೆ ಅವನನ್ನು ನೋಡುತ್ತಾ ಭೀಷ್ಮರು ಮಾತನಾಡಿದರು.
ಶೃಣು ರಾಜನ್ ಪುರಾವೃತ್ತಮಿತಿಹಾಸಂ ಪುರಾತನಮ್ |
ಏತಾವದುಕತ್ವ ಗಾಂಗೇಯಃ ಪ್ರಣಮ್ಯ ಶಿರಸಾ ಹರಿಮ್ |
ಧರ್ಮರಾಜಂ ಸಮೀಕ್ಷ್ಯೇದಂ ಪುನರ್ವಕ್ತುಂ ಸಮಾರಭತ್ ॥10॥
ರಾಜನೇ, ಪ್ರಾಚೀನಕಾಲದಲ್ಲಿ ನಡೆದ ಈ ಇತಿಹಾಸವನ್ನು ಕೇಳು. ಇಷ್ಟು ಹೇಳಿ ಭೀಷ್ಮರು ಹರಿಗೆ ಶಿರಸಾ ನಮಸ್ಕಾರವನ್ನು ಮಾಡಿ, ಧರ್ಮರಾಜನನ್ನು ನೋಡಿ ಪುನಃ ಮಾತನಾಡಲು ಪ್ರಾರಂಭಿಸಿದರು.
ಅಯಂ ನಾರಾಯಣಃ ಶ್ರೀಮಾನ್ ಪುತ್ರಾರ್ಥೇ ವ್ರತಕಾಂಕ್ಷಯಾ |
ದೀಕ್ಷಿತೋಽಭೂನ್ಮಹಾಬಾಹುಃ ಪುರಾ ದ್ವಾದಶವಾರ್ಷಿಕಮ್ ॥11॥
ಈ ಮಹಾಬಾಹುವೂ, ಸಂಪದ್ಯುಕ್ತನೂ ಆದ ನಾರಾಯಣನು ಪುತ್ರನನ್ನು ಪಡೆಯುವ ಸಲುವಾಗಿ ವ್ರತವನ್ನು ಮಾಡಲು ಬಯಸಿ ಹನ್ನೆರಡು ವರ್ಷಗಳ ಕಾಲ ತಪಸ್ಸನ್ನು ಕೈಗೊಂಡನು.
ಶಿವನ ಅನುಗ್ರಹದಿಂದ ಕೃಷ್ಣನು ಪ್ರದ್ಯುಮ್ನನನ್ನು ಪಡೆದನು ಎಂಬ ಅಪವಾದವನ್ನು ಪರಿಹರಿಸಲು ಭೀಷ್ಮರು `ಅಯಂ ನಾರಾಯಣಃ' ಎಂಬ ಶ್ಲೋಕದಿಂದ ಪ್ರಾರಂಭಿಸಿ ಅಧ್ಯಾಯದ ಕೊನೆಯವರೆಗೆ ಒಂದು ಕಥೆಯನ್ನು ಹೇಳುತ್ತಾರೆ. ಇಲ್ಲಿ `ಅಸುರಃ

ಸಾಂಪ್ರತಂ ಕಶ್ಚಿತ್' (ಶ್ಲೋಕ 42) ರಿಂದ ಆರಂಭವಾಗುವ ಮುಂದಿರುವ ಶ್ಲೋಕದಿಂದ ಕೈಲಾಸಶಿಖರದಲ್ಲಿ ವಕ್ರನೆಂಬ ಅಸುರನಿದ್ದನು. ಅವನು ಕೃಷ್ಣಪುತ್ರನಾದ ಪ್ರದ್ಯುಮ್ನನಿಂದಲೇ ಕೊಲ್ಲಲ್ಪಡಬೇಕಾದವನು ಎಂದು ಹೇಳಲ್ಪಡುತ್ತದೆ. `ತತೋ ಮಮಾತ್ಮಜೋ ದೇಹಾತ್ ಸೋಗ್ನಿರ್ಭೂತ್ವಾ ವಿನಿಃಸೃತಃ' (ಶ್ಲೋಕ 45) ಎಂಬ ವಚನದಿಂದ ಮೊದಲೇ ಜನಿಸಿದ ಪ್ರದ್ಯುಮ್ನನನ್ನು ತನ್ನ ಉದರದಲ್ಲಿಟ್ಟುಕೊಂಡು ಕೃಷ್ಣನು ಕೈಲಾಸಕ್ಕೆ ಬಂದನು. ಪ್ರದ್ಯುಮ್ನ ಅಗ್ನಿಯ ರೂಪವನ್ನು ತೆಗೆದುಕೊಂಡು ಕೃಷ್ಣ ದೇಹದಿಂದ ಹೊರಗೆ ಬಂದು ಆ ವನದ ಜೊತೆಯಲ್ಲಿ ಆ ಅಸುರನನ್ನೂ ದಹಿಸಿದನು ಎಂದು ತಿಳಿದುಬರುತ್ತದೆ. `ಸ ತು ವಹ್ನಿರ್ಮಹಾನ್ ಭೂತ್ವಾ' (ಶ್ಲೋಕ 29) ಎಂಬ ಶ್ಲೋಕದಿಂದ ಆ ಅಸುರನನ್ನು ದಹಿಸಿ ಪುನಃ ಪ್ರದ್ಯುಮ್ನ ರೂಪದಿಂದಲೇ ಕೃಷ್ಣನ ಉದರವನ್ನು ಪ್ರವೇಶಿಸಿದನು ಎಂದೂ ತಿಳಿದು ಬರುತ್ತದೆ. ಈ ಘಟನೆಯು ಎಲ್ಲ ಋಷಿಗಳಿಂದಲೂ ನೋಡಲ್ಪಟ್ಟಿತು. ಕೃಷ್ಣನೂ ಸಹ ಈ ಅಧ್ಯಾಯದ ಕೊನೆಯಲ್ಲಿ ಹೇಳುವಂತೆ ಅದನ್ನು ವರ್ಣಿಸಿದ್ದಾನೆ. ಆದ್ದರಿಂದ ಮೊದಲೇ ಜನಿಸಿದ ಪ್ರದ್ಯುಮ್ನನಿಗೆ ಪುನಃ ಜನನವು ಅಯುಕ್ತವಾದುದರಿಂದ ಶಿವನ ಅನುಗ್ರಹದಿಂದ ಕೃಷ್ಣನು ಪ್ರದ್ಯುಮ್ನನನ್ನು ಪುತ್ರನನ್ನಾಗಿ ಪಡೆದನು ಎಂಬ ವಾರ್ತೆಯು ಅಸುರ ಜನರ ಮೋಹನಕ್ಕಾಗಿಯೇ ಹೊರಟಿದೆ ಎಂಬ ಸಾರಾಂಶವು ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ಪ್ರಮೇಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಪೂರ್ಣಪ್ರಜ್ಞಾಚಾರ್ಯರೂ ಸಹ ಹಾಗೆಯೇ ತಮ್ಮ ಗ್ರಂಥದಲ್ಲಿ ನಿವೇಶವನ್ನು ಮಾಡಿದ್ದಾರೆ. ಆದ್ದರಿಂದ ಕೃಷ್ಣನ ಅಭಿಪ್ರಾಯವೂ, ಕೃಷ್ಣನ ಭಕ್ತಾಗ್ರೇಸರರಾದ ಪೂರ್ಣಪ್ರಜ್ಞಾಚಾರ್ಯರ ಅಭಿಪ್ರಾಯವೂ ಒಂದೇ ಎಂದು ಸಿದ್ಧವಾಗುತ್ತದೆ - ಲಕ್ಷಾಲಂಕಾರ.

ದೀಕ್ಷಿತಂ ಕೇಶವಂ ದ್ರಷ್ಟುಮಭಿಜಗ್ಮುರ್ಮಹರ್ಷಯಃ |
ಸೇವಿತುಂ ತಂ ಮಹಾತ್ಮಾನಂ ಪ್ರೀಯಮಾಣಂ ಜನಾರ್ದನಮ್ ॥12॥

ದೀಕ್ಷಿತನಾದ ಕೃಷ್ಣನನ್ನು ನೋಡಿ ಸಂತೋಷಗೊಂಡ, ಮಹಾತ್ಮನಾದ ಅವನ ಸೇವೆಯನ್ನು ಮಾಡಲು ಮಹರ್ಷಿಗಳು ಅಲ್ಲಿಗೆ ಬಂದರು.

ನಾರದಃ ಪರ್ವತಶ್ಚೈವ ಕೃಷ್ಣದ್ವೈಪಾಯನಸ್ತಥಾ |
ದೇವಲಃ ಕಾಶ್ಯಪಶ್ಚೈವ ಹಸ್ತಿಕಾಶ್ಯಪ ಏವ ಚ |
ಜಮದಗ್ನಿಶ್ಚ ರಾಜೇಂದ್ರ ಧೌಮ್ಯೋ ವಾಲ್ಮೀಕಿರೇವ ಚ ॥13॥
ಅಪರೇಽಪಿ ತಪಃಸಿದ್ಧಾಃ ಸತ್ಯವ್ರತಪರಾಯಣಾಃ |
ಶಿಷ್ಯೈರನುಗತಾಃ ಸರ್ವೇ ಬ್ರಹ್ಮವಿದ್ಭಿರಕಲ್ಮಷೈಃ ॥14॥

ನಾರದ, ಪರ್ವತ, ಕೃಷ್ಣದ್ವೈಪಾಯನರು, ದೇವಲ, ಕಾಶ್ಯಪ, ಹಸ್ತಿಕಾಶ್ಯಪ, ಜಮದಗ್ನಿ, ಧೌಮ್ಯ, ವಾಲ್ಮೀಕಿ ಮತ್ತು ಇನ್ನೂ ತಪಸ್ಸಿದ್ಧರೂ, ಸತ್ಯವ್ರತಪರಾಯಣರೂ ಆದ ಅನೇಕ ಋಷಿಗಳು, ಬ್ರಹ್ಮಜ್ಞಾನಿಗಳೂ, ನಿಷ್ಕಲ್ಮಷರೂ ಆದ ತಮ್ಮ ಶಿಷ್ಯರಿಂದ ಹಿಂಬಾಲಿಸಲ್ಪಟ್ಟವರಾಗಿ ಎಲ್ಲರೂ ಅಲ್ಲಿಗೆ ಬಂದರು.

ಕೇಶವಸ್ತಾನಭಿಗತಾನ್ ಪ್ರೀತ್ಯಾ ಸಂಪರಿಗೃಹ್ಯ ಚ |
ತೇಷಾಮತಿಥಿಸತ್ಕಾರಂ ಪೂಜನಾರ್ಥಂ ಕುಲೋಚಿತಮ್ |
ದೇವಕೀತನಯೋ ಹೃಷ್ಟೋ ದೇವತುಲ್ಯಮಕಲ್ಪಯತ್ ॥15॥

ಕೇಶವನು ಅಲ್ಲಿಗೆ ಬಂದ ಅವರನ್ನು ಪ್ರೀತಿಯಿಂದ ಸ್ವೀಕರಿಸಿ ಅವರನ್ನು ಪೂಜಿಸಲು ಕುಲೋಚಿತವಾದ ಅತಿಥಿ ಸತ್ಕಾರವನ್ನು ಮಾಡುವವನಾಗಿ ದೇವಕೀನಂದನನಾದ ಅವನು ಸಂತೋಷದಿಂದ ದೇವತೆಗಳಿಗೆ ಸಲ್ಲುವಂತಹ ಅತಿಥಿ ಸತ್ಕಾರವನ್ನು ಮಾಡಿದನು.

ಉಪವಿಷ್ಟೇಷು ಸರ್ವೇಷು ವಿಷ್ಟರೇಷು ತದಾಽನಘ |
ವಿಶ್ವಸ್ತೇಷು ಹಿ ತುಷ್ಟೇಷು ಕೇಶವಾರ್ಚನಯಾ ಪುನಃ ॥16॥
ಪರಸ್ಪರಂ ಕಥಾ ದಿವ್ಯಾಃ ಪ್ರಾವರ್ತಂತ ಮನೋರಮಾಃ |
ವಿಷ್ಣೋರ್ನಾರಾಯಣಸ್ಯೈವ ಪ್ರಸಾದಾತ್ ಕಥಯಾಮಿ ತಾಃ ॥17॥

ಅವರೂ ಸಹ ಕೇಶವಾರ್ಚನೆಯನ್ನು ಮಾಡಿ ವಿಶ್ರಾಂತಿಯನ್ನು ಪಡೆದು ತಮ್ಮ ತಮ್ಮ ಆಸನಗಳಲ್ಲಿ ಕುಳಿತಿರುವಾಗ ಎಲೈ ಅನಘನೇ, ಪರಸ್ಪರವಾಗಿ ದಿವ್ಯವೂ, ಮನೋಹರವೂ ಆದ ಅನೇಕ ಕಥೆಗಳು ನಡೆದವು. ವಿಷ್ಣುವೂ, ನಾರಾಯಣನೂ ಆದ ಕೃಷ್ಣನ ಅನುಗ್ರಹದಿಂದ ಆ ಕಥೆಗಳನ್ನು ಹೇಳುತ್ತೇನೆ.

ತಸ್ಯೈವ ವ್ರತಚರ್ಯಾಯಾಂ ಮುನಿಭಿರ್ವಿಸ್ಮಿತಂ ಪುರಾ |
ಯಶ್ಚ ಗೋವೃಷಭಾಂಕಸ್ಯ ಪ್ರಭಾವೋಽಭೂನ್ಮಹಾತ್ಮನಃ ॥18॥

ಅವನ ವ್ರತಚರ್ಯೆಯನ್ನು ನೋಡಿ ಹಾಗೂ ಮಹಾತ್ಮನಾದ ವೃಷಧ್ವಜನಾದ ಶಂಕರನ ಸಾಮರ್ಥ್ಯವನ್ನು ನೋಡಿ ಹಿಂದೆ ಮಹಾತ್ಮರು ವಿಸ್ಮಿತರಾದರು (ರಾಗಿದ್ದರು).

ಯತ್ರ ದೇವೀ ಮಹಾದೇವಮಪೃಚ್ಛತ್ ಸಂಶಯಾನ್ ಪುರಾ |
ಕಥಯಾಮಾಸ ಸರ್ವಾನ್ ತಾನ್ ದೇವ್ಯಾಃ ಪ್ರಿಯಚಿಕೀರ್ಷಯಾ ॥19॥

ಅಲ್ಲಿ ಪಾರ್ವತಿದೇವಿಯು ತನ್ನ ಸಂಶಯಗಳನ್ನು ಮಹಾದೇವನಲ್ಲಿ ಕೇಳಿದಳು. ಶಿವನು ದೇವಿಗೆ ಪ್ರಿಯವನ್ನು ಮಾಡಲು ಬಯಸಿ ಆ ಎಲ್ಲ ಪ್ರಶ್ನೆಗಳಿಗೆ ಉತ್ತರವನ್ನು ನೀಡಿದನು.

ಉಮಾಪತ್ಯೋಶ್ಚ ಸಂವಾದಂ ಶೃಣು ತಾತ ಮನೋರಮಮ್ |
ವರ್ಣಾಶ್ರಮಾಣಾಂ ಧರ್ಮಶ್ಚ ತತ್ರ ತಾತ ಸಮಾಹಿತಃ ॥20॥

ಎಲೈ ಪ್ರೀತಿಪಾತ್ರನೇ, ಮನೋಹರವಾದ ಆ ಉಮಾ-ಮಹೇಶ್ವರ ಸಂವಾದವನ್ನು ಕೇಳು. ಅದರಲ್ಲಿ ವರ್ಣಾಶ್ರಮ ಧರ್ಮಗಳು ನೆಲೆಗೊಂಡಿವೆ.

ಋಷಿಧರ್ಮಶ್ಚ ನಿಖಿಲೋ ರಾಜಧರ್ಮಶ್ಚ ಪುಷ್ಕಳಃ |
ಗೃಹಸ್ಥಧರ್ಮಶ್ಚ ಶುಭಃ ಕರ್ಮಪಾಕಫಲಾನಿ ಚ ॥21॥

ದೇವಗುಹ್ಯಂ ಚ ವಿವಿಧಂ ದಾನಧರ್ಮವಿಧಿಸ್ತಥಾ |
ವಿಧಾನಮತ್ರ ಸಂಪ್ರೋಕ್ತಂ ಯಮಸ್ಯ ನಿಯಮಸ್ಯ ಚ ॥22॥
(ಅಲ್ಲಿ) ಸಮಸ್ತವಾದ ಋಷಿಧರ್ಮವೂ, ಪುಷ್ಕಳವಾದ ರಾಜಧರ್ಮವೂ, ಶುಭವಾದ ಗೃಹಸ್ಥಧರ್ಮವೂ, ಕರ್ಮಪಾಕಫಲಗಳೂ, ವಿವಿಧವಾದ ದೇವಗುಹ್ಯ (ರಹಸ್ಯ)ಗಳೂ, ದಾನ- ಧರ್ಮ ವಿಧಿಗಳೂ, ಯಮ-ನಿಯಮ ವಿಧಿಗಳೂ ಹೇಳಲ್ಪಟ್ಟಿವೆ.
ಯಮಲೋಕವಿಧಾನಂ ಚ ಸ್ವರ್ಗಲೋಕವಿಧಿಸ್ತಥಾ |
ಪ್ರಾಣಮೋಕ್ಷವಿಧಿಶ್ಚೈವ ತೀರ್ಥಚರ್ಯಾ ಚ ಪುಷ್ಕಳಾ ॥23॥
ಮೋಕ್ಷಧರ್ಮವಿಧಾನಂ ಚ ಸಾಂಖ್ಯಯೋಗಸಮನ್ವಿತಮ್ |
ಸ್ತ್ರೀಧರ್ಮಶ್ಚ ಸ್ವಯಂ ದೇವ್ಯಾ ದೇವದೇವಾಯ ಭಾಷಿತಃ ॥24॥
ಯಮಲೋಕದ ವಿಧಾನಗಳು, ಸ್ವರ್ಗಲೋಕದ ವಿಧಾನಗಳು, ಮರಣ ಪ್ರಕಾರ, ಪುಷ್ಕಳವಾದ ತೀರ್ಥಯಾತ್ರೆಯ ಕ್ರಮ, ಮೋಕ್ಷಧರ್ಮ ವಿಧಿಗಳು, ಸಾಂಖ್ಯಯೋಗ ಸಮ್ಮತವಾದ ಜ್ಞಾನ (ಇವು ಶಂಕರನಿಂದ ಹೇಳಲ್ಪಟ್ಟಿವೆ). ಸ್ತ್ರೀಧರ್ಮಗಳು ಎಲ್ಲವೂ ಪಾರ್ವತಿದೇವಿಯಿಂದ ದೇವದೇವನಾದ ಶಂಕರನ ಎದುರಿಗೆ ಹೇಳಲ್ಪಟ್ಟಿವೆ.
ಏವಮಾದಿ ಶುಭಂ ಸರ್ವಂ ತತ್ರ ತಾತ ಸಮಾಹಿತಮ್ |
ರುದ್ರಾಣ್ಯಾಃ ಸಂಶಯಪ್ರಶ್ನೋ ಯತ್ರ ತಾತ ಪ್ರವರ್ತತೇ ॥25॥
ಎಲೈ ಪ್ರೀತಿಪಾತ್ರನೇ, ಪಾರ್ವತಿಯ ಸಂಶಯ ಪ್ರಶ್ನೆಗಳು ಎಲ್ಲಿವೆಯೋ ಅಲ್ಲಿ ಇಂತಹ ಶುಭವಾದ ಎಲ್ಲ ವಿಷಯಗಳೂ ಹೇಳಲ್ಪಟ್ಟಿವೆ.
ಧನ್ಯಂ ಯಶಸ್ಯಮಾಯುಷ್ಯಂ ಧರ್ಮ್ಯಂ ಚ ಪರಮಂ ಹಿತಮ್ |
ಪುಷ್ಟಿಯೋಗಮಿದಂ ದಿವ್ಯಂ ಕಥ್ಯಮಾನಂ ಮಯಾ ಶೃಣು ॥26॥
ಈ ಸಂವಾದವು ಧನಪ್ರದವಾದುದು, ಕೀರ್ತಿಪ್ರದವಾದುದು, ಆಯುಃಪ್ರದವಾದುದು, ಧರ್ಮಪ್ರದವಾದುದು, ಪರಮಹಿತವಾದುದು ಮತ್ತು ಪೌಷ್ಟಿಕವಾದುದು. ನಾನು ಹೇಳುವ ಈ ದಿವ್ಯವಾದ ಆಖ್ಯಾನವನ್ನು ಕೇಳು.
ಇತಿಹಾಸಮಿಮಂ ದಿವ್ಯಂ ಪವಿತ್ರಂ ಪರಮಂ ಶುಭಮ್ |
ಸಾಯಂ ಪ್ರಾತಃ ಸದಾ ಸಮ್ಯಕ್ ಶ್ರೋತವ್ಯಂ ಚ ಬುಭೂಷತಾ ॥27॥
ಈ ದಿವ್ಯವೂ, ಪವಿತ್ರವೂ, ಪರಮಮಂಗಳವೂ ಆದ ಇತಿಹಾಸವನ್ನು ತನ್ನ ಕಲ್ಯಾಣವನ್ನು ಬಯಸುವವನು ಯಾವಾಗಲೂ ಪ್ರಾತಃಕಾಲದಲ್ಲಿ ಮತ್ತು ಸಾಯಂಕಾಲದಲ್ಲಿ ಚೆನ್ನಾಗಿ ಕೇಳಬೇಕು.
ತತೋ ನಾರಾಯಣೋ ದೇವಃ ಸಂಕ್ಲಿಷ್ಟೋ ವ್ರತಚರ್ಯಯಾ |
ವಹ್ನಿರ್ವಿನಿಃಸೃತೋ ವಕ್ತ್ರಾತ್ ಕೃಷ್ಣಸ್ಯಾದ್ಭುತದರ್ಶನಃ ॥28॥
ಅನಂತರ ದೇವನಾದ ನಾರಾಯಣನು ವ್ರತಾನುಷ್ಠಾನದಿಂದ ಕ್ಲೇಶವನ್ನು ಹೊಂದಿದವನಂತೆ ತೋರಿಸಿಕೊಂಡನು. ಆಗ ಕೃಷ್ಣನ ಮುಖದಿಂದ ಅದ್ಭುತವಾಗಿ ಕಾಣುವ ವಹ್ನಿಯು ಹೊರಹೊಮ್ಮಿತು.
ಸ ತು ವಹ್ನಿರ್ಮಹಾನ್ ಭೂತ್ವಾ ದಗ್ಧ್ವಾ ಗಿರಿಮಶೇಷತಃ |
ಪುನರೇವಾವಿಶತ್ ಕೃಷ್ಣಂ ತದದ್ಭುತಮಿವಾಭವತ್ ॥29॥
ಆ ವಹ್ನಿಯು ಬಹಳ ದೊಡ್ಡದಾಗಿ ಬೆಳೆದು ಆ ಪರ್ವತವನ್ನು ಸಂಪೂರ್ಣವಾಗಿ ಸುಟ್ಟು ಪುನಃ ಕೃಷ್ಣನನ್ನು ಪ್ರವೇಶಿಸಿತು. ಆ ಘಟನೆಯು ಅದ್ಭುತವಾಗಿದ್ದಿತು.
ಅಗ್ನಿನಾ ತೇನ ಮಹತಾ ನಿಃಸೃತೇನ ಮುಖಾದ್ ವಿಭೋಃ |
ಪಶ್ಯತಾಮೇವ ಸರ್ವೇಷಾಂ ದಗ್ಧ ಏವ ನಗೋತ್ತಮಃ ॥30॥
ಮೃಗಪಕ್ಷಿಗಣಾಕೀರ್ಣಃ ಶ್ವಾಪದೈರಭಿಸಂಕುಲಃ |
ವೃಕ್ಷಗುಲ್ಮಲತಾಕೀರ್ಣೋ ಮಥಿತೋಽದೀನದರ್ಶನಃ ॥31॥
ವಿಭುವಾದ ಕೃಷ್ಣನ ಮುಖದಿಂದ ಹೊರಹೊಮ್ಮಿದ ಆ ದೊಡ್ಡ ಅಗ್ನಿಯಿಂದ ಎಲ್ಲರೂ ನೋಡುತ್ತಿರುವಂತೆಯೇ ಮೃಗ-ಪಕ್ಷಿಗಳ ಗಣದಿಂದ ಕೂಡಿದ, ಮಾಂಸಾಹಾರಿ ಪ್ರಾಣಿಗಳಿಂದ ನಿಬಿಡವಾದ, ವೃಕ್ಷ-ಗುಲ್ಮ-ಲತೆಗಳಿಂದ ತುಂಬಿಕೊಂಡು ಸುಂದರವಾಗಿ ಕಾಣುತ್ತಿದ್ದ ಆ ಶ್ರೇಷ್ಠ ಪರ್ವತವು ಒಂದು ಕ್ಷಣದಲ್ಲಿ ದಗ್ಧವಾಯಿತು.
ಪುನಃ ಸ ದೃಷ್ಟಮಾತ್ರೇಣ ಹರಿಣಾ ಸೌಮ್ಯಚೇತಸಾ |
ಸ ಬಭೂವ ಗಿರಿಃ ಕ್ಷಿಪ್ರಂ ಪ್ರಫುಲ್ಲದ್ರುಮಕಾನನಃ ॥32॥
ಸಿದ್ಧಚಾರಣಸಂಘೈಶ್ಚ ಪ್ರಸನ್ನೈರುಪಶೋಭಿತಃ |
ಮತ್ತವಾರಣಸಂಯುಕ್ತೋ ನಾನಾಪಕ್ಷಿಗಣೈರ್ಯುತಃ |
ತದದ್ಭುತಮಚಿಂತ್ಯಂ ಚ ಸರ್ವೇಷಾಮಭವದ್ ಭೃಶಮ್ ॥33॥
ಪುನಃ ಹರಿಯು ಸೌಮ್ಯದೃಷ್ಟಿಯಿಂದ ಆ ಪರ್ವತವನ್ನು ನೋಡಿದ ಕೂಡಲೇ ಅದು ಶೀಘ್ರವಾಗಿ ಅನೇಕ ವೃಕ್ಷವುಳ್ಳ ತಾಣಗಳಿಂದಲೂ, ಪ್ರಸನ್ನರಾದ ಸಿದ್ಧ-ಚಾರಣ ಸಮೂಹಗಳಿಂದಲೂ, ಮದ್ದಾನೆಗಳ ಸಮೂಹದಿಂದಲೂ, ನಾನಾ ಪಕ್ಷಿಗಳ ಸಮೂಹದಿಂದಲೂ ಕೂಡಿ ಮೊದಲಿನಂತೆಯೇ ಆಯಿತು. ಆ ಘಟನೆಯು ಎಲ್ಲರಿಗೂ ಅದ್ಭುತವೂ ಮತ್ತು ಅಚಿಂತ್ಯವೂ ಆಗಿದ್ದಿತು.
ತಂ ದೃಷ್ಟ್ವಾ ಹೃಷ್ಟರೋಮಾಣಃ ಸರ್ವೇ ಮುನಿಗಣಾಸ್ತದಾ |
ವಿಸ್ಮಿತಾಃ ಪರಮಾಯಸ್ತಾಃ ಸಾಧ್ವಸಾಕುಲಲೋಚನಾಃ |
ನ ಕಿಂಚಿದಬ್ರುವಂಸ್ತತ್ರ ಶುಭಂ ವಾ ಯದಿ ವೇತರತ್ ॥34॥
ಅದನ್ನು ನೋಡಿದ ಎಲ್ಲ ಮುನಿಗಳೂ ರೋಮಾಂಚನವನ್ನು ಹೊಂದಿ, ವಿಸ್ಮಯವನ್ನು ಹೊಂದಿ, ಶ್ರಮವನ್ನು ಹೊಂದಿ ಭಯದಿಂದ ತುಂಬಿದ ಕಣ್ಣುಳ್ಳವರಾದರು. ಅಲ್ಲಿ ಯಾರೂ ಶುಭವನ್ನಾಗಲೀ, ಅಶುಭವನ್ನಾಗಲೀ ಏನನ್ನೂ ಮಾತನಾಡಲಿಲ್ಲ.

ತತೋ ನಾರಾಯಣೋ ದೇವೋ ಮುನಿಸೇಂ ಸುವಿಸ್ಮಿತೇ |
ತಾನ್ ಸಮೀಕ್ಷ್ಯೈವ ಮಧುರಂ ಬಭಾಷೇ ಪುಷ್ಕರೇಕ್ಷಣಃ ॥35॥
ಕಿಮರ್ಥಂ ಮುನಿಸಂಘಸ್ಯ ವಿಸ್ಮಯೋಽಯಮನುತ್ತಮಃ |
ಏತನ್ಮೇ ಸಂಶಯಂ ಸರ್ವೇ ಯಾಥಾತಥ್ಯಮನಿಂದಿತಾಃ |
ಋಷಯೋ ವಕ್ತುಮರ್ಹಂತಿ ನಿಶ್ಚಯೇನಾರ್ಥಕೋವಿದಾಃ ॥36॥
ಆಗ ಮುನಿಸಂಘವು ಅತ್ಯಂತ ವಿಸ್ಮಿತವಾಗಿರಲು ದೇವನೂ, ಪುಷ್ಕರಾಕ್ಷನೂ ಆದ ನಾರಾಯಣನು ಅವರನ್ನು ನೋಡಿ ಮಧುರವಾದ ವಾಣಿಯಿಂದ ಮುನಿಸಂಘಕ್ಕೆ ಏಕೆ ಇಂತಹ ತೀವ್ರವಾದ ವಿಸ್ಮಯವುಂಟಾಗಿದೆ? ಈ ನನ್ನ ಸಂಶಯವನ್ನು ಅನಿಂದಿತರೂ, ಅರ್ಥಕೋವಿದರೂ ಆದ ಋಷಿಗಳಾದ ನೀವೆಲ್ಲರೂ ಯಥಾರ್ಥವಾಗಿ ಪರಿಹರಿಸಬೇಕು ಎಂದು ಹೇಳಿದನು.
ಕೇಶವಸ್ಯ ವಚಃ ಶ್ರುತ್ವಾ ತುಷ್ಟುವುರ್ಮುನಿಪುಂಗವಾಃ |
ಭವಾನ್ ಸೃಜತಿ ವೈ ಲೋಕಾನ್ ಭವಾನ್ ಸಂಹರತಿ ಪ್ರಜಾಃ |
ಭವಾನ್ ಶೀತಂ ಭವಾನುಷ್ಣಂ ಭವಾನ್ ಸತ್ಯಂ ಭವಾನ್ ಕ್ರತುಃ ॥37॥
ಕೇಶವನ ಮಾತುಗಳನ್ನು ಕೇಳಿ ಋಷಿಗಳು ಅವನನ್ನು ಸ್ತೋತ್ರ ಮಾಡಿದರು - ನೀನೇ ಲೋಕಗಳನ್ನು ಸೃಷ್ಟಿಸುತ್ತೀಯೆ. ನೀನೇ ಪ್ರಜೆಗಳನ್ನು ಸಂಹರಿಸುತ್ತೀಯೆ. ಶೀತ, ಉಷ್ಣ, ಸತ್ಯ, ಯಜ್ಞ ಎಲ್ಲವೂ ನಿನ್ನ ಅಧೀನ.
ಭವಾನಾದಿರ್ಭವಾನಂತೋ ಭವತೋಽನ್ಯನ್ನ ವಿದ್ಯತೇ |
ಸ್ಥಾವರಂ ಜಂಗಮಂ ಸರ್ವಂ ತ್ವಮೇವ ಪುರುಷೋತ್ತಮ ॥38॥
ನೀನೇ ಮೊದಲು ಇದ್ದವನು. ನೀನೇ ಪ್ರಪಂಚದ ಕೊನೆಯಲ್ಲಿ ಇರುವವನು. ಸ್ಥಾವರ-ಜಂಗಮಾತ್ಮಕವಾದ ಸರ್ವವೂ ನಿನ್ನ ಅಧೀನವಾಗಿದೆ. ಎಲೈ ಪುರುಷೋತ್ತಮನೇ, ನಿನ್ನನ್ನು ಬಿಟ್ಟು ಸ್ವತಂತ್ರವಾದ ವಸ್ತುವು ಬೇರೆ ಯಾವುದೂ ಇಲ್ಲ.
ತ್ವತ್ತಃ ಸರ್ವಮಿದಂ ತಾತ ಲೋಕಚಕ್ರಂ ಪ್ರವರ್ತತೇ |
ತ್ವಮೇವಾರ್ಹಸಿ ತದ್ವಕ್ತುಂ ಮುಖಾದಗ್ನಿವಿನಿರ್ಗಮಮ್ ॥39॥
ಎಲೈ ಪ್ರೀತಿಪಾತ್ರನೇ, ನಿನ್ನಿಂದ ಲೋಕಯಾತ್ರೆಯು ನಡೆಯುತ್ತದೆ. ನಿನ್ನ ಮುಖದಿಂದ ಅಗ್ನಿಯು ಹೊರಹೊಮ್ಮಿದ ವಿಷಯವನ್ನು ನೀನೇ ಹೇಳಬೇಕು.
ಏತನ್ನೋ ವಿಸ್ಮಯಕರಂ ಬಭೂವ ಮಧುಸೂದನ |
ತತೋ ವಿಗತಸಂತ್ರಾಸಾ ಭವಾಮ ಪುರುಷೋತ್ತಮ |
ಯದಿಚ್ಛೇತ್ ತತ್ರ ವಕ್ತವ್ಯಂ ಕುತೋಽಸ್ಮಾಕಂ ನಿಯೋಗತಃ ॥40॥
ಎಲೈ ಮಧುಸೂದನನೇ, ಇದು ನಮಗೆ ಬಹಳ ವಿಸ್ಮಯವನ್ನುಂಟು ಮಾಡಿತು. ಪುರುಷೋತ್ತಮನೇ, ನೀನು ಎಲ್ಲವನ್ನೂ ವಿವರಿಸಿದರೆ ನಾವು ನಮ್ಮ ಭಯವನ್ನು ಕಳೆದುಕೊಳ್ಳುತ್ತೇವೆ. ನಿನ್ನ ಇಚ್ಛೆಗೆ ಬಂದಂತೆ ಮಾತನಾಡು. ನಮ್ಮ ಆದೇಶದಿಂದ ಮಾತನಾಡುವ ನಿರ್ಬಂಧವು ನಿನಗೆ ಇಲ್ಲ (ಎಂದು ಸ್ತೋತ್ರ ಮಾಡಿದರು).
ಶ್ರೀಭಗವಾನ್
ನಿತ್ಯಂ ಹಿತಾರ್ಥಂ ಲೋಕಾನಾಂ ಭವದ್ಭಿಃ ಕ್ರಿಯತೇ ತಪಃ |
ತಸ್ಮಾಲ್ಲೋಕಹಿತಂ ಗುಹ್ಯಂ ಶ್ರೂಯತಾಂ ಕಥಯಾಮಿ ವಃ ॥41॥
ಶ್ರೀಭಗವಾನ್ ನೀವು ಲೋಕಹಿತಕ್ಕಾಗಿ ಯಾವಾಗಲೂ ತಪಸ್ಸನ್ನು ಮಾಡುತ್ತೀರಿ. ಆದ್ದರಿಂದ ಲೋಕಹಿತವೂ, ರಹಸ್ಯವೂ ಆದ ವಿಷಯವನ್ನು ನಿಮಗೆ ಹೇಳುತ್ತೇನೆ.
ಅಸುರಃ ಸಾಂಪ್ರತಂ ಕಶ್ಚಿದಹಿತೋ ಲೋಕನಾಶನಃ |
ಮಾಯಾಸ್ತ್ರಕುಶಲಶ್ಚೈವ ಬಲದರ್ಪಸಮನ್ವಿತಃ ॥42॥
ಬಭೂವ ಸ ಮಯಾ ವಧ್ಯೋ ಲೋಕಾನಾಂ ಹಿತಕಾಮ್ಯಯಾ |
ಪುತ್ರೇಣ ಮೇ ವಧೋ ದೃಷ್ಟಸ್ತಸ್ಯ ವೈ ಮುನಿಪುಂಗವಾಃ ॥43॥
ಈಗ ಲೋಕನಾಶಕನೂ, ಲೋಕಕ್ಕೆ ಅಹಿತನೂ, ಮಾಯಾಶಸತ್ರಸ್ತ್ರ ಕುಶಲನೂ, ಬಲ-ದರ್ಪದಿಂದ ಕೂಡಿದವನೂ ಆದ ಒಬ್ಬ ಅಸುರನಿದ್ದನು. ಲೋಕಹಿತದ ದೃಷ್ಟಿಯಿಂದ ನಾನು ಅವನನ್ನು ಕೊಲ್ಲಬೇಕಾಗಿದ್ದಿತು. ಎಲೈ ಮುನಿಪುಂಗವರೇ, ಅವನು ನನ್ನ ಪುತ್ರನಿಂದ ಕೊಲ್ಲಲ್ಪಡಬೇಕೆಂದು ವಿಧಿಯ ನಿಯಮವಿದ್ದಿತು.
ತದರ್ಥಂ ಪುತ್ರಮೇವಾಹಂ ಸಿಸೃಕ್ಷುರ್ವನಮಾಗತಃ |
ಆತ್ಮನಃ ಸದೃಶಂ ಪುತ್ರಮಹಂ ಜನಯಿತುಂ ವ್ರತೈಃ ॥44॥
ಆ ಕಾರಣದಿಂದ ನನಗೆ ಸದೃಶನಾದ ಪುತ್ರನನ್ನು ವ್ರತಾನುಷ್ಠಾನದಿಂದ ಪಡೆಯಲು ನಾನು ಈ ವನಕ್ಕೆ ಬಂದೆನು.
ಏವಂ ವ್ರತಪರೀತಸ್ಯ ತಪಸ್ತೀವ್ರತಯಾ ಮಮ |
ತತೋ ಮಮಾತ್ಮಜೋ ದೇಹಾತ್ ಸೋಽಗ್ನಿರ್ಭೂತ್ವಾ ವಿನಿಃಸೃತಃ ॥45॥
ಹೀಗೆ ನಾನು ವ್ರತವನ್ನು ಧರಿಸಿ ತೀವ್ರವಾದ ತಪಸ್ಸನ್ನು ಮಾಡುತ್ತಿರಲು ನನ್ನ ದೇಹದಿಂದ ನನ್ನ ಪುತ್ರನು ಅಗ್ನಿಯ ರೂಪವನ್ನು ಧರಿಸಿ ಹೊರಗೆ ಬಂದನು.
ವಿನಿಃಸೃತ್ಯ ಗತೋ ದ್ರಷ್ಟುಂ ಕ್ಷಣೇನ ಚ ಪಿತಾಮಹಮ್ |
ಬ್ರಹ್ಮಣಾ ಮನ್ಮಥೋಽನಂಗಃ ಪುತ್ರತ್ವೇನ ಪ್ರಕಲ್ಪಿತಃ |
ಅನುಜ್ಞಾತಶ್ಚ ತೇನೈವ ಪುನರಾಯಾನ್ಮಮಾಂತಿಕಮ್ ॥46॥
ಹೊರಬಂದವನು ತಕ್ಷಣವೇ ಪಿತಾಮಹರಾದ ಬ್ರಹ್ಮದೇವರನ್ನು ನೋಡಲು ಹೋದನು. ಬ್ರಹ್ಮದೇವರು ಅನಂಗನಾದ ಮನ್ಮಥನನ್ನು

ನನ್ನ ಪುತ್ರನೆಂದು ಸಂಕಲ್ಪಿಸಿದ್ದರು. ಬ್ರಹ್ಮದೇವರ ಅನುಮತಿಯನ್ನು ಪಡೆದು ಅವನು ಪುನಃ ನನ್ನ ಬಳಿಗೆ ಬಂದನು.
ಏತನ್ಮೇ ವೈಷ್ಣವಂ ತೇಜೋ ಮಮ ವಕ್ತ್ರಾದ್ ವಿನಿಃಸೃತಮ್ |
ತತ್ತೇಜಸಾ ನಿರ್ಮಥಿತಃ ಪುರತೋಽಯಂ ಗಿರಿಃ ಸ್ಥಿತಃ ||47||
ನನ್ನ ವೈಷ್ಣವ ತೇಜಸ್ಸು ನನ್ನ ಮುಖದಿಂದ ಹೊರಗೆ ಬಂದಿತು. ಆ ತೇಜಸ್ಸಿನಿಂದ ಎದುರಿಗಿದ್ದ ಪರ್ವತವು ನಾಶವನ್ನು ಹೊಂದಿತು.
ದೃಷ್ಟ್ವಾ ದಾಹಂ ಗಿರೇಸ್ತಸ್ಯ ಸೌಮ್ಯಭಾವತಯಾ ಮಮ |
ಪುನಃ ಸ ದೃಷ್ಟಮಾತ್ರೇಣ ಗಿರಿರಾಸೀದ್ ಯಥಾಪುರಮ್ ||48||
ಪರ್ವತವು ದಗ್ಧವಾದುದನ್ನು ನೋಡಿ ನಾನು ಪುನಃ ಅದನ್ನು ಸೌಮ್ಯದೃಷ್ಟಿಯಿಂದ ನೋಡಿದ ತಕ್ಷಣವೇ ಅದು ಮೊದಲಿನಂತಾಯಿತು.
ಏತದ್ ಗುಹ್ಯಂ ಮಯಾ ತಥ್ಯಂ ಕಥಿತಂ ವಃ ಸಮಾಸತಃ |
ಭವಂತೋ ವ್ಯಥಿತಾ ಯೇನ ವಿಸ್ಮಿತಾಶ್ಚ ತಪೋಧನಾಃ ||49||
ಎಲೈ ತಪೋಧನರೇ, ನೀವು ಅದರಿಂದ ವ್ಯಥೆಯನ್ನು ಮತ್ತು ವಿಸ್ಮಯವನ್ನು ಹೊಂದಿದ್ದೀರಿ. ರಹಸ್ಯವಾದ ಮತ್ತು ಸತ್ಯವಾದ ಈ ವಿಷಯವನ್ನು ಸಂಕ್ಷೇಪವಾಗಿ ಹೇಳಿದ್ದೇನೆ.
ಋಷೀಣಾಮೇವಮುಕ್ತ್ವಾ ತು ತಾನ್ ಪುನಃ ಪ್ರತ್ಯಭಾಷತ ||50||
ಋಷಿಗಳನ್ನು ಕುರಿತು ಹೀಗೆ ಹೇಳಿ ಕೃಷ್ಣನು ಪುನಃ ಅವರನ್ನು ಕುರಿತು ಮಾತನಾಡಿದನು.
|| ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ
ಏಕೋನನವತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೊಂದನೆಯ ಅಧ್ಯಾಯ
ಋಷಿಗಳಿಂದ ಪ್ರವಚನ ಮಾಡುವಂತೆ ನಾರದರಿಗೆ ಒತ್ತಾಯ
ಶ್ರೀಭಗವಾನ್
ಭವತಾಂ ದರ್ಶನಾದೇವ ಪ್ರೀತಿರಭ್ಯಧಿಕಾ ಮಮ |
ಭವಂತಸ್ತು ತಪಃಸಿದ್ಧಾ ಭವಂತೋ ದೇವದರ್ಶನಾಃ ||1||
ಶ್ರೀಭಗವಾನ್ ನಿಮ್ಮ ದರ್ಶನದಿಂದಲೇ ನನಗೆ ಬಹಳ ಸಂತೋಷವಾಗಿದೆ. ನೀವು ತಪಃಸಿದ್ಧರು ಮತ್ತು ದೇವದರ್ಶನವನ್ನು ಹೊಂದಿದವರು.
ಸರ್ವತ್ರ ಗತಿಮಂತಶ್ಚ ಜ್ಞಾನವಿಜ್ಞಾನಭಾವಿತಾಃ |
ಗತ್ಯಾಗತಿಜ್ಞಾ ಲೋಕಾನಾಂ ಸರ್ವೇ ನಿರ್ಧೂತಕಲ್ಮಷಾಃ ||2||
ಸರ್ವತ್ರ ಗತಿಯುಳ್ಳವರು. ಜ್ಞಾನ-ವಿಜ್ಞಾನಗಳಿಂದ ಪರಿಶುದ್ಧರಾದವರು. ಲೋಕಗಳಿಂದ ಗಮನಾಗಮನಗಳನ್ನು ತಿಳಿದವರು. ಎಲ್ಲರೂ ದೋಷದೂರರಾದವರು.
ತಸ್ಮಾದ್ ಭವದ್ಭಿರ್ಯತ್ ಕಿಂಚಿದ್ ದೃಷ್ಟಂ ವಾಽಪ್ಯಥವಾ ಶ್ರುತಮ್ |
ಆಶ್ಚರ್ಯಭೂತಂ ಲೋಕೇಷು ತದ್ ಭವಂತೋ ಬ್ರುವಂತು ಮೇ ||3||
ಆದ್ದರಿಂದ ನೀವು ಲೋಕದಲ್ಲಿ ನೋಡಿದ ಅಥವಾ ಕೇಳಿದ ಯಾವುದಾದರೂ ಆಶ್ಚರ್ಯಕರವಾದ ವಿಷಯವನ್ನು ನನಗೆ ಹೇಳಿ.
ಯುಷ್ಮಾಭಿಃ ಕಥಿತಂ ಯತ್ ಸ್ಯಾತ್ ತಪಸಾ ಭಾವಿತಾತ್ಮಭಿಃ |
ತತ್ ಸ್ಯಾದಮೃತಸಂಕಾಶಂ ವಾಙ್ಮಧುಶ್ರವಣೇ ಸ್ಪೃಹಾ ||4||
ತಪಸ್ಸಿನಿಂದ ಶೋಧಿತವಾದ ಮನಸ್ಸನ್ನು ಹೊಂದಿದ ನೀವು ಹೇಳುವಂತಹ ವಿಷಯವು ಅಮೃತದಂತಿರುತ್ತದೆ. ಅಂತಹ ವಾಙ್ಮಯವಾದ ಮಧುವನ್ನು ಸ್ವೀಕರಿಸಲು ನನಗೆ ಆಸೆಯಾಗಿದೆ.
ರಾಗದ್ವೇಷವಿಯುಕ್ತಾನಾಂ ಸತತಂ ಸತ್ಯವಾದಿನಾಮ್ |
ಶ್ರದ್ಧೇಯಂ ಶ್ರವಣೀಯಂ ಚ ವಚನಂ ಹಿ ಸತಾಂ ಭವೇತ್ ||5||
ರಾಗ-ದ್ವೇಷ ರಹಿತರಾದವರೂ, ಸತತವೂ ಸತ್ಯವಾದಿಗಳೂ ಆದವರ ಮಾತುಗಳನ್ನು ಸಜ್ಜನರು ಕೇಳಿ ಶ್ರದ್ಧೆಯನ್ನು ಮಾಡಬೇಕು.
ತತ್ಸಂಯೋಗಂ ಹಿ ತನ್ಮೇಽಸ್ತು ನ ವೃಥಾ ಕರ್ತುಮರ್ಹಥ |
ಭವತಾಂ ದರ್ಶನಂ ತಸ್ಮಾತ್ ಸಫಲಂ ತು ಭವೇನ್ಮಮ ||6||
ಅಂತಹ ವಚನಗಳ ಸಂಯೋಗವು ನನಗಾಗಲಿ. ನನ್ನ ಪ್ರಾರ್ಥನೆಯನ್ನು ವ್ಯರ್ಥಗೊಳಿಸಬೇಡಿ. ನನಗೆ ನಿಮ್ಮ ದರ್ಶನವು ಸಫಲವಾಗಲಿ.
ತದಹಂ ಸಜ್ಜನಮುಖಾನ್ನಿಃಸೃತಂ ಜನಸಂಸದಿ |
ಕಥಯಿಷ್ಯಾಮ್ಯಹರಹೋ ಬುದ್ಧಿದೀಪಕರಂ ನೃಣಾಮ್ ||7||
ಸಜ್ಜನರ ಮುಖದಿಂದ ಬಂದ, ಬುದ್ಧಿಯನ್ನು ಉದ್ದೀಪನಗೊಳಿಸುವ ಅಂತಹ ವಿಷಯವನ್ನು ನಾನು ಜನಸಮೂಹದಲ್ಲಿ ನಿತ್ಯವೂ ಹೇಳುವೆನು.
ತದನ್ಯೇ ವರ್ಧಯಿಷ್ಯಂತಿ ಪೂಜಯಿಷ್ಯಂತಿ ವಾಪರೇ |
ವಾಕ್‌ಶಲ್ಯವಿಗತಾಶ್ಚಾನ್ಯೇ ಪ್ರಶಂಸಂತಿ ಪುರಾತನಾಃ ||8||

ಅದನ್ನು ಉಳಿದವರು ಅಭಿವೃದ್ಧಿಗೊಳಿಸುತ್ತಾರೆ. ಇನ್ನು ಕೆಲವರು ಗೌರವಿಸುತ್ತಾರೆ. ವಾಕ್‌ಶಲ್ಯರಹಿತರಾಗಿ ಮೃದುವಾಗಿ ಮಾತನಾಡುವ ಪ್ರಾಚೀನರು ಪ್ರಶಂಸೆ ಮಾಡುತ್ತಾರೆ.
ಭೀಷ್ಮಃ
ಏವಂ ಬ್ರುವತಿ ಗೋವಿಂದೇ ಶ್ರವಣಾರ್ಥಂ ಮಹರ್ಷಯಃ |
ವಾಗ್ಮಿಃ ಸಾಂಜಲಿಮಾಲಾಭಿರಿದಮೂಚುರ್ಜನಾರ್ದನಮ್ ॥9॥
ಭೀಷ್ಮ ಗೋವಿಂದನು ಶ್ರವಣವನ್ನು ಮಾಡಲು ಬಯಸಿ ಹೀಗೆ ಮಾತನಾಡುತ್ತಿರಲು ಮಹರ್ಷಿಗಳು ತಮ್ಮ ಕೈಗಳನ್ನು ಜೋಡಿಸಿ ಜನಾರ್ದನನನ್ನು ಕುರಿತು ಹೀಗೆ ಮಾತನಾಡಿದರು.
ಅಯುಕ್ತಮಸ್ಮಾನೇವಂ ತ್ವಂ ವಾಚಾ ವರದ ಭಾಷಿತುಮ್ |
ತ್ವಚ್ಛಾಸನಮುಖಾಃ ಸರ್ವೇ ತ್ವದಧೀನಪರಿಶ್ರಮಾಃ ॥10॥
ಎಲೈ ವರದನೇ, ನಮ್ಮನ್ನು ಕುರಿತು ನೀನು ಹೀಗೆ ಮಾತನಾಡುವುದು ನ್ಯಾಯವಲ್ಲ. ನಾವೆಲ್ಲರೂ ನಿನ್ನ ಮುಖದಿಂದ ಬರುವ ಶಾಸನವನ್ನೇ ನಿರೀಕ್ಷಿಸುತ್ತಾ, ನಿನಗೆ ಅಧೀನರಾಗಿ ಪರಿಶ್ರಮವನ್ನು ಪಡುತ್ತೇವೆ.
ಏವಂ ಪೂಜಯಿತುಂ ಚಾಸ್ಮಾನ್ ನ ಚೈವಾರ್ಹಸಿ ಕೇಶವ |
ತದ್ವಸ್ತ್ವನ್ಯನ್ನ ಪಶ್ಯಾಮೋ ಯಲ್ಲೋಕೇ ತೇ ನ ವಿದ್ಯತೇ |
ದಿವಿ ವಾ ಭುವಿ ವಾ ಕಿಂಚಿತ್ ತತ್ಸರ್ವಂ ಹಿ ತ್ವಯಾ ತತಮ್ ॥11॥
ಎಲೈ ಕೇಶವನೇ, ನೀನು ನಮ್ಮನ್ನು ಪೂಜಿಸುವುದು ಸರಿಯಲ್ಲ. ನಿನ್ನ ಬಳಿ ಇಲ್ಲದಿರುವ ಯಾವ ಶುಭವಸ್ತು (ಗುಣ)ವನ್ನೂ ನಾವು ಲೋಕದಲ್ಲಿ ನೋಡಲಾರೆವು. ಭೂಮಿಯಲ್ಲಿ ಸ್ವರ್ಗದಲ್ಲಿ ಇರುವ ವಸ್ತುಗಳೆಲ್ಲವೂ ನಿನ್ನಿಂದ ವ್ಯಾಪ್ತವಾಗಿವೆ.
ನ ವಿದ್ಮಹೇ ವಯಂ ದೇವ ಕಥ್ಯಮಾನಂ ತವಾಂತಿಕೇ |
ಏವಮುಕ್ತೋ ಹೃಷೀಕೇಶಃ ಸಸ್ಮಿತಂ ಚೇದಮಬ್ರವೀತ್ ॥12॥
ಎಲೈ ದೇವನೇ, ನಿನ್ನ ಬಳಿ ನಾವು ಹೇಳಬಹುದಾದಂತಹ ಯಾವ ವಿಷಯವೂ ನಮಗೆ ಕಾಣುವುದಿಲ್ಲ (ಎಂದು ಹೇಳಿದರು). ಹೀಗೆ ಹೇಳಲ್ಪಟ್ಟ ಹೃಷೀಕೇಶನು ನಗುತ್ತಾ ಈ ಮಾತನ್ನು ಆಡಿದನು.
ಅಹಂ ಮಾನುಷಯೋನಿಸ್ಥಃ ಸಾಂಪ್ರತಂ ಮುನಿಪುಂಗವಾಃ |
ತಸ್ಮಾನ್ಮಾನುಷವದ್ ವೀರ್ಯಂ ಮಮ ಜಾನೀತ ಸುವ್ರತಾಃ |
ಭವದ್ಭಿಃ ಕಥ್ಯಮಾನಂ ಚ ಅಪೂರ್ವಮಿವ ತದ್ ಭವೇತ್ ॥13॥
ಎಲೈ ಮುನಿಪುಂಗವರೇ, ನಾನು ಈಗ ಮಾನುಷಯೋನಿಯಲ್ಲಿದ್ದೇನೆ. ಆದ್ದರಿಂದ ಎಲೈ ಸುವ್ರತರೇ, ನನ್ನ ಸಾಮರ್ಥ್ಯವು ಮನುಷ್ಯರ ಸಾಮರ್ಥ್ಯದಂತೆ ಇದೆ ಎಂದು ತಿಳಿಯಿರಿ. ಆದ್ದರಿಂದ ನೀವು ಹೇಳುವುದೆಲ್ಲವೂ ನನಗೆ ಹೊಸದಾಗಿರುವಂತೆಯೇ ತೋರುತ್ತದೆ ಎಂದು ಹೇಳಿದನು.
ಭೀಷ್ಮಃ
ಏವಂ ಸಂಚೋದಿತಾಃ ಸರ್ವೇ ಕೇಶವೇನ ಮಹಾತ್ಮನಾ |
ಋಷಯಶ್ಚಾನುವರ್ತಂತೇ ವಾಸುದೇವಸ್ಯ ಶಾಸನಮ್ ॥14॥
ಭೀಷ್ಮ ಹೀಗೆ ಮಹಾತ್ಮನಾದ ಕೇಶವನಿಂದ ಪ್ರೇರಿಸಲ್ಪಟ್ಟ ಋಷಿಗಳೆಲ್ಲರೂ ವಾಸುದೇವನ ಶಾಸನವನ್ನು ಅನುಸರಿಸಿದರು.
ತತಸ್ತ್ವ ೃಷಿಗಣಾಃ ಸರ್ವೇ ನಾರದಂ ದೇವದರ್ಶನಮ್ |
ಅಮನ್ಯಂತ ಬುಧಾ ಬುದ್ಧ್ಯಾ ಸಮರ್ಥಂ ತನ್ನಿಬೋಧನೇ ॥15॥
ಆಗ ಜ್ಞಾನಿಗಳಾದ ಎಲ್ಲ ಋಷಿಗಳು ದೇವದರ್ಶನರಾದ ನಾರದರನ್ನು ಮಾತನಾಡಲು ಸಮರ್ಥರೆಂದು ತಿಳಿದರು.
ಋಷಿರುಗ್ರತಪಾಶ್ಚಾಯಂ ಕೇಶವಸ್ಯ ಪ್ರಿಯೋಽಧಿಕಮ್ |
ಪುರಾಣಜ್ಞಶ್ಚ ವಾಗ್ಮೀ ಚ ಕಾರಣೈಸ್ತಂ ಚ ಮೇನಿರೇ ॥16॥
ನಾರದರು ಉಗ್ರತಪಸ್ಸನ್ನು ಮಾಡಿದವರು. ಕೇಶವನಿಗೆ ಅಧಿಕ ಪ್ರಿಯರಾದವರು. ಪುರಾಣವನ್ನು ತಿಳಿದವರು ಮತ್ತು ವಾಗ್ಮಿಗಳು. ಈ ಕಾರಣದಿಂದ ಅವರು ಸಮರ್ಥರಾದವರು ಎಂದು ತಿಳಿದರು.
ಸರ್ವೇ ತದರ್ಹಣಂ ಕೃತ್ವಾ ನಾರದಂ ವಾಕ್ಯಮಬ್ರುವನ್ ॥17॥
ಆಗ ಎಲ್ಲರೂ ನಾರದರನ್ನು ಪೂಜಿಸಿ ಅವರನ್ನು ಕುರಿತು ಹೀಗೆ ಹೇಳಿದರು.
ಭವತಾ ತೀರ್ಥಯಾತ್ರಾರ್ಥಂ ಚರತಾ ಹಿಮವದ್ಗಿರೌ |
ದೃಷ್ಟಂ ವೈ ಯತ್ ತದಾಶ್ಚರ್ಯಂ ಶ್ರೋತೃಣಾಂ ಪರಮಂ ಪ್ರಿಯಮ್ ॥
ತತ್ತ್ವಂ ತ್ವಮವಿಶೇಷೇಣ ಹಿತಾರ್ಥಂ ಸರ್ವಮಾದಿತಃ |
ಪ್ರಿಯಾರ್ಥಂ ಕೇಶವಸ್ಯಾಸ್ಯ ಸ ಭವಾನ್ ವಕ್ತುಮರ್ಹತಿ ॥19॥
ಹಿಮಾಲಯ ಪರ್ವತದಲ್ಲಿ ನೀವು ತೀರ್ಥಯಾತ್ರೆಯನ್ನು ಮಾಡುವಾಗ ನೋಡಿದ, ಶ್ರೋತೃಗಳಿಗೆ ಪರಮಪ್ರಿಯವಾದ, ಆಶ್ಚರ್ಯಕರವಾದ ವಿಷಯವೆಲ್ಲವನ್ನೂ ಮೊದಲಿನಿಂದಲೂ ಪ್ರಾರಂಭಿಸಿ ಕೇಶವನ ಪ್ರೀತಿಗಾಗಿ ಹೇಳಬೇಕು (ಎಂದು ಹೇಳಿದರು).
ಭೀಷ್ಮಃ
ತದಾ ಸಂಚೋದಿತಃ ಸರ್ವೈರ್ಋಷಿಭಿರ್ನಾರದಸ್ತದಾ |
ಪ್ರಣಮ್ಯ ಶಿರಸಾ ವಿಷ್ಣುಂ ಸರ್ವಲೋಕಹಿತೇ ರತಮ್ |
ಸಮುದ್ವೀಕ್ಷ್ಯ ಹೃಷೀಕೇಶಂ ವಕ್ತುಮೇವೋಪಚಕ್ರಮೇ ॥20॥
ಭೀಷ್ಮ ಆಗ ಎಲ್ಲ ಋಷಿಗಳಿಂದಲೂ ಪ್ರಚೋದಿಸಲ್ಪಟ್ಟ ನಾರದರು ಸರ್ವಲೋಕ ಹಿತದಲ್ಲಿ ರತನಾದ ವಿಷ್ಣುವನ್ನು ನಮಸ್ಕರಿಸಿ

ಹೃಷೀಕೇಶನನ್ನು ನೋಡುತ್ತಾ ಮಾತನಾಡಲು ಪ್ರಾರಂಭಿಸಿದರು.
ತತೋ ನಾರಾಯಣಸುಹೃನ್ನಾರದೋ ವದತಾಂವರಃ |
ಶಂಕರಸ್ಯೋಮಯಾ ಸಾರ್ಧಂ ಸಂವಾದಮನುಭಾಷತ ||21||
ಅನಂತರ ಮಾತನಾಡುವವರಲ್ಲಿ ಶ್ರೇಷ್ಠರಾದ, ನಾರಾಯಣನ ಪ್ರಿಯರಾದ ನಾರದರು ಶಿವ-ಪಾರ್ವತಿಯರಿಗೆ ನಡೆದ ಸಂವಾದವನ್ನು ಅನುವಾದವನ್ನು ಮಾಡಲು ಪ್ರಾರಂಭಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಕಥನೇ ಋಷಿ-ಕೇಶವಸಂವಾದೋ ನಾಮ ಏಕನವತ್ಯುತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೆರಡನೆಯ ಅಧ್ಯಾಯ
ನಾರದರಿಂದ ಉಮಾ-ಮಹೇಶ್ವರಸಂವಾದದ ಅನುವಾದ.
ರುದ್ರನ ತೃತೀಯನೇತ್ರೋತ್ಪತ್ತಿ.
ನಾರದಃ
ಭಗವಂಸ್ತೀರ್ಥಯಾತ್ರಾರ್ಥಂ ತಥೈವ ಚರತಾ ಮಯಾ |
ದಿವ್ಯಮದ್ಭುತಸಂಕಾಶಂ ದೃಷ್ಟಂ ಹೈಮವತಂ ವನಮ್ ||1||
ನಾರದ ಭಗವಂತನೇ, ತೀರ್ಥಯಾತ್ರೆಗಾಗಿ ನಾನು ಸಂಚಾರ ಮಾಡುತ್ತಿದ್ದಾಗ ದಿವ್ಯವಾದ ಮತ್ತು ಅದ್ಭುತವಾದ ಕಾಂತಿಯುಳ್ಳ ಹಿಮಾಲಯ ಪರ್ವತದ ವನವನ್ನು ನೋಡಿದೆನು.
ನಾನಾವೃಕ್ಷಲತಾಯುಕ್ತಂ ನಾನಾಪಕ್ಷಿಗಣೈರ್ವೃತಮ್ |
ನಾನಾರತ್ನಸಮಾಕೀರ್ಣಂ ನಾನಾಭಾವಸಮನ್ವಿತಮ್ ||2||
ದಿವ್ಯಚಂದನಸಂಯುಕ್ತಂ ದಿವ್ಯಧೂಪೇನ ಧೂಪಿತಮ್ |
ದಿವ್ಯಪುಷ್ಪಸಮಾಕೀರ್ಣಂ ದಿವ್ಯಗಂಧೇನ ಮೂರ್ಚ್ಛಿತಮ್ ||3||
ಸಿದ್ಧಚಾರಣಸಂವಾಸಂ ಭೂತಸ್ಯೆಂರ್ನಿಷೇವಿತಮ್ |
ವರಿಷ್ಠಾಪ್ಸರಸಾಕೀರ್ಣಂ ನಾನಾಗಂಧರ್ವಸಂಕುಲಮ್ ||4||
ಅದು ನಾನಾ ವೃಕ್ಷಗಳಿಂದಲೂ, ನಾನಾ ಪಕ್ಷಿಗಣಗಳಿಂದಲೂ, ಅನೇಕ ವಿಧವಾದ ರತ್ನಗಳಿಂದಲೂ, ಅನೇಕ ಅಭಿಪ್ರಾಯಗಳಿಂದಲೂ ಕೂಡಿದ್ದಿತು. ದಿವ್ಯಚಂದನದಿಂದ ಕೂಡಿ, ದಿವ್ಯಧೂಮದಿಂದ ಧೂಪಿತವಾಗಿ, ದಿವ್ಯಪುಷ್ಪಗಳು ಎಲ್ಲೆಡೆಯಲ್ಲಿಯೂ ಹರಡಿ ವ್ಯಾಪ್ತವಾದ ದಿವ್ಯವಾದ ಗಂಧವನ್ನು ಹೊಂದಿದ್ದಿತು. ಸಿದ್ದ- ಚಾರಣರಿಗೆ ವಾಸಸ್ಥಾನವಾಗಿ, ಭೂತಗಣಗಳಿಂದ ಸೇವಿತವಾಗಿ, ಶ್ರೇಷ್ಠರಾದ ಅಪ್ಸರೆಯರಿಂದ ಮತ್ತು ನಾನಾ ಗಂಧರ್ವರಿಂದ ನಿಬಿಡವಾಗಿದ್ದಿತು.
ಮೃದಂಗಮುರಜೋದ್ಘುಷ್ಟಂ ಶಂಖವೀಣಾಭಿನಾದಿತಮ್ |
ನೃತ್ಯದ್ಭಿರ್ಭೂತಸ್ಯೆಂಶ್ಚ ಸರ್ವತಸ್ತ್ವಭಿಶೋಭಿತಮ್ ||5||
ಮೃದಂಗ, ಮುರಜ ಮೊದಲಾದ ವಾದ್ಯಘೋಷದಿಂದಲೂ, ಶಂಖ-ವೀಣಾ ಮೊದಲಾದವುಗಳ ಘೋಷದಿಂದಲೂ, ನರ್ತನವನ್ನು ಮಾಡುವ ಭೂತಸಂಘಗಳಿಂದಲೂ ಎಲ್ಲ ಕಡೆಯಲ್ಲಿಯೂ ಶೋಭಿಸುತ್ತಿದ್ದಿತು.
ನಾನಾರೂಪೈರ್ವಿರೂಪೈಶ್ಚ ಭೀಮರೂಪೈರ್ಭಯಾನಕೈಃ |
ವ್ಯಾಘ್ರಸಿಂಹೋರಗಮುಖೈರ್ಬಿಡಾಲವದನೈಸ್ತಥಾ ||6||
ಖರೋಷ್ಟ್ರದ್ವೀಪಿವದನೈರ್ಗಜವಕ್ತ್ರೈಸ್ತಥೈವ ಚ |
ಉಲೂಕಶ್ಯೇನವದನೈಃ ಕಾಕಗೃಧ್ರಮುಖೈಸ್ತಥಾ ||7||
ಏವಂ ಬಹುವಿಧಾಕಾರೈರ್ಭೂತಸ್ಯೆಂರ್ಭೃಶಾಕುಲಮ್ |
ನಾನದ್ಯಮಾನಂ ಬಹುಧಾ ಹರಪಾರಿಷದೈರ್ಭೃಶಮ್ ||8||
ನಾನಾ ರೂಪಗಳನ್ನು ಧರಿಸಿದ, ವಿಕಾರ ರೂಪಗಳನ್ನು, ಭಯಂಕರ ರೂಪಗಳನ್ನು ಹೊಂದಿದ, ಭಯಂಕರವಾದ ವ್ಯಾಘ್ರ-ಸಿಂಹ-ಸರ್ಪಗಳ ಮುಖವನ್ನು ಹೊಂದಿದ, ಕತ್ತೆ-ಒಂಟೆ-ಚಿರತೆಗಳ ಮುಖವನ್ನು ಹೊಂದಿದ, ಆನೆಯ ಮುಖವನ್ನು ಹೊಂದಿದ, ಗೂಬೆ-ಹದ್ದುಗಳ ಮುಖವನ್ನು ಹೊಂದಿದ, ಕಾಗೆ-ಗಿಡಗಗಳ ಮುಖವನ್ನು ಹೊಂದಿದ ಅನೇಕ ವಿಧವಾದ, ಅನೇಕ ಆಕಾರಗಳನ್ನು ಹೊಂದಿದ ಭೂತಸಂಘಗಳಿಂದ ನಿಬಿಡವಾಗಿದ್ದಿತು. ರುದ್ರನ ಪಾರ್ಷದರು ಉಂಟುಮಾಡಿದ ಕೋಲಾಹಲದಿಂದ ಕೂಡಿದ್ದಿತು.
ಘೋರರೂಪಂ ಸುದುರ್ದರ್ಶಂ ರಕ್ಷೋಗಣಶತೈರ್ವೃತಮ್ |
ಸಮಾಜಂ ತದ್ವನೇ ದೃಷ್ಟಂ ಮಯಾ ಭೂತಪತೇಃ ಪುರಾ ||9||
ಹಿಂದೆ ಭೂತಪತಿಯಾದ ಶಿವನ ಆ ವನದಲ್ಲಿ ನಾನು ಘೋರರೂಪವನ್ನು ಹೊಂದಿದ, ನೋಡಲು ಕಷ್ಟಸಾಧ್ಯವಾದ, ನೂರಾರು ರಾಕ್ಷಸ ಸಮೂಹದಿಂದ ಕೂಡಿದ ಸಭೆಯನ್ನು ನೋಡಿದೆನು.
ಪ್ರನೃತ್ತಾಪ್ಸರಸಂ ದಿವ್ಯಂ ದೇವಗಂಧರ್ವನಾದಿತಮ್ |
ಷಟ್ಪದೈರುಪಗೀತಂ ಚ ಪ್ರಥಮೇ ಮಾಸಿ ಮಾಧವೇ ||10||
ಉತ್ಕ್ರೋಶಕ್ರೌಂಚಕುರರೈಃ ಸಾರಸೈರ್ಜೀವಜೀವಕೈಃ |

ಮತ್ತಾಭಿಃ ಪರಪುಷ್ಟಾಭಿಃ ಕೂಜಂತೀಭಿಃ ಸಮಾಕುಲಮ್ ॥11॥
ಉತ್ತಮೋತ್ಸವಸಂಕಾಶಂ ಭೀಮರೂಪತರಂ ತತಃ।
ದೃಷ್ಟುಂ ಭವತಿ ಸರ್ವಸ್ಯ ಧರ್ಮಭಾಗಿಜನಸ್ಯ ಚ ॥12॥
ಅಪ್ಸರೆಯರು ನರ್ತನವನ್ನು ಮಾಡುತ್ತಿದ್ದ, ದೇವ-ಗಂಧರ್ವರು ಗಾನವನ್ನು ಮಾಡುತ್ತಿದ್ದ, ದಿವ್ಯವಾದ ವಸಂತ ಋತುವಿನ ಭ್ರಮರಗಳ ಝೇಂಕಾರದಿಂದ ಕೂಡಿದ ಕೌಂಚ-ಚಕೋರ ಪಕ್ಷಿಗಳ ನಾದದಿಂದಲೂ, ಸಾರಸ-ಚಕ್ರವಾಕ ಪಕ್ಷಿಗಳ ನಾದದಿಂದಲೂ, ಮತ್ತು ಕೋಗಿಲೆಗಳ ನಾದದಿಂದಲೂ ಕೂಡಿದಂತಹ, ದೊಡ್ಡ ಉತ್ಸವದಂತಿದ್ದರೂ ಭಯಂಕರವಾಗಿ ಕಾಣುತ್ತಿದ್ದ ಧರ್ಮಾನುಸಾರಿಗಳಾದ ಜನರೆಲ್ಲರಿಗೂ ನೋಡಲು ಸಾಧ್ಯವಾಗುವಂತಹ ಸಭೆಯನ್ನು ನೋಡಿದೆನು.
ಯೇ ಚೋರ್ಧ್ವರೇತಸಃ ಸಿದ್ಧಾಸ್ತತ್ರ ತತ್ರ ಸಮಾಗತಾಃ।
ಮಾರ್ತಾಂಡರಶ್ಮಿಸಂಚಾರಾ ವಿಶ್ವೇದೇವಗಣಾಸ್ತಥಾ ॥13॥
ತಥಾ ನಾಗಾಸ್ತಥಾ ದಿವ್ಯಾ ಲೋಕಪಾಲಾ ಹುತಾಶನಾಃ।
ವಾತಾಶ್ಚ ಸರ್ವೇ ವಾಯಂತಿ ದಿವ್ಯಪುಷ್ಪಸಮಾಕುಲಾಃ ॥14॥
ಅಲ್ಲಿ ಊರ್ಧ್ವರೇತಸ್ಕರಾದ ಸಿದ್ಧರು ಅಲ್ಲಲ್ಲಿ ಇದ್ದರು. ಸೂರ್ಯನ ರಶ್ಮಿಗಳಲ್ಲಿ ಸಂಚಾರ ಮಾಡುವ ಋಷಿಗಳು ಮತ್ತು ವಿಶ್ವೇದೇವಗಣಗಳು, ನಾನಾ ದಿವ್ಯ ಗಜಗಳು, ಲೋಕಪಾಲಕರು, ಅಗ್ನಿಯು ಇದ್ದರು. ವಾಯುವು ಅಲ್ಲಿ ದಿವ್ಯಪುಷ್ಪದ ಗಂಧವನ್ನು ತೆಗೆದುಕೊಂಡು ಬೀಸುತ್ತಿದ್ದಿತು.
ಕಿರಂತಃ ಸರ್ವಪುಷ್ಪಾಣಿ ಕಿರಂತೋಽದ್ಭುತದರ್ಶನಾಃ।
ಓಷಧ್ಯಃ ಪ್ರಜ್ವಲಂತ್ಯಶ್ಚ ದ್ಯೋತಯಂತ್ಯೋ ದಿಶೋ ದಶ ॥15॥
ವಿಹಗಾಶ್ಚ ಮುದಾ ಯುಕ್ತಾ ನೃತ್ಯಂತಿ ಚ ನದಂತಿ ಚ।
ಗಿರಃ ಸುಮಧುರಾಸ್ತತ್ರ ದಿವ್ಯಾ ದಿವ್ಯಜನಪ್ರಿಯಾಃ ॥16॥
ಅಲ್ಲಿ ಅನೇಕ ವಾಯುಗಳು ಎಲ್ಲ ಪುಷ್ಪಗಳನ್ನು ಮತ್ತು ಅದ್ಭುತವಾಗಿ ಕಾಣುವ ಪ್ರಜ್ವಲಿಸುವ ಓಷಧಿಗಳನ್ನು ತಂದು ಹಾಕಿ ಹತ್ತು ದಿಕ್ಕುಗಳು ಕಂಗೊಳಿಸುತ್ತಿದ್ದವು. ಪಕ್ಷಿಗಳು ಸಂತೋಷದಿಂದ ಕುಣಿದು ಕೇಕೆಯನ್ನು ಹಾಕುತ್ತಿದ್ದವು. ದಿವ್ಯಜನಪ್ರಿಯವೂ, ದಿವ್ಯವೂ ಆದ ಸುಮಧುರವಾದ ಮಾತುಗಳು ಅಲ್ಲಿ ಕೇಳಿ ಬರುತ್ತಿದ್ದವು.
ತತ್ರ ದೇವೋ ಗಿರಿತಟೇ ಹೇಮಧಾತುವಿಭೂಷಿತೇ।
ಪರ್ಯಂಕ ಇವ ಬಭ್ರಾಜ ಉಪವಿಷ್ಟೋ ಮಹಾದ್ಯುತಿಃ ॥17॥
ಅಲ್ಲಿ ಹೇಮಧಾತು (ಬಂಗಾರ) ವಿಭೂಷಿತವಾದ ಪರ್ವತ ಪ್ರದೇಶವೊಂದರಲ್ಲಿ ಪರ್ಯಂಕದಲ್ಲಿ ಕುಳಿತಿದ್ದಂತೆ ಮಹಾದ್ಯುತಿ (ಕಾಂತಿ)ಯುಳ್ಳ ರುದ್ರನು ಕುಳಿತಿದ್ದನು.
ವ್ಯಾಘ್ರಚರ್ಮಪರೀಧಾನೋ ಗಜಚರ್ಮೋತ್ತರಚ್ಛದಃ।
ವ್ಯಾಲಯಜ್ಞೋಪವೀತಶ್ಚ ಲೋಹಿತಾಂತ್ರವಿಭೂಷಿತಃ ॥18॥
ಹರಿಶ್ಮಶ್ರುಜಟೋ ಭೀಮೋ ಭಯಕರ್ತಾ ಸುರದ್ವಿಷಾಮ್।
ಭಯಘ್ನಃ ಸರ್ವಭೂತಾನಾಂ ಭಕ್ತಾನಾಮಭಯಂಕರಃ ॥19॥
ಕಿನ್ನರೈರ್ದೇವಗಂಧರ್ವೈಃ ಸ್ತೂಯಮಾನಃ ಸಮಂತತಃ।
ಋಷಿಭಿಶ್ಚಾಪ್ಸರೋಭಿಶ್ಚ ಸರ್ವತಶ್ಚಾಪಿ ಶೋಭಿತಃ ॥20॥
ವ್ಯಾಘ್ರಚರ್ಮವನ್ನು ಉಟ್ಟು, ಗಜಚರ್ಮವನ್ನು ಹೊದ್ದು, ಸರ್ಪ ಯಜ್ಞೋಪವೀತವನ್ನು ಧರಿಸಿ, ಕೆಂಪಾದ ಕರುಳಿನ ಹಾರದಿಂದ ವಿಭೂಷಿತನಾಗಿ, ಹಸಿರು ಬಣ್ಣದ ಶ್ಮಶ್ರು- ಜಟೆಗಳನ್ನು ಧರಿಸಿ ಭಯಂಕರನೂ, ಸುರಶತ್ರುಗಳಿಗೆ ಭಯವನ್ನು ಉಂಟುಮಾಡುವವನೂ, ಸರ್ವಭೂತಗಳಿಗೂ ಭಯವನ್ನು ಪರಿಹಾರ ಮಾಡುವವನೂ, ಭಕ್ತರಿಗೆ ಅಭಯಂಕರನೂ ಆದ ಶಿವನು ಕಿನ್ನರರಿಂದಲೂ, ದೇವ-ಗಂಧರ್ವರಿಂದಲೂ ಎಲ್ಲ ಕಡೆಯಿಂದಲೂ ಸ್ತೋತ್ರ ಮಾಡಲ್ಪಟ್ಟು ಋಷಿಗಳ ಜೊತೆಯಲ್ಲಿ ಮತ್ತು ಅಪ್ಸರೆಯರ ಜೊತೆಯಲ್ಲಿ ಶೋಭಿಸುತ್ತಿದ್ದನು.
ತತ್ರ ಭೂತಪತೇಃ ಸ್ಥಾನಂ ದೇವದಾನವಸಂಕುಲಮ್।
ಸರ್ವತೇಜೋಮಯಂ ಭೂಮ್ನಾ ಲೋಕಪಾಲನಿಷೇವಿತಮ್ ॥21॥
ಮಹೋರಗಸಮಾಕೀರ್ಣಂ ಸರ್ವೇಷಾಂ ಲೋಮಹರ್ಷಣಮ್।
ಭೀಮರೂಪಮನಿರ್ದೇಶ್ಯಮಪ್ರಧೃಷ್ಯತಮಂ ವಿಭೋ ॥22॥
ಎಲೈ ವಿಭುವೇ, ಅಲ್ಲಿ ಭೂತಪತಿಯಾದ ಶಿವನ ಸ್ಥಾನವು ದೇವ-ದಾನವರಿಂದ ನಿಬಿಡವಾಗಿ, ಸರ್ವತೇಜೋಮಯವಾಗಿ, ಲೋಕಪಾಲರಿಂದ ನಿಷೇವಿತವಾಗಿ ಮಹಾಸರ್ಪಗಳಿಂದ ಸುತ್ತುವರಿಯಲ್ಪಟ್ಟು ಎಲ್ಲರೂ ರೋಮಾಂಚನವುಳ್ಳವರಾಗಿ, ಭಯಂಕರ ರೂಪವುಳ್ಳದ್ದೂ, ವರ್ಣಿಸಲು ಅಸಾಧ್ಯವಾದದ್ದೂ, ಪರಾಭವಗೊಳಿಸಲು ಅಸಾಧ್ಯವಾದದ್ದೂ ಆಗಿದೆ (ಆಗಿದ್ದಿತು).
ತತ್ರ ಭೂತಪತಿಂ ದೇವಮಾಸೀನಂ ಶಿಖರೋತ್ತಮೇ।
ಋಷಯೋ ಭೂತಸಂಘಾಶ್ಚ ಪ್ರಣಮ್ಯ ಶಿರಸಾ ಹರಮ್।
ಗೀರ್ಭಿಃ ಪರಮಶುದ್ಧಾಭಿಸ್ತುಷ್ಟುವುಶ್ಚ ಮನೋಹರಮ್ ॥23॥
ಅಲ್ಲಿ ಒಂದು ಶ್ರೇಷ್ಠವಾದ ಶಿಖರದಲ್ಲಿ ಕುಳಿತ ಭೂತಪತಿಯಾದ ರುದ್ರದೇವನನ್ನು ಋಷಿಗಳು, ಭೂತಸಂಘಗಳು ಶಿರಸಾ ನಮಸ್ಕರಿಸಿ ಪರಮ ಶುದ್ಧವಾದ ಮಾತುಗಳಿಂದ ಮನೋಹರವಾಗಿ ಸ್ತೋತ್ರವನ್ನು ಮಾಡಿದವು.
ವಿಮುಕ್ತಾಶ್ಚೈವ ಪಾಪೇಭ್ಯೋ ಬಭೂವುರ್ವಿಗತಜ್ವರಾಃ।
ಋಷಯೋ ವಾಲಖಿಲ್ಯಾಶ್ಚ ತಥಾ ವಿಪ್ರರ್ಷಯಶ್ಚ ಯೇ ॥24॥

ಅಯೋನಿಜಾ ಯೋನಿಜಾಶ್ಚ ತಪಃಸಿದ್ಧಾ ಮಹರ್ಷಯಃ |
ತತಸ್ತಂ ದೇವದೇವೇಶಂ ಭಗವಂತಮುಪಾಸತೇ ॥25॥
ಎಲ್ಲ ಪಾಪಗಳಿಂದಲೂ ನಿರ್ಮುಕ್ತರಾದ, ನಿರಾತಂಕರಾದ ಋಷಿಗಳೂ, ವಾಲಖಿಲ್ಯರೂ, ಬ್ರಹ್ಮರ್ಷಿಗಳೂ, ಅಯೋನಿಜರೂ, ಯೋನಿಜರೂ, ತಪಸ್ಸಿದ್ಧರಾದ ಮಹರ್ಷಿಗಳೂ ಅಲ್ಲಿ ದೇವದೇವೇಶನಾದ, ಭಗವಂತನಾದ ಅವನನ್ನು ಉಪಾಸನೆ ಮಾಡುತ್ತಿದ್ದರು.
ತತಸ್ತಸ್ಮಿನ್ ಕ್ಷಣೇ ದೇವೀ ಭೂತಸ್ತ್ರೀಗಣಸಂವೃತಾ |
ಹರತುಲ್ಯಾಂಬರಧರಾ ಸಮಾನವ್ರತಚಾರಿಣೀ ॥26॥
ಕಾಂಚನಂ ಕಲಶಂ ಗೃಹ್ಯ ಸರ್ವತೀರ್ಥಾಂಬುಪೂರಿತಮ್ |
ಪುಷ್ಪವೃಷ್ಟ್ಯಾಭಿವರ್ಷಂತೀ ದಿವ್ಯಗಂಧಸಮಾಯುತಾ ॥27॥
ಸರಿದ್ವರಾಭಿಃ ಸರ್ವಾಭಿಃ ಪೃಷ್ಠತೋಽನುಗತಾ ವರಾ |
ಸೇವಿತುಂ ಭಗವತ್ಪಾರ್ಶ್ವಮಾಜಗಾಮ ಶುಚಿಸ್ಮಿತಾ ॥28॥
ಅನಂತರ ಆ ಕ್ಷಣದಲ್ಲಿ ಭೂತಸ್ತ್ರೀಗಣದಿಂದ ಪರಿವೃತಳಾದ, ಶಿವನ ವಸ್ತ್ರಕ್ಕೆ ಸದೃಶವಾದ ವಸ್ತ್ರವನ್ನು ಧರಿಸಿದ, ಸಮಾನವ್ರತಚಾರಿಣಿಯಾದ ಪಾರ್ವತೀದೇವಿಯು ಸರ್ವತೀರ್ಥಗಳಿಂದ ಪೂರ್ಣವಾದ ಸುವರ್ಣಕಲಶವನ್ನು ಕೈಯಲ್ಲಿ ಹಿಡಿದು ದಿವ್ಯಗಂಧದಿಂದ ಕೂಡಿದವಳಾಗಿ ಎಲ್ಲ ಕಡೆಯಲ್ಲಿಯೂ ಪುಷ್ಪವೃಷ್ಟಿಯನ್ನು ಮಾಡುತ್ತಾ ಶ್ರೇಷ್ಠವಾದ ನದೀ-ದೇವತೆಗಳಿಂದ ಹಿಂಬಾಲಿಸಲ್ಪಟ್ಟವಳಾಗಿ ರುದ್ರದೇವರ ಸೇವೆಯನ್ನು ಮಾಡಲು ಶುಚಿಸ್ಮಿತಳಾಗಿ ಅವರ ಸಮೀಪಕ್ಕೆ ಬಂದಳು.
ಆಗಮ್ಯ ತು ಗಿರೇಃ ಪುತ್ರೀ ದೇವದೇವಸ್ಯ ಚಾಂತಿಕಮ್ |
ಮನಃಪ್ರಿಯಂ ಚಿಕೀರ್ಷಂತೀ ಕ್ರೀಡಾರ್ಥಂ ಶಂಕರಾಂತಿಕೇ ॥29॥
ಮನೋಹರಾಭ್ಯಾಂ ಪಾಣಿಭ್ಯಾಂ ಹರನೇತ್ರೇ ಪಿಧಾಯ ತು |
ಅವೇಕ್ಷ್ಯ ಹೃಷ್ಟಾ ಸ್ವಗಣಾನ್ ಸ್ಮಯಂತೀ ಪೃಷ್ಠತಃ ಸ್ಥಿತಾ ॥30॥
ಪರ್ವತಪುತ್ರಿಯಾದ ಅವಳು ದೇವನ ಸಮೀಪಕ್ಕೆ ಬಂದು, ಅವನಿಗೆ ಪ್ರಿಯವನ್ನುಂಟು ಮಾಡಲು ಕ್ರೀಡಾರ್ಥವಾಗಿ ಶಂಕರನ ಹಿಂದೆ ನಿಂತು ತನ್ನ ಗಣಗಳನ್ನು ನೋಡಿ ನಗುತ್ತಾ ಸಂತೋಷದಿಂದ ತನ್ನ ಮನೋಹರವಾದ ಎರಡು ಕೈಗಳಿಂದ ರುದ್ರನ ಎರಡು ಕಣ್ಣುಗಳನ್ನು ಮುಚ್ಚಿದಳು.
ದೇವ್ಯಾ ಚಾಂಧೀಕೃತೇ ದೇವೇ ಕಶ್ಮಲಂ ಸಮಪದ್ಯತ |
ನಿಮೀಲಿತೇ ಭೂತಪತೌ ನಷ್ಟಚಂದ್ರಾರ್ಕತಾರಕಮ್ ॥31॥
ನಿಃಸ್ವಾಧ್ಯಾಯವಷಟ್ಕಾರಂ ತಮಸಾ ಚಾಭಿಸಂವೃತಮ್ |
ವಿಷಣ್ಣಂ ಭಯಸಂತ್ರಸ್ತಂ ಜಗದಾಸೀದ್ ಭಯಾಕುಲಮ್ ॥32॥
ದೇವಿಯ ಕ್ರೀಡೆಯಿಂದ ರುದ್ರನು ಅಂಧನಂತೆ ಆಗುತ್ತಿರಲು ಎಲ್ಲ ಕಡೆಯಲ್ಲಿಯೂ ಕತ್ತಲು ಉಂಟಾಯಿತು. ರುದ್ರನು ಕಣ್ಣು ಮುಚ್ಚುತ್ತಿರಲು ಸೂರ್ಯ-ಚಂದ್ರ-ನಕ್ಷತ್ರಗಳು ನಷ್ಟವಾದವು. ಸ್ವಾಧ್ಯಾಯ, ವಷಟ್ಕಾರಗಳು ನಿಂತು ಹೋದವು. ಕತ್ತಲೆಯು ಲೋಕವನ್ನು ಆವರಿಸಿತು. ಜಗತ್ತು ವಿಷಾದದಿಂದಲೂ, ಭಯದಿಂದಲೂ ಕೂಡಿ ಸಂತ್ರಸ್ತವಾಯಿತು.
ಹಾಹಾಕಾರಸ್ತ್ವ ೃಷೀಣಾಂ ಚ ಲೋಕಾನಾಮಭವತ್ ತದಾ |
ತಮೋಭಿಭೂತೇ ಸಂಭ್ರಾಂತೇ ಲೋಕೇ ಜೀವಿತಶಂಕಿತೇ ॥33॥
ತೃತೀಯಂ ಚಾಸ್ಯ ಸಂಭೂತಂ ಲಲಾಟೇ ನೇತ್ರಮಾಯತಮ್ |
ದ್ವಾದಶಾದಿತ್ಯಸಂಕಾಶಂ ಲೋಕಾನ್ ಭಾಸಾಽವಭಾಸಯತ್ ॥34॥
ಋಷಿಗಳಿಗೆ ಮತ್ತು ಲೋಕಗಳಿಗೆ ಹಾಹಾಕಾರವುಂಟಾಯಿತು. ಜನರು ಅಂಧಕಾರದಿಂದ ಪೀಡಿತರಾಗಿ, ದಿಗ್ಭ್ರಾಂತರಾಗಿ ತಮ್ಮ ಜೀವಿತದ ಶಂಕೆಯನ್ನು ಹೊಂದುತ್ತಿರಲು ರುದ್ರದೇವರ ಹಣೆಯಲ್ಲಿ ವಿಶಾಲವಾದ ಮೂರನೆಯ ನೇತ್ರವು ದ್ವಾದಶಾದಿತ್ಯರ ಪ್ರಭೆಯನ್ನು ಹೊಂದಿ, ತನ್ನ ಪ್ರಭೆಯಿಂದ ಲೋಕಗಳನ್ನು ಪ್ರಕಾಶಗೊಳಿಸುತ್ತಾ ಉದ್ಭವಿಸಿತು.
ತತ್ರ ನೇತ್ರಾಗ್ನಿನಾ ತೇನ ಯುಗಾಂತಾಗ್ನಿನಿಭೇನ ವೈ |
ಅದಹ್ಯತ ಗಿರಿಃ ಸರ್ವೋ ಹಿಮವಾನಗ್ರತಃ ಸ್ಥಿತಃ ॥35॥
ಯುಗಾಂತಕಾಲದ ಅಗ್ನಿಗೆ ಸದೃಶವಾದ, ಆ ನೇತ್ರಾಗ್ನಿಯಿಂದ ಎದುರಿಗಿದ್ದ ಹಿಮಾಲಯ ಪರ್ವತವೆಲ್ಲವೂ ಸುಟ್ಟುಹೋಯಿತು.
ದಹ್ಯಮಾನೇ ಗಿರೌ ತಸ್ಮಿನ್ ಮೃಗಪಕ್ಷಿಸಮಾಕುಲೇ |
ಸವಿದ್ಯಾಧರಗಂಧರ್ವೇ ದಿವ್ಯೌಷಧಸಮಾಯುತೇ ॥36॥
ತತೋ ಗಿರಿಸುತಾ ಚಾಪಿ ವಿಸ್ಮಯೋತ್ಫುಲ್ಲಲೋಚನಾ |
ಬಭೂವ ಚ ಜಗತ್ಸರ್ವಂ ತಥಾ ವಿಸ್ಮಯಸಂಯುತಮ್ ॥37॥
ಮೃಗ-ಪಕ್ಷಿಗಳಿಂದ ಕೂಡಿದ, ವಿದ್ಯಾದರ-ಗಂಧರ್ವರಿಂದ ಕೂಡಿದ, ದಿವ್ಯೌಷಧಗಳಿಂದ ಸಮನ್ವಿತವಾದ ಆ ಪರ್ವತವು ಸುಡಲ್ಪಡುತ್ತಿರಲು ವಿಸ್ಮಯದಿಂದ ಗಿರಿಜೆಯು ಅಗಲವಾಗಿ ಕಣ್ಣುಗಳನ್ನು ತೆಗೆದಳು. ಜಗತ್ತೆಲ್ಲವೂ ಹಾಗೆಯೇ ವಿಸ್ಮಯದಿಂದ ಕೂಡಿತು.
ಪಶ್ಯತಾಮೇವ ಸರ್ವೇಷಾಂ ದೇವದಾನವರಕ್ಷಸಾಮ್ |
ನೇತ್ರಜೇನಾಗ್ನಿನಾ ತೇನ ದಗ್ಧ ಏವ ನಗೋತ್ತಮಃ ॥38॥
ದೇವ-ದಾನವ-ರಾಕ್ಷಸರು ನೋಡುತ್ತಿರುವಂತೆಯೇ ಶಿವನ ನೇತ್ರದಿಂದ ಉಂಟಾದ ಅಗ್ನಿಯಿಂದ ಆ ಶ್ರೇಷ್ಠವಾದ ಪರ್ವತವು ಸುಟ್ಟೇ ಹೋಯಿತು.
ತಂ ದೃಷ್ಟ್ವಾ ಮಥಿತಂ ಶೈಲಂ ಶೈಲಪುತ್ರೀ ಸವಿಕ್ಲವಾ |
ಪಿತುಃ ಶಮನಮಿಚ್ಛಂತೀ ಪಪಾತ ಭುವಿ ಪಾದಯೋಃ ॥39॥

ಆ ಪರ್ವತವು ದಹಿಸಲ್ಪಡುತ್ತಿರುವುದನ್ನು ನೋಡಿ ಶೈಲಪುತ್ರಿಯಾದ ಪಾರ್ವತಿಯು ಭಯದಿಂದ ಕೂಡಿದವಳಾಗಿ, ತಂದೆಗೆ ಕ್ಷೇಮವನ್ನು ಬಯಸುತ್ತಾ ರುದ್ರದೇವರ ಪಾದಗಳ ಮೇಲೆ ಬಿದ್ದಳು.
ತದ್ ದೃಷ್ಟ್ವಾ ದೇವದೇವೇಶೋ ದೇವ್ಯಾ ದುಃಖಮನುತ್ತಮಮ್ |
ಹೈಮವತ್ಯಾಃ ಪ್ರಿಯಾರ್ಥಂ ಚ ಗಿರಿಂ ಪುನರವೈಕ್ಷತ ॥40॥
ದೃಷ್ಟಮಾತ್ರೇ ಭಗವತಾ ಸೌಮ್ಯಯುಕ್ತೇನ ಚೇತಸಾ |
ಕ್ಷಣೇನ ಹಿಮವಾನ್ ಶೈಲಃ ಪ್ರಕೃತಿಸ್ಥೋಽಭವತ್ ಪುನಃ ॥41॥
ದೇವಿಯ ಆ ತೀವ್ರವಾದ ದುಃಖವನ್ನು ನೋಡಿದ ರುದ್ರದೇವರು ಹೈಮವತಿಯಾದ (ಹಿಮಾಲಯ ಪುತ್ರಿಯಾದ) ಅವಳಿಗೆ ಪ್ರಿಯವನ್ನುಂಟು ಮಾಡಲು ಆ ಪರ್ವತವನ್ನು ಪುನಃ ನೋಡಿದರು. ಸೌಮ್ಯದೃಷ್ಟಿಯಿಂದ ಕೂಡಿದ ಮನಸ್ಸಿನಿಂದ ಆ ಪರ್ವತವನ್ನು ನೋಡಿದ ತಕ್ಷಣವೇ ಹಿಮಾಲಯವು ಮೊದಲಿನಂತೆಯೇ ಆಯಿತು.
ಹೃಷ್ಟಪುಷ್ಟವಿಹಂಗಶ್ಚ ಪ್ರಫುಲ್ಲದ್ರುಮಕಾನನಃ |
ಸಿದ್ಧಚಾರಣಸಂಘೈಶ್ಚ ಪ್ರೀತಿಯುಕ್ತೈಃ ಸಮಾಕುಲಃ ॥42॥
ಹೃಷ್ಟ-ಪುಷ್ಟ ಪಕ್ಷಿಗಳು, ಅರಳಿದ ಹೂಗಳುಳ್ಳ ಮರಗಳ ಕಾನನಗಳು, ಸಂತೋಷದಿಂದ ಕೂಡಿದ ಸಿದ್ಧ-ಚಾರಣ ಸಂಘಗಳು ನಿಬಿಡವಾಗಿ ಕಂಡುಬಂದವು.
ಪಿತರಂ ಪ್ರಕೃತಿಸ್ಥಂ ಚ ದೃಷ್ಟ್ವಾ ಹೈಮವತೀ ಭೃಶಮ್ |
ಅಭವತ್ ಪ್ರೀತಿಸಂಯುಕ್ತಾ ಮುದಿತಾ ಚ ಪಿನಾಕಿನಮ್ ॥43॥
ತಂದೆಯು ಮೊದಲಿನಂತೆಯೇ ಆದುದನ್ನು ನೋಡಿ ಬಹಳ ಸಂತೋಷಗೊಂಡ ಪಾರ್ವತಿಯು ರುದ್ರದೇವರ ಸಾಮರ್ಥ್ಯದ ವಿಷಯದಲ್ಲಿ ಬಹಳ ಸಂತೋಷವನ್ನು ಹೊಂದಿದಳು.
ದೇವೀ ವಿಸ್ಮಯಸಂಯುಕ್ತಾ ಪ್ರಷ್ಟುಕಾಮಾ ಮಹೇಶ್ವರಮ್ |
ಹಿತಾರ್ಥಂ ಸರ್ವಲೋಕಾನಾಂ ಪ್ರಜಾನಾಂ ಹಿತಕಾಮ್ಯಯಾ |
ದೇವದೇವಂ ಮಹಾದೇವೀ ಬಭಾಷೇದಂ ವಚೋಽರ್ಥವತ್ ॥44॥
ವಿಸ್ಮಯಯುಕ್ತಳಾದ ಪಾರ್ವತಿಯು ಸರ್ವಲೋಕಗಳಿಗೆ ಮತ್ತು ಪ್ರಜೆಗಳಿಗೆ ಹಿತವನ್ನು ಬಯಸಿ ರುದ್ರದೇವರನ್ನು ಪ್ರಶ್ನೆ ಮಾಡಲು ಬಯಸಿ ಅವರನ್ನು ಕುರಿತು ಅರ್ಥಪೂರ್ಣವಾದ ಈ ಮಾತನ್ನು ಆಡಿದಳು.
ಭಗವನ್ ದೇವದೇವೇಶ ಶೂಲಪಾಣೇ ಮಹಾದ್ಯುತೇ |
ವಿಸ್ಮಯೋ ಮೇ ಮಹಾನ್ ಜಾತಸ್ತಸ್ಮಿನ್ ನೇತ್ರಾಗ್ನಿಸಮ್ಪ್ಲುತೇ ॥45॥
ಭಗವಂತನೇ, ದೇವದೇವೇಶನೇ, ಶೂಲಪಾಣಿಯೇ, ಮಹಾದ್ಯುತಿಯೇ, ನಿನ್ನ ನೇತ್ರಾಗ್ನಿಯಿಂದ ಉಂಟಾದ ಈ ವನದಹನವನ್ನು ನೋಡಿ ನನಗೆ ಬಹಳ ವಿಸ್ಮಯ ಉಂಟಾಗಿದೆ.
ಕಿಮರ್ಥಂ ದೇವದೇವೇಶ ಲಲಾಟೇಽಸ್ಮಿನ್ ಪ್ರಕಾಶತೇ |
ಅತಿಸೂರ್ಯಾಗ್ನಿಸಂಕಾಶಂ ತೃತೀಯಂ ನೇತ್ರಮಾಯತಮ್ ॥46॥
ನೇತ್ರಾಗ್ನಿನಾ ತು ಮಹತಾ ನಿರ್ದಗ್ಧೋ ಹಿಮವಾನಸೌ |
ಪುನಃ ಸ ದೃಷ್ಟಮಾತ್ರಸ್ತು ಪ್ರಕೃತಿಸ್ಥಃ ಪಿತಾ ಮಮ ॥47॥
ದೇವದೇವೇಶನೇ, ಈ ನಿನ್ನ ಲಲಾಟದಲ್ಲಿ ಸೂರ್ಯಾಗ್ನಿಗಳ ತೇಜಸ್ಸನ್ನು ಮೀರಿದ ವಿಶಾಲವಾದ ತೃತೀಯ ನೇತ್ರವು ಏಕೆ ಕಾಣುತ್ತಿದೆ? ನಿನ್ನ ಆ ದೊಡ್ಡ ನೇತ್ರಾಗ್ನಿಯಿಂದ ಈ ಹಿಮಾಲಯ ಪರ್ವತವು ಸುಟ್ಟುಹೋಯಿತು. ಪುನಃ ನೀನು ನೋಡಿದ ತಕ್ಷಣವೇ ನನ್ನ ತಂದೆಯು ಮೊದಲಿನಂತೆ ಆದನು.
ಏಷ ಮೇ ಸಂಶಯೋ ದೇವ ಹೃದಿ ಮೇ ಸಂಪ್ರತಿ ವರ್ತತೇ |
ದೇವದೇವ ನಮಸ್ತುಭ್ಯಂ ತನ್ಮೇ ಶಂಸಿತುಮರ್ಹಸಿ ॥48॥
ಎಲೈ ದೇವದೇವನೇ, ಈ ವಿಷಯದಲ್ಲಿ ನನಗೆ ಈಗ ವಿಸ್ಮಯವುಂಟಾಗಿದೆ. ದೇವದೇವನೇ, ನಿನಗೆ ನಮಸ್ಕಾರ. ಇದಕ್ಕೆ ಕಾರಣವನ್ನು ನನಗೆ ಹೇಳಬೇಕು (ಎಂದು ಹೇಳಿದಳು).
ನಾರದಃ
ಏವಮುಕ್ತಸ್ತಯಾ ದೇವ್ಯಾ ಪ್ರೀಯಮಾಣೋಽಬ್ರವೀದ್ ಭವಃ |
ಸ್ಥಾನೇ ಸಂಶಯಿತುಂ ದೇವಿ ಧರ್ಮಜ್ಞೇ ಪ್ರಿಯಭಾಷಿಣಿ ॥49॥
ನಾರದ ದೇವಿಯಿಂದ ಹೀಗೆ ಕೇಳಲ್ಪಟ್ಟ ರುದ್ರದೇವರು ಸಂತೋಷಗೊಂಡು ದೇವಿಯನ್ನು ಕುರಿತು- `ಎಲೈ ಧರ್ಮಜ್ಞೆಯೇ, ಪ್ರಿಯಭಾಷಿಣಿಯೇ, ದೇವಿಯೇ ನೀನು ಸಂಶಯಪಡುವುದು ಯುಕ್ತವಾಗಿದೆ.
ತ್ವದೃತೇ ಮಾಂ ಹಿ ವೈ ಪ್ರಷ್ಟುಂ ನ ಶಕ್ಯಂ ಕೇನಚಿತ್ ಪ್ರಿಯೇ |
ಪ್ರಕಾಶಂ ಯದಿ ವಾ ಗುಹ್ಯಂ ತ್ವತ್ಪ್ರಿಯಾರ್ಥಂ ಬ್ರವೀಮ್ಯಹಮ್ ॥50॥
ಎಲೌ ಪ್ರಿಯೆಯೇ, ನಿನ್ನನ್ನು ಬಿಟ್ಟು ಬೇರೆ ಯಾವನೂ ನನ್ನನ್ನು ಹೀಗೆ ಪ್ರಶ್ನೆಯನ್ನು ಕೇಳಲಾರನು. ಅದು ರಹಸ್ಯವಾಗಿರಲಿ ಅಥವಾ ಇಲ್ಲದಿರಲಿ ನಿನಗೆ ಪ್ರಿಯವನ್ನುಂಟು ಮಾಡಲು ನಾನು ಹೇಳುತ್ತೇನೆ.
ಶೃಣು ತತ್ಸರ್ವಮಖಿಲಮಸ್ಯಾಂ ಸಂಸದಿ ಭಾಮಿನಿ |
ಸರ್ವೇಷಾಮೇವ ಲೋಕಾನಾಂ ಕೂಟಸ್ಥಂ ವಿದ್ಧಿ ಮಾಂ ಪ್ರಿಯೇ ॥51॥
ಎಲೌ ಭಾಮಿನಿಯೇ, ಅದೆಲ್ಲವನ್ನೂ ಈ ಸಭೆಯಲ್ಲಿ ನಾನು ಹೇಳುತ್ತೇನೆ, ಅದನ್ನು ಕೇಳು. ಎಲೌಪ್ರಿಯೆಯೇ, ನಾನು ಎಲ್ಲ ಲೋಕಗಳ ಶಿಖರಸ್ಥಾನದಲ್ಲಿ ಇದ್ದೇನೆಂದು ತಿಳಿ.

ಮದಧೀನಾಸ್ತ್ರಯೋ ಲೋಕಾ ಯಥಾ ವಿಷ್ಣೌ ತಥಾ ಮಯಿ |
ಸ್ರಷ್ಟಾ ವಿಷ್ಣುರಹಂ ಗೋಪ್ತಾ ಇತ್ಯೇತದ್ ವಿದ್ಧಿ ಭಾಮಿನಿ ॥52॥
ವಿಷ್ಣುವಿಗೆ ಅಧೀನವಾದಂತೆ ಮೂರುಲೋಕಗಳು ನನಗೂ ಅಧೀನವಾಗಿವೆ. ಎಲೌ ಭಾಮಿನಿಯೇ ವಿಷ್ಣುವು ಸೃಷ್ಟಿಮಾಡುತ್ತಾನೆ, ನಾನು ರಕ್ಷಿಸುತ್ತೇನೆ ಎಂದು ತಿಳಿ.
ತಸ್ಮಾದ್ ಯದಾ ಮಾಂ ಸ್ಪೃಶತಿ ಶುಭಂ ವಾ ಯದಿ ವೇತರತ್ |
ತಥೈವೇದಂ ಜಗತ್ಸರ್ವಂ ತತ್ತದ್ ಭವತಿ ಶೋಭನೇ ॥53॥
ಎಲೌ ಶೋಭನೆಯೇ, ಆದ್ದರಿಂದ ನನಗೆ ಶುಭವಾಗಲೀ ಅಥವಾ ಅಶುಭವಾಗಲೀ ಉಂಟಾದರೆ ಈ ಜಗತ್ತೆಲ್ಲವೂ ಶುಭವನ್ನೂ, ಅಶುಭವನ್ನೂ ಹೊಂದುತ್ತದೆ.
ಏತದ್ ಗುಹ್ಯಮಜಾನಂತ್ಯಾ ತ್ವಯಾ ಬಾಲ್ಯಾದನಿಂದಿತೇ |
ನೇತ್ರೇ ಮೇ ಪಿಹಿತೇ ದೇವಿ ಕ್ರೀಡನಾರ್ಥಂ ದೃಢವ್ರತೇ ॥54॥
ಎಲೌ ಅನಿಂದಿತೆಯೇ, ದೇವಿಯೇ, ದೃಢವ್ರತೆಯೇ, ಈ ರಹಸ್ಯವನ್ನು ತಿಳಿಯದೆ ನೀನು ಬಾಲ್ಯನಿಮಿತ್ತದಿಂದ, ಕ್ರೀಡಾರ್ಥವಾಗಿ ನನ್ನ ಕಣ್ಣುಗಳನ್ನು ಮುಚ್ಚಿದೆ.
ತತ್ಕೃತೇ ನಷ್ಟಚಂದ್ರಾರ್ಕಂ ಜಗದಾಸೀದ್ ಭಯಾಕುಲಮ್ |
ನಷ್ಟಾದಿತ್ಯೇ ತಮೋಭೂತೇ ಲೋಕೇ ಗಿರಿಸುತೇ ಪ್ರಿಯೇ ॥55॥
ತೃತೀಯಂ ಲೋಚನಂ ಸೃಷ್ಟಂ ಲೋಕಾನ್ ಸಂರಕ್ಷಿತುಂ ಮಯಾ |
ಅಸ್ಯೈವ ತೇಜಸಾಽಕ್ಷ್ಣೋ ಮೇ ಮಥಿತೋಽಯಂ ಗಿರಿಃ ಶುಭೇ |
ವೃಕ್ಷಗುಲ್ಮಲತಾಕೀರ್ಣೋ ವ್ಯಾಲಾಧ್ಯುಷಿತಕಂದರಃ ॥56॥
ಅದರಿಂದ ಸೂರ್ಯ-ಚಂದ್ರರು ನಷ್ಟವಾಗಿ ಜಗತ್ತಲ್ಲಿ ಭಯವುಂಟಾಯಿತು. ಎಲೌ ಪ್ರಿಯೆಯೇ, ಗಿರಿಸುತೆಯೇ, ಸೂರ್ಯನು ನಷ್ಟನಾಗಿ ಜಗತ್ತು ಅಂಧಕಾರದಿಂದ ಆವರಿಸಲ್ಪಡುತ್ತಿರಲು ಲೋಕಗಳನ್ನು ರಕ್ಷಿಸಲು ನಾನು ಮೂರನೆಯ ನೇತ್ರವನ್ನು ಸೃಷ್ಟಿಸಿದೆ. ಈ ಕಣ್ಣಿನ ತೇಜಸ್ಸಿನಿಂದಲೇ ವೃಕ್ಷ-ಗುಲ್ಮ ಲತೆಗಳಿಂದ ತುಂಬಿದ, ಗುಹೆಗಳಲ್ಲಿ ಸರ್ಪ ಮೊದಲಾದ ಮೃಗಗಳನ್ನು ಹೊಂದಿದ ಈ ಪರ್ವತವು ದಗ್ಧವಾಯಿತು.
ತ್ವತ್ಪ್ರಿಯಾರ್ಥಂ ಕೃತೋ ದೇವಿ ಪ್ರಕೃತಿಸ್ಥಃ ಪುನರ್ಮಯಾ |
ಕಥಿತಂ ಸಂಶಯಸ್ಥಾನಂ ನಿರ್ವಿಶಂಕಾ ಭವ ಪ್ರಿಯೇ ॥57॥
ಎಲೌ ದೇವಿಯೇ, ನಿನ್ನ ಪ್ರೀತಿಗಾಗಿ ನಾನು ಪುನಃ ಪರ್ವತವನ್ನು ಮೊದಲಿನಂತೆಯೇ ಮಾಡಿದೆನು. ನಿನ್ನ ಸಂಶಯವನ್ನು ಪರಿಹರಿಸಿದ್ದೇನೆ. ಪ್ರಿಯೆಯೇ, ನಿರಾತಂಕವಾಗಿರು.
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮೇ ಉಮಾಮಹೇಶ್ವರಸಂವಾದೋ ನಾಮ ದ್ವಿನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ಮೂರನೆಯ ಅಧ್ಯಾಯ
ಉಮಾ-ಮಹೇಶ್ವರ ಸಂವಾದ. ಶಿವನಿಂದ ತಾನು ಚತುರ್ಮುಖನಾಗುವುದಕ್ಕೆ, ನೀಲಕಂಠನಾಗುವುದಕ್ಕೆ, ಪಿನಾಕಿಯಾಗುವುದಕ್ಕೆ ಮತ್ತು ವೃಷಭಧ್ವಜನಾಗುವುದಕ್ಕೆ ಕಾರಣಕಥನ.
ನಾರದಃ
ಕ್ಷಣಜ್ಞಾ ದೇವದೇವಸ್ಯ ಶ್ರೋತುಕಾಮಾ ಪ್ರಿಯಂ ಹಿತಮ್ |
ಉಮಾದೇವೀ ಮಹಾದೇವಮಪೃಚ್ಛತ್ ಪುನರೇವ ತು ॥1॥
ನಾರದ ದೇವದೇವನ ಸಮಯವನ್ನು ತಿಳಿದ ಉಮಾದೇವಿಯು ಪ್ರಿಯವನ್ನೂ, ಹಿತವನ್ನೂ ಬಯಸಿ, ಮಹಾದೇವನನ್ನು ಕುರಿತು ಮಹಾಪ್ರಶ್ನೆಯನ್ನು ಮಾಡಿದಳು.
ಭಗವನ್ ದೇವದೇವೇಶ ಸರ್ವದೇವನಮಸ್ಕೃತ |
ಚತುರ್ಮುಖೋ ವೈ ಭಗವಾನಭವತ್ ಕೇನ ಹೇತುನಾ ॥2॥
ಭಗವಂತನೇ, ದೇವದೇವೇಶನೇ, ಸರ್ವದೇವತೆಗಳಿಂದ ನಮಸ್ಕೃತನಾದವನೇ, ಪೂಜ್ಯನಾದ ನೀನು ಯಾವ ನಿಮಿತ್ತದಿಂದ ನಾಲ್ಕುಮುಖಗಳನ್ನು ಹೊಂದಿದೆ?
ಭಗವನ್ ಕೇನ ವೈ ವಕ್ತ್ರಮೈಂದ್ರಮದ್ಭುತದರ್ಶನಮ್ |
ಉತ್ತರಂ ಚಾಪಿ ಭಗವನ್ ಪಶ್ಚಿಮಂ ಶುಭದರ್ಶನಮ್ |
ದಕ್ಷಿಣಂ ಚ ಮುಖಂ ರೌದ್ರಂ ಕೇನೋರ್ಧ್ವಂ ಜಟಿಲಾವೃತಮ್ ॥3॥
ಭಗವಂತನೇ, ಯಾವ ನಿಮಿತ್ತದಿಂದ ಪೂರ್ವಾಭಿಮುಖವಾದ ನಿನ್ನ ಮುಖವು ಅದ್ಭುತವಾಗಿ ಕಾಣುತ್ತಿದೆ? ಪಶ್ಚಿಮದಲ್ಲಿರುವ ನಿನ್ನ ಮುಖವು ಶುಭವಾಗಿ ಕಾಣುತ್ತಿದೆ. ದಕ್ಷಿಣ ದಿಕ್ಕಿನಲ್ಲಿರುವ ನಿನ್ನ ಮುಖವು ಭಯಂಕರವಾಗಿ ಕಾಣುತ್ತಿದೆ ಮತ್ತು ಉತ್ತರ ದಿಕ್ಕಿನಲ್ಲಿರುವ ನಿನ್ನ ಮುಖವು ಜಟಿಲವಾಗಿದೆ. ಏಕೆ?
ಯಥಾದಿಶಂ ಮಹಾಭಾಗ ಶ್ರೋತುಮಿಚ್ಛಾಮಿ ಕಾರಣಮ್ |
ಏಷ ಮೇ ಸಂಶಯೋ ದೇವ ತನ್ಮೇ ಶಂಸಿತುಮರ್ಹಸಿ ॥4॥

ಎಲೈ ಮಹಾನುಭಾವನೇ, ದಿಕ್ಕುಗಳ ಅನುಸಾರವಾಗಿ ಆ ನಿಮಿತ್ತಗಳನ್ನು ನಾನು ಕೇಳಲು ಬಯಸುತ್ತೇನೆ. ಎಲೈ ದೇವನೇ, ನೀನು ಆ ಸಂಶಯಗಳನ್ನು ಪರಿಹರಿಸಬೇಕು.
ಮಹಾದೇವಃ
ತದಹಂ ತೇ ಪ್ರವಕ್ಷ್ಯಾಮಿ ಯತ್ತ್ವಂ ಪೃಚ್ಛಸಿ ಭಾಮಿನಿ |
ಪುರಾಽಸುರೌ ಮಹಾಘೋರೌ ಲೋಕೋದ್ವೇಗಕರೌ ಭೃಶಮ್ ॥5॥
ಸುಂದೋಪಸುಂದನಾಮಾನಾವಾಸತುರ್ಬಹುಗರ್ವಿತೌ |
ಅಶಸ್ತ್ರವಧ್ಯೌ ಬಲಿನೌ ಪರಸ್ಪರಹಿತೈಷಿಣೌ ॥6॥
ಮಹಾದೇವ ಎಲೌ ಭಾಮಿನಿಯೇ, ನೀನು ಕೇಳುವ ಪ್ರಶ್ನೆಗೆ ನಾನು ಉತ್ತರವನ್ನು ಹೇಳುವೆನು. ಹಿಂದೆ ಮಹಾಘೋರರಾದ, ಲೋಕಕ್ಕೆ ಭಯವನ್ನುಂಟು ಮಾಡುವ ಸುಂದೋಪಸುಂದರೆಂಬ ಇಬ್ಬರು ಅಸುರರಿದ್ದರು. ಅವರು ಬಹಳ ಗರ್ವದಿಂದ ಕೂಡಿ, ಬಲಿಷ್ಠರಾಗಿ, ಪರಸ್ಪರ ಹಿತವನ್ನು ಬಯಸುತ್ತಾ ಶಸ್ತ್ರಗಳಿಂದ ಅವಧ್ಯರಾಗಿದ್ದರು.
ತಯೋರೇವ ವಿನಾಶಾಯ ನಿರ್ಮಿತಾ ವಿಶ್ವಕರ್ಮಣಾ |
ಮೃಗಪಕ್ಷಿಗಣಾನಾಂ ಚ ಸ್ಥಾವರಾಣಾಂ ತಥೈವ ಚ ॥7॥
ಸರ್ವತಃ ಸಾರಮುದ್ಧೃತ್ಯ ತಿಲಶೋ ಲೋಕಪೂಜಿತಾ |
ತಿಲೋತ್ತಮೇತಿ ವಿಖ್ಯಾತಾ ಅಪ್ಸರಾಃ ಸಾ ಬಭೂವ ಹ ॥8॥
ಅವರ ವಿನಾಶಕ್ಕಾಗಿಯೇ ಜಗತ್ತನ್ನು ಸೃಷ್ಟಿ ಮಾಡುವ ಬ್ರಹ್ಮದೇವರು ಮೃಗ-ಪಕ್ಷಿ ಗಣಗಳ ಮತ್ತು ವೃಕ್ಷಗಳ ಸಾರವನ್ನು ಎಲ್ಲ ಕಡೆಗಳಿಂದಲೂ ಎಳ್ಳಿನಷ್ಟು ಭಾಗಗಳನ್ನು ತೆಗೆದು ಒಂದು ಸ್ತ್ರೀಮೂರ್ತಿಯನ್ನು ಮಾಡಿದರು. ಅವಳು ಲೋಕಪೂಜಿತಳಾದ, ಪ್ರಖ್ಯಾತಳಾದ ತಿಲೋತ್ತಮೆ ಎಂಬ ಅಪ್ಸರೆಯಾದಳು.
ದೇವಕಾರ್ಯಂ ಕರಿಷ್ಯಂತೀ ಹಾವಭಾವಸಮನ್ವಿತಾ |
ಸಾ ತು ಪರ್ಯಂತಮಾಗಮ್ಯ ರೂಪೇಣಾಪ್ರತಿಮಾ ಭುವಿ ॥9॥
ಮಯಾ ಬಹುಮತಾ ಚೇಯಂ ದೇವಕಾರ್ಯಂ ಕರಿಷ್ಯತಿ |
ಇತಿ ಮತ್ವಾ ತದಾ ಚಾಹಂ ಕುರ್ವಂತೀಂ ಮಾಂ ಪ್ರದಕ್ಷಿಣಮ್ |
ತಥೈವ ತಾಂ ದಿದೃಕ್ಷುಶ್ಚ ಚತುರ್ವಕ್ತ್ರೋಽಭವಂ ಪ್ರಿಯೇ ॥10॥
ಅವಳು ದೇವಕಾರ್ಯವನ್ನು ಮಾಡುವವಳಾಗಿ, ಹಾವಭಾವ ಸಮನ್ವಿತಳಾಗಿ, ಭೂಮಿಯಲ್ಲಿ ರೂಪದಿಂದ ಅಸದೃಶಳಾಗಿ ನನ್ನ ಸಮೀಪಕ್ಕೆ ಬಂದಳು. ನಾನು ಇವಳನ್ನು ಗೌರವಿಸಿದರೆ ಇವಳು ದೇವಕಾರ್ಯವನ್ನು ಮಾಡುತ್ತಾಳೆ ಎಂದು ತಿಳಿದ ನಾನು ನನಗೆ ಪ್ರದಕ್ಷಿಣೆ ಮಾಡುತ್ತಿದ್ದ ಅವಳನ್ನು ನೋಡಲು ಬಯಸಿ ಹಾಗೆಯೇ ಅವಳನ್ನು ತಿರುಗಿ ನೋಡುತ್ತಿದ್ದಾಗ ನನಗೆ ನಾಲ್ಕು ಮುಖಗಳು ಉಂಟಾದವು.
ಐಂದ್ರಂ ಮುಖಮಿದಂ ಪೂರ್ವಂ ತಪಶ್ಚರ್ಯಾಪರಂ ಸದಾ |
ದಕ್ಷಿಣಂ ಮೇ ಮುಖಂ ದಿವ್ಯಂ ರೌದ್ರಂ ಸಂಹರತಿ ಪ್ರಜಾಃ ॥11॥
ಲೋಕಕಾರ್ಯಪರಂ ನಿತ್ಯಂ ಪಶ್ಚಿಮಂ ಮೇ ಮುಖಂ ಪ್ರಿಯೇ |
ವೇದಾನಧೀತೇ ಸತತಮದ್ಭುತಂ ಚೋತ್ತರಂ ಮುಖಮ್ |
ಏತತ್ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥12॥
ಪೂರ್ವದಿಕ್ಕಿನಲ್ಲಿರುವ ಈ ಮುಖವು ಯಾವಾಗಲೂ ತಪಶ್ಚರ್ಯೆಯಲ್ಲಿ ನಿರತವಾಗಿರುತ್ತದೆ. ದಕ್ಷಿಣ ದಿಕ್ಕಿನಲ್ಲಿರುವ ದಿವ್ಯವಾದ ಮುಖವು ಭಯಂಕರವಾಗಿದ್ದು ಪ್ರಜೆಗಳನ್ನು ಸಂಹರಿಸುತ್ತದೆ. ಎಲೌ ಪ್ರಿಯೆಯೇ, ಪಶ್ಚಿಮ ದಿಕ್ಕಿನ ಮುಖವು ನಿತ್ಯವೂ ಲೋಕಕಾರ್ಯಗಳನ್ನು ಮಾಡುತ್ತದೆ. ಉತ್ತರ ದಿಕ್ಕಿನಲ್ಲಿರುವ ಅದ್ಭುತವಾದ ಮುಖವು ವೇದಗಳನ್ನು ಅಧ್ಯಯನ ಮಾಡುತ್ತದೆ. ನೀನು ಕೇಳಿದುದೆಲ್ಲವನ್ನೂ ಹೇಳಿದ್ದೇನೆ. ಪುನಃ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ಶ್ರೋತುಮಿಚ್ಛಾಮಿ ಶೂಲಪಾಣೇ ವರಪ್ರದ |
ಕಿಮರ್ಥಂ ನೀಲತಾ ಕಂಠೇ ಭಾತಿ ಬರ್ಹನಿಭಾ ತವ ॥13॥
ಉಮಾ ಭಗವಂತನೇ, ಶೂಲಪಾಣಿಯೇ, ವರಪ್ರದನೇ, ನಿನ್ನ ಕಂಠದಲ್ಲಿ ನವಿಲು ಗರಿಯಂತೆ ಕಪ್ಪು ಬಣ್ಣವು ಏತಕ್ಕಿದೆ ಎಂದು ಕೇಳಲು ಬಯಸುತ್ತೇನೆ.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ದೇವಿ ಸಮಾಹಿತಾ ॥14॥
ದೇವಿಯೇ, ಸಂತೋಷ, ಹೇಳುವೆನು, ಸಮಾಧಾನದಿಂದ ಕೇಳು.
ಪುರಾ ಯುಗಾಂತರೇ ಯತ್ನಾದಮೃತಾರ್ಥಂ ಸುರಾಸುರೈಃ |
ಬಲವದ್ಭಿರ್ವಿಮಥಿತಶ್ಚಿರಕಾಲಂ ಮಹೋದಧಿಃ ॥15॥
ಹಿಂದೆ ಯುಗಾಂತರದಲ್ಲಿ ಬಲಿಷ್ಠರಾದ ದೇವಾಸುರರು ಅಮೃತವನ್ನು ಪಡೆಯಲು ಬಹಳ ಪ್ರಯತ್ನವನ್ನು ಪಟ್ಟು ಬಹುಕಾಲದವರೆಗೆ ಕ್ಷೀರಸಾಗರವನ್ನು ಮಥಿಸಿದರು.
ರಜ್ಜುನಾ ನಾಗರಾಜೇನ ಮಥ್ಯಮಾನೇ ಮಹೋದಧೌ |
ವಿಷಂ ತತ್ರ ಸಮುದ್ಭೂತಂ ಸರ್ವಲೋಕವಿನಾಶನಮ್ ॥16॥
ನಾಗರಾಜನಾದ ವಾಸುಕಿಯನ್ನು ಹಗ್ಗವನ್ನಾಗಿ ಮಾಡಿಕೊಂಡು ಸಮುದ್ರವನ್ನು ಕಡೆದಾಗ ಅಲ್ಲಿ ಸರ್ವಲೋಕ ವಿನಾಶಕವಾದ ವಿಷವು

ಉಂಟಾಯಿತು.
ತದ್ ದೃಷ್ಟ್ವಾ ವಿಬುಧಾಃ ಸರ್ವೇ ತದಾ ವಿಮನಸೋಽಭವನ್ |
ಗ್ರಸ್ತಂ ಹಿ ತನ್ಮಯಾ ದೇವಿ ಲೋಕಾನಾಂ ಹಿತಕಾರಣಾತ್ ॥17॥
ಅದನ್ನು ನೋಡಿ ಎಲ್ಲ ದೇವತೆಗಳೂ ಬೇಸರಗೊಂಡರು. ಎಲೌ ದೇವಿಯೇ, ಲೋಕದ ಹಿತಕ್ಕಾಗಿ ನಾನು ಆ ವಿಷವನ್ನು ನುಂಗಿದೆನು.
ತತ್ಕೃತಾ ನೀಲತಾ ಚಾಸೀತ್ಕಂಠೇ ಬರ್ಹಿನಿಭಾ ಶುಭೇ |
ತದಾಪ್ರಭೃತಿ ಚೈವಾಹಂ ನೀಲಕಂಠ ಇತಿ ಸ್ಮೃತಃ |
ಏತತ್ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥18॥
ಎಲೌ ಶುಭಳೇ, ಆ ಕಾರಣದಿಂದ ನನ್ನ ಕಂಠವು ನವಿಲುಗರಿಯಂತೆ ಕಪ್ಪಾಯಿತು. ಅಂದಿನಿಂದ ಆರಂಭಿಸಿ ನಾನು ನೀಲಕಂಠನೆಂದು ಕರೆಯಲ್ಪಡುತ್ತೇನೆ. ನೀನು ಕೇಳಿದುದೆಲ್ಲವನ್ನೂ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ನೀಲಕಂಠ ನಮಸ್ತೇಽಸ್ತು ಸರ್ವಲೋಕಸುಖಾವಹ |
ಬಹೂನಾಮಾಯುಧಾನಾಂ ತ್ವಂ ಪಿನಾಕಂ ಧರ್ತುಮಿಚ್ಛಸಿ |
ಕಿಮರ್ಥಂ ದೇವದೇವೇಶ ತನ್ಮೇ ಶಂಸಿತುಮರ್ಹಸಿ ॥19॥
ಉಮಾ ನೀಲಕಂಠನೇ, ಸರ್ವಲೋಕಗಳಿಗೆ ಸುಖವನ್ನು ಕೊಡುವವನೇ, ನಿನಗೆ ನಮಸ್ಕಾರ. ದೇವದೇವೇಶನೇ, ಅನೇಕ ಆಯುಧಗಳ ಮಧ್ಯದಲ್ಲಿ ನೀನು ಪಿನಾಕವನ್ನು ಧರಿಸಲು ಏಕೆ ಇಚ್ಛಿಸುತ್ತೀಯೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಶಸ್ತ್ರಾಗಮಂ ತೇ ವಕ್ಷ್ಯಾಮಿ ಶೃಣು ಧರ್ಮ್ಯಂ ಶುಚಿಸ್ಮಿತೇ |
ಯುಗಾಂತರೇ ಮಹಾದೇವಿ ಕಣ್ವೋ ನಾಮ ಮಹಾಮುನಿಃ ॥20॥
ಮಹೇಶ್ವರ ಎಲೌ ಶುಚಿಸ್ಮಿತೆಯೇ, ಶಸ್ತ್ರವು ನನಗೆ ಬಂದ ಧರ್ಮಪ್ರದವಾದ ರೀತಿಯನ್ನು ನಿನಗೆ ಹೇಳುವೆನು. ಎಲೌ ಮಹಾದೇವಿಯೇ, ಯುಗಾಂತರದಲ್ಲಿ ಕಣ್ವನೆಂಬ ಮಹರ್ಷಿ ಇದ್ದನು.
ಸ ಹಿ ದಿವ್ಯಾಂ ತಪಶ್ಚರ್ಯಾಂ ಕರ್ತುಮೇವೋಪಚಕ್ರಮೇ |
ತಥಾ ತಸ್ಯ ತಪೋ ಘೋರಂ ಚರತಃ ಕಾಲಪರ್ಯಯಾತ್ |
ವಲ್ಮೀಕಂ ಪುನರುದ್ಭೂತಂ ತಸ್ಯೈವ ಶಿರಸಿ ಪ್ರಿಯೇ ॥21॥
ಅವನು ದಿವ್ಯವಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದನು. ಎಲೌ ಪ್ರಿಯೆಯೇ, ಅವನು ಘೋರವಾದ ತಪಸ್ಸನ್ನು ಆಚರಿಸುತ್ತಿರಲು ಕಾಲಕ್ರಮದಲ್ಲಿ ಅವನ ತಲೆಯ ಮೇಲೆ ಒಂದು ಹುತ್ತವು ಬೆಳೆಯಿತು.
ವೇಣುರ್ವಲ್ಮೀಕಸಂಯೋಗಾನ್ಮೂರ್ಧ್ನಿ ತಸ್ಯ ಬಭೂವ ಹ |
ಧರಮಾಣಶ್ಚ ತತ್ಸರ್ವಂ ತಪಶ್ಚರ್ಯಾಂ ತಥಾಽಕರೋತ್ ॥22॥
ಆ ಹುತ್ತದ ಸಂಯೋಗದಿಂದ ಅವನ ತಲೆಯ ಮೇಲೆ ಒಂದು ಬಿದಿರಿನ ಪೊದೆಯು ಬೆಳೆಯಿತು. ಆ ಋಷಿಯು ಅದನ್ನು ಧರಿಸಿಕೊಂಡೇ ತಪಸ್ಸನ್ನು ಮಾಡಿದನು.
ತಸ್ಮೈ ಬ್ರಹ್ಮಾ ವರಂ ದಾತುಂ ಜಗಾಮ ತಪಸಾಽರ್ಚಿತಃ |
ದತ್ತ್ವಾ ತಸ್ಮೈ ವರಂ ದೇವೋ ವೇಣುಂ ದೃಷ್ಟ್ವಾ ತ್ವಚಿಂತಯತ್ ॥23॥
ಲೋಕಕಾರ್ಯಂ ಸಮುದ್ದಿಶ್ಯ ವೇಣುನಾಽನೇನ ಭಾಮಿನಿ |
ಚಿಂತಯಿತ್ವಾ ತಮಾದಾಯ ಕಾರ್ಮುಕಾರ್ಥೇ ನ್ಯಯೋಜಯತ್॥24॥
ಅವನ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಅವನಿಗೆ ವರವನ್ನು ಕೊಡಲು ಅಲ್ಲಿಗೆ ಬಂದನು. ಬ್ರಹ್ಮನು ಅವನಿಗೆ ವರವನ್ನು ಕೊಟ್ಟು ಅವನ ತಲೆಯ ಮೇಲೆ ಬೆಳೆದಿದ್ದ ಬಿದಿರನ್ನು ನೋಡಿ ಚಿಂತಿಸಿದನು. ಎಲೌ ಭಾಮಿನಿಯೇ, ಇದರಿಂದ ಲೋಕಕಾರ್ಯವನ್ನು ಮಾಡುತ್ತೇನೆ ಎಂದು ಚಿಂತಿಸಿದ ಬ್ರಹ್ಮನು ಅದನ್ನು ತೆಗೆದುಕೊಂಡು ಅದರಿಂದ ಧನುಸ್ಸುಗಳನ್ನು ಮಾಡಿಸಿದನು.
ವಿಷ್ಣೋರ್ಮಮ ಚ ಸಾಮರ್ಥ್ಯಂ ಜ್ಞಾತ್ವಾ ಲೋಕಪಿತಾಮಹಃ |
ಧನುಷೀ ದ್ವೇ ತದಾ ಪ್ರಾದಾದ್ ವಿಷ್ಣವೇ ಚ ಮಮೈವ ಚ ॥25॥
ಲೋಕಪಿತಾಮಹನಾದ ಬ್ರಹ್ಮನು ನನ್ನ ಮತ್ತು ವಿಷ್ಣುವಿನ ಸಾಮರ್ಥ್ಯವನ್ನು ತಿಳಿದು ಎರಡು ಧನುಸ್ಸುಗಳನ್ನು ಮಾಡಿಸಿ ನನಗೂ ಮತ್ತು ವಿಷ್ಣುವಿಗೂ ಕೊಟ್ಟನು.
ಪಿನಾಕಂ ನಾಮ ಮೇ ಚಾಪಂ ಶಾರ್ಙ್ಗಂ ನಾಮ ಹರೇರ್ಧನುಃ |
ತೃತೀಯಮವಶೇಷೇಣ ಗಾಂಡೀವಮಭವದ್ ಧನುಃ ॥26॥
ನನ್ನ ಧನುಸ್ಸಿಗೆ ಪಿನಾಕವೆಂದೂ, ವಿಷ್ಣುವಿನ ಧನುಸ್ಸಿಗೆ ಶಾರ್ಙ್ಗವೆಂದೂ ಹೆಸರು. ಉಳಿದ ಬಿದಿರಿನ ಭಾಗದಿಂದ ಮೂರನೆಯ ಗಾಂಡೀವ ಧನುಸ್ಸು ಉಂಟಾಯಿತು.
ತಚ್ಚ ಸೋಮಾಯ ನಿರ್ದಿಶ್ಯ ಬ್ರಹ್ಮಾ ಲೋಕಂ ಗತಃ ಪುನಃ |
ಏತತ್ತೇ ಸರ್ವಮಾಖ್ಯಾತಂ ಶಸ್ತ್ರಾಗಮಮನಿಂದಿತೇ ॥27॥
ಅದನ್ನು ಚಂದ್ರನಿಗೆ ಕೊಡಬೇಕೆಂದು ತಿಳಿಸಿ ಬ್ರಹ್ಮನು ತನ್ನ ಲೋಕಕ್ಕೆ ಹೊರಟು ಹೋದನು. ಎಲೌ ಅನಿಂದಿತೆಯೇ, ಶಸ್ತ್ರಗಳು ಬಂದುದೆಲ್ಲವನ್ನೂ ನಿನಗೆ ತಿಳಿಸಿದ್ದೇನೆ.
ಉಮಾ
ಭಗವನ್ ದೇವದೇವೇಶ ಪಿನಾಕಪರಶುಪ್ರಿಯ |

ವಾಹನೇಷು ತಥಾಽನ್ಯೇಷು ಸತ್ಸು ಭೂತಪತೇ ತವ ॥28॥
ಅಯಂ ತು ವೃಷಭಃ ಕಸ್ಮಾದ್ ವಾಹನಂ ಸ ಯಥಾಽಭವತ್ |
ಏಷ ಮೇ ಸಂಶಯೋ ದೇವ ತನ್ಮೇ ಶಂಸಿತುಮರ್ಹಸಿ ॥29॥
ಉಮಾ ಭಗವಂತನೇ, ದೇವದೇವೇಶನೆ, ಪಿನಾಕ-ಪರಶುಪ್ರಿಯನೇ, ಭೂತಪತಿಯೇ, ಅನೇಕ ವಾಹನಗಳಿದ್ದರೂ ನಿನಗೆ ಈ ವೃಷಭವು ಹೇಗೆ ವಾಹನವಾಯಿತು? ದೇವನೇ, ಇದು ನನ್ನ ಸಂಶಯ. ಇದನ್ನು ಪರಿಹರಿಸಬೇಕು.
ಮಹಾದೇವಃ
ತದಹಂ ತೇ ಪ್ರವಕ್ಷ್ಯಾಮಿ ವಾಹನಂ ಸ ಯಥಾಽಭವತ್ ॥30॥
ಮಹಾದೇವ ವೃಷಭವು ನನಗೆ ಹೇಗೆ ವಾಹನವಾಯಿತೆಂದು ನಿನಗೆ ನಾನು ಹೇಳುವೆನು.
ಆದಿಸರ್ಗೇ ಪುರಾ ಗಾವಃ ಶ್ವೇತವರ್ಣಾಃ ಶುಚಿಸ್ಮಿತೇ |
ಬಲಸಂಹನನೋಪೇತಾ ದರ್ಪಯುಕ್ತಾಶ್ಚರಂತಿ ತಾಃ ॥31॥
ಎಲೌ ಶುಚಿಸ್ಮಿತೆಯೇ, ಆದಿಸೃಷ್ಟಿಯಲ್ಲಿ ಗೋವುಗಳು ಬಿಳಿಯ ಬಣ್ಣದಿಂದ ಕೂಡಿದ್ದವು. ಅವು ಒಳ್ಳೆಯ ಬಲ ಮತ್ತು ಶರೀರದಿಂದ ಕೂಡಿ ದರ್ಪದಿಂದ ಸಂಚರಿಸುತ್ತಿದ್ದವು.
ಅಹಂ ತು ತಪ ಆತಿಷ್ಠಂ ತಸ್ಮಿನ್ ಕಾಲೇ ಶುಭಾನನೇ |
ಏಕಪಾದಶ್ಚೋರ್ಧ್ವಬಾಹುರ್ಲೋಕಾರ್ಥಂ ಹಿಮವದ್ಗಿರೌ ॥32॥
ಎಲೌ ಶುಭಾನನೆಯೇ, ಆ ಕಾಲದಲ್ಲಿ ನಾನು ಲೋಕಹಿತಕ್ಕಾಗಿ ಹಿಮಾಲಯ ಪರ್ವತದಲ್ಲಿ ಒಂದು ಪಾದದ ಮೇಲೆ ನಿಂತು, ಬಾಹುಗಳನ್ನು ಮೇಲಕ್ಕೆತ್ತಿ ತಪಸ್ಸನ್ನು ಮಾಡುತ್ತಿದ್ದೆನು.
ಗಾವೋ ಮೇ ಪಾರ್ಶ್ವಮಾವಿಶ್ಯ ದರ್ಪೋತ್ಸಿಕ್ತಾಃ ಸಮಂತತಃ |
ಸ್ಥಾನಭ್ರಂಶಂ ತು ಮೇ ದೇವಿ ಚಕ್ರಿರೇ ಬಹುಶಸ್ತಥಾ ॥33॥
ಎಲೌ ದೇವಿಯೇ, ದರ್ಪದಿಂದ ಕೂಡಿದ ಗೋವುಗಳು ಎಲ್ಲ ಕಡೆಯಿಂದಲೂ ನನ್ನ ಸಮೀಪಕ್ಕೆ ಬಂದು ನನ್ನನ್ನು ತಳ್ಳಿ ಅನೇಕ ಬಾರಿ ನನಗೆ ಸ್ಥಾನಭ್ರಂಶವನ್ನು ಉಂಟು ಮಾಡುತ್ತಿದ್ದವು.
ಅಪಚಾರೇಣ ಚೈತಾಸಾಂ ಮನಃಕ್ಷೋಭೋಽಭವನ್ಮಮ |
ತಸ್ಮಾದ್ ದಗ್ಧಾ ಯದಾ ಗಾವೋ ರೋಷಾವಿಷ್ಟೇನ ಚೇತಸಾ ॥34॥
ತಸ್ಮಿಂಸ್ತು ವ್ಯಸನೇ ಘೋರೇ ವರ್ತಮಾನೇ ಪಶೂನ್ ಪ್ರತಿ |
ಅನೇನ ವೃಷಭೇಣಾಹಂ ಶಮಿತಃ ಸಂಪ್ರಸಾದನೈಃ ॥35॥
ಅವುಗಳು ನನಗೆ ಮಾಡಿದ ಅಪಚಾರದಿಂದ ನನ್ನ ಮನಸ್ಸಿನಲ್ಲಿ ಕ್ಷೋಭೆ ಉಂಟಾಯಿತು. ಆಗ ನಾನು ರೋಷಾವಿಷ್ಟವಾದ ಮನಸ್ಸಿನಿಂದ ಗೋವುಗಳನ್ನು ದಹಿಸಿದೆನು. ಗೋವುಗಳಿಗೆ ಅಂತಹ ವ್ಯಸನವು ಪ್ರಾಪ್ತವಾಗಿರಲು ಈ ವೃಷಭವು ಬಂದು ನನ್ನನ್ನು ಸಮಾಧಾನಗೊಳಿಸಿತು.
ತದಾಪ್ರಭೃತಿ ಶಾಂತಾಶ್ಚ ವರ್ಣಭೇದತ್ವಮಾಗತಾಃ |
ಶ್ವೇತೋಽಯಂ ವೃಷಭೋ ದೇವಿ ಪೂರ್ವಸಂಸ್ಕಾರಸಂಯುತಃ |
ವಾಹನತ್ವೇ ಧ್ವಜತ್ವೇ ಮೇ ತದಾಪ್ರಭೃತಿ ಯೋಜಿತಃ ॥36॥
ಅಲ್ಲಿಂದ ಆರಂಭಿಸಿ ಗೋವುಗಳು ಶಾಂತಸ್ವಭಾವವನ್ನೂ ಮತ್ತು ವರ್ಣಭೇದವನ್ನೂ ಹೊಂದಿದವು. ಎಲೌ ದೇವಿಯೇ, ಈ ವೃಷಭವು ಪೂರ್ವಸಂಸ್ಕಾರದಿಂದ ಬಿಳಿಯ ಬಣ್ಣದ್ದೇ ಆಗಿದೆ. ಆಗಿನಿಂದ ನಾನು ಇದನ್ನು ವಾಹನವಾಗಿಯೂ, ಧ್ವಜವಾಗಿಯೂ ಯೋಜಿಸಿದ್ದೇನೆ.
ತಸ್ಮಾನ್ಮೇ ಗೋಪತಿತ್ವಂ ಚ ದೇವೈರ್ಗೋಭಿಶ್ಚ ಕಲ್ಪಿತಮ್ |
ಪ್ರಸನ್ನಶ್ಚಾಭವಂ ದೇವಿ ತದಾ ಗೋಪತಿತಾಂ ಗತಃ ॥37॥
ದೇವತೆಗಳು ಮತ್ತು ಗೋವುಗಳು ಸೇರಿ ನನ್ನನ್ನು ಗೋಪತಿ ಎಂದು ಕಲ್ಪಿಸಿದರು. ದೇವಿಯೇ, ನಾನು ಗೋಪತಿತ್ವವನ್ನು ಹೊಂದಿ ಪ್ರಸನ್ನನಾದೆನು.
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ
ತ್ರಿನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ನಾಲ್ಕನೆಯ ಅಧ್ಯಾಯ
ಶಿವನಿಂದ ಸ್ಮಶಾನವಾಸ ಮಾಡುವುದಕ್ಕೆ ಮತ್ತು ಭಯಂಕರರೂಪವನ್ನು ಧರಿಸಿರುವುದಕ್ಕೆ ಕಾರಣಕಥನ.
ಉಮಾ
ಭಗವನ್ ಸರ್ವಭೂತೇಶ ಶೂಲಪಾಣೇ ವೃಷಧ್ವಜ |
ಆವಾಸೇಷು ವಿಚಿತ್ರೇಷು ರಮ್ಯೇಷು ಚ ಶುಭೇಷು ಚ ॥1॥
ಸತ್ಸು ಚಾನ್ಯೇಷು ದೇಶೇಷು ಶ್ಮಶಾನೇ ರಮಸೇ ಕಥಮ್ |
ಕೇಶಾಸ್ಥಿಕಲಿಲೇ ಭೀಮೇ ಕಪಾಲಶತಸಂಕುಲೇ ॥2॥
ಸೃಗಾಲಗೃಧ್ರಸಂಪೂರ್ಣೇ ಶವಧೂಮಸಮಾಕುಲೇ |
ಚಿತಾಗ್ನಿವಿಷಮೇ ಘೋರೇ ಗಹನೇ ಚ ಭಯಾನಕೇ ॥3॥

ಉಮಾ ಭಗವಂತನೇ, ಸರ್ವಭೂತೇಶನೇ, ಶೂಲಪಾಣಿಯೇ, ವೃಷಧ್ವಜನೇ, ಶುಭವಾದ, ವಿಚಿತ್ರವಾದ, ರಮ್ಯವಾದ ಬೇರೆ ವಾಸಸ್ಥಾನಗಳು ಇರುವಾಗ ಕೇಶ-ಅಸ್ಥಿಗಳಿಂದ ಕೂಡಿದ, ಭಯಂಕರವಾದ, ತಲೆಬುರುಡೆಗಳಿಂದ ಕೂಡಿದ, ಹದ್ದು-ನರಿಗಳಿಂದ ಕೂಡಿದ, ಪ್ರೇತಧೂಮದಿಂದ ಕೂಡಿದ, ಚಿತಾಗ್ನಿಯಿಂದ ವಿಷಮವಾದ ಘೋರವೂ, ಭಯಂಕರವೂ ಆದ ಸ್ಮಶಾನದಲ್ಲಿ ಏಕೆ ಸಂತೋಷಪಡುತ್ತೀಯೆ?
ಏವಂ ಕಳೇವರಕ್ಷೇತ್ರೇ ದುರ್ದರ್ಶೇ ರಮಸೇ ಕಥಮ್ |
ಏಷ ಮೇ ಸಂಶಯೋ ದೇವ ತನ್ಮೇ ಶಂಸಿತುಮರ್ಹಸಿ ||4||
ಇಂತಹ ನೋಡಲು ಅಸಾಧ್ಯವಾದ ಶವಕ್ಷೇತ್ರದಲ್ಲಿ ಹೇಗೆ ಸಂತೋಷಪಡುವಿ? ದೇವನೇ, ಈ ನನ್ನ ಸಂಶಯವನ್ನು ಪರಿಹರಿಸಬೇಕು.
ಮಹಾದೇವಃ
ಹಂತ ತೇ ಕಥಯಿಷ್ಯಾಮಿ ಶೃಣು ದೇವಿ ಸಮಾಹಿತಾ |
ಆವಾಸಾರ್ಥಂ ಪುರಾ ದೇವಿ ಶುದ್ಧಾನ್ವೇಷೀ ಶುಚಿಸ್ಮಿತೇ ||5||
ನಾಧ್ಯಗಚ್ಛಂ ಚಿರಂ ಕಾಲಂ ದೇಶಂ ಶುಚಿತಮಂ ಶುಭೇ |
ಏಷ ಮೇಽಭಿನಿವೇಶೋಽಭೂತ್ ತಸ್ಮಿನ್ ಕಾಲೇ ಪ್ರಜಾಃ ಪ್ರತಿ ||6||
ಮಹಾದೇವ ಎಲೌ ದೇವಿಯೇ, ಸಮಾಧಾನದಿಂದ ನಾನು ಹೇಳುವುದನ್ನು ಕೇಳು. ಎಲೌ ದೇವಿಯೇ, ಶುಭಳೇ, ಶುಚಿಸ್ಮಿತೆಯೇ, ನಾನು ವಾಸ ಮಾಡಲು ಶುದ್ಧವಾದ ಸ್ಥಳವನ್ನು ಹುಡುಕುತ್ತಿರುವಾಗ ಅತ್ಯಂತ ಶುಚಿಯಾದ ದೇಶವು ದೊರಕಲಿಲ್ಲ. ಆಗ ಆ ಕಾಲದಲ್ಲಿ ಪ್ರಜೆಗಳನ್ನು ಕುರಿತು ನನಗೆ ಚಿಂತೆಯುಂಟಾಯಿತು.
ಆಕುಲಂ ಸುಮಹಾಘೋರಂ ಪ್ರಾದುರಾಸೀತ್ ಸಮಂತತಃ |
ಸಂಭೂತಾ ಭೂತಸೃಷ್ಟಿಶ್ಚ ಘೋರಾ ಲೋಕಭಯಾವಹಾ ||7||
ಎಲ್ಲ ಕಡೆಯಲ್ಲಿಯೂ ದೃಶ್ಯವು ಘೋರತರವಾಗಿದ್ದಿತು. ಘೋರವೂ, ಲೋಕಕ್ಕೆ ಭಯವನ್ನುಂಟು ಮಾಡುವಂತಹವೂ ಆದ ಭೂತಗಳ ಸೃಷ್ಟಿಯಾಯಿತು.
ನಾನಾವರ್ಣವಿರೂಪಾಶ್ಚ ತೀಕ್ಷ್ಣದಂಷ್ಟ್ರಾಃ ಪ್ರಹಾರಿಣಃ |
ಪಿಶಾಚರಕ್ಷೋವದನಾಃ ಪ್ರಾಣಿನಾಂ ಪ್ರಾಣಹಾರಿಣಃ |
ಯತಸ್ತತಶ್ಚರಂತಿ ಸ್ಮ ನಿಘ್ನಂತಃ ಪ್ರಾಣಿನೋ ಭೃಶಮ್ ||8||
ನಾನಾ ಬಣ್ಣಗಳನ್ನು ಹೊಂದಿದ, ವಿಕಾರ ರೂಪಗಳನ್ನು ಹೊಂದಿದ, ತೀಕ್ಷ್ಣವಾದ ದಂಷ್ಟ್ರಗಳನ್ನು ಹೊಂದಿದ, ಪ್ರಹಾರಶೀಲರಾದ, ಪಿಶಾಚ-ರಾಕ್ಷಸ ಮುಖಗಳನ್ನು ಹೊಂದಿದ, ಪ್ರಾಣಿಗಳ ಪ್ರಾಣವನ್ನು ಅಪಹರಿಸುವ ಭೂತಗಳು ಪ್ರಾಣಿಗಳನ್ನು ಕೊಲ್ಲುತ್ತಾ ಎಲ್ಲೆಂದರಲ್ಲಿ ತಿರುಗಾಡಲು ಪ್ರಾರಂಭಿಸಿದವು.
ಏವಂ ಲೋಕೇ ಕ್ಷಯಂ ಯಾತೇ ಪ್ರಾಣಿಹೀನೇ ಪಿತಾಮಹಃ |
ಚಿಂತಯಂಸ್ತತ್ಪ್ರತೀಕಾರಂ ಮಾಂ ಚ ಶಕ್ತಂ ಹಿ ನಿಗ್ರಹೇ ||9||
ಏವಂ ಜ್ಞಾತ್ವಾ ತತೋ ಬ್ರಹ್ಮಾ ತಸ್ಮಿನ್ ಕರ್ಮಣ್ಯಯೋಜಯತ್ |
ತಚ್ಚ ಪ್ರಾಣಿದಯಾರ್ಥಂ ತು ಮಯಾಽಪ್ಯನುಮತಂ ಪ್ರಿಯೇ ||10||
ಹೀಗೆ ಲೋಕವು ಪ್ರಾಣಿಗಳಿಲ್ಲದೆ ಕ್ಷಯವನ್ನು ಹೊಂದುತ್ತಿರಲು ಪಿತಾಮಹನಾದ ಬ್ರಹ್ಮನು ಅದಕ್ಕೆ ಪ್ರತಿಕಾರವನ್ನು ಮಾಡಲು ಬಯಸಿ ನನ್ನನ್ನು ಆ ಭೂತಗಳನ್ನು ನಿಗ್ರಹಿಸಲು ಸಮರ್ಥನೆಂದು ತಿಳಿದು ನನ್ನನ್ನು ಆ ಕಾರ್ಯದಲ್ಲಿ ಯೋಜಿಸಿದನು. ಪ್ರಿಯೆಯೇ, ಪ್ರಾಣಿಗಳ ಮೇಲಿನ ದಯೆಯಿಂದ ನಾನು ಆ ಕಾರ್ಯವನ್ನು ಅಂಗೀಕರಿಸಿದೆ.
ತಸ್ಮಾತ್ಸಂರಕ್ಷಿತಾ ದೇವಿ ಭೂತೇಭ್ಯಃ ಪ್ರಾಣಿನೋ ಭಯಾತ್ |
ಅಸ್ಮಾತ್ ಶ್ಮಶಾನಾನ್ಮೇಧ್ಯಂ ತು ನಾಸ್ತಿ ಕಿಂಚಿದನಿಂದಿತೇ |
ನಿಃಸಂಪಾತಂ ಮನುಷ್ಯಾಣಾಂ ತಸ್ಮಾಚ್ಛುಚಿತಮಂ ಸ್ಮೃತಮ್ ||11||
ಆದ್ದರಿಂದ ಎಲೌ ದೇವಿಯೇ, ಪ್ರಾಣಿಗಳನ್ನು ನಾನು ಭೂತಗಳಿಂದ ಉಂಟಾಗುವ ಭಯದಿಂದ ರಕ್ಷಿಸುತ್ತೇನೆ. ಎಲೌ ಅನಿಂದಿತೆಯೇ, ಈ ಸ್ಮಶಾನಕ್ಕಿಂತಲೂ ಮೇಧ್ಯವಾದುದು ಯಾವುದೂ ಇಲ್ಲ. ಇಲ್ಲಿ ಮನುಷ್ಯರು ಬರುವುದಿಲ್ಲ. ಆದ್ದರಿಂದ ಅತ್ಯಂತ ಶುಚಿ ಎಂದು ಹೇಳಲ್ಪಡುತ್ತದೆ.
ಭೂತಸೃಷ್ಟಿಂ ಚ ತಾಂ ಚಾಹಂ ಶ್ಮಶಾನೇ ಸನ್ನ್ಯವೇಶಯಮ್ |
ತತ್ರಸ್ಥಃ ಸರ್ವಲೋಕಾನಾಂ ವಿನಿಹನ್ಮಿ ಪ್ರಿಯೇ ಭಯಮ್ ||12||
ನಾನು ಆ ಭೂತಸೃಷ್ಟಿಯನ್ನೆಲ್ಲಾ ಸ್ಮಶಾನದಲ್ಲೇ ನಿಲ್ಲಿಸಿದೆನು. ಎಲೌ ಪ್ರಿಯೆಯೇ, ನಾನು ಅಲ್ಲಿದ್ದುಕೊಂಡೇ ಎಲ್ಲ ಲೋಕಗಳ ಭಯವನ್ನು ಪರಿಹರಿಸುತ್ತೇನೆ.
ನ ಚ ಭೂತಗಣೇನಾಹಂ ವಿನಾ ವಸಿತುಮುತ್ಸಹೇ |
ತಸ್ಮಾನ್ಮೇ ಸನ್ನಿವಾಸಾಯ ಶ್ಮಶಾನೇ ರೋಚತೇ ಮನಃ ||13||
ಭೂತಗಣಗಳನ್ನು ಬಿಟ್ಟು ನಾನು ವಾಸ ಮಾಡಲು ಇಷ್ಟಪಡುವುದಿಲ್ಲ. ಆದ್ದರಿಂದ ಅವುಗಳು ಇರುವ ಸ್ಮಶಾನದಲ್ಲಿ ವಾಸವನ್ನು ಮಾಡಲು ನನ್ನ ಮನಸ್ಸಿಗೆ ಸಂತೋಷವಾಗುತ್ತದೆ.
ಮೇಧ್ಯಕಾಮೈರ್ದ್ವಿಜೈರ್ನಿತ್ಯಂ ಮೇಧ್ಯಮಿತ್ಯಭಿಧೀಯತೇ |
ಆಚರದ್ಭಿರ್ವ್ರತಂ ನಿತ್ಯಂ ಮೋಕ್ಷಕಾಮೈಶ್ಚ ಸೇವ್ಯತೇ ||14||
ಪಾವಿತ್ರ್ಯವನ್ನು ಬಯಸಿದ ಬ್ರಾಹ್ಮಣರು ನಿತ್ಯವೂ ಆ ಸ್ಥಾನವನ್ನು ಪವಿತ್ರವೆಂದು ಹೇಳುತ್ತಾರೆ. ಆ ಸ್ಥಾನವು ಮುಮುಕ್ಷುಗಳಿಂದಲೂ ಮತ್ತು ವ್ರತವನ್ನು ಆಚರಿಸುವವರಿಂದಲೂ ನಿತ್ಯವೂ ಸೇವಿಸಲ್ಪಡುತ್ತದೆ.

ಸ್ಥಾನಂ ಮೇ ತತ್ರ ವಿಹಿತಂ ವೀರಸ್ಥಾನಮಿತಿ ಪ್ರಿಯೇ |
ಕಪಾಲಶತಸಂಪೂರ್ಣಂ ಭೀಮರೂಪಂ ಭಯಾನಕಮ್ ॥15॥
ಎಲೌ ಪ್ರಿಯೆಯೇ, ಅಲ್ಲಿ ನಾನು ವಾಸ ಮಾಡುವ ಪ್ರದೇಶಕ್ಕೆ ವೀರಸ್ಥಾನವೆಂದು ಹೆಸರು. ಅದು ನೂರಾರು ಶಿರಃಕಪಾಲಗಳಿಂದ ತುಂಬಿ ಭಯಂಕರವಾಗಿರುತ್ತದೆ.
ಮಧ್ಯಾಹ್ನೇ ಸಂಧ್ಯಯೋಸ್ತತ್ರ ನಕ್ಷತ್ರೇ ರುದ್ರದೈವತೇ |
ಆಯುಷ್ಕಾಮೈರಶುದ್ಧೈರ್ವಾ ನ ಗಂತವ್ಯಮಿತಿ ಸ್ಥಿತಿಃ ॥16॥
ಮಧ್ಯಾಹ್ನದಲ್ಲಿ, ಸಂಧ್ಯಾಕಾಲದಲ್ಲಿ ಮತ್ತು ರುದ್ರದೈವತಾಕ ನಕ್ಷತ್ರದಲ್ಲಿ ಆಯುಷ್ಕಾಮರಾದವರಾಗಲೀ, ಅಶುದ್ಧರಾಗಲೀ ಅಲ್ಲಿಗೆ ಹೋಗಬಾರದೆಂದು ಸ್ಥಿತಿ.
ಮದನ್ಯೇನ ನ ಶಕ್ಯಂ ಹಿ ನಿಹಂತುಂ ಭೂತಜಂ ಭಯಮ್ |
ತತ್ರಸ್ಥೋಽಹಂ ಪ್ರಜಾಃ ಸರ್ವಾಃ ಪಾಲಯಾಮಿ ದಿನೇದಿನೇ ॥17॥
ನನ್ನನ್ನು ಬಿಟ್ಟು ಬೇರೆ ಯಾವನೂ ಭೂತದಿಂದ ಉಂಟಾಗುವ ಭಯವನ್ನು ನಿವಾರಿಸಲಾರನು. ನಾನು ಅಲ್ಲಿಯೇ ಸ್ಮಶಾನದಲ್ಲಿಯೇ ಇದ್ದುಕೊಂಡು ಪ್ರಜೆಗಳನ್ನು ಪ್ರತಿದಿನವೂ ಪಾಲಿಸುತ್ತೇನೆ.
ಮನ್ನಿಯೋಗಾದ್ ಭೂತಸಂಘಾ ನ ಚ ಘ್ನಂತೀಹ ಕಿಂಚನ |
ತಸ್ಮಾಲ್ಲೋಕಹಿತಾರ್ಥಾಯ ಶ್ಮಶಾನೇ ರಮಯಾಮ್ಯಹಮ್ |
ಏತತ್ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥18॥
ನನ್ನ ಆದೇಶದಂತೆ ಭೂತಸಮೂಹಗಳು ಇಲ್ಲಿ ಯಾರನ್ನೂ ಕೊಲ್ಲುವುದಿಲ್ಲ. ಆದ್ದರಿಂದ ಲೋಕಹಿತಕ್ಕಾಗಿ ನಾನು ಸ್ಮಶಾನದಲ್ಲಿ ಸುಖವಾಗಿ ವಾಸಿಸುತ್ತೇನೆ. ನಿನಗೆ ಎಲ್ಲವನ್ನೂ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ದೇವದೇವೇಶ ತ್ರಿನೇತ್ರ ವೃಷಭಧ್ವಜ |
ಪಿಂಗಲಂ ವಿಕೃತಂ ಭಾತಿ ರೂಪಂ ತೇ ತು ಭಯಾನಕಮ್ ॥19॥
ಭಸ್ಮದಿಗ್ಧಂ ವಿರೂಪಾಕ್ಷಂ ತೀಕ್ಷ್ಣದಂಷ್ಟ್ರಂ ಜಟಾಕುಲಮ್ |
ವ್ಯಾಘ್ರೋರಗತ್ವಕ್ಸಂವೀತಂ ಕಪಿಲಶ್ಮಶ್ರುಸಂತತಮ್ ॥20॥
ರೌದ್ರಂ ಭಯಾನಕಂ ಘೋರಂ ಶೂಲಪಟ್ಟಸಸಂಯುತಮ್ |
ಕಿಮರ್ಥಮೀದೃಶಂ ರೂಪಂ ತನ್ಮೇ ಶಂಸಿತುಮರ್ಹಸಿ ॥21॥
ಉಮಾ ಭಗವಂತನೇ, ದೇವದೇವೇಶನೇ, ತ್ರಿನೇತ್ರನೇ, ವೃಷಧ್ವಜನೇ, ವಿಕೃತವಾದ ಪಿಂಗಲದ (ಕೆಂಪು-ಕಪ್ಪು ಬಣ್ಣ ಮಿಶ್ರಿತವಾದ) ನಿನ್ನ ರೂಪವು ಭಯಂಕರವಾಗಿದೆ. ಭಸ್ಮವನ್ನು ಲೇಪಿಸಿಕೊಂಡು, ವೀರೂಪವಾದ ಕಣ್ಣುಗಳನ್ನು ಹೊಂದಿ, ತೀಕ್ಷ್ಣವಾದ ದಂಷ್ಟ್ರಗಳನ್ನು ಹೊಂದಿ, ಬಹಳ ಜಟೆಗಳನ್ನು ಧರಿಸಿ, ವ್ಯಾಘ್ರ- ಸರ್ಪಗಳ ಚರ್ಮಗಳಿಂದ ಪರಿವೃತನಾಗಿ, ಕಪಿಲವರ್ಣದ ಮೀಸೆಗಳನ್ನು ಧರಿಸಿ, ಶೂಲ-ಪಟ್ಟಸ ಆಯುಧಗಳನ್ನು ಹಿಡಿದು ರೌದ್ರವೂ, ಘೋರವೂ, ಭಯಂಕರವೂ ಆಗಿದೆ. ನೀನು ಏತಕ್ಕೆ ಇಂತಹ ರೂಪವನ್ನು ಧರಿಸಿದ್ದೀಯೆ ಎಂದು ನನಗೆ ಹೇಳು.
ಮಹೇಶ್ವರಃ
ತದಹಂ ಕಥಯಿಷ್ಯಾಮಿ ಶೃಣು ತತ್ತ್ವಂ ಸಮಾಹಿತಾ |
ದ್ವಿವಿಧೋ ಲೌಕಿಕೋ ಭಾವಃ ಶೀತಮುಷ್ಣಮಿತಿ ಪ್ರಿಯೇ ॥22॥
ತಯೋರ್ವಿಗ್ರಥಿತಂ ಸರ್ವಂ ಸೌಮ್ಯಾಗ್ನೇಯಮಿದಂ ಜಗತ್ ॥23॥
ಮಹೇಶ್ವರ ಎಲೌ ಪ್ರಿಯೆಯೇ, ನಾನು ಅದನ್ನು ಹೇಳುವೆನು. ಸಮಾಧಾನದಿಂದ ತತ್ತ್ವವನ್ನು ಕೇಳು. ಲೋಕದಲ್ಲಿ ಶೀತ, ಉಷ್ಣ ಎಂದು ಎರಡು ಭಾವಗಳಿವೆ. ಒಂದು ಚಂದ್ರನಿಗೂ ಇನ್ನೊಂದು ಅಗ್ನಿಗೂ ಸಂಬಂಧಿಸಿದುದು. ಈ ಜಗತ್ತೆಲ್ಲವೂ ಆ ಎರಡು ಭಾವಗಳಿಂದ ವ್ಯಾಪಿಸಲ್ಪಟ್ಟಿವೆ.
ಸೌಮ್ಯತ್ವಂ ಸತತಂ ವಿಷ್ಣೌ ಮಯ್ಯಾಗ್ನೇಯಂ ಪ್ರತಿಷ್ಠಿತಮ್ |
ಅನೇನ ವಪುಷಾ ನಿತ್ಯಂ ಸರ್ವಲೋಕಾನ್ ಬಿಭರ್ಮ್ಯಹಮ್ ॥24॥
ಸೌಮ್ಯತ್ವವು ಸತತವಾಗಿ ವಿಷ್ಣುವಿನಲ್ಲಿಯೂ, ಅಗ್ನಿಸ್ವಭಾವವು ನನ್ನಲ್ಲಿಯೂ ಪ್ರತಿಷ್ಠಿತವಾಗಿದೆ. ಈ ರೂಪದಿಂದ ನಾನು ಯಾವಾಗಲೂ ಎಲ್ಲ ಲೋಕಗಳನ್ನೂ ಧರಿಸುತ್ತೇನೆ.
ರೌದ್ರಾಕೃತಿಂ ವಿರೂಪಾಕ್ಷಂ ಶೂಲಪಟ್ಟಸಸಂಯುತಮ್ |
ಆಗ್ನೇಯಮಿತಿ ಮೇ ರೂಪಂ ದೇವಿ ಲೋಕಹಿತೇ ರತಮ್ ॥25॥
ಎಲೌ ದೇವಿಯೇ, ಭಯಂಕರವಾದ ವಿರೂಪಾಕ್ಷವಾದ ಶೂಲಪಟ್ಟಸ ಧಾರಿಯಾದ ಈ ನನ್ನ ಅಗ್ನಿಸಂಬಂಧಿಯಾದ ರೂಪವು ಲೋಕಹಿತದಲ್ಲಿ ರತವಾಗಿರುತ್ತದೆ.
ಯದ್ಯಹಂ ವಿಪರೀತಃ ಸ್ಯಾಮೇತತ್ತ್ಯಕ್ತ್ವಾ ಶುಭಾನನೇ |
ತದೈವ ಸರ್ವಲೋಕಾನಾಂ ವಿಪರೀತಂ ಪ್ರವರ್ತತೇ ॥26॥
ಎಲೌ ಶುಭಾನನೆಯೇ, ನಾನು ಈ ರೂಪವನ್ನು ತ್ಯಜಿಸಿ ಬೇರೆ ರೂಪವನ್ನು ಹೊಂದಿದರೆ ಆಗ ಎಲ್ಲ ಲೋಕಗಳು ತಲೆಕೆಳಗಾಗುತ್ತವೆ.
ತಸ್ಮಾನ್ಮಯೇದಂ ಧ್ರಿಯತೇ ರೂಪಂ ಲೋಕಹಿತೈಷಿಣಾ |
ಇತಿ ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ॥27॥
ಆದ್ದರಿಂದ ಲೋಕಹಿತವನ್ನು ಬಯಸಿ ನಾನು ಈ ರೂಪವನ್ನು ಧರಿಸಿದ್ದೇನೆ. ಎಲೌ ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ

ಏನನ್ನು ಕೇಳಲು ಬಯಸುವಿ?
ಉಮಾ
ಭಗವನ್ ದೇವದೇವೇಶ ಶೂಲಪಾಣೇ ವೃಷಧ್ವಜ |
ಕಿಮರ್ಥಂ ಚಂದ್ರರೇಖಾ ತೇ ಶಿರೋಭಾಗೇ ವಿರೋಚತೇ |
ಶ್ರೋತುಮಿಚ್ಛಾಮ್ಯಹಂ ದೇವ ತನ್ಮೇ ಶಂಸಿತುಮರ್ಹಸಿ ॥28॥
ಉಮಾ ಭಗವಂತನೇ, ದೇವದೇವೇಶನೇ, ಶೂಲಪಾಣಿಯೇ, ವೃಷಧ್ವಜನೇ, ನಿನ್ನ ಶಿರಸ್ಸಿನಲ್ಲಿ ಚಂದ್ರರೇಖೆಯು ಏಕೆ ಶೋಭಿಸುತ್ತದೆ? ದೇವನೇ, ನಾನು ಇದನ್ನು ಕೇಳಲು ಬಯಸುತ್ತೇನೆ, ಅದನ್ನು ಹೇಳು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ |
ಪುರಾಽಹಂ ಕಾರಣಾದ್ ದೇವಿ ಕೋಪಯುಕ್ತಃ ಶುಚಿಸ್ಮಿತೇ |
ದಕ್ಷಯಜ್ಞವಧಾರ್ಥಾಯ ಭೂತಸಂಘಸಮಾವೃತಃ ॥29॥
ಮಹೇಶ್ವರ ಎಲೌ ಕಲ್ಯಾಣಿಯೇ, ಅದಕ್ಕೆ ಕಾರಣವನ್ನು ಹೇಳುತ್ತೇನೆ, ಕೇಳು. ಎಲೌ ಶುಚಿಸ್ಮಿತೆಯೇ, ನಾನು ಹಿಂದೆ ಒಂದು ನಿಮಿತ್ತದಿಂದ ದಕ್ಷಯಜ್ಞವನ್ನು ವಿನಾಶ ಮಾಡಲು ಕೋಪದಿಂದ ಕೂಡಿದವನಾಗಿ ಭೂತಸಮೂಹಗಳಿಂದ ಪರಿವೃತನಾಗಿದ್ದೆ.
ತಸ್ಮಿನ್ ಕ್ರತುವಧೇ ಘೋರೇ ಯಜ್ಞಭಾಗನಿಮಿತ್ತತಃ |
ದೇವಾ ವಿಭ್ರಂಶಿತಾಸ್ತೇ ವೈ ಯೇಷಾಂ ಭಾಗಃ ಕ್ರತೌ ಕೃತಃ ॥30॥
ಯಜ್ಞಭಾಗದ ನಿಮಿತ್ತವಾಗಿ ನಡೆದ ಆ ಘೋರವಾದ ಯಜ್ಞಧ್ವಂಸದಲ್ಲಿ ಯಾವ ದೇವತೆಗಳಿಗೆ ಯಜ್ಞಭಾಗವು ಕ್ಲೃಪ್ತವಾಗಿದ್ದಿತೋ ಆ ದೇವತೆಗಳು ನನ್ನಿಂದ ಘಾಸಿಗೊಳಿಸಲ್ಪಟ್ಟರು.
ಸೋಮಸ್ತತ್ರ ಮಯಾ ದೇವಿ ಕುಪಿತೇನ ಭೃಶಾರ್ದಿತಃ |
ಪಶ್ಯಂಶ್ಚಾನಪರಾಧೀ ಸನ್ ಪಾದಾಂಗುಷ್ಠೇನ ತಾಡಿತಃ ॥31॥
ಕೋಪಗೊಂಡ ನಾನು ಅಲ್ಲಿ ಚಂದ್ರನನ್ನು ಬಹಳವಾಗಿ ಹಿಂಸೆ ಮಾಡಿದೆ. ಅವನು ನಿರಪರಾಧಿಯೆಂದು ತಿಳಿದಿದ್ದರೂ ಅವನನ್ನು ನನ್ನ ಪಾದಾಂಗುಷ್ಠದಿಂದ ಒದ್ದೆ.
ತಥಾಪಿ ವಿನಿಕೃತೇನಾಹಂ ಸಾಮಪೂರ್ವಂ ಪ್ರಸಾದಿತಃ |
ತನ್ಮೇ ಚಿಂತಯತಶ್ಚಾಸೀತ್ ಪಶ್ಚಾತ್ತಾಪಃ ಪುರಾ ಪ್ರಿಯೇ ॥32॥
ಅವನಿಗೆ ನಾನು ಹೀಗೆ ಅಪಚಾರ ಮಾಡಿದ್ದರೂ ಅವನು ಶಾಂತವಾಗಿಯೇ ನನ್ನನ್ನು ಪ್ರಸನ್ನೀಕರಿಸಿದನು. ಎಲೌ ಪ್ರಿಯೆಯೇ, ಅದನ್ನು ಯೋಚಿಸಿದ ನನಗೆ ಪಶ್ಚಾತ್ತಾಪ ಉಂಟಾಯಿತು.
ತದಾಪ್ರಭೃತಿ ಸೋಮಂ ವೈ ಶಿರಸಾ ಧಾರಯಾಮ್ಯಹಮ್ |
ಏವಂ ಮೇ ಪಾಪಹಾನಿಸ್ತು ಭವೇದಿತಿ ಮತಿರ್ಮಮ |
ತದಾಪ್ರಭೃತಿ ವೈ ಸೋಮೋ ಮೂರ್ಧ್ನಿ ಸಂದೃಶ್ಯತೇ ಸದಾ ॥33॥
ಅಂದಿನಿಂದ ಆರಂಭಿಸಿ ನಾನು ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿದ್ದೇನೆ. ಹೀಗೆ ಮಾಡಿದರೆ ನನ್ನ ಪಾಪಹಾನಿಯಾದೀತು ಎಂದು ನನ್ನ ಅಭಿಪ್ರಾಯ. ಅಲ್ಲಿಂದ ಆರಂಭಿಸಿ ಚಂದ್ರನು ನನ್ನ ಶಿರಸ್ಸಿನಲ್ಲಿ ಕಾಣುತ್ತಾನೆ.
ನಾರದಃ
ಏವಂ ಬ್ರುವತಿ ದೇವೇಶೇ ವಿಸ್ಮಿತಾಃ ಪರಮರ್ಷಯಃ |
ವಾಗ್ಭಿಃ ಸಾಂಜಲಿಮಾಲಾಭಿರಭಿತುಷ್ಟುವುರೀಶ್ವರಮ್ ॥34॥
ನಾರದ ದೇವೇಶನಾದ ಶಂಕರನು ಹೀಗೆ ಹೇಳುತ್ತಿರಲು ವಿಸ್ಮಿತರಾದ ಪರಮರ್ಷಿಗಳು ಕೈಗಳನ್ನು ಮುಗಿದು ಈಶ್ವರನನ್ನು ಸ್ತೋತ್ರ ಮಾಡಿದರು.
ನಮಃ ಶಂಕರ ಸರ್ವೇಶ ನಮಃ ಸರ್ವಜಗದ್ಗುರೋ |
ನಮೋ ದೇವಾದಿದೇವಾಯ ನಮಃ ಶಶಿಕಲಾಧರ ॥35॥
ನಮೋ ಘೋರತರಾದ್‌ಘೋರ ನಮೋ ರುದ್ರ ಭಯಂಕರ |
ನಮಃ ಶಾಂತತರಾಚ್ಛಾಂತ ನಮಶ್ಚಂದ್ರಸ್ಯ ಪಾಲಕ ॥36॥
ನಮಃ ಸೋಮಾಯ ದೇವಾಯ ನಮಸ್ತುಭ್ಯಂ ಚತುರ್ಮುಖ |
ನಮೋ ಭೂತಪತೇ ಶಂಭೋ ಜಹ್ನುಕನ್ಯಾಂಬುಶೇಖರ ॥37॥
ನಮಸ್ತ್ರಿಶೂಲಹಸ್ತಾಯ ಪನ್ನಗಾಭರಣಾಯ ಚ |
ನಮೋಸ್ತು ವಿಷಮಾಕ್ಷಾಯ ದಕ್ಷಯಜ್ಞಪ್ರದಾಹಕ ॥38॥
ನಮೋಸ್ತು ಬಹುನೇತ್ರಾಯ ಲೋಕರಕ್ಷಣತತ್ಪರ |
ಅಹೋ ದೇವಸ್ಯ ಮಾಹಾತ್ಮ್ಯಂ ಮಹಾದೇವಸ್ಯ ವೈ ಕೃಪಾ |
ಏವಂ ಧರ್ಮಪರತ್ವಂ ಚ ದೇವದೇವಸ್ಯ ಚಾರ್ಹತಿ ॥39॥
ಶಂಕರನೇ ನಿನಗೆ ನಮಸ್ಕಾರ. ಸರ್ವೇಶನೇ, ಸರ್ವಜಗದ್ಗುರುವೇ ನಿನಗೆ ನಮಸ್ಕಾರ. ದೇವಾದಿದೇವನೇ ನಿನಗೆ ನಮಸ್ಕಾರ. ಚಂದ್ರಕಲಾಧರನೇ ನಿನಗೆ ನಮಸ್ಕಾರ. ಘೋರಕ್ಕಿಂತಲೂ ಘೋರನಾದವನೇ ನಿನಗೆ ನಮಸ್ಕಾರ. ಭಯಂಕರನೇ, ರುದ್ರನೇ ನಿನಗೆ ನಮಸ್ಕಾರ. ಶಾಂತಕ್ಕಿಂತಲೂ ಶಾಂತನಾದವನೇ ನಿನಗೆ ನಮಸ್ಕಾರ. ಚಂದ್ರನ ರಕ್ಷಕನೇ ನಿನಗೆ ನಮಸ್ಕಾರ. ಪಾರ್ವತೀ ಸಹಿತನಾದ ದೇವನೇ ನಿನಗೆ ನಮಸ್ಕಾರ. ಚತುರ್ಮುಖನೇ ನಿನಗೆ ನಮಸ್ಕಾರ. ಭೂತಪತಿಯೇ, ಶಂಭುವೇ, ಜಾಹ್ನವೀ ಜಲವನ್ನು ತಲೆಯಲ್ಲಿ

ಧರಿಸಿದವನೇ ನಿನಗೆ ನಮಸ್ಕಾರ. ತ್ರಿಶೂಲವನ್ನು ಹಿಡಿದವನೇ, ಸರ್ಪಾಭರಣನೇ ನಿನಗೆ ನಮಸ್ಕಾರ. ವಿರೂಪಾಕ್ಷನೇ, ದಕ್ಷಯಜ್ಞಭಂಜಕನೇ ನಿನಗೆ ನಮಸ್ಕಾರ. ಲೋಕರಕ್ಷಣ ತತ್ಪರನೇ, ಬಹುನೇತ್ರವುಳ್ಳವನೇ ನಿನಗೆ ನಮಸ್ಕಾರ. ಮಹಾದೇವನ ಮಹಿಮೆಯು ಮತ್ತು ಕೃಪೆಯು ಎಷ್ಟು ಆಶ್ಚರ್ಯಕರವಾದುದು. ದೇವದೇವನಾದ ಅವನೇ ಇಂತಹ ಧರ್ಮಪರತ್ವಕ್ಕೆ ಅರ್ಹನಾದವನು.
ಏವಂ ಬ್ರುವತ್ಸು ಮುನಿಷು ವಚೋ ದೇವ್ಯಬ್ರವೀದ್ ಹರಮ್ |
ಪ್ರೀತ್ಯರ್ಥಂ ಚ ಮುನೀನಾಂ ಸಾ ಕ್ಷಣಜ್ಞಾ ಪರಮಂ ಹಿತಮ್ ॥40॥
ಹೀಗೆ ಋಷಿಗಳು ಹೇಳುತ್ತಿರಲು ದೇವಿಯು ಋಷಿಗಳ ಸಂತೋಷಕ್ಕಾಗಿ ಸಂದರ್ಭವನ್ನು ತಿಳಿದು ಈಶ್ವರನನ್ನು ಕುರಿತು ಪರಮಹಿತವಾದ ಮಾತನ್ನು ಹೇಳಿದಳು.
ಉಮಾ
ಭಗವನ್ ದೇವದೇವೇಶ ಸರ್ವಲೋಕನಮಸ್ಕೃತ |
ಅಸ್ಯ ವೈ ಋಷಿಸಂಘಸ್ಯ ಮಮ ಚ ಪ್ರಿಯಕಾಮ್ಯಯಾ ॥41॥
ವರ್ಣಾಶ್ರಮಕೃತಂ ಧರ್ಮಂ ವಕ್ತುಮರ್ಹಸ್ಯಶೇಷತಃ |
ನ ತೃಪ್ತಿರಸ್ತಿ ದೇವೇಶ ಶ್ರವಣೀಯಂ ಹಿ ತೇ ವಚಃ ॥42॥
ಉಮಾ ಭಗವಂತನೇ, ದೇವದೇವೇಶನೇ, ಸರ್ವಲೋಕನಮಸ್ಕೃತನೇ, ಈ ಋಷಿಗಳ ಸಮೂಹಕ್ಕೆ ಮತ್ತು ನನಗೂ ಪ್ರಿಯವನ್ನು ಮಾಡಲು ಬಯಸಿ ವರ್ಣಾಶ್ರಮ ಧರ್ಮಗಳನ್ನು ಸಂಪೂರ್ಣವಾಗಿ ಹೇಳಬೇಕು. ದೇವೇಶನೇ, ನಿನ್ನ ಮಾತುಗಳಿಂದ ನನಗೆ ತೃಪ್ತಿಯಿಲ್ಲ. ಇನ್ನೂ ನಿನ್ನ ಮಾತುಗಳನ್ನು ಕೇಳಬೇಕಾಗಿದೆ.
ಸಧರ್ಮಚಾರಿಣೀ ಚೇಯಂ ಭಕ್ತಾ ಚೇಯಮಿತಿ ಪ್ರಭೋ |
ವಕ್ತುಮರ್ಹಸಿ ದೇವೇಶ ಲೋಕಾನಾಂ ಹಿತಕಾಮ್ಯಯಾ |
ಯಾಥಾತಥ್ಯೇನ ತತ್ಸರ್ವಂ ವಕ್ತುಮರ್ಹಸಿ ಶಂಕರ ॥43॥
ಎಲೈ ಪ್ರಭುವೇ, ದೇವೇಶನೇ, ಶಂಕರನೇ, ನಾನು ನಿನ್ನ ಸಹಧರ್ಮಿಣಿಯೆಂದೂ, ನಿನ್ನ ಭಕ್ತಳೆಂದೂ ತಿಳಿದು ನನ್ನ ಮತ್ತು ಲೋಕದ ಹಿತವನ್ನು ಬಯಸಿ ನೀನು ವರ್ಣಾಶ್ರಮ ಧರ್ಮಗಳನ್ನು ಯಥಾರ್ಥವಾಗಿ ಹೇಳಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ರುದ್ರರೂಪನಿಮಿತ್ತಕಥನಂ ನಾಮ ಚತುರ್ನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೈದನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ವರ್ಣಾಶ್ರಮಧರ್ಮ ಕಥನ.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಯತ್ತೇ ದೇವಿ ಮನಃಪ್ರಿಯಮ್ |
ಶೃಣು ತತ್ಸರ್ವಮಖಿಲಂ ಧರ್ಮಂ ವರ್ಣಾಶ್ರಮಾಶ್ರಿತಮ್ ॥1॥
ಮಹೇಶ್ವರ ದೇವಿಯೇ ಸಂತೋಷ. ನಿನ್ನ ಮನಸ್ಸಿಗೆ ಪ್ರಿಯವಾದುದನ್ನು ಹೇಳುವೆನು. ಎಲ್ಲ ವರ್ಣಾಶ್ರಮ ಸಂಬಂಧಿ ಧರ್ಮಗಳನ್ನೂ ಕೇಳು.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶುದ್ರಾಶ್ಚೇತಿ ಚತುರ್ವಿಧಮ್ |
ಬ್ರಾಹ್ಮಣಾ ವಿಹಿತಾಃ ಪೂರ್ವಂ ಲೋಕತಂತ್ರಮಭೀಪ್ಸತಾ |
ಕರ್ಮಾಣಿ ಚ ತದರ್ಹಾಣಿ ಶಾಸ್ತ್ರೇಷು ವಿಹಿತಾನಿ ವೈ ॥2॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ವರ್ಣಗಳು ನಾಲ್ಕು ವಿಧವಾದವುಗಳು. ಲೋಕತಂತ್ರವನ್ನು ನಡೆಸುವ ಉದ್ದೇಶದಿಂದ ಬ್ರಾಹ್ಮಣರು ಮೊದಲು ವಿಹಿತರಾದರು. ಅವರಿಗೆ ಯೋಗ್ಯವಾದ ಕರ್ಮಗಳು ಶಾಸ್ತ್ರಗಳಲ್ಲಿ ವಿಹಿತವಾಗಿವೆ.
ಯದಿ ಚೇದೇಕವರ್ಣಂ ಸ್ಯಾಜ್ಜಗತ್ ಸರ್ವಂ ವಿನಶ್ಯತಿ |
ಸಹೈವ ದೇವೈರ್ವರ್ಣಾನಿ ಚತ್ವಾರಿ ವಿಹಿತಾನ್ಯುತ ॥3॥
ಒಂದೇ ವರ್ಣವಿದ್ದರೆ ಜಗತ್ತೆಲ್ಲವೂ ನಾಶವನ್ನು ಹೊಂದುತ್ತದೆ. ಆದ್ದರಿಂದ ದೇವತೆಗಳು ಒಂದೇ ಕಾಲದಲ್ಲಿ ನಾಲ್ಕು ವರ್ಣಗಳನ್ನು ಜೊತೆಯಲ್ಲಿಯೇ ಸೃಷ್ಟಿಸಿದರು.
ಮುಖತೋ ಬ್ರಾಹ್ಮಣಾಃ ಸೃಷ್ಟಾಸ್ತಸ್ಮಾತ್ ತೇ ವಾಗ್ವಿಶಾರದಾಃ |
ಬಾಹುಭ್ಯಾಂ ಕ್ಷತ್ರಿಯಾಃ ಸೃಷ್ಟಾಸ್ತಸ್ಮಾತ್ ಬಾಹುಬಲಾನ್ವಿತಾಃ ॥4॥
ಬ್ರಾಹ್ಮಣರು ಮುಖದಿಂದ ಜನಿಸಿದರು. ಆದ್ದರಿಂದ ಅವರು ವಾಗ್ವಿಶಾರದರು. ಕ್ಷತ್ರಿಯರು ಬಾಹುಗಳಿಂದ ಜನಿಸಿದರು. ಆದ್ದರಿಂದ ಅವರು ಬಾಹುಬಲಾನ್ವಿತರು.
ಉದರಾದುದ್ಗತಾ ವೈಶ್ಯಾಸ್ತಸ್ಮಾದ್ವಾರ್ತೋಪಜೀವಿನಃ |
ಶೂದ್ರಾಶ್ಚ ಪಾದತಃ ಸೃಷ್ಟಾಸ್ತಸ್ಮಾತ್ ತೇ ಪರಿಚಾರಕಾಃ ॥5॥
ವೈಶ್ಯರು ಉದರದಿಂದ ಹೊರಬಂದರು. ಆದ್ದರಿಂದ ಅವರು ವಾರ್ತೆಯನ್ನು (ವಾಣಿಜ್ಯವನ್ನು) ಅವಲಂಬಿಸಿರುತ್ತಾರೆ. ಶೂದ್ರರು ಪಾದಗಳಿಂದ ಜನಿಸಿದರು. ಆದ್ದರಿಂದ ಅವರು ಪರಿಚಾರಕರು.

ತೇಷಾಂ ಧರ್ಮಾಂಶ್ಚ ಕರ್ಮಾಣಿ ಶೃಣು ದೇವಿ ಸಮಾಹಿತಾ |
ವಿಪ್ರಾಃ ಕೃತಾ ಭೂಮಿದೇವಾ ಲೋಕಾನಾಂ ಧಾರಣೇ ಕೃತಾಃ |
ತೇ ಕೈಶ್ಚಿನ್ನಾವಮಂತವ್ಯಾ ಬ್ರಾಹ್ಮಣಾ ಹಿತಮಿಚ್ಛುಭಿಃ ॥6॥
ದೇವಿಯೇ, ಅವರಿಗೆ ವಿಹಿತವಾದ ಕರ್ಮಗಳನ್ನು ಮತ್ತು ಧರ್ಮಗಳನ್ನು ಸಮಾಧಾನದಿಂದ ಕೇಳು. ಬ್ರಾಹ್ಮಣರು ಭೂಮಿದೇವತೆಗಳಾಗಿ ಮಾಡಲ್ಪಟ್ಟರು. ಲೋಕದ ಧಾರಣೆಗಾಗಿ ಅವರು ಹಾಗೆ ಮಾಡಲ್ಪಟ್ಟರು. ತಮ್ಮ ಹಿತವನ್ನು ಬಯಸುವ ಯಾರೂ ಬ್ರಾಹ್ಮಣರಿಗೆ ಅವಮಾನವನ್ನು ಮಾಡಬಾರದು.
ಯದಿ ತೇ ಬ್ರಾಹ್ಮಣಾ ನ ಸ್ಯುರ್ದಾನಯೋಗವಹಾಃ ಸದಾ |
ಉಭಯೋರ್ಲೋಕಯೋರ್ದೇವಿ ಸ್ಥಿತಿರ್ನ ಸ್ಯಾತ್ಸಮಾಸತಃ ॥7॥
ಒಂದು ಪಕ್ಷ ದಾನವನ್ನೂ, ಯೋಗವನ್ನೂ ಪ್ರವರ್ತಿಸುವ ಬ್ರಾಹ್ಮಣರು ಇಲ್ಲದಿದ್ದರೆ ಎಲೌ ದೇವಿಯೇ, ಈ ಲೋಕ ಮತ್ತು ಪರಲೋಕಗಳು ಉಳಿಯುತ್ತಿರಲೇ ಇಲ್ಲ.
ಲೋಕೇಷು ದುರ್ಲಭಂ ಕಿಂತು ಬ್ರಾಹ್ಮಣತ್ವಮಿತಿ ಸ್ಮೃತಮ್ |
ಅಬುಧೋ ವಾ ದರಿದ್ರೋ ವಾ ಪೂಜನೀಯಃ ಸದೈವ ಸಃ ॥8॥
ಲೋಕದಲ್ಲಿ ಬ್ರಾಹ್ಮಣತ್ವವು ಬಹಳ ದುರ್ಲಭವಾದುದೆಂದು ಹೇಳುತ್ತಾರೆ. ಅವನು ವಿದ್ಯಾವಂತನಾಗದಿದ್ದರೂ, ದರಿದ್ರನಾದರೂ ಯಾವಾಗಲೂ ಅವನನ್ನು ಪೂಜಿಸಬೇಕು.
ಬ್ರಾಹ್ಮಣಾನ್ ಯೋಽವಮನ್ಯೇತ ನಿಂದಯೇತ್ ಕ್ರೋಶಯೇಚ್ಚ ವಾ |
ಪ್ರಹರೇತ ಹರೇದ್ವಾಪಿ ಧನಂ ತೇಷಾಂ ನರಾಧಮಃ ॥9॥
ಕಾರಯೇದ್ಧೀನಕರ್ಮಾಣಿ ಕಾಮಲೋಭವಿಮೋಹನಾತ್ |
ಸ ಚ ಮಾಮವಮನ್ಯೇತ ಮಾಂ ಕ್ರೋಶತಿ ಚ ನಿಂದತಿ ॥10॥
ಮಾಮೇವ ಪ್ರಹರೇನ್ಮೂಢೋ ಮದ್ಧನಸ್ಯಾಪಹಾರಕಃ |
ಮಾಮೇವ ಪ್ರೇಕ್ಷಣಂ ಕೃತ್ವಾ ನಿಂದತೇ ಮೂಢಚೇತನಃ ॥11॥
ಬ್ರಾಹ್ಮಣರಿಗೆ ಯಾವ ನರಾಧಮನು ಅವಮಾನ ಮಾಡುತ್ತಾನೆಯೋ, ನಿಂದಿಸುತ್ತಾನೆಯೋ ಅಥವಾ ಕಿರುಚುತ್ತಾನೆಯೋ, ಹೊಡೆಯುತ್ತಾನೆಯೋ ಅಥವಾ ಅವನ ಧನವನ್ನು ಅಪಹರಿಸುತ್ತಾನೆಯೋ ಅಥವಾ ಕಾಮಲೋಭಗಳಿಗೆ ವಶನಾಗಿ ಅವರಿಂದ ನೀಚಕರ್ಮಗಳನ್ನು ಮಾಡಿಸುತ್ತಾನೆಯೋ ಅವನು ನನ್ನನ್ನೇ ಅವಮಾನ ಮಾಡುತ್ತಾನೆ, ನನ್ನನ್ನೇ ಕುರಿತು ನಿಂದಿಸುತ್ತಾನೆ. ಮೂಢನಾದ ಅವನು ನನ್ನನ್ನೇ ಹೊಡೆಯುತ್ತಾನೆ. ನನ್ನ ಧನವನ್ನೇ ಅಪಹರಿಸುತ್ತಾನೆ. ನನ್ನನ್ನೇ ದುರುಗುಟ್ಟುಕೊಂಡು ನೋಡಿ ಮೂಢನಾದ ಅವನು ನಿಂದಿಸುತ್ತಾನೆ.
ಸ್ವಾಧ್ಯಾಯೋ ಯಜನಂ ದಾನಂ ತಸ್ಯ ಧರ್ಮ ಇತಿ ಸ್ಥಿತಿಃ |
ಕರ್ಮಾಣ್ಯಧ್ಯಾಪನಂ ಚೈವ ಯಾಜನಂ ಚ ಪ್ರತಿಗ್ರಹಃ |
ಸತ್ಯಂ ಶಾಂತಿಸ್ತಪಃ ಶೌಚಂ ತಸ್ಯ ಧರ್ಮಃ ಸನಾತನಃ ॥12॥
ಸ್ವಾಧ್ಯಾಯ, ಯಜನ ಮತ್ತು ದಾನಗಳು ಅವನ ಧರ್ಮ, ಸತ್ಯ, ಶಾಂತಿ, ತಪಸ್ಸು, ಶೌಚ ಎಂಬುವು ಅವನ ಕರ್ಮಗಳು. ಅಧ್ಯಾಪನ, ಯಾಜನ ಮತ್ತು ಪ್ರತಿಗ್ರಹ ಇವುಗಳು ಅವನಿಗೆ ಸನಾತನವಾದ ಧರ್ಮಗಳು.
ವಿಕ್ರಯೋ ರಸಧಾನ್ಯಾನಾಂ ಬ್ರಾಹ್ಮಣಸ್ಯ ವಿಗರ್ಹಿತಃ |
ಅನಾಪದಿ ಚ ಶೂದ್ರಾನ್ನಂ ವೃಷಲೀಸಂಗ್ರಹಸ್ತಥಾ ॥13॥
ರಸಗಳ ಮತ್ತು ಧಾನ್ಯಗಳ ವಿಕ್ರಯವು ಬ್ರಾಹ್ಮಣರಿಗೆ ನಿಂದಿತವಾದುದು. ಆಪತ್ತು ಇಲ್ಲದಿರುವಾಗ ಅವನು ಶೂದ್ರಾನ್ನವನ್ನಾಗಲೀ, ಶೂದ್ರಸ್ತ್ರೀಯನ್ನಾಗಲೀ ಸೇವಿಸಬಾರದು.
ತಪ ಏವ ಸದಾ ಧರ್ಮೋ ಬ್ರಾಹ್ಮಣಸ್ಯ ನ ಸಂಶಯಃ |
ಸ ತು ಧರ್ಮಾರ್ಥಮುತ್ಪನ್ನಃ ಪೂರ್ವಂ ಧಾತ್ರಾ ತಪೋಬಲಾತ್ ॥14॥
ಬ್ರಾಹ್ಮಣನಿಗೆ ಯಾವಾಗಲೂ ತಪಸ್ಸೇ ಧರ್ಮ. ಇದರಲ್ಲಿ ಸಂಶಯವಿಲ್ಲ. ಬ್ರಹ್ಮದೇವರು ತಮ್ಮ ತಪೋಬಲದಿಂದ ಧರ್ಮವನ್ನು ಸಂಪಾದಿಸುವುದಕ್ಕಾಗಿಯೇ ಬ್ರಾಹ್ಮಣನನ್ನು ಮೊದಲು ಸೃಷ್ಟಿಸಿದ್ದಾರೆ.
ತಸ್ಯೋಪನಯನಂ ಧರ್ಮೋ ನಿತ್ಯಂ ಚೋದಕಧಾರಣಮ್ |
ರಹಸ್ಯಶ್ರವಣಂ ಧರ್ಮೋ ದೇವವ್ರತನಿಷೇವಣಮ್ ॥15॥
ಅವನಿಗೆ ಉಪನಯನ, ಜಲಸಹಿತವಾದ ಕಮಂಡಲುವಿನ ಧಾರಣ, ಉಪನಿಷತ್ ಶ್ರವಣ ಮತ್ತು ದೇವತಾವ್ರತಗಳ ಆಚರಣೆ - ಇವು ಧರ್ಮಗಳು.
ಅಗ್ನಿಕಾರ್ಯಂ ಪರೋ ಧರ್ಮೋ ನಿತ್ಯಂ ಯಜ್ಞೋಪವೀತಿತಾ |
ಶೂದ್ರಾನ್ನವರ್ಜನಂ ಧರ್ಮೋ ಧರ್ಮಃ ಸತ್ಪಥಸೇವನಮ್ |
ಧರ್ಮೋ ನಿತ್ಯೋಪವಾಸಿತ್ವಂ ಬ್ರಹ್ಮಚರ್ಯಂ ಪರಂ ತಥಾ ॥16॥
ಅಗ್ನಿಕಾರ್ಯವು ಶ್ರೇಷ್ಠವಾದ ಧರ್ಮ. ಯಾವಾಗಲೂ ಯಜ್ಞೋಪವೀತ ಹಾಕಿಕೊಂಡಿರುವುದು, ಶೂದ್ರಾನ್ನ ಪರಿತ್ಯಾಗ, ಸನ್ಮಾರ್ಗ ಸೇವನೆ, ನಿತ್ಯೋಪವಾಸ ಮತ್ತು ಶ್ರೇಷ್ಠವಾದ ಬ್ರಹ್ಮಚರ್ಯ - ಇವು ಅವನ ಧರ್ಮಗಳು.
ಅಮೃತಾಶ್ಯಂ ಪರೋ ಧರ್ಮೋ ಗೃಹಪುಷ್ಪಬಲಿಸ್ತಥಾ |
ಗೃಹಸಮ್ಮಾರ್ಜನಂ ಧರ್ಮ ಆಲೇಪನವಿಧಿಸ್ತಥಾ ॥17॥
ಅಮೃತಾನ್ನ ಭೋಜನ ಅವನಿಗೆ ಶ್ರೇಷ್ಠವಾದ ಧರ್ಮ. ಗೃಹದಲ್ಲಿ ಪುಷ್ಪಗಳಿಂದ ಪೂಜಿಸುವುದು, ಮನೆಯನ್ನು ಸಾರಿಸಿ ಕಾರಣೆ

ತೆಗೆಯುವುದು ಅವನ ಧರ್ಮ.
ಅತಿಥಿವ್ರತತಾ ಧರ್ಮೋ ಧರ್ಮಸ್ತ್ರೇತಾಗ್ನಿಧಾರಣಮ್ |
ಇಷ್ಟಿರ್ವಾ ಪಶುಬಂಧಾಶ್ಚ ವಿಧಿಪೂರ್ವಂ ಪರಂ ತಪಃ ॥18॥
ಅತಿಥಿವ್ರತ, ತ್ರೇತಾಗ್ನಿಧಾರಣ, ಇಷ್ಟಿಗಳು ಅಥವಾ ಪಶುಬಂಧಗಳು, ವಿಧಿ ಪೂರ್ವಕವಾದ ತಪಸ್ಸು ಇವೂ ಅವನ ಧರ್ಮಗಳು.
ದಂಪತ್ಯೋಃ ಸಮಶೀಲತ್ವಂ ಧರ್ಮೋ ವೈ ಗೃಹಮೇಧಿನಾಮ್ |
ಏವಂ ದ್ವಿಜನ್ಮನೋ ಧರ್ಮೋ ಗಾರ್ಹಸ್ಥ್ಯೇ ಧರ್ಮಧಾರಣಮ್ ॥19॥
ದಂಪತಿಗಳ ಸಮಶೀಲತ್ವವು ಗೃಹಸ್ಥರ ಧರ್ಮ. ಹೀಗೆ ಗಾರ್ಹಸ್ಥ್ಯದಲ್ಲಿ ಧರ್ಮವನ್ನು ಆಚರಿಸುವುದು ಬ್ರಾಹ್ಮಣನ ಧರ್ಮ.
ಯಸ್ತು ಕ್ಷತ್ರಗತೋ ಧರ್ಮಸ್ತ್ವಯಾ ದೇವಿ ಪ್ರಚೋದಿತಃ |
ತಮಹಂ ತೇ ಪ್ರವಕ್ಷ್ಯಾಮಿ ಶೃಣು ದೇವಿ ಸಮಾಹಿತಾ ॥20॥
ಎಲೌ ದೇವಿಯೇ, ನೀನು ಕ್ಷತ್ರಿಯಧರ್ಮವನ್ನು ಕುರಿತು ಕೇಳಿದೆಯಷ್ಟೆ? ಅದನ್ನು ನಾನು ಹೇಳುವೆನು, ಸಮಾಧಾನದಿಂದ ಕೇಳು.
ಕ್ಷತ್ರಿಯಾಸ್ತು ತಥಾ ದೇವಿ ಪ್ರಜಾನಾಂ ಪಾಲನೇ ಸ್ಮೃತಾಃ |
ಯದಿ ನ ಕ್ಷತ್ರಿಯೋ ಲೋಕೇ ಜಗತ್ ಸ್ಯಾದಧರೋತ್ತರಮ್ ॥21॥
ಎಲೌ ದೇವಿಯೇ, ಕ್ಷತ್ರಿಯರು ಪ್ರಜಾಪಾಲನೆಯಲ್ಲಿ ವಿಹಿತರಾಗಿದ್ದಾರೆ. ಲೋಕದಲ್ಲಿ ಕ್ಷತ್ರಿಯರಿಲ್ಲದಿದ್ದರೆ ಎಲ್ಲವೂ ತಲೆಕೆಳಗಾಗುತ್ತಿದ್ದಿತು.
ರಕ್ಷಣಾತ್ ಕ್ಷತ್ರಿಯೈರೇವ ಜಗದ್ ಭವತಿ ಶಾಶ್ವತಮ್ |
ತಸ್ಯಾಪ್ಯಧ್ಯಯನಂ ದಾನಂ ಯಜನಂ ಧರ್ಮತಃ ಸ್ಮೃತಮ್ ॥22॥
ಕ್ಷತ್ರಿಯರು ರಕ್ಷಣೆ ಮಾಡುವ ಕಾರಣದಿಂದಲೇ ಜಗತ್ತು ಸರಿಯಾಗಿ ನಡೆದುಕೊಂಡು ಹೋಗುತ್ತಿದೆ. ಅವನಿಗೂ ಅಧ್ಯಯನ, ದಾನ ಮತ್ತು ಯಜನಗಳು ಧರ್ಮಗಳು.
ದೀನಾನಾಂ ರಕ್ಷಣಂ ಚೈವ ಪಾಪಾನಾಮನುಶಾಸನಮ್ |
ಸತಾಂ ಸಂಪೋಷಣಂ ಚೈವ ಕರಷಡ್‌ಭಾಗವರ್ಜಿತಮ್ ॥23॥
ದೀನರ ರಕ್ಷಣೆ, ಅಪರಾಧಿಗಳ ಶಿಕ್ಷೆ, ಸಜ್ಜನರ ಪೋಷಣೆ, ಆದಾಯದ ಆರನೆಯ ಒಂದು ಭಾಗದಿಂದ ಜೀವನ- ಇವು ಅವನ ಧರ್ಮಗಳು.
ಉತ್ಸಾಹಃ ಶಸ್ತ್ರಜೀವಿತ್ವಂ ತಸ್ಯ ಧರ್ಮಾಃ ಸನಾತನಾಃ |
ಭೃತ್ಯಾನಾಂ ಭರಣಂ ಧರ್ಮಃ ಕೃತೇ ಕರ್ಮಣ್ಯಮೋಘತಾ ॥24॥
ಉತ್ಸಾಹ, ಶಸ್ತ್ರದಿಂದ ಜೀವಿಸುವುದು, ಸೇವಕರನ್ನು ಪೋಷಿಸುವುದು, ವ್ಯರ್ಥವಾದ ಕರ್ಮವನ್ನು ಮಾಡದಿರುವುದು - ಇವು ಅವನ ಸನಾತನ ಧರ್ಮಗಳು.
ಸಮ್ಯಗ್ ರಣಯುತೋ ಧರ್ಮೋ ಧರ್ಮಃ ಪೌರಹಿತಕ್ರಿಯಾ |
ವ್ಯವಹಾರಸ್ಥಿತಿರ್ನಿತ್ಯಂ ಗುಣಮೇತನ್ಮಹೀಪತೇಃ ॥25॥
ಚೆನ್ನಾಗಿ ಧರ್ಮಯುದ್ಧವನ್ನು ಮಾಡುವುದು. ಪೌರರಿಗೆ ಹಿತವನ್ನು ಮಾಡುವುದು. ಒಳ್ಳೆಯ ವ್ಯವಹಾರಗಳನ್ನು ಮಾಡುವುದು- ಇವು ರಾಜನ ಧರ್ಮಗಳು.
ಆರ್ತಹಸ್ತಪ್ರದೋ ರಾಜಾ ಧರ್ಮಂ ಪ್ರಾಪ್ನೋತ್ಯನುತ್ತಮಮ್ |
ಏವಂ ತೇ ವಿಹಿತಾಃ ಪೂರ್ವೈರ್ಧರ್ಮಾಃ ಕರ್ಮವಿಧಾನತಃ ॥26॥
ಆರ್ತರಿಗೆ ಕೈ ನೀಡಿ ರಕ್ಷಿಸುವರಾಜನು ಶ್ರೇಷ್ಠವಾದ ಧರ್ಮವನ್ನು ತಿಳಿಯುತ್ತಾನೆ. ಹೀಗೆ ಪೂರ್ವಜರು ಕರ್ಮಕ್ಕೆ ಅನುಗುಣವಾಗಿ ಕ್ಷತ್ರಿಯ ಧರ್ಮವನ್ನು ವಿಧಾನ ಮಾಡಿದ್ದಾರೆ.
ತಥೈವ ದೇವಿ ವೈಶ್ಯಾಶ್ಚ ಲೋಕಯಾತ್ರಾಹಿತಾಃ ಸ್ಮೃತಾಃ |
ಅನ್ಯೇ ತಾನುಪಜೀವಂತಿ ಪ್ರತ್ಯಕ್ಷಫಲದಾ ಹಿ ತೇ ॥27॥
ಎಲೌ ದೇವಿಯೇ, ಹಾಗೆಯೇ ವೈಶ್ಯರು ಲೋಕಯಾತ್ರೆಗೆ ಹಿತರು ಎಂದು ಹೇಳಲ್ಪಡುತ್ತಾರೆ. ಉಳಿದವರು ಅವರನ್ನು ಉಪಜೀವಿಸುತ್ತಾರೆ. ವೈಶ್ಯರು ಪ್ರತ್ಯಕ್ಷವಾಗಿ ಫಲವನ್ನು ಕೊಡುವವರು.
ಯದಿ ನ ಸ್ಯುಸ್ತಥಾ ವೈಶ್ಯಾ ನ ಭವೇಯುಸ್ತಥಾ ಪರೇ |
ತೇಷಾಮಧ್ಯಯನಂ ದಾನಂ ಯಜನಂ ಧರ್ಮ ಉಚ್ಯತೇ ॥28॥
ವೈಶ್ಯರು ಇಲ್ಲದಿದ್ದರೆ ಉಳಿದವರೂ ಇರಲಾರರು. ಅವರಿಗೂ ಅಧ್ಯಯನ, ದಾನ ಮತ್ತು ಯಜನಗಳು ಧರ್ಮವೆಂದು ಹೇಳಲ್ಪಡುತ್ತವೆ.
ವೈಶ್ಯಸ್ಯ ಸತತಂ ಧರ್ಮಃ ಪಾಶುಪಾಲ್ಯಂ ಕೃಷಿಸ್ತಥಾ |
ಅಗ್ನಿಹೋತ್ರಪರಿಸ್ಪಂದಾಸ್ತ್ರಯೋ ವರ್ಣಾ ದ್ವಿಜಾತಯಃ ॥29॥
ವೈಶ್ಯನಿಗೆ ಪಶುಪಾಲನೆ ಮತ್ತು ಕೃಷಿಯು ಸತತವಾದ ಧರ್ಮ. ಅಗ್ನಿಹೋತ್ರದ ಕ್ರಿಯೆಯನ್ನು ಮಾಡುವ ಮೂರು ವರ್ಣಗಳೂ ದ್ವಿಜಾತಿಗಳು ಎನಿಸಿಕೊಳ್ಳುತ್ತವೆ.
ವಾಣಿಜ್ಯಂ ಸತ್ಪಥೇ ಸ್ಥಾನಮಾತಿಥೇಯಂ ಸದಾ ಭವೇತ್ |
ವಿಪ್ರಾಣಾಂ ಸ್ವಾಗತಂ ನ್ಯಾಯೋ ವೈಶ್ಯಧರ್ಮಃ ಸನಾತನಃ ॥30॥
ವೈಶ್ಯರಿಗೆ ವಾಣಿಜ್ಯ, ಸನ್ಮಾರ್ಗದಲ್ಲಿ ಸ್ಥಿತಿ ಮತ್ತು ಅತಿಥಿ ಪೂಜೆಯು ಯಾವಾಗಲೂ ಇರಬೇಕು. ವಿಪ್ರರಿಗೆ ಸ್ವಾಗತವನ್ನು ಮಾಡುವುದು ಸನಾತನವಾದ ನ್ಯಾಯವಾದ ವೈಶ್ಯಧರ್ಮ.
ತಿಲಗಂಧರಸಾಶ್ಚೈವ ನ ವಿಕ್ರೇಯಾಃ ಕಥಂಚನ |
ವಣಿಕ್ಪಥಮುಪಾಸದ್ಭಿರ್ವೈಶ್ಯೈರ್ವೈಶ್ಯಪಥಿ ಸ್ಥಿತೈಃ ॥31॥

ತಮ್ಮ ಧರ್ಮದಲ್ಲಿದ್ದು ವ್ಯಾಪಾರಮಾರ್ಗದಲ್ಲಿರುವ ವೈಶ್ಯರು ತಿಲ-ಗಂಧ ಮತ್ತು ರಸಪದಾರ್ಥಗಳನ್ನು ಮಾರಬಾರದು.
ಸರ್ವಾತಿಥ್ಯಂ ತ್ರಿವರ್ಗಸ್ಯ ಯಥಾಶಕ್ತಿ ದಿವಾನಿಶಮ್ |
ಏವಂ ತೇ ವಿಹಿತಾ ದೇವಿ ಲೋಕಯಾತ್ರಾ ಸ್ವಯಂಭುವಾ ॥32॥
ಸರ್ವಾತಿಥ್ಯ, ಹಗಲೂ-ರಾತ್ರಿಯೂ ಧರ್ಮಾರ್ಥಕಾಮಗಳ ಯಥಾಶಕ್ತಿ ಸೇವನೆ ಇವು ಬ್ರಹ್ಮದೇವರಿಂದ ಲೋಕಯಾತ್ರೆಗೆ ಕಾರಣವಾದ ವೈಶ್ಯಧರ್ಮಗಳೆಂದು ಹೇಳಲ್ಪಡುತ್ತವೆ.
ತಥೈವ ಶೂದ್ರಾ ವಿಹಿತಾಃ ಸರ್ವಧರ್ಮಪ್ರಸಾಧಕಾಃ |
ಶೂದ್ರಾಶ್ಚ ಯದಿ ತೇ ನ ಸ್ಯುಃ ಕರ್ಮಕರ್ತಾ ನ ವಿದ್ಯತೇ ॥33॥
ಹಾಗೆಯೇ ಶೂದ್ರರು ಎಲ್ಲ ಧರ್ಮಗಳನ್ನೂ ಸಾಧಿಸುವವರೆಂದು ಹೇಳಲ್ಪಡುತ್ತಾರೆ. ಶೂದ್ರರಿಲ್ಲದಿದ್ದರೆ ಕರ್ಮವನ್ನು ಮಾಡುವವರೇ ಇರುತ್ತಿರಲಿಲ್ಲ.
ತ್ರಯಃ ಪೂರ್ವೇ ಶೂದ್ರಮೂಲಸ್ತಸ್ಮಾತ್ ಕರ್ಮಕರಾಃ ಸ್ಮೃತಾಃ |
ಬ್ರಾಹ್ಮಣಾದಿಷು ಶುಶ್ರೂಷಾ ದಾಸಧರ್ಮ ಇತಿ ಸ್ಮೃತಃ ॥34॥
ಮೊದಲಿನ ಮೂರು ವರ್ಣಗಳು ಶೂದ್ರರನ್ನು ಅವಲಂಬಿಸಿವೆ. ಆದ್ದರಿಂದ ಶೂದ್ರರು ಕರ್ಮಕರರು ಎಂದು ಹೇಳಲ್ಪಡುತ್ತಾರೆ. ಬ್ರಾಹ್ಮಣಾದಿಗಳ ಸೇವೆಯು ಅವರಿಗೆ ವಿಹಿತವಾದ ದಾಸಧರ್ಮ.
ವಾರ್ತಾ ಚ ಕಾರುಕರ್ಮಾಣಿ ಶಿಲ್ಪಂ ನಾಟ್ಯಂ ತಥೈವ ಚ |
ಅಹಿಂಸಕಃ ಶುಭಾಚಾರೋ ದೈವತದ್ವಿಜವಂದಕಃ ॥35॥
ಶೂದ್ರೋ ಧರ್ಮಫಲೈರಿಷ್ಟೈಃ ಸ್ವಧರ್ಮೇಣೋಪಪದ್ಯತೇ |
ಏವಮಾದಿ ತಥಾಽನ್ಯಚ್ಚ ಶೂದ್ರಕರ್ಮ ಇತಿ ಸ್ಮೃತಃ॥36॥
ವ್ಯಾಪಾರ, ಕಮ್ಮಾರ ಮೊದಲಾದವರ ಕೆಲಸ, ಕುಶಲಕರ್ಮ, ನಾಟ್ಯ, ಅಹಿಂಸೆ, ಶುಭಾಚಾರ, ದೈವ-ದ್ವಿಜರ ವಂದನೆ ಇವು ಮತ್ತು ಇನ್ನೂ ಕೆಲವು ಶೂದ್ರಕರ್ಮಗಳೆಂದು ಹೇಳಲ್ಪಡುತ್ತವೆ. ಶೂದ್ರನು ತನ್ನ ಧರ್ಮವನ್ನು ಆಚರಣೆ ಮಾಡಿದರೆ ತನಗೆ ಇಷ್ಟವಾದ ಧರ್ಮಫಲವನ್ನು ಪಡೆಯುತ್ತಾನೆ.
ತೇಽಪ್ಯೇವಂ ವಿಹಿತಾ ಲೋಕೇ ಕರ್ಮಯೋಗಾಃ ಶುಭಾನನೇ ॥37॥
ಎಲೌ ಶುಭಾನನೆಯೇ, ಶೂದ್ರರೂ ಸಹ ಲೋಕದಲ್ಲಿ ಕರ್ಮಯೋನಿಗಳಾಗಿ ಹೇಳಲ್ಪಟ್ಟಿದ್ದಾರೆ.
ಏವಂ ಚತುರ್ಣಾಂ ವರ್ಣಾನಾಂ ಪುಣ್ಯಲೋಕಾಃ ಪರತ್ರ ಚ |
ವಿಹಿತಾಶ್ಚ ತಥಾ ದೃಷ್ಟ್ವಾ ಯಥಾವದ್ಧರ್ಮಚಾರಿಣಮ್ ॥38॥
ಹೀಗೆ ತಮ್ಮ ಧರ್ಮವನ್ನು ಆಚರಿಸುವ ನಾಲ್ಕು ವರ್ಣದವರಿಗೂ ಪರಲೋಕದಲ್ಲಿ ಪುಣ್ಯಸ್ಥಾನಗಳು ವಿಹಿತವಾಗಿವೆ ಎಂಬುದನ್ನು ಚೆನ್ನಾಗಿ ಧರ್ಮಾಚರಣೆಯನ್ನು ಮಾಡುವವರು ತಿಳಿದಿದ್ದಾರೆ.
ಏಷ ವರ್ಣಾಶ್ರಯೋ ಧರ್ಮಃ ಕರ್ಮ ಚೈವ ತದರ್ಪಣಮ್ |
ಕಥಿತಂ ಶ್ರೋತುಕಾಮಾಯಾಃ ಕಿಂ ಭೂಯಃ ಶ್ರೋತುಮಿಚ್ಛಸಿ ॥39॥
ಕೇಳಲು ಬಯಸಿದ ನಿನಗೆ ಈ ವರ್ಣಧರ್ಮವನ್ನು ಮತ್ತು ಅದಕ್ಕೆ ಸಂಬಂಧಿಸಿದ ಕರ್ಮವನ್ನು ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ದೇವದೇವೇಶ ನಮಸ್ತೇ ವೃಷಭಧ್ವಜ |
ಶ್ರೋತುಮಿಚ್ಛಾಮ್ಯಹಂ ದೇವ ಧರ್ಮಮಾಶ್ರಮಿಣಾಂ ವಿಭೋ ॥40॥
ಉಮಾ ಭಗವಂತನೇ, ದೇವದೇವೇಶನೇ, ವೃಷಭಧ್ವಜನೇ ನಿನಗೆ ನಮಸ್ಕಾರ. ವಿಭುವೇ, ದೇವನೇ, ನಾನು ಆಶ್ರಮಿಗಳ ಧರ್ಮವನ್ನು ಕೇಳಲು ಬಯಸುತ್ತೇನೆ.
ಮಹೇಶ್ವರಃ
ಅಥಾಽಽಶ್ರಮಗತಂ ಧರ್ಮಂ ಶೃಣು ದೇವಿ ಸಮಾಹಿತಾ |
ಆಶ್ರಮಾಣಾಂ ತು ಯೋ ಧರ್ಮಃ ಕ್ರಿಯತೇ ಬ್ರಹ್ಮವಾದಿಭಿಃ ॥41॥
ಮಹೇಶ್ವರ ದೇವಿಯೇ, ಇನ್ನು ಬ್ರಹ್ಮವಾದಿಗಳು, ಆಶ್ರಮಿಗಳಿಗೆ ಎಂತಹ ಧರ್ಮವನ್ನು ವಿಧಿಸಿದ್ದಾರೆಯೋ ಅಂತಹ ಆಶ್ರಮಧರ್ಮಗಳನ್ನು ಸಮಾಧಾನದಿಂದ ಕೇಳು.
ಗೃಹಸ್ಥಃ ಪ್ರವರಸ್ತೇಷಾಂ ಗಾರ್ಹಸ್ಥ್ಯವ್ರತಮಾಶ್ರಿತಃ |
ಪಂಚಯಜ್ಞಕ್ರಿಯಾ ಶೌಚಂ ದಾರತುಷ್ಟಿರತಂದ್ರಿತಾ ॥42॥
ಋತುಕಾಲಾಭಿಗಮನಂ ದಾನಯಜ್ಞತಪಾಂಸಿ ಚ |
ಅವಿಪ್ರವಾಸಸ್ತಸ್ಯೇಷ್ಟಂ ಸ್ವಾಧ್ಯಾಯಶ್ಚಾಗ್ನಿಪೂಜನಮ್ ॥43॥
ಆಶ್ರಮಿಗಳಲ್ಲಿ ಗಾರ್ಹಸ್ಥ್ಯವ್ರತವನ್ನು ಆಶ್ರಯಿಸಿದ ಗೃಹಸ್ಥನು ಶ್ರೇಷ್ಠನಾದವನು. ಪಂಚಯಜ್ಞಕ್ರಿಯೆಗಳು, ಶೌಚ, ತನ್ನ ಪತ್ನಿಯಲ್ಲಿ ತೃಪ್ತಿ, ಆಲಸ್ಯರಾಹಿತ್ಯ, ಋತುಕಾಲ ಗಮನ, ದಾನ-ಯಜ್ಞ-ತಪಸ್ಸುಗಳು ಮತ್ತು ಪ್ರವಾಸಕ್ಕೆ ಹೋಗದಿರುವುದು ಅವನ ಧರ್ಮಗಳು. ಸ್ವಾಧ್ಯಾಯ ಮತ್ತು ಅಗ್ನಿಪೂಜೆಗಳು ಅವನಿಗೆ ಇಷ್ಟವಾದವುಗಳು.
ಅತಿಥೀನಾಮಾಭಿಮುಖ್ಯಂ ಶಕ್ತ್ಯಾ ಚೇಷ್ಟನಿಮಂತ್ರಣಮ್ |
ಅನುಗ್ರಹಶ್ಚ ಸರ್ವೇಷಾಂ ಮನೋವಾಕ್ಕಾಯಕರ್ಮಭಿಃ ॥44॥
ಏವಮಾದಿ ಶುಭಂ ಚಾನ್ಯತ್ ಕುರ್ಯಾತ್ ತದ್ವೃತ್ತವಾನ್ ಗೃಹೀ |

ಏವಂ ಸಂಚರತಸ್ತಸ್ಯ ಪುಣ್ಯಲೋಕಾ ನ ಸಂಶಯಃ ॥45॥
ಅತಿಥಿಗಳಿಗೆ ಪೂಜೆ, ತನಗೆ ಶಕ್ತಿ ಇದ್ದಷ್ಟು ಇಷ್ಟರಿಗೆ ಭೋಜನಕ್ಕಾಗಿ ನಿಮಂತ್ರಣ, ಮನೋ-ವಾಕ್-ಕಾಯಕರ್ಮಗಳಿಂದ ಎಲ್ಲರಿಗೂ ಕ್ಷೇಮ ಚಿಂತನೆ - ಇವೇ ಮೊದಲಾದವುಗಳನ್ನೂ, ಇನ್ನೂ ಕೆಲವನ್ನೂ ಒಳ್ಳೆಯ ನಡತೆಯುಳ್ಳ ಗೃಹಸ್ಥಾಶ್ರಮಿಗಳು ಮಾಡಬೇಕು. ಹೀಗೆ ಅನುಷ್ಠಾನ ಮಾಡುವ ಅವನಿಗೆ ಪುಣ್ಯಲೋಕವು ದೊರೆಯುವುದರಲ್ಲಿ ಸಂಶಯವಿಲ್ಲ.
ತಥೈವ ವಾನಪ್ರಸ್ಥಸ್ಯ ಧರ್ಮಾಃ ಪ್ರೋಕ್ತಾಃ ಸನಾತನಾಃ ॥46॥
ಗೃಹವಾಸಂ ಸಮುತ್ಸೃಜ್ಯ ನಿಶ್ಚಿತ್ಯೈಕಮನಾಃ ಶುಭೈಃ।
ವನ್ಯೈರೇವ ಸದಾಹಾರೈಃ ವರ್ತಯೇದಿತಿ ಚ ಸ್ಥಿತಿಃ ॥47॥
ಹಾಗೆ ವಾನಪ್ರಸ್ಥನಿಗೂ ಸನಾತನವಾದ ಧರ್ಮವು ಹೇಳಲ್ಪಟ್ಟಿದೆ. ಗೃಹವಾಸವನ್ನು ಪರಿತ್ಯಜಿಸಿ ಧೈರ್ಯದಿಂದ ವನದಲ್ಲಿ ದೊರಕುವ ಶುಭವಾದ ಆಹಾರದಿಂದಲೇ ಜೀವನವನ್ನು ನಡೆಸಬೇಕೆಂಬುದು ಅವನ ಸ್ಥಿತಿ.
ಭೂಮಿಶಯ್ಯಾ ಜಟಾಶ್ಮಶ್ರುಚರ್ಮವಲ್ಕಲಧಾರಣಮ್।
ದೇವತಾತಿಥಿಸತ್ಕಾರೋ ಮಹಾಕೃಚ್ಛ್ರಾಭಿಪೂಜನಮ್ ॥48॥
ಅಗ್ನಿಹೋತ್ರಂ ತ್ರಿಷವಣಂ ನಿತ್ಯಂ ತಸ್ಯ ವಿಧೀಯತೇ।
ಬ್ರಹ್ಮಚರ್ಯಂ ಕ್ಷಮಾ ಶೌಚಂ ತಸ್ಯ ಧರ್ಮಾಃ ಸನಾತನಾಃ।
ಏವಂ ಸ ವಿಗತೇ ಪ್ರಾಣೇ ದೇವಲೋಕೇ ಮಹೀಯತೇ ॥49॥
ಭೂಮಿ ಶಯನ, ಜಟಾಶ್ಮಶ್ರುಧಾರಣ, ಚರ್ಮ ವಲ್ಕಲರೂಪವಾದ ವಸ್ತ್ರಧಾರಣ, ದೇವತೆಗಳ ಮತ್ತು ಅತಿಥಿಗಳ ಸತ್ಕಾರ, ಮಹಾಕಷ್ಟದಲ್ಲಿಯೂ ಅವರ ಪೂಜೆ, ಮೂರು ಸಮಯಗಳಲ್ಲಿಯೂ ಅಗ್ನಿಹೋತ್ರವುಅವನಿಗೆ ಹೇಳಲ್ಪಡುತ್ತದೆ. ಬ್ರಹ್ಮಚರ್ಯ, ಕ್ಷಮೆ, ಶೌಚ ಇವುಗಳು ಅವನಿಗೆ ವಿಹಿತವಾದ ಸನಾತನ ಧರ್ಮಗಳು. ಹೀಗೆ ವಾನಪ್ರಸ್ಥವನ್ನು ಆಚರಿಸುವವನು ಪ್ರಾಣತ್ಯಾಗವನ್ನು ಮಾಡಿದ ಮೇಲೆ ದೇವಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಯತಿಧರ್ಮಾಸ್ತಥಾ ದೇವಿ ಸಂಗಾಂಸ್ತ್ಯಕ್ತ್ವಾ ಯತಸ್ತತಃ।
ಆಕಿಂಚನ್ಯಮನಾರಂಭಃ ಸರ್ವತಃ ಶೌಚಮಾರ್ಜವಮ್ ॥50॥
ಎಲೌ ದೇವಿಯೇ, ಯತಿಧರ್ಮವೆಂದರೆ ಸರ್ವಸಂಗವನ್ನು ತ್ಯಜಿಸಬೇಕು. ಧನವನ್ನು ಹೊಂದಿರಬಾರದು. ಯಾವ ಕಾರ್ಯವನ್ನೂ ಆರಂಭಿಸಬಾರದು. ಎಲ್ಲಾ ರೀತಿಯ ಶೌಚವನ್ನು ಹೊಂದಿರಬೇಕು ಮತ್ತು ಋಜುತನವನ್ನು ಹೊಂದಿರಬೇಕು.
ಸರ್ವತ್ರ ಭೈಕ್ಷಚರ್ಯಾ ಚ ಸರ್ವತ್ರೈವ ವಿವಾಸನಮ್।
ಸದಾ ಧ್ಯಾನಪರತ್ವಂ ಚ ದೋಷಶುದ್ಧಿಃ ಕ್ಷಮಾ ದಯಾ।
ತತ್ತ್ವಾನುಗತಬುದ್ಧಿತ್ವಂ ತಸ್ಯ ಧರ್ಮವಿಧಿರ್ಭವೇತ್ ॥51॥
ಯಾವಾಗಲೂ ಭೈಕ್ಷಚರ್ಯೆಯನ್ನು ಮಾಡಬೇಕು. ಒಂದೇ ಕಡೆ ವಾಸಿಸಬಾರದು. ಅವನು ಧ್ಯಾನಪರನಾಗಿರಬೇಕು. ದೋಷಶುದ್ಧಿ, ಕ್ಷಮೆ, ದಯೆ, ತತ್ತ್ವಚಿಂತನೆ ಇವುಗಳು ಅವನ ಧರ್ಮವಿಧಿಗಳು.
ಬ್ರಹ್ಮಚಾರೀ ಚ ಯೋ ದೇವಿ ಜನ್ಮಪ್ರಭೃತಿ ಭಿಕ್ಷಿತಃ।
ಬ್ರಹ್ಮಚರ್ಯಪರೋ ಭೂತ್ವಾ ಸಾಧಯೇದ್ ಗುರುಮಾತ್ಮನಃ।
ಸರ್ವಕಾಲೇಷು ಸರ್ವತ್ರ ಗುರುಪೂಜಾಂ ಸಮಾಚರೇತ್ ॥52॥
ಎಲೌ ದೇವಿಯೇ, ಬ್ರಹ್ಮಚಾರಿಯಾದವನು ಬ್ರಹ್ಮಚಾರಿಯಾದಾಗಿನಿಂದ ಭಿಕ್ಷಾನ್ನದಿಂದ ಜೀವಿಸಬೇಕು. ಬ್ರಹ್ಮಚರ್ಯವ್ರತವನ್ನು ಧರಿಸಿ, ಗುರುವನ್ನು ಸಂಪಾದಿಸಿ ಸರ್ವಕಾಲಗಳಲ್ಲಿ, ಸರ್ವದೇಶಗಳಲ್ಲಿ ಗುರುಪೂಜೆಯನ್ನು ಮಾಡಬೇಕು.
ಭೈಕ್ಷಚರ್ಯಾಗ್ನಿಕಾರ್ಯಂ ಚ ಸದಾ ಜಲನಿಷೇವಣಮ್।
ಸ್ವಾಧ್ಯಾಯಃ ಸತತಂ ತಸ್ಯ ಏಷ ಧರ್ಮಃ ಸನಾತನಃ ॥53॥
ಭೈಕ್ಷಚರ್ಯ, ಅಗ್ನಿಕಾರ್ಯ, ಸದಾ ಸ್ನಾನ, ಸತತವಾದ ಸ್ವಾಧ್ಯಾಯ ಇವು ಅವನಿಗೆ ವಿಹಿತವಾದ ಸನಾತನ ಧರ್ಮಗಳು.
ತಸ್ಯ ಚೇಷ್ಟಾ ತು ಗುರ್ವರ್ಥಮಾಪ್ರಾಣಾಂತಮಿತಿ ಸ್ಥಿತಿಃ।
ಗುರೋರಭಾವೇ ತತ್ಪುತ್ರೇ ಗುರುವದ್ ವೃತ್ತಿಮಾಚರೇತ್ ॥54॥
ಅವನು ಪ್ರಾಣವಿರುವವರೆಗೂ ಗುರುಗಳ ಹಿತಕ್ಕಾಗಿ ಕಾರ್ಯವನ್ನು ಮಾಡಬೇಕೆಂಬುದು ಸ್ಥಿತಿ. ಗುರುವಿಲ್ಲದಿದ್ದರೆ ಗುರುಪುತ್ರನಲ್ಲಿ ಗುರುವಿನಂತೆಯೇ ನಡೆದುಕೊಳ್ಳಬೇಕು.
ಏವಂ ಸೋಽಪ್ಯಮಲಾನ್ ಲೋಕಾನ್ ಬ್ರಾಹ್ಮಣಃ ಪ್ರತಿಪದ್ಯತೇ।
ಏಷ ತೇ ಕಥಿತೋ ದೇವಿ ಧರ್ಮಶ್ಚಾಶ್ರಮವಾಸಿನಾಮ್ ॥55॥
ಹೀಗೆ ಮಾಡಿದರೆ ಬ್ರಹ್ಮಚಾರಿಯಾದ ಬ್ರಾಹ್ಮಣನು ಪರಿಶುದ್ಧವಾದ ಲೋಕಗಳನ್ನು ಹೊಂದುತ್ತಾನೆ. ಎಲೌ ದೇವಿಯೇ, ಆಶ್ರಮವಾಸಿಗಳ ಧರ್ಮವನ್ನು ನಿನಗೆ ಹೇಳಿದ್ದೇನೆ.
ಚಾತುರ್ವರ್ಣ್ಯಾಶ್ರಮೇ ಯುಕ್ತೋ ಲೋಕ ಇತ್ಯೇವ ವಿದ್ಯತೇ।
ಕಥಿತಂ ತೇ ಸಮಾಸೇನ ಕಿಂ ಭೂಯಃ ಶ್ರೋತುಮಿಚ್ಛಸಿ ॥56॥
ನಾಲ್ಕು ವರ್ಣಗಳು ಮತ್ತು ನಾಲ್ಕು ಆಶ್ರಮಗಳು ಎಂದು ಲೋಕವು ಹೀಗೆಯೇ ತಿಳಿಯುತ್ತದೆ. ನಿನಗೆ ವರ್ಣಾಶ್ರಮಧರ್ಮವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ
ಪಂಚನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತೈದನೆಯ

ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತಾರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಋಷಿಧರ್ಮಕಥನ.
ಉಮಾ
ಭಗವನ್ ದೇವದೇವೇಶ ತ್ರಿಪುರಾಂತಕ ಶಂಕರ |
ಅಯಂ ತ್ವೃಷಿಗಣೋ ದೇವ ತಪಸ್ತಪ ಇತಿ ಪ್ರಭೋ |
ತಪಸಾ ಕರ್ಶಿತಾ ನಿತ್ಯಂ ತಪೋಽರ್ಜನಪರಾಯಣಾಃ ॥1॥
ಉಮಾ ಭಗವಂತನೇ, ದೇವದೇವೇಶನೇ, ತ್ರಿಪುರಾಂತಕನೇ, ಶಂಕರನೇ, ಪ್ರಭುವೇ, ಈ ಋಷಿ ಸಮೂಹಗಳು ತಪಸ್ಸು, ತಪಸ್ಸು ಎಂದು ಹೇಳುತ್ತಾ ತಪಸ್ಸನ್ನು ಸಂಪಾದಿಸುವುದರಲ್ಲಿ ನಿರತವಾಗಿ ನಿತ್ಯವೂ ತಪಸ್ಸಿನಿಂದ ದೇಹದಂಡನೆಯನ್ನು ಮಾಡುತ್ತವೆ.
ಅಸ್ಯ ಕಿಂಲಕ್ಷಣೋ ಧರ್ಮಃ ಕೀದೃಶಶ್ಚಾಗಮಸ್ತಥಾ |
ಏತದಿಚ್ಛಾಮ್ಯಹಂ ಶ್ರೋತುಂ ತನ್ಮೇ ವದ ವರಪ್ರದ ॥2॥
ಇವರ ಧರ್ಮವು ಎಂತಹದು? ಈ ವಿಷಯದಲ್ಲಿ ಏನು ಶಾಸ್ತ್ರವಿದೆ? ಇದನ್ನು ತಿಳಿಯಲು ಬಯಸುತ್ತೇನೆ. ವರಪ್ರದನೇ ನನಗೆ ಅದನ್ನು ಹೇಳು.
ನಾರದಃ
ಏವಂ ಬ್ರುವಂತ್ಯಾಂ ರುದ್ರಾಣ್ಯಾಮೃಷಯಃ ಸಾಧುಸಾಧ್ವಿತಿ |
ಅಬ್ರುವನ್ ಹೃಷ್ಟಮನಸಃ ಸರ್ವೇ ತದ್ಗತಮಾನಸಾಃ ॥3॥
ಶೃಣ್ವಂತೀಮೃಷಿಧರ್ಮಾಂಸ್ತು ಋಷಯಶ್ಚಾಭ್ಯಪೂಜಯನ್ ॥4॥
ನಾರದ ಪಾರ್ವತಿಯು ಹೀಗೆ ಹೇಳುತ್ತಿರಲು ಋಷಿಗಳೆಲ್ಲರೂ ಸಂತೋಷದಿಂದ ಕೂಡಿದವರಾಗಿ ರುದ್ರನಲ್ಲಿಯೇ ಮನಸ್ಸಿಟ್ಟು `ಸಾಧು-ಸಾಧು' ಎಂದು ಹೇಳಿದರು. ಋಷಿಧರ್ಮವನ್ನು ಕುರಿತು ಪ್ರಶ್ನೆಯನ್ನು ಮಾಡಿದ ಪಾರ್ವತಿಯನ್ನು ಎಲ್ಲ ಋಷಿಗಳೂ ಸತ್ಕರಿಸಿದರು.
ತ್ವತ್ಪ್ರಸಾದಾದ್ ವಯಂ ದೇವಿ ಶ್ರೋಷ್ಯಾಮಃ ಪರಮಂ ಹಿತಮ್ |
ಧನ್ಯಾಃ ಖಲು ವಯಂ ಸರ್ವೇ ಪಾದಮೂಲಂ ತವಾಶ್ರಿತಾಃ |
ಇತಿ ಸರ್ವೇ ತದಾ ದೇವೀಂ ವಾಚಾ ಸಮಭಿಪೂಜಯನ್ ॥5॥
ಎಲೌ ದೇವಿಯೇ, ನಿನ್ನ ಅನುಗ್ರಹದಿಂದ ನಾವು ನಮಗೆ ಪರಮ ಹಿತವಾದುದನ್ನು ಕೇಳುವೆವು. ನಿನ್ನ ಪಾದಮೂಲವನ್ನು ಆಶ್ರಯಿಸಿದ ನಾವೆಲ್ಲರೂ ಧನ್ಯರು ಎಂದು ದೇವಿಯನ್ನು ಮಾತಿನಿಂದಲೇ ಪೂಜಿಸಿದರು.
ಮಹೇಶ್ವರಃ
ನ್ಯಾಯತಸ್ತ್ವಂ ಮಹಾಭಾಗೇ ಶ್ರೋತುಕಾಮಾ ಮನಸ್ವಿನಿ |
ಹಂತ ತೇ ಕಥಯಿಷ್ಯಾಮಿ ಮುನಿಧರ್ಮಂ ಶುಚಿಸ್ಮಿತೇ ॥6॥
ಮಹೇಶ್ವರ ಎಲೌ ಮಹಾನುಭಾವಳೇ, ಧೈರ್ಯಶಾಲಿನಿಯೇ, ನೀನು ಕೇಳಲು ಬಯಸಿರುವುದು ನ್ಯಾಯವಾಗಿದೆ. ಶುಚಿಸ್ಮಿತೆಯೇ, ನಿನಗೆ ಮುನಿಧರ್ಮವನ್ನು ಹೇಳುವೆನು.
ವಾನಪ್ರಸ್ಥಂ ಸಮಾಶ್ರಿತ್ಯ ಕ್ರಿಯತೇ ಬಹುಧಾ ನರೈಃ |
ಬಹುಶಾಖೋ ಬಹುವಿಧೋ ಋಷಿಧರ್ಮಃ ಸನಾತನಃ ॥7॥
ವಾನಪ್ರಸ್ಥಧರ್ಮವನ್ನು ಆಶ್ರಯಿಸಿ ಋಷಿಧರ್ಮವು ಮನುಷ್ಯರಿಂದ ಬಹುವಿಧವಾಗಿ ಮಾಡಲ್ಪಡುತ್ತದೆ. ಸನಾತನವಾದ ಋಷಿಧರ್ಮವು ಅನೇಕ ವಿಧಗಳನ್ನು ಮತ್ತು ಅನೇಕ ಪ್ರಕಾರಗಳನ್ನು ಹೊಂದಿದೆ.
ಪ್ರಾಯಶಃ ಸರ್ವಭೋಗಾರ್ಥಮೃಷಿಭಿಃ ಕ್ರಿಯತೇ ತಪಃ |
ತಥಾ ಸಂಚರತಾಂ ತೇಷಾಂ ದೇವಿ ಧರ್ಮವಿಧಿಂ ಶೃಣು ॥8॥
ದೇವಿಯೇ, ಪ್ರಾಯಶಃ ಸರ್ವಭೋಗಗಳನ್ನು ಉದ್ದೇಶಿಸಿ ಋಷಿಗಳು ತಪಸ್ಸನ್ನು ಮಾಡುತ್ತಾರೆ. ಹಾಗೆ ತಪಸ್ಸನ್ನು ಮಾಡುವ ಅವರ ಧರ್ಮವಿಧಿಯನ್ನು ಕೇಳು.
ಭೂತ್ವಾ ಪೂರ್ವಂ ಗೃಹಸ್ಥಸ್ತು ಪುತ್ರಾನೃಣ್ಯಮವಾಪ್ಯ ಚ |
ಕಲತ್ರಕಾರ್ಯಂ ಸಂಸ್ಥಾಪ್ಯ ಕಾರಣಾತ್ ಸಂತ್ಯಜೇದ್ ಗೃಹಮ್ ॥9॥
ಮೊದಲು ಗೃಹಸ್ಥನಾಗಿದ್ದು ಪುತ್ರ ಋಣವನ್ನು ತೀರಿಸಿ ಪತ್ನಿಯ ಜೀವನದ ವ್ಯವಸ್ಥೆಯನ್ನು ಮಾಡಿ ಯೋಗ್ಯವಾದ ಕಾರಣದಿಂದ ಗೃಹವನ್ನು ತ್ಯಜಿಸಬೇಕು.
ಅವಸ್ಥಾಪ್ಯ ಮನೋ ಧೃತ್ಯಾ ವ್ಯವಸಾಯಪುರಃಸರಃ |
ನಿರ್ದ್ವಂದ್ವೋ ವಾ ಸದಾರೋ ವಾ ವನವಾಸಾಯ ಸಂವ್ರಜೇತ್ ॥10॥
ಮನಸ್ಸಿನಲ್ಲಿ ಧೈರ್ಯವನ್ನೂ ಮತ್ತು ನಿಶ್ಚಯವನ್ನೂ ತಂದುಕೊಂಡು ಒಬ್ಬನೇ ಆಗಲಿ ಅಥವಾ ಪತ್ನಿಯ ಜೊತೆಯಲ್ಲಾಗಲೀ ವನವಾಸಕ್ಕೆ ಹೋಗಬೇಕು.
ದೇಶಾಃ ಪರಮಪುಣ್ಯಾ ಯೇ ನದೀವನಸಮನ್ವಿತಾಃ |
ಅಬಾಧಮುಕ್ತಾಃ ಪ್ರಾಯೇಣ ತೀರ್ಥಾಯತನಸಂಯುತಾಃ ॥11॥
ತತ್ರ ಗತ್ವಾ ವಿಧಿಂ ಜ್ಞಾತ್ವಾ ದೀಕ್ಷಾಂ ಕುರ್ಯಾದ್ ಯಥಾಗಮಮ್ |

ದೀಕ್ಷಿತ್ವೈಕಮನಾ ಭೂತ್ವಾ ಪರಿಚರ್ಯಾಂ ಸಮಾಚರೇತ್ ॥12॥
ಪರಮಪವಿತ್ರವಾದ ನದಿ ಮತ್ತು ವನಗಳಿಂದ ಕೂಡಿದಂತಹ, ಬಾಧೆರಹಿತವಾದ, ತೀರ್ಥ ಗುಣಗಳಿಂದ ಸಂಯುತವಾದ ದೇಶಗಳಿಗೆ ಹೋಗಿ, ಶಾಸ್ತ್ರಕ್ಕೆ ಅನುಸಾರವಾಗಿ ಕರ್ಮವನ್ನು ತಿಳಿದು ಅಲ್ಲಿ ದೀಕ್ಷೆಯನ್ನು ವಹಿಸಬೇಕು. ದೀಕ್ಷಿತನಾದ ಮೇಲೆ ಒಂದೇ ಮನಸ್ಸಿನಿಂದ ಪರಿಚರ್ಯೆಯನ್ನು ಮಾಡಬೇಕು.
ಕಾಲ್ಯೋತ್ಥಾನಂ ಚ ಶೌಚಂ ಚ ಸರ್ವದೇವಪ್ರಣಾಮನಮ್ |
ಶಕೃದಾಲೇಪನಂ ಕಾಯೇ ತ್ಯಕ್ತದೋಷೋಽಪ್ರಮಾದಿತಾ ॥13॥
ಸಾಯಂಪ್ರಾತಶ್ಚಾಭಿಷೇಕಮಗ್ನಿಹೋತ್ರಂ ಯಥಾವಿಧಿ |
ಕಾಯಶೌಚಂ ಚ ಕಾರ್ಯಂ ಚ ಜಟಾವಲ್ಕಲಧಾರಣಮ್ ॥14॥
ಪ್ರಾತಃಕಾಲದಲ್ಲಿ ಬೇಗ ಏಳುವುದು, ಶೌಚ, ಸರ್ವದೇವತೆಗಳಿಗೆ ನಮಸ್ಕಾರ, ಗೋಮಯ-ಮೃತ್ತಿಕಾ ಲೇಪನ, ದೋಷ ಪರಿತ್ಯಾಗ, ಪ್ರಮಾದ ಪರಿತ್ಯಾಗ, ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿ ಸ್ನಾನ, ಶಾಸ್ತ್ರೋಕ್ತವಾದ ರೀತಿಯಲ್ಲಿ ಅಗ್ನಿಹೋತ್ರ, ದೇಹಶುದ್ಧಿ ಮತ್ತು ಜಟಾವಲ್ಕಲಧಾರಣೆಯನ್ನು ಮಾಡಬೇಕು.
ಸತತಂ ವನಚರ್ಯಾ ಚ ಸಮಿತ್ಕುಸುಮಕಾರಣಾತ್ |
ನೀವಾರಗ್ರಹಣಂ ಕಾಲೇ ಶಾಕಮೂಲೋಪಚಾಯನಮ್ |
ಸದಾಯತನಶೌಚಂ ಚ ತಸ್ಯ ಧರ್ಮಾಯ ಚೇಷ್ಯತೇ ॥15॥
ಸತತವಾದ ವ್ರತಾನುಷ್ಠಾನ, ಸಮಿತ್ತು ಮತ್ತು ಪುಷ್ಪಗಳನ್ನು ತರಲು ವನದಲ್ಲಿ ಸಂಚಾರ, ಕಾಲದಲ್ಲಿ ನೀವಾರಗ್ರಹಣ ಮತ್ತು ಶಾಕ ಮತ್ತು ಮೂಲಗಳ ಸಂಗ್ರಹ, ವಾಸಸ್ಥಾನದ ಶುದ್ಧಿ- ಇವು ಅವನ ಧರ್ಮವೆಂದು ಹೇಳಲ್ಪಡುತ್ತವೆ.
ಅತಿಥೀನಾಮಾಭಿಮುಖ್ಯಂ ತತ್ಪರತ್ವಂ ಚ ಸರ್ವಶಃ |
ಪಾದ್ಯಾಸನಾಭ್ಯಾಂ ಸಂಪೂಜ್ಯ ತಥಾಽಽಹಾರನಿಮಂತ್ರಣಮ್ ॥16॥
ಅಗ್ರಾಮ್ಯಪಚನಂ ಕಾಲೇ ಪಿತೃದೇವಾರ್ಚನಂ ತಥಾ |
ಪಶ್ಚಾದತಿಥಿಸತ್ಕಾರಸ್ತಸ್ಯ ಧರ್ಮಾಃ ಸನಾತನಾಃ ॥17॥
ಅತಿಥಿಗಳನ್ನು ಸ್ವಾಗತಿಸುವುದು, ಅವರ ಸೇವೆಯಲ್ಲಿ ಆಸಕ್ತಿ, ಪಾದ್ಯಾಸನಗಳಿಂದ ಅವರ ಪೂಜೆ, ಅವರಿಗೆ ಆಹಾರದಾನ, ಗ್ರಾಮ್ಯಧಾನ್ಯಗಳನ್ನು ಬಿಟ್ಟು ವನ ಧಾನ್ಯಗಳಿಂದ ಪಾಕ, ಆಯಾ ಕಾಲದಲ್ಲಿ ಪಿತೃದೇವಾರ್ಚನೆ, ಅನಂತರ ಅತಿಥಿಯ ಅರ್ಚನೆ ಇವು ಅವನ ಸನಾತನ ಧರ್ಮಗಳು.
ಶಿಷ್ಟೈರ್ಧರ್ಮಾಸನೇ ಚೈವ ಧರ್ಮಾರ್ಥಸಹಿತಾಃ ಕಥಾಃ ॥18॥
ಪ್ರತಿಶ್ರಯವಿಭಾಗಶ್ಚ ಭೂಮಿಶಯ್ಯಾ ಶಿಲಾಸು ವಾ |
ವ್ರತೋಪವಾಸಯೋಗಶ್ಚ ಕ್ಷಮಾ ಚೇಂದ್ರಿಯನಿಗ್ರಹಃ ॥19॥
ದಿವಾರಾತ್ರಂ ಯಥಾಯೋಗಂ ಶೌಚಂ ಧರ್ಮಸ್ಯ ಚಿಂತನಮ್ |
ಏವಂ ಧರ್ಮಾಃ ಪುರಾ ದೃಷ್ಟಾಃ ಸಾಮಾನ್ಯಾ ವನವಾಸಿನಾಮ್ ॥20॥
ಶಿಷ್ಟರ ಜೊತೆಯಲ್ಲಿ ಧರ್ಮಾಸನದಲ್ಲಿ ಕುಳಿತು ಧರ್ಮಾರ್ಥ ಸಹಿತವಾದ ಕಥೆಗಳ ಶ್ರವಣ, ನಿವಾಸವನ್ನು ಇನ್ನೊಬ್ಬರ ಜೊತೆ ಹಂಚಿಕೊಳ್ಳುವುದು, ಭೂಮಿಯಲ್ಲಿ ಅಥವಾ ಶಿಲೆಯಲ್ಲಿ ಮಲಗುವುದು, ವ್ರತೋಪವಾಸಯೋಗದಲ್ಲಿ ನಿರತನಾಗಿರುವುದು, ಕ್ಷಮೆ, ಇಂದ್ರಿಯನಿಗ್ರಹ, ಹಗಲು ಮತ್ತು ರಾತ್ರಿ ಸಾಧ್ಯವಾದಷ್ಟು ಶುದ್ಧಿ, ಧರ್ಮದ ಚಿಂತನೆ - ಇವು ವನವಾಸದಲ್ಲಿರುವ ಎಲ್ಲ ಋಷಿಗಳಿಗೂ ಇರುವ ಸಾಮಾನ್ಯ ಧರ್ಮಗಳು.
ಏವಂ ವೈ ಯತಮಾನಸ್ಯ ಕಾಲಧರ್ಮೋ ಯದಾ ಭವೇತ್ |
ತದೈವ ಸೋಽಭಿಜಾಯೇತ ಸ್ವರ್ಗಲೋಕಂ ಶುಚಿಸ್ಮಿತೇ ॥21॥
ಎಲೌ ಶುಚಿಸ್ಮಿತೆಯೇ, ಹೀಗೆ ಪ್ರಯತ್ನ ಪಡುವ ಋಷಿಗೆ ಯಾವಾಗ ಮರಣವುಂಟಾಗುವುದೋ ಆಗಲೇ ಅವನು ಸ್ವರ್ಗಲೋಕವನ್ನು ಹೊಂದುತ್ತಾನೆ.
ತತ್ರ ಸಂವಿಹಿತಾ ಭೋಗಾಃ ಸ್ವರ್ಗಸ್ತ್ರೀಭಿರನಿಂದಿತೇ |
ಪರಿಭ್ರಷ್ಟೋ ಯದಾ ಸ್ವರ್ಗಾದ್ ವಿಶಿಷ್ಟಸ್ತು ಭವೇನ್ನೃಷು ॥22॥
ಎಲೌ ಅನಿಂದಿತೆಯೇ, ಅಲ್ಲಿ ಅವನು ಸ್ವರ್ಗಸ್ತ್ರೀಯರ ಜೊತೆಯಲ್ಲಿ ಭೋಗವನ್ನು ಅನುಭವಿಸಿ, ಪುಣ್ಯಕ್ಷಯವಾದ ಮೇಲೆ ಸ್ವರ್ಗದಿಂದ ಭ್ರಷ್ಟನಾಗಿ ವಿಶಿಷ್ಟವಾದ ಮಾನುಷಧರ್ಮವನ್ನು ಪಡೆಯುತ್ತಾನೆ.
ಏವಂ ಧರ್ಮಃ ಸದಾ ದೇವಿ ಸರ್ವೇಷಾಂ ವನವಾಸಿನಾಮ್ |
ಏತತ್ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ॥23॥
ಎಲೌ ದೇವಿಯೇ, ವನವಾಸಿಗಳಾದ ಋಷಿಗಳೆಲ್ಲರಿಗೂ ಇದು ನಿತ್ಯವಾದ ಧರ್ಮ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ದೇವದೇವೇಶ ಋಷೀಣಾಂ ಚರಿತಂ ಶುಭಮ್ |
ವಿಶೇಷಧರ್ಮಾನಿಚ್ಛಾಮಿ ಶ್ರೋತುಂ ಕೌತೂಹಲಂ ಹಿ ಮೇ ॥24॥
ಉಮಾ ಭಗವಂತನೇ, ದೇವದೇವೇಶನೇ, ಋಷಿಗಳ ವಿಶೇಷವಾದ ಶುಭ ಧರ್ಮಗಳನ್ನು ಕೇಳಲು ಬಯಸುತ್ತೇನೆ. ಅದರಲ್ಲಿ ನನಗೆ ಕುತೂಹಲವಿದೆ.
ಮಹೇಶ್ವರಃ

ತದಹಂ ತೇ ಪ್ರವಕ್ಷ್ಯಾಮಿ ಶೃಣು ದೇವಿ ಸಮಾಹಿತಾ ॥25॥
ಮಹೇಶ್ವರ ದೇವಿಯೇ, ಅದನ್ನೂ ನಾನು ನಿನಗೆ ಹೇಳುವೆನು. ಸಮಾಧಾನದಿಂದ ಕೇಳು.
ವನನಿತ್ಯೈರ್ವನರತೈರ್ವಾನಪ್ರಸ್ಥೈರ್ಮಹರ್ಷಿಭಿಃ।
ವನಂ ಗುರುಮಿವಾಲಂಬ್ಯ ವಸ್ತವ್ಯಮಿತಿ ನಿಶ್ಚಯಃ ॥26॥
ವಾನಪ್ರಸ್ಥರಾದ ಮಹರ್ಷಿಗಳು ನಿತ್ಯವೂ ವನದಲ್ಲಿ ವಾಸಿಸಿ, ವನದಲ್ಲಿಯೇ ಪ್ರೀತಿಯನ್ನು ಹೊಂದಿ, ವನವನ್ನೇ ಗುರುವಿನಂತೆ ತಿಳಿದು ವಾಸ ಮಾಡಬೇಕೆಂದು ನಿಶ್ಚಯಿಸಬೇಕು.
ವೀರಶಯ್ಯಾಮುಪಾಸದ್ಭಿರ್ವೀರಸ್ಥಾನೋಪಸೇವಿಭಿಃ।
ವ್ರತೋಪವಾಸೈರ್ಬಹುಭಿರ್ಗ್ರೀಷ್ಮೇ ಪಂಚತಪೈಸ್ತಥಾ ॥27॥
ಪಂಚಯಜ್ಞಪರೈರ್ನಿತ್ಯಂ ಪೌರ್ಣಮಾಸ್ಯಪರಾಯಣೈಃ।
ಮಂಡೂಕಶಾಯೈರ್ಹೇಮಂತೇ ಶೈವಾಲಾಂಕುರಭೋಜನೈಃ ॥28॥
ಚೀರವಲ್ಕಲಸಂವೀತೈರ್ಮೃಗಾಜಿನಧರೈಸ್ತಥಾ।
ಚಾತುರ್ಮಾಸ್ಯಪರೈಃ ಕೈಶ್ಚಿದ್ ದೇವಧರ್ಮಪರಾಯಣೈಃ ॥29॥
ಏವಂವಿಧೈರ್ವನಗತೈಸ್ತಪ್ಯತೇ ಸುಮಹತ್ ತಪಃ।
ಏವಂ ಕೃತ್ವಾ ಶುಭಂ ಕರ್ಮ ಪಶ್ಚಾದ್ ಯಾತಿ ತ್ರಿವಿಷ್ಟಪಮ್ ॥30॥
ವೀರಶಯ್ಯೆಯಲ್ಲಿ ಮಲಗುವುದು, ವೀರಸ್ಥಾನದಲ್ಲಿ ನಿಲ್ಲುವುದು, ವ್ರತೋಪವಾಸವನ್ನು ಮಾಡುವುದು, ಗ್ರೀಷ್ಮದಲ್ಲಿ ಪಂಚಾಗ್ನಿ ತಪಸ್ಸು, ನಿತ್ಯವೂ ಪಂಚಯಜ್ಞಾನುಷ್ಠಾನ, ಪೌರ್ಣಮಾಸಿಯಲ್ಲಿ ಅಗ್ನಿಹೋತ್ರಗಳು, ಹೇಮಂತ ಋತುವಿನಲ್ಲಿ ಮಂಡೂಕದಂತೆ ಶಯನ, ಪಾಚಿ ಮತ್ತು ಅಂಕುರಗಳ ಭೋಜನ, ಚೀರ- ವಲ್ಕಲ-ಮೃಗಾಜಿನಗಳ ಧಾರಣ, ಚಾತುರ್ಮಾಸ್ಯ ವ್ರತನಿಯಮ, ಕೆಲವು ದೇವಧರ್ಮಗಳ ಆಚರಣೆ -ಇಂತಹ ಪ್ರಕಾರಗಳಿಂದ ವನಗತರಾದ ಋಷಿಗಳು ದೊಡ್ಡ ತಪಸ್ಸನ್ನು ಮಾಡುತ್ತಾರೆ. ಇಂತಹ ಶುಭಕರ್ಮವನ್ನು ಮಾಡಿ ಅನಂತರ ಸ್ವರ್ಗಕ್ಕೆ ಹೋಗುತ್ತಾರೆ.
ತತ್ರಾಪಿ ಸುಮಹತ್ಕಾಲಂ ಸ ವಿಹೃತ್ಯ ಯಥಾಸುಖಮ್।
ಜಾಯತೇ ಮಾನುಷೇ ಲೋಕೇ ದಾನಭೋಗಸಮನ್ವಿತಃ ॥31॥
ತಪೋವಿಶೇಷಸಂಯುಕ್ತಾಃ ಕಥಿತಾಸ್ತೇ ಶುಚಿಸ್ಮಿತೇ ॥32॥
ಅಲ್ಲಿಯೂ ಕೂಡ ಬಹಳ ಕಾಲದವರೆಗೆ ಸುಖವನ್ನು ಅನುಭವಿಸಿ, ಮನುಷ್ಯ ಲೋಕದಲ್ಲಿ ದಾನಭೋಗ ಸಮನ್ವಿತರಾಗಿ ಜನಿಸುತ್ತಾರೆ. ಶುಚಿಸ್ಮಿತೆಯೇ, ವಿಶೇಷವಾದ ತಪಸ್ಸನ್ನು ಮಾಡಿದವರ ವಿಷಯವನ್ನು ನಾನು ನಿನಗೆ ಹೇಳಿದ್ದೇನೆ.
ಉಮಾ
ಭಗವನ್ ದೇವದೇವೇಶ ತೇಷು ಯೇ ದಾರಸಂಯುತಾಃ।
ಕೀದೃಶಂ ಚರಿತಂ ತೇಷಾಂ ತನ್ಮೇ ಶಂಸಿತುಮರ್ಹಸಿ॥33॥
ಉಮಾ ಭಗವಂತನೇ, ದೇವದೇವೇಶನೆ, ಅವರಲ್ಲಿ ಯಾರು ಪತ್ನೀ ಸಹಿತರಾಗಿರುತ್ತಾರೆಯೋ ಅವರ ಆಚರಣೆ ಹೇಗಿರುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಯ ಏಕಪತ್ನೀಧರ್ಮಾಣಶ್ಚರಂತಿ ವಿಪುಲಂ ತಪಃ।
ವಿಂಧ್ಯಪಾದೇಷು ಯೇ ಕೇಚಿದ್ ಯೇ ಚ ನೈಮಿಶವಾಸಿನಃ ॥34॥
ಪುಷ್ಕರೇಷು ಚ ಯೇ ಚಾನ್ಯೇ ನದೀವನಸಮಾಶ್ರಿತಾಃ।
ಸರ್ವೇ ತೇ ವಿಧಿದೃಷ್ಟೇನ ಚರಂತಿ ವಿಪುಲಂ ತಪಃ ॥35॥
ಮಹೇಶ್ವರ ಕೆಲವರು ಪತ್ನೀಸಹಿತರಾಗಿ ವಿಂಧ್ಯಪಾದಗಳಲ್ಲಿಯೂ, ಕೆಲವರು ನೈಮಿಶಾರಣ್ಯದಲ್ಲಿಯೂ, ಕೆಲವರು ಪುಷ್ಕರಗಳಲ್ಲಿಯೂ, ಕೆಲವರು ನದೀ- ವನಗಳಲ್ಲಿಯೂ ತಪಸ್ಸನ್ನು ಮಾಡುತ್ತಾರೆ. ಅವರೆಲ್ಲರೂ ವಿಧಿಗೆ ಅನುಸಾರವಾಗಿ ವಿಪುಲವಾದ ತಪಸ್ಸನ್ನು ಆಚರಿಸುತ್ತಾರೆ.
ಹಿಂಸಾದ್ರೋಹವಿಮುಕ್ತಾಶ್ಚ ಸರ್ವಭೂತಾನುಕಂಪಿನಃ।
ಶಾಂತಾ ದಾಂತಾ ಜಿತಕ್ರೋಧಾಃ ಸರ್ವಾತಿಥ್ಯಪರಾಯಣಾಃ ॥36॥
ಪ್ರಾಣಿಷ್ವಾತ್ಮೋಪಮಾ ನಿತ್ಯಮೃತುಕಾಲಾಭಿಗಾಮಿನಃ।
ಸ್ವದಾರಸಹಿತಾ ದೇವಿ ಚರಂತಿ ವ್ರತಮುತ್ತಮಮ್ ॥37॥
ಹಿಂಸಾ-ದ್ರೋಹಗಳನ್ನು ತ್ಯಜಿಸಿ, ಸರ್ವಭೂತದಯೆಯನ್ನು ಹೊಂದಿ ಶಾಂತರೂ, ಇಂದ್ರಿಯನಿಗ್ರಹವುಳ್ಳವರೂ, ಕ್ರೋಧವನ್ನು ಜಯಿಸಿದವರೂ, ಸರ್ವಾತಿಥಿ ಪರಾಯಣರೂ ಆಗಿ, ಪ್ರಾಣಿಗಳನ್ನು ತಮ್ಮಂತೆಯೇ ನೋಡುತ್ತಾ, ನಿತ್ಯವೂ ಋತು ಕಾಮಗಾಮಿಗಳಾಗಿ ಪತ್ನೀ ಸಹಿತರಾಗಿ ಶ್ರೇಷ್ಠವಾದ ವ್ರತವನ್ನು ಮಾಡುತ್ತಾರೆ.
ವಸಂತಿ ಸುಖಮವ್ಯಗ್ರಾಃ ಪುತ್ರದಾರಸಮನ್ವಿತಾಃ।
ತೇಷಾಂ ಪರಿಚ್ಛದಾರಂಭಾಃ ಕೃತೋಪಕರಣಾನಿ ಚ ॥38॥
ಗೃಹಸ್ಥವದ್ ವಿಧೀಯಂತೇ ಯಥಾಯೋಗಂ ಪ್ರಮಾಣತಃ।
ಪೋಷಣಾರ್ಥಂ ಸ್ವದಾರಾಣಾಮಗ್ನಿಕಾರ್ಯಾರ್ಥಮೇವ ಚ।
ಗಾವಶ್ಚ ಕರ್ಷಕಾಶ್ಚೈವ ಸರ್ವಮೇತದ್ವಿಧೀಯತೇ ॥39॥
ಪುತ್ರ, ಪತ್ನೀ ಸಹಿತರಾಗಿ ಅವರು ಸುಖವಾಗಿ ವನದಲ್ಲಿ ವಾಸಿಸುತ್ತಾರೆ. ಅವರ ವಸ್ತ್ರಗಳು, ಕಾರ್ಯಾರಂಭಗಳು, ಉಪಕರಣಗಳು

ಎಲ್ಲವೂ ಗೃಹಸ್ಥನಿಗೆ ಹೇಳಿದಂತೆಯೇ ಯಥಾಯೋಗ್ಯವಾಗಿ ಪ್ರಮಾಣಗಳಿಂದ ವಿಧಿಸಲ್ಪಡುತ್ತವೆ. ಪತ್ನಿಯ ಪೋಷಣೆಗಾಗಿ, ಅಗ್ನಿಕಾರ್ಯಕ್ಕೋಸ್ಕರವಾಗಿ ಗೋವುಗಳು ಮತ್ತು ಧನ-ಧಾನ್ಯಾದಿಗಳನ್ನು ಪಡೆಯುತ್ತಾ, ಧಾನ್ಯಾದಿಗಳನ್ನು ಬೆಳೆಯುವ ಭೃತ್ಯರು ಅವರಿಗೆ ವಿಧಿಸಲ್ಪಡುತ್ತಾರೆ.

ಏವಂ ವನಗತೈರ್ದೇವಿ ಕರ್ತವ್ಯಂ ದಾರಸಂಯುತೈಃ |
ತೇ ಸ್ವದಾರೈಃ ಸಮಾಯಾಂತಿ ಪುಣ್ಯಾಲ್ಲೋಕಾನ್ ದೃಢವ್ರತಾಃ ॥40॥

ವನದಲ್ಲಿ ಪತ್ನೀ ಸಹಿತರಾಗಿ ಇರುವವರು ಈ ರೀತಿಯಾದ ಅನುಷ್ಠಾನವನ್ನು ಮಾಡಬೇಕು. ದೃಢವ್ರತರಾದ ಅಂತಹವರು ಪತ್ನೀ ಸಹಿತರಾಗಿ ಪುಣ್ಯಲೋಕಗಳಿಗೆ ಹೋಗುತ್ತಾರೆ.

ಪತಿಭಿಃ ಸಹ ಯೇ ದಾರಾಶ್ಚರಂತಿ ವಿಪುಲಂ ತಪಃ |
ಅಲ್ಪಗ್ರಹಾ ವಾರಹವ್ಯಾ ತೇ ಚ ಗಚ್ಛಂತಿ ವೈ ದಿವಮ್ |
ಏತತ್ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ॥41॥

ಪತಿಗಳ ಜೊತೆಯಲ್ಲಿ ಪತ್ನಿಯರೂ ಸಹ ಅಲ್ಪಪರಿಗ್ರಹಗಳನ್ನು ಹೊಂದಿ, ಏಕಭುಕ್ತವನ್ನು ಮಾಡಿ, ವಿಪುಲವಾದ ತಪಸ್ಸನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾರೆ. ಎಲೌ ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?

॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ವಾನಪ್ರಸ್ಥಧರ್ಮಕಥನಂ ನಾಮ ಷಣ್ಣವತ್ಯುತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.

* * * * *

## ನೂರ ತೊಂಬತ್ತೇಳನೆಯ ಅಧ್ಯಾಯ

ಉಮಾ-ಮಹೇಶ್ವರರ ಸಂವಾದ. ವಾನಪ್ರಸ್ಥರ ಮತ್ತು ವಿಧವೆಯರ ಧರ್ಮಕಥನ

ಉಮಾ

ಭಗವನ್ ದೇವದೇವೇಶ ತೇಷಾಂ ಕರ್ಮಫಲಂ ಪ್ರಭೋ |
ಶ್ರೋತುಮಿಚ್ಛಾಮ್ಯಹಂ ದೇವ ಪ್ರಸಾದಾತ್ ತೇ ವರಪ್ರದ ॥1॥

ಉಮಾ ಭಗವಂತನೇ, ದೇವದೇವೇಶನೇ, ಪ್ರಭುವೇ, ವರಪ್ರದನೇ, ನಿನ್ನ ಅನುಗ್ರಹದಿಂದ ವಾನಪ್ರಸ್ಥರ ಕರ್ಮದ ಫಲವನ್ನು ಕೇಳಲು ಬಯಸುತ್ತೇನೆ.

ಮಹೇಶ್ವರಃ

ವಾನಪ್ರಸ್ಥಗತಂ ಸರ್ವಂ ಫಲಪಾಕಂ ಶೃಣು ಪ್ರಿಯೇ ॥2॥

ಮಹೇಶ್ವರ ಪ್ರಿಯೇ, ವಾನಪ್ರಸ್ಥರು ಮಾಡುವ ಕರ್ಮಗಳ ಫಲಪಾಕವನ್ನು ಕೇಳು.

ಅಗ್ನಿಯೋಗಂ ವ್ರಜನ್ ಗ್ರೀಷ್ಮೇ ತತೋ ದ್ವಾದಶವಾರ್ಷಿಕಮ್ |
ರುದ್ರಲೋಕೇ ಹಿ ಜಾಯೇತ ವಿಧಿದೃಷ್ಟೇನ ಕರ್ಮಣಾ ॥3॥

ಗ್ರೀಷ್ಮ ಕಾಲದಲ್ಲಿ ಹನ್ನೆರಡು ವರ್ಷಗಳವರೆಗೆ ಅಗ್ನಿ ತಪಸ್ಸನ್ನು ವಿಧಿಗೆ ಅನುಸಾರವಾಗಿ ಮಾಡುವವನು ರುದ್ರಲೋಕವನ್ನು ಹೊಂದುತ್ತಾನೆ.

ಉಪವಾಸವ್ರತಂ ಕುರ್ವನ್ ವರ್ಷಾಕಾಲೇ ದೃಢವ್ರತಃ |
ಸೋಮಲೋಕೇಽಭಿಜಾಯೇತ ನರೋ ದ್ವಾದಶವಾರ್ಷಿಕಮ್ ॥4॥

ಹನ್ನೆರಡು ವರ್ಷದವರೆಗೆ ವರ್ಷಾಕಾಲದಲ್ಲಿ ದೃಢವಾದ ವ್ರತವನ್ನು ಧರಿಸಿ, ಉಪವಾಸವನ್ನು ಮಾಡುವವನು ಚಂದ್ರಲೋಕವನ್ನು ಹೊಂದುತ್ತಾನೆ.

ಕಾಷ್ಠವನ್ಮೌನಮಾಸ್ಥಾಯ ನರೋ ದ್ವಾದಶವಾರ್ಷಿಕಮ್ |
ಮರುತಾಂ ಲೋಕಮಾಸ್ಥಾಯ ತತ್ರ ಭೋಗೈಶ್ಚ ಯುಜ್ಯತೇ ॥5॥

ಹನ್ನೆರಡು ವರ್ಷಗಳ ಕಾಲ ಕಾಷ್ಠಮೌನವನ್ನು ಮಾಡುವ ನರನು ಮರುತ್ತುಗಳ ಲೋಕವನ್ನು ಹೊಂದಿ ಅಲ್ಲಿ ಭೋಗಗಳನ್ನು ಅನುಭವಿಸುತ್ತಾನೆ.

ಕುಶಶರ್ಕರಸಂಯುಕ್ತೇ ಸ್ಥಂಡಿಲೇ ಸಂವಿಶನ್ಮುನಿಃ |
ಯಕ್ಷಲೋಕೇಽಭಿಜಾಯೇತ ಸಹಸ್ರಾಣಿ ಚತುರ್ದಶ ॥6॥

ದರ್ಭೆಗಳು ಮತ್ತು ಮರಳು ಇರುವ ಭೂಮಿಯಲ್ಲಿ ಮಲಗುವ ಮುನಿಯು ಯಕ್ಷಲೋಕವನ್ನು ಹೊಂದಿ ಹದಿನಾಲ್ಕು ಸಾವಿರ ವರ್ಷಗಳ ಕಾಲ ಅಲ್ಲಿರುತ್ತಾನೆ.

ವರ್ಷಾಣಾಂ ಭೋಗಸಂಯುಕ್ತೋ ನರೋ ದ್ವಾದಶವಾರ್ಷಿಕಮ್ |
ವೀರಾಸನಗತೋ ಯಸ್ತು ಕಂಟಕಾಫಲಕಾಶ್ರಿತಃ |
ಗಂಧರ್ವೇಷ್ವಭಿಜಾಯೇತ ಸಹಸ್ರಾಣಿ ಚತುರ್ದಶ ॥7॥

ಹನ್ನೆರಡು ವರ್ಷಗಳವರೆಗೆ ಮುಳ್ಳಿನ ಹಲಗೆಯ ಮೇಲೆ ವೀರಾಸನದಲ್ಲಿ ನಿಲ್ಲುವ ನರನು ಗಂಧರ್ವಲೋಕವನ್ನು ಹೊಂದಿ, ಅಲ್ಲಿ ಹದಿನಾಲ್ಕು ಸಾವಿರ ವರ್ಷಗಳ ಕಾಲ ಭೋಗಗಳನ್ನು ಅನುಭವಿಸುತ್ತಾನೆ.

ವೀರಸ್ಥಾಯೀ ಚೋರ್ಧ್ವಬಾಹುರ್ನರೋ ದ್ವಾದಶವಾರ್ಷಿಕಮ್ |
ದೇವಲೋಕೇಽಭಿಜಾಯೇತ ದಿವ್ಯಭೋಗಸಮನ್ವಿತಃ ॥8॥

ಹನ್ನೆರಡು ವರ್ಷಗಳ ಕಾಲ ವೀರಸ್ಥಾಯಿಯಾಗಿ ಬಾಹುಗಳನ್ನು ಎತ್ತಿ ನಿಲ್ಲುವ ನರನು ದೇವಲೋಕವನ್ನು ಹೊಂದಿ ದಿವ್ಯಭೋಗಗಳನ್ನು ಅನುಭವಿಸುತ್ತಾನೆ.
ಪಾದಾಂಗುಷ್ಠೇನ ಯಸ್ತಿಷ್ಠೇದೂರ್ಧ್ವಬಾಹುರ್ಜಿತೇಂದ್ರಿಯಃ |
ಇಂದ್ರಲೋಕೇಽಭಿಜಾಯೇತ ಸಹಸ್ರಾಣಿ ಚತುರ್ದಶ ॥9॥
ಬಾಹುಗಳನ್ನು ಮೇಲಕ್ಕೆತ್ತಿ ಜಿತೇಂದ್ರಿಯನಾಗಿ ಪಾದಾಂಗುಷ್ಠದ ಮೇಲೆ ನಿಲ್ಲುವವನು ಇಂದ್ರಲೋಕವನ್ನು ಹೊಂದಿ ಅಲ್ಲಿ ಹದಿನಾಲ್ಕು ಸಾವಿರ ವರ್ಷಗಳ ಕಾಲ ಇರುತ್ತಾರೆ.
ಆಹಾರನಿಯಮಂ ಕೃತ್ವಾ ಮುನಿರ್ದ್ವಾದಶವಾರ್ಷಿಕಮ್ |
ನಾಗಲೋಕೇಽಭಿಜಾಯೇತ ಸಂವತ್ಸರಗಣಾನ್ ಬಹೂನ್ ॥10॥
ಹನ್ನೆರಡು ವರ್ಷಗಳವರೆಗೆ ಆಹಾರನಿಯಮವನ್ನು ಮಾಡಿದ ಮುನಿಯು ನಾಗಲೋಕವನ್ನು ಹೊಂದಿ ಅಲ್ಲಿ ಅನೇಕ ವರ್ಷಗಳ ಕಾಲ ಇರುತ್ತಾನೆ.
ಏವಂ ದೃಢವ್ರತಾ ದೇವಿ ವಾನಪ್ರಸ್ಥಾಶ್ಚ ಕರ್ಮಭಿಃ |
ಸ್ಥಾನೇಷು ತೇಷು ತಿಷ್ಠಂತಿ ತತ್ರದ್ಭೋಗಸಮನ್ವಿತಾಃ ॥11॥
ಎಲೌ ದೇವಿಯೇ, ಹೀಗೆ ಕಠಿಣವಾದ ವ್ರತವನ್ನು ಮಾಡಿದ ವಾನಪ್ರಸ್ಥರು ತಮ್ಮ ಕರ್ಮಗಳಿಂದ ಆಯಾ ಸ್ಥಾನದಲ್ಲಿ ಭೋಗದಿಂದ ಕೂಡಿದವರಾಗಿ ಇರುತ್ತಾರೆ.
ತೇಭ್ಯೋ ಭ್ರಷ್ಟಾಃ ಪುನರ್ದೇವಿ ಜಾಯಂತೇ ನೃಷು ಭೋಗಿನಃ |
ವರ್ಣೋತ್ತಮಕುಲೇಷ್ವೇವ ಧನಧಾನ್ಯಸಮನ್ವಿತಾಃ ॥12॥
ಹೀಗೆಯೇ ಪುಣ್ಯಕ್ಷಯವಾದ ಮೇಲೆ ಆ ಸ್ಥಾನದಿಂದ ಭ್ರಷ್ಟರಾಗಿ ಉತ್ತಮ ವರ್ಣದ ಕುಲದಲ್ಲಿ ಧನ-ಧಾನ್ಯ ಸಮನ್ವಿತರಾಗಿ ಭೋಗವನ್ನು ಹೊಂದುವವರಾಗಿ ಜನಿಸುತ್ತಾರೆ.
ಏತತ್ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ॥13॥
ದೇವಿ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಲೋಕಾನ್ ವೈ ವಿವರಾಣಾಂ ತು ಧರ್ಮಮಿಚ್ಛಾಮಿ ಮಾನದ |
ಕೃಪಯಾ ಪರಯಾಽಽವಿಷ್ಟಸ್ತನ್ಮೇ ಬ್ರೂಹಿ ಮಹೇಶ್ವರ ॥14॥
ಉಮಾ ಎಲೈ ಮಾನದನೇ, ವಿಧವೆಯರ ಧರ್ಮವನ್ನು ಮತ್ತು ಅವರು ಹೊಂದುವ ಲೋಕಗಳನ್ನು ಕೇಳಲು ಬಯಸುತ್ತೇನೆ. ಮಹೇಶ್ವರನೇ, ನನ್ನ ಮೇಲೆ ಬಹಳ ಕೃಪೆಯನ್ನು ಮಾಡಿ ಅದನ್ನು ಹೇಳು (ಲಕ್ಷ್ಮಾಲಂಕಾರ).
ಮಹೇಶ್ವರಃ
ಧರ್ಮಂ ಚ ವಿವರಾಣಾಂ ತ್ವಂ ಶೃಣು ಭಾಮಿನಿ ತತ್ಪರಾ ॥15॥
ಮಹೇಶ್ವರ ಭಾಮಿನಿಯೇ, ವಿಧವೆಯರ ಧರ್ಮಗಳನ್ನು ಅವಧಾನದಿಂದ ಕೇಳು.
ವ್ರತೋಪವಾಸಶುದ್ಧಾಂಗಾಸ್ತೀರ್ಥಸ್ನಾನಪರಾಯಣಾಃ |
ಧೃತಿಮಂತಃ ಕ್ಷಮಾಯುಕ್ತಾಃ ಸತ್ಯವ್ರತಪರಾಯಣಾಃ ॥16॥
ಪಕ್ಷಮಾಸೋಪವಾಸೈಶ್ಚ ಕರ್ಶಿತಾ ಧರ್ಮದರ್ಶಿನಃ |
ವರ್ಷೈಃ ಶೀತಾತಪೈರೇವ ಕುರ್ವಂತಃ ಪರಮಂ ತಪಃ |
ಕಾಲಯೋಗೇನ ಗಚ್ಛಂತಿ ಶಕ್ರಲೋಕಂ ಶುಚಿಸ್ಮಿತೇ ॥17॥
ಎಲೌ ಶುಚಿಸ್ಮಿತೆಯೇ, ಸತತ ಉಪವಾಸದಿಂದ ಶೋಭಿಸುವ, ಶರೀರವುಳ್ಳವರಾಗಿ ತೀರ್ಥಸ್ನಾನ ಪರಾಯಣರಾಗಿ, ಧೈರ್ಯವನ್ನೂ, ಕ್ಷಮೆಯನ್ನೂ ಹೊಂದಿ, ಸತ್ಯವ್ರತ ಪರಾಯಣರಾಗಿ, ಪಕ್ಷೋಪವಾಸ ಮತ್ತು ಮಾಸೋಪವಾಸಗಳಿಂದ ಶರೀರವನ್ನು ಸವೆಸಿ, ಧರ್ಮಗಳನ್ನು ಗಮನಿಸಿ, ಬಿಸಿಲು, ಮಳೆ ಮತ್ತು ಹಿಮಗಳಲ್ಲಿ ಶ್ರೇಷ್ಠವಾದ ತಪಸ್ಸನ್ನು ಮಾಡುತ್ತಾ ಮರಣವನ್ನು ಹೊಂದಿ ಇಂದ್ರಲೋಕಕ್ಕೆ ಹೋಗುತ್ತಾರೆ.
ತತ್ರ ತೇ ಭೋಗಸಂಯುಕ್ತಾ ದಿವ್ಯಗಂಧಸಮನ್ವಿತಾಃ |
ದಿವ್ಯಭೂಷಣಸಂಯುಕ್ತಾ ವಿಮಾನವರಸಂಯುತಾಃ ॥18॥
ವಿಚರಂತಿ ಯಥಾಕಾಮಂ ದಿವ್ಯಸ್ತ್ರೀಗಣಸಂಯುತಾಃ |
ಏತತ್ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ॥19॥
ಅಲ್ಲಿ ಅವರು ದಿವ್ಯಗಂಧ ಸಮನ್ವಿತರೂ, ದಿವ್ಯಭೂಷಣಯುಕ್ತರೂ, ಒಳ್ಳೆಯ ವಿಮಾನವುಳ್ಳವರೂ, ಭೋಗಸಂಯುಕ್ತರೂ ಆಗಿ ದಿವ್ಯಸ್ತ್ರೀ ಸಮೂಹದ ಜೊತೆಯಲ್ಲಿ ತಮಗೆ ಇಷ್ಟಬಂದಂತೆ ಸಂಚರಿಸುತ್ತಾರೆ. ದೇವಿಯೇ, ಇದನ್ನು ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ತೇಷಾಂ ಚಕ್ರಧರಾಣಾಂ ಚ ಧರ್ಮಮಿಚ್ಛಾಮಿ ವೈ ಪ್ರಭೋ ॥20॥
ಉಮಾ ಎಲೈ ಪ್ರಭುವೇ, ಚಕ್ರಧರರ ಧರ್ಮಗಳನ್ನು ಕೇಳಲು ಬಯಸುತ್ತೇನೆ. ಚಕ್ರಧರರೆಂದರೆ ತಮ್ಮ ವಸ್ತುಗಳ ಭಾರವನ್ನು ಹೊರಲಾರದೆ ಚಕ್ರವುಳ್ಳ ಗಾಡಿಗಳಲ್ಲಿ ತಿರುಗಾಡುವ ವಯೋವೃದ್ಧರಾದ ಕುಟುಂಬಗಳು ಎಂದು ಅರ್ಥ (ಲಕ್ಷ್ಮಾಲಂಕಾರ).
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ಶಾಕಟಿಕಂ ಶುಭೇ ॥21॥

ಮಹೇಶ್ವರ ಸಂತೋಷ. ಶುಭಳಾದವಳೇ, ಗಾಡಿಯಲ್ಲಿ ಸಂಚರಿಸುವ ವೃದ್ಧರ ಧರ್ಮವನ್ನು ಹೇಳುತ್ತೇನೆ.
ಸಂವಹಂತೋ ಧುರಂ ದಾರ್ಯೈಃ ಶಕಟಾನಾಂ ತು ಸರ್ವದಾ |
ಪ್ರಾರ್ಥಯಂತೇ ಯಥಾ ಗ್ರಾಮ್ಯಾಃ ಶಕಟೈರ್ಭೈಕ್ಷಚರ್ಯಯಾ ॥22॥
ಪತ್ನಿಯರ ಜೊತೆಯಲ್ಲಿ ತಮ್ಮ ವಸ್ತುಗಳನ್ನು ಶಕಟಗಳಲ್ಲಿ ಕೊಂಡೊಯ್ಯುತ್ತಾ ಶಕಟಗಳಲ್ಲಿಯೇ ಸಂಚರಿಸಿ ಗ್ರಾಮ್ಯ ಪುರುಷರು ಬೇಡುವಂತೆ ಭಿಕ್ಷೆಯನ್ನು ಬೇಡುತ್ತಾರೆ.
ತಪೋರ್ಜನಪರಾ ಧೀರಾಸ್ತಪಸಾ ಕ್ಷೀಣಕಲ್ಮಷಾಃ |
ಪರ್ಯಟಂತೋ ದಿಶಃ ಸರ್ವಾಃ ಕಾಮಕ್ರೋಧವಿವರ್ಜಿತಾಃ ॥23॥
ತಪಸ್ಸನ್ನು ಗಳಿಸುವುದರಲ್ಲಿಯೇ ತಾತ್ಪರ್ಯವುಳ್ಳವರಾಗಿ, ಧೀರರಾಗಿ, ತಪಸ್ಸಿನಿಂದ ತಮ್ಮ ದೋಷಗಳನ್ನು ಕಳೆದುಕೊಂಡು, ಕಾಮ-ಕ್ರೋಧ ವಿವರ್ಜಿತರಾಗಿ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಾರೆ.
ಸ್ವವಶಾದೇವ ತೇ ಮೃತ್ಯುಮಭಿಕಾಂಕ್ಷಂತಿ ನಿತ್ಯಶಃ |
ಇಂದ್ರಲೋಕೇ ತಥಾ ತೇಷಾಂ ನಿರ್ಮಿತಾ ಭೋಗಸಂಚಯಾಃ ॥24॥
ತಮ್ಮ ಇಚ್ಛೆಯಿಂದಲೇ ಅವರು ನಿತ್ಯವೂ ಮೃತ್ಯುವನ್ನು ಬಯಸುತ್ತಾರೆ. ಇಂದ್ರಲೋಕದಲ್ಲಿ ಅವರಿಗಾಗಿ ಭೋಗಸಾಮಗ್ರಿಗಳು ನಿರ್ಮಿತವಾಗಿರುತ್ತವೆ.
ಅಮರೈಃ ಸಹ ತೇ ಯಾಂತಿ ದೇವವದ್ ಭೋಗಸಂಯುತಾಃ |
ವರಾಪ್ಸರೋಭಿಃ ಸಂಯುಕ್ತಾಶ್ಚಿರಕಾಲಮನಿಂದಿತೇ ॥25॥
ಎಲೌ ಅನಿಂದಿತೆಯೇ, ಅವರು ದೇವತೆಗಳಂತೆ ಭೋಗಯುಕ್ತರಾಗಿ, ಶ್ರೇಷ್ಠರಾದ ಅಪ್ಸರೆಯರಿಂದ ಕೂಡಿ ಬಹಳ ಕಾಲದವರೆಗೆ ಸಂಚರಿಸುತ್ತಾರೆ.
ತೇನೈವ ಕಾಲಯೋಗೇನ ತ್ರಿದಿವಂ ಯಾಂತಿ ಶೋಭನೇ |
ತತ್ರ ಪ್ರಮುದಿತಾ ಭೋಗೈರ್ವಿಚರಂತಿ ಯಥಾಸುಖಮ್ ॥26॥
ಏತತ್ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ॥27॥
ಎಲೌ ಶೋಭನೆಯೇ, ಅವರಿಗೆ ಮರಣವು ಒದಗಿದಾಗ ಸ್ವರ್ಗಲೋಕಕ್ಕೆ ಹೋಗಿ ಸಂತೋಷದಿಂದ ಭೋಗಗಳನ್ನು ಅನುಭವಿಸುತ್ತಾ ಸಂಚರಿಸುತ್ತಾರೆ. ದೇವಿಯೇ, ಇದನ್ನು ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ವೈಖಾನಸಾನಾಂ ವೈ ಧರ್ಮಂ ಶ್ರೋತುಮಿಚ್ಛಾಮ್ಯಹಂ ಪ್ರಭೋ ॥28॥
ಉಮಾ ಪ್ರಭುವೇ, ವೈಖಾನಸರ ಧರ್ಮವನ್ನು ಕೇಳಲು ಬಯಸುತ್ತೇನೆ.
ಮಹೇಶ್ವರಃ
ತೇ ವೈ ವೈಖಾನಸಾ ನಾಮ ವಾನಪ್ರಸ್ಥಾಃ ಶುಭೇಕ್ಷಣೇ |
ತೀವ್ರೇಣ ತಪಸಾ ಯುಕ್ತಾ ದೀಪ್ತಿಮಂತಃ ಸ್ವತೇಜಸಾ |
ಸತ್ಯವ್ರತಪರಾ ಧೀರಾಸ್ತೇಷಾಂ ನಿಷ್ಕಲ್ಮಷಂ ತಪಃ ॥27॥
ಮಹೇಶ್ವರ ಎಲೌ ಶುಭೇಕ್ಷಣೆಯೇ, ವೈಖಾನಸರು ವಾನಪ್ರಸ್ಥರ ಒಂದು ಪ್ರಭೇದ. ಅವರು ತೀವ್ರವಾದ ತಪಸ್ಸಿನಿಂದ ಕೂಡಿ ತಮ್ಮ ತೇಜಸ್ಸಿನಿಂದ ಕಂಗೊಳಿಸುತ್ತಾರೆ. ಅವರು ಧೀರರು ಮತ್ತು ಸತ್ಯವ್ರತ ಪರಾಯಣರು. ಅವರ ತಪಸ್ಸು ನಿಷ್ಕಲ್ಮಷವಾಗಿರುತ್ತದೆ.
ಅಶ್ಮಕುಟ್ಟಾಸ್ತಥಾಽನ್ಯೇ ಚ ದಂತೋಲೂಖಲಿನಸ್ತಥಾ |
ಶೀರ್ಣಪರ್ಣಾಶಿನಶ್ಚಾನ್ಯೇ ಉಂಛಯಂತಿ ತಥಾ ಪರೇ ॥28॥
ಅವರಲ್ಲಿ ಕೆಲವರು ಅಶ್ಮಕುಟ್ಟರು (ಕಲ್ಲಿನಿಂದ ಕುಟ್ಟಿದ ಆಹಾರವನ್ನು ಮಾತ್ರ ಸೇವಿಸುವವರು. ಪಕ್ವವಾದ ಆಹಾರವನ್ನಲ್ಲ). ಇನ್ನು ಕೆಲವರು ದಂತೋಲೂಖಲಿಗಳು (ಹಲ್ಲಿನಿಂದ ಅಗಿದು ತಿನ್ನಬಹುದಾದುದನ್ನು ಮಾತ್ರ ತಿನ್ನುತ್ತಾರೆ. ಕುಟ್ಟಿದುದನ್ನಾಗಲೀ, ಬೇಯಿಸಿದುದನ್ನಾಗಲೀ ತಿನ್ನುವುದಿಲ್ಲ). ಇನ್ನು ಕೆಲವರು ಹಣ್ಣಾಗಿ ಬಿದ್ದ ಎಲೆಗಳನ್ನು ತಿನ್ನುವವರು. ಇನ್ನು ಕೆಲವರು ಉಂಛವೃತ್ತಿಯಿಂದ (ಕಾಳು ಕಡಿಗಳಿಂದ) ಜೀವಿಸುವವರು.
ಕಪೋತವೃತ್ತಯಶ್ಚಾನ್ಯೇ ಕಾಪೋತೀಂ ವೃತ್ತಿಮಾಶ್ರಿತಾಃ |
ಪಶುಪ್ರಚಾರನಿರತಾಃ ಫೇನಪಾಶ್ಚ ತಥಾ ಪರೇ ॥29॥
ಕೆಲವರು ಕಪೋತವೃತ್ತಿಯಲ್ಲಿ ನಿರತರಾಗಿರುತ್ತಾರೆ. ಕೆಲವರು ಪಶುಗಳನ್ನು ಮೇಯಿಸುವುದರಲ್ಲಿ ನಿರತರಾಗಿರುತ್ತಾರೆ. ಇನ್ನು ಕೆಲವರು ಹಾಲು ಕುಡಿಯುವಾಗ ಕರುಗಳ ಬಾಯಿಂದ ಬಂದ ನೊರೆಯನ್ನು ಮಾತ್ರ ಕುಡಿದು ತಪಸ್ಸನ್ನು ಮಾಡುತ್ತಾರೆ.
ಮೃಗವನ್ಮೃಗಚರ್ಯಾಯಾಂ ಸಂಚರಂತಿ ತಥಾ ಪರೇ |
ಅಬ್ಭಕ್ಷ್ಯಾ ವಾಯುಭಕ್ಷಾಶ್ಚ ನಿರಾಹಾರಾಸ್ತಥೈವ ಚ ॥30॥
ಕೆಲವರು ಮೃಗಗಳಂತೆ ಮೃಗಚರ್ಯೆಯನ್ನು ಮಾಡುತ್ತಾ ಸಂಚರಿಸುತ್ತಾರೆ (ಹಿಂದೆ ಮಾಧವಿಯ ಕಥೆಯಲ್ಲಿ ಇದರ ಉಲ್ಲೇಖವಿದೆ). ಕೆಲವರು ಅಬ್ಭಕ್ಷರೂ, ಕೆಲವರು ವಾಯುಭಕ್ಷರೂ, ಕೆಲವರು ನಿರಾಹಾರರೂ ಆಗಿರುತ್ತಾರೆ.
ಸಂಚರಂತಿ ತಪೋ ಘೋರಂ ವ್ಯಾಧಿಮೃತ್ಯುವಿವರ್ಜಿತಾಃ |
ಸ್ವವಶಾದೇವ ತೇ ಮೃತ್ಯುಮಭಿಕಾಂಕ್ಷಂತಿ ನಿತ್ಯಶಃ ॥31॥
ವ್ಯಾಧಿ, ಮೃತ್ಯುಗಳ ಭಯವನ್ನು ತೊರೆದು ಘೋರವಾದ ತಪಸ್ಸನ್ನು ಆಚರಿಸುತ್ತಾರೆ. ಅವರು ತಮ್ಮ ಇಚ್ಛೆಯಿಂದಲೇ ಮೃತ್ಯುವನ್ನು ಬಯಸುತ್ತಾರೆ (ಸ್ವಚ್ಛಂದ ಮೃತ್ಯುಗಳು).
ಇಂದ್ರಲೋಕೇ ತಥಾ ತೇಷಾಂ ನಿರ್ಮಿತಾ ಭೋಗಸಂಚಯಾಃ |

ಅಮರೈಃ ಸಹ ತೇ ಯಾಂತಿ ದೇವವದ್ ಭೋಗಸಂಯುತಾಃ ॥32॥
ವರಾಪ್ಸರೋಭಿಃ ಸಂಯುಕ್ತಾಶ್ಚಿರಕಾಲಮನಿಂದಿತೇ |
ಏತತ್ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥33॥
ಇಂದ್ರಲೋಕದಲ್ಲಿ ಅವರಿಗೆ ಭೋಗದ ರಾಶಿಗಳು ನಿರ್ಮಿಸಲ್ಪಟ್ಟಿರುತ್ತವೆ. ದೇವತೆಗಳಂತೆ ಭೋಗಯುಕ್ತರಾಗಿ ಅವರು ದೇವತೆಗಳ ಜೊತೆಯಲ್ಲಿ ಎಲೌ ಅನಿಂದಿತೆಯೇ, ಶ್ರೇಷ್ಠವಾದ ಅಪ್ಸರೆಯರ ಜೊತೆಯಲ್ಲಿ ಬಹುಕಾಲ ಸಂಚರಿಸುತ್ತಾರೆ. ದೇವಿಯೇ, ನಿನಗೆ ಇದನ್ನು ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ಶ್ರೋತುಮಿಚ್ಛಾಮಿ ವಾಲಖಿಲ್ಯಾಂಸ್ತಪೋಧನಾನ್ ॥34॥
ಉಮಾ ಭಗವಂತನೇ, ತಪೋಧನರಾದ ವಾಲಖಿಲ್ಯ ಋಷಿಗಳ ವಿಷಯವನ್ನು ಕೇಳಲು ಬಯಸುತ್ತೇನೆ.
ಮಹೇಶ್ವರಃ
ಧರ್ಮಚರ್ಯಾಂ ತಥಾ ದೇವಿ ವಾಲಖಿಲ್ಯಗತಾಂ ಶೃಣು ॥35॥
ಮಹೇಶ್ವರ ದೇವಿಯೇ, ವಾಲಖಿಲ್ಯರು ಮಾಡುವ ತಪಶ್ಚರ್ಯವನ್ನು ಕೇಳು.
ಮೃಗನಿರ್ಮೋಕವಸನಾ ನಿರ್ದ್ವಂದ್ವಾಸ್ತೇ ತಪೋಧನಾಃ |
ಅಂಗುಷ್ಠಮಾತ್ರಾಃ ಸುಶ್ರೋಣಿ ಸ್ವೇಷ್ವೇವಾಂಗೇಷು ಸಂಯುತಾಃ ॥36॥
ಅವರು ತಪೋಧನರಾಗಿ, ಮೃಗಚರ್ಮಧರರಾಗಿ, ಶೀತೋಷ್ಣಾದಿ ದ್ವಂದ್ವಗಳನ್ನು ಮೀರಿರುತ್ತಾರೆ. ಎಲೌ ಸುಶ್ರೋಣಿಯೇ, ಅವರು ಅಂಗುಷ್ಠ ಮಾತ್ರದಷ್ಟು ಎತ್ತರವಿದ್ದು ಎಲ್ಲಾ ಅಂಗಗಳನ್ನು ಹೊಂದಿರುತ್ತಾರೆ.
ತೇ ಮೃತ್ಯುವಿಷಯಾತೀತಾಸ್ತಪಃಸಿದ್ಧಾಸ್ತಪೋಬಲಾಃ |
ಜಿತಾಹಾರಾಃ ಜಿತಕ್ರೋಧಾಃ ಸರ್ವಭೋಗೇಷು ನಿಃಸ್ಪೃಹಾಃ |
ತಪಶ್ಚರಣಮಿಚ್ಛಂತೋ ಲೋಕಾರ್ಥಂ ಪರಮೋದ್ಯತಾಃ ॥37॥
ಅವರು ಮೃತ್ಯುಲೋಕವನ್ನು ಮೀರಿದವರು. ತಪಸ್ಸಿದ್ಧರಾದವರು. ತಪಸ್ಸನ್ನೇ ಬಲವಾಗಿ ಉಳ್ಳವರು. ಆಹಾರ ಜಯವನ್ನೂ, ಕ್ರೋಧಜಯವನ್ನೂ ಹೊಂದಿರುತ್ತಾರೆ. ಯಾವ ಭೋಗಗಳಲ್ಲೂ ಆಸಕ್ತರಲ್ಲ. ಲೋಕದ ಹಿತಕ್ಕಾಗಿ ಪರಮಪ್ರಯತ್ನದಿಂದ ತಪಸ್ಸನ್ನು ಮಾಡುತ್ತಾರೆ.
ಉದ್ಯಂತಂ ಸತತಂ ಸೂರ್ಯಂ ಸ್ತುವಂತೋ ವಿವಿಧೈಃ ಸ್ತವೈಃ |
ಭಾಸ್ಕರಸ್ಯೇವ ಕಿರಣೈಃ ಸಹಸಾ ಯಾಂತಿ ನಿತ್ಯದಾ |
ದ್ಯೋತಯಂತೋ ದಿಶಃ ಸರ್ವಾ ಧರ್ಮಜ್ಞಾಃ ಸತ್ಯವಾದಿನಃ ॥38॥
ಸತತವಾಗಿ ಉದಯಿಸುವ ಸೂರ್ಯನನ್ನು ವಿವಿಧ ಸ್ತೋತ್ರಗಳಿಂದ ಸ್ತೋತ್ರ ಮಾಡುತ್ತಾ ಸೂರ್ಯನ ಕಿರಣಗಳಂತೆ ಯಾವಾಗಲೂ ಶೀಘ್ರವಾಗಿ, ಹತ್ತು ದಿಕ್ಕುಗಳನ್ನು ಬೆಳಗುತ್ತಾ ಧರ್ಮಜ್ಞರೂ, ಸತ್ಯವಾದಿಗಳೂ ಆದ ಅವರು ಸಂಚರಿಸುತ್ತಾರೆ.
ತೇಷ್ವೇವ ನಿರ್ಮಲಂ ಸತ್ಯಂ ಲೋಕಾರ್ಥಂ ತು ಪ್ರತಿಷ್ಠಿತಮ್ |
ಲೋಕೋಽಯಂ ಧಾರ್ಯತೇ ದೇವಿ ತೇಷಾಮೇವ ತಪೋಬಲಾತ್ ॥
ಲೋಕದ ಹಿತಕ್ಕಾಗಿ ನಿರ್ಮಲವಾದ ಸತ್ಯವು ಅವರಲ್ಲಿಯೇ ಪ್ರತಿಷ್ಠಿತವಾಗಿದೆ. ದೇವಿಯೇ, ಈ ಲೋಕವು ಅವರ ತಪೋಬಲದಿಂದಲೇ ನಿಂತಿದೆ.
ಮಹಾತ್ಮನಾಂ ತು ತಪಸಾ ಸತ್ಯೇನ ಚ ಶುಚಿಸ್ಮಿತೇ |
ಕ್ಷಮಯಾ ಚ ಮಹಾಭಾಗೇ ಭೂತಾನಾಂ ಸಂಸ್ಥಿತಿಂ ವಿದುಃ ॥40॥
ಎಲೌ ಮಹಾನುಭಾವಳೇ, ಮಹಾತ್ಮರಾದ ಅವರ ತಪಸ್ಸಿನಿಂದ, ಸತ್ಯದಿಂದ, ಕ್ಷಮಾಗುಣದಿಂದ ಎಲ್ಲ ಪ್ರಾಣಿಗಳೂ ಬದುಕಿವೆ ಎಂದು ಹೇಳುತ್ತಾರೆ.
ಪ್ರಜಾರ್ಥಮಪಿ ಲೋಕಾರ್ಥಂ ಮಹದ್ಭಿಃ ಕ್ರಿಯತೇ ತಪಃ |
ತಪಸಾ ಪ್ರಾಪ್ಯತೇ ಸರ್ವಂ ತಪಸಾ ಪ್ರಾಪ್ಯತೇ ಫಲಮ್ |
ದುಷ್ಪ್ರಾಪಮಪಿ ಯಲ್ಲೋಕೇ ತಪಸಾ ಪ್ರಾಪ್ಯತೇ ಹಿ ತತ್ ॥41॥
ಪ್ರಜೆಗಳ ಸಲುವಾಗಿ ಮತ್ತು ಲೋಕಗಳ ಸಲುವಾಗಿ ಮಹಾತ್ಮರಾದ ಅವರು ದೊಡ್ಡ ತಪಸ್ಸನ್ನು ಆಚರಿಸುತ್ತಾರೆ. ತಪಸ್ಸಿನಿಂದ ಎಲ್ಲ ಫಲವೂ ಪ್ರಾಪ್ತವಾಗುತ್ತದೆ. ಲೋಕದಲ್ಲಿ ಪಡೆಯಲು ಅಸಾಧ್ಯವಾದುದನ್ನೆಲ್ಲಾ ತಪಸ್ಸಿನಿಂದ ಪಡೆಯಬಹುದು.
ಪಂಚಭೂತಸ್ಥಿತಿಶ್ಚೈವ ಲೋಕಸೃಷ್ಟಿವಿವರ್ಧನಮ್ |
ಏತತ್ಸರ್ವಂ ಸಮಾಸೇನ ತಪೋಯೋಗಾದ್ ವಿನಿರ್ಮಿತಮ್ ॥42॥
ಪಂಚಭೂತಗಳ ಸ್ಥಿತಿ, ಲೋಕದಲ್ಲಿ ಸಂತತಿಯ ಬೆಳವಣಿಗೆ ಇವೆಲ್ಲವೂ ಸಂಕ್ಷೇಪವಾಗಿ ಹೇಳುವುದಾದರೆ ತಪಸ್ಸಿನ ಬಲದಿಂದಲೇ ಉಂಟಾಗಿದೆ.
ತಸ್ಮಾದಂಧ ಋಷಿಗಣಸ್ತಪಸ್ತಪ ಇತಿ ಪ್ರಿಯೇ |
ಧರ್ಮಾನ್ವೇಷೀ ತಪಃ ಕರ್ತುಂ ಯತತೇ ಸತತಂ ಪ್ರಿಯೇ ॥43॥
ಎಲೌ ಪ್ರಿಯೆಯೇ, ಆದ್ದರಿಂದ ಋಷಿಸಮೂಹವು ಬೇರೆ ಎಲ್ಲ ವಿಷಯದಲ್ಲಿಯೂ ಏನನ್ನೂ ಗಮನಿಸದೆ ಕುರುಡಾಗಿ ತಪಸ್ಸು ತಪಸ್ಸು ಎಂದು ಹೇಳುತ್ತಾ ಸತತವಾಗಿ ತಪಸ್ಸನ್ನು ಮಾಡಲು ಪ್ರಯತ್ನ ಪಡುತ್ತದೆ.
ಅಮರತ್ವಂ ವಶಿತ್ವಂ ಚ ತಪಸಾ ಪ್ರಾರ್ಥಯೇತ್ ಸದಾ |
ಏತತ್ತೇ ಕಥಿತಂ ಸರ್ವಂ ಶೃಣ್ವಂತ್ಯಾಸ್ತೇ ಶ್ರುತಂ ಪ್ರಿಯೇ |

ಪ್ರಿಯಾರ್ಥಮೃಷಿಸಂಘಸ್ಯ ಪ್ರಜಾನಾಂ ಹಿತಕಾಮ್ಯಯಾ ॥44॥
ಅಮರತ್ವವನ್ನೂ ಮತ್ತು ವಶಿತ್ವವನ್ನೂ ಅದು ತನ್ನ ತಪಸ್ಸಿನಿಂದ ಪ್ರಾರ್ಥನೆಯನ್ನು ಮಾಡುತ್ತದೆ. ಎಲೌ ಪ್ರಿಯೆಯೇ, ಪ್ರಶ್ನೆಯನ್ನು ಕೇಳಿದ ನಿನ್ನ ಸಲುವಾಗಿ ಈ ಋಷಿ ಸಮೂಹಗಳ ಸಲುವಾಗಿ ಮತ್ತು ಪ್ರಜೆಗಳ ಹಿತವನ್ನು ಬಯಸಿ ಇವೆಲ್ಲವನ್ನೂ ಹೇಳಿದ್ದೇನೆ.
ನಾರದಃ
ಏವಂ ಬ್ರುವಂತಂ ದೇವೇಶಮೃಷಯಶ್ಚಾಪಿ ತುಷ್ಟುವುಃ |
ಭೂಯಃ ಪರಮಕಂ ಯತ್ನಂ ತದಾಪ್ರಭೃತಿ ಚಕ್ರಿರೇ ॥45॥
ನಾರದ ದೇವೇಶನು ಹೀಗೆ ಹೇಳುತ್ತಿರಲು ಋಷಿಗಳು ಅವನನ್ನು ಸ್ತೋತ್ರ ಮಾಡಿ ಅಲ್ಲಿಂದ ಆರಂಭಿಸಿ ತಮ್ಮ ತಪಸ್ಸಿನ ವಿಷಯದಲ್ಲಿ ಇನ್ನೂ ಹೆಚ್ಚಿನ ಪ್ರಯತ್ನವನ್ನು ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ಸಪ್ತನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೆಂಟನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಸಾಧಾರಣಧರ್ಮದ ಕಥನ.
ಉಮಾ
ಉಕ್ತಸ್ತ್ವಯಾ ತ್ರಿವರ್ಗಸ್ಯ ಧರ್ಮಃ ಪರಮಕಃ ಶುಭಃ |
ಸರ್ವವ್ಯಾಪೀ ತು ಯೋ ಧರ್ಮೋ ಭಗವಂಸ್ತದ್ ಬ್ರವೀತು ಮೇ ॥1॥
ಉಮಾ ಪೂಜ್ಯನೇ, ನೀನು ಧರ್ಮಾರ್ಥಕಾಮಗಳಿಗೆ ಸಂಬಂಧಿಸಿದ, ಶ್ರೇಷ್ಠವಾದ, ಶುಭವಾದ ಧರ್ಮಗಳನ್ನು ಹೇಳಿದ್ದೀಯೆ.
ಸರ್ವವ್ಯಾಪಿಯಾದ (ಸರ್ವ ಸಾಧಾರಣವಾದ) ಧರ್ಮಗಳನ್ನು ಹೇಳು.
ಮಹೇಶ್ವರಃ
ಬ್ರಹ್ಮಣಾ ಲೋಕಸಂಸಾರೇ ಸೃಷ್ಟಾ ಧಾತ್ರಾ ಗುಣಾರ್ಥಿನಾ |
ಲೋಕಾಂಸ್ತಾರಯಿತುಂ ಯುಕ್ತಾ ಮರ್ತ್ಯೇಷು ಕ್ಷಿತಿದೇವತಾಃ ॥2॥
ಮಹೇಶ್ವರ ಲೋಕಯಾತ್ರೆಗಾಗಿ ಸದ್ಗುಣಗಳನ್ನು ಅಪೇಕ್ಷಿಸಿದ ಬ್ರಹ್ಮದೇವರು ಲೋಕಗಳನ್ನು ಸಂಕಟದಿಂದ ಪಾರು ಮಾಡಲು ಮನುಷ್ಯರಲ್ಲಿ ಬ್ರಾಹ್ಮಣರನ್ನು ಇಟ್ಟರು.
ತೇಷು ತಾವತ್ಪ್ರವಕ್ಷ್ಯಾಮಿ ಧರ್ಮಂ ಶುಭಫಲೋದಯಮ್ |
ಬ್ರಾಹ್ಮಣೇಷ್ವಭಯೋ ಧರ್ಮಃ ಪರಮಃ ಶುಭಲಕ್ಷಣಃ ॥3॥
ಅವರಲ್ಲಿರುವ ಶುಭಫಲವನ್ನು ಕೊಡುವ ಧರ್ಮಗಳನ್ನು ಹೇಳುವೆನು. ಬ್ರಾಹ್ಮಣರಲ್ಲಿರುವ ಅಭಯ ಧರ್ಮವು ಪರಮ ಶುಭವಾದುದು.
ಇಮೇ ಹಿ ಧರ್ಮಾ ಲೋಕಾರ್ಥಂ ಪೂರ್ವಂ ಸೃಷ್ಟಾಃ ಸ್ವಯಂಭುವಾ |
ಪೃಥಿವ್ಯಾಂ ಸಜ್ಜನೈರ್ನಿತ್ಯಂ ಕೀರ್ತ್ಯಮಾನಂ ನಿಬೋಧ ಮೇ ॥4॥
ಲೋಕದ ಹಿತಕ್ಕಾಗಿ ಬ್ರಹ್ಮದೇವರು ಮೊದಲು ಈ ಧರ್ಮವನ್ನು ಸೃಷ್ಟಿಸಿದರು. ಇದನ್ನು ಭೂಮಿಯಲ್ಲಿ ಸಜ್ಜನರು ಯಾವಾಗಲೂ ಹೇಳುತ್ತಾರೆ. ಅಂತಹ ಧರ್ಮಗಳನ್ನು ಕೇಳು.
ಸ್ವದಾರನಿರತಿರ್ಧರ್ಮೋ ನಿತ್ಯಂ ಜಪ್ಯಂ ತಥೈವ ಚ |
ಸರ್ವಾತಿಥ್ಯಂ ತ್ರಿವರ್ಗಸ್ಯ ಯಥಾಶಕ್ತಿ ದಿವಾನಿಶಮ್ ॥5॥
ತನ್ನ ಪತ್ನಿಯಲ್ಲೇ ತೃಪ್ತಿ, ನಿತ್ಯವೂ ಜಪ, ಹಗಲೂ ಮತ್ತು ರಾತ್ರಿಯೂ ಶಕ್ತಿಗೆ ಅನುಗುಣವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ಆತಿಥ್ಯ (ಇವು ಬ್ರಾಹ್ಮಣರ ಧರ್ಮಗಳು).
ಶೂದ್ರೋ ಧರ್ಮಪರೋ ನಿತ್ಯಂ ಶುಶ್ರೂಷಾಭಿಮನಾ ಭವೇತ್ ॥6॥
ಧರ್ಮಪರನಾದ ಶೂದ್ರನು ಯಾವಾಗಲೂ ಶುಶ್ರೂಷೆಯಲ್ಲಿ ರತನಾಗಿರಬೇಕು.
ತ್ರೈವಿದ್ಯೋ ಬ್ರಾಹ್ಮಣೋ ವೃದ್ಧೋ ನ ಚಾಧ್ಯಯನಜೀವಕಃ |
ತ್ರಿವರ್ಗಂ ತು ವ್ಯತಿಕ್ರಾಂತಸ್ತಸ್ಯ ಧರ್ಮಃ ಸನಾತನಃ ॥7॥
ವೇದವಿದ್ಯಾಸಂಪನ್ನನಾಗಿ ವೃದ್ಧನಾಗಿ ಅಧ್ಯಯನದಿಂದ ಜೀವಿಸದಿರುವ ಬ್ರಾಹ್ಮಣನು ಧರ್ಮಾರ್ಥಕಾಮಗಳನ್ನು ಮೀರಿರುತ್ತಾನೆ. ಅವನ ಧರ್ಮವು ಸನಾತನವಾದುದು (ಮೋಕ್ಷಪ್ರದವಾದುದು).
ಷಟ್ ಕರ್ಮಾಣಿ ಚ ಪ್ರೋಕ್ತಾನಿ ಸೃಷ್ಟಾನಿ ಬ್ರಹ್ಮಣಾ ಪುರಾ |
ಧರ್ಮಿಷ್ಠಾನಿ ವರಿಷ್ಠಾನಿ ಯಾನಿ ತಾನಿ ಶೃಣೂತ್ತಮೇ ॥8॥
ಎಲೈ ಶ್ರೇಷ್ಠಳೇ, ಬ್ರಹ್ಮದೇವರು ಹಿಂದೆ ಸೃಷ್ಟಿ ಮಾಡಿದ ಶ್ರೇಷ್ಠವೂ, ಧರ್ಮಿಷ್ಠವೂ ಆದ ಆರು ಕರ್ಮಗಳನ್ನು ಕೇಳು.
ಯಜನಂ ಯಾಜನಂ ಚೈವ ದಾನಂ ಪಾತ್ರೇ ಪ್ರತಿಗ್ರಹಃ |
ಅಧ್ಯಾಪನಮಧ್ಯಯನಂ ಷಟ್‌ಕರ್ಮಾ ಧರ್ಮಭಾಗ್ನೃಜುಃ ॥9॥
ಯಜನ, ಯಾಜನ, ಪಾತ್ರರಲ್ಲಿ ದಾನ, ಪ್ರತಿಗ್ರಹ, ಅಧ್ಯಯನ ಮತ್ತು ಅಧ್ಯಾಪನ ಈ ಆರು ಕರ್ಮಗಳು ಧರ್ಮವನ್ನು ಸಂಪಾದಿಸಿ ಕೊಡುವ ಋಜುವಾದವುಗಳು.
ನಿತ್ಯಸ್ವಾಧ್ಯಾಯತೋ ಧರ್ಮೋ ನಿತ್ಯಯಜ್ಞಃ ಸನಾತನಃ |

ದಾನಂ ಪ್ರಶಸ್ಯತೇ ನಿತ್ಯಂ ಬ್ರಾಹ್ಮಣೇಷು ತ್ರಿಕರ್ಮಸು ॥10॥
ಅದರಲ್ಲಿ ಬ್ರಾಹ್ಮಣರಲ್ಲಿ ನಿತ್ಯ ಅಧ್ಯಯನ, ನಿತ್ಯಧರ್ಮ ಮತ್ತು ನಿತ್ಯದಾನ- ಈ ಮೂರು ಕರ್ಮಗಳು ಪ್ರಶಸ್ತವಾದವುಗಳು.
ಅಯಂ ಪರಮಕೋ ಧರ್ಮಃ ಸಂವೃತಃ ಸತ್ಸು ವಿದ್ಯತೇ |
ಗರ್ಭಸ್ಥಾನೇ ವಿಶುದ್ಧಾನಾಂ ಧರ್ಮಸ್ಯ ನಿಯಮೋ ಮಹಾನ್ ॥11॥
ಈ ಶ್ರೇಷ್ಠ ಧರ್ಮಗಳು ಗರ್ಭದಿಂದಲೂ ಶುದ್ಧರಾದ ಸಜ್ಜನರಲ್ಲಿ ಇರುತ್ತವೆ. ಅಂತಹವರಿಗೆ ಧರ್ಮದ ನಿಯಮವು ಬಹಳ ದೊಡ್ಡದಾಗಿರುತ್ತದೆ.
ಪಂಚಯಜ್ಞವಿಶುದ್ಧಾತ್ಮಾ ಋತುನಿತ್ಯೋಽನಸೂಯಕಃ |
ದಾಂತೋ ಬ್ರಾಹ್ಮಣಸತ್ಕರ್ತಾ ಸುಸಮ್ಮೃಷ್ಟನಿವೇಶನಃ ॥12॥
ಚಕ್ಷುರ್ದೋ ಮನದೋ ಜಿಹ್ವಾಸ್ನಿಗ್ಧವರ್ಣಪ್ರದಃ ಸದಾ |
ಅತಿಥ್ಯಭ್ಯಾಗತರತಃ ಶೇಷಾನ್ನಕೃತಭೋಜನಃ ॥13॥
ಪಾದ್ಯಮರ್ಘ್ಯಂ ಯಥಾನ್ಯಾಯಮಾಸನಂ ಶಯನಂ ತಥಾ |
ದೀಪಂ ಪ್ರತಿಶ್ರಯಂ ಚೈವ ಯೋ ದದಾತಿ ಸ ಧಾರ್ಮಿಕಃ ॥14॥
ನಿತ್ಯವೂ ಪಂಚಯಜ್ಞಗಳನ್ನು ಮಾಡಿ ವಿಶುದ್ಧನಾಗಿರುವುದು, ಋತುಕಾಲದಲ್ಲಿ ಪತ್ನೀಗಮನ, ಅಸೂಯಾ ರಾಹಿತ್ಯ, ಇಂದ್ರಿಯನಿಗ್ರಹ, ಬ್ರಾಹ್ಮಣ ಸತ್ಕಾರ, ಗೃಹವನ್ನು ಸಾರಿಸಿ ಶುದ್ಧಿ ಮಾಡುವುದು, ಅತಿಥಿ-ಅಭ್ಯಾಗತರಿಗೆ ಚಕ್ಷುಸ್ಸನ್ನೂ, ಮನಸ್ಸನ್ನೂ ನಾಲಿಗೆಯಿಂದ ಸ್ನೇಹಯುಕ್ತವಾದ ಮಾತುಗಳನ್ನೂ ಕೊಡುವುದು, ಯಜ್ಞವಾದ ಮೇಲೆ ಅತಿಥಿಗಳು ಊಟ ಮಾಡಿದ ಮೇಲೆ ಉಳಿದ ಅನ್ನವನ್ನು ಭೋಜನ ಮಾಡುವುದು, ಅತಿಥಿಗಳಿಗೆ ಪಾದ್ಯ-ಅರ್ಘ್ಯ-ಆಸನ-ಶಯನ-ದೀಪ ಮತ್ತು ವಾಸಿಸುವ ಸ್ಥಳ ಇವುಗಳನ್ನು ಕೊಡುವುದು - ಇವುಗಳನ್ನು ಮಾಡುವವನು ಧಾರ್ಮಿಕನೆನಿಸುತ್ತಾನೆ.
ಪ್ರಾತರುತ್ಥಾಯ ವೈ ಪಶ್ಚಾದ್ ಭೋಜನೇ ತು ನಿಮಂತ್ರಯೇತ್ |
ಸತ್ಕೃತ್ಯಾನುವ್ರಜೇದ್ ಯಶ್ಚ ತಸ್ಯ ಧರ್ಮಃ ಸನಾತನಃ ॥15॥
ಪ್ರಾತಃಕಾಲದಲ್ಲಿ ಬ್ರಾಹ್ಮಣರನ್ನು ಭೋಜನಕ್ಕೆ ನಿಮಂತ್ರಿಸಿ ಅವರನ್ನು ಸತ್ಕರಿಸಿ ಅನಂತರ ಯಾವನು ಅವರನ್ನು ಹಿಂಬಾಲಿಸಿ ಹೋಗುತ್ತಾನೆಯೋ ಅವನ ಧರ್ಮವು ಸನಾತನವಾದುದು.
ಪ್ರವೃತ್ತಿಲಕ್ಷಣೋ ಧರ್ಮೋ ಗೃಹಸ್ಥೇಷು ವಿಧೀಯತೇ |
ತದಹಂ ಕೀರ್ತಯಿಷ್ಯಾಮಿ ತ್ರಿವರ್ಗೇಷು ಚ ಯದ್ ಯಥಾ ॥16॥
ಗೃಹಸ್ಥರಿಗೆ ಪ್ರವೃತ್ತಿರೂಪವಾದ ಧರ್ಮವು ಹೇಳಲ್ಪಡುತ್ತದೆ. ತ್ರಿವರ್ಗಗಳಲ್ಲಿ ಯಾವುದನ್ನು ಹೇಗೆ ಮಾಡಬೇಕೆಂದು ನಾನು ಹೇಳುವೆನು.
ಏಕೇನಾಂಶೇನ ಧರ್ಮಾರ್ಥಃ ಕರ್ತವ್ಯೋ ಹಿತಮಿಚ್ಛತಾ |
ಏಕೇನಾಂಶೇನ ಕಾಮಾರ್ಥಮೇಕಮಂಶಂ ವಿವರ್ಧಯೇತ್ ॥17॥
ತನ್ನ ಹಿತವನ್ನು ಬಯಸುವ ಮನುಷ್ಯನು ತಾನು ಸಂಪಾದನೆ ಮಾಡಿದುದರಲ್ಲಿ ಒಂದು ಭಾಗವನ್ನು ಧರ್ಮಕ್ಕಾಗಿ ಇಡಬೇಕು. ಒಂದು ಭಾಗವನ್ನು ಭೋಗಕ್ಕಾಗಿ ಇಡಬೇಕು. ಒಂದು ಭಾಗವನ್ನು ಧನದ ಅಭಿವೃದ್ಧಿಗಾಗಿ ಇಡಬೇಕು.
ನಿವೃತ್ತಿಲಕ್ಷಣಃ ಪುಣ್ಯೋ ಧರ್ಮೋ ಮೋಕ್ಷೇ ವಿಧೀಯತೇ |
ತಸ್ಯ ವೃತ್ತಿಂ ಪ್ರವಕ್ಷ್ಯಾಮಿ ತಾಂ ಶೃಣುಷ್ವ ಸಮಾಹಿತಾ ॥18॥
ಮೋಕ್ಷಕ್ಕಾಗಿ ನಿವೃತ್ತಿರೂಪವಾದ ಪವಿತ್ರವಾದ ಧರ್ಮವು ವಿಧಿಸಲ್ಪಡುತ್ತದೆ. ಅದರ ಸ್ವರೂಪವನ್ನು ಹೇಳುವೆನು. ಸಮಾಧಾನದಿಂದ ಕೇಳು.
ಸರ್ವಭೂತದಯಾ ಧರ್ಮೋ ನಿವೃತ್ತಿಪರಮಃ ಸದಾ |
ಬುಭುಕ್ಷಿತಂ ಪಿಪಾಸಾರ್ತಮತಿಥಿಂ ಶ್ರಾಂತಮಾಗತಮ್ |
ಅರ್ಚಯಂತಿ ವರಾರೋಹೇ ತೇಷಾಮಪಿ ಫಲಂ ಮಹತ್ ॥19॥
ಸರ್ವಭೂತ ದಯೆಯು ಶ್ರೇಷ್ಠವಾದ ನಿವೃತ್ತಿ ಧರ್ಮ. ಎಲೌ ಸುಂದರಿಯೇ, ಹಸಿದು ಬಾಯಾರಿಕೆಯಿಂದ ಬಳಲಿ ಬಂದ ಅತಿಥಿಯನ್ನು ಯಾರು ಅರ್ಚಿಸುತ್ತಾರೋ ಅವರಿಗೆ ಮಹಾಫಲವಿದೆ.
ಪಾತ್ರಮಿತ್ಯೇವ ದಾತವ್ಯಂ ಸರ್ವಸ್ಮೈ ಧರ್ಮಕಾಂಕ್ಷಿಭಿಃ |
ಆಗಮಿಷ್ಯತಿ ಯತ್ಪಾತ್ರಂ ತತ್ಪಾತ್ರಂ ತಾರಯಿಷ್ಯತಿ ॥20॥
ಧರ್ಮವನ್ನು ಬಯಸುವವರು ಪಾತ್ರರನ್ನು ಗಮನಿಸಿಯೇ ಅವರಿಗೆ ದಾನವನ್ನು ಮಾಡಬೇಕು (ಬಂಧು-ಮಿತ್ರ ಎಂದು ಗಮನಿಸಿ ದಾನ ಮಾಡುವುದಲ್ಲ). ಯಾವ ಸತ್ಪಾತ್ರವು ತಾನಾಗಿಯೇ ಒದಗಿ ಬರುವುದೋ ಅದು ದಾತೃವನ್ನು ಸಂಕಟದಿಂದ ಪಾರು ಮಾಡುತ್ತದೆ.
ಕಾಲೇ ಸಂಪ್ರಾಪ್ತಮತಿಥಿಂ ಭೋಕ್ತುಕಾಮಮುಪಸ್ಥಿತಮ್ |
ವಿತ್ತಂ ಸಂಭಾವಯೇತ್ತಸ್ಯ ನ್ಯಾಸೋಽಯಮಿತಿ ನಿಶ್ಚಿತಃ ॥21॥
ಯೋಗ್ಯವಾದ ಕಾಲದಲ್ಲಿ ಭೋಜನವನ್ನು ಬಯಸಿ ಬಂದ ಅತಿಥಿಯನ್ನು ನ್ಯಾಸವಾಗಿಟ್ಟಿರುವ ನಿಧಿಯೆಂದು ನಿಶ್ಚಯಿಸಿ ಪೂಜಿಸಬೇಕು (ಲಕ್ಷ್ಮಾಲಂಕಾರ).
ತಸ್ಯ ಪ್ರಭಾಂ ಯಥಾಶಕ್ತ್ಯಾ ಸೌಮ್ಯಚಿತ್ತಃ ಪ್ರಯೋಜಯೇತ್ |
ಚಿತ್ತಮೂಲೋ ಭವೇದ್ಧರ್ಮೋ ಧರ್ಮಮೂಲಂ ಭವೇದ್ ಯಶಃ ॥
ಅವನಿಗೆ ಸೌಮ್ಯವಾದ ಮನಸ್ಸಿನಿಂದ, ತನ್ನ ಶಕ್ತಿಗೆ ಅನುಗುಣವಾಗಿ ಒಳ್ಳೆಯ ಕಾಂತಿಯನ್ನು ಕೊಡುವ ಭೋಜನವನ್ನು ನೀಡಬೇಕು (ಲಕ್ಷ್ಮಾಲಂಕಾರ). ಧರ್ಮದ ಮೂಲವು ಮನಸ್ಸಿನಲ್ಲಿದೆ. ಯಶಸ್ಸಿನ ಮೂಲವು ಧರ್ಮದಲ್ಲಿದೆ.

ತಸ್ಮಾತ್ ಸೌಮ್ಯೇನ ಚಿತ್ತೇನ ದಾತವ್ಯಂ ದೇವಿ ಸರ್ವಥಾ |
ಸೌಮ್ಯಚಿತ್ತಸ್ತು ಯೋ ದದ್ಯಾತ್ ತದ್ಧಿ ದಾನಮನುತ್ತಮಮ್ ॥23॥
ಎಲೌ ದೇವಿಯೇ, ಆದ್ದರಿಂದ ಸೌಮ್ಯಚಿತ್ತದಿಂದ ದಾನವನ್ನು ಮಾಡಬೇಕು. ಸೌಮ್ಯ ಚಿತ್ತದಿಂದ ಮಾಡುವ ದಾನವು ಶ್ರೇಷ್ಠವಾದುದು.
ಯಥಾಂಬುಬಿಂದುಭಿಃ ಸೂಕ್ಷ್ಮೈಃ ಪತದ್ಭಿರ್ಮೇದಿನೀತಳೇ |
ಕೇದಾರಾಶ್ಚ ತಟಾಕಾನಿ ಸರಾಂಸಿ ಸರಿತಸ್ತಥಾ ॥24॥
ತೋಯಪೂರ್ಣಾನಿ ದೃಶ್ಯಂತೇ ಅಪ್ರತರ್ಕ್ಯಾಣಿ ಶೋಭನೇ |
ಅಲ್ಪಮಲ್ಪಮಪಿ ಹ್ಯೇತದ್ ದೀಯಮಾನಂ ವಿವರ್ಧತೇ ॥25॥
ಹೇಗೆ ಮಳೆಯ ನೀರು ಭೂಮಿಯಲ್ಲಿ ಹನಿ-ಹನಿಯಾಗಿ ಬಿದ್ದರೂ ನಾವು ಯೋಚಿಸಲು ಸಾಧ್ಯವಿಲ್ಲದಂತೆ ಕೆರೆಗಳು, ಕೊಳಗಳು, ಸರೋವರಗಳು, ನದಿಗಳು ಜಲಪೂರ್ಣವಾಗಿ ಕಂಡುಬರುತ್ತವೆಯೋ ಎಲೌ ಶೋಭನೆಯೇ, ಅದರಂತೆ ಅಲ್ಪ-ಅಲ್ಪವಾಗಿ ದಾನ ಮಾಡಿದರೂ ಸಹ ವೃದ್ಧಿಯನ್ನು ಹೊಂದುತ್ತವೆ.
ಪೀಡಯಾಽಪಿ ಚ ಭೃತ್ಯಾನಾಂ ದಾನಮೇವ ವಿಶಿಷ್ಯತೇ |
ಪುತ್ರದಾರಾ ಧನಂ ಧಾನ್ಯಂ ನ ಮೃತಾನನುಗಚ್ಛತಿ ॥26॥
ಭೃತ್ಯವರ್ಗಕ್ಕೆ ಪೀಡೆಯುಂಟಾದರೂ ದಾನವನ್ನು ಕೊಡುವ ಶ್ರೇಷ್ಠವಾದುದು. ಪುತ್ರರು, ಪತ್ನಿ, ಧನ, ಧಾನ್ಯಗಳು ಮೃತರನ್ನು ಹಿಂಬಾಲಿಸುವುದಿಲ್ಲ.
ಶ್ರೇಯೋ ದಾನಂ ಚ ಭೋಗಶ್ಚ ಧನಂ ಪ್ರಾಪ್ಯ ಯಶಸ್ವಿನಿ |
ದಾನೇನ ಹಿ ಮಹಾಭಾಗಾ ಭವಂತಿ ಮನುಜಾಧಿಪಾಃ ॥27॥
ಎಲೌ ಯಶಸ್ವಿನಿಯೇ, ಧನವನ್ನು ಸಂಪಾದಿಸಿದ ಮೇಲೆ ದಾನ ಮತ್ತು ಭೋಗಗಳು ಶ್ರೇಷ್ಠವಾದವುಗಳು. ದಾನವನ್ನು ಮಾಡಿದ ಮಹಾನುಭಾವರು ರಾಜರಾಗುತ್ತಾರೆ.
ನಾಸ್ತಿ ಭೂಮಿಸಮಂ ದಾನಂ ನಾಸ್ತಿ ದಾನಸಮೋ ನಿಧಿಃ |
ನಾಸ್ತಿ ಸತ್ಯಾತ್ ಪರೋ ಧರ್ಮೋ ನಾನೃತಾತ್ ಪಾತಕಂ ಪರಮ್ ॥
ಭೂಮಿದಾನಕ್ಕೆ ಸಮನಾದ ದಾನವಿಲ್ಲ. ದಾನಕ್ಕೆ ಸಮನಾದ ನಿಧಿ ಇಲ್ಲ. ಸತ್ಯಕ್ಕಿಂತ ಶ್ರೇಷ್ಠವಾದ ಧರ್ಮವಿಲ್ಲ. ಸುಳ್ಳಿಗಿಂತಲೂ ನೀಚವಾದ ಪಾತಕವಿಲ್ಲ.
ಆಶ್ರಮೇ ಯಸ್ತು ತಪ್ಯೇತ ತಪೋ ಮೂಲಫಲಾಶನಃ |
ಆದಿತ್ಯಾಭಿಮುಖೋ ಭೂತ್ವಾ ಜಟಾವಲ್ಕಲಸಂವೃತಃ ॥29॥
ಮಂಡೂಕಶಾಯೀ ಹೇಮಂತೇ ಗ್ರೀಷ್ಮೇ ಪಂಚತಪಾ ಭವೇತ್ |
ಸಮ್ಯಕ್ ತಪಶ್ಚರಂತೀಹ ಶ್ರದ್ದಧಾನಾ ವನಾಶ್ರಮೇ |
ಗೃಹಾಶ್ರಮಸ್ಯ ತೇ ದೇವಿ ಕಲಾಂ ನಾರ್ಹಂತಿ ಷೋಡಶೀಮ್ ॥30॥
ವಾನಪ್ರಸ್ಥಾಶ್ರಮದಲ್ಲಿ ಆಶ್ರಮದಲ್ಲಿ ಮೂಲಫಲಗಳನ್ನು ಸೇವಿಸಿ ಯಾರು ತಪಸ್ಸನ್ನು ಮಾಡುತ್ತಾರೆಯೋ, ಜಟಾವಲ್ಕಲಧಾರಿಗಳಾಗಿ ಸೂರ್ಯನಿಗೆ ಎದುರಾಗಿ ಯಾರು ತಪಸ್ಸನ್ನು ಮಾಡುತ್ತಾರೆಯೋ, ಹೇಮಂತ ಋತುವಿನಲ್ಲಿ ಮಂಡೂಕ ಶಯನವನ್ನು ಮಾಡಿ, ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿ ತಪಸ್ಸನ್ನು ಮಾಡಿ ಯಾರು ಶ್ರದ್ಧೆಯಿಂದ ಸರಿಯಾಗಿ ತಪಸ್ಸನ್ನು ಮಾಡುತ್ತಾರೆಯೋ ಎಲೌ ದೇವಿಯೇ, ಆ ತಪಸ್ಸೆಲ್ಲವೂ ಗೃಹಸ್ಥಾಶ್ರಮದ ತಪಸ್ಸಿನ ಹದಿನಾರನೆಯ ಒಂದು ಭಾಗಕ್ಕೂ ಸಮನಾಗುವುದಿಲ್ಲ.
ಉಮಾ
ಗೃಹಾಶ್ರಮಸ್ಯ ಯಾ ಚರ್ಯಾ ವ್ರತಾನಿ ನಿಯಮಾಶ್ಚ ಯೇ |
ತಥಾ ಚ ದೇವತಾಃ ಪೂಜ್ಯಾಃ ಸತತಂ ಗೃಹಮೇಧಿನಾ ॥31॥
ಯದ್ಯಚ್ಚ ಪರಿಹರ್ತವ್ಯಂ ಗೃಹಿಣಾಽತಿಥಿಪರ್ವಸು |
ತತ್ಸರ್ವಂ ಶ್ರೋತುಮಿಚ್ಛಾಮಿ ಕಥ್ಯಮಾನಂ ತ್ವಯಾ ಪ್ರಭೋ ॥32॥
ಉಮಾ ಗೃಹಸ್ಥಾಶ್ರಮದ ಚರ್ಯೆ, ವ್ರತ-ನಿಯಮಗಳು, ಗೃಹಸ್ಥಾಶ್ರಮಿಗಳು ಪೂಜಿಸಬೇಕಾದ ದೇವತೆಗಳು, ಅತಿಥಿಗಳು ಬಂದಾಗ ಮತ್ತು ಪರ್ವಕಾಲದಲ್ಲಿ ಪರಿತ್ಯಾಗ ಮಾಡಬೇಕಾದ ಕಾರ್ಯಗಳು - ಎಲ್ಲೈ ಪ್ರಭುವೇ, ಅವೆಲ್ಲವನ್ನೂ ನಿನ್ನಿಂದ ಕೇಳಲು ಬಯಸುತ್ತೇನೆ.
ಮಹೇಶ್ವರಃ
ಗೃಹಾಶ್ರಮಸ್ಯ ಯನ್ಮೂಲಂ ಫಲಂ ಧರ್ಮೋಽಯಮುತ್ತಮಃ |
ಪಾದೈಶ್ಚತುರ್ಭಿಃ ಸತತಂ ಧರ್ಮೋ ಯತ್ರ ಪ್ರತಿಷ್ಠಿತಃ ॥33॥
ಸಾರಭೂತಂ ವರಾರೋಹೇ ದಧ್ನೋ ಘೃತಮಿವೋದ್ಧೃತಮ್ |
ತದಹಂ ತೇ ಪ್ರವಕ್ಷ್ಯಾಮಿ ಶ್ರೂಯತಾಂ ಧರ್ಮಚಾರಿಣಿ ॥34॥
ಮಹೇಶ್ವರ ಗೃಹಸ್ಥಾಶ್ರಮದ ಮೂಲವಾದುದು ಮತ್ತು ಫಲವಾದುದು ಈ ಶ್ರೇಷ್ಠವಾದ ಧರ್ಮ. ಅಲ್ಲಿ ಧರ್ಮವು ನಾಲ್ಕು ಪಾದಗಳಿಂದ ಚೆನ್ನಾಗಿ ಪ್ರತಿಷ್ಠಿತವಾಗಿರುತ್ತದೆ. ಎಲ್ಲೈ ವರಾರೋಹೇ, ಮೊಸರಿನಿಂದ ಸಾರವಾದ ತುಪ್ಪವನ್ನು ಪಡೆದಂತೆ ಸಾರಭೂತವಾದ ಧರ್ಮವನ್ನು ನಿನಗೆ ಹೇಳುವೆನು. ಎಲೌ ಧರ್ಮಚಾರಿಣಿಯೇ, ಅದನ್ನು ಕೇಳು.
ಶುಶ್ರೂಷತೇ ಯಃ ಪಿತರಂ ಮಾತರಂ ಚ ಗೃಹಾಶ್ರಮೇ |
ಭರ್ತಾರಂ ಚೈವ ಯಾ ನಾರೀ ಅಗ್ನಿಹೋತ್ರಂ ಚ ಯೇ ದ್ವಿಜಾಃ ॥35॥
ತೇಷು ತೇಷು ಚ ಪ್ರೀಣಂತಿ ದೇವಾ ಇಂದ್ರಪುರೋಗಮಾಃ |
ಪಿತರಃ ಪಿತೃಲೋಕಸ್ಥಾಃ ಸ್ವಧರ್ಮೇಣ ಸ ರಜ್ಯತೇ ॥36॥

ಗೃಹಸ್ಥಾಶ್ರಮದಲ್ಲಿ ಯಾವನು ತಂದೆ-ತಾಯಿಗಳ ಸೇವೆಯನ್ನು ಮಾಡುತ್ತಾನೆಯೋ, ಯಾವಳು ಪತಿ ಸೇವೆಯನ್ನು ಮಾಡುತ್ತಾಳೆಯೋ, ಯಾವ ಬ್ರಾಹ್ಮಣರು ಅಗ್ನಿಹೋತ್ರವನ್ನು ಮಾಡುತ್ತಾರೆಯೋ ಅವರಲ್ಲಿ ಇಂದ್ರ ಮೊದಲಾದ ದೇವತೆಗಳು ಸಂತೋಷವನ್ನು ಹೊಂದುತ್ತಾರೆ. ತಮ್ಮ ತಮ್ಮ ಧರ್ಮವನ್ನು ಆಚರಿಸುತ್ತಿರುವ ಅವರನ್ನು ನೋಡಿ ಪಿತೃಲೋಕದಲ್ಲಿರುವ ಪಿತೃಗಳು ಅವರಲ್ಲಿ ಅನುರಾಗ ಹೊಂದುತ್ತಾರೆ.
ಉಮಾ
ಮಾತಾಪಿತೃವಿಯುಕ್ತಾನಾಂ ಕಾ ಚರ್ಯಾ ಗೃಹಮೇಧಿನಾಮ್ |
ವಿಧವಾನಾಂ ಚ ನಾರೀಣಾಂ ಭವಾನೇತದ್ ಬ್ರವೀತು ಮೇ ॥37॥
ಉಮಾ ಮಾತಾ-ಪಿತೃಗಳು ಇಲ್ಲದಿರುವ ಗೃಹಸ್ಥರಿಗೆ ಯಾವ ಚರ್ಯೆ? ವಿಧವೆಯರಾದ ನಾರಿಯರಿಗೆ ಯಾವ ಚರ್ಯೆ? ಇದನ್ನು ನೀನು ಹೇಳಬೇಕು.
ಮಹೇಶ್ವರಃ
ದೇವತಾತಿಥಿಶುಶ್ರೂಷಾ ಗುರುವೃದ್ಧಾಭಿವಾದನಮ್ |
ಅಹಿಂಸಾ ಸರ್ವಭೂತಾನಾಮಲೋಭಃ ಸತ್ಯಸಂಧತಾ ॥38॥
ಬ್ರಹ್ಮಚರ್ಯಂ ಶರಣ್ಯತ್ವಂ ಶೌಚಂ ಪೂರ್ವಾಭಿಭಾಷಣಮ್ |
ಕೃತಜ್ಞತ್ವಮಪೈಶುನ್ಯಂ ಸತತಂ ಧರ್ಮಶೀಲತಾ ॥39॥
ಮಹೇಶ್ವರ ದೇವತಾತಿಥಿ ಸೇವೆ, ಗುರು-ಹಿರಿಯರಿಗೆ ನಮಸ್ಕಾರ, ಸರ್ವ ಪ್ರಾಣಿಗಳಲ್ಲಿ ಅಹಿಂಸೆ, ಅಲೋಭ, ಸತ್ಯಸಂಧತೆ, ಬ್ರಹ್ಮಚರ್ಯ, ಶರಣಾಗತ ರಕ್ಷಣೆ, ಶೌಚ, ಮೊದಲು ಮಾತನಾಡಿಸುವುದು, ಕೃತಜ್ಞತೆ, ಚಾಡಿ ಹೇಳದಿರುವುದು, ಸತತವಾದ ಧರ್ಮಶೀಲತ್ವ,
ದಿನೇ ದ್ವಿರಭಿಷೇಕಂ ಚ ಪಿತೃದೈವತಪೂಜನಮ್ |
ಗವಾಹ್ನಿಕಪ್ರದಾನಂ ಚ ಸಂವಿಭಾಗೋಽತಿಥಿಷ್ವಪಿ ॥40॥
ದೀಪಂ ಪ್ರತಿಶ್ರಯಂ ಚೈವ ದದ್ಯಾತ್ ಪಾದ್ಯಾಸನಂ ತಥಾ |
ಪಂಚಮೇಽಹನಿ ಷಷ್ಠೇ ವಾ ದ್ವಾದಶೇ ವಾಽಪ್ಯಥಾಷ್ಟಮೇ |
ಚತುರ್ದಶೇ ಪಂಚದಶೇ ಬ್ರಹ್ಮಚಾರೀ ಸದಾ ಭವೇತ್ ॥41॥
ದಿನದಲ್ಲಿ ಎರಡು ಬಾರಿ ಸ್ನಾನ, ಪಿತೃ-ದೇವತಾ ಪೂಜೆ, ನಿತ್ಯವೂ ಗೋಗ್ರಾಸ ಪ್ರದಾನ, ಅತಿಥಿಗಳಿಗೆ ಅನ್ನದಾನ, ದೀಪ, ವಾಸಸ್ಥಾನ, ಪಾದ್ಯ ಮತ್ತು ಆಸನಗಳನ್ನು ಕೊಡುವುದು (ಇವೆಲ್ಲವೂ ಮಾತಾ-ಪಿತೃ ಹೀನರಾದವರಿಗೂ ಮತ್ತು ವಿಧವೆಯರಿಗೂ ಸಾಧಾರಣವಾದ ಧರ್ಮಗಳು). ಪಂಚಮೀ, ಷಷ್ಠೀ, ದ್ವಾದಶೀ, ಅಷ್ಟಮೀ, ಚತುರ್ದಶೀ, ಪೌರ್ಣಮಾಸಿ ಮತ್ತು ಅಮಾವಾಸ್ಯೆಗಳಲ್ಲಿ ಯಾವಾಗಲೂ ಬ್ರಹ್ಮಚರ್ಯವನ್ನು ಪಾಲಿಸಬೇಕು.
ಶ್ಮಶ್ರುಕರ್ಮ ಶಿರೋಭ್ಯಂಗಮಂಜನಂ ದಂತಧಾವನಮ್ |
ನೈತೇಷ್ವಹಃಸು ಕುರ್ವೀತ ತೇಷ್ವಲಕ್ಷ್ಮೀಃ ಪ್ರತಿಷ್ಠಿತಾ ॥42॥
ಈ ದಿವಸಗಳಲ್ಲಿ ಕ್ಷೌರಕರ್ಮವನ್ನಾಗಲೀ, ಅಭ್ಯಂಗಸ್ನಾನವನ್ನಾಗಲೀ, ಎಣ್ಣೆ ಮಜ್ಜನವನ್ನಾಗಲೀ, ದಂತಧಾವನವನ್ನಾಗಲೀ ಮಾಡಬಾರದು. ಆ ದಿನ ಅವುಗಳಲ್ಲಿ ಅಲಕ್ಷ್ಮಿಯು ಇರುತ್ತಾಳೆ.
ವ್ರತೋಪವಾಸನಿಯಮಸ್ತಪೋ ದಾನಂ ಚ ಶಕ್ತಿತಃ |
ಭರಣಂ ಭೃತ್ಯವರ್ಗಸ್ಯ ದೀನಾನಾಮನುಕಂಪನಮ್ |
ಪರದಾರಾನ್ನಿವೃತ್ತಿಶ್ಚ ಸ್ವದಾರೇಷು ರತಿಃ ಸದಾ ॥43॥
ವ್ರತೋಪವಾಸದ ನಿಯಮಗಳು, ತಪಸ್ಸು, ಶಕ್ತಿ ಇದ್ದಷ್ಟು ದಾನ, ಭೃತ್ಯರನ್ನು ಪೂಜಿಸುವುದು, ದೀನರಲ್ಲಿ ಅನುಕಂಪ, ಪರಪತ್ನಿಯರಿಂದ ನಿವೃತ್ತನಾಗುವುದು, ತನ್ನ ಪತ್ನಿಯಲ್ಲಿಯೇ ರತನಾಗುವುದು (ಇವು ಅಂತಹ ಗೃಹಸ್ಥನ ಸಾಧಾರಣ ಧರ್ಮಗಳು).
ಶರೀರಮೇಕಂ ದಂಪತ್ಯೋರ್ವಿಧಾತ್ರಾ ಪೂರ್ವನಿರ್ಮಿತಮ್ |
ತಸ್ಮಾತ್ಸ್ವದಾರನಿರತೋ ಬ್ರಹ್ಮಚಾರೀ ವಿಧೀಯತೇ ॥44॥
ಹಿಂದೆ ಬ್ರಹ್ಮದೇವರು ಪತಿ-ಪತ್ನಿಯರಿಗೆ ಸೇರಿ ಒಂದೇ ಶರೀರವನ್ನು ನಿರ್ಮಿಸಿದರು. ಆದ್ದರಿಂದ ಸ್ವದಾರನಿರತನಾದವನು ಬ್ರಹ್ಮಚಾರಿ ಎಂದು ಹೇಳಲ್ಪಡುತ್ತಾನೆ.
ಶೀಲವೃತ್ತವಿನೀತಸ್ಯ ನಿಗೃಹೀತೇಂದ್ರಿಯಸ್ಯ ಚ |
ಆರ್ಜವೇ ವರ್ತಮಾನಸ್ಯ ಸರ್ವಭೂತಹಿತೈಷಿಣಃ ॥45॥
ಪ್ರಿಯಾತಿಥೇಶ್ಚ ಕ್ಷಾಂತಸ್ಯ ಧರ್ಮಾರ್ಜಿತಧನಸ್ಯ ಚ |
ಗೃಹಾಶ್ರಮಪದಸ್ಥಸ್ಯ ಕಿಮನ್ಯೈಃ ಕೃತ್ಯಮಾಶ್ರಮೈಃ ॥46॥
ಶೀಲ-ವೃತ್ತದಿಂದ ವಿನಯವನ್ನು ಹೊಂದಿದ, ಇಂದ್ರಿಯಜಯವನ್ನು ಹೊಂದಿದ, ಆರ್ಜವದಲ್ಲಿ ರತನಾದ, ಸರ್ವಪ್ರಾಣಿ ಹಿತವನ್ನು ಬಯಸುವ, ಅತಿಥಿ ಪ್ರಿಯನಾದ, ಕ್ಷಮಾವಂತನಾದ, ಧರ್ಮದಿಂದ ಧನವನ್ನು ಗಳಿಸಿದ ಗೃಹಸ್ಥಾಶ್ರಮಿಗೆ ಉಳಿದ ಆಶ್ರಮಗಳಿಂದ ಏನು ಪ್ರಯೋಜನ?
ಯಥಾ ಮಾತರಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ |
ತಥಾ ಗೃಹಾಶ್ರಮಂ ಪ್ರಾಪ್ಯ ಸರ್ವೇ ಜೀವಂತಿ ಚಾಶ್ರಮಾಃ ॥47॥
ಹೇಗೆ ತಾಯಿಯನ್ನು ಆಶ್ರಯಿಸಿ ಎಲ್ಲ ಪ್ರಾಣಿಗಳೂ ಬದುಕುತ್ತವೆಯೋ ಅದರಂತೆ ಗೃಹಸ್ಥಾಶ್ರಮವನ್ನು ಆಶ್ರಯಿಸಿ ಉಳಿದೆಲ್ಲಾ ಆಶ್ರಮಗಳೂ ಬದುಕುತ್ತವೆ.
ರಾಜಾನಃ ಸರ್ವಪಾಷಂಡಾಃ ಸರ್ವೇ ರಂಗೋಪಜೀವಿನಃ |

ವ್ಯಾಳಗ್ರಹಾಶ್ಚ ಡಂಭಾಶ್ಚ ಚೋರಾ ರಾಜಭಟಾಸ್ತಥಾ ॥48॥
ಸವಿದ್ಯಾಃ ಸರ್ವಶಿಲ್ಪಜ್ಞಾಃ ಸರ್ವೇ ಚೈವ ಚಿಕಿತ್ಸಕಾಃ |
ದೂರಾಧ್ವಾನಂ ಪ್ರಪನ್ನಾಶ್ಚ ಕ್ಷೀಣಪಥ್ಯೋದನಾ ನರಾಃ |
ಏತೇ ಚಾನ್ಯೇ ಚ ಬಹವಸ್ತರ್ಕಯಂತಿ ಗೃಹಾಶ್ರಮಮ್ ॥49॥
ರಾಜರು, ಸರ್ವಪಾಷಂಡಿಗಳು, ರಂಗಭೂಮಿಯಿಂದ ಜೀವಿಸುವವರು, ಹಾವನ್ನು ಹಿಡಿಯುವವರು, ಡಾಂಭಿಕರು, ಚೋರರು, ರಾಜಭಟರು, ಹಾಗೆಯೇ ವಿದ್ಯಾವಂತರು, ಕುಶಲಕರ್ಮಗಳಲ್ಲಿ ನುರಿತವರು, ವೈದ್ಯರು, ದೀರ್ಘವಾದ ಮಾರ್ಗದಲ್ಲಿ ಹೋಗುತ್ತಾ ಆಹಾರದ ಬುತ್ತಿಯನ್ನು ಕಳೆದುಕೊಂಡ ಮನುಷ್ಯರು - ಇವರು ಮತ್ತು ಉಳಿದವರು ಗೃಹಾಶ್ರಮವನ್ನು ಕುರಿತು ಆಸೆಯಿಂದ ಚಿಂತಿಸುತ್ತಾರೆ.
ಮಾರ್ಜಾರಾ ಮೂಷಿಕಾಃ ಶ್ವಾನಃ ಸೂಕರಾಶ್ಚ ಶುಕಾಸ್ತಥಾ |
ಕಪೋತಕಾಕಚಟಕಾಃ ಸರೀಸೃಪನಿಷೇವಿಣಃ |
ಅರಣ್ಯವಾಸಿನಶ್ಚಾನ್ಯೇ ಸಂಘಾ ಯೇ ಮೃಗಪಕ್ಷಿಣಾಮ್ ॥50॥
ಏವಂ ಬಹುವಿಧಾ ದೇವಿ ಲೋಕೇಽಸ್ಮಿನ್ ಸಚರಾಚರಾಃ |
ಗೃಹೇ ಕ್ಷೇತ್ರೇ ಬಲೇ ಚೈವ ಶತಶೋಽಥ ಸಹಸ್ರಶಃ ॥51॥
ಗೃಹಸ್ಥೇನ ಕೃತಂ ಕರ್ಮ ಸರ್ವೈಸ್ತೈರುಪಭುಜ್ಯತೇ |
ಉಪಯುಕ್ತಂ ಚ ಯತ್ ತೇಷಾಂ ಮತಿಮಾನ್ ನಾನುಶೋಚತಿ ॥52॥
ಬೆಕ್ಕುಗಳು, ಇಲಿಗಳು, ನಾಯಿಗಳು, ಹಂದಿಗಳು, ಗಿಣಿಗಳು, ಪಾರಿವಾಳಗಳು, ಕಾಗೆಗಳು, ಗುಬ್ಬಚ್ಚಿಗಳು, ಅರಣ್ಯದಲ್ಲಿ ವಾಸಿಸುವ ಉಳಿದ ಮೃಗಪಕ್ಷಿಗಳ ಸಮೂಹಗಳು, ಸರ್ಪದಿಂದ ಜೀವಿಸುವ ಮುಂಗುಸಿಗಳು- ಎಲೌ ದೇವಿಯೇ, ಕ್ಷೇತ್ರದಲ್ಲಿ ಗೃಹದಲ್ಲಿ ವಾಸಿಸುವ ಇಂತಹ ನೂರಾರು, ಸಹಸ್ರಾರು ಚರಾಚರ ಪ್ರಾಣಿಗಳು ಈ ಲೋಕದಲ್ಲಿ ಗೃಹಸ್ಥನು ಮಾಡಿದ ಕಾರ್ಯವನ್ನೇ ಉಪಜೀವಿಸಿಕೊಂಡು ಬದುಕುತ್ತವೆ. ಬುದ್ಧಿವಂತನಾದವನು ಅವುಗಳು (ಇಲಿ ಮೊದಲಾದವುಗಳು) ತಿಂದು ಹಾಳು ಮಾಡಿದ ಪದಾರ್ಥಗಳ ವಿಷಯದಲ್ಲಿ ಶೋಕಪಡುವುದಿಲ್ಲ.
ಧರ್ಮ ಇತ್ಯೇವ ಸಂಕಲ್ಪ್ಯ ಯತ್ ತು ತಸ್ಯ ಫಲಂ ಶೃಣು |
ಸರ್ವಯಜ್ಞಪ್ರಣೀತಸ್ಯ ಹಯಮೇಧೇನ ಯತ್ಫಲಮ್ |
ವರ್ಷೇ ಸ ದ್ವಾದಶೇ ದೇವಿ ಫಲೇನೈತೇನ ಯುಜ್ಯತೇ ॥53॥
ಎಲ್ಲವೂ ಧರ್ಮವೆಂದೇ ತಿಳಿದವನ ಫಲವನ್ನು ಕೇಳು. ಎಲೌ ದೇವಿಯೇ, ಸರ್ವಯಜ್ಞವನ್ನು ಮಾಡಿದವನಿಗೆ ಅಶ್ವಮೇಧವನ್ನು ಮಾಡಿದವನಿಗೆ ಉಂಟಾದಂಥ ಫಲವು ಅವನಿಗೆ ಈ ಧರ್ಮದಿಂದ ಹನ್ನೆರಡನೆಯ ವರ್ಷದಲ್ಲಿ ದೊರಕುತ್ತದೆ.
ಆಶಾಪಾಶವಿಮೋಕ್ಷಂ ಚ ವಿದ್ಧಿ ಧರ್ಮಮನುತ್ತಮಮ್ |
ವೃಕ್ಷಮೂಲಚರೋ ನಿತ್ಯಂ ಶೂನ್ಯಾಗಾರನಿವೇಶನಮ್ ॥54॥
(ಇನ್ನು ಸಂನ್ಯಾಸ ಧರ್ಮವು ಹೇಳಲ್ಪಡುತ್ತದೆ). ಆಶಾಪಾಶವಿಮೋಕ್ಷವನ್ನು ಶ್ರೇಷ್ಠವಾದ ಧರ್ಮವೆಂದು ತಿಳಿ. ಸಂನ್ಯಾಸಿಯು ವೃಕ್ಷದ ಬುಡದಲ್ಲಾಗಲೀ, ಶೂನ್ಯಾಗಾರದಲ್ಲಾಗಲೀ ನಿತ್ಯವೂ ವಾಸಿಸಬೇಕು.
ನದೀಪುಲಿನಶಾಯೀ ಚ ನದೀತೀರಮನುವ್ರಜನ್ |
ವಿಮುಕ್ತಃ ಸರ್ವಸಂಗೇಭ್ಯಃ ಸ್ನೇಹಬಂಧೇನ ವೈ ದ್ವಿಜಃ ॥55॥
ನದೀತೀರಕ್ಕೆ ಹೋಗಿ, ನದೀತೀರದ ಮರಳಿನಲ್ಲಿಯೇ ಮಲಗಿ, ಸರ್ವ ಸಂಗಗಳನ್ನೂ, ಸ್ನೇಹಬಂಧಗಳನ್ನೂ ತ್ಯಜಿಸಬೇಕು.
ಆತ್ಮನ್ಯೇವಾತ್ಮನಾ ಭಾವಂ ಸಮಾಯೋಜ್ಯೇಹ ತೇ ವನೇ |
ಆತ್ಮಭೂತೋ ಯತಾಹಾರೋ ಮೋಕ್ಷದೃಷ್ಟೇನ ಕರ್ಮಣಾ ॥56॥
ಪವಿತ್ರನಿತ್ಯೋ ಯುಕ್ತಶ್ಚ ತಸ್ಯ ಧರ್ಮಃ ಸನಾತನಃ |
ನೈಕತ್ರ ರಮತೇ ಸಕ್ತೋ ನ ಚೈಕಗ್ರಾಮಗೋಚರಃ |
ಯುಕ್ತೋಽಪ್ಯಟತಿ ಯೋಽಯುಕ್ತೋ ನ ಚೈಕಪುಲಿನೇಶಯಃ ॥57॥
ಪರಮಾತ್ಮನಲ್ಲಿಯೇ ತನ್ನ ಮನಸ್ಸಿನ ಎಲ್ಲ ವೃತ್ತಿಯನ್ನೂ ಇಟ್ಟು, ಪರಮಾತ್ಮನನ್ನೇ ಚಿಂತಿಸುವವನಾಗಿ, ಕಾಡಿನಲ್ಲಿ ಆಹಾರನಿಯಮವನ್ನು ಹೊಂದಿ, ಮೋಕ್ಷೋಪಯೋಗಿಯಾದ ಕರ್ಮವನ್ನು ಮಾಡುತ್ತಾ ನಿತ್ಯವೂ ಪವಿತ್ರನೂ, ಯೋಗಯುಕ್ತನೂ ಆಗಿರುವವನ ಧರ್ಮವು ಶಾಶ್ವತವಾದುದು. ಅಂತಹವನು ಯಾವ ವಿಷಯದಲ್ಲಿಯೂ ಸಂತೋಷವನ್ನು ಹೊಂದುವುದಿಲ್ಲ. ಒಂದು ಗ್ರಾಮದಲ್ಲಿಯೇ ಕಾಣಬರುವುದಿಲ್ಲ. ಅವನು ಸಾಮಗ್ರಿಗಳಿಂದ ಯುಕ್ತನಾಗಿರಲಿ, ಇಲ್ಲದಿರಲಿ, ಯಾವಾಗಲೂ ಸಂಚಾರ ಮಾಡುತ್ತಾನೆ. ಒಂದೇ ನದಿಯ ತೀರದಲ್ಲಿಯೂ ಮಲಗುವುದಿಲ್ಲ.
ಏಷ ಮೋಕ್ಷವಿದಾಂ ಧರ್ಮೋ ವೇದೋಕ್ತಃ ಸತ್ಪಥೇ ಸ್ಥಿತಃ॥ ॥58॥
ಇದು ವೇದೋಕ್ತವಾದ, ಸನ್ಮಾರ್ಗದಲ್ಲಿರುವವರ ವೇದೋಕ್ತವಾದ ಧರ್ಮ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಅಷ್ಟನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ನೂರ ತೊಂಬತ್ತೊಂಬತ್ತನೆಯ ಅಧ್ಯಾಯ

ಉಮಾ-ಮಹೇಶ್ವರರ ಸಂವಾದ. ರಾಜಧರ್ಮಗಳು.
ಉಮಾ
ದೇವದೇವ ನಮಸ್ತುಭ್ಯಂ ತ್ರಿಯಕ್ಷ ವೃಷಭಧ್ವಜ |
ಶ್ರುತಂ ಮೇ ಭಗವನ್ ಸರ್ವಂ ತ್ವತ್ಪ್ರಸಾದಾನ್ಮಹೇಶ್ವರ ||1||
ಉಮಾ ದೇವದೇವನೇ, ತ್ರ್ಯಂಬಕನೇ, ವೃಷಭಧ್ವಜನೇ, ನಿನಗೆ ನಮಸ್ಕಾರ. ಪೂಜ್ಯನೇ, ಮಹೇಶ್ವರನೇ, ನಿನ್ನ ಅನುಗ್ರಹದಿಂದ ನಾನು ಎಲ್ಲವನ್ನೂ ಕೇಳಿದೆನು.
ಸಂಗೃಹೀತಂ ಮಯಾ ತಚ್ಚ ತವ ವಾಕ್ಯಮನುತ್ತಮಮ್ |
ಇದಾನೀಮಸ್ತಿ ಸಂದೇಹೋ ಮಾನುಷೇಷ್ವಿಹ ಕಶ್ಚನ ||2||
ನಿನ್ನ ಶ್ರೇಷ್ಠವಾದ ವಾಕ್ಯಗಳೆಲ್ಲವನ್ನೂ ನಾನು ಗ್ರಹಿಸಿದ್ದೇನೆ. ಈಗ ಮನುಷ್ಯರ ವಿಷಯದಲ್ಲಿ ಒಂದು ಸಂದೇಹವಿದೆ.
ತುಲ್ಯಪ್ರಾಣಶಿರಃಕಾಯೋ ರಾಜಾಽಯಮಿತಿ ದೃಶ್ಯತೇ |
ಕೇನ ಕರ್ಮವಿಪಾಕೇನ ಸರ್ವಪ್ರಾಧಾನ್ಯಮರ್ಹತಿ ||3||
ಎಲ್ಲರಿಗೂ ಸಮಾನವಾದ ಶಿರಸ್ಸು, ದೇಹ, ಪ್ರಾಣಗಳಿದ್ದರೂ ಒಬ್ಬನು ರಾಜನಾಗಿರುವುದು ಕಂಡುಬರುತ್ತದೆ. ಯಾವ ಕರ್ಮದ ವಿಪಾಕದಿಂದ ಅವನು ಅಂತಹ ಪ್ರಾಧಾನ್ಯವನ್ನು ಪಡೆಯುತ್ತಾನೆ?
ಸ ಚಾಪಿ ದಂಡಯನ್ ಮರ್ತ್ಯಾನ್ ಭರ್ತ್ಸಯನ್ ವಿಧಮನ್ನಪಿ |
ಪ್ರೇತ್ಯಭಾವೇ ಕಥಂ ಲೋಕಾನ್‌ಲಭತೇ ಪುಣ್ಯಕರ್ಮಣಾ |
ರಾಜವೃತ್ತಮಹಂ ತಸ್ಮಾಚ್ಛ್ರೋತುಮಿಚ್ಛಾಮಿ ಮಾನದ ||4||
ಅವನಾದರೂ ಮನುಷ್ಯರನ್ನು ದಂಡಿಸಿ, ಗದರಿಸಿ, ವಿನಾಶಗೊಳಿಸಿ ಮರಣವನ್ನು ಹೊಂದಿದ ಮೇಲೆ ಹೇಗೆ ಪುಣ್ಯಕರ್ಮಿಗಳು ಪಡೆಯುವ ಲೋಕವನ್ನು ಪಡೆಯುತ್ತಾನೆ? ಎಲೈ ಮಾನದನೇ, ಆದ್ದರಿಂದ ನಾನು ರಾಜಧರ್ಮವನ್ನು ಕೇಳಲು ಬಯಸುತ್ತೇನೆ.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ರಾಜಧರ್ಮಂ ಶುಭಾನನೇ ||5||
ಮಹೇಶ್ವರ ಶುಭಾನನೆಯೇ, ನಾನು ನಿನಗೆ ರಾಜಧರ್ಮವನ್ನು ಹೇಳುವೆನು.
ರಾಜಾಯತ್ತಂ ಹಿ ತತ್ಸರ್ವಂ ಲೋಕವೃತ್ತಂ ಶುಭಾಶುಭಮ್ |
ಮಹತಸ್ತಪಸೋ ದೇವಿ ಫಲಂ ರಾಜ್ಯಮಿತಿ ಸ್ಮೃತಮ್ ||6||
ಲೋಕದಲ್ಲಿ ನಡೆಯುವ ಶುಭಾಶುಭಗಳೆಲ್ಲವೂ ರಾಜರಿಗೆ ಅಧೀನವಾಗಿದೆ. ಎಲೌ ದೇವಿಯೇ, ದೊಡ್ಡ ತಪಸ್ಸಿನ ಫಲವಾಗಿ ರಾಜ್ಯವು ದೊರೆಯುತ್ತದೆ.
ತಪೋದಾನಮಯಂ ರಾಜ್ಯಂ ಪರಂ ಸ್ಥಾನಂ ವಿಧೀಯತೇ |
ತಸ್ಮಾದ್ ರಾಜ್ಞಃ ಸದಾ ಮರ್ತ್ಯಾಃ ಪ್ರಣಮಂತಿ ಯತಸ್ತತಃ ||7||
ತಪಸ್ಸು ಮತ್ತು ದಾನಗಳಿಂದ ರಾಜ್ಯವನ್ನು ಪಡೆದವನ ಸ್ಥಾನವು ಬಹಳ ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ. ಆದ್ದರಿಂದ ಮಾನವರು ರಾಜನಿಗೆ ಎಲ್ಲೆಲ್ಲಿಯೂ ನಮಸ್ಕಾರ ಮಾಡುತ್ತಾರೆ.
ನ್ಯಾಯತಸ್ತ್ವಂ ಮಹಾಭಾಗೇ ಶ್ರೋತುಕಾಮಾಽಸಿ ಭಾಮಿನಿ |
ತಸ್ಮಾತ್ ತಸ್ಯೈವ ಚರಿತಂ ಜಗತ್ಪಥ್ಯಂ ಶೃಣು ಪ್ರಿಯೇ ||8||
ಎಲೌ ಭಾಮಿನಿಯೇ, ನೀನು ರಾಜಧರ್ಮವನ್ನು ಕೇಳಲು ಬಯಸಿರುವುದು ಯೋಗ್ಯವಾಗಿದೆ. ಪ್ರಿಯೆಯೇ, ಆದ್ದರಿಂದ ಜಗತ್ತಿನ ಹಿತಕಾರಣವಾದ ರಾಜಧರ್ಮವನ್ನು ಕೇಳು.
ಅರಾಜಕೇ ಪುರಾ ತ್ವಾಸೀತ್ ಪ್ರಜಾನಾಂ ಸಂಕುಲಂ ಮಹತ್ |
ತದ್‌ದೃಷ್ಟ್ವಾ ಸಂಕುಲಂ ಬ್ರಹ್ಮಾ ಮನುಂ ರಾಜ್ಯೇ ನ್ಯವೇಶಯತ್ |
ತದಾಪ್ರಭೃತಿ ಸಂದೃಷ್ಟಂ ರಾಜ್ಞಾಂ ವೃತ್ತಂ ಶುಭಾಶುಭಮ್ ||9||
ಹಿಂದೆ ರಾಜನಿಲ್ಲದಿದ್ದಾಗ ಪ್ರಜೆಗಳಿಗೆ ದೊಡ್ಡ ಘರ್ಷಣೆಯುಂಟಾಯಿತು. ಆ ಘರ್ಷಣೆಯನ್ನು ನೋಡಿದ ಬ್ರಹ್ಮದೇವನು ಮನುವನ್ನು ರಾಜ್ಯಾಧಿಕಾರದಲ್ಲಿ ಇರಿಸಿದನು. ಅಲ್ಲಿಂದಲೂ ರಾಜನ ಶುಭಾಶುಭ ನಡತೆಗಳು ಗಮನಿಸಲ್ಪಡುತ್ತವೆ.
ತನ್ಮೇ ಶೃಣು ವರಾರೋಹೇ ತಸ್ಯ ಪಥ್ಯಂ ಜಗದ್ಧಿತಮ್ |
ಯಥಾ ಪ್ರೇತ್ಯ ಲಭೇತ್ ಸ್ವರ್ಗಂ ಯಥಾ ವೀರ್ಯಂ ಯಶಸ್ತಥಾ ||10||
ಎಲೌ ವರಾರೋಹೆಯೇ, ಜಗದ್ಧಿತವಾದ, ಅವನಿಗೂ ಪಥ್ಯವಾದ ಮತ್ತು ಮರಣವನ್ನು ಹೊಂದಿದ ಮೇಲೆ ಸ್ವರ್ಗವನ್ನು, ಸಾಮರ್ಥ್ಯವನ್ನು ಮತ್ತು ಕೀರ್ತಿಯನ್ನು ದೊರಕಿಸುವ ಕೊಡುವ ಅವನ ಧರ್ಮಗಳನ್ನು ಕೇಳು.
ಪಿತ್ರ್ಯಂ ವಾ ಭೂತಪೂರ್ವಂ ವಾ ಸ್ವಯಮುತ್ಪಾದ್ಯ ವಾ ಪುನಃ |
ರಾಜ್ಯಧರ್ಮಮನುಷ್ಠಾಯ ವಿಧಿವದ್ ಭೋಕ್ತುಮರ್ಹತಿ ||11||
ತಂದೆಯಿಂದ ಬಂದ ರಾಜ್ಯವನ್ನು ಪಡೆದು ಅಥವಾ ಮೊದಲಿನಿಂದ ಬಂದ ರಾಜ್ಯವನ್ನು (ಜಯದಿಂದ) ಪಡೆದು ಅಥವಾ ತಾನೇ ಒಂದು ರಾಜ್ಯವನ್ನು ಕಟ್ಟಿ ರಾಜನು ಶಾಸ್ತ್ರಕ್ಕನುಗುಣವಾಗಿ ಅದನ್ನು ಭೋಗಿಸಬೇಕು.
ಆತ್ಮಾನಮೇವ ಪ್ರಥಮಂ ವಿನಯ್ಯೈರುಪಪಾದಯೇತ್ |
ಅನು ಭೃತ್ಯಾನ್ ಪ್ರಜಾಃ ಪಶ್ಚಾದಿತ್ಯೇಷ ವಿನಯಕ್ರಮಃ ||12||
ಮೊದಲು ತನ್ನನ್ನು ವಿನೀತನನ್ನಾಗಿ ಮಾಡಿಕೊಳ್ಳಬೇಕು, ಅನಂತರ ಭೃತ್ಯರನ್ನು, ಅನಂತರ ಪ್ರಜೆಗಳನ್ನು ವಿನೀತರನ್ನಾಗಿ ಮಾಡಬೇಕು ಎಂಬುದು ವಿನಯಕ್ರಮ.

ಸ್ವಾಮಿನಂ ಚೋಪಮಾಂ ಕೃತ್ವಾ ಪ್ರಜಾಸ್ತದ್ವೃತ್ತಕಾಂಕ್ಷಯಾ |
ಸ್ವಯಂ ವಿನಯಸಂಪನ್ನಾ ಭವಂತೀಹ ಶುಭೇಕ್ಷಣೇ ||13||
ಪ್ರಜೆಗಳು ಸ್ವಾಮಿಯನ್ನು ದೃಷ್ಟಾಂತವಾಗಿಟ್ಟುಕೊಂಡು ಅವನ ನಡತೆಯನ್ನು ನೋಡಿ ಸ್ವತಃ ವೀರ್ಯಸಂಪನ್ನರಾಗುತ್ತಾರೆ.
ತಸ್ಮಾತ್ ಪೂರ್ವತರಂ ರಾಜಾ ಆತ್ಮಾನಂ ವಿನಯೇ ನಯೇತ್ |
ಯೋ ವಿನೀತಃ ಸ್ವಯಂ ರಾಜಾ ವಿನಯತ್ಯೇವ ವೈ ಪ್ರಜಾಃ |
ಅಪಹಾಸ್ಯೋ ಭವೇತ್ ತಾದೃಕ್ ಸ್ವದೋಷಸ್ಯಾನವೇಕ್ಷಣಾತ್ ||14||
ಆದ್ದರಿಂದ ಮೊಟ್ಟ ಮೊದಲು ರಾಜನು ತನ್ನನ್ನೇ ವಿನಯದಿಂದ ನಡೆಸಿಕೊಳ್ಳಬೇಕು. ರಾಜನು ಸ್ವತಃ ವಿನೀತನಾಗಿದ್ದರೆ ಪ್ರಜೆಗಳೂ ವಿನೀತರಾಗುತ್ತಾರೆ. ಆದರೆ ತನ್ನ ದೋಷವನ್ನು ನೋಡದೆ ವಿನೀತನಾಗದ ರಾಜನು ಅಪಹಾಸಕ್ಕೆ ಗುರಿಯಾಗುತ್ತಾನೆ.
ವಿದ್ಯಾಭ್ಯಾಸೈರ್ವೃದ್ಧಯೋಗೈರಾತ್ಮಾನಂ ವಿನಯಂ ನಯೇತ್ |
ವಿದ್ಯಾ ಧರ್ಮಾರ್ಥಫಲಿನೀ ತದ್ವಿದೋ ವೃದ್ಧಸಂಜ್ಞಿತಾಃ ||15||
ವಿನೀತನನ್ನಾಗಿ ಮಾಡಿಕೊಳ್ಳುವುದು ಎಂದರೆ ವಿದ್ಯಾಭ್ಯಾಸದಿಂದಲೂ ಮತ್ತು ವೃದ್ಧರ ಸಹವಾಸದಿಂದಲೂ ತನ್ನ ದೋಷವನ್ನು ತಿದ್ದಿಕೊಳ್ಳುವುದು ಎಂದು ಅರ್ಥ. ವಿದ್ಯೆಯು ಧರ್ಮಾರ್ಥ ಫಲಗಳನ್ನುಂಟು ಮಾಡುತ್ತದೆ. ಅದನ್ನು ತಿಳಿದವರು ವೃದ್ಧರೆನಿಸುತ್ತಾರೆ.
ಇಂದ್ರಿಯಾಣಾಂ ಜಯೋ ದೇವಿ ಅತ ಊರ್ಧ್ವಮುದಾಹೃತಃ |
ಅಜಯೇ ಸುಮಹಾನ್ ದೋಷೋ ರಾಜಾನಂ ವಿನಿಪಾತಯೇತ್ ||
ಎಲೌ ದೇವಿಯೇ, ವಿನಯದ ಅನಂತರ ಇಂದ್ರಿಯಜಯವು ರಾಜಧರ್ಮವೆಂದು ಹೇಳಲ್ಪಡುತ್ತದೆ. ಇಂದ್ರಿಯಜಯವಿಲ್ಲದಿದ್ದರೆ ಆ ಮಹಾದೋಷವು ರಾಜನನ್ನು ಉರುಳಿಸುತ್ತದೆ.
ಪಂಚೈವ ಸ್ವವಶೇ ಕೃತ್ವಾ ತದರ್ಥಾನ್ ಪಂಚ ಶೋಷಯೇತ್ |
ಷಡುತ್ಸೃಜ್ಯ ಯಥಾಯೋಗಂ ಜ್ಞಾನೇನ ವಿನಯೇನ ಚ |
ಶಾಸ್ತ್ರಚಕ್ಷುರ್ನಯಪರೋ ಭೂತ್ವಾ ಭೃತ್ಯಾನ್ ಸಮಾಹರೇತ್ ||17||
ಪಂಚೇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ಅವುಗಳಿಗೆ ವಿಷಯವಾದ ಶಬ್ದ- ಸ್ಪರ್ಶಾದಿಗಳನ್ನು ಶೋಷಣೆಗೊಳಿಸಬೇಕು. ಜ್ಞಾನ ಮತ್ತು ವಿನಯದ ಬಲದಿಂದ ಕಾಮಾದಿ ಆರು ವೈರಿಗಳನ್ನು ಯಥಾಯೋಗ್ಯವಾಗಿ ತ್ಯಜಿಸಿ ಶಾಸ್ತ್ರ ದೃಷ್ಟಿಯುಳ್ಳವನಾಗಿ, ನೀತಿ ಪರನಾಗಿ ಭೃತ್ಯರನ್ನು ಆರಿಸಬೇಕು.
ವೃತ್ತಶ್ರುತಕುಲೋಪೇತಾನುಪಧಾಭಿಃ ಪರೀಕ್ಷಿತಾನ್ |
ಅಮಾತ್ಯಾನುಪಧಾತೀತಾನ್ ಸೋಪಸರ್ಪಾನ್ ಜಿತೇಂದ್ರಿಯಾನ್ |
ಯೋಜಯೇತ ಯಥಾಯೋಗಂ ಯಥಾರ್ಹಂ ಸ್ವೇಷು ಕರ್ಮಸು ||18||
ಒಳ್ಳೆಯ ನಡತೆ, ವಿದ್ಯೆ ಮತ್ತು ಕುಲಗಳನ್ನು ಹೊಂದಿದ, ಕಪಟವಿಲ್ಲದಿರುವ, ಪರೀಕ್ಷಿತರಾದ, ಮೋಸ ಹೋಗದಿರುವ, ಸುಲಭವಾಗಿ ಸಮೀಪಿಸಬಹುದಾದ, ಜಿತೇಂದ್ರಿಯರಾದ ಪುರುಷರನ್ನು ಅವರವರ ಯೋಗ್ಯತೆ ಮತ್ತು ಅರ್ಹತೆಗೆ ತಕ್ಕಂತೆ ಅಮಾತ್ಯರಾಗಿ ಅವರವರ ಕರ್ಮಗಳಲ್ಲಿ ನಿಯೋಜಿಸಬೇಕು.
ಅಮಾತ್ಯಾ ಬುದ್ಧಿಸಂಪನ್ನಾ ರಾಷ್ಟ್ರಂ ಬಹುಜನಪ್ರಿಯಮ್ |
ದುರಾಧರ್ಷಂ ಪುರಶ್ರೇಷ್ಠಂ ಕೋಶಃ ಕೃಚ್ಛ್ರಸಹಃ ಸ್ಮೃತಃ ||19||
ಬುದ್ಧಿಸಂಪನ್ನರಾದ ಅಮಾತ್ಯರು, ಬಹುಜನಪ್ರಿಯವಾದ ರಾಷ್ಟ್ರ ಮತ್ತು ಆಕ್ರಮಿಸಲು ಅಸಾಧ್ಯವಾದ ರಾಜಧಾನಿ ಮತ್ತು ಕಷ್ಟಕಾಲದಲ್ಲಿ ಕಷ್ಟವನ್ನು ಸಹಿಸಿ ಮುಂದೆ ನಡೆಸುವ ಕೋಶ- ಇವುಗಳನ್ನು ರಾಷ್ಟ್ರವನ್ನು ರಕ್ಷಿಸುವವೆಂದು ಹೇಳಲಾಗುತ್ತದೆ.
ಅನುರಕ್ತಂ ಬಲಂ ಸಾಮ್ನಾಮದ್ವೈಧಂ ಮಂತ್ರಮೇವ ಚ |
ಏತಾಃ ಪ್ರಕೃತಯಃ ಷಟ್ ಚ ಸ್ವಾಮೀ ಚ ನಯತತ್ತ್ವವಿತ್ ||20||
ಪ್ರಜಾನಾಂ ರಕ್ಷಣಾರ್ಥಾಯ ಸರ್ವಮೇತದ್ ವಿನಿರ್ಮಿತಮ್ |
ಆಭಿಃ ಕರಣಭೂತಾಭಿಃ ಕುರ್ಯಾಲ್ಲೋಕಹಿತಂ ನೃಪಃ ||21||
ಅನುರಕ್ತವಾದ ಸೈನ್ಯ, ಮಂತ್ರಾಲೋಚನೆ, ಮಂತ್ರವನ್ನು ಭೇದಿಸದಿರುವುದು, ಅಮಾತ್ಯ, ಮಂತ್ರಿ, ದೂತ, ಅಂಗರಕ್ಷಕರು, ರಾಜಧಾನಿ ಮತ್ತು ರಾಜನೀತಿಯನ್ನು ತಿಳಿದ ಸೇನಾನಾಯಕ - ಇವರೆಲ್ಲರೂ ಪ್ರಜೆಗಳ ರಕ್ಷಣೆಗಾಗಿ ನಿರ್ಮಿತರಾಗಿದ್ದಾರೆ. ತನಗೆ ಉಪಕರಣದಂತಿರುವ ಇವರಿಂದ ರಾಜನು ಲೋಕಹಿತವನ್ನು ಮಾಡಬೇಕು.
ಆತ್ಮರಕ್ಷಾ ನೃಪೇಂದ್ರಸ್ಯ ಪ್ರಜಾರಕ್ಷಾರ್ಥಮಿಷ್ಯತೇ |
ತಸ್ಮಾತ್ ಸತತಮಾತ್ಮಾನಂ ಸಂರಕ್ಷೇದಪ್ರಮಾದವಾನ್ ||22||
ಲೋಕಹಿತಕ್ಕಾಗಿ ರಾಜನು ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕು. ಆದ್ದರಿಂದ ರಾಜನು ಯಾವಾಗಲೂ ಎಚ್ಚರಿಕೆಯಿಂದಿದ್ದು ತನ್ನನ್ನು ತಾನು ರಕ್ಷಿಸಿಕೊಳ್ಳಬೇಕು.
ಭೋಜನಾಚ್ಛಾದನಸ್ನಾನಾದ್ ಬಹಿರ್ನಿಷ್ಕ್ರಮಣಾದಪಿ |
ನಿತ್ಯಂ ಸ್ತ್ರೀಗಣಸಂಯೋಗಾದ್ ರಕ್ಷೇದಾತ್ಮಾನಮಾತ್ಮವಾನ್ ||23||
ಭೋಜನ, ಸ್ನಾನ, ವಸತ್ರಚ್ಛಾದನ,ಬೇಟೆ ಮುಂತಾದವುಗಳು, ಬಹಿರ್ಗಮನ, ಸ್ತ್ರೀಗಣ ಸಂಯೋಗ ಇಂತಹ ಸಂದರ್ಭದಲ್ಲಿ ಧೈರ್ಯಶಾಲಿಯಾದ ರಾಜನು ತನ್ನನ್ನು ತಾನು ರಕ್ಷಿಸಿಕೊಳ್ಳಬೇಕು.
ಸ್ವೇಭ್ಯಶ್ಚೈವ ಪರೇಭ್ಯಶ್ಚ ಶಸತ್ರದಪಿ ವಿಷಾದಪಿ |
ಸತತಂ ಪುತ್ರದಾರೇಭ್ಯೋ ರಕ್ಷೇದಾತ್ಮಾನಮಾತ್ಮವಾನ್ ||24||
ಧೈರ್ಯಶಾಲಿಯಾದ ರಾಜನು ತನ್ನವರಿಂದಲೂ, ಪರರಿಂದಲೂ, ಶಸ್ತ್ರದಿಂದಲೂ, ವಿಷದಿಂದಲೂ, ಪತ್ನೀ-ಪುತ್ರರಿಂದಲೂ ತನ್ನನ್ನು

ರಕ್ಷಿಸಿಕೊಳ್ಳಬೇಕು.
ಸರ್ವೇಭ್ಯ ಏವ ಸ್ಥಾನೇಭ್ಯೋ ರಕ್ಷೇದಾತ್ಮಾನಮಾತ್ಮವಾನ್ |
ಪ್ರಜಾನಾಂ ರಕ್ಷಣಾರ್ಥಾಯ ಪ್ರಜಾಹಿತಕರೋ ಭವೇತ್ ॥25॥
ಎಲ್ಲ ಸ್ಥಾನಗಳಲ್ಲಿಯೂ ಧೈರ್ಯಶಾಲಿಯಾದ ರಾಜನು ಪ್ರಜೆಗಳ ಹಿತಕ್ಕೋಸ್ಕರವಾಗಿ ತನ್ನನ್ನು ರಕ್ಷಿಸಿಕೊಳ್ಳಬೇಕು ಮತ್ತು ಪ್ರಜೆಗಳಿಗೆ ಹಿತವನ್ನು ಮಾಡಬೇಕು.
ಪ್ರಜಾಕಾರ್ಯಂ ತು ತತ್ಕಾರ್ಯಂ ಪ್ರಜಾಸೌಖ್ಯಂ ತು ತತ್ಸುಖಮ್ |
ಪ್ರಜಾಪ್ರಿಯಂ ಪ್ರಿಯಂ ತಸ್ಯ ಸ್ವಹಿತಂ ತು ಪ್ರಜಾಹಿತಮ್ |
ಪ್ರಜಾರ್ಥಂ ತಸ್ಯ ಸರ್ವಸ್ವಮಾತ್ಮಾರ್ಥಂ ನ ವಿಧೀಯತೇ ॥26॥
ಪ್ರಜೆಗಳ ಕಾರ್ಯವೇ ರಾಜನ ಕಾರ್ಯ. ಪ್ರಜೆಗಳ ಸೌಖ್ಯವೇ ರಾಜನ ಸೌಖ್ಯ. ಪ್ರಜೆಗಳ ಪ್ರಿಯವೇ ರಾಜನ ಪ್ರಿಯ. ಪ್ರಜೆಗಳ ಹಿತವೇ ರಾಜನ ಹಿತ. ಪ್ರಜೆಗಳಿಗಾಗಿಯೇ ಅವನ ಸರ್ವಸ್ವವೂ ಇದೆ. ತನ್ನ ಸಲುವಾಗಿ ಯಾವುದೂ ಇರುವುದಿಲ್ಲ.
ಪ್ರಕೃತೀನಾಂ ಹಿ ರಕ್ಷಾರ್ಥಂ ರಾಗದ್ವೇಷೌ ವ್ಯುದಸ್ಯ ಚ |
ಉಭಯೋಃ ಪಕ್ಷಯೋರ್ವಾದಂ ಶ್ರುತ್ವಾ ಚೈವ ಯಥಾತಥಮ್ |
ತಮರ್ಥಂ ವಿಮೃಶೇದ್ ಬುದ್ಧ್ಯಾ ಸ್ವಯಮಾತತ್ತ್ವದರ್ಶನಾತ್ ॥27॥
ಪ್ರಜೆಗಳನ್ನು ರಕ್ಷಿಸುವ ಸಲುವಾಗಿ ರಾಗ-ದ್ವೇಷಗಳನ್ನು ಬಿಟ್ಟು, ವಿವಾದಗಳಲ್ಲಿ ಉಭಯ ಪಕ್ಷಗಳ ವಾದವನ್ನೂ ಸರಿಯಾಗಿ ಕೇಳಿ, ತನ್ನ ಬುದ್ಧಿಯಿಂದ ತತ್ತ್ವವು ನಿಶ್ಚಯವಾಗುವವರೆಗೆ ವಿವಾದ ವಿಷಯವನ್ನು ವಿಮರ್ಶೆ ಮಾಡಬೇಕು.
ತದ್ವಿದ್ಭಿರ್ಬಹುಭಿರ್ವೃದ್ಧೈಃ ಸಹಾಸೀನೋ ನರೋತ್ತಮೈಃ |
ಕರ್ತಾರಮಪರಾಧಂ ಚ ದೇಶಕಾಲೌ ನಯಾನಯೌ ॥28॥
ಜ್ಞಾತ್ವಾ ಸಮ್ಯಗ್ ಯಥಾಶಾಸ್ತ್ರಂ ತತೋ ದಂಡಂ ನಯೇನ್ನೃಷು |
ಏವಂ ಕುರ್ವಂಲ್ಲಭೇದ್ ಧರ್ಮಂ ಪಕ್ಷಪಾತವಿವರ್ಜನಾತ್ ॥29॥
ಅಂತಹ ವಿವಾದಗಳನ್ನು ತಿಳಿದ ವೃದ್ಧರಾದ ಅನೇಕ ಶ್ರೇಷ್ಠ ನರರ ಜೊತೆಯಲ್ಲಿ ಕುಳಿತು, ಅಪರಾಧವನ್ನು ಮಾಡಿದವನನ್ನೂ, ದೇಶ-ಕಾಲಗಳನ್ನೂ, ನೀತಿ, ಅನೀತಿಗಳನ್ನೂ ಚೆನ್ನಾಗಿ ತಿಳಿದು, ಶಾಸ್ತ್ರಕ್ಕೆ ಅನುಗುಣವಾಗಿ ಅಪರಾಧಿಗೆ ದಂಡವನ್ನು ವಿಧಿಸಬೇಕು. ಪಕ್ಷಪಾತ ರಹಿತನಾಗಿ ಹೀಗೆ ಮಾಡುವ ರಾಜನು ಧರ್ಮವನ್ನು ಸಂಪಾದಿಸುತ್ತಾನೆ.
ಪ್ರತ್ಯಕ್ಷಾಪ್ತೋಪದೇಶಾಭ್ಯಾಮನುಮಾನೇನ ವಾ ಪುನಃ |
ಬೋದ್ಧವ್ಯಂ ಸತತಂ ರಾಜ್ಞಾ ದೇಶವೃತ್ತಂ ಶುಭಾಶುಭಮ್ ॥30॥
ರಾಜನು ದೇಶದಲ್ಲಿ ನಡೆಯುವ ಶುಭಾಶುಭ ವಿಷಯಗಳನ್ನು ಪ್ರತ್ಯಕ್ಷವಾಗಿ ಅಥವಾ ಆಪ್ತರ ಉಪದೇಶದಿಂದ ಅಥವಾ ಅನುಮಾನದಿಂದ ಸತತವಾಗಿ ತಿಳಿಯಬೇಕು.
ಚಾರೈಃ ಕರ್ಮಪ್ರವೃತ್ತ್ಯಾ ಚ ತದ್ವಿಜ್ಞಾಯ ವಿಚಾರಯೇತ್ |
ಅಶುಭಂ ನಿರ್ಹರೇತ್ ಸದ್ಯೋ ಜೋಷಯೇಚ್ಛುಭಮಾತ್ಮನಃ ॥31॥
ಚಾರರ ಕರ್ಮಪ್ರವೃತ್ತಿಯಿಂದ ಅವುಗಳನ್ನು ತಿಳಿದು ವಿಚಾರ ಮಾಡಬೇಕು. ಅನಂತರ ಅಶುಭವನ್ನು ತಕ್ಷಣ ವಿನಾಶಗೊಳಿಸಬೇಕು. ತನಗೆ (ಮತ್ತು ದೇಶಕ್ಕೆ) ಶುಭವಾದುದನ್ನು ಪ್ರೋತ್ಸಾಹಿಸಬೇಕು.
ಗರ್ಹ್ಯಾನ್ ವಿಗರ್ಹಯೇದೇವ ಪೂಜ್ಯಾನ್ ಸಂಪೂಜಯೇತ್ ತಥಾ |
ದಂಡ್ಯಾಂಶ್ಚ ದಂಡಯೇದ್ ದೇವಿ ನಾತ್ರ ಕಾರ್ಯಾ ವಿಚಾರಣಾ ॥32॥
ಎಲೌ ದೇವಿಯೇ, ನಿಂದನೀಯರಾದವರನ್ನು ನಿಂದಿಸಬೇಕು. ಹಾಗೆಯೇ ಪೂಜನೀಯರಾದವರನ್ನು ಪೂಜಿಸಬೇಕು. ಶಿಕ್ಷೆಗೆ ಅರ್ಹರಾದವರಿಗೆ ಶಿಕ್ಷೆಯನ್ನು ಕೊಡಬೇಕು. ಇದರಲ್ಲಿ ಸಂಶಯ ಪಡಬೇಕಾದುದಿಲ್ಲ.
ಪಂಚಾಪೇಕ್ಷಂ ಸದಾ ಮಂತ್ರಂ ಕುರ್ಯಾದ್ ಬುದ್ಧಿಯುತೈರ್ನರೈಃ |
ಕುಲವೃತ್ತಶ್ರುತೋಪೇತೈರ್ನಿತ್ಯಂ ಮಂತ್ರಪರೋ ಭವೇತ್ ॥33॥
ಮಂತ್ರಾಲೋಚನೆಯನ್ನು ಮಾಡುವಾಗ ಬುದ್ಧಿವಂತರಾದ, ಕುಲ-ವೃತ್ತ-ಶ್ರುತ ಸಂಪನ್ನರಾದ ಐದು ಜನರ ಜೊತೆಯಲ್ಲಿ ಕುಳಿತು ಮಂತ್ರಾಲೋಚನೆಯನ್ನು ಮಾಡಬೇಕು.
ಕಾಮಕಾರೇಣ ವೈ ಮೂರ್ಖೈರ್ನೈವ ಮಂತ್ರೇಮನಾ ಭವೇತ್ |
ರಾಜಾ ರಾಷ್ಟ್ರಹಿತಾಪೇಕ್ಷಃ ಸತ್ಯಧರ್ಮಾಣಿ ಕಾರಯೇತ್ ॥34॥
ತನ್ನ ಮನಸ್ಸಿಗೆ ಬಂದಂತಾಗಲೀ ಅಥವಾ ಮೂರ್ಖರ ಜೊತೆಯಲ್ಲಿ ಕುಳಿತಾಗಲೀ ಮಂತ್ರಾಲೋಚನೆಯನ್ನು ಮಾಡಬಾರದು. ರಾಷ್ಟ್ರ ಹಿತವನ್ನು ಬಯಸುವ ರಾಜನು ಸಜ್ಜನರಿಗೆ ಹಿತವನ್ನು ಮಾಡುವ ಧರ್ಮಗಳನ್ನು ಆಚರಿಸಬೇಕು.
ಸರ್ವೋದ್ಯೋಗಂ ಸ್ವಯಂ ಕುರ್ಯಾದ್ ದುರ್ಗಾದಿಷು ಸದಾ ನೃಪಃ |
ದೇಶವೃದ್ಧಿಕರಾನ್ ಸರ್ವಾನ್ ಸಂಪ್ರಿಯಾನಪಿ ವರ್ಜಯೇತ್ |
ಅಹನ್ಯಹನಿ ಸಂಪಶ್ಯೇದನುಜೀವಿಗಣಂ ಸ್ವಯಮ್ ॥36॥
ದುರ್ಗಾದಿಗಳಲ್ಲಿ ಕಷ್ಟ ಸಂದರ್ಭದಲ್ಲಿ ರಾಜನು ಮೊದಲ ಪ್ರಯತ್ನವನ್ನು ತಾನೇ ಮಾಡಬೇಕು. ದೇಶಕ್ಕೆ ದುಃಖವನ್ನುಂಟು ಮಾಡುವ ಎಲ್ಲವೂ ತನಗೆ ಅತ್ಯಂತ ಪ್ರಿಯವನ್ನುಂಟು ಮಾಡುತ್ತಿದ್ದರೂ ಅದನ್ನು ತ್ಯಜಿಸಬೇಕು. ತನ್ನನ್ನು ಉಪಜೀವಿಸಿ ಬದುಕುತ್ತಿರುವವರ ಪರಿಸ್ಥಿತಿಯನ್ನು ಪ್ರತಿನಿತ್ಯವೂ ಗಮನಿಸಬೇಕು.
ಸುಮುಖಃ ಸುಪ್ರಿಯೋ ಭೂತಶತ್ವ ಸಮ್ಯಗ್ವೃತ್ತಂ ಸಮಾದಿಶೇತ್ |
ಅಧರ್ಮ್ಯಂ ಪರುಷಂ ತೀಕ್ಷ್ಣಂ ವಾಕ್ಯಂ ವಕ್ತುಂ ನ ಚಾರ್ಹತಿ ॥37॥

ನರೇನರೇ ಗುಣಾನ್ ದೋಷಾನ್ ಸಮ್ಯಗ್ವೇದಿತುಮರ್ಹತಿ ॥38॥
ಅವನು ಪ್ರಸನ್ನಮುಖದಿಂದ ಮತ್ತು ಸಂತೋಷದಿಂದ ಕೂಡಿದವನಾಗಿ, ಸರಿಯಾದ ನಡತೆಯ ಆದೇಶವನ್ನು ಕೊಡಬೇಕು. ಧರ್ಮವಿರುದ್ಧವಾದ, ಒರಟಾದ, ತೀಕ್ಷ್ಣವಾದ ಮಾತನ್ನು ಆಡಬಾರದು. ಪ್ರತಿಯೊಬ್ಬ ಪ್ರಜೆಯಲ್ಲಿಯೂ ಇರುವ ಗುಣಗಳನ್ನೂ, ದೋಷಗಳನ್ನೂ ಸರಿಯಾಗಿ ತಿಳಿಯಬೇಕು.
ಸ್ವೇಂಗಿತಂ ವೃಣುಯಾದ್ ಧೈರ್ಯಾನ್ನ ಕುರ್ಯಾತ್ ಕ್ಷುದ್ರಸಂವಿದಮ್ ।
ಪರೇಂಗಿತಜ್ಞೋ ಲೋಕಜ್ಞೋ ಭೂತ್ವಾ ಸಂಸರ್ಗಮಾಚರೇತ್ ॥39॥
ತನ್ನ ಅಭಿಪ್ರಾಯವನ್ನು ಧೈರ್ಯದಿಂದ ಮುಚ್ಚಿಟ್ಟುಕೊಳ್ಳಬೇಕು. ಕ್ಷುದ್ರರ ಜೊತೆಯಲ್ಲಿ ಸಂಭಾಷಣೆಯನ್ನು ಮಾಡಬಾರದು. ಇನ್ನೊಬ್ಬರ ಇಂಗಿತವನ್ನೂ, ಲೋಕದ ಇಂಗಿತವನ್ನೂ ತಿಳಿದು ಅವರ ಸಂಸರ್ಗವನ್ನು ಮಾಡಬೇಕು.
ಸ್ವತಶ್ಚ ಪರತಶ್ಚೈವ ಪರಸ್ಪರಭಯಾದಪಿ ।
ಅಮಾನುಷಭಯೇಭ್ಯಶ್ಚ ಸ್ವಾಃ ಪ್ರಜಾಃ ಪಾಲಯೇನ್ನೃಪಃ ॥40॥
ರಾಜನು ಪ್ರಜೆಗಳಿಗೆ ತಮ್ಮಿಂದಲೂ, ಇನ್ನೊಬ್ಬರಿಂದಲೂ ಅಥವಾ ಪರಸ್ಪರವಾಗಿಯೂ ಅಥವಾ ಮನುಷ್ಯಭಿನ್ನರಾದ ಪ್ರಾಣಿಗಳಿಂದ ಉಂಟಾಗುವ ಭಯದಿಂದಲೂ ತನ್ನ ಪ್ರಜೆಗಳನ್ನು ರಕ್ಷಿಸಬೇಕು.
ಲುಬ್ಧಾಃ ಕರೋರಾಶ್ಚಾಧ್ಯಕ್ಷಾ ಮಾನವಾ ದಸ್ಯುವೃತ್ತಯಃ ।
ನಿಗ್ರಾಹ್ಯಾ ಏವ ತೇ ರಾಜ್ಞಾ ಸಂಗೃಹೀತ್ವಾ ಯತಸ್ತತಃ ॥41॥
ರಾಜನು ಅಲ್ಲಲ್ಲಿಂದ ಆರಿಸಿದ ಲುಬ್ಧರಾದ, ಕ್ರೂರಿಗಳಾದ, ಕಳ್ಳ ನಡತೆಯನ್ನು ಹೊಂದಿದ ಅಧಿಕಾರಿಗಳನ್ನು ನಿಗ್ರಹಿಸಲೇಬೇಕು.
ಕುಮಾರಾನ್ ವಿನಯೈರೇವ ಜನ್ಮಪ್ರಭೃತಿ ಯೋಜಯೇತ್ ।
ತೇಷಾಮಾತ್ಮಗುಣೋಪೇತಂ ಯೌವರಾಜ್ಯೇ ನಿಯೋಜಯೇತ್ ॥42॥
ರಾಜಕುಮಾರರನ್ನು ಹುಟ್ಟಿದಾಗಿನಿಂದಲೂ ವಿದ್ಯಾದಿಗಳಲ್ಲಿ ತೊಡಗಿಸಬೇಕು. ಅವರಲ್ಲಿ ತನ್ನ ಗುಣಕ್ಕೆ ಸದೃಶವಾದ ಗುಣಗಳುಳ್ಳವನನ್ನು ಯೌವರಾಜ್ಯದಲ್ಲಿ ಸ್ಥಾಪಿಸಬೇಕು.
ಪ್ರಕೃತೀನಾಂ ಯಥಾ ನ ಸ್ಯಾದ್ ರಾಜ್ಯಭ್ರಂಶೋದ್ಭವಂ ಭಯಮ್ ।
ಏತತ್‌ಸಂಚಿಂತಯೇನ್ನಿತ್ಯಂ ತದ್ವಿಧಾನಂ ತಥಾರ್ಹತಿ ॥43॥
ಪ್ರಜೆಗಳಿಗೆ ರಾಜ್ಯಭ್ರಂಶದಿಂದ ಭಯವುಂಟಾಗದಂತೆ ಯುವರಾಜನನ್ನು ನಿಯಮಿಸಬೇಕು. ಇವೆಲ್ಲವನ್ನೂ ಚಿಂತಿಸಿ ಯೋಗ್ಯವಾದ ಕಾರ್ಯವನ್ನು ಮಾಡಬೇಕು.
ಅರಾಜಕಂ ಕ್ಷಣಮಪಿ ರಾಷ್ಟ್ರಂ ನ ಸ್ಯಾದ್ಧಿ ಶೋಭನೇ ।
ಆತ್ಮನೋಽನುವಿಧಾನಾಯ ಯೌವರಾಜ್ಯಂ ಸದೇಷ್ಯತೇ ॥44॥
ಎಲೌ ಶೋಭನೆಯೇ, ರಾಜನಿಲ್ಲದ ರಾಷ್ಟ್ರವು ಒಂದು ಕ್ಷಣವೂ ಉಳಿಯುವುದಿಲ್ಲ. ತನ್ನಂತೆ ರಾಜ್ಯವನ್ನು ನಡೆಸುವುದಕ್ಕಾಗಿ ಯುವರಾಜನ ಸ್ಥಾನವು ಯಾವಾಗಲೂ ಅಪೇಕ್ಷಿತವಾಗುತ್ತದೆ.
ಕುಲಜಾನಾಂ ಚ ವೈದ್ಯಾನಾಂ ಶ್ರೋತ್ರಿಯಾಣಾಂ ತಪಸ್ವಿನಾಮ್ ।
ಅನ್ಯೇಷಾಂ ವೃತ್ತಯುಕ್ತಾನಾಂ ವಿಶೇಷಂ ಕರ್ತುಮರ್ಹತಿ ॥45॥
ಸತ್ಕುಲದಲ್ಲಿ ಜನಿಸಿದವರೂ, ವಿದ್ಯಾವಂತರೂ, ಶ್ರೋತ್ರಿಯರೂ, ತಪಸ್ವಿಗಳೂ, ಒಳ್ಳೆಯ ನಡತೆಯುಳ್ಳವರೂ ಆದವರನ್ನು ವಿಶೇಷವಾಗಿ ನೋಡಿಕೊಳ್ಳಬೇಕು.
ಆತ್ಮಾರ್ಥಂ ರಾಜ್ಯತಂತ್ರಾರ್ಥಂ ಕೋಶಸಂಚಯಮಾರಭೇತ್ ।
ದುರ್ಗಾದ್ರಾಷ್ಟ್ರಾತ್ಸಮುದ್ರಾಚ್ಚ ವಣಿಗ್ಭ್ಯಃ ಪುರುಷಾತ್ಯಯಾತ್ ॥46॥
ತನ್ನ ಸಲುವಾಗಿ, ರಾಜ್ಯದ ನಿರ್ವಹಣೆಯ ಸಲುವಾಗಿ ಕೋಶವನ್ನು ಅಭಿವೃದ್ಧಿ ಪಡಿಸಬೇಕು. ದುರ್ಗಗಳಿಂದಲೂ, ರಾಷ್ಟ್ರದಿಂದಲೂ, ಸಮುದ್ರದಿಂದಲೂ, ವ್ಯಾಪಾರಿಗಳಿಂದಲೂ, ಅಪರಾಧಿ ಪುರುಷರಿಂದಲೂ (ಧನವನ್ನು ಸಂಗ್ರಹಿಸಿ ಕೋಶವನ್ನು ಅಭಿವೃದ್ಧಿಪಡಿಸಬೇಕು).
ಚತುರ್ಧಾ ವಿಭಜೇತ್‌ಕೋಶಂ ಧರ್ಮಭೃತ್ಯಾತ್ಮಕಾರಣಾತ್ ।
ದುರ್ಗಾದ್ ರಾಷ್ಟ್ರಾತ್ ಸಮುದ್ರಾಚ್ಚ ವಣಿಗ್ಭ್ಯಃ ಪುರುಷಾತ್ಯಯಾತ್ ।
ಪರಾತ್ಮಗುಣಸಾರಾಭ್ಯಾಂ ಭೃತ್ಯಪೋಷಣಮಾಚರೇತ್ ॥47॥
ಧರ್ಮಾಚರಣೆಯ ಸಲುವಾಗಿ, ಭೃತ್ಯರ ಸಲುವಾಗಿ ಮತ್ತು ತನ್ನ ಸಲುವಾಗಿ ಕೋಶವನ್ನು ನಾಲ್ಕು ವಿಭಾಗವನ್ನಾಗಿ ಮಾಡಬೇಕು. ದುರ್ಗದಿಂದ, ರಾಷ್ಟ್ರದಿಂದ, ಸಮುದ್ರದಿಂದ, ವ್ಯಾಪಾರಗಳಿಂದ, ಅಪರಾಧಿ ಪುರುಷರಿಂದ, ಪರಾತ್ಮಗುಣ ಸಾರಗಳಿಂದ ಬಂದ ಧನದಿಂದ ಭೃತ್ಯಪೋಷಣೆಯನ್ನು ಮಾಡಬೇಕು.
ವಾಹನಾನಾಂ ವಿಧಾಯಾಗ್ರೇ ಪೋಷಣಂ ಯೌಧಕರ್ಮಸು ।
ಸಾದರಃ ಸತತಂ ಭೂತ್ವಾ ಅವೇಕ್ಷಾವ್ರತಮಾಚರೇತ್ ।
ಚತುರ್ಧಾ ವಿಭಜೇತ್ ಕೋಶಂ ಧರ್ಮಭೃತ್ಯಾತ್ಮಕಾರಣಾತ್ ॥48॥
ಆಪದರ್ಥಂ ಚ ನೀತಿಜ್ಞೋ ದೇಶಕಾಲವಶೇನ ತು ।
ಅನಾಥಾನ್ ವ್ಯಥಿತಾನ್ ವೃದ್ಧಾನ್ ಸ್ವದೇಶೇ ಪೋಷಯೇನ್ನೃಪಃ ॥49॥
ಅಶ್ವ ಮೊದಲಾದ ವಾಹನಗಳನ್ನು ಮುಂದಿಟ್ಟುಕೊಂಡು ಯುದ್ಧಕರ್ಮಗಳಲ್ಲಿ ಅವುಗಳನ್ನು ಪಳಗಿಸಿ ಪೋಷಿಸಬೇಕು. ಯಾವಾಗಲೂ ಆದರದಿಂದ ತಾನೇ ಮೇಲ್ವಿಚಾರಣೆಯ ವ್ರತವನ್ನು ಕೈಗೊಳ್ಳಬೇಕು. ರಾಜನೀತಿಯನ್ನು ತಿಳಿದ ರಾಜನು ದೇಶ, ಕಾಲ ವಶನಾಗಿ ತನ್ನ ಕೋಶವನ್ನು ಧರ್ಮದ ಸಲುವಾಗಿ, ಭೃತ್ಯರ ಸಲುವಾಗಿ, ತನ್ನ ಸಲುವಾಗಿ ಮತ್ತು ಆಪತ್ತಿನ ಸಲುವಾಗಿ ಎಂದು ನಾಲ್ಕು ವಿಭಾಗವನ್ನು

ಮಾಡಬೇಕು. ಅನಾಥರನ್ನೂ, ದುಃಖಿತರನ್ನೂ, ವೃದ್ಧರನ್ನೂ ತನ್ನ ದೇಶದಲ್ಲಿ ಪೋಷಿಸಬೇಕು.
ಸಂಧಿಂ ಚ ವಿಗ್ರಹಂ ಚೈವ ತದ್ವಿಶೇಷಾಂಸ್ತಥಾಽಪರಾನ್ |
ಯಥಾವತ್ಸಂವಿಮೃಶ್ಯೈವ ಬುದ್ಧಿಪೂರ್ವಂ ಸಮಾಚರೇತ್ ॥50॥
ಸಂಧಿ, ವಿಗ್ರಹ, ಸ್ಥಾನ, ಯಾನ, ದ್ವೈಧ ಮೊದಲಾದ ರಾಜನೀತಿಯನ್ನು ಚೆನ್ನಾಗಿ ವಿಮರ್ಶೆ ಮಾಡಿ ಬುದ್ಧಿಪೂರ್ವಕವಾಗಿ ಅನುಷ್ಠಾನ ಮಾಡಬೇಕು.
ಸರ್ವೇಷಾಂ ಸ ಪ್ರಿಯೋ ಭೂತ್ವಾ ಮಂಡಲಂ ಸತತಂ ಚರೇತ್ |
ಶುಭೇಷ್ವಪಿ ಚ ಕಾರ್ಯೇಷು ನ ಚೈಕಾಂತಃ ಸಮಾಚರೇತ್ ॥51॥
ಎಲ್ಲರಿಗೂ ಪ್ರಿಯನಾಗಿದ್ದು ರಾಜ್ಯದಲ್ಲಿ ಯಾವಾಗಲೂ ಸಂಚರಿಸಬೇಕು. ಶುಭಕಾರ್ಯವನ್ನು ಮಾಡುವಾಗಲೂ ಒಬ್ಬನೇ ಮಾಡಬಾರದು.
ಸ್ವತಶ್ಚ ಪರತಶ್ಚೈವ ವ್ಯಸನಾನಿ ವಿಮೃಶ್ಯ ತು |
ಪರೇಣ ಧಾರ್ಮಿಕಾನ್ ನ್ಯಾಯಾನ್ನಾತೀಯಾದ್ ದ್ವೇಷಲೋಭತಃ ॥52॥
ತಾನು ಸ್ವತಃ ಮತ್ತು ಇನ್ನೊಬ್ಬರಿಂದಲೂ ಇನ್ನೊಬ್ಬರಿಗಿರುವ ವ್ಯಸನಗಳನ್ನು ವಿಮರ್ಶೆ ಮಾಡಿ, ಶ್ರೇಷ್ಠರಾದವರಿಂದ ಧಾರ್ಮಿಕ ಕಾರ್ಯಗಳನ್ನು ಮಾಡಿಸಬೇಕು. ದ್ವೇಷದಿಂದಾಗಲೀ ಅಥವಾ ಲೋಭದಿಂದಾಗಲೀ ಧಾರ್ಮಿಕ ಕಾರ್ಯಗಳನ್ನು ಉಲ್ಲಂಘಿಸಬಾರದು.
ರಕ್ಷ್ಯತ್ವಂ ವೈ ಪ್ರಜಾಧರ್ಮಃ ಕ್ಷತ್ರಧರ್ಮಸ್ತು ರಕ್ಷಣಮ್ |
ಕುನೃಪೈಃ ಪೀಡಿತಾಸ್ತಸ್ಮಾತ್ ಪ್ರಜಾಃ ಸರ್ವತ್ರ ಪಾಲಯೇತ್ ॥53॥
ರಕ್ಷಿಸಲ್ಪಡಬೇಕಾದುದು ಪ್ರಜೆಗಳ ಧರ್ಮ. ರಕ್ಷಣೆಯನ್ನು ಮಾಡಬೇಕಾದುದು ಕ್ಷತ್ರಿಯ ಧರ್ಮ. ಆದ್ದರಿಂದ ಕೆಟ್ಟ ರಾಜನಿಂದ ಪೀಡಿತರಾದ ಪ್ರಜೆಗಳನ್ನು ಎಲ್ಲ ಕಡೆಗಳಲ್ಲಿಯೂ ರಕ್ಷಿಸಬೇಕು.
ಯಾತ್ರಾಕಾಲಮವೇಕ್ಷ್ಯೈವ ಪಶ್ಚಾತ್ ಕೋಪಃ ಫಲೋದಯಃ |
ತದ್ಯುಕ್ತಾಶ್ಚಾಪದಶ್ಚೈವ ಪ್ರಾಗ್ಯಾನಾದಿತಿ ಚಿಂತಯೇತ್ ॥54॥
ಯುದ್ಧಕ್ಕೆ ಹೊರಡುವ ಸರಿಯಾದ ಕಾಲವನ್ನು ಗಮನಿಸಿ ಅನಂತರ ಶತ್ರುಗಳ ಮೇಲೆ ಮಾಡುವ ಕೋಪವು ಅಪೇಕ್ಷಿತವಾದ ಫಲವನ್ನುಂಟು ಮಾಡುತ್ತದೆ. ಅಂತಹ ಆಕ್ರಮಣದಲ್ಲಿ ಆಪತ್ತುಗಳೂ ಇವೆ ಎಂದು ಆಕ್ರಮಣಕ್ಕೆ ಹೊರಡುವುದಕ್ಕಿಂತ ಮೊದಲೇ ಆಪತ್ತುಗಳನ್ನೂ ಚಿಂತಿಸಬೇಕು.
ವ್ಯಸನೇಭ್ಯೋ ಬಲಂ ರಕ್ಷೇನ್ನಯತೋ ವ್ಯಯತೋಽಪಿ ವಾ |
ಪ್ರಾಯಶೋ ವರ್ಜಯೇದ್ ಯುದ್ಧಂ ಪ್ರಾಣರಕ್ಷಣಕಾರಣಾತ್ ॥55॥
ಸೈನ್ಯವು ಚಟಗಳಿಗೆ ಬಲಿಯಾಗದಂತೆ ಅದನ್ನು ರಕ್ಷಿಸಬೇಕು. ದುರ್ನೀತಿಗಳಿಗೆ ವಶವಾಗದಂತೆ ಮತ್ತು ದುರ್ವ್ಯಯಗಳನ್ನು ಮಾಡದಂತೆ ರಕ್ಷಿಸಬೇಕು. ಪ್ರಾಣ ರಕ್ಷಣೆಯನ್ನು ಮಾಡಬೇಕಾದ ಕಾರಣದಿಂದ ಸಾಧ್ಯವಾದಷ್ಟು ಮಟ್ಟಿಗೆ ಯುದ್ಧವನ್ನು ವರ್ಜಿಸಬೇಕು.
ಕಾರಣಾದೇವ ಯೋದ್ಧವ್ಯಂ ನಾತ್ಮನಃ ಪರದೋಷತಃ |
ಸುಯುದ್ಧೇ ಪ್ರಾಣಮೋಕ್ಷಶ್ಚ ತಸ್ಯ ಧರ್ಮಾಯ ಇಷ್ಯತೇ ॥56॥
ತನ್ನ ದೋಷವಿಲ್ಲದ ರಾಜನು ಶತ್ರುಗಳ ದೋಷಗಳಿಂದ (ಪ್ರೇರಿತನಾಗಿ) ಅಪರಿಹಾರ್ಯ ಕಾರ್ಯವಿದ್ದರೆ ಮಾತ್ರ ಯುದ್ಧವನ್ನು ಮಾಡಬೇಕು. ಧರ್ಮಯುದ್ಧವನ್ನು ಮಾಡಿ ಪ್ರಾಣತ್ಯಾಗವನ್ನು ಮಾಡಿದರೆ ಅವನಿಗೆ ಧರ್ಮ ಪ್ರಾಪ್ತಿಯಾಗುತ್ತದೆ.
ಅಭಿಯುಕ್ತೋ ಬಲವತಾ ಕುರ್ಯಾದಾಪದ್ವಿಧಿಂ ನೃಪಃ |
ಅನುನೀಯ ತಥಾ ಸರ್ವಾನ್ ಪ್ರಜಾನಾಂ ಹಿತಕಾರಣಾತ್ ॥57॥
ಬಲಿಷ್ಠನಾದ ರಾಜನ ಆಕ್ರಮಣಕ್ಕೆ ಒಳಗಾದಾಗ ರಾಜನು ಆಪದ್ಧರ್ಮವನ್ನು ಅನುಸರಿಸಬೇಕು. ಪ್ರಜೆಗಳ ಹಿತಕ್ಕೋಸ್ಕರವಾಗಿ ಪ್ರಜೆಗಳನ್ನು ಸಮಾಧಾನಪಡಿಸಬೇಕು.
ಅನ್ಯಪ್ರಕೃತಿಯುಕ್ತಾನಾಂ ರಾಜ್ಞಾಂ ವೃತ್ತವಿಚಾರಿಣಾಮ್ |
ಅನ್ಯಾಯಂಶ್ಚಾಪತ್ಪ್ರಪನ್ನಾನಾಂ ನ ತಾನ್ ಸಂಯೋಕ್ತುಮರ್ಹತಿ ॥58॥
ಬೇರೆ ಸ್ವಭಾವವುಳ್ಳವರನ್ನೂ, ರಾಜನ ನಡತೆಯನ್ನೇ ವಿಮರ್ಶೆ ಮಾಡುವವರನ್ನೂ, ಆಪತ್ತಿಗೆ ಸಿಲುಕಿದವರನ್ನೂ ಕಾರ್ಯಗಳಲ್ಲಿ ವಿನಿಯೋಗಿಸಬಾರದು.
ಶುಭಾಶುಭಂ ಯದಾ ದೇವಿ ವೃತ್ತಂ ತೂಭಯಸಾಧನಮ್ |
ಆತ್ಮೈವ ತಚ್ಛುಭಂ ಕುರ್ಯಾದಶುಭಂ ಯೋಜಯೇತ್ ಪರಾನ್ ॥59॥
ಎಲೌ ದೇವಿಯೇ, ಶುಭಾಶುಭ ಕಾರ್ಯಗಳನ್ನು ಮಾಡಬೇಕಾಗಿ ಬಂದಾಗ ಶುಭಕಾರ್ಯವನ್ನು ತಾನೇ ಮಾಡಬೇಕು. ಅಶುಭ ಕಾರ್ಯವನ್ನು ಇನ್ನೊಬ್ಬರಿಂದ ಮಾಡಿಸಬೇಕು.
ಏವಮುದ್ದೇಶತಃ ಪ್ರೋಕ್ತಮಲೇಪತ್ವಂ ಯಥಾ ಭವೇತ್ |
ಏತದೇವಂ ಸಮಾಸೇನ ರಾಜಧರ್ಮಃ ಪ್ರಕೀರ್ತಿತಃ ॥60॥
ರಾಜನಿಗೆ ದೋಷಲೇಪವಾಗದಂತೆ ಮಾಡಬೇಕಾದ ವಿಧಿಗಳನ್ನು ಉದ್ದೇಶಿಸಿ ಹೇಳಿದ್ದೇನೆ. ಇದೇ ರಾಜಧರ್ಮದ ಸಂಕ್ಷಿಪ್ತವಾದ ಕೀರ್ತನೆ.

ಏವಂ ಸಂವರ್ತಮಾನಸ್ತು ದಂಡಯನ್ ಭರ್ತ್ಸಯನ್ ಪ್ರಜಾಃ |
ನ ಕಿಲ್ಬಿಷಮವಾಪ್ನೋತಿ ಪದ್ಮಪತ್ರಮಿವಾಂಭಸಾ ॥61॥
ಹೀಗೆ ಇದ್ದು ಪ್ರಜೆಗಳನ್ನು ಶಿಕ್ಷಿಸುತ್ತಾ, ಗದರಿಸುತ್ತಾ ಆಳುವ ರಾಜನು ಪದ್ಮಪತ್ರವು ನೀರಿನ ಲೇಪವನ್ನು ಹೊಂದದಂತೆ ದೋಷದ ಲೇಪವನ್ನು ಹೊಂದುವುದಿಲ್ಲ.

ಏವಂ ಸಂವರ್ತಮಾನಸ್ಯ ಕಾಲಧರ್ಮೋ ಯದಾ ಭವೇತ್ |
ಸ್ವರ್ಗಲೋಕೇ ತದಾ ರಾಜಾ ತ್ರಿದಶೈಃ ಸಹ ತೋಷ್ಯತೇ ॥62॥
ಹೀಗೆ ಪ್ರಜಾಪಾಲನೆಯನ್ನು ಮಾಡಿದ ರಾಜನು ಕಾಲವಶನಾದಾಗ ಅವನು ಸ್ವರ್ಗಲೋಕವನ್ನು ಹೊಂದಿ, ಅಲ್ಲಿ ದೇವತೆಗಳಿಂದ ಸಂತೋಷಗೊಳಿಸಲ್ಪಡುತ್ತಾನೆ.
ದ್ವಿವಿಧಂ ರಾಜವೃತ್ತಂ ಚ ನ್ಯಾಯಭಾಗ್ಯಸಮನ್ವಿತಮ್ |
ಏವಂ ನ್ಯಾಯಾನುಗಂ ವೃತ್ತಂ ಕಥಿತಂ ತೇ ಶುಭೇಕ್ಷಣೇ ॥63॥
ರಾಜನ ರಾಜಧರ್ಮವು ನ್ಯಾಯಾಯತ್ತವಾದುದು ಮತ್ತು ಭಾಗ್ಯಾಯತ್ತವಾದುದು ಎಂದು ಎರಡು ವಿಧ. ಎಲೌ ಶುಭೇಕ್ಷಣೆಯೇ, ನಾನು ಇದುವರೆಗೆ ನ್ಯಾಯಾಯತ್ತವಾದ ರಾಜಧರ್ಮವನ್ನು ಹೇಳಿದ್ದೇನೆ.
ರಾಜ್ಯಂ ನ್ಯಾಯಾನುಗಂ ನಾಮ ಬುದ್ಧಿಶಾಸ್ತ್ರಾನುಗಂ ಭವೇತ್ |
ಧರ್ಮ್ಯಂ ಪಥ್ಯಂ ಯಶಸ್ಯಂ ಚ ಸ್ವರ್ಗ್ಯಂ ಚೈವ ತಥಾ ಭವೇತ್ ॥64॥
ನ್ಯಾಯಾಯತ್ತವಾದ ರಾಜಧರ್ಮವೆಂದರೆ ಅದು ಬುದ್ಧಿಗೆ ಮತ್ತು ಶಾಸ್ತ್ರಕ್ಕೆ ಅನುಗುಣವಾಗಿರಬೇಕು. ಧರ್ಮಪ್ರದವೂ, ಹಿತವೂ, ಕೀರ್ತಿಪ್ರದವೂ ಮತ್ತು ಸ್ವರ್ಗಪ್ರದವೂ ಆಗಿರಬೇಕು.
ದೈವಪಕ್ಷ್ಯೇ ಸತಿ ನೃಪೇ ರಾಜ್ಯಂ ನ್ಯಾಯಾನುಗಂ ಭವೇತ್ |
ಕ್ರಿಯಂತೇ ಯತ್ರ ಕರ್ಮಾಣಿ ಶಾಸ್ತ್ರಯುಕ್ತಿಂ ವಿಮೃಶ್ಯ ವೈ |
ಕರ್ತಾ ದ್ವೇಷವಿಯುಕ್ತಶ್ಚ ತತ್ರ ನ್ಯಾಯಾನುಗಂ ಭವೇತ್ ॥65॥
ರಾಜನು ದೇವಪಕ್ಷದವನಾಗಿದ್ದರೆ (ದೇವಭಕ್ತನಾಗಿದ್ದರೆ) ರಾಜ್ಯವು ನ್ಯಾಯಾನುಸಾರಿಯಾಗಿರುತ್ತದೆ. ಎಲ್ಲಿ ರಾಜನು ಶಾಸ್ತ್ರವನ್ನು ಮತ್ತು ಯುಕ್ತಿಗಳನ್ನು ವಿಮರ್ಶೆ ಮಾಡಿ ದ್ವೇಷವನ್ನು ತ್ಯಜಿಸಿ ಕಾರ್ಯಗಳನ್ನು ಮಾಡುತ್ತಾನೆಯೋ ಅಲ್ಲಿ ರಾಜ್ಯವು ನ್ಯಾಯಾನುಗವಾಗಿರುತ್ತದೆ.
ರಾಜ್ಯಂ ಭಾಗ್ಯಾನುಗಂ ನಾಮ ಅಯಥಾವತ್ ಪ್ರದೃಶ್ಯತೇ |
ತತ್ತು ಶಾಸ್ತ್ರವಿನಿರ್ಮುಕ್ತಂ ಸತಾಂ ಕೋಪಕರಂ ಭವೇತ್ |
ಅಧರ್ಮ್ಯಮಯಶಸ್ಯಂ ಚ ದುರಂತಂ ಚ ಭವೇದ್ ಧ್ರುವಮ್ ॥66॥
ವಿರುದ್ಧವಾಗಿ ಕಂಡುಬರುವ ರಾಜ್ಯವು ಭಾಗ್ಯಾನುಗವೆಂದು ಹೇಳಲ್ಪಡುತ್ತದೆ. ಅದಕ್ಕೆ ಶಾಸ್ತ್ರದ ಸಮ್ಮತಿಯಿಲ್ಲ ಮತ್ತು ಸಜ್ಜನರಿಗೆ ಕೋಪವನ್ನುಂಟು ಮಾಡುತ್ತದೆ. ಅದು ದುರಂತವಾದ ಅಧರ್ಮವನ್ನೂ ಮತ್ತು ಅಕೀರ್ತಿಯನ್ನೂ ನಿಶ್ಚಿತವಾಗಿ ತಂದು ಕೊಡುತ್ತದೆ.
ಯತ್ರ ಸ್ವಚ್ಛಂದತಃ ಸರ್ವಂ ಕ್ರಿಯತೇ ಕರ್ಮ ರಾಜಭಿಃ |
ತತ್ರ ಭಾಗ್ಯವಶಾದ್ ಭೃತ್ಯಾ ಲಭಂತೇ ನ ವಿಶೇಷತಃ ॥67॥
ಎಲ್ಲಿ ರಾಜನು ಸ್ವಚ್ಛಂದವಾಗಿ ಎಲ್ಲ ಕಾರ್ಯವನ್ನು ಮಾಡುತ್ತಾನೆಯೋ ಅಲ್ಲಿ ಭೃತ್ಯರು ತಾವು ಪಡೆಯಬೇಕಾದುದನ್ನು ತಮ್ಮ ಭಾಗ್ಯದಿಂದಲೇ ಪಡೆಯುತ್ತಾರೆ ಹೊರತಾಗಿ ರಾಜನ ವಿಶೇಷ ಪ್ರಯತ್ನದಿಂದಲ್ಲ.
ಯತ್ರ ದಂಡ್ಯಾ ನ ದಂಡ್ಯಂತೇ ಪೂಜ್ಯಂತೇ ವಾ ನರಾಧಮಾಃ |
ಯತ್ರ ಸಂತೋ ವಿಹನ್ಯಂತೇ ತತ್ರ ಭಾಗ್ಯಾನುಗಂ ಭವೇತ್ ॥68॥
ಎಲ್ಲಿ ಶಿಕ್ಷಾರ್ಹರಾದವರು ಶಿಕ್ಷೆಯನ್ನು ಹೊಂದುವುದಿಲ್ಲವೋ, ನರಾಧಮರು ಪೂಜಿಸಲ್ಪಡುತ್ತಾರೆಯೋ, ಸಜ್ಜನರು ಹಿಂಸಿಸಲ್ಪಡುತ್ತಾರೆಯೋ ಅಲ್ಲಿ ರಾಜ್ಯವು ಭಾಗ್ಯಾನುಗವೆಂದು ಹೇಳಲ್ಪಡುತ್ತದೆ.
ಶುಭಾಶುಭಂ ಯದಾ ಯತ್ರ ವಿಪರೀತಂ ಪ್ರದೃಶ್ಯತೇ |
ರಾಜ್ಞಾ ವಾಽಸುರಪಕ್ಷ್ಯೇ ತು ತತ್ರ ಭಾಗ್ಯಾನುಗಂ ಭವೇತ್ ॥69॥
ರಾಜನಲ್ಲಾಗಲೀ, ಅಪರಾಧಿಗಳ ಪಕ್ಷದಲ್ಲಾಗಲೀ ಶುಭಾಶುಭಗಳು ಎಲ್ಲಿ ವಿರುದ್ಧವಾಗಿ ಕಾಣುತ್ತವೆಯೋ ಅಲ್ಲಿ ರಾಜ್ಯವನ್ನು ಭಾಗ್ಯಾನುಗವೆಂದು ಹೇಳಬೇಕು.
ಭಾಗ್ಯಾನುಗೇ ತು ರಾಜಾನೋ ವರ್ತಮಾನಾ ಯಥಾತಥಾ |
ಪ್ರಾಪ್ಯಾಕೀರ್ತಿಮನರ್ಥಂ ಚ ಇಹ ಲೋಕೇ ಶುಭೇಕ್ಷಣೇ ॥70॥
ಪರತ್ರ ಸುಮಹಾಘೋರಂ ತಮಃ ಪ್ರಾಪ್ಯ ದುರತ್ಯಯಮ್ |
ತಿಷ್ಠಂತಿ ನರಕೇ ದೇವಿ ಪ್ರಳಯಾಂತಾದಿತಿ ಸ್ಥಿತಿಃ ॥71॥
ಎಲೌ ಶುಭೇಕ್ಷಣೆಯೇ, ಭಾಗ್ಯಾನುಗರಾಜ್ಯವನ್ನು ಆಳುವ, ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಳ್ಳುವ ರಾಜರು ಈ ಲೋಕದಲ್ಲಿ ಅಕೀರ್ತಿಯನ್ನೂ ಮತ್ತು ಅನರ್ಥವನ್ನೂ ಹೊಂದಿ, ಪರಲೋಕದಲ್ಲಿ ಮಹಾಘೋರವಾದ, ದಾಟಲು ಅಸಾಧ್ಯವಾದ, ತಮೋರೂಪವಾದ ನರಕವನ್ನು ಹೊಂದುತ್ತಾರೆ. ಎಲೌ ದೇವಿಯೇ, ಅವರು ನರಕದಲ್ಲಿ ಪ್ರಳಯ ಕಾಲದವರೆಗೂ ಇರುತ್ತಾರೆ ಎಂಬುದು ನಿಜವಾದ ಪರಿಸ್ಥಿತಿ.
ಮೋಕ್ಷಣಂ ದುಷ್ಕೃತೀನಾಂ ತು ವಿದ್ಯತೇ ಕಾಲಪರ್ಯಯಾತ್ |
ನಾಸ್ತ್ಯೇವ ಮೋಕ್ಷಣಂ ದೇವಿ ರಾಜ್ಞಾಂ ದುಷ್ಕೃತಿಕಾರಿಣಾಮ್ ॥72॥
ಎಲೌ ದೇವಿಯೇ, ಉಳಿದ ದುಷ್ಕರ್ಮಗಳಿಗೆ ಕಾಲಕ್ರಮದಲ್ಲಿ ಬಿಡುಗಡೆ ಎಂಬುದಿದೆ. ಆದರೆ ದುಷ್ಕರ್ಮವನ್ನು ಮಾಡಿದ ರಾಜರಿಗೆ ನರಕದಿಂದ ಬಿಡುಗಡೆಯು ಇಲ್ಲವೇ ಇಲ್ಲ.
ಏತತ್ಸರ್ವಂ ಸಮಾಸೇನ ರಾಜವೃತ್ತಂ ಶುಭಾಶುಭಮ್ |
ಕಥಿತಂ ತೇ ಮಹಾಭಾಗೇ ಭೂಯಃ ಶ್ರೋತುಂ ಕಿಮಿಚ್ಛಸಿ ॥73॥
ಎಲೌ ಮಹಾನುಭಾವಳೇ, ಶುಭಾಶುಭರೂಪವಾದ ರಾಜನ ನಡತೆ ಎಲ್ಲವನ್ನೂ ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು

ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮಪರ್ವಣಿ ನವನವತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ನೂರ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಗೃಹಸ್ಥರ ಜೀವನೋಪಾಯ.
ಉಮಾ
ಭಗವನ್ ಸರ್ವಭೂತೇಶ ಶೂಲಪಾಣೇ ಮಹಾದ್ಯುತೇ |
ಶ್ರೋತುಮಿಚ್ಛಾಮ್ಯಹಂ ವೃತ್ತಂ ಸರ್ವೇಷಾಂ ಗೃಹಮೇಧಿನಾಮ್ ॥1॥
ಉಮಾ ಭಗವಂತನೇ, ಸರ್ವಭೂತೇಶನೇ, ಶೂಲಪಾಣಿಯೇ, ಮಹಾದ್ಯುತಿಯೇ, ಎಲ್ಲಾ ಗೃಹಸ್ಥರ ವೃತ್ತಿಯನ್ನು ಕೇಳಲು ನಾನು ಬಯಸುತ್ತೇನೆ.
ಕೀದೃಶಂ ಚರಿತಂ ತೇಷಾಂ ತ್ರಿವರ್ಗಸಹಿತಂ ಪ್ರಭೋ |
ಪ್ರತ್ಯಾಯತಿಃ ಕಥಂ ತೇಷಾಂ ಜೀವನಾರ್ಥಮುದಾಹೃತಮ್ ॥2॥
ಎಲೈ ಪ್ರಭುವೇ, ತ್ರಿವರ್ಗಸಾಧಕವಾದ ಅವರ ಪ್ರವೃತ್ತಿಯು ಹೇಗಿರುತ್ತದೆ? ಅವರು ಜೀವನಾರ್ಥವಾಗಿ ಯಾವ ವೃತ್ತಿಯನ್ನು ಅವಲಂಬಿಸಬೇಕೆಂದು ಹೇಳಲ್ಪಡುತ್ತದೆ?
ವರ್ತಮಾನಾಃ ಕಥಂ ಸರ್ವೇ ಪ್ರಾಪ್ನುವಂತ್ಯುತ್ತಮಾಂ ಗತಿಮ್ |
ಏತತ್ಸರ್ವಂ ಸಮಾಸೇನ ವಕ್ತುಮರ್ಹಸಿ ಮಾನದ ॥3॥
ಹೀಗೆ ಬದುಕುವರೆಲ್ಲರೂ ಹೇಗೆ ಉತ್ತಮ ಗತಿಯನ್ನು ಪಡೆಯುತ್ತಾರೆ? ಎಲೈ ಮಾನದನೇ, ಈ ಎಲ್ಲವನ್ನೂ ನನಗೆ ಸಂಕ್ಷೇಪವಾಗಿ ಹೇಳಬೇಕು.
ಮಹೇಶ್ವರಃ
ನ್ಯಾಯತಸ್ತ್ವಂ ಮಹಾಭಾಗೇ ಶ್ರೋತುಕಾಮಾಽಸಿ ಭಾಮಿನಿ |
ಪ್ರಾಯಶೋ ಲೋಕಸದ್ವೃತ್ತಮಿಷ್ಯತೇ ಗೃಹವಾಸಿನಾಮ್ ॥4॥
ಮಹೇಶ್ವರ ಎಲೌ ಮಹಾನುಭಾವಳೇ, ಭಾಮಿನಿಯೇ, ನೀನು ಕೇಳಲು ಬಯಸುತ್ತಿರುವುದು ನ್ಯಾಯವಾಗಿದೆ. ಗೃಹಸ್ಥರಿಗೆ ಲೋಕದಲ್ಲಿ ಹೆಚ್ಚಾಗಿ ಸಚ್ಚಾರಿತ್ರ್ಯವು ಹೇಳಲ್ಪಡುತ್ತದೆ.
ತೇಷಾಂ ಸಂರಕ್ಷಣಾರ್ಥಾಯ ರಾಜಾನಃ ಸಂಸ್ಕೃತಾ ಭುವಿ |
ಸರ್ವೇಷಾಮಥ ಮರ್ತ್ಯಾನಾಂ ವೃತ್ತಿಂ ಸಾಮಾನ್ಯತಃ ಶೃಣು ॥5॥
ಅಂತಹವರ ರಕ್ಷಣೆಗಾಗಿ ಭೂಮಿಯಲ್ಲಿ ರಾಜರು ಇರುತ್ತಾರೆ. ಎಲ್ಲ ಮನುಷ್ಯರಿಗೂ ಇರುವ ಸಾಮಾನ್ಯವಾದ ವೃತ್ತಿಗಳನ್ನು ಕೇಳು.
ವಿದ್ಯಾ ವಾರ್ತಾ ಚ ಸೇವಾ ಚ ಕಾರುತ್ವಂ ನಾಟ್ಯತಾ ತಥಾ |
ಇತ್ಯೇತೇ ಜೀವನಾರ್ಥಾಯ ಮರ್ತ್ಯಾನಾಂ ವಿಹಿತಾಃ ಪ್ರಿಯೇ ॥5॥
ಎಲೌ ಪ್ರಿಯೆಯೇ, ವಿದ್ಯೆ, ವಾರ್ತೆ (ಕೃಷಿ-ವಾಣಿಜ್ಯ), ಸೇವೆ, ಕಮ್ಮಾರ, ಬಡಗಿ ಮುಂತಾದವರು ಮಾಡುವ ಕಾರ್ಯಗಳು ನಾಟ್ಯ ಮೊದಲಾದವುಗಳು- ಇವು ಮನುಷ್ಯರ ಜೀವನಾರ್ಥವಾಗಿ ವಿಹಿತವಾಗಿವೆ.
ಅಪಿ ಜನ್ಮಫಲಂ ತಾವನ್ಮಾನುಷಾಣಾಂ ವಿಶೇಷತಃ |
ವಿಹಿತಂ ತತ್ಸ್ವವೃತ್ತೇನ ತನ್ಮೇ ನಿಗದತಃ ಶೃಣು ॥6॥
ಮನುಷ್ಯರಿಗೆ ವಿಶೇಷವಾಗಿ ತಮ್ಮ ವೃತ್ತಿಯಿಂದ, ತಮ್ಮ ನಡತೆಯಿಂದ ಜನ್ಮಫಲವು ಹೇಳಲ್ಪಡುತ್ತದೆ. ನಾನು ಹೇಳುವಂತೆ ಅದನ್ನು ಕೇಳು.
ಕರ್ಮಕ್ಷೇತ್ರಂ ಹಿ ಮಾನುಷ್ಯಂ ಸುಖದುಃಖಯುತಾಃ ಪರೇ |
ಸರ್ವೇಷಾಂ ಪ್ರಾಣಿನಾಂ ತಸ್ಮಾನ್ಮಾನುಷ್ಯೇ ವೃತ್ತಮಿಷ್ಯತೇ ॥7॥
ಮನುಷ್ಯಜನ್ಮವು ಕರ್ಮಕ್ಷೇತ್ರ. ಉಳಿದ ಪ್ರಾಣಿಗಳು ಕೇವಲ ಸುಖ-ದುಃಖ ಯುಕ್ತಗಳಾಗಿರುತ್ತವೆ. ಕರ್ಮವನ್ನು ಮಾಡುವುದಕ್ಕಾಗಿ ಮನುಷ್ಯನಿಗೆ ಒಂದು ವೃತ್ತಿಯ ಅಪೇಕ್ಷೆ ಇದೆ.
ವಿದ್ಯಾಯೋಗಸ್ತು ಸರ್ವೇಷಾಂ ಪೂರ್ವಮೇವ ವಿಧೀಯತೇ |
ಕಾರ್ಯಾಕಾರ್ಯಂ ವಿಜಾನಾತಿ ವಿದ್ಯಯಾ ದೇವಿ ನಾನ್ಯಥಾ ॥8॥
ಎಲ್ಲರಿಗೂ ವಿದ್ಯಾಭ್ಯಾಸವು ಮೊದಲೇ ಹೇಳಲ್ಪಡುತ್ತದೆ. ದೇವಿಯೇ, ವಿದ್ಯೆ ಇದ್ದರೆ ಕಾರ್ಯಾಕಾರ್ಯಗಳನ್ನು ತಿಳಿಯುತ್ತಾನೆ. ಇಲ್ಲದಿದ್ದರೆ ಇಲ್ಲ.
ವಿದ್ಯಯಾ ಸ್ಪ್ರೀಯತೇ ಜ್ಞಾನಂ ಜ್ಞಾನಾತ್ ತತ್ತ್ವವಿದರ್ಶನಮ್ |
ದೃಷ್ಟತತ್ತ್ವೋ ವಿನೀತಾತ್ಮಾ ಸರ್ವಾರ್ಥಸ್ಯ ಚ ಭಾಜನಮ್ ॥9॥
ಶಕ್ಯಂ ವಿದ್ಯಾವಿನೀತೇನ ಲೋಕೇ ಸಂಜೀವನಂ ಸುಖಮ್ ॥10॥
ವಿದ್ಯೆಯಿಂದ ಶುದ್ಧವಾದ ಜ್ಞಾನವುಂಟಾಗುತ್ತದೆ. ಜ್ಞಾನದಿಂದ ತತ್ತ್ವದರ್ಶನವಾಗುತ್ತದೆ. ತತ್ತ್ವದರ್ಶನವನ್ನು ಪಡೆದವನು ವಿನೀತನಾಗಿ ಎಲ್ಲ ಶುಭಗಳಿಗೂ ಪಾತ್ರನಾಗುತ್ತಾನೆ. ವಿದ್ಯೆಯಿಂದ ವಿನೀತನಾದವನು ಲೋಕದಲ್ಲಿ ಸುಖವಾಗಿ ಜೀವನವನ್ನು

ಮಾಡಲು ಸಾಧ್ಯ.
ಆತ್ಮಾನಂ ವಿದ್ಯಯಾ ತಸ್ಮಾತ್ ಪೂರ್ವಂ ಕೃತ್ವಾ ತು ಭಾಜನಮ್ |
ವಶ್ಯೇಂದ್ರಿಯೋ ಜಿತಕ್ರೋಧೋ ಭೂತ್ವಾಽಽತ್ಮಾನಂ ತು ಭಾವಯೇತ್ |
ಭಾವಯಿತ್ವಾ ತಥಾಽಽತ್ಮಾನಂ ಪೂಜನೀಯಃ ಸತಾಮಪಿ ॥11॥
ಮೊದಲು ಮನುಷ್ಯನು ತನ್ನನ್ನು ವಿದ್ಯೆಯಿಂದ ಯೋಜಿಸಿಕೊಳ್ಳಬೇಕು. ಅದರಿಂದ ಇಂದ್ರಿಯಗಳನ್ನು ವಶಪಡಿಸಿಕೊಂಡು, ಕ್ರೋಧವನ್ನು ಜಯಿಸಿ ತನ್ನನ್ನು ಶುದ್ಧೀಕರಿಸಿಕೊಳ್ಳಬೇಕು. ಶುದ್ಧೀಕರಿಸಿಕೊಂಡ ಮೇಲೆ ಅವನು ಸಜ್ಜನರಿಂದಲೂ ಪೂಜನೀಯನಾಗುತ್ತಾನೆ.
ಕುಲಾನುವೃತ್ತಂ ವೃತ್ತಂ ವಾ ಪೂರ್ವಮಾತ್ಮಾ ಸಮಾಶ್ರಯೇತ್ |
ಇಷ್ಯತೇ ಗೃಹವಾಸಾಯ ದಾರಕರ್ಮ ಯಥಾಪುರಮ್ ॥12॥
ಮೊದಲು ಕುಲಕ್ರಮಾಗತವಾದ ವೃತ್ತಿಯನ್ನೇ ಅವಲಂಬಿಸಬೇಕು. ಹಿಂದಿನವರ ಪದ್ಧತಿಯನ್ನು ಅನುಸರಿಸಿ ಗೃಹಸ್ಥನಾಗುವುದಕ್ಕಾಗಿ ವಿವಾಹವನ್ನು ಮಾಡಿಕೊಳ್ಳಬೇಕು.
ಯದಿ ಚೇದ್ ವಿದ್ಯಯಾ ಚೈವ ವೃತ್ತಿಂ ಕಾಂಕ್ಷೇದಥಾತ್ಮನಃ |
ರಾಜವಿದ್ಯಾಂ ತು ವಾದೇಽಪಿ ಲೋಕವಿದ್ಯಾಮಥಾಪಿ ವಾ |
ತೀರ್ಥತಶ್ಚಾಪಿ ಗೃಹ್ಣೀಯಾಚ್ಛುಶ್ರೂಷಾದಿಗುಣೈರ್ಯುತಃ ॥13॥
ವಿದ್ಯೆಯಿಂದ ಜೀವನವನ್ನು ಮಾಡಲು ಬಯಸಿದರೆ ವಾದಕ್ಕೆ ಉಪಯೋಗಿಯಾದ ರಾಜವಿದ್ಯೆಯನ್ನಾಗಲೀ ಲೋಕವಿದ್ಯೆಯನ್ನಾಗಲೀ ಗುರುಸೇವಾದಿಗಳನ್ನು ಮಾಡಿ ಗುರುವಿನಿಂದಲೇ ಸ್ವೀಕರಿಸಬೇಕು.
ಗ್ರಂಥತಶ್ಚಾರ್ಥತಶ್ಚೈವ ದೃಢಂ ಕುರ್ಯಾತ್ಪ್ರಯತ್ನತಃ |
ಏವಂ ವಿದ್ಯಾಫಲಂ ದೇವಿ ಪ್ರಾಪ್ನುಯಾನ್ನಾನ್ಯಥಾ ನರಃ |
ನ್ಯಾಯಾದ್ ವಿದ್ಯಾಫಲಂ ಚೇಚ್ಛೇದಧರ್ಮಂ ತತ್ರ ವರ್ಜಯೇತ್ ॥14॥
ಗ್ರಂಥಪಾಠದಿಂದಲೂ ಮತ್ತು ಅರ್ಥಾನುಸಂಧಾನದಿಂದಲೂ ದೃಢವಾಗಿ ಪ್ರಯತ್ನವನ್ನು ಮಾಡಬೇಕು. ಎಲೌ ದೇವಿಯೇ, ಹೀಗಲ್ಲದೆ ವಿದ್ಯೆಯ ಫಲವನ್ನು ಪಡೆಯಲು ಸಾಧ್ಯವಿಲ್ಲ. ನ್ಯಾಯದಿಂದ ವಿದ್ಯೆಯ ಫಲವನ್ನು ಬಯಸಬೇಕು. ವಿದ್ಯೆಯ ಸಂಪಾದನೆಯಲ್ಲಿ ಯಾವ ಅಧರ್ಮವನ್ನೂ ಮಾಡಬಾರದು.
ಯದಿ ಚೇದ್ ವಾರ್ತಯಾ ವೃತ್ತಿಂ ಕಾಂಕ್ಷೇತ ವಿಧಿಪೂರ್ವಕಮ್ |
ಕ್ಷೇತ್ರೇ ಜಲೋಪಪನ್ನೇ ಚ ತದ್ಯೋಗ್ಯಾಂ ಕೃಷಿಮಾಚರೇತ್ ॥15॥
ಒಂದು ಪಕ್ಷ ಕೃಷಿಯಿಂದ ವಿಧಿಪೂರ್ವಕವಾಗಿ ಜೀವನವನ್ನು ಮಾಡಲು ಬಯಸಿದರೆ ಜಲಸಂಪನ್ನವಾದ ಕ್ಷೇತ್ರದಲ್ಲಿ ಆ ಕ್ಷೇತ್ರಕ್ಕೆ ಯೋಗ್ಯವಾದ ಕೃಷಿಯನ್ನು ಆರಂಭಿಸಬೇಕು.
ವಾಣಿಜ್ಯಂ ವಾ ಯಥಾಕಾಲಂ ಕುರ್ಯಾತ್ ತದ್ದೇಶಯೋಗತಃ |
ಮೂಲ್ಯಮರ್ಥಂ ಪ್ರಯಾಸಂ ಚ ವಿಚಾರ್ಯೈವ ಫಲೋದಯೌ ॥16॥
ವಾಣಿಜ್ಯವನ್ನು ಮಾಡುವುದಾದರೆ ಆ ಕಾಲ ಮತ್ತು ದೇಶಗಳಿಗೆ ಅನುಗುಣವಾಗಿ ಮಾಡಬೇಕು. ವ್ಯಾಪಾರವನ್ನು ಮಾಡಲು ಬೇಕಾಗುವ ವ್ಯಯ, ಪ್ರಯಾಸ, ವ್ಯಾಪಾರದಿಂದ ಉಂಟಾಗುವ ಫಲ ಇವುಗಳನ್ನು ವಿಚಾರ ಮಾಡಿಯೇ ವ್ಯಾಪಾರವನ್ನು ಮಾಡಬೇಕು.
ಪಶುಸಂಜೀವಕಶ್ಚೈವ ದೇಶೇ ಗಾಃ ಪೋಷಯೇದ್ ಧ್ರುವಮ್ |
ಬಹುಪ್ರಕಾರಾ ಬಹವಃ ಪಶವಸ್ತಸ್ಯ ಸಾಧಕಾಃ ॥17॥
ಪಶುಸಂರಕ್ಷಣೆಯಿಂದ ಜೀವನವನ್ನು ಮಾಡುವವನು ಯೋಗ್ಯವಾದ ದೇಶದಲ್ಲಿ ಗೋವುಗಳನ್ನು ಚೆನ್ನಾಗಿ ಪೋಷಿಸಬೇಕು. ಜೀವನವನ್ನು ಸಾಧಿಸಿಕೊಡುವ ಪಶುಗಳು ಅನೇಕ ಪ್ರಕಾರವಾಗಿರುತ್ತವೆ.
ಯಃ ಕಶ್ಚಿತ್ಸೇವಯಾ ವೃತ್ತಿಂ ಕಾಂಕ್ಷೇತ ಮತಿಮಾನ್ ನರಃ |
ಯತಾತ್ಮಾ ಶ್ರವಣೀಯಾನಾಂ ಭವೇದ್ ವೈ ಸಂಪ್ರಯೋಜಕಃ ॥18॥
ಯಾವ ಮನುಷ್ಯನು ಸೇವೆಯಿಂದ ಜೀವಿಸಲು ಬಯಸುತ್ತಾನೆಯೋ ಅಂತಹ ಮೇಧಾವಿಯು ಮನೋಜಯವನ್ನು ಹೊಂದಿ ಉತ್ತಮರ ಸೇವೆಯಲ್ಲಿ ತೊಡಗಬೇಕು.
ಬುದ್ಧ್ಯಾ ವಾ ಕರ್ಮಯೋಗಾದ್ ವಾ ಬೋಧನಾದ್ ವಾ ಸಮಾಶ್ರಯೇತ್|
ಮಾರ್ಗತಸ್ತು ಸಮಾಶ್ರಿತ್ಯ ತದಾ ತತ್ ಸಂಪ್ರಿಯೋ ಭವೇತ್ ॥19॥
ಬುದ್ಧಿಯಿಂದ ಮಾಡುವ ಕೆಲಸವಾಗಲೀ, ಹಸ್ತದಿಂದ ಮಾಡುವ ಕೆಲಸವಾಗಲೀ ಅಥವಾ ಬೋಧನದಿಂದ ಮಾಡುವ ಕೆಲಸವಾಗಲೀ ನ್ಯಾಯವಾಗಿ ಮಾಡಿದರೆ ಅವನು ಎಲ್ಲರಿಗೂ ಪ್ರಿಯನಾಗುತ್ತಾನೆ.
ಯಥಾಯಥಾ ಸ ತುಷ್ಯೇತ ತಥಾ ಸಂತೋಷಯೇತ ತಮ್ |
ಅನುಜೀವಿಗುಣೋಪೇತಃ ಕುರ್ಯಾದಾತ್ಮಾರ್ಥಮಾಶ್ರಿತಃ ॥20॥
ಸೇವೆಯನ್ನು ಮಾಡುವವನು ತನ್ನ ಸ್ವಾಮಿಯು ಸಂತೋಷಪಡುವಂತೆ ನಡೆದುಕೊಳ್ಳಬೇಕು. ತನ್ನ ಸಲುವಾಗಿ ಅವನನ್ನು ಆಶ್ರಯಿಸಿದವನು ಆಶ್ರಯಿಸಿದವನಲ್ಲಿ ಇರಬೇಕಾದ ಗುಣಗಳನ್ನು ಹೊಂದಿರಬೇಕು.
ವಿಪ್ರಿಯಂ ನಾಚರೇತ್ ತಸ್ಯ ಏಷಾ ಸೇವಾ ಸಮಾಸತಃ |
ವಿಪ್ರಯೋಗಾತ್ ಪುರಾ ತೇನ ಗತಿಮನ್ಯಾಂ ನ ಲಕ್ಷಯೇತ್ ॥21॥
ತನ್ನ ಸ್ವಾಮಿಗೆ ಅಪ್ರಿಯವನ್ನು ಮಾಡಬಾರದು. ಇದು ಸಂಕ್ಷೇಪವಾಗಿ ಸೇವೆಯನ್ನು ಮಾಡುವ ವಿಧಾನ. ಆ ಸ್ವಾಮಿಯನ್ನು ಬಿಡುವುದಕ್ಕಿಂತ ಮೊದಲು ಬೇರೆ ಮಾರ್ಗವನ್ನು ಅವಲಂಬಿಸಬಾರದು.

ಕಾರುಕರ್ಮ ಚ ನಾಟ್ಯಂ ಚ ಪ್ರಾಯಶೋ ನೀಚಯೋನಿಷು |
ತಯೋರಪಿ ಯಥಾಯೋಗಂ ನ್ಯಾಯತಃ ಕರ್ಮವೇತನಮ್ ॥22॥
ಮರಗೆಲಸ, ನಾಟ್ಯ ಮೊದಲಾದವು ಹೆಚ್ಚಾಗಿ ನೀಚಯೋನಿಯ ಮನುಷ್ಯರ ಕಾರ್ಯಗಳು. ಅವುಗಳನ್ನು ಮಾಡಿದರೂ ತನ್ನ ಕಾರ್ಯಕ್ಕನುಗುಣವಾಗಿ ನ್ಯಾಯದಿಂದ ಕರ್ಮವೇತನವನ್ನು ಪಡೆಯಬೇಕು.
ಆಜೀವೇಭ್ಯೋಽಪಿ ಸರ್ವೇಭ್ಯಶ್ಚಾರ್ಜವಾದ್ ವೇತನಂ ಹರೇತ್ |
ಅನಾರ್ಜವಾದಾಹರತಸ್ತತ್ತು ಪಾಪಾಯ ಕಲ್ಪತೇ ॥23॥
ಜೀವನಕ್ಕಾಗಿ ಮಾಡಿದ ಎಲ್ಲಾ ವೃತ್ತಿಗಳಿಂದಲೂ ಋಜುತನದಿಂದ ವೇತನವನ್ನು ಪಡೆಯಬೇಕು. ಋಜುತನವಿಲ್ಲದೆ (ಮೋಸ ಮಾಡಿ) ವೇತನವನ್ನು ಪಡೆದರೆ ಅಲ್ಲಿ ಪಾಪವುಂಟಾಗುತ್ತದೆ.
ಸರ್ವೇಷಾಂ ಪೂರ್ವಮಾರಂಭಾಂಶ್ಚಿಂತಯೇನ್ನಯಪೂರ್ವಕಮ್ |
ಆತ್ಮಶಕ್ತಿಮುಪಾಯಾಂಶ್ಚ ದೇಶಕಾಲೌ ಚ ಶಕ್ತಿತಃ |
ಕಾರಣಾನಿ ಪ್ರಯಾಸಂ ಚ ಪ್ರಕ್ಷೇಪಂ ಚ ಫಲೋದಯಮ್ ॥24॥
ಎಲ್ಲಾ ಕಾರ್ಯಗಳನ್ನು ಮಾಡುವಾಗಲೂ ಮೊದಲು ತನ್ನ ಶಕ್ತಿಯನ್ನೂ, ಆ ಕಾರ್ಯವನ್ನು ಮಾಡುವ ಉಪಾಯವನ್ನೂ, ದೇಶ-ಕಾಲಗಳನ್ನೂ, ಆ ಕಾರ್ಯಕ್ಕೆ ಬೇಕಾದ ಸಲಕರಣೆಗಳನ್ನೂ, ತನಗೆ ಉಂಟಾಗುವ ಪ್ರಯಾಸವನ್ನೂ, ಸಂಚರಿಸಬೇಕಾದ ದೂರವನ್ನೂ, ಅದರಿಂದ ಉಂಟಾಗುವ ಫಲವನ್ನೂ ತನ್ನ ಶಕ್ತಿ ಇದ್ದಷ್ಟು ವಿಮರ್ಶೆ ಮಾಡಬೇಕು.
ಏವಮಾದೀನಿ ಸಂಚಿಂತ್ಯ ದೃಷ್ಟ್ವಾ ದೈವಾನುಕೂಲತಾಮ್ |
ಅತಃ ಪರಂ ಸಮಾರಂಭೇದ್ ಯತ್ರಾತ್ಮಹಿತಮಾಹಿತಮ್ ॥25॥
ಇವುಗಳನ್ನೆಲ್ಲ ಚಿಂತಿಸಿ ದೈವಾನುಕೂಲವಿದ್ದ ಮಾರ್ಗದಲ್ಲಿ ಎಲ್ಲಿ ತನ್ನ ಹಿತವು ಪ್ರತಿಷ್ಠಿತವಾಗಿದೆಯೋ ಅಂತಹ ಕಾರ್ಯವನ್ನು ಆರಂಭಿಸಬೇಕು.
ವೃತ್ತಿಮೇವ ಸಮಾಸಾದ್ಯ ತಾಂ ಸದಾ ಪರಿಪಾಲಯೇತ್ |
ದೈವಮಾನುಷವಿಘ್ನೇಭ್ಯೋ ನ ಪುನರ್ಭ್ರಶ್ಯತೇ ಯಥಾ ॥26॥
ಒಂದು ವೃತ್ತಿಯನ್ನು ಅವಲಂಬಿಸಿದವನು ದೈವವಿಘ್ನಗಳಿಂದಾಗಲೀ, ಮನುಷ್ಯ ವಿಘ್ನದಿಂದಾಗಲೀ ಅದು ಚ್ಯುತವಾಗದಂತೆ ಅದನ್ನು ರಕ್ಷಿಸಬೇಕು.
ಪಾಲಯನ್ ವರ್ಧಯನ್ ಭುಂಜನ್ ತಾಂ ಪ್ರಾಪ್ಯ ನ ವಿನಾಶಯೇತ್ |
ಕ್ಷೀಯತೇ ಗಿರಿಸಂಕಾಶಮಶ್ನತೋ ಹ್ಯನಪೇಕ್ಷಯಾ ॥27॥
ವೃತ್ತಿಯನ್ನು ಹೊಂದಿ ಆ ವೃತ್ತಿಯನ್ನು ರಕ್ಷಿಸಿ ನಡೆಸುತ್ತಾ, ಅಭಿವೃದ್ಧಿ ಪಡಿಸುತ್ತಾ, ಭೋಗಿಸುತ್ತಾ ಇರಬೇಕು. ಅದನ್ನು ನಾಶ ಮಾಡಬಾರದು. ಯಾವ ವೃತ್ತಿಯನ್ನೂ ಮಾಡದೆ ಭೋಗಿಸುವವನ ಧನವು ಪರ್ವತದಷ್ಟಿದ್ದರೂ ಅದು ನಾಶವನ್ನು ಹೊಂದುತ್ತದೆ.
ಆಜೀವೇಭ್ಯೋ ಧನಂ ಪ್ರಾಪ್ಯ ಚತುರ್ಧಾ ವಿಭಜೇದ್ ಬುಧಃ |
ಧರ್ಮಾಯಾರ್ಥಾಯ ಕಾಮಾಯ ಆಪತ್ಪ್ರಶಮನಾಯ ಚ ॥28॥
ಚತುರ್ಷ್ವಪಿ ವಿಭಾಗೇಷು ವಿಧಾನಂ ಶೃಣು ಶೋಭನೇ ॥29॥
ವಿವೇಕಿಯಾದವನು ಜೀವನವೃತ್ತಿಗಳಿಂದ ಧನವನ್ನು ಸಂಪಾದಿಸಿ, ಧರ್ಮದ ಸಲುವಾಗಿ, ಭೋಗದ ಸಲುವಾಗಿ, ಆಪತ್ತಿನ ಪರಿಹಾರದ ಸಲುವಾಗಿ (ಮತ್ತು ತನ್ನ ಸಲುವಾಗಿ) ಎಂದು ನಾಲ್ಕು ವಿಭಾಗವನ್ನು ಮಾಡಬೇಕು. ಶೋಭನೆಯೇ, ವಿಭಾಗವನ್ನು ಮಾಡುವ ವಿಧಾನವನ್ನು ಕೇಳು.
ಯಜ್ಞಾರ್ಥಂ ಚಾನ್ನದಾನಾರ್ಥಂ ದೀನಾನುಗ್ರಹಕಾರಣಾತ್ |
ದೇವಬ್ರಾಹ್ಮಣಪೂಜಾರ್ಥಂ ಪಿತೃಪೂಜಾರ್ಥಮೇವ ಚ ॥30॥
ಕುಲಾರ್ಥಂ ಸನ್ನಿವಾಸಾರ್ಥಂ ಕ್ರಿಯಾನಿತ್ಯೈಶ್ಚ ಧಾರ್ಮಿಕೈಃ |
ಏವಮಾದಿಷು ಚಾನ್ಯೇಷು ಧರ್ಮಾರ್ಥಂ ಸಂತ್ಯಜೇದ್ ಧನಮ್ |
ಧರ್ಮಕಾರ್ಯೇ ಧನಂ ದದ್ಯಾದನವೇಕ್ಷ್ಯ ಫಲೋದಯಮ್ ॥
ಯಜ್ಞದ ಸಲುವಾಗಿ, ಅನ್ನದಾನದ ಸಲುವಾಗಿ, ದೀನರಿಗೆ ಸಹಾಯವನ್ನು ಮಾಡುವ ಸಲುವಾಗಿ, ದೇವ-ಬ್ರಾಹ್ಮಣ-ಪಿತೃಗಳ ಪೂಜಾರ್ಥವಾಗಿ, ಕುಲಾರ್ಥವಾಗಿ, ನಿತ್ಯ ಧಾರ್ಮಿಕ ಕ್ರಿಯೆಗಳಿಗಾಗಿ, ಇನ್ನೊಬ್ಬ ಯೋಗ್ಯನಾದ ವ್ಯಕ್ತಿಯನ್ನು ಮನೆಯಲ್ಲಿ ಪೋಷಿಸುವುದಕ್ಕಾಗಿ - ಇವೇ ಮೊದಲಾದ ಕಾರ್ಯಗಳಲ್ಲಿ ಧರ್ಮದ ಸಲುವಾಗಿ ತೆಗೆದಿಟ್ಟ ಭಾಗವನ್ನು ವ್ಯಯ ಮಾಡಬೇಕು. ಧರ್ಮಕಾರ್ಯಕ್ಕಾಗಿ ಧನವ್ಯಯವನ್ನು ಮಾಡುವಾಗ ಅದರ ಫಲವನ್ನು ಕುರಿತು ಚಿಂತಿಸಬಾರದು.
ಐಶ್ವರ್ಯಸ್ಥಾನಲಾಭಾರ್ಥಂ ರಾಜವಾಲ್ಲಭ್ಯಕಾರಣಾತ್ ॥32॥
ವಾರ್ತ್ತಾಯಾಂ ಚ ಸಮಾರಂಭೇ ಭೃತ್ಯಮಿತ್ರಪರಿಗ್ರಹೇ |
ಆವಾಹೇ ಚ ವಿವಾಹೇ ಚ ಪುತ್ರಾಣಾಂ ವೃತ್ತಿಕಾರಣಾತ್ ॥33॥
ಅರ್ಥೋದಯಸಮಾವಾಪ್ತಾವನರ್ಥಸ್ಯ ವಿಘಾತನೇ |
ಏವಮಾದಿಷು ಚಾನ್ಯೇಷು ಅರ್ಥಾರ್ಥಂ ವಿಭಜೇದ್ ಧನಮ್ ॥34॥
ಐಶ್ವರ್ಯದ ಲಾಭಕ್ಕಾಗಿ, ಸ್ಥಾನದ ಲಾಭಕ್ಕಾಗಿ, ರಾಜನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ, ವಾಣಿಜ್ಯಕ್ಕಾಗಿ, ಸಮಾರಂಭಗಳಿಗಾಗಿ, ಭೃತ್ಯ-ಮಿತ್ರ ಸ್ವೀಕಾರ ಸಂದರ್ಭದಲ್ಲಿ, ವಿವಾಹ ಸಂದರ್ಭದಲ್ಲಿ, ಪುತ್ರನಿಗೆ ಜೀವನೋಪಾಯ ಕಲ್ಪಿಸುವ ಸಂದರ್ಭದಲ್ಲಿ, ದೇವತಾ ಪ್ರತಿಷ್ಠೆಯಲ್ಲಿ ಧನವನ್ನು ಸಂಪಾದಿಸುವುದರಲ್ಲಿ, ಅನರ್ಥವನ್ನು ನಾಶ ಮಾಡುವುದರಲ್ಲಿ - ಇಂತಹ ಕಾರ್ಯಗಳಲ್ಲಿ ಧನಾರ್ಥವಾಗಿ ತೆಗೆದಿಟ್ಟ ಭಾಗವನ್ನು ವಿನಿಯೋಗಿಸಬೇಕು.

ಅನುಬಂಧಂ ಫಲಂ ಹೇತುಂ ದೃಷ್ಟ್ವಾ ವಿತ್ತಂ ಪರಿತ್ಯಜೇತ್ |
ಅನರ್ಥಂ ಬಾಧತೇ ಹ್ಯರ್ಥೋ ಅರ್ಥಂ ಚೈವ ಫಲಾನ್ಯುತ ॥35॥
ಧನವನ್ನು ವ್ಯಯ ಮಾಡಿದ ಪರಿಣಾಮಗಳನ್ನೂ, ವ್ಯಯ ಮಾಡುವುದಕ್ಕೆ ಕಾರಣವನ್ನೂ, ವ್ಯಯ ಮಾಡಿದುದರ ಫಲವನ್ನೂ ನೋಡಿ ಧನವನ್ನು ವ್ಯಯ ಮಾಡಬೇಕು. ಅರ್ಥವು ಅನರ್ಥವನ್ನು ಬಾಧಿಸಿ ಅರ್ಥವನ್ನು ತಂದುಕೊಡುತ್ತದೆ.
ನಾಧನಾಃ ಪ್ರಾಪ್ನುವಂತ್ಯರ್ಥಾನ್ನರಾ ಯತ್ನಶತೈರಪಿ |
ತಸ್ಮಾದ್ ಧನಂ ರಕ್ಷಿತವ್ಯಂ ದಾತವ್ಯಂ ಚ ವಿಧಾನತಃ ॥36॥
ನಿರ್ಧನರಾದವರು ಶತಪ್ರಯತ್ನವನ್ನು ಮಾಡಿದರೂ ಧನವನ್ನು ಸಂಪಾದಿಸುವುದಿಲ್ಲ. ಆದ್ದರಿಂದ ಧನವನ್ನು ರಕ್ಷಿಸಬೇಕು ಮತ್ತು ವಿಧಿಗೆ ಅನುಸಾರವಾಗಿ ದಾನವನ್ನು ಮಾಡಬೇಕು.
ಶರೀರಪೋಷಣಾರ್ಥಾಯ ಆಹಾರಸ್ಯ ವಿಶೇಷಣೇ |
ನಟಗಾಂಧರ್ವಸಂಯೋಗೇ ಕಾಮಯಾತ್ರಾವಿಹಾರಯೋಃ ॥37॥
ಮನಃಪ್ರಿಯಾಣಾಂ ಸಂಯೋಗೇ ಪ್ರೀತಿದಾನೇ ತಥೈವ ಚ |
ಏವಮಾದಿಷು ಚಾನ್ಯೇಷು ಕಾಮಾರ್ಥಂ ವಿಸೃಜೇದ್ ಧನಮ್ ॥38॥
ಶರೀರದ ಪೋಷಣೆಯನ್ನು ಮಾಡುವ ಸಲುವಾಗಿ, ವಿಶೇಷವಾದ ಆಹಾರಕ್ಕಾಗಿ, ಸಂಗೀತ-ನಾಟ್ಯಗಳನ್ನು ಅನುಭವಿಸುವುದಕ್ಕಾಗಿ, ವಿಹಾರ ಯಾತ್ರೆಗಳನ್ನು ಮಾಡುವುದಕ್ಕಾಗಿ, ಮನಸ್ಸಿಗೆ ಪ್ರಿಯರಾದವರ ಸಂಪರ್ಕ ಮಾಡುವುದಕ್ಕಾಗಿ, ಪ್ರೀತಿಯಿಂದ ಕೊಡುವ ಧನಕ್ಕಾಗಿ - ಇಂತಹ ಕೆಲಸಗಳಲ್ಲಿ ಕಾಮಾರ್ಥವಾಗಿ ತೆಗೆದಿಟ್ಟ ಧನದ ಭಾಗವನ್ನು ವಿನಿಯೋಗಿಸಬೇಕು.
ವಿಚಾರ್ಯ ಗುಣದೋಷೌ ತು ಮಾತ್ರಯಾ ತತ್ರ ಸಂತ್ಯಜೇತ್ |
ಚತುರ್ಥಂ ಸನ್ನಿದಧ್ಯಾಚ್ಚ ಆಪದರ್ಥಂ ಶುಚಿಸ್ಮಿತೇ ॥39॥
ಎಲೌ ಶುಚಿಸ್ಮಿತೆಯೇ, ಗುಣ-ದೋಷಗಳನ್ನು ವಿಚಾರ ಮಾಡಿ ಸ್ವಲ್ಪ ಸ್ವಲ್ಪವಾಗಿ ಧನವನ್ನು ಪರಿತ್ಯಜಿಸಬೇಕು. ನಾಲ್ಕನೆಯ ಭಾಗವನ್ನು ಆಪತ್ತಿನ ಪರಿಹಾರಕ್ಕಾಗಿ ಕೂಡಿಡಬೇಕು.
ರಾಜ್ಯಭ್ರಂಶವಿನಾಶಾರ್ಥಂ ದುರ್ಭಿಕ್ಷಾರ್ಥಂ ಚ ಶೋಭನೇ |
ಮಹಾವ್ಯಾಧಿವಿಮೋಕ್ಷಾರ್ಥಂ ವಾರ್ದ್ಧಕಸ್ಯೈವ ಕಾರಣಾತ್ ॥40॥
ಶತ್ರೂಣಾಂ ಪ್ರತಿಕಾರಾಯ ಸಾಹಸ್ಯೆಶ್ಚಾಪ್ಯಮರ್ಷಣಾತ್ |
ಪ್ರಸ್ಥಾನೇ ಚಾನ್ಯದೇಶಾರ್ಥಮಾಪದಾಂ ವಿಪ್ರಮೋಕ್ಷಣೇ |
ಏವಮಾದಿ ಸಮುದ್ದಿಶ್ಯ ಸನ್ನಿದಧ್ಯಾತ್ ಸ್ವಕಂ ಧನಮ್ ॥41॥
ಎಲೌ ಶೋಭನೆಯೇ, ರಾಜ್ಯಭ್ರಂಶದಿಂದ ಉಂಟಾಗುವ ವಿನಾಶವನ್ನು ತಪ್ಪಿಸಿಕೊಳ್ಳಲು, ದುರ್ಭಿಕ್ಷೆಯಿಂದ ತಪ್ಪಿಸಿಕೊಳ್ಳಲು, ಮಹಾವ್ಯಾಧಿಗಳಿಂದ ಬಿಡುಗಡೆಯನ್ನು ಹೊಂದಲು, ಮುಪ್ಪಿನ ಕಾರಣದಿಂದ ಶತ್ರುಗಳಿಗೆ ಪ್ರತೀಕಾರವನ್ನು ಮಾಡಲು, ಸಹಿಸದವರನ್ನು ದೂರದಲ್ಲಿಡಲು, ನಿವಾಸಕ್ಕಾಗಿ ಇನ್ನೊಂದು ದೇಶಕ್ಕೆ ಹೋಗಲು, ಆಪತ್ತುಗಳನ್ನು ತಪ್ಪಿಸಿಕೊಳ್ಳಲು - ಇಂತಹ ಕಾರ್ಯಗಳಲ್ಲಿ ಆಪತ್ತಿಗಾಗಿ ತೆಗೆದಿಟ್ಟ ಧನದ ಭಾಗವನ್ನು ವ್ಯಯ ಮಾಡಬೇಕು.
ಸುಖಮರ್ಥವತಾಂ ಲೋಕೇ ಕೃಚ್ಛ್ರಾಣಾಂ ವಿಪ್ರಮೋಕ್ಷಣಮ್ |
ಯಸ್ಯ ನಾಸ್ತಿ ಧನಂ ಕಿಂಚಿತ್ ತಸ್ಯ ಲೋಕದ್ವಯಂ ನ ಚ ॥42॥
ಲೋಕದಲ್ಲಿ ಧನವಿದ್ದವರಿಗೆ ಕಷ್ಟದಿಂದ ಬಿಡುಗಡೆ ಹೊಂದುವುದು ಸುಲಭ. ಧನವಿಲ್ಲದವನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ.
ಅಶನಾದಿಂದ್ರಿಯಾಣೀವ ಸರ್ವಮರ್ಥಾತ್ ಪ್ರವರ್ತತೇ |
ನಿಧಾನಂ ಮಾತ್ರಯಾ ಕುರ್ಯಾದನ್ಯಥಾ ವಿಲಯಂ ವ್ರಜೇತ್ |
ಏವಂ ದೇವಿ ಮನುಷ್ಯಾಣಾಂ ಲೋಕೇ ತ್ವಾಜೀವನಂ ಪ್ರತಿ ॥43॥
ಭೋಜನದಿಂದ ಇಂದ್ರಿಯಗಳು ಪ್ರವೃತ್ತಿ ಮಾಡುವಂತೆ ಧನದಿಂದ ಎಲ್ಲವೂ ಪ್ರವೃತ್ತವಾಗುತ್ತವೆ. ಧನವನ್ನು ಸ್ವಲ್ಪ ಸ್ವಲ್ಪವಾಗಿ ಕೂಡಿಡಬೇಕು. ಕೂಡಿಡದಿದ್ದರೆ ಎಲ್ಲವೂ ವಿನಾಶವನ್ನು ಹೊಂದುತ್ತದೆ. ದೇವಿಯೇ, ಮನುಷ್ಯರ ಜೀವನೋಪಾಯವನ್ನು ಕುರಿತು ಲೋಕದಲ್ಲಿ ಹೀಗೆ ವಿಹಿತವಾಗಿದೆ.
ಏವಂಯುಕ್ತಸ್ಯ ಲೋಕಸ್ಯ ಲೌಕ್ಯಂ ವೃತ್ತಂ ಪುನಃ ಶೃಣು |
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗೀಯಂ ಪರಮಂ ಯಶಃ ॥44॥
ಇಂತಹ ವಿಧಾನದಿಂದ ಕೂಡಿದ ಲೋಕಕ್ಕೆ ಉಂಟಾಗುವ ಫಲವನ್ನು ಕೇಳು. ಧನವೂ, ಕೀರ್ತಿಯೂ, ಆಯುಷ್ಯವೂ, ಸ್ವರ್ಗಸುಖವೂ ಮತ್ತು ಪರಮಕೀರ್ತಿಯೂ ಉಂಟಾಗುತ್ತದೆ.
ತ್ರಿವರ್ಗೇ ಚ ತಥಾ ಯುಕ್ತಂ ಸರ್ವೇಷಾಂ ಸಂವಿಧೀಯತೇ |
ತಥಾ ಸಂವರ್ತಮಾನಾಸ್ತು ಲೋಕಯೋರ್ಹಿತಮಾಪ್ನುಯುಃ ॥45॥
ಧರ್ಮಾರ್ಥ ಕಾಮಗಳ ವಿಷಯದಲ್ಲಿ ಎಲ್ಲದರಲ್ಲಿಯೂ ಹೀಗೆ ಯೋಗ್ಯವಾದುದು ವಿಹಿತವಾಗಿದೆ. ಹಾಗೆ ನಡೆದುಕೊಳ್ಳುವವರು ಎರಡು ಲೋಕಗಳಲ್ಲಿಯೂ ಸುಖವನ್ನು ಹೊಂದುತ್ತಾರೆ.
ಕಾಲ್ಯೋತ್ಥಾನಂ ಚ ಶೌಚಂ ಚ ದೇವಬ್ರಾಹ್ಮಣಭಕ್ತತಾ |
ಗುರೂಣಾಮೇವ ಶುಶ್ರೂಷಾ ಬ್ರಾಹ್ಮಣೇಷ್ವಭಿವಾದನಮ್ ॥46॥
ಪ್ರತ್ಯುತ್ಥಾನಂ ಚ ವೃದ್ಧಾನಾಂ ದೇವಸ್ಥಾನಪ್ರಣಾಮನಮ್ |
ಆಭಿಮುಖ್ಯಂ ಪುರಸ್ಕೃತ್ಯ ಅತಿಥೀನಾಂ ಚ ಭೋಜನಮ್ ॥47॥

ವೃದ್ಧೋಪದೇಶಕರಣಂ ಶ್ರವಣಂ ಹಿತಪಥ್ಯಯೋಃ |
ಪೋಷಣಂ ಭೃತ್ಯವರ್ಗಸ್ಯ ಸಾಂತ್ವದಾನಪರಿಗ್ರಹೈಃ ||48||
ನ್ಯಾಯತಃ ಕರ್ಮಕರಣಮನ್ಯಾಯಾಹಿತವರ್ಜಿತಮ್ |
ಸಮ್ಯಗ್ವೃತ್ತಂ ಸ್ವದಾರೇಷು ದೋಷಾಣಾಂ ಪ್ರತಿಷೇಧನಮ್ ||49||
ಪುತ್ರಾಣಾಂ ವಿನಯಂ ಕುರ್ಯಾತ್ ತತ್ತತ್ಕಾರ್ಯೇ ನಿಯೋಜನಮ್ |
ವರ್ಜನಂ ಚಾಶುಭಾರ್ಥಾನಾಂ ಶುಭಾನಾಂ ಜೋಷಣಂ ತಥಾ ||50||
ಕುಲೋಚಿತಾನಾಂ ಧರ್ಮಾಣಾಂ ಯಥಾವತ್ ಪರಿಪಾಲನಮ್ |
ವರ್ಜನಂ ಕಲಹಾದೀನಾಂ ಭಕ್ತ್ಯಾ ಸಂಶಮನಂ ತಥಾ ||51||
ಸತಾಂ ವ್ಯಸನಸಂಯೋಗೇ ಸ್ವಶಕ್ತ್ಯಾಭ್ಯವಪತ್ತಿತಾ |
ದೀನಾನಾಂ ಸಂಗ್ರಹಂ ಚೈವ ನಾನೃಶಂಸ್ಯವ್ಯಪೇಕ್ಷಯಾ |
ಅಬದ್ಧಾನೃತಘೋರಾಣಾಂ ವಚನಾನಾಂ ವಿವರ್ಜನಮ್ ||52||
ಕುಲಸಂಧಾರಣಂ ಚೈವ ಪೌರುಷೇಣೈವ ಸರ್ವಶಃ |
ಏವಮಾದಿ ಶುಭಂ ಸರ್ವಂ ತಸ್ಯ ವೃತ್ತಮಿತಿ ಸ್ಮೃತಮ್ ||53||
ಬೆಳಗಿನ ಜಾವದಲ್ಲಿ ಏಳುವುದು, ಶೌಚ, ದೇವ-ಬ್ರಾಹ್ಮಣರಲ್ಲಿ ಭಕ್ತಿ, ಗುರುಸೇವೆ, ಬ್ರಾಹ್ಮಣರಿಗೆ ನಮಸ್ಕಾರ, ಹಿರಿಯರ ಎದುರಿಗೆ ಏಳುವುದು, ದೇವಾಲಯದಲ್ಲಿ ನಮಸ್ಕಾರ ಮಾಡುವುದು, ಅತಿಥಿಗಳನ್ನು ಅಭಿಮುಖವಾಗಿ ಸ್ವೀಕರಿಸಿ ಭೋಜನವನ್ನು ಮಾಡುವುದು, ವೃದ್ಧರು ಉಪದೇಶವನ್ನು ಮಾಡುವಂತೆ ಮಾಡುವುದು, ಹಿತವಾದ ಮತ್ತು ಪಥ್ಯವಾದ ಮಾತುಗಳನ್ನು ಕೇಳುವುದು, ಭೃತ್ಯವರ್ಗವನ್ನು ಪೋಷಿಸುವುದು, ಯಾವ ಕಾರ್ಯವನ್ನು ಮಾಡಿದರೂ ನ್ಯಾಯದಿಂದ ಮಾಡುವುದು, ಅನ್ಯಾಯದ ಸಂಪಾದನೆಯನ್ನು ವರ್ಜಿಸುವುದು, ತನ್ನ ಪತ್ನಿಯರಲ್ಲಿ ಸರಿಯಾಗಿ ನಡೆದುಕೊಳ್ಳುವುದು, ದೋಷಗಳನ್ನು ನಿಷೇಧಿಸುವುದು, ಪುತ್ರರಿಗೆ ಶಿಕ್ಷಣವನ್ನು ಕೊಟ್ಟು ಆಯಾ ಕಾರ್ಯಗಳಲ್ಲಿ ನಿಯೋಜಿಸುವುದು, ಅಶುಭವಾದ ಪದಾರ್ಥಗಳನ್ನು ಬಿಡುವುದು, ಶುಭವಾದ ಪದಾರ್ಥಗಳನ್ನು ಸೇವಿಸುವುದು, ಕುಲೋಚಿತವಾದ ಧರ್ಮಗಳನ್ನು ಸರಿಯಾಗಿ ಪಾಲಿಸುವುದು, ಕಲಹಗಳನ್ನು ಪರಿತ್ಯಜಿಸುವುದು, ಭಕ್ತಿಯಿಂದ ಶಾಂತವಾಗಿರುವುದು, ಸಜ್ಜನರಿಗೆ ವ್ಯಸನ ಉಂಟಾದಾಗ ಶಕ್ತಿ ಇದ್ದಷ್ಟು ಸಹಾಯವನ್ನು ಮಾಡುವುದು, ದೀನರನ್ನು ಫಲಾಪೇಕ್ಷೆ ಇಲ್ಲದೆ ಸಂಗ್ರಹಿಸುವುದು, ಅ(ಸಂ)ಬದ್ಧವಾದ ಸುಳ್ಳಾದ ಮತ್ತು ಘೋರವಾದ ಮಾತುಗಳನ್ನು ಆಡದಿರುವುದು, ಪ್ರಯತ್ನದಿಂದ ಕುಲವನ್ನು ಒಟ್ಟುಗೂಡಿಸುವುದು - ಇವೇ ಮೊದಲಾದ ಕಾರ್ಯಗಳು ಗೃಹಸ್ಥರಿಗೆ ಶುಭವಾದವುಗಳು ಎಂದು ಹೇಳಲ್ಪಡುತ್ತವೆ.
ವೃದ್ಧಸೇವೀ ಭವೇನ್ನಿತ್ಯಂ ಹಿತಾರ್ಥಂ ಜ್ಞಾನಕಾಂಕ್ಷಯಾ |
ಪರಾರ್ಥಂ ನಾಹರೇದ್ ದ್ರವ್ಯಮನಾಮಂತ್ರ್ಯ ತು ಸರ್ವಥಾ |
ನ ಯಾಚೇತ ಪರಾನ್ ಧೀರಃ ಸ್ವಬಾಹುಬಲಮಾಶ್ರಯೇತ್ ||54||
ಹಿತವನ್ನು ಸಂಪಾದಿಸಲು ಮತ್ತು ಜ್ಞಾನವನ್ನು ಸಂಪಾದಿಸಲು ಯಾವಾಗಲೂ ವೃದ್ಧರನ್ನು ಸೇವಿಸಬೇಕು. ಪರರ ಅನುಮತಿಯಿಲ್ಲದೆ ಅವರ ವಸ್ತುಗಳನ್ನು ಸರ್ವಥಾ ತೆಗೆದುಕೊಳ್ಳಬಾರದು. ಧೀರರಾದವರು ಪರರನ್ನು ಯಾಚಿಸಬಾರದು. ತನ್ನ ಬಾಹುಬಲದಿಂದ ಸಂಪಾದಿಸಿದುದನ್ನೇ ಆಶ್ರಯಿಸಬೇಕು.
ಸ್ವಶರೀರಂ ಸದಾ ರಕ್ಷೇದಾಹಾರಾಚಾರಯೋರಪಿ |
ಹಿತಂ ಪಥ್ಯಂ ಸದಾಹಾರಂ ಜೀರ್ಣಂ ಭುಂಜೀತ ಮಾತ್ರಯಾ ||55||
ಆಚಾರ, ಆಹಾರ ಮತ್ತು ವಿಹಾರಗಳಲ್ಲಿ ಸದಾ ತನ್ನ ಶರೀರಗಳನ್ನು ರಕ್ಷಿಸಿಕೊಳ್ಳಬೇಕು. ಪಥ್ಯವೂ, ಹಿತವೂ ಆದ ಒಳ್ಳೆಯ ಆಹಾರವು ಜೀರ್ಣವಾದ ಮೇಲೆ ಸ್ವಲ್ಪ ಸ್ವಲ್ಪವಾಗಿ ಭೋಜನವನ್ನು ಮಾಡಬೇಕು.
ದೇವತಾತಿಥಿಸತ್ಕಾರಂ ಕೃತ್ವಾ ಸರ್ವಂ ಯಥಾವಿಧಿ |
ಶೇಷಂ ಭುಂಜೇಚ್ಛುಚಿರ್ಭೂತ್ವಾ ನ ಚ ಭಾಷೇತ ವಿಪ್ರಿಯಮ್ ||56||
ಮೊದಲು ವಿಧಿಗೆ ಅನುಗುಣವಾಗಿ ದೇವತಾತಿಥಿಗಳ ಸತ್ಕಾರವನ್ನು ಮಾಡಿ, ಅನಂತರ ಶುಚಿಯಾಗಿ ಶೇಷಾನ್ನವನ್ನು ಭುಂಜಿಸಬೇಕು. ಯಾರಿಗೂ ಅಪ್ರಿಯವಾದ ಮಾತನ್ನಾಡಬಾರದು.
ಪ್ರತಿಶ್ರಯಂ ಚ ಪಾನೀಯಂ ಬಲಿಂ ಭಿಕ್ಷಾಂ ಚ ಸರ್ವತಃ |
ಗೃಹಸ್ಥಃ ಪ್ರವಹೇದ್ ದದ್ಯಾದ್ ಗಾಶ್ಚ ವತ್ಸಾಂಶ್ಚ ಪೋಷಯೇತ್ ||57||
ಗೃಹಸ್ಥನು ನಿವಾಸವನ್ನು, ಧನವನ್ನು, ಅನ್ನವನ್ನು, ಭಿಕ್ಷೆಯನ್ನು ಕೊಡಬೇಕು. ಗೋವುಗಳನ್ನು ಮತ್ತು ಕರುಗಳನ್ನು ಪೋಷಿಸಬೇಕು.
ಬಹಿರ್ನಿಷ್ಕ್ರಮಣಂ ಚೈವ ಕುರ್ಯಾತ್ ಕಾರಣತೋ ದಿವಾ |
ಮಧ್ಯಾಹ್ನೇ ವಾಽರ್ಧರಾತ್ರೇ ವಾ ಗಮನಂ ನೈವ ರೋಚಯೇತ್ ||58||
ಒಂದು ಕಾರಣವಿದ್ದರೆ ಮಾತ್ರ ಹಗಲಿನಲ್ಲಿ ಹೊರಗೆ ಪ್ರಯಾಣ ಮಾಡಬೇಕು. ಮಧ್ಯಾಹ್ನದಲ್ಲಾಗಲೀ, ಅರ್ಧರಾತ್ರಿಯಲ್ಲಾಗಲೀ ಪ್ರಯಾಣವನ್ನು ಇಷ್ಟಪಡಬಾರದು.
ವಿಷಮಾನ್ನಾವಗಾಹೇತ ಸ್ವಶಕ್ತ್ಯಾ ಸಮಮಾಚರೇತ್ |
ಯಥಾऽऽಯವ್ಯಯತಾ ಲೋಕೇ ಗೃಹಸ್ಥಾನಾಂ ಪ್ರಪೂಜಿತಾ ||59||
ವಿಷಮವಾದ ಕಾರ್ಯಗಳನ್ನು ಆರಂಭಿಸಬಾರದು. ಶಕ್ತಿ ಇದ್ದಷ್ಟು ಸಾಧು ಕಾರ್ಯಗಳನ್ನೇ ಆರಂಭಿಸಬೇಕು. ಅಂತಹ ಆಯವ್ಯಯಗಳು ಲೋಕದಲ್ಲಿ ಗೃಹಸ್ಥರಿಗೆ ಶ್ಲಾಘಿಸಲ್ಪಡುತ್ತವೆ.
ಅಯಶಸ್ಕರಮರ್ಥಘ್ನಂ ಕರ್ಮ ಯತ್ಪರಪೀಡನಮ್ |
ಭಯಾದ್ವಾ ಯದಿ ಲೋಭಾದ್ವಾ ನ ಕುರ್ವೀತ ಕದಾಚನ ||60||

ಕೀರ್ತಿನಾಶಕವೂ, ಧನನಾಶಕವೂ, ಪರಪೀಡಕವೂ ಆದ ಕಾರ್ಯವನ್ನು ಭಯದಿಂದಾಗಲೀ, ಲೋಭದಿಂದಾಗಲೀ ಎಂದೂ ಮಾಡಬಾರದು.
ಬುದ್ಧಿಪೂರ್ವಂ ಸಮಾಲೋಕ್ಯ ದೂರತೋ ಗುಣದೋಷತಃ |
ಆರಭೇತ ತದಾ ಕರ್ಮ ಶುಭಂ ವಾ ಯದಿ ವೇತರತ್ ||61||
ಮೊದಲೇ ಬುದ್ಧಿಯಿಂದ ಚೆನ್ನಾಗಿ ಆಲೋಚಿಸಿ ಶುಭಕಾರ್ಯವನ್ನಾಗಲೀ ಅಥವಾ ಅಶುಭಕಾರ್ಯವನ್ನಾಗಲೀ ಆರಂಭಿಸಬೇಕು ಅಥವಾ ನಿವೃತ್ತನಾಗಬೇಕು.
ಆತ್ಮಾ ಸಾಕ್ಷೀ ಭವೇನ್ನಿತ್ಯಮಾತ್ಮನಸ್ತು ಶುಭಾಶುಭೇ |
ಮನಸಾ ಕರ್ಮಣಾ ವಾಚಾ ನ ಚ ಕಾಂಕ್ಷೇತ ಪಾತಕಮ್ ||62||
ತಾನು ಮಾಡುವ ಶುಭಾಶುಭ ಕರ್ಮಗಳಿಗೆ ಯಾವಾಗಲೂ ತಾನೇ ಸಾಕ್ಷಿಯಾಗುತ್ತಾನೆ. ಆದ್ದರಿಂದ ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ, ಕರ್ಮದಿಂದಾಗಲೀ ಪಾಪವನ್ನು ಬಯಸಬಾರದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಗೃಹಸ್ಥಾನಾಂ ವೃತ್ತಿನಿರೂಪಣಂ ನಾಮ ದ್ವಿಶತತಮೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರನೆಯ ಅಧ್ಯಾಯ ಮುಗಿಯಿತು.
* * * * *
|| ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ||
ಮಹಾಭಾರತ
ಅನುಶಾಸನ ಪರ್ವ
ಇನ್ನೂರ ಒಂದನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ವರ್ಣವಿಭಾಗಾದಿನಿಮಿತ್ತಕಥನ
ಉಮಾ
ಭಗವನ್ ಭಗನೇತ್ರಘ್ನ ಕಾಲಸೂದನ ಶಂಕರ |
ಇಮೇ ತು ವರ್ಣಾಶ್ಚತ್ವಾರೋ ವಿಹಿತಾಃ ಸ್ವಿತ್ಸ್ವಭಾವತಃ |
ಉತಾಹೋ ಕ್ರಿಯಯಾ ವರ್ಣಾಃ ಸಂಭವಂತಿ ಮಹೇಶ್ವರ ||1||
ಏಷ ಮೇ ಸಂಶಯಪ್ರಶ್ನಸ್ತಂ ಮೇ ಛೇತ್ತುಂ ತ್ವಮರ್ಹಸಿ ||2||
ಉಮಾ ಭಗವಂತನೇ, ಭಗನೇತ್ರವನ್ನು ನಾಶ ಮಾಡಿದವನೇ, ಕಾಲಸೂದನನೇ, ಶಂಕರನೇ, ಈ ನಾಲ್ಕು ವರ್ಣಗಳು ಸ್ವಭಾವದಿಂದ ವಿಹಿತವಾಗಿವೆಯೇ ಅಥವಾ ಕರ್ಮಗಳಿಂದ ವಿಹಿತವಾಗಿವೆಯೇ? ಎಲೈ ಮಹೇಶ್ವರನೇ, ಇದು ನನ್ನ ಸಂಶಯ ಮೂಲಕವಾದ ಪ್ರಶ್ನೆ. ನೀನು ಅದನ್ನು ಪರಿಹರಿಸಬೇಕು.
ಮಹೇಶ್ವರಃ
ಸ್ವಭಾವಾದೇವ ವಿದ್ಯಂತೇ ಚತ್ವಾರೋ ಬ್ರಾಹ್ಮಣಾದಯಃ |
ಏಕಜಾತ್ಯಾ ಸುದುಷ್ಪ್ರಾಪಮನ್ಯವರ್ಣತ್ವಮಾಗತಮ್ ||3||
ಮಹೇಶ್ವರ ಬ್ರಾಹ್ಮಣಾದಿ ನಾಲ್ಕು ವರ್ಣಗಳು ಸ್ವಭಾವದಿಂದಲೇ ಇರುತ್ತವೆ. ಒಂದು ವರ್ಣದಲ್ಲಿ ಹುಟ್ಟಿದವನು ಇನ್ನೊಂದು ವರ್ಣವನ್ನು ಪಡೆಯುವುದು ಅತ್ಯಂತ ದುಷ್ಕರವಾದುದು.
ತಚ್ಚ ಕರ್ಮವಿಶೇಷೇಣ ಪುನರ್ಜನ್ಮನಿ ಜಾಯತೇ |
ತಸ್ಮಾತ್ತೇ ಸಂಪ್ರವಕ್ಷ್ಯಾಮಿ ತತ್ಸರ್ವಂ ಕರ್ಮಪಾಕತಃ ||4||
ಇನ್ನೊಂದು ವರ್ಣವಾದರೂ ಇನ್ನೊಂದು ಜನ್ಮದಲ್ಲಿ ಕರ್ಮವಿಶೇಷದಿಂದ ಉಂಟಾಗುತ್ತದೆ. ಆದ್ದರಿಂದ ನಿನಗೆ ಕರ್ಮಪಾಕದಿಂದ ಉಂಟಾಗುವ ಆ ವರ್ಣಾಂತರವೆಲ್ಲವನ್ನೂ ಸರಿಯಾಗಿ ಹೇಳುವೆನು.
ಬ್ರಾಹ್ಮಣಸ್ತು ನರೋ ಭೂತ್ವಾ ಸ್ವಜಾತಿಮನುಪಾಲಯೇತ್ |
ದೃಢಂ ಬ್ರಾಹ್ಮಣಕರ್ಮಾಣಿ ವೇದೋಕ್ತಾನಿ ಸಮಾಚರೇತ್ ||5||
ಬ್ರಾಹ್ಮಣನು ಮನುಷ್ಯನಾಗಿ ಜನಿಸಿ ತನ್ನ ಜಾತಿಯ ಕರ್ಮವನ್ನು ಮಾಡಬೇಕು. ವೇದೋಕ್ತವಾದ ಬ್ರಾಹ್ಮಣಕರ್ಮಗಳನ್ನು ದೃಢವಾಗಿ ಆಚರಿಸಬೇಕು.
ಸತ್ಯಾರ್ಜವಪರೋ ಭೂತ್ವಾ ದಾನಯಜ್ಞಪರಸ್ತಥಾ |
ತಸ್ಯಾಂ ಜಾತ್ಯಾಂ ಸಮುದಿತೋ ಜಾತಿಧರ್ಮಾನ್ನ ಹಾಪಯೇತ್ ||6||
ಸತ್ಯಾರ್ಜವ ಸಂಯುಕ್ತನೂ, ದಾನಯಜ್ಞಪರನೂ ಆಗಿರಬೇಕು. ಆ ಜಾತಿಯಲ್ಲಿ ಜನಿಸಿದವನು ಆ ಜಾತಿಯ ಧರ್ಮವನ್ನು ಬಿಡಬಾರದು.
ಏವಂ ಸಂವರ್ತಮಾನಸ್ತು ಕಾಲಧರ್ಮಂ ಗತಃ ಪುನಃ |
ಸ್ವರ್ಗಲೋಕೇ ಚಾಭಿಜಾಯೇತ ಸ್ವರ್ಗಭೋಗಾಯ ಭಾಮಿನಿ ||7||
ಎಲೌ ಭಾಮಿನಿಯೇ, ಹೀಗೆ ಜೀವನವನ್ನು ನಡೆಸುವವನು ಕಾಲವಶನಾಗಿ ಸ್ವರ್ಗಲೋಕದಲ್ಲಿ ಸ್ವರ್ಗಭೋಗಗಳನ್ನು ಅನುಭವಿಸಲು ಜನ್ಮವನ್ನು ಪಡೆಯುತ್ತಾನೆ.
ತತ್ಕ್ಷಯೇ ಬ್ರಾಹ್ಮಣೋ ಭೂತ್ವಾ ತಥೈವ ನೃಷು ಜಾಯತೇ |
ಏವಂ ಸ್ವಕರ್ಮಣಾ ಮರ್ತ್ಯಃ ಸ್ವಜಾತಿಂ ಲಭತೇ ಪುನಃ ||8||

ಆ ಸ್ವರ್ಗವು ಪುಣ್ಯನಾಶದಿಂದ ಕ್ಷಯವನ್ನು ಹೊಂದಿದ ಮೇಲೆ ಪುನಃ ಬ್ರಾಹ್ಮಣನಾಗಿ ಮೊದಲಿನಂತೆಯೇ ಭೂಮಿಯಲ್ಲಿ ಜನಿಸುತ್ತಾನೆ. ಹೀಗೆ ಮನುಷ್ಯನು ತನ್ನ ಸ್ವಕರ್ಮದಿಂದ ಪುನಃ ಸ್ವಜಾತಿಯನ್ನು ಪಡೆಯುತ್ತಾನೆ.
ಅಪರಸ್ತು ತಥಾ ಕಶ್ಚಿದ್ ಬ್ರಹ್ಮಯೋನಿಸಮುದ್ಭವಃ |
ಅವಮತ್ಯೈವ ತಾಂ ಜಾತಿಮಜ್ಞಾನತಮಸಾವೃತಃ ॥9॥
ಅನ್ಯಥಾ ವರ್ತಮಾನಸ್ತು ಜಾತಿಕರ್ಮಾಣಿ ವರ್ಜಯೇತ್ |
ಶೂದ್ರುವದ್ ವಿಚರೇಲ್ಲೋಕೇ ಶೂದ್ರುಕರ್ಮಾಭಿಲಾಷಯಾ |
ಶೂದ್ರೈಃ ಸಹ ಚರನ್ ನಿತ್ಯಂ ಶೌಚಮಂಗಲವರ್ಜಿತಃ ॥10॥
ಸ ಚಾಪಿ ಕಾಲಧರ್ಮಸ್ಥೋ ಯಮಲೋಕೇಷು ದಂಡಿತಃ |
ಯದಿ ಜಾಯೇತ ಮರ್ತ್ಯೇಷು ಶೂದ್ರ ಏವಾಭಿಜಾಯತೇ ॥11॥
ಶೂದ್ರ ಏವ ಭವೇದ್ ದೇವಿ ಬ್ರಾಹ್ಮಣೋಽಪಿ ಸ್ವಕರ್ಮಣಾ ॥12॥
ಹಾಗೆ ಇನ್ನೊಬ್ಬನು ಬ್ರಹ್ಮಯೋನಿಯಲ್ಲಿ ಹುಟ್ಟಿ, ಬ್ರಾಹ್ಮಣಜಾತಿಗೆ ಅವಮಾನ ಮಾಡಿ ಅಜ್ಞಾನದಿಂದ, ತಾಮಸ ಗುಣದಿಂದ ಕೂಡಿದವನಾಗಿ ಬೇರೆ ರೀತಿಯಲ್ಲಿ ಜೀವಿಸುತ್ತಾ ಜಾತಿಕರ್ಮಗಳನ್ನು ತ್ಯಜಿಸಿ ಶೂದ್ರುಕರ್ಮಗಳನ್ನು ಬಯಸಿ ಲೋಕದಲ್ಲಿ ನಿತ್ಯವೂ ಶೌಚಮಂಗಲ ವರ್ಜಿತನಾಗಿ ಶೂದ್ರರ ಜೊತೆಯಲ್ಲಿ ಸಂಚಾರ ಮಾಡುತ್ತಾ ಜೀವಿಸಿ ಅವನು ಕಾಲವಶನಾಗಿ ಯಮಲೋಕದಲ್ಲಿ ಶಿಕ್ಷೆಯನ್ನು ಅನುಭವಿಸಿ ಪುನಃ ಮನುಷ್ಯನಾಗಿ ಹುಟ್ಟಿದರೆ ಶೂದ್ರನಾಗಿಯೇ ಹುಟ್ಟುತ್ತಾನೆ. ಅವನು ಹಿಂದೆ ಬ್ರಾಹ್ಮಣನಾಗಿದ್ದರೂ ಎಲೌ ದೇವಿಯೇ, ತನ್ನ ಕರ್ಮದಿಂದ ಅವನು ಶೂದ್ರನೇ ಆಗುತ್ತಾನೆ.
ತಥೈವ ಶೂದ್ರುಸ್ತ್ವಪರಃ ಶೂದ್ರುಕರ್ಮಾಣಿ ವರ್ಜಯನ್ |
ಸತ್ಯಾರ್ಜವಪರೋ ಭೂತ್ವಾ ದಾನಧರ್ಮಪರಸ್ತಥಾ |
ಮಂತ್ರಬ್ರಾಹ್ಮಣಸತ್ಕರ್ತಾ ಮನಸಾ ಬ್ರಾಹ್ಮಣಪ್ರಿಯಃ ॥13॥
ಏವಂ ಯುಕ್ತಸಮಾಚಾರಃ ಶೂದ್ರೋಽಪಿ ಮರಣಂ ಗತಃ |
ಸ್ವರ್ಗಲೋಕೇಽಭಿಜಾಯೇತ ತತ್ಕ್ಷಯೇ ನೃಷು ಜಾಯತೇ |
ಬ್ರಾಹ್ಮಣಾನಾಂ ಕುಲೇ ಮುಖ್ಯೇ ವೇದಸ್ವಾಧ್ಯಾಯಸಂಯುತೇ ॥14॥
ಏವಮೇವ ಸದಾ ಲೋಕೇ ಶೂದ್ರೋ ಬ್ರಾಹ್ಮಣ್ಯಮಾಪ್ನುಯಾತ್ ॥15॥
ಹಾಗೆಯೇ ಇನ್ನೊಬ್ಬ ಶೂದ್ರನು ಶೂದ್ರುಕರ್ಮಗಳನ್ನು ತ್ಯಜಿಸಿ, ಸತ್ಯಾರ್ಜವ ಪರಾಯಣನಾಗಿ, ದಾನ-ಧರ್ಮಪರಾಯಣನಾಗಿ, ವೇದವನ್ನೂ, ಬ್ರಾಹ್ಮಣರನ್ನೂ ಸತ್ಕರಿಸುತ್ತಾ ಮನಸ್ಸಿನಲ್ಲಿ ಬ್ರಾಹ್ಮಣರಲ್ಲಿ ಪ್ರೀತಿಯನ್ನು ಹೊಂದಿ ಇಂತಹ ಆಚಾರವನ್ನು ಹೊಂದಿದ್ದರೆ ಶೂದ್ರನೂ ಸಹ ಮರಣವನ್ನು ಹೊಂದಿ ಸ್ವರ್ಗಲೋಕವನ್ನು ಸೇರುತ್ತಾನೆ. ಸ್ವರ್ಗವು ನಾಶವಾದ ಮೇಲೆ ಪುನಃ ಅವನು ಮನುಷ್ಯರಲ್ಲಿ ವೇದಸ್ವಾಧ್ಯಾಯ ಸಂಪನ್ನರಾದ ಶ್ರೇಷ್ಠರಾದ ಬ್ರಾಹ್ಮಣರ ಕುಲದಲ್ಲಿ ಜನಿಸುತ್ತಾನೆ. ಹೀಗೆಯೇ ಶೂದ್ರನು ಯಾವಾಗಲೂ ಲೋಕದಲ್ಲಿ ಬ್ರಾಹ್ಮಣ್ಯವನ್ನು ಪಡೆಯುವನು (ಬ್ರಾಹ್ಮಣ್ಯವನ್ನು ಪಡೆಯುವ ರೀತಿ).
ಏವಂ ಕ್ಷತ್ರಿಯವೈಶ್ಯಾಶ್ಚ ಜಾತಿಧರ್ಮೇಣ ಸಂಯುತಾಃ |
ಸ್ವಕರ್ಮಣೈವ ಜಾಯಂತೇ ವಿಶಿಷ್ಟೇಷ್ವಧಮೇಷು ಚ ॥16॥
ಹೀಗೆಯೇ ಕ್ಷತ್ರಿಯ, ವೈಶ್ಯಯೋನಿಯಲ್ಲಿ ಜನಿಸಿದ ಮನುಷ್ಯರೂ ಸಹ ತಮ್ಮ ಜಾತಿಯ ಕರ್ಮಗಳಿಂದ ಅಥವಾ ತಮ್ಮ ಧರ್ಮಕ್ಕೆ ವಿರುದ್ಧವಾದ ಕರ್ಮದಿಂದ ಶ್ರೇಷ್ಠವಾದ ಅಥವಾ ಕನಿಷ್ಠವಾದ ಯೋನಿಗಳಲ್ಲಿ ಜನಿಸುತ್ತಾರೆ.
ಏವಂ ಜಾತಿವಿಪರ್ಯಾಸಃ ಪ್ರೇತ್ಯಭಾವೇ ಭವೇನ್ನೃಣಾಮ್ |
ಅನ್ಯಥಾ ತು ನ ಶಕ್ಯಂತೇ ಲೋಕಸಂಸ್ಥಿತಿಕಾರಣಾತ್ ॥17॥
ಈ ರೀತಿಯಲ್ಲಿ ಮರಣವನ್ನು ಹೊಂದಿದ ಮೇಲೆ ಮನುಷ್ಯರಿಗೆ ಜಾತಿಯ ವ್ಯತ್ಯಾಸವಾಗುತ್ತದೆ. ಇಲ್ಲದಿದ್ದರೆ ಲೋಕ ಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ ಬೇರೆ ರೀತಿಯಲ್ಲಿ ಆಗುವುದಿಲ್ಲ.
ತಸ್ಮಾಜ್ಜಾತಿಂ ವಿಶಿಷ್ಟಾಂ ತು ಕಥಂಚಿತ್ ಪ್ರಾಪ್ಯ ಪಂಡಿತಃ |
ಸರ್ವಥಾ ತಾಂ ತಥಾ ರಕ್ಷೇನ್ನ ಪುನರ್ಭ್ರಶ್ಯತೇ ಯಥಾ |
ಇತಿ ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥18॥
ಆದುದರಿಂದ ಪಂಡಿತನಾದವನು ಹೇಗೋ ವಿಶಿಷ್ಟವಾದ ಜಾತಿಯನ್ನು ಪಡೆದರೆ ಅದನ್ನು ರಕ್ಷಿಸಿಕೊಂಡು ಪುನಃ ಅಲ್ಲಿಂದ ಭ್ರಷ್ಟನಾಗದಂತೆ ಪ್ರಯತ್ನವನ್ನು ಪಡಬೇಕು. ಎಲೌ ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಜನ್ಮಪ್ರಭೃತಿ ಕೈಃ ಶುದ್ಧೋ ಲಭೇಜ್ಜನ್ಮಫಲಂ ನರಃ |
ಶೋಭನಾಶೋಭನಂ ಸರ್ವಮಧಿಕಾರವಶಾತ್ ಸ್ವಯಮ್ ॥19॥
ಉಮಾ ಜನ್ಮವನ್ನಾರಂಭಿಸಿ ಯಾವ ಆಚಾರಗಳಿಂದ ಶುದ್ಧನಾಗಿ ಮನುಷ್ಯನು ಜನ್ಮ ಫಲವನ್ನು ಪಡೆಯುತ್ತಾನೆ?ಶೋಭನಾಶೋಭನಗಳೆಲ್ಲವೂ ತನ್ನ ಅಧಿಕಾರವಶದಿಂದ (ಯೋಗ್ಯತೆಗೆ ಅನುಗುಣವಾಗಿ) ಉಂಟಾಗುತ್ತವೆಯಷ್ಟೆ?
ಮಹೇಶ್ವರಃ
ಕರ್ಮ ಕುರ್ವನ್ನ ಲಿಪ್ಯೇತ ಆರ್ಜವೇನ ಸಮಾಚರನ್ |
ಆತ್ಮೈವ ತಚ್ಛುಭಂ ಕುರ್ಯಾದಶುಭೇ ನೈವ ಯೋಜಯೇತ್ ॥20॥
ಮಹೇಶ್ವರ ಕರ್ಮವನ್ನು ಮಾಡುತ್ತಾ ಋಜುತ್ವವನ್ನು ಮಾಡುವವನು ದೋಷ ಲೇಪವನ್ನು ಹೊಂದುವುದಿಲ್ಲ. ತಾನೇ ಶುಭವನ್ನು

ಹೊಂದಬೇಕು. ಅಶುಭದಲ್ಲಿ ತನ್ನನ್ನು ಯೋಜಿಸಿಕೊಳ್ಳಬಾರದು.
ಶಠೇಷು ಶಠವತ್ ಕುರ್ಯಾದಾರ್ಯೇಷ್ವೃವಜುವದಾಚರೇತ್ |
ಆಪತ್ಸು ನಾವಸೀದೇಚ್ಚ ಘೋರಾನ್ ಸಂಕ್ರಾಮಯೇತ್ ಪರಾತ್ |
ಸಾಮ್ನೈವ ಸರ್ವಕಾರ್ಯಾಣಿ ಕರ್ತುಂ ಪೂರ್ವಂ ಸಮಾರಭೇತ್ ॥21॥
ಶಠರಲ್ಲಿ ಶಠರಂತೆಯೇ ನಡೆದುಕೊಳ್ಳಬೇಕು. ಆರ್ಯರಲ್ಲಿ ಋಜುತನದಿಂದ ನಡೆದುಕೊಳ್ಳಬೇಕು. ಆಪತ್ತಿನಲ್ಲಿ ಕುಗ್ಗಿಹೋಗಬಾರದು. ಘೋರವಾದ ಪುರುಷರನ್ನು ಇನ್ನೊಬ್ಬರಿಂದ ದೂರ ಸರಿಸಬೇಕು. ಎಲ್ಲ ಕಾರ್ಯಗಳನ್ನೂ ಸಾಮೋಪಾಯದಿಂದಲೇ ಮಾಡಲು ಮೊದಲು ಪ್ರಾರಂಭಿಸಬೇಕು.
ಅನರ್ಥಾಧರ್ಮಶೋಕಾಂಸ್ತು ಯಥಾ ನ ಪ್ರಾಪ್ನುಯಾತ್ ಸ್ವಯಮ್ |
ಪ್ರಯತೇತ ತಥಾ ಕರ್ತುಮೇತದ್ ವೃತ್ತಂ ಸಮಾಸತಃ ॥22॥
ತನಗೆ ಅಧರ್ಮವಾಗಲೀ, ಅನರ್ಥವಾಗಲೀ, ಶೋಕವಾಗಲೀ ಉಂಟಾಗದಂತೆ ಸ್ವತಃ ಪ್ರಯತ್ನ ಪಡಬೇಕು. ಇದು ಸಂಕ್ಷೇಪವಾಗಿ ಒಳ್ಳೆಯ ನಡತೆಯ ನಿರೂಪಣೆ.
ಏತದ್ ವೃತ್ತಂ ಸಮಾಸಾದ್ಯ ಗೃಹಮಾಶ್ರಿತ್ಯ ಮಾನವಾಃ |
ನಿರಾಹಾರಾ ನಿರುದ್ವೇಗಾಃ ಪ್ರಾಪ್ನುವಂತ್ಯುತ್ತಮಾಂ ಗತಿಮ್ ॥23॥
ಇಂತಹ ನಡತೆಯನ್ನು ಹೊಂದಿ ಗೃಹಸ್ಥರಾದ ಮಾನವರು ನಿರುದ್ವೇಗದಿಂದ ನಿರಾಹಾರಾದಿಗಳನ್ನು ಮಾಡಿ ಉತ್ತಮ ಗತಿಯನ್ನು ಪಡೆಯುತ್ತಾರೆ.
ಏತಜ್ಜನ್ಮಫಲಂ ನಿತ್ಯಂ ಸರ್ವೇಷಾಂ ಗೃಹವಾಸಿನಾಮ್ |
ಏವಂ ಗೃಹಗತೈರ್ನಿತ್ಯಂ ವರ್ತಿತವ್ಯಮಿತಿ ಸ್ಥಿತಿಃ |
ಏತತ್ಸರ್ವಂ ಮಯಾ ಪ್ರೋಕ್ತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥24॥
ಗೃಹಸ್ಥರಾದ ಎಲ್ಲರಿಗೂ ಇದು ಯಾವಾಗಲೂ ಜನ್ಮಫಲ. ಗೃಹಸ್ಥರಾದವರು ಹೀಗೆ ನಡೆದುಕೊಳ್ಳಬೇಕೆಂಬುದು ಶಾಸ್ತ್ರದ ಸ್ಥಿತಿ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಸುರಾಸುರಪತೇ ದೇವ ವರದ ಪ್ರೀತಿವರ್ಧನ |
ಮಾನುಷೇಷ್ವೇವ ಯೇ ಕೇಚಿದಾಢ್ಯಾಃ ಕ್ಲೇಶವಿವರ್ಜಿತಾಃ |
ಭುಂಜಾನಾ ವಿವಿಧಾನ್ ಭೋಗಾನ್ ದೃಶ್ಯಂತೇ ನಿರುಪದ್ರವಾಃ ॥25॥
ಉಮಾ ಸುರಾಸುರಪತಿಯೇ, ದೇವನೇ, ವರದನೇ, ಸಂತೋಷ ವರ್ಧನನೇ, ಮನುಷ್ಯರಲ್ಲಿ ಕೆಲವರು ಆಢ್ಯರೂ, ಕ್ಲೇಶರಹಿತರೂ ಆಗಿ, ಯಾವ ಉಪದ್ರವವೂ ಇಲ್ಲದೆ ವಿವಿಧವಾದ ಭೋಗಗಳನ್ನು ಭುಂಜಿಸುವುದು ಕಂಡುಬರುತ್ತದೆ.
ಅಪರೇ ಕ್ಲೇಶಸಂಯುಕ್ತಾ ದರಿದ್ರಾ ಭೋಗವರ್ಜಿತಾಃ ॥26॥
ಕಿಮರ್ಥಂ ಮಾನುಷೇ ಲೋಕೇ ನ ಸಮತ್ವೇನ ಕಲ್ಪಿತಾಃ |
ಏತಚ್ಛ್ರೋತುಂ ಮಹಾದೇವ ಕೌತೂಹಲಮತೀವ ಮೇ ॥27॥
ಇನ್ನು ಕೆಲವರು ಕ್ಲೇಶಯುಕ್ತರಾಗಿ, ದರಿದ್ರರಾಗಿ ಭೋಗವರ್ಜಿತರಾಗಿರುವುದು ಕಂಡುಬರುತ್ತದೆ. ಮನುಷ್ಯಲೋಕದಲ್ಲಿ ಏಕೆ ಎಲ್ಲರೂ ಸಮವಾಗಿ ಜನಿಸಿಲ್ಲ? ಮಹಾದೇವನೇ, ಇದನ್ನು ಕೇಳಲು ನನಗೆ ಬಹಳ ಕುತೂಹಲವಿದೆ.
ಮಹೇಶ್ವರಃ
ನ್ಯಾಯತಸ್ತ್ವಂ ಮಹಾಭಾಗೇ ಶ್ರೋತುಕಾಮಾಸಿ ಭಾಮಿನಿ |
ಶೃಣು ತತ್ಸರ್ವಮಖಿಲಂ ಮಾನುಷಾಣಾಂ ಹಿತಂ ವಚಃ ॥28॥
ಮಹೇಶ್ವರ ಮಹಾನುಭಾವಳೇ, ಭಾಮಿನಿಯೇ, ನೀನು ಕೇಳಲು ಬಯಸುತ್ತಿರುವುದು ನ್ಯಾಯವಾಗಿಯೇ ಇದೆ. ಮನುಷ್ಯರಿಗೆ ಹಿತವಾದ ವಚನವನ್ನೆಲ್ಲವನ್ನೂ ನಾನು ಹೇಳುತ್ತೇನೆ, ಅದನ್ನು ಕೇಳು.
ಆದಿಸರ್ಗೇ ಪುರಾ ಬ್ರಹ್ಮಾ ಸಮತ್ವೇನಾಸೃಜತ್ ಪ್ರಜಾಃ |
ನಿತ್ಯಂ ನ ಭವತೋ ಹ್ಯಸ್ಯ ರಾಗದ್ವೇಷೌ ಪ್ರಜಾಪತೇಃ |
ತದಾ ತಸ್ಮಾತ್ ಸಮಾಃ ಸರ್ವೇ ಬಭೂವುಃ ಸರ್ವತೋ ನರಾಃ ॥29॥
ಮೊದಲು ಆದಿಸೃಷ್ಟಿಯಲ್ಲಿ ಬ್ರಹ್ಮದೇವರು ಪ್ರಜೆಗಳನ್ನು ಸಮರಾಗಿಯೇ ಸೃಷ್ಟಿಸಿದರು. ಪ್ರಜಾಪತಿಯಾದ ಬ್ರಹ್ಮದೇವರಿಗೆ ಎಂದೂ ರಾಗ-ದ್ವೇಷವಿಲ್ಲವಷ್ಟೆ? ಆಗ ಎಲ್ಲ ನರರೂ ಎಲ್ಲ ರೀತಿಯಿಂದ ಸಮರಾಗಿದ್ದರು.
ಏವಂ ಸಂವರ್ತಮಾನೇ ತು ಯುಗೇ ಕಾಲವಿಪರ್ಯಯಾತ್ |
ಕೇಚಿತ್ ಪ್ರಪೇದಿರೇ ತತ್ರ ವಿಷಮಂ ಬುದ್ಧಿಮೋಹಿತಾಃ ॥30॥
ಹೀಗೆಯೇ ಯುಗವು ಮುಂದುವರಿಯುತ್ತಿರಲು ಕಾಲವಿಪರ್ಯಯದಿಂದ ಕೆಲವರು ಬುದ್ಧಿಮೋಹಿತರಾಗಿ ವಿಷಮವಾಗಿ ನಡೆದುಕೊಳ್ಳಲು ಆರಂಭಿಸಿದರು.
ತೇಷಾಂ ಹಾನಿಂ ತತೋ ದೃಷ್ಟ್ವಾ ತುಲ್ಯಾನಾಮೇವ ಭಾಮಿನಿ |
ಬ್ರಹ್ಮಾಣಂ ತೇ ಸಮಾಜಗ್ಮುಸ್ತತ್ಕಾರಣನಿವೇದಕಾಃ ॥31॥
ಎಲೌ ಭಾಮಿನಿಯೇ, ತಮಗೆ ಸದೃಶರಾದ ಅವರು ಹಾನಿಯನ್ನು ಹೊಂದುತ್ತಿರುವುದನ್ನು ನೋಡಿ ಉಳಿದವರು ಅದಕ್ಕೆ ಕಾರಣವನ್ನು ತಿಳಿದುಕೊಳ್ಳಲು ಬ್ರಹ್ಮದೇವರ ಬಳಿಗೆ ಹೋದರು.
ಕರ್ತುಂ ನಾರ್ಹಸಿ ದೇವೇಶ ಪಕ್ಷಪಾತಂ ತ್ವಮೀದೃಶಮ್ |

ಪುತ್ರಭಾವೇ ಸಮೇ ದೇವ ಕಿಮರ್ಥಂ ನೋ ಭವೇತ್ ಕಲಿಃ ॥32॥
ಎಲೈ ದೇವೇಶನೇ, ನೀನು ಇಂತಹ ಪಕ್ಷಪಾತವನ್ನು ಮಾಡಬಾರದು. ಎಲೈ ದೇವನೇ, ನಿನಗೆ ಎಲ್ಲರಲ್ಲಿಯೂ ಪುತ್ರಭಾವ ಸಮವಾಗಿದ್ದರೂ ನಮಗೆ ಏಕೆ ಇಂತಹ ಕಲಹವುಂಟಾಗುತ್ತಿದೆ?
ಇತ್ಯೇವಂ ತೈರುಪಾಲಬ್ಧೋ ಬ್ರಹ್ಮಾ ವಚನಮಬ್ರವೀತ್ |
ಯೂಯಂ ಮಾ ಕಾರ್ಷ್ಟ ಮೇ ದೋಷಂ ಸ್ವಕೃತಂ ಸ್ಮರತ ಪ್ರಜಾಃ ॥33॥
ಯುಷ್ಮಾಭಿರೇವ ಯುಷ್ಮಾಕಂ ಗ್ರಥಿತಂ ಹಿ ಶುಭಾಶುಭಮ್ |
ಯಾದೃಶಂ ಕುರುತೇ ಕರ್ಮ ತಾದೃಶಂ ಫಲಮಶ್ನುತೇ |
ಸ್ವಕೃತಸ್ಯ ಫಲಂ ಭುಂಕ್ತೇ ನಾನ್ಯಸ್ತದ್ ಭೋಕ್ತುಮರ್ಹತಿ ॥34॥
ಹೀಗೆ ಅವರಿಂದ ನಿಂದಿಸಲ್ಪಟ್ಟ ಬ್ರಹ್ಮದೇವರು ಉತ್ತರವನ್ನು ನೀಡಿದರು: ಎಲೈ ಪ್ರಜೆಗಳೇ, ನೀವು ನನ್ನಲ್ಲಿ ದೋಷವನ್ನು ಎಣಿಸಬೇಡಿ. ನಿಮ್ಮ ಶುಭಾಶುಭಗಳನ್ನು ನೀವೇ ಗಂಟುಹಾಕಿಕೊಂಡಿದ್ದೀರಿ. ಮನುಷ್ಯರು ಎಂತಹ ಕರ್ಮವನ್ನು ಮಾಡುತ್ತಾರೆಯೋ ಅಂತಹ ಫಲವನ್ನು ಅನುಭವಿಸುತ್ತಾರೆ. ಮನುಷ್ಯರು ತಾವು ಮಾಡಿದ ಕರ್ಮದ ಫಲವನ್ನು ಅನುಭವಿಸುತ್ತಾರೆ. ಇನ್ನೊಬ್ಬರು ಅದನ್ನು ಅನುಭವಿಸುವುದಿಲ್ಲ (ಎಂದು ಹೇಳಿದರು).
ಏವಂ ಸಂಬೋಧಿತಾಸ್ತೇನ ಲೋಕಕರ್ತ್ರಾ ಸ್ವಯಂಭುವಾ |
ಪುನರ್ನಿವೃತ್ಯ ಕರ್ಮಾಣಿ ಶುಭಾನ್ಯೇವ ಪ್ರಪೇದಿರೇ ॥35॥
ಲೋಕಕರ್ತೃವಾದ ಬ್ರಹ್ಮದೇವರಿಂದ ಹೀಗೆ ಹೇಳಲ್ಪಟ್ಟ ಅವರು ಪುನಃ ಹಿಂದಿರುಗಿ ಶುಭಕರ್ಮಗಳನ್ನೇ ಮಾಡಲು ಪ್ರಾರಂಭಿಸಿದರು.
ಏವಂ ವಿಜ್ಞಾತತತ್ತ್ವಸ್ತೇ ದಾನಧರ್ಮಪರಾಯಣಾಃ |
ಶುಭಾನಿ ವಿಧಿವತ್ ಕೃತ್ವಾ ಕಾಲಧರ್ಮಗತಾಃ ಪುನಃ |
ತಾನಿ ದಾನಫಲಾನ್ಯೇವ ಭುಂಜತೇ ಸುಖಭೋಗಿನಃ ॥36॥
ಸ್ವಕೃತಂ ತು ನರಸ್ತಸ್ಮಾತ್ ಸ್ವಯಮೇವ ಪ್ರಪದ್ಯತೇ ॥37॥
ಹೀಗೆ ಅವರು ತತ್ತ್ವಜ್ಞಾನವನ್ನು ಹೊಂದಿ, ದಾನ-ಧರ್ಮಪರಾಯಣರಾಗಿ ವಿಧಿಗೆ ಅನುಸಾರವಾಗಿ ಶುಭಕರ್ಮವನ್ನು ಮಾಡಿ ಕಾಲಕ್ರಮದಲ್ಲಿ ಮೃತ್ಯುವಶರಾಗಿ ಪುನಃ ದಾನಫಲಗಳಾದ ಸುಖವನ್ನು ಅನುಭವಿಸುತ್ತಿದ್ದಾರೆ. ಆದ್ದರಿಂದ ಮನುಷ್ಯರು ತಮ್ಮ ಕರ್ಮದ ಫಲವನ್ನು ತಾವೇ ಹೊಂದುತ್ತಾರೆ.
ಅಪರೇ ಧರ್ಮಕಾಮೇಭ್ಯೋ ನಿವೃತ್ತಾಸ್ತು ಶುಭೇಕ್ಷಣೇ |
ಕದರ್ಯಾ ನಿರನುಕ್ರೋಶಾಃ ಪ್ರಾಯೇಣಾತ್ಮಪರಾಯಣಾಃ ॥38॥
ತಾದೃಶಾ ಮರಣಂ ಪ್ರಾಪ್ತಾಃ ಪುನರ್ಜನ್ಮನಿ ಶೋಭನೇ |
ದರಿದ್ರಾಃ ಕ್ಲೇಶಸಂಯುಕ್ತಾ ಭವಂತ್ಯೇವ ನ ಸಂಶಯಃ ॥39॥
ಎಲೌ ಶುಭೇಕ್ಷಣೆಯೇ, ಇನ್ನು ಕೆಲವರು ಧರ್ಮಕಾಮನೆಯುಳ್ಳ ಮಾನವರಿಂದ ದೂರ ಸರಿದು ಜಿಪುಣರಾಗಿ, ದಯಾಹೀನರಾಗಿ, ಹೆಚ್ಚಾಗಿ ಸ್ವಾರ್ಥಿಗಳಾಗಿ ಅನಂತರ ಮರಣವನ್ನು ಹೊಂದಿ ಇನ್ನೊಂದು ಜನ್ಮದಲ್ಲಿ ದರಿದ್ರರೂ, ಕ್ಲೇಶಯುಕ್ತರೂ ಆಗಿಯೇ ಆಗುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಉಮಾ
ಮಾನುಷೇಷ್ವಥ ಯೇ ಕೇಚಿದ್ ಧನಧಾನ್ಯಸಮನ್ವಿತಾಃ |
ಭೋಗಹೀನಾಃ ಪ್ರದೃಶ್ಯಂತೇ ಸರ್ವಭೋಗೇಷು ಸತ್ಸ್ವಪಿ |
ನ ಭುಂಜತೇ ಕಿಮರ್ಥಂ ತೇ ತನ್ಮೇ ಶಂಸಿತುಮರ್ಹಸಿ ॥40॥
ಉಮಾ ಮನುಷ್ಯರಲ್ಲೇ ಕೆಲವರು ಧನ-ಧಾನ್ಯಗಳಿಂದ ಸಮನ್ವಿತರಾಗಿ, ಸರ್ವ ಭೋಗಗಳು ಇದ್ದರೂ ಭೋಗಹೀನರಾಗಿರುವುದು ಕಂಡುಬರುತ್ತದೆ. ಅವರಿಗೆ ಏಕೆ ಭೋಗವಿಲ್ಲ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಪರೈಃ ಸಂಚೋದಿತಾ ಧರ್ಮಂ ಕುರ್ವತೇ ನ ಸ್ವಕಾಮತಃ |
ಸ್ವಯಂ ಶ್ರದ್ಧಾಂ ಬಹಿಷ್ಕೃತ್ಯ ಕುರ್ವಂತಿ ಚ ರುದಂತಿ ಚ ॥41॥
ತಾದೃಶಾ ಮರಣಂ ಪ್ರಾಪ್ತಾಃ ಪುನರ್ಜನ್ಮನಿ ಶೋಭನೇ |
ಫಲಾನಿ ತಾನಿ ಸಂಪ್ರಾಪ್ಯ ಭುಂಜತೇ ನ ಕದಾಚನ |
ರಕ್ಷಂತೋ ವರ್ಧಯಂತಶ್ಚ ಆಸತೇ ನಿಧಿಪಾಲವತ್ ॥42॥
ಮಹೇಶ್ವರ ತಾವು ತಮ್ಮ ಸ್ವಂತ ಇಚ್ಛೆ ಇಲ್ಲದೆ ಇನ್ನೊಬ್ಬರ ಪ್ರೇರಣೆಯಿಂದ ಧರ್ಮವನ್ನು ಆಚರಿಸುತ್ತಾರೆ. ಸ್ವತಃ ಶ್ರದ್ಧೆಯಿಲ್ಲದೆ ಧರ್ಮಕಾರ್ಯವನ್ನು ಮಾಡಿ (ಧನವ್ಯಯದಿಂದ ಮತ್ತು ಆಯಾಸದಿಂದ) ರೋದಿಸುತ್ತಾರೆ. ಎಲೌ ಶೋಭನೆಯೇ, ಅಂತಹವರು ಮರಣವನ್ನು ಹೊಂದಿದ ಮೇಲೆ ಇನ್ನೊಂದು ಜನ್ಮದಲ್ಲಿ ತಾವು ಮಾಡಿದ ಕರ್ಮದ ಫಲವನ್ನು ಪಡೆದು ಎಂದೂ ಭೋಗಿಸುವುದಿಲ್ಲ. ನಿಧಿಪಾಲಕರಂತೆ ತಮ್ಮ ಧನವನ್ನು ರಕ್ಷಣೆ ಮಾಡುತ್ತಾ, ಅಭಿವೃದ್ಧಿಪಡಿಸುತ್ತಾ ಇರುತ್ತಾರೆ.
ಉಮಾ
ಕೇಚಿದ್ ಧನವಿಯುಕ್ತಾಶ್ಚ ಭೋಗಯುಕ್ತಾ ಮಹೇಶ್ವರ |
ಮಾನುಷಾಃ ಸಂಪ್ರದೃಶ್ಯಂತೇ ತನ್ಮೇ ಶಂಸಿತುಮರ್ಹಸಿ ॥43॥
ಉಮಾ ಎಲೈ ಮಹೇಶ್ವರನೇ, ಕೆಲವು ಮನುಷ್ಯರು ಧನವಿಲ್ಲದಿದ್ದರೂ ಭೋಗಯುಕ್ತರಾಗಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣವನ್ನು ನನಗೆ ಹೇಳಬೇಕು.

ಮಹೇಶ್ವರಃ
ಆನೃಶಂಸ್ಯಪರಾ ಯೇ ತು ಧರ್ಮಕಾಮಾಶ್ಚ ದುರ್ಗತಾಃ |
ಪರೋಪಕಾರಂ ಕುರ್ವಂತಿ ದೀನಾನುಗ್ರಹಕಾರಣಾತ್ ||44||
ಪ್ರತಿದದ್ಯುಃ ಪರಧನಂ ನಷ್ಟಂ ವಾಽನ್ಯೈರ್ಹೃತಂ ಧನಮ್ |
ನಿತ್ಯಂ ಯೇ ದಾತುಮನಸೋ ನರಾ ವಿತ್ತೇಷ್ವಸತ್ಸ್ವಪಿ ||45||
ಮಹೇಶ್ವರ ದುರ್ಗತಿಯನ್ನು ಹೊಂದಿದರೂ (ದರಿದ್ರರಾದರೂ) ದಯಾಪರರೂ, ಧರ್ಮಕಾಮರೂ ಆಗಿರುತ್ತಾರೆ. ದೀನರಿಗೆ ಅನುಗ್ರಹ ಮಾಡಬೇಕೆಂಬ ದೃಷ್ಟಿಯಿಂದ ಪರೋಪಕಾರವನ್ನು ಮಾಡುತ್ತಾರೆ. ಇನ್ನೊಬ್ಬರ ಧನವನ್ನು ಹಿಂದಿರುಗಿಸುತ್ತಾರೆ. ಇನ್ನೊಬ್ಬರಿಂದ ಅಪಹೃತವಾದ ನಿಧಿಯನ್ನು ತಮ್ಮ ಬಳಿ ಧನವಿಲ್ಲದಿದ್ದರೂ ನಿತ್ಯವೂ ಕೊಡಲು ಬಯಸುತ್ತಾರೆ.
ಕಾಲಧರ್ಮವಶಂ ಪ್ರಾಪ್ತಾಃ ಪುನರ್ಜನ್ಮನಿ ತೇ ನರಾಃ |
ಏತೇ ಧನವಿಯುಕ್ತಾಶ್ಚ ಭೋಗಯುಕ್ತಾ ಭವಂತ್ಯುತ ||46||
ಧರ್ಮದಾನೋಪದೇಶಂ ವಾ ಕರ್ತವ್ಯಮಿತಿ ನಿಶ್ಚಯಃ |
ಇತಿ ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ||47||
ಅಂತಹ ಮನುಷ್ಯರು ಮರಣವನ್ನು ಹೊಂದಿ ಪುನರ್ಜನ್ಮದಲ್ಲಿ ಧನಹೀನರಾದರೂ ಭೋಗಯುಕ್ತರಾಗುತ್ತಾರೆ. ಆದ್ದರಿಂದ ಧರ್ಮದ ಉಪದೇಶ ಮತ್ತು ದಾನದ ಉಪದೇಶವನ್ನಾದರೂ ಮಾಡಬೇಕೆಂಬುದು ನಿಶ್ಚಿತವಾದುದು. ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ವರ್ಣವಿಭಾಗಾದಿನಿಮಿತ್ತಕಥನಂ ನಾಮ ಏಕೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಒಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಎರಡನೆಯ ಅಧ್ಯಾಯ
ಉಮಾ-ಮಹೇಶ್ವರ ಸಂವಾದ. ಮನುಷ್ಯರ ತ್ರೈವಿಧ್ಯನಿಮಿತ್ತಕಥನ.
ಉಮಾ
ಭಗವನ್ ದೇವದೇವೇಶ ತ್ರಿಯಕ್ಷ ವೃಷಭಧ್ವಜ |
ಮಾನುಷಾಸ್ತ್ರಿವಿಧಾ ದೇವ ದೃಶ್ಯಂತೇ ಸತತಂ ವಿಭೋ ||1||
ಉಮಾ ಭಗವಂತನೇ, ದೇವದೇವೇಶನೇ, ತ್ರ್ಯಂಬಕನೇ, ವೃಷಭಧ್ವಜನೇ, ವಿಭುವೇ, ಮನುಷ್ಯರು ಸತತವಾಗಿ ಮೂರು ವಿಧವಾಗಿ ಕಂಡುಬರುತ್ತಾರೆ.
ಆಸೀನಾ ಏವ ಭುಂಜಂತೇ ಸ್ಥಾನೈಶ್ವರ್ಯಪರಿಗ್ರಹೈಃ |
ಅಪರೇ ಯತ್ನಪೂರ್ವಂ ತು ಲಭಂತೇ ಭೋಗಸಂಗ್ರಹಮ್ ||2||
ಅಪರೇ ಯತ್ನಕುರ್ವಂತೋ ಲಭಂತೇ ನ ತು ಕಿಂಚನ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ||3||
ಕೆಲವರು ಕುಳಿತುಕೊಂಡೇ ಸ್ಥಾನ, ಐಶ್ವರ್ಯ ಮತ್ತು ಸಲಕರಣೆಗಳನ್ನು ಹೊಂದಿ ಭೋಗಿಸುತ್ತಾರೆ. ಇನ್ನು ಕೆಲವರು ಪ್ರಯತ್ನಪೂರ್ವಕವಾಗಿ ಭೋಗಸಾಮಗ್ರಿಗಳನ್ನು ಹೊಂದುತ್ತಾರೆ. ಇನ್ನು ಕೆಲವರು ಯತ್ನವನ್ನು ಮಾಡಿದರೂ ಯಾವುದನ್ನೂ ಪಡೆಯುವುದಿಲ್ಲ. ಇದು ಯಾವ ಕರ್ಮವಿಪಾಕದಿಂದ ಎಂದು ನನಗೆ ಹೇಳಬೇಕು.
ಮಹೇಶ್ವರಃ
ನ್ಯಾಯತಸ್ತ್ವಂ ಮಹಾಭಾಗೇ ಶ್ರೋತುಕಾಮಾಽಸಿ ಭಾಮಿನಿ ||4||
ಮಹೇಶ್ವರ ಎಲೌ ಮಹಾನುಭಾವಳೇ, ಭಾಮಿನಿಯೇ, ನೀನು ನ್ಯಾಯವಾಗಿಯೇ ಕೇಳಲು ಬಯಸುತ್ತಿದ್ದೀಯೆ.
ಯೇ ಲೋಕೇ ಮಾನುಷಾ ದೇವಿ ದಾನಧರ್ಮಪರಾಯಣಾಃ |
ಪಾತ್ರಾಣಿ ವಿಧಿವಜ್ಜ್ಞಾತ್ವಾ ದೂರತೋ ಹ್ಯನುಮಾನತಃ ||5||
ದಾನಾದಿ ಚೇಂಗಿತೈರೇವ ತೈರವಿಜ್ಞಾತಮೇವ ವಾ |
ಅಭಿಗಮ್ಯ ಸ್ವಯಂ ತತ್ರ ಗ್ರಾಹಯಂತಿ ಪ್ರಸಾದ್ಯ ಚ ||6||
ಪುನರ್ಜನ್ಮನಿ ದೇವೇಶಿ ತಾದೃಶಾಃ ಶೋಭನಾ ನರಾಃ |
ಅಯತ್ನತಸ್ತು ತಾನ್ಯೇವ ಫಲಾನಿ ಪ್ರಾಪ್ನುವಂತ್ಯುತ ||7||
ಆಸೀನಾ ಏವ ಭುಂಜಂತೇ ಭೋಗಾನ್ ಸುಕೃತಭೋಗಿನಃ ||8||
ದೇವಿಯೇ, ಲೋಕದಲ್ಲಿ ಯಾವ ಮನುಷ್ಯರು ದಾನ-ಧರ್ಮ ಪರಾಯಣರಾಗಿ ಪಾತ್ರರನ್ನು ಶಾಸೋತ್ರೋಕ್ತ ರೀತಿಯಲ್ಲಿ ದೂರದಿಂದಲೇ ಅನುಮಾನದಿಂದ ಅಥವಾ ಅವರ ನಿಮಿತ್ತಗಳಿಂದ ತಿಳಿದು ಅಥವಾ ಅವರಿಗೆ ಗೊತ್ತಾಗದಂತೆಯೇ ತಿಳಿದು ಸ್ವತಃ ಅವರ ಬಳಿಗೆ ತಾವೇ ಹೋಗಿ ಅವರನ್ನು ಪ್ರಸನ್ನೀಕರಿಸಿ ದಾನಾದಿಗಳನ್ನು ಮಾಡುತ್ತಾರೆಯೋ, ಎಲೌ ದೇವೇಶಿಯೇ, ಅಂತಹ ಸತ್ಪುರುಷರು ಮುಂದಿನ ಜನ್ಮದಲ್ಲಿ ಪ್ರಯತ್ನವಿಲ್ಲದೆಯೇ ಆ ಫಲಗಳನ್ನು ಪಡೆಯುತ್ತಾರೆ. ತಮ್ಮ ಪುಣ್ಯಫಲವನ್ನು ಭೋಗಿಸುವ ಅವರು ಪ್ರಯತ್ನವಿಲ್ಲದೆ ಕುಳಿತುಕೊಂಡೇ ಭೋಗಿಸುತ್ತಾರೆ.
ಅಪರೇ ಯೇ ಚ ದಾನಾನಿ ದದತ್ಯೇವ ಪ್ರಯಾಚಿತಾಃ |

ಯಥಾ ಯಥಾ ತೇ ದೀನತ್ವಾತ್ ಪುನರ್ದಾಸ್ಯಂತಿ ಯಾಚಿತಾಃ ॥9॥
ತಾವತ್ಕಾಲಂ ತತೋ ದೇವಿ ಪುನರ್ಜನ್ಮನಿ ತೇ ನರಾಃ |
ಯತ್ನತಃ ಶ್ರಮಸಂಯುಕ್ತಾಃ ಪುನಸ್ತಾನ್ ಪ್ರಾಪ್ನುವಂತಿ ಚ ॥10॥
ಇನ್ನು ಕೆಲವರು ಬಹಳ ಯಾಚನೆಯನ್ನು ಮಾಡಿದ ಮೇಲೆ ದಾನವನ್ನು ಮಾಡುತ್ತಾರೆ. ದಾನವನ್ನು ಬೇಡುವವರು ದೀನರಾಗಿದ್ದರೆ ಅವರು ಪುನಃ ಪುನಃ ಕೇಳಿದಂತೆ ದಾನವನ್ನು ಕೊಡುತ್ತಾರೆ. ಎಲೌ ದೇವಿಯೇ, ಅಂತಹ ಮನುಷ್ಯರು ಮುಂದಿನ ಜನ್ಮದಲ್ಲಿ ಶ್ರಮದಿಂದ ಕೂಡಿ ಅಷ್ಟು ಕಾಲವು ಕಳೆದ ಮೇಲೆ ಆ ಭೋಗ ಸಾಮಗ್ರಿಗಳನ್ನು ಪಡೆಯುತ್ತಾರೆ.
ಯಾಚಿತಾ ಅಪಿ ಯೇ ಕೇಚಿನ್ನ ದದತ್ಯೇವ ಕಿಂಚನ |
ಅಭ್ಯಸೂಯಾಪರಾ ಮರ್ತ್ಯಾ ಲೋಭೋಪಹತಚೇತಸಃ ॥11॥
ತೇ ಪುನರ್ಜನ್ಮನಿ ಶುಭೇ ಯತಂತೇ ಬಹುಧಾ ನರಾಃ |
ನ ಪ್ರಾಪ್ನುವಂತಿ ಮನುಜಾ ಮಾರ್ಗಂತಸ್ತೇಽಪಿ ಕಿಂಚನ ॥12॥
ಇನ್ನು ಕೆಲವು ಅಸೂಯಾ ಪರರೂ, ಲೋಭದಿಂದ ಕೂಡಿದವರೂ ಆದ ಮನುಷ್ಯರು ಯಾಚನೆಯನ್ನು ಮಾಡಿದರೂ ಏನನ್ನೂ ದಾನ ಮಾಡುವುದಿಲ್ಲ. ಎಲೌ ಶುಭಳೇ, ಅಂತಹ ಮನುಷ್ಯರು ಇನ್ನೊಂದು ಜನ್ಮದಲ್ಲಿ ಬಹಳ ಪ್ರಯತ್ನವನ್ನು ಪಡುತ್ತಾರೆ. ಅವರು ಎಷ್ಟು ಪ್ರಯತ್ನ ಪಟ್ಟರೂ ಏನನ್ನೂ ಪಡೆಯುವುದಿಲ್ಲ.
ನಾನುಪ್ತಂ ರೋಹತೇ ಸಸ್ಯಂ ತದ್ವದ್ ದಾನಫಲಂ ವಿದುಃ |
ಯದ್ಯದ್ ದದಾತಿ ಪುರುಷಸ್ತತ್ತತ್ ಪ್ರಾಪ್ನೋತಿ ಕೇವಲಮ್ ॥13॥
ಇತಿ ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥14॥
ಬಿತ್ತದಿದ್ದ ಸಸ್ಯವು ಬೆಳೆಯುವುದಿಲ್ಲ. ದಾನಫಲವು ಅದರಂತೆಯೇ ಎಂದು ತಿಳಿಯುತ್ತಾರೆ. ಪುರುಷನು ಯಾವ ಯಾವ ದಾನವನ್ನು ಮಾಡುತ್ತಾನೋ ಅವುಗಳನ್ನು ಪಡೆಯುತ್ತಾನೆ. ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ಭಗನೇತ್ರಘ್ನ ಕೇಚಿದ್ ವಾರ್ಧ್ವಕಸಂಯುತಾಃ |
ಅಭೋಗಯೋಗ್ಯಕಾಲೇ ತು ಭೋಗಾಂಶ್ಚೈವ ಧನಾನಿ ಚ ॥15॥
ಲಭಂತೇ ಸ್ಥವಿರಾ ಭೂತಾ ಭೋಗೈಶ್ವರ್ಯಂ ಯತಸ್ತತಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥16॥
ಉಮಾ ಭಗವಂತನೇ, ಭಗನೇತ್ರನಾಶಕನೇ, ಕೆಲವರು ಮುಪ್ಪಿನ ಕಾಲದಲ್ಲಿ ಭೋಗಿಸುವ ಸಾಮರ್ಥ್ಯವಿಲ್ಲದಿದ್ದಾಗ ಭೋಗ ಸಾಮಗ್ರಿಗಳನ್ನು ಮತ್ತು ಧನವನ್ನು ಎಲ್ಲಿಂದಲಾದರೂ ಹೊಂದುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ತತ್ತ್ವಂ ಸಮಾಹಿತಾ ॥17॥
ಮಹೇಶ್ವರ ಸಂತೋಷ. ಹೇಳುವೆನು, ತತ್ವವನ್ನು ಸಮಾಧಾನದಿಂದ ಕೇಳು.
ಧರ್ಮಕಾರ್ಯಂ ಚಿರಂ ಕಾಲಂ ವಿಸ್ಮೃತ್ಯ ಧನಸಂಯುತಾಃ |
ಪ್ರಾಣಾಂತಕಾಲೇ ಸಂಪ್ರಾಪ್ತೇ ವ್ಯಾಧಿಭಿಶ್ಚ ನಿಪೀಡಿತಾಃ ॥18॥
ಆರಭಂತೇ ಪುನರ್ಧರ್ಮಂ ದಾತುಂ ದಾನಾನಿ ವಾ ನರಾಃ |
ತೇ ಪುನರ್ಜನ್ಮನಿ ಶುಭೇ ಭೂತ್ವಾ ದುಃಖಪರಿಪ್ಲುತಾಃ ॥19॥
ಅತೀತಯೌವನೇ ಕಾಲೇ ಸ್ಥವಿರತ್ವಮುಪಾಗತಾಃ |
ಲಭಂತೇ ಪೂರ್ವದತ್ತಾನಾಂ ಫಲಾನಿ ಶುಭಲಕ್ಷಣೇ ॥20॥
ಏವಂ ಕರ್ಮಫಲಂ ದೇವಿ ಕಾಲಯೋಗಾದ್ ಭವತ್ಯುತ ॥21॥
ಯಾವ ಮನುಷ್ಯರು ಧನವನ್ನು ಹೊಂದಿದ್ದರೂ ಬಹಳ ಕಾಲ ಧರ್ಮಕಾರ್ಯವನ್ನು ಮಾಡುವುದನ್ನು ಮರೆತು, ರೋಗದಿಂದ ಪೀಡಿತರಾಗಿ ಪ್ರಾಣಾಂತಕಾಲವು ಸಮೀಪಿಸಿದಾಗ ದಾನ-ಧರ್ಮಗಳನ್ನು ಮಾಡಲು ಆರಂಭಿಸುತ್ತಾರೆಯೋ, ಎಲೌ ಶುಭಳೇ, ಅವರು ಇನ್ನೊಂದು ಜನ್ಮದಲ್ಲಿ ದುಃಖದಿಂದ ಕೂಡಿದವರಾಗಿ ಯೌವನಕಾಲವು ಕಳೆದು ವಾರ್ಧಕ್ಯವು ಪ್ರಾಪ್ತವಾದಾಗ ಹಿಂದೆ ಮಾಡಿದ ದಾನದ ಫಲವನ್ನು ಪಡೆಯುತ್ತಾರೆ. ಎಲೌ ಶುಭಲಕ್ಷಣೆಯೇ, ದೇವಿಯೇ, ಹೀಗೆ ಮಾಡಿದ ಕರ್ಮದ ಫಲವು ಕಾಲಯೋಗದಿಂದ ಉಂಟಾಗುತ್ತದೆ.
ಉಮಾ
ಭೋಗಯುಕ್ತಾ ಮಹಾದೇವ ಕೇಚಿದ್ವ್ಯಾಧಿಪರಿಪ್ಲುತಾಃ |
ಅಸಮರ್ಥಾಶ್ಚ ತಾನ್ ಭೋಕ್ತುಂ ಭವಂತಿ ಕಿಮು ಕಾರಣಮ್ ॥22
ಉಮಾ ಮಹಾದೇವನೇ, ಕೆಲವರು ಭೋಗಸಾಮಗ್ರಿಗಳಿಂದ ಕೂಡಿದ್ದರೂ ವ್ಯಾಧಿಗಳಿಂದ ಗ್ರಸ್ತರಾಗಿ ಭೋಗಿಸಲು ಸಮರ್ಥರಾಗುವುದಿಲ್ಲ. ಇದಕ್ಕೆ ಏನು ಕಾರಣ?
ಮಹೇಶ್ವರಃ
ವ್ಯಾಧಿಯೋಗಪರಿಕ್ಲಿಷ್ಟಾ ಯೇ ನಿರಾಶಾಃ ಸ್ವಜವಿತೇ |
ಆರಭಂತೇ ತದಾ ಕರ್ತುಂ ದಾನಾನಿ ಶುಭಲಕ್ಷಣೇ ॥23॥
ತೇ ಪುನರ್ಜನ್ಮನಿ ಶುಭೇ ಪ್ರಾಪ್ಯ ತಾನಿ ಫಲಾನ್ಯುತ |

ಅಸಮರ್ಥಾಶ್ಚ ತಾನ್ ಭೋಕ್ತುಂ ವ್ಯಾಧಿತಾಸ್ತೇ ಭವಂತ್ಯುತ ॥24॥
ಮಹೇಶ್ವರ ಎಲೌ ಶುಭಲಕ್ಷಣವುಳ್ಳವಳೇ, ಕೆಲವರು ವ್ಯಾಧಿಗಳಿಂದ ಪೀಡಿತರಾಗಿ ತಮ್ಮ ಜೀವನದಲ್ಲೇ ಆಸೆಯನ್ನು ಕಳೆದುಕೊಂಡು, ಆಗ ದಾನಗಳನ್ನು ಮಾಡಲು ಪ್ರಾರಂಭಿಸುತ್ತಾರೆ. ಎಲೌ ಶುಭಳೇ, ಅವರು ಇನ್ನೊಂದು ಜನ್ಮದಲ್ಲಿ ಆ ದಾನದ ಫಲವನ್ನು ಪಡೆದು ವ್ಯಾಧಿಗ್ರಸ್ತರಾಗಿ ಭೋಗಿಸಲು ಅಸಮರ್ಥರಾಗುತ್ತಾರೆ.
ಉಮಾ
ಭಗವನ್ ದೇವದೇವೇಶ ಮಾನುಷೇಷ್ವೇವ ಕೇಚನ |
ರೂಪಯುಕ್ತಾಃ ಪ್ರದೃಶ್ಯಂತೇ ಶುಭಾಂಗಾ ಪ್ರಿಯದರ್ಶನಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥25॥
ಉಮಾ ಭಗವಂತನೇ, ದೇವದೇವೇಶನೇ, ಮನುಷ್ಯರಲ್ಲಿ ಕೆಲವರು ಒಳ್ಳೆಯ ರೂಪದಿಂದ ಕೂಡಿ ನೋಡಲು ಮನೋಹರರಾಗಿರುತ್ತಾರೆ. ಯಾವ ಕರ್ಮ ವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ತತ್ತ್ವಂ ಸಮಾಹಿತಾ ॥26॥
ಮಹೇಶ್ವರ ಸಂತೋಷ. ಅದನ್ನು ನಿನಗೆ ಹೇಳುವೆನು. ಸಮಾಧಾನದಿಂದ ಕೇಳು.
ಯೇ ಪುರಾ ಮನುಜಾ ದೇವಿ ಲಜ್ಜಾಯುಕ್ತಾಃ ಪ್ರಿಯಂವದಾಃ |
ಶಕ್ತಾಃ ಸುಮಧುರಾ ನಿತ್ಯಂ ಭೂತ್ವಾ ಚೈವ ಸ್ವಭಾವತಃ ॥27॥
ಅಮಾಂಸಭೋಜಿನಶ್ಚೈವ ಸದಾ ಪ್ರಾಣಿದಯಾಯುತಾಃ |
ಪ್ರತಿಕರ್ಮಪ್ರದಾ ವಾಪಿ ವಸ್ತ್ರದಾ ಧರ್ಮಕಾರಣಾತ್ |
ಭೂಮಿಶುದ್ಧಿಕರಾ ವಾಽಪಿ ಕಾರಣಾದಗ್ನಿಪೂಜಕಾಃ ॥28॥
ಏವಂ ಯುಕ್ತಸಮಾಚಾರಾಃ ಪುನರ್ಜನ್ಮನಿ ತೇ ನರಾಃ |
ರೂಪೇಣ ಸ್ಪೃಹಣೀಯಾಸ್ತು ಭವಂತ್ಯೇವ ನ ಸಂಶಯಃ ॥29॥
ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ನಾಚಿಕೆಯಿಂದ ಕೂಡಿ, ಪ್ರಿಯವನ್ನೇ ಮಾತನಾಡುವವರಾಗಿ, ಸಮರ್ಥರಾಗಿ, ಮಧುರಸ್ವಭಾವವನ್ನು ಹೊಂದಿದವರಾಗಿ, ಮಾಂಸಭೋಜನವನ್ನು ಮಾಡದೆ ಪ್ರಾಣಿದಯೆಯಿಂದ ಕೂಡಿದವರಾಗಿರುತ್ತಾರೆಯೋ, ಧರ್ಮದ ನಿಮಿತ್ತದಿಂದ ಕೇಳಿದವರಿಗೆ ಕರ್ಮವನ್ನು ಮಾಡುತ್ತಾರೆಯೋ ಮತ್ತು ವಸ್ತ್ರಗಳನ್ನು ನೀಡುತ್ತಾರೆಯೋ ಅಥವಾ ಭೂಶುದ್ಧಿಯನ್ನು ಮಾಡುತ್ತಾರೆಯೋ ಅಥವಾ ಅಗ್ನಿಪೂಜೆಯನ್ನು ಮಾಡುತ್ತಾರೆಯೋ ಅಂತಹ ಒಳ್ಳೆಯ ನಡತೆಯುಳ್ಳ ಮನುಷ್ಯರು ಇನ್ನೊಂದು ಜನ್ಮದಲ್ಲಿ ಒಳ್ಳೆಯ ರೂಪವನ್ನು ಹೊಂದಿ ಎಲ್ಲರಿಂದಲೂ ಅಪೇಕ್ಷಿಸಲ್ಪಡುವುದರಲ್ಲಿ ಸಂಶಯವಿಲ್ಲ.
ಉಮಾ
ವಿರೂಪಾಶ್ಚ ಪ್ರದೃಶ್ಯಂತೇ ಮಾನುಷೇಷ್ವೇವ ಕೇಚನ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥30॥
ಉಮಾ ಮನುಷ್ಯರಲ್ಲಿ ಕೆಲವರು ಕುರೂಪಿಗಳಾಗಿ ಕಾಣುತ್ತಾರೆ. ಯಾವ ಕರ್ಮ ವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ॥31॥
ಮಹೇಶ್ವರ ಕಲ್ಯಾಣಿಯೇ, ಅದನ್ನು ಹೇಳುವೆನು. ಕಾರಣವನ್ನು ಕೇಳು.
ರೂಪಯೋಗಾತ್ ಪುರಾ ಮರ್ತ್ಯಾ ದರ್ಪಾಹಂಕಾರಸಂಯುತಾಃ |
ವಿರೂಪಹಾಸಕಾಶ್ಚೈವ ಸ್ತುತಿನಿಂದಾದಿಭಿರ್ಭೃಶಮ್ ॥32॥
ಪರೋಪತಾಪಿನಶ್ಚೈವ ಮಾಂಸಾದಾಶ್ಚ ತಥೈವ ಚ |
ಅಭ್ಯಸೂಯಾಪರಾಶ್ಚೈವ ಅಶುದ್ಧಾಶ್ಚ ತಥೈವ ಚ ॥33॥
ಏವಂ ಯುಕ್ತಸಮಾಚಾರಾ ಯಮಲೋಕೇ ಸುದಂಡಿತಾಃ |
ಕಥಂಚಿತ್ ಪ್ರಾಪ್ಯ ಮಾನುಷ್ಯಂ ತತ್ರ ತೇ ರೂಪವರ್ಜಿತಾಃ |
ವಿರೂಪಾಃ ಸಂಭವಂತ್ಯೇವ ನಾಸ್ತಿ ತತ್ರ ವಿಚಾರಣಾ ॥34॥
ಯಾವ ಮನುಷ್ಯರು ಹಿಂದೆ ಒಳ್ಳೆಯ ರೂಪವನ್ನು ಹೊಂದಿ ದರ್ಪ, ಅಹಂಕಾರದಿಂದ ಕೂಡಿ, ಕುರೂಪಿಗಳನ್ನು ಸ್ತುತಿ-ನಿಂದಾದಿಗಳಿಂದ ಅಪಹಾಸ್ಯ ಮಾಡುತ್ತಾರೆಯೋ, ಪರೋಪದ್ರವವನ್ನು ಉಂಟು ಮಾಡುತ್ತಾರೆಯೋ, ಮಾಂಸ ಭಕ್ಷಕರೂ, ಅಸೂಯಾಪರರೂ ಮತ್ತು ಅಶುದ್ಧರೂ ಆಗಿದ್ದಾರೆಯೋ ಅಂತಹ ಆಚಾರದಿಂದ ಕೂಡಿದವರು ಯಮಲೋಕದಲ್ಲಿ ಬಹಳ ಶಿಕ್ಷೆಯನ್ನು ಅನುಭವಿಸಿ, ಬಹಳ ಪ್ರಯಾಸದಿಂದ ಮನುಷ್ಯಜನ್ಮವನ್ನು ಪಡೆದು ಕುರೂಪಿಗಳಾಗುತ್ತಾರೆ. ಇದರಲ್ಲಿ ಬೇರೆ ವಿಚಾರವಿಲ್ಲ.
ಉಮಾ
ಭಗವನ್ ದೇವದೇವೇಶ ಕೇಚಿತ್ ಸೌಭಾಗ್ಯಸಂಯುತಾಃ |
ರೂಪಭೋಗವಿಹೀನಾಶ್ಚ ದೃಶ್ಯಂತೇ ಪ್ರಮದಾಪ್ರಿಯಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥35॥
ಉಮಾ ಭಗವಂತನೇ, ದೇವದೇವೇಶನೇ, ಕೆಲವರು ರೂಪ-ಭೋಗಗಳು ಇಲ್ಲದಿದ್ದರೂ ಸ್ತ್ರೀಯರಿಗೆ ಪ್ರಿಯರಾಗಿ ಕಂಡುಬರುತ್ತಾರೆ. ಯಾವ ಕರ್ಮ ವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ

ಯೇ ಪುರಾ ಮನುಜಾ ದೇವಿ ಸೌಮ್ಯಶೀಲಾಃ ಪ್ರಿಯಂವದಾಃ |
ಸ್ವದಾರೈರೇವ ಸಂತುಷ್ಟಾ ದಾರೇಷು ಸಮವೃತ್ತಯಃ ||36||
ದಾಕ್ಷಿಣ್ಯೇನೈವ ವರ್ತಂತೇ ಪ್ರಮದಾಸ್ವಪ್ರಿಯಾಸ್ವಪಿ |
ನ ತು ಪ್ರತ್ಯಾದಿಶಂತ್ಯೇವ ಸ್ತ್ರೀದೋಷಾನ್ ಗುಣಸಂಶ್ರಿತಾನ್ ||37||
ಅನ್ನಪಾನೀಯದಾಃ ಕಾಲೇ ನೃಣಾಂ ಸ್ವಾದುಪ್ರದಾಶ್ಚ ಯೇ |
ಸ್ವದಾರವರ್ತಿನಶ್ಚೈವ ಧೃತಿಮಂತೋ ನಿರತ್ಯಯಾಃ ||38||
ಏವಂ ಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಮಾನುಷಾಸ್ತೇ ಭವಂತ್ಯೇವ ಸತತಂ ಸುಭಗಾ ಭೃಶಮ್ |
ಅರ್ಥಾದ್ವೃತೇಽಪಿ ತೇ ದೇವಿ ಭವಂತಿ ಪ್ರಮದಾಪ್ರಿಯಾಃ ||39||
ಮಹೇಶ್ವರ ಎಲೌ ದೇವಿಯೇ, ಯಾರು ಹಿಂದೆ ಸೌಮ್ಯಸ್ವಭಾವವನ್ನು ಹೊಂದಿ ಪ್ರಿಯವಾದ ಮಾತುಗಳನ್ನು ಆಡಿದ್ದಾರೆಯೋ, ತಮ್ಮ ಪತ್ನಿಯರಲ್ಲೇ ತೃಪ್ತರಾಗಿದ್ದಾರೆಯೋ, ಅನೇಕ ಪತ್ನಿಯರನ್ನು ಹೊಂದಿ ಎಲ್ಲರಲ್ಲಿಯೂ ಸಮವಾಗಿ ನಡೆದುಕೊಂಡಿರುತ್ತಾರೆಯೋ, ಅಪ್ರಿಯರಾದ ಸ್ತ್ರೀಯರಲ್ಲಿಯೂ ಸಹ ಸೌಜನ್ಯದಿಂದ ನಡೆದುಕೊಂಡಿದ್ದಾರೆಯೋ, ಗುಣಗಳ ಜೊತೆಯಲ್ಲಿರುವ ಸ್ತ್ರೀ ದೋಷಗಳನ್ನು ಯಾರು ಕೀರ್ತಿಸಿಲ್ಲವೋ, ಯೋಗ್ಯವಾದ ಕಾಲದಲ್ಲಿ ಮನುಷ್ಯರಿಗೆ ಅನ್ನ-ಪಾನಗಳನ್ನೂ, ಸಿಹಿ ಭಕ್ಷ್ಯಗಳನ್ನು ಕೊಟ್ಟಿದ್ದಾರೆಯೋ ಅಂತಹ ಧೈರ್ಯಶಾಲಿಗಳೂ, ಧರ್ಮವನ್ನು ಮೀರದವರೂ ಆದ ಸದಾಚಾರವನ್ನು ಹೊಂದಿದ ಮನುಷ್ಯರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ಮನುಷ್ಯರಾಗಿ ಜನಿಸಿ ನೋಡಲು ಬಹಳ ಸುಂದರರಾಗಿರುತ್ತಾರೆ. ಎಲೌ ದೇವಿಯೇ, ಅವರ ಬಳಿ ಧನವಿಲ್ಲದಿದ್ದರೂ ಅವರು ಸ್ತ್ರೀಯರಿಗೆ ಪ್ರಿಯರಾಗುತ್ತಾರೆ.
ಉಮಾ
ದುರ್ಭಗಾಃ ಸಂಪ್ರದೃಶ್ಯಂತೇ ಆಢ್ಯಾ ಭೋಗಯುತಾ ಅಪಿ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ||40||
ಉಮಾ ಕೆಲವರು ಧನಾಢ್ಯರಾಗಿದ್ದರೂ, ಭೋಗಸಾಮಗ್ರಿಗಳಿಂದ ಕೂಡಿದ್ದರೂ ಕುರೂಪಿಗಳಾಗಿರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಸರ್ವಂ ಸಮಾಹಿತಾ ||41||
ಮಹೇಶ್ವರ ನಾನು ಅದನ್ನು ಹೇಳುವೆನು. ಎಲ್ಲವನ್ನೂ ಸಮಾಧಾನದಿಂದ ಕೇಳು.
ಯೇ ಪುರಾ ಮನುಜಾ ದೇವಿ ಸ್ವದಾರೇಷ್ವನಪೇಕ್ಷಯಾ |
ಯಥೇಷ್ಟವೃತ್ತಯಶ್ಚೈವ ನಿರ್ಲಜ್ಜಾ ವೀತಸಂಭ್ರಮಾಃ ||42||
ಪರೇಷಾಂ ವಿಪ್ರಿಯಕರಾ ವಾಙ್ಮನಃಕಾಯಕರ್ಮಭಿಃ |
ನಿರಾಶ್ರಯಾ ನಿರನ್ನಾದ್ಯಾಃ ಸ್ತ್ರೀಣಾಂ ಹೃದಯಕೋಪನಾಃ ||43||
ಏವಂ ಯುಕ್ತಸಮಾಚಾರಾಃ ಪುನರ್ಜನ್ಮನಿ ತೇ ನರಾಃ |
ದುರ್ಭಗಾಸ್ತು ಭವಂತ್ಯೇವ ಸ್ತ್ರೀಣಾಂ ಹೃದಯವಿಪ್ರಿಯಾಃ ||44||
ನಾಸ್ತಿ ತೇಷಾಂ ರತಿಸುಖಂ ಸ್ವದಾರೇಷ್ವಪಿ ಕಿಂಚನ ||45||
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ತಮ್ಮ ಪತ್ನಿಯರನ್ನು ಅಪೇಕ್ಷಿಸದೆ ನಾಚಿಕೆಯನ್ನೂ, ಭಯವನ್ನೂ ಬಿಟ್ಟು ಸ್ವೇಚ್ಛಾಚಾರಿಗಳಾಗಿರುತ್ತಾರೆಯೋ, ಮನೋ-ವಾಕ್-ಕಾಯಕರ್ಮಗಳಿಂದ ಇನ್ನೊಬ್ಬರಿಗೆ ಅಪ್ರಿಯವನ್ನು ಮಾಡಿರುತ್ತಾರೆಯೋ, ಯಾರಿಗೂ ಆಶ್ರಯವನ್ನು ನೀಡದೆ, ಅನ್ನವನ್ನು ದಾನಮಾಡದೆ, ಸ್ತ್ರೀಯರಿಗೆ ಕೋಪವನ್ನುಂಟು ಮಾಡಿದ್ದಾರೆಯೋ ಅಂತಹ ಆಚಾರದಿಂದ ಕೂಡಿದವರು ಇನ್ನೊಂದು ಜನ್ಮದಲ್ಲಿ ಕುರೂಪಿಗಳೂ, ಸ್ತ್ರೀಯರಿಗೆ ಅಪ್ರಿಯರೂ ಆಗಿರುತ್ತಾರೆ. ಅವರಿಗೆ ತಮ್ಮ ಪತ್ನಿಯಲ್ಲಿಯೂ ಸಹ ರತಿಸುಖವಿರುವುದಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಮಾನುಷಾಣಾಂ ತ್ರೈವಿಧ್ಯನಿಮಿತ್ತಕಥನಂ ನಾಮ ದ್ವ್ಯಧಿಕದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಮನುಷ್ಯರ ವೈವಿಧ್ಯಕ್ಕೆ ನಿಮಿತ್ತಕಥನ.
ಉಮಾ
ಭಗವನ್ ದೇವದೇವೇಶ ಮಾನುಷೇಷ್ವೇವ ಕೇಚನ |
ಜ್ಞಾನವಿಜ್ಞಾನಸಂಪನ್ನಾ ಬುದ್ಧಿಮಂತೋ ವಿಚಕ್ಷಣಾಃ ||1||
ಉಮಾ ಭಗವಂತನೇ, ದೇವದೇವೇಶನೇ, ಮನುಷ್ಯರಲ್ಲೇ ಕೆಲವರು ಜ್ಞಾನ-ವಿಜ್ಞಾನಸಂಪನ್ನರಾಗಿ, ಬುದ್ಧಿವಂತರಾಗಿಯೂ, ದಕ್ಷರಾಗಿಯೂ ಕಾಣುತ್ತಾರೆ.
ದುರ್ಗತಾಸ್ತು ಪ್ರದೃಶ್ಯಂತೇ ಯತಮಾನಾ ಯಥಾವಿಧಿ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ||2||
ಇನ್ನು ಕೆಲವರು ಸರಿಯಾದ ಪ್ರಯತ್ನವನ್ನು ಮಾಡಿದರೂ ದುರ್ಗತಿಯನ್ನು ಹೊಂದಿರುವುದು ಕಂಡುಬರುತ್ತದೆ. ಯಾವ

ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ॥3॥
ಮಹೇಶ್ವರ ಕಲ್ಯಾಣಿಯೇ, ಅದನ್ನು ನಿನಗೆ ಹೇಳುವೆನು. ಅದಕ್ಕೆ ಕಾರಣವನ್ನು ಕೇಳು.
ಯೇ ಪುರಾ ಮನುಜಾ ದೇವಿ ಶ್ರುತವಂತೋಽಪಿ ಕೇವಲಮ್ |
ನಿರಾಶ್ರಯಾ ನಿರನ್ನಾದ್ಯಾ ಭೃಶಮಾತ್ಮಪರಾಯಣಾಃ ॥4॥
ತೇ ಪುನರ್ಜನ್ಮನಿ ಶುಭೇ ಜ್ಞಾನಬುದ್ಧಿಯುತಾ ಅಪಿ |
ನಿಷ್ಕಿಂಚನಾ ಭವಂತ್ಯೇವ ಅನುಪ್ತಂ ಹಿ ನ ರೋಹತಿ ॥5॥
ಎಲೌ ದೇವಿಯೇ, ಯಾರು ಹಿಂದೆ ವಿದ್ಯೆಯಿದ್ದರೂ ಇನ್ನೊಬ್ಬರಿಗೆ ಆಶ್ರಯವನ್ನು ಕೊಡದೆ, ಅನ್ನವನ್ನು ಕೊಡದೆ ಕೇವಲ ಸ್ವಾರ್ಥಿಗಳಾಗಿರುತ್ತಾರೆಯೋ ಅಂತಹವರು ಇನ್ನೊಂದು ಜನ್ಮದಲ್ಲಿ ಜ್ಞಾನಬುದ್ಧಿವಂತರಾದರೂ ದರಿದ್ರರಾಗಿರುತ್ತಾರೆ. ದೀಪ್ತವಿಲ್ಲದ ಬೀಜವು ಬೆಳೆಯುವುದಿಲ್ಲವಷ್ಟೆ?
ಉಮಾ
ಮೂರ್ಖಾ ಲೋಕೇ ಪ್ರದೃಶ್ಯಂತೇ ವೃಥಾಮೂಢಾ ವಿಚೇತಸಃ |
ಜ್ಞಾನವಿಜ್ಞಾನರಹಿತಾಃ ಸಮೃದ್ಧಾಶ್ಚ ಸಮಂತತಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥6॥
ಉಮಾ ಲೋಕದಲ್ಲಿ ಮೂರ್ಖರು, ಮೂಢರು, ಜ್ಞಾನ-ವಿಜ್ಞಾನಶೂನ್ಯರು ಸಮೃದ್ಧರಾಗಿರುವುದು ಕಂಡುಬರುತ್ತದೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಬಾಲಿಶಾ ಅಪಿ ಸರ್ವತಃ |
ಸಮಾಚರಂತಿ ದಾನಾನಿ ದೀನಾನುಗ್ರಹಕಾರಣಾತ್ ॥7॥
ಅಬುದ್ಧಿಪೂರ್ವಂ ವಾ ದಾನಂ ದದತ್ಯೇವ ಯತಸ್ತತಃ |
ತೇ ಪುನರ್ಜನ್ಮನಿ ಶುಭೇ ಪ್ರಾಪ್ನುವಂತ್ಯೇವ ತತ್ತಥಾ ॥8॥
ಪಂಡಿತೋಽಪಂಡಿತೋ ವಾಽಪಿ ಭುಂಕ್ತೇ ದಾನಫಲಂ ನರಃ |
ಬುದ್ಧ್ಯಾಽನಪೇಕ್ಷಿತಂ ದಾನಂ ಸರ್ವಥಾ ತತ್ಫಲತ್ಯುತ ॥9॥
ಮಹೇಶ್ವರ ಎಲೌ ದೇವಿಯೇ, ಯಾರು ಹಿಂದೆ ಅಪಕ್ವ ಬುದ್ಧಿ ಇದ್ದರೂ ದೀನರಿಗೆ ಅನುಗ್ರಹವನ್ನು ಮಾಡಲು ಅಬುದ್ಧಿ ಪೂರ್ವಕವಾಗಿಯಾದರೂ ದಾನಗಳನ್ನು ಮಾಡಿದ್ದಾರೆಯೋ ಅವರು ಇನ್ನೊಂದು ಜನ್ಮದಲ್ಲಿ ಶುಭವನ್ನು ಪಡೆದೇ ಪಡೆಯುತ್ತಾರೆ. ಪಂಡಿತನಾಗಲಿ ಅಥವಾ ಆಗದಿರಲಿ ದಾನಫಲವನ್ನು ಭೋಗಿಸುತ್ತಾನೆ. ದಾನಫಲವು ದೊರೆಯಲು ಬುದ್ಧಿಯ ಅಪೇಕ್ಷೆ ಇರುವುದಿಲ್ಲ. ಕೊಟ್ಟ ದಾನವು ಫಲವನ್ನು ಕೊಟ್ಟೇ ಕೊಡುತ್ತದೆ.
ಉಮಾ
ಭಗವನ್ ದೇವದೇವೇಶ ಮಾನುಷೇಷ್ವೇವ ಕೇಚನ |
ಮೇಧಾವಿನಃ ಶ್ರುತಧರಾ ಭವಂತಿ ವಿಶದಾಕ್ಷರಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥10॥
ಉಮಾ ಭಗವಂತನೇ, ದೇವದೇವೇಶನೇ, ಮನುಷ್ಯರಲ್ಲೇ ಕೆಲವರು ವಿದ್ಯಾಸಂಪನ್ನರೂ ಮೇಧಾವಿಗಳೂ ಸ್ಪಷ್ಟವಾಗಿ ಮಾತನಾಡುವವರೂ ಆಗಿರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಗುರುಶುಶ್ರೂಷಕಾ ಭೃಶಮ್ |
ಜ್ಞಾನಾರ್ಥಂ ತೇ ತು ಸಂಗೃಹ್ಯ ತೀರ್ಥತೋ ವಿಧಿಪೂರ್ವಕಮ್ ॥11॥
ವಿಧಿನೈವ ಪರಾಂಶ್ಚೈವ ಗ್ರಾಹಯಂತಿ ಚ ನಾನ್ಯಥಾ |
ಅಶ್ಲಾಘಮಾನಾ ಜ್ಞಾನೇನ ಪ್ರಶಾಂತಾ ಯತವಾಚಕಾಃ |
ವಿದ್ಯಾಸ್ಥಾನಾನಿ ಯೇ ಲೋಕೇ ಸ್ಥಾಪಯಂತಿ ಚ ಯತ್ನತಃ ॥12॥
ತಾದೃಶಾ ಮರಣಂ ಪ್ರಾಪ್ತಾಃ ಪುನರ್ಜನ್ಮನಿ ಶೋಭನೇ |
ಮೇಧಾವಿನಃ ಶ್ರುತಧರಾ ಭವಂತಿ ವಿಶದಾಕ್ಷರಾಃ ॥13॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಜ್ಞಾನಾರ್ಥವಾಗಿ ಯೋಗ್ಯವಾದ ಗುರುಗಳ ಸೇವೆಯನ್ನು ಶಾಸ್ತ್ರೋಕ್ತ ರೀತಿಯಲ್ಲಿ ಮಾಡಿದ್ದಾರೆಯೋ ಶಾಸ್ತ್ರೋಕ್ತ ರೀತಿಯಲ್ಲಿಯೇ ಇನ್ನೊಬ್ಬರಿಗೆ ಉಪದೇಶವನ್ನು ಮಾಡಿದ್ದಾರೆಯೋ, ತಮ್ಮನ್ನು ತಾವು ಹೊಗಳಿಕೊಳ್ಳದೆ ಜ್ಞಾನದಿಂದ ಶಾಂತರೂ, ಮಿತಭಾಷಿಗಳೂ ಆಗಿದ್ದಾರೆಯೋ, ಯಾರು ಪ್ರಯತ್ನಪೂರ್ವಕವಾಗಿ ವಿದ್ಯಾಪ್ರಭೇದಗಳನ್ನು ಸಾಧಿಸಿದ್ದಾರೆಯೋ ಎಲೌ ಶೋಭನೆಯೇ, ಅಂತಹವರು ಮರಣವನ್ನು ಹೊಂದಿದ ಮೇಲೆ ಜನ್ಮಾಂತರದಲ್ಲಿ ಮೇಧಾವಿಗಳೂ, ವಿದ್ಯಾಸಂಪನ್ನರೂ, ಒಳ್ಳೆಯ ಪ್ರವಚನಕಾರರೂ ಆಗುತ್ತಾರೆ.
ಉಮಾ
ಅಪರೇ ಮಾನುಷಾ ದೇವ ಯತಂತೋಽಪಿ ಯತಸ್ತತಃ |
ಬಹಿಷ್ಕೃತಾಃ ಪ್ರದೃಶ್ಯಂತೇ ಶ್ರುತವಿಜ್ಞಾನಬುದ್ಧಿಭಿಃ |

ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥14॥
ಉಮಾ ಎಲೈ ದೇವನೇ, ಇನ್ನು ಕೆಲವು ಮನುಷ್ಯರು ಪ್ರಯತ್ನಪಟ್ಟರೂ ಜ್ಞಾನ-ವಿಜ್ಞಾನ ಬುದ್ಧಿಗಳಿಂದ ರಹಿತರಾಗಿರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಜ್ಞಾನದರ್ಪಸಮನ್ವಿತಾಃ |
ಶ್ಲಾಘಮಾನಾಶ್ಚ ತತ್ಪ್ರಾಪ್ಯ ಜ್ಞಾನಾಹಂಕಾರಮೋಹಿತಾಃ ॥15॥
ತಪಂತಿ ಯೇ ಪರಾನ್ ನಿತ್ಯಂ ಜ್ಞಾನಾಧಿಕ್ಯೇನ ದರ್ಪಿತಾಃ |
ಜ್ಞಾನಾದಸೂಯಾಂ ಕುರ್ವಂತಿ ನ ಸಹಂತ್ಯೇವ ಚಾಪರಾನ್ ॥16॥
ತಾದೃಶಾ ಮರಣಂ ಪ್ರಾಪ್ತಾಃ ಪುನರ್ಜನ್ಮನಿ ಶೋಭನೇ |
ಮಾನುಷ್ಯಂ ಸುಚಿರಾತ್ಪ್ರಾಪ್ಯ ತತ್ರ ಬೋಧವಿವರ್ಜಿತಾಃ |
ಭವಂತಿ ಸತತಂ ದೇವಿ ವಿವರ್ಣವಚನಾಸ್ತಥಾ ॥17॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಜ್ಞಾನದಿಂದ ಅಹಂಕಾರವನ್ನು ಹೊಂದಿ, ಜ್ಞಾನ ಮತ್ತು ಅಹಂಕಾರದಿಂದ ಮೋಹಿತರಾಗಿ ತಮ್ಮನ್ನೇ ತಾವು ಹೊಗಳಿಕೊಳ್ಳುತ್ತಾ ಇನ್ನೊಬ್ಬರನ್ನು ತಾಪಪಡಿಸುತ್ತಾರೆಯೋ, ಇನ್ನೊಬ್ಬರ ಜ್ಞಾನವನ್ನು ನೋಡಿ ಸಹನೆಯನ್ನು ಹೊಂದದೆ ಅಸೂಯೆಯನ್ನು ಪಡುತ್ತಾರೆಯೋ, ಎಲೌ ಶೋಭನೆಯೇ, ಅಂತಹವರು ಜನ್ಮಾಂತರವನ್ನು ಹೊಂದಿ, ಅದರಲ್ಲೂ ಬಹಳ ಕಷ್ಟದಿಂದ ಬಹಳ ಕಾಲದ ಮೇಲೆ ಮನುಷ್ಯ ಜನ್ಮವನ್ನು ಹೊಂದಿ ಪ್ರಯತ್ನಪಟ್ಟರೂ ಹೀನ ಬುದ್ಧಿಯುಳ್ಳವರಾಗಿ ಜ್ಞಾನರಹಿತರಾಗಿ ಅಸ್ಪಷ್ಟವಾಗಿ ಮಾತನಾಡುವವರಾಗುತ್ತಾರೆ.
ಉಮಾ
ಭಗವನ್ ಮಾನುಷಾಃ ಕೇಚಿತ್ ಸರ್ವಕಲ್ಯಾಣಸಂಯುತಾಃ |
ಪುತ್ರೈರ್ದಾರೈರ್ಗುಣಯುತೈರ್ದಾಸೀದಾಸಪರಿಚ್ಛದೈಃ ॥18॥
ಪರಸ್ಪರರ್ದ್ಧಿಸಂಯುಕ್ತಾಃ ಸ್ಥಾನೈಶ್ವರ್ಯಪರಿಗ್ರಹೈಃ |
ವ್ಯಾಧಿಹೀನಾ ನಿರಾಬಾಧಾ ರೂಪಾರೋಗ್ಯಬಲೈರ್ಯುತಾಃ ॥19॥
ಧನಧಾನ್ಯೇನ ಸಂಪನ್ನಾಃ ಪ್ರಾಸಾದೈರ್ಯಾನವಾಹನೈಃ |
ಸರ್ವೋಪಭೋಗಸಂಯುಕ್ತಾ ನಾನಾಚಿತ್ರೈರ್ಮನೋಹರೈಃ ॥20॥
ಜ್ಞಾತಿಭಿಃ ಸಹ ಮೋದಂತೇ ಅವಿಘ್ನಂ ತು ದಿನೇದಿನೇ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥21॥
ಉಮಾ ಭಗವಂತನೇ, ಕೆಲವು ಮನುಷ್ಯರು ಸರ್ವಕಲ್ಯಾಣದಿಂದ ಯುಕ್ತರಾಗಿ ಗುಣವಂತರಾದ ಪತ್ನೀ-ಪುತ್ರರಿಂದಲೂ, ದಾಸೀ-ದಾಸರಿಂದಲೂ ಸಾಮಗ್ರಿಗಳಿಂದಲೂ ಯುಕ್ತರಾಗಿ ಸಮೃದ್ಧಿಯನ್ನೂ, ಸ್ಥಾನ-ಐಶ್ವರ್ಯ ಮತ್ತು ಸಾಮಗ್ರಿಗಳಿಂದ ಸಮೃದ್ಧಿಯನ್ನೂ ಹೊಂದಿ ವ್ಯಾಧಿಹೀನರಾಗಿ ಯಾರ ಬಾಧೆಯೂ ಇಲ್ಲದೆ ರೂಪ, ಆರೋಗ್ಯ ಮತ್ತು ಬಲಗಳನ್ನು ಹೊಂದಿರುತ್ತಾರೆ. ಧನ- ಧಾನ್ಯಗಳಿಂದಲೂ ಪ್ರಾಸಾದ, ಯಾನ ಮತ್ತು ವಾಹನಗಳಿಂದಲೂ, ವಿಚಿತ್ರವಾದ ಮತ್ತು ಮನೋಹರವಾದ ನಾನಾ ಭೋಗಗಳಿಂದಲೂ ಕೂಡಿರುತ್ತಾರೆ. ದಿನದಿನವೂ ಬಂಧುಗಳ ಜೊತೆಯಲ್ಲಿ ಸಂತೋಷ ಪಡುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಸರ್ವಂ ಸಮಾಹಿತಾ ॥22॥
ಮಹೇಶ್ವರ ಅದನ್ನು ನಾನು ಹೇಳುವೆನು, ಸಮಾಧಾನದಿಂದ ಕೇಳು.
ಯೇ ಪುರಾ ಮನುಜಾ ದೇವಿ ಆಢ್ಯಾ ವಾ ಇತರೇಽಪಿ ವಾ |
ಶ್ರುತವೃತ್ತಸಮಾಯುಕ್ತಾ ದಾನಧರ್ಮರತಾಶ್ಚ ಯೇ ॥23॥
ಪರೇಂಗಿತಪರಾ ನಿತ್ಯಂ ದಾತವ್ಯಮಿತಿ ನಿಶ್ಚಿತಾಃ |
ಸತ್ಯಸಂಧಾಃ ಕ್ಷಮಾಶೀಲಾ ಲೋಭಮೋಹವಿವರ್ಜಿತಾಃ ॥24॥
ಎಲೌ ದೇವಿಯೇ, ಯಾರು ಹಿಂದೆ ಧನಾಢ್ಯರಾಗಲಿ, ಆಗದಿರಲಿ ವಿದ್ಯಾ-ಶೀಲಗಳಿಂದ ಸಂಪನ್ನರಾಗಿ, ದಾನ-ಧರ್ಮಗಳಲ್ಲಿ ರತರಾಗಿ, ಇನ್ನೊಬ್ಬರ ಇಂಗಿತವನ್ನು ತಿಳಿದು ದಾನವನ್ನು ಮಾಡಲೇಬೇಕೆಂದು ನಿಶ್ಚಯಮಾಡಿ, ಸತ್ಯಸಂಧರಾಗಿ, ಕ್ಷಮಾಶೀಲರಾಗಿ, ಲೋಭ-ಮೋಹರಹಿತರಾಗಿರುತ್ತಾರೆಯೋ;
ದಾತಾರಃ ಪಾತ್ರತೋ ದಾನಂ ವ್ರತೈರ್ನಿಯಮಸಂಯುತಾಃ |
ಸ್ವದುಃಖಮಿವ ಸಂಸ್ಮೃತ್ಯ ಪರದುಃಖಂ ಮಹಾತ್ಮನಃ |
ಸೌಮ್ಯಶೀಲಾಃ ಶುಭಾಚಾರಾ ದೇವಬ್ರಾಹ್ಮಣಪೂಜಕಾಃ ॥25॥
ಏವಂ ಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ದಿವಿ ವಾ ಭುವಿ ವಾ ದೇವಿ ಜಾಯಂತೇ ಕರ್ಮಭೋಗಿನಃ ॥26॥
ವ್ರತ-ನಿಯಮಗಳಿಂದ ಕೂಡಿ ಸತ್ಪಾತ್ರರಿಗೆ ದಾನವನ್ನು ಮಾಡುತ್ತಾರೆಯೋ, ಮಹಾತ್ಮರಾದ ಯಾರು ಇನ್ನೊಬ್ಬರ ದುಃಖವನ್ನು ತಮ್ಮ ದುಃಖವೆಂದು ನೋಡುತ್ತಾರೆಯೋ ಅಂತಹ ಸೌಮ್ಯ ನಡತೆಯಿಂದಲೂ, ಶುಭಾಚಾರದಿಂದಲೂ ಕೂಡಿ ದೇವ-ಬ್ರಾಹ್ಮಣರ ಪೂಜೆಯನ್ನು ಮಾಡುವವರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ಸ್ವರ್ಗದಲ್ಲಾಗಲೀ, ಭೂಮಿಯಲ್ಲಾಗಲೀ ತಮ್ಮ ಕರ್ಮದ ಫಲವನ್ನು ಭೋಗಿಸುವವರಾಗಿ ಜನಿಸುತ್ತಾರೆ.

ಮಾನುಷೇಷ್ವಪಿ ಯೇ ಜಾತಾಸ್ತಾದೃಶಾಃ ಸಂಭವಂತಿ ತೇ |
ಯಾದೃಶಾಸ್ತು ತಥಾ ಪ್ರೋಕ್ತಾಃ ಸರ್ವೇ ಕಲ್ಯಾಣಸಂಯುತಾಃ ॥27॥
ರೂಪಂ ದ್ರವ್ಯಂ ಬಲಂ ಚಾಯುರ್ಭೋಗೈಶ್ವರ್ಯಂ ಕುಲಂ ಶ್ರುತಮ್ |
ಇತ್ಯೇತತ್ಸರ್ವಸಾದ್ಗುಣ್ಯಂ ದಾನಾದ್ ಭವತಿ ನಾನ್ಯಥಾ |
ತಪೋದಾನಮಯಂ ಸರ್ವಮಿತಿ ವಿದ್ಧಿ ಶುಭಾನನೇ॥28॥
ಮನುಷ್ಯರಲ್ಲಿಯೂ ನೀನು ಹೇಳಿದ ಗುಣಗಳಿಂದ ಮತ್ತು ಕಲ್ಯಾಣಗಳಿಂದ ಕೂಡಿ ಜನ್ಮವನ್ನು ಪಡೆಯುತ್ತಾರೆ. ರೂಪ, ದ್ರವ್ಯ, ಬಲ, ಆಯುಸ್ಸು, ಭೋಗೈಶ್ವರ್ಯಗಳು, ಕುಲ, ವಿದ್ಯೆ, ಸರ್ವಸಾದ್ಗುಣ್ಯ- ಎಲ್ಲವೂ ದಾನದಿಂದಲೇ ಆಗುತ್ತವೆ. ಎಲೌ ಶುಭಾನನೆಯೇ, ತಪಸ್ಸು ಮತ್ತು ದಾನಗಳಿಂದ ಎಲ್ಲ ಫಲಗಳನ್ನು ಪಡೆಯಬಹುದೆಂದು ತಿಳಿ.
ಉಮಾ
ಅಥ ಕೇಚಿತ್ಪ್ರದೃಶ್ಯಂತೇ ಮಾನುಷೇಷ್ವೇವ ಮಾನುಷಾಃ |
ದುರ್ಗತಾಃ ಕ್ಲೇಶಭೂಯಿಷ್ಠಾ ದಾನಭೋಗವಿವರ್ಜಿತಾಃ ॥29॥
ಭಯೈಸ್ತ್ರಿಭಿಃ ಸಮಾಜುಷ್ಟಾ ವ್ಯಾಧಿಕ್ಷುದ್ಭಯಪೀಡಿತಾಃ |
ದುಷ್ಕಳತ್ರಾಭಿಭೂತಾಶ್ಚ ಸತತಂ ವಿಘ್ನದರ್ಶಕಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥30॥
ಉಮಾ ಇನ್ನು ಮನುಷ್ಯರಲ್ಲೇ ಕೆಲವರು ಬಹಳ ಕಷ್ಟವನ್ನು ಅನುಭವಿಸುತ್ತಾ, ದಾನ-ಭೋಗ ವರ್ಜಿತರಾಗಿ, ದುಃಸ್ಥಿತಿಯಲ್ಲಿದ್ದು ಆಧ್ಯಾತ್ಮಿಕಾದಿ ಮೂರು ಭಯಗಳಿಂದ ಕೂಡಿ, ವ್ಯಾಧಿಗಳಿಂದಲೂ, ಹಸಿವು ಮತ್ತು ಭಯಗಳಿಂದಲೂ ಪೀಡಿತರಾಗಿ ದುಷ್ಟ ಪತ್ನಿಯಿಂದ ಅವಮಾನಿತರಾಗಿ ಪ್ರತಿಯೊಂದು ಕೆಲಸದಲ್ಲಿಯೂ ಯಾವಾಗಲೂ ವಿಘ್ನವನ್ನೇ ಹೊಂದುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಆಸುರಂ ಭಾವಮಾಶ್ರಿತಾಃ |
ಕ್ರೋಧಲೋಭರತಾ ನಿತ್ಯಂ ನಿರನ್ನಾದ್ಯಾಶ್ಚ ನಿಷ್ಕ್ರಿಯಾಃ ॥31॥
ನಾಸ್ತಿಕಾಶ್ಚೈವ ಧೂರ್ತಾಶ್ಚ ಮೂರ್ಖಾಶ್ಚಾತ್ಮಪರಾಯಣಾಃ |
ಪರೋಪತಾಪಿನೋ ದೇವಿ ಪ್ರಾಯಶಃ ಪ್ರಾಣಿನಿರ್ದಯಾಃ ॥32॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಕಥಂಚಿತ್ಪ್ರಾಪ್ಯ ಮಾನುಷ್ಯಂ ತತ್ರ ತೇ ದುಃಖಪೀಡಿತಾಃ ॥33॥
ಮಹೇಶ್ವರ ದೇವಿಯೇ, ಯಾವ ಮನುಷ್ಯರು ಹಿಂದೆ ಅಸುರಸ್ವಭಾವವನ್ನು ಹೊಂದಿ, ಕ್ರೋಧ-ಲೋಭದಲ್ಲಿ ರತರಾಗಿ, ಯಾರಿಗೂ ಅನ್ನದಾನವನ್ನು ಮಾಡದೆ, ಸತ್ಕರ್ಮಗಳನ್ನು ಮಾಡದೆ, ನಾಸ್ತಿಕರಾಗಿ ಧೂರ್ತರಾಗಿ, ಸ್ವಾರ್ಥಿಗಳಾಗಿ, ಮೂರ್ಖರಾಗಿ, ಪರೋಪದ್ರವವನ್ನು ಮಾಡುವವರಾಗಿ, ಹೆಚ್ಚಾಗಿ ಪ್ರಾಣಿದಯಾ ಶೂನ್ಯರಾಗಿ - ಇಂತಹ ದುರಾಚಾರಗಳಿಂದ ಕೂಡಿರುತ್ತಾರೆಯೋ ಎಲೌ ಶೋಭನೆಯೇ, ಅವರು ಇನ್ನೊಂದು ಜನ್ಮದಲ್ಲಿ ಬಹಳ ಕಷ್ಟದಿಂದ ಮಾನುಷ್ಯವನ್ನು ಪಡೆದು ಅಲ್ಲಿ ದುಃಖಪೀಡಿತರಾಗುತ್ತಾರೆ.
ಸರ್ವತಃ ಸಂಭವಂತ್ಯೇವ ಪೂರ್ವಮಾತ್ಮಪ್ರಮಾದತಃ |
ಯಥಾ ತೇ ಪೂರ್ವಕಥಿತಂ ತಯಾ ತೇ ಸಂಭವಂತ್ಯುತ ॥34॥
ಪ್ರಮಾದದಿಂದ ಮಾಡಿದ ಎಲ್ಲವೂ ನಾನು ಹಿಂದೆ ಹೇಳಿದಂತೆ ಅವುಗಳ ಫಲವನ್ನು ಕೊಟ್ಟೇ ಕೊಡುತ್ತವೆ.
ಶುಭಾಶುಭಂ ಕೃತಂ ಕರ್ಮ ಸುಖದುಃಖಫಲೋದಯಮ್ |
ಇತಿ ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ॥35॥
ಶುಭವಾದ ಕರ್ಮವು ಸುಖವನ್ನೂ, ಅಶುಭವಾದ ಕರ್ಮವು ದುಃಖರೂಪವಾದ ಫಲವನ್ನೂ ಕೊಟ್ಟೇ ಕೊಡುತ್ತದೆ. ಎಲೌ ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಮಾನುಷವೈಚಿತ್ರ್ಯಕಥನಂ ನಾಮ
ತ್ರ್ಯಧಿಕದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಾಲ್ಕನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಮನುಷ್ಯರ ರೋಗಗಳಿಗೆ ನಿಮಿತ್ತಕಥನ.
ಉಮಾ
ಭಗವನ್ ದೇವದೇವೇಶ ಮಮ ಪ್ರೀತಿವಿವರ್ಧನ |
ಜಾತ್ಯಂಧಾಶ್ಚೈವ ದೃಶ್ಯಂತೇ ಜಾತಾ ವಾ ನಷ್ಟಚಕ್ಷುಷಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥1॥
ಉಮಾ ಭಗವಂತನೇ, ದೇವದೇವೇಶನೇ, ನನ್ನ ಸಂತೋಷವನ್ನು ಹೆಚ್ಚಿಸುವವನೇ, ಮನುಷ್ಯರಲ್ಲಿ ಕೆಲವರು ಹುಟ್ಟುಕುರುಡರೂ, ಇನ್ನು ಕೆಲವರು ಹುಟ್ಟಿದ ನಂತರ ಕುರುಡರೂ ಕಂಡುಬರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.

ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ॥2॥
ಮಹೇಶ್ವರ ಸಂತೋಷ. ಕಲ್ಯಾಣಿಯೇ, ನಾನು ಅದರ ಕಾರಣವನ್ನು ಹೇಳುವೆನು, ಕೇಳು.
ಯೇ ಪುರಾ ಕಾಮಕಾರೇಣ ಪರವೇಶ್ಮಸು ಲೋಲುಪಾಃ |
ಪರಸ್ತ್ರಿಯೋಽಭಿವೀಕ್ಷಂತೇ ದುಷ್ಟೇನೈವ ಸ್ವಚಕ್ಷುಷಾ ॥3॥
ಅಂಧೀಕುರ್ವಂತಿ ಯನ್ಮರ್ತ್ಯಾನ್ ಕ್ರೋಧಲೋಭಸಮನ್ವಿತಾಃ |
ಲಕ್ಷಣಜ್ಞಾಶ್ಚ ರೂಪೇಷು ಅಯಥಾವತ್ ಪ್ರದರ್ಶಕಾಃ ॥4॥
ಏವಂಯುಕ್ತಸಮಾಚಾರಾಃ ಕಾಲಧರ್ಮಗತಾಸ್ತು ತೇ |
ದಂಡಿತಾ ಯಮದಂಡೇನ ನಿರಯಸ್ಥಾಶ್ಚಿರಂ ಪ್ರಿಯೇ ॥5॥
ಯದಿ ಚೇನ್ಮಾನುಷಂ ಜನ್ಮ ಲಭೇರನ್ ತೇ ತಥಾಪಿ ವಾ |
ಸ್ವಭಾವತೋ ವಾ ಜಾತಾ ವಾ ಅಂಧಾ ಏವ ಭವಂತಿ ತೇ |
ಅಕ್ಷಿರೋಗಯುತಾ ವಾಽಪಿ ನಾಸ್ತಿ ತತ್ರ ವಿಚಾರಣಾ ॥6॥
ಯಾರು ಹಿಂದೆ ಕಾಮಲೋಲುಪರಾಗಿ ಪರಗೃಹಗಳಲ್ಲಿ ದುಷ್ಟದೃಷ್ಟಿಯಿಂದ ಸ್ತ್ರೀಯರನ್ನು ನೋಡುತ್ತಾರೆಯೋ, ಕ್ರೋಧ-ಲೋಭಯುಕ್ತರಾಗಿ ಮನುಷ್ಯರನ್ನು ಕುರುಡರನ್ನಾಗಿ ಮಾಡುತ್ತಾರೆಯೋ, ಲಕ್ಷಣಗಳನ್ನು ತಿಳಿದರೂ ಅವುಗಳನ್ನು ವಿಪರೀತವಾಗಿ ತೋರಿಸುತ್ತಾರೆಯೋ ಅಂತಹ ಆಚಾರವುಳ್ಳವರು ಮರಣವನ್ನು ಹೊಂದಿ ನರಕದಲ್ಲಿ ಬಹುಕಾಲ ಯಮದೇವರಿಂದ ಶಿಕ್ಷೆಯನ್ನು ಪಡೆಯುತ್ತಾರೆ. ಎಲೌ ಪ್ರಿಯೆಯೇ, ಅವರಿಗೆ ಪುನಃ ಮನುಷ್ಯ ಜನ್ಮ ಬಂದರೂ ಅವರು ಹುಟ್ಟುಕುರುಡರಾಗಿ ಅಥವಾ ಹುಟ್ಟಿದ ಮೇಲೆ ಕುರುಡರಾಗಿ ಅಥವಾ ನೇತ್ರರೋಗಿಗಳಾಗಿ ಜನಿಸುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಉಮಾ
ಮುಖರೋಗಯುತಾಃ ಕೇಚಿದ್ ದೃಶ್ಯಂತೇ ಸತತಂ ನರಾಃ |
ದಂತಕಂಠಕಪೋಲಸ್ಥೈರ್ವ್ಯಾಧಿಭಿರ್ಬಹುಪೀಡಿತಾಃ ॥7॥
ಆದಿಪ್ರಭೃತಿ ಮರ್ತ್ಯಾ ವಾ ಜಾತಾ ವಾಽಪ್ಯಥ ಕಾರಣಾತ್ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥8॥
ಉಮಾ ಕೆಲವು ಮನುಷ್ಯರು ಮುಖರೋಗದಿಂದಲೂ, ದಂತ-ಕಂಠ- ಕಪಾಲಗಳ ರೋಗದಿಂದಲೂ ಬಹಳವಾಗಿ ಪೀಡಿಸಲ್ಪಡುತ್ತಾರೆ. ಕೆಲವರು ಹುಟ್ಟಿದಾಗಿನಿಂದಲೂ, ಇನ್ನು ಕೆಲವರು ಹುಟ್ಟಿದ ನಂತರವೂ ಇಂತಹ ರೋಗಗಳಿಂದ ಪೀಡಿಸಲ್ಪಡುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ದೇವಿ ಸಮಾಹಿತಾ ॥9॥
ಮಹೇಶ್ವರ ದೇವಿಯೇ, ಸಂತೋಷ. ಹೇಳುವೆನು ಸಮಾಧಾನದಿಂದ ಕೇಳು.
ಕುವಕ್ತಾರಸ್ತು ಯೇ ದೇವಿ ಜಿಹ್ವಯಾ ಕಟುಕಂ ಭೃಶಮ್ |
ಅಸತ್ಯಂ ಪರುಷಂ ಘೋರಂ ಗುರೂನ್ ಪ್ರತಿ ಪರಾನ್ ಪ್ರತಿ ॥10॥
ಜಿಹ್ವಾಬಾಧಾಂ ತದಾಽನ್ಯೇಷಾಂ ಕುರ್ವತೇ ಕೋಪಕಾರಣಾತ್ |
ಪ್ರಾಯಶೋಽನೃತಭೂಯಿಷ್ಠಾ ನರಾಃ ಕಾರ್ಯವಶೇನ ವಾ |
ತೇಷಾಂ ಜಿಹ್ವಾಪ್ರದೇಶಸ್ಥಾ ವ್ಯಾಧಯಃ ಸಂಭವಂತಿ ತೇ ॥11॥
ಯಾರು ಹಿಂದೆ ಕೆಟ್ಟ ಮಾತುಗಳನ್ನು ಆಡಿರುತ್ತಾರೆಯೋ, ಗುರುಗಳನ್ನು ಮತ್ತು ಪರರನ್ನು ಕುರಿತು ಅಸತ್ಯವೂ, ಕ್ರೂರವೂ, ಘೋರವೂ, ತೀಕ್ಷ್ಣವೂ ಆದ ಮಾತುಗಳನ್ನು ಆಡಿರುತ್ತಾರೆಯೋ, ತಮ್ಮ ಕೋಪದಿಂದ ಇನ್ನೊಬ್ಬರ ನಾಲಿಗೆಗೆ ಬಾಧೆಯನ್ನು ಉಂಟುಮಾಡಿರುತ್ತಾರೆಯೋ ಅಂತಹ ಹೆಚ್ಚಾಗಿ ಸ್ವತಃ ಸುಳ್ಳನ್ನು ಮಾತನಾಡುವ ಅಥವಾ ಕಾರ್ಯವಶದಿಂದ ಸುಳ್ಳನ್ನು ಮಾತನಾಡುವ ಜನರು ನಾಲಿಗೆಯ ರೋಗಗಳನ್ನು ಹೊಂದುತ್ತಾರೆ.
ಕುಶ್ರೋತಾರಸ್ತು ಯೇ ಚಾರ್ಯಾನ್ ಪರೇಷಾಂ ಕರ್ಣನಾಶಕಾಃ |
ಕರ್ಣರೋಗಾನ್ ಬಹುವಿಧಾಲ್ಲಭಂತೇ ತೇ ಪುನರ್ಭವೇ ॥12॥
ದಂತರೋಗಶಿರೋರೋಗಕರ್ಣರೋಗಾಸ್ತಥೈವ ಚ |
ಅನ್ಯೇ ದುಃಖಾಶ್ರಿತಾ ದೋಷಾಃ ಸರ್ವೇ ಚಾತ್ಮಕೃತಂ ಫಲಮ್ ॥13॥
ಯಾರು ಹಿರಿಯರ ಮಾತನ್ನು ಕೇಳುವುದಿಲ್ಲವೋ, ಇನ್ನೊಬ್ಬರ ಶ್ರೋತ್ರವನ್ನು ನಾಶ ಮಾಡುತ್ತಾರೆಯೋ ಅಂತಹವರು ಮುಂದಿನ ಜನ್ಮದಲ್ಲಿ ಬಹುವಿಧವಾದ ಕಿವಿಯ ರೋಗವನ್ನು ಹೊಂದುತ್ತಾರೆ. ದಂತರೋಗ, ಶಿರೋರೋಗ, ಕರ್ಣರೋಗ, ದುಃಖವನ್ನು ಕೊಡುವ ಉಳಿದ ರೋಗಗಳು ಎಲ್ಲವೂ ತಾನು ಮಾಡಿದ ಕರ್ಮದ ಫಲವಾಗಿದೆ.
ಉಮಾ
ಪೀಡ್ಯಂತೇ ಸತತಂ ದೇವ ಮಾನುಷೇಷ್ವೇವ ಕೇಚನ |
ಕುಕ್ಷಿಪಕ್ವಾಶ್ರಿತೈರ್ದೋಷೈರ್ವ್ಯಾಧಿಭಿಶ್ಚೋದರಾಶ್ರಿತೈಃ ॥14॥
ತೀಕ್ಷ್ಣಶೂಲೈಶ್ಚ ಪೀಡ್ಯಂತೇ ನರಾ ದುಃಖಪರಿಪ್ಲುತಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥15॥
ಉಮಾ ಎಲೈ ದೇವನೇ, ಕೆಲವು ಮನುಷ್ಯರು ಹೊಟ್ಟೆಯ ನೋವಿನಿಂದ, ಪಕ್ಕೆಯ ನೋವಿನಿಂದ ಮತ್ತು ಹೊಟ್ಟೆಗೆ ಸಂಬಂಧಪಟ್ಟ

ರೋಗಗಳಿಂದ ಪೀಡಿಸಲ್ಪಡುತ್ತಾರೆ. ತೀವ್ರವಾದ ವೇದನೆಯನ್ನು ಕೊಡುವ ಆ ರೋಗಗಳಿಂದ ದುಃಖದಿಂದ ಪೂರ್ಣರಾಗಿ ಪೀಡಿಸಲ್ಪಡುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.

ಮಹೇಶ್ವರಃ

ಯೇ ಪುರಾ ಮನುಜಾ ದೇವಿ ಕಾಮಕ್ರೋಧವಶಾ ಭೃಶಮ್ |
ಆತ್ಮಾರ್ಥಮೇವ ಚಾಹಾರಂ ಭುಂಜಂತೇ ನಿರಪೇಕ್ಷಕಾಃ ॥16॥
ಅಭಕ್ಷ್ಯಾಹಾರದಾಶ್ಚೈವ ವಿಶ್ವಸ್ತಾನಾಂ ವಿಷಪ್ರದಾಃ |
ಅಭಕ್ಷ್ಯಭಕ್ಷದಾಶ್ಚೈವ ಶೌಚಮಂಗಲವರ್ಜಿತಾಃ ॥17॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಕಥಂಚಿತ್ ಪ್ರಾಪ್ಯ ಮಾನುಷ್ಯಂ ತತ್ರ ತೇ ವ್ಯಾಧಿಪೀಡಿತಾಃ ॥18॥
ತೈಸ್ತೈರ್ಬಹುವಿಧಾಕಾರೈರ್ವ್ಯಾಧಿಭಿರ್ದುಃಖಸಂಶ್ರಿತಾಃ |
ಭವಂತ್ಯೇವಂ ತಥಾ ದೇವಿ ಯಥಾ ಯೇನ ಕೃತಂ ಪುರಾ ॥19॥

ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಕಾಮ-ಕ್ರೋಧ ವಶರಾಗಿ ಇನ್ನೊಬ್ಬರನ್ನು ಅಪೇಕ್ಷಿಸದೆ ತಾವೊಬ್ಬರೇ ಆಹಾರವನ್ನು ಸ್ವೀಕರಿಸುತ್ತಾರೆಯೋ ವಿಶ್ವಾಸ ಪಾತ್ರರಿಗೆ ಅಭಕ್ಷ್ಯವಾದ ಆಹಾರವನ್ನು ಅಥವಾ ವಿಷವನ್ನು ಕೊಡುತ್ತಾರೆಯೋ, ಶೌಚಾಚಾರ ವರ್ಜಿತರಾಗಿ ಅಭಕ್ಷ್ಯವಾದ ಭಕ್ಷವನ್ನು ಕೊಡುತ್ತಾರೆಯೋ, ಎಲೌ ಶೋಭನೆಯೇ, ಅಂತಹವರು ಮುಂದೆ ಹೇಗೋ ಮನುಷ್ಯಯೋನಿಯಲ್ಲಿ ಜನಿಸಿ ಅಂತಹ ಬಹುವಿಧವಾದ ವ್ಯಾಧಿಗಳಿಂದ ಪೀಡಿಸಲ್ಪಟ್ಟು, ಬಹಳ ದುಃಖವನ್ನು ಅನುಭವಿಸುತ್ತಾರೆ. ದೇವಿಯೇ, ಅವರು ಹಿಂದೆ ಇನ್ನೊಬ್ಬರಿಗೆ ಹೇಗೆ ಮಾಡಿದ್ದರೋ ಅದರಂತೆ ಅವರಿಗೂ ಆಗುತ್ತದೆ.

ಉಮಾ

ದೃಶ್ಯಂತೇ ಸತತಂ ದೇವ ವ್ಯಾಧಿಭಿರ್ಮೇಹನಾಶ್ರಿತೈಃ |
ಪೀಡ್ಯಮಾನಾಸ್ತಥಾ ಮರ್ತ್ಯಾ ಅಶ್ಮರೀಶರ್ಕರಾದಿಭಿಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥20॥

ಉಮಾ ದೇವನೇ, ಕೆಲವು ಮನುಷ್ಯರು ಮೂತ್ರಾಂಗ ಸಂಬಂಧವಾದ ಅಶ್ಮರೀ (ಮೂತ್ರಕೋಶದ ಕಲ್ಲುಗಳು), ಶರ್ಕರಾ (ಮೂತ್ರಪಿಂಡದ ಕಲ್ಲುಗಳು) ಈ ರೋಗಗಳಿಂದ ಪೀಡಿಸಲ್ಪಡುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.

ಮಹೇಶ್ವರಃ

ಯೇ ಪುರಾ ಮನುಜಾ ದೇವಿ ಪರದಾರಪ್ರಧರ್ಷಕಾಃ |
ತಿರ್ಯಗ್ಯೋನಿಷು ಧೂರ್ತಾ ವೈ ಮೈಥುನಾರ್ಥಂ ಚರಂತಿ ಚ ॥21॥
ಕಾಮದೋಷೇಣ ಯೇ ಧೂರ್ತಾಃ ಕನ್ಯಾಸು ವಿಧವಾಸು ಚ |
ಬಲಾತ್ಕಾರೇಣ ಗಚ್ಛಂತಿ ರೂಪದರ್ಪಸಮನ್ವಿತಾಃ ॥22॥
ತಾದೃಶಾ ಮರಣಂ ಪ್ರಾಪ್ತಾಃ ಪುನರ್ಜನ್ಮನಿ ಶೋಭನೇ |
ಯದಿ ಚೇನ್ಮಾನುಷಂ ಜನ್ಮ ಲಭೇರಂಸ್ತೇ ತಥಾವಿಧಾಃ |
ತತ್ರ ಮೇಹನಜೈರ್ಘೋರೈಃ ಪೀಡ್ಯಂತೇ ವ್ಯಾಧಿಭಿಃ ಪ್ರಿಯೇ ॥23॥

ಮಹೇಶ್ವರ ದೇವಿಯೇ, ಯಾವ ಮನುಷ್ಯರು ಹಿಂದೆ ಪರಸ್ತ್ರೀಯರನ್ನು ಬಲಾತ್ಕಾರ ಮಾಡಿರುತ್ತಾರೆಯೋ, ಯಾವ ಧೂರ್ತರು ಹಿಂದೆ ಪ್ರಾಣಿಗಳ ಜೊತೆಯಲ್ಲಿ ಮೈಥುನವನ್ನು ಮಾಡಿರುತ್ತಾರೆಯೋ ಅಥವಾ ಧೂರ್ತರಾಗಿ ಕಾಮದೋಷದಿಂದ, ಬಲಾತ್ಕಾರದಿಂದ ಅಥವಾ ರೂಪದರ್ಪಸಮನ್ವಿತರಾಗಿ ಕನ್ಯೆಯರ ಮತ್ತು ವಿಧವೆಯರ ಸಂಗವನ್ನು ಮಾಡಿರುತ್ತಾರೆಯೋ ಅಂತಹವರು ಮರಣವನ್ನು ಹೊಂದಿ ಇನ್ನೊಂದು ಜನ್ಮದಲ್ಲಿ ಮಾನುಷ ಯೋನಿಯನ್ನು ಪಡೆದರೆ ಅಂತಹ ವಿಧವಾದ ಮೂತ್ರಾಂಗಗಳಿಗೆ ಸಂಬಂಧಿಸಿದ ಘೋರವಾದ ರೋಗಗಳಿಂದ ಪೀಡಿಸಲ್ಪಡುತ್ತಾರೆ.

ಉಮಾ

ಭಗವನ್ಮಾನುಷಾಃ ಕೇಚಿದ್ ದೃಶ್ಯಂತೇ ಶೋಷಿಣಃ ಕೃಶಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥24॥

ಉಮಾ ಭಗವಂತನೇ, ಕೆಲವು ಮನುಷ್ಯರು ದೇಹವು ಒಣಗಿ ಹೋಗಿ ಕೃಶರಾಗಿ ಕಾಣುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.

ಮಹೇಶ್ವರಃ

ಯೇ ಪುರಾ ಮನುಜಾ ದೇವಿ ಮಾಂಸಲುಬ್ಧಾಃ ಸುಲೋಲುಪಾಃ |
ಆತ್ಮಾರ್ಥೇ ಸ್ವಾದುಗೃಧ್ನಾಶ್ಚ ಪರಭೋಗೋಪತಾಪಿನಃ ॥25॥
ಅಭ್ಯಸೂಯಾಶ್ಚೋಪತಾಪಾಃ ಪರಭೋಗೇಷು ಯೇ ನರಾಃ |
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ ॥26॥
ಶೋಷವ್ಯಾಧಿಯುತಾಸ್ತತ್ರ ನರಾ ಧಮನಿಸಂತತಾಃ |
ಭವಂತ್ಯೇವ ನರಾ ದೇವಿ ಪಾಪಕರ್ಮೋಪಭೋಗಿನಃ ॥27॥

ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಮಾಂಸದಲ್ಲಿ ಬಹಳ ಆಸೆಯುಳ್ಳವರಾಗಿರುತ್ತಾರೆಯೋ, ಇನ್ನೊಬ್ಬರ ಭೋಗವನ್ನು ನಿಷೇಧಿಸಿ ತಾವೇ ಸ್ವಾದುಪದಾರ್ಥಗಳನ್ನು ಭುಂಜಿಸುತ್ತಾರೆಯೋ, ಪರಭೋಗಗಳನ್ನು ನೋಡಿ ಯಾರು ಅಸೂಯೆಯನ್ನು ಪಡುತ್ತಾರೆಯೋ ಅಂತಹವರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ಈ ಶೋಷಣವ್ಯಾಧಿಯನ್ನು ಹೊಂದಿ

ನರಗಳು ಮತ್ತು ರಕ್ತನಾಳಗಳು ಎದ್ದು ಕಾಣುವಂತೆ ಇರುತ್ತಾರೆ. ಎಲೌ ದೇವಿಯೇ, ಮನುಷ್ಯರು ತಾವು ಮಾಡಿದ ಪಾಪ ಕರ್ಮದ ಫಲವನ್ನು ಭೋಗಿಸಿಯೇ ತೀರುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿತ್ ಕ್ಲಿಶ್ಯಂತೇ ಕುಷ್ಠರೋಗಿಣಃ|
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥28॥
ಉಮಾ ಭಗವಂತನೇ, ಕೆಲವು ಮನುಷ್ಯರು ಕುಷ್ಠರೋಗದಿಂದ ಕ್ಲೇಶ ಪಡುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಪರೇಷಾಂ ರೂಪನಾಶನಾಃ|
ಆಘಾತವಧಬಂಧೈಶ್ಚ ವೃಥಾದಂಡೇನ ಮೋಹಿತಾಃ ॥29॥
ಇಷ್ಟನಾಶಕರಾ ಯೇ ತು ಅಪಥ್ಯಾಹಾರದಾ ನರಾಃ|
ಚಿಕಿತ್ಸಕಾ ವಾ ದುಷ್ಟಾಶ್ಚ ದ್ವೇಷಲೋಭಸಮನ್ವಿತಾಃ ॥30॥
ನಿರ್ದಯಾಃ ಪ್ರಾಣಿಹಿಂಸಾಯಾಂ ಮಲದಾಶ್ಚಿತ್ತನಾಶನಾಃ|
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ ॥31॥
ಯದಿ ವೈ ಮಾನುಷಂ ಜನ್ಮ ಲಭೇರಂಸ್ತೇ ಸುದುಃಖಿತಾಃ|
ಅತ್ರ ತೇ ಕ್ಲೇಶಸಂಯುಕ್ತಾಃ ಕುಷ್ಠರೋಗಸಮನ್ವಿತಾಃ॥32॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಇನ್ನೊಬ್ಬರ ರೂಪವನ್ನು ನಾಶಮಾಡಿರುತ್ತಾರೆಯೋ, ಹೊಡೆಯುವುದರಿಂದ ಅಥವಾ ಕೊಲ್ಲುವುದರಿಂದ ಅಥವಾ ಬೆಂಕಿ ಹಾಕುವುದರಿಂದ ಅಥವಾ ವ್ಯರ್ಥವಾದ ಶಿಕ್ಷೆಯನ್ನು ಕೊಡುವುದರಿಂದ ಇನ್ನೊಬ್ಬರ ಇಷ್ಟಗಳನ್ನು ನಾಶ ಮಾಡಿರುತ್ತಾರೆಯೋ, ಯಾರು ಇನ್ನೊಬ್ಬರಿಗೆ ಅಪಥ್ಯವಾದ ಆಹಾರವನ್ನು ಕೊಟ್ಟಿರುತ್ತಾರೆಯೋ ಅಥವಾ ದ್ವೇಷ- ಲೋಭಗಳಿಂದ ಕೂಡಿ, ದುಷ್ಟರಾದ ವೈದ್ಯರಾಗಿರುತ್ತಾರೆಯೋ, ಪ್ರಾಣಿಹಿಂಸೆಯ ವಿಷಯದಲ್ಲಿ ದಯಾರಹಿತರಾಗಿರುತ್ತಾರೆಯೋ, ಇನ್ನೊಬ್ಬರಿಗೆ ಕಶ್ಮಲಯುಕ್ತವಾದ ಆಹಾರವನ್ನು ಕೊಡುತ್ತಾರೆಯೋ ಅಂತಹವರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ಮನುಷ್ಯಜನ್ಮವನ್ನು ಪಡೆದರೆ ಬಹಳ ದುಃಖದಿಂದ ಕೂಡಿ ಕ್ಲೇಶದಿಂದ ಕೂಡಿ, ಕುಷ್ಠರೋಗವನ್ನು ಹೊಂದಿರುತ್ತಾರೆ.
ಕೇಚಿತ್ತ್ವಗ್ದೋಷಸಂಯುಕ್ತಾ ವ್ರಣಕುಷ್ಠೈಶ್ಚ ಸಂಯುತಾಃ|
ಶ್ವಿತ್ರಕುಷ್ಠಯುತಾ ವಾಽಪಿ ಬಹುಧಾ ಕುಷ್ಠಸಂಯುತಾಃ|
ಭವಂತ್ಯೇವ ನರಾ ದೇವಿ ಯಥಾ ತೇನ ಕೃತಂ ಫಲಮ್ ॥33॥
ಕೆಲವರಿಗೆ ಕೇವಲ ತ್ವಗ್ದೋಷವಿರುತ್ತದೆ. ಕೆಲವರಿಗೆ ವ್ರಣವಿರುವ ಕುಷ್ಠರೋಗವಿರುತ್ತದೆ. ಕೆಲವರಿಗೆ ಶ್ವಿತ್ರಕುಷ್ಠವಿರುತ್ತದೆ. ಎಲೌ ದೇವಿಯೇ, ಹೀಗೆ ಅನೇಕ ವಿಧವಾದ ಕುಷ್ಠರೋಗಗಳನ್ನು ತಾವು ಹಿಂದೆ ಮಾಡಿದುದರ ಫಲವಾಗಿ ಅನುಭವಿಸುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿದಂಗಹೀನಾಶ್ಚ ಪಂಗವಃ|
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥34॥
ಉಮಾ ಭಗವಂತನೇ, ಕೆಲವು ಮನುಷ್ಯರು ಕುಂಟರಾಗಿ ವಿಕಲಾಂಗರಾಗಿರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಲೋಭಮೋಹಸಮಾವೃತಾಃ|
ಪ್ರಾಣಿನಾಂ ಪ್ರಾಣಹಿಂಸಾರ್ಥಮಂಗವಿಘ್ನಂ ಪ್ರಕುರ್ವತೇ|
ಶಸ್ತ್ರೇಣೋತ್ಕೃತ್ಯ ವಾ ದೇವಿ ಪ್ರಾಣಿನಾಂ ಚೇಷ್ಟನಾಶಕಾಃ ॥35॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ|
ತದಂಗಹೀನಾ ವೈ ಪ್ರೇತ್ಯ ಭವಂತ್ಯೇವ ನ ಸಂಶಯಃ|
ಸ್ವಭಾವತೋ ವಾ ಜಾತಾ ವಾ ಪಂಗವಶ್ಚ ಭವಂತಿ ತೇ ॥36॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಲೋಭ-ಮೋಹ ಯುಕ್ತರಾಗಿ ಪ್ರಾಣಿಗಳಿಗೆ ಹಿಂಸೆಯನ್ನು ಮಾಡಿ, ಪ್ರಾಣಿಗಳ ಅಂಗಗಳಿಗೆ ಶಸ್ತ್ರದಿಂದ ಹೊಡೆದಾಗಲೀ ಅಥವಾ ಕತ್ತರಿಸುವುದರಿಂದಾಗಲೀ ಹಿಂಸೆಯನ್ನು ಮಾಡಿರುತ್ತಾರೆಯೋ, ಪ್ರಾಣಿಗಳ ಇಷ್ಟವನ್ನು ನಾಶ ಮಾಡಿರುತ್ತಾರೆಯೋ ಅಂತಹವರು ಎಲೌ ಶೋಭನೆಯೇ, ಕೆಲವರು ಹುಟ್ಟಿದಾಗಲೇ ಆಯಾ ಅಂಗಗಳಿಂದ ಹೀನರಾಗಿ ಜನಿಸುತ್ತಾರೆ. ಇನ್ನು ಕೆಲವರು ಹುಟ್ಟಿದ ಅನಂತರದಲ್ಲಿ ಅಂತಹ ಅಂಗಹೀನರೂ, ಕುಂಟರೂ ಆಗುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿದ್ಗ್ರಂಥಿಭಿಃ ಪಿಟಕೈಸ್ತಥಾ|
ಕ್ಲಿಶ್ಯಮಾನಾಃ ಪ್ರದೃಶ್ಯಂತೇ ತನ್ಮೇ ಶಂಸಿತುಮರ್ಹಸಿ ॥37॥
ಉಮಾ ಭಗವಂತನೇ, ಕೆಲವು ಮನುಷ್ಯರು ಗಂಟುರೋಗದಿಂದಲೂ, ಕಜ್ಜಿ- ಕುರುಗಳಿಂದಲೂ ಕ್ಲೇಶಪಡುವುದು ಕಂಡುಬರುತ್ತದೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ಹೇಳಬೇಕು.
ಮಹೇಶ್ವರಃ

ಯೇ ಪುರಾ ಮನುಜಾ ದೇವಿ ಗ್ರಂಥಿಭೇದಕರಾ ನೃಣಾಮ್ |
ಮುಷ್ಟಿಪ್ರಹಾರಪರುಷಾ ನೃಶಂಸಾಃ ಪಾಪಕಾರಿಣಃ |
ಪಾಟಕಾಸ್ತೋದಕಾಶ್ಚೈವ ಶೂಲತುನ್ನಾಸ್ತಥೈವ ಚ ॥38॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಗ್ರಂಥಿಭಿಃ ಪಿಟಕೈಶ್ಚೈವ ಕ್ಲಿಶ್ಯಂತೇ ಭೃಶದುಃಖಿತಾಃ ॥39॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಮನುಷ್ಯರಿಗೆ ಮುಷ್ಟಿಯಿಂದ ಪ್ರಹಾರವನ್ನು ಮಾಡಿ ಒರಟಾಗಿ, ಕ್ರೂರವಾಗಿ ಪಾಪಕರ್ಮವನ್ನು ಎಸಗಿರುತ್ತಾರೆಯೋ ಅಂತಹ ಅಂಗಗಳನ್ನು ಸೀಳುವ ಅಥವಾ ಶೂಲಾದಿಗಳಿಂದ ಚುಚ್ಚುವ ಮನುಷ್ಯರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ಗಂಟು ರೋಗದಿಂದಲೂ, ಕಜ್ಜಿ-ಕುರುಗಳಿಂದಲೂ ಬಹಳ ದುಃಖವನ್ನು ಹೊಂದಿ ಕ್ಲೇಶ ಪಡುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿತ್ಪಾದರೋಗಸಮನ್ವಿತಾಃ |
ದೃಶ್ಯಂತೇ ಸತತಂ ದೇವ ತನ್ಮೇ ಶಂಸಿತುಮರ್ಹಸಿ ॥40॥
ಉಮಾ ಭಗವಂತನೇ, ಕೆಲವು ಮನುಷ್ಯರು ಪಾದರೋಗದಿಂದ ಕೂಡಿರುವುದು ಸತತವಾಗಿ ಕಂಡುಬರುತ್ತದೆ. ಎಲೈ ದೇವನೇ, ಅದನ್ನು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಕ್ರೋಧಲೋಭಸಮನ್ವಿತಾಃ |
ಮನುಜಾ ದೇವತಾಸ್ಥಾನಂ ಸ್ವಪಾದೈಃ ಸಂಸ್ಪೃಶಂತ್ಯುತ |
ಜಾನುಭಿಃ ಪಾರ್ಷ್ಣಿಭಿಶ್ಚೈವ ಪ್ರಾಣಿಹಿಂಸಾಂ ಪ್ರಕುರ್ವತೇ ॥41॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಪಾದರೋಗೈರ್ಬಹುವಿಧೈರ್ಬಾಧ್ಯಂತೇ ಶ್ಲೀಪದಾದಿಭಿಃ ॥42॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಕ್ರೋಧ-ಲೋಭ ಸಮನ್ವಿತರಾಗಿ ದೇವತಾ ಸ್ಥಾನಗಳನ್ನು ತಮ್ಮ ಪಾದದಿಂದ ಸ್ಪರ್ಶ ಮಾಡಿರುತ್ತಾರೆಯೋ, ಪ್ರಾಣಿಗಳನ್ನು ಮಂಡಿಯಿಂದ ಅಥವಾ ಹಿಮ್ಮಡಿಯಿಂದ ಹಿಂಸಿಸಿರುತ್ತಾರೆಯೋ ಎಲೌ ಶೋಭನೆಯೇ, ಅಂತಹವರು ಇನ್ನೊಂದು ಜನ್ಮವನ್ನು ಪಡೆದು ಆನೆಕಾಲು ರೋಗ ಮೊದಲಾದ ಬಹುವಿಧವಾದ ಪಾದರೋಗಗಳಿಂದ ಬಾಧಿಸಲ್ಪಡುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿದ್ ದೃಶ್ಯಂತೇ ಬಹವೋ ಭುವಿ |
ವಾತಜೈಃ ಪಿತ್ತಜೈ ರೋಗೈರ್ಯುಗಪತ್ಸನ್ನಿಪಾತಕೈಃ ॥43॥
ರೋಗೈರ್ಬಹುವಿಧೈರ್ದೇವ ಕ್ಲಿಶ್ಯಮಾನಾಃ ಸುದುಃಖಿತಾಃ |
ಅಸಮಸ್ತೈಃ ಸಮಸ್ತೈಶ್ಚ ಆಢ್ಯಾ ವಾ ದುರ್ಗತಾಸ್ತಥಾ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥44॥
ಉಮಾ ಭಗವಂತನೇ, ಲೋಕದಲ್ಲಿ ಅನೇಕ ಜನರಿಗೆ ವಾತ-ಪಿತ್ತಗಳಿಂದ ಒಟ್ಟಿಗೆ ಉಂಟಾದ ಅನೇಕ ರೋಗಗಳು ಕಂಡುಬರುತ್ತವೆ. ಅನೇಕ ವಿಧವಾಗ ರೋಗಗಳಿಂದ ಪೀಡಿಸಲ್ಪಟ್ಟು ಅವರು ದುಃಖವನ್ನು ಹೊಂದುತ್ತಾರೆ. ಧನಾಢ್ಯರಾಗಲೀ ಅಥವಾ ದರಿದ್ರರಾಗಲೀ ಒಂದು ರೋಗದಿಂದ ಅಥವಾ ಅನೇಕ ರೋಗಗಳಿಂದ ಪೀಡಿಸಲ್ಪಡುವುದು ಕಂಡುಬರುತ್ತದೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ॥45॥
ಮಹೇಶ್ವರ ಎಲೌ ಕಲ್ಯಾಣಿಯೇ, ನಾನು ಕಾರಣವನ್ನು ಹೇಳುವೆನು, ಅದನ್ನು ಕೇಳು.
ಯೇ ಪುರಾ ಮನುಜಾ ದೇವಿ ಸ್ವಧರ್ಮನಿರತಾಃ ಸದಾ |
ಸ್ವವಶಾಃ ಕೋಪನಪರಾ ಗುರುವಿದ್ವೇಷಿಣಸ್ತಥಾ ॥46॥
ಪರೇಷಾಂ ದುಃಖಜನಕಾ ಮನೋವಾಕ್ಕಾಯಕರ್ಮಭಿಃ |
ಛಿಂದನ್ ಭಿಂದನ್ ತುದನ್ನೇವ ನಿತ್ಯಂ ಪ್ರಾಣಿಷು ನಿರ್ದಯಾಃ ॥47॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಯದಿ ವೈ ಮಾನುಷಂ ಜನ್ಮ ಲಭೇರಂಸ್ತೇ ತಥಾವಿಧಾಃ |
ತತ್ರ ತೇ ಬಹುಭಿರ್ಘೋರೈಸ್ತಪ್ಯಂತೇ ವ್ಯಾಧಿಭಿಃ ಪ್ರಿಯೇ ॥48॥
ಯಾವ ಮನುಷ್ಯರು ಹಿಂದೆ ಕೆಟ್ಟ ಅಧರ್ಮಗಳಲ್ಲಿಯೇ ನಿರತರಾಗಿ, ತಮಗೇ ತಮ್ಮ ಮೇಲೆ ನಿಯಂತ್ರಣವಿಲ್ಲದೆ ಕೋಪವನ್ನು ಹೊಂದಿ, ಗುರುದ್ವೇಷವನ್ನು ಮಾಡಿ ಮನೋವಾಕ್‌ಕಾಯ-ಕರ್ಮಗಳಿಂದ ಇನ್ನೊಬ್ಬರಿಗೆ ದುಃಖವನ್ನುಂಟು ಮಾಡಿರುತ್ತಾರೆಯೋ, ಕತ್ತರಿಸುತ್ತಾ, ಒಡೆಯುತ್ತಾ ಮತ್ತು ಚುಚ್ಚುತ್ತಾ ಪ್ರಾಣಿಗಳಲ್ಲಿ ನಿರ್ದಯರಾಗಿರುತ್ತಾರೆಯೋ, ಎಲೌ ಶೋಭನೆಯೇ, ಅವರು ಇನ್ನೊಂದು ಮನುಷ್ಯ ಜನ್ಮವನ್ನು ಪಡೆದರೆ ಅಲ್ಲಿ ಅನೇಕ ಘೋರವ್ಯಾಧಿಗಳಿಂದ ಪೀಡಿಸಲ್ಪಡುತ್ತಾರೆ.
ಕೇಚಿದ್ ದ್ವಿಪಾದಸಂಯುಕ್ತಾಃ ಕೇಚಿತ್ಕಾಸಸಮನ್ವಿತಾಃ |
ಜ್ವರಾತಿಸಾರತೃಷ್ಣಾಭಿಃ ಪೀಡ್ಯಮಾನಾಸ್ತಥಾ ಪರೇ ॥49॥

ವಾತಗುಲ್ಮೈಶ್ಚ ಬಹುಭಿಃ ಶ್ಲೇಷ್ಮದೋಷಸಮನ್ವಿತಾಃ |
ಪಾದರೋಗೈಶ್ಚ ವಿವಿಧೈರ್ವ್ರಣಕುಷ್ಠಭಗಂದರೈಃ |
ಆಢ್ಯಾ ವಾ ದುರ್ಗತಾ ವಾಽಪಿ ದೃಶ್ಯಂತೇ ವ್ಯಾಧಿಪೀಡಿತಾಃ ॥50॥
ಏವಮಾತ್ಮಕೃತಂ ಕರ್ಮ ಭುಂಜಂತೇ ತತ್ರತತ್ರ ವೈ |
ಗೂಹಿತುಂ ನ ಹಿ ಶಕ್ಯಂ ವೈ ಕೇನಚಿತ್ಸ್ವಕೃತಂ ಫಲಮ್ |
ಇತಿ ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥51॥
ಕೆಲವರು ಎರಡು ಪಾದಗಳಲ್ಲಿಯೂ ರೋಗವನ್ನೂ ಹೊಂದುತ್ತಾರೆ. ಕೆಲವರು ಕಾಸರೋಗವನ್ನು ಹೊಂದುತ್ತಾರೆ. ಜ್ವರ-ಅತಿಸಾರ ಮತ್ತು ಬಾಯಾರಿಕೆಯಿಂದ ಇನ್ನು ಕೆಲವರು ಪೀಡಿಸಲ್ಪಡುತ್ತಾರೆ. ವಾತ-ಪಿತ್ಥ-ಕಫ ದೋಷಗಳಿಂದ ಕೂಡಿರುತ್ತಾರೆ. ವಿವಿಧವಾದ ಪಾದರೋಗಗಳಿಂದಲೂ, ವಿವಿಧವಾದ ವ್ರಣ, ಕುಷ್ಠ, ಭಗಂದರ ರೋಗಗಳಿಂದಲೂ ಕೂಡಿರುತ್ತಾರೆ. ಅವರು ಧನಾಢ್ಯರಾಗಲೀ ಅಥವಾ ದರಿದ್ರರಾಗಲೀ ಇಂತಹ ರೋಗಗಳಿಂದ ಕೂಡಿರುವುದು ಕಂಡುಬರುತ್ತದೆ. ಹೀಗೆ ಮನುಷ್ಯರು ಅಲ್ಲಲ್ಲಿ ತಾವು ಮಾಡಿದ ಕರ್ಮದ ಫಲವನ್ನು ಭೋಗಿಸುತ್ತಾರೆ. ತಾವು ಮಾಡಿದ ಕರ್ಮದ ಫಲವನ್ನು ಮುಚ್ಚಿಡಲು ಯಾರಿಗೂ ಸಾಧ್ಯವಿಲ್ಲ. ಎಲೌ ದೇವಿಯೇ, ಇದನ್ನು ನಾನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಮಾನುಷಾಣಾಂ ವ್ಯಾಧಿನಿಮಿತ್ತಕಥನಂ ನಾಮ ಚತುರಧಿಕದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಐದನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಮನುಷ್ಯರೋಗಗಳಿಗೆ ನಿಮಿತ್ತಕಥನ
ಉಮಾ
ಭಗವನ್ ದೇವದೇವೇಶ ಭೂತಪಾಲ ನಮೋಸ್ತು ತೇ |
ಹ್ರಸ್ವಾಂಗಾಶ್ಚೈವ ವಕ್ರಾಂಗಾಃ ಕುಬ್ಜಾ ವಾಮನಕಾಸ್ತಥಾ ॥1॥
ಅಪರೇ ಮಾನುಷಾ ದೇವ ದೃಶ್ಯಂತೇ ಕುಣಿಬಾಹವಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥2॥
ಉಮಾ ಭಗವಂತನೇ, ದೇವದೇವೇಶನೇ, ಭೂತಪಾಲನೇ, ನಿನಗೆ ನಮಸ್ಕಾರ. ಕೆಲವು ಮನುಷ್ಯರು ಹ್ರಸ್ವವಾದ ಅವಯವವುಳ್ಳವರೂ, ಕೆಲವರು ವಕ್ರರೂ, ಕೆಲವರು ಕುಬ್ಜರೂ, ಕೆಲವರು ವಾಮನರೂ ಇನ್ನು ಕೆಲವರು ಹಸ್ತದೋಷವುಳ್ಳವರೂ (ಚೊತ್ತ ಕೈಯುಳ್ಳವರು) ಆಗಿ ಕಾಣುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಲೋಭಮೋಹಸಮನ್ವಿತಾಃ |
ಧಾನ್ಯಮಾನಾನ್ ವಿಕುರ್ವಂತಿ ಕ್ರಯವಿಕ್ರಯಕಾರಣಾತ್ ॥3॥
ತುಲಾದೋಷಂ ತದಾ ದೇವಿ ಧೃತಮಾನೇಷು ನಿತ್ಯಶಃ |
ಅರ್ಧಾಪಕರ್ಷಣಂ ಚೈವ ಸರ್ವೇಷಾಂ ಕ್ರಯವಿಕ್ರಯೇ ॥4॥
ಅಂಗದೋಷಕರಾ ಯೇ ತು ಪರೇಷಾಂ ಕೋಪಕಾರಣಾತ್ |
ಮಾಂಸಾದಾಶ್ಚೈವ ಯೇ ಮೂರ್ಖಾ ಅಯಥಾವದ್ ವೃಥಾಃ ಸದಾ ॥5॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ವಾಮನಾಶ್ಚೈವ ಹ್ರಸ್ವಾಂಗಾ ಕುಬ್ಜಾಶ್ಚೈವ ಭವಂತಿ ತೇ ॥6॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಲೋಭ- ಮೋಹದಿಂದ ಕೂಡಿದವರಾಗಿ ಕ್ರಯ-ವಿಕ್ರಯ ಸಮಯದಲ್ಲಿ ಅಳತೆಗಳನ್ನು ವ್ಯತ್ಯಾಸ ಮಾಡುತ್ತಾರೆಯೋ, ತಕ್ಕಡಿಯಲ್ಲಿ ತೂಗುವಾಗ ಮೋಸ ಮಾಡುತ್ತಾರೆಯೋ, ತೂಗಿದ ಮೇಲೆ ಸಾಮಾನುಗಳನ್ನು ಕೊಡುವಾಗ ಸ್ವಲ್ಪ ಭಾಗವನ್ನು ಕಡಿಮೆ ಮಾಡಿಕೊಡುತ್ತಾರೆಯೋ, ಯಾರು ಕೋಪದಿಂದ ಇನ್ನೊಬ್ಬರ ಅಂಗಗಳಿಗೆ ವೈಕಲ್ಯವನ್ನು ಉಂಟುಮಾಡಿರುತ್ತಾರೆಯೋ, ಯಾವ ಮೂರ್ಖರು ಶಾಸ್ತ್ರವಿರುದ್ಧವಾಗಿ ವ್ಯರ್ಥ ಮಾಂಸವನ್ನು ತಿನ್ನುತ್ತಾರೆಯೋ ಅಂತಹ ನಡತೆಯುಳ್ಳವರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ವಾಮನರೂ, ಹ್ರಸ್ವಾಂಗರೂ, ಕುಬ್ಜರೂ ಆಗುತ್ತಾರೆ (ಶರೀರದ ಎಲ್ಲಾ ಅವಯವಗಳು ಸಣ್ಣವಾಗಿರುವವರು ವಾಮನರು, ಹಸ್ತ-ಪಾದಗಳು ಮಾತ್ರ ಸಣ್ಣಗಿರುವವರು ಹ್ರಸ್ವಾಂಗರು, ವಕ್ರಶರೀರವುಳ್ಳವರು ಕುಬ್ಜರು- ಲಕ್ಷಾಲಂಕಾರ).
ಉಮಾ
ಭಗವನ್ಮಾನುಷಾಃ ಕೇಚಿದ್ ದೃಶ್ಯಂತೇ ಮಾನುಷೇಷು ವೈ |
ಉನ್ಮತ್ತಾಶ್ಚ ಪಿಶಾಚಾಶ್ಚ ಪರ್ಯಟಂತೋ ಯತಸ್ತತಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥7॥
ಉಮಾ ಪೂಜ್ಯನೇ, ಮನುಷ್ಯರಲ್ಲಿ ಕೆಲವರು ಹುಚ್ಚರೂ ಮತ್ತು ಪಿಶಾಚಿಗಳೂ ಆಗಿ ಎಲ್ಲ ಕಡೆಯಲ್ಲಿಯೂ ಅಲೆಯುವುದು ಕಂಡುಬರುತ್ತದೆ. ಯಾವ ಕರ್ಮ ವಿಪಾಕದಿಂದ ಹೀಗಾಗುವುದು ಎಂದು ನನಗೆ ಹೇಳಬೇಕು.
ಮಹೇಶ್ವರಃ

ಯೇ ಪುರಾ ಮನುಜಾ ದೇವಿ ದರ್ಪಾಹಂಕಾರಸಂಯುತಾಃ |
ಬಹುಧಾ ಪ್ರಲಪಂತ್ಯೇವ ಪ್ರಹಸಂತಿ ಪರಾನ್ ಭೃಶಮ್ ॥8॥
ಮೋಹಯಂತಿ ಪರಾನ್ ಭೋಗೈರ್ಮದಲೈರ್ಲೋಭಕಾರಣಾತ್ |
ವೃದ್ಧಾನ್ ಗುರೂಂಶ್ಚ ಯೇ ಮೂರ್ಖಾ ವೃಥೈವಾಪಹಸಂತಿ ಚ |
ಶೌಂಡಾ ವಿದಗ್ಧಾಃ ಶಾಸ್ತ್ರೇಷು ತಥೈವಾನೃತವಾದಿನಃ ॥9॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಉನ್ಮತ್ತಾಶ್ಚ ಪಿಶಾಚಾಶ್ಚ ಭವಂತ್ಯೇವ ನ ಸಂಶಯಃ ॥10॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ದರ್ಪ- ಅಹಂಕಾರದಿಂದ ಕೂಡಿ ಬಹಳವಾಗಿ ಮಾತನಾಡಿರುತ್ತಾರೆಯೋ, ಇನ್ನೊಬ್ಬರನ್ನು ಬಹಳವಾಗಿ ಹಾಸ್ಯಮಾಡಿರುತ್ತಾರೆಯೋ, ಲೋಭದಿಂದ ಕೂಡಿ ಇನ್ನೊಬ್ಬರಿಗೆ ಉನ್ಮಾದವನ್ನುಂಟು ಮಾಡುವ ಭೋಗಗಳನ್ನು ನೀಡಿರುತ್ತಾರೆಯೋ, ಹಿರಿಯರನ್ನು ಮತ್ತು ಗುರುಗಳನ್ನು ಯಾವ ಮೂರ್ಖರು ವ್ಯರ್ಥವಾಗಿ ಅಪಹಾಸ ಮಾಡಿರುತ್ತಾರೆಯೋ, ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪರಿಣಿತರಾಗಿದ್ದರೂ ಯಾರು ಸುಳ್ಳು ಮಾತನ್ನಾಡಿರುತ್ತಾರೆಯೋ ಅಂತಹವರು ಎಲೌ ಶೋಭನೆಯೇ, ಇನ್ನೊಂದು ಜನ್ಮದಲ್ಲಿ ಹುಚ್ಚರೂ ಮತ್ತು ಪಿಶಾಚಗಳೂ ಆಗುವುದರಲ್ಲಿ ಸಂಶಯವಿಲ್ಲ.
ಉಮಾ
ಭಗವನ್ಮಾನುಷಾಃ ಕೇಚಿನ್ನಿರಪತ್ಯಾಃ ಸುದುಃಖಿತಾಃ |
ಯತಂತೋ ನ ಲಭಂತ್ಯೇವ ಅಪತ್ಯಾನಿ ಯತಸ್ತತಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥11॥
ಉಮಾ ಭಗವಂತನೇ, ಮನುಷ್ಯರಲ್ಲಿ ಯಾರು ಮಕ್ಕಳಿಲ್ಲದೆ ದುಃಖಪಡುತ್ತಾರೆ? ಪ್ರಯತ್ನಪಟ್ಟರೂ ಅವರಿಗೆ ಮಕ್ಕಳಾಗುವುದಿಲ್ಲ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಸರ್ವಪ್ರಾಣಿಷು ನಿರ್ದಯಾಃ |
ಘ್ನಂತಿ ಬಾಲಾಂಶ್ಚ ಭುಂಜಂತೇ ಮೃಗಾಣಾಂ ಪಕ್ಷಿಣಾಮಪಿ ॥12॥
ಗುರುವಿದ್ವೇಷಿಣಶ್ಚೈವ ಪರಪುತ್ರಾಭ್ಯಸೂಯಕಾಃ |
ಪಿತೃಪೂಜಾಂ ನ ಕುರ್ವಂತಿ ಯಥೋಕ್ತಂ ಚಾಷ್ಟಕಾದಿಭಿಃ ॥13॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಮಾನುಷ್ಯಂ ಸುಚಿರಾತ್ ಪ್ರಾಪ್ಯ ನಿರಪತ್ಯಾ ಭವಂತಿ ತೇ |
ಪುತ್ರಶೋಕಯುತಾ ವಾಪಿ ನಾಸ್ತಿ ತತ್ರ ವಿಚಾರಣಾ ॥14॥
ಮಹೇಶ್ವರ ಯಾವ ಮನುಷ್ಯರು ಹಿಂದೆ ಪ್ರಾಣಿಗಳಲ್ಲಿ ದಯೆಯಿಲ್ಲದೆ ಮೃಗಗಳ ಮತ್ತು ಪಕ್ಷಿಗಳ ಎಳೆ ಮರಿಗಳನ್ನು ಕೊಂದು ತಿಂದಿರುತ್ತಾರೆಯೋ, ಹಿರಿಯರನ್ನು ದ್ವೇಷಿಸಿರುತ್ತಾರೆಯೋ, ಇನ್ನೊಬ್ಬರ ಮಕ್ಕಳನ್ನು ನೋಡಿ ಅಸೂಯೆಯನ್ನು ಪಟ್ಟಿರುತ್ತಾರೆಯೋ ಪಿತೃಗಳಿಗೆ ಅಷ್ಟಕಾದಿ ಶ್ರಾದ್ಧಗಳನ್ನು ಮಾಡಿರುವುದಿಲ್ಲವೋ ಅಂತಹವರು ಬಹಳ ಕಾಲದ ಮೇಲೆ ಪುನಃ ಮನುಷ್ಯತ್ವವನ್ನು ಪಡೆದು ಪುತ್ರಹೀನರಾಗುತ್ತಾರೆ ಅಥವಾ ಅವರಿಗೆ ಜನಿಸಿದ ಪುತ್ರರು ಮರಣವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಉಮಾ
ಭಗವನ್ ಮಾನುಷಾಃ ಕೇಚಿತ್ ಪ್ರದೃಶ್ಯಂತೇ ಸುದುಃಖಿತಾಃ |
ಉದ್ವೇಗವಾಸನಿರತಾಃ ಸೋದ್ವೇಗಾಶ್ಚ ಯತವ್ರತಾಃ ॥15॥
ನಿತ್ಯಂ ಶೋಕಸಮಾವಿಷ್ಟಾ ದುರ್ಗತಾಶ್ಚ ತಥೈವ ಚ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥16॥
ಉಮಾ ಭಗವಂತನೇ, ಮನುಷ್ಯರಲ್ಲಿ ಕೆಲವರು ಬಹಳ ದುಃಖದಿಂದ ಕೂಡಿ ಉದ್ವೇಗವನ್ನುಂಟು ಮಾಡುವ ಮನೆಯಲ್ಲಿ ತಾವೂ ಉದ್ವೇಗದಿಂದ ಕೂಡಿದವರಾಗಿ ವ್ರತಗಳನ್ನು ಅನುಷ್ಠಾನ ಮಾಡಿದರೂ ಯಾವಾಗಲೂ ದಾರಿದ್ರ್ಯ ಮತ್ತು ಶೋಕಗಳಿಂದ ಕೂಡಿರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದೆಂದು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ನಿತ್ಯಮುತ್ಕೋಚನಪರಾಯಣಾಃ |
ಭೀಷಯಂತಿ ಪರಾನ್ ನಿತ್ಯಂ ವಿಕುರ್ವಂತಿ ತಥೈವ ಚ ॥17॥
ಋಣೈರ್ವೃದ್ಧಿಂ ಚ ಯೇ ಕೃತ್ವಾ ದರಿದ್ರೇಭ್ಯೋ ಯಥೇಷ್ಟತಃ |
ಋಣಾರ್ಥಮಭಿಗಚ್ಛಂತಿ ಸತತಂ ವೃದ್ಧಿರೂಪಕಾಃ ॥18॥
ಉದ್ವಿಜಂತೇ ಹಿ ತಾನ್ ದೃಷ್ಟ್ವಾ ಧಾರಕಾಃ ಸ್ವಾರ್ಥಕಾರಣಾತ್ |
ಅತಿವೃದ್ಧಿರ್ನ ಕರ್ತವ್ಯಾ ದರಿದ್ರೇಭ್ಯೋ ಯಥೇಷ್ಟತಃ ॥19॥
ಯೇ ಶ್ವಭಿಃ ಕ್ರೀಡಮಾನಾಶ್ಚ ತ್ರಾಸಯಂತಿ ವನೇ ಮೃಗಾನ್ |
ಪ್ರಾಣಿಹಿಂಸಾಂ ತಥಾ ದೇವಿ ಕುರ್ವಂತಿ ಚ ಯತಸ್ತತಃ ॥20॥
ಮಹೇಶ್ವರ ಯಾವ ಮನುಷ್ಯರು ಹಿಂದೆ ಯಾವಾಗಲೂ ಇನ್ನೊಬ್ಬರನ್ನು ಪರಿಹಾಸ ಮಾಡುವುದರಲ್ಲಿ ನಿರತರಾಗಿರುತ್ತಾರೆಯೋ, ಇನ್ನೊಬ್ಬರನ್ನು ಹೆದರಿಸುತ್ತಾ ಇನ್ನೊಬ್ಬರಿಗೆ ವಿಕಾರವನ್ನುಂಟು ಮಾಡಿರುತ್ತಾರೆಯೋ, ದರಿದ್ರರಿಗೆ ಸಾಲವನ್ನು ಕೊಟ್ಟು ತಮಗಿಷ್ಟಬಂದಂತೆ ಬಡ್ಡಿಯನ್ನು ತೆಗೆದುಕೊಂಡು ಸಾಲವನ್ನು ಹಿಂಪಡೆಯಲು ಅವರ ಮನೆಗೆ ಸತತವಾಗಿ ಹೋಗುತ್ತಾರೆಯೋ,

ಯಾರನ್ನು ನೋಡಿ ಸಾಲವನ್ನು ತೆಗೆದುಕೊಂಡವರು ಸತತವಾಗಿ ಹೆದರುತ್ತಾರೆಯೋ - ಬಡವರಿಗೆ ಸಾಲವನ್ನು ಕೊಟ್ಟಾಗ ಮನಸ್ಸಿಗೆ ಬಂದಂತೆ ಹೆಚ್ಚಾದ ಬಡ್ಡಿಯನ್ನು ತೆಗೆದುಕೊಳ್ಳಬಾರದು - ಯಾರು ನಾಯಿಗಳ ಜೊತೆಯಲ್ಲಿ ಆಟವಾಡಿಕೊಂಡು ಇರುತ್ತಾರೆಯೋ, ಕಾಡಿನಲ್ಲಿ ಮೃಗಗಳನ್ನು ನಾಯಿಗಳಿಂದ ಹೆದರಿಸಿ ಪ್ರಾಣಿಹಿಂಸೆಯನ್ನು ಮಾಡುತ್ತಾರೆಯೋ;

ಯೇಷಾಂ ಗೃಹೇಷು ವೈ ಶ್ವಾನಸಾತ್ರಸಯಂತಿ ವೃಥಾ ನರಾನ್ |
ಏವಂಯುಕ್ತಸಮಾಚಾರಾಃ ಕಾಲಧರ್ಮಗತಾಃ ಪುನಃ ॥21॥
ಪೀಡಿತಾ ಯಮದಂಡೇನ ನಿರಯಸ್ಥಾಶ್ಚಿರಂ ಪ್ರಿಯೇ |
ಕಥಂಚಿತ್ಪ್ರಾಪ್ಯ ಮಾನುಷ್ಯಂ ತತ್ರ ತೇ ದುಃಖಸಂಯುತಾಃ ॥22॥
ಕುದೇಶೇ ದುಃಖಭೂಯಿಷ್ಠೇ ವ್ಯಾಘಾತಶತಸಂಕುಲೇ |
ಜಾಯಂತೇ ತತ್ರ ಶೋಚಂತಃ ಸೋದ್ವೇಗಾಶ್ಚ ಯತಸ್ತತಃ ॥23॥

ಯಾರ ಮನೆಯಲ್ಲಿ ನಾಯಿಗಳು ಮನೆಗೆ ಬಂದವರನ್ನು ವ್ಯರ್ಥವಾಗಿ ಹೆದರಿಸುತ್ತವೆಯೋ ಇಂತಹ ನಡತೆಯುಳ್ಳವರು ಮರಣವನ್ನು ಹೊಂದಿ ಯಮದೇವರು ಕೊಡುವ ಶಿಕ್ಷೆಯಿಂದ ಬಹಳ ಕಾಲ ನರಕದಲ್ಲಿ ಇದ್ದು, ಬಹಳ ಕಷ್ಟದಿಂದ ಪುನಃ ಮನುಷ್ಯತ್ವವನ್ನು ಪಡೆದು, ದುಃಖದಿಂದ ಕೂಡಿ, ದುಃಖಪ್ರದವಾದ ಅನೇಕ ಆಪತ್ತುಗಳಿರುವ (ಭೂಕಂಪ, ಅಗ್ನಿಪರ್ವತ ಮೊದಲಾದ ಅನೇಕ ದೋಷಗಳಿರುವ)ಕೆಟ್ಟ ದೇಶದಲ್ಲಿ ಹುಟ್ಟಿ ಯಾವಾಗಲೂ ಭಯವನ್ನೂ, ಶೋಕವನ್ನೂ ಅನುಭವಿಸುತ್ತಾರೆ.

ಉಮಾ

ಭಗವನ್ ಮಾನುಷಾಃ ಕೇಚಿದೈಶ್ವರ್ಯಜ್ಞಾನಸಂಯುತಾಃ |
ಮ್ಲೇಚ್ಛಭೂಮಿಷು ದೃಶ್ಯಂತೇ ಮ್ಲೇಚ್ಛೈಶ್ವರ್ಯಸಮನ್ವಿತಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥24॥

ಉಮಾ ಭಗವಂತನೇ, ಕೆಲವು ಮನುಷ್ಯರು ಮ್ಲೇಚ್ಛಭೂಮಿಯಲ್ಲಿ ಮ್ಲೇಚ್ಛೈಶ್ವರ್ಯವನ್ನು ಪಡೆದು ಜ್ಞಾನ ಮತ್ತು ಸಂಪತ್ತಿನಿಂದ ಕೂಡಿದವರಾಗಿರುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದೆಂದು ನನಗೆ ಹೇಳಬೇಕು.

ಮಹೇಶ್ವರಃ

ಯೇ ಪುರಾ ಮನುಜಾ ದೇವಿ ಧನಧಾನ್ಯಸಮನ್ವಿತಾಃ |
ಅಯಥಾವತ್ ಪ್ರಯಚ್ಛಂತಿ ಶ್ರದ್ಧಾವರ್ಜಿತಮೇವ ವಾ ॥25॥
ಅಪಾತ್ರೇಭ್ಯಶ್ಚ ಯೇ ದಾನಂ ಶೌಚಮಂಗಲವರ್ಜಿತಾಃ |
ದದತ್ಯೇವ ಚ ಯೇ ಮೂರ್ಖಾಃ ಶ್ಲಾಘಯಾಽವಜ್ಞಯಾಽಪಿ ವಾ ॥26॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ಕುದೇಶೇ ಮ್ಲೇಚ್ಛಭೂಯಿಷ್ಠೇ ದುರ್ಗಮೇ ವನಸಂಕಟೇ |
ಮ್ಲೇಚ್ಛಾಧಿಪತ್ಯಂ ಸಂಪ್ರಾಪ್ಯ ಜಾಯಂತೇ ತತ್ರತತ್ರ ವೈ ॥27॥

ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಧನ-ಧಾನ್ಯದಿಂದ ಕೂಡಿದವರೂ ಸರಿಯಾಗಿ ದಾನ ಮಾಡುವುದಿಲ್ಲವೋ ಅಥವಾ ಶ್ರದ್ಧೆಯಿಲ್ಲದೆ ದಾನ ಮಾಡುತ್ತಾರೆಯೋ, ಶೌಚ ಮತ್ತು ಶುಭಾಚಾರಗಳಿಲ್ಲದೆ ಅಪಾತ್ರರಿಗೆ ದಾನ ಮಾಡುತ್ತಾರೆಯೋ ಅಥವಾ ಮೂರ್ಖರಾಗಿ ತಮ್ಮನ್ನು ತಾವೇ ಹೊಗಳಿಕೊಂಡು ಅಥವಾ ಪ್ರತಿಗ್ರಹ ಮಾಡುವವರನ್ನು ತಿರಸ್ಕಾರ ಮಾಡುತ್ತಾ ದಾನ ಮಾಡುತ್ತಾರೆಯೋ ಅಂತಹವರು ಇನ್ನೊಂದು ಜನ್ಮದಲ್ಲಿ ದುರ್ಗಮವಾದ, ಕಾಡುಗಳಿಂದ ಕೂಡಿದ ಮ್ಲೇಚ್ಛ ಪ್ರದೇಶದಲ್ಲಿ ಮ್ಲೇಚ್ಛರ ಮೇಲೆ ಆಧಿಪತ್ಯವನ್ನು ಹೊಂದಿ ಅಲ್ಲಲ್ಲಿ ಜನಿಸುತ್ತಾರೆ.

ಉಮಾ

ಭಗವನ್ ಭಗನೇತ್ರಘ್ನ ಮಾನುಷೇಷು ಚ ಕೇಚನ |
ಕ್ಲೀಬಾ ನಪುಂಸಕಾಶ್ಚೈವ ದೃಶ್ಯಂತೇ ಷಂಡಕಾಸ್ತಥಾ ॥28॥
ನೀಚಕರ್ಮರತಾ ನೀಚಾ ನೀಚಸೌಖ್ಯಾಸ್ತಥಾ ಭುವಿ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥29॥

ಉಮಾ ಭಗವಂತನೇ, ಭಗನೇತ್ರನಾಶಕನೇ, ಮನುಷ್ಯರಲ್ಲಿ ಕೆಲವರು ಕ್ಲೀಬರೂ, ಕೆಲವರು ನಪುಂಸಕರೂ, ಕೆಲವರು ಷಂಡರೂ ಇರುತ್ತಾರೆ. ನೀಚಕರ್ಮರತರಾಗಿ, ನೀಚ ನಡತೆಯುಳ್ಳವರಾಗಿ ಅಲ್ಪವಾದ ಸೌಖ್ಯವನ್ನು ಅನುಭವಿಸುತ್ತಾರೆ. ಯಾವ ಕರ್ಮ ವಿಪಾಕದಿಂದ ಹೀಗಾಗುತ್ತದೆ ಎಂದು ನನಗೆ ಹೇಳಬೇಕು.

ಹುಟ್ಟಿದಾಗಿನಿಂದ ಸರಿಯಾಗಿ ಬೆಳೆಯದಿರುವ ಶಿಶ್ನವುಳ್ಳವರು ಕ್ಲೀಬರು. ಸರಿಯಾದ ಶಿಶ್ನವಿದ್ದರೂ ಪುಂಶಕ್ತಿಯಿಲ್ಲದ ಶಿಖಂಡಿಗಳು ನಪುಂಸಕರು. ಶಿಶ್ನವನ್ನು ಕತ್ತರಿಸಿಕೊಂಡವರು ಷಂಡರು - ಲಕ್ಷಾಲಂಕಾರ.

ಮಹೇಶ್ವರಃ

ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ॥30॥

ಮಹೇಶ್ವರ ಕಲ್ಯಾಣಿಯೇ, ಅದಕ್ಕೆ ಕಾರಣವನ್ನು ನಿನಗೆ ಹೇಳುವೆನು. ಅದನ್ನು ಕೇಳು.

ಯೇ ಪುರಾ ಮನುಜಾ ಭೂತ್ವಾ ಘೋರಕರ್ಮರತಾಸ್ತಥಾ |
ಪಶುಪುಂಸೊತ್ವೋಪಘಾತೇನ ಜೀವಂತಿ ಚ ರಮಂತಿ ಚ ॥31॥
ಪುಂಸೊತ್ವೋಪಘಾತಿನಶ್ಚೈವ ನರಾಣಾಂ ಕೋಪಕಾರಣಾತ್ |
ಯೇ ಧೂರ್ತಾಃ ಸ್ತ್ರೀಷು ಗಚ್ಛಂತಿ ಅಯಥಾವದ್ ಯಥೇಷ್ಟತಃ ॥32॥
ಕಾಮವಿಘ್ನಕರಾ ಯೇ ತು ದ್ವೇಷಪೈಶುನ್ಯಕಾರಣಾತ್ |

ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ |
ದಂಡಿತಾ ಯಮದಂಡೇನ ನಿರಯಸ್ಥಾಶ್ಚಿರಂ ಪ್ರಿಯೇ ॥33॥
ಯದಿ ಚೇನ್ಮಾನುಷಂ ಜನ್ಮ ಲಭೇರಂಸ್ತೇ ತಥಾವಿಧಾಃ |
ಕ್ಲೀಬಾ ವರ್ಷವರಾಶ್ಚೈವ ಷಂಡಕಾಶ್ಚ ಭವಂತಿ ತೇ ॥34॥
ಯಾವ ಮನುಷ್ಯರು ಹಿಂದೆ ಘೋರಕರ್ಮಗಳಲ್ಲಿ ಆಸಕ್ತರಾಗಿರುತ್ತಾರೆಯೋ, ಪಶುಗಳ ಪುಂಸ್ತ್ವವನ್ನು ಅಪಹರಿಸಿ (ಬೀಜಗಳನ್ನು ಒಡೆದು) ಅದರಿಂದಲೇ ಸಂತೋಷದಿಂದ ಜೀವಿಸಿರುತ್ತಾರೆಯೋ, ಕೋಪದಿಂದ ಮನುಷ್ಯರ ಪುಂಸ್ತ್ವವನ್ನು ವಿನಾಶಗೊಳಿಸಿರುತ್ತಾರೆಯೋ, ಯಾವ ಧೂರ್ತರು ಮನಸ್ಸಿಗೆ ಬಂದಂತೆ ದುಷ್ಟ ರೀತಿಗಳಲ್ಲಿ ಸ್ತ್ರೀಸಂಗವನ್ನು ಮಾಡಿರುತ್ತಾರೆಯೋ, ಯಾರು ದ್ವೇಷ ಮತ್ತು ಅಸೂಯೆಗಳ ಕಾರಣಗಳಿಂದ ಇನ್ನೊಬ್ಬರ ಕಾಮಕ್ಕೆ ವಿಘ್ನವನ್ನುಂಟು ಮಾಡಿರುತ್ತಾರೆಯೋ ಅಂತಹ ನಡತೆಯುಳ್ಳವರು, ಎಲೌ ಶೋಭನೆಯೇ, ಪ್ರಿಯೆಯೇ, ಯಮದೇವರ ಶಿಕ್ಷೆಯನ್ನು ಬಹುಕಾಲ ಅನುಭವಿಸಿ ಒಂದು ಪಕ್ಷ ಮನುಷ್ಯತ್ವವನ್ನು ಪಡೆದರೂ ಆಗ ಅವರು ಕ್ಲೀಬರೂ, ನಪುಂಸಕರೂ, ಷಂಡರೂ ಆಗುತ್ತಾರೆ.
ನೀಚಕರ್ಮಪರಾ ಲೋಕೇ ನಿರ್ಲಜ್ಜಾ ವೀತಸಂಭ್ರಮಾಃ |
ಪರನಿಂದಾಂ ಬಹಿಷ್ಕೃತ್ಯ ತೇ ಭವಂತಿ ಸ್ವಕರ್ಮಣಾ ॥35॥
ಯದಿ ಚೇತ್ಸಂವಿಮೃಶ್ಯೇರನ್ ತೇ ಮುಚ್ಯಂತೇ ಹಿ ಕಲ್ಮಷಾತ್ |
ಅತ್ರಾಪಿ ತೇ ಪ್ರಮಾದ್ಯೇಯುಃ ಪತಂತಿ ನರಕಾಲಯೇ ॥36॥
ಅವರು ನಾಚಿಕೆಗೆಟ್ಟವರೂ, ನೀಚಕರ್ಮರತರೂ, ಯಾವ ಸಂಭ್ರಮವೂ ಇಲ್ಲದವರೂ ಮತ್ತು ಯಾವಾಗಲೂ ತಮ್ಮ ಮುಖದಿಂದ ಪರನಿಂದೆಯನ್ನು ಮಾಡುವವರೂ ಆಗಿರುತ್ತಾರೆ. ಆ ಜನ್ಮದಲ್ಲಿ ಅವರು ವಿಮರ್ಶೆ ಮಾಡಿ ತಮ್ಮ ದೋಷಗಳನ್ನು ತಿದ್ದಿಕೊಂಡರೆ ಆಗ ದೋಷಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ. ಆ ಜನ್ಮದಲ್ಲಿಯೂ ಪ್ರಮಾದವನ್ನು ಮಾಡಿ ಅದೇ ದುಷ್ಕರ್ಮಗಳನ್ನು ಮುಂದುವರೆಸಿದರೆ ನರಕದಲ್ಲಿ ಬೀಳುತ್ತಾರೆ.
ಸ್ತ್ರೀಣಾಮಪಿ ತಥಾ ದೇವಿ ಯಥಾ ಪುಂಸಾಂ ತು ಕರ್ಮಜಮ್ |
ಇತಿ ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ॥ ॥37॥
ದೇವಿಯೇ, ಸ್ತ್ರೀಯರಿಗೂ ಸಹ ಪುರುಷರಿಗೆ ಕರ್ಮಫಲವಿದ್ದಂತೆಯೇ ಕರ್ಮಫಲವಿರುತ್ತದೆ. ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಉಮಾಮಹೇಶ್ವರಸಂವಾದೇ ರೋಗಾಣಾಂ ನಿಮಿತ್ತಕಥನಂ ನಾಮ ಪಂಚಾಧಿಕದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐದನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರ ಆರನೆಯ ಅಧ್ಯಾಯ
ಉಮಾ-ಮಹೇಶ್ವರ ಸಂವಾದ. ಮನುಷ್ಯರ ದುಸ್ಥಿತಿಗೆ ಕಾರಣಕಥನ.
ಉಮಾ
ಭಗವನ್ ದೇವದೇವೇಶ ಶೂಲಪಾಣೇ ವೃಷಧ್ವಜ |
ಪುಂಶ್ಚಲ್ಯ ಇವ ಯಾ ಸ್ತ್ರೀಷು ನೀಚವೃತ್ತಿರತಾಃ ಸ್ಮೃತಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥1॥
ಉಮಾ ಭಗವಂತನೇ, ದೇವದೇವೇಶನೇ, ಶೂಲಪಾಣಿಯೇ, ವೃಷಧ್ವಜನೇ, ಯಾವ ಸ್ತ್ರೀಯರು ನೀಚವೃತ್ತಿಯಲ್ಲಿ ನಿರತರಾಗಿ ಅನೇಕ ಪುರುಷರ ಬಳಿಗೆ ಹೋಗುತ್ತಾರೆಯೋ, ತಮ್ಮ ಪತಿಗಳನ್ನು ಮೀರಿ ನಡೆಯುತ್ತಾರೆಯೋ ಅವರಿಗೆ ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಯಾಃ ಪುರಾ ಮನುಜಾ ದೇವಿ ಬುದ್ಧಿಮೋಹಸಮನ್ವಿತಾಃ |
ಕಾಮರಾಗಸಮಾಯುಕ್ತಾಃ ಪತೀನತಿಚರಂತಿ ವೈ ॥2॥
ಪ್ರತಿಕೂಲಪರಾ ಯಾಸ್ತು ಪತೀನ್ ಪ್ರತಿ ಯಥಾ ತಥಾ |
ಶೌಚಂ ಲಜ್ಜಾಂ ತು ವಿಸ್ಮೃತ್ಯ ಯಥೇಷ್ಟಪರಿಚಾರಕಾಃ ॥3॥
ಏವಂಯುಕ್ತಸಮಾಚಾರಾ ಯಮಲೋಕೇ ಸುದಂಡಿತಾಃ |
ಯದಿ ವೈ ಮಾನುಷಂ ಜನ್ಮ ಲಭೇರಂಸ್ತಾಸ್ತಥಾವಿಧಾಃ |
ಬಹುಸಾಧಾರಣಾ ಏವಂ ಪುಂಶ್ಚಲ್ಯಶ್ಚ ಭವಂತಿ ತಾಃ ॥4॥
ಮಹೇಶ್ವರ ಎಲೌ ದೇವಿಯೇ, ಯಾವ ಸ್ತ್ರೀಯರು ಹಿಂದೆ ಬುದ್ಧಿ ಮೋಹದಿಂದ ಕೂಡಿದವರಾಗಿ, ಕಾಮಯುಕ್ತರಾಗಿ ತಮ್ಮ ಪತಿಗಳಿಗೆ ಪ್ರತಿಕೂಲರಾಗಿ ನಡೆದುಕೊಂಡಿರುತ್ತಾರೆಯೋ, ಇಷ್ಟಬಂದಂತೆ ಪರಿಚರ್ಯೆಯನ್ನು ಮಾಡಿರುತ್ತಾರೆಯೋ ಅಂತಹವರು ಯಮಲೋಕದಲ್ಲಿ ಶಿಕ್ಷೆಯನ್ನು ಹೊಂದಿ ಪುನಃ ಮನುಷ್ಯರಾಗಿ ಜನಿಸಿದರೆ ಅನೇಕ ಪುರುಷರ ಬಳಿಗೆ ಹೋಗುವ ಪುಂಶ್ಚಲಿಯರಾಗುತ್ತಾರೆ.
ಪೌಂಶ್ಚಲ್ಯಂ ಯತ್ತು ತದ್ವೃತ್ತಂ ಸ್ತ್ರೀಣಾಂ ಕಷ್ಟತಮಂ ಸ್ಮೃತಮ್ |
ತತಃಪ್ರಭೃತಿ ತಾ ದೇವಿ ಪತಂತ್ಯೇವ ನ ಸಂಶಯಃ |
ಶೋಚಂತಿ ಚೇತ್ತು ತದ್ವೃತ್ತಂ ಮನಸಾ ಹಿತಮಾಪ್ನುಯುಃ ॥5॥

ಎಲೌ ದೇವಿಯೇ, ಸ್ತ್ರೀಯರಿಗೆ ಅನೇಕ ಪುರುಷರ ಸಹವಾಸವು ಬಹಳ ದುಃಖವನ್ನು ಕೊಡುವುದಾಗಿದೆ ಎಂದು ಹೇಳಲ್ಪಡುತ್ತದೆ. ಅಲ್ಲಿಂದ ಮುಂದೆ ಅವರು ಇನ್ನೂ ಅಧಃಪಾತವನ್ನು ಹೊಂದುತ್ತಾರೆ. ತಮ್ಮ ನಡತೆಯ ಬಗ್ಗೆ ಪಶ್ಚಾತ್ತಾಪವನ್ನು ಹೊಂದಿ ತಿದ್ದಿಕೊಂಡರೆ ಮಾತ್ರ ಅವರಿಗೆ ಹಿತವಾದೀತು.
ಉಮಾ
ಭಗವನ್ ದೇವದೇವೇಶ ಪ್ರಮದಾ ವಿಧವಾ ಭೃಶಮ್ ॥6॥
ದೃಶ್ಯಂತೇ ಮಾನುಷಾ ಲೋಕೇ ಸರ್ವಕಲ್ಯಾಣವರ್ಜಿತಾಃ ।
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥7॥
ಉಮಾ ಭಗವಂತನೇ, ದೇವದೇವೇಶನೇ, ಲೋಕದ ಮನುಷ್ಯರಲ್ಲಿ ಸರ್ವ ಕಲ್ಯಾಣವರ್ಜಿತರಾದ ಅನೇಕ ವಿಧವೆಯರು ಕಾಣುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಯಾಃ ಪುರಾ ಮನುಜಾ ದೇವಿ ಬುದ್ಧಿಮೋಹಸಮನ್ವಿತಾಃ ।
ಕುಟುಂಬಂ ತತ್ರ ವೈ ಪತ್ಯುರ್ನಾಶಯಂತಿ ವೃಥಾ ತಥಾ ॥8॥
ವಿಷದಾಶ್ಚಾಗ್ನಿದಾಶ್ಚೈವ ಪತೀನ್ ಪ್ರತಿ ಸುನಿರ್ದಯಾಃ ।
ಅನ್ಯಾಸಾಂ ಹಿ ಪತೀನ್ ಯಾಂತಿ ಸ್ವಪತಿದ್ವೇಷಕಾರಣಾತ್ ॥9॥
ಏವಂಯುಕ್ತಸಮಾಚಾರಾ ಯಮಲೋಕೇ ಸುದಂಡಿತಾಃ ।
ನಿರಯಸ್ಥಾಶ್ಚಿರಂ ಕಾಲಂ ಕಥಂಚಿತ್ಪ್ರಾಪ್ಯ ಮಾನುಷಮ್ ।
ತತ್ರ ತಾ ಭೋಗರಹಿತಾ ವಿಧವಾಸ್ತು ಭವಂತಿ ವೈ ॥10॥
ಮಹೇಶ್ವರ ಎಲೌ ದೇವಿಯೇ, ಯಾವ ಸ್ತ್ರೀಯರು ಹಿಂದೆ ವ್ಯರ್ಥವಾಗಿ ಪತಿಯ ಕುಟುಂಬವನ್ನು ಭಗ್ನಗೊಳಿಸಿರುತ್ತಾರೆಯೋ, ವಿಷದಾನ ಮತ್ತು ಅಗ್ನಿದಾಹಗಳನ್ನು ಮಾಡಿರುತ್ತಾರೆಯೋ ಅಥವಾ ಗೃಹಗಳಿಗೆ ಅಗ್ನಿಯನ್ನು ಕೊಟ್ಟಿರುತ್ತಾರೆಯೋ ತಮ್ಮ ಪತಿಗಳ ವಿಷಯದಲ್ಲಿ ಏನೂ ದಯೆಯಿಲ್ಲದೆ ಅವರ ಮೇಲಿನ ದ್ವೇಷದಿಂದ ಇನ್ನೊಬ್ಬರ ಪತಿಯ ಬಳಿಗೆ ಹೋಗಿರುತ್ತಾರೆಯೋ ಅಂತಹವರು ಯಮಲೋಕದಲ್ಲಿ ಬಹಳ ಶಿಕ್ಷೆಯನ್ನು ಅನುಭವಿಸುತ್ತಾ ಬಹುಕಾಲ ವಾಸಿಸಿ ಪುನಃ ಕಷ್ಟದಿಂದ ಮನುಷ್ಯತ್ವವನ್ನು ಪಡೆದು ಅಲ್ಲಿ ಭೋಗರಹಿತರಾದ ವಿಧವೆಯರಾಗುತ್ತಾರೆ.
ಉಮಾ
ಭಗವನ್ ಪ್ರಮದಾಸ್ತ್ವನ್ಯಾಃ ಪತೌ ಜ್ಞಾತಿಷು ಸತ್ಸ್ವಪಿ ।
ಲಿಂಗಿನ್ಯಃ ಸಂಪ್ರದೃಶ್ಯಂತೇ ಪಾಷಂಡಂ ಮತಮಾಶ್ರಿತಾಃ ।
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥11॥
ಉಮಾ ಭಗವಂತನೇ, ಇನ್ನು ಕೆಲವು ಸ್ತ್ರೀಯರು ಪತಿಯೂ, ಬಂಧುಗಳೂ ಇರುತ್ತಿರುವಾಗಲೇ ಪಾಷಂಡಮತವನ್ನು ಆಶ್ರಯಿಸಿ, ಸಂನ್ಯಾಸಚಿಹ್ನೆಯನ್ನು ಧರಿಸಿರುವುದು ಕಂಡುಬರುತ್ತದೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ?
ಮಹೇಶ್ವರಃ
ಯಾಃ ಪುರಾ ಭಾವದೋಷೇಣ ಲೋಭಮೋಹಸಮನ್ವಿತಾಃ ।
ಪರದ್ರವ್ಯಪರಾ ಲೋಭಾತ್ ಪರೇಷಾಂ ದ್ರವ್ಯಹಾರಕಾಃ ॥12॥
ಅಭ್ಯಸೂಯಾಪರಾ ಯಾಸ್ತು ಸಪತ್ನೀನಾಂ ಪ್ರದೂಷಕಾಃ ।
ಈರ್ಷ್ಯಾಪರಾಃ ಕೋಪನಾಶ್ಚ ಬಂಧೂನಾಂ ವಿಫಲಾಃ ಸದಾ ॥13॥
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ತಾಃ ಪ್ರಿಯೇ ।
ಅಪಲಕ್ಷಣಸಂಪನ್ನಾಃ ಪಾಷಂಡಂ ಧರ್ಮಮಾಶ್ರಿತಾಃ ।
ಸ್ತ್ರಿಯಃ ಪ್ರವ್ರಾಜಶೀಲಾಶ್ಚ ಭವಂತ್ಯೇವ ನ ಸಂಶಯಃ ॥14॥
ಮಹೇಶ್ವರ ಯಾರು ಹಿಂದೆ ಮನೋದೋಷದಿಂದ ಕೂಡಿ, ಲೋಭ-ಮೋಹ ಯುಕ್ತರಾಗಿ ಪರದ್ರವ್ಯದಲ್ಲೇ ಕಣ್ಣಿಟ್ಟು ಅದನ್ನು ಅಪಹರಿಸಿರುತ್ತಾರೆಯೋ, ಅಸೂಯಾ ಪರರಾಗಿರುತ್ತಾರೆಯೋ, ಸವತಿಯರನ್ನು ನಿಂದಿಸಿರುತ್ತಾರೆಯೋ, ಯಾವಾಗಲೂ ಅಸೂಯೆಯನ್ನೂ ಕೋಪವನ್ನೂ ಹೊಂದಿ ಬಂಧುಗಳಿಗೆ ಯಾವ ಉಪಕಾರವನ್ನೂ ಮಾಡಿರುವುದಿಲ್ಲವೋ ಎಲೌ ಪ್ರಿಯೆಯೇ, ಅಂತಹವರು ಇನ್ನೊಂದು ಜನ್ಮವನ್ನು ಹೊಂದಿ ದುರ್ಲಕ್ಷಣಗಳನ್ನು ಹೊಂದಿ, ಪಾಷಂಡಮತವನ್ನು ಆಶ್ರಯಿಸುತ್ತಾರೆ. ಅಂತಹವರು ಸಂನ್ಯಾಸಿನಿಯರಾಗಿ ನಿತ್ಯವೂ ತಿರುಗಾಡುವುದರಲ್ಲಿಯೇ ರತರಾಗಿರುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಉಮಾ
ಭಗವನ್ ಮಾನುಷಾಃ ಕೇಚಿತ್ ಕಾರುವೃತ್ತಿಂ ಸಮಾಶ್ರಿತಾಃ ।
ಪ್ರದೃಶ್ಯಂತೇ ಮನುಷ್ಯೇಷು ನೀಚಕರ್ಮರತಾ ಜನಾಃ ।
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹತಿ ॥15॥
ಉಮಾ ಭಗವಂತನೇ, ಮನುಷ್ಯರಲ್ಲೇ ಕೆಲವರು ಮರಗೆಲಸ ಮುಂತಾದ ನೀಚ ಕಾರ್ಯವನ್ನು ಮಾಡಿಕೊಂಡು ಜೀವಿಸಿಕೊಂಡಿರುವುದು ಕಂಡುಬರುತ್ತದೆ. ಯಾವ ಕರ್ಮವಿಪಾಕದಿಂದ ಹೀಗಾಗುತ್ತದೆ?
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಸ್ತಬ್ಧಾ ಮಾನಯುತಾ ಭೃಶಮ್ ।
ದರ್ಪಾಹಂಕಾರಸಂಯುಕ್ತಾಃ ಕೇವಲಾತ್ಮಪರಾಯಣಾಃ ॥16॥

ತಾದೃಶಾ ಮಾನುಷಾ ದೇವಿ ಪುನರ್ಜನ್ಮನಿ ಶೋಭನೇ |
ಕಾರವೋ ನಟಗಂಧರ್ವಾಃ ಸಂಭವಂತಿ ಯಥಾ ತಥಾ ||17||
ಮಹೇಶ್ವರ ದೇವಿಯೇ, ಯಾವ ಮನುಷ್ಯರು ಹಿಂದೆ ಅಹಂಕಾರಯುತರಾಗಿ ಸ್ತಬ್ಧತೆಯನ್ನು ಹೊಂದಿ (ದೊಡ್ಡವರ ಜೊತೆ ಮಾತನಾಡದೆ) ದರ್ಪ- ಅಹಂಕಾರದಿಂದ ಕೂಡಿ ಕೇವಲ ಸ್ವಾರ್ಥಿಗಳಾಗಿರುತ್ತಾರೆಯೋ, ಎಲೌ ಶೋಭನೆಯೇ, ಅಂತಹವರು ಇನ್ನೊಂದು ಜನ್ಮದಲ್ಲಿ ಬಡಗಿಗಳೂ, ನಟರೂ, ಸಂಗೀತಗಾರರೂ ಆಗಿ ಜನಿಸುತ್ತಾರೆ.
ನಾಪಿತಾ ಬಂದಿನಶ್ಚೈವ ತಥಾ ವೈತಾಲಿಕಾಃ ಪ್ರಿಯೇ |
ಏವಂಭೂತಾಸ್ತ್ವಧೋವೃತ್ತಿಂ ಜೀವಂತ್ಯಾಶ್ರಿತ್ಯ ಮಾನವಾಃ ||18||
ಪರಪ್ರಸಾಧನಕರಾಸ್ತೇ ಪರ್ಯೈಃ ಕೃತವೇತನಾಃ |
ಪರಾವಮಾನಸ್ಯ ಫಲಂ ಭುಂಜತೇ ಪೌರ್ವದೈಹಿಕಮ್ ||19||
ಕ್ಷೌರಕರ್ಮವನ್ನು ಮಾಡುವವರೂ, ಸೂತ-ಮಾಗಧ-ಬಂಧಿಗಳೂ ಆಗಿ ನೀಚ ವೃತ್ತಿಯನ್ನು ಆಶ್ರಯಿಸಿ ಜೀವಿಸುತ್ತಾರೆ. ಇನ್ನೊಬ್ಬರಿಗೆ ಅಲಂಕಾರವನ್ನು ಮಾಡಿ ಅವರಿಂದ ವೇತನವನ್ನು ಪಡೆದು ಹಿಂದಿನ ಜನ್ಮದಲ್ಲಿ ಇನ್ನೊಬ್ಬರಿಗೆ ಮಾಡಿದ ಅವಮಾನದ ಫಲವನ್ನು ಅನುಭವಿಸುತ್ತಾರೆ.
ಉಮಾ
ಭಗವನ್ ದೇವದೇವೇಶ ಮಾನುಷೇಷ್ವೇವ ಕೇಚನ |
ದಾಸಭೂತಾಃ ಪ್ರದೃಶ್ಯಂತೇ ಸರ್ವಕರ್ಮಕರಾ ಭೃಶಮ್ ||20||
ಆಘಾತಭರ್ತ್ಸನಸಹಾಃ ಪೀಡ್ಯಮಾನಾಶ್ಚ ಸರ್ವಶಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ||21||
ಉಮಾ ಭಗವಂತನೇ, ದೇವದೇವೇಶನೇ, ಮನುಷ್ಯರಲ್ಲೇ ಕೆಲವರು ದಾಸರಾಗಿ ಇನ್ನೊಬ್ಬರ ಎಲ್ಲ ಕರ್ಮಗಳನ್ನು ಮಾಡುತ್ತಾರೆ. ಅವರಿಂದ ಹೊಡೆಯಲ್ಪಟ್ಟು, ನಿಂದಿಸಲ್ಪಟ್ಟು, ಪೀಡಿಸಲ್ಪಡುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ಹೇಳಬೇಕು.

ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ||22||
ಮಹೇಶ್ವರ ಕಲ್ಯಾಣಿಯೇ, ಅದಕ್ಕೆ ಕಾರಣವನ್ನು ಹೇಳುವೆನು. ಅದನ್ನು ಕೇಳು.
ಯೇ ಪುರಾ ಮನುಜಾ ದೇವಿ ಪರೇಷಾಂ ವಿತ್ತಹಾರಕಾಃ |
ಋಣವೃದ್ಧಿಕರಂ ಕುರ್ಯಾನ್ನ್ಯಾಸದತ್ತಂ ತಥೈವ ಚ ||23||
ನಿಕ್ಷೇಪಕಾರಣಾದ್ ದತ್ತಂ ಪರೇಷಾಂ ದ್ರವ್ಯಹಾರಿಣಃ |
ಪ್ರಮಾದಾದ್ ವಿಸ್ಮೃತಂ ನಷ್ಟಂ ಪರೇಷಾಂ ಧನಹಾರಕಾಃ ||24||
ವಧಬಂಧಪರಿಕ್ಲೇಶೈರ್ದಾಸತ್ವೇ ಕುರ್ವತೇಽಪರಾನ್ |
ತಾದೃಶಾ ಮರಣಂ ಪ್ರಾಪ್ತಾ ದಂಡಿತಾ ಯಮಶಾಸನೈಃ ||25||
ದೇವಿಯೇ, ಯಾರು ಹಿಂದೆ ಇನ್ನೊಬ್ಬರ ಧನವನ್ನು ಅಪಹರಿಸಿರುತ್ತಾರೆಯೋ, ಸಾಲ ನೀಡಿದ ಧನಕ್ಕೆ ಬಡ್ಡಿಯನ್ನು ಹೆಚ್ಚಿಸಿಕೊಂಡು ಹೋಗಿರುತ್ತಾರೆಯೋ, ತಮ್ಮಲ್ಲಿ ನ್ಯಾಸವಾಗಿಟ್ಟ ಪದಾರ್ಥವನ್ನು ಅಪಹರಿಸಿರುತ್ತಾರೆಯೋ, ಇನ್ನೊಬ್ಬರು ಕೊಟ್ಟು ಪ್ರಮಾದದಿಂದ ಮರೆತ ವಸ್ತುವನ್ನು ಅಥವಾ ಧನವನ್ನು ಅಪಹರಿಸಿರುತ್ತಾರೆಯೋ, ಹೊಡೆದು, ಬಂಧಿಸಿ ಅಥವಾ ಪೀಡಿಸಿ ಇನ್ನೊಬ್ಬರನ್ನು ದಾಸರನ್ನಾಗಿ ಮಾಡಿಕೊಂಡಿರುತ್ತಾರೆಯೋ ಅಂತಹವರು ಮರಣವನ್ನು ಹೊಂದಿ ಯಮದೇವರ ಶಾಸನದಂತೆ ಶಿಕ್ಷಿಸಲ್ಪಡುತ್ತಾರೆ.
ಕಥಂಚಿತ್ಪ್ರಾಪ್ಯ ಮಾನುಷ್ಯಂ ತತ್ರ ತೇ ದೇವಿ ಸರ್ವಥಾ |
ದಾಸಭೂತಾ ಭವಿಷ್ಯಂತಿ ಜನ್ಮಪ್ರಭೃತಿ ಮಾನವಾಃ ||26||
ತೇಷಾಂ ಕರ್ಮಾಣಿ ಕುರ್ವಂತಿ ಯೇಷಾಂ ತೇ ಧನಹಾರಕಾಃ |
ಆ ಸಮಾಪ್ತೇಃ ಸ್ವಪಾಪಸ್ಯ ಕುರ್ವಂತೀತಿ ವಿನಿಶ್ಚಯಃ ||27||
ದೇವಿಯೇ, ಬಹಳ ಕಷ್ಟದಿಂದ ಪುನಃ ಮನುಷ್ಯಜನ್ಮವನ್ನು ಪಡೆದು ಹುಟ್ಟಿದಾಗಿನಿಂದಲೇ ದಾಸರಾಗುತ್ತಾರೆ. ಯಾರ ಧನವನ್ನು ಹಿಂದೆ ಅಪಹರಿಸಿದ್ದರೋ ಅವರಿಗೆ ದಾಸರಾಗಿ ಆ ಪಾಪಕರ್ಮವು ಮುಗಿಯುವವರೆಗೂ ಅವರ ಕರ್ಮಗಳನ್ನು ಮಾಡುತ್ತಿರುತ್ತಾರೆ ಎಂಬುದು ನಿಶ್ಚಿತವಾದುದು.
ಪಶುಭೂತಾಸ್ತಥಾ ಚಾನ್ಯೇ ಭವಂತಿ ಧನಹಾರಕಾಃ |
ತತ್ತಥಾ ಕ್ಷೀಯತೇ ಕರ್ಮ ತೇಷಾಂ ಪೂರ್ವಾಪರಾಧಜಮ್ |
ಅತೋಽನ್ಯಥಾ ನ ತಚ್ಛಕ್ಯಂ ಕರ್ಮ ಹಾತುಂ ಸುರಾಸುರೈಃ ||28||
ಪರಧನವನ್ನು ಅಪಹರಿಸಿದ ಕೆಲವರು ಪಶುಗಳಂತೆ ಭಾರವನ್ನು ಹೊರುತ್ತಾರೆ. ಅವರೂ ಸಹ ಹಿಂದಿನವರಂತೆ ನರಕ ಭೋಗವನ್ನು ಅನುಭವಿಸಿ ಹಿಂದೆ ಮಾಡಿದ ಅಪರಾಧದ ಕರ್ಮಫಲವನ್ನು ಕಳೆದುಕೊಳ್ಳುತ್ತಾರೆ (ಲಕ್ಷ್ಮಾಲಂಕಾರ). ಅವರ ಸೇವೆಯನ್ನು ಹಾಗೆ ಮಾಡುವುದರಿಂದ ಪೂರ್ವಾಪರಾಧದಿಂದ ಉಂಟಾದ ಅವರ ಕರ್ಮವು ಕ್ಷಯವನ್ನು ಹೊಂದುತ್ತದೆ. ಇಲ್ಲದಿದ್ದರೆ ದೇವತೆಗಳಾಗಲೀ, ಅಸುರರಾಗಲೀ ಆ ಕರ್ಮದಿಂದ ಬಿಡುಗಡೆಯನ್ನು ಹೊಂದಲಾರರು.
ಕಿಂತು ಮೋಕ್ಷವಿಧಿಸ್ತೇಷಾಂ ಸರ್ವಥಾ ತತ್ಪ್ರಸಾದಜಃ |
ಅಯಥಾವನ್ಮೋಕ್ಷಕಾಮಃ ಪುನರ್ಜನ್ಮನಿ ಚೇಷ್ಯತೇ ||29||
ಆದರೆ ಹಿಂದಿನ ಜನ್ಮದಲ್ಲಿ ಯಾರ ಧನವನ್ನು ಅಪಹರಿಸಿ ಈ ಜನ್ಮದಲ್ಲಿ ಅವರ ಸೇವೆಯನ್ನು ಮಾಡುತ್ತಿರುತ್ತಾರೆಯೋ ಅವರೇ

ಪ್ರಸನ್ನರಾಗಿ ಈ ದಾಸರನ್ನು ದಾಸ್ಯಕರ್ಮದಿಂದ ಮುಕ್ತರನ್ನಾಗಿ ಮಾಡಬಹುದು. ಹಾಗಲ್ಲದೆ ದಾಸ್ಯಕರ್ಮದಿಂದ ಸ್ವಾಮಿಯ ಪ್ರಸನ್ನತೆಯಿಲ್ಲದೆ ತಾನೇ ಬಿಡಿಸಿಕೊಂಡು ಓಡಿಹೋಗುವವನು ಪುನಃ ಇನ್ನೊಂದು ಜನ್ಮದಲ್ಲಿ ದಾಸನಾಗುತ್ತಾನೆ (ಲಕ್ಷಾಲಂಕಾರ).
ಮೋಕ್ಷಕಾಮೀ ಯಥಾನ್ಯಾಯಂ ಕುರ್ವನ್ ಕರ್ಮಾಣಿ ಸರ್ವಶಃ |
ಭರ್ತುಃ ಪ್ರಸಾದಮಾಕಾಂಕ್ಷೇದಾಘಾತಾನ್ ಸರ್ವಥಾ ಸಹನ್ ||30||
ದಾಸ್ಯದಿಂದ ಬಿಡುಗಡೆಯನ್ನು ಹೊಂದಲು ಬಯಸುವವನು ಸ್ವಾಮಿಯ ಕರ್ಮವನ್ನು ನ್ಯಾಯದಿಂದ ಮಾಡಿ, ಅವನು ಹೊಡೆದರೆ ಅದನ್ನು ಸಹಿಸಿಕೊಂಡು ಅವನ ಅನುಗ್ರಹವನ್ನು ಬಯಸಬೇಕು.
ಪ್ರೀತಿಪೂರ್ವಂ ತು ಯೋ ಭರ್ತ್ರಾ ಮುಕ್ತೋ ಮುಕ್ತಃ ಸ್ವಪಾಪತಃ |
ತಥಾಭೂತಾನ್ ಕರ್ಮಕರಾನ್ ಸದಾ ಸಂತೋಷಯೇತ್ ಪತಿಃ ||31||
ಸ್ವಾಮಿಯಾದವನು ಪ್ರೀತಿಪೂರ್ವಕವಾಗಿ ಅವನನ್ನು ಕಳುಹಿಸಿಕೊಟ್ಟರೆ ಅವನು ತನ್ನ ಕರ್ಮದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಸ್ವಾಮಿಯಾದವನು ಅಂತಹ ಕರ್ಮಕಾರರನ್ನು ಯಾವಾಗಲೂ ಸಂತೋಷಪಡಿಸಬೇಕು.
ಯಥಾಹಂ ಕಾರಯೇತ್ಕರ್ಮ ದಂಡಂ ಕಾರಣತಃ ಕ್ಷಿಪೇತ್ |
ವೃದ್ಧಾನ್ ಬಾಲಾಂಸ್ತಥಾ ಕ್ಷೀಣಾನ್ ಪಾಲಯನ್ ಧರ್ಮಮಾಪ್ನುಯಾತ್ ||
ಇತಿ ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ||33||
ಅಂತಹವರಿಂದ ಹಗಲಿನಲ್ಲಿ ಮಾತ್ರ ಕೆಲಸವನ್ನು ಮಾಡಿಸಬೇಕು. ಕಾರಣವಿದ್ದರೆ ಮಾತ್ರ ಶಿಕ್ಷೆಯನ್ನು ಕೊಡಬೇಕು. ಅದರಲ್ಲಿಯೂ ಕೂಡ ದಾಸರಾದವರು ವೃದ್ಧರೂ, ಬಾಲರೂ, ಕೃಶರೂ ಆಗಿದ್ದರೆ ಅವರನ್ನು ರಕ್ಷಿಸುವ ಸ್ವಾಮಿಯು ಪುಣ್ಯವನ್ನು ಹೊಂದುತ್ತಾನೆ (ಲಕ್ಷಾಲಂಕಾರ). ಎಲೌ ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಉಮಾಮಹೇಶ್ವರಸಂವಾದೇ ಮಾನುಷಾಣಾಂ ವೈಧವ್ಯದಾಸ್ಯಾದಿ ನಿಮಿತ್ತಕಥನಂ ನಾಮ
ಷಡಧಿಕದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಆರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಏಳನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಚಂಡಾಲಾದಿಯೋನಿಪ್ರಾಪ್ತಿನಿಮಿತ್ತದ
ಮತ್ತು ಕರ್ಮಫಲಭೋಗಪ್ರಕಾರದ ಕಥನ.
ಉಮಾ
ಭಗವನ್ ಮಾನುಷೇಷ್ವೇವ ಮಾನುಷಾಃ ಸಮದರ್ಶನಾಃ |
ಚಂಡಾಲಾ ಇವ ದೃಶ್ಯಂತೇ ಸ್ಪರ್ಶಮಾತ್ರೇಣ ದೂಷಕಾಃ ||1||
ನೀಚಕರ್ಮರತಾ ದೇವ ಸರ್ವೇಷಾಂ ಮಲಹಾರಕಾಃ |
ದುರ್ಗತಾಃ ಕ್ಲೇಶಭೂಯಿಷ್ಠಾ ವಿರೂಪಾ ದುಷ್ಟಚೇತಸಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ||2||
ಉಮಾ ಭಗವಂತನೇ, ಮನುಷ್ಯರಲ್ಲಿಯೇ ಎಲ್ಲಾ ಮನುಷ್ಯರಂತೆ ಕಾಣುವ ಸ್ಪರ್ಶದಿಂದಲೂ ದೋಷವನ್ನುಂಟು ಮಾಡುವ ಚಂಡಾಲರಂತೆ ಕಾಣುವ ಮನುಷ್ಯರೂ ಇದ್ದಾರೆ. ಎಲೈ ದೇವನೇ, ಅವರು ಎಲ್ಲರ ಕಶ್ಮಲವನ್ನು ನಾಶ ಮಾಡುವವರಾಗಿ ನೀಚ ಕರ್ಮರತರಾಗಿ ದರಿದ್ರರೂ, ಬಹಳ ಕ್ಲೇಶವನ್ನು ಹೊಂದಿದವರೂ, ವಿರೂಪವುಳ್ಳವರೂ ಮತ್ತು ದುಷ್ಟಮನಸ್ಸುಳ್ಳವರೂ ಆಗಿರುತ್ತಾರೆ. ಇದು ಯಾವ ಕರ್ಮವಿಪಾಕದಿಂದ ಆಗುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ತ್ವಮೇಕಾಗ್ರಮನಾಃ ಶೃಣು ||3||
ಮಹೇಶ್ವರ ಅದನ್ನು ನಿನಗೆ ಹೇಳುವೆನು, ಒಂದೇ ಮನಸ್ಸಿನಿಂದ ಕೇಳು.
ಯೇ ಪುರಾ ಮನುಜಾ ಘೋರಾ ಅತಿಮಾನಯುತಾ ಭೃಶಮ್ |
ಆತ್ಮಸಂಭಾವನಾಯುಕ್ತಾಃ ಸ್ತಬ್ಧಾ ದರ್ಪಸಮನ್ವಿತಾಃ ||4||
ಪ್ರಣಾಮಂ ನ ತು ಕುರ್ವಂತಿ ಗುರೂಣಾಮಪಿ ಪಾಮರಾಃ |
ಯೇ ಸ್ವಧರ್ಮಾಶ್ರಿತಂ ಕಾಲಮತಿಮಾನಾನ್ನ ಕುರ್ವತೇ ||5||
ಯಾವ ಮನುಷ್ಯರು ಹಿಂದೆ ಘೋರರಾಗಿ ಬಹಳ ಅಹಂಕಾರದಿಂದ ಕೂಡಿದವರಾಗಿ ಆತ್ಮಸಂಭಾವಿತರೂ, ಸ್ತಬ್ಧರೂ, ದರ್ಪಿಷ್ಠರೂ ಆಗಿ ಗುರುಗಳಿಗೂ ನಮಸ್ಕಾರವನ್ನು ಮಾಡಿರುವುದಿಲ್ಲವೋ, ಯಾರು ಅತಿಯಾದ ಅಹಂಕಾರದಿಂದ ಕೂಡಿ ಆಯಾ ಕಾಲದಲ್ಲಿ ಮಾಡಬೇಕಾದ ತಮ್ಮ ಧರ್ಮವನ್ನು ಮಾಡುವುದಿಲ್ಲವೋ;
ಪರಾನ್ ಸನ್ನಾಮಯಂತ್ಯೇವ ಅಜ್ಞಾನಾತ್ಮನಿ ಯೇ ಬಲಾತ್ |
ಋದ್ಧಿಯೋಗಾತ್ ಪರಾನ್ ನಿತ್ಯಮವಮನ್ಯಂತಿ ಮಾನವಾನ್ |
ಪಾನಪಾಃ ಸರ್ವಭಕ್ಷಾಶ್ಚ ಪರುಷಾಃ ಕಟುಕಾ ನರಾಃ ||6||
ಏವಂಯುಕ್ತಸಮಾಚಾರಾ ದಂಡಿತಾ ಯಮಶಾಸನೈಃ |
ಕಥಂಚಿತ್ ಪ್ರಾಪ್ಯ ಮಾನುಷ್ಯಂ ಚಂಡಾಲಾಃ ಸಂಭವಂತಿ ತೇ ||7||

ಅಜ್ಞಾನರೂಪರಾದ ತಮಗೆ ಬೇರೆಯವರಿಂದ ಯಾರು ಬಲಾತ್ಕಾರದಿಂದ ನಮಸ್ಕಾರ ಮಾಡಿಸಿಕೊಳ್ಳುತ್ತಾರೆಯೋ, ತಮ್ಮ ಐಶ್ವರ್ಯದ ಕಾರಣದಿಂದ ಉಳಿದ ಮನುಷ್ಯರನ್ನು ನಿತ್ಯವೂ ಅವಮಾನಗೊಳಿಸುತ್ತಾರೆಯೋ, ಮದ್ಯಪಾನವನ್ನು ಮಾಡಿ ಸರ್ವಭಕ್ಷಕರಾಗಿ ಕ್ರೂರರೂ ಒರಟರೂ ಆಗಿರುತ್ತಾರೆಯೋ ಅಂತಹವರು ಯಮಲೋಕದಲ್ಲಿ ಶಿಕ್ಷೆಯನ್ನು ಅನುಭವಿಸಿ, ಬಹಳ ಪ್ರಯಾಸದಿಂದ ಮನುಷ್ಯಜನ್ಮವನ್ನು ಪಡೆದು ಚಂಡಾಲರಾಗುತ್ತಾರೆ.

ನೀಚಕರ್ಮರತಾಶ್ಚೈವ ಸರ್ವೇಷಾಂ ಮಲಹಾರಕಾಃ |
ಪರೇಷಾಂ ವಂದನಪರಾಸ್ತೇ ಭವಂತ್ಯೇವಮಾನಿತಾಃ ॥8॥
ವಿರೂಪಾಃ ಪಾಪಯೋನಿಸ್ಥಾಃ ಸ್ಪರ್ಶನಾದಪಿ ವರ್ಜಿತಾಃ |
ಕುವೃತ್ತಿಮುಪಜೀವಂತಿ ಭೂತ್ವಾ ತೇ ರಜಕಾದಯಃ |
ಪುರಾಽತಿಮಾನದೋಷಾತ್ತು ಭುಂಜತೇ ಸ್ವಕೃತಂ ಫಲಮ್ ॥9॥

ನೀಚಕರ್ಮಗಳನ್ನು ಮಾಡುತ್ತಾ, ಎಲ್ಲರ ಕಶ್ಮಲಗಳನ್ನು ತೊಳೆಯುತ್ತಾ, ಎಲ್ಲರಿಗೂ ನಮಸ್ಕಾರ ಮಾಡುತ್ತಾ ಅವಮಾನಿತರಾಗುತ್ತಾರೆ. ಪಾಪಯೋನಿಗಳಲ್ಲಿ ಜನಿಸಿ ವಿರೂಪವನ್ನು ಹೊಂದಿ ಸ್ಪರ್ಶಕ್ಕೂ ಅನರ್ಹರಾಗಿರುತ್ತಾರೆ. ಅಗಸರು ಮುಂತಾದವರಾಗಿ ಜನಿಸಿ ಹೀನವಾದ ಜೀವನೋಪಾಯಗಳನ್ನು ಆಶ್ರಯಿಸಿರುತ್ತಾರೆ. ಹಿಂದೆ ಬಹಳ ಅಹಂಕಾರವನ್ನು ಮಾಡಿದ ದೋಷದಿಂದ ಮುಂದಿನ ಜನ್ಮದಲ್ಲಿ ತಾವು ಮಾಡಿದ ಕರ್ಮದ ಫಲವನ್ನು ಅನುಭವಿಸುತ್ತಾರೆ.

ನಾನ್ಯವ್ಯವಸ್ಥಾರೂಪಾಣಾಂ ಚಂಡಾಲಾನಪಿ ಬುದ್ಧಿಮಾನ್ |
ನ ಚ ನಿಂದೇನ್ನಾತಿಕುಪ್ಯೇದ್ ಭುಂಜತೇ ಸ್ವಕೃತಂ ಫಲಮ್ |
ಚಂಡಾಲಾ ಅಪಿ ತಾಂ ಜಾತಿಂ ಶೋಚಂತಃ ಶುದ್ಧಿಮಾಪ್ನುಯುಃ ॥10॥

ಆದರೆ ವಿವೇಕಿಯಾದ ಮನುಷ್ಯನು ಬೇರೆ ಜೀವನೋಪಾಯವಿಲ್ಲದಿರುವ ಚಂಡಾಲರನ್ನು ನಿಂದಿಸಬಾರದು ಅಥವಾ ಅವರ ಮೇಲೆ ಕೋಪಗೊಳ್ಳಬಾರದು. ಅವರು ತಮ್ಮ ಕರ್ಮದ ಫಲವನ್ನು ಅನುಭವಿಸುತ್ತಿರುತ್ತಾರೆ. ಚಂಡಾಲರೂ ಸಹ ತಮ್ಮ ಜಾತಿಯ ವಿಷಯದಲ್ಲಿ ಪಶ್ಚಾತ್ತಾಪವನ್ನು ಹೊಂದಿದರೆ ಶುದ್ಧಿಯನ್ನು ಪಡೆಯುತ್ತಾರೆ.

ಉಮಾ

ಭಗವನ್ಮಾನುಷಾಃ ಕೇಚಿದಾಶಾಪಾಶಶತೈರ್ವೃತಾಃ |
ಪರೇಷಾಂ ದ್ವಾರಿ ತಿಷ್ಠಂತಿ ಪ್ರತಿಷಿದ್ಧಾಃ ಪ್ರವೇಶನೇ ॥11॥
ದ್ರಷ್ಟುಂ ಜ್ಞಾಪಯಿತುಂ ಚೈವ ನ ಲಭಂತೇ ಚ ಯತ್ನತಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥12॥

ಉಮಾ ಭಗವಂತನೇ, ಕೆಲವರು ನೂರಾರು ಆಶಾಪಾಶಗಳಿಂದ ಬದ್ಧರಾಗಿ ಇನ್ನೊಬ್ಬರ ಮನೆಯ (ಅಥವಾ ಕಛೇರಿಯ) ಬಾಗಿಲಿನಲ್ಲಿ ಪ್ರವೇಶಿಸಲು ನಿಷೇಧಿಸಲ್ಪಟ್ಟು ನಿಂತಿರುತ್ತಾರೆ. ಅವರಿಗೆ ಆ ವ್ಯಕ್ತಿಯನ್ನು ನೋಡಲು ಅಥವಾ ತಮ್ಮ ವಿಷಯಗಳನ್ನು ಹೇಳಲೂ ಸಹ ಪ್ರಯತ್ನ ಮಾಡಿದರೂ ಅವಕಾಶವಿರುವುದಿಲ್ಲ. ಯಾವ ಕರ್ಮವಿಪಾಕದಿಂದ ಹೀಗಾಗುವುದೆಂದು ಹೇಳಬೇಕು.

ಮಹೇಶ್ವರಃ

ಯೇ ಪುರಾ ಮಾನುಷಾ ದೇವಿ ಐಶ್ವರ್ಯಸ್ಥಾನಸಂಯುತಾಃ |
ಸಂವಿದಂ ತು ನ ಕುರ್ವಂತಿ ಪರೈರೈಶ್ವರ್ಯಮೋಹಿತಾಃ ॥13॥
ದ್ವಾರಾಣಿ ನ ದದತ್ಯೇವ ಲೋಭಮೋಹಾದಿಭಿರ್ವೃತಾಃ |
ಅವಸ್ಥಾಮೋಹಸಂಯುಕ್ತಾಃ ಸ್ವಾರ್ಥಮಾತ್ರಪರಾಯಣಾಃ ॥14॥

ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಐಶ್ವರ್ಯ ಮತ್ತು ಸ್ಥಾನಗಳಿಂದ ಕೂಡಿ, ತಮ್ಮ ಐಶ್ವರ್ಯದಿಂದ ಮೋಹಿತರಾಗಿ ಇನ್ನೊಬ್ಬರ ಜೊತೆಯಲ್ಲಿ ಮಾತನ್ನೂ ಆಡಿರುವುದಿಲ್ಲವೋ, ಲೋಭ-ಮೋಹಗಳಿಂದ ಕೂಡಿದವರಾಗಿ ಇನ್ನೊಬ್ಬರು ಮಾತನಾಡುವುದಕ್ಕೆ ಅವಕಾಶವನ್ನೂ ಕೊಡದೆ ತಮ್ಮ ಉನ್ನತ ಸ್ಥಿತಿಯಿಂದ ಮೋಹಿತರಾಗಿ ಸ್ವಾರ್ಥಿಗಳಾಗಿರುತ್ತಾರೆಯೋ;

ಸರ್ವಭೋಗಯುತಾ ವಾಪಿ ಸರ್ವೇಷಾಂ ನಿಷ್ಫಲಾ ಭೃಶಮ್ |
ಅಪಿ ಶಕ್ತಾ ನ ಕುರ್ಯುಸ್ತೇ ಪರಾನುಗ್ರಹಕಾರಣಾತ್ ॥15॥
ನಿರ್ದಯಾಶ್ಚೈವ ನಿದ್ವಾರಾ ಭೋಗೈಶ್ವರ್ಯಗತಿಂ ಪ್ರತಿ |
ಏವಂಯುಕ್ತಸಮಾಚಾರಾಃ ಪುನರ್ಜನ್ಮನಿ ಶೋಭನೇ ॥16॥
ಯದಿ ಚೇನ್ಮಾನುಷಂ ಜನ್ಮ ಲಭೇರಂಸ್ತೇ ತಥಾವಿಧಾಃ |
ದುರ್ಗತಾ ದುರವಸ್ಥಾಶ್ಚ ಕರ್ಮವ್ಯಾಕ್ಷೇಪಸಂಯುತಾಃ ॥17॥

ಯಾವ ಸರ್ವಭೋಗಗಳಿಂದ ಕೂಡಿದ್ದರೂ ಇನ್ನೊಬ್ಬರಿಗೆ ಉಪಕಾರವನ್ನು ಮಾಡದೆ ಇನ್ನೊಬ್ಬರ ದೃಷ್ಟಿಯಲ್ಲಿ ನಿಷ್ಫಲರಾಗಿರುತ್ತಾರೆಯೋ, ಇನ್ನೊಬ್ಬರಿಗೆ ಉಪಕಾರವನ್ನು ಮಾಡಲು ಸಮರ್ಥರಾಗಿಯೂ ಯಾರು ಉಪಕಾರವನ್ನು ಮಾಡಿರುವುದಿಲ್ಲವೋ, ಭೋಗೈಶ್ವರ್ಯಗಳ ವಿಷಯದಲ್ಲಿ ಯಾರಿಗೂ ಅವಕಾಶವನ್ನು ಕೊಡದೆ ನಿರ್ದಯರಾಗಿರುತ್ತಾರೆಯೋ, ಎಲೌ ಶೋಭನೆಯೇ, ಅವರು ಇನ್ನೊಂದು ಜನ್ಮದಲ್ಲಿ ಮಾನುಷ್ಯತ್ವವನ್ನು ಪಡೆಯುವುದಾದರೆ ಆ ರೀತಿಯಲ್ಲಿ ದರಿದ್ರರೂ, ದುರವಸ್ಥೆಯನ್ನು ಹೊಂದಿದವರೂ ಮತ್ತು ಕೆಲಸಗಳನ್ನು ಕಳೆದುಕೊಳ್ಳುವವರೂ ಆಗುತ್ತಾರೆ.

ಅಭಿಧಾವಂತಿ ತೇ ಸರ್ವೇ ತಮರ್ಥಮಭಿವೇದಿನಃ |
ರಾಜ್ಞಾಂ ವಾ ರಾಜಮಾತ್ರಾಣಾಂ ದ್ವಾರಿ ತಿಷ್ಠಂತಿ ವಾರಿತಾಃ ॥18॥

ತಮ್ಮ ದುರವಸ್ಥೆಯನ್ನು ಹೇಳಿಕೊಳ್ಳಲು ರಾಜನ ಅಥವಾ ರಾಜಪುರುಷನ ಮನೆಯ ಬಾಗಿಲಿಗೆ ಹೋಗಿ ದ್ವಾರದಲ್ಲಿ ನಿಂತು ಪ್ರವೇಶದಿಂದ ನಿಷೇಧಿಸಲ್ಪಡುತ್ತಾರೆ.

ಕರ್ಮ ವಿಜ್ಞಾಪಿತುಂ ದ್ರಷ್ಟುಂ ನ ಲಭಂತೇ ಕಥಂಚನ |
ಪ್ರವೇಷ್ಟುಮಪಿ ತೇ ದ್ವಾರಂ ಬಹಿಸ್ತಿಷ್ಠಂತಿ ಕಾಂಕ್ಷಯಾ ॥19॥
ರಾಜ ಮೊದಲಾದವರನ್ನು ನೋಡುವುದಕ್ಕಾಗಲೀ, ತಮ್ಮ ಪರಿಸ್ಥಿತಿಯನ್ನು ಹೇಳುವುದಕ್ಕಾಗಲೀ, ದ್ವಾರದೊಳಗೆ ಪ್ರವೇಶಿಸುವುದಕ್ಕಾಗಲೀ ಅವರು ಅವಕಾಶವನ್ನು ಪಡೆಯದೆ ಕೇವಲ ಆಸೆಯನ್ನು ಹೊತ್ತು ಬಾಗಿಲಿನಲ್ಲಿ ನಿಂತಿರುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿನ್ಮನುಷ್ಯೇಷು ಬಹುಷ್ವಪಿ |
ಸಹಸಾ ನಷ್ಟಸರ್ವಸ್ವಾ ಭ್ರಷ್ಟಕೋಶಪರಿಗ್ರಹಾಃ ॥20॥
ದೃಶ್ಯಂತೇ ಮಾನುಷಾಃ ಕೇಚಿದ್ ರಾಜಚೋರೋದಕಾದಿಭಿಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥21॥
ಉಮಾ ಭಗವಂತನೇ, ಮನುಷ್ಯರಲ್ಲಿಯೇ ಎಷ್ಟೋ ಮನುಷ್ಯರು ಇದ್ದಕ್ಕಿದ್ದಂತೆ ರಾಜರಿಂದ, ಚೋರರಿಂದ, ಜಲಪ್ರವಾಹ ಮೊದಲಾದವುಗಳಿಂದ ಎಲ್ಲವನ್ನೂ ಕಳೆದುಕೊಂಡು ತಮ್ಮ ಕೋಶವನ್ನು ಮತ್ತು ಉಪಕರಣಗಳನ್ನು ಕಳೆದುಕೊಂಡು ನಿಲ್ಲುವುದು ಕಂಡುಬರುತ್ತದೆ. ಯಾವ ಕರ್ಮವಿಪಾಕದಿಂದ ಹೀಗಾಗುವುದೆಂದು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮಾನುಷಾ ದೇವಿ ಆಸುರಂ ಭಾವಮಾಶ್ರಿತಾಃ |
ಪರೇಷಾಂ ವೃತ್ತಿನಾಶಂ ತು ಕುರ್ವತೇ ದ್ವೇಷಲೋಭತಃ ॥22॥
ಉತ್ಕೋಚನಪರಾಶ್ಚೈವ ಪಿಶುನಾಶ್ಚ ತಥಾವಿಧಾಃ |
ಪರದ್ರವ್ಯಹರಾ ಘೋರಾಶ್ಚೌರ್ಯಾದ್ವಾಽನ್ಯೇನ ಕರ್ಮಣಾ ॥23॥
ಮಹೇಶ್ವರ ಎಲೌ ದೇವಿಯೇ, ಯಾವ ಮನುಷ್ಯರು ಹಿಂದೆ ಅಸುರ ಸ್ವಭಾವವನ್ನು ಹೊಂದಿ, ದ್ವೇಷ ಮತ್ತು ಲೋಭಗಳಿಗೆ ಒಳಗಾಗಿ, ಇನ್ನೊಬ್ಬರ ಜೀವನೋಪಾಯವನ್ನು ನಾಶಪಡಿಸಿರುತ್ತಾರೆಯೋ, ಇನ್ನೊಬ್ಬರನ್ನು ನಿಂದಿಸುವವರಾಗಿ ಚಾಡಿಯನ್ನು ಹೇಳುವವರಾಗಿರುತ್ತಾರೆಯೋ, ಚೌರ್ಯದಿಂದಾಗಲೀ ಅಥವಾ ಬೇರೆ ರೀತಿಯಿಂದಾಗಲೀ ಪರದ್ರವ್ಯವನ್ನು ಅಪಹರಿಸಿ ಘೋರರಾಗಿರುತ್ತಾರೆಯೋ;
ನಿರ್ದಯಾ ನಿರನುಕ್ರೋಶಾಃ ಪರೇಷಾಂ ವೃತ್ತಿನಾಶಕಾಃ |
ನಾಸ್ತಿಕಾನೃತಭೂಯಿಷ್ಠಾಃ ಪರದ್ರವ್ಯಾಪಹಾರಿಣಃ ॥24॥
ಏವಂಯುಕ್ತಸಮಾಚಾರಾ ದಂಡಿತಾ ಯಮಶಾಸನೈಃ |
ನಿರಯಸ್ಥಾಶ್ಚಿರಂ ಕಾಲಂ ತತ್ರ ದುಃಖಸಮನ್ವಿತಾಃ ॥25॥
ದಯಾಶೂನ್ಯರೂ, ಅನುಕಂಪಶೂನ್ಯರೂ ಆಗಿ, ನಾಸ್ತಿಕರಾಗಿ ಸುಳ್ಳು ಮಾತುಗಳನ್ನಾಡಿ ಪರದ್ರವ್ಯವನ್ನು ಅಪಹರಿಸಿರುತ್ತಾರೆಯೋ ಅಂತಹವರು ನರಕದಲ್ಲಿ ಬಹುಕಾಲವಿದ್ದು ಯಮದೇವರ ಆಜ್ಞೆಯಂತೆ ಶಿಕ್ಷೆಯನ್ನು ಹೊಂದಿ ದುಃಖವನ್ನು ಅನುಭವಿಸುತ್ತಾರೆ.
ಯದಿ ಚೇನ್ಮಾನುಷಂ ಜನ್ಮ ಲಭೇರಂಸ್ತೇ ತಥಾವಿಧಾಃ |
ತತ್ರಸ್ಥಾಃ ಪ್ರಾಪ್ನುವಂತ್ಯೇವ ಸಹಸಾ ದ್ರವ್ಯನಾಶನಮ್ ॥26॥
ಕಷ್ಟಂ ಚ ಪ್ರಾಪ್ನುವಂತ್ಯೇವ ಕಾರಣಾಕಾರಣಾದಪಿ |
ನಾಶಂ ವಿನಾಶಂ ದ್ರವ್ಯಾಣಾಮುಪಘಾತಾಂಶ್ಚ ಸರ್ವಶಃ ॥27॥
ಅಂತಹವರು ಒಂದು ಪಕ್ಷ ಮನುಷ್ಯ ಜನ್ಮವನ್ನು ಪಡೆದರೆ ಅಲ್ಲಿ ಇದ್ದಕ್ಕಿದ್ದಂತೆಯೇ ದ್ರವ್ಯನಾಶವನ್ನು ಹೊಂದುತ್ತಾರೆ. ಕಾರಣವಿಲ್ಲದೆ ಅಥವಾ ಕಾರಣ ಸಹಿತವಾಗಿ ಕಷ್ಟವನ್ನು ಹೊಂದುತ್ತಾರೆ. ಸರ್ವನಾಶವನ್ನು ಮತ್ತು ದ್ರವ್ಯವಿನಾಶವನ್ನು ಹೊಂದುತ್ತಾರೆ.
ಉಮಾ
ಭಗವನ್ ಮಾನುಷಾಃ ಕೇಚಿದ್ ಬಾಂಧವೈಃ ಸಹಸಾ ಪೃಥಕ್ |
ಕಾರಣಾಕಾರಣಾದೇವ ಸಹಸಾ ಪ್ರಾಣನಾಶನಮ್ ॥28॥
ಶಸ್ತ್ರೇಣ ವಾಽನ್ಯಥಾ ವಾಽಪಿ ಪ್ರಾಪ್ನುವಂತಿ ವಧಂ ನರಾಃ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥29॥
ಉಮಾ ಭಗವಂತನೇ, ಮನುಷ್ಯರಲ್ಲಿ ಕೆಲವರು ಬಾಂಧವರ ಜೊತೆಯಲ್ಲಿ ಅಥವಾ ಏಕಾಂಗಿಯಾಗಿ ಕಾರಣವಿದ್ದು ಅಥವಾ ಇಲ್ಲದೆ ಇದ್ದಕ್ಕಿದ್ದಂತೆಯೇ ಶಸ್ತ್ರದಿಂದಾಗಲೀ ಅಥವಾ ಬೇರೆ ಪ್ರಕಾರದಿಂದಾಗಲೀ ಮರಣವನ್ನು ಹೊಂದುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದು ಎಂದು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಘೋರಕರ್ಮರತಾ ನರಾಃ |
ಆಸುರಾಃ ಪ್ರಾಯಶೋ ಮೂರ್ಖಾಃ ಪ್ರಾಣಿಹಿಂಸಾಪ್ರಿಯಾ ಭೃಶಮ್ ॥
ನಿರ್ದಯಾಃ ಪ್ರಾಣಿಹಿಂಸಾಯಾಂ ತಥಾ ಪ್ರಾಣವಿಘಾತಕಾಃ |
ವಿಶ್ವಸ್ತಘಾತಕಾಶ್ಚೈವ ತಥಾ ಸುಪ್ತವಿಘಾತಕಾಃ |
ಪ್ರಾಯಶೋಽನೃತಭೂಯಿಷ್ಠಾ ನಾಸ್ತಿಕಾ ಮಾಂಸಭೋಜಿನಃ ॥31॥
ಏವಂಯುಕ್ತಸಮಾಚಾರಾಃ ಕಾಲಧರ್ಮಂ ಗತಾಃ ಪುನಃ |
ದಂಡಿತಾ ಯಮದಂಡೇನ ನಿರಯಸ್ಥಾಶ್ಚಿರಂ ಪ್ರಿಯೇ ॥32॥
ಮಹೇಶ್ವರ ಎಲೌ ದೇವಿಯೇ, ಹಿಂದೆ ಯಾವ ಮನುಷ್ಯರು ಪ್ರಾಯಶಃ ಅಸುರರಾಗಿ ಘೋರಕರ್ಮಗಳಲ್ಲಿ ಆಸಕ್ತರಾಗಿ, ಮೂರ್ಖರಾಗಿ

ಪ್ರಾಣಿಹಿಂಸೆಯಲ್ಲೇ ಸಂತೋಷವನ್ನು ಹೊಂದಿ ನಿರ್ದಯವಾಗಿ ಪ್ರಾಣಿ ಹಿಂಸೆಯನ್ನು ಮಾಡಿರುತ್ತಾರೆಯೋ, ವಿಶ್ವಾಸಘಾತವನ್ನು ಮಾಡಿರುತ್ತಾರೆಯೋ, ನಿದ್ರಿಸುತ್ತಿರುವವರನ್ನು ಕೊಂದಿರುತ್ತಾರೆಯೋ, ಪ್ರಾಯಶಃ ಸುಳ್ಳನ್ನೇ ಯಾವಾಗಲೂ ಮಾತನಾಡಿರುತ್ತಾರೆಯೋ, ನಾಸ್ತಿಕರಾಗಿ ಮತ್ತು ಮಾಂಸ ಭೋಜನರಾಗಿರುತ್ತಾರೆಯೋ ಅಂತಹ ನಡೆಯುಳ್ಳವರು ಮರಣವನ್ನು ಹೊಂದಿ, ಯಮದೇವರಿಂದ ಶಿಕ್ಷೆಯನ್ನು ಅನುಭವಿಸುತ್ತಾ ನರಕದಲ್ಲಿ ಬಹಳ ಕಾಲ ಇರುತ್ತಾರೆ.
ತಿರ್ಯಗ್ಯೋನಿಂ ಪುನಃ ಪ್ರಾಪ್ಯ ತತ್ರ ದುಃಖಪರಿಕ್ಷಯಾತ್ |
ಯದಿ ಚೇನ್ಮಾನುಷಂ ಜನ್ಮ ಲಭೇರಂಸ್ತೇ ತಥಾವಿಧಾಃ |
ತತ್ರ ತೇ ಪ್ರಾಪ್ನುವಂತ್ಯೇವ ವಧಬಂಧಾನ್ಯಥಾ ತಥಾ ॥33॥
ಆಢ್ಯಾ ವಾ ದುರ್ಗತಾ ವಾಽಪಿ ಭುಂಜತೇ ಸ್ವಕೃತಂ ಫಲಮ್ |
ಸುಪ್ತಾ ಮತ್ತಾಶ್ಚ ವಿಶ್ವಸ್ತಾಸ್ತಥಾ ತೇ ಪ್ರಾಪ್ನುವಂತ್ಯುತ ॥34॥
ಪ್ರಾಣಬಾಧಕೃತಂ ದುಃಖಂ ಬಾಂಧವ್ಯೈಃ ಸಹಸಾ ಪೃಥಕ್ |
ಪುತ್ರದಾರವಿನಾಶಂ ವಾ ಶಸ್ತ್ರೇಣಾನ್ಯೇನ ವಾ ವಧಮ್ ॥35॥
ಅವರು ಪುನಃ ಅಲ್ಲಿಂದ ತಿರ್ಯಗ್ಯೋನಿಯನ್ನು ಹೊಂದಿ, ಪಾಪವನ್ನು ಕಳೆದುಕೊಂಡು, ಒಂದು ಪಕ್ಷ ಮನುಷ್ಯಜನ್ಮವನ್ನು ಪಡೆದರೆ ಅಲ್ಲಿ ಅವರು ವಧೆ, ಬಂಧನ ಮೊದಲಾದ ಅನಿಷ್ಟಗಳನ್ನು ಅನುಭವಿಸುತ್ತಾರೆ. ದರಿದ್ರರಾಗಲೀ ಅಥವಾ ಧನಾಢ್ಯರಾಗಲೀ ತಾವು ಮಾಡಿದ ಕರ್ಮದ ಫಲವನ್ನು ಅನುಭವಿಸುತ್ತಾರೆ. ಪ್ರಾಣ ಬಾಧೆಯನ್ನು ಮಾಡಿದ ಪಾಪದ ಫಲವಾದ ದುಃಖವನ್ನು ಬಾಂಧವರ ಜೊತೆಯಾಗಲೀ ಅಥವಾ ಒಬ್ಬನೇ ಆಗಲಿ ಹೊಂದಿ ಪುತ್ರ-ಪತ್ನೀ ವಿನಾಶವನ್ನಾಗಲೀ ಅಥವಾ ಶಸ್ತ್ರದಿಂದ ವಧೆಯನ್ನಾಗಲೀ ಹೊಂದುತ್ತಾರೆ.
ಉಮಾ
ಭಗವನ್ಮಾನುಷಾಃ ಕೇಚಿದ್ ರಾಜಭಿರ್ನೀತಿಕೋವಿದೈಃ |
ದಂಡ್ಯಂತೇ ಮಾನುಷೇ ಲೋಕೇ ಮಾನುಷಾಃ ಸತತಂ ಭುವಿ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ॥36॥
ಉಮಾ ಭಗವಂತನೇ, ಲೋಕದಲ್ಲಿ ಕೆಲವು ಮನುಷ್ಯರು ರಾಜನೀತಿ ಕೋವಿದರು ಮೊದಲಾದವರಿಂದ ಸತತವಾಗಿ ದಂಡನೆಗೆ ಒಳಗಾಗುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದೆಂದು ನನಗೆ ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಮನುಜಾಂಶ್ಚೇತರಾಂಶ್ಚ ವಾ |
ಕ್ಲಿಷ್ಟಘಾತೇನ ನಿಘ್ನಂತಿ ಪ್ರಾಣಾನ್ ಪ್ರಾಣಿಷು ನಿರ್ದಯಾಃ |
ಆಸುರಾ ಘೋರಕರ್ಮಾಣಃ ಕ್ರೂರದಂಡವಧಪ್ರಿಯಾಃ ॥37॥
ಯೇ ದಂಡಯಂತ್ಯದಂಡ್ಯಾಂಸ್ತು ರಾಜಾನಃ ಕೋಪಮೋಹಿತಾಃ |
ಹಿಂಸಾವಿಹಾರಾಃ ಪುರುಷಾ ಮಾಂಸಾದಾ ನಾಸ್ತಿಕಾಃ ಶುಭೇ ॥38॥
ಕೇಚಿತ್‌ಸ್ತ್ರೀಪುರುಷಘ್ನಾಶ್ಚ ಗುರುಘ್ನಾಶ್ಚ ತಥಾ ಪ್ರಿಯೇ |
ಏವಂಯುಕ್ತಸಮಾಚಾರಾಃ ಪ್ರಾಣಿಧರ್ಮಗತಾಃ ಪುನಃ ॥39॥
ದಂಡಿತಾ ಯಮದಂಡೇನ ನಿರಯಸ್ಥಾಶ್ಚಿರಂ ಪ್ರಿಯೇ |
ಪೂರ್ವದೇಹಕೃತಂ ಕರ್ಮ ಭುಂಜತೇ ತದಿಹ ಪ್ರಜಾಃ ॥40॥
ಮಹೇಶ್ವರ ಎಲೌ ದೇವಿಯೇ, ಯಾವ ಪುರುಷರು ಹಿಂದೆ ಪುರುಷರನ್ನಾಗಲೀ ಪ್ರಾಣಿಗಳನ್ನಾಗಲೀ ನಿರ್ದಯವಾಗಿ ವಿಚಿತ್ರ ಹಿಂಸೆಗೆ ಗುರಿ ಮಾಡಿರುತ್ತಾರೆಯೋ ಅಂತಹ ಅಸುರರೂ, ಘೋರಕರ್ಮವನ್ನು ಮಾಡುವವರೂ, ಕ್ರೂರವಾದ ಶಿಕ್ಷೆ ಮತ್ತು ವಧೆಗಳನ್ನು ಮಾಡುವುದರಲ್ಲಿ ಸಂತೋಷ ಪಡುವವರೂ, ಆದ ಯಾವ ರಾಜರು ಕೋಪದಿಂದ ಮೋಹಿತರಾಗಿ ಶಿಕ್ಷೆಗೆ ಅನರ್ಹರಾದವರಿಗೆ ಶಿಕ್ಷೆಯನ್ನು ಕೊಟ್ಟಿರುತ್ತಾರೆಯೋ, ಹಿಂಸೆಯನ್ನೇ ವಿಹಾರವೆಂದು ತಿಳಿಯುತ್ತಾರೆಯೋ, ಮಾಂಸಭಕ್ಷಕರೋ, ನಾಸ್ತಿಕರೋ, ಯಾರು ಸ್ತ್ರೀಯನ್ನಾಗಲೀ, ಪುರುಷನನ್ನಾಗಲೀ, ಗುರುವನ್ನಾಗಲೀ ಕೊಂದಿರುತ್ತಾರೆಯೋ ಅಂತಹ ನಡತೆಯುಳ್ಳವರು ಪುನಃ ಪ್ರಾಣಿಧರ್ಮವನ್ನು ಹೊಂದಿದವರಾಗಿ, ಯಮದಂಡದಿಂದ ನರಕದಲ್ಲಿ ಚಿರಕಾಲ ಶಿಕ್ಷೆಯನ್ನು ಅನುಭವಿಸಿ, ಈ ಭೂಮಿಗೆ ಬಂದು ಹಿಂದಿನ ದೇಹದಲ್ಲಿ ಮಾಡಿದ ಕರ್ಮದ ಫಲವನ್ನು ಅನುಭವಿಸುತ್ತಾರೆ.
ಇಹೈವ ಯತ್‌ಕೃತಂ ಕರ್ಮ ತತ್‌ಪರತ್ರ ಫಲತ್ಯುತ |
ಏಷಾ ವ್ಯವಸ್ಥಿತಿರ್ದೇವಿ ಮಾನುಷೇಷ್ವೇವ ದೃಶ್ಯತೇ ॥41॥
ಭೂಲೋಕದಲ್ಲಿ ಮಾಡಿದ ಕರ್ಮದ ಫಲವು ಇಲ್ಲಿಯೇ ಇನ್ನೊಂದು ಜನ್ಮದಲ್ಲಿ ಅನುಭವಿಸಲ್ಪಡುತ್ತದೆ. ಎಲೌ ದೇವಿಯೇ, ಈ ವ್ಯವಸ್ಥೆಯು ಮನುಷ್ಯರಲ್ಲಿ ಮಾತ್ರ ಕಂಡು ಬರುತ್ತದೆ (ಮಾಡಿದ ಕರ್ಮದ ಬಹುಭಾಗದ ಫಲವನ್ನು ನರಕದಲ್ಲಿ ಅನುಭವಿಸಿ ಪುನಃ ಭೂಮಿಗೆ ಬಂದು ಇಲ್ಲಿಯೇ ಅನುಭವಿಸುತ್ತಾರೆ).
ನ ಋಷೀಣಾಂ ನ ದೇವಾನಾಮಮೃತತ್ವಾತ್ ತಪೋಬಲಾತ್ |
ತೈರೇಕೇನ ಶರೀರೇಣ ಭುಜ್ಯತೇ ಕರ್ಮಣಃ ಫಲಮ್ ॥42॥
ದೇವತೆಗಳು ಅಮರರಾದುದರಿಂದ ಮತ್ತು ಋಷಿಗಳು ತಪೋಬಲದಿಂದ ಕೂಡಿದವರಾದ್ದರಿಂದ ಅವರು ಆ ಶರೀರದಲ್ಲಿ ಮಾಡಿದ ಕರ್ಮಫಲವನ್ನು ಆ ಶರೀರದಲ್ಲಿಯೇ ಭುಂಜಿಸುತ್ತಾರೆ.
ನ ತಥಾ ಮಾನುಷಾಣಾಂ ಸ್ಯಾದಂತರ್ಧಾಯ ಭವೇದ್ಧಿ ತತ್ ॥43॥
ಮನುಷ್ಯರಿಗೆ ಹಾಗಾಗುವುದಿಲ್ಲ. ದೇಹಾಂತರದಲ್ಲಿಯೇ ಆ ಕರ್ಮಫಲವನ್ನು ಅನುಭವಿಸುತ್ತಾರೆ.

ಉಮಾ
ಕಿಮರ್ಥಂ ಮಾನುಷಾ ಲೋಕೇ ದಂಡ್ಯಂತೇ ಪೃಥಿವೀಶ್ವರೈಃ |
ಕೃತಾಪರಾಧಮುದ್ದಿಶ್ಯ ಹಂತಾ ಹರ್ತಾಽಯಮಿತ್ಯುತ ॥44॥
ಉಮಾ ಲೋಕದಲ್ಲಿ ಮನುಷ್ಯರು, ರಾಜರಿಂದ ಇವನು ಕೊಂದವನು, ಇವನು ಕದ್ದವನು ಎಂದು ಅವರು ಮಾಡಿದ ಅಪರಾಧವನ್ನು ನಿಮಿತ್ತೀಕರಿಸಿ ಏಕೆ ಶಿಕ್ಷೆಯನ್ನು ಹೊಂದುತ್ತಾರೆ?
ಪುತ್ರಾರ್ಥೀ ಪುತ್ರಕಾಮೇಷ್ಟ್ಯಾ ಇಹೈವ ಲಭತೇ ಸುತಾನ್ |
ತೈರೇವ ಹಿ ಶರೀರೇಣ ಭುಂಜಾನಾಃ ಕರ್ಮಣಾಂ ಫಲಮ್ ॥45॥
ದೃಶ್ಯಂತೇ ಮಾನುಷೇ ಲೋಕೇ ತದ್ಭವಾನನುಮನ್ಯತೇ |
ಏತನ್ಮೇ ಸಂಶಯಸ್ಥಾನಂ ತನ್ಮೇ ತ್ವಂ ಛೇತ್ತುಮರ್ಹಸಿ ॥46॥
ಪುತ್ರಾರ್ಥಿಯಾದವನು ಪುತ್ರಕಾಮೇಷ್ಠಿಯನ್ನು ಮಾಡಿ ಇಲ್ಲಿಯೇ ಈ ಜನ್ಮದಲ್ಲಿಯೇ ಫಲವನ್ನು ಪಡೆಯುತ್ತಾನೆ. ಆದ್ದರಿಂದ ಮನುಷ್ಯರೂ ಸಹ ತಾವು ಮಾಡಿದ ಕರ್ಮದ ಫಲವನ್ನು ಅದೇ ಜನ್ಮದಲ್ಲಿಯೇ ಪಡೆಯುವುದು ಕಂಡುಬರುತ್ತದೆ. ಇದು ನಿನಗೂ ಸಮ್ಮತವಾಗಿದೆ. ಆದ್ದರಿಂದ ನನ್ನ ಸಂಶಯವನ್ನು ಪರಿಹರಿಸಬೇಕು (ಮನುಷ್ಯರು ಜನ್ಮಾಂತರದಲ್ಲಿ ಅನುಭವಿಸುತ್ತಾರೆ ಎಂದು ಹೇಳಿದ್ದೀಯೆ. ಆದರೆ ಈ ಜನ್ಮದಲ್ಲಿಯೇ ಅನುಭವಿಸುವುದು ಕಂಡುಬರುತ್ತದೆ. ಆದ್ದರಿಂದ ನನಗೆ ಉಂಟಾದ ಸಂಶಯವನ್ನು ಪರಿಹರಿಸಬೇಕು).
ಮಹೇಶ್ವರಃ
ಸ್ಥಾನೇ ಸಂಶಯಿತಂ ದೇವಿ ತತ್ತ್ವಂ ಶೃಣು ಸಮಾಹಿತಾ |
ಕರ್ಮ ಕರ್ಮಫಲಂ ಚೇತಿ ಯುಗಪದ್ಭುವಿ ನೇಷ್ಯತೇ ॥47॥
ಮಹೇಶ್ವರ ಎಲೌ ದೇವಿಯೇ, ನಿನ್ನ ಸಂಶಯವು ಬಹಳ ನ್ಯಾಯವಾಗಿದೆ. ಸಮಾಧಾನದಿಂದ ತತ್ತ್ವವನ್ನು ಕೇಳು. ಕರ್ಮ ಮತ್ತು ಅದರ ಫಲ ಎರಡೂ ಒಂದೇ ಕಾಲದಲ್ಲಿ ಉಂಟಾಗುವುದಿಲ್ಲ.
ಯತ್ತ್ವಯಾಽಭಿಹಿತಂ ದೇವಿ ಹಂತಾ ಹರ್ತಾಽಯಮಿತ್ಯಪಿ |
ತೇಷಾಂ ತತ್ಪೂರ್ವಕಂ ಕರ್ಮ ದಂಡ್ಯತೇ ಯತ್ರ ರಾಜಭಿಃ ॥48॥
ದೇವಿಯೇ, ಇವನು ಕಳ್ಳ, ಇವನು ಕೊಲೆಗಡುಕನೆಂದು ಹೇಳಿ ರಾಜರು ದಂಡಿಸುತ್ತಾರಷ್ಟೇ? ಅಲ್ಲಿಯೂ ಕೂಡ ರಾಜರು ಅವರು ಹಿಂದೆ ಮಾಡಿದ ಕರ್ಮಗಳಿಗೆ ಶಿಕ್ಷೆಯನ್ನು ಕೊಡುತ್ತಾರೆಯೇ ಹೊರತು ಆ ಜನ್ಮದಲ್ಲಿ ಮಾಡಿದ ಕರ್ಮಗಳಿಗೆ ಅದು ಶಿಕ್ಷೆಯಲ್ಲ.
ಐಹಿಕಂ ದುಷ್ಕೃತಂ ತೇಷಾಂ ಹೇತುರ್ಭವತಿ ಶಾಸನೇ |
ಅಪರಾಧಾಪದೇಶೇನ ರಾಜಾ ದಂಡಯತಿ ಪ್ರಜಾಃ ॥49॥
ರಾಜರು ಅವರಿಗೆ ಶಿಕ್ಷೆಯನ್ನು ಕೊಡುವುದಕ್ಕೆ ಆ ಜನ್ಮದಲ್ಲಿಯೇ ಮಾಡಿದ ಒಂದು ಅಪರಾಧವು ನಿಮಿತ್ತವಾಗುತ್ತದೆ ಅಷ್ಟೇ. ಆ ಅಪರಾಧವನ್ನು ನಿಮಿತ್ತ ಮಾಡಿಕೊಂಡು ರಾಜರು ದಂಡನೆಯನ್ನು ಕೊಡುತ್ತಾರೆ.
ಇಹ ಲೋಕೇ ವ್ಯವಸ್ಥಾರ್ಥಂ ರಾಜಭಿರ್ದಂಡನಂ ಸ್ಮೃತಮ್ |
ಉದ್ವೇಜನಾರ್ಥಂ ಶೇಷಾಣಾಮಪರಾಧಂ ತಮುದ್ದಿಶನ್ ॥50॥
ಈ ಲೋಕದಲ್ಲಿ ಕ್ಷೇಮದ ವ್ಯವಸ್ಥೆಯನ್ನು ಮಾಡಲು ಮತ್ತು ಅಪರಾಧವನ್ನು ಮಾಡುವ ಮನಸ್ಸನ್ನು ಹೊಂದಿರುವವರನ್ನು ಭಯಗೊಳಿಸಲು ರಾಜರು ಶಿಕ್ಷೆಯನ್ನು ಕೊಡುತ್ತಾರೆ.
ಪುರಾಕೃತಫಲಂ ದಂಡೋ ದಂಡ್ಯಮಾನಸ್ಯ ತದ್ ಧ್ರುವಮ್ |
ಪ್ರಾಗೇವ ಚ ಮಯಾ ಪ್ರೋಕ್ತಂ ತತ್ರ ನಿಃಸಂಶಯಾ ಭವ ॥51॥
ಆದರೆ ರಾಜರು ಅಪರಾಧವನ್ನು ಮಾಡಿದವರಿಗೆ ಕೊಡುವ ದಂಡವು ಆ ಜನ್ಮದಲ್ಲಿ ಮಾಡಿದ (ಲೋಕವು ತಿಳಿದಿರುವ) ಅಪರಾಧಕ್ಕಾಗಿ ಅಲ್ಲ. ಹಿಂದಿನ ಜನ್ಮದಲ್ಲಿ ಮಾಡಿದ ಅಪರಾಧಕ್ಕಾಗಿಯೇ ಇಲ್ಲಿ ಶಿಕ್ಷೆಯನ್ನು ಅನುಭವಿಸುತ್ತಾರೆ. ಇದನ್ನು ನಾನು ಮೊದಲೇ ಹೇಳಿದ್ದೇನೆ. ಈ ವಿಷಯದಲ್ಲಿ ಸಂಶಯವನ್ನು ಮಾಡಬೇಡ.
ಉಮಾ
ಭಗವನ್ ಭುವಿ ಮರ್ತ್ಯಾನಾಂ ದಂಡಿತಾನಾಂ ನರೇಶ್ವರೈಃ |
ದಂಡೇನೈವ ತು ತೇನೇಹ ಪಾಪನಾಶೋ ಭವೇನ್ನ ವಾ ॥52॥
ಏತನ್ಮಯಾ ಸಂಶಯಿತಂ ತದ್ಭವಾಂಶ್ಚೇತ್ತುಮರ್ಹತಿ ॥53॥
ಉಮಾ ಭಗವಂತನೇ, ರಾಜರಿಂದ ದಂಡಿತರಾದ ಪುರುಷರಿಗೆ ಆ ದಂಡದಿಂದಲೇ ಪಾಪನಾಶವು ಉಂಟಾಗುತ್ತದೆಯೋ, ಇಲ್ಲವೋ? ಈ ನನ್ನ ಸಂಶಯವನ್ನು ನೀನು ಪರಿಹರಿಸಬೇಕು.
ಮಹೇಶ್ವರಃ
ಸ್ಥಾನೇ ಸಂಶಯಿತಂ ದೇವಿ ಶೃಣು ತತ್ತ್ವಂ ಸಮಾಹಿತಾ ॥53॥
ಮಹೇಶ್ವರ ದೇವಿಯೇ, ನೀನು ಸಂಶಯಪಟ್ಟಿರುವುದು ಯೋಗ್ಯವಾಗಿದೆ. ಸಮಾಧಾನದಿಂದ ತತ್ತ್ವವನ್ನು ಕೇಳು.
ಯೇ ನೃಪೈರ್ದಂಡಿತಾ ಭೂಮಾವಪರಾಧಾಪದೇಶತಃ |
ಯಮಲೋಕೇ ನ ದಂಡ್ಯಂತೇ ತತ್ರ ತೇ ಯಮದಂಡನೈಃ ॥54॥
ಈ ಜನ್ಮದಲ್ಲಿ ಮಾಡಿದ ಅಪರಾಧದ ವ್ಯಾಜದಿಂದ ರಾಜರಿಂದ ದಂಡಿತರಾದವರು ಯಮಲೋಕದಲ್ಲಿ ಆ ಅಪರಾಧಕ್ಕಾಗಿ ಯಮಶಿಕ್ಷೆಯನ್ನು ಹೊಂದುವುದಿಲ್ಲ.
ಅದಂಡಿತಾ ವಾ ಯೇ ಮಿಥ್ಯಾ ಮರ್ತ್ಯಾ ವಾ ದಂಡಿತಾ ಭುವಿ |

ತಾನ್ ಯಮೋ ದಂಡಯತ್ಯೇವ ಸ ಹಿ ವೇದ ಕೃತಾಕೃತಮ್ |
ನಾತಿಕ್ರಮೇದ್ ಯಮಂ ಕಶ್ಚಿತ್ ಕರ್ಮ ಕೃತ್ವೇಹ ಮಾನುಷಃ ॥55॥
ಭೂಮಿಯಲ್ಲಿ ಯಾರು ದಂಡಿತರಾಗಿದ್ದಾರೆಯೋ ಅಥವಾ ಅದಂಡಿತರಾಗಿದ್ದಾರೆಯೋ ಅಥವಾ ಸುಳ್ಳಾಗಿ ದಂಡಿತರಾಗಿದ್ದಾರೆಯೋ ಅವರನ್ನು ಯಮನು ದಂಡಿಸಿಯೇ ತೀರುತ್ತಾನೆ. ಅವರು ಮಾಡಿದುದನ್ನೂ ಮಾಡದೆ ಇದುದನ್ನೂ ಎಲ್ಲವನ್ನೂ ಯಮನು ತಿಳಿದಿರುವನಷ್ಟೆ? ಕರ್ಮವನ್ನು ಮಾಡಿದ ಯಾವುದೇ ಮನುಷ್ಯನು ಯಮನನ್ನು ಎಂದೂ ಉಲ್ಲಂಘಿಸಲಾರ.
ರಾಜಾ ಯಮಶ್ಚ ಕುರ್ವಾತೇ ದಂಡಮಾತ್ರಂ ತು ಶೋಭನೇ |
ಉಭಾಭ್ಯಾಂ ಯಮರಾಜಭ್ಯಾಂ ದಂಡಿತೋಽದಂಡಿತೋಽಪಿ ವಾ |
ಪಶ್ಚಾತ್ಕರ್ಮಫಲಂ ಭುಂಕ್ತೇ ನರಕೇ ಮಾನುಷೇಷು ವಾ ॥56॥
ಎಲೌ ಶೋಭನೆಯೇ, ರಾಜ ಮತ್ತು ಯಮರಿಬ್ಬರೂ ಶಿಕ್ಷೆಯನ್ನು ಮಾತ್ರ ಕೊಡುತ್ತಾರೆ. ಅವರಿಬ್ಬರಿಂದ ದಂಡಿತನಾದವನು ಅಥವಾ ಅದಂಡಿತನಾದವನೂ ಸಹ ಅನಂತರ ನರಕದಲ್ಲಾಗಲೀ, ಮನುಷ್ಯಲೋಕದಲ್ಲಾಗಲೀ ಕರ್ಮದ ಫಲವನ್ನು ಅನುಭವಿಸುತ್ತಾನೆ (ರಾಜನಿಗೆ ಕಾಣುವ ಅಪರಾಧದ ವಿಷಯದಲ್ಲಿ ರಾಜನು ಶಿಕ್ಷೆಯನ್ನು ಕೊಡುತ್ತಾನೆ. ರಾಜನು ಕೊಡದಿದ್ದರೆ ಯಮನು ಶಿಕ್ಷೆಯನ್ನು ಕೊಡುತ್ತಾನೆ. ಆದರೆ ಲೋಕಕ್ಕೆ ಕಾಣದಿದ್ದ ಅದರ ಹಿನ್ನೆಲೆಯ ಫಲವನ್ನು ಮಾತ್ರ ನರಕದಲ್ಲಾಗಲೀ ಅಥವಾ ಪುನಃ ಮನುಷ್ಯ ಲೋಕದಲ್ಲಾಗಲೀ ಅನುಭವಿಸಬೇಕು.
ನಾಸ್ತಿ ಕರ್ಮಫಲಚ್ಛೇತ್ತಾ ಕಶ್ಚಿಲ್ಲೋಕತ್ರಯೇಽಪಿ ಚ |
ಇತಿ ತೇ ಕಥಿತಂ ಸರ್ವಂ ನಿರ್ವಿಶಂಕಾ ಭವ ಪ್ರಿಯೇ ॥57॥
ಮೂರುಲೋಕಗಳಲ್ಲಿ ಹುಡುಕಿದರೂ ಕರ್ಮಫಲವನ್ನು ಅನುಭವಿಸದಂತೆ ಮಾಡುವವರು ಯಾರೂ ಇಲ್ಲ. ಪ್ರಿಯೆಯೇ, ಇದನ್ನು ನಿನಗೆ ಹೇಳಿದ್ದೇನೆ. ನಿನ್ನ ಸಂಶಯಗಳನ್ನು ಬಿಡು.
ಉಮಾ
ಕಿಮರ್ಥಂ ದುಷ್ಕೃತಂ ಕೃತ್ವಾ ಮಾನುಷಾ ಭುವಿ ನಿತ್ಯಶಃ |
ಪುನಸ್ತತ್ಕರ್ಮನಾಶಾಯ ಪ್ರಾಯಶ್ಚಿತ್ತಾನಿ ಕುರ್ವತೇ ॥58॥
ಉಮಾ ಮನುಷ್ಯರು ಭೂಮಿಯಲ್ಲಿ ದುಷ್ಕರ್ಮವನ್ನು ಮಾಡಿ ಅದರ ಫಲನಾಶಕ್ಕಾಗಿ ಯಾವಾಗಲೂ ಏತಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡುತ್ತಾರೆ.
ಸರ್ವಪಾಪಹರಂ ಚೇತಿ ಹಯಮೇಧಂ ವದಂತಿ ಚ |
ಪ್ರಾಯಶ್ಚಿತ್ತಾನಿ ಚಾನ್ಯಾನಿ ಪಾಪನಾಶಾಯ ಕುರ್ವತೇ |
ತಸ್ಮಾನ್ಮೇ ಸಂಶಯೋ ಜಾತಸ್ತ್ವಂ ತಂ ಚ್ಛೇತ್ತುಮಿಹಾರ್ಹಸಿ ॥59॥
ಅಶ್ವಮೇಧವು ಸರ್ವಪಾಪಗಳನ್ನೂ ನಾಶಗೊಳಿಸುತ್ತದೆ ಎಂದು ಹೇಳುತ್ತಾರೆ. ಉಳಿದ ಪ್ರಾಯಶ್ಚಿತ್ತವನ್ನೂ ಸಹ ಪಾಪನಾಶಕ್ಕಾಗಿಯೇ ಮಾಡುತ್ತಾರೆ. ಆದ್ದರಿಂದ ನನಗೆ ಸಂಶಯವುಂಟಾಗಿದೆ. ಅದನ್ನು ನೀನು ಪರಿಹರಿಸಬೇಕು.
ಮಹೇಶ್ವರಃ
ಸ್ಥಾನೇ ಸಂಶಯಿತಂ ದೇವಿ ಶೃಣು ತತ್ತ್ವಂ ಸಮಾಹಿತಾ |
ಸಂಶಯೋ ಹಿ ಮಹಾನೇವ ಪೂರ್ವೇಷಾಂ ಚ ಮನೀಷಿಣಾಮ್ ॥60॥
ಮಹೇಶ್ವರ ದೇವಿಯೇ, ನಿನ್ನ ಸಂಶಯವು ಯೋಗ್ಯವಾಗಿದೆ. ತತ್ತ್ವವನ್ನು ಕೇಳು. ಈ ವಿಷಯದಲ್ಲಿ ಪ್ರಾಚೀನರಾದ ಮೇಧಾವಿಗಳಿಗೂ ಸಂಶಯವಿದ್ದಿತು.
ದ್ವಿಧಾ ತು ಕ್ರಿಯತೇ ಪಾಪಂ ಸದ್ಭಿಶ್ಚಾಸದ್ಭಿರೇವ ಚ |
ಅಭಿಸಂಧಾಯ ವಾ ನಿತ್ಯಮನ್ಯಥಾ ವಾ ಯದೃಚ್ಛಯಾ ॥61॥
ಸಜ್ಜನರಾಗಲೀ, ಅಸಜ್ಜನರಾಗಲೀ ಎರಡು ರೀತಿಯಲ್ಲಿ ಕರ್ಮಗಳನ್ನು ಮಾಡುತ್ತಾರೆ. ಕೆಲವು ನಿತ್ಯವೂ ಉದ್ದೇಶಪೂರ್ವಕವಾಗಿ ಮಾಡುವ ಕರ್ಮಗಳು. ಕೆಲವು ಅಕಸ್ಮಾತ್ತಾಗಿ ನಡೆಯುವ ಕರ್ಮಗಳು.
ಕೇವಲಂ ಚಾಭಿಸಂಧಾಯ ಸಂರಂಭಾಚ್ಚ ಕರೋತಿ ಯತ್ |
ಕರ್ಮಣಸ್ತಸ್ಯ ನಾಶಸ್ತು ನ ಕಥಂಚನ ವಿದ್ಯತೇ ॥62॥
ಸಂಕಲ್ಪವನ್ನು ಮಾಡಿ ಕೋಪದಿಂದ ಉದ್ದೇಶಪೂರ್ವಕವಾಗಿ ಮಾಡಿದ ಕರ್ಮದ ಫಲವು ಎಂದೂ ನಾಶವನ್ನು ಹೊಂದುವುದಿಲ್ಲ.
ಅಭಿಸಂಧಿಕೃತಸ್ಯೇಹ ನೈವ ನಾಶೋಽಸ್ತಿ ಕರ್ಮಣಃ |
ಅಶ್ವಮೇಧಸಹಸ್ರೈರ್ವಾ ಪ್ರಾಯಶ್ಚಿತ್ತಶತೈರಪಿ ॥63॥
ಪಾಪಕರ್ಮದ ಫಲವನ್ನು ಉದ್ದೇಶ ಮಾಡಿ ಅಂತಹ ಪಾಪಕರ್ಮವನ್ನು ಮಾಡಿದರೆ ಸಹಸ್ರ ಅಶ್ವಮೇಧಗಳಿಂದಾಗಲೀ, ನೂರು ಪ್ರಾಯಶ್ಚಿತ್ತಗಳಿಂದಾಗಲೀ ಅದು ನಾಶವನ್ನು ಹೊಂದುವುದಿಲ್ಲ.
ಅನ್ಯಥಾ ಯತ್ಕೃತಂ ಪಾಪಂ ಪ್ರಮಾದಾದ್ವಾ ಯದೃಚ್ಛಯಾ |
ಪ್ರಾಯಶ್ಚಿತ್ತಾಶ್ವಮೇಧಾಭ್ಯಾಂ ಶೋಧನಾತ್ ತು ಪ್ರಣಶ್ಯತಿ ॥64॥
ಇನ್ನು ಪ್ರಮಾದದಿಂದ ಅಥವಾ ಅಕಸ್ಮಾತ್ತಾಗಿ ಮಾಡಿದ ಪಾಪಕರ್ಮಗಳು ಪ್ರಾಯಶ್ಚಿತ್ತ, ಅಶ್ವಮೇಧಗಳಿಂದ ಶೋಧನೆಯನ್ನು ಮಾಡುವುದರಿಂದ ನಾಶವನ್ನು ಹೊಂದುತ್ತವೆ.
ಲೋಕಸಂವ್ಯವಹಾರಾರ್ಥಂ ಪ್ರಾಯಶ್ಚಿತ್ತಾದಿರಿಷ್ಯತೇ |
ವಿದ್ಧ್ಯೇವಂ ಪಾಪಕೇ ಕಾರ್ಯೇ ನಿರ್ವಿಶಂಕಾ ಭವ ಪ್ರಿಯೇ ॥65॥
ಇತಿ ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥66॥

ಲೋಕದಲ್ಲಿ ಸುವ್ಯವಸ್ಥೆಯನ್ನು ಉಂಟುಮಾಡಲು ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ. ಪಾಪಕಾರ್ಯದ ವಿಷಯದಲ್ಲಿ ಹೀಗೆ ತಿಳಿಯುವವಳಾಗು. ಪ್ರಿಯೆಯೇ, ಸಂಶಯವನ್ನು ಹೊಂದಬೇಡ. ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಉಮಾ
ಭಗವನ್ ದೇವದೇವೇಶ ಮಾನುಷಾಶ್ಚೇತರಾ ಅಪಿ |
ಮ್ರಿಯಂತೇ ಬಹುಧಾ ಲೋಕೇ ಕಾರಣಾಕಾರಣಾದಪಿ |
ಕೇನ ಕರ್ಮವಿಪಾಕೇನ ತನ್ಮೇ ಶಂಸಿತುಮರ್ಹಸಿ ||67||
ಉಮಾ ಭಗವಂತನೇ, ದೇವದೇವೇಶನೇ, ಲೋಕದಲ್ಲಿ ಮನುಷ್ಯರು ಮತ್ತು ಇತರ ಪ್ರಾಣಿಗಳು ರೋಗಾದಿ ಕಾರಣದಿಂದಲೂ ಅಥವಾ ಇತರ ಕಾರಣಗಳಿಂದಲೂ ಅನೇಕ ರೀತಿಯಲ್ಲಿ ಮರಣವನ್ನು ಹೊಂದುತ್ತಾರೆ. ಯಾವ ಕರ್ಮವಿಪಾಕದಿಂದ ಹೀಗಾಗುವುದೆಂದು ಹೇಳಬೇಕು.
ಮಹೇಶ್ವರಃ
ಯೇ ಪುರಾ ಮನುಜಾ ದೇವಿ ಕಾರಣಾಕಾರಣಾದಪಿ |
ಯಥಾಽಸುಭಿರ್ವಿಯೋಜ್ಯಂತೇ ಪ್ರಾಣಿನಃ ಪ್ರಾಣಿನಿರ್ದಯೈಃ ||68||
ತಥೈವ ತೇ ಪ್ರಾಪ್ನುವಂತಿ ಯಥೈವಾತ್ಮಕೃತಂ ಫಲಮ್ |
ವಿಷದಸ್ತು ವಿಷೇಣೈವ ಶಸ್ತ್ರೈಃ ಶಸ್ತ್ರೇಣ ಘಾತಕಾಃ ||69||
ಮಹೇಶ್ವರ ದೇವಿಯೇ, ಯಾವ ಮನುಷ್ಯರು ಹಿಂದೆ ಕಾರಣದಿಂದಾಗಲೀ ಅಥವಾ ನಿಷ್ಕಾರಣದಿಂದಾಗಲೀ ಪ್ರಾಣಿಗಳಲ್ಲಿ ದಯೆಯನ್ನು ಹೊಂದದೆ ಪ್ರಾಣಿಗಳನ್ನು ಕೊಂದಿರುತ್ತಾರೆಯೋ ಅವರು ತಾವು ಮಾಡಿದ ಕರ್ಮದ ಫಲದ ಭಾಗವನ್ನು ಹಾಗೆಯೇ ಹೊಂದುತ್ತಾರೆ. ವಿಷವನ್ನು ಕೊಟ್ಟವನು ವಿಷದಿಂದಲೇ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಶಸ್ತ್ರದಿಂದ ಹೊಡೆದು ಕೊಂದವನು ಶಸ್ತ್ರಘಾತದಿಂದಲೇ ಮೃತನಾಗುತ್ತಾನೆ.
ಏವಮೇವ ಯಥಾ ಲೋಕೇ ಮಾನುಷಾನ್ ಘ್ನಂತಿ ಮಾನುಷಾಃ |
ಕಾರಣೇನೈವ ತೇ ತೇನ ತಥಾ ಸ್ವಪ್ರಾಣನಾಶನಮ್ |
ಪ್ರಾಪ್ನುವಂತಿ ಪುನರ್ದೇವಿ ನಾಸ್ತಿ ತತ್ರ ವಿಚಾರಣಾ ||70||
ಈ ರೀತಿಯಲ್ಲಿ ಲೋಕದಲ್ಲಿ ಮನುಷ್ಯರು ಮನುಷ್ಯರನ್ನು ಯಾವ ರೀತಿಯಲ್ಲಿ ಕೊಲ್ಲುತ್ತಾರೆಯೋ ಅದೇ ರೀತಿಯಲ್ಲಿ ಕೊಲ್ಲುವವರೂ ಸಹ ತಮ್ಮ ಪ್ರಾಣನಾಶವನ್ನು ಹೊಂದುತ್ತಾರೆ. ಎಲೌ ದೇವಿಯೇ, ಇದರಲ್ಲಿ ವಿಚಾರ ಮಾಡಬೇಕಾದ ಅವಶ್ಯಕತೆ ಇಲ್ಲ.
ಇತಿ ತೇ ಕಥಿತಂ ಸರ್ವಂ ಪಾಪಕರ್ಮಫಲಂ ಪ್ರಿಯೇ |
ಭೂಯಸ್ತ್ವವ ಸಮಾಸೇನ ಕಥಯಿಷ್ಯಾಮಿ ತಚ್ಛೃಣು ||71||
ಪ್ರಿಯೆಯೇ, ಪಾಪಕರ್ಮಗಳ ಫಲವನ್ನು ಎಲ್ಲವನ್ನೂ ಹೇಳಿದ್ದೇನೆ. ಪುನಃ ಸಂಕ್ಷೇಪವಾಗಿ ನಿನಗೆ ಹೇಳುವೆನು. ಅದನ್ನು ಕೇಳು.
ಸತ್ಯಂ ಪ್ರಮಾಣಕರಣಂ ನಿತ್ಯಮವ್ಯಭಿಚಾರಿ ಚ |
ಯೈಃ ಪುರಾ ಮನುಜೈರ್ದೇವಿ ಯಸ್ಮಿನ್ ಕಾಲೇ ಯಥಾ ಕೃತಮ್ ||72||
ಯೇನೈವ ಕಾರಣೇನಾಪಿ ಕರ್ಮ ಯತ್ತು ಶುಭಾಶುಭಮ್ |
ಕರ್ಮಣಃ ಫಲಮಾತ್ರಂ ತು ತೇನೈವ ಕಾರಣೇನ ತು ||73||
ಪ್ರಮಾಣವನ್ನು ಮಾಡುವವರಿಗೆ ಹೇಗೆ ನಿಯಮೇನ ಜಯ ಉಂಟಾಗುತ್ತದೆಯೋ ಹೇಗೆ ಅಪಜಯ ಉಂಟಾಗುವುದಿಲ್ಲವೋ ಅದರಂತೆಯೇ ನನ್ನ ಮಾತುಗಳು ಎಂದು ತಿಳಿ. ಯಾವ ಕಾರಣಗಳಿಂದ ಮನುಷ್ಯನು ಶುಭಕರ್ಮವನ್ನಾಗಲೀ, ಅಶುಭ ಕರ್ಮವನ್ನಾಗಲೀ ಮಾಡುತ್ತಾನೆಯೋ ಆ ಕರ್ಮದ ಫಲವನ್ನು ಅದೇ ಕಾರಣದಿಂದ ಅವನು ಹೊಂದುತ್ತಾನೆ (ಕಳ್ಳತನ ಮಾಡಿದವನು ತನ್ನ ವಸ್ತುವನ್ನು ಕಳ್ಳತನದಿಂದಲೇ ಕಳೆದುಕೊಳ್ಳುತ್ತಾನೆ. ಮೋಸ ಮಾಡಿದವನು ಮೋಸಮಾಡಲ್ಪಡುತ್ತಾನೆ).
ಪ್ರಾಪ್ನುವಂತಿ ನರಾಃ ಪ್ರೇತ್ಯ ನಿಃಸಂದೇಹಂ ಶುಭಾಶುಭಮ್ |
ಇತಿ ಸತ್ಯಂ ವಿಜಾನೀಹಿ ಲೋಕತಂತ್ರವಿಧಿಂ ಪ್ರತಿ ||74||
ಶುಭಾಶುಭ ಕರ್ಮವನ್ನು ಮಾಡಿದ ಮನುಷ್ಯರು ಮರಣಾನಂತರದಲ್ಲಿ ನಿಸ್ಸಂದೇಹವಾಗಿ ಅದರ ಫಲವನ್ನು ಹೊಂದುತ್ತಾರೆ. ಲೋಕದಲ್ಲಿ ಹೀಗೆ ನಡೆಯುತ್ತಿದೆ. ಇದು ಸತ್ಯ ಎಂದು ತಿಳಿ.
ಕರ್ಮ ಕೃತ್ವಾ ನರೋ ಭೋಕ್ತಾ ಸ ನಾಸ್ತಿ ದಿವಿ ವಾ ಭುವಿ |
ಗೃಹೀತುಂ ಚ ನ ಶಕ್ಯಂ ಹಿ ಸದೇವಾಸುರಮಾನುಷೈಃ ||75||
ಭೂಮಿಯಲ್ಲಾಗಲೀ, ಸ್ವರ್ಗದಲ್ಲಾಗಲೀ ಅಥವಾ ನರಕದಲ್ಲಾಗಲೀ ಕರ್ಮವನ್ನು ಮಾಡಿದ ಮನುಷ್ಯನು ಅದರ ಫಲವನ್ನು ಅನುಭವಿಸಿಯೇ ತೀರುತ್ತಾನೆ. ದೇವತೆಗಳಾಗಲೀ, ಅಸುರರಾಗಲೀ, ಮನುಷ್ಯರಾಗಲೀ ಆ ಕರ್ಮದ ಫಲವನ್ನು ಬದಲು ಮಾಡಲು ಸಾಧ್ಯವಿಲ್ಲ.
ಕರ್ಮಣಾ ಗ್ರಥಿತೋ ಲೋಕ ಆದಿಪ್ರಭೃತಿ ವರ್ತತೇ |
ಏತದುದ್ದೇಶತಃ ಪ್ರೋಕ್ತಂ ಕರ್ಮಪಾಕಫಲಂ ಪ್ರಿಯೇ ||76||
ಮೊದಲಿನಿಂದಲೂ ಲೋಕವು ಕರ್ಮದಿಂದ ಬದ್ಧವಾಗಿಯೇ ಇದೆ. ಪ್ರಿಯೆಯೇ, ಇದನ್ನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ.
ಯದನ್ಯಚ್ಚ ಮಯಾ ನೋಕ್ತಂ ಯಸ್ಮಿಂಸ್ತೇ ಕರ್ಮಸಂಗ್ರಹೇ |
ಬುದ್ಧಿತರ್ಕೇಣ ತತ್ಸರ್ವಂ ತಥಾ ವೇದಿತುಮರ್ಹಸಿ |
ಕಥಿತಂ ಶ್ರೋತುಕಾಮಾಯಾ ಭೂಯಃ ಶ್ರೋತುಂ ಕಿಮಿಚ್ಛಸಿ ||77||

ಈ ಕರ್ಮದ ವಿಷಯದಲ್ಲಿ ನಾನು ನಿನಗೆ ಏನು ಹೇಳಿಲ್ಲವೋ ಅದೆಲ್ಲವನ್ನೂ ನಿನ್ನ ಬುದ್ಧಿಯಿಂದ ಮತ್ತು ಯುಕ್ತಿಯಿಂದ ನೀನು ತಿಳಿದುಕೊಳ್ಳಬೇಕು. ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಉಮಾಮಹೇಶ್ವರಸಂವಾದೇ
ಸಪ್ತಾಧಿಕದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಏಳನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಎಂಟನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಕರ್ಮಫಲಭೋಗದಲ್ಲಿ ಮನುಷ್ಯರಿಗೂ ದೇವಾದಿಗಳಿಗೂ ಇರುವ ಅಂತರದ ಕಥನ
ಉಮಾ
ಭಗವನ್ ದೇವದೇವೇಶ ಲೋಕಪಾಲನಮಸ್ಕೃತ |
ಪ್ರಸಾದಾತ್ ತೇ ಮಹಾದೇವ ಶ್ರುತಾ ಮೇ ಕರ್ಮಣಾಂ ಗತಿಃ ॥1॥
ಉಮಾ ಭಗವಂತನೇ, ದೇವದೇವೇಶನೇ, ಲೋಕಪಾಲಕರಿಂದ ನಮಸ್ಕೃತನಾದವನೇ, ಮಹಾದೇವನೇ, ನಿನ್ನ ಅನುಗ್ರಹದಿಂದ ನಾನು ಕರ್ಮಗಳ ಗತಿಯನ್ನು ಕೇಳಿದ್ದೆನು.
ಸಂಗೃಹೀತಂ ಚ ತತ್ಸರ್ವಂ ತತ್ತ್ವತೋಽಮೃತಸನ್ನಿಭಮ್ |
ಕರ್ಮಣಾ ಗ್ರಥಿತಂ ಸರ್ವಮಿತಿ ವೇದ್ಮಿ ಶುಭಾಶುಭಮ್ ॥2॥
ಅಮೃತಪ್ರಾಯವಾದ ಅವೆಲ್ಲವನ್ನೂ ನಾನು ಗ್ರಹಿಸಿದ್ದೇನೆ. ಎಲ್ಲ ಶುಭಾಶುಭಗಳು ಕರ್ಮದಿಂದ ಉಂಟಾದವುಗಳು ಎಂದು ತಿಳಿದಿದ್ದೇನೆ.
ಗೋವತ್ಸವಚ್ಚ ಜನನೀಂ ನಿಮ್ನಂ ಸಲಿಲವತ್ ತಥಾ |
ಕರ್ತಾರಂ ಸ್ವಕೃತಂ ಕರ್ಮ ನಿತ್ಯಂ ತದನುಧಾವತಿ ॥3॥
ಕರುವು ತನ್ನ ತಾಯಿಯ ಬಳಿಗೆ ಹೋಗುವಂತೆ, ಜಲವು ತಗ್ಗು ಪ್ರದೇಶವನ್ನು ಕುರಿತು ಹರಿಯುವಂತೆ ಕರ್ಮವನ್ನು ಮಾಡಿದವನನ್ನು ಆ ಕರ್ಮವು ಯಾವಾಗಲೂ ಹಿಂಬಾಲಿಸುತ್ತದೆ.
ಕೃತಸ್ಯ ಕರ್ಮಣಶ್ಚೇಹ ನಾಶೋ ನಾಸ್ತೀತಿ ನಿಶ್ಚಯಃ |
ಅಶುಭಸ್ಯ ಶುಭಸ್ಯಾಪಿ ತದಪ್ಯುಪಗತಂ ಮಯಾ ॥4॥
ಮಾಡಿದ ಕರ್ಮವು ಶುಭವಾಗಲೀ ಅಥವಾ ಅಶುಭವಾಗಲೀ ಅದಕ್ಕೆ ನಾಶವಿಲ್ಲ ಎಂಬುದು ನಿಶ್ಚಿತವಾದುದು. ಅದನ್ನೂ ನಾನು ತಿಳಿದಿದ್ದೇನೆ.
ಭೂಯ ಏವ ಮಹಾದೇವ ವರದ ಪ್ರೀತಿವರ್ಧನ |
ಕರ್ಮಣಾಂ ಗತಿಮಾಶ್ರಿತ್ಯ ಸಂಶಯಾನ್ ಮೋಕ್ತುಮರ್ಹಸಿ ॥5॥
ಎಲೈ ವರದನೇ, ಮಹಾದೇವನೇ, ಪ್ರೀತಿವರ್ಧನನೇ, ಇನ್ನೂ ನನಗಿರುವ ಕರ್ಮಗಳ ಭೋಗದ ವಿಷಯದಲ್ಲಿ ಸಂಶಯವನ್ನು ಪರಿಹರಿಸಬೇಕು.
ಮಹೇಶ್ವರಃ
ಯತ್ತೇ ವಿವಕ್ಷಿತಂ ದೇವಿ ಗುಹ್ಯಮಪ್ಯಸಿತೇಕ್ಷಣೇ |
ತತ್ಸರ್ವಂ ನಿರ್ವಿಶಂಕಾ ತ್ವಂ ಪೃಚ್ಛ ಮಾಂ ಶುಭಲಕ್ಷಣೇ ॥6॥
ಮಹೇಶ್ವರ ಶುಭಲಕ್ಷಣೆಯೇ, ದೇವಿಯೇ, ಅಸಿತೇಕ್ಷಣೆಯೇ, ಯಾವ ಸಂಕೋಚವೂ ಇಲ್ಲದೆ ನೀನು ಕೇಳಬೇಕಾಗಿರುವ ಪ್ರಶ್ನೆಗಳನ್ನು ನನ್ನನ್ನು ಕೇಳು.
ಉಮಾ
ಏವಂ ವ್ಯವಸ್ಥಿತೇ ಲೋಕೇ ಕರ್ಮಣಾ ವೃಷಭಧ್ವಜ |
ಕೃತ್ವಾ ತತ್ ಪುರುಷಃ ಕರ್ಮ ಶುಭಂ ವಾ ಯದಿ ವೇತರತ್ ॥7॥
ಪ್ರೇತ್ಯ ದೇವ ಕದಾ ಭುಂಕ್ತೇ ಸ ಫಲಂ ಕರ್ಮಣಃ ಪುನಃ |
ಇಹ ವಾ ಪ್ರೇತ್ಯ ವಾ ದೇವ ತನ್ಮೇ ಶಂಸಿತುಮರ್ಹಸಿ ॥8॥
ಉಮಾ ಎಲೈ ವೃಷಭಧ್ವಜನೇ, ಈ ಲೋಕದಲ್ಲಿ ಕರ್ಮವು ವ್ಯವಸ್ಥಿತವಾಗಿರುವಾಗ ಪುರುಷನು ಶುಭವಾದ ಅಥವಾ ಅಶುಭವಾದ ಕರ್ಮವನ್ನು ಮಾಡಿ ಅದರ ಫಲವನ್ನು ಯಾವಾಗ ಮತ್ತು ಹೇಗೆ ಅನುಭವಿಸುತ್ತಾನೆ? ಎಲೈ ದೇವನೇ, ಈ ಜನ್ಮದಲ್ಲಿಯೇ ಅನುಭವಿಸುತ್ತಾನೆಯೇ ಅಥವಾ ಮರಣಾನಂತರದಲ್ಲಿ ಅನುಭವಿಸುತ್ತಾನೆಯೇ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಸ್ಥಾನೇ ಸಂಶಯಿತುಂ ದೇವಿ ತದ್ಧಿ ಗುಹ್ಯತಮಂ ಶೃಣು |
ತ್ವತ್ಪ್ರಿಯಾರ್ಥಂ ಪ್ರವಕ್ಷ್ಯಾಮಿ ದೇವಿ ಗುಹ್ಯಂ ಶುಭಾನನೇ ॥9॥
ಮಹೇಶ್ವರ ದೇವಿಯೇ, ನೀನು ಸಂಶಯವನ್ನು ಪಡುವುದು ಯೋಗ್ಯವಾಗಿದೆ. ನೀನು ಕೇಳಿದ ವಿಷಯವು ಅತ್ಯಂತ ರಹಸ್ಯವಾದುದು. ಶುಭಾನನೆಯೇ, ನಿನ್ನ ಮೇಲೆ ಪ್ರೀತಿಯಿಂದ ರಹಸ್ಯವಾದ ಅದನ್ನು ಹೇಳುವೆನು. ದೇವಿಯೇ ಅದನ್ನು ಕೇಳು.
ಪೂರ್ವದೇಹಕೃತಂ ಕರ್ಮ ಭುಂಜತೇ ತದಿಹ ಪ್ರಜಾಃ |

ಇಹೈವ ಯತ್ಕೃತಂ ಪುಂಸಾಂ ತತ್ಪರತ್ರ ಫಲಿಷ್ಯತಿ |
ಏಷಾ ವ್ಯವಸ್ಥಿತಿರ್ದೇವಿ ಮಾನುಷೇಷ್ವೇವ ದೃಶ್ಯತೇ ||10||
ಹಿಂದಿನ ದೇಹದಲ್ಲಿ ಮಾಡಿದ ಕರ್ಮದ ಫಲವನ್ನು ಪ್ರಜೆಗಳು ಇಂದಿನ ದೇಹದಲ್ಲಿ ಅನುಭವಿಸುತ್ತಾರೆ. ಈ ಜನ್ಮದಲ್ಲಿ ಮಾಡಿದ ಕರ್ಮದ ಫಲವನ್ನು ಮುಂದಿನ ಜನ್ಮಾಂತರದಲ್ಲಿ ಅನುಭವಿಸುವರು. ದೇವಿಯೇ, ಮನುಷ್ಯರಲ್ಲಿ ಈ ವ್ಯವಸ್ಥೆಯು ಶಾಸ್ತ್ರಗಳಲ್ಲಿ ದೃಷ್ಟವಾಗಿದೆ.
ದೇವಾನಾಮಸುರಾಣಾಂ ಚ ಅಮರತ್ವಾತ್ ತಪೋಬಲಾತ್ |
ಏಕೇನೈವ ಶರೀರೇಣ ಭುಜ್ಯತೇ ಕರ್ಮಣಾಂ ಫಲಮ್ |
ಮಾನುಷೈರ್ನ ತಥಾ ದೇವಿ ಅಂತರಂ ತ್ವೇತದಿಷ್ಯತೇ ||11||
ದೇವತೆಗಳು ಅಮರರಾಗಿರುವುದರಿಂದ ಮತ್ತು ಋಷಿಗಳು ತಪೋಬಲದಿಂದ ಕೂಡಿರುವುದರಿಂದ ಕರ್ಮವನ್ನು ಮಾಡಿದ ಶರೀರದಿಂದಲೇ ಅವರು ಕರ್ಮದ ಫಲವನ್ನು ಭೋಗಿಸುತ್ತಾರೆ. ಮನುಷ್ಯರು ಮಾತ್ರ ಹಾಗೆ ಭೋಗಿಸುವುದಿಲ್ಲ. ದೇವಿಯೇ, ಇದು ಮನುಷ್ಯರಿಗೂ ಮತ್ತು ದೇವತೆಗಳಿಗೂ ಇರುವ ಅಂತರ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅನುಶಾಸನಪರ್ವಣಿ ದಾನಧರ್ಮಪರ್ವಣಿ ಮಾನುಷಾಣಾಂ ದೇವಾದೀನಾಂ ಚ ಭೋಗೇ ಅಂತರಕಥನಂ ನಾಮ ಅಷ್ಟೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಎಂಟನೆಯ ಅಧ್ಯಾಯ ಮುಗಿಯಿತು.
* * * * *

ಇನ್ನೂರ ಒಂಬತ್ತನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಕರ್ಮಫಲಭೋಗದಲ್ಲಿ ಗ್ರಹಗಳ ತಟಸ್ಥತ್ವ ಮತ್ತು ಅಲ್ಪಾಯುಷ್ಯಾದಿಗಳಿಗೆ ನಿಮಿತ್ತಕಥನ

ಉಮಾ
ಭಗವನ್ ಭಗನೇತ್ರಘ್ನ ಮಾನುಷಾಣಾಂ ವಿಚೇಷ್ಟಿತಮ್ |
ಸರ್ವಮಾತ್ಮಕೃತಂ ಚೇತಿ ಶ್ರುತಂ ಮೇ ಭಗವನ್ಮತಮ್ ||1||
ಲೋಕೇ ಗ್ರಹಕೃತಂ ಸರ್ವಂ ಮತ್ವಾ ಕರ್ಮ ಶುಭಾಶುಭಮ್ |
ತದೇವ ಗ್ರಹನಕ್ಷತ್ರಂ ಪ್ರಾಯಶಃ ಪರ್ಯುಪಾಸತೇ |
ಏತಂ ಮೇ ಸಂಶಯಂ ದೇವ ತದ್ಗತಂ ಛೇತ್ತುಮರ್ಹಸಿ ||2||
ಉಮಾ ಭಗವಂತನೇ, ಭಗನೇತ್ರನಾಶಕನೇ, ಮನುಷ್ಯರ ಎಲ್ಲ ಚೇಷ್ಟೆಗಳೂ ಅವರು ತಾವು ಮಾಡಿದ ಕರ್ಮದ ಫಲವಾಗಿ ಎಂಬ ನಿಮ್ಮ ಅಭಿಪ್ರಾಯವನ್ನು ಕೇಳಿದೆನು. ಆದರೆ ಲೋಕದಲ್ಲಿ ಶುಭಾಶುಭ ಕರ್ಮಗಳು ಗ್ರಹಗಳಿಂದ ಮಾಡಲ್ಪಡುತ್ತವೆ ಎಂದು ಆ ಗ್ರಹಗಳನ್ನೂ, ನಕ್ಷತ್ರಗಳನ್ನೂ ಹೆಚ್ಚಾಗಿ ಪೂಜಿಸುತ್ತಾರೆ. ಈ ವಿಷಯದಲ್ಲಿ ನನಗಿರುವ ಸಂಶಯವನ್ನು ಪರಿಹರಿಸಬೇಕು.

ಮಹೇಶ್ವರಃ
ಸ್ಥಾನೇ ಸಂಶಯಿತುಂ ದೇವಿ ಶೃಣು ತತ್ತ್ವವಿನಿಶ್ಚಯಮ್ ||3||
ಮಹೇಶ್ವರ ದೇವಿಯೇ, ಸಂಶಯವನ್ನು ಪಟ್ಟಿರುವುದು ಯೋಗ್ಯವಾಗಿದೆ. ತತ್ತ್ವನಿಶ್ಚಯವನ್ನು ಕೇಳು.
ನಕ್ಷತ್ರಾಣಿ ಗ್ರಹಾಶ್ಚೈವ ಶುಭಾಶುಭನಿವೇದಕಾಃ |
ಮಾನವಾನಾಂ ಮಹಾಭಾಗೇ ನ ತು ಕರ್ಮಕರಾಃ ಸ್ವಯಮ್ ||4||
ನಕ್ಷತ್ರಗಳು ಮತ್ತು ಗ್ರಹಗಳು ಶುಭಾಶುಭಗಳನ್ನು ತಿಳಿಸಿಕೊಡುತ್ತವೆ. ಎಲೌ ಮಹಾನುಭಾವಳೇ, ಮನುಷ್ಯರಿಗೆ ಅವು ಸ್ವತಃ ಶುಭಾಶುಭಗಳನ್ನು ಮಾಡಿಸುವುದಿಲ್ಲ.
ಪ್ರಜಾನಾಂ ತು ಹಿತಾರ್ಥಾಯ ಶುಭಾಶುಭವಿಧಿಂ ಪ್ರತಿ |
ಅನಾಗತಮತಿಕ್ರಾಂತಂ ಜ್ಯೋತಿಶ್ಚಕ್ರೇಣ ಬೋಧ್ಯತೇ ||5||
ಪ್ರಜೆಗಳ ಹಿತದ ಸಲುವಾಗಿ ಒದಗಲಿರುವ ಶುಭಾಶುಭಗಳನ್ನು ಅಥವಾ ಅತೀತವಾದ ಶುಭಾಶುಭಗಳನ್ನು ಜ್ಯೋತಿಶ್ಚಕ್ರವು ತೋರಿಸುತ್ತದೆ.
ಕಿಂತು ತತ್ರ ಶುಭಂ ಕರ್ಮ ಸುಗ್ರಹೈಸ್ತನ್ನಿವೇದ್ಯತೇ |
ದುಷ್ಕೃತಸ್ಯಾಶುಭೈರೇವ ಸಮವಾಯೋ ಭವೇದಿತಿ ||6||
ಅಲ್ಲಿ ಶುಭಗ್ರಹಗಳು ಶುಭಕರ್ಮವನ್ನೂ, ಅಶುಭ ಗ್ರಹಗಳು ಅಶುಭ ಕರ್ಮ ಅಥವಾ ಅದರ ಫಲವು ಉಂಟಾಗುವುದೆಂದೂ ಸೂಚಿಸುತ್ತವೆ.
ತಸ್ಮಾದ್ಧಿ ಗ್ರಹವೈಷಮ್ಯೇ ವೈಷಮ್ಯಂ ಕುರುತೇ ಜನಃ |
ಗ್ರಹಸಾಮ್ಯೇ ಶುಭಂ ಕುರ್ಯಾತ್ ಜಾತ್ಯಾಂ ಜಾತ್ಯಾಂ ಪುರಸ್ಕೃತಮ್ ||
ಆದ್ದರಿಂದ ಗ್ರಹಗಳು ವಿಷಮವಾಗಿದ್ದರೆ ಮನುಷ್ಯನು ವಿಷಮವಾಗಿ ಅಶುಭ ಕರ್ಮಗಳನ್ನು ಮಾಡುತ್ತಾನೆ. ಗ್ರಹಗಳು ಸಮವಾಗಿದ್ದರೆ ಹಿಂದಿನ ಜನ್ಮಗಳಲ್ಲಿ ಪ್ರಾರಂಭ ಮಾಡಿದ ಶುಭಗಳನ್ನೇ ಮಾಡಿಕೊಂಡು ಹೋಗುತ್ತಾನೆ.
ಕೇವಲಂ ಗ್ರಹನಕ್ಷತ್ರಂ ನ ಕರೋತಿ ಶುಭಾಶುಭಮ್ |
ಸರ್ವಮಾತ್ಮಕೃತಂ ಕರ್ಮ ಲೋಕವಾದೋ ಗ್ರಹಾ ಇತಿ ||8||
ಕೇವಲ ಗ್ರಹ-ನಕ್ಷತ್ರಗಳು ಶುಭಾಶುಭಗಳನ್ನು ಉಂಟುಮಾಡುವುದಿಲ್ಲ. ಎಲ್ಲವೂ ಜೀವನ ಕರ್ಮದಿಂದಲೇ ಉಂಟಾಗುತ್ತವೆ. ಗ್ರಹಗಳು

ಉಂಟುಮಾಡುತ್ತವೆ ಎಂಬುದು ಲೋಕದ ಒಂದು ವದಂತಿ ಮಾತ್ರ.
ಪೃಥಗ್ಗ್ರಹಾಃ ಪೃಥಕ್ಕರ್ತಾ ಸ್ವಯಂಭೂರ್ಭುಜ್ಯತೇ ಫಲಮ್ |
ಇತಿ ತೇ ಕಥಿತಂ ಸರ್ವಂ ವಿಶಂಕಾಂ ಜಹಿ ಶೋಭನೇ ||9||
ಗ್ರಹಗಳೇ ಬೇರೆ, ಕರ್ಮವನ್ನು ಮಾಡುವ ಕರ್ತೃವೇ ಬೇರೆ. ಶುಭಾಶುಭ ಕರ್ಮಗಳಿಗೆ ಆಶ್ರಯನಾದ (ಸ್ವತಂತ್ರನಾದ) ಜೀವನೇ ಅವುಗಳ ಫಲವನ್ನು ಅನುಭವಿಸುತ್ತಾನೆ. ಶೋಭನೆಯೇ, ಎಲ್ಲವನ್ನೂ ನಿನಗೆ ಹೇಳಿದ್ದೇನೆ. ಸಂಶಯರಹಿತಳಾಗಿರು.
ಉಮಾ
ಭಗವನ್ ವಿವಿಧಂ ಕರ್ಮ ಕೃತ್ವಾ ಜಂತುಃ ಶುಭಾಶುಭಮ್ |
ಕಿಂ ತಯೋಃ ಪೂರ್ವಕತರಂ ಭುಂಕ್ತೇ ಜನ್ಮಾಂತರೇ ಪುನಃ |
ಏಷ ಮೇ ಸಂಶಯೋ ದೇವ ತಂ ಮೇ ತ್ವಂ ಛೇತ್ತುಮರ್ಹಸಿ ||10||
ಉಮಾ ಭಗವಂತನೇ, ಪುರುಷನು ವಿವಿಧವಾದ ಶುಭಾಶುಭಕರ್ಮಗಳನ್ನು ಮಾಡಿ ಅವುಗಳಲ್ಲಿ ಜನ್ಮಾಂತರಗಳಲ್ಲಿ ಮೊದಲು ಯಾವುದನ್ನು ಭೋಗಿಸುತ್ತಾನೆ ಮತ್ತು ಅನಂತರ ಯಾವುದನ್ನು ಭೋಗಿಸುತ್ತಾನೆ? ದೇವನೇ, ನನ್ನ ಈ ಸಂಶಯವನ್ನು ಪರಿಹರಿಸಬೇಕು.

ಮಹೇಶ್ವರಃ
ಸ್ಥಾನೇ ಸಂಶಯಿತುಂ ದೇವಿ ತತ್ತೇ ವಕ್ಷ್ಯಾಮಿ ತತ್ತ್ವತಃ |
ಅಶುಭಂ ಪೂರ್ವಮಿತ್ಯಾಹುರಪರೇ ಶುಭಮಿತ್ಯಪಿ ||11||
ಮಿಥ್ಯಾ ತದುಭಯಂ ಪ್ರೋಕ್ತಂ ಕೇವಲಂ ತದ್‌ಬ್ರವೀಮಿ ತೇ ||12||
ಮಹೇಶ್ವರ ದೇವಿಯೇ, ನಿನ್ನ ಸಂಶಯವು ಯೋಗ್ಯವಾಗಿದೆ. ಅದರ ತತ್ತ್ವವನ್ನು ಸರಿಯಾಗಿ ಹೇಳುವೆನು. ಕೆಲವರು ಅಶುಭವನ್ನು ಮೊದಲು ಅನುಭವಿಸುತ್ತಾನೆ ಎಂದೂ ಇನ್ನು ಕೆಲವರು ಶುಭವನ್ನು ಮೊದಲು ಅನುಭವಿಸುತ್ತಾನೆ ಎಂದೂ ಹೇಳುತ್ತಾರೆ. ಅವೆರಡೂ ಸುಳ್ಳು. ಶುದ್ಧ ತತ್ತ್ವವನ್ನು ನಿನಗೆ ಹೇಳುತ್ತೇನೆ.
ಮಾನುಷೇ ತು ಪದೇ ಕರ್ಮ ಯುಗಪದ್ ಯುಜ್ಯತೇ ಸದಾ |
ಯಥಾಕೃತಂ ಯಥಾಯೋಗಮುಭಯಂ ಭುಜ್ಯತೇ ಕ್ರಮಾತ್ ||13||
ಮನುಷ್ಯಜನ್ಮದಲ್ಲಿ ಶುಭಾಶುಭ ಕರ್ಮಗಳು ಒಟ್ಟಿಗೆ ಸಂಭವಿಸುತ್ತವೆ. ಅವುಗಳನ್ನು ಮಾಡಿದ ಕ್ರಮದಲ್ಲಿ, ಅವುಗಳನ್ನು ಮಾಡಿದ ರೀತಿಯಲ್ಲಿ ಶುಭಾಶುಭ ಫಲಗಳೆರಡೂ ಭೋಗಿಸಲ್ಪಡುತ್ತವೆ.
ಭುಂಜಾನಾಶ್ಚೈವ ದೃಶ್ಯಂತೇ ಕ್ರಮಶೋ ಭುವಿ ಮಾನವಾಃ |
ಋದ್ಧಿಂ ಹಾನಿಂ ಸುಖಂ ದುಃಖಮಭಯಂ ಭಯಮೇವ ಚ ||14||
ಲೋಕದಲ್ಲಿ ಮನುಷ್ಯರು ಕ್ರಮವಾಗಿ ಸಮೃದ್ಧಿ-ನಷ್ಟ, ಸುಖ-ದುಃಖ, ಭಯ- ಅಭಯ ಇವುಗಳನ್ನು ಭೋಗಿಸುವುದು ಕಂಡುಬರುತ್ತದೆ.
ದುಃಖಾನ್ಯನುಭವಂತ್ಯಾಢ್ಯಾ ದರಿದ್ರಾಶ್ಚ ಸುಖಾನಿ ಚ |
ಯೌಗಪದ್ಯಾಚ್ಚ ಭುಂಜಾನಾ ದೃಶ್ಯಂತೇ ಲೋಕಸಾಕ್ಷಿಕಮ್ ||15||
ಧನಾಢ್ಯರೂ ದುಃಖವನ್ನು ಅನುಭವಿಸುತ್ತಾರೆ ಮತ್ತು ದರಿದ್ರರೂ ಸುಖವನ್ನು ಅನುಭವಿಸುತ್ತಾರೆ. ಕೆಲವರು ಸುಖ-ದುಃಖಗಳೆರಡನ್ನೂ (ಒಂದು ಅಂಶದಲ್ಲಿ ಸುಖ, ಒಂದು ಅಂಶದಲ್ಲಿ ದುಃಖ) ಒಂದೇ ಕಾಲದಲ್ಲಿ ಅನುಭವಿಸುವುದು ಲೋಕಸಾಕ್ಷಿಕವಾಗಿ ಕಂಡುಬರುತ್ತದೆ.
ನರಕೇ ಸ್ವರ್ಗಲೋಕೇ ಚ ನ ತಥಾ ಸಂಸ್ಥಿತಿಃ ಪ್ರಿಯೇ |
ನಿತ್ಯಂ ದುಃಖಂ ಹಿ ನರಕೇ ಸ್ವರ್ಗೇ ನಿತ್ಯಂ ಸುಖಂ ತಥಾ ||16||
ಪ್ರಿಯೆಯೇ, ನರಕದಲ್ಲಿ ಅಥವಾ ಸ್ವರ್ಗಲೋಕದಲ್ಲಿ ಇಂತಹ ಪರಿಸ್ಥಿತಿಯಿಲ್ಲ. ನರಕದಲ್ಲಿ ನಿತ್ಯ ದುಃಖವೂ, ಸ್ವರ್ಗದಲ್ಲಿ ನಿತ್ಯ ಸುಖವೂ ಇರುತ್ತದೆ.
ಶುಭಾಶುಭಾನಾಮಾಧಿಕ್ಯಾತ್ ಕರ್ಮಣಾಂ ತತ್ರ ಸೇವ್ಯತೇ |
ನಿರಂತರಂ ಸುಖಂ ದುಃಖಂ ಸ್ವರ್ಗೇ ಚ ನರಕೇ ಭವೇತ್ ||17||
ಅಲ್ಲಿ ಶುಭಾಶುಭ ಕರ್ಮಗಳು ಅಧಿಕವಾಗಿರುವುದರಿಂದ ಕರ್ಮಗಳ ಫಲವಾದ ಸುಖವು ಸ್ವರ್ಗದಲ್ಲಿಯೂ, ದುಃಖವು ನರಕದಲ್ಲಿಯೂ ನಿರಂತರವಾಗಿ ಸೇವಿಸಲ್ಪಡುತ್ತದೆ.
ತತ್ರಾಪಿ ಸುಮಹದ್‌ಭುಕ್ತತ್ವ ಪೂರ್ವಮಲ್ಪಂ ಪುನಃ ಶುಭೇ |
ಏತತ್ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ||18||
ಸ್ವರ್ಗ-ನರಕಗಳಲ್ಲಿಯೂ ಕೂಡ ಯಾವುದು ಹೆಚ್ಚಾಗಿರುತ್ತದೆಯೋ ಅದನ್ನು ಮೊದಲು ಅನುಭವಿಸುತ್ತಾರೆ. ಮನುಷ್ಯರ ಶುಭಾಶುಭಗಳಲ್ಲಿ ಶುಭವು ಹೆಚ್ಚಾಗಿದ್ದರೆ ಮೊದಲು ಶುಭವನ್ನೂ, ಅಶುಭವು ಹೆಚ್ಚಾಗಿದ್ದರೆ ಮೊದಲು ಅಶುಭದ ಫಲವಾದ ನರಕವನ್ನೂ ಅನುಭವಿಸುತ್ತಾರೆ. ಅಲ್ಪವಾದುದರ ಫಲವನ್ನು ಅನಂತರ ಅನುಭವಿಸುತ್ತಾರೆ. ಇವೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ? (ಲಕ್ಷ್ಮಾಲಂಕಾರ).
ಉಮಾ
ಭಗವನ್ ಪ್ರಾಣಿನೋ ಲೋಕೇ ಮ್ರಿಯಂತೇ ಕೇನ ಹೇತುನಾ |
ಜಾತಾಜಾತಾ ನ ತಿಷ್ಠಂತಿ ತನ್ಮೇ ಶಂಸಿತುಮರ್ಹಸಿ ||19||
ಉಮಾ ಭಗವಂತನೇ, ಲೋಕದಲ್ಲಿ ಪ್ರಾಣಿಗಳು ಯಾವ ಕಾರಣದಿಂದ ಸಾಯುತ್ತವೆ? ಹುಟ್ಟಿದವರು ಯಾರೂ ಇರುವುದಿಲ್ಲ. ಅದನ್ನು ನನಗೆ ಹೇಳಬೇಕು.
ಮಹೇಶ್ವರಃ

ತದಹಂ ತೇ ಪ್ರವಕ್ಷ್ಯಾಮಿ ಶೃಣು ತತ್ತ್ವಂ ಸಮಾಹಿತಾ |
ಆತ್ಮಕರ್ಮಕ್ಷಯಾದ್ ದೇಹಂ ಯಥಾ ಮುಂಚತಿ ತಚ್ಛೃಣು ॥20॥
ಮಹೇಶ್ವರ ಅದನ್ನು ನಿನಗೆ ಹೇಳುವೆನು, ಸಮಾಧಾನದಿಂದ ತತ್ತ್ವವನ್ನು ಕೇಳು. ತನ್ನ ಕರ್ಮಕ್ಷಯದ ಕಾರಣದಿಂದ ದೇಹವನ್ನು ಹೇಗೆ ತ್ಯಾಗ ಮಾಡುತ್ತಾರೆ ಎಂಬುದನ್ನು ಕೇಳು.
ಶರೀರಾತ್ಮಸಮಾಹಾರೋ ಜನುರಿತ್ಯಭಿಧೀಯತೇ |
ತತ್ರಾತ್ಮಾನಂ ನಿತ್ಯಮಾಹುರನಿತ್ಯಂ ಕ್ಷೇತ್ರಮುಚ್ಯತೇ ॥21॥
ಆತ್ಮ ಮತ್ತು ಶರೀರ ಸಂಬಂಧವಾದರೆ ಅದಕ್ಕೆ ಜನ್ಮ ಎಂದು ಹೆಸರು. ಅದರಲ್ಲಿ ಆತ್ಮ ಎಂಬುದು ನಿತ್ಯ ಕ್ಷೇತ್ರವೆನಿಸುವ ಶರೀರವು ಅನಿತ್ಯವಾದುದು.
ತತ್ತು ಕಾಲವಶಾಲ್ಲೋಕೇ ಜೀರ್ಣಂ ಭವತಿ ಶೋಭನೇ |
ಕಾಲಶ್ಛಿನತ್ತಿ ಚಾಯೂಂಷಿ ದಿನಮಾಸರ್ತುಹಾಯನೈಃ ॥22॥
ಕಾಲಃ ಪಚತಿ ಭೂತಾನಿ ಕಾಲೇನಾಕುಲಿತಂ ಜಗತ್ |
ಕಾಲಂ ನಾತಿಕ್ರಮೇರನ್ ಹಿ ಸದೇವಾಸುರಮಾನವಾಃ ॥23॥
ಯಥಾಕಾಶೇ ನ ತಿಷ್ಠೇತ ದ್ರವ್ಯಂ ಕಿಂಚಿದಚೇತನಮ್ |
ತಥಾ ಧಾವತಿ ಕಾಲೋಽಯಂ ಕ್ಷಣಂ ಕಿಂಚಿನ್ನ ತಿಷ್ಠತಿ ॥24॥
ಏವಂ ಕಾಲೇನ ಸಂಕ್ರಾಂತಂ ಶರೀರಂ ಜರ್ಝರೀಕೃತಮ್ |
ಅಕರ್ಮಯೋಗ್ಯಂ ಸಂಶೀರ್ಣಂ ತ್ಯಕ್ತತ್ವ ದೇಹೀ ತತೋ ವ್ರಜೇತ್ ॥
ನ ಚ ನಿತ್ಯಸ್ಯ ಜೀವಸ್ಯ ವಿನಾಶೋ ವಿದ್ಯತೇ ಶುಭೇ |
ಸ ಪುನರ್ಜಾಯತೇಽನ್ಯತ್ರ ಶರೀರಂ ನವಮಾವಿಶನ್ |
ಏವಂ ಲೋಕಗತಿರ್ನಿತ್ಯಮಾದಿಪ್ರಭೃತಿ ವರ್ತತೇ ॥26॥
ಎಲೌ ಶೋಭನೆಯೇ, ಕಾಲವಶದಿಂದ ಆ ಶರೀರವು ಸವೆದು ಹೋಗುತ್ತದೆ. ಕಾಲವು ದಿನ, ಮಾಸ, ಋತು, ಸಂವತ್ಸರಗಳ ಕ್ರಮದಲ್ಲಿ ಆಯುಸ್ಸನ್ನು ನಾಶಪಡಿಸುತ್ತದೆ. ಕಾಲವು ಎಲ್ಲಾ ಪ್ರಾಣಿಗಳನ್ನೂ ಪಕ್ವಗೊಳಿಸುತ್ತದೆ. ಜಗತ್ತು ಕಾಲದ ಪ್ರಭಾವಕ್ಕೆ ತುತ್ತಾಗಿದೆ. ದೇವಾಸುರ ಮಾನವರೂ ಸಹ ಕಾಲವನ್ನು ಮೀರಲಾರರು. ಆಕಾಶಕ್ಕೆ ಎಸೆದ ವಸ್ತುವು ಹೇಗೆ ಅಲ್ಲಿ ನಿಲ್ಲುವುದಿಲ್ಲವೋ ಅದರಂತೆ ಕಾಲವು ಒಂದು ಕ್ಷಣವೂ ಸ್ವಲ್ಪವೂ ನಿಲ್ಲದೆ ಓಡುತ್ತದೆ. ಹೀಗೆ ಕಾಲಸಂಬಂಧದಿಂದ ಕೂಡಿ ಶಿಥಿಲವಾಗಿ ಕರ್ಮವನ್ನು ಮಾಡುವ ಸಾಧ್ಯತೆ ಇಲ್ಲದಿದ್ದಾಗ ಜೀವನು ಆ ಶರೀರವನ್ನು ಬಿಟ್ಟು ಇನ್ನೊಂದು ಶರೀರಕ್ಕೆ ಹೋಗುತ್ತಾನೆ. ಎಲೌ ಶುಭಳೇ, ಜೀವನು ನಿತ್ಯನಾದವನು. ಅವನಿಗೆ ವಿನಾಶವಿಲ್ಲ. ಅವನು ಇನ್ನೊಂದು ಹೊಸ ಶರೀರವನ್ನು ಪ್ರವೇಶಿಸಿ ಇನ್ನೊಂದು ಸ್ಥಳದಲ್ಲಿ ಜನಿಸುತ್ತಾನೆ. ಲೋಕಗತಿಯು ಸೃಷ್ಟಿಯ ಪ್ರಾರಂಭದಿಂದಲೂ ಇದೇ ರೀತಿ ನಡೆದುಕೊಂಡು ಬಂದಿದೆ.
ಉಮಾ
ಭಗವನ್ ಪ್ರಾಣಿನೋ ಬಾಲಾ ದೃಶ್ಯಂತೇ ಮರಣಂ ಗತಾಃ |
ಅತಿವೃದ್ಧಾಶ್ಚ ಜೀವಂತೋ ದೃಶ್ಯಂತೇ ಚಿರಜೀವಿನಃ ॥27॥
ಕೇವಲಂ ಕಾಲಮರಣಂ ನ ಪ್ರಮಾಣಂ ಮಹೇಶ್ವರ |
ತಸ್ಮಾನ್ಮೇ ಸಂಶಯಂ ಬ್ರೂಹಿ ಪ್ರಾಣಿನಾಂ ಜೀವಕಾರಣಮ್ ॥28॥
ಉಮಾ ಭಗವಂತನೇ, ಬಾಲಕರು ಮತ್ತು ಚಿಕ್ಕ ವಯಸ್ಸಿನ ಪ್ರಾಣಿಗಳು ಮರಣವನ್ನು ಹೊಂದುವುದು ಕಂಡುಬರುತ್ತದೆ. ಅತಿ ವೃದ್ಧರೂ ಚಿರಜೀವಿಗಳಾಗಿ ಜೀವಿಸುವುದು ಕಂಡುಬರುತ್ತದೆ. ಎಲೈ ಮಹೇಶ್ವರನೇ, ಆದ್ದರಿಂದ ಕೇವಲ ಕಾಲವು ಮರಣಕ್ಕೆ ಕಾರಣವಲ್ಲ. ಆದ್ದರಿಂದ ಪ್ರಾಣಿಗಳ ಜೀವನ ವಿಷಯದಲ್ಲಿ (ಜೀವಾಂತರಾಗಿರುವ ಕಾಲದ ವಿಷಯದಲ್ಲಿ) ನನಗಿರುವ ಸಂಶಯವನ್ನು ಪರಿಹರಿಸು.
ಮಹೇಶ್ವರಃ
ಶೃಣು ತತ್ಕಾರಣಂ ದೇವಿ ನಿರ್ಣಯಸ್ತ್ವೇಕ ಏವ ಸಃ |
ಜೀರ್ಣತ್ವಮಾತ್ರಂ ಕುರುತೇ ಕಾಲೋ ದೇಹಂ ನ ಪಾತಯೇತ್ ॥29॥
ಮಹೇಶ್ವರ ದೇವಿಯೇ, ಅದಕ್ಕೆ ಕಾರಣವನ್ನು ಕೇಳು. ಇದೊಂದೇ ನಿರ್ಣಯ. ಕಾಲವು ದೇಹವನ್ನು ಶಿಥಿಲಗೊಳಿಸುತ್ತದೆ ಹೊರತು ದೇಹವನ್ನು ಬೀಳಿಸುವುದಿಲ್ಲ.
ಜೀರ್ಣೇ ಕರ್ಮಣಿ ಸಂಘಾತಃ ಸ್ವಯಮೇವ ವಿಶೀರ್ಯತೇ |
ಪೂರ್ವಕರ್ಮಪ್ರಮಾಣೇನ ಜೀವಿತಂ ಮೃತ್ಯುರೇವ ವಾ ॥30॥
ಆ ದೇಹದಿಂದ ಕೂಡಿರಲು ಬೇಕಾದ ಕರ್ಮವು ಕ್ಷೀಣವಾಗುತ್ತಿರಲು ಇಂದ್ರಿಯಾದಿ ಸಂಘಾತರೂಪವಾದ ದೇಹವು ತಾನೇ ಬಿದ್ದು ಹೋಗುತ್ತದೆ. ಹಿಂದಿನ ಕರ್ಮಕ್ಕೆ ಅನುಗುಣವಾಗಿ ಜೀವನ ಅಥವಾ ಮರಣವು ಉಂಟಾಗುತ್ತದೆ.
ಯಾವತ್ಪೂರ್ವಕೃತಂ ಕರ್ಮ ತಾವಜ್ಜೀವತಿ ಮಾನವಃ |
ತದ್ವತ್ ಕಾಲವಶಾದ್ ಬಾಲಾ ಮ್ರಿಯಂತೇ ಭೋಗಸಂಕ್ಷಯಾತ್ ॥31॥
ಜೀವಂತಿ ಚಿರವೃದ್ಧಾಶ್ಚ ತಥಾ ಕರ್ಮಪ್ರಮಾಣತಃ |
ಇತಿ ತೇ ಕಥಿತಂ ದೇವಿ ನಿರ್ವಿಶಂಕಾ ಭವ ಪ್ರಿಯೇ ॥32॥
ಹಿಂದಿನ ಕರ್ಮವು ಇರುವವರೆಗೆ ಮನುಷ್ಯನು ಜೀವಿಸುತ್ತಾನೆ. ಅದರಂತೆ ಕಾಲವಶದಿಂದ ಭೋಗಕ್ಷಯವನ್ನು ಹೊಂದಿದ ಬಾಲರೂ ಮರಣವನ್ನು ಹೊಂದುತ್ತಾರೆ.ಚಿರಜೀವಿಗಳೂ ಸಹ ಅದೇ ಕರ್ಮದ ಪ್ರಭಾವದಿಂದ ಬದುಕಿರುತ್ತಾರೆ. ಪ್ರಿಯೆಯೇ, ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಸಂಶಯವನ್ನು ಬಿಡು.

ಉಮಾ
ಭಗವನ್ ಕೇನ ವೃತ್ತೇನ ಭವಂತಿ ಚಿರಜೀವಿನಃ |
ಅಲ್ಪಾಯುಷೋ ನರಾಃ ಕೇನ ತನ್ಮೇ ಶಂಸಿತುಮರ್ಹಸಿ ||33||
ಉಮಾ ಭಗವಂತನೇ, ಯಾವ ನಡತೆಯಿಂದ ಮನುಷ್ಯರು ಚಿರಜೀವಿ- ಗಳಾಗುತ್ತಾರೆ? ಯಾವ ನಡತೆಯಿಂದ ಮನುಷ್ಯರು ಅಲ್ಪಾಯುಷಿಗಳಾಗುತ್ತಾರೆ? ಇದನ್ನು ನನಗೆ ಹೇಳಬೇಕು.
ಮಹೇಶ್ವರಃ
ಶೃಣು ತತ್ಸರ್ವಮಖಿಲಂ ಗುಹ್ಯಂ ಪಥ್ಯತರಂ ನೃಣಾಮ್ |
ಯೇ ನರಾ ವೃತ್ತಸಂಪನ್ನಾ ಭವಂತಿ ಚಿರಜೀವಿನಃ ||34||
ಮಹೇಶ್ವರ ಯಾವ ಮನುಷ್ಯರು ಒಳ್ಳೆಯ ನಡತೆಯಿಂದ ಕೂಡಿದವರಾಗಿ ಚಿರಜೀವಿಗಳಾಗುತ್ತಾರೆ ಎಂಬ ರಹಸ್ಯವಾದ, ಮನುಷ್ಯರಿಗೆ ಅತ್ಯಂತ ಹಿತವಾದ ಎಲ್ಲವನ್ನೂ ನೀನು ಕೇಳು.
ಅಹಿಂಸಾ ಸತ್ಯವಚನಮಕ್ರೋಧಃ ಕ್ಷಾಂತಿರಾರ್ಜವಮ್ |
ಗುರೂಣಾಂ ನಿತ್ಯಶುಶ್ರೂಷಾ ವೃದ್ಧಾನಾಮಪಿ ಪೂಜನಮ್ ||35||
ಶೌಚಂ ಚಾಕಾರ್ಯಸಂತ್ಯಾಗಃ ಸದಾ ಪಥ್ಯಸ್ಯ ಭೋಜನಮ್ |
ಏವಮಾದಿ ಶುಭಂ ವೃತ್ತಂ ನರಾಣಾಂ ದೀರ್ಘಜೀವಿನಾಮ್ ||36||
ಅಹಿಂಸೆ, ಸತ್ಯವಚನ, ಅಕ್ರೋಧ, ಕ್ಷಮೆ, ಆರ್ಜವ, ನಿತ್ಯವೂ ಗುರುಸೇವೆ, ವೃದ್ಧರ ಸತ್ಕಾರ, ಶೌಚ, ನಿಷಿದ್ಧ ಕಾರ್ಯತ್ಯಾಗ, ಸದಾ ಪಥ್ಯಾನ್ನ ಭೋಜನ ಇವೇ ಮುಂತಾದ ನಡತೆಯು ದೀರ್ಘಜೀವಿಗಳಾದ ಮನುಷ್ಯರಿಗೆ ಇರುತ್ತದೆ.
ತಪಸಾ ಬ್ರಹ್ಮಚರ್ಯೇಣ ರಸಾಯನನಿಷೇವಣಾತ್ |
ಉದಗ್ರಸತ್ತ್ವ ಬಲಿನೋ ಭವಂತಿ ಚಿರಜೀವಿನಃ |
ಸ್ವರ್ಗೇ ವಾ ಮಾನುಷೇ ವಾಽಪಿ ಚಿರಂ ತಿಷ್ಠಂತಿ ಧಾರ್ಮಿಕಾಃ ||37||
ಚಿರಜೀವಿಗಳು ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ರಸಾಯನ ಸೇವನೆಯಿಂದಲೂ ಶ್ರೇಷ್ಠವಾದ ಧೈರ್ಯ ಮತ್ತು ಬಲಗಳನ್ನು ಹೊಂದಿರುತ್ತಾರೆ. ಧಾರ್ಮಿಕರಾದವರು ಸ್ವರ್ಗದಲ್ಲಾಗಲೀ, ಮನುಷ್ಯಲೋಕದಲ್ಲಾಗಲೀ ಬಹುಕಾಲ ಇರುತ್ತಾರೆ.
ಅಪರೇ ಪಾಪಕರ್ಮಾಣಃ ಪ್ರಾಯಶೋಽನೃತವಾದಿನಃ |
ಹಿಂಸಾಪ್ರಿಯಾ ಗುರುದ್ವಿಷ್ಟಾ ನಿಷ್ಕ್ರಿಯಾಃ ಶೌಚವರ್ಜಿತಾಃ ||38||
ನಾಸ್ತಿಕಾ ಘೋರಕರ್ಮಾಣಃ ಸತತಂ ಮಾಂಸಪಾನಪಾಃ |
ಪಾಪಾಚಾರಾ ಗುರುದ್ವೇಷಾಃ ಕೋಪನಾಃ ಕಲಹಪ್ರಿಯಾಃ ||39||
ಏವಮೇವಾಶುಭಾಚಾರಾಸ್ತಿಷ್ಠಂತಿ ನರಕೇ ಚಿರಮ್ |
ತಿರ್ಯಗ್ಯೋನೌ ತಥಾಽತ್ಯಂತಮಲ್ಪಂ ತಿಷ್ಠಂತಿ ಮಾನುಷೇ |
ತಸ್ಮಾದಲ್ಪಾಯುಷೋ ಮರ್ತ್ಯಾಸ್ತಾದೃಶಾಃ ಸಂಭವಂತಿ ತೇ ||40||
ಇನ್ನು ಉಳಿದ ಪಾಪಕರ್ಮಿಗಳು, ಹೆಚ್ಚಾಗಿ ಅನೃತವನ್ನೇ ಮಾತನಾಡುವವರು, ಹಿಂಸಾಪ್ರಿಯರೂ, ಗುರುಗಳ ದ್ವೇಷಕ್ಕೆ ಪಾತ್ರರಾದವರು, ಕ್ರಿಯಾಶೂನ್ಯರು, ಶೌಚಹೀನರು, ನಾಸ್ತಿಕರು, ಘೋರಕರ್ಮವನ್ನು ಮಾಡುವವರು, ಸದಾ ಮದ್ಯ ಮಾಂಸ ಪ್ರಿಯರಾದವರು, ಪಾಪಕರ್ಮವನ್ನು ಮಾಡುವವರು, ಗುರುಗಳನ್ನು ದ್ವೇಷಿಸುವವರು, ಕೋಪಸ್ವಭಾವದವರು, ಕಲಹ ಪ್ರಿಯರಾದವರು ಇಂತಹ ಅಶುಭಾಚಾರ ಉಳ್ಳವರು ನರಕದಲ್ಲಿ ವಾಸ ಮಾಡುತ್ತಾರೆ. ಹಾಗೆಯೇ ತಿರ್ಯಗ್ಯೋನಿಗಳಲ್ಲೂ ಬಹುಕಾಲ ವಾಸಮಾಡುತ್ತಾರೆ. ಮನುಷ್ಯಯೋನಿಯಲ್ಲಿ ಸ್ವಲ್ಪ ಕಾಲ ಮಾತ್ರ ವಾಸ ಮಾಡುತ್ತಾರೆ. ಆದ್ದರಿಂದ ಅಂತಹವರು ಮನುಷ್ಯರಾಗಿ ಅಲ್ಪಾಯುಷ್ಯವನ್ನು ಹೊಂದಿದವರಾಗುತ್ತಾರೆ.
ಅಗಮ್ಯದೇಶಗಮನಾದಪಥ್ಯಾನಾಂ ಚ ಭೋಜನಾತ್ |
ಆಯುಃಕ್ಷಯೋ ಭವೇನ್ನ ೄಣಾಮಾಯುಃಕ್ಷಯಕರಾ ಹಿ ತೇ ||41||
ಅಗಮ್ಯವಾದ ದೇಶಕ್ಕೆ ಹೋಗುವುದರಿಂದ, ಅಪಥ್ಯವಾದ ಭೋಜನವನ್ನು ಮಾಡುವುದರಿಂದ ಆಯುಷ್ಯ ಕ್ಷಯ ಉಂಟಾಗುತ್ತದೆ. ಅಂತಹ ಕಾರ್ಯಗಳು ಮನುಷ್ಯನ ಆಯುಷ್ಯವನ್ನು ನಾಶ ಮಾಡುವಂತಹವುಗಳು.
ಭವಂತ್ಯಲ್ಪಾಯುಷಸ್ತೈಸ್ತೈರನ್ಯಥಾ ಚಿರಜೀವಿನಃ |
ಏತತ್ತೇ ಕಥಿತಂ ಸರ್ವಂ ಭೂಯಃ ಶ್ರೋತುಂ ಕಿಮಿಚ್ಛಸಿ ||42||
ಆಯಾ ದುಷ್ಟಕಾರ್ಯಗಳಿಂದ ಅಲ್ಪಾಯುಷಿಗಳಾಗುತ್ತಾರೆ. ಇಲ್ಲದಿದ್ದರೆ ಚಿರಜೀವಿಗಳಾಗುತ್ತಾರೆ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ನೃಣಾಮಲ್ಪಾಯುಷ್ಯಾದಿನಿಮಿತ್ತಕಥನಂ ನಾಮ ನವೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹತ್ತನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಪುಂಸ್ತ್ವ-ಸ್ತ್ರೀತ್ವಾದಿ ಕಥನ.
ಉಮಾ
ಭಗವನ್ ದೇವದೇವೇಶ ಶ್ರುತಂ ಮೇ ಪರಮಂ ಹಿತಮ್ |

ಆತ್ಮನೋ ಜಾತಿಸಂಬಂಧಂ ಬ್ರೂಹಿ ಸ್ತ್ರೀಪುರುಷಾಂತರೇ ॥1॥
ಸ್ತ್ರೀಪ್ರಾಣಃ ಪುರುಷಪ್ರಾಣ ಏಕಃ ಸ ಪೃಥಗೇವ ವಾ |
ಏಷ ಮೇ ಸಂಶಯೋ ದೇವ ತಂ ಮೇ ಛೇತ್ತುಂ ತ್ವಮರ್ಹಸಿ ॥2॥
ಉಮಾ ಭಗವಂತನೇ, ದೇವದೇವೇಶನೇ, ಪರಮಹಿತವಾದ ನಿನ್ನ ಉಪದೇಶವನ್ನು ಕೇಳಿದೆನು. ಸ್ತ್ರೀ-ಪುರುಷರ ಜನ್ಮ ವಿಷಯದಲ್ಲಿ ನನಗೆ ಹೇಳು. ಒಂದೇ ಜೀವಕ್ಕೆ ಸ್ತ್ರೀ-ಪುರುಷ ಜನ್ಮ ಬರುತ್ತದೆಯೋ ಅಥವಾ ಸ್ತ್ರೀಯರೂ ಪುರುಷರೂ ಬೇರೆ ಬೇರೆಯೋ? ಇದು ನನ್ನ ಸಂಶಯ. ಇದನ್ನು ಪರಿಹರಿಸಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಸರ್ವಂ ಸಮಾಹಿತಾ |
ಪುಂಸ್ತ್ವಂ ಸ್ತ್ರೀತ್ವಮಿತಿ ಪ್ರಾಣೇ ಸ್ಥಿತಿರ್ನಾಸ್ತಿ ಶುಭೇಕ್ಷಣೇ ॥3॥
ನಿರ್ವಿಕಾರೀ ಸದಾ ಚಾತ್ಮಾ ಸ್ತ್ರೀತ್ವಂ ಪುಂಸ್ತ್ವಂ ನ ಚಾತ್ಮನಿ |
ಕರ್ಮಪ್ರಕಾರೇಣ ತಥಾ ಜಾತ್ಯಾಂ ಜಾತ್ಯಾಂ ಪ್ರಜಾಯತೇ ॥4॥
ಮಹೇಶ್ವರ ನಾನು ನಿನಗೆ ಅದನ್ನು ಹೇಳುವೆನು. ಸಮಾಧಾನದಿಂದ ಕೇಳುವವಳಾಗು. ಎಲೌ ಶುಭೇಕ್ಷಣೆಯೇ, ಜೀವನಲ್ಲಿ ಒಮ್ಮೆ ಪುಂಸ್ತ್ವ, ಇನ್ನೊಮ್ಮೆ ಸ್ತ್ರೀತ್ವ ಎಂಬ ಪರಿಸ್ಥಿತಿಯಿಲ್ಲ. ಆತ್ಮನು ನಿರ್ವಿಕಾರನಾದವನು. ಆದ್ದರಿಂದ ಆತ್ಮನ ಸ್ತ್ರೀತ್ವ, ಪುಂಸ್ತ್ವಗಳು ಬದಲಾವಣೆಯನ್ನು ಹೊಂದುವುದಿಲ್ಲ. ಕರ್ಮಗಳಿಗೆ ಅನುಗುಣವಾಗಿ ಬೇರೆ ಬೇರೆ ಜಾತಿಯಲ್ಲಿ ಹುಟ್ಟುತ್ತಾನೆ.
ಕೆಲವೊಮ್ಮೆ ಸ್ತ್ರೀತ್ವ, ಕೆಲವೊಮ್ಮೆ ಪುಂಸ್ತ್ವ ಎಂಬ ಸ್ತ್ರೀ-ಪುಂಸ್ತ್ವದ ವಿಷಯದಲ್ಲಿ ಅವ್ಯವಸ್ಥೆಯು ಜೀವನಲ್ಲಿ ಇಲ್ಲ. ಅದಕ್ಕೆ ಕಾರಣವಾದುದು ಅವನ ನಿರ್ವಿಕಾರತ್ವ. ಆದರೆ ಅನಾದ್ಯನಂತ ಕಾಲದಲ್ಲಿ ಸ್ತ್ರೀ ಜೀವರು ಸ್ತ್ರೀ ಜೀವರಾಗಿಯೇ ಇರುತ್ತಾರೆ. ಪುರುಷ ಜೀವರು ಪುರುಷ ಜೀವರಾಗಿಯೇ ಇರುತ್ತಾರೆ. ಇಲ್ಲದಿದ್ದರೆ ಮೋಕ್ಷದಲ್ಲಿ ಸ್ತ್ರೀ-ಪುರುಷ ಭೇದ ಇಲ್ಲದೇ ಹೋಗಬೇಕಾದೀತು ಎಂದು ಶಿವನ ಅಭಿಪ್ರಾಯ ಮತ್ತು `ಕರ್ತಾರಮವ್ಯಯಂ' ಕರ್ತೃವು ವ್ಯತ್ಯಾಸವನ್ನು ಹೊಂದುವುದಿಲ್ಲ ಎಂಬ ಪೂರ್ವ ವಾಕ್ಯದಿಂದಲೂ ವಿರೋಧವುಂಟಾಗುತ್ತದೆ. ಸ್ತ್ರೀಯರಲ್ಲಿ ಎರಡು ವಿಧ. ಔಪಾಧಿಕ ಸ್ತ್ರೀಯರು, ಸ್ವಾಭಾವಿಕವಾಗಿ ಸ್ತ್ರೀಯರು ಎಂದು. ಪುರುಷರಲ್ಲಿ ಹಾಗಲ್ಲ. ಸ್ವಾಭಾವಿಕವಾಗಿ ಪುರುಷರಾದವರು ಒಂದು ನಿಮಿತ್ತದಿಂದ ಅವರು ಸ್ತ್ರೀಯರಾಗುವುದೂ ಉಂಟು. ಸ್ವಾಭಾವಿಕ ಸ್ತ್ರೀಯರು ಮಾತ್ರ ಪುನಃ ಪುನಃ ಸ್ತ್ರೀಯರಾಗಿಯೇ ಹುಟ್ಟುತ್ತಾರೆ ಎಂದೂ ಪುರುಷರಾಗುವುದಿಲ್ಲ. ಪುರುಷನಾದರೆ ಸ್ವಾಭಾವಿಕನಾಗಿ ಪುರುಷನು ಕರ್ಮವಶದಿಂದ ಸ್ತ್ರೀಯೂ ಆಗುತ್ತಾನೆ. ಇಲ್ಲದಿದ್ದರೆ ಶಿಖಂಡಿಗೆ ಪುಂಭಾವ ಉಂಟಾಗಲು ಯಕ್ಷರೂಪನಾದ ಪುರುಷನ ಪ್ರವೇಶವು ವ್ಯರ್ಥವಾಗುತ್ತಿದ್ದಿತು ಎಂದು ಶಿವನ ಅಭಿಪ್ರಾಯ (ಲಕ್ಷ್ಮಾಲಂಕಾರ).
ಅಕರ್ತಾ ಚಾವಿಕಾರೀ ಚ ನಿತ್ಯಶ್ಚ ಪುರುಷಃ ಸ್ಮೃತಃ |
ಸ್ತ್ರೀಶರೀರಕೃತಂ ಕರ್ಮ ಸ್ತ್ರೀಭಾವೇನೋಪಭುಜ್ಯತೇ ॥5॥
ಜೀವನು ನಿರ್ವಿಕಾರನಾದವನು ಮತ್ತು ನಿತ್ಯನಾದವನು. ದೇಹಸಂಬಂಧವಿಲ್ಲದೆ ಅವನು ಕರ್ಮವನ್ನು ಮಾಡುವುದಿಲ್ಲ. ಸ್ತ್ರೀ ಶರೀರದಿಂದ ಮಾಡಿದ ಕರ್ಮವನ್ನು ಸ್ತ್ರೀ ಶರೀರದಿಂದಲೇ ಅನುಭವಿಸುತ್ತಾನೆ.
ಪುರುಷೇಣ ಕೃತಂ ಕರ್ಮ ಪುರುಷೇಣೈವ ಭುಜ್ಯತೇ |
ಏವಂ ಪ್ರಸಜ್ಯತೇ ಲೋಕೇ ಭಾವೈಕತ್ವೇನ ಭೂಯಶಃ |
ಶರೀರಂ ಕರ್ಮನಾನಾತ್ವಾದ್ ದೃಶ್ಯತೇ ವಿಪರೀತವತ್ ॥6॥
ಪುರುಷನು ಮಾಡಿದ ಕರ್ಮಫಲವನ್ನು ಪುರುಷ ಶರೀರದಿಂದಲೇ ಅನುಭವಿಸುತ್ತಾನೆ. ಹೀಗೆ ಕರ್ಮ ಮತ್ತು ಕರ್ಮಫಲಗಳು ಹೆಚ್ಚಾಗಿ ಒಂದೇ ಭಾವದಿಂದ ಮಾಡಲ್ಪಡುತ್ತವೆ ಮತ್ತು ಅನುಭವಿಸಲ್ಪಡುತ್ತವೆ. ಪುರುಷನ ಶರೀರವು ಮಾತ್ರ ಕರ್ಮ ವೈಚಿತ್ರ್ಯದಿಂದ ಪುರುಷನಾಗಿಯೂ, ಸ್ತ್ರೀಯಾಗಿಯೂ ಕಂಡುಬರುತ್ತದೆ.
ಕೃತ್ವಾ ತು ಪೌರುಷಂ ಕರ್ಮ ಸ್ತ್ರೀ ಪುಮಾನಪಿ ಜಾಯತೇ |
ಸ್ತ್ರೀಭಾವಯುಕ್ ಪುಮಾನ್ಕೃತ್ವಾ ಕರ್ಮಣಾ ಪ್ರಮದಾ ಭವೇತ್ ॥7॥
ನೈಮಿತ್ತಿಕ ಸ್ತ್ರೀಯಾದವಳು ಪುರುಷನಿಗೆ ಯೋಗ್ಯವಾದ ಕರ್ಮವನ್ನು ಮಾಡಿ ಪುನಃ ಪುರುಷನಾಗಿ ಜನಿಸುತ್ತಾಳೆ. ಪುರುಷನು ಸ್ತ್ರೀಯರಿಗೆ ಯೋಗ್ಯವಾದ ಕರ್ಮಗಳನ್ನು ಮಾಡಿ ಆ ಕರ್ಮದಿಂದ ಸ್ತ್ರೀಯಾಗಿಯೇ ಹುಟ್ಟುತ್ತಾನೆ (ಲಕ್ಷ್ಮಾಲಂಕಾರ).
ಉಮಾ
ಭಗವನ್ ಸರ್ವಲೋಕೇಶ ಯದ್ಯಾತ್ಮಾ ನ ಕರೋತಿ ಚೇತ್ |
ಕೋಽನ್ಯಃ ಕರ್ಮಕರಸ್ತತ್ರ ದೇಹೇ ತದ್ವಕ್ತುಮರ್ಹಸಿ ॥8॥
ಉಮಾ ಭಗವಂತನೇ, ಸರ್ವಲೋಕೇಶನೇ, ಜೀವನನ್ನು ಅಕರ್ತಾ ಎಂದು ಹೇಳಿದೆ.  ಜೀವನು ಕರ್ತೃವಲ್ಲದಿದ್ದರೆ ದೇಹದಲ್ಲಿ ಪ್ರಕೃತಿಸಂಬಂಧರಹಿತನಾಗಿ ಕರ್ಮವನ್ನು ಮಾಡುವವನು ಯಾರು ಎಂದು ನನಗೆ ಹೇಳಬೇಕು (ಲಕ್ಷ್ಮಾಲಂಕಾರ).
ಮಹೇಶ್ವರಃ
ಶೃಣು ಭಾಮಿನಿ ಕರ್ತಾರಮಾತ್ಮಾಽಯಂ ನೈವ ಕರ್ಮಕೃತ್ |
ಪ್ರಕೃತ್ಯಾ ಗುಣಯುಕ್ತೇನ ಕ್ರಿಯತೇ ಕರ್ಮ ನಿತ್ಯಶಃ ॥9॥
ಮಹೇಶ್ವರ ಶರೀರ ರಹಿತನಾದ ಆತ್ಮನು ಎಂದೂ ಕರ್ಮವನ್ನು ಮಾಡುವುದಿಲ್ಲ. ಪ್ರಕೃತಿಯ ಗುಣವಾದ ದೇಹದಿಂದ ಯುಕ್ತನಾದ ಆತ್ಮನು ಮಾತ್ರ ಕರ್ಮವನ್ನು ಮಾಡುತ್ತಾನೆ (ಲಕ್ಷ್ಮಾಲಂಕಾರ).
ಶರೀರಂ ಪ್ರಾಣಿನಾಂ ಲೋಕೇ ಯಥಾ ಪಿತ್ತಕಫಾನಿಲೈಃ |
ವ್ಯಾಪ್ತಮೇವ ತ್ರಿಭಿರ್ದೋಷೈಸ್ತಥಾ ವ್ಯಾಪ್ತಂ ಗುಣೈಸ್ತ್ರಿಭಿಃ ॥10॥
ಲೋಕದಲ್ಲಿ ಪ್ರಾಣಿಗಳ ಶರೀರವು ಹೇಗೆ ವಾತ, ಪಿತ್ಥ, ಕಫಗಳೆಂಬ ಮೂರು ದೋಷಗಳಿಂದ ವ್ಯಾಪ್ತವಾಗಿರುತ್ತದೆಯೋ ಅದರಂತೆ

ಸತ್ವ-ರಜಸ್ತಮೋಗುಣಗಳಿಂದ ವ್ಯಾಪ್ತವಾಗಿರುತ್ತದೆ.
ಸತ್ವಂ ರಜಸ್ತಮ ಇತಿ ಗುಣಾಸ್ತ್ವೇತೇ ಶರೀರಿಣಃ |
ಪ್ರಕಾಶಾತ್ಮಕಮೇತೇಷಾಂ ಸತ್ವಂ ಸತತಮಿಷ್ಯತೇ ॥11॥
ಸತ್ವ-ರಜಸ್ಸು ಮತ್ತು ತಮಸ್ಸು ಎಂಬ ಗುಣಗಳು ಶರೀರಿಯ ಜೊತೆಯಲ್ಲಿ ಇರುತ್ತವೆ. ಇವುಗಳಲ್ಲಿ ಸತ್ವವು ಯಾವಾಗಲೂ ಪ್ರಕಾಶಾತ್ಮಕವಾದುದು.
ರಜೋ ದುಃಖಾತ್ಮಕಂ ತತ್ರ ತಮೋ ಮೋಹಾತ್ಮಕಂ ಸ್ಮೃತಮ್ |
ತ್ರಿಭಿರೇತೈರ್ಗುಣೈಃ ಸರ್ವಂ ಲೋಕೇ ಕರ್ಮ ಪ್ರವರ್ತತೇ ॥12॥
ರಜೋಗುಣವು ದುಃಖಾತ್ಮಕವಾದುದು ಮತ್ತು ತಮೋಗುಣವು ಮೋಹಾತ್ಮಕವಾದುದು ಎಂದು ಹೇಳಲ್ಪಡುತ್ತದೆ. ಲೋಕದಲ್ಲಿ ಎಲ್ಲ ಕರ್ಮವೂ ಈ ಮೂರುಗುಣಗಳಿಂದಲೇ ಮಾಡಲ್ಪಡುತ್ತದೆ.
ಸತ್ಯಂ ಪ್ರಾಣಿದಯಾ ಶೌಚಂ ಶ್ರೇಯಃ ಪ್ರೀತಿಃ ಕ್ಷಮಾ ದಮಃ |
ಏವಮಾದಿ ತಥಾಽನ್ಯಚ್ಚ ಕರ್ಮ ಸಾತ್ವಿಕಮಿಷ್ಯತೇ ॥13॥
ಸತ್ಯ, ಪ್ರಾಣಿದಯೆ, ಶೌಚ, ಶ್ರೇಯಸ್ಸಾಧನ, ಪ್ರೀತಿ, ಕ್ಷಮೆ, ಇಂದ್ರಿಯನಿಗ್ರಹ ಇವೇ ಮೊದಲಾದವುಗಳು ಸಾತ್ವಿಕ ಕರ್ಮಗಳೆಂದು ಹೇಳಲ್ಪಡುತ್ತವೆ.
ದಾಕ್ಷ್ಯಂ ಕರ್ಮಪರತ್ವಂ ಚ ಲೋಭೋ ಭೋಗವಿಧಿಂ ಪ್ರತಿ |
ಕಳತ್ರಸಂಗೋ ಮಾಧುರ್ಯಂ ನಿತ್ಯಮೈಶ್ವರ್ಯಲುಬ್ಧತಾ |
ರಜಸಶ್ಚೋದ್ಭವಂ ಚೈತತ್ಕರ್ಮ ನಾನಾವಿಧಂ ಸದಾ ॥14॥
ಕೆಲಸ ಮಾಡುವುದರಲ್ಲಿ ದಕ್ಷತೆ, ಯಾವಾಗಲೂ ಕಾರ್ಯಪರತೆ, ಲೋಭ, ಭೋಗಾಸಕ್ತಿ, ಸ್ತ್ರೀಸಂಗ, ಮಧುರಭಾವ, ಯಾವಾಗಲೂ ಐಶ್ವರ್ಯದಲ್ಲಿ ಆಸೆ ಇಂತಹ ನಾನಾ ವಿಧವಾದ ಕರ್ಮಗಳು ಯಾವಾಗಲೂ ರಜೋಗುಣದಿಂದ ಉಂಟಾಗುತ್ತವೆ.
ಅನೃತಂ ಚೈವ ಪಾರುಷ್ಯಂ ಶ್ರುತಿವಿದ್ವೇಷತಾ ಭೃಶಮ್ |
ಹಿಂಸಾಪರತ್ವಂ ನಾಸ್ತಿಕ್ಯಂ ನಿದ್ರಾಲಸ್ಯಭಯಾನಿ ಚ |
ತಮಸಶ್ಚೋದ್ಭವಂ ಚೈತತ್ಕರ್ಮ ಪಾಪಯುತಂ ಸದಾ ॥15॥
ಅನೃತ, ಕ್ರೌರ್ಯ, ಶ್ರುತಿಗಳಲ್ಲಿ ವಿದ್ವೇಷ, ಹಿಂಸಾಪರತ್ವ, ನಾಸ್ತಿಕ್ಯ, ನಿದ್ರೆ, ಆಲಸ್ಯ, ಭಯ ಇವುಗಳು ತಮೋಗುಣದಿಂದ ಉಂಟಾದವುಗಳು ಮತ್ತು ಪಾಪಕರ್ಮಗಳು.
ತಸ್ಮಾದ್ ಗುಣಮಯಃ ಸರ್ವಃ ಕಾರ್ಯಾರಂಭಃ ಶುಭಾಶುಭಃ |
ತಸ್ಮಾದಾತ್ಮಾನಮವ್ಯಗ್ರಂ ವಿದ್ಧ್ಯಕರ್ತಾರಮವ್ಯಯಮ್ ॥16॥
ಆದ್ದರಿಂದ ಶುಭಾಶುಭ ಕಾರ್ಯಗಳೆಲ್ಲವೂ ಗುಣಗಳಿಂದಲೇ ಆಗುತ್ತವೆ. ಆತ್ಮನು ಮಾತ್ರ ನಿರ್ವಿಕಾರನಾದವನು. ಗುಣಗಳ ಸಂಬಂಧವಿಲ್ಲದೆ ಕರ್ಮಗಳನ್ನು ಮಾಡಲು ಅಶಕ್ತನಾದವನು ಮತ್ತು ನಾಶರಹಿತನಾದವನು.
ಸಾತ್ವಿಕಾಃ ಪುಣ್ಯಲೋಕೇಷು ರಾಜಸಾ ಮಾನುಷೇ ಪದೇ |
ತಿರ್ಯಗ್ಯೋನೌ ಚ ನರಕೇ ತಿಷ್ಠೇಯುಸ್ತಾಮಸಾ ನರಾಃ ॥17॥
ಸಾತ್ವಿಕರು ಪುಣ್ಯಲೋಕಗಳಲ್ಲಿಯೂ ರಾಜಸ ಜೀವರು ಮನುಷ್ಯ ಲೋಕದಲ್ಲಿಯೂ, ತಾಮಸ ಜೀವರು ನೀಚಯೋನಿಗಳಲ್ಲಿಯೂ ಮತ್ತು ನರಕದಲ್ಲಿಯೂ ಇರುತ್ತಾರೆ.
ಉಮಾ
ಕಿಮರ್ಥಮಾತ್ಮಾ ಭಿನ್ನೇಽಸ್ಮಿನ್ದೇಹೇ ಶಸ್ತ್ರೇಣ ವಾ ಹತೇ |
ಸ್ವಯಂ ಪ್ರಣಶ್ಯತೇ ದೇಹೀ ತನ್ಮೇ ಶಂಸಿತುಮರ್ಹಸಿ ॥18॥
ಉಮಾ ದೇಹವು ಶಸ್ತ್ರದಿಂದ ಹತವಾದಾಗ ದೇಹಿಯಾದ ಆತ್ಮನು ಏಕೆ ನಾಶವನ್ನು ಹೊಂದುತ್ತಾನೆ? ಇದನ್ನು ನನಗೆ ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ |
ಏತನ್ನೈಯಾಯಿಕೈಶ್ಚಾಪಿ ಮುಹ್ಯತೇ ಸೂಕ್ಷ್ಮಬುದ್ಧಿಭಿಃ ॥19॥
ಮಹೇಶ್ವರ ಕಲ್ಯಾಣಿಯೇ, ಅದಕ್ಕೆ ಕಾರಣವನ್ನು ನಾನು ಹೇಳುವೆನು. ಅದನ್ನು ಕೇಳು. ಸೂಕ್ಷ್ಮವಾದ ತರ್ಕಬುದ್ಧಿಯುಳ್ಳವರೂ ಸಹ ಈ ವಿಷಯದಲ್ಲಿ ಮೋಹಕ್ಕೆ ಒಳಗಾಗುತ್ತಾರೆ.
ಕರ್ಮಕ್ಷಯೇ ತು ಸಂಪ್ರಾಪ್ತೇ ಪ್ರಾಣಿನಾಂ ಜನ್ಮಧಾರಿಣಾಮ್ |
ಉಪದ್ರವೋ ಭವೇದ್ ದೇಹೇ ಯೇನ ಕೇನಾಪಿ ಹೇತುನಾ ॥20॥
ಕರ್ಮಕ್ಷಯವು ಉಂಟಾಗುವ ಕಾಲದಲ್ಲಿ ಜನ್ಮವನ್ನು ಪಡೆದ ಜೀವರಿಗೆ ದೇಹದಲ್ಲಿ ಯಾವುದಾದರೂ ಕಾರಣದಿಂದ ಉಪದ್ರವವು ಉಂಟಾಗುತ್ತದೆ.
ತನ್ನಿಮಿತ್ತಂ ಶರೀರೀ ತು ಶರೀರಂ ಪ್ರಾಪ್ತಸಂಕ್ಷಯಮ್ |
ಅಪಯಾತಿ ಪರಿತ್ಯಜ್ಯ ತತಃ ಕರ್ಮವಶೇನ ಸಃ ॥21॥
ಆ ನಿಮಿತ್ತದಿಂದ ಶರೀರಿಯು ಆ ದೇಹದ ಸಂಕ್ಷಯವನ್ನು ಹೊಂದಿ ಆ ದೇಹವನ್ನು ಬಿಟ್ಟು ಕರ್ಮವಶದಿಂದ ಬೇರೆ ಕಡೆಗೆ ಹೋಗುತ್ತಾನೆ.
ದೇಹಹಾನೌ ಭವೇದಾತ್ಮಾ ವೇದನಾಭಿರ್ನ ಚಾಲ್ಯತೇ |
ತಿಷ್ಠೇತ್ಕರ್ಮಫಲಂ ಯಾವದ್ ವ್ರಜೇತ್ಕರ್ಮಕ್ಷಯೇ ಪುನಃ ॥22॥

ದೇಹಹಾನಿಯಾದಾಗ ಅವನು ಹೇಗೆ ಕರ್ಮದ ಫಲವನ್ನು ಭೋಗಿಸುತ್ತಾನೆ? ದೇಹದಿಂದ ಯುಕ್ತನಾಗಿಯೇ ಭೋಗಿಸುತ್ತಾನಷ್ಟೇ? ಕರ್ಮವನ್ನು ಮಾಡುವಾಗ ಸಹಾಯಭೂತವಾಗಿದ್ದ ದೇಹವು ಭೋಗಕಾಲದಲ್ಲಿ ನಷ್ಟವಾಗಿರುವುದರಿಂದ ಕರ್ಮಕಾಲದಲ್ಲಿದ್ದ ಶರೀರವು ಭೋಗಕ್ಕೆ ಉಪಯೋಗಿಯಲ್ಲ. ಆತ್ಮನೇ ಭೋಗವನ್ನು ಭೋಗಿಸುವವನು. ರಾಜನಿಗೆ ಗಮನಕ್ಕೆ ಸಹಾಯ ಮಾಡಿದ ಅಶ್ವವು ರಾಜನು ಭೋಜನ ಮಾಡುವ ಕಾಲದಲ್ಲಿಯೂ ಅವನ ಜೊತೆಯಲ್ಲಿ ಇರುವುದಿಲ್ಲವಷ್ಟೇ? ಕರ್ಮಕ್ಷಯ ಉಂಟಾದಾಗ ಯಾವ ಕರ್ಮದಿಂದ ಆ ದೇಹವು ಬಂದಿದ್ದಿತೋ ಆ ದೇಹವನ್ನು ಜೀವನು ತೊರೆಯುತ್ತಾನೆ. ಆದರೆ ದೇಹವು ನಾಶವನ್ನು ಹೊಂದಿದಾಗ ತಾನು ನಾಶವನ್ನು ಹೊಂದುವುದಿಲ್ಲ. ಸ್ವರ್ಗಕ್ಕೆ, ನರಕಕ್ಕೆ ಅಥವಾ ಮೋಕ್ಷಕ್ಕೆ ಹೋಗುತ್ತಾನೆ (ಲಕ್ಷ್ಮಾಲಂಕಾರ).
ದೇಹವು ನಾಶವನ್ನು ಹೊಂದಿದರೂ ಆತ್ಮನು ಇದ್ದೇ ಇರುತ್ತಾನೆ. ವೇದನಾದಿಗಳಿಂದ ಆತ್ಮನು ನಾಶವನ್ನು ಹೊಂದುವುದಿಲ್ಲ. ಜೀವನು ಕರ್ಮಫಲವಿರುವವರೆಗೂ ಆ ದೇಹದಲ್ಲಿ ಇರುತ್ತಾನೆ. ಕರ್ಮಫಲವು ಕ್ಷಯಿಸಿದರೆ ಆ ದೇಹವನ್ನು ಬಿಟ್ಟು ಹೋಗುತ್ತಾನೆ.
ಆದಿಪ್ರಭೃತಿ ಲೋಕೇಽಸ್ಮಿನ್ನೇವಮಾತ್ಮಗತಿಃ ಸ್ಮೃತಾ |
ಏತತ್ತೇ ಕಥಿತಂ ದೇವಿ ಕಿಂ ಭೂಯಃ ಶ್ರೋತುಮಿಚ್ಛಸಿ ||23||
ದೇವಿಯೇ, ಮೊದಲಿನಿಂದಲೂ ಜಗತ್ತಿನ ಜೀವನ ಗತಿಯು ಈ ರೀತಿಯಾಗಿಯೇ ಇದೆ ಎಂದು ಹೇಳಲ್ಪಡುತ್ತದೆ. ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಪುಂಸತ್ವಾದಿಕಥನಂ ನಾಮ
ದಶಾಧಿಕದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹನ್ನೊಂದನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಹಿಂಸೆ ಮಾಡಿದರೂ ಪಾಪಾಲೇಪದ ಕಥನ.
ಉಮಾ
ಭಗವನ್ ದೇವದೇವೇಶ ಕರ್ಮಣ್ಯೈವ ಶುಭಾಶುಭಮ್ |
ಯಥಾಯೋಗಂ ಫಲಂ ಜಂತುಃ ಪ್ರಾಪ್ನೋತೀತಿ ವಿನಿಶ್ಚಯಃ ||1||
ಪರೇಷಾಂ ವಿಪ್ರಿಯಂ ಕುರ್ವನ್ ಯಥಾ ಸಂಪ್ರಾಪ್ನುಯಾಚ್ಛುಭಮ್ |
ಯದ್ಯೇತದಸ್ತಿ ಚೇದ್ ದೇವ ತನ್ಮೇ ಶಂಸಿತುಮರ್ಹಸಿ ||2||
ಉಮಾ ಭಗವಂತನೇ, ದೇವದೇವೇಶನೇ, ಜೀವನು ತನ್ನ ಕರ್ಮಕ್ಕೆ ಅನುಗುಣವಾಗಿ ಶುಭಾಶುಭ ಫಲಗಳನ್ನು ಹೊಂದುತ್ತಾನೆ ಎಂಬುದು ನಿಶ್ಚಿತವಾದುದು. ಇನ್ನೊಬ್ಬರಿಗೆ ಹಿಂಸೆಯನ್ನು ಮಾಡಿದರೂ ಶುಭಫಲವನ್ನು ಹೊಂದುವಂತಹ ಯಾವುದಾದರೂ ವಿಷಯವಿದ್ದರೆ ಎಲೈ ದೇವನೇ, ಅದನ್ನು ನನಗೆ ಹೇಳಬೇಕು.
ಮಹೇಶ್ವರಃ
ತದಪ್ಯಸ್ತಿ ಮಹಾಭಾಗೇ ಅಭಿಸಂಧಿಫಲಂ ನೃಣಾಮ್ |
ಹಿತಾರ್ಥಂ ದುಃಖಮನ್ಯೇಷಾಂ ಕೃತ್ವಾ ಶುಭಮವಾಪ್ನುಯಾತ್ ||3||
ಮಹೇಶ್ವರ ಮಹಾಭಾಗ್ಯವಂತಳೇ, ಅಂತಹದೂ ಇದೆ. ಮನುಷ್ಯರಿಗೆ ಉದ್ದೇಶಕ್ಕೆ ಅನುಗುಣವಾಗಿ ಫಲವು ಲಭಿಸುತ್ತದೆ. ಇನ್ನೊಬ್ಬರ ಹಿತಕ್ಕಾಗಿ ದುಃಖವನ್ನು ಕೊಟ್ಟರೂ ಶುಭಫಲವೇ ದೊರಕುತ್ತದೆ.
ದಂಡಯನ್ ಭರ್ತ್ಸಯನ್ ರಾಜಾ ಪ್ರಜಾಃ ಪುಣ್ಯಮವಾಪ್ನುಯಾತ್ |
ಗುರುಃ ಸಂತರ್ಜಯನ್ ಶಿಷ್ಯಾನ್ ಭರ್ತಾ ಭೃತ್ಯಜನಾನ್ ಸ್ವಕಾನ್ |
ಉನ್ಮಾರ್ಗಪ್ರತಿಪನ್ನಾಂಶ್ಚ ಶಾಸ್ತಾ ಧರ್ಮಫಲಂ ಲಭೇತ್ ||4||
ರಾಜನು ಪ್ರಜೆಗಳಿಗೆ ಶಿಕ್ಷೆಯನ್ನು ಕೊಟ್ಟು ಗದರಿಸಿ ಪುಣ್ಯವನ್ನು ಪಡೆಯುತ್ತಾನೆ. ಗುರುವು ಶಿಷ್ಯರನ್ನು ಗದರಿಸಿ, ಸ್ವಾಮಿಯು ತನ್ನ ಭೃತ್ಯರನ್ನು ಗದರಿಸಿ ಪುಣ್ಯವನ್ನು ಪಡೆಯುತ್ತಾರೆ. ದುರ್ಮಾರ್ಗದಲ್ಲಿ ಹೋಗುವವರಿಗೆ ಶಿಕ್ಷೆಯನ್ನು ಕೊಡುವವನು ಧರ್ಮಫಲವನ್ನು ಪಡೆಯುತ್ತಾನೆ.
ಚಿಕಿತ್ಸಕಶ್ಚ ದುಃಖಾನಿ ಜನಯನ್ ಹಿತಮಾಪ್ನುಯಾತ್ |
ಯಜ್ಞಾರ್ಥಂ ಪಶುಹಿಂಸಾಂ ಚ ಕುರ್ವನ್ನಪಿ ನ ಹಿಂಸಕಃ |
ಏವಮನ್ಯೇ ಸುಮನಸೋ ಹಿಂಸಕಾಃ ಸ್ವರ್ಗಮಾಪ್ನುಯುಃ ||5||
ವೈದ್ಯನು ರೋಗಿಗೆ ದುಃಖವನ್ನು ಉಂಟುಮಾಡಿದರೂ ಶುಭವನ್ನು ಪಡೆಯುತ್ತಾನೆ. ಯಜ್ಞದ ಸಲುವಾಗಿ ಪಶುಹಿಂಸೆಯನ್ನು ಮಾಡಿದರೂ ಅವನು ಹಿಂಸಕನಾಗುವುದಿಲ್ಲ. ಹೀಗೆ ಒಳ್ಳೆಯ ಅಭಿಪ್ರಾಯದಿಂದ ಹಿಂಸೆಯನ್ನು ಮಾಡುವವರು ಸ್ವರ್ಗವನ್ನು ಹೊಂದುವರು.
ಏಕಸ್ಮಿನ್ ನಿಹತೇ ಭದ್ರೇ ಬಹವಃ ಸುಖಮಾಪ್ನುಯುಃ |
ತಸ್ಮಿನ್ ಹತೇ ಭವೇದ್ ಧರ್ಮಃ ಕುತ ಏವ ತು ಪಾಪಕಮ್ ||6||
ಮಂಗಳಸ್ವರೂಪಳೇ, ಒಬ್ಬನನ್ನು ಕೊಂದರೆ ಬಹಳ ಜನ ಸುಖವನ್ನು ಪಡೆಯುತ್ತಾರೆ (ಎಂದಾದರೆ) ಆ ಒಬ್ಬನನ್ನು ಕೊಲ್ಲುವುದು ಧರ್ಮವೇ ಆಗುತ್ತದೆ. ಪಾಪವು ಎಲ್ಲಿಂದ ಬರುತ್ತದೆ?
ಅಭಿಸಂಧೇರಜಿಹ್ಮತ್ವಾಚ್ಛುದ್ಧೇ ಧರ್ಮಸ್ಯ ಗೌರವಾತ್ |

ಏತತ್ಕೃತ್ವಾ ತು ಪಾಪೇಭ್ಯೋ ನ ದೋಷಂ ಪ್ರಾಪ್ನುಯುಃ ಕ್ವಚಿತ್ ॥7॥
ಉದ್ದೇಶವು ವಕ್ರವಿಲ್ಲದಿರುವುದರಿಂದ ಮತ್ತು ಶುದ್ಧಧರ್ಮದಲ್ಲಿ ಗೌರವ ಇರುವುದರಿಂದ ಇಂತಹ ಹಿಂಸಾ ಕಾರ್ಯಗಳನ್ನು ಮಾಡಿದರೂ ಅವರಿಗೆ ದೋಷ ಉಂಟಾಗುವುದಿಲ್ಲ.
ಉಮಾ
ಭಗವನ್ ಸರ್ವಮರ್ತ್ಯಾನಾಂ ಜ್ಞಾನೀ ಭವತಿ ಸತ್ತಮಃ |
ಕಿಮವೇಕ್ಷ್ಯ ತದುತ್ಪನ್ನಂ ಜ್ಞಾನಂ ತಸ್ಯ ಫಲಂ ಚ ಯತ್ |
ಕೃತ್ರಿಮಂ ತತ್ಸ್ವಭಾವಂ ವಾ ತನ್ಮೇ ಶಂಸಿತುಮರ್ಹಸಿ ॥8॥
ಉಮಾ ಭಗವಂತನೇ, ಎಲ್ಲ ಮನುಷ್ಯರಲ್ಲಿ ಜ್ಞಾನಿಯು ಶ್ರೇಷ್ಠನಾಗುತ್ತಾನೆ. ಆ ಜ್ಞಾನವು ಹೇಗೆ ಉಂಟಾಗುತ್ತದೆ? ಮತ್ತು ಅದರ ಫಲವೇನು? ಜ್ಞಾನವು ಸ್ವಾಭಾವಿಕವಾದುದೋ ಅಥವಾ ಆಗಂತುಕವಾದುದೋ ಎಂದು ನನಗೆ ಹೇಳಬೇಕು.
ನಾರದಃ
ಏತಚ್ಛ್ರುತ್ವಾ ಮಹಾದೇವೋ ಜಗೌ ಜ್ಞಾನಸ್ಯ ಸಂಭವಮ್ ॥9॥
ನಾರದ ಈ ಮಾತನ್ನು ಕೇಳಿ ಮಹಾದೇವನು ಜ್ಞಾನದ ಉತ್ಪತ್ತಿಯನ್ನು ಹೇಳಿದನು.
ಮಹೇಶ್ವರಃ
ಸ್ಥಾವರಂ ಜಂಗಮಂ ಚೈವ ಜಗದ್ ದ್ವಿವಿಧಮುಚ್ಯತೇ |
ಚತಸ್ರೋ ಜಾತಯಸ್ತತ್ರ ಪ್ರಜಾನಾಂ ಕ್ರಮಶೋ ಯಥಾ ॥10॥
ಮಹೇಶ್ವರ ಪ್ರಪಂಚವು ಸ್ಥಾವರ ಮತ್ತು ಜಂಗಮ ಎಂದು ಎರಡು ವಿಧವಾದುದು. ಅವುಗಳಲ್ಲಿ ಪ್ರಾಣಿಗಳಿಗೆ ಕ್ರಮವಾಗಿ ನಾಲ್ಕು ಜಾತಿಗಳಿವೆ.
ತೇಷಾಮುದ್ಭೇದಜಾ ವೃಕ್ಷಾ ಲತಾ ವಲ್ಲ್ಯಶ್ಚ ವೀರುಧಃ |
ದಂಶಯೂಕಾದಯಶ್ಚಾನ್ಯೇ ಸ್ವೇದಜಾಃ ಕೃಮಿಜಾತಯಃ ॥11॥
ವೃಕ್ಷಗಳು, ಲತೆಗಳು, ಬಳ್ಳಿಗಳು, ಪೊದೆಗಳು ಇವು ಉದ್ಭೇದಜ ಜಾತಿಗೆ ಸೇರಿದವು. ಸೊಳ್ಳೆ, ಹೇನು ಮೊದಲಾದ ಕ್ರಿಮಿಗಳು ಸ್ವೇದಜ ಜಾತಿಗೆ ಸೇರಿದವುಗಳು.
ಪಕ್ಷಿಣಶ್ಛಿದ್ರಕರ್ಣಾಶ್ಚ ಪ್ರಾಣಿನಸ್ತ್ವಂಡಜಾ ಮತಾಃ |
ಮೃಗವ್ಯಾಲಮನುಷ್ಯಾಂಶ್ಚ ವಿದ್ಧಿ ತೇಷಾಂ ಜರಾಯುಜಾನ್ ॥12॥
ಪಕ್ಷಿಗಳು, ಕಿವಿಯಲ್ಲಿ ರಂಧ್ರವಿರುವ ಪ್ರಾಣಿಗಳು ಅಂಡಜ ಜಾತಿಗೆ ಸೇರಿದವುಗಳು (ಮೊಟ್ಟೆಯಿಂದ ಒಡೆದು ಹೊರಗೆ ಬರುವಂತಹವುಗಳು). ಮೃಗಗಳು, ಗಜಗಳು, ಮನುಷ್ಯರು ಮೊದಲಾದವರು ಜರಾಯುಜ (ಗರ್ಭಕೋಶದ ಆವರಣದಿಂದ ಹೊರಗೆ ಬರುವವರು) ಎಂದು ತಿಳಿ.
ಏವಂ ಚತುರ್ವಿಧಾಂ ಜಾತಿಮಾತ್ಮಾ ಸಂಸೃತ್ಯ ತಿಷ್ಠತಿ ॥13॥
ಹೀಗೆ ಜೀವನು ಸಂಸಾರದಲ್ಲಿ ಈ ನಾಲ್ಕುವಿಧವಾದ ಜಾತಿಗಳಲ್ಲಿ ಕ್ರಮವಾಗಿ ಜನಿಸುತ್ತಾನೆ.
ಸ್ಪರ್ಶೇನೈಕೇಂದ್ರಿಯೇಣಾತ್ಮಾ ತಿಷ್ಠತ್ಯುದ್ಭೇದಜೇಷು ವೈ |
ಶರೀರಸ್ಪರ್ಶರೂಪಾಭ್ಯಾಂ ಕ್ಲೇದಜೇಷ್ವಪಿ ತಿಷ್ಠತಿ ॥14॥
ಪಂಚಭಿಶ್ಚೇಂದ್ರಿಯದ್ವಾರೈರ್ಜೀವಂತ್ಯೇಂಡಜರಾಯುಜಾಃ ॥15॥
ಉದ್ಭೇದಜ ಜಾತಿ ಸ್ಪರ್ಶೇಂದ್ರಿಯವೊಂದನ್ನೇ ಹೊಂದಿರುತ್ತಾನೆ. ಸ್ವೇದಜ ಜಾತಿಗಳಲ್ಲಿ ಸ್ಪರ್ಶ ಮತ್ತು ರೂಪ ಎಂಬ ಎರಡು ಇಂದ್ರಿಯಗಳಿಂದ ಯುಕ್ತನಾಗಿರುತ್ತಾನೆ. ಅಂಡಜ ಮತ್ತು ಜರಾಯುಜಗಳಲ್ಲಿ ಐದು ಇಂದ್ರಿಯಗಳಿಂದಲೂ ಯುಕ್ತನಾಗಿರುತ್ತಾನೆ.
ತಥಾ ಭೂಮ್ಯಂಬುಸಂಯೋಗಾದ್ ಭವಂತ್ಯುದ್ಭೇದಜಾಃ ಪ್ರಿಯೇ |
ಶೀತೋಷ್ಣಯೋಸ್ತು ಸಂಯೋಗಾಜ್ಜಾಯಂತೇ ಸ್ವೇದಜಾಃ ಪ್ರಿಯೇ |
ಅಂಡಜಾಶ್ಚಾಪಿ ಸಂಯೋಗಾತ್ ಜಾಯಂತೇ ಕ್ಷೇತ್ರಬೀಜಯೋಃ ॥16॥
ಪ್ರಿಯೆಯೇ, ಭೂಮಿ ಮತ್ತು ಜಲದ ಸಂಯೋಗದಿಂದ ಉದ್ಭೇದಜ ಜಾತಿಯ ಜೀವರು ಜನಿಸುತ್ತಾರೆ. ಶೀತೋಷ್ಣಗಳ ಸಂಯೋಗದಿಂದ ಸ್ವೇದಜ ಜಾತಿಯ ಕ್ರಿಮಿಗಳು ಉಂಟಾಗುತ್ತವೆ. ಕ್ಷೇತ್ರ-ಬೀಜಗಳ ಸಂಯೋಗದಿಂದ ಅಂಡಜಗಳು ಜನಿಸುತ್ತವೆ.
ಶುಕ್ಲಶೋಣಿತಸಂಯೋಗಾತ್ ಸಂಭವಂತಿ ಜರಾಯುಜಾಃ |
ಜರಾಯುಜಾನಾಂ ಸರ್ವೇಷಾಂ ಮಾನುಷಂ ಪದಮುತ್ತಮಮ್ ॥17॥
ಶುಕ್ಲ-ಶೋಣಿತಸಂಬಂಧದಿಂದ ಜರಾಯುಜಗಳು ಜನಿಸುತ್ತವೆ. ಎಲ್ಲ ಜರಾಯುಜಗಳಲ್ಲಿ ಮನುಷ್ಯನ ಸ್ಥಾನವು ಶ್ರೇಷ್ಠವಾದುದು.
ಸಕಲೈರಿಂದ್ರಿಯೈರ್ಮರ್ತ್ಯಾಃ ಸಂಯುಕ್ತಾ ಜಲ್ಪಿನಸ್ತಥಾ |
ಭಯಂ ರತಿಶ್ಚ ಚಿತ್ತಂ ತದ್ ವಿದ್ಯತೇ ಮೃಗಪಕ್ಷಿಷು ॥18॥
ಮನುಷ್ಯರು ಎಲ್ಲ ಇಂದ್ರಿಯಗಳಿಂದಲೂ ಕೂಡಿ ಮಾತನಾಡಲು ಸಮರ್ಥರಾಗಿರುತ್ತಾರೆ. ಮೃಗ-ಪಕ್ಷಿಗಳಲ್ಲಿ ಭಯ, ರತಿ ಮತ್ತು ಮನಸ್ಸುಗಳು ಮಾತ್ರ ಇರುತ್ತವೆ.
ಧರ್ಮಾಧರ್ಮೌ ಚ ವಿಜ್ಞಾನಂ ನೈವ ಪಕ್ಷಿಮೃಗಾದಿಷು |
ಬುದ್ಧಿಃ ಸತ್ತ್ವಂ ಧೃತಿರ್ಲಜ್ಜಾ ಜ್ಞಾನಂ ವಿಜ್ಞಾನಮೇವ ಚ ॥19॥
ಅವುಗಳಿಗೆ ಧರ್ಮಾಧರ್ಮಗಳಾಗಲೀ ಅಥವಾ ವಿಜ್ಞಾನವಾಗಲೀ ಇರುವುದಿಲ್ಲ. ಮನುಷ್ಯರಲ್ಲಿ ಬುದ್ಧಿ, ಬಲ, ಧೈರ್ಯ, ಲಜ್ಜೆ, ಸಾಮಾನ್ಯ ಜ್ಞಾನ, ವಿಶೇಷ ಜ್ಞಾನ ಎಲ್ಲವೂ ಇರುತ್ತವೆ.
ಊಹಾಪೋಹೌ ಚ ಮರ್ತ್ಯೇಷು ಗುಣಾ ನಾನಾವಿಧಾಃ ಸ್ಮೃತಾಃ |

ಮಾನುಷಂ ಹಿ ಪದಂ ತಸ್ಮಾದ್ ವಿಶಿಷ್ಟಮಿಹ ಲಕ್ಷ್ಯತೇ |
ಮಹತಾ ಧರ್ಮಕಾರ್ಯೇಣ ಪ್ರಾಪ್ಯತೇ ಜನ್ಮ ಮಾನುಷಮ್ ॥20॥
ಅತಃಪರಂ ತಮೋತ್ಪತ್ತಿಂ ಶೃಣು ದೇವಿ ಸಮಾಹಿತಾ |
ದ್ವಿವಿಧಂ ಹಿ ತಮೋ ಲೋಕೇ ಶಾರ್ವರಂ ದೇಹಜಂ ತಥಾ ॥21॥
ಜ್ಯೋತಿರ್ಭಿಶ್ಚ ತಮೋ ಲೋಕೇ ನಾಶಂ ಗಚ್ಛತಿ ಶಾರ್ವರಮ್ |
ದೇಹಜಂ ತು ತಮೋ ಘೋರಂ ತೈಃ ಸಮಸ್ತೈರ್ನ ಶಾಮ್ಯತೇ ॥22॥
ತಮಸಸ್ತಸ್ಯ ನಾಶಾರ್ಥಂ ನೋಪಾಯಮಧಿಜಗ್ಮಿವಾನ್ |
ತಪಶ್ಚಕಾರ ವಿಪುಲಂ ಲೋಕಕರ್ತಾ ಪಿತಾಮಹಃ ॥23॥
ದೇವಿಯೇ, ಇನ್ನು ಮುಂದೆ ತಪಸ್ಸಿನ ಉತ್ಪತ್ತಿಯನ್ನು ಹೇಳು. ಕತ್ತಲು ಮತ್ತು ದೇಹದಲ್ಲಿ ಉಂಟಾದ (ಅಜ್ಞಾನ)ವೆಂದು ತಮಸ್ಸು ಎರಡು ವಿಧವಾದುದು. ಕತ್ತಲಿನ ರೂಪವಾದ ತಮಸ್ಸು ಜ್ಯೋತಿಗಳಿಂದ ನಾಶವನ್ನು ಹೊಂದುತ್ತದೆ. ದೇಹದಲ್ಲಿ ಉಂಟಾದ ತಮಸ್ಸು ಮಹಾಘೋರವಾದುದು. ಅದು ಯಾವ ಜ್ಯೋತಿಸ್ಸುಗಳಿಂದಲೂ ನಾಶವನ್ನು ಹೊಂದುವುದಿಲ್ಲ. ಪಿತಾಮಹರಾದ ಲೋಕಕರ್ತರಾದ ಬ್ರಹ್ಮದೇವರು ಆ ತಮಸ್ಸಿನ ನಾಶಕ್ಕೆ ಉಪಾಯವನ್ನು ಕಾಣದೆ ವಿಪುಲವಾದ ತಪಸ್ಸನ್ನು ಆಚರಿಸಿದರು.
ಚತುರಸ್ತು ಸಮುದ್ಭೂತಾ ವೇದಾಃ ಸಾಂಗಾಃ ಸಹೋತ್ತರಾಃ |
ತಾಲ್ಲಬ್ಧ್ವಾ ಮುಮುದೇ ಬ್ರಹ್ಮಾ ಲೋಕಾನಾಂ ಹಿತಕಾಮ್ಯಯಾ |
ದೇಹಜಂ ತು ತಮೋ ಘೋರಮಭೂತ್ ತೈರೇವ ನಾಶಿತಮ್ ॥24॥
ಆಗ ಅಂಗ ಮತ್ತ ಉಪನಿಷತ್ತುಗಳಿಗೆ ಸಹಿತವಾದ ನಾಲ್ಕು ವೇದಗಳು ಉದ್ಭವಿಸಿದವು. ಲೋಕಗಳ ಹಿತವನ್ನು ಬಯಸಿದ ಬ್ರಹ್ಮದೇವರು ಅವುಗಳನ್ನು ಹೊಂದಿ ಸಂತೋಷಪಟ್ಟರು. ದೇಹದ ಒಳಗಿರುವ ಘೋರವಾದ ಕತ್ತಲೆಯು ಆ ವೇದಗಳಿಂದಲೇ ನಾಶವನ್ನು ಹೊಂದಿತು.
ಕಾರ್ಯಾಕಾರ್ಯಮಿದಂ ಚೇತಿ ವಾಚ್ಯಾವಾಚ್ಯಮಿದಂ ತ್ವಿತಿ |
ಯದಿ ಚೇನ್ನ ಭವೇಲ್ಲೋಕೇ ಶ್ರುತಂ ಚಾರಿತ್ರದೈಶಿಕಮ್ |
ಪಶುಭಿರ್ನಿರ್ವಿಶೇಷಂ ತು ಚೇಷ್ಟಂತೇ ಮಾನುಷಾ ಅಪಿ ॥25॥
(ವೇದಗಳಿಂದ) ಇದು ಕಾರ್ಯ, ಇದು ಅಕಾರ್ಯ. ಇದು ಹೇಳಬಹುದಾದುದು, ಇದು ಹೇಳಬಾರದುದು ಎಂಬ ನಡತೆಯ ಉಪದೇಶವಿಲ್ಲದಿದ್ದರೆ ಲೋಕದಲ್ಲಿ ಮನುಷ್ಯರೂ ಸಹ ಪಶುಗಳಂತೆಯೇ ವರ್ತಿಸುತ್ತಾರೆ (ವೇದಗಳು ಅಂತಹ ಮಾರ್ಗಗಳನ್ನು ಉಪದೇಶಿಸುತ್ತವೆ).
ಯಜ್ಞಾದೀನಾಂ ಸಮಾರಂಭಃ ಶ್ರುತೇನೈವ ವಿಧೀಯತೇ |
ಯಜ್ಞಸ್ಯ ಫಲಯೋಗೇನ ದೇವಲೋಕಃ ಸಮೃದ್ಧ್ಯತೇ ॥26॥
ಯಜ್ಞಾದಿಗಳನ್ನು ಮಾಡುವ ರೀತಿಯೂ ಸಹ ವೇದಗಳಿಂದಲೇ ತಿಳಿಯುತ್ತದೆ. ಯಜ್ಞದ ಫಲವಾಗಿ ದೇವಲೋಕವು ಸಮೃದ್ಧಿಯಿಂದ ಕೂಡಿದೆ.
ಪ್ರೀತಿಯುಕ್ತಾಃ ಪುನರ್ದೇವಾ ಮಾನುಷಾಣಾಂ ಭವಂತ್ಯುತ |
ಏವಂ ನಿತ್ಯಂ ಪ್ರವರ್ಧೇತೇ ರೋದಸೀ ಚ ಪರಸ್ಪರಮ್ ॥27॥
ಯಜ್ಞವನ್ನು ಮಾಡಿದ ಮನುಷ್ಯರನ್ನು ನೋಡಿ ದೇವತೆಗಳು ಪ್ರೀತಿಯುಕ್ತರಾಗುತ್ತಾರೆ. ಹೀಗೆ ಮನುಷ್ಯಲೋಕ ಮತ್ತು ದೇವಲೋಕಗಳು ಪರಸ್ಪರವಾಗಿ ಅಭಿವೃದ್ಧಿಯನ್ನು ಹೊಂದುತ್ತವೆ.
ಲೋಕಸಂಧಾರಣಂ ತಸ್ಮಾಚ್ಛ್ರುತಮಿತ್ಯವಧಾರಯ |
ಜ್ಞಾನಾದ್ ವಿಶಿಷ್ಟಂ ಜಂತೂನಾಂ ನಾಸ್ತಿ ಲೋಕತ್ರಯೇಽಪಿ ಚ ॥28॥
ಆದ್ದರಿಂದ ಲೋಕಗಳ ಧಾರಣೆಯು ವೇದಗಳಿಂದಲೇ ಆಗುವುದೆಂದು ತಿಳಿ. ಜೀವರಿಗೆ ಜ್ಞಾನಕ್ಕಿಂತಲೂ ಶ್ರೇಷ್ಠವಾದುದು ಮೂರುಲೋಕಗಳಲ್ಲಿ ಯಾವುದೂ ಇಲ್ಲ.
ಸಹಜಂ ತತ್ಪ್ರಧಾನಂ ಸ್ಯಾದಪರಂ ಕೃತ್ರಿಮಂ ಸ್ಮೃತಮ್ |
ಉಭಯಂ ಯತ್ರ ಸಂಪನ್ನಂ ಭವೇತ್ ತತ್ರ ತು ಶೋಭನಮ್ ॥29॥
ಆ ಜ್ಞಾನಗಳಲ್ಲಿ ಸಹಜವಾದುದು ಮತ್ತು ಆಗಂತುಕವಾದುದು ಎಂದು ಎರಡು ವಿಧ. ಎಲ್ಲಿ ಎರಡೂ ಇರುತ್ತವೆಯೋ ಅಲ್ಲಿ ಬಹಳ ಶುಭವುಂಟಾಗುತ್ತದೆ.
ಸಂಪ್ರಗೃಹ್ಯ ಶ್ರುತಂ ಸರ್ವಂ ಕೃತಕೃತ್ಯೋ ಭವತ್ಯುತ |
ಉಪರ್ಯುಪರಿ ಮರ್ತ್ಯಾನಾಂ ದೇವವತ್ಸಂಪ್ರಕಾಶತೇ ॥30॥
ಕಾಮಂ ಕ್ರೋಧಂ ಭಯಂ ದರ್ಪಮಜ್ಞಾನಂ ಚೈವ ಬುದ್ಧಿಜಮ್ |
ತಚ್ಛ್ರುತಂ ನುದತಿ ಕ್ಷಿಪ್ರಂ ಯಥಾ ವಾಯುರ್ಬಲಾಹಕಾನ್ ॥31॥
ವೇದಗಳಲ್ಲಿ ಹೇಳಿದ ಎಲ್ಲವನ್ನೂ ಗ್ರಹಿಸಿದ ಮನುಷ್ಯನು ಕೃತಕೃತ್ಯನಾಗಿ ಮನುಷ್ಯರ ಮೇಲೆ ದೇವತೆಗಳಂತೆ ಪ್ರಕಾಶಿಸುತ್ತಾನೆ. ವೇದಗಳ ಅರ್ಥಾನುಸಂಧಾನವು ವಾಯುವು ಮೋಡಗಳನ್ನು ನಾಶಮಾಡಿದಂತೆ ಕಾಮ-ಕ್ರೋಧ, ಭಯ, ದರ್ಪ, ಅಜ್ಞಾನ ಮೊದಲಾದ ಬುದ್ಧಿದೋಷಗಳನ್ನು ಶೀಘ್ರವಾಗಿ ನಾಶ ಮಾಡುತ್ತದೆ.
ಅಲ್ಪಮಾತ್ರಂ ಕೃತೋ ಧರ್ಮೋ ಭವೇಜ್ಞಾನವತೋ ಮಹಾನ್ |
ಮಹಾನಪಿ ಕೃತೋ ಧರ್ಮೋ ಹ್ಯಜ್ಞಾನಾಂನಿಷ್ಫಲೋ ಭವೇತ್ ॥32॥
ಜ್ಞಾನಿಯು ಮಾಡಿದ ಅಲ್ಪಧರ್ಮವೂ ಸಹ ಮಹಾಫಲವನ್ನು ಕೊಡುತ್ತದೆ. ಅಜ್ಞಾನಿಗಳು ಆಚರಿಸಿದ ಮಹಾಧರ್ಮವೂ ಸಹ

ನಿಷ್ಫಲವಾಗುತ್ತದೆ.
ಪರಾವರಜ್ಞೋ ಭೂತಾನಾಂ ಜ್ಞಾನವಾಂಸ್ತತ್ತ್ವವಿದ್ಭವೇತ್ |
ಏವಂ ಶ್ರುತಫಲಂ ಸರ್ವಂ ಕಥಿತಂ ತೇ ಶುಭೇಕ್ಷಣೇ ॥33॥
ಆದ್ದರಿಂದ ಮನುಷ್ಯನು ಪ್ರಾಣಿಗಳಲ್ಲಿ ಜ್ಯೇಷ್ಠರನ್ನೂ, ಕನಿಷ್ಠರನ್ನೂ ತಿಳಿದು ತತ್ತ್ವಜ್ಞಾನವನ್ನು ಸಂಪಾದಿಸಬೇಕು. ಎಲೌ ಶುಭೇಕ್ಷಣೆಯೇ, ನಿನಗೆ ವೇದಗಳ ಫಲವೆಲ್ಲವನ್ನೂ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಹಿಂಸಾಯಾಮಪಿ ಶುಭಫಲಕಥನಂ ನಾಮ ಏಕಾದಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹನ್ನೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹನ್ನೆರಡನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ನಾಸ್ತಿಕವಾದನಿರಾಕರಣೆ.
ಉಮಾ
ಭಗವನ್ ಸರ್ವಭೂತೇಶ ಲೋಕನಾಥ ವೃಷಧ್ವಜ |
ನಾಸ್ತ್ಯಾತ್ಮಾ ಕರ್ಮಭೋಕ್ತೇತಿ ಮೃತೋ ಜಂತುರ್ನ ಜಾಯತೇ ॥1॥
ಸ್ವಭಾವಾಜ್ಜಾಯತೇ ಸರ್ವಂ ಯಥಾ ವೃಕ್ಷಫಲಂ ತಥಾ |
ಯಥೋರ್ಮಯಃ ಸಂಭವಂತಿ ತಥೈವ ಜಗದಾಕೃತಿಃ ॥2॥
ತಪೋದಾನಾದಿ ಯತ್ಕರ್ಮ ತತ್ರಾತ್ಮಾ ದೃಶ್ಯತೇ ವೃಥಾ |
ನಾಸ್ತಿ ಪೌನರ್ಭವಂ ಜನ್ಮ ಇತಿ ಕೇಚಿದ್ವ್ಯವಸ್ಥಿತಾಃ ॥3॥
ಉಮಾ ಭಗವಂತನೇ, ಸರ್ವಭೂತೇಶನೇ, ಲೋಕನಾಥನೇ, ವೃಷಧ್ವಜನೇ, ಕರ್ಮವನ್ನು ಭೋಗಿಸುವ ಆತ್ಮನು ಇಲ್ಲವೇ ಇಲ್ಲ. ಮೃತನಾದ ಜಂತುವು ಪುನಃ ಜನಿಸುವುದಿಲ್ಲ. ವೃಕ್ಷಗಳಲ್ಲಿ ಹಣ್ಣಾಗುವಂತೆ, ಸಮುದ್ರಗಳಲ್ಲಿ ಅಲೆಗಳು ಬಂದಂತೆ ಜಗತ್ತೆಲ್ಲವೂ ಸ್ವಭಾವದಿಂದಲೇ ನಡೆಯುತ್ತದೆ. ತಪಸ್ಸು-ದಾನ ಮೊದಲಾದ ಎಲ್ಲ ಕರ್ಮಗಳು ವ್ಯರ್ಥವಾದವುಗಳು. ಪುನರ್ಜನ್ಮ ಎಂಬುದಿಲ್ಲ ಎಂದು ಕೆಲವರು ಹೇಳುತ್ತಾರೆ.
ಪರೋಕ್ಷವಚನಂ ಶ್ರುತ್ವಾ ನ ಪ್ರತ್ಯಕ್ಷಸ್ಯ ದರ್ಶನಾತ್ |
ತತ್ಸರ್ವಂ ನಾಸ್ತಿ ವಾಽಸ್ತೀತಿ ಸಂಶಯಸ್ಥಾಸ್ತಥಾ ಪರೇ ॥4॥
ಪಕ್ಷಭೇದಾಂತರೇ ಚಾಸ್ಮಿಂಸ್ತತ್ತ್ವಂ ಮೇ ವಕ್ತುಮರ್ಹಸಿ |
ಉಕ್ತಂ ಭಗವತಾ ಯತ್ತು ತತ್ತು ಲೋಕಸ್ಯ ಸಂಸ್ಥಿತಿಃ ॥5॥
ಇನ್ನು ಕೆಲವರು ಧರ್ಮಾದಿಗಳೆಲ್ಲವೂ ಕಣ್ಣಿಗೆ ಕಾಣದ ವಸ್ತುಗಳು. ಕೇವಲ ಕೇಳಿರುವುದು ಮಾತ್ರ. ಅವು ಇವೆಯೋ ಇಲ್ಲವೋ ಎಂಬುದು ಸಂಶಯ ಎಂದು ಹೇಳುತ್ತಾರೆ. ಈ ಎರಡು ಪಕ್ಷಗಳಲ್ಲಿ ತತ್ತ್ವವು ಯಾವುದು ಎಂದು ನೀನು ಹೇಳಬೇಕು. ನೀನು ಯಾವುದನ್ನು ಹೇಳುತ್ತೀಯೋ ಅದೇ ತತ್ತ್ವವೆಂಬುದು ಸಿದ್ಧವಾದುದು.
ನಾರದಃ
ಪ್ರಶ್ನಮೇತಂ ತು ಪೃಚ್ಛಂತ್ಯಾಂ ರುದ್ರಾಣ್ಯಾಂ ಪರಿಷತ್ತದಾ |
ಕೌತೂಹಲಯುತಾ ಶ್ರೋತುಂ ಸಮಾಹಿತಮನಾಽಭವತ್ ॥6॥
ನಾರದ ಪಾರ್ವತಿಯು ಈ ಪ್ರಶ್ನೆಯನ್ನು ಕೇಳುತ್ತಿರಲು ಪರಿಷತ್ತೆಲ್ಲವೂ ಕುತೂಹಲದಿಂದ ಕೂಡಿ ಸಾವಧಾನದಿಂದ ಕೇಳಲು ಪ್ರಾರಂಭಿಸಿತು.
ಮಹೇಶ್ವರಃ
ನೈತದಸ್ತಿ ಮಹಾಭಾಗೇ ಯದ್ ವದಂತೀಹ ನಾಸ್ತಿಕಾಃ |
ಏತದೇವಾಭಿಶಸ್ತಾನಾಂ ಶ್ರುತಿವಿದ್ವೇಷಿಣಾಂ ಮತಮ್ ॥7॥
ಮಹೇಶ್ವರ ಮಹಾಭಾಗ್ಯವಂತಳೇ, ನಾಸ್ತಿಕರು ಹೇಳುವ ಈ ವಾದವು ಎಂದೂ ಸರಿಯಲ್ಲ. ಇದು ಅಧಮರಾದ ವೇದದ್ವೇಷಿಗಳ ಮತ.
ಅಸುರಾ ರಾಕ್ಷಸಾಶ್ಚೈವ ಮನ್ಯಂತೇ ಲೋಕನಾಯಕಾಃ |
ನ ಪಶ್ಯಂತಿ ಚ ತೇ ಪಾಪಾಃ ಕೇವಲಂ ಮಾಂಸಭಕ್ಷಕಾಃ ॥8॥
ಅಸುರರು ಮತ್ತು ರಾಕ್ಷಸರು ತಮ್ಮನ್ನು ಲೋಕನಾಯಕರೆಂದುಕೊಳ್ಳುತ್ತಾರೆ. ಪಾಪನಿರತರೂ, ಮಾಂಸಭಕ್ಷಕರೂ ಆದ ಅವರು ತತ್ವವನ್ನು ಕಾಣುವುದಿಲ್ಲ.
ಪ್ರಚ್ಛಾದಿತಂ ಹಿ ತತ್ಸರ್ವಂ ಗುಹ್ಯಕಾಮಾ ಹಿ ದೇವತಾಃ |
ತದಹಂ ತೇ ಪ್ರವಕ್ಷ್ಯಾಮಿ ದೇವಿ ಗುಹ್ಯಂ ಪುರಾತನಮ್ ॥9॥
ತತ್ವವೆಲ್ಲವೂ ಆಚ್ಛಾದಿತವಾಗಿರುತ್ತದೆ. ಏಕೆಂದರೆ ದೇವತೆಗಳು ರಹಸ್ಯ ಪ್ರಿಯರಾದವರು. ಎಲೌ ದೇವಿಯೇ, ರಹಸ್ಯವಾದ ಸನಾತನವಾದ ತತ್ವವನ್ನು ನಾನು ನಿನಗೆ ಹೇಳುವೆನು.
ಆದಿಕಾಲೇ ಪ್ರಜಾಃ ಸರ್ವಾಃ ಕೃತ್ವಾ ಕರ್ಮ ಶುಭಾಶುಭಮ್ |
ಭುಂಜತೇ ಪಶ್ಯಮಾನಾಸ್ತೇ ವೃತ್ತಾಂತಂ ಲೋಕಯೋರ್ದ್ವಯೋಃ ॥10॥
ಆದಿಕಾಲದಲ್ಲಿ ಪ್ರಜೆಗಳು ಶುಭಾಶುಭ ಕರ್ಮಗಳನ್ನು ಮಾಡಿ ಎರಡು ಲೋಕಗಳಲ್ಲಿಯೂ ಇನ್ನೊಬ್ಬರ ಕಣ್ಣಿಗೆ ಕಾಣುವಂತೆ

ಅನುಭವಿಸುತ್ತಿದ್ದರು.
ಯಥೈವಾತ್ಮಕೃತಂ ಕರ್ಮ ದೇಶಾಂತರಗತಾ ನರಾಃ |
ವಿದ್ಯುಸ್ತಥೈವಾಂತಕಾಲೇ ಸುಕೃತಂ ಪೌರ್ವದೈಹಿಕಮ್ ॥11॥
ಒಬ್ಬನು ಮಾಡಿದ ಕರ್ಮವನ್ನು ದೇಶಾಂತರದಲ್ಲಿರುವ ಜನರು ಹೇಗೆ ತಿಳಿಯುತ್ತಾರೆಯೋ ಅದರಂತೆ ಜಂತುವಿನ ಅಂತ್ಯಕಾಲದಲ್ಲಿ ಪೂರ್ವದೇಹದಲ್ಲಿ ಮಾಡಿದ ಅಪರಾಧಾದಿಗಳ ಸ್ಮರಣೆಯುಂಟಾಗುತ್ತದೆ (ಉಂಟಾಗುತ್ತಿದ್ದಿತು).
ಏವಂ ವ್ಯವಸ್ಥಿತೇ ಲೋಕೇ ಸರ್ವೇ ಧರ್ಮರತಾಽಭವನ್ |
ಅಚಿರೇಣೈವ ಕಾಲೇನ ಸ್ವರ್ಗಃ ಸಂಪೂರಿತಸ್ತದಾ ॥12॥
ಲೋಕದಲ್ಲಿ ಇಂತಹ ವ್ಯವಸ್ಥೆ ಇದ್ದಾಗ ಎಲ್ಲರೂ ಧರ್ಮಪರರಾದರು. ಬಹಳ ಶೀಘ್ರವಾಗಿ ಸ್ವರ್ಗವು ಜೀವರಿಂದ ತುಂಬಿಹೋಯಿತು.
ದೇವಾನಾಮಪಿ ಸಂಬಾಧಂ ದೃಷ್ಟ್ವಾ ಬ್ರಹ್ಮಾಽಪ್ಯಚಿಂತಯತ್ |
ಸಂಚರಂತೇ ಕಥಂ ಸ್ವರ್ಗಂ ಮಾನುಷಾಃ ಪ್ರವಿಶಂತಿ ಹಿ ॥13॥
ದೇವತೆಗಳಿಗೂ ಸಹ ಜನಜಂಗುಳಿಯಿಂದ ತೊಂದರೆಯಾದುದನ್ನು ನೋಡಿ ಬ್ರಹ್ಮದೇವರು ಇಷ್ಟು ಜನ ಮನುಷ್ಯರ ಮಧ್ಯದಲ್ಲಿ ದೇವತೆಗಳು ಹೇಗೆ ಸಂಚರಿಸುತ್ತಾರೆ ಎಂದು ಚಿಂತಿಸಿದರು.
ಇತ್ಯೇವಮನುಚಿಂತ್ಯೈವ ಮಾನುಷಾನ್ ಸಮಮೋಹಯತ್ |
ತದಾಪ್ರಭೃತಿ ತೇ ಮರ್ತ್ಯಾ ನ ವಿದುಸ್ತೇ ಪುರಾತನಮ್ ॥14॥
ಹೀಗೆ ಚಿಂತಿಸಿ ಬ್ರಹ್ಮದೇವರು ಮನುಷ್ಯರಿಗೆ ಮೋಹವನ್ನುಂಟು ಮಾಡಿದರು. ಆಗಿನಿಂದ ಮನುಷ್ಯರಿಗೆ ಹಿಂದಿನ ಜನ್ಮದಲ್ಲಿ ತಾವು ಮಾಡಿದ ಅಪರಾಧಾದಿಗಳ ಸ್ಮರಣೆಯು ಬರುವುದಿಲ್ಲ.
ಕಾಮಕ್ರೋಧೌ ತು ತತ್ಕಾಲೇ ಮಾನುಷೇಷು ನ್ಯಪಾತಯತ್ |
ತಾಭ್ಯಾಮಭಿಹತಾ ಮರ್ತ್ಯಾಃ ಸ್ವರ್ಗಲೋಕಂ ನ ಪೇದಿರೇ ॥15॥
ಜೊತೆಗೆ ಬ್ರಹ್ಮದೇವರು ಮನುಷ್ಯರನ್ನು ಕಾಮ-ಕ್ರೋಧಗಳಿಂದ ಸಂಯುಕ್ತರನ್ನಾಗಿ ಮಾಡಿದರು. ಕಾಮ-ಕ್ರೋಧಗಳಿಂದ ಪೀಡಿಸಲ್ಪಟ್ಟ ಮನುಷ್ಯರು ಸ್ವರ್ಗಲೋಕಕ್ಕೆ ಹೋಗಲಿಲ್ಲ.
ಪುರಾಕೃತಸ್ಯಾವಿಜ್ಞಾನಾತ್ ಕಾಮಕ್ರೋಧಾಭಿಪೀಡನಾತ್ |
ನೈತದಸ್ತೀತಿ ಮನ್ವಾನಾ ವಿಕಾರಾಂಶ್ಚಕ್ರಿರೇ ಪುನಃ ॥16॥
ಹಿಂದಿನ ಜನ್ಮದ ವಿಸ್ಮರಣೆಯಿಂದ, ಕಾಮ-ಕ್ರೋಧಗಳ ಪೀಡೆಯಿಂದ ಸ್ವರ್ಗಾದಿಗಳು ಇಲ್ಲ ಎಂದು ತಿಳಿದು ಪುನಃ ದುಷ್ಕರ್ಮಗಳನ್ನು ಮಾಡಲು ಪ್ರಾರಂಭಿಸಿದರು.
ಅಕಾರ್ಯಾದೀನ್ ಮಹಾದೋಷಾನಾರಭಂತಾತ್ಮಕಾರಣಾತ್ |
ವಿಸ್ಮೃತ್ಯ ಧರ್ಮಕಾರ್ಯಾಣಿ ಪರಲೋಕಭಯಂ ತದಾ ॥17॥
ಧರ್ಮಕಾರ್ಯವನ್ನು ಮಾಡುವವರು ಪರಲೋಕದ ಭಯವನ್ನು ತ್ಯಜಿಸಿ, ಮಹಾದೋಷಕರವಾದ ಅಕಾರ್ಯಗಳನ್ನು ಸ್ವಾರ್ಥದ ಸಲುವಾಗಿ ಮಾಡಲು ಪ್ರಾರಂಭಿಸಿದರು.
ಏವಂ ವ್ಯವಸ್ಥಿತೇ ಲೋಕೇ ಕಶ್ಮಲಂ ಸಮಪದ್ಯತ |
ಲೋಕಾನಾಂ ಚೈವ ವೇದಾನಾಂ ಕ್ಷಯಾಯೈವ ತದಾ ಪ್ರಿಯೇ |
ನರಕಾಃ ಪೂರಿತಾಶ್ಚಾಸನ್ ಪ್ರಾಣಿಭಿಃ ಪಾಪಕಾರಿಭಿಃ॥18॥
ಎಲೌ ಪ್ರಿಯೆಯೇ, ಲೋಕವು ಹೀಗೆ ನಡೆದುಕೊಳ್ಳುತ್ತಿರಲು ಲೋಕಗಳಿಗೆ ಮತ್ತು ವೇದಗಳಿಗೆ ವಿನಾಶವನ್ನುಂಟುಮಾಡುವ ದುಃಸ್ಥಿತಿಯುಂಟಾಯಿತು. ಪಾಪಗಳನ್ನು ಮಾಡುವ ಪ್ರಾಣಿಗಳಿಂದ ನರಕವು ತುಂಬಿಹೋಯಿತು.
ಪುನರೇವ ತು ತದ್ ದೃಷ್ಟ್ವಾ ಲೋಕಕರ್ತಾ ಪಿತಾಮಹಃ |
ಅಚಿಂತಯತ್ ತಮೇವಾರ್ಥಂ ಲೋಕಾನಾಂ ಹಿತಕಾರಣಾತ್ |
ಸಮತ್ವೇನ ಕಥಂ ಲೋಕೋ ವರ್ತೇತೇತಿ ಮುಹುರ್ಮುಹುಃ ॥19॥
ಲೋಕಕರ್ತರಾದ ಬ್ರಹ್ಮದೇವರು ಪುನಃ ಲೋಕದ ಹಿತಕ್ಕಾಗಿ ಈ ಪ್ರಜೆಗಳು ಸರಿಯಾಗಿ ಸಾಧುಮಾರ್ಗದಲ್ಲಿ ಹೇಗೆ ನಡೆದುಕೊಂಡಾರು ಎಂದು ಪುನಃ ಪುನಃ ಚಿಂತಿಸಿದರು.
ಚಿಂತಯಿತ್ವಾ ತದಾ ಬ್ರಹ್ಮಾ ಜ್ಞಾನೇನ ತಪಸಾ ಪ್ರಿಯೇ |
ಅಕರೋಜ್ಜ್ಞಾನದೃಶ್ಯಂ ತತ್ಪರಲೋಕಂ ನ ಚಕ್ಷುಷಾ ॥20॥
ಎಲೌ ಪ್ರಿಯೆಯೇ, ಹೀಗೆ ಚಿಂತಿಸಿ ಬ್ರಹ್ಮದೇವರು ಕಣ್ಣಿನಿಂದ ಕಾಣದಿದ್ದರೂ ಜ್ಞಾನದಿಂದ ಮತ್ತು ತಪಸ್ಸಿನಿಂದ ಪರಲೋಕಗಳು ಕಾಣಿಸುವಂತೆ ಮಾಡಿದರು.
ಸರ್ವಮರ್ಥಂ ಶ್ರುತಂ ದೃಷ್ಟಂ ಯತ್ಪ್ರಾಗುಕ್ತಂ ಮಯಾ ತವ |
ತದಾಪ್ರಭೃತಿ ಮರ್ತ್ಯಾನಾಂ ಶ್ರುತಮಾಶ್ರಿತ್ಯ ಪಂಡಿತಾಃ ॥21॥
ಕಾಮಾನ್ ಸಂಭಿದ್ಯ ಪರಿಘಾನ್ ಧೃತ್ಯಾ ವೈ ಪರಮಾಸಿನಾ |
ಅಭಿಯಾಂತ್ಯೇವ ತೇ ಸ್ವರ್ಗಂ ಪಶ್ಯಂತಃ ಕರ್ಮಣಃ ಫಲಮ್ ॥22॥
ನಾನು ನಿನಗೆ ನೋಡಿದಂತಹ, ಕೇಳಿದಂತಹ ಯಾವ ವಿಷಯಗಳನ್ನು ಹೇಳಿದೆನೋ ಅವೆಲ್ಲವನ್ನೂ ವಿವೇಕಿಗಳಾದವರು ಕೇಳಿ, ಅದನ್ನು ಆಶ್ರಯಿಸಿ ಮನುಷ್ಯರ ದೃಢವಾದ ಸಂಶಯಗಳನ್ನು ಆ ಜ್ಞಾನವೆಂಬ ಖಡ್ಗದಿಂದ ಧೈರ್ಯದಿಂದ ಕತ್ತರಿಸಿ ಸ್ವರ್ಗಕ್ಕೆ ಹೋಗಿಯೇ ಹೋಗುತ್ತಾರೆ.
ಏವಂ ಶ್ರದ್ಧಾಫಲಂ ಲೋಕೇ ಪರತಃ ಸುಮಹತ್ಫಲಮ್ |

ಬುದ್ಧಿಃ ಶ್ರದ್ಧಾ ಚ ವಿನಯಃ ಕಾರಣಾನಿ ಹಿತೈಷಿಣಾಮ್ ॥23॥
ಹೀಗೆ ಲೋಕದಲ್ಲಿ ಶ್ರದ್ಧೆಯು ಪರಲೋಕದಲ್ಲಿ ಮಹಾಫಲವನ್ನು ಕೊಡುವಂತಹದು. ತಮ್ಮ ಹಿತವನ್ನು ಬಯಸುವವರಿಗೆ ಬುದ್ಧಿ, ಶ್ರದ್ಧೆ ಮತ್ತು ವಿನಯಗಳು ಹಿತಕ್ಕೆ ಕಾರಣವಾದವುಗಳು.
ತಸ್ಮಾತ್ಸ್ವರ್ಗಾಭಿಗಂತಾರಃ ಕತಿಚಿತ್ ತ್ವಭವನ್ ನರಾಃ |
ಅನ್ಯೇ ಕಾರಣಹೀನತ್ವಾನ್ನಾಸ್ತಿಕ್ಯಂ ಭಾವಮಾಶ್ರಿತಾಃ ॥24॥
ಆದ್ದರಿಂದ ಕೆಲವು ಜನರು ಸ್ವರ್ಗಕ್ಕೆ ಹೋಗುವವರಾದರು. ಇನ್ನು ಕೆಲವರು ಅಂತಹ ಕಾರಣರಹಿತರಾದುದರಿಂದ ನಾಸ್ತಿಕ್ಯವಾದವನ್ನು ಆಶ್ರಯಿಸಿದರು.
ಶ್ರುತವಿದ್ವೇಷಿಣೋ ಮೂರ್ಖಾ ನಾಸ್ತಿಕಾ ದೃಢನಿಶ್ಚಯಾಃ |
ನಿಷ್ಕ್ರಿಯಾಸ್ತು ನಿರನ್ನಾದ್ಯಾಃ ಪತಂತ್ಯೇವಾಧಮಾಂ ಗತಿಮ್ ॥25॥
ಮೂರ್ಖರು ಜ್ಞಾನವನ್ನು ದ್ವೇಷಿಸಿ, ದೃಢನಿಶ್ಚಯದಿಂದ ನಾಸ್ತಿಕ್ಯವನ್ನು ಆಶ್ರಯಿಸಿ ಸತ್ಕರ್ಮಗಳನ್ನು ಮಾಡದೆ, ಅನ್ನದಾನಾದಿಗಳನ್ನು ಮಾಡದೆ ಅಧಮಗತಿಯನ್ನು ಹೊಂದಿಯೇ ಹೊಂದುತ್ತಾರೆ.
ನಾಸ್ತೀತಿ ವೈ ಪುನರ್ಜನ್ಮ ಕವಯೋಽಪ್ಯತ್ರ ಮೋಹಿತಾಃ |
ನಾಧಿಗಚ್ಛಂತಿ ತನ್ನಿತ್ಯಂ ಹೇತುವಾದಶತೈರಪಿ ॥26॥
ಪುನರ್ಜನ್ಮವು ಇಲ್ಲ ಎಂಬ ವಿಷಯದಲ್ಲಿ ವಿವೇಕಿಗಳಿಗೂ ಸಂಶಯವುಂಟಾಗುತ್ತದೆ. ನೂರಾರು ಕಾರಣಗಳನ್ನು ಹೇಳಿದರೂ ಅವಿವೇಕಿಗಳು ಅದನ್ನು ತಿಳಿಯುವುದಿಲ್ಲ.
ಏಷಾ ಬ್ರಹ್ಮಕೃತಾ ಮಾಯಾ ದುರ್ವಿಜ್ಞೇಯಾ ಸುರಾಸುರೈಃ |
ಕಿಂಪುನರ್ಮಾನುಷೈರ್ಲೋಕೇ ಜ್ಞಾತುಕಾಮೈಃ ಕುಬುದ್ಧಿಭಿಃ ॥27॥
ಇದು ಬ್ರಹ್ಮದೇವರು ಹಾಕಿರುವ ಮಾಯೆ. ಸುರಾಸುರರು ಈ ತತ್ವವನ್ನು ತಿಳಿಯಲಾರರು. ಇನ್ನು ಅಲ್ಪಬುದ್ಧಿ, ಅದರಲ್ಲೂ ಕೆಟ್ಟಬುದ್ಧಿಯುಳ್ಳ ಮನುಷ್ಯರು ತಿಳಿಯಲು ಬಯಸಿದರೆ ಅದು ಹೇಗೆ ಸಾಧ್ಯ?
ಕೇವಲಂ ಶ್ರದ್ಧಯಾ ದೇವಿ ಶ್ರುತಿಮಾತ್ರನಿವಿಷ್ಟಯಾ |
ತದಸ್ತೀತ್ಯೇವ ಮಂತವ್ಯಂ ತಥಾ ಹಿ ತಮವಾಪ್ನುಯಾತ್ ॥28॥
ಎಲೌ ದೇವಿಯೇ, ವೇದನಿಷ್ಠವಾದ ಮತ್ತು (ಜ್ಞಾನನಿಷ್ಠವಾದ) ಶುದ್ಧವಾದ ಶ್ರದ್ಧೆಯಿಂದ ಪರಲೋಕವು ಇದೆ ಎಂದೇ ತಿಳಿಯಬೇಕು. ಹಾಗಾದರೆ ಮಾತ್ರ ಫಲವು ದೊರೆತೀತು.
ವೇದಗುಹ್ಯೇಷು ಚಾನ್ಯೇಷು ಹೇತುರ್ದೇವಿ ನಿರರ್ಥಕಃ |
ಬಧಿರಾಂಧವದೇವಾತ್ರ ವರ್ತಿತವ್ಯಂ ಹಿತೈಷಿಣಾ ॥29॥
ಎಲೌ ದೇವಿಯೇ, ವೇದರಹಸ್ಯಗಳಲ್ಲಿ ಹೇತುಗಳನ್ನು ಹುಡುಕುವುದು ವ್ಯರ್ಥವಾದುದು. ಹಿತೈಷಿಯಾದವನು ಕುರುಡನಂತೆ, ಕಿವುಡರಂತೆ ವರ್ತಿಸಬೇಕು.
ಏತತ್ತೇ ಕಥಿತಂ ಸರ್ವಂ ದೇವಗುಹ್ಯಂ ಪ್ರಜಾಹಿತಮ್ |
ತ್ವತ್ಪ್ರೀತ್ಯರ್ಥಮಿದಂ ಗುಹ್ಯಮವಾಚ್ಯಮಪಿ ಭಾಷಿತಮ್ ॥30॥
ಪ್ರಜಾಹಿತಕ್ಕಾಗಿ ದೇವಗುಹ್ಯವಾದ ಈ ಎಲ್ಲವನ್ನೂ ಹೇಳಬಾರದಾಗಿದ್ದರೂ ನಿನ್ನ ಸಂತೋಷಕ್ಕಾಗಿ ಹೇಳಿದ್ದೇನೆ.
ಉಮಾ
ಭಗವನ್ಮಾನುಷಾಃ ಕೇಚಿಜ್ಜಾತಿಸ್ಮರಣಸಂಯುತಾಃ |
ಕಿಮರ್ಥಂ ತೇಭಿಜಾಯಂತೇ ಜಾನಂತಃ ಪೌರ್ವದೈಹಿಕಮ್ |
ಏತನ್ಮೇ ತತ್ತ್ವತೋ ದೇವ ಮಾನುಷೇಷು ವದಸ್ವ ಭೋ ॥31॥
ಉಮಾ ಭಗವಂತನೇ, ಮನುಷ್ಯರಲ್ಲಿ ಕೆಲವರು ಪೂರ್ವಜನ್ಮದ ಸ್ಮರಣೆಯನ್ನು ಹೊಂದಿರುತ್ತಾರೆ. ಹಾಗಾದರೆ ಪೂರ್ವಜನ್ಮದ ಸ್ಮರಣೆ ಇದ್ದರೂ ಪುನಃ ಏಕೆ ಹುಟ್ಟುತ್ತಾರೆ? ದೇವನೇ, ಮನುಷ್ಯರ ವಿಷಯದಲ್ಲಿರುವ ಈ ನನ್ನ ಸಂಶಯವನ್ನು ಪರಿಹರಿಸು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ತತ್ವಂ ಸಮಾಹಿತಾ ॥32॥
ಮಹೇಶ್ವರ ನಾನು ಆ ತತ್ವವನ್ನು ಹೇಳುವೆನು, ಸಮಾಧಾನದಿಂದ ಕೇಳು.
ಯೇ ಮೃತಾಃ ಸಹಸಾ ಮರ್ತ್ಯಾ ಜಾಯಂತೇ ಸಹಸಾ ಪುನಃ |
ತೇಷಾಂ ಪೌರಾಣಿಕೋಽಭ್ಯಾಸಃ ಕಂಚಿತ್ಕಾಲಂ ಸ ತಿಷ್ಠತಿ ॥33॥
ಯಾವ ಮನುಷ್ಯರು ತಕ್ಷಣದಲ್ಲಿ ಮರಣವನ್ನು ಹೊಂದಿ (ವ್ಯಾಧಿಗಳಿಂದ ಬಹಳ ಕಾಲ ನೆರಳದೆ) ತಕ್ಷಣವೇ ಜನ್ಮಾಂತರವನ್ನು ಪಡೆಯುತ್ತಾರೆಯೋ ಅವರಿಗೆ ಹಿಂದಿನ ಜನ್ಮದ ಸ್ಮರಣೆಯು ಸ್ವಲ್ಪ ಕಾಲದವರೆಗೆ ಇರುತ್ತದೆ.
ತಸ್ಮಾಜ್ಜಾತಿಸ್ಮರಾ ಲೋಕೇ ಜಾಯಂತೇ ಬೋಧಸಂಯುತಾಃ |
ತೇಷಾಂ ವಿವರ್ಧತಾಂ ಸಂಜ್ಞಾ ಸ್ವಪ್ನವತ್ ಸಾ ಪ್ರಣಶ್ಯತಿ |
ಪರಲೋಕಸ್ಯ ಚಾಸ್ತಿತ್ವೇ ಮೂಢಾನಾಂ ಕಾರಣಂ ಚ ತತ್ ॥34॥
ಆದ್ದರಿಂದ ವಿವೇಕವುಳ್ಳವರೂ ಸಹ ಜಾತಿಸ್ಮರಣೆಯನ್ನು ಹೊಂದಿ ಜನಿಸುತ್ತಾರೆ. ಅವರು ಬೆಳೆದಂತೆ ಆ ಜಾತಿಸ್ಮರಣೆಯು ಸ್ವಪ್ನದಂತೆ ನಾಶವನ್ನು ಹೊಂದುತ್ತದೆ. ಮೂಢರು ಪರಲೋಕದ ಅಸ್ತಿತ್ವದ ವಿಷಯದಲ್ಲಿ ಸಂಶಯವನ್ನು ಪಡುವುದಕ್ಕೆ ಇದು ಕಾರಣ.
ಉಮಾ
ಭಗವನ್ಮಾನುಷಾಃ ಕೇಚಿನ್ಮೃತಾ ಭೂತ್ವಾ ಹಿ ಸಂಪ್ರತಿ |

ನಿವರ್ತಮಾನಾ ದೃಶ್ಯಂತೇ ದೇಹೇಷ್ವೇವ ಪುನರ್ನರಾಃ ॥35॥
ಉಮಾ ಭಗವಂತನೇ, ಮನುಷ್ಯರಲ್ಲಿ ಕೆಲವರು ಈಗಲೂ ಮೃತರಾಗಿ ಪುನಃ ಅದೇ ದೇಹಕ್ಕೆ ಹಿಂದಿರುಗಿ ಬರುವುದು ಕಂಡುಬರುತ್ತದೆ.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಕಾರಣಂ ಶೃಣು ಶೋಭನೇ ॥36॥
ಮಹೇಶ್ವರ ಎಲೌ ಶೋಭನೆಯೇ, ಅದಕ್ಕೆ ಕಾರಣವನ್ನು ಹೇಳುವೆನು, ಕೇಳು.
ಪ್ರಾಣೈರ್ವಿಯುಜ್ಯಮಾನಾನಾಂ ಬಹುತ್ವಾತ್ ಪ್ರಾಣಿನಾಂ ವಧೇ |
ತಥೈವ ನಾಮಸಾಮಾನ್ಯಾದ್ ಯಮದೂತಾ ನೃಣಾಂ ಪ್ರತಿ ॥37॥
ವಹಂತಿ ತೇ ಕ್ವಚಿನ್ಮೋಹಾದನ್ಯಾಂಸ್ತ ಇತಿ ಯಾಮಿಕಾಃ |
ನಿರ್ವಿಕಾರಂ ಹಿ ತತ್ಸರ್ವಂ ಯಮೋ ವೇದ ಕೃತಾಕೃತಮ್ ॥38॥
ಪ್ರಾಣಿಗಳ ವಧೆಯ ಕಾಲದಲ್ಲಿ ಮರಣವನ್ನು ಹೊಂದುವವರ ಸಂಖ್ಯೆಯು ಬಹಳವಾಗಿರುವುದರಿಂದ ಹಾಗೂ ಹೆಸರಿನ ಸಾಮ್ಯವಿರುವ ಕಾರಣದಿಂದ (ನಾಮ ಸಾಮ್ಯವಿರುವ ಸ್ಥಳದಲ್ಲಿ) ಯಮದೂತರು ಮನುಷ್ಯರ ವಿಷಯದಲ್ಲಿ ಅವರನ್ನು ಬೇರೆಯವರು ಎಂದು ತಿಳಿದು ಬೇರೆಯವರನ್ನು ಕರೆದೊಯ್ಯುತ್ತಾರೆ. ಯಮದೇವರು ಯಾವ ವಿಕಾರವೂ ಇಲ್ಲದೆ ಎಲ್ಲರನ್ನೂ ಮತ್ತು ಎಲ್ಲರೂ ಮಾಡಿದ ಎಲ್ಲ ಕರ್ಮಗಳನ್ನೂ ತಿಳಿದಿರುತ್ತಾರೆ.
ತಸ್ಮಾತ್ ಸಂಯಮನೀಂ ಪ್ರಾಪ್ಯ ಯಮೇನೈತೇ ವಿಮೋಕ್ಷಿತಾಃ |
ಪುನರೇವ ನಿವರ್ತಂತೇ ಶೇಷಂ ಭೋಕ್ತುಂ ಸ್ವಕರ್ಮಣಃ |
ಸ್ವಕರ್ಮಣ್ಯಸಮಾಪ್ತೇ ತು ನ ಮ್ರಿಯಂತೇ ಹಿ ಮಾನವಾಃ ॥39॥
ಆದ್ದರಿಂದ ಸಂಯಮನೀ ಪಟ್ಟಣಕ್ಕೆ ಹೋಗಿ ಯಮದೇವರಿಂದ ಬಿಡುಗಡೆಯನ್ನು ಹೊಂದಿ ತಮ್ಮ ಕರ್ಮಶೇಷವನ್ನು ಅನುಭವಿಸಲು ಪುನಃ ಅದೇ ದೇಹಕ್ಕೆ ಬರುತ್ತಾರೆ. ತಮ್ಮ ಕರ್ಮಗಳು ಮುಗಿಯುವವರೆಗೆ ಮನುಷ್ಯರು ಮರಣವನ್ನು ಹೊಂದುವುದಿಲ್ಲ.
ಉಮಾ
ಭಗವನ್ ಸುಪ್ತಮಾತ್ರೇಣ ಪ್ರಾಣಿನಾಂ ಸ್ವಪ್ನದರ್ಶನಮ್ |
ಕಿಂ ತತ್ಸ್ವಭಾವಮನ್ಯದ್ವಾ ತನ್ಮೇ ಶಂಸಿತುಮರ್ಹಸಿ ॥40॥
ಉಮಾ ಭಗವಂತನೇ, ನಿದ್ರೆಯನ್ನು ಮಾಡುವ ಪ್ರಾಣಿಗಳಿಗೆಲ್ಲಾ ಸ್ವಪ್ನ ದರ್ಶನ ವಾಗುತ್ತದೆ. ಅದೇನು ಸ್ವಾಭಾವಿಕವೇ? (ಸತ್ಯವೇ) ಅಥವಾ ಅಲ್ಲವೇ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಸುಪ್ತಾನಾಂ ತು ಮನಶ್ಚೇಷ್ಟಾ ಸ್ವಪ್ನ ಇತ್ಯಭಿಧೀಯತೇ |
ಅನಾಗತಮತಿಕ್ರಾಂತಂ ಪಶ್ಯತೇ ಸಂಚರನ್ಮನಃ ॥41॥
ನಿಮಿತ್ತಂ ಚ ಭವೇತ್ತಸ್ಮಾತ್ ಪ್ರಾಣಿನಾಂ ಸ್ವಪ್ನದರ್ಶನಮ್ |
ಏತತ್ತೇ ಕಥಿತಂ ಸರ್ವಂ ಭೂಯಃ ಶ್ರೋತುಂ ಕಿಮಿಚ್ಛಸಿ ॥42॥
ಮಹೇಶ್ವರ ನಿದ್ರಿಸುವ ಜೀವರ ಮನಸ್ಸಿನ ವ್ಯಾಪಾರಕ್ಕೆ ಸ್ವಪ್ನ ಎಂದು ಹೆಸರು. ಸಂಚರಿಸುವ ಮನಸ್ಸು ಭೂತಕಾರದ ಘಟನೆಗಳನ್ನು, ಭವಿಷ್ಯತ್ಕಾಲದ ಘಟನೆಗಳನ್ನು ನೋಡುತ್ತದೆ. ಮನಸ್ಸಿನ ಸಂಚಾರವು ಪ್ರಾಣಿಗಳ ಸ್ವಪ್ನದರ್ಶನಕ್ಕೆ ಕಾರಣವಾಗುತ್ತದೆ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಪುನಃ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದ್ವಾದಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹದಿಮೂರನೆಯ ಅಧ್ಯಾಯ
ಉಮಾ- ಮಹೇಶ್ವರಸಂವಾದ.
ದೈವಪೌರುಷ ಸಂಯೋಗದಿಂದ ಕಾರ್ಯಸಿದ್ಧಿಕಥನ.
ಉಮಾ
ಭಗವನ್ ಸರ್ವಭೂತೇಶ ಲೋಕೇ ಕರ್ಮಕ್ರಿಯಾಪಥೇ |
ದೈವಾತ್ ಪ್ರವರ್ತತೇ ಸರ್ವಮಿತಿ ಕೇಚಿದ್ ವ್ಯವಸ್ಥಿತಾಃ ॥1॥
ಅಪರೇ ಚೇಷ್ಟಯಾ ಚೇತಿ ದೃಷ್ಟ್ವಾ ಪ್ರತ್ಯಕ್ಷತಃ ಕ್ರಿಯಾಮ್ |
ಪಕ್ಷಭೇದೇ ದ್ವಿಧಾ ಚಾಸ್ಮಿನ್ ಸಂಶಯಸ್ಥಂ ಮನೋ ಮಮ |
ತತ್ತ್ವಂ ವದ ಮಹಾದೇವ ಶ್ರೋತುಂ ಕೌತೂಹಲಂ ಹಿ ಮೇ ॥2॥
ಉಮಾ ಭಗವಂತನೇ, ಸರ್ವಭೂತೇಶನೇ, ಲೋಕದಲ್ಲಿ ಕ್ರಿಯಾ ಮಾರ್ಗವು ಎಲ್ಲವೂ ದೈವದಿಂದಲೇ ನಡೆಯುತ್ತದೆ ಎಂದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಪ್ರತ್ಯಕ್ಷವಾಗಿ ಮನುಷ್ಯನ ಕ್ರಿಯೆಯು ಕಾಣುವುದರಿಂದ ಮನುಷ್ಯನ ಪ್ರಯತ್ನದಿಂದ ಕಾರ್ಯವು ನಡೆಯುತ್ತದೆ ಎಂದು ಅಭಿಪ್ರಾಯವನ್ನು ಹೊಂದುತ್ತಾರೆ. ಈ ಎರಡು ರೀತಿಯ ಅಭಿಪ್ರಾಯವಿರುವಾಗ ನನ್ನ ಮನಸ್ಸು ಸಂಶಯಸ್ಥವಾಗಿದೆ. ಮಹಾದೇವನೇ, ತತ್ತ್ವವನ್ನು ಹೇಳು. ಅದನ್ನು ಕೇಳಲು ನನಗೆ ಕುತೂಹಲವಿದೆ.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ತತ್ವಂ ಸಮಾಹಿತಾ |

ನ ದೈವಂ ಕುರುತೇ ಕರ್ಮ ಲೋಕೇ ದೇವಿ ಶುಭಾಶುಭಮ್ ॥3॥
ಮಹೇಶ್ವರ ಅದನ್ನು ನಿನಗೆ ಹೇಳುವೆನು. ಸಮಾಧಾನದಿಂದ ತತ್ತ್ವವನ್ನು ಕೇಳು. ದೇವಿಯೇ, ದೈವವು ಲೋಕದಲ್ಲಿ ಶುಭಾಶುಭಕರ್ಮಗಳನ್ನು ಮಾಡುವುದಿಲ್ಲ.
ಲಕ್ಷ್ಯತೇ ದ್ವಿವಿಧಂ ಕರ್ಮ ಮಾನುಷಾಣಾಂ ಶುಭಾನನೇ |
ಪುರಾಕೃತಂ ತಯೋರೇಕಮೈಹಿಕಂ ಚ ಪರಂ ತಥಾ ॥4॥
ಎಲೈ ಶುಭಾನನೆಯೇ, ಮನುಷ್ಯರಲ್ಲಿ ಎರಡು ವಿಧವಾದ ಕರ್ಮಗಳು ಕಂಡುಬರುತ್ತವೆ. ಒಂದು ಹಿಂದಿನ ಜನ್ಮದಲ್ಲಿ ಮಾಡಿದುದು, ಇನ್ನೊಂದು ಈ ಜನ್ಮದಲ್ಲಿ ಮಾಡುತ್ತಿರುವುದು.
ಅದೃಷ್ಟಂ ಪೌರ್ವಿಕಂ ಕರ್ಮ ತದ್ ದೈವಮಿತಿ ಲಕ್ಷ್ಯತೇ |
ಐಹಿಕಂ ದೃಷ್ಟಕರಣಂ ತನ್ಮಾನುಷಮಿತಿ ಸ್ಮೃತಮ್ ॥5॥
ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವನ್ನು ಅದೃಷ್ಟವೆಂದೂ, ದೈವವೆಂದೂ ಕರೆಯುತ್ತಾರೆ. ಈ ಜನ್ಮದ ಕರ್ಮವು ಪ್ರತ್ಯಕ್ಷಸಿದ್ಧವಾಗಿದೆ. ಅದನ್ನು ಮಾನುಷ, ಪೌರುಷ, ಪುರುಷಕಾರ ಮುಂತಾದ ಶಬ್ದಗಳಿಂದ ಕರೆಯುತ್ತಾರೆ.
ಮಾನುಷಂ ತು ಕ್ರಿಯಾಮಾತ್ರಂ ದೈವಾತ್ ಸಂಭವತೇ ಫಲಮ್ |
ಏವಂ ತದುಭಯಂ ಕರ್ಮ ಮಾನುಷಂ ವಿದ್ಯತೇ ನೃಷು ॥6॥
ಮನುಷ್ಯರ ಪ್ರಯತ್ನಸಾಧ್ಯವಾದುದು ಕೇವಲ ಕ್ರಿಯೆ ಮಾತ್ರ. ಫಲವುಂಟಾಗುವುದು ಮಾತ್ರ ದೈವದಿಂದಲೇ. ಹೀಗೆ ಮನುಷ್ಯರಲ್ಲಿ ಆ ಎರಡು ವಿಧವಾದ ಕರ್ಮಗಳು ಇವೆ.
ಲೌಕಿಕಂ ತತ್ ಪ್ರವಕ್ಷ್ಯಾಮಿ ದೈವಮಾನುಷನಿರ್ಮಿತಮ್ |
ಕೃಷೌ ತು ದೃಶ್ಯತೇ ಕರ್ಮ ಕರ್ಷಣಂ ವಪನಂ ತಥಾ ॥7॥
ರೋಪಣಂ ಚೈವಲವನಂ ಯಚ್ಚಾನ್ಯತ್ ಪೌರುಷಂ ಸ್ಮೃತಮ್ |
ಕಾಲೇ ವೃಷ್ಟಿಃ ಸುವಾಪಶ್ಚ ಪ್ರರೋಹಃ ಪಕ್ತಿರೇವ ಚ ॥8॥
ಏವಮಾದಿ ತು ಯಚ್ಚಾನ್ಯತ್ ತದ್ ದೈವತಮಿತಿ ಸ್ಮೃತಮ್ |
ಪ್ರವಾಪಃ ಪೌರುಷಂ ಕರ್ಮ ಸಿದ್ಧಿರ್ದೈವಮಿತಿ ಸ್ಮೃತಮ್ |
ದೈವಾದಸಿದ್ಧಿಶ್ಚ ಭವೇದ್ ದುಷ್ಕೃತಂ ಚಾಸ್ತಿ ಪೌರುಷೇ ॥9॥
ದೈವ ಮತ್ತು ಮಾನುಷ ಎರಡು ಸೇರಿ ಫಲವುಂಟಾಗುವ ಲೋಕಸಿದ್ಧವಾದ ವಿಷಯ (ದೃಷ್ಟಾಂತ)ವನ್ನು ಹೇಳುವೆನು. ಕೃಷಿಯಲ್ಲಿ ಉಳುವುದು, ಬಿತ್ತುವುದು ಅಥವಾ ಸಸಿಯನ್ನು ನೆಡುವುದು, ಬೆಳೆಯನ್ನು ಕೊಯ್ಯುವುದು ಇಂತಹ ಕ್ರಿಯೆಗಳೆಲ್ಲಾ ಪೌರುಷವೆಂದು ಹೇಳುತ್ತಾರೆ. ಕಾಲದಲ್ಲಿ ಮಳೆ, ಒಳ್ಳೆಯ ಮೊಳಕೆ, ಅಂಕುರೋತ್ಪತ್ತಿ, ಬೆಳೆಗಳ ಪಾಕ - ಇವೇ ಮೊದಲಾದವುಗಳು ದೈವವೆಂದು ಹೇಳಲ್ಪಡುತ್ತವೆ. ಬೀಜವನ್ನು ಬಿತ್ತುವುದು ಪೌರುಷ ಕರ್ಮ. ಬೆಳೆಯ ಸಿದ್ಧಿಯು ದೈವದಿಂದಾಗುತ್ತದೆ. ಒಮ್ಮೊಮ್ಮೆ ಪುರುಷಪ್ರಯತ್ನವಿದ್ದರೂ ದೈವದಿಂದ ಫಲಸಿದ್ಧಿಯಾಗುವುದಿಲ್ಲ. ಇನ್ನು ಪುರುಷರು ಕೆಲವೊಮ್ಮೆ ದುಷ್ಟ ಪ್ರಯತ್ನವನ್ನು ಮಾಡುತ್ತಾರೆ ಆಗಲೂ ಕಾರ್ಯ ಸಿದ್ಧಿಯಾಗುವುದಿಲ್ಲ.
ಸುಯತ್ನಾಲ್ಲಭ್ಯತೇ ಕೀರ್ತಿರ್ದುರ್ಯತ್ನಾದಯಶಸ್ತಥಾ |
ಏವಂ ಲೋಕಗತಿರ್ದೇವಿ ಆದಿಪ್ರಭೃತಿ ವರ್ತತೇ ॥10॥
ಒಳ್ಳೆಯ ಪ್ರಯತ್ನದಿಂದ ಕೀರ್ತಿಯೂ, ಕೆಟ್ಟ ಪ್ರಯತ್ನದಿಂದ ಅಪಕೀರ್ತಿಯೂ ಉಂಟಾಗುತ್ತದೆ. ಎಲೌ ದೇವಿಯೇ, ಇಂತಹ ಲೋಕಗತಿಯು ಮೊದಲಿನಿಂದಲೂ ಇದೆ.
ಉಮಾ
ಭಗವನ್ ಸರ್ವಲೋಕೇಶ ಸುರಾಸುರನಮಸ್ಕೃತ |
ಕಥಮಾತ್ಮಾ ಸದಾ ಗರ್ಭಂ ಸಂವಿಶೇತ್ ಕರ್ಮಕಾರಣಾತ್ |
ತನ್ಮೇ ವದ ಮಹಾದೇವ ತದ್ಧಿ ಗುಹ್ಯಂ ಪರಂ ಮತಮ್ ॥11॥
ಉಮಾ ಭಗವಂತನೇ, ಸರ್ವಲೋಕೇಶನೇ, ಸುರಾಸುರನಮಸ್ಕೃತನೇ, ಜೀವನು ತನ್ನ ಕರ್ಮನಿಮಿತ್ತದಿಂದ ಹೇಗೆ ಗರ್ಭವನ್ನು ಪ್ರವೇಶಿಸುತ್ತಾನೆ? ಮಹಾದೇವನೇ, ಇದನ್ನು ಹೇಳು. ಇದು ಬಹಳ ರಹಸ್ಯವಾದುದು ಎಂದು ನನ್ನ ಅಭಿಪ್ರಾಯ.
ಮಹೇಶ್ವರಃ
ಶೃಣು ಭಾಮಿನಿ ತದ್ ಗುಹ್ಯಂ ಗುಹ್ಯಾನಾಂ ಪರಮಂ ಪ್ರಿಯೇ |
ದೇವಗುಹ್ಯಾದಪಿ ಪರಮಾತ್ಮಗುಹ್ಯಮಿತಿ ಸ್ಮೃತಮ್ ॥12॥
ಮಹೇಶ್ವರ ಎಲೌ ಭಾಮಿನಿಯೇ, ಪ್ರಿಯೆಯೇ, ಇದು ರಹಸ್ಯಗಳಲ್ಲಿ ರಹಸ್ಯವಾದುದು. ಇದನ್ನು ಕೇಳು. ದೇವಗುಹ್ಯಕ್ಕಿಂತಲೂ ದೇಹ(ಜೀವ)ಗುಹ್ಯವು ಇನ್ನೂ ಅಧಿಕವಾದುದು ಎಂದು ಹೇಳುತ್ತಾರೆ.
ದೇವಾಸುರಾಸ್ತನ್ನ ವಿದುರಾತ್ಮನೋ ಹಿ ಗತಾಗತಮ್ |
ಅದೃಶ್ಯೋ ಹಿ ಸ ದೇವಾನಾಂ ಶೈಘ್ರ್ಯಾತ್ ಸೌಕ್ಷ್ಮ್ಯಾನ್ನಿರಾಶ್ರಯಾತ್ ॥
ದೇವಾಸುರರು ತಾವು ಈ ಲೋಕಕ್ಕೆ ಬಂದು ಹೋಗುವ ಪ್ರಕಾರವನ್ನು ತಿಳಿಯುವುದಿಲ್ಲ. ಗಮನಾಗಮನಗಳು ಶೀಘ್ರವಾಗಿರುವುದರಿಂದ, ಬಹಳ ಸೂಕ್ಷ್ಮವಾಗಿರುವುದರಿಂದ, ಯಾವ ಆಶ್ರಯವೂ ಕಾಣದಿರುವುದರಿಂದ ದೇವತೆಗಳೂ ಅದನ್ನು ಕಾಣುವುದಿಲ್ಲ.
ಅತಿಮಾತ್ರಾತಿಮಾಯಾನಾಮಾತ್ಮಮಾಯಾ ಸದೇಷ್ಯತೇ |
ಸೋಽಯಂ ಚತುರ್ವಿಧಾಂ ಜಾತಿಂ ಸಂವಿಶತ್ಯಾತ್ಮಮಾಯಯಾ |
ಮೈಥುನಂ ಶೋಣಿತಂ ಬೀಜಂ ದೈವಂ ಚಾಪ್ಯತ್ರ ಕಾರಣಮ್ ॥14॥

ಎಲ್ಲ ಮಾಯೆಗಳಲ್ಲಿ ಪರಮಾತ್ಮನ ಮಾಯೆ ಅತ್ಯಂತ ನಿಗೂಢವಾದುದು ಎಂದು ಹೇಳಲ್ಪಡುತ್ತದೆ. ಈ ಜೀವನು ಪರಮಾತ್ಮನ ಮಾಯೆಯಿಂದ ಎಂದರೆ ಸಾಮರ್ಥ್ಯದಿಂದ, ಇಚ್ಛೆಯಿಂದ ನಾಲ್ಕು ವಿಧವಾದ ಜಾತಿಗಳಲ್ಲಿ ಪ್ರವೇಶಿಸುತ್ತಾನೆ. ಮೈಥುನ, ಶೋಣಿತ, ಬೀಜ, ದೈವ ಎಲ್ಲವೂ ಇದಕ್ಕೆ ಕಾರಣವಾಗುತ್ತದೆ.
ಬೀಜಶೋಣಿತಸಂಯೋಗೋ ಯದಾ ಸಂಭವತೇ ಶುಭೇ |
ತದಾऽऽತ್ಮಾ ವಿಶತೇ ಗರ್ಭಮೇವಮಂಡಜರಾಯುಜೇ ॥15॥
ಎಲೌ ಶುಭಳೇ, ಅಂಡಜ, ಜರಾಯುಜ ಪ್ರಾಣಿಗಳಲ್ಲಿ ಬೀಜ-ಶೋಣಿತ ಸಂಯೋಗ ಉಂಟಾದಾಗ ಜೀವನು ಗರ್ಭವನ್ನು ಪ್ರವೇಶಿಸುತ್ತಾನೆ.
ಶೀತೋಷ್ಣಯೋಸ್ತು ಸಂಯೋಗೇ ಕ್ಲೇದಜೇಷ್ವವತಿಷ್ಠತಿ |
ಬೀಜಭೂಮಿಜಲಾನಾಂ ತು ಯೋಗಾದುದ್ಭೇದಜೇಷು ಚ |
ಏವಂ ಸಂಯೋಗಕಾಲೇ ತು ಆತ್ಮಾ ಗರ್ಭತ್ವಮೇಯಿವಾನ್ ॥16॥
ಕ್ಲೇದಜ (ಸ್ವೇದಜ ಜಾತಿಗಳಲ್ಲಿ) ಶೀತೋಷ್ಣ ಸಂಯೋಗದಿಂದ ಜೀವನು ಪ್ರವೇಶಿಸುತ್ತಾನೆ. ಉದ್ಭಿಜ ಜಾತಿಗಳಲ್ಲಿ ಬೀಜ, ಭೂಮಿ ಮತ್ತು ಜಲಗಳ ಸಂಯೋಗದಿಂದ ಜೀವನು ಪ್ರವೇಶಿಸುತ್ತಾನೆ. ಹೀಗೆ ಯಾವುದಾದರೂ ಸಂಯೋಗದ ಕಾಲದಲ್ಲಿ ಜೀವನು ಗರ್ಭವನ್ನು ಪ್ರವೇಶಿಸುತ್ತಾನೆ.
ಕಲಲಾಜ್ಜಾಯತೇ ಪಿಂಡಂ ಪಿಂಡಾತ್ ಪೇಶ್ಯರ್ಬುದಂ ಭವೇತ್ |
ವ್ಯಕ್ತಿಭಾವಂ ಗತೇ ಚೈವ ಕರ್ಮ ತ್ವಾಶ್ರಯತೇ ಕ್ರಮಾತ್ ॥17॥
ಗರ್ಭವು ನೀರಿನ ಗುಳ್ಳೆಯ ಆಕಾರದಿಂದ ಒಂದು ಸಣ್ಣ ಪಿಂಡದ ಆಕಾರವನ್ನೂ ಅನಂತರ ಪೇಶಿ (ರೇಷ್ಮೆ ಹುಳುವಿನ ಗೂಡಿನಷ್ಟು) ಆಕಾರವನ್ನೂ ಅನಂತರ ಅದಕ್ಕಿಂತ ದೊಡ್ಡ ಆಕಾರವನ್ನೂ ಪಡೆಯುತ್ತದೆ. ಜೀವನು ವ್ಯಕ್ತಾವಸ್ಥೆಯನ್ನು ಹೊಂದಿದ ಮೇಲೆ ಕರ್ಮಗಳನ್ನು ಕ್ರಮವಾಗಿ ಮಾಡುತ್ತಾನೆ.
ಏವಂ ಸ್ತ್ರೀಪುರುಷಸಂಯೋಗಂ ಪೌರುಷಂ ವಿದ್ಧಿ ಭಾಮಿನಿ |
ಅಪತ್ಯಲಾಭೋ ಯಚ್ಚಾನ್ಯತ್ ತದ್ ದೈವಮಿತಿ ಸಂಸ್ಕೃತಮ್ ॥18॥
ಎಲೌ ಭಾಮಿನಿಯೇ, ಹೀಗೆ ಸ್ತ್ರೀ-ಪುರುಷ ಸಂಯೋಗವು ಪುರುಷಪ್ರಯತ್ನ ಸಾಧ್ಯವಾದುದೆಂದು ತಿಳಿ. ಪುತ್ರೋತ್ಪತ್ತಿಯಾಗಲೀ ಅಥವಾ ಬೇರೆ ಯಾವುದಾಗಲೀ ಅದು ದೈವವೆಂದು ಕರೆಯಲ್ಪಡುತ್ತದೆ.
ಪಂಚಭೂತಸ್ಥಿತಿಶ್ಚೈವ ಜ್ಯೋತಿಷಾಮಯನಂ ತಥಾ |
ಅಬುದ್ಧಿಗಮ್ಯಂ ಯನ್ಮರ್ತ್ಯೈ ರ್್ಯಹೇತುಭಿರ್ವಾ ನ ವಿದ್ಯತೇ ॥19॥
ತಾದೃಶಂ ಕಾರಣಂ ದೈವಂ ಶುಭಂ ವಾ ಯದಿ ವೇತರತ್ |
ಯಾದೃಶಂ ಚಾತ್ಮನಾ ಶಕ್ಯಂ ತತ್ ಪೌರುಷಮಿತಿ ಸ್ಮೃತಮ್ ॥20॥
ಪಂಚಭೂತಗಳ ಸ್ಥಿತಿ, ಜ್ಯೋತಿಸ್ಸುಗಳ ಗತಿ, ಮನುಷ್ಯರ ಬುದ್ಧಿಗೆ ಗೋಚರವಾಗದುದು ಅಥವಾ ಮನುಷ್ಯರ ಯುಕ್ತಿಗೂ ಗೋಚರವಾಗದುದು ಅದು ಶುಭವಾಗಲೀ ಅಥವಾ ಅಶುಭವಾಗಲೀ ಅದನ್ನು ದೈವವೆಂದು ಹೇಳುತ್ತಾರೆ. ಜೀವನು ಏನನ್ನು ಮಾಡಲು ಸಾಧ್ಯವೋ ಅದನ್ನು ಮಾತ್ರ ಪೌರುಷವೆಂದು ಹೇಳುತ್ತಾರೆ.
ಕೇವಲಂ ಫಲನಿಷ್ಪತ್ತಿರೇಕೇನ ನ ತು ಶಕ್ಯತೇ |
ಪೌರುಷೇಣೈವ ದೈವೇನ ಯುಗಪದ್ ಗ್ರಥಿತಂ ಪ್ರಿಯೇ |
ತಯೋಃ ಸಮಾಹಿತಂ ಕರ್ಮ ಶೀತೋಷ್ಣಂ ಯುಗಪತ್ ತಥಾ ॥21॥
ಇವೆರಡರಲ್ಲಿ ಯಾವುದೇ ಒಂದರಿಂದ ಫಲಸಿದ್ಧಿಯಾಗುವುದಿಲ್ಲ. ಪ್ರಿಯೆಯೇ, ಪೌರುಷ ಮತ್ತು ದೈವ ಇವೆರಡೂ ಒಂದಕ್ಕೊಂದು ಹೆಣೆದುಕೊಂಡಿವೆ. ಶೀತೋಷ್ಣಗಳಂತೆ ಅವು ಯಾವಾಗಲೂ ಒಟ್ಟಿಗೆ ಸೇರಿರುತ್ತವೆ.
ಪೌರುಷಂ ತು ತಯೋಃ ಪೂರ್ವಮಾರಬ್ಧವ್ಯಂ ವಿಜಾನತಾ |
ಆತ್ಮನಾ ನೈವ ಶಕ್ಯಂ ಹಿ ನ ತಥಾ ಕೀರ್ತಿಮಾಪ್ನುಯಾತ್ ॥22॥
ವಿವೇಕಿಯಾದ ಪುರುಷನು ಮೊದಲು ಪುರುಷ ಪ್ರಯತ್ನವನ್ನು ಮಾಡಬೇಕು. ಪುರುಷಪ್ರಯತ್ನ ಒಂದರಿಂದಲೇ ಕಾರ್ಯಸಿದ್ಧಿಯುಂಟಾಗಿ ಕೀರ್ತಿಯು ಉಂಟಾಗುವುದಿಲ್ಲ.
ಖನನಾನ್ಮಥನಾಲ್ಲೋಕೇ ಜಲಾಗ್ನಿಪ್ರಾಪಣಂ ಯಥಾ |
ತಥಾ ಪುರುಷಕಾರೇ ತು ದೈವಸಂಪತ್ ಸಮಾಹಿತಾ ॥23॥
ಭೂಮಿಯನ್ನು ತೋಡಿ ನೀರನ್ನು ಪಡೆಯುವುದು, ಮಥನದಿಂದ ಅಗ್ನಿಯನ್ನು ಪಡೆಯುವುದು ಇದಕ್ಕೆ ದೃಷ್ಟಾಂತ. ಭೂಮಿಯನ್ನು ತೋಡಿದರೂ ನೀರು ಬರುತ್ತದೆಂಬ ನಿಶ್ಚಯವಿಲ್ಲ. ಮಥನವನ್ನು ಮಾಡಿದರೂ ಅಗ್ನಿ ಉತ್ಪತ್ತಿಯಾಗುವುದೆಂಬ ನಿಶ್ಚಯವಿಲ್ಲ. ಈ ರೀತಿಯಲ್ಲಿ ಪುರುಷ ಪ್ರಯತ್ನದ ಜೊತೆಯಲ್ಲಿ ದೈವ ಸಂಪತ್ತು ಸಮಾಹಿತವಾಗಿದೆ.
ನರಸ್ಯಾಕುರ್ವತಃ ಕರ್ಮ ದೈವಸಂಪನ್ನ ಲಭ್ಯತೇ |
ತಸ್ಮಾತ್ ಸರ್ವಸಮಾರಂಭೋ ದೈವಮಾನುಷನಿರ್ಮಿತಃ ॥24॥
ಮನುಷ್ಯನು ಯಾವ ಪ್ರಯತ್ನವನ್ನೂ ಮಾಡದಿದ್ದರೆ ದೈವಸಹಾಯ (ದೈವ ಸಂಪತ್ತಿ ಯಾವ ರೀತಿಯಲ್ಲಿಯೂ ಇರುವುದಿಲ್ಲ. ಆದ್ದರಿಂದ ಎಲ್ಲ ಕ್ರಿಯಾರಂಭಗಳೂ ದೈವ- ಮಾನುಷ ಉಭಯನಿರ್ಮಿತವಾಗಿರುತ್ತದೆ.
ಉಮಾ
ಭಗವನ್ ಮೃತಮಾತ್ರಸ್ತು ಯೋಽಯಂ ಜಾತ ಇತಿ ಸ್ಮೃತಃ |
ತಥೈವ ದೃಶ್ಯತೇ ಜಾತಸ್ತತ್ರಾತ್ಮಾ ತು ಕಥಂ ಭವೇತ್ ॥25॥

ಗರ್ಭಾದಾವೇವ ಸಂವಿಷ್ಟ ಆತ್ಮಾ ತು ಭಗವನ್ ಮತಮ್ |
ಏಷ ಮೇ ಸಂಶಯೋ ದೇವ ತನ್ಮೇ ಛೇತ್ತುಂ ತ್ವಮರ್ಹಸಿ ॥26॥
ಉಮಾ ಭಗವಂತನೇ, ಮೃತನಾದವನು ಪುನಃ ಜನಿಸುತ್ತಾನೆ ಎಂದು ಹೇಳುತ್ತಾರೆ. ಜನಿಸುವುದು ಕಂಡುಬರುತ್ತದೆ. ಮೃತರಾದ ಮೇಲೆ ಜೀವನು ಅಲ್ಲಿಗೆ ಬರುವುದು ಹೇಗೆ? ಗರ್ಭದಲ್ಲಿ ಜೀವನು ಅಲ್ಲಿಯೇ ಮೃತಿಯನ್ನು ಹೊಂದಿರುತ್ತಾನಷ್ಟೆ? ಎಲೈ ದೇವನೇ, ಇದು ನನ್ನ ಸಂಶಯ. ಇದನ್ನು ಪರಿಹರಿಸಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ತತ್ತ್ವಂ ಸಮಾಹಿತಾ ॥27॥
ಮಹೇಶ್ವರ ಅದನ್ನು ನಿನಗೆ ಹೇಳುವೆನು. ಸಮಾಧಾನದಿಂದ ತತ್ತ್ವವನ್ನು ಕೇಳು.
ಅನ್ಯೋ ಗರ್ಭಗತೋ ಭೂತ್ವಾ ತತ್ರೈವ ನಿಧನಂ ಗತಃ |
ಪುನರನ್ಯಃ ಶರೀರಂ ತದಾವಿಶ್ಯ ಭುವಿ ಜಾಯತೇ |
ತತ್ ಕ್ವಚಿನ್ನೈವ ಸರ್ವತ್ರ ದೈವಯೋಗಂ ತು ತದ್ ಭವೇತ್ ॥28॥
ಒಬ್ಬ ಜೀವನು ಗರ್ಭದಲ್ಲಿದ್ದು ಅಲ್ಲಿಯೇ ಮೃತನಾಗುತ್ತಾನೆ. ಪುನಃ ಇನ್ನೊಬ್ಬ ಜೀವನು ಆ ಶರೀರವನ್ನು ಪ್ರವೇಶಿಸಿ ಭೂಮಿಯಲ್ಲಿ ಜನಿಸುತ್ತಾನೆ. ಇದು ಬಹಳ ಅಪರೂಪವಾದುದು. ಯಾವಾಗಲೂ ನಡೆಯುವುದಿಲ್ಲ. ಹೀಗೆ ನಡೆಯುವುದಕ್ಕೆ ದೈವಯೋಗವು ಕಾರಣ.
ಸೂತಿಕಾಯಾ ಹಿತಾರ್ಥಂ ಚ ಮೋಹನಾರ್ಥಂ ಚ ದೇಹಿನಾಮ್ |
ಸಮಕರ್ಮವಿಧಾನಂ ತದಿತ್ಯೇವಂ ವಿದ್ಧಿ ಶೋಭನೇ ॥29॥
ಎಲೌ ಶೋಭನೆಯೇ, ಪ್ರಸವದ ಹಿತಕ್ಕಾಗಿ ಮತ್ತು ಜೀವನನ್ನು ಮೋಹಗೊಳಿಸುವುದಕ್ಕಾಗಿ ಇಂತಹ ಕರ್ಮವಿಧಾನವು ನಡೆಯುತ್ತದೆ ಎಂದು ತಿಳಿ.
ಕೌಕ್ಷಮಾತ್ರಂ ತು ನರಕಂ ಭುಕತ್ವ ಕೇಚಿತ್ ಪ್ರಯಾಂತಿ ಹಿ |
ಮಾಯಾ ಸಾ ಯಾಮಿಕಾ ನಾಮ ಯಜ್ಜನ್ಮಮರಣಾಂತರೇ |
ಇತಿ ತೇ ಕಥಿತಂ ದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥30॥
ಕೆಲವರು ಗರ್ಭವಾಸ ದುಃಖವನ್ನು ಮಾತ್ರ ಅನುಭವಿಸಿ ಮೃತರಾಗಿ ಹೊರಟು ಹೋಗುತ್ತಾರೆ. ಆ ಜನ್ಮ ಮರಣಗಳ ಮಧ್ಯೆ ಅವರು ಯಾಮಿಕಾ ಎಂಬ ಭಗವಂತನ ಮಾಯೆಗೆ ಒಳಗಾಗಿರುತ್ತಾರೆ. ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದೈವಪುರುಷಕಾರಯೋರ್ಮೇಲನಕಥನಂ ನಾಮ ತ್ರಯೋದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹದಿಮೂರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹದಿನಾಲ್ಕನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ನರಕಮಾರ್ಗಗಳ ವರ್ಣನೆ
ಉಮಾ
ಭಗವನ್ ಸರ್ವಲೋಕೇಶ ತ್ರಿಪುರಾರ್ದನ ಶಂಕರ |
ಕೀದೃಶಾ ಯಮದಂಡಾಸ್ತೇ ಕೀದೃಶಾಃ ಪರಿಚಾರಕಾಃ ॥1॥
ಕಥಂ ಮೃತಾಸ್ತೇ ಗಚ್ಛಂತಿ ಪ್ರಾಣಿನೋ ಯಮಸಾದನಮ್ |
ಕೀದೃಶಂ ಭವನಂ ತಸ್ಯ ಕಥಂ ದಂಡಯತಿ ಪ್ರಜಾಃ |
ಏತತ್ಸರ್ವಂ ಮಹಾದೇವ ಶ್ರೋತುಮಿಚ್ಛಾಮ್ಯಹಂ ಪ್ರಭೋ ॥2॥
ಉಮಾ ಭಗವಂತನೇ, ಸರ್ವಲೋಕೇಶನೆ, ತ್ರಿಪುರ ಸಂಹಾರಿಯೇ, ಶಂಕರನೇ, ಯಮನ ದೂತರು ಹೇಗಿರುತ್ತಾರೆ? ಯಮನು ಕೊಡುವ ಶಿಕ್ಷೆಯು ಹೇಗಿರುತ್ತದೆ? ಮೃತರಾದ ಪ್ರಾಣಿಗಳು ಯಮಲೋಕಕ್ಕೆ ಹೇಗೆ ಹೋಗುತ್ತಾರೆ? ಯಮನ ಗೃಹವು ಹೇಗಿರುತ್ತದೆ? ಅವನು ಜೀವರನ್ನು ಹೇಗೆ ಶಿಕ್ಷಿಸುತ್ತಾನೆ? ಎಲೈ ಮಹಾದೇವನೇ, ಪ್ರಭುವೇ, ನಾನು ಇದೆಲ್ಲವನ್ನೂ ಕೇಳಲು ಬಯಸುತ್ತೇನೆ.
ಮಹೇಶ್ವರಃ
ಶೃಣು ಕಲ್ಯಾಣಿ ತತ್ಸರ್ವಂ ಯತ್ತದ್ ದೇವಿ ಮನಃಪ್ರಿಯಮ್ |
ದಕ್ಷಿಣಸ್ಯಾಂ ದಿಶಿ ಶುಭೇ ಯಮಸ್ಯ ಸದನಂ ಮಹತ್ ॥3॥
ವಿಚಿತ್ರಂ ರಮಣೀಯಂ ಚ ನಾನಾಭಾವಸಮನ್ವಿತಮ್ |
ಪಿತೃಭಿಃ ಪ್ರೇತಸ್ಯಿಂಶ್ಚ ಯಮದೂತೈಶ್ಚ ಸಂತತಮ್ ॥4॥
ಮಹೇಶ್ವರ ಕಲ್ಯಾಣಿಯೇ, ದೇವಿಯೇ, ನಿನ್ನ ಮನಸ್ಸಿಗೆ ಪ್ರಿಯವಾದ ಆ ಎಲ್ಲ ವಿಷಯವನ್ನೂ ಕೇಳು. ಶುಭವಾದ ದಕ್ಷಿಣ ದಿಕ್ಕಿನಲ್ಲಿ ಯಮನ ದೊಡ್ಡ ಗೃಹವಿದೆ. ಅದು ವಿಚಿತ್ರವೂ, ಮನೋಹರವೂ ಮತ್ತು ನಾನಾ ಕೌಶಲದಿಂದ ಕೂಡಿದುದೂ ಆಗಿದೆ. ಅಲ್ಲಿ ಪಿತೃಗಳು, ಯಮದೂತರು ಮತ್ತು ಮೃತ ಜೀವರು ತುಂಬಿರುತ್ತಾರೆ.
ಪ್ರಾಣಿಸ್ಯಿಂಃ ಸುಬಹುಭಿಃ ಕರ್ಮವಶ್ಯೈಶ್ಚ ಪೂರಿತಮ್ |
ತತ್ರಾಸ್ತೇ ದಂಡಯನ್ ನಿತ್ಯಂ ಯಮೋ ಲೋಕಹಿತೇ ರತಃ ॥5॥
ಕರ್ಮವಶರಾದ, ಅನೇಕ ವಿಧವಾದ ಜೀವ ಸಂಘಗಳಿಂದ ಅದು ತುಂಬಿರುತ್ತದೆ. ಅಲ್ಲಿ ಲೋಕಹಿತದಲ್ಲಿ ರತನಾದ ಯಮನು ನಿತ್ಯವೂ

ಜೀವರಿಗೆ ಶಿಕ್ಷೆಯನ್ನು ವಿಧಿಸುತ್ತಾ ಇರುತ್ತಾನೆ.
ಮಾಯಯಾ ಸತತಂ ವೇತ್ತಿ ಪ್ರಾಣಿನಾಂ ಯಚ್ಛುಭಾಶುಭಮ್ |
ಮಾಯಯಾ ಸಂಹರನ್ ತತ್ರ ಪ್ರಾಣಿಸಂಘಾನ್ ಯತಸ್ತತಃ ॥6॥
ತನ್ನ ಸಾಮರ್ಥ್ಯದಿಂದ ಅವನು ಸತತವಾಗಿ ಪ್ರಾಣಿಗಳ ಶುಭಾಶುಭಗಳನ್ನು ತಿಳಿಯುತ್ತಾನೆ. ತನ್ನ ಸಾಮರ್ಥ್ಯದಿಂದಲೇ ಪ್ರಾಣಿಸಮೂಹಗಳನ್ನು ಎಲ್ಲೆಂದರಲ್ಲಿ ಸಂಹರಿಸುತ್ತಾನೆ (ಸಾಮರ್ಥ್ಯ ಎಂಬ ಅರ್ಥದಲ್ಲಿ ಮಾಯಾ ಶಬ್ದ ಪ್ರಯೋಗವನ್ನು ಗಮನಿಸಬೇಕು).
ತಸ್ಯ ಮಾಯಾಮಯಾಃ ಪಾಶಾ ನ ವೇದ್ಯಂತೇ ಸುರಾಸುರೈಃ |
ಕೋ ಹಿ ಮಾನುಷಮಾತ್ರಸ್ತು ವೇತ್ತಾ ತಚ್ಚರಿತಂ ಮಹತ್ ॥7॥
ಅವನ ಮಾಯಾಮಯವಾದ ಪಾಶಗಳು ಸುರಾಸುರರಿಗೂ ತಿಳಿಯುವುದಿಲ್ಲ. ಇನ್ನು ಮನುಷ್ಯಮಾತ್ರನಾದವನು ಯಮನ ಮಹಾಚರಿತೆಯನ್ನು ಹೇಗೆ ತಿಳಿದಾನು?
ಏವಂ ಹಿ ಶಾಸತಸ್ತಸ್ಯ ಯಮಸ್ಯ ಪರಿಚಾರಕಾಃ |
ಗೃಹೀತ್ವಾ ಸನ್ನಯಂತ್ಯೇವ ಪ್ರಾಣಿನಃ ಕ್ಷೀಣಕರ್ಮಿಣಃ |
ಯೇನ ಕೇನಾಪದೇಶೇನ ತ್ವಪದೇಶಸಮುದ್ಭವಾಃ ॥8॥
ಹೀಗೆ ಶಿಕ್ಷೆಯನ್ನು ಕೊಡುವ ಯಮನ ದೂತರು, ತಮ್ಮ ಕರ್ಮವು ವಿನಾಶವನ್ನು ಹೊಂದಿದ ಪ್ರಾಣಿಗಳನ್ನು ಯಾವುದಾದರೂ ಒಂದು ವ್ಯಾಜದಿಂದ ಹಿಡಿದುಕೊಂಡು ಎಳೆದುಕೊಂಡು ಹೋಗುತ್ತಾರೆ.
ಕರ್ಮಣಾ ಪ್ರಾಣಿನೋ ಲೋಕ ಉತ್ತಮಾಧಮಮಧ್ಯಮಾಃ |
ಯಥಾರ್ಹಂ ತಾನ್ ಸಮಾದಾಯ ನಯಂತಿ ಯಮಸಾದನಮ್ ॥9॥
ಪ್ರಾಣಿಗಳು ತಾವು ಮಾಡುವ ಕರ್ಮದಿಂದ ಲೋಕದಲ್ಲಿ ಉತ್ತಮ, ಅಧಮ, ಮಧ್ಯಮರೆಂದು ಮೂರು ವಿಧವಾಗಿರುತ್ತಾರೆ. ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಅವರನ್ನು ಕರೆದುಕೊಂಡು ಯಮದೂತರು ಯಮಪಟ್ಟಣಕ್ಕೆ ಹೋಗುತ್ತಾರೆ.
ಧಾರ್ಮಿಕಾನುತ್ತಮಾನ್ ವಿದ್ಧಿ ಸ್ವರ್ಗೀಯಾಸ್ತೇ ಯಥಾಽಮರಾಃ |
ನೃಷು ಜನ್ಮ ಲಭಂತೇ ಯೇ ಕರ್ಮಣಾ ಮಧ್ಯಮಾಃ ಸ್ಮೃತಾಃ |
ತಿರ್ಯಙ್ನರಕಗಂತಾರೋ ಹ್ಯಧಮಾಸ್ತೇ ನರಾಧಮಾಃ ॥10॥
ಧಾರ್ಮಿಕರಾದವರು ಉತ್ತಮರೆಂದು ತಿಳಿ. ಅವರು ಸ್ವರ್ಗಕ್ಕೆ ಹೋಗುವ ದೇವತೆಗಳು. ಯಾರು ಮನುಷ್ಯಯೋನಿಯಲ್ಲಿ ಜನ್ಮವನ್ನು ಪಡೆಯುತ್ತಾರೆಯೋ ಅವರು ಕರ್ಮಗಳಿಂದ ಮಧ್ಯಮರು. ತಿರ್ಯಗ್ಯೋನಿಗಳಿಗೆ ಮತ್ತು ನರಕಕ್ಕೆ ಹೋಗುವ ನರಾಧಮರು ಅಧಮರು.
ಪಂಥಾನಸ್ತ್ರಿವಿಧಾ ದೃಷ್ಟಾ ಸರ್ವೇಷಾಂ ಗತಜೀವಿನಾಮ್ |
ರಮಣೀಯಂ ನಿರಾಬಾಧಂ ದುರ್ದರ್ಶಮಿತಿ ನಾಮತಃ ॥11॥
ಮೃತರಾದವರೆಲ್ಲ ಹೋಗುವ ಮಾರ್ಗಗಳು ರಮಣೀಯ, ನಿರಾಬಾಧ ಮತ್ತು ದುರ್ದರ್ಶ ಎಂದು ಮೂರು ಇವೆ.
ರಮಣೀಯಂ ತು ಸನ್ಮಾರ್ಗಂ ಪತಾಕಾಧ್ವಜಸಂಕುಲಮ್ |
ಧೂಪಿತಂ ಸಿಕ್ತಸಂಮೃಷ್ಟಂ ಪುಷ್ಪಮಾಲಾಭಿಸಂಕುಲಮ್ ॥12॥
ರಮಣೀಯವೆಂಬ ಮಾರ್ಗವು ಒಳ್ಳೆಯ ಮಾರ್ಗ. ಪತಾಕೆ, ಧ್ವಜಗಳಿಂದ ಅಲಂಕೃತವಾಗಿ, ಒಳ್ಳೆಯ ಧೂಪದಿಂದ ಕೂಡಿ, ಸುಗಂಧ ದ್ರವ್ಯಗಳನ್ನು ಚುಮುಕಿಸಿ ಪುಷ್ಪ ಮಾಲೆಗಳಿಂದ ಅಲಂಕೃತವಾಗಿರುತ್ತದೆ.
ಮನೋಹರಂ ಸುಖಸ್ಪರ್ಶಂ ಗಚ್ಛತಾಮೇವ ತದ್ ಭವೇತ್ |
ನಿರಾಬಾಧಂ ಯಥಾ ಲೋಕೇ ಸುಪ್ರಶಸ್ತಂ ತಥಾ ಭವೇತ್ ॥13॥
ಅದರಲ್ಲಿ ಹೋಗುವವರಿಗೆ ಅದು ಮನೋಹರವೂ, ಸುಖಸ್ಪರ್ಶವನ್ನು ಕೊಡುವಂತಹದೂ ಆಗಿರುತ್ತದೆ. ನಿರಾಬಾಧ ಮಾರ್ಗವು ಈ ಲೋಕದಲ್ಲಿ ಒಳ್ಳೆಯ ಮಾರ್ಗದಂತೆ ಇರುತ್ತದೆ.
ತೃತೀಯಂ ಯತ್ತು ದುರ್ದರ್ಶಂ ದುರ್ಗಂಧಿ ತಮಸಾವೃತಮ್ |
ಪರುಷಂ ಶರ್ಕರಾಕೀರ್ಣಂ ಶ್ವದಂಷ್ಟ್ರಾಬಹುಲಂ ಭೃಶಮ್ |
ಕೃಮಿಕೀಟಸಮಾಕೀರ್ಣಂ ಗಚ್ಛತಾಮತಿದುರ್ಗಮಮ್ ॥14॥
ಮೂರನೆಯದಾದ ದುರ್ದರ್ಶ ಮಾರ್ಗವು ದುರ್ಗಂಧವುಳ್ಳದುದು, ಕತ್ತಲೆಯಿಂದ ಕೂಡಿದುದು, ಒರಟಾದುದು, ಕಲ್ಲುಗಳಿಂದ ತುಂಬಿದುದು, ನಾಯಿ ಮುಂತಾದ ಪ್ರಾಣಿಗಳಿಂದಲೂ, ಕ್ರಿಮಿ-ಕೀಟಗಳಿಂದಲೂ ತುಂಬಿ ನಡೆಯಲು ಅತಿ ದುರ್ಗಮವಾದುದು.
ಮಾರ್ಗೈರೇಭಿಸ್ತ್ರಿಭಿರ್ನಿತ್ಯಮುತ್ತಮಾಧಮಮಧ್ಯಮಾನ್ |
ಸನ್ನಯಂತಿ ಯಥಾ ಕಾಲೇ ತನ್ಮೇ ಶೃಣು ಶುಚಿಸ್ಮಿತೇ ॥15॥
ಎಲೌ ಶುಚಿಸ್ಮಿತೆಯೇ, ಯಮದೂತರು ಈ ಮೂರು ಮಾರ್ಗಗಳಲ್ಲಿ ಉತ್ತಮ- ಅಧಮ-ಮಧ್ಯಮರನ್ನು ಮರಣ ಕಾಲದಲ್ಲಿ ಹೇಗೆ ಕರೆದುಕೊಂಡು ಹೋಗುತ್ತಾರೆಂದು ಕೇಳು.
ಉತ್ತಮಾನಂತಕಾಲೇ ತು ಯಮದೂತಾಃ ಸುಸಂವೃತಾಃ |
ನಯಂತಿ ಸುಖಮಾದಾಯ ರಮಣೀಯಪಥೇನ ವೈ ॥16॥
ಮರಣಕಾಲದಲ್ಲಿ ಉತ್ತಮರನ್ನು ಒಳ್ಳೆಯ ವೇಷವನ್ನು ಧರಿಸಿದ ಯಮದೂತರು ಸುಖವಾಗಿ ರಮಣೀಯ ಮಾರ್ಗದಲ್ಲಿ ಕರೆದುಕೊಂಡು ಹೋಗುತ್ತಾರೆ.
ಉಮಾ
ಭಗವಂಸ್ತತ್ರ ಚಾತ್ಮಾನಂ ತ್ಯಕ್ತದೇಹಂ ನಿರಾಶ್ರಯಮ್ |

ಅದೃಶ್ಯಂ ಕಥಮಾದಾಯ ಸನ್ನಯಂತಿ ಯಮಾಂತಿಕಮ್ ॥17॥
ಉಮಾ ಭಗವಂತನೇ, ಜೀವನು ದೇಹವನ್ನು ತ್ಯಜಿಸಿ ಆಶ್ರಯವಿಲ್ಲದೆ ಅದೃಶ್ಯನಾಗಿರುವಾಗ ಅವನನ್ನು ಯಮನ ಬಳಿಗೆ ಹೇಗೆ ಕರೆದುಕೊಂಡು ಹೋಗುತ್ತಾರೆ?
ಮಹೇಶ್ವರಃ
ಶೃಣು ಭಾಮಿನಿ ತತ್ಸರ್ವಂ ತ್ರಿವಿಧಂ ದೇಹಕಾರಣಮ್ ।
ಕರ್ಮವಶ್ಯಂ ಭೋಗವಶ್ಯಂ ದುಃಖವಶ್ಯಮಿತಿ ಪ್ರಿಯೇ ॥18॥
ಮಹೇಶ್ವರ ಎಲೌ ಭಾಮಿನಿಯೇ, ಪ್ರಿಯೆಯೇ, ದೇಹಗಳು ಕರ್ಮವಶ್ಯ, ಭೋಗವಶ್ಯ ಮತ್ತು ದುಃಖವಶ್ಯ ಎಂದು ಮೂರು ವಿಧವಾಗಿವೆ ಎಂಬುದನ್ನು ಕೇಳು.
ಮಾನುಷಂ ಕರ್ಮವಶ್ಯಂ ಸ್ಯಾತ್ ಸ್ವರ್ಗೀಯಂ ಭೋಗಸಾಧನಮ್ ।
ತೃತೀಯಂ ಯಾತನಾವಶ್ಯಂ ಶರೀರಂ ಮಾಯಯಾ ಕೃತಮ್ ।
ಯಮಲೋಕೇ ನ ಚಾನ್ಯತ್ರ ದೃಶ್ಯತೇ ಯಾತನಾಯುತಮ್ ॥19॥
ಮನುಷ್ಯರ ದೇಹವು ಕರ್ಮವಶ್ಯವಾಗಿರುತ್ತದೆ. ದೇವತೆಗಳ ಸ್ವರ್ಗೀಯ ದೇಹವು ಭೋಗವಶ್ಯ ಎಂದೇ ಭೋಗಸಾಧನವಾಗಿರುತ್ತದೆ. ಮೂರನೆಯದಾದ ಯಾತನಾವಶ್ಯ ಎಂಬ ಶರೀರವು ಯಮಲೋಕದಲ್ಲಿ ಮಾತ್ರ ಕಂಡು ಬರುತ್ತದೆ. ಬೇರೆಲ್ಲಿಯೂ ಕಂಡುಬರುವುದಿಲ್ಲ.

ಶರೀರೈರ್ಯಾತನಾವಶ್ಯೈರ್ಜೀವಾನಾಮುಚ್ಯ ಭಾಮಿನಿ ।
ನಯಂತಿ ಯಾಮಿಕಾಸ್ತತ್ರ ಪ್ರಾಣಿನೋ ಮಾಯಯಾ ಮೃತಾನ್ ॥20॥
ಎಲೌ ಭಾಮಿನಿಯೇ, ಯಮದೂತರು ನೂತನಾದಿ ಜೀವನನ್ನು ಯಾತನಾ ಶರೀರದಲ್ಲಿ ಪ್ರವೇಶಿಸಿ ತಮ್ಮ ಸಾಮರ್ಥ್ಯದಿಂದ ಕರೆದುಕೊಂಡು ಹೋಗುತ್ತಾರೆ.
ಮಧ್ಯಮಾನಥ ವೇಷೇಣ ಮಧ್ಯಮೇನ ಪಥಾ ತಥಾ ॥21॥
ಚಂಡಾಲವೇಷಾಸ್ತ್ವಧಮಾನ್ ಗೃಹೀತ್ವಾ ಭರ್ತ್ಸ್ಯತರ್ಜನೈಃ ।
ಆಕರ್ಷಂತಸ್ತಥಾ ಪಾಶೈರ್ದುರ್ದರ್ಶೇನ ನಯಂತಿ ತಾನ್ ॥22॥
ಮಧ್ಯಮರನ್ನು ಮಧ್ಯಮ ಮಾರ್ಗದಲ್ಲಿ ಯೋಧರ ವೇಷದಂತೆ ಮಧ್ಯಮ ವೇಷವನ್ನು ಧರಿಸಿ ಕರೆದುಕೊಂಡು ಹೋಗುತ್ತಾರೆ. ಅಧಮರನ್ನು ಚಂಡಾಲವೇಷವನ್ನು ಧರಿಸಿ ಅವರನ್ನು ಹಿಡಿದುಕೊಂಡು ಅವರನ್ನು ಹೆದರಿಸುತ್ತಾ, ಬೆದರಿಸುತ್ತಾ ಪಾಶಗಳಿಂದ ಎಳೆದುಕೊಂಡು ದುರ್ದರ್ಶ ಮಾರ್ಗದಿಂದ ಕರೆದುಕೊಂಡು ಹೋಗುತ್ತಾರೆ.
ತ್ರಿವಿಧಾನೇವಮಾದಾಯ ನಯಂತಿ ಯಮಸಾದನಮ್ ।
ಧರ್ಮಾಸನಗತಂ ದಕ್ಷಂ ಭ್ರಾಜಮಾನಂ ಸ್ವತೇಜಸಾ ॥23॥
ಲೋಕಪಾಲಂ ಸಭಾಧ್ಯಕ್ಷಂ ತಥೈವ ಪರಿಷದ್ಗತಮ್ ।
ದರ್ಶಯಂತಿ ಮಹಾಭಾಗೇ ಯಾಮಿಕಾಸ್ತಾನ್ನಿವೇದ್ಯ ತೇ ॥24॥
ಮೂರು ವಿಧ ಜೀವರನ್ನು ಹೀಗೆ ಎಳೆದುಕೊಂಡು ಧರ್ಮಾಸನದಲ್ಲಿ ದಕ್ಷತೆಯಿಂದ ತನ್ನ ಕಾಂತಿಯಿಂದ ಶೋಭಿಸುತ್ತಾ ಕುಳಿತು ಲೋಕಪಾಲಕನೂ, ಸಭಾಧ್ಯಕ್ಷನೂ, ಸಭೆಯಲ್ಲಿ ಇರುವವನೂ ಆದ ಯಮನಿಗೆ ತೋರಿಸುತ್ತಾರೆ. ಎಲೌ ಮಹಾಭಾಗ್ಯವಂತಳೇ ಮತ್ತು ಯಮನಿಗೆ ಅವರನ್ನು ನಿವೇದಿಸುತ್ತಾರೆ.
ಪೂಜಯನ್ ದಂಡಯನ್ ಕಾಂಶ್ಚಿತ್ ತೇಷಾಂ ಶೃಣ್ವನ್ ಶುಭಾಶುಭಮ್ ।
ವ್ಯಾಹೃತೋ ಬಹುಸಾಹಸ್ರೈಸ್ತತ್ರಾಸ್ತೇ ಸತತಂ ಯಮಃ ॥25॥
ಯಮದೇವರು ಅವರ ಶುಭಾಶುಭಗಳನ್ನು ಕೇಳಿ, ಕೆಲವರಿಗೆ ಪೂಜೆಯನ್ನೂ, ಕೆಲವರಿಗೆ ಶಿಕ್ಷೆಯನ್ನೂ ಕೊಡುತ್ತಾರೆ. ಹೀಗೆ ಸಹಸ್ರಾರು ದೂತರು ಯಮನಿಗೆ ಸತತವಾಗಿ ಜೀವರನ್ನು ನಿವೇದಿಸುತ್ತಿರುತ್ತಾರೆ.
ಗತಾನಾಂ ತು ಯಮಸ್ತೇಷಾಮುತ್ತಮಾನಭಿಪೂಜಯಾ ।
ಅಭಿಸಂಗಮ್ಯ ವಿಧಿವತ್ ಪೃಷ್ಟ್ವಾ ಸ್ವಾಗತಕೌಶಲಮ್ ।
ಪ್ರಸ್ತುತ್ಯ ಸತ್ಕಥಾಂ ತೇಷಾಂ ಲೋಕಂ ಸಂದಿಶತೇ ಯಮಃ ॥26॥
ಯಮೇನೈವಮನುಜ್ಞಾತಾ ಯಾಂತಿ ಪಶ್ಚಾತ್ ತ್ರಿವಿಷ್ಟಪಮ್ ॥27॥
ಯಮನು ತನ್ನ ಬಳಿಗೆ ಬಂದ ಉತ್ತಮರನ್ನು ಪೂಜಿಸಿ, ಅವರ ಜೊತೆಯಲ್ಲಿ ಬೆರೆತು, ವಿಧಿಗೆ ಅನುಗುಣವಾಗಿ ಕುಶಲಪ್ರಶ್ನೆಯನ್ನು ಮಾಡಿ, ಅವರು ಮಾಡಿದ ಸತ್ಕರ್ಮಗಳನ್ನು ನಿಮಿತ್ತವನ್ನಾಗಿ ಮಾಡಿಕೊಂಡು ಅವರಿಗೆ ಯೋಗ್ಯವಾದ ಲೋಕಗಳನ್ನು ಕೊಡುತ್ತಾನೆ. ಈ ರೀತಿಯಲ್ಲಿ ಯಮನಿಂದ ಅನುಮತಿಯನ್ನು ಪಡೆದ ಅವರು ಅನಂತರ ಸ್ವರ್ಗಕ್ಕೆ ಹೋಗುತ್ತಾರೆ.
ಮಧ್ಯಮಾನಾಂ ಯಮಸ್ತೇಷಾಂ ಶ್ರುತ್ವಾ ಕರ್ಮ ಯಥಾತಥಮ್ ।
ಜಾಯಂತಾಂ ಮಾನುಷೇಷ್ವೇವ ಇತಿ ಸಂದಿಶತೇ ಚ ತಾನ್ ॥28॥
ಮಧ್ಯಮ ಜೀವರ ವಿಷಯದಲ್ಲಿ ಯಮನು ಅವರ ಶುಭಾಶುಭಕರ್ಮಗಳನ್ನು ಕೇಳಿ ಮನುಷ್ಯರಲ್ಲೇ ಹುಟ್ಟಿ ಎಂದು ಆದೇಶವನ್ನು ಕೊಡುತ್ತಾನೆ.
ಅಧಮಾನ್ ಪಾಶಸಂಯುಕ್ತಾನ್ ಯಮೋ ನಾವೇಕ್ಷತೇಽಽಗತಾನ್ ।
ಯಮಸ್ಯ ಪುರುಷಾ ಘೋರಾಶ್ಚಂಡಾಲಸಮದರ್ಶನಾಃ ।
ಯಾತನಾ ಯಾಪಯಂತ್ಯೇತಾಲ್ಲೋಕಪಾಲಸ್ಯ ಶಾಸನಾತ್ ॥29॥
ಪಾಶದಿಂದ ಬಿಗಿಯಲ್ಪಟ್ಟ ಅಧಮರನ್ನು ಯಮನು ನೋಡುವುದೇ ಇಲ್ಲ. ಚಂಡಾಲರಂತೆ ಕಾಣುವ ಘೋರರಾದ ಯಮದೂತರು

ಲೋಕಪಾಲಕನಾದ ಯಮನ ಶಾಸನದಂತೆ ಅವರಿಗೆ ತೀವ್ರ ಯಾತನೆಗಳನ್ನು ಉಂಟುಮಾಡುತ್ತಾರೆ.
ಛಿಂದಂತಶ್ಚ ತುದಂತಶ್ಚ ಪ್ರಕರ್ಷಂತೋ ಯತಸ್ತತಃ |
ಕ್ರೋಶತಃ ಪಾತಯಂತ್ಯೇತಾನ್ ಮಿಥೋ ಗರ್ತೇಷ್ವವಾಙ್ಮುಖಾನ್ ॥30॥
ಕತ್ತರಿಸುತ್ತಾ, ಚುಚ್ಚುತ್ತಾ, ಅಲ್ಲಿಂದಿಲ್ಲಿಗೆ ಎಳೆದಾಡುತ್ತಾ ಕಿರುಚುತ್ತಿರುವ ಆ ಜೀವರನ್ನು ತಲೆಕೆಳಗಾಗಿ ಹಳ್ಳಗಳಲ್ಲಿ ಕೆಡವುತ್ತಾರೆ.
ಸಂಯಾಮಿನ್ಯಃ ಶಿಲಾಸ್ತೇಷಾಂ ಪತಂತಿ ಶಿರಸಿ ಪ್ರಿಯೇ |
ಅಯೋಮುಖಾಃ ಕಾಕವಲಾ ಭಕ್ಷಯಂತಿ ಸುದಾರುಣಾಃ ॥31॥
ಯಮಲೋಕದ ಶಿಲೆಗಳು ಅವರ ತಲೆಯ ಮೇಲೆ ಬೀಳುತ್ತವೆ. ಪ್ರಿಯೆಯೇ, ಕಬ್ಬಿಣದ ಮುಖವುಳ್ಳ ಅತ್ಯಂತ ದಾರುಣವಾದ ಕಾಗೆಗಳು ಮತ್ತು ವಲಪಕ್ಷಿಗಳು ಅವರನ್ನು ತಿನ್ನುತ್ತವೆ.
ಅಸಿಪತ್ರವನೇ ಘೋರೇ ಚಾರಯಂತಿ ತಥಾ ಪರಾನ್ |
ತೀಕ್ಷ್ಣದಂಷ್ಟ್ರಾಸ್ತಥಾ ಶ್ವಾನಃ ಕಾಂಶ್ಚಿತ್ ತತ್ರ ಹ್ಯದಂತಿ ವೈ ॥32॥
ಇನ್ನು ಕೆಲವರನ್ನು ಅಸಿಪತ್ರವನ (ಖಡ್ಗದಂತಿರುವ ಎಲೆಗಳುಳ್ಳ ಗಿಡಗಳು ಇರುವ ವನ)ದಲ್ಲಿ ತಿರುಗಾಡಿಸುತ್ತಾರೆ. ಇನ್ನು ಕೆಲವರನ್ನು ತೀಕ್ಷ್ಣವಾದ ದಂಷ್ಟ್ರ (ಹಲ್ಲು)ವಿರುವ ನಾಯಿಗಳು ತಿನ್ನುತ್ತವೆ.
ತತ್ರ ವೈತರಣೀ ನಾಮ ನದೀ ಗ್ರಾಹಸಮಾಕುಲಾ |
ದುಷ್ಪ್ರವೇಶಾ ಚ ಘೋರಾ ಚ ಮೂತ್ರಶೋಣಿತವಾಹಿನೀ |
ತಸ್ಯಾಂ ಸಮ್ಮಜ್ಜಯಂತ್ಯೇತೇ ತೃಷಿತಾನ್ ಪಾಯಯಂತಿ ತಾನ್ ॥33॥
ಅಲ್ಲಿ ಮೊಸಳೆಗಳಿಂದ ಕೂಡಿರುವ ವೈತರಣೀ ಎಂಬ ನದಿಯಿದೆ. ಅದು ಮೂತ್ರ- ರಕ್ತಗಳಿಂದ ಕೂಡಿದ ಘೋರವಾದ, ಪ್ರವೇಶಿಸಲು ಅಸಾಧ್ಯವಾದ ನದಿ. ಯಮದೂತರು ಬಾಯಾರಿದ ಇಂತಹ ಜೀವರನ್ನು ಆ ನದಿಯಲ್ಲಿ ಮುಳುಗಿಸಿ ಅದನ್ನೇ ಪಾನ ಮಾಡಿಸುತ್ತಾರೆ.
ಆರೋಪಯಂತಿ ವೈ ಕಾಂಶ್ಚಿತ್ ತತ್ರ ಕಂಟಕಶಾಲ್ಮಲೀಮ್ |
ಯಂತ್ರೇಚಕ್ರೇಷು ತಿಲವತ್ ಪೀಡ್ಯಂತೇ ತತ್ರ ಕೇಚನ ॥34॥
ಕೆಲವರನ್ನು ಮುಳ್ಳುಗಳಿಂದ ಕೂಡಿದ ಶಾಲ್ಮಲೀ ವೃಕ್ಷಕ್ಕೆ ಏರಿಸುತ್ತಾರೆ. ಇನ್ನು ಕೆಲವರನ್ನು ಎಳ್ಳುಗಳನ್ನು ಗಾಣದಲ್ಲಿ ಅರೆದಂತೆ ಅರೆಯುತ್ತಾರೆ.
ಅಂಗಾರೇಷು ಚ ದಹ್ಯಂತೇ ತಥಾ ದುಷ್ಕೃತಕಾರಿಣಃ |
ಕುಂಭೀಪಾಕೇಷು ಪಚ್ಯಂತೇ ಭರ್ಜ್ಯಂತೇ ಸಘೃತೇಷು ವೈ ॥35॥
ದುಷ್ಕರ್ಮಗಳನ್ನು ಮಾಡಿ ಇನ್ನು ಕೆಲವರು ಕೆಂಡಗಳಲ್ಲಿ ಸುಡಲ್ಪಡುತ್ತಾರೆ. ಇನ್ನು ಕೆಲವರು ದೊಡ್ಡ ದೊಡ್ಡ ತುಪ್ಪದ ಹಂಡೆಗಳಲ್ಲಿ ಕರಿದು ಬೇಯಿಸಲ್ಪಡುತ್ತಾರೆ.
ಪಾಟ್ಯಂತೇ ತರುವಚ್ಛಸ್ತ್ರೈಃ ಪೀಡ್ಯಂತೇ ಲೋಚನಾದಿಷು |
ಭಿದ್ಯಂತೇಽಥಾಂಗಶಃ ಶೂಲೈಸ್ತುದ್ಯಂತೇ ಸೂಕ್ಷ್ಮಸೂಚಿಭಿಃ ॥36॥
ಕಟ್ಟಿಗೆಯಂತೆ ಸೀಳಲ್ಪಡುತ್ತಾರೆ. ಕಣ್ಣುಗಳಲ್ಲಿ ಚುಚ್ಚಲ್ಪಡುತ್ತಾರೆ. ಶೂಲಗಳಿಂದ ಅವಯವಗಳನ್ನು ಕತ್ತರಿಸುತ್ತಾರೆ. ತೀಕ್ಷ್ಣವಾದ ಸೂಜಿಗಳಿಂದ ಚುಚ್ಚುತ್ತಾರೆ.
ಏವಂ ತ್ವಯಾ ಕೃತೋ ದೋಷಸ್ತದರ್ಥಂ ದಂಡನಂ ತ್ವಿದಮ್ |
ವಾಚೈವ ಘೋಷಯಂತಿ ಸ್ಮ ದಂಡ್ಯಮಾನಾನ್ ಸಮಂತತಃ ॥37॥
ನೀನು ಇಂತಹ ದೋಷವನ್ನು ಮಾಡಿದ್ದೀಯೆ. ಅದಕ್ಕೆ ಇದು ಶಿಕ್ಷೆ ಎಂದು ಶಿಕ್ಷೆಗೆ ಒಳಪಡುವ ಜೀವರಿಗೆ ಘೋಷಣೆ ಮಾಡುತ್ತಿರುತ್ತಾರೆ.
ಏವಂ ತೇ ಯಾತನಾಂ ಪ್ರಾಪ್ಯ ಶರೀರೈರ್ಯಾತನಾಶಯೈಃ |
ಪ್ರಸಹಂತಶ್ಚ ತದ್ ದುಃಖಂ ಸ್ಮರಂತಃ ಸ್ವಾಪರಾಧಜಮ್ ॥38॥
ಕ್ರೋಶಂತಶ್ಚ ರುದಂತಶ್ಚ ನ ಮುಚ್ಯಂತೇ ಕಥಂಚನ |
ಸ್ಮರಂತಸ್ತತ್ರ ತಪ್ಯಂತೇ ಪಾಪಮಾತ್ಮಕೃತಂ ಫಲಮ್ ॥39॥
ಹೀಗೆ ಯಾತನಾಶರೀರದಲ್ಲಿ ಆ ಜೀವರು ಯಾತನೆಯನ್ನು ಹೊಂದಿ, ಆ ದುಃಖವನ್ನು ತಡೆದುಕೊಂಡು, ತಾವು ಮಾಡಿದ ಅಪರಾಧಗಳನ್ನು ಸ್ಮರಿಸುತ್ತಾ, ಕಿರುಚುತ್ತಾ ಅಳುತ್ತಾ ಅವರು ಬಿಡುಗಡೆಯನ್ನು ಹೊಂದುವುದಿಲ್ಲ. ತಾವು ಮಾಡಿದ ಪಾಪಕರ್ಮಗಳನ್ನು ಸ್ಮರಿಸುತ್ತಾ ತಾಪಪಡುತ್ತಾರೆ.
ಏವಂ ಬಹುವಿಧಾ ದಂಡಾ ಭುಜ್ಯಂತೇ ಪಾಪಕಾರಿಭಿಃ |
ಯಾತನಾಶ್ಚ ತಥಾ ಭುಕ್ತ್ವಾ ಪಚ್ಯಂತೇ ನರಕೇ ಪುನಃ ॥40॥
ಹೀಗೆ ಪಾಪಕರ್ಮವನ್ನು ಮಾಡಿದವರು ಬಹುವಿಧವಾದ ಶಿಕ್ಷೆಯನ್ನು ಅನುಭವಿಸುತ್ತಾರೆ. ಇಂತಹ ಯಾತನೆಗಳನ್ನು ಅನುಭವಿಸಿ ಕೆಲವರು ಪುನಃ ನರಕದಲ್ಲಿಯೇ ಯಾತನೆಗಳನ್ನು ಅನುಭವಿಸುತ್ತಾರೆ.
ಅಪರೇ ಯಾತನಾ ಭುಕ್ತ್ವಾ ಮುಚ್ಯಂತೇ ತತ್ರ ಕಿಲ್ಬಿಷಾತ್ |
ಪಾಪದೋಷಕ್ಷಯಕರಾ ಯಾತನಾ ಸಂಸ್ಕೃತಾ ನೃಣಾಮ್ |
ಬಹುತಪ್ತಂ ಯಥಾ ಲೋಹಂ ನಿರ್ಮಲಂ ತತ್ ತಥಾ ಭವೇತ್ ॥41॥
ಇನ್ನು ಕೆಲವರು ಯಾತನೆಗಳನ್ನು ಅನುಭವಿಸಿ, ಪಾಪಗಳಿಂದ ಮುಕ್ತರಾಗಿ ಬಿಡುಗಡೆಯನ್ನು ಹೊಂದುತ್ತಾರೆ. ಮನುಷ್ಯರಿಗೆ ಯಮದೇವರು ಕೊಡುವ ಯಾತನೆಯು ಅವರ ಪಾಪದೋಷಗಳನ್ನು ಪರಿಹಾರ ಮಾಡುತ್ತದೆ ಎಂದು ಹೇಳಲಾಗುತ್ತದೆ. ಬಹಳವಾಗಿ ಕಾಯಿಸಿದ ಲೋಹವು ಹೇಗೆ ದೋಷವನ್ನು ಕಳೆದುಕೊಳ್ಳುವುದೋ ಹಾಗೆಯೇ ಶಿಕ್ಷೆಗೆ ಒಳಗಾದವರು ಪಾಪಗಳನ್ನು ಕಳೆದುಕೊಳ್ಳುತ್ತಾರೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ನರಕಮಾರ್ಗಾದಿವರ್ಣನಂ ನಾಮ ಚತುರ್ದಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹದಿನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹದಿನೈದನೆಯ ಅಧ್ಯಾಯ
ಉಮಾ-ಮಹೇಶ್ವರಸಂವಾದ. ವಿವಿಧನರಕಗಳ ವರ್ಣನೆ.
ಉಮಾ
ಭಗವಂಸ್ತೇ ಕಥಂ ತತ್ರ ದಂಡ್ಯಂತೇ ನರಕೇಷು ವೈ |
ಕತಿ ತೇ ನಿರಯಾ ಘೋರಾಃ ಕೀದೃಶಾಸ್ತೇ ಮಹೇಶ್ವರ ॥1॥
ಉಮಾ ಭಗವಂತನೇ, ಜೀವರು ನರಕದಲ್ಲಿ ಹೇಗೆ ಶಿಕ್ಷೆಯನ್ನು ಹೊಂದುತ್ತಾರೆ? ಘೋರವಾದ ನರಕಗಳು ಎಷ್ಟಿವೆ? ಮಹೇಶ್ವರನೇ, ಅವು ಯಾವ ರೀತಿಯಲ್ಲಿವೆ?
ಮಹೇಶ್ವರಃ
ಶೃಣು ಭಾಮಿನಿ ತತ್ಸರ್ವಂ ಪಂಚೈತೇ ನರಕಾಹ್ವಯಾಃ |
ಭೂಮೇರಧಸ್ತಾದ್ ವಿಹಿತಾ ಘೋರಾ ದುಷ್ಕೃತಕರ್ಮಣಾಮ್ ॥2॥
ಮಹೇಶ್ವರ ಭಾಮಿನಿಯೇ, ಕೇಳು. ದುಷ್ಕರ್ಮವನ್ನು ಮಾಡಿದವರಿಗೆ ಭೂಮಿಯ ಕೆಳಗಿರುವ ಘೋರವಾದ ನರಕಗಳು ಐದು ಇವೆ.
ಪ್ರಥಮಂ ರೌರವಂ ನಾಮ ಶತಯೋಜನಮಾಯತಮ್ |
ತಾವತ್ಪ್ರಮಾಣಂ ವಿಸ್ತೀರ್ಣಂ ತಾಮಸಂ ಪಾಪಪೀಡಿತಮ್ ॥3॥
ಮೊದಲನೆಯದು ರೌರವ ನರಕ. ಅದು ನೂರು ಯೋಜನ ಉದ್ದ ಮತ್ತು ನೂರು ಯೋಜನ ಅಗಲವಾಗಿದ್ದು, ಕತ್ತಲೆಯಿಂದ ಕೂಡಿ ಬಹಳ ದುಸ್ಸಹವಾಗಿದೆ.
ಭೃಶಂ ದುರ್ಗಂಧಿ ಪರುಷಂ ಕೃಮಿಭಿರ್ದಾರುಣೈರ್ಯುತಮ್ |
ಅತಿಘೋರಮನಿರ್ದೇಶ್ಯಂ ಪ್ರತಿಕೂಲಂ ತತಸ್ತತಃ ॥4॥
ಬಹಳ ದುರ್ಗಂಧ, ಒರಟುತನ ಮತ್ತು ದಾರುಣವಾದ ಕ್ರಿಮಿಗಳಿಂದ ಕೂಡಿದೆ. ಅತಿಘೋರವೂ, ಜೀವರಿಗೆ ಪ್ರತಿಕೂಲವೂ ಆಗಿದೆ. ಅದನ್ನು ಶಬ್ದಗಳಿಂದ ವರ್ಣಿಸುವುದು ಅಸಾಧ್ಯವಾದುದು.
ತೇ ಚಿರಂ ತತ್ರ ತಿಷ್ಠಂತಿ ನ ತತ್ರ ಶಯನಾಸನೇ |
ಕೃಮಿಭಿರ್ಭಕ್ಷ್ಯಮಾಣಾಶ್ಚ ವಿಸ್ರಗಂಧಸಮಾಯುತಾಃ ॥5॥
ಜೀವರು ಅಲ್ಲಿ ಬಹುಕಾಲ ನಿಲ್ಲುತ್ತಾರೆ. ಅಲ್ಲಿ ಕುಳಿತುಕೊಳ್ಳಲು ಅಥವಾ ಮಲಗಲು ಸ್ಥಳವಿಲ್ಲ. ಜೀವರು ಅಮೇಧ್ಯಗಂಧಯುಕ್ತವಾದ ಆ ಸ್ಥಳದಲ್ಲಿ ಕ್ರಿಮಿಗಳಿಂದ ಭಕ್ಷಿಸಲ್ಪಡುತ್ತಾರೆ.
ಏವಂಪ್ರಮಾಣಮುದ್ವಿಗ್ನಾ ಯಾಂತಿ ತಿಷ್ಠಂತಿ ತತ್ರ ತೇ |
ಯಾತನಾಭ್ಯೋ ದಶಗುಣಂ ನರಕೇ ದುಃಖಮಿಷ್ಯತೇ ॥6॥
ಅಷ್ಟು ವಿಸ್ತಾರವಾದ ಪ್ರದೇಶದಲ್ಲಿ ಅವರು ನಿಲ್ಲುತ್ತಾರೆ ಮತ್ತು ಓಡಾಡುತ್ತಾರೆ. ಭೂಲೋಕದ ಯಾತನೆಗಳಿಗಿಂತ ನರಕದ ಯಾತನೆಗಳು ಹತ್ತು ಪಟ್ಟು ಅಧಿಕವಾಗಿರುತ್ತವೆ.
ತತ್ರ ಚಾತ್ಯಂತಿಕಂ ದುಃಖಮಿತಿ ವಿದ್ಧಿ ಶುಭೇಕ್ಷಣೇ |
ಕ್ರೋಶಂತಶ್ಚ ರುದಂತಶ್ಚ ವೇದನಾಸ್ತತ್ರ ಭುಂಜತೇ ॥7॥
ಎಲೌ ಶುಭೇಕ್ಷಣೆಯೇ, ಅಲ್ಲಿ ದುಃಖವು ಪರಮಾವಧಿಯಾಗಿರುತ್ತದೆ ಎಂದು ತಿಳಿ. ಅಲ್ಲಿ ಜೀವರು ಅಳುತ್ತಾ, ಕಿರುಚುತ್ತಾ ವೇದನೆಗಳನ್ನು ಅನುಭವಿಸುತ್ತಾರೆ.
ಭ್ರಮಂತಿ ದುಃಖಮೋಕ್ಷಾರ್ಥಂ ತ್ರಾತಾ ಕಶ್ಚಿನ್ನ ವಿದ್ಯತೇ |
ದುಃಖಸ್ಯಾಂತರಮಾತ್ರಂ ತು ದ್ವಾರಂ ವಾ ನ ಚ ಲಭ್ಯತೇ ॥8॥
ದುಃಖದ ಬಿಡುಗಡೆಗಾಗಿ ಓಡಾಡುತ್ತಾರೆ. ಆದರೆ ಅಲ್ಲಿ ಯಾರೂ ರಕ್ಷಕರಿಲ್ಲ. ದುಃಖದ ಬಿಡುಗಡೆಯಾಗಲೀ ಅಥವಾ ದುಃಖದ ಪರಿಹಾರ ಮಾರ್ಗವಾಗಲೀ ದೊರೆಯುವುದಿಲ್ಲ.
ಮಹಾರೌರವಸಂಜ್ಞಂ ತು ದ್ವಿತೀಯಂ ನರಕಂ ಪ್ರಿಯೇ |
ತಸ್ಮಾದ್ ದ್ವಿಗುಣಿತಂ ವಿದ್ಧಿ ಮಾನೇ ದುಃಖೇ ಚ ರೌರವಾತ್ ॥9॥
ಎಲೌ ಪ್ರಿಯೆಯೇ, ಮಹಾರೌರವ ಎಂಬುದು ಎರಡನೆಯ ನರಕ. ಅದು ವಿಸ್ತೀರ್ಣದಲ್ಲಿ ಮತ್ತು ಜೀವರಿಗೆ ಉಂಟುಮಾಡುವ ದುಃಖದ ವಿಷಯದಲ್ಲಿ ರೌರವಕ್ಕಿಂತ ಎರಡು ಪಟ್ಟು ಹೆಚ್ಚಾಗಿರುತ್ತದೆ.
ತೃತೀಯಂ ನರಕಂ ತತ್ರ ಕಂಟಕಾವನಸಂಜ್ಞಿತಮ್ |
ತತೋ ದ್ವಿಗುಣಿತಂ ತಚ್ಚ ಪೂರ್ವಾಭ್ಯಾಂ ದುಃಖಮಾನಯೋಃ |
ಮಹಾಪಾತಕಸಂಯುಕ್ತಾ ಘೋರಾಸ್ತಸ್ಮಿನ್ ವಿಶಂತಿ ಹಿ ॥10॥
ಕಂಟಕಾವನವೆಂಬುದು ಅಲ್ಲಿ ಮೂರನೆಯ ನರಕ. ಅದು ಹಿಂದಿನ ನರಕಕ್ಕಿಂತ ವಿಸ್ತೀರ್ಣ ಮತ್ತು ದುಃಖದಲ್ಲಿ ಎರಡು ಪಟ್ಟು ಹೆಚ್ಚಾಗಿರುತ್ತದೆ. ಮಹಾಪಾತಕವನ್ನು ಮಾಡಿದ ಘೋರ ಜೀವರು ಅಲ್ಲಿಗೆ ಬರುತ್ತಾರೆ.
ಅಗ್ನಿಕುಂಡಮಿತಿ ಖ್ಯಾತಂ ಚತುರ್ಥಂ ನರಕಂ ಪ್ರಿಯೇ |

ಏತದ್ ದ್ವಿಗುಣಿತಂ ತಸ್ಮಾದ್ ಯಥಾನಿಷ್ಟಸುಖಂ ತಥಾ ॥11॥
ಎಲೌ ಪ್ರಿಯೆಯೇ, ನಾಲ್ಕನೆಯ ನರಕವು ಅಗ್ನಿಕುಂಡವೆಂದು ಪ್ರಸಿದ್ಧವಾದುದು. ಅದೂ ಸಹ ವಿಸ್ತೀರ್ಣ ಮತ್ತು ದುಃಖದಲ್ಲಿ ಹಿಂದಿನದರ ಎರಡರಷ್ಟಿದೆ.
ತತ್ರ ದುಃಖಂ ಹಿ ಸುಮಹದಮಾನುಷಮಿತಿ ಸ್ಮೃತಮ್ ।
ಭುಂಜತೇ ತತ್ರತತ್ರೈವ ದುಃಖಂ ದುಷ್ಕೃತಕಾರಿಣಃ ॥12॥
ಅಲ್ಲಿ ಉಂಟಾಗುವ ದುಃಖವು ಮನುಷ್ಯರನ್ನು ಮೀರಿದುದು ಎಂದು ಹೇಳಲಾಗುತ್ತದೆ. ದುಷ್ಕರ್ಮವನ್ನು ಮಾಡಿದವರು ಅಲ್ಲಲ್ಲಿಯೇ ಇದ್ದು (ಓಡಾಡಲು ಸಾಧ್ಯವಾಗದೆ) ಆ ದುಃಖವನ್ನು ಅನುಭವಿಸುತ್ತಾರೆ.
ಪಂಚಕಷ್ಟಮಿತಿ ಖ್ಯಾತಂ ಪಂಚಮಂ ನರಕಂ ಪ್ರಿಯೇ ।
ತತ್ರ ದುಃಖಮನಿರ್ದೇಶ್ಯಂ ಮಹಾಘೋರಂ ಯಥಾತಥಮ್ ॥13॥
ಪ್ರಿಯೆಯೇ, ಐದನೆಯ ನರಕವು ಪಂಚಕಷ್ಟವೆಂದು ಪ್ರಸಿದ್ಧವಾದುದು. ಅಲ್ಲಿ ಉಂಟಾಗುವ ಮಹಾಘೋರವಾದ ದುಃಖವನ್ನು ಶಬ್ದಗಳಿಂದ ವರ್ಣಿಸಲು ಸಾಧ್ಯವಿಲ್ಲ.
ಪಂಚೇಂದ್ರಿಯೈರಸಹ್ಯತ್ವಾತ್ ಪಂಚಕಷ್ಟಮಿತಿ ಸ್ಮೃತಮ್ ।
ಭುಂಜತೇ ತತ್ರತತ್ರೈವ ದುಃಖಂ ದುಷ್ಕೃತಕಾರಿಣಃ ॥14॥
ಅಲ್ಲಿ ಉಂಟಾಗುವ ದುಃಖಗಳು ಪಂಚೇಂದ್ರಿಯಗಳಿಗೂ ವೇದನೆಯನ್ನು ಉಂಟು ಮಾಡುವುದರಿಂದ ಅದಕ್ಕೆ ಪಂಚಕಷ್ಟವೆಂದು ಹೆಸರು. ದುಷ್ಕರ್ಮವನ್ನು ಮಾಡಿದವರು ಅಲ್ಲಿಯೂ ಸಹ ಒಂದೇ ಸ್ಥಳದಲ್ಲಿದ್ದು ದುಃಖವನ್ನು ಅನುಭವಿಸುತ್ತಾರೆ.
ಅಮಾನುಷಾರ್ಹಂ ತದ್ ದುಃಖಂ ಮಹಾಭೂತೈಸ್ತು ಭುಂಜತೇ ।
ಅತಿಘೋರಂ ಚಿರಂ ಕೃತ್ವಾ ಮಹಾಭೂತಾನಿ ಯಾಂತಿ ತಮ್ ॥15॥
ಅಮಾನುಷವಾದ ಆ ದುಃಖಗಳನ್ನು ಮಹಾಭೂತಗಳು ಅನುಭವಿಸುತ್ತವೆ. ಭೂಮಿಯಲ್ಲಿ ಅವು ಅತಿಘೋರವಾದ ಕರ್ಮಗಳನ್ನು ಬಹುಕಾಲ ಮಾಡಿ ಆ ನರಕಕ್ಕೆ ಹೋಗುತ್ತವೆ.
ಪಂಚಕಷ್ಟೇನ ಹಿ ಸಮಂ ನಾಸ್ತಿ ದುಃಖಂ ತಥಾವಿಧಮ್ ।
ದುಃಖಸ್ಯಾಂತಮಿತಿ ಪ್ರಾಹುಃ ಪಂಚಕಷ್ಟಂ ಸದಾ ಪ್ರಿಯೇ ॥16॥
ಪಂಚಕಷ್ಟ ದುಃಖಕ್ಕೆ ಸಮಾನವಾದ ಇನ್ನೊಂದು ದುಃಖವಿಲ್ಲ. ಪ್ರಿಯೆಯೇ, ಪಂಚಕಷ್ಟದ ದುಃಖವನ್ನು ದುಃಖದ ಪರಾಕಾಷ್ಠೆ ಎಂದು ಹೇಳುತ್ತಾರೆ.
ಏವಂ ತೇ ತೇಷು ತಿಷ್ಠಂತಿ ಪ್ರಾಣಿನೋ ದುಃಖಭೋಗಿನಃ ।
ಅನ್ಯೇ ಚ ನರಕಾಃ ಸಂತಿ ಅವೀಚಿಪ್ರಮುಖಾಃ ಪ್ರಿಯೇ ॥17॥
ಹೀಗೆ ಪ್ರಾಣಿಗಳು ದುಃಖವನ್ನು ಅನುಭವಿಸುತ್ತಾ ಅವುಗಳಲ್ಲಿರುತ್ತಾರೆ. ಪ್ರಿಯೆಯೇ, ಅವೀಚಿ ಮೊದಲಾದ ಬೇರೆ ನರಕಗಳೂ ಇವೆ.
ಕ್ರೋಶಂತಶ್ಚ ರುದಂತಶ್ಚ ವೇದನಾರ್ತಾ ಭೃಶಾತುರಾಃ ।
ಕೇಚಿದ್ ಭ್ರಮಂತಿ ವೇಷ್ಟಂತೇ ಕೇಚಿದ್ ಧಾವಂತಿ ಚಾತುರಾಃ ॥18॥
ವೇದನೆಯಿಂದ ಆರ್ತರಾಗಿ, ಬಹಳ ಸಂಕಟವನ್ನನುಭವಿಸುತ್ತಾ, ಕಿರುಚುತ್ತಾ, ಅಳುತ್ತಾ ಕೆಲವರು ಓಡುತ್ತಾರೆ. ಕೆಲವರು ಮುದುಡಿಕೊಳ್ಳುತ್ತಾರೆ.
ಆಧಾವಂತೋ ನಿವಾರ್ಯಂತೇ ಶೂಲಹಸ್ತೈರ್ಯತಸ್ತತಃ ।
ರುಜಾರ್ದಿತಾಸ್ತೃಷಾಯುಕ್ತಾಃ ಪ್ರಾಣಿನಃ ಪಾಪಕಾರಿಣಃ ॥19॥
ಕ್ರೋಶಂತಶ್ಚ ನದಂತಶ್ಚ ನ ಮುಚ್ಯಂತೇ ಕಥಂಚನ ।
ಕ್ರಿಮಿಭಿರ್ಭಕ್ಷ್ಯಮಾಣಾಶ್ಚ ವೇದನಾರ್ತಾಸ್ತೃಷಾನ್ವಿತಾಃ ॥20॥
ಸಂಸ್ಮರಂತಃ ಸ್ವಕಂ ಪಾಪಂ ಕೃತಮಾತ್ಮಾಪರಾಧಜಮ್ ।
ಶೋಚಂತಸ್ತತ್ರ ತಿಷ್ಠಂತಿ ಯಾವತ್ ಪಾಪಕ್ಷಯಂ ಪ್ರಿಯೇ ।
ಏವಂ ಭುಕತ್ವಾ ತು ನರಕಂ ಮುಚ್ಯಂತೇ ಪಾಪಸಂಕ್ಷಯಾತ್ ॥21॥
ಓಡುತ್ತಿರುವ ಜೀವರನ್ನು ಶೂಲಪಾಣಿಗಳಾದ ಯಮದೂತರು ತಡೆಯುತ್ತಾರೆ. ಪಾಪವನ್ನು ಮಾಡಿದ ಜೀವರು ದುಃಖಪೂರ್ಣರಾಗಿ, ಬಾಯಾರಿಕೆಯಿಂದ ಬಳಲಿ ಅತ್ತು ಅರುಚುತ್ತಿದ್ದರೂ ಅಲ್ಲಿ ಬಿಡುಗಡೆಯನ್ನು ಹೊಂದುವುದಿಲ್ಲ. ಬಾಯಾರಿ ವೇದನೆಯಿಂದ ಕೂಡಿ ಕ್ರಿಮಿಗಳಿಂದ ಭಕ್ಷಿಸುತ್ತಾರೆ. ತಮ್ಮ ಪಾಪದ ಕ್ಷಯವಾಗುವವರೆಗೆ ಅಲ್ಲಿರುತ್ತಾರೆ. ಪಾಪಕ್ಷಯವಾದ ಮೇಲೆ ಅವರು ನರಕದಿಂದ ಬಿಡುಗಡೆಯನ್ನು ಹೊಂದುತ್ತಾರೆ.
ಉಮಾ
ಭಗವನ್ ಕತಿಕಾಲಂ ತೇ ತಿಷ್ಠಂತಿ ನರಕೇಷು ವೈ ।
ಏತದ್ ವೇದಿತುಮಿಚ್ಛಾಮಿ ತನ್ಮೇ ಬ್ರೂಹಿ ಮಹೇಶ್ವರ ॥22॥
ಉಮಾ ಭಗವಂತನೇ, ಅವರು ಎಷ್ಟು ಕಾಲ ಆ ನರಕದಲ್ಲಿರುತ್ತಾರೆ ಎಂದು ತಿಳಿಯಲು ಬಯಸುತ್ತೇನೆ. ಮಹೇಶ್ವರನೇ, ಅದನ್ನು ನನಗೆ ಹೇಳು.
ಮಹೇಶ್ವರಃ
ಶತಂ ಸಹಸ್ರಂ ವರ್ಷಾಣಾಮಾದಿಂ ಕೃತ್ವಾ ಹಿ ಜಂತವಃ ।
ತಿಷ್ಠಂತಿ ನರಕಾವಾಸಾಃ ಪ್ರಳಯಾಂತಮಿತಿ ಸ್ಥಿತಿಃ ॥23॥
ಮಹೇಶ್ವರ ನೂರು ವರ್ಷ, ಸಾವಿರ ವರ್ಷಗಳನ್ನು ಆರಂಭಿಸಿ ಜಂತುಗಳು ನರಕದಲ್ಲಿ ಪ್ರಳಯದವರೆಗೂ ಇರುತ್ತಾರೆಂಬುದು ಪರಿಸ್ಥಿತಿ.

ಉಮಾ
ಭಗವಂಸ್ತೇಷು ಕೇ ಕುತ್ರ ತಿಷ್ಠಂತೀತಿ ವದ ಪ್ರಭೋ ॥24॥
ಉಮಾ ಭಗವಂತನೇ, ಪ್ರಭುವೇ, ಆ ನರಕಗಳಲ್ಲಿ ಯಾವ ಜೀವರು ಎಲ್ಲಿ ಇರುತ್ತಾರೆಂದು ಹೇಳು.
ಮಹೇಶ್ವರಃ
ರೌರವೇ ಶತಸಾಹಸ್ರಂ ವರ್ಷಾಣಾಮಿತಿ ಸಂಸ್ಥಿತಿಃ |
ಮಾನುಷಘ್ನಾಃ ಕೃತಘ್ನಾಶ್ಚ ತಥೈವಾನೃತವಾದಿನಃ ॥25॥
ಮಹೇಶ್ವರ ಮನುಷ್ಯರನ್ನು ಕೊಂದವರು, ಕೃತಘ್ನರಾದವರು, ಸುಳ್ಳು ಮಾತನಾಡುವವರು ರೌರವದಲ್ಲಿ ಹತ್ತುಸಾವಿರ ವರ್ಷಗಳು ಇರುತ್ತಾರೆಂಬುದು ಪರಿಸ್ಥಿತಿ.
ಜಾರಚೋರಾಶ್ಚ ನಾರೀ ಚ ಸರ್ವತಶ್ಚಾಪಚಾರಿಣೀ |
ಉತ್ಕೋಚಕಾಶ್ಚ ಪಿಶುನಾ ವರ್ಣಸಂಭೇದಕಾರಕಾಃ |
ತಾದೃಶಾಃ ಪರಿಪಚ್ಯಂತೇ ರೌರವೇ ನರಕೇ ನರಾಃ ॥26॥
ಜಾರರು, ಚೋರರು, ಎಲ್ಲರಿಗೂ ಅಪಚಾರವನ್ನು ಮಾಡುವ ಸ್ತ್ರೀಯರು, ನಿಂದಿಸುವವರು, ಚಾಡಿಯನ್ನು ಹೇಳುವವರು, ವರ್ಣಸಂಕರವನ್ನು ಮಾಡುವವರು ಆದ ಜೀವರು ರೌರವ ನರಕದಲ್ಲಿ ದುಃಖವನ್ನು ಅನುಭವಿಸುತ್ತಾರೆ.
ದೇಶಘ್ನಾಶ್ಚೈವ ರಾಜಘ್ನಾಃ ಪಿತೃಮಾತೃವಿಘಾತಿನಃ ॥27॥
ರಾಜಾ ಚಾನ್ಯಾಯತಃ ಶಾಸ್ತಾ ಸಾಕ್ಷಿತ್ವೇಽನೃತವಾದಿನಃ |
ಬಹುಘ್ನಾಶ್ಚ ಕುಲಘ್ನಾಶ್ಚ ಭ್ರೂಣಘ್ನಾ ಗುರುಘಾತಿನಃ ॥28॥
ವಿಶ್ವಸ್ತಘಾತಕಾಶ್ಚೈವಮಾತ್ಮಘ್ನಾಃ ಕೋಪಕಾರಣಾತ್ |
ಪತಿಘ್ನ್ಯಃ ಪ್ರಮದಾ ಮೋಹಾದ್ ಯಜ್ಞವಿಘ್ನಕರಾಶ್ಚ ಯೇ |
ದ್ವಿತೀಯೇ ದ್ವಿಗುಣಂ ಕಾಲಂ ಪಚ್ಯಂತೇ ತಾದೃಶಾ ನರಾಃ ॥29॥
ದೇಶದ್ರೋಹಿಗಳು, ರಾಜನನ್ನು ಕೊಲ್ಲುವವರು, ತಂದೆ-ತಾಯಿಯರನ್ನು ಕೊಲ್ಲುವವರು, ಅನ್ಯಾಯದಿಂದ ರಾಜ್ಯವನ್ನು ಆಳುವ ರಾಜ, ಸುಳ್ಳು ಸಾಕ್ಷಿಯನ್ನು ಹೇಳುವವರು, ಬಹಳ ಮನುಷ್ಯರನ್ನು ಮತ್ತು ಪ್ರಾಣಿಗಳನ್ನು ಕೊಲ್ಲುವವರು, ಕುಲನಾಶಕರು, ಭ್ರೂಣಹತ್ಯೆಯನ್ನು ಮಾಡಿದವರು, ಗುರುಹತ್ಯೆಯನ್ನು ಮಾಡಿದವರು, ವಿಶ್ವಾಸಘಾತಕರು, ಕೋಪದಿಂದ ಆತ್ಮಹತ್ಯೆಯನ್ನು ಮಾಡಿಕೊಂಡವರು, ಪತಿಗಳನ್ನು ಕೊಂದ ಸ್ತ್ರೀಯರು, ಮೋಹದಿಂದ ಯಜ್ಞಕ್ಕೆ ವಿಘ್ನವನ್ನುಂಟು ಮಾಡುವವರು - ಈ ಎಲ್ಲ ಮನುಷ್ಯರು ಎರಡನೆಯ ನರಕದಲ್ಲಿ ಮೊದಲನೆಯ ನರಕದ ಎರಡರಷ್ಟು ಕಾಲ ದುಃಖವನ್ನು ಅನುಭವಿಸುತ್ತಾರೆ.
ಮಹಾಪಾತಕಯುಕ್ತಾಸ್ತು ತೃತೀಯೇ ದುಃಖಮಾಪ್ನುಯುಃ |
ಏತಾವನ್ಮಾನುಷಸಹಂ ಪರಮನ್ಯೇಷು ಲಕ್ಷ್ಯತೇ ॥30॥
ಮಹಾಪಾತಕವನ್ನು ಮಾಡಿದವರು ಮೂರನೆಯ ನರಕದಲ್ಲಿ ದುಃಖವನ್ನು ಹೊಂದುತ್ತಾರೆ. ಇಷ್ಟು ದುಃಖಗಳು ಮನುಷ್ಯನಿಂದ ಸಹಿಸಲು ಶಕ್ಯವಾದವುಗಳು. ಬೇರೆ ನರಕಗಳಲ್ಲಿ ಇದಕ್ಕಿಂತ ಅಧಿಕವಾದ ದುಃಖವಿರುತ್ತದೆ.
ಯಕ್ಷಾ ವಿದ್ಯಾಧರಾಶ್ಚೈವ ಕಾದ್ರವೇಯಾಶ್ಚ ಕಿನ್ನರಾಃ |
ಗಂಧರ್ವಾ ಭೂತಸಂಘಾಶ್ಚ ತೇಷಾಂ ಪಾಪಯುತಾ ಭೃಶಮ್ |
ಚತುರ್ಥೇ ಪರಿಪಚ್ಯಂತೇ ಯಾವದ್ಯುಗವಿಪರ್ಯಯಃ ॥31॥
ಸಹಂತಸ್ತಾದೃಶಂ ಘೋರಂ ಪಂಚಕಷ್ಟೇ ಚ ಯಾದೃಶಮ್ |
ತಾದೃಗ್ವಿಧಸ್ಯ ದುಃಖಸ್ಯ ಅಯೋಗ್ಯಾನ್ ವಿದ್ಧಿ ಮಾನುಷಾನ್ ॥32॥
ಪಾಪವನ್ನು ಮಾಡಿದ ಯಕ್ಷರು, ವಿದ್ಯಾಧರರು, ಸರ್ಪಗಳು, ಕಿನ್ನರರು, ಗಂಧರ್ವರು, ಭೂತಸಂಘಗಳು ನಾಲ್ಕನೆಯ ನರಕದಲ್ಲಿ ಯುಗಾಂತ್ಯದವರೆಗೂ ದುಃಖವನ್ನು ಅನುಭವಿಸುತ್ತಾರೆ. ಪಂಚಕಷ್ಟದಲ್ಲಿರುವ ದುಃಖಕ್ಕೆ ಸಮಾನವಾದ ಘೋರವಾದ ದುಃಖವನ್ನು ಅವರು ಅನುಭವಿಸುತ್ತಾರೆ. ಮನುಷ್ಯರು ಅಂತಹ ದುಃಖವನ್ನು ಅನುಭವಿಸಲು ಸಾಮರ್ಥ್ಯವನ್ನು ಹೊಂದಿಲ್ಲವೆಂದು ತಿಳಿ.
ಏವಂ ತೇ ನರಕಾನ್ ಭುಕತ್ವ ತತ್ರ ಕ್ಷಪಿತಕಲ್ಮಷಾಃ |
ನರಕೇಭ್ಯೋ ವಿಮುಕ್ತಾಶ್ಚ ಜಾಯಂತೇ ಕೃಮಿಜಾತಿಷು ॥33॥
ಉದ್ಭೇದಜೇಷು ವಾ ಕೇಚಿತ್ ತತ್ರಾಪಿ ಕ್ಷೀಣಕಲ್ಮಷಾಃ |
ಪುನರೇವ ಪ್ರಜಾಯಂತೇ ಮೃಗಪಕ್ಷಿಷು ಶೋಭನೇ |
ಮೃಗಪಕ್ಷಿಷು ತದ್ಭುಕತ್ವ ಲಭಂತೇ ಮಾನುಷಂ ಪದಮ್ ॥34॥
ಅವರು ನರಕಗಳನ್ನು ಅನುಭವಿಸಿ ತಮ್ಮ ದೋಷಗಳನ್ನು ಕಳೆದುಕೊಂಡು, ನರಕದಿಂದ ಮುಕ್ತರಾಗಿ ಕ್ರಿಮಿಯೋನಿಗಳಲ್ಲಿ ಜನಿಸುತ್ತಾರೆ. ಕೆಲವರು ಉದ್ಭಿಜಜಾತಿಗಳಲ್ಲಿ ಜನಿಸಿ ಅಲ್ಲಿಯೂ ತಮ್ಮ ಪಾಪವನ್ನು ಕಳೆದುಕೊಂಡು ಮೃಗ- ಪಕ್ಷಿಗಳ ಜಾತಿಯಲ್ಲಿ ಜನಿಸುತ್ತಾರೆ. ಎಲೌ ಶೋಭನೆಯೇ, ಮೃಗ-ಪಕ್ಷಿಗಳ ಜಾತಿಯಲ್ಲಿ ತಮ್ಮ ಉಳಿದ ಕರ್ಮದ ಭಾಗವನ್ನು ಭೋಗಿಸಿ ಅನಂತರ ಮನುಷ್ಯರಾಗುತ್ತಾರೆ.
ಉಮಾ
ನಾನಾಜಾತಿಷು ಕೇನೈವ ಜಾಯಂತೇ ಪಾಪಕಾರಿಣಃ॥35॥
ಉಮಾ ಪಾಪವನ್ನು ಮಾಡಿದವರು ಯಾವ ಯಾವ ಪಾಪದಿಂದ, ಯಾವ ಯೋನಿಯಲ್ಲಿ ಜನಿಸುತ್ತಾರೆ?
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಯತ್ತ್ವಮಿಚ್ಛಸಿ ಶೋಭನೇ |

ಸರ್ವಥಾಽಽತ್ಮಾ ಕರ್ಮವಶಾನ್ನಾನಾಜಾತಿಷು ದೃಶ್ಯತೇ ॥36॥
ಎಲೌ ಶೋಭನನೆಯೇ, ನೀನು ಬಯಸುವುದನ್ನು ನಿನಗೆ ಹೇಳುವೆನು. ಜೀವನು ಸರ್ವಥಾ ಕರ್ಮವಶನಾಗಿ ನಾನಾ ಯೋನಿಗಳಲ್ಲಿ ಜನಿಸುತ್ತಾನೆ.
ಯಶ್ಚ ಮಾಂಸಪ್ರಿಯೋ ನಿತ್ಯಂ ಕಾಕಗೃಧ್ರಾನ್ ಸ ಸಂಸ್ಪೃಶೇತ್ |
ಸುರಾಪಃ ಸತತಂ ಮರ್ತ್ಯಃ ಸೂಕರತ್ವಂ ವ್ರಜೇದ್ ಧ್ರುವಮ್ ॥37॥
ಸತತ ಮಾಂಸಪ್ರಿಯನು ಕಾಗೆ-ಹದ್ದುಗಳ ಯೋನಿಯಲ್ಲಿ ಜನಿಸುತ್ತಾನೆ. ಸತತ ಮದ್ಯಪಾನವನ್ನು ಮಾಡುವ ಮನುಷ್ಯನು ಹಂದಿಯ ಜನ್ಮವನ್ನು ನಿಶ್ಚಯವಾಗಿ ಪಡೆಯುತ್ತಾನೆ.
ಅಭಕ್ಷ್ಯಭಕ್ಷಣೋ ಮರ್ತ್ಯಃ ಕಾಕಜಾತಿಷು ಸಂಸ್ಪೃಶೇತ್ |
ಪರೋದ್ವೇಗಕರೋ ನಿತ್ಯಂ ವ್ಯಾಲಜಾತಿಷು ಜಾಯತೇ |
ಆತ್ಮಘ್ನೋ ಯೋ ನರಃ ಕೋಪಾತ್ ಪ್ರೇತಜಾತಿಸು ತಿಷ್ಠತಿ ॥38॥
ಅಭಕ್ಷ್ಯಭಕ್ಷನಾದ ಮನುಷ್ಯನು ಕಾಗೆಯ ಯೋನಿಯಲ್ಲಿ ಜನಿಸುತ್ತಾನೆ. ಇನ್ನೊಬ್ಬರಿಗೆ ಯಾವಾಗಲೂ ಭಯವನ್ನುಂಟು ಮಾಡುವವನು ಸರ್ಪಯೋನಿಯಲ್ಲಿ ಜನಿಸುತ್ತಾನೆ. ಕೋಪದಿಂದ ಆತ್ಮಹತ್ಯೆಯನ್ನು ಮಾಡಿಕೊಂಡ ಮನುಷ್ಯನು ಪ್ರೇತಯೋನಿಯಲ್ಲಿ (ಪಿಶಾಚ ಯೋನಿಯಲ್ಲಿ) ಹುಟ್ಟುತ್ತಾನೆ.
ಪೈಶುನ್ಯಾತ್ ಪರಿವಾದಾಚ್ಚ ಕುಕ್ಕುಟತ್ವಂ ಸಮಶ್ನುಯಾತ್ |
ನಾಸ್ತಿಕಶ್ಚೈವ ಯೋ ಮೂರ್ಖೋ ಮೃಗಜಾತಿಂ ಸ ಗಚ್ಛತಿ ॥39॥
ಪರನಿಂದೆಯಿಂದ ಮತ್ತು ಚಾಡಿಯಿಂದ ಕೋಳಿಯ ಜನ್ಮವು ಬರುತ್ತದೆ. ಮೂರ್ಖರು ಮತ್ತು ನಾಸ್ತಿಕರು ಮೃಗಗಳ ಜಾತಿಯನ್ನು ಹೊಂದುತ್ತಾರೆ.
ಹಿಂಸಾವಿಹಾರಸ್ತು ನರಃ ಕೃಮಿಕೀಟೇಷು ಜಾಯತೇ |
ಅತ್ರ ಮಾನಯುತೋ ನಿತ್ಯಂ ಪ್ರೇತ್ಯ ಗರ್ದಭತಾಂ ವ್ರಜೇತ್ ॥41॥
ಹಿಂಸೆಯನ್ನೇ ವಿಹಾರವಾಗಿ ಹೊಂದಿದ ಮನುಷ್ಯರು ಕ್ರಿಮಿ-ಕೀಟಗಳ ಯೋನಿಯಲ್ಲಿ ಜನಿಸುತ್ತಾರೆ. ಭೂಲೋಕದಲ್ಲಿ ನಿತ್ಯವೂ ಬಹಳ ಅಹಂಕಾರದಿಂದ ಕೂಡಿದವನು ಮರಣವನ್ನು ಹೊಂದಿ ಕತ್ತೆಯ ಜನ್ಮವನ್ನು ಪಡೆಯುತ್ತಾನೆ.
ಅಸತ್ಯಂ ಪರುಷಂ ವಾಕ್ಯಂ ಯೋ ವದೇದ್ ಮತ್ಸ್ಯತಾಂ ವ್ರಜೇತ್ |
ಅಗಮ್ಯಾಗಮನಾಚ್ಚೈವ ಪರದಾರಾಭಿಮರ್ಶನಾತ್ |
ಮೂಷಿಕತ್ವಂ ವ್ರಜೇನ್ಮರ್ತ್ಯೋ ನಾಸ್ತಿ ತತ್ರ ವಿಚಾರಣಾ ॥42॥
ಸುಳ್ಳು ಮಾತನಾಡುವವನು, ಒರಟು ಮಾತನ್ನಾಡುವವನು ಮೀನಿನ ಜನ್ಮವನ್ನು ಪಡೆಯುತ್ತಾನೆ. ಅಗಮ್ಯಾಗಮನವನ್ನು ಮಾಡುವುದರಿಂದ ಮತ್ತು ಪರಪತ್ನಿಯರ ಸ್ಪರ್ಶ ಮಾಡುವುದರಿಂದ ಮನುಷ್ಯನು ಇಲಿಯ ಜನ್ಮವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಕೃತಘ್ನೋ ಮಿತ್ರಘಾತೀ ಚ ಸೃಗಾಲವೃಕಜಾತಿಷು |
ಗುರುಘ್ನಃ ಮಿತ್ರಘಾತೀ ಚ ಸ್ಥಾವರೇಷ್ವವತಿಷ್ಠತಿ ॥43॥
ಕೃತಘ್ನನಾದವನು, ಮಿತ್ರನನ್ನು ಕೊಂದವನು ನರಿ ಮತ್ತು ತೋಳಗಳ ಜಾತಿಯಲ್ಲಿ ಹುಟ್ಟುತ್ತಾನೆ. ಗುರುಹತ್ಯೆ ಮತ್ತು ಮಿತ್ರಹತ್ಯೆಯನ್ನು ಮಾಡಿದವನು ದುಷ್ಟ ಜಾತಿಗಳಲ್ಲಿ ಜನಿಸುತ್ತಾನೆ.
ವಾಚಿಕೈಃ ಪಕ್ಷಿಮೃಗತಾಂ ಮಾನಸೈರನ್ಯಜಾತಿತಾಮ್ |
ಶರೀರಜೈಃ ಕರ್ಮದೋಷೈರ್ಯಾತಿ ಸ್ಥಾವರತಾಂ ನರಃ ॥44॥
ಮನುಷ್ಯನು ವಾಚಿಕ ದೋಷಗಳಿಂದ ಪಕ್ಷಿ-ಮೃಗ ಜಾತಿಗಳನ್ನೂ, ಮಾನಸ ದೋಷಗಳಿಂದ ಬೇರೆ ಜಾತಿಗಳನ್ನೂ, ಶರೀರದಿಂದ ಮಾಡಿದ ಕರ್ಮದೋಷದಿಂದ ವೃಕ್ಷಾದಿ ಸ್ಥಾವರ ಜಾತಿಗಳನ್ನೂ ಹೊಂದುತ್ತಾನೆ.
ಏವಮಾದ್ಯಶುಭಂ ಕೃತ್ವಾ ನರಾ ನಿರಯಮಾಶ್ರಿತಾಃ |
ತಾಂಸ್ತಾನ್ಭಾವಾನ್ಪ್ರಪದ್ಯಂತೇ ಸ್ವಕೃತಸ್ಯೈವ ಕಾರಣಾತ್ ॥45॥
ಹೀಗೆ ಅಶುಭಕರ್ಮವನ್ನು ಮಾಡಿದ ಮನುಷ್ಯನು ತಾವು ಮಾಡಿದ ಕರ್ಮದ ನಿಮಿತ್ತದಿಂದ ನರಕಕ್ಕೆ ಹೋಗಿ, ಅಲ್ಲಿ ದುಃಖಗಳನ್ನು ಅನುಭವಿಸಿ, ಅನಂತರ ಆಯಾ ಯೋನಿಗಳಲ್ಲಿ ಜನಿಸುತ್ತಾರೆ.
ಏವಂ ಜಾತಿಷು ನಿರ್ದಗ್ಧಾಃ ಪ್ರಾಣಿನಃ ಪಾಪಕಾರಿಣಃ |
ಕಥಂಚಿತ್ ಪುನರುತ್ಪದ್ಯ ಲಭಂತೇ ಮಾನುಷಂ ಪದಮ್ ॥46॥
ಹೀಗೆ ಆಯಾ ಜಾತಿಗಳಲ್ಲಿ ಜನಿಸಿದ ಪಾಪಕಾರಿಗಳಾದ ಪ್ರಾಣಿಗಳು ಅಲ್ಲಿ ತಮ್ಮ ಅಪರಾಧವನ್ನು ಕಳೆದುಕೊಂಡು, ಬಹಳ ಕಷ್ಟದಿಂದ ಪುನಃ ಮನುಷ್ಯಜನ್ಮವನ್ನು ಪಡೆಯುತ್ತಾರೆ.
ಬಹುಕೃತ್ವೋಽತಿ(ಗ್ನಿ)ಸಂತಪ್ತಂ ಲೋಹಂ ಶುಚಿತಮಂ ತಥಾ |
ಬಹುದುಃಖಾಭಿಸಂತಪ್ತಸ್ತಥಾಽಽತ್ಮಾ ಶುದ್ಧ್ಯತೇ ಮಲಾತ್ |
ತಸ್ಮಾತ್ ಸುದುರ್ಲಭಂ ಚೇತಿ ವಿದ್ಧಿ ಜನ್ಮ ಸುಮಾನುಷಮ್ ॥47॥
ಅಗ್ನಿಯಲ್ಲಿ ಬಹಳವಾಗಿ ಕಾಯಿಸಿದ ಲೋಹವು ಶುದ್ಧವಾಗುವಂತೆ ಬಹಳ ದುಃಖವನ್ನು ಅನುಭವಿಸಿದ ಜೀವನು ದೋಷದಿಂದ ಬಿಡುಗಡೆಯನ್ನು ಹೊಂದಿ ಶುದ್ಧಿಯನ್ನು ಪಡೆಯುತ್ತಾನೆ. ಆದ್ದರಿಂದ ಮನುಷ್ಯ ಜನ್ಮವು ಅತ್ಯಂತ ದುರ್ಲಭವೆಂದು ತಿಳಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಪಂಚನರಕವರ್ಣನಂ ನಾನಾಯೋನಿಪ್ರವೇಶಕಥನಂ ನಾಮ

ಪಂಚದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರಹದಿನೈದನೆಯ ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹದಿನಾರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಅಶುಭಕರ್ಮಗಳ ವಿಸ್ತೃತಕಥನ.
ಉಮಾ
ಭಗವನ್ ದೇವದೇವೇಶ ಶೂಲಪಾಣೇ ವೃಷಧ್ವಜ |
ಶ್ರುತಂ ಮೇ ಪರಮಂ ಗುಹ್ಯಂ ಪ್ರಸಾದಾತ್ ತೇ ವರಪ್ರದ ॥1॥
ಶ್ರೋತುಂ ಭೂಯೋಽಹಮಿಚ್ಛಾಮಿ ಪ್ರಜಾನಾಂ ಹಿತಕಾರಣಾತ್ |
ಶುಭಾಶುಭಮಿತಿ ಪ್ರೋಕ್ತಂ ಕರ್ಮ ಸ್ವಂಸ್ವಂ ಸಮಾಸತಃ ॥2॥
ಉಮಾ ಭಗವಂತನೇ, ದೇವದೇವೇಶನೇ, ಶೂಲಪಾಣಿಯೇ, ವೃಷಧ್ವಜನೇ, ವರಪ್ರದನೇ, ನಿನ್ನ ಅನುಗ್ರಹದಿಂದ ಪರಮ ರಹಸ್ಯವಾದ ವಿಷಯಗಳನ್ನು ಕೇಳಿದೆನು. ಸಂಕ್ಷೇಪವಾಗಿ ತಮ್ಮ ತಮ್ಮ ಶುಭಾಶುಭಗಳನ್ನು ಹೇಳಿದೆಯಷ್ಟೆ? ಪ್ರಜೆಗಳ ಹಿತಕ್ಕಾಗಿ ಅದನ್ನು ಇನ್ನೂ ಕೇಳಲು ಬಯಸುತ್ತೇನೆ.
ತನ್ಮೇ ವಿಸ್ತರತೋ ಬ್ರೂಹಿ ಶುಭಾಶುಭವಿಧಿಂ ಪ್ರತಿ |
ಅಶುಭಂ ಕೀದೃಶಂ ಕರ್ಮ ಪ್ರಾಣಿನೋಽಧೋ ನಿಪಾತಯೇತ್ ॥3॥
ಶುಭಂ ಕರ್ಮ ಕಥಂ ದೇವ ಪ್ರಜಾನಾಮೂರ್ಧ್ವತೋ ನಯೇತ್ |
ಏತನ್ಮೇ ವದ ದೇವೇಶ ಶ್ರೋತುಕಾಮಾಽಸ್ಮಿ ಕೀರ್ತಯ ॥4॥
ನನಗೆ ಶುಭಾಶುಭ ಕರ್ಮಗಳ ವಿಧಾನವನ್ನು ವಿಸ್ತಾರವಾಗಿ ಹೇಳು. ಪ್ರಾಣಿಗಳನ್ನು ಅಧೋಲೋಕಕ್ಕೆ ಎಳೆದುಕೊಂಡು ಹೋಗುವ ಅಶುಭ ಕರ್ಮವು ಹೇಗಿರುತ್ತದೆ? ಎಲೈ ದೇವನೇ, ಶುಭಕರ್ಮವು ಪ್ರಜೆಗಳನ್ನು ಹೇಗೆ ಊರ್ಧ್ವಲೋಕಗಳಿಗೆ ಕರೆದುಕೊಂಡು ಹೋಗುತ್ತದೆ? ದೇವೇಶನೆ, ಇದನ್ನು ಕೇಳಲು ಬಯಸುತ್ತೇನೆ, ಹೇಳುವವನಾಗು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ತತ್ಸರ್ವಂ ಶೃಣು ಶೋಭನೇ |
ಸುಕೃತಂ ದುಷ್ಕೃತಂ ಚೇತಿ ದ್ವಿವಿಧಂ ಕರ್ಮವಿಸ್ತರಮ್ ॥5॥
ಮಹೇಶ್ವರ ಶೋಭನೆಯೇ, ಎಲ್ಲವನ್ನೂ ಹೇಳುವೆನು, ಕೇಳು. ಸುಕೃತ ಮತ್ತು ದುಷ್ಕೃತ ಎಂಬ ಎರಡು ವಿಧವಾದ ಕರ್ಮಗಳೂ ವಿಸ್ತಾರವಾಗಿವೆ.
ತಯೋರ್ಯದ್ ದುಷ್ಕೃತಂ ಕರ್ಮ ತಚ್ಚ ಸಂಜಾಯತೇ ತ್ರಿಧಾ |
ಮನಸಾ ಕರ್ಮಣಾ ವಾಚಾ ಬುದ್ಧಿಮೋಹಸಮುದ್ಭವಮ್ ॥6॥
ಅವುಗಳಲ್ಲಿ ದುಷ್ಕೃತವೆಂಬ ಕರ್ಮವು ಮನುಷ್ಯರ ಬುದ್ಧಿಮೋಹದಿಂದ ಮನಸ್ಸಿನಿಂದ, ಮಾತಿನಿಂದ ಮತ್ತು ಕರ್ಮದಿಂದ ಎಂದು ಮೂರು ವಿಧವಾಗಿ ಉಂಟಾಗುತ್ತದೆ.
ಮನಃಪೂರ್ವಂ ತು ವಾಕ್ಕರ್ಮ ವರ್ತತೇ ವಾಙ್ಮಯಂ ತತಃ |
ಜಾಯತೇ ವೈ ಕ್ರಿಯಾಯೋಗಮೇವಂ ಚೇಷ್ಟಾಕ್ರಮಂ ಪ್ರಿಯೇ ॥7॥
ಎಲೌ ಪ್ರಿಯೆಯೇ, ಮೊದಲು ಮಾನಸಕರ್ಮ, ಅನಂತರ ವಾಙ್ಮಯವಾದ ವಾಕ್ ಕರ್ಮ, ಅನಂತರ ದೇಹಚೇಷ್ಟಾರೂಪವಾದ ಶಾರೀರಿಕ ಕರ್ಮವು ಉಂಟಾಗುತ್ತದೆ.
ಅಭಿದ್ರೋಹೋಽಭ್ಯಸೂಯಾ ಚ ಪರಾರ್ಥೇ ಚಕ್ಷುಷಾ ಸ್ಪೃಹಾ |
ಶುಭಾಶುಭಾನಾಂ ಮರ್ತ್ಯಾನಾಂ ವರ್ತನಂ ವಿಪರೀತತಃ ॥8॥
ಧರ್ಮಕಾರ್ಯೇ ಯದಾಽಶ್ರದ್ಧಾ ಪಾಪಕರ್ಮಣಿ ಹರ್ಷಣಮ್ |
ಏವಮಾದ್ಯಶುಭಂ ಕರ್ಮ ಮನಸಾ ಪಾಪಮುಚ್ಯತೇ ॥9॥
ಇನ್ನೊಬ್ಬರಿಗೆ ಕೇಡನ್ನು ಚಿಂತಿಸುವುದು, ಅಸೂಯೆ, ಇನ್ನೊಬ್ಬರ ವಸ್ತುವನ್ನು ನೋಡಿ ಆಶಿಸುವುದು, ಶುಭಾಶುಭ ಮನುಷ್ಯರನ್ನು ವಿರುದ್ಧವಾಗಿ ತಿಳಿಯುವುದು. ಧರ್ಮಕಾರ್ಯಗಳಲ್ಲಿ ಅಶ್ರದ್ಧೆ, ಪಾಪಕರ್ಮಗಳಲ್ಲಿ ಸಂತೋಷ - ಇವೇ ಮೊದಲಾದವುಗಳು ಮನಸ್ಸಿನ ಅಶುಭವಾದ ಪಾಪಗಳು ಎಂದು ಹೇಳಲ್ಪಡುತ್ತವೆ.
ಅನೃತಂ ಯಚ್ಚ ಪರುಷಮಬದ್ಧವಚನಂ ಕಟು |
ಅಸತ್ಯಂ ಪರಿವಾದಶ್ಚ ಪಾಪಮೇತತ್ತು ವಾಙ್ಮಯಮ್ ॥10॥
ಸುಳ್ಳು ಮಾತನ್ನಾಡುವುದು, ಅಸಂಗತವಾದ ಮಾತನ್ನಾಡುವುದು, ಒರಟಾದ, ತೀಕ್ಷ್ಣವಾದ ಮಾತನ್ನಾಡುವುದು, ಮಿಥ್ಯಾಪವಾದಗಳನ್ನು ಆರೋಪಿಸುವುದು - ಇವು ವಾಙ್ಮಯವಾದ ಪಾಪಗಳು.
ಅಗಮ್ಯಾಗಮನಂ ಚೈವ ಪರದಾರನಿಷೇವಣಮ್ |
ವಧಬಂಧಪರಿಕ್ಲೇಶೈಃ ಪರಪ್ರಾಣೋಪತಾಪನಮ್ ॥11॥
ಚೌರ್ಯಂ ಪರೇಷಾಂ ದ್ರವ್ಯಾಣಾಂ ಹರಣಂ ನಾಶನಂ ತಥಾ |
ಅಭಕ್ಷ್ಯಭಕ್ಷಣಂ ಚೈವ ವ್ಯಸನೇಷ್ವಭಿಷಂಗತಾ ॥12॥
ದರ್ಪಾತ್ ಸ್ತಂಭಾಭಿಮಾನಾಚ್ಚ ಪರೇಷಾಮುಪತಾಪನಮ್ |
ಅಕಾರ್ಯಾಣಾಂ ಚ ಕರಣಮಶೌಚಂ ಪಾನಮೇವ ಚ ॥13॥

ದೌಃಶೀಲ್ಯೇ ಕ್ಷುದ್ರಸಂಪರ್ಕಃ ಸಾಹಾಯ್ಯಂ ಪಾಪಕರ್ಮಣಿ |
ಅಧರ್ಮ್ಯಮಯಶಸ್ಯಂ ಚ ಕಾರ್ಯಂ ತಸ್ಯ ನಿಷೇವಣಮ್ |
ಏವಮಾದ್ಯಶುಭಂ ಚಾನ್ಯಚ್ಚಾರೀರಂ ಪಾಪಮುಚ್ಯತೇ ॥14॥
ಅಗಮ್ಯಾಗಮನ, ಇನ್ನೊಬ್ಬರ ಪತ್ನಿಯ ಜೊತೆಯಲ್ಲಿ ಚೆಲ್ಲಾಟ, ವಧ-ಬಂಧ ಕ್ಲೇಶಗಳನ್ನುಂಟು ಮಾಡಿ ಇನ್ನೊಬ್ಬರಿಗೆ ಪ್ರಾಣಹಿಂಸೆಯನ್ನು ಕೊಡುವುದು, ಕಳ್ಳತನ, ಇನ್ನೊಬ್ಬರ ದ್ರವ್ಯದ ಅಪಹರಣ, ಇನ್ನೊಬ್ಬರ ದ್ರವ್ಯದ ನಾಶ, ಅಭಕ್ಷ್ಯವಾದುದರ ಭಕ್ಷಣ, ಚಟಗಳಿಗೆ ಬಲಿಯಾಗುವುದು, ದರ್ಪದಿಂದ ಸ್ತಬ್ಧತೆಯಿಂದ ಮತ್ತು ಅಹಂಕಾರದಿಂದ ಇನ್ನೊಬ್ಬರನ್ನು ಹಿಂಸಿಸುವುದು, ಮಾಡಬಾರದ ಕಾರ್ಯವನ್ನು ಮಾಡುವುದು, ಶುಚಿಯಾಗಿಲ್ಲದಿರುವುದು, ಮದ್ಯಪಾನವನ್ನು ಮಾಡುವುದು, ದುಷ್ಟ ನಡತೆಯುಳ್ಳವರ ಜೊತೆಯಲ್ಲಿ ಕೆಟ್ಟ ಸಂಪರ್ಕವನ್ನು ಹೊಂದಿರುವುದು, ಪಾಪ ಕರ್ಮಗಳಿಗೆ ಸಹಾಯವನ್ನು ಮಾಡುವುದು, ಧರ್ಮನಾಶಕವಾದ ಮತ್ತು ಕೀರ್ತಿನಾಶಕವಾದ ಕಾರ್ಯಗಳನ್ನು ಮಾಡುವುದು - ಇವೇ ಮೊದಲಾದವುಗಳು ಅಶುಭವಾದ ಶರೀರ ಪಾಪಗಳೆನಿಸಿಕೊಳ್ಳುತ್ತವೆ.
ಮಾನಸಾದ್ ವಾಙ್ಮಯಂ ಪಾಪಂ ವಿಶಿಷ್ಟಮಿತಿ ವಕ್ಷ್ಯತೇ |
ವಾಙ್ಮಯಾದಪಿ ವೈ ಪಾಪಾಚ್ಚಾರೀರಂ ಗಣ್ಯತೇ ಬಹು ॥15॥
ಮನಸ್ಸಿನ ಪಾಪಕ್ಕಿಂತಲೂ ವಾಙ್ಮಯವಾದ ಪಾಪವು ಅಧಿಕವೆಂದು ಹೇಳಲ್ಪಡುತ್ತದೆ. ವಾಙ್ಮಯವಾದ ಪಾಪಕ್ಕಿಂತಲೂ ದೈಹಿಕವಾದ ಪಾಪವು ದೊಡ್ಡದೆಂದು ಪರಿಗಣಿಸಲ್ಪಡುತ್ತದೆ.
ಏವಂ ಪಾಪಯುತಂ ಕರ್ಮ ಪಾತಯೇತ್ ತ್ರಿವಿಧಂ ನರಮ್ |
ಪರೋಪತಾಪಜನನಮತ್ಯಂತಂ ಪಾಪಕಂ ಸ್ಮೃತಮ್ ॥16॥
ಈ ರೀತಿಯಲ್ಲಿ ಪಾಪಸಂಬಂಧಿಯಾದ ಮೂರು ವಿಧವಾದ ಕರ್ಮವು ಮನುಷ್ಯನನ್ನು ಕೆಡಹುತ್ತದೆ. ಇನ್ನೊಬ್ಬರಿಗೆ ಹಿಂಸೆಯನ್ನು ಕೊಟ್ಟ ಪಾಪವು ಅತ್ಯಂತ ಅಧಿಕವಾದುದೆಂದು ಹೇಳಲ್ಪಡುತ್ತದೆ.
ತ್ರಿವಿಧಂ ತತ್ಕೃತಂ ಪಾಪಂ ಕರ್ತಾರಂ ನರಕಂ ನಯೇತ್ |
ಪಾತಕಂ ತ್ವಪಿ ಯತ್ಕರ್ಮ ಕರಣಾದ್ ಬುದ್ಧಿಪೂರ್ವಕಮ್ ॥17॥
ಬುದ್ಧಿಪೂರ್ವಕವಾಗಿ ಮಾಡಿದ ಈ ಮೂರು ಪಾತಕಗಳು ಕರ್ತೃವನ್ನು ನರಕಕ್ಕೆ ಕರೆದುಕೊಂಡು ಹೋಗುತ್ತವೆ.
ಸಾಪದೇಶಮವಶ್ಯಂ ತು ಕರ್ತವ್ಯಮಿತಿ ಯತ್ಕೃತಮ್ |
ಕಥಂಚಿತ್ ತತ್ಕೃತಮಪಿ ಕರ್ತಾ ತೇನ ನ ಲಿಪ್ಯತೇ ॥18॥
ಅವಶ್ಯಮಪದೇಶೇನ ಪ್ರತಿಹನ್ಯೇತ ಕಾರಣಮ್ ॥19॥
ಶಾಸ್ತ್ರಕ್ಕೆ ಅನುಸಾರವಾಗಿ ಇಂತಹ ಜಾತಿಯವನು ಇಂತಹ ಹಿಂಸೆಯನ್ನು ಮಾಡಲೇಬೇಕೆಂಬ ವಿಧಿಯಿಂದ ಮಾಡಿದ ಹಿಂಸೆಯು ಪಾಪಲೇಪಕ್ಕೆ ಒಳಗಾಗುವುದಿಲ್ಲ. ಶ್ರುತಿ-ಸ್ಮೃತಿಗಳ ಆಜ್ಞೆಯಿಂದ ಪಾಪವು ವಿನಾಶವನ್ನು ಹೊಂದುತ್ತದೆ (ಲಕ್ಷ್ಮಾಲಂಕಾರ).
ಉಮಾ
ಭಗವನ್ ಪಾಪಕಂ ಕರ್ಮ ಯಥಾ ಕೃತ್ವಾ ನ ಲಿಪ್ಯತೇ ॥20॥
ಉಮಾ ಭಗವಂತನೇ, ಪಾಪಕರ್ಮವನ್ನು ಮಾಡಿದವನು ಪಾಪಲೇಪವನ್ನು ಹೊಂದದಿರುವ ಬಗೆ ಹೇಗೆ?
ಮಹೇಶ್ವರಃ
ಯೋ ನರೋಽನಪರಾಧೀ ಚ ಸ್ವಾತ್ಮಪ್ರಾಣಸ್ಯ ರಕ್ಷಣಾತ್ |
ಶತ್ರುಮುದ್ಯತಶಸ್ತ್ರಂ ವಾ ಪೂರ್ವಂ ತೇನ ಹತೋಽಪಿ ವಾ |
ಪ್ರತಿಗತ್ಯ ನರೋ ಹಿಂಸ್ಯಾನ್ನ ಸ ಪಾಪೇನ ಲಿಪ್ಯತೇ ॥21॥
ಮಹೇಶ್ವರ ಯಾವ ನಿರಪರಾಧಿಯಾದ ಮನುಷ್ಯನು ತನ್ನ ಪ್ರಾಣರಕ್ಷಣೆಯನ್ನು ಮಾಡಿಕೊಳ್ಳಲು ಶಸ್ತ್ರವನ್ನು ಹಿಡಿದ ಶತ್ರುವನ್ನು ಅಥವಾ ಹಿಂದೆ ಯಾವನಿಂದ ಆಕ್ರಮಣಕ್ಕೆ ಒಳಗಾಗಿದ್ದನೋ ಅವನನ್ನು ಸಮೀಪಿಸಿ ಹಿಂಸಿಸಿದರೆ ಅವನಿಗೆ ಪಾಪಲೇಪವು ಆಗುವುದಿಲ್ಲ.
ಚೋರಾಟವಿಕಸಂತ್ರಸ್ತಸ್ತತ್ಪ್ರತೀಕಾರಚೇಷ್ಟಯಾ |
ತಾನ್ ಪ್ರತಿಘ್ನನ್ ನರೋ ಹಿಂಸ್ಯಾನ್ನ ಸ ಪಾಪೇನ ಲಿಪ್ಯತೇ ॥22॥
ಕಳ್ಳರು ಮತ್ತು ಅಡವಿಯ ಕಳ್ಳರಿಂದ ಹೆದರಿ ಅದಕ್ಕೆ ಪ್ರತೀಕಾರವನ್ನು ಮಾಡಲು ಮನುಷ್ಯನು ಅವರು ಹೊಡೆದುದಕ್ಕೆ ಪ್ರತಿಯಾಗಿ ಹೊಡೆದರೆ ಪಾಪಲೇಪವನ್ನು ಹೊಂದುವುದಿಲ್ಲ.
ಗ್ರಾಮಾರ್ಥಂ ಭರ್ತೃಪಿಂಡಾರ್ಥಂ ದೀನಾನುಗ್ರಹಕಾರಣಾತ್ |
ವಧಬಂಧಪರಿಕ್ಲೇಶಾನ್ ಕುರ್ವನ್ ಪಾಪಾತ್ ಪ್ರಮುಚ್ಯತೇ ॥23॥
ಗ್ರಾಮದ ಸಲುವಾಗಿ ಅಥವಾ ತನ್ನನ್ನು ಪೋಷಿಸಿದ ಸ್ವಾಮಿಗೆ ಅನುಗುಣವಾಗಿ ಅಥವಾ ದೀನರಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ವಧ-ಬಂಧ ಪರಿಕ್ಲೇಶಗಳನ್ನು ಉಂಟುಮಾಡುವ ಮನುಷ್ಯನು ಪಾಪದಿಂದ ನಿರ್ಮುಕ್ತನಾಗುತ್ತಾನೆ.
ದುರ್ಭಿಕ್ಷೇ ಚಾತ್ಮವೃತ್ತ್ಯರ್ಥಮೇಕಾಯತನಗತಸ್ತಥಾ |
ಅಕಾರ್ಯಂ ವಾಽಪ್ಯಭಕ್ಷ್ಯಂ ವಾ ಕೃತ್ವಾ ಪಾಪೈರ್ನ ಲಿಪ್ಯತೇ ॥24॥
ದುರ್ಭಿಕ್ಷ ಪ್ರದೇಶದಲ್ಲಿ ಇದ್ದು ತಾನು ಬದುಕುವುದಕ್ಕಾಗಿ ಅಕಾರ್ಯವನ್ನು ಮಾಡಿದರೂ ಅಭಕ್ಷ್ಯವನ್ನು ಸೇವಿಸಿದರೂ ಪಾಪಲೇಪ ಉಂಟಾಗುವುದಿಲ್ಲ (ಲಕ್ಷ್ಮಾಲಂಕಾರ).
ವ್ಯಾಧಿತೋ ರೋಗಮೋಕ್ಷಾರ್ಥಮಭಕ್ಷ್ಯೇಣ ನ ಲಿಪ್ಯತೇ |
ಅನೃತಂ ಧರ್ಮಯುಕ್ತಂ ಚ ದಾಕ್ಷಿಣ್ಯಾತ್ ಸ್ತ್ರೀಷು ಭಾಷಿತಮ್ ॥25॥
ಆತ್ಮಪ್ರಾಣಭಯಾದುಕ್ತಂ ಮೋಕ್ಷಾರ್ಥಂ ಚಾಪ್ಯಧಾರ್ಮಿಕಾತ್ |

ವಿವಾಹಕರಣೇ ಚೈವ ಲೌಕಿಕೇನಾನೃತಂ ಬ್ರುವನ್ |
ಸಂಸ್ತಂಭನಾರ್ಥಂ ತ್ರಸ್ತಾನಾಮನೃತೇನ ನ ಲಿಪ್ಯತೇ ॥26॥
ವ್ಯಾಧಿಗ್ರಸ್ತನಾದವನು ವ್ಯಾಧಿ ಪರಿಹಾರಕ್ಕಾಗಿ ಅಭಕ್ಷ್ಯವನ್ನು ಸೇವಿಸಿದರೆ ದೋಷದ ಲೇಪವನ್ನು ಹೊಂದುವುದಿಲ್ಲ. ಧರ್ಮಕ್ಕಾಗಿ ಅನೃತವನ್ನು ಮಾತನಾಡಿದರೆ, ಸ್ತ್ರೀಯರ ಮೇಲಿನ ಅನುಕಂಪದಿಂದ ಅನೃತವನ್ನು ಮಾತನಾಡಿದರೆ, ತನಗೆ ಪ್ರಾಣಭಯ ಉಂಟಾದಾಗ ಅನೃತವನ್ನು ಮಾತನಾಡಿದರೆ, ದುಷ್ಟರಿಂದ ಬಿಡಿಸಿಕೊಳ್ಳುವುದಕ್ಕಾಗಿ (ಇನ್ನೊಬ್ಬರನ್ನು ಬಿಡಿಸುವುದಕ್ಕಾಗಿ) ಅನೃತವನ್ನು ಮಾತನಾಡಿದರೆ, ವಿವಾಹವನ್ನು ಸಂಘಟಿಸಲು ಲೋಕವಿಷಯದಲ್ಲಿ ಅನೃತವನ್ನು ಮಾತನಾಡಿದರೆ, ಹೆದರಿದವರನ್ನು ಸಮಾಧಾನ ಪಡಿಸಲು ಅನೃತವನ್ನು ಮಾತನಾಡಿದರೆ ದೋಷವುಂಟಾಗುವುದಿಲ್ಲ.
ವಿಧಿರೇಷ ಗೃಹಸ್ಥಾನಾಂ ಪ್ರಾಯೇಣೈವೋಪದಿಶ್ಯತೇ |
ಅವಾಚ್ಯಂ ವಾऽಪ್ಯಕಾರ್ಯಂ ವಾ ದೇಶಕಾಲವಶೇನ ತು ॥27॥
ಇದು ಆಯಾ ದೇಶ-ಕಾಲಗಳಿಗೆ ಅನುಗುಣವಾಗಿ ಹೆಚ್ಚಾಗಿ ಗೃಹಸ್ಥರಿಗೆ ಹೇಳಿದ ನಿಂದನೀಯವಲ್ಲದ ಅಕಾರ್ಯಗಳ ವಿಧಾನ.
ಬುದ್ಧಿಪೂರ್ವಂ ನರಃ ಕುರ್ವಂಸ್ತತ್ಪ್ರಯೋಜನಮಾತ್ರಯಾ |
ಕಿಂಚಿದ್ವಾ ಲಿಪ್ಯತೇ ಪಾಪೈರಥವಾ ನ ಚ ಲಿಪ್ಯತೇ ॥28॥
ಏವಂ ದೇವಿ ವಿಜಾನೀಹಿ ನಾಸ್ತಿ ತತ್ರ ವಿಚಾರಣಾ ॥29॥
ಎಲೌ ದೇವಿಯೇ, ಬುದ್ಧಿಪೂರ್ವಕವಾಗಿ ಮನುಷ್ಯನು ಇದನ್ನು ಮಾಡಿ ಅದರಲ್ಲಿ ತನ್ನ ಪ್ರಯೋಜನವು ಇದ್ದರೆ ಸ್ವಲ್ಪ ಪಾಪಲೇಪವನ್ನು ಹೊಂದುತ್ತಾನೆ. ಅಥವಾ ಹೊಂದುವುದಿಲ್ಲ ಎಂದು (ಕೆಲವರ ಅಭಿಪ್ರಾಯ). ದೇವಿಯೇ, ಇದನ್ನು ಹೀಗೆಯೇ ತಿಳಿ. ಇದರಲ್ಲಿ ವಿಚಾರ ಮಾಡಬೇಕಾದ ಅವಶ್ಯಕತೆ ಇಲ್ಲ.
ಉಮಾ
ಭಗವನ್ ಪಾನದೋಷಾಂಶ್ಚ ಪ್ರೇಕ್ಷಯಾಪೇಯಕಾರಣಾನ್ |
ಏತದಿಚ್ಛಾಮ್ಯಹಂ ಶ್ರೋತುಂ ತನ್ಮೇ ವದ ಮಹೇಶ್ವರ ॥30॥
ಉಮಾ ಪೂಜ್ಯನೇ, ಅಪೇಯವಾದುದನ್ನು ಪಾನ ಮಾಡುವುದರಿಂದ ಉಂಟಾಗುವ ದೋಷಗಳನ್ನು ಪ್ರದರ್ಶಿಸು. ಮಹೇಶ್ವರನೇ, ಅದನ್ನು ನಾನು ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳು.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಪಾನೋತ್ಪತ್ತಿಂ ಶುಚಿಸ್ಮಿತೇ ॥31॥
ಮಹೇಶ್ವರ ಶುಚಿಸ್ಮಿತೆಯೇ, ಸಂತೋಷ. ನಿನಗೆ ಪಾನದ ಉತ್ಪತ್ತಿಯನ್ನು ಮೊದಲು ಹೇಳುತ್ತೇನೆ.
ಪುರಾ ಸರ್ವೇऽಭವನ್ಮರ್ತ್ಯಾ ಬುದ್ಧಿಮಂತೋ ನಯಾನುಗಾಃ |
ಶುಚಯಃ ಸುಭಗಾಚಾರಾಃ ಸರ್ವೇ ಸುಮನಸಃ ಪ್ರಿಯೇ ॥32॥
ಪ್ರಿಯೆಯೇ, ಪ್ರಾಚೀನ ಕಾಲದಲ್ಲಿ ಎಲ್ಲ ಮನುಷ್ಯರೂ ಬುದ್ಧಿವಂತರೂ, ನೀತಿವಂತರೂ, ಶುಚಿಗಳೂ, ಒಳ್ಳೆಯ ಆಚಾರವುಳ್ಳವರೂ, ಒಳ್ಳೆಯ ಮನಸ್ಸುಳ್ಳವರೂ ಆಗಿದ್ದರು.
ಏವಂಭೂತೇ ತದಾ ಲೋಕೇ ಪ್ರೇಷ್ಯತ್ವಂ ನ ಪರಸ್ಪರಮ್ |
ಪ್ರೇಷ್ಯಾಭಾವಾನ್ಮನುಷ್ಯಾಣಾಂ ಕರ್ಮಾರಂಭೋ ನನಾಶ ಹ ॥33॥
ಲೋಕವು ಹೀಗೆ ನಡೆಯುತ್ತಿರಲು ಒಬ್ಬರಿಗೊಬ್ಬರು ಸೇವಕರಾಗಲಿಲ್ಲ. ಸೇವಕರೇ ಇಲ್ಲದೆ ಮನುಷ್ಯರ ಕಾರ್ಯಗಳು ನಷ್ಟವಾದವು.
ಉಭಯೋರ್ಲೋಕಯೋರ್ನಾಶಂ ದೃಷ್ಟ್ವಾ ಕರ್ಮಕ್ಷಯಾತ್ ಪ್ರಭುಃ |
ಯಜ್ಞಕರ್ಮ ಕಥಂ ಲೋಕೇ ವರ್ತೇತೇತಿ ಪಿತಾಮಹಃ ॥34॥
ಕರ್ಮವೇ ಇಲ್ಲದುದರಿಂದ ಎರಡು ಲೋಕಗಳಲ್ಲಿ ನಾಶವನ್ನು ನೋಡಿದ ಪ್ರಭುಗಳಾದ, ಪಿತಾಮಹರಾದ ಬ್ರಹ್ಮದೇವರು ಲೋಕದಲ್ಲಿ ಯಜ್ಞಕರ್ಮವು ಹೇಗೆ ನಡೆದೀತು ಎಂದು ಚಿಂತಿಸಿದರು.
ಆಜ್ಞಾಪಯತ್ ಸುರಾನ್ ದೇವಿ ಮೋಹಯಸ್ವೇತಿ ಮಾನುಷಾನ್ |
ತಮಸಃ ಸಾರಮುದ್ಧೃತ್ಯ ಪಾನಂ ಬುದ್ಧಿಪ್ರಣಾಶನಮ್ |
ನ್ಯಪಾತಯನ್ ಮನುಷ್ಯೇಷು ಪಾಪದೋಷಾವಹಂ ಪ್ರಿಯೇ ॥35॥
ದೇವಿಯೆ, ಆಗ ದೇವತೆಗಳನ್ನು ಕುರಿತು, ಮನುಷ್ಯರನ್ನು ಮೋಹಗೊಳಿಸಿ ಎಂದು ಆಜ್ಞಾಪಿಸಿದರು. ಪ್ರಿಯೆಯೇ, ತಮಸ್ಸಿನ ಸಾರವನ್ನು ತೆಗೆದು ಅದರಿಂದ ಬುದ್ಧಿಯನ್ನು ಕೆಡಿಸುವ ಪಾನೀಯವನ್ನು ಮಾಡಿ ದೇವತೆಗಳು ಪಾಪದೋಷಗಳನ್ನು ತಂದುಕೊಡುವ ಆ ಪಾನೀಯವನ್ನು ಮನುಷ್ಯಲೋಕದಲ್ಲಿ ಹಾಕಿದರು.
ತದಾಪ್ರಭೃತಿ ತತ್ ಪೀತ್ವಾ ಮುಮುಹುರ್ಮಾನವಾ ಭುವಿ |
ಕಾರ್ಯಾಕಾರ್ಯಮಜಾನಂತೋ ವಾಚ್ಯಾವಾಚ್ಯಂ ಗುಣಾಗುಣಮ್ ॥
ಅನೇಕ ಮನುಷ್ಯರು ಭೂಮಿಯಲ್ಲಿ ಅದನ್ನು ಕುಡಿದು ಕಾರ್ಯಾಕಾರ್ಯ- ಗಳನ್ನಾಗಲೀ, ವಾಚ್ಯಾವಾಚ್ಯಗಳನ್ನಾಗಲೀ, ಗುಣ-ದೋಷಗಳನ್ನಾಗಲೀ ತಿಳಿಯದೆ ಮೋಹಕ್ಕೆ ಒಳಗಾದರು.
ಕೇಚಿದ್ ಹಸಂತಿ ತತ್ ಪೀತ್ವಾ ಪ್ರವದಂತಿ ತಥಾ ಪರೇ |
ನೃತ್ಯಂತಿ ಮುದಿತಾಃ ಕೇಚಿದ್ ಗಾಯಂತಿ ಚ ಶುಭಾಶುಭಾನ್ ॥37॥
ಕಲಹಂ ಕುರ್ವತೇऽಭೀಕ್ಷ್ಣಂ ಪ್ರಹರಂತಿ ಪರಸ್ಪರಮ್ |
ಕ್ವಚಿದ್ ಧಾವಂತಿ ಸಹಸಾ ಪ್ರಸ್ಖಲಂತಿ ಪತಂತಿ ಚ ॥38॥
ಅಯುಕ್ತಂ ಬಹು ಭಾಷಂತೇ ಯತ್ರ ಕ್ವಚನ ಶೋಭನೇ |

ನಗ್ನಾ ವಿಕ್ಷಿಪ್ಯ ಗಾತ್ರಾಣಿ ನಷ್ಟಸಂಜ್ಞಾ ಮೃತಾ ಇವ ॥39॥
ಕುಡಿದವರಲ್ಲಿ ಕೆಲವರು ನಗುತ್ತಾರೆ. ಇನ್ನು ಕೆಲವರು ಬಹಳವಾಗಿ ಮಾತನಾಡುತ್ತಾರೆ. ಕೆಲವರು ಸಂತೋಷದಿಂದ ನರ್ತನವನ್ನು ಮಾಡುತ್ತಾರೆ. ಕೆಲವರು ಒಳ್ಳೆಯ ಮತ್ತು ಕೆಟ್ಟ ಹಾಡುಗಳನ್ನು ಹಾಡುತ್ತಾರೆ. ಕೆಲವರು ಜಗಳವಾಡುತ್ತಾರೆ. ಕೆಲವರು ಪರಸ್ಪರವಾಗಿ ಹೊಡೆದಾಡುತ್ತಾರೆ. ಕೆಲವರು ಓಡುತ್ತಾರೆ, ಎಡವಿ ಬೀಳುತ್ತಾರೆ. ಎಲೌ ಶೋಭನೆಯೇ, ಕೆಲವರು ಅಸಂಗತವಾದ ಬಹಳ ಮಾತನಾಡುತ್ತಾರೆ. ನಗ್ನರಾಗಿ ತಮ್ಮ ಶರೀರವನ್ನು ತೋರಿಸುತ್ತಾ ಮೃತರಂತೆ ಜ್ಞಾನಶೂನ್ಯರಾಗಿರುತ್ತಾರೆ.
ಏವಂ ಬಹುವಿಧಾನ್ ಪಾಪಾನ್ ಕುರ್ವಂತಿ ಹೃತಚೇತಸಃ।
ಯೇ ಪಿಬಂತಿ ಮಹಾಮೋಹಂ ಪಾನಂ ಪಾಪಯುತಾ ನರಾಃ ॥40॥
ಹೀಗೆ ಯಾರು ಪಾನ ಮಾಡುತ್ತಾರೆಯೋ ಅವರು ಮಹಾಮೋಹವನ್ನು ಉಂಟುಮಾಡುವ ಪಾಪಯುಕ್ತರಾಗಿ, ಜ್ಞಾನಶೂನ್ಯರಾಗಿ ಬಹುವಿಧ ಪಾಪಗಳನ್ನು ಮಾಡುತ್ತಾರೆ.
ಧೃತಿಂ ಲಜ್ಜಾಂ ಚ ಬುದ್ಧಿಂ ಚ ಪಾನಂ ಪೀತಂ ಪ್ರಣಾಶಯೇತ್।
ತಸ್ಮಾನ್ನರಾಃ ಸಂಭವಂತಿ ನಿರ್ಲಜ್ಜಾ ನಿರಪತ್ರಪಾಃ ॥41॥
ಪಾನವು ಪಾನ ಮಾಡಿದವರ ಧೈರ್ಯವನ್ನೂ, ನಾಚಿಕೆಯ ಪ್ರಜ್ಞೆಯನ್ನೂ, ಬುದ್ಧಿಯನ್ನೂ ಕೆಡಿಸುತ್ತದೆ. ಅದರಿಂದ ಮನುಷ್ಯರು ನಿರ್ಲಜ್ಜರಾಗುತ್ತಾರೆ.
ಬುದ್ಧಿಸತ್ತ್ವೈರ್ಃ ಪರಿಕ್ಷೀಣಾಸ್ತೇಜೋಹೀನಾ ಮಲಾನ್ವಿತಾಃ।
ಪೀತ್ವಾಪೀತ್ವಾ ತೃಷಾಯುಕ್ತಾಃ ಪಾನಪಾಃ ಸಂಭವಂತಿ ಚ ॥42॥
ಬುದ್ಧಿ ಮತ್ತು ಬಲಗಳನ್ನು ಕಳೆದುಕೊಂಡು, ತೇಜೋಹೀನರಾಗಿ, ಕಶ್ಮಲದಿಂದ ಕೂಡಿ, ಪಾನವನ್ನು ಮಾಡುವವರು ಮತ್ತೆ ಮತ್ತೆ ಕುಡಿದರೂ ಇನ್ನೂ ಕುಡಿಯುವ ಆಸೆಯನ್ನು ಹೊಂದುತ್ತಾರೆ.
ಪಾನಕಾಮಾಃ ಪಾನಕಥಾಃ ಪಾನಕಾಲಾಭಿಕಾಂಕ್ಷಿಣಃ।
ಪಾನಾರ್ಥಂ ಕರ್ಮವಶ್ಯಾಸ್ತೇ ಸಂಭವಂತಿ ನರಾಧಮಾಃ ॥43॥
ಪಾನವನ್ನು ಮಾಡುವ ನರಾಧಮರು ಯಾವಾಗಲೂ ಪಾನದ ಆಸೆಯನ್ನೇ ಹೊಂದಿ ಪಾನದ ವಿಷಯವನ್ನೇ ಮಾತನಾಡುತ್ತಾ ಪಾನದ ಕಾಲವನ್ನು ನಿರೀಕ್ಷಿಸುತ್ತಿರುತ್ತಾರೆ. ಪಾನಕ್ಕಾಗಿಯೇ ಎಲ್ಲ ಕರ್ಮಗಳನ್ನು ಮಾಡುತ್ತಾರೆ.
ಪಾನಕಾಮಾಸ್ತೃಷಾಯೋಗಾದ್ ಬುದ್ಧಿಸತ್ತ್ವಪರಿಕ್ಷಯಾತ್।
ಪಾನಪಾನಾಂ ಪ್ರೇಷ್ಯಕರಾಃ ಪಾನಪಾಸ್ತ್ವಭವನ್ ಭೃಶಮ್ ॥44॥
ಅನಂತರ ಅಂತಹ ಪಾನ ಮಾಡುವವರು ಪಾನಕಾಮರಾಗಿ, ಪುನಃ ಪಾನವನ್ನು ಮಾಡುವ ಆಸೆಯನ್ನು ಹೊಂದಿ, ಬುದ್ಧಿ-ಬಲಗಳನ್ನು ಕಳೆದುಕೊಂಡು, ಪಾನ ಮಾಡಿಸುವವರಿಗೇ ಸೇವಕರಾದರು.
ತದಾಪ್ರಭೃತಿ ವೈ ಲೋಕೇ ನೀಚೈಃ ಪಾನವಶೈರ್ನರೈಃ।
ಕಾರಯಂತಿ ಚ ಕರ್ಮಾಣಿ ಬುದ್ಧಿಮಂತಸ್ತ್ವಪಾನಪಾಃ ॥45॥
ಆಗಿನಿಂದ ಪ್ರಾರಂಭಿಸಿ ಪಾನ ಮಾಡದಿರುವ ಬುದ್ಧಿವಂತರಾದ ಜನರು ಪಾನ ಮಾಡುವ ನೀಚರ ಕೈಯಲ್ಲಿ ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳುತ್ತಾರೆ.
ಕಾಕೃತ್ವಮಥ ದಾಸತ್ವಂ ಪ್ರೇಷ್ಯತಾಮೇತ್ಯ ಪಾನಪಾಃ।
ಸರ್ವಕರ್ಮಕರಾಶ್ಚಾಸನ್ ಪಶುವದ್ ರಜ್ಜುಬಂಧಿತಾಃ ॥46॥
ಪಾನ ಮಾಡುವವರು ಯಾವ ನೀಚಕರ್ಮಗಳನ್ನು ಬೇಕಾದರೂ ಮಾಡುತ್ತಾ, ಸೇವಕರಾಗಿ ಹಗ್ಗದಿಂದ ಕಟ್ಟಲ್ಪಟ್ಟ ಪಶುಗಳಂತೆ ಎಲ್ಲ ಕಾರ್ಯಗಳನ್ನೂ ಮಾಡಲು ಪ್ರಾರಂಭಿಸಿದರು.
ಪಾನಪಸ್ತು ಮದಾಂಧತ್ವಾತ್ ತದಾ ಬುದ್ಧಿಪ್ರಣಾಶನಾತ್।
ಕಾರ್ಯಾಕಾರ್ಯಸ್ಯ ಚಾಜ್ಞಾನಾದ್ ಯಥೇಷ್ಟಕರಣಾತ್ ಸ್ವಯಮ್।
ವಿದುಷಾಮವಿಧೇಯತ್ವಾತ್ ಪಾಪಮೇವಾಭಿಪದ್ಯತೇ ॥47॥
ಪಾನ ಮಾಡುವವರಾದರೂ ಮದಾಂಧರಾಗಿ ಬುದ್ಧಿಯನ್ನು ಕಳೆದುಕೊಂಡು ಕಾರ್ಯಾಕಾರ್ಯ ವಿವೇಕವಿಲ್ಲದೆ, ಮನಸ್ಸಿಗೆ ಬಂದಂತೆ ವರ್ತಿಸುತ್ತಾ, ವಿವೇಕಿಗಳಿಗೆ ಅವಿಧೇಯರಾಗಿ ಪುನಃ ಪಾಪವನ್ನು ಮಾಡುತ್ತಾರೆ.
ಪರಿಭೂತೋ ಭವೇಲ್ಲೋಕೇ ಮದ್ಯಪೋ ಮಿತ್ರಭೇದಕಃ।
ಸರ್ವಕಾಲಮಶುದ್ಧಶ್ಚ ಸರ್ವಭಕ್ಷಸ್ತಥಾಭವತ್ ॥48॥
ಪಾನವನ್ನು ಮಾಡಿದವನು ಲೋಕದಲ್ಲಿ ಅವಮಾನಕ್ಕೊಳಗಾಗುತ್ತಾನೆ. ಮಿತ್ರಭೇದವನ್ನು ಮಾಡುತ್ತಾನೆ. ಸರ್ವಕಾಲದಲ್ಲಿಯೂ ಅಶುದ್ಧನಾಗಿರುತ್ತಾನೆ ಮತ್ತು ಸರ್ವಭಕ್ಷಕನಾಗಿರುತ್ತಾನೆ.
ವಿಶಿಷ್ಟೈರ್ಜ್ಞಾತಿಭಿರ್ದ್ವೇಷ್ಯಃ ಸತತಂ ಕಲಿಭಾವನಃ।
ಕಟುಕಂ ಪರುಷಂ ಘೋರಂ ವಾಕ್ಯಂ ವದತಿ ಸರ್ವಶಃ ॥49॥
ತನ್ನ ಬಂಧುಗಳ ದ್ವೇಷಕ್ಕೆ ಪಾತ್ರನಾಗುತ್ತಾನೆ. ಯಾವಾಗಲೂ ಕಲಹವನ್ನು ಉಂಟುಮಾಡುತ್ತಿರುತ್ತಾನೆ. ತೀಕ್ಷ್ಣವಾದ, ಘೋರವಾದ, ಒರಟಾದ ಮಾತನ್ನು ಆಡುತ್ತಾನೆ.
ಗುರೂನತಿವದೇನ್ಮತ್ತಃ ಪರದಾರಾನ್ ಪ್ರಧರ್ಷಯೇತ್।
ಸಂವಿದಂ ಕುರುತೇ ಶೌಂಡೈರ್ನ ಶೃಣೋತಿ ಹಿತಂ ಕ್ವಚಿತ್ ॥50॥
ಮತ್ತನಾಗಿ ಗುರುಗಳನ್ನೂ ನಿರಾಕರಿಸುತ್ತಾನೆ. ಪರಸ್ತ್ರೀಯರನ್ನು ಅವಮಾನಗೊಳಿಸುತ್ತಾನೆ. ಬಹಳ ದೊಡ್ಡವರ ಜೊತೆಯಲ್ಲಿ ಮಾತನಾಡುತ್ತಾನೆ. ಹಿತವಚನಗಳನ್ನು ಕೇಳುವುದಿಲ್ಲ.

ಏವಂ ಬಹುವಿಧಾ ದೋಷಾಃ ಪಾನಪೇ ಸಂತಿ ಶೋಭನೇ |
ಕೇವಲಂ ನರಕಂ ಯಾಂತಿ ನಾಸ್ತಿ ತತ್ರ ವಿಚಾರಣಾ |
ತಸ್ಮಾತ್ ತದ್ ವರ್ಜಿತಂ ಸದ್ಭಿಃ ಪಾನಮಾತ್ಮಹಿತೈಷಿಭಿಃ ||51||
ಎಲೌ ಶೋಭನೆಯೇ, ಪಾನ ಮಾಡುವವನಲ್ಲಿ ಇಂತಹ ಬಹುವಿಧವಾದ ದೋಷಗಳಿರುತ್ತವೆ. ಅವರೆಲ್ಲರೂ ನರಕಕ್ಕೇ ಹೋಗುತ್ತಾರೆ. ಇದರಲ್ಲಿ ಬೇರೆ ವಿಚಾರವೇ ಇಲ್ಲ. ಆದ್ದರಿಂದ ತಮ್ಮ ಹಿತವನ್ನು ಬಯಸುವ ಸಜ್ಜನರು ಪಾನವನ್ನು ಪರಿತ್ಯಜಿಸಿದ್ದಾರೆ.
ಯದಿ ಪಾನಂ ನ ವರ್ಜೇರನ್ ಸಂತಶ್ಚಾರಿತ್ರಕಾರಣಾತ್ |
ಭವೇದೇವಂ ಜಗತ್ ಸರ್ವಂ ನಿರ್ಮರ್ಯಾದಂ ಚ ನಿಷ್ಕ್ರಿಯಮ್ ||52||
ಸಜ್ಜನರೂ ಸಹ ತಮ್ಮ ಶೀಲವನ್ನು ರಕ್ಷಿಸಿಕೊಳ್ಳಲು ಪಾನವನ್ನು ವರ್ಜಿಸದಿದ್ದರೆ ಜಗತ್ತೆಲ್ಲವೂ ಯಾವ ನಡತೆಯ ಎಲ್ಲೆಯೂ ಇಲ್ಲದೆ ನಿಷ್ಕ್ರಿಯವಾಗಿರುತ್ತಿದ್ದಿತು.
ತಸ್ಮಾದ್ ಬುದ್ಧೇರ್ಹಿ ರಕ್ಷಾರ್ಥಂ ಸದ್ಭಿಃ ಪಾನಂ ವಿವರ್ಜಿತಮ್ |
ಇತಿ ತೇ ದುಷ್ಕೃತಂ ಸರ್ವಂ ತ್ರಿವಿಧಂ ಕಥಿತಂ ಪ್ರಿಯೇ ||53||
ಆದ್ದರಿಂದ ಸಜ್ಜನರು ತಮ್ಮ ಬುದ್ಧಿಯನ್ನು ರಕ್ಷಿಸಿಕೊಳ್ಳಲು ಪಾನವನ್ನು ವರ್ಜಿಸಿದ್ದಾರೆ. ಪ್ರಿಯೆಯೇ, ನಿನಗೆ ನಾನು ಮೂರು ವಿಧವಾದ ಎಲ್ಲಾ ದುಷ್ಕರ್ಮಗಳನ್ನು ಹೇಳಿದ್ದೇನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಷೋಡಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹದಿನಾರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹದಿನೇಳನೆಯ ಅಧ್ಯಾಯ
ಉಮಾ-ಮಹೇಶ್ವರಸಂವಾದ. ಸುಕೃತವಿಭಾಗಕಥನ.
ಮಹೇಶ್ವರಃ
ವಿಧಾನಂ ಸುಕೃತಸ್ಯಾಪಿ ಭೂಯಃ ಶೃಣು ಶುಚಿಸ್ಮಿತೇ |
ಪ್ರೋಚ್ಯತೇ ತತ್ ತ್ರಿಧಾ ದೇವಿ ಸುಕೃತಂ ಚ ಸಮಾಸತಃ ||1||
ಮಹೇಶ್ವರ ಶುಚಿಸ್ಮಿತೆಯೇ, ಸುಕೃತದ ವಿಧಾನವನ್ನು ಕೇಳು. ದೇವಿಯೇ, ಸುಕೃತವೂ ಸಹ ಸಂಕ್ಷೇಪವಾಗಿ ಮೂರು ವಿಧವೆಂದು ಹೇಳಲ್ಪಡುತ್ತದೆ.
ಯದೌಪರಮಿತಂ ಚೈವ ಸುಕೃತಂ ನಿರುಪದ್ರವಮ್ |
ತಥೈವ ಸೋಪಕರಣಂ ತಾವತಾ ಸುಕೃತಂ ವಿದುಃ ||2||
ಔಪರಮಿತ, ನಿರುಪದ್ರವ (ನಿರುಪಸಾಧನ) ಮತ್ತು ಸೋಪಕರಣ ಎಂದು ಸುಕೃತದ ಮೂರು ವಿಧಗಳು.
ನಿವೃತ್ತಿಃ ಪಾಪಕರ್ಮಭ್ಯಸ್ತದೌಪರಮಿತಂ ಪ್ರಿಯೇ |
ಮನೋವಾಕ್ಕಾಯಜಾ ದೋಷಾಃ ಶೃಣು ಮೇ ವರ್ಜನಾಚ್ಛುಭಮ್ ||3||
ಪ್ರಿಯೆಯೇ, ಪಾಪಕರ್ಮಗಳಿಂದ ನಿವೃತ್ತಿಯು ಔಪರಮಿತ ಎಂದು ಹೇಳಲ್ಪಡುತ್ತದೆ. ಮನೋ-ವಾಕ್-ಶರೀರದ ದೋಷಗಳು ಏನಿವೆಯೋ ಅವುಗಳ ಪರಿತ್ಯಾಗವು ಶುಭವನ್ನುಂಟು ಮಾಡುತ್ತದೆ ಎಂದು ನನ್ನಿಂದ ಕೇಳು.
ತ್ರೈವಿಧ್ಯದೋಷೋಪರಮೇ ಯಸ್ತು ದೋಷವ್ಯಪೇಕ್ಷಯಾ |
ಸ ಹಿ ಪ್ರಾಪ್ನೋತಿ ಸಕಲಂ ಸರ್ವದುಷ್ಕೃತವರ್ಜನಾತ್ ||4||
ಹಿಂದೆ ಹೇಳಿದ ಮೂರು ವಿಧವಾದ ದೋಷಗಳನ್ನು ಪರಿತ್ಯಾಗ ಮಾಡಿದರೆ ದೋಷದ ಅಪೇಕ್ಷೆಯನ್ನು ಬಿಡುವುದರಿಂದ ಜೀವನು ಎಲ್ಲವನ್ನೂ ಪಡೆಯುತ್ತಾನೆ.
ಪ್ರಥಮಂ ವರ್ಜಯೇದ್ ದೋಷಾನ್ ಯುಗಪತ್ ಪೃಥಗೇವ ವಾ |
ತಥಾ ಧರ್ಮಮವಾಪ್ನೋತಿ ದೋಷತ್ಯಾಗೋ ಹಿ ದುಷ್ಕರಃ |
ದೋಷಸಾಕಲ್ಯಸಂತ್ಯಾಗಾನ್ಮುನಿರ್ಭವತಿ ಮಾನವಃ ||5||
ಮೊದಲು ದೋಷಗಳನ್ನು ಒಂದೊಂದಾಗಿ ಅಥವಾ ಒಟ್ಟಿಗೆ ಬಿಡಬೇಕು. ಅದರಿಂದ ಧರ್ಮವುಂಟಾಗುತ್ತದೆ. ದೋಷತ್ಯಾಗವು ಕಷ್ಟಸಾಧ್ಯವಾದುದು. ಸಕಲ ದೋಷಗಳನ್ನು ತ್ಯಜಿಸುವುದರಿಂದ ಮನುಷ್ಯನು ಮುನಿಯಾಗುತ್ತಾನೆ.
ಸೌಕರ್ಯಂ ಪಶ್ಯ ಧರ್ಮಸ್ಯ ಕಾರ್ಯಾರಂಭಾದೃತೇಽಪಿ ಚ |
ಆತ್ಮನಾ ಸ್ಥಾಪನಾಮಾತ್ರಾಲ್ಲಭಂತೇ ಸುಕೃತಂ ಪರಮ್ ||6||
ಧರ್ಮದ ಸೌಕರ್ಯವನ್ನು ನೋಡು. ಕಾರ್ಯಾರಂಭವನ್ನು ಮಾಡದಿದ್ದರೂ ದುಷ್ಕರ್ಮಗಳಿಗೆ ಹೋಗದಂತೆ ಮನಸ್ಸನ್ನು ತಡೆಯುವ ಮಾತ್ರದಿಂದ ಶ್ರೇಷ್ಠವಾದ ಸುಕೃತವು ಉಂಟಾಗುತ್ತದೆ.
ಅಹೋ ನೃಶಂಸಾಃ ಪಚ್ಯಂತೇ ಮಾನುಷಾಃ ಸ್ವಲ್ಪಬುದ್ಧಯಃ |
ಯೇ ತಾದೃಶಂ ನ ಬುಧ್ಯಂತೇ ಆತ್ಮಾಧೀನಂ ನ ನಿರ್ವ್ಯಯಮ್ ||7||
ಅಯ್ಯೋ ಕ್ರೂರಿಗಳಾದ ಮನುಷ್ಯರು ನರಕದಲ್ಲಿ ಬೇಯಿಸಲ್ಪಡುತ್ತಾರೆ! ಸ್ವಲ್ಪ ಬುದ್ಧಿಯುಳ್ಳ ಅಂತಹ ಮನುಷ್ಯರು ಯಾವ ವ್ಯಯವನ್ನೂ (ಖರ್ಚು)ಉಂಟುಮಾಡದ, ತಮಗೆ ಅಧೀನವಾದ ಇಂತಹ ಸುಕೃತ ಸಾಧನವನ್ನು ತಿಳಿಯುವುದಿಲ್ಲ.
ದುಷ್ಕೃತತ್ಯಾಗಮಾತ್ರೇಣ ಪದಮೂರ್ಧ್ವಂ ಹಿ ಲಭ್ಯತೇ ||8||

ದುಷ್ಕೃತವನ್ನು ತ್ಯಾಗ ಮಾಡುವ ಮಾತ್ರದಿಂದ ಊರ್ಧ್ವಸ್ಥಾನಗಳು ಲಭಿಸುತ್ತವೆ.
ಪಾಪಭೀರುತ್ವಮಾತ್ರೇಣ ದೋಷಾಣಾಂ ಪರಿವರ್ಜನಾತ್ |
ಸುಶೋಭನಂ ಭವೇದ್ ದೇವಿ ಕಿಮು ಧರ್ಮವ್ಯಪೇಕ್ಷಯಾ |
ಇತ್ಯೌಪರಮಿತಂ(ಕಂ) ದೇವಿ ಸುಕೃತಂ ಕಥಿತಂ ತವ ॥9॥
ಎಲೌ ದೇವಿಯೇ, ಪಾಪಕ್ಕೆ ಹೆದರಿ ದೋಷವನ್ನು ಪರಿತ್ಯಾಗ ಮಾಡುವುದರಿಂದಲೇ ಒಳ್ಳೆಯ ಫಲ ಉಂಟಾಗುತ್ತದೆ. ಇನ್ನು ಧರ್ಮಾಚರಣೆಯನ್ನು ಮಾಡಿದರೆ ಹೇಳುವುದೇನು? ಹೀಗೆ ಔಪರಮಿತ ಸುಕೃತವನ್ನು ನಿನಗೆ ಹೇಳಿದ್ದೇನೆ.
ಶ್ರುತಾಚ್ಚ ವೃದ್ಧಸಂಯೋಗಾದಿಂದ್ರಿಯಾಣಾಂ ಚ ನಿಗ್ರಹಾತ್ |
ಸಂತೋಷಾಚ್ಚ ಧೃತೇಶ್ಚೈವ ಶಕ್ಯತೇ ದೋಷವರ್ಜನಮ್ ॥10॥
ವಿದ್ಯೆಯಿಂದಲೂ, ದೊಡ್ಡವರ ಸಹವಾಸದಿಂದಲೂ, ಇಂದ್ರಿಯನಿಗ್ರಹದಿಂದಲೂ, ಮನಸ್ಸಂತೋಷದಿಂದಲೂ ಮತ್ತು ಧೈರ್ಯದಿಂದಲೂ ದೋಷಗಳನ್ನು ಪರಿತ್ಯಾಗ ಮಾಡುವುದು ಸಾಧ್ಯವಾಗುತ್ತದೆ.
ತದೇವ ಯಮ ಇತ್ಯಾಹುರ್ದೋಷಸಂಯಮನಂ ಪ್ರಿಯೇ |
ಯಮಧರ್ಮೇಣ ಧರ್ಮೋಽಸ್ತಿ ನಾನ್ಯಃ ಶುಭತರಃ ಪ್ರಿಯೇ |
ಯಮಧರ್ಮೇಣ ಯತಯಃ ಪ್ರಾಪ್ನುವಂತ್ಯುತ್ತಮಾಂ ಗತಿಮ್ ॥11॥
ಪ್ರಿಯೆಯೇ, ಈ ದೋಷಗಳನ್ನು ನಿಯಂತ್ರಣ ಮಾಡುವ ವಿಧಾನಗಳನ್ನೇ ಯಮ ಎಂದು ಹೇಳುತ್ತಾರೆ. ಪ್ರಿಯೆಯೇ, ಯಮಧರ್ಮಕ್ಕಿಂತ ಶುಭತರವಾದ ಧರ್ಮವು ಇನ್ನೊಂದಿಲ್ಲ. ಯತಿಗಳು ಯಮಧರ್ಮದಿಂದ ಉತ್ತಮ ಗತಿಯನ್ನು ಹೊಂದುತ್ತಾರೆ.
ಈಶ್ವರಾಣಾಂ ಪ್ರಭವತಾಂ ದರಿದ್ರಾಣಾಂ ಚ ವೈ ನೃಣಾಮ್ |
ಸಫಲೋ ದೋಷಸಂತ್ಯಾಗೋ ದಾನಾದಪಿ ಶುಭಾದಪಿ ॥12॥
ಧನಾಢ್ಯರಾದವರಿಗೂ, ಪ್ರಭುಗಳಿಗೂ, ದರಿದ್ರರಾದ ಮನುಷ್ಯರಿಗೂ ದೋಷ ಸಂತ್ಯಾಗವು ದಾನದಿಂದ ಉಂಟಾಗುವ, ಶುಭದಿಂದ ಉಂಘಾಗುವ ಫಲಗಳಿಗಿಂತಲೂ ಹೆಚ್ಚಿನ ಫಲವನ್ನು ಕೊಡುತ್ತದೆ.
ತಪೋ ದಾನಂ ಮಹಾದೇವಿ ದೋಷಮಲ್ಪಂ ವಿನಿರ್ದಹೇತ್ |
ಸುಕೃತಂ ಯಾಮಿಕಂ ಪ್ರೋಕ್ತಂ ವಕ್ಷ್ಯೇ ನಿರುಪಸಾಧನಮ್ ॥13॥
ಎಲೌ ಮಹಾದೇವಿಯೇ, ತಪಸ್ಸು ಮತ್ತು ದಾನಗಳು ಅಲ್ಪಪ್ರಮಾಣದಲ್ಲಿ ಮಾತ್ರ ದೋಷಗಳನ್ನು ವಿನಾಶಗೊಳಿಸುತ್ತವೆ. ಈ ಯಮಸಂಬಂಧಿಯಾದ ಸುಕೃತವನ್ನು ನಿನಗೆ ಹೇಳಿದ್ದೇನೆ. ಇನ್ನು ನಿರುಪಸಾಧನವನ್ನು ನಿನಗೆ ಹೇಳುವೆನು.
ಸುಖಾಭಿಸಂಧಿರ್ಲೋಕಾನಾಂ ಸತ್ಯಂ ಶೌಚಮಥಾರ್ಜವಮ್ |
ವ್ರತೋಪವಾಸಃ ಪ್ರೀತಿಶ್ಚ ಬ್ರಹ್ಮಚರ್ಯಂ ದಮಃ ಶಮಃ ॥14॥
ಏವಮಾದಿ ಶುಭಂ ಕರ್ಮ ಸುಕೃತಂ ನಿಯಮಾಶ್ರಿತಮ್ |
ಶೃಣು ತೇಷಾಂ ವಿಶೇಷಾಂಶ್ಚ ಕೀರ್ತಯಿಷ್ಯಾಮಿ ಭಾಮಿನಿ ॥15॥
ಲೋಕಗಳಿಗೆ ಸುಖವಾಗಲಿ ಎಂಬ ಇಚ್ಛೆ, ಸತ್ಯವಚನ, ಶೌಚ, ಋಜುತನ, ವ್ರತೋಪವಾಸಗಳು, ಸಂತೋಷ, ಬ್ರಹ್ಮಚರ್ಯ, ಇಂದ್ರಿಯನಿಗ್ರಹ, ಭಗವನ್ನಿಷ್ಠೆ - ಇವೆಲ್ಲವೂ ಯಮನಿಯಮಗಳಲ್ಲಿ ಯಮಕ್ಕೆ ಸಂಬಂಧಿಸಿದ ಸುಕೃತ. ಎಲೌ ಭಾಮಿನಿಯೇ, ಅವುಗಳ ವಿಶೇಷವನ್ನು ಹೇಳುವೆನು. ಅದನ್ನು ಕೇಳು.
ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ |
ನಾಸ್ತಿ ಸತ್ಯಾತ್ಪರಂ ದಾನಂ ನಾಸ್ತಿ ಸತ್ಯಾತ್ಪರಂ ತಪಃ ॥16॥
ಸಮುದ್ರವನ್ನು ದಾಟುವುದಕ್ಕೆ ನೌಕೆಯಂತೆ ಸ್ವರ್ಗವನ್ನು ಹೊಂದುವುದಕ್ಕೆ ಸತ್ಯವು ಸೋಪಾನ ರೂಪವಾದುದು. ಸತ್ಯಕ್ಕಿಂತಲೂ ಶ್ರೇಷ್ಠವಾದ ದಾನವಿಲ್ಲ. ಸತ್ಯಕ್ಕಿಂತಲೂ ಶ್ರೇಷ್ಠವಾದ ತಪಸ್ಸಿಲ್ಲ.
ಯಥಾ ಶ್ರುತಂ ಯಥಾ ದೃಷ್ಟಮಾತ್ಮನಾ ಯದ್ಯಥಾ ಕೃತಮ್ |
ತಥಾ ಸತ್ಯೋಪಕಾರೇಣ ವಚನಂ ಸತ್ಯಲಕ್ಷಣಮ್ ॥17॥
ನಾವು ನೋಡಿದಂತೆ ಅಥವಾ ಕೇಳಿದಂತೆ ಅಥವಾ ಮಾಡಿದಂತೆ ಅಥವಾ ಸಜ್ಜನರಿಗೆ ಉಪಕಾರವಾಗುವಂತೆ ಮಾತನಾಡುವುದು ಸತ್ಯದ ಲಕ್ಷಣ.
ಯಚ್ಛಲೇನಾಭಿಸಂಯುಕ್ತಂ ಸತ್ಯರೂಪಂ ಮೃಷೈವ ತತ್ |
ನಿತ್ಯಮೇವ ಪ್ರವಕ್ತವ್ಯಂ ಪಾರಾವರ್ಯಂ ವಿಜಾನತಾ ॥18॥
ಕಪಟದ ಉದ್ದೇಶದಿಂದ ಸತ್ಯವಚನವನ್ನು ಆಡಿದರೂ ಅದು ಅನೃತವೇ ಸರಿ. ಉಚ್ಚ-ನೀಚ ಭಾವವನ್ನು ತಿಳಿದವನು ಯಾವಾಗಲೂ ಸತ್ಯವನ್ನೇ ಮಾತನಾಡಬೇಕು.
ದೀರ್ಘಾಯುಶ್ಚ ಭವೇತ್ ಸತ್ಯಾತ್ ಕುಲಸಂತಾನಪಾಲಕಃ |
ಲೋಕಸಂಸ್ಥಿತಿಪಾಲಶ್ಚ ಭವೇತ್ ಸತ್ಯೇನ ಮಾನವಃ ॥19॥
ಸತ್ಯವಚನದಿಂದ ಮನುಷ್ಯನು ದೀರ್ಘಾಯುವೂ, ಕುಲ-ಸಂತತಿಯನ್ನು ರಕ್ಷಿಸುವವನೂ, ಲೋಕಸಂಸ್ಥಿತಿಯನ್ನು ರಕ್ಷಿಸುವವನೂ ಆಗುತ್ತಾನೆ.
ಉಮಾ
ಕಥಂ ಸಂಧಾರಯನ್ ಮರ್ತ್ಯೋ ವ್ರತಂ ಶುಭಮವಾಪ್ನುಯಾತ್ ॥20॥
ಉಮಾ ಕೇವಲ ತನ್ನನ್ನು ಪಾಪದಿಂದ ತಡೆದುಕೊಳ್ಳುವ ಮನುಷ್ಯನು ಶುಭವ್ರತ ಫಲವನ್ನು ಹೇಗೆ ಹೊಂದುತ್ತಾನೆ?
ಮಹೇಶ್ವರಃ

ಪೂರ್ವಮುಕ್ತಂ ತು ಯತ್ಪಾಪಂ ಮನೋವಾಕ್ಕಾಯಕರ್ಮಭಿಃ |
ವ್ರತವತ್ತಸ್ಯ ಸಂತ್ಯಾಗಸ್ತದೌಪರಮಿತಂ ಸ್ಮೃತಮ್ ||21||
ಮಹೇಶ್ವರ ಹಿಂದೆ ಮನೋವಾಕ್-ಕಾಯಗಳಿಂದ ಉಂಟಾಗುವ ಮೂರು ವಿಧವಾದ ಪಾಪಗಳನ್ನು ಹೇಳಿದ್ದೇನೆ. ವ್ರತಗಳಂತೆ ಅವುಗಳ ಪರಿತ್ಯಾಗವು ಔಪರಮಿತ ಸುಕೃತವೆಂದು ಹೇಳಲ್ಪಡುತ್ತದೆ.
ತೇನ ಧರ್ಮಮವಾಪ್ನೋತಿ ವ್ರತವತ್ ಪರಿಪಾಲಯನ್ |
ಮಂಗಲಂ ಶುಭಕರ್ಮಾಣಿ ವ್ರತೇನೈವ ಸಮಾಚರೇತ್ |
ನರೋ ಧರ್ಮಮವಾಪ್ನೋತಿ ಶುಭಸಂಜೋಷಣಂ ವ್ರತಮ್ ||22||
ವ್ರತದಂತೆ ಆ ಪರಿತ್ಯಾಗಗಳನ್ನು ರಕ್ಷಿಸುವವನು ಅದರಿಂದ ಧರ್ಮವನ್ನು ಹೊಂದುತ್ತಾನೆ. ಮಂಗಳ ಮತ್ತು ಶುಭಕರ್ಮಗಳನ್ನು ಅಂತಹ ವ್ರತದಿಂದ ಕೂಡಿಯೇ ಆಚರಿಸಬೇಕು. ಅಂತಹ ಶುಭಕರ್ಮವನ್ನು ಮತ್ತು ವ್ರತವನ್ನು ಆಚರಿಸುವ ಮನುಷ್ಯನು ಧರ್ಮವನ್ನು ಹೊಂದುತ್ತಾನೆ.
ಯದ್ಯದಾತ್ಮಪ್ರಿಯಂ ನಿತ್ಯಂ ಮನೋವಾಕ್ಕಾಯಕರ್ಮಭಿಃ |
ವ್ರತವತ್ತಸ್ಯ ಸಂತ್ಯಾಗಸ್ತಪೋವ್ರತಮಿತಿ ಸ್ಥಿತಮ್ ||23||
ತನಗೆ ಪ್ರಿಯವಾದ ವಸ್ತುಗಳನ್ನು ಮನೋ-ವಾಕ್-ಕಾಯಕರ್ಮಗಳಿಂದ ವ್ರತದಂತೆ ಪರಿತ್ಯಾಗ ಮಾಡುವುದು ತಪೋವ್ರತವೆಂದು ಹೇಳಲ್ಪಡುತ್ತದೆ.
ತ್ಯಾಜ್ಯಂ ವಾ ಯದಿ ವಾ ಜೋಷ್ಯಮವ್ರತೇನ ವೃಥಾ ಚರನ್ |
ತಥಾ ಫಲಂ ನ ಲಭತೇ ತಸ್ಮಾದ್ಧರ್ಮಂ ವ್ರತಾಚ್ಚರೇತ್ ||24||
ತ್ಯಾಜ್ಯವಾದ ಅಥವಾ ಭೋಜ್ಯವಾದ ವಸ್ತುವನ್ನು ವ್ರತಶೂನ್ಯನಾಗಿ ಸೇವಿಸಿದರೆ ಅದು ಫಲವನ್ನು ಕೊಡುವುದಿಲ್ಲ. ಆದ್ದರಿಂದ ವ್ರತಸಹಿತವಾಗಿಯೇ ಧರ್ಮವನ್ನು ಆಚರಿಸಬೇಕು.
ಶುದ್ಧಕಾಯೋ ನರೋ ಭೂತ್ವಾ ಸ್ನಾತ್ವಾ ತೀರ್ಥೇ ಯಥಾವಿಧಿ |
ಪಂಚಭೂತಾನಿ ಚಂದ್ರಾರ್ಕೌ ಸಂಧ್ಯೇ ಧರ್ಮಂ ಯಮಂ ಪಿತೄನ್ ||
ಆತ್ಮನ್ಯೇವ ರತಾನ್ ಮತ್ವಾ ನಿರ್ಬಂಧವ್ರತಮಾಚರೇತ್ |
ವ್ರತಮಾಮರಣಾದ್ ವಾಽಪಿ ಕಾಲಚ್ಛೇದೇನ ವಾ ಹರೇತ್ ||26||
ಮನುಷ್ಯನು ತೀರ್ಥದಲ್ಲಿ ವಿಧಿಗೆ ಅನುಗುಣವಾಗಿ ಸ್ನಾನವನ್ನು ಮಾಡಿ, ಶರೀರ ಶುದ್ಧಿಯನ್ನು ಹೊಂದಿ ಪಂಚಭೂತಗಳು, ಸೂರ್ಯ-ಚಂದ್ರರು, ಸಂಧ್ಯೆಗಳು, ಧರ್ಮ-ಯಮ-ಪಿತೃಗಳು ಪರಮಾತ್ಮನಲ್ಲಿಯೇ ರತರಾಗಿದ್ದಾರೆಂದು ಚಿಂತಿಸಿ ನಿರ್ಬಂಧದಿಂದ ವ್ರತವನ್ನು ಮಾಡಬೇಕು (ಇವೆಲ್ಲವೂ ಪರಮಾತ್ಮನ ಅಧೀನವೆಂದು ತಿಳಿದು ಶರೀರ ಶೋಷಕವಾದ ವ್ರತವನ್ನು ಆರಂಭಿಸಬೇಕು). ವ್ರತವನ್ನು ಪರಿಮಿತ ಕಾಲದವರೆಗೆ ಅಥವಾ ಮರಣ ಕಾಲದವರೆಗೆ ಮಾಡಬಹುದು-ಲಕ್ಷಾಲಂಕಾರ.
ಶಾಕಾದಿಷು ವ್ರತಂ ಕುರ್ಯಾತ್ತಥಾ ಪುಷ್ಪಫಲಾದಿಷು |
ಬ್ರಹ್ಮಚರ್ಯಂ ವ್ರತಂ ಕುರ್ಯಾದುಪವಾಸಂ ತಥಾ ವ್ರತಮ್ ||27||
ಶಾಕಾದಿಗಳ ವಿಷಯದಲ್ಲಿ, ಪುಷ್ಪಫಲಾದಿಗಳ ವಿಷಯದಲ್ಲಿ ಅಂತಹ ವ್ರತವನ್ನು ಮಾಡಬೇಕು. ಬ್ರಹ್ಮಚರ್ಯದ ವಿಷಯದಲ್ಲಿ, ಉಪವಾಸದ ವಿಷಯದಲ್ಲಿಯೂ ಸಹ ವ್ರತವನ್ನು ಮಾಡಬೇಕು.
ಏವಮನ್ಯೇಷು ಬಹುಷು ವ್ರತಂ ಕಾರ್ಯಂ ಹಿತೈಷಿಣಾ |
ವ್ರತಭಂಗೋ ಯಥಾ ನ ಸ್ಯಾದ್ ರಕ್ಷಿತವ್ಯಂ ತಥಾ ಬುಧೈಃ |
ವ್ರತಭಂಗೋ ಮಹತ್ಪಾಪಮಿತಿ ವಿದ್ಧಿ ಶುಭೇಕ್ಷಣೇ ||28||
ಹಾಗೆಯೇ ತನ್ನ ಹಿತವನ್ನು ಬಯಸುವವನು ಉಳಿದ ಅನೇಕ ವಸ್ತುಗಳ ವಿಷಯದಲ್ಲಿಯೂ ವ್ರತವನ್ನು ಮಾಡಬೇಕು. ವಿವೇಕಿಯಾದವನು ಆರಂಭಿಸಿದ ವ್ರತವು ಭಗ್ನವಾಗದಂತೆ ರಕ್ಷಣೆಯನ್ನು ಮಾಡಬೇಕು. ಎಲೌ ಶುಭೇಕ್ಷಣೆಯೇ, ವ್ರತಭಂಗವು ದೊಡ್ಡ ಪಾಪವೆಂದು ತಿಳಿ.
ಔಷಧಾರ್ಥಂ ಯಥಾಜ್ಞಾನಾದ್ ಗುರೂಣಾಂ ವಚನಾದಪಿ |
ಅನುಗ್ರಹಾರ್ಥಂ ಬಂಧೂನಾಂ ವ್ರತಭಂಗೋ ನ ದುಷ್ಯತೇ ||29||
ಔಷಧಿಯ ಸಲುವಾಗಿ ಅಥವಾ ಪ್ರಮಾದದಿಂದ ಅಥವಾ ಹಿರಿಯರ ವಚನದಂತೆ ಅಥವಾ ಬಂಧುಗಳಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಮಾಡಿದ ವ್ರತಭಂಗವು ದೋಷವಾಗುವುದಿಲ್ಲ.
ವ್ರತಾಪವರ್ಗಕಾಲೇಷು ದೈವಬ್ರಾಹ್ಮಣಪೂಜನಮ್ |
ನರೇಣ ತು ಯಥಾಶಕ್ತಿ ಕಾರ್ಯಂ ಸಿದ್ಧಿಂ ತಥಾಽಽಪ್ನುಯಾತ್ ||30||
ವ್ರತವನ್ನು ಉಪಸಂಹಾರ ಮಾಡುವ ಕಾಲದಲ್ಲಿ ಯಥಾಶಕ್ತಿಯಾಗಿ ದೈವ-ಬ್ರಾಹ್ಮಣ ಪೂಜೆಯನ್ನು ಮಾಡುವ ಮನುಷ್ಯನು ಕಾರ್ಯಸಿದ್ಧಿಯನ್ನು ಹೊಂದುತ್ತಾನೆ.
ಉಮಾ
ಕಥಂ ಶೌಚವಿಧಿಸ್ತತ್ರ ತನ್ಮೇ ಶಂಸಿತುಮರ್ಹಸಿ ||31||
ಉಮಾ ವ್ರತಾನುಷ್ಠಾನ ಸಮಯದಲ್ಲಿ ಶೌಚಪ್ರಕಾರವು ಹೇಗಿರುತ್ತದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಬಾಹ್ಯಮಾಭ್ಯಂತರಂ ಚೇತಿ ದ್ವಿವಿಧಂ ಶೌಚಮಿಷ್ಯತೇ |
ಮಾನಸಂ ಸುಕೃತಂ ಯತ್ತಚ್ಛೌಚಮಾಭ್ಯಂತರಂ ಸ್ಮೃತಮ್ ||32||

ಮಹೇಶ್ವರ ಶೌಚವು ಬಾಹ್ಯ ಮತ್ತು ಆಂತರಿಕ ಎಂದು ಎರಡು ವಿಧವಾಗಿರುತ್ತದೆ. ಮನಸ್ಸಿನಲ್ಲಿ ಮಾಡುವ ಸುಕೃತವು ಆಂತರಿಕ ಶೌಚವೆಂದು ಹೇಳಲ್ಪಡುತ್ತದೆ.
ಸದಾಽಽಹಾರವಿಶುದ್ಧಿಶ್ಚ ಕಾಯಪ್ರಕ್ಷಾಲನಂ ಚ ಯತ್ |
ಬಾಹ್ಯಶೌಚಂ ಭವೇದೇತತ್ ತಥೈವಾಚಮನಾದಿನಾ ॥33॥
ಯಾವಾಗಲೂ ಆಹಾರದ ಶುದ್ಧಿ ಮತ್ತು ದೇಹಶುದ್ಧಿಗಳು ಮತ್ತು ಆಚಮನಾದಿಗಳು ಬಾಹ್ಯಶೌಚವೆಂದು ಹೇಳಲ್ಪಡುತ್ತವೆ.
ಮೃಚ್ಚೈವ ಶುದ್ಧದೇಶಸ್ಥಾ ಗೋಶಕೃನ್ಮೂತ್ರಮೇವ ಚ |
ದ್ರವ್ಯಾಣಿ ಗಂಧಯುಕ್ತಾನಿ ಯಾನಿ ಪುಷ್ಟಿಕರಾಣಿ ಚ |
ಏತೈಃ ಸಮ್ಮಾರ್ಜಯೇತ್ ಕಾಯಮಂಭಸಾ ಚ ಪುನಃ ಪುನಃ ॥34॥
ಶುದ್ಧದೇಶದ ಮೃತ್ತಿಕೆ, ಗೋಮಯ, ಗೋಮೂತ್ರ, ಪುಷ್ಟಿಕರವಾದ ಸುಗಂಧ ದ್ರವ್ಯಗಳು ಇವುಗಳಿಂದಲೂ ಮತ್ತು ನೀರಿನಿಂದಲೂ ದೇಹವನ್ನು ಪುನಃ ಪುನಃ ತೊಳೆದುಕೊಳ್ಳಬೇಕು.
ಅಕ್ಷೋಭ್ಯಂ ಯತ್ಪ್ರಕೀರ್ಣಂ ಚ ನಿತ್ಯಸ್ರೋತಶ್ಚ ಯಜ್ಜಲಮ್ |
ಪ್ರಾಯಶಸ್ತಾದೃಶೇ ಮಜ್ಜೇದನ್ಯಥಾ ಚಾಪಿ ವರ್ಜಯೇತ್ ॥35॥
ಅಲುಗಾಡಿಸಲು ಸಾಧ್ಯವಾಗದ ನಿಂತ ನೀರು (ಕೆರೆ-ಸರೋವರ ಮುಂತಾದವು) ಮತ್ತು ನಿತ್ಯಪ್ರವಾಹದಲ್ಲಿರುವ ನೀರು ಇವುಗಳಲ್ಲಿ ಸ್ನಾನ ಮಾಡಬೇಕು. ಬೇರೆ ಜಲಗಳನ್ನು ವರ್ಜಿಸಬೇಕು.
ತ್ರಿಸ್ತ್ರಿರಾಚಮನಂ ಶ್ರೇಷ್ಠಂ ನಿಷ್ಫೇನೈರ್ನಿರ್ಮಲೈರ್ಜಲೈಃ |
ತಥಾ ವಿಣ್ಮೂತ್ರಯೋಃ ಶುದ್ಧಿರದ್ಭಿರ್ಬಹುಮೃದಾ ಭವೇತ್ |
ತಥೈವ ಜಲಸಂಶುದ್ಧಿರ್ಯತ್ಸಂಶುದ್ಧಂ ತು ಸಂಸ್ಪೃಶೇತ್ ॥36॥
ನೊರೆಯಿಲ್ಲದ ನಿರ್ಮಲವಾದ ಜಲದಿಂದ ಮೂರುಬಾರಿ ಆಚಮನವನ್ನು ಮಾಡಬೇಕು. ಹಾಗೆಯೇ ಮಲ-ಮೂತ್ರ ವಿಸರ್ಜನೆಯನ್ನು ಮಾಡಿದಾಗ ಜಲ ಮತ್ತು ಬಹಳ ಮೃತ್ತಿಕೆಗಳಿಂದ ಶುದ್ಧಿಯಾಗುತ್ತದೆ. ಹಾಗೆಯೇ ಜಲಶುದ್ಧಿಯನ್ನು ಗಮನಿಸಬೇಕು. ಶುದ್ಧವಾದ ಜಲವನ್ನು ಮಾತ್ರ ಉಪಯೋಗಿಸಬೇಕು.
ಶಕೃತಾ ಭೂಮಿಶುದ್ಧಿಃ ಸ್ಯಾಲ್ಲೌಹಾನಾಂ ಭಸ್ಮನಾ ಸ್ಮೃತಮ್ |
ತಕ್ಷಣಂ ಘರ್ಷಣಂ ಚೈವ ದಾರವಾಣಾಂ ವಿಶೋಧನಮ್ ॥37॥
ಗೋಮಯದಿಂದ ಭೂಶುದ್ಧಿಯಾಗುತ್ತದೆ. ಭಸ್ಮದಿಂದ ಲೋಹ-ಶುದ್ಧಿ ಆಗುತ್ತದೆ. ಮರದ ವಸ್ತುಗಳಿಗೆ ಕೆತ್ತುವುದರಿಂದ ಅಥವಾ ಉಜ್ಜುವುದರಿಂದ ಶುದ್ಧಿಯಾಗುತ್ತದೆ.
ದಹನಂ ಮೃಣ್ಮಯಾನಾಂ ಚ ಮರ್ತ್ಯಾನಾಂ ಕೃಚ್ಛ್ರಧಾರಣಮ್ |
ಶೇಷಾಣಾಂ ದೇವಿ ಸರ್ವೇಷಾಮಾತಪೇನ ಜಲೇನ ಚ |
ಬ್ರಾಹ್ಮಣಾನಾಂ ಚ ವಾಕ್ಯೇನ ಸದಾ ಸಂಶೋಧನಂ ಭವೇತ್ ॥38॥
ಮಣ್ಣಿನ ಪಾತ್ರೆಗಳಿಗೆ ದಹನದಿಂದಲೂ, ಮನುಷ್ಯರಿಗೆ ಕೃಚ್ಛ್ರವ್ರತ ಧಾರಣೆಯಿಂದಲೂ ಶುದ್ಧಿಯಾಗುತ್ತದೆ. ಎಲೌ ದೇವಿಯೇ, ಉಳಿದ ಎಲ್ಲಾ ವಸ್ತುಗಳಿಗೂ ಸೂರ್ಯ ಕಿರಣಗಳಿಂದ ಮತ್ತು ಜಲದಿಂದ ಶುದ್ಧಿಯಾಗುತ್ತದೆ. ಬ್ರಾಹ್ಮಣರ ವಾಕ್ಯದಿಂದಲೂ ಯಾವಾಗಲೂ ಶುದ್ಧಿಯಾಗುತ್ತದೆ.
ಆಮೃಷ್ಟಮದ್ಭಿರ್ನಿರ್ಣಿಕ್ತಂ ಯಚ್ಚ ವಾಚಾ ಪ್ರಶಸ್ಯತೇ |
ಏವಮಾಪದಿ ಸಂಶುದ್ಧಿರೇವಂ ಶೌಚಂ ವಿಧೀಯತೇ ॥39॥
ಆಪತ್ಕಾಲದಲ್ಲಿ ತೊಳೆಯುವಷ್ಟು ಜಲವಿಲ್ಲದಿದ್ದರೂ ಪಾತ್ರೆಯನ್ನು ಜಲದಿಂದ ಒದ್ದೆ ಮಾಡಿದರೂ ಶುದ್ಧಿಯಾಗುತ್ತದೆ ಮತ್ತು ನಾರಾಯಣ-ಪುಂಡರೀಕಾಕ್ಷಾದಿ ನಾಮಸ್ಮರಣೆಯಿಂದಲೂ ಶುದ್ಧಿಯಾಗುತ್ತದೆ. ಆಪತ್ತಿನಲ್ಲಿ ಶುದ್ಧಿಯ ಕ್ರಮವು ಹೀಗೆ ಹೇಳಲ್ಪಡುತ್ತದೆ.
ಉಮಾ
ಆಹಾರಶುದ್ಧಿಸ್ತು ಕಥಂ ದೇವದೇವ ಮಹೇಶ್ವರ ॥40॥
ಉಮಾ ಎಲೈ ಮಹೇಶ್ವರನೇ, ದೇವದೇವನೇ, ಆಹಾರಶುದ್ಧಿಯು ಹೇಗೆ ಉಂಟಾಗುತ್ತದೆ?
ಮಹೇಶ್ವರಃ
ಅಮಾಂಸಮದ್ಯಮಕ್ಲೇದ್ಯಮಪರ್ಯುಷಿತಮೇವ ಚ |
ಅತಿಕಟ್ವಾಮ್ಲಲವಣೈರ್ಹೀನಂ ಚ ಶುಭಗಂಧಿ ಚ ॥41॥
ಕೃಮಿಕೀಟಮಲೈರ್ಹೀನಂ ಸಂಭೃತಂ ಶುದ್ಧಭಾಜನೇ |
ಏವಂವಿಧಂ ಸದಾಹಾರಂ ದೇವಬ್ರಾಹ್ಮಣಸತ್ಕೃತಮ್ ॥42॥
ಮಹೇಶ್ವರ ಮಾಂಸಭಕ್ಷಣೆಯನ್ನು ಮಾಡದಿರುವುದು, ಮದ್ಯಪಾನವನ್ನು ಮಾಡದಿರುವುದು, ಹಳಸಿದುದನ್ನು ತಿನ್ನದಿರುವುದು, ತಂಗಳನ್ನು ತಿನ್ನದಿರುವುದು, ಅತಿಯಾದ ಹುಳಿ-ಉಪ್ಪು-ಖಾರಗಳನ್ನು ತಿನ್ನದಿರುವುದು, ಕ್ರಿಮಿ-ಕೀಟ-ಕಶ್ಮಲಗಳಿಂದ ಹೀನವಾದುದನ್ನು ಸೇವಿಸುವುದು, ಶುದ್ಧವಾದ ಪಾತ್ರೆಯಲ್ಲಿ ತುಂಬಿಟ್ಟ, ಒಳ್ಳೆಯ ಗಂಧದಿಂದ ಕೂಡಿದ, ದೇವ-ಬ್ರಾಹ್ಮಣರಿಗೆ ನಿವೇದಿಸಿದ ಒಳ್ಳೆಯ ಆಹಾರವನ್ನು ಸೇವಿಸುವುದು, ಇವು ಆಹಾರ ಶುದ್ಧಿಯ ಕ್ರಮ.
ಶ್ರುತಮಿತ್ಯೇವ ವಿಜ್ಞೇಯಮನ್ಯಥಾ ತ್ವಶುಭಂ ಭವೇತ್ |
ಗ್ರಾಮ್ಯಾದಾರಣ್ಯಕೈಃ ಸಿದ್ಧಂ ಶುದ್ಧಮಿತ್ಯವಧಾರಯ ॥43॥
ಸೇವಿಸುವ ಆಹಾರವು ಶುಭವಾಗಿದೆ ಎಂದೇ ತಿಳಿದುಕೊಂಡು ಸೇವಿಸಬೇಕು. ಇಲ್ಲದಿದ್ದರೆ ಅಶುಭ ಉಂಟಾಗುತ್ತದೆ. ಗ್ರಾಮದಲ್ಲಿ ದೊರೆಯುವ ಆಹಾರಗಳಿಗಿಂತ ಅರಣ್ಯದಲ್ಲಿ ದೊರೆಯುವ ಆಹಾರಗಳು ಶುದ್ಧವಾಗಿರುತ್ತವೆ ಎಂದು ತಿಳಿ.

ಅತಿಮಾತ್ರಗೃಹೀತಾತ್ತು ಅಲ್ಪದತ್ತಂ ಭವೇಚ್ಛುಚಿ |
ಯಜ್ಞಶೇಷಂ ಹವಿಃಶೇಷಂ ಪಿತೃಶೇಷಂ ಚ ನಿರ್ಮಲಮ್ |
ಇತಿ ತೇ ಕಥಿತಂ ದೇವಿ ಭೂಯಃ ಕಿಂ ಶ್ರೋತುಮಿಚ್ಛಸಿ ||44||
ಬಹಳ ಪರಿಮಾಣದ ಆಹಾರಕ್ಕಿಂತಲೂ ಅಲ್ಪಪರಿಮಾಣದ ಆಹಾರವು ಶುದ್ಧವಾಗಿರುತ್ತದೆ. ಯಜ್ಞಶೇಷ, ಹವಿಶ್ಶೇಷ ಮತ್ತು ಪಿತೃಶೇಷಗಳು ಯಾವಾಗಲೂ ನಿರ್ಮಲವಾಗಿರುತ್ತವೆ. ದೇವಿಯೇ, ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ? (ಸೋಪಕರಣ ಎಂದು ತೃತೀಯ ಸುಕೃತವನ್ನು ಇಲ್ಲಿ ಹೇಳಿಲ್ಲ. ಅದನ್ನು ಮುಂದೆ ಇನ್ನೂರ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಹೇಳುತ್ತಾರೆ).
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಸುಕೃತವಿಭಾಗಕಥನಂ ನಾಮ ಸಪ್ತದಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹದಿನೇಳನೆಯ
ಅಧ್ಯಾಯ ಮುಗಿಯಿತು.
* * * * *

ಇನ್ನೂರ ಹದಿನೆಂಟನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಮಾಂಸಾಭಕ್ಷಣ,
ಬ್ರಹ್ಮಚರ್ಯ-ಉಪವಾಸಾದಿಫಲಕಥನ.

ಉಮಾ
ಭಕ್ಷಯಂತ್ಯಪರೇ ಮಾಂಸಂ ವರ್ಜಯಂತ್ಯಪರೇ ವಿಭೋ |
ತನ್ಮೇ ವದ ಮಹಾದೇವ ಭಕ್ಷ್ಯಾಭಕ್ಷ್ಯಸ್ಯ ಕಾರಣಮ್ ||1||
ಉಮಾ ಎಲೈ ವಿಭುವೇ, ಕೆಲವರು ಮಾಂಸವನ್ನು ಭಕ್ಷಿಸುತ್ತಾರೆ. ಇನ್ನು ಕೆಲವರು ವರ್ಜಿಸುತ್ತಾರೆ. ಎಲೈ ಮಹಾದೇವನೇ, ಮಾಂಸ ಭಕ್ಷಣಾಭಕ್ಷಣಗಳ ವಿಷಯದಲ್ಲಿ ನನಗೆ ನಿರ್ಣಯವನ್ನು ಹೇಳು.

ಮಹೇಶ್ವರಃ
ಮಾಂಸಸ್ಯ ಭಕ್ಷಣೇ ದೋಷೋ ಯಶ್ಚಾಸ್ಯಾಭಕ್ಷಣೇ ಗುಣಃ |
ತದಹಂ ಕೀರ್ತಯಿಷ್ಯಾಮಿ ತನ್ನಿಬೋಧ ಯಥಾತಥಮ್ ||2||
ಮಹೇಶ್ವರ ಮಾಂಸಭಕ್ಷಣದ ಏನು ದೋಷವಿದೆಯೋ, ಮಾಂಸವನ್ನು ಭಕ್ಷಿಸದಿರುವುದರಲ್ಲಿ ಏನು ಗುಣವಿದೆಯೋ ಅದನ್ನು ನಿನಗೆ ಹೇಳುವೆನು, ಸರಿಯಾಗಿ ತಿಳಿದುಕೊ.
ಇಷ್ಟಂ ದತ್ತಮಧೀತಂ ಚ ಕ್ರತವಶ್ಚ ಸದಕ್ಷಿಣಾಃ |
ಅಮಾಂಸಭಕ್ಷಣಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ||3||
ಇಷ್ಟಗಳು, ದಾನಗಳು, ಅಧ್ಯಯನಗಳು, ದಕ್ಷಿಣಾ ಸಹಿತವಾದ ಯಾಗಗಳು ಇವು ಯಾವುವೂ ಮಾಂಸದ ಅಭಕ್ಷಣೆಯ ಹದಿನಾರನೆಯ ಒಂದು ಭಾಗಕ್ಕೂ ಸಮನಾಗುವುದಿಲ್ಲ.
ಆತ್ಮಾರ್ಥಂ ಯಃ ಪರಪ್ರಾಣಾನ್ ಹಿಂಸ್ಯಾತ್ ಸ್ವಾದುಫಲೇಪ್ಸಯಾ |
ವ್ಯಾಲಗೃಧ್ರಸೃಗಾಲೈಶ್ಚ ರಾಕ್ಷಸೈಶ್ಚ ಸಮಸ್ತು ಸಃ ||4||
ತನ್ನ ರುಚಿಕರವಾದ ಭೋಜನಕ್ಕೋಸ್ಕರ ಯಾವನು ಪರಪ್ರಾಣವನ್ನು ಹಿಂಸಿಸುತ್ತಾನೆಯೋ ಅಂತಹ ಮನುಷ್ಯನು ಸರ್ಪ, ಹದ್ದು, ನರಿ ಮತ್ತು ರಾಕ್ಷಸರಿಗೆ ಸಮನಾದವನು.
ಯೋ ವೃಥಾ ನಿತ್ಯಮಾಂಸಾಶೀ ಸ ಪುಮಾನಧಮೋ ಭವೇತ್ |
ತತಃ ಕಷ್ಟತರಂ ನಾಸ್ತಿ ಸ್ವಯಮಾಹೃತ್ಯ ಭಕ್ಷಣಾತ್ ||5||
ಯಾವನು ನಿತ್ಯವೂ ವ್ಯರ್ಥವಾಗಿ ಮಾಂಸವನ್ನು ಭಕ್ಷಿಸುತ್ತಾನೆಯೋ ಅವನು ಪುರುಷಾಧಮನೆನಿಸುತ್ತಾನೆ. ತಾನೇ ಪ್ರಾಣಿಯನ್ನು ಕೊಂದು ಮಾಂಸವನ್ನು ಭಕ್ಷಿಸುವುದಕ್ಕಿಂತಲೂ ದುಃಖದಾಯಕವಾದುದು ಇನ್ನೊಂದಿಲ್ಲ.
ಸ್ವಮಾಂಸಂ ಪರಮಾಂಸೇನ ಯೋ ವರ್ಧಯಿತುಮಿಚ್ಛತಿ |
ಉದ್ವಿಗ್ನವಾಸಂ ಲಭತೇ ಯತ್ರಯತ್ರೋಪಜಾಯತೇ ||6||
ಇನ್ನೊಂದು ಪ್ರಾಣಿಯ ಮಾಂಸದಿಂದ ತನ್ನ ಮಾಂಸವನ್ನು ವೃದ್ಧಿಸಿಕೊಳ್ಳಲು ಬಯಸುವವನು ಎಲ್ಲಿ ತಾನು ವಾಸಮಾಡಿದರೂ ಭಯದಿಂದಲೇ ಬದುಕುತ್ತಾನೆ.
ಸಂಛೇದನಂ ಸ್ವಮಾಂಸಸ್ಯ ಯಥಾ ಸಂಜನಯೇದ್ ರುಜಮ್ |
ತಥೈವ ಪರಮಾಂಸೇಽಪಿ ವೇದಿತವ್ಯಂ ವಿಜಾನತಾ ||7||
ತನ್ನ ಮಾಂಸವನ್ನು ಕತ್ತರಿಸಿದರೆ ಹೇಗೆ ವೇದನೆಯಾಗುತ್ತದೆಯೋ ಹಾಗೆ ಇನ್ನೊಬ್ಬರ ಮಾಂಸವನ್ನು ಕತ್ತರಿಸಿದರೂ ವೇದನೆಯಾಗುತ್ತದೆ ಎಂದು ವಿವೇಕಿಯಾದವನು ತಿಳಿಯಬೇಕು.
ಯಸ್ತು ಸರ್ವಾಣಿ ಮಾಂಸಾನಿ ಯಾವಜ್ಜೀವಂ ನ ಭಕ್ಷಯೇತ್ |
ಸ ಸ್ವರ್ಗೇ ವಿಪುಲಂ ಸ್ಥಾನಂ ಲಭತೇ ನಾತ್ರ ಸಂಶಯಃ ||8||
ಯಾವನು ಜೀವನವಿಡೀ ಯಾವ ಮಾಂಸವನ್ನೂ ಭಕ್ಷಿಸುವುದಿಲ್ಲವೋ ಅವನು ಸ್ವರ್ಗದಲ್ಲಿ ವಿಪುಲವಾದ ಸ್ಥಾನವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.
ಯಸ್ತು ವರ್ಷಶತಂ ಪೂರ್ಣಂ ತಪ್ಯತೇ ಪರಮಂ ತಪಃ |

ಯಶ್ಚಾಪಿ ವರ್ಜಯೇನ್ಮಾಂಸಂ ಸಮಮೇತನ್ನ ವಾ ಸಮಮ್ ॥9॥
ನೂರು ವರ್ಷಗಳ ಕಾಲ ಪೂರ್ಣವಾಗಿ ಶ್ರೇಷ್ಠವಾದ ತಪಸ್ಸನ್ನು ಆಚರಿಸುವವನು ಒಬ್ಬನು, ಇನ್ನೊಬ್ಬನು ಮಾಂಸವನ್ನು ಸಂಪೂರ್ಣವಾಗಿ ಭುಂಜಿಸದವನು- ಇವರಿಬ್ಬರೂ ಸಮಾನರಾದಾರು ಅಥವಾ ಆಗಲಾರರು.
ನ ಹಿ ಪ್ರಾಣ್ಯೈಃ ಪ್ರಿಯತಮಂ ಲೋಕೇ ಕಿಂಚನ ವಿದ್ಯತೇ |
ತಸ್ಮಾತ್ಪ್ರಾಣಿದಯಾ ಕಾರ್ಯಾ ಯಥಾತ್ಮನಿ ತಥಾ ಪರೇ ॥10॥
ಲೋಕದಲ್ಲಿ ಯಾರಿಗೂ ತಮ್ಮ ಪ್ರಾಣಕ್ಕಿಂತ ಹೆಚ್ಚು ಪ್ರಿಯವಾದ ವಸ್ತುವು ಯಾವುದೂ ಇಲ್ಲ. ಆದ್ದರಿಂದ ತನ್ನಲ್ಲಿ ಪ್ರೀತಿಯನ್ನು ಮಾಡುವಂತೆ ಇನ್ನೊಬ್ಬರಲ್ಲಿಯೂ ಪ್ರೀತಿಯನ್ನು ಮಾಡಿ, ಪ್ರಾಣಿಗಳಲ್ಲಿ ದಯೆಯನ್ನು ಮಾಡಬೇಕು.
ಸರ್ವೇ ಯಜ್ಞಾ ನ ತತ್ಕುರ್ಯುಃ ಸರ್ವೇ ದೇವಾಶ್ಚ ಭಾಮಿನಿ |
ಯನ್ಮಾಂಸರಸಮಾಸ್ವಾದ್ಯ ಪುನರ್ಮಾಂಸಾನಿ ವರ್ಜಯೇತ್ ॥11॥
ಎಲೌ ಭಾಮಿನಿಯೇ, ಮಾಂಸವನ್ನು ಮೊದಲು ಭಕ್ಷಿಸಿ, ಅದರ ರುಚಿಯನ್ನು ತಿಳಿದು ಪುನಃ ಯಾವನು ಮಾಂಸವನ್ನು ಬಿಡುತ್ತಾನೆಯೋ ಅವನಿಗೆ ಉಂಟಾಗುವ ಫಲವನ್ನು ಎಲ್ಲ ಯಜ್ಞಗಳೂ ಮತ್ತು ಎಲ್ಲಾ ದೇವತೆಗಳೂ ಸೇರಿ ಉಂಟುಮಾಡಲಾರರು.
ಧರ್ಮ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ |
ಇತ್ಯೇವಂ ಮುನಯಃ ಪ್ರಾಹುರ್ಮಾಂಸಸ್ಯಾಭಕ್ಷಣೇ ಗುಣಾಃ |
ಏವಂ ಬಹುಗುಣಂ ದೇವಿ ನೃಣಾಂ ಮಾಂಸವಿವರ್ಜನಮ್ ॥12॥
ಮುನಿಗಳು ಮಾಂಸದ ಅಭಕ್ಷಣೆಯಲ್ಲಿ ಧರ್ಮ, ಯಶಸ್ಸು, ಆಯುಷ್ಯ, ಸ್ವರ್ಗಪ್ರಾಪ್ತಿ, ಕ್ಷೇಮ ಮೊದಲಾದ ಗುಣಗಳಿವೆ ಎಂದು ಹೇಳುತ್ತಾರೆ. ಎಲೌ ದೇವಿಯೇ, ಮಾಂಸವರ್ಜನೆಯು ಹೀಗೆ ಅನೇಕ ಗುಣಗಳಿಂದ ಕೂಡಿದೆ.
ನ ಶಕ್ನುಯಾದ್ ಯದಾ ಜೀವನ್ ತ್ಯಕ್ತುಂ ಮಾಂಸಂ ಕಥಂಚನ |
ತ್ರಿಪುಣ್ಯಮಾಸಮಾತ್ರಂ ವಾ ವರ್ಜನೀಯಂ ವಿಶೇಷತಃ ॥13॥
ಬದುಕಿರುವವನು ಯಾವುದೇ ಕಾರಣದಿಂದ ಮಾಂಸವನ್ನು ಸಂಪೂರ್ಣವಾಗಿ ಬಿಡಲು ಸಾಧ್ಯವಾಗದಿದ್ದರೆ ಮೂರು ಪುಣ್ಯಮಾಸಗಳಲ್ಲಾದರೂ (ವೈಶಾಖ, ಕಾರ್ತಿಕ ಮತ್ತು ಮಾಘ ಮಾಸಗಳಲ್ಲಿ) ವಿಶೇಷವಾಗಿ ವರ್ಜಿಸಬೇಕು.
ನ ಶಕ್ನುಯಾದಪಿ ತಥಾ ಕೌಮುದೀಮಾಸಮೇವ ಚ |
ಜನ್ಮನಕ್ಷತ್ರತಿಥಿಷು ಸದಾ ಪರ್ವಸು ರಾತ್ರಿಷು |
ವರ್ಜನೀಯಂ ತಥಾ ಮಾಂಸಂ ಪರತ್ರ ಹಿತಮಿಚ್ಛತಾ ॥14॥
ಮೂರು ತಿಂಗಳು ಬಿಡಲೂ ಸಾಧ್ಯವಾಗದಿದ್ದರೆ ಕಾರ್ತಿಕ ಮಾಸದಲ್ಲಾದರೂ ಮಾಂಸವನ್ನು ವರ್ಜಿಸಬೇಕು. ಪರಲೋಕದಲ್ಲಿ ತನಗೆ ಹಿತವನ್ನು ಬಯಸುವವನು ಜನ್ಮನಕ್ಷತ್ರಗಳಲ್ಲಿಯೂ, ಜನ್ಮತಿಥಿಗಳಲ್ಲಿಯೂ, ಪರ್ವಕಾಲಗಳಲ್ಲಿಯೂ ಮತ್ತು ರಾತ್ರಿಗಳಲ್ಲಿಯೂ ಮಾಂಸವನ್ನು ವರ್ಜಿಸಬೇಕು.
ಅಶಕ್ತಃ ಕಾರಣಾನ್ಮರ್ತ್ಯೋ ಭೋಕ್ತುಮಿಚ್ಛೇದ್ ವಿಧಿಂ ಶೃಣು |
ಅನೇನ ಖಾದನ್ ವಿಧಿನಾ ಕಲ್ಮಷೇಣ ನ ಲಿಪ್ಯತೇ ॥15॥
ಯಾವುದೇ ಕಾರಣದಿಂದ ಮಾಂಸವನ್ನು ಬಿಡಲು ಅಸಮರ್ಥನಾದ ಮನುಷ್ಯನು ಮಾಂಸವನ್ನು ತಿನ್ನಲು ಬಯಸಿದರೆ ಅದರ ವಿಧಿಯನ್ನು ಕೇಳು. ಈ ವಿಧಾನದಿಂದ ಭಕ್ಷಿಸಿದರೆ ಅವನಿಗೆ ದೋಷಲೇಪವಾಗುವುದಿಲ್ಲ.
ಹತಾನಾಮುದ್ಗತಪ್ರಾಣಂ ಕ್ರೀತ್ವಾ ನ್ಯಾಯೇನ ಭಾಮಿನಿ |
ಬ್ರಾಹ್ಮಣಾತಿಥಿಪೂಜಾರ್ಥಂ ಭೋಕ್ತವ್ಯಂ ಹಿತಮಿಚ್ಛತಾ ॥16॥
ಎಲೌ ಭಾಮಿನಿಯೇ, ತನ್ನ ಹಿತವನ್ನು ಬಯಸುವವನು ಇನ್ನೊಬ್ಬರಿಂದ ಹತವಾದ ಪ್ರಾಣಿಯ ಮಾಂಸವನ್ನು ನ್ಯಾಯವಾದ ಬೆಲೆಯನ್ನು ಕೊಟ್ಟು, ಬ್ರಾಹ್ಮಣರ ಮತ್ತು ಅತಿಥಿಗಳ ಪೂಜಾರ್ಥವಾಗಿ ಕೊಂಡುಕೊಂಡು ಅನಂತರ ತಾನು ಭುಂಜಿಸಬೇಕು (ಲಕ್ಷ್ಮಾಲಂಕಾರ).
ಭೈಷಜ್ಯಕಾರಣಾದ್ ವ್ಯಾಧೌ ಖಾದನ್ ಪಾಪ್ಮೈರ್ನ ಲಿಪ್ಯತೇ |
ಪಿತೃಶೇಷಂ ತಥೈವಾಶ್ನನ್ ಮಾಂಸಂ ನಾಶುಭಮೃಚ್ಛತಿ ॥17॥
ಔಷಧಿಯ ನಿಮಿತ್ತದಿಂದಾಗಿ ವ್ಯಾಧಿಗ್ರಸ್ತನಾದವನು ಮಾಂಸ ಭಕ್ಷಣವನ್ನು ಮಾಡಿದರೆ ಪಾಪಲೇಪವುಂಟಾಗುವುದಿಲ್ಲ. ಹಾಗೆಯೇ ಪಿತೃಶೇಷವಾದ ಮಾಂಸವನ್ನು ತಿನ್ನುವವನೂ ಸಹ ಅಶುಭವನ್ನು ಹೊಂದುವುದಿಲ್ಲ.
ಉಮಾ
ಗುರುಪೂಜಾ ಕಥಂ ದೇವ ಕ್ರಿಯತೇ ಧರ್ಮಚಾರಿಭಿಃ ॥18॥
ಉಮಾ ದೇವನೇ, ಧರ್ಮವನ್ನು ಆಚರಿಸುವವರು ಗುರುಪೂಜೆಯನ್ನು ಹೇಗೆ ಮಾಡುತ್ತಾರೆ?
ಮಹೇಶ್ವರಃ
ಗುರುಪೂಜಾಂ ಪ್ರವಕ್ಷ್ಯಾಮಿ ಯಥಾವತ್ ತವ ಶೋಭನೇ |
ಕೃತಜ್ಞಾನಾಂ ಪರೋ ಧರ್ಮ ಇತಿ ವೇದಾನುಶಾಸನಮ್ ॥19॥
ಮಹೇಶ್ವರ ಎಲೌ ಶೋಭನೆಯೇ, ನಿನಗೆ ಗುರುಪೂಜೆಯನ್ನು ಸರಿಯಾಗಿ ಹೇಳುವೆನು. ಕೃತಜ್ಞರಾದವರಿಗೆ ಗುರುಪೂಜೆಯು ಶ್ರೇಷ್ಠವಾದ ಧರ್ಮ ಎಂದು ವೇದದ ಶಾಸನವಿದೆ.
ತಸ್ಮಾತ್ ಸ್ವಗುರವಃ ಪೂಜ್ಯಾಸ್ತೇ ಹಿ ಪೂರ್ವೋಪಕಾರಿಣಃ |
ಗುರೂಣಾಂ ಚ ಗರೀಯಾಂಸಸ್ತ್ರಯೋ ಲೋಕೇಷು ಪೂಜಿತಾಃ ॥20॥
ಆದ್ದರಿಂದ ತನ್ನ ಗುರುಗಳನ್ನು ಪೂಜಿಸಬೇಕು. ಏಕೆಂದರೆ ಅವರೇ ಇವನಿಗೆ ಮೊದಲು ಉಪಕಾರವನ್ನು ಮಾಡಿದವರು.

ಗುರುಗಳಲ್ಲಿಯೂ ಶ್ರೇಷ್ಠರಾದವರು ಮೂರು ಮಂದಿ ಅವರು ಲೋಕಪೂಜಿತರಾದವರು.
ಉಪಾಧ್ಯಾಯಃ ಪಿತಾ ಮಾತಾ ಸಂಪೂಜ್ಯಾಸ್ತೇ ವಿಶೇಷತಃ |
ಯೇ ಪಿತುರ್ಭ್ರಾತರೋ ಜ್ಯೇಷ್ಠಾ ಯೇ ಚ ತಸ್ಯಾನುಜಾಸ್ತಥಾ |
ಪಿತುಃ ಪಿತಾ ಚ ಸರ್ವೇ ತೇ ಪೂಜನೀಯಾಃ ತಥಾ ಪಿತಾ ॥21॥
ಉಪಾಧ್ಯಾಯರು, ತಂದೆ-ತಾಯಿಗಳು- ಈ ಮೂವರು ವಿಶೇಷವಾಗಿ ಪೂಜಿಸಲ್ಪಡಬೇಕಾದವರು. ತಂದೆಯ ಅಣ್ಣ-ತಮ್ಮಂದಿರು, ತಂದೆಯ ತಂದೆ ಎಲ್ಲರೂ ತಂದೆಯಂತೆಯೇ ಪೂಜಿಸಲ್ಪಡಬೇಕು.
ಮಾತುರ್ಯಾ ಭಗಿನೀ ಜ್ಯೇಷ್ಠಾ ಮಾತುರ್ಯಾ ಚ ಯವೀಯಸೀ |
ಮಾತಾಮಹೀ ಚ ಧಾತ್ರೀ ಚ ಸರ್ವಾಸ್ತಾ ಮಾತರಃ ಸ್ಮೃತಾಃ ॥22॥
ತಾಯಿಯ ಅಕ್ಕ-ತಂಗಿಯರು, ತಾಯಿಯ ತಾಯಿ ಮತ್ತು ತನ್ನನ್ನು ಸಾಕಿದ ದಾದಿ ಎಲ್ಲರೂ ತಾಯಿಯರೆಂದೇ ಹೇಳಲ್ಪಡುತ್ತಾರೆ.
ಉಪಾಧ್ಯಾಯಸ್ಯ ಯಃ ಪುತ್ರೋ ಯಶ್ಚ ತಸ್ಯ ಭವೇದ್ ಗುರುಃ |
ಋತ್ವಿಗ್ಗುರುಃ ಪಿತಾ ಚೇತಿ ಗುರವಃ ಸಂಪ್ರಕೀರ್ತಿತಾಃ ॥23॥
ಉಪಾಧ್ಯಾಯನ ಪುತ್ರ, ಉಪಾಧ್ಯಾಯನ ಗುರು, ಋತ್ವಿಕ್, ತನ್ನ ಗುರು, ತಂದೆ ಇವರೆಲ್ಲರೂ ಗುರುಗಳೆಂದು ಹೇಳಲ್ಪಡುತ್ತಾರೆ.
ಜ್ಯೇಷ್ಠೋ ಭ್ರಾತಾ ನರೇಂದ್ರಶ್ಚ ಮಾತುಲಃ ಶ್ವಶುರಸ್ತಥಾ |
ಭಯತ್ರಾತಾ ಚ ಭರ್ತಾ ಚ ಗುರವಸ್ತೇ ಪ್ರಕೀರ್ತಿತಾಃ ॥24॥
ಅಣ್ಣ, ರಾಜ, ಸೋದರಮಾವ, ಹೆಣ್ಣುಕೊಟ್ಟ ಮಾವ, ಭಯದಿಂದ ರಕ್ಷಿಸುವವನು, ಪೋಷಿಸುವವನು- ಎಲ್ಲರೂ ಗುರುಗಳೆಂದು ಹೇಳಲ್ಪಡುತ್ತಾರೆ.
ಇತ್ಯೇಷ ಕಥಿತಃ ಸಾಧ್ವಿ ಗುರೂಣಾಂ ಸರ್ವಸಂಗ್ರಹಃ |
ಅನುವೃತ್ತಿಂ ಚ ಪೂಜಾಂ ಚ ತೇಷಾಮಪಿ ನಿಬೋಧ ಮೇ ॥25॥
ಎಲೌ ಸಾಧ್ವಿಯೇ, ಎಲ್ಲ ಗುರುಗಳ ಸಂಗ್ರಹವನ್ನು ಈ ರೀತಿಯಲ್ಲಿ ಹೇಳಿದ್ದೇನೆ. ಅವರ ಅನುಸರಣೆಯನ್ನು ಮತ್ತು ಪೂಜಾ ವಿಧಾನವನ್ನು ತಿಳಿದುಕೊ.
ಅವಧ್ಯೌ ಮಾತಾಪಿತರಾವುಪಾಧ್ಯಾಯಸ್ತಥೈವ ಚ |
ಕಥಂಚಿನ್ನಾವಮಂತವ್ಯಾ ನರೇಣ ಹಿತಮಿಚ್ಛತಾ ॥26॥
ತಂದೆ-ತಾಯಿಗಳನ್ನಾಗಲೀ, ಉಪಾಧ್ಯಾಯರನ್ನಾಗಲೀ ಎಂದೂ ಹೊಡೆಯಬಾರದು. ತನ್ನ ಹಿತವನ್ನು ಬಯಸುವ ಮನುಷ್ಯನು ಯಾವ ರೀತಿಯಿಂದಲೂ ಅವರಿಗೆ ಅವಮಾನವನ್ನು ಮಾಡಬಾರದು.
ಯೇನ ಪ್ರೀಣಂತಿ ಪಿತರಸ್ತೇನ ಪ್ರೀತಃ ಪ್ರಜಾಪತಿಃ |
ಯೇನ ಪ್ರೀಣಾತಿ ಚೇನ್ಮಾತಾ ಪ್ರೀತಾಃ ಸ್ಯುರ್ದೇವಮಾತರಃ ॥27॥
ಪಿತೃಗಳು ಪ್ರೀತರಾದರೆ ಬ್ರಹ್ಮದೇವರು ಪ್ರೀತರಾಗುತ್ತಾರೆ. ತಾಯಿಯು ಪ್ರೀತಳಾದರೆ ದೇವ-ಮಾತೃಗಳೆಲ್ಲರೂ ಪ್ರೀತರಾಗುತ್ತಾರೆ.
ಯೇನ ಪ್ರೀಣಾತ್ಯುಪಾಧ್ಯಾಯೋ ಬ್ರಹ್ಮಾ ತೇನಾಭಿಪೂಜಿತಃ |
ಅಪ್ರೀತೇಷು ಪುನಸ್ತೇಷು ನರೋ ನರಕಮೇತಿ ಹಿ ॥28॥
ಉಪಾಧ್ಯಾಯನು ಪ್ರೀತನಾದರೆ ಬ್ರಹ್ಮದೇವರೇ ಅವನಿಂದ ಪೂಜಿಸಲ್ಪಡುತ್ತಾರೆ. ಅವರು (ಮೂವರು) ಪ್ರಸನ್ನರಾಗದಿದ್ದರೆ ಮನುಷ್ಯನು ನರಕಕ್ಕೆ ಹೋಗುತ್ತಾನೆ.
ಗುರೂಣಾಂ ವೈರನಿರ್ಬಂಧೋ ನ ಕರ್ತವ್ಯಃ ಕಥಂಚನ |
ನರಕಂ ಸ ಗುರುಪ್ರೀತ್ಯಾ ಮನಸಾಪಿ ನ ಗಚ್ಛತಿ ॥29॥
ಗುರುಗಳ ಜೊತೆ ವೈರವನ್ನಾಗಲೀ ಅವರಿಗೆ ನಿರ್ಬಂಧವನ್ನಾಗಲೀ ಯಾವ ರೀತಿಯಿಂದಲೂ ಮಾಡಬಾರದು. ಗುರುಗಳನ್ನು ಹರ್ಷಗೊಳಿಸಿದವನು ಮನಸ್ಸಿನಿಂದಲೂ ನರಕಕ್ಕೆ ಹೋಗುವುದಿಲ್ಲ.
ನ ಬ್ರೂಯಾದ್ ವಿಪ್ರಿಯಂ ತೇಷಾಮನಿಷ್ಟೇ ನ ಪ್ರವರ್ತಯೇತ್ |
ವಿಗೃಹ್ಯ ನ ವದೇತ್ ತೇಷಾಂ ಸಮೀಪೇ ಸ್ಪರ್ಧಯಾ ಕ್ವಚಿತ್ ॥30॥
ಅವರಿಗೆ ಅಪ್ರಿಯವಾದುದನ್ನು ಮಾತನಾಡಬಾರದು. ಅವರಿಗೆ ಇಷ್ಟವಿಲ್ಲದುದರಲ್ಲಿ ಪ್ರವೃತ್ತನಾಗಬಾರದು. ಅವರ ಸಮೀಪದಲ್ಲಿ, ಅವರ ಜೊತೆ ವಿರೋಧವನ್ನು ಮಾಡಿ ಸ್ಪರ್ಧೆಯಿಂದ ಮಾತನಾಡಬಾರದು.
ಯದ್ಯದಿಚ್ಛಂತಿ ತೇ ಕರ್ತುಮಸ್ವತಂತ್ರಸ್ತದಾಚರೇತ್ |
ವೇದಾನುಶಾಸನಸಮಂ ಗುರುಶಾಸನಮಿಷ್ಯತೇ ॥31॥
ಅವರು ಏನೇನು ಮಾಡಬೇಕೆಂದು ಇಚ್ಛಿಸುತ್ತಾರೋ ಅದನ್ನು ಅಸ್ವತಂತ್ರನಾಗಿ ಆಚರಿಸಬೇಕು. ಗುರುಗಳ ಶಾಸನವು ವೇದದ ಶಾಸನಕ್ಕೆ ಸಮವಾದುದು ಎಂದು ಹೇಳಲ್ಪಡುತ್ತದೆ.
ಕಲಹಾಂಶ್ಚ ವಿವಾದಾಂಶ್ಚ ಗುರುಭಿಃ ಸಹ ವರ್ಜಯೇತ್ |
ಕೈತವಂ ಪರಿಹಾಸಾಂಶ್ಚ ಮನ್ಯುಕಾಮಾಶ್ರಯಾಃ ಕಥಾಃ ॥32॥
ಗುರುಗಳ ಜೊತೆಯಲ್ಲಿ ಕಲಹವನ್ನಾಗಲೀ, ವಿವಾದವನ್ನಾಗಲೀ ಮಾಡಬಾರದು. ಕಪಟವನ್ನಾಗಲೀ, ಹಾಸ್ಯವನ್ನಾಗಲೀ, ಸಿಟ್ಟು ಮತ್ತು ಕಾಮಕ್ಕೆ ಸಂಬಂಧಿಸಿದ ಮಾತುಗಳನ್ನಾಗಲೀ ಆಡಬಾರದು.
ಗುರೂಣಾಂ ಯೋಽನಹಂವಾದೀ ಕರೋತ್ಯಾಜ್ಞಾಮತಂದ್ರಿತಃ |
ನ ತಸ್ಮಾತ್ ಸರ್ವಮರ್ತ್ಯೇಷು ವಿದ್ಯತೇ ಪುಣ್ಯಕೃತ್ತಮಃ ॥33॥
ಯಾವನು ನಿರಹಂಕಾರಿಯಾಗಿ, ಆಲಸ್ಯವಿಲ್ಲದೆ ಗುರುಗಳ ಆಜ್ಞೆಯನ್ನು ಪಾಲಿಸುತ್ತಾನೆಯೋ, ಸರ್ವಮನುಷ್ಯರಲ್ಲಿ ಅವನಿಗಿಂತ

ಹೆಚ್ಚು ಪುಣ್ಯವನ್ನು ಮಾಡಿದವನು ಯಾವನೂ ಇರುವುದಿಲ್ಲ.
ಅಸೂಯಾಮಪವಾದಾಂಶ್ಚ ಗುರೂಣಾಂ ಪರಿವರ್ಜಯೇತ್ |
ತೇಷಾಂ ಪ್ರಿಯಹಿತಾನ್ವೇಷೀ ಭೂತ್ವಾ ಪರಿಚರೇತ್ ಸದಾ ॥34॥
ಗುರುಗಳಲ್ಲಿ ಅಸೂಯೆಯನ್ನಾಗಲೀ, ಅವರ ಮೇಲೆ ಅಪವಾದವನ್ನು ಹೊರಿಸುವುದನ್ನಾಗಲೀ ಪರಿತ್ಯಜಿಸಬೇಕು. ಅವರ ಪ್ರಿಯವನ್ನು ಮತ್ತು ಹಿತವನ್ನು ಬಯಸುತ್ತಾ ಯಾವಾಗಲೂ ಪರಿಚರಿಸಬೇಕು (ಸೇವೆ ಮಾಡಬೇಕು).
ನ ತದ್ಯಜ್ಞಫಲಂ ಕುರ್ಯಾತ್ ತಪೋ ವಾऽऽಚರಿತಂ ಮಹತ್ |
ಯತ್ ಕುರ್ಯಾತ್ ಪುರುಷಸ್ಯೇಹ ಗುರುಪೂಜಾ ಸದಾ ಕೃತಾ ॥35॥
ಯಾವಾಗಲೂ ಗುರುಪೂಜೆಯನ್ನು ಮಾಡಿದ ಮನುಷ್ಯನಿಗೆ ಗುರುಪೂಜೆಯು ಎಂತಹ ಫಲವನ್ನು ಉಂಟುಮಾಡಿಕೊಡುತ್ತದೆಯೋ ಅದನ್ನು ಆಚರಿಸಿದ ಯಜ್ಞವಾಗಲೀ ಅಥವಾ ದೊಡ್ಡ ತಪಸ್ಸಾಗಲೀ ಉಂಟುಮಾಡಿಕೊಡಲಾರವು.
ಅನುವೃತ್ತೇರ್ವಿನಾ ಧರ್ಮೋ ನಾಸ್ತಿ ಸರ್ವಾಶ್ರಮೇಷ್ವಪಿ |
ತಸ್ಮಾತ್ ಸಮಾದೃತಃ ಕಾಲೇ ಗುರುವೃತ್ತಿಂ ಸಮಾಚರೇತ್ ॥36॥
ಎಲ್ಲಾ ಆಶ್ರಮಗಳಲ್ಲಿ ಗುರುಗಳನ್ನು ಅನುಸರಿಸುವುದನ್ನು ಬಿಟ್ಟು ಬೇರೆ ಧರ್ಮಾಚರಣೆ ಇಲ್ಲ. ಆದ್ದರಿಂದ ಯೋಗ್ಯಕಾಲದಲ್ಲಿ ಗುರುಸೇವೆಯನ್ನು ಮಾಡಬೇಕು.
ಸ್ವಮರ್ಥಂ ಸ್ವಶರೀರಂ ಚ ಗುರ್ವರ್ಥೇ ಸಂತ್ಯಜೇದ್ ಬುಧಃ |
ವಿವಾದಂ ಧನಹೇತೋರ್ವಾ ಮೋಹಾದ್ವಾ ತೈರ್ನ ರೋಚಯೇತ್ ॥
ತನ್ನ ಧನವನ್ನು ಮತ್ತು ಶರೀರವನ್ನು ಗುರುಗಳ ಸಲುವಾಗಿ ವಿನಿಯೋಗಿಸಬೇಕು. ಧನದ ನಿಮಿತ್ತದಿಂದಾಗಲೀ ಅಥವಾ ಮೋಹದಿಂದಾಗಲೀ ಅವರ ಜೊತೆಯಲ್ಲಿ ವಿವಾದವನ್ನು ಮಾಡಲು ಬಯಸಬಾರದು.
ಬ್ರಹ್ಮಚರ್ಯಮಹಿಂಸಾ ಚ ದಾನಾನಿ ವಿವಿಧಾನಿ ಚ |
ಗುರುಭಿಃ ಪ್ರತಿಷಿದ್ಧಸ್ಯ ಸರ್ವಮೇತದಪಾರ್ಥಕಮ್ ॥38॥
ಗುರುಗಳ ಪ್ರೀತಿಗೆ ಪಾತ್ರನಾಗದವನಿಗೆ ಅವನು ಮಾಡುವ ಬ್ರಹ್ಮಚರ್ಯ, ಅಹಿಂಸೆ, ವಿವಿಧ ದಾನಗಳು ಎಲ್ಲವೂ ವ್ಯರ್ಥವಾದವು.
ಉಪಾಧ್ಯಾಯಂ ಪಿತರಂ ಮಾತರಂ ಚ
ಯೇऽಭಿದ್ರುಹ್ಯುರ್ಮನಸಾ ಕರ್ಮಣಾ ವಾ |
ತೇಷಾಂ ಪಾಪಂ ಭ್ರೂಣಹತ್ಯಾವಿಶಿಷ್ಟಂ
ತೇಭ್ಯೋ ನಾನ್ಯಃ ಪಾಪಕೃದಸ್ತಿ ಲೋಕೇ ॥39॥
ಯಾರು ಮನಸ್ಸಿನಿಂದಾಗಲೀ, ಕರ್ಮದಿಂದಾಗಲೀ ಉಪಾಧ್ಯಾಯರಿಗೂ, ಮಾತಾ ಪಿತೃಗಳಿಗೂ ದ್ರೋಹವನ್ನು ಮಾಡುತ್ತಾರೆಯೋ ಅವರಿಗೆ ಉಂಟಾಗುವ ಪಾಪವು ಭ್ರೂಣ ಹತ್ಯೆಗಿಂತಲೂ ದೊಡ್ಡದಾದ ಪಾಪ. ಲೋಕದಲ್ಲಿ ಅವರಿಗಿಂತ ಹೆಚ್ಚು ಪಾಪವನ್ನು ಮಾಡಿದವನು ಯಾವನೂ ಇರುವುದಿಲ್ಲ.
ಉಮಾ
ಉಪವಾಸವಿಧಿಂ ತತ್ರ ತನ್ಮೇ ಶಂಸಿತುಮರ್ಹಸಿ ॥40॥
ಉಮಾ ನನಗೆ ಉಪವಾಸ ವಿಧಿಯನ್ನು ಹೇಳಬೇಕು.
ಮಹೇಶ್ವರಃ
ಶರೀರಮಲಶಾಂತ್ಯರ್ಥಮಿಂದ್ರಿಯೋಚ್ಛೋಷಣಾಯ ಚ |
ಏಕಭುಕ್ತೋಪವಾಸೈಸ್ತು ಧಾರಯಂತೇ ವ್ರತಂ ನರಾಃ ॥41॥
ಮಹೇಶ್ವರ ಶರೀರದೋಷಗಳ ಪರಿಹಾರಾರ್ಥವಾಗಿ ಮತ್ತು ಇಂದ್ರಿಯಗಳನ್ನು ಪಳಗಿಸುವ ಸಲುವಾಗಿ ಮನುಷ್ಯರು ಏಕಭುಕ್ತ ಮತ್ತು ಉಪವಾಸ ವ್ರತಗಳನ್ನು ಮಾಡುತ್ತಾರೆ.
ಲಭಂತೇ ವಿಪುಲಂ ಧರ್ಮಂ ತಥಾऽऽಹಾರಪರಿಕ್ಷಯಾತ್ |
ಬಹೂನಾಮುಪರೋಧಂ ತು ನ ಕುರ್ಯಾದಾತ್ಮಕಾರಣಾತ್ ॥42॥
ಆಹಾರದ ಪರಿತ್ಯಾಗವನ್ನು ಮಾಡುವುದರಿಂದ ವಿಪುಲವಾದ ಧರ್ಮವನ್ನು ಹೊಂದುತ್ತಾರೆ. ತನ್ನ ಸಲುವಾಗಿ ಬಹಳ ಜನರಿಗೆ ತೊಂದರೆಯನ್ನು ಮಾಡಬಾರದು.
ಜೀವೋಪಘಾತಂ ಚ ತಥಾ ಧಾನ್ಯಂ ಸಂಜೀವ್ಯಮಿಷ್ಯತೇ |
ತಸ್ಮಾತ್ ಪುಣ್ಯಂ ಲಭೇನ್ಮರ್ತ್ಯಃ ಸ್ವಯಮಾಹಾರಕರ್ಶನಾತ್ |
ತದ್ ಗೃಹಸ್ಥೈರ್ಯಥಾಶಕ್ತಿ ಕರ್ತವ್ಯಮಿತಿ ನಿಶ್ಚಯಃ ॥43॥
ಜೀವರಿಗೆ ತೊಂದರೆಯನ್ನು ಮಾಡಬಾರದು (ಆಹಾರವನ್ನು ಸೇವಿಸುವುದರಿಂದ ಧಾನ್ಯದಲ್ಲಿರುವ ಜೀವರಿಗೆ ಹಿಂಸೆಯಾಗುತ್ತದೆ). ಧಾನ್ಯವು ಜೀವಸಹಿತವಾಗಿ ಉಳಿಯಬೇಕಾದುದು ಎಂದು ಹೇಳುತ್ತಾರೆ. ಆದ್ದರಿಂದ ಸ್ವತಃ ಆಹಾರವನ್ನು ಕಡಿಮೆ ಮಾಡಿಕೊಳ್ಳುವ ಮನುಷ್ಯನು ಪುಣ್ಯವನ್ನು ಪಡೆಯುತ್ತಾನೆ. ಗೃಹಸ್ಥರು ತಮ್ಮ ಶಕ್ತಿಗೆ ಅನುಗುಣವಾಗಿ ಈ ಉಪವಾಸ ವ್ರತವನ್ನು ಮಾಡಬೇಕೆಂಬುದು ನಿಶ್ಚಿತವಾದುದು.
ಉಪವಾಸಾರ್ದಿತೇ ಕಾಯೇ ಆಪದರ್ಥಂ ಪಯೋ ಜಲಮ್ |
ಭುಂಜನ್ನ ಪ್ರತಿಘಾತೀ ಸ್ಯಾದ್ ಬ್ರಾಹ್ಮಣಾನನುಮಾನ್ಯ ಚ ॥44॥
ದೇಹವು ಉಪವಾಸದಿಂದ ಪೀಡಿತವಾಗಿದ್ದಾಗ ಆಪತ್ತಿನ ಪರಿಹಾರಕ್ಕಾಗಿ ಕ್ಷೀರವನ್ನಾಗಲೀ, ಜಲವನ್ನಾಗಲೀ ಬ್ರಾಹ್ಮಣರ ಅನುಮತಿಯಿಂದ ಸೇವಿಸಿದರೆ ಉಪವಾಸ ವ್ರತಕ್ಕೆ ಭಂಗ ಉಂಟಾಗುವುದಿಲ್ಲ.

ಉಮಾ
ಬ್ರಹ್ಮಚರ್ಯಂ ಕಥಂ ದೇವ ರಕ್ಷಿತವ್ಯಂ ವಿಜಾನತಾ ॥45॥
ಉಮಾ ಎಲೈ ದೇವನೇ, ವಿವೇಕಿಯಾದವನು ಬ್ರಹ್ಮಚರ್ಯವನ್ನು ಹೇಗೆ ರಕ್ಷಿಸಿಕೊಳ್ಳಬೇಕು?
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಶೃಣು ದೇವಿ ಸಮಾಹಿತಾ ॥46॥
ಮಹೇಶ್ವರ ದೇವಿಯೇ, ಅದನ್ನು ನಿನಗೆ ಹೇಳುವೆನು. ಸಮಾಧಾನದಿಂದ ಕೇಳು.
ಬ್ರಹ್ಮಚರ್ಯಂ ಪರಂ ಶೌಚಂ ಬ್ರಹ್ಮಚರ್ಯಂ ಪರಂ ತಪಃ |
ಕೇವಲಂ ಬ್ರಹ್ಮಚರ್ಯೇಣ ಪ್ರಾಪ್ಯತೇ ಪರಮಂ ಪದಮ್ ॥47॥
ಬ್ರಹ್ಮಚರ್ಯವು ಶ್ರೇಷ್ಠವಾದ ಶೌಚ. ಬ್ರಹ್ಮಚರ್ಯವು ಶ್ರೇಷ್ಠವಾದ ತಪಸ್ಸು. ಕೇವಲ ಬ್ರಹ್ಮಚರ್ಯದಿಂದ ಶ್ರೇಷ್ಠವಾದ ಸ್ಥಾನವು ದೊರೆಯುತ್ತದೆ.
ಸಂಕಲ್ಪಾದ್ ದರ್ಶನಾಚ್ಚೈವ ತದ್ಯುಕ್ತವಚನಾದಪಿ |
ಸಂಸ್ಪರ್ಶಾದಥ ಸಂಯೋಗಾತ್ ಪಂಚಧಾ ರಕ್ಷಿತಂ ವ್ರತಮ್ ॥48॥
ಮೈಥುನ ವಿಷಯದ ಸಂಕಲ್ಪದಿಂದಲೂ, ದರ್ಶನದಿಂದಲೂ, ತತ್ಸಂಬಂಧಿಯಾದ ಮಾತುಗಳಿಂದಲೂ, ಸ್ಪರ್ಶದಿಂದಲೂ ಮತ್ತು ಸಂಯೋಗದಿಂದಲೂ - ಈ ಐದು ರೀತಿಯಲ್ಲಿ ಬ್ರಹ್ಮಚರ್ಯವನ್ನು ರಕ್ಷಿಸಿಕೊಳ್ಳಬೇಕು.
ವ್ರತವದ್ ಧಾರಿತಂ ಚೈವ ಬ್ರಹ್ಮಚರ್ಯಮಕಲ್ಮಷಮ್ |
ನಿತ್ಯಸಂರಕ್ಷಣಂ ತಸ್ಯ ನೈಷ್ಠಿಕಾನಾಂ ವಿಧೀಯತೇ |
ತದಿಷ್ಯತೇ ಗೃಹಸ್ಥಾನಾಂ ಕಾಲಮುದ್ದಿಶ್ಯ ಕಾರಣಮ್ ॥49॥
ವ್ರತದಂತೆ ಧಾರಣೆ ಮಾಡಿದ ಈ ಬ್ರಹ್ಮಚರ್ಯವು ನಿಷ್ಕಲ್ಮಷವಾಗಿರುತ್ತದೆ. ನೈಷ್ಠಿಕ ಬ್ರಹ್ಮಚಾರಿಗಳು ಅಂತಹ ಬ್ರಹ್ಮಚರ್ಯವನ್ನು ಯಾವಾಗಲೂ ಸಂರಕ್ಷಿಸಿಕೊಳ್ಳಬೇಕು ಎಂಬುದು ವಿಹಿತವಾಗಿದೆ. ಗೃಹಸ್ಥರಿಗೆ ವಿಶೇಷ ಕಾಲಗಳಲ್ಲಿ ಬ್ರಹ್ಮಚರ್ಯವು ವಿಹಿತವಾಗಿದೆ.
ಜನ್ಮನಕ್ಷತ್ರಯೋಗೇಷು ಪುಣ್ಯವಾಸೇಷು ಪರ್ವಸು |
ದೇವತಾಧರ್ಮಕಾರ್ಯೇಷು ಬ್ರಹ್ಮಚರ್ಯವ್ರತಂ ಚರೇತ್ ॥50॥
ಜನ್ಮ ನಕ್ಷತ್ರಗಳಲ್ಲಿ, ಪುಣ್ಯಕ್ಷೇತ್ರಗಳಲ್ಲಿ, ಪರ್ವಕಾಲಗಳಲ್ಲಿ, ದೇವತಾ ಕಾರ್ಯಗಳಲ್ಲಿ, ಧರ್ಮಕಾರ್ಯಗಳಲ್ಲಿ ಗೃಹಸ್ಥನು ಬ್ರಹ್ಮಚರ್ಯವನ್ನು ಪಾಲಿಸಬೇಕು.
ಬ್ರಹ್ಮಚರ್ಯವ್ರತಫಲಂ ಲಭೇದ್ ದಾರವ್ರತೀ ಸದಾ |
ಶೌಚಮಾಯುಸ್ತಥಾಽಽರೋಗ್ಯಂ ಲಭ್ಯತೇ ಬ್ರಹ್ಮಚಾರಿಭಿಃ ॥51॥
ಪತ್ನೀ ಇದ್ದವನೂ ಸಹ ಹೀಗೆ ಮಾಡಿದರೆ ಬ್ರಹ್ಮಚರ್ಯವ್ರತದ ಫಲವನ್ನು ಹೊಂದುತ್ತಾನೆ. ಬ್ರಹ್ಮಚರ್ಯ ವ್ರತವನ್ನು ಮಾಡಿದವರು ಶುದ್ಧಿಯನ್ನೂ, ಆಯುಸ್ಸನ್ನೂ, ಆರೋಗ್ಯವನ್ನೂ ಪಡೆಯುತ್ತಾರೆ.
ಉಮಾ
ತೀರ್ಥಚರ್ಯಾವ್ರತಂ ದೇವ ಕ್ರಿಯತೇ ಧರ್ಮಕಾಂಕ್ಷಿಭಿಃ |
ಕಾನಿ ತೀರ್ಥಾನಿ ಲೋಕೇಶ ತನ್ಮೇ ಶಂಸಿತುಮರ್ಹಸಿ ॥52॥
ಉಮಾ ಎಲೈ ದೇವನೇ, ಧರ್ಮಾಕಾಂಕ್ಷಿಗಳು ತೀರ್ಥಯಾತ್ರಾ ವ್ರತವನ್ನು ಮಾಡುತ್ತಾರೆ. ಲೋಕೇಶನೇ, ತೀರ್ಥವು ಯಾವುವು ಎಂದು ನನಗೆ ಹೇಳಬೇಕು.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ತೀರ್ಥಸ್ನಾನವಿಧಿಂ ಪ್ರಿಯೇ |
ಪಾವನಾರ್ಥಂ ಚ ಶೌಚಾರ್ಥಂ ಬ್ರಹ್ಮಣಾ ನಿರ್ಮಿತಂ ಪುರಾ ॥53॥
ಮಹೇಶ್ವರ ಸಂತೋಷ. ಪ್ರಿಯೆಯೇ, ನಿನಗೆ ತೀರ್ಥಸ್ನಾನವಿಧಿಯನ್ನು ಹೇಳುವೆನು. ತೀರ್ಥವು ಹಿಂದೆ ಬ್ರಹ್ಮದೇವರಿಂದ ಪುಣ್ಯಸಂಪಾದನೆಗಾಗಿ ಮತ್ತು ಶೌಚಾಚಾರದ ಸಲುವಾಗಿ ನಿರ್ಮಿಸಲ್ಪಟ್ಟವು.
ಯಾಸ್ತು ಲೋಕೇ ಮಹಾನದ್ಯಸ್ತಾಃ ಸರ್ವಾಸ್ತೀರ್ಥಸಂಜ್ಞಿತಾಃ |
ತಾಸಾಂ ಪ್ರಾಕ್‌ಸ್ರೋತಸಃ ಶ್ರೇಷ್ಠಾಃ ಸಂಗಮಶ್ಚ ಪರಸ್ಪರಮ್ |
ತಾಸಾಂ ಸಾಗರಸಂಯೋಗೋ ವರಿಷ್ಠಶ್ಚೇತಿ ವಿದ್ಯತೇ ॥54॥
ಲೋಕದಲ್ಲಿರುವ ಮಹಾನದಿಗಳೆಲ್ಲವೂ ತೀರ್ಥಗಳೆಂದು ಕರೆಯಲ್ಪಡುತ್ತವೆ. ಅವುಗಳಲ್ಲಿ ಪೂರ್ವಾಭಿಮುಖವಾಗಿ ಹರಿಯುವ ನದಿಗಳು ಶ್ರೇಷ್ಠವಾದವುಗಳು. ನದಿಗಳ ಪರಸ್ಪರ ಸಂಗಮವೂ ಶ್ರೇಷ್ಠವಾದುದು. ನದೀ-ಸಾಗರ ಸಂಗಮವು ಶ್ರೇಷ್ಠವಾದುದು.
ತಾಸಾಮುಭಯತಃ ಕೂಲಂ ಯತ್ರ ತತ್ರ ಮನೀಷಿಭಿಃ |
ದೇವೈರ್ವಾ ಸೇವಿತಂ ದೇವಿ ತತ್ತೀರ್ಥಂ ಪರಮಂ ಸ್ಮೃತಮ್ ॥55॥
ಅವುಗಳಲ್ಲಿ ಎರಡೂ ಕಡೆಗಳಲ್ಲಿ ದಡವಿರುವ ಸ್ರೋತಸ್ಸುಗಳು ಋಷಿಗಳಿಂದಲೂ, ದೇವತೆಗಳಿಂದಲೂ ಸೇವಿತವಾದವುಗಳು. ಎಲೌ ದೇವಿಯೇ, ಅಂತಹ ತೀರ್ಥವು ಬಹಳ ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ.
ಸಮುದ್ರಶ್ಚ ಮಹಾತೀರ್ಥಂ ಪಾವನಂ ಪರಮಂ ಶುಭಮ್ |
ತಸ್ಯ ಕೂಲಗತಾಸ್ತೀರ್ಥಾ ಮಹದ್ಭಿಶ್ಚ ಸಮಾಪ್ಲುತಾಃ ॥56॥
ಸಮುದ್ರವೂ ಸಹ ಪರಮ ಮಂಗಳವಾದ, ಪವಿತ್ರವಾದ ದೊಡ್ಡ ತೀರ್ಥ. ಸಮುದ್ರತೀರದಲ್ಲಿರುವ, ಮಹಾತ್ಮರಿಂದ ಸೇವಿತವಾದ ಜಲಾಶಯಗಳೂ ಸಹ ತೀರ್ಥಗಳು.

ಸ್ರೋತಸಾಂ ಪರ್ವತಾನಾಂ ಚ ಜೋಷಿತಾನಾಂ ಮಹರ್ಷಿಭಿಃ |
ಅಪಿ ಕೂಪತಟಾಕಂ ವಾ ಮುನಿಭಿಃ ಸೇವಿತಂ ಪ್ರಿಯೇ ||57||
ತತ್ತು ತೀರ್ಥಮಿತಿ ಜ್ಞೇಯಂ ಪ್ರಭಾವಾತ್ತು ತಪಸ್ವಿನಾಮ್ |
ತದಾಪ್ರಭೃತಿ ತೀರ್ಥತ್ವಂ ಲೇಭೇ ಲೋಕಹಿತಾಯ ವೈ ||58||
ಮಹರ್ಷಿಗಳಿಂದ ಸೇವಿತವಾದ ನದಿಗಳು, ಪರ್ವತಗಳು, ಕೆರೆ-ಬಾವಿಗಳು ತಪಸ್ವಿಗಳ ಪ್ರಭಾವದಿಂದ ತೀರ್ಥವೆಂದು ತಿಳಿಯಬೇಕು. ಎಲೌ ಪ್ರಿಯೆಯೇ, ಮಹಾತ್ಮರ ಸಂಪರ್ಕದಿಂದ ಆ ಜಲಾಶಯಗಳು ಲೋಕಹಿತಕ್ಕಾಗಿ ತೀರ್ಥಸಂಜ್ಞೆಯನ್ನು ಪಡೆದವು.
ಏವಂ ತೀರ್ಥೋದ್ಭವಂ ವಿದ್ಧಿ ತಸ್ಯ ಸ್ನಾನವಿಧಿಂ ಶೃಣು ||59||
ತೀರ್ಥಗಳು ಹೀಗೆ ಉಂಟಾದವುಗಳು ಎಂದು ತಿಳಿ. ಅವುಗಳಲ್ಲಿ ಸ್ನಾನ ಮಾಡುವ ವಿಧಿಯನ್ನು ಹೇಳುತ್ತೇನೆ, ಕೇಳು.
ತನ್ಮನಾ ವ್ರತಭೂಯಿಷ್ಠೋ ಗತ್ವಾ ತೀರ್ಥಾಭಿಕಾಂಕ್ಷಯಾ |
ಉಪವಾಸತ್ರಯಂ ಕುರ್ಯಾದೇಕಂ ವಾ ನಿಯಮಾನ್ವಿತಃ ||60||
ತೀರ್ಥವನ್ನೇ ಮನಸ್ಸಿನಲ್ಲಿ ಧ್ಯಾನ ಮಾಡುತ್ತಾ, ಅಲ್ಲಿಗೆ ಹೋಗಲು ಬಯಸಿ, ತೀರ್ಥಕ್ಕೆ ಹೋಗಿ, ಮೂರು ರಾತ್ರಿಗಳು ಅಥವಾ ಒಂದು ದಿನವಾಗಲೀ ನಿಯಮದಿಂದ ಕೂಡಿ ಉಪವಾಸವನ್ನು ಮಾಡಬೇಕು.
ಪುಣ್ಯಮಾಸಯುತೇ ಕಾಲೇ ಪೌರ್ಣಮಾಸ್ಯಾಂ ಯಥಾವಿಧಿ |
ಬಹಿರೇವ ಶುಚಿರ್ಭೂತ್ವಾ ತತ್ತೀರ್ಥಂ ತನ್ಮನಾ ವಿಶೇತ್ ||61||
ಪುಣ್ಯಮಾಸಗಳಲ್ಲಿ ಅದರಲ್ಲೂ ಪೌರ್ಣಮಾಸಿಯಂದು ವಿಧಿಗೆ ಅನುಗುಣವಾಗಿ ಹೊರಗೆ ಸ್ನಾನವನ್ನು ಮಾಡಿ, ಶುಚಿಯಾಗಿ, ಅನಂತರ ತೀರ್ಥವನ್ನು ಧ್ಯಾನಿಸುತ್ತಾ ತೀರ್ಥವನ್ನು ಪ್ರವೇಶಿಸಬೇಕು.
ತ್ರಿರಾಪ್ಲುತ್ಯ ಜಲಾಭ್ಯಾಶೇ ದತ್ತ್ವಾ ಬ್ರಾಹ್ಮಣದಕ್ಷಿಣಾಮ್ |
ಅಭ್ಯರ್ಚ್ಯ ದೇವಾಯತನಂ ತತಃ ಪ್ರಾಯಾದ್ ಯಥಾಗತಮ್ ||62||
ನೀರಿನಲ್ಲಿ ಮೂರು ಬಾರಿ ಮುಳುಗಿ, ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು, ಅಲ್ಲಿಯೇ ದೇವತಾ ಪೂಜೆಯನ್ನು ಮಾಡಿ, ಅನಂತರ ಬಂದಂತೆಯೇ ಹಿಂದಿರುಗಬೇಕು.
ಏತದ್ ವಿಧಾನಂ ಸರ್ವೇಷಾಂ ತೀರ್ಥಂ ತೀರ್ಥಂ ಪ್ರತಿ ಪ್ರಿಯೇ |
ಸಮೀಪತೀರ್ಥಸ್ನಾನಾತ್ತು ದೂರತೀರ್ಥಂ ಸುಪೂಜಿತಮ್ ||63||
ಎಲೌ ಪ್ರಿಯೆಯೇ, ಎಲ್ಲ ತೀರ್ಥಗಳಲ್ಲಿಯೂ ಇದು ಸ್ನಾನ ಮಾಡುವ ವಿಧಿ. ಸಮೀಪದಲ್ಲಿರುವ ತೀರ್ಥಸ್ನಾನಕ್ಕಿಂತಲೂ ದೂರದಲ್ಲಿರುವ ತೀರ್ಥಸ್ನಾನವು ಶ್ರೇಷ್ಠವಾದುದು.
ಆದಿಪ್ರಭೃತಿಶುದ್ಧಸ್ಯ ತೀರ್ಥಸ್ನಾನಂ ಶುಭಂ ಭವೇತ್ |
ತಪೋರ್ಥಂ ಪಾಪನಾಶಾರ್ಥಂ ಶೌಚಾರ್ಥಂ ತೀರ್ಥಗಾಹನಮ್ ||64||
ಮೊದಲಿನಿಂದಲೂ ಶುದ್ಧನಾದವನು ತೀರ್ಥಸ್ನಾನವನ್ನು ಮಾಡಿದರೆ ಬಹಳ ಶುಭವನ್ನು ಹೊಂದುತ್ತಾನೆ. ತಪಸ್ಸನ್ನು ಮಾಡುವ ಸಲುವಾಗಿಯೂ, ಪಾಪನಾಶದ ಸಲುವಾಗಿಯೂ ಮತ್ತು ಶುದ್ಧಿಯ ಸಲುವಾಗಿಯೂ ತೀರ್ಥಸ್ನಾನವು ಹೇಳಲ್ಪಟ್ಟಿದೆ.
ಏವಂ ಪುಣ್ಯೇಷು ಮಾಸೇಷು ತೀರ್ಥಸ್ನಾನಂ ಶುಭಂ ಭವೇತ್ |
ಏತನ್ನೈಯಮಿಕಂ ಸರ್ವಂ ಸುಕೃತಂ ಕಥಿತಂ ತವ ||65||
ಹೀಗೆ ಪವಿತ್ರವಾದ ಮಾಸಗಳಲ್ಲಿ ತೀರ್ಥಸ್ನಾನವು ಶುಭವನ್ನುಂಟು ಮಾಡುತ್ತದೆ. ಇವೆಲ್ಲವೂ ಎರಡನೆಯದಾದ ನಿಯಮ ಸಂಬಂಧಿಯಾದ ಸುಕೃತ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಭಕ್ಷ್ಯಾಭಕ್ಷ್ಯಕಥನಂ ನಾಮ ಗುರುಸೇವಾತೀರ್ಥಸ್ನಾನಪ್ರಕರಣಂ
ಅಷ್ಟಾದಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹದಿನೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಹತ್ತೊಂಬತ್ತನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಸೋಪಕರಣಸುಕೃತಕಥನ.
ಮಹೇಶ್ವರಃ
ತೃತೀಯಂ ಸೋಪಕರಣಂ ಕ್ರಿಯತೇ ಗೃಹವಾಸಿಭಿಃ |
ದಾನಾನಿ ದೇವಪೂಜಾಂ ಚ ಪಿತೃಪೂಜಾಂ ತಥೈವ ಚ ||1||
ಅನ್ಯಾನಿ ಧರ್ಮಕಾರ್ಯಾಣಿ ಸುಕೃತಂ ಸೋಪಸಾಧನಮ್ |
ತತ್ಸರ್ವಂ ಶೃಣು ಕಲ್ಯಾಣಿ ಪ್ರಜಾನಾಂ ಹಿತಕಾಮ್ಯಯಾ ||2||
ಮಹೇಶ್ವರ ಮೂರನೆಯದಾದ ಸೋಪಕರಣಸುಕೃತವನ್ನು ಗೃಹಸ್ಥರು ಮಾಡುತ್ತಾರೆ. ದಾನಗಳು, ದೇವಪೂಜೆ, ಪಿತೃಪೂಜೆ, ಉಳಿದ ಧರ್ಮಕಾರ್ಯಗಳು ಎಲ್ಲವೂ ಸೋಪಸಾಧನ (ಸೋಪಕರಣ) ಸುಕೃತಗಳು. ಎಲೌ ಕಲ್ಯಾಣಿಯೇ, ಪ್ರಜೆಗಳ ಹಿತಕಾಮನೆಯಿಂದ ಅವೆಲ್ಲವನ್ನೂ ಕೇಳು.
ಚೇತನಾಚೇತನೈರ್ಯುಕ್ತಂ ಯಲ್ಲೋಕೇ ವಿದ್ಯತೇ ಧನಮ್ |
ಏತದರ್ಥಮವಾಪ್ನೋತಿ ನರಃ ಪ್ರೇತ್ಯ ಶುಭೇಕ್ಷಣೇ ||3||

ಎಲೌ ಶುಭೇಕ್ಷಣೆಯೇ, ಚೇತನಾಚೇತನರೂಪವಾದ ಸಂಪತ್ತು ಲೋಕದಲ್ಲಿ ಏನಿದೆಯೋ ಅದನ್ನು ಮನುಷ್ಯನು ದಾನ ಮಾಡಲು ಸಂಪಾದಿಸಿ, ದಾನಮಾಡಿ ಅದರ ಫಲವನ್ನು ಮರಣಾನಂತರದಲ್ಲಿ ಪಡೆಯುತ್ತಾನೆ.
ಉಮಾ
ಲೋಕಸಿದ್ಧಂ ತು ಯದ್ ದ್ರವ್ಯಂ ಸರ್ವಸಾಧಾರಣಂ ಭವೇತ್ ॥4॥
ತದ್ ದದತ್ ಸರ್ವಸಾಮಾನ್ಯಂ ಕಥಂ ಧರ್ಮಂ ಲಭೇನ್ನರಃ ।
ಏವಂ ಸಾಧಾರಣೇ ದ್ರವ್ಯೇ ಕಸ್ಯ ಸ್ವತ್ವಂ ಕಥಂ ಭವೇತ್ ॥5॥
ಉಮಾ ಲೋಕಸಿದ್ಧವಾದ ಸಾಧಾರಣವಾದ ದ್ರವ್ಯವೇನಿದೆಯೋ ಅಂತಹ ಸರ್ವಸಾಧಾರಣವಾದ ದ್ರವ್ಯವನ್ನು ದಾನ ಮಾಡುವ ಮನುಷ್ಯನು ಹೇಗೆ ಧರ್ಮವನ್ನು ಪಡೆಯುತ್ತಾನೆ? ಸರ್ವಸಾಧಾರಣವಾದ ದ್ರವ್ಯದಲ್ಲಿ ಯಾರಿಗೆ, ಹೇಗೆ ಸ್ವತ್ವ ಉಂಟಾಗುತ್ತದೆ?
ಮಹೇಶ್ವರಃ
ಲೋಕೇ ಭೂತಮಯಂ ದ್ರವ್ಯಂ ಸರ್ವಸಾಧಾರಣಂ ತಥಾ ।
ತಥೈವ ತದ್ ದದನ್ಮರ್ತ್ಯೋ ಭವೇತ್ ಪುಣ್ಯಂ ಹಿ ತಚ್ಛೃಣು ॥6॥
ಮಹೇಶ್ವರ ಲೋಕದಲ್ಲಿ ಪಂಚಭೂತಾತ್ಮಕವಾದ ದ್ರವ್ಯವು ಸರ್ವ ಸಾಧಾರಣವಾದುದು. ಅದನ್ನು ಹಾಗೆಯೇ ದಾನ ಮಾಡುವ ಮನುಷ್ಯನು ಪುಣ್ಯವನ್ನು ಸಂಪಾದಿಸುತ್ತಾನೆ. ಅದನ್ನು ಕೇಳು.
ದಾತಾ ಪ್ರಕೃತಿಹೀನಶ್ಚ ದೇಯಂ ಸೋಪಕ್ರಮಂ ತಥಾ ।
ದೇಶಕಾಲೌ ಚ ಯತ್ರೈತದ್ ದಾನಂ ಷಡ್ಗುಣಮುಚ್ಯತೇ ।
ತೇಷಾಂ ಸಂಪದ್ವಿಶೇಷಾಂಶ್ಚ ಕೀರ್ತ್ಯಮಾನಾನ್ ನಿಬೋಧ ಮೇ ॥7॥
ದಾನ ಮಾಡುವವನು ದ್ರವ್ಯಹೀನನಾದವನು. ದೇಯವಾದ ವಸ್ತು, ಉಪಕ್ರಮ, ದೇಶ ಮತ್ತು ಕಾಲ- ಇವು ದಾನದ ಆರು ಅಂಗಗಳು. ಅವುಗಳು ಸಂಪನ್ನವಾಗುವ ಬಗೆಯನ್ನು ನಾನು ಹೇಳುತ್ತೇನೆ. ಅದನ್ನು ಕೇಳು.
ಆದಿಪ್ರಭೃತಿ ಯಃ ಶುದ್ಧೋ ಮನೋವಾಕ್ಕಾಯಕರ್ಮಭಿಃ ।
ಸತ್ಯವಾದೀ ಜಿತಕ್ರೋಧಸ್ತ್ವಲುಬ್ಧೋ ನಾಭ್ಯಸೂಯಕಃ ।
ಶ್ರದ್ಧಾವಾನಾಸ್ತಿಕಶ್ಚೈವ ಏವಂ ದಾತಾ ಪ್ರಶಸ್ಯತೇ ॥8॥
ಮೊದಲಿನಿಂದಲೂ ಯಾವನು ಮನೋ-ವಾಕ್-ಕಾಯ ಕರ್ಮಗಳಿಂದ ಶುದ್ಧನಾಗಿ ಸತ್ಯವನ್ನು ನುಡಿಯುತ್ತಾ, ಕ್ರೋಧವನ್ನು ಜಯಿಸಿ, ಲೋಭ-ಅಸೂಯೆಗಳಿಲ್ಲದೆ, ಶ್ರದ್ಧಾವಂತನೂ, ಆಸ್ತಿಕ್ಯ ಬುದ್ಧಿಯುಳ್ಳವನೂ ಆಗಿರುತ್ತಾನೆಯೋ ಅಂತಹ ದಾತೃವು (ದಾನವನ್ನು ಸ್ವೀಕರಿಸುವವನು) ಪ್ರಶಂಸಿಸಲ್ಪಡುತ್ತಾನೆ.
ಶುದ್ಧೋ ದಾಂತೋ ಜಿತಕ್ರೋಧಸ್ತಥೋದಿತಕುಲೋದ್ಭವಃ ।
ಶ್ರುತಚಾರಿತ್ರಸಂಪನ್ನಸ್ತಥಾ ಬಹುಕಳತ್ರವಾನ್ ॥9॥
ಪಂಚಯಜ್ಞಪರೋ ನಿತ್ಯಂ ನಿರ್ವಿಕಾರಶರೀರವಾನ್ ।
ಏತಾನ್ ಪಾತ್ರಗುಣಾನ್ ವಿದ್ಧಿ ತಾದೃಕ್ಪಾತ್ರಂ ಪ್ರಶಸ್ಯತೇ ॥10॥
ಶುದ್ಧನೂ, ಇಂದ್ರಿಯನಿಗ್ರಹವುಳ್ಳವನೂ, ಕ್ರೋಧವನ್ನು ಜಯಿಸಿದವನೂ, ಒಳ್ಳೆಯ ಕುಲದಲ್ಲಿ ಜನಿಸಿದವನೂ, ವಿದ್ಯಾ-ಚಾರಿತ್ರಸಂಪನ್ನನೂ, ಬಹು ಪರಿವಾರವನ್ನು ಹೊಂದಿದವನೂ, ನಿತ್ಯವೂ ಪಂಚಯಜ್ಞಪರನಾದವನೂ ಮತ್ತು ವಿಕಾರವಿಲ್ಲದ ಶರೀರವನ್ನು ಹೊಂದಿದವನೂ - ಇವೆಲ್ಲ ಪಾತ್ರಗುಣಗಳು - ಆದಂತಹ ಪಾತ್ರನು ಪ್ರಶಸ್ತನಾದವನು ಎಂದು ತಿಳಿ.
ಪಿತೃದೇವಾಗ್ನಿಕಾರ್ಯೇಷು ತಸ್ಯ ದತ್ತಂ ಮಹತ್ಫಲಮ್ ।
ಯದ್ಯದರ್ಹತಿ ಯೋ ಲೋಕೇ ಪಾತ್ರಂ ತಸ್ಯ ಭವೇಚ್ಚ ಸಃ ।
ಮುಚ್ಯೇದಾಪದಮಾಪನ್ನೋ ಯೇನ ಪಾತ್ರಂ ಸ ತಸ್ಯ ತು ॥11॥
ಪಿತೃ-ದೇವಾಗ್ನಿ ಕಾರ್ಯಗಳಲ್ಲಿ ಅಂತಹ ಪಾತ್ರನಿಗೆ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ. ಯಾವನು ಯಾವ ಯಾವ ವಸ್ತುವನ್ನು ಸ್ವೀಕರಿಸಲು ಅರ್ಹನಾಗಿರುತ್ತಾನೆಯೋ ದಾತೃವಿಗೆ ಅವನು ಪಾತ್ರನಾಗುತ್ತಾನೆ. ಯಾವನಿಗೆ ಮಾಡಿದ ದಾನದಿಂದ ಪ್ರತಿಗೃಹೀತೃವು ಆಪತ್ತಿನಿಂದ ಬಿಡುಗಡೆಯನ್ನು ಹೊಂದುತ್ತಾನೆಯೋ ಅವನು ಪಾತ್ರನಾಗುತ್ತಾನೆ.
ಅನ್ನಸ್ಯ ಕ್ಷುಧಿತಂ ಪಾತ್ರಂ ತೃಷಿತಸ್ತು ಜಲಸ್ಯ ವೈ ।
ಏವಂ ಪಾತ್ರೇಷು ನಾನಾತ್ವಮಿಷ್ಯತೇ ಪುರುಷಂ ಪ್ರತಿ ॥12॥
ಅನ್ನಕ್ಕೆ ಹಸಿದವನು ಪಾತ್ರ. ಬಾಯಾರಿದವನು ನೀರಿಗೆ ಪಾತ್ರ. ಹೀಗೆ ಪುರುಷರಲ್ಲಿ ಪಾತ್ರರಲ್ಲಿ ನಾನಾವಿಧವಿದೆ.
ಜಾರಶ್ಚೋರಶ್ಚ ಷಂಡಶ್ಚ ಹಿಂಸ್ರಶ್ಚ ಕುಹಕಃ ಶುನಿಃ ।
ಲೋಕವಿಘ್ನಕರಾಶ್ಚಾನ್ಯೇ ವರ್ಜಿತವ್ಯಾಃ ಸರ್ವಶಃ ಪ್ರಿಯೇ ॥13॥
ಜಾರ, ಚೋರ, ಷಂಡ, ಹಿಂಸೆಯನ್ನು ಮಾಡುವವನು, ಕಪಟಿ, ನಾಯಿಗಳನ್ನು ಸಾಕುವವನು, ಜನರಿಗೆ ವಿಘ್ನವನ್ನು ಮಾಡಿದ ಉಳಿದವರು ಎಲೌ ಪ್ರಿಯೆಯೇ, ಇವರೆಲ್ಲರನ್ನೂ ದಾನದಿಂದ ವರ್ಜಿಸಬೇಕು.
ಪರೋಪಘಾತಾದ್ ಯದ್ ದ್ರವ್ಯಂ ಚೌರ್ಯಾದ್ವಾ ಲಭ್ಯತೇ ನೃಭಿಃ ।
ನಿಂದಯಾ ಲಭ್ಯತೇ ಯಚ್ಚ ಧೂರ್ತಭಾವೇನ ವೈ ತಥಾ ॥14॥
ಅಧರ್ಮಾದಥ ಮೋಹಾದ್ವಾ ಬಹೂನಾಮುಪರೋಧನಾತ್ ।
ಲಭ್ಯತೇ ಯದ್ ಧನಂ ದೇವಿ ತದತ್ಯಂತವಿಗರ್ಹಿತಮ್ ॥15॥
ಇನ್ನೊಬ್ಬರಿಗೆ ಉಪದ್ರವವನ್ನು ಕೊಟ್ಟು ಸಂಪಾದಿಸಿದ ಧನ, ಕಳ್ಳತನದಿಂದ ಸಂಪಾದಿಸಿದ ಧನ, ನಿಂದೆಯಿಂದ ಹಾಗೂ ಧೂರ್ತತನದಿಂದ ಸಂಪಾದಿಸಿದ ಧನ, ಅಧರ್ಮದಿಂದ ಅಥವಾ ಮೋಹದಿಂದ ಅಥವಾ ಅನೇಕ ಜನರಿಗೆ ತೊಂದರೆಯನ್ನು ಕೊಟ್ಟು

ಸಂಪಾದಿಸಿದ ಧನವು ಎಲೌ ದೇವಿಯೇ, ಅತ್ಯಂತ ನಿಂದಿತವಾದುದು.
ತಾದೃಶೇನ ಕೃತಂ ಧರ್ಮಂ ನಿಷ್ಫಲಂ ವಿದ್ಧಿ ಭಾಮಿನಿ |
ತಸ್ಮಾನ್ನ್ಯಾಯಾಗತೇನೈವ ದಾತವ್ಯಂ ಶುಭಮಿಚ್ಛತಾ ॥16॥
ಎಲೌ ಭಾಮಿನಿಯೇ, ಅಂತಹ ಧನದಿಂದ ಮಾಡಿದ ಧರ್ಮವು ನಿಷ್ಫಲವೆಂದು ತಿಳಿ. ಆದ್ದರಿಂದ ಶುಭವನ್ನು ಬಯಸುವವನು ನ್ಯಾಯಮಾರ್ಗದಿಂದ ಸಂಪಾದಿಸಿದ ಧನದಿಂದಲೇ ದಾನವನ್ನು ಮಾಡಬೇಕು.
ಯದ್ಯದಾತ್ಮಪ್ರಿಯಂ ನಿತ್ಯಂ ತತ್ತದ್ ದೇಯಮಿತಿ ಸ್ಥಿತಿಃ |
ಉಪಕ್ರಮಮಿಮಂ ವಿದ್ಧಿ ದಾತೄಣಾಂ ಪರಮಂ ಹಿತಮ್ ॥17॥
ತನಗೆ ಯಾವ ಯಾವ ವಸ್ತುಗಳು ಪ್ರಿಯವೋ ಅವುಗಳನ್ನು ದಾನ ಮಾಡಬೇಕೆಂಬುದು ಸ್ಥಿತಿ. ಇದನ್ನು ಉಪಕ್ರಮವೆಂದು ತಿಳಿ (ಇದಕ್ಕೆ ಉಪಕ್ರಮವೆಂದು ಹೆಸರು). ಇದು ದಾತೃಗಳಿಗೆ ಪರಮ ಹಿತವನ್ನು ಉಂಟುಮಾಡುತ್ತದೆ.
ಪಾತ್ರಭೂತಂ ತು ದೂರಸ್ಥಮಭಿಗಮ್ಯ ಪ್ರಸಾದ್ಯ ಚ |
ದಾತಾ ದಾನಂ ತಥಾ ದದ್ಯಾದ್ ಯಥಾ ತುಷ್ಯೇತ ತೇನ ಸಃ |
ಏಷ ದಾನವಿಧಿಃ ಶ್ರೇಷ್ಠಃ ಸಮಾಹೂಯ ತು ಮಧ್ಯಮಃ ॥18॥
ದೂರದಲ್ಲಿರುವ ಪಾತ್ರನ ಬಳಿಗೆ ಸ್ವತಃ ಹೋಗಿ ಅವನನ್ನು ಪ್ರಸನ್ನೀಕರಿಸಿಕೊಂಡು ಅವನು ಸಂತೋಷಗೊಳ್ಳುವಂತೆ ದಾತೃವು ದಾನವನ್ನು ಮಾಡಬೇಕು. ಇದು ಶ್ರೇಷ್ಠವಾದ ದಾನವಿಧಿ. ಪಾತ್ರನನ್ನು ಆಹ್ವಾನಿಸಿ, ತನ್ನ ಬಳಿಗೆ ಕರೆಸಿ ಕೊಡುವ ಧನವು ಮಧ್ಯಮವಾದುದು.
ಪೂರ್ವಂ ಚ ಪಾತ್ರತಾಂ ಜ್ಞಾತ್ವಾ ಸಮಾಹೂಯ ನಿವೇದ್ಯ ಚ |
ಶೌಚಾರ್ಚನಸಮಾಯುಕ್ತಂ ದಾತವ್ಯಂ ಶ್ರದ್ಧಯಾ ಪ್ರಿಯೇ ॥19॥
ಎಲೌ ದೇವಿಯೇ, ಮೊದಲು ಅವನು ಪಾತ್ರನೆಂದು ತಿಳಿದು, ಅನಂತರ ಆಹ್ವಾನಿಸಿ, ಅನಂತರ ದಾನವನ್ನು ಅವನಿಗೆ ವಿವರಿಸಿ, ತಾನೂ ಶುಚಿಯಾಗಿ ಅರ್ಚನ ಪೂರ್ವಕವಾಗಿ ಶ್ರದ್ಧೆಯಿಂದ ದಾನವನ್ನು ಮಾಡಬೇಕು.
ಯಾಚಿತೄಣಾಂ ತು ಪರಮಮಾಭಿಮುಖ್ಯಪುರಸ್ಕೃತಮ್ |
ಸಮ್ಮಾನಪೂರ್ವಂ ಸಂಗ್ರಾಹ್ಯಂ ದಾತವ್ಯಂ ದೇಶಕಾಲಯೋಃ ॥20॥
ಯಾಚನೆಯನ್ನು ಮಾಡುವವರಿಗೆ ಅಭಿಮುಖವಾಗಿ ಕೊಟ್ಟ ದಾನವು ಪ್ರಶಸ್ತವಾದುದು. ಸಮ್ಮಾನಪೂರ್ವಕವಾಗಿ, ಒಳ್ಳೆಯ ದೇಶ-ಕಾಲಗಳಲ್ಲಿ ಪ್ರತಿಗೃಹೀತೃವಿಗೆ ಉಪಯೋಗಕ್ಕೆ ಬರುವ ವಸ್ತುವನ್ನು ದಾನ ಮಾಡಬೇಕು.
ಅಪಾತ್ರೇಭ್ಯೋಽಪಿ ಚಾನ್ಯೇಭ್ಯೋ ದಾತವ್ಯಂ ಭೂತಿಮಿಚ್ಛತಾ |
ಪಾತ್ರಾಣಿ ಸಂಪರೀಕ್ಷ್ಯೈವ ದಾತಾ ವೈ ದಾನಪಾತ್ರಯೋಃ ॥21॥
ತನ್ನ ಕಲ್ಯಾಣವನ್ನು ಬಯಸುವವನು ಉಳಿದ ಅಪಾತ್ರರಿಗೂ ದಾನವನ್ನು ಮಾಡಬೇಕಾಗುತ್ತದೆ. ಯಾವ ದಾನದಲ್ಲೇ ಆದರೂ ದಾತೃವು ಪಾತ್ರರನ್ನು ಪರೀಕ್ಷಿಸಿಯೇ ದಾನವನ್ನು ಮಾಡಬೇಕು.
ಅತಿಶಕ್ತ್ಯಾ ಪರಂ ದಾನಂ ಯಥಾಶಕ್ತಿ ತು ಮಧ್ಯಮಮ್ |
ತೃತೀಯಂ ತ್ವವರಂ ದಾನಂ ದಾನರೂಪಮಿವಾತ್ಮನಃ ॥22॥
ತನ್ನ ಶಕ್ತಿಯನ್ನು ಮೀರಿ ಮಾಡಿದ ದಾನವು ಶ್ರೇಷ್ಠವಾದುದು. ತನ್ನ ಶಕ್ತಿಗೆ ಅನುಗುಣವಾದ ದಾನವು ಮಧ್ಯಮವಾದುದು. ತನ್ನ ಶಕ್ತಿಗಿಂತ ಕಡಿಮೆಯಾಗಿ ಮಾಡಿದ ಅಲ್ಪದಾನವು ಅಧಮ ದಾನ. ತನಗೆ ಆ ದಾನದ ಫಲವು ಹೇಗೆ ತುಚ್ಛವೋ ಹಾಗೆ ಆ ದಾನವೂ ತುಚ್ಛವಾದುದು (ಲಕ್ಷ್ಯಾಲಂಕಾರ).
ಯಥಾ ಸಂಭಾವಿತಂ ಪೂರ್ವಂ ದಾತವ್ಯಂ ತತ್ ತಥೈವ ಚ |
ಪುಣ್ಯಕ್ಷೇತ್ರೇಷು ಯದ್ ದತ್ತಂ ಪುಣ್ಯಕಾಲೇಷು ವಾ ಯಥಾ |
ತಚ್ಛ್ರೋಭನತರಂ ವಿದ್ಧಿ ಗೌರವಾದ್ ದೇಶಕಾಲಯೋಃ ॥23॥
ಮೊದಲು ಯೋಚಿಸಿದಂತೆಯೇ ದಾನವನ್ನು ಮಾಡಬೇಕು (ಮೊದಲು ಯೋಚಿಸಿದುದಕ್ಕಿಂತ ಕಡಿಮೆಯಾದ ದಾನವನ್ನು ಮಾಡಬಾರದು). ಪುಣ್ಯಕ್ಷೇತ್ರಗಳಲ್ಲಿ ಮತ್ತು ಪುಣ್ಯಕಾಲಗಳಲ್ಲಿ ಮಾಡಿದ ದಾನವು ಬಹಳ ಒಳ್ಳೆಯದೆಂದು ತಿಳಿ. ಏಕೆಂದರೆ ಅದು ದೇಶ-ಕಾಲಗಳ ಮಹತ್ತ್ವದಿಂದಲೂ ಯುಕ್ತವಾಗಿರುತ್ತದೆ.
ಉಮಾ
ಯಶ್ಚ ಪುಣ್ಯತಮೋ ದೇಶಸ್ತಥಾ ಕಾಲಶ್ಚ ಶಂಸ ಮೇ ॥24॥
ಉಮಾ ಪುಣ್ಯತಮವಾದ ದೇಶವನ್ನು ಮತ್ತು ಕಾಲವನ್ನು ನನಗೆ ಹೇಳು.
ಮಹೇಶ್ವರಃ
ಕುರುಕ್ಷೇತ್ರಂ ಮಹಾನದ್ಯೋ ಯಶ್ಚ ದೇವರ್ಷಿಸೇವಿತಮ್ |
ಗಿರಿರ್ವರಶ್ಚ ತೀರ್ಥಾನಿ ದೇಶಭಾಗೇಷು ಪೂಜಿತಾಃ |
ಗೃಹೀತುರೀಪ್ಸಿತೋ ಯಶ್ಚ ತತ್ರ ದತ್ತಂ ಮಹಾಫಲಮ್ ॥25॥
ಮಹೇಶ್ವರ ಕುರುಕ್ಷೇತ್ರ, ಮಹಾನದಿಗಳು, ದೇವರ್ಷಿಗಳಿಂದ ಸೇವಿತವಾದ ಪ್ರದೇಶಗಳು, ಪರ್ವತ, ತೀರ್ಥಗಳು, ದೇಶಭಾಗದಲ್ಲಿ ಪೂಜಿತವಾದ ಪ್ರದೇಶಗಳು, ಸ್ವೀಕರಿಸುವವನಿಗೆ ಇಷ್ಟವಾದ ಸ್ಥಳ - ಇವುಗಳಲ್ಲಿ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.
ಶರದ್ವಸಂತಕಾಲಶ್ಚ ಪುಣ್ಯಮಾಸಸ್ತಥೈವ ಚ |
ಶುಕ್ಲಪಕ್ಷಶ್ಚ ಪಕ್ಷಾಂತಃ ಪೌರ್ಣಮಾಸೀ ಚ ಪರ್ವಸು ॥26॥
ಪಿತೃದೈವತನಕ್ಷತ್ರಂ ನಿರ್ಮಲಾ ದಿವಸಾಸ್ತಥಾ |

ತಚ್ಛ್ರೋಭನತರಂ ವಿದ್ಧಿ ಚಂದ್ರಸೂರ್ಯಗ್ರಹಂ ತಥಾ ॥27॥
ಶರತ್ಕಾಲ, ವಸಂತಕಾಲ, ಪವಿತ್ರವಾದ ಮಾಸಗಳು, ಶುಕ್ಲಪಕ್ಷ, ಅಮಾವಾಸ್ಯೆ, ಪೌರ್ಣಮಾಸೀ, ಪರ್ವಕಾಲ, ಪಿತೃ-ದೈವತ ನಕ್ಷತ್ರಗಳು, ನಿರ್ಮಲವಾದ ದಿವಸಗಳು, ಚಂದ್ರ-ಸೂರ್ಯಗ್ರಹಣ- ಇವುಗಳನ್ನು ದಾನಕ್ಕೆ ಶುಭವಾದ ಕಾಲವೆಂದು ತಿಳಿ.
ಪ್ರತಿಗ್ರಹೀತುರ್ಯಃ ಕಾಲೋ ಮನಸಾ ಕೀರ್ತಿತಃ ಶುಭೇ |
ಏವಮಾದಿಷು ಕಾಲೇಷು ದತ್ತಂ ದಾನಂ ಮಹದ್ಭವೇತ್ ॥28॥
ಎಲೌ ಶುಭಳೇ, ಪ್ರತಿಗೃಹೀತೃವಿನ ಮನಸ್ಸಿಗೆ ಇಷ್ಟವಾದ ಕಾಲ ಇವೇ ಮೊದಲಾದ ಕಾಲಗಳಲ್ಲಿ ಮಾಡಿದ ದಾನವು ಮಹಾಫಲವನ್ನು ಕೊಡುತ್ತದೆ.
ದಾತಾ ದೇಯಂ ಚ ಪಾತ್ರಂ ಚ ಉಪಕ್ರಮಯುತಾ ಕ್ರಿಯಾ |
ದೇಶಃ ಕಾಲಶ್ಚ ಇತ್ಯೇಷಾಂ ಸಂಪಚ್ಛುದ್ಧಿಃ ಪ್ರಕೀರ್ತಿತಾ ॥29॥
ಯತ್ರೈವ ಯುಗಪತ್ ಸಂಪತ್ ತತ್ರ ಶುದ್ಧಿರ್ಮಹದ್ ಭವೇತ್ ॥30॥
ದಾತೃ, ದೇಯ (ದಾನವನ್ನು ಕೊಡುವ ವಸ್ತು), ಪಾತ್ರ, ಉಪಕ್ರಮ ಸಹಿತವಾದ ದಾನಕ್ರಿಯೆ, ದೇಶ, ಕಾಲ ಇವುಗಳ ಸಂಪತ್ತನ್ನು (ಒಟ್ಟುಗೂಡುವಿಕೆಯನ್ನು) ಶುದ್ಧಿ ಎಂದು ಹೇಳುತ್ತಾರೆ. ಎಲ್ಲಿ ಈ ಅನೇಕ ಸಂಪತ್ತುಗಳು ಒಟ್ಟಿಗೆ ಉಂಟಾಗುತ್ತವೆಯೋ ಅಲ್ಲಿ ಬಹಳ ಶುದ್ಧಿ ಇರುತ್ತದೆ.
ಅತ್ಯಲ್ಪಮಪಿ ಯದ್ ದಾನಮೇಭಿಃ ಷಡ್ಭಿರ್ಗುಣೈರ್ಯುತಮ್ |
ಭೂತ್ವಾನಂತಂ ನಯೇತ್ ಸ್ವರ್ಗಂ ದಾತಾರಂ ದೋಷವರ್ಜಿತಮ್ ॥
ಈ ಆರು ಗುಣಗಳಿಂದ ಕೂಡಿದ ದಾನವು ಅಲ್ಪವಾದರೂ ಅದು ದೋಷವರ್ಜಿತವಾಗಿ ದಾತೃವಿಗೆ ಅನಂತವಾದ ಸ್ವರ್ಗವನ್ನು ಕೊಡುತ್ತದೆ.
ಸುಮಹದ್ವಾಽಪಿ ಯದ್ ದಾನಂ ಗುಣೈರೇಭಿರ್ವಿನಾಕೃತಮ್ |
ಅತ್ಯಲ್ಪಫಲನಿಯೋಗಮಫಲಂ ವಾ ಭವೇದ್ಧಿ ತತ್ ॥32॥
ಈ ಗುಣಗಳಿಲ್ಲದ ದಾನವು ಬಹಳ ದೊಡ್ಡದಾದರೂ ಅಲ್ಪಫಲವನ್ನು ಕೊಡುತ್ತದೆ ಅಥವಾ ನಿಷ್ಫಲವಾಗುತ್ತದೆ.
ಉಮಾ
ಏವಂ ಗುಣಯುತಂ ದಾನಂ ದತ್ತಂ ತ್ವಫಲತಾಂ ವ್ರಜೇತ್ |
ತದಸ್ತಿ ಚೇನ್ಮಹದ್ ದೇಯಂ ತನ್ಮೇ ಶಂಸಿತುಮರ್ಹಸಿ ॥33॥
ಉಮಾ ಇಂತಹ ಗುಣಯುತ ದಾನವು ಮಹಾದ್ರವ್ಯದ ದಾನವಾದರೂ ಅದು ನಿಷ್ಫಲವಾಗುವುದನ್ನು ನನಗೆ ಹೇಳು.
ಮಹೇಶ್ವರಃ
ತದಪ್ಯಸ್ತಿ ಮಹಾಭಾಗೇ ನರಾಣಾಂ ಭಾವದೋಷತಃ ॥34॥
ಮಹೇಶ್ವರ ಎಲೌ ಮಹಾಭಾಗ್ಯವಂತಳೇ, ಮನುಷ್ಯರ ಮನೋದೋಷಗಳಿಂದ ನಿಷ್ಫಲವಾಗುವಂತಹ ದೊಡ್ಡ ದಾನವೂ ಇದೆ.
ಕೃತ್ವಾ ತು ಧರ್ಮಂ ವಿಧಿವತ್ ಪಶ್ಚಾತ್ತಾಪಂ ಕರೋತಿ ಚೇತ್ |
ಶ್ಲಾಘಯಾ ವಾ ಯದಿ ಬ್ರೂಯಾದ್ ವೃಥಾ ಸಂಸದಿ ಯತ್ಕೃತಮ್ ॥
ಪ್ರಕಲ್ಪಯೇಚ್ಚ ಮನಸಾ ತತ್ಫಲಂ ಪ್ರೇತ್ಯಭಾವತಃ |
ಧರ್ಮಕಾರ್ಯಕೃತಂ ಯಚ್ಚ ಸತತಂ ಫಲಕಾಂಕ್ಷಯಾ |
ಏವಂ ಕೃತಂ ವಾ ದತ್ತಂ ವಾ ಪರತ್ರ ವಿಫಲಂ ಭವೇತ್ ॥36॥
ವಿಧಿಪೂರ್ವಕವಾಗಿ ದಾನವನ್ನು ಮಾಡಿ ಪಶ್ಚಾತ್ತಾಪವನ್ನು ಪಟ್ಟರೆ, ಸಂಸತ್ತಿನಲ್ಲಿ ತಾನು ಮಾಡಿದ ದಾನವನ್ನು ವ್ಯರ್ಥವಾಗಿ ಹೊಗಳಿಕೊಂಡರೆ, ತಾನು ಮಾಡುವ ದಾನಕ್ಕೆ ಮನಸ್ಸಿನಲ್ಲಿ ಮರಣಾನಂತರದಲ್ಲಿ ಫಲವನ್ನು ಅಪೇಕ್ಷಿಸಿದರೆ - ಹೀಗೆ ಫಲದ ಅಪೇಕ್ಷೆಯಿಂದ ಸತತವಾಗಿ ಯಾರು ಧರ್ಮಕಾರ್ಯವನ್ನು ಮಾಡಿದರೂ ಅಂತಹ ದಾನವೂ ಮತ್ತು ಧರ್ಮವೂ ಪರಲೋಕದಲ್ಲಿ ನಿಷ್ಫಲವಾಗುತ್ತದೆ.
ಏತೇ ದೋಷಾ ವಿವರ್ಜ್ಯಾಶ್ಚ ದಾತೃಭಿಃ ಪುಣ್ಯಕಾಂಕ್ಷಿಭಿಃ |
ಸನಾತನಮಿದಂ ವೃತ್ತಂ ಸದ್ಭಿರಾಚರಿತಂ ತಥಾ ॥37॥
ಪುಣ್ಯವನ್ನು ಬಯಸುವ ದಾತೃಗಳು ಈ ದೋಷಗಳನ್ನು ವರ್ಜಿಸಬೇಕು. ಇದು ಸಜ್ಜನರು ಆಚರಿಸಿದ ಸನಾತನವಾದ ಸಂಪ್ರದಾಯ.
ಅನುಗ್ರಹಾತ್ ಪರೇಷಾಂ ತು ಗೃಹಸ್ಥಾನಾಮೃಣಂ ಹಿ ತತ್ |
ಇತ್ಯೇವಂ ಮನ ಆವೇಶ್ಯ ದಾತವ್ಯಂ ಸತತಂ ಬುಧೈಃ ॥38॥
ಇನ್ನೊಬ್ಬರನ್ನು ಅನುಗ್ರಹಿಸುವುದು ಗೃಹಸ್ಥರ ಋಣ ಎಂದು ಮನಸ್ಸಿನಲ್ಲಿ ತಿಳಿದು ವಿವೇಕಿಗಳಾದವರು ಸತತವಾಗಿ ದಾನವನ್ನು ಮಾಡಬೇಕು.
ಏವಮೇವ ಕೃತಂ ನಿತ್ಯಂ ಸುಕೃತಂ ತದ್ ಭವೇನ್ಮಹತ್ |
ಸರ್ವಸಾಧಾರಣಂ ದ್ರವ್ಯಮೇವಂ ದತ್ತಂ ತ್ವ ಮಹತ್ಫಲಮ್ ॥39॥
ಹೀಗೆ ಮಾಡಿದ ದಾನವು ನಿತ್ಯವೂ ದೊಡ್ಡ ಸುಕೃತವಾಗುತ್ತದೆ. ಸರ್ವ ಸಾಧಾರಣವಾದ ದ್ರವ್ಯವನ್ನು ಈ ರೀತಿ ದಾನ ಮಾಡುವುದರಿಂದ ಮಹಾಫಲ ಉಂಟಾಗುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ತೃತೀಯಸುಕೃತಕಥನಂ ನಾಮ ಏಕೋನವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಹತ್ತೊಂಬತ್ತನೆಯ

ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ತನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ವಿವಿಧ ದಾನಫಲಗಳ ಕಥನ.
ಉಮಾ
ಭಗವನ್ ಕಾನಿ ದೇಯಾನಿ ಧರ್ಮಮುದ್ದಿಶ್ಯ ಮಾನವೈಃ |
ತಾನ್ಯಹಂ ಶ್ರೋತುಮಿಚ್ಛಾಮಿ ತನ್ಮೇ ಶಂಸಿತುಮರ್ಹಸಿ ||1||
ಉಮಾ ಪೂಜ್ಯನೇ, ಮನುಷ್ಯರು ಧರ್ಮವನ್ನು ಉದ್ದೇಶಿಸಿ ಯಾವ ದಾನಗಳನ್ನು ಮಾಡಬೇಕೆಂದು ನಾನು ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳಬೇಕು.
ಮಹೇಶ್ವರಃ
ಅಜಸ್ರಂ ಧರ್ಮಕಾರ್ಯಂ ಚ ತಥಾ ನೈಮಿತ್ತಿಕಂ ಪ್ರಿಯೇ |
ಅನ್ನಂ ಪ್ರತಿಶ್ರಯೋ ದೀಪಃ ಪಾನೀಯಂ ತೃಣಮಿಂಧನಮ್ ||2||
ಸ್ನೇಹೋ ಗಂಧಶ್ಚ ಭೈಷಜ್ಯಂ ತಿಲಾಶ್ಚ ಲವಣಂ ತಥಾ |
ಏವಮಾದಿ ತಥಾಽನ್ಯಶ್ಚ ದಾನಮಾಜಸ್ರಮುಚ್ಯತೇ ||3||
ಮಹೇಶ್ವರ ಎಲೌ ಪ್ರಿಯೆಯೇ, ಧರ್ಮಕಾರ್ಯವು ನಿತ್ಯವಾದುದು ಮತ್ತು ನೈಮಿತ್ತಿಕವಾದುದು ಎಂದು ಎರಡು ವಿಧ. ಅನ್ನ, ವಾಸಸ್ಥಾನ, ದೀಪ, ಜಲ, ಆಸನ, ಸಮಿತ್ತು, ಘೃತ, ಗಂಧ, ಔಷಧಿ, ಎಳ್ಳು, ಉಪ್ಪು- ಇವೇ ಮೊದಲಾದ ವಸ್ತುಗಳ ದಾನವು ಆಜಸ್ರ (ನಿತ್ಯ) ಎನಿಸುತ್ತದೆ.
ಅಜಸ್ರದಾನಾತ್ ಸತತಮಾಜಸ್ರಮಿತಿ ನಿಶ್ಚಿತಮ್ |
ಸಾಮಾನ್ಯಂ ಸರ್ವವರ್ಣಾನಾಂ ದಾನಂ ಶೃಣು ಸಮಾಹಿತಾ ||4||
ಅಜಸ್ರವಾಗಿ (ಸತತವಾಗಿ) ದಾನ ಮಾಡುವುದರಿಂದ ಇದಕ್ಕೆ ಆಜಸ್ರ ಎಂದು ಹೆಸರು. ಸರ್ವವರ್ಣಗಳಿಗೆ ಸಾಮಾನ್ಯವಾದ ದಾನಗಳನ್ನು ಹೇಳುತ್ತೇನೆ. ಸಮಾಧಾನದಿಂದ ಕೇಳು.
ಅನ್ನಂ ಪ್ರಾಣೋ ಮನುಷ್ಯಾಣಾಮನ್ನದಃ ಪ್ರಾಣದೋ ಭವೇತ್ |
ತಸ್ಮಾದನ್ನಂ ವಿಶೇಷೇಣ ದಾತುಮಿಚ್ಛಂತಿ ಮಾನವಾಃ ||5||
ಮನುಷ್ಯರಿಗೆ ಅನ್ನವೇ ಪ್ರಾಣ. ಅನ್ನವನ್ನು ದಾನ ಮಾಡುವವನು ಪ್ರಾಣದಾನವನ್ನೇ ಮಾಡುತ್ತಾನೆ. ಆದ್ದರಿಂದ ಮನುಷ್ಯರು ವಿಶೇಷವಾಗಿ ಅನ್ನದಾನವನ್ನು ಮಾಡಲು ಬಯಸುತ್ತಾರೆ.
ಬ್ರಾಹ್ಮಣಾಯಾಭಿರೂಪಾಯ ಯೋ ದದ್ಯಾದನ್ನಮೀಪ್ಸಿತಮ್ |
ನಿದಧಾತಿ ನಿಧಿಂ ಶ್ರೇಷ್ಠಂ ಸೋಽನಂತಂ ಪಾರಲೌಕಿಕಮ್ ||6||
ಯಾವನು ಯೋಗ್ಯನಾದ ಬ್ರಾಹ್ಮಣನಿಗೆ ಅವನಿಗೆ ಇಷ್ಟವಾದ ಅನ್ನವನ್ನು ಕೊಡುತ್ತಾನೆಯೋ ಅವನು ಪರಲೋಕದಲ್ಲಿ ಅನಂತವಾದ, ಶ್ರೇಷ್ಠವಾದ ನಿಧಿಯನ್ನು ಸ್ಥಾಪಿಸುತ್ತಾನೆ.
ಶ್ರಾಂತಮಧ್ವಪರಿಶ್ರಾಂತಮತಿಥಿಂ ಗೃಹಮಾಗತಮ್ |
ಅರ್ಚಯೀತ ಪ್ರಯತ್ನೇನ ಸ ಹಿ ಯಜ್ಞೋ ವರಃ ಸ್ಮೃತಃ ||7||
ಮಾರ್ಗಾಯಾಸದಿಂದ ಬಳಲಿ ಮನೆಗೆ ಬಂದ ಅತಿಥಿಯನ್ನು ಪ್ರಯತ್ನ ಪೂರ್ವಕವಾಗಿ ಪೂಜಿಸಬೇಕು. ಅದು ಶ್ರೇಷ್ಠವಾದ ಯಜ್ಞವೆನಿಸುತ್ತದೆ.
ಕೃತ್ವಾ ತು ಪಾತಕಂ ಕರ್ಮ ಯೋ ದದ್ಯಾದನ್ನಮರ್ಥಿನಾಮ್ |
ಬ್ರಾಹ್ಮಣಾನಾಂ ವಿಶೇಷೇಣ ಸೋಽಪಹಂತಿ ಸ್ವಕಂ ತಮಃ ||8||
ಪಾತಕವನ್ನು ಮಾಡಿದವನೂ ಸಹ ಬ್ರಾಹ್ಮಣರಿಗೆ ವಿಶೇಷವಾಗಿ ಅನ್ನದಾನವನ್ನು ಮಾಡುವುದರಿಂದ ತನ್ನ ಪಾಪವನ್ನು ಕಳೆದುಕೊಳ್ಳುತ್ತಾನೆ.
ಪಿತರಸ್ತಸ್ಯ ನಂದಂತಿ ಸುವೃಷ್ಟ್ಯಾ ಕರ್ಷಕಾ ಇವ |
ಪುತ್ರೋ ವಾ ಯಸ್ಯ ಪೌತ್ರೋ ವಾ ಶ್ರೋತ್ರಿಯಾನ್ ಭೋಜಯಿಷ್ಯತಿ ||
ಕೃಷಿಕರು ಒಳ್ಳೆಯ ಮಳೆಯಿಂದ ಸಂತೋಷಪಡುವಂತೆ ಪಿತೃಗಳು ತನ್ನ ಪುತ್ರನು ಅಥವಾ ಪೌತ್ರನು ಶ್ರೋತ್ರಿಯರಿಗೆ ಅನ್ನದಾನ ಮಾಡಿದರೆ ಸಂತೋಷ ಪಡುತ್ತಾರೆ.
ಅಪಿ ಚಂಡಾಲಶೂದ್ರಾಣಾಮನ್ನದಾನಾನ್ನ ಗರ್ಹ್ಯತೇ |
ತಸ್ಮಾತ್ ಸರ್ವಪ್ರಯತ್ನೇನ ದದ್ಯಾದನ್ನಮಮತ್ಸರಃ ||10||
ಚಂಡಾಲ, ಶೂದ್ರರಿಗೆ ಅನ್ನದಾನವನ್ನು ಮಾಡಿದರೂ ಅದು ನಿಂದಿತವಾದುದಲ್ಲ. ಆದ್ದರಿಂದ ಸರ್ವಪ್ರಯತ್ನದಿಂದ ಮತ್ಸರಹೀನರಾಗಿ ಅನ್ನದಾನವನ್ನು ಮಾಡಬೇಕು.
ಕಳತ್ರಂ ಪೀಡಯಿತ್ವಾಽಪಿ ಪೋಷಯೇದತಿಥೀನ್ ಸದಾ |
ಜನ್ಮಾಪಿ ಮಾನುಷೇ ಲೋಕೇ ತದರ್ಥಂ ಹಿ ವಿಧೀಯತೇ ||11||
ಪತ್ನಿ ಮೊದಲಾದ ಪರಿವಾರಕ್ಕೆ ತೊಂದರೆಯಾದರೂ ಸಹ ಅತಿಥಿಗಳನ್ನು ಪೋಷಿಸಬೇಕು. ಮನುಷ್ಯಜನ್ಮವು ಅದಕ್ಕಾಗಿ ಎಂದು ಹೇಳಲ್ಪಡುತ್ತದೆ.
ಅನ್ನದಾನಾಚ್ಚ ಲೋಕಾಂಸ್ತಾನ್ ಸಂಪ್ರವಕ್ಷ್ಯಾಮ್ಯನಿಂದಿತೇ |

ಭವನಾನಿ ಪ್ರಕಾಶಂತೇ ದಿವಿ ತೇಷಾಂ ಮಹಾತ್ಮನಾಮ್ ॥12॥
ಎಲೌ ಅನಿಂದಿತೆಯೇ, ಅನ್ನದಾನದಿಂದ ಉಂಟಾಗುವ ಲೋಕಗಳನ್ನು ನಾನು ಹೇಳುವೆನು. ಅಂತಹ ಮಹಾತ್ಮರ ಭವನಗಳು ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತವೆ.
ಅನೇಕಶತಭೌಮಾನಿ ಸಾಂತರ್ಜಲವನಾನಿ ಚ |
ವೈಡೂರ್ಯಾರ್ಚಿಃಪ್ರಕಾಶಾನಿ ರುಗ್ಮರೂಪ್ಯನಿಭಾನಿ ಚ ॥13॥
ನಾನಾಸಂಸ್ಥಾನರೂಪಾಣಿ ನಾನಾರತ್ನಮಯಾನಿ ಚ |
ಚಂದ್ರಮಂಡಲಶುಭ್ರಾಣಿ ಕಿಂಕಿಣೀಜಾಲವಂತಿ ಚ ॥14॥
ತರುಣಾದಿತ್ಯವರ್ಣಾನಿ ಸ್ಥಾವರಾಣಿ ಚರಾಣಿ ಚ |
ಯಥೇಷ್ಟಭಕ್ಷ್ಯಭೋಜ್ಯಾನಿ ಶಯನಾಸನವಂತಿ ಚ ॥15॥
ನೂರಾರು ರತ್ನಗಳಿಂದ ಕೂಡಿರುವ, ಜಲಾಶಯಗಳನ್ನು ಮತ್ತು ವನಗಳನ್ನು ಹೊಂದಿದ, ವೈಡೂರ್ಯಕಾಂತಿಯಿಂದ ಹೊಳೆಯುವ, ಸುವರ್ಣ-ರಜತ ಕಾಂತಿಯನ್ನು ಹೊಂದಿದ, ಅನೇಕ ವಿಧವಾದ ಆಕಾರಗಳನ್ನು ಹೊಂದಿದ, ನಾನಾ ರತ್ನಮಯವಾದ, ಚಂದ್ರಮಂಡಲದಂತೆ ಶುಭ್ರವಾದ, ಸಣ್ಣಗಂಟೆಗಳ ಜಾಲದಿಂದ ಕೂಡಿದ, ಉದಯಿಸುವ ಸೂರ್ಯನ ಬಣ್ಣವನ್ನು ಹೊಂದಿದ, ಚಲಿಸುವ ಮತ್ತು ಚಲಿಸದಿರುವ, ಯಥೇಷ್ಟ ಭಕ್ಷ್ಯಭೋಜ್ಯಗಳಿಂದ ಕೂಡಿದ, ಶ್ರೇಷ್ಠವಾದ ಶಯ್ಯಾಸನಗಳಿಂದ ಕೂಡಿದ ಭವನಗಳು ಅವರಿಗೆ ಅಲ್ಲಿ ಪ್ರಕಾಶಿಸುತ್ತವೆ.
ಸರ್ವಕಾಮಫಲಾಶ್ಚಾತ್ರ ವೃಕ್ಷಾ ಭವನಸಂಸ್ಥಿತಾಃ |
ವಾಪ್ಯೋ ಬಹ್ವ್ಯಶ್ಚ ಕೂಪಾಶ್ಚ ದೀರ್ಘಿಕಾಶ್ಚ ಸಹಸ್ರಶಃ ॥16॥
ಅರುಜಾನಿ ವಿಶೋಕಾನಿ ನಿತ್ಯಾನಿ ವಿವಿಧಾನಿ ಚ |
ಭವನಾನಿ ವಿವಿಕ್ತಾನಿ ಪ್ರಾಣದಾನಾಂ ತ್ರಿವಿಷ್ಟಪೇ ॥17॥
ಭವನದ ಸುತ್ತಲೂ ಇರುವ ವೃಕ್ಷಗಳು ಅಪೇಕ್ಷಿತವಾದ ಎಲ್ಲಾ ಫಲಗಳನ್ನೂ ಕೊಡುತ್ತವೆ. ಅನೇಕ ಬಾವಿಗಳು, ಸರೋವರಗಳು, ಇಳಿಯುವ ಬಾವಿಗಳು ಸಾವಿರಾರು ಸಂಖ್ಯೆಯಲ್ಲಿ ಇರುತ್ತವೆ. ಅನ್ನದಾನವನ್ನು ಮಾಡಿದವರಿಗೆ ಸ್ವರ್ಗದಲ್ಲಿ ಶೋಕ-ರೋಗ ರಹಿತವಾದ ಪ್ರತ್ಯೇಕವಾದ ವಿವಿಧವಾದ ನಿತ್ಯವಾದ ಭವನಗಳು ಇರುತ್ತವೆ.
ವಿವಸ್ವತಶ್ಚ ಸೋಮಸ್ಯ ಬ್ರಹ್ಮಣಶ್ಚ ಪ್ರಜಾಪತೇಃ |
ವಿಶಂತಿ ಲೋಕಾಂಸ್ತೇ ನಿತ್ಯಂ ಜಗತ್ಯನ್ನೋದಕಪ್ರದಾಃ ॥18॥
ಜಗತ್ತಿನಲ್ಲಿ ಅನ್ನೋದಕವನ್ನು ದಾನ ಮಾಡುವವರು ಸೂರ್ಯಲೋಕಕ್ಕೂ, ಚಂದ್ರಲೋಕಕ್ಕೂ, ಪ್ರಜಾಪತಿಯಾದ ಬ್ರಹ್ಮನ ಲೋಕಕ್ಕೂ ಹೋಗುತ್ತಾರೆ.
ತತ್ರ ತೇ ಸುಚಿರಂ ಕಾಲಂ ವಿಹೃತ್ಯಾಪ್ಸರಸಾಂ ಗಣೈಃ |
ಜಾಯಂತೇ ಮಾನುಷೇ ಲೋಕೇ ಸರ್ವಕಲ್ಯಾಣಸಂಯುತಾಃ ॥19॥
ಅವರು ಅಲ್ಲಿ ಬಹಳ ಕಾಲದವರೆಗೆ ಅಪ್ಸರೆಯರ ಜೊತೆಯಲ್ಲಿ ವಿಹಾರವನ್ನು ಮಾಡಿ, ಮನುಷ್ಯಲೋಕದಲ್ಲಿ ಎಲ್ಲಾ ಕಲ್ಯಾಣಗಳಿಂದ ಸಹಿತರಾಗಿ ಜನಿಸುತ್ತಾರೆ.
ಬಲಸಂಹನನೋಪೇತಾ ನೀರೋಗಾಶ್ಚಿರಜೀವಿನಃ |
ಕುಲೀನಾ ಮತಿಮಂತಶ್ಚ ಭವಂತ್ಯನ್ನಪ್ರದಾ ನರಾಃ ॥20॥
ಅನ್ನದಾನವನ್ನು ಮಾಡುವ ಮನುಷ್ಯರು ಒಳ್ಳೆಯ ಶರೀರ, ಬಲ, ಆರೋಗ್ಯ, ಚಿರಜೀವನ, ಸತ್ಕುಲ, ಮೇಧಾಶಕ್ತಿ- ಇವುಗಳನ್ನು ಹೊಂದುತ್ತಾರೆ.
ತಸ್ಮಾದನ್ನಂ ವಿಶೇಷೇಣ ದಾತವ್ಯಂ ಭೂತಿಮಿಚ್ಛತಾ |
ಸರ್ವಕಾಲಂ ಚ ಸರ್ವಸ್ಯ ಸರ್ವತ್ರ ಚ ಸದೈವ ಚ ॥21॥
ಆದ್ದರಿಂದ ಕಲ್ಯಾಣವನ್ನು ಬಯಸುವವನು ಎಲ್ಲಾ ಕಾಲಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಎಲ್ಲರಿಗೂ ವಿಶೇಷವಾಗಿ ಅನ್ನದಾನವನ್ನು ಮಾಡಬೇಕು.
ಸುವರ್ಣದಾನಂ ಪರಮಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ |
ತಸ್ಮಾತ್ ತದ್ ವರ್ಣಯಿಷ್ಯಾಮಿ ಯಥಾವದನುಪೂರ್ವಶಃ ॥22॥
ಅಪಿ ಪಾಪಕೃತಂ ಕ್ರೂರಂ ದತ್ತಂ ರುಗ್ಮಂ ಪ್ರಣಾಶಯೇತ್ ॥23॥
ಸುವರ್ಣದಾನವು ಶ್ರೇಷ್ಠವಾದ ಸ್ವರ್ಗ ಪ್ರಾಪಕವಾದ, ಕ್ಷೇಮವನ್ನುಂಟು ಮಾಡುವ ದೊಡ್ಡ ದಾನ. ಆದ್ದರಿಂದ ಅದನ್ನು ಒಂದು ಕ್ರಮದಿಂದ ಸರಿಯಾಗಿ ವರ್ಣಿಸುವೆನು. ಸುವರ್ಣದಾನವು ಮಾಡಿದ ಕ್ರೂರವಾದ ಪಾಪವನ್ನೂ ವಿನಾಶಗೊಳಿಸುತ್ತದೆ.
ಸುವರ್ಣಂ ಯೇ ಪ್ರಯಚ್ಛಂತಿ ಶ್ರೋತ್ರಿಯೇಭ್ಯಃ ಸುಚೇತಸಃ |
ದೇವತಾಸ್ತೇ ತರ್ಪಯಂತಿ ಸಮಸ್ತಾ ಇತಿ ವೈದಿಕಮ್ ॥24॥
ಯಾರು ಒಳ್ಳೆಯ ಮನಸ್ಸಿನಿಂದ ಕೂಡಿ ಶ್ರೋತ್ರಿಯರಿಗೆ ಸುವರ್ಣದಾನವನ್ನು ಮಾಡುತ್ತಾರೆಯೋ ಅವರು ಸಮಸ್ತ ದೇವತೆಗಳನ್ನೂ ತೃಪ್ತಿಪಡಿಸುತ್ತಾರೆ ಎಂದು ವೇದಾನುಶಾಸನವಿದೆ.
ಅಗ್ನಿರ್ಹಿ ದೇವತಾಃ ಸರ್ವಾಃ ಸುವರ್ಣಂ ಚಾಗ್ನಿರುಚ್ಯತೇ |
ತಸ್ಮಾತ್ ಸುವರ್ಣದಾನೇನ ದತ್ತಾಃ ಸ್ಯುಃ ಸರ್ವದೇವತಾಃ ॥25॥
ಅಗ್ನಿಯಲ್ಲಿ ಸರ್ವದೇವತೆಗಳೂ ಸನ್ನಿಹಿತರಾಗಿರುತ್ತಾರೆ. ಸುವರ್ಣದಲ್ಲಿ ಅಗ್ನಿಯು ಸನ್ನಿಹಿತನಾಗಿದ್ದಾನೆ. ಆದ್ದರಿಂದ ಸುವರ್ಣದಾನವನ್ನು ಮಾಡಿದರೆ ಎಲ್ಲಾ ದೇವತೆಗಳ ದಾನವನ್ನು ಮಾಡಿದಂತಾಗುತ್ತದೆ.

ಅಗ್ನ್ಯಭಾವೇ ತು ಕುರ್ವಂತಿ ವಹ್ನಿಸ್ಥಾನೇಷು ಕಾಂಚನಮ್ |
ತಸ್ಮಾತ್ ಸುವರ್ಣದಾತಾರಃ ಸರ್ವಾನ್ ಕಾಮಾನವಾಪ್ನುಯುಃ ॥26॥
ಅಗ್ನಿ ಇಲ್ಲದಿದ್ದರೆ ಅಗ್ನಿಸ್ಥಾನದಲ್ಲಿ ಸುವರ್ಣವನ್ನಿಟ್ಟು ಕಾರ್ಯವನ್ನು ಮಾಡುತ್ತಾರೆ. ಆದ್ದರಿಂದ ಸುವರ್ಣದಾನವನ್ನು ಮಾಡುವವರು ಎಲ್ಲಾ ಕಾಮಗಳನ್ನೂ ಹೊಂದುತ್ತಾರೆ.
ಆದಿತ್ಯಸ್ಯ ಹುತಾಶಸ್ಯ ಲೋಕಾನ್ ನಾನಾವಿಧಾನ್ ಶುಭಾನ್ |
ಕಾಂಚನಂ ಸಂಪ್ರದಾಯಾಶು ಪ್ರವಿಶಂತಿ ನ ಸಂಶಯಃ ॥27॥
ಸುವರ್ಣದಾನವನ್ನು ಮಾಡಿದವರು ನಾನಾ ವಿಧವಾದ ಶುಭವಾದ ಆದಿತ್ಯಲೋಕಕ್ಕೂ, ಅಗ್ನಿಲೋಕಕ್ಕೂ ಹೋಗುವುದರಲ್ಲಿ ಸಂಶಯವಿಲ್ಲ.
ಅಲಂಕಾರಕೃತಂ ಚಾಪಿ ಕೇವಲಾತ್ ಪ್ರವಿಶಿಷ್ಯತೇ |
ಸೌವರ್ಣೈರ್ಬ್ರಾಹ್ಮಣಾನ್ ಕಾಲೇ ತೈರಲಂಕೃತ್ಯ ಭೋಜಯೇತ್ ॥28॥
ಕೇವಲ ಸುವರ್ಣಕ್ಕಿಂತಲೂ ಆಭರಣರೂಪವಾದ ಸುವರ್ಣವು ಶ್ರೇಷ್ಠವಾದುದು. ಬ್ರಾಹ್ಮಣರನ್ನು ಸುವರ್ಣಾಭರಣಗಳಿಂದ ಅಲಂಕರಿಸಿ, ಅವರಿಗೆ ಭೋಜನವನ್ನು ಮಾಡಿಸಬೇಕು.
ಏತತ್ಪರಮಕಂ ದಾನಂ ದತ್ತತ್ವ(ದತ್ವಾಸೌ ವರ್ಣ) ಸೌವರ್ಣಮದ್ಭುತಮ್ |
ದ್ಯುತಿಂ ಮೇಧಾಂ ವಪುಃ ಕೀರ್ತಿಂ ಪುನರ್ಜಾತೇ ಲಭೇದ್ ಧ್ರುವಮ್ ॥29॥
ಇದು ಶ್ರೇಷ್ಠವಾದ ದಾನ. ಸುವರ್ಣದಾನವನ್ನು ಮಾಡುವವನು ಮುಂದಿನ ಜನ್ಮದಲ್ಲಿ ಒಳ್ಳೆಯ ವರ್ಣವನ್ನೂ, ಕಾಂತಿಯನ್ನೂ, ಮೇಧಾಶಕ್ತಿಯನ್ನೂ, ಶರೀರವನ್ನೂ ಮತ್ತು ಕೀರ್ತಿಯನ್ನೂ ಪಡೆಯುತ್ತಾನೆ.
ತಸ್ಮಾತ್ ಸ್ವಶಕ್ತ್ಯಾ ದಾತವ್ಯಂ ಕಾಂಚನಂ ಭುವಿ ಮಾನವೈಃ |
ನ ಹ್ಯೇತಸ್ಮಾತ್ ಪರಂ ಲೋಕೇಷ್ವನ್ಯತ್ ಪಾವನಮುಚ್ಯತೇ ॥30॥
ಆದ್ದರಿಂದ ಭೂಮಿಯಲ್ಲಿ ಮನುಷ್ಯರು ತಮ್ಮ ಶಕ್ತಿಗೆ ಅನುಗುಣವಾಗಿ ಸುವರ್ಣ ದಾನವನ್ನು ಮಾಡಬೇಕು. ಲೋಕದಲ್ಲಿ ಇದಕ್ಕಿಂತ ಪವಿತ್ರವಾದುದು ಯಾವುದೂ ಇಲ್ಲವೆಂದು ಹೇಳಲ್ಪಡುತ್ತದೆ.
ಅತ ಊರ್ಧ್ವಂ ಪ್ರವಕ್ಷ್ಯಾಮಿ ಗವಾಂ ದಾನಮನಿಂದಿತೇ |
ನಹಿ ಗೋಭ್ಯಃ ಪರಂ ದಾನಂ ವಿದ್ಯತೇ ಜಗತಿ ಪ್ರಿಯೇ ॥31॥
ಎಲೌ ಅನಿಂದಿತೆಯೇ, ಇಲ್ಲಿಂದ ಮುಂದೆ ಗೋದಾನವನ್ನು ಹೇಳುವೆನು. ಪ್ರಿಯೆಯೇ, ಜಗತ್ತಿನಲ್ಲಿ ಗೋದಾನಕ್ಕಿಂತಲೂ ಶ್ರೇಷ್ಠವಾದ ದಾನವಿಲ್ಲ.
ಲೋಕಾನ್ ಸಿಸೃಕ್ಷುಣಾ ಪೂರ್ವಂ ಗಾವಃ ಸೃಷ್ಟಾಃ ಸ್ವಯಂಭುವಾ |
ವೃತ್ತ್ಯರ್ಥಂ ಸರ್ವಭೂತಾನಾಂ ತಸ್ಮಾತ್ತಾ ಮಾತರಃ ಸ್ಮೃತಾಃ ॥32॥
ಜಗತ್ತನ್ನು ಸೃಷ್ಟಿಮಾಡಲು ಇಚ್ಛಿಸಿದ ಬ್ರಹ್ಮದೇವರು ಮೊದಲು ಪ್ರಜೆಗಳ ಜೀವನಕ್ಕಾಗಿ ಗೋವುಗಳನ್ನು ಸೃಷ್ಟಿಸಿದರು. ಆದ್ದರಿಂದ ಗೋವುಗಳು ಪ್ರಜೆಗಳ ತಾಯಂದಿರು ಎಂದು ಹೇಳಲ್ಪಡುತ್ತವೆ.
ಲೋಕಜ್ಯೇಷ್ಠಾ ಲೋಕವೃತ್ತ್ಯಾ ಪ್ರವೃತ್ತಾ
ಮಯ್ಯಾಯತ್ತಾಃ ಸೋಮವಿಷ್ಯಂದಭೂತಾಃ |
ಸೌಮ್ಯಾಃ ಪುಣ್ಯಾಃ ಕಾಮದಾಃ ಪ್ರಾಣದಾಶ್ಚ
ತಸ್ಮಾತ್ ಪೂಜ್ಯಾಃ ಪುಣ್ಯಕಾಮೈರ್ಮನುಷ್ಯೈಃ ॥33॥
ಗೋವುಗಳು ಲೋಕದಲ್ಲಿ ಜ್ಯೇಷ್ಠವಾದವುಗಳು. ಲೋಕದ ಸ್ಥಿತಿಗಾಗಿ ಪ್ರವೃತ್ತವಾದವುಗಳು. ನನ್ನನ್ನು ಆಶ್ರಯಿಸಿಕೊಂಡಿರುವಂತಹವು. ಕ್ಷೀರವನ್ನು ಹರಿಸುವಂತಹವು. ಸೌಮ್ಯ ಸ್ವಭಾವವನ್ನು ಹೊಂದಿರುವಂತಹವು. ಪವಿತ್ರವಾದವುಗಳು. ಕಾಮಪ್ರದವಾದವುಗಳು. ಪ್ರಾಣಪ್ರದವಾದವುಗಳು. ಆದ್ದರಿಂದ ಪುಣ್ಯವನ್ನು ಬಯಸುವ ಮನುಷ್ಯರು ಅವುಗಳನ್ನು ಪೂಜಿಸಬೇಕು.
ಧೇನುಂ ಹಿ ದತ್ತತ್ವ ನಿಭೃತಾಮರೋಗಾಂ
ಕಲ್ಯಾಣವತ್ಸಾಂ ಚ ಪಯಸ್ವಿನೀಂ ಚ |
ಯಾವಂತಿ ರೋಮಾಣಿ ಭವಂತಿ ತಸ್ಯಾ-
ಸ್ತಾವತ್ಸಮಾಃ ಸ್ವರ್ಗಫಲಾನಿ ಭುಂಕ್ತೇ ॥34॥
ಸೌಮ್ಯ ಸ್ವಭಾವದ, ರೋಗಹೀನವಾದ, ಒಳ್ಳೆಯ ಕರುವನ್ನು ಹೊಂದಿದ, ಹಾಲನ್ನು ಕರೆಯುವ ಗೋವನ್ನು ದಾನ ಮಾಡಿದವನು ಆ ಗೋವಿನ ಶರೀರದಲ್ಲಿ ಎಷ್ಟು ರೋಮಗಳಿರುತ್ತವೆಯೋ ಅಷ್ಟು ವರ್ಷಗಳ ಕಾಲ ಸ್ವರ್ಗಫಲವನ್ನು ಅನುಭವಿಸುತ್ತಾನೆ.
ಪ್ರಯಚ್ಛತೇ ಯಃ ಕಪಿಲಾಂ ಸಚೇಲಾಂ
ಕಾಂಸ್ಯೋಪದೋಹಾಂ ಕನಕಾಗ್ರಶೃಂಗೀಮ್ |
ಪುತ್ರಾಶ್ಚ ಪೌತ್ರಾಂಶ್ಚ ಕುಲಂ ಚ ಸರ್ವಮ್
ಆ ಸಪ್ತಮಂ ತಾರಯತೇ ಪರತ್ರ ॥35॥
ಯಾವನು ವಸ್ತ್ರ ಸಹಿತವಾದ, ಕಂಚಿನ ಕರೆಯುವ ಪಾತ್ರೆಯಿಂದ ಸಹಿತವಾದ, ಶೃಂಗದ ತುದಿಗಳನ್ನು ಚಿನ್ನದಿಂದ ಅಲಂಕರಿಸಿದ ಕಪಿಲಾಗೋವನ್ನು ದಾನ ಮಾಡುತ್ತಾನೆಯೋ ಅವನು ಏಳು ತಲೆಯವರೆಗೆ ತನ್ನ ಪುತ್ರರನ್ನೂ, ಪೌತ್ರರನ್ನೂ, ಕುಲವನ್ನೂ ಸಂಕಟದಿಂದ ಪಾರು ಮಾಡುತ್ತಾನೆ.
ಅಂತರ್ಜಾತಾಃ ಕ್ರೀತಕಾ ದ್ಯೂತಲಬ್ಧಾಃ
ಪ್ರಾಣಕ್ರೀತಾಃ ಸೋದಕಾಶ್ಚೌಜಸಾ ವಾ |

ಕೃಚ್ಛ್ರೋತ್ಸೃಷ್ಟಾಃ ಪೋಷಣಾರ್ಥಾಗತಾಶ್ಚ
ದ್ವಾರೈರೇತೈಸ್ತಾಃ ಪ್ರಲಬ್ಧಾಃ ಪ್ರದದ್ಯಾತ್ ॥36॥
ಮನೆಯಲ್ಲಿ ಹುಟ್ಟಿದ ಹಸುಗಳು, ಕೊಂಡಂತಹವು, ದ್ಯೂತದಲ್ಲಿ ಪಡೆದವುಗಳು, ದಾನವಾಗಿ ಪಡೆದಂತಹವು, ಪ್ರಾಣವನ್ನು ಕೊಟ್ಟು ಕೊಂಡುಕೊಂಡತಹವು, ಸಾಕುವವರಿಗೆ ಕಷ್ಟವಾಗಿ ತ್ಯಜಿಸಲ್ಪಟ್ಟವುಗಳು, ಪೋಷಣೆಗಾಗಿ ತಾವಾಗಿಯೇ ತನ್ನ ಬಳಿಗೆ ಬಂದಂತಹವುಗಳು -ಇಂತಹ ಅನೇಕ ರೀತಿಯಲ್ಲಿ ಪಡೆದ ಗೋವುಗಳನ್ನು ದಾನ ಮಾಡಬೇಕು.
ಕೃಶಾಯ ಬಹುಪುತ್ರಾಯ ಶ್ರೋತ್ರಿಯಾಯಾಹಿತಾಗ್ನಯೇ |
ಪ್ರದಾಯ ನೀರುಜಾಂ ಧೇನುಂ ಲೋಕಾನ್ ಪ್ರಾಪ್ನೋತ್ಯನುತ್ತಮಾನ್ ॥
ಕೃಶನಾದ, ಬಹುಪುತ್ರರನ್ನು ಹೊಂದಿದ, ಆಹಿತಾಗ್ನಿಯಾದ, ಶ್ರೋತ್ರಿಯನಾದ ಬ್ರಾಹ್ಮಣನಿಗೆ ರೋಗರಹಿತವಾದ ಧೇನುವನ್ನು ಕೊಡುವವನು ಶ್ರೇಷ್ಠವಾದ ಲೋಕವನ್ನು ಹೊಂದುತ್ತಾನೆ.
ನೃಶಂಸಸ್ಯ ಕೃತಘ್ನಸ್ಯ ಲುಬ್ಧಸ್ಯಾನೃತವಾದಿನಃ |
ಹವ್ಯಕವ್ಯವ್ಯಪೇತಸ್ಯ ನ ದದ್ಯಾದ್ ಗಾಃ ಕಥಂಚನ ॥38॥
ಕ್ರೂರಿಯಾದವನಿಗೆ, ಕೃತಘ್ನನಾದವನಿಗೆ, ಲೋಭಿಯಾದವನಿಗೆ, ಅನೃತವಾದಿಗೆ, ಹವ್ಯ-ಕವ್ಯರಹಿತನಾದವನಿಗೆ ಎಂದೂ ಗೋದಾನವನ್ನು ಮಾಡಬಾರದು.
ಸಮಾನವತ್ಸಾಂ ಯೋ ದದ್ಯಾದ್ ಧೇನುಂ ವಿಪ್ರೇ ಪಯಸ್ವಿನೀಮ್ |
ಸುವೃತ್ತಾಂ ವಸ್ತ್ರಸಂದಾನಾಂ ಸೋಮಲೋಕೇ ಮಹೀಯತೇ ॥39॥
ಒಳ್ಳೆಯ ಗುಣವನ್ನು ಹೊಂದಿದ, ಹಾಲನ್ನು ಕರೆಯುವ ಸಮಾನವಾದ ಕರುವಿನಿಂದ ಕೂಡಿದ, ವಸ್ತ್ರದಿಂದ ಆಚ್ಛಾದಿತವಾದ ಗೋವನ್ನು ದಾನ ಮಾಡುವವನು ಚಂದ್ರ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಸಮಾನವತ್ಸಾಂ ಯೋ ಧೇನುಂ ಕೃಷ್ಣಾಂ ದದ್ಯಾತ್ ಪಯಸ್ವಿನೀಮ್ |
ಸುವೃತ್ತಾಂ ವಸ್ತ್ರಸಂದಾನಾಂ ಲೋಕಾನ್ ಪ್ರಾಪ್ನೋತ್ಯಪಾಂಪತೇಃ ॥40॥
ಸಮಾನ ವತ್ಸವುಳ್ಳ, ಹಾಲನ್ನು ಕರೆಯುವ, ಒಳ್ಳೆಯ ನಡತೆಯನ್ನು ಹೊಂದಿದ, ವಸ್ತ್ರದಿಂದ ಆಚ್ಛಾದಿತವಾದ ಕೃಷ್ಣಧೇನುವನ್ನು ದಾನ ಮಾಡುವವನು ವರುಣ ಲೋಕವನ್ನು ಹೊಂದುತ್ತಾನೆ.
ಸಮಾನವತ್ಸಾಂ ಯೋ ಧೇನುಂ ದದ್ಯಾದ್ ಗೌರೀಂ ಪಯಸ್ವಿನೀಮ್ |
ಸುವೃತ್ತಾಂ ವಸ್ತ್ರಸಂದಾನಾಮಗ್ನಿಲೋಕೇ ಮಹೀಯತೇ ॥41॥
ಸಮಾನ ವತ್ಸವನ್ನು ಹೊಂದಿದ, ಹಾಲು ಕರೆಯುವ, ಒಳ್ಳೆಯ ನಡತೆಯುಳ್ಳ, ವಸತ್ರಚ್ಛಾದಿತವಾದ ಗೌರವರ್ಣದ ಗೋವನ್ನು ದಾನ ಮಾಡುವವನು ಅಗ್ನಿ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಹಿರಣ್ಯವರ್ಣಾಂ ಪಿಂಗಾಕ್ಷೀಂ ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂದಾನಾಂ ಯಾತಿ ಕೌಬೇರಸದ್ಮ ಸಃ ॥42॥
ಸುವರ್ಣವರ್ಣದ, ಕಂದುಬಣ್ಣದ ಕಣ್ಣುಳ್ಳ ಕರುವನ್ನು ಹೊಂದಿರುವ, ಕರೆಯುವ ಪಾತ್ರೆ ಮತ್ತು ವಸ್ತ್ರಗಳಿಂದ ಕೂಡಿದ ಗೋದಾನವನ್ನು ಮಾಡಿದವನು ಕುಬೇರನ ಮನೆಯನ್ನು ಪ್ರವೇಶಿಸುತ್ತಾನೆ.
ವಾಯುರೇಣುಸವರ್ಣಾಂ ತು ಸವತ್ಸಾಂ ಕಾಂಸ್ಯದೋಹನಾಮ್ |
ಪ್ರದಾಯ ವಸ್ತ್ರಸಂದಾನಾಂ ವಾಯುಲೋಕೇ ಮಹೀಯತೇ ॥43॥
ವಾಯುವಿನ ಧೂಳಿನ ಕಣದ ಬಣ್ಣವನ್ನು ಹೊಂದಿದ, ವತ್ಸಸಹಿತವಾದ, ಕಂಚಿನ ಪಾತ್ರೆಯಿಂದ ಸಹಿತವಾದ, ವಸ್ತ್ರಯುತವಾದ ಗೋವನ್ನು ದಾನ ಮಾಡುವವನು ವಾಯುಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ಯುವಾನಂ ಬಲಿನಂ ಶ್ಯಾಮಂ ಶತೇನ ಸಹ ಯೂಥಪಮ್ |
ಗವೇಂದ್ರಂ ಬ್ರಾಹ್ಮಣೇಂದ್ರಾಯ ಭೂರಿಶೃಂಗಮಲಂಕೃತಮ್ ॥44॥
ಋಷಭಂ ಯೇ ಪ್ರಯಚ್ಛಂತಿ ಶ್ರೋತ್ರಿಯಾಣಾಂ ಮಹಾತ್ಮನಾಮ್ |
ಐಶ್ವರ್ಯಮಭಿಜಾಯಂತೇ ಜಾಯಮಾನಾಃ ಪುನಃಪುನಃ ॥45॥
ಯುವವಯಸ್ಸಿನ, ಬಲಿಷ್ಠವಾದ, ಶ್ಯಾಮವರ್ಣದ, ನೂರು ನಿಷ್ಕಗಳಿಂದ ಸಹಿತವಾದ, ಅಲಂಕೃತವಾದ ದೊಡ್ಡ ಕೊಂಬುಗಳನ್ನು ಹೊಂದಿದ, ಗುಂಪಿನ ನಾಯಕನಾದ ಗೂಳಿಯನ್ನು ಬ್ರಾಹ್ಮಣರಿಗೆ ದಾನ ಮಾಡುವವನು ಪುನಃ ಪುನಃ ಮಹಾತ್ಮರ, ಶ್ರೋತ್ರೀಯರ ಕುಲದಲ್ಲಿ ಐಶ್ವರ್ಯಯುಕ್ತನಾಗಿ ಜನಿಸುತ್ತಾನೆ.
ಗವಾಂ ಮೂತ್ರಪುರೀಷಾಣಿ ನೋದ್ವಿಜೇತ ಕದಾಚನ |
ನ ಚಾಸಾಂ ಮಾಂಸಮಶ್ನೀಯಾದ್ ಗೋಷು ಭಕ್ತಃ ಸದಾ ಭವೇತ್ ॥
ಗೋಮೂತ್ರ ಮತ್ತು ಗೋಮಯಗಳಿಗೆ ಎಂದೂ ಅಸಹ್ಯ ಪಡಬಾರದು. ಅವುಗಳ ಮಾಂಸವನ್ನು ಎಂದೂ ತಿನ್ನಬಾರದು. ಯಾವಾಗಲೂ ಗೋವುಗಳಲ್ಲಿ ಭಕ್ತಿಯನ್ನು ಹೊಂದಿರಬೇಕು.
ಗ್ರಾಸಮುಷ್ಟಿಂ ಪರಗವೇ ದದ್ಯಾತ್ ಸಂವತ್ಸರಂ ಶುಚಿ |
ಅಕೃತ್ವಾ ಸ್ವಯಮಾಹಾರಂ ವ್ರತಂ ತತ್ಸಾರ್ವಕಾಮಿಕಮ್ ॥47॥
ಯಾವನು ತಾನು ಆಹಾರವನ್ನು ಸೇವಿಸುವುದಕ್ಕಿಂತ ಮೊದಲು ಶುಚಿಯಾಗಿ ಒಂದು ವರ್ಷದ ಕಾಲ ಇನ್ನೊಬ್ಬರ ಹಸುವಿಗೆ ಒಂದು ಹಿಡಿ ಗ್ರಾಸವನ್ನು ಕೊಡುತ್ತಾನೆಯೋ ಆ ವ್ರತಕ್ಕೆ ಸರ್ವಕಾಮಪ್ರದವಾದ ವ್ರತವೆಂದು ಹೆಸರು.
ಗವಾಮುಭಯತಃ ಕಾಲೇ ನಿತ್ಯಂ ಸ್ವಸ್ತ್ಯಯನಂ ವದೇತ್ |
ನ ಚಾಸಾಂ ಚಿಂತಯೇತ್ ಪಾಪಮಿತಿ ಧರ್ಮವಿದೋ ವಿದುಃ ॥48॥

ಪ್ರಾತಃಕಾಲ ಮತ್ತು ಸಂಧ್ಯಾಕಾಲಗಳಲ್ಲಿ ಗೋವುಗಳಿಗೆ ಕ್ಷೇಮವಾಗಲಿ ಎಂದು ಹೇಳಬೇಕು. ಅವುಗಳಿಗೆ ಕೇಡನ್ನು ಚಿಂತಿಸಬಾರದು ಎಂದು ಧರ್ಮವನ್ನು ತಿಳಿದವರು ಹೇಳುತ್ತಾರೆ.
ಗಾವಃ ಪವಿತ್ರಂ ಪರಮಂ ಗೋಷು ಲೋಕಾಃ ಪ್ರತಿಷ್ಠಿತಾಃ |
ಕಥಂಚಿನ್ನಾವಮಂತವ್ಯಾ ಗಾವೋ ಲೋಕಸ್ಯ ಮಾತರಃ ॥49॥
ಗೋವುಗಳು ಪರಮಪವಿತ್ರವಾದವುಗಳು. ಅವುಗಳಲ್ಲಿ ಲೋಕಗಳು ಪ್ರತಿಷ್ಠಿತವಾಗಿವೆ. ಅವು ಲೋಕದ ತಾಯಿಯರು. ಯಾವ ಕಾರಣದಿಂದಲೂ ಗೋವುಗಳಿಗೆ ಅವಮಾನವನ್ನು ಮಾಡಬಾರದು.
ತಸ್ಮಾದೇವ ಗವಾಂ ದಾನಂ ವಿಶಿಷ್ಟಮಿತಿ ಕಥ್ಯತೇ |
ಗೋಷು ಪೂಜಾ ಚ ಭಕ್ತಿಶ್ಚ ನರಸ್ಯಾಯುಷ್ಯಮಾವಹೇತ್ ॥50॥
ಆದ್ದರಿಂದ ಗೋದಾನವು ಬಹಳ ಶ್ರೇಷ್ಠವಾದುದೆಂದು ಹೇಳಲ್ಪಡುತ್ತದೆ. ಗೋವುಗಳ ಪೂಜೆ ಮತ್ತು ಅವುಗಳಲ್ಲಿ ಭಕ್ತಿಯ ಮನುಷ್ಯನ ಆಯುಸ್ಸನ್ನು ಹೆಚ್ಚಿಸುತ್ತವೆ.
ಅತಃಪರಂ ಪ್ರವಕ್ಷ್ಯಾಮಿ ಭೂಮಿದಾನಂ ಮಹಾಫಲಮ್ |
ಭೂಮಿದಾನಸಮಂ ದಾನಂ ಲೋಕೇ ನಾಸ್ತೀತಿ ನಿಶ್ಚಯಃ ॥51॥
ಇಲ್ಲಿಂದ ಮುಂದೆ ಮಹಾಫಲವನ್ನು ಕೊಡುವ ಭೂಮಿದಾನವನ್ನು ಹೇಳುವೆನು. ಲೋಕದಲ್ಲಿ ಭೂಮಿದಾನಕ್ಕೆ ಸಮಾನವಾದ ದಾನವಿಲ್ಲವೆಂಬುದು ನಿಶ್ಚಿತವಾದುದು.
ಗೃಹಯುಕ್ ಕ್ಷೇತ್ರಯುಗ್ವಾಽಪಿ ಭೂಮಿಭಾಗಃ ಪ್ರದೀಯತೇ |
ಸುಖಭೋಗಂ ನಿರಾಕ್ರೋಶಂ ವಾಸ್ತುಪೂರ್ವಂ ಪ್ರಕಲ್ಪ್ಯ ಚ ॥52॥
ಮೊದಲು ಮನೆಯನ್ನು ನಿರ್ಮಿಸಿ, ಮನೆಯಿಂದ ಮತ್ತು ಹೊಲದಿಂದ ಸಹಿತವಾದ, ಸುಖವಾದ ಭೋಗವನ್ನು ಕೊಡುವ, ನಿರುಪದ್ರವವಾದ ಭೂಮಿ ಭಾಗವನ್ನು ದಾನ ಮಾಡಬೇಕು.
ಗ್ರಹೀತಾರಮಲಂಕೃತ್ಯ ವಸ್ತ್ರಪುಷ್ಪಾನುಲೇಪನೈಃ |
ಸಭೃತ್ಯಂ ಸಪರೀವಾರಂ ಭೋಜಯಿತ್ವಾ ಯಥೇಷ್ಟತಃ |
ಯೋ ದದ್ಯಾದ್ ದಕ್ಷಿಣಾಕಾಲೇ ತ್ರಿರದ್ಭಿರ್ಗೃಹ್ಯತಾಮಿತಿ ॥53॥
ಏವಂ ಭೂಮ್ಯಾಂ ಪ್ರದತ್ತಾಯಾಂ ಶ್ರದ್ಧಯಾ ವೀತಮತ್ಸರೈಃ |
ಯಾವತ್ ತಿಷ್ಠತಿ ಸಾ ಭೂಮಿಸ್ತಾವತ್ ತಸ್ಯ ಫಲಂ ವಿದುಃ ॥54॥
ದಾನವನ್ನು ಸ್ವೀಕಾರ ಮಾಡುವವನನ್ನು ಗಂಧ-ಪುಷ್ಪಗಳಿಂದ ಅಲಂಕರಿಸಿ, ಭೃತ್ಯ ಪರಿವಾರದ ಜೊತೆಯಲ್ಲಿ ಅವನಿಗೆ ಇಷ್ಟ ಭೋಜನವನ್ನು ಮಾಡಿಸಿ ದಕ್ಷಿಣಾಸಹಿತವಾಗಿ ಜಲಧಾರಾ ಪೂರ್ವಕವಾಗಿ ಸ್ವೀಕರಿಸಬೇಕು ಎಂದು ಹೇಳಿ ಯಾವನು ಭೂಮಿದಾನವನ್ನು ಮಾಡುತ್ತಾನೆಯೋ ಅಂತಹ, ಮತ್ಸರರಹಿತನಾಗಿ ಶ್ರದ್ಧೆಯಿಂದ ಭೂಮಿದಾನವನ್ನು ಮಾಡುವವನು ಭೂಮಿಯು ಇರುವವರೆಗೂ ಆ ದಾನದ ಫಲವನ್ನು ಅನುಭವಿಸುವನೆಂದು ಜ್ಞಾನಿಗಳು ತಿಳಿಯುತ್ತಾರೆ.
ಭೂಮಿದಃ ಸ್ವರ್ಗಮಾರುಹ್ಯ ರಮತೇ ಶಾಶ್ವತೀಃ ಸಮಾಃ |
ಅಚಲಾ ಹ್ಯಕ್ಷಯಾ ಭೂಮಿಃ ಸರ್ವಕಾಮಾನ್ ದುಧುಕ್ಷತಿ ॥55॥
ಭೂಮಿದಾನವನ್ನು ಮಾಡಿದವನು ಸ್ವರ್ಗಕ್ಕೆ ಹೋಗಿ ಬಹಳ ಕಾಲ ಸುಖವನ್ನು ಅನುಭವಿಸುತ್ತಾನೆ. ಅಚಲವೂ, ಅಕ್ಷಯವೂ ಆದ ಭೂಮಿಯು ಅವನಿಗೆ ಸರ್ವಕಾಮಗಳನ್ನು ಕೊಡುತ್ತದೆ.
ಯದ್ಯಚ್ಚ ಕುರುತೇ ಪಾಪಂ ಪುರುಷೋ ವೃತ್ತಿಕರ್ಶಿತಃ |
ಅಪಿ ಗೋಕರ್ಣಮಾತ್ರೇಣ ಭೂಮಿದಾನೇನ ಮುಚ್ಯತೇ ॥56॥
ಮನುಷ್ಯನು ಜೀವನೋಪಾಯದಿಂದ ಕರ್ಶಿತನಾಗಿ ಏನೇನು ಪಾಪವನ್ನು ಮಾಡಿದರೂ ಗೋವಿನ ಕಿವಿಯಷ್ಟು ಮಾತ್ರ (ಒಂದು ಗೇಣಿನಷ್ಟು) ಭೂಮಿದಾನವನ್ನು ಮಾಡಿದರೂ ಆ ಪಾಪದಿಂದ ನಿರ್ಮುಕ್ತನಾಗುತ್ತಾನೆ.
ಸುವರ್ಣಂ ರಜತಂ ವಸ್ತ್ರಂ ಮಣಿಮುಕ್ತಾವಸೂನಿ ಚ |
ಸರ್ವಮೇತನ್ಮಹಾಪ್ರಾಜ್ಞೇ ಭೂಮಿದಾನೇ ಪ್ರತಿಷ್ಠಿತಮ್ ॥57॥
ಎಲೌ ಮಹಾಪ್ರಾಜ್ಞೆಯೇ, ಸುವರ್ಣದಾನ, ರಜತದಾನ, ವಸ್ತ್ರದಾನ, ಮಣಿ ಮುಕ್ತಾಫಲದಾನ - ಈ ಎಲ್ಲ ದಾನವೂ ಭೂದಾನದಲ್ಲಿ ಸೇರಿಕೊಂಡಿದೆ.
ಭರ್ತುರ್ನಿಃಶ್ರೇಯಸೇ ಯುಕ್ತಾಸ್ತ್ಯಕ್ತಾತ್ಮಾನೋ ರಣೇ ಹತಾಃ |
ಬ್ರಹ್ಮಲೋಕಾಯ ಸಂಸಿದ್ಧಾ ನಾತಿಕ್ರಾಮಂತಿ ಭೂಮಿದಮ್ ॥58॥
ಸ್ವಾಮಿಯ ಶ್ರೇಯಸ್ಸಿನಲ್ಲಿ ನಿರತರಾಗಿ ಯುದ್ಧದಲ್ಲಿ ಪ್ರಾಣವನ್ನು ತ್ಯಜಿಸಿ ಬ್ರಹ್ಮಲೋಕವನ್ನು ಪಡೆದವರೂ ಸಹ ಭೂಮಿದಾನ ಮಾಡಿದವನನ್ನು ಮೀರಿ ಹೋಗುವುದಿಲ್ಲ.
ಹಲಕೃಷ್ಟಾಂ ಮಹೀಂ ದದ್ಯಾತ್ ಯಃ ಸಬೀಜಫಲಾನ್ವಿತಾಮ್ |
ಸುಕೂಪಶರಣಾಂ ವಾಪಿ ಸಾ ಭವೇತ್ ಸರ್ವಕಾಮದಾ ॥59॥
ನೇಗಿಲಿನಿಂದ ಉತ್ತು, ಬಿತ್ತಿ, ಬೆಳೆಯಿಂದ ಕೂಡಿದ ಒಳ್ಳೆಯ ನೀರನ್ನು, ಆಸರೆಯನ್ನು, ಗೃಹವನ್ನು ಹೊಂದಿದ ಭೂಮಿಯನ್ನು ದಾನ ಮಾಡಬೇಕು. ಅಂತಹ ಭೂಮಿಯು ಸರ್ವಕಾಮಗಳನ್ನು ಕೊಡುತ್ತದೆ.
ನಿಷ್ಪನ್ನಸಸ್ಯಾಂ ಪೃಥಿವೀಂ ಯೋ ದದಾತಿ ದ್ವಿಜನ್ಮನಾಮ್ |
ವಿಮುಕ್ತಃ ಕಲುಷೈಃ ಸರ್ವೈಃ ಶಕ್ರಲೋಕಂ ಸ ಗಚ್ಛತಿ ॥60॥
ಯಾವ ತೊಂದರೆಯೂ ಇಲ್ಲದ ಸಸ್ಯಾರೂಢವಾದ ಭೂಮಿಯನ್ನು ಬ್ರಾಹ್ಮಣನಿಗೆ ದಾನವನ್ನು ಮಾಡುವವನು ಇಂದ್ರಲೋಕಕ್ಕೆ

ಹೋಗುತ್ತಾನೆ.
ಯಥಾ ಜನಿತ್ರೀ ಕ್ಷೀರೇಣ ಸ್ವಪುತ್ರಮಭಿವರ್ಧಯೇತ್ |
ಏವಂ ಸರ್ವಫಲೈರ್ಭೂಮಿರ್ದಾತಾರಮಭಿವರ್ಧಯೇತ್ ॥61॥
ತಾಯಿಯು ತನ್ನ ಮಗುವನ್ನು ಕ್ಷೀರದಿಂದ ಪೋಷಿಸುವಂತೆ ಭೂಮಿಯು ದಾನ ಮಾಡಿದವನನ್ನು ಸರ್ವಫಲಗಳಿಂದಲೂ ಪೋಷಿಸುತ್ತದೆ.
ಬ್ರಾಹ್ಮಣಂ ವೃತ್ತಸಂಪನ್ನಮಾಹಿತಾಗ್ನಿಂ ಶುಚಿವ್ರತಮ್ |
ಗ್ರಾಹಯಿತ್ವಾ ನಿಜಾಂ ಭೂಮಿಂ ನ ಯಾಂತಿ ಯಮಸಾದನಮ್ ॥62॥
ವೃತ್ತಸಂಪನ್ನನಾದ, ಶುಚಿವ್ರತನಾದ, ಆಹಿತಾಗ್ನಿಯಾದ ಬ್ರಾಹ್ಮಣನಿಗೆ ತಮ್ಮ ಭೂಮಿಯನ್ನು ದಾನ ಮಾಡಿದವರು ಯಮಲೋಕಕ್ಕೆ ಹೋಗುವುದಿಲ್ಲ.
ಯಥಾ ಚಂದ್ರಮಸೋ ವೃದ್ಧಿರಹನ್ಯಹನಿ ದೃಶ್ಯತೇ |
ತಥಾ ಭೂಮಿಕೃತಂ ದಾನಂ ಸಸ್ಯೇಸಸ್ಯೇ ವಿವರ್ಧತೇ ॥63॥
ಶುಕ್ಲಪಕ್ಷದಲ್ಲಿ ಚಂದ್ರನ ವೃದ್ಧಿಯು ದಿನದಿನದಲ್ಲಿ ಹೆಚ್ಚಾಗಿ ತೋರುವಂತೆ ಭೂದಾನದ ಫಲವು ಸಸ್ಯಗಳು ಬೆಳೆದಂತೆ ಅಭಿವೃದ್ಧಿಯನ್ನು ಹೊಂದುತ್ತದೆ.
ಯಥಾ ಬೀಜಾನಿ ರೋಹಂತಿ ಪ್ರಕೀರ್ಣಾನಿ ಮಹೀತಳೇ |
ತಥಾ ಕಾಮಾಃ ಪ್ರರೋಹಂತಿ ಭೂಮಿದಾನಗುಣಾರ್ಜಿತಾಃ ॥64॥
ಭೂಮಿಯ ಮೇಲೆ ಎಸೆದ ಬೀಜಗಳು ಮೊಳಕೆಯೊಡೆದು ಬೆಳೆಯುವಂತೆ ಭೂಮಿದಾನದಿಂದ ಸಂಪಾದಿಸಿದ ಅವನ ಕಾಮಗಳು ಬೆಳೆಯುತ್ತವೆ.
ಪಿತರಃ ಪಿತೃಲೋಕಸ್ಥಾ ದೇವತಾಶ್ಚ ದಿವಿ ಸ್ಥಿತಾಃ |
ಸಂತರ್ಪಯಂತಿ ಭೋಗೈಸ್ತಂ ಯೋ ದದಾತಿ ವಸುಂಧರಾಮ್ ॥65॥
ಪಿತೃಲೋಕದಲ್ಲಿರುವ ಪಿತೃಗಳು, ಸ್ವರ್ಗಲೋಕದಲ್ಲಿರುವ ದೇವತೆಗಳು ಭೂಮಿದಾನವನ್ನು ಮಾಡಿದವನನ್ನು ಎಲ್ಲ ಭೋಗಗಳಿಂದಲೂ ಸಂತೋಷಪಡಿಸುತ್ತಾರೆ.
ದೀರ್ಘಾಯುಷ್ಟ್ವಮರೋಗತ್ವಂ ಸ್ಫೀತಾಂ ಚ ಶ್ರಿಯಮುತ್ತಮಾಮ್ |
ಪರತ್ರ ಲಭತೇ ಮರ್ತ್ಯಃ ಸಂಪ್ರದಾಯ ವಸುಂಧರಾಮ್ ॥66॥
ಭೂದಾನವನ್ನು ಮಾಡಿದವನು ದೀರ್ಘಾಯುಷ್ಯವನ್ನೂ, ಅರೋಗತ್ವವನ್ನೂ, ಶುದ್ಧವಾದ ಸಂಪತ್ತನ್ನೂ ಪರಲೋಕದಲ್ಲಿ ಪಡೆಯುತ್ತಾನೆ.
ಏತತ್ಸರ್ವಂ ಮಯೋದ್ದಿಷ್ಟಂ ಭೂಮಿದಾನಸ್ಯ ಯತ್ಫಲಮ್ |
ಶ್ರದ್ದಧಾನೈರ್ನರೈರ್ನಿತ್ಯಂ ಶ್ರಾವ್ಯಮೇತತ್ ಸನಾತನಮ್ ॥67॥
ಭೂದಾನದ ಫಲವೆಲ್ಲವನ್ನೂ ನಾನು ಹೇಳಿದ್ದೇನೆ. ಶ್ರದ್ಧೆಯುಳ್ಳ ಪುರುಷರು ಸನಾತನವಾದ ಈ ದಾನವಿಧಿಯನ್ನು ನಿತ್ಯವೂ ಕೇಳಬೇಕು.
ಅತಃ ಪರಂ ಪ್ರವಕ್ಷ್ಯಾಮಿ ಕನ್ಯಾದಾನಂ ಯಥಾವಿಧಿ |
ಕನ್ಯಾ ದೇಯಾ ಮಹಾದೇವಿ ಪರೇಷಾಮಾತ್ಮನೋಽಪಿ ವಾ ॥68॥
ಇನ್ನು ಮುಂದೆ ವಿಧಿಗೆ ಅನುಸಾರಿಯಾದ ಕನ್ಯಾದಾನವನ್ನು ಹೇಳುವೆನು. ಎಲೌ ಮಹಾದೇವಿಯೇ, ಇನ್ನೊಬ್ಬರ ಕನ್ಯೆಯನ್ನು ಅಥವಾ ತನ್ನ ಕನ್ಯೆಯನ್ನು ದಾನ ಮಾಡಬೇಕು.
ಕನ್ಯಾಂ ಶುದ್ಧವ್ರತಾಚಾರಾಂ ಕುಲರೂಪಸಮನ್ವಿತಾಮ್ |
ಯಸ್ಮೈ ದಿತ್ಸತಿ ಪಾತ್ರಾಯ ತೇನಾಪಿ ಭೃಶಕಾಮಿತಾಮ್ ॥69॥
ಪ್ರಥಮಂ ತತ್ಸಮಾಕಲ್ಪ್ಯ ಬಂಧುಭಿಃ ಕೃತನಿಶ್ಚಯಮ್ |
ಕಾರಯಿತ್ವಾ ಗೃಹಂ ಪೂರ್ವಂ ದಾಸೀದಾಸಪರಿಚ್ಛದೈಃ ॥70॥
ಗೃಹೋಪಕರಣಂ ಚೈವ ಶುದ್ಧಧಾನ್ಯೇನ ಸಂಯುತಮ್ |
ದಾರಾರ್ಥಿನೇ ತದರ್ಹಾಯ ಕನ್ಯಾಂ ತಾಂ ಸಮಲಂಕೃತಾಮ್ ॥71॥
ಸವಿವಾಹಂ ಯಥಾನ್ಯಾಯಂ ಪ್ರಯಚ್ಛೇದಗ್ನಿಸಾಕ್ಷಿಕಮ್ |
ವೃತ್ತ್ಯಾಯತಿಂ ಯಥಾ ಕೃತ್ವಾ ಸದ್ಗೃಹೇ ತೌ ನಿವೇಶಯೇತ್ ॥72॥
ಶುದ್ಧವ್ರತ ಮತ್ತು ಆಚಾರಗಳುಳ್ಳ, ಕುಲ-ರೂಪಸಮನ್ವಿತಳಾದ ಪಾತ್ರರಿಂದಲೂ ಅಪೇಕ್ಷಿಸಲ್ಪಟ್ಟ ಕನ್ಯೆಯನ್ನು ಪಾತ್ರರಿಗೆ ಕೊಡಲು ಬಯಸಿದಾಗ ಮೊದಲು ಬಂಧುಗಳ ಜೊತೆಯಲ್ಲಿ ಸೇರಿ ನಿಶ್ಚಯವನ್ನು ಮಾಡಿ ದಾಸೀ-ದಾಸ ಸಲಕರಣೆಗಳಿಂದ ತುಂಬಿದ ಒಂದು ಗೃಹವನ್ನು ಕಟ್ಟಿಸಿ, ಗೃಹದಲ್ಲಿ ಉಪಕರಣಗಳನ್ನೂ ಮತ್ತು ಶುದ್ಧ ಧಾನ್ಯಗಳನ್ನೂ ಇಟ್ಟು, ಕನ್ಯಾರ್ಥಿಯಾದ ವರನಿಗೆ ಅಲಂಕೃತಳಾದ ಕನ್ಯೆಯನ್ನು ವಿಧಿಪೂರ್ವಕವಾಗಿ, ಅಗ್ನಿಸಾಕ್ಷಿಕವಾಗಿ ಶಾಸ್ತ್ರರೀತಿಯಲ್ಲಿ ವಿವಾಹ ಮಾಡಿಕೊಡಬೇಕು. ಅವರ ಜೀವನೋಪಾಯವನ್ನು ಕಲ್ಪಿಸಿ ಅಂತಹ ಒಳ್ಳೆಯ ಮನೆಯಲ್ಲಿ ಅವರನ್ನು ಇಡಬೇಕು.
ಏವಂ ಕೃತ್ವಾ ವಧೂದಾನಂ ತಸ್ಯ ದಾನಸ್ಯ ಗೌರವಾತ್ |
ಪ್ರೇತ್ಯಭಾವೇ ಮಹೀಯೇತ ಸ್ವರ್ಗಲೋಕೇ ಯಥಾಸುಖಮ್ ॥73॥
ಪುನರ್ಜಾತೌ ಚ ಸೌಭಾಗ್ಯಂ ಕುಲವೃದ್ಧಿಂ ತಥಾಽಽಪ್ನುಯಾತ್ ॥74॥
ಇಂತಹ ವಧೂದಾನವನ್ನು ಮಾಡಿದವನು ಆ ದಾನದ ಮಹಿಮೆಯಿಂದ ಮರಣಾ ನಂತರದಲ್ಲಿ ಸ್ವರ್ಗಲೋಕದಲ್ಲಿ ಸುಖದಿಂದ

ಪೂಜಿಸಲ್ಪಡುತ್ತಾನೆ. ಪುನಃ ಮುಂದಿನ ಜನ್ಮದಲ್ಲಿ ಅವನು ಸೌಭಾಗ್ಯವನ್ನೂ, ಕುಲವೃದ್ಧಿಯನ್ನೂ ಹೊಂದುತ್ತಾನೆ.
ವಿದ್ಯಾದಾನಂ ತಥಾ ದೇವಿ ಪಾತ್ರಭೂತಾಯ ವೈ ದದತ್ |
ಪ್ರೇತ್ಯಭಾವೇ ಲಭೇನ್ಮರ್ತ್ಯೋ ಮೇಧಾಂ ವೃದ್ಧಿಂ ಧೃತಿಂ ಸ್ಮೃತಿಮ್ ॥75॥
ಎಲೌ ದೇವಿಯೇ, ಪಾತ್ರನಾದವನಿಗೆ ವಿದ್ಯಾದಾನವನ್ನು ಮಾಡಿದವನು ಮರಣಾ ನಂತರ ಮುಂದಿನ ಜನ್ಮದಲ್ಲಿ ಮೇಧಾಶಕ್ತಿಯನ್ನೂ, ಅಭಿವೃದ್ಧಿಯನ್ನೂ, ಧೈರ್ಯವನ್ನೂ ಮತ್ತು ಸ್ಮೃತಿಯನ್ನೂ ಹೊಂದುತ್ತಾನೆ.
ಅನುರೂಪಾಯ ಶಿಷ್ಯಾಯ ಸ್ವಾಂ ವಿದ್ಯಾಂ ಯಃ ಪ್ರಯಚ್ಛತಿ |
ಯಥೋಕ್ತಸ್ಯ ಚ ದಾನಸ್ಯ ಫಲಮಾನಂತ್ಯಮುಚ್ಯತೇ ॥76॥
ಅನುರೂಪನಾದ ಶಿಷ್ಯನಿಗೆ ತನ್ನ ವಿದ್ಯೆಯನ್ನು ದಾನ ಮಾಡುವವನು ಹಿಂದೆ ಹೇಳಿದ ದಾನದ ಫಲವನ್ನು ಅನಂತವಾಗಿ ಪಡೆಯುತ್ತಾನೆ.
ದಾಪನಂ ತ್ವಥ ವಿದ್ಯಾನಾಂ ದರಿದ್ರೇಭ್ಯೋಽರ್ಥವೇದನೈಃ |
ಸ್ವಯಂ ದತ್ತೇನ ತುಲ್ಯಂ ಸ್ಯಾದಿತಿ ವಿದ್ಧಿ ಶುಭಾನನೇ ॥77॥
ದರಿದ್ರನಾದವನಿಗೆ ಅರ್ಥಜ್ಞಾನಪೂರ್ವಕವಾಗಿ ವಿದ್ಯಾದಾನವನ್ನು ಮಾಡುವವನು ಎಲೌ ಶುಭಾನನೆಯೇ, ಆತ್ಮದಾನವನ್ನೇ ಮಾಡಿದವನಿಗೆ ಸಮಾನನೆಂದು ತಿಳಿ.
ಏವಂ ತೇ ಕಥಿತಾನ್ಯೇವ ಮಹಾದಾನಾನಿ ಭಾಮಿನಿ |
ತ್ವತ್ಪ್ರಿಯಾರ್ಥಂ ಮಹಾದೇವಿ ಭೂಯಃ ಶ್ರೋತುಂ ಕಿಮಿಚ್ಛಸಿ ॥78॥
ಎಲೌ ಭಾಮಿನಿಯೇ, ಹೀಗೆ ನಾನು ನಿನಗೆ ನಿನ್ನ ಸಂತೋಷಕ್ಕಾಗಿ ಮಹಾದಾನಗಳನ್ನು ಹೇಳಿದ್ದೇನೆ. ಮಹಾದೇವಿಯೇ, ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ವಿವಿಧದಾನಫಲಕಥನಂ ನಾಮ ವಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯ
ಉಮಾ-ಮಹೇಶ್ವರಸಂವಾದ. ತಿಲಾದಿ ದಾನವಿಧಿ.
ಉಮಾ
ಭಗವನ್ ದೇವದೇವೇಶ ಕಥಂ ದೇಯಂ ತಿಲಾನ್ವಿತಮ್ |
ತಸ್ಯ ತಸ್ಯ ಫಲಂ ಬ್ರೂಹಿ ದತ್ತಸ್ಯ ಚ ಕೃತಸ್ಯ ಚ ॥1॥
ಉಮಾ ಪೂಜ್ಯನೇ, ದೇವದೇವೇಶನೇ, ತಿಲದಾನ ವಿಧಿಯನ್ನು ಮತ್ತು ಉಳಿದ ಸತ್ಕರ್ಮಗಳ ಫಲವನ್ನು ಹೇಳು.
ಮಹೇಶ್ವರಃ
ತಿಲಕಲ್ಪವಿಧಿಂ ದೇವಿ ತನ್ಮೇ ಶೃಣು ಸಮಾಹಿತಾ ॥2॥
ಮಹೇಶ್ವರ ದೇವಿಯೇ, ತಿಲದಾನ ವಿಧಿಯನ್ನು ಹೇಳುತ್ತೇನೆ. ಸಮಾಧಾನದಿಂದ ಕೇಳು.
ಸಮೃದ್ಧೈರಸಮೃದ್ಧೈರ್ವಾ ತಿಲಾ ದೇಯಾ ವಿಶೇಷತಃ |
ತಿಲಾಃ ಪವಿತ್ರಾಃ ಪಾಪಘ್ನಾಃ ಸುಪುಣ್ಯಾ ಇತಿ ಸಂಸ್ಮೃತಾಃ ॥3॥
ಸಂಪತ್ತು ಇದ್ದವರಾಗಲೀ, ಇಲ್ಲದಿದ್ದವರಾಗಲೀ ವಿಶೇಷವಾಗಿ ತಿಲದಾನವನ್ನು ಮಾಡಬೇಕು. ತಿಲಗಳು ಪವಿತ್ರವಾದವುಗಳು, ಪಾಪಪರಿಹಾರಕವಾದವುಗಳು ಮತ್ತು ಪುಣ್ಯಪ್ರದವಾದವುಗಳು ಎಂದು ಹೇಳಲ್ಪಡುತ್ತವೆ.
ನ್ಯಾಯತಸ್ತು ತಿಲಾನ್ ಶುದ್ಧಾನ್ ಸಂಹೃತ್ಯಾಥ ಸ್ವಶಕ್ತಿತಃ |
ತಿಲರಾಶಿಂ ಪುನಃ ಕುರ್ಯಾತ್ ಪರ್ವತಾಭಂ ಸುರತ್ನಕಮ್ |
ಮಹಾಂತಂ ಯದಿ ವಾ ಸ್ತೋಕಂ ನಾನಾದ್ರವ್ಯಸಮಾಯುತಮ್ ॥4॥
ನ್ಯಾಯದಿಂದ ತಿಲಗಳನ್ನು ತನ್ನ ಶಕ್ತಿಯಿದ್ದಷ್ಟು ಸಂಪಾದಿಸಿ, ಅವುಗಳನ್ನು ಶುದ್ಧ ಮಾಡಿ, ಪರ್ವತದಂತೆ ಎತ್ತರವಾಗಿ ರತ್ನಸಹಿತವಾಗಿ ತಿಲರಾಶಿಯನ್ನು ಮಾಡಬೇಕು. ದೊಡ್ಡದಾಗಲೀ, ಸಣ್ಣದಾಗಲೀ, ನಾನಾದ್ರವ್ಯಯುಕ್ತವಾದ ರಾಶಿಯನ್ನು ಮಾಡಬೇಕು.
ಸುವರ್ಣರಜತಾಭ್ಯಾಂ ಚ ಮಣಿಮುಕ್ತಾಪ್ರವಾಳಕೈಃ |
ಅಲಂಕೃತ್ಯ ಯಥಾಯೋಗಂ ಸಪತಾಕಂ ಸವೇದಿಕಮ್ |
ಸಭೂಷಣಂ ಸವಸ್ತ್ರಂ ಚ ಶಯನಾಸನಸಂಯುತಮ್ ॥5॥
ಅದಕ್ಕೆ ಸುವರ್ಣ-ರಜತಗಳಿಂದಲೂ, ಮಣಿ-ಮುತ್ತು ಮತ್ತು ಹವಳಗಳಿಂದಲೂ ಸಾಧ್ಯವಿದ್ದಷ್ಟು ಅಲಂಕಾರವನ್ನು ಮಾಡಿ ಪತಾಕೆಯನ್ನೂ, ಒಂದು ವೇದಿಕೆಯನ್ನೂ ಇಟ್ಟು ಭೂಷಣ, ವಸ್ತ್ರ, ಶಯನ ಮತ್ತು ಆಸನಗಳನ್ನು ಇಡಬೇಕು.
ಪ್ರಾಯಶಃ ಕೌಮುದೀಮಾಸೇ ಪೌರ್ಣಮಾಸ್ಯಾಂ ವಿಶೇಷತಃ |
ಭೋಜಯಿತ್ವಾ ಚ ವಿಧಿವದ್ ಬ್ರಾಹ್ಮಣಾನರ್ಹತೋ ಬಹೂನ್ ॥6॥
ಸ್ವಯಂ ಕೃತೋಪವಾಸಂ ಚ ವೃತ್ತಶೌಚಸಮನ್ವಿತಃ |
ದದ್ಯಾತ್ ಪ್ರದಕ್ಷಿಣೀಕೃತ್ಯ ತಿಲರಾಶಿಂ ಸದಕ್ಷಿಣಮ್ ॥7॥
ಹೆಚ್ಚಾಗಿ ಕಾರ್ತಿಕ ಮಾಸದಲ್ಲಿ, ಅದರಲ್ಲೂ ವಿಶೇಷವಾಗಿ ಪೌರ್ಣಮಾಸಿಯಂದು ಯೋಗ್ಯರಾದ ಅನೇಕ ಬ್ರಾಹ್ಮಣರಿಗೆ ವಿಧಿಗೆ

ಅನುಸಾರವಾಗಿ ಭೋಜನವನ್ನು ಮಾಡಿಸಿ ತಾನು ಶೌಚ-ವ್ರತ ಸಮನ್ವಿತನಾಗಿ, ಉಪವಾಸವನ್ನು ಮಾಡಿ, ತಿಲರಾಶಿಯನ್ನು ಪ್ರದಕ್ಷಿಣೆ ಮಾಡಿ ದಕ್ಷಿಣಾಸಹಿತವಾದ ತಿಲರಾಶಿಯನ್ನು ದಾನ ಮಾಡಬೇಕು.

ಏಕಸ್ಯ ವಾ ಬಹೂನಾಂ ವಾ ದಾತವ್ಯಂ ಭೂತಿಮಿಚ್ಛತಾ |
ತಸ್ಯ ದಾನಫಲಂ ದೇವಿ ಅಗ್ನಿಷ್ಟೋಮೇನ ಸಮ್ಮಿತಮ್ ॥8॥

ತನ್ನ ಕಲ್ಯಾಣವನ್ನು ಬಯಸುವವನು ಒಬ್ಬನಿಗಾಗಲೀ, ಅನೇಕರಿಗಾಗಲೀ ದಾನವನ್ನು ಮಾಡಬೇಕು. ಎಲೌ ದೇವಿಯೇ, ಆ ದಾನದ ಫಲವು ಅಗ್ನಿಷ್ಟೋಮದ ಫಲಕ್ಕೆ ಸಮವಾಗಿರುತ್ತದೆ.

ಕೇವಲಂ ವಾ ತಿಲೈರೇವ ಭೂಮೌ ಕೃತ್ವಾ ಗವಾಕೃತಿಮ್ |
ಸವಸ್ತ್ರಕಂ ಸವತ್ಸಂ ಚ ಪುಂಸಾ ಗೋದಾನಕಾಂಕ್ಷಿಣಾ |
ತದರ್ಹಾಯ ಪ್ರದಾತವ್ಯಂ ತಸ್ಯ ಗೋದಾನವತ್ಫಲಮ್ ॥9॥

ಅಥವಾ ಭೂಮಿಯ ಮೇಲೆ ಕೇವಲ ತಿಲಗಳಿಂದಲೇ ಗೋವಿನ ಆಕೃತಿಯನ್ನು ಮಾಡಿ ವಸ್ತ್ರ ಸಹಿತವಾಗಿ ಗೋದಾನವನ್ನು ಮಾಡಲು ಬಯಸುವ ಪುರುಷನು ಅದನ್ನು ಯೋಗ್ಯನಾದವನಿಗೆ ದಾನ ಮಾಡಬೇಕು. ಅದರಿಂದ ಪ್ರತ್ಯಕ್ಷ ಗೋದಾನ ಮಾಡಿದಷ್ಟೇ ಫಲವುಂಟಾಗುತ್ತದೆ.

ಶರಾವಾಂಸ್ತಿಲಸಂಪೂರ್ಣಾನ್ ಸಹಿರಣ್ಯಾನ್ ಸಚಂಪಕಾನ್ |
ಜಲೈರ್ದದದ್ ಬ್ರಾಹ್ಮಣಾಯ ಸ ಪುಣ್ಯಫಲಭಾಗ್ಭವೇತ್ ॥10॥

ಮಡಕೆಗಳನ್ನು ಅಥವಾ ಪಾತ್ರೆಗಳನ್ನು ಎಳ್ಳಿನಿಂದ ತುಂಬಿ, ಅದರ ಮೇಲೆ ಹಿರಣ್ಯವನ್ನೂ ಮತ್ತು ಚಂಪಕ ಪುಷ್ಪವನ್ನೂ ಇಟ್ಟು ಜಲಧಾರಾ ಪೂರ್ವಕವಾಗಿ ಬ್ರಾಹ್ಮಣರಿಗೆ ದಾನ ಮಾಡುವವನು ಬಹಳ ಪುಣ್ಯಫಲವನ್ನು ಹೊಂದುತ್ತಾನೆ.

ಏವಂ ತಿಲಮಯಂ ದೇಯಂ ನರೇಣ ಹಿತಮಿಚ್ಛತಾ |
ನಾನಾದಾನಫಲಂ ಭೂಯಃ ಶೃಣು ದೇವಿ ಸಮಾಹಿತಾ ॥11॥

ತನ್ನ ಹಿತವನ್ನು ಬಯಸುವ ಪುರುಷನು ಹೀಗೆ ತಿಲದಾನವನ್ನು ಮಾಡಬೇಕು. ಎಲೌ ದೇವಿಯೇ, ನಾನಾ ದಾನಗಳ ಫಲವನ್ನು ಪುನಃ ಸಮಾಧಾನದಿಂದ ಕೇಳು.

ಬಲಮಾಯುಷ್ಯಮಾರೋಗ್ಯಮನ್ನದಾನಾಲ್ಲಭೇನ್ನರಃ |
ಪಾನೀಯದಸ್ತು ಸೌಭಾಗ್ಯಂ ರಸಜ್ಞಾನಂ ಲಭೇನ್ನರಃ ॥12॥

ಮನುಷ್ಯನು ಅನ್ನದಾನದಿಂದ ಬಲವನ್ನೂ, ಆಯುಷ್ಯವನ್ನೂ, ಆರೋಗ್ಯವನ್ನೂ ಪಡೆಯುತ್ತಾನೆ. ಜಲದಾನವನ್ನು ಮಾಡುವ ಪುರುಷನು ಸೌಭಾಗ್ಯವನ್ನೂ ಮತ್ತು ರಸಜ್ಞಾನವನ್ನೂ ಪಡೆಯುತ್ತಾನೆ.

ವಸ್ತ್ರದಾನಾದ್ ವಪುಃಶೋಭಾಮಲಂಕಾರಂ ಲಭೇನ್ನರಃ |
ದೀಪದೋ ಬುದ್ಧಿವೈಮಲ್ಯಂ ದ್ಯುತಿಂ ಶೋಭಾಂ ಲಭೇತ್ಪುನಃ ॥13॥

ವಸ್ತ್ರದಾನದಿಂದ ದೇಹದ ಕಾಂತಿಯನ್ನೂ ಮತ್ತು ಅಲಂಕಾರವನ್ನೂ ಪಡೆಯುತ್ತಾನೆ. ದೀಪದಾನವನ್ನು ಮಾಡಿದವನು ನಿರ್ಮಲವಾದ ಬುದ್ಧಿಯನ್ನೂ ಮತ್ತು ದೇಹ ಕಾಂತಿಯನ್ನೂ ಪಡೆಯುತ್ತಾನೆ.

ರಾಜಪೀಡಾವಿಮೋಕ್ಷಂ ತಚ್ಛತ್ರದೋ ಲಭತೇ ಫಲಮ್ |
ದಾಸೀದಾಸಪ್ರದಾನಾತ್ತು ಭವೇತ್ ಕರ್ಮಾಂತಭಾಜ್ ನರಃ |
ದಾಸೀದಾಸಂ ಚ ವಿವಿಧಂ ಲಭೇತ್ ಪ್ರೇತ್ಯ ಗುಣಾನ್ವಿತಮ್ ॥14॥

ಛತ್ರಿಯನ್ನು ದಾನ ಮಾಡುವವನು ರಾಜಪೀಡೆಯಿಂದ ಬಿಡುಗಡೆಯನ್ನು ಹೊಂದುತ್ತಾನೆ. ದಾಸೀ-ದಾಸರನ್ನು ದಾನ ಮಾಡುವುದರಿಂದ ಪ್ರಾರಂಭಿಸಿದ ಕಾರ್ಯವು ಪೂರ್ಣಗೊಳ್ಳುತ್ತದೆ. ತಾನೂ ಸಹ ಮರಣಾನಂತರದಲ್ಲಿ (ಮುಂದಿನ ಜನ್ಮದಲ್ಲಿ) ಗುಣಾನ್ವಿತರಾದ ಅನೇಕ ದಾಸ-ದಾಸಿಯರನ್ನು ಪಡೆಯುತ್ತಾನೆ.

ಯಾನಾನಿ ವಾಹನಂ ಚೈವ ತದರ್ಹಾಯ ದದನ್ನರಃ |
ಪಾದರೋಗಪರಿಕ್ಲೇಶಾನ್ಮುಕ್ತಶ್ಚೋತ್ಸಾಹವಾನ್ ಭವೇತ್ |
ವಿಚಿತ್ರಂ ರಮಣೀಯಂ ಚ ಲಭತೇ ಯಾನವಾಹನಮ್ ॥15॥

ಯಾನಗಳನ್ನು ಮತ್ತು ವಾಹನಗಳನ್ನು (ಅಶ್ವ ಮೊದಲಾದವುಗಳನ್ನು) ದಾನ ಮಾಡುವ ಮನುಷ್ಯನು ಪಾದರೋಗಗಳಿಂದ ಮುಕ್ತನಾಗಿ ಉತ್ಸಾಹಯುಕ್ತನಾಗುತ್ತಾನೆ. ತಾನೂ ಸಹ ವಿಚಿತ್ರವಾದ, ಮನೋಹರವಾದ ಯಾನ-ವಾಹನಗಳನ್ನು ಪಡೆಯುತ್ತಾನೆ.

ಪ್ರತಿಶ್ರಯಪ್ರದಾನಂ ಚ ತದರ್ಹಾಯ ತದಿಚ್ಛತೇ |
ವರ್ಷಾಕಾಲೇ ತು ರಾತ್ರೌ ವಾ ಲಭೇತ್ ಪಕ್ಷಬಲಂ ಶುಭಮ್ ॥16॥

ಮಳೆಗಾಲದ ರಾತ್ರಿಯಲ್ಲಿ ನಿವಾಸವನ್ನು ಬಯಸುವವನಿಗೆ ನಿವಾಸವನ್ನು ಕೊಡುವವನು ಶುಭವಾದ ತನ್ನ ಪಕ್ಷದ ಬಲವನ್ನು ಹೆಚ್ಚಿಸುತ್ತಾನೆ.

ಸೇತುಕೂಪತಟಾಕಾನಾಂ ಕರ್ತಾ ತು ಲಭತೇ ನರಃ |
ದೀರ್ಘಾಯುಷ್ಟ್ವಂ ಚ ಸೌಭಾಗ್ಯಂ ತಥಾ ಪ್ರೇತ್ಯಾಯತೀಂ ಶುಭಾಮ್ ॥

ಅಣೆಕಟ್ಟುಗಳನ್ನೂ, ಬಾವಿಗಳನ್ನೂ ಮತ್ತು ಕೆರೆಗಳನ್ನೂ ನಿರ್ಮಿಸುವ ನರನು ದೀರ್ಘಾಯುಷ್ಯವನ್ನೂ, ಸೌಭಾಗ್ಯವನ್ನೂ ಮರಣಾನಂತರದಲ್ಲಿ ಬಹಳ ಶುಭವನ್ನೂ ಹೊಂದುತ್ತಾನೆ.

ವೃಕ್ಷಪಂಕ್ತಿಕರೋ ಯಸ್ತು ಛಾಯಾಪುಷ್ಪಫಲಪ್ರದಃ |
ಪ್ರೇತ್ಯಭಾವೇ ಲಭೇತ್ ಪುಣ್ಯಮಭಿಗಮ್ಯೋ ಭವೇನ್ನರಃ ॥18॥

ಸಾಲು ಮರಗಳನ್ನು ನೆಡಿಸುವವನು, ಛಾಯಾಪುಷ್ಪ ಮತ್ತು ಫಲಗಳನ್ನು ಕೊಡುವವನು ಮರಣಾನಂತರದಲ್ಲಿ ಬಹಳ ಪುಣ್ಯವನ್ನು

ಪಡೆಯುತ್ತಾನೆ. ಎಲ್ಲರಿಂದಲೂ ಪ್ರಾಪ್ಯನಾಗುತ್ತಾನೆ.
ಯಸ್ತು ಸಂಕ್ರಮಕೃಲ್ಲೋಕೇ ನದೀಷು ಜಲತಾರಿಣಾಮ್ |
ಲಭೇತ್ ಪುಣ್ಯಫಲಂ ಪ್ರೇತ್ಯ ವ್ಯಸನೇಭ್ಯೋ ವಿಮೋಕ್ಷಣಮ್ ॥19॥
ಯಾವನು ನದಿಯನ್ನು ದಾಟಲು ಬಯಸುವವರನ್ನು ದಾಟಿಸುತ್ತಾನೆಯೋ ಅವನು ಪುಣ್ಯಫಲವನ್ನು ಪಡೆದು ಮರಣಾನಂತರದಲ್ಲಿ ವ್ಯಸನಗಳಿಂದ ಮುಕ್ತನಾಗುತ್ತಾನೆ.
ಮಾರ್ಗಕೃತ್ ಸತತಂ ಮರ್ತ್ಯೋ ಭವೇತ್ ಸಂತಾನವಾನ್ ಪುನಃ |
ಕಾಯದೋಷವಿಮುಕ್ತಸ್ತು ತೀರ್ಥಕೃತ್ ಸತತಂ ಭವೇತ್ ॥20॥
ಮಾರ್ಗಗಳನ್ನು ನಿರ್ಮಿಸುವ ಮನುಷ್ಯನು ಒಳ್ಳೆಯ ಸಂತತಿಯುಳ್ಳವನಾಗುತ್ತಾನೆ. ತೀರ್ಥವನ್ನು ನಿರ್ಮಾಣ ಮಾಡುವವನು ದೇಹದೋಷಗಳಿಂದ ಮುಕ್ತನಾಗುತ್ತಾನೆ.
ಔಷಧಾನಾಂ ಪ್ರದಾತಾ ಚ ಸತತಂ ಕೃಪಯಾಽನ್ವಿತಃ |
ಭವೇದ್ ವ್ಯಾಧಿವಿಹೀನಶ್ಚ ದೀರ್ಘಾಯುಶ್ಚ ವಿಶೇಷತಃ ॥21॥
ಕೃಪೆಯಿಂದ ಕೂಡಿ ಇನ್ನೊಬ್ಬರಿಗೆ ಔಷಧವನ್ನು ದಾನ ಮಾಡುವವನು ವ್ಯಾಧಿ ರಹಿತನೂ, ದೀರ್ಘಾಯುಷ್ಯವಂತನೂ ಆಗುತ್ತಾನೆ.
ಅನಾಥಾನ್ ಪೋಷಯೇದ್ ಯಸ್ತು ಕೃಪಣಾಂಧಕಪಂಗುಕಾನ್ |
ಸ ಚ ಪುಣ್ಯಫಲಂ ಪ್ರೇತ್ಯ ಲಭತೇ ಕೃಚ್ಛ್ರಮೋಕ್ಷಣಮ್ ॥22॥
ಅನಾಥರನ್ನೂ, ದರಿದ್ರರನ್ನೂ, ಕುರುಡ-ಕುಂಟರನ್ನೂ ಪೋಷಿಸುವ ಮನುಷ್ಯನು ಪುಣ್ಯಫಲವನ್ನು ಪಡೆದು ಮರಣಾನಂತರದಲ್ಲಿ (ಮುಂದಿನ ಜನ್ಮದಲ್ಲಿ) ಎಲ್ಲ ಕಷ್ಟಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.
ದೇವಗೋಷ್ಠಾನ್ ಸಭಾಃ ಶಾಲಾ ಭಿಕ್ಷೂಣಾಂ ಚ ಪ್ರತಿಶ್ರಯಮ್ |
ಯಃ ಕುರ್ಯಾಲ್ಲಭತೇ ನಿತ್ಯಂ ನರಃ ಪ್ರೇತ್ಯ ಫಲಂ ಶುಭಮ್ ॥23॥
ಪ್ರಾಸಾದವಾಸಂ ವಿವಿಧಂ ಪಕ್ಷಶೋಭಾಂ ಲಭೇನ್ನರಃ |
ವಿವಿಧಂ ವಿವಿಧಾಕಾರಂ ಭಕ್ಷ್ಯಭೋಜ್ಯಗುಣಾನ್ವಿತಮ್ ॥24॥
ಯಾವನು ದೇವಾಲಯಗಳನ್ನೂ, ಗೋಶಾಲೆಗಳನ್ನೂ, ಸಭಾಮಂದಿರಗಳನ್ನೂ, ಶಾಲೆಗಳನ್ನೂ ಮತ್ತು ಭಿಕ್ಷುಗಳಿಗೆ ಆವಾಸ ಸ್ಥಾನಗಳನ್ನೂ ನಿರ್ಮಿಸುತ್ತಾನೆಯೋ ಅವನು ಮರಣಾನಂತರದಲ್ಲಿ ಶುಭಫಲವನ್ನು ಅನುಭವಿಸುತ್ತಾನೆ. ವಿಧವಿಧವಾದ ಉಪ್ಪರಿಗೆ ಗೃಹದಲ್ಲಿ ವಾಸವನ್ನೂ, ಪಕ್ಷಶೋಭೆಯನ್ನೂ ಪಡೆಯುತ್ತಾನೆ. ವಿವಿಧವಾದ ವಿವಿಧಾಕಾರವನ್ನು ಹೊಂದಿದ ಭಕ್ಷ್ಯ-ಭೋಜ್ಯ ಗುಣಗಳಿಂದ ಕೂಡಿದ ಭೋಜನವನ್ನು ಪಡೆಯುತ್ತಾನೆ.
ರಮ್ಯಂ ಸದ್ಯೈವ ಗೋವಾಟಂ ಯಃ ಕುರ್ಯಾಲ್ಲಭತೇ ನರಃ |
ಪ್ರೇತ್ಯಭಾವೇ ಶುಭಾಂ ಜಾತಿಂ ವ್ಯಾಧಿಮೋಕ್ಷಂ ತಥೈವ ಚ ॥25॥
ಏವಂ ನಾನಾವಿಧಂ ದ್ರವ್ಯಂ ದಾತಾ ಕರ್ತಾ ಲಭೇತ್ ಫಲಮ್ ॥26॥
ಮನೋಹರವಾದ ಗೋಶಾಲೆಯನ್ನು ಕಟ್ಟಿಸುವ ನರನು ಮರಣಾನಂತರದಲ್ಲಿ ಶುಭಜಾತಿಯನ್ನೂ ಮತ್ತು ವ್ಯಾಧಿಗಳಿಂದ ಮೋಕ್ಷವನ್ನೂ ಹೊಂದುತ್ತಾನೆ. ಹೀಗೆ ನಾನಾ ವಿಧವಾದ ಕಾರ್ಯಗಳನ್ನು ಮಾಡುವವನೂ ಮತ್ತು ನಾನಾ ವಿಧವಾದ ದಾನಗಳನ್ನು ಮಾಡುವವನೂ ಶುಭಫಲಗಳನ್ನು ಹೊಂದುತ್ತಾರೆ.
ಉಮಾ
ಕೃತಂ ದತ್ತಂ ಯಥಾ ಯಾವತ್ ತಸ್ಯ ತಲ್ಲಭತೇ ಫಲಮ್ |
ಏತನ್ಮೇ ದೇವದೇವೇಶ ತತ್ರ ಕೌತೂಹಲಂ ಮಹತ್ ॥27॥
ಉಮಾ ಮಾಡಿದ ಸತ್ಕರ್ಮಗಳು ಅಥವಾ ದಾನಗಳು ಎಷ್ಟು ಕಾಲದಲ್ಲಿ ಶುಭ ಫಲವನ್ನು ಕೊಡುತ್ತವೆ? ಎಲೈ ದೇವದೇವೇಶನೇ, ಇದನ್ನು ಹೇಳು. ಇದರಲ್ಲಿ ನನಗೆ ದೊಡ್ಡ ಕುತೂಹಲವಿದೆ.
ಮಹೇಶ್ವರಃ
ಪ್ರೇತ್ಯಭಾವೇ ಶೃಣು ಫಲಂ ದತ್ತಸ್ಯ ಚ ಕೃತಸ್ಯ ಚ |
ದಾನಂ ಷಡ್ಗುಣಯುಕ್ತಂ ತು ತದರ್ಹಾಯ ಯಥಾವಿಧಿ |
ಯಥಾವಿಭವತೋ ದಾನಂ ದಾತವ್ಯಮಿತಿ ಮಾನವೈಃ ॥28॥
ಮಹೇಶ್ವರ ಮರಣಾನಂತರದಲ್ಲಿ ದಾನಗಳಿಂದ ಮತ್ತು ಸತ್ಕರ್ಮಗಳಿಂದ ಉಂಟಾಗುವ ಶುಭಫಲವನ್ನು ಕೇಳು. ಹಿಂದೆ ಹೇಳಿದ ಆರು ಗುಣಗಳಿಂದ ಕೂಡಿದ ದಾನವನ್ನು ವಿಧಿಗೆ ಅನುಗುಣವಾಗಿ, ತನ್ನ ವೈಭವಕ್ಕನುಗುಣವಾಗಿ ದಾನಕ್ಕೆ ಯೋಗ್ಯನಾದವನಿಗೆ ಎಲ್ಲ ಮಾನವರೂ ದಾನವನ್ನು ಮಾಡಬೇಕು.
ಬುದ್ಧಿಮಾಯುಷ್ಯಮಾರೋಗ್ಯಂ ಕುಲಂ ಭಾಗ್ಯಂ ತಥಾಽಽಗಮಮ್ |
ರೂಪೇಣ ಸಪ್ತಧಾ ಭೂತ್ವಾ ಮಾನುಷ್ಯಂ ಫಲತಿ ಧ್ರುವಮ್ ॥29॥
ಹಾಗೆ ಕೊಟ್ಟ ದಾನವು ಬುದ್ಧಿ, ಆಯುಷ್ಯ, ಆರೋಗ್ಯ, ಕುಲ, ಭಾಗ್ಯ, ರೂಪ ಮತ್ತು ವಿದ್ಯೆ ಎಂದು ಏಳು ಪ್ರಕಾರವಾಗಿ ಮನುಷ್ಯನಿಗೆ ನಿಶ್ಚಿತವಾಗಿ ಫಲವನ್ನು ಕೊಡುತ್ತದೆ.
ಇದಂ ದತ್ತಮಿದಂ ಮೇ ಸ್ಯಾದಿತ್ಯೇವಂ ಫಲಕಾಂಕ್ಷಯಾ |
ಯದ್ ದತ್ತಂ ತತ್ ತದೇವ ಸ್ಯಾನ್ನ ತು ಕಿಂಚನ ಲಭ್ಯತೇ ॥30॥
ಧ್ರುವಂ ದೇವ್ಯುತ್ತಮೇ ದಾನಂ ಮಧ್ಯಮೇ ತ್ವಧಮಂ ಫಲಮ್ ॥31॥
ಇದನ್ನು ದಾನ ಮಾಡುತ್ತಿದ್ದೇನೆ. ಇದರ ಫಲವು ನನಗೆ ಉಂಟಾಗಬೇಕು ಎಂಬ ಫಲದಾಸೆಯಿಂದ ಮಾಡಿದ ದಾನವು ಎಷ್ಟು

ಕೊಟ್ಟಿರುತ್ತದೆಯೋ ಅಷ್ಟೇ ಫಲವು ದೊರಕುವಂತೆ ಮಾಡುತ್ತದೆ. ಅಂತಹ ದಾನದಿಂದ ಅಧಿಕವಾದ ಯಾವುದೂ ಲಭ್ಯವಾಗುವುದಿಲ್ಲ.
ಎಲೌ ದೇವಿಯೇ, ಉತ್ತಮಪಾತ್ರರಿಗೆ ಕೊಟ್ಟ ದಾನವು ಶ್ರೇಷ್ಠವಾದುದು. ಮಧ್ಯಮನಿಗೆ ಕೊಟ್ಟ ದಾನದ ಫಲವು ಅಧಮವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಅನ್ನದಾನಪ್ರಶಂಸಾ ನಾಮ, ಗೋದಾನಪ್ರಶಂಸಾ ನಾಮ, ಸುವರ್ಣದಾನಪ್ರಶಂಸಾ ನಾಮ
ಏಕವಿಂಶೋತ್ತರದ್ವಿಶತತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ
ಉಮಾ-ಮಹೇಶ್ವರಸಂವಾದ. ಲೌಕಿಕ-ವೈದಿಕಯಜ್ಞಫಲಕಥನ.
ಉಮಾ
ಭಗವನ್ ದೇವದೇವೇಶ ವಿಶಿಷ್ಟಂ ಯಜ್ಞಮುಚ್ಯತೇ |
ಲೌಕಿಕಂ ವೈದಿಕಂ ಚೈವ ತನ್ಮೇ ಶಂಸಿತುಮರ್ಹಸಿ ॥1॥
ಉಮಾ ಪೂಜ್ಯನೇ, ದೇವದೇವೇಶನೇ, ಲೌಕಿಕ ಮತ್ತು ವೈದಿಕ ಯಜ್ಞವು ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಅದನ್ನು ನನಗೆ ಹೇಳಬೇಕು.
ಮಹೇಶ್ವರಃ
ದೇವತಾನಾಂ ತು ಪೂಜಾ ಯಾ ಯಜ್ಞೇಷ್ವೇವ ಸಮಾಹಿತಾ |
ಯಜ್ಞಾ ವೇದೇಷ್ವಧೀನಾಶ್ಚ ವೇದಾ ಬ್ರಾಹ್ಮಣಸಂಯುತಾಃ ॥2॥
ಮಹೇಶ್ವರ ದೇವತೆಗಳ ಪೂಜೆಯು ಯಜ್ಞಗಳನ್ನು ಅವಲಂಬಿಸಿದೆ. ಈ ಯಜ್ಞಗಳು ವೇದಗಳನ್ನು ಆಶ್ರಯಿಸಿವೆ. ವೇದಗಳು
ಬ್ರಾಹ್ಮಣರನ್ನು ಆಶ್ರಯಿಸಿವೆ.
ಇದಂ ತು ಸಕಲಂ ದಿವ್ಯಂ ದಿವಿ ವಾ ಭುವಿ ವಾ ಪ್ರಿಯೇ |
ಯಜ್ಞಾರ್ಥಂ ವಿದ್ಧಿ ತತ್ಸೃಷ್ಟಂ ಲೋಕಾನಾಂ ಹಿತಕಾಮ್ಯಯಾ ॥3॥
ಎಲೌ ಪ್ರಿಯೆಯೇ, ಭೂಮಿಯಲ್ಲಿ ಮತ್ತು ಸ್ವರ್ಗಲೋಕದಲ್ಲಿ ಇರುವ ಸಕಲ ದಿವ್ಯವಸ್ತುಗಳು ಲೋಕದ ಹಿತದೃಷ್ಟಿಯಿಂದ
ಯಜ್ಞಾರ್ಥವಾಗಿ ಸೃಷ್ಟಿಸಲ್ಪಟ್ಟಿವೆ ಎಂದು ತಿಳಿ.
ಏವಂ ವಿಜ್ಞಾಯ ತತ್ಕರ್ತಾ ಸದಾರಃ ಸತತಂ ದ್ವಿಜಃ |
ಪ್ರೇತ್ಯಭಾವೇ ಲಭೇಲ್ಲೋಕಾನ್ ಬ್ರಹ್ಮಕರ್ಮಸಮಾಧಿನಾ ॥4॥
ಹೀಗೆ ಚಿಂತಿಸುವ ಪತ್ನೀಸಹಿತನಾದ ಬ್ರಾಹ್ಮಣನು ಸತತವಾಗಿ ಅಂತಹ ಕಾರ್ಯಗಳನ್ನು ಮಾಡಿ ಭಗವಂತನ ಚಿತ್ತ ಮತ್ತು
ಭಗವತ್ಪ್ರೀತಿಕರವಾದ ಕರ್ಮದಿಂದ ಮರಣಾನಂತರದಲ್ಲಿ ಶುಭಲೋಕಗಳನ್ನು ಪಡೆಯುತ್ತಾನೆ.
ಬ್ರಾಹ್ಮಣೇಷ್ವಪಿ ತದ್ ಬ್ರಹ್ಮ ನಿತ್ಯಂ ದೇವಿ ಸಮಾಹಿತಮ್ |
ತಸ್ಮಾದ್ ವಿಪ್ರೈರ್ಯಥಾಶಾಸ್ತ್ರಂ ವಿಧಿದೃಷ್ಟೇನ ಕರ್ಮಣಾ ॥5॥
ಯಜ್ಞಕರ್ಮ ಕೃತಂ ಸರ್ವಂ ದೇವತಾ ಅಭಿತರ್ಪಯೇತ್ |
ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ಯಜ್ಞಾರ್ಹಾಃ ಪ್ರಾಯಶಃ ಸ್ಮೃತಾಃ ॥6॥
ಎಲೌ ದೇವಿಯೇ, ಬ್ರಾಹ್ಮಣರಲ್ಲಿ ಆ ಬ್ರಹ್ಮನು ನಿತ್ಯವೂ ಸನ್ನಿಹಿತನಾಗಿದ್ದಾನೆ. ಆದ್ದರಿಂದ ಬ್ರಾಹ್ಮಣರು ವೇದವಿಧಿಗೆ ಮತ್ತು
ಶಾಸ್ತ್ರವಿಧಿಗೆ ಅನುಸಾರವಾಗಿ ಮಾಡಿದ ಎಲ್ಲ ಯಜ್ಞಾದಿ ಕರ್ಮಗಳು ದೇವತೆಗಳನ್ನು ತೃಪ್ತಿಪಡಿಸುತ್ತವೆ. ಬ್ರಾಹ್ಮಣರು ಮತ್ತು
ಕ್ಷತ್ರಿಯರು ಹೆಚ್ಚಾಗಿ ಯಜ್ಞವನ್ನು ಮಾಡಲು ಅರ್ಹರಾದವರು ಎಂದು ಹೇಳಲ್ಪಡುತ್ತಾರೆ.
ಅಗ್ನಿಷ್ಟೋಮಾದಿಭಿರ್ಯಜ್ಞೈರ್ವೇದೇಷು ಪರಿಕಲ್ಪಿತೈಃ |
ಸುಶುದ್ಧೈರ್ಯಜಮಾನೈಶ್ಚ ಋತ್ವಿಗ್ಭಿಶ್ಚ ಯಥಾವಿಧಿ |
ಶುದ್ಧೈರ್ದ್ರವ್ಯೋಪಕರಣೈರ್ಯಷ್ಟವ್ಯಮಿತಿ ನಿಶ್ಚಯಃ ॥7॥
ಅತ್ಯಂತ ಶುದ್ಧನಾದ ಯಜಮಾನನು ಋತ್ವಿಜರು ಶುದ್ಧವಾದ ದ್ರವ್ಯಗಳು ಮತ್ತು ಉಪಕರಣಗಳಿಂದ ಕೂಡಿಕೊಂಡು ವಿಧಿಗೆ
ಅನುಸಾರವಾಗಿ, ವೇದವಿಹಿತವಾಗಿ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಬೇಕೆಂಬುದು ನಿಶ್ಚಿತವಾದುದು.
ತಥಾ ಕೃತೇಷು ಯಜ್ಞೇಷು ದೇವಾನಾಂ ತೋಷಣಂ ಭವೇತ್ |
ತುಷ್ಟೇಷು ದೇವಸೇಂಷು ಯಜ್ವಾ ಯಜ್ಞಫಲಂ ಲಭೇತ್ ॥8॥
ಹಾಗೆ ಯಜ್ಞಗಳನ್ನು ಮಾಡಿದರೆ ದೇವತೆಗಳು ಸಂತುಷ್ಟರಾಗುತ್ತಾರೆ. ದೇವತೆಗಳು ಸಂತುಷ್ಟರಾದರೆ ಯಜ್ಞವನ್ನು ಮಾಡಿದವನು
ಯಜ್ಞಫಲವನ್ನು ಹೊಂದುತ್ತಾನೆ.
ದೇವಾಃ ಸಂತೋಷಿತಾ ಯಜ್ಞೈರ್ಲೋಕಾನ್ ಸಂವರ್ಧಯಂತ್ಯುತ |
ಉಭಯೋರ್ಲೋಕಯೋರ್ಭೂತಿರ್ದೇವಿ ಯಜ್ಞೈಃ ಪ್ರದೃಶ್ಯತೇ ॥9॥
ಯಜ್ಞಗಳಿಂದ ಸಂತುಷ್ಟರಾದ ದೇವತೆಗಳು ಲೋಕಗಳನ್ನು ಅಭಿವೃದ್ಧಿ ಪಡಿಸುತ್ತಾರೆ. ಆದ್ದರಿಂದ ಎಲೌ ದೇವಿಯೇ, ಎರಡು
ಲೋಕಗಳ ಸಮೃದ್ಧಿಯೂ ಯಜ್ಞಗಳಿಂದ ಉಂಟಾಗುವುದು ಕಂಡು ಬರುತ್ತದೆ.
ತಸ್ಮಾದ್ ಯಜ್ವಾ ದಿವಂ ಗತ್ವಾ ಅಮರೈಃ ಸಹ ಮೋದತೇ |
ನಾಸ್ತಿ ಯಜ್ಞಸಮಂ ದಾನಂ ನಾಸ್ತಿ ಯಜ್ಞಸಮೋ ನಿಧಿಃ ॥10॥
ಆದ್ದರಿಂದ ಯಾಗವನ್ನು ಮಾಡುವವನು ಸ್ವರ್ಗಕ್ಕೆ ಹೋಗಿ ದೇವತೆಗಳ ಜೊತೆಯಲ್ಲಿ ಸಂತೋಷಪಡುತ್ತಾನೆ. ಯಜ್ಞಕ್ಕೆ ಸಮಾನವಾದ

ದಾನವಿಲ್ಲ, ಯಜ್ಞಕ್ಕೆ ಸಮಾನವಾದ ವಿಧಿಯೂ ಇಲ್ಲ.
ಸರ್ವಧರ್ಮಸಮುದ್ದೇಶೋ ದೇವಿ ಯಜ್ಞೋ ಸಮಾಹಿತಃ |
ಏಷಾ ಯಜ್ಞಕೃತಾ ಪೂಜಾ ಲೌಕಿಕೀಮಪರಾಂ ಶೃಣು ॥11॥
ದೇವಸತ್ಕಾರಮುದ್ದಿಶ್ಯ ಕ್ರಿಯತೇ ಲೌಕಿಕೋತ್ಸವಾಃ ॥12॥
ಎಲೌ ದೇವಿಯೇ, ಯಜ್ಞದಲ್ಲಿ ಎಲ್ಲ ಧರ್ಮಗಳ ಮೇಲನವಿದೆ. ಇದು ಯಜ್ಞದಿಂದ ದೇವತೆಗಳನ್ನು ಪೂಜೆ ಮಾಡುವ ವಿಧಾನ. ಲೌಕಿಕವಾದ ಇನ್ನೊಂದು ವಿಧಿಯನ್ನು ಕೇಳು. ಅದು ದೇವತೆಗಳ ಸತ್ಕಾರವನ್ನು ಉದ್ದೇಶಿಸಿ ಲೌಕಿಕ ಉತ್ಸವವನ್ನು ಮಾಡುವುದು.
ದೇವಗೋಷ್ಠಾನ್ ಹಿ ಸಂಸ್ಕೃತ್ಯ ಚೋತ್ಸವಂ ಯಃ ಕರೋತಿ ವೈ |
ಯಾಗಾನ್ ದೇವೋಪಹಾರಾಂಶ್ಚ ಶುಚಿರ್ಭೂತ್ವಾ ಯಥಾವಿಧಿ |
ದೇವಾನ್ ಸಂತೋಷಯಿತ್ವಾ ಸ ದೇವಿ ಧರ್ಮಮವಾಪ್ನುಯಾತ್ ॥13॥
ದೇವಾಲಯಗಳನ್ನು ಅಲಂಕರಿಸಿ ಯಾವನು ಉತ್ಸವಗಳನ್ನು ಮಾಡಿ, ಶುಚಿಯಾಗಿ, ವಿಧಿಗೆ ಅನುಗುಣವಾಗಿ ವೈಶ್ವದೇವಾದಿಗಳನ್ನು ಮತ್ತು ನೈವೇದ್ಯಗಳನ್ನು ಮಾಡಿ ದೇವತೆಗಳನ್ನು ಸಂತೋಷಪಡಿಸಿ ಧರ್ಮವನ್ನು ಹೊಂದುತ್ತಾನೆಯೋ.
ಗಂಧಮಾಲ್ಯೈಶ್ಚ ವಿವಿಧೈಃ ಪರಮಾನ್ನೇನ ಧೂಪನ್ಯೆಃ |
ಬಹುಭಿಃ ಸ್ತುತಿಭಿಶ್ಚೈವ ಸ್ತುವಂತಃ ಪ್ರಯತಾ ನರಾಃ ॥14॥
ವಿವಿಧವಾದ ಗಂಧ-ಮಾಲ್ಯಗಳಿಂದಲೂ, ಧೂಪ-ದೀಪಗಳಿಂದಲೂ, ಪರಮಾನ್ನದಿಂದಲೂ ಪೂಜೆಯನ್ನು ಮಾಡಿ (ಯಾವ) ಮನುಷ್ಯರು ಅನೇಕ ಸ್ತೋತ್ರಗಳಿಂದ ಶ್ರದ್ಧಾಪೂರ್ವಕವಾಗಿ ದೇವತೆಗಳನ್ನು ಸ್ತೋತ್ರ ಮಾಡುತ್ತಾರೆಯೋ.
ನೃತ್ತೈರ್ವಾದ್ಯೈಶ್ಚ ಗಾಂಧರ್ವೈರನ್ಯೈರ್ದೃಷ್ಟಿವಿಲೋಭನ್ಯೆಃ |
ದೇವಸತ್ಕಾರಮುದ್ದಿಶ್ಯ ಕುರ್ವತೇ ಯೇ ನರಾ ಭುವಿ ॥15॥
ತೇಷಾಂ ಭಕ್ತಿಕೃತೇನೈವ ಸತ್ಕಾರೇಣಾಭಿಪೂಜಿತಾಃ |
ತಥೈವ ತೋಷಂ ಸಂಯಾಂತಿ ದೇವಿ ದೇವಾಸ್ತ್ರಿವಿಷ್ಟಪೇ ॥16॥
ಯಾವ ಮನುಷ್ಯರು ಭೂಮಿಯಲ್ಲಿ ದೇವತೆಗಳ ಸತ್ಕಾರವನ್ನು ಉದ್ದೇಶಿಸಿ ನೃತ್ಯ- ವಾದ್ಯ-ಗೀತೆಗಳಿಂದಲೂ, ನಯನ ಮನೋಹರವಾದ ಇನ್ನೂ ಅನೇಕ ವಸ್ತುಗಳಿಂದಲೂ ಪೂಜೆಯನ್ನು ಮಾಡುತ್ತಾರೆಯೋ, ಎಲೌ ದೇವಿಯೇ, ಅವರು ಭಕ್ತಿಯಿಂದ ಮಾಡಿದ ಆ ಸತ್ಕಾರದಿಂದಲೇ ಪೂಜಿತರಾದ ದೇವತೆಗಳು ಸ್ವರ್ಗದಲ್ಲಿ ಸಂತೋಷವನ್ನು ಹೊಂದುತ್ತಾರೆ.
ಮಾನುಷ್ಯೈರಪರೈರ್ವಾಪಿ ಶುಚಿಭಿಸ್ತತ್ಪರಾಯಣೈಃ |
ಬ್ರಹ್ಮಚರ್ಯಪರೈರೇತತ್ಕೃತಂ ಧರ್ಮಫಲಂ ಲಭೇತ್ ॥17॥
ಅಥವಾ ಶುಚಿಯಾದ, ದೇವತಾಪರಾಯಣರಾದ, ಬ್ರಹ್ಮಚರ್ಯಾದಿ ನಿಯಮಗಳಿಂದ ಕೂಡಿದ ಮನುಷ್ಯರು ಮಾಡಿದ ಸ್ತೋತ್ರದಿಂದಲೂ ಧರ್ಮಫಲ ಉಂಟಾಗುತ್ತದೆ.
ಕೇವಲೈಃ ಸ್ತುತಿಭಿರ್ದೇವಿ ಗಂಧಮಾಲ್ಯಸಮಾಯುತೈಃ |
ಪ್ರಯತೈಃ ಶುದ್ಧಗಾತ್ರೈಸ್ತು ಶುದ್ಧದೇಶೇ ಸುಪೂಜಿತಾಃ |
ಸಂತೋಷಂ ಯಾಂತಿ ವೈ ದೇವಾ ಭಕ್ತೈಃ ಸಂಪೂಜಿತಾಸ್ತಥಾ ॥18॥
ದೇವಾನ್ ಸಂತೋಷಯಿತ್ವೈವ ದೇವಿ ಧರ್ಮಮವಾಪ್ನುಯಾತ್ ॥19॥
ಎಲೌ ದೇವಿಯೇ, ಶ್ರದ್ಧೆಯಿಂದ ಕೂಡಿ, ಶರೀರ ಶುದ್ಧಿಯನ್ನು ಹೊಂದಿ, ಶುದ್ಧವಾದ ದೇಶ-ಕಾಲಗಳಲ್ಲಿ ಗಂಧ-ಮಾಲ್ಯಾದಿಗಳಿಂದಲೂ ಮತ್ತು ಕೇವಲ ಸ್ತೋತ್ರದಿಂದಲೂ ಚೆನ್ನಾಗಿ ಪೂಜಿತರಾದ ದೇವತೆಗಳು ಸಂತೋಷವನ್ನು ಹೊಂದುತ್ತಾರೆ. ಎಲೌ ದೇವಿಯೇ, ದೇವತೆಗಳ ಸಂತೋಷದಿಂದಲೇ ಧರ್ಮವುಂಟಾಗುತ್ತದೆ.
ಉಮಾ
ತ್ರಿವಿಷ್ಟಪಸ್ಥಾ ವೈ ಭೂಮೌ ದೇವಾ ಮಾನುಷಚೇಷ್ಟಿತಮ್ |
ಕಥಂ ಜ್ಞಾಸ್ಯಂತಿ ವಿಧಿವತ್ ತನ್ಮೇ ಶಂಸಿತುಮರ್ಹಸಿ ॥20॥
ಉಮಾ ದೇವತೆಗಳಾದರೂ ಸ್ವರ್ಗಲೋಕದಲ್ಲಿರುತ್ತಾರೆ. ಭೂಮಿಯಲ್ಲಿ ಮನುಷ್ಯರು ವಿಧಿಗೆ ಅನುಸಾರವಾಗಿ ಮಾಡಿದ ಕಾರ್ಯವನ್ನು ಅವರು ಹೇಗೆ ತಿಳಿಯುವರೆಂದು ನನಗೆ ಹೇಳಬೇಕು.
ಮಹೇಶ್ವರಃ
ತದಹಂ ತೇ ಪ್ರವಕ್ಷ್ಯಾಮಿ ಯಥಾ ತೈರ್ವಿದ್ಯತೇ ಪ್ರಿಯೇ |
ಪ್ರಾಣಿನಾಂ ತು ಶರೀರೇಷು ಅಂತರಾತ್ಮಾ ವ್ಯವಸ್ಥಿತಃ ॥21॥
ಮಹೇಶ್ವರ ಎಲೌ ಪ್ರಿಯೆಯೇ, ಅವರು ಹೇಗೆ ತಿಳಿಯುತ್ತಾರೆಂದು ನಿನಗೆ ನಾನು ಹೇಳುವೆನು. ಪ್ರಾಣಿಗಳ ಶರೀರದಲ್ಲಿ ಅಂತರಾತ್ಮನಾದ ನಾರಾಯಣನು ವ್ಯವಸ್ಥಿತನಾಗಿದ್ದಾನೆ.
ಆತ್ಮಾನಂ ಪರಮಂ ದೇವಮಿತಿ ವಿದ್ಧಿ ಶುಭೇಕ್ಷಣೇ |
ಆತ್ಮಾ ಮನೋವ್ಯವಸ್ಥಾನಾತ್ ಸರ್ವಂ ವೇತ್ತಿ ಶುಭಾಶುಭಮ್ ॥22॥
ಎಲೌ ಶುಭೇಕ್ಷಣೆಯೇ, ಆ ಅಂತರಾತ್ಮನು ಪರದೇವತೆ ಎಂದು ತಿಳಿ. ಅವನು ಮನಸ್ಸಿನಲ್ಲಿರುವುದರಿಂದ ಮನಸ್ಸಿನಲ್ಲಿ ನಡೆಯುವ ಎಲ್ಲಾ ಶುಭಾಶುಭಗಳನ್ನೂ ತಿಳಿಯುತ್ತಾನೆ.
ಆತ್ಮೈವ ದೇವಾಸ್ತದ್ ವಿದ್ಯುರವ್ಯಗ್ರಮನಸಃ ಕೃತಮ್ |
ಸತಾಂ ಮನೋವ್ಯವಸ್ಥಾನಾಚ್ಛುಭಂ ಭವತಿ ವೈ ನೃಣಾಮ್ ॥23॥
ದೇವತೆಗಳೂ ಸಹ ಅವ್ಯಗ್ರವಾದ ಮನಸ್ಸಿನಿಂದ ಆ ಅಂತರಾತ್ಮನನ್ನು ಧ್ಯಾನಿಸುತ್ತಾರೆ. ಸಜ್ಜನರ ಮನಸ್ಸಿನಲ್ಲಿ ಸ್ಥಿತನಾದ

ಪರಮಾತ್ಮನೂ, ದೇವತೆಗಳ ಮನಸ್ಸಿನಲ್ಲಿ ಸ್ಥಿತನಾದ ಪರಮಾತ್ಮನೂ (ಒಬ್ಬನೇ ಆದುದರಿಂದ) ಮನುಷ್ಯರಿಗೆ ಶುಭವಾಗುತ್ತದೆ. (ಮನುಷ್ಯರ ಮನೋನಿಯಾಮಕನೂ ದೇವತೆಗಳ ಮನೋನಿಯಾಮಕನಾದ ಪರಮಾತ್ಮನೂ ಒಬ್ಬನೇ ಆದುದರಿಂದ ಅವನ ಅನುಗ್ರಹದಿಂದ ದೇವತೆಗಳು ಮನುಷ್ಯರ ಮನಸ್ಸಿನಲ್ಲಿರುವುದನ್ನು ತಿಳಿಯುತ್ತಾರೆ ಎಂದು ಅಭಿಪ್ರಾಯ).

ತಸ್ಮಾದ್ ದೇವಾಭಿಸಂಪೂಜಾ ಪಿತೃಪೂಜಾ ತಥೈವ ಚ |
ಯಜ್ಞಾಶ್ಚ ಧರ್ಮಕಾರ್ಯಾಣಿ ಗುರುಪೂಜಾಶ್ಚ ಶೋಭನೇ ||24||

ಎಲೌ ಶೋಭನೆಯೇ, ಆದ್ದರಿಂದಲೇ ದೇವತೆಗಳ ಪೂಜೆಯೂ, ಪಿತೃಗಳ ಪೂಜೆಯೂ, ಯಜ್ಞಗಳೂ, ಧರ್ಮಕಾರ್ಯಗಳೂ, ಗುರುಪೂಜೆಯೂ ನಡೆಯುತ್ತವೆ.

ಶುದ್ಧಗಾತ್ರೈರ್ವೃತ್ತಯುಕ್ತೈಸ್ತನ್ಮಯೈಸ್ತತ್ಪರಾಯಣೈಃ |
ಏವಂ ವ್ಯವಸ್ಥಿತೈರ್ನಿತ್ಯಂ ಕರ್ತವ್ಯಮಿತಿ ನಿಶ್ಚಯಃ ||25||

ಇಂತಹ ಕಾರ್ಯಗಳನ್ನು ಶರೀರ ಶುದ್ಧಿಯುಳ್ಳ, ಶುದ್ಧ ಚಾರಿತ್ರವುಳ್ಳ, ಯಾವಾಗಲೂ ಭಗವಂತನನ್ನೇ ಧ್ಯಾನಿಸಿ ಅವನನ್ನು ಆಶ್ರಯಿಸಿದಂತಹ ಪುರುಷರು ಮಾಡಬೇಕೆಂಬುದು ನಿಶ್ಚಿತವಾದುದು.

ಏವಂ ಕೃತ್ವಾ ಶುಭಾಕಾಂಕ್ಷೀ ಪರತ್ರೇಹ ಚ ಮೋದತೇ |
ಅನ್ಯಥಾ ಮನ ಆವೇಶ್ಯ ಕೃತಂ ನ ಫಲತಿ ಪ್ರಿಯೇ |
ಋತೇಽಪಿ ತು ಮನೋ ದೇವಿ ಅಶುಭಂ ಫಲತಿ ಧ್ರುವಮ್ ||26||

ಶುಭವನ್ನು ಬಯಸುವವನು ಈ ರೀತಿಯ ಕರ್ಮಾನುಷ್ಠಾನವನ್ನು ಮಾಡಿ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸಂತೋಷವನ್ನು ಹೊಂದುತ್ತಾನೆ. ಎಲೌ ಪ್ರಿಯೆಯೇ, ಮನಸ್ಸನ್ನು ಪರಮಾತ್ಮನಲ್ಲಿ ಬಿಟ್ಟು ಬೇರೆ ಕಡೆ ಇಟ್ಟು ಮಾಡಿದ ಕರ್ಮವು ಫಲವನ್ನು ಕೊಡುವುದಿಲ್ಲ. ಆದರೆ ಮನಸ್ಸನ್ನು ಬೇರೆ ಕಡೆ ಇಟ್ಟು ಮಾಡಿದ ಅಶುಭವಾದ ಕರ್ಮವು ಮಾತ್ರ ನಿಶ್ಚಿತವಾಗಿ ಅಶುಭ ಫಲವನ್ನು ಕೊಡುತ್ತದೆ.

|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಲೌಕಿಕವೈದಿಕಕರ್ಮಫಲವರ್ಣನಂ ನಾಮ ದ್ವಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.

* * * * *

## ಇನ್ನೂರ ಇಪ್ಪತ್ಮೂರನೆಯ ಅಧ್ಯಾಯ

### ಉಮಾ-ಮಹೇಶ್ವರಸಂವಾದ. ಶ್ರಾದ್ಧವಿಧಿ.

ಉಮಾ

ಪಿತೃಮೇಧಃ ಕಥಂ ದೇವ ತನ್ಮೇ ಶಂಸಿತುಮರ್ಹಸಿ |
ಸರ್ವೇಷಾಂ ಪಿತರಃ ಪೂಜ್ಯಾಃ ಸರ್ವಸಂಪತ್ಪ್ರದಾಯಿನಃ ||1||

ಉಮಾ ಎಲ್ಲರಿಗೂ ಪಿತೃಗಳು ಪೂಜ್ಯರಾದವರು ಮತ್ತು ಸರ್ವಸಂಪತ್ತನ್ನು ಕೊಡುವವರು. ಎಲೈ ದೇವನೇ, ಅಂತಹ ಪಿತೃಮೇಧವನ್ನು (ಶ್ರಾದ್ಧ ಕರ್ಮವನ್ನು) ಹೇಗೆ ಮಾಡಬೇಕೆಂದು ತಿಳಿಸು.

ಮಹೇಶ್ವರಃ

ಪಿತೃಮೇಧಂ ಪ್ರವಕ್ಷ್ಯಾಮಿ ಯಥಾವತ್ ತನ್ಮನಾಃ ಶೃಣು |
ದೇಶಕಾಲೌ ವಿಧಾನಂ ಚ ತತ್ಕ್ರಿಯಾಯಾಃ ಶುಭಾಶುಭಮ್ ||2||

ಮಹೇಶ್ವರ ಪಿತೃಮೇಧವನ್ನೂ, ಅದಕ್ಕೆ ಯೋಗ್ಯವಾದ ದೇಶ-ಕಾಲಗಳನ್ನೂ, ವಿಧಾನವನ್ನೂ, ಆ ಕ್ರಿಯೆಗೆ ಶುಭಾಶುಭ ಫಲಗಳನ್ನೂ ಸರಿಯಾಗಿ ಹೇಳುವೆನು. ಅದರಲ್ಲಿಯೇ ಮನಸ್ಸಿಟ್ಟು ಕೇಳು.

ಲೋಕೇಷು ಪಿತರಃ ಪೂಜ್ಯಾ ದೇವತಾನಾಂ ಚ ದೇವತಾಃ |
ಶುಚಯೋ ನಿರ್ಮಲಾಃ ಪುಣ್ಯಾ ದಕ್ಷಿಣಾಂ ದಿಶಮಾಶ್ರಿತಾಃ ||3||

ಲೋಕದಲ್ಲಿ ಪಿತೃಗಳು ಪೂಜ್ಯರಾದವರು. ದೇವತೆಗಳಿಗೂ ದೇವತೆಗಳಾದವರು. ಅವರು ಶುಚಿಗಳೂ, ನಿರ್ಮಲರೂ, ಪವಿತ್ರರೂ ಆಗಿ ದಕ್ಷಿಣ ದಿಕ್ಕಿನಲ್ಲಿ ನೆಲೆಸಿರುತ್ತಾರೆ.

ಯಥಾ ವೃಷ್ಟಿಂ ಪ್ರತೀಕ್ಷಂತೇ ಭೂಮಿಷ್ಠಾಃ ಸರ್ವಜಂತವಃ |
ಪಿತರಶ್ಚ ತಥಾ ಲೋಕೇ ಪಿತೃಮೇಧಂ ಶುಭೇಕ್ಷಣೇ ||4||

ಎಲೌ ಶುಭೇಕ್ಷಣೆಯೇ, ಭೂಮಿಯಲ್ಲಿರುವ ಎಲ್ಲ ಜಂತುಗಳು ಮಳೆಯನ್ನು ನಿರೀಕ್ಷಿಸುವಂತೆ ಪಿತೃಗಳು ಲೋಕದಲ್ಲಿ ಮಾಡುವ ಪಿತೃಮೇಧವನ್ನು ನಿರೀಕ್ಷಿಸುತ್ತಿರುತ್ತಾರೆ.

ತಸ್ಯ ದೇಶಾಃ ಕುರುಕ್ಷೇತ್ರಂ ಗಯಾ ಗಂಗಾ ಸರಸ್ವತೀ |
ಪ್ರಭಾಸಂ ಪುಷ್ಕರಂ ಚೇತಿ ತೇಷು ದತ್ತಂ ಮಹಾಫಲಮ್ ||5||

ಅದಕ್ಕೆ ಪವಿತ್ರವಾದ ದೇಶವೆಂದರೆ ಕುರುಕ್ಷೇತ್ರ, ಗಯಾ, ಗಂಗಾ, ಸರಸ್ವತೀ, ಪ್ರಭಾಸ ಮತ್ತು ಪುಷ್ಕರಗಳು. ಅಲ್ಲಿ ಮಾಡಿದ ಪಿತೃಮೇಧವು ಮಹಾಫಲವನ್ನು ಕೊಡುತ್ತದೆ.

ತೀರ್ಥಾನಿ ಸರಿತಃ ಪುಣ್ಯಾ ವಿವಿಕ್ತಾನಿ ವನಾನಿ ಚ |
ನದೀನಾಂ ಪುಲಿನಾನೀತಿ ದೇಶಾಃ ಶ್ರಾದ್ಧಸ್ಯ ಪೂಜಿತಾಃ ||6||

ತೀರ್ಥಕ್ಷೇತ್ರಗಳು, ಪುಣ್ಯನದಿಗಳು, ನಿರ್ಜನವಾದ ವನಗಳು, ನದೀ ತೀರಗಳು ಇವು ಶ್ರಾದ್ಧಕ್ಕಾಗಿ ಪ್ರಶಂಸಿಸಲ್ಪಟ್ಟ ದೇಶಗಳು.

ಮಾಘಪ್ರೋಷ್ಠಪದೌ ಮಾಸೌ ಶ್ರಾದ್ಧಕರ್ಮಣಿ ಪೂಜಿತೌ |
ಪಕ್ಷಯೋಃ ಕೃಷ್ಣಪಕ್ಷಶ್ಚ ಪೂರ್ವಪಕ್ಷಾತ್ ಪ್ರಶಸ್ಯತೇ ॥7॥
ಮಾಘ ಮಾಸ ಮತ್ತು ಭಾದ್ರಪದ ಮಾಸಗಳು ಶ್ರಾದ್ಧಕರ್ಮಕ್ಕೆ ಶ್ರೇಷ್ಠವಾದವುಗಳು. ಪಕ್ಷಗಳಲ್ಲಿ ಕೃಷ್ಣಪಕ್ಷವು ಶುಕ್ಲಪಕ್ಷಕ್ಕಿಂತ ಶ್ರಾದ್ಧಕ್ಕೆ ಶ್ರೇಷ್ಠವಾದುದು.
ಅಮಾವಾಸ್ಯಾಂ ತ್ರಯೋದಶ್ಯಾಂ ನವಮ್ಯಾಂ ಪ್ರತಿಪತ್ಸು ಚ |
ತಿಥಿಷ್ವೇತಾಸು ತುಷ್ಯಂತಿ ದತ್ತೇನೇಹ ಪಿತಾಮಹಾಃ ॥8॥
ಅಮಾವಾಸ್ಯೆ, ತ್ರಯೋದಶಿ, ನವಮಿ, ಪ್ರತಿಪತ್ - ಈ ತಿಥಿಗಳಲ್ಲಿ ಮಾಡಿದ ಶ್ರಾದ್ಧದಿಂದ ಪಿತಾಮಹರು ಸಂತುಷ್ಟರಾಗುತ್ತಾರೆ.
ಪೂರ್ವಾಹ್ಣೇ ಶುಕ್ಲಪಕ್ಷೇ ಚ ರಾತ್ರೌ ಜನ್ಮದಿನೇಷು ವಾ |
ಯುಗ್ಮೇಷ್ವಹಸ್ಸು ಚ ಶ್ರಾದ್ಧಂ ನ ಚ ಕುರ್ವೀತ ಪಂಡಿತಃ ॥9॥
ಪ್ರಾತಃಕಾಲದಲ್ಲಿ, ಶುಕ್ಲಪಕ್ಷದಲ್ಲಿ, ರಾತ್ರಿಯಲ್ಲಿ, ಜನ್ಮದಿನದಲ್ಲಿ ಮರಣ ಕಾಲದಿಂದ ಆರಂಭಿಸಿ ಸಮಸಂಖ್ಯೆಯ ದಿನಗಳಲ್ಲಿ ವಿವೇಕಿಯಾದವನು ಶ್ರಾದ್ಧವನ್ನು ಮಾಡಬಾರದು. (ಇದು ಕಾಮ್ಯಶ್ರಾದ್ಧಕ್ಕೆ ಸಂಬಂಧಿಸಿದುದು, ಕಾಲಶ್ರಾದ್ಧಕ್ಕಲ್ಲ).
ಏಷ ಕಾಲೋ ಮಯಾ ಪ್ರೋಕ್ತಃ ಪಿತೃಮೇಧಸ್ಯ ಪೂಜಿತಃ |
ಯಸ್ಮಿನ್ ವಾ ಬ್ರಾಹ್ಮಣಂ ಪಾತ್ರಂ ಪಶ್ಯೇತ್ಕಾಲಃ ಸ ಚ ಸ್ಮೃತಃ ॥10॥
ನಾನು ಪಿತೃಮೇಧಕ್ಕೆ ಶ್ರೇಷ್ಠವಾದ ಕಾಲವನ್ನು ಹೇಳಿದ್ದೇನೆ. ಯಾವ ಕಾಲದಲ್ಲಿ ಸತ್ಪಾತ್ರನಾದ ಬ್ರಾಹ್ಮಣನು ದೊರೆಯುತ್ತಾನೆಯೋ ಅದೇ ಶ್ರೇಷ್ಠವಾದ ಕಾಲವೆಂದು ತಿಳಿಯಬೇಕು.
ಅಪಾಂಕ್ತೇಯಾ ದ್ವಿಜಾ ವರ್ಜ್ಯಾ ಗ್ರಾಹ್ಯಾಸ್ತೇ ಪಂಕ್ತಿಪಾವನಾಃ |
ಪೂಜಯೇದ್ ಯದಿ ಪಾಪಿಷ್ಠಾನ್ ಶ್ರಾದ್ಧೇಷು ನರಕಂ ವ್ರಜೇತ್ ॥11॥
ಶ್ರಾದ್ಧದಲ್ಲಿ ಪಂಕ್ತಿಗೆ ಅಯೋಗ್ಯರಾದ ಬ್ರಾಹ್ಮಣರನ್ನು ವರ್ಜಿಸಬೇಕು. ಪಂಕ್ತಿಪಾವನರನ್ನು ಸ್ವೀಕರಿಸಬೇಕು. ಶ್ರಾದ್ಧದಲ್ಲಿ ಪಾಪಿಷ್ಠರನ್ನು ಪೂಜಿಸಿದರೆ ಯಜಮಾನನು ನರಕಕ್ಕೆ ಹೋಗುತ್ತಾನೆ.
ವೃತ್ತಶ್ರುತಕುಲೋಪೇತಾನ್ ಸಕಳತ್ರಾನ್ ಗುಣಾನ್ವಿತಾನ್ |
ತದರ್ಹಾನ್ ಶ್ರೋತ್ರಿಯಾನ್ ವಿದ್ಧಿ ಬ್ರಾಹ್ಮಣಾನಯುಜಃ ಶುಭೇ ॥12॥
ಎಲೌ ಶುಭಳೇ, ವಿದ್ಯೆ, ಚಾರಿತ್ರ ಮತ್ತು ಕುಲಗಳಿಂದ ಸಂಪನ್ನರಾದ, ಗುಣಾನ್ವಿತರಾದ, ಪತ್ನೀಸಹಿತರಾದ, ಧನರಹಿತರಾದ, ಶ್ರೋತ್ರಿಯರಾದ ಬ್ರಾಹ್ಮಣರನ್ನು ಶ್ರಾದ್ಧಕ್ಕೆ ಅರ್ಹರಾದವರೆಂದು ತಿಳಿ.
ಏತಾನ್ ನಿಮಂತ್ರಯೇದ್ ವಿದ್ವಾನ್ ಪೂರ್ವೇದ್ಯುಃ ಪ್ರಾತರೇವ ವಾ |
ತತ್ರ ಶ್ರಾದ್ಧಕ್ರಿಯಾಂ ಪಶ್ಚಾದಾರಭೇತ ಯಥಾವಿಧಿ ॥13॥
ವಿವೇಕಿಯಾದವನು ಇವರನ್ನು ಶ್ರಾದ್ಧದ ಹಿಂದಿನ ದಿನ ಅಥವಾ ಶ್ರಾದ್ಧ ದಿನದ ಪ್ರಾತಃಕಾಲದಲ್ಲಿಯೇ ನಿಮಂತ್ರಿಸಬೇಕು. ಅನಂತರ ಶ್ರಾದ್ಧ ಕ್ರಿಯೆಯನ್ನು ಶಾಸ್ತ್ರಕ್ಕೆ ಅನುಸಾರವಾಗಿ ಆರಂಭಿಸಬೇಕು.
ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ |
ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾಮ್ ॥14॥
ದೌಹಿತ್ರ, ಕುತಪಕಾಲ ಮತ್ತು ಎಳ್ಳು - ಈ ಮೂರು ವಸ್ತುಗಳು ಶ್ರಾದ್ಧದಲ್ಲಿ ಪವಿತ್ರವಾದವುಗಳು. ಶೌಚ, ಅಕ್ರೋಧ ಮತ್ತು ಅತ್ವರೆ (ಅವಸರರಾಹಿತ್ಯ)- ಈ ಮೂರು ಅಲ್ಲಿ ಪ್ರಶಂಸಿಸಲ್ಪಡುತ್ತವೆ.
ಕುತಪಸ್ಯ ಚ ಲೋಮಾನಿ ಕುಶಾ ದರ್ಭಾಸ್ತಿಲಾ ಮಧು |
ನೀಲಶಾಕಂ ಗಜಚ್ಛಾಯಾ ಪವಿತ್ರಂ ಶ್ರಾದ್ಧಕರ್ಮಸು ॥15॥
ಕುಶ, ದರ್ಭೆಗಳು, ತಿಲ ಮತ್ತು ಮಧು ಇವು ಕುತಪಕಾಲದ ಲೋಮಗಳು. ಶ್ರಾದ್ಧ ಕರ್ಮದಲ್ಲಿ ನೀಲಶಾಕ ಹಾಗಲಕಾಯಿ ಮತ್ತು ಅಪರಾಹ್ಣ ಕಾಲವು ಪವಿತ್ರವಾದವುಗಳು.
ತಿಲಾನವಕಿರೇತ್ ತತ್ರ ನಾನಾವರ್ಣಾನ್ ಸಮಂತತಃ |
ಅಶುದ್ಧಂ ಪಿತೃಯಜ್ಞೇಷು ತಿಲೈಃ ಶುದ್ಧ್ಯತಿ ಶೋಭನೇ ॥16॥
ಶ್ರಾದ್ಧ ಮಾಡುವ ಪ್ರದೇಶದಲ್ಲಿ ಸುತ್ತಲೂ ನಾನಾವರ್ಣದ ಎಳ್ಳುಗಳನ್ನು ಎರಚಬೇಕು. ಎಲೌ ಶೋಭನೆಯೇ, ಪಿತೃಯಜ್ಞಗಳಲ್ಲಿ ಅಶುದ್ಧವಾದುದೆಲ್ಲವೂ ಎಳ್ಳುಗಳಿಂದ ಶುದ್ಧವಾಗುತ್ತವೆ.
ನೀಲಕಾಷಾಯವಸ್ತ್ರಂ ಚ ಭಿನ್ನಕರ್ಣಂ ನವವ್ರಣಮ್ |
ಹೀನಾಂಗಮಶುಚಿಂ ವಾऽಪಿ ವರ್ಜಯೇತ್ ತತ್ರ ದೂರತಃ ॥17॥
ಕಪ್ಪು ಅಥವಾ ಕಾಷಾಯ ವಸ್ತ್ರವನ್ನು ಧರಿಸಿದವರನ್ನೂ, ದೇಹದಲ್ಲಿ ಹೊಸದಾದ ವ್ರಣವಿರುವವರನ್ನೂ, ಕರ್ಣದೋಷವಿರುವವರನ್ನೂ, ಅಂಗವಿಕಲರನ್ನೂ ಮತ್ತು ಅಶುಚಿಯಾದವರನ್ನೂ ಶ್ರಾದ್ಧದಲ್ಲಿ ದೂರದಲ್ಲಿಯೇ ತ್ಯಜಿಸಬೇಕು.
ಕುಕ್ಕುಟಾಂಶ್ಚ ವರಾಹಾಂಶ್ಚ ನಗ್ನಂ ಕ್ಲೀಬಂ ರಜಸ್ವಲಾಮ್ |
ಆಯಸಂ ತ್ರಪು ಸೀಸಂ ಚ ಶ್ರಾದ್ಧಕರ್ಮಣಿ ವರ್ಜಯೇತ್ ॥18॥
ಕೋಳಿಗಳು, ಹಂದಿಗಳು, ನಗ್ನ ಪುರುಷ, ನಪುಂಸಕ, ರಜಸ್ವಲೆ, ಕಬ್ಬಿಣ, ಸೀಸ ಮತ್ತು ತವರದ ಪಾತ್ರೆಗಳು- ಇವುಗಳನ್ನು ಶ್ರಾದ್ಧಕರ್ಮದಲ್ಲಿ ವರ್ಜಿಸಬೇಕು.
ಮಾಂಸೈಃ ಪ್ರೀಣಂತಿ ಪಿತರೋ ಮುದ್ಗಮಾಷಯವೈರಿಹ |
ಶಶರೌರವಮಾಂಸೇನ ಷಣ್ಮಾಸಂ ತೃಪ್ತಿರಿಷ್ಯತೇ ॥19॥
ಪಿತೃಗಳು ಮಾಂಸದಿಂದಲೂ, ಹೆಸರು, ಉದ್ದು ಮತ್ತು ಗೋಧಿಯಿಂದಲೂ ತೃಪ್ತಿಯನ್ನು ಹೊಂದುತ್ತಾರೆ. ಮೊಲದ ಮತ್ತು ರುರುವಿನ

ಮಾಂಸದಿಂದ ಪಿತೃಗಳಿಗೆ ಆರು ತಿಂಗಳ ಕಾಲ ತೃಪ್ತಿಯಾಗುತ್ತದೆ.
ಸಂವತ್ಸರಂ ಚ ಗವ್ಯೇನ ಹವಿಷಾ ಪಾಯಸೇನ ಚ |
ವಾರ್ಧ್ರಾಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥20॥
ಗೋವಿನ ಕ್ಷೀರ-ಘೃತಾದಿಗಳು ಮತ್ತು ಪಾಯಸವು ಒಂದು ವರ್ಷದ ಕಾಲ ತೃಪ್ತಿಯನ್ನು ಕೊಡುತ್ತವೆ. ಕಾಡೆಮ್ಮೆಯ ಮಾಂಸದಿಂದ ಹನ್ನೆರಡು ವರ್ಷಗಳ ಕಾಲ ಪಿತೃಗಳಿಗೆ ತೃಪ್ತಿಯುಂಟಾಗುತ್ತದೆ.
ಆನಂತ್ಯಾಯ ಭವೇದ್ ದತ್ತಂ ಖಡ್ಗಮಾಂಸಂ ಪಿತೃಕ್ಷಯೇ |
ಪಾಯಸಂ ಸತಿಲಂ ಕ್ಷೌದ್ರಂ ಖಡ್ಗಮಾಂಸೇನ ಸಮ್ಮಿತಮ್ ॥21॥
ಶ್ರಾದ್ಧದಲ್ಲಿ ಖಡ್ಗಮೃಗದ ಮಾಂಸವು ಅನಂತಕಾಲದವರೆಗೆ ತೃಪ್ತಿಯನ್ನು ಉಂಟುಮಾಡುತ್ತದೆ. ಪಾಯಸ, ಎಳ್ಳುಗಳು ಮತ್ತು ಜೇನುತುಪ್ಪ ಇವು ಖಡ್ಗಮೃಗದ ಮಾಂಸಕ್ಕೆ ಸಮನಾದವುಗಳು.
ಮಹಾಶಫರಿಣೋ ಮತ್ಸ್ಯಾಶ್ಛಾಗೋ ವಾ ಸರ್ವಲೋಹಿತಃ |
ಕಾಲಶಾಕಕಮಿತ್ಯೇವ ತದಾನಂತ್ಯಂ ಪ್ರಕೀರ್ತಿತಮ್ ॥22॥
ದೊಡ್ಡ ಮೀನುಗಳು, ಮೀನುಗಳು, ಪೂರ್ಣವಾಗಿ ಕೆಂಪಾದ ಆಡು, ಕಾಲಶಾಕ - ಇವುಗಳು ಅನಂತಕಾಲದವರೆಗೂ ತೃಪ್ತಿಯನ್ನುಂಟು ಮಾಡುತ್ತವೆ.
ಸಾಪೂಪಂ ಸಾಮಿಷಂ ಸ್ನಿಗ್ಧಮಾಹಾರಮುಪಕಲ್ಪಯೇತ್ |
ಉಪಕಲ್ಪ್ಯ ತದಾಹಾರಂ ಬ್ರಾಹ್ಮಣಾನರ್ಚಯೇತ್ ತತಃ ॥23॥
ಅಪೂಪ, ಮಾಂಸಸಹಿತವಾದ, ಘೃತಾದಿಸಹಿತವಾದ ಆಹಾರವನ್ನು ಸಿದ್ಧ ಪಡಿಸಬೇಕು. ಆಹಾರವು ಸಿದ್ಧವಾದ ನಂತರ ಬ್ರಾಹ್ಮಣರನ್ನು ಪೂಜಿಸಬೇಕು.
ಶ್ಮಶ್ರುಕರ್ಮಶಿರಃಸ್ನಾತಾನ್ ಸಮಾರೋಪ್ಯಾಸನಂ ಕ್ರಮಾತ್ |
ಸುಗಂಧಮಾಲ್ಯಾಭರಣೈಃ ಸ್ರಗ್ಭಿರೇತಾನ್ ವಿಭೂಷಯೇತ್ ॥24॥
ಶ್ಮಶ್ರುಕರ್ಮವನ್ನು ಮಾಡಿಸಿಕೊಂಡು ಶಿರಃಸ್ನಾತರಾದ ಬ್ರಾಹ್ಮಣರನ್ನು ಆಸನದಲ್ಲಿ ಕುಳ್ಳಿರಿಸಿ ಕ್ರಮವಾಗಿ ಗಂಧ, ಮಾಲ್ಯ, ಆಭರಣ ಮತ್ತು ಹೂಮಾಲೆಗಳಿಂದ ಅವರನ್ನು ಅಲಂಕರಿಸಬೇಕು.
ಅಲಂಕೃತೋಪವಿಷ್ಟಾನ್ ತಾನ್ ಪಿಂಡಾವಾಪಂ ನಿವೇದಯೇತ್ ॥25॥
ಅಲಂಕೃತರಾದ ಬ್ರಾಹ್ಮಣರನ್ನು ಕುರಿತು ಪಿಂಡದಾನಕ್ಕೆ ಅನುಮತಿಯನ್ನು ಕೇಳಬೇಕು.
ತತಃ ಪ್ರಸ್ತೀರ್ಯ ದರ್ಭಾಣಾಂ ಪ್ರಸ್ತರಂ ದಕ್ಷಿಣಾಮುಖಮ್ |
ತತ್ಸಮೀಪೇಽಗ್ನಿಮಿದ್ಧ್ವಾ ಚ ಸ್ವಧಾಂ ಚ ಜುಹುಯಾತ್ ತತಃ |
ಸಮೀಪೇ ತ್ವಗ್ನೀಷೋಮಾಭ್ಯಾಂ ಪಿತೃಭ್ಯೋ ಜುಹುಯಾತ್ ತದಾ ॥26॥
ಅನಂತರ ಒಂದು ಮುಷ್ಟಿ ದರ್ಭೆಯನ್ನು ದಕ್ಷಿಣೆಗೆ ತುದಿಯಿರುವಂತೆ ಭೂಮಿಯ ಮೇಲೆ ಹರಡಿ, ಅದರ ಸಮೀಪದಲ್ಲಿ ಅಗ್ನಿಯನ್ನು ಉದ್ದೀಪನ ಮಾಡಿ, ಸ್ವಧೆಯನ್ನು ಹೋಮ ಮಾಡಬೇಕು. ದರ್ಭೆಗಳ ಸಮೀಪದಲ್ಲಿಯೇ ಅಗ್ನಿ-ಸೋಮರನ್ನೂ ಮತ್ತು ಪಿತೃಗಳನ್ನೂ ಉದ್ದೇಶಿಸಿ ಹೋಮ ಮಾಡಬೇಕು.
ತಥಾ ದರ್ಭೇಷು ಪಿಂಡಾನ್ ತ್ರೀನ್ ನಿರ್ವಪೇದ್ ದಕ್ಷಿಣಾಮುಖಃ |
ಅಪಸವ್ಯಮಪಾಂಗುಷ್ಠಂ ನಾಮಧೇಯಪುರಸ್ಕೃತಮ್ ॥27॥
ಅನಂತರ ದಕ್ಷಿಣಾಭಿಮುಖವಾಗಿ ಕುಳಿತು ದರ್ಭೆಗಳ ಮೇಲೆ ಅಪಸವ್ಯದಿಂದ ಅಂಗುಷ್ಠವನ್ನು ಸ್ಪರ್ಶ ಮಾಡಿಸದೆ ಪಿತೃಗಳ ನಾಮವನ್ನು ಹೇಳಿ ಪಿಂಡವನ್ನು ಇಡಬೇಕು.
ಏತೇನ ವಿಧಿನಾ ದತ್ತಂ ಪಿತೄಣಾಮಕ್ಷಯಂ ಭವೇತ್ |
ತತೋ ವಿಪ್ರಾನ್ ಯಥಾಕಾಮಂ ಪೂಜಯೇನ್ನಿಯತಃ ಶುಚಿಃ |
ಸದಕ್ಷಿಣಂ ಸಸಂಭಾರಂ ಯಥಾ ತುಷ್ಯಂತಿ ತೇ ದ್ವಿಜಾಃ ॥28॥
ಈ ಪ್ರಕಾರವಾಗಿ ಕೊಟ್ಟ ಅನ್ನವು ಪಿತೃಗಳಿಗೆ ಅಕ್ಷಯವಾಗುತ್ತದೆ. ಅನಂತರ ಬ್ರಾಹ್ಮಣರನ್ನು ಯಥಾಶಕ್ತಿಯಾಗಿ ಶುಚಿಯಾಗಿ ಪೂಜಿಸಬೇಕು. ದಕ್ಷಿಣೆಯನ್ನೂ, ಗೃಹಸಂಭಾರಗಳನ್ನೂ ಕೊಟ್ಟು ಬ್ರಾಹ್ಮಣರು ಸಂತೋಷಗೊಳ್ಳುವಂತೆ ಮಾಡಬೇಕು.
ಯತ್ರ ತತ್ಕ್ರಿಯತೇ ಕರ್ಮ ಪೈತೃಕಂ ಬ್ರಾಹ್ಮಣಾನ್ ಪ್ರತಿ |
ತತ್ಸರ್ವಮಖಿಲಂ ಕುರ್ಯಾದ್ ವೈಶ್ವದೇವಸ್ಯ ಪೂರ್ವಕಮ್ ॥29॥
ಪಿತೃಶ್ರಾದ್ಧದಲ್ಲಿ ಮೊದಲು ವೈಶ್ವದೇವವನ್ನು ಮಾಡಿ ಅನಂತರ ಬ್ರಾಹ್ಮಣರಿಗೆ ಮಾಡಬೇಕಾದ ಸಕಲ ಉಪಚಾರಗಳನ್ನೂ ಮಾಡಬೇಕು.
ಅಶ್ರೂನ್ನ ಪಾತಯೇತ್ ತತ್ರ ನ ಜಲ್ಪೇನ್ನ ಜಪೇನ್ಮಿಥಃ |
ನಿಯಮ್ಯ ವಾಚಂ ದೇಹಂ ಚ ಶ್ರಾದ್ಧಕರ್ಮ ಸಮಾರಭೇತ್ ॥30॥
ಶ್ರಾದ್ಧವನ್ನು ಮಾಡುವಾಗ ಕಣ್ಣೀರನ್ನು ಹಾಕಬಾರದು. ಪರಸ್ಪರವಾಗಿ ಮಾತನಾಡಬಾರದು. ಮಾತನ್ನೂ ಮತ್ತು ದೇಹವನ್ನೂ ನಿಯಂತ್ರಿಸಿ ಶ್ರಾದ್ಧ ಕರ್ಮವನ್ನು ಆರಂಭಿಸಬೇಕು.
ತತೋ ನಿರ್ವಪಣೇ ವೃತ್ತೇ ತಾನ್ ಪಿಂಡಾಂಸ್ತದನಂತರಮ್ |
ಬ್ರಾಹ್ಮಣೋಽಗ್ನಿರಜೋ ಗೌರ್ವಾ ಭಕ್ಷಯೇದಪ್ಸು ವಾ ಕ್ಷಿಪೇತ್ ॥31॥
ಪಿಂಡದಾನವನ್ನು ಮಾಡಿದ ಮೇಲೆ ಆ ಪಿಂಡವನ್ನು ಬ್ರಾಹ್ಮಣನಾಗಲೀ, ಅಗ್ನಿಯಾಗಲೀ, ಆಡಾಗಲೀ, ಗೋವಾಗಲೀ ತಿನ್ನಬಹುದು ಅಥವಾ ಜಲದಲ್ಲಿಯೂ ವಿಸರ್ಜಿಸಬಹುದು.

ಪತ್ನೀಂ ವಾ ಮಧ್ಯಮಂ ಪಿಂಡಂ ಪುತ್ರಕಾಮೋ ಹಿ ಪ್ರಾಶಯೇತ್ |
ಆಧತ್ತ ಪಿತರೋ ಗರ್ಭಂ ಕುಮಾರಂ ಪುಷ್ಕರಸ್ರಜಮ್ ॥32॥
ಪುತ್ರಕಾಮನಾದವನು ಪತ್ನಿಗೆ ಮಧ್ಯಮಪಿಂಡವನ್ನು ತಿನ್ನಲು ಕೊಡಬೇಕು. ಪಿತೃಗಳು ಪುಷ್ಕರಮಾಲೆಯನ್ನು ಧರಿಸಿದ ಕುಮಾರನನ್ನು ಅವಳ ಗರ್ಭದಲ್ಲಿ ಇಡುತ್ತಾರೆ.
ತೃಪ್ತಾನುತ್ಥಾಪ್ಯ ತಾನ್ ವಿಪ್ರಾನನ್ನಶೇಷಂ ನಿವೇದಯೇತ್ |
ತಚ್ಛೇಷಂ ಬಹುಭಿಃ ಪಶ್ಚಾತ್ ಸಭೃತ್ಯೋ ಭಕ್ಷಯೇನ್ನರಃ ॥33॥
ತೃಪ್ತರಾದ ಬ್ರಾಹ್ಮಣರನ್ನು ಭೋಜನ ಸ್ಥಳದಿಂದ ಎಬ್ಬಿಸಿ, ಉಳಿದ ಅನ್ನಶೇಷವನ್ನು ಅವರಿಗೆ ನಿವೇದಿಸಬೇಕು. ಅವರ ಅನುಮತಿಯನ್ನು ಪಡೆದು ಅನಂತರ ಆ ಶೇಷವನ್ನು ಅನೇಕ ಭೃತ್ಯರ ಮತ್ತು ಪರಿವಾರದವರ ಜೊತೆಯಲ್ಲಿ ಭಕ್ಷಿಸಬೇಕು.
ಏಷ ಪ್ರೋಕ್ತಃ ಸಮಾಸೇನ ಪಿತೃಯಜ್ಞಃ ಸನಾತನಃ |
ಪಿತರಸ್ತೇನ ತುಷ್ಯಂತಿ ಕರ್ತಾ ಚ ಫಲಮಾಪ್ನುಯಾತ್ ॥34॥
ಸನಾತನವಾದ ಪಿತೃಯಜ್ಞವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಅದರಿಂದ ಪಿತೃಗಳು ಸಂತೋಷಪಡುತ್ತಾರೆ ಮತ್ತು ಶ್ರಾದ್ಧವನ್ನು ಮಾಡುವವನೂ ಫಲವನ್ನು ಹೊಂದುತ್ತಾನೆ.
ಅಹನ್ಯಹನಿ ವಾ ಕುರ್ಯಾನ್ಮಾಸೇಮಾಸೇಽಥವಾ ಪುನಃ |
ಸಂವತ್ಸರಂ ದ್ವಿಃ ಕುರ್ಯಾಚ್ಚ ಚತುರ್ವಾಽಪಿ ಚ ಶಕ್ತಿತಃ ॥35॥
ಪ್ರತಿದಿನವೂ ಶ್ರಾದ್ಧವನ್ನು ಮಾಡಬಹುದು ಅಥವಾ ತಿಂಗಳಿಗೊಮ್ಮೆ ಶ್ರಾದ್ಧವನ್ನು ಮಾಡಬಹುದು ಅಥವಾ ಸಂವತ್ಸರದಲ್ಲಿ ಎರಡು ಬಾರಿ ಅಥವಾ ನಾಲ್ಕು ಬಾರಿ ಹೀಗೆ ಶಕ್ತಿ ಇದ್ದಷ್ಟು ಶ್ರಾದ್ಧವನ್ನು ಮಾಡಬಹುದು.
ದೀರ್ಘಾಯುಶ್ಚ ಭವೇತ್ಸ್ವಸ್ಥಃ ಪಿತೃಮೇಧೇನ ಮಾನವಃ |
ಸಪುತ್ರೋ ಬಹುಭೃತ್ಯಶ್ಚ ಪ್ರಭೂತಧನಧಾನ್ಯವಾನ್ ॥36॥
ಪಿತೃಮೇಧದಿಂದ ಮಾನವನು ದೀರ್ಘಾಯುಷ್ಯವಂತನೂ, ನೀರೋಗಿಯೂ ಆಗುತ್ತಾನೆ. ಪುತ್ರರನ್ನೂ, ಭೃತ್ಯರನ್ನೂ, ಪ್ರಭೂತವಾದ ಧನ-ಧಾನ್ಯಗಳನ್ನೂ ಹೊಂದುತ್ತಾನೆ.
ಶ್ರಾದ್ಧದಃ ಸ್ವರ್ಗಮಾಪ್ನೋತಿ ನಿರ್ಮಲಂ ವಿವಿಧಾತ್ಮಕಮ್ |
ಅಪ್ಸರೋಗಣಸಂಘುಷ್ಟಂ ವಿರಜಸ್ಕಮನಂತರಮ್ ॥37॥
ಶ್ರಾದ್ಧವನ್ನು ಮಾಡುವವನು ನಿರ್ಮಲವಾದ, ಅನೇಕ ಬಗೆಯಾದ, ಅಪ್ಸರೆಯರ ಗಣದಿಂದ ಕೂಡಿದ, ನಿಷ್ಕಲ್ಮಷವಾದ ಸ್ವರ್ಗವನ್ನು ಪಡೆಯುತ್ತಾನೆ.
ಶ್ರಾದ್ಧಾನಿ ಪುಷ್ಟಿಕಾಮಾ ಯೇ ಪ್ರಕುರ್ವಂತಿ ಚ ಪಂಡಿತಾಃ |
ತೇಷಾಂ ಪುಷ್ಟಿಂ ಪ್ರಜಾಶ್ಚೈವ ದಾಸ್ಯಂತಿ ಪಿತರಃ ಸದಾ ॥38॥
ಪುಷ್ಟಿಕಾಮರಾದ ವಿವೇಕಿಗಳು ಶ್ರಾದ್ಧವನ್ನು ಮಾಡಿದರೆ ಅವರ ಪಿತೃಗಳು ಪ್ರಸನ್ನರಾಗಿ ಅವರಿಗೆ ಪುಷ್ಟಿಯನ್ನೂ, ಪ್ರಜೆಗಳನ್ನೂ ಕೊಡುತ್ತಾರೆ.
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಶತ್ರುವಿನಾಶನಮ್ |
ಕುಲಸಂಧಾರಣಂ ಚೇತಿ ಶ್ರಾದ್ಧಮಾಹುರ್ಮನೀಷಿಣಃ ॥39॥
ಶ್ರಾದ್ಧಕರ್ಮವು ಧನಪ್ರದವಾದುದು, ಕೀರ್ತಿಪ್ರದವಾದುದು, ಆಯುಷ್ಯ- ಪ್ರದವಾದುದು, ಸ್ವರ್ಗಪ್ರದವಾದುದು,
ಶತ್ರುವಿನಾಶಕವಾದುದು ಮತ್ತು ಕುಲವನ್ನು ರಕ್ಷಿಸುವಂತಹದು ಎಂದು ಜ್ಞಾನಿಗಳು ಹೇಳುತ್ತಾರೆ.
ಉಮಾ
ಭಗವನ್ ದೇವದೇವೇಶ ಮೃತಾಸ್ತೇ ಭುವಿ ಜಂತವಃ |
ನಾನಾಜಾತಿಷು ಜಾಯಂತೇ ಶೀಘ್ರಂ ಕರ್ಮವಶಾತ್ ಪುನಃ ॥40॥
ಉಮಾ ಪೂಜ್ಯನೇ, ದೇವದೇವೇಶನೇ, ಭೂಮಿಯಲ್ಲಿ ಮೃತರಾದ ಜಂತುಗಳು ಶೀಘ್ರವಾಗಿ ಕರ್ಮವಶದಿಂದ ಪುನಃ ನಾನಾ ಯೋನಿಗಳಲ್ಲಿ ಜನಿಸುತ್ತಾರೆ.
ಪಿತರಸಿತ್ವತಿ ತೇ ತತ್ರ ಕಥಂ ತಿಷ್ಠಂತಿ ದೇವವತ್ |
ಪಿತೄಣಾಂ ಕತಮೋ ದೇಶಃ ಪಿಂಡಾನಶ್ನಂತಿ ವೈ ಕಥಮ್ ॥41॥
ಅವರು ದೇವತೆಗಳಂತೆ ಪಿತೃಗಳು ಎಂದು ಕರೆಸಿಕೊಂಡು ಎಲ್ಲಿರುತ್ತಾರೆ? ಪಿತೃಗಳ ದೇಶವು ಯಾವುದು? ಅವರು ಪಿಂಡವನ್ನು ಹೇಗೆ ಭಕ್ಷಿಸುತ್ತಾರೆ?
ಅನ್ನೇ ದತ್ತೇ ಮೃತಾನಾಂ ತು ಕಥಮಾಪ್ಯಾಯನಂ ಭವೇತ್ |
ಏವಂ ಮಯಾ ಸಂಶಯಿತಂ ಭಗವನ್ ವಕ್ತುಮರ್ಹಸಿ ॥42॥
ಮೃತರಿಗೆ ಅನ್ನವನ್ನು ಕೊಟ್ಟರೆ ಅದು ಅವರಿಗೆ ಹೇಗೆ ಸಂತೋಷವನ್ನುಂಟು ಮಾಡುತ್ತದೆ? ಇದು ನನ್ನ ಸಂಶಯ. ಪೂಜ್ಯನೇ, ಉತ್ತರವನ್ನು ಕೊಡಬೇಕು.
ನಾರದಃ
ಏತದ್ ವಿರುದ್ಧಂ ರುದ್ರಾಣ್ಯಾಂ ಪೃಚ್ಛಂತ್ಯಾಂ ಪರಿಷದ್‌ಭೃಶಮ್ |
ಬಭೂವ ಸರ್ವಾ ಮುದಿತಾ ಶ್ರೋತುಂ ಪರಮಕಂ ಹಿತಮ್ ॥43॥
ನಾರದ ಪಾರ್ವತೀ ದೇವಿಯು ಹೀಗೆ ವಿರುದ್ಧವಾಗಿ ತೋರುವ ವಿಷಯದಲ್ಲಿ ಪ್ರಶ್ನೆಯನ್ನು ಮಾಡುತ್ತಿರಲು, ಆ ಋಷಿಗಳ ಪರಿಷತ್ತು ಸಂತೋಷದಿಂದ ಕೂಡಿ ಪರಮಹಿತವಾದ ವಿಷಯವನ್ನು ಕೇಳಲು ಉದ್ಯುಕ್ತವಾಯಿತು.

ಮಹೇಶ್ವರಃ
ಸ್ಥಾನೇ ಸಂಶಯಿತಂ ದೇವಿ ಶೃಣು ಕಲ್ಯಾಣಿ ತತ್ವತಃ |
ಗುಹ್ಯಾನಾಂ ಪರಮಂ ಗುಹ್ಯಂ ಹಿತಾನಾಂ ಪರಮಂ ಹಿತಮ್ ॥44॥
ಮಹೇಶ್ವರ ದೇವಿಯೇ, ಕಲ್ಯಾಣಿಯೇ, ನಿನ್ನ ಸಂಶಯವು ಯೋಗ್ಯವಾಗಿದೆ. ತತ್ತ್ವವನ್ನು ಕೇಳು. ಇದು ರಹಸ್ಯಗಳಲ್ಲಿ ಪರಮರಹಸ್ಯ ಮತ್ತು ಹಿತಗಳಲ್ಲಿ ಪರಮ ಹಿತವಾದುದು.
ಯಥಾ ದೇವಗಣಾ ದೇವಿ ತಥಾ ಪಿತೃಗಣಾಃ ಪ್ರಿಯೇ |
ದಕ್ಷಿಣಸ್ಯಾಂ ದಿಶಿ ಶುಭೇ ಸರ್ವೇ ಪಿತೃಗಣಾಃ ಸ್ಥಿತಾಃ ॥45॥
ಎಲೌ ದೇವಿಯೇ, ದೇವಗಣಗಳಿರುವಂತೆ ಪಿತೃಗಣಗಳೂ ಸಹ ದಕ್ಷಿಣ ದಿಕ್ಕಿನಲ್ಲಿ ಇರುತ್ತವೆ. ಎಲೌ ಶುಭಳೇ, ಪ್ರಿಯೆಯೇ, ಎಲ್ಲ ಪಿತೃಗಳೂ ಅಲ್ಲಿರುತ್ತಾರೆ.
ಪ್ರೇತಾನುದ್ದಿಶ್ಯ ಯಾ ಪೂಜಾ ಕ್ರಿಯತೇ ಮಾನುಷ್ಯೈರಿಹ |
ತೇನ ತುಷ್ಯಂತಿ ಪಿತರೋ ನ ಪ್ರೇತಾಃ ಪಿತರಃ ಸ್ಮೃತಾಃ ॥46॥
ಮೃತರನ್ನು ಉದ್ದೇಶಿಸಿ ಮಾನವರು ಮಾಡುವ ಕ್ರಿಯೆಯಿಂದ ಪಿತೃಗಳು ಸಂತೋಷಪಡುತ್ತಾರೆ. ಮೃತರಾದವರನ್ನು ಪಿತೃಗಳೆಂದು ಹೇಳುವುದಿಲ್ಲ (ಆ ಪಿತೃಗಳು ಮೃತರಾದವರಿಗೆ ಯೋಗ್ಯವಾದ ತೃಪ್ತಿಯನ್ನು ಕೊಡುತ್ತಾರೆ).
ಉತ್ತರಸ್ಯಾಂ ಯಥಾ ದೇವಾ ರಮಂತೇ ಯಜ್ಞಕರ್ಮಭಿಃ |
ದಕ್ಷಿಣಸ್ಯಾಂ ತಥಾ ತೇ ಚ ತುಷ್ಯಂತಿ ವಿವಿಧೈರ್ಮಖೈಃ ॥47॥
ಹೇಗೆ ದೇವತೆಗಳು ಉತ್ತರದಿಕ್ಕಿನಲ್ಲಿ ಯಜ್ಞಕರ್ಮಗಳಿಂದ ಸಂತೋಷ ಪಡುತ್ತಾರೆಯೋ ಅದರಂತೆ ಪಿತೃಗಳು ದಕ್ಷಿಣದಿಕ್ಕಿನಲ್ಲಿ ವಿವಿಧವಾದ ಶ್ರಾದ್ಧ ಕರ್ಮಗಳಿಂದ ಸಂತೋಷಪಡುತ್ತಾರೆ.
ದ್ವಿವಿಧಂ ಕ್ರಿಯತೇ ಕರ್ಮ ಹವ್ಯಕವ್ಯಸಮಾಶ್ರಿತಮ್ |
ತಯೋರ್ಹವ್ಯಕ್ರಿಯಾ ದೇವಾನ್ ಕವ್ಯಮಾಪ್ಯಾಯಯೇತ್ ಪಿತೄನ್ ॥
ಹವ್ಯ-ಕವ್ಯ ಎಂಬ ಎರಡು ವಿಧವಾದ ಕ್ರಿಯೆಗಳು ಮಾಡಲ್ಪಡುತ್ತವೆ. ಹವ್ಯಕ್ರಿಯೆಯು ದೇವತೆಗಳನ್ನು ತಲುಪುತ್ತದೆ. ಕವ್ಯಕ್ರಿಯೆಯು ಪಿತೃಗಳಿಗೆ ಸಂತೋಷವನ್ನುಂಟು ಮಾಡುತ್ತದೆ.
ಪ್ರಸವ್ಯಂ ಮಂಗಲ್ಯೈರ್ದ್ರವ್ಯೈರ್ಹವ್ಯಕರ್ಮ ವಿಧೀಯತೇ |
ಅಪಸವ್ಯಮಮಂಗಲ್ಯೈಃ ಕವ್ಯಂ ಚಾಪಿ ವಿಧೀಯತೇ ॥49॥
ಹವ್ಯಕ್ರಿಯೆಯನ್ನು ಸವ್ಯದಿಂದ, ಮಂಗಳದ್ರವ್ಯದಿಂದ ಮಾಡುತ್ತಾರೆ. ಕವ್ಯವಾದರೂ ಅಪಸವ್ಯದಿಂದ ಅಮಂಗಳ ದ್ರವ್ಯಗಳಿಂದ ಮಾಡಲ್ಪಡುತ್ತದೆ.
ಸದೇವಾಸುರಗಂಧರ್ವಾಃ ಪಿತೄನಭ್ಯರ್ಚಯಂತಿ ಚ |
ಆಪ್ಯಾಯಿತಾಶ್ಚ ತೇ ಶ್ರಾದ್ಧೈಃ ಪುನರಾಪ್ಯಾಯಯಂತಿ ತಾನ್ ॥50॥
ದೇವತೆಗಳು, ಅಸುರರು, ಗಂಧರ್ವರು ಎಲ್ಲರೂ ಪಿತೃಗಳನ್ನು ಪೂಜಿಸುತ್ತಾರೆ. ಶ್ರಾದ್ಧದಿಂದ ಸಂತುಷ್ಟರಾದ ಪಿತೃಗಳು ಪುನಃ ಶ್ರಾದ್ಧ ಮಾಡಿದವರನ್ನು ಅಭಿವೃದ್ಧಿ ಪಡಿಸಿ ಸಂತೋಷಪಡಿಸುತ್ತಾರೆ.
ಅನಿಷ್ಟ್ವಾ ಚ ಪಿತೄನ್ ಪೂರ್ವಂ ಯಃ ಕ್ರಿಯಾಂ ಪ್ರಕರೋತಿ ಚೇತ್ |
ರಕ್ಷಾಂಸಿ ಚ ಪಿಶಾಚಾಶ್ಚ ಫಲಂ ಭೋಕ್ಷ್ಯಂತಿ ತಸ್ಯ ತತ್ ॥51॥
ಯಾವನು ಮೊದಲು ಪಿತೃಗಳ ಪೂಜೆಯನ್ನು ಮಾಡದೆ ಕ್ರಿಯೆಗಳನ್ನು ಆರಂಭಿಸುತ್ತಾನೆಯೋ ಅಂತಹ ಕ್ರಿಯೆಗಳ ಫಲವನ್ನು ರಾಕ್ಷಸರು ಮತ್ತು ಪಿಶಾಚಿಗಳು ಭೋಗಿಸುತ್ತವೆ.
ಹವ್ಯಕವ್ಯಕ್ರಿಯಾ ತಸ್ಮಾತ್ ಕರ್ತವ್ಯಾ ಭುವಿ ಮಾನುಷೈಃ |
ಕರ್ಮಕ್ಷೇತ್ರಂ ಹಿ ಮಾನುಷ್ಯಂ ತದನ್ಯತ್ರ ನ ವಿದ್ಯತೇ ॥52॥
ಆದ್ದರಿಂದ ಮನುಷ್ಯರು ಭೂಮಿಯಲ್ಲಿ ಹವ್ಯ-ಕವ್ಯ ಕ್ರಿಯೆಗಳನ್ನು ಮಾಡಬೇಕು. ಮನುಷ್ಯ ಶರೀರವೇ ಕರ್ಮಕ್ಷೇತ್ರವಷ್ಟೆ? ಬೇರೆ ಯೋನಿಯಲ್ಲಿ ಕರ್ಮವನ್ನು ಮಾಡುವ ಸಾಧ್ಯತೆ ಇಲ್ಲ.
ಕವ್ಯೇನ ಸಂತತಿರ್ದೃಷ್ಟಾ ಹವ್ಯೇ ಭೂತಿಃ ಪೃಥಗ್ವಿಧಾಃ |
ಇತಿ ತೇ ಕಥಿತಂ ದೇವಿ ದೇವಗುಹ್ಯಂ ಸನಾತನಮ್ ॥53॥
ಕವ್ಯದಿಂದ ಸಂತತಿಯ ಅಭಿವೃದ್ಧಿಯು ದೃಷ್ಟವಾಗಿದೆ. ಹವ್ಯಕರ್ಮದಿಂದ ಅನೇಕ ವಿಧವಾದ ಸಂಪತ್ತು ಉಂಟಾಗುತ್ತದೆ. ಎಲೌ ದೇವಿಯೇ, ದೇವಗುಹ್ಯವಾದ, ಸನಾತನವಾದ ಈ ತತ್ತ್ವವನ್ನು ನಿನಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಶ್ರಾದ್ಧಪ್ರಶಂಸಾ ನಾಮ ತ್ರಯೋವಿಂಶೋತ್ತರದ್ವಿಶತತಮೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ನಾಲ್ಕನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಧರ್ಮಫಲ ಕಾಲಕಥನ.
ಉಮಾ
ಏವಂ ಕೃತಸ್ಯ ಧರ್ಮಸ್ಯ ಶ್ರೋತುಮಿಚ್ಛಾಮ್ಯಹಂ ಪ್ರಭೋ |

ಪ್ರಮಾಣಂ ಫಲಮಾನಾನಾಂ ತನ್ಮೇ ಶಂಸಿತುಮರ್ಹಸಿ ॥1॥
ಉಮಾ ಪ್ರಭುವೇ, ಹೀಗೆ ಆಚರಿಸಿದ ಧರ್ಮದ ಫಲದ ಕಾಲಮಾನಗಳನ್ನು ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳಬೇಕು.
ಮಹೇಶ್ವರಃ
ಪ್ರಮಾಣಕಲ್ಪನಾಂ ದೇವಿ ದಾನಸ್ಯ ಶೃಣು ಭಾಮಿನಿ ॥2॥
ದೇವಿಯೇ, ಭಾಮಿನಿಯೇ, ದಾನಗಳ ಫಲದ ಕಾಲವಿಧಿಯನ್ನು ಹೇಳುತ್ತೇನೆ, ಕೇಳು.
ಯತ್ಸಾರಸ್ತು ನರೋ ಲೋಕೇ ತದ್ದಾನಂ ಚೋತ್ತಮಂ ಸ್ಮೃತಮ್ |
ಸರ್ವದಾನವಿಧಿಂ ಪ್ರಾಹುಸ್ತದೇವ ಭುವಿ ಶೋಭನೇ ॥3॥
ಮನುಷ್ಯನಿಗೆ ಎಷ್ಟು ಧನಬಲವಿರುತ್ತದೆಯೋ (ದ್ರವ್ಯಬಲ) ಅದಕ್ಕೆ ಅನುಗುಣವಾದ ದಾನವು ಉತ್ತಮವಾದ ದಾನ ಎಂದು ಹೇಳಲ್ಪಡುತ್ತದೆ. ಎಲೌ ಶೋಭನೆಯೇ, ಭೂಮಿಯಲ್ಲಿ ಸರ್ವದಾನವಿಧಿಗಳಲ್ಲಿ ಅದೇ ಪ್ರಧಾನವಾದುದು.
ಪ್ರಸ್ಥಂ ಸಾರಂ ದರಿದ್ರಸ್ಯ ಶತಂ ಕೋಟಿಧನಸ್ಯ ಚ |
ಪ್ರಸ್ಥಸಾರಸ್ತು ತತ್ಪ್ರಸ್ಥಂ ದದನ್ಮಹದವಾಪ್ನುಯಾತ್ ॥4॥
ದರಿದ್ರನಿಗೆ ಒಂದು ಹಿಡಿ ಧಾನ್ಯವೂ ಸಾರವಾಗುತ್ತದೆ. ಕೋಟಿಧನವುಳ್ಳವನಿಗೆ ನೂರಾರು ಖಂಡುಗಗಳಷ್ಟು ಧಾನ್ಯವು ಸಾರವಾಗುತ್ತದೆ. ಒಂದು ಪ್ರಸ್ಥ ಸಾರವನ್ನು ಹೊಂದಿದ ದರಿದ್ರನು ಒಂದು ಪ್ರಸ್ಥ ಧಾನ್ಯವನ್ನು ದಾನ ಮಾಡಿದರೆ ಅದು ಮಹಾದಾನವಾಗುತ್ತದೆ.
ಕೋಟಿಸಾರಸ್ತು ತಾಂ ಕೋಟಿಂ ದದಾನ್ಮಹದವಾಪ್ನುಯಾತ್ |
ಉಭಯಂ ತನ್ಮಹತ್ ತಚ್ಚ ಫಲೇನೈವ ಸಮಂ ಸ್ಮೃತಮ್ ॥5॥
ಕೋಟಿಸಾರನಾದವನು ಕೋಟಿಯನ್ನು ದಾನ ಮಾಡಿದರೆ ಮಹಾಫಲವನ್ನು ಹೊಂದುತ್ತಾನೆ. ಅವೆರಡು ದಾನಗಳೂ ಫಲದಲ್ಲಿ ಸಮನಾದವುಗಳು ಎಂದು ಹೇಳಲ್ಪಡುತ್ತದೆ.
ಧರ್ಮಾರ್ಥಕಾಮಭೋಗೇಷು ಶಕ್ಯಂ ದಾನಂ ತು ಮಧ್ಯಮಮ್ |
ಸ್ವದ್ರವ್ಯಾದತಿಹೀನಂ ತು ತದ್ದಾನಮಧಮಂ ಸ್ಮೃತಮ್ ॥6॥
ತನ್ನ ಧರ್ಮಾರ್ಥಕಾಮ ಭೋಗಗಳು ಸಾಧ್ಯವಾಗುವಂತೆ (ದ್ರವ್ಯಾದಿಗಳನ್ನು ಇಟ್ಟುಕೊಂಡು) ಮಾಡುವ ದಾನವು ಮಧ್ಯಮ ದಾನ. ತನ್ನ ದ್ರವ್ಯ ಬಲದ ದೃಷ್ಟಿಯಿಂದ ಅತ್ಯಂತ ಹೀನವಾದ ದಾನವು ಅಧಮ ದಾನವೆನಿಸುತ್ತದೆ.
ಶೃಣು ದತ್ತಸ್ಯ ವೈ ದೇವಿ ಪಂಚಧಾ ಫಲಕಲ್ಪನಾಮ್ |
ಆನಂತ್ಯಂ ಚ ಮಹಚ್ಚೈವ ಸಮಂ ಹೀನಂ ಹಿ ಪಾತಕಮ್ ॥7॥
ದೇವಿಯೇ, ದಾನದ ಐದುವಿಧವಾದ ಫಲವನ್ನು ಕೇಳು. ದಾನವು ಆನಂತ್ಯ, ಮಹತ್ವ, ಸಾಮ್ಯ, ಹೀನತೆ ಮತ್ತು ಪಾತಕಗಳೆಂಬ ಐದು ಫಲದಿಂದ ಕೂಡಿದೆ.
ತೇಷಾಂ ವಿಶೇಷಾನ್ ವಕ್ಷ್ಯಾಮಿ ಶೃಣು ದೇವಿ ಸಮಾಹಿತಾ |
ದುಸ್ತ್ಯಜಸ್ಯ ಚ ವೈ ದಾನಂ ಪಾತ್ರ ಆನಂತ್ಯಮುಚ್ಯತೇ ॥8॥
ಎಲೌ ದೇವಿಯೇ, ಅವುಗಳ ವಿಶೇಷಗಳನ್ನು ಹೇಳುವೆನು. ಸಮಾಧಾನದಿಂದ ಕೇಳು. ದುಸ್ತ್ಯಜವಾದ ವಸ್ತುವನ್ನು ಪಾತ್ರನಲ್ಲಿ ದಾನ ಮಾಡಿದರೆ ಅದು ಅನಂತ ಫಲವೆನಿಸುತ್ತದೆ.
ದಾನಂ ಷಡ್ಗುಣಯುಕ್ತಂ ತು ಮಹದಿತ್ಯಭಿಧೀಯತೇ |
ಯಥಾಶ್ರದ್ಧಂ ತು ವೈ ದಾನಂ ಯಥಾರ್ಹಂ ಸಮಮುಚ್ಯತೇ ॥9॥
ಹಿಂದೆ ಹೇಳಿದ ಆರುಗುಣಗಳಿಂದ ಯುಕ್ತವಾದ ದಾನವು ಮಹಾದಾನವೆನಿಸುತ್ತದೆ. ತನ್ನ ಶ್ರದ್ಧೆಗೆ ಅನುಗುಣವಾಗಿ ಮತ್ತು ಪಾತ್ರನಿಗೆ ಅನುಗುಣವಾಗಿ ಮಾಡಿದ ದಾನವು ಸಮದಾನವೆನಿಸುತ್ತದೆ.
ಗುಣತಸ್ತು ತಥಾ ಹೀನಂ ದಾನಂ ಹೀನಮಿತಿ ಸ್ಮೃತಮ್ |
ದಾನಂ ಪಾತಕಮಿತ್ಯಾಹುಃ ಷಡ್ಗುಣಾನಾಂ ವಿಪರ್ಯಯೇ ॥10॥
ಆರುಗುಣಗಳಿಲ್ಲದೆ ಮಾಡುವ ದಾನವು ಹೀನದಾನವೆನಿಸುತ್ತದೆ. ಆರು ಗುಣಗಳು ವಿಪರೀತವಾಗಿ ದುರ್ಗುಣವೇ ಇದ್ದರೆ ಆ ದಾನವು ಪಾತಕದಾನವೆನಿಸುತ್ತದೆ.
ದೇವಲೋಕೇ ಮಹತ್ಕಾಲಮಾನಂತ್ಯಸ್ಯ ಫಲಂ ವಿದುಃ |
ಮಹತಸ್ತು ತಥಾ ದಾನಂ ಸ್ವರ್ಗಲೋಕೇ ತು ಪೂಜ್ಯತೇ ॥11॥
ದೇವಲೋಕದಲ್ಲಿ ಬಹುಕಾಲದವರೆಗೆ ವಾಸವು ಆನಂತ್ಯದ ಫಲವೆಂದು ಹೇಳುತ್ತಾರೆ. ಸ್ವರ್ಗಲೋಕದಲ್ಲಿ ಸತ್ಕಾರವು ಮಹಾದಾನದ ಫಲ.
ಸಮಸ್ಯ ತು ತದಾ ದಾನಂ ಮಾನುಷ್ಯಂ ಭೋಗಮಾವಹೇತ್ |
ದಾನಂ ನಿಷ್ಫಲಮಿತ್ಯಾಹುರ್ವಿಹೀನಂ ಕ್ರಿಯಯಾ ಶುಭೇ ॥12॥
ಸಮದಾನವು ಮನುಷ್ಯಜನ್ಮದಲ್ಲಿ ಭೋಗಗಳನ್ನು ಉಂಟು ಮಾಡುತ್ತದೆ. ಕ್ರಿಯಾ ವಿಹೀನವಾದ ದಾನವನ್ನು ನಿಷ್ಫಲವೆಂದು ಹೇಳುತ್ತಾರೆ.
ಅಥವಾ ಮ್ಲೇಚ್ಛದೇಶೇಷು ತತ್ರ ತತ್ಫಲತಾಂ ವ್ರಜೇತ್ |
ನರಕಂ ಪ್ರೇತ್ಯ ತಿರ್ಯಕ್ಷು ಗಚ್ಛೇದಶುಭದಾನತಃ ॥13॥
ಅಥವಾ ಆ ದಾನವು ಮ್ಲೇಚ್ಛ ದೇಶಗಳಲ್ಲಿ ಜನ್ಮವನ್ನು ಕೊಟ್ಟು ಫಲವನ್ನು ಕೊಡುತ್ತದೆ. ಅಶುಭದಾನದಿಂದ (ಪಾತಕ ದಾನದಿಂದ) ಮನುಷ್ಯನು ನರಕವನ್ನು ಹೊಂದಿ ಅನಂತರ ನೀಚಯೋನಿಯಲ್ಲಿ ಜನಿಸುತ್ತಾನೆ.
ಉಮಾ

ಅಶುಭಸ್ಯಾಪಿ ದಾನಸ್ಯ ಶುಭಂ ಸ್ಯಾಚ್ಚ ಫಲಂ ಕಥಮ್ ॥14॥
ಉಮಾ ಅಶುಭವಾದ ದಾನವೂ ಶುಭಫಲವನ್ನು ಕೊಡುವುದು ಹೇಗೆ?
ಮಹೇಶ್ವರಃ
ಮನಸಾ ತತ್ತ್ವತಃ ಶುದ್ಧಮಾನೃಶಂಸ್ಯಪುರಃಸರಮ್ |
ಪ್ರೀತ್ಯಾ ತು ಸರ್ವದಾನಾನಿ ದತ್ತಾತ್ವ ಫಲಮವಾಪ್ನುಯಾತ್ ॥15॥
ಮಹೇಶ್ವರ ಮನಸ್ಸಿನಿಂದಲೂ ಮತ್ತು ತತ್ತ್ವದಿಂದಲೂ ಶುದ್ಧವಾದ, ದಯಾ ಪುರಸ್ಸರವಾಗಿ ಸಂತೋಷದಿಂದ ಮಾಡಿದ ಎಲ್ಲ ದಾನಗಳಿಗೂ ಫಲವುಂಟಾಗುತ್ತದೆ.
ರಹಸ್ಯಂ ಸರ್ವದಾನಾನಾಮೇತದ್ ವಿದ್ಧಿ ಶುಭೇಕ್ಷಣೇ |
ಅನ್ಯಾನಿ ಸರ್ವಕಾರ್ಯಾಣಿ ಶೃಣು ಸದ್ಭಿಃ ಕೃತಾನಿ ಚ ॥16॥
ಶುಭೇಕ್ಷಣೆಯೇ, ಇದು ಎಲ್ಲ ದಾನಗಳ ರಹಸ್ಯವೆಂದು ತಿಳಿ. ಸಜ್ಜನರು ಮಾಡುವ ಬೇರೆ ಕಾರ್ಯಗಳನ್ನು ಕೇಳುವವಳಾಗು.
ಆರಾಮಂ ದೇವಗೋಷ್ಠಾನಿ ಸಂಕ್ರಮಾಃ ಕೂಪ ಏವ ಚ |
ಗೋವಾಟಂ ಚ ತಟಾಕಂ ಚ ಸಭಾಃ ಶಾಲಾಶ್ಚ ಸರ್ವಶಃ ॥17॥
ಭಿಕ್ಷುಕಾವಸಥಾಶ್ಚೈವ ಪಾನೀಯಂ ಗೋತೃಣಾನಿ ಚ |
ವ್ಯಾಧಿತಾನಾಂ ಚ ಭೈಷಜ್ಯಮನಾಥಾನಾಂ ಚ ಭೋಜನಮ್ ॥18॥
ಅನಾಥಶವಸಂಸ್ಕಾರಸ್ತೀರ್ಥಮಾರ್ಗವಿಶೋಧನಮ್ |
ವ್ಯಸನಾಭ್ಯವಪತ್ತಿಶ್ಚ ಸರ್ವೇಷಾಂ ಚ ಸ್ವಶಕ್ತಿತಃ ॥19॥
ಏತತ್ಸರ್ವಂ ಸಮಾಸೇನ ಧರ್ಮಕಾರ್ಯಮಿತಿ ಸ್ಮೃತಮ್ |
ತತ್ಕರ್ತವ್ಯಂ ಮನುಷ್ಯೇಣ ಸ್ವಶಕ್ತ್ಯಾ ಶ್ರದ್ಧಯಾ ಶುಭೇ ॥20॥
ವನಗಳ, ದೇವಾಲಯಗಳ, ಮಾರ್ಗಗಳ, ಬಾವಿ, ಗೋಶಾಲೆ, ಕೆರೆ, ಸಭೆಗಳ, ಶಾಲೆಗಳ, ಭಿಕ್ಷುಕರ ವಸತಿಗಳ ನಿರ್ಮಾಣ, ಜಲ, ಗೋವುಗಳಿಗೆ ಹುಲ್ಲು, ರೋಗಗ್ರಸ್ತರಾದವರಿಗೆ ಔಷಧ, ಅನಾಥರಿಗೆ ಭೋಜನ, ಅನಾಥ ಶವಸಂಸ್ಕಾರ, ತೀರ್ಥಮಾರ್ಗಗಳ ಶೋಧನೆ, ವ್ಯಸನದಲ್ಲಿರುವ ಎಲ್ಲರಿಗೂ ತನ್ನ ಶಕ್ತಿ ಇದ್ದಷ್ಟು ಸಹಾಯ - ಇವೆಲ್ಲವೂ ಸಂಕ್ಷೇಪವಾಗಿ ಧರ್ಮಕಾರ್ಯಗಳೆಂದು ಹೇಳಲ್ಪಡುತ್ತವೆ. ಶುಭಳೇ, ಮನುಷ್ಯನು ತನ್ನ ಶಕ್ತಿ ಇದ್ದಷ್ಟು ಅಂತಹ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡಬೇಕು.
ಪ್ರೇತ್ಯಭಾವೇ ಲಭೇತ್ ಪುಣ್ಯಂ ನಾಸ್ತಿ ತತ್ರ ವಿಚಾರಣಾ |
ರೂಪಂ ಸೌಭಾಗ್ಯಮಾರೋಗ್ಯಂ ಬಲಂ ಸೌಖ್ಯಂ ಲಭೇನ್ನರಃ |
ಸ್ವರ್ಗೇ ವಾ ಮಾನುಷೇ ವಾऽಪಿ ತೈಸ್ತೈರಾಪ್ಯಾಯತೇ ಹಿ ಸಃ ॥21॥
ಮರಣವನ್ನು ಹೊಂದಿದ ಮೇಲೆ ಅಂತಹವನು ಪುಣ್ಯಫಲವನ್ನು ಪಡೆಯುವುದರಲ್ಲಿ ಬೇರೆ ವಿಚಾರವಿಲ್ಲ. ಅಂತಹ ಕಾರ್ಯವನ್ನು ಮಾಡುವ ಮಾನವನು ಸ್ವರ್ಗಲೋಕದಲ್ಲಿ ಅಥವಾ ಮನುಷ್ಯಲೋಕದಲ್ಲಿ ರೂಪ, ಸೌಭಾಗ್ಯ, ಆರೋಗ್ಯ, ಬಲ ಮತ್ತು ಸೌಖ್ಯಗಳನ್ನು ಪಡೆದು ಸಂತೋಷಪಡುತ್ತಾನೆ.
ಉಮಾ
ಭಗವನ್ ಲೋಕಪಾಲೇಶ ಧರ್ಮಸ್ತು ಕತಿಭೇದಕಃ |
ದೃಶ್ಯತೇ ಚರಿತಃ ಸದ್ಭಿಸ್ತನ್ಮೇ ಶಂಸಿತುಮರ್ಹಸಿ ॥22॥
ಉಮಾ ಭಗವಂತನೇ, ಲೋಕಪಾಲಕರಿಗೆ ಒಡೆಯನೇ, ಸಜ್ಜನರು ಆಚರಿಸುವ ಧರ್ಮವು ಎಷ್ಟು ಪ್ರಭೇದಗಳನ್ನು ಹೊಂದಿದೆ ಎಂದು ನನಗೆ ಹೇಳಬೇಕು.
ಮಹೇಶ್ವರಃ
ಶೃಣು ದೇವಿ ಸಮುದ್ದೇಶಾನ್ನಾನಾತ್ವಂ ಧರ್ಮಸಂಕಟೇ |
ಧರ್ಮಾ ಬಹುವಿಧಾ ಲೋಕೇ ಶ್ರುತಿಭೇದಮುಖೋದ್ಭವಾಃ ॥23॥
ಸ್ಮೃತಿಧರ್ಮಶ್ಚ ಬಹುಧಾ ಸದ್ಭಿರಾಚಾರ ಇಷ್ಯತೇ ॥24॥
ದೇಶಧರ್ಮಾಶ್ಚ ದೃಶ್ಯಂತೇ ಕುಲಧರ್ಮಾಸ್ತಥೈವ ಚ |
ಜಾತಿಧರ್ಮಾಶ್ಚ ವೈ ಧರ್ಮಾ ಗಣಧರ್ಮಾಶ್ಚ ಶೋಭನೇ ॥25॥
ಶರೀರಕಾಲವೈಷಮ್ಯಾದಾಪದ್ಧರ್ಮಶ್ಚ ದೃಶ್ಯತೇ |
ಏತದ್ಧರ್ಮಸ್ಯ ನಾನಾತ್ವಂ ಕ್ರಿಯತೇ ಲೋಕವಾಸಿಭಿಃ ॥26॥
ಮಹೇಶ್ವರ ದೇವಿಯೇ, ಧರ್ಮಗಳು ಒಟ್ಟುಗೂಡಿದಾಗ ಅವುಗಳ ಸಂಯೋಗವನ್ನೂ ಮತ್ತು ಅನೇಕ ವಿಧತ್ವವನ್ನೂ ಕೇಳು. ಲೋಕದಲ್ಲಿ ಧರ್ಮಗಳು ಬಹುವಿಧವಾಗಿವೆ. ಶ್ರುತಿ ವಿಶೇಷದಿಂದ ಪ್ರಾಪ್ತವಾದ ಧರ್ಮಗಳು, ಸ್ಮೃತಿಯಿಂದ ಪ್ರಾಪ್ತವಾದ ಧರ್ಮಗಳು, ಸಜ್ಜನರ ಬಹುಳಾಚಾರದಿಂದ ಪ್ರಾಪ್ತವಾದ ಧರ್ಮಗಳು ಅಂಗೀಕರಿಸಲ್ಪಡುತ್ತವೆ. ಹಾಗೆಯೇ ದೇಶಧರ್ಮಗಳು, ಕುಲಧರ್ಮಗಳು, ಜಾತಿ ಧರ್ಮಗಳು ಮತ್ತು ಗಣಧರ್ಮಗಳು ಹಾಗೆಯೇ ಶರೀರ ಮತ್ತು ಕಾಲದ ವ್ಯತ್ಯಾಸದಿಂದ ಆಪದ್ಧರ್ಮಗಳು ಇವೆಲ್ಲವೂ ಕಂಡುಬರುತ್ತವೆ. ಆ ಕಾರಣದಿಂದ ಲೋಕದ ಜನರು ನಾನಾ ವಿಧವಾದ ಧರ್ಮಗಳನ್ನು ಆಚರಿಸುತ್ತಾರೆ.
ಕಾರಣಾತ್ ತತ್ರತತ್ರೈವ ಫಲಂ ಧರ್ಮಸ್ಯ ಚೇಷ್ಯತೇ |
ತತ್ಕಾರಣಸಮಾಯೋಗೇ ಲಭೇತ್ ಕುರ್ವನ್ ಫಲಂ ನರಃ ॥27॥
ಅನ್ಯಥಾ ನ ಲಭೇತ್ ಪುಣ್ಯಮತದರ್ಹಃ ಸಮಾದಿಶನ್ |
ಏವಂ ಧರ್ಮಸ್ಯ ನಾನಾತ್ವಂ ಫಲಂ ಕುರ್ವಲ್ಲಭೇನ್ನರಃ ॥28॥

ಶ್ರೌತಃ ಸ್ಮಾರ್ತಸ್ತು ಧರ್ಮಾಣಾಂ ಪ್ರಾಕೃತೋ ಧರ್ಮ ಉಚ್ಯತೇ |
ಇತಿ ತೇ ಕಥಿತಂ ಸರ್ವಂ ಭೂಯಃ ಶ್ರೋತುಂ ಕಿಮಿಚ್ಛಸಿ ||29||
ಆಯಾ ಕಾರಣಗಳಿಗೆ ಅನುಸಾರವಾಗಿ ಧರ್ಮದ ಫಲವುಂಟಾಗುತ್ತದೆ. ಕಾರಣಗಳು ಒಂದುಗೂಡಿದಾಗ ಧರ್ಮವನ್ನು ಆಚರಿಸುವ ನರನು ಫಲವನ್ನು ಹೊಂದುತ್ತಾನೆ. ಪುಣ್ಯವನ್ನು ಪಡೆಯುವ ಯೋಗ್ಯತೆ ಇಲ್ಲದವನು ಆಚರಿಸಿದ ಧರ್ಮಕ್ಕೆ ಫಲವು ದೊರೆಯುವುದಿಲ್ಲ. ಹೀಗೆ ಧರ್ಮವನ್ನು ಆಚರಿಸುವ ನರನು ನಾನಾ ವಿಧವಾದ ಫಲಗಳನ್ನು ಪಡೆಯುತ್ತಾನೆ. ಶ್ರುತಿ-ಸ್ಮೃತಿಗಳಲ್ಲಿ ಹೇಳಲ್ಪಟ್ಟ ಧರ್ಮಗಳು ಪ್ರಾಕೃತ ಧರ್ಮವೆನಿಸುತ್ತವೆ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಧರ್ಮಫಲಕಾಕಥನಂ ನಾಮ ಚತುರ್ವಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ತೈದನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಶುಭಕರ್ಮಪ್ರಾಪ್ಯವಾದ ಭೋಗಗಳ ವರ್ಣನೆ.
ಉಮಾ
ಭಗವನ್ ಸರ್ವಭೂತೇಶ ತ್ರಿಪುರಾರ್ದನ ಶಂಕರ |
ಶ್ರುತಂ ಪಾಪಕೃತಂ ದುಃಖಂ ಯಮಲೋಕೇ ವರಪ್ರದ ||1||
ಉಮಾ ಭಗವಂತನೇ, ಸರ್ವಭೂತೇಶನೆ, ತ್ರಿಪುರ ಸಂಹಾರಕನೇ, ಶಂಕರನೇ, ವರಪ್ರದನೇ, ಪಾಪದಿಂದ ಯಮಲೋಕದಲ್ಲಿ ಅನುಭವಿಸುವ ದುಃಖವನ್ನು ಕೇಳಿದೆನು.
ಶ್ರೋತುಮಿಚ್ಛಾಮ್ಯಹಂ ದೇವ ನೃಣಾಂ ಸುಕೃತಕರ್ಮಣಾಮ್ |
ಕಥಂ ತೇ ಭುಂಜತೇ ಭೋಗಾನ್ ಸ್ವರ್ಗಲೋಕೇ ಮಹೇಶ್ವರ ||2||
ಕಥಿತಾಃ ಕೀದೃಶಾ ಲೋಕಾ ನೃಣಾಂ ಸುಕೃತಕಾರಿಣಾಮ್ |
ಏತನ್ಮೇ ವದ ದೇವೇಶ ಶ್ರೋತುಂ ಕೌತೂಹಲಂ ಹಿ ಮೇ ||3||
ದೇವನೇ, ಸುಕೃತವನ್ನು ಮಾಡಿದವರ ಭೋಗವನ್ನು ಕೇಳಲು ಬಯಸುತ್ತೇನೆ. ಎಲೈ ಮಹೇಶ್ವರನೇ, ಸುಕೃತವನ್ನು ಮಾಡಿದವರು ಸ್ವರ್ಗಲೋಕದಲ್ಲಿ ಎಂತಹ ಭೋಗಗಳನ್ನು ಅನುಭವಿಸುತ್ತಾರೆ? ಸುಕೃತವನ್ನು ಮಾಡಿದವರಿಗೆ ದೊರಕುವ ಲೋಕಗಳು ಎಂತಹವುಗಳೆಂದು ಹೇಳಲ್ಪಟ್ಟಿವೆ? ದೇವೇಶನೇ, ಇದನ್ನು ನನಗೆ ಹೇಳು. ನನಗೆ ಇದನ್ನು ಕೇಳಲು ಬಹಳ ಕುತೂಹಲವಿದೆ.
ಮಹೇಶ್ವರಃ
ಶೃಣು ಕಲ್ಯಾಣಿ ತತ್ಸರ್ವಂ ಯತ್ತ್ವಮಿಚ್ಛಸಿ ಶೋಭನೇ |
ವಿವಿಧಾಃ ಪುಣ್ಯಲೋಕಾಸ್ತೇ ಕರ್ಮಕರ್ಮಣ್ಯತಾಂ ಗತಾಃ ||4||
ಮಹೇಶ್ವರ ಕಲ್ಯಾಣಿಯೇ, ಶೋಭನೆಯೇ, ನೀನು ಬಯಸಿದ ಎಲ್ಲವನ್ನೂ ಕೇಳು. ಕರ್ಮದಿಂದ ಹೊಂದಬಹುದಾದ ಪುಣ್ಯಲೋಕಗಳು ಅನೇಕ ವಿಧವಾಗಿವೆ.
ಮೇರುಂ ಹಿ ಕನಕಾತ್ಮಾನಂ ಪರಿತಃ ಸರ್ವತೋದಿಶಮ್ |
ಭದ್ರಾಶ್ವಃ ಕೇತುಮಾಲಶ್ಚ ಉತ್ತರಾಃ ಕುರವಸ್ತಥಾ ||5||
ಸುವರ್ಣ ಪರ್ವತವಾದ ಮೇರುವಿನ ಸುತ್ತಲೂ ಎಲ್ಲ ದಿಕ್ಕುಗಳಲ್ಲಿ ಭದ್ರಾಶ್ವ, ಕೇತುಮಾದ ಮತ್ತು ಉತ್ತರ ಕುರು ಖಂಡಗಳಿವೆ.
ಜಂಬೂವನಾದಯಃ ಸ್ವರ್ಗಾ ಇತ್ಯೇತೇ ಕರ್ಮವರ್ಜಿತಾಃ |
ತೇಷು ಭೋಗಾಃ ಸ್ವಯಂಭೂತಾಃ ಪ್ರದೃಶ್ಯಂತೇ ಯತಸ್ತತಃ ||6||
ಜಂಬೂವನ ಮೊದಲಾದ ಸ್ವರ್ಗಸದೃಶವಾದ ಈ ಪ್ರದೇಶಗಳು ಕರ್ಮ ವರ್ಜಿತವಾಗಿವೆ (ಅಲ್ಲಿ ಪುಣ್ಯ-ಪಾಪ ಕರ್ಮಗಳ ಆಚರಣೆಯಿಲ್ಲ). ಅವುಗಳಲ್ಲಿ ಎಲ್ಲೆಲ್ಲಿಯೂ ಸ್ವಾಭಾವಿಕವಾಗಿಯೇ ಭೋಗಗಳು ಕಂಡುಬರುತ್ತವೆ.
ಯೋಜನಾನಾಂ ಸಹಸ್ರಂ ಚ ಏಕೈಕಂ ಮಾನಮಾತ್ರಯಾ |
ನಿತ್ಯಪುಷ್ಪಫಲೋಪೇತಾಸ್ತತ್ರ ವೃಕ್ಷಾಃ ಸಮಂತತಃ ||7||
ಅವುಗಳಲ್ಲಿ ಒಂದೊಂದು ಪ್ರದೇಶವೂ ಸಹಸ್ರ ಯೋಜನ ವಿಸ್ತಾರವುಳ್ಳದ್ದಾಗಿದೆ. ಅಲ್ಲಿರುವ ವೃಕ್ಷಗಳು ನಿತ್ಯವೂ ಎಲ್ಲ ಕಡೆಗಳಲ್ಲಿಯೂ ಪುಷ್ಪ-ಫಲಭರಿತವಾಗಿರುತ್ತವೆ.
ಆಸಕ್ತವಸನಾಭರಣಾಃ ಸರ್ವೇ ಕನಕಸನ್ನಿಭಾಃ |
ದ್ವಿರೇಫಾಶ್ಚಾಂಡಜಾಸ್ತತ್ರ ಪ್ರವಾಳಮಣಿಸನ್ನಿಭಾಃ |
ವಿಚಿತ್ರಾಶ್ಚ ಮನೋಜ್ಞಾಶ್ಚ ಕೂಜಿತೈಃ ಶೋಭಯಂತಿ ತಾನ್ ||8||
ಸುವರ್ಣವರ್ಣಸದೃಶರಾದ ಸ್ತ್ರೀ-ಪುರುಷರೆಲ್ಲರೂ ವಸನಾಭರಣಗಳಿಂದ ಅಲಂಕೃತರಾಗಿರುತ್ತಾರೆ. ದುಂಬಿಗಳು ಮತ್ತು ಪಕ್ಷಿಗಳು ಹವಳ ಮತ್ತು ಮಣಿಗಳಂತೆ ಹೊಳೆಯುತ್ತಿರುತ್ತವೆ. ವಿಚಿತ್ರವಾದ ತಮ್ಮ ನಾದಗಳಿಂದ ಆ ಪ್ರದೇಶಗಳಿಗೆ ಶೋಭೆಯನ್ನುಂಟು ಮಾಡುತ್ತಿರುತ್ತವೆ.
ಕುಶೇಶಯವನೈಚ್ಛನ್ನಾ ನಳಿನ್ಯಶ್ಚ ಮನೋರಮಾಃ |
ತತ್ರ ವಾಂತ್ಯನಿಲಾ ನಿತ್ಯಂ ದಿವ್ಯಗಂಧಾಃ ಸುಖಾವಹಾಃ ||9||
ಕಮಲಸರೋವರಗಳು ಕಮಲವನಗಳಿಂದ ಆವರಿಸಲ್ಪಟ್ಟು ಮನೋಹರ- ವಾಗಿರುತ್ತವೆ. ಅಲ್ಲಿ ವಾಯುವು ದಿವ್ಯಗಂಧವನ್ನೂ,

ಸುಖಸ್ಪರ್ಶವನ್ನೂ ಹೊಂದಿ ನಿತ್ಯವೂ ಬೀಸುತ್ತದೆ.
ಸರ್ವೇ ಚಾಮ್ಲಾನಮಾಲ್ಯಾಶ್ಚ ವಿರಜೋಂಬರಸಂವೃತಾಃ |
ಏವಂ ಬಹುವಿಧಾ ದೇವಿ ದಿವಿ ಭೋಗಾಃ ಸುಖಾವಹಾಃ ॥10॥
ಎಲ್ಲರೂ ಬಾಡದ ಹೂಮಾಲೆಗಳನ್ನೂ, ನಿರ್ಮಲವಾದ ವಸ್ತ್ರಗಳನ್ನೂ ಧರಿಸಿರುತ್ತಾರೆ. ದೇವಿಯೇ, ಹೀಗೆ ಆ ಪ್ರದೇಶಗಳಲ್ಲಿ ಸುಖವನ್ನು ತರುವ ಅನೇಕ ಭೋಗಗಳಿವೆ.
ಸ್ತ್ರಿಯಶ್ಚ ಪುರುಷಾಶ್ಚೈವ ಸರ್ವೇ ಸುಕೃತಕಾರಿಣಃ |
ರಮಂತೇ ತತ್ರ ಚಾನ್ಯೋನ್ಯಂ ಕಾಮರಾಗಸಮನ್ವಿತಾಃ |
ದಿವ್ಯಭೂಷಣಸಂಯುಕ್ತಾ ದಿವ್ಯಗಂಧಸಮನ್ವಿತಾಃ ॥11॥
ಸುಕೃತವನ್ನು ಮಾಡಿದ ಸ್ತ್ರೀ-ಪುರುಷರೆಲ್ಲರೂ ಅಲ್ಲಿ ಅನ್ಯೋನ್ಯವಾಗಿ ಕಾಮ- ರಾಗದಿಂದ ಕೂಡಿ ದಿವ್ಯಭೂಷಣಗಳಿಂದಲೂ ಮತ್ತು ದಿವ್ಯಗಂಧಗಳಿಂದಲೂ ಅಲಂಕೃತರಾಗಿ ಸುಖವನ್ನು ಅನುಭವಿಸುತ್ತಾರೆ.
ಮನೋರಮಾ ಮಹಾಭಾಗಾಃ ಸರ್ವೇ ಲಲಿತಕುಂಡಲಾಃ |
ಏವಂ ತತ್ರಾಗತಾ ಮರ್ತ್ಯಾಃ ಪ್ರಮದಾಃ ಪ್ರಿಯದರ್ಶನಾಃ ॥12॥
ಅಲ್ಲಿಗೆ ಬಂದ ಸ್ತ್ರೀಯರು ಮತ್ತು ಪುರುಷರೆಲ್ಲರೂ ನೋಡಲು ಮನೋಹರರಾಗಿದ್ದು, ಮಹಾಭಾಗ್ಯವಂತರಾಗಿ ಒಳ್ಳೆಯ ಕರ್ಣ-ಕುಂಡಲಗಳನ್ನು ಧರಿಸಿರುತ್ತಾರೆ.
ನಾನಾಭಾವಸಮಾಯುಕ್ತಾ ಯೌವನಸ್ಥಾಃ ಸದೈವ ತು |
ಕಮನೀಯಾಃ ಕಾಮಯುತಾಃ ಕಾಮಜ್ಞಾ ಲಲಿತಾಸ್ತಥಾ ॥13॥
ನಾನಾ ಅಭಿಪ್ರಾಯವನ್ನು ಹೊಂದಿ, ಯಾವಾಗಲೂ ಯೌವನಸ್ಥರಾಗಿ, ಸುಂದರರಾಗಿ, ಕಾಮವನ್ನು ತಿಳಿದು ಕಾಮಯುಕ್ತರಾಗಿ ಲಲಿತರಾಗಿರುತ್ತಾರೆ.
ಮನೋನುಕೂಲಾ ಮಧುರಾ ಭೋಗಿನಾಮುಪಕಲ್ಪಿತಾಃ |
ಪ್ರಮದಾಶ್ಚೋದ್ಭವಂತ್ಯೇವ ಸ್ವರ್ಗಲೋಕೇ ಯಥಾ ತಥಾ ॥14॥
ಸ್ತ್ರೀಯರು ಸ್ವರ್ಗಲೋಕದಲ್ಲಿರುವಂತೆ ಪುರುಷರ ಮನಸ್ಸಿಗೆ ಅನುಕೂಲವಾಗಿ, ಮಧುರವಾಗಿ ಭೋಗಿಗಳಾದ ಅವರಿಗೆ ಸಹಾಯಕರಾಗಿರುತ್ತಾರೆ.
ಏವಂವಿಧಾಃ ಸ್ತ್ರಿಯಶ್ಚಾತ್ರ ಪುರುಷಾಶ್ಚ ಪರಸ್ಪರಮ್ |
ರಮಂತೇ ಚೇಂದ್ರಿಯೈಃ ಸ್ವಸ್ಥೈಃ ಶರೀರೈರ್ಭೋಗಸಂಸ್ಕೃತೈಃ ॥15॥
ಈ ರೀತಿಯಲ್ಲಿ ಅಲ್ಲಿ ಇಂತಹ ಸ್ತ್ರೀಯರು ಮತ್ತು ಪುರುಷರು ಶರೀರ ಭೋಗಗಳಿಂದಲೂ, ಒಳ್ಳೆಯ ಇಂದ್ರಿಯಗಳಿಂದಲೂ ಕೂಡಿದವರಾಗಿ ಸಂತೋಷ ಪಡುತ್ತಾರೆ.
ಕಾಮಹರ್ಷೌ ಗುಣಾವಾಸ್ತಾಂ ನಾನ್ಯೇ ಕ್ರೋಧಾದಯಃ ಪ್ರಿಯೇ |
ಕ್ಷುತ್ಪಿಪಾಸಾ ನ ಚಾಸ್ತ್ಯತ್ರ ಗಾತ್ರಕ್ಲೇಶಾಶ್ಚ ಶೋಭನೇ ॥16॥
ಅಲ್ಲಿ ಕಾಮ ಮತ್ತು ಸಂತೋಷ ಗುಣಗಳು ಮಾತ್ರ ಇರುತ್ತವೆ. ಪ್ರಿಯೆಯೇ, ಅಲ್ಲಿ ಕ್ರೋಧಾದಿಗಳು ಇರುವುದಿಲ್ಲ. ಎಲೌ ಶೋಭನೆಯೇ, ಹಸಿವು - ನೀರಡಿಕೆಗಳಾಗಲೀ, ಶರೀರ ಕ್ಲೇಶವಾಗಲೀ ಇರುವುದಿಲ್ಲ.
ಸರ್ವತೋ ರಮಣೀಯಶ್ಚ ಸರ್ವರ್ತುಕುಸುಮಾನ್ವಿತಮ್ |
ಯಾವತ್ಪುಣ್ಯಫಲಂ ತಾವದ್ ರಮಂತೇ ತತ್ರ ಸಂಗತಾಃ |
ನಿರಂತರಂ ಭೋಗಯುತಾ ರಮಂತೇ ಸ್ವರ್ಗವಾಸಿನಃ ॥17॥
ಆ ಪ್ರದೇಶವು ಸರ್ವ ಋತುಗಳಲ್ಲಿಯೂ ಕುಸುಮಭರಿತವಾದ ವೃಕ್ಷಗಳಿಂದ ಎಲ್ಲ ಕಡೆಯಲ್ಲಿಯೂ ರಮಣೀಯವಾಗಿರುತ್ತದೆ. ಅಲ್ಲಿಗೆ ಹೋದ ಜೀವರು ಪುಣ್ಯಫಲ ಇರುವವರೆಗೂ ನಿರಂತರ ಭೋಗಗಳಿಂದ ಕೂಡಿ, ಸ್ವರ್ಗವಾಸಿಗಳಾಗಿ ಸುಖವನ್ನು ಅನುಭವಿಸುತ್ತಾರೆ.
ತತ್ರ ಭೋಗಾನ್ ಯಥಾಯೋಗಂ ಭುಕ್ತ್ವಾ ಪುಣ್ಯಕ್ಷಯಾತ್ ಪುನಃ |
ನಶ್ಯಂತಿ ಜಾಯಮಾನಾಸ್ತೇ ಶರೀರೈಃ ಸಹಸಾ ಪ್ರಿಯೇ ॥18॥
ಪ್ರಿಯೆಯೇ, ಅಲ್ಲಿ ತಮಗೆ ಯೋಗ್ಯವಾದ ಭೋಗಗಳನ್ನು ಅನುಭವಿಸಿ ಅನಂತರ ಪುಣ್ಯಕ್ಷಯವನ್ನು ಹೊಂದಿ ಆ ಶರೀರಗಳನ್ನು ಬಿಟ್ಟು ತಕ್ಷಣ ಭೂಮಿಯಲ್ಲಿ ಬೇರೆ ಶರೀರಗಳನ್ನು ತೆಗೆದುಕೊಂಡು ಜನಿಸುತ್ತಾರೆ.
ಸ್ವರ್ಗಲೋಕಾತ್ ಪರಿಭ್ರಷ್ಟಾಃ ಜಾಯಂತೇ ಮಾನುಷೇ ಪುನಃ |
ಪೂರ್ವಪುಣ್ಯಾವಶೇಷೇಣ ವಿಶಿಷ್ಟಾಃ ಸಂಭವಂತಿ ತೇ ॥19॥
ಸ್ವರ್ಗಲೋಕದಿಂದ ಭ್ರಷ್ಟರಾದ ಜೀವರು ಪುನಃ ಮನುಷ್ಯರಾಗಿ ಜನಿಸುತ್ತಾರೆ. ಪೂರ್ವಪುಣ್ಯದ ಅವಶೇಷದಿಂದ ಅಲ್ಲಿಯೂ ಅವರು ಶ್ರೇಷ್ಠರಾಗಿರುತ್ತಾರೆ.
ಏಷಾ ಸ್ವರ್ಗಗತಿಃ ಪ್ರೋಕ್ತಾ ಪೃಚ್ಛಂತ್ಯಾಸ್ತವ ಭಾಮಿನಿ |
ಅತ ಊರ್ಧ್ವಂ ಪದಾನ್ಯಷ್ಟೌ ಕರ್ಮಣ್ಯಾನಿ ಶೃಣು ಪ್ರಿಯೇ |
ಭೋಗಯುಕ್ತಾನಿ ಪುಣ್ಯಾನಿ ಉಚ್ಛ್ರಿತಾನಿ ಪರಸ್ಪರಮ್ ॥20॥
ಭಾಮಿನಿಯೇ, ನಿನ್ನ ಪ್ರಶ್ನೆಗೆ ಉತ್ತರವಾಗಿ ಈ ಸ್ವರ್ಗಗತಿಯನ್ನು ಹೇಳಿದೆನು. ಪ್ರಿಯೆಯೇ, ಇದಕ್ಕಿಂತ ಮೇಲ್ಭಾಗದಲ್ಲಿ ಕರ್ಮಪ್ರಾಪ್ಯವಾದ ಭೋಗಯುಕ್ತವಾದ ಪುಣ್ಯಕರವಾದ ಒಂದಕ್ಕಿಂತ ಒಂದು ಎತ್ತರವಾದ ಎಂಟು ಸ್ಥಾನಗಳಿವೆ.
ವಿದ್ಯಾಧರಾಃ ಕಿಂಪುರುಷಾ ಯಕ್ಷಗಂಧರ್ವಕಿನ್ನರಾಃ |
ಅಪ್ಸರೋ ದಾನವಾ ದೇವಾ ಯಥಾಕ್ರಮಮುದಾಹೃತಾಃ ॥21॥

ಅಲ್ಲಿ ಕ್ರಮವಾಗಿ ವಿದ್ಯಾಧರರೂ, ಕಿಂಪುರುಷರೂ, ಯಕ್ಷರೂ, ಗಂಧರ್ವರೂ, ಕಿನ್ನರರೂ, ಅಪ್ಸರೆಯರೂ, ದಾನವರೂ ಮತ್ತು ದೇವತೆಗಳು ವಾಸಿಸುತ್ತಾರೆ.
ತೇಷು ಸ್ಥಾನೇಷು ಜಾಯಂತೇ ಪ್ರಾಣಿನಃ ಪುಣ್ಯಕರ್ಮಿಣಃ |
ತೇಷಾಮಪಿ ಚ ಯೇ ಲೋಕಾಃ ಸ್ವರ್ಗಲೋಕೋಪಮಾಃ ಸ್ಮೃತಾಃ ||22||
ಪುಣ್ಯಕರ್ಮವನ್ನು ಮಾಡಿದವರು ಆ ಸ್ಥಾನಗಳಲ್ಲಿ ಜನಿಸುತ್ತಾರೆ. ಅವರ ಆ ಲೋಕಗಳೂ ಸಹ ಸ್ವರ್ಗಲೋಕದಂತೆಯೇ ಇರುತ್ತವೆ.
ಸ್ವರ್ಗವತ್ ತತ್ರ ತೇ ಭೋಗಾನ್ ಭುಂಜತೇ ಚ ರಮಂತಿ ಚ |
ರೂಪಸತ್ವಬಲೋಪೇತಾಃ ಸರ್ವೇ ದೀರ್ಘಾಯುಷಸ್ತಥಾ ||23||
ಸ್ವರ್ಗಲೋಕದಲ್ಲಿರುವಂತೆಯೇ ಅವರು ಅಲ್ಲಿ ಭೋಗಗಳನ್ನು ಭೋಗಿಸಿ ಸಂತೋಷಪಡುತ್ತಾರೆ. ಎಲ್ಲರೂ ರೂಪ, ಧೈರ್ಯ, ಬಲಗಳಿಂದ ಕೂಡಿದವರಾಗಿ ದೀರ್ಘಾಯುಷಿಗಳಾಗಿರುತ್ತಾರೆ.
ತೇಷಾಂ ಸರ್ವಕ್ರಿಯಾರಂಭೋ ಮಾನುಷೇಷ್ವೇವ ದೃಶ್ಯತೇ |
ಅತಿಮಾನುಷಮಾಶ್ಚರ್ಯಮಸ್ತ್ರಮಾಯಾಬಲಾತ್ಕೃತಮ್ ||24||
ಅವರೂ ಸಹ ತಾವು ಮನುಷ್ಯರಾಗಿದ್ದಾಗಲೇ ಇಂತಹ ಲೋಕಸಂಪಾದಕವಾದ ಎಲ್ಲಾ ಕ್ರಿಯೆಗಳನ್ನೂ ಮಾಡಿರುತ್ತಾರೆ. ಅವರಿಗೆ ಅಸ್ತ್ರಬಲ ಮತ್ತು ಮಾಯಾಬಲದಿಂದ ಉಂಟಾದ, ಅತಿಮಾನುಷವಾದ, ಆಶ್ಚರ್ಯಕರವಾದ ಶಕ್ತಿ ಇರುತ್ತದೆ.
ಜರಾಪ್ರಸೂತಿಮರಣಂ ತೇಷು ಸ್ಥಾನೇಷು ದೃಶ್ಯತೇ |
ಗುಣದೋಷಾಶ್ಚ ಸಂತ್ಯತ್ರ ಆಕಾಶಗಮನಂ ತಥಾ ||25||
ಆ ಸ್ಥಾನಗಳಲ್ಲಿ ಮುಪ್ಪು-ಜನನ ಮತ್ತು ಮರಣಗಳು ಕಂಡುಬರುತ್ತವೆ. ಅಲ್ಲಿ ಗುಣಗಳು, ದೋಷಗಳು, ಆಕಾಶ ಸಂಚಾರವೂ ಇರುತ್ತದೆ.
ಅಂತರ್ಧಾನಂ ಬಲಂ ಸರ್ವಮಾಯುಶ್ಚ ಚಿರಜೀವನಮ್ |
ತಪೋವಿಶೇಷಾಜ್ಜಾಯಂತೇ ಯಥಾ ಕರ್ಮಾಣಿ ಭಾಮಿನಿ ||26||
ಎಲೌ ಭಾಮಿನಿಯೇ, ಅಂತರ್ಧಾನಶಕ್ತಿ, ಬಲ, ಪೂರ್ಣವಾದ ಆಯುಸ್ಸು, ಚಿರಜೀವನ- ಇವೆಲ್ಲವೂ ಅವರು ಮಾಡಿದ ಕರ್ಮಕ್ಕನುಗುಣವಾಗಿ ತಪೋವಿಶೇಷದಿಂದ ಉಂಟಾಗುತ್ತವೆ.
ದೇವಲೋಕಪ್ರವೃತ್ತಿಸ್ತು ತೇಷಾಮೇವ ವಿಧೀಯತೇ |
ನ ತಥಾ ದೇವಲೋಕೋ ಹಿ ತದ್ವಿಶಿಷ್ಟಾಃ ಸುರಾಃ ಸ್ಮೃತಾಃ ||27||
ದೇವಲೋಕ ಪ್ರವೃತ್ತಿಯು ದೇವತೆಗಳಿಗೆ ಮಾತ್ರ ಹೇಳಲ್ಪಡುತ್ತದೆ. ದೇವಲೋಕವು ಆ ರೀತಿಯಲ್ಲಿ ಜರಾ-ಮರಣಗಳಿಂದ ಕೂಡಿರುವುದಿಲ್ಲ. ಆದ್ದರಿಂದ ದೇವತೆಗಳನ್ನು ಶ್ರೇಷ್ಠರಾದವರು ಎಂದು ಹೇಳುತ್ತಾರೆ.
ತತ್ರ ಭೋಗಮನಿರ್ದೇಶ್ಯಮಮೃತತ್ವಂ ಚ ವಿದ್ಯತೇ |
ವಿಮಾನಗಮನಂ ನಿತ್ಯಮಪ್ಸರೋಗಣಸೇವಿತಮ್ ||28||
ಅಲ್ಲಿ ಶಬ್ದದಿಂದ ನಿರ್ದೇಶ ಮಾಡಲು ಸಾಧ್ಯವಿಲ್ಲದ ಭೋಗವೂ, ಅಮೃತತ್ವವೂ ಇರುತ್ತದೆ. ನಿತ್ಯವೂ ವಿಮಾನ ಸಂಚಾರವೂ ಮತ್ತು ಅಪ್ಸರೆಯರಗಣದಿಂದ ಸೇವೆಯೂ ಇರುತ್ತದೆ.
ಏವಮನ್ಯಚ್ಚ ತತ್ಕರ್ಮ ದೇವತಾಭ್ಯೋ ವಿಶಿಷ್ಯತೇ |
ಪ್ರತ್ಯಕ್ಷಂ ತವ ತತ್ಸರ್ವಂ ದೇವಲೋಕಪ್ರವರ್ತನಮ್ ||29||
ಈ ರೀತಿಯಲ್ಲಿ ದೇವತೆಗಳಿಗೆ ಅಂತಹ ವಿಶಿಷ್ಟವಾದ ಕರ್ಮಗಳಿರುತ್ತವೆ. ದೇವಲೋಕದ ಪ್ರವೃತ್ತಿಯೆಲ್ಲವೂ ನಿನಗೆ ಪ್ರತ್ಯಕ್ಷವಾದುದು.
ತಸ್ಮಾನ್ನ ವರ್ಣಯೇ ದೇವಿ ವಿದಿತಂ ಚ ತ್ವಯಾ ಶುಭೇ |
ತತ್ಸರ್ವಂ ಸುಕೃತೇನೈವ ಪ್ರಾಪ್ಯತೇ ಚೋತ್ತಮಂ ಪದಮ್ ||30||
ದೇವಿಯೇ, ಆದ್ದರಿಂದ ಅದನ್ನು ನಾನು ವರ್ಣಿಸುವುದಿಲ್ಲ. ಶುಭಳೇ, ನಿನಗೆ ಅದೆಲ್ಲವೂ ತಿಳಿದಿದೆ. ಆ ಉತ್ತಮ ಸ್ಥಾನಗಳೆಲ್ಲವೂ ಪುಣ್ಯಕರ್ಮಗಳಿಂದಲೇ ಹೊಂದಲ್ಪಡುತ್ತವೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಸುಕೃತಿಲೋಕವರ್ಣನಂ ನಾಮ ಪಂಚವಿಂಶೋತ್ತರಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತೈದನೆಯ
ಅಧ್ಯಾಯ ಮುಗಿಯಿತು.
* * * * *

ಇನ್ನೂರ ಇಪ್ಪತ್ತಾರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಮಾನುಷರಾಗಿದ್ದಾಗಲೇ ಮುಂದಿನ
ಶುಭಾಶುಭಗತಿಯ ಸೂಚನೆಯ ಕಥನ.
ಉಮಾ
ಮಾನುಷೇಷ್ವೇವ ಜೀವತ್ಸು ಗತಿರ್ವಿಜ್ಞಾಯತೇ ನ ವಾ |
ಯಥಾ ಶುಭಗತಿರ್ಜೀವೋ ನಾಸೌ ತ್ವಶುಭಭಾಗಿತಿ ||1||
ಏತದಿಚ್ಛಾಮ್ಯಹಂ ಶ್ರೋತುಂ ತನ್ಮೇ ಶಂಸಿತುಮರ್ಹಸಿ ||2||
ಉಮಾ ಮನುಷ್ಯರಾಗಿ ಬದುಕಿದ್ದಾಗಲೇ ಇವನು ಶುಭಗತಿಯನ್ನು ಹೊಂದುವವನು, ಇವನು ಅಶುಭಗತಿಯನ್ನು ಹೊಂದುವವನು ಎಂದು ಅವರಿಗೆ ಮುಂದೆ ಒದಗುವ ಗತಿಯು ತಿಳಿಯುವುದೇ ಇಲ್ಲವೆ? ಇದನ್ನು ತಿಳಿಯಲು ಬಯಸುತ್ತೇನೆ. ಇದನ್ನು ನನಗೆ ಹೇಳಬೇಕು.
ಮಹೇಶ್ವರಃ

ತದಹಂ ತೇ ಪ್ರವಕ್ಷ್ಯಾಮಿ ಜೀವತಾಂ ವಿದ್ಯತೇ ಯಥಾ |
ದ್ವಿವಿಧಾಃ ಪ್ರಾಣಿನೋ ಲೋಕೇ ದೈವಮಾಸುರಮಾಶ್ರಿತಾಃ ॥3॥
ಮಹೇಶ್ವರ ಬದುಕಿರುವಾಗಲೇ ಹೇಗೆ ತಿಳಿಯುತ್ತದೆ ಎಂಬುದನ್ನು ನಾನು ನಿನಗೆ ಹೇಳುವೆನು. ಲೋಕದಲ್ಲಿ ಪ್ರಾಣಿಗಳು ದೈವ ಅಥವಾ ಆಸುರಭಾವವನ್ನು ಹೊಂದಿ ಎರಡು ವಿಧವಾಗಿರುತ್ತಾರೆ.
ಮನಸಾ ಕರ್ಮಣಾ ವಾಚಾ ಪ್ರತಿಕೂಲಾ ಭವಂತಿ ಯೇ |
ತಾದೃಶಾನಾಸುರಾನ್ ವಿದ್ಧಿ ಮರ್ತ್ಯಾಸ್ತೇ ನರಕಾಲಯಾಃ ॥4॥
ಯಾವ ಮನುಷ್ಯರು ಮನಸ್ಸಿನಿಂದಲೂ, ಕರ್ಮದಿಂದಲೂ ಮತ್ತು ಮಾತಿನಿಂದಲೂ ಇನ್ನೊಬ್ಬರಿಗೆ ಪ್ರತಿಕೂಲವನ್ನು ಮಾಡುತ್ತಾರೆಯೋ ಅಂತಹವರನ್ನು ನರಕದಲ್ಲಿ ವಾಸಿಸಲಿರುವ ಅಸುರರೆಂದು ತಿಳಿ.
ರಾಗದ್ವೇಷಯುತಾ ಯೇ ತು ನಿರ್ಲಜ್ಜಾ ನಿರಪತ್ರಪಾಃ |
ದರ್ಪಾಹಂಕಾರಸಂಯುಕ್ತಾ ನರಾ ನರಕಗಾಮಿನಃ ॥5॥
ರಾಗ-ದ್ವೇಷಯುಕ್ತರಾಗಿ, ನಾಚಿಕೆ ಮತ್ತು ಮಾನವನ್ನು ತೊರೆದು, ದರ್ಪಾಹಂಕಾರದಿಂದ ಕೂಡಿರುವ ಮನುಷ್ಯರು ನರಕಕ್ಕೆ ಹೋಗುವರು.
ನಾಸ್ತಿಕಾಶ್ಚ ಶಠಾ ಘೋರಾಃ ಪರೇಷಾಮುಪತಾಪಿನಃ |
ಯಥೇಷ್ಟವೃತ್ತಯಶ್ಚೈವ ನರಾ ನರಕಗಾಮಿನಃ ॥6॥
ನಾಸ್ತಿಕರು, ಶಠರು (ಹಠಮಾರಿಗಳು), ಕ್ರೂರಿಗಳು, ಇನ್ನೊಬ್ಬರಿಗೆ ಹಿಂಸೆಯನ್ನು ಕೊಡುವವರು, ಮನಸ್ಸಿಗೆ ಬಂದಂತೆ ನಡೆದುಕೊಳ್ಳುವವರು- ಇಂತಹ ಮನುಷ್ಯರು ನರಕಕ್ಕೆ ಹೋಗುವವರು.
ದುಷ್ಪ್ರತೀಪಮನಾ ಯಸ್ತು ಚಲಚಿತ್ತೋ ನಿರಾಕೃತಿಃ |
ಶಿಶ್ನೋದರರತಿರ್ಮೂಢೋ ನಿರಯಂ ಯಾತಿ ಸೋಽಧಮಃ ॥7॥
ಇನ್ನೊಬ್ಬರಿಗೆ ದುಃಖವನ್ನು ಕೊಡಲು ಮತ್ತು ಪ್ರತೀಕಾರವನ್ನು ಮಾಡಲು ಚಿಂತಿಸುತ್ತಾ ಯಾವನು ಚಂಚಲಚಿತ್ತನಾಗಿ, ತನಗೆ ವಿದ್ಯಾದಿ ಯಾವ ಆಕಾರವೂ ಇಲ್ಲದೆ ಕೇವಲ ಶಿಶ್ನೋದರರತನಾಗಿರುತ್ತಾನೆಯೋ ಅಂತಹ ಮೂಢನಾದ ಅಧಮನು ನರಕಕ್ಕೆ ಹೋಗುತ್ತಾನೆ.
ಮಾಂಸಪಾನಪ್ರಿಯಾ ನಿತ್ಯಂ ಕಠೋರಾ ನೀಚವೃತ್ತಯಃ |
ತಾದೃಶಾನಾಸುರಾನ್ ವಿದ್ಧಿ ಸರ್ವೇ ತೇ ನರಕಾಲಯಾಃ ॥8॥
ಮಾಂಸ-ಮದ್ಯ ಪ್ರಿಯರಾಗಿ, ಕಠೋರರಾಗಿ, ನೀಚ ನಡತೆಯನ್ನು ಹೊಂದಿದವರನ್ನು ಅಸುರರೆಂದು ತಿಳಿ. ಅವರೆಲ್ಲಾ ನರಕಕ್ಕೆ ಹೋಗುವರು.
ಹಿಂಸಾವಿಹಾರಾ ಯೇ ನಿತ್ಯಂ ನಿರ್ದಯಾಃ ಪ್ರಾಣಿನಾಶನೇ |
ಸ್ವಧರ್ಮವಿಮುಖಾಶ್ಚೈವ ಪರಸ್ವೇಷ್ವಭಿಕಾಂಕ್ಷಿಣಃ ॥9॥
ಯುದ್ಧಮಾತ್ಸರ್ಯಸಂಯುಕ್ತಾ ಗ್ರಾಮ್ಯಭೋಗಪರಾಯಣಾಃ |
ತಾದೃಶಾನಾಸುರಾನ್ ವಿದ್ಧಿ ನರಾನ್ನರಕಗಾಮಿನಃ ॥10॥
ಯಾರಿಗೆ ನಿತ್ಯವೂ ಹಿಂಸೆಯೇ ವಿಹಾರವೋ, ಪ್ರಾಣಿವಧೆಯ ವಿಷಯದಲ್ಲಿ ನಿರ್ದಯರೋ, ಸ್ವಧರ್ಮದಿಂದ ವಿಮುಖರೋ, ಇನ್ನೊಬ್ಬರ ಸ್ವತ್ತನ್ನು ಅಪೇಕ್ಷಿಸುವವರೋ, ಯುದ್ಧ ಮತ್ತು ಮಾತ್ಸರ್ಯದಿಂದ ಕೂಡಿರುವವರೋ, ಗ್ರಾಮ್ಯ ಭೋಗದಲ್ಲೇ ಆಸಕ್ತರೋ ಅಂತಹ ಮನುಷ್ಯರನ್ನು ನರಕಕ್ಕೆ ಹೋಗುವ ಅಸುರರೆಂದು ತಿಳಿ.
ದರ್ಪೋರ್ತ್ನೇಕಸಮಾಯುಕ್ತಾ ಮೂರ್ಖಾಸ್ತತ್ತ್ವಬಹಿಷ್ಕೃತಾಃ |
ಶ್ರುತಿವಿದ್ವೇಷಿಣೋ ನಿತ್ಯಂ ತೇ ನರಾ ನರಕಾಲಯಾಃ ॥11॥
ದರ್ಪ-ಅಹಂಕಾರಗಳಿಂದ ಕೂಡಿ ಮೂರ್ಖರಾಗಿ, ತತ್ತ್ವಜ್ಞಾನದಿಂದ ದೂರರಾಗಿ ನಿತ್ಯವೂ ವೇದವನ್ನು ದ್ವೇಷಿಸುವ ಮನುಷ್ಯರು ನರಕಕ್ಕೆ ಹೋಗುವರು.
ನಿತ್ಯಂ ವದಂತಿ ಯೇ ಮೋಹಾದನೃತಂ ಕಟುಕಂ ವಚಃ |
ಕೃತಘ್ನಾಃ ಪಿಶುನಾ ಘೋರಾ ಭವಂತಿ ನರಕಾಲಯಾಃ ॥12॥
ಯಾರು ನಿತ್ಯವೂ ಮೋಹದಿಂದ ಸುಳ್ಳನ್ನೇ ಮಾತನಾಡುತ್ತಾರೋ ಅಥವಾ ಕ್ರೂರವಾದ ಮಾತುಗಳನ್ನಾಡುತ್ತಾರೋ, ಕೃತಘ್ನರೋ, ಚಾಡಿಕೋರರೋ, ಘೋರರೋ ಅಂತಹವರು ನರಕಕ್ಕೆ ಹೋಗುವರು.
ಹಿಂಸ್ರಾಶ್ಚೋರಾಶ್ಚ ಧೂರ್ತಾಶ್ಚ ಪರದಾರಾಭಿಮರ್ಶಿನಃ |
ನೀಚಕರ್ಮರತಾ ಯೇ ಚ ಶೌಚಮಂಗಲವರ್ಜಿತಾಃ ॥13॥
ಶುಚಿವಿದ್ವೇಷಿಣಃ ಪಾಪಾ ಲೋಕಚಾರಿತ್ರದೂಷಕಾಃ |
ಏವಂ ಯುಕ್ತಸಮಾಚಾರಾ ಜೀವಂತೋ ನರಕಾಲಯಾಃ ॥14॥
ಹಿಂಸಕರು, ಚೋರರು, ಧೂರ್ತರು, ಪರಸ್ತ್ರೀಗಾಮಿಗಳು, ನೀಚಕರ್ಮರತರು, ಶೌಚಮಂಗಳಹೀನರು, ಶೌಚವನ್ನು ದ್ವೇಷಿಸುವವರು, ಪಾಪವನ್ನು ಮಾಡುವವರು, ಲೋಕದ ನಡತೆಯನ್ನು ದೂಷಿಸುವವರು- ಇಂತಹ ಆಚಾರದಿಂದ ಕೂಡಿ ಜೀವಿಸುವ ಮನುಷ್ಯರು ನರಕಕ್ಕೆ ಹೋಗುವರು.
ಲೋಕೋದ್ವೇಗಕರಾಶ್ಚಾನ್ಯೇ ಪಶವಶ್ಚ ಸರೀಸೃಪಾಃ |
ವೃಕ್ಷಾಃ ಕಂಟಕಿನೋ ರೂಕ್ಷಾಸ್ತಾದೃಶಾನ್ ವಿದ್ಧಿ ಚಾಸುರಾನ್ ॥15॥
ಇನ್ನು ಲೋಕಕ್ಕೆ ಭಯವನ್ನುಂಟು ಮಾಡುವ ಬೇರೆ ಪಶುಗಳು, ಸರ್ಪಗಳು, ಮುಳ್ಳಿನ ವೃಕ್ಷಗಳು ಅಂತಹವುಗಳನ್ನು ಅಸುರರೆಂದು ತಿಳಿ.

ಅಪರಾನ್ ದೇವಪಕ್ಷಾಂಸ್ತು ಶೃಣು ದೇವಿ ಸಮಾಹಿತಾ ॥16॥
ದೇವಿಯೇ, ಇದಕ್ಕಿಂತ ಭಿನ್ನವಾದ ದೇವಪಕ್ಷದವರನ್ನು ಸಮಾಧಾನದಿಂದ ಕೇಳು.
ಮನೋವಾಕ್ಕರ್ಮಭಿರ್ನಿತ್ಯಮನುಕೂಲಾ ಭವಂತಿ ಯೇ |
ತಾದೃಶಾನಮರಾನ್ ವಿದ್ಧಿ ತೇ ನರಾಃ ಸ್ವರ್ಗಗಾಮಿನಃ ॥17॥
ಯಾರು ತಮ್ಮ ಮನೋ-ವಾಕ್-ಕಾಯಕರ್ಮಗಳಿಂದ ನಿತ್ಯವೂ ಇನ್ನೊಬ್ಬರಿಗೆ ಅನುಕೂಲವನ್ನು ಮಾಡುತ್ತಾರೆಯೋ ಅಂತಹವರನ್ನು ದೇವತೆಗಳೆಂದು ತಿಳಿ. ಅಂತಹ ಮನುಷ್ಯರು ಸ್ವರ್ಗಕ್ಕೆ ಹೋಗುವರು.
ಶೌಚಾರ್ಜವಪರಾಧೀನಾಃ ಪರಾರ್ಥಂ ನ ಹರಂತಿ ಯೇ |
ಯೇ ಸಮಾಃ ಸರ್ವಭೂತೇಷು ತೇ ನರಾಃ ಸ್ವರ್ಗಗಾಮಿನಃ ॥18॥
ಶೌಚ ಮತ್ತು ಋಜುತನದಿಂದ ಕೂಡಿದ ಯಾರು ಇನ್ನೊಬ್ಬರ ಸ್ವತ್ತನ್ನು ಅಪಹರಿಸುವುದಿಲ್ಲವೋ ಮತ್ತು ಸರ್ವಭೂತಗಳಲ್ಲಿಯೂ ಸಮಾನರಾಗಿರುತ್ತಾರೆಯೋ ಅಂತಹ ಮನುಷ್ಯರು ಸ್ವರ್ಗಗಾಮಿಗಳು.
ಭಯಾದ್ವಾ ವೃತ್ತಿಹೇತೋರ್ವಾ ಅನೃತಂ ನ ಬ್ರುವಂತಿ ಯೇ |
ಸತ್ಯಂ ವದಂತಿ ಸತತಂ ತೇ ನರಾಃ ಸ್ವರ್ಗಗಾಮಿನಃ ॥19॥
ಭಯದಿಂದಾಗಲೀ, ಜೀವನೋಪಾಯದ ಸಲುವಾಗಿಯಾಗಲೀ ಯಾರು ಅನೃತವನ್ನು (ಸುಳ್ಳು) ಮಾತನಾಡುವುದಿಲ್ಲವೋ, ಸತತವಾಗಿ ಸತ್ಯವನ್ನೇ ನುಡಿಯುತ್ತಾರೆಯೋ ಅಂತಹ ಮನುಷ್ಯರು ಸ್ವರ್ಗಗಾಮಿಗಳು.
ಧಾರ್ಮಿಕಾಃ ಶೌಚಸಂಪನ್ನಾಃ ಶುಕ್ಲಾ ಮಧುರವಾದಿನಃ |
ನಾಕಾರ್ಯಂ ಮನಸೇಚ್ಛಂತಿ ತೇ ನರಾಃ ಸ್ವರ್ಗಗಾಮಿನಃ ॥20॥
ಧಾರ್ಮಿಕರೂ, ಶೌಚಸಂಪನ್ನರೂ, ಶುದ್ಧರೂ, ಮಧುರ ಭಾಷಿಗಳೂ, ಅಕಾರ್ಯವನ್ನು ಮನಸ್ಸಿನಲ್ಲಿಯೂ ಇಚ್ಛಿಸದವರೂ ಆದ ನರರು ಸ್ವರ್ಗಗಾಮಿಗಳು.
ದರಿದ್ರಾ ಅಪಿ ಯೇ ಕೇಚಿದ್ ಯಾಚಿತಾಃ ಪ್ರೀತಿಪೂರ್ವಕಮ್ |
ದದತ್ಯೇವ ಚ ಯತ್ಕಿಂಚಿತ್ ತೇ ನರಾಃ ಸ್ವರ್ಗಗಾಮಿನಃ ॥21॥
ಯಾರು ತಾವು ದರಿದ್ರರಾದರೂ ಇನ್ನೊಬ್ಬರು ಯಾಚಿಸಿದಾಗ ಪ್ರೀತಿ ಪೂರ್ವಕವಾಗಿ ಏನನ್ನಾದರೂ ಕೊಟ್ಟೇ ಕೊಡುತ್ತಾರೆಯೋ ಅಂತಹ ಮನುಷ್ಯರು ಸ್ವರ್ಗಗಾಮಿಗಳು.
ಆಸ್ತಿಕಾ ಮಂಗಲಪರಾಃ ಸತತಂ ವೃದ್ಧಸೇವಿನಃ |
ಪುಣ್ಯಕರ್ಮಪರಾ ನಿತ್ಯಂ ತೇ ನರಾಃ ಸ್ವರ್ಗಗಾಮಿನಃ ॥22॥
ಆಸ್ತಿಕರೂ, ಮಂಗಳಪರರೂ, ಸತತವಾಗಿ ಹಿರಿಯರನ್ನು ಸೇವಿಸುವವರೂ, ನಿತ್ಯವೂ ಪುಣ್ಯಕರ್ಮರತರೂ ಆದ ನರರು ಸ್ವರ್ಗಗಾಮಿಗಳು.
ವ್ರತಿನೋ ದಾನಶೀಲಾಶ್ಚ ಸುಖಶೀಲಾಶ್ಚ ಮಾನವಾಃ |
ಋಜವೋ ಮೃದವೋ ನಿತ್ಯಂ ತೇ ನರಾಃ ಸ್ವರ್ಗಗಾಮಿನಃ ॥23॥
ವ್ರತವನ್ನು ಆಚರಿಸುವವರು, ದಾನಶೀಲರು, ಸುಖಶೀಲರು, ಋಜು (ಸರಳ) ಸ್ವಭಾವದವರು, ಮೃದುಗಳು ಆದ ಮನುಷ್ಯರು ಸ್ವರ್ಗಗಾಮಿಗಳು.
ಗುರುಶುಶ್ರೂಷಣಪರಾ ದೇವಬ್ರಾಹ್ಮಣಪೂಜಕಾಃ |
ಕೃತಜ್ಞಾಃ ಕೃತವಿದ್ಯಾಶ್ಚ ತೇ ನರಾಃ ಸ್ವರ್ಗಗಾಮಿನಃ ॥24॥
ಗುರುಶುಶ್ರೂಷೆಯಲ್ಲಿ ರತರಾದವರು, ದೇವ-ಬ್ರಾಹ್ಮಣ ಪೂಜಕರು, ಕೃತಜ್ಞರೂ, ವಿದ್ಯಾಸಂಪನ್ನರೂ ಆದ ಮನುಷ್ಯರು ಸ್ವರ್ಗಗಾಮಿಗಳು.
ಜಿತೇಂದ್ರಿಯಾ ಜಿತಕ್ರೋಧಾ ಜಿತಮಾನಮದಸ್ಪೃಹಾಃ |
ಲೋಭಮಾತ್ಸರ್ಯಹೀನಾ ಯೇ ತೇ ನರಾಃ ಸ್ವರ್ಗಗಾಮಿನಃ ॥25॥
ಇಂದ್ರಿಯಗಳನ್ನು ಜಯಿಸಿ, ಕ್ರೋಧವನ್ನು ಜಯಿಸಿ, ಮಾನ, ಮದ ಮತ್ತು ಆಸೆಗಳನ್ನು ಜಯಿಸಿ, ಲೋಭ-ಮಾತ್ಸರ್ಯಗಳಿಂದ ರಹಿತರಾದ ಜನರು ಸ್ವರ್ಗಗಾಮಿಗಳು.
ನಿರ್ಮಮಾ ನಿರಹಂಕಾರಾಃ ಸಾನುಕ್ರೋಶಾಃ ಸ್ವಬಂಧುಷು |
ದೀನಾನುಕಂಪಿನೋ ನಿತ್ಯಂ ತೇ ನರಾಃ ಸ್ವರ್ಗಗಾಮಿನಃ ॥26॥
ಅಹಂಕಾರ-ಮಮಕಾರಗಳನ್ನು ತ್ಯಜಿಸಿ, ತಮ್ಮ ಬಂಧುಗಳಲ್ಲಿ ದಯೆಯನ್ನು ಹೊಂದಿ, ದೀನರ ವಿಷಯದಲ್ಲಿ ಯಾವಾಗಲೂ ಅನುಕಂಪವನ್ನು ಹೊಂದಿರುವ ಮನುಷ್ಯರು ಸ್ವರ್ಗಗಾಮಿಗಳು.
ಐಹಿಕೇನ ತು ವೃತ್ತೇನ ಪಾರತ್ರಮನುಮೀಯತೇ |
ಏವಂವಿಧಾ ನರಾ ಲೋಕೇ ಜೀವಂತಃ ಸ್ವರ್ಗಗಾಮಿನಃ ॥27॥
ಅವರ ಈ ಲೋಕದ ನಡವಳಿಕೆಯಿಂದ ಅವರಿಗೆ ಒದಗಲಿರುವ ಪರಲೋಕವು ಊಹಿಸಲ್ಪಡುತ್ತದೆ. ಲೋಕದಲ್ಲಿ ಈ ರೀತಿಯಲ್ಲಿ ಜೀವಿಸುವ ಮನುಷ್ಯರು ಸ್ವರ್ಗಗಾಮಿಗಳು.
ಯದನ್ಯಚ್ಚ ಶುಭಂ ಲೋಕೇ ಪ್ರಜಾನುಗ್ರಹಕಾರಿ ಚ |
ಪಶವಶ್ಚೈವ ವೃಕ್ಷಾಶ್ಚ ಪ್ರಜಾನಾಂ ಹಿತಕಾರಿಣಃ |
ತಾದೃಶಾನ್ ದೇವಪಕ್ಷಸ್ಥಾನಿತಿ ವಿದ್ಧಿ ಶುಭಾನನೇ ॥28॥

ಎಲೌ ಶುಭಾನನೆಯೇ, ಅಲ್ಲದೇ ಲೋಕದಲ್ಲಿರುವ ಶುಭವಾದ ಪ್ರಜೆಗಳಿಗೆ ಅನುಕೂಲವನ್ನು ಮಾಡುವ, ಪಶುಗಳು ವೃಕ್ಷಗಳು - ಅವುಗಳನ್ನು ದೇವಪಕ್ಷಕ್ಕೆ ಸೇರಿದವು ಎಂದು ತಿಳಿ.
ಶುಭಾಶುಭಮಯಂ ಲೋಕೇ ಸರ್ವಂ ಸ್ಥಾವರಜಂಗಮಮ್ |
ದೈವಂ ಶುಭಮಿತಿ ಪ್ರಾಹುರಾಸುರಂ ಹ್ಯಶುಭಂ ಪ್ರಿಯೇ ॥29॥
ಲೋಕದಲ್ಲಿ ಇರುವ ಸ್ಥಾವರ-ಜಂಗಮವೆಲ್ಲವೂ ಶುಭಾಶುಭಾತ್ಮಕವಾದುವು. ಪ್ರಿಯೆಯೇ, ಶುಭವನ್ನು ದೈವವೆಂದೂ, ಅಶುಭವನ್ನು ಆಸುರವೆಂದೂ ಜ್ಞಾನಿಗಳು ಹೇಳುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಶುಭಾಶುಭಗತ್ಯನುಮಾನಕಥನಂ ನಾಮ ಷಡ್‌ವಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಪ್ರಾಣತ್ಯಾಗವಿಧಿ.
ಉಮಾ
ಭಗವನ್ಮಾನುಷಾಃ ಕೇಚಿತ್‌ಕಾಲಧರ್ಮಮುಪಸ್ಥಿತಾಃ |
ಪ್ರಾಣಮೋಕ್ಷಂ ಕಥಂ ಕೃತ್ವಾ ಪರತ್ರ ಹಿತಮಾಪ್ನುಯುಃ ॥1॥
ಉಮಾ ಪೂಜ್ಯನೇ, ಮರಣವು ಸನ್ನಿಹಿತರಾದ ಮಾನವರು ಹೇಗೆ ಪ್ರಾಣತ್ಯಾಗವನ್ನು ಮಾಡಿದರೆ ಪರಲೋಕದಲ್ಲಿ ಹಿತವನ್ನು ಹೊಂದುವರು?
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಶೃಣು ದೇವಿ ಸಮಾಹಿತಾ |
ದ್ವಿವಿಧಂ ಮರಣಂ ಲೋಕೇ ಸ್ವಭಾವಾದ್ ಯತ್ನತಸ್ತಥಾ ॥2॥
ಮಹೇಶ್ವರ ದೇವಿಯೇ, ಸಂತೋಷ. ನಿನಗೆ ಹೇಳುವೆನು, ಸಮಾಧಾನದಿಂದ ಕೇಳು. ಲೋಕದಲ್ಲಿ ಮರಣವು ಸ್ವಾಭಾವಿಕ ಮತ್ತು ಪ್ರಯತ್ನಜನ್ಯ ಎಂದು ಎರಡು ವಿಧ.
ತಯೋಃ ಸ್ವಭಾವಂ ನಾಪಾಯಂ ಯತ್ನತಃ ಕರಣೋದ್ಭವಮ್ |
ಏತಯೋರುಭಯೋರ್ದೇವಿ ವಿಧಾನಂ ಶೃಣು ಶೋಭನೇ ॥3॥
ಅವುಗಳಲ್ಲಿ ಸ್ವಾಭಾವಿಕ ಮರಣವು ಅಪಾಯಕಾರಿಯಲ್ಲ. ಪ್ರಯತ್ನಜನ್ಯ ಮರಣವು ಬೇರೆ ಸಾಧನಗಳಿಂದ ಉಂಟಾಗುತ್ತದೆ. ಎಲೌ ದೇವಿಯೇ, ಶೋಭನೆಯೇ, ಈ ಎರಡು ಮರಣಗಳ ವಿಧಾನವನ್ನು ಕೇಳು.
ಕಲ್ಯಾಕಲ್ಯಶರೀರಸ್ಯ ಯತ್ನಜಂ ದ್ವಿವಿಧಂ ಸ್ಮೃತಮ್ |
ಯತ್ನಜಂ ನಾಮ ಮರಣಮಾತ್ಮತ್ಯಾಗೋ ಮುಮೂರ್ಷಯಾ ॥4॥
ಶಕ್ತವಾದ ಮತ್ತು ಅಶಕ್ತವಾದ ಶರೀರಕ್ಕೆ ಪ್ರಯತ್ನಜನ್ಯವಾದ ಮರಣವು ಎರಡು ವಿಧವಾದುದು. ಪ್ರಯತ್ನಜನ್ಯವೆಂದರೆ ಮರಣವನ್ನು ಹೊಂದುವ ಇಚ್ಛೆಯಿಂದ ಪ್ರಾಣತ್ಯಾಗವನ್ನು ಮಾಡುವುದು.
ತತ್ರಾಕಲ್ಯಶರೀರಸ್ಯ ಜರಾ ವ್ಯಾಧಿಶ್ಚ ಕಾರಣಮ್ |
ಮಹಾಪ್ರಸ್ಥಾನಗಮನಂ ತಥಾ ಪ್ರಾಯೋಪವೇಶನಮ್ |
ಜಲಾವಗಾಹನಂ ಚೈವ ಅಗ್ನಿಚಿತ್ಯಾಪ್ರವೇಶನಮ್ ॥5॥
ಅಶಕ್ತ ಶರೀರವುಳ್ಳವನಿಗೆ ಮುಪ್ಪು ಮತ್ತು ವ್ಯಾಧಿಗಳು ಅದಕ್ಕೆ ಕಾರಣ. ಆ ಶರೀರವನ್ನು ತ್ಯಜಿಸಲು ಮಹಾಪ್ರಸ್ಥಾನ ಗಮನ, ಪ್ರಾಯೋಪವೇಶ, ಜಲಪ್ರವೇಶ ಮತ್ತು ಅಗ್ನಿಪ್ರವೇಶವೆಂಬ ನಾಲ್ಕು ವಿಧಿಗಳಿವೆ.
ಏವಂ ಚತುರ್ವಿಧಃ ಪ್ರೋಕ್ತ ಆತ್ಮತ್ಯಾಗೋ ಮುಮೂರ್ಷತಾಮ್ |
ಏತೇಷಾಂ ಕ್ರಮಯೋಗೇನ ವಿಧಾನಂ ಶೃಣು ಶೋಭನೇ ॥6॥
ಹೀಗೆ ಪ್ರಾಣತ್ಯಾಗವನ್ನು ಮಾಡಲು ಬಯಸುವ ಮನುಷ್ಯರಿಗೆ ನಾಲ್ಕು ಪ್ರಕಾರಗಳು ಹೇಳಲ್ಪಟ್ಟಿವೆ. ಶೋಭನೆಯೇ, ಅವುಗಳ ವಿಧಾನವನ್ನು ಕ್ರಮವಾಗಿ ಕೇಳು.
ಸ್ವಧರ್ಮಯುಕ್ತಂ ಗಾರ್ಹಸ್ಥ್ಯಂ ಚಿರಮೂಢ್ವಾ ವಿಧಾನತಃ |
ತತ್ರಾನೃಣ್ಯಂ ಚ ಸಂಪ್ರಾಪ್ಯ ವೃದ್ಧೋ ವಾ ವ್ಯಾಧಿತೋಽಪಿ ವಾ ॥7॥
ದರ್ಶಯಿತ್ವಾ ಸ್ವದೌರ್ಬಲ್ಯಂ ಸರ್ವಾನೇವಾನುಮಾನ್ಯ ಚ |
ಸಂವಿಧಾಯ ಸ್ವಬಂಧೂಂಶ್ಚ ಕರ್ಮಣಾಂ ಭರಣೇ ತಥಾ ॥8॥
ದಾನಾನಿ ವಿಧಿವತ್‌ಕೃತ್ವಾ ಧರ್ಮಕಾರ್ಯಾರ್ಥಮಾತ್ಮನಃ |
ಅನುಜ್ಞಾಪ್ಯ ಜನಂ ಸರ್ವಂ ವಾಚಾ ಮಧುರಯಾ ಬ್ರುವನ್ ॥9॥
ಅಹತಂ ವಸ್ತ್ರಮಾಚ್ಛಾದ್ಯ ಬದ್ಧ್ವಾ ತತ್ಕುಶರಜ್ಜುನಾ |
ಉಪಸ್ಪೃಶ್ಯ ಪ್ರತಿಜ್ಞಾಯ ವ್ಯವಸಾಯಪುರಃಸರಮ್ ॥10॥
ಪರಿತ್ಯಜ್ಯ ತತೋ ಗ್ರಾಮ್ಯಂ ಪಶ್ಚಾತ್ ಕುರ್ಯಾದ್ ಯಥೇಪ್ಸಿತಮ್ |
ಮಹಾಪ್ರಸ್ಥಾನಮಿಚ್ಛೇಚ್ಚೇತ್‌ಪ್ರತಿಷ್ಠೇತೋತ್ತರಾಂ ದಿಶಮ್ ॥11॥

ಸ್ವಧರ್ಮಯುಕ್ತವಾದ ಗಾರ್ಹಸ್ತ್ಯ ಧರ್ಮವನ್ನು ಶಾಸ್ತ್ರೋಕ್ತ ರೀತಿಯಿಂದ ಚಿರಕಾಲ ಪಾಲಿಸಿ ಅಲ್ಲಿ ಋಣಮುಕ್ತನಾಗಿ ವೃದ್ಧನಾಗಿ ಅಥವಾ ರೋಗಗ್ರಸ್ತನಾಗಿ ಮರಣವನ್ನು ಬಯಸುವುದಾದರೆ ತನ್ನ ಶರೀರದ ದೌರ್ಬಲ್ಯವನ್ನು ಎಲ್ಲರಿಗೂ ತೋರಿಸಿ ಎಲ್ಲರ ಅನುಮತಿಯನ್ನೂ ಪಡೆದು, ತನ್ನ ಬಂಧುಗಳನ್ನು ಪೋಷಿಸುವುದಕ್ಕೆ ಮತ್ತು ಅವರ ಕಾರ್ಯಗಳಿಗೆ ಅವಶ್ಯಕವಾದ ಅನುಕೂಲತೆಯನ್ನು ಮಾಡಿ, ತನ್ನ ಧರ್ಮದ ಸಲುವಾಗಿ ವಿಧಿವತ್ತಾಗಿ ದಾನವನ್ನು ಮಾಡಿ, ಮಧುರವಾದ ಮಾತುಗಳನ್ನಾಡಿ, ಎಲ್ಲ ಜನರ ಅನುಮತಿಯನ್ನು ಪಡೆದು, ಖಂಡಿಸದಿದ್ದ ವಸ್ತ್ರವನ್ನು ಉಟ್ಟು ಅದನ್ನು ದರ್ಭೆಯ ಪಾಶದಿಂದ ಬಿಗಿದು ಜಲಸ್ಪರ್ಶವನ್ನು ಮಾಡಿ, ಶುಚಿಯಾಗಿ, ನಿಶ್ಚಯ ಪೂರ್ವಕವಾಗಿ ಪ್ರತಿಜ್ಞೆಯನ್ನು ಮಾಡಿ, ಎಲ್ಲಾ ಗ್ರಾಮ್ಯವಸ್ತುಗಳನ್ನೂ ಪರಿತ್ಯಜಿಸಿ ಅನಂತರ ಹಿಂದೆ ಹೇಳಿದ ನಾಲ್ಕು ವಿಧಾನಗಳಲ್ಲಿ ತನಗೆ ಇಷ್ಟವಾದ ವಿಧಾನವನ್ನು ಅನುಸರಿಸಬೇಕು. ಮಹಾಪ್ರಸ್ಥಾನವನ್ನು ಮಾಡುವುದಾದರೆ ಉತ್ತರ ದಿಕ್ಕನ್ನು ಕುರಿತು ಪ್ರಯಾಣ ಮಾಡುತ್ತಾ ಹೋಗಬೇಕು.

ಭೂತ್ವಾ ತಾವನ್ನಿರಾಹಾರೋ ಯಾವತ್ಪ್ರಾಣವಿಮೋಕ್ಷಣಮ್ |
ಚೇಷ್ಟಾಹಾನೌ ಶಯಿತ್ವಾಽಪಿ ತನ್ಮನಾಃ ಪ್ರಾಣಮುತ್ಸೃಜೇತ್ |
ಏವಂ ಪುಣ್ಯಕೃತಾಂ ಲೋಕಾನಮಲಾನ್ ಪ್ರತಿಪದ್ಯತೇ ॥12॥

ಪ್ರಾಣತ್ಯಾಗದ ಪರ್ಯಂತವೂ ನಿರಾಹಾರನಾಗಿ, ದೇಹದಿಂದ ಯಾವ ಕ್ರಿಯೆಯನ್ನೂ ಮಾಡಲಾಗದಿದ್ದರೆ ಮಲಗಿಕೊಂಡಾದರೂ ದೇವರನ್ನು ಧ್ಯಾನಿಸಿ ಪ್ರಾಣವನ್ನು ಬಿಡಬೇಕು. ಹೀಗೆ ಮಾಡಿದರೆ ಪುಣ್ಯಕರ್ಮಿಗಳು ಹೊಂದುವ ನಿರ್ಮಲವಾದ ಲೋಕಗಳನ್ನು ಹೊಂದುತ್ತಾನೆ.

ಪ್ರಾಯೋಪವೇಶನಂ ಚೇಚ್ಛೇತ್ ತೇನೈವ ವಿಧಿನಾ ನರಃ |
ದೇಶೇ ಪುಣ್ಯತಮೇ ಶ್ರೇಷ್ಠೇ ನಿರಾಹಾರಸ್ತು ಸಂವಿಶೇತ್ ॥13॥
ಆಪ್ರಾಣಾಂತಂ ಶುಚಿರ್ಭೂತ್ವಾ ಕುರ್ವನ್ ದಾನಂ ಸ್ವಶಕ್ತಿತಃ |
ಹರಿಂ ಸ್ಮರಂಸ್ತ್ಯಜೇತ್ಪ್ರಾಣಾನೇಷ ಧರ್ಮಃ ಸನಾತನಃ |
ಏವಂ ಕಳೇಬರಂ ತ್ಯಕ್ತ್ವಾ ಸ್ವರ್ಗಲೋಕೇ ಮಹೀಯತೇ ॥14॥

ಪ್ರಾಯೋಪವೇಶವನ್ನು ಮಾಡಲು ಇಚ್ಛಿಸುವುದಾದರೆ ಮನುಷ್ಯನು ಅದೇ ವಿಧಾನದಿಂದ ಪುಣ್ಯತಮವಾದ ಶ್ರೇಷ್ಠ ದೇಶದಲ್ಲಿ ನಿರಾಹಾರನಾಗಿ ಕುಳಿತುಕೊಳ್ಳಬೇಕು. ಪ್ರಾಣಹೋಗುವವರೆಗೆ ಶುಚಿಯಾಗಿ ತನ್ನ ಶಕ್ತಿ ಇದ್ದಷ್ಟು ದಾನವನ್ನು ಮಾಡುತ್ತಾ ಹರಿಯನ್ನು ಸ್ಮರಿಸುತ್ತಾ ಪ್ರಾಣವನ್ನು ಬಿಡಬೇಕು. ಇದು ಸನಾತನವಾದ ಧರ್ಮ. ಹೀಗೆ ದೇಹತ್ಯಾಗವನ್ನು ಮಾಡಿದವನು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.

ಅಗ್ನಿಪ್ರವೇಶನಂ ಚೇಚ್ಛೇತ್ತೇನೈವ ವಿಧಿನಾ ಶುಭೇ |
ಕೃತ್ವಾ ಕಾಷ್ಠಮಯಂ ಚಿತ್ಯಂ ಪುಣ್ಯಕ್ಷೇತ್ರೇ ನದೀಷು ವಾ ॥15॥
ದೈವತೇಭ್ಯೋ ನಮಸ್ಕೃತ್ವಾ ಕೃತ್ವಾ ಚಾಪಿ ಪ್ರದಕ್ಷಿಣಮ್ |
ಭೂತ್ವಾ ಶುಚಿರ್ವ್ಯವಸಿತಃ ಪ್ರವಿಶೇದಗ್ನಿಸಂಸ್ತರಮ್ |
ಸೋಽಪಿ ಲೋಕಾನ್ ಯಥಾನ್ಯಾಯಂ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ॥

ಎಲೌ ಶುಭಳೇ, ಅಗ್ನಿಪ್ರವೇಶವನ್ನು ಮಾಡಲು ಬಯಸಿದರೆ ಅದೇ ವಿಧಾನದಿಂದ ಪುಣ್ಯಕ್ಷೇತ್ರದಲ್ಲಿ ಅಥವಾ ನದೀತೀರದಲ್ಲಿ ಕಾಷ್ಠಗಳಿಂದ ಚಿತೆಯನ್ನು ಮಾಡಿ, ದೇವತೆಗಳಿಗೆ ನಮಸ್ಕರಿಸಿ, ಅಗ್ನಿಯನ್ನು ಪ್ರದಕ್ಷಿಣೆಯನ್ನು ಮಾಡಿ, ಶುಚಿಯಾಗಿ, ನಿರ್ಧಾರದೊಂದಿಗೆ ಹಬ್ಬಿದ ಅಗ್ನಿಯಲ್ಲಿ ಪ್ರವೇಶಿಸಬೇಕು. ಅವನೂ ಸಹ ನ್ಯಾಯವಾಗಿಯೇ ಪುಣ್ಯಕರ್ಮಗಳ ಲೋಕವನ್ನು ಪಡೆಯುತ್ತಾನೆ.

ಜಲಾವಗಾಹನಂ ಚೇಚ್ಛೇತ್ತೇನೈವ ವಿಧಿನಾ ಶುಭೇ |
ಖ್ಯಾತೇ ಪುಣ್ಯತಮೇ ತೀರ್ಥೇ ನಿಮಜ್ಜೇತ್ಸುಕೃತಂ ಸ್ಮರನ್ |
ಸೋಽಪಿ ಪುಣ್ಯಕೃತಾನ್ ಲೋಕಾನ್ನಿಸರ್ಗಾತ್ ಪ್ರತಿಪದ್ಯತೇ ॥17॥

ಜಲಪ್ರವೇಶವನ್ನು ಮಾಡಲು ಬಯಸುವುದಾದರೆ ಎಲೌ ಶುಭಳೇ, ಅದೇ ವಿಧಾನದಿಂದ ಪ್ರಖ್ಯಾತವಾದ ಪುಣ್ಯತಮವಾದ ತೀರ್ಥದಲ್ಲಿ ಧರ್ಮವನ್ನು ಸ್ಮರಿಸುತ್ತಾ ಮುಳುಗಬೇಕು. ಅಂತಹವನೂ ಸಹ ಪುಣ್ಯಕರ್ಮಿಗಳ ಲೋಕವನ್ನು ಸ್ವಾಭಾವಿಕವಾಗಿಯೇ ಹೊಂದುತ್ತಾನೆ.

ತತಃ ಕಲ್ಯಶರೀರಸ್ಯ ಸಂತ್ಯಾಗಂ ಶೃಣು ತತ್ತ್ವತಃ ॥18॥
ರಕ್ಷಾರ್ಥಂ ಕ್ಷತ್ರಿಯಸ್ಯೇಷ್ಟಃ ಪ್ರಜಾಪಾಲನಕಾರಣಾತ್ |
ಯೋಧಾನಾಂ ಭರ್ತೃಪಿಂಡಾರ್ಥಂ ಗುರ್ವರ್ಥಂ ಬ್ರಹ್ಮಚಾರಿಣಾಮ್ |
ಗೋಬ್ರಾಹ್ಮಣಾರ್ಥಂ ಗ್ರಾಮಾರ್ಥಂ ಸರ್ವೇಷಾಂ ಚ ವಿಧೀಯತೇ ॥

ಇನ್ನು ಶಕ್ತವಾದ ಶರೀರವುಳ್ಳವನು ಪ್ರಾಣತ್ಯಾಗ ಮಾಡುವ ವಿಧಾನವನ್ನು ಸರಿಯಾಗಿ ಕೇಳು. ಪ್ರಜಾಪಾಲನ ನಿಮಿತ್ತದಿಂದ ಪ್ರಜೆಗಳನ್ನು ರಕ್ಷಿಸಲು ಕ್ಷತ್ರಿಯನಿಗೆ ಶಕ್ತ ಶರೀರದ ತ್ಯಾಗವು ಇಷ್ಟವಾದುದು. ಭರ್ತೃಋಣವನ್ನು ತೀರಿಸುವುದಕ್ಕಾಗಿ ಯೋಧರಿಗೂ, ಗುರುಗಳ ಹಿತಕ್ಕಾಗಿ ಬ್ರಹ್ಮಚಾರಿಗಳಿಗೂ, ಗೋ-ಬ್ರಾಹ್ಮಣರ ಹಿತದ ಸಲುವಾಗಿ ಮತ್ತು ಗ್ರಾಮದ ಸಲುವಾಗಿ ಎಲ್ಲರಿಗೂ ಶಕ್ತವಾದ ಶರೀರತ್ಯಾಗವು ವಿಧಿಸಲ್ಪಡುತ್ತದೆ.

ಸ್ವರಾಜ್ಯರಕ್ಷಣಾರ್ಥಂ ವಾ ಕುನೃಪೈಃ ಪೀಡಿತಾಃ ಪ್ರಜಾಃ |
ಮೋಕ್ತುಕಾಮಸ್ತ್ಯಜೇತ್ಪ್ರಾಣಾನ್ ಯುದ್ಧಮಾರ್ಗೇ ಯಥಾವಿಧಿ ॥20॥
ಸುಸನ್ನದ್ಧೋ ವ್ಯವಸಿತಃ ಸಂಪ್ರವಿಶ್ಯಾಪರಾಙ್ಮುಖಃ |
ಏವಂ ರಾಜಾ ಮೃತಃ ಸದ್ಯಃ ಸ್ವರ್ಗಲೋಕೇ ಮಹೀಯತೇ ॥21॥

ತನ್ನ ರಾಜ್ಯವನ್ನು ರಕ್ಷಿಸುವ ಸಲುವಾಗಿ ಅಥವಾ ಕೆಟ್ಟರಾಜನಿಂದ ಪೀಡಿತರಾದ ಪ್ರಜೆಗಳನ್ನು ಅವನಿಂದ ಮೋಚನೆಗೊಳಿಸುವ

ಸಲುವಾಗಿ ಯುದ್ಧಮಾರ್ಗದಲ್ಲಿ ವಿಧಿಗೆ ಅನುಗುಣವಾಗಿ ಶಸ್ತ್ರಸಜ್ಜಿತನಾಗಿ, ನಿರ್ಧಾರದಿಂದ ಕೂಡಿ, ರಣರಂಗವನ್ನು ಪ್ರವೇಶಿಸಿ ಹಿಂದಿರುಗದೆ ಪ್ರಾಣವನ್ನು ಬಿಡಬೇಕು. ಹೀಗೆ ಮರಣ ಹೊಂದಿದ ರಾಜನು ತಕ್ಷಣದಲ್ಲಿಯೇ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ತಾದೃಶೀ ಸುಗತಿರ್ನಾಸ್ತಿ ಕ್ಷತ್ರಿಯಸ್ಯ ವಿಶೇಷತಃ |
ಭೃತ್ಯೋ ವಾ ಭರ್ತೃಪಿಂಡಾರ್ಥಂ ಭರ್ತೃಕರ್ಮಣ್ಯುಪಸ್ಥಿತೇ ॥22॥
ಕುರ್ವಂಸ್ತತ್ರ ತು ಸಾಹಾಯ್ಯಮಾತ್ಮಪ್ರಾಣಾನಪೇಕ್ಷಯಾ |
ಸ್ವಾಮ್ಯರ್ಥಂ ಸಂತ್ಯಜೇತ್ ಪ್ರಾಣಾನ್ ಪುಣ್ಯಾಲ್ಲೋಕಾನ್ ಸ ಗಚ್ಛತಿ |
ಸ್ಪೃಹಣೀಯಃ ಸುರಗಣೈಸ್ತತ್ರ ನಾಸ್ತಿ ವಿಚಾರಣಾ ॥
ಕ್ಷತ್ರಿಯನಿಗೆ ಅಂತಹ ವಿಶೇಷವಾದ ಸದ್ಗತಿಯು ಬೇರೆ ಯಾವುದರಿಂದಲೂ ಬರುವುದಿಲ್ಲ. ಅಥವಾ ಭೃತ್ಯನಾದರೂ ಸ್ವಾಮಿಯ ಋಣವನ್ನು ತೀರಿಸಲು ಸ್ವಾಮಿಯ ಕಾರ್ಯವು ಪ್ರಾಪ್ತವಾಗಿರುವಾಗ ತನ್ನ ಪ್ರಾಣವನ್ನು ಅಪೇಕ್ಷಿಸದೆ ಸಹಾಯವನ್ನು ಮಾಡುತ್ತಾ, ಸ್ವಾಮಿಯ ಸಲುವಾಗಿ ಪ್ರಾಣವನ್ನು ತ್ಯಜಿಸಿದರೆ ಅವನೂ ಪುಣ್ಯಲೋಕವನ್ನು ಪಡೆಯುತ್ತಾನೆ. ಅವನು ಅಲ್ಲಿ ದೇವತಾ ಸಮೂಹದಿಂದ ಆಸೆಯಿಂದ ಸ್ವೀಕರಿಸಲ್ಪಡುತ್ತಾನೆ. ಇದರಲ್ಲಿ ಸಂಶಯವಿಲ್ಲ.
ಏವಂ ಗೋಬ್ರಾಹ್ಮಣಾರ್ಥಂ ವಾ ದೀನಾರ್ಥಂ ವಾ ತ್ಯಜೇತ್ತನುಮ್ ॥
ಸೋಽಪಿ ಪುಣ್ಯಮವಾಪ್ನೋತಿ ಆನೃಶಂಸ್ಯವ್ಯಪೇಕ್ಷಯಾ |
ಇತ್ಯೇತೇ ಜೀವಿತತ್ಯಾಗೇ ಮಾರ್ಗಾಸ್ತೇ ಸಮುದಾಹೃತಾಃ ॥25॥
ಹೀಗೆ ಗೋ-ಬ್ರಾಹ್ಮಣರ ಹಿತಕ್ಕಾಗಲೀ ಅಥವಾ ದೀನರ ನಿಮಿತ್ತದಿಂದಾಗಲೀ ದೇಹತ್ಯಾಗವನ್ನು ಮಾಡಬೇಕು. ಅಂತಹವನೂ ಸಹ ದಯಾನಿಮಿತ್ತದಿಂದ ಪುಣ್ಯಲೋಕಗಳನ್ನು ಪಡೆಯುತ್ತಾನೆ. ಇವು ಜೀವನವನ್ನು ತೊರೆಯಲು ಇರುವ ಮಾರ್ಗಗಳು. ಇದನ್ನು ನಿನಗೆ ಹೇಳಿದ್ದೇನೆ.
ಕಾಮಾತ್ ಕ್ರೋಧಾದ್ ಭಯಾದ್ವಾಽಪಿ ಚೇತ್ಸಂತ್ಯಜೇತ್ತನುಮ್ |
ಸೋಽನಂತಂ ನರಕಂ ಯಾತಿ ಆತ್ಮಹಂತೃತ್ವಕಾರಣಾತ್ ॥26॥
ಕಾಮದಿಂದಾಗಲೀ, ಕ್ರೋಧದಿಂದಾಗಲೀ, ಭಯದಿಂದಾಗಲೀ ದೇಹತ್ಯಾಗವನ್ನು ಮಾಡಿದರೆ ಅವನು ಆತ್ಮಹತ್ಯೆಯನ್ನು ಮಾಡಿಕೊಂಡ ಕಾರಣದಿಂದ ಅನಂತವಾದ ನರಕವನ್ನು ಹೊಂದುತ್ತಾನೆ.
ಸ್ವಭಾವಮರಣಂ ನಾಮ ನ ತು ಚಾತ್ಮೇಚ್ಛಯಾ ಭವೇತ್ |
ಯಥಾ ಮೃತಾನಾಂ ಯತ್ಕಾರ್ಯಂ ತನ್ಮೇ ಶೃಣು ಯಥಾವಿಧಿ ॥27॥
ಸ್ವಾಭಾವಿಕ ಮರಣವೆಂದರೆ ಅದು ತನ್ನ ಇಚ್ಛೆಯಿಂದ ಉಂಟು ಮಾಡಿಕೊಂಡ ಮರಣವಲ್ಲ. ಇನ್ನು ಮೃತರಿಗೆ ವಿಧಿಗೆ ಅನುಸಾರವಾಗಿ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ನನ್ನಿಂದ ಕೇಳು.
ತತ್ರಾಪಿ ಬೋಧಸಂತ್ಯಾಗಾನ್ಮೂಢತ್ಯಾಗೋ ವಿಶಿಷ್ಯತೇ |
ಭೂಮೌ ಸಂವೇಶಯೇದ್ ದೇಹಂ ನರಸ್ಯ ವಿನಶಿಷ್ಯತಃ ॥28॥
ಅಲ್ಲಿಯೂ ಜ್ಞಾನವಿರುವವನ ತ್ಯಾಗಕ್ಕಿಂತಲೂ, ಪ್ರಜ್ಞಾನಹೀನನಾದವನ ತ್ಯಾಗವು ವಿಶಿಷ್ಟವಾದುದು. ಸಾಯಲಿರುವ ಮನುಷ್ಯನ ದೇಹವನ್ನು ಭೂಮಿಯಲ್ಲಿ ಮಲಗಿಸಬೇಕು.
ನಿರ್ಜೀವಂ ವೃಣುಯಾತ್ ಸದ್ಯೋ ವಾಸಸಾ ತು ಕಲೇವರಮ್ |
ಮಾಲ್ಯಗಂಧೈರಲಂಕೃತ್ಯ ಸುವರ್ಣೇನ ಚ ಭಾಮಿನಿ ॥29॥
ಜೀವನು ಹೋದ ತಕ್ಷಣವೇ ಆ ಶರೀರವನ್ನು ವಸ್ತ್ರದಿಂದ ಮುಚ್ಚಬೇಕು. ಎಲೌ ಭಾಮಿನಿಯೇ, ದೇಹವನ್ನು ಮಾಲ್ಯ-ಗಂಧಗಳಿಂದಲೂ, ಸುವರ್ಣದಿಂದಲೂ ಅಲಂಕಾರ ಮಾಡಿ ವಸ್ತ್ರದಿಂದ ಮುಚ್ಚಬೇಕು.
ಶ್ಮಶಾನೇ ದಕ್ಷಿಣೇ ದೇಶೇ ಚಿತಾಗ್ನೌ ಪ್ರದಹೇನ್ಮೃತಮ್ |
ಅಥವಾ ನಿಕ್ಷಿಪೇದ್ ಭೂಮೌ ಶರೀರಂ ಜೀವವರ್ಜಿತಮ್ ॥30॥
ಸ್ಮಶಾನದಲ್ಲಿ ದಕ್ಷಿಣಭಾಗದಲ್ಲಿ ಚಿತಾಗ್ನಿಯಲ್ಲಿ ಮೃತದೇಹವನ್ನು ದಹಿಸಬೇಕು ಅಥವಾ ಮೃತಶರೀರವನ್ನು ಭೂಮಿಯಲ್ಲೂ ಹೂಳಬಹುದು.
ದಿವಾ ಚ ಶುಕ್ಲಪಕ್ಷಶ್ಚ ಉತ್ತರಾಯಣಮೇವ ಚ |
ಮುಮೂರ್ಷೂಣಾಂ ಪ್ರಶಸ್ತಾನಿ ವಿಪರೀತಂ ತು ಗರ್ಹಿತಮ್ ॥31॥
ಮರಣವನ್ನು ಹೊಂದುವವರಿಗೆ ಹಗಲು, ಶುಕ್ಲಪಕ್ಷ ಮತ್ತು ಉತ್ತರಾಯಣಗಳು ಪ್ರಶಸ್ತವಾದವುಗಳು. ರಾತ್ರಿ, ಕೃಷ್ಣಪಕ್ಷ ಮತ್ತು ದಕ್ಷಿಣಾಯನಗಳು ನಿಂದಿತವಾದವುಗಳು.
ಔದಕಂ ಚಾಷ್ಟಕಾಶ್ರಾದ್ಧಂ ಬಹುಭಿರ್ಬಹುಶಃ ಕೃತಮ್ |
ಆಪ್ಯಾಯನಂ ಮೃತಾನಾಂ ತತ್ ಪರಲೋಕೇ ಭವೇಚ್ಛುಭಮ್ |
ಏತತ್ ಸರ್ವಂ ಮಯಾ ಪ್ರೋಕ್ತಂ ಮಾನುಷಾಣಾಂ ಹಿತಾಯ ಚ ॥
ಅನೇಕ ಜನರು ಅನೇಕ ರೀತಿಯಲ್ಲಿ ಮಾಡಿದ ಉದಕಕ್ರಿಯೆ ಮತ್ತು ಅಷ್ಟಕ ಶ್ರಾದ್ಧಗಳು ಮೃತರಾದವರಿಗೆ ಪರಲೋಕದಲ್ಲಿ ಬಲವೃದ್ಧಿಯನ್ನು ಮತ್ತು ಶುಭವನ್ನುಂಟು ಮಾಡುತ್ತವೆ. ಮನುಷ್ಯರ ಹಿತಕ್ಕಾಗಿ ನಾನು ಇವೆಲ್ಲವನ್ನೂ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಪ್ರಾಣತ್ಯಾಗವಿಧಿರ್ನಾಮ ಸಪ್ತವಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತೇಳನೆಯ
ಅಧ್ಯಾಯ ಮುಗಿಯಿತು.

* * * * *
ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಮೋಕ್ಷಧರ್ಮದ ಶ್ರೇಷ್ಠತ್ವಕಥನ.
ಉಮಾ
ದೇವದೇವ ನಮಸ್ತೇಽಸ್ತು ಕಾಲಸೂದನ ಶಂಕರ |
ಲೋಕೇಷು ವಿವಿಧಾ ಧರ್ಮಾಸ್ತ್ವತ್ಪ್ರಸಾದಾನ್ಮಯಾ ಶ್ರುತಾಃ ||1||
ಉಮಾ ದೇವದೇವನೇ, ಕಾಲಸಂಹಾರಕನೇ, ಶಂಕರನೇ, ನಿನಗೆ ನಮಸ್ಕಾರ. ನಿನ್ನ ಅನುಗ್ರಹದಿಂದ ಲೋಕದ ವಿವಿಧ ಧರ್ಮಗಳನ್ನು ನಾನು ಕೇಳಿದೆನು.
ವಿಶಿಷ್ಟಂ ಸರ್ವಧರ್ಮೇಭ್ಯಃ ಶಾಶ್ವತಂ ಧ್ರುವಮವ್ಯಯಮ್ |
ಶ್ರೋತುಮಿಚ್ಛಾಮ್ಯಹಂ ಧರ್ಮಂ ತತ್ರ ಮುಹ್ಯತಿ ಮೇ ಮನಃ ||2||
ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದ, ಶಾಶ್ವತವಾದ, ನಾಶರಹಿತವಾದ ಧರ್ಮವನ್ನು ಕೇಳಲು ಬಯಸುತ್ತೇನೆ. ಆ ವಿಷಯದಲ್ಲಿ ನನ್ನ ಮನಸ್ಸು ಮೋಹಕ್ಕೆ ಒಳಗಾಗಿದೆ.
ಕೇಚಿನ್ಮೋಕ್ಷಂ ಪ್ರಶಂಸಂತಿ ಕೇಚಿದ್ ಯಜ್ಞಫಲಂ ದ್ವಿಜಾಃ |
ವಾನಪ್ರಸ್ಥಂ ಪುನಃ ಕೇಚಿದ್ ಗಾರ್ಹಸ್ಥ್ಯಂ ಕೇಚಿದಾಶ್ರಮಮ್ ||3||
ಕೆಲವರು ಬ್ರಾಹ್ಮಣರು ಮೋಕ್ಷವನ್ನು ಪ್ರಶಂಸಿಸುತ್ತಾರೆ. ಕೆಲವರು ಯಜ್ಞಫಲವನ್ನು ಪ್ರಶಂಸಿಸುತ್ತಾರೆ. ಕೆಲವರು ವಾನಪ್ರಸ್ಥವನ್ನೂ, ಇನ್ನು ಕೆಲವರು ಗೃಹಸ್ಥಾಶ್ರಮವನ್ನೂ ಪ್ರಶಂಸಿಸುತ್ತಾರೆ.
ರಾಜಧರ್ಮಾಶ್ರಯಂ ಕೇಚಿತ್ ಕೇಚಿತ್ಸ್ವಾಧ್ಯಾಯಮೇವ ಚ |
ಬ್ರಹ್ಮಚರ್ಯಾಶ್ರಮಂ ಕೇಚಿತ್ ಕೇಚಿದ್ ವಾಕ್ಸಂಯಮಾಶ್ರಯಮ್ ||4||
ಕೆಲವರು ರಾಜಧರ್ಮವನ್ನೂ, ಕೆಲವರು ಸ್ವಾಧ್ಯಾಯವನ್ನೂ, ಕೆಲವರು ಬ್ರಹ್ಮಚರ್ಯಾಶ್ರಮವನ್ನೂ, ಕೆಲವರು ಮೌನವನ್ನೂ ಪ್ರಶಂಸಿಸುತ್ತಾರೆ.
ಮಾತರಂ ಪಿತರಂ ಕೇಚಿತ್ ಸೇವಮಾನಾ ದಿವಂ ಗತಾಃ |
ಅಹಿಂಸಯಾ ಪರಃ ಸ್ವರ್ಗೇ ಸತ್ಯೇನ ಚ ಮಹೀಯತೇ ||5||
ಕೆಲವರು ತಂದೆ-ತಾಯಿಯರ ಸೇವೆಯನ್ನು ಮಾಡಿ ಸ್ವರ್ಗಕ್ಕೆ ಹೋಗಿದ್ದಾರೆ. ಇನ್ನೊಬ್ಬನು ಅಹಿಂಸೆಯಿಂದಲೂ, ಸತ್ಯದಿಂದಲೂ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.
ಆಹವೇಽಭಿಮುಖಾಃ ಕೇಚಿನ್ನಿಹತಾಸ್ತ್ರಿದಿವಂ ಗತಾಃ |
ಕೇಚಿದುಂಛವೃತ್ತೈಃ ಸಿದ್ಧಾಃ ಸ್ವರ್ಗಮಾರ್ಗಂ ಸಮಾಶ್ರಿತಾಃ ||6||
ಕೆಲವರು ಯುದ್ಧದಲ್ಲಿ ಶತ್ರುಗಳಿಗೆ ಅಭಿಮುಖವಾಗಿ ಮಡಿದು ಸ್ವರ್ಗಕ್ಕೆ ಹೋಗಿದ್ದಾರೆ. ಇನ್ನು ಕೆಲವರು ಉಂಛವೃತ್ತಿಯಿಂದ ಸಿದ್ಧರಾಗಿ ಸ್ವರ್ಗಮಾರ್ಗದಲ್ಲಿ ಹೋಗುತ್ತಿದ್ದಾರೆ.
ಆರ್ಜವೇನಾಪರೇ ಯುಕ್ತಾ ಮಹತಾಂ ಪೂಜನೇ ರತಾಃ |
ಋಜವೋ ನಾಕಪೃಷ್ಠೇ ತು ಶುದ್ಧಾತ್ಮಾನಃ ಪ್ರತಿಷ್ಠಿತಾಃ ||7||
ಇನ್ನು ಕೆಲವರು ಋಜುತ್ವದಿಂದ ಕೂಡಿ, ಮಹಾತ್ಮರ ಪೂಜೆಯಲ್ಲಿ ರತರಾಗಿ ಶುದ್ಧಾತ್ಮರಾಗಿ ಸ್ವರ್ಗದಲ್ಲಿ ನೆಲೆಸಿದ್ದಾರೆ.
ಏವಂ ಬಹುವಿಧೈರ್ಲೋಕೇ ಧರ್ಮದ್ವಾರೈಃ ಸುಸಂವೃತೈಃ |
ಮಮಾಪಿ ಮತಿರಾವಿದ್ಧಾ ಮೇಘಲೇಖೇವ ವಾಯುನಾ ||8||
ಹೀಗೆ ಲೋಕದಲ್ಲಿ ಬಹುವಿಧವಾದ ಚೆನ್ನಾಗಿ ಸ್ವೀಕರಿಸಿದ ಧರ್ಮದ್ವಾರಗಳಿಂದ ನನ್ನ ಬುದ್ಧಿಯೂ ಸಹ ಗಾಳಿಯಿಂದ ಮೇಘಮಾಲೆಯು ಹೊಯ್ದಾಡಿದಂತೆ ಹೊಯ್ದಾಡುತ್ತಿದೆ.
ಏತಸ್ಮಿನ್ ಸಂಶಯಸ್ಥಾನೇ ಸಂಶಯಚ್ಛೇದಕಾರಿ ಯತ್ |
ವಚನಂ ಬ್ರೂಹಿ ದೇವೇಶ ನಿಶ್ಚಯಜ್ಞಾನಸಂಜ್ಞಿತಮ್ ||9||
ದೇವೇಶನೇ, ಇಂತಹ ಸಂಶಯವಿರುವಾಗ ನಿಶ್ಚಯಜ್ಞಾನರೂಪವಾದ ಸಂಶಯವನ್ನು ಛೇದಿಸುವ ವಚನವನ್ನು ಹೇಳು.
ನಾರದಃ
ಏವಂ ಪೃಷ್ಟಃ ಸ್ವಯಂ ದೇವ್ಯಾ ಮಹಾದೇವಃ ಪಿನಾಕಧೃಕ್ |
ಪ್ರೋವಾಚ ಮಧುರಂ ವಾಕ್ಯಂ ಸೂಕ್ಷ್ಮಮಧ್ಯಾತ್ಮಸಂಜ್ಞಿತಮ್ ||10||
ನಾರದ ದೇವಿಯಿಂದ ಸ್ವತಃ ಹೀಗೆ ಕೇಳಲ್ಪಟ್ಟ, ಪಿನಾಕಧಾರಿಯಾದ ಮಹಾದೇವನು ಮಧುರವಾದ ಮಾತುಗಳಿಂದ ಸೂಕ್ಷ್ಮವಾದ ಅಧ್ಯಾತ್ಮ ಶಬ್ದದಿಂದ ಕರೆಸಲ್ಪಡುವ ವಾಕ್ಯಗಳನ್ನು ಮಾತನಾಡಿದನು.
ಮಹೇಶ್ವರಃ
ನ್ಯಾಯತಸ್ತ್ವಂ ಮಹಾಭಾಗೇ ಶ್ರೋತುಕಾಮಾಽಸಿ ನಿಶ್ಚಯಮ್ |
ಏತದೇವ ವಿಶಿಷ್ಟಂ ತೇ ಯತ್ತ್ವಂ ಪೃಚ್ಛಸಿ ಮಾಂ ಪ್ರಿಯೇ ||11||
ಮಹೇಶ್ವರ ಮಹಾಭಾಗ್ಯವಂತಳೇ, ಪ್ರಿಯೆಯೇ, ನೀನು ನ್ಯಾಯದಿಂದ ಕೇಳಲು ಬಯಸುತ್ತಿದ್ದೀಯೆ ಎಂಬುದು ನಿಶ್ಚಿತವಾದುದು. ನೀನು ನನ್ನನ್ನು ಈ ಪ್ರಶ್ನೆಯನ್ನು ಕೇಳುತ್ತಿರುವುದೇ ಬಹಳ ಶ್ರೇಷ್ಠವಾದುದು.
ಸರ್ವತ್ರ ವಿಹಿತೋ ಧರ್ಮಃ ಸ್ವರ್ಗಲೋಕಫಲಾಶ್ರಿತಃ |
ಬಹುದ್ವಾರಸ್ಯ ಧರ್ಮಸ್ಯ ನೇಹಾಸ್ತಿ ವಿಫಲಾ ಕ್ರಿಯಾ ||12||

ಸ್ವರ್ಗಲೋಕರೂಪವಾದ ಫಲವನ್ನು ಉದ್ದೇಶಿಸಿ ಎಲ್ಲ ಕಡೆಗಳಲ್ಲಿಯೂ ಅನೇಕ ಧರ್ಮಗಳು ಹೇಳಲ್ಪಟ್ಟಿವೆ. ಬಹುದ್ವಾರವುಳ್ಳ ಧರ್ಮದ ಯಾವ ಕ್ರಿಯೆಯೂ ವ್ಯರ್ಥವಲ್ಲ.

ಯಸ್ಮಿನ್ಯಸ್ಮಿಂಶ್ಚ ವಿಷಯೇ ಯೋಯೋ ಯಾತಿ ವಿನಿಶ್ಚಯಮ್ |
ತಂ ತಮೇವಾಭಿಜಾನಾತಿ ನಾನ್ಯಂ ಧರ್ಮಂ ಶುಚಿಸ್ಮಿತೇ ||13||

ಎಲೌ ಶುಚಿಸ್ಮಿತೆಯೇ, ಯಾವ ಯಾವ ವಿಷಯದಲ್ಲಿ ಯಾವ ಯಾವನು ನಿರ್ಧಾರವನ್ನು ಹೊಂದುತ್ತಾನೆಯೋ ಅವನು ಅದನ್ನೇ ಧರ್ಮವೆಂದು ತಿಳಿಯುತ್ತಾನೆ. ಅವನು ಇನ್ನೊಂದು ಧರ್ಮವನ್ನು ತಿಳಿಯುವುದಿಲ್ಲ.

ಶೃಣು ದೇವಿ ಸಮಾಸೇನ ಮೋಕ್ಷದ್ವಾರಮನುತ್ತಮಮ್ |
ಏತದ್ಧಿ ಸರ್ವಧರ್ಮಾಣಾಂ ವಿಶಿಷ್ಟಂ ಗುಹ್ಯಮವ್ಯಯಮ್ ||14||

ದೇವಿಯೇ, ಶ್ರೇಷ್ಠವಾದ ಮೋಕ್ಷದ್ವಾರವನ್ನು ಸಂಕ್ಷೇಪವಾಗಿ ಕೇಳು. ಇದು ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದುದು, ರಹಸ್ಯವಾದುದು ಮತ್ತು ಅವ್ಯಯವಾದುದು.

ನಾಸ್ತಿ ಮೋಕ್ಷಾತ್ ಪರಂ ದೇವಿ ಮೋಕ್ಷ ಏವ ಪರಾ ಗತಿಃ |
ಸುಖಮಾತ್ಯಂತಿಕಂ ಶ್ರೇಷ್ಠಮನಿವರ್ತಿ ಚ ತದ್ವಿದುಃ ||15||

ದೇವಿಯೇ, ಮೋಕ್ಷಕ್ಕಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ. ಮೋಕ್ಷವೇ ಶ್ರೇಷ್ಠವಾದ ಗಮ್ಯಸ್ಥಾನ. ಅಲ್ಲಿ ಆತ್ಯಂತಿಕವಾದ ಶ್ರೇಷ್ಠವಾದ ಸುಖವೂ ಮತ್ತು ಅನಿವೃತ್ತಿಯೂ ಇದೆ ಎಂದು ಜ್ಞಾನಿಗಳು ತಿಳಿಯುತ್ತಾರೆ.

ನಾತ್ರ ದೇವಿ ಜರಾಮೃತ್ಯೂ ಶೋಕೋ ವಾ ದುಃಖಮೇವ ವಾ |
ಅನುತ್ತಮಮಚಿಂತ್ಯಂ ಚ ತದ್ ದೇವಿ ಪರಮಂ ಸುಖಮ್ ||16||

ದೇವಿಯೇ, ಅಲ್ಲಿ ಜರಾ-ಮರಣಗಳಾಗಲೀ, ಶೋಕ-ದುಃಖಗಳಾಗಲೀ ಇಲ್ಲ. ದೇವಿಯೇ, ಅಲ್ಲಿಯ ಪರಮಸುಖವು ಅತ್ಯಂತ ಶ್ರೇಷ್ಠವಾದುದು ಮತ್ತು ಚಿಂತನೆಯನ್ನು ಮೀರಿದುದು.

ಜ್ಞಾನಾನಾಮುತ್ತಮಂ ಜ್ಞಾನಂ ಮೋಕ್ಷಜ್ಞಾನಂ ವಿದುರ್ಬುಧಾಃ |
ಋಷಿಭಿರ್ದೇವಸ್ಯೆಂಶ್ಚ ಪ್ರೋಚ್ಯತೇ ಪರಮಂ ಪದಮ್ ||17||

ಎಲ್ಲ ಜ್ಞಾನಗಳಲ್ಲಿ ಮೋಕ್ಷಸಾಧನವಾದ ಜ್ಞಾನವು ಶ್ರೇಷ್ಠವಾದುದೆಂದು ಜ್ಞಾನಿಗಳು ತಿಳಿಯುತ್ತಾರೆ. ಋಷಿಗಳು ಮತ್ತು ದೇವತೆಗಳು ಮೋಕ್ಷವನ್ನು ಪರಮಪದವೆಂದು ಹೇಳುತ್ತಾರೆ.

ನಿತ್ಯಮಕ್ಷರಮಕ್ಷೋಭ್ಯಮಜರಂ ಶಾಶ್ವತಂ ಶಿವಮ್ |
ಉಶಂತಿ ತತ್ಪದಂ ಪ್ರಾಜ್ಞಾಃ ಸ್ಪೃಹಣೀಯಂ ಸುರೋತ್ತಮೈಃ ||18||

ಮೋಕ್ಷವು ನಿತ್ಯವಾದುದು, ವಿಕಾರವನ್ನು ಹೊಂದದಿರುವಂತಹದು, ಅಲುಗಾಡಿಸಲು ಅಸಾಧ್ಯವಾದುದು, ಜರೆಯನ್ನು ಹೊಂದದಿರುವಂತಹದು, ಶಾಶ್ವತವಾದುದು ಮತ್ತು ಮಂಗಳಪ್ರದವಾದುದು. ಸುರಶ್ರೇಷ್ಠರಿಂದ ಬಯಸಲ್ಪಡುವ ಆ ಸ್ಥಾನವನ್ನು ಪ್ರಾಜ್ಞರು ಬಯಸುತ್ತಾರೆ.

ದುಃಖಾದಿ ಚ ದುರಂತಂ ಚ ಸಂಕ್ಷಯಂ ಚ ವಿರೋಧಿ ಚ |
ಮಿಥಃ ಸತತಕಾರ್ಯಂ ಚ ತ್ರಿವರ್ಗಸುಖಮುಚ್ಯತೇ ||19||

ತ್ರಿವರ್ಗದಿಂದ ಉಂಟಾಗುವ ಸುಖವು ಮೊದಲು ದುಃಖದಿಂದ ಕೂಡಿರುತ್ತದೆ. ಕೊನೆಯಲ್ಲೂ ದುಃಖದಿಂದ ಕೂಡಿರುತ್ತದೆ. ನಾಶವನ್ನು ಹೊಂದುತ್ತದೆ. ಶ್ರೇಯಸ್ಸಿಗೆ ವಿರೋಧಿಯಾಗಿರುತ್ತದೆ ಮತ್ತು ಸತತವಾಗಿ ಕಾರ್ಯವನ್ನು ಮಾಡಿಸುತ್ತದೆ.

ತಸ್ಮಾನ್ಮೋಕ್ಷಃ ಪ್ರಧಾನಸ್ತು ತ್ರಿವರ್ಗಾಚ್ಚ ವಿಶೇಷತಃ |
ಮೋಕ್ಷಸ್ಯ ತಸ್ಯ ಮಾರ್ಗೋಽಯಂ ಶ್ರೂಯತಾಂ ಶುಭಲಕ್ಷಣೇ ||20||

ಆದ್ದರಿಂದ ಮೋಕ್ಷವು ತ್ರಿವರ್ಗಕ್ಕಿಂತಲೂ ವಿಶೇಷವಾಗಿ ಶ್ರೇಷ್ಠವಾದುದು. ಶುಭಲಕ್ಷಣವುಳ್ಳವಳೇ, ಅಂತಹ ಮೋಕ್ಷದ ಈ ಮಾರ್ಗವನ್ನು ಕೇಳು.

ಬ್ರಹ್ಮಾದಿಸ್ಥಾವರಾಂತಸ್ಯ ಸಂಸಾರೋಽಯಂ ಪ್ರವರ್ತತೇ |
ಶೋಕವ್ಯಾಧಿಜರಾದೋಷೈರ್ಮರಣೇನ ಚ ಸಂಯುತಃ ||21||

ಬ್ರಹ್ಮಾದಿ ಸ್ಥಾವರಾಂತ ಜೀವರಿಗೆ ಶೋಕ-ವ್ಯಾಧಿ-ಜರಾ-ದೋಷ-ಮರಣಗಳಿಂದ ಕೂಡಿದ ಈ ಸಂಸಾರವು ಪ್ರವೃತ್ತವಾಗುತ್ತದೆ.

ಯಥಾ ಜ್ಯೋತಿರ್ಗಣಾ ವ್ಯೋಮ್ನಿ ನಿವರ್ತಂತೇ ಪುನಃಪುನಃ |
ಸಂಸಾರೇ ಪ್ರಾಣಿನಃ ಸರ್ವೇ ನಿವರ್ತಂತೇ ಯಥಾ ಪುನಃ ||22||

ಆಕಾಶದಲ್ಲಿ ಜ್ಯೋತಿರ್ಗಣಗಳು ಪುನಃ ಪುನಃ ಹಿಂದಕ್ಕೆ ಬರುವಂತೆ ಸಂಸಾರದಲ್ಲಿ ಎಲ್ಲ ಪ್ರಾಣಿಗಳು ಪುನಃ ಪುನಃ ಹಿಂದೆ ಬರುತ್ತವೆ.

ತತ್ರ ಸಂಸಾರಚಕ್ರಸ್ಯ ಮೋಕ್ಷೋ ಜ್ಞಾನೇನ ದೃಶ್ಯತೇ |
ಅಧ್ಯಾತ್ಮತತ್ತ್ವವಿಜ್ಞಾನಂ ಜ್ಞಾನಮಿತ್ಯಭಿಧೀಯತೇ ||23||

ಸಂಸಾರಚಕ್ರದಿಂದ ಬಿಡುಗಡೆಯು ಜ್ಞಾನದಿಂದ ಉಂಟಾಗುವುದು ಕಂಡುಬರುತ್ತದೆ. ಅಧ್ಯಾತ್ಮ ತತ್ತ್ವಜ್ಞಾನವನ್ನೇ ಜ್ಞಾನವೆಂದು ಹೇಳುತ್ತಾರೆ.

ಜ್ಞಾನಸ್ಯ ಗ್ರಹಣೋಪಾಯಮಾಚಾರಂ ಜ್ಞಾನಿನಸ್ತಥಾ |
ಯಥಾವತ್ಸಂಪ್ರವಕ್ಷ್ಯಾಮಿ ತತ್ ತ್ವಮೇಕಮನಾಃ ಶೃಣು ||24||

ಜ್ಞಾನವನ್ನು ಪಡೆಯುವ ವಿಧಾನ ಶುದ್ಧವಾದ ಆಚಾರ ಮತ್ತು ಜ್ಞಾನಿಗಳಾದ ಗುರುಗಳು. ಅವುಗಳನ್ನು ಸರಿಯಾಗಿ ಹೇಳುವೆನು. ಒಂದೇ ಮನಸ್ಸಿನಿಂದ ಅದನ್ನು ಕೇಳು.

ಬ್ರಾಹ್ಮಣಃ ಕ್ಷತ್ರಿಯೋ ವಾಽಪಿ ಭೂತ್ವಾ ಪೂರ್ವಂ ಗೃಹೇ ಸ್ಥಿತಃ |

ಆನೃಣ್ಯಂ ಸರ್ವತಃ ಪ್ರಾಪ್ಯ ತತಸ್ತಾನ್ ಸಂತ್ಯಜೇದ್ ಗೃಹಾನ್ |
ತತಃ ಸಂತ್ಯಜ್ಯ ಗಾರ್ಹಸ್ಥ್ಯಂ ನಿಶ್ಚಿತೋ ವನಮಾಶ್ರಯೇತ್ ॥25॥
ಬ್ರಾಹ್ಮಣನಾಗಲೀ ಅಥವಾ ಕ್ಷತ್ರಿಯನಾಗಲೀ ಮೊದಲು ಗೃಹಸ್ಥನಾಗಿದ್ದು, ಎಲ್ಲ ಋಣಗಳನ್ನೂ ತೀರಿಸಿ ಅನಂತರ ಗೃಹವನ್ನು ಬಿಡಬೇಕು. ಗಾರ್ಹಸ್ಥ್ಯಧರ್ಮವನ್ನು ಪರಿತ್ಯಾಗ ಮಾಡಿ, ನಿಶ್ಚಯಿಸಿ ವನವನ್ನು ಸೇರಬೇಕು.
ವನೇ ಗುರುಸಮಾಜ್ಞಾತೋ ದೀಕ್ಷೇತ ವಿಧಿಪೂರ್ವಕಮ್ |
ದೀಕ್ಷಾಂ ಪ್ರಾಪ್ಯ ಯಥಾನ್ಯಾಯಂ ಸ್ವವೃತ್ತಂ ಪರಿಪಾಲಯೇತ್ ॥26॥
ವನದಲ್ಲಿ ಗುರುಗಳ ಆಜ್ಞೆಯನ್ನು ಪಡೆದು ವಿಧಿಪೂರ್ವಕವಾಗಿ ದೀಕ್ಷೆಯನ್ನು ಪಡೆದು ಶಾಸ್ತ್ರಕ್ಕೆ ಅನುಗುಣವಾಗಿ ತನ್ನ ನಡತೆಯನ್ನು ರಕ್ಷಿಸಿಕೊಳ್ಳಬೇಕು.
ಗೃಹ್ಣೀಯಾದಪ್ಯುಪಾಧ್ಯಾಯಾನ್ಮೋಕ್ಷಜ್ಞಾನಮನಿಂದಿತಃ |
ದ್ವಿವಿಧಂ ಚ ಪುನರ್ಮೋಕ್ಷಃ ಸಾಂಖ್ಯೋ ಯೋಗ ಇತಿ ಸ್ಮೃತಃ ॥27॥
ಅನಿಂದಿತನಾಗಿ ಉಪಾಧ್ಯಾಯರಿಂದ ಮೋಕ್ಷಜ್ಞಾನವನ್ನು ಸಂಪಾದಿಸಬೇಕು. ಮೋಕ್ಷಸಾಧಕವಾದ ಜ್ಞಾನವು ಪುನಃ ಸಾಂಖ್ಯ ಮತ್ತು ಯೋಗ ಎಂದು ಎರಡು ವಿಧವಾಗಿದೆ ಎಂದು ಹೇಳಲ್ಪಡುತ್ತದೆ.
ಪಂಚವಿಂಶತಿವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ |
ಐಶ್ವರ್ಯಂ ದೇವಸಾರೂಪ್ಯಂ ಯೋಗಶಾಸ್ತ್ರಸ್ಯ ನಿರ್ಣಯಃ |
ತಯೋರನ್ಯತರಂ ಜ್ಞಾನಂ ಶೃಣುಯಾಚ್ಛಿಷ್ಯತಾಂ ಗತಃ ॥28॥
ಇಪ್ಪತ್ತೈದು ತತ್ತ್ವಗಳ ವಿಜ್ಞಾನವು ಸಾಂಖ್ಯವೆಂದು ಹೇಳಲ್ಪಡುತ್ತದೆ. ಅಣಿಮಾದಿ ಐಶ್ವರ್ಯ ಮತ್ತು ದೇವಸಾದೃಶ್ಯ ಇವು ಯೋಗಶಾಸ್ತ್ರದ ಫಲಗಳೆಂದು ನಿರ್ಣಯ. ಗುರುಗಳಿಗೆ ಶಿಷ್ಯನಾಗಿ, ಅವೆರಡರಲ್ಲಿ ಯಾವುದಾದರೂ ಒಂದರ ಜ್ಞಾನವನ್ನು ಶ್ರವಣದಿಂದ ಸಂಪಾದಿಸಬೇಕು.
ನಾಮುಂಡೋ ನಾಪ್ಯಕಾಷಾಯೀ ನಾಪ್ಯಸಂವತ್ಸರೋಷಿತಃ |
ಸಾಂಖ್ಯಯೋಗೌ ನ ಚ ಶ್ರಾವ್ಯೌ ಗುರುಣಾ ಸ್ನೇಹಪೂರ್ವಕಮ್ |
ಸಮಃ ಶೀತೋಷ್ಣಹರ್ಷಾದೀನ್ ವಿಷಹೇತ ಸದಾ ಮುನಿಃ ॥29॥
ಶಿರಸ್ಸನ್ನು ಮುಂಡನೆ ಮಾಡಿಕೊಳ್ಳದೆ, ಕಾಷಾಯವಸ್ತ್ರವನ್ನು ಧರಿಸದೆ, ಗುರುಗಳ ಬಳಿಯಲ್ಲಿ ಒಂದು ಸಂವತ್ಸರ ವಾಸವನ್ನು ಮಾಡದೆ ಗುರುಗಳಿಂದ ಸ್ನೇಹಪೂರ್ವಕವಾಗಿ ಸಾಂಖ್ಯಯೋಗಗಳನ್ನು ಶ್ರವಣ ಮಾಡಬಾರದು. ಮುನಿಯಾದವನು ಶೀತೋಷ್ಣ, ಹರ್ಷ-ಶೋಕಗಳಲ್ಲಿ ಸಮನಾಗಿದ್ದು ಎಲ್ಲವನ್ನೂ ಸಹಿಸಬೇಕು.
ಅಧೃಷ್ಯಃ ಕ್ಷುತ್ಪಿಪಾಸಾಭ್ಯಾಂ ಭವೇಜ್ಜ್ಞಾನಸಮಾಧಿನಾ |
ನ ಕುರ್ವೀತಾನ್ಯಮಾರಂಭಮನಿವೇದ್ಯ ಸ್ವಕಂ ಗುರುಮ್ ॥30॥
ಜ್ಞಾನಸಮಾಧಿಯನ್ನು ಹೊಂದಿ ಹಸಿವು, ನೀರಡಿಕೆಗಳಿಂದ ಅಲುಗಾಡಬಾರದು. ತನ್ನ ಗುರುವಿಗೆ ಹೇಳದೆ ಯಾವ ಕಾರ್ಯವನ್ನೂ ಆರಂಭಿಸಬಾರದು.
ಛಾಯಾಭೂತೋಽಪರಿತ್ಯಾಗೀ ನಿತ್ಯಮೇವ ಭವೇದ್ ಗುರೌ |
ಇಂದ್ರಿಯಾಣೀಂದ್ರಿಯಾರ್ಥೇಭ್ಯ ಉಚಿತೇಭ್ಯೋ ನಿವರ್ತಯೇತ್ |
ತ್ಯಜೇತ್ ಸಂಕಲ್ಪಜಾನ್ ಗ್ರಂಥೀನ್ ಸದಾ ಧ್ಯಾನಪರೋ ಭವೇತ್ ॥
ಗುರುಗಳನ್ನು ಪರಿತ್ಯಜಿಸದೆ ಯಾವಾಗಲೂ ಛಾಯೆಯಂತೆ ಗುರುಗಳನ್ನು ಅನುಸರಿಸಬೇಕು. ಇಂದ್ರಿಯಗಳನ್ನು ಯೋಗ್ಯವಾದ ತಮ್ಮ ವಿಷಯಗಳಿಂದ ಹಿಂದಕ್ಕೆ ತೆಗೆದುಕೊಳ್ಳಬೇಕು. ಸಂಕಲ್ಪದಿಂದ ಉಂಟಾಗುವ ಕರ್ಮಬಂಧನಗಳನ್ನು ತ್ಯಜಿಸಿ ಸದಾ ಜ್ಞಾನಪರನಾಗಬೇಕು.
ಕುಂಡಿಕಾಂ ಚರ್ಮ ಸಂಶಿಕ್ಯಂ ಛತ್ರಂ ಯಷ್ಟಿಮುಪಾನಹೌ |
ಚೇಲಮಿತ್ಯೇವ ನೈತೇಷು ಸ್ಥಾಪಯೇತ್ ಸ್ವಾಮ್ಯಮಾತ್ಮನಃ ॥32॥
ಕಮಂಡಲು, ಕೃಷ್ಣಾಜಿನ, ಭಾರವನ್ನು ಹೊರುವ ನೆಲುವು, ಛತ್ರಿ, ದಂಡ, ಪಾದರಕ್ಷೆ, ವಸ್ತ್ರ - ಇವುಗಳಲ್ಲಿ ತನ್ನ ಸ್ವಾಮ್ಯವನ್ನು ಪ್ರತಿಷ್ಠಿಸಬಾರದು.
ಗುರೋಃ ಪೂರ್ವಂ ಸಮುತ್ತಿಷ್ಠೇತ್ ಜನ್ಯಂ ತಸ್ಯ ನ ಸಂವಿಶೇತ್ |
ನೈವಾವಿಜ್ಞಾಪ್ಯ ಭರ್ತಾರಮಾವಶ್ಯಕಮಪಿ ವ್ರಜೇತ್ ॥33॥
ಗುರುವಿಗಿಂತ ಮೊದಲು ಹಾಸಿಗೆಯಿಂದ ಏಳಬೇಕು. ಅವರಿಗಾಗಿ ಇಟ್ಟ ಆಸನ, ಶಯನಾದಿ ಯಾವ ವಸ್ತುವನ್ನೂ ಉಪಯೋಗಿಸಬಾರದು. ಗುರುಗಳಿಗೆ ತಿಳಿಸದೆ ಆವಶ್ಯಕ ಕಾರ್ಯಗಳಿಗೂ ಹೋಗಬಾರದು.
ದ್ವಿರಹ್ನಾ ಸ್ನಾನಸಾದೇನ ಪ್ರಾಕ್ಸಂಧ್ಯಮಭಿಷೇಚನಮ್ |
ಏಕಕಾಲಾಶನಂ ಚಾಸ್ಯ ವಿಹಿತಂ ಯತಿಭಿಃ ಪುರಾ ॥34॥
ಹಗಲಿನಲ್ಲಿಯೇ ಎರಡು ಸ್ನಾನವನ್ನು ಮಾಡುವ ಭಯದಿಂದ ಸಂಧ್ಯಾ ಕಾಲದಲ್ಲಿಯೇ ಸ್ನಾನವನ್ನು ಮಾಡಬೇಕು. ಪ್ರಯತ್ನಶೀಲರಾದವರಿಗೆ ಹಿಂದಿನಿಂದಲೂ ಒಂದೇ ಆಹಾರಸ್ವೀಕಾರವು ವಿಹಿತವಾಗಿದೆ (ಲಕ್ಷಾಲಂಕಾರ).
ಭೈಕ್ಷಂ ಸರ್ವತ್ರ ಗೃಹ್ಣೀಯಾಚ್ಚಿಂತಯೇತ್ ಸತತಂ ನಿಶಿ |
ಕಾರಣೇ ಚಾಪಿ ಸಂಪ್ರಾಪ್ತೇ ನ ಕುಪ್ಯೇತ ಕದಾಚನ ॥35॥
ಎಲ್ಲ ಕಡೆಯಿಂದಲೂ ಭೈಕ್ಷ್ಯವನ್ನು ಸ್ವೀಕರಿಸಬೇಕು. ರಾತ್ರಿಯಲ್ಲಿ ಸತತವಾಗಿ ತತ್ತ್ವಚಿಂತನೆಯನ್ನು ಮಾಡಬೇಕು. ಕೋಪಗೊಳ್ಳುವ ಕಾರಣವಿದ್ದರೂ ಎಂದೂ ಕೋಪಗೊಳ್ಳಬಾರದು.

ಬ್ರಹ್ಮಚರ್ಯಂ ವನೇ ವಾಸಃ ಶೌಚಮಿಂದ್ರಿಯಸಂಯಮಃ |
ದಯಾ ಚ ಸರ್ವಭೂತೇಷು ತಸ್ಯ ಧರ್ಮಃ ಸನಾತನಃ ॥36॥
ಬ್ರಹ್ಮಚರ್ಯ, ವನವಾಸ, ಶೌಚ, ಇಂದ್ರಿಯನಿಗ್ರಹ, ಸರ್ವಭೂತ ದಯಾ - ಇವುಗಳು ಅವನ ಸನಾತನ ಧರ್ಮಗಳು.
ವಿಮುಕ್ತಃ ಸರ್ವಪಾಪೇಭ್ಯೋ ಲಘ್ವಾಹಾರೋ ಜಿತೇಂದ್ರಿಯಃ |
ಆತ್ಮಯುಕ್ತಃ ಪರಾಂ ಬುದ್ಧಿಂ ಲಭತೇ ಪಾಪನಾಶಿನೀಮ್ ॥37॥
ಅಂತಹವನು ಅಲ್ಪಹಾರವನ್ನು ಸೇವಿಸಿ, ಜಿತೇಂದ್ರಿಯನಾಗಿ, ಸರ್ವಪಾಪಗಳಿಂದ ಮುಕ್ತನಾಗಿ, ಯಾವಾಗಲೂ ಪರಮಾತ್ಮನ ಚಿಂತನೆಯಿಂದ ಕೂಡಿ, ಪಾಪನಾಶಿನಿಯಾದ ಶ್ರೇಷ್ಠವಾದ ಬುದ್ಧಿಯನ್ನು ಹೊಂದುತ್ತಾನೆ.
ಯದಾ ಭಾವಂ ನ ಕುರುತೇ ಸರ್ವಭೂತೇಷು ಪಾಪಕಮ್ |
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥38॥
ಯಾವಾಗ ಸರ್ವಭೂತಗಳಲ್ಲಿಯೂ ಕರ್ಮದಿಂದಾಗಲೀ, ಮನಸ್ಸಿನಿಂದಾಗಲೀ ಅಥವಾ ಮಾತಿನಿಂದಾಗಲೀ ಪಾಪಬುದ್ಧಿಯನ್ನು ಮಾಡುವುದಿಲ್ಲವೋ ಆಗ ಬ್ರಹ್ಮಪ್ರಾಪ್ತಿಯನ್ನು ಹೊಂದುತ್ತಾನೆ.
ಅನೀರ್ಷ್ಯುರನಹಂಕಾರೋ ನಿರ್ವೇದಂ ಭೃತಕೋ ಯಥಾ |
ವೀತಶೋಕಭಯಾಬಾಧಃ ಪದಂ ಪ್ರಾಪ್ನೋತ್ಯನುತ್ತಮಮ್ ॥39॥
ಅಸೂಯೆಯನ್ನು ಪಡದೆ ಅಹಂಕಾರಶೂನ್ಯನಾಗಿ ಭಾರವನ್ನು ಹೊರುವವನಂತೆ ವೈರಾಗ್ಯವನ್ನು ಹೊಂದಿ, ಶೋಕವನ್ನು ಕಳೆದುಕೊಂಡು, ಭಯದ ಬಾಧೆಯಿಲ್ಲದೆ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ.
ತುಲ್ಯನಿಂದಾಸ್ತುತಿರ್ಮೌನೀ ಸಮಲೋಷ್ಟಾಶ್ಮಕಾಂಚನಃ |
ಸಮಃ ಶತ್ರೌ ಚ ಮಿತ್ರೇ ಚ ನಿರ್ವಾಣಮಧಿಗಚ್ಛತಿ ॥40॥
ಮೌನವನ್ನು ಮಾಡಿ, ನಿಂದಾ-ಸ್ತುತಿಗಳಲ್ಲಿ ಸಮನಾಗಿದ್ದು, ಲೋಷ್ಟಾಶ್ಮ ಕಾಂಚನಗಳಲ್ಲಿ ಸಮನಾಗಿದ್ದು, ಶತ್ರು-ಮಿತ್ರರಲ್ಲಿ ಸಮನಾಗಿದ್ದು ಮೋಕ್ಷವನ್ನು ಹೊಂದುತ್ತಾನೆ.
ಏವಂ ಯುಕ್ತಸಮಾಚಾರಸ್ತತ್ಪರೋಽಧ್ಯಾತ್ಮಚಿಂತಕಃ |
ಜ್ಞಾನಾಭ್ಯಾಸೇನ ತೇನೈವ ಪ್ರಾಪ್ನೋತಿ ಪರಮಾಂ ಗತಿಮ್ ॥41॥
ಹೀಗೆ ಯೋಗ್ಯವಾದ ಒಳ್ಳೆಯ ಆಚಾರಗಳಿಂದ ಕೂಡಿ ಭಗವತ್ಪರನಾಗಿ, ಅಧ್ಯಾತ್ಮ ಚಿಂತಕನಾಗಿ ಅದೇ ಜ್ಞಾನ-ಚಿಂತನೆಯಿಂದ ಪರಮಗತಿಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಮೋಕ್ಷಧರ್ಮಪ್ರಶಂಸಾ ನಾಮ ಅಷ್ಟಾವಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ವೈರಾಗ್ಯಕ್ಕೆ ನಿಮಿತ್ತವಾದ
ಸಂಸಾರದ ಅಸಾರತ್ವಕಥನ.
ಮಹೇಶ್ವರಃ
ಅನುದ್ವಿಗ್ನಮತೇರ್ಜಂತೋರಸ್ಮಿನ್ ಸಂಸಾರಮಂಡಲೇ |
ಶೋಕವ್ಯಾಧಿಜರಾದುಃಖೇ ನಿರ್ವಾಣಂ ನೋಪಪದ್ಯತೇ ॥1॥
ತಸ್ಮಾದುದ್ವೇಗಜನನಂ ಮನೋಽವಸ್ಥಾಪನಂ ತಥಾ |
ಜ್ಞಾನಂ ತೇ ಸಂಪ್ರವಕ್ಷ್ಯಾಮಿ ತನ್ಮೂಲಮಮೃತಂ ಹಿ ವೈ ॥2॥
ಮಹೇಶ್ವರ ಶೋಕ, ವ್ಯಾಧಿ, ಜರಾ (ಮುಪ್ಪು), ದುಃಖದಿಂದ ಕೂಡಿದ ಈ ಸಂಸಾರವೆಂಬ ಮಂಡಲದಲ್ಲಿ ಉದ್ವೇಗ ಹೊಂದದ ಜಂತುವಿಗೆ ಮೋಕ್ಷವು ಉಪಪನ್ನವಾಗುವುದಿಲ್ಲ. ಆದ್ದರಿಂದ ಸಂಸಾರದಲ್ಲಿ ಉದ್ವೇಗವನ್ನುಂಟು ಮಾಡಿ, ಮನಸ್ಸನ್ನು ಒಂದು ಕಡೆ ನೆಲೆಸುವಂತಹ ಜ್ಞಾನವನ್ನು ನಿನಗೆ ಉಪದೇಶ ಮಾಡುವೆನು. ಅಂತಹ ಜ್ಞಾನವು ಮೋಕ್ಷಕ್ಕೆ ಕಾರಣವಾದುದು.
ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ |
ದಿವಸೇದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥3॥
ಮೂಢನಾದವನಿಗೆ ಪ್ರತಿನಿತ್ಯವೂ ಶೋಕವನ್ನು ಪಡಲು ಸಾವಿರ ಕಾರಣಗಳೂ, ಭಯವನ್ನು ಹೊಂದಲು ನೂರು ಕಾರಣಗಳೂ ಇರುತ್ತವೆ. ಪಂಡಿತನಿಗೆ ಇರುವುದಿಲ್ಲ.
ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ |
ಅಹೋ ದುಃಖಮಿತಿ ಧ್ಯಾಯನ್ ಶೋಕಸ್ಯ ಪದಮಾವ್ರಜೇತ್ ॥4॥
ಧನವಾಗಲೀ, ಪತ್ನಿಯಾಗಲೀ, ಪುತ್ರನಾಗಲೀ, ಪಿತೃವಾಗಲೀ ಮೃತನಾದರೆ ಅಯ್ಯೋ ದುಃಖ ಎಂದು ಚಿಂತಿಸುತ್ತಾ ಮನುಷ್ಯನು ಶೋಕಕ್ಕೆ ಸಿಲುಕುತ್ತಾನೆ.
ದ್ರವ್ಯೇಷು ಸಮತೀತೇಷು ಯೇ ಗುಣಾಸ್ತಾನ್ನ ಚಿಂತಯೇತ್ |
ತಾನನಾದ್ರಿಯಮಾಣಸ್ಯ ಶೋಕಬಂಧಃ ಪ್ರಣಶ್ಯತಿ ॥5॥
ದ್ರವ್ಯಗಳು ಹೊರಟು ಹೋದಮೇಲೆ ಅವುಗಳಲ್ಲಿದ್ದ ಗುಣಗಳನ್ನು ಚಿಂತಿಸಬಾರದು. ಅವುಗಳನ್ನು ಆದರಿಸದಿದ್ದರೆ ಶೋಕಬಂಧವು

ನಾಶವನ್ನು ಹೊಂದುತ್ತದೆ.
ಸಂಪ್ರಯೋಗಾದನಿಷ್ಟಸ್ಯ ವಿಪ್ರಯೋಗಾತ್ ಪ್ರಿಯಸ್ಯ ಚ |
ಮಾನುಷಾ ಮಾನಸೈರ್ದುಃಖೈಃ ಸಂಯುಜ್ಯಂತೇಽಲ್ಪಬುದ್ಧಯಃ ॥6॥
ಅಲ್ಪಬುದ್ಧಿಯುಳ್ಳ ಮನುಷ್ಯರು ಅನಿಷ್ಟ ಪ್ರಾಪ್ತಿಯಿಂದ ಮತ್ತು ಪ್ರಿಯದ ನಿವೃತ್ತಿಯಿಂದ ಮಾನಸ ದುಃಖಗಳನ್ನು ಹೊಂದುತ್ತಾರೆ.
ಮೃತಂ ವಾ ಯದಿ ವಾ ನಷ್ಟಂ ಯೋಽತೀತಮನುಶೋಚತಿ |
ಸಂತಾಪೇನ ಚ ಯುಜ್ಯೇತ ತಚ್ಚಾಸ್ಯ ನ ನಿವರ್ತತೇ ॥7॥
ಯಾವನು ಮೃತವಾದ ಅಥವಾ ನಷ್ಟವಾದ ವಸ್ತುವನ್ನು ಕುರಿತು ಶೋಕಪಡುತ್ತಾ ಸಂತಾಪದಿಂದ ಕೂಡಿರುತ್ತಾನೆಯೋ ಅವರಿಗೆ ಆ ವಸ್ತುವು ಹಿಂದೆ ಬರುವುದಿಲ್ಲ.
ಉತ್ಪನ್ನೇ ತ್ವಿಹ ಮಾನುಷ್ಯೇ ಗರ್ಭಪ್ರಭೃತಿ ಮಾನವಮ್ |
ವಿವಿಧಾನ್ಯುಪವರ್ತಂತೇ ದುಃಖಾನಿ ಚ ಸುಖಾನಿ ಚ ॥8॥
ಮನುಷ್ಯನಿಗೆ ಗರ್ಭವಾಸದಿಂದ ಹಿಡಿದು ವಿವಿಧವಾದ ದುಃಖಗಳು ಮತ್ತು ಸುಖಗಳು ಬರುತ್ತಿರುತ್ತವೆ.
ತಯೋರೇಕತರೋ ಮಾರ್ಗೋ ಯದ್ಯೇನಮಭಿಸನ್ನಮೇತ್ |
ಸುಖಂ ಪ್ರಾಪ್ಯ ನ ಸಂಹೃಷ್ಯೇದ್ ದುಃಖಂ ಪ್ರಾಪ್ಯ ನ ಸಂಜ್ವರೇತ್ ॥9॥
ಅವುಗಳನ್ನು ನಿರ್ವಾಹ ಮಾಡುವುದಕ್ಕೆ ಒಂದೇ ಮಾರ್ಗವಿದೆ. ಸುಖ ಬಂದಾಗ ಹರ್ಷಪಡಬಾರದು, ದುಃಖ ಉಂಟಾದಾಗ ಸಂತಾಪ ಪಡಬಾರದು.
ದೋಷದರ್ಶೀ ಭವೇತ್ ತತ್ರ ಯತ್ರ ಸ್ನೇಹಃ ಪ್ರವರ್ತತೇ |
ಅನಿಷ್ಟೇನಾನ್ವಿತಂ ಪಶ್ಯೇದ್ ಯಥಾ ಕ್ಷಿಪ್ರಂ ವಿರಜ್ಯತೇ ॥10॥
ಎಲ್ಲಿ ಸ್ನೇಹವುಂಟಾಗುತ್ತದೆಯೋ ಅಲ್ಲಿರುವ ದೋಷವನ್ನು ನೋಡಬೇಕು. ಅದು ಅನಿಷ್ಟದಿಂದ ಕೂಡಿದೆ ಎಂದು ತಿಳಿದರೆ ಶೀಘ್ರವಾಗಿ ಸ್ನೇಹವು ಹೊರಟು ಹೋಗುತ್ತದೆ.
ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ |
ಸಮೇತ್ಯ ಚ ವ್ಯಪೇಯಾತಾಂ ತದ್ವಜ್ಜ್ಞಾತಿಸಮಾಗಮಃ ॥11॥
ಹೇಗೆ ದೊಡ್ಡ ಸಮುದ್ರದಲ್ಲಿ ಎರಡು ಕಾಷ್ಠಗಳು ಪರಸ್ಪರವಾಗಿ ಸೇರುತ್ತವೆಯೋ, ಸೇರಿದ ಮೇಲೆ ಬಿಟ್ಟು ಹೋಗುತ್ತವೆಯೋ ಅದರಂತೆ ಸಂಸಾರದಲ್ಲಿ ಬಂಧುಗಳ ಸಮಾಗಮ.
ಅದರ್ಶನಾದಾಪತಿತಾಃ ಪುನಶ್ಚಾದರ್ಶನಂ ಗತಾಃ |
ಸ್ನೇಹಸ್ತತ್ರ ನ ಕರ್ತವ್ಯೋ ವಿಪ್ರಯೋಗೋ ಹಿ ತೈರ್ಧ್ರುವಮ್ ॥12॥
ಕಾಣದ ಸ್ಥಳದಿಂದ ಬಂದರು ಪುನಃ ಕಾಣದ ಸ್ಥಳಕ್ಕೆ ಹೊರಟು ಹೋದರು. ಅವರಲ್ಲಿ ಸ್ನೇಹವನ್ನು ಮಾಡಬಾರದು. ಅವರಿಂದ ವಿಯೋಗವನ್ನು ಹೊಂದುವುದು ನಿಶ್ಚಿತವಾದುದು.
ಕುಟುಂಬಂ ಪುತ್ರದಾರಂ ಚ ಶರೀರಂ ಧನಸಂಚಯಃ |
ಪಾರಕ್ಯಮಧ್ರುವಂ ಸರ್ವಂ ಕಿಂ ಸ್ವಂ ಸುಕೃತದುಷ್ಕೃತೇ ॥13॥
ಕುಟುಂಬ, ಪತ್ನೀ, ಪುತ್ರರು, ಶರೀರ, ಧನರಾಶಿ ಎಲ್ಲವೂ ಅನಿತ್ಯವಾದುದು ಮತ್ತು ಇನ್ನೊಬ್ಬರಿಗೆ ಸೇರಿದುದು. ಇನ್ನು ತನ್ನ ಸುಕೃತ-ದುಷ್ಕೃತಗಳು ಅನಿತ್ಯವಾದವುಗಳು ಎಂದು ಹೇಳಬೇಕಾದುದಿಲ್ಲ.
ಪುತ್ರದಾರಕುಟುಂಬೇಷು ಸಕ್ತಾಃ ಸೀದಂತಿ ಜಂತವಃ |
ಸರಃಪಂಕಾರ್ಣವೇ ಮಗ್ನಾ ಜೀರ್ಣಾ ಇವ ಮಹಾಗಜಾಃ ॥14॥
ಪತ್ನೀ-ಪುತ್ರ, ಕುಟುಂಬಗಳಲ್ಲಿ ಆಸಕ್ತರಾದ ಮನುಷ್ಯರು ಕೆಸರಿನಲ್ಲಿ ಮುಳುಗಿದ ವೃದ್ಧವಾದ ಮಹಾಗಜಗಳಂತೆ ನಾಶವನ್ನು ಹೊಂದುತ್ತಾರೆ.
ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ |
ಅಸಂಖ್ಯೇಯಾನ್ಯತೀತಾನಿ ತಥೈವಾನಾಗತಾನಿ ಚ ॥15॥
ಮಾತಾ-ಪಿತೃ ಸಹಸ್ರಗಳು, ಪತ್ನೀ-ಪುತ್ರ ಶತಗಳು ಅಸಂಖ್ಯೇಯವಾಗಿ ಬಂದು ಹೋಗಿವೆ ಮತ್ತು ಮುಂದೆ ಬರಲಿವೆ.
ನ ತೇಷಾಂ ಚ ಮಯಾ ಕಾರ್ಯಂ ನ ಕಾರ್ಯಂ ಮಮ ತೈರಪಿ |
ಅತೀತಮನತೀತಂ ತದಿತಿ ಪಶ್ಯನ್ನ ಮುಹ್ಯತಿ ॥16॥
ಅವರಿಗೆ ನನ್ನಿಂದಾಗಬೇಕಾದುದು, ನನಗೆ ಅವರಿಂದಾಗಬೇಕಾದುದು ಏನೂ ಇಲ್ಲ. ಕೆಲವು ಬಂದು ಹೋಗಿವೆ, ಇನ್ನು ಕೆಲವು ಮುಂದೆ ಬರುತ್ತವೆ ಎಂದು ಚಿಂತಿಸುವವನು ಮೋಹಕ್ಕೆ ಒಳಗಾಗುವುದಿಲ್ಲ.
ದುಃಖೋಪಘಾತೇ ಶಾರೀರೇ ಮಾನಸೇ ವಾ ಸಮುತ್ಥಿತೇ |
ಯಸ್ಮಿನ್ನ ಶಕ್ಯತೇ ಕರ್ತುಂ ಯತ್ನಾತ್ ತನ್ನಾನುಚಿಂತಯೇತ್ ॥17॥
ಶಾರೀರಿಕ ದುಃಖವಾಗಲೀ, ಮಾನಸ ದುಃಖವಾಗಲೀ ಸಂಭವಿಸಿದರೆ ಅದನ್ನು ಪ್ರಯತ್ನದಿಂದ ಪರಿಹರಿಸಲು ಸಾಧ್ಯವಿಲ್ಲದಿದ್ದರೆ ಅದನ್ನು ಕುರಿತು ಚಿಂತಿಸಬಾರದು.
ಯನ್ನಿಮಿತ್ತಂ ಭವೇತ್ ಶೋಕಸ್ತ್ರಾಸೋ ವಾ ದುಃಖಮೇವ ವಾ |
ಆಯಾಸೋ ವಾ ಯತೋಮೂಲಸ್ತದೇಕಾಂಗಮಪಿ ತ್ಯಜೇತ್ ॥18॥
ಶೋಕವಾಗಲೀ, ಭಯ-ದುಃಖಗಳಾಗಲೀ ಯಾವ ನಿಮಿತ್ತದಿಂದ ಉಂಟಾಗಿವೆಯೋ, ಆಯಾಸವು ಯಾವ ನಿಮಿತ್ತದಿಂದ ಉಂಟಾಗಿದೆಯೋ ಆ ನಿಮಿತ್ತಕ್ಕೆ ಒಂದೇ ಒಂದು ಅವಯವವಿದ್ದರೂ ಅದನ್ನು ತ್ಯಜಿಸಬೇಕು.

ಅನಿತ್ಯಂ ಯೌವನಂ ರೂಪಂ ಜೀವಿತಂ ರತ್ನಸಂಚಯಃ |
ಐಶ್ವರ್ಯಂ ಸ್ವಸ್ಥತಾ ಚೇತಿ ನ ಮುಹ್ಯೇತ್ ತತ್ರ ಪಂಡಿತಃ ॥19॥
ಯೌವನ, ರೂಪ, ಜೀವನ, ರತ್ನಸಂಗ್ರಹ, ಐಶ್ವರ್ಯ, ಆರೋಗ್ಯ- ಎಲ್ಲವೂ ಅನಿತ್ಯವೆಂದು ತಿಳಿದು ಪಂಡಿತನು ಮೋಹಕ್ಕೆ ಒಳಗಾಗುವುದಿಲ್ಲ.
ಸುಖಮೇಕಾಂತತೋ ನಾಸ್ತಿ ಶಕ್ರಸ್ಯಾಪಿ ತ್ರಿವಿಷ್ಟಪೇ |
ತತ್ರಾಪಿ ಸುಮಹದ್ ದುಃಖಂ ಸುಖಮಲ್ಪತರಂ ಭವೇತ್ |
ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ ॥20॥
ಸ್ವರ್ಗದಲ್ಲಿ ಇಂದ್ರನಿಗೂ ಸುಖವೇ ಇರುತ್ತದೆ ಎಂಬ ನಿಯಮವಿಲ್ಲ. ಅಲ್ಲಿಯೂ ಬಹಳ ದುಃಖ ಮತ್ತು ಅಲ್ಪ ಸುಖವಿರುತ್ತದೆ. ನಿತ್ಯವಾದ ದುಃಖವಾಗಲೀ, ನಿತ್ಯವಾದ ಸುಖವಾಗಲೀ ಯಾರಿಗೂ ದೊರೆಯುವುದಿಲ್ಲ.
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ |
ಕ್ಷಯಾಂತಾ ನಿಚಯಾಃ ಸರ್ವೇ ಪತನಾಂತಾಃ ಸಮುಚ್ಛ್ರಯಾಃ ॥21॥
ದುಃಖದ ನಂತರದಲ್ಲಿ ಸುಖ, ಸುಖದ ಅನಂತರದಲ್ಲಿ ದುಃಖ. ಎಲ್ಲ ಸಂಚಯಗಳು ಕ್ಷಯದಲ್ಲಿ ಕೊನೆಗೊಳ್ಳುತ್ತವೆ. ಎಲ್ಲ ಔನ್ನತ್ಯಗಳು ಪತನದಲ್ಲಿ ಕೊನೆಗೊಳ್ಳುತ್ತವೆ.
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಚ ಜೀವಿತಮ್ |
ಉಚ್ಛ್ರಯಾನ್ ವಿನಿಪಾತಾಂಶ್ಚ ದೃಷ್ಟ್ವಾ ಪ್ರತ್ಯಕ್ಷತಃ ಸ್ವಯಮ್ |
ಅನಿತ್ಯಮಸುಖಂ ಚೇತಿ ವ್ಯವಸ್ಯೇತ್ ಸರ್ವಮೇವ ಚ ॥22॥
ಸಂಯೋಗಗಳು ವಿಯೋಗದಲ್ಲಿ ಕೊನೆಗೊಳ್ಳುತ್ತವೆ. ಜೀವನವು ಮರಣದಲ್ಲಿ ಕೊನೆಗೊಳ್ಳುತ್ತದೆ. ಔನ್ನತ್ಯಗಳನ್ನೂ ಪತನಗಳನ್ನೂ ಪ್ರತ್ಯಕ್ಷವಾಗಿ ನೋಡಿ, ಎಲ್ಲವೂ ಅನಿತ್ಯ ಮತ್ತು ದುಃಖದಿಂದ ಕೂಡಿವೆ ಎಂದು ನಿರ್ಧರಿಸಬೇಕು.
ಅರ್ಥಾನಾಮಾರ್ಜನೇ ದುಃಖಮಾರ್ಜಿತಾನಾಂ ತು ರಕ್ಷಣೇ |
ನಾಶೇ ದುಃಖಂ ವ್ಯಯೇ ದುಃಖಂ ಧಿಗರ್ಥಂ ದುಃಖಭಾಜನಮ್ ॥23॥
ಧನವನ್ನು ಗಳಿಸುವುದರಲ್ಲಿ ದುಃಖ, ಗಳಿಸಿದುದನ್ನು ರಕ್ಷಣೆ ಮಾಡಲು ದುಃಖ, ರಕ್ಷಣೆ ಮಾಡಿದುದು ನಾಶವಾದರೆ ದುಃಖ, ಖರ್ಚಾದರೆ ದುಃಖ. ದುಃಖಕ್ಕೆ ಪಾತ್ರವಾದ ಧನಕ್ಕೆ ಧಿಕ್ಕಾರವಿರಲಿ.
ಅರ್ಥವಂತಂ ನರಂ ನಿತ್ಯಂ ಪಂಚ ನಿಘ್ನಂತಿ ಶತ್ರವಃ |
ರಾಜಾ ತಸ್ಕರದಾಯಾದಾ ಭೂತಾನಿ ಕ್ಷಯ ಏವ ಚ ॥24॥
ಧನವಂತನಾದ ಪುರುಷನನ್ನು ಯಾವಾಗಲೂ ರಾಜ, ಚೋರ, ದಾಯಾದಿಗಳು, ಭೂತಗಳು ಮತ್ತು ವಿನಾಶ ಎಂಬ ಈ ಐದು ಶತ್ರುಗಳು ಕೊಲ್ಲುತ್ತಾರೆ.
ಅರ್ಥ ಏವ ಹ್ಯನರ್ಥಸ್ಯ ಮೂಲಮಿತ್ಯವಧಾರಯ |
ನ ಹ್ಯನರ್ಥಾಃ ಪ್ರಬಾಧಂತೇ ನರಮರ್ಥವಿವರ್ಜಿತಮ್ ॥25॥
ಅರ್ಥವೇ ಅನರ್ಥಕ್ಕೆ ಮೂಲವಾದುದು ಎಂದು ತಿಳಿ. ಅರ್ಥಹೀನನಾದ ಮನುಷ್ಯನನ್ನು ಅನರ್ಥಗಳು ಬಾಧಿಸುವುದಿಲ್ಲ.
ಅರ್ಥಪ್ರಾಪ್ತಿರ್ಮಹದ್ದುಃಖಮಾಕಿಂಚನ್ಯಂ ಪರಂ ಸುಖಮ್ |
ಉಪದ್ರವೇಷು ಚಾರ್ಥಾನಾಂ ದುಃಖಂ ಹಿ ನಿಯತಂ ಭವೇತ್ ॥26॥
ಅರ್ಥಪ್ರಾಪ್ತಿಯು ದೊಡ್ಡ ದುಃಖ. ದಾರಿದ್ರ್ಯವು ಪರಮಸುಖ. ಅರ್ಥಗಳಿಗೆ ತೊಂದರೆಯಾದರೆ ದುಃಖವು ನಿಯಮೇನ ಉಂಟಾಗುತ್ತದೆ.
ಧನಲೋಭೇನ ತೃಷ್ಣಾಯಾ ನ ತೃಪ್ತಿರುಪಲಭ್ಯತೇ |
ಲಬ್ಧಾಶ್ರಯೋ ವಿವರ್ಧೇತ ಸಮಿದ್ಭಿರಿವ ಪಾವಕಃ ॥27॥
ಧನಲೋಭದ ನಿಮಿತ್ತದಿಂದಾಗಿ ಆಸೆಗೆ ಎಂದೂ ತೃಪ್ತಿಯುಂಟಾಗುವುದಿಲ್ಲ. ಆಸೆಗೆ ಒಂದು ಆಶ್ರಯವು ದೊರೆತರೆ ಸಮಿತ್ತುಗಳಿಂದ ಅಗ್ನಿಯಂತೆ ಅದು ಅಭಿವೃದ್ಧಿಯನ್ನು ಹೊಂದುತ್ತದೆ.
ಜಿತ್ವಾಽಪಿ ಪೃಥಿವೀಂ ಕೃತ್ಸ್ನಾಂ ಚತುಃಸಾಗರಮೇಖಲಾಮ್ |
ಸಾಗರಾಣಾಂ ಪುನಃ ಪಾರಂ ಜೇತುಮಿಚ್ಛತ್ಯಸಂಶಯಮ್ ॥28॥
ಚತುಃಸಾಗರಪರ್ಯಂತವಾದ ಸಮಗ್ರವಾದ ಭೂಮಿಯನ್ನು ಮನುಷ್ಯನು ಗೆದ್ದರೂ ಪುನಃ ಸಾಗರದ ಆಚೆದಡವನ್ನು ಜಯಿಸಲು ಇಚ್ಛಿಸುತ್ತಾನೆ.
ಅಲಂ ಪರಿಗ್ರಹೇಣೇಹ ದೋಷವಾನ್ ಹಿ ಪರಿಗ್ರಹಃ |
ಕೋಶಕಾರಃ ಕೃಮಿರ್ದೇವಿ ಬಧ್ಯತೇ ಹಿ ಪರಿಗ್ರಹಾತ್ ॥29॥
ಪರಿಗ್ರಹವನ್ನು ನಿಲ್ಲಿಸಬೇಕು. ಪರಿಗ್ರಹದಲ್ಲಿ ದೋಷವಿದೆ. ದೇವಿಯೇ, ಕೀಟವು ಪರಿಗ್ರಹದ ಕಾರಣದಿಂದಾಗಿ ಬಂಧನಕ್ಕೆ ಒಳಗಾಗುತ್ತದೆ.
ಯ ಏಕಾಂ ಪೃಥಿವೀಂ ಕೃತ್ಸ್ನಾಮೇಕಚ್ಛತ್ರಾಂ ಪ್ರಶಾಸ್ತಿ ಚ |
ಏಕಸ್ಮಿನ್ನೇವ ರಾಷ್ಟ್ರೇ ತು ಸ ಚಾಪಿ ನಿವಸೇನ್ನೃಪಃ ॥30॥
ತಸ್ಮಿನ್ ರಾಷ್ಟ್ರೇಽಪಿ ನಗರಮೇಕಮೇವಾಧಿತಿಷ್ಠತಿ |
ನಗರೇಽಪಿ ಗೃಹಂ ಚೈಕಂ ಭವೇತ್ ತಸ್ಯ ನಿವೇಶನಮ್ ॥31॥
ಏಕ ಏವ ಪ್ರತಿಷ್ಠಾ ಸ್ಯಾದಾವಾಸಂ ತದ್ ಗೃಹೇಽಪಿ ಚ |
ಆವಾಸೇ ಶಯನಂ ಚೈಕಂ ನಿಶಿ ಯತ್ರ ಪ್ರಲೀಯತೇ ॥32॥
ಶಯನಸ್ಯಾರ್ಧಮೇವಾಸ್ಯ ಸ್ತ್ರಿಯಾಸ್ತ್ವರ್ಧಂ ವಿಧೀಯತೇ |

ತದನೇನ ಪ್ರಸಂಗೇನ ಸ್ವಲ್ಪೇನೈವ ಹಿ ಯುಜ್ಯತೇ ॥33॥
ಯಾವ ರಾಜನು ಏಕಚಕ್ರಾಧಿಪತಿಯಾಗಿ ಭೂಮಿಯನ್ನೆಲ್ಲಾ ಆಳುತ್ತಾನೆಯೋ ಅವನೂ, ಒಂದೇ ರಾಷ್ಟ್ರದಲ್ಲಿ ವಾಸ ಮಾಡುತ್ತಾನೆ, ಆ ರಾಷ್ಟ್ರದಲ್ಲಿಯೂ ಒಂದು ನಗರದಲ್ಲಿ ವಾಸ ಮಾಡುತಾನೆ, ಆ ನಗರದಲ್ಲಿಯೂ, ಒಂದು ಗೃಹದಲ್ಲಿ ವಾಸ ಮಾಡುತ್ತಾನೆ, ಆ ಗೃಹದಲ್ಲಿಯೂ, ಒಂದೇ ಒಂದು ಆವಾಸ ಸ್ಥಳದಲ್ಲಿ ಅಥವಾ ಕೋಣೆಯಲ್ಲಿ ವಾಸ ಮಾಡುತ್ತಾನೆ, ಆ ಕೋಣೆಯಲ್ಲಿಯೂ, ಒಂದೇ ಹಾಸಿಗೆಯ ಇದ್ದರೆ ರಾತ್ರಿ ಅದರಲ್ಲಿ ಮಲಗುತ್ತಾನೆ. ಆದರೂ ಹಾಸಿಗೆ ಅರ್ಧವೇ ಅವನ ಭಾಗ. ಉಳಿದ ಅರ್ಧ ಅವನ ಪತ್ನಿಯದು (ಸಮಸ್ತ ಭೂಮಿಗೆ ಅಧಿಪತಿಯಾದರೂ ಅವನು ಭೋಗಿಸುವ ಪ್ರದೇಶವು ಅತ್ಯಲ್ಪವಾದುದು). ಈ ದೃಷ್ಟಾಂತದಿಂದ ಸ್ವಲ್ಪದಿಂದಲೇ ತೃಪ್ತಿಯನ್ನು ಹೊಂದಬೇಕು.
ಸರ್ವಂ ಮಮೇತಿ ಸಮ್ಮೂಢೋ ಜನಃ ಪಶ್ಯತಿ ಬಾಲಿಶಃ |
ಏವಂ ಸರ್ವೋಪಭೋಗೇಷು ಸ್ವಲ್ಪಮಸ್ಯ ಪ್ರಯೋಜನಮ್ ॥34॥
ಎಲ್ಲವೂ ನನಗೆ ಬೇಕು ಎಂದು ಬಾಲಿಶನಾದ ಮೂಢ ಮನುಷ್ಯನು ಚಿಂತಿಸುತ್ತಾನೆ. ಆದರೆ ಎಲ್ಲ ಭೋಗಗಳಲ್ಲಿಯೂ ಅವನ ಭಾಗವು ಸ್ವಲ್ಪವೇ ಇರುತ್ತದೆ.
ತಂಡುಲಪ್ರಸ್ಥಮಾತ್ರೇಣ ಯಾತ್ರಾ ಸ್ಯಾತ್ಸರ್ವದೇಹಿನಾಮ್ |
ತತೋ ಭೂಯಸ್ತರೋ ಭಾಗೋ ದುಃಖಾಯ ತಪನಾಯ ಚ ॥35॥
ಒಂದು ಹಿಡಿ ಅಕ್ಕಿಯಿಂದ ಜೀವನವು ನಡೆಯುತ್ತದೆ. ಅದಕ್ಕಿಂತ ಹೆಚ್ಚಿನ ಭಾಗವು ದುಃಖವನ್ನೂ, ತಾಪವನ್ನೂ ಉಂಟುಮಾಡುತ್ತದೆ.
ನಾಸ್ತಿ ತೃಷ್ಣಾಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್ |
ಸರ್ವಾನ್ ಕಾಮಾನ್ ಪರಿತ್ಯಜ್ಯ ಬ್ರಹ್ಮಭೂಯಾಯ ಕಲ್ಪತೇ ॥36॥
ಆಸೆಗೆ ಸಮವಾದ ದುಃಖವಿಲ್ಲ. ತ್ಯಾಗಕ್ಕೆ ಸಮವಾದ ಸುಖವಿಲ್ಲ. ಎಲ್ಲ ಆಸೆಗಳನ್ನೂ ತೊರೆದರೆ ಜೀವನ್ಮುಕ್ತನಾಗುತ್ತಾನೆ.
ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ |
ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥
ಯಾವುದನ್ನು ದುರ್ಮತಿಗಳು ಬಿಡಲು ಸಾಧ್ಯವಿಲ್ಲವೋ, ಮುಪ್ಪು ಬಂದರೂ ಯಾವುದಕ್ಕೆ ಮುಪ್ಪು ಬರುವುದಿಲ್ಲವೋ, ಯಾವುದು ಪ್ರಾಣಾಂತಕವಾದುದೋ ಅಂತಹ ಆಸೆಯನ್ನು ತೊರೆದವನಿಗೆ ಸುಖವಾಗುತ್ತದೆ.
ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ |
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥38॥
ಕಾಮ್ಯವಸ್ತುಗಳ ಭೋಗದಿಂದ ಆಸೆಯು ಶಾಂತವಾಗುವುದಿಲ್ಲ. ಹವಿಸ್ಸಿನಿಂದ ಅಗ್ನಿಯು ಅಭಿವೃದ್ಧಿಯನ್ನು ಹೊಂದುವಂತೆ ಪುನಃ ಅಭಿವೃದ್ಧಿಯನ್ನೇ ಹೊಂದುತ್ತದೆ.
ಅಲಾಭೇನೈವ ಕಾಮಾನಾಂ ಶೋಕಂ ತ್ಯಜತಿ ಪಂಡಿತಃ |
ಆಯಾಸವಿಕಟಸ್ತೀವ್ರಃ ಕಾಮಾಗ್ನಿಸ್ತರ್ಷಣಾರಣಿಃ |
ಇಂದ್ರಿಯಾರ್ಥೇಷು ಸಮ್ಮೋಹಾತ್ ಪಚತ್ಯಕುಶಲಂ ಜನಮ್ ॥39॥
ಪಂಡಿತನಾದವನು ಕಾಮಗಳನ್ನು ಹೊಂದದೆ ಶೋಕವನ್ನು ತ್ಯಜಿಸುತ್ತಾನೆ. ಆಯಾಸದಿಂದ ತೀವ್ರವಾಗಿ ಜ್ವಲಿಸುವ, ಆಸೆ ಎಂಬ ಸಮಿತ್ತುಗಳನ್ನು ಹೊಂದಿದ, ಕಾಮಾಗ್ನಿಯು ಇಂದ್ರಿಯಾರ್ಥಗಳ ಸಮ್ಮೋಹನಿಮಿತ್ತದಿಂದ ಅವಿವೇಕಿಯಾದ ಮನುಷ್ಯನನ್ನು ಸುಡುತ್ತದೆ.
ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ |
ನಾಲಮೇಕಸ್ಯ ಪರ್ಯಾಪ್ತಮಿತಿ ಪಶ್ಯನ್ನ ಮುಹ್ಯತಿ ॥40॥
ಭೂಮಿಯಲ್ಲಿ ಎಷ್ಟು ವ್ರೀಹಿಯವಾದಿ ಧಾನ್ಯಗಳಿವೆಯೋ, ಎಷ್ಟು ಸುವರ್ಣವಿದೆಯೋ, ಎಷ್ಟು ಪಶುಗಳು ಮತ್ತು ಸ್ತ್ರೀಯರು ಇದ್ದಾರೆಯೋ ಅವೆಲ್ಲವೂ ಒಬ್ಬನ ಭೋಗಕ್ಕೆ ಸಾಕಾಗುವುದಿಲ್ಲ (ಎಲ್ಲವನ್ನೂ ಭೋಗಿಸಿದರೂ ತೃಪ್ತಿ ಉಂಟಾಗುವುದಿಲ್ಲವೆಂದು ತಿಳಿಯುವವನು ಮೋಹಕ್ಕೆ ಸಿಲುಕುವುದಿಲ್ಲ.
ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್ |
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥41॥
ಲೋಕದಲ್ಲಿರುವ ಕಾಮಸುಖವಾಗಲೀ, ಸ್ವರ್ಗದಲ್ಲಿರುವ ದಿವ್ಯ ಸುಖವಾಗಲೀ ಆಸೆಯ ವಿನಾಶದಿಂದ ಉಂಟಾಗುವ ಸುಖದ ಹದಿನಾರನೆಯ ಒಂದು ಭಾಗಕ್ಕೂ ಸಮನಾಗುವುದಿಲ್ಲ.
ಇಂದ್ರಿಯಾಣೀಂದ್ರಿಯಾರ್ಥೇಷು ನೈವ ಧೀರೋ ನಿಯೋಜಯೇತ್ |
ಮನಃಷಷ್ಠಾನಿ ಸಂಯಮ್ಯ ನಿತ್ಯಮಾತ್ಮನಿ ಯೋಜಯೇತ್ ॥42॥
ಧೀರನಾದವನು ಇಂದ್ರಿಯಗಳನ್ನು ಅವುಗಳ ವಿಷಯದಲ್ಲಿ ಬಿಡಬಾರದು. ಮನಸ್ಸಿನಿಂದ ಕೂಡಿದ ಆರು ಇಂದ್ರಿಯಗಳನ್ನು ನಿಯಂತ್ರಿಸಿ ಪರಮಾತ್ಮನನ್ನು ಚಿಂತಿಸಬೇಕು.
ಇಂದ್ರಿಯಾಣಾಂ ವಿಸರ್ಗೇಣ ದೋಷಮೃಚ್ಛತ್ಯಸಂಶಯಮ್ |
ಸನ್ನಿಯಮ್ಯ ನು ತಾನ್ಯೇವ ತತಃ ಸಿದ್ಧಿಮವಾಪ್ನುಯಾತ್ ॥43॥
ಇಂದ್ರಿಯಗಳನ್ನು ಹರಿಯಲು ಬಿಡುವುದರಿಂದ ನಿಸ್ಸಂಶಯವಾಗಿ ದೋಷ ಉಂಟಾಗುತ್ತದೆ. ಅವುಗಳನ್ನೇ ನಿಯಂತ್ರಿಸಿದರೆ ಅದರಿಂದ ಸಿದ್ಧಿಯುಂಟಾಗುತ್ತದೆ.
ಷಣ್ಣಾಮಾತ್ಮನಿ ಯುಕ್ತಾನಾಮೈಶ್ವರ್ಯಂ ಯೋಽಧಿಗಚ್ಛತಿ |
ನ ಚ ಪಾಪೈರ್ನ ಚಾನರ್ಥೈಃ ಸಂಯುಜ್ಯೇತ ವಿಚಕ್ಷಣಃ ॥44॥

ಪರಮಾತ್ಮನನ್ನು ವಿಷಯೀಕರಿಸುವ ಆರು ಇಂದ್ರಿಯಗಳ ಮೇಲೆ ಯಾವನು ಪ್ರಭುತ್ವವನ್ನು ಹೊಂದುತ್ತಾನೆಯೋ ಅಂತಹ ವಿವೇಕಿಯಾದವನು ಪಾಪಗಳಿಂದಾಗಲೀ, ಅನರ್ಥಗಳಿಂದಾಗಲೀ ಸಂಯೋಗವನ್ನು ಹೊಂದುವುದಿಲ್ಲ.
ಅಪ್ರಮತ್ತಃ ಸದಾ ರಕ್ಷೇದಿಂದ್ರಿಯಾಣಿ ವಿಚಕ್ಷಣಃ।
ಅರಕ್ಷಿತೇಷು ತೇಷ್ವಾಶು ನರೋ ನರಕಮೇತಿ ಹಿ ॥45॥
ವಿವೇಕಿಯಾದವನು ಜಾಗರೂಕನಾಗಿ, ಯಾವಾಗಲೂ ಇಂದ್ರಿಯಗಳನ್ನು ರಕ್ಷಿಸಬೇಕು. ಇಂದ್ರಿಯಗಳನ್ನು ರಕ್ಷಿಸಿಕೊಳ್ಳದಿದ್ದರೆ ಮನುಷ್ಯನು ಶೀಘ್ರವಾಗಿ ನರಕಕ್ಕೆ ಹೋಗುತ್ತಾನೆ.
ಹೃದಿ ಕಾಮಮಯಶ್ಚಿತ್ರೋ ಮೋಹಸಂಚಯಸಂಭವಃ।
ಅಜ್ಞಾನರೂಢಮೂಲಸ್ತು ವಿವಿತ್ಸಾಪರಿಷೇಚನಃ ॥46॥
ರೋಷಲೋಭಮಹಾಸ್ಕಂಧಃ ಪುರಾ ದುಷ್ಕೃತಸಾರವಾನ್।
ಆಯಾಸವಿಟಪಸ್ತೀವ್ರಃ ಶೋಕಪುಷ್ಪೋ ಭಯಾಂಕುರಃ ॥47॥
ನಾನಾಸಂಕಲ್ಪಪತ್ರಾಢ್ಯಃ ಪ್ರಮಾದಾತ್ ಪರಿವರ್ಧಿತಃ।
ಮಹತೀಭಿಃ ಪಿಪಾಸಾಭಿಃ ಸಮಂತಾತ್ಪರಿವೇಷ್ಟಿತಃ॥48॥
ಸಂರೋಹತ್ಯಕೃತಪ್ರಜ್ಞೇ ಪಾದಪಃ ಕಾಮಸಂಭವಃ।
ನೈವ ರೋಹತಿ ತತ್ತ್ವಜ್ಞೇ ರೂಢೋ ವಾ ಛಿದ್ಯತೇ ಪುನಃ ॥49॥
ಮನಸ್ಸಿನಲ್ಲಿ ಕಾಮಮಯವಾದ, ವಿಚಿತ್ರವಾದ, ಮೋಹದ ರಾಶಿಯಲ್ಲಿ ಬೆಳೆದ, ಅಜ್ಞಾನದಲ್ಲಿ ಮೂಲವನ್ನು ಹೊಂದಿದ, ಆಸೆ ಎಂಬ ನೀರಿನಿಂದ ಬೆಳೆಸಿದ, ರೋಷ-ಲೋಭಗಳೆಂಬ ದೊಡ್ಡ ಕೊಂಬೆಯನ್ನು ಹೊಂದಿದ, ಹಿಂದೆ ಮಾಡಿದ ದುಷ್ಕೃತವೆಂಬ ಬಲವನ್ನುಳ್ಳ, ತೀವ್ರವಾದ ಆಯಾಸವೆಂಬ ಸಣ್ಣ ಕೊಂಬೆಗಳನ್ನು ಹೊಂದಿದ, ಶೋಕಪುಷ್ಪಗಳನ್ನೂ, ಭಯಚಿಗುರುಗಳನ್ನೂ ಹೊಂದಿದ, ನಾನಾ ಸಂಕಲ್ಪಗಳೆಂಬ ಪತ್ರಗಳಿಂದ ತುಂಬಿದ, ಪ್ರಮಾದದಿಂದ, ಚೆನ್ನಾಗಿ ಬೆಳೆದ, ದೊಡ್ಡ ಆಸೆಗಳೆಂಬ ಬಿಳಿಲುಗಳಿಂದ ಚೆನ್ನಾಗಿ ಸುತ್ತುವರಿಯಲ್ಪಟ್ಟ, ಕಾಮದಿಂದ ಉಂಟಾದ ದೊಡ್ಡ ವೃಕ್ಷವು ವಿವೇಕಶೂನ್ಯನಾದ ಮನುಷ್ಯನಲ್ಲಿ ಬೆಳೆಯುತ್ತದೆ. ತತ್ತ್ವಜ್ಞಾನಿಯಾದ ಪುರುಷನಲ್ಲಿ ಅದು ಬೆಳೆಯುವುದಿಲ್ಲ. ಬೆಳೆದರೂ ಅದು ಕತ್ತರಿಸಲ್ಪಡುತ್ತದೆ.
ಕೃಚ್ಛ್ರೋಪಾಯೇಷ್ವನಿತ್ಯೇಷು ನಿಃಸಾರೇಷು ಫಲೇಷು ಚ।
ದುಃಖಾದಿಷು ದುರಂತೇಷು ಕಾಮಯೋಗೇಷು ಕಾ ರತಿಃ ॥50॥
ಕಷ್ಟಮಯವಾದ ಸಾಧನಗಳಿಂದ ಕೂಡಿದ, ನಿಸ್ಸಾರವಾದ ಫಲಗಳಿಂದ ಕೂಡಿದ, ದುಃಖದ ಪ್ರಾರಂಭವನ್ನೂ, ದುಃಖದ ಅಂತ್ಯವನ್ನೂ ಹೊಂದಿರುವ ಕಾಮಯೋಗಗಳಲ್ಲಿ ಯಾವ ರತಿ ಉಂಟಾದೀತು?
ಯೇನ ಸಂವತ್ಸರೋ ದೃಷ್ಟಃ ಸಕೃತ್ಕಾಮಶ್ಚ ಸೇವಿತಃ।
ತೇನ ಸರ್ವಮಿದಂ ದೃಷ್ಟಂ ಪುನರಾವರ್ತಕಂ ಜಗತ್ ॥51॥
ಯಾವನು ಒಂದು ಸಂವತ್ಸರವನ್ನು ನೋಡಿದ್ದಾನೆಯೋ, ಒಂದು ಬಾರಿ ಕಾಮವನ್ನು ಭೋಗಿಸಿದ್ದಾನೆಯೋ ಅವನು ಎಲ್ಲವನ್ನೂ ನೋಡಿದ್ದಾನೆ. ಜಗತ್ತಿನಲ್ಲಿ ಎಲ್ಲವೂ ಪುನಃ ಪುನಃ ಅವೇ ಬರುತ್ತವೆ.
ಭೋಗಾ ಭುಕ್ತಾ ಮನುಷ್ಯೇಣ ಸ್ವಪ್ನಾ ಇವ ಭವಂತಿ ತೇ।
ಸ್ವಪ್ನೋಪಭೋಗತುಲ್ಯೇಷು ಕಾಮಭೋಗೇಷು ಕಾ ರತಿಃ ॥52॥
ಮನುಷ್ಯನು ಅನುಭವಿಸಿದ ಭೋಗಗಳು ಸ್ವಪ್ನದಂತಾಗುತ್ತವೆ. ಸ್ವಪ್ನಭೋಗ ಸಮಾನವಾದ ಕಾಮಭೋಗಗಳಲ್ಲಿ ಯಾವ ರತಿ?
ಇಂದ್ರಿಯೇಷು ಚ ಜೀರ್ಯತ್ಸು ಚ್ಛಿದ್ಯಮಾನೇ ತಥಾಽಽಯುಷಿ।
ಪುರಸ್ತಾಚ್ಚ ಸ್ಥಿತೇ ಮೃತ್ಯೌ ಕಿಂ ಸುಖಂ ಪಶ್ಯತಃ ಶುಭೇ ॥53॥
ಎಲೌ ಶುಭಳೇ, ಇಂದ್ರಿಯಗಳು ಜೀರ್ಣವಾಗುತ್ತಿರುವಾಗ, ಆಯುಸ್ಸು ಕ್ಷೀಣವಾಗುತ್ತಿರುವಾಗ, ಎದುರಿಗೆ ಮೃತ್ಯುವಿರುವಾಗ ಇವುಗಳನ್ನು ನೋಡುವ ಮನುಷ್ಯನಿಗೆ ಯಾವ ಸುಖ?
ವ್ಯಾಧಿಭಿಃ ಪೀಡ್ಯಮಾನಸ್ಯ ನಿತ್ಯಂ ಶಾರೀರಮಾನಸೈಃ।
ನರಸ್ಯಾಕೃತಕೃತ್ಯಸ್ಯ ಕಿಂ ಸುಖಂ ಭವತಿ ಪ್ರಿಯೇ ॥54॥
ಪ್ರಿಯೆಯೇ, ನಿತ್ಯವೂ ದೈಹಿಕವಾದ ಮತ್ತು ಮಾನಸಿಕವಾದ ವ್ಯಾಧಿಗಳಿಂದ ಪೀಡಿಸಲ್ಪಡುವ, ಕೃತಕೃತ್ಯನಲ್ಲದ ಮನುಷ್ಯನಿಗೆ ಯಾವ ಸುಖವುಂಟಾಗುತ್ತದೆ?
ಸಂಚಿನ್ವಾನಂ ತಮೇವಾರ್ಥಂ ಕಾಮಾನಾಮವಿತೃಪ್ತಕಮ್।
ವ್ಯಾಘ್ರಃ ಪಶುಮಿವಾರಣ್ಯೇ ಮೃತ್ಯುರಾದಾಯ ಗಚ್ಛತಿ ॥55॥
ಅದೇ ಧನವನ್ನು ಸಂಪಾದಿಸುತ್ತಾ ಕಾಮಗಳಲ್ಲಿ ತೃಪ್ತಿಯನ್ನು ಹೊಂದದ ಮನುಷ್ಯನನ್ನು ಅರಣ್ಯದಲ್ಲಿ ವ್ಯಾಘ್ರವು ಪಶುವನ್ನು ಎತ್ತಿಕೊಂಡು ಹೋದಂತೆ ಮೃತ್ಯುವು ಎತ್ತಿಕೊಂಡು ಹೋಗುತ್ತದೆ.
ಜನ್ಮಮೃತ್ಯುಜರಾದುಃಖೈಃ ಸತತಂ ಸಮಭಿದ್ರುತಃ।
ಸಂಸಾರೇ ಪಚ್ಯಮಾನಸ್ತು ಪಾಪಾನ್ನೋದ್ವಿಜತೇ ಜನಃ ॥56॥
ಜನನ-ಮರಣ-ಮುಪ್ಪು-ದುಃಖಗಳು ಇವುಗಳಿಂದ ಸತತವಾಗಿ ಉಪದ್ರವಕ್ಕೆ ಒಳಗಾಗಿ ಸಂಸಾರದಲ್ಲಿ ಬೇಯುವ ಮನುಷ್ಯನು ಪಾಪಕ್ಕೆ ಹೆದರುವುದಿಲ್ಲ.
ಉಮಾ
ಕೇನೋಪಾಯೇನ ಮರ್ತ್ಯಾನಾಂ ನಿವರ್ತ್ಯೇತೇ ಜರಾಂತಕೌ।
ಯದ್ಯಸ್ತಿ ಭಗವನ್ ಮಹ್ಯಮೇತದಾಚಕ್ಷ್ವ ಮಾಚಿರಮ್ ॥57॥

ತಪಸಾ ವಾ ಸುಮಹತಾ ಕರ್ಮಣಾ ವಾ ಶ್ರುತೇನ ವಾ |
ರಸಾಯನಪ್ರಯೋಗೈರ್ವಾ ಕೇನಾತ್ಯೇತಿ ಜರಾಂತಕೌ ||58||
ಉಮಾ ಯಾವ ಉಪಾಯದಿಂದ ಮನುಷ್ಯರಿಗೆ ಮುಪ್ಪು-ಸಾವುಗಳು ದೂರವಾಗುತ್ತವೆ? ಭಗವಂತನೇ, ಅಂತಹ ಉಪಾಯವಿದ್ದರೆ ಶೀಘ್ರವಾಗಿ ನನಗೆ ಹೇಳು. ದೊಡ್ಡ ತಪಸ್ಸಿನಿಂದಾಗಲೀ ಅಥವಾ ಕರ್ಮದಿಂದಾಗಲೀ ಅಥವಾ ವಿದ್ಯೆಯಿಂದಾಗಲೀ ಅಥವಾ ವ್ರತ-ದಾನ ಪ್ರಯೋಗದಿಂದಾಗಲೀ ಯಾವುದರಿಂದ ಜರಾ-ಮರಣಗಳನ್ನು ದಾಟಬಹುದು?
ಮಹೇಶ್ವರಃ
ನೈತದಸ್ತಿ ಮಹಾಭಾಗೇ ಜರಾಮೃತ್ಯುನಿವರ್ತನಮ್ |
ಸರ್ವಲೋಕೇಷು ಜಾನೀಹಿ ಮೋಕ್ಷಾದನ್ಯತ್ರ ಭಾಮಿನಿ ||59||
ಮಹೇಶ್ವರ ಮಹಾಭಾಗ್ಯವಂತಳೇ, ಜರಾ-ಮೃತ್ಯುಗಳು ಇಲ್ಲದಂತೆ ಮಾಡುವ ಯಾವ ಉಪಾಯವೂ ಯಾವ ಲೋಕದಲ್ಲೂ ಇಲ್ಲ. ಭಾಮಿನಿಯೇ, ಮೋಕ್ಷ ಒಂದೇ ಉಪಾಯ. ಅದನ್ನು ಬಿಟ್ಟು ಬೇರೆ ಉಪಾಯವಿಲ್ಲ.
ನ ಧನೇನ ನ ರಾಜ್ಯೇನ ನೋಗ್ರೇಣ ತಪಸಾಽಪಿ ವಾ |
ಮರಣಂ ನಾತಿತರತೇ ವಿನಾ ಮುಕ್ತ್ಯಾ ಶರೀರಿಣಃ ||60||
ಧನದಿಂದಾಗಲೀ, ರಾಜ್ಯದಿಂದಾಗಲೀ, ಉಗ್ರವಾದ ತಪಸ್ಸಿನಿಂದಾಗಲೀ ದೇಹಿಯು ಮೋಕ್ಷ ಒಂದನ್ನು ಬಿಟ್ಟು ಬೇರೆ ಯಾವುದರಿಂದಲೂ ಮರಣವನ್ನು ದಾಟಲಾರ.
ಅಶ್ವಮೇಧಸಹಸ್ರೇಣ ವಾಜಪೇಯಶತೇನ ಚ |
ನ ತರಂತಿ ಜರಾಮೃತ್ಯೂ ನಿರ್ವಾಣಾಧಿಗಮಾದ್ ವಿನಾ ||61||
ಮೋಕ್ಷದ ಪ್ರಾಪ್ತಿಯನ್ನು ಬಿಟ್ಟು ಸಹಸ್ರ ಅಶ್ವಮೇಧಗಳಿಂದಾಗಲೀ, ನೂರು ವಾಜಪೇಯಗಳಿಂದಾಗಲೀ ಜರಾ-ಮರಣಗಳನ್ನು ದಾಟಲು ಸಾಧ್ಯವಿಲ್ಲ.
ಐಶ್ವರ್ಯಂ ಧನಧಾನ್ಯಂ ಚ ವಿದ್ಯಾಲಾಭಸ್ತಪಸ್ತಥಾ |
ರಸಾಯನಪ್ರಯೋಗಾಶ್ಚ ನ ತರಂತಿ ಜರಾಂತಕೌ ||62||
ಐಶ್ವರ್ಯವಾಗಲೀ, ಧನ-ಧಾನ್ಯಗಳಾಗಲೀ, ವಿದ್ಯಾಲಾಭವಾಗಲೀ, ತಪಸ್ಸಾಗಲೀ, ರಸಾಯನ ಪ್ರಯೋಗವಾಗಲೀ ಜರಾ-ಮರಣಗಳನ್ನು ದಾಟಿಸುವುದಿಲ್ಲ.
ದಾನಯಜ್ಞತಪಃಶೀಲಾ ರಸಾಯನವಿದೋಽಪಿ ವಾ |
ಸ್ವಾಧ್ಯಾಯನಿರತಾ ವಾಽಪಿ ನ ತರಂತಿ ಜರಾಂತಕೌ ||63||
ದಾನ-ಯಜ್ಞ-ತಪಶ್ಶೀಲರಾದವರೂ, ರಸಾಯನ ತಿಳಿದವರೂ, ಸ್ವಾಧ್ಯಾಯ ನಿರತರೂ ಸಹ ಜರಾ-ಮರಣಗಳನ್ನು ದಾಟುವುದಿಲ್ಲ.
ದೇವದಾನವಗಂಧರ್ವಕಿನ್ನರೋರಗರಾಕ್ಷಸಾನ್ |
ಸ್ವವಶೇ ಕುರುತೇ ಕಾಲೋ ನ ಕಾಲಸ್ಯಾಸ್ತ್ಯಗೋಚರಃ ||64||
ಕಾಲವು ದೇವ-ದಾನವ-ಗಂಧರ್ವರನ್ನು ತನ್ನ ವಶ ಮಾಡಿಕೊಳ್ಳುತ್ತದೆ. ಕಾಲದ ಪ್ರಭಾವಕ್ಕೆ ಸಿಲುಕದವನು ಯಾವನೂ ಇಲ್ಲ.
ನ ಹ್ಯಹಾನಿ ನಿವರ್ತಂತೇ ನ ಮಾಸಾ ನ ಪುನಃ ಕ್ಷಪಾಃ |
ಸೋಽಯಂ ಪ್ರಪದ್ಯತೇಽಧ್ವಾನಮಜಸ್ರಂ ಧ್ರುವಮವ್ಯಯಮ್ ||65||
ಕಳೆದು ಹೋದ ದಿನಗಳಾಗಲೀ, ಮಾಸಗಳಾಗಲೀ, ರಾತ್ರಿಗಳಾಗಲೀ ಹಿಂದೆ ಬರುವುದಿಲ್ಲ. ಜೀವನು ಸತತವಾಗಿ ಅಂತಹ ಧ್ರುವವಾದ, ನಾಶರಹಿತವಾದ ಕಾಲ ಮಾರ್ಗದಲ್ಲಿ ಮುಂದುವರೆಯುತ್ತಾನೆ.
ಸ್ರವಂತಿ ನ ನಿವರ್ತಂತೇ ಸ್ರೋತಾಂಸಿ ಸರಿತಾಮಿವ |
ಆಯುರಾದಾಯ ಮರ್ತ್ಯಾನಾಮಹೋರಾತ್ರಾಣಿ ಸಂತತಮ್ ||66||
ನದಿಗಳ ಪ್ರವಾಹಗಳು ಹರಿಯುತ್ತವೆ ಮತ್ತು ಹಿಂದೆ ಬರುವುದಿಲ್ಲ. ಅದರಂತೆ ಅಹೋ-ರಾತ್ರಿಗಳು ಸತತವಾಗಿ ಮನುಷ್ಯನ ಆಯುಸ್ಸನ್ನು ತೆಗೆದುಕೊಂಡು ಮುಂದೆ ಹೋಗುತ್ತವೆ. ಹಿಂದೆ ಬರುವುದಿಲ್ಲ.
ಜೀವಿತಂ ಸರ್ವಭೂತಾನಾಮಕ್ಷಯಃ ಕ್ಷಪಯನ್ನಸೌ |
ಆದಿತ್ಯೋ ಹ್ಯಸ್ತಮಭ್ಯೇತಿ ಪುನಃ ಪುನರುದೇತಿ ಚ ||67||
ಕಾಲವು ಸ್ವತಃ ನಾಶರಹಿತವಾಗಿ ಸರ್ವಭೂತಗಳ ಜೀವನವನ್ನು ನಾಶಗೊಳಿಸುತ್ತದೆ. ಸೂರ್ಯನು ಅಸ್ತವನ್ನು ಹೊಂದುತ್ತಾನೆ. ಪುನಃ ಪುನಃ ಉದಯಿಸುತ್ತಾನೆ.
ಯಸ್ಯಾಂ ರಾತ್ರ್ಯಾಂ ವ್ಯತೀತಾಯಾಮಾಯುರಲ್ಪತರಂ ಭವೇತ್ |
ಗಾಧೋದಕೇ ಮತ್ಸ್ಯ ಇವ ಕಿನ್ನು ತಸ್ಯ ಕುಮಾರತಾ ||68||
ಒಂದು ರಾತ್ರಿಯು ಕಳೆದರೆ ಆಯುಸ್ಸು ಕ್ಷೀಣವಾಗುತ್ತದೆ. ಅಲ್ಪ ನೀರಿನಲ್ಲಿರುವ ಮತ್ಸ್ಯದಂತೆ ಮನುಷ್ಯನು ಹುಟ್ಟಿದ ಮೇಲೆ ಅವನು ಹೇಗೆ ಮಾರನಾಗುತ್ತಾನೆ?
ಮರಣಂ ಹಿ ಶರೀರಸ್ಯ ನಿಯತಂ ಧ್ರುವಮೇವ ಚ |
ತಿಷ್ಠನ್ನೇವ ಕ್ಷಣಂ ಸರ್ವಃ ಕಾಲಸ್ಯೈತಿ ವಶಂ ಪುನಃ ||69||
ಶರೀರಕ್ಕೆ ಮರಣವು ನಿಯತವಾದುದು ಮತ್ತು ಧ್ರುವವಾದುದು. ಒಂದು ಕ್ಷಣ ಸುಮ್ಮನೆ ಕುಳಿತರೂ ಮನುಷ್ಯನು ಕಾಲವಶನಾಗಿರುತ್ತಾನೆ.
ನ ಮ್ರಿಯೇರನ್ನ ಜೀರ್ಯೇರನ್ ಯದಿ ಸ್ಯುಃ ಸರ್ವದೇಹಿನಃ |
ನ ಚಾನಿಷ್ಟಂ ಪ್ರವರ್ತೇತ ಶೋಕೋ ವಾ ಪ್ರಾಣಿನಾಂ ಕ್ವಚಿತ್ ||70||

ಸರ್ವದೇಹಿಗಳು ಜರಾ-ಮರಣವನ್ನು ಹೊಂದಿರದಿದ್ದರೆ ಪ್ರಾಣಿಗಳಿಗೆ ಅನಿಷ್ಟವಾಗಲೀ, ಶೋಕವಾಗಲೀ ಇರುತ್ತಿರಲಿಲ್ಲ.
ಅಪ್ರಮತ್ತಃ ಪ್ರಮತ್ತೇಷು ಕಾಲೋ ಭೂತೇಷು ತಿಷ್ಠತಿ |
ಅಪ್ರಮತ್ತಸ್ಯ ಕಾಲಸ್ಯ ಕ್ಷಯಂ ಪ್ರಾಪ್ತೋ ನ ಮುಚ್ಯತೇ ॥71॥
ಕಾಲವು ಮೈಮರೆತ ಪ್ರಾಣಿಗಳಲ್ಲಿ ಎಚ್ಚರವಾಗಿರುತ್ತದೆ. ಅಂತಹ ಜಾಗರೂಕವಾದ ಕಾಲದ ಗೃಹಕ್ಕೆ ಹೋದವನು ಬಿಡುಗಡೆಯನ್ನು ಹೊಂದುವುದಿಲ್ಲ.
ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಮ್ |
ಕೋ ಹಿ ತದ್ವೇದ ಯತ್ರಾಸೌ ಮೃತ್ಯುನಾ ನಾಭಿವೀಕ್ಷಿತಃ ॥72॥
ನಾಳೆ ಮಾಡುವ ಕಾರ್ಯವನ್ನು ಈ ದಿನವೇ ಮಾಡಬೇಕು. ಮಧ್ಯಾಹ್ನ ಮಾಡುವ ಕಾರ್ಯವನ್ನು ಪ್ರಾತಃಕಾಲದಲ್ಲಿಯೇ ಮಾಡಬೇಕು. ಮನುಷ್ಯನು ಯಾವಾಗ ಮೃತ್ಯುವಿನಿಂದ ನೋಡಲ್ಪಡುವುದಿಲ್ಲವೆಂದು ಯಾರು ತಿಳಿದಿದ್ದಾರೆ?
ವರ್ಷಾಸ್ವಿದಂ ಕರಿಷ್ಯಾಮಿ ಇದಂ ಗ್ರೀಷ್ಮವಸಂತಯೋಃ |
ಇತಿ ಬಾಲಶ್ಚಿಂತಯತಿ ಅಂತರಾಯಂ ನ ಬುದ್ಧ್ಯತೇ ॥73॥
ಇದನ್ನು ಮಳೆಗಾಲದಲ್ಲಿ ಮಾಡುತ್ತೇನೆ, ಇದನ್ನು ಗ್ರೀಷ್ಮ-ವಸಂತದಲ್ಲಿ ಮಾಡುತ್ತೇನೆ ಎಂದು ಬಾಲಕನಂತೆ ಚಿಂತಿಸುತ್ತಾನೆ. ವಿಘ್ನಗಳನ್ನು ಗಮನಿಸುವುದಿಲ್ಲ.
ಇದಂ ಮೇ ಸ್ಯಾದಿದಂ ಮೇ ಸ್ಯಾದಿತ್ಯೇವಂಮನಸೋ ನರಾಃ |
ಅನವಾಪ್ತೇಷು ಕಾಮೇಷು ಹ್ರಿಯಂತೇ ಮರಣಂ ಪ್ರತಿ ॥74॥
ಮನುಷ್ಯರು ಇದು ನನಗೆ ಬೇಕು, ಇದು ನನಗೆ ಬೇಕು ಎಂದು ಮನಸ್ಸಿನಲ್ಲಿ ಚಿಂತಿಸುತ್ತಾ, ಆ ಕಾಮಗಳನ್ನು ಹೊಂದದೆಯೇ ಮರಣದ ಕಡೆಗೆ ಎಳೆದೊಯ್ಯಲ್ಪಡುತ್ತಾರೆ.
ಕಾಲಪಾಶೇನ ಬದ್ಧಾನಾಮಹನ್ಯಹನಿ ಜೀರ್ಯತಾಮ್ |
ಕಾ ಶ್ರದ್ಧಾ ಪ್ರಾಣಿನಾಂ ಮಾರ್ಗೇ ವಿಷಮೇ ಭ್ರಮತಾಂ ಸದಾ ॥75॥
ಕಾಲಪಾಶದಿಂದ ಬದ್ಧರಾಗಿ ದಿನದಿನವೂ ಮುಪ್ಪನ್ನು ಹೊಂದುವ, ವಿಷಮವಾದ ಮಾರ್ಗದಲ್ಲಿ ಸದಾ ಸಂಚರಿಸುವ ಪ್ರಾಣಿಗಳಿಗೆ ಆ ಕಾಮಗಳಲ್ಲಿ ಯಾವ ಆಸೆ?
ಯುವೈವ ಧರ್ಮಶೀಲಃ ಸ್ಯಾದನಿಮಿತ್ತಂ ಹಿ ಜೀವಿತಮ್ |
ಫಲಾನಾಮಿವ ಪಕ್ವಾನಾಂ ಸದಾ ಹಿ ಪತನಾದ್ ಭಯಮ್ ॥76॥
ಯುವಕನಾಗಿಯೇ ಧರ್ಮಶೀಲನಾಗಬೇಕು. ಜೀವಿತವು ಅನಿಶ್ಚಿತವಾದುದು. ಪಕ್ವವಾದ ಫಲವು ಕೆಳಗೆ ಬೀಳುವಂತೆ ಯಾವಾಗಲೂ ಮರಣರೂಪವಾದ ಪತನದ ಭಯವಿದೆ.
ಮರ್ತ್ಯಸ್ಯ ಕಿಮು ತೈರ್ದಾರೈಃ ಪುತ್ರೈರ್ಭೋಗೈಃ ಪ್ರಿಯೈರಪಿ |
ಏಕಾಹ್ನಾ ಸರ್ವಮುತ್ಸೃಜ್ಯ ಮೃತ್ಯೋರ್ಹಿ ವಶಮೇಯಿವಾನ್ ॥77॥
ಮನುಷ್ಯನಿಗೆ ಪತ್ನಿಯಿಂದಾಗಲೀ, ಪುತ್ರರಿಂದಾಗಲೀ, ಪ್ರಿಯರಿಂದಾಗಲೀ ಭೋಗದಿಂದಾಗಲೀ ಆಗಬೇಕಾದುದೇನು? ಒಂದು ದಿವಸ ಎಲ್ಲವನ್ನೂ ಬಿಟ್ಟು ಮೃತ್ಯುವಿಗೆ ವಶನಾಗುವನಷ್ಟೆ?
ಜಾಯಾಮಾನಾಂಶ್ಚ ಸಂಪ್ರೇಕ್ಷ್ಯ ಮ್ರಿಯಮಾಣಾಂಸ್ತಥೈವ ಚ |
ನ ಸಂವೇಗೋಽಸ್ತಿ ಚೇತ್ಪುಂಸಃ ಕಾಷ್ಠಲೋಷ್ಟಸಮೋ ಹಿ ಸಃ ॥78॥
ಜನಿಸುವವರನ್ನೂ ಹಾಗೆಯೇ ಮರಣ ಹೊಂದುವವರನ್ನೂ ನೋಡಿ ಮನುಷ್ಯನಿಗೆ ಸಂಸಾರದ ಭಯ ಉಂಟಾಗದಿದ್ದರೆ ಅವನು ಕಾಷ್ಠ-ಲೋಷ್ಟಗಳಿಗೆ ಸಮನಾದವನು.
ವಿನಾಶಿನೋ ಹ್ಯಧ್ರುವಜೀವಿತಸ್ಯ
ಕಿಂ ಬಂಧುಭಿರ್ಮಿತ್ರಪರಿಗ್ರಹೈಶ್ಚ |
ವಿಹಾಯ ಯದ್ ಗಚ್ಛತಿ ಸರ್ವಮೇವಂ
ಕ್ಷಣೇನ ಗತ್ವಾ ನ ನಿವರ್ತತೇ ಚ ॥79॥
ವಿನಾಶವನ್ನು ಹೊಂದಲಿರುವ ಅನಿತ್ಯವಾದ ಜೀವಿತವುಳ್ಳ ಮನುಷ್ಯನಿಗೆ ಬಂಧುಗಳಿಂದಾಗಲೀ, ಮಿತ್ರರಿಂದಾಗಲೀ, ಭೋಗ ಸಾಧನಗಳಿಂದಾಗಲೀ ಆಗಬೇಕಾದುದೇನು? ಹೀಗೆ ಎಲ್ಲವನ್ನೂ ಬಿಟ್ಟು ಒಂದು ಕ್ಷಣದಲ್ಲಿ ಅವನು ಹೊರಟು ಹೋಗುತ್ತಾನೆ, ಮತ್ತೆ ಹಿಂದೆ ಬರುವುದಿಲ್ಲ.
ಏವಂ ಚಿಂತಯತೋ ನಿತ್ಯಂ ಸರ್ವಾರ್ಥಾನಾಮನಿತ್ಯತಾಮ್ |
ಉದ್ವೇಗೋ ಜಾಯತೇ ಶೀಘ್ರಂ ನಿರ್ವಾಣಸ್ಯ ಪುರಸ್ಸರಃ ॥80॥
ಹೀಗೆ ಎಲ್ಲ ಪದಾರ್ಥಗಳೂ ಅನಿತ್ಯವೆಂದು ಯಾವಾಗಲೂ ಚಿಂತಿಸುವ ಮನುಷ್ಯನಿಗೆ ಮೋಕ್ಷಕ್ಕೆ ಪುರಸ್ಸರವಾದ ಸಂಸಾರಭಯವು ಶೀಘ್ರವಾಗಿಯೇ ಉಂಟಾಗುತ್ತದೆ.
ತೇನೋದ್ವೇಗೇನ ಚಾಪ್ಯಸ್ಯ ವಿಮರ್ಶೋ ಜಾಯತೇ ಪುನಃ |
ವಿಮರ್ಶೇನಾಥ ವೈರಾಗ್ಯಂ ಸರ್ವತ್ರಾಸ್ಯೋಪಜಾಯತೇ ॥81॥
ಆ ಉದ್ವೇಗದಿಂದ ಅವನಿಗೆ ಪುನಃ ವಿಮರ್ಶೆ ಉಂಟಾಗುತ್ತದೆ. ನಂತರ ವಿಮರ್ಶೆಯಿಂದ ಎಲ್ಲ ವಸ್ತುಗಳಲ್ಲಿಯೂ ವೈರಾಗ್ಯವುಂಟಾಗುತ್ತದೆ.
ವೈರಾಗ್ಯೇಣ ಪರಾಂ ಶಾಂತಿಂ ಲಭಂತೇ ಮಾನವಾಃ ಶುಭೇ |
ಮೋಕ್ಷಸ್ಯೋಪನಿಷದ್ ದೇವಿ ವೈರಾಗ್ಯಮಿತಿ ನಿಶ್ಚಿತಮ್ ॥82॥

ಎಲೌ ಶುಭಳೇ, ಮನುಷ್ಯರು ವೈರಾಗ್ಯದಿಂದ ಪರಮಶಾಂತಿಯನ್ನು ಪಡೆಯುತ್ತಾರೆ. ದೇವಿಯೇ, ಮೋಕ್ಷಕ್ಕೆ ವೈರಾಗ್ಯವೆಂಬುದು ಇನ್ನೊಂದು ರಹಸ್ಯ ನಾಮ.
ಏತತ್ತೇ ಕಥಿತಂ ದೇವಿ ವೈರಾಗ್ಯೋತ್ಪಾದನಂ ವಚಃ |
ಏತತ್ ಸರ್ವಂ ಹಿ ಸಂಚಿಂತ್ಯ ಮುಚ್ಯಂತೇ ಹಿ ಮುಮುಕ್ಷವಃ ॥83॥
ದೇವಿಯೇ, ವೈರಾಗ್ಯೋತ್ಪಾದಕವಾದ ಮಾತುಗಳನ್ನು ನಿನಗೆ ಹೇಳಿದ್ದೇನೆ. ಮುಮುಕ್ಷುಗಳಾದವರು ಇದೆಲ್ಲವನ್ನೂ ಚಿಂತಿಸಿ ಮೋಕ್ಷವನ್ನು ಪಡೆಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಸಂಸಾರೋದ್ವೇಗಜನನಂ ನಾಮ ಏಕೋನತ್ರಿಂಶತ್ಯುತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಇಪ್ಪತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ತನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಜ್ಞಾನೋಪದೇಶ.
ಮಹೇಶ್ವರಃ
ಸಾಂಖ್ಯಜ್ಞಾನಂ ಪ್ರವಕ್ಷ್ಯಾಮಿ ಯಥಾವತ್ ತೇ ಶುಚಿಸ್ಮಿತೇ |
ಯಜ್ಜ್ಞಾತ್ವಾ ನ ಪುನರ್ಮರ್ತ್ಯಃ ಸಂಸಾರೇಷು ಪತೇತ್ ಪುನಃ ॥1॥
ಮಹೇಶ್ವರ ಎಲೌ ಶುಚಿಸ್ಮಿತೆಯೇ, ಯಾವ ಜ್ಞಾನವನ್ನು ಸಂಪಾದಿಸಿದರೆ ಮನುಷ್ಯನು ಪುನಃ ಪುನಃ ಸಂಸಾರದಲ್ಲಿ ಬೀಳುವುದಿಲ್ಲವೋ ಅಂತಹ ಸಾಂಖ್ಯಜ್ಞಾನವನ್ನು ಉಪದೇಶ ಮಾಡುವೆನು.
ಜ್ಞಾನೇನೈವ ವಿಮುಕ್ತಾಸ್ತೇ ಸಾಂಖ್ಯಾಃ ಸನ್ನ್ಯಾಸಕೋವಿದಾಃ |
ಶಾರೀರಂ ತು ತಪೋ ಘೋರಂ ಸಾಂಖ್ಯಾಃ ಪ್ರಾಹುರ್ನಿರರ್ಥಕಮ್ ॥
ಸಂನ್ಯಾಸ ಕುಶಲರಾದ ಸಾಂಖ್ಯರು ಜ್ಞಾನದಿಂದಲೇ ಮೋಕ್ಷ ಹೊಂದಿದರು. ಶಾರೀರಕವಾದ ಘೋರವಾದ ತಪಸ್ಸು ನಿರರ್ಥಕವೆಂದು ಸಾಂಖ್ಯರು ಹೇಳುತ್ತಾರೆ.
ಪಂಚವಿಂಶತಿಕಂ ಜ್ಞಾನಂ ತೇಷಾಂ ಜ್ಞಾನಮಿತಿ ಸ್ಮೃತಮ್ |
ಮೂಲಪ್ರಕೃತಿರವ್ಯಕ್ತಮವ್ಯಕ್ತಾಜ್ಜಾಯತೇ ಮಹಾನ್ ॥3॥
ಇಪ್ಪತ್ತೈದು ತತ್ತ್ವಗಳ ಜ್ಞಾನವು ಅವರಿಗೆ ಸಮ್ಮತವಾದ ಜ್ಞಾನವೆಂದು ಹೇಳಲಾಗುತ್ತದೆ. ಮೂಲ ಪ್ರಕೃತಿಯು ಅವ್ಯಕ್ತಸಂಜ್ಞೆಯನ್ನುಳ್ಳದ್ದು. ಅವ್ಯಕ್ತದಿಂದ ಮಹತ್ತತ್ತ್ವವು ಜನಿಸುತ್ತದೆ.
ಮಹತೋಽಭೂದಹಂಕಾರಸ್ತಸ್ಮಾತ್ ತನ್ಮಾತ್ರಪಂಚಕಮ್ |
ಇಂದ್ರಿಯಾಣಿ ದಶೈಕಂ ಚ ತನ್ಮಾತ್ರೇಭ್ಯೋ ಭವಂತ್ಯುತ ॥4॥
ತೇಭ್ಯೋ ಭೂತಾನಿ ಪಂಚ ಸ್ಯುರಿತಿ ಕ್ಷೇತ್ರಸಮುಚ್ಚಯಃ |
ಅಸ್ಯ ಕ್ಷೇತ್ರಸ್ಯ ಸಂಕ್ಷೇಪಂ ಚತುರ್ವಿಂಶತಿರಿಷ್ಯತೇ |
ಪಂಚವಿಂಶತಿರಿತ್ಯಾಹುಃ ಪುರುಷೇಣೇಹ ಸಂಖ್ಯಯಾ ॥5॥
ಮಹತತ್ತ್ವದಿಂದ ಅಹಂಕಾರತತ್ತ್ವವೂ,ಅಹಂಕಾರತತ್ತ್ವದಿಂದ ಪಂಚತನ್ಮಾತ್ರಗಳೂ, ಏಕಾದಶ ಇಂದ್ರಿಯಗಳೂ ಉಂಟಾಗುತ್ತವೆ. ಆ ಪಂಚತನ್ಮಾತ್ರಗಳಿಂದ ಪಂಚಭೂತಗಳು ಉಂಟಾಗುತ್ತವೆ. ಇದು ಕ್ಷೇತ್ರದ ಸಮೂಹ. ಈ ಕ್ಷೇತ್ರವು ಸಂಕ್ಷೇಪವಾಗಿ ಇಪ್ಪತ್ನಾಲ್ಕು ತತ್ತ್ವಗಳಿಂದ ಕೂಡಿದೆ ಎಂದು ಹೇಳಲಾಗುತ್ತದೆ. ಆ ತತ್ತ್ವಗಳ ಅಭಿಮಾನಿ ದೇವತೆಗಳನ್ನು ಸೇರಿಸಿದರೆ ಇಪ್ಪತ್ತೈದು ತತ್ತ್ವಗಳಾಗುತ್ತವೆ.
ಸತ್ವಂ ರಜಸ್ತಮಶ್ಚೇತಿ ಗುಣಾಃ ಪ್ರಕೃತಿಸಂಭವಾಃ |
ತೈಃ ಸೃಜತ್ಯಖಿಲಂ ಲೋಕಂ ಪ್ರಕೃತಿಃ ಸ್ವಾತ್ಮಕೈರ್ಗುಣೈಃ ॥6॥
ಸತ್ವ-ರಜಸ್-ತಮೋಗುಣಗಳು ಪ್ರಕೃತಿಯಿಂದ ಉಂಟಾದವುಗಳು. ಪ್ರಕೃತಿಯು ತನ್ನ ಅಂಶಗಳಾದ ಆ ಗುಣಗಳಿಂದ ಎಲ್ಲ ಲೋಕಗಳನ್ನೂ ಸೃಷ್ಟಿಸುತ್ತದೆ (ಪರಮಾತ್ಮನು ಪ್ರಕೃತಿಯ ಗುಣಗಳನ್ನು ಉಪಾದಾನ ಮಾಡಿಕೊಂಡು ಎಲ್ಲ ಲೋಕಗಳನ್ನೂ ಸೃಷ್ಟಿಸುತ್ತಾನೆ).
ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ |
ವಿಕಾರಾಃ ಪ್ರಕೃತೇಶ್ಚೈತೇ ವೇದಿತವ್ಯಾ ಮನೀಷಿಭಿಃ ॥7॥
ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನಾ, ಧೈರ್ಯ- ಇವೆಲ್ಲವನ್ನೂ ವಿವೇಕಿಗಳು ಪ್ರಕೃತಿಯ ವಿಕಾರವೆಂದು ತಿಳಿಯಬೇಕು.
ಲಕ್ಷಣಂ ಚಾಪಿ ಸರ್ವೇಷಾಂ ವಿಕಲ್ಪಂ ಚಾದಿತಃ ಪೃಥಕ್ |
ವಿಸ್ತರೇಣ ಪ್ರವಕ್ಷ್ಯಾಮಿ ತಸ್ಯ ವ್ಯಾಖ್ಯಾಮಿಮಾಂ ಶೃಣು ॥8॥
ಇವೆಲ್ಲದರ ಲಕ್ಷಣವನ್ನು ಮತ್ತು ವಿಭಾಗವನ್ನು ಮೊದಲಿನಿಂದಲೂ ಕೇಳು. ಅದರ ವಿವರಣೆಯನ್ನು ವಿಸ್ತಾರವಾಗಿ ಹೇಳುವೆನು.
ನಿತ್ಯಮೇಕಮಣು ವ್ಯಾಪಿ ಕ್ರಿಯಾಹೀನಮಹೇತುಕಮ್ |
ಅಗ್ರಾಹ್ಯಮಿಂದ್ರಿಯೈಃ ಸರ್ವೈರೇತದವ್ಯಕ್ತಲಕ್ಷಣಮ್ ॥9॥
ಅವ್ಯಕ್ತವು, ನಿತ್ಯವಾದುದು ಒಂದೇ. ಬಹಳ ಸೂಕ್ಷ್ಮವಾದುದು (ಅತೀಂದ್ರಿಯವಾದುದು), ಸರ್ವವ್ಯಾಪಕವಾದುದು, ಸ್ವತಃ ಕ್ರಿಯಾಶೂನ್ಯವಾದುದು ಮತ್ತು ಜನ್ಯವಾದುದಲ್ಲ. ಇಂದ್ರಿಯಗಳಿಂದ ಗ್ರಹಿಸಲ್ಪಡುವುದಿಲ್ಲ- ಇವೆಲ್ಲವೂ ಅವ್ಯಕ್ತದ ಲಕ್ಷಣಗಳು.
ಅವ್ಯಕ್ತಂ ಪ್ರಕೃತಿರ್ಮೂಲಂ ಪ್ರಧಾನಂ ಯೋನಿರವ್ಯಯಮ್ |

ಅವ್ಯಕ್ತಸ್ಯೈವ ನಾಮಾನಿ ಶಬ್ದೈಃ ಪರ್ಯಾಯವಾಚಕೈಃ ॥10॥
ಅವ್ಯಕ್ತ, ಪ್ರಕೃತಿ, ಮೂಲ, ಪ್ರಧಾನ, ಯೋನಿ, ಅವ್ಯಯ ಇವೆಲ್ಲವೂ ಅವ್ಯಕ್ತತತ್ತ್ವವನ್ನು ಹೇಳುವ ಪರ್ಯಾಯ ಶಬ್ದಗಳು.
ತತ್ಸೂಕ್ಷ್ಮತ್ವಾದನಿರ್ದೇಶ್ಯಂ ತತ್ಸದಿತ್ಯಭಿಧೀಯತೇ |
ತನ್ಮೂಲಂ ಚ ಜಗತ್ಸರ್ವಂ ತನ್ಮೂಲಾ ಸೃಷ್ಟಿರಿಷ್ಯತೇ ॥11॥
ಸತ್ತ್ವಾದಯಃ ಪ್ರಕೃತಿಜಾ ಗುಣಾಸ್ತಾನ್ ಪ್ರಬ್ರವೀಮ್ಯಹಮ್ ॥12॥
ಸೂಕ್ಷ್ಮವಾಗಿರುವುದರಿಂದ ಅದನ್ನು ಅನಿರ್ದೇಶ್ಯವೆಂದು ಹೇಳುತ್ತಾರೆ. ಅದನ್ನು ಸತ್ ಎಂದೂ ಹೇಳುತ್ತಾರೆ. ಜಗತ್ತೆಲ್ಲವೂ ಅವ್ಯಕ್ತತತ್ತ್ವವನ್ನು ಮೂಲವಾಗಿ ಹೊಂದಿರುವಂತಹದು. ಸೃಷ್ಟಿಯ ಮೂಲವೂ ಸಹ ಅವ್ಯಕ್ತತತ್ತ್ವದಲ್ಲಿದೆ. ಸತ್ತ್ವಾದಿಗಳು ಪ್ರಕೃತಿಯ ಗುಣಗಳು. ಅವುಗಳನ್ನು ಹೇಳುತ್ತೇನೆ.
ಸುಖಂ ತುಷ್ಟಿಃ ಪ್ರಕಾಶಶ್ಚ ತ್ರಯಸ್ತೇ ಸಾತ್ವಿಕಾ ಗುಣಾಃ |
ರಾಗದ್ವೇಷೌ ಸುಖಂ ದುಃಖಂ ಸ್ತಂಭಶ್ಚ ರಜಸೋ ಗುಣಾಃ |
ಅಪ್ರಕಾಶೋ ಭಯಂ ಮೋಹಸ್ತಂದ್ರೀ ಚ ತಮಸೋ ಗುಣಾಃ ॥13॥
ಸುಖ, ತೃಪ್ತಿ, ಪ್ರಕಾಶ (ಜ್ಞಾನ) - ಈ ಮೂರು ಸಾತ್ವಿಕಗುಣಗಳು. ರಾಗ- ದ್ವೇಷಗಳು, ಸುಖ-ದುಃಖಗಳು, ಅಹಂಕಾರ- ಇವು ರಜೋಗುಣಗಳು. ಅಜ್ಞಾನ, ಭಯ, ಭ್ರಾಂತಿ, ಆಲಸ್ಯ - ಇವು ತಮೋಗುಣಗಳು.
ಶ್ರದ್ಧಾ ಪ್ರಹರ್ಷೋ ವಿಜ್ಞಾನಮಸಮ್ಮೋಹೋ ದಯಾ ಧೃತಿಃ |
ಸತ್ತ್ವೇ ಪ್ರವೃದ್ಧೇ ವರ್ಧಂತೇ ವಿಪರೀತೇ ವಿಪರ್ಯಯಃ ॥14॥
ಶ್ರದ್ಧೆ, ಸಂತೋಷ, ವಿಜ್ಞಾನ, ಮೋಹಾಭಾವ, ದಯೆ, ಧೈರ್ಯ - ಈ ಗುಣಗಳು ಸತ್ತ್ವಗುಣವು ಅಭಿವೃದ್ಧಿಯನ್ನು ಹೊಂದಿದಾಗ ಅಭಿವೃದ್ಧಿಯನ್ನು ಹೊಂದುತ್ತವೆ. ಸತ್ತ್ವವು ಕ್ಷೀಣವಾದರೆ ಇವೂ ಕ್ಷೀಣಿಸುತ್ತವೆ.
ಕಾಮಕ್ರೋಧೌ ಮನಸ್ತಾಪೋ ದ್ರೋಹೋ ಲೋಭಸ್ತಥಾ ತೃಷಾ |
ಪ್ರವೃದ್ಧೇ ಪರಿವರ್ಧಂತೇ ರಜಸ್ಯೇತಾನಿ ನಿತ್ಯಶಃ ॥15॥
ಕಾಮ-ಕ್ರೋಧಗಳು, ಮನಸ್ತಾಪ, ದ್ರೋಹ, ಲೋಭ, ಆಸೆ - ಇವುಗಳು ರಜೋಗುಣವು ಪ್ರವೃದ್ಧವಾದಾಗ ನಿತ್ಯವೂ ಅಭಿವೃದ್ಧಿಯನ್ನು ಹೊಂದುತ್ತವೆ.
ವಿಷಾದಃ ಸಂಶಯೋ ಮೋಹಸ್ತಂದ್ರೀ ನಿದ್ರಾ ಭಯಂ ತಥಾ |
ತಮಸ್ಯೇತಾನಿ ವರ್ಧಂತೇ ಪ್ರವೃದ್ಧೇ ಹೇತ್ವಹೇತುಭಿಃ ॥16॥
ವಿಷಾದ, ಸಂಶಯ, ಅಜ್ಞಾನ, ಆಲಸ್ಯ, ನಿದ್ರೆ, ಭಯ - ಇವುಗಳು ಸಕಾರಣಗಳಿಂದ ಅಥವಾ ನಿಷ್ಕಾರಣವಾಗಿ ತಮೋಗುಣವು ಅಭಿವೃದ್ಧಿಯನ್ನು ಹೊಂದಿದಾಗ ಅಭಿವೃದ್ಧಿಯನ್ನು ಹೊಂದುತ್ತವೆ.
ಏವಮನ್ಯೋನ್ಯಮೇತಾನಿ ವರ್ಧಂತೇ ಚ ಪುನಃಪುನಃ |
ಹೀಯಂತೇ ಚ ತಥಾ ನಿತ್ಯಮಭಿಭೂತಾನಿ ಭೂರಿಭಿಃ ॥17॥
ಹೀಗೆ ಇವು ಪರಸ್ಪರವಾಗಿ ಅಭಿವೃದ್ಧಿಯನ್ನು ಹೊಂದುತ್ತವೆ ಮತ್ತು ವಿರೋಧಿಯಾದ ಒಂದು ಗುಣವು ಹೆಚ್ಚಾದರೆ ಇನ್ನೊಂದು ಗುಣವು ಕಡಿಮೆಯಾಗುತ್ತದೆ. ಆ ಗುಣಕಾರ್ಯಗಳು ಕಡಿಮೆಯಾಗುತ್ತವೆ.
ತತ್ರ ಯತ್ಪ್ರೀತಿಸಂಯುಕ್ತಂ ಕಾಯೇ ಮನಸಿ ವಾ ಭವೇತ್ |
ವರ್ತತೇ ಸಾತ್ವಿಕೋ ಭಾವ ಇತ್ಯುಪೇಕ್ಷೇತ ತತ್ತಥಾ ॥18॥
ದೇಹದಲ್ಲಾಗಲೀ, ಮನಸ್ಸಿನಲ್ಲಾಗಲೀ ಸಂತೋಷಜನಕವಾದ ಒಂದು ಘಟನೆಯು ಉಂಟಾದರೆ ಅದನ್ನು ಸಾತ್ವಿಕಭಾವ ಎಂದು ತಿಳಿಯಬೇಕು.
ಯದಾ ಸಂತಾಪಸಂಯುಕ್ತಂ ಚಿತ್ತಕ್ಷೋಭಕರಂ ಭವೇತ್ |
ವರ್ತತೇ ರಜ ಇತ್ಯೇವ ತದಾ ತದಭಿಚಿಂತಯೇತ್ ॥19॥
ಸಂತಾಪಸಹಿತವಾದ, ಚಿತ್ತಕ್ಷೋಭೆಯನ್ನುಂಟು ಮಾಡುವ ವಿಷಯವು ಸಂಬಂಧಿಸಿದರೆ ಅದನ್ನು ರಜೋಗುಣದ ಕಾರ್ಯವೆಂದು ಚಿಂತಿಸಬೇಕು.
ಯದಾ ಸಮ್ಮೋಹಸಂಯುಕ್ತಂ ಯದ್ ವಿಷಾದಕರಂ ಭವೇತ್ |
ಅಪ್ರತರ್ಕ್ಯಮವಿಜ್ಞೇಯಂ ತಮಸ್ತದುಪಧಾರಯೇತ್ ॥20॥
ಸಮ್ಮೋಹಯುಕ್ತವಾದ, ವಿಷಾದಕರವಾದ, ಊಹಿಸಲು ಅಸಾಧ್ಯವಾದ ಭಾವ ಉಂಟಾದರೆ ಅದನ್ನು ತಮೋಗುಣದ ಕಾರ್ಯವೆಂದು ತಿಳಿಯಬೇಕು.
ಸಮಾಸಾತ್ ಸಾತ್ವಿಕೋ ಧರ್ಮಃ ಸಮಾಸಾದ್ ರಾಜಸಂ ಧನಮ್ |
ಸಮಾಸಾತ್ ತಾಮಸಃ ಕಾಮಸ್ತ್ರಿವರ್ಗೇ ತ್ರಿಗುಣಕ್ರಮಾತ್ ॥21॥
ಸಂಕ್ಷೇಪವಾಗಿ ಹೇಳುವುದಾದರೆ ತ್ರಿವರ್ಗದಲ್ಲಿ ಧರ್ಮವು ಸಾತ್ವಿಕವಾದುದು, ಧನವು ರಾಜಸವಾದುದು ಮತ್ತು ಕಾಮವು ತಾಮಸವಾದುದು.
ಬ್ರಹ್ಮಾದಿದೇವಸೃಷ್ಟಿರ್ಯಾ ಸಾತ್ವಿಕೀತಿ ಪ್ರಕೀರ್ತ್ಯತೇ |
ರಾಜಸೀ ಮಾನವೀ ಸೃಷ್ಟಿಸ್ತಿರ್ಯಗ್ಯೋನಿಸ್ತು ತಾಮಸೀ ॥22॥
ಬ್ರಹ್ಮಾದಿ ದೇವತೆಗಳ ಸೃಷ್ಟಿಯನ್ನು ಸಾತ್ವಿಕ ಸೃಷ್ಟಿ ಎಂದು ಹೇಳಲಾಗುತ್ತದೆ. ಮಾನವರ ಸೃಷ್ಟಿಯು ರಾಜಸ ಸೃಷ್ಟಿ. ತಿರ್ಯಗ್ಯೋನಿಗಳ ಸೃಷ್ಟಿಯು ತಾಮಸ ಸೃಷ್ಟಿ.
ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ |

ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥23॥
ಸಾತ್ವಿಕರು ಊರ್ಧ್ವಲೋಕಗಳಿಗೆ ಹೋಗುತ್ತಾರೆ. ರಾಜಸರು ಮಧ್ಯದಲ್ಲಿ ಇರುತ್ತಾರೆ. ಕೊನೆಯದಾದ ತಾಮಸಗುಣವನ್ನು ಹೊಂದಿದ ತಾಮಸರು ಅಧೋಗತಿಯನ್ನು ಹೊಂದುತ್ತಾರೆ.
ದೇವಮಾನುಷತಿರ್ಯಕ್ಷು ಯದ್ಭೂತಂ ಸಚರಾಚರಮ್ |
ಆದಿಪ್ರಭೃತಿ ಸಂಯುಕ್ತಂ ವ್ಯಾಪ್ತಮೇಭಿಸ್ತ್ರಿಭಿರ್ಗುಣೈಃ ॥24॥
ದೇವ-ಮಾನುಷ-ತಿರ್ಯಕ್ ಪ್ರಾಣಿಗಳಲ್ಲಿ ಯಾವ ಚರಾಚರ ವಸ್ತುಗಳು ಇವೆಯೋ ಅವೆಲ್ಲವೂ ಮೊದಲಿನಿಂದಲೂ ಈ ಮೂರು ಗುಣಗಳಿಂದ ವ್ಯಾಪ್ತವಾಗಿವೆ.
ಅತಃ ಪರಂ ಪ್ರವಕ್ಷ್ಯಾಮಿ ಮಹದಾದೀನಿ ಲಿಂಗತಃ |
ವಿಜ್ಞಾನಂ ಚ ವಿವೇಕಶ್ಚ ಮಹತೋ ಲಕ್ಷಣಂ ಭವೇತ್ ॥25॥
ಇನ್ನು ಮುಂದೆ ಮಹದಾದಿ ತತ್ತ್ವದ ಲಕ್ಷಣಗಳನ್ನು ಹೇಳುತ್ತೇನೆ. ವಿಜ್ಞಾನ ಮತ್ತು ವಿವೇಕವು ಮಹತತ್ತ್ವದಲಕ್ಷಣ.
ಮಹಾನ್ ಬುದ್ಧಿರ್ಮತಿಃ ಪ್ರಜ್ಞಾ ನಾಮಾನಿ ಮಹತೋ ವಿದುಃ |
ಮಹದಾದಿಕ್ರಿಯಾಯೋಗೇ ಮಹತ್ತ್ವಂ ಚೋಪಜಾಯತೇ ॥26॥
ಅಭಿಮಾನಃ ಪುನಸ್ತತ್ರ ಮಹತೋ ವೈಕೃತಾದ್ ಭವೇತ್ |
ಅಹಂಕಾರಃ ಸ ವಿಜ್ಞೇಯೋ ಲಕ್ಷಣೇನ ಸಮಾಸತಃ ॥27॥
ಮಹಾನ್, ಬುದ್ಧಿ, ಮತಿ, ಪ್ರಜ್ಞಾ ಇವು ಮಹತತ್ತ್ವದ ನಾಮಗಳು. ಮಹಾಕಾರ್ಯಗಳನ್ನು ಮಾಡುವಾಗಲೂ ಮಹತ್ವವು ಅಪೇಕ್ಷಿತವಾಗುತ್ತದೆ. ಅವ್ಯಕ್ತ ತತ್ತ್ವದ ವಿಕಾರವಾದ ಮಹತತ್ತ್ವದಿಂದ ಅಭಿಮಾನವು ಉಂಟಾಯಿತು. ಸಂಕ್ಷೇಪವಾಗಿ ಅದನ್ನು ಲಕ್ಷಣಮುಖದಿಂದ ಅಹಂಕಾರವೆಂದು ತಿಳಿಯಬೇಕು.
ಅಹಂಕಾರೇಣ ಭೂತಾನಾಂ ಸರ್ವೇಷಾಂ ಪ್ರಭವಾಪ್ಯಯೌ |
ಅಹಂಕಾರನಿವೃತ್ತಿರ್ಹಿ ನಿರ್ವಾಣಾಯೋಪಪದ್ಯತೇ ॥28॥
ಎಲ್ಲ ಪ್ರಾಣಿಗಳ ಉತ್ಪತ್ತಿ-ವಿನಾಶಗಳು ಅಹಂಕಾರದಿಂದ ಉಂಟಾಗುತ್ತವೆ. ಅಹಂಕಾರ ನಿವೃತ್ತಿಯೇ ಮೋಕ್ಷಕ್ಕೆ ಕಾರಣವಾಗುತ್ತದೆ.
ಖಂ ವಾಯುರಗ್ನಿಃ ಸಲಿಲಂ ಪೃಥಿವೀ ಚೇತಿ ಪಂಚಮೀ |
ಮಹಾಭೂತಾನಿ ಭೂತಾನಾಂ ಸರ್ವೇಷಾಂ ಪ್ರಭವಾಪ್ಯಯೌ ॥29॥
ಆಕಾಶ, ವಾಯು, ಅಗ್ನಿ, ಜಲ ಮತ್ತು ಐದನೆಯದಾದ ಪೃಥಿವಿ- ಈ ಮಹಾಭೂತಗಳು ಎಲ್ಲ ಪ್ರಾಣಿಗಳ ಉತ್ಪತ್ತಿ-ವಿನಾಶಗಳಿಗೆ ಕಾರಣವಾದವುಗಳು.
ಶಬ್ದಃ ಶ್ರೋತ್ರಂ ತಥಾ ಖಾನಿ ತ್ರಯಮಾಕಾಶಸಂಭವಮ್ |
ಸ್ಪರ್ಶಸ್ತ್ವಕ್ ಪ್ರಾಣಿನಾಂ ಚೇಷ್ಟಾ ಪವನಸ್ಯ ಗುಣಾಃ ಸ್ಮೃತಾಃ ॥30॥
ಶಬ್ದ, ಶ್ರೋತ್ರೇಂದ್ರಿಯ ಮತ್ತು ಇಂದ್ರಿಯಗಳು ಆಕಾಶದಿಂದ ಉಂಟಾದವುಗಳು. ಸ್ಪರ್ಶ, ತ್ವಗಿಂದ್ರಿಯ ಮತ್ತು ಪ್ರಾಣಿಗಳ ಚೇಷ್ಟೆಗಳು ವಾಯುವಿನ ಗುಣವೆಂದು ಹೇಳಲ್ಪಡುತ್ತವೆ.
ರೂಪಂ ಪಾಕೋಽಕ್ಷಿಣೀ ಜ್ಯೋತಿಶ್ಚತ್ವಾರಸ್ತೇಜಸೋ ಗುಣಾಃ |
ರಸಃ ಸ್ನೇಹಸ್ತಥಾ ಜಿಹ್ವಾ ಶೈತ್ಯಂ ಚ ಜಲಜಾ ಗುಣಾಃ ॥31॥
ರೂಪ, ಪಾಕ, ಚಕ್ಷುಸ್ಸು ಮತ್ತು ಪ್ರಕಾಶ - ಈ ನಾಲ್ಕು ತೇಜಸ್ಸಿನ ಗುಣಗಳು. ರಸ, ಸ್ನೇಹ, ಜಿಹ್ವೇಂದ್ರಿಯ ಮತ್ತು ಶೈತ್ಯ - ಇವು ಜಲದ ಗುಣಗಳು.
ಗಂಧೋ ಘ್ರಾಣಂ ಶರೀರಂ ಚ ಪೃಥಿವ್ಯಾಸ್ತೇ ಗುಣಾಸ್ತ್ರಯಃ |
ಇತಿ ಸರ್ವಗುಣಾ ದೇವಿ ವಿಖ್ಯಾತಾಃ ಪಾಂಚಭೌತಿಕಾಃ ॥32॥
ಗಂಧ, ಘ್ರಾಣೇಂದ್ರಿಯ, ಶರೀರ - ಈ ಮೂರು ಪೃಥಿವಿಯ ಗುಣಗಳು. ಎಲೌ ದೇವಿಯೇ, ಹೀಗೆ ಸರ್ವಗುಣಗಳು ಪಾಂಚಭೌತಿಕವೆಂದು ಪ್ರಸಿದ್ಧವಾಗಿವೆ.
ಗುಣಾನ್ ಪೂರ್ವಸ್ಯ ಪೂರ್ವಸ್ಯ ಪ್ರಾಪ್ನುವಂತ್ಯುತ್ತರಾಣಿ ತು |
ತಸ್ಮಾನ್ನೈಕಗುಣಾಶ್ಚೇಹ ದೃಶ್ಯಂತೇ ಭೂತಸೃಷ್ಟಯಃ ॥33॥
ಮೊದಲಿನ ಭೂತಗಳು ಅನಂತರ ಜನಿಸಿದ ಭೂತಗಳಲ್ಲಿ ಕಂಡುಬರುತ್ತವೆ. ಆಕಾಶದ ಗುಣವು ವಾಯುವಿನಲ್ಲಿಯೂ, ಆಕಾಶ ವಾಯು ಗುಣಗಳು ಅಗ್ನಿಯಲ್ಲಿಯೂ, ಅಗ್ನಿಗಳ ಆಕಾಶವಾಯು ಗುಣಗಳು ಜಲದಲ್ಲಿಯೂ, ಆಕಾಶ ವಾಯು ಅಗ್ನಿ ಜಲದ ಗುಣಗಳು ಪೃಥಿವಿಯಲ್ಲಿಯೂ ಕಂಡುಬರುತ್ತವೆ. ಆದ್ದರಿಂದ ಭೂತಸೃಷ್ಟಿಯಲ್ಲಿ ಅನೇಕ ಗುಣಗಳು ಇರುತ್ತವೆ.
ಉಪಲಭ್ಯಾಪ್ಸು ಯೇ ಗಂಧಂ ಕೇಚಿದ್ ಬ್ರೂಯುರನೈಪುಣಾಃ |
ಅಪಾಂ ಗಂಧಗುಣಂ ಪ್ರಾಜ್ಞಾ ನೇಚ್ಛಂತಿ ಕಮಲೇಕ್ಷಣೇ ॥34॥
ನೀರಿನಲ್ಲಿ ಗಂಧವನ್ನು ಗಮನಿಸಿ ಅಕೋವಿದರಾದ ಕೆಲವರು ನೀರಿನಲ್ಲಿ ಗಂಧವಿದೆ ಎಂದು ಭಾವಿಸುತ್ತಾರೆ. ಕಮಲನೇತ್ರೆಯೇ, ಪ್ರಾಜ್ಞರು ನೀರಿಗೆ ಗಂಧರೂಪವಾದ ಗುಣವನ್ನು ಬಯಸುವುದಿಲ್ಲ.
ತದ್ಗಂಧತ್ವಮಪಾಂ ನಾಸ್ತಿ ಪೃಥಿವ್ಯಾ ಏವ ತದ್ಗುಣಃ |
ಭೂಮಿರ್ಗಂಧೇ ರಸೇ ಸ್ನೇಹೋ ಜ್ಯೋತಿಶ್ಚಕ್ಷುಷಿ ಸಂಸ್ಥಿತಮ್ |
ಪ್ರಾಣಾಪಾನಾಶ್ರಯೋಃ ವಾಯುಃ ಖೇಷ್ವಾಕಾಶಃ ಶರೀರಿಣಾಮ್ ॥35॥
ನೀರಿಗೆ ಗಂಧವಿಲ್ಲ. ಅದು ಪೃಥಿವಿಯದೇ ಗುಣ. ಶರೀರಿಗಳಿಗೆ ಗಂಧದಲ್ಲಿ (ಘ್ರಾಣೇಂದ್ರಿಯದಲ್ಲಿ) ಭೂಮಿಯೂ, ರಸದಲ್ಲಿ (ಜಿಹ್ವೆಯಲ್ಲಿ) ಸ್ನೇಹವೂ (ಜಲವೂ), ಚಕ್ಷುಸ್ಸಿನಲ್ಲಿ ಜ್ಯೋತಿಸ್ಸೂ, ಪ್ರಾಣಾಪಾನಗಳಲ್ಲಿ ವಾಯುವೂ, ವಿವರಗಳಲ್ಲಿ ಆಕಾಶವೂ ಸನ್ನಿಹಿತವಾಗಿವೆ.

ಕೇಶಾಸ್ಥಿನಖದಂತತ್ವಕ್ಪಾಣಿಪಾದಶಿರಾಂಸಿ ಚ |
ಪೃಷ್ಠೋದರಕಟಿಗ್ರೀವಾಃ ಸರ್ವಂ ಭೂಮ್ಯಾತ್ಮಕಂ ಸ್ಮೃತಮ್ ॥36॥
ಕೇಶ, ಅಸ್ಥಿ, ನಖ, ದಂತ, ಚರ್ಮ, ಪಾಣಿ, ಪಾದ, ಶಿರಸ್ಸು, ಪೃಷ್ಠ, ಉದರ, ಕಟಿ, ಗ್ರೀವಾ ಎಲ್ಲವೂ ಪೃಥಿವ್ಯಾತ್ಮಕವೆಂದು ಹೇಳಲ್ಪಡುತ್ತವೆ.
ಯತ್ಕಿಂಚಿದಪಿ ಕಾಯೇಽಸ್ಮಿಂಧಾತುದೋಷಮಲಾಶ್ರಿತಮ್ |
ತತ್ಸರ್ವಂ ಭೌತಿಕಂ ವಿದ್ಧಿ ದೇಹೇ ನೈವಾಸ್ತ್ಯಭೌತಿಕಮ್ ॥37॥
ಈ ದೇಹದಲ್ಲಿ ಧಾತುದೋಷ ಮತ್ತು ಕಶ್ಮಲಾತ್ಮಕವಾದ ಯಾವ ವಸ್ತುವಿದ್ದರೂ ಅದೆಲ್ಲವನ್ನೂ ಭೌತಿಕವೆಂದು ತಿಳಿ. ದೇಹದಲ್ಲಿ ಅಭೌತಿಕವಾದುದು ಯಾವುದೂ ಇಲ್ಲ.
ಬುದ್ಧೀಂದ್ರಿಯಾಣಿ ಕರ್ಣಸ್ತ್ವಗಕ್ಷಿ ಜಿಹ್ವಾಽಥ ನಾಸಿಕಾ |
ಕರ್ಮೇಂದ್ರಿಯಾಣಿ ವಾಕ್ಪಾಣಿಃ ಪಾದೋ ಮೇಢ್ರಂ ಗುದಂ ತಥಾ ॥38॥
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ |
ಬುದ್ಧೀಂದ್ರಿಯಾರ್ಥಾನ್ ಜಾನೀಯಾದ್ ಭೂತೇಭ್ಯಸ್ತ್ವಭಿನಿಃಸೃತಾನ್ ॥
ಬುದ್ಧಿ, ಇಂದ್ರಿಯಗಳು, ಕರ್ಣ, ಚರ್ಮ, ನೇತ್ರಗಳು, ನಾಲಿಗೆ, ನಾಸಿಕ, ಕರ್ಮೇಂದ್ರಿಯಗಳಾದ ವಾಕ್, ಪಾಣಿ, ಪಾದ, ಶಿಶ್ನ, ಗುದ ಮತ್ತು ಜ್ಞಾನೇಂದ್ರಿಯಗಳ ವಿಷಯವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳೆಲ್ಲವೂ ಭೂತಗಳಿಂದ ಉಂಟಾದವುಗಳು ಎಂದು ತಿಳಿಯಬೇಕು.
ವಾಕ್ಯಂ ಕ್ರಿಯಾ ಗತಿಃ ಪ್ರೀತಿರುತ್ಸರ್ಗಶ್ಚೇತಿ ಪಂಚಧಾ |
ಕರ್ಮೇಂದ್ರಿಯಾರ್ಥಾನ್ ಜಾನೀಯಾತ್ ತೇ ಚ ಭೂತೋದ್ಭವಾ ಮತಾಃ ॥
ಮಾತನಾಡುವುದು, ಕೆಲಸವನ್ನು ಮಾಡುವುದು, ನಡೆಯುವುದು, ಸಂತೋಷ ಪಡುವುದು, ವಿಸರ್ಗವನ್ನು ಮಾಡುವುದು - ಹೀಗೆ ಐದು ಬಗೆಯಾದ ಕರ್ಮೇಂದ್ರಿಯ ವಿಷಯಗಳು ಭೂತದಿಂದ ಉದ್ಭವಿಸಿವೆ ಎಂದು ತಿಳಿಯಬೇಕು.
ಇಂದ್ರಿಯಾಣಾಂ ತು ಸರ್ವೇಷಾಮೀಶ್ವರಂ ಮನ ಉಚ್ಯತೇ |
ಪ್ರಾರ್ಥನಾಲಕ್ಷಣಂ ತಚ್ಚ ಇಂದ್ರಿಯಂ ತು ಮನಃ ಸ್ಮೃತಮ್ ॥41॥
ಎಲ್ಲ ಇಂದ್ರಿಯಗಳಿಗೆ ಮನಸ್ಸು ಸ್ವಾಮಿಯಾದುದು. ಸಂಕಲ್ಪರೂಪವಾದ ಇಂದ್ರಿಯಕ್ಕೆ ಮನಸ್ಸು ಎಂದು ಹೆಸರು.
ನಿಯುಂಕ್ತೇ ಚ ಸದಾ ತಾನಿ ಭೂತಾತ್ಮಾ ಮನಸಾ ಸಹ |
ನಿಯಮೇ ಚ ವಿಸರ್ಗೇ ಚ ಮನಸಃ ಕಾರಣಂ ಪ್ರಭುಃ ॥42॥
ಪ್ರಭುವಾದ ಪರಮಾತ್ಮನು ಮನಸ್ಸಿನ ಜೊತೆಯಲ್ಲಿ ಆ ಎಲ್ಲ ಇಂದ್ರಿಯಗಳನ್ನೂ ಯಾವಾಗಲೂ ನಿಯೋಜಿಸುತ್ತಾನೆ. ಪ್ರಭುವಾದ ಅವನು ನಿಯಂತ್ರಿಸುವುದರಲ್ಲಿ ಅಥವಾ ನಿಯಂತ್ರಣವನ್ನು ಬಿಡುವುದರಲ್ಲಿ ಮನಸ್ಸನ್ನು ನಿಮಿತ್ತ ಮಾಡಿಕೊಳ್ಳುತ್ತಾನೆ.
ಇಂದ್ರಿಯಾಣೀಂದ್ರಿಯಾರ್ಥಾಶ್ಚ ಸ್ವಭಾವಶ್ಚೇತನಾ ಧೃತಿಃ |
ಭೂತಾಭೂತವಿಕಾರಶ್ಚ ಶರೀರಮಿತಿ ಸಂಜ್ಞಿತಮ್ ॥43॥
ಇಂದ್ರಿಯಗಳು, ಇಂದ್ರಿಯಾರ್ಥಗಳು, ಸ್ವಭಾವ, ಜ್ಞಾನ, ಧೈರ್ಯ, ಭೂತವಿಕಾರಗಳು, ಭೂತವಿಕಾರವಲ್ಲದವು ಎಲ್ಲವೂ ಸೇರಿ ಶರೀರವೆನಿಸುತ್ತದೆ.
ಶರೀರಾಚ್ಚ ಪರೋ ದೇಹೀ ಶರೀರಂ ಚ ವ್ಯಪಾಶ್ರಿತಃ |
ಶರೀರಿಣಃ ಶರೀರಸ್ಯ ಸೋಽಂತರಂ ವೇತ್ತಿ ವೈ ಮುನಿಃ ॥44॥
ಶರೀರಕ್ಕಿಂತ ಭಿನ್ನನಾದ ಜೀವನು ಶರೀರವನ್ನು ಆಶ್ರಯಿಸಿಕೊಂಡಿದ್ದಾನೆ. ಶರೀರ ಮತ್ತು ಶರೀರಿಗಳ ಭೇದವನ್ನು ಜ್ಞಾನಿಯಾದವನು ತಿಳಿಯುತ್ತಾನೆ.
ಅರಸಸ್ಪರ್ಶಗಂಧಂ ಚ ರೂಪಶಬ್ದವಿವರ್ಜಿತಮ್ |
ಅಶರೀರಂ ಶರೀರೇಷು ದಿದೃಕ್ಷೇತ ನಿರಿಂದ್ರಿಯಮ್ ॥45॥
ಶರೀರಗಳಲ್ಲಿ ಶರೀರರಹಿತನಾದ, ಶಬ್ದ-ಸ್ಪರ್ಶ-ರೂಪ-ಗಂಧ-ರಸ ವಿವರ್ಜಿತನಾದ, ಪ್ರಾಕೃತಗುಣರಹಿತನಾದ ಪರಮಾತ್ಮನನ್ನು ನೋಡಲು ಬಯಸಬೇಕು.
ಅವ್ಯಕ್ತಂ ಸರ್ವದೇಹೇಷು ಮರ್ತ್ಯೇಷ್ವಮರಮಾಶ್ರಿತಮ್ |
ಯಃ ಪಶ್ಯೇತ್ ಪರಮಾತ್ಮಾನಂ ಬಂಧನೈಃ ಸ ವಿಮುಚ್ಯತೇ ॥46॥
ಮರಣಶೀಲವಾದ ಸರ್ವದೇಹಗಳಲ್ಲಿ ಅವ್ಯಕ್ತನಾಗಿ, ಮರಣರಹಿತನಾಗಿ ನೆಲೆಸಿರುವ ಪರಮಾತ್ಮನನ್ನು ನೋಡುವವನು ಬಂಧನಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.
ನೈವಾಯಂ ಚಕ್ಷುಷಾ ಗ್ರಾಹ್ಯೋ ನಾಪರೈರಿಂದ್ರಿಯೈರಪಿ |
ಮನಸೈವ ಪ್ರದೀಪ್ತೇನ ಮಹಾನಾತ್ಮಾ ಪ್ರದೃಶ್ಯತೇ ॥47॥
ಅವನನ್ನು ಚಕ್ಷುಸ್ಸಿನಿಂದಾಗಲೀ, ಬೇರೆ ಇಂದ್ರಿಯಗಳಿಂದಾಗಲೀ ಗ್ರಹಿಸಲು ಸಾಧ್ಯವಿಲ್ಲ. ಪ್ರದೀಪ್ತವಾದ ಮನಸ್ಸಿಗೆ ಮಾತ್ರ ಆ ಮಹಾತ್ಮನು ಗೋಚರನಾಗುತ್ತಾನೆ.
ಸ ಹಿ ಸರ್ವೇಷು ಭೂತೇಷು ಸ್ಥಾವರೇಷು ಚರೇಷು ಚ |
ವಸತ್ಯೇಕೋ ಮಹಾವೀರ್ಯೋ ನಾನಾಭಾವಸಮನ್ವಿತಃ ॥48॥
ಸರ್ವೋತ್ತಮನೂ, ಮಹಾಸಾಮರ್ಥ್ಯೋಪೇತನೂ ಆದ ಅವನು ಎಲ್ಲಾ ಜಂಗಮ ಸ್ಥಾವರಗಳಲ್ಲಿ ನಾನಾ ಭಾವಗಳನ್ನು ಹೊಂದಿ ವಾಸ ಮಾಡುತ್ತಾನೆ.

ನೈವ ಚೋರ್ಧ್ವಂ ನ ತಿರ್ಯಕ್ಚ ನಾಧಸ್ತಾನ್ನ ಕುತಶ್ಚನ |
ಇಂದ್ರಿಯೈರಿವ ಬುದ್ಧ್ಯಾ ವಾ ನ ದೃಶ್ಯೇತ ಕದಾಚನ ॥49॥
ಅವನು ಇಂದ್ರಿಯಗಳಿಂದ ಹೇಗೆ ಕಾಣುವುದಿಲ್ಲವೋ ಹಾಗೆ ಬುದ್ಧಿಯಿಂದಲೂ ಸಹ ಮೇಲ್ಭಾಗದಲ್ಲಾಗಲೀ, ಪಾರ್ಶ್ವದಲ್ಲಾಗಲೀ, ಕೆಳಭಾಗದಲ್ಲಾಗಲೀ ಎಲ್ಲಿಯೂ ಕಂಡುಬರುವುದಿಲ್ಲ.
ನವದ್ವಾರಂ ಪುರಂ ಗತ್ವಾ ಹಂಸೋಽಸೌ ನೀಯತೇ ವಶಮ್ |
ಈಶ್ವರಃ ಸರ್ವಭೂತೇಷು ಸ್ಥಾವರಸ್ಯ ಚರಸ್ಯ ಚ ॥50॥
ದೋಷದೂರನೂ, ಸಾರರೂಪನೂ ಆದ ಅವನು ನವದ್ವಾರವುಳ್ಳ ಶರೀರವನ್ನು ಪ್ರವೇಶಿಸಿ ಆ ಶರೀರವನ್ನು ತನ್ನ ವಶವನ್ನಾಗಿ ಮಾಡಿಕೊಳ್ಳುತ್ತಾನೆ. ಸ್ಥಾವರ- ಜಂಗಮವಾದ ಎಲ್ಲ ಭೂತಗಳಿಗೂ ಅವನು ಪ್ರಭುವಾಗಿದ್ದಾನೆ.
ತಮೇವಾಹುರಣುಭ್ಯೋಽಣುಂ ಮಹದ್ಭ್ಯಸ್ತು ಮಹತ್ತರಮ್ |
ಬಹುಧಾ ಸರ್ವಭೂತಾನಿ ವ್ಯಾಪ್ಯ ತಿಷ್ಠತಿ ಶಾಶ್ವತಃ ॥51॥
ಅವನನ್ನು ಅಣುವಿಗಿಂತಲೂ ಅಣುವೆಂದೂ, ಮಹತ್ತರಕ್ಕಿಂತಲೂ ಮಹತ್ತರನೆಂದೂ ಹೇಳುತ್ತಾರೆ. ಶಾಶ್ವತನಾದ ಅವನು ಅನೇಕ ರೂಪಗಳಿಂದ ಎಲ್ಲ ಭೂತಗಳನ್ನೂ ವ್ಯಾಪಿಸಿರುತ್ತಾನೆ.
ಕ್ಷೇತ್ರಜ್ಞಮೇಕತಃ ಕೃತ್ವಾ ಸರ್ವಂ ಕ್ಷೇತ್ರಮಥೈಕತಃ |
ಏವಂ ಸಂವಿಮೃಶೇಜ್ಜ್ಞಾನೀ ಸಂಯತಃ ಸತತಂ ಸದಾ ॥52॥
ಕ್ಷೇತ್ರಜ್ಞನಾದ ಪರಮಾತ್ಮನು ಒಂದು ಕಡೆ ಮತ್ತು ಎಲ್ಲ ಕ್ಷೇತ್ರಗಳನ್ನು ಇನ್ನೊಂದು ಕಡೆ ಇಟ್ಟು ಜ್ಞಾನಿಯಾದವನು ಮೌನವಾಗಿ ಕ್ಷೇತ್ರವೆಲ್ಲವೂ ಕ್ಷೇತ್ರಜ್ಞನ ಅಧೀನವೆಂದು ಚಿಂತಿಸಬೇಕು.
ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ |
ಅಕರ್ತಾ ಲೇಪಕೋ ನಿತ್ಯೋ ಮಧ್ಯಸ್ಥಃ ಸರ್ವಕರ್ಮಣಾಮ್ ॥53॥
ಜೀವನು ಪ್ರಕೃತಿಯಲ್ಲಿದ್ದು ಪ್ರಕೃತಿಯ ಗುಣಗಳನ್ನು ಭೋಗಿಸುತ್ತಾನೆ. ತಾನು ಫಲದ ಆಸೆಯಿಂದ ಕರ್ಮವನ್ನು ಮಾಡದೆ ಜೀವನಿಗೆ ಕರ್ಮಲೇಪವನ್ನುಂಟು ಮಾಡಿ ಪರಮಾತ್ಮನು ಸರ್ವಕರ್ಮಗಳಲ್ಲಿಯೂ ಯಾವಾಗಲೂ ತಟಸ್ಥನಾಗಿರುತ್ತಾನೆ.
ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ |
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥54॥
ಕಾರ್ಯ-ಕಾರಣ ಕರ್ತೃತ್ವದ ವಿಷಯದಲ್ಲಿ ಪ್ರಕೃತಿಯು ಕಾರಣವೆಂದು ಹೇಳಲಾಗುತ್ತದೆ. ಸುಖ-ದುಃಖದ ಭೋಕ್ತೃತ್ವದ ವಿಷಯದಲ್ಲಿ ಪುರುಷನು ಕಾರಣನೆಂದು ಹೇಳಲ್ಪಡುತ್ತದೆ.
ಅಜಯ್ಯೋಽಯಮಚಿಂತ್ಯೋಽಯಮವ್ಯಕ್ತೋಽಯಂ ಸನಾತನಃ |
ದೇಹೇ ತೇಜೋಮಯೋ ದೇಹೀ ತಿಷ್ಠತೀತ್ಯಪರೇ ವಿದುಃ ॥55॥
ದೇಹದಲ್ಲಿರುವ ಅವ್ಯಕ್ತನೂ, ಸನಾತನನೂ ಆದ ಪರಮಾತ್ಮನು ಜಯಿಸಲು ಅಸಾಧ್ಯನಾದವನು, ಚಿಂತಿಸಲು ಅಸಾಧ್ಯನಾದವನು. ಅವನು ತೇಜೋಮಯನಾಗಿದ್ದಾನೆ. ಅವನೇ ಜೀವನೆಂದು ಕೆಲವರು ತಿಳಿಯುತ್ತಾರೆ.
ಜ್ಞಾನಮೂಷ್ಮಾ ಚ ವಾಯುಶ್ಚ ಶರೀರೇ ಜೀವಸಂಜ್ಞಿತಃ |
ಇತ್ಯೇಕೇ ನಿಶ್ಚಿತಾ ಬುದ್ಧ್ಯಾ ತತ್ರ ಯೇ ಬುದ್ಧಿಚಿಂತಕಾಃ ॥56॥
ಇನ್ನು ಕೆಲವರು ಬುದ್ಧಿಚಿಂತಕರು ತಮ್ಮ ಬುದ್ಧಿಯಿಂದ ಶರೀರದಲ್ಲಿರುವ ಜ್ಞಾನ, ಉಷ್ಮ ಮತ್ತು ವಾಯು ಇವುಗಳು ಒಟ್ಟಾಗಿ ಜೀವ ಎಂಬ ಹೆಸರನ್ನು ಪಡೆಯುತ್ತದೆ ಎಂಬ ನಿಶ್ಚಯವನ್ನು ಹೊಂದಿದ್ದಾರೆ.
ಅಪರೇ ಸರ್ವಲೋಕಾಂಶ್ಚ ವ್ಯಾಪ್ಯ ತಿಷ್ಠಂತಮೀಶ್ವರಮ್ |
ಬ್ರುವತೇ ಕೇಚಿದತ್ರೈವ ತಿಲೇ ತೈಲವದಾಸ್ಥಿತಮ್ ॥57॥
ಇನ್ನು ಕೆಲವರು ಈಶ್ವರನು ಎಲ್ಲ ಲೋಕಗಳನ್ನೂ ವ್ಯಾಪಿಸಿ ತಿಲದಲ್ಲಿ ತೈಲವಿದ್ದಂತೆ ಇಲ್ಲಿಯೇ ಅದೃಶ್ಯನಾಗಿದ್ದಾನೆ ಎಂದು ಹೇಳುತ್ತಾರೆ.
ಅಪರೇ ನಾಸ್ತಿಕಾ ಮೂಢಾ ಹೀನತ್ವಾತ್ ಸ್ಥೂಲಲಕ್ಷಣೈಃ |
ನಾಸ್ತ್ಯಾತ್ಮೇತಿ ವಿನಿಶ್ಚಿತ್ಯ ಪ್ರಾಹುಸ್ತೇ ನಿರಯಾಲಯಾಃ ॥58॥
ಏವಂ ನಾನಾವಿಧಾನೇನ ವಿಮೃಶಂತಿ ಮಹೇಶ್ವರಮ್ ॥59॥
ಇನ್ನು ಕೆಲವು ನಾಸ್ತಿಕರು ಜ್ಞಾನಶೂನ್ಯರಾದುದರಿಂದ, ಸ್ಥೂಲಲಕ್ಷಣಗಳು ಕಂಡುಬರದಿರುವುದರಿಂದ ಪರಮಾತ್ಮನೇ ಇಲ್ಲ ಎಂದು ಹೇಳುತ್ತಾರೆ. ಅವರು ನರಕಕ್ಕೆ ಹೋಗುವವರು. ಹೀಗೆ ಮಹೇಶ್ವರನನ್ನು ನಾನಾವಿಧದಿಂದ ವಿಮರ್ಶೆ ಮಾಡಿ (ಕೆಲವರು ಸರಿಯಾಗಿ, ಕೆಲವರು ತಪ್ಪಾಗಿ) ತಿಳಿಯುತ್ತಾರೆ.
ಉಮಾ
ಊಹವಾನ್ ಬ್ರಾಹ್ಮಣೋ ಲೋಕೇ ನಿತ್ಯಮವ್ಯಯಮಕ್ಷರಮ್ |
ಅಸ್ತ್ಯಾತ್ಮಾ ಸರ್ವಭೂತೇಷು ಹೇತುಸ್ತತ್ರ ಸುದುರ್ಗಮಃ ॥60॥
ಉಮಾ ತರ್ಕಶಕ್ತಿಯುಳ್ಳ ಬ್ರಾಹ್ಮಣನು ಲೋಕದಲ್ಲಿ ನಿತ್ಯನೂ, ಅವ್ಯಯನೂ, ವಿಕಾರರಹಿತನೂ ಆದ ಪರಮಾತ್ಮನು ಸರ್ವಭೂತದಲ್ಲಿದ್ದಾನೆ ಎಂಬ ಜ್ಞಾನವನ್ನು ಹೊಂದಿದ್ದಾನೆ. ಆದರೆ ಅವನನ್ನು ನೋಡುವುದು (ತಿಳಿಯುವುದು) ಬಹಳ ಕಷ್ಟವಾದುದು.
ಮಹೇಶ್ವರಃ
ಋಷಿಭಿಶ್ಚಾಪಿ ದೇವೈಶ್ಚ ವ್ಯಕ್ತಮೇಷ ತು ದೃಶ್ಯತೇ |

ದೃಷ್ಟ್ವಾ ತು ತಂ ಮಹಾತ್ಮಾನಂ ಪುನಸ್ತನ್ನ ನಿವರ್ತತೇ ॥61॥
ಮಹೇಶ್ವರ ಋಷಿಗಳು, ದೇವತೆಗಳು ಸ್ಪಷ್ಟವಾಗಿಯೇ ಅವನನ್ನು ನೋಡುತ್ತಾರೆ. ಆ ಮಹಾತ್ಮನನ್ನು ನೋಡಿದ ಮೇಲೆ ಪುನಃ ಸಂಸಾರಕ್ಕೆ ಬರುವುದಿಲ್ಲ.
ತಸ್ಮಾತ್ ತದ್ದರ್ಶನಾದೇವ ವಿಂದತೇ ಪರಮಾಂ ಗತಿಮ್ |
ಇತಿ ತೇ ಕಥಿತೋ ದೇವಿ ಸಾಂಖ್ಯಧರ್ಮಃ ಸನಾತನಃ |
ಕಪಿಲಾದಿಭಿರಾಚಾರ್ಯೈಃ ಸೇವಿತಃ ಪರಮರ್ಷಿಭಿಃ ॥62॥
ಆದ್ದರಿಂದ ಅವನ ದರ್ಶನದಿಂದಲೇ ಶ್ರೇಷ್ಠ ಗತಿಯನ್ನು ಹೊಂದುತ್ತಾರೆ. ದೇವಿಯೇ, ಕಪಿಲಾದಿ ಪರಮಾತ್ಮನ ರೂಪದಿಂದಲೂ, ಪರಮರ್ಷಿಗಳಿಂದಲೂ ಸೇವಿತವಾದ ಪರಮಾರ್ಥವಾದ, ಸನಾತನವಾದ ಸಾಂಖ್ಯಧರ್ಮವನ್ನು ನಿನಗೆ ಹೇಳಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಸಾಂಖ್ಯತತ್ತ್ವೋಪದೇಶೋ ನಾಮ ತ್ರಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ತೊಂದನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಯೋಗವಿಧಿಕಥನ.
ಮಹೇಶ್ವರಃ
ಸಾಂಖ್ಯಜ್ಞಾನೇನ ಯುಕ್ತಾನಾಂ ತದೇತತ್ ಕೀರ್ತಿತಂ ಮಯಾ |
ಯೋಗಧರ್ಮಂ ಪುನಃ ಕೃತ್ಸ್ನಂ ಕೀರ್ತಯಿಷ್ಯಾಮಿ ತೇ ಶೃಣು ॥1॥
ಮಹೇಶ್ವರ ಸಾಂಖ್ಯಜ್ಞಾನಕ್ಕೆ ಸಂಬಂಧಿಸಿದ ಈ ವಿಷಯವೆಲ್ಲವನ್ನೂ ನಾನು ಹೇಳಿದೆನು. ಇನ್ನೂ ಸಮಗ್ರವಾಗಿ ಯೋಗಧರ್ಮವನ್ನು ನಿನಗೆ ಹೇಳುವೆನು. ಅದನ್ನು ಕೇಳು.
ಸ ಚ ಯೋಗೋ ದ್ವಿಧಾ ಭಿನ್ನೋ ಬ್ರಹ್ಮದೇವರ್ಷಿಸಮ್ಮತಃ |
ಸಮಾನಮುಭಯತ್ರಾಪಿ ವೃತ್ತಂ ಶಾಸ್ತ್ರಪ್ರಚೋದಿತಮ್ ॥2॥
ಬ್ರಹ್ಮರ್ಷಿಗಳಿಗೆ ಮತ್ತು ದೇವರ್ಷಿಗಳಿಗೆ ಸಮ್ಮತವಾದ ಯೋಗವು ಎರಡು ಬಗೆಯಾದವುಗಳು. ಶಾಸ್ತ್ರವಿಧಿಯಿಂದ ವಿಧಿಸಲ್ಪಟ್ಟ ನಡತೆಯು (ಆಚಾರವು) ಎರಡು ಕಡೆಯಲ್ಲಿಯೂ ಸಮಾನವಾಗಿರುತ್ತವೆ.
ಸ ಚಾಷ್ಟಗುಣಮೈಶ್ವರ್ಯಮಧಿಕೃತ್ಯ ವಿಧೀಯತೇ |
ಸಾಯುಜ್ಯಂ ಸರ್ವದೇವಾನಾಂ ಯೋಗಧರ್ಮಃ ಪರಃ ಸ್ಮೃತಃ ॥3॥
ಲೋಕಪಾಲರ ಅಣಿಮಾದಿ ಅಷ್ಟೈಶ್ವರ್ಯವನ್ನು ಉದ್ದೇಶಿಸಿ ಯೋಗವು ವಿಧಿಸಲ್ಪಡುತ್ತದೆ. ಸರ್ವದೇವತೆಗಳ ಸಾಯುಜ್ಯವು ಯೋಗಧರ್ಮದ ಪರಮ ಫಲವಾಗಿದೆ.
ಜ್ಞಾನಂ ಸರ್ವಸ್ಯ ಯೋಗಸ್ಯ ಮೂಲಮಿತ್ಯವಧಾರಯ |
ವ್ರತೋಪವಾಸನಿಯಮೈಸ್ತೈಸ್ತೈಸ್ತತ್ಪರಿಬೃಂಹಯೇತ್ ॥4॥
ಜ್ಞಾನವು ಎಲ್ಲ ಯೋಗಗಳಿಗೂ ಮೂಲವೆಂದು ತಿಳಿ. ಆಯಾ ವ್ರತೋಪವಾಸ, ನಿಯಮಗಳಿಂದ ಆ ಜ್ಞಾನವನ್ನು ಪುಷ್ಟೀಕರಿಸಬೇಕು.
ಐಕಾತ್ಮ್ಯಂ ಬುದ್ಧಿಮನಸೋರಿಂದ್ರಿಯಾಣಾಂ ಚ ಸರ್ವಶಃ |
ಆತ್ಮನ್ಯವ್ಯಯಿನಿ ಪ್ರಾಜ್ಞೇ ಜ್ಞಾನಮೇತತ್ತು ಯೋಗಿನಾಮ್ ॥5॥
ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳನ್ನು ನಾಶರಹಿತನಾದ, ಪ್ರಾಜ್ಞನಾದ ಪರಮಾತ್ಮನ ವಿಷಯಕವನ್ನಾಗಿ ಮಾಡುವುದೇ ಯೋಗ. ಯೋಗಿಗಳಿಗೆ ಇದೇ ಜ್ಞಾನವೆನಿಸುತ್ತದೆ.
ಅರ್ಚಯೇದ್ ಬ್ರಾಹ್ಮಣಾನಗ್ನೀನ್ ದೇವತಾಯತನಾನಿ ಚ |
ವರ್ಜಯೇದಶಿವಂ ಭಾವಂ ಭವೇತ್ ಸತ್ತ್ವಮುಪಾಶ್ರಿತಃ ॥6॥
ಬ್ರಾಹ್ಮಣರನ್ನು, ಅಗ್ನಿಗಳನ್ನು, ದೇವತಾ ಪ್ರತಿಮೆಗಳನ್ನು ಪೂಜಿಸಬೇಕು. ಸತ್ತ್ವ ಗುಣವನ್ನು ಆಶ್ರಯಿಸಿ ಮನಸ್ಸಿನ ದುಷ್ಟ ಆಲೋಚನೆಗಳನ್ನು ಬಿಡಬೇಕು.
ದಾನಮಧ್ಯಯನಂ ಶ್ರದ್ಧಾ ವ್ರತಾನಿ ನಿಯಮಾಸ್ತಥಾ |
ಸತ್ಯಮಾಹಾರಶುದ್ಧಿಶ್ಚ ಶೌಚಮಿಂದ್ರಿಯನಿಗ್ರಹಃ |
ಏತೈಸ್ತು ವರ್ಧತೇ ತೇಜಃ ಪಾಪಂ ಚಾಪ್ಯವಧೂಯತೇ ॥7॥
ದಾನ, ಅಧ್ಯಯನ, ಶ್ರದ್ಧೆ, ವ್ರತನಿಯಮಗಳು, ಸತ್ಯವಚನ, ಆಹಾರಶುದ್ಧಿ, ಶೌಚ, ಇಂದ್ರಿಯನಿಗ್ರಹ ಇವುಗಳಿಂದ ತೇಜಸ್ಸು ಅಭಿವೃದ್ಧಿಯನ್ನು ಹೊಂದುತ್ತದೆ ಮತ್ತು ಪಾಪವು ನಾಶವನ್ನು ಹೊಂದುತ್ತದೆ.
ನಿರ್ಧೂತಪಾಪ್ಮಾ ಚ ತೇಜಸ್ವೀ ಲಘ್ವಾಹಾರೋ ಜಿತೇಂದ್ರಿಯಃ |
ನಿಃಶೋಕೋ ನಿರ್ಮಲೋ ದಾಂತಃ ಪಶ್ಚಾದ್ ಯೋಗಂ ಸಮಾಚರೇತ್ ॥
ಪಾಪಗಳನ್ನು ಕಳೆದುಕೊಂಡು, ತೇಜಸ್ವಿಯಾಗಿ ಅಲ್ಪಾಹಾರವನ್ನು ಸೇವಿಸಿ, ಜಿತೇಂದ್ರಿಯನಾಗಿ, ಶೋಕರಹಿತನೂ, ನಿರ್ಮಲನೂ, ಇಂದ್ರಿಯನಿಗ್ರಹವುಳ್ಳವನೂ ಆಗಿ ಅನಂತರ ಯೋಗವನ್ನು ಅಭ್ಯಾಸ ಮಾಡಬೇಕು.
ಅವದಧ್ಯಾನ್ಮನಃ ಪೂರ್ವಂ ಮತ್ಸ್ಯಃ ಪಾತಮಿವಾಮಿಷಮ್ |
ಏಕಾಂತೇ ವಿಜನೇ ದೇಶೇ ಸರ್ವತಃ ಸಂವೃತೇ ಶುಚೌ |

ಕಲ್ಪಯೇದಾಸನಂ ತತ್ರ ಸ್ವಾಸ್ತೀರ್ಣಂ ಮೃದುಭಿಃ ಕುಶೈಃ ॥9॥
ಮತ್ಸ್ಯವು ಪತನಕ್ಕೆ ಹೇತುವಾದ ಆಮಿಷದಲ್ಲಿ (ಮಾಂಸದಲ್ಲಿ) ಅಥವಾ ಹುಳುವಿನಲ್ಲಿ ಮನಸ್ಸನ್ನು ಇಡುವಂತೆ ಮನಸ್ಸನ್ನು ಒಂದು ಕಡೆ ನೆಲೆಸಬೇಕು. ಏಕಾಂತದಲ್ಲಿ ಎಲ್ಲ ಕಡೆಯಿಂದಲೂ ಮುಚ್ಚಿದ, ಶುಚಿಯಾದ ನಿರ್ಜನ ಪ್ರದೇಶದಲ್ಲಿ ಆಸನವನ್ನು ಕಲ್ಪಿಸಿ ಅದರ ಮೇಲೆ ಮೃದುವಾದ ಕುಶ (ದರ್ಭೆ)ಗಳನ್ನು ಹರಡಬೇಕು.
ಉಪವಿಶ್ಯಾಸನೇ ತಸ್ಮಿನ್ನೃಜುಕಾಯಶಿರೋಧರಃ |
ಅವ್ಯಗ್ರಃ ಸುಖಮಾಸೀನಃ ಸ್ವಾಂಗಾನಿ ನ ವಿಕಂಪಯೇತ್ |
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥10॥
ಭ್ರುವೋರ್ಮಧ್ಯೇ ಮನಃ ಕೃತ್ವಾ ಚಿಂತಯಿತ್ವಾ ಶರೀರಿಣಮ್ |
ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ |
ತತಸ್ತತೋ ನಿಯಮ್ಯೈತದಾತ್ಮನ್ಯೇವ ಪರಂ ನಯೇತ್ ॥11॥
ಆ ಆಸನದಲ್ಲಿ ಕುಳಿತು ದೇಹ, ಶಿರಸ್ಸು ಮತ್ತು ಕತ್ತುಗಳನ್ನು ನೇರವಾಗಿಟ್ಟುಕೊಂಡು ಸುಖವಾಗಿ ಕುಳಿತು ಅಂಗಗಳನ್ನು ಅಲುಗಾಡಿಸಬಾರದು. ಮೂಗಿನ ತುದಿಯನ್ನು ನೋಡುತ್ತಾ ದಿಕ್ಕುಗಳನ್ನು ನೋಡದೆ ಮನಸ್ಸನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿ, ಶರೀರ ಸ್ವಾಮಿಯಾದ ನಾರಾಯಣನನ್ನು ಚಿಂತಿಸಬೇಕು. ಚಂಚಲವೂ, ಅಸ್ಥಿರವೂ ಆಗಿರುವ ಮನಸ್ಸು ಬೇರೆ ಬೇರೆ ಕಡೆಗೆ ಹೋದಂತೆಲ್ಲಾ ಅದನ್ನು ಅಲ್ಲಿಂದ ಎಳೆದು ತಂದು ಪರಬ್ರಹ್ಮನಲ್ಲಿಯೇ ಇಡಬೇಕು.
ಮನೋಽವಸ್ಥಾಪನಂ ದೇವಿ ಯೋಗಸ್ಯೋಪನಿಷದ್ ಭವೇತ್ |
ತಸ್ಮಾತ್ ಸರ್ವಪ್ರಯತ್ನೇನ ಮನೋಽವಸ್ಥಾಪಯೇತ್ ಸದಾ ॥12॥
ದೇವಿಯೇ, ಮನಸ್ಸು ಅಲುಗಾಡಿಸದೆ ಒಂದೇ ಕಡೆ ನಿಲ್ಲಿಸುವುದು ಯೋಗದ ರಹಸ್ಯ. ಆದ್ದರಿಂದ ಸರ್ವಪ್ರಯತ್ನದಿಂದ ಮನಸ್ಸನ್ನು ನಾರಾಯಣನಲ್ಲಿ ನೆಲೆಸಬೇಕು.
ತ್ವಕ್ಶ್ರೋತ್ರಂ ಚ ತತೋ ಜಿಹ್ವಾಂ ಘ್ರಾಣಂ ಚಕ್ಷುಶ್ಚ ಸಂಹರೇತ್ |
ಪಂಚೇಂದ್ರಿಯಾಣಿ ಸಂಧಾಯ ಮನಸಿ ಸ್ಥಾಪಯೇದ್ ಬುಧಃ ॥13॥
ತ್ವಕ್, ಶ್ರೋತ್ರ, ಜಿಹ್ವಾ, ಘ್ರಾಣ, ಚಕ್ಷುಸ್ - ಈ ಐದು ಇಂದ್ರಿಯಗಳನ್ನು ತಂದು ವಿವೇಕಿಯಾದವನು ಮನಸ್ಸಿನಲ್ಲಿ ನೆಲೆಸುವಂತೆ ಮಾಡಬೇಕು.
ಸರ್ವಂ ಚಾಪೋಹ್ಯ ಸಂಕಲ್ಪಮಾತ್ಮನಿ ಸ್ಥಾಪಯೇನ್ಮನಃ |
ಯದ್ಯೈತಾನ್ಯವತಿಷ್ಠಂತೇ ಮನಃಷಷ್ಠಾನಿ ಚಾತ್ಮನಿ ॥14॥
ಪ್ರಾಣಾಪಾನೌ ತದಾ ತಸ್ಯ ಯುಗಪತ್ತಿಷ್ಠತೋ ವಶೇ |
ಪ್ರಾಣೇ ಹಿ ವಶಮಾಪನ್ನೇ ಯೋಗಸಿದ್ಧಿರ್ಧ್ರುವಾ ಭವೇತ್ ॥15॥
ಮನಸ್ಸಿನ ಎಲ್ಲ ಸಂಕಲ್ಪವನ್ನೂ ತ್ಯಜಿಸಿ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಸಬೇಕು. ಐದು ಇಂದ್ರಿಯಗಳು ಮತ್ತು ಮನಸ್ಸು ಪರಮಾತ್ಮನಲ್ಲಿ ನಿಂತಾಗ ಪ್ರಾಣಾಪಾನಗಳು ಒಟ್ಟಿಗೆ ಯೋಗಿಗೆ ವಶವಾಗುತ್ತವೆ. ಪ್ರಾಣವಾಯುವು ವಶವಾದರೆ ನಿಶ್ಚಿತವಾಗಿ ಯೋಗಸಿದ್ಧಿ ಉಂಟಾಗುತ್ತದೆ.
ಶರೀರಂ ಚಿಂತಯೇತ್ಸರ್ವಂ ವಿಪಾಟ್ಯ ಚ ಸಮೀಪತಃ |
ಅಂತರ್ದೇಹಗತಿಂ ಚಾಪಿ ಪ್ರಾಣಾನಾಂ ಪರಿಚಿಂತಯೇತ್ ॥16॥
ಶರೀರವನ್ನು ವಿಶ್ಲೇಷಿಸಿ ಸಮೀಪದಿಂದ ಎಲ್ಲವನ್ನೂ ಚಿಂತಿಸಬೇಕು. ದೇಹದಲ್ಲಿ ಪ್ರಾಣಾದಿ ವಾಯುಗಳು ಸಂಚರಿಸುವ ಗತಿಯನ್ನೂ ಚಿಂತಿಸಬೇಕು.
ತತೋ ಮೂರ್ಧಾನಮಗ್ನಿಂ ಚ ಶರೀರಂ ಪರಿಪಾಲಯನ್ |
ಪ್ರಾಣೋ ಮೂರ್ಧನಿ ಚಾಗ್ನೌ ಚ ವರ್ತಮಾನೋ ವಿಚೇಷ್ಟತೇ ॥17॥
ಅನಂತರ ಪ್ರಾಣವಾಯುವು ಶಿರಸ್ಸಿನಲ್ಲಿ ಮತ್ತು ಅಗ್ನಿಯಲ್ಲಿದ್ದು ಶಿರಸ್ಸನ್ನೂ, ಶರೀರವನ್ನೂ, ಅಗ್ನಿಯನ್ನೂ (ಜಠರಾಗ್ನಿ) ರಕ್ಷಿಸುತ್ತಾ, ದೇಹದಲ್ಲಿ ವ್ಯಾಪಾರವನ್ನು ಮಾಡುತ್ತದೆ.
ಸ ಜಂತುಃ ಸರ್ವಭೂತಾತ್ಮಾ ಪುರುಷಃ ಸ ಸನಾತನಃ |
ಮನೋ ಬುದ್ಧಿರಹಂಕಾರೋ ಭೂತಾನಿ ವಿಷಯಾಂಶ್ಚ ಸಃ ॥18॥
ಬಸ್ತಿರ್ಮೂಲಂ ಗುದಂ ಚೈವ ಪಾವಕಂ ಚ ಸಮಾಶ್ರಿತಃ |
ವಹನ್ಮೂತ್ರಂ ಪುರೀಷಂ ಚ ಸದಾಽಪಾನಃ ಪ್ರವರ್ತತೇ ॥19॥
ಪ್ರಾಣನು ಸನಾತನವಾದ, ಸರ್ವಪ್ರಾಣಿಯ ಅಂತರ್ಯಾಮಿಯಾದ ಪುರುಷ ಜೀವ. ಅವನು ಮನಸ್ಸು, ಬುದ್ಧಿ, ಅಹಂಕಾರ, ಪಂಚಭೂತಗಳ ವಿಷಯಗಳು, ಬಸ್ತಿ, ಮೂಲಾಧಾರ, ಬುದ್ಧಿ, ಅಗ್ನಿ ಇವುಗಳನ್ನು ಆಶ್ರಯಿಸಿಕೊಂಡಿರುತ್ತಾನೆ. ಮೂತ್ರ- ಮಲಗಳನ್ನು ಹೊರಗೆ ಸಾಗಿಸುತ್ತಾ ಅಪಾನನು ಕಾರ್ಯವನ್ನು ಮಾಡುತ್ತಾನೆ. ಅದರಿಂದ ಪ್ರಾಣಿಗಳಲ್ಲಿ ಪ್ರವೃತ್ತಿಯುಂಟಾಗುತ್ತದೆ.
ಅತಃಪ್ರವೃತ್ತಿರ್ದೇಹೇಷು ಕರ್ಮಾಪಾನಸ್ಯ ತನ್ಮತಮ್ |
ಉದೀರಯನ್ ಸರ್ವಧಾತೂನತ ಊರ್ಧ್ವಂ ಪ್ರವರ್ತತೇ |
ಉದಾನ ಇತಿ ತಂ ವಿದ್ಯುರಧ್ಯಾತ್ಮಕುಶಲಾ ಜನಾಃ ॥20॥
ವಿಸರ್ಜನೆಯು ಅಪಾನನ ಕಾರ್ಯವೆಂದು ಹೇಳಲ್ಪಟ್ಟಿದೆ. ಉದಾನನು ಶರೀರದ ಧಾತುಗಳನ್ನು ಮೇಲ್ಮುಖವಾಗಿ ಕೊಂಡೊಯ್ಯುತ್ತಾನೆ. ಅಧ್ಯಾತ್ಮ ಕುಶಲರಾದ ಜನರು ಅವನನ್ನು ತಿಳಿಯುತ್ತಾರೆ.
ಸಂಧೌಸಂಧೌ ಸನ್ನಿವಿಷ್ಟಃ ಸರ್ವಚೇಷ್ಟಾಪ್ರವರ್ತಕಃ |

ಶರೀರೇಷು ಮನುಷ್ಯಾಣಾಂ ವ್ಯಾನ ಇತ್ಯುಪದಿಶ್ಯತೇ॥21॥
ಮನುಷ್ಯರ ಶರೀರದ ಸಂಧಿ ಸಂಧಿಗಳಲ್ಲಿ ಇದ್ದು ವ್ಯಾನನು ಸರ್ವಚೇಷ್ಟಾ ಪ್ರವರ್ತಕನಾಗಿದ್ದಾನೆ ಎಂದು ಉಪದೇಶಿಸಲ್ಪಡುತ್ತದೆ.
ಧಾತುಷ್ವಗ್ನೌ ಚ ವಿತತಃ ಸಮಾನೋಽಗ್ನಿಃ ಸಮೀರಣಃ |
ಸ ಏವ ಸರ್ವಚೇಷ್ಟಾನಾಮಂತಕಾಲೇ ನಿವರ್ತಕಃ ॥22॥
ಸಮಾನವಾಯುವು ಶರೀರದ ಸಪ್ತಧಾತುಗಳಲ್ಲಿಯೂ ಮತ್ತು ಅಗ್ನಿಯಲ್ಲಿಯೂ ವ್ಯಾಪ್ತನಾಗಿರುತ್ತಾನೆ. ಅಂತ್ಯಕಾಲದಲ್ಲಿ ಎಲ್ಲ ಚೇಷ್ಟೆಗಳನ್ನು, ಉಪರಮವನ್ನು ಮಾಡುವವನು ಅವನೇ.
ಪ್ರಾಣಾನಾಂ ಸನ್ನಿಪಾತೇಷು ಸಂಸರ್ಗಾದ್ ಯಃ ಪ್ರಜಾಯತೇ |
ಊಷ್ಮಾ ಸೋಗ್ನಿರಿತಿ ಜ್ಞೇಯಃ ಸೋನ್ನಂ ಪಚತಿ ದೇಹಿನಾಮ್ ॥23॥
ಪ್ರಾಣವಾಯುಗಳ ಪರಸ್ಪರ ಸಂಯೋಗದಿಂದ ಉಂಟಾಗುವ ಉಷ್ಣತೆಗೆ ಅಗ್ನಿ ಎಂದು ಹೆಸರು. ಅಗ್ನಿಯು ದೇಹಿಗಳ ಆಹಾರವನ್ನು ಪಚನ ಮಾಡುತ್ತಾನೆ.
ಅಪಾನಪ್ರಾಣಯೋರ್ಮಧ್ಯೇ ಪ್ರಾಣಾಪಾನಸಮಾಹಿತಃ |
ಸಮನ್ವಿತಃ ಸಮಾನೇನ ಸಮ್ಯಕ್‌ಪಚತಿ ಪಾವಕಃ ॥24॥
ಅಪಾನ-ಪ್ರಾಣವಾಯುಗಳ ಮಧ್ಯದಲ್ಲಿ ಪ್ರಾಣಾಪಾನರಿಬ್ಬರನ್ನೂ ಆಶ್ರಯಿಸಿ ಸಮಾನವಾಯು ಸಹಿತನಾಗಿ ಅಗ್ನಿಯು ಚೆನ್ನಾಗಿ ಆಹಾರವನ್ನು ಪಚನ ಮಾಡುತ್ತಾನೆ.
ಅಧಸ್ತ್ವಗ್ನಿರಪಾನೇನ ಪ್ರಾಣೇನ ಪರಿಪಾಲ್ಯತೇ |
ಪೃಷ್ಠತಸ್ತು ಸಮಾನೇನ ಸ್ವಾಂ ಸ್ವಾಂ ಗತಿಮುಪಾಶ್ರಿತಃ ॥25॥
ಶರೀರಮಧ್ಯೇ ನಾಭಿಃ ಸ್ಯಾನ್ನಾಭ್ಯಾಮಗ್ನಿಃ ಪ್ರತಿಷ್ಠಿತಃ |
ಅಗ್ನೌ ಪ್ರಾಣಾಶ್ಚ ಸಂಸಕ್ತಾಃ ಪ್ರಾಣೇಷ್ವಾತ್ಮಾ ವ್ಯವಸ್ಥಿತಃ ॥26॥
ಅಗ್ನಿಯು ದೇಹದ ಕೆಳಭಾಗದಲ್ಲಿ ಅಪಾನನಿಂದ ರಕ್ಷಿಸಲ್ಪಡುತ್ತಾನೆ. ಪೃಷ್ಠ ಭಾಗದಲ್ಲಿ ಸಮಾನನಿಂದ ರಕ್ಷಿಸಲ್ಪಡುತ್ತಾನೆ. ಸಮಾನನಿಂದ ಶರೀರದಲ್ಲಿ ತನ್ನ ಗತಿಯನ್ನು ಹೊಂದುತ್ತಾನೆ. ಶರೀರಮಧ್ಯದಲ್ಲಿ ನಾಭಿ ಇದೆ. ನಾಭಿಯಲ್ಲಿ ಅಗ್ನಿಯು ಪ್ರತಿಷ್ಠಿತನಾಗಿದ್ದಾನೆ. ಅಗ್ನಿಯಲ್ಲಿ ಪ್ರಾಣಗಳೂ ಸಂಸಕ್ತವಾಗಿವೆ ಮತ್ತು ಪ್ರಾಣಗಳಲ್ಲಿ ಪರಮಾತ್ಮನು ಸ್ಥಿತನಾಗಿದ್ದಾನೆ.
ಪಕ್ವಾಶಯಸ್ತ್ವಧೋ ನಾಭೇರೂರ್ಧ್ವಮಾಮಾಶಯಃ ಸ್ಮೃತಃ |
ನಾಭಿರ್ಮಧ್ಯೇ ಶರೀರಸ್ಯ ಸರ್ವಪ್ರಾಣಾಸ್ತಮಾಶ್ರಿತಾಃ ॥27॥
ಪಕ್ವವಾದ ಆಹಾರದ ಕೋಶವು ನಾಭಿಯ ಕೆಳಗಿದೆ. ನಾಭಿಯ ಮೇಲ್ಭಾಗದಲ್ಲಿ ಪಕ್ವವಾಗದ ಆಹಾರಕೋಶವಿದೆ. ಶರೀರದಲ್ಲಿ ನಾಭಿಮಧ್ಯದಲ್ಲಿ ಎಲ್ಲ ಪ್ರಾಣಗಳೂ ಪರಮಾತ್ಮನನ್ನು ಆಶ್ರಯಿಸಿಕೊಂಡಿವೆ.
ಸ್ಥಿತಾಃ ಪ್ರಾಣಾದಯಃ ಸರ್ವೇ ತಿರ್ಯಗೂರ್ಧ್ವಮಧಶ್ಚರಾಃ |
ವಹಂತ್ಯನ್ನರಸಾನ್ನಾಡ್ಯೋ ದಶಪ್ರಾಣಪ್ರಚೋದಿತಾಃ ॥28॥
ದೇಹದಲ್ಲಿರುವ ಪ್ರಾಣಗಳೆಲ್ಲವೂ ಮೇಲ್ಭಾಗದಲ್ಲಿ, ಕೆಳಭಾಗದಲ್ಲಿ ಮತ್ತು ಅಕ್ಕ- ಪಕ್ಕಗಳಲ್ಲಿ ಸಂಚರಿಸುತ್ತವೆ. ಹತ್ತು ಪ್ರಾಣರಿಂದ ಪ್ರಚೋದಿತವಾದ ನಾಡಿಗಳು ಅನ್ನ ರಸಗಳನ್ನು ದೇಹದ ಎಲ್ಲ ಕಡೆಗೂ ಕೊಂಡೊಯ್ಯುತ್ತವೆ (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ - ಈ ಹತ್ತು ಮುಖ್ಯಪ್ರಾಣನ ರೂಪಗಳು. ಈ ಹತ್ತನ್ನು ಪ್ರಾಣ ಎಂಬ ಒಂದೇ ಶಬ್ದದಿಂದ ಕರೆಯುವುದುಂಟು).
ಯೋಗಿನಾಮೇಷ ಮಾರ್ಗಸ್ತು ಪಂಚಸ್ವೇತೇಷು ತಿಷ್ಠತಿ |
ಜಿತಶ್ರಮಃ ಸಮಾಸೀನೋ ಮೂರ್ಧನ್ಯಾತ್ಮಾನಮಾದಧೇತ್ ॥29॥
ಯೋಗಿಗಳ ಮಾರ್ಗವು ಈ ಐದು ಪ್ರಾಣಗಳಲ್ಲಿ ಇರುತ್ತದೆ. ಆಸನದಲ್ಲಿ ಕುಳಿತ ಯೋಗಿಯು ಶ್ರಮವನ್ನು ಜಯಿಸಿ ಆತ್ಮನನ್ನು ಶಿರಸ್ಸಿನಲ್ಲಿ ತಂದಿಡಬೇಕು.
ಮೂರ್ಧನ್ಯಾತ್ಮಾನಮಾಧಾಯ ಭ್ರುವೋರ್ಮಧ್ಯೇ ಮನಸ್ತಥಾ |
ಸನ್ನಿರುಧ್ಯ ತತಃ ಪ್ರಾಣಾನಾತ್ಮಾನಂ ಚಿಂತಯೇತ್‌ಪರಮ್ ॥30॥
ಆತ್ಮನನ್ನು (ತನ್ನನ್ನು) ಶಿರಸ್ಸಿನಲ್ಲಿಟ್ಟು ಹುಬ್ಬುಗಳ ಮಧ್ಯದಲ್ಲಿ ಮನಸ್ಸನ್ನಿಟ್ಟು ಪ್ರಾಣಗಳನ್ನು ನಿರೋಧ ಮಾಡಿ ಹರಿಯನ್ನು ಚಿಂತಿಸಬೇಕು.
ಪ್ರಾಣೇ ತ್ವಪಾನಂ ಯುಂಜೀತ ಪ್ರಾಣಾಂಶ್ಚಾಪಾನಕರ್ಮಣಿ |
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರೋ ಭವೇತ್ ॥31॥
ಅಪಾನನನ್ನು ಪ್ರಾಣನ ಅಧೀನನನ್ನಾಗಿ ಮಾಡಬೇಕು. ಪ್ರಾಣನನ್ನು ಅಪಾನನ ಕರ್ಮಗಳಲ್ಲಿ ನಿಯೋಜಿಸಬೇಕು. ಪ್ರಾಣಾಪಾನ ವಾಯುಗಳ ಗತಿಯನ್ನು ತಡೆದು ಪ್ರಾಣಾಯಾಮ ಪರನಾಗಬೇಕು.
ಏವಮಂತಃ ಪ್ರಯುಂಜೀತ ಪಂಚ ಪ್ರಾಣಾನ್ ಪರಸ್ಪರಮ್ |
ವಿಜನೇ ಸಮ್ಮಿತಾಹಾರೋ ಮುನಿಸ್ತೂಷ್ಣೀಂ ನಿರುಚ್ಛ್ವಸನ್ ॥32॥
ಹೀಗೆ ಐದು ಪ್ರಾಣಗಳನ್ನು ಪರಸ್ಪರವಾಗಿ ದೇಹದೊಳಗೆ ನಿಯೋಜಿಸಬೇಕು (ಚಿಂತಿಸಬೇಕು). ಮುನಿಯು ನಿರ್ಜನ ಪ್ರದೇಶದಲ್ಲಿ ಕುಳಿತು, ಯೋಗ್ಯವಾದ ಆಹಾರವನ್ನು ಸ್ವೀಕರಿಸಿ, ಉಸಿರನ್ನು ಬಿಡದೆ ಮೌನದಿಂದ ಚಿಂತಿಸಬೇಕು.
ಅಶ್ರಾಂತಶ್ಚಿಂತಯೇದ್ ಯೋಗಮುತ್ಥಾಯ ಚ ಪುನಃಪುನಃ |
ತಿಷ್ಠನ್ ಗಚ್ಛನ್ ಸ್ವಪನ್ ವಾಪಿ ಯುಂಜೀತೈವಮತಂದ್ರಿತಃ ॥33॥
ದಣಿವಾಗದಿದ್ದರೆ ಪುನಃ ಪುನಃ ಇಂತಹ ಯೋಗಚಿಂತನೆಯನ್ನು ಮಾಡಬೇಕು. ನಡೆಯುವಾಗಲೂ, ನಿಲ್ಲುವಾಗಲೂ, ಮಲಗುವಾಗಲೂ

ಆಲಸ್ಯವಿಲ್ಲದೆ ಇಂತಹ ಯೋಗವನ್ನು (ಚಿಂತನೆಯನ್ನು) ಮಾಡಬೇಕು.
ಏವಂ ನಿಯುಂಜತಸ್ತಸ್ಯ ಯೋಗಿನೋ ಯುಕ್ತಚೇತಸಃ |
ಪ್ರಸೀದತಿ ಮನಃ ಕ್ಷಿಪ್ರಂ ಪ್ರಸನ್ನೇ ದೃಶ್ಯತೇ ಪರಮ್ ॥34॥
ಹೀಗೆ ತನ್ನ ಪ್ರಾಣಗಳನ್ನು ನಿಯೋಜಿಸುವ ಮತ್ತು ಭಗವಂತನನ್ನು ಚಿಂತಿಸುವ ಯೋಗಿಗೆ ಶೀಘ್ರವಾಗಿ ಮನಸ್ಸು ಪ್ರಸನ್ನವಾಗುತ್ತದೆ. ಮನಸ್ಸು ಪ್ರಸನ್ನವಾದರೆ ಪರಮಾತ್ಮನು ಕಾಣುತ್ತಾನೆ.
ವಿಧೂಮ ಇವ ದೀಪ್ತೋऽಗ್ನಿರಾದಿತ್ಯ ಇವ ರಶ್ಮಿವಾನ್ |
ವೈದ್ಯುತೋऽಗ್ನಿರಿವಾಕಾಶೇ ದೃಶ್ಯತೇ ಪುರುಷೋऽವ್ಯಯಃ ॥35॥
ಅವ್ಯಯನಾದ, ಪುರುಷನಾದ ಪರಮಾತ್ಮನು ಧೂಮವಿಲ್ಲದೆ ಜ್ವಲಿಸುವ ಅಗ್ನಿಯಂತೆ, ಕಿರಣಗಳಿಂದ ಕೂಡಿದ ಸೂರ್ಯನಂತೆ, ಆಕಾಶದಲ್ಲಿ ಮಿಂಚಿನಿಂದ ಉಂಟಾದ ಅಗ್ನಿಯಂತೆ ಕಾಣುತ್ತಾನೆ.
ದೃಷ್ಟ್ವಾ ತದಾತ್ಮನೋ ಜ್ಯೋತಿರೈಶ್ವರ್ಯಾಷ್ಟಗುಣೈರ್ಯುತಮ್ |
ಪ್ರಾಪ್ನೋತಿ ಪರಮಂ ಸ್ಥಾನಂ ಸ್ಪೃಹಣೀಯಂ ಸುರೈರಪಿ ॥36॥
ಅಣಿಮಾದಿ ಅಷ್ಟ ಮಹಿಮೆಯಿಂದ ಕೂಡಿದ, ಜ್ಯೋತೀರೂಪನಾದ ಪರಮಾತ್ಮನನ್ನು ನೋಡಿದವನು ದೇವತೆಗಳಿಂದಲೂ ಪ್ರಾರ್ಥನೀಯವಾದ, ಪರಮಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ.
ಇಮಾನ್ಯೋಗಸ್ಯ ದೋಷಾಂಶ್ಚ ದಶೈವ ಪರಿಚಕ್ಷತೇ |
ದೋಷೈರ್ವಿಘ್ನೋ ವರಾರೋಹೇ ಯೋಗಿನಾಂ ಕವಿಭಿಃ ಸ್ಮೃತಾಃ ॥37॥
ಯೋಗಕ್ಕೆ ಈ ಹತ್ತು ದೋಷಗಳನ್ನು ಹೇಳುತ್ತಾರೆ. ಎಲೌ ಸುಂದರಿಯೇ, ಯೋಗಿಗಳಿಗೆ ಈ ದೋಷಗಳು ಯೋಗವಿಘ್ನವನ್ನು ತರುತ್ತವೆ ಎಂದು ಜ್ಞಾನಿಗಳು ಹೇಳುತ್ತಾರೆ.
ಕಾಮಂ ಕ್ರೋಧಂ ಭಯಂ ಸ್ವಪ್ನಂ ಸ್ನೇಹಮತ್ಯಶನಂ ತಥಾ |
ವೈಚಿತ್ರ್ಯಂ ವ್ಯಾಧಿಮಾಲಸ್ಯಂ ಲೋಭಂ ಚ ದಶಮಂ ಸ್ಮೃತಮ್ ॥38॥
ಕಾಮ, ಕ್ರೋಧ, ಭಯ, ನಿದ್ರೆ, ಸ್ನೇಹ, ಗುರು (ಬಹಳ) ಭೋಜನ, ಚಿತ್ತ ವಿಕ್ಷೇಪ, ವ್ಯಾಧಿ, ಆಲಸ್ಯ, ಲೋಭ - ಇವು ಆ ಹತ್ತು ದೋಷಗಳು
ಏತೈಸ್ತೇಷಾಂ ಭವೇದ್ ವಿಘ್ನೋ ದಶಭಿರ್ದೇವಕಾರಿತೈಃ |
ತಸ್ಮಾದೇತಾನಪಾಸ್ಯಾದೌ ಯುಂಜೀತ ಚಪಲಂ ಮನಃ ॥39॥
ದೇವತೆಗಳಿಂದ ಉಂಟುಮಾಡಲ್ಪಟ್ಟ ಈ ಹತ್ತು ದೋಷಗಳಿಂದ ಯೋಗಿಗಳಿಗೆ ವಿಘ್ನ ಉಂಟಾಗುತ್ತದೆ. ಆದ್ದರಿಂದ ಮೊದಲು ಈ ದೋಷಗಳನ್ನು ದೂರ ಮಾಡಿಕೊಂಡು ಅನಂತರ ಚಂಚಲವಾದ ಮನಸ್ಸನ್ನು ಯೋಗರತವನ್ನಾಗಿ ಮಾಡಬೇಕು.
ಇಮಾನಪಿ ಗುಣಾನಷ್ಟೌ ಯೋಗಸ್ಯ ಪರಿಚಕ್ಷತೇ |
ಗುಣೈಸ್ತೈರಷ್ಟಭಿರ್ದ್ರವ್ಯಮೈಶ್ವರ್ಯಮಧಿಗಮ್ಯತೇ ॥40॥
ಈ ಎಂಟು ವಸ್ತುಗಳನ್ನು ಯೋಗದ ಎಂಟು ಗುಣಗಳೆಂದು ಹೇಳುತ್ತಾರೆ. ಈ ಎಂಟು ಗುಣಗಳಿಂದ ದ್ರವ್ಯವೂ ಮತ್ತು ಐಶ್ವರ್ಯವೂ ಪ್ರಾಪ್ತವಾಗುತ್ತವೆ.
ಅಣಿಮಾ ಮಹಿಮಾ ಚೈವ ಪ್ರಾಪ್ತಿಃ ಪ್ರಾಕಾಶ್ಯಲಾಘವೇ |
ಈಶಿತ್ವಂ ಚ ವಶಿತ್ವಂ ಚ ಯತ್ರ ಕಾಮಾವಸಾಯಿತಾ ॥41॥
ಅಣಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಶ್ಯ, ಲಾಘವ, ಈಶಿತ್ವ, ವಶಿತ್ವ ಮತ್ತು ಕಾಮಿತವಾದ ವಸ್ತುಪ್ರಾಪ್ತಿ ಇವು ಆ ಎಂಟು ಗುಣಗಳು.
ಏತಾನಷ್ಟೌ ಗುಣಾನ್ ಪ್ರಾಪ್ಯ ಕಥಂಚಿದ್ ಯೋಗಿನಾಂವರಾಃ |
ಈಶಾಃ ಸರ್ವಸ್ಯ ಲೋಕಸ್ಯ ದೇವಾನಪ್ಯತಿಶೇರತೇ ॥42॥
ಯೋಗಿಗಳಲ್ಲಿ ಶ್ರೇಷ್ಠರಾದವರು ಬಹಳ ಪ್ರಯಾಸದಿಂದ ಈ ಎಂಟು ಗುಣಗಳನ್ನು ಸಂಪಾದಿಸಿ, ಎಲ್ಲ ಲೋಕಕ್ಕೂ ಪ್ರಭುಗಳಾಗಿ ದೇವತೆಗಳನ್ನೂ ಮೀರಿರುತ್ತಾರೆ.
ಯೋಗೋऽಸ್ತಿ ನೈವಾತ್ಯಶಿನೋ ನ ಚೈಕಾಂತಮನಶ್ನತಃ |
ನ ಚಾತಿಸ್ವಪ್ನಶೀಲಸ್ಯ ನಾತಿಜಾಗರತಸ್ತಥಾ ॥43॥
ಬಹಳ ಊಟವನ್ನು ಮಾಡುವವನಿಗೆ, ಹೆಚ್ಚು ಉಪವಾಸವಿರುವವನಿಗೆ, ಅತಿಯಾಗಿ ನಿದ್ರೆಯನ್ನು ಮಾಡುವವನಿಗೆ, ಯಾವಾಗಲೂ ಎಚ್ಚರದಿಂದಿರುವವನಿಗೆ ಯೋಗವು ಸಿದ್ಧಿಸುವುದಿಲ್ಲ.
ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು |
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥44॥
ಯೋಗ್ಯವಾದ ಆಹಾರ-ವಿಹಾರವನ್ನು ಹೊಂದಿದ, ತನ್ನ ಕರ್ಮಗಳಲ್ಲಿ ಯೋಗ್ಯವಾದ ಚೇಷ್ಟೆಯನ್ನು ಹೊಂದಿದ, ಯೋಗ್ಯವಾದ ಸ್ವಪ್ನ ಮತ್ತು ಪ್ರಬೋಧಗಳನ್ನು ಹೊಂದಿರುವ ಮನುಷ್ಯನಿಗೆ ಯೋಗವು ದುಃಖನಾಶಕವಾಗುತ್ತದೆ.
ಅನೇನೈವ ವಿಧಾನೇನ ಸಾಯುಜ್ಯಂ ತತ್ಪ್ರಕಲ್ಪ್ಯತೇ |
ಸಾಯುಜ್ಯಂ ದೇವಸಾತ್ಕೃತ್ಯ ಪ್ರಯುಂಜೀತಾತ್ಮಭಕ್ತಿತಃ ॥45॥
ಇದೇ ವಿಧಾನದಿಂದಲೇ ದೇವತೆಗಳ ಸಾಯುಜ್ಯವೂ ಲಭ್ಯವಾಗುತ್ತದೆ. ಸಾಯುಜ್ಯವನ್ನು ದೇವತಾಧೀನವನ್ನಾಗಿ ಮಾಡಿ (ಚಿಂತಿಸಿ) ತನ್ನ ಭಕ್ತಿಯಿಂದ ಅದನ್ನು ಪಡೆಯಬೇಕು.
ಅನನ್ಯಮನಸಾ ದೇವಿ ನಿತ್ಯಂ ತದ್ಗತಚೇತಸಾ |
ಸಾಯುಜ್ಯಂ ಪ್ರಾಪ್ಯತೇ ದೇವೈರ್ಯತ್ನೇನ ಮಹತಾ ಚಿರಾತ್ ॥46॥
ದೇವಿಯೇ, ಮನಸ್ಸಿನಲ್ಲಿ ಬೇರೆ ಏನನ್ನೂ ಯೋಚಿಸದೆ ನಿತ್ಯವೂ ನಾರಾಯಣನನ್ನು ಚಿಂತಿಸಿ, ದೇವತೆಗಳು ಬಹುಕಾಲ ದೊಡ್ಡ

ಪ್ರಯತ್ನವನ್ನು ಮಾಡಿ, ಸಾಯುಜ್ಯವನ್ನು ಪಡೆಯುತ್ತಾರೆ.
ಹವಿರ್ಭಿರರ್ಚನೈರ್ಹೋಮ್ಯೈಃ ಪ್ರಣಾಮೈರ್ನಿತ್ಯಚಿಂತಯಾ |
ಅರ್ಚಯಿತ್ವಾ ಯಥಾಶಕ್ತಿ ಸ್ವಕಂ ದೇಶಂ ವಿಶಂತಿ ತೇ ||47||
ಹವಿಸ್ಸುಗಳಿಂದ, ಅರ್ಚನೆಗಳಿಂದ, ಹೋಮಗಳಿಂದ, ನಮಸ್ಕಾರಗಳಿಂದ ಮತ್ತು ನಿತ್ಯಚಿಂತನೆಯಿಂದ ತಮ್ಮ ಶಕ್ತಿಗನುಗುಣವಾಗಿ ಪರಮಾತ್ಮನನ್ನು ಪೂಜಿಸಿ ತಮ್ಮ ಕ್ಲಪ್ತವಾದ ಸ್ಥಾನಕ್ಕೆ ಹೋಗುತ್ತಾರೆ.
ಸಾಯುಜ್ಯಾನಾಂ ವಿಶಿಷ್ಟೇ ದ್ವೇ ಮಾಮಕಂ ವೈಷ್ಣವಂ ತಥಾ |
ಮಾಂ ಪ್ರಾಪ್ಯ ನ ನಿವರ್ತಂತೇ ವಿಷ್ಣುಂ ವಾ ಶುಭಲೋಚನೇ ||48||
ದೇವಸಾಯುಜ್ಯಗಳಲ್ಲಿ ಎರಡು ಸಾಯುಜ್ಯಗಳು ಶ್ರೇಷ್ಠವಾದವುಗಳು. ಒಂದು ನನ್ನ ಸಾಯುಜ್ಯ ಮತ್ತು ಇನ್ನೊಂದು ವಿಷ್ಣು ಸಾಯುಜ್ಯ. ಎಲೌ ಶುಭಲೋಚನೆಯೇ, ನನ್ನನ್ನಾಗಲೀ, ವಿಷ್ಣುವನ್ನಾಗಲೀ ಹೊಂದಿದವರು ಪುನಃ ಸಂಸಾರವನ್ನು ಹೊಂದುವುದಿಲ್ಲ.
ಇತಿ ತೇ ಕಥಿತೋ ದೇವಿ ಯೋಗಧರ್ಮಃ ಸನಾತನಃ |
ನ ಸಶಕ್ಯಃ ಪ್ರಷ್ಟುಮನ್ಯೈರ್ಯೋಗಧರ್ಮಸ್ತ್ವಯಾ ವಿನಾ ||49||
ದೇವಿಯೇ, ಸನಾತನವಾದ ಯೋಗಧರ್ಮವನ್ನು ಈ ರೀತಿಯಲ್ಲಿ ನಿನಗೆ ಹೇಳಿದ್ದೇನೆ. ನೀನಲ್ಲದೆ ಬೇರೆ ಯಾರೂ ಯೋಗಧರ್ಮದ ವಿಷಯದಲ್ಲಿ ಪ್ರಶ್ನೆಯನ್ನು ಮಾಡಲು ಸಮರ್ಥರಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಯೋಗವಿಧಿಕಥನಂ ನಾಮ ಏಕತ್ರಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ತೆರಡನೆಯ ಅಧ್ಯಾಯ
ಉಮಾ-ಮಹೇಶ್ವರ ಸಂವಾದ. ಪಾಶುಪತಯೋಗಕಥನ.
ಉಮಾ
ತ್ರಿಯಕ್ಷ ತ್ರಿದಶಶ್ರೇಷ್ಠ ತ್ರ್ಯಂಬಕ ತ್ರಿದಶಾಧಿಪ |
ತ್ರಿಪುರಾಂತಕ ಕಾಮಾಂಗಹರ ತ್ರಿಪಥಗಾಧರ ||1||
ದಕ್ಷಯಜ್ಞಪ್ರಶಮನ ಶೂಲಪಾಣೇಽರಿಸೂದನ |
ನಮಸ್ತೇ ಲೋಕಪಾಲೇಶ ಲೋಕಪಾಲವರಪ್ರದ ||2||
ಉಮಾ ತ್ರಿನೇತ್ರನೇ, ದೇವತೆಗಳಲ್ಲಿ ಶ್ರೇಷ್ಠನೇ, ತ್ರ್ಯಂಬಕನೇ, ತ್ರಿದಶಪ್ರಭುವೇ, ತ್ರಿಪುರಾಂತಕನೇ, ಕಾಮಶರೀರನಾಶಕನೇ, ಗಂಗಾಧರನೇ, ದಕ್ಷಯಜ್ಞನಾಶಕನೇ, ಶೂಲಪಾಣಿಯೇ, ಶತ್ರುಸೂದನನೇ, ಲೋಕಪಾಲಕರಿಗೆ ಪ್ರಭುವೇ, ಲೋಕಪಾಲಕರಿಗೆ ವರವನ್ನು ಕೊಡುವವನೇ, ನಿನಗೆ ನಮಸ್ಕಾರ.
ನೈಕಶಾಖಮಪರ್ಯಂತಮಧ್ಯಾತ್ಮಜ್ಞಾನಮುತ್ತಮಮ್ |
ಅಪ್ರತರ್ಕ್ಯಮವಿಜ್ಞೇಯಂ ಸಾಂಖ್ಯಯೋಗಸಮನ್ವಿತಮ್ ||3||
ಭವತಾ ಪರಿತುಷ್ಟೇನ ಶ್ರುಣ್ವಂತ್ಯಾ ಮಮ ಭಾಷಿತಮ್ |
ಇದಾನೀಂ ಶ್ರೋತುಮಿಚ್ಛಾಮಿ ಸಾಯುಜ್ಯಂ ತ್ವದ್ಗತಂ ವಿಭೋ ||4||
ಅನೇಕ ಶಾಖೆಗಳಿಂದ ಕೂಡಿದ, ಅಪರಿಮಿತವಾದ, ತಿಳಿಯಲು ಕಷ್ಟವಾದ, ತರ್ಕಕ್ಕೆ ನಿಲುಕದ, ಸಾಂಖ್ಯ-ಯೋಗಸಮನ್ವಿತವಾದ, ಶ್ರೇಷ್ಠವಾದ ಅಧ್ಯಾತ್ಮಜ್ಞಾನವು ಪರಿತುಷ್ಟನಾದ ನಿನ್ನಿಂದ ಕೇಳುವವಳಾದ ನನಗೆ ಉಪದೇಶಿಸಲ್ಪಟ್ಟಿತು. ಎಲೈ ವಿಭುವೇ, ಈಗ ನಿನ್ನ ಸಾಯುಜ್ಯವನ್ನು ಕೇಳಲು ಬಯಸುತ್ತೇನೆ.
ಕಥಂ ಪರಿಚರಂತ್ಯೇತೇ ಭಕ್ತಾಸ್ತ್ವಂ ಪರಮೇಷ್ಠಿನಮ್ |
ಆಚಾರಃ ಕೀದೃಶಸ್ತೇಷಾಂ ಕೇನ ತುಷ್ಟೋ ಭವೇದ್ ಭವಾನ್ |
ವರ್ಣ್ಯಮಾನಂ ತ್ವಯಾ ಸಾಕ್ಷಾತ್ ಪ್ರೀಣಯತ್ಯಧಿಕಂ ಹಿ ಮಾಮ್ ||5||
ನಿನ್ನ ಭಕ್ತರು ಶ್ರೇಷ್ಠನಾದ ನಿನ್ನನ್ನು ಹೇಗೆ ಪರಿಚರಿಸುತ್ತಾರೆ? ಅವರ ಆಚಾರವು ಹೇಗಿರುತ್ತದೆ? ನೀನು ಯಾವುದರಿಂದ ಸಂತುಷ್ಟನಾಗುತ್ತೀಯೆ? ನೀನು ಸಾಕ್ಷಾತ್ತಾಗಿ ಹೇಳುವ ವಿಷಯಗಳು ನನಗೆ ಬಹಳ ಸಂತೋಷವನ್ನುಂಟು ಮಾಡುತ್ತಿವೆ.
ಮಹೇಶ್ವರಃ
ಹಂತ ತೇ ಕಥಯಿಷ್ಯಾಮಿ ಮಮ ಸಾಯುಜ್ಯಮದ್ಭುತಮ್ |
ಯೇನ ತೇ ನ ನಿವರ್ತಂತೇ ಯುಕ್ತಾಃ ಪರಮಯೋಗಿನಃ ||6||
ಮಹೇಶ್ವರ ಸಂತೋಷ. ಪರಮಯೋಗಿಗಳು ಯಾವುದನ್ನು ಹೊಂದಿ ಸಂಸಾರಕ್ಕೆ ಹಿಂದಿರುಗುವುದಿಲ್ಲವೋ ಅಂತಹ ಅದ್ಭುತವಾದ ನನ್ನ ಸಾಯುಜ್ಯವನ್ನು ಹೇಳುವೆನು.
ಅವ್ಯಕ್ತೋಽಹಮಚಿಂತ್ಯೋಽಹಂ ಪೂರ್ವೈರಪಿ ಮಹರ್ಷಿಭಿಃ |
ಸಾಂಖ್ಯಯೋಗೌ ಮಯಾ ಸೃಷ್ಟೌ ಸರ್ವಂ ಚಾಪಿ ಚರಾಚರಮ್ ||7||
ನಾನು ಅವ್ಯಕ್ತನಾದವನು, ಪ್ರಾಚೀನ ಮಹರ್ಷಿಗಳಿಂದಲೂ ಅಚಿಂತ್ಯನಾದವನು. ಸಾಂಖ್ಯ-ಯೋಗಗಳನ್ನೂ ಮತ್ತು ಸರ್ವಚರಾಚರವಾದ ಜಗತ್ತನ್ನೂ ನಾನೇ ಸೃಷ್ಟಿಸಿದ್ದೇನೆ.
ಅರ್ಚನೀಯೋಽಹಮೀಶೋಽಹಮವ್ಯಯೋಽಹಂ ಸನಾತನಃ |

ಅಹಂ ಪ್ರಸನ್ನೋ ಭಕ್ತಾನಾಂ ದದಾಮ್ಯಮರತಾಮಪಿ ॥8॥
ನಾನು ಪೂಜಿಸಲ್ಪಡಬೇಕಾದವನು. ನಾನು ಪ್ರಭುವಾದವನು. ನಾನು ನಿತ್ಯನಾದವನು. ಅನಾದಿಯಾದವನು. ಪ್ರಸನ್ನನಾದ ನಾನು ಭಕ್ತರಿಗೆ ಅಮೃತತ್ವವನ್ನೂ ಕೊಡುತ್ತೇನೆ.
ನ ಮಾಂ ವಿದುಃ ಸುರಗಣಾ ಮುನಯಶ್ಚ ತಪೋಧನಾಃ |
ತ್ವತ್ಪ್ರಿಯಾರ್ಥಮಹಂ ದೇವಿ ಮದ್ವಿಭೂತಿಂ ಬ್ರವೀಮಿ ತೇ ॥9॥
ದೇವತಾ ಸಮೂಹವಾಗಲೀ, ತಪೋಧನರಾದ ಋಷಿಗಳಾಗಲೀ ನನ್ನನ್ನು ತಿಳಿದಿಲ್ಲ. ದೇವಿಯೇ, ನಿನ್ನ ಸಂತೋಷಕ್ಕಾಗಿ ನನ್ನ ವಿಭೂತಿಯನ್ನು ನಿನಗೆ ಹೇಳುತ್ತೇನೆ.
ಆಶ್ರಮೇಭ್ಯಶ್ಚತುರ್ಭ್ಯೋಽಹಂ ಚತುರೋ ಬ್ರಾಹ್ಮಣಾನ್ ಶುಭೇ |
ಮದ್ಭಕ್ತಾನ್ ನಿರ್ಮಲಾನ್ ಪುಣ್ಯಾನ್ ಸಮಾನೀಯ ತಪಸ್ವಿನಃ ॥10॥
ವ್ಯಾಚಖ್ಯೇಽಹಂ ತಥಾ ದೇವಿ ಯೋಗಂ ಪಾಶುಪತಂ ಮಹತ್ |
ಗೃಹೀತಂ ತಚ್ಚ ತೈಃ ಸರ್ವಂ ಮುಖಾಚ್ಚ ಮಮ ದಕ್ಷಿಣಾತ್ ॥11॥
ಎಲೌ ಶುಭಳೇ, ನಾನು ನಾಲ್ಕು ಆಶ್ರಮಗಳಿಗೆ ಸೇರಿದ ನನ್ನ ಭಕ್ತರಾದ, ನಿರ್ಮಲರಾದ ತಪಸ್ವಿಗಳಾದ, ಪುಣ್ಯಶೀಲರಾದ ಬ್ರಾಹ್ಮಣರನ್ನು ಕರೆದು ಅವರಿಗೆ ಶ್ರೇಷ್ಠವಾದ ಪಾಶುಪತ ಯೋಗವನ್ನು ವ್ಯಾಖ್ಯಾನ ಮಾಡುತ್ತೇನೆ (ವ್ಯಾಖ್ಯಾನ ಮಾಡಿದೆನು). ದೇವಿಯೇ, ನನ್ನ ದಕ್ಷಿಣ ಮುಖದಿಂದ ಬಂದ ಉಪದೇಶವನ್ನು ಅವರೆಲ್ಲರೂ ಗ್ರಹಿಸಿದರು.
ಶ್ರುತ್ವಾ ಚ ತ್ರಿಷು ಲೋಕೇಷು ಸ್ಥಾಪಿತಂ ಚಾಪಿ ತೈಃ ಪುನಃ |
ಇದಾನೀಂ ಚ ತ್ವಯಾ ಪೃಷ್ಟಸ್ತ್ವತ್ಪ್ರಿಯಾರ್ಥಮನಿಂದಿತೇ |
ತತ್ಸರ್ವಂ ಕಥಯಿಷ್ಯಾಮಿ ತತ್ತ್ವಮೇಕಮನಾಃ ಶೃಣು ॥12॥
ಶ್ರವಣವನ್ನು ಮಾಡಿದ ಅವರು ಮೂರು ಲೋಕಗಳಲ್ಲಿಯೂ ಆ ವಿದ್ಯೆಯನ್ನು ಸ್ಥಾಪಿಸಿದರು. ಎಲೌ ಅನಿಂದಿತೆಯೇ, ಈಗ ನಿನ್ನಿಂದ ಕೇಳಲ್ಪಟ್ಟವನಾಗಿ ನಿನ್ನ ಸಂತೋಷಕ್ಕಾಗಿ ಅವೆಲ್ಲವನ್ನೂ ಹೇಳುವೆನು. ಅದನ್ನು ನೀನು ಒಂದೇ ಮನಸ್ಸಿನಿಂದ ಕೇಳು.
ಅಹಂ ಪಶುಪತಿರ್ನಾಮ ಮದ್ಭಕ್ತಾ ಯೇ ಚ ಮಾನವಾಃ |
ಸರ್ವೇ ಪಾಶುಪತಾ ಜ್ಞೇಯಾ ಭಸ್ಮದಿಗ್ಧತನೂರುಹಾಃ ॥13॥
ಪಶುಪತಿ ಎಂದು ನನ್ನ ನಾಮ. ನನ್ನ ಭಕ್ತರಾದ ಮಾನವರೆಲ್ಲರೂ ಪಾಶುಪತರೆಂದು ತಿಳಿಯಲ್ಪಡಬೇಕಾದವರು. ಅವರು ದೇಹದಲ್ಲೆಲ್ಲಾ ಭಸ್ಮಲೇಪವನ್ನು ಮಾಡಿಕೊಂಡಿರುತ್ತಾರೆ.
ಹಿಂದಿನ ಅಧ್ಯಾಯದಲ್ಲಿ ವೇದಸಮ್ಮಿತವಾದ ಯೋಗವನ್ನು ವಿಸ್ತಾರವಾಗಿ ಹೇಳಿ, ಈಗ ಹರಿಯ ಆಜ್ಞೆಗೆ ಅನುಗುಣವಾಗಿ ಅಸುರರನ್ನು ಮೋಹಿಸಲು ರುದ್ರದೇವರು `ಅಹಂ ಪಶುಪತಿರ್ನಾಮ' ಇತ್ಯಾದಿ ವಾಕ್ಯಗಳಿಂದ ತಾವೇ ರಚಿಸಿದ ಪಾಶುಪತ ಶಾಸ್ತ್ರದಲ್ಲಿ ಹೇಳಿದ ತಾಮಸ ಯೋಗವನ್ನು ಹೇಳುತ್ತಾರೆ. ಕಾಪಾಲಿಕರು ಆಚರಿಸುವ ಸರ್ವಾಂಗ ಭಸ್ಮಲೇಪನ, ಕಪಾಲಧಾರಣ, ಭಿಕ್ಷಾಟನ ಮೊದಲಾದುವನ್ನು ವೈದಿಕರು ಯಾರೂ ಮಾಡುವುದಿಲ್ಲವಾದ್ದರಿಂದಲೂ, ಇಲ್ಲಿ `ಅಹಂ ಪಶುಪತಿಃ' ಎಂದು ಹೇಳಿ ಪಾಶುಪತಶಾಸ್ತ್ರ ಪ್ರವರ್ತಕವಾದ ತನ್ನ ರೂಪವಿಶೇಷವನ್ನು ಮೊದಲು ಪ್ರಸ್ತಾವನೆಯನ್ನು ಮಾಡಿರುವುದರಿಂದಲೂ ಇಲ್ಲಿ ಹೇಳುವ ಆಚಾರವು ಪಾಶುಪತ ಶಾಸ್ತ್ರೋಕ್ತವಾದ ಕರ್ಮಕ್ಕೆ ಅಂಗವೇ ಹೊರತು ವೈದಿಕ ಮಾರ್ಗವಲ್ಲ ಎಂದು ತಿಳಿಯಬೇಕು- ಲಕ್ಷಾಲಂಕಾರ.
ರಕ್ಷಾರ್ಥಂ ಮಂಗಲಾರ್ಥಂ ನ ಪವಿತ್ರಾರ್ಥಂ ಚ ಭಾಮಿನಿ |
ಲಿಂಗಾರ್ಥಂ ಚೈವ ಭಕ್ತಾನಾಂ ಭಸ್ಮ ದತ್ತಂ ಮಯಾ ಪುರಾ ॥14॥
ಭಾಮಿನಿಯೇ, ರಕ್ಷೆಗೋಸ್ಕರ, ಮಂಗಳಕ್ಕೋಸ್ಕರ ಮತ್ತು ಪಾವಿತ್ರ್ಯಕ್ಕೋಸ್ಕರ ಮತ್ತು ಚಿಹ್ನೆಗೋಸ್ಕರ ನಾನು ನನ್ನ ಭಕ್ತರಿಗೆ ಹಿಂದೆ ಭಸ್ಮವನ್ನು ನೀಡಿದೆನು.
ತೇನ ಸಂದಿಗ್ಧಸರ್ವಾಂಗಾ ಭಸ್ಮನಾ ಬ್ರಹ್ಮಚಾರಿಣಃ |
ಜಟಿಲಾ ಮುಂಡಿತಾ ವಾಪಿ ನಾನಾಕಾರಶಿಖಂಡಿನಃ ॥15॥
ವಿಕೃತಾಃ ಪಿಂಗಲಾಭಾಶ್ಚ ನಗ್ನಾ ನಾನಾಪ್ರಕಾರಿಣಃ |
ಭೈಕ್ಷಂ ಚರಂತಃ ಸರ್ವತ್ರ ನಿಃಸ್ಪೃಹಾ ನಿಷ್ಪರಿಗ್ರಹಾಃ॥16॥
ಬ್ರಹ್ಮಚಾರಿಗಳು, ಜಟಿಲರು ಮುಂಡಿತರಾದ ಸಂನ್ಯಾಸಿಗಳು, ನಾನಾಕಾರವಾದ ಶಿಖೆಗಳನ್ನು ಹೊಂದಿದವರು, ವಿಕೃತವಾದ ರೂಪವನ್ನು ಹೊಂದಿದವರು, ಪಿಂಗಲ ವರ್ಣದವರು, ನಾನಾ ಪ್ರಕಾರದಿಂದ ನಗ್ನರಾಗಿರುವವರು ಎಲ್ಲರೂ ಆ ಭಸ್ಮಗಳನ್ನು ಸರ್ವಾಂಗಗಳಲ್ಲಿಯೂ ಲೇಪಿಸಿಕೊಂಡು, ಭಿಕ್ಷಾಟನೆಯನ್ನು ಮಾಡುತ್ತಾ, ಎಲ್ಲ ವಸ್ತುಗಳಲ್ಲಿಯೂ ಆಸೆಯನ್ನು ತೊರೆದು ನಿಷ್ಪರಿಗ್ರಹರಾಗಿರುತ್ತಾರೆ.
ಕಪಾಲಹಸ್ತಾ ಮದ್ಭಕ್ತಾ ಮನ್ನಿವೇಶಿತಬುದ್ಧಯಃ |
ಚರಂತೋ ನಿಖಿಲಂ ಲೋಕಂ ಮಮ ಹರ್ಷವಿವರ್ಧನಾಃ ॥17॥
ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ ಕೈಯಲ್ಲಿ ಕಪಾಲವನ್ನು ಹಿಡಿದು ಎಲ್ಲ ಲೋಕಗಳನ್ನು ಸಂಚರಿಸುವ ನನ್ನ ಭಕ್ತರು ನನ್ನ ಸಂತೋಷವನ್ನು ಹೆಚ್ಚಿಸುತ್ತಾರೆ.
ಮಮ ಪಾಶುಪತಂ ದಿವ್ಯಂ ಯೋಗಶಾಸ್ತ್ರಮನುತ್ತಮಮ್ |
ಸೂಕ್ಷ್ಮಂ ಸರ್ವೇಷು ಲೋಕೇಷು ವಿಮೃಶಂತಶ್ಚರಂತಿ ತೇ ॥18॥
ನಾನು ರಚಿಸಿದ ದಿವ್ಯವೂ, ಶ್ರೇಷ್ಠವೂ ಆದ, ಸೂಕ್ಷ್ಮವಾದ ಪಾಶುಪತ ಯೋಗಶಾಸ್ತ್ರವನ್ನು ವಿಮರ್ಶೆ ಮಾಡುತ್ತಾ ಎಲ್ಲ ಲೋಕಗಳಲ್ಲಿಯೂ ಅವರು ಸಂಚರಿಸುತ್ತಾರೆ.
ಏವಂ ನಿತ್ಯಾಭಿಯುಕ್ತಾನಾಂ ಮದ್ಭಕ್ತಾನಾಂ ತಪಸ್ವಿನಾಮ್ |

ಉಪಾಯಂ ಚಿಂತಯಾಮ್ಯಾಶು ಯೇನ ಮಾಮುಪಯಾಂತಿ ತೇ ॥19॥
ಹೀಗೆ ನಿತ್ಯವೂ ನನ್ನಲ್ಲಿ ಮನಸ್ಸಿಟ್ಟ ನನ್ನ ತಪಸ್ವಿಗಳಾದ ನನ್ನ ಭಕ್ತರು ನನ್ನನ್ನು ಹೊಂದುವ ಉಪಾಯವೇನು ಎಂದು ನಾನು ಶೀಘ್ರವಾಗಿ ಚಿಂತಿಸುತ್ತೇನೆ (ಚಿಂತಿಸಿದೆನು).
ಸ್ಥಾಪಿತಂ ತ್ರಿಷು ಲೋಕೇಷು ಶಿವಲಿಂಗಂ ಮಯಾ ಪ್ರಿಯೇ |
ನಮಸ್ಕಾರೇಣ ವಾ ತಸ್ಯ ಮುಚ್ಯಂತೇ ಸರ್ವಕಿಲ್ಬಿಷೈಃ ॥20॥
ಎಲೌ ಪ್ರಿಯೆಯೇ, ನಾನು ಮೂರುಲೋಕಗಳಲ್ಲಿ ಶಿವಲಿಂಗವನ್ನು ಸ್ಥಾಪಿಸಿದೆನು. ಶಿವಲಿಂಗಕ್ಕೆ ನಮಸ್ಕಾರ ಮಾಡುವುದರಿಂದ ಎಲ್ಲ ಪಾಪಗಳಿಂದಲೂ ಮುಕ್ತರಾಗುತ್ತಾರೆ.
ಇಷ್ಟಂ ದತ್ತಮಧೀತಂ ಚ ಯಜ್ಞಾಶ್ಚ ಸಹದಕ್ಷಿಣಾಃ |
ಶಿವಲಿಂಗಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥21॥
ತಟಾಕಾದಿ ನಿರ್ಮಾಣ, ದಾನ, ಅಧ್ಯಯನ, ದಕ್ಷಿಣಾ ಸಹಿತವಾದ ಯಜ್ಞಗಳು - ಇವು ಯಾವುವೂ ಶಿವಲಿಂಗ ಪ್ರಣಾಮದ ಹದಿನಾರನೆಯ ಒಂದು ಭಾಗದ ಫಲಕ್ಕೆ ಅರ್ಹವಾದವುಗಳಲ್ಲ.
ಅರ್ಚಯಾ ಶಿವಲಿಂಗಸ್ಯ ಪರಿತುಷ್ಯಾಮ್ಯಹಂ ಪ್ರಿಯೇ |
ಶಿವಲಿಂಗಾರ್ಚನಾಯಾಂ ತು ವಿಧಾನಮಪಿ ಮೇ ಶೃಣು ॥22॥
ಪ್ರಿಯೆಯೇ, ಶಿವಲಿಂಗದ ಅರ್ಚನೆಯಿಂದ ನಾನು ಸಂತುಷ್ಟನಾಗುತ್ತೇನೆ. ಶಿವಲಿಂಗಾರ್ಚನೆಯ ವಿಧಾನವನ್ನು ನನ್ನಿಂದ ಕೇಳು.
ಗೋಕ್ಷೀರನವನೀತಾಭ್ಯಾಮರ್ಚಯೇದ್ ಯಃ ಶಿವಂ ಮಮ |
ಇಷ್ಟಸ್ಯ ಹಯಮೇಧಸ್ಯ ಯತ್ಫಲಂ ತತ್ಫಲಂ ಭವೇತ್ ॥23॥
ಗೋಕ್ಷೀರ ಮತ್ತು ನವನೀತಗಳಿಂದ ಯಾವನು ನನ್ನ ಲಿಂಗವನ್ನು ಅರ್ಚಿಸುತ್ತಾನೆಯೋ ಅವನಿಗೆ ಅಶ್ವಮೇಧ ಯಾಗವನ್ನು ಮಾಡಿದ ಫಲವುಂಟಾಗುತ್ತದೆ.
ಘೃತಮಂಡೇನ ಯೋ ನಿತ್ಯಮರ್ಚಯೇದ್ಧಿ ಶಿವಂ ಮಮ |
ಸ ಫಲಂ ಪ್ರಾಪ್ನುಯಾನ್ಮರ್ತ್ಯೋ ಬ್ರಾಹ್ಮಣಸ್ಯಾಗ್ನಿಹೋತ್ರಿಣಃ ॥24॥
ಗಟ್ಟಿಯಾದ ಘೃತದಿಂದ ಯಾವನು ನನ್ನ ಶಿವಲಿಂಗವನ್ನು ಅರ್ಚಿಸುತ್ತಾನೆಯೋ ಅಂತಹವನು ಅಗ್ನಿಹೋತ್ರವನ್ನು ಮಾಡಿದ ಬ್ರಾಹ್ಮಣರ ಫಲವನ್ನು ಹೊಂದುತ್ತಾನೆ.
ಕೇವಲೇನಾಪಿ ತೋಯೇನ ಸ್ನಾಪಯೇದ್ ಯಃ ಶಿವಂ ಮಮ |
ಸ ಚಾಪಿ ಲಭತೇ ಪುಣ್ಯಂ ಮತ್ಪ್ರಿಯಶ್ಚ ಭವೇನ್ನರಃ ॥25॥
ಕೇವಲ ನೀರಿನಿಂದಲೇ ಯಾವನು ನನ್ನ ಲಿಂಗಕ್ಕೆ ಅಭಿಷೇಕ ಮಾಡುತ್ತಾನೆಯೋ ಅವನೂ ಸಹ ಪುಣ್ಯವನ್ನು ಪಡೆದು ನನಗೆ ಪ್ರಿಯನಾಗುತ್ತಾನೆ.
ಸಘೃತಂ ಗುಗ್ಗುಲಂ ಸಮ್ಯಗ್ ಧೂಪಯೇದ್ ಯಃ ಶಿವಾಂತಿಕೇ |
ಗೋಸವಸ್ಯ ತು ಯಜ್ಞಸ್ಯ ಯತ್ಫಲಂ ತಸ್ಯ ತದ್ಭವೇತ್ ॥26॥
ಘೃತ ಸಹಿತವಾದ ಗುಗ್ಗುಲ ಧೂಪವನ್ನು ಯಾವನು ನನ್ನ ಬಳಿ ನೀಡುತ್ತಾನೆಯೋ ಅವನಿಗೆ ಗೋಸವ ಯಜ್ಞದ ಫಲವು ಉಂಟಾಗುತ್ತದೆ.
ಯಸ್ತು ಗುಗ್ಗುಲಪಿಂಡೇನ ಕೇವಲೇನಾಪಿ ಧೂಪಯೇತ್ |
ತಸ್ಯ ರುಗ್ಮಪ್ರದಾನಸ್ಯ ಯತ್ಫಲಂ ತಸ್ಯ ತದ್ಭವೇತ್ ॥27॥
ಯಾವನು ಕೇವಲ ಗುಗ್ಗುಲಪಿಂಡದಿಂದಲೇ ನನಗೆ ಧೂಪಾರತಿಯನ್ನು ಮಾಡುತ್ತಾನೆಯೋ ಅವನಿಗೆ ಸುವರ್ಣದಾನದ ಫಲವು ಉಂಟಾಗುತ್ತದೆ.
ಯಸ್ತು ನಾನಾವಿಧೈಃ ಪುಷ್ಪೈರ್ಮಮ ಲಿಂಗಂ ಸಮರ್ಚಯೇತ್ |
ಸ ಹಿ ಧೇನುಸಹಸ್ರಸ್ಯ ದತ್ತಸ್ಯ ಫಲಮಾಪ್ನುಯಾತ್ ॥28॥
ಯಾವನು ನಾನಾ ವಿಧವಾದ ಪುಷ್ಪಗಳಿಂದ ನನ್ನ ಲಿಂಗವನ್ನು ಅರ್ಚಿಸುತ್ತಾನೆಯೋ ಅವನಿಗೆ ಸಹಸ್ರ ಗೋದಾನ ಮಾಡಿದ ಫಲವು ಉಂಟಾಗುತ್ತದೆ.
ಯಸ್ತು ದೇಶಾಂತರಂ ಗತ್ವಾ ಶಿವಲಿಂಗಂ ಸಮರ್ಚಯೇತ್ |
ತಸ್ಮಾತ್ ಸರ್ವಮನುಷ್ಯೇಷು ನಾಸ್ತಿ ಮೇ ಪ್ರಿಯಕೃತ್ತಮಃ ॥29॥
ಯಾವನು ಬೇರೆ ದೇಶಕ್ಕೆ ಹೋಗಿ ಶಿವಲಿಂಗವನ್ನು ಪೂಜಿಸುತ್ತಾನೆಯೋ, ಸರ್ವ ಮನುಷ್ಯರಲ್ಲಿ ನನಗೆ ಅವನಿಗಿಂತ ಹೆಚ್ಚು ಪ್ರಿಯನಾದವನು ಯಾವನೂ ಇಲ್ಲ.
ಏವಂ ನಾನಾವಿಧೈರ್ದ್ರವ್ಯೈಃ ಶಿವಲಿಂಗಂ ಸಮರ್ಚಯೇತ್ |
ಮತ್ಪ್ರಸಾದಾತ್ ಮನುಷ್ಯೇಷು ನ ಪುನರ್ಜಾಯತೇ ನರಃ ॥30॥
ಹೀಗೆ ನಾನಾ ವಿಧವಾದ ದ್ರವ್ಯಗಳಿಂದ ಶಿವಲಿಂಗವನ್ನು ಪೂಜಿಸುವವನು ನನ್ನ ಅನುಗ್ರಹದಿಂದ ಪುನಃ ಮನುಷ್ಯಯೋನಿಯಲ್ಲಿ ಜನಿಸುವುದಿಲ್ಲ.
ಅರ್ಚನಾಭಿರ್ನಮಸ್ಕಾರೈರುಪಹಾರೈಃ ಸ್ತವೈರಪಿ |
ಭಕ್ತೋ ಮಾಮರ್ಚಯೇನ್ನಿತ್ಯಂ ಶಿವಲಿಂಗೇಷ್ವತಂದ್ರಿತಃ ॥31॥
ಭಕ್ತನಾದವನು ಆಲಸ್ಯವಿಲ್ಲದೆ ಅರ್ಚನೆಗಳಿಂದ, ನಮಸ್ಕಾರಗಳಿಂದ, ನೈವೇದ್ಯಗಳಿಂದ ಮತ್ತು ಸ್ತೋತ್ರಗಳಿಂದ ಶಿವಲಿಂಗದಲ್ಲಿರುವ ನನ್ನನ್ನು ಅರ್ಚಿಸಬೇಕು.

ಪಲಾಶಬಿಲ್ವಪತ್ರಾಣಿ ರಾಜವೃಕ್ಷಸ್ರುಜಸ್ತಥಾ |
ಅರ್ಕಪುಷ್ಪಾಣಿ ಮೇಧ್ಯಾನಿ ಮತ್ಪ್ರಿಯಾಣಿ ವಿಶೇಷತಃ ||32||
ಪಲಾಶ-ಬಿಲ್ವಪತ್ರಗಳು, ರಾಜವೃಕ್ಷ ಪುಷ್ಪಗಳ ಮಾಲೆಗಳು, ಎಕ್ಕದ ಹೂವುಗಳು ನನಗೆ ಪವಿತ್ರವಾದವುಗಳು ಮತ್ತು ವಿಶೇಷವಾಗಿ ಪ್ರಿಯವಾದವುಗಳು.
ಫಲಂ ವಾ ಯದಿ ವಾ ಶಾಕಂ ಪುಷ್ಪಂ ವಾ ಯದಿ ವಾ ಜಲಮ್ |
ದತ್ತಂ ಸಂಪ್ರೀಣಯೇದ್ ದೇವಿ ಭಕ್ತೈರ್ಮದ್ಗತಮಾನಸೈಃ ||33||
ದೇವಿಯೇ, ನನ್ನ ಭಕ್ತರು ನನ್ನಲ್ಲಿಯೇ ಮನಸ್ಸಿಟ್ಟು ನೀಡಿದ ಫಲವಾಗಲೀ, ಶಾಕವಾಗಲೀ, ಪುಷ್ಪವಾಗಲೀ ಅಥವಾ ಜಲವಾಗಲೀ ನನಗೆ ಸಂತೋಷವನ್ನುಂಟು ಮಾಡುತ್ತದೆ.
ಮಮಾಭಿಪರಿತುಷ್ಟಸ್ಯ ನಾಸ್ತಿ ಲೋಕೇ ಸುದುರ್ಲಭಮ್ |
ತಸ್ಮಾತ್ತೇ ಸತತಂ ಭಕ್ತಾ ಮಾಮೇವಾಭ್ಯರ್ಚಯಂತ್ಯುತ ||34||
ನಾನು ಸಂತುಷ್ಟನಾದರೆ ಲೋಕದಲ್ಲಿ ದುರ್ಲಭವಾದುದು ಯಾವುದೂ ಇಲ್ಲ. ಆದ್ದರಿಂದ ನನ್ನ ಭಕ್ತರು ಸತತವಾಗಿ ನನ್ನನ್ನೇ ಪೂಜಿಸುತ್ತಾರೆ.
ಮದ್ಭಕ್ತಾ ನ ವಿನಶ್ಯಂತಿ ಮದ್ಭಕ್ತಾ ವೀತಕಲ್ಮಷಾಃ |
ಮದ್ಭಕ್ತಾಃ ಸರ್ವಲೋಕೇಷು ಪೂಜನೀಯಾ ವಿಶೇಷತಃ ||35||
ನನ್ನ ಭಕ್ತರು ನಾಶವನ್ನು ಹೊಂದುವುದಿಲ್ಲ. ನನ್ನ ಭಕ್ತರು ದೋಷದೂರರಾಗುತ್ತಾರೆ. ನನ್ನ ಭಕ್ತರು ಸರ್ವಲೋಕಗಳಲ್ಲಿ ವಿಶೇಷವಾಗಿ ಪೂಜಿಸಲ್ಪಡಬೇಕಾದವರು.
ಮದ್ದ್ವೇಷಿಣಶ್ಚ ಯೇ ಮರ್ತ್ಯಾ ಮದ್ಭಕ್ತದ್ವೇಷಿಣಸ್ತಥಾ |
ಯಾಂತಿ ತೇ ನರಕಂ ಕ್ಷಿಪ್ರಮಿಷ್ಟ್ವಾ ಕ್ರತುಶತೈರಪಿ ||36||
ಯಾವ ಮನುಷ್ಯರು ನನ್ನನ್ನು ದ್ವೇಷಿಸುತ್ತಾರೆಯೋ, ಅದರಂತೆ ನನ್ನ ಭಕ್ತರನ್ನು ದ್ವೇಷಿಸುತ್ತಾರೆಯೋ ಅವರು ನೂರು ಯಾಗಗಳನ್ನು ಮಾಡಿದರೂ ಶೀಘ್ರವಾಗಿ ನರಕಕ್ಕೆ ಹೋಗುತ್ತಾರೆ.
ಏತತ್ ತೇ ಸರ್ವಮಾಖ್ಯಾತಂ ಯೋಗಂ ಪಾಶುಪತಂ ಮಮ |
ಮದ್ಭಕ್ತೈರ್ಮನುಜೈರ್ದೇವಿ ಶ್ರಾವ್ಯಮೇತದ್ ದಿನೇದಿನೇ ||37||
ದೇವಿಯೇ, ಸಮಗ್ರವಾದ ಪಾಶುಪತ ಯೋಗವನ್ನು ನಿನಗೆ ಹೇಳಿದ್ದೇನೆ. ನನ್ನ ಭಕ್ತರಾದ ಮನುಷ್ಯರು ಇದನ್ನು ದಿನದಿನವೂ ಕೇಳಬೇಕು.
ಶೃಣುಯಾದ್ ಯಃ ಪಠೇದ್ವಾಽಪಿ ಮಮೈತಂ ಧರ್ಮನಿಶ್ಚಯಮ್ |
ಸ್ವರ್ಗಂ ಕೀರ್ತಿಂ ಧನಂ ಧಾನ್ಯಂ ಲಭೇತ ಸ ನರೋತ್ತಮಃ ||38||
ಯಾವ ನರೋತ್ತಮನು ಈ ಧರ್ಮನಿಶ್ಚಯಾಖ್ಯಾನವನ್ನು ಕೇಳುತ್ತಾನೆಯೋ ಅಥವಾ ಪಾರಾಯಣ ಮಾಡುತ್ತಾನೆಯೋ ಅವನು ಸ್ವರ್ಗವನ್ನೂ, ಕೀರ್ತಿಯನ್ನೂ, ಧನವನ್ನೂ, ಧಾನ್ಯವನ್ನೂ ಪಡೆಯುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಪಾಶುಪತಯೋಗಕಥನಂ ನಾಮ ದ್ವಾತ್ರಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರಮೂವತ್ತೆರಡನೆಯ
ಅಧ್ಯಾಯ ಮುಗಿಯಿತು.
ಇನ್ನೂರ ಮೂವತ್ಮೂರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ.
ಉಮಾದೇವಿಗೆ ಸ್ತ್ರೀಧರ್ಮವನ್ನು ಹೇಳುವಂತೆ ಶಿವನ ಒತ್ತಾಯ.
ನಾರದಃ
ಏವಮುಕತತ್ವ ಮಹಾದೇವಃ ಶ್ರೋತುಕಾಮಃ ಸ್ವಯಂ ಪ್ರಭುಃ |
ಅನುಕೂಲಾಂ ಪ್ರಿಯಾಂ ಭಾರ್ಯಾಂ ಪಾರ್ಶ್ವಸ್ಥಾಂ ಸಮಭಾಷತ ||1||
ನಾರದ ಪ್ರಭುವಾದ ಮಹಾದೇವನು ಈ ರೀತಿಯಲ್ಲಿ ಮಾತನಾಡಿ ಸ್ವತಃ ಶ್ರವಣ ಮಾಡಲು ಬಯಸಿ ಪಾರ್ಶ್ವದಲ್ಲಿದ್ದ ಅನುಕೂಲಳಾದ ಪ್ರಿಯಳಾದ ಭಾರ್ಯೆಯನ್ನು ಕುರಿತು ಮಾತನಾಡಿದನು.
ಮಹೇಶ್ವರಃ
ಪರಾವರಜ್ಞೇ ಧರ್ಮಾಣಾಂ ತಪೋವನನಿವಾಸಿನಾಮ್ |
ದೀಕ್ಷಾವಿಧಿದಮೋಪೇತೇ ಸತತಂ ವ್ರತಚಾರಿಣಿ |
ಪೃಚ್ಛಾಮಿ ತ್ವಾಂ ವರಾರೋಹೇ ಪೃಷ್ಟಾ ವದ ಮಮೇಪ್ಸಿತಮ್ ||2||
ಮಹೇಶ್ವರ ತಪೋವನ ನಿವಾಸಿಗಳ ಧರ್ಮಗಳ ಶ್ರೇಷ್ಠ-ಕನಿಷ್ಠತೆಗಳನ್ನು ತಿಳಿದವಳೇ, ದೀಕ್ಷೆ-ದಮಗಳ ವಿಧಾನಗಳನ್ನು ಹೊಂದಿದವಳೇ, ಸತತವಾಗಿ ವ್ರತವನ್ನು ಆಚರಿಸುವವಳೇ, ಸುಂದರಿಯೇ, ನನಗೆ ಇಷ್ಟವಾದುದನ್ನು ನಿನ್ನನ್ನು ಕೇಳುತ್ತೇನೆ. ಅದನ್ನು ನೀನು ಹೇಳು.
ಸಾವಿತ್ರೀ ಬ್ರಹ್ಮಣಃ ಪತ್ನೀ ಕೌಶಿಕಸ್ಯ ಶಚೀ ಶುಭಾ |
ಲಕ್ಷ್ಮೀರ್ವಿಷ್ಣೋಃ ಪ್ರಿಯಾ ಭಾರ್ಯಾ ಧೃತಿರ್ಭಾರ್ಯಾ ಯಮಸ್ಯ ತು ||
ಮಾರ್ಕಂಡೇಯಸ್ಯ ಧೂಮಾರ್ಣಾ ಋದ್ಧಿರ್ವೈಶ್ರವಣಸ್ಯ ತು |

ವರುಣಸ್ಯ ಪ್ರಿಯಾ ಗೌರೀ ಸವಿತುಶ್ಚ ಸುವರ್ಚಲಾ ॥4॥
ರೋಹಿಣೀ ಶಶಿನೋ ಭಾರ್ಯಾ ಸ್ವಾಹಾ ವಹ್ನೇರನಿಂದಿತಾ |
ಕಾಶ್ಯಪಸ್ಯಾದಿತಿಶ್ಚೈವ ವಸಿಷ್ಠಸ್ಯಾಪ್ಯರುಂಧತೀ ॥5॥
ಏತಾಶ್ಚಾನ್ಯಾಶ್ಚ ದೇವ್ಯಸ್ತು ಸರ್ವಾಸ್ತಾಃ ಪತಿದೇವತಾಃ |
ಶ್ರೂಯಂತೇ ಲೋಕವಿಖ್ಯಾತಾಸ್ತ್ವಯಾ ಚೈವ ಸಹೋಷಿತಾಃ ॥6॥
ಬ್ರಹ್ಮನ ಪತ್ನಿಯಾದ ಸಾವಿತ್ರೀ, ಇಂದ್ರನ ಪತ್ನಿಯಾದ ಶುಭಳಾದ ಶಚೀ, ವಿಷ್ಣುವಿನ ಪ್ರಿಯ ಭಾರ್ಯೆಯಾದ ಲಕ್ಷ್ಮೀ, ಯಮನ ಭಾರ್ಯೆಯಾದ ಧೃತಿ, ಮಾರ್ಕಂಡೇಯರ ಭಾರ್ಯೆಯಾದ ಧೂಮಾರ್ಣಾ, ಕುಬೇರನ ಭಾರ್ಯೆಯಾದ ಋದ್ಧಿ, ವರುಣನ ಪ್ರಿಯ ಭಾರ್ಯೆಯಾದ ಗಂಗೆ, ಸೂರ್ಯಪ್ರಿಯಭಾರ್ಯೆಯಾದ ಸುವರ್ಚಲಾ, ಚಂದ್ರನ ಭಾರ್ಯೆಯಾದ ರೋಹಿಣಿ, ವಹ್ನಿಯ ಭಾರ್ಯೆಯಾದ ಅನಿಂದಿತಳಾದ ಸ್ವಾಹಾ, ಕಾಶ್ಯಪರ ಭಾರ್ಯೆಯಾದ ಅದಿತಿ, ವಸಿಷ್ಠರ ಭಾರ್ಯೆಯಾದ ಅರುಂಧತೀ ಇವರೂ ಪತಿದೇವತೆಯರಾದ ಇನ್ನೂ ಲೋಕಖ್ಯಾತರಾದ ಎಲ್ಲಾ ದೇವಿಯರೂ ನಿನ್ನ ಜೊತೆಯಲ್ಲಿ ವಾಸಿಸಿದರು ಎಂದು ಕೇಳಿಬರುತ್ತದೆ.
ತಾಭಿಶ್ಚ ಪೂಜಿತಾ ಸಾ ತ್ವಮನುವೃತ್ತ್ಯಾऽನುಭಾಷಣೈಃ |
ತಸ್ಮಾತ್ ತ್ವಾಂ ಪರಿಪೃಚ್ಛಾಮಿ ಧರ್ಮಜ್ಞೇ ಲೋಕಸಮ್ಮತೇ ॥7॥
ಅವರು ನಿನ್ನನ್ನು ಅನುವೃತ್ತಿಯಿಂದಲೂ, ಅನುಸರಿಸುವ ಮಾತಿನಿಂದಲೂ ಪೂಜಿಸಿದ್ದಾರೆ. ಆದ್ದರಿಂದ ಎಲೌ ಧರ್ಮಜ್ಞೆಯೇ, ಲೋಕಸಮ್ಮತಳೇ, ನಿನಗೆ ಪ್ರಶ್ನೆಯನ್ನು ಮಾಡುತ್ತಿದ್ದೇನೆ.
ಸ್ತ್ರೀಧರ್ಮಂ ಶ್ರೋತುಮಿಚ್ಛಾಮಿ ತ್ವಯ್ಯೈವ ಸಮುದಾಹೃತಮ್ |
ಸಧರ್ಮಚಾರಿಣೀ ಮೇ ತ್ವಂ ಸಮಾನವ್ರತಚಾರಿಣೀ ॥8॥
ನಿನ್ನ ಮುಖದಿಂದಲೇ ಸ್ತ್ರೀಧರ್ಮವನ್ನು ಕೇಳಲು ಬಯಸುತ್ತೇನೆ. ನೀನು ನನಗೆ ಸಹಧರ್ಮಚಾರಿಣಿಯಾದವಳು ಮತ್ತು ಸಮಾನ ವ್ರತವನ್ನು ಆಚರಿಸುವವಳು.
ಸಮಾನಸಾರಾ ವೀರ್ಯೇಣ ಮಯ್ಯೈವ ತ್ವಂ ಶುಭಾನನೇ |
ಮಮೈವಾರ್ಧಾಚ್ಛರೀರಸ್ಯ ನಿರ್ಮಿತಾಸಿ ಪುರಾ ಶುಭೇ |
ಸುರಕಾರ್ಯಂ ಕರೋಷಿ ತ್ವಂ ಲೋಕಸಂಧಾರಿಣೀ ತಥಾ ॥9॥
ಅಯಂ ಹಿ ಸ್ತ್ರೀಗಣಸ್ತತ್ವಂ ತು ಅನುಯಾತಿ ನ ಮುಂಚತಿ |
ತ್ವತ್ಪ್ರಸಾದಾದ್ಧಿತಂ ಶ್ರೋತುಂ ಸ್ತ್ರೀವೃತ್ತಂ ಶುಭಲಕ್ಷಣಮ್ ॥10॥
ಶುಭಾನನೆಯೇ, ಸಾಮರ್ಥ್ಯದಿಂದ ನೀನು ನನಗೆ ಸಮಳಾದವಳು. ಶುಭಳೇ, ನೀನು ಹಿಂದೆ ನನ್ನ ಅರ್ಧಶರೀರದಿಂದಲೇ ನಿರ್ಮಿತಳಾಗಿದ್ದೀಯೆ. ನೀನು ದೇವತಾ ಕಾರ್ಯವನ್ನು ಸಾಧಿಸುವವಳು ಮತ್ತು ಲೋಕಗಳನ್ನು ಧರಿಸುವವಳು ಮತ್ತು ಈ ಸ್ತ್ರೀ ಸಮೂಹವು ನಿನ್ನನ್ನು ಯಾವಾಗಲೂ ಹಿಂಬಾಲಿಸುತ್ತದೆ ಮತ್ತು ನಿನ್ನ ಅನುಗ್ರಹದಿಂದ ಸ್ತ್ರೀಯರಿಗೆ ಹಿತವಾದ ಸ್ತ್ರೀಯರ ಶುಭಧರ್ಮವನ್ನು ಕೇಳಲು ನಿನ್ನನ್ನು ಬಿಡುವುದಿಲ್ಲ.
ತ್ವಯಾ ಚೋಕ್ತಂ ವಿಶೇಷೇಣ ಗುರುಭೂತಂ ಹಿ ತಿಷ್ಠತಿ |
ಸ್ತ್ರಿಯ ಏವ ಸದಾ ಲೋಕೇ ಸ್ತ್ರೀಗಣಸ್ಯ ಗತಿಃ ಪ್ರಿಯೇ ॥11॥
ನೀನು ಹೇಳಿದುದು ವಿಶೇಷವಾಗಿ ಮಹತ್ವವನ್ನು ಹೊಂದುತ್ತದೆ. ಪ್ರಿಯೆಯೇ, ಸ್ತ್ರೀ ಸಮೂಹಕ್ಕೆ ಯಾವಾಗಲೂ ಸ್ತ್ರೀಯರೇ ಗತಿಯಾದವರು.
ಶಶ್ವದ್ ಗೌರ್ಗೋಷು ಗಚ್ಛೇತ ನಾನ್ಯತ್ರ ರಮತೇ ನರಃ |
ಏವಂ ಲೋಕಗತಿರ್ದೇವಿ ಆದಿಪ್ರಭೃತಿ ವರ್ತತೇ ॥12॥
ಗೋವು ಯಾವಾಗಲೂ ಗೋವುಗಳ ಬಳಿಗೇ ಹೋಗುತ್ತದೆ. ಮನುಷ್ಯನು ಮನುಷ್ಯನನ್ನು ಬಿಟ್ಟು ಬೇರೆಯವರಿಂದ ಸಂತೋಷವನ್ನು ಹೊಂದುವುದಿಲ್ಲ. ದೇವಿಯೇ, ಮೊದಲಿನಿಂದಲೂ ಲೋಕಗತಿಯು ಈ ರೀತಿಯಾಗಿಯೇ ಇದೆ.
ಪ್ರಮದೋಕ್ತಂ ತು ಯತ್ ಕಿಂಚಿತ್ತತ್ ಸ್ತ್ರೀಷು ಬಹು ಮನ್ಯತೇ |
ನ ತಥಾ ಮನ್ಯತೇ ಸ್ತ್ರೀಷು ಪುರುಷೋಕ್ತಮನಿಂದಿತೇ ॥13॥
ಪ್ರಮದೆಯರು ಏನು ಹೇಳಿದರೂ ಅದು ವನಿತೆಯರಿಗೆ ಬಹುಮಾನ್ಯವಾಗುತ್ತದೆ. ಅನಿಂದಿತೆಯೇ, ಪುರುಷರು ಮಾತನಾಡಿದ ವಿಷಯದಲ್ಲಿ ಸ್ತ್ರೀಯರು ಹಾಗೆ ಭಾವಿಸುವುದಿಲ್ಲ.
ತ್ವಯ್ಯೈಷ ವಿದಿತೋ ಹ್ಯರ್ಥಃ ಸ್ತ್ರೀಣಾಂ ಧರ್ಮಃ ಸನಾತನಃ |
ತಸ್ಮಾತ್ ತ್ವಾಂ ಪರಿಪೃಚ್ಛಾಮಿ ಪೃಷ್ಟಾ ವದ ಮಮೇಪ್ಸಿತಮ್ ॥14॥
ಸ್ತ್ರೀಯರ ಸನಾತನವಾದ ಧರ್ಮವನ್ನು ನೀನೇ ತಿಳಿದಿದ್ದೀಯೆ. ಆದ್ದರಿಂದ ನಿನ್ನನ್ನು ಕೇಳುತ್ತಿದ್ದೇನೆ. ನೀನು ನನಗೆ ಇಷ್ಟವಾದುದನ್ನು ಹೇಳು.
ನಾರದಃ
ಏವಮುಕ್ತಾ ತದಾ ದೇವೀ ಮಹಾದೇವೇನ ಶೋಭನಾ |
ಸೋದ್ವೇಗಾ ಚ ಸಲಜ್ಜಾ ಚ ನಾವದತ್ ತತ್ರ ಕಿಂಚನ ॥15॥
ಪುನಃ ಪುನಸ್ತದಾ ದೇವೋ ದೇವೀಂ ಕಿಮಿತಿ ಚಾಬ್ರವೀತ್ |
ಬಹುಶಶ್ಚೋದಿತಾ ದೇವೀ ಸವ್ರೀಡಾ ಚೇದಮಬ್ರವೀತ್ ॥16॥
ನಾರದ ಮಹಾದೇವನಿಂದ ಹೀಗೆ ಹೇಳಲ್ಪಟ್ಟ ಶುಭಳಾದ ಆ ದೇವಿಯು ಭಯ ಮತ್ತು ನಾಚಿಕೆಯಿಂದ ಕೂಡಿ ಏನನ್ನೂ ಮಾತನಾಡಲಿಲ್ಲ. ಆಗ ದೇವನು ದೇವಿಯನ್ನು ಕುರಿತು ಏಕೆ ಮಾತನಾಡುತ್ತಿಲ್ಲ ಎಂದು ಪುನಃ ಪುನಃ ಕೇಳಿದನು. ಬಹಳ ಒತ್ತಾಯ

ಪಡಿಸಿದ ಮೇಲೆ ದೇವಿಯು ನಾಚಿಕೆಯಿಂದ ಹೀಗೆ ಹೇಳಿದಳು.
ಉಮಾ
ಭಗವನ್ ದೇವದೇವೇಶ ಸುರಾಸುರನಮಸ್ಕೃತ |
ತ್ವದಂತಿಕೇ ಮಯಾ ವಕ್ತುಂ ಸ್ತ್ರೀಣಾಂ ಧರ್ಮಃ ಕಥಂ ಭವೇತ್ ॥17॥
ಉಮಾ ಭಗವಂತನೇ, ದೇವದೇವೇಶನೇ, ಸುರಾಸುರ ನಮಸ್ಕೃತನೇ, ನಿನ್ನ ಸಮೀಪದಲ್ಲಿ ಸ್ತ್ರೀಧರ್ಮವನ್ನು ಹೇಳಲು ನಾನು ಹೇಗೆ ಶಕ್ತಳಾಗುತ್ತೇನೆ?
ಮಹೇಶ್ವರಃ
ಮನ್ನಿಯೋಗಾದವಶ್ಯಂ ತು ವಕ್ತವ್ಯಂ ಹಿ ಮಮ ಪ್ರಿಯೇ ॥18॥
ಮಹೇಶ್ವರ ನನ್ನ ಪ್ರಿಯೆಯೇ, ನನ್ನ ಆಜ್ಞೆಯಂತೆ ನೀನು ಅವಶ್ಯವಾಗಿ ಹೇಳಬೇಕು.
ಉಮಾ
ಇಮಾ ನದ್ಯೋ ಮಹಾದೇವ ಸರ್ವತೀರ್ಥೋದಕಾನ್ವಿತಾಃ |
ಉಪಸ್ಪರ್ಶನಹೇತೋಸ್ತ್ವಾಂ ನ ತ್ಯಜಂತಿ ಸಮೀಪತಃ ॥19॥
ಉಮಾ ಎಲೈ ಮಹಾದೇವನೇ, ಸರ್ವತೀರ್ಥೋದಕದಿಂದ ಕೂಡಿದ ಈ ನದಿಗಳು ನೀನು ಸ್ನಾನ ಮಾಡುವಿಯೆಂಬ ಕಾರಣದಿಂದ ನಿನ್ನ ಸಾಮೀಪ್ಯವನ್ನು ಬಿಟ್ಟು ದೂರ ಹೋಗುವುದಿಲ್ಲ.
ಏತಾಭಿಃ ಸಹ ಸಮ್ಮಂತ್ರ್ಯ ಪ್ರವಕ್ಷ್ಯಾಮಿ ತವೇಪ್ಸಿತಮ್ |
ಅಯುಕ್ತಂ ಸತ್ಸು ತಜ್ಜ್ಞೇಷು ತಾನತಿಕ್ರಮ್ಯ ಭಾಷಿತುಮ್ ॥20॥
ಮಯಾ ಸಮ್ಮಾನಿತಾಶ್ಚೈವ ಭವಿಷ್ಯಂತಿ ಸರಿದ್ವರಾಃ॥21॥
ಇವರ ಜೊತೆಯಲ್ಲಿ ಆಲೋಚನೆಯನ್ನು ಮಾಡಿ ನಿನಗೆ ಇಷ್ಟವಾದುದನ್ನು ಹೇಳುವೆನು. ವಿದ್ವಾಂಸರಾದ ಸಜ್ಜನರ ಮುಂದೆ ಅವರನ್ನು ಮೀರಿ ಮಾತನಾಡುವುದು ಯೋಗ್ಯವಾದುದಲ್ಲ. ನಾನು ನದಿಗಳೊಡನೆ ಮಾತನಾಡಿದರೆ ಅದರಿಂದ ಈ ಶ್ರೇಷ್ಠ ನದಿಗಳು ಪೂಜಿಸಲ್ಪಡುತ್ತವೆ.
ನಾರದಃ
ಇತಿ ಮತ್ವಾ ಮಹಾದೇವೀ ನದೀದೇವೀಃ ಸಮಾಹ್ವಯತ್ |
ವಿಪಾಶಾಂ ಚ ವಿತಸ್ತಾಂ ಚ ಚಂದ್ರಭಾಗಾಂ ಸರಸ್ವತೀಮ್ ॥22॥
ಶತದ್ರುಂ ದೇವಿಕಾಂ ಸಿಂಧುಂ ಗೋಮತೀಂ ಕೌಶಿಕೀಂ ತಥಾ |
ಯಮುನಾಂ ನರ್ಮದಾಂ ಚೈವ ಕಾವೇರೀಮಥ ನಿಮ್ನಗಾಮ್ ॥23॥
ತಥಾ ದೇವನದೀಂ ಗಂಗಾಂ ಶ್ರೇಷ್ಠಾಂ ತ್ರಿಪಥಗಾಂ ಶುಭಾಮ್ |
ಸರ್ವತೀರ್ಥೋದಕವಹಾಂ ಸರ್ವಪಾಪವಿನಾಶಿನೀಮ್ |
ಏತಾ ನದೀಃ ಸಮಾಹೂಯ ಸಮುದ್ವೀಕ್ಷ್ಯೇದಮಬ್ರವೀತ್ ॥24॥
ಮಹಾದೇವಿಯು ಹೀಗೆ ತಿಳಿದು ನದೀದೇವತೆಗಳನ್ನು ಆಹ್ವಾನಿಸಿದಳು. ವಿಪಾಶಾ, ವಿತಸ್ತಾ, ಚಂದ್ರಭಾಗಾ, ಸರಸ್ವತೀ, ಶತದ್ರು, ದೇವಿಕಾ, ಸಿಂಧು, ಗೋಮತೀ, ಕೌಶಿಕೀ, ಯಮುನಾ, ನರ್ಮದಾ, ಕಾವೇರೀ, ಸರ್ವತೀರ್ಥೋದಕಗಳನ್ನು ಹೊಂದಿದ, ಸರ್ವಪಾಪವಿನಾಶಿನಿಯಾದ, ದೇವನದಿಯಾದ, ತ್ರಿಪಥಗಾಮಿನಿಯಾದ, ಶುಭಳಾದ ಶ್ರೇಷ್ಠಳಾದ ಗಂಗೆ - ಈ ನದಿಗಳನ್ನು ಕರೆದು ಅವರನ್ನು ನೋಡಿ ಮಾತನಾಡಿದಳು.
ಉಮಾ
ಹೇ ಹೇ ಪುಣ್ಯಾಃ ಸರಿಚ್ಛ್ರೇಷ್ಠಾಃ ಸರ್ವಪಾಪವಿನೋದಕಾಃ |
ಜ್ಞಾನವಿಜ್ಞಾನಸಂಪನ್ನಾಃ ಶೃಣುಧ್ವಂ ವಚನಂ ಮಮ ॥25॥
ಎಲೌ ಪವಿತ್ರವಾದ ಶ್ರೇಷ್ಠ ನದಿಗಳೇ, ಸರ್ವಪಾಪ ಪರಿಹಾರಕಗಳೇ, ಜ್ಞಾನ ವಿಜ್ಞಾನ ಸಂಪನ್ನರೇ, ನನ್ನ ಮಾತುಗಳನ್ನು ಕೇಳಿ.
ಅಯಂ ಭಗವತಾ ಪ್ರಶ್ನ ಉಕ್ತಃ ಸ್ತ್ರೀಧರ್ಮಮಾಶ್ರಿತಃ |
ನ ಚೈಕಯಾ ಮಯಾ ಸಾಧ್ಯಸ್ತಸ್ಮಾದ್ವಸ್ತ್ವನಯಾಮ್ಯಹಮ್ ॥26॥
ಪೂಜ್ಯನು ಸ್ತ್ರೀ ಧರ್ಮದ ಪ್ರಶ್ನೆಯನ್ನು ಮಾಡಿದ್ದಾನೆ. ನಾನೊಬ್ಬಳೇ ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ನಿಮ್ಮೆಲ್ಲರನ್ನೂ ಆಹ್ವಾನಿಸುತ್ತಿದ್ದೇನೆ.
ಯುಷ್ಮಾಭಿಸ್ತದ್ವಿಚಾರ್ಯೈವ ವಕ್ತುಮಿಚ್ಛಾಮಿ ಶೋಭನಾಃ |
ತತ್ಕಥಂ ದೇವದೇವಾಯ ವಾಚ್ಯಃ ಸ್ತ್ರೀಧರ್ಮ ಉತ್ತಮಃ ॥27॥
ಎಲೌ ಶೋಭನರೇ, ದೇವದೇವನ ಮುಂದೆ ಶ್ರೇಷ್ಠವಾದ ಸ್ತ್ರೀಧರ್ಮವನ್ನು ಹೇಗೆ ಹೇಳುವುದು ಎಂದು ನಿಮ್ಮ ಜೊತೆ ವಿಚಾರವನ್ನು ಮಾಡಿಯೇ ಅನಂತರ ಮಾತನಾಡಲು ಬಯಸುತ್ತೇನೆ.
ನಾರದಃ
ಇತಿ ಪೃಷ್ಟಾಸ್ತಥಾ ದೇವ್ಯಾ ದೇವನದ್ಯಶ್ಚಕಂಪಿರೇ |
ತಾಸಾಂ ಶ್ರೇಷ್ಠತಮಾ ಗಂಗಾ ವಚನಂ ಚೇದಮಬ್ರವೀತ್ ॥28॥
ನಾರದ ಹೀಗೆ ದೇವಿಯಿಂದ ಹೇಳಲ್ಪಟ್ಟ ದೇವನದಿಗಳು ನಡುಗಿದವು. ಅವರಲ್ಲಿ ಅತ್ಯಂತ ಶ್ರೇಷ್ಠಳಾದ ಗಂಗೆಯು ಈ ಮಾತನ್ನು ಆಡಿದಳು.
ಧನ್ಯಾಶ್ಚಾನುಗೃಹೀತಾಃ ಸ್ಮ ಅನೇನ ವಚನೇನ ತೇ |

ಯಾ ತ್ವಂ ಸುರಾಸುರೈರ್ಮಾನ್ಯಾ ನದೀರ್ಮಾನಯಸೇಽನಘೇ ॥29॥
ನಿನ್ನ ಈ ಮಾತಿನಿಂದ ನಾವು ಧನ್ಯರೂ, ಅನುಗೃಹೀತರೂ ಆಗಿದ್ದೇವೆ. ಎಲೌ ಅನಘಳೇ, ಸುರಾಸುರರಿಂದ ಮಾನ್ಯಳಾದ ನೀನು ನಮ್ಮನ್ನು ಗೌರವಿಸುತ್ತಿದ್ದೀಯೆ.
ತವೈವಾರ್ಹಂತಿ ಕಲ್ಯಾಣಿ ಏವಂ ಸಾಂತ್ವಪ್ರಸಾದನಮ್ |
ಅಶಕ್ಯಮಪಿ ಯೇ ಮೂರ್ಖಾಃ ಸ್ವಾತ್ಮಸಂಭಾವನಾಯುತಾಃ |
ವಾಕ್ಯಂ ವದಂತಿ ಸಂಸತ್ಸು ಸ್ವಯಮೇವ ಯಥೇಷ್ಟತಃ ॥30॥
ಯಃ ಶಕ್ತಶ್ಚಾನಹಂವಾದೀ ಸುದುರ್ಲಭತಮೋ ಮತಃ ॥31॥
ಎಲೌ ಕಲ್ಯಾಣಿಯೇ, ಇಂತಹ ಸಮಾಧಾನ ಮತ್ತು ಸತ್ಕಾರದ ಮಾತುಗಳು ನಿನಗೇ ಯೋಗ್ಯವಾದವುಗಳು. ಆತ್ಮಸಂಭಾವಿತರಾದ ಮೂರ್ಖರು ಸಭೆಗಳಲ್ಲಿ ತಮಗೆ ಸಾಧ್ಯವಿಲ್ಲದುದನ್ನೂ ತಮ್ಮ ಮನಸ್ಸಿಗೆ ಬಂದಂತೆ ತಾವಾಗಿಯೇ ಮಾತನಾಡುತ್ತಾರೆ. ಯಾವನು ಮಾತನಾಡಲು ಸಮರ್ಥನಾಗಿ ನಿರಹಂಕಾರಿಯಾಗಿರುತ್ತಾನೆಯೋ ಅಂತಹವನು ಲೋಕದಲ್ಲಿ ಅತ್ಯಂತ ದುರ್ಲಭನಾದವನು.
ತ್ವಂ ಹಿ ಶಕ್ತಾ ಸತೀ ದೇವಿ ವಕ್ತುಂ ಪ್ರಶ್ನಮಶೇಷತಃ |
ವ್ಯಾಹರ್ತುಂ ನೇಚ್ಛಸಿ ಸ್ತ್ರೀತ್ವಾತ್ ಸಂಪೂಜಯಸಿ ನಸ್ತಥಾ ॥32॥
ಎಲೌ ದೇವಿಯೇ, ಪ್ರಶ್ನೆಯನ್ನು ಸಮಗ್ರವಾಗಿ ಉತ್ತರಿಸಲು ನೀನು ಸಮರ್ಥಳಾಗಿದ್ದೀಯೆ. ಸ್ತ್ರೀಯಾದ ಕಾರಣದಿಂದ ನೀನು ಸ್ವತಃ ಮಾತನಾಡಲು ಬಯಸದೆ ನಮ್ಮನ್ನು ಪೂಜಿಸುತ್ತಿದ್ದೀಯೆ.
ತ್ವಂ ಹಿ ದೇವಸಮಾ ದೇವಿ ಊಹಾಪೋಹವಿಶಾರದಾ |
ದಿವ್ಯಜ್ಞಾನಯುತಾ ದೇವಿ ದಿವ್ಯಜ್ಞಾನೇಂಧನೈಧಿತಾ ॥33॥
ದೇವಿಯೇ, ನೀನು ಮಹಾದೇವನಿಗೆ ಸಮಳಾದವಳು. ಊಹಾಪೋಹಗಳಲ್ಲಿ ಕುಶಲಳಾದವಳು. ದೇವಿಯೇ, ನೀನು ದಿವ್ಯಜ್ಞಾನವನ್ನು ಹೊಂದಿ ಆ ದಿವ್ಯಜ್ಞಾನದ ಇಂಧನದಿಂದ ಜ್ವಲಿಸುತ್ತಿರುವವಳು.
ತ್ವಮೇವಾರ್ಹಸಿ ತದ್ವಕ್ತುಂ ಸ್ತ್ರೀಣಾಂ ಧರ್ಮಂ ಶುಭಾಶುಭಮ್ |
ಯಾಚಾಮಹೇ ವಯಂ ಶ್ರೋತುಮಮೃತಂ ತ್ವನ್ಮುಖೋದ್ಗತಮ್ |
ಕುರು ದೇವಿ ಪ್ರಿಯಂ ದೇವಿ ವದ ಸ್ತ್ರೀಧರ್ಮಮುತ್ತಮಮ್ ॥34॥
ಸ್ತ್ರೀಯರ ಶುಭಾಶುಭ ಧರ್ಮಗಳನ್ನು ಹೇಳಲು ನೀನೇ ಶಕ್ತಳಾಗಿದ್ದೀಯೆ. ನಾವು ನಿನ್ನ ಮುಖದಿಂದ ಬಂದ ಅಮೃತವನ್ನು ಕೇಳಲು ನಿನ್ನನ್ನು ಬೇಡುತ್ತಿದ್ದೇವೆ. ದೇವಿಯೇ, ನಮಗೆ ಪ್ರಿಯವನ್ನು ಮಾಡು. ದೇವಿಯೇ, ಶ್ರೇಷ್ಠವಾದ ಸ್ತ್ರೀಧರ್ಮವನ್ನು ಹೇಳು.
ನಾರದಃ
ಏವಂ ಪ್ರಸಾದಿತಾ ದೇವೀ ಗಂಗಯಾ ಲೋಕಪೂಜಿತಾ |
ಪ್ರಾಹ ಸರ್ವಮಶೇಷೇಣ ಸ್ತ್ರೀಧರ್ಮಂ ಸುರಸುಂದರೀ ॥35॥
ನಾರದ ಹೀಗೆ ಗಂಗೆಯಿಂದ ಪ್ರಸನ್ನೀಕರಿಸಲ್ಪಟ್ಟ ಲೋಕಪೂಜಿತಳಾದ, ಸುರಸುಂದರಿಯಾದ ಪಾರ್ವತೀದೇವಿಯು ಸಮಗ್ರವಾದ ಸ್ತ್ರೀ ಧರ್ಮವನ್ನು ಹೇಳಿದಳು.
ಉಮಾ
ಭಗವನ್ ದೇವದೇವೇಶ ಸುರೇಶ್ವರ ಮಹೇಶ್ವರ |
ತ್ವತ್ಪ್ರಸಾದಾತ್ ಸುರಶ್ರೇಷ್ಠ ತವೈವ ಪ್ರಿಯಕಾಮ್ಯಯಾ |
ತಮಹಂ ಕೀರ್ತಯಿಷ್ಯಾಮಿ ಯಥಾವಚ್ಛ್ರೋತುಮರ್ಹಸಿ ॥36॥
ಉಮಾ ಭಗವಂತನೇ, ದೇವದೇವೇಶನೇ, ಸುರೇಶ್ವರನೇ, ಮಹೇಶ್ವರನೇ, ಸುರಶ್ರೇಷ್ಠನೇ, ನಿನ್ನ ಅನುಗ್ರಹದಿಂದ ನಿನ್ನ ಪ್ರೀತಿಯನ್ನೇ ಬಯಸಿ ಆ ಧರ್ಮವನ್ನು ನಾನು ಹೇಳುವೆನು. ಸರಿಯಾಗಿ ಕೇಳಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಉಮಾಯಾಃ ಸ್ತ್ರೀಧರ್ಮಕಥನಾದೇಶೋ ನಾಮ
ತ್ರಯಸ್ತ್ರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ನಾಲ್ಕನೆಯ ಅಧ್ಯಾಯ
ಪಾರ್ವತಿಯಿಂದ ಪಾತಿವ್ರತ್ಯಧರ್ಮಕಥನ.
ನಾರದಃ
ಏವಂ ಬ್ರುವಂತ್ಯಾಂ ಸ್ತ್ರೀಧರ್ಮಂ ದೇವ್ಯಾಂ ದೇವಸ್ಯ ಶಾಸನಾತ್ |
ಋಷಿಗಂಧರ್ವಯಕ್ಷಾಣಾಂ ಯೋಷಿತಶ್ಚಾಪ್ಸರೋಗಣಾಃ ॥1॥
ನಾಗಭೂತಸ್ತ್ರಿಯಶ್ಚೈವ ನದ್ಯಶ್ಚೈವ ಸಮಾಗತಾಃ |
ಶ್ರೋತುಕಾಮಾಃ ಪರಂ ವಾಕ್ಯಂ ಸರ್ವಾಃ ಪರ್ಯವತಸ್ಥಿರೇ ॥2॥
ನಾರದ ಮಹಾದೇವನ ಶಾಸನದಂತೆ ಪಾರ್ವತಿಯು ಸ್ತ್ರೀಧರ್ಮವನ್ನು ಹೇಳಲು ಉದ್ಯುಕ್ತಳಾಗುತ್ತಿರಲು ಋಷಿ-ಗಂಧರ್ವ-ಯಕ್ಷರ ಪತ್ನಿಯರು, ಅಪ್ಸರೆಯರ ಸಮೂಹಗಳು, ನಾಗಪತ್ನಿಯರು, ಭೂತಪತ್ನಿಯರು, ನದಿಗಳು ಶ್ರೇಷ್ಠವಾದ ಉಪದೇಶವನ್ನು ಕೇಳಲು ಬಯಸಿ ಎಲ್ಲರೂ ಬಂದು ಸೇರಿದರು.

ಉಮಾ ದೇವೀ ಮುದಾ ಯುಕ್ತಾ ಪೂಜ್ಯಮಾನಾಂಗನಾಗಣೈಃ |
ಆನೃಶಂಸ್ಯಪರಾ ದೇವೀ ಸತತಂ ಸ್ತ್ರೀಗಣಂ ಪ್ರತಿ ॥3॥
ಸ್ತ್ರೀಗಣಸ್ಯ ಹಿತಾರ್ಥಾಯ ಭವಪ್ರಿಯಚಿಕೀರ್ಷಯಾ |
ವಕ್ತುಂ ವಚನಮಾರೇಭೇ ಸ್ತ್ರೀಣಾಂ ಧರ್ಮಾಶ್ರಿತಂ ಹಿತಮ್ ॥4॥
ಸ್ತ್ರೀ ಸಮೂಹದ ಮೇಲೆ ಯಾವಾಗಲೂ ದಯೆಯನ್ನು ಹೊಂದಿದ ಉಮಾದೇವಿಯು ಸ್ತ್ರೀ ಸಮೂಹಗಳಿಂದ ಪೂಜಿಸಲ್ಪಟ್ಟು ಸಂತೋಷದಿಂದ ಯುಕ್ತಳಾಗಿ ಈಶ್ವರನಿಗೆ ಪ್ರಿಯವನ್ನು ಮಾಡಲು ಬಯಸಿ ಸ್ತ್ರೀಯರ ಹಿತಕ್ಕೋಸ್ಕರವಾಗಿ ಸ್ತ್ರೀಧರ್ಮ ಸಂಬಂಧಿಯಾದ ಹಿತವಚನವನ್ನು ಹೇಳಲು ಪ್ರಾರಂಭಿಸಿದಳು.
ಉಮಾ
ಭಗವನ್ ಸರ್ವಧರ್ಮಜ್ಞ ಶ್ರೂಯತಾಂ ವಚನಂ ಮಮ |
ಋತುಪ್ರಾಪ್ತಾ ಸುಶುದ್ಧಾ ಯಾ ಕನ್ಯಾ ಸೇತ್ಯಭಿಧೀಯತೇ ॥5॥
ಉಮಾ ಪೂಜ್ಯನೇ, ಸರ್ವಧರ್ಮಜ್ಞನೇ, ನನ್ನ ಮಾತನ್ನು ಕೇಳು. ಋತುಪ್ರಾಪ್ತಳಾದ, ಶುದ್ಧಳಾದ ಬಾಲಕಿಯು ಕನ್ಯೆ ಎಂದು ಕರೆಯಲ್ಪಡುತ್ತಾಳೆ.
ತಾಂ ತು ಕನ್ಯಾಂ ಪಿತಾ ಮಾತಾ ಭ್ರಾತಾ ಮಾತುಲ ಏವ ವಾ |
ಪಿತೃವ್ಯಶ್ಚೈವ ಪಂಚೈತೇ ದಾತುಂ ಪ್ರಭವತಾಂ ಗತಾಃ ॥6॥
ಆ ಕನ್ಯೆಯನ್ನು ದಾನ ಮಾಡಲು ತಂದೆ, ತಾಯಿ, ಸಹೋದರ ಅಥವಾ ಸೋದರಮಾವ ಅಥವಾ ಪಿತೃ ಸಹೋದರರು - ಈ ಐದು ಜನರು ಅಧಿಕಾರವನ್ನು ಹೊಂದಿರುತ್ತಾರೆ.
ವಿವಾಹಾಶ್ಚ ತಥಾ ಪಂಚ ತಾಸಾಂ ಧರ್ಮಾರ್ಥಕಾರಣಾತ್ |
ಕಾಮತಶ್ಚ ಮಿಥೋ ದಾನಂ ಭಯಾಚ್ಚ ಪ್ರಸಭಾತ್ ತಥಾ ॥7॥
ಸ್ತ್ರೀಯರ ಧರ್ಮಾರ್ಥಕ್ಕೋಸ್ಕರ ಅವರಿಗೆ ಐದು ವಿಧವಾದ ವಿವಾಹಗಳು ಹೇಳಲ್ಪಟ್ಟಿವೆ. ಪರಸ್ಪರ ಸಮ್ಮತಿಯಿಂದ, ಕಾಮದಿಂದ ಗಂಧರ್ವವಿವಾಹವೂ, ಭಯದಿಂದ ಮತ್ತು ಬಲಾತ್ಕಾರದಿಂದ ನಡೆಯುವ ರಾಕ್ಷಸ ವಿವಾಹವೂ ಇದೆ.
ದತ್ತಾ ಯಸ್ಯ ಭವೇದ್ ಭಾರ್ಯಾ ಏತೇಷಾಂ ಯೇನ ಕೇನಚಿತ್ |
ದಾತಾರಃ ಸಂವಿಮೃಶ್ಯೈವ ದಾತುಮರ್ಹಂತಿ ನಾನ್ಯಥಾ ॥8॥
ಈ (ಮೊದಲಿನ) ಐದು ವಿಧಗಳಲ್ಲಿ ಯಾವುದಾದರೂ ಒಂದು ವಿಧಿಯಿಂದ ಕನ್ಯೆಯನ್ನು ಯಾವಾತನಿಗೆ ದಾನ ಮಾಡುತ್ತಾರೋ ಅವಳು ಅವನ ಭಾರ್ಯೆಯಾಗುತ್ತಾಳೆ.  ಕನ್ಯಾದಾನವನ್ನು ಮಾಡುವವರು ಚೆನ್ನಾಗಿ ವಿಮರ್ಶೆ ಮಾಡಿ ದಾನ ಮಾಡಬೇಕು.ಬೇರೆ ರೀತಿಯಲ್ಲಿ ಮಾಡಬಾರದು.
ಉತ್ತಮಾನಾಂ ತು ವರ್ಣಾನಾಂ ಮಂತ್ರವತ್ ಪಾಣಿಸಂಗ್ರಹಃ |
ವಿವಾಹಕರಣಂ ಚಾಹುಃ ಶೂದ್ರಾಣಾಂ ಸಂಪ್ರಯೋಗತಃ ॥9॥
ಉತ್ತಮ ವರ್ಣದವರಿಗೆ ಮಂತ್ರಪೂರ್ವಕವಾಗಿ ಪಾಣಿಗ್ರಹಣವಾಗುತ್ತದೆ. ಶೂದ್ರರಿಗೆ ಸಮಾಗಮವೇ ವಿವಾಹ ವಿಧಿ.
ಯದಾ ದತ್ತಾ ಭವೇತ್ ಕನ್ಯಾ ತಸ್ಮೈ ಭಾರ್ಯಾರ್ಥಿನೇ ಸ್ವಕೈಃ |
ತದಾಪ್ರಭೃತಿ ಸಾ ನಾರೀ ದಶರಾತ್ರಂ ವಿವರ್ಜ್ಯ ಚ |
ಮನಸಾ ಕರ್ಮಣಾ ವಾಚಾ ಹ್ಯನುಕೂಲಾ ಚ ಸಾ ಭವೇತ್ ॥10॥
ಯಾವ ಭಾರ್ಯಾರ್ಥಿಯಾದವನಿಗೆ ಕನ್ಯೆಯ ಬಂಧುಗಳು ಯಾವಾಗ ಕನ್ಯೆಯನ್ನು ಕೊಡುತ್ತಾರೆಯೋ ಆಗಿನಿಂದ ಅವಳು ಹತ್ತು ರಾತ್ರಿಗಳು ಕಳೆದ ಮೇಲೆ ಮನಸ್ಸಿನಿಂದಲೂ, ಕರ್ಮದಿಂದಲೂ ಮತ್ತು ಮಾತಿನಿಂದಲೂ ಪತಿಗೆ ಅನುಕೂಲಳಾಗಿರಬೇಕು.
ಇತಿ ಭರ್ತೃವ್ರತಂ ಕುರ್ಯಾತ್ ಪತಿಮುದ್ದಿಶ್ಯ ಶೋಭನಾ |
ತದಾಪ್ರಭೃತಿ ಸಾ ನಾರೀ ತತ್ತತ್ ಕುರ್ಯಾತ್ ಪತಿಪ್ರಿಯಮ್ ॥11॥
ಒಳ್ಳೆಯ ಸ್ವಭಾವದ ನಾರಿಯು ಪತಿಯ ಪ್ರೀತಿಯನ್ನುದ್ದೇಶಿಸಿ ಹೀಗೆ ಭರ್ತೃವ್ರತವನ್ನು ಮಾಡಬೇಕು. ಆಗಿನಿಂದ ಆರಂಭಿಸಿ ಆ ನಾರಿಯು ಪತಿಗೆ ಪ್ರಿಯವಾದ ಆಯಾ ಕಾರ್ಯವನ್ನು ಮಾಡಬೇಕು.
ಯದ್ಯದಿಚ್ಛತಿ ವೈ ಭರ್ತಾ ಧರ್ಮಕಾಮಾರ್ಥಕಾರಣಾತ್ |
ತಥೈವಾನುಪ್ರಿಯಾ ಭೂತ್ವಾ ತಥೈವೋಪಚರೇತ್ ಪತಿಮ್ |
ಪತಿವ್ರತಾತ್ವಂ ನಾರೀಣಾಮೇತದೇವ ಸಮಾಸತಃ ॥12॥
ಪತಿಯು ಧರ್ಮದ ಸಲುವಾಗಿ, ಕಾಮದ ಸಲುವಾಗಿ ಅಥವಾ ಅರ್ಥದ ಸಲುವಾಗಿ ಏನೇನನ್ನು ಬಯಸುತ್ತಾನೆಯೋ ಹಾಗೆ ತಾನೂ ಬಯಸಿ, ಅವನಿಗೆ ಪ್ರಿಯಳಾಗಿ ಪತಿಯನ್ನು ಉಪಚರಿಸಬೇಕು. ಇದೇ ಸಂಕ್ಷೇಪವಾಗಿ ಪಾತಿವ್ರತ್ಯಧರ್ಮ.
ತಾದೃಶಾ ಸಾ ಭವೇನ್ನಿತ್ಯಂ ಯಾದೃಶಸ್ತು ಭವೇತ್ಪತಿಃ |
ಶುಭಾಶುಭಸಮಾಚಾರೇ ಏತದ್ ವೃತ್ತಂ ಸಮಾಸತಃ ॥13॥
ಶುಭಾಶುಭ ಆಚಾರಗಳಲ್ಲಿ ಪತಿಯು ಹೇಗಿರುತ್ತಾನೆಯೋ ಪತ್ನಿಯೂ ಹಾಗೆಯೇ ಇರಬೇಕು. ಇದು ಸಂಕ್ಷೇಪವಾಗಿ ಪತಿವ್ರತೆಯರ ನಡತೆ.

ದೈವತಂ ಸತತಂ ಸಾಧ್ವೀ ಭರ್ತಾರಂ ಯಾಽನುಪಶ್ಯತಿ |
ದೈವಮೇವ ಭವೇತ್ ತಸ್ಯಾಃ ಪತಿರಿತ್ಯವಗಮ್ಯತೇ ॥14॥
ಯಾವ ಸಾಧ್ವಿಯು ಪತಿಯನ್ನು ದೇವತಾ ದೃಷ್ಟಿಯಿಂದ ನೋಡುತ್ತಾಳೆಯೋ ಅವಳ ಪಾಲಿಗೆ ಪತಿಯು ದೈವವೇ ಆಗುತ್ತಾನೆ ಎಂದು ತಿಳಿಯುತ್ತದೆ.

ಏತಸ್ಮಿನ್ ಕಾರಣಂ ದೇವ ಪೌರಾಣೀ ಶ್ರೂಯತೇ ಶ್ರುತಿಃ |
ಕಥಯಾಮಿ ಪ್ರಸಾದಾತ್ ತೇ ಶೃಣು ದೇವ ಸಮಾಹಿತಃ ||15||
ದೇವನೇ, ಇದಕ್ಕೆ ಕಾರಣವಾದ ಒಂದು ಪೌರಾಣಿಕ ಕಥೆ ಇದೆ. ನಿನ್ನ ಅನುಗ್ರಹದಿಂದ ಹೇಳುತ್ತೇನೆ. ಸಮಾಧಾನದಿಂದ ಅದನ್ನು ಕೇಳು.
ಕಸ್ಯಚಿತ್ತ್ವಥ ವಿಪ್ರಸ್ಯ ಭಾರ್ಯೇ ಹಿ ದ್ವೇ ಬಭೂವತುಃ |
ತಯೋರೇಕಾ ಧರ್ಮಕಾಮಾ ದೇವಾನುದ್ದಿಶ್ಯ ಭಕ್ತಿತಃ ||16||
ಭರ್ತಾರಮವಮತ್ಯೈವ ದೇವತಾಸು ಸಮಾಹಿತಾ |
ಚಕಾರ ವಿಪುಲಂ ಧರ್ಮಂ ಪೂಜನಾಽರ್ಚನಯಾಽನ್ವಿತಮ್ ||17||
ಯಾವುದೋ ಒಬ್ಬ ಬ್ರಾಹ್ಮಣನಿಗೆ ಇಬ್ಬರು ಪತ್ನಿಯರಿದ್ದರು. ಅವರಲ್ಲಿ ಒಬ್ಬಳು ಧರ್ಮಕಾಮಳಾಗಿ ದೇವತೆಗಳನ್ನುದ್ದೇಶಿಸಿ ಪತಿಯನ್ನು ತಿರಸ್ಕರಿಸಿ, ಯಾವಾಗಲೂ ಭಕ್ತಿಯಿಂದ ದೇವತಾಪೂಜೆಯಲ್ಲಿ ನಿರತಳಾಗಿರುತ್ತಿದ್ದಳು. ಪೂಜನೆ, ಅರ್ಚನೆ ಮೊದಲಾದ ವಿಪುಲ ಧರ್ಮವನ್ನು ಮಾಡಿದಳು.
ಅಪರಾ ಧರ್ಮಕಾಮಾ ಚ ಪತಿಮುದ್ದಿಶ್ಯ ಶೋಭನಾ |
ಭರ್ತಾರಂ ದೈವತಂ ಕೃತ್ವಾ ಚಕಾರ ಕಿಲ ತತ್ಪ್ರಿಯಮ್ ||18||
ಧರ್ಮವನ್ನು ಬಯಸಿದ ಇನ್ನೊಬ್ಬ ಶುಭಳಾದ ಪತ್ನಿಯು ಪತಿಯನ್ನೇ ದೈವತವೆಂದು ತಿಳಿದು ಪತಿಯ ಪ್ರೀತಿಗಾಗಿ ಅವನಿಗೆ ಪ್ರಿಯವಾದುದನ್ನು ಮಾಡಿದಳು.
ಏವಂ ಸಂವರ್ತಮಾನೇ ತು ಯುಗಪನ್ಮರಣೇಽಧ್ವನಿ |
ಗತೇ ಕಿಲ ಮಹಾದೇವ ತತ್ರೈಕಾ ಯಾ ಪತಿವ್ರತಾ |
ದೇವಪ್ರಿಯಾಯಾಂ ತಿಷ್ಠಂತ್ಯಾಂ ಪುಣ್ಯಲೋಕಂ ಜಗಾಮ ಸಾ ||19||
ಹೀಗೆ ಕಾಲವು ಕಳೆಯುತ್ತಿರಲು ಅವರಿಬ್ಬರೂ ಮರಣದ ಮಾರ್ಗದಲ್ಲಿ ಒಟ್ಟಿಗೆ ಹೊರಟರು. ಅವರಲ್ಲಿ ಪತಿವ್ರತೆಯಾದವಳು ದೇವಪ್ರಿಯಳಾದ ಮೊದಲನೆಯವಳು ನಿಂತಿರುವಾಗಲೇ ಪುಣ್ಯಲೋಕಗಳಿಗೆ ಹೊರಟು ಹೋದಳು.
ದೇವಪ್ರಿಯಾ ಚ ತಿಷ್ಠಂತೀ ವಿಲಲಾಪ ಸುದುಃಖಿತಾ |
ತಾಂ ಯಮೋ ಲೋಕಪಾಲಸ್ತು ಬಭಾಷೇ ಪುಷ್ಕಳಂ ವಚಃ ||20||
ದೇವಪ್ರಿಯೆಯು ಅಲ್ಲಿಯೇ ನಿಂತು ದುಃಖದಿಂದ ವಿಲಾಪವನ್ನು ಮಾಡಿದಳು. ಲೋಕಪಾಲಕನಾದ ಯಮನು ಅವಳನ್ನು ಕುರಿತು ಪುಷ್ಕಳವಾದ ಮಾತನ್ನಾಡಿದನು.
ಮಾ ಶೋಚೀಸ್ತ್ವಂ ನಿವರ್ತಸ್ವ ನ ಲೋಕಾಃ ಸಂತಿ ತೇ ಶುಭೇ |
ಸ್ವಧರ್ಮವಿಮುಖಾಽಸಿ ತ್ವಂ ತಸ್ಮಾಲ್ಲೋಕಾ ನ ಸಂತಿ ತೇ ||21||
ಎಲೌ ಶುಭಳೇ, ಶೋಕಪಡಬೇಡ. ಹಿಂದಿರುಗಿ ಹೋಗು. ನಿನಗೆ ಲೋಕಗಳಿಲ್ಲ. ನೀನು ನಿನ್ನ ಧರ್ಮದಿಂದ ವಿಮುಖಳಾಗಿದ್ದೀಯೆ. ಆದ್ದರಿಂದ ನಿನಗೆ ಲೋಕಗಳಿಲ್ಲ.
ದೈವತಂ ಹಿ ಪತಿರ್ನಾರ್ಯಾಃ ಸ್ಥಾಪಿತಂ ಸರ್ವದೈವತೈಃ |
ಅವಮತ್ಯ ಶುಭೇ ತಂ ತ್ವಂ ಕಥಂ ಲೋಕಾನ್ ಗಮಿಷ್ಯಸಿ ||22||
ಸರ್ವದೇವತೆಗಳು ಪತಿಯನ್ನು ನಾರಿಯರಿಗೆ ದೈವತವೆಂದು ಕಲ್ಪಿಸಿದ್ದಾರೆ. ಎಲೌ ಶುಭಳೇ, ಅಂತಹ ಪತಿಯನ್ನು ಅವಮಾನಗೊಳಿಸಿ ನೀನು ಹೇಗೆ ಶುಭಲೋಕಗಳಿಗೆ ಹೋಗುವಿ?
ಮೋಹೇನ ತ್ವಂ ವರಾರೋಹೇ ನ ಜಾನೀಷೇ ಸ್ವದೈವತಮ್ |
ಪತಿಮತ್ಯಾ ಸ್ತ್ರಿಯಾ ಕಾರ್ಯೋ ಧರ್ಮಃ ಪತ್ಯರ್ಪಿತಸ್ತ್ವಿತಿ ||23||
ಎಲೌ ಸುಂದರಿಯೇ, ಮೋಹದಿಂದ ನೀನು ನಿನ್ನ ದೈವತವನ್ನು ತಿಳಿದಿಲ್ಲ. ಪತಿಯನ್ನು ಹೊಂದಿದ ಸ್ತ್ರೀಯು ಮಾಡಿದ ಎಲ್ಲ ಧರ್ಮಗಳನ್ನೂ ಪತಿಯ ಮೂಲಕವಾಗಿಯೇ ಅರ್ಪಣೆ ಮಾಡಬೇಕು.
ತಸ್ಮಾತ್ತ್ವಂ ಹಿ ನಿವರ್ತಸ್ವ ಕುರು ಪತ್ಯಾಶ್ರಿತಂ ಹಿತಮ್ |
ತದಾ ಗಂತಾಸಿ ಲೋಕಾಂಸ್ತಾನ್ ಯಾನ್ ಗಚ್ಛಂತಿ ಪತಿವ್ರತಾಃ |
ನಾನ್ಯಥಾ ಶಕ್ಯತೇ ಪ್ರಾಪ್ತುಂ ಪತೀನಾಂ ಲೋಕಮುತ್ತಮಮ್ ||24||
ಆದ್ದರಿಂದ ನೀನು ಹಿಂದಿರುಗು. ಪತಿಗೆ ಹಿತವನ್ನು ಮಾಡು. ಆಗ ಪತಿವ್ರತೆಯರು ಹೊಂದುವ ಲೋಕಗಳನ್ನು ಹೊಂದುವಿ. ಬೇರೆ ರೀತಿಯಲ್ಲಿ ಶ್ರೇಷ್ಠವಾದ ಪತಿವ್ರತೆಯರ ಲೋಕವನ್ನು ಹೊಂದಲು ಸಾಧ್ಯವಿಲ್ಲ (ಎಂದು ಹೇಳಿದನು).
ಯಮೇನೈವಂವಿಧಂ ಚೋಕ್ತತ್ವ ನಿವೃತ್ಯ ಪುನರೇವ ಸಾ |
ಬಭೂವ ಪತಿಮಾಲಂಬ್ಯ ಪತಿಪ್ರಿಯಪರಾಯಣಾ ||25||
ಯಮನಿಂದ ಹೀಗೆ ಹೇಳಲ್ಪಟ್ಟ ಅವಳು ಪುನಃ ಹಿಂದಿರುಗಿ ಬಂದು, ಪತಿಪ್ರಿಯ ಪರಾಯಣಳಾಗಿ, ಪತಿಯನ್ನು ಆಶ್ರಯಿಸಿ ಧರ್ಮವನ್ನು ಮಾಡಿದಳು.
ಏವಮೇತನ್ಮಹಾದೇವ ದೈವತಂ ಹಿ ಪತಿಃ ಸ್ತ್ರಿಯಃ |
ತಸ್ಮಾತ್ ಪತಿಪರಾ ಭೂತ್ವಾ ಪತಿಂ ಪರಿಚರೇದಿತಿ ||26||
ಎಲೈ ಮಹಾದೇವನೇ, ಈ ರೀತಿಯಲ್ಲಿ ಸ್ತ್ರೀಗೆ ಪತಿಯೇ ದೇವತೆ. ಆದ್ದರಿಂದ ಪತಿಪರಾಯಣಳಾಗಿ ಪತಿಯನ್ನು ಉಪಚರಿಸಬೇಕು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮಪರ್ವಣಿ ಪತಿವ್ರತಾಧರ್ಮಕಥನಂ ನಾಮ ಚತುಸ್ತ್ರಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ನಾಲ್ಕನೆಯ

ಅಧ್ಯಾಯ ಮುಗಿಯಿತು.
* * * * *
ಇನ್నూರ ಮೂವತ್ತೈದನೆಯ ಅಧ್ಯಾಯ
ಪಾರ್ವತಿಯಿಂದ ಪಾತಿವ್ರತ್ಯಧರ್ಮಕಥನ.
ಉಮಾ
ಪತಿಮತ್ಯಾ ದಿವಾರಾತ್ರಂ ವೃತ್ತಾಂತಂ ಶ್ರೂಯತಾಂ ಶುಭಮ್ |
ಪತ್ಯುಃ ಪೂರ್ವಂ ಸಮುತ್ಥಾಯ ಪ್ರಾತಃ ಕರ್ಮ ಸಮಾಚರೇತ್ ॥1॥
ಉಮಾ ಪತಿಯನ್ನು ಹೊಂದಿದ ನಾರಿಯು ಹಗಲೂ ಮತ್ತು ರಾತ್ರಿಯೂ ಮಾಡಬೇಕಾದ ಶುಭವಾದ ವೃತ್ತಾಂತವನ್ನು ಕೇಳು.
ಪತಿಗಿಂತಲೂ ಮೊದಲು ಎದ್ದು ಪ್ರಾತಃಕರ್ಮಗಳನ್ನು ಮಾಡಬೇಕು.
ಪತ್ಯುರ್ಭಾವಂ ವಿದಿತ್ವಾ ತು ಪಶ್ಚಾತ್ ಸಂಬೋಧಯೇತ್ ಪತಿಮ್ |
ತತಃ ಪೌರ್ವಾಹ್ಣಿಕಂ ಕಾರ್ಯಂ ಸ್ವಯಂ ಕುರ್ಯಾದ್ ಯಥಾವಿಧಿ ॥2॥
ಪತಿಯ ಅಭಿಪ್ರಾಯವನ್ನು ತಿಳಿದು ಅನಂತರ ಪತಿಯನ್ನು ಎಬ್ಬಿಸಬೇಕು. ಅನಂತರ ಪ್ರಾತಃಕಾಲದಲ್ಲಿ ಮಾಡಬೇಕಾದ ಕೆಲಸಗಳನ್ನು ವಿಧಿಗೆ ಅನುಗುಣವಾಗಿ ಸ್ವತಃ ಮಾಡಬೇಕು.
ನಿವೇದ್ಯ ಚ ತಥಾಽಽಹಾರಂ ಯಥಾ ಸಂಪದ್ಯತಾಮಿತಿ |
ತಥೈವ ಕುರ್ಯಾತ್ ತತ್ಸರ್ವಂ ಯಥಾ ಪತ್ಯುಃ ಪ್ರಿಯಂ ಭವೇತ್ ॥3॥
ಯಥಾ ಪತ್ಯುಸ್ತಥಾ ಭರ್ತುರ್ಗುರೂಣಾಂ ಪ್ರತಿಪದ್ಯತೇ ॥4॥
ಶುಶ್ರೂಷಾಪೋಷಣವಿಧೌ ಪತಿಪ್ರಿಯಚಿಕೀರ್ಷಯಾ |
ಭರ್ತುರ್ನಿಷ್ಕ್ರಮಣೇ ಕಾರ್ಯಂ ಸಂಸ್ಮರೇದಪ್ರಮಾದತಃ ॥5॥
ಅನಂತರ ಆಹಾರವನ್ನು ಹೇಗೆ ಸಿದ್ಧಪಡಿಸಬೇಕು ಎಂದು ಕೇಳಿ ಅದರಂತೆ ಪತಿಗೆ ಸಂತೋಷವಾಗುವಂತೆ ಎಲ್ಲವನ್ನೂ ಮಾಡಬೇಕು. ಶುಶ್ರೂಷೆ ಮತ್ತು ಪೋಷಣ ವಿಷಯದಲ್ಲಿ ಪತಿಗೆ ಪ್ರಿಯವಾಗುವಂತೆ, ಪತಿಯ ವಿಷಯದಲ್ಲಿ ನಡೆದುಕೊಂಡಂತೆ ಪತಿಯ ಹಿರಿಯರ ವಿಷಯದಲ್ಲಿಯೂ ನಡೆದುಕೊಳ್ಳಬೇಕು. ಪತಿಯು ಹೊರಗೆ ಹೋದಾಗ ಮಾಡಬೇಕಾದ ಕಾರ್ಯಗಳನ್ನು ಸ್ಮರಿಸಿಕೊಂಡು ಎಚ್ಚರಿಕೆಯಿಂದ ಮಾಡಬೇಕು.
ಆಗತಂ ತು ಪತಿಂ ದೃಷ್ಟ್ವಾ ಸಹಸಾ ಪರಿಚಾರಕೈಃ |
ಸ್ವಯಂ ಕುರ್ವೀತ ಸಂಪ್ರೀತ್ಯಾ ಕಾಯಶ್ರಮಹರಂ ಪರಮ್ ॥6॥
ಪತಿಯು ಮನೆಗೆ ಹಿಂದಿರುಗಿದಾಗ ಪರಿಚಾರಕರ ಜೊತೆಯಲ್ಲಿ ಎದ್ದು, ಅವನ ಶ್ರಮ ಪರಿಹಾರಕವಾದ ಕಾರ್ಯಗಳನ್ನು ಸ್ವತಃ ತಾನೇ ಮಾಡಬೇಕು.
ಪಾದ್ಯಾಸನಾಭ್ಯಾಂ ಶಯನೈರ್ವಾಕ್ಯೈಶ್ಚ ಹೃದಯಪ್ರಿಯೈಃ |
ಅತಿಥೀನಾಮಾಗಮೇನ ಪ್ರೀತಿಯುಕ್ತಾ ಸದಾ ಭವೇತ್ ॥7॥
ಪಾದ್ಯ, ಆಸನ, ಶಯನ, ಮನಸ್ಸಿಗೆ ಪ್ರಿಯವಾದ ವಾಕ್ಯಗಳಿಂದ ಉಪಚರಿಸಬೇಕು. ಅತಿಥಿಗಳ ಆಗಮನದಿಂದ ಯಾವಾಗಲೂ ಸಂತೋಷಪಡಬೇಕು.
ಕರ್ಮಣಾ ವಚನೇನಾಪಿ ತೋಷಯೇದತಿಥೀನ್ ಸದಾ |
ಮಂಗಲಂ ಗೃಹಶೌಚಂ ಚ ಸರ್ವೋಪಕರಣಾನಿ ಚ ॥8॥
ಸರ್ವಕಾಲಮವೇಕ್ಷೇತ ಕಾರಯಂತೀ ಚ ಕುರ್ವತೀ |
ಧರ್ಮಕಾರ್ಯೇ ತು ಸಂಪ್ರಾಪ್ತೇ ತದ್ವದ್ಧರ್ಮಪರಾ ಭವೇತ್ ॥9॥
ಕರ್ಮದಿಂದಲೂ ಮತ್ತು ಮಾತಿನಿಂದಲೂ ಯಾವಾಗಲೂ ಅತಿಥಿಗಳನ್ನು ಸಂತೋಷಪಡಿಸಬೇಕು. ಮನೆಯ ಶುದ್ಧಿಯನ್ನೂ, ಮಂಗಳ ದ್ರವ್ಯಗಳನ್ನೂ, ಸರ್ವೋಪಕರಣಗಳನ್ನೂ ಎಲ್ಲ ಕಾಲದಲ್ಲಿಯೂ ನೋಡಿಕೊಂಡು ಕೆಲಸವನ್ನು ತಾನೂ ಮಾಡಿ ಸೇವಕರಿಂದಲೂ ಮಾಡಿಸಬೇಕು. ಧರ್ಮಕಾರ್ಯವು ಪ್ರಾಪ್ತವಾದಾಗ ಪತಿಯಂತೆ ಧರ್ಮಪರಳಾಗಬೇಕು.
ಅರ್ಥಕಾರ್ಯೇ ಪುನರ್ಭರ್ತುಃ ಪ್ರಮಾದಾಲಸ್ಯವರ್ಜಿತಾ |
ಸಾ ಯತ್ನಂ ಪರಮಂ ಕುರ್ಯಾತ್ ತಸ್ಯ ಸಾಹಾಯ್ಯಕಾರಣಾತ್ ॥10॥
ಪತಿಯ ಅರ್ಥದ ಕಾರ್ಯವು ಉಂಟಾದಾಗ ಪ್ರಮಾದವನ್ನಾಗಲೀ, ಆಲಸ್ಯವನ್ನಾಗಲೀ ಮಾಡದೆ ಅವನಿಗೆ ಸಹಾಯವನ್ನು ಮಾಡಲು ಪರಮ ಪ್ರಯತ್ನವನ್ನು ಮಾಡಬೇಕು.
ಯುಗಂಧರಾ ಭವೇತ್ ಸಾಧ್ವೀ ಪತ್ಯುರ್ಧರ್ಮಾರ್ಥಯೋಃ ಸದಾ |
ವಿಹಾರಕಾಲೇ ವೈ ಭರ್ತುರ್ಜ್ಞಾತ್ವಾ ಭಾವಂ ಹೃದಿ ಸ್ಥಿತಮ್ ॥11॥
ಅಲಂಕೃತ್ಯ ಯಥಾಯೋಗಂ ಮಂದಹಾಸಸಮನ್ವಿತಾ |
ವಾಕ್ಯೈರ್ಮಧುರಸಂಯುಕ್ತೈಃ ಸ್ಮಯಂತೀ ತೋಷಯೇತ್ ಪತಿಮ್ ॥12॥
ಸಾಧ್ವಿಯಾದವಳು ಪತಿಯ ಧರ್ಮಾರ್ಥಗಳಲ್ಲಿ ಇನ್ನೊಂದು ವೃಷಭವು ನೊಗವನ್ನು ಹೊರುವಂತೆ ಭಾರವನ್ನು ಹೊರಬೇಕು. ವಿಹಾರಕಾಲದಲ್ಲಿ ಪತಿಯ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿದು, ಯಥಾಯೋಗ್ಯವಾಗಿ ಅಲಂಕರಿಸಿಕೊಂಡು, ಮಂದಹಾಸಯುಕ್ತಳಾಗಿ, ಮಧುರವಾಕ್ಯಗಳಿಂದ ಮಾತನಾಡುತ್ತಾ, ನಗುತ್ತಾ ಪತಿಯನ್ನು ಸಂತೋಷಪಡಿಸಬೇಕು.
ಕಠೋರಾಣಿ ನ ವಾಚ್ಯಾನಿ ಅನ್ಯಥಾ ಪ್ರಮದಾಂತರೇ |
ಯಸ್ಯಾಂ ಕಾಮೀ ಭವೇದ್ ಭರ್ತಾ ತಸ್ಯಾಃ ಪ್ರೀತಿಕರಾ ಭವೇತ್ ॥13॥

ಕಠೋರವಾದ ಮಾತುಗಳನ್ನು ಆಡಬಾರದು. ಹಾಗೆ ಮಾಡಿದರೆ ಪತಿಗೆ ಇನ್ನೊಬ್ಬಳಲ್ಲಿ ಪ್ರೀತಿ ಇದ್ದರೆ ಅವಳಿಗೆ ಸಂತೋಷವಾದೀತು.
ಅಪ್ರಮಾದಂ ಪುರಸ್ಕೃತ್ಯ ಮನಸಾ ಜೋಷಯೇತ್ ಪತಿಮ್ |
ಅನಂತರಂ ತಥಾऽನ್ಯೇಷಾಂ ಭೋಜನಾವೇಕ್ಷಣಂ ಚರೇತ್ ॥14॥
ಪ್ರಮಾದ ಮಾಡದಿರುವುದನ್ನು ಮುಂದೆ ಮಾಡಿಕೊಂಡು ಮನಃ ಪೂರ್ವಕವಾಗಿ ಪತಿಯನ್ನು ಸೇವಿಸಬೇಕು. ಅನಂತರ ಉಳಿದವರ ಭೋಜನದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕು.
ದಾಸೀದಾಸಬಲೀವರ್ದಾಂಶ್ಚಂಡಾಲಾಂಶ್ಚ ಶುನಸ್ತಥಾ |
ಅನಾಥಾನ್ ಕೃಪಣಾಂಶ್ಚೈವ ಭಿಕ್ಷುಕಾಂಶ್ಚ ತಥೈವ ಚ |
ಪೂಜಯೇದ್ ಬಲಿಭೈಕ್ಷ್ಯೇಣ ಪತ್ಯುರ್ಧರ್ಮವಿವರ್ಧಯೇ ॥15॥
ದಾಸಿಯರು, ದಾಸರು, ದುಡಿಯುವ ಎತ್ತುಗಳು, ಚಂಡಾಲರು, ನಾಯಿಗಳು, ಅನಾಥರು, ದರಿದ್ರರು, ಭಿಕ್ಷುಕರು- ಎಲ್ಲರನ್ನೂ ಪತಿಯ ಧರ್ಮದ ಅಭಿವೃದ್ಧಿಗಾಗಿ ಆಹಾರ ಮತ್ತು ಭೈಕ್ಷ್ಯಗಳಿಂದ ಸತ್ಕರಿಸಬೇಕು.
ಕುಪಿತಂ ವಾऽರ್ಥಹೀನಂ ವಾ ಶ್ರಾಂತಂ ವೋಪಚರೇತ್ ಪತಿಮ್ |
ಯಥಾ ಸ ತುಷ್ಟಃ ಸ್ವಸ್ಥಶ್ಚ ಭವೇತ್ ಸಂತೋಷಯೇತ್ ಪತಿಮ್ ॥16॥
ಪತಿಯು ಕುಪಿತನಾಗಿದ್ದರೂ, ಅರ್ಥಹೀನನಾಗಿದ್ದರೂ, ದಣಿದಿದ್ದರೂ ಅವನು ಪುನಃ ಸಮಾಧಾನಗೊಳ್ಳುವಂತೆ, ಅವನು ಸಂತೋಷಗೊಳ್ಳುವಂತೆ ಉಪಚರಿಸಬೇಕು.
ಯಥಾ ಕುಟುಂಬಚಿಂತಾಯಾಂ ವಿವಾದೇ ವಾऽರ್ಥಸಂಶಯೇ |
ಆಹೂತಾ ಚ ಸಹಾಯಾರ್ಥಂ ತದಾ ಪ್ರಿಯಹಿತಂ ವದೇತ್ ॥17॥
ಕುಟುಂಬದ ಕ್ಷೇಮಚಿಂತನೆಯ ವಿಷಯದಲ್ಲಿ ಅಥವಾ ವಿವಾದದ ವಿಷಯದಲ್ಲಿ ಅಥವಾ ಅರ್ಥವಿಷಯದ ಸಂಶಯದಲ್ಲಿ ಪತಿಯು ಆಹ್ವಾನಿಸಿದರೆ ಅವನ ಬಳಿಗೆ ಹೋಗಿ ಪ್ರಿಯಹಿತವನ್ನು ಹೇಳಿ ಸಹಾಯವನ್ನು ಮಾಡಬೇಕು.
ಅಪ್ರಿಯಂ ವಾ ಹಿತಂ ಬ್ರೂಯಾತ್ ತಸ್ಯ ಧರ್ಮಾರ್ಥಕಾಂಕ್ಷಯಾ |
ಏಕಾಂತಚರ್ಯಾಕಥನಂ ಕಲಹಂ ವರ್ಜಯೇತ್ ಪರೈಃ ॥18॥
ಪತಿಯ ಧರ್ಮಾರ್ಥವನ್ನು ಬಯಸಿ ಅಪ್ರಿಯವಾದರೂ ಹಿತವನ್ನು ಹೇಳಬೇಕು. ಇನ್ನೊಬ್ಬರ ಜೊತೆಯಲ್ಲಿ ಏಕಾಂತದಲ್ಲಿರುವುದನ್ನೂ, ಕಲಹವನ್ನೂ ವರ್ಜಿಸಬೇಕು.
ಬಹಿರಾಲೋಕನಂ ಚೈವ ಮೋಹಂ ವ್ರೀಡಾಂ ಚ ಪೈಶುನಮ್ |
ಬಹ್ವಾಶಿತ್ವಂ ದಿವಾಸ್ವಪ್ನಮೇವಮಾದೀನಿ ವರ್ಜಯೇತ್ ॥19॥
ಯಾವಾಗಲೂ ಹೊರಗೆ ನೋಡುವುದು, ಮೋಹ, ನಾಚುವುದು, ಚಾಡಿ ಹೇಳುವುದು, ಬಹಳ ಊಟ ಮಾಡುವುದು, ಹಗಲಿನಲ್ಲಿ ನಿದ್ದೆ ಮಾಡುವುದು- ಇಂತಹುದನ್ನು ವರ್ಜಿಸಬೇಕು.
ರಹಸ್ಯೇಕಾಸನಂ ಸಾಧ್ವೀ ನ ಕುರ್ಯಾದಾತ್ಮಜೈರಪಿ |
ಯದ್ಯದ್ ದದ್ಯಾನ್ನಿಧತ್ಸ್ವೇತಿ ನ್ಯಾಸವತ್ ಪರಿಪಾಲಯೇತ್ ॥20॥
ಏಕಾಂತದಲ್ಲಿ ಪುತ್ರರ ಜೊತೆಯಲ್ಲಿಯೂ ಒಂದೇ ಆಸನದಲ್ಲಿ ಕುಳಿತುಕೊಳ್ಳಬಾರದು. ಪತಿಯು ಇಟ್ಟಿರು ಎಂದು ಏನೇನನ್ನು ಕೊಡುತ್ತಾನೆಯೋ ಅವೆಲ್ಲವನ್ನೂ ನ್ಯಾಸದಂತೆ ರಕ್ಷಿಸಬೇಕು.
ವಿಸ್ಮೃತಂ ವಾ ಪತಿದ್ರವ್ಯಂ ಪ್ರತಿಪದ್ಯಾತ್ ಸ್ವಶೌಚತಃ |
ಯತ್ ಕಿಂಚಿತ್ ಪತಿನಾ ದತ್ತಂ ತಲ್ಲಬ್ಧ್ವಾ ಸುಮುಖೀ ಭವೇತ್ ॥21॥
ಪತಿಯು ಇಟ್ಟು ಮರೆತ ದ್ರವ್ಯವನ್ನು ತನ್ನ ಶುದ್ಧತೆಯಿಂದ ಹುಡುಕಿಕೊಡಬೇಕು. ಪತಿಯು ಏನನ್ನು ಕೊಟ್ಟರೂ ಅದನ್ನು ಸ್ವೀಕರಿಸಿ ಸುಮುಖಿಯಾಗಿರಬೇಕು.
ಅತಿಯಾಂಚಾಮತೀರ್ಷ್ಯಾಂ ಚ ದೂರತಃ ಪರಿವರ್ಜಯೇತ್ |
ಬಾಲವದ್ ವೃದ್ಧವನ್ನಾರ್ಯಾಃ ಸದೈವಾತುರವತ್ಪತಿಃ ॥22॥
ಅತಿಯಾಗಿ ಬೇಡುವುದನ್ನಾಗಲೀ, ಅಸೂಯೆಯನ್ನು ಪಡುವುದನ್ನಾಗಲೀ ದೂರದಿಂದಲೇ ಪರಿತ್ಯಜಿಸಬೇಕು. ಬಾಲರನ್ನು ನೋಡಿಕೊಂಡಂತೆ, ವೃದ್ಧರನ್ನು ನೋಡಿಕೊಂಡಂತೆ, ರೋಗಿಗಳನ್ನು ನೋಡಿಕೊಂಡಂತೆ ಪತಿಯನ್ನು ಯಾವಾಗಲೂ ನೋಡಿಕೊಳ್ಳಬೇಕು.
ಭಾರ್ಯಾಯಾ ವ್ರತಮಿತ್ಯೇವ ಭರ್ತವ್ಯಃ ಸತತಂ ವಿಭೋ |
ಏತತ್ಪತಿವ್ರತಾವೃತ್ತಮುಕ್ತಂ ದೇವ ಸಮಾಸತಃ ॥23॥
ಎಲೈ ವಿಭುವೇ, ಇದು ಭಾರ್ಯೆಯ ವ್ರತ ಎಂದು ತಿಳಿದು ಯಾವಾಗಲೂ ಪತಿಯನ್ನು ನೋಡಿಕೊಳ್ಳಬೇಕು. ಇದು ಸಂಕ್ಷೇಪವಾಗಿ ಪತಿವ್ರತೆಯರ ನಡತೆ.
ನ ಚ ಭೋಗೇ ನ ಚೈಶ್ವರ್ಯೇ ನ ಸುಖೇ ನ ಧನೇ ತಥಾ |
ಸ್ಪೃಹಾ ಯಸ್ಯಾ ಯಥಾ ಪತ್ಯೌ ಸಾ ನಾರೀಣಾಂ ಪತಿವ್ರತಾ ॥24॥
ಯಾವ ನಾರಿಯು ಪತಿಯನ್ನು ಆಸೆಪಡುವಂತೆ ಭೋಗವನ್ನಾಗಲೀ, ಐಶ್ವರ್ಯವನ್ನಾಗಲೀ, ಸುಖವನ್ನಾಗಲೀ, ಧನವನ್ನಾಗಲೀ ಆಸೆಪಡುವುದಿಲ್ಲವೋ ಅವಳೇ ಪತಿವ್ರತೆ.
ಪತಿರ್ಹಿ ದೈವತಂ ಸ್ತ್ರೀಣಾಂ ಪತಿರ್ಬಂಧುಃ ಪತಿರ್ಗತಿಃ |
ನಾನ್ಯಾಂ ಗತಿಮಹಂ ಪಶ್ಯೇ ಪ್ರಮದಾನಾಂ ಯಥಾ ಪತಿಃ ॥25॥
ಸ್ತ್ರೀಯರಿಗೆ ಪತಿಯೇ ಬಂಧು, ಪತಿಯೇ ಗತಿ. ಸ್ತ್ರೀಯರಿಗೆ ಪತಿಯಂತಹ ಇನ್ನೊಂದು ಗತಿಯನ್ನು ನಾನು ಕಾಣುವುದಿಲ್ಲ.

ಜಾತಿಷ್ವಪಿ ಚ ವೈ ಸ್ತ್ರೀತ್ವಂ ವಿಶಿಷ್ಟಮಿತಿ ಮೇ ಮತಿಃ |
ಕಾಯಕ್ಲೇಶೇನ ಮಹತಾ ಪುರುಷಃ ಪ್ರಾಪ್ನುಯಾತ್ಫಲಮ್ |
ತತ್ಸರ್ವಂ ಲಭತೇ ನಾರೀ ಸೇವಂತೀಂದ್ರಿಯಗೋಚರಾನ್ ॥26॥
ಸ್ತ್ರೀ-ಪುರುಷ ಜಾತಿಗಳಲ್ಲಿ ಸ್ತ್ರೀ ಜಾತಿಯು ಶ್ರೇಷ್ಠವಾದುದೆಂದು ನನ್ನ ಅಭಿಪ್ರಾಯ. ಕಾಯಕ್ಲೇಶದಿಂದ ಪುರುಷರು ಯಾವ ಮಹಾಫಲವನ್ನು ಪಡೆಯುತ್ತಾರೆಯೋ ಅವೆಲ್ಲವನ್ನೂ ನಾರಿಯಾದವಳು ಪತಿಪೂಜೆಯನ್ನು ಮಾಡಿ ಅನಾಯಾಸದಿಂದ ಪಡೆಯುತ್ತಾಳೆ. (ಕಣ್ಣಿಗೆ ಕಾಣುವ ಪತಿಯನ್ನು ಮತ್ತು ಪತಿಯ ಹಿರಿಯರನ್ನು ಸೇವಿಸಿ ಪಡೆಯುತ್ತಾಳೆ).
ಯಥಾಸುಖಂ ಪತಿಮತೀ ಸರ್ವಂ ಪತ್ಯನುಕೂಲತಃ |
ಈದೃಶಂ ಧರ್ಮಸೌಕರ್ಯಂ ಪಶ್ಯಧ್ವಂ ಪ್ರಮದಾಃ ಪ್ರತಿ |
ಏತದ್ ವಿಸೃಜ್ಯ ಪಚ್ಯಂತೇ ಕುಸ್ತ್ರಿಯಃ ಪಾಪಮೋಹಿತಾಃ ॥27॥
ಪತಿಯನ್ನು ಹೊಂದಿದ ಸ್ತ್ರೀಯು ಪತಿಗೆ ಅನುಕೂಲವನ್ನು ಮಾಡಿ, ಸುಖವಾಗಿ ಎಲ್ಲವನ್ನೂ ಪಡೆಯುತ್ತಾಳೆ. ಸ್ತ್ರೀಯರಿಗಿರುವ ಇಂತಹ ಧರ್ಮಸೌಕರ್ಯವನ್ನು ನೋಡಿ. ಇದನ್ನು ಬಿಟ್ಟು ಕೆಟ್ಟ ಸ್ತ್ರೀಯರು ಪಾಪಮೋಹಿತರಾಗಿ ನರಕದಲ್ಲಿ ಬೇಯಿಸಲ್ಪಡುತ್ತಾರೆ.
ತಪಶ್ಚರ್ಯಾ ಚ ದಾನಂ ಚ ಪತೌ ತಸ್ಯಾಃ ಸಮರ್ಪಿತೌ |
ರೂಪಂ ಕುಲಂ ಯಶಃ ಸ್ವರ್ಗಃ ಸರ್ವಂ ತಸ್ಮಿನ್ ಪ್ರತಿಷ್ಠಿತಮ್ ॥28॥
ಸ್ತ್ರೀಯರ ತಪಸ್ಸು, ದಾನ ಎಲ್ಲವೂ ಪತಿಯ ಮೂಲಕವಾಗಿಯೇ ಸಮರ್ಪಿಸಲ್ಪಡುತ್ತದೆ. ಅವಳ ರೂಪ, ಕುಲ, ಯಶಸ್ಸು, ಸ್ವರ್ಗ ಎಲ್ಲವೂ ಪತಿಯನ್ನು ಅವಲಂಬಿಸಿವೆ.
ಏವಂ ವೃತ್ತಸಮಾಚಾರಾ ಸ್ವವೃತ್ತೇನೈವ ಶೋಭನಾ |
ಪತಿನಾ ಚ ಸಮಂ ಗಚ್ಛೇತ್ಪುಣ್ಯಲೋಕಾನ್ ಸುಕರ್ಮಣಾ ॥29॥
ಇಂತಹ ಶುಭಾಚಾರಗಳಿಂದ ಕೂಡಿದ ಒಳ್ಳೆಯ ವನಿತೆಯು ತನ್ನ ನಡತೆಯಿಂದಲೇ ಪತಿಯ ಜೊತೆಯಲ್ಲಿ ಪುಣ್ಯಲೋಕಗಳಿಗೆ ಹೋಗುತ್ತಾಳೆ.
ವೃದ್ಧೋ ವಿರೂಪೋ ಬೀಭತ್ಸೋ ಧನವಾನ್ನಿರ್ಧನೋಽಪಿ ವಾ |
ಏವಂಭೂತೋಽಪಿ ವೈ ಭರ್ತಾ ಸ್ತ್ರೀಣಾಂ ಭೂಷಣಮುತ್ತಮಮ್ ॥
ಪತಿಯು ವೃದ್ಧನಾಗಿರಲಿ, ವಿರೂಪನಾಗಿರಲಿ, ಭಯಂಕರನಾಗಿರಲಿ, ಧನವಂತನಾಗಿರಲಿ ಅಥವಾ ನಿರ್ಧನನಾಗಿರಲಿ ಅವನೇ ಸ್ತ್ರೀಯರಿಗೆ ಶ್ರೇಷ್ಠವಾದ ಭೂಷಣ.
ಆಢ್ಯಂ ವಾ ರೂಪಯುಕ್ತಂ ವಾ ವಿರೂಪಂ ಧನವರ್ಜಿತಮ್ |
ಯಾ ಪತಿಂ ತೋಷಯೇತ್ ಸಾಧ್ವೀ ಸಾ ನಾರೀಣಾಂ ವಿಶಿಷ್ಯತೇ ॥31॥
ಯಾವ ವನಿತೆಯು ಧನಾಢ್ಯನಾದ ಅಥವಾ ದರಿದ್ರನಾದ, ರೂಪವಂತನಾದ ಅಥವಾ ಕುರೂಪಿಯಾದ ಪತಿಯನ್ನು ಸಂತೋಷಪಡಿಸುತ್ತಾಳೆಯೋ ಅವಳು ನಾರಿಯರಲ್ಲಿ ಶ್ರೇಷ್ಠಳಾದವಳು.
ದರಿದ್ರಾಂಶ್ಚ ವಿರೂಪಾಂಶ್ಚ ಪ್ರಮೂಢಾನ್ ಕುಷ್ಠಸಂಯುತಾನ್ |
ಏವಂವಿಧಾನ್ ಪತೀನ್ ದೇವ ತೋಷಯಿತ್ವಾ ಪತಿವ್ರತಾ |
ಉಪರ್ಯುಪರಿ ತಾನ್ ಲೋಕಾನ್ ಪತ್ಯೈವ ಸಹ ಗಚ್ಛತಿ ॥
ಪತಿವ್ರತೆಯಾದವಳು ದರಿದ್ರರೂ, ಕುರೂಪಿಗಳೂ, ಮೂಢರೂ, ಕುಷ್ಠ ರೋಗವಿದ್ದವರೂ ಆದ ಇಂತಹ ಪತಿಯರನ್ನು ಸಂತೋಷಪಡಿಸಿ ಎಲೈ ದೇವನೇ, ಮೇಲೆ ಮೇಲೆ ಇರುವ ಶ್ರೇಷ್ಠ ಲೋಕಗಳಿಗೆ ಪತಿಯರೊಂದಿಗೆ ಹೋಗುತ್ತಾಳೆ.
ಏವಂ ಪ್ರವರ್ತಮಾನಾಯಾಃ ಪತಿಃ ಪೂರ್ವಂ ಮ್ರಿಯೇತ ಚೇತ್ |
ತದಾಽನುಮರಣಂ ಗಚ್ಛೇತ್ ಪುನರ್ಧರ್ಮಂ ಚರೇತ ವಾ |
ಏತದೇವಂ ಮಯಾ ಪ್ರೋಕ್ತಂ ಸ್ತ್ರೀಣಾಂ ಧರ್ಮಾಶ್ರಿತಂ ಹಿತಮ್ ॥33॥
ಹೀಗೆ ಧರ್ಮಾಚರಣೆಯನ್ನು ಮಾಡುವ ಸ್ತ್ರೀಗೆ ಪತಿಯೇ ಮೊದಲು ಮೃತನಾದರೆ ಆಗ ಅವಳು ಅನುಮರಣವನ್ನು ಮಾಡಬೇಕು ಅಥವಾ ಪುನಃ ಧರ್ಮಾಚರಣೆಯನ್ನು ಮಾಡಬಹುದು. ಇದೇ ಸ್ತ್ರೀಯರಿಗೆ ಸಂಬಂಧಿಸಿದ ಹಿತವಾದ ಧರ್ಮವಚನ.
ಏವಮೇತನ್ಮಯಾ ಪ್ರೋಕ್ತಂ ಸ್ತ್ರಿಯಸ್ತು ಬಹುಧಾ ಸ್ಮೃತಾಃ |
ದೇವತಾನಾಗಗಂಧರ್ವಮನುಷ್ಯಾ ಇತಿ ನೈಕಧಾ ॥34॥
ಸೌಮ್ಯಶೀಲಾಃ ಶುಭಾಚಾರಾಃ ಸರ್ವಾಸ್ತಾಃ ಸಂಭವಂತಿ ಚ |
ನಾನು ಸ್ತ್ರೀಯರ ವಿಷಯದಲ್ಲಿ ಹೀಗೆ ಹೇಳಿದ್ದೇನೆ. ಸ್ತ್ರೀಯರೂ, ದೇವತಾಸ್ತ್ರೀಯರು, ನಾಗಸ್ತ್ರೀಯರು, ಗಂಧರ್ವಸ್ತ್ರೀಯರು, ಮನುಷ್ಯಸ್ತ್ರೀಯರು ಎಂದು ಅನೇಕ ವಿಧವಾಗಿದ್ದಾರೆ. ಅವರೆಲ್ಲರೂ ಸೌಮ್ಯ ಸ್ವಭಾವವುಳ್ಳವರೂ, ಶುಭಾಚಾರ ಉಳ್ಳವರೂ ಆಗಿರುತ್ತಾರೆ.
ಯಥಾ ಶುಭಂ ಪ್ರವಕ್ಷ್ಯಾಮಿ ಸ್ತ್ರೀಣಾಂ ವೃತ್ತಂ ಮಹೇಶ್ವರ ॥35॥
ಆಸುರ್ಯಶ್ಚೈವ ಪೈಶಾಚ್ಯೋ ರಾಕ್ಷಸ್ಯಶ್ಚ ಭವಂತಿ ಯಾಃ |
ತಾಸಾಂ ವೃತ್ತಮಶೇಷೇಣ ಶ್ರೂಯತಾಂ ಲೋಕಕಾರಣಾತ್ ॥36॥
ಎಲೈ ಮಹೇಶ್ವರನೇ, ಸ್ತ್ರೀಯರ ಶುಭಾಚಾರವನ್ನು ಹೇಳಿದಂತೆ ಆಸುರ್ಯರೂ, ಪಿಶಾಚಿಗಳೂ, ರಾಕ್ಷಸಿಯರೂ ಆದ ಸ್ತ್ರೀಯರ ವೃತ್ತವನ್ನು ಲೋಕದ ದೃಷ್ಟಿಯಿಂದ ಸಮಗ್ರವಾಗಿ ಹೇಳುತ್ತೇನೆ. ಅದನ್ನೂ ಕೇಳು.
ನ್ಯಾಯತೋ ವಾಽನ್ಯಥಾ ಪ್ರೋಕ್ತಾ ಭಾವದೋಷಸಮನ್ವಿತಾಃ |
ಭರ್ತೄನುಪಚರಂತ್ಯೇವ ರಾಗದ್ವೇಷಬಲಾತ್ಕೃತಾಃ ॥37॥

ನ್ಯಾಯದಿಂದಾಗಲೀ ಅಥವಾ ಅನ್ಯಾಯದಿಂದಾಗಲೀ ಹೀಗೆ ಹೇಳಿದ ಈ ಸ್ತ್ರೀಯರು ಮನೋದೋಷಯುಕ್ತರಾಗಿ, ರಾಗ-ದ್ವೇಷಗಳಿಗೆ ವಶರಾಗಿ ಪತಿಗಳನ್ನು ಉಪಚರಿಸುತ್ತಾರೆ.
ಸ್ವಧರ್ಮವಿಮುಖಾ ಭೂತ್ವಾ ಪ್ರದೂಷ್ಯಂತಿ ಯತಸ್ತತಃ |
ಪ್ರವೃದ್ಧವಿಷಯಾ ನಿತ್ಯಂ ಪ್ರತಿಕೂಲಂ ವದಂತಿ ಚ ॥38॥
ತಮ್ಮ ಧರ್ಮದಿಂದ ವಿಮುಖರಾಗಿ ಎಲ್ಲ ಕಡೆಯಲ್ಲಿಯೂ ದೋಷಗಳನ್ನು ತಂದೊಡ್ಡುತ್ತಾರೆ. ಎಷ್ಟು ಸಾಮಗ್ರಿಗಳಿದ್ದರೂ ನಿತ್ಯವೂ ಪ್ರತಿಕೂಲವಾಗಿ ಮಾತನಾಡುತ್ತಾರೆ.
ಅರ್ಥಾನ್ ವಿನಾಶಯಂತ್ಯೇವಂ ನ ಗೃಹ್ಣಂತಿ ಹಿತಂ ಕ್ವಚಿತ್ |
ಸ್ವಬುದ್ಧಿನಿರತಾ ಭೂತ್ವಾ ಜೀವಂತಿ ಚ ಯಥಾ ತಥಾ ॥39॥
ವಸ್ತುಗಳನ್ನು ಹಾಳು ಮಾಡುತ್ತಾರೆ. ಹಿತವಚನವನ್ನು ಕೇಳುವುದಿಲ್ಲ. ತಮ್ಮ ಬುದ್ಧಿಯಲ್ಲೇ ನಿರತರಾಗಿ ತಮಗೆ ಬೇಕಾದಂತೆ ಜೀವಿಸುತ್ತಾರೆ.
ಗುಣವತ್ಯಃ ಕ್ವಚಿದ್ ಭೂತ್ವಾ ಪತಿಧರ್ಮಪರಾ ಇವ |
ಪುನರ್ಭವಂತಿ ಪಾಪಿಷ್ಠಾ ವಿಷಮಂ ವೃತ್ತಮಾಶ್ರಿತಾಃ ॥40॥
ಅವರೂ ಸಹ ಒಮ್ಮೊಮ್ಮೆ ಗುಣವತಿಯರಾಗಿ ಎಲ್ಲರಂತೆ ಧರ್ಮಾಚರಣೆಯನ್ನು ಮಾಡುತ್ತಾರೆ. ಆದರೆ ಪುನಃ ವಿಷಮವಾದ ವೃತ್ತದಿಂದ ಪಾಪಿಷ್ಠರಾಗುತ್ತಾರೆ.
ಅನವಸ್ಥಿತಮರ್ಯಾದಾ ಬಹುವೇಷಾ ವ್ಯವಪ್ರಿಯಾಃ |
ಅಸಂತುಷ್ಟಾಶ್ಚ ಲುಬ್ಧಾಶ್ಚ ಈರ್ಷ್ಯಾಕ್ರೋಧಯುತಾ ಭೃಶಮ್ ॥41॥
ಅವರು ಎಲ್ಲ ಮರ್ಯಾದೆಗಳನ್ನೂ ಮೀರಿ, ಅನೇಕ ವೇಷಗಳನ್ನು ಧರಿಸಿ ಎಲ್ಲರಿಗೂ ಅಪ್ರಿಯರಾಗಿರುತ್ತಾರೆ. ಎಂದೂ ಸಂತೋಷಪಡುವುದಿಲ್ಲ. ಲೋಭಿಗಳಾಗಿರುತ್ತಾರೆ. ತೀವ್ರವಾದ ಅಸೂಯೆ ಮತ್ತು ಕ್ರೋಧದಿಂದ ಕೂಡಿರುತ್ತಾರೆ.
ಭೋಗಪ್ರಿಯಾ ಹಿತದ್ವೇಷ್ಯಾಃ ಕಾಮಭೋಗಪರಾಯಣಾಃ |
ಪತೀನ್ ಪರಿಭವಂತ್ಯೇವ ಪ್ರತಿಕೂಲಪರಾಯಣಾಃ |
ಪ್ರಾಯಶೋಽನೃತಭೂಯಿಷ್ಠಾ ಗುರೂಣಾಂ ಪ್ರತಿಲೋಮಕಾಃ ॥42॥
ಭೋಗಪ್ರಿಯರೂ, ಹಿತದ್ವೇಷಿಗಳೂ, ಕಾಮಭೋಗಪರಾಯಣರೂ, ಪತಿಗೆ ಪ್ರತಿಕೂಲವನ್ನು ಮಾಡುವುದರಲ್ಲೇ ಹಠವನ್ನು ಹಿಡಿದವರೂ ಆಗಿ ಪತಿಗಳನ್ನು ಅವಮಾನಗೊಳಿಸುತ್ತಾರೆ. ಹೆಚ್ಚಾಗಿ ಸುಳ್ಳನ್ನೇ ಮಾತನಾಡಿ ಹಿರಿಯರಿಗೂ ಪ್ರತಿಕೂಲವನ್ನು ಮಾಡುತ್ತಾರೆ.
ಏವಂಯುಕ್ತಸಮಾಚಾರಾ ಆಸುರಂ ಭಾವಮಾಶ್ರಿತಾಃ |
ಅಪರಾಃ ಪಾಪಕಾರಿಣ್ಯಃ ಸತತಂ ಕಲಹಪ್ರಿಯಾಃ ॥43॥
ಇಂತಹ ಆಚಾರದಿಂದ ಯುಕ್ತರಾದ, ಆಸುರಭಾವದಿಂದ ಕೂಡಿದವರನ್ನು - ಅಸುರ ಸ್ತ್ರೀಯರೆಂದು ತಿಳಿಯಬೇಕು. ಇನ್ನು ಕೆಲವು ಪಾಪಶೀಲೆಯರು ಯಾವಾಗಲೂ ಕಲಹಪ್ರಿಯರಾಗಿರುತ್ತಾರೆ.
ಪರುಷಾ ರೂಕ್ಷವಚನಾ ನಿರ್ಘೃಣಾ ನಿರಪತ್ರಪಾಃ |
ನಿಃಸ್ನೇಹಾಃ ಕೋಪನಾಶ್ಚೈವ ಭರ್ತೃಪುತ್ರಸ್ವಬಂಧುಷು ॥44॥
ಕ್ರೂರಿಗಳಾಗಿ, ಒರಟು ಮಾತುಗಳನ್ನಾಡುತ್ತಾ, ದಯಾಹೀನರೂ, ಲಜ್ಜಾಹೀನರೂ, ಸ್ನೇಹಹೀನರೂ ಆಗಿ, ಪತಿ-ಪುತ್ರ-ಬಂಧುಗಳಿಗೆ ಕೋಪವುಂಟು ಮಾಡುತ್ತಾರೆ.
ಘೋರಾ ಮಾಂಸಪ್ರಿಯಾ ನಿತ್ಯಂ ಹಸಂತಿ ಚ ರುದಂತಿ ಚ |
ಪತೀನ್ ವ್ಯಭಿಚರಂತ್ಯೇವಮುನ್ಮಾರ್ಗೇಣ ಯಥಾ ತಥಾ |
ಬಂಧುಭಿರ್ಭರ್ತ್ಸಿತಾ ಭೂತ್ವಾ ಗೃಹಕಾರ್ಯಾಣಿ ಕುರ್ವತೇ ॥45॥
ಘೋರರರೂ, ನಿತ್ಯವೂ ಮಾಂಸಪ್ರಿಯರೂ ಆಗಿ ನಗುತ್ತಾರೆ ಮತ್ತು ಅಳುತ್ತಾರೆ. ತಮಗೆ ಮನಸ್ಸು ಬಂದಂತೆ ದುರ್ಮಾರ್ಗದಲ್ಲಿ ಹೋಗಿ ಪತಿಗಳನ್ನು ಉಲ್ಲಂಘಿಸುತ್ತಾರೆ. ಬಂಧುಗಳು ಗದರಿಸಿದರೆ ಮಾತ್ರ ಗೃಹಕಾರ್ಯವನ್ನು ಮಾಡುತ್ತಾರೆ.
ಅಥವಾ ಭರ್ತ್ಸಿತಾ ದೇವ ನೀಚವೃತ್ತಾಃ ಸ್ವಬಂಧುಷು |
ತಥೈವಾತ್ಮವಧಂ ಘೋರಂ ವ್ಯವಸ್ಯೇಯುರ್ನ ಸಂಶಯಃ ॥46॥
ಎಲೈ ದೇವನೇ, ಅಥವಾ ತಮ್ಮ ಬಂಧುಗಳಲ್ಲಿ ನೀಚ ನಡವಳಿಕೆಯನ್ನು ಹೊಂದಿದ ಇವರು ಗದರಿಸಲ್ಪಟ್ಟಾಗ ಘೋರವಾದ ಆತ್ಮಹತ್ಯೆಯನ್ನೂ ಮಾಡಿಕೊಳ್ಳಲು ನಿರ್ಧರಿಸುತ್ತಾರೆ. ಇದರಲ್ಲಿ ಸಂಶಯವಿಲ್ಲ.
ನಿರ್ದಯಾ ನಿರನುಕ್ರೋಶಾಃ ಕುಟುಂಬಾರ್ಥವಿಲೋಪನಾಃ |
ಧರ್ಮಾರ್ಥರಹಿತಾ ಘೋರಾಃ ಸತತಂ ಕುರ್ವತೇ ಕ್ರಿಯಾಃ ॥47॥
ನಿರ್ದಯರಾಗಿ, ಅನುಕಂಪರಹಿತರಾಗಿ ಕುಟುಂಬದ ವಸ್ತುಗಳನ್ನು ಹಾಳು ಮಾಡುತ್ತಾ, ಧರ್ಮಾರ್ಥರಹಿತರಾಗಿ ಸತತವಾಗಿ ಘೋರವಾದ ಕಾರ್ಯಗಳನ್ನು ಮಾಡುತ್ತಾರೆ.
ಅನರ್ಥನಿಪುಣಾಃ ಪಾಪಾಃ ಪರಪ್ರಾಣೇಷು ನಿರ್ದಯಾಃ |
ಏವಂಯುಕ್ತಸಮಾಚಾರಾಃ ಸ್ತ್ರಿಯಃ ಪೈಶಾಚ್ಯಮಾಶ್ರಿತಾಃ ॥48॥
ಅನರ್ಥವನ್ನು ಉಂಟುಮಾಡುವುದರಲ್ಲಿ ನಿಪುಣರಾಗಿ, ಪಾಪಿಗಳಾಗಿ, ಪರಪ್ರಾಣಗಳಲ್ಲಿ ದಯೆಯನ್ನು ಹೊಂದದೆ ಇಂತಹ ಆಚಾರವನ್ನು ಮಾಡಿದ ಸ್ತ್ರೀಯರು ಪಿಶಾಚಿ ಧರ್ಮವನ್ನು ಆಶ್ರಯಿಸಿದವರಾಗಿರುತ್ತಾರೆ.
ಅಪರಾ ಮೋಹಸಂಯುಕ್ತಾ ನಿರ್ಲಜ್ಜಾ ರೋದನಪ್ರಿಯಾಃ |

ಅಶುದ್ಧಾ ಮಲದಿಗ್ಧಾಂಗಾಃ ಪಾನಮಾಂಸರತಾ ಭೃಶಮ್ |
ವದಂತ್ಯನೃತವಾಕ್ಯಾನಿ ಹಸಂತಿ ವಿಲಪಂತಿ ಚ ॥49॥
ಇನ್ನು ಕೆಲವರು ಮೋಹಯುಕ್ತರಾಗಿ, ನಿರ್ಲಜ್ಜರಾಗಿ, ಅಳುವುದರಲ್ಲೇ ನಿರತರಾಗಿ, ಅಶುದ್ಧರಾಗಿ, ದೇಹದಲ್ಲಿ ಕಶ್ಮಲವನ್ನು ಹೊಂದಿ, ಪಾನ-ಮಾಂಸರತರಾಗಿರುತ್ತಾರೆ. ಸುಳ್ಳು ಮಾತುಗಳನ್ನು ಆಡುತ್ತಾರೆ. ನಗುತ್ತಾರೆ ಮತ್ತು ವಿಲಾಪವನ್ನು ಮಾಡುತ್ತಾರೆ.
ದುಷ್ಪ್ರಸಾದಾ ಮಹಾಕ್ರೋಧಾಃ ಸ್ವಪ್ನಶೀಲಾ ನಿರಂತರಮ್ |
ತಾಮಸ್ಯೋ ನಷ್ಟತತತ್ತ್ವಾರ್ಥಾ ಮಂದಶೀಲಾ ಮಹೋದರಾಃ |
ಭುಂಜಂತಿ ವಿವಿಧಂ ಸಿದ್ಧಂ ಭೋಜನಂ ತೀವ್ರಸಂಭ್ರಮಾಃ ॥50॥
ಸಂತೋಷಗೊಳಿಸಲು ಅಸಾಧ್ಯರಾಗಿ, ಮಹಾಕ್ರೋಧದಿಂದ ಕೂಡಿ, ಯಾವಾಗಲೂ ನಿದ್ರಾಶೀಲರಾದ ತಾಮಸ ಸ್ತ್ರೀಯರು ತತ್ತ್ವಜ್ಞಾನಶೂನ್ಯರಾಗಿ, ಮಂದವಾದ ನಡತೆಯುಳ್ಳವರಾಗಿ, ಮಹೋದರರಾಗಿ ಸಿದ್ಧಪಡಿಸಿದ ವಿವಿಧವಾದ ಅನ್ನವನ್ನು ಬಹಳ ಸಂಭ್ರಮದಿಂದ ಊಟ ಮಾಡುತ್ತಾರೆ.
ಗುಣರೂಪವಯೋಯುಕ್ತಂ ಪತಿಂ ಕಾಮುಕಮುತ್ತಮಮ್ |
ಹಿತ್ವಾಽನ್ಯಾನೇವ ಗಚ್ಛಂತಿ ಸರ್ವಥಾ ಭೃಶಪಾಪಿಕಾಃ ॥51॥
ಗುಣ-ರೂಪ-ವಯಸ್ಸುಗಳಿಂದ ಕೂಡಿದ, ಒಳ್ಳೆಯ ಕಾಮಪ್ರಜ್ಞೆಯಿಂದ ಕೂಡಿದ ಪತಿಯನ್ನು ಬಿಟ್ಟು ಅತ್ಯಂತ ಪಾಪವನ್ನು ಮಾಡುವ ಅವರು ಇನ್ನೊಬ್ಬರ ಕಡೆಗೆ ಹೋಗುತ್ತಾರೆ.
ನಿರ್ಲಜ್ಜಾ ಧರ್ಮಸಂದಿಗ್ಧಾಃ ಪ್ರತಿಕೂಲಾಃ ಸಮಂತತಃ |
ಏವಂಯುಕ್ತಸಮಾಚಾರಾಃ ಸ್ತ್ರಿಯೋ ರಾಕ್ಷಸಮಾಶ್ರಿತಾಃ ॥52॥
ನಿರ್ಲಜ್ಜರಾಗಿ, ಧರ್ಮವನ್ನೇ ಆಶ್ರಯಿಸದೆ ಯಾವಾಗಲೂ ಪ್ರತಿಕೂಲ ಆಚಾರವನ್ನು ಹೊಂದಿರುತ್ತಾರೆ. ಇಂತಹ ಸ್ತ್ರೀಯರನ್ನು ರಾಕ್ಷಸಧರ್ಮವನ್ನು ಆಶ್ರಯಿಸಿದವರು ಎಂದು ತಿಳಿಯಬೇಕು.
ಏವಂವಿಧಾನಾಂ ಸರ್ವಾಸಾಂ ನ ಪರತ್ರೇಹ ವಾ ಸುಖಮ್ |
ಏತಾಸಾಮೇವ ಕುಸ್ತ್ರೀಣಾಂ ಮೃತಾನಾಂ ಚ ಮಹೇಶ್ವರ ॥
ಅಸಂಶಯಂ ಚಿರಂ ಕಾಲಂ ನರಕೇ ವಾಸ ಇಷ್ಯತೇ |
ನರಕಾದ್ವಿ ವಿಮುಕ್ತಾನಾಂ ಕಥಂಚಿತ್ ಕಾಲಪರ್ಯಯಾತ್ ॥53॥
ಇಷ್ಯತೇ ಜನ್ಮ ಮಾನುಷ್ಯಂ ಕಷ್ಟಂ ತತ್ರಾಪಿ ಭುಂಜತೇ |
ತಾಸಾಂ ದುಷ್ಕೃತಸಂಯೋಗಾದ್ ದುಃಖಂ ಜನ್ಮಾಂತರೇಷ್ವಪಿ ॥
ಇಂತಹ ಯಾವ ಸ್ತ್ರೀಯರಿಗೂ ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಸುಖವಿಲ್ಲ. ಎಲೈ ಮಹೇಶ್ವರನೇ, ಇಂತಹ ಕೆಟ್ಟ ಸ್ತ್ರೀಯರು ಮೃತರಾದ ಮೇಲೆ ನಿಸ್ಸಂಶಯವಾಗಿ ಬಹುಕಾಲ ನರಕದಲ್ಲಿ ವಾಸ ಮಾಡುತ್ತಾರೆ. ಕಾಲದ ಉರುಳುವಿಕೆಯಿಂದ ಹೇಗೋ ನರಕದಿಂದ ಮುಕ್ತರಾಗಿ ಮನುಷ್ಯ ಜನ್ಮವನ್ನು ಪಡೆದರೂ ಅಲ್ಲಿಯೂ ಕಷ್ಟಗಳನ್ನು ಅನುಭವಿಸುತ್ತಾರೆ. ಹಿಂದೆ ಮಾಡಿದ ದುಷ್ಕರ್ಮಗಳ ಸಂಯೋಗದಿಂದ ಜನ್ಮಾಂತರದಲ್ಲಿಯೂ ಅವರಿಗೆ ದುಃಖವೇ ಉಂಟಾಗುತ್ತದೆ.
ದರಿದ್ರಾಃ ಕ್ಲೇಶಭೂಯಿಷ್ಠಾ ವಿರೂಪಾಃ ಕುತ್ಸಿತಾಃ ಪರೈಃ |
ವಿಧವಾ ದುರ್ಭಗಾ ವಾಽಪಿ ಲಭಂತೇ ದುಃಖಮೀದೃಶಮ್ ॥54॥
ಅಂತಹವರು ದರಿದ್ರರಾಗಿ, ಬಹಳ ಕ್ಲೇಶವನ್ನು ಪಡುವವರಾಗಿ, ಕುರೂಪಿಗಳಾಗಿ, ಪರರಿಂದ ನಿಂದಿತರಾಗಿ, ವಿಧವೆಯರಾಗಿ, ದೌರ್ಭಾಗ್ಯಶಾಲಿಗಳಾಗಿ ಇಂತಹ ದುಃಖಗಳನ್ನು ಅನುಭವಿಸುತ್ತಾರೆ.
ಶತವರ್ಷಸಹಸ್ರಾಂತಮಾತ್ಮಾನಂ ವ್ಯಭಿಚಾರಿಣೀ |
ನಯೇಜ್ಜಾರಂ ಚ ನಿರಯಂ ಪತಿಂ ಪಾಪೇನ ಯೋಜಯೇತ್ ॥55॥
ವ್ಯಭಿಚಾರಿಣಿಯಾದ ಸ್ತ್ರೀಯು ಒಂದು ಲಕ್ಷ ವರ್ಷಗಳವರೆಗೆ ತನ್ನನ್ನು ಮತ್ತು ತನ್ನ ಜಾರನನ್ನು ನರಕಕ್ಕೆ ತಳ್ಳುತ್ತಾಳೆ ಮತ್ತು ಪತಿಗೆ ಪಾಪಸಂಯೋಗವನ್ನು ಉಂಟು ಮಾಡುತ್ತಾಳೆ.
ಏತದ್ಯದಿ ತು ವಿಜ್ಞಾಯ ಪುನಶ್ಚೇದ್ಧಿತಮಾತ್ಮನಃ |
ಕುರ್ಯುರ್ಭರ್ತಾರಮಾಶ್ರಿತ್ಯ ತಥಾ ಧರ್ಮಮವಾಪ್ನುಯುಃ |
ಅಭಿಸಂಯಾಂತಿ ತಾ ಲೋಕಾನ್ ಪುಣ್ಯಾನ್ ಪರಮಶೋಭನಾನ್ ॥
ಇದನ್ನು ತಿಳಿದು, ತನ್ನನ್ನು ತಿದ್ದಿಕೊಂಡು, ತನಗೆ ಹಿತವನ್ನು ಮಾಡಲು ಪುನಃ ಪತಿಯನ್ನು ಆಶ್ರಯಿಸಿ ಧರ್ಮಾಚರಣೆಯನ್ನು ಮಾಡಿದರೆ ಧರ್ಮವನ್ನು ಹೊಂದುತ್ತಾರೆ. ಅಂತಹ ಸ್ತ್ರೀಯರು ಪರಮಶೋಭನವಾದ ಪುಣ್ಯಲೋಕಗಳನ್ನು ಹೊಂದುತ್ತಾರೆ.
ಅವಮತ್ಯ ಚ ಯಾಃ ಪೂರ್ವಂ ಪತಿಂ ದುಷ್ಟೇನ ಚೇತಸಾ ॥57॥
ವರ್ತಮಾನಾಶ್ಚ ಸತತಂ ಭರ್ತೄಣಾಂ ಪ್ರತಿಕೂಲತಾಮ್ |
ಭರ್ತ್ರಾನುಮರಣಂ ಕಾಲೇ ಯಾಃ ಕುರ್ವಂತಿ ತಥಾವಿಧಾಃ ॥58॥
ಕಾಮಾತ್ ಕ್ರೋಧಾದ್ ಭಯಾನ್ಮೋಹಾದಪಹಾಸ್ಯಾ ಭವಂತಿ ತಾಃ |
ಆದಿಪ್ರಭೃತಿ ಕುಸ್ತ್ರೀಣಾಂ ತಥಾಽನುಮರಣಂ ವೃಥಾ ॥59॥
ಯಾರು ಮೊದಲಿನಿಂದಲೂ ದುಷ್ಟ ಮನಸ್ಸಿನಿಂದ ಪತಿಗೆ ಅವಮಾನವನ್ನು ಮಾಡಿ, ಸತತವಾಗಿ ಪತಿಗೆ ಪ್ರತಿಕೂಲರಾಗಿದ್ದು, ಪತಿಯ ಮರಣಕಾಲದಲ್ಲಿ ಅನುಮರಣವನ್ನು ಮಾಡುತ್ತಾರೆಯೋ ಅಂತಹ ಕಾಮದಿಂದಲೂ, ಕ್ರೋಧದಿಂದಲೂ, ಭಯದಿಂದಲೂ, ಮೋಹದಿಂದಲೂ ಕೂಡಿದ ಸ್ತ್ರೀಯರು ಹಾಸ್ಯಾಸ್ಪದರಾಗುತ್ತಾರೆ. ಮೊದಲಿನಿಂದಲೂ ಕೆಟ್ಟ ನಡತೆಯನ್ನು ಹೊಂದಿದ ಸ್ತ್ರೀಯರಿಗೆ ಸಹಗಮನವು ವ್ಯರ್ಥವಾದುದು.

ಆದಿಪ್ರಭೃತಿ ಯಾ ಸಾಧ್ವೀ ಪತ್ಯುಃ ಪ್ರಿಯಪರಾಯಣಾ |
ಊರ್ಧ್ವಂ ಗಚ್ಛತಿ ಸಾ ತತ್ರ ಭರ್ತ್ರಾನುಮರಣಂ ಗತಾ ॥60॥
ಮೊದಲಿನಿಂದಲೂ ಪತಿಯ ಪ್ರಿಯದಲ್ಲೇ ಆಸಕ್ತಳಾದ ಸಾಧ್ವಿಯಾದ ಸ್ತ್ರೀಯು ಭರ್ತೃವಿನ ಜೊತೆಯಲ್ಲಿ ಸಹಗಮನವನ್ನು ಮಾಡಿ ಊರ್ಧ್ವಲೋಕಗಳಿಗೆ ಹೋಗುತ್ತಾಳೆ.
ಏವಂ ಮೃತಾಯಾ ವೈ ಲೋಕಾನಹಂ ಪಶ್ಯಾಮಿ ಚಕ್ಷುಷಾ |
ಸ್ಪೃಹಣೀಯಾನ್ ಸುರಗಣೈರ್ಯಾನ್ ಗಚ್ಛಂತಿ ಪತಿವ್ರತಾಃ ॥61॥
ಹೀಗೆ ಮರಣವನ್ನು ಹೊಂದಿದ ಪತಿವ್ರತೆಯರು ಹೋಗುವ, ದೇವತಾ ಗಣಗಳೂ ಬಯಸುವ ಅಂತಹ ಪುಣ್ಯಲೋಕಗಳನ್ನು ನಾನು ಕಣ್ಣಿನಿಂದ ನೋಡುತ್ತಿದ್ದೇನೆ.
ಅಥವಾ ಭರ್ತರಿ ಮೃತೇ ವೈಧವ್ಯಂ ಧರ್ಮಮಾಶ್ರಿತಾ |
ಮೃತಂ ಚ ಪತಿಮುದ್ದಿಶ್ಯ ಕುರ್ಯುರ್ಶ್ಚೈವಂವಿಧಿಂ ತತಃ ॥62॥
ಅಥವಾ ಪತಿಯು ಮರಣ ಹೊಂದಿದಾಗ ವಿಧವೆಯ ಧರ್ಮವನ್ನು ಆಶ್ರಯಿಸಿ ಮೃತನಾದ ಪತಿಯನ್ನು ಉದ್ದೇಶಿಸಿ ಇಂತಹ ಧರ್ಮಾಚರಣೆಯನ್ನು ಮಾಡಬಹುದು.
ಏವಂ ಗಚ್ಛತಿ ಸಾ ನಾರೀ ಪತಿಲೋಕಮನುತ್ತಮಮ್ |
ರಮಣೀಯಮನಿರ್ದೇಶ್ಯಂ ದುಷ್ಪ್ರಾಪಂ ದೇವಮಾನುಷೈಃ ॥63॥
ಅಂತಹ ನಾರಿಯು ಶ್ರೇಷ್ಠವಾದ, ರಮಣೀಯವಾದ, ನಿರ್ದೇಶಿಸಲು ಅಸಾಧ್ಯವಾದ, ದೇವತೆಗಳಿಂದಲೂ ಮನುಷ್ಯರಿಂದಲೂ ಹೊಂದಲು ಸಾಧ್ಯವಿಲ್ಲದಂತಹ ಶುಭಲೋಕಗಳನ್ನು ಹೊಂದುತ್ತಾಳೆ.
ಪ್ರಾಪ್ನುಯಾತ್ ತಾದೃಶಂ ಲೋಕಂ ಕೇವಲಂ ಯಾ ಪತಿವ್ರತಾ |
ಇತಿ ತೇ ಕಥಿತಂ ದೇವ ಸ್ತ್ರೀಣಾಂ ಧರ್ಮಮನುತ್ತಮಮ್ ॥64॥
ಕೇವಲ ಪತಿವ್ರತೆಯಾದವಳು ಅಂತಹ ಲೋಕಗಳನ್ನು ಪಡೆಯುತ್ತಾಳೆ. ದೇವನೇ, ಹೀಗೆ ನಾನು ಸ್ತ್ರೀಯರ ಶ್ರೇಷ್ಠವಾದ ಧರ್ಮಗಳನ್ನು ನಿನಗೆ ಹೇಳಿದ್ದೇನೆ.
ತವೈವ ಪ್ರಿಯಕಾಮಿನ್ಯಾ ಯನ್ಮಯೋಕ್ತಂ ತವಾಗ್ರತಃ |
ಚಾಪಲ್ಯಾನ್ಮಮ ದೇವೇಶ ತದ್ ಭವಾನ್ ಕ್ಷಂತುಮರ್ಹತಿ ॥65॥
ನಿನ್ನ ಪ್ರಿಯವನ್ನೇ ಬಯಸಿ ನಿನ್ನ ಎದುರಿಗೆ ಮಾತನಾಡಿದ ನನ್ನ ಚಾಪಲ್ಯವನ್ನು ದೇವೇಶನೇ, ನೀನು ಕ್ಷಮಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಪಾರ್ವತ್ಯಾ ಸ್ತ್ರೀಧರ್ಮಕಥನಂ ನಾಮ ಪಂಚತ್ರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ತಾರನೆಯ ಅಧ್ಯಾಯ
ಉಮಾ-ಮಹೇಶ್ವರರ ಸಂವಾದ. ಪಾರ್ವತಿಯಿಂದ ಸ್ತ್ರೀಯರಿಗೆ
ಶ್ರೇಷ್ಠಪತಿಲಾಭಕ್ಕೆ ನಿಮಿತ್ತಕಥನ.
ಮಹೇಶ್ವರಃ
ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ಜಾಯಂತೇ ಕೇನ ಕರ್ಮಣಾ |
ಕಿಂ ಕರ್ಮ ಸುಕೃತಂ ಕೃತ್ವಾ ನಾರೀ ಪ್ರಾಪ್ನೋತಿ ಪಾರ್ವತಿ ॥1॥
ರಾಜಾನಂ ರಾಜಮಾತ್ರಂ ವಾ ಕೋಶೀ ಧನಪತಿಂ ಪತಿಮ್ |
ಏತದಿಚ್ಛಾಮಿ ವಿಜ್ಞಾತುಂ ಯಥಾ ತ್ವಂ ಪ್ರಬ್ರವೀಹಿ ಮೇ ॥2॥
ಮಹೇಶ್ವರ ಯಾವ ಕರ್ಮದಿಂದ ಬ್ರಾಹ್ಮಣರಾಗಿ ಮತ್ತು ಕ್ಷತ್ರಿಯರಾಗಿ ಜನಿಸುತ್ತಾರೆ? ಎಲೌ ಪಾರ್ವತಿಯೇ, ಯಾವ ಸುಕೃತವನ್ನು ಮಾಡಿ ನಾರಿಯು ರಾಜನನ್ನು, ರಾಜಪುರುಷನನ್ನು, ಕೋಶವುಳ್ಳ ಧನಪತಿಯನ್ನು ಪತಿಯಾಗಿ ಪಡೆಯುತ್ತಾಳೆ? ಇದನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಅದನ್ನು ನನಗೆ ಸರಿಯಾಗಿ ಹೇಳು.
ಉಮಾ
ಯದಿ ಭರ್ತಾ ಪ್ರವಸತಿ ಕುಟುಂಬಾರ್ಥೇನ ಕೇನಚಿತ್ |
ವ್ಯಪೇತಮಂಡನಸ್ನಾನಾ ಕ್ಷುಧಾರ್ತಾ ಚ ವಿನಿರ್ಭಯಾ ॥3॥
ಸ್ವಪತಿಂ ಪತಿತಂ ದೀನಂ ವಿಕಲಂ ವ್ಯಾಧಿಪೀಡಿತಮ್ |
ನಿರ್ಗುಣಂ ನಿರ್ಧನಂ ವೃದ್ಧಮನಾಥಂ ಮದ್ಯಪಂ ತಥಾ ॥4॥
ನ ಜಹಾತಿ ರತಾ ಧರ್ಮೇ ಪ್ರಿಯಾ ಪ್ರಿಯತರಾ ಸದಾ |
ಶುಶ್ರೂಷಮಾಣಾ ಪತ್ಯೌ ತು ಕರೋತ್ಯವಿಮನಾ ಭೃಶಮ್ ॥5॥
ತೈಸ್ತೈರ್ಯಾ ತು ಪರಿಕ್ಲೇಶೈರ್ಭರ್ತಾರಂ ಪರಿತೋಷಯೇತ್ |
ಪತಿವ್ರತಾ ಪತಿಮುಖೀ ಪತ್ಯಾವೇಕಮನಾ ಭವೇತ್ ॥6॥
ಭಕ್ಷ್ಯಾನ್ನಪಾನಭೋಜ್ಯಾನಿ ಕಂದಮೂಲಫಲಂ ತಥಾ |
ಭರ್ತುರುಚ್ಛೇಷಮಶ್ನಾತಿ ಸ್ವಯಂ ಪೂರ್ವಂ ನ ಖಾದತಿ ॥7॥

ಏವಂ ಶೀಲಸಮಾಚಾರಾ ಪಾಪೇಭ್ಯಃ ಪರಿಮುಚ್ಯತೇ |
ಪ್ರಾಪ್ಯ ಲೋಕಾನ್ ಶುಭಾನ್ ದಿವ್ಯಾನ್ ದೈವತ್ಯೈಃ ಸಹ ಮೋದತೇ ॥8॥
ಉಮಾ ಪತಿಯು ಕುಟುಂಬದ ಸಲುವಾಗಿ ಯಾವುದಾದರೂ ಕಾರಣದಿಂದ ಪ್ರವಾಸಕ್ಕೆ ಹೋದಾಗ ಯಾವಳು ಅಲಂಕಾರ, ಅಭ್ಯಂಗವನ್ನು ಮಾಡಿಕೊಳ್ಳದೆ, ಹಸಿವೆಯನ್ನು ತಡೆದುಕೊಂಡು ನಿರ್ಭಯಳಾಗಿರುತ್ತಾಳೆಯೋ ಅಂತಹವಳು ತನ್ನ ಪತಿಯು ಪತಿತನಾಗಲೀ, ದೀನನಾಗಲೀ, ವಿಕಲಾಂಗನಾಗಲೀ, ವ್ಯಾಧಿಪೀಡಿತನಾಗಲೀ, ನಿರ್ಗುಣನಾಗಲೀ, ನಿರ್ಧನನಾಗಲೀ, ವೃದ್ಧನಾಗಲೀ, ಅನಾಥನಾಗಲೀ, ಮದ್ಯಪಾಯಿಯಾಗಲೀ ಅವನನ್ನು ಪರಿತ್ಯಜಿಸದೆ ಧರ್ಮದಲ್ಲಿ ರತಳಾಗಿ ಅವನಿಗೆ ಪ್ರಿಯವನ್ನು ಯಾವಾಗಲೂ ಉಂಟುಮಾಡುತ್ತಾ ಬೇಸರಗೊಳ್ಳದೆ ಅವನನ್ನು ಚೆನ್ನಾಗಿ ಪರಿಚರಿಸುತ್ತಾಳೆಯೋ, ಯಾವಳು ಆಯಾ ಪರಿಕ್ಲೇಶಗಳನ್ನು ಅನುಭವಿಸಿ ಪತಿಯನ್ನು ಸಂತೋಷಪಡಿಸುತ್ತಾಳೆಯೋ, ಪತಿವ್ರತೆಯಾಗಿ ಪತಿಯ ಮುಖವನ್ನೇ ನೋಡುತ್ತಾ ಪತಿಯಲ್ಲಿಯೇ ಮನಸ್ಸಿಟ್ಟಿರುತ್ತಾಳೆಯೋ, ಪತಿಯ ಉಚ್ಛಿಷ್ಟವಾದ ಭಕ್ಷ್ಯ ಭೋಜ್ಯಗಳನ್ನೂ, ಕಂದಮೂಲ ಫಲಗಳನ್ನು ಸೇವಿಸುತ್ತಾಳೆಯೋ, ಸ್ವತಃ ಪತಿಗಿಂತ ಮೊದಲು ಆಹಾರವನ್ನು ಸ್ವೀಕರಿಸುವುದಿಲ್ಲವೋ, ಅಂತಹ ಶೀಲಾಚಾರವುಳ್ಳ ನಾರಿಯು ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾಳೆ. ದಿವ್ಯವಾದ ಶುಭಲೋಕಗಳನ್ನು ಹೊಂದಿ ದೇವತೆಗಳಿಂದ ಸಂತೋಷಪಡುತ್ತಾಳೆ.
ಸುಕೃತೇನೈವ ಸಾ ನಾರೀ ಜಾಯತೇ ಚಂದ್ರನಿರ್ಮಲಾ |
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಜಾಯತೇ ॥9॥
ಬ್ರಾಹ್ಮಣಾನಾಂ ಕುಲೇ ಜನ್ಮ ದಿವ್ಯಂ ತಸ್ಯಾ ವಿಧೀಯತೇ |
ಶ್ರೇಷ್ಠಾನಾಂ ಕ್ಷತ್ರಿಯಾಣಾಂ ವಾ ಕುಲವಂಶೇ ಪ್ರಜಾಯತೇ ॥10॥
ತಾನು ಮಾಡಿದ ಪುಣ್ಯದಿಂದಲೇ ಆ ನಾರಿಯು ಚಂದ್ರನಂತೆ ನಿರ್ಮಲವಾಗಿ ಶೋಭಿಸುತ್ತಾಳೆ. ಮನುಷ್ಯಲೋಕದಲ್ಲಿ ಪುನಃ ಜನಿಸುವುದಾದರೆ ಅವಳಿಗೆ ಬ್ರಾಹ್ಮಣ ಕುಲದಲ್ಲಿ ದಿವ್ಯವಾದ ಜನ್ಮವು ಉಂಟಾಗುತ್ತದೆ. ಅಥವಾ ಶ್ರೇಷ್ಠವಾದ ಕ್ಷತ್ರಿಯ ಕುಲದಲ್ಲಿ ಜನ್ಮವುಂಟಾಗುತ್ತದೆ.
ಸುವರ್ಣಮಣಿಮುಕ್ತಾಶ್ಚ ವಸತ್ರಣ್ಯಾಭರಣಾನಿ ಚ |
ದಾಸೀದಾಸಂ ಧನಂ ಧಾನ್ಯಂ ಭರ್ತಾರಂ ಚ ವಶಾನುಗಮ್ ॥11॥
ಭಕ್ಷ್ಯಭೋಜ್ಯನ್ನಪಾನಾಂಶ್ಚ ಸೋಪಭುಂಕ್ತೇ ನಿಜೇಚ್ಛಯಾ |
ಮಾನುಷೇಷ್ವೇವ ಭೋಗೇಷು ಸಮಸ್ತಾಸು ಕ್ರಿಯಾಸು ಚ ॥12॥
ಅವಳು ಸುವರ್ಣಮಣಿ ಮುಕ್ತಾಭರಣಗಳಿಂದಲೂ, ವಸತ್ರಭರಣಗಳಿಂದಲೂ, ದಾಸೀ-ದಾಸರಿಂದಲೂ, ಧನ-ಧಾನ್ಯಗಳಿಂದಲೂ ಕೂಡಿ ತನ್ನ ವಶವರ್ತಿಯಾದ ಪತಿಯನ್ನು ಪಡೆಯುತ್ತಾಳೆ. ತನ್ನ ಇಚ್ಛೆಯಿಂದಲೇ ಮಾನುಷ ಭೋಗಗಳಲ್ಲಿಯೂ ಸಮಸ್ತ ಕ್ರಿಯೆಗಳಲ್ಲಿಯೂ ಭಕ್ಷ್ಯಭೋಜ್ಯಗಳನ್ನೂ, ಅನ್ನಪಾನಗಳನ್ನೂ ಅವಳು ಭೋಗಿಸುತ್ತಾಳೆ.
ಭರ್ತುರ್ಹಿ ಯಜಮಾನಸ್ಯ ಯಜ್ಞಪತ್ನೀ ಭವೇದ್ ಧ್ರುವಮ್ |
ಜ್ಞಾತಿಭ್ಯೋ ಹಿ ಧನಂ ಲಬ್ಧ್ವಾ ಸರ್ವಂ ಭರ್ತುಃ ಪ್ರಯಚ್ಛತಿ ॥13॥
ಯಾಗವನ್ನು ಮಾಡುವ ಯಜಮಾನನಿಗೆ ನಿಶ್ಚಿತವಾಗಿ ಯಪತ್ನಿಯಾಗುತ್ತಾಳೆ. ಜ್ಞಾತಿಗಳಿಂದ ಧನವನ್ನು ತೆಗೆದುಕೊಂಡು ಎಲ್ಲವನ್ನೂ ಪತಿಗೆ ಕೊಡುತ್ತಾಳೆ.
ಪುತ್ರವಕ್ತ್ರಮಿವಾಭೀಕ್ಷ್ಣಂ ಭರ್ತುರ್ವದನಮೀಕ್ಷತೇ |
ತದ್ಭಾವಗತಸಂಕಲ್ಪಾ ಪತಿಶುಶ್ರೂಷಣೇ ರತಾ ॥14॥
ಮಗನ ಮುಖವನ್ನು ನೋಡುವಂತೆ ಸತತವಾಗಿ ಪತಿಯ ಮುಖವನ್ನು ನೋಡುತ್ತಾಳೆ. ಅವನ ಅಭಿಪ್ರಾಯಕ್ಕೆ ಅನುಗುಣವಾಗಿ ಸಂಕಲ್ಪವನ್ನು ಮಾಡುವವಳಾಗಿ ಪತಿ ಶುಶ್ರೂಷೆಯಲ್ಲಿ ರತಳಾಗಿರುತ್ತಾಳೆ.
ಭರ್ತುರ್ವಚೋಽನುಮನ್ಯೇತ ಕುರ್ವಂತೀ ಪ್ರಿಯವಾದಿನೀ |
ಭರ್ತುರ್ನ ಪ್ರತಿಕೂಲಾ ಚ ಪತಿಧರ್ಮೇಣ ಯುಜ್ಯತೇ |
ಏತತ್‌ಪತಿವ್ರತಾಸೂಕ್ತಂ ವ್ರತಂ ದೇವ ಸಮಾಸತಃ ॥15॥
ಪತಿಯ ಮಾತನ್ನು ಅನುಮೋದಿಸುತ್ತಾ ಪತಿಗೆ ಪ್ರಿಯವಾದಿನಿಯಾಗಿರುತ್ತಾಳೆ. ಪತಿಗೆ ಪ್ರತಿಕೂಲವನ್ನು ಮಾಡುವುದಿಲ್ಲ. ಅಂತಹವಳು ಪತಿಧರ್ಮದಿಂದ ಕೂಡಿರುತ್ತಾಳೆ. ಎಲೈ ದೇವನೇ, ಇದು ಪತಿವ್ರತೆಯರಿಗೆ ಹೇಳಲ್ಪಟ್ಟ ವ್ರತದ ಸಂಕ್ಷಿಪ್ತವಾದ ಕಥನ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಷಡ್‌ತ್ರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ತೇಳನೆಯ ಅಧ್ಯಾಯ
ಸ್ತ್ರೀಯರ ಅನೇಕ ದುಃಖಗಳಿಗೆ ನಿಮಿತ್ತಕಥನ.
ಮಹೇಶ್ವರಃ
ಅನಪತ್ಯಾಃ ಸ್ತ್ರಿಯೋ ದೇವಿ ಜಾಯಂತೇ ಕೇನ ಕರ್ಮಣಾ |
ಏತದಿಚ್ಛಾಮಿ ವಿಜ್ಞಾತುಂ ತತ್ತ್ವೇನಾಂಬುಜಲೋಚನೇ ॥1॥
ಮಹೇಶ್ವರ ದೇವಿಯೇ, ಕಮಲನೇತ್ರೆಯೇ, ಸ್ತ್ರೀಯರು ಯಾವ ಕರ್ಮದಿಂದ ಸಂತತಿಹೀನರಾಗುತ್ತಾರೆಂದು ಕೇಳಲು ಬಯಸುತ್ತೇನೆ.
ಉಮಾ

ಯಾ ನಾರೀ ಕುರುತೇಽನಿಷ್ಕಾಮಪತ್ಯಾನಾಂ ವಿಶೇಷತಃ |
ತಿರಶ್ಚಾಮೃತುಕಾಲೇಷು ನಾರೀಣಾಮುತ್ಸವೇಷು ಚ ||2||
ಸಾ ಗತ್ವಾ ನರಕಂ ನಾರೀ ತಿರ್ಯಗ್ಯೋನಿಷು ಜಾಯತೇ |
ತಿರ್ಯಗ್ಯೋನಿಪ್ರಸೂತಾಽಪಿ ಸ್ವಮಪತ್ಯಂ ನ ಪಶ್ಯತಿ ||3||
ಉಮಾ ಯಾವ ನಾರಿಯು ಋತುಕಾಲದಲ್ಲಿ ಮತ್ತು ನಾರಿಯರ ಉತ್ಸವ ಕಾಲಗಳಲ್ಲಿ ತಿರ್ಯಕ್ಪ್ರಾಣಿಗಳ ಶಿಶುಗಳನ್ನು ವಿಶೇಷವಾಗಿ ಕಡೆಗಣಿಸುತ್ತಾಳೆಯೋ ಅವಳು ನರಕವನ್ನು ಅನುಭವಿಸಿ ಅನಂತರ ನೀಚಯೋನಿಗಳಲ್ಲಿ ಜನಿಸುತ್ತಾಳೆ. ನೀಚ ಯೋನಿಯನ್ನು ಹೊಂದಿದಾಗಲೂ ಸಹ ಅವಳು ತನ್ನ ಶಿಶುಗಳನ್ನು ಕಾಣುವುದಿಲ್ಲ.
ದಾಸಭಾವೇ ಚ ಸಾಽವನ್ಯಾಂ ಮಾನುಷ್ಯಂ ಪುನರಾಗತಾ |
ಏತತ್ ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ||4||
ಅನಂತರ ಈ ಲೋಕದಲ್ಲಿ ಮನುಷ್ಯಯೋನಿಯಲ್ಲಿ ಜನಿಸಿದಾಗಲೂ ಅವಳು ದಾಸಿಯಾಗುತ್ತಾಳೆ. ಇದನ್ನು ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಮಹೇಶ್ವರಃ
ಬ್ರಾಹ್ಮಣೀ ಕ್ಷತ್ರಿಯಾ ವೈಶ್ಯಾ ಯಾ ಚಾನ್ಯಾಪಿ ಮಹಾಕುಲಾ |
ಕೇನ ಕರ್ಮವಿಪಾಕೇನ ದಾಸೀತ್ವಮುಪಗಚ್ಛತಿ ||5||
ಮಹೇಶ್ವರ ಬ್ರಾಹ್ಮಣ ಸ್ತ್ರೀಯಾಗಲೀ, ಕ್ಷತ್ರಿಯ ಸ್ತ್ರೀಯಾಗಲೀ, ವೈಶ್ಯಸ್ತ್ರೀಯಾಗಲೀ ಅಥವಾ ಮಹಾಕುಲದಲ್ಲಿ ಜನಿಸಿದ ಬೇರೆ ಯಾವ ಸ್ತ್ರೀಯಾಗಲೀ ಯಾವ ಕರ್ಮ ವಿಪಾಕದಿಂದ ದಾಸ್ಯವನ್ನು ಹೊಂದುತ್ತಾರೆ?
ಉಮಾ
ದಾಸೀತ್ವಸ್ಯ ಪರೋ ನಾಸ್ತಿ ದಾಸತ್ವೇಽಪಿ ತಥೈವ ಚ |
ತಥಾಪಿ ತೇ ಪ್ರವಕ್ಷ್ಯಾಮಿ ಶ್ರೂಯತಾಂ ಗುರುಪುಂಗವ ||6||
ಉಮಾ ಗುರುಪುಂಗವನೇ, ಸ್ತ್ರೀಯರಿಗಾಗಲೀ, ಪುರುಷರಿಗಾಗಲೀ ದಾಸ್ಯ ಉಂಟಾಗಲು ಕರ್ಮವಿಪಾಕವನ್ನು ಬಿಟ್ಟು ಬೇರೆ ಕಾರಣವಿಲ್ಲ. ಅದನ್ನೂ ನಿನಗೆ ಹೇಳುವೆನು.
ಪ್ರಾಪ್ನುವಂತಿ ಸ್ಮ ದೋಷೇಣ ಪುರಾ ದುಶ್ಚರಿತೈಃ ಸ್ತ್ರಿಯಃ |
ಮದ್ಯಪಾನರತಾ ನಾರೀ ಸದಾ ಚ್ಛಿದ್ರಗವೇಷಿಣೀ ||7||
ಸುವರ್ಣಮಣಿಮುಕ್ತಾಶ್ಚ ವಸ್ತ್ರಣ್ಯಾಭರಣಾನಿ ಚ |
ಪರೇಷಾಂ ಹರಣಂ ಕೃತ್ವಾ ಯಾ ತುಷ್ಟಿಮುಪಗಚ್ಛತಿ ||8||
ಸ್ತ್ರೀಯರು ಹಿಂದೆ ಮಾಡಿದ ದುಷ್ಕರ್ಮಗಳ ದೋಷದಿಂದ ದಾಸ್ಯವನ್ನು ಹೊಂದುತ್ತಾರೆ. ಮದ್ಯಪಾನರತರಾದ, ಯಾವಾಗಲೂ ಇನ್ನೊಬ್ಬರ ದೋಷವನ್ನು ಹುಡುಕುವ, ಸುವರ್ಣ-ಮಣಿ-ಮುತ್ತುಗಳನ್ನೂ, ವಸ್ತ್ರಗಳನ್ನೂ, ಆಭರಣಗಳನ್ನೂ ಅಪಹರಿಸುವ, ಹೀಗೆ ಪರಸ್ವತ್ತನ್ನು ಅಪಹರಿಸಿ ಸಂತೋಷವನ್ನು ಪಡುವ ನಾರಿಯರು ದಾಸ್ಯವನ್ನು ಹೊಂದುತ್ತಾರೆ.
ಸಾ ಮೃತಾ ನರಕಂ ಯಾತಿ ತಿರ್ಯಗ್ಯೋನೀಶ್ಚ ಗಚ್ಛತಿ |
ತತ್ರಾಪಕಾರಂ ಕುರ್ವಂತೀ ಮಹಾದೇವ ಪ್ರಸೂತಿಭಿಃ ||9||
ಮೋಹಯತ್ಯಾತ್ಮನಾಽಽತ್ಮಾನಂ ಪರದ್ರವ್ಯಾಪಹಾರಿಣೀ |
ಅಥ ಮಾನುಷತಾಮೇತಿ ಕದಾಚಿತ್ ಕಾಲಪರ್ಯಯಾತ್ ||10||
ಅಂತಹ ಸ್ತ್ರೀಯು ಮೃತಳಾಗಿ ನರಕವನ್ನು ಹೊಂದಿ ತಿರ್ಯಗ್ಯೋನಿಗಳಲ್ಲಿ ಜನಿಸುತ್ತಾಳೆ. ಎಲೈ ಮಹಾದೇವನೇ, ಅಲ್ಲಿಯೂ ತನ್ನಿಂದಲೂ ತನ್ನ ಶಿಶುಗಳಿಂದಲೂ ಇನ್ನೊಬ್ಬರಿಗೆ ಅಪಕಾರವನ್ನು ಮಾಡಿ ಪುನಃ ಮೋಹಕ್ಕೆ ಒಳಗಾಗುತ್ತಾಳೆ. ಹಿಂದೆ ಪರದ್ರವ್ಯವನ್ನು ಅಪಹರಿಸಿದವಳು ಕಾಲಪರ್ಯಯದಲ್ಲಿ ಒಮ್ಮೆ ಪುನಃ ಮಾನುಷ್ಯವನ್ನು ಹೊಂದುತ್ತಾಳೆ.
ಬ್ರಹ್ಮಕ್ಷತ್ರೇ ಪ್ರಸೂತಾಽಪಿ ದಾಸೀತ್ವಮುಪಗಚ್ಛತಿ |
ತಸ್ಯಾ ನ ತುಷ್ಯತಿ ಸ್ವಾಮೀ ಕೃತೈಃ ಕರ್ಮಶತೈರಪಿ ||11||
ಬ್ರಾಹ್ಮಣ ಕುಲದಲ್ಲಿ ಅಥವಾ ಕ್ಷತ್ರಿಯಕುಲದಲ್ಲಿ ಜನಿಸಿದರೂ ಅವಳು ದಾಸಿಯಾಗುತ್ತಾಳೆ. ಅವಳು ನೂರು ಕರ್ಮಗಳನ್ನು ಮಾಡಿದರೂ ಅವಳ ಸ್ವಾಮಿಯು ಸಂತೋಷಪಡುವುದಿಲ್ಲ.
ನಿತ್ಯಂ ಮೃಷ್ಟಗೃಹಾ ಚೈವ ಭಯೋದ್ವಿಗ್ನಮನಾಃ ಸದಾ |
ನ ನಿರ್ವೃತಿಮವಾಪ್ನೋತಿ ಸತತಂ ದುಃಖಭಾಗಿನೀ ||12||
ಯಾವಾಗಲೂ ಮನೆಯನ್ನು ಸಾರಿಸಿಕೊಂಡು, ಭಯದಿಂದ ಕೂಡಿದ ಮನಸ್ಸುಳ್ಳವಳಾಗಿ, ಸತತವಾಗಿ ದುಃಖವನ್ನು ಹೊಂದಿ, ಸಂತೋಷವನ್ನೇ ಹೊಂದುವುದಿಲ್ಲ.
ಅಜಸ್ರಂ ಕರ್ಮಣಾ ಚೈವ ಪ್ರಸವೋಪಚರೇಣ ಚ |
ಮೋಕ್ಷಯತ್ಯಾತ್ಮನಾಽಽತ್ಮಾನಂ ಪರದ್ರವ್ಯಾಪಹಾರಿಣೀ ||13||
ಪರದ್ರವ್ಯವನ್ನು ಅಪಹರಿಸಿದವಳು ಸತತವಾಗಿ ಹೀಗೆ ಇನ್ನೊಬ್ಬನ ಕರ್ಮವನ್ನು ಮಾಡಿ, ಅವನ ಮಕ್ಕಳನ್ನು ಉಪಚರಿಸಿ, ತಾನು ಹಿಂದೆ ಮಾಡಿದ ಕರ್ಮದಿಂದ ತನ್ನನ್ನು ಬಿಡಿಸಿಕೊಳ್ಳುತ್ತಾಳೆ.
ಮಹೇಶ್ವರಃ
ದಾಸಯೋನಿಪ್ರಸೂತಾನಾಂ ಸೌಖ್ಯಮುತ್ಪದ್ಯತೇ ಕಥಮ್ ||14||
ಮಹೇಶ್ವರ ದಾಸಯೋನಿಯಲ್ಲಿ ಜನಿಸಿದವರಿಗೆ ಹೇಗೆ ಸುಖವುಂಟಾಗುತ್ತದೆ?

ಉಮಾ
ಸುವರ್ಣಮಣಿಮುಕ್ತಾಶ್ಚ ವಸ್ತ್ರಾಣ್ಯಾಭರಣಾನಿ ಚ |
ಭೋಗಭೂತಾ ವಿಶಿಷ್ಟಾ ಯೇ ಗಂಧಮಾಲ್ಯಾದಯಃ ಶುಭಾಃ ॥15॥
ರತಿರಾಗವಿಧಿಜ್ಞೈಶ್ಚ ಸತತಂ ವಶವರ್ತಿನೀ |
ರೂಪಾನುರೂಪೈಃ ಪುರುಷೈಃ ರಮತೇ ಶಯನೇ ಶುಭೇ ॥16॥
ಉಮಾ ದಾಸಿಯಾದವಳು ಭೋಗಸಾಧನಗಳಾದ ಶ್ರೇಷ್ಠವಾದ ಮಣಿ-ಮುತ್ತು, ಸುವರ್ಣಗಳನ್ನೂ ವಸ್ತ್ರಾಭರಣಗಳನ್ನೂ, ಗಂಧ-ಮಾಲ್ಯಗಳನ್ನೂ ಹೊಂದಿ ಸುಂದರರಾದ, ರತಿವಿಶೇಷವನ್ನು ಬಲ್ಲ ಪುರುಷರಿಗೆ ವಶಳಾಗಿ ಅವರ ಜೊತೆಯಲ್ಲಿ ಶ್ರೇಷ್ಠವಾದ ಶಯನದಲ್ಲಿ ಸುಖವನ್ನು ಅನುಭವಿಸುತ್ತಾಳೆ.
ಅಥವಾ ಸಾ ಭವೇದ್ ಭಾರ್ಯಾ ರಾಜ್ಞೋ ರಾಜೋಪಮಸ್ಯ ವಾ |
ಏತತ್ ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥17॥
ಅಥವಾ ಅವಳು ರಾಜನ ಅಥವಾ ರಾಜನಿಗೆ ಸದೃಶನಾದ ಶ್ರೀಮಂತನ ಭಾರ್ಯೆಯಾಗುತ್ತಾಳೆ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಮಹೇಶ್ವರಃ
ಉತ್ಪನ್ನಾಶ್ಚಾಂತ್ಯದೇಶೇಷು ಯವನಾದಿಷು ಯೋಷಿತಃ |
ಕೇನ ಕರ್ಮವಿಪಾಕೇನ ದಾಸೀತ್ವಂ ಯಾಂತಿ ಸುಂದರಿ ॥18॥
ಮಹೇಶ್ವರ ಎಲೌ ಸುಂದರಿಯೇ, ಯವನಾದಿ ಅಂತ್ಯದೇಶಗಳಲ್ಲಿ ಜನಿಸಿದ ಸ್ತ್ರೀಯರು ಯಾವ ಕರ್ಮವಿಪಾಕದಿಂದ ದಾಸ್ಯವನ್ನು ಹೊಂದುತ್ತಾರೆ?
ಉಮಾ
ಉಚ್ಛಿಷ್ಟಾಹಾರಬಹುಳಾಃ ಸತತಂ ಶೌಚವರ್ಜಿತಾಃ |
ಭಿಕ್ಷಾಂ ದದತಿ ಚಾಜ್ಞಾನಾಂ ಕುರ್ವಂತಿ ಬಲಿಕರ್ಮ ಚ ॥19॥
ಮದ್ಯಪಾನೇ ಪ್ರಸಕ್ತಾಶ್ಚ ಪರಸ್ವಹರಣೇಷು ಚ |
ಏತೈಸ್ತು ಕರ್ಮಭಿರ್ನಾರ್ಯೋ ಜಾಯಂತೇ ನಿರಯಾಲಯಾಃ ॥20॥
ಉಮಾ ಉಚ್ಛಿಷ್ಟ ಆಹಾರವನ್ನೇ ಬಹಳವಾಗಿ ಸೇವಿಸುವುದು, ಸತತವಾಗಿ ಶೌಚ ಹೀನವಾಗಿರುವುದು, ಅಜ್ಞಾನಿಗಳಿಗೆ ಭಿಕ್ಷೆಯನ್ನು ಕೊಡುವುದು, ಶೌಚಾಚಾರವಿಲ್ಲದೆ ಪೂಜೆಯನ್ನು ಮಾಡುವುದು, ಮದ್ಯಪಾನದಲ್ಲಿ ಮತ್ತು ಪರದ್ರವ್ಯ ಅಪಹಾರದಲ್ಲಿ ಆಸಕ್ತರಾಗುವುದು - ಇಂತಹ ಕರ್ಮಗಳಿಂದ ನಾರಿಯರು ನರಕವಾಸಿಗಳಾಗುತ್ತಾರೆ.
ಯದಿ ಮಾನುಷತಾಂ ಪ್ರಾಪ್ತಾಃ ಕದಾಚಿತ್ ಕರ್ಮಣಃ ಕ್ಷಯಾತ್ |
ನಾನಾವಿಧೇಷು ಮ್ಲೇಚ್ಛೇಷು ಜನ್ಮ ತಾಸಾಂ ವಿಧೀಯತೇ ॥21॥
ಆ ಕರ್ಮಗಳ ಕ್ಷಯದಿಂದ ಎಂದಾದರೂ ಅವರಿಗೆ ಮನುಷ್ಯಜನ್ಮ ಉಂಟಾದರೆ ಅವರು ನಾನಾ ವಿಧವಾದ ಮ್ಲೇಚ್ಛ ಜಾತಿಗಳಲ್ಲಿ ಜನ್ಮವನ್ನು ಪಡೆಯುತ್ತಾರೆ.
ತಾಃ ಸ್ವದೇಶಾಚ್ಚ್ಯುತಾ ನಾರ್ಯಃ ಪರದೇಶಮುಪಾಗತಾಃ |
ದಾಸೀತ್ವಮುಪಪದ್ಯಂತೇ ಚೋದಿತಾಃ ಕರ್ಮಭಿಃ ಸ್ವಕೈಃ ॥22॥
ಅಲ್ಲಿಯೂ ಸಹ ಆ ನಾರಿಯರು ತಾವು ಜನಿಸಿದ ದೇಶವನ್ನು ಬಿಟ್ಟು ಹೊರದೇಶಕ್ಕೆ ಹೋಗಿ ತಾವು ಹಿಂದೆ ಮಾಡಿದ ಕರ್ಮಗಳ ಫಲವಾಗಿ ದಾಸೀತ್ವವನ್ನು ಹೊಂದುತ್ತಾರೆ.
ರುದ್ರಃ
ಏತೇಷ್ವೇವ ಚ ಮ್ಲೇಚ್ಛೇಷು ಕರ್ಮಣಾ ಕೇನ ಶೋಭನೇ |
ಕುಲೀನಾಶ್ಚ ಸಮೃದ್ಧಾಶ್ಚ ಜಾಯಂತೇ ಪ್ರಮದೋತ್ತಮಾಃ ॥23॥
ರುದ್ರ ಎಲೌ ಶೋಭನೆಯೇ, ಇಂತಹದೇ ಮ್ಲೇಚ್ಛ ಯೋನಿಗಳಲ್ಲಿ ಕುಲೀನರೂ, ಸಮೃದ್ಧರೂ ಆದ ಶ್ರೇಷ್ಠ ಸ್ತ್ರೀಯರು ಕಂಡುಬರುತ್ತಾರೆ. ಯಾವ ಕರ್ಮದಿಂದ ಹೀಗಾಗುತ್ತದೆ?
ಉಮಾ
ಯಾ ನಾರೀ ವಿಪುಳಂ ಭೋಗಂ ಬ್ರಾಹ್ಮಣೇಭ್ಯಃ ಪ್ರಯಚ್ಛತಿ |
ಆಸನಂ ಶಯನಂ ಯಾನಂ ಭೋಜನೋಪಸ್ಕರಂ ತಥಾ ॥24॥
ರತ್ನಾನಿ ಮಣಿಮುಕ್ತಾಶ್ಚ ವಸ್ತ್ರಾಣ್ಯಾಭರಣಾನಿ ಚ |
ಗಾಃ ಸುವರ್ಣಂ ಚ ರೂಪ್ಯಂ ಚ ಮಧುರಾಣಾಂ ರಜಸ್ವಲಾ ॥25॥
ಕ್ರೋಧಾವಿಷ್ಟಾ ಚ ಯಾ ದದ್ಯಾತ್ ಶೋಚಂತೀ ವಾಪಿ ದುಃಖಿತಾ |
ಏವಂವಿಧಾನಾಂ ದಾನಾನಾಂ ಫಲಂ ಮ್ಲೇಚ್ಛೇಷು ಭೋಜ್ಯತೇ ॥26॥
ಉಮಾ ಯಾವ ನಾರಿಯು ರಜಸ್ವಲೆಯಾಗಿದ್ದಾಗ ಬ್ರಾಹ್ಮಣರಿಗೆ ವಿಪುಲವಾದ ಭೋಗಗಳನ್ನೂ, ಆಸನ-ಶಯನ-ಪಾನ-ಭೋಜನ ಸಾಮಗ್ರಿಗಳನ್ನೂ, ರತ್ನಗಳನ್ನೂ, ಮುತ್ತು-ಮಾಣಿಕ್ಯಗಳನ್ನೂ, ವಸ್ತ್ರಾಭರಣಗಳನ್ನೂ, ಗೋವುಗಳನ್ನೂ, ಸುವರ್ಣ- ರಜತಗಳನ್ನೂ, ಮಧುರವಾದ ಪದಾರ್ಥಗಳನ್ನೂ ಕೊಡುತ್ತಾಳೆಯೋ ಮತ್ತು ಯಾವಳು ಕ್ರೋಧಾವಿಷ್ಟಳಾಗಿ ಅಥವಾ ವ್ಯಯದ ದುಃಖದಿಂದ ಕೂಡಿದವಳಾಗಿ, ಶೋಕಪಡುತ್ತಾ ದಾನಗಳನ್ನು ಮಾಡುತ್ತಾಳೆಯೋ ಅಂತಹ ದಾನಗಳ ಫಲವು ಮ್ಲೇಚ್ಛಯೋನಿಗಳಲ್ಲಿ ಭೋಗಿಸಲ್ಪಡುತ್ತದೆ.

ಸಾಶಿಕಾ ಜಾಯತೇ ಚಾತ್ರ ಮಹಾಕುಲಸಮುದ್ಭವಾ |
ಕೋಗೀಧನೇಶಂ ಪ್ರಾಪ್ನೋತಿ ಭರ್ತಾರಂ ಸ್ವವಶಾನುಗಮ್ ॥27॥
ಅವಳು ಅಲ್ಲಿ ಮಹಾಕುಲದಲ್ಲಿ ಜನಿಸಿ ಬಹಳ ಭೋಜನವನ್ನು ಮಾಡುವವಳಾಗಿ ತನಗೆ ವಶವರ್ತಿಯಾದ ಧನಿಕನಾದ ಒಬ್ಬ ಪುರುಷನನ್ನು ಪತಿಯಾಗಿ ಪಡೆಯುತ್ತಾಳೆ.
ಮ್ಲೇಚ್ಛಾನಾಂ ತು ಭವೇದ್ ರಾಜ್ಞೋ ಭಾರ್ಯಾ ರಾಜೋಪಮಸ್ಯ ವಾ |
ಏತತ್ ತೇ ಸರ್ವಮಾಖ್ಯಾತಂ ಕಿಂಭೂಯಃ ಶ್ರೋತುಮಿಚ್ಛಸಿ ॥28॥
ಒಬ್ಬ ಮ್ಲೇಚ್ಛರಾಜನ ಅಥವಾ ರಾಜನಿಗೆ ಸಮಾನನಾದವನ ಭಾರ್ಯೆಯಾಗುತ್ತಾಳೆ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ಮಹೇಶ್ವರಃ
ಕೇನ ಕರ್ಮವಿಪಾಕೇನ ವೇಶ್ಯಾ ಸ್ತ್ರೀ ಜಾಯತೇ ಪುಮಾನ್ ॥29॥
ಮಹೇಶ್ವರ ಯಾವ ಕರ್ಮವಿಪಾಕದಿಂದ ಪುರುಷನು ಸ್ತ್ರೀ ಜನ್ಮವನ್ನು ಹೊಂದಿ ವೇಶ್ಯೆಯಾಗುತ್ತಾನೆ?
ಉಮಾ
ಚಿರಂ ಸಾರ್ಥಂಶಯಾ ನಾರೀ ಚಿಂತಯಂತೀ ಬಹೂನ್ ನರಾನ್ |
ಯುಜ್ಯತೇ ಕಾಲಧರ್ಮೇಣ ವೇಶ್ಯಾಸ್ತ್ರೀ ಸೋಪಪದ್ಯತೇ ॥30॥
ಉಮಾ ಯಾವಾಗಲೂ ಧನದ ಜೊತೆಯಲ್ಲೇ ಮಲಗಿಕೊಳ್ಳುವ, ಅನೇಕ ಪುರುಷರನ್ನು ಚಿಂತಿಸುವ ನಾರಿಯು ಮರಣವನ್ನು ಹೊಂದಿ ವೇಶ್ಯೆಯಾಗಿ ಜನಿಸುತ್ತಾಳೆ (ಇದು ದೋಷದಿಂದ ಪುರುಷನು ಸ್ತ್ರೀ ಜನ್ಮವನ್ನು ಪಡೆದ ನಾರಿಯ ವಿಚಾರ).
ವೇಶ್ಯಾ ತು ನಿವಸಂತೀ ಯಾ ಸ್ವೇಪ್ಸಿತಂ ಪ್ರಾಪ್ಯ ವೇತನಮ್ |
ಸುರೂಪೇಪಿ ವಿರೂಪೇ ಚ ಸುಭಗೇ ದುರ್ಭಗೇ ತಥಾ ॥31॥
ಸಮೃದ್ಧೇ ಚ ದರಿದ್ರೇ ಚ ದುಷ್ಕುಲೇ ಚ ಕುಲಾನ್ವಿತೇ |
ಯೌವನಸ್ಥೇ ಚ ವೃದ್ಧೇ ಚ ವಸ್ತವ್ಯಾಽಽಗಂತುಕೇಷು ಚ ॥32॥
ವೇಶ್ಯೆಯ ಕುಲದಲ್ಲಿ ವಾಸಿಸುವಳು ತಾನು ಬಯಸಿದ ಶುಲ್ಕವನ್ನು ಪಡೆದು ಸುರೂಪನಾದ ಅಥವಾ ಕುರೂಪನಾದ, ಸೌಭಾಗ್ಯವನ್ನು ಹೊಂದಿರುವ ಅಥವಾ ದೌರ್ಭಾಗ್ಯವನ್ನು ಹೊಂದಿರುವ, ಸಮೃದ್ಧನಾದ ಅಥವಾ ದರಿದ್ರನಾದ, ದುಷ್ಕುಲದಲ್ಲಿ ಜನಿಸಿದ ಅಥವಾ ಸತ್ಕುಲದಲ್ಲಿ ಜನಿಸಿದ, ಯುವಕನಾದ ಅಥವಾ ವೃದ್ಧನಾದ ತನ್ನ ಬಳಿಗೆ ಬಂದ ಅಂತಹ ಪುರುಷನ ಜೊತೆಯಲ್ಲಿ ವಾಸಮಾಡಬೇಕು.
ಸಮೋಪಚಾರಾ ಸರ್ವತ್ರ ಸರ್ವೇಷಾಂ ವಶವರ್ತಿನೀ |
ಏವಂ ಶೀಲಸಮಾಚಾರಾ ದೇವಲೋಕೇ ಮಹೀಯತೇ ॥33॥
ಅವಳು ಎಲ್ಲರಿಗೂ ವಶವರ್ತಿನಿಯಾಗಿದ್ದು, ಎಲ್ಲರಿಗೂ ಒಂದೇ ವಿಧವಾದ ಉಪಚಾರವನ್ನು ಮಾಡಬೇಕು. ಅಂತಹ ಶೀಲ ಮತ್ತು ಆಚಾರವುಳ್ಳ ವೇಶ್ಯೆಯು ಮರಣವನ್ನು ಹೊಂದಿ ದೇವಲೋಕದಲ್ಲಿ ಪೂಜಿಸಲ್ಪಡುತ್ತಾಳೆ.
ಸುಕೃತೇನಾತ್ಮನಃ ಪೂತಾ ಚಂದ್ರವದ್ ಭಾತಿ ನಿರ್ಮಲಾ |
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಪದ್ಯತೇ ॥34॥
ರೂಪವಾನ್ ಸುಭಗಶ್ಚೈವ ಸಮೃದ್ಧೋ ಜಾಯತೇ ಪುಮಾನ್ |
ಏತತ್ ತೇ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥35॥
ತನ್ನ ಸತ್ಕರ್ಮದಿಂದ ಪವಿತ್ರಳಾಗಿ, ದೋಷರಹಿತಳಾಗಿ ಚಂದ್ರನಂತೆ ಶೋಭಿಸುತ್ತಾಳೆ. ಮನುಷ್ಯ ಯೋನಿಯಲ್ಲಿ ಯಾವಾಗಲಾದರೂ ಜನ್ಮವನ್ನು ತಾಳಿದರೆ ರೂಪವನ್ನು ಮತ್ತು ಸೌಭಾಗ್ಯವನ್ನು ಮತ್ತು ಸಮೃದ್ಧಿಯನ್ನು ಪಡೆಯುತ್ತಾಳೆ (ಪುರುಷನು ತನ್ನ ದೋಷಗಳಿಂದ ವೇಶ್ಯೆಯಾಗಿ ಜನಿಸಿದರೆ ಅವನೂ ಇಂತಹ ಧರ್ಮಾಚರಣೆಯಿಂದ ಪುನಃ ರೂಪವಂತನಾದ, ಸೌಭಾಗ್ಯವಂತನಾದ ಪುರುಷನಾಗಿ ಜನಿಸುತ್ತಾನೆ). ನಾನು ನಿನಗೆ ಇದೆಲ್ಲವನ್ನೂ ಹೇಳಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀನೆ.
ರುದ್ರಃ
ರಾಜಕಾಪಗಕಾರೀಷು ಲಂಬಿಕಾಸು ನದೀಷು ಚ |
ಡಾಕಿನೀಷು ವರಾರೋಹೇ ಜಾಯಂತೇ ಯೋಷಿತಃ ಕಥಮ್ ॥36॥
ರುದ್ರ ಎಲೌ ಸುಂದರಿಯೇ, ಸ್ತ್ರೀಯರು ರಾಜಕಾದಿ (ಅಗಸ) ಯೋನಿಗಳಲ್ಲಿ, ಲಂಬಿಕಾ, ಡಾಕಿನಿ ಮೊದಲಾದ ಭೂತಯೋನಿಗಳಲ್ಲಿ ಮತ್ತು ನದಿಗಳಲ್ಲಿ ಯಾವ ಕಾರಣದಿಂದ ಜನಿಸುತ್ತಾರೆ?
ಪಾರ್ವತೀ
ಮದ್ಯಪಾನರತಾ ನಾರೀ ಪೈಶುನ್ಯಕಲಹಪ್ರದಾ |
ನ ಶುಶ್ರೂಷತಿ ಭರ್ತಾರಂ ಗೃಹೇಷು ಗೃಹದೇವತಾಃ ॥37॥
ನ ಸಮ್ಮಾರ್ಷ್ಟಿ ಗೃಹಂ ಚೈವ ನ ಕರೋತ್ಯನುಲೇಪನಮ್ |
ನ ಕರೋತಿ ಬಲಿಂ ಭಿಕ್ಷಾಂ ನ ದದಾತಿ ಕದಾಚನ ॥38॥
ನ ದದ್ಯಾದತಿಥಿಭ್ಯಶ್ಚ ನೃಶಂಸಾ ಶಂಸವರ್ಜಿತಾ |
ಪ್ರತಿಕೂಲಾ ಚ ಯಾ ಭರ್ತುಃ ಭೃತ್ಯವರ್ಗೇಷು ನಿರ್ಘೃಣಾ ॥39॥
ಆತ್ಮನಃ ಪೋಷಿಕಾ ನಿತ್ಯಂ ಸಂವಿಭಾಗವಿವರ್ಜಿತಾ |
ಏವಂಶೀಲಸಮಾಚಾರಾ ಸಾ ನಾರೀ ನರಕಂ ವ್ರಜೇತ್ ॥40॥
ಪಾರ್ವತೀ ಯಾವ ನಾರಿಯು ಮದ್ಯಪಾನರತಳಾಗಿ, ಯಾವಾಗಲೂ ಚಾಡಿ ಹೇಳುವುದರಲ್ಲಿ ರತಳಾಗಿ ಕಲಹವನ್ನುಂಟು

ಮಾಡುವಳೋ, ಪತಿಯ ಮಾತನ್ನು ಕೇಳುವುದಿಲ್ಲವೋ, ಮನೆಯಲ್ಲಿ ಗೃಹದೇವತೆಗಳನ್ನು ಪೂಜಿಸುವುದಿಲ್ಲವೋ, ಮನೆಯನ್ನು ಸಾರಿಸಿ ಗುಡಿಸಿ ಶುದ್ಧಮಾಡಿ ಕಾರಣೆಯನ್ನು ತೆಗೆಯುವುದಿಲ್ಲವೋ, ಪೂಜೆಯನ್ನು ಮಾಡುವುದಿಲ್ಲವೋ, ಯಾರಿಗೂ ಭಿಕ್ಷೆಯನ್ನು ಹಾಕುವುದಿಲ್ಲವೋ, ಯಾವ ಅತಿಥಿಗಳನ್ನೂ ಸತ್ಕರಿಸದೇ ಕ್ರೂರಿಯೂ ನಿಷ್ಠುರಳೂ ಆಗಿ, ಪತಿಗೆ ಪ್ರತಿಕೂಲಳಾಗಿಯೂ, ಭೃತ್ಯವರ್ಗದಲ್ಲಿ ದಯಾಹೀನಳೂ ಆಗಿ ಯಾವುದನ್ನೂ ಹಂಚಿ ಉಪಯೋಗಿಸದೆ, ನಿತ್ಯವೂ ತನ್ನ ಪೋಷಣೆಯಲ್ಲಿಯೂ ನಿರತಳಾಗಿರುತ್ತಾಳೆಯೋ - ಇಂತಹ ಶೀಲಾಚಾರವುಳ್ಳ ನಾರಿಯು ನರಕಕ್ಕೆ ಹೋಗುತ್ತಾಳೆ.
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಜಾಯತೇ |
ಪಾಪಯೋನಿಷು ಜಾಯೇತ ದೈವಪಿತ್ರ್ಯವಿವರ್ಜಿತಾ ||41||
ಒಂದು ಪಕ್ಷ ಮನುಷ್ಯ ಲೋಕದಲ್ಲಿ ಜನಿಸಿದರೆ ಅಂತಹವಳು ದೇವ-ಪಿತೃರ್ಚನೆಯಿಲ್ಲದ ಪಾಪಯೋನಿಗಳಲ್ಲಿ ಜನಿಸುತ್ತಾಳೆ.
ರಾಜಕಾಪಗಕಾರೀಷು ಲಂಬಿಕಾಸು ನದೀಷು ಚ |
ಡಾಕಿನೀಷು ಚ ಸರ್ವಾಸು ಜನ್ಮ ತಸ್ಯಾ ವಿಧೀಯತೇ ||42||
ಅಗಸಗಿತ್ತಿ, ಶಾಕಿನಿ, ಡಾಕಿನಿ, ಲಂಬಿಕಾ ಮೊದಲಾದ ಭೂತಯೋನಿಗಳಲ್ಲಿ ಅವಳಿಗೆ ಜನ್ಮವುಂಟಾಗುತ್ತದೆ.
ರುದ್ರಃ
ವ್ಯಾಧೀ ವಾ ಗುರುಮಾತಂಗೀ ಚಂಡಾಲೀ ಮಾಂಸಿಕಾಪಿ ವಾ |
ಜಾಯಂತೇ ಕರ್ಮಣಾ ಕೇನ ಸ್ತ್ರಿಯಃ ಸ್ತ್ರೀಜನಪೂಜಿತೇ ||43||
ರುದ್ರ ಎಲೌ ಸ್ತ್ರೀಯರಿಂದ ಪೂಜಿತಳಾದವಳೇ, ಸ್ತ್ರೀಯರು ಯಾವ ಕರ್ಮದಿಂದ ಬೇಡರ ಜಾತಿಯಲ್ಲಿ, ಮಾದಿಗರ ಜಾತಿಯಲ್ಲಿ, ಚಂಡಾಲರ ಜಾತಿಯಲ್ಲಿ, ಮಾಂಸವನ್ನು ಮಾರುವವರ ಜಾತಿಯಲ್ಲಿ ಜನಿಸುತ್ತಾರೆ?
ಉಮಾ
ಯಾ ನಾರೀ ಪತಿಮುತ್ಸೃಜ್ಯ ಅನ್ಯಸ್ಮಿನ್ ಕುರುತೇ ಮನಃ |
ಪತ್ಯೌಕಾ ವಿಗತಸ್ನೇಹಾ ಅನ್ಯೇಷು ರಮತೇऽಶುಭಾ ||44||
ರಾಜಸ್ನೇಹಾನುರಾಗೇಣ ಭರ್ತಾರಂ ದ್ವೇಷ್ಟಿ ಯಾ ಸ್ವಕಮ್ |
ಪತಿಂ ವೈಕಲಯೋಗೈರ್ವಾ ವಿಷೈರ್ವಾ ಮೂಲಕರ್ಮಣಾ ||45||
ನಿಷ್ಣಾತಾ ಮೃತ್ಯುಭಿಶ್ಚೈತೈರಾಯುಧೈರ್ವಾಪಿ ಪಾತಯೇತ್ |
ಏವಂಕೃತಿಸ್ತು ಯಾ ಘೋರಾ ನಾರೀ ನರಕನಿರ್ಭಯಾ |
ಅಗಾಧಮಪ್ಲವಂ ಘೋರಂ ನರಕಂ ಯಾತಿ ಸಾ ಮೃತಾ ||46||
ಉಮಾ ಯಾವ ನಾರಿಯು ಪತಿಯನ್ನು ಬಿಟ್ಟು ಇನ್ನೊಬ್ಬನಲ್ಲಿಯೇ ಮನಸ್ಸನ್ನು ಹೊಂದಿರುತ್ತಾಳೆಯೋ ಅಥವಾ ಪತಿಯ ಮನೆಯಲ್ಲಿಯೇ ಇದ್ದು ಪತಿಯಲ್ಲಿ ಸ್ನೇಹರಹಿತಳಾಗಿ ಬೇರೆಯವರಲ್ಲಿಯೇ ರಮಿಸುತ್ತಾಳೆಯೋ, ರಾಜನಲ್ಲಿ ಅಥವಾ ಧನವಂತನಲ್ಲಿ ಸ್ನೇಹವನ್ನು ಹೊಂದಿ ತನ್ನ ಪತಿಯನ್ನು ತ್ಯಜಿಸುತ್ತಾಳೆಯೋ ಅಥವಾ ವೈಕಲ್ಯವನ್ನುಂಟು ಮಾಡುವ ವಿಷಪ್ರಯೋಗಗಳಲ್ಲಿ ಮತ್ತು ಮೂಲಿಕಾ ಪ್ರಯೋಗಗಳಲ್ಲಿ ಪರಿಣತಳಾಗಿ, ಮೃತ್ಯುಕಾರಕವಾದ ಇಂತಹ ಉಪಾಯಗಳಿಂದ ಅಥವಾ ಆಯುಧಗಳಿಂದಾದರೂ ಪತಿಯನ್ನು ಘಾತಿಸುತ್ತಾಳೆಯೋ - ಅಂತಹ ಘೋರಳಾದ, ನರಕಭಯರಹಿತಳಾದ ನಾರಿಯು ಮರಣವನ್ನು ಹೊಂದಿ ಅಗಾಧವಾದ, ದಾಟಲು ಅಸಾಧ್ಯವಾದ, ಘೋರವಾದ ನರಕವನ್ನು ಹೊಂದುತ್ತಾಳೆ.
ಯದಿ ಚೇನ್ಮಾನುಷೇ ಲೋಕೇ ಜಾಯತೇ ಕರ್ಮಣಃ ಕ್ಷಯಾತ್ ||47||
ವ್ಯಾಧೀ ವಾ ಗುರುಮಾತಂಗೀ ಚಂಡಾಲೀ ಮಾಂಸಿಕಾಸು ಚ |
ಯೋನಿಷ್ವೇವಂ ಪ್ರಕಾರಾಸು ಜನ್ಮ ತಸ್ಯಾ ವಿಧೀಯತೇ ||48||
ಕರ್ಮಕ್ಷಯದಿಂದ ಒಂದು ಪಕ್ಷ ಮನುಷ್ಯ ಜನ್ಮವು ಉಂಟಾದರೆ ಅವಳು ಬೇಡರ, ಮಾದಿಗರ, ಚಂಡಾಲರ ಅಥವಾ ಮಾಂಸಿಕರ (ಪ್ರಾಣಿಗಳನ್ನು ಕೊಂದು ಮಾಂಸವನ್ನು ಮಾರುವವರ) ಅಥವಾ ಇಂತಹ ವಿಧವಾದ ಇನ್ನೂ ಅನೇಕ ಯೋನಿಗಳಲ್ಲಿ ಜನ್ಮವನ್ನು ಪಡೆಯುತ್ತಾಳೆ.
ಮಹೇಶ್ವರಃ
ಭರ್ತುರೇವ ಸುತಾನಾಂ ಚ ಭ್ರಾತೄಣಾಮಥವಾ ಪುನಃ |
ವಧಂ ಬಂಧಂ ಚ ಪಶ್ಯಂತಿ ಕರ್ಮಣಾ ಕೇನ ಯೋಷಿತಃ ||49||
ಮಹೇಶ್ವರ ಸ್ತ್ರೀಯರು ಯಾವ ಕರ್ಮದಿಂದ ಪತಿಯ, ಪುತ್ರರ ಅಥವಾ ಸಹೋದರರ ವಧೆಯನ್ನು ಮತ್ತು ಬಂಧವನ್ನು (ತಮ್ಮ ಕಣ್ಣುಗಳಿಂದ) ನೋಡುತ್ತಾರೆ?
ಉಮಾ
ವಿನಾಪರಾಧಾತ್ ತಿರ್ಯಕ್ಷು ರಂಡಾ ಸಂಯಮ್ಯ ನಿರ್ಘೃಣಾ |
ಪ್ರಹಾರವ್ಯಥಿತಂ ಕುರ್ಯಾನ್ನಾರೀ ನರಕನಿರ್ಭಯಾ ||50||
ಹನ್ಯಮಾನಂ ತಥಾऽನ್ಯೈಸ್ತಂ ದೃಷ್ಟ್ವಾ ಚೈವಾಭಿನಂದತಿ |
ನರಕೇಷು ಚಿರಂ ಸ್ಥಿತ್ವಾ ತಿರ್ಯಗ್ಯೋನಿತ್ವಮೃಚ್ಛತಿ ||51||
ಉಮಾ ವಿಧವೆಯಾದ ಯಾವ ಸ್ತ್ರೀಯು ಅಪರಾಧವನ್ನು ಮಾಡದ ಪ್ರಾಣಿಗಳನ್ನು ಕಟ್ಟಿಹಾಕಿ, ಅವುಗಳಲ್ಲಿ ದಯೆಯನ್ನು ಹೊಂದದೆ, ನರಕಭಯವನ್ನು ತ್ಯಜಿಸಿ ಹೊಡೆದು ಅವುಗಳಿಗೆ ವ್ಯಥೆಯನ್ನುಂಟು ಮಾಡುತ್ತಾಳೆಯೋ ಅಥವಾ ಅಂತಹ ಪ್ರಾಣಿಗಳು ಇನ್ನೊಬ್ಬರಿಂದ ಹೊಡೆಯಲ್ಪಡುವುದನ್ನು ನೋಡಿ ಸಂತೋಷ ಪಡುತ್ತಾಳೆಯೋ ಅವಳು ಬಹುಕಾಲ ನರಕವನ್ನು ಅನುಭವಿಸಿ ತಿರ್ಯಗ್ಯೋನಿಯಲ್ಲಿ ಜನಿಸುತ್ತಾಳೆ.

ವಧಬಂಧಪ್ರಹಾರಾಂಶ್ಚ ತಿರ್ಯಕ್ತ್ವೇ ಚ ಲಭೇತ ಚ |
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಜಾಯತೇ ||52||
ವಧಂ ಬಂಧಂ ಚ ಭ್ರಾತೄಣಾಂ ಭರ್ತುಶ್ಚೈವ ಸುತಸ್ಯ ಚ |
ಮಾತುಃ ಪಿತುಶ್ಚ ಪಶ್ಯಂತಿ ಪುರಾ ದುಶ್ಚರಿತಸ್ತ್ರಿಯಃ ||53||
ಆ ತಿರ್ಯಗ್ಯೋನಿಯಲ್ಲಿಯೂ ಸಹ ಅವಳು ವಧೆ, ಬಂಧ ಮತ್ತು ಪ್ರಹಾರಗಳನ್ನು ಹೊಂದುತ್ತಾಳೆ. ಒಂದು ಪಕ್ಷ ಯಾವಾಗಲಾದರೂ ಮನುಷ್ಯಲೋಕದಲ್ಲಿ ಜನಿಸಿದರೆ ಹಿಂದೆ ಅಂತಹ ದುಶ್ಚರಿತ ಮಾಡಿದ ಸ್ತ್ರೀಯರು ತಮ್ಮ ಪತಿಯ, ಪುತ್ರರ, ಸಹೋದರರ, ತಂದೆ-ತಾಯಿಗಳ ವಧೆಯನ್ನು ಮತ್ತು ಬಂಧನವನ್ನೂ ನೋಡುತ್ತಾರೆ.
ತನ್ನಿಮಿತ್ತೋ ಮನಸ್ತಾಪೋ ಅಗ್ನಿದಾಹಸಮಶ್ಚಿರಮ್ |
ಕರ್ಮಣಃ ಸ್ವಸ್ಯ ಪಾಪಸ್ಯ ವಿಪಾಕೋ ಭುಜ್ಯತೇ ಭುವಿ ||54||
ಅದರಿಂದ ಅವರಿಗೆ ಉಂಟಾಗುವ ಮನಸ್ಸಿನ ತಾಪವು ಬಹುಕಾಲದವರೆಗೆ ಅಗ್ನಿದಾಹಕ್ಕೆ ಸಮವಾಗಿರುತ್ತದೆ. ತಾವು ಮಾಡಿದ ಪಾಪಕರ್ಮದ ಫಲವನ್ನು ಅವರು ಭೂಮಿಯಲ್ಲಿ ಅನುಭವಿಸುತ್ತಾರೆ.
ಮಹೇಶ್ವರಃ
ಅಲ್ಪಾಯುಷಃ ಸ್ತ್ರಿಯೋ ದೇವಿ ಜಾಯಂತೇ ಕೇನ ಕರ್ಮಣಾ |
ವ್ಯಾಧಿಭಿಶ್ಚೈವ ಕ್ಲಿಶ್ಯಂತೇ ಶ್ರೋತುಮಿಚ್ಛಾಮಿ ತತ್ತ್ವತಃ ||55||
ಮಹೇಶ್ವರ ಎಲೌ ದೇವಿಯೇ, ಸ್ತ್ರೀಯರು ಯಾವ ಕರ್ಮದಿಂದ ಅಲ್ಪಾಯುಷಿಗಳಾಗುತ್ತಾರೆ ಮತ್ತು ವ್ಯಾಧಿಗ್ರಸ್ತರಾಗಿ ಕ್ಲೇಶ ಪಡುತ್ತಾರೆ? ಇದನ್ನು ಕೇಳಲು ಬಯಸುತ್ತೇನೆ.
ಉಮಾ
ಸರ್ವಭೂತಾನಿ ಯಾ ನಾರೀ ಸತತಂ ಹಂತಿ ನಿರ್ದಯಾ |
ಸಾಧುಘ್ನೀ ವಾ ಕೃತಘ್ನೀ ವಾ ನಾರೀ ನರಕನಿರ್ಭಯಾ ||56||
ವಿಷದಾ ಗರದಾ ಚೈವ ಸತತಂ ಸಾಹಸಪ್ರಿಯಾ |
ಗರ್ಭಾನ್ನಿಪಾತಯೇಚ್ಚಾಪಿ ಪರಸ್ತ್ರೀಣಾಮಥಾತ್ಮನಃ ||57||
ಅಧರ್ಮೇ ರಮತೇ ಚಾಪಿ ಪಾಪಬುದ್ಧಿಸಮನ್ವಿತಾ |
ನರಕೇ ಸಾ ಚಿರಂ ಸ್ಥಿತ್ವಾ ತಿರ್ಯಗ್ಯೋನಿಷು ಜಾಯತೇ ||58||
ಉಮಾ ಯಾವ ನಾರಿಯು ಸತತ ನಿರ್ದಯಳಾಗಿ ಎಲ್ಲ ಪ್ರಾಣಿಗಳನ್ನೂ ಅವುಗಳು ಸಾಧುಗಳಾಗಿದ್ದರೂ ಹೊಡೆಯುತ್ತಾಳೆಯೋ, ನರಕಭಯರಹಿತಳಾಗಿ ಕೃತಘ್ನಳಾಗಿರುತ್ತಾಳೆಯೋ, ಸತತವೂ ಸಾಹಸಕಾರ್ಯಗಳಲ್ಲಿ ಆಸಕ್ತಳಾಗಿ ಪ್ರಾಣಿಗಳಿಗೆ ವಿಷವನ್ನು ಕೊಡುತ್ತಾಳೆಯೋ, ತನ್ನ ಮತ್ತು ಪರಸ್ತ್ರೀಯರ ಗರ್ಭಪಾತವನ್ನುಂಟು ಮಾಡುತ್ತಾಳೆಯೋ, ಪಾಪಬುದ್ಧಿಯಿಂದ ಕೂಡಿದವಳಾಗಿ ಅಧರ್ಮದಲ್ಲಿಯೇ ಸಂತೋಷಪಡುತ್ತಾಳೆಯೋ ಅಂತಹ ಸ್ತ್ರೀಯು ನರಕದಲ್ಲಿ ಬಹುಕಾಲ ವಾಸಿಸಿ ಅನಂತರ ತಿರ್ಯಗ್ಯೋನಿಯಲ್ಲಿ ಜನಿಸುತ್ತಾಳೆ.
ತಿರ್ಯಗ್ಯೋನೌ ಚ ಸಾ ದೇವ ಯತ್ರ ಯತ್ರೋಪಜಾಯತೇ |
ತತ್ರ ತತ್ರ ನ ಸಂದೇಹೋ ಜಾತಮಾತ್ರಾ ವಿಯುಜ್ಯತೇ ||59||
ಎಲೈ ದೇವನೇ, ತಿರ್ಯಗ್ಯೋನಿಗಳಲ್ಲಿ ಎಲ್ಲೆಲ್ಲಿ ಜನಿಸಿದರೂ ಅವಳು ನಿಸ್ಸಂದೇಹವಾಗಿ ಜನಿಸಿದ ತಕ್ಷಣವೇ ಮರಣವನ್ನು ಹೊಂದುತ್ತಾಳೆ.
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಪದ್ಯತೇ |
ಗರ್ಭೇ ಮೃತ್ಯುಮವಾಪ್ನೋತಿ ಬಾಲ್ಯೇ ವಾಽಪ್ಯಥ ಯೌವನೇ ||60||
ವ್ಯತೀತೇ ಯೌವನೇ ವಾಪಿ ಕಾಲಧರ್ಮೇಣ ಯುಜ್ಯತೇ |
ವ್ಯಾಧಿಭಿಶ್ಚೈವ ಬಹುಭಿಃ ಪುರಾದುಶ್ಚರಿತೈಶ್ಚಿರಮ್ ||61||
ಯಾವಾಗಲಾದರೂ ಒಮ್ಮೆ ಮನುಷ್ಯಲೋಕದಲ್ಲಿ ಜನಿಸಿದರೆ ಗರ್ಭದಲ್ಲೇ ಆಗಲಿ ಅಥವಾ ಬಾಲ್ಯದಲ್ಲಾಗಲೀ ಅಥವಾ ಯೌವನದಲ್ಲಾಗಲೀ ಅಥವಾ ಯೌವನವು ಕಳೆದ ತಕ್ಷಣದಲ್ಲಾಗಲೀ ಮರಣವನ್ನು ಹೊಂದುತ್ತಾಳೆ. ಹಿಂದೆ ಬಹುಕಾಲ ಮಾಡಿದ ಅನೇಕ ದುಷ್ಕರ್ಮಗಳಿಂದ, ಅನೇಕ ವ್ಯಾಧಿಗಳಿಂದ ಪೀಡಿಸಲ್ಪಡುತ್ತಾಳೆ.
ಶಯನಾಸನಭೋಗೇಷು ನಿರ್ವೃತಿಂ ಸಾ ನ ವಿಂದತಿ |
ವೇದನಾರ್ತಾ ವಿಪದ್ಯೇತ ಕಿಂ ಭೂಯಃ ಶ್ರೋತುಮಿಚ್ಛಸಿ ||62||
ಶಯನಾಸನ ಭೋಗಗಳಲ್ಲಿ ಸಂತೋಷವನ್ನು ಹೊಂದುವುದಿಲ್ಲ. ರೋಗದಿಂದ ಉಂಟಾದ ವೇದನೆಯಿಂದ ಆರ್ತಳಾಗಿ ಮರಣವನ್ನು ಹೊಂದುತ್ತಾಳೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ?
ರುದ್ರಃ
ಕೇನ ಕರ್ಮವಿಪಾಕೇನ ಕ್ಲಿಶ್ಯಂತೇ ಕುಲಜಾಃ ಸ್ತ್ರಿಯಃ |
ಕುಭೋಜನಾಃ ಕುಚೇಲಾಶ್ಚ ದೀನಾಃ ಕೃಪಣಜೀವಕಾಃ ||63||
ಪ್ರಾಪ್ನುವಂತಿ ಚ ನಿರ್ವೇದಂ ದುಃಖಿತಾಃ ಪ್ರವ್ರಜಂತಿ ಚ |
ಪ್ರಾಯೋಪವೇಶನಂ ಚೈವ ರಜ್ಜೂಮಗ್ನಿಪ್ರವೇಶನಮ್ ||64||
ಮರುಪ್ರಪತನಂ ಚೈವ ಕಾಂಕ್ಷಂತೇ ಕೇನ ಕರ್ಮಣಾ |
ಏತದಿಚ್ಛಾಮಿ ವಿಜ್ಞಾತುಂ ಬ್ರೂಹಿ ಮೇ ವರವರ್ಣಿನಿ ||65||

ರುದ್ರ ಸತ್ಕುಲದಲ್ಲಿ ಜನಿಸಿದ ಸ್ತ್ರೀಯರು ಯಾವ ಕರ್ಮದಿಂದ ಕೆಟ್ಟ ಭೋಜನವನ್ನೂ, ಕೆಟ್ಟ ವಸ್ತ್ರಗಳನ್ನೂ ಹೊಂದಿ ದೀನರಾಗಿ ಕಾರ್ಪಣ್ಯದಿಂದ ಜೀವನವನ್ನು ಮಾಡುತ್ತಾರೆ? ಜೀವನದಲ್ಲಿ ನಿರಾಸೆಯನ್ನು ಹೊಂದಿ ದುಃಖಿತರಾಗಿ ಮನೆಯನ್ನು ಬಿಟ್ಟು ಹೊರಟು ಹೋಗುತ್ತಾರೆ? ಅಥವಾ ಪರಪುರುಷನಾಗಲೀ, ಹಗ್ಗದಿಂದ ಗೃಹ ಬಂಧನವನ್ನಾಗಲೀ, ಅಗ್ನಿಪ್ರವೇಶವನ್ನಾಗಲೀ, ಮರುಭೂಮಿಯಲ್ಲಿ ದೇಹತ್ಯಾಗವನ್ನಾಗಲೀ ಯಾವ ಕರ್ಮದಿಂದ ಬಯಸುತ್ತಾರೆ? ಎಲೌ ಸುಂದರಿಯೇ, ಇದನ್ನು ತಿಳಿಯಲು ಬಯಸುತ್ತೇನೆ. ಇದನ್ನು ನನಗೆ ಹೇಳು.

ಉಮಾ

ಕೂಟಕಾ ಪಟಿಕಾ ನಾರೀ ಸತ್ಯಾರ್ಜವವಿವರ್ಜಿತಾ |
ಧರ್ಮವಿದ್ವೇಷಿಣೀ ನಿತ್ಯಂ ದಾನವ್ಯಾ ಘಾತಕಾರಿಕಾ ||66||
ವ್ರತೋಪವಾಸಹೀನಾ ಚ ದೈವಪೈತ್ರುವಿವರ್ಜಿತಾ |
ಉಚ್ಛಂದಕಂ ಯಾಚಿತಕಂ ನ್ಯಾಸಂ ನಿಕ್ಷೇಪಮೇವ ಚ ||67||
ಶಕ್ತಿದ್ವಯಾದ್(?) ವಾ ಶಾಠ್ಯಾದ್ ವಾ ಲೋಭಾನ್ಮೋಹಾತ್ ತಥಾಪಿ ವಾ |
ಯಾಚಮಾನಾ ಸ್ವಕಂ ದ್ರವ್ಯಂ ನ ತದ್ ದಾಪಯತೀಹ ಸಾ |
ಅನೇನ ಕರ್ಮಣಾ ನಾರೀ ಜಾಯತೇ ನರಕಾಲಯಾ ||68||

ಉಮಾ ಯಾವ ನಾರಿಯು ಸತ್ಯ ಮತ್ತು ಋಜುತನದಿಂದ ರಹಿತಳಾಗಿ ಮೋಸದಲ್ಲಿಯೇ ಆಸಕ್ತಳಾಗಿ ನಿತ್ಯವೂ ಧರ್ಮವನ್ನು ನಿರ್ದೇಶಿಸುತ್ತಾ ದಾನಗಳಿಗೆ ವಿರೋಧವನ್ನುಂಟು ಮಾಡುತ್ತಾಳೆಯೋ, ವ್ರತೋಪವಾಸ ಹೀನಳಾಗಿ, ದೇವ-ಪಿತೃಗಳ ಆರಾಧನೆಯಿಂದ ರಹಿತಳಾಗಿ, ತನ್ನ ಬಳಿ ಇಟ್ಟ ನ್ಯಾಸವನ್ನಾಗಲೀ ನಿಕ್ಷೇಪವನ್ನಾಗಲೀ ತನ್ನ ಶಕ್ತಿಯಿಂದ ಅಥವಾ ಶಾಠ್ಯದಿಂದ ಅಥವಾ ಲೋಭ-ಮೋಹಗಳಿಂದ ಅಪಹರಿಸಿ ಅದನ್ನು ಇಟ್ಟವರು ಯಾಚಿಸಿದರೂ ಅವರ ದ್ರವ್ಯವನ್ನು ಹಿಂದೆ ಕೊಡುವುದಿಲ್ಲವೋ ಅಥವಾ ಇನ್ನೊಬ್ಬರಿಂದ ಹಿಂದೆ ಕೊಡುಸುವುದಿಲ್ಲವೋ ಅಂತಹ ನಾರಿಯು ಆ ಕರ್ಮದಿಂದ ನರಕವಾಸಿಯಾಗುತ್ತಾಳೆ.

ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಪದ್ಯತೇ ||69||
ಕ್ಷೀಣದ್ರವ್ಯೇ ತಥಾ ನಾರೀ ಸಂಭೂತಾಽಥ ಮಹಾಕುಲೇ |
ಪ್ರಾಪ್ನೋತ್ಯಪಿ ಚ ಭರ್ತಾರಂ ದರಿದ್ರಂ ಕ್ಲೇಶಭಾಗಿನಮ್ ||70||

ಅವಳು ಒಂದು ಪಕ್ಷ ಮನುಷ್ಯಜನ್ಮವನ್ನು ಹೊಂದಿದರೆ ದ್ರವ್ಯಹೀನವಾದ ಒಂದು ಮಹಾಕುಲದಲ್ಲಿ ಜನಿಸಿ, ದರಿದ್ರನೂ ಕ್ಲೇಶಭಾಗಿಯೂ ಆದ ಪತಿಯನ್ನು ಪಡೆಯುತ್ತಾಳೆ.

ಏವಂ ದರಿದ್ರತಾಂ ಪ್ರಾಪ್ಯ ಕ್ಲಿಶ್ಯತೇ ಹಿ ಕುಲಾಂಗನಾ |
ಕ್ರಂದನಾ ಚ ಕುಚೇಲಾ ಚ ಕುಲಕರ್ಮಾಸಮಾಶ್ರಿತಾ ||71||

ಹೀಗೆ ಕುಲಾಂಗನೆಯಾದ ಅವಳು ದಾರಿದ್ರ್ಯವನ್ನು ಹೊಂದಿ ಅಳುತ್ತಾ ಕೆಟ್ಟ ವಸ್ತ್ರಗಳನ್ನು ಧರಿಸಿ ಕುಲಕರ್ಮಗಳನ್ನು ಮಾಡದೆ ಕ್ಲೇಶಗಳನ್ನು ಅನುಭವಿಸುತ್ತಾಳೆ.

ಪರೇಷಾಂ ಗೃಹಮಾಸಾದ್ಯ ಪರಪಿಂಡೋಪಜೀವಿಕಾ |
ಪ್ರಾಪ್ನೋತಿ ಕ್ಲೇಶಮಖಿಲಂ ಕ್ಷಪಂತೀ ಶೀಲಮಾತ್ಮನಃ ||72||

ಇನ್ನೊಬ್ಬರ ಮನೆಯನ್ನು ಸೇರಿ ಅವರ ಅನ್ನವನ್ನು ಉಪಜೀವಿಸಿ ತನ್ನ ಶೀಲವನ್ನು ಕಳೆದುಕೊಳ್ಳುತ್ತಾ ಅಖಿಲ ಕ್ಲೇಶವನ್ನು ಹೊಂದುತ್ತಾಳೆ.

ಅಶೌಚದಾಸಭಾವೇನ ಪರಚ್ಛಂದಾನುವರ್ತಿನೀ |
ಮಾತಾಪಿತೃವಿಯೋಗೇನ ಭರ್ತುಶ್ಚ ಮರಣೇನ ಚ ||73||
ದಾರಿದ್ರ್ಯೇಣ ಚ ಕ್ಲಿಶ್ಯಂತೀ ಅಪತ್ಯಮರಣೇನ ಚ |
ದೌರ್ಭಾಗ್ಯವಧಬಂಧೇನ ಈರ್ಷ್ಯಾಕ್ರೋಧವಶೇನ ಚ ||74||
ದುಃಖೈರಿಹೈವಚಾನ್ಯೈಶ್ಚ ಯದಾ ನಿರ್ವೇದಮಾಗತಾ |
ತದಾ ಪ್ರವ್ರಜಿತಾ ನಾರೀ ಪ್ರವಿಶೇದ್ವಾ ಹುತಾಶನಮ್ ||75||

ಶೌಚವಿಲ್ಲದ ದಾಸಭಾವವನ್ನು ಹೊಂದಿ ಇನ್ನೊಬ್ಬರ ಮನಸ್ಸಿಗೆ ಅನುಗುಣವಾಗಿ ವರ್ತಿಸುತ್ತಾ, ಮಾತಾ-ಪಿತೃಗಳನ್ನು ಕಳೆದುಕೊಂಡು, ಪತಿಯು ಮರಣವನ್ನು ಹೊಂದಿ ದಾರಿದ್ರ್ಯದಿಂದ ಕ್ಲೇಶ ಪಡುತ್ತಾ, ಮಕ್ಕಳ ಸಾವಿನಿಂದ ಅಥವಾ ದೌರ್ಭಾಗ್ಯದಿಂದ ಅಥವಾ ವಧೆ ಮತ್ತು ಬಂಧನಗಳಿಂದ, ಅಸೂಯೆ ಮತ್ತು ಕ್ರೋಧಗಳಿಗೆ ವಶಳಾಗಿ ಇಂತಹ ಮತ್ತು ಇನ್ನೂ ಅನೇಕ ದುಃಖಗಳಿಂದ ಪೀಡಿತಳಾಗಿ ಜೀವನದಲ್ಲಿ ವೈರಾಗ್ಯವನ್ನು ಹೊಂದಿ ಮನೆಯನ್ನು ಬಿಟ್ಟು ಹೋಗುತ್ತಾಳೆ ಅಥವಾ ಅಗ್ನಿಪ್ರವೇಶವನ್ನು ಮಾಡುತ್ತಾಳೆ.

ಕುರ್ಯಾತ್ ಪ್ರಾಯೋಪವೇಶಂ ವಾ ಮರುಪ್ರಪತನಂ ತಥಾ |
ರಜ್ಜುಂ ವಾಪ್ಯಥ ಗೃಹ್ಣಾತಿ ಮೃತ್ಯುಂ ವಾಽನ್ಯಂ ಸಮಾಶ್ರಯೇತ್ ||76||
ಏವಮೇತಾನ್ಯವಾಪ್ಯಂತೇ ದುಃಖಾನ್ಯಮರನಂದನ ||77||

ಪ್ರಾಯೋಪವೇಶವನ್ನಾಗಲೀ ಅಥವಾ ಮರುಭೂಮಿಯಲ್ಲಿ ಪ್ರಪತನವನ್ನಾಗಲೀ ಅಥವಾ ಹಗ್ಗದಿಂದ ನೇಣುಹಾಕಿಕೊಳ್ಳುವುದನ್ನಾಗಲೀ ಅಥವಾ ಬೇರೆ ಯಾವುದಾದರೂ ಮರಣಸಾಧನವನ್ನಾಗಲೀ ಆಶ್ರಯಿಸುತ್ತಾಳೆ. ಎಲೈ ಅಮರನಂದನನೇ, ಹೀಗೆ ಅವಳು ಇಂತಹ ದುಃಖಗಳನ್ನು ಹೊಂದುತ್ತಾಳೆ.

ಈಶ್ವರಃ

ನಾರೀಣಾಂ ದೇಹವೈಕಲ್ಯಂ ಕರ್ಮಣಾ ಕೇನ ಜಾಯತೇ |
ಸರ್ವಮರ್ಹಸಿ ಮೇ ವಕ್ತುಂ ಸರ್ವದೇವನಮಸ್ಕೃತೇ ||78||

ಈಶ್ವರ ಎಲೌ ಸರ್ವದೇವತೆಗಳಿಂದ ನಮಸ್ಕೃತಳಾದವಳೇ, ಯಾವ ಕರ್ಮದಿಂದ ನಾರಿಯರಿಗೆ ದೇಹವೈಕಲ್ಯ ಉಂಟಾಗುತ್ತದೆ? ಅದೆಲ್ಲವನ್ನೂ ನನಗೆ ಹೇಳಬೇಕು.
ಉಮಾ
ಯಾ ವದತ್ಯನೃತಂ ನಾರೀ ಸತ್ಯಾರ್ಜವವಿವರ್ಜಿತಾ |
ಮಾನಸ್ತಬ್ಧಾಽವನಾಶ್ಚೈವ ಭರ್ತಾರಂ ಚಾವಮನ್ಯತೇ ॥79॥
ಪತಿಮಭ್ಯಾಗತಂ ದೃಷ್ಟ್ವಾ ಬ್ರಾಹ್ಮಣಂ ಶ್ವಶುರಂ ತಥಾ |
ನ ಸಮಭ್ಯೇತಿ ಯಾ ನಾರೀ ಪ್ರದದಾತಿ ನ ಚಾಸನಮ್ ॥80॥
ಸುಖೋಪವಿಷ್ಟಾ ತೂಷ್ಣೀಂಶ್ಚ ರೂಪಯೌವನಗರ್ವಿತಾ |
ಭರ್ತ್ರಾ ಚಾಪಿ ವಿರುದ್ಧ್ಯೇತ ನಿತ್ಯಮಪ್ರಿಯವಾದಿನೀ ॥81॥
ಯದಾ ಸುರವಿರುದ್ಧಾ ಚ ಸತತಂ ಕಲಹಪ್ರಿಯಾ |
ಏವಂಶೀಲಸಮಾಚಾರಾ ಕ್ಷಿಪ್ರಂ ನರಕಮಾವ್ರಜೇತ್॥82॥
ಉಮಾ ಯಾವ ನಾರಿಯು ಸತ್ಯ ಮತ್ತು ಋಜುತನದಿಂದ ರಹಿತಳಾಗಿ ಸುಳ್ಳನ್ನೇ ನುಡಿಯುತ್ತಾ, ಅಹಂಕಾರದಿಂದ ಸ್ತಬ್ಧಳಾಗಿ ಪತಿಯನ್ನು ಮನಸ್ಸಿನಲ್ಲಿಯೂ ಚಿಂತಿಸದೆ ಪತಿಗೆ ಅವಮಾನ ಮಾಡುತ್ತಾಳೆಯೋ, ಪತಿಯಾಗಲೀ, ಬ್ರಾಹ್ಮಣನಾಗಲೀ, ಮಾವನಾಗಲೀ ಬಂದಾಗ ಎದ್ದು ಎದುರಿಗೆ ಹೋಗಿ ಅವರಿಗೆ ಆಸನವನ್ನು ಕೊಡುವುದಿಲ್ಲವೋ, ರೂಪ-ಯೌವನಗಳಿಂದ ಗರ್ವವನ್ನು ಹೊಂದಿ ಮಾತನಾಡದೆ ಅಂತಹ ಸಂದರ್ಭದಲ್ಲಿ ಸುಖವಾಗಿ ಕುಳಿತಿರುತ್ತಾಳೆಯೋ, ಪತಿಗೆ ನಿತ್ಯವೂ ಅಪ್ರಿಯವಾದುದನ್ನೇ ಮಾತನಾಡುತ್ತಾ ಅವನಿಗೆ ವಿರೋಧವನ್ನು ಮಾಡುತ್ತಾಳೆಯೋ, ಬ್ರಾಹ್ಮಣರಿಗೆ ವಿರುದ್ಧವಾಗಿ ನಡೆದುಕೊಂಡು ಸತತವಾಗಿ ಕಲಹಪ್ರಿಯ-ಳಾಗಿರುತ್ತಾಳೆಯೋ ಅಂತಹ ಶೀಲಸಮಾಚಾರವುಳ್ಳವಳು ಶೀಘ್ರವಾಗಿ ನರಕಕ್ಕೆ ಹೋಗುತ್ತಾಳೆ.
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಪದ್ಯತೇ |
ದೇಹವೈಕಲ್ಯಮಾಪ್ನೋತಿ ರಂಡಾ ಷಂಡಾಪಿ ವಾ ಭವೇತ್ ॥83॥
ಮನುಷ್ಯಯೋನಿಯಲ್ಲಿ ಒಂದು ಪಕ್ಷ ಜನಿಸಿದರೆ ದೇಹವೈಕಲ್ಯವನ್ನು ಹೊಂದುತ್ತಾಳೆ, ವಿಧವೆಯಾಗುತ್ತಾಳೆ ಅಥವಾ ನಪುಂಸಕಳಾಗುತ್ತಾಳೆ.
ಜಡಾಂಧಬಧಿರಾ ಮೂಕಾ ಏಕಪಕ್ಷಹತಾಪಿ ವಾ |
ಕರಾಳದಂತೀ ಲಂಬೋಷ್ಠೀ ಚಾಪಿ ವಾಽವ್ಯಕ್ತಭಾಷಿಣೀ ॥84॥
ವಿಕಲಾಂಗಾ ವಿರೂಪಾ ಚ ಕುಬ್ಜಾ ಚ ವಿಕಲಾನನಾ |
ಅಥವಾ ನಾಸಿಕೋಷ್ಠಸ್ಯ ದೀರ್ನೇಚ್ಛೇದನಮಾಪ್ನುಯಾತ್ ॥85॥
ಬುದ್ಧಿಮಾಂದ್ಯವುಳ್ಳವಳಾಗಿ, ಕುರುಡಿಯಾಗಿ, ಕಿವುಡಿಯಾಗಿ, ಮೂಕಿಯಾಗಿ ಅಥವಾ ಪಾರ್ಶ್ವವಾಯು ಪೀಡಿತಳಾಗಿ, ಕಪ್ಪಾದ ಹಲ್ಲುಗಳನ್ನು ಹೊಂದಿದವಳಾಗಿ, ಇಳಿ ಬಿದ್ದ ತುಟಿಯನ್ನು ಹೊಂದಿ, ಅಸ್ಪಷ್ಟವಾಗಿ ಮಾತನಾಡುವವಳಾಗಿ, ಅಂಗವೈಕಲ್ಯವನ್ನು ಹೊಂದಿ, ಕುರೂಪಿಯಾಗಿ, ಕುಬ್ಜೆಯಾಗಿ, ಸೊಟ್ಟ ಬಾಯಿ ಉಳ್ಳವಳಾಗಿ ಅಥವಾ ಮೊಲದಂತೆ ಮೂರು ತುಟಿಯುಳ್ಳವಳಾಗಿ ಜನಿಸುತ್ತಾಳೆ.
ಮಹೇಶ್ವರಃ
ಅಲಂಕಾರಮಹಂ ಸ್ತ್ರೀಣಾಂ ಶ್ರೋತುಮಿಚ್ಛಾಮಿ ಶೋಭನೇ |
ಉತ್ಸವೇ ವ್ಯಸನೇ ಚ ಸ್ಯಾದ್ ಯೇನ ನಿತ್ಯಮಲಂಕೃತಾ ॥86॥
ಉಮಾ
ಸುವರ್ಣಮಣಿಮುಕ್ತಾಶ್ಚ ವಸತ್ರಣ್ಯಾಭರಣಾನಿ ಚ |
ಆನೀಯಮೇತದ್ ಭವತಿ ಭಗವನ್ ಸ್ತ್ರೀಜನಸ್ಯ ತು ॥87॥
ಪೂಜ್ಯನೇ, ಸ್ತ್ರೀಜನಕ್ಕೆ ಸುವರ್ಣ, ಮುತ್ತು ಮತ್ತು ವಸತ್ರಭರಣಗಳನ್ನು ತಂದುಕೊಡಬೇಕಾಗುತ್ತದೆ.
ವಿಭೂಷಣಂ ರಕ್ಷಣೀಯಂ ಚೋರೇಭ್ಯಃ ಸರ್ವತೋ ಭಯಾತ್ |
ಭೂಷಣಾನಾಂ ತು ಸರ್ವೇಷಾಂ ಶೃಣು ಭೂಷಣಮುತ್ತಮಮ್ ॥88॥
ಒಡವೆಗಳನ್ನು ಯಾವಾಗಲೂ ಚೋರರ ಭಯದಿಂದ ರಕ್ಷಿಸಬೇಕು. ಎಲ್ಲ ಭೂಷಣಗಳಲ್ಲಿಯೂ ಉತ್ತಮವಾದ ಭೂಷಣವನ್ನು ಹೇಳುತ್ತೇನೆ, ಕೇಳು.
ವ್ರತಂ ಚ ಭೂಷಣಂ ಸ್ತ್ರೀಣಾಂ ಸುಶೀಲಶ್ಚ ವಿಭೂಷಣಮ್ |
ವೃದ್ಧೋ ವಿರೂಪೋ ಬೀಭತ್ಸೋ ನಿರ್ಧನೋ ವಿಗುಣಸ್ತಥಾ ॥89॥
ನಿರ್ಗುಣಸ್ತು ತಥೈವ ಸ್ಯಾತ್ ಸ್ತ್ರೀಣಾಂ ಭೂಷಣಮುತ್ತಮಮ್ |
ವೈಧವ್ಯಸದೃಶಂ ದುಃಖಂ ಸ್ತ್ರೀಣಾಂ ಚೈವ ನ ವಿದ್ಯತೇ ॥90॥
ಪಾತಿವ್ರತ್ಯವು ಸ್ತ್ರೀಯರಿಗೆ ಭೂಷಣ. ಒಳ್ಳೆಯ ನಡತೆಯು ವಿಶೇಷವಾಗಿ ಭೂಷಣ. ಪತಿಯು ವೃದ್ಧನಾಗಿರಲಿ, ವಿರೂಪನಾಗಿರಲಿ, ಭಯಂಕರನಾಗಿ ಕಾಣಲಿ, ನಿರ್ಧನನಾಗಿರಲಿ ಅಥವಾ ಗುಣಶೂನ್ಯನಾಗಿರಲಿ, ಏನೇ ಆದರೂ ಪತಿಯೇ ಸ್ತ್ರೀಯರಿಗೆ ಶ್ರೇಷ್ಠವಾದ ಭೂಷಣ. ಸ್ತ್ರೀಯರಿಗೆ ವೈಧವ್ಯಕ್ಕೆ ಸದೃಶವಾದ ಇನ್ನೊಂದು ದುಃಖವು ಇರುವುದಿಲ್ಲ.
ರತ್ನಂ ಗಂಧಶ್ಚ ಪುಷ್ಪಂ ಚ ಸೌಖ್ಯಂ ಬಹುವಿಧಂ ತಥಾ |
ಭರ್ತ್ರಾ ವೈ ವಿಪ್ರಯುಕ್ತಾನಾಂ ಸ್ತ್ರೀಣಾಂ ತಜ್ಜಾಯತೇ ವಿಷಮ್ ॥91॥
ರತ್ನಗಳು, ಗಂಧ-ಪುಷ್ಪಗಳು, ಹಾಗೆಯೇ ಬಹುವಿಧ ಸೌಖ್ಯ- ಎಲ್ಲವೂ ಪತಿಹೀನಳಾದ ಸ್ತ್ರೀಗೆ ವಿಷವಾಗುತ್ತದೆ.

ಮದದರ್ಪಮನಾಯಾಸಂ ರೂಪಂ ವರ್ಣಂ ವಪುಃ ಶುಭಮ್ |
ನಿತ್ಯಂ ದಾಸಜನಸ್ಯೇಕ್ಷಾ ಧೈರ್ಯಮಪ್ರತಿಯೋಷಿತಾಮ್ ॥92॥
ತಾಸಾಂ ಪುತ್ರೇಷು ಪೌತ್ರೇಷು ಮಾತುಳಭ್ರಾತೃಗೌರವಮ್ |
ತಥೈವ ಪ್ರತ್ಯಯಸ್ನೇಹೋ ವೈಧವ್ಯೇನ ಪ್ರಣಶ್ಯತಿ ॥93॥
ಮದ, ಅಹಂಕಾರ, ಆಯಾಸರಾಹಿತ್ಯ, ರೂಪ, ದೇಹದ ಬಣ್ಣ ಮತ್ತು ಕಾಂತಿ, ದಾಸಜನರ ಮೇಲ್ವಿಚಾರಣೆ, ಧೈರ್ಯ, ಅನುಕೂಲವಾದ ಸ್ತ್ರೀಯ ಮಕ್ಕಳು ಮೊಮ್ಮಕ್ಕಳು ಮತ್ತು ಸೋದರಮಾವ ಮತ್ತು ಸಹೋದರ ರೂಪರಾದ ಸಂಬಂಧಿಕರಲ್ಲಿ ಇರುವ ನಂಬಿಕೆ ಮತ್ತು ಸ್ನೇಹ ಇವೆಲ್ಲವೂ ವೈಧವ್ಯದಿಂದ ನಾಶವನ್ನು ಹೊಂದುತ್ತವೆ.
ಸಂಯೋಗೇ ಸಹವಾಸೇ ಚ ಬಂಧುವರ್ಗಸುಹೃಜ್ಜನೇ |
ಪ್ರೀತಿಃ ಶಿಥಿಲತಾಂ ಯಾತಿ ವಿಸ್ರಂಭಃ ಪ್ರಣಯಸ್ತಥಾ ॥94॥
ಇನ್ನೊಬ್ಬರ ಜೊತೆಯಲ್ಲಿ ವಾಸ ಮಾಡುವುದಕ್ಕೆ ಬಂಧುವರ್ಗದಲ್ಲಿ ಮತ್ತು ಸುಹೃಜ್ಜನರಲ್ಲಿ ಇರಬೇಕಾದ ಪ್ರೀತಿಯು ಶಿಥಿಲವಾಗುತ್ತದೆ. ಇನ್ನೊಬ್ಬರಲ್ಲಿರುವ ಸ್ನೇಹವೂ, ವಿಶ್ವಾಸವೂ ಕ್ಷೀಣವಾಗುತ್ತದೆ.
ಏವಮಾದಿಷು ದುಃಖೇಷು ಖಿದ್ಯಂತೇ ವಿಧವಾಃ ಸ್ತ್ರಿಯಃ |
ನಾನ್ಯದ್ ದುಃಖತರಂ ಸ್ತ್ರೀಣಾಂ ವೈಧವ್ಯೇನ ಸಮಂ ಭವೇತ್ ॥95॥
ವಿಧವೆಯರಾದ ಸ್ತ್ರೀಯರು ಇಂತಹ ದುಃಖಗಳಲ್ಲಿ ಬಳಲುತ್ತಾರೆ. ಸ್ತ್ರೀಯರಿಗೆ ವೈಧವ್ಯಕ್ಕೆ ಸಮವಾದ ಇನ್ನೊಂದು ದುಃಖವಿಲ್ಲ.
ಯದಿ ಕೋಟೀಧನಾ ನಾರೀ ಪುತ್ರೈಶ್ಚ ಬಹುಭಿರ್ಯುತಾ |
ಭರ್ತ್ರಾ ವೈ ವಿಪ್ರಯುಕ್ತಾಯಾ ಜೀವಿತಂ ಮರಣಂ ಸ್ಮೃತಮ್ ॥96॥
ಸ್ತ್ರೀಗೆ ಕೋಟಿಯಷ್ಟು ಧನವಿದ್ದರೂ, ಅನೇಕ ಪುತ್ರ-ಪೌತ್ರರಿದ್ದರೂ ಪತಿಯ ವಿಯೋಗ ಉಂಟಾದರೆ ಅವಳ ಜೀವನವು ಮರಣಕ್ಕೆ ಸಮಾನವಾಗಿರುತ್ತದೆ.
ಗಂಧಮಾಲ್ಯೈರಲಂಕಾರೈರ್ವಸಾತತ್ರಭರಣಭೂಷಣೈಃ |
ಮಹದ್ಭಿರ್ವಾಪಿ ರತ್ನೌಘೈಃ ವಿಧವಾ ಕಿಂ ಕರಿಷ್ಯತಿ ॥97॥
ಗಂಧ-ಮಾಲ್ಯಗಳಿಂದಾಗಲೀ, ಅಲಂಕಾರದಿಂದಾಗಲೀ, ವಸಾತತ್ರಭರಣ ಭೂಷಣಗಳಿಂದಾಗಲೀ, ಮಹಾರತ್ನ ಸಮೂಹಗಳಿಂದಾಗಲೀ ವಿಧವೆಯು ಏನು ಮಾಡುತ್ತಾಳೆ?
ವ್ಯಪೇತಮಂಡನಸ್ನಾನಾ ಪುಷ್ಪಭೂಷಣವರ್ಜಿತಾ |
ಶ್ರಿಯಂ ಸಖೀನಾಂ ಪಶ್ಯಂತೀ ಜೀವಲೋಕೇ ಮೃತೋಪಮಾ ॥98॥
ಮಂಗಳಸ್ನಾನವಿಲ್ಲದೆ ಪುಷ್ಪಗಳ ಅಲಂಕಾರರಹಿತಳಾಗಿ ಸಖಿಯರ ಸೌಭಾಗ್ಯವನ್ನು ನೋಡುತ್ತಾ ಜೀವಲೋಕದಲ್ಲಿ ಶವದಂತಿರುತ್ತಾಳೆ.
ನಾತಂತ್ರೀ ವಾದ್ಯತೇ ವೀಣಾ ನಾಚಕ್ರೋ ವರ್ತತೇ ರಥಃ |
ನಾಪತಿಃ ಸುಖಮೇಧೇತ ನಾರೀ ಬಂಧುಶತೈರಪಿ ॥99॥
ತಂತಿಯಿಲ್ಲದ ವೀಣೆಯು ನುಡಿಯುವುದಿಲ್ಲ. ಚಕ್ರವಿಲ್ಲದ ರಥವು ಚಲಿಸುವುದಿಲ್ಲ. ಅದರಂತೆ ನೂರು ಬಾಂಧವರಿದ್ದರೂ ಪತಿಯಿಲ್ಲದ ನಾರಿಯು ಸುಖವನ್ನು ಹೊಂದುವುದಿಲ್ಲ.
ನಹಿ ಸ್ವಚ್ಛಂದತೋ ದ್ರವ್ಯಂ ಗೃಹಂ ಮಾತೃಕಪೈತೃಕಮ್ |
ಉಪಭೋಕ್ತುಂ ಸ್ತ್ರಿಯೋಽರ್ಹಂತಿ ದಾತುಂ ವಾಪ್ಯಥ ಕಸ್ಯಚಿತ್ ॥100॥
ನಾರಿಯರು ತಮ್ಮ ಮನಸ್ಸಿಗೆ ಬಂದಂತೆ ತಂದೆ-ತಾಯಿಯರ ಧನವನ್ನಾಗಲೀ, ಗೃಹವನ್ನಾಗಲೀ ಭೋಗಿಸಲು ಅಥವಾ ಯಾರಿಗಾದರೂ ದಾನ ಮಾಡಲು ಸಮರ್ಥರಾಗುವುದಿಲ್ಲ.
ಸ್ವಚ್ಛಂದಭೋಗ್ಯಂ ನಾರೀಣಾಂ ಭರ್ತುರೇವ ಧನಂ ಭವೇತ್ |
ದ್ರವ್ಯಂ ವಾ ಯದಿ ವಾ ಧಾನ್ಯಮ್ ಋಣಂ ವಾಪಿ ಚ ಯದ್ಭವೇತ್ ॥
ಪತಿಯ ಧನವು ಮಾತ್ರ ಅವಳ ಸ್ವಚ್ಛಂದಭೋಗಕ್ಕೆ ಅರ್ಹವಾದುದು. ಪತಿಯ ದ್ರವ್ಯವಾಗಲೀ ಅಥವಾ ಧಾನ್ಯವಾಗಲೀ ಅಥವಾ ಋಣವಾಗಲೀ ಅವಳು ಅದರ ಭೋಗಕ್ಕೆ ಅರ್ಹಳಾಗುತ್ತಾಳೆ, ಬಾಧ್ಯತೆಯನ್ನು ಹೊಂದುತ್ತಾಳೆ.
ಮಿತಂ ದದಾತಿ ಹಿ ಪಿತಾ ಮಿತಂ ಮಾತಾ ಮಿತಂ ಸುತಾಃ |
ಅಮಿತಸ್ಯ ಚ ದಾತಾರಂ ಕಾ ಪತಿಂ ನಾಭಿನಂದತಿ ॥102॥
ತಂದೆಯು ಮಿತವಾದ ಸುಖವನ್ನೇ ಕೊಡುತ್ತಾನೆ. ತಾಯಿಯಾಗಲೀ, ಪುತ್ರರಾಗಲೀ ಮಿತವಾದ ಸುಖವನ್ನೇ ಕೊಡುತ್ತಾರೆ. ಅಮಿತವಾದ (ಈ ಲೋಕದ ಮತ್ತು ಪರಲೋಕದ) ಸುಖವನ್ನು ಕೊಡುವ ಪತಿಯನ್ನು ಯಾವ ನಾರಿಯು ಅಭಿನಂದಿಸುವುದಿಲ್ಲ?
ತಸ್ಮಾದ್ ಭರ್ತೃವಿಹೀನಾನಾಂ ಶ್ರೇಯಾನ್ ಮೃತ್ಯುರ್ನ ಜೀವಿತಮ್ |
ಏವಮೇತೇ ಮಯಾ ಪ್ರೋಕ್ತಾಃ ಸ್ತ್ರೀಧರ್ಮಾಸ್ತ್ರಿದಶೇಶ್ವರ ॥103॥
ಆದ್ದರಿಂದ ಪತಿಯನ್ನು ಕಳೆದುಕೊಂಡ ನಾರಿಯರಿಗೆ ಮರಣವು ಒಳ್ಳೆಯದು. ಬದುಕುವುದು ಒಳ್ಳೆಯದಲ್ಲ. ಎಲೈ ದೇವತೆಗಳಿಗೆ ಒಡೆಯನೇ, ನಾನು ಹೀಗೆ ಸ್ತ್ರೀ ಧರ್ಮಗಳನ್ನು ಹೇಳಿದ್ದೇನೆ.
ನಾರದಃ
ಏವಂ ವದಂತೀಂ ರುದ್ರಾಣೀಂ ಲಜ್ಜಾಭಾವಸಮನ್ವಿತಾಮ್ |
ತೋಷಯಾಮಾಸ ದೇವೇಶೋ ವಾಚಾ ಸಂಜನಯನ್ ಪ್ರಿಯಮ್ ॥
ನಾರದ ಹೀಗೆ ಮಾತನಾಡುತ್ತಾ ಲಜ್ಜೆಯಿಂದ ಕೂಡಿದ ಪಾರ್ವತಿಯನ್ನು ಕುರಿತು ದೇವೇಶನಾದ ಮಹೇಶ್ವರನು ಮಾತಿನಿಂದ ಅವಳಿಗೆ

ಪ್ರಿಯವನ್ನುಂಟು ಮಾಡುತ್ತಾ ಸಂತೋಷಪಡಿಸಿದನು.
ಋಷಯೋ ದೇವಗಂಧರ್ವಾಃ ಸಸುರಾಶ್ಚ ಸರಾಕ್ಷಸಾಃ |
ದೇವತಾಪ್ರಮದಾಶ್ಚಾಪಿ ದೇವನದ್ಯಶ್ಚ ಸಂಗತಾಃ ॥105॥
ಪ್ರಣಮ್ಯ ಶಿರಸಾ ದೇವೀಂ ಸ್ತುತಿಭಿಶ್ಚಾಭಿತುಷ್ಟುವುಃ |
ಪೂಜಯಾಮಾಸುರಪರೇ ದೇವದೇವಂ ಮುದಾಯುತಾಃ ॥106॥
ಅಲ್ಲಿ ನೆರೆದಿದ್ದ ಋಷಿಗಳೂ, ದೇವತೆಗಳೂ, ಗಂಧರ್ವರೂ, ರಾಕ್ಷಸರೂ, ದೇವತಾ ಸ್ತ್ರೀಯರೂ, ದೇವನದಿಗಳೂ ದೇವಿಯಾದ ಪಾರ್ವತಿಗೆ ಶಿರಸಾ ಪ್ರಣಾಮವನ್ನು ಮಾಡಿ ಅನೇಕ ಸ್ತೋತ್ರಗಳಿಂದ ಸ್ತೋತ್ರ ಮಾಡಿದರು. ಇನ್ನು ಕೆಲವರು ಸಂತೋಷದಿಂದ ಕೂಡಿದವರಾಗಿ ದೇವದೇವನಾದ ಮಹೇಶ್ವರನನ್ನು ಪೂಜಿಸಿದರು.
ಅಪಾರವಿಸ್ಮಯಾನ್ಯೂಚುಸ್ತಮರ್ಥಮಭಿಚಿಂತ್ಯ ಚ |
ಸಂಹೃಷ್ಟಮನಸಃ ಸರ್ವೇ ಸಂವಾದಂ ಚಿಂತಯನ್ ಮುಹುಃ ॥107॥
ಆ ಸಂವಾದವನ್ನು ಕೇಳಿದವರೆಲ್ಲಾ ಅದನ್ನು ಪುನಃ ಪುನಃ ಚಿಂತಿಸುತ್ತಾ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಈ ಸಂವಾದವು ಅಪಾರವಾದ ಅರ್ಥವನ್ನು ಹೊಂದಿದುದು ಮತ್ತು ಆಶ್ಚರ್ಯಕರವಾದುದು ಎಂದು ಹೇಳಿದರು.
ತತ್ರ ತಸ್ಮಿನ್ ಕ್ಷಣೇ ದೇವೋ ದೇವೀಂ ವಚನಮಬ್ರವೀತ್ ॥108॥
ಅಲ್ಲಿ ಆ ಕ್ಷಣದಲ್ಲಿ ಮಹೇಶ್ವರನು ಪಾರ್ವತಿಯನ್ನು ಕುರಿತು ಹೇಳಿದನು.
ಶೃಣು ಕಲ್ಯಾಣಿ ಮದ್ವಾಕ್ಯಂ ಯದಿದಂ ತು ತ್ವಯಾ ಮಯಾ |
ಕೃತಂ ಸಂವಾದಮಭವತ್ ತ್ರೈಲೋಕ್ಯಂ ತದ್ ಭವಿಷ್ಯತಿ ॥109॥
ಖ್ಯಾತಂ ಪುಣ್ಯಂ ಪವಿತ್ರಂ ಚ ಭವಿತಾ ಚ ನ ಸಂಶಯಃ |
ಯ ಇದಂ ಶ್ರಾವಯೇದ್ ವಿಪ್ರಾನ್ ಸಂವಾದಂ ಚಾವಯೋಃ ಪ್ರಿಯೇ ॥
ಶುಚಿರ್ಭೂತ್ವಾ ನರಃ ಪ್ರಾಪ್ಯ ಯಜ್ಞಸ್ಯ ಫಲಮಾಪ್ನುಯಾತ್ |
ಯತ್ನತಃ ಶೃಣುಯಾನ್ನಿತ್ಯಂ ಧರ್ಮಂ ತದ್ಗತಮಾನಸಃ ॥111॥
ಕಲ್ಯಾಣಿಯೇ, ಇದನ್ನು ಕೇಳು. ನನಗೆ ಮತ್ತು ನಿನಗೆ ನಡೆದ ಈ ಸಂವಾದವೇನಿದೆಯೋ ಅದು ಮೂರುಲೋಕಗಳಲ್ಲಿಯೂ ಹರಡುತ್ತದೆ. ಇದು ಪ್ರಖ್ಯಾತವಾಗಿಯೂ, ಪುಣ್ಯಪ್ರದವಾಗಿಯೂ, ಪವಿತ್ರವಾಗಿಯೂ ಆಗುವುದರಲ್ಲಿ ಸಂಶಯವಿಲ್ಲ. ಎಲೌ ಪ್ರಿಯೆಯೇ, ಯಾವ ಮಾನವನು ವಿಪ್ರರನ್ನು ಸಮೀಪಿಸಿ ಶುಚಿಯಾಗಿ ಈ ನಮ್ಮ ಸಂವಾದವನ್ನು ಶ್ರವಣ ಮಾಡಿಸುತ್ತಾನೆಯೋ ಅವನು ಯಜ್ಞದ ಫಲವನ್ನು ಹೊಂದುತ್ತಾನೆ. ಮನುಷ್ಯನು ಶಿವ-ಪಾರ್ವತಿಯರಲ್ಲೇ ಮನಸ್ಸನ್ನು ಇಟ್ಟು ನಿತ್ಯವೂ ಈ ಧರ್ಮದ ಆಖ್ಯಾನವನ್ನು ಪ್ರಯತ್ನ ಪೂರ್ವಕವಾಗಿ ಕೇಳಬೇಕು.
ಶ್ರವಣಾದೇವ ತೇಷಾಂ ತು ಮಹದ್ ಧರ್ಮಫಲಂ ಲಭೇತ್ |
ಕಥಯೇಚ್ಛೃಣುಯಾದ್ ವಾಪಿ ಯತ್ಕಿಂಚಿನ್ನಿತ್ಯಮೈಹಿಕಮ್ |
ಸ ಭವೇತ್ ಮತ್ಪ್ರಿಯೋ ದೇವಿ ತಂ ಸ್ಮರಾಮಿ ದಿನೇ ದಿನೇ ॥112॥
ಈ ಸಂವಾದದ ಶ್ರವಣದಿಂದಲೇ ದೊಡ್ಡ ಫಲವುಂಟಾಗುತ್ತದೆ. ದೇವಿಯೇ, ಯಾರು ಈ ಸಂವಾದದ ಸ್ವಲ್ಪಭಾಗವನ್ನಾದರೂ ನಿತ್ಯವೂ ಹೇಳುತ್ತಾರೆಯೋ ಅಥವಾ ಕೇಳುತ್ತಾರೆಯೋ ಅವರು ನನಗೆ ಪ್ರಿಯರಾಗುತ್ತಾರೆ. ಅವರನ್ನು ನಾನು ದಿನದಿನದಲ್ಲಿ ಸ್ಮರಿಸುತ್ತೇನೆ.
ಯ ಇದಂ ಪಠತೇ ನಿತ್ಯಂ ಸಂವಾದಂ ಚಾವಯೋಃ ಶುಭಮ್ |
ಕೀರ್ತಿಮಾಯುಷ್ಯಮಾರೋಗ್ಯಂ ಪರತ್ರೇಹ ಚ ವಿಂದತಿ ॥113॥
ಯಾವ ಮನುಷ್ಯನು ನಮ್ಮಿಬ್ಬರ ಈ ಶುಭವಾದ ಸಂವಾದವನ್ನು ನಿತ್ಯವೂ ಪಠಿಸುತ್ತಾನೆಯೋ ಅವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕೀರ್ತಿ, ಆಯುಷ್ಯ ಮತ್ತು ಆರೋಗ್ಯಗಳನ್ನು ಹೊಂದುತ್ತಾನೆ.
ಶ್ರುತ್ವಾ ಚೈವ ಪ್ರಯೋಕ್ತಾ ತು ಕಥಂ ಸ ನ ಭವೇನ್ಮಹಾನ್ |
ಇತ್ಯುಕತ್ತ್ವ ಸ ತು ದೇವೇಶಃ ಪ್ರತಿಗೃಹ್ಯ ಗಿರೇಃ ಸುತಾಮ್ ॥114॥
ಇದನ್ನು ಕೇಳಿ ಅನುಷ್ಠಾನವನ್ನು ಮಾಡುವವನು ಹೇಗೆ ದೊಡ್ಡ ವ್ಯಕ್ತಿಯಾಗದೆ ಇದ್ದಾನು? ದೇವೇಶನಾದ ಮಹೇಶ್ವರನು ಹೀಗೆ ಮಾತನಾಡಿ ಪರ್ವತಪುತ್ರಿಯಾದ ಪಾರ್ವತಿಯನ್ನು ಕರೆದುಕೊಂಡು (ಅಲ್ಲಿಂದ ಹೊರಟನು).
ಭೀಷ್ಮಃ
ಏತಾವದುಕತ್ತ್ವ ದೇವರ್ಷಿರ್ನಾರದೋ ವಿರರಾಮ ಹ |
ತದದ್ಯ ನಿಖಿಲಂ ಸರ್ವಂ ಕಥಿತಂ ತೇ ಯುಧಿಷ್ಠಿರ ॥115॥
ಭೀಷ್ಮ ದೇವರ್ಷಿಗಳಾದ ನಾರದರು ಇಷ್ಟು ಮಾತುಗಳನ್ನು ಹೇಳಿ ಅನಂತರ ಸುಮ್ಮನಾದರು. ಎಲೈ ಯುಧಿಷ್ಠಿರನೇ, ಅದೆಲ್ಲವನ್ನೂ ನಿನಗೆ ಈ ದಿನ ಸಂಪೂರ್ಣವಾಗಿ ಹೇಳಿದ್ದೇನೆ.
ವೈಶಂಪಾಯನಃ
ಧರ್ಮರಾಜಸ್ತು ತಚ್ಛ್ರುತ್ವಾ ಭ್ರಾತೃಭಿರ್ಮುದಿತೋಽಭವತ್ |
ತತ್ಸರ್ವಂ ನಿಖಿಲಂ ಚೋಕ್ತಂ ತವೇಹ ಜನಮೇಜಯ ॥116॥
ವೈಶಂಪಾಯನ ಧರ್ಮರಾಜನಾದರೂ ತನ್ನ ತಮ್ಮಂದಿರ ಜೊತೆಯಲ್ಲಿ ಆ ಸಂವಾದವನ್ನು ಕೇಳಿ ಸಂತೋಷವನ್ನು ಹೊಂದಿದನು. ಎಲೈ ಜನಮೇಜಯನೇ, ಅದೆಲ್ಲವನ್ನೂ ನಿನಗೆ ಪೂರ್ಣವಾಗಿ ಹೇಳಿದ್ದೇನೆ.
ಶೂದ್ರಜಾತ್ಯಾಂ ಪ್ರಸೂತಸ್ಯ ಜಿಹ್ವಾಗ್ರೇ ಯಸ್ಯ ತಿಷ್ಠತಿ |
ಶಾಂತಿಪರ್ವಚತುರ್ಥಾಭಿಃ ಶೂದ್ರಃ ಸಂಪದ್ಯತೇ ದ್ವಿಜಃ ॥117॥

ಶೂದ್ರಜಾತಿಯಲ್ಲಿ ಹುಟ್ಟಿದವನೂ ಸಹ ಈ ಸಂವಾದವನ್ನು ಕೇಳಿದರೆ ಶ್ರೇಯಸ್ಸನ್ನು ಹೊಂದುತ್ತಾನೆ. ಶಾಂತಿಪರ್ವವನ್ನೂ ಸೇರಿಸಿ ನಾಲ್ಕು ಪರ್ವಗಳನ್ನು ಶ್ರವಣ ಮಾಡುವುದರಿಂದ ಶೂದ್ರನು ಮುಂದೆ ಬ್ರಾಹ್ಮಣ ಜನ್ಮವನ್ನು ಪಡೆಯುತ್ತಾನೆ.
ವೇದಾನಾಂ ಇತಿಹಾಸಸ್ಯ ಸೋಪವೇದಾಂಗಪಾರಗಃ |
ಸ ಹಿ ಮಾನ್ಯಶ್ಚ ಪೂಜ್ಯಶ್ಚ ಯಥಾ ವಿಪ್ರಃ ಷಡಂಗವಿತ್ ॥118॥
ಅವನು ವೇದಾಂಗಗಳಲ್ಲಿ ಪಾರಂಗತನಾಗಿ ಇತಿಹಾಸ ಜ್ಞಾನವನ್ನು ಪಡೆಯುತ್ತಾನೆ ಮತ್ತು ಷಡಂಗವನ್ನು ತಿಳಿದ ಬ್ರಾಹ್ಮಣನಂತೆ ಮಾನ್ಯನೂ, ಪೂಜ್ಯನೂ ಆಗುತ್ತಾನೆ.
ಧರ್ಮೇಣ ಶೃಣುಯಾದ್ ಯೋ ಹಿ ಪೂಜ್ಯಃ ಶೂದ್ರೋಽಪಿ ಶೀಲವಾನ್ |
ಅಕ್ಷಯಂ ಲಭತೇ ಧರ್ಮಂ ಶೂದ್ರಃ ಶೀಲಗುಣಾನ್ವಿತಃ ॥119॥
ಯಾವ ಶೂದ್ರನು ಶೀಲವಂತನಾಗಿ ಧರ್ಮದಿಂದ ಭಾರತವನ್ನು ಕೇಳುತ್ತಾನೆಯೋ ಅವನು ಪೂಜ್ಯನಾಗುತ್ತಾನೆ ಮತ್ತು ಅಕ್ಷಯವಾದ ಧರ್ಮವನ್ನು ಹೊಂದುತ್ತಾನೆ.
ಶಾಂತಿಪರ್ವಾಧಿಯಾನಸ್ಯ ಶ್ರೂಯತಾಂ ತಸ್ಯ ಯಾ ಗತಿಃ |
ಕೋಟೀಶತಸಹಸ್ರಸ್ಯ ವರ್ಷಾಣಾಂ ದಿವಿ ತಿಷ್ಠತಿ ॥120॥
ಶಾಂತಿಪರ್ವವನ್ನು ಅಧ್ಯಯನ ಮಾಡುವವನಿಗೆ ಮುಂದೆ ಆಗುವ ಗತಿಯನ್ನು ಕೇಳು. ಅವನು ಲಕ್ಷ-ಕೋಟಿ ವರ್ಷಗಳವರೆಗೆ ಸ್ವರ್ಗದಲ್ಲಿ ವಾಸಿಸುತ್ತಾನೆ.
ಯದಿ ಚೇನ್ಮಾನುಷೇ ಲೋಕೇ ಕದಾಚಿದುಪಪದ್ಯತೇ |
ಜ್ಞಾನವಿಜ್ಞಾನಸಂಪನ್ನೋ ಭಾರತಜ್ಞೋ ಭವಿಷ್ಯತಿ |
ತಸ್ಮಾತ್ ಸರ್ವೇಷು ಲೋಕೇಷು ನ ಭಾರತಸಮಾ ಶ್ರುತಿಃ ॥121॥
ಯಾವಾಗಲಾದರೂ ಮಾನುಷಲೋಕದಲ್ಲಿ ಜನಿಸಿದರೆ ಜ್ಞಾನ-ವಿಜ್ಞಾನಸಂಪನ್ನನೂ ಭಾರತಾರ್ಥವನ್ನು ತಿಳಿದವನೂ ಆಗುತ್ತಾನೆ. ಆದ್ದರಿಂದ ಎಲ್ಲ ಲೋಕಗಳಲ್ಲಿ ಭಾರತ ಶ್ರವಣಕ್ಕೆ ಸಮವಾದ ಶ್ರವಣವಿಲ್ಲ.
ಜನಮೇಜಯಃ
ಇಮೇ ಹಿ ವಿಪ್ರಾಃ ಸತತಂ ವೇದಾಧ್ಯಯನತತ್ಪರಾಃ |
ಕಿನ್ನು ವೇದಶ್ರುತಿಃ ಪುಣ್ಯಾ ಭಾರತಂ ವಾ ಮಹಾದ್ವಿಜ ॥122॥
ಊನತುಲ್ಯಾಧಿಕತ್ವಂ ವಾ ವೇದಾನಾಂ ಭಾರತಸ್ಯ ವಾ |
ಏತದಿಚ್ಛಾಮಿ ವಿಜ್ಞಾತುಂ ಭಗವನ್ ವಕ್ತುಮರ್ಹಸಿ ॥123॥
ಎಲೈ ಶ್ರೇಷ್ಠ ಬ್ರಾಹ್ಮಣರೇ, ಇಲ್ಲಿ ನೆರೆದಿರುವ ಬ್ರಾಹ್ಮಣರೆಲ್ಲರೂ ಸತತವಾಗಿ ವೇದಾಧ್ಯಯನ ತತ್ಪರರಾದವರು. ವೇದ ಮತ್ತು ಭಾರತಗಳಲ್ಲಿ ಯಾವುದು ಹೆಚ್ಚು ಪುಣ್ಯಪ್ರದವಾದುದು? ಎಲೈ ಪೂಜ್ಯರೇ, ಇದನ್ನು ತಿಳಿಯಲು ಬಯಸುತ್ತೇನೆ. ಇದನ್ನು ನನಗೆ ಹೇಳಬೇಕು.
ವೈಶಂಪಾಯನಃ
ಕಿಂ ವಾ ತ್ವಂ ಮನ್ಯಸೇ ರಾಜನ್ ದೇವೇಭ್ಯೋ ಭಾರತಂ ಹವಿಃ |
ಭಾರತಂ ಪಂಚಮೋ ವೇದ ಇತಿಹಾಸ ಇತಿ ಶ್ರುತಿಃ ॥124॥
ವೈಶಂಪಾಯನ ಎಲೈ ರಾಜನೇ, ನಿನ್ನ ಅಭಿಪ್ರಾಯವೇನು? ದೇವತೆಗಳಿಗೆ ಭಾರತವು ಹವಿಸ್ಸಿನಂತೆ ಪ್ರಿಯವಾದುದು. ಭಾರತ ರೂಪವಾದ ಇತಿಹಾಸವು ಐದನೆಯ ವೇದವೆಂದು ವೇದದಲ್ಲಿಯೇ ಹೇಳಲ್ಪಟ್ಟಿದೆ.
ಅನುಗ್ರಹಾರ್ಥಂ ವರ್ಣಾನಾಂ ವ್ಯಾಸೇನಾಮಿತತೇಜಸಾ |
ಜ್ಞಾನಮುತ್ಪಾದಿತಂ ಹ್ಯೇತತ್ ಸರ್ವಜ್ಞೇನೋತ್ತಮಂ ಭುವಿ ॥125॥
ಸರ್ವಜ್ಞರೂ, ಅಮಿತತೇಜಸ್ವಿಗಳೂ ಆದ ವ್ಯಾಸರು ನಾಲ್ಕು ವರ್ಣಗಳಿಗೆ ಸೇರಿದ ಪ್ರಜೆಗಳ ಅನುಗ್ರಹಕ್ಕಾಗಿ ಉತ್ತಮವಾದ ಈ ಗ್ರಂಥವನ್ನು ಭೂಮಿಯಲ್ಲಿ ರಚಿಸಿದರು.
ಜ್ಞಾತ್ವಾ ತು ಸರ್ವಧರ್ಮಾಂಶ್ಚ ಜ್ಞಾಸ್ಯತೇ ನಿಶ್ಚಿತಾಂ ಮತಿಮ್ |
ಸರ್ವವರ್ಣಾ ಗಮಿಷ್ಯಂತಿ ತತ್ರ ಮೇ ನಾಸ್ತಿ ಸಂಶಯಃ ॥126॥
ಈ ಗ್ರಂಥದಿಂದ ಎಲ್ಲ ವರ್ಣದವರೂ ಎಲ್ಲ ಧರ್ಮಗಳನ್ನೂ ತಿಳಿದು ನಿಶ್ಚಿತವಾದ ಜ್ಞಾನವನ್ನು ಹೊಂದುತ್ತಾರೆ ಎಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.
ಸರ್ವೇ ಹಿ ಚೈಕತೋ ವೇದಾ ಭಾರತಂ ಚೈಕಮೇಕತಃ |
ಪುರಾ ದೇವೈಶ್ಚ ದೈತ್ಯೈಶ್ಚ ಸಮೇತೈಸ್ತುಲಯಾ ಧೃತಮ್ ॥127॥
ಹಿಂದೆ ದೇವತೆಗಳು, ದೈತ್ಯರೂ ಎಲ್ಲರೂ ಸೇರಿ ಒಂದು ಕಡೆ ವೇದಗಳನ್ನೂ, ಇನ್ನೊಂದು ಕಡೆ ಭಾರತವನ್ನೂ ಇಟ್ಟು ತಕ್ಕಡಿಯಲ್ಲಿ ತೂಗಿದರು.
ಸರಹಸ್ಯೈಸ್ತು ವಿಸ್ತೀರ್ಣೈರತೀತಾನಾಗತೈಸ್ತಥಾ |
ಯಸ್ಮಾಚ್ಛ್ರುತಿಜನ್ಯೈರನ್ಯೈರ್ವ್ಯಾಸಾತ್ಮಗುಣವಿಸ್ತರೈಃ ॥128॥
ಅತೀತ್ಯ ಚತುರೋ ವೇದಾನ್ ಗುರುಂ ಜಾನೀಹಿ ಭಾರತಮ್ |
ತಸ್ಮಾತ್ ತ್ರಿಷ್ವಪಿ ಲೋಕೇಷು ಮಹಾಭಾರತಮುಚ್ಯತೇ ॥129॥
ವ್ಯಾಸರ ಜ್ಞಾನಗುಣದಿಂದ ಕೂಡಿ ಶ್ರುತಿಮೂಲವನ್ನು ಹೊಂದಿದ್ದ ವಿಸ್ತಾರವಾದ ರಹಸ್ಯ ಸಹಿತವಾದ, ಅತೀತ ಮತ್ತು ಅನಾಗತವಾದ ಎಲ್ಲ ಗ್ರಂಥಗಳಿಗಿಂತಲೂ ಮತ್ತು ನಾಲ್ಕು ವೇದಗಳಿಗಿಂತಲೂ ಭಾರತವು ಹೆಚ್ಚು ಭಾರವನ್ನು ಹೊಂದಿದುದು ಎಂದು ತಿಳಿ. ಆ

ಕಾರಣದಿಂದ ಮೂರುಲೋಕಗಳಲ್ಲಿಯೂ ಮಹಾಭಾರತವೆಂದು ಕರೆಯಲ್ಪಡುತ್ತದೆ.
ಸಾಂಗೋಪಾಂಗೇಷು ವೇದೇಷು ಶಾಸ್ತ್ರೇಷು ವಿವಿಧೇಷು ಚ |
ಪ್ರದೃಶ್ಯಮಾನೇಷ್ವಸ್ತೀಹ ನ ಭಾರತಸಮಾ ಶ್ರುತಿಃ ||130||
ಸಾಂಗೋಪಾಂಗ ಸಹಿತವಾದ ವೇದಗಳನ್ನು ಮತ್ತು ವಿವಿಧ ಶಾಸ್ತ್ರಗಳನ್ನು ಪರಿಶೀಲನೆ ಮಾಡಿದರೂ ಭಾರತಕ್ಕೆ ಸಮಾನವಾದ ಇನ್ನೊಂದು ಗ್ರಂಥವಿಲ್ಲ.
ಸದೇವಯಕ್ಷಗಂಧರ್ವೈಃ ಸಕಿನ್ನರಮಹೋರಗೈಃ |
ತ್ರೈಲೋಕ್ಯೇ ನ ತದಪ್ಯಸ್ತಿ ಭಾರತೇ ಯನ್ನ ವಿದ್ಯತೇ ||131||
ಭಾರತದಲ್ಲಿ ಯಾವ ವಿಷಯವಿಲ್ಲವೋ ಅದು ದೇವ-ಯಕ್ಷ-ಗಂಧರ್ವರಿಂದ, ಕಿನ್ನರ-ಉರಗಗಳಿಂದ ಸಹಿತವಾದ ಮೂರುಲೋಕಗಳಲ್ಲಿಯೂ ಇಲ್ಲ.
ಶ್ರುತೀನಾಮಾಕರೋ ಹ್ಯೇಷ ರತ್ನಾನಾಮಿವ ಸಾಗರಃ |
ಜ್ಞಾನಾನಾಂ ಪರಮಂ ಹ್ಯೇತತ್ ಪವಿತ್ರಂ ಶೌಚಮುತ್ತಮಮ್ ||132||
ರತ್ನಗಳಿಗೆ ಸಾಗರವು ಆಶ್ರಯವಾದಂತೆ ಭಾರತವು ಶ್ರುತ್ಯರ್ಥಗಳಿಗೆ ಆಶ್ರಯವಾಗಿದೆ. ಇದು ಜ್ಞಾನಗಳಲ್ಲಿ (ಜ್ಞಾನಜನಕವಾದ ಗ್ರಂಥಗಳಲ್ಲಿ) ಶ್ರೇಷ್ಠವಾದುದು, ಶುದ್ಧವಾದುದು ಮತ್ತು ಪವಿತ್ರವಾದುದು.
ಯಾಂ ಯಾಂ ಶ್ರುತಿಂ ಪ್ರಾರ್ಥಯತೇ ಮನಸಾ ಕೃತನಿಶ್ಚಯಃ |
ಪ್ರವಿಶ್ಯ ಭಾರತಂ ರಾಜನ್ ತಾಂ ತಾಂ ಶ್ರುತಿಮವಾಪ್ನುಯಾತ್ ||133||
ಎಲೈ ರಾಜನೇ, ಮನಸ್ಸಿನಲ್ಲಿ ಯಾವ ಯಾವ ಶ್ರುತಿಗಳನ್ನು ತಂದುಕೊಳ್ಳುತ್ತಾನೆಯೋ ಭಾರತವನ್ನು ಪ್ರವೇಶಿಸಿದವನು ಆಯಾ ಶ್ರುತಿಗಳ ಅರ್ಥವನ್ನು ಇಲ್ಲಿ ಕಾಣುತ್ತಾನೆ.
ಅಬುದ್ಧಿಶೋಧನಂ ಹ್ಯೇತದ್ ಬುಧಾನಾಂ ಬುದ್ಧಿವರ್ಧನಮ್ |
ಶಾಂತಿಪರ್ವ ವಿಶೇಷೇಣ ಕ್ಷೀರಾದ್ ಘೃತಮಿವೋದ್ಧೃತಮ್ ||134||
ಪರ್ವಣಾಂ ತಸ್ಯ ಸರ್ವೇಷಾಂ ಸಾರಭೂತಂ ಪ್ರಕೀರ್ತಿತಮ್ ||135||
ಏತತ್ ತೇ ಕಥಿತಂ ಸರ್ವಂ ಪರಿಪೃಷ್ಟಂ ತು ಯತ್ ತ್ವಯಾ ||136||
ಇದು ಬುದ್ಧಿಹೀನರಿಗೆ ಬುದ್ಧಿಯನ್ನು ಶೋಧಿಸುವಂತಹದು. ಬುದ್ಧಿಯುಳ್ಳವರಿಗೆ ಬುದ್ಧಿಯನ್ನು ಅಭಿವೃದ್ಧಿಪಡಿಸುವಂತಹದು. ಕ್ಷೀರದಿಂದ ಘೃತವನ್ನು ತೆಗೆದಂತೆ ಶಾಂತಿ ಪರ್ವವು ವಿಶೇಷವಾಗಿ ಉದ್ಧರಿಸಲ್ಪಟ್ಟಿದೆ. ಅದು ಎಲ್ಲ ಪರ್ವಗಳ ಸಾರಭೂತವಾದ ಭಾಗವೆಂದು ಹೇಳಲ್ಪಡುತ್ತದೆ. ಎಲೈ ರಾಜನೇ, ನೀನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ನಾನು ಉತ್ತರವನ್ನು ಹೇಳಿದ್ದೇನೆ.
ಶ್ರದ್ದಧಾನೋ ನರೋ ಯಸ್ತು ಸಂವಾದಂ ಪುಣ್ಯವರ್ಧನಮ್ |
ಸಮಾಹಿತಮನಾ ನಿತ್ಯಂ ಶೃಣುಯಾದ್ ಶ್ರಾವಯೇತ ವಾ ||137||
ನಾಂಧೋ ನ ಬಧಿರೋ ರೋಗೀ ನೋನ್ಮತ್ತಶ್ಚೈವ ಜಾಯತೇ |
ಭಾರತಂ ಯೋ ನ ಜಾನಾತಿ ಸೋಽಂಧಃ ಪಾಪೋ ನರೋ ಭುವಿ ||
ಈ ಪುಣ್ಯವರ್ಧನವಾದ ಸಂವಾದವನ್ನು ಶ್ರದ್ಧೆ ಮತ್ತು ಸಮಾಧಾನಗಳಿಂದ ಯಾವನು ಹೇಳುತ್ತಾನೆಯೋ ಅಥವಾ ಕೇಳುತ್ತಾನೆಯೋ ಅವನು ಎಂದೂ ಕುರುಡನಾಗುವುದಿಲ್ಲ, ಕಿವುಡನಾಗುವುದಿಲ್ಲ, ರೋಗಿಯಾಗುವುದಿಲ್ಲ, ಉನ್ಮತ್ತನಾಗುವುದಿಲ್ಲ. ಭಾರತವನ್ನು ತಿಳಿಯದಿದ್ದ ನರನು ಭೂಮಿಯಲ್ಲಿ ಕುರುಡನೂ ಮತ್ತು ಪಾಪಿಯೂ ಆಗುವನು.
ಸರ್ವಭೂತಹಿತೋ ನಿತ್ಯಂ ದೇಶಿಕಃ ಸರ್ವಕರ್ಮಣಾಮ್ |
ವೇದೋಽಯಂ ಗುಣಕೃದ್ ರಾಜನ್ ಸರ್ವಪಾಪಪ್ರಣಾಶನಃ ||139||
ಎಲೈ ರಾಜನೇ, ಪಂಚಮವೇದವಾದ ಈ ಭಾರತವು ಸರ್ವಭೂತ ಹಿತವಾದುದು, ನಿತ್ಯವಾದುದು, ಸರ್ವಕರ್ಮಗಳ ಉಪದೇಶವನ್ನು ಮಾಡುವಂತಹದು, ಸರ್ವ ಪಾಪಗಳನ್ನು ಪರಿಹರಿಸುವಂತಹದು ಮತ್ತು ಸರ್ವ ಸದ್ಗುಣಗಳನ್ನೂ ಉಂಟು ಮಾಡುವಂತಹದು.
ಯಾನಿ ಕಾನ್ಯಪಿ ಶಾಸ್ತ್ರಾಣಿ ಕರಿಷ್ಯಂತೇ ಕೃತಾನಿ ವಾ |
ವೇದಶ್ರೇಷ್ಠಂ ಮಹಚ್ಚೇದಂ ಸತ್ಯಂ ಸತ್ಯಂ ವದಾಮ್ಯಹಮ್ ||140||
ಇದುವರೆಗೆ ಎಷ್ಟು ಶಾಸ್ತ್ರಗಳು ರಚಿಸಲ್ಪಟ್ಟಿವೆಯೋ ಮತ್ತು ಮುಂದೆ ರಚಿಸಲ್ಪಡುತ್ತವೆಯೋ ಅವುಗಳೆಲ್ಲದಕ್ಕಿಂತಲೂ ಮತ್ತು ವೇದಗಳಿಗಿಂತಲೂ ಈ ಮಹಾಭಾರತವು ಶ್ರೇಷ್ಠವಾದುದೆಂದು ನಾನು ಹೇಳುತ್ತೇನೆ. ಇದು ಸತ್ಯ, ಸತ್ಯ.
ನಾಶ್ರುತಾಯ ಪ್ರದಾತವ್ಯಂ ನ ಸುತಾಯಾಹಿತಾಯ ವಾ |
ನಾಶ್ರುತಾಯ ಪ್ರದಾತವ್ಯಂ ನ ಚಾನದಿಷ್ಟಕಾರಿಣೇ ||141||
ಇದನ್ನು ವೇದಜ್ಞಾನವಿಲ್ಲದವನಿಗಾಗಲೀ, ಅಪ್ರಿಯನಾದ ಪುತ್ರನಿಗಾಗಲೀ ಉಪದೇಶಿಸಬಾರದು. ಆದೇಶವನ್ನು ಪಾಲಿಸದಿರುವ ವ್ಯಕ್ತಿಗೂ ಹೇಳಬಾರದು.
ಇದಂ ಜ್ಯೇಷ್ಠಾಯ ಪುತ್ರಾಯ ಇದಂ ಶಿಷ್ಯಾಯ ಚಾರ್ಥಿನೇ |
ಏತದರ್ಥಂ ಚ ಶುಶ್ರೂಷಾಂ ಕರೋತ್ವವಿಮನಾ ಇವ ||142||
ಇದನ್ನು ಈ ಅರ್ಥವನ್ನು ಕೇಳಲು ಬಯಸುವ ಜ್ಯೇಷ್ಠ ಪುತ್ರನಿಗೂ ಮತ್ತು ಶಿಷ್ಯನಿಗೂ ಹೇಳಬೇಕು. ಅದಕ್ಕಾಗಿ ಅವನು ಬೇಸರವಿಲ್ಲದೆಯೇ ಗುರುಸೇವೆಯನ್ನು ಮಾಡಬೇಕು.
ಶ್ರದ್ದಧಾನಸ್ತು ಯಶ್ಚೇದಂ ಶೃಣುಯಾಚ್ಛ್ರಾವಯೇತ ವಾ |
ವಿಮುಕ್ತಃ ಸರ್ವಪಾಪೇಭ್ಯಃ ಸರ್ವಂ ಸ್ವಗೃಹವದ್ ವ್ರಜೇತ್ ||143||
ಯಾವನು ಶ್ರದ್ಧೆಯಿಂದ ಮಹಾಭಾರತವನ್ನು ಕೇಳುತ್ತಾನೆಯೋ ಮತ್ತು ಹೇಳುತ್ತಾನೆಯೋ ಅವನು ಎಲ್ಲ ಪಾಪಗಳಿಂದಲೂ

ಮುಕ್ತನಾಗಿ, ಎಲ್ಲ ಶುಭ ಲೋಕಗಳಿಗೂ ತನ್ನ ಮನೆಗೆ ಹೋದಂತೆ ಹೋಗುತ್ತಾನೆ.
ಪಾರಣಂ ಸರ್ವವೇದಾನಾಂ ಸರ್ವತೀರ್ಥಾವಗಾಹನಮ್ |
ಯಶ್ಚೇದಂ ಶೃಣುಯಾನ್ನಿತ್ಯಂ ಸಮಮೇತನ್ನ ಸಂಶಯಃ ॥144॥
ಎಲ್ಲ ವೇದಗಳ ಪಾರಾಯಣ ಮತ್ತು ಸರ್ವತೀರ್ಥಗಳಲ್ಲಿ ಸ್ನಾನ- ಇವುಗಳಿಗೆ ಭಾರತ ಶ್ರವಣದಿಂದ ಉಂಟಾದ ಪುಣ್ಯವು ಸಮವಾದುದು. ಇದರಲ್ಲಿ ಸಂಶಯವಿಲ್ಲ.
ಸುವರ್ಣದಾನಂ ಗೋದಾನಂ ಭೂಮಿದಾನಂ ದದಾತಿ ಚ |
ಪಠೇದಿಮಂ ಚ ಯೋ ನಿತ್ಯಂ ಸಮಾವೇತೌ ನೃಪೋತ್ತಮ ॥145॥
ಎಲೈ ನೃಪೋತ್ತಮನೇ, ಯಾವನು ನಿತ್ಯವೂ ಮಹಾಭಾರತವನ್ನು ಪಠಿಸುತ್ತಾನೆಯೋ ಅವನಿಗೆ ಅದರಿಂದ ಉಂಟಾದ ಪುಣ್ಯವು ಸುವರ್ಣದಾನ, ಗೋದಾನ ಮತ್ತು ಭೂಮಿದಾನಗಳಿಂದ ಉಂಟಾದ ಪುಣ್ಯಕ್ಕೆ ಸಮವಾದುದು.
ಶ್ರದ್ಧೇಯಮೇತತ್ ಪರಮಂ ಸಂಭಾವ್ಯಂ ಚ ನರೈಃ ಸದಾ |
ಪ್ರಯತ್ನೇನ ಗೃಹೀತವ್ಯಮಿದಂ ಶಾಸ್ತ್ರಮನುತ್ತಮಮ್ ॥146॥
ಈ ಶ್ರೇಷ್ಠವಾದ ಶಾಸ್ತ್ರದಲ್ಲಿ ಮಾನವರು ಶ್ರದ್ಧೆಯನ್ನು ಮಾಡಬೇಕು. ಇದನ್ನು ಯಾವಾಗಲೂ ಪೂಜಿಸಬೇಕು ಮತ್ತು ಪ್ರಯತ್ನಪೂರ್ವಕವಾಗಿ ಅರ್ಥಜ್ಞಾನವನ್ನು ಸಂಪಾದಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪತಿವ್ರತಾ ಉಮಾಮಹೇಶ್ವರಸಂವಾದೇ ಪತಿವ್ರತಾಧರ್ಮವಿಚಾರೇ ಮಹಾಭಾರತಪ್ರಶಂಸಾನಾಮ ಸಪ್ತತ್ರಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತೇಳನೆಯ
ಅಧ್ಯಾಯ ಮುಗಿಯಿತು.
॥ ಇತ್ಯುಮಾಮಹೇಶ್ವರಯೋಃ ಸಂವಾದಃ ಸಮಾಪ್ತಃ ॥
* * * * *
ಇನ್ನೂರ ಮೂವತ್ತೆಂಟನೆಯ ಅಧ್ಯಾಯ
ಸರ್ವಪಾಪಪರಿಹಾರೋಪಾಯದ ಮತ್ತು ಜ್ಞಾನಪ್ರಾಪ್ತಿಯ ಉಪಾಯದ ಕಥನ.
ಯುಧಿಷ್ಠಿರಃ
ಕ ಉಪಾಯೋ ವರಪ್ರಾಪ್ತೌ ಸರ್ವೇಷಾಂ ಪಾಪಕರ್ಮಣಾಮ್ |
ಜ್ಞಾನಸ್ಯ ಚ ಪರಸ್ಯೇಹ ತನ್ಮೇ ಬ್ರೂಹಿ ಪಿತಾಮಹ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಎಲ್ಲ ಪಾಪಕರ್ಮಗಳ ಫಲವನ್ನು ಕಳೆದುಕೊಂಡು ಶ್ರೇಷ್ಠವಾದುದನ್ನು ಪಡೆಯಲು ಯಾವ ಉಪಾಯ? ಅದರಂತೆ ಜ್ಞಾನವನ್ನು ಪಡೆಯಲು ಯಾವ ಉಪಾಯವೆಂದು ನನಗೆ ಹೇಳು.
ಭೀಷ್ಮಃ
ಉಪಾಯೋಽಯಂ ವರಪ್ರಾಪ್ತೌ ಪರಮಃ ಪರಿಕೀರ್ತಿತಃ |
ನಾರಾಯಣಸ್ಯ ತು ಧ್ಯಾನಮರ್ಚನಂ ಯಜನಂ ಸ್ತುತಿಃ ॥2॥
ಭೀಷ್ಮ ಪಾಪ ಪರಿಹಾರಪೂರ್ವಕವಾಗಿ ಶ್ರೇಷ್ಠವಾದ ಎಲ್ಲವನ್ನೂ ಪಡೆಯಲು ನಾರಾಯಣನ ಧ್ಯಾನ, ಅರ್ಚನೆ, ಪೂಜೆ, ಸ್ತೋತ್ರಗಳು ಶ್ರೇಷ್ಠವಾದ ಉಪಾಯಗಳು ಎಂದು ಹೇಳಲ್ಪಡುತ್ತವೆ.
ಶ್ರವಣಂ ತತ್ಕಥಾನಾಂ ಚ ವಿದ್ವತ್ಸಂರಕ್ಷಣಂ ತಥಾ |
ವಿದ್ವಚ್ಛುಶ್ರೂಷಣಪ್ರೀತಿರುಪದೇಶಾನುಪಾಲನಮ್ ॥3॥
ಅದರಂತೆಯೇ ನಾರಾಯಣನ ಕಥೆಗಳ ಶ್ರವಣ, ವಿದ್ವಾಂಸರ ಸಂರಕ್ಷಣೆ, ವಿದ್ವಾಂಸರ ಸೇವೆ, ವಿದ್ವಾಂಸರಲ್ಲಿ ಪ್ರೀತಿ ಮತ್ತು ವಿದ್ವಾಂಸರ ಮಾತುಗಳನ್ನು ಪಾಲಿಸುವುದು ಇದು ಉಪಾಯ.
ಸಂಧ್ಯಾನೇನ ಜಪೇನಾಶು ಮುಚ್ಯತೇ ಪ್ರಾಕೃತೋಽಪಿ ಚ |
ಜಪಶ್ಚತುರ್ವಿಧಃ ಪ್ರೋಕ್ತೋ ವೈದಿಕಸ್ತಾಂತ್ರಿಕೋಽಪಿ ಚ |
ಪೌರಸ್ತಿಕೋಽರ್ಥೋ ವಿದ್ವದ್ಭಿಃ ಕಥಿತಃ ಸ್ಮಾರ್ತ ಏವ ಚ ॥4॥
ನಾರಾಯಣನ ಸಮೀಚೀನವಾದ ಧ್ಯಾನ ಮತ್ತು ಜಪಗಳಿಂದ ಸಾಧಾರಣನಾದ ಮಾನವನೂ ಸಹ ಶೀಘ್ರವಾಗಿ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ. ಜಪವು ವೈದಿಕ, ತಾಂತ್ರಿಕ, ಅನಾದಿಕಾಲದಿಂದಲೂ ಅನುವೃತ್ತವಾದುದು ಮತ್ತು ಸ್ಮಾರ್ತ ಎಂದು ನಾಲ್ಕು ವಿಧವಾದುದು ಎಂದು ಹೇಳಲ್ಪಡುತ್ತದೆ.
ದ್ವಿಜಶುಶ್ರೂಷಯಾ ಜ್ಞಾನಂ ವಿದ್ವತ್ಸಂರಕ್ಷಣೇನ ವಾ |
ನಾಸಾಧ್ಯಂ ಜ್ಞಾನಿನಾಂ ಕಿಂಚಿತ್ ತಸ್ಮಾದ್ ರಕ್ಷ್ಯಾ ದ್ವಿಜಾಸ್ತ್ವಯಾ ॥5॥
ಬ್ರಾಹ್ಮಣರ ಸೇವೆಯಿಂದ ಅಥವಾ ವಿದ್ವಾಂಸರ ಸಂರಕ್ಷಣೆಯಿಂದಲೂ ಜ್ಞಾನ ಉಂಟಾಗುತ್ತದೆ. ಜ್ಞಾನಿಗಳಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಆದ್ದರಿಂದ ನೀನು ಬ್ರಾಹ್ಮಣರನ್ನು ರಕ್ಷಿಸಬೇಕು.
ಸುವ್ರತಾ ಬಂಧುಹೀನೈಕಾ ವನೇ ಪೂರ್ವಂ ಯಮೇನ ತು |
ಆಸೀದಾಶ್ವಾಸಿತಾ ವಿದ್ವತ್ಸಂರಕ್ಷಣಫಲಾತ್ ಕಿಲ ॥6॥
ಹಿಂದೆ ಕಾಡಿನಲ್ಲಿ ಬಂಧುಹೀನಳಾಗಿ, ಒಳ್ಳೆಯ ವ್ರತವನ್ನು ಧರಿಸಿ ತಪಸ್ಸನ್ನು ಮಾಡುತ್ತಿದ್ದ ಒಬ್ಬ ಸ್ತ್ರೀಯು ವಿದ್ವತ್ ಸಂರಕ್ಷಣೆಯ ಫಲವನ್ನು ಹೇಳಿ ಯಮನಿಂದ ಸಮಾಧಾನ ಪಡಿಸಲ್ಪಟ್ಟಳಷ್ಟೆ?

ವಿಪ್ರಸ್ಯ ಮರಣೇ ಹೇತುಸ್ತತ್ಪತ್ನೀಪಿತೃಶೋಕದಾ |
ವೈಶ್ಯಾ ತ್ವಮತಿಲಾಭೋಽಯಂ ವಿಪ್ರಕನ್ಯೇತಿ ಸಾಂಪ್ರತಮ್ ॥7॥
ಹಿಂದಿನ ಜನ್ಮದಲ್ಲಿ ವೈಶ್ಯಳಾಗಿ ಒಬ್ಬ ಬ್ರಾಹ್ಮಣನ ಮರಣಕ್ಕೆ ಕಾರಣಳಾಗಿ ಬ್ರಾಹ್ಮಣನ ಪತ್ನಿ ಮತ್ತು ಪಿತೃಗಳಿಗೆ ಶೋಕವನ್ನುಂಟು ಮಾಡಿದ ನಿನಗೆ ಈ ವಿಪ್ರಕನ್ಯೆಯ ಜನ್ಮವು ಶ್ರೇಷ್ಠವಾದ ಲಾಭವಾಗಿದೆ (ಎಂದು ಯಮನು ಹೇಳಿದನು).
ಇತ್ಯುಕ್ತಾಶ್ಚಾಸಿತಾಪೃಚ್ಛತ್ ಕೇನೈವಂ ಪಾಪಸಂಯುತಾ |
ಜಾತಾ ವಿಪ್ರಕುಲೇ ಸಮ್ಯಕ್ ಶ್ರೇಯಶ್ಚಾಪಿ ಬ್ರುವೀಹಿ ಮೇ ॥8॥
ಯಮನಿಂದ ಹೀಗೆ ಹೇಳಲ್ಪಟ್ಟ ಆ ಕನ್ಯೆಯು- ಅಂತಹ ಪಾಪವನ್ನು ಮಾಡಿದ ನಾನು ಯಾವ ನಿಮಿತ್ತದಿಂದ ಇಂತಹ ಶ್ರೇಷ್ಠವಾದ ಬ್ರಾಹ್ಮಣ ಕುಲದಲ್ಲಿ ಜನ್ಮವನ್ನು ಪಡೆದೆನು ಎಂದು ಹೇಳು ಎಂದು ಕೇಳಿದಳು.
ಯಮಃ
ಅನ್ಯಜನ್ಮನಿ ವಿದ್ವಾಂಸಂ ಪ್ರಹಾರೈರಭಿಪೀಡಿತಮ್ |
ಚೋರಶಂಕಾವಿಮೋಕ್ಷೇಣ ಮೋಕ್ಷಯಿತ್ವಾ ಸುಜನ್ಮಿಕಾ ॥9॥
ಯಮ ನೀನು ಇನ್ನೊಂದು ಜನ್ಮದಲ್ಲಿ ಕಳ್ಳನೆಂಬ ಶಂಕೆಯಿಂದ ಹೊಡೆದು ಹಿಂಸಿಸಲ್ಪಡುತ್ತಿದ್ದ ಒಬ್ಬ ವಿದ್ವಾಂಸನನ್ನು ಬಿಡಿಸಿ ಇಂತಹ ಒಳ್ಳೆಯ ಜನ್ಮವನ್ನು ಪಡೆದಿದ್ದೀಯೆ.
ಇತ್ಯುಕ್ತಾಷ್ಟಾಕ್ಷರಧ್ಯಾನಜಪಾದಿಶ್ರೇಯಸಾ ತು ಸಾ |
ಯಮೇನಾನುಗೃಹೀತಾಽಭೂತ್ ಪುಣ್ಯಲೋಕನಿವಾಸಿನೀ ॥10॥
ಯಮನು ಹೀಗೆ ಹೇಳಿ, ಅವಳಿಗೆ ನಾರಾಯಣಾಷ್ಟಾಕ್ಷರ ಧ್ಯಾನ-ಜಪಾದಿಗಳನ್ನು ಉಪದೇಶಿಸಿ ಅನುಗ್ರಹಿಸಿದನು. ಆ ಶ್ರೇಯಸ್ಸಿನ ಅನುಷ್ಠಾನದಿಂದ ಅವಳು ಪುಣ್ಯ ಲೋಕನಿವಾಸಿನಿಯಾದಳು.
ಭೀಷ್ಮಃ
ತನ್ನಿತ್ಯಂ ವಿದುಷಾಂ ರಕ್ಷಾತತ್ಪರೋ ಭವ ಭೂಪತೇ |
ತೇಷಾಂ ಸಂರಕ್ಷಣಾತ್ ತುಷ್ಟಃ ಸರ್ವಪಾಪೈಃ ಪ್ರಮುಚ್ಯತೇ ॥11॥
ಭೀಷ್ಮ ಎಲೈ ರಾಜನೇ, ಆದ್ದರಿಂದ ಯಾವಾಗಲೂ ವಿದ್ವಾಂಸರ ರಕ್ಷಣೆಯಲ್ಲಿ ತತ್ಪರನಾಗಿರು. ಅವರ ರಕ್ಷಣೆಯಿಂದ ಸರ್ವಪಾಪಗಳಿಂದಲೂ ನಿರ್ಮುಕ್ತನಾಗಿ ಸಂತೋಷವನ್ನು ಹೊಂದುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ವೈಶ್ಯಕನ್ಯಾ-ಸುವ್ರತಾಖ್ಯಾನಂ ನಾಮ ಅಷ್ಟತ್ರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಮೂವತ್ತೊಂಬತ್ತನೆಯ ಅಧ್ಯಾಯ
ವಿಷ್ಣುಸಹಸ್ರನಾಮಸ್ತೋತ್ರ
ವೈಶಂಪಾಯನಃ
ಶ್ರುತ್ವಾ ಧರ್ಮಾನಶೇಷೇಣ ಪಾವನಾನಿ ಚ ಸರ್ವಶಃ |
ಯುಧಿಷ್ಠಿರಃ ಶಾಂತನವಂ ಪುನರೇವಾಭ್ಯಭಾಷತ ॥1॥
ವೈಶಂಪಾಯನ ಯುಧಿಷ್ಠಿರನು ಪವಿತ್ರವಾದ ಎಲ್ಲಾ ಧರ್ಮಗಳನ್ನೂ ಸಂಪೂರ್ಣವಾಗಿ ಕೇಳಿ, ಶಂತನುಪುತ್ರರಾದ ಭೀಷ್ಮರನ್ನು ಕುರಿತು ಮಾತನಾಡಿದನು.
ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಮ್ |
ಸ್ತುವಂತಃ ಕಂ ಕಮರ್ಚಂತಃ ಪ್ರಾಪ್ನುಯುರ್ಮಾನವಾಃ ಶುಭಮ್ ॥2॥
ಲೋಕದಲ್ಲಿ ಮುಖ್ಯವಾದ ದೇವನು ಯಾರು? ಶ್ರೇಷ್ಠವಾದ ಆಶ್ರಯವು ಯಾವುದು? ಯಾರನ್ನು ಸ್ತೋತ್ರ ಮಾಡಿ, ಅರ್ಚಿಸಿ ಮಾನವರು ಶುಭವನ್ನು ಪಡೆಯುವರು?
ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ |
ಕಿಂ ಜಪನ್ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥3॥
ಎಲ್ಲ ಧರ್ಮಗಳಲ್ಲಿ ಯಾವ ಧರ್ಮವು ಶ್ರೇಷ್ಠವೆಂದು ಹೇಳಲ್ಪಡುತ್ತದೆ? ಯಾವ ಜಪವನ್ನು ಮಾಡಿದರೆ ಜೀವನು ಸಂಸಾರಬಂಧನದಿಂದ ಮುಕ್ತನಾಗುತ್ತಾನೆ?
ಭೀಷ್ಮಃ
ಜಗತ್ಪ್ರಭುಂ ದೇವದೇವಮನಂತಂ ಪುರುಷೋತ್ತಮಮ್ |
ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ ॥4॥
ತಮೇವ ಚಾರ್ಚಯನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ |
ಧ್ಯಾಯನ್ ಸ್ತುವನ್ ನಮಸ್ಯಂಶ್ಚ ಯಜಮಾನಸ್ತಮೇವ ಚ ॥5॥
ಅನಾದಿನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ |
ಲೋಕಾಧ್ಯಕ್ಷಂ ಸ್ತುವನ್ ನಿತ್ಯಂ ಸರ್ವದುಃಖಾತಿಗೋ ಭವೇತ್ ॥6॥
ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಲೋಕಾನಾಂ ಕೀರ್ತಿವರ್ಧನಮ್ |

ಲೋಕನಾಥಂ ಮಹದ್ಭೂತಂ ಸರ್ವಭೂತಭವೋದ್ಭವಮ್ ॥7॥
ಭೀಷ್ಮ ಜಗತ್ಪ್ರಭುವೂ, ದೇವದೇವನೂ, ಅನಂತನೂ, ಪುರುಷೋತ್ತಮನೂ, ಬ್ರಾಹ್ಮಣ ವತ್ಸಲನೂ, ಸರ್ವಧರ್ಮಜ್ಞನೂ, ಲೋಕಗಳಿಗೆ ಕೀರ್ತಿವರ್ಧನನೂ, ಲೋಕನಾಥನೂ, ಮಹದ್ಭೂತನೂ, ಸರ್ವಭೂತಗಳಿಗೆ ಉತ್ಪತ್ತಿ ಕಾರಣನೂ, ಆದ್ಯಂತ ಶೂನ್ಯನೂ, ಸರ್ವಲೋಕಮಹೇಶ್ವರನೂ, ಲೋಕಾಧ್ಯಕ್ಷನೂ ಆದ ವಿಷ್ಣುವನ್ನು ಸತತವಾಗಿ ಶ್ರದ್ಧಾಯುಕ್ತನಾಗಿ ಸಹಸ್ರನಾಮದಿಂದ ಸ್ತೋತ್ರವನ್ನು ಮಾಡುವವನು ಎಲ್ಲ ದುಃಖಗಳನ್ನೂ ದಾಟುತ್ತಾನೆ.
ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ |
ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥8॥
ಪುಂಡರೀಕಾಕ್ಷನನ್ನು ಭಕ್ತಿಯಿಂದ ಸ್ತೋತ್ರಗಳಿಂದ ಪೂಜಿಸುವುದೇ ಮನುಷ್ಯನು ಆಚರಿಸಬೇಕಾದ ಎಲ್ಲ ಧರ್ಮಗಳಲ್ಲಿ ಅತ್ಯಧಿಕವಾದ ಧರ್ಮ ಎಂದು ನನ್ನ ಅಭಿಪ್ರಾಯ.
ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ |
ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಮ್ ॥9॥
ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್ |
ದೈವತಂ ದೇವತಾನಾಂ ಚ ಭೂತಾನಾಂ ಯೋಽವ್ಯಯಃ ಪಿತಾ ॥10॥
ಯತಃ ಸರ್ವಾಣಿ ಭೂತಾನಿ ಭವಂತ್ಯಾದಿಯುಗಾಗಮೇ |
ಯಸ್ಮಿಂಶ್ಚ ಪ್ರಲಯಂ ಯಾಂತಿ ಪುನರೇವ ಯುಗಕ್ಷಯೇ ॥11॥
ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ |
ವಿಷ್ಣೋರ್ನಾಮಸಹಸ್ರಂ ಮೇ ಶೃಣು ಪಾಪಭಯಾಪಹಮ್ ॥12॥
ಯಾವನು ಶ್ರೇಷ್ಠವಾದ ಮಹಾತೇಜೋರೂಪಿಯೋ, ಪರಮ ಜ್ಞಾನರೂಪಿಯೋ, ಯಾವನು ಪರಮಮಹದ್ಬ್ರಹ್ಮನೋ, ಯಾವನು ಶ್ರೇಷ್ಠವಾದ ಆಶ್ರಯನೋ, ಪವಿತ್ರ ವಸ್ತುಗಳಿಗೆ ಪಾವಿತ್ರ್ಯವನ್ನುಂಟು ಮಾಡುವವನೋ, ಮಂಗಳವಾದ ವಸ್ತುಗಳಿಗೆ ಮಾಂಗಲ್ಯವನ್ನು ಕೊಡುವವನೋ, ದೇವತೆಗಳಿಗೂ ಆರಾಧ್ಯದೈವತೆಯೋ, ಎಲ್ಲ ಜೀವರಿಗೂ ಶಾಶ್ವತನಾದ ತಂದೆಯೋ, ಯಾವನಿಂದ ಸೃಷ್ಟಿಯ ಆದಿಯಲ್ಲಿ ಎಲ್ಲ ಭೂತಗಳೂ ಜನಿಸುತ್ತವೆಯೋ, ಪುನಃ ಪ್ರಳಯಕಾಲದಲ್ಲಿ ಯಾವನಲ್ಲಿ ಲಯವನ್ನು ಹೊಂದುತ್ತವೆಯೋ ಎಲೈ ರಾಜನೇ, ಅಂತಹ ಲೋಕಪ್ರಧಾನನಾದ, ಜಗನ್ನಾಥನಾದ ವಿಷ್ಣುವಿನ ಪಾಪಗಳನ್ನು ಪರಿಹರಿಸುವ ಸಹಸ್ರನಾಮಗಳನ್ನು ನನ್ನಿಂದ ಕೇಳು.
ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ |
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ॥13॥
ಮಹಾತ್ಮನಾದ ಯಾವನ ಗುಣಪ್ರತಿಪಾದಕವಾದ ನಾಮಗಳು ವಿಶ್ವವೆಲ್ಲ ಹರಡಿ ಋಷಿಗಳಿಂದ ಹಾಡಲ್ಪಟ್ಟಿವೆಯೋ ಅಂತಹ ನಾಮಗಳನ್ನು ನಿನ್ನ (ನನ್ನ) ಶ್ರೇಯಸ್ಸಿಗೆ ಹೇಳುವೆನು.
(ಗೌಣ ಎಂದರೆ ಅಮುಖ್ಯ ಎಂದು ಅರ್ಥವಲ್ಲ. ವಿಶ್ವಾದಿ ಶಬ್ದಗಳು ವಿಷ್ಣುವಿನಲ್ಲಿ ಅಮುಖ್ಯ ಎನ್ನುವುದು ವ್ಯಾಹತವಾದುದು).
ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ |
ಭೂತಕೃದ್ಭೂತಭೃದ್ಭಾವೋ ಭೂತಾತ್ಮಾ ಭೂತಭಾವನಃ ॥14॥
ವಿಶ್ವಂ= ವಿಶೇಷವಾದ ಜ್ಞಾನರೂಪನು, ವಿಷ್ಣುವಿನ ಪರಬ್ರಹ್ಮತ್ವವನ್ನು ಸೂಚಿಸುವುದಕ್ಕೆ ನಪುಂಸಕ ಲಿಂಗವಿದೆ. ಅಥವಾ ಎಲ್ಲ ಜೀವರಿಗೆ ಪ್ರವರ್ತಕನಾದವನು. ಅಥವಾ ಹೃದಯದಲ್ಲಿ ಪ್ರತಿಷ್ಠಿತನಾದವನು ಅಥವಾ ಸರ್ವಗುಣಪೂರ್ಣನಾದವನು. ಈ ವಿಶ್ವ ಶಬ್ದವು ಸರ್ವನಾಮ ಶಬ್ದವಲ್ಲ. ವಿಶ್ವ ಶಬ್ದವು ಸರ್ವನಾಮ ಶಬ್ದವಾಗಿದ್ದರೆ ಆ ಶಬ್ದವು ಮಂಗಳವಾದ ಮತ್ತು ಅಮಂಗಳವಾದ ಎಲ್ಲ ವಸ್ತುಗಳನ್ನೂ ಹೇಳುವುದರಿಂದ ಸ್ತೋತ್ರದಲ್ಲಿ ಪಠನೀಯವೇ ಆಗುತ್ತಿರಲಿಲ್ಲ. `ವಿಷ್ಣೋಃ ಸಹಸ್ರನಾಮಾನಿ' ಎಂದು ಉಪಕ್ರಮ ಮಾಡಿರುವುದರಿಂದ ಅದು ವಿಷ್ಣುವಿನ ಹೆಸರೇ ಆಗಿದೆ. ವಿಷ್ಣುವನ್ನು ವಿಶ್ವಾತ್ಮಕ, ವಿಶ್ವದಿಂದ ಅಭಿನ್ನ ಎಂದು ಹೇಳಬಾರದು. ವಿಶ್ವದಲ್ಲಿ ಎಲ್ಲವೂ ಸೇರಿರುವುದರಿಂದ ಜಡಾಭೇದವು ಯಾವ ವಾದಿಗೂ ಸಮ್ಮತವಲ್ಲವಾದ್ದರಿಂದ ಹಾಗೆ ಹೇಳಬಾರದು. ಏಕೆಂದರೆ `ಭೂತಭವ್ಯಭವತ್ಪ್ರಭುಃ, ಮುಕ್ತಾನಾಂ ಪರಮಾ ಗತಿಃ' ಎಂದು ಜೀವ-ಜಡಾತ್ಮಕ ವಸ್ತುಗಳಿಗೆ ಸ್ವಾಮಿ ಎಂದೂ ಮತ್ತು ಮುಕ್ತ ಜೀವರಿಗೆ ಒಡೆಯನೆಂದೂ ಹೇಳಿರುವುದರಿಂದ ಅದರ ವಿರೋಧ ಉಂಟಾಗುತ್ತದೆ.
ವಿಷ್ಣುಃ= ವ್ಯಾಪ್ತನಾದವನು. ಬಲಪ್ರೇರಕನಾದವನು.
ವಷಟ್ಕಾರಃ= ಪೂರ್ಣಜ್ಞಾನಾದಿ ಆರು ಗುಣಗಳೇ ಆಕಾರವಾಗಿ ಉಳ್ಳವನು. ಯಜ್ಞದಲ್ಲಿ ವಷಟ್ ಎಂಬ ಶಬ್ದದಿಂದ ಕರೆಯಲ್ಪಡುವವನು ಅಥವಾ ಜ್ಞಾನಾರ್ಥವಾಗಿ ಇತಿಹಾಸ-ಪುರಾಣಗಳಿಂದ ಸೇರಿದ ಐದು ವೇದಗಳನ್ನು ಮತ್ತು ನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸುವವನು.
ಭೂತಭವ್ಯಭವತ್ಪ್ರಭುಃ= ಹಿಂದೆ ಆಗಿ ಹೋದ, ಮುಂದೆ ಆಗಲಿರುವ ಮತ್ತು ಈಗ ಇರುವ ಜಗತ್ತುಗಳಿಗೆ ಒಡೆಯನಾಗಿರುವವನು.
ಭೂತಕೃತ್= ಬ್ರಹ್ಮಾದಿ ಚೇತನರನ್ನು ಸೃಷ್ಟಿಸುವವನು.
ಭೂತಭೃತ್= ಬ್ರಹ್ಮಾದಿ ಚೇತನರನ್ನು ಪೋಷಿಸುವವನು
ಭಾವಃ= ಸೃಷ್ಟಿ-ಸ್ಥಿತಿ-ಸಂಹಾರ ಇವುಗಳನ್ನು ನಡೆಸುವವನು
ಭೂತಾತ್ಮಾ= ಸಕಲ ಚೇತನರಿಗೂ ಆಕಾಶಾದಿ ಭೂತಪದಾರ್ಥಗಳಿಗೂ ಅಂತರ್ಯಾಮಿ.
ಭೂತಭಾವನಃ= ಚೇತನರಿಗೆ ಆಹಾರಾದಿಗಳನ್ನು ಕೊಟ್ಟು ಅವರನ್ನು ರಕ್ಷಿಸುವವನು.
ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾ ಗತಿಃ |
ಅವ್ಯಯಃ ಪುರುಷಃ ಸಾಕ್ಷೀ ಕ್ಷೇತ್ರಜ್ಞೋಽಕ್ಷರ ಏವ ಚ ॥15॥

ಪೂತಾತ್ಮಾ= ನಿರ್ದುಷ್ಟನಾದ ಆತ್ಮ, ನಿರ್ದುಷ್ಟವಾದ ದೇಹವುಳ್ಳವನು, ನಿರ್ದುಷ್ಟವಾದ ಮನಸ್ಸುಳ್ಳವನು, ಪವಿತ್ರನಾದ ಆತ್ಮ.
ಪರಮಾತ್ಮಾ= ಉತ್ತಮನು, ಜಗತ್ತಿನ ಒಡೆಯನಾಗಿ ಎಲ್ಲ ಪದಾರ್ಥಗಳನ್ನೂ ತನ್ನದಾಗಿ ಸ್ವೀಕರಿಸುವವನು.
ಮುಕ್ತಾನಾಂ ಪರಮಾಗತಿಃ= ಮುಕ್ತರಿಂದ ಪ್ರಾಪ್ಯನಾದವನು ಮತ್ತು ಮುಕ್ತರಿಗೆ ಆಶ್ರಯನಾದವನು.
ಅವ್ಯಯಃ= ಯಾವ ವಿಕಾರವೂ ಇಲ್ಲದವನು.
ಪುರುಷಃ= ಜೀವರ ಶರೀರಗಳಲ್ಲಿ, ಹೃದಯ ಎಂಬ ಪಟ್ಟಣಗಳಲ್ಲಿ ನೆಲೆಸಿರುವವನು. ಅಸಾಧಾರಣ ಪುರುಷತ್ವವುಳ್ಳವನು.
ಅತ್ಯಧಿಕವಾದ ಕ್ರಿಯಾಶೀಲನು.
ಸಾಕ್ಷೀ= ದೇಶ, ಕಾಲ ಅಥವಾ ವಸ್ತುಗಳ ವ್ಯವಧಾನವಿಲ್ಲದೆ ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವವನು.
ಕ್ಷೇತ್ರಜ್ಞಃ= ಅವ್ಯಕ್ತತತ್ತ್ವವೇ ಮೊದಲಾದ ಇಪ್ಪತ್ನಾಲ್ಕು ತತ್ತ್ವಗಳನ್ನು ಮತ್ತು ಅದರ ಅಭಿಮಾನಿಗಳನ್ನು ಪ್ರೇರಿಸುತ್ತಾ, ನಿತ್ಯವೂ ನಿರ್ದುಷ್ಟವಾದ ಚಕ್ಷುಸ್ಸಿನಿಂದ ನೋಡುತ್ತಿರುವವನು.
ಅಕ್ಷರಃ= ಯಾವುದೇ ರೀತಿಯ ನಾಶವಿಲ್ಲದವನು.
ಯೋಗೋ ಯೋಗವಿದಾಂ ನೇತಾ ಪ್ರಧಾನಪುರುಷೇಶ್ವರಃ |
ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ ॥16॥
ಯೋಗಃ= ಸಕಲ ಗುಣಗಳನ್ನು ಹೊಂದಿದವನು.
ಯೋಗವಿದಾಂ ನೇತಾ= ಮನೋನಿಗ್ರಹರೂಪವಾದ ಯೋಗವನ್ನು, ಜ್ಞಾನ- ಯೋಗವನ್ನು, ಭಕ್ತಿಯೋಗವನ್ನು ಹೊಂದಿರುವವರನ್ನು ವಿಶೇಷವಾಗಿ ಪ್ರೇರಿಸುವವನು ಅಥವಾ ಮೋಕ್ಷಕ್ಕೆ ಕರೆದೊಯ್ಯುವವನು.
ಪ್ರಧಾನಪುರುಷೇಶ್ವರಃ= ಪ್ರಕೃತಿ ಮತ್ತು ಬ್ರಹ್ಮದೇವರಿಗೆ ಒಡೆಯನು.
ನಾರಸಿಂಹವಪುಃ= ಭಕ್ತರ ದೋಷಗಳನ್ನು ಹಿಂಸಿಸುವವನು (ನಾಶ ಮಾಡುವವನು), ಭಕ್ತರ ದೋಷಗಳನ್ನು ನಾಶ ಮಾಡುವ ದೇಹವುಳ್ಳವನು, ಮನುಷ್ಯ ದೇಹ ಮತ್ತು ಸಿಂಹದ ಶಿರಸ್ಸುಳ್ಳವನು.
ಶ್ರೀಮಾನ್= ಸರ್ವಾಧಿಕವಾದ ಸ್ವರೂಪಕಾಂತಿಯನ್ನು ಯಾವಾಗಲೂ ಪಡೆದಿರುವವನು.
ಕೇಶವಃ= ಬ್ರಹ್ಮ-ರುದ್ರರನ್ನು ಪ್ರವರ್ತಿಸುವವನು, ಉತ್ಕೃಷ್ಟವಾದ ಕೇಶವನ್ನು ಹೊಂದಿರುವವನು.
ಪುರುಷೋತ್ತಮಃ= ಪುರುಷರೆನಿಸುವ ಎಲ್ಲಾ ಚೇತನರಿಗಿಂತಲೂ ಉತ್ತಮನಾದವನು.
ಸರ್ವಃ ಶರ್ವಃ ಶಿವಃ ಸ್ಥಾಣುರ್ಭೂತಾದಿರ್ನಿಧಿರವ್ಯಯಃ |
ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ ॥17॥
ಸರ್ವಃ= ಹಿಂದೆ ಹೋಗಿ ದೈತ್ಯಸಮೂಹವನ್ನು ನಾಶ ಮಾಡುವವನು, ಗುಣ ಪೂರ್ಣನಾದವನು.
ಶರ್ವಃ= ದೈತ್ಯರ ಮರಣಾನಂತರದಲ್ಲಿಯೂ ಅವರಿಗೆ ಸುಖವನ್ನು ನಿವಾರಣೆ ಮಾಡುವವನು.
ಶಿವಃ= ಶೋಭನನಾದವನು, ನಿರ್ವಿಕಾರಾನಂದ ಸ್ವರೂಪನು.
ಸ್ಥಾಣುಃ= ಸ್ಥಿರನಾದವನು. ಶಿವಾದಿಗಳ ಎಲ್ಲ ನಾಮಗಳೂ ಭಗವಂತನ ನಾಮಗಳೇ. ಶಿವಾದಿ ದೇವತೆಗಳೆಲ್ಲರೂ ದೇವರ ನಾಮವನ್ನೇ ಧರಿಸಿದ್ದಾರೆ ಎಂದು ಸೂಚಿಸುವುದಕ್ಕೆ ಹೀಗೆ ಹೇಳಲಾಗಿದೆ. `ಯೋ ದೇವಾನಾಂ` ಎಂಬ ಋಗ್ವೇದದ ಮಂತ್ರವು ಎಲ್ಲ ದೇವತೆಗಳು ದೇವರ ಹೆಸರನ್ನೇ ಧರಿಸಿದ್ದಾರೆಂದು ಹೇಳುತ್ತದೆ.
ಭೂತಾದಿಃ= ಸಕಲ ಭೂತಗಳಿಗೂ ಕಾರಣನು.
ನಿಧಿಃ= ಚೆನ್ನಾಗಿ ಧರಿಸುವವನು. ಸಜ್ಜನರಿಂದ ಹೃದಯದಲ್ಲಿ ಚೆನ್ನಾಗಿ ಧರಿಸಲ್ಪಟ್ಟವನು.
ಅವ್ಯಯಃ= ಯಾವುದೇ ವಿಕಾರಕ್ಕೆ ಒಳಗಾಗದವನು.
ಸಂಭವಃ= ಜಗತ್ತಿನ ಉತ್ಪತ್ತಿಯನ್ನು ಚೆನ್ನಾಗಿ ಮಾಡುವವನು.
ಭಾವನಃ= ಮೂರು ವಿಧವಾದ ಜೀವರಿಗೂ ಅವರ ಸ್ವಭಾವವನ್ನು ಹೊಂದಿಸುವವನು, ರಕ್ಷಿಸುವವನು.
ಭರ್ತಾ= ಎಲ್ಲವನ್ನೂ ಧರಿಸಿದವನು, ಎಲ್ಲವನ್ನೂ ಪೋಷಿಸುವವನು.
ಪ್ರಭವಃ= ಎಲ್ಲವನ್ನೂ ಸೃಷ್ಟಿಸುವವನು, ಎಲ್ಲ ಶುಭಗಳಿಗೆ ಕಾರಣನಾದವನು.
ಪ್ರಭುಃ= ಸರ್ವಸಮರ್ಥ.
ಈಶ್ವರಃ= ಈಶರೆನಿಸುವ ಲಕ್ಷ್ಮೀ, ಬ್ರಹ್ಮ, ರುದ್ರ, ಶೇಷ ಮೊದಲಾದ ದೇವತೆಗಳಿಗಿಂತಲೂ ಉತ್ತಮನು.
ಸ್ವಯಂಭೂಃ ಶಂಭುರಾದಿತ್ಯಃ ಪುಷ್ಕರಾಕ್ಷೋ ಮಹಾಸ್ವನಃ |
ಅನಾದಿನಿಧನೋ ಧಾತಾ ವಿಧಾತಾ ಧಾತುರುತ್ತಮಃ ॥18॥
ಸ್ವಯಂಭೂಃ= ಸ್ವತಂತ್ರ, ತನ್ನಿಂದ ತಾನೇ ಅವತರಿಸುವವನು, ಸ್ವತಂತ್ರನಾಗಿ ಎಲ್ಲವನ್ನೂ ತಿಳಿದವನು.
ಶಂಭುಃ= ಸುಖಕ್ಕೆ ಆಶ್ರಯನಾದವನು.
ಆದಿತ್ಯಃ= ವಾಮನ ರೂಪದಿಂದ ಅದಿತಿಯಲ್ಲಿ ಜನಿಸಿದವನು.
ಪುಷ್ಕರಾಕ್ಷಃ= ಕಮಲದಂತೆ ಕಣ್ಣುಳ್ಳವನು.
ಮಹಾಸ್ವನಃ= ಗಂಭೀರವಾದ ಧ್ವನಿಯುಳ್ಳವನು.
ಅನಾದಿನಿಧನಃ= ಜನನ-ಮರಣ ರಹಿತನು.
ಧಾತಾ= ಜಗತ್ತಿಗೆ ಧಾರಕ ಮತ್ತು ಪೋಷಕನು.
ವಿಧಾತಾ= ವಿಶಿಷ್ಟವಾಗಿ ಧಾರಣೆ-ಪೋಷಣೆಯನ್ನು ಮಾಡುವವನು. ವಿಚಿತ್ರವಾದ ಜೀವರನ್ನು ವಿಶೇಷವಾಗಿ ಪೋಷಿಸುವವನು.
ಧಾತುರುತ್ತಮಃ= ಚತುರ್ಮುಖ ಬ್ರಹ್ಮನಿಗಿಂತಲೂ ಶ್ರೇಷ್ಠನಾದವನು.
ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಽಮರಪ್ರಭುಃ |

ವಿಶ್ವಕರ್ಮಾ ಮನುಸ್ತ್ವಷ್ಟಾ ಸ್ಥವಿಷ್ಠಃ ಸ್ಥವಿರೋ ಧ್ರುವಃ ॥19॥
ಅಪ್ರಮೇಯಃ= ಚೆನ್ನಾಗಿ ತಿಳಿದುಕೊಳ್ಳಲು ಅಸಾಧ್ಯನಾದವನು.
ಹೃಷೀಕೇಶಃ= ಇಂದ್ರಿಯಗಳಿಗೆ ಅಧಿಪತಿ, ಹರ್ಷರೂಪವಾದ ಕೇಶವುಳ್ಳವನು.
ಪದ್ಮನಾಭಃ= ನಾಭಿಯಲ್ಲಿ ಪದ್ಮವನ್ನು ಹೊಂದಿದವನು.
ಅಮರಪ್ರಭುಃ= ದೇವತೆಗಳಿಗೆ ಒಡೆಯನಾದವನು.
ವಿಶ್ವಕರ್ಮಾ= ಚೇತನರ ಪುಣ್ಯ-ಪಾಪಾದಿ ಕರ್ಮಗಳಿಗೆ ಪ್ರೇರಕನಾದವನು. ಜಗತ್ತಿಗೆ ಸಂಬಂಧಿಸಿದ ಎಲ್ಲ ಕರ್ಮಗಳನ್ನೂ ಮಾಡುವವನು.
ಮನುಃ= ಸರ್ವಜ್ಞ.
ತ್ವಷ್ಟಾ= ಹದಿನಾಲ್ಕು ಭುವನಗಳನ್ನು ಸೃಷ್ಟಿಸುವವನು (ಜಗತ್ತನ್ನು ಸೃಷ್ಟಿಸುವ ಬಡಿಗ) ಅಥವಾ ಪ್ರಳಯದಲ್ಲಿ ಜಗತ್ತನ್ನು ಕ್ಷಯಗೊಳಿಸುವವನು.
ಸ್ಥವಿಷ್ಠಃ= ಅನಾದಿಕಾಲದಿಂದ ಇರುವುದರಿಂದ ಬಹಳ ವಯಸ್ಸಾದವನು.
ಸ್ಥವಿರಃ= ಸ್ಥಿರವಾದ ಜಗತ್ತಿನಲ್ಲಿ ವಿಶೇಷವಾಗಿ ಶೋಭಿಸುವವನು, ವಿಶೇಷವಾದ ಸುಖರೂಪನಾದವನು.
ಧ್ರುವಃ= ಸ್ಥಿರನಾದವನು.
ಅಗ್ರಾಹ್ಯಃ ಶಾಶ್ವತಃ ಕೃಷ್ಣೋ ಲೋಹಿತಾಕ್ಷಃ ಪ್ರತರ್ದನಃ |
ಪ್ರಭೂತಸ್ತ್ರಿಕಕುಬ್ಧಾ(ದ್ಧಾ)ಮ ಪವಿತ್ರಂ ಮಂಗಲಂ ಪರಮ್ ॥20॥
ಅಗ್ರಾಹ್ಯಃ= ಸಮಗ್ರವಾಗಿ ತಿಳಿಯಲ್ಪಡಲು ಅಶಕ್ಯನಾದವನು, ಇಂದ್ರಿಯಗಳಿಗೆ ಅಗೋಚರನಾದವನು.
ಶಾಶ್ವತಃ= ಯಾವಾಗಲೂ ಒಂದೇ ರೀತಿ ಇರುವವನು.
ಕೃಷ್ಣಃ= ತನ್ನ ಸೌಂದರ್ಯಾದಿ ಗುಣಗಳಿಂದ ಎಲ್ಲರನ್ನೂ ತನ್ನ ಕಡೆಗೆ ಎಳೆಯುವವನು.
ಲೋಹಿತಾಕ್ಷಃ= ಕೆಂಪಾದ ಕಣ್ಣುಳ್ಳವನು.
ಪ್ರತರ್ದನಃ= ದುಷ್ಟರನ್ನು ಚೆನ್ನಾಗಿ ಭಯಪಡಿಸುವವನು.
ಪ್ರಭೂತಃ= ಭೂಮಿಯಲ್ಲಿ ಚೆನ್ನಾಗಿ ವ್ಯಾಪ್ತನಾದವನು.
ತ್ರಿಕಕುತ್= ವರಾಹಾವತಾರದಲ್ಲಿ ಎರಡು ಭುಜಗಳು ಮತ್ತು ಸ್ಕಂಧಮೂಲ ಈ ಮೂರು ಉನ್ನತ ಪ್ರದೇಶಗಳನ್ನು ಹೊಂದಿದವನು.
ಧಾಮ= ಆಧಾರರೂಪನು, ತೇಜೋರೂಪಿಯಾದವನು.
ತ್ರಿಕಕುದ್ಧಾಮ= ಸ್ವರೂಪಾನಂದವನ್ನು ಕೊಡುವ ಶ್ವೇತದ್ವೀಪ-ಅನಂತಾಸನ ಮತ್ತು ವೈಕುಂಠ ಲೋಕಗಳಲ್ಲಿ ವಾಸಿಸುವವನು.
ಪವಿತ್ರಂ= ಪರಿಶುದ್ಧನಾದವನು, ಪವಿತ್ರೀಕರಿಸುವವನು.
ಮಂಗಲಂ= ಶುಭಸ್ವರೂಪನು.
ಪರಂ= ನಿರ್ದುಷ್ಟಗುಣಪರಿಪೂರ್ಣ, ಸರ್ವೋತ್ತಮ.
ಈಶಾನಃ ಪ್ರಾಣದಃ ಪ್ರಾಣೋ ಜ್ಯೇಷ್ಠಃ ಶ್ರೇಷ್ಠಃ ಪ್ರಜಾಪತಿಃ |
ಹಿರಣ್ಯಗರ್ಭೋ ಭೂಗರ್ಭೋ ಮಾಧವೋ ಮಧುಸೂದನಃ ॥21॥
ಈಶಾನಃ= ಲೋಕಕ್ಕೆ ಒಡೆಯರಾದ ಬ್ರಹ್ಮ-ರುದ್ರಾದಿಗಳಿಗೂ ಚೇಷ್ಟಕ.
ಪ್ರಾಣದಃ= ಇಂದ್ರಿಯಗಳನ್ನು ನೀಡುವವನು ಅಥವಾ ನಾಶ ಮಾಡುವವನು.
ಪ್ರಾಣಃ= ಶ್ರೇಷ್ಠವಾದ ಯಜ್ಞಾದಿ ಪ್ರವರ್ತಕ, ಪ್ರಕೃಷ್ಟವಾದ ಸುಖವನ್ನು ಹೊಂದಿದವನು.
ಜ್ಯೇಷ್ಠಃ= ವಯಸ್ಸಿನಿಂದ ಬಹಳ ದೊಡ್ಡವನು.
ಶ್ರೇಷ್ಠಃ= ಅತಿಶಯವಾದ ಮಹಿಮೆಯನ್ನು ಹೊಂದಿದವನು, ಅತಿಶಯವಾಗಿ ಪ್ರಶಂಸೆಗೆ ಅರ್ಹನಾದವನು.
ಪ್ರಜಾಪತಿಃ= ಪ್ರಜೆಗಳಿಗೆ ಒಡೆಯ.
ಹಿರಣ್ಯಗರ್ಭಃ= ಲೋಕಕ್ಕೆ ಹಿತವಾದ, ರಮಣೀಯವಾದ ಉದರವುಳ್ಳವನು.
ಭೂಗರ್ಭಃ= ಭೂಮಿಯನ್ನು ಉದರದಲ್ಲಿ ಹೊಂದಿದವನು.
ಮಾಧವಃ= ಲಕ್ಷ್ಮೀಪತಿ.
ಮಧುಸೂದನಃ= ಸುಖ ಸಾಧನಗಳಾದ ವಿಷಯಗಳನ್ನು ನಾಶ ಮಾಡುವವನು.
ಈಶ್ವರೋ ವಿಕ್ರಮೀ ಧನ್ವೀ ಮೇಧಾವೀ ವಿಕ್ರಮಃ ಕ್ರಮಃ |
ಅನುತ್ತಮೋ ದುರಾಧರ್ಷಃ ಕೃತಜ್ಞಃ ಕೃತಿರಾತ್ಮವಾನ್ ॥22॥
ಈಶ್ವರಃ= ಒಡೆಯ, ಸಮರ್ಥ.
ವಿಕ್ರಮಃ= ತ್ರಿವಿಕ್ರಮ ಅವತಾರದಲ್ಲಿ ವಿಶೇಷವಾದ ಪಾದವಿಕ್ಷೇಪವನ್ನು ಮಾಡಿದವನು.
ಧನ್ವೀ= ಶ್ರೇಷ್ಠವಾದ ಧನುಸ್ಸನ್ನು ಹೊಂದಿದವನು.
ಮೇಧಾವೀ= ಧಾರಣಶಕ್ತಿಯಿಂದ ಕೂಡಿದ ನಿರವಧಿಕವಾದ ಬುದ್ಧಿಯನ್ನು ಹೊಂದಿದವನು.
ವಿಕ್ರಮೀ= ವಿಶೇಷವಾದ ತಾರತಮ್ಯಕ್ಕೆ ನಿಯಾಮಕನಾದವನು, ತನ್ನ ರೂಪದಲ್ಲಿ ತಾರತಮ್ಯವಿಲ್ಲದವನು.
ಕ್ರಮಃ= ಲಕ್ಷ್ಮಿಯನ್ನು ಪರಿಚಾರಿಕೆಯಾಗಿ ಹೊಂದಿದವನು.
ಅನುತ್ತಮಃ= ಸರ್ವಶ್ರೇಷ್ಠನಾದವನು.
ದುರಾಧರ್ಷಃ= ಸೋಲಿಸಲು ಅಸಾಧ್ಯನಾದವನು, ಅವಮಾನಿಸಲು ಅಶಕ್ಯನಾದವನು.
ಕೃತಜ್ಞಃ= ಜೀವರ ಪುಣ್ಯ-ಪಾಪ ಕರ್ಮಗಳನ್ನು ತಿಳಿದವನು.

ಕೃತಿಃ= ದುಃಖವನ್ನು ಛೇದಿಸುವವನು.
ಆತ್ಮವಾನ್= ಪ್ರಶಸ್ತವಾದ ಶರೀರವನ್ನು ಯಾವಾಗಲೂ ಹೊಂದಿರುವವನು.
ಸುರೇಶಃ ಶರಣಂ ಶರ್ಮ ವಿಶ್ವರೇತಾಃ ಪ್ರಜಾಭವಃ |
ಅಹಃ ಸಂವತ್ಸರೋ ವ್ಯಾಲಃ ಪ್ರತ್ಯಯಃ ಸರ್ವದರ್ಶನಃ ॥23॥
ಸುರೇಶಃ= ದೇವತೆಗಳಿಗೆ ಒಡೆಯ.
ಶರಣಂ= ಸಂಸಾರಭೀತರಿಗೆ ಮತ್ತು ಭಕ್ತರಿಗೆ ಆಶ್ರಯ.
ಶರ್ಮ= ಪರಮಾನಂದ ಸ್ವರೂಪಿ.
ವಿಶ್ವರೇತಾಃ= ವಿಶ್ವಕ್ಕೆ ಕಾರಣವಾದ ರೇತಸ್ಸುಳ್ಳವನು.
ಪ್ರಜಾಭವಃ= ಪ್ರಜೆಗಳ ಉತ್ಪತ್ತಿಗೆ ಕಾರಣನಾದವನು.
ಅಹಃ= ಹೇಯನಲ್ಲದವನು.
ಸಂವತ್ಸರಃ= ಭಕ್ತರನ್ನು ಶಿಶುಗಳಂತೆ ಚೆನ್ನಾಗಿ ರಕ್ಷಿಸುವವನು.
ವ್ಯಾಲಃ= ವಿಶಿಷ್ಟ ವಿಷಯಗಳನ್ನು ಚೆನ್ನಾಗಿ ಆಸ್ವಾದಿಸುವವನು ಅಥವಾ ಜಗತ್ತಿಗೆ ಕ್ಷಯಕಾರಕನು. ವಿಶೇಷವಾಗಿ ಪ್ರಕಾಶಮಾನನಾದವನು. ವಿಶೇಷವಾಗಿ ಎಲ್ಲ ಕಡೆಯಲ್ಲಿಯೂ ಸನ್ನಿಹಿತನಾದವನು.
ಪ್ರತ್ಯಯಃ= ಪ್ರತಿ ವಿಷಯವನ್ನೂ ತಿಳಿದವನು.
ಸರ್ವದರ್ಶನಃ= ಸರ್ವವನ್ನೂ ಸಾಕ್ಷಾತ್ತಾಗಿ ನೋಡುವವನು.
ಅಜಃ ಸರ್ವೇಶ್ವರಃ ಸಿದ್ಧಃ ಸಿದ್ಧಿಃ ಸರ್ವಾದಿರಚ್ಯುತಃ |
ವೃಷಾಕಪಿರಮೇಯಾತ್ಮಾ ಸರ್ವಯೋಗವಿನಿಃಸೃತಃ ॥24॥
ಅಜಃ= ಸ್ವರಾಕೃತ ಶರೀರ ಸಂಬಂಧ ರೂಪವಾದ ಜನನವಿಲ್ಲದವನು.
ಸರ್ವೇಶ್ವರಃ= ಎಲ್ಲರಿಗೂ ಒಡೆಯನಾದವನು.
ಸಿದ್ಧಃ= ಸ್ವಾಭಾವಿಕವಾದ, ನಿರವಧಿಕವಾದ ಅಣಿಮಾದಿ ಸಿದ್ಧಿಯನ್ನು ಹೊಂದಿದವನು.
ಸಿದ್ಧಿಃ= ತನ್ನಲ್ಲಿ ಸ್ನೇಹಬಂಧವನ್ನು ಹೊಂದಿರುವವನು.
ಸರ್ವಾದಿಃ= ಎಲ್ಲದಕ್ಕೂ ಕಾರಣನಾದವನು ಅಥವಾ ಎಲ್ಲವನ್ನೂ ಸ್ವೀಕರಿಸುವವನು ಅಥವಾ ಎಲ್ಲವನ್ನೂ ಭಕ್ಷಿಸುವವನು.
ಅಚ್ಯುತಃ= ಸ್ವರೂಪದಿಂದ, ಗುಣದಿಂದ ಅಥವಾ ಕ್ರಿಯೆಯಿಂದ ಚ್ಯುತಿ ಇಲ್ಲದವನು.
ವೃಷಾಕಪಿಃ= ಸುಖದ ಮಳೆಯನ್ನು ಸುರಿಸುವವನು ಮತ್ತು ದುಃಖವನ್ನು ನಾಶ ಮಾಡುವವನು.
ಅಮೇಯಾತ್ಮಾ= ಸಮಗ್ರವಾಗಿ ತಿಳಿಯಲು ಅಶಕ್ಯವಾದ ಸ್ವರೂಪವುಳ್ಳವನು.
ಸರ್ವಯೋಗವಿನಿಃ ಸೃತಃ= ಎಲ್ಲದರ ಸಂಬಂಧವನ್ನು ಕಳೆದುಕೊಂಡಿರುವವನು.
ವಸುರ್ವಸುಮನಾಃ ಸತ್ಯಃ ಸಮಾತ್ಮಾ ಸಮ್ಮಿತಃ ಸಮಃ |
ಅಮೋಘಃ ಪುಂಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ ॥25॥
ವಸುಃ= ಎಲ್ಲ ಕಡೆಯಲ್ಲಿಯೂ ವಾಸ ಮಾಡುವವನು, ಶ್ರೇಷ್ಠವಾದ ಸುಖ ಉಳ್ಳವನು.
ವಸುಮನಾಃ= ಶ್ರೇಷ್ಠವಾದ ತನ್ನ ಐಶ್ವರ್ಯಧನದಲ್ಲಿ ಮನಸ್ಸುಳ್ಳವನು.
ಸತ್ಯಃ= ಸಮೀಚೀನವಾದ ಆನಂದಜ್ಞಾನವುಳ್ಳವನು, ಮುಕ್ತಾಮುಕ್ತ ನಿಯಾಮಕನು.
ಸಮಾತ್ಮಾ= ನೀಚೋಚ್ಚ ಪ್ರಾಣಿಗಳಲ್ಲಿಯೂ ಸಮನಾಗಿರುವವನು, ಜ್ಞಾನಾನಂದಾದಿ ಗುಣಗಳಲ್ಲಿ ಒಂದೇ ಪ್ರಕಾರವುಳ್ಳವನು. ಒಂದೇ ಪ್ರಕಾರವಾದ ಸ್ವರೂಪವನ್ನು ಹೊಂದಿರುವವನು.
ಸಮ್ಮಿತಃ= ಸರಿಯಾಗಿ ತಿಳಿಯಲ್ಪಡುವವನು.
ಸಮಃ= ಲಕ್ಷ್ಮಿಯಿಂದ ಸಹಿತನಾದವನು.
ಅಮೋಘಃ= ನಿರರ್ಥಕವಾದ ಸಂಕಲ್ಪವಾಗಲೀ, ಮಾತಾಗಲೀ, ಚೇಷ್ಟೆಯಾಗಲೀ ಇಲ್ಲದವನು.
ಪುಂಡರೀಕಾಕ್ಷಃ= ಹೃದಯಭಾಗದಲ್ಲಿ ವ್ಯಾಪಿಸಿರುವವನು.
ವೃಷಕರ್ಮಾ= ಈಶ್ವರನ ವಾಹನವಾದ ನಂದಿಯಲ್ಲಿ ಗಮನಾಗಮನವನ್ನು ಮಾಡುವವನು.
ವೃಷಾಕೃತಿಃ= ನಂದಿಯಂತೆ ಭಯಂಕರವಾದ ಆಕಾರವುಳ್ಳವನು.
ರುದ್ರೋ ಬಹುಶಿರಾ ಬಭ್ರುರ್ವಿಶ್ವಯೋನಿಃ ಶುಚಿಶ್ರವಾಃ |
ಅಮೃತಃ ಶಾಶ್ವತಃ ಸ್ಥಾಣುರ್ವರಾರೋಹೋ ಮಹಾತಪಾಃ ॥26॥
ರುದ್ರಃ= ರೋಗವನ್ನು ಪರಿಹರಿಸುವವನು
ಬಹುಶಿರಾಃ= ಅನೇಕ ಶಿರಸ್ಸುಗಳನ್ನು ಹೊಂದಿರುವವನು.
ಬಭ್ರುಃ= ಕಪಿಲವರ್ಣನು. ಪೋಷಿಸುವ ಸ್ವಭಾವದವನು. ಬಂಧಕವಾದ ಭೂಮಂಡಲವುಳ್ಳವನು.
ವಿಶ್ವಯೋನಿಃ= ಪ್ರಪಂಚಕ್ಕೆ ನೇರವಾಗಿ ಕಾರಣನಾದವನು.
ಶುಚಿಶ್ರವಾಃ= ಶುದ್ಧವಾದ ಶ್ರವಣವುಳ್ಳವನು (ಯಾವನ ಮಹಿಮೆಯ ಶ್ರವಣವು ಶುದ್ಧಿಯನ್ನು ತಂದುಕೊಡುತ್ತದೋ ಅಂತಹವನು).
ಅಮೃತಃ= ಎಂದಿಗೂ ಮರಣವನ್ನು ಹೊಂದದವನು.
ಶಾಶ್ವತಃ= ಯಾವಾಗಲೂ ಒಂದೇ ರೀತಿಯಾಗಿ ಇರುವವನು.
ಸ್ಥಾಣುಃ= ಅಣುವಾಗಿ ಎಲ್ಲ ಕಡೆಯಲ್ಲಿಯೂ ಇರುವವನು.
ವರಾರೋಹಃ= ಉತ್ತಮವಾದ ವೈಕುಂಠಾದಿ ಲೋಕಗಳಿಗೆ ಸಾಧಕರನ್ನು ಏರುವಂತೆ ಮಾಡುವವನು.

ಮಹಾತಪಾಃ= ಶ್ರೇಷ್ಠವಾದ, ಜ್ಞಾನರೂಪವಾದ ತಪಸ್ಸುಳ್ಳವನು.
ಸರ್ವಗಃ ಸರ್ವವಿದ್ಭಾನುರ್ವಿಷ್ವಕ್ಸೇನೋ ಜನಾರ್ದನಃ |
ವೇದೋ ವೇದವಿದವ್ಯಂಗೋ ವೇದಾಂಗೋ ವೇದವಿತ್ಕವಿಃ ॥27॥
ಸರ್ವಗಃ= ಎಲ್ಲವನ್ನೂ ಪ್ರವೇಶಿಸಿರುವವನು.
ಸರ್ವವಿತ್= ಎಲ್ಲವನ್ನೂ ವಿಶೇಷವಾಗಿ ತಿಳಿದಿರುವವನು.
ಭಾನುಃ= ಪ್ರಕಾಶಶೀಲನಾದವನು.
ವಿಷ್ವಕ್ಸೇನಃ= ಎಲ್ಲ ಕಡೆಯಲ್ಲಿಯೂ ತನ್ನ ಭಟರ ಸೈನ್ಯವನ್ನು ಹೊಂದಿದವನು.
ಜನಾರ್ದನಃ= ದುಷ್ಟ ಜನರನ್ನು ಅರ್ದಿಸುವವನು, ಭಕ್ತರ ಜನನವನ್ನು ಅರ್ದಿಸುವವನು.
ವೇದಃ= ಜ್ಞಾನಸ್ವರೂಪಿಯಾದವನು.
ವೇದವಿತ್= ವೇದವನ್ನು ಚೆನ್ನಾಗಿ ತಿಳಿದವನು.
ಅವ್ಯಂಗಃ= ಯಾವಾಗಲೂ ಸಕಲ ಅಂಗಗಳಿಂದ ಕೂಡಿದವನು.
ವೇದಾಂಗಃ= ತನ್ನ ಅಂಗಗಳಲ್ಲಿ ವೇದಗಳಿಗೆ ಆಶ್ರಯವನ್ನು ನೀಡಿದವನು.
ವೇದವಿತ್= ವೇದಗಳಿಂದ ತಿಳಿಯಲ್ಪಡುವವನು, ವೇದಗಳಿಂದ ಹೊಂದಲ್ಪಡುವವನು.
ಕವಿಃ= ಸರ್ವಜ್ಞನಾದವನು.
ಲೋಕಾಧ್ಯಕ್ಷಃ ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ |
ಚತುರಾತ್ಮಾ ಚತುರ್ವ್ಯೂಹಶ್ಚತುರ್ದಂಷ್ಟ್ರಶ್ಚತುರ್ಭುಜಃ ॥28॥
ಲೋಕಾಧ್ಯಕ್ಷಃ= ಸಕಲ ಲೋಕಗಳಿಗೂ ಅಧಿಪತಿಯಾದವನು.
ಸುರಾಧ್ಯಕ್ಷಃ= ದೇವತೆಗಳಿಗೆ ಅಧಿಪತಿಯಾದವನು.
ಧರ್ಮಾಧ್ಯಕ್ಷಃ= ಧರ್ಮಕ್ಕೆ ಅಧಿಪತಿಯಾದವನು.
ಕೃತಾಕೃತಃ= ಅಕೃತವೆನಿಸುವ ಮೋಕ್ಷಕ್ಕೆ ಕಾರಣನಾದವನು. ನಿತ್ಯವಾದ ಕಾಲಾಕಾಶಾದಿಗಳಿಗೆ ಪರಾಧೀನವಾದ ವಿಶೇಷಾವಾಪ್ತಿರೂಪವಾದ ಸೃಷ್ಟಿಯನ್ನು ಉಂಟು ಮಾಡುವವನು.
ಚತುರಾತ್ಮಾ= ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ನಾಲ್ಕು ರೂಪವುಳ್ಳವನು.
ಚತುರ್ವ್ಯೂಹಃ= ಜಗತ್ತಿನ ಸೃಷ್ಟಿ, ಪಾಲನೆ, ಸಂಹಾರ ಮತ್ತು ಯೋಗ್ಯರಿಗೆ ಮೋಕ್ಷ ಎಂಬ ನಾಲ್ಕು ಚಟುವಟಿಕೆಗಳಿಗಾಗಿ ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ ಮತ್ತು ವಾಸುದೇವ ಎಂಬ ವಿಭಾಗವನ್ನು ಹೊಂದಿರುವವನು.
ಚತುದ್ರಂಷ್ಟ್ರಃ= ನಾಲ್ಕು ಕೋರೆ ಹಲ್ಲುಗಳನ್ನುಳ್ಳವನು.
ಚತುರ್ಭುಜಃ= ನಾಲ್ಕು ಭುಜಗಳನ್ನು ಹೊಂದಿದವನು.
ಭ್ರಾಜಿಷ್ಣುರ್ಭೋಜನಂ ಭೋಕ್ತಾ ಸಹಿಷ್ಣುರ್ಜಗದಾದಿಜಃ |
ಅನಘೋ ವಿಜಯೋ ಜೇತಾ ವಿಶ್ವಯೋನಿಃ ಪುನರ್ವಸುಃ ॥29॥
ಭ್ರಾಜಿಷ್ಣುಃ= ಸ್ವಭಾವತಃ ಪ್ರಕಾಶರೂಪನಾಗಿರುವವನು.
ಭೋಜನಂ= ಭಕ್ತರಿಗೆ ಸುಖಭೋಗವನ್ನು ಕೊಡುವವನು, ಎಲ್ಲರಿಂದಲೂ ಉಪಜೀವಿಸಲ್ಪಡುವವನು.
ಭೋಕ್ತಾ= ಸರ್ವಸಾರವನ್ನು ಭೋಗಿಸುವವನು.
ಸಹಿಷ್ಣುಃ= ಭಕ್ತರು ಮಾಡುವ ಅಪರಾಧವನ್ನು ವಿಶೇಷವಾಗಿ ಸಹಿಸಿಕೊಳ್ಳುವವನು.
ಜಗದಾದಿಜಃ= ಜಗತ್ತಿನ ಸೃಷ್ಟಿಯ ಆದಿಯಲ್ಲಿ ಪುರುಷ ರೂಪದಿಂದ ವ್ಯಕ್ತನಾದವನು.
ಅನಘಃ= ಪಾಪರಹಿತನು.
ವಿಜಯಃ= ವಿಶೇಷವಾದ ಉತ್ಕರ್ಷವನ್ನು ಹೊಂದಿದವನು.
ಜೇತಾ= ಪ್ರತಿಯೊಂದು ಗುಣದ ವಿಷಯದಲ್ಲಿಯೂ ಎಲ್ಲರನ್ನೂ ಸ್ವಾಭಾವಿಕವಾಗಿ ಜಯಿಸಿರುವವನು.
ವಿಶ್ವಯೋನಿಃ= ಅಸ್ವತಂತ್ರರಲ್ಲಿ ಪೂರ್ಣಗುಣಳಾದ ಲಕ್ಷ್ಮಿಯನ್ನು ಭಾರ್ಯೆಯಾಗಿ ಹೊಂದಿದವನು.
ಪುನರ್ವಸುಃ= ಭಕ್ತರಿಗೆ ಪುನಃ ಪುನಃ ಜ್ಞಾನ, ದ್ರವ್ಯ ಸಂಪತ್ತನ್ನು ಕೊಡುವವನು.
ಉಪೇಂದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ |
ಅತೀಂದ್ರಃ ಸಂಗ್ರಹಃ ಸರ್ಗೋ ಧೃತಾತ್ಮಾ ನಿಯಮೋ ಯಮಃ ॥30॥
ಉಪೇಂದ್ರಃ= ಉತ್ಕೃಷ್ಟನಾದವನು, ತನ್ನ ಸ್ವರೂಪವನ್ನು ಪ್ರತ್ಯಕ್ಷವಾಗಿ ತಿಳಿಯುವವನು.
ವಾಮನಃ= ಬಲಿಯನ್ನು ಪಾತಾಳಕ್ಕೆ ತಳ್ಳಿದವನು.
ಪ್ರಾಂಶುಃ= ನಿಯತನಾಗಿರುವವನು.
ಅಮೋಘಃ= ತನ್ನ ಸ್ಮರಣೆ, ಕೀರ್ತನೆ, ಪ್ರಣಾಮ, ಆರಾಧನೆ ಮೊದಲಾದವುಗಳನ್ನು ನಿರರ್ಥಕವಾಗಿ ಮಾಡದವನು.
ಶುಚಿಃ= ಶುದ್ಧನಾದವನು.
ಊರ್ಜಿತಃ= ಅತಿಶಯವಾದ ಚೇಷ್ಟೆಯುಳ್ಳವನು. ಅತಿಶಯವಾದ ಬಲವುಳ್ಳವನು. ಅತಿಶಯವಾದ ಉತ್ಸಾಹವುಳ್ಳವನು.
ಅತೀಂದ್ರಃ= ಶಚೀಪತಿಯಾದ ಇಂದ್ರನನ್ನು ಮೀರಿಸಿದವನು.
ಸಂಗ್ರಹಃ= ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಳ್ಳುವವನು.
ಸರ್ಗಃ= ಸೃಷ್ಟಿಯನ್ನು ಮಾಡುವವನು.
ಧೃತಾತ್ಮಾ= ಬ್ರಹ್ಮಾದಿ ದೇವರನ್ನು ಧರಿಸಿರುವವನು ಮತ್ತು ಪೋಷಿಸುವವನು.

ನಿಯಮಃ= ಚೆನ್ನಾಗಿ ನಿಯಂತ್ರಿಸುವವನು.
ಯಮಃ= ಸಂಹಾರಕನಾದವನು.
ವೇದ್ಯೋ ವೈದ್ಯಃ ಸದಾಯೋಗೀ ವೀರಹಾ ಮಾಧವೋ ಮಧುಃ |
ಅತೀಂದ್ರಿಯೋ ಮಹಾಮಾಯೋ ಮಹೋತ್ಸಾಹೋ ಮಹಾಬಲಃ ||
ವೇದ್ಯಃ= ತಿಳಿದುಕೊಳ್ಳಲು ಅರ್ಹನಾದವನು, ಸಕಲ ವಿದ್ಯೆಗಳನ್ನು ಬಲ್ಲವನು.
ವೈದ್ಯಃ= ವಿದ್ಯಾಸಂಬಂಧಿ, ವೇದಪ್ರತಿಪಾದ್ಯ
ಸದಾಯೋಗೀ= ಯಾವಾಗಲೂ ಜೀವನ ಸಂಬಂಧವುಳ್ಳವನು, ಲಕ್ಷ್ಮೀದೇವಿಯಲ್ಲಿ ನಿತ್ಯ ಸಂಬಂಧವುಳ್ಳವನು.
ವೀರಹಾ= ವಿಶೇಷ ಪ್ರೇರಕನಾದ ಮುಖ್ಯಪ್ರಾಣನಲ್ಲಿ ಇರುವವನು.
ಮಾಧವಃ= ಲಕ್ಷ್ಮೀಪತಿ, ಬ್ರಹ್ಮವಿದ್ಯೆಗೆ ಅಧಿಪತಿ, ಮನನ ಮತ್ತು ಧ್ಯಾನಗಳಿಗೆ ಗೋಚರನಾದವನು.
ಮಧುಃ= ಮಧುಕುಲದಲ್ಲಿ ಜನಿಸಿದವನು, ಮಧುರನಾದವನು.
ಅತೀಂದ್ರಿಯಃ= ಇಂದ್ರಿಯಗಳಿಗೆ ಗೋಚರಿಸದವನು.
ಮಹಾಮಾಯಃ= ಶ್ರೇಷ್ಠವಾದ ಮಹಿಮೆಯುಳ್ಳವನು, ಶ್ರೇಷ್ಠವಾದ ಜ್ಞಾನವುಳ್ಳವನು, ಶ್ರೇಷ್ಠವಾದ ಇಚ್ಛೆಯುಳ್ಳವನು.
ಮಹೋತ್ಸಾಹಃ= ಸೃಷ್ಟ್ಯಾದಿ ಕ್ರಿಯೆಗಳಲ್ಲಿ ಬಹಳ ಉತ್ಸಾಹವುಳ್ಳವನು.
ಮಹಾಬಲಃ= ಶ್ರೇಷ್ಠವಾದ ಬಲವುಳ್ಳವನು.
ಮಹಾಬುದ್ಧಿರ್ಮಹಾವೀರ್ಯೋ ಮಹಾಶಕ್ತಿರ್ಮಹಾದ್ಯುತಿಃ |
ಅನಿರ್ದೇಶ್ಯವಪುಃ ಶ್ರೀಮಾನಮೇಯಾತ್ಮಾ ಮಹಾದ್ರಿಧೃಕ್ ||32||
ಮಹಾಬುದ್ಧಿಃ= ಮಹತ್ತಾದ ಜ್ಞಾನವುಳ್ಳವನು.
ಮಹಾವೀರ್ಯಃ= ಮಹಾಪ್ರಭಾವವುಳ್ಳವನು.
ಮಹಾಶಕ್ತಿಃ= ಮಹತ್ತಾದ, ಸ್ವರೂಪಾತ್ಮಕವಾದ ಮತ್ತು ಬಾಹ್ಯವಾದ ಶಕ್ತಿ ಉಳ್ಳವನು.
ಮಹಾದ್ಯುತಿಃ= ಮಹಾಪ್ರಭೆಯುಳ್ಳವನು.
ಅನಿರ್ದೇಶ್ಯವಪುಃ= ಹೀಗೆಯೇ ಇದೆ ಎಂದು ಸ್ಪಷ್ಟವಾಗಿ ನಿರೂಪಿಸಲಾಗದ ದೇಹವುಳ್ಳವನು.
ಶ್ರೀಮಾನ್= ಸದಾ ಲಕ್ಷ್ಮಿಯಿಂದ ಕೂಡಿದವನು.
ಅಮೇಯಾತ್ಮಾ= ಅಳೆಯಲು ಬಾರದ ಸ್ವರೂಪವುಳ್ಳವನು.
ಮಹಾದ್ರಿಧೃಕ್= ಸಮುದ್ರಮಥನದ ಕಾಲದಲ್ಲಿ ದೊಡ್ಡ ಮಂದರಪರ್ವತವನ್ನು ಎತ್ತಿದವನು.
ಮಹೇಷ್ವಾಸೋ ಮಹೀಭರ್ತಾ ಶ್ರೀನಿವಾಸಃ ಸತಾಂ ಗತಿಃ |
ಅನಿರುದ್ಧಃ ಸುರಾನಂದೋ ಗೋವಿಂದೋ ಗೋವಿದಾಂ ಪತಿಃ ||33||
ಮಹೇಷ್ವಾಸಃ= ಮಹತ್ತಾದ ಧನುಸ್ಸುಳ್ಳವನು, ಮಹತ್ತಾದ ಬಾಣಪ್ರಯೋಗ ಉಳ್ಳವನು.
ಮಹೀಭರ್ತಾ= ತನ್ನ ಕಕ್ಷೆಯಿಂದ ಬೀಳುತ್ತಿದ್ದ ಭೂಮಿಯನ್ನು ಧರಿಸಿದವನು.
ಶ್ರೀನಿವಾಸಃ= ಶ್ರೀಯನ್ನು ಧರಿಸಿದವನು. ತನ್ನ ಸೌಂದರ್ಯಕ್ಕೆ ಎಂದೂ ಎಲ್ಲಿಯೂ ವಿಯೋಗ ಬರದಂತೆ ಆಶ್ರಯನಾಗಿರುವವನು.
ಸತಾಂ ಗತಿಃ= ಸಜ್ಜನರಿಗೆ ಆಶ್ರಯನಾಗಿರುವವನು.
ಅನಿರುದ್ಧಃ= ತನ್ನ ಕ್ರಿಯೆಗಳಲ್ಲಿ ಯಾರಿಂದಲೂ ತಡೆಯಲ್ಪಡದವನು.
ಸುರಾನಂದಃ= ದೇವತೆಗಳನ್ನು ಆನಂದಪಡಿಸುವವನು.
ಗೋವಿಂದಃ= ಪಾತಾಳಕ್ಕೆ ಕುಸಿದ ಭೂಮಿಯನ್ನು ಪಡೆದಿರುವವನು, ವೇದವಾಣಿಯನ್ನು ಚೆನ್ನಾಗಿ ಬಲ್ಲವನು, ಗೋವುಗಳಿಗೆ ಒಡೆಯನಾದವನು.
ಗೋವಿದಾಂಪತಿಃ= ವೇದಜ್ಞರಿಗೆ ಪಾಲಕನಾದವನು.
ಮರೀಚಿರ್ದಮನೋ ಹಂಸಃ ಸುಪರ್ಣೋ ಭುಜಗೋತ್ತಮಃ |
ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ ||34||
ಮರೀಚಿಃ= ಮೋಡವು ಚಲಿಸುವಂತೆ ಮಾಡುವವನು, ಶಾಸ್ತ್ರದಲ್ಲಿ ಪ್ರತೀತವಾದ ಪ್ರಕಾಶವುಳ್ಳವನು.
ದಮನಃ= ದುಷ್ಟರನ್ನು ನಿಗ್ರಹಿಸುವವನು.
ಹಂಸಃ= ಸರ್ವೋತ್ತಮವಾದ, ಪೂರ್ಣವಾದ ಎಲ್ಲವನ್ನೂ ಹೊಂದಿರುವವನು.
ಸುಪರ್ಣಃ= ಚೆನ್ನಾಗಿ ಪೂರ್ಣನಾದವನು, ಪೂರ್ಣಾನಂದ ಉಳ್ಳವನು.
ಭುಜಗೋತ್ತಮಃ= ಶೇಷನನ್ನು ಇಂದ್ರಾದಿಗಳಿಗಿಂತ ಉತ್ತಮನಾಗಿರುವಂತೆ ಅನುಗ್ರಹಿಸುವವನು.
ಹಿರಣ್ಯನಾಭಃ= ಹಿರಣ್ಯಮಯವಾದ ಬ್ರಹ್ಮಾಂಡವನ್ನು ನಾಭಿಯಲ್ಲಿ ಧರಿಸಿದವನು.
ಸುತಪಾಃ= ಶೋಭನವಾದ ಜ್ಞಾನವುಳ್ಳವನು.
ಪದ್ಮನಾಭಃ= ನಾಭಿಯಲ್ಲಿ ಪದ್ಮವನ್ನು ಧರಿಸಿದವನು, ಪಾದದಲ್ಲಿ ಲಕ್ಷ್ಮಿಯನ್ನು ಹೊಂದಿದವನು. ಅತಿಶಯವಾಗಿ ಶತ್ರುಗಳನ್ನು ಸಹಿಸಿಕೊಳ್ಳುವವನು.
ಪ್ರಜಾಪತಿಃ= ಜೀವರಿಗೆ ಒಡೆಯನಾದವನು.
ಅಮೃತ್ಯುಃ ಸರ್ವದೃಕ್ ಸಿಂಹಃ ಸಂಧಾತಾ ಸಂಧಿಮಾನ್‌ಸ್ಥಿರಃ |
ಅಜೋ ದುರ್ಮರ್ಷಣಃ ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ ||35||
ಅಮೃತ್ಯುಃ= ಮೃತ್ಯುರಹಿತನು.

ಸರ್ವದೃಕ್= ಎಲ್ಲವನ್ನೂ ಎಲ್ಲರನ್ನೂ ನೋಡುವವನು.
ಸಿಂಹಃ= ಸಿಂಹದಂತೆ ಗಂಭೀರನು.
ಸಂಧಾತಾ= ಚೆನ್ನಾಗಿ ಧಾರಣೆ ಪೋಷಣೆಗಳನ್ನು ಮಾಡುವವನು.
ಸಂಧಿಮಾನ್= ಅಕ್ಷರದ್ವಯಸಮಾಹಾರರೂಪವಾದ ಸಂಧಿಯಿಂದ ಪ್ರತಿಪಾದ್ಯನಾದವನು.
ಸ್ಥಿರಃ= ಸ್ವರೂಪತಃ ನಿರ್ವಿಕಾರನಾದವನು. ಮನಸ್ಸಿಗೆ ಚಾಂಚಲ್ಯವಿಲ್ಲದವನು.
ಅಜಃ= `ಅ' ಎಂಬ ಸ್ವಾಭಾವಿಕ ನಾಮವನ್ನು ಹೊಂದಿದವನು.
ದುರ್ಮರ್ಷಣಃ= ಯಾರಿಂದಲೂ ಎದುರಿಸಲು ಅಶಕ್ಯನಾದವನು.
ಶಾಸ್ತಾ= ಆದೇಶಿಸುವವನು.
ವಿಶ್ರುತಾತ್ಮಾ= ಪ್ರಸಿದ್ಧನಾದ ಸ್ವಾಮಿ.
ಸುರಾರಿಹಾ= ದೇವತೆಗಳ ಶತ್ರುಗಳನ್ನು ಸಂಹರಿಸುವವನು.
ಗುರುರ್ಗುರುತಮೋ ಧಾಮ ಸತ್ಯಃ ಸತ್ಯಪರಾಕ್ರಮಃ |
ನಿಮೇಷೋಽನಿಮಿಷಃ ಸ್ರಗ್ವೀ ವಾಚಸ್ಪತಿರುದಾರಧೀಃ ॥36॥
ಗುರುಃ= ಉದ್ಯೋಗದೆಶೆಯಲ್ಲಿಡುವವನು, ಅಜ್ಞಾನವನ್ನು ಹೋಗಲಾಡಿಸುವವನು.
ಗುರುತಮಃ= ಉತ್ಕೃಷ್ಟನಾದ ಗುರು.
ಧಾಮ= ಎಲ್ಲವನ್ನೂ ಧರಿಸಿದ ಭೂಮಿಯನ್ನು ಸಹಾಯವಾಗಿ ಉಳ್ಳವನು. ಭೂಮಿಯಲ್ಲಿ ವಾಸಿಸುವವನು.
ಸತ್ಯಃ= ಯಾವಾಗಲೂ ಯಥಾರ್ಥಜ್ಞಾನವನ್ನು ಹೊಂದಿದವನು, ಜಗತ್ತನ್ನು ಸೃಷ್ಟಿಸುವವನು.
ಸತ್ಯಪರಾಕ್ರಮಃ= ಪ್ರತಿಬಂಧ, ಅನಿತ್ಯತ್ವ, ಅಪೂರ್ಣತೆ, ಅದಾರ್ಢ್ಯ ಮೊದಲಾದ ದೋಷಗಳಿಂದ ರಹಿತವಾದ ಶೋಭೆಯುಳ್ಳವನು. ಸಫಲವಾದ ಪ್ರವೃತ್ತಿಯುಳ್ಳವನು.
ನಿಮೇಷಃ= ಪ್ರಳಯಕಾಲದಲ್ಲಿ ಯೋಗನಿದ್ರೆಯಲ್ಲಿರುವವನು.
ಅನಿಮಿಷಃ= ಪ್ರಳಯ ಕಾಲದಲ್ಲಿಯೂ ಮುಖ್ಯಪ್ರಾಣನಿಂದ ನೋಡಲ್ಪಡುವವನು.
ಸ್ರಗ್ವೀ= ಶ್ರೇಷ್ಠವಾದ ವನಮಾಲೆ ಮೊದಲಾದ ಮಾಲೆಗಳನ್ನು ನಿತ್ಯವೂ ಧರಿಸಿರುವವನು.
ವಾಚಸ್ಪತಿಃ= ವೇದವಾಣಿಗೆ ಒಡೆಯನಾಗಿರುವವನು.
ಉದಾರಧೀಃ= ಉತ್ಕೃಷ್ಟವಾದ ಬುದ್ಧಿಯುಳ್ಳವನು, ಔದಾರ್ಯದಿಂದ ಸಹಿತವಾದ ಬುದ್ಧಿಯುಳ್ಳವನು.
ಅಗ್ರಣೀರ್ಗ್ರಾಮಣೀಃ ಶ್ರೀಮಾನ್ ನ್ಯಾಯೋ ನೇತಾ ಸಮೀರಣಃ |
ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥37॥
ಅಗ್ರಣೀಃ= ಪ್ರಥಮ ಪ್ರವರ್ತಕನಾದವನು. ಯೋಗ್ಯರನ್ನು ಮುಕ್ತಿಗೆ ಕರೆದೊಯ್ಯುವವನು. ಭಕ್ತರನ್ನು ತನಗಿಂತ ಮುಂದೆ ನಡೆಸುವವನು.
ಗ್ರಾಮಣೀಃ= ಶ್ರೇಷ್ಠನಾಗಿರುವವನು. ಗ್ರಾಮಗಳಿಗೆ ನೇತಾರನಾಗಿರುವವನು.
ಶ್ರೀಮಾನ್= ವಿದ್ಯಾಸಂಪತ್ತನ್ನು ಅತ್ಯಧಿಕವಾಗಿ ಹೊಂದಿರುವವನು.
ನ್ಯಾಯಃ= ಚೆನ್ನಾದ ಲಾಭವುಳ್ಳವನು. ಜೀವರಿಗೆ ಅವರವರ ಫಲಗಳನ್ನು ಭುಂಜಿಸುವವನು.
ನೇತಾ= ಎಲ್ಲರಿಗೂ ಪ್ರಭುವಾಗಿರುವವನು, ಸಮಸ್ತ ಪ್ರಪಂಚವನ್ನು ಭೇದಿಸುವವನು.
ಸಮೀರಣಃ= ಚೆನ್ನಾಗಿ ಪ್ರೇರಿಸುವವನು.
ಸಹಸ್ರಮೂರ್ಧಾ= ಸಾವಿರಾರು ಶಿರಸ್ಸುಗಳನ್ನುಳ್ಳವನು.
ವಿಶ್ವಾತ್ಮಾ= ಪೂರ್ಣನಾದ ಆತ್ಮ, ಪೂರ್ಣನಾದ ಸ್ವಾಮಿ.
ಸಹಸ್ರಾಕ್ಷಃ= ಸಾವಿರಾರು ಕಣ್ಣುಗಳುಳ್ಳವನು.
ಸಹಸ್ರಪಾತ್= ಸಾವಿರಾರು ಪಾದಗಳನ್ನುಳ್ಳವನು.
ಆವರ್ತನೋ ನಿವೃತ್ತಾತ್ಮಾ ಸಂವೃತಃ ಸಂಪ್ರಮರ್ದನಃ |
ಅಹಃ ಸಂವರ್ತಕೋ ವಹ್ನಿರನಿಲೋ ಧರಣೀಧರಃ ॥38॥
ಆವರ್ತಃ= ಜಗಚ್ಚಕ್ರವನ್ನು ತಿರುಗಿಸುವವನು.
ನಿವೃತ್ತಾತ್ಮಾ= ಸಂಸಾರ ಬಂಧನದಿಂದ ದೂರವಾದ ಸ್ವರೂಪವುಳ್ಳವನು.
ಸಂವೃತಃ= ಪ್ರಳಯಕಾಲದಲ್ಲಿ ಕತ್ತಲೆಯಿಂದ ಆವೃತನಾಗಿರುವವನು. ತನ್ನ ಗುಣಗಳನ್ನು ಸಂಸಾರಿ ಜೀವರಿಗೆ ಕಾಣದಂತೆ ಮುಚ್ಚಿಕೊಳ್ಳುವವನು.
ಸಂಪ್ರಮರ್ದನಃ= ಪ್ರಳಯಕಾಲದಲ್ಲಿ ಎಲ್ಲವನ್ನೂ ಸಂಹರಿಸುವವನು.
ಅಹಃ= ಎಂದೂ ನಾಶವನ್ನು ಹೊಂದದವನು.
ಸಂವರ್ತಕಃ= ಚೆನ್ನಾಗಿ ಪ್ರವರ್ತಿಸುವವನು.
ವಹ್ನಿಃ= ಖಾಂಡವವನವನ್ನು ಹಿಂಸೆ ಮಾಡುವವನು.
ಅನಿಲಃ= ಇತರರನ್ನು ಆಶ್ರಯಿಸದವನು. ತಾನೇ ತನಗೆ ಆಶ್ರಯನಾದವನು.
ಧರಣೀಧರಃ= ಭೂದೇವಿಯನ್ನು ಧರಿಸಿಕೊಂಡಿರುವವನು.
ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಧೃಗ್ವಿಶ್ವಭುಗ್ವಿಭುಃ |
ಸತ್ಕರ್ತಾ ಸತ್ಕೃತಿಃ ಸಾಧುರ್ಜಹ್ನುರ್ನಾರಾಯಣೋ ನರಃ ॥39॥

ಸುಪ್ರಸಾದಃ= ಶೋಭನವಾದ ಅನುಗ್ರಹವುಳ್ಳವನು.
ಪ್ರಸನ್ನಾತ್ಮಾ= ಸದಾ ಪ್ರಸನ್ನ ಸ್ವರೂಪನು. ಸದಾ ಪ್ರಸನ್ನವಾದ ಮನಸ್ಸುಳ್ಳವನು.
ವಿಶ್ವಧೃಕ್= ವಿಶ್ವದಲ್ಲಿ ತಲೆ ಎತ್ತಿ ನಿಲ್ಲುವವನು. ನಿರ್ಭೀತನಾಗಿರುವವನು.
ವಿಶ್ವಭುಕ್= ಸಮಸ್ತವನ್ನೂ ಭೋಗಿಸುವವನು.
ವಿಭುಃ= ಸರ್ವತ್ರವ್ಯಾಪಕನು.
ಸತ್ಕರ್ತಾ= ಸ್ವತಂತ್ರನಾದ ಕರ್ತೃ.
ಸತ್ಕೃತಿಃ= ನಿರ್ದುಷ್ಟವಾದ ಕೃತಿಯುಳ್ಳವನು. ನಿರ್ದುಷ್ಟವಾದ ಆಕೃತಿಯುಳ್ಳವನು.
ಸಾಧುಃ= ಶ್ರೇಷ್ಠನೆಂದು ನಿರ್ಧರಿಸಿಕೊಳ್ಳಲು ಯೋಗ್ಯನಾದವನು.
ಜಹ್ನುಃ= ಜನರಿಗೆ ಹುಂಕಾರವನ್ನು ಮಾಡುವವನು. ಜನಿಸಿದ ವಸ್ತುವನ್ನು ಸಂಹರಿಸುವವನು.
ನಾರಾಯಣಃ= ಸರ್ವಗುಣಪರಿಪೂರ್ಣನಾದವನು.
ನರಃ= ಕ್ಷಯವನ್ನು ಹೊಂದದವನು.
ಅಸಂಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟಃ ಶಿಷ್ಟಕೃಚ್ಛುಚಿಃ |
ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ ॥40॥
ಅಸಂಖ್ಯೇಯಃ= ಗುಣಕರ್ಮರೂಪಾದಿಗಳನ್ನು ಎಣಿಸಲು ಅಶಕ್ಯನಾದವನು.
ಅಪ್ರಮೇಯಾತ್ಮಾ= ಸಮಗ್ರವಾಗಿ ತಿಳಿಯಲು ಅಸಾಧ್ಯವಾದ ಸ್ವರೂಪವುಳ್ಳವನು.
ವಿಶಿಷ್ಟಃ= ಎಲ್ಲರಿಗಿಂತಲೂ ಅತಿಶಯವನ್ನು ಹೊಂದಿದವನು. ವಿಶೇಷವಾಗಿ ಶಾಸ್ತ್ರದಿಂದ ಪ್ರತಿಪಾದ್ಯನಾದವನು.
ಶಿಷ್ಟಕೃತ್= ಸ್ವತಂತ್ರವಾಗಿ ಸರ್ವರಿಗೂ ಶಾಸನವನ್ನು ಮಾಡುವವನು.
ಶುಚಿಃ= ತನ್ನ ಭಕ್ತರಿಗೆ ತನ್ನ ಸ್ವರೂಪವನ್ನು ಪ್ರಕಾಶಪಡಿಸುವವನು.
ಸಿದ್ಧಾರ್ಥಃ= ಸಹಜವಾಗಿಯೇ ಈಡೇರಿರುವ ಪ್ರಯೋಜನವುಳ್ಳವನು.
ಸಿದ್ಧಸಂಕಲ್ಪಃ= ಈಡೇರಿದ ಸಂಕಲ್ಪವುಳ್ಳವನು.
ಸಿದ್ಧಿದಃ= ಕ್ರಿಯಾನಿಷ್ಪತ್ತಿರೂಪವಾದ ಅಥವಾ ಫಲನಿಷ್ಪತ್ತಿ ರೂಪವಾದ ಸಿದ್ಧಿಯನ್ನು ನೀಡುವವನು.
ಸಿದ್ಧಿಸಾಧನಃ= ಕಾರ್ಯನಿಷ್ಪತ್ತಿಯನ್ನು ಸಾಧಿಸುವವನು. ಮೋಕ್ಷವನ್ನು ಸಾಧಿಸುವವನು. ಮೋಕ್ಷಕ್ಕೆ ಸಾಧನವಾದ ಜ್ಞಾನವನ್ನು ಸಾಧಿಸುವವನು.
ವೃಷಾಹೀ ವೃಷಭೋ ವಿಷ್ಣುರ್ವೃಷಪರ್ವಾ ವೃಷೋದರಃ |
ವರ್ಧನೋ ವರ್ಧಮಾನಶ್ಚ ವಿವಿಕ್ತಃ ಶ್ರುತಿಸಾಗರಃ ॥41॥
ವೃಷಾಹೀ= ವೃಷಭಾಸುರನನ್ನು ಚೆನ್ನಾಗಿ ಹಿಂಸಿಸುವವನು.
ವೃಷಭಃ= ಶ್ರೇಷ್ಠನಾದವನು.
ವಿಷ್ಣುಃ= ಕಾಲಿಯನಾಗನ ವಿಷವನ್ನು ನಾಶ ಮಾಡುವವನು.
ವೃಷಪರ್ವಾ=ಭಕ್ತರ ಅಭೀಷ್ಟವನ್ನು ಸುರಿಸುವ ಐದು ಪರ್ವಗಳನ್ನುಳ್ಳವನು.
ವೃಷೋದರಃ= ಭಕ್ತರ ಕಾಮನೆಗಳನ್ನು ಸುರಿಸುವ ಉದರವುಳ್ಳವನು.
ವರ್ಧನಃ= ಭಕ್ತರನ್ನು ಅಭಿವೃದ್ಧಿ ಪಡಿಸುವವನು.
ವರ್ಧಮಾನಃ= ನಿತ್ಯವೂ ಪೂರ್ಣನಾಗಿರುವವನು.
ವಿವಿಕ್ತಃ= ಜೀವ-ಜಡ ಪ್ರಪಂಚಕ್ಕಿಂತಲೂ ಭಿನ್ನನಾದವನು.
ಶ್ರುತಿಸಾಗರಃ= ಅನಂತ ಶ್ರುತಿಗಳನ್ನು ಪಡೆದು ಅಂತಹ ಶ್ರುತಿಗಳಿಂದ ಸಾಗರದಂತೆ ಇರುವವನು.
ಸುಭುಜೋ ದುರ್ಧರೋ ವಾಗ್ಮೀ ಮಹೇಂದ್ರೋ ವಸುದೋ ವಸುಃ |
ನೈಕರೂಪೋ ಬೃಹದ್ರೂಪಃ ಶಿಪಿವಿಷ್ಟಃ ಪ್ರಕಾಶನಃ ॥42॥
ಸುಭುಜಃ= ಸುಂದರವಾದ ಭುಜಗಳುಳ್ಳವನು. ಆನಂದವನ್ನು ಭೋಗಿಸುವವನು. ಚೆನ್ನಾಗಿ ಪಾಲಿಸುವವನು.
ದುರ್ಧರಃ= ಯಾರಿಂದಲೂ ಧರಿಸಲು ಅಶಕ್ಯನಾದವನು.
ವಾಗ್ಮೀ= ಪ್ರಶಸ್ತವಾದ ಮಾತುಳ್ಳವನು. ವೇದವಚನದಿಂದಲೇ ತಿಳಿಯಲ್ಪಡುವವನು.
ಮಹೇಂದ್ರಃ= ತೇಜಸ್ವಿಯಾದವನು. ಪರಮಶ್ರೇಯಸ್ಸಂಪನ್ನನಾದವನು.
ವಸುದಃ= ದ್ರವ್ಯರೂಪವಾದ ಧನವನ್ನು ನೀಡುವವನು. ವಿದ್ಯಾರೂಪವಾದ ಧನವನ್ನು ನೀಡುವವನು.
ವಸುಃ= ದಿಕ್ಪಾಲಕರನ್ನು ಅವರವರ ಸ್ಥಾನದಲ್ಲಿ ವಾಸ ಮಾಡಿಸುವವನು.
ನೈಕರೂಪಃ= ಅನೇಕ ರೂಪವುಳ್ಳವನು.
ಬೃಹದ್ರೂಪಃ= ಗುಣಪೂರ್ಣವಾದ ರೂಪವುಳ್ಳವನು.
ಶಿಪಿವಿಷ್ಟಃ= ವಸುಗಳಲ್ಲಿ ಆಯಾ ಹೆಸರುಗಳಿಂದ ಪ್ರವೇಶಿಸಿರುವವನು. ಗರುಡಾರೂಢನಾದವನು. ಕಾಷ್ಠಗಳಲ್ಲಿ ಅಗ್ನಿಯ ಅಂತರ್ಯಾಮಿಯಾಗಿ ಪ್ರವೇಶಿಸಿರುವವನು.
ಪ್ರಕಾಶನಃ= ಬೆಳಗಿಸುವವನು.
ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ |
ಋದ್ಧಃ ಸ್ಪಷ್ಟಾಕ್ಷರೋ ಮಂತ್ರಶ್ಚಂದ್ರಾಂಶುರ್ಭಾಸ್ಕರದ್ಯುತಿಃ ॥43॥
ಓಜಸ್ತೇಜೋ ದ್ಯುತಿಧರಃ= ಇತರರನ್ನು ಪರಾಭವಗೊಳಿಸುವ ಸಾಮರ್ಥ್ಯ, ಪ್ರತಾಪ ಮತ್ತು ಪ್ರಕಾಶವನ್ನು ಧರಿಸಿರುವವನು.

ಪ್ರಕಾಶಾತ್ಮಾ= ಪ್ರಕಾಶಿಸುವ ಸ್ವರೂಪವುಳ್ಳವನು.
ಪ್ರತಾಪನಃ= ಚೆನ್ನಾಗಿ ತಾಪವನ್ನುಂಟು ಮಾಡುವವನು.
ಋದ್ಧಃ= ಸ್ವಾಭಾವಿಕವಾಗಿಯೇ ಯಾವಾಗಲೂ ಪರಿಪೂರ್ಣನಾದವನು.
ಅಷ್ಟಾಕ್ಷರಃ= ನಾರಾಯಣಾಷ್ಟಾಕ್ಷರ ಮಂತ್ರದಿಂದ ಪ್ರತಿಪಾದ್ಯನಾದವನು.
ಸ್ಪಷ್ಟಾಕ್ಷರಃ= ಓಂಕಾರವೇ ಮೊದಲಾದವುಗಳನ್ನು ವ್ಯಕ್ತಪಡಿಸುವವನು. ವೇದವನ್ನು ಅಭಿವ್ಯಕ್ತಿಗೊಳಿಸುವವನು.
ಮಂತ್ರಃ= ಮನನಶೀಲನಾದವನು. ಜ್ಞಾನವನ್ನು ನೀಡಿ ರಕ್ಷಿಸುವವನು.
ಚಂದ್ರಾಂಶುಃ= ಚಂದ್ರನ ಕಿರಣಗಳಂತಹ ಆಹ್ಲಾದಕರವಾದ ಕಿರಣಗಳನ್ನು ಹೊಂದಿದವನು.
ಭಾಸ್ಕರದ್ಯುತಿಃ= ಸಾವಿರಾರು ಸೂರ್ಯರ ಪ್ರಕಾಶವನ್ನು ಹೊಂದಿರುವವನು.
ಅಮೃತಾಂಶೂದ್ಭವೋ ಭಾನುಃ ಶಶಬಿಂದುಃ ಸುರೇಶ್ವರಃ |
ಔಷಧಂ ಜಗತಃ ಸೇತುಃ ಸತ್ಯಧರ್ಮಪರಾಕ್ರಮಃ ॥44॥
ಅಮೃತಾಂಶೂದ್ಭವಃ= ನಾಶ ಹೊಂದದ ಕಿರಣಗಳುಳ್ಳವನು ಮತ್ತು ಉತ್ಕೃಷ್ಟನಾಗಿರುವವನು. ಚಂದ್ರನ ಉತ್ಪತ್ತಿಗೆ ಕಾರಣನಾದವನು.

ಭಾನುಃ= ಸೂರ್ಯಾದಿಗಳ ಪ್ರಕಾಶವನ್ನು ಎಲ್ಲ ಕಡೆಗಳಲ್ಲಿಯೂ ತಲುಪಿಸುವವನು.
ಶಶಬಿಂದುಃ= ಅತಿಶಯವಾದ ಸುಖವೇ ಲಕ್ಷಣವಾಗಿ ಉಳ್ಳವನು.
ಸುರೇಶ್ವರಃ= ದೇವತೆಗಳಿಗೆ ಒಡೆಯನಾದವನು.
ಔಷಧಂ= ವ್ಯಾಧಿಗಳ ತಾಪದಿಂದ ದಗ್ಧರಾದ ಜೀವರನ್ನು ಧನ್ವಂತರಿರೂಪದಿಂದ ಧರಿಸುವವನು.
ಜಗತಃ ಸೇತುಃ= ಚರಾಚರ ಪ್ರಪಂಚಕ್ಕೆ ಆಶ್ರಯನಾದವನು.
ಸತ್ಯಧರ್ಮಪರಾಕ್ರಮಃ= ಪಾರಮಾರ್ಥಿಕ ಸತ್ಯಗಳಾದ ಧರ್ಮ ಮತ್ತು ಪರಾಕ್ರಮಗಳನ್ನುಳ್ಳವನು.
ಭೂತಭವ್ಯಭವನ್ನಾಥಃ ಪವನಃ ಪಾವನೋಽನಲಃ |
ಕಾಮಹಾ ಕಾಮಕೃತ್ಕಾಂತಃ ಕಾಮಃ ಕಾಮಪ್ರದಃ ಪ್ರಭುಃ ॥45॥
ಭೂತಭವ್ಯಭವನ್ನಾಥಃ= ಭೂತ-ಭವಿಷ್ಯತ್-ವರ್ತಮಾನ ಕಾಲದ ಜೀವರೆಲ್ಲರನ್ನೂ ಯಾಚಕರನ್ನಾಗಿ ಹೊಂದಿರುವವನು.
ಪವನಃ= ಚಕ್ರವರ್ತಿ ಸಮೂಹವನ್ನು ಭಾಗ್ಯದಾನದಿಂದ ಭಜಿಸುವವನು.
ಪಾವನಃ= ಶುದ್ಧಗೊಳಿಸುವವನು.
ಅನಲಃ= ಭಕ್ತಾಭೀಷ್ಟಧನದಲ್ಲಿ ಅಲಂಬುದ್ಧಿ ಇಲ್ಲದವನು.
ಕಾಮಹಾ= ದುರ್ಜನರ ಕಾಮವನ್ನು ಪರಿಹರಿಸುವವನು.
ಕಾಮಕೃತ್= ಇಚ್ಛೆಯನ್ನು ಉಂಟುಮಾಡುವವನು (ಕಾಮ= ಮನ್ಮಥ ಜನಕನಾದವನು).
ಕಾಂತಃ= ಸ್ವಾಭಾವಿಕವಾಗಿಯೇ ಪ್ರಧಾನನಾಗಿ ಪ್ರಿಯನಾಗಿರುವವನು.
ಕಾಮಃ= ಎಲ್ಲರಿಂದಲೂ ಬಯಸಲ್ಪಡುವವನು.
ಕಾಮಪ್ರದಃ= ಅಭಿದೇಶಿತ ಕಾಮಗಳನ್ನು ಚೆನ್ನಾಗಿ ಮಾಡುವವನು.
ಪ್ರಭುಃ= ನಿರ್ವಿಕಾರನಾಗಿ ಇರುವವನು, ಸರ್ವಜ್ಞನಾದವನು.
ಯುಗಾದಿಕೃದ್ ಯುಗಾವರ್ತೋ ನೈಕಮಾಯೋ ಮಹಾಶನಃ |
ಅದೃಶ್ಯೋ ವ್ಯಕ್ತರೂಪಶ್ಚ ಸಹಸ್ರಜಿದನಂತಜಿತ್ ॥46॥
ಯುಗಾದಿಕೃತ್= ಯುಗಗಳನ್ನು ಆರಂಭಿಸುವವನು. ಯುಗವೇ ಮೊದಲಾದ ಕಾಲವಿಶೇಷಗಳನ್ನು ಸೃಷ್ಟಿಸುವವನು.
ಯುಗಾವರ್ತಃ= ಕೃತಾದಿ ಯುಗಗಳು ಪುನಃ ಪುನಃ ಬರುವಂತೆ ಮಾಡುವವನು.
ನೈಕಮಾಯಃ= ಅನಂತ ಶಕ್ತಿಯುಳ್ಳವನು. ಅನಂತ ಮಹಿಮೆಯುಳ್ಳವನು. ಅನಂತ ಜ್ಞಾನವುಳ್ಳವನು. ಅನಂತ ಇಚ್ಛೆಯುಳ್ಳವನು.
ಮಹಾಶನಃ= ಮಹತ್ತಾದ ಮತ್ತು ಉತ್ತಮವಾದ ಭೋಜನವುಳ್ಳವನು.
ಅದೃಶ್ಯಃ= ಸಮಗ್ರವಾಗಿ ಜ್ಞಾನಗೋಚರವಾದ ಪದಾರ್ಥಗಳಿಗಿಂತ ಭಿನ್ನನಾದವನು.
ವ್ಯಕ್ತರೂಪಃ= ತನ್ನ ಶಕ್ತಿಯಿಂದ ಭಕ್ತರಿಗೆ ಕಾಣಿಸುವ ರೂಪವುಳ್ಳವನು. ಬ್ರಹ್ಮಾಂಡಕ್ಕೆ ರೂಪವನ್ನು ಕೊಟ್ಟವನು.
(ಅ)ವ್ಯಕ್ತರೂಪಃ= ಸ್ವಾಭಾವಿಕವಾಗಿ ಅವ್ಯಕ್ತವಾದ ರೂಪವನ್ನು ಹೊಂದಿದವನು.
ಸಹಸ್ರಜಿತ್= ವಿಷ್ಣುಸಹಸ್ರನಾಮದಿಂದ ಮತ್ತು ಬೃಹತೀ ಸಹಸ್ರದಿಂದ ಪ್ರತಿಪಾದ್ಯವಾದ ಅನಂತ ರೂಪವುಳ್ಳವನು. ಸಾವಿರಾರು ಅಸುರರನ್ನು ಸೋಲಿಸುವವನು.
ಅನಂತಜಿತ್= ಅನಂತಗುಣಗಳನ್ನು ಹೊಂದಿರುವವನು. ದೇಶ-ಕಾಲಗಳಿಂದ ಅನಂತವಾದ ಶ್ರೀತತ್ವವನ್ನು ಜಯಿಸುವವನು. ಅನೇಕಾನೇಕ ದೈತ್ಯರನ್ನು ಸೋಲಿಸುವವನು.
ಇಷ್ಟೋ ವಿಶಿಷ್ಟಃ ಶಿಷ್ಟೇಷ್ಟಃ ಶಿಖಂಡೀ ನಹುಷೋ ವೃಷಃ |
ಕ್ರೋಧಹಾ ಕ್ರೋಧಕೃತ್ ಕರ್ತಾ ವಿಶ್ವಬಾಹುರ್ಮಹೀಧರಃ ॥47॥
ಇಷ್ಟಃ= ಸಹಜವಾಗಿ ಮತ್ತು ಮುಖ್ಯವಾಗಿ ಪ್ರಿಯನಾಗಿರುವವನು.
ವಿಶಿಷ್ಟಃ= ಪ್ರಳಯಕಾಲದಲ್ಲಿ ವಿಶೇಷವಾಗಿ ಉಳಿಯುವವನು.
ಶಿಷ್ಟೇಷ್ಟಃ= ಜ್ಞಾನಿಗಳಿಗೆ ಪ್ರಿಯನಾದವನು. ಪ್ರಿಯರಾದ ಜ್ಞಾನಿಗಳನ್ನು ಹೊಂದಿರುವವನು.
ಶಿಖಂಡೀ= ಕೃಷ್ಣಾವತಾರದಲ್ಲಿ ತಲೆಯ ಮೇಲೆ ಶಿಖೆಯನ್ನು ಧರಿಸಿದವನು. ನವಿಲುಗರಿಯನ್ನು ಧರಿಸಿದವನು. ನಿದ್ರೆಯನ್ನು ಜಯಿಸಿದವನು.

ನಹುಷಃ= ಸಂಸಾರದಲ್ಲಿ ಜೀವರನ್ನು ಬಂಧಿಸಿ ಜ್ಞಾನವನ್ನು ಕೊಟ್ಟು ಬಂಧನವನ್ನು ಪರಿಹರಿಸುವವನು.
ವೃಷಃ= ಯಾವಾಗಲೂ ಜ್ಞಾನೈಶ್ವರ್ಯಾದಿ ಷಡ್ಗುಣಗಳನ್ನು ಹೊಂದಿದವನು.
ಕ್ರೋಧಹಾ= ಕ್ರೋಧವನ್ನು ಪರಿಹರಿಸುವವನು.
ಕ್ರೋಧಕೃತ್= ಚಿದಾನಂದಾತ್ಮಕವಾದ ತನ್ನ ಕ್ರೋಧವನ್ನು ಅಭಿವ್ಯಕ್ತಿ ಪಡಿಸುವವನು. ಕ್ರೋಧವನ್ನು ನಾಶಮಾಡುವವನು.
ಪ್ರಕೃತಿಯ ಗುಣದಿಂದ ಕ್ರೋಧವನ್ನು ಉಂಟು ಮಾಡುವವನು.
ಕರ್ತಾ= ಪ್ರಳಯಕಾಲದಲ್ಲಿ ಎಲ್ಲರನ್ನೂ ಸಂಹರಿಸುವವನು. ಸಂಸಾರಪಾಶವನ್ನು ಛೇದಿಸುವವನು.
ವಿಶ್ವಬಾಹುಃ= ಅನಂತಬಾಹುಗಳುಳ್ಳವನು. ಗುಣಪೂರ್ಣಗಳಾದ ಬಾಹುಗಳುಳ್ಳವನು. ವಾಯುದೇವರಿಗೆ ಆಧಾರನಾಗಿರುವವನು.
ಮಹೀಧರಃ= ಕೂರ್ಮರೂಪದಿಂದ ಭೂಮಿಯನ್ನು ಧರಿಸಿದವನು. ತನ್ನ ಮಹಿಮೆಯಿಂದ ಲಕ್ಷ್ಮಿಯನ್ನು ಧರಿಸಿದವನು.
ವರಾಹರೂಪದಿಂದ ಭೂಮಿಯನ್ನು ಉದ್ಧರಿಸಿದವನು.
ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ |
ಅಪಾಂ ನಿಧಿರಧಿಷ್ಠಾನಮಪ್ರಮತ್ತಃ ಪ್ರತಿಷ್ಠಿತಃ ॥48॥
ಅಚ್ಯುತಃ= ತನ್ನ ಸ್ಥಾನದಿಂದ ಎಂದೂ ಭ್ರಷ್ಟನಾಗದವನು. ತನ್ನ ಪ್ರಭುತ್ವದಿಂದ ಎಂದೂ ಭ್ರಷ್ಟನಾಗದವನು.
ಪ್ರಥಿತಃ= ಶಾಸ್ತ್ರದಲ್ಲಿ ಪ್ರಸಿದ್ಧನಾಗಿರುವವನು.
ಪ್ರಾಣಃ= ತನ್ನ ಭಕ್ತರನ್ನು ವೈಕುಂಠಾದಿ ಲೋಕಗಳಿಗೆ ಕರೆದೊಯ್ಯುವವನು.
ಪ್ರಾಣದಃ= ಮುಕ್ತಿಯೋಗ್ಯರಿಗೆ ಮುಖ್ಯಪ್ರಾಣನನ್ನು ಗುರುವಾಗಿ ನೀಡುವವನು. ಪ್ರಕೃಷ್ಟನಾಗಿರುವವನು ಮತ್ತು ಚೆನ್ನಾಗಿ ಸುಖವನ್ನು ನೀಡುವವನು.
ವಾಸವಾನುಜಃ= ದೇವತೆಗಳ ಪ್ರಾರ್ಥನೆಯನ್ನು ಅನುಸರಿಸಿ ಅವತರಿಸುವವನು. ಇಂದ್ರನ ತಮ್ಮನಾಗಿ ಅವತರಿಸಿದವನು.
ಅಪಾಂ ನಿಧಿಃ= ಚೆನ್ನಾಗಿ ಪೂರ್ಣರಾದ ಅಥವಾ ಪಾಲಿಸುವ ದೇವತೆಗಳಿಗೆ ಆಶ್ರಯನಾಗಿರುವವನು.
ಅಧಿಷ್ಠಾನಃ= ಎಲ್ಲಾ ಜಗತ್ತಿಗೂ ಮೂಲಾಧಾರನಾಗಿರುವವನು.
ಅಪ್ರಮತ್ತಃ= ಪ್ರಮಾದಕ್ಕೆ ಒಳಗಾಗದವನು. ಪ್ರಮಾದಕ್ಕೆ ಒಳಗಾಗುವ ಜೀವನಿಗಿಂತ ಅತ್ಯಂತ ಭಿನ್ನನಾದವನು.
ಪ್ರತಿಷ್ಠಿತಃ= ತನ್ನ ಮಹಿಮೆಯನ್ನೇ ಆಧರಿಸಿಕೊಂಡಿರುವವನು.
ಸ್ಕಂದಃ ಸ್ಕಂದಧರೋ ಧುರ್ಯೋ ವರದೋ ವಾಯುವಾಹನಃ |
ವಾಸುದೇವೋ ಬೃಹದ್ಭಾನುರಾದಿದೇವಃ ಪುರಂದರಃ ॥49॥
ಸ್ಕಂದಃ= ಭಕ್ತರಿಗೆ ಜ್ಞಾನವನ್ನು ಮತ್ತು ಸುಖವನ್ನು ಕೊಡುವವನು. ದುರ್ಜನರ ಹೃದಯದಿಂದ ಹೊರಗೆ ಬರುವವನು.
ಸ್ಕಂದಧರಃ= ಷಣ್ಮುಖನನ್ನು ಧರಿಸುವವನು.
ಧುರ್ಯಃ= ಎಲ್ಲರ ಹೊಣೆಯನ್ನೂ ಹೊತ್ತಿರುವವನು
ವರದಃ= ವರಗಳನ್ನು ನೀಡುವವನು
ವಾಯುವಾಹನಃ= ವಾಯುದೇವನನ್ನು ವಾಹನವಾಗಿ ಹೊಂದಿದವನು. ವಾಯುವಾಹರಾದ ಜೀವರನ್ನು ಪ್ರೇರಿಸುವವನು.
ವಾಸುದೇವಃ= ಎಲ್ಲವನ್ನೂ ತಿಳಿದಿರುವವನು. ಉತ್ಪಾದಿಸುವವನು ಹಾಗೂ ಕಳಿಸುವವನು.
ಬೃಹದ್ಭಾನುಃ= ಮಹಾಕಾಂತಿಯನ್ನು ಹೊಂದಿದವನು.
ಆದಿದೇವಃ= ಎಲ್ಲದಕ್ಕೂ ಕಾರಣನಾಗಿರುವವನು ಮತ್ತು ಪ್ರಕಾಶಿಸುವವನು.
ಪುರಂದರಃ= ಸಂಸಾರರೂಪವಾದ ಪುರಗಳನ್ನು ಸೀಳುವವನು.
ಅಶೋಕಸ್ತಾರಣಸ್ತಾರಃ ಶೂರಃ ಶೌರಿರ್ಜನೇಶ್ವರಃ |
ಅನುಕೂಲಃ ಶತಾವರ್ತಃ ಪದ್ಮೀ ಪದ್ಮನಿಭೇಕ್ಷಣಃ ॥50॥
ಅಶೋಕಃ= ಶೋಕವಿಲ್ಲದವನು.
ತಾರಣಃ= ಸಂಸಾರ ಸಾಗರವನ್ನು ದಾಟಿಸುವವನು.
ತಾರಃ= ಸೃಷ್ಟಿಸಲ್ಪಟ್ಟ ಜಗತ್ತಿನ ಒಳಗೆ ಇರುವವನು. ಅಲ್ಲಿಯೂ ಸಂಸಾರದಿಂದ ಉತ್ತೀರ್ಣನಾದವನು. ಪ್ರಣವ ಪ್ರತಿಪಾದ್ಯನಾದವನು.

ಶೂರಃ= ವಿಕ್ರಮಶಾಲಿಯಾಗಿರುವವನು.
ಶೌರಿಃ= ಪರಾಕ್ರಮಶಾಲಿಯಾಗಿರುವುದರಿಂದ ಶೂರನೆನಿಸುವ ವಾಯುದೇವರ ಪುತ್ರನಂತೆ ಇರುವವನು.
ಜನೇಶ್ವರಃ= ಜೀವರಿಗೆ ಪ್ರಭುವಾಗಿರುವವನು.
ಅನುಕೂಲಃ= ಸಜ್ಜನರಿಗೆ ಹಿತಕಾರಿಯಾಗಿರುವವನು.
ಶತಾವರ್ತಃ= ಅಮೃತಪಾನಯೋಗ್ಯರಾದ ನೂರು ದೇವತೆಗಳನ್ನು ತತ್ತ್ವದೇವತಾ ರೂಪದಿಂದ ಪ್ರವರ್ತಿಸುವವನು.
ಪದ್ಮೀ= ಚತುರ್ಮುಖನನ್ನು ಪುತ್ರನನ್ನಾಗಿ ಪಡೆದವನು.
ಪದ್ಮನಿಭೇಕ್ಷಣಃ= ಪದ್ಮದಂತೆ ಕಣ್ಣುಳ್ಳವನು. ಪದ್ಮದಂತೆ ಅರಳಿದ ಜ್ಞಾನವುಳ್ಳವನು.
ಪದ್ಮನಾಭೋಽರವಿಂದಾಕ್ಷಃ ಪದ್ಮಗರ್ಭಃ ಶರೀರಭೃತ್ |
ಮಹರ್ದ್ಧಿರೃದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ ॥51॥
ಪದ್ಮನಾಭಃ= ವೇದಪ್ರತಿಪಾದ್ಯರಾದವರಿಗೆ ಶ್ರೇಷ್ಠನಾದವನು. ಕಲ್ಪಾಂತ್ಯದಲ್ಲಿ ಚತುರ್ಮುಖನನ್ನೂ ಸಂಹರಿಸುವವನು.
ಅರವಿಂದಾಕ್ಷಃ= ಹೃದಯರಂಗದಲ್ಲಿ ವ್ಯಾಪಿಸಿಕೊಂಡಿರುವವನು. ಜ್ಞಾನಾತ್ಮಕವಾದ ಕಣ್ಣುಳ್ಳವನು.
ಪದ್ಮಗರ್ಭಃ= ಜಗತ್ಕಾರಣವಾದ ಪದ್ಮವನ್ನು ಗರ್ಭದಲ್ಲಿ ಹೊಂದಿದವನು.

ಶರೀರಭೃತ್= ಅಮೋಘವಾದ ಶರವುಳ್ಳವನು, ಪ್ರೇರಕನಾದವನು ಮತ್ತು ಧಾರಕನಾದವನು. ಶರಾಕಾರವುಳ್ಳ ಮುಖ್ಯಪ್ರಾಣನನ್ನು ಧರಿಸುವವನು. ಪ್ರಳಯ ಕಾಲದಲ್ಲಿ ತನ್ನ ಶರೀರದೊಳಗೆ ಜಗತ್ತನ್ನು ಧರಿಸುವವನು.
ಮಹರ್ಧಿಃ= ಮಹತ್ವಪೂರ್ಣವಾದ ಸಮೃದ್ಧಿಯನ್ನು ಹೊಂದಿರುವವನು.
ಋದ್ಧಃ= ವೇದಗಳನ್ನು ಧರಿಸಿಕೊಂಡವನು. ಮುಕ್ತರಿಗೆ ಧಾರಕನಾದವನು.
ವೃದ್ಧಾತ್ಮಾ= ಗುಣಸಮೃದ್ಧವಾದ ಸ್ವರೂಪವುಳ್ಳವನು.
ಮಹಾಕ್ಷಃ= ಮಹತ್ವಪೂರ್ಣವಾದ ಕಣ್ಣುಳ್ಳವನು. ಮಹತ್ವಪೂರ್ಣವಾದ ಇಂದ್ರಿಯಗಳುಳ್ಳವನು.
ಗರುಡಧ್ವಜಃ= ಗರುಡನನ್ನು ಧ್ವಜವಾಗಿ ಉಳ್ಳವನು. ಗರುಡನ ಬೆನ್ನ ಮೇಲೆ ಸಂಚರಿಸುವವನು.
ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ |
ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ॥52॥
ಅತುಲಃ= ಅಸದೃಶನಾದವನು.
ಶರಭಃ= ಶತ್ರುಗಳ ಶರವನ್ನು ಭಂಜಿಸುವವನು. ತ್ರಿಪುರರನ್ನು ಸಂಹಾರ ಮಾಡುವ ಶರದ ತುದಿಯಲ್ಲಿ ವಾಸಿಸುವವನು.
ಭೀಮಃ= ಅಮುಕ್ತರಿಗೆ, ವಿಶೇಷವಾಗಿ ಅಜ್ಞಾನಿಗಳಿಗೆ ಭಯವನ್ನುಂಟು ಮಾಡುವವನು.
ಸಮಯಜ್ಞಃ= ವೈದಿಕ ಸಿದ್ಧಾಂತವನ್ನು ಬಲ್ಲವನು. ಆಚಾರಗಳನ್ನು ಬಲ್ಲವನು.
ಹವಿರ್ಹರಿಃ= ಯಜ್ಞಗಳಲ್ಲಿ ನೀಡುವ ಹವಿಸ್ಸನ್ನು ಪಡೆಯುವವನು.
ಸರ್ವಲಕ್ಷಣಲಕ್ಷಣ್ಯಃ= ಸಕಲ ಶುಭಲಕ್ಷಣಗಳಿಂದ ಗುರುತಿಸಲು ಸಾಧ್ಯವಾಗುವವನು.
ಲಕ್ಷ್ಮೀವಾನ್= ನಿತ್ಯವೂ ಲಕ್ಷ್ಮೀದೇವಿಯೊಡನೆ ಕೂಡಿರುವವನು.
ಸಮಿತಿಂಜಯಃ= ಯುದ್ಧದಲ್ಲಿ ಗೆಲ್ಲುವವನು. ವಿದ್ವತ್ಸಭೆಯಲ್ಲಿ ಗೆಲ್ಲುವವನು.
ವಿಕ್ಷರೋ ರೋಹಿತೋ ಮಾರ್ಗೋ ಹೇತುರ್ದಾಮೋದರಃ ಸಹಃ |
ಮಹೀಧರೋ ಮಹಾಭಾಗೋ ವೇಗವಾನಮಿತಾಶನಃ ॥53॥
ವಿಕ್ಷರಃ= ಭಕ್ತರಿಗೆ ವಿಶೇಷವಾಗಿ ಸಕಲ ಉಪಯುಕ್ತ ಪದಾರ್ಥಗಳನ್ನೂ ಸತತವಾಗಿ ನೀಡುವವನು. ಯಾವುದೇ ರೀತಿಯ ನಾಶವಿಲ್ಲದವನು.
ರೋಹಿತಃ= ಸುವರ್ಣವರ್ಣವುಳ್ಳವನು.
ಮಾರ್ಗಃ= ಸಂಸಾರವನ್ನು ನಾಶಪಡಿಸಿ ಮೋಕ್ಷವನ್ನು ಹೊಂದಿಸುವವನು.
ಹೇತುಃ= ಎಲ್ಲದಕ್ಕೂ ಕಾರಣನಾದವನು.
ದಾಮೋದರಃ= ಉದರದಲ್ಲಿ ಲೋಕಗಳನ್ನು ಇಟ್ಟುಕೊಂಡವನು. ಯಶೋದೆಯಿಂದ ಹಗ್ಗದಿಂದ ಉದರದಲ್ಲಿ ಕಟ್ಟಲ್ಪಟ್ಟವನು.
ಸಹಃ= ನಿಷ್ಠುರವನ್ನು ಸಹಿಸಿಕೊಳ್ಳುವ ಸಾಮರ್ಥ್ಯರೂಪನಾದವನು.
ಮಹೀಧರಃ= ಭೂದೇವಿಯು ಜಗತ್ತನ್ನು ಧರಿಸುವಂತೆ ಅನುಗ್ರಹಿಸಿದವನು.
ಮಹಾಭಾಗಃ= ಮಹತ್ವಪೂರ್ಣವಾದ ಸ್ವರೂಪಾಂಶವನ್ನುಳ್ಳವನು.
ವೇಗವಾನ್= ಸರ್ವಾತಿಶಯವಾದ, ಪ್ರಶಂಸನೀಯವಾದ ವೇಗವನ್ನು ನಿತ್ಯವೂ ಪಡೆದಿರುವವನು.
ಅಮಿತಾಶನಃ= ಅಪರಿಮಿತವಾದ ತನ್ನ ಸ್ವರೂಪವನ್ನೂ, ಗುಣಗಳನ್ನೂ, ಆನಂದವನ್ನೂ ಅನುಭವಿಸುತ್ತಿರುವವನು.
ಉದ್ಭವಃ ಕ್ಷೋಭಣೋ ದೇವಃ ಶ್ರೀಗರ್ಭಃ ಪರಮೇಶ್ವರಃ |
ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ॥54॥
ಉದ್ಭವಃ= ಉತ್ಪಾದಿಸುವವನು.
ಕ್ಷೋಭಣಃ= ಪ್ರಕೃತಿಯಲ್ಲಿ ಸೃಷ್ಟಿಗೆ ಬೇಕಾದ ಕ್ಷೋಭೆಯನ್ನು ಉಂಟುಮಾಡುವವನು.
ದೇವಃ= ಪ್ರಕಾಶಿಸುವವನು.
ಶ್ರೀಗರ್ಭಃ= ಲಕ್ಷ್ಮಿಯಲ್ಲಿ ಗರ್ಭಾಧಾನವನ್ನು ಮಾಡುವವನು.
ಪರಮೇಶ್ವರಃ= ಉತ್ತಮನಾದ ಒಡೆಯನು.
ಕರಣಂ= ಪ್ರತಿಯೊಂದು ಕಾರ್ಯಕ್ಕೂ ಮುಖ್ಯಸಾಧನವಾಗಿರುವವನು.
ಕಾರಣಂ= ಎಲ್ಲದಕ್ಕೂ ಕಾರಣನಾಗಿರುವವನು.
ಕರ್ತಾ= ಎಲ್ಲವನ್ನೂ ಸ್ವತಂತ್ರವಾಗಿ ಮಾಡುವವನು. ಎಲ್ಲರಿಂದಲೂ ಮಾಡಿಸುವವನು.
ವಿಕರ್ತಾ= ಅದ್ಭುತವಾಗಿ ಅಥವಾ ವಿಶಿಷ್ಟವಾಗಿ ಅಥವಾ ವೈವಿಧ್ಯಪೂರ್ಣವಾಗಿ ಜಗತ್ತನ್ನು ನಿರ್ಮಿಸಿದವನು.
ಗಹನಃ= ಸಮಗ್ರವಾಗಿ ಯಾರಿಗೂ ತಿಳಿಯದವನು.
ಗುಹಃ= ತನ್ನನ್ನು ತಾನು ಆಚ್ಛಾದಿಸಿಕೊಳ್ಳುವವನು. ಎಲ್ಲರನ್ನೂ ರಕ್ಷಿಸುವವನು.
ವ್ಯವಸಾಯೋ ವ್ಯವಸ್ಥಾನಃ ಸಂಸ್ಥಾನಃ ಸ್ಥಾನದೋ ಧ್ರುವಃ |
ಪರರ್ದ್ಧಿಃ ಪರಮಃ ಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ॥55॥
ವ್ಯವಸಾಯಃ= ನಿಶ್ಚಯಜ್ಞಾನರೂಪನಾದವನು.
ವ್ಯವಸ್ಥಾನಃ= ದೈತ್ಯರಿಗೆ ವಿರುದ್ಧವಾಗಿ ನಿಲ್ಲುವವನು.
ಸಂಸ್ಥಾನಃ= ದೇವತೆಗಳಿಗೆ ಚೆನ್ನಾಗಿ ಅನುಕೂಲವಾಗಿ ನಿಲ್ಲುವವನು.
ಸ್ಥಾನದಃ= ತ್ರಿವಿಧ ಜೀವರಿಗೆ ಪುನರಾವೃತ್ತಿ ರಹಿತವಾದ, ಅವರವರಿಗೆ ಯೋಗ್ಯವಾದ ಸ್ಥಾನವನ್ನು ಕೊಡುವವನು.
ಧ್ರುವಃ= ಧಾರಣಶೀಲರಾದ ದೇವತೆಗಳನ್ನು ಪ್ರವರ್ತಿಸುವವನು. ಶಾಶ್ವತನು.

ಪರರ್ದ್ಧಿಃ= ಶ್ರೇಷ್ಠವಾದ ಸಮೃದ್ಧಿಯುಳ್ಳವನು.
ಪರಮಃ= ಸರ್ವೋತ್ತಮನಾದವನು.
ಸ್ಪಷ್ಟಃ= ತನಗೆ ತಾನು ಯಾವಾಗಲೂ ಅಭಿವ್ಯಕ್ತನಾದವನು.
ತುಷ್ಟಃ= ಪರಮಾನಂದದಿಂದ ಸಂತುಷ್ಟನು.
ಪುಷ್ಟಃ= ಸಮೃದ್ಧನಾದವನು.
ಶುಭೇಕ್ಷಣಃ= ಶುಭದರ್ಶನನಾದವನು.
ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋಽನಯಃ |
ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ ॥56॥
ರಾಮಃ= ನಿತ್ಯವಾದ ಮತ್ತು ಪೂರ್ಣವಾದ ಸುಖಜ್ಞಾನಸ್ವರೂಪನು.
ವಿರಾಮಃ= ವಿಶೇಷವಾಗಿ ರಮಿಸುವವನು. ಆರಬ್ಧ ಕಾರ್ಯವನ್ನು ಮುಗಿಸುವವನು.
ವಿರಜಃ= ದೋಷದೂರನಾದವನು.
ಮಾರ್ಗಃ= ಕಾಮನನ್ನು ವಕ್ರನಾಮ ಅಸುರನ ವಧೆಗಾಗಿ ತನ್ನ ಉದರದಿಂದ ಹೊರಗೆ ತರುವವನು.
ನೇಯಃ= ಶಿಷ್ಯಾದಿಗಳಲ್ಲಿ ವ್ಯಾಖ್ಯಾನದಿಂದ ನಿರ್ಣಯಿಸಲ್ಪಡುವವನು.
ನಯಃ= ನೀತಿಯುಳ್ಳವನು.
ಅನಯಃ= ಮಧ್ವರೂಪಿಯಾದ ಮುಖ್ಯಪ್ರಾಣನನ್ನು ಭೂಲೋಕಕ್ಕೆ ಕಳುಹಿಸುವವನು.
ವೀರಃ= ಪರಾಕ್ರಮಶಾಲಿಯಾದವನು.
ಶಕ್ತಿಮತಾಂಶ್ರೇಷ್ಠಃ= ಪ್ರಶಸ್ತವಾದ ಶಕ್ತಿಸಂಪನ್ನರಾದವರಿಗೆಲ್ಲಾ ಶ್ರೇಷ್ಠನಾಗಿರುವವನು.
ಧರ್ಮಃ= ಸಕಲ ಜಗತ್ತನ್ನೂ ಧರಿಸಿದವನು.
ಧರ್ಮವಿದುತ್ತಮಃ= ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನಾದವನು.
ವೈಕುಂಠಃ ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ ಪೃಥುಃ |
ಹಿರಣ್ಯಗರ್ಭಃ ಶತ್ರುಘ್ನೋ ವ್ಯಾಪ್ತೋ ವಾಯುರಧೋಕ್ಷಜಃ ॥57॥
ವೈಕುಂಠಃ= ಕುಂಠಿತವಾಗದ ದೇಹಸುಖಜ್ಞಾನವುಳ್ಳವನು.
ಪುರುಷಃ= ಪೂರ್ಣವಾದ ಷಡ್ಗುಣಗಳುಳ್ಳವನು.
ಪ್ರಾಣಃ= ಪ್ರಕೃಷ್ಟವಾಗಿ ದೇವತೆಗಳಿಂದ ಶಿಷ್ಯರಲ್ಲಿ ಉಪದೇಶದಿಂದ ತಿಳಿಯಲ್ಪಡುವವನು.
ಪ್ರಾಣದಃ= ಉತ್ಪತ್ತಿ ಸಮಯದಲ್ಲಿ ಪ್ರಾಣವನ್ನು ಕೊಡುವವನು. ಮರಣ ಸಮಯದಲ್ಲಿ ಪ್ರಾಣವನ್ನು ಸಂಹರಿಸುವವನು.
ಪ್ರಣವಃ= ಪ್ರಕೃಷ್ಟವಾಗಿ ಯಾವಾಗಲೂ ಹೊಸಹೊಸದಾಗಿರುವವನು.
ಪೃಥುಃ= ವಿಸ್ತಾರವಾಗಿರುವವನು.
ಹಿರಣ್ಯಗರ್ಭಃ= ಗರ್ಭದಲ್ಲಿ ಸುವರ್ಣಮಯವಾದ ಬ್ರಹ್ಮಾಂಡವನ್ನು ಧರಿಸಿದವನು.
ಶತ್ರುಘ್ನಃ= ಒಳಗಿನ ಮತ್ತು ಹೊರಗಿನ ಶತ್ರುಗಳನ್ನು ಸಂಹರಿಸುವವನು.
ವ್ಯಾಪ್ತಃ= ಸರ್ವತ್ರ ವ್ಯಾಪಿಸಿರುವವನು.
ವಾಯುಃ= ಬಲಸ್ವರೂಪಿ ಮತ್ತು ಸರ್ವತ್ರ ಸಂಚರಿಸುವವನು. ಅಂಗಗಳಲ್ಲಿ ಸುಖ ಸಂಗವನ್ನು ಮತ್ತು ನಿರವಧಿಕವಾದ ಆಯುಸ್ಸನ್ನು ಹೊಂದಿದವನು.
ಅಧೋಕ್ಷಜಃ= ಪ್ರತ್ಯಕ್ಷರೂಪವಾದ ಜ್ಞಾನಕ್ಕೆ ವಿಷಯನಾಗದವನು.
ಋತುಃ ಸುದರ್ಶನಃ ಕಾಲಃ ಪರಮೇಷ್ಠೀ ಪರಿಗ್ರಹಃ |
ಉಗ್ರಃ ಸಂವತ್ಸರೋ ದಕ್ಷೋ ವಿಶ್ರಾಮೋ ವಿಶ್ವದಕ್ಷಿಣಃ ॥58॥
ಋತುಃ= ಮಹಾಪ್ರಯತ್ನವುಳ್ಳವನು.
ಸುದರ್ಶನಃ= ಶೋಭನವಾದ ದರ್ಶನವುಳ್ಳವನು.
ಕಾಲಃ= ಸದ್ಗುಣಗಳಿಂದ ಸಂಬದ್ಧನಾದವನು, ಸರ್ವಸಂಹಾರಕನು.
ಪರಮೇಷ್ಠೀ= ಆಯಾ ರೂಪಗಳಲ್ಲಿ ಉತ್ತಮವೆನಿಸುವ ಪದಾರ್ಥಗಳಲ್ಲಿ ಇರುವವನು.
ಪರಿಗ್ರಹಃ= ಭಕ್ತರನ್ನು ತನ್ನವರನ್ನಾಗಿ ಸ್ವೀಕರಿಸುವವನು.
ಉಗ್ರಃ= ಉತ್ಕೃಷ್ಟರಾದ ಜೀವರನ್ನು ರಮಿಸುವವನು.
ಸಂವತ್ಸರಃ= ಚೆನ್ನಾಗಿ ವತ್ಸರಗಳನ್ನು ಪ್ರವರ್ತಿಸುವವನು. ಸಮೀಚೀನವಾದ ಕಂಠ ಮಾಲೆಯನ್ನು ಉಳ್ಳವನು.
ದಕ್ಷಃ= ನಿಪುಣನಾದವನು.
ವಿಶ್ರಾಮಃ= ಕಾರ್ಯಗಳಲ್ಲಿ ಶ್ರಮವಿಲ್ಲದವನು.
ವಿಶ್ವದಕ್ಷಿಣಃ= ಎಲ್ಲ ಕಾರ್ಯಗಳಲ್ಲಿಯೂ ಕುಶಲನಾದವನು.
ವಿಸ್ತಾರಃ ಸ್ಥಾವರಃ ಸ್ಥಾಣುಃ ಪ್ರಮಾಣಂ ಬೀಜಮವ್ಯಯಃ |
ಅರ್ಥೋಽನರ್ಥೋ ಮಹಾಕೋಶೋ ಮಹಾಭೋಗೋ ಮಹಾಧನಃ ॥
ವಿಸ್ತಾರಃ= ವ್ಯಾಪ್ತನಾದವನು.
ಸ್ಥಾವರಃ= ತನಗಿಂತ ಅವರರಾದ ಸತ್ಯಾದಿ ಲೋಕದಲ್ಲಿ ಇರುವ ದೇವತೆಗಳನ್ನು ಹೊಂದಿದವನು.
ಸ್ಥಾಣುಃ= ಪರಮಾಣುಗಳಲ್ಲಿ ಇರುವವನು.

ಪ್ರಮಾಣಂ= ಪ್ರಕೃಷ್ಟವಾದ ಪರಿಮಾಣವುಳ್ಳವನು.
ಬೀಜಃ= ಜಗತ್ತಿನ ಅಭಿವ್ಯಕ್ತಿಗೆ ಕಾರಣನಾದವನು.
ಅವ್ಯಯಂ (ಅವ್ಯಯಃ)= ನಿರ್ವಿಕಾರನಾದವನು. ಮೇಷರೂಪನಾದ ಶಂಕರನನ್ನು ಏರಿ ಯೋಗಿನಿಯ ಜೊತೆಯಲ್ಲಿ ಯುದ್ಧಕ್ಕೆ ಹೋಗುವವನು.
ಅರ್ಥಃ= ಸಕಲ ವೇದಗಳ ಅರ್ಥನಾದವನು.
ಅನರ್ಥಃ= ದೈತ್ಯರಿಗೆ ಅನರ್ಥವನ್ನು ಉಂಟುಮಾಡುವವನು. ಜಗತ್ ಸೃಷ್ಟ್ಯಾದಿಗಳಲ್ಲಿ ತನಗೆ ಪ್ರಯೋಜನವಿಲ್ಲದವನು.
ಮಹಾಕೋಶಃ= ಮಹತ್ವ ಪರಿಮಾಣವನ್ನು ಹೊಂದಿದವನು ಮತ್ತು ಸುಖ ಇಚ್ಛಾ ಸ್ವರೂಪನು.
ಮಹಾಭೋಗಃ= ಉತ್ತಮವಾದ ಸುಖವುಳ್ಳವನು. ಉತ್ತಮ ಸುಖಸ್ವರೂಪನು.
ಮಹಾಧನಃ= ಉತ್ತಮವಾದ ಸಂಪತ್ತುಳ್ಳವನು. ಭಕ್ತರಿಗೆ ಚೆನ್ನಾದ ಸಂಪತ್ತನ್ನು ಕರುಣಿಸುವವನು.
ಅನಿರ್ವಿಣ್ಣಃ ಸ್ಥವಿಷ್ಠೋ ಭೂರ್ಧರ್ಮಯೂಪೋ ಮಹಾಮಖಃ |
ನಕ್ಷತ್ರನೇಮಿರ್ನಕ್ಷತ್ರೀ ಕ್ಷಮಃ ಕ್ಷಾಮಃ ಸಮೀಹನಃ ॥60॥
ಅನಿರ್ವಿಣ್ಣಃ= ಭಕ್ತರ ಅಭೀಷ್ಟವನ್ನು ಕೊಡುವುದರಲ್ಲಿ ಬೇಸರಗೊಳ್ಳದವನು.
ಸ್ಥವಿಷ್ಠಃ= ಅತಿಶಯವಾಗಿ ಸ್ಥೂಲನಾದವನು ಅಥವಾ ಅತಿಶಯನಾಗಿ ಸ್ಥಿರನಾದವನು.
ಭೂಃ= ಯಾವಾಗಲೂ ಇರುವವನು.
ಧರ್ಮಯೂಪಃ= ಧರ್ಮವನ್ನು ಅಧಿಷ್ಠಾನವಾಗಿ ಹೊಂದಿದವನು.
ಮಹಾಮಖಃ= ಶ್ರೇಷ್ಠವಾದ ಪೂಜೆಯುಳ್ಳವನು. ಶ್ರೇಷ್ಠವಾದ ಯಜ್ಞಗಳಿಗೆ ಆಶ್ರಯನಾದವನು.
ನಕ್ಷತ್ರನೇಮಿಃ= ಜ್ಯೋತಿರ್ಮಂಡಲವನ್ನು ತನ್ನ ಚಕ್ಷುಃಸ್ಥಾನದಲ್ಲಿ ಹೊಂದಿದವನು. ಶಿಂಶುಮಾರ ರೂಪದಿಂದ ಜ್ಯೋತಿರ್ಮಂಡಲವನ್ನು ಪ್ರವರ್ತಿಸುವವನು ಎಂದು ಅರ್ಥ.
ನಕ್ಷತ್ರೀ= ಬ್ರಾಹ್ಮಣ ಪ್ರಿಯನು.
ಕ್ಷಮಃ= ಸಮರ್ಥನಾದವನು.
ಕ್ಷಾಮಃ= ಕ್ಷಮೆಯನ್ನು ಹೊಂದಿದವನು. ಭೂಮಿಯನ್ನು ಧರಿಸಿದವನು.
ಸಮೀಹನಃ= ಚೆನ್ನಾಗಿ ಕ್ರಿಯೆಗಳನ್ನು ನಡೆಸುವವನು.
ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತುಃ ಸತ್ರಂ ಸತಾಂಗತಿಃ |
ಸರ್ವದರ್ಶೀ ವಿಮುಕ್ತಾತ್ಮಾ ಸರ್ವಜ್ಞೋ ಜ್ಞಾನಮುತ್ತಮಮ್ ॥61॥
ಯಜ್ಞಃ= ಲೀಲೆಯಿಂದ ಯಜ್ಞವನ್ನು ಮಾಡುವವನು. ಪಾತಾಳಾದಿ ಲೋಕಗಳಿಗೆ ಅನ್ಯೋನ್ಯ ಸಂಬಂಧವನ್ನುಂಟು ಮಾಡುವವನು. ಭಕ್ತರ ಅಭೀಷ್ಟವನ್ನು ಕೊಡುವವನು.
ಇಜ್ಯಃ= ಯಜ್ಞದಿಂದ ಪೂಜಿಸಿಕೊಳ್ಳಲು ಯೋಗ್ಯನಾದವನು.
ಮಹೇಜ್ಯಃ= ಪೂಜನೀಯರಲ್ಲಿ ಉತ್ತಮನಾದವನು.
ಕ್ರತುಃ= ಕ್ರಿಯಾಶೀಲನಾದವನು.
ಸತ್ರಂ= ಜಗತ್ಪಾಲನೆಯಿಂದ ಕೂಡಿದವನು.
ಸತಾಂಗತಿಃ= ಇರುವವರಿಗೆಲ್ಲ ಆಶ್ರಯನಾದವನು. ಇರುವ ವಸ್ತುಗಳನ್ನೆಲ್ಲಾ ತಿಳಿದವನು.
ಸರ್ವದರ್ಶೀ= ಎಲ್ಲಾ ಅಮಾವಾಸ್ಯೆಗಳಲ್ಲೂ ಪೂಜನೀಯನಾದವನು.
ವಿಮುಕ್ತಾತ್ಮಾ= ವಿಶೇಷವಾಗಿ ಮುಕ್ತವಾದ ಸ್ವರೂಪವುಳ್ಳವನು.
ಸರ್ವಜ್ಞಃ= ಎಲ್ಲವನ್ನೂ ಚೆನ್ನಾಗಿ ಬಲ್ಲವನು. ಸರ್ವನೆನಿಸುವ ತನ್ನನ್ನು ಚೆನ್ನಾಗಿ ತಿಳಿದವನು.
ಜ್ಞಾನಮುತ್ತಮಮ್= ಉತ್ತಮವಾದ ಜ್ಞಾನಸ್ವರೂಪನು.
ಸುವ್ರತಃ ಸುಮುಖಃ ಸೂಕ್ಷ್ಮಃ ಸುಘೋಷಃ ಸುಖದಃ ಸುಹೃತ್ |
ಮನೋಹರೋ ಜಿತಕ್ರೋಧೋ ವೀರಬಾಹುರ್ವಿದಾರಣಃ ॥62॥
ಸುವ್ರತಃ= ಭಕ್ತರ ರಕ್ಷಣೆ ಮುಂತಾದ ಶೋಭನವಾದ ನಿಯಮವುಳ್ಳವನು.
ಸುಮುಖಃ= ಶೋಭನವಾದ ಮುಖವುಳ್ಳವನು. ಆನಂದರೂಪವಾದ ಮುಖ ಉಳ್ಳವನು.
ಸೂಕ್ಷ್ಮಃ= ಬಹಳ ಸೂಕ್ಷ್ಮನಾದವನು.
ಸುಘೋಷಃ= ಶೋಭನವಾದ ವೇದಾದಿಗಳ ಘೋಷವುಳ್ಳವನು.
ಸುಖದಃ= ಸುಖವನ್ನು ನೀಡುವವನು.
ಸುಹೃತ್= ಯಾವುದೇ ರೀತಿಯ ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಉಪಕಾರ ಮಾಡುವವನು.
ಮನೋಹರಃ= ಜೀವರ ಮನಸ್ಸನ್ನು ವಿಷಯಗಳ ಕಡೆಗೆ ಒಯ್ಯುವವನು.
ಜಿತಕ್ರೋಧಃ= ಎಲ್ಲರ ಕ್ರೋಧವನ್ನೂ ನಿಯಮಿಸುವವನು.
ವೀರಬಾಹುಃ= ವಿಶೇಷವಾಗಿ ಪ್ರೇರಿಸುವ ಬಾಹುಗಳುಳ್ಳವನು.
ವಿದಾರಣಃ= ಶಾಸ್ತ್ರಾದಿಗಳ ಮೂಲಕ ಅಜ್ಞಾನವನ್ನು ನಾಶ ಮಾಡುವವನು.
ಸ್ವಾಪನಃ ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್ |
ವತ್ಸರೋ ವತ್ಸಲೋ ವತ್ಸೀ ರತ್ನಗರ್ಭೋ ಧನೇಶ್ವರಃ ॥63॥
ಸ್ವಾಪನಃ= ಜೀವರ ಸ್ವಪ್ನಾವಸ್ಥೆಯನ್ನು ಸುಷುಪ್ತ್ಯವಸ್ಥೆಯನ್ನು ಪ್ರೇರಿಸುವವನು.

ಸ್ವವಶಃ= ಸ್ವತಂತ್ರನಾದವನು.
ವ್ಯಾಪೀ= ಸದಾ ಸರ್ವತ್ರ ವ್ಯಾಪ್ತನಾದವನು.
ನೈಕಾತ್ಮಾ= ಜೀವರಿಂದ ಅಭೇದವನ್ನು ಹೊಂದದವನು.
ನೈಕಕರ್ಮಕೃತ್= ಸೃಷ್ಟಿ ಮೊದಲಾದ ಅನಂತ ಕ್ರಿಯೆಗಳನ್ನು ನಡೆಸುವವನು.
ವತ್ಸರಃ= ಕೃಷ್ಣಾವತಾರದಲ್ಲಿ ಕರುಗಳ ಜೊತೆಯಲ್ಲಿ ಸಂತೋಷ ಪಡುವವನು.
ವತ್ಸಲಃ= ವಾತ್ಸಲ್ಯವುಳ್ಳವನು.
ವತ್ಸೀ= ಶ್ರೀವತ್ಸಚಿಹ್ನೆಯನ್ನು ಹೊಂದಿದವನು.
ರತ್ನಗರ್ಭಃ= ಸುಖವನ್ನು ಅಭಿವ್ಯಕ್ತಿಪಡಿಸುವವನು.
ಜನೇಶ್ವರಃ= ಮಿಥ್ಯಾರೂಪವಾದ ಮತ್ತು ಬಾಹ್ಯ ಸಂಪತ್ತಿನ ಒಡೆಯನಾದವನು.
ಧರ್ಮಗುಬ್ಧರ್ಮಕೃದ್ಧರ್ಮೀ ಸದಸತ್ಕ್ಷರಮಕ್ಷರಮ್ |
ಅವಿಜ್ಞಾತಾ ಸಹಸ್ರಾಂಶುರ್ವಿಧಾತಾ ಕೃತಲಕ್ಷಣಃ ॥64॥
ಧರ್ಮಗುಬ್(ಪ್)= ಧರ್ಮಗಳನ್ನು ರಕ್ಷಿಸುವವನು.
ಧರ್ಮಕೃತ್= ಧರ್ಮಗಳನ್ನು ನಿರ್ಮಿಸುವವನು. ಧರ್ಮವನ್ನು ಆಚರಿಸುವವನು. ವಾಯುದೇವರನ್ನು ಸೃಷ್ಟಿಸಿದವನು.
ಧರ್ಮೀ= ಧರ್ಮನಿಯಾಮಕನಾದವನು.
ಸದಸತ್= ನಿರ್ದುಷ್ಟನಾದವನು ಮತ್ತು ನಾಶವನ್ನು ಹೊಂದಲು ಅನರ್ಹನಾದವನು.
ಕ್ಷರಂ= ಜಗತ್ತನ್ನು ನಾಶ ಮಾಡುವವನು.
ಅಕ್ಷರಂ= ಸ್ವಯಂ ನಾಶವಿಲ್ಲದವನು.
ಅವಿಜ್ಞಾತಾ= ತನ್ನನ್ನು ವಿಶೇಷವಾಗಿ ಬಲ್ಲವನು ಯಾವನೂ ಇಲ್ಲದವನು.
ಸಹಸ್ರಾಂಶುಃ= ಸಾವಿರಾರು ಕಿರಣಗಳುಳ್ಳವನು.
ವಿಧಾತಾ= ಗರುಡನನ್ನು ಪೋಷಿಸುವವನು. ಗರುಡವಾಹನನಾದವನು.
ಕೃತಲಕ್ಷಣಃ= ಗುಣಗಳಿಂದ ಪ್ರಸಿದ್ಧನಾದವನು.
ಗಭಸ್ತಿನೇಮಿಃ ಸತ್ತ್ವಸ್ಥಃ ಸಿಂಹೋ ಭೂತಮಹೇಶ್ವರಃ |
ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ಗುರುಃ ॥65॥
ಗಭಸ್ತಿನೇಮಿಃ= ತನ್ನ ಕಾಂತಿಯನ್ನೇ ಚಕ್ರದಂತೆ ಸುತ್ತಲೂ ಹೊಂದಿದವವನು. ಸಹಸ್ರೋಲ್ಕ .
ಸತ್ತ್ವಸ್ಥಃ= ಜೀವರಲ್ಲಿ ಇರುವವನು. ಸತ್ವಗುಣದಲ್ಲಿ ಇರುವವನು.
ಸಿಂಹಃ= ನರಸಿಂಹಾವತಾರದಲ್ಲಿ ಸಿಂಹದ ಮುಖವುಳ್ಳವನು.
ಭೂತಮಹೇಶ್ವರಃ= ಸಕಲ ಭೂತಗಳಿಗೂ ಶ್ರೇಷ್ಠನಾದ ಈಶ್ವರನಾಗಿರುವವನು.
ಆದಿದೇವಃ= ಕಾರಣಗಳಲ್ಲಿ ನಿಯಾಮಕನಾಗಿ ಪ್ರವೇಶಿಸಿರುವವನು.
ಮಹಾದೇವಃ= ದೇವೋತ್ತಮನಾದವನು.
ದೇವೇಶಃ= ದೇವತೆಗಳಿಗೆ ಒಡೆಯನಾದವನು.
ದೇವಭೃದ್ಗುರುಃ= ದೇವತೆಗಳನ್ನು ಪೋಷಿಸುವ ಚತುರ್ಮುಖನಿಗೂ ಗುರುವಾಗಿರುವವನು.
ಉತ್ತರೋ ಗೋಪತಿರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ |
ಶರೀರೀ ಭೂತಭೃದ್ಭೋಕ್ತಾ ಕಪೀಂದ್ರೋ ಭೂರಿದಕ್ಷಿಣಃ ॥66॥
ಉತ್ತರಃ= ಅತಿಶಯವಾಗಿ ಉತ್ಕೃಷ್ಟನಾಗಿರುವವನು.
ಗೋಪತಿಃ= ಜ್ಞಾನದ ರಕ್ಷಕ-ಅಧಿಪತಿ.
ಗೋಪ್ತಾ= ಸಂರಕ್ಷಿಸುವವನು.
ಜ್ಞಾನಗಮ್ಯಃ= ಬ್ರಹ್ಮ-ವಾಯುಗಳಿಂದ ವಿಶೇಷವಾಗಿ ತಿಳಿಯಲ್ಪಡುವವನು ಅಥವಾ ಹೊಂದಲ್ಪಡುವವನು.
ಪುರಾತನಃ= ಪ್ರಾಚೀನನಾದವನು.
ಶರೀರೀ= ಪ್ರಶಸ್ತವಾದ ಶರೀರವುಳ್ಳವನು.
ಭೂತಭೃದ್= ಭೂತಗಳನ್ನು ಧರಿಸಿರುವವನು.
ಭೋಕ್ತಾ= ಪೂರ್ಣ ಸರ್ವಗುಣಾತ್ಮಕವಾದ ತನ್ನ ಸ್ವರೂಪವನ್ನು ಸರ್ವದಾ ಅನುಭವಿಸುವವನು.
ಕಪೀಂದ್ರಃ= ಮುಕ್ತರಿಗೆ ಒಡೆಯನಾದವನು. ರಾಮಾವತಾರದಲ್ಲಿ ಕಪಿಗಳಿಗೆ ಒಡೆಯನಾದವನು.
ಭೂರಿದಕ್ಷಿಣಃ= ಅತಿಯಾಗಿ ದಾನ ಮಾಡುವವನು. ಅತ್ಯಂತ ಸಮೃದ್ಧನಾದವನು.
ಸೋಮಪೋಽಮೃತಪಃ ಸೋಮಃ ಪುರುಜಿತ್ಪುರುಸತ್ತಮಃ |
ವಿನಯೋ ಜಯಃ ಸತ್ಯಸಂಧೋ ದಾಶಾರ್ಹಃ ಸಾತ್ವತಾಂಪತಿಃ ॥67॥
ಸೋಮಪಃ= ಸೋಮರಸವನ್ನು ಪಾನ ಮಾಡುವವನು.
ಅಮೃತಪಃ= ದೇವತೆಗಳನ್ನು ವಿಶೇಷವಾಗಿ ರಕ್ಷಿಸುವವನು. ದೇವತೆಗಳಿಗೆ ಅಮೃತವನ್ನು ಕುಡಿಸಿದವನು.
ಸೋಮಃ= ಆನಂದಾನುಭವ ರೂಪವಾದ ಸೌಮ್ಯಗುಣವುಳ್ಳವನು.
ಪುರುಜಿತ್= ಬಹುಗುಣಗಳನ್ನು ಹೊಂದಿರುವವನು. ಬಹಳ ಶತ್ರುಗಳನ್ನು ಜಯಿಸಿರುವವನು.
ಪುರುಸತ್ತಮಃ= ಅಧಿಕವಾದ ನಿರ್ದುಃಖಾನಂದವುಳ್ಳ ಮುಕ್ತರನ್ನು ಸೃಷ್ಟಿಸುವವನು.

ವಿನಯಃ= ವಿಶಿಷ್ಟನಾದ ನಾಯಕನಾಗಿರುವವನು. ತನಗೆ ಇನ್ನೊಬ್ಬ ನಾಯಕನು ಇಲ್ಲದಿರುವವನು.
ಜಯಃ= ಉತ್ಕೃಷ್ಟನಾದವನು. ಎಲ್ಲರನ್ನೂ ಅತಿಕ್ರಮಿಸಿ ಇರುವವನು.
ಸತ್ಯಸಂಧಃ= ಸತ್ಯವಾದ ಪ್ರತಿಜ್ಞೆಯುಳ್ಳವನು.
ದಾಶಾರ್ಹಃ= ಎಲ್ಲ ದಾನಕ್ಕೂ ಅರ್ಹನಾದವನು. ದಾಶಾರ್ಹಗಣದಲ್ಲಿ ಅವತರಿಸಿರುವವನು.
ಸಾತ್ವತಾಂಪತಿಃ= ಒಳ್ಳೆಯವರಿಗೆ ಒಡೆಯನಾದವನು.
ಜೀವೋ ವಿನಯಿತಾ ಸಾಕ್ಷೀ ಮುಕುಂದೋಽಮಿತವಿಕ್ರಮಃ |
ಅಂಭೋನಿಧಿರನಂತಾತ್ಮಾ ಮಹೋದಧಿಶಯೋಂತಕಃ ॥68॥
ಜೀವಃ= ಇಂದ್ರಿಯಗಳಿಗೆ ಆಧಾರನಾದವನು.
ವಿನಯಿತಾ= ಕಾಲೀಯ ಸರ್ಪನ ಹೆಡೆಗಳನ್ನು ಬಗ್ಗಿಸುವವನು.
ಸಾಕ್ಷೀ= ಎಲ್ಲವನ್ನೂ ಸಾಕ್ಷಾತ್ತಾಗಿ ನೋಡಿದವನು .
ಮುಕುಂದಃ= ಮೋಕ್ಷವನ್ನು ಕೊಡುವವನು.
ಅಮಿತವಿಕ್ರಮಃ= ಅಪರಿಮಿತವಾದ ಶಕ್ತಿಯುಳ್ಳವನು.
ಅಂಭೋನಿಧಿಃ= ಅಂಭಸ್ ಎನಿಸುವ ಸ್ವರ್ಗ ಮತ್ತು ಮೇಲಿನ ಲೋಕಗಳಿಗೆ ಆಶ್ರಯನಾದವನು.
ಅನಂತಾತ್ಮಾ= ದೇಶ-ಕಾಲ-ಗುಣಗಳಿಂದ ಅಂತವಿಲ್ಲದ ಸ್ವರೂಪವುಳ್ಳವನು.
ಮಹೋದಧಿಶಯಃ= ಪ್ರಳಯೋದಕದಲ್ಲಿ ಅಥವಾ ಕ್ಷೀರಸಾಗರದಲ್ಲಿ ಪವಡಿಸಿರುವವನು.
ಅಂತಕಃ= ಎಲ್ಲವನ್ನೂ ಸಂಹರಿಸುವವನು.
ಅಜೋ ಮಹಾರ್ಹಃ ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ |
ಆನಂದೋ ನಂದನೋ ನಂದಃ ಸತ್ಯಧರ್ಮಾ ತ್ರಿವಿಕ್ರಮಃ ॥69॥
ಅಜಃ= ಜಡವಲ್ಲ, ಜೀವನಲ್ಲ ಎಂಬ ನಿಷೇಧದಿಂದ ತಿಳಿಯಲ್ಪಡುವವನು.
ಮಹಾರ್ಹಃ= ಉತ್ತಮ ಪೂಜ್ಯನಾಗಿರುವವನು.
ಸ್ವಾಭಾವ್ಯಃ= ಸ್ವತಂತ್ರನೂ, ಸುಖರೂಪಿಯೂ ಆಗಿ ತನ್ನ ಅನುಗ್ರಹದಿಂದಲೇ ಪೂಜಿಸಲ್ಪಡುವವನು.
ಜಿತಾಮಿತ್ರಃ= ಶತ್ರುಗಳನ್ನು ತನ್ನ ಅಧೀನರಾಗಿ ಹೊಂದಿರುವವನು. ಶತ್ರುಗಳನ್ನು ಪರಾಜಯಗೊಳಿಸುವವನು.
ಪ್ರಮೋದನಃ= ಸರ್ವದಾ ಶ್ರೇಷ್ಠವಾದ ಸುಖರೂಪನಾದವನು.
ಆನಂದಃ= ಆನಂದಸ್ವರೂಪನು.
ನಂದನಃ= ಆನಂದಗೊಳಿಸುವವನು, ಆನಂದಸ್ವರೂಪಿ ಮತ್ತು ಸರ್ವಪ್ರೇರಕನು.
ನಂದಃ= ಸಮೃದ್ಧನಾಗಿರುವವನು. ಸಂಸಾರಬಂಧನವನ್ನು ಪರಿಹರಿಸುವವನು.
ಸತ್ಯಧರ್ಮಾಃ= ಸದ್ಗುಣಗಳನ್ನು ಹೊಂದಿದವನು. ಸತ್ಯವಾದ ಜಗತ್ತನ್ನು ಧರಿಸಿದವನು.
ತ್ರಿವಿಕ್ರಮಃ= ಮೂರುವೇದಗಳನ್ನು, ಮೂರು ಕಾಲಗಳನ್ನು, ಮೂರು ಗುಣಗಳನ್ನು ಅತಿಕ್ರಮಿಸಿ ಇರುವವನು.
ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ ಮೇದಿನೀಪತಿಃ |
ತ್ರಿಪದಸ್ತ್ರಿದಶಾಧ್ಯಕ್ಷೋ ಮಹಾಶೃಂಗಃ ಕೃತಾಂತಕೃತ್ ॥70॥
ಮಹರ್ಷಿಃ= ಶ್ರೇಷ್ಠ ಜ್ಞಾನಿಯಾಗಿರುವವನು.
ಕಪಿಲಾಚಾರ್ಯಃ= ಕಪಿಲಾದಿ ರೂಪಗಳಿಂದ ಶಾಸ್ತ್ರಾರ್ಥವನ್ನು ವ್ಯಾಖ್ಯಾನ ಮಾಡುವವನು.
ಕೃತಜ್ಞಃ= ಪೌರುಷೇಯ ಗ್ರಂಥಗಳನ್ನು ತಿಳಿದವನು.
ಮೇದಿನೀಪತಿಃ= ಭೂಮಿಗೆ ಒಡೆಯನಾದವನು.
ತ್ರಿಪದಃ= ಶ್ವೇತದ್ವೀಪ-ಅನಂತಾಸನ ಮತ್ತು ವೈಕುಂಠವೆಂಬ ಮೂರು ಸ್ಥಾನಗಳನ್ನು ಹೊಂದಿದವನು.
ಭೂಮಿ-ಆಕಾಶ-ಪಾತಾಳಗಳನ್ನು ವ್ಯಾಪಿಸಿದವನು.
ತ್ರಿದಶಾಧ್ಯಕ್ಷಃ= ದೇವತೆಗಳಿಗೆ ಒಡೆಯನಾದವನು.
ಮಹಾಶೃಂಗಃ= ಮತ್ಸ್ಯಾವತಾರದಲ್ಲಿ ದೊಡ್ಡ ಕೊಂಬನ್ನು ಹೊಂದಿದವನು.
ಕೃತಾಂತಕೃತ್= ಯಮನನ್ನು ಸೃಷ್ಟಿಸುವವನು. ಸಂಹಾರಕಾಲದಲ್ಲಿ ಯಮನನ್ನೂ ಸಂಹರಿಸುವವನು.
ಮಹಾವರಾಹೋ ಗೋವಿಂದಃ ಸುಷೇಣಃ ಕನಕಾಂಗದೀ |
ಗುಹ್ಯೋ ಗಭೀರೋ ಗಹನೋ ಗುಪ್ತಶ್ಚಕ್ರಗದಾಧರಃ ॥71॥
ಮಹಾವರಾಹಃ= ಪೂಜ್ಯನಾದವನು ಮತ್ತು ಶ್ರೇಷ್ಠರಿಂದ ವಂದ್ಯನಾದವನು. ಶ್ರೇಷ್ಠ ವರಾಹರೂಪನಾದವನು.
ಗೋವಿಂದಃ= ಸೂರ್ಯನನ್ನು ಪ್ರತೀಕವಾಗಿ ಹೊಂದಿದವನು.
ಸುಷೇಣಃ= ಜೀವರನ್ನು ಸಂಸಾರ ಪಾಶದಿಂದ ಚೆನ್ನಾಗಿ ಬಂಧಿಸುವವನು. ಒಳ್ಳೆಯ ಸೈನ್ಯವನ್ನು ಹೊಂದಿದವನು. ಒಳ್ಳೆಯ ದಾನವನ್ನು ಮಾಡುವವನು.
ಕನಕಾಂಗದೀ= ದೀಪ್ತವಾದ ಭುಜಕೀರ್ತಿಯನ್ನು ನಿತ್ಯವೂ ಧರಿಸಿರುವವನು.
ಗುಹ್ಯಃ= ಅಯೋಗ್ಯರಿಗೆ ತಿಳಿಯದವನು. ಹೃದಯ ಗುಹೆಯಲ್ಲಿ ವಾಸಿಸುವವನು.
ಗಭೀರಃ= ಜ್ಞಾನೈಶ್ವರ್ಯಾದಿ ಗುಣಗಳಿಂದ ಗಂಭೀರನಾದವನು.
ಗಹನಃ= ಎಲ್ಲವನ್ನೂ ಸಂಹರಿಸುವವನು.
ಗುಪ್ತಃ= ಸಾಧಕರಿಂದ ತಮ್ಮ ಹೃದಯದಲ್ಲಿ ರಕ್ಷಿಸಲ್ಪಡುವವನು.

ಚಕ್ರಗದಾಧರಃ= ಸುದರ್ಶನ ಚಕ್ರ ಮತ್ತು ಕೌಮೋದಕೀ ಗದೆಗಳನ್ನು ಧರಿಸಿದವನು.
ವೇಧಾಃ ಸ್ವಾಂಗೋಽಜಿತಃ ಕೃಷ್ಣೋ ದೃಢಃ ಸಂಕರ್ಷಣೋಽಚ್ಯುತಃ |
ವರುಣೋ ವಾರುಣೋ ವೃಕ್ಷಃ ಪುಷ್ಕರಾಕ್ಷೋ ಮಹಾಮನಾಃ ॥72॥
ವೇಧಾಃ= ವಿಶೇಷವಾಗಿ ಧಾರಣೆ, ಪೋಷಣೆಗಳನ್ನು ಮಾಡುವವನು.
ಸ್ವಾಂಗಃ= ಚೆನ್ನಾಗಿ ವ್ಯಾಪ್ತವಾದ ಅಂಗಗಳನ್ನು ಹೊಂದಿದವನು.
ಅಜಿತಃ= ಯಾರಿಂದಲೂ ಜಯಿಸಲ್ಪಡದವನು.
ಕೃಷ್ಣಃ= ಎಲ್ಲರನ್ನೂ ಆಕರ್ಷಿಸುವವನು. ಪೂರ್ಣಸುಖವುಳ್ಳವನು.
ದೃಢಃ= ಶಕ್ತನಾದವನು.
ಸಂಕರ್ಷಣಃ= ಸಂಹಾರಕಾಲದಲ್ಲಿ ಸಕಲಭೂತಗಳನ್ನೂ ತನ್ನೆಡೆಗೆ ಸೆಳೆದು ಕೊಳ್ಳುವವನು.
ಅಚ್ಯುತಃ= ಹಾನಿಯಿಲ್ಲದ ಗುಣ-ಕ್ರಿಯಾದಿಗಳನ್ನು ಹೊಂದಿದವನು.
ವರುಣಃ= ದೈತ್ಯರಿಗೆ ಅಮೃತವನ್ನು ಕೊಡದವನು. ದೇವತೆಗಳಿಗೆ ಅಮೃತವನ್ನು ಕೊಡುವವನು.
ವಾರುಣಃ= ನೀರಿಗೆ ಉತ್ಪಾದಕನಾದವನು.
ವೃಕ್ಷಃ= ದೈತ್ಯರನ್ನು ನಾಶಪಡಿಸುವವನು.
ಪುಷ್ಕರಾಕ್ಷಃ= ಭಕ್ತರನ್ನು ಪೋಷಿಸುವ ಕಣ್ಣುಳ್ಳವನು.
ಮಹಾಮನಾಃ= ಶ್ರೇಷ್ಠವಾದ ಮನಸ್ಸುಳ್ಳವನು.
ಭಗವಾನ್ ಭಗಹಾ ನಂದೀ ವನಮಾಲೀ ಹಲಾಯುಧಃ |
ಆದಿತ್ಯೋ ಜ್ಯೋತಿರಾದಿತ್ಯಃ ಸಹಿಷ್ಣುರ್ಗತಿಸತ್ತಮಃ ॥73॥
ಭಗವಾನ್= ಭಗ ಎನಿಸುವ ಸಮಗ್ರ ಪ್ರಭುತ್ವ, ಸಮಗ್ರ ಪರಾಕ್ರಮ, ಸಮಗ್ರ ಯಶಸ್ಸು, ಸಮಗ್ರ ಸಂಪತ್ತು, ಸಮಗ್ರ ಜ್ಞಾನ ಹಾಗೂ ಸಮಗ್ರ ವೈರಾಗ್ಯವನ್ನು ನಿತ್ಯವೂ ಪೂರ್ಣವಾಗಿ ಹೊಂದಿರುವವನು.
ಭಗಹಾ= ದೈತ್ಯರ ಭಾಗ್ಯವನ್ನು ನಾಶಪಡಿಸುವವನು. ಸೂರ್ಯ-ಚಂದ್ರರ ಸಮೀಪಕ್ಕೆ ಹೋಗುವ ರಾಹುವನ್ನು ನಾಶಪಡಿಸುವವನು.
ನಂದೀ= ಆನಂದರೂಪನಾದವನು.
ವನಮಾಲೀ= ಪ್ರಶಸ್ತವಾದ ವನಮಾಲೆಯನ್ನು ಸರ್ವದಾ ಧರಿಸಿರುವವನು.
ಹಲಾಯುಧಃ= ನೇಗಿಲನ್ನು ಆಯುಧವನ್ನಾಗಿ ಧರಿಸಿರುವವನು.
ಆದಿತ್ಯಃ= ಅನಾದಿಕಾಲದಿಂದಲೂ ಆನಂದ-ಜ್ಞಾನಗಳನ್ನು ಹೊಂದಿದವನು. ಭಕ್ಷಣಶೀಲರಾದ ದೈತ್ಯರನ್ನು ತ್ಯಜಿಸುವವನು.
ಜ್ಯೋತಿರಾದಿತ್ಯಃ= ಸೂರ್ಯ-ಅಗ್ನಿ-ನಕ್ಷತ್ರ ಮೊದಲಾದ ಪ್ರಕಾಶರೂಪವಾದ ಪದಾರ್ಥಗಳಲ್ಲಿ ಇರುವವನು.
ಸಹಿಷ್ಣುಃ= ಎಲ್ಲರನ್ನೂ ಸೋಲಿಸುವವನು.
ಗತಿಸತ್ತಮಃ= ಜ್ಞಾನದಿಂದ ನಿರ್ದುಷ್ಟರಾದವರಿಂದ ಬಯಸಲ್ಪಡುವವನು.
ಸುಧನ್ವಾ ಖಂಡಪರಶುರ್ದಾರುಣೋ ದ್ರವಿಣಪ್ರದಃ |
ದಿವಃಸ್ಪೃಕ್ಸರ್ವದೃಗ್ವ್ಯಾಸೋ ವಾಚಸ್ಪತಿರಯೋನಿಜಃ ॥74॥
ಸುಧನ್ವಾ= ಶೋಭನವಾದ ಶಾರ್ಙ್ಗಧನುಸ್ಸುಳ್ಳವನು.
ಖಂಡಪರಶುಃ= ಶತ್ರುಗಳನ್ನು ಖಂಡಿಸುವ ಪರಶು ಉಳ್ಳವನು.
ದಾರುಣಃ= ಜೀವಸ್ವರೂಪಾಚ್ಛಾದಕವಾದ ಅಜ್ಞಾನವನ್ನು ನಾಶಪಡಿಸುವವನು.
ದ್ರವಿಣಪ್ರದಃ= ಜ್ಞಾನರೂಪವಾದ ಮತ್ತು ಬಾಹ್ಯವಾದ ಧನವನ್ನು ಚೆನ್ನಾಗಿ ನೀಡುವವನು.
ದಿವಃಸ್ಪೃಕ್= ವೈಕುಂಠಾದಿ ಲೋಕಗಳಲ್ಲಿ ಇರುವವನು.
ಸರ್ವದೃಕ್= ಸರ್ವವೇದಗಳಿಂದ ಪ್ರತಿಪಾದ್ಯನಾದವನು. ಸರ್ವವೇದ ವ್ಯಾಖ್ಯಾತೃವಾದವನು.
ವ್ಯಾಸಃ= ವಿಶೇಷವಾಗಿ ಬದರಿಕಾಶ್ರಮದಲ್ಲಿ ವಾಸಿಸುವವನು. ವೇದರಾಶಿಯನ್ನು ವಿಭಜಿಸಿದವನು.
ವಾಚಸ್ಪತಿಃ= ವೇದವಾಙ್ಮಯಕ್ಕೆ ಒಡೆಯನಾದವನು.
ಅಯೋನಿಜಃ= ನಿತ್ಯವಾದ ವೇದಗಳಿಂದ ಅಭಿವ್ಯಕ್ತನಾಗುವವನು.
ತ್ರಿಸಾಮಾ ಸಾಮಗಃ ಸಾಮ ನಿರ್ವಾಣಂ ಭೇಷಜಂ ಭಿಷಕ್ |
ಸಂನ್ಯಾಸಕೃಚ್ಛಮಃ ಶಾಂತೋ ನಿಷ್ಠಾ ಶಾಂತಿಃ ಪರಾಯಣಮ್ ॥75॥
ತ್ರಿಸಾಮಾ= ನಿಧನ, ಉದ್ಗೀಥ ಮತ್ತು ಪ್ರತಿಹಾರಗಳೆಂಬ ಪ್ರಿಯವಾದ ಸಾಮಗಳನ್ನು ಹೊಂದಿದವನು.
ಸಾಮಗಃ= ಸಂಧಿಗಾಗಿ ಸಾಮವಚನಗಳಿಂದ ಕೌರವರ ಸಭೆಗೆ ಹೋದವನು.
ಸಾಮಃ= ಚೆನ್ನಾಗಿ ಗುಣಾದಿ ಸಂಬಂಧವುಳ್ಳವನು.
ನಿರ್ವಾಣಂ= ಪ್ರಾಕೃತ ಶರೀರದವನಾದವನಿಂದ ಭೇದಿಸಲಾರದೆ ಹಿಂದಿರುಗಿದ ಬಾಣವುಳ್ಳವನು.
ಭೇಷಜಂ= ಸಂಸಾರರೂಪವಾದ ವ್ಯಾಧಿಗೆ ಔಷಧನಾದವನು.
ಭಿಷಕ್= ದುರ್ಜನರನ್ನು ಭಯದಿಂದ ನಾಶವನ್ನು ಹೊಂದುವಂತೆ ಮಾಡುವವನು.
ಸಂನ್ಯಾಸಕೃತ್= ಚೆನ್ನಾಗಿ ದೋಷಗಳನ್ನು ದೂರದಲ್ಲಿಡುವವನು.
ಶಮಃ= ಶಮಗುಣವನ್ನು ಹೊಂದಿರುವವನು.
ಶಾಂತಃ= ವೇದೋಕ್ತವಾದ ಶತಗುಣದ ಆನಂದದ ತುದಿಯಲ್ಲಿ ಇರುವವನು. ನಿರವಧಿಕ ಆನಂದರೂಪೀ.
ನಿಷ್ಠಾ= ದೇವತೆಗಳಲ್ಲಿ ಚೆನ್ನಾಗಿ ಇರುವ ನಾರಾಯಣೀ ಮೂರ್ತಿಯುಳ್ಳವನು.

ಶಾಂತಿಃ= ಸುಖದ ಪರಾಕಾಷ್ಠೆಯಾದವನು.
ಪರಾಯಣಮ್= ಮುಕ್ತರಿಗೆ ಆಶ್ರಯನಾದವನು.
ಶುಭಾಂಗಃ ಶಾಂತಿದಃ ಸ್ರಷ್ಟಾ ಕುಮುದಃ ಕುವಲೇಶಯಃ |
ಗೋಹಿತೋ ಗೋಪತಿರ್ಗೋಪ್ತಾ ವೃಷಭಾಕ್ಷೋ ವೃಷಪ್ರಿಯಃ ॥76॥
ಶುಭಾಂಗಃ= ಮಂಗಳಾತ್ಮಕವಾದ ಶರೀರವುಳ್ಳವನು.
ಶಾಂತಿದಃ= ಯೋಗ್ಯರಿಗೆ ತನ್ನ ವಿಷಯದಲ್ಲಿ ನಿಷ್ಠೆಯನ್ನು ನೀಡುವವನು.
ಸ್ರಷ್ಟಾ= ಪ್ರಕೃತಿಯಿಂದ ಜಡಗಳನ್ನು ನಿರ್ಮಿಸುವವನು.
ಕುಮುದಃ= ಭೂಮಿಯಲ್ಲಿಯೂ ಪೂರ್ಣಸಂತೋಷದಿಂದ ಇರುವವನು.
ಕುವಲೇಶಯಃ= ಭೂಮಿಯ ಬಲಕ್ಕಾಗಿ ಶ್ವೇತದ್ವೀಪದಲ್ಲಿ ಪವಡಿಸಿರುವವನು. ಜೀವರ ಹೃದಯಗುಹೆಯಲ್ಲಿ ವಾಸಿಸುವವನು.
ಗೋಹಿತಃ= ಭೂಮಿಗೆ ಹಿತಕಾರಿಯಾಗಿರುವವನು.
ಗೋಪತಿಃ= ಕಿರಣಗಳಿಗೆ ಅಧಿಪತಿಯಾದವನು.
ಗೋಪ್ತಾ= ತನ್ನನ್ನು ಆಚ್ಛಾದಿಸಿಕೊಳ್ಳುವವನು. ವೇದಗಳಲ್ಲಿ ನಿಂತು ರಕ್ಷಿಸುವವನು.
ವೃಷಭಾಕ್ಷಃ= ಎತ್ತುಗಳಲ್ಲಿ ಎತ್ತಿನ ರೂಪದಿಂದ ವ್ಯಾಪಿಸಿರುವವನು.
ವೃಷಪ್ರಿಯಃ= ಧರ್ಮಪ್ರಿಯನಾದವನು.
ಅನಿವರ್ತೀ ನಿವೃತ್ತಾತ್ಮಾ ಸಂಕ್ಷೇಪ್ತಾ ಕ್ಷೇಮಕೃಚ್ಛಿವಃ |
ಶ್ರೀವತ್ಸವಕ್ಷಾಃ ಶ್ರೀವಾಸಃ ಶ್ರೀಪತಿಃ ಶ್ರೀಮತಾಂವರಃ ॥77॥
ಅನಿವರ್ತೀ= ಯುದ್ಧದಿಂದ ಹಿಂದಿರುಗದವನು.
ನಿವೃತ್ತಾತ್ಮಾ= ದುರ್ಜನರ ಹೃದಯದಿಂದ ಹಿಂದೆ ಬಂದವನು.
ಸಂಕ್ಷೇಪ್ತಾ= ರಾಮಾವತಾರದಲ್ಲಿ ದುಂದುಭಿಯ ದೇಹವನ್ನು ಪಾದಾಂಗುಷ್ಠದಿಂದ ಸೀಳಿದವನು. ಕೃಷ್ಣಾವತಾರದಲ್ಲಿ ಗೋಪ-ಗೋಪಿಯರ ಪ್ರೀತಿಗಾಗಿ ಬಾಹುಗಳನ್ನು ಎತ್ತಿದವನು.
ಕ್ಷೇಮಕೃಚ್ಛಿವಃ= ಭಕ್ತರಿಗೆ ಕ್ಷೇಮವನ್ನುಂಟು ಮಾಡುವ ಮಂಗಳಸ್ವರೂಪೀ.
ಶ್ರೀವತ್ಸವಕ್ಷಾಃ= ಶ್ರೀವತ್ಸಕ್ಕೆ ಅಭಿಮಾನಿನಿಯಾದ ಲಕ್ಷ್ಮೀಯನ್ನು ಎದೆಯಲ್ಲಿ ಹೊಂದಿದವನು.
ಶ್ರೀವಾಸಃ= ಲಕ್ಷ್ಮೀದೇವಿಗೆ ಆಶ್ರಯನಾದವನು.
ಶ್ರೀಪತಿಃ= ಲಕ್ಷ್ಮೀಗೆ ವಲ್ಲಭನಾದವನು.
ಶ್ರೀಮತಾಂವರಃ= ಸಂಪತ್ತಿನಿಂದ ಕೂಡಿರುವವರಲ್ಲಿ ಶ್ರೇಷ್ಠನಾದವನು.
ಶ್ರೀದಃ ಶ್ರೀಶಃ ಶ್ರೀನಿವಾಸಃ ಶ್ರೀನಿಧಿಃ ಶ್ರೀವಿಭಾವನಃ |
ಶ್ರೀಧರಃ ಶ್ರೀಕರಃ ಶ್ರೇಯಃ ಶ್ರೀಮಾಲ್ಲೋಕತ್ರಯಾಶ್ರಯಃ ॥78॥
ಶ್ರೀದಃ= ಭಕ್ತರಿಗೆ ಲಕ್ಷ್ಮೀಯನ್ನು ಅಭೀಷ್ಟಪ್ರದನಾಗಿ ನೀಡುವವನು.
ಶ್ರೀಶಃ= ಲಕ್ಷ್ಮೀದೇವಿಗೆ ಸುಖವನ್ನು ಅನುಗ್ರಹಿಸುವವನು. ಭಾರತೀದೇವಿಗೆ ವಾಯುದೇವನನ್ನು ಪತಿಯಾಗಿ ಅನುಗ್ರಹಿಸಿರುವವನು.
ಶ್ರೀನಿವಾಸಃ= ತನ್ನ ದೇಹದ ಗಂಧದಿಂದ ಲಕ್ಷ್ಮೀಯನ್ನು ಪರಿಮಳ ಯುಕ್ತಳನ್ನಾಗಿ ಮಾಡುವವನು.
ಶ್ರೀನಿಧಿಃ= ಲಕ್ಷ್ಮೀದೇವಿ ಮತ್ತು ಅವಳಿಂದ ಅಭಿಮನ್ಯವಾದ ಸಂಪತ್ತಿಗೆ ಚೆನ್ನಾದ ಆಶ್ರಯನಾದವನು.
ಶ್ರೀವಿಭಾವನಃ= ಲಕ್ಷ್ಮೀದೇವಿಯು ಉಳಿದ ಜೀವರಿಗಿಂತಲೂ ವಿಲಕ್ಷಣಳಾಗಿರುವಂತೆ, ವಿಶಿಷ್ಟಳಾಗಿರುವಂತೆ ಮತ್ತು ವಿವಿಧ ರೂಪಗಳನ್ನು ಧರಿಸಿರುವಂತೆ ಪ್ರೇರಿಸುವವನು.
ಶ್ರೀಧರಃ= ಲಕ್ಷ್ಮೀಯ ಶ್ರೀರೂಪವನ್ನು ತೊಡೆಯ ಮೇಲೆ ಧರಿಸಿರುವವನು.
ಶ್ರೀಕರಃ= ಸಂಪತ್ತನ್ನು ಉಂಟುಮಾಡುವವನು.
ಶ್ರೇಯಃ= ಅತಿಶಯವಾಗಿ ಪ್ರಶಸ್ತನಾದವನು.
ಶ್ರೀಮಾನ್= ಪ್ರಶಸ್ತವಾದ ಸಂಪತ್ತು-ಕಾಂತಿಗಳನ್ನು ಸರ್ವದಾ ಹೊಂದಿರುವವನು.
ಲೋಕತ್ರಯಾಶ್ರಯಃ= ಭೂಲೋಕ, ಅಂತರಿಕ್ಷ ಮತ್ತು ದೇವಲೋಕಗಳಿಗೆ ಆಶ್ರಯನಾಗಿರುವವನು.
ಸ್ವಕ್ಷಃ ಸ್ವಂಗಃ ಶತಾನಂದೋ ನಂದಿರ್ಜ್ಯೋತಿರ್ಗಣೇಶ್ವರಃ |
ವಿಜಿತಾತ್ಮಾ ವಿಧೇಯಾತ್ಮಾ ಸತ್ಕೀರ್ತಿಶ್ಛಿನ್ನಸಂಶಯಃ ॥79॥
ಸ್ವಕ್ಷಃ= ಶೋಭನವಾದ ಕಣ್ಣುಳ್ಳವನು.
ಸ್ವಂಗಃ= ಶೋಭನವಾದ, ಸುಖಾತ್ಮಕವಾದ ಅಂಗಗಳುಳ್ಳವನು.
ಶತಾನಂದಃ= ಅಪರಿಮಿತ ಆನಂದರೂಪನಾದವನು.
ನಂದಿಃ= ಜ್ಞಾನರೂಪವಾದ ನೇತ್ರವನ್ನು ಕೊಡುವವನು.
ಜ್ಯೋತಿರ್ಗಣೇಶ್ವರಃ= ಪ್ರಕಾಶಮಾನವಾದ ಪದಾರ್ಥಗಳ ಸಮುದಾಯಕ್ಕೆ ಒಡೆಯನಾದವನು.
ವಿಜಿತಾತ್ಮಾ= ಭಕ್ತರಿಂದ ವಿಜಿತವಾದ ಸ್ವರೂಪವುಳ್ಳವನು.
ವಿಧೇಯಾತ್ಮಾ= ಜ್ಞಾನಿಗಳು ತಮ್ಮ ಹೃದಯದಲ್ಲಿ ಧರಿಸಲು ಯೋಗ್ಯವಾದ ಸ್ವರೂಪವುಳ್ಳವನು.
ಅವಿಧೇಯಾತ್ಮಾ= ಯಾರಿಗೂ ವಿಧೇಯವಾಗದ ಸ್ವರೂಪವುಳ್ಳವನು.
ಸತ್ಕೀರ್ತಿಃ= ಉತ್ತಮವಾದ, ನಿರ್ದುಷ್ಟವಾದ ಮತ್ತು ಮಾನ್ಯವಾದ ಕೀರ್ತಿಯುಳ್ಳವನು.
ಛಿನ್ನಸಂಶಯಃ= ಯಾವ ವಿಷಯದಲ್ಲಿಯೂ ಸಂಶಯವಿಲ್ಲದವನು.

ಉದೀರ್ಣಃ ಸರ್ವತಶ್ಚಕ್ಷುರನೀಶಃ ಶಾಶ್ವತಃ ಸ್ಥಿರಃ |
ಭೂಶಯೋ ಭೂಷಣೋ ಭೂತಿರ್ವಿಶೋಕಃ ಶೋಕನಾಶನಃ ॥80॥
ಉದೀರ್ಣಃ= ಉತ್ಕೃಷ್ಟನಾದವನು.
ಸರ್ವತಶ್ಚಕ್ಷುಃ= ಎಲ್ಲೆಡೆ ಕಣ್ಣುಳ್ಳವನು. ಅನಂತ ಕಣ್ಣುಳ್ಳವನು.
ಅನೀಶಃ= ತನಗೆ ಇನ್ನೊಬ್ಬ ಒಡೆಯನಿಲ್ಲದವನು.
ಶಾಶ್ವತಃ ಸ್ಥಿರಃ (ಶಾಶ್ವತ ಸ್ಥಿರಃ) = ಶಾಶ್ವತವೆನಿಸುವ ಪದಾರ್ಥಗಳು ನಿರ್ವಿಕಾರವಿರುವಂತೆ ಮಾಡುವವನು.
ಭೂಶಯಃ= ಭೂಮಿಯಲ್ಲಿ ಪವಡಿಸಿದವನು.
ಭೂಷಣಃ= ಪ್ರಪಂಚಕ್ಕೆ ಭೂಷಣಪ್ರಾಯನಾದವನು.
ಭೂತಿಃ= ಸಂಪತ್‌ಸ್ವರೂಪನಾದವನು.
ವಿಶೋಕಃ= ಶೋಕದೂರನಾದವನು.
ಶೋಕನಾಶನಃ= ಭಕ್ತರ ಶೋಕವನ್ನು ಪರಿಹರಿಸುವವನು.
ಅರ್ಚಿಷ್ಮಾನರ್ಚಿತಃ ಕುಂಭೋ ವಿಶುದ್ಧಾತ್ಮಾ ವಿಶೋಧನಃ |
ಅನಿರುದ್ಧೋಽಪ್ರತಿರಥಃ ಪ್ರದ್ಯುಮ್ನೋಽಮಿತವಿಕ್ರಮಃ ॥81॥
ಅರ್ಚಿಷ್ಮಾನ್= ಪ್ರಶಸ್ತವಾದ ಕಿರಣಗಳನ್ನು ನಿತ್ಯವೂ ಹೊಂದಿರುವವನು.
ಅರ್ಚಿತಃ= ಸಕಲರಿಂದಲೂ ಸರ್ವದಾ ಪೂಜಿತನಾದವನು.
ಕುಂಭಃ= ಭೂಮಿಯನ್ನು ಪ್ರಕಾಶಿಸುವವನು.
ವಿಶುದ್ಧಾತ್ಮಾ= ನಿರ್ಮಲವಾದ ಸ್ವರೂಪವುಳ್ಳವನು. ವಿಶುದ್ಧರಾದವರಲ್ಲಿ ವ್ಯಾಪಿಸಿರುವವನು.
ವಿಶೋಧನಃ= ವಿಶೇಷವಾಗಿ ಶುದ್ಧಿ ಎನಿಸುವವನು.
ಅನಿರುದ್ಧಃ= ಮುಖ್ಯಪ್ರಾಣರ ಭಕ್ತರಿಂದ ಒಲಿಸಿಕೊಳ್ಳಲ್ಪಡುವವನು.
ಅಪ್ರತಿರಥಃ= ಎದುರಾಳಿ ಇಲ್ಲದವನು.
ಪ್ರದ್ಯುಮ್ನಃ= ಪ್ರಕೃಷ್ಟವಾದ ಪ್ರಕಾಶರೂಪನಾದವನು.
ಅಮಿತವಿಕ್ರಮಃ= ವಾಯುದೇವರೇ ಮೊದಲಾದವರಿಗೆ ಸಾಮಾನ್ಯರಿಂದ ತಿಳಿಯಲು ಅಶಕ್ಯವಾದ ಪರಾಕ್ರಮವನ್ನು ಅನುಗ್ರಹಿಸಿರುವವನು.
ಕಾಲನೇಮಿನಿಹಾ ವೀರಃ ಶೂರಃ ಶೌರಿರ್ಜನೇಶ್ವರಃ |
ತ್ರಿಲೋಕಾತ್ಮಾ ತ್ರಿಲೋಕೇಶಃ ಕೇಶವಃ ಕೇಶಿಹಾ ಹರಿಃ ॥82॥
ಕಾಲನೇಮಿನಿಹಾ= ಕಾಲನೇಮಿ ಅಸುರನನ್ನು ಚೆನ್ನಾಗಿ ಸಂಹರಿಸಿದವನು.
ವೀರಃ= ವಿಶೇಷವಾದ ಜ್ಞಾನ, ಇಚ್ಛೆ ಮತ್ತು ಸುಖಗಳನ್ನು ಹೊಂದಿದವನು.
ಶೌರಿಃ= ಸುಖಸ್ವಭಾವನಾದ ತನ್ನಲ್ಲೇ ಅತಿಶಯವಾಗಿ ಕ್ರೀಡಿಸುವವನು.
ಶೂರಜನೇಶ್ವರಃ= ಪರಾಕ್ರಮಿಗಳಾದ ಜನರಿಗೆ ಒಡೆಯನಾದವನು.
ತ್ರಿಲೋಕಾತ್ಮಾ= ಭೂ, ಭುವಃ, ಸ್ವಃ- ಎಂಬ ಮೂರು ಲೋಕಗಳಿಗೆ ಒಡೆಯನಾದವನು.
ತ್ರಿಲೋಕೇಶಃ= ಸಾತ್ವಿಕ, ರಾಜಸ, ತಾಮಸರೆಂಬ ಮೂರುವಿಧ ಜೀವರಿಗೂ ಒಡೆಯನಾದವನು.
ಕೇಶವಃ= ಕೃಷ್ಣ, ಕೇಶರೂಪದಿಂದ ಜಗತ್ತಿನಲ್ಲಿರುವವನು. ಕೇಶದಿಂದ ಭಕ್ತರಿಗೆ ಅನುಗ್ರಹವನ್ನು ಮಾಡುವವನು.
ಕೇಶಿಹಾ= ಕೇಶಿ ಎಂಬ ವಾಯುದೇವರ ರೂಪದಲ್ಲಿ ರಕ್ಷಕನಾಗಿ ಪ್ರವೇಶಿಸುವವನು.
ಹರಿಃ= ದೈತ್ಯರನ್ನು ಸಂಹಾರ ಮಾಡುವವನು.
ಕಾಮದೇವಃ ಕಾಮಪಾಲಃ ಕಾಮೀ ಕಾಂತಃ ಕೃತಾಗಮಃ |
ಅನಿರ್ದೇಶ್ಯವಪುರ್ವಿಷ್ಣುರ್ವೀರೋಽನಂತೋ ಧನಂಜಯಃ ॥83॥
ಕಾಮದೇವಃ= ಮನ್ಮಥನನ್ನು ಜಯಿಸಿರುವವನು.
ಕಾಮಪಾಲಃ= ಇಚ್ಛೆಗಳನ್ನು ಪಾಲಿಸುವವನು.
ಕಾಮೀ= ಪ್ರಶಂಸನೀಯವಾದ ಇಚ್ಛೆಯುಳ್ಳವನು.
ಕಾಂತಃ= ದೈತ್ಯಸುಖವನ್ನು ನಾಶಮಾಡುವವನು.
ಕೃತಾಗಮಃ= ವೇದಗಳನ್ನು ನಿತ್ಯವೂ ಧ್ಯಾನಿಸುವವನು.
ಅನಿರ್ದೇಶ್ಯ ವಪುಃ= ಯಾರಿಂದಲೂ ಆಜ್ಞಾಪಿಸಿಕೊಳ್ಳಲು ಅರ್ಹನಾಗದವನು.
ವಿಷ್ಣುಃ= ನದಿಗಳ ಜಲವು ಪ್ರವಹಿಸುವಂತೆ ಮಾಡುವವನು.
ವೀರಃ= ಪಕ್ಷಿಯಾದ ಗರುಡನಲ್ಲಿ ಸಂತೋಷದಿಂದ ಇರುವವನು. ವಿಶೇಷವಾಗಿ ಪ್ರಕಾಶಿಸುವವನು.
ಅನಂತಃ= ದೇಶ-ಕಾಲ-ಗುಣಗಳ ಪರಿಧಿ ಇಲ್ಲದವನು.
ಧನಂಜಯಃ= ಎಲ್ಲ ರೀತಿಯ ಸಂಪತ್ತುಗಳನ್ನು ಅಧೀನದಲ್ಲಿ ಇಟ್ಟುಕೊಂಡವನು.
ಬ್ರಹ್ಮಣ್ಯೋ ಬ್ರಹ್ಮಕೃದ್ ಬ್ರಹ್ಮಾ ಬ್ರಹ್ಮ ಬ್ರಹ್ಮವಿವರ್ಧನಃ |
ಬ್ರಹ್ಮವಿದ್ ಬ್ರಾಹ್ಮಣೋ ಬ್ರಹ್ಮೀ ಬ್ರಹ್ಮಜ್ಞೋ ಬ್ರಾಹ್ಮಣಪ್ರಿಯಃ ॥84॥
ಬ್ರಹ್ಮಣ್ಯಃ= ಬ್ರಾಹ್ಮಣ ವತ್ಸಲನು.
ಬ್ರಹ್ಮಕೃದ್= ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸುವವನು.

ಬ್ರಹ್ಮಾ= ಗುಣಪರಿಪೂರ್ಣನು.
ಬ್ರಹ್ಮ= ಗುಣಪೂರ್ಣಳಾದ ಲಕ್ಷ್ಮಿಯೇ ಪತಿಯಾಗಿ ಉಳ್ಳವನು.
ಬ್ರಹ್ಮವಿವರ್ಧನಃ= ವೇದವನ್ನು ಚೆನ್ನಾಗಿ ಪ್ರಚಾರ ಮಾಡುವವನು.
ಬ್ರಹ್ಮವಿದ್= ವೇದಗಳನ್ನು ಚೆನ್ನಾಗಿ ಅರಿತವನು.
ಬ್ರಾಹ್ಮಣಃ= ವೇದಪಾಠಕಾರನಾದವನು.
ಬ್ರಹ್ಮೀ= ಬ್ರಾಹ್ಮಣಸ್ವಾಮಿ. ಚತುರ್ಮುಖನನ್ನು ಉದರದಲ್ಲಿ ಧರಿಸಿದವನು. ಅನಂತ ವೇದರಾಶಿಯನ್ನು ಹೊಂದಿದವನು.
ಬ್ರಹ್ಮಜ್ಞಃ= ವೇದಗಳನ್ನು ತಿಳಿಸಿಕೊಡುವವನು. ಬ್ರಹ್ಮನಿಂದ ತಿಳಿಯಲ್ಪಡುವವನು.
ಬ್ರಾಹ್ಮಣಪ್ರಿಯಃ= ಬ್ರಹ್ಮ-ವಾಯುಗಳಿಗೆ ಪ್ರಿಯನಾದವನು. ಬ್ರಹ್ಮಜ್ಞಾನಿಗಳಿಗೆ ಪ್ರಿಯನಾದವನು.
ಮಹಾಕ್ರಮೋ ಮಹಾಕರ್ಮಾ ಮಹಾತೇಜಾ ಮಹೋರಗಃ |
ಮಹಾಕ್ರತುರ್ಮಹಾಯಜ್ವಾ ಮಹಾಯಜ್ಞೋ ಮಹಾಹವಿಃ ॥85॥
ಮಹಾಕ್ರಮಃ= ಜೀವರಲ್ಲಿ ಶ್ರೇಷ್ಠವಾದ ತಾರತಮ್ಯವಿರುವಂತೆ ಮಾಡುವವನು.
ಮಹಾಕರ್ಮಾ= ಶ್ರೇಷ್ಠ ಕ್ರಿಯೆಗಳುಳ್ಳವನು.
ಮಹಾತೇಜಾಃ= ಶ್ರೇಷ್ಠಳಾದ ಲಕ್ಷ್ಮೀದೇವಿಯ ಜನನಕ್ಕೆ ಕಾರಣನಾದವನು. ಉತ್ತಮವಾದ ತೇಜಸ್ಸನ್ನು ಹೊಂದಿದವನು.
ಮಹೋರಗಃ= ನಾಗರಾಜನನ್ನು ಹಾಸಿಗೆಯಾಗಿ ಹೊಂದಿದವನು. ಮಹಾತ್ಮರ ಹೃದಯದಲ್ಲಿ ನೆಲೆಸಿರುವವನು.
ಮಹಾಕ್ರತುಃ= ಅಗ್ನಿಷ್ಟೋಮ ಮೊದಲಾದ ಶ್ರೇಷ್ಠ ಯಜ್ಞಗಳಿಗೆ ಉತ್ಪಾದಕನಾದವನು.
ಮಹಾಯಜ್ವಾ= ಶ್ರೇಷ್ಠನಾದ ಯಜ್ಞಪ್ರವರ್ತಕನಾದವನು.
ಮಹಾಯಜ್ಞಃ= ಶ್ರೇಷ್ಠವಾದ ಯಜ್ಞಗಳನ್ನು ನಡೆಸುವವನು.
ಮಹಾಹವಿಃ= ಶ್ರೇಷ್ಠನಾದವನು ಮತ್ತು ಸಂಹಾರಕಾಲದಲ್ಲಿ ಸರ್ವ ಜಗತ್ತನ್ನೂ ತನ್ನಲ್ಲಿ ಹೋಮಿಸಿಕೊಳ್ಳುವವನು.
ಸ್ತವ್ಯಃ ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾ ರಣಪ್ರಿಯಃ |
ಪೂರ್ಣಃ ಪೂರಯಿತಾ ಪುಣ್ಯಃ ಪುಣ್ಯಕೀರ್ತಿರನಾಮಯಃ ॥86॥
ಸ್ತವ್ಯಃ= ಸ್ತುತಿಸಲು ಯೋಗ್ಯನಾದವನು.
ಸ್ತವಪ್ರಿಯಃ= ತನ್ನ ಸ್ತುತಿ ಮಾತ್ರದಿಂದ ಪ್ರೀತಿಯನ್ನು ಹೊಂದುವವನು.
ಸ್ತೋತ್ರಮ್= ಸ್ತೋತ್ರ ಮಾಡುವವನಲ್ಲಿ ಸಂತೋಷವನ್ನು ಹೊಂದುವವನು.
ಸ್ತುತಿಃ= ವೇದಾದಿ ಸಚ್ಛಾಸ್ತ್ರಗಳಿಂದ ಸ್ತುತಿಸಲ್ಪಡುವವನು.
ಸ್ತೋತಾ= ಸ್ತುತಿರೂಪವಾದ ಇತಿಹಾಸ-ಪುರಾಣಗಳನ್ನು ರಚಿಸುವವನು.
ರಣಪ್ರಿಯಃ= ಭಕ್ತರ ಸ್ತುತಿರೂಪವಾದ ಶಬ್ದಗಳಲ್ಲಿ ಪ್ರೀತಿಯುಳ್ಳವನು.
ಪೂರ್ಣಃ= ಗುಣಾದಿ ವಿಷಯಗಳಲ್ಲಿ ಪೂರ್ಣನಾಗಿರುವವನು.
ಪೂರಯಿತಾ= ಸಾಧಕರನ್ನು ಭಕ್ತಿ-ಜ್ಞಾನಾದಿಗಳಿಂದ ತುಂಬಿಸುವವನು.
ಪುಣ್ಯಃ= ತನ್ನ ಪ್ರಭೆಯಿಂದ ಸಕಲ ಪುರುಷರನ್ನೂ ಧಿಕ್ಕರಿಸುವವನು.
ಪುಣ್ಯಕೀರ್ತಿಃ= ಪವಿತ್ರವಾದ ಕೀರ್ತಿಯುಳ್ಳವನು.
ಅನಾಮಯಃ= ಸಂಸಾರವೆಂಬ ಮಹಾವ್ಯಾಧಿಗೆ ವಿರೋಧಿಯಾಗಿರುವವನು.
ಮನೋಜವಸ್ತೀರ್ಥಕರೋ ವಸುರೇತಾ ವಸುಪ್ರದಃ |
ವಸುಪ್ರದೋ ವಾಸುದೇವೋ ವಸುರ್ವಸುಮನಾ ಹರಿಃ(ಹವಿಃ) ॥87॥
ಮನೋಜವಃ= ಮನಸ್ಸಿನ ವೇಗದಂತೆ ವೇಗವುಳ್ಳವನು.
ತೀರ್ಥಕರಃ= ಗಂಗಾದಿ ತೀರ್ಥಗಳನ್ನು ನಿರ್ಮಿಸಿರುವವನು.
ವಸುರೇತಾಃ= ಸುವರ್ಣಮಯವಾದ ಅಥವಾ ಎಲ್ಲರ ವಾಸಕ್ಕೆ ಅರ್ಹವಾದ ಬ್ರಹ್ಮಾಂಡವನ್ನು ರೇತಸ್ಸಾಗಿ ಹೊಂದಿರುವವನು.
ವಸುಪ್ರದಃ= ಬಾಹ್ಯಸಂಪತ್ತನ್ನು, ಆಂತರಿಕ ಸಂಪತ್ತನ್ನು ಚೆನ್ನಾಗಿ ನೀಡುವವನು.
ವಸುಪ್ರದಃ= ದೇವತೆಗಳನ್ನು ಚೆನ್ನಾಗಿ ರಕ್ಷಿಸುವವನು.
ವಾಸುದೇವಃ= ಎಲ್ಲರನ್ನೂ ತನ್ನಲ್ಲಿ ವಾಸಿಸಿಕೊಳ್ಳುವವನು ಮತ್ತು ಕ್ರೀಡಾದಿ ಗುಣವುಳ್ಳವನು.
ವಸುಃ= ತನ್ನ ಗುಣಗಳನ್ನು ಆಚ್ಛಾದಿಸಿಕೊಳ್ಳುವವನು.
ವಸುಮನಾಃ= ವಸುರೂಪನಾದ ಭೀಷ್ಮನಿಗೆ ಜ್ಞಾನವನ್ನು ನೀಡಿದವನು.
ಹವಿಃ (ಹರಿಃ)= ಹದಿನಾರು ಸಾವಿರ ಕನ್ಯೆಯರನ್ನು ಕರೆದು ತಂದವನು. ಕೌರವರ ಸೇನೆಯ ಆಯುಸ್ಸನ್ನು ದೃಷ್ಟಿಯಿಂದಲೇ ಹರಣಮಾಡಿದವನು.
ಸದ್ಗತಿಃ ಸತ್ಕೃತಿಃ ಸತ್ತಾ ಸದ್ಭೂತಿಃ ಸತ್ಪರಾಯಣಃ |
ಶೂರಸೇನೋ ಯದುಶ್ರೇಷ್ಠಃ ಸನ್ನಿವಾಸಃ ಸುಯಾಮುನಃ ॥88॥
ಸದ್ಗತಿಃ= ಸಜ್ಜನರಿಗೆ ಆಶ್ರಯನಾದವನು. ಒಳ್ಳೆಯ ಆಶ್ರಯನಾದವನು.
ಸತ್ಕೃತಿಃ= ಸಮೀಚೀನವಾದ ಕರ್ತೃತ್ವವುಳ್ಳವನು.
ಸತ್ತಾ= ನಿರ್ದುಃಖಾನಂದ ಸ್ವರೂಪನಾದವನು.
ಸದ್ಭೂತಿಃ= ಸಜ್ಜನರ ಐಶ್ವರ್ಯಕ್ಕೆ ಕಾರಣನಾದವನು.
ಸತ್ಪರಾಯಣಃ= ಸಜ್ಜನರಿಗೆ ಶ್ರೇಷ್ಠನಾದ ಆಶ್ರಯನಾದವನು.

ಶೂರಸೇನಃ= ಶೂರರಿಗೆ ಶ್ರೇಷ್ಠನಾದ ಒಡೆಯ.
ಯದುಶ್ರೇಷ್ಠಃ= ಯದುವಂಶದಲ್ಲಿ ಶ್ರೇಷ್ಠನಾದವನು. ಜ್ಞಾನವನ್ನು ನೀಡುವ, ಸಂರಕ್ಷಿಸುವ ಗುರುಗಳಲ್ಲಿ ಶ್ರೇಷ್ಠನಾದವನು.
ಸನ್ನಿವಾಸಃ= ಸಜ್ಜನರಿಗೆ ಆವಾಸಸ್ಥಾನನಾದವನು.
ಸುಯಾಮುನಃ= ವಿಷವನ್ನು ಪರಿಹರಿಸಿ ಯಮುನೆಯನ್ನು ಶುದ್ಧಗೊಳಿಸಿದವನು.
ಭೂತಾವಾಸೋ ವಾಸುದೇವೋ ಸರ್ವಾಸುನಿಲಯೋನಲಃ |
ದರ್ಪಹಾ ದರ್ಪದೋ ದೃಪ್ತೋ ದುರ್ಧರೋಽಥಾಪರಾಜಿತಃ ॥89॥
ಭೂತಾವಾಸಃ= ಸಕಲ ಭೂತಗಳಿಗೂ ಆವಾಸಸ್ಥಾನನಾದವನು.
ವಾಸುದೇವಃ= ಮುಕ್ತಿಯೋಗ್ಯರಿಗೆ ತನ್ನ ಸ್ವರೂಪವನ್ನು ತಿಳಿಸುವವನು. ಅವರನ್ನು ಮುಕ್ತರನ್ನಾಗಿ ಮಾಡುವವನು. ಮುಕ್ತಿಯಲ್ಲಿ ಅವರಿಗೆ ಆನಂದವನ್ನು ಕೊಡುವವನು.
ಸರ್ವಾಸುನಿಲಃ= ಎಲ್ಲರ ಪ್ರಾಣಗಳಿಗೆ ಆಧಾರನಾದವನು.
ಅನಲಃ= ಮುಖ್ಯಪ್ರಾಣನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಲಾಲಿಸುವವನು.
ದರ್ಪಹಾ= ಗರ್ವವನ್ನು ಅಡಗಿಸುವವನು.
ದರ್ಪದಃ= ಅಯೋಗ್ಯರಿಗೆ ಅಹಂಕಾರವನ್ನು ಕೊಡುವವನು.
ದೃಪ್ತಃ= ಸ್ವರೂಪಾನಂದದಿಂದ ಪರಿಪೂರ್ಣನಾದವನು.
ದುರ್ಧರಃ= ಜೀವಾತ್ಮರು ದುಃಖವನ್ನು ಧರಿಸಿಕೊಳ್ಳುವಂತೆ ಮಾಡುವವನು.
ಅಪರಾಜಿತಃ= ಯಾರಿಂದಲೂ ಪರಾಜಯವನ್ನು ಹೊಂದದವನು.
ವಿಶ್ವಮೂರ್ತಿರ್ಮಹಾಮೂರ್ತಿರ್ದೀಪ್ತಮೂರ್ತಿರಮೂರ್ತಿಮಾನ್ |
ಅನೇಕಮೂರ್ತಿರವ್ಯಕ್ತಃ ಶತಮೂರ್ತಿಃ ಶತಾನನಃ ॥90॥
ವಿಶ್ವಮೂರ್ತಿಃ= ದೇಶ-ಕಾಲ-ಗುಣಗಳಿಂದ ಪರಿಪೂರ್ಣವಾದ ಆಕಾರವನ್ನು ಹೊಂದಿದವನು.
ಮಹಾಮೂರ್ತಿಃ= ಉತ್ತಮವಾದ ದೇಹವುಳ್ಳವನು.
ದೀಪ್ತಮೂರ್ತಿಃ= ಚೆನ್ನಾಗಿ ಪ್ರಕಾಶಿಸುವ ದೇಹವುಳ್ಳವನು.
ಅಮೂರ್ತಿಮಾನ್= ಪ್ರಾಕೃತ ದೇಹವಿಲ್ಲದವನು.
ಅನೇಕಮೂರ್ತಿಃ= ಅನಂತ ದೇಹಗಳುಳ್ಳವನು.
ಅವ್ಯಕ್ತಃ= ತನ್ನ ಅನುಗ್ರಹದ ಹೊರತಾಗಿ ಕಾಣಿಸಿಕೊಳ್ಳದವನು.
ಶತಮೂರ್ತಿಃ= ನಾರಾಯಣಾದಿ ಪುರಾತನಾಂತವಾದ ನೂರು ರೂಪಗಳನ್ನು ಧರಿಸಿದವನು.
ಶತಾನನಃ= ನೂರಾರು ಮುಖವುಳ್ಳವನು.
ಏಕೋ ನೈಕಃ ಸವಃ ಕಃ ಕಿಂ ಯತ್ತತ್ಪದಮನುತ್ತಮಮ್ |
ಲೋಕಬಂಧುರ್ಲೋಕನಾಥೋ ಮಾಧವೋ ಭಕ್ತವತ್ಸಲಃ ॥91॥
ಏಕಃ= ಪ್ರಧಾನನಾದವನು.
ನೈಕಃ= ಮುಕ್ತಾಮುಕ್ತರ ಜೊತೆಯಲ್ಲಿ ಅಭಿನ್ನನಾಗದವನು.
ಸವಃ= ಜಗತ್ ಪ್ರಸವಕರ್ತಾ.
ಕಃ= ಸುಖರೂಪನಾದವನು. ಶ್ರುತಿ-ಸ್ಮೃತಿಯಲ್ಲಿ ವಿಚಾರಿಸಲ್ಪಡುವವನು.
ಕಿಮ್= ಅತಿಶಯ ಸುಖರೂಪನಾದವನು.
ಯತ್= ಜ್ಞಾನರೂಪೀ.
ತತ್= ವ್ಯಾಪ್ತನಾದವನು.
ಪದಮ್= ಮುಕ್ತರಿಂದ ಪ್ರಾಪ್ಯನಾದವನು.
ಅನುತ್ತಮಮ್= ಸರ್ವೋತ್ತಮನಾದವನು.
ಲೋಕಬಂಧುಃ= ಸಕಲ ಜನರಿಗೂ ಬಂಧುವಾಗಿರುವವನು.
ಲೋಕನಾಥಃ= ಲೋಕಗಳಿಗೆ ಒಡೆಯ. ಜೀವರಿಗೆ ಒಡೆಯ.
ಮಾಧವಃ= ಲಕ್ಷ್ಮೀಪತಿ.
ಭಕ್ತವತ್ಸಲಃ= ಭಕ್ತರಲ್ಲಿ ವಾತ್ಸಲ್ಯವುಳ್ಳವನು.
ಸುವರ್ಣವರ್ಣೋ ಹೇಮಾಂಗೋ ವರಾಂಗಶ್ಚಂದನಾಂಗದೀ |
ವೀರಹಾ ವಿಷಮಃ ಶೂನ್ಯೋ ಘೃತಾಶೀರಚಲಶ್ಚಲಃ ॥92॥
ಸುವರ್ಣವರ್ಣಃ= ಚಿನ್ನದಂತಹ ಬಣ್ಣವುಳ್ಳವನು.
ಹೇಮಾಂಗಃ= ಚಿನ್ನದಂತಹ ಅವಯವವುಳ್ಳವನು.
ವರಾಂಗಃ= ಜ್ಞಾನಾನಂದಾತ್ಮಕವಾದ ಶರೀರವುಳ್ಳವನು.
ಚಂದನಾಂಗದೀ= ಆಹ್ಲಾದಕರವಾದ ಭುಜಾಭರಣವುಳ್ಳವನು.
ವೀರಹಾ= ವಿರುದ್ಧವಾದ ಜ್ಞಾನವುಳ್ಳವನನ್ನು ಅಂಧಂತಮಸ್ಸಿನಲ್ಲಿ ನೆಲೆಸುವಂತೆ ಮಾಡುವವನು.
ವಿಷಮಃ= ಶುಭಾಶುಭ ನಿಯಂತೃತ್ವ ರೂಪವಾದ ವೈಷಮ್ಯವನ್ನು ಹೊಂದಿದವನು.
ಶೂನ್ಯಃ= ದುರ್ಜನರ ಸುಖವನ್ನು ಊನಮಾಡುವವನು.

ಘೃತಾಶೀಃ= ಹವಿಸ್ಸಿನ ರೂಪವಾದ ಘೃತವನ್ನು ಸ್ವೀಕರಿಸುವವನು.
ಅಚಲಃ= ಪ್ರಾಕೃತವಾದ ಚರ ಪದಾರ್ಥವಿಲ್ಲದವನು.
ಚಲಃ= ಸ್ವತಂತ್ರವಾಗಿ ಎಲ್ಲ ಕಡೆಯಲ್ಲಿಯೂ ಯಾವಾಗಲೂ ಚಲಿಸುವವನು.
ಅಮಾನೀ ಮಾನದೋ ಮಾನ್ಯೋ ಲೋಕಸ್ವಾಮೀ ತ್ರಿಲೋಕಧೃಕ್ |
ಸುಮೇಧಾ ಮೇಧಜೋ ಧನ್ಯಃ ಸತ್ಯಮೇಧಾ ಧರಾಧರಃ ॥93॥
ಅಮಾನೀ= ಪ್ರಾಕೃತ ಗುಣಸಂಬಂಧದಿಂದ ಅಭಿಮಾನವನ್ನು ಹೊಂದದವನು.
ಮಾನದಃ= ಜ್ಞಾನವನ್ನು ನೀಡುವವನು.
ಮಾನ್ಯಃ= ಸರ್ವೇಶ್ವರನಾಗಿರುವುದರಿಂದ ಎಲ್ಲರಿಂದಲೂ ಪೂಜ್ಯನಾಗಿರುವವನು.
ಲೋಕಸ್ವಾಮೀ= ಸಕಲ ಭೂಮಿಗಳಿಗೂ ಒಡೆಯ.
ತ್ರಿಲೋಕಧೃಕ್= ಭೂ, ಭುವಃ, ಸ್ವಃ ಎಂಬ ಮೂರುಲೋಕಗಳನ್ನು ಧರಿಸಿರುವವನು.
ಸುಮೇಧಾಃ= ಒಳ್ಳೆಯ ಧಾರಣಾಶಕ್ತಿ ಸಂಪನ್ನವಾದ ಬುದ್ಧಿಯುಳ್ಳವನು.
ಮೇಧಜಃ= ಯಜ್ಞದಿಂದ ಅಭಿವ್ಯಕ್ತನಾಗುವವನು. ಮೇಧಾಶಕ್ತಿಗೆ ವಿಷಯನಾಗುವವನು.
ಧನ್ಯಃ= ಗುಣಗಳಿಂದ ಪೂರ್ಣನಾಗಿ ಯಾವುದರ ಅಪೇಕ್ಷೆಯೂ ಇಲ್ಲದವನು.
ಸತ್ಯಮೇಧಾಃ= ಸಮೀಚೀನವಾದ ಜ್ಞಾನವುಳ್ಳವನು.
ಧರಾಧರಃ= ಧರಾದೇವಿಯನ್ನು ಧರಿಸಿಕೊಂಡಿರುವವನು.
ತೇಜೋ ವೃಷೋ ದ್ಯುತಿಧರಃ ಸರ್ವಶಸ್ತ್ರಭೃತಾಂವರಃ |
ಪ್ರಗ್ರಹೋ ನಿಗ್ರಹೋ ವ್ಯಗ್ರೋ ನೈಕಶೃಂಗೋ ಗದಾಗ್ರಜಃ ॥94॥
ತೇಜಃ= ತೇಜೋರೂಪಿಯಾದವನು.
ವೃಷಃ= ಶ್ರೇಷ್ಠನಾದವನು.
ದ್ಯುತಿಧರಃ= ಶೋಭೆಯಿಂದ ಕೂಡಿದವನು.
ಸರ್ವಶಸ್ತ್ರಭೃತಾಂ ವರಃ= ಸಕಲ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾಗಿರುವವನು.
ಪ್ರಗ್ರಹಃ= ಪ್ರಕೃಷ್ಟರಾದವರನ್ನು ಸ್ವೀಕರಿಸುವವನು.
ನಿಗ್ರಹಃ= ನೀಚರನ್ನು ನಿಗ್ರಹಿಸುವವನು.
ವ್ಯಗ್ರಃ= ವಿಶೇಷವಾಗಿ ಅಧಿಕನಾಗಿರುವವನು.
ನೈಕಶೃಂಗಃ= ಅಗ್ನಿಯ ಅಂತರ್ಯಾಮಿಯಾಗಿ ಅನೇಕ ಶೃಂಗಗಳನ್ನು ಹೊಂದಿದವನು. ವೃಷಭಾವತಾರದಲ್ಲಿ ಎರಡು ಶೃಂಗಗಳನ್ನು ಹೊಂದಿದವನು.
ಗದಾಗ್ರಜಃ= ಕೃಷ್ಣಾವತಾರದಲ್ಲಿ ಗದನ ಅಣ್ಣನಾದವನು.
ಚತುರ್ಮೂರ್ತಿಶ್ಚತುರ್ಬಾಹುಶ್ಚತುರ್ವ್ಯೂಹಶ್ಚತುರ್ಗತಿಃ |
ಚತುರಾತ್ಮಾ ಚತುರ್ಭಾವಶ್ಚತುರ್ವೇದವಿದೇಕಪಾತ್ ॥95॥
ಚತುರ್ಮೂರ್ತಿಃ= ಚತುರ್ಮುಖನನ್ನು ಮುಖ್ಯ ಪ್ರವರ್ತಕನನ್ನಾಗಿ ಹೊಂದಿರುವವನು.
ಚತುರ್ಬಾಹುಃ= ಮುಕ್ತರು ನಾಲ್ಕು ತೋಳುಗಳನ್ನು ಹೊಂದುವಂತೆ ಅನುಗ್ರಹಿಸುವವನು.
ಚತುರ್ವ್ಯೂಹಃ= ನಾಲ್ಕು ವೇದಗಳಿಂದ ವಿಚಾರಿಸಲ್ಪಡುವವನು.
ಚತುರ್ಗತಿಃ= ನಾಲ್ಕು ವೇದಗಳಿಂದಲೂ ತಿಳಿಯಲ್ಪಡುವವನು.
ಚತುರಾತ್ಮಾ= ನಿಪುಣನಾದ ಸ್ವಾಮಿ.
ಚತುರ್ಭಾವ= ನಾಲ್ಕು ವಿಧದ ಭಕ್ತಿ ಯಾರನ್ನು ಕುರಿತು ಹೊರಟಿದೆಓ ಅವನು.
ಚತುರ್ವೇದವಿತ್= ನಾಲ್ಕು ವೇದಗಳನ್ನೂ ಸ್ವತಂತ್ರವಾಗಿ ತಾತ್ಪರ್ಯ ಪೂರ್ವಕವಾಗಿ ಬಲ್ಲವನು.
ಏಕಪಾತ್= ಸ್ವರೂಪಕ್ಕಿಂತ ಅಭಿನ್ನವಾದ ಅಂಶವುಳ್ಳವನು.
ಸಮಾವರ್ತೋ ನಿವೃತ್ತಾತ್ಮಾ ದುರ್ಜಯೋ ದುರತಿಕ್ರಮಃ |
ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ ॥
ಸಮಾವರ್ತಃ= ಸಮವಾಗಿ ಎಲ್ಲ ಕಡೆಗಳಲ್ಲಿಯೂ ವ್ಯಾಪ್ತನಾದವನು.
ನಿವೃತ್ತಾತ್ಮಾ= ಸಮಸ್ತ ವಿಷಯಗಳಲ್ಲಿಯೂ ಪ್ರವೃತ್ತಿ ಹೊಂದುವ ಅಂತಃಕರಣ ಉಳ್ಳವನು.
ದುರ್ಜಯಃ= ಯಾರಿಂದಲೂ ಜಯಿಸಲಾಗದವನು.
ದುರತಿಕ್ರಮಃ= ಯಾರಿಂದಲೂ ದಾಟಲಾಗದವನು.
ದುರ್ಲಭಃ= ಅಯೋಗ್ಯರಿಗೆ ದುರ್ಲಭನು.
ದುರ್ಗಮಃ= ತಿಳಿಯಲು ಅಶಕ್ಯನು.
ದುರ್ಗಃ= ಅಯೋಗ್ಯರಿಂದ ತಿಳಿಯಲಾಗದವನು.
ದುರಾವಾಸಃ= ಭಕ್ತರಿಂದ ಅತಿಪ್ರಯಾಸಪಟ್ಟು ತಮ್ಮ ಹೃದಯದಲ್ಲಿ ನೆಲೆಸುವಂತೆ ಮಾಡುವವನು.
ದುರಾರಿಹಾ= ಎಲ್ಲೆಡೆಯೂ ನಿಂತು ಶತ್ರುಗಳನ್ನು ಸದೆಬಡಿಯುವವನು.
ಶುಭಾಂಗೋ ಲೋಕಸಾರಂಗಃ ಸುತಂತುಸ್ತಂತುವರ್ಧನಃ |
ಇಂದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ ॥97॥

ಶುಭಾಂಗಃ=ಮಂಗಳಾತ್ಮಕಗಳಾದ ವಾಸುದೇವಾದಿ ರೂಪಗಳೇ ತನ್ನ ಅಂಗಗಳಾಗಿ ಉಳ್ಳವನು.
ಲೋಕಸಾರಂಗಃ= ಶ್ರೇಷ್ಠಧಾಮತ್ರಯಗಳಲ್ಲಿ ಪದ್ಮನಾಭ, ಅನಂತಾಸನ, ವೈಕುಂಠ ರೂಪನಾಗಿರುವವನು.
ಸುತಂತುಃ= ಶೋಭನವಾದ ಶಾಸ್ತ್ರಪ್ರಪಂಚವನ್ನು ವಿಸ್ತರಿಸುವವನು.
ತಂತುವರ್ಧನಃ= ಶಾಸ್ತ್ರಜ್ಞಾನವನ್ನು ಭಕ್ತರ ಪಾಲಿಗೆ ಅನುಗ್ರಹಿಸುವವನು.
ಇಂದ್ರಕರ್ಮಾ= ವಾಯುದೇವನನ್ನು ಸೃಷ್ಟಿಸುವವನು.
ಮಹಾಕರ್ಮಾ= ಶ್ರೇಷ್ಠವಾದ ಪುಣ್ಯಕರ್ಮ ಪ್ರವರ್ತಕನು.
ಕೃತಕರ್ಮಾ= ಸಕಲ ಕರ್ಮಗಳನ್ನು ನಡೆಸುವವನು.
ಕೃತಾಗಮಃ= ತನ್ನಿಂದ ಸೃಷ್ಟವಾದ ಜಗತ್ತನ್ನು ಚೆನ್ನಾಗಿ ಬಲ್ಲವನು.
ಉದ್ಭವಃ ಸುಂದರಃ ಸುಂದೋ ರತ್ನನಾಭಃ ಸುಲೋಚನಃ |
ಅರ್ಕೋ ವಾಜಸನಃ ಶೃಂಗೀ ಜಯಂತಃ ಸರ್ವವಿಜ್ಜಯೀ ॥98॥
ಉದ್ಭವಃ= ಜಗತ್ತಿನ ಉತ್ಪತ್ತಿಗೆ ಕಾರಣನಾದವನು.
ಸುಂದರಃ= ಪರಮ ಸುಂದರನಾದವನು.
ಸುಂದಃ= ಸುಖವನ್ನು ಕೊಡುವವನು.
ರತ್ನನಾಭಃ= ರತ್ನದಂತೆ ಶೋಭಿಸುವ ನಾಭಿ ಉಳ್ಳವನು.
ಸುಲೋಚನಃ= ಶೋಭನವಾದ ದರ್ಶನವುಳ್ಳವನು.
ಅರ್ಕಃ= ಪ್ರಕಾಶರೂಪನಾದವನು.
ವಾಜಸನಃ= ಅನ್ನವನ್ನು ಕೊಡುವವನು.
ಶೃಂಗೀ= ಗೋವರ್ಧನ ಪರ್ವತದ ಶೃಂಗವನ್ನು ಧರಿಸಿದವನು. ಶೃಂಗವೆಂಬ ವಾದ್ಯವನ್ನು ಧರಿಸಿದವನು.
ಜಯಂತಃ= ಸಜ್ಜನರ ಬಾಹ್ಯ ಮತ್ತು ಆಂತರಿಕ ಶತ್ರುಗಳನ್ನು ಅತಿಶಯವಾಗಿ ಜಯಿಸುವವನು.
ಸರ್ವವಿತ್= ಸರ್ವಳೆನಿಸುವ ಲಕ್ಷ್ಮಿಯನ್ನು ಪತ್ನಿಯಾಗಿ ಹೊಂದಿರುವವನು.
ಜಯೀ= ಪ್ರತಿಯೊಂದು ಗುಣದ ವಿಷಯದಲ್ಲೂ ಎಲ್ಲವನ್ನೂ ಸ್ವಭಾವತಃ ಜಯಿಸಿರುವವನು.
ಸುವರ್ಣಬಿಂದುರಕ್ಷೋಭ್ಯಃ ಸರ್ವವಾಗೀಶ್ವರೇಶ್ವರಃ |
ಮಹಾಹ್ರದೋ ಮಹಾಗರ್ತೋ ಮಹಾಭೂತೋ ಮಹಾನಿಧಿಃ ॥99॥
ಸುವರ್ಣಬಿಂದುಃ= ಶೋಭನ ವರ್ಣಗಳುಳ್ಳ ವೇದಗಳನ್ನು ಸ್ವತಂತ್ರವಾಗಿ ಬಲ್ಲವನು. ಚಿನ್ನದಂತಹ ಅವಯವಗಳನ್ನು ಹೊಂದಿರುವವನು.
ಅಕ್ಷೋಭ್ಯಃ= ವಿಕಾರಕ್ಕೆ ಒಳಗಾಗದವನು. ಕಳವಳಕ್ಕೆ ಒಳಗಾಗದವನು.
ಸರ್ವವಾಗೀಶ್ವರೇಶ್ವರಃ= ಸರ್ವಜ್ಞಳಾದ ಸರಸ್ವತೀದೇವಿಗೆ ಒಡೆಯನಾದ ಚತುರ್ಮುಖನಿಗೂ ಒಡೆಯನಾದವನು.
ಮಹಾಹ್ರದಃ= ಉತ್ತಮವಾದ ಹರ್ಷವುಳ್ಳವನು.
ಮಹಾಗರ್ತಃ= ಉತ್ತಮವಾದ ಹೃದಯಾಕಾಶವನ್ನು ತನ್ನ ಆವಾಸವಾಗಿ ಹೊಂದಿರುವವನು.
ಮಹಾಭೂತಃ= ಉತ್ತಮವಾದ ಅಸ್ತಿತ್ವವನ್ನು ಹೊಂದಿರುವವನು.
ಮಹಾನಿಧಿಃ= ಶ್ರೇಷ್ಠ ನಿಧಿಯಾದವನು.
ಕುಮುದಃ ಕುಂದರಃ ಕುಂದಃ ಪರ್ಜನ್ಯಃ ಪಾವನೋಽನಲಃ |
ಅಮೃತಾಂಶೋಽಮೃತವಪುಃ ಸರ್ವಜ್ಞಃ ಸರ್ವತೋಮುಖಃ ॥100॥
ಕುಮುದಃ= ಅಯೋಗ್ಯರಿಗೆ ಕೆಟ್ಟ ಆನಂದವನ್ನೇ ಕೊಡುವವನು.
ಕುಂದರಃ= ಕುತ್ಸಿತವಾದ ಸಂಸಾರವನ್ನು ನಾಶ ಮಾಡುವವನು.
ಕುಂದಃ= ಕುತ್ಸಿತವಾದ ಕರ್ಮಗಳನ್ನು, ಪಾಪಗಳನ್ನು ನಾಶ ಮಾಡುವವನು.
ಪರ್ಜನ್ಯಃ= ಉತ್ತಮವಾದ ಸಸ್ಯಗಳನ್ನು ಹುಟ್ಟಿಸುವವನು.
ಪಾವನಃ= ಪವಿತ್ರನಾದವನು.
ಅನಲಃ= ಆಲಸ್ಯವಿಲ್ಲದವನು.
ಅಮೃತಾಂಶಃ= ಮುಕ್ತವಾದ ತನ್ನ ಎಲ್ಲಾ ಸ್ವರೂಪಗಳನ್ನು ಹೊಂದಿದವನು. ಮರಣರಹಿತವಾದ ಮತ್ಸ್ಯಾದಿ ಅಂಶಗಳನ್ನು ಹೊಂದಿದವನು.
ಅಮೃತಾಶಃ= ಯೋಗ್ಯಜೀವರು ಮುಕ್ತಿಯನ್ನು ಅನುಭವಿಸುವಂತೆ ಮಾಡುವವನು.
ಅಮೃತವಪುಃ= ಮರಣವಿಲ್ಲದ ಶರೀರವುಳ್ಳವನು.
ಸರ್ವಜ್ಞಃ= ಸರ್ವಜೀವರ ಉತ್ಪತ್ತಿಗೆ ಕಾರಣನಾದವನು.
ಸರ್ವತೋಮುಖಃ= ಎಲ್ಲರಿಗಿಂತಲೂ ಪ್ರಧಾನನಾದವನು.
ಸುಲಭಃ ಸುವ್ರತಃ ಸಿದ್ಧಃ ಶತ್ರುಜಿಚ್ಛತ್ರುತಾಪನಃ |
ನ್ಯಗ್ರೋಧೋದುಂಬರೋಶ್ವತ್ಥಶ್ಚಾಣೂರಾಂಧ್ರನಿಷೂದನಃ ॥101॥
ಸುಲಭಃ= ಭಕ್ತರಿಂದ ಅನಾಯಾಸವಾಗಿ ಪ್ರಾಪ್ಯನಾಗುವವನು.
ಸುವ್ರತಃ= ನರ-ನಾರಾಯಣ, ಪರಶುರಾಮಾದಿ ಅವತಾರಗಳಲ್ಲಿ ಶೋಭನವಾದ ತಪಶ್ಚರ್ಯವೇ ಮೊದಲಾದ ವ್ರತವುಳ್ಳವನು.
ಸಿದ್ಧಃ= ಎಲ್ಲೆಡೆ ಇರುವವನು.

ಶತ್ರುಜಿತ್= ತನ್ನ ಬಾಹ್ಯ ಶತ್ರುಗಳಂತಿರುವ ಅಸುರ, ದೈತ್ಯ-ದಾನವರನ್ನೂ, ಆಂತರಿಕ ಶತ್ರುಗಳಂತಿರುವ ಕಾಮ-ಕ್ರೋಧಾದಿಗಳನ್ನು ವಶಪಡಿಸಿಕೊಂಡಿರುವವನು.
ಶತ್ರುತಾಪನಃ= ತನ್ನ ಶತ್ರುಗಳನ್ನು ಸಂತಾಪಕ್ಕೆ ಒಳಪಡಿಸುವವನು.
ನ್ಯಗ್ರೋಧಃ= ಹೀನರು ಸದ್ಗತಿಯನ್ನು ಹೊಂದದಂತೆ ತಡೆಯುವವನು.
ಉದುಂಬರಃ= ಅತಿಶಯೇನ ಉತ್ಕೃಷ್ಟವಾದ ಬ್ರಹ್ಮಾದಿ ಜೀವಸಮೂಹವನ್ನು ಸ್ವೀಕರಿಸುವವನು.
ಅಶ್ವತ್ಥಃ= ಭೋಜನಪ್ರಿಯರಲ್ಲಿ ನಿಲ್ಲದವನು. ಹಯಗ್ರೀವ ರೂಪದಿಂದ ಅಶ್ವರೂಪವನ್ನು ಹೊಂದಿದವನು.
ಚಾಣೂರಾಂಧ್ರ(ಧ)ನಿಷೂದನಃ= ದಾನಶೀಲರಾದ ಮತ್ತು ಉತ್ಕೃಷ್ಟವಾದ ಸಂಪತ್ತನ್ನು ಅನುಗ್ರಹಿಸುವ ಹಾಗೂ ಆನಂದಸ್ವರೂಪಿಯಾದ ಭಗವಂತನನ್ನು ತಮ್ಮ ಹೃದಯದಲ್ಲಿ ಧರಿಸಿಕೊಂಡಿರುವ ಭಕ್ತರನ್ನು ನಾಶಪಡಿಸುವ ದುಷ್ಟಶಕ್ತಿಗಳನ್ನು ಪರಿಹರಿಸುವವನು. ಚಾಣೂರ ಎಂಬ ಆಂಧ್ರಜಾತಿಯ ಮಲ್ಲನನ್ನು ಸಂಹರಿಸಿದವನು.
ಸಹಸ್ರಾರ್ಚಿಃ ಸಪ್ತಜಿಹ್ವಃ ಸಪ್ತೈಧಾಃ ಸಪ್ತವಾಹನಃ |
ಅಮೂರ್ತಿರನಘೋಽಚಿಂತ್ಯೋ ಭಯಕೃದ್ ಭಯನಾಶನಃ ॥102॥
ಸಹಸ್ರಾರ್ಚಿಃ= ಅಗ್ನ್ಯಂತರ್ಗತ ರೂಪಗಳಿಂದ ಸಹಸ್ರಾರು ಜ್ವಾಲೆಗಳನ್ನು ಹೊಂದಿದವನು.
ಸಪ್ತಜಿಹ್ವಃ= ಅ ಗ್ನ್ಯಂತರ್ಗತ ನಾರಾಯಣ ರೂಪದಲ್ಲಿ ಕಾಳೀ, ಕರಾಳೀ ಮೊದಲಾದ ಏಳು ನಾಲಿಗೆಗಳನ್ನು ಹೊಂದಿದವನು.
ಸಪ್ತೈಧಾಃ= ಸಪ್ತ ಸಮಿತ್ತುಗಳನ್ನು ಸ್ವೀಕರಿಸುವವನು (ಅಗ್ನಿ, ಔದುಂಬರ, ಶಮೀ, ಉಲ್ಕಪಥ, ಅಶನ್ಯಕ, ಪುಷ್ಕರ ಮತ್ತು ಪರ್ಣ. ಈ ಏಳು ವೃಕ್ಷಗಳ ಸಮಿತ್ತುಗಳನ್ನು ಹೊಂದುವವನು).
ಸಪ್ತವಾಹನಃ= ಏಳು ಯಾಗಗಳನ್ನು ನಿರ್ವಹಿಸುವವನು.
ಅಮೂರ್ತಿಃ= ಪರಿಮಾಣದ ಮಿತಿ ಇಲ್ಲದವನು.
ಅನಘಃ= ಭಕ್ತರಿಗೆ ಆಪತ್ತುಗಳು ಬರದಂತೆ ಮಾಡುವವನು.
ಅಚಿಂತ್ಯಃ= ಸಮಗ್ರವಾಗಿ ಚಿಂತಿಸಲು ಅಶಕ್ಯನಾದವನು.
ಭಯಕೃತ್= ಭಯವನ್ನು ಉಂಟುಮಾಡುವವನು. ಭಯವನ್ನು ಪರಿಹರಿಸುವವನು.
ಭಯನಾಶನಃ= ಭಯಾತ್ಮಕವಾದ ಸಂಸಾರವನ್ನು ಪರಿಹರಿಸುವವನು.
ಅಣುರ್ಬೃಹತ್ಕೃಶಃ ಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ |
ಅಧೃತಃ ಸ್ವಧೃತಃ ಸ್ವಾಸ್ಯಃ ಪ್ರಾಗ್ವಂಶೋ ವಂಶವರ್ಧನಃ ॥103॥
ಅಣುಃ= ಅತ್ಯಂತ ಸೂಕ್ಷ್ಮನಾಗಿರುವವನು.
ಬೃಹತ್= ಗುಣಪೂರ್ಣನಾದವನು.
ಕೃಶಃ= ಪ್ರಳಯಕಾಲದಲ್ಲಿ ಜಗತ್ತನ್ನು ಸೂಕ್ಷ್ಮರೂಪವನ್ನು ತಾಳುವಂತೆ ಮಾಡುವವನು.
ಸ್ಥೂಲಃ= ಅಪ್ರಾಕೃತವಾದ ಸ್ಥೌಲ್ಯವುಳ್ಳವನು.
ಗುಣಭೃತ್= ಜ್ಞಾನಾನಂದಾದಿ ಗುಣಗಳನ್ನು ಧರಿಸಿರುವವನು.
ನಿರ್ಗುಣಃ= ಪ್ರಾಕೃತ ಗುಣರಹಿತನಾದವನು.
ಮಹಾನ್= ದೇಶದಿಂದ, ಕಾಲದಿಂದ ಮತ್ತು ಗುಣದಿಂದ ಉತ್ತಮನಾಗಿರುವವನು.
ಅಧೃತಃ= ಇನ್ನೊಬ್ಬರಿಂದ ಧರಿಸಲ್ಪಡದವನು.
ಸ್ವಧೃತಃ= ತನ್ನನ್ನು ತಾನೇ ಧರಿಸಿರುವವನು.
ಸ್ವಾಸ್ಯಃ= ಶೋಭನವಾದ ಮುಖವುಳ್ಳವನು.
ಪ್ರಾಗ್ವಂಶಃ= ದೇವಾಸುರ ವಂಶಗಳಿಗಿಂತಲೂ ಮೊದಲು ಇರುವವನು. ಪ್ರಾಕೃತವಾದ ಮುರಳಿಯನ್ನು ಹೊಂದಿದವನು.
ವಂಶವರ್ಧನಃ= ಸಂತಾನವನ್ನು ಬೆಳೆಸುವವನು. ವೇದವ್ಯಾಸ ರೂಪದಿಂದ ಕುರುವಂಶವನ್ನು ಬೆಳೆಸಿದವನು.
ಭಾರಭೃತ್ ಕಥಿತೋ ಯೋಗೀ ಯೋಗೀಶಃ ಸರ್ವಕಾಮದಃ |
ಆಶ್ರಮಃ ಶ್ರಮಣಃ ಕ್ಷಾಮಃ ಸುಪರ್ಣೋ ವಾಯುವಾಹನಃ ॥104॥
ಭಾರಭೃತ್= ಭಾರವನ್ನು ಧರಿಸಿರುವವನು.
ಕಥಿತಃ= ವೇದ-ಇತಿಹಾಸ-ಪುರಾಣಗಳಲ್ಲಿ, ಸಕಲ ವಿದ್ಯೆಗಳಲ್ಲಿ ಸಮಸ್ತ ದೋಷ ದೂರ ಮತ್ತು ಗುಣಪರಿಪೂರ್ಣನೆಂದು ಪ್ರತಿಪಾದಿತನಾಗಿರುವವನು.
ಯೋಗೀ= ಪ್ರಶಂಸನೀಯವಾದ ಅತಿಶಯವಾದ ಸಾಮರ್ಥ್ಯವನ್ನು ನಿತ್ಯವೂ ಹೊಂದಿರುವವನು.
ಯೋಗೀಶಃ= ಯೋಗಿಗಳಿಗೆ ಒಡೆಯನಾದವನು. ಯೋಗಿಗಳಿಗೆ ಜ್ಞಾನ- ಸುಖಗಳನ್ನು ಅನುಗ್ರಹಿಸುವವನು.
ಸರ್ವಕಾಮದಃ= ಎಲ್ಲಾ ಇಷ್ಟಗಳನ್ನೂ ನೀಡುವವನು.
ಆಶ್ರಮಃ= ಸನತ್ಕುಮಾರ, ಕೃಷ್ಣ, ನರಸಿಂಹ, ವ್ಯಾಸಾದಿ ರೂಪಗಳಿಂದ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನೂ ಹೊಂದಿರುವವನು.
ಶ್ರಮಣಃ= ಸಂಸಾರ ಶ್ರಮವನ್ನು ಪರಿಹರಿಸುವವನು.
ಕ್ಷಾಮಃ= ಯಾವ ರೀತಿಯ ಕ್ಷಯವೂ ಇಲ್ಲದವನು.
ಸುಪರ್ಣಃ= ಪ್ರಳಯಕಾಲದಲ್ಲಿ ವಟಪತ್ರವನ್ನು ಶಯನವಾಗಿ ಹೊಂದಿದವನು. ಅತ್ಯಂತ ಪೂರ್ಣವಾದ ಆನಂದವುಳ್ಳವನು.
ವಾಯುವಾಹನಃ= ಜೀವೋತ್ಕ್ರಮಣ ಸಮಯದಲ್ಲಿ ವಾಯುವನ್ನೇ ವಾಹನವನ್ನಾಗಿ ಮಾಡಿಕೊಳ್ಳುವವನು.
ಧನುರ್ಧರೋ ಧನುರ್ವೇದೋ ದಂಡೋ ದಮಯಿತಾ ದಮಃ |
ಅಪರಾಜಿತಃ ಸರ್ವಸಹೋ ನಿಯಂತಾ ನಿಯಮೋ ಯಮಃ ॥105॥

ಧನುರ್ಧರಃ= ರಾಮ-ಪರಶುರಾಮ ಮೊದಲಾದ ರೂಪದಲ್ಲಿ ಬಿಲ್ಲನ್ನು ಧರಿಸಿದವನು.
ಧನುರ್ವೇದಃ= ರಣರಂಗದಲ್ಲಿ ತನ್ನ ಧನುಸ್ಸಿನ ಕೌಶಲವನ್ನು ತೋರಿಸುವವನು.
ದಂಡಃ= ಶಿಕ್ಷೆಯನ್ನು ನೀಡುವವನು.
ದಮಯಿತಾ= ಭಕ್ತರ ಆಂತರಿಕ ಮತ್ತು ಬಾಹ್ಯಶತ್ರುಗಳನ್ನು ನಿಗ್ರಹಿಸುವವನು.
ದಮಃ= ಇಂದ್ರಿಯ ನಿಗ್ರಹಕ್ಕೆ ನಿಯಾಮಕನಾದವನು.
ಅಪರಾಜಿತಃ= ಎಂದೂ ಯಾರಿಂದಲೂ ಪರಾಜಿತನಾಗದವನು.
ಸರ್ವಸಹಃ= ಸರ್ವಾಭಿಮಾನಿಯಾದ ಲಕ್ಷ್ಮಿಯನ್ನು ಮತ್ತು ಜಡಪ್ರಕೃತಿಯನ್ನು ಸೋಲಿಸಿ ಅವರನ್ನು ಸಹಿಸುವವನು.
ನಿಯಂತಾ= ಚೆನ್ನಾಗಿ ಅರ್ಜುನನ ಸಾರಥ್ಯವನ್ನು ಮಾಡುವವನು.
ನಿಯಮಃ= ಪರಕೀಯರು ಪ್ರಯೋಗಿಸಿದ ಬ್ರಹ್ಮಾಸ್ತ್ರಾದಿಗಳನ್ನು ನಿಯಂತ್ರಿಸುವವನು.
ಯಮಃ= ಕ್ಷಣ-ಕ್ಷಣದಲ್ಲಿ ಅರ್ಜುನನ ಸದ್ಬುದ್ಧಿಯನ್ನು ನಿಯಂತ್ರಿಸುವವನು.
ಸತ್ತ್ವವಾನ್ ಸಾತ್ತ್ವಿಕಃ ಸತ್ಯಃ ಸತ್ಯಧರ್ಮಪರಾಯಣಃ |
ಅಭಿಪ್ರಾಯಃ ಪ್ರಿಯಾರ್ಹೋऽರ್ಹಃ ಪ್ರಿಯಕೃತ್ ಪ್ರೀತಿವರ್ಧನಃ ॥
ಸತ್ತ್ವವಾನ್= ಯಾವಾಗಲೂ ಸದ್ಗುಣಗಳಿಂದ ಪೂರ್ಣನಾದವನು.
ಸಾತ್ತ್ವಿಕಃ= ಸಮಸ್ತ ಗುಣಪೂರ್ಣತೆಯನ್ನು ಹೊಂದಲು ಅರ್ಹನಾಗಿರುವವನು.
ಸತ್ಯಃ= ಸಜ್ಜನರಿಗೆ ಪ್ರಿಯನಾದವನು.
ಸತ್ಯಧರ್ಮಪರಾಯಣಃ= ಸತ್ಯ ಮತ್ತು ಧರ್ಮಗಳಿಗೆ ಶ್ರೇಷ್ಠನಾದ ಆಶ್ರಯನಾದವನು.
ಅಭಿಪ್ರಾಯಃ= ಎಲ್ಲ ರೀತಿಯಿಂದಲೂ ಪ್ರಕೃಷ್ಟವಾದ ಆನಂದಾದಿ ಲಾಭವನ್ನು ಹೊಂದಿರುವವನು.
ಪ್ರಿಯಾರ್ಹಃ= ಪ್ರಿಯವಾದವುಗಳನ್ನು ಸಮರ್ಪಿಸಲು ಯೋಗ್ಯನಾದವನು.
ಅರ್ಹಃ= ಎಲ್ಲರಿಂದಲೂ ಎಲ್ಲ ದೇಶ-ಕಾಲದಿಂದಲೂ ಪೂಜಿಸಲ್ಪಡುವವನು. ತನ್ನಿಂದಲೇ ತಾನು ಪೂಜಿಸಲ್ಪಡುವವನು.
ಪ್ರಿಯಕೃತ್= ಜೀವಾತ್ಮರಿಗೆ ಪತ್ನೀ-ಪುತ್ರಾದಿಗಳು ಪ್ರಿಯರೆನಿಸುವಂತೆ ಮಾಡುವವನು.
ಪ್ರೀತಿವರ್ಧನಃ= ಭಕ್ತರಿಗೆ ತನ್ನ ವಿಷಯದಲ್ಲಿ ಪ್ರೀತಿಯುಂಟಾಗುವಂತೆ ಮಾಡುವವನು.
ವಿಹಾಯಸಗತಿರ್ಜ್ಯೋತಿಃ ಸುರುಚಿರ್ಹುತಭುಗ್ ವಿಭುಃ |
ರವಿರ್ವಿರೋಚನಃ ಸೂರ್ಯಃ ಸವಿತಾ ರವಿಲೋಚನಃ ॥107॥
ವಿಹಾಯಸಗತಿಃ= ಗರುಡವಾಹನನಾಗಿ ಆಕಾಶದಲ್ಲಿ ಸಂಚರಿಸುವವನು.
ಜ್ಯೋತಿಃ= ಬುದ್ಧಿಯನ್ನು ಬೆಳಗಿಸುವವನು. ಶ್ರೇಷ್ಠವಾದ ಸಂತತಿಯನ್ನು ಹೊಂದಿರುವವನು.
ಸುರುಚಿಃ= ಶೋಭನವಾದ ಕಾಂತಿಯುಳ್ಳವನು.
ಹುತಭುಗ್= ಯಜ್ಞಗಳಲ್ಲಿ ಸಮರ್ಪಿತವಾದ ಹವಿಸ್ಸನ್ನು ಸ್ವೀಕರಿಸುವವನು.
ವಿಭುಃ= ಸ್ವಾಭಾವಿಕವಾಗಿ ಜ್ಞಾನಿಯಾಗಿರುವವನು ಅಥವಾ ಬಲಿಷ್ಠನಾಗಿರುವವನು.
ರವಿಃ= ರಮಿಸುವವನು ಮತ್ತು ವಿಶಿಷ್ಟನಾಗಿರುವವನು.
ವಿರೋಚನಃ= ಪ್ರಕಾಶನಶೀಲನಾದವನು.
ಸೂರ್ಯಃ= ಸೂರಿಗಳಿಂದ ಪ್ರಾಪ್ಯನಾದವನು.
ಸವಿತಾ= ಜಲಪ್ರಸವವನ್ನು ಉಂಟುಮಾಡುವವನು.
ರವಿಲೋಚನಃ= ಸೂರ್ಯನಿಗೆ ಆಶ್ರಯವಾದ ಕಣ್ಣುಳ್ಳವನು.
ಅನಂತೋ ಹುತಭುಗ್ ಭೋಕ್ತಾ ಸುಖದೋ ನೈಕದೋऽಗ್ರಜಃ |
ಅನಿರ್ವಿಣ್ಣಃ ಸದಾಮರ್ಷೀ ಲೋಕಾಧಿಷ್ಠಾನಮದ್ಭುತಃ ॥108॥
ಅನಂತಃ= ಯಾವ ವಿಷಯದಲ್ಲಿಯೂ ಕೊನೆಯವನಲ್ಲದಿರುವವನು, ಅಥವಾ ನಾಶವಿಲ್ಲದವನು.
ಹುತಭುಗ್= ಹಿರಣ್ಯಕಶಿಪುವಿನ ಕೋಪಾಗ್ನಿಯಲ್ಲಿ ಬೆಂದ ಪ್ರಹ್ಲಾದನನ್ನು ಪಾಲಿಸುವವನು.
ಭೋಕ್ತಾ= ಎಲ್ಲರನ್ನೂ ಪಾಲಿಸುವವನು.
ಸುಖದಃ= ಭಕ್ತರಿಗೆ ಸುಖವನ್ನು ಕೊಡುವವನು. ಅಭಕ್ತರಿಗೆ ಸುಖವನ್ನು ನಾಶ ಮಾಡುವವನು.
ನೈಕಜಃ= ಯಾರೊಬ್ಬರಿಂದಲೂ ಜನಿಸದವನು.
ನೈಕದಃ= ಭಕ್ತರಿಗೆ ಅನೇಕ ವಸ್ತುಗಳನ್ನು ಕೊಡುವವನು.
ಅಗ್ರಜಃ= ಜಗತ್ತಿನ ಸೃಷ್ಟಿಗಿಂತಲೂ ಮೊದಲು ಅಭಿವ್ಯಕ್ತನಾದವನು.
ಅನಿರ್ವಿಣ್ಣಃ= ಎಂದೂ ದುಃಖಿತನಾಗದವನು. ಎಂದೂ ಪೂರ್ಣವಾಗಿ ತಿಳಿಯಲ್ಪಡದವನು.
ಸದಾಮರ್ಶೀ= ಸಜ್ಜನರನ್ನು ಚೆನ್ನಾಗಿ ಕ್ಷಮಿಸುವ ಸ್ವಭಾವವುಳ್ಳವನು.
ಲೋಕಾಧಿಷ್ಠಾನಮ್= ಲೋಕಗಳಿಗೆ ಮೂಲಾಧಾರನಾದವನು.
ಅದ್ಭುತಃ= ಸರ್ವಾಶ್ಚರ್ಯ ಸ್ವರೂಪನು.
ಸನಾತ್ ಸನಾತನತಮಃ ಕಪಿಲಃ ಕಪಿಲರವ್ಯಯಃ |
ಸ್ವಸ್ತಿದಃ ಸ್ವಸ್ತಿಕೃತ್ ಸ್ವಸ್ತಿ ಸ್ವಸ್ತಿಭುಕ್ ಸ್ವಸ್ತಿದಕ್ಷಿಣಃ ॥109॥
ಸನಾತ್= ಸದಾವಿದ್ಯಮಾನನಾದವನು.
ಸನಾತನತಮಃ= ಅತಿಶಯವಾಗಿ ಸನಾತನನಾದವನು.

ಕಪಿಲಃ= ಕಪಿಲಾವತಾರದಲ್ಲಿ ಕಪಿಲನಾಮಕನಾದವನು. ಸೀತೆಯ ಚೂಡಾರತ್ನವನ್ನು ತಂದ ಕಪಿಯಾದ ಹನುಮಂತನನ್ನು ಲಾಲಿಸುವವನು.
ಕಪಿಃ= ಅಪರಿಮಿತವಾದ ಸುಖವನ್ನು ಅನುಭವಿಸುವವನು.
ಅವ್ಯಯಃ= ಕೃಷ್ಣಾವತಾರದಲ್ಲಿ ಕುರಿಗಳ ಜೊತೆಯಲ್ಲಿ ಸಂಚರಿಸುವವನು. ಜರಾಸಂಧನ ಜೊತೆಯಲ್ಲಿ ಮಾಡಿದ ಯುದ್ಧದಲ್ಲಿ ಒಂದು ರೋಮವನ್ನೂ ಕಳೆದುಕೊಳ್ಳದವನು.
ಸ್ವಸ್ತಿದಃ= ಶಾಶ್ವತವಾದ ಸುಖವನ್ನು ಅನುಗ್ರಹಿಸುವವನು.
ಸ್ವಸ್ತಿಕೃತ್= ಯೋಗ್ಯರಿಗೆ ಶಾಶ್ವತವಾದ ಸುಖವನ್ನು ಕೊಡುವವನು.
ಸ್ವಸ್ತಿ= ಶೋಭನವಾದ, ಸ್ವತಂತ್ರವಾದ ಅಸ್ತಿತ್ವವುಳ್ಳವನು.
ಸ್ವಸ್ತಿಭುಕ್= ಶೋಭನವಾದ ಹವಿಸ್ಸನ್ನು ಭೋಗಿಸುವವನು.
ಸ್ವಸ್ತಿದಕ್ಷಿಣಃ= ದಕ್ಷಿಣಾ ಎನಿಸುವ ಲಕ್ಷ್ಮಿಗೆ ಶೋಭನವಾದ ಅಸ್ತಿತ್ವವನ್ನು ಉಂಟು ಮಾಡುವವನು.
ಅರೌದ್ರಃ ಕುಂಡಲೀ ಚಕ್ರೀ ವಿಕ್ರಮ್ಯೂರ್ಜಿತಶಾಸನಃ |
ಶಬ್ದಾತಿಗಃ ಶಬ್ದಸಹಃ ಶಿಶಿರಃ ಶರ್ವರೀಕರಃ ॥110॥
ಅರೌದ್ರಃ= ಎಲ್ಲರಿಗೂ ಅಧಿಕವಾಗಿ ಭಯಂಕರನಾಗಿರುವವನು. ಕ್ರೂರನೆನಿಸದಿರುವವನು.
ಕುಂಡಲೀ= ಸುಂದರವಾದ ಕರ್ಣಾಭರಣಗಳನ್ನು ಧರಿಸಿಕೊಂಡಿರುವವನು.
ಚಕ್ರೀ= ಚಕ್ರರೂಪದಲ್ಲಿರುವ ದುರ್ಗಾದೇವಿಯನ್ನು ಪತ್ನಿಯಾಗಿ ಹೊಂದಿರುವವನು.
ವಿಕ್ರಮೀ= ಅತಿಶಯವಾದ ಪರಾಕ್ರಮವನ್ನು ಹೊಂದಿರುವವನು.
ಊರ್ಜಿತಶಾಸನಃ= ಶ್ರೇಷ್ಠವಾದ ಆದೇಶವುಳ್ಳವನು.
ಶಬ್ದಾತಿಗಃ= ವೇದಗಳನ್ನು ಮೀರಿದವನು.
ಶಬ್ದಸಹಃ= ಧ್ವನ್ಯಾತ್ಮಕ-ವರ್ಣಾತ್ಮಕವಾದ ಎಲ್ಲ ಶಬ್ದಗಳಿಂದಲೂ ಹೇಳಲ್ಪಡಲು ಸಮರ್ಥನಾದವನು.
ಶಿಶಿರಃ= ಅತಿಶಯಿತ ಸುಖಸ್ವರೂಪೀ.
ಶರ್ವರೀಕರಃ= ರಾತ್ರಿಯನ್ನು ನಿರ್ಮಿಸುವವನು. ದುರ್ಗೆಯನ್ನು ರಾತ್ರಿಗೆ ಅಭಿಮಾನಿನಿಯನ್ನಾಗಿ ಮಾಡಿದವನು.
ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ ಕ್ಷಮಿಣಾಂ ವರಃ |
ವಿದ್ವತ್ತಮೋ ವೀತಭಯಃ ಪುಣ್ಯಶ್ರವಣಕೀರ್ತನಃ ॥111॥
ಅಕ್ರೂರಃ= ಕ್ರೂರನಲ್ಲದವನು.
ಪೇಶಲಃ= ಪರಮಸುಂದರನಾದವನು.
ದಕ್ಷಃ= ಎಲ್ಲೆಡೆ ಸಂಚರಿಸುವವನು. ಎಲ್ಲವನ್ನೂ ಬಲ್ಲವನು.
ದಕ್ಷಿಣಃ= ಚತುರನಾದವನು. ಉದಾರನಾದವನು.
ಕ್ಷಮಿಣಾಂವರಃ= ಸಹನಶೀಲರಲ್ಲಿ ಶ್ರೇಷ್ಠನಾದವನು.
ವಿದ್ವತ್ತಮಃ= ಜ್ಞಾನಿಗಳಲ್ಲಿ ಶ್ರೇಷ್ಠನಾದವನು.
ವೀತಭಯಃ= ಭಯವಿಲ್ಲದವನು. ಭಯವಿಲ್ಲದಂತೆ ಮಾಡುವವನು.
ಪುಣ್ಯಶ್ರವಣಕೀರ್ತನಃ= ಶ್ರವಣದಿಂದ ಪುಣ್ಯವುಂಟಾಗುವ ನಾಮ ಚರಿತಾದಿ ಕೀರ್ತನೆಯುಳ್ಳವನು.
ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಃಸ್ವಪ್ನನಾಶನಃ |
ವೀರಹಾ ರಕ್ಷಣಃ ಸಂತೋ ಜೀವನಃ ಪರ್ಯವಸ್ಥಿತಃ ॥112॥
ಉತ್ತಾರಣಃ= ಸಂಸಾರ ಸಾಗರದಿಂದ ದಾಟಿಸುವವನು.
ದುಷ್ಕೃತಿಹಾ= ಪಾಪಶೀಲರಾದ ಪಾತಕಿಗಳನ್ನು ಅಂಧಂತಮಸ್ಸಿನಲ್ಲಿ ಹಾಕಿ ಅಲ್ಲಿಯೇ ಇರುವಂತೆ ಮಾಡುವವನು.
ಪುಣ್ಯಃ= ಸತ್ಕರ್ಮಗಳ ಮೂಲಕ ಪುಣ್ಯವನ್ನು ಉಂಟುಮಾಡುವವನು.
ದುಃಸ್ವಪ್ನನಾಶನಃ= ಕೆಟ್ಟ ಸ್ವಪ್ನಗಳು ಬೀಳದಂತೆ ಮಾಡುವವನು. ಕೆಟ್ಟ ಸ್ವಪ್ನಗಳ ದುಷ್ಪರಿಣಾಮವನ್ನು ಪರಿಹರಿಸುವವನು.
ವೀರಹಾ= ವೇದವ್ಯಾಸಾವತಾರದಲ್ಲಿ ವಿರುದ್ಧ ಮಾತುಗಳುಳ್ಳ ಮತಗಳನ್ನು ನಿರಾಕರಿಸಿರುವವನು.
ರಕ್ಷಣಃ= ರಕ್ಷಿಸುವವನು.
ಸಂತಃ= ಚೆನ್ನಾಗಿ ವ್ಯಾಪಿಸಿರುವವನು.
ಜೀವನಃ= ಜೀವರು ಬದುಕುವಂತೆ ಮಾಡುವವನು.
ಪರ್ಯವಸ್ಥಿತಃ= ಸುತ್ತಲೂ ಇರುವವನು.
ಅನಂತರೂಪೋಽನಂತಶ್ರೀರ್ಜಿತಮನ್ಯುರ್ಭಯಾಪಹಃ |
ಚತುರಸ್ರೋ ಗಭೀರಾತ್ಮಾ ವಿದಿಶೋ ವ್ಯಾದಿಶೋ ದಿಶಃ ॥113॥
ಅನಂತರೂಪಃ= ಅಸಂಖ್ಯಾತವಾದ ರೂಪವುಳ್ಳವನು,
ಅನಂತಶ್ರೀಃ= ದೇಶ-ಕಾಲದಿಂದ ಅಂತಶೂನ್ಯಳಾದ ಲಕ್ಷ್ಮಿಯನ್ನು ಪತ್ನಿಯನ್ನಾಗಿ ಪಡೆದವನು.
ಜಿತಮನ್ಯುಃ= ಕ್ರೋಧವನ್ನು ಜಯಿಸಿದವನು.
ಭಯಾಪಹಃ= ಸಕಲ ವಿಧವಾದ ಭಯವನ್ನೂ ಪರಿಹರಿಸುವವನು.
ಚತುರಸ್ರಃ= ಸರ್ವಸಮರ್ಥನಾಗಿರುವವನು ಹಾಗೂ ಸುಖಾಸಕ್ತನಾಗಿಯೇ ಇರುವವನು.
ಗಭೀರಾತ್ಮಾ= ಉಳಿದವರು ಸಮಗ್ರವಾಗಿ ತಿಳಿಯಲು ಅಶಕ್ಯವಾದ ಸ್ವರೂಪ ಉಳ್ಳವನು.

ವಿದಿಶಃ= ಅಸಜ್ಜನರಿಗೆ ವಿರುದ್ಧವಾದ ಗತಿಯನ್ನು ಕೊಡುವವನು.
ವ್ಯಾದಿಶಃ= ಸಜ್ಜನರಿಗೆ ವಿಶಿಷ್ಟವಾದ ತತ್ತೋತ್ವೋಪದೇಶವನ್ನು ಮಾಡುವವನು.
ದಿಶಃ= ಮುಕ್ತರಿಗೆ ಸುಖವನ್ನು ಕೊಡುವವನು.
ಅನಾದಿರ್ಭೂರ್ಭುವೋ ಲಕ್ಷ್ಮೀಃ ಸುವೀರೋ ರುಚಿರಾಂಗದಃ |
ಜನನೋ ಜನಜನ್ಮಾದಿರ್ಭೀಮೋ ಭೀಮಪರಾಕ್ರಮಃ ॥114॥
ಅನಾದಿಃ= ಸ್ವರೂಪ, ದೇಹ, ಇಂದ್ರಿಯ, ಕ್ರಿಯೆ ಗುಣಗಳಲ್ಲಿ ಆದಿರಹಿತನಾದವನು.
ಭೂಃ= ಪೂರ್ಣನಾದವನು.
ಭುವಃ= ಭೂಮಿಯಲ್ಲಿರುವವನು.
ಲಕ್ಷ್ಮೀಃ= ಲಕ್ಷ್ಮೀಯನ್ನು ಪತ್ನಿಯಾಗಿ ಹೊಂದಿರುವವನು.
ಸುವೀರಃ= ಚೆನ್ನಾಗಿ ಪರಾಕ್ರಮಶಾಲಿಯಾದವನು.
ರುಚಿರಾಂಗದಃ= ಮನೋಹರವಾದ ಅಂಗದಗಳನ್ನು ಧರಿಸಿರುವವನು.
ಜನನಃ= ಜೀವರಿಗೆ ದೇಹಸಂಬಂಧವನ್ನುಂಟು ಮಾಡುವವನು.
ಜನ್ಮಾದಿಃ= ಜೀವರ ಜನ್ಮಕ್ಕೆ ಕಾರಣನಾದವನು.
ಭೀಮಃ= ದುರ್ಜನರಿಗೆ ಭಯವನ್ನೂ, ಸಜ್ಜನರಿಗೆ ಮೋಕ್ಷವನ್ನು ಕೊಡುವವನು.
ಭೀಮಪರಾಕ್ರಮಃ= ಶತ್ರುಗಳಿಗೆ ಭಯವನ್ನುಂಟು ಮಾಡುವ ಪರಾಕ್ರಮ ಉಳ್ಳವನು.
ಆಧಾರನಿಲಯೋ ಧಾತಾ ಪುಷ್ಪಹಾಸಃ ಪ್ರಜಾಗರಃ |
ಊರ್ಧ್ವಗಃ ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ ॥115॥
ಆಧಾರನಿಲಯಃ= ಎಲ್ಲರಿಗೂ ಧಾರಕನೂ, ಆವಾಸಸ್ಥಾನನೂ ಆಗಿರುವವನು.
ಧಾತಾ= ಅನಿರುದ್ಧ ರೂಪದಿಂದ ಗರ್ಭವನ್ನು ಧರಿಸುವವನು.
ಪುಷ್ಪಹಾಸಃ= ಪುಷ್ಪದಂತೆ ಮನೋಹರವಾದ ಹಾಸವುಳ್ಳವನು.
ಪ್ರಜಾಗರಃ= ಯಾವಾಗಲೂ ಚೆನ್ನಾಗಿ ಎಚ್ಚೆತ್ತಿರುವವನು.
ಊರ್ಧ್ವಗಃ= ಎಲ್ಲರಿಗಿಂತಲೂ ಎತ್ತರದಲ್ಲಿ ಇರುವವನು.
ಸತ್ಪಥಾಚಾರಃ= ಸನ್ಮಾರ್ಗದಲ್ಲಿ ನಡೆಯುವವನು.
ಪ್ರಾಣದಃ= ರಾಮಾವತಾರದಲ್ಲಿ ಮೃತವಾದ ಕಪಿಸೈನ್ಯಕ್ಕೆ ಪುನಃ ಪ್ರಾಣವನ್ನು ಕೊಟ್ಟವನು.
ಪ್ರಣವಃ= ಪ್ರಣವ ಪ್ರತಿಪಾದ್ಯನು. ಚೆನ್ನಾಗಿ ಸ್ತುತ್ಯನಾದವನು.
ಪಣಃ= ಚಕ್ರವರ್ತಿಗಳನ್ನು ನಡೆಸುವವನು.
ಪ್ರಮಾಣಂ ಪ್ರಾಣನಿಲಯಃ ಪ್ರಾಣಕೃ(ಭೃ)ತ್ ಪ್ರಾಣಜೀವನಃ |
ತತ್ತ್ವಂ ತತ್ತ್ವವಿದೇಕಾತ್ಮಾ ಜನ್ಮಮೃತ್ಯುಜರಾತಿಗಃ ॥116॥
ಪ್ರಮಾಣಂ= ಧರ್ಮಾಧರ್ಮ ವಿಷಯದಲ್ಲಿ ಸರಿಯಾದ ಜ್ಞಾನವನ್ನು ಉಂಟು ಮಾಡುವವನು. ಸಕಲ ಪ್ರಮಾಣವೇದ್ಯನಾದವನು.
ಪ್ರಾಣನಿಲಯಃ= ಮುಖ್ಯಪ್ರಾಣನನ್ನು ನಿವಾಸಸ್ಥಾನವಾಗಿ ಹೊಂದಿದವನು.
ಪ್ರಾಣಕೃತ್= ಪ್ರಾಣನಿಗೆ ಶರೀರವನ್ನು ಉಂಟುಮಾಡುವವನು.
ಪ್ರಾಣಭೃತ್= ಮುಖ್ಯಪ್ರಾಣನನ್ನು ಧರಿಸಿರುವವನು.
ಪ್ರಾಣಜೀವನಃ= ಪ್ರಾಣನ ಮೂಲಕ ಜೀವರನ್ನು ಬದುಕಿಸುವವನು.
ತತ್ತ್ವಮ್= ಸ್ವತಂತ್ರ ತತ್ತ್ವನಾದವನು.
ತತ್ತ್ವವಿತ್= ಸ್ವತಂತ್ರ ಮತ್ತು ಅಸ್ವತಂತ್ರ ತತ್ತ್ವವನ್ನು ತಿಳಿದವನು.
ಏಕಾತ್ಮಾ= ಪ್ರಧಾನನಾದ ಸ್ವಾಮಿ.
ಜನ್ಮಮೃತ್ಯುಜರಾತಿಗಃ= ಜನ್ಮ-ಮೃತ್ಯು-ಜರೆಗಳನ್ನು ಮೀರಿದವನು. ಭಕ್ತರಿಗೆ ಜನ್ಮ-ಮೃತ್ಯು-ಜರೆಗಳನ್ನು ಮೀರಿಸುವವನು.
ಭೂರ್ಭುವಃ ಸ್ವಸ್ತರುಸ್ತಾರಃ ಸವಿತಾ ಪ್ರಪಿತಾಮಹಃ |
ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ ॥117॥
ಭೂರ್ಭುವಃ ಸ್ವಃ= ಭೂರ್ಭುವಸ್ವಃ ಲೋಕಕರ್ತಾ.
ತರುಃ= ಭಕ್ತರಿಗೆ ಕಲ್ಪತರುವಾದವನು.
ತಾರಃ= ಸಂಸಾರದಲ್ಲಿ ಬಳಲಿದ ಭಕ್ತರನ್ನು ಸ್ವೀಕರಿಸುವವನು.
ಸವಿತಾ= ಜಗತ್ತನ್ನು ಪ್ರಸವಿಸುವವನು.
ಪ್ರಪಿತಾಮಹಃ= ಜಗತ್ತಿಗೆ ಮುತ್ತಜ್ಜನಾದವನು (ಪಿತಾಮಹರಾದ ಬ್ರಹ್ಮದೇವರ ಪಿತೃವಾದವನು).
ಯಜ್ಞಃ= ಯಜನ ಯೋಗನಾದವನು.
ಯಜ್ಞಪತಿಃ= ಯಜ್ಞಗಳನ್ನು ರಕ್ಷಿಸುವವನು. ಯಜ್ಞಗಳಿಗೆ ಒಡೆಯನಾದವನು.
ಯಜ್ವಾ= ಯಜಮಾನನಲ್ಲಿದ್ದು ತಾನೇ ಯಜ್ಞವನ್ನು ಮಾಡುವವನು.
ಯಜ್ಞಾಂಗಃ= ಯಜ್ಞಾಂಗಗಳನ್ನು ತನ್ನ ಯಜ್ಞವರಾಹರೂಪದ ಅಂಗಗಳಿಂದ ಸೃಷ್ಟಿಸಿದವನು.
ಯಜ್ಞವಾಹನಃ= ಯಜ್ಞಗಳನ್ನು ನಿರ್ವಹಿಸುವವನು.
ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ |

ಯಜ್ಞಾಂತಕೃದ್ಯಜ್ಞಗುಹ್ಯಮನ್ನಮನ್ನಾದ ಏವ ಚ ॥118॥
ಯಜ್ಞಭೃದ್= ಯಜ್ಞಗಳನ್ನು ಧರಿಸುವವನು. ಯಜ್ಞಗಳನ್ನು ಪೋಷಿಸುವವನು.
ಯಜ್ಞಕೃತ್= ಯಜ್ಞಗಳನ್ನು ಮಾಡುವವನು.
ಯಜ್ಞೀ= ನಿರ್ವಾಹಕನಾಗಿ, ಕರ್ತೃವಾಗಿ, ಭೋಕ್ತೃವಾಗಿ ಯಜ್ಞವನ್ನು ಹೊಂದಿದವನು.
ಯಜ್ಞಭುಗ್= ಯಜ್ಞಫಲವನ್ನು ಅನುಭವಿಸುವವನು.
ಯಜ್ಞಸಾಧನಃ= ಯಜ್ಞವನ್ನು ಅಥವಾ ವಿಹಿತಕರ್ಮಗಳನ್ನು ನಡೆಸುವವನು.
ಯಜ್ಞಾಂತಕೃತ್= ಯಜ್ಞದ ಅಥವಾ ಸತ್ಕರ್ಮಗಳ ನಿರ್ಣಯವನ್ನು ಮಾಡಿದವನು.
ಗುಹ್ಯಂ= ಯಜ್ಞಗುಹ್ಯನು. ಯಜ್ಞಕ್ಕೆ ಸಂಬಂಧಿಸಿದ ರಹಸ್ಯ ತತ್ತ್ವವಾದವನು.
ಅನ್ನಂ= ಪ್ರಳಯಕಾಲದಲ್ಲಿ ಎಲ್ಲರನ್ನೂ ಸಂಹರಿಸುವವನು. ಎಲ್ಲರಿಗೂ ತೃಪ್ತಿಯನ್ನು ಕೊಡುವವನು.
ಅನ್ನಾದಃ= ಭೋಗ್ಯವಾದ ಪದಾರ್ಥದ ಸಾರವನ್ನು ಭೋಗಿಸುವವನು.
ಆತ್ಮಯೋನಿಃ ಸ್ವಯಂಜಾತೋ ವೈಖಾನಃ ಸಾಮಗಾಯನಃ |
ದೇವಕೀನಂದನಃ ಸ್ರಷ್ಟಾ ಕ್ಷಿತೀಶಃ ಪಾಪನಾಶನಃ ॥119॥
ಆತ್ಮಯೋನಿಃ= ತನಗೆ ತಾನೇ ಕಾರಣನಾದವನು.
ಸ್ವಯಂಜಾತಃ= ತಾನಾಗಿಯೇ ತನ್ನಿಂದ ಜನಿಸಿದವನು.
ವೈಖಾನಃ= ಮುಕ್ತರಿಗೆ ಒಡೆಯನಾದವನು.
ಸಾಮಗಾಯನಃ= ಸಾಮಗಾನವನ್ನು ಮಾಡುವ ಚತುರ್ಮುಖನನ್ನು ಪಡೆದವನು.
ದೇವಕೀನಂದನಃ= ದೇವತೆಗಳಿಗೆ ಸಂತೋಷವನ್ನು ಕೊಡುವ ಲಕ್ಷ್ಮಿಯನ್ನು ಆನಂದಪಡಿಸುವವನು.
ಸ್ರಷ್ಟಾ= ದೇವತೆಗಳಿಗೆ ಮೋಕ್ಷವನ್ನು ಕೊಡುವವನು.
ಕ್ಷಿತೀಶಃ= ಭೂಮಿಗೆ ಒಡೆಯನಾದವನು. ರಾಜರಲ್ಲಿ ರಾಜರಾಜೇಶ್ವರ ರೂಪದಿಂದ ಇರುವವನು.
ಪಾಪನಾಶನಃ= ಪಾಪವನ್ನು ಪರಿಹರಿಸುವವನು. ಪಾಪವನ್ನು ಮಾಡಿದವರಿಗೆ ನಾಶವನ್ನು ಉಂಟು ಮಾಡುವವನು.
ಶಂಖಭೃನ್ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ |
ರಥಾಂಗಪಾಣಿರಕ್ಷೋಭ್ಯಃ ಸರ್ವಪ್ರಹರಣಾಯುಧಃ ॥120॥
ಶಂಖಭೃತ್= ಶಂಖ ಸ್ವರೂಪಳಾದ ಶ್ರೀದೇವಿಯನ್ನು ಧರಿಸಿಕೊಂಡಿರುವವನು.
ನಂದಕೀ= ನಂದಕವೆಂಬ ಖಡ್ಗವನ್ನು ಧರಿಸಿರುವವನು.
ಚಕ್ರೀ= ಸುದರ್ಶನ ಚಕ್ರವನ್ನು ಧರಿಸಿದವನು.
ಶಾರ್ಙ್ಗಧನ್ವಾ= ಶಾರ್ಙ್ಗಧನುಸ್ಸನ್ನು ಧರಿಸಿದವನು.
ಗದಾಧರಃ= ಕೌಮೋದಕೀ ಗದೆಯನ್ನು ಧರಿಸಿರುವವನು.
ರಥಾಂಗಪಾಣಿಃ= ಹಸ್ತದಲ್ಲಿ ಯಾವಾಗಲೂ ಸುದರ್ಶನವನ್ನು ಧರಿಸಿರುವವನು.
ಅಕ್ಷೋಭ್ಯಃ= ತನ್ನ ಮಹಿಮೆಯಿಂದ ಎಂದೂ ವಿಚಲಿತನಾಗದವನು.
ಸರ್ವಪ್ರಹರಣಾಯುಧಃ= ಎಲ್ಲ ದುಷ್ಟರನ್ನೂ ಹೊಡೆಯಬಲ್ಲ ಸಕಲ ಆಯುಧಗಳನ್ನು ಹೊಂದಿರುವವನು.
॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆನುಶಾಸನಿಕೇ ಪರ್ವಣಿ ದಾನಧರ್ಮೇ ಶ್ರೀಮದ್ವಾದಿರಾಜತೀರ್ಥಪೂಜ್ಯಚರಣ ವಿರಚಿತಲಕ್ಷಾಂಕಾರಾಖ್ಯಟೀಕಾಯಾಂ ವಿಷ್ಣೋರ್ದಿವ್ಯಸಹಸ್ರನಾಮವ್ಯಾಖ್ಯಾನಂ ಸಂಪೂರ್ಣಮ್ ॥
ಭೀಷ್ಮಃ
ಇತೀದಂ ಕೀರ್ತನೀಯಸ್ಯ ಕೇಶವಸ್ಯ ಮಹಾತ್ಮನಃ |
ನಾಮ್ನಾಂ ಸಹಸ್ರಂ ದಿವ್ಯಾನಾಮಶೇಷೇಣ ಪ್ರಕೀರ್ತಿತಮ್ ॥121॥
ಭೀಷ್ಮ ಹೀಗೆ ನಾನು ಕೀರ್ತನೀಯನಾದ, ಮಹಾತ್ಮನಾದ ಕೇಶವನ ದಿವ್ಯ ಸಹಸ್ರನಾಮಗಳ ಕೀರ್ತನೆಯನ್ನು ಹೇಳಿದ್ದೇನೆ.
ಯ ಇದಂ ಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ |
ನಾಶುಭಂ ಪ್ರಾಪ್ನುಯಾತ್ ಕಿಂಚಿತ್ ಸೋಮುತ್ರೇಹ ಚ ಮಾನವಃ ॥
ಯಾವ ಮಾನವನು ಇದನ್ನು ಕೇಳುತ್ತಾನೆಯೋ ಅಥವಾ ಕೀರ್ತಿಸುತ್ತಾನೆಯೋ ಅವನು ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಯಾವ ಅಶುಭವನ್ನೂ ಹೊಂದುವುದಿಲ್ಲ.
ವೇದಾಂತಗೋ ಬ್ರಾಹ್ಮಣಃ ಸ್ಯಾತ್ಕ್ಷತ್ರಿಯೋ ವಿಜಯೀ ಭವೇತ್ |
ವೈಶ್ಯೋ ಧನಸಮೃದ್ಧಃ ಸ್ಯಾಚ್ಛೂದ್ರಃ ಸುಖಮವಾಪ್ನುಯಾತ್ ॥123॥
ಬ್ರಾಹ್ಮಣನು ವೇದಾದಿ ಜ್ಞಾನಸಂಪನ್ನನಾಗುತ್ತಾನೆ. ಕ್ಷತ್ರಿಯನು ವಿಜಯಶಾಲಿ ಆಗುತ್ತಾನೆ. ವೈಶ್ಯನು ಧನಸಮೃದ್ಧಿಯನ್ನು ಹೊಂದುತ್ತಾನೆ. ಶೂದ್ರನು ಸುಖವನ್ನು ಹೊಂದುತ್ತಾನೆ.
ಧರ್ಮಾರ್ಥೀ ಪ್ರಾಪ್ನುಯಾದ್ ಧರ್ಮಮರ್ಥಾರ್ಥೀ ಚಾರ್ಥಮಾಪ್ನುಯಾತ್|
ಕಾಮಾನವಾಪ್ನುಯಾತ್ ಕಾಮೀ ಪ್ರಜಾರ್ಥೀ ಚಾಪ್ನುಯಾತ್ ಪ್ರಜಾಃ ॥
ಧರ್ಮವನ್ನು ಬಯಸುವವನು ಧರ್ಮವನ್ನು ಪಡೆಯುತ್ತಾನೆ. ಧನವನ್ನು ಬಯಸುವವನು ಧನವನ್ನು ಪಡೆಯುತ್ತಾನೆ. ಭೋಗವನ್ನು ಬಯಸುವವನು ಭೋಗವನ್ನು ಪಡೆಯುತ್ತಾನೆ. ಸಂತತಿಯನ್ನು ಬಯಸುವವನು ಸಂತತಿಯನ್ನು ಪಡೆಯುತ್ತಾನೆ.
ಭಕ್ತಿಮಾನ್ ಯಃ ಸದೋತ್ಥಾಯ ಶುಚಿಸ್ತದ್ಗತಮಾನಸಃ |

ಸಹಸ್ರಂ ವಾಸುದೇವಸ್ಯ ನಾಮ್ನಾಮೇತತ್ ಪ್ರಕೀರ್ತಯೇತ್ ॥125॥
ಯಶಃ ಪ್ರಾಪ್ನೋತಿ ವಿಪುಲಂ ಜ್ಞಾತಿಪ್ರಾಧಾನ್ಯಮೇವ ಚ |
ಅಚಲಾಂ ಶ್ರಿಯಮಾಪ್ನೋತಿ ಶ್ರೇಯಶ್ಚಾಪ್ನೋತ್ಯನುತ್ತಮಮ್ ॥126॥
ಯಾವನು ಯಾವಾಗಲೂ ಶ್ರದ್ಧಾಯುಕ್ತನಾಗಿ ಶುಚಿಯಾಗಿ ವಿಷ್ಣುವನ್ನೇ ಧ್ಯಾನಿಸುತ್ತಾ ಭಕ್ತಿಯಿಂದ ವಾಸುದೇವನ ಈ ಸಹಸ್ರನಾಮವನ್ನು ಕೀರ್ತಿಸುತ್ತಾನೆಯೋ ಅವನು ವಿಪುಲವಾದ ಯಶಸ್ಸನ್ನು ಹೊಂದುತ್ತಾನೆ. ಬಂಧುಗಳಲ್ಲಿ ಶ್ರೇಷ್ಠತೆಯನ್ನು ಹೊಂದುತ್ತಾನೆ. ಅಚಲವಾದ ಸಂಪತ್ತನ್ನು ಹೊಂದುತ್ತಾನೆ. ಶ್ರೇಷ್ಠವಾದ ಶ್ರೇಯಸ್ಸನ್ನು ಪಡೆಯುತ್ತಾನೆ.
ನ ಭಯಂ ಕ್ವಚಿದಾಪ್ನೋತಿ ವೀರ್ಯಂ ತೇಜಶ್ಚ ವಿಂದತಿ |
ಭವತ್ಯರೋಗೋ ದ್ಯುತಿಮಾನ್ ಬಲರೂಪಗುಣಾನ್ವಿತಃ ॥127॥
ಎಂದೂ ಭಯವನ್ನು ಹೊಂದುವುದಿಲ್ಲ. ಪರಾಕ್ರಮವನ್ನು ಮತ್ತು ತೇಜಸ್ಸನ್ನು ಪಡೆಯುತ್ತಾನೆ. ರೋಗನಿವೃತ್ತಿಯನ್ನು ಹೊಂದಿ, ಬಲ-ರೂಪ-ಕಾಂತಿಗಳನ್ನು ಹೊಂದುತ್ತಾನೆ.
ರೋಗಾರ್ತೋ ಮುಚ್ಯತೇ ರೋಗಾದ್ ಬದ್ಧೋ ಮುಚ್ಯೇತ ಬಂಧನಾತ್ |
ಭಯಾನ್ಮುಚ್ಯೇತ ಭೀತಶ್ಚ ಮುಚ್ಯೇತಾಪನ್ನ ಆಪದಃ ॥128॥
ರೋಗಾರ್ತನಾದವನು ರೋಗದಿಂದ ಮುಕ್ತನಾಗುತ್ತಾನೆ. ಬಂಧನಕ್ಕೆ ಒಳಗಾದವನು ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಭೀತನಾದವನು ಭಯದಿಂದ ಮುಕ್ತನಾಗುತ್ತಾನೆ. ಆಪತ್ತಿಗೆ ಸಿಲುಕಿದವನು ಆಪತ್ತಿನ ಪರಿಹಾರವನ್ನು ಹೊಂದುತ್ತಾನೆ.
ದುರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಮ್ |
ಸ್ತುವನ್ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ ॥129॥
ನಿತ್ಯವೂ ಭಕ್ತಿಸಹಿತನಾಗಿ ಸಹಸ್ರನಾಮಗಳಿಂದ ಪುರುಷೋತ್ತಮನನ್ನು ಸ್ತುತಿಸುವ ಪುರುಷನು ಸಮಸ್ತ ಕಷ್ಟಗಳನ್ನೂ ದಾಟುತ್ತಾನೆ.
ವಾಸುದೇವಾಶ್ರಯೋ ಮರ್ತ್ಯೋ ವಾಸುದೇವಪರಾಯಣಃ |
ಸರ್ವಪಾಪವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಮ್ ॥130॥
ವಾಸುದೇವನನ್ನು ಆಶ್ರಯಿಸಿ, ವಾಸುದೇವನನ್ನೇ ಶ್ರೇಷ್ಠವಾದ ಆಶ್ರಯವೆಂದು ತಿಳಿದು ಸರ್ವಪಾಪಗಳಿಂದಲೂ ದೂರನಾಗಿ, ವೇದಪ್ರತಿಪಾದ್ಯನಾದ ಬ್ರಹ್ಮನ ಪ್ರಾಪ್ತಿಯನ್ನು ಹೊಂದುತ್ತಾನೆ.
ನ ವಾಸುದೇವಭಕ್ತಾನಾಮಶುಭಂ ವಿದ್ಯತೇ ಕ್ವಚಿತ್ |
ಜನ್ಮಮೃತ್ಯುಜರಾವ್ಯಾಧಿಭಯಂ ನೈವೋಪಜಾಯತೇ ॥131॥
ವಾಸುದೇವನ ಭಕ್ತರಿಗೆ ಯಾವ ಅಶುಭವೂ ಉಂಟಾಗುವುದಿಲ್ಲ. ಜನ್ಮ-ಮರಣ- ಜರಾ-ವ್ಯಾಧಿಗಳ ಭಯ ಉಂಟಾಗುವುದಿಲ್ಲ.
ಇಮಂ ಸ್ತವಮಧೀಯಾನಃ ಶ್ರದ್ಧಾಭಕ್ತಿಸಮನ್ವಿತಃ |
ಯುಜ್ಯೇತಾತ್ಮಸುಖಕ್ಷಾಂತಿಶ್ರೀಧೃತಿಸ್ಮೃತಿಕೀರ್ತಿಭಿಃ ॥132॥
ಶ್ರದ್ಧಾಭಕ್ತಿ ಸಮನ್ವಿತನಾಗಿ ಈ ಸ್ತೋತ್ರವನ್ನು ಅಧ್ಯಯನ ಮಾಡುವವನು ಆತ್ಮಸುಖ, ಕ್ಷಮೆ, ಸಂಪತ್ತು, ಧೈರ್ಯ, ಸ್ಮೃತಿ ಮತ್ತು ಕೀರ್ತಿಗಳನ್ನು ಹೊಂದುತ್ತಾನೆ.
ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ |
ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ॥133॥
ಪುರುಷೋತ್ತಮನಲ್ಲಿ ಭಕ್ತಿಯನ್ನು ಹೊಂದಿದ ಪುಣ್ಯವಂತರಿಗೆ ಕ್ರೋಧವಾಗಲೀ, ಮಾತ್ಸರ್ಯವಾಗಲೀ, ಲೋಭವಾಗಲೀ, ಅಶುಭವಾದ ಮತಿಯಾಗಲೀ ಉಂಟಾಗುವುದಿಲ್ಲ.
ದ್ಯೌಃ ಸಚಂದ್ರಾರ್ಕನಕ್ಷತ್ರಾ ಖಂ ದಿಶೋ ಭೂರ್ಮಹೋದಧಿಃ |
ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ ॥134॥
ಚಂದ್ರ-ಸೂರ್ಯ-ನಕ್ಷತ್ರಗಳಿಂದ ಸಹಿತವಾದ ಅಂತರಿಕ್ಷಲೋಕ, ಆಕಾಶ, ದಿಕ್ಕುಗಳು, ಭೂಮಿ, ಸಮುದ್ರ ಎಲ್ಲವೂ ಮಹಾತ್ಮನಾದ ವಾಸುದೇವನ ವೀರ್ಯದಿಂದ ಧರಿಸಲ್ಪಟ್ಟಿವೆ.
ಸಸುರಾಸುರಗಂಧರ್ವಂ ಸಯಕ್ಷೋರಗರಾಕ್ಷಸಮ್ |
ಜಗದ್ವಶೇ ವರ್ತತೇದಂ ಕೃಷ್ಣಸ್ಯ ಸಚರಾಚರಮ್ ॥135॥
ಸುರಾಸುರಗಂಧರ್ವರಿಂದ ಸಹಿತವಾದ, ಯಕ್ಷೋರಗರಾಕ್ಷಸರಿಂದ ಸಹಿತವಾದ ಚರಾಚರ ಸಹಿತವಾದ ಈ ಜಗತ್ತು ಕೃಷ್ಣನ ವಶದಲ್ಲಿದೆ.
ಇಂದ್ರಿಯಾಣಿ ಮನೋ ಬುದ್ಧಿಃ ಸತ್ತ್ವಂ ತೇಜೋ ಬಲಂ ಧೃತಿಃ |
ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞ ಏವ ಚ ॥136॥
ಇಂದ್ರಿಯಗಳು, ಮನಸ್ಸು, ಬುದ್ಧಿ, ಸತ್ತ್ವ, ತೇಜಸ್ಸು, ಬಲ, ಧೈರ್ಯ, ಪಂಚ ಮಹಾಭೂತಗಳು, ಜೀವ- ಎಲ್ಲರೂ ವಾಸುದೇವನಿಗೆ ಅಧೀನರಾದವರು ಎಂದು ಜ್ಞಾನಿಗಳು ಹೇಳುತ್ತಾರೆ.
ಸರ್ವಾಗಮಾನಾಮಾಚಾರಃ ಪ್ರಥಮಂ ಪರಿಕಲ್ಪ್ಯತೇ |
ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ॥137॥
ಎಲ್ಲಾ ಆಗಮಗಳಲ್ಲಿಯೂ ಮೊದಲು ಆಚಾರವು ಹೇಳಲ್ಪಡುತ್ತದೆ. ಆಚಾರದಿಂದ ಧರ್ಮವುಂಟಾಗುತ್ತದೆ. ಅಚ್ಯುತನು ಧರ್ಮಕ್ಕೆ ಪ್ರಭುವಾದವನು.
ಋಷಯಃ ಪಿತರೋ ದೇವಾ ಮಹಾಭೂತಾನಿ ಧಾತವಃ |
ಜಂಗಮಾಜಂಗಮಂ ಚೇದಂ ಜಗನ್ನಾರಾಯಣೋದ್ಭವಮ್ ॥138॥

ಋಷಿಗಳು, ಪಿತೃಗಳು, ದೇವತೆಗಳು, ಪಂಚಮಹಾಭೂತಗಳು, ಸುವರ್ಣಾದಿ ಧಾತುಗಳು, ಸ್ಥಿರ-ಚರವಾದ ಈ ಜಗತ್ತೆಲ್ಲವೂ ನಾರಾಯಣನಿಂದ ಜನಿಸಿದೆ.
ಯೋಗೋ ಜ್ಞಾನಂ ತಥಾ ಸಾಂಖ್ಯಂ ವಿದ್ಯಾಃ ಶಿಲ್ಪಾನಿ ಕರ್ಮ ಚ |
ವೇದಾಃ ಶಾಸ್ತ್ರಾಣಿ ವಿಜ್ಞಾನಮೇತತ್ಸರ್ವಂ ಜನಾರ್ದನಾತ್ ॥139॥
ಯೋಗ, ಜ್ಞಾನ, ಸಾಂಖ್ಯ, ವಿದ್ಯೆಗಳು, ಕುಶಲ ಕಲೆಗಳು, ಕರ್ಮಗಳು, ವೇದಗಳು, ಶಾಸ್ತ್ರಗಳು, ವಿಜ್ಞಾನ- ಎಲ್ಲವೂ ಜನಾರ್ದನನಿಂದ ಜನಿಸಿವೆ.
ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ |
ತ್ರೀಲ್ಲೋಕಾನ್ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥140॥
ವಿಷ್ಣುವು ಪ್ರಧಾನನಾದ ದೊಡ್ಡದಾದ ಚೇತನ. ವಿಶ್ವಭೋಜನನೂ, ಅವ್ಯಯನೂ ಆದ ಅವನು ಮೂರುಲೋಕಗಳನ್ನು ವ್ಯಾಪಿಸಿ ಸರ್ವಭೂತಾಂತರ್ಯಾಮಿಯಾಗಿ ಆ ಭೂತಗಳು (ಜೀವರು) ಅನುಭವಿಸುವ ಭೋಗಗಳ ಸಾರಭಾಗವನ್ನು ಭೋಗಿಸುತ್ತಾನೆ.
ಇಮಂ ಸ್ತವಂ ಭಗವತೋ ವಿಷ್ಣೋರ್ವ್ಯಾಸೇನ ಕೀರ್ತಿತಮ್ |
ಪಠೇದ್ ಯ ಇಚ್ಛೇತ್ ಪುರುಷಃ ಶ್ರೇಯಃ ಪ್ರಾಪ್ತುಂ ಸುಖಾನಿ ಚ ॥
ಯಾವ ಪುರುಷನು ಶ್ರೇಯಸ್ಸನ್ನೂ, ಸುಖವನ್ನೂ ಹೊಂದಲು ಬಯಸುವನೋ ಅವನು ವೇದವ್ಯಾಸರು ಹೇಳಿದ ಭಗವಂತನ ಈ ಸ್ತೋತ್ರವನ್ನು ಪಠಿಸಬೇಕು.
ವಿಶ್ವೇಶ್ವರಮಜಂ ದೇವಂ ಜಗತಃ ಪ್ರಭವಾಪ್ಯಯಮ್ |
ಭಜಂತಿ ಯೇ ಪುಷ್ಕರಾಕ್ಷಂ ನ ತೇ ಯಾಂತಿ ಪರಾಭವಮ್ ॥142॥
ವಿಶ್ವೇಶ್ವರನೂ, ಜನನ ರಹಿತನೂ, ಕ್ರೀಡಾದಿ ಗುಣವಿಶಿಷ್ಟನೂ, ಜಗತ್ತಿನ ಉತ್ಪತ್ತಿ- ಸಂಹಾರಗಳಿಗೆ ಕಾರಣನೂ ಆದ ಪುಂಡರೀಕಾಕ್ಷನನ್ನು ಭಜಿಸುವವನು ಎಂದೂ ಪರಾಭವವನ್ನು ಹೊಂದುವುದಿಲ್ಲ.
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥143॥
ಬ್ರಾಹ್ಮಣರಲ್ಲಿ ವತ್ಸಲನಾದ, ದೇವನಾದ, ಗೋ-ಬ್ರಾಹ್ಮಣಹಿತನಾದ, ಜಗತ್ತಿಗೆ ಹಿತನಾದ, ವೇದಪ್ರತಿಪಾದ್ಯನಾದ ಕೃಷ್ಣನಿಗೆ ನಮಸ್ಕಾರ, ನಮಸ್ಕಾರ, ನಮಸ್ಕಾರ.
ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ |
ಸರ್ವದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ ॥144॥
ಆಕಾಶದಿಂದ ಬಿದ್ದ ನೀರು ಸಮುದ್ರವನ್ನು ಸೇರುವಂತೆ ಎಲ್ಲ ದೇವತೆಗಳಿಗೆ ಮಾಡಿದ ನಮಸ್ಕಾರವು ಅಂತರ್ಯಾಮಿಯಾದ ಕೇಶವನನ್ನು ಹೋಗಿ ಸೇರುತ್ತದೆ.
ಸರ್ವವೇದೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಮ್ |
ತತ್ಫಲಂ ಪುರುಷ ಆಪ್ನೋತಿ ಸ್ತುತ್ವಾ ದೇವಂ ಜನಾರ್ದನಮ್ ॥145॥
ಕ್ರೀಡಾದಿ ಗುಣವಿಶಿಷ್ಟನಾದ ಜನಾರ್ದನನನ್ನು ಸ್ತೋತ್ರ ಮಾಡುವವನು ಎಲ್ಲ ವೇದಗಳ ಅಧ್ಯಯನದ ಪುಣ್ಯವನ್ನೂ ಎಲ್ಲ ತೀರ್ಥಗಳ ಸ್ನಾನದ ಫಲವನ್ನೂ ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ವಿಷ್ಣೋಃ ಸಹಸ್ರನಾಮಕೀರ್ತನಂ ನಾಮ ಏಕೋನಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಮೂವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತನೆಯ ಅಧ್ಯಾಯ
ಬ್ರಾಹ್ಮಣಪ್ರಶಂಸೆ
ಯುಧಿಷ್ಠಿರಃ
ಕೇ ಪೂಜ್ಯಾಃ ಕೇ ನಮಸ್ಕಾರ್ಯಾಃ ಕಥಂ ವರ್ತೇತ ಕೇಷು ಚ |
ಕಿಮಾಚಾರಃ ಕೀದೃಶೇಷು ಪಿತಾಮಹ ನ ರಿಷ್ಯತೇ ॥1॥
ಯುಧಿಷ್ಠಿರ ಎಲೈ ಪಿತಾಮಹನೇ, ಪೂಜ್ಯರಾದವರು ಯಾರು? ನಮಸ್ಕಾರಕ್ಕೆ ಅರ್ಹರಾದವರು ಯಾರು? ಯಾರಲ್ಲಿ ಹೇಗೆ ನಡೆದುಕೊಳ್ಳಬೇಕು? ಯಾರಲ್ಲಿ ಎಂತಹ ಆಚಾರವು ನಾಶವನ್ನು ಹೊಂದುವುದಿಲ್ಲ?
ಭೀಷ್ಮಃ
ಬ್ರಾಹ್ಮಣಾನಾಂ ಪರಿಭವಃ ಸಾದಯೇದಪಿ ದೇವತಾಃ |
ಬ್ರಾಹ್ಮಣಾನಾಂ ನಮಸ್ಕರ್ತಾ ಯುಧಿಷ್ಠಿರ ನ ರಿಷ್ಯತೇ ॥2॥
ಭೀಷ್ಮ ಬ್ರಾಹ್ಮಣರಿಗೆ ಅವಮಾನವನ್ನು ಮಾಡಿದರೆ ದೇವತೆಗಳಿಗೂ ವಿನಾಶವುಂಟಾದೀತು. ಎಲೈ ಯುಧಿಷ್ಠಿರನೇ, ಬ್ರಾಹ್ಮಣರಿಗೆ ನಮಸ್ಕಾರ ಮಾಡುವವನು ಕ್ಷಯವನ್ನು ಹೊಂದುವುದಿಲ್ಲ.
ತೇ ಪೂಜ್ಯಾಸ್ತೇ ನಮಸ್ಕಾರ್ಯಾ ವರ್ತೇಥಾಸ್ತೇಷು ಪುತ್ರವತ್ |
ತೇ ಹಿ ಲೋಕಾನಿಮಾನ್ ಸರ್ವಾನ್ ಧಾರಯಂತಿ ಮನೀಷಿಣಃ ॥3॥
ಅವರೇ ಪೂಜೆಗೆ ಅರ್ಹರಾದವರು. ನಮಸ್ಕಾರಕ್ಕೆ ಅರ್ಹರಾದವರು. ಅವರಲ್ಲಿ ಮಕ್ಕಳಂತೆ ನಡೆದುಕೊ. ಜ್ಞಾನಿಗಳಾದ ಅವರು ಈ

ಎಲ್ಲಾ ಲೋಕಗಳನ್ನೂ ಧರಿಸುವವರು.
ಬ್ರಾಹ್ಮಣಾಃ ಸರ್ವಲೋಕಾನಾಂ ಮಹಾಂತೋ ಧರ್ಮಸೇತವಃ |
ಧನತ್ಯಾಗಾಭಿರಾಮಾಶ್ಚ ವಾಕ್ಸಂಯಮರತಾಶ್ಚ ಯೇ ॥4॥
ಬ್ರಾಹ್ಮಣರು ಎಲ್ಲ ಲೋಕಗಳಿಗೂ ದೊಡ್ಡ ಧರ್ಮ ಸೇತುವೆಗಳು. ಧನತ್ಯಾಗವನ್ನು ಮಾಡಿ ಸಂತೋಷದಿಂದ ಕೂಡಿರುತ್ತಾರೆ. ಮೌನವ್ರತದಲ್ಲಿ ರತರಾಗಿರುತ್ತಾರೆ.
ರಮಣೀಯಾಶ್ಚ ಭೂತಾನಾಂ ನಿಧಾನಂ ಚ ಧೃತವ್ರತಾಃ |
ಪ್ರಣೇತಾರಶ್ಚ ಲೋಕಾನಾಂ ಶಾಸ್ತ್ರಾಣಾಂ ಚ ಯಶಸ್ವಿನಃ ॥5॥
ಎಲ್ಲ ಪ್ರಾಣಿಗಳಿಗೂ ಮನೋಹರರಾಗಿರುತ್ತಾರೆ. ಆಶ್ರಯರಾಗಿರುತ್ತಾರೆ. ವ್ರತಗಳನ್ನು ಧರಿಸಿರುತ್ತಾರೆ. ಲೋಕಗಳನ್ನು ಮತ್ತು ಶಾಸ್ತ್ರಗಳನ್ನು ಕೀರ್ತಿವಂತರಾದ ಅವರು ಮುಂದೆ ನಡೆಸಿಕೊಂಡು ಹೋಗುತ್ತಾರೆ.
ತಪೋ ಯೇಷಾಂ ಧನಂ ನಿತ್ಯಂ ವಾಕ್ ಚೈವ ವಿಪುಲಂ ಬಲಮ್ |
ಪ್ರಭವಶ್ಚಾಪಿ ಧರ್ಮಾಣಾಂ ಧರ್ಮಜ್ಞಾಃ ಸೂಕ್ಷ್ಮದರ್ಶಿನಃ ॥6॥
ಅವರಿಗೆ ನಿತ್ಯವೂ ತಪಸ್ಸೇ ಧನ. ವಾಣಿಯೇ ವಿಪುಲವಾದ ಬಲ. ಧರ್ಮಜ್ಞರೂ, ಸೂಕ್ಷ್ಮದರ್ಶಿಗಳೂ ಆದ ಅವರು ಧರ್ಮಗಳ ಉಗಮಸ್ಥಾನರಾಗಿರುತ್ತಾರೆ.
ಧರ್ಮಕಾಮಾಃ ಸ್ಥಿತಾ ಧರ್ಮೇ ಸುಕೃತೈರ್ಧರ್ಮಸೇತವಃ |
ಯಾನುಪಾಶ್ರಿತ್ಯ ಜೀವಂತಿ ಪ್ರಜಾಃ ಸರ್ವಾಶ್ಚತುರ್ವಿಧಾಃ ॥7॥
ಧರ್ಮಕಾಮರಾಗಿರುತ್ತಾರೆ. ಧರ್ಮದಲ್ಲಿಯೇ ಇರುತ್ತಾರೆ. ತಮ್ಮ ಸತ್ಕರ್ಮಗಳಿಂದ ಧರ್ಮಸೇತುವೆಗಳಾಗಿರುತ್ತಾರೆ. ಅವರನ್ನು ಉಪಜೀವಿಸಿ ನಾಲ್ಕು ವಿಧವಾದ ಎಲ್ಲಾ ಪ್ರಜೆಗಳೂ ಜೀವಿಸುತ್ತಾರೆ.
ಪಂಥಾನಃ ಸರ್ವನೇತಾರೋ ಯಜ್ಞವಾಹಾಃ ಸನಾತನಾಃ |
ಪಿತೃಪೈತಾಮಹೀಂ ಗುರ್ವೀಮುದ್ವಹಂತಿ ಧುರಂ ಸದಾ ॥8॥
ಅವರು ಮಾರ್ಗರಾದವರು. ಮಾರ್ಗದರ್ಶಕರಾದವರು. ಯಜ್ಞವನ್ನು ನಿರ್ವಹಿಸುವವರು. ವೇದಪ್ರತಿಪಾದ್ಯರು. ಪಿತೃ-ಪಿತಾಮಹರಿಂದ ಬಂದ ದೊಡ್ಡ ಧರ್ಮರಕ್ಷಣೆಯ ಭಾರವನ್ನು ಹೊತ್ತಿರುತ್ತಾರೆ.
ಧುರಿ ಯೇ ನಾವಸೀದಂತಿ ವಿಷಮೇ ಸದ್ಗವಾ ಇವ |
ಪಿತೃದೇವಾತಿಥಿಮುಖಾ ಹವ್ಯಕವ್ಯಾಗ್ರಭೋಜಿನಃ ॥9॥
ವಿಷಮ ಪರಿಸ್ಥಿತಿಯಲ್ಲಿ ಸಿಲುಕಿದ ಅವರು ಎತ್ತುಗಳಂತೆ ಭಾರವನ್ನು ಸಂಕಟ ಒದಗಿದಾಗ ವಿಷಾದ ಪಡುವುದಿಲ್ಲ. ಪಿತೃಗಳನ್ನು, ದೇವತೆಗಳನ್ನು ಮತ್ತು ಅತಿಥಿಗಳನ್ನು ಪೂಜಿಸುತ್ತಾ ಹವ್ಯ-ಕವ್ಯಗಳ ಅಗ್ರಭೋಜಿಗಳಾಗಿರುತ್ತಾರೆ.
ಭೋಜನಾದೇವ ಯೇ ಲೋಕಾನ್ ತ್ರಾಯಂತೇ ಮಹತೋ ಭಯಾತ್|
ದೀಪಾಃ ಸರ್ವಸ್ಯ ಲೋಕಸ್ಯ ಚಕ್ಷುಶ್ಚಕ್ಷುಷ್ಮತಾಮಪಿ ॥10॥
ಕೇವಲ ಭೋಜನದಿಂದಲೇ ಅವರು ಲೋಕಗಳನ್ನು ದೊಡ್ಡ ಭಯದಿಂದ ರಕ್ಷಿಸುತ್ತಾರೆ. ಅವರು ಎಲ್ಲ ಲೋಕಗಳಿಗೂ ದೀಪಪ್ರಾಯರಾದವರು. ಕಣ್ಣುಗಳುಳ್ಳವರಿಗೂ ಕಣ್ಣಿನಂತಿರುವವರು.
ಸರ್ವಶಿಲ್ಪಾದಿನಿಧಯೋ ನಿಪುಣಾಃ ಸೂಕ್ಷ್ಮದರ್ಶಿನಃ |
ಗತಿಜ್ಞಾಃ ಸರ್ವಭೂತಾನಾಮಧ್ಯಾತ್ಮಗತಿಚಿಂತಕಾಃ ॥11॥
ಎಲ್ಲ ಕಲಾ ವಿದ್ಯೆಗಳಿಗೆ ಆಶ್ರಯರಾದವರು. ನಿಪುಣರು. ಸೂಕ್ಷ್ಮದರ್ಶಿಗಳು. ಎಲ್ಲ ಪ್ರಾಣಿಗಳ ಗತಿಯನ್ನು ತಿಳಿದವರು. ಅಧ್ಯಾತ್ಮ ಗತಿಯನ್ನು ಚಿಂತಿಸುವವರು.
ಆದಿಮಧ್ಯಾವಸಾನಾನಾಂ ಜ್ಞಾತಾರಶ್ಛಿನ್ನಸಂಶಯಾಃ |
ಪರಾವರವಿಶೇಷಜ್ಞಾ ಗಂತಾರಃ ಪರಮಾಂ ಗತಿಮ್ ॥12॥
ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ತಿಳಿದವರು. ಸಂಶಯರಹಿತರು. ತಾರತಮ್ಯ ವಿಶೇಷ ಜ್ಞಾನವುಳ್ಳವರು. ಶ್ರೇಷ್ಠವಾದ ಗತಿಯನ್ನು ಹೊಂದುವವರು.
ವಿಮುಕ್ತಾ ಧೂತಪಾಪ್ಮಾನೋ ನಿರ್ದ್ವಂದ್ವಾ ನಿಷ್ಪರಿಗ್ರಹಾಃ |
ಮಾನಾರ್ಹಾ ಮಾನಿತಾ ನಿತ್ಯಂ ಜ್ಞಾನವಿದ್ಭಿರ್ಮಹಾತ್ಮಭಿಃ ॥13॥
ಸಂಸಾರದ ತಾಪತ್ರಯದಿಂದ ಬಿಡುಗಡೆಯನ್ನು ಹೊಂದಿದವರು. ಪಾಪಗಳಿಂದ ನಿರ್ಮುಕ್ತರಾದವರು. ದ್ವಂದ್ವಾತೀತರು. ಪರಿಗ್ರಹಶೂನ್ಯರು. ಸನ್ಮಾನಕ್ಕೆ ಅರ್ಹರಾದವರು. ನಿತ್ಯವೂ ಜ್ಞಾನವನ್ನು ಗುರುತಿಸುವ ಮಹಾತ್ಮರಿಂದ ಸಮ್ಮಾನಿತರಾದವರು.
ಚಂದನೇ ಮಲಪಂಕೇ ಚ ಭೋಜನೇಽಭೋಜನೇ ಸಮಾಃ |
ಸಮಂ ಯೇಷಾಂ ದುಕೂಲಂ ಚ ಶಾಣಕ್ಷೌಮಾಜಿನಾನಿ ಚ ॥14॥
ಚಂದನಗಳಲ್ಲಿ ಮತ್ತು ಕಶ್ಮಲಗಳಲ್ಲಿ, ಹಾಗೆಯೇ ಭೋಜನಗಳಲ್ಲಿ ಮತ್ತು ಉಪವಾಸ (ನಿರಾಹಾರ)ಗಳಲ್ಲಿ ಸಮರಾದವರು. ಅವರಿಗೆ ರೇಷ್ಮೆವಸ್ತ್ರಗಳು, ನಾರು-ಮಡಿ ಕೃಷ್ಣಾಜಿನಗಳು ಸಮಾನವಾದವುಗಳು.
ತಿಷ್ಠೇಯುರಪ್ಯಭುಂಜಾನಾ ಬಹೂನಿ ದಿವಸಾನ್ಯಪಿ |
ಶೋಷಯೇಯುಶ್ಚ ಗಾತ್ರಾಣಿ ಸ್ವಾಧ್ಯಾಯೈಃ ಸಂಯತೇಂದ್ರಿಯಾಃ ॥15॥
ಅನೇಕ ದಿವಸಗಳವರೆಗೆ ಭೋಜನವನ್ನು ಮಾಡದೆ ಹಾಗೆಯೇ ಇರುತ್ತಾರೆ. ಇಂದ್ರಿಯ ಜಯವನ್ನು ಹೊಂದಿ ಸ್ವಾಧ್ಯಾಯಗಳಿಂದ ಶರೀರವನ್ನು ಶೋಷಿಸುತ್ತಾರೆ.
ಅದೈವಂ ದೈವತಂ ಕುರ್ಯುರ್ದೈವತಂ ಚಾಪ್ಯದೈವತಮ್ |

ಲೋಕಾನನ್ಯಾನ್ ಸೃಜೇಯುಶ್ಚ ಲೋಕಪಾಲಾಂಶ್ಚ ಕೋಪಿತಾಃ ॥16॥
ದೇವತೆಯಲ್ಲದವರನ್ನು ದೇವತೆಯಾಗಿ ಮಾಡಿಯಾರು! ದೇವತೆಯನ್ನು ಅದೇವತೆಯನ್ನಾಗಿ ಮಾಡಿಯಾರು! ಕೋಪಗೊಂಡ ಅವರು ಲೋಕಗಳನ್ನೂ, ಲೋಕಪಾಲಕರನ್ನೂ ಸೃಷ್ಟಿಸಿಯಾರು.
ಅಪೇಯಃ ಸಾಗರೋ ಯೇಷಾಮಭಿಶಾಪಾನ್ಮಹಾತ್ಮನಾಮ್ |
ಯೇಷಾಂ ಕೋಪಾಗ್ನಿರದ್ಯಾಪಿ ದಂಡಕೇ ನೋಪಶಾಮ್ಯತಿ ॥17॥
ಆ ಮಹಾತ್ಮರ ಶಾಪದಿಂದ ಸಾಗರದ ಜಲವು ಪಾನಕ್ಕೆ ಅನರ್ಹವಾಗಿದೆ. ಅವರ ಕೋಪಾಗ್ನಿಯು ದಂಡಕಾರಣ್ಯದಲ್ಲಿ ಇಂದಿಗೂ ಶಾಂತವಾಗಿಲ್ಲ.
ದೇವಾನಾಮಪಿ ಯೇ ದೇವಾಃ ಕಾರಣಂ ಕಾರಣಸ್ಯ ಚ |
ಪ್ರಮಾಣಸ್ಯ ಪ್ರಮಾಣಂ ಚ ಕಸ್ತಾನಭಿಭವೇದ್ ಬುಧಃ ॥18॥
ಅವರು ದೇವತೆಗಳಿಗೂ ದೇವತೆಗಳು. ಕಾರಣಗಳಿಗೆ ಕಾರಣರು. ಪ್ರಮಾಣಗಳಿಗೆ ಪ್ರಮಾಣರಾದವರು. ಯಾವ ವಿವೇಕಿಯಾದವನು ಅವರನ್ನು ಅವಮಾನಗೊಳಿಸಿಯಾನು?
ಯೇಷಾಂ ವೃದ್ಧಶ್ಚ ಬಾಲಶ್ಚ ಸರ್ವಃ ಸಮ್ಮಾನಮರ್ಹತಿ |
ತಪೋವಿದ್ಯಾವಿಶೇಷಾತ್ ತು ಮಾನಯಂತಿ ಪರಸ್ಪರಮ್ ॥19॥
ಅವರಲ್ಲಿ ವೃದ್ಧರೂ, ಬಾಲರೂ ಎಲ್ಲರೂ ಸನ್ಮಾನಕ್ಕೆ ಅರ್ಹರಾಗುತ್ತಾರೆ. ತಪಸ್ಸು ಮತ್ತು ವಿದ್ಯೆಯ ವಿಷಯಗಳಲ್ಲಿ ಅವರೇ ಪರಸ್ಪರವಾಗಿ ಸಮ್ಮಾನ ಮಾಡುತ್ತಾರೆ.
ಅವಿದ್ವಾನ್ ಬ್ರಾಹ್ಮಣೋ ದೇವಃ ಪಾತ್ರಂ ವೈ ಪಾವನಂ ಮಹತ್ |
ವಿದ್ವಾನ್ ಭೂಯಸ್ತರೋ ದೇವಃ ಪೂರ್ಣಸಾಗರಸನ್ನಿಭಃ ॥20॥
ವಿದ್ವಾಂಸನಲ್ಲದ ಬ್ರಾಹ್ಮಣನೂ ದೇವತೆಯೇ. ಬಹಳ ಪವಿತ್ರನಾದ ಪಾತ್ರನೂ ಹೌದು. ವಿದ್ವಾಂಸನಾದವನಂತೂ ಪೂರ್ಣಸಾಗರದಂತಿರುವ ಇನ್ನೂ ಶ್ರೇಷ್ಠವಾದ ದೇವತೆ.
ಅವಿದ್ವಾಂಶ್ಚೈವ ವಿದ್ವಾಂಶ್ಚ ಬ್ರಾಹ್ಮಣೋ ದೈವತಂ ಮಹತ್ |
ಪ್ರಣೀತಶ್ಚಾಪ್ರಣೀತಶ್ಚ ಯಥಾಗ್ನಿರ್ದೈವತಂ ಮಹತ್ ॥21॥
ಬ್ರಾಹ್ಮಣನು ವಿದ್ವಾಂಸನಾಗಿರಲಿ, ಅವಿದ್ವಾಂಸನಾಗಿರಲಿ, ಅವನು ಪ್ರಣೀತವಾದ ಅಥವಾ ಪ್ರಣೀತವಲ್ಲದ ಅಗ್ನಿಯು ದೊಡ್ಡ ದೇವತೆಯಾಗುವಂತೆ ಬ್ರಾಹ್ಮಣನೂ ದೊಡ್ಡ ದೇವತೆಯೇ.
ಶ್ಮಶಾನೇ ಹ್ಯಪಿ ತೇಜಸ್ವೀ ಪಾವಕೋ ನೈವ ದುಷ್ಯತಿ |
ಹವಿರ್ಯಜ್ಞೇಷು ಚ ವಹನ್ ಭೂಯ ಏವಾಭಿಶೋಭತೇ ॥22॥
ತೇಜಸ್ವಿಯಾದ ಅಗ್ನಿಯು ಸ್ಮಶಾನದಲ್ಲಿಯೂ ದೋಷಭಾಗಿಯಾಗುವುದಿಲ್ಲ. ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸುತ್ತಾ ಇನ್ನೂ ಹೆಚ್ಚು ಶೋಭಿಸುತ್ತಾನೆ.
ಏವಂ ಯದ್ಯಪ್ಯನಿಷ್ಟೇಷು ವರ್ತತೇ ಸರ್ವಕರ್ಮಸು |
ಸರ್ವಥಾ ಬ್ರಾಹ್ಮಣೋ ಮಾನ್ಯೋ ದೈವತಂ ವಿದ್ಧಿ ತತ್ಪರಮ್ ॥23॥
ಹಾಗೆಯೇ ಬ್ರಾಹ್ಮಣನು ಅನಿಷ್ಟಕರ್ಮಗಳಲ್ಲಿ ಕಂಡುಬಂದರೂ ಅವನು ಸರ್ವಥಾ ಮಾನ್ಯನಾದವನು. ಅವನನ್ನು ಶ್ರೇಷ್ಠವಾದ ದೇವತೆ ಎಂದು ತಿಳಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಬ್ರಾಹ್ಮಣಮಾಹಾತ್ಮ್ಯಕಥನಂ ನಾಮ ಚತ್ವಾರಿಂಶೋತ್ತರದ್ವಿಶತತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತೊಂದನೆಯ ಅಧ್ಯಾಯ
ಕಾರ್ತವೀರ್ಯಾರ್ಜುನ ಮತ್ತು ವಾಯುವಿನ ಸಂವಾದ
ಯುಧಿಷ್ಠಿರಃ
ಕಾಂ ತು ಬ್ರಾಹ್ಮಣಪೂಜಾಯಾಂ ವ್ಯುಷ್ಟಿಂ ದೃಷ್ಟ್ವಾ ಜನಾಧಿಪ |
ಕಂ ವಾ ಕರ್ಮೋದಯಂ ಮತ್ವಾ ತಾನರ್ಚಸಿ ಮಹಾಮತೇ ॥1॥
ಯುಧಿಷ್ಠಿರ ಎಲೈ ಜನಾಧಿಪನೇ, ಮಹಾಮತಿಯೇ ಬ್ರಾಹ್ಮಣರ ಪೂಜೆಯನ್ನು ಮಾಡುವುದರಲ್ಲಿ ಯಾವ ಸಮೃದ್ಧಿಯನ್ನು ನೋಡಿ ಅಥವಾ ಯಾವ ಕರ್ಮದ ಸಾಫಲ್ಯವನ್ನು ನೋಡಿ ನೀನು ಬ್ರಾಹ್ಮಣರನ್ನು ಅರ್ಚಿಸುತ್ತೀಯೆ?
ಭೀಷ್ಮಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪವನಸ್ಯ ಚ ಸಂವಾದಮರ್ಜುನಸ್ಯ ಚ ಭಾರತ ॥2॥
ಭೀಷ್ಮ ಎಲೈ ಭಾರತನೇ, ಈ ವಿಷಯದಲ್ಲಿಯೂ ಕಾರ್ತವೀರ್ಯಾರ್ಜುನನಿಗೂ ಮತ್ತು ವಾಯುವಿಗೂ ನಡೆದ ಈ ಪುರಾತನ ಇತಿಹಾಸವನ್ನು ಹೇಳುತ್ತಾರೆ.
ಸಹಸ್ರಭುಜಭೃಚ್ಛ್ರೀಮಾನ್ ಕಾರ್ತವೀರ್ಯೋಽಭವತ್ ಪ್ರಭುಃ |
ಅಸ್ಯ ಲೋಕಸ್ಯ ಸರ್ವಸ್ಯ ಮಾಹಿಷ್ಮತ್ಯಾಂ ಮಹಾಬಲಃ ॥3॥

ಸಹಸ್ರ ಭುಜಗಳುಳ್ಳ, ಕಾಂತಿಯುಕ್ತನಾದ, ಮಹಾಬಲನಾದ ಕಾರ್ತವೀರ್ಯನು ಈ ಎಲ್ಲಾ ಲೋಕಕ್ಕೆ ಪ್ರಭುವಾಗಿ ಮಾಹಿಷ್ಮತಿಯಲ್ಲಿ ಆಳುತ್ತಿದ್ದನು.
ಸ ತು ರತ್ನಾಕರವತೀಂ ಸದ್ವೀಪಾಂ ಸಾಗರಾಂಬರಾಮ್ |
ಶಶಾಸ ಸರ್ವಾಂ ಪೃಥಿವೀಂ ಹೈಹಯಃ ಸತ್ಯವಿಕ್ರಮಃ ॥4॥
ಹೇಹಯ ಕುಲದಲ್ಲಿ ಜನಿಸಿದ, ಸತ್ಯವಿಕ್ರಮನಾದ ಅವನು ಸಾಗರಾಂಬರವಾದ, ದ್ವೀಪಸಹಿತವಾದ, ರತ್ನಗಳಿಗೆ ಆಶ್ರಯವಾದ ಭೂಮಿ ಎಲ್ಲವನ್ನೂ ಆಳಿದನು.
ಸ್ವವಿತ್ತಂ ತೇನ ದತ್ತಂ ತು ದತ್ತಾತ್ರೇಯಾಯ ಕಾರಣೇ |
ಕ್ಷತ್ರಧರ್ಮಂ ಪುರಸ್ಕೃತ್ಯ ವಿನಯಂ ಶ್ರುತಮೇವ ಚ ॥5॥
ಅವನು ಯಜ್ಞದ ಕಾರಣದಿಂದಾಗಿ ದತ್ತಾತ್ರೇಯರಿಗೆ ತನ್ನ ಕ್ಷತ್ರಿಯ ಧರ್ಮವನ್ನೂ, ವಿನಯವನ್ನೂ ಮತ್ತು ವಿದ್ಯೆಯನ್ನೂ ಪುರಸ್ಕರಿಸಿ ತನ್ನ ಧನವನ್ನು ಕೊಟ್ಟನು.
ಆರಾಧಯಾಮಾಸ ಚ ತಂ ಕೃತವೀರ್ಯಾತ್ಮಜೋ ಮುನಿಮ್ |
ನ್ಯಮಂತ್ರಯತ ಸಂಹೃಷ್ಟಃ ಸ ದ್ವಿಜಶ್ಚ ವರೈಸ್ತ್ರಿಭಿಃ ॥6॥
ಕೃತವೀರ್ಯನ ಪುತ್ರನಾದ ಕಾರ್ತವೀರ್ಯಾರ್ಜುನನು ದತ್ತಾತ್ರೇಯರನ್ನು ಆರಾಧಿಸಿದನು. ಸಂತುಷ್ಟರಾದ, ಬ್ರಾಹ್ಮಣರಾದ ದತ್ತಾತ್ರೇಯರು ಮೂರು ವರಗಳನ್ನು ಕೇಳುವಂತೆ ಅವನನ್ನು ನಿಮಂತ್ರಿಸಿದರು.
ಸ ವರೈಶ್ಛಂದಿತಸ್ತೇನ ನೃಪೋ ವಚನಮಬ್ರವೀತ್ |
ಸಹಸ್ರಬಾಹುರ್ಭೂಯಾಂ ವೈ ಚಮೂಮಧ್ಯೇ ಗೃಹೇಽನ್ಯಥಾ ॥7॥
ಮಮ ಬಾಹುಸಹಸ್ರಂ ತು ಪಶ್ಯಂತಾಂ ಸೈನಿಕಾ ರಣೇ |
ವಿಕ್ರಮೇಣ ಮಹೀಂ ಕೃತ್ಸ್ನಾಂ ಜಯೇಯಂ ವಿಪುಲವ್ರತ |
ತಾಂ ಚ ಧರ್ಮೇಣ ಸಂಪ್ರಾಪ್ಯ ಪಾಲಯೇಯಮತಂದ್ರಿತಃ ॥8॥
ವರವನ್ನು ಬೇಡು ಎಂದು ಹೇಳಿದಾಗ ರಾಜನು ಅವರನ್ನು ಕುರಿತು, ನಾನು ಸೈನ್ಯದ ಮಧ್ಯದಲ್ಲಿ ಸಹಸ್ರಬಾಹುಗಳನ್ನು ಹೊಂದಿರಬೇಕು. ಗೃಹದಲ್ಲಿ ಬೇರೆ ರೀತಿಯಲ್ಲಿಯೇ (ಎರಡು ಬಾಹುಗಳನ್ನು ಹೊಂದಿ) ಇರಬೇಕು. ಯುದ್ಧದಲ್ಲಿ ಸೈನಿಕರು ನನ್ನ ಸಹಸ್ರ ಬಾಹುಗಳನ್ನು ನೋಡಬೇಕು. ಎಲೈ ವಿಪುಲವ್ರತನೇ, ನಾನು ನನ್ನ ಪರಾಕ್ರಮದಿಂದ ಸಮಗ್ರವಾದ ಭೂಮಿಯನ್ನು ಜಯಿಸಬೇಕು. ಧರ್ಮದಿಂದ ಭೂಮಿಯನ್ನು ಪಡೆದು ಆ ಭೂಮಿಯನ್ನು ಆಲಸ್ಯವಿಲ್ಲದೆ ಪಾಲಿಸಬೇಕು.
ಚತುರ್ಥಂ ತು ವರಂ ಯಾಚೇ ತ್ವಾಮಹಂ ದ್ವಿಜಸತ್ತಮ |
ತಂ ಮಮಾನುಗ್ರಹಕೃತೇ ದಾತುಮರ್ಹಸ್ಯನಿಂದಿತ |
ಅನುಶಾಸಂತು ಮಾಂ ಸಂತೋ ಮಿಥ್ಯಾವೃತ್ತಂ ತದಾಶ್ರಯಮ್ ॥9॥
ಎಲೈ ದ್ವಿಜಶ್ರೇಷ್ಠನೇ, ನಾನು ನಿನ್ನನ್ನು ನಾಲ್ಕನೆಯ ವರವನ್ನು ಕೇಳುತ್ತೇನೆ. ಎಲೈ ಅನಿಂದಿತನೇ, ನನ್ನ ಮೇಲೆ ಅನುಗ್ರಹವನ್ನು ಮಾಡಿ ನೀನು ಆ ವರವನ್ನೂ ಕೊಡಬೇಕು. ನಾನು ತಪ್ಪಾಗಿ ನಡೆದಾಗ ಅಂತಹ ಮಿಥ್ಯಾಚಾರಕ್ಕೆ ಆಶ್ರಯನಾದ ನನ್ನನ್ನು ಸಜ್ಜನರು ಶಿಕ್ಷಿಸಬೇಕು (ಎಂದು ಕೇಳಿದನು).
ಇತ್ಯುಕ್ತಃ ಸ ದ್ವಿಜಃ ಪ್ರಾಹ ತಥಾಸ್ತ್ವಿತಿ ನರಾಧಿಪಮ್ |
ಏವಂ ಸಮಭವಂಸ್ತಸ್ಯ ವರಾಸ್ತೇ ದೀಪ್ತತೇಜಸಃ ॥10॥
ಹೀಗೆ ಕೇಳಲ್ಪಟ್ಟ ದತ್ತಾತ್ರೇಯರು ರಾಜನನ್ನು ಕುರಿತು ಹಾಗೆಯೇ ಆಗಲಿ ಎಂದು ಹೇಳಿದರು. ಉಜ್ವಲವಾದ ಪರಾಕ್ರಮವುಳ್ಳ ಅರ್ಜುನನಿಗೆ ಹೀಗೆ ವರಗಳು ಲಭಿಸಿದವು.
ತತಃ ಸ ರಥಮಾಸ್ಥಾಯ ಜ್ವಲನಾರ್ಕಸಮದ್ಯುತಿಃ |
ಅಬ್ರವೀದ್ ವೀರ್ಯಸಮ್ಮೋಹಾತ್ ಕೋ ನ್ವಸ್ತಿ ಸದೃಶೋ ಮಯಾ |
ವೀರ್ಯಧೈರ್ಯಯಶಃಶೌಚೈರ್ವಿಕ್ರಮೇಣೌಜಸಾಪಿ ವಾ ॥11॥
ಅನಂತರ ಸೂರ್ಯಾಗ್ನಿ ಸದೃಶವಾದ ತೇಜಸ್ಸನ್ನು ಹೊಂದಿದ ಅವನು ರಥವನ್ನೇರಿ, ತನ್ನ ಪರಾಕ್ರಮದಿಂದ ಮೋಹಿತನಾಗಿ ವೀರ್ಯ, ಧೈರ್ಯ, ಕೀರ್ತಿ, ಶೌಚ, ವಿಕ್ರಮ, ಸಾಮರ್ಥ್ಯಗಳಲ್ಲಿ ನನಗೆ ಸಮಾನರಾದವರು ಯಾರಿದ್ದಾರೆ ಎಂದು ಕೇಳಿದನು.
ತದ್ವಾಕ್ಯಾಂತೇ ಚಾಂತರಿಕ್ಷೇ ವಾಗುವಾಚಾಶರೀರಿಣೀ |
ನ ತ್ವಂ ಮೂಢ ವಿಜಾನೀಷೇ ಬ್ರಾಹ್ಮಣಂ ಕ್ಷತ್ರಿಯಾದ್ ವರಮ್ |
ಸಹಿತೋ ಬ್ರಾಹ್ಮಣೇನೇಹ ಕ್ಷತ್ರಿಯೋ ರಕ್ಷತಿ ಪ್ರಜಾಃ ॥12॥
ಆ ವಾಕ್ಯವನ್ನು ಮುಗಿಸಿದ ಮೇಲೆ ಅಂತರಿಕ್ಷದಲ್ಲಿ ಅಶರೀರವಾಣಿಯಾಯಿತು. ಮೂಢನೇ, ಬ್ರಾಹ್ಮಣನು ಕ್ಷತ್ರಿಯನಿಗಿಂತ ಶ್ರೇಷ್ಠನೆಂದು ನೀನು ತಿಳಿಯುತ್ತಿಲ್ಲ. ಕ್ಷತ್ರಿಯನು ಬ್ರಾಹ್ಮಣನಿಂದ ಸಹಿತನಾಗಿ ಪ್ರಜೆಗಳನ್ನು ರಕ್ಷಿಸುತ್ತಾನೆ ಎಂದು ಹೇಳಿತು. .
ಅರ್ಜುನಃ
ಕುರ್ಯಾಂ ಭೂತಾನಿ ತುಷ್ಟೋಽಹಂ ಕ್ರುದ್ಧೋ ನಾಶಂ ತಥಾ ನಯೇ |
ಕರ್ಮಣಾ ಮನಸಾ ವಾಚಾ ನ ಮತ್ತೋಽಸ್ತಿ ವರೋ ದ್ವಿಜಃ ॥13॥
ಅರ್ಜುನ ಕುಪಿತನಾದರೆ ನಾನು ಭೂತಗಳನ್ನು ಸೃಷ್ಟಿಸಿಯೇನು. ಅವುಗಳನ್ನು ನಾಶ ಪಡಿಸುತ್ತೇನೆ. ಕರ್ಮದಿಂದಾಗಲೀ, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ ಬ್ರಾಹ್ಮಣನು ನನಗಿಂತ ಶ್ರೇಷ್ಠನಾದವನಲ್ಲ.
ಪೂರ್ವೋ ಬ್ರಹ್ಮೋತ್ತರೋ ವಾದೋ ದ್ವಿತೀಯಃ ಕ್ಷತ್ರಿಯೋತ್ತರಃ |
ತ್ವಯೋಕ್ತೌ ಯೌ ತು ತೌ ಹೇತೂ ವಿಶೇಷಸ್ತ್ವತ್ರ ದೃಶ್ಯತೇ ॥14॥

ಹಿಂದೆ ಸಮಾಜದಲ್ಲಿ ಬ್ರಾಹ್ಮಣನು ಶ್ರೇಷ್ಠನಾದವನು ಎಂಬ ವಾದವಿದ್ದಿತು. ಆದರೆ ಈಗ ಕ್ಷತ್ರಿಯನು ಶ್ರೇಷ್ಠನಾದವನು. ನೀನು ಹೇಳಿದ ಎರಡು ಕಾರಣಗಳು ಸರಿಯಲ್ಲ. ಈ ವಿಷಯದಲ್ಲಿ ವಿಶೇಷವು ಹೀಗೆ ಕಂಡುಬರುತ್ತದೆ.
ಬ್ರಾಹ್ಮಣಾಃ ಸಂಶ್ರಿತಾಃ ಕ್ಷತ್ರಂ ನ ಕ್ಷತ್ರಂ ಬ್ರಾಹ್ಮಣಾಶ್ರಿತಮ್ |
ಕ್ಷಿತೌ ಬ್ರಹ್ಮಪರಾ ವಿಪ್ರಾ ಖಾದಂತಿ ಕ್ಷತ್ರಿಯಾನ್ ಭುವಿ ||15||
ಬ್ರಾಹ್ಮಣರು ಕ್ಷತ್ರಿಯರನ್ನು ಆಶ್ರಯಿಸಿರುತ್ತಾರೆ. ಕ್ಷತ್ರಿಯರು ಬ್ರಾಹ್ಮಣರನ್ನು ಆಶ್ರಯಿಸಿರುವುದಿಲ್ಲ. ವೇದನಿಷ್ಠರಾದ ಬ್ರಾಹ್ಮಣರು ಕ್ಷತ್ರಿಯರನ್ನು ಆಶ್ರಯಿಸಿರುತ್ತಾರೆ ಮತ್ತು ಭೂಮಿಯಲ್ಲಿ ಕ್ಷತ್ರಿಯರನ್ನೇ ಉಪಜೀವಿಸಿ ಬದುಕುತ್ತಾರೆ.
ಕ್ಷತ್ರಿಯೇಷ್ವಾಶ್ರಿತೋ ಧರ್ಮಃ ಪ್ರಜಾನಾಂ ಪರಿಪಾಲನಮ್ |
ಕ್ಷತ್ರಾದ್ ವೃತ್ತಿರ್ಬ್ರಾಹ್ಮಣಾನಾಂ ತೈಃ ಕಥಂ ಬ್ರಾಹ್ಮಣೋ ವರಃ ||16||
ಪ್ರಜೆಗಳ ಪಾಲನಾರೂಪವಾದ ಧರ್ಮವು ಕ್ಷತ್ರಿಯರನ್ನು ಆಶ್ರಯಿಸಿದೆ. ಬ್ರಾಹ್ಮಣರ ಜೀವನೋಪಾಯವು ಕ್ಷತ್ರಿಯರಿಂದ ಉಂಟಾಗುತ್ತದೆ. ಕ್ಷತ್ರಿಯರಿಗಿಂತಲೂ ಬ್ರಾಹ್ಮಣನು ಹೇಗೆ ಶ್ರೇಷ್ಠನಾಗುತ್ತಾನೆ?
ಸರ್ವಭೂತಪ್ರಧಾನಾಂಸ್ತಾನ್ ಭೈಕ್ಷವೃತ್ತೀನಹಂ ಸದಾ |
ಆತ್ಮಸಂಭಾವಿತಾನ್ ವಿಪ್ರಾನ್ ಸ್ಥಾಪಯಾಮ್ಯಾತ್ಮನೋ ವಶೇ ||17||
ಸರ್ವಭೂತಗಳಲ್ಲಿ ಶ್ರೇಷ್ಠರಾದ, ಭೈಕ್ಷ್ಯವೃತ್ತಿಯಲ್ಲೇ ನಿರತರಾದ, ಆತ್ಮಸಂಭಾವಿತರಾದ ಬ್ರಾಹ್ಮಣರನ್ನು ನಾನು ನನ್ನ ವಶದಲ್ಲಿಟ್ಟುಕೊಳ್ಳುತ್ತೇನೆ.
ಕಥಿತಂ ಹಿ ಮಯಾ ಸತ್ಯಂ ಗಾಯತ್ರ್ಯಾ ಕನ್ಯಯಾ ಭುವಿ |
ವಿಜೇಷ್ಯಾಮ್ಯವಶಾನ್ ಸರ್ವಾನ್ ಬ್ರಾಹ್ಮಣಾಂಶ್ಚರ್ಮವಾಸಸಃ ||18||
ಸಾಕ್ಷಿಯಾದ ಗಾಯತ್ರಿಯ ಎದುರಿನಲ್ಲಿ ಭೂಮಿಯಲ್ಲಿ ನಾನು ಹೇಳಿದ ಈ ಮಾತು ಸತ್ಯವಾದುದು. ಕೃಷ್ಣಾಜಿನವನ್ನು ಧರಿಸಿದ ತಮ್ಮ ವಶರಲ್ಲದ ಬ್ರಾಹ್ಮಣರೆಲ್ಲರನ್ನೂ ನಾನು ಜಯಿಸುವೆನು (ಲಕ್ಷ್ಯಾಲಂಕಾರ).
ನ ಚ ಮಾಂ ಚ್ಯಾವಯೇದ್ ರಾಷ್ಟ್ರಾತ್ ತ್ರಿಷು ಲೋಕೇಷು ಕಶ್ಚನ |
ದೇವೋ ವಾ ಮಾನುಷೋ ವಾಪಿ ತಸ್ಮಾಜ್ಜ್ಯೇಷ್ಠೋ ದ್ವಿಜಾದಹಮ್ ||
ಮೂರುಲೋಕಗಳಲ್ಲಿರುವ ದೇವನಾಗಲೀ ಅಥವಾ ಮನುಷ್ಯನಾಗಲೀ ಯಾವನೂ ನನ್ನನ್ನು ನನ್ನ ರಾಜ್ಯದಿಂದ ಚ್ಯುತಿಗೊಳಿಸಲಾರ. ಆದ್ದರಿಂದ ನಾನು ಬ್ರಾಹ್ಮಣರಿಗಿಂತ ಶ್ರೇಷ್ಠನಾದವನು.
ಅದ್ಯ ಬ್ರಹ್ಮೋತ್ತರಂ ಲೋಕಂ ಕರಿಷ್ಯೇ ಕ್ಷತ್ರಿಯೋತ್ತರಮ್ |
ನ ಹಿ ಮೇ ಸಂಯುಗೇ ಕಶ್ಚಿತ್ ಸೋಢುಮುತ್ಸಹತೇ ಬಲಮ್ ||20||
ಇದುವರೆಗೆ ಬ್ರಾಹ್ಮಣಪ್ರಧಾನವಾಗಿದ್ದ ಲೋಕವನ್ನು ನಾನು ಈಗ ಕ್ಷತ್ರಿಯ ಪ್ರಧಾನವನ್ನಾಗಿ ಮಾಡುವೆನು. ಯುದ್ಧದಲ್ಲಿ ನನ್ನ ಬಲವನ್ನು ಯಾವನೂ ಸಹಿಸಲಾರ (ಎಂದು ಹೇಳಿದನು).
ಅರ್ಜುನಸ್ಯ ವಚಃ ಶ್ರುತ್ವಾ ವಿತ್ರಸ್ತಾಭೂನ್ನಿಶಾಚರೀ |
ಅಥೈನಮಂತರಿಕ್ಷಸ್ಥಸ್ತತೋ ವಾಯುರಭಾಷತ ||21||
ಅರ್ಜುನನ ಮಾತನ್ನು ಕೇಳಿ ನಿಶಾಚರಿಯಾದ ಭೂತವು ಹೆದರಿತು. ಆಗ ವಾಯುವು ಅಂತರಿಕ್ಷದಲ್ಲಿ ನಿಂತು ಮಾತನಾಡಿದನು.
ತ್ಯಜೈನಂ ಕಲುಷಂ ಭಾವಂ ಬ್ರಾಹ್ಮಣೇಭ್ಯೋ ನಮಸ್ಕುರು |
ಏತೇಷಾಂ ಕುರ್ವತಃ ಪಾಪಂ ರಾಷ್ಟ್ರಕ್ಷೋಭೋ ಹಿ ತೇ ಭವೇತ್ ||22||
ಈ ದುಷ್ಟಭಾವವನ್ನು ಬಿಡು. ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡು. ಬ್ರಾಹ್ಮಣರಿಗೆ ಅಪರಾಧವನ್ನು ಮಾಡಿದರೆ ನಿನಗೆ ರಾಷ್ಟ್ರಕ್ಷೋಭೆ ಉಂಟಾದೀತು!
ಅಥ ವಾ ತ್ವಾಂ ಮಹೀಪಾಲ ಶಮಯಿಷ್ಯಂತಿ ವೈ ದ್ವಿಜಾಃ |
ನಿರಸಿಷ್ಯಂತಿ ವಾ ರಾಷ್ಟ್ರಾದ್ ಹತೋತ್ಸಾಹಂ ಮಹಾಬಲಾಃ ||23||
ಅಥವಾ ಎಲೈ ಮಹಾರಾಜನೇ, ಮಹಾಬಲರಾದ ಬ್ರಾಹ್ಮಣರೇ ನಿನ್ನನ್ನು ಶಮನಗೊಳಿಸಿ ಉತ್ಸಾಹವನ್ನು ಕಳೆದುಕೊಂಡ ರಾಷ್ಟ್ರದಿಂದ ನಿನ್ನನ್ನು ಹೊರಗೆ ಹಾಕುವರು (ಎಂದು ಹೇಳಿದನು).
ತಂ ರಾಜಾ ಕಸ್ತ್ವಮಿತ್ಯಾಹ ತತಸ್ತಂ ಪ್ರಾಹ ಮಾರುತಃ |
ವಾಯುರ್ವೈ ದೇವದೂತೋಽಸ್ಮಿ ಹಿತಂ ತ್ವಾಂ ಪ್ರಬ್ರವೀಮ್ಯಹಮ್ ||
ಆಗ ರಾಜನು ನೀನು ಯಾರು ಎಂದು ಕೇಳಿದನು. ಅದಕ್ಕೆ ಉತ್ತರವಾಗಿ ವಾಯುವು ಅವನನ್ನು ಕುರಿತು- `ನಾನು ದೇವದೂತನಾದ ವಾಯು. ನಿನಗೆ ಹಿತವನ್ನು ಹೇಳುತ್ತಿದ್ದೇನೆ' (ಎಂದು ಹೇಳಿದನು).
ಅರ್ಜುನಃ
ಅಹೋ ತ್ವಯಾಽದ್ಯ ವಿಪ್ರೇಷು ಭಕ್ತಿರಾಗಃ ಪ್ರದರ್ಶಿತಃ |
ಯಾದೃಶಂ ಪೃಥಿವೀಭೂತಸ್ತಾದೃಶಂ ಬ್ರೂಹಿ ವೈ ದ್ವಿಜಮ್ ||25||
ಅರ್ಜುನ ಆಶ್ಚರ್ಯ! ನೀನು ಬ್ರಾಹ್ಮಣರಲ್ಲಿ ಬಹಳ ಭಕ್ತಿ-ಸ್ನೇಹಗಳನ್ನು ಪ್ರದರ್ಶಿಸುತ್ತಿದ್ದೀಯೆ. ಪೃಥಿವಿಗೆ ಸಮಾನನಾದ ಒಬ್ಬ ಬ್ರಾಹ್ಮಣನಿದ್ದಾನೆಯೇ ಹೇಳು.
ವಾಯೋರ್ವಾ ಸದೃಶಂ ಕಂಚಿದ್ ಬ್ರೂಹಿ ತ್ವಂ ಬ್ರಾಹ್ಮಣೋತ್ತಮಮ್ |
ಅಪಾಂ ವೈ ಸದೃಶಂ ಬ್ರೂಹಿ ಸೂರ್ಯಸ್ಯ ನಭಸೋಽಪಿ ವಾ ||26||
ವಾಯುವಿಗೆ ಸಮಾನವಾದ ಒಬ್ಬ ಬ್ರಾಹ್ಮಣಶ್ರೇಷ್ಠನನ್ನಾದರೂ ಹೇಳು ಅಥವಾ ಜಲಕ್ಕೆ, ಸೂರ್ಯನಿಗೆ, ಆಕಾಶಕ್ಕೆ ಸದೃಶನಾದ ಒಬ್ಬ ಬ್ರಾಹ್ಮಣಶ್ರೇಷ್ಠನನ್ನಾದರೂ ಹೇಳು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಬ್ರಾಹ್ಮಣಪ್ರಶಂಸನಂ ನಾಮ ಏಕಚತ್ವಾರಿಂಶೋತ್ತರದ್ವಿಶತತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತೆರಡನೆಯ ಅಧ್ಯಾಯ
ವಾಯುದೇವನ ಉಪದೇಶ
ವಾಯುಃ
ಶೃಣು ಮೂಢ ಗುಣಾನ್ ಕಾಂಶ್ಚಿದ್ ಬ್ರಾಹ್ಮಣಾನಾಂ ಮಹಾತ್ಮನಾಮ್ ।
ಯೇ ತ್ವಯಾ ಕೀರ್ತಿತಾ ರಾಜನ್ ತೇಭ್ಯೋಽಥ ಬ್ರಾಹ್ಮಣೋ ವರಃ ॥1॥
ವಾಯು ಎಲೈ ಮೂಢನೇ, ಮಹಾತ್ಮರಾದ ಬ್ರಾಹ್ಮಣರ ಕೆಲವು ಗುಣಗಳನ್ನು ಕೇಳು. ಎಲೈ ರಾಜನೇ, ನೀನು ಯಾರನ್ನು ಹೇಳಿದ್ದೀಯೋ ಅವರಿಗಿಂತಲೂ ಬ್ರಾಹ್ಮಣನು ಉತ್ತಮನಾದವನು.
ತ್ಯಕ್ತ್ವಾ ಮಹೀತ್ವಂ ಭೂಮಿಸ್ತು ಸ್ಪರ್ಧಯಾಽಂಗನೃಪಸ್ಯ ಹ ।
ನಾಶಂ ಜಗಾಮ ತಾಂ ವಿಪ್ರೋ ವ್ಯಷ್ಟಂಭಯತ ಕಶ್ಯಪಃ ॥2॥
ಭೂಮಿಯು ತನ್ನ ಧನ-ಧಾನ್ಯ ಸಮೃದ್ಧಿಯನ್ನು ಮಾಡುವ ಸ್ವಭಾವವನ್ನು ಬಿಟ್ಟು ಅಂಗರಾಜನ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡಿ ನಾಶವನ್ನು ಹೊಂದಿತು. ಬ್ರಾಹ್ಮಣರಾದ ಕಾಶ್ಯಪರು ಭೂಮಿಯನ್ನು ಪುನಃ ಸ್ಥಾಪಿಸಿದರು.
ಅಕ್ಷಯಾ ಬ್ರಾಹ್ಮಣಾ ರಾಜನ್ ದಿವಿ ಚೇಹ ಚ ಸರ್ವದಾ ।
ಅಪಿಬತ್ ತೇಜಸಾ ಹ್ಯಾಪಃ ಸ್ವಯಮೇವಾಂಗಿರಾಃ ಪುರಾ ॥3॥
ರಾಜನೇ, ಬ್ರಾಹ್ಮಣರು ಸ್ವರ್ಗಲೋಕದಲ್ಲೂ ಮತ್ತು ಭೂಲೋಕದಲ್ಲೂ ಸರ್ವದಾ ನಾಶವಿಲ್ಲದವರು. ಹಿಂದೆ ಅಂಗಿರಸರು ತಮ್ಮ ಸಾಮರ್ಥ್ಯದಿಂದ ಜಲವನ್ನೆಲ್ಲಾ ಕುಡಿದರು.
ಸ ತಾಃ ಪಿಬನ್ ಕ್ಷೀರಮಿವ ನಾತೃಪ್ಯತ ಮಹಾತಪಾಃ ।
ಅಪೂರಯನ್ಮಹೌಘೇನ ಮಹೀಂ ಸರ್ವಾಂ ಚ ಪಾರ್ಥಿವ ॥4॥
ಮಹಾತಪಸ್ವಿಗಳಾದ ಅವರು ಹಾಲಿನಂತೆ ನೀರನ್ನು ಕುಡಿದರೂ ತೃಪ್ತಿಯನ್ನು ಹೊಂದಲಿಲ್ಲ. ಎಲೈ ರಾಜನೇ, ಅನಂತರ ಅವರು ಜಲಪ್ರವಾಹದಿಂದ ಭೂಮಿ ಎಲ್ಲವನ್ನೂ ತುಂಬಿದರು.
ತಸ್ಮಿನ್ನಹಂ ಚ ಕ್ರುದ್ಧೇ ವೈ ಜಗತ್ತ್ಯಕ್ತ್ವಾ ತತೋ ಗತಃ ।
ವ್ಯತಿಷ್ಠಮಗ್ನಿಹೋತ್ರೇ ಚ ಚಿರಮಂಗಿರಸೋ ಭಯಾತ್ ॥5॥
ಅವರು ಕೋಪಗೊಂಡಿರಲು ನಾನು ಅಂಗಿರಸರ ಭಯದಿಂದ ಜಗತ್ತನ್ನು ಬಿಟ್ಟು ಅಗ್ನಿಹೋತ್ರದಲ್ಲಿ ಬಹುಕಾಲ ವಾಸಿಸಿದೆನು.
ಅಭಿಶಪ್ತಶ್ಚ ಭಗವಾನ್ ಗೌತಮೇನ ಪುರಂದರಃ ।
ಅಹಲ್ಯಾಂ ಕಾಮಯಾನೋ ವೈ ಧರ್ಮಾರ್ಥಂ ಚ ನ ಹಿಂಸಿತಃ ॥6॥
ಪೂಜ್ಯನಾದ ಪುರಂದರನು ಗೌತಮರಿಂದ ಶಾಪವನ್ನು ಹೊಂದಿದನು. ಅಹಲ್ಯೆಯನ್ನು ಕಾಮಿಸಿದ ಅವನು ಧರ್ಮದ ದೃಷ್ಟಿಯಿಂದ ಗೌತಮರಿಂದ ಕೊಲ್ಲಲ್ಪಡಲಿಲ್ಲ.
ತಥಾ ಸಮುದ್ರೋ ನೃಪತೇ ಪೂರ್ಣೋ ಮೃಷ್ಟೇನ ವಾರಿಣಾ ।
ಬ್ರಾಹ್ಮಣೈರಭಿಶಪ್ತಃ ಸನ್ಲವಣೋದಃ ಕೃತೋ ವಿಭೋ ॥7॥
ಎಲೈ ರಾಜನೇ, ಹಾಗೆಯೇ ಶುದ್ಧವಾದ ಮತ್ತು ಸ್ವಚ್ಛವಾದ ಜಲದಿಂದ ತುಂಬಿದ ಸಮುದ್ರವು ಬ್ರಾಹ್ಮಣರ ಶಾಪದಿಂದ ಉಪ್ಪು ನೀರನ್ನು ಹೊಂದಿತು.
ಸುವರ್ಣವರ್ಣೋ ನಿರ್ಧೂಮಃ ಸಂಹತೋರ್ಧ್ವಶಿಖಃ ಕಪಿಃ ।
ಕ್ರುದ್ಧೇನಾಂಗಿರಸಾ ಶಪ್ತೋ ಗುಣೈರೇತೈರ್ವಿವರ್ಜಿತಃ ॥8॥
ಸುವರ್ಣವರ್ಣವನ್ನು ಹೊಂದಿ, ನಿರ್ಧೂಮನಾಗಿ, ಊರ್ಧ್ವಶಿಖೆಗಳ ಸಮುದಾಯವನ್ನು ಹೊಂದಿದ ಅಗ್ನಿಯು ಕೋಪಗೊಂಡ ಅಂಗಿರಸರ ಶಾಪದಿಂದ ತನ್ನ ಗುಣಗಳನ್ನು ಕಳೆದುಕೊಂಡನು (ಲಕ್ಷಾಲಂಕಾರ).
ಮರುತಶ್ಚೂರ್ಣಿತಾನ್ ಪಶ್ಯ ಯೇಽಹಸಂತ ಮಹೋದಧಿಮ್ ।
ಸುವರ್ಣಧಾರಿಣಾ ನಿತ್ಯಮ್ ಅವಶಪ್ತಾ ದ್ವಿಜನ್ಮನಾ ॥9॥
ಮಹಾಸಮುದ್ರವನ್ನು ಹಾಸ್ಯ ಮಾಡಿದ ಮರುತ್ತುಗಳು ಸುವರ್ಣಧಾರಿಣಿಯೆಂಬ ಬ್ರಾಹ್ಮಣಿಯಿಂದ ಶಾಪವನ್ನು ಹೊಂದಿ ಚೂರ್ಣಿತರಾದುದನ್ನು ನೋಡು.
ಸಮೋ ನ ತ್ವಂ ದ್ವಿಜಾತಿಭ್ಯಃ ಶ್ರೇಷ್ಠಂ ವಿದ್ಧಿ ನರಾಧಿಪ ।
ಗರ್ಭಸ್ಥಾನ್ ಬ್ರಾಹ್ಮಣಾನ್ ಸಮ್ಯಙ್ ನಮಸ್ಯತಿ ಕಿಲ ಪ್ರಭುಃ ॥10॥
ಎಲೈ ನರಾಧಿಪನೇ, ನೀನು ಬ್ರಾಹ್ಮಣರಿಗೆ ಸಮನೂ ಅಲ್ಲ ಅವರಿಗಿಂತ ಶ್ರೇಷ್ಠನೂ ಅಲ್ಲ ಎಂಬುದನ್ನು ತಿಳಿ. ಪ್ರಭುವಾದವನು ಗರ್ಭದಲ್ಲಿದ್ದ ಬ್ರಾಹ್ಮಣರಿಗೂ ಚೆನ್ನಾಗಿ ನಮಸ್ಕಾರವನ್ನು ಮಾಡುವನಷ್ಟೆ?
ದಂಡಕಾನಾಂ ಮಹದ್ರಾಜ್ಯಂ ಬ್ರಾಹ್ಮಣೇನ ವಿನಾಶಿತಮ್ ।
ತಾಳಜಂಘಂ ಮಹತ್ಕ್ಷತ್ರಮೌರ್ವೇಣೈಕೇನ ನಾಶಿತಮ್ ॥11॥
ದಂಡಕ ದೇಶದ ದೊಡ್ಡ ರಾಜ್ಯವು ಬ್ರಾಹ್ಮಣನಿಂದ ವಿನಾಶ ಮಾಡಲ್ಪಟ್ಟಿತು. ತಾಳಜಂಘವೆಂಬ ದೊಡ್ಡ ಕ್ಷತ್ರಿಯ ಸಮೂಹವು ಒಬ್ಬ

ಔರ್ವನಿಂದ ನಾಶ ಮಾಡಲ್ಪಟ್ಟಿತು.
ತ್ವಯಾ ಚ ವಿಪುಲಂ ರಾಜ್ಯಂ ಬಲಂ ಧರ್ಮಃ ಶ್ರುತಂ ತಥಾ |
ದತ್ತಾತ್ರೇಯಪ್ರಸಾದೇನ ಪ್ರಾಪ್ತಂ ಪರಮದುರ್ಲಭಮ್ ||12||
ನೀನು ಪರಮದುರ್ಲಭವಾದ, ವಿಸ್ತಾರವಾದ ರಾಜ್ಯವನ್ನೂ, ಬಲವನ್ನೂ, ಧರ್ಮವನ್ನೂ ಮತ್ತು ವಿದ್ಯೆಯನ್ನೂ ದತ್ತಾತ್ರೇಯರ ಅನುಗ್ರಹದಿಂದ ಪಡೆದಿದ್ದೀಯೆ.
ಅಗ್ನಿಂ ತ್ವಂ ಯಜಸೇ ನಿತ್ಯಂ ಕಸ್ಮಾದರ್ಜುನ ಬ್ರಾಹ್ಮಣಮ್ |
ಸ ಹಿ ಸರ್ವಸ್ಯ ಲೋಕಸ್ಯ ಹವ್ಯವಾಟ್ ಕಿಂ ನ ವೇತ್ಸಿ ತಮ್ ||13||
ಎಲೈ ಅರ್ಜುನನೇ, ನೀನು ಬ್ರಾಹ್ಮಣನಾದ ಅಗ್ನಿಯನ್ನು ಏಕೆ ನಿತ್ಯವೂ ಪೂಜಿಸುತ್ತೀಯೆ? ಅವನು ಎಲ್ಲ ಲೋಕಗಳಿಗೂ ಹವ್ಯವನ್ನು ತೆಗೆದುಕೊಂಡು ಹೋಗುವವನು ಎಂದು ನೀನು ತಿಳಿದಿಲ್ಲವೆ?
ಅಥ ವಾ ಬ್ರಾಹ್ಮಣಶ್ರೇಷ್ಠಮನು ಭೂತಾನುಪಾಲಕಮ್ |
ಕರ್ತಾರಂ ಜೀವಲೋಕಸ್ಯ ಕಸ್ಮಾಜ್ಜಾನನ್ ವಿಮುಹ್ಯಸೇ ||14||
ಅಥವಾ ಬ್ರಾಹ್ಮಣಶ್ರೇಷ್ಠರ ಅನಂತರ ಜೀವಲೋಕದ ಸೃಷ್ಟಿಕರ್ತರಾದ, ಭೂತಪಾಲಕರಾದ ದೇವತೆಗಳು ಇರುತ್ತಾರೆ ಎಂದು ತಿಳಿದು ಏಕೆ ಮೋಹಕ್ಕೆ ಒಳಗಾಗಿದ್ದೀಯೆ?
ತಥಾ ಪ್ರಜಾಪತಿರ್ಬ್ರಹ್ಮಾ ಅವ್ಯಕ್ತಃ ಪ್ರಭವಾಪ್ಯಯಃ |
ಯೇನೇದಂ ನಿಖಿಲಂ ವಿಶ್ವಂ ಜನಿತಂ ಸ್ಥಾವರಂ ಚರಮ್ ||15||
ಹಾಗೆಯೇ ಅವ್ಯಕ್ತರೂ, ಸೃಷ್ಟಿ-ಸಂಹಾರಗಳಿಗೆ ಕಾರಣರೂ, ಈ ಸ್ಥಾವರ- ಜಂಗಮಾತ್ಮಕವಾದ ಜಗತ್ತೆಲ್ಲವನ್ನೂ ಸೃಷ್ಟಿಸಿದವರೂ, ಪ್ರಜಾಪತಿಗಳೂ ಆದ ಬ್ರಹ್ಮದೇವರು ಬ್ರಾಹ್ಮಣರಷ್ಟೆ?
ಅಂಡಜಾತಂ ತು ಬ್ರಹ್ಮಾಣಂ ಕೇಚಿದಿಚ್ಛಂತ್ಯಪಂಡಿತಾಃ |
ಅಂಡಾದ್ ಭಿನ್ನಾದ್ ಬಭುಃ ಶೈಲಾ ದಿಶೋಽಂಭಃ ಪೃಥಿವೀ ದಿವಮ್ ||
ಪಂಡಿತರಲ್ಲದ ಕೆಲವರು ಬ್ರಹ್ಮದೇವರು ಅಂಡದಿಂದ ಹುಟ್ಟಿದರೆಂದು ಭಾವಿಸುತ್ತಾರೆ. ಅಂಡವು ಭಿನ್ನವಾದಾಗ ಪರ್ವತಗಳೂ, ದಿಕ್ಕುಗಳೂ, ಜಲವೂ, ಪೃಥಿವಿಯೂ, ಸ್ವರ್ಗವೂ ಉಂಟಾದವು.
ದ್ರಷ್ಟವ್ಯಂ ನೈತದೇವಂ ಹಿ ಕಥಂ ಜ್ಯಾಯಸ್ತಮೋ ಹಿ ಸಃ |
ಸ್ಮೃತಮಾಕಾಶಮಂಡಂ ತು ತಸ್ಮಾಜ್ಜಾತಃ ಪಿತಾಮಹಃ ||17||
ಇದನ್ನು ಹೀಗೆ ತಿಳಿಯಬಾರದು. ಬ್ರಹ್ಮದೇವರು ಅಂಡದಿಂದ ಹುಟ್ಟಿದ್ದರೆ ಅವರು ಶ್ರೇಷ್ಠರಾಗುವುದು ಹೇಗೆ? ಆಕಾಶಕ್ಕೆ ಅಂಡವೆಂದು ಹೆಸರು. ಬ್ರಹ್ಮದೇವರು ಆಕಾಶದಿಂದ ಹುಟ್ಟಿದವರು.
ತಿಷ್ಠೇತ್ ಕಥಮಿತಿ ಬ್ರೂಹಿ ನ ಕಿಂಚಿದ್ಧಿ ತದಾ ಭವೇತ್ |
ಅಹಂಕಾರ ಇತಿ ಪ್ರೋಕ್ತಃ ಸರ್ವತೇಜೋಗತಃ ಪ್ರಭುಃ ||18||
ಯಾವುದಾದರೂ ವಸ್ತುವು ಆಗ ಹೇಗೆ ಇರಬಹುದೆಂದು ಹೇಳಲು ಆಗ ಯಾವುದೂ ಇರುವುದಕ್ಕೆ ಸಾಧ್ಯವಿಲ್ಲ. ಅಹಂಕಾರ ತತ್ತ್ವವನ್ನು ಸೃಷ್ಟಿಸಿದವರೇ ಸರ್ವತೇಜೋಗತರಾದ ಬ್ರಹ್ಮದೇವರು. (ಅಹಂಕಾರತತ್ತ್ವವು ಸೃಷ್ಟಿಯಾದ ಮೇಲೆ ಬ್ರಹ್ಮಾಂಡವು ಸೃಷ್ಟಿಯಾಗಬೇಕಷ್ಟೆ?)
ನಾಸ್ತ್ಯಂಡಮಸ್ತಿ ತು ಬ್ರಹ್ಮಾ ಸ ರಾಜಲ್ಲೋಕಭಾವನಃ |
ಇತ್ಯುಕ್ತಃ ಸ ತದಾ ತೂಷ್ಣೀಮಭೂದ್ ವಾಯುಸ್ತಮಬ್ರವೀತ್ ||19||
ಎಲೈ ರಾಜನೇ, ಬ್ರಹ್ಮಾಂಡವು ಇರುವುದಿಲ್ಲ, ಲೋಕಸೃಷ್ಟಿಕರ್ತರಾದ ಬ್ರಹ್ಮದೇವರು ಇರುತ್ತಾರೆ ಎಂದು ಆಗ ವಾಯುದೇವರು ಅವನನ್ನು ಕುರಿತು ಪುನಃ ಮಾತನಾಡಿದರು. ವಾಯುದೇವರು ಹೇಳಿದಾಗ ರಾಜರು ಬೇರೆ ಏನನ್ನೂ ಮಾತನಾಡದೆ ಸುಮ್ಮನಾದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಬ್ರಾಹ್ಮಣಸಾಮರ್ಥ್ಯಕಥನಂ ನಾಮ ದ್ವಿಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ಮೂರನೆಯ ಅಧ್ಯಾಯ
ವಾಯುವಿನಿಂದ ಉಚಥ್ಯರ ಮಹಿಮೆಯ ಕಥನ.
ವಾಯುಃ
ಇಮಾಂ ಭೂಮಿಂ ಬ್ರಾಹ್ಮಣೇಭ್ಯೋ ದಿತ್ಸುರ್ವೈ ದಕ್ಷಿಣಾಂ ಪುರಾ |
ಅಂಗೋ ನಾಮ ನೃಪೋ ರಾಜಂಸ್ತತಶ್ಚಿಂತಾಂ ಮಹೀ ಯಯೌ ||1||
ವಾಯು ಎಲೈ ರಾಜನೇ, ಹಿಂದೆ ಅಂಗ ಎಂಬ ರಾಜನು ಈ ಭೂಮಿಯನ್ನು ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಡಲು ಬಯಸಿದನು. ಆಗ ಭೂಮಿಯು ಚಿಂತಾಕ್ರಾಂತಳಾದಳು.
ಧಾರಣೀಂ ಸರ್ವಭೂತಾನಾಮಯಂ ಪ್ರಾಪ್ಯ ವರೋ ನೃಪಃ |
ಕಥಮಿಚ್ಛತಿ ಮಾಂ ದಾತುಂ ದ್ವಿಜೇಭ್ಯೋ ಬ್ರಹ್ಮಣಃ ಸುತಾಮ್ ||2||
ಸರ್ವಪ್ರಾಣಿಗಳಿಗೆ ಆಧಾರಳಾದ, ಬ್ರಹ್ಮದೇವರ ಪುತ್ರಿಯಾದ ನನ್ನನ್ನು ಪಡೆದು ಈ ಶ್ರೇಷ್ಠನಾದ ರಾಜನು ನನ್ನನ್ನು ಹೇಗೆ ಬ್ರಾಹ್ಮಣರಿಗೆ ದಾನವಾಗಿ ಕೊಡಲು ಇಚ್ಛಿಸುತ್ತಿದ್ದಾನೆ?

ಸಾಹಂ ತ್ಯಕತ್ತ್ವ ಗಮಿಷ್ಯಾಮಿ ಭೂಮಿತ್ವಂ ಬ್ರಹ್ಮಣಃ ಪದಮ್ |
ಅಯಂ ಸರಾಷ್ಟ್ರೋ ನೃಪತಿರ್ಮಾ ಭೂದಿತಿ ತತೋಽಗಮತ್ ॥3॥
ನಾನು ನನ್ನ ಭೂಮಿ ಗುಣವನ್ನು ಬಿಟ್ಟು ಬ್ರಹ್ಮದೇವರ ಸ್ಥಾನಕ್ಕೆ ಹೋಗುವೆನು. ಈ ರಾಜನು ಮತ್ತು ರಾಷ್ಟ್ರವು ಇಲ್ಲದೇ ಹೋಗಲಿ ಎಂದು ಚಿಂತಿಸಿ ಹೊರಟಳು.
ತತಸ್ತಾಂ ಕಶ್ಯಪೋ ದೃಷ್ಟ್ವಾ ವ್ರಜಂತೀಂ ಪೃಥಿವೀಂ ತದಾ |
ಪ್ರವಿವೇಶ ಮಹೀಂ ಸದ್ಯೋ ಮುಕತತ್ವ್ವತ್ಮಾನಂ ಸಮಾಹಿತಃ ॥4॥
ಆಗ ಕಶ್ಯಪರು ಹೊರಟು ಹೋಗುತ್ತಿದ್ದ ಭೂಮಿಯನ್ನು ನೋಡಿ ತಕ್ಷಣದಲ್ಲಿ ತಮ್ಮ ಸ್ವಭಾವವನ್ನು ತ್ಯಜಿಸಿ ಸಮಾಧಾನದಿಂದ ಭೂಮಿಯೊಳಗೆ ಪ್ರವೇಶಿಸಿದರು.
ರುದ್ಧಾ ಸಾ ಸರ್ವತೋ ಜಜ್ಞೇ ತೃಣೌಷಧಿಸಮನ್ವಿತಾ |
ಧರ್ಮೋತ್ತರಾ ನಷ್ಟಭಯಾ ಭೂಮಿರಾಸೀತ್ ತತೋ ನೃಪ ॥5॥
ಎಲೈ ರಾಜನೇ, ಹೀಗೆ ಕಶ್ಯಪರಿಂದ ತಡೆಯಲ್ಪಟ್ಟ ಭೂಮಿಯಲ್ಲಿ ಎಲ್ಲ ಕಡೆಯಲ್ಲಿಯೂ ತೃಣ, ವನಸ್ಪತಿಗಳು ಉಂಟಾದವು. ಭೂಮಿಯು ಧರ್ಮ ಪ್ರಧಾನವಾಗಿ ಭಯರಹಿತವಾಯಿತು.
ಏವಂ ವರ್ಷಸಹಸ್ರಾಣಿ ದಿವ್ಯಾನಿ ವಿಪುಲವ್ರತಃ |
ತ್ರಿಂಶತಂ ಕಶ್ಯಪೋ ರಾಜನ್ ಭೂಮಿರಾಸೀದತಂದ್ರಿತಾ ॥6॥
ಎಲೈ ರಾಜನೇ, ವಿಪುಲವ್ರತವನ್ನು ಧರಿಸಿದ ಕಶ್ಯಪರು ಹೀಗೆ ದಿವ್ಯಮಾನದ ಮೂವತ್ತು ಸಹಸ್ರ ವರ್ಷಗಳ ಕಾಲ ಆಲಸ್ಯವಿಲ್ಲದೆ ಭೂಮಿಯಾದರು (ಭೂಮಿಯ ಕಾರ್ಯವನ್ನು ಮಾಡಿದರು).
ಅಥಾಗಮ್ಯ ಮಹಾರಾಜ ನಮಸ್ಕೃತ್ಯ ಚ ಕಶ್ಯಪಮ್ |
ಪೃಥಿವೀ ಕಾಶ್ಯಪೀ ಜಜ್ಞೇ ಸುತಾ ತಸ್ಯ ಮಹಾತ್ಮನಃ ॥7॥
ಎಲೈ ರಾಜನೇ, ಅನಂತರ ಭೂಮಿಯು ಬಂದು ಕಾಶ್ಯಪರನ್ನು ನಮಸ್ಕರಿಸಿ ಮಹಾತ್ಮರಾದ ಅವರ ಮಗಳಾಗಿ ಕಾಶ್ಯಪೀ ಎನಿಸಿಕೊಂಡಳು.
ಏಷ ರಾಜನ್ನೀದೃಶೋ ವೈ ಬ್ರಾಹ್ಮಣಃ ಕಶ್ಯಪೋಽಭವತ್ |
ಅನ್ಯಂ ಪ್ರಬ್ರೂಹಿ ವಾಪಿ ತ್ವಂ ಕಶ್ಯಪಾತ್ ಕ್ಷತ್ರಿಯಂ ವರಮ್ ॥8॥
ಎಲೈ ರಾಜನೇ, ಕಶ್ಯಪರು ಇಂತಹ ಬ್ರಾಹ್ಮಣರಾಗಿದ್ದರು. ಕಶ್ಯಪರಿಗಿಂತ ಶ್ರೇಷ್ಠರಾದ ಒಬ್ಬ ಕ್ಷತ್ರಿಯನನ್ನು ಹೇಳು.
ತೂಷ್ಣೀಂ ಬಭೂವ ನೃಪತಿಃ ಪವನಸ್ತ್ವಬ್ರವೀತ್ ಪುನಃ |
ಶೃಣು ರಾಜನ್ನುಚಥ್ಯಸ್ಯ ಜಾತಸ್ಯಾಂಗಿರಸೇ ಕುಲೇ ॥9॥
ಆಗ ರಾಜನು ಸುಮ್ಮನಾಗಿ ವಾಯುವು ಪುನಃ ಮಾತನ್ನು ಮುಂದುವರಿಸಿದನು. ಎಲೈ ರಾಜನೇ, ಅಂಗಿರಸರ ಕುಲದಲ್ಲಿ ಜನಿಸಿದ ಉಚಥ್ಯರ ಚರಿತೆಯನ್ನು ಕೇಳು.
ಭದ್ರಾ ಸೋಮಸ್ಯ ದುಹಿತಾ ರೂಪೇಣ ಪರಮಾ ಮತಾ |
ತಸ್ಯಾಸ್ತುಲ್ಯಂ ಪತಿಂ ಸೋಮ ಉಚಥ್ಯಂ ಸಮಪಶ್ಯತ ॥10॥
ಚಂದ್ರನ ಮಗಳಾದ ಭದ್ರೆಯು ಪರಮ ಸುಂದರಿಯಾಗಿದ್ದಳು. ಚಂದ್ರನು ಉಚಥ್ಯರು ಅವಳಿಗೆ ಯೋಗ್ಯನಾದ ಪತಿ ಎಂದು ಭಾವಿಸಿದರು.
ಸಾ ಚ ತೀವ್ರಂ ತಪಸ್ತೇಪೇ ಮಹಾಭಾಗಾ ಯಶಸ್ವಿನೀ |
ಉಚಥ್ಯಂ ತು ಮಹಾಭಾಗಂ ತತ್ಕೃತೇಽವರಯತ್ ತದಾ ॥11॥
ಮಹಾಭಾಗ್ಯವಂತಳೂ, ಕೀರ್ತಿವಂತಳೂ ಆದ ಭದ್ರೆಯು ತೀವ್ರವಾದ ತಪಸ್ಸನ್ನು ಮಾಡಿ ಪತಿಯ ಸಲುವಾಗಿ ಉಚಥ್ಯರನ್ನು ಪತಿಯಾಗಿ ವರಿಸಿದಳು.
ತತ ಆಹೂಯ ಸೋಚಥ್ಯಂ ದದಾವತ್ರ ಯಶಸ್ವಿನೀಮ್ |
ಭಾರ್ಯಾರ್ಥೇ ಸ ಚ ಜಗ್ರಾಹ ವಿಧಿವದ್ ಭೂರಿದಕ್ಷಿಣ ॥12॥
ಎಲೈ ಭೂರಿದಕ್ಷಿಣನೇ, ಅನಂತರ ಚಂದ್ರನು ಉಚಥ್ಯರನ್ನು ಕರೆದು ಯಶಸ್ವಿನಿಯಾದ ಅವಳನ್ನು ವಿಧಿಪೂರ್ವಕವಾಗಿ ಭಾರ್ಯಾರ್ಥವಾಗಿ ದಾನ ಮಾಡಿದನು. ಉಚಥ್ಯರು ಸ್ವೀಕರಿಸಿದರು.
ತಾಂ ತ್ವಕಾಮಯತ ಶ್ರೀಮಾನ್ ವರುಣಃ ಪೂರ್ವಮೇವ ಹ |
ಸ ಚಾಗಮ್ಯ ವನಪ್ರಸ್ಥಂ ಯಮುನಾಯಾಂ ಜಹಾರ ತಾಮ್ ॥13॥
ಕಾಂತಿಯುಕ್ತನಾದ ವರುಣನು ಅವಳನ್ನು ಮೊದಲೇ ಬಯಸಿದ್ದನು. ಅವನು ಯಮುನಾ ನದಿಯ ತೀರಪ್ರದೇಶಕ್ಕೆ ಬಂದು ಅವಳನ್ನು ಅಪಹರಿಸಿದನು.
ಜಲೇಶ್ವರಸ್ತು ಹೃತ್ವಾ ತಾಮನಯತ್ ಸ್ವಪುರಂ ಪ್ರತಿ |
ಪರಮಾದ್ಭುತಸಂಕಾಶಂ ಷಟ್ಸಹಸ್ರಶತಹ್ರದಮ್ ॥14॥
ನ ಹಿ ರಮ್ಯತರಂ ಕಿಂಚಿತ್ ತಸ್ಮಾದನ್ಯತ್ ಪುರೋತ್ತಮಮ್ |
ಪ್ರಾಸಾದೈರಪ್ಸರೋಭಿಶ್ಚ ದಿವ್ಯೈಃ ಕಾಮೈಶ್ಚ ಶೋಭಿತಮ್ |
ತತ್ರ ದೇವಸ್ತಯಾ ಸಾರ್ಧಂ ರೇಮೇ ರಾಜನ್ ಜಲೇಶ್ವರಃ ॥15॥
ಅಥಾಖ್ಯಾತಮುಚಥ್ಯಾಯ ತತಃ ಪತ್ನ್ಯವಮರ್ದನಮ್ ॥16॥
ಜಲೇಶ್ವರನಾದ ವರುಣನು ಅವಳನ್ನು ಅಪಹರಿಸಿ ಪರಮಾದ್ಭುತ ಕಾಂತಿಯುಳ್ಳ, ಆರು ಲಕ್ಷ ಸರೋವರಗಳಿಂದ ಕೂಡಿದ ತನ್ನ

ಪಟ್ಟಣಕ್ಕೆ ಕರೆದುಕೊಂಡು ಹೋದನು. ವರುಣನ ಪಟ್ಟಣಕ್ಕಿಂತ ಶ್ರೇಷ್ಠವಾದ ಪಟ್ಟಣವು ಇನ್ನೊಂದಿಲ್ಲ. ಅದು ಪ್ರಾಸಾದಗಳಿಂದಲೂ, ಅಪ್ಸರೆಯರಿಂದಲೂ, ದಿವ್ಯವಾದ ಭೋಗ್ಯವಸ್ತುಗಳಿಂದಲೂ ಶೋಭಿತವಾಗಿದ್ದಿತು. ಎಲೈ ರಾಜನೇ, ವರುಣದೇವನು ಅವಳ ಜೊತೆಯಲ್ಲಿ ವಿಹರಿಸಿದನು. ಅನಂತರ ಪತ್ನಿಯ ಈ ಅವಮಾನವು ಉಚಥ್ಯರಿಗೆ ತಿಳಿಯಬಂದಿತು.
ತಚ್ಛ್ರುತ್ವಾ ನಾರದಾತ್ ಸರ್ವಮುಚಥ್ಯೋ ನಾರದಂ ತದಾ |
ಪ್ರೋವಾಚ ಗಚ್ಛ ಬ್ರೂಹಿ ತ್ವಂ ವರುಣಂ ಪರುಷಂ ವಚಃ |
ಮದ್ವಾಕ್ಯಾನ್ಮುಂಚ ಮೇ ಭಾರ್ಯಾಂ ಕಥಮಾಹೃತವಾನಸಿ ॥17॥
ಉಚಥ್ಯರು ನಾರದರಿಂದ ಎಲ್ಲವನ್ನೂ ಕೇಳಿ, ನೀವು ವರುಣನ ಬಳಿಗೆ ಹೋಗಿ. ನಾನು ಹೇಳಿದ್ದೇನೆಂದು ಉಗ್ರವಾಗಿ ಹೇಳಿ. ನನ್ನ ಭಾರ್ಯೆಯನ್ನು ಹೇಗೆ ಅಪಹರಿಸಿದ್ದೀಯೆ ಎಂದು ಕೇಳಿ.
ಲೋಕಪಾಲೋಽಸಿ ಲೋಕಾನಾಂ ನ ಲೋಕಸ್ಯ ವಿಲೋಪಕಃ |
ಸೋಮೇನ ದತ್ತಾ ಭಾರ್ಯಾ ಮೇ ತ್ವಯಾ ಚಾಪಹೃತಾದ್ಯ ವೈ ॥18॥
ನೀನು ಲೋಕಪಾಲಕನಾಗಿದ್ದೀಯೆ. ಲೋಕಕ್ಕೆ ವಿಲೋಪಕನಾಗಿಲ್ಲ. ಚಂದ್ರನು ನನಗೆ ಅವಳನ್ನು ನನ್ನ ಭಾರ್ಯೆಯಾಗಿ ಕೊಟ್ಟಿದ್ದಾನೆ. ನೀನು ಈ ದಿನ ಅವಳನ್ನು ಅಪಹರಿಸಿದ್ದೀಯೆ (ಎಂದು ಹೇಳಿ ಎಂದು ಹೇಳಿದನು).
ಇತ್ಯುಕ್ತೋ ವಚನಾತ್ ತಸ್ಯ ನಾರದೇನ ಜಲೇಶ್ವರಃ |
ಮುಂಚ ಭಾರ್ಯಾಮುಚಥ್ಯಸ್ಯೇತ್ಯಥ ತಂ ವರುಣೋಽಬ್ರವೀತ್ |
ಮಮೈಷಾ ಸುಪ್ರಿಯಾ ಭಾರ್ಯಾ ನೈನಾಮುತ್ಸ್ರಷ್ಟುಮುತ್ಸಹೇ ॥19॥
ನಾರದರಿಂದ ಎಲ್ಲವನ್ನೂ ಕೇಳಿ ಉಚಥ್ಯರ ಭಾರ್ಯೆಯನ್ನು ಬಿಡು ಎಂದು ಹೇಳಿದಾಗ ವರುಣನು ಅವರನ್ನು ಕುರಿತು, ಇವಳು ನನಗೆ ಪ್ರಿಯಳಾದ ಭಾರ್ಯೆ. ಇವಳನ್ನು ನಾನು ಬಿಡಲಾರೆ ಎಂದು ಹೇಳಿದನು.
ಇತ್ಯುಕ್ತೋ ವರುಣೇನಾಥ ನಾರದಃ ಪ್ರಾಪ್ಯ ತಂ ಮುನಿಮ್ |
ಉಚಥ್ಯಮಬ್ರವೀದ್ ವಾಕ್ಯಂ ನಾತಿಹೃಷ್ಟಮನಾ ಇವ ॥20॥
ವರುಣನಿಂದ ಹೀಗೆ ಹೇಳಲ್ಪಟ್ಟ ನಾರದರು ಉಚಥ್ಯರ ಬಳಿಗೆ ಬಂದು ಬಹಳ ಸಂತೋಷವಿಲ್ಲದೆ ವರುಣನ ಮಾತನ್ನು ಹೇಳಿದರು.
ಗಲೇ ಗೃಹೀತ್ವಾ ಕ್ಷಿಪ್ತೋಽಸ್ಮಿ ವರುಣೇನ ಮಹಾಮುನೇ |
ನ ಪ್ರಯಚ್ಛತಿ ತೇ ಭಾರ್ಯಾಂ ಯತ್ ತೇ ಕಾರ್ಯಂ ಕುರುಷ್ವ ತತ್ ॥
ಎಲೈ ಮಹಾಮುನಿಯೇ, ವರುಣನು ನನ್ನನ್ನು ಕತ್ತಿನಲ್ಲಿ ಹಿಡಿದು ಎಸೆದನು. ನಿನ್ನ ಭಾರ್ಯೆಯನ್ನು ಕೊಡುತ್ತಿಲ್ಲ. ಮುಂದೇನು ಮಾಡಬೇಕೋ ಅದನ್ನು ಮಾಡು (ಎಂದು ಹೇಳಿದರು).
ನಾರದಸ್ಯ ವಚಃ ಶ್ರುತ್ವಾ ಕ್ರುದ್ಧಃ ಪ್ರಾಜ್ವಲದಂಗಿರಾಃ |
ಅಪಿಬತ್ ತೇಜಸಾ ವಾರಿ ವಿಷ್ಟಭ್ಯ ಸುಮಹಾತಪಾಃ ॥22॥
ನಾರದರ ಮಾತನ್ನು ಕೇಳಿ ಕೋಪಗೊಂಡು ಅಂಗಿರಸಕುಲೋತ್ಪನ್ನರಾದ ಉಚಥ್ಯರು ಪ್ರಜ್ವಲಿಸಿದರು. ಅತ್ಯಂತ ಮಹಾತಪಸ್ವಿಗಳಾದ ಅವರು ತಮ್ಮ ಸಾಮರ್ಥ್ಯದಿಂದ ಸಮುದ್ರವನ್ನು ನಿಲ್ಲಿಸಿ ಎಲ್ಲ ನೀರನ್ನೂ ಕುಡಿದುಬಿಟ್ಟರು.
ಪೀಯಮಾನೇ ಚ ಸರ್ವಸ್ಮಿಂಸ್ತೋಯೇ ವೈ ಸಲಿಲೇಶ್ವರಃ |
ಸುಹೃದ್ಭಿಃ ಕಾಮ್ಯಮಾನೋಽಪಿ ನೈವಾಮುಂಚತ ತಾಂ ತದಾ ॥23॥
ಎಲ್ಲ ನೀರು ಕುಡಿಯಲ್ಪಡುತ್ತಿರಲು, ಸುಹೃಜ್ಜನರು ಭದ್ರೆಯನ್ನು ಬಿಡು ಎಂದು ಹೇಳುತ್ತಿದ್ದರೂ ಜಲೇಶ್ವರನಾದ ವರುಣನು ಆಗ ಅವಳನ್ನು ಬಿಡಲಿಲ್ಲ.
ತತಃ ಕ್ರುದ್ಧೋಽಬ್ರವೀದ್ ಭೂಮಿಮುಚಥ್ಯೋ ಬ್ರಾಹ್ಮಣೋತ್ತಮಃ |
ದರ್ಶಯಸ್ವ ಸ್ಥಲಂ ಭದ್ರೇ ಷಟ್‌ಸಹಸ್ರಶತಹ್ರದಮ್॥24॥
ಆಗ ಬ್ರಾಹ್ಮಣ ಶ್ರೇಷ್ಠರಾದ ಉಚಥ್ಯರು ಕ್ರುದ್ಧರಾಗಿ ಭೂಮಿಯನ್ನು ಕುರಿತು ಆರು ಲಕ್ಷ ಮಡುಗಳಿರುವ ಸ್ಥಳವನ್ನು ತೋರಿಸು ಎಂದು ಹೇಳಿದರು.
ತತಸ್ತದೀರಿಣಂ ಜಾತಂ ಸಮುದ್ರಶ್ಚಾಪಸರ್ಪಿತಃ |
ತಸ್ಮಾದ್ ದೇಶಾನ್ನದೀಂ ಚೈವ ಪ್ರೋವಾಚಾಸೌ ದ್ವಿಜೋತ್ತಮಃ ॥25॥
ಆಗ ಆ ಪ್ರದೇಶವೆಲ್ಲವೂ ಮರುಭೂಮಿಯಾಯಿತು. ಸಮುದ್ರವು ಆ ಪ್ರದೇಶವನ್ನು ಬಿಟ್ಟು ಹಿಂದೆ ಹೊರಟು ಹೋಯಿತು. ಆಗ ಆ ದ್ವಿಜೋತ್ತಮರು ನದಿಯನ್ನು ಕುರಿತು ಹೀಗೆ ಹೇಳಿದರು.
ಅದೃಶ್ಯಾ ಗಚ್ಛ ಭೀರು ತ್ವಂ ಸರಸ್ವತಿ ಮರುಂ ಪ್ರತಿ |
ಅಪುಣ್ಯ ಏಷ ಭವತು ದೇಶಸ್ತ್ಯಕ್ತಸ್ತ್ವಯಾ ಶುಭೇ ॥26॥
ಎಲೌ ಭೀರುವೇ, ಸರಸ್ವತಿಯೇ, ನೀನು ಅದೃಶ್ಯಳಾಗಿ ಮರುಭೂಮಿಗೆ ಹೋಗು. ಎಲೌ ಶುಭಳೇ, ನಿನ್ನಿಂದ ಪರಿತ್ಯಜಿಸಲ್ಪಟ್ಟ ಈ ದೇಶವು ಅಪವಿತ್ರವಾಗಲಿ ಎಂದು ಹೇಳಿದರು.
ತಸ್ಮಿನ್ ಸಂಚೂರ್ಣಿತೇ ದೇಶೇ ಭದ್ರಾಮಾದಾಯ ವಾರಿಪಃ |
ಅದದಾಚ್ಛರಣಂ ಗತ್ವಾ ಭಾರ್ಯಾಮಾಂಗಿರಸಾಯ ವೈ ॥27॥
ಹೀಗೆ ಆ ದೇಶವೆಲ್ಲವೂ ಸಂಚೂರ್ಣಿತವಾಗುತ್ತಿರಲು (ಮರಳಿನ ರಾಶಿಯಾಗುತ್ತಿರಲು) ಜಲೇಶ್ವರನಾದ ವರುಣನು ಭದ್ರೆಯನ್ನು ಕರೆದುಕೊಂಡು ಬಂದು ಉಚಥ್ಯರಿಗೆ ಶರಣಾಗತನಾಗಿ ಅವರ ಪತ್ನಿಯನ್ನು ಕೊಟ್ಟನು.
ಪ್ರತಿಗೃಹ್ಯ ತು ತಾಂ ಭಾರ್ಯಾಮುಚಥ್ಯಃ ಸುಮನಾಭವತ್ |
ಮುಮೋಚ ಚ ತತೋ ದುಃಖಾತ್ ವರುಣಂ ಚೈವ ಹೈಹಯ ॥28॥

ತಮ್ಮ ಪತ್ನಿಯನ್ನು ಸ್ವೀಕರಿಸಿ ಉಚಥ್ಯರು ಪ್ರಸನ್ನರಾದರು. ಎಲೈ ಕಾರ್ತವೀರ್ಯಾರ್ಜುನನೇ ಉಚಥ್ಯರು ಅನಂತರ ವರುಣನನ್ನು ಶೋಕ-ದುಃಖದಿಂದ ಬಿಡುಗಡೆ ಮಾಡಿದರು.
ತತಃ ಸ ಲಬ್ಧ್ವಾ ತಾಂ ಭಾರ್ಯಾಂ ವರುಣಂ ಪ್ರಾಹ ಧರ್ಮವಿತ್ |
ಉಚಥ್ಯಃ ಸುಮಹಾತೇಜಾ ಯತ್ ತಚ್ಛೃಣು ನರಾಧಿಪ ||29||
ಎಲೈ ನರಾಧಿಪನೇ, ತಮ್ಮ ಪತ್ನಿಯನ್ನು ಪಡೆದು ಧರ್ಮಜ್ಞರಾದ, ಮಹಾತೇಜಸ್ವಿಗಳಾದ ಉಚಥ್ಯರು ವರುಣನನ್ನು ಕುರಿತು ಏನು ಹೇಳಿದರೆಂದು ಕೇಳು.
ಮಯ್ಯೈಷಾ ತಪಸಾ ಪ್ರಾಪ್ತಾ ಕ್ರೋಶತಸ್ತೇ ಜಲಾಧಿಪ |
ಇತ್ಯುಕ್ತ್ವಾ ತಾಮುಪಾದಾಯ ಸ್ವಮೇವ ಭವನಂ ಯಯೌ ||30||
ಎಲೈ ಜಲಾಧಿಪತಿಯೇ, ನೀನು ಕಿರುಚಾಡುತ್ತಿದ್ದರೂ ನನ್ನ ತಪಸ್ಸಿನಿಂದ ನಾನು ಇವಳನ್ನು ಪಡೆದಿದ್ದೇನೆ ಎಂದು ಹೇಳಿ, ಅವಳನ್ನು ಕರೆದುಕೊಂಡು ತಮ್ಮ ಭವನಕ್ಕೆ ಹೋದರು.
ಏಷ ರಾಜನ್ನೀದೃಶೋ ವೈ ಉಚಥ್ಯೋ ಬ್ರಾಹ್ಮಣರ್ಷಭಃ |
ಬ್ರವೀಮ್ಯಹಂ ಬ್ರೂಹಿ ವಾ ತ್ವಮುಚಥ್ಯಾತ್ ಕ್ಷತ್ರಿಯಂ ವರಮ್ ||31||
ಎಲೈ ರಾಜನೇ, ಬ್ರಾಹ್ಮಣ ಶ್ರೇಷ್ಠರಾದ ಉಚಥ್ಯರು ಇಂತಹವರು ಎಂದು ನಾನು ಹೇಳುತ್ತಿದ್ದೇನೆ. ನೀನು ಉಚಥ್ಯರಿಗಿಂತ ಶ್ರೇಷ್ಠನಾದ ಒಬ್ಬ ಕ್ಷತ್ರಿಯನನ್ನು ಹೇಳು (ಎಂದು ವಾಯುವು ಕೇಳಿದನು).
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಕಾಶ್ಯಪ-ಉಚಥ್ಯಮಹಿಮಕಥನಂ ನಾಮ ತ್ರಿಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *

## ಇನ್ನೂರ ನಲವತ್ನಾಲ್ಕನೆಯ ಅಧ್ಯಾಯ
## ಅಗಸ್ತ್ಯರ ಮತ್ತು ವಸಿಷ್ಠರ ಮಹಿಮೆ

ಭೀಷ್ಮಃ
ಇತ್ಯುಕ್ತಃ ಸ ತದಾ ತೂಷ್ಣೀಮಭೂದ್ ವಾಯುಸ್ತತೋಽಬ್ರವೀತ್ |
ಶೃಣು ರಾಜನ್ನಗಸ್ತ್ಯಸ್ಯ ಮಾಹಾತ್ಮ್ಯಂ ಬ್ರಾಹ್ಮಣಸ್ಯ ಹ ||1||
ಭೀಷ್ಮ ಹೀಗೆ ಹೇಳಲ್ಪಟ್ಟ ರಾಜನು ಸುಮ್ಮನಾದನು. ವಾಯುದೇವನು ಪುನಃ ಮಾತನಾಡಿದನು. ರಾಜನೇ, ಬ್ರಾಹ್ಮಣರಾದ ಅಗಸ್ತ್ಯರ ಮಹಿಮೆಯನ್ನು ಕೇಳು.
ಅಸುರೈರ್ನಿರ್ಜಿತಾ ದೇವಾ ನಿರುತ್ಸಾಹಾಶ್ಚ ತೇ ಕೃತಾಃ |
ಯಜ್ಞಾಶ್ಚೈಷಾಂ ಹೃತಾಃ ಸರ್ವೇ ಪಿತೃಭ್ಯಶ್ಚ ಸ್ವಧಾ ತಥಾ ||2||
ದೇವತೆಗಳು ಅಸುರರಿಂದ ಪರಾಜಯವನ್ನು ಹೊಂದಿ ನಿರುತ್ಸಾಹರಾದರು. ಅಸುರರು ದೇವತೆಗಳ ಯಜ್ಞಗಳನ್ನೂ, ಪಿತೃಗಳ ಸ್ವಧೆಯನ್ನೂ ಅಪಹರಿಸಿದರು.
ಕರ್ಮೇಜ್ಯಾ ಮಾನವಾನಾಂ ಚ ದಾನವೈರ್ಹೈಹಯರ್ಷಭ |
ಭ್ರಷ್ಟೈಶ್ವರ್ಯಾಸ್ತದಾ ದೇವಾಶ್ಚೇರುಃ ಪೃಥ್ವೀಮಿತಿ ಶ್ರುತಿಃ ||3||
ಎಲೈ ಹೈಹಯಶ್ರೇಷ್ಠನೇ, ಮನುಷ್ಯರ ಸತ್ಕರ್ಮಗಳು ಮತ್ತು ಪೂಜೆಗಳು ದಾನವರಿಂದ ಅಪಹರಿಸಲ್ಪಟ್ಟವು. ಐಶ್ವರ್ಯಭ್ರಷ್ಟರಾದ ದೇವತೆಗಳು ಆಗ ಭೂಮಿಯಲ್ಲಿ ತಿರುಗುತ್ತಿದ್ದರು ಎಂದು ಕೇಳಿದ್ದೇವೆ.
ತತಃ ಕದಾಚಿತ್ ತೇ ರಾಜನ್ ದೀಪ್ತಮಾದಿತ್ಯವರ್ಚಸಮ್ |
ದದೃಶುಸ್ತೇಜಸಾ ಯುಕ್ತಮಗಸ್ತ್ಯಂ ವಿಪುಲವ್ರತಮ್ ||4||
ಎಲೈ ರಾಜನೇ, ಅನಂತರ ಅವರು ಒಮ್ಮೆ ಸೂರ್ಯತೇಜಸ್ಸನ್ನು ಹೊಂದಿದ, ವಿಪುಲವ್ರತರಾದ, ತೇಜೋಯುಕ್ತರಾದ ಅಗಸ್ತ್ಯರನ್ನು ನೋಡಿದರು.
ಅಭಿವಾದ್ಯ ಚ ತಂ ದೇವಾ ದೃಷ್ಟ್ವಾ ಚ ಯಶಸಾ ವೃತಮ್ |
ಇದಮೂಚುರ್ಮಹಾತ್ಮಾನಂ ವಾಕ್ಯಂ ಕಾಲೇ ಜನಾಧಿಪ ||5||
ಎಲೈ ಜನಾಧಿಪನೇ, ದೇವತೆಗಳು ಅವರನ್ನು ನಮಸ್ಕರಿಸಿ, ಕೀರ್ತಿಯುಕ್ತರಾದ ಆ ಮಹಾತ್ಮರನ್ನು ಕುರಿತು ಆ ಕಾಲದಲ್ಲಿ ಈ ಮಾತುಗಳನ್ನು ಆಡಿದರು.
ದಾನವೈರ್ಯುಧಿ ಭಗ್ನಾಃ ಸ್ಮ ತಥೈಶ್ವರ್ಯಾಚ್ಚ ಭ್ರಂಶಿತಾಃ |
ತದಸ್ಮಾನ್ನೋ ಭಯಾತ್ ತೀವ್ರಾತ್ ತ್ರಾಹಿ ತ್ವಂ ಮುನಿಪುಂಗವ ||6||
ನಾವು ಯುದ್ಧದಲ್ಲಿ ದಾನವರಿಂದ ಭಗ್ನರಾಗಿದ್ದೇವೆ. ಐಶ್ವರ್ಯದಿಂದ ಭ್ರಂಶಿತರಾಗಿದ್ದೇವೆ. ಎಲೈ ಮುನಿಪುಂಗವರೇ, ನಮ್ಮನ್ನು ಈ ತೀವ್ರವಾದ ಭಯದಿಂದ ನೀವು ರಕ್ಷಿಸಿ.
ಇತ್ಯುಕ್ತಃ ಸ ತದಾ ದೇವೈರಗಸ್ತ್ಯಃ ಕುಪಿತೋಽಭವತ್ |
ಪ್ರಜಜ್ವಾಲ ಚ ತೇಜಸ್ವೀ ಕಾಲಾಗ್ನಿರಿವ ಸಂಕ್ಷಯೇ ||7||
ದೇವತೆಗಳಿಂದ ಹೀಗೆ ಹೇಳಲ್ಪಟ್ಟ ಅಗಸ್ತ್ಯರು ಆಗ ಕೋಪಗೊಂಡರು. ತೇಜಸ್ವಿಗಳಾದ ಅವರು ಪ್ರಳಯಕಾಲದ ಕಾಲಾಗ್ನಿಯಂತೆ ಪ್ರಜ್ವಲಿಸಿದರು.

ತೇನ ದೀಪ್ತಾಂಶುಜಾಲೇನ ನಿರ್ದಗ್ಧಾ ದಾನವಾಸ್ತದಾ |
ಅಂತರಿಕ್ಷಾನ್ಮಹಾರಾಜ ನ್ಯಪತಂತ ಸಹಸ್ರಶಃ ॥8॥
ಎಲೈ ಮಹಾರಾಜನೇ, ಪ್ರಜ್ವಲಿಸುವ ಅವರ ಜ್ವಾಲೆಗಳಿಂದ ದಗ್ಧರಾಗಿ ದಾನವರು ಸಹಸ್ರ ಸಂಖ್ಯೆಯಲ್ಲಿ ಅಂತರಿಕ್ಷದಿಂದ ಕೆಳಗೆ ಬಿದ್ದರು.

ದಹ್ಯಮಾನಾಸ್ತು ತೇ ದೈತ್ಯಾಸ್ತಸ್ಯಾಗಸ್ತ್ಯಸ್ಯ ತೇಜಸಾ |
ಉಭೌ ಲೋಕೌ ಪರಿತ್ಯಜ್ಯ ಯಯುಃ ಕಾಷ್ಠಾಂ ಸ್ಮ ದಕ್ಷಿಣಾಮ್ ॥9॥
ಅಗಸ್ತ್ಯರ ತೇಜಸ್ಸಿನಿಂದ ದಹಿಸಲ್ಪಡುತ್ತಿದ್ದ ಅವರು ಸ್ವರ್ಗ ಮತ್ತು ಭೂಲೋಕವೆರಡನ್ನೂ ಪರಿತ್ಯಜಿಸಿ ದಕ್ಷಿಣ ದಿಕ್ಕಿಗೆ ಹೊರಟು ಹೋದರು.
ಬಲಿಸ್ತು ಯಜತೇ ಯಜ್ಞಮಶ್ವಮೇಧಂ ಮಹೀಂ ಗತಃ |
ಯೇಽನ್ಯೇ ಖಸ್ಥಾ ಮಹೀಸ್ಥಾಶ್ಚ ತೇ ನ ದಗ್ಧಾ ಮಹಾಸುರಾಃ ॥10॥
ಅಶ್ವಮೇಧ ಯಜ್ಞವನ್ನು ಮಾಡುತ್ತಿದ್ದ ಬಲಿಯು ಮಾತ್ರ ಭೂಮಿಗೆ ಬಂದನು. ಇನ್ನು ಉಳಿದ ಅಂತರಿಕ್ಷವಾಸಿಗಳೂ, ಭೂಲೋಕ ವಾಸಿಗಳೂ ಆದ ಮಹಾಸುರರು ದಗ್ಧರಾದರು.
ತತೋ ಲೋಕಾಃ ಪುನಃ ಪ್ರಾಪ್ತಾಃ ಸುರೈಃ ಶಾಂತಂ ಚ ತದ್ರಜಃ |
ಅಥೈನಮಬ್ರುವನ್ ದೇವಾ ಭೂಮಿಷ್ಠಾನಸುರಾನ್ ಜಹಿ ॥11॥
ಆಗ ದೇವತೆಗಳು ತಮ್ಮ ಲೋಕಗಳನ್ನು ಪುನಃ ಪಡೆದರು. ಆ ಘರ್ಷಣೆಯು ಶಾಂತವಾಯಿತು. ಅನಂತರ ದೇವತೆಗಳು ಅಗಸ್ತ್ಯರನ್ನು ಕುರಿತು ಭೂಮಿಯಲ್ಲಿರುವ ಅಸುರರನ್ನು ದಹಿಸಿ ಎಂದು ಹೇಳಿದರು.
ಇತ್ಯುಕ್ತ ಆಹ ದೇವಾನ್ ಸ ನ ಶಕ್ನೋಮಿ ಮಹೀಗತಾನ್ |
ದಗ್ಧುಂ ತಪೋ ಹಿ ಕ್ಷೀಯೇನ್ಮೇ ನ ಧಕ್ಷ್ಯಾಮೀತಿ ಪಾರ್ಥಿವ ॥12॥
ಎಲೈ ರಾಜನೇ, ಹೀಗೆ ಹೇಳಲ್ಪಟ್ಟ ಅಗಸ್ತ್ಯರು ದೇವತೆಗಳನ್ನು ಕುರಿತು ಭೂಮಿಯಲ್ಲಿರುವ ಅಸುರರನ್ನು ನಾನು ಕೊಲ್ಲಲಾರೆ. ನಾನು ದಹಿಸಿದರೆ ನನ್ನ ತಪಸ್ಸು ನಾಶವಾದೀತು ಎಂದು ಹೇಳಿದರು.
ಏವಂ ದಗ್ಧಾ ಭಗವತಾ ದಾನವಾಸ್ತೇನ ತೇ ತದಾ |
ಅಗಸ್ತ್ಯೇನ ತದಾ ರಾಜಂಸ್ತಪಸಾ ಭಾವಿತಾತ್ಮನಾ ॥13॥
ಎಲೈ ರಾಜನೇ, ಶುದ್ಧವಾದ ಮನಸ್ಸುಳ್ಳ ಪೂಜ್ಯರಾದ ಅಗಸ್ತ್ಯರಿಂದ ಆಗ ಆ ದಾನವರು ಈ ರೀತಿಯಲ್ಲಿ ದಹಿಸಲ್ಪಟ್ಟರು.
ಈದೃಶಶ್ಚಾಪ್ಯಗಸ್ತ್ಯೋ ಹಿ ಕಥಿತಸ್ತೇ ಮಯಾನಘ |
ಬ್ರವೀಮ್ಯಹಂ ಬ್ರೂಹಿ ವಾ ತ್ವಮಗಸ್ತ್ಯಾತ್ ಕ್ಷತ್ರಿಯಂ ವರಮ್ ॥14॥
ಎಲೈ ಅನಘನೇ, ಇಂತಹ ಅಗಸ್ತ್ಯರ ಮಹಿಮೆಯನ್ನು ನಿನಗೆ ಹೇಳಿದ್ದೇನೆ. ಬ್ರಾಹ್ಮಣರು ಶ್ರೇಷ್ಠರಾದವರೆಂದು ನಾನು ಹೇಳುತ್ತಿದ್ದೇನೆ. ಅಗಸ್ತ್ಯರಿಗಿಂತ ಶ್ರೇಷ್ಠನಾದ ಕ್ಷತ್ರಿಯನಿದ್ದರೆ ನೀನು ಹೇಳು.
ಇತ್ಯುಕ್ತಃ ಸ ತದಾ ತೂಷ್ಣೀಮಭೂದ್ ವಾಯುಸ್ತತೋಽಬ್ರವೀತ್ |
ಶೃಣು ರಾಜನ್ ವಸಿಷ್ಠಸ್ಯ ಮುಖ್ಯಂ ಕರ್ಮ ಯಶಸ್ವಿನಃ ॥15॥
ಹೀಗೆ ಹೇಳಲ್ಪಟ್ಟ ಕಾರ್ತವೀರ್ಯಾರ್ಜುನನು ಸುಮ್ಮನಾದನು. ವಾಯುದೇವನು ಸಹ ಮಾತನಾಡಿದನು. ಎಲೈ ರಾಜನೇ, ಯಶಸ್ವಿಗಳಾದ ವಸಿಷ್ಠರ ಮುಖ್ಯವಾದ ಕರ್ಮವನ್ನು ಕೇಳು.
ಆದಿತ್ಯಾಃ ಸತ್ರಮಾಸಂತ ಸರೋ ವೈ ಮಾನಸಂ ಪ್ರತಿ |
ವಸಿಷ್ಠಂ ಮನಸಾ ಗತ್ವಾ ಜ್ಞಾತ್ವಾ ತಸ್ಯ ಚ ಗೌರವಮ್ ॥16॥
ಅದಿತಿಪುತ್ರರಾದ ದೇವತೆಗಳು ಮನಸ್ಸಿನಲ್ಲಿಯೇ ವಸಿಷ್ಠರನ್ನು ಸಮೀಪಿಸಿ, ಅವರ ಮಹಿಮೆಯನ್ನು ತಿಳಿದು, ಮಾನಸ ಸರೋವರದ ಬಳಿಯಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು.
ಯಜಮಾನಾಂಸ್ತು ತಾನ್ ದೃಷ್ಟ್ವಾ ವ್ಯಗ್ರಾನ್ ದೀಕ್ಷಾನುಕರ್ಶಿತಾನ್ |
ಹಂತುಮಿಚ್ಛಂತಿ ಶೈಲಾಭಾಃ ಖಲಿನೋ ನಾಮ ದಾನವಾಃ ॥17॥
ಯಜ್ಞದೀಕ್ಷೆಯಿಂದ ಕರ್ಶಿತರಾಗಿ ವ್ಯಗ್ರರಾಗಿದ್ದ ಆ ಯಜಮಾನರನ್ನು ನೋಡಿ ಪರ್ವತಪ್ರಾಯರಾಗಿದ್ದ ಖಲಿಗಳೆಂಬ ದಾನವರು ಅವರನ್ನು ಕೊಲ್ಲಲು ಇಚ್ಛಿಸಿದರು.
ಅದೂರಾತ್ ತು ತತಸ್ತೇಷಾಂ ಬ್ರಹ್ಮದತ್ತವರಂ ಸರಃ |
ಹತಾ ಹತಾ ವೈ ತೇ ತತ್ರ ಜೀವಂತ್ಯಾಪ್ಲುತ್ಯ ದಾನವಾಃ ॥18॥
ಮಾನಸ ಸರೋವರದ ಸಮೀಪದಲ್ಲಿಯೇ ಅವರು ಬ್ರಹ್ಮದೇವರಿಂದ ವರವನ್ನು ಪಡೆದ ಒಂದು ಸರೋವರವಿದ್ದಿತು. ಹತರಾದ ದಾನವರನ್ನು ಅಲ್ಲಿ ಮುಳುಗಿಸಿದರೆ ಅವರು ಪುನಃ ಜೀವಂತರಾಗುತ್ತಿದ್ದರು.
ತೇ ಪ್ರಗೃಹ್ಯ ಮಹಾಘೋರಾನ್ ಪರ್ವತಾನ್ ಪರಿಘಾನ್ ದ್ರುಮಾನ್ |
ವಿಕ್ಷೋಭಯಂತಃ ಸಲಿಲಮುತ್ಥಿತಾಃ ಶತಯೋಜನಮ್ ॥19॥
ಅಭ್ಯದ್ರವಂತ ದೇವಾಂಸ್ತೇ ಸಹಸ್ರಾಣಿ ದಶೈವ ಹ |
ತತಸ್ತೈರರ್ದಿತಾ ದೇವಾಃ ಶರಣಂ ವಾಸವಂ ಯಯುಃ ॥20॥
ಅಂತಹ ದಾನವರು ಮಹಾಘೋರವಾದ ಪರ್ವತಗಳನ್ನೂ, ಪರಿಘಗಳನ್ನೂ, ವೃಕ್ಷಗಳನ್ನೂ ತೆಗೆದುಕೊಂಡು ಶತಯೋಜನ ವಿಸ್ತಾರವಾದ ಆ ಸರೋವರದ ಜಲವನ್ನು ಕಲಕುತ್ತಾ ಮೇಲೆದ್ದು, ಹತ್ತು ಸಹಸ್ರ ಮಂದಿ ದೇವತೆಗಳ ಕಡೆಗೆ ಓಡಿಬಂದರು. ಅವರಿಂದ ಹಿಂಸಿಸಲ್ಪಟ್ಟ ದೇವತೆಗಳು ಇಂದ್ರನಿಗೆ ಶರಣಾಗತರಾದರು.

ಸ ಚ ತೈರ್ವ್ಯಥಿತಃ ಶಕ್ರೋ ವಸಿಷ್ಠಂ ಶರಣಂ ಯಯೌ |
ತತೋಽಭಯಂ ದದೌ ತೇಭ್ಯೋ ವಸಿಷ್ಠೋ ಭಗವಾನೃಷಿಃ ॥21॥
ಇಂದ್ರನೂ ಸಹ ಅವರಿಂದ ಪೀಡಿಸಲ್ಪಟ್ಟು ಅವನು ವಸಿಷ್ಠರಿಗೆ ಶರಣಾಗತನಾದನು. ಪೂಜ್ಯರಾದ ವಸಿಷ್ಠಋಷಿಗಳು ಅವರಿಗೆ ಅಭಯವನ್ನು ನೀಡಿದರು.
ತಥಾ ತಾನ್ ದುಃಖಿತಾನ್ ಜಾನನ್ನಾನೃಶಂಸ್ಯಪರೋ ಮುನಿಃ |
ಅಯತ್ನೇನಾದಹತ್ ಸರ್ವಾನ್ ಜ್ವಲಿತೇನ ಸ್ವತೇಜಸಾ ॥22॥
ದಯಾಶೀಲರಾದ ಆ ಋಷಿಗಳು ದುಃಖಿತರಾದ ದೇವತೆಗಳನ್ನು ನೋಡಿ ಜ್ವಲಿಸುವ ತಮ್ಮ ತೇಜಸ್ಸಿನಿಂದ ಅವರೆಲ್ಲರನ್ನೂ ಅನಾಯಾಸವಾಗಿ ದಹಿಸಿದರು.
ಕೈಲಾಸಂ ಪ್ರಸ್ಥಿತಾಂ ಚಾಪಿ ನದೀಂ ಗಂಗಾಂ ಮಹಾತಪಾಃ |
ಆನಯತ್ ತತ್ಸರೋ ದಿವ್ಯಂ ತಯಾ ಭಿನ್ನಂ ಚ ತತ್ಸರಃ ॥23॥
ಮಹಾತಪಸ್ವಿಗಳಾದ ಅವರು ಕೈಲಾಸಕ್ಕೆ ಹೊರಟಿದ್ದ ಗಂಗೆಯನ್ನೂ ಸಹ ಹಿಂದಕ್ಕೆ ಆ ದಿವ್ಯಸರೋವರಕ್ಕೆ ಕರೆಸಿದರು. ಗಂಗೆಯು ಪ್ರವೇಶ ಮಾಡಿದಾಗ ಆ ಸರೋವರವು ಒಡೆದು ಹೋಯಿತು.
ಸರೋ ಭಿನ್ನಂ ತಯಾ ನದ್ಯಾ ಸರಯೂಃ ಸಾ ತತೋಽಭವತ್ |
ಹತಾಶ್ಚ ಖಲಿನೋ ಯತ್ರ ಸ ದೇಶಃ ಖಲಿನೋಽಭವತ್ ॥24॥
ಭಿನ್ನವಾದ ಸರೋವರದಿಂದ ಹರಿದ ನೀರು ಸರಯೂ ನದಿಯಾಯಿತು. ಖಲಿಗಳು ಹತರಾದರು. ಖಲಿಗಳಿದ್ದ ದೇಶವು ಉಪದ್ರವರಹಿತವಾಯಿತು.
ಏವಂ ಸೇಂದ್ರಾ ವಸಿಷ್ಠೇನ ರಕ್ಷಿತಾಸ್ತ್ರಿದಿವೌಕಸಃ |
ಬ್ರಹ್ಮದತ್ತವರಾಶ್ಚೈವ ಹತಾ ದೈತ್ಯಾ ಮಹಾತ್ಮನಾ ॥25॥
ಹೀಗೆ ಇಂದ್ರ ಸಹಿತರಾದ ದೇವತೆಗಳು ವಸಿಷ್ಠರಿಂದ ರಕ್ಷಿಸಲ್ಪಟ್ಟರು. ಬ್ರಹ್ಮದೇವರಿಂದ ವರವನ್ನು ಪಡೆದಿದ್ದ ದೈತ್ಯರೂ ಸಹ ಮಹಾತ್ಮರಾದ ಅವರಿಂದ ಹತರಾದರು.
ಏತತ್ಕರ್ಮ ವಸಿಷ್ಠಸ್ಯ ಕಥಿತಂ ತೇ ಮಯಾನಘ |
ಬ್ರವೀಮ್ಯಹಂ ಬ್ರೂಹಿ ವಾ ತ್ವಂ ವಸಿಷ್ಠಾತ್ ಕ್ಷತ್ರಿಯಂ ವರಮ್ ॥26॥
ಎಲೈ ಅನಘನೇ, ವಸಿಷ್ಠರ ಈ ಕರ್ಮವನ್ನು ನಾನು ನಿನಗೆ ಹೇಳಿದ್ದೇನೆ. ಬ್ರಾಹ್ಮಣರು ಶ್ರೇಷ್ಠರೆಂದು ನಾನು ಹೇಳುತ್ತಿದ್ದೇನೆ. ವಸಿಷ್ಠರಿಗಿಂತ ಶ್ರೇಷ್ಠನಾದ ಕ್ಷತ್ರಿಯನಿದ್ದರೆ ನೀನು ಹೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಅಗಸ್ತ್ಯ-ವಸಿಷ್ಠಪ್ರಶಂಸಾ ನಾಮ ಚತುಶ್ಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತೈದನೆಯ ಅಧ್ಯಾಯ
ಚ್ಯವನರ ಮಹಿಮೆ
ಭೀಷ್ಮಃ
ತೂಷ್ಣೀಮಾಸೀದರ್ಜುನಸ್ತು ಪವನಸ್ತ್ವಬ್ರವೀತ್ಪುನಃ |
ಶೃಣು ಮೇ ಬ್ರಾಹ್ಮಣೇಷ್ವೇವ ಮುಖ್ಯಂ ಕರ್ಮ ಜನಾಧಿಪ ॥1॥
ಭೀಷ್ಮ ಅರ್ಜುನನು ಸುಮ್ಮನಾದನು. ವಾಯುದೇವನು ಪುನಃ ಮಾತನಾಡಿದನು. ಎಲೈ ಜನಾಧಿಪನೇ, ಬ್ರಾಹ್ಮಣರಲ್ಲಿಯೇ ಮುಖ್ಯವಾದ ಕರ್ಮವನ್ನು ಕೇಳು.
ಮದಸ್ಯಾಸ್ಯಮನುಪ್ರಾಪ್ತಾ ಯದಾ ಸೇಂದ್ರಾ ದಿವೌಕಸಃ |
ತದೇಯಂ ಚ್ಯವನೇನೇಹ ಹೃತಾ ತೇಷಾಂ ವಸುಂಧರಾ ॥2॥
ಇಂದ್ರಾದಿ ದೇವತೆಗಳು ಮದಕ್ಕೆ ಸಿಲುಕಿದಾಗ ಅವರ ಈ ಭೂಮಿಯನ್ನು ಚ್ಯವನರು ಅಪಹರಿಸಿದರು.
ಉಭೌ ಲೋಕೌ ಹೃತೌ ಮತ್ವಾ ತೇ ದೇವಾ ದುಃಖಿತಾಭವನ್ |
ಶೋಕಾರ್ತಾಶ್ಚ ಮಹಾತ್ಮಾನಂ ಬ್ರಹ್ಮಾಣಂ ಶರಣಂ ಯಯುಃ ॥3॥
ಎರಡು ಲೋಕಗಳನ್ನೂ ಕಳೆದುಕೊಂಡುದುದನ್ನು ತಿಳಿದು ದೇವತೆಗಳು ದುಃಖಿತರಾದರು. ಶೋಕಾರ್ತರಾಗಿ ಮಹಾತ್ಮರಾದ ಬ್ರಹ್ಮದೇವರನ್ನು ಶರಣು ಹೊಂದಿದರು.
ದೇವಾಃ
ಮದಾಸ್ಯವ್ಯತಿಷಿಕ್ತಾನಾಮಸ್ಮಾಕಂ ಲೋಕಪೂಜಿತ |
ಚ್ಯವನೇನ ಹೃತಾ ಭೂಮಿಃ ಕಪೈಶ್ಚಾಪಿ ದಿವಂ ಪ್ರಭೋ ॥4॥
ದೇವತೆಗಳು ಎಲೈ ಲೋಕಪೂಜಿತನೇ, ಮದದ ಬಾಯಿಗೆ ಸಿಲುಕಿದ ನಮ್ಮ ಭೂಮಿಯನ್ನು ಚ್ಯವನರು ಕಸಿದುಕೊಂಡರು. ಪ್ರಭುವೇ, ಕಪರು ಸ್ವರ್ಗವನ್ನೂ ಅಪಹರಿಸಿದರು.
ಬ್ರಹ್ಮಾ
ಗಚ್ಛಧ್ವಂ ಶರಣಂ ವಿಪ್ರಾನ್ ಯೂಯಂ ಸೇಂದ್ರಾ ದಿವೌಕಸಃ |

ಪ್ರಸಾದ್ಯ ತಾನುಭೌ ಲೋಕಾವವಾಪ್ಸ್ಯಥ ಯಥಾ ಪುರಾ ॥5॥
ಬ್ರಹ್ಮ ಇಂದ್ರಸಹಿತರಾದ ದೇವತೆಗಳೇ, ನೀವು ಶೀಘ್ರವಾಗಿ ಬ್ರಾಹ್ಮಣರಿಗೆ ಶರಣಾಗತರಾಗಿ. ಅವರನ್ನು ಪ್ರಸನ್ನೀಕರಿಸಿದರೆ ನೀವು ಮೊದಲಿನಂತೆ ಎರಡು ಲೋಕಗಳನ್ನೂ ಹೊಂದುವಿರಿ.
ತೇ ಯಯುಃ ಶರಣಂ ವಿಪ್ರಾಂಸ್ತ ಊಚುಃ ಕಾನ್ ಜಯಾಮಹೇ |
ಇತ್ಯುಕ್ತಾಸ್ತೇ ದ್ವಿಜಾನ್ ಪ್ರಾಹುರ್ಜಯತೇಹ ಕಪಾನಿತಿ |
ಭೂಗತಾನ್ ಹಿ ವಿಜೇತಾರೋ ವಯಮಿತ್ಯೇವ ಪಾರ್ಥಿವ ॥6॥
ಅವರು ಹೋಗಿ ವಿಪ್ರರಿಗೆ ಶರಣಾಗತರಾದರು. ಅವರು ಯಾರನ್ನು ಜಯಿಸಬೇಕು ಎಂದು ಕೇಳಿದಾಗ ದೇವತೆಗಳು ದ್ವಿಜರನ್ನು ಕುರಿತು ನೀವು ಕಪರನ್ನು ಜಯಿಸಿ, ಭೂಮಿಯಲ್ಲಿರುವವರನ್ನು ನಾವು ಜಯಿಸುವೆವು ಎಂದು ಹೇಳಿದರು.
ತತಃ ಕರ್ಮ ಸಮಾರಬ್ಧಂ ಬ್ರಾಹ್ಮಣೈಃ ಕಪನಾಶನಮ್ |
ತಚ್ಛ್ರುತ್ವಾ ಪ್ರೇಷಿತೋ ದೂತೋ ಬ್ರಾಹ್ಮಣೇಭ್ಯೋ ಧನೀ ಕಪೈಃ ॥7॥
ಅನಂತರ ಬ್ರಾಹ್ಮಣರು ಕಪನಾಶನ ಕರ್ಮವನ್ನು ಆರಂಭಿಸಿದರು. ಅದನ್ನು ಕೇಳಿದ ಕಪರು ಬ್ರಾಹ್ಮಣರ ಬಳಿಗೆ ಧನೀ ಎಂಬ ತಮ್ಮ ದೂತನನ್ನು ಕಳುಹಿಸಿದರು.
ಸ ಚ ತಾನ್ ಬ್ರಾಹ್ಮಣಾನಾಹ ಧನೀ ಕಪವಚೋ ಯಥಾ |
ಭವದ್ಭಿಃ ಸದೃಶಾಃ ಸರ್ವೇ ಕಪಾಃ ಕಿಮಿಹ ವರ್ತತೇ ॥8॥
ಧನಿಯು ಬಂದು ಬ್ರಾಹ್ಮಣರಿಗೆ ಕಪರ ಮಾತುಗಳನ್ನು ಹೇಳಿದನು. ಕಪರು ಎಲ್ಲರೂ ನಿಮಗೆ ಸದೃಶರಾದವರು. ನೀವು ಏನು ಮಾಡುತ್ತಿದ್ದೀರಿ?
ಸರ್ವೇ ವೇದವಿದಃ ಪ್ರಾಜ್ಞಾಃ ಸರ್ವೇ ಚ ಕ್ರತುಯಾಜಿನಃ |
ಸರ್ವೇ ಸತ್ಯವ್ರತಾಶ್ಚೈವ ಸರ್ವೇ ತುಲ್ಯಾ ಮಹರ್ಷಿಭಿಃ ॥9॥
ಕಪರೆಲ್ಲರೂ ವೇದಜ್ಞರು, ಪ್ರಾಜ್ಞರು, ಯಾಗವನ್ನು ಮಾಡುವವರು, ಸತ್ಯವ್ರತರು, ಮಹರ್ಷಿಗಳಿಗೆ ಸಮರಾದವರು.
ಶ್ರೀಶ್ಚೈವ ರಮತೇ ತೇಷು ಧಾರಯಂತಿ ಶ್ರಿಯಂ ಚ ತೇ |
ವೃಥಾ ದಾರಾನ್ನ ಗಚ್ಛಂತಿ ನಿವೃತ್ತಾ ಮಾಂಸಭಕ್ಷಣೇ ॥10॥
ಲಕ್ಷ್ಮಿಯು ಅವರಲ್ಲಿ ಸಂತೋಷದಿಂದ ನೆಲೆಸಿದ್ದಾಳೆ. ಅವರೂ ಲಕ್ಷ್ಮಿಯನ್ನು ಧರಿಸಿದ್ದಾರೆ. ವ್ಯರ್ಥವಾಗಿ ಪತ್ನೀ ಸಂಗವನ್ನು ಮಾಡುವುದಿಲ್ಲ. ಮಾಂಸಭಕ್ಷಣದಿಂದ ನಿವೃತ್ತರಾಗಿದ್ದಾರೆ.
ದೀಪ್ತಮಗ್ನಿಂ ಜುಹ್ವತಿ ಚ ಗುರೂಣಾಂ ವಚನೇ ಸ್ಥಿತಾಃ |
ಸರ್ವೇ ಚ ನಿಯತಾತ್ಮಾನೋ ಬಾಲಾನಾಂ ಸಂವಿಭಾಗಿನಃ ॥11॥
ಜ್ವಲಿಸುವ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾರೆ. ಹಿರಿಯರ ಮಾತನ್ನು ಅನುಸರಿಸುತ್ತಾರೆ. ಎಲ್ಲರೂ ಜಿತಮನಸ್ಕರು. ಮಕ್ಕಳಿಗೆ ಹಂಚಿ ಭೋಜನವನ್ನು ಮಾಡುವವರು.
ಉಪೇತ್ಯ ಶಕಟೈರ್ಯಾಂತಿ ನ ಸೇವಂತೇ ರಜಸ್ವಲಾಃ |
ಅಭುಕ್ತವತ್ಸು ನಾಶ್ನಂತಿ ದಿವಾ ಚೈವ ನ ಶೇರತೇ ॥12॥
ಗಾಡಿಗಳಲ್ಲಿ ಸಂಚಾರ ಮಾಡುತ್ತಾರೆ. ರಜಸ್ವಲೆಯರ ಸಮೀಪಕ್ಕೆ ಹೋಗುವುದಿಲ್ಲ. ಹಿರಿಯರಿಗಿಂತ ಮುಂಚೆ ಊಟ ಮಾಡುವುದಿಲ್ಲ. ಹಗಲಿನಲ್ಲಿ ನಿದ್ರೆಯನ್ನು ಮಾಡುವುದಿಲ್ಲ.
ಏತೈಶ್ಚಾನ್ಯೈಶ್ಚ ಬಹುಭಿರ್ಗುಣೈರ್ಯುಕ್ತಾನ್ ಕಥಂ ಕಪಾನ್ |
ವಿಜೇಷ್ಯಥ ನಿವರ್ತಧ್ವಂ ನಿವೃತ್ತಾನಾಂ ಶುಭಂ ಹಿ ವಃ ॥13॥
ಇಂತಹ ಮತ್ತು ಇನ್ನೂ ಅನೇಕ ಗುಣಗಳಿಂದ ಕೂಡಿದ ಕಪರನ್ನು ನೀವು ಹೇಗೆ ಜಯಿಸುವಿರಿ? ನಿವೃತ್ತರಾಗಿ. ನಿವೃತ್ತರಾದರೆ ನಿಮಗೆ ಶುಭವಿದೆ (ಎಂದು ಹೇಳಿದನು).
ಬ್ರಾಹ್ಮಣಾಃ
ಕಪಾನ್ ವಯಂ ವಿಜೇಷ್ಯಾಮೋ ಯೇ ದೇವಾಸ್ತೇ ವಯಂ ಸ್ಮೃತಾಃ |
ತಸ್ಮಾದ್ ವಧ್ಯಾಃ ಕಪಾಸ್ಮಾಕಂ ಧನಿನ್ ಯಾಹಿ ಯಥಾಗತಮ್ ॥14॥
ಬ್ರಾಹ್ಮಣರು ನಾವು ಕಪರನ್ನು ಗೆಲ್ಲುವೆವು. ನಾವೇ ದೇವತೆಗಳು. ಆದ್ದರಿಂದ ಕಪರು ನಮ್ಮಿಂದ ವಧ್ಯರಾದವರು. ಧನಿಯೇ, ಬಂದಂತೆಯೇ ಹೊರಟು ಹೋಗು.
ಧನೀ ಗತ್ವಾ ಕಪಾನಾಹ ನ ವೋ ವಿಪ್ರಾಃ ಪ್ರಿಯಂಕರಾಃ |
ಗೃಹೀತ್ವಾಸ್ತ್ರಾಣ್ಯಥೋ ವಿಪ್ರಾನ್ ಕಪಾಃ ಸರ್ವೇ ಸಮಾದ್ರವನ್ ॥15॥
ಧನಿಯು ಹಿಂದಿರುಗಿ ಕಪರನ್ನು ಕುರಿತು, ಬ್ರಾಹ್ಮಣರು ನಿಮಗೆ ಹಿತವನ್ನು ಮಾಡುವುದಿಲ್ಲ ಎಂದು ಹೇಳಿದನು. ಆಗ ಕಪರೆಲ್ಲರೂ ಆಯುಧಗಳನ್ನು ಹಿಡಿದು ಬ್ರಾಹ್ಮಣರ ಮೇಲೆ ಎರಗಿದರು.
ಸಮುದಗ್ರಧ್ವಜಾನ್ ದೃಷ್ಟ್ವಾ ಕಪಾನ್ ಸರ್ವೇ ದ್ವಿಜಾತಯಃ |
ವ್ಯಸೃಜನ್ ಜ್ವಲಿತಾನಗ್ನೀನ್ ಕಪಾನಾಂ ಪ್ರಾಣನಾಶನಾನ್ ॥16॥
ಕಪರ ಉನ್ನತವಾದ ಧ್ವಜಗಳನ್ನು ನೋಡಿ ಎಲ್ಲ ಬ್ರಾಹ್ಮಣರೂ ಜ್ವಲಿತವಾದ ಅಗ್ನಿಯನ್ನು ಕಪರ ಪ್ರಾಣನಾಶಕ್ಕಾಗಿ ವಿಸರ್ಜಿಸಿದರು.
ಬ್ರಹ್ಮಸೃಷ್ಟಾ ಹವ್ಯಭುಜಃ ಕಪಾನ್ ಭುಕತ್ವ ಸನಾತನಾಃ |
ನಭಸೀವ ಯಥಾಭ್ರಾಣಿ ವ್ಯಭ್ರಾಜಂತ ನರಾಧಿಪ |
ಪ್ರಶಶಂಸುರ್ದ್ವಿಜಾಂಶ್ಚೈವ ಬ್ರಹ್ಮಾಣಂ ಚ ಯಶಸ್ವಿನಮ್ ॥17॥

ಬ್ರಾಹ್ಮಣರು ಉತ್ಸರ್ಜನೆಯನ್ನು ಮಾಡಿದ ಸನಾತನವಾದ ಅಗ್ನಿಗಳು ಕಪರನ್ನು ಸಂಹರಿಸಿ ಆಕಾಶದಲ್ಲಿರುವ ಮೋಡಗಳಂತೆ ವಿರಾಜಿಸಿದವು. ಎಲೈ ನರಾಧಿಪನೇ, ಆಗ ಎಲ್ಲರೂ ಬ್ರಾಹ್ಮಣರನ್ನೂ ಮತ್ತು ಕೀರ್ತಿವಂತರಾದ ಬ್ರಹ್ಮದೇವರನ್ನೂ ಕೊಂಡಾಡಿದರು.
ತೇಷಾಂ ತೇಜಸ್ತಥಾ ವೀರ್ಯಂ ದೇವಾನಾಂ ವವೃಧೇ ತತಃ |
ಅವಾಪ್ನುವಂಶ್ಚ ದೇವತ್ವಂ ತ್ರಿಷು ಲೋಕೇಷು ಪೂಜಿತಮ್ ॥18॥
ಅನಂತರ ದೇವತೆಗಳ ತೇಜಸ್ಸು ಮತ್ತು ಪರಾಕ್ರಮಗಳು ಹೆಚ್ಚಿದವು ಮತ್ತು ಮೂರು ಲೋಕಗಳಲ್ಲಿ ಪೂಜಿತವಾದ ದೇವತ್ವವನ್ನು ಅವರು ಪಡೆದರು.
ಇತ್ಯುಕ್ತವಚನಂ ವಾಯುಮರ್ಜುನಃ ಪ್ರತ್ಯಭಾಷತ |
ಪ್ರತಿಪೂಜ್ಯ ಮಹಾಬಾಹೋ ಯತ್ತಚ್ಛೃಣು ನರಾಧಿಪ ॥19॥
ವಾಯುವು ಹೀಗೆ ಹೇಳುತ್ತಿರಲು ಅರ್ಜುನನು ಅವರನ್ನು ಪೂಜಿಸಿ ಅವರನ್ನು ಕುರಿತು ಏನು ಹೇಳಿದನೆಂದು ಎಲೈ ನರಾಧಿಪನೇ, ಮಹಾಬಾಹುವೇ ಕೇಳು.
ಜೀವಾಮ್ಯಹಂ ಬ್ರಾಹ್ಮಣಾರ್ಥೇ ಸರ್ವಥಾ ಸತತಂ ಪ್ರಭೋ |
ಬ್ರಹ್ಮಣೇ ಬ್ರಾಹ್ಮಣೇಭ್ಯಶ್ಚ ಪ್ರಣಮಾಮಿ ಚ ನಿತ್ಯಶಃ ॥20॥
ಎಲೈ ಪ್ರಭುವೇ, ನಾನು ಬ್ರಾಹ್ಮಣರ ಸಲುವಾಗಿ ಯಾವಾಗಲೂ ಜೀವಿಸುತ್ತೇನೆ. ಬ್ರಹ್ಮದೇವರಿಗೂ ಮತ್ತು ಬ್ರಾಹ್ಮಣರಿಗೂ ನಿತ್ಯವೂ ನಮಸ್ಕರಿಸುತ್ತೇನೆ.
ದತ್ತಾತ್ರೇಯಪ್ರಸಾದಾಚ್ಚ ಮಯಾ ಪ್ರಾಪ್ತಮಿದಂ ಯಶಃ |
ಲೋಕೇ ಚ ಪರಮಾ ಕೀರ್ತಿರ್ಧರ್ಮಶ್ಚ ಪರಮೋ ಮಹಾನ್ ॥21॥
ದತ್ತಾತ್ರೇಯರ ಅನುಗ್ರಹದಿಂದ ನನಗೆ ಈ ಯಶಸ್ಸೂ, ಲೋಕದಲ್ಲಿ ಶ್ರೇಷ್ಠವಾದ ಕೀರ್ತಿಯೂ, ಬಹಳ ಶ್ರೇಷ್ಠವಾದ ಧರ್ಮವೂ ಲಭಿಸಿದೆ.
ಅಹೋ ಬ್ರಾಹ್ಮಣಕರ್ಮಾಣಿ ಯಥಾ ಮಾರುತ ತತ್ತ್ವತಃ |
ತ್ವಯಾ ಪ್ರೋಕ್ತಾನಿ ಕಾರ್ತ್ಸ್ನ್ಯೇನ ಶ್ರುತಾನಿ ಪ್ರಯತೇನ ಹ ॥22॥
ಎಲೈ ಮಾರುತನೇ, ನೀನು ಹೇಳಿದಂತೆ ನಾನು ನಿಯತನಾಗಿ ಕೇಳಿದ ಬ್ರಾಹ್ಮಣರ ಮಹಿಮೆಗಳು ಎಷ್ಟು ಅದ್ಭುತವಾದವುಗಳು!
ವಾಯುಃ
ಬ್ರಾಹ್ಮಣಾನ್ ಕ್ಷತ್ರಧರ್ಮೇಣ ಪಾಲಯಸ್ವೇಂದ್ರಿಯಾಣಿ ಚ |
ಭೃಗುಭ್ಯಸ್ತೇ ಭಯಂ ಘೋರಂ ತತ್ ತು ಕಾಲಾದ್ ಭವಿಷ್ಯತಿ ॥23॥
ವಾಯು ಕ್ಷತ್ರಧರ್ಮಕ್ಕೆ ಅನುಸಾರವಾಗಿ ಬ್ರಾಹ್ಮಣರನ್ನು ಪಾಲಿಸು. ನಿನ್ನ ಇಂದ್ರಿಯಗಳನ್ನು ರಕ್ಷಿಸು. ಕಾಲಕ್ರಮದಲ್ಲಿ ನಿನಗೆ ಭಾರ್ಗವರಿಂದ ಘೋರ ಭಯವು ಉಂಟಾಗುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಪವನಾರ್ಜುನಸಂವಾದೇ ಚ್ಯವನಪ್ರಶಂಸಾ ನಾಮ
ಪಂಚಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತೈದನೆಯ
ಅಧ್ಯಾಯ ಮುಗಿಯಿತು.
॥ ಪವನಾರ್ಜುನಸಂವಾದಃ ಸಮಾಪ್ತಃ ॥
* * * * *
ಇನ್ನೂರ ನಲವತ್ತಾರನೆಯ ಅಧ್ಯಾಯ
ಭೀಷ್ಮರಿಂದ ಕೃಷ್ಣನ ಮಹಿಮೆಯ ವರ್ಣನೆ
ಯುಧಿಷ್ಠಿರಃ
ಬ್ರಾಹ್ಮಣಾನರ್ಚಸೇ ರಾಜನ್ ಸತತಂ ಸಂಶಿತವ್ರತಾನ್ |
ಕಂ ತು ಕರ್ಮೋದಯಂ ದೃಷ್ಟ್ವಾ ತಾನರ್ಚಸಿ ನರಾಧಿಪ ॥1॥
ಕಾಂ ವಾ ಬ್ರಾಹ್ಮಣಪೂಜಾಯಾಂ ವ್ಯುಷ್ಟಿಂ ದೃಷ್ಟ್ವಾ ಮಹಾವ್ರತ |
ತಾನರ್ಚಸಿ ಮಹಾಬಾಹೋ ಸರ್ವಮೇತದ್ ವದಸ್ವ ಮೇ ॥2॥
ಯುಧಿಷ್ಠಿರ ಎಲೈ ನರಾಧಿಪನೇ, ನೀನು ಯಾವ ಕರ್ಮಫಲವನ್ನು ನೋಡಿ ತೀವ್ರವ್ರತವನ್ನು ಧರಿಸಿದ ಬ್ರಾಹ್ಮಣರನ್ನು ಪೂಜಿಸುತ್ತೀಯೆ? ಎಲೈ ಮಹಾವ್ರತನೇ, ಮಹಾಬಾಹುವೇ, ಬ್ರಾಹ್ಮಣಪೂಜೆಯಲ್ಲಿ ಯಾವ ಸಮೃದ್ಧಿಯನ್ನು ನೋಡಿ ನೀನು ಅವರನ್ನು ಪೂಜಿಸುತ್ತಿದ್ದೀಯೆ ಎಂಬುದನ್ನು ನನಗೆ ಹೇಳು.
ಭೀಷ್ಮಃ
ಏಷ ತೇ ಕೇಶವಃ ಸರ್ವಮಾಖ್ಯಾಸ್ಯತಿ ಮಹಾಮತಿಃ |
ವ್ಯುಷ್ಟಿಂ ಬ್ರಾಹ್ಮಣಪೂಜಾಯಾಂ ದೃಷ್ಟ್ವಾ ವ್ಯುಷ್ಟಿಂ ಮಹಾವ್ರತಃ ॥3॥
ಭೀಷ್ಮ ಈ ಮಹಾಮತಿಯಾದ ಮಹಾವ್ರತನಾದ ಕೇಶವನು ಬ್ರಾಹ್ಮಣಪೂಜೆಯ ಫಲವನ್ನು ಮತ್ತು ಸಮೃದ್ಧಿಯನ್ನು ನೋಡಿ ಎಲ್ಲವನ್ನೂ ನಿನಗೆ ಹೇಳುವನು.
ಬಲಂ ಶ್ರೋತ್ರೇ ವಾಙ್ಮನಶ್ಚಕ್ಷುಷೀ ಚ
ಜ್ಞಾನಂ ತಥಾ ನ ವಿಶುದ್ಧಂ ಮಮಾದ್ಯ |

ದೇಹನ್ಯಾಸೋ ನಾತಿಚಿರಾನ್ಮತೋ ಮೇ
ನ ಚಾತಿತೂರ್ಣಂ ಸವಿತಾಽದ್ಯ ಯಾತಿ ॥4॥
ಈ ದಿನ ನನಗೆ ನನ್ನ ಬಲ, ಶ್ರೋತ್ರಗಳು, ವಾಙ್ಮನಶ್ಚಕ್ಷುಸ್ಸುಗಳು, ಹಾಗೆ ಜ್ಞಾನ ಯಾವುದೂ ಶುದ್ಧವಾಗಿಲ್ಲ. ನನ್ನ ದೇಹತ್ಯಾಗವು ಸಮೀಪದಲ್ಲಿಯೇ ನನಗೆ ಅಭಿಪ್ರೇತವಾಗಿದೆ. ಈ ದಿನ ಸೂರ್ಯನು ಬಹಳ ಶೀಘ್ರವಾಗಿ ಹೋಗುತ್ತಿಲ್ಲ.
ಉಕ್ತಾ ಧರ್ಮಾ ಯೇ ಪುರಾಣೇ ಮಹಾಂತೋ
ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ವಿಶಾಂ ಚ |
ಪೌರಾಣಂ ಯೇ ದಂಡಮುಪಾಸತೇ ಚ
ಶೇಷಂ ಕೃಷ್ಣಾದುಪಶಿಕ್ಷಸ್ವ ಪಾರ್ಥ ॥5॥
ನಾನು ನಿನಗೆ ಪುರಾಣದಲ್ಲಿ ಹೇಳಿದ ಬ್ರಾಹ್ಮಣರ, ಕ್ಷತ್ರಿಯರ ಮತ್ತು ವೈಶ್ಯರ ಮಹಾಧರ್ಮಗಳನ್ನು ಹೇಳಿದ್ದೇನೆ. ಯಾರು ದಂಡವನ್ನು ಉಪಜೀವಿಸಿ ಬದುಕುತ್ತಾರೋ ಅಂತಹ ಪ್ರಾಚೀನ ಕ್ಷತ್ರಿಯರ ಧರ್ಮವನ್ನೂ ಹೇಳಿದ್ದೇನೆ. ಎಲೈ ಪಾರ್ಥನೇ, ಉಳಿದುದನ್ನು ನೀನು ಕೃಷ್ಣನಿಂದ ತಿಳಿ.
ಅಹಂ ಹ್ಯೇನಂ ವೇದ್ಮಿ ತತ್ತ್ವೇನ ಕೃಷ್ಣಂ
ಯೋಽಯಂ ಹಿ ಯಚ್ಚಾಸ್ಯ ಬಲಂ ಪುರಾಣಮ್ |
ಅಮೇಯಾತ್ಮಾ ಕೇಶವಃ ಕೌರವೇಂದ್ರ
ಸೋಽಯಂ ಧರ್ಮಂ ವಕ್ಷ್ಯತಿ ಸಂಶಯೇಷು ॥6॥
ಈ ಕೃಷ್ಣನು ಯಾರು? ಅವನ ಅನಾದಿಯಾದ ಬಲವು ಎಂತಹದು ಎಂದು ನಾನು ಕೃಷ್ಣನನ್ನು ಸರಿಯಾಗಿ ತಿಳಿದಿದ್ದೇನೆ. ಎಲೈ ಕೌರವೇಂದ್ರನೇ, ಕೇಶವನು ಅಚಿಂತ್ಯ ಮಹಿಮೆಯುಳ್ಳವನು. ಅಂತಹ ಇವನು ನಿನ್ನ ಸಂಶಯಗಳಿಗೆ ಪರಿಹಾರವನ್ನು ಹೇಳುವನು.
ಕೃಷ್ಣಃ ಪೃಥ್ವೀಮಸೃಜತ್ ಖಂ ದಿವಂ ಚ
ವರಾಹೋಽಯಂ ಭೀಮಬಲಃ ಪುರಾಣಃ |
ಅಸ್ಯ ಚಾಧೋಽಥಾಂತರಿಕ್ಷಂ ದಿವಂ ಚ
ದಿಶಶ್ಚತಸ್ರಃ ಪ್ರದಿಶಶ್ಚತಸ್ರಃ |
ಸೃಷ್ಟಿಸ್ತಥೈವೇಯಮನುಪ್ರಸೂತಾ
ಸ ನಿರ್ಮಮೇ ವಿಶ್ವಮಿದಂ ಪುರಾಣಮ್ ॥7॥
ಕೃಷ್ಣನು ಭೂಮಿಯನ್ನು, ಅಂತರಿಕ್ಷವನ್ನು, ಸ್ವರ್ಗವನ್ನು ಸೃಷ್ಟಿಸಿದನು. ಭಯಂಕರ ಬಲವುಳ್ಳ ಪ್ರಾಚೀನನಾದ ವರಾಹನೂ ಇವನೇ. ಈ ಭೂಮಿಯ ಕೆಳಭಾಗ, ಮೇಲೆ ಅಂತರಿಕ್ಷ, ಸ್ವರ್ಗ, ನಾಲ್ಕು ದಿಕ್ಕುಗಳು, ನಾಲ್ಕು ವಿದಿಕ್ಕುಗಳು, ಅನಂತರ ಉಂಟಾದ ಸೃಷ್ಟಿ, ಈ ಪುರಾತನವಾದ ವಿಶ್ವ- ಎಲ್ಲವೂ ಇವನಿಂದಲೇ ನಿರ್ಮಿತವಾದುದು.
ಅಸ್ಯ ನಾಭ್ಯಾಂ ಪುಷ್ಕರಂ ಸಂಪ್ರಸೂತಂ
ಯತ್ರೋತ್ಪನ್ನಃ ಸ್ವಯಮೇವಾಮಿತೌಜಾಃ |
ಯೇನಾಚ್ಛಿನ್ನಂ ತತ್ ತಮಃ ಪಾರ್ಥ ಘೋರಂ
ಯತ್ ತತ್ ತಿಷ್ಠತ್ಯರ್ಣವಂ ತರ್ಜಯಾನಮ್ ॥8॥
ಇವನ ನಾಭಿಯಲ್ಲಿ ಕಮಲವು ಹುಟ್ಟಿತು. ಅಲ್ಲಿ ಸ್ವತಂತ್ರನಾದ ನಾರಾಯಣನಿಂದ ಅಮಿತ ತೇಜಸ್ವಿಯಾದ ಬ್ರಹ್ಮನು ಜನಿಸಿದನು. ಎಲೈ ಪಾರ್ಥನೇ, ಆ ಕಮಲವು ಪ್ರಳಯ ಸಮುದ್ರವನ್ನೇ ಹೆದರಿಸುತ್ತಿದ್ದ ಘೋರವಾದ ಕತ್ತಲೆಯನ್ನು ನಾಶಪಡಿಸಿತು.
ಕೃತೇ ಯುಗೇ ಧರ್ಮ ಆಸೀತ್ ಸಮಗ್ರಃ
ತ್ರೇತಾಕಾಲೇ ಯಜ್ಞಮನುಪ್ರಪನ್ನಃ |
ಫಲಂ ತ್ವಾಸೀದ್ ದ್ವಾಪರೇ ಪಾರ್ಥ ಕೃಷ್ಣಃ
ಕಲಾವಧರ್ಮಃ ಕ್ಷಿತಿಮಾಜಗಾಮ ॥9॥
ಕೃತಯುಗದಲ್ಲಿ ಧರ್ಮವು ಸಮಗ್ರವಾಗಿದ್ದಿತು. ಕೃತಯುಗದಲ್ಲಿ ಮಾಡಿದ ಸಕಲ ಧರ್ಮಗಳಿಗೂ, ತ್ರೇತಾಯುಗದಲ್ಲಿ ಮಾಡಿದ ಸಕಲ ಜ್ಞಾನ ಯಜ್ಞಗಳಿಗೂ ಕೃಷ್ಣನು ಫಲರೂಪನಾಗಿದ್ದನು. ಅಂತಹ ಅವನು ದ್ವಾಪರದಲ್ಲಿ ಕೃಷ್ಣನಾಗಿ ಅವತರಿಸಿದನು. ಕಲಿಯುಗದಲ್ಲಿ ಭೂಮಿಯನ್ನು ಅಧರ್ಮವು ಆವರಿಸಿತು.
ಸ ಪೂರ್ವದೇವೋ ನಿಜಘಾನ ದೈತ್ಯಾನ್
ಸ ಪೂರ್ವದೇವಶ್ಚ ಬಭೂವ ಸಮ್ರಾಟ್ |
ಸ ಭೂತಾನಾಂ ಭಾವನಾದ್ ಭೂತಭವ್ಯಃ
ವಿಶ್ವಸ್ಯಾಸ್ಯ ಜಗತಶ್ಚಾಪಿ ಗೋಪ್ತಾ ॥10॥
ಅನಾದಿದೇವನಾದ ಅವನು ದೈತ್ಯರನ್ನು ಸಂಹರಿಸಿದನು. ಅನಾದಿದೇವನಾದ ಅವನೇ ಚಕ್ರವರ್ತಿಯಾದನು. ಅವನು ಭೂತಗಳ ಉತ್ಪತ್ತಿಯನ್ನು ಮಾಡುವುದರಿಂದ ಭೂತಭವ್ಯನೆನಿಸುತ್ತಾನೆ. ಈ ಸಮಸ್ತವಾದ ಜನರಿಗೂ ರಕ್ಷಕನೂ ಆಗಿದ್ದಾನೆ.
ಯದಾ ಧರ್ಮೋ ಗ್ಲಾಯತಿ ವೈ ಸುರಾಣಾಂ
ತದಾ ಕೃಷ್ಣೋ ಜಾಯತೇ ಮಾನುಷೇಷು |
ಧರ್ಮೇ ಸ್ಥಿತ್ವಾ ಸ ತು ವೈ ಭಾವಿತಾತ್ಮಾ
ಪರಾಂಶ್ಚ ಲೋಕಾನಪರಾಂಶ್ಚ ಯಾತಿ ॥11॥
ದೇವತೆಗಳ ಧರ್ಮವು ಮ್ಲಾನತೆಯನ್ನು ಹೊಂದಿದಾಗ ಕೃಷ್ಣನು ಮನುಷ್ಯರಲ್ಲಿ ಅವತರಿಸುತ್ತಾನೆ. ಪರಿಶುದ್ಧನಾದ ಅವನು

ಲೋಕವನ್ನು ಧರ್ಮದಲ್ಲಿ ಸ್ಥಾಪಿಸಿ ಸ್ವರ್ಗಲೋಕಗಳಿಗೂ ಮತ್ತು ವೈಕುಂಠಾದಿ ಲೋಕಗಳಿಗೂ ಹೋಗುತ್ತಾನೆ.

ತ್ಯಾಜ್ಯಾಂಸ್ತ್ಯಕ್ತ್ವಾ ಚಾಸುರಾಣಾಂ ವಧಾಯ
ಕಾರ್ಯಾಕಾರ್ಯೇ ಕಾರಣಂ ಚೈವ ಪಾರ್ಥ |
ಕೃತಂ ಕರಿಷ್ಯತ್ ಕ್ರಿಯತೇ ಚ ದೇವೋ
ಮುಹುಃ ಸೋಮಂ ವಿದ್ಧಿ ಚ ಶಕ್ರಮೇತಮ್ ॥12॥

ಕಲಿಯುಗದ ಪ್ರವರ್ತನೆಗಾಗಿ ಉಳಿಸಬೇಕಾದ ಅಸುರರನ್ನು ಬಿಟ್ಟು ಉಳಿದವರನ್ನು ವಧೆ ಮಾಡಿ ಅವನು ಕಾರ್ಯಕಾರಣಗಳನ್ನು ನಿಯಂತ್ರಿಸುತ್ತಾನೆ. ಈ ದೇವನು ಭೂತ- ಭವಿಷ್ಯತ್-ವರ್ತಮಾನ ಕಾರ್ಯಗಳನ್ನು ಮಾಡುತ್ತಾನೆ. ಅವನನ್ನೇ ಸೋಮನೆಂದೂ, ಶಕ್ರನೆಂದೂ ತಿಳಿ (ಅವನೇ ಸೋಮ-ಶಕ್ರಾದಿ ಪದಗಳಿಂದ ಮುಖ್ಯವಾಗಿ ವಾಚ್ಯನೆಂದು ತಿಳಿ).

ಸ ವಿಶ್ವಕರ್ಮಾ ಸ ಚ ವಿಶ್ವರೂಪಃ
ಸ ವಿಶ್ವಭೃದ್ ವಿಶ್ವಸೃಗ್ ವಿಶ್ವಜಿಚ್ಚ |
ಸ ಶೂಲಭೃಚ್ಛೋಣಿತಭೃತ್ ಕರಾಳಃ
ತಂ ಕರ್ಮಭಿರ್ವಿದಿತಂ ವೈ ಸ್ತುವಂತಿ ॥13॥

ಅವನೇ ಸಮಸ್ತ ಕಾರ್ಯಗಳನ್ನು ಮಾಡುವುದರಿಂದ ವಿಶ್ವಕರ್ಮನೆನಿಸುತ್ತಾನೆ. ಸಮಸ್ತ ರೂಪಗಳನ್ನು ಧರಿಸಿರುವುದರಿಂದ ವಿಶ್ವರೂಪನೆನಿಸುತ್ತಾನೆ. ಅವನು ವಿಶ್ವವನ್ನು ಸೃಷ್ಟಿ ಮಾಡುತ್ತಾನೆ, ಧರಿಸುತ್ತಾನೆ ಮತ್ತು ಜಯಿಸುತ್ತಾನೆ. ಅವನು ಶೂಲವನ್ನು ಧರಿಸಿ ರಕ್ತಲಿಪ್ತನಾಗಿ ಕರಾಳನಾಗುತ್ತಾನೆ. ತನ್ನ ಕರ್ಮಗಳಿಂದ ತಿಳಿಯಲ್ಪಡುವ ಅವನನ್ನು ಭಕ್ತರು ಸ್ತೋತ್ರ ಮಾಡುತ್ತಾರೆ.

ತಂ ಗಂಧರ್ವಾ ಅಪ್ಸರಸಶ್ಚ ನಿತ್ಯಮ್
ಉಪತಿಷ್ಠಂತೇ ವಿಧಿನಾ ಪಾಪಶಾಂತ್ಯೈ |
ರಾಕ್ಷಸಾಶ್ಚಾಪಿ ನಮಂತಿ ಸರ್ವೇ
ರಾಯಸ್ಪೋಷಃ ಸ ವಿಜಿಗೀಷುರೇಕಃ ॥14॥

ಅವನನ್ನು ತಮ್ಮ ಪಾಪಶಾಂತಿಗಾಗಿ ಗಂಧರ್ವರು ಮತ್ತು ಅಪ್ಸರೆಯರು ವಿಧಿಗೆ ಅನುಸಾರವಾಗಿ ಯಾವಾಗಲೂ ಸ್ತೋತ್ರ ಮಾಡುತ್ತಾರೆ. ಪ್ರಹ್ಲಾದ ಮೊದಲಾದ ರಾಕ್ಷಸರೂ ಅವನನ್ನು ನಮಸ್ಕರಿಸುತ್ತಾರೆ. ಸಂಪತ್ತನ್ನು ಪೋಷಿಸುವವನೂ, ಜಯಶೀಲನಾದವನೂ ಅವನೊಬ್ಬನೇ.

ತಮಧ್ವರೇ ಶಂಸಿತಾರಃ ಸ್ತುವಂತಿ
ರಥಂತರೇ ಸಾಮಗಾಶ್ಚ ಸ್ತುವಂತಿ |
ತಂ ಬ್ರಾಹ್ಮಣಾ ಬ್ರಹ್ಮಮಂತ್ರೈಃ ಸ್ತುವಂತಿ
ತಸ್ಮೈ ಹವಿರಧ್ವರ್ಯವಃ ಕಲ್ಪಯಂತಿ ॥15॥

ಯಜ್ಞಗಳಲ್ಲಿ ಶಸ್ತ್ರಮಂತ್ರಗಳನ್ನು ಹೇಳುವವರು ಅವನನ್ನೇ ಸ್ತೋತ್ರ ಮಾಡುತ್ತಾರೆ. ಸಾಮಗಾನವನ್ನು ಮಾಡುವವರು ರಥಂತರ ಸಾಮದಿಂದ ಅವನನ್ನೇ ಸ್ತೋತ್ರ ಮಾಡುತ್ತಾರೆ. ಬ್ರಾಹ್ಮಣರು ವೇದಮಂತ್ರಗಳಿಂದ ಅವನನ್ನು ಸ್ತೋತ್ರ ಮಾಡುತ್ತಾರೆ. ಅಧ್ವರ್ಯುಗಳು ಅವನಿಗೆ ಹವಿಸ್ಸನ್ನು ಅರ್ಪಿಸುತ್ತಾರೆ.

ಸ ಪೌರಾಣೀಂ ಬ್ರಹ್ಮಗುಹಾಂ ಪ್ರವಿಷ್ಟೋ
ಮಹೀ ಸತ್ರಂ ಭಾರತಾಗ್ರೇ ದದರ್ಶ |
ಸ ಚೈವ ಗಾಮುದ್ಧಧಾರಾಗ್ರ್ಯಕರ್ಮಾ
ವಿಕ್ಷೋಭ್ಯ ದೈತ್ಯಾನುರಗಾನ್ ದಾನವಾಂಶ್ಚ ॥16॥

ಅವನು ಅನಾದಿಯಾದ ವೇದದ ಗುಹೆಯನ್ನು ಪ್ರವೇಶಿಸಿದ್ದಾನೆ (ಕೃಷ್ಣನೇ ವೇದದಿಂದ ಪ್ರತಿಪಾದ್ಯನಾಗಿದ್ದಾನೆ). ಎಲೈ ಭಾರತನೇ, ಮಹಿಮೋಪೇತನಾದ ಅವನು ಮೊದಲು ಸತ್ರವನ್ನು ನೋಡಿದನು. ಉಗ್ರಕರ್ಮವನ್ನು ಹೊಂದಿದ ಅವನೇ ದೈತ್ಯ-ದಾನವರನ್ನೂ, ಉರಗಗಳನ್ನೂ ಕ್ಷೋಭೆಗೊಳಿಸಿ ಭೂಮಿಯನ್ನು ಮೇಲೆತ್ತಿದನು.

ತಂ ಘೋಷಾರ್ಥೇ ಗೀರ್ಭಿರಿಂದ್ರಾಃ ಸ್ತುವಂತಿ
ಸ ಚಾಪೀಶೋ ಭಾರತೈಕಃ ಪಶೂನಾಮ್ |
ತಸ್ಯ ಭಕ್ಷಾನ್ ವಿವಿಧಾನ್ ವೇದಯಂತಿ
ತಮೇವಾಜೌ ವಾಹನಂ ವೇದಯಂತಿ |
ತಸ್ಯಾಂತರಿಕ್ಷಂ ಪೃಥಿವೀ ದಿವಂ ಚ
ಸರ್ವಂ ವಶೇ ತಿಷ್ಠತಿ ಶಾಶ್ವತಸ್ಯ ॥17॥

ಗೋಕುಲದ ರಕ್ಷಣೆಗಾಗಿ ಅವನನ್ನು ಪ್ರಭುಗಳಾದ ದೇವತೆಗಳು ಸ್ತೋತ್ರ ಮಾಡುತ್ತಾರೆ. ಎಲೈ ಭಾರತನೇ, ಅವನೇ ಪಶುಗಳಿಗೆ ಮುಖ್ಯನಾದ ಪತಿಯಾದವನು. ಅವನಿಗೆ ವಿವಿಧವಾದ ಭಕ್ಷಗಳನ್ನು ನಿವೇದಿಸುತ್ತಾರೆ (ವಿವಿಧವಾದ ಬ್ರಾಹ್ಮಣ- ಕ್ಷತ್ರಿಯಾದಿಗಳು ಅವನ ಭಕ್ಷ್ಯವೆಂದು ವೇದಗಳು ಹೇಳುತ್ತವೆ). ಯುದ್ಧದಲ್ಲಿ ಅವನನ್ನೇ ಯುದ್ಧನಿವಾಹನನೆಂದು ಹೇಳುತ್ತಾರೆ (ವಾಹನಗಳಲ್ಲಿದ್ದು ಆ ಕಾರ್ಯವನ್ನು ಮಾಡುವವನು). ಶಾಶ್ವತನಾದ ಅವನ ವಶದಲ್ಲಿ ಭೂಮಿ-ಅಂತರಿಕ್ಷ-ಸ್ವರ್ಗ ಎಲ್ಲವೂ ಇವೆ -ಲಕ್ಷಾಲಂಕಾರ.

ಸ ಕುಂಭರೇತಃ ಸಸೃಜೇ ಪುರಾಣಂ
ಯತ್ರೋತ್ಪನ್ನಮೃಷಿಮಾಹುರ್ವಸಿಷ್ಠಮ್ |
ಸ ಮಾತರಿಶ್ವಾ ವಿಭುರಶ್ವವಾಜೀ
ಸ ರಶ್ಮಿಮಾನ್ ಸವಿತಾ ಚಾದಿದೇವಃ ॥18॥

ಅವನು ಪೃಥಿವಿಯನ್ನು ಕ್ಷೋಭೆಗೊಳಿಸುವಂತಹ ವೀರ್ಯವುಳ್ಳವನಾಗಿ ಪ್ರಾಚೀನವಾದ ಈ ಬ್ರಹ್ಮಾಂಡವನ್ನು ಸೃಷ್ಟಿಸಿದನು. ಬ್ರಹ್ಮಾಂಡದಲ್ಲಿ ಚಿರಕಾಲ ವಾಸಿಸುವ ಕಾರಣದಿಂದ ವಾಸಿಸುವರಲ್ಲಿ ಶ್ರೇಷ್ಠನಾದ ಜ್ಞಾನಿಯಾದ ಬ್ರಹ್ಮನು ಅಲ್ಲಿ ಉದಿಸಿದನು. ಅವನೇ ಮಾತರಿಶ್ವಾ, ಅವನೇ ವಿಭು, ಅವನೇ ಅಶ್ವವಾಜಗಳನ್ನು ಹೊಂದಿದವನು. ಅವನೇ ಕಿರಣಗಳಿಂದ ಕೂಡಿದ ಸವಿತೃ. ಅವನೇ ಆದಿದೇವ.

ತೇನಾಸುರಾ ವಿಜಿತಾಃ ಸರ್ವ ಏವ
ತಸ್ಯ ವಿಕ್ರಾಂತೈರ್ವಿಜಿತಾನೀಹ ತ್ರೀಣಿ |
ಸ ದೇವಾನಾಂ ಮಾನುಷಾಣಾಂ ಪಿತೃಣಾಂ
ತಮೇವಾಹುರ್ಯಜ್ಞವಿದಃ ಪುರಾಣಮ್ ||19||
ಅವನೇ ಎಲ್ಲ ಅಸುರರನ್ನೂ ಜಯಿಸಿದನು. ಅವನ ಪಾದವಿನ್ಯಾಸಗಳಿಂದ ದೇವತೆಗಳ, ಮನುಷ್ಯರ ಮತ್ತು ಪಿತೃಗಳ ಮೂರುಲೋಕಗಳೂ ಜಯಿಸಲ್ಪಟ್ಟವು. ಯಜ್ಞವನ್ನು ತಿಳಿದವರು ಅವನನ್ನೇ ಪ್ರಾಚೀನನಾದವನೆಂದು ಹೇಳುತ್ತಾರೆ.
ಸ ಏವ ಕಾಲಂ ವಿಭಜನ್ನುದೇತಿ
ತಸ್ಯೋತ್ತರಂ ದಕ್ಷಿಣಂ ಚಾಯನೇ ದ್ವೇ |
ತಸ್ಯೈವೋರ್ಧ್ವಂ ತಿರ್ಯಗಧಶ್ಚರಂತಿ
ಗಭಸ್ತಯೋ ಮೇದಿನೀಂ ತಾಪಯಂತಃ ||20||
ಅವನೇ ಕಾಲವನ್ನು (ಹಗಲು-ರಾತ್ರಿ ಎಂದು) ವಿಭಾಗ ಮಾಡಿ ಉದಿಸುತ್ತಾನೆ. ಅವನಿಗೆ ಉತ್ತರ ಮತ್ತು ದಕ್ಷಿಣ ಎರಡು ಆಯನಗಳು. ಅವನ ಕಿರಣಗಳೇ ಭೂಮಿಗೆ ಶಾಖವನ್ನು ಮತ್ತು ಬೆಳಕನ್ನು ಕೊಡುತ್ತಾ ಮೇಲ್ಮುಖವಾಗಿ, ಕೆಳಮುಖವಾಗಿ ಮತ್ತು ಅಕ್ಕ-ಪಕ್ಕಗಳಲ್ಲಿ ಸಂಚರಿಸುತ್ತವೆ.
ತಂ ಬ್ರಾಹ್ಮಣಾ ವೇದವಿದೋ ಜುಷಂತಿ
ತಸ್ಯಾದಿತ್ಯೋ ಭಾಮುಪಯುಜ್ಯ ಭಾತಿ |
ಸ ಮಾಸಿ ಮಾಸ್ಯಧ್ವರಕೃದ್ ವಿಧತ್ತೇ
ತಮಧ್ವರೇ ವೇದವಿದಃ ಪಠಂತಿ ||21||
ವೇದವನ್ನು ತಿಳಿದ ಬ್ರಾಹ್ಮಣರು ಅವನ ಸೇವೆಯನ್ನು ಮಾಡುತ್ತಾರೆ. ಸೂರ್ಯನು ಅವನ ತೇಜಸ್ಸನ್ನು ಉಪಜೀವಿಸಿಕೊಂಡು ಪ್ರಕಾಶಿಸುತ್ತಾನೆ. ಅವನು ಮಾಸ ಮಾಸಗಳಲ್ಲಿ ಯಜ್ಞಗಳನ್ನು ಮಾಡುವವನಾಗಿ ದರ್ಶಪೌರ್ಣಮಾಸಾದಿ ಯಜ್ಞಗಳನ್ನು ಮಾಡುತ್ತಾನೆ. ವೇದವನ್ನು ತಿಳಿದವರು ಯಜ್ಞಗಳಲ್ಲಿ ಅವನನ್ನು ಸ್ತೋತ್ರ ಮಾಡುತ್ತಾರೆ.
ಸ ಏಕಯುಕ್ ಚಕ್ರಮಿದಂ ತ್ರಿನಾಭಿ-
ಸಪ್ತಾಶ್ವಯುಕ್ತಂ ವಹತೇ ವೈ ತ್ರಿಧಾಮಾ |
ಮಹಾತೇಜಾಃ ಸರ್ವಗಃ ಸರ್ವಸಿಂಹಃ
ಕೃಷ್ಣೋ ಲೋಕಾನ್ ಧಾರಯತೇ ತಥೈಕಃ |
ಅಶ್ನನ್ನನಶ್ನಂಶ್ಚ ತಥೈವ ಧೀರಃ
ಕೃಷ್ಣಂ ಸದಾ ಪಾರ್ಥ ಕರ್ತಾರಮೇಹಿ ||22||
ತ್ರಿಧಾಮನಾದ ಅವನು ಒಬ್ಬ ಸಾರಥಿಯನ್ನು, ಒಂದು ಚಕ್ರವನ್ನು, ಮೂರು ಧಾಮಗಳನ್ನು, ಸಪ್ತಾಶ್ವಗಳನ್ನು ಹೊಂದಿದ ಈ ಸೂರ್ಯರಥವನ್ನು (ಕಾಲಚಕ್ರವನ್ನು) ನಿರ್ವಾಹ ಮಾಡುತ್ತಾನೆ. ಮಹಾತೇಜಸ್ವಿಯೂ, ಸರ್ವವ್ಯಾಪ್ತನೂ, ಸರ್ವ ಸಮರ್ಥನೂ ಆದ ಕೃಷ್ಣನು ಒಬ್ಬನೇ ಲೋಕಗಳನ್ನು ಧರಿಸುತ್ತಾನೆ. ಧೀರನಾದ ಅವನು ಭೋಗಿಸಿದರೂ, ಭೋಗಿಸದಿದ್ದರೂ ಒಂದೇ ರೀತಿ ಇರುತ್ತಾನೆ. ಎಲೈ ಪಾರ್ಥನೇ, ಯಾವಾಗಲೂ ಕೃಷ್ಣನನ್ನೇ ಸರ್ವಕರ್ತೃವೆಂದು ತಿಳಿ.
ಸ ಏಕದಾ ಕಕ್ಷಗತೋ ಮಹಾತ್ಮಾ
ತೃಪ್ತೋ ವಿಭುಃ ಖಾಂಡವೇ ಧೂಮಕೇತುಃ |
ಸ ರಾಕ್ಷಸಾನುರಗಾಂಶ್ಚಾವಜಿತ್ಯ
ಸರ್ವತ್ರಗಃ ಸರ್ವಮಗ್ನೌ ಜುಹೋತಿ ||23||
ಮಹಾತ್ಮನಾದ ಅವನು ಒಮ್ಮೆ ಖಾಂಡವವನದಲ್ಲಿ ಇದ್ದವನಾಗಿ ಧೂಮಕೇತುವಾಗಿ, ವಿಭುವಾಗಿ ತೃಪ್ತನಾದನು. ಸರ್ವತ್ರವ್ಯಾಪ್ತನಾದ ಅವನೇ ರಾಕ್ಷಸರನ್ನು, ಸರ್ಪಗಳನ್ನು ಜಯಿಸಿ ಎಲ್ಲರನ್ನೂ ಅಗ್ನಿಯಲ್ಲಿ ಹೋಮ ಮಾಡಿದನು.
ಸ ಏವಾಶ್ವಃ ಶ್ವೇತಮಶ್ವಂ ಪ್ರಯಚ್ಛತ್
ಸ ಏವಾಶ್ವಾನಥ ಸರ್ವಾಂಶ್ಚಕಾರ |
ತ್ರಿಬಂಧುರಸ್ತಸ್ಯ ರಥಸ್ತ್ರಿಚಕ್ರಃ
ತ್ರಿವೃಚ್ಛಿರಾಶ್ಚತುರಸ್ರಶ್ಚ ತಸ್ಯ ||24||
ಅವನೇ ಅಶ್ವನಾಮಕನಾಗಿ ಶ್ವೇತಾಶ್ವವಾದ ಉಚ್ಛೈಃಶ್ರವಸ್ಸನ್ನು ನೀಡಿದನು. ಅನಂತರ ಬೇರೆ ಅಶ್ವಗಳನ್ನು ಸೃಷ್ಟಿಸಿದನು. ಅವನ ರಥವು ಮೂರು ನೊಗಗಳಿಂದ (ಎದುರಿಗೆ ಒಂದು, ಎರಡು ಪಾರ್ಶ್ವಗಳಲ್ಲೂ ಒಂದೊಂದು) ಕೂಡಿದೆ. ಅವನ ರಥವು ಮೂರು ಚಕ್ರಗಳನ್ನು ಹೊಂದಿದೆ (ಮೂರು ಚಕ್ರವೆಂದರೆ ಮೂರು ವೇದಗಳು. ಅಥರ್ವಣ ವೇದವು ಮೂರು ವೇದಗಳಲ್ಲೇ ಸೇರಿರುವುದರಿಂದ ತ್ರಿಚಕ್ರವೆಂದರೆ ನಾಲ್ಕು ವೇದಗಳು ಎಂದು ಅರ್ಥ). ಅವನ ಶಿರಸ್ಸು ಮೂರು ದಿಕ್ಕುಗಳನ್ನೂ ವ್ಯಾಪಿಸಿದೆ. ಪರಿಪೂರ್ಣವಾದ ಅರ್ಜುನನ ರಥವು ಅವನ ವಶದಲ್ಲೇ ಇರುತ್ತದೆ.
ಸ ವಿಹಾಯೋ ವ್ಯದಧಾತ್ ಪಂಚನಾಭಿಃ

ಸ ನಿರ್ಮಮೇ ಗಾಂ ದಿವಮಂತರಿಕ್ಷಮ್ |
ಏವಂ ರಮ್ಯಾನಸೃಜತ್ ಪರ್ವತಾಂಶ್ಚ
ಹೃಷೀಕೇಶೋಽಮಿತದೀಪ್ತಾಗ್ನಿತೇಜಾಃ ॥25॥
ಮುಕ್ತಾಮುಕ್ತ ದೇವತೆಗಳು, ಮುಕ್ತಾಮುಕ್ತ ಅಸುರರು ಮತ್ತು ಸಂಸಾರಿಗಳು ಎಂಬ ಈ ಐದು ವಿಧರಾದ ಜೀವರನ್ನು ಉದರದಲ್ಲಿ ಹೊಂದಿದ ಅವನು ಆಕಾಶವನ್ನು ಸೃಷ್ಟಿಸಿದನು. ಅವನು ಭೂಮಿಯನ್ನು, ಸ್ವರ್ಗವನ್ನು, ಅಂತರಿಕ್ಷವನ್ನೂ ಸೃಷ್ಟಿಸಿದನು. ಅಮಿತ ದೀಪ್ತವಾದ ಅಗ್ನಿ ತೇಜಸ್ಸನ್ನು ಹೊಂದಿದ ಹೃಷೀಕೇಶನಾದ ಅವನು ರಮ್ಯವಾದ ಪರ್ವತಗಳನ್ನೂ ಸೃಷ್ಟಿ ಮಾಡಿದನು.
ಅಲಂಘಯದ್ ಸರತೋ ವೈ ಜಿಘಾಂಸುಃ
ಚಕ್ರಂ ವಜ್ರಂ ಪ್ರಹರಂತಂ ನಿರಸ್ಯ |
ಸ ಮಹೇಂದ್ರಃ ಸ್ತೂಯತೇ ವೈ ಮಹಾಧ್ವರೇ
ವಿಪ್ರೈರೇಕೋ ಋಕ್ಸಹಸ್ರೈಃ ಪುರಾಣೈಃ ॥26॥
ಅವನು ವಜ್ರಾಯುಧವನ್ನು ಪ್ರಯೋಗಿಸುತ್ತಿದ್ದ ಇಂದ್ರನನ್ನು ನಿರಾಸ ಮಾಡಿ ಚಕ್ರವನ್ನು ಪ್ರಯೋಗಿಸಿ ಸಜ್ಜನರ ಮೇಲೆ ಬೀಳುತ್ತಿದ್ದ ಪರ್ವತಗಳನ್ನು ಕೊಲ್ಲಲು ಉದ್ಯುಕ್ತನಾಗಿ ಭೂಮಿಯನ್ನು ಇಲ್ಲಿಂದಲ್ಲಿಗೆ ದಾಟಿದನು. ಮಹಾಧ್ವರಗಳಲ್ಲಿ ಮಹೇಂದ್ರನೆಂದು ಅವನೇ ಸ್ತೋತ್ರ ಮಾಡಲ್ಪಡುತ್ತಾನೆ. ಪ್ರಾಚೀನವಾದ ಸಹಸ್ರ ರೂಪಗಳಿಂದ (ಬೃಹತೀಸಹಸ್ರದಿಂದ) ಬ್ರಾಹ್ಮಣರಿಂದ ಅವನೇ ಸ್ತೋತ್ರ ಮಾಡಲ್ಪಡುತ್ತಾನೆ.
ದುರ್ವಾಸಾ ವೈ ತೇನ ನಾನ್ಯೇನ ಶಕ್ಯೋ
ಗೃಹೇ ರಾಜನ್ ವಾಸಯಿತುಂ ಮಹೌಜಾಃ |
ತಮೇವಾಹುರ್ಋಷಿಮೇಕಂ ಪುರಾಣಂ
ಸ ವಿಶ್ವಕೃದ್ ವಿದಧಾತ್ಯಾತ್ಮಭಾವಾನ್ ॥27॥
ಎಲೈ ರಾಜನೇ, ಮಹಾಸಾಮರ್ಥ್ಯೋಪೇತರಾದ ದುರ್ವಾಸರನ್ನು ಅವನನ್ನು ಬಿಟ್ಟು ಬೇರೆ ಯಾವನೂ ಮನೆಯಲ್ಲಿ ಇಟ್ಟುಕೊಳ್ಳಲು ಶಕ್ತನಾಗಿರಲಿಲ್ಲ. ಅವನನ್ನೇ ಜ್ಞಾನಿಗಳು ಪ್ರಾಚೀನನಾದ, ಮುಖ್ಯವಾದ, ಶತರ್ಚ್ಯಾದಿ ಋಷಿಗಳೆಂದು ಹೇಳುತ್ತಾರೆ (ಶತರ್ಚ್ಯಾದಿ ಶಬ್ದದಿಂದ ಅವನೇ ಮುಖ್ಯವಾಚ್ಯನೆಂದು ಹೇಳುತ್ತಾರೆ). ವಿಶ್ವಕರ್ತೃವಾದ ಅವನೇ ತನ್ನ ಅಭಿಪ್ರಾಯಗಳನ್ನು ಪ್ರಕಟಿಸುತ್ತಾನೆ.
ವೇದಾಂಶ್ಚ ಯೋ ವೇದಯತೇಽಧಿದೇವೋ
ವಿಧೀಂಶ್ಚ ಯಶ್ಚಾಶ್ರಯತೇ ಪುರಾಣಾನ್ |
ಕಾಮೇ ವೇದೇ ಲೌಕಿಕೇ ಯತ್ಫಲಂ ಚ
ವಿಷ್ವಕ್ಸೇನೇ ಸರ್ವಮೇತತ್ ಪ್ರತೀಹಿ ॥28॥
ಸರ್ವೋತ್ತಮ ದೇವನಾದ ಅವನು ವೇದಗಳನ್ನು ತಿಳಿಸುತ್ತಾನೆ. ಪ್ರಾಚೀನವಾದ ವಿಧಿಗಳನ್ನು ಅನುಸರಿಸುತ್ತಾನೆ. ವೇದಗಳಲ್ಲಿ ಲೋಕದಲ್ಲಿ, ಕಾಮ್ಯಕರ್ಮಗಳಲ್ಲಿ ಯಾವ ಫಲವು ವಿಹಿತವಾಗಿದೆಯೋ ಅದೆಲ್ಲವೂ ವಿಷ್ವಕ್ಸೇನನಾದ ಕೃಷ್ಣನ ಅಧೀನವಾಗಿದೆ ಎಂದು ತಿಳಿ.
ಜ್ಯೋತೀಂಷಿ ಶುಕ್ಲಾನಿ ಚ ಸರ್ವಲೋಕೇ
ತ್ರಯೋ ಲೋಕಾ ಲೋಕಪಾಲಾಸ್ತ್ರಯಶ್ಚ |
ತ್ರಯೋಽಗ್ನಯೋ ವ್ಯಾಹೃತಯಶ್ಚ ತಿಸ್ರಃ
ಸರ್ವೇ ದೇವಾ ದೇವಕೀಪುತ್ರ ಏವ ॥29॥
ಸರ್ವಲೋಕದಲ್ಲಿರುವ ಪರಿಶುದ್ಧವಾದ ಜ್ಯೋತಿಸ್ಸುಗಳು, ಮೂರು ಲೋಕಗಳು, ಮೂರು ಲೋಕಪಾಲರು, ಮೂರು ಅಗ್ನಿಗಳು, ಮೂರು ವ್ಯಾಹೃತಿಗಳು, ಎಲ್ಲ ದೇವತೆಗಳು- ಎಲ್ಲರೂ ದೇವಕೀಪುತ್ರನಲ್ಲಿಯೇ ಇದ್ದಾರೆ.
ಸಂವತ್ಸರಃ ಸ ಋತುಃ ಸೋಽರ್ಧಮಾಸಃ
ಸೋಽಹೋರಾತ್ರಃ ಸ ಕಲಾ ವೈ ಸ ಕಾಷ್ಠಾಃ |
ಮಾತ್ರಾ ಮುಹೂರ್ತಾಶ್ಚ ಲವಾಃ ಕ್ಷಣಾಶ್ಚ
ವಿಷ್ವಕ್ಸೇನೇ ಸರ್ವಮೇತತ್ ಪ್ರತೀಹಿ ॥30॥
ಅವನೇ ಸಂವತ್ಸರ, ಋತು, ಅರ್ಧಮಾಸ, ಅಹೋರಾತ್ರ, ಕಲಾ, ಕಾಷ್ಠ, ಮಾತ್ರಾ, ಮುಹೂರ್ತ, ಲವ, ಕ್ಷಣ ಎಲ್ಲವೂ. ಈ ಎಲ್ಲವೂ ಅವನಲ್ಲಿಯೇ ಇವೆ ಎಂದು ತಿಳಿ.
ಚಂದ್ರಾದಿತ್ಯೌ ಗ್ರಹನಕ್ಷತ್ರತಾರಾಃ
ಸರ್ವಾಣಿ ದರ್ಶಾನ್ಯಥ ಪೌರ್ಣಮಾಸ್ಯಃ |
ನಕ್ಷತ್ರಯೋಗಾ ಋತವಶ್ಚ ಪಾರ್ಥ
ವಿಷ್ವಕ್ಸೇನಾತ್ ಸರ್ವಮೇತತ್ ಪ್ರಸೂತಮ್ ॥31॥
ಎಲೈ ಪಾರ್ಥನೇ, ಚಂದ್ರ-ಸೂರ್ಯರು, ಗ್ರಹ-ನಕ್ಷತ್ರ-ತಾರೆಗಳು ಎಲ್ಲ ದರ್ಶ ಪೌರ್ಣಮಾಸ್ಯಗಳು, ನಕ್ಷತ್ರಯೋಗಗಳು, ಋತುಗಳು ವಿಷ್ವಕ್ಸೇನನಾದ ಕೃಷ್ಣನಿಂದಲೇ ಜನಿಸಿವೆ ಎಂದು ತಿಳಿ.
ರುದ್ರಾದಿತ್ಯಾ ವಸವೋಽಥಾಶ್ವಿನೌ ಚ
ಸಾಧ್ಯಾ ವಿಶ್ವೇ ಮರುತಾಂ ಷಡ್ಗಣಾಶ್ಚ |
ಪ್ರಜಾಪತಿರ್ದೇವಮಾತಾಽದಿತಿಶ್ಚ
ಸರ್ವೇ ಕೃಷ್ಣಾದೃಷಯಶ್ಚೈವ ಸಪ್ತ ॥32॥

ರುದ್ರರು, ಆದಿತ್ಯರು, ವಸುಗಳು, ಅಶ್ವಿನಿಗಳು, ಸಾಧ್ಯರು, ವಿಶ್ವೇದೇವತೆಗಳು, ಮರುತ್ತುಗಳ ಆರು ಗಣಗಳು, ಪ್ರಜಾಪತಿ, ದೇವಮಾತೆಯಾದ ಅದಿತಿ, ಸಪ್ತರ್ಷಿಗಳು ಎಲ್ಲರೂ ಕೃಷ್ಣನಿಂದಲೇ ಜನಿಸಿದವರು.

ವಾಯುರ್ಭೂತ್ವಾ ವಿಕ್ಷಿಪತೇ ಚ ವಿಶ್ವಮ್
ಅಗ್ನಿರ್ಭೂತ್ವಾ ದಹತೇ ವಿಶ್ವರೂಪಃ |
ಆಪೋ ಭೂತ್ವಾ ಮಜ್ಜಯತೇ ಚ ಸರ್ವಂ
ಬ್ರಹ್ಮಾ ಭೂತ್ವಾ ಸೃಜತೇ ವಿಶ್ವಸಂಘಾನ್ ||33||

ಅವನು ವಾಯುವಾಗಿ ಜಗತ್ತನ್ನು ಹಾರಿಸುತ್ತಾನೆ. ವಿಶ್ವರೂಪನಾದ ಅವನು ಅಗ್ನಿಯಾಗಿ ದಹಿಸುತ್ತಾನೆ. ಜಲವಾಗಿ ಎಲ್ಲವನ್ನೂ ಮುಳುಗಿಸುತ್ತಾನೆ. ಬ್ರಹ್ಮನಾಗಿ ಎಲ್ಲವನ್ನೂ ಸೃಷ್ಟಿಸುತ್ತಾನೆ.

ವೇದ್ಯಂ ಚ ಯದ್ ವೇದಯತೇ ಚ ವೇದಾನ್
ವಿಧಿಶ್ಚ ಯಶ್ಚಾಶ್ರಯತೇ ವಿಧೇಯಾನ್ |
ಧರ್ಮೇ ಚ ವೇದೇ ಚ ಬಲೇ ಚ ಸರ್ವಂ
ಚರಾಚರಂ ಕೇಶವಂ ತ್ವಂ ಪ್ರತೀಹಿ ||34||

ಅವನು ವೇದ್ಯರನ್ನು ಮತ್ತು ವೇದವನ್ನು ತಿಳಿಸುತ್ತಾನೆ. ಅನುಷ್ಠಾನ ಮಾಡಬೇಕಾದ ವಿಧಿಗಳನ್ನು ಅನುಸರಿಸುತ್ತಾನೆ. ಧರ್ಮದಲ್ಲಿ, ವೇದದಲ್ಲಿ, ಬಲದಲ್ಲಿ ಇರುವ ಎಲ್ಲಾ ಚರಾಚಾರವು ಕೇಶವನೆಂದು (ಕೇಶವನ ಅಧೀನವೆಂದು) ತಿಳಿ.

ಜ್ಯೋತಿರ್ಭೂತಃ ಪರಮೋಽಸೌ ಪುರಸ್ತಾತ್
ಪ್ರಭಾಸಯನ್ ಪ್ರಭಯಾ ವಿಶ್ವರೂಪಮ್ |
ಅಪಃ ಸೃಷ್ಟ್ವಾ ಹ್ಯಾತ್ಮಭೂರಾತ್ಮಯೋನಿಃ
ಪುರಾಕರೋತ್ ಸರ್ವಮೇವಾಥ ವಿಶ್ವಮ್ ||35||

ಮೊದಲು ಜ್ಯೋತೀರೂಪನಾಗಿ ಸರ್ವೋತ್ತಮನಾಗಿದ್ದ ಅವನು ತನ್ನ ವಿಶ್ವರೂಪವನ್ನು ಕಾಂತಿಯಿಂದ ಪ್ರಕಾಶಿಸುತ್ತಾ ಜಲವನ್ನು ಸೃಷ್ಟಿಸಿದನು. ತನ್ನಷ್ಟಕ್ಕೆ ತಾನೇ ಸ್ವತಂತ್ರನಾಗಿರುವ, ತನ್ನಿಂದಲೇ ತಾನು ಜ್ವಲಿಸುವ ಅವನು ಅನಂತರ ವಿಶ್ವವನ್ನು ಸೃಷ್ಟಿಸಿದನು.

ಋತೂನುತ್ಪಾತಾನ್ ವಿವಿಧಾನ್ಯದ್ಭುತಾನಿ
ಮೇಘಾನ್ ವಿದ್ಯುತ್ ಸರ್ವಮೈರಾವತಂ ಚ |
ಸರ್ವಂ ಕೃಷ್ಣಾತ್ ಸ್ಥಾವರಂ ಜಂಗಮಂ ಚ
ವಿಶ್ವಾಖ್ಯಾತಾದ್ ವಿಷ್ಣುಮೇನಂ ಪ್ರತೀಹಿ ||36||

ಋತುಗಳು, ಉತ್ಪಾತಗಳು, ವಿವಿಧವಾದ ಅದ್ಭುತಗಳು, ಮೇಘಗಳು, ಮಿಂಚುಗಳು, ಐರಾವತ ಮೊದಲಾದ ಗಜಗಳು, ಸ್ಥಾವರ-ಜಂಗಮವೆಲ್ಲವೂ ವಿಶ್ವ ಶಬ್ದವಾಚ್ಯನಾದ ಕೃಷ್ಣನಿಂದಲೇ ಎಂದು ಈ ವಿಷ್ಣುವನ್ನು ತಿಳಿ.

ವಿಶ್ವಾವಾಸಂ ನಿರ್ಗುಣಂ ವಾಸುದೇವಂ
ಸಂಕರ್ಷಣಂ ಜೀವಭೂತಂ ವದಂತಿ |
ತತಃ ಪ್ರದ್ಯುಮ್ನಮನಿರುದ್ಧಂ ಚತುರ್ಥಮ್
ಆಜ್ಞಾಪಯತ್ಯಾತ್ಮಯೋನಿರ್ಮಹಾತ್ಮಾ ||37||

ವಿಶ್ವದಲ್ಲಿ ವಾಸನಾದ ನಿರ್ಗುಣನಾದ ಇವನನ್ನು ವಾಸುದೇವನೆಂದು ಕರೆಯುತ್ತಾರೆ. ಜೀವನಲ್ಲಿರುವ ಇವನನ್ನು ಸಂಕರ್ಷಣನೆಂದು ಕರೆಯುತ್ತಾರೆ. ಆತ್ಮಯೋನಿಯಾದ, ಮಹಾತ್ಮನಾದ ಇವನು ಅನಂತರ ಪ್ರದ್ಯುಮ್ನನನ್ನೂ ಮತ್ತು ನಾಲ್ಕನೆಯದಾದ ಅನಿರುದ್ಧ ರೂಪವನ್ನೂ ತಿಳಿಸಿಕೊಡುತ್ತಾನೆ.

ಸ ಪಂಚಧಾ ಪಂಚಜನೋಪಪನ್ನಂ
ಸಂಚೋದಯನ್ ವಿಶ್ವಮಿದಂ ಸಿಸೃಕ್ಷುಃ |
ತತಶ್ಚಕಾರಾವನಿಮಾರುತೌ ಚ
ಖಂ ಜ್ಯೋತಿರಾಪಶ್ಚ ತಥೈವ ಪಾರ್ಥ ||38||

ಅವನು ದೇವರ್ಷ್ಯಾದಿ ಪಂಚವಿಧವಾದ ಜೀವರಿಂದ ಕೂಡಿದ ಈ ವಿಶ್ವವನ್ನು ಐದು ರೀತಿಯಲ್ಲಿ ಪ್ರಚೋದಿಸುವವನಾಗಿ ಜಗತ್ತನ್ನು ಸೃಷ್ಟಿ ಮಾಡಲು ಬಯಸಿ ಅನಂತರ ಎಲೈ ಪಾರ್ಥನೇ, ಅಗ್ನಿ, ಜಲ, ವಾಯು, ಆಕಾಶ ಮತ್ತು ಭೂಮಿಯನ್ನು ಸೃಷ್ಟಿಸಿದನು.

ಸ ಸ್ಥಾವರಂ ಜಂಗಮಂ ಚೈವಮೇತತ್
ಚತುರ್ವಿಧಂ ಲೋಕಮಿಮಂ ಚ ಕೃತ್ವಾ |
ತತೋ ಭೂಮಿಂ ವ್ಯದಧಾತ್ ಪಂಚಬೀಜಾಂ
ದ್ಯೌಃ ಪೃಥಿವ್ಯಾಂ ಧಾಸ್ಯತಿ ಭೂರಿವಾರಿ |
ತೇನ ವಿಶ್ವಂ ಕೃತಮೇತದ್ಧಿ ರಾಜನ್
ಸ ಜೀವಯತ್ಯಾತ್ಮನೈವಾತ್ಮಯೋನಿಃ ||39||

ಅವನು ಸ್ಥಾವರ-ಜಂಗಮಾತ್ಮಕವಾದ ಉದ್ಭಿಜಾದಿ ನಾಲ್ಕು ವಿಧಗಳನ್ನು ಹೊಂದಿದ ಈ ಲೋಕವನ್ನು ಸೃಷ್ಟಿಸಿ, ಪಂಚಬೀಜಗಳುಳ್ಳ ಭೂಮಿಯನ್ನು ಸೃಷ್ಟಿಸಿದನು. ಅನಂತರ ದ್ಯುಲೋಕವನ್ನು ಬಹಳ ಜಲವಿರುವ ಭೂಮಿಯ ಮೇಲೆ ಇಟ್ಟನು. ಎಲೈ ರಾಜನೇ, ಈ ವಿಶ್ವವು ಅವನಿಂದಲೇ ಸೃಷ್ಟಿಸಲ್ಪಟ್ಟುದು. ಆತ್ಮಯೋನಿಯಾದ ಅವನೇ ತನ್ನ ಸಾಮರ್ಥ್ಯದಿಂದ ಎಲ್ಲ ಜೀವರಿಗೂ ಜೀವಪ್ರದನಾಗಿದ್ದಾನೆ.

ತತೋ ದೇವಾನಸುರಾನ್ ಮಾನುಷಾಂಶ್ಚ

ಲೋಕಾನೃಷೀಂಶ್ಚಾಥ ಪಿತ್ರೂನ್ ಪ್ರಜಾಶ್ಚ |
ಸಮಾಸೇನ ವಿವಿಧಾನ್ ಪ್ರಾಣಿಲೋಕಾನ್
ಸರ್ವಾನ್ ಸದಾ ಭೂತಪತಿಃ ಸಿಸೃಕ್ಷುಃ ||40||
ಅನಂತರ ದೇವತೆಗಳನ್ನೂ, ಅಸುರರನ್ನೂ, ಮನುಷ್ಯರನ್ನೂ, ಲೋಕಗಳನ್ನೂ, ಋಷಿಗಳನ್ನೂ, ಪಿತೃಗಳನ್ನೂ, ಉಳಿದ ಪ್ರಜೆಗಳನ್ನೂ, ಸಂಕ್ಷೇಪವಾಗಿ ವಿವಿಧ ಪ್ರಾಣಿಲೋಕಗಳನ್ನು ಭೂತಪತಿಯಾದ ಅವನು ಸದಾ ಸೃಷ್ಟಿಸುವ ಇಚ್ಛೆಯುಳ್ಳವನಾದನು.
ಶುಭಾಶುಭಂ ಸ್ಥಾವರಂ ಜಂಗಮಂ ಚ
ವಿಷ್ವಕ್ಸೇನಾತ್ ಸರ್ವಮೇತತ್ ಪ್ರತೀಹಿ |
ಯದ್ವರ್ತತೇ ಯಚ್ಚ ಭವಿಷ್ಯತೀಹ
ಸರ್ವಮೇತತ್ ಕೇಶವಂ ತ್ವಂ ಪ್ರತೀಹಿ ||41||
ಶುಭಾಶುಭವಾದ, ಸ್ಥಾವರ-ಜಂಗಮವಾದ ಎಲ್ಲವೂ ವಿಷ್ವಕ್ಸೇನನಾದ ಅವನಿಂದಲೇ ಎಂದು ತಿಳಿ. ಈಗ ಏನು ಇದೆಯೋ, ಮುಂದೆ ಏನು ಉಂಟಾಗುವುದೋ ಎಲ್ಲವೂ ಕೇಶವನ ಅಧೀನವೆಂದು ತಿಳಿ.
ಮೃತ್ಯುಶ್ಚೈವ ಪ್ರಾಣಿನಾಮಂತಕಾಲೇ
ಸಾಕ್ಷಾತ್ ಕೃಷ್ಣಃ ಶಾಶ್ವತೋ ಧರ್ಮ ಏವ |
ಭೂತಂ ಚ ಯಚ್ಚೇಹ ನ ವಿದ್ಮ ಕಿಂಚಿದ್
ವಿಷ್ವಕ್ಸೇನಾತ್ ಸರ್ವಮೇತತ್ ಪ್ರತೀಹಿ ||42||
ಪ್ರಾಣಿಗಳಲ್ಲಿ ಅಂತಕಾಲದಲ್ಲಿ ಒದಗುವ ಮೃತ್ಯುವು ಸಾಕ್ಷಾತ್ ಕೃಷ್ಣನೇ. ಅವನೇ ಧಾರಕನಾದುದರಿಂದ ಶಾಶ್ವತನಾದ ಧರ್ಮ. ನಾವು ತಿಳಿದಿರುವ ವಸ್ತುಗಳೆಷ್ಟಿವೆಯೋ ಅವೆಲ್ಲವೂ ಸಹ ವಿಷ್ವಕ್ಸೇನನಾದ ಕೃಷ್ಣನಿಂದಲೇ ಜನಿಸಿವೆ ಎಂದು ತಿಳಿ.
ಯತ್ ಪ್ರಶಸ್ತಂ ಚ ಲೋಕೇಷು ಪುಣ್ಯಂ ಯಚ್ಚ ಶುಭಾಶುಭಮ್ |
ತತ್ಸರ್ವಂ ಕೇಶವೋಽಚಿಂತ್ಯೋ ವಿಪರೀತಮತೋ ಭವೇತ್ ||43||
ಲೋಕದಲ್ಲಿ ಯಾವುದು ಪ್ರಶಸ್ತವೋ, ಯಾವುದು ಪವಿತ್ರವೋ, ಯಾವುದು ಶುಭವೋ, ಯಾವುದು ಅಶುಭವೋ ಅವೆಲ್ಲವೂ ಅಚಿಂತ್ಯನಾದ ಕೇಶವನಿಂದ ಅಧಿಷ್ಠಿತವಾದುವು. ಕೇಶವನ ವಿಶೇಷವಾದ ಸನ್ನಿಧಾನವಿಲ್ಲದಿದ್ದರೆ ಎಲ್ಲವೂ ವಿರುದ್ಧವಾಗುತ್ತವೆ.
ಏತಾದೃಶಃ ಕೇಶವೋಽಯಂ ಸ್ವಯಂಭೂಃ
ನಾರಾಯಣಃ ಪರಮಶ್ಚಾವ್ಯಯಶ್ಚ |
ಮಧ್ಯಂ ಚಾಸ್ಯ ಜಗತಸ್ತಸ್ಥುಷಶ್ಚ
ಸರ್ವೇಷಾಂ ಭೂತಾನಾಂ ಪ್ರಭವಶ್ಚಾಪ್ಯಯಶ್ಚ ||44||
ಅಂತಹ ಈ ಕೇಶವನು ಸ್ವತಂತ್ರನಾದವನು. ನಾರಾಯಣ, ಸರ್ವೋತ್ತಮ, ನಾಶ ರಹಿತ. ಸ್ಥಾವರ-ಜಂಗಮಾತ್ಮಕವಾದ ಎಲ್ಲ ಜೀವರಿಗೆ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವನು.
|| ಇತಿ ದಾನಧರ್ಮೇ ವಿಷ್ಣುಮಾಹಾತ್ಮ್ಯಕೀರ್ತನಂ ನಾಮ ಷಟ್‌ಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತೇಳನೆಯ ಅಧ್ಯಾಯ
ಕೃಷ್ಣನಿಂದ ದುರ್ವಾಸಮಾಹಾತ್ಮ್ಯಕಥನ.
ವೈಶಂಪಾಯನಃ
ಪಿತಾಮಹವಚಃ ಶ್ರುತ್ವಾ ರಾಜಂಸ್ತೇ ಪ್ರಪಿತಾಮಹಃ |
ಪ್ರಣಮ್ಯ ಪುಂಡರೀಕಾಕ್ಷಮಿದಂ ವಚನಮಬ್ರವೀತ್ ||1||
ವೈಶಂಪಾಯನ ಪಿತಾಮಹರಾದ ಭೀಷ್ಮರ ಮಾತನ್ನು ಕೇಳಿ ನಿನ್ನ ಪ್ರಪಿತಾಮಹನಾದ ಯುಧಿಷ್ಠಿರನು ಪುಂಡರೀಕಾಕ್ಷನಾದ ಕೃಷ್ಣನಿಗೆ ನಮಸ್ಕಾರವನ್ನು ಮಾಡಿ ಈ ಮಾತನ್ನು ಆಡಿದನು.
ಯುಧಿಷ್ಠಿರಃ
ಬ್ರೂಹಿ ಬ್ರಾಹ್ಮಣಪೂಜಾಯಾಂ ವ್ಯುಷ್ಟಿಂ ತ್ವಂ ಮಧುಸೂದನ |
ವೇತ್ತಾ ತ್ವಮಸ್ಯ ಚಾರ್ಥಸ್ಯ ವೇದ ತ್ವಾಂ ಹಿ ಪಿತಾಮಹಃ ||2||
ಯುಧಿಷ್ಠಿರ ಎಲೈ ಮಧುಸೂದನನೇ, ಬ್ರಾಹ್ಮಣ ಪೂಜೆಯಿಂದ ಉಂಟಾಗುವ ಫಲವನ್ನು ಹೇಳು. ನೀನು ಇದನ್ನು ತಿಳಿದಿದ್ದೀಯೆ. ಪಿತಾಮಹರಾದ ಭೀಷ್ಮರೂ ನಿನ್ನನ್ನು ತಿಳಿದಿದ್ದಾರಷ್ಟೆ?
ವಾಸುದೇವಃ
ಶೃಣುಷ್ವಾವಹಿತೋ ರಾಜನ್ ದ್ವಿಜಾನಾಂ ಭರತರ್ಷಭ |
ಯಥಾತತ್ತ್ವೇನ ವದತೋ ಗುಣಾನ್ ಮೇ ಕುರುಸತ್ತಮ ||3||
ವಾಸುದೇವ ಎಲೈ ರಾಜನೇ, ಭರತಶ್ರೇಷ್ಠನೇ, ಕುರುಸತ್ತಮನೇ, ಬ್ರಾಹ್ಮಣರ ಗುಣವನ್ನು ಯಥಾರ್ಥವಾಗಿ ಹೇಳುವ ನನ್ನ ಮಾತುಗಳನ್ನು ಅವಧಾನದಿಂದ ಕೇಳು.
ಪ್ರದ್ಯುಮ್ನಃ ಪರಿಪಪ್ರಚ್ಛ ಬ್ರಾಹ್ಮಣೈಃ ಪರಿಕೋಪಿತಃ |

ಕಿಂ ಫಲಂ ಬ್ರಾಹ್ಮಣೇಷ್ವಸ್ತಿ ಪೂಜಾಯಾಂ ಮಧುಸೂದನ |
ಈಶ್ವರಸ್ಯ ಸತಸ್ತಸ್ಯ ಇಹ ಚೈವ ಪರತ್ರ ಚ ||4||
ಸದಾ ದ್ವಿಜಾತೀನ್ ಸಂಪೂಜ್ಯ ಕಿಂ ಫಲಂ ತತ್ರ ಮಾನದ |
ಏತನ್ಮೇ ಬ್ರೂಹಿ ತತ್ಸತ್ಯಂ ಸುಮಹಾನ್ ಸಂಶಯೋಽತ್ರ ಮೇ ||5||
ಬ್ರಾಹ್ಮಣರಿಂದ ಕೋಪಿಸಲ್ಪಟ್ಟ ಪ್ರದ್ಯುಮ್ನನು ನನ್ನನ್ನು ಕುರಿತು ಮಧುಸೂದನನೇ, ಈಶ್ವರನಾದ ನಿನಗೆ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಬ್ರಾಹ್ಮಣರ ಪೂಜೆಯಿಂದ ಏನು ಫಲವಿದೆ? ಎಲೈ ಮಾನದನೇ, ಯಾವಾಗಲೂ ಬ್ರಾಹ್ಮಣರನ್ನು ಪೂಜಿಸುವುದರಿಂದ ಅದರಲ್ಲಿ ಏನು ಫಲ? ಇದನ್ನು ನನಗೆ ಸತ್ಯವಾಗಿ ಹೇಳು. ನನಗೆ ಈ ವಿಷಯದಲ್ಲಿ ಬಹಳ ಸಂಶಯವಿದೆ ಎಂದು ಹೇಳಿದನು.
ಇತ್ಯುಕ್ತವಚನಸ್ತೇನ ಪ್ರದ್ಯುಮ್ನೇನ ತದಾ ತ್ವಹಮ್ |
ಪ್ರತ್ಯಬ್ರುವಂ ಮಹಾರಾಜ ಯತ್ತಚ್ಛೃಣು ಸಮಾಹಿತಃ ||6||
ಎಲೈ ಮಹಾರಾಜನೇ, ಪ್ರದ್ಯುಮ್ನನು ಹೀಗೆ ಹೇಳಿದಾಗ ನಾನು ಅವನಿಗೆ ಏನು ಹೇಳಿದೆನೆಂದು ಸಮಾಧಾನದಿಂದ ಕೇಳು.
ವ್ಯುಷ್ಟಿಂ ಬ್ರಾಹ್ಮಣಪೂಜಾಯಾಂ ರೌಗ್ಮಿಣೇಯ ನಿಬೋಧ ಮೇ |
ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ||7||
ಎಲೈ ರುಗ್ಮಿಣೀ ಪುತ್ರನೇ, ಬ್ರಾಹ್ಮಣ ಪೂಜೆಯ ಫಲವನ್ನು ನೀನು ತಿಳಿದುಕೊ. ಇವರು (ಬ್ರಾಹ್ಮಣರು) ಚಂದ್ರನನ್ನೇ ಪ್ರಭುವಾಗಿ ಹೊಂದಿದವರು ಮತ್ತು ಸುಖ-ದುಃಖಗಳಿಗೆ ಒಡೆಯರಾದವರು.
ಅಸ್ಮಿಲ್ಲೋಕೇ ರೌಗ್ಮಿಣೇಯ ತಥಾಽಮುಷ್ಮಿಂಶ್ಚ ಪುತ್ರಕ |
ಬ್ರಾಹ್ಮಣಪ್ರಮುಖಂ ಸೌಖ್ಯಂ ನ ಮೇಽತ್ರಾಸ್ತಿ ವಿಚಾರಣಾ ||8||
ಎಲೈ ರುಗ್ಮಿಣಿಯ ಪುತ್ರನೇ, ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಎಲ್ಲ ಸೌಖ್ಯವೂ ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡಿದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.
ಬ್ರಾಹ್ಮಣಪ್ರಮುಖಂ ವೀರ್ಯಮಾಯುಃ ಕೀರ್ತಿರ್ಯಶೋ ಬಲಮ್ |
ಲೋಕಾ ಲೋಕೇಶ್ವರಾಶ್ಚೈವ ಸರ್ವೇ ಬ್ರಾಹ್ಮಣಪೂರ್ವಕಾಃ ||9||
ವೀರ್ಯ, ಆಯುಸ್ಸು, ಕೀರ್ತಿ, ಬಲ ಎಲ್ಲವೂ ಬ್ರಾಹ್ಮಣ ಪ್ರಮುಖವಾದವುಗಳು. ಲೋಕಗಳು ಮತ್ತು ಲೋಕೇಶ್ವರರೆಲ್ಲರೂ ಬ್ರಾಹ್ಮಣರನ್ನೇ ಮುಂದೆ ಮಾಡಿಕೊಂಡಿರುತ್ತಾರೆ.
ತತ್ಕಥಂ ನಾದ್ರಿಯೇಯಂ ವೈ ಈಶ್ವರೋಽಸ್ಮೀತಿ ಪುತ್ರಕ |
ಮಾ ತೇ ಮನ್ಯುರ್ಮಹಾಬಾಹೋ ಭವತ್ವತ್ರ ದ್ವಿಜಾನ್ ಪ್ರತಿ ||10||
ಎಲೈ ಪುತ್ರಕನೇ, ನಾನು ಈಶ್ವರನೆಂದು ಬ್ರಾಹ್ಮಣರನ್ನು ಹೇಗೆ ಆದರಿಸದೇ ಇರಲಿ? ಎಲೈ ಮಹಾಬಾಹುವೇ, ಬ್ರಾಹ್ಮಣರ ಮೇಲೆ ಕೋಪಗೊಳ್ಳಬೇಡ.
ಬ್ರಾಹ್ಮಣೋ ಹಿ ಮಹದ್ಭೂತಮಸ್ಮಿಲ್ಲೋಕೇ ಪರತ್ರ ಚ |
ಭಸ್ಮ ಕುರ್ಯುರ್ಜಗದಿದಂ ಕ್ರುದ್ಧಾಃ ಪ್ರತ್ಯಕ್ಷಮೇವ ನಃ ||11||
ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಬ್ರಾಹ್ಮಣನು ಮಹದ್ಭೂತ. ಕೋಪಗೊಂಡ ಅವರು ನಮ್ಮ ಕಣ್ಣೆದುರಿಗೇ ಈ ಜಗತ್ತನ್ನು ಭಸ್ಮ ಮಾಡಿಯಾರು.
ಅನ್ಯಾನಪಿ ಸೃಜೇಯುಶ್ಚ ಲೋಕಾಲ್ಲೋಕೇಶ್ವರಾಂಸ್ತಥಾ |
ಕಥಂ ತೇಷು ನ ವರ್ತೇಯ ಸಮ್ಯಗ್ಜ್ಞಾನಾತ್ ಸುತೇಜಸಃ ||12||
ಬ್ರಾಹ್ಮಣರು ತಮ್ಮ ಸಾಮರ್ಥ್ಯದಿಂದ ಬೇರೆ ಲೋಕಗಳನ್ನು ಮತ್ತು ಲೋಕ ಪಾಲಕರನ್ನು ಸೃಷ್ಟಿಸಿಯಾರು! ದಿವ್ಯವಾದ ಜ್ಞಾನವನ್ನು ಹೊಂದಿರುವುದರಿಂದ ಬಹಳ ತೇಜಸ್ಸನ್ನು ಹೊಂದಿದ ಅವರನ್ನು ನಾನು ಹೇಗೆ ಅನುಸರಿಸದೇ ಇರಲು ಸಾಧ್ಯ?
ಅವಸನ್ ಮದ್ಗೃಹೇ ತಾತ ಬ್ರಾಹ್ಮಣೋ ಹರಿಪಿಂಗಲಃ |
ಚೀರವಾಸಾ ಬಿಲ್ವದಂಡೀ ದೀರ್ಘಶ್ಮಶ್ರುನಖಾದಿಮಾನ್ |
ದೀರ್ಘೇಭ್ಯಶ್ಚ ಮನುಷ್ಯೇಭ್ಯಃ ಪ್ರಮಾಣಾದಧಿಕೋ ಭುವಿ ||13||
ಎಲೈ ಪ್ರೀತಿಪಾತ್ರನೇ, ನನ್ನ ಮನೆಯಲ್ಲಿ ಕೃಷ್ಣಪಿಂಗಲನೂ, ನಾರುಮಡಿ ಉಟ್ಟವನೂ, ಬಿಲ್ವದಂಡವನ್ನು ಧರಿಸಿದವನೂ, ದೀರ್ಘವಾದ ಉಗುರು ಮತ್ತು ಮೀಸೆಗಳನ್ನು ಧರಿಸಿದವನೂ ಆದ ಒಬ್ಬ ಬ್ರಾಹ್ಮಣನು ವಾಸ ಮಾಡಿದನು. ಅವನು ಭೂಮಿಯಲ್ಲಿ ಎತ್ತರವಾದ ಮನುಷ್ಯರಿಗಿಂತಲೂ ಎತ್ತರವಾಗಿದ್ದನು.
ಸ ಸ್ಮ ಸಂಚರತೇ ಲೋಕಾನ್ ಯೇ ದಿವ್ಯಾ ಯೇ ಚ ಮಾನುಷಾಃ |
ಇಮಾ ಗಾಥಾ ಗಾಯಮಾನಶ್ಚತ್ವರೇಷು ಸಭಾಸು ಚ ||14||
ಅವನು ಈ ಗೀತೆಯನ್ನು ಹಾಡುತ್ತಾ ದಿವ್ಯಲೋಕಗಳಲ್ಲಿಯೂ, ಮನುಷ್ಯ ಲೋಕಗಳಲ್ಲಿ ಚತ್ವರಗಳಲ್ಲಿಯೂ (ನಾಲ್ಕು ರಸ್ತೆಗಳು ಕೂಡುವ ಸ್ಥಳ) ಮತ್ತು ಸಭೆಗಳಲ್ಲಿಯೂ ಸಂಚರಿಸುತ್ತಿದ್ದನು.
ದುರ್ವಾಸಸಂ ವಾಸಯೇತ್ ಕೋ ಬ್ರಾಹ್ಮಣಂ ಸತ್ಕೃತಂ ಗೃಹೇ |
ಪರಿಭಾಷಾಂ ಚ ಮೇ ಶ್ರುತ್ವಾ ಕೋ ನು ದದ್ಯಾತ್ ಪ್ರತಿಶ್ರಯಮ್ |
ಯೋ ಮಾಂ ಕಶ್ಚಿದ್ ವಾಸಯೇತ ನ ಸ ಮಾಂ ಕೋಪಯೇದಿಹ ||15||
ಪೂಜ್ಯನಾದ, ಬ್ರಾಹ್ಮಣನಾದ ದುರ್ವಾಸರನ್ನು ಯಾವನು ತನ್ನ ಮನೆಯಲ್ಲಿ ಇಟ್ಟುಕೊಳ್ಳುತ್ತಾನೆ? ನನ್ನ ನಿಬಂಧನೆಯನ್ನು ಕೇಳಿ ಯಾವನು ನನಗೆ ಆಶ್ರಯವನ್ನು ಕೊಡುತ್ತಾನೆ? ನನಗೆ ಆಶ್ರಯವನ್ನು ಕೊಡುವವನು ನನ್ನನ್ನು ಕೋಪಗೊಳಿಸಬಾರದು (ಎಂದು ಹಾಡುತ್ತಿದ್ದನು).

ತಂ ಸ್ಮ ನಾದ್ರಿಯತೇ ಕಶ್ಚಿತ್ ತತೋಽಹಂ ತಮವಾಸಯಮ್ |
ಸ ಸ್ಮ ಭುಂಕ್ತೇ ಸಹಸ್ರಾಣಾಂ ಬಹೂನಾಮನ್ನಮೇಕದಾ |
ಏಕದಾ ಸ್ಮಾಲ್ಪಕಂ ಭುಂಕ್ತೇ ನ ವೈತಿ ಚ ಪುನರ್ಗೃಹಾನ್ ॥16॥
ಅವನನ್ನು ಯಾರೂ ಆದರಿಸಲಿಲ್ಲ. ಆಗ ನಾನು ನನ್ನ ಮನೆಯಲ್ಲಿ ಅವನಿಗೆ ವಾಸವನ್ನು ನೀಡಿದೆನು. ಅವನೊಬ್ಬನೇ ಅನೇಕ ಸಹಸ್ರ ಜನರು ಊಟ ಮಾಡುವ ಅನ್ನವನ್ನು ಒಂದೇ ಬಾರಿ ಉಣ್ಣುತ್ತಿದ್ದನು. ಇನ್ನೊಮ್ಮೆ ಅಲ್ಪಭೋಜನವನ್ನು ಮಾಡಿ ಪುನಃ ಮನೆಗೆ ಹಿಂದಿರುಗುತ್ತಿರಲೇ ಇಲ್ಲ.
ಅಕಸ್ಮಾಚ್ಚ ಪ್ರಹಸತಿ ತಥಾಽಕಸ್ಮಾತ್ ಪ್ರರೋದಿತಿ |
ನ ಚಾಸ್ಯ ವಯಸಾ ತುಲ್ಯಃ ಪೃಥಿವ್ಯಾಮಭವತ್ ತದಾ ॥17॥
ಇದ್ದಕ್ಕಿದ್ದಂತೆಯೇ ನಗುತ್ತಾನೆ, ಹಾಗೆಯೇ ಇದ್ದಕ್ಕಿದ್ದಂತೆಯೇ ಅಳುತ್ತಾನೆ. ವಯಸ್ಸಿನಲ್ಲಿ ಅವನಿಗೆ ಸಮರಾದವರು ಆಗ ಭೂಮಿಯಲ್ಲಿ ಯಾರೂ ಇರಲಿಲ್ಲ.
ಸೋಽಸ್ಮದಾವಸಥಂ ಗತ್ವಾ ಶಯ್ಯಾಶ್ಚಾಸ್ತರಣಾನಿ ಚ |
ಕನ್ಯಾಶ್ಚಾಲಂಕೃತಾ ದಗ್ಧ್ವಾ ತತೋ ವ್ಯಪಗತಃ ಸ್ವಯಮ್ ॥18॥
ಅವನು ನನ್ನ ಗೃಹಕ್ಕೆ ಹೋಗಿ ಶಯನಗಳು, ಆಸನಗಳು, ಹಾಸುಗಳು, ಅಲಂಕೃತ ಕನ್ಯೆಯರು ಎಲ್ಲರನ್ನೂ ಸುಟ್ಟು ಹೊರಟು ಹೋದನು.
ಅಥ ಮಾಮಬ್ರವೀದ್ ಭೂಯಃ ಸ ಮುನಿಃ ಸಂಶಿತವ್ರತಃ |
ಕೃಷ್ಣ ಪಾಯಸಮಿಚ್ಛಾಮಿ ಭೋಕ್ತುಮಿತ್ಯೇವ ಸತ್ವರಃ ॥19॥
ಶ್ರೇಷ್ಠ ವ್ರತವನ್ನು ಧರಿಸಿದ ಆ ಮುನಿಯು ಅನಂತರ ಪುನಃ ನನ್ನನ್ನು ಕುರಿತು ತ್ವರೆಯಿಂದ ಕೂಡಿ, ಕೃಷ್ಣ ನಾನು ಪಾಯಸವನ್ನು ಭಕ್ಷಿಸಲು ಇಚ್ಛಿಸುತ್ತೇನೆ ಎಂದು ಹೇಳಿದನು.
ಸದ್ಯೈವ ತು ಮಯಾ ತಸ್ಯ ಚಿತ್ತಜ್ಞೇನ ಗೃಹೇ ಜನಃ |
ಸರ್ವಾಣ್ಯೇವಾನ್ನಪಾನಾನಿ ಭಕ್ಷ್ಯಾಶ್ಚೋಚ್ಚಾವಚಾಸ್ತಥಾ |
ಭವಂತು ಸತ್ಕೃತಾನೀತಿ ಪೂರ್ವಮೇವ ಪ್ರಚೋದಿತಃ ॥20॥
ಅವನ ಚಿತ್ತವನ್ನು ತಿಳಿದ ನಾನು ಯಾವಾಗಲೂ ಮನೆಯಲ್ಲಿರುವ ಪರಿಚಾರಕರಿಗೆ ಎಲ್ಲ ಅನ್ನ-ಪಾನಗಳು, ಶ್ರೇಷ್ಠ ಕನಿಷ್ಠವಾದ ಎಲ್ಲಾ ಭಕ್ಷ್ಯಗಳು ಯಾವಾಗಲೂ ಸಿದ್ಧವಾಗಿರಬೇಕೆಂದು ಮೊದಲೇ ಆದೇಶವನ್ನು ನೀಡಿದ್ದೆನು.
ತತೋಽಹಂ ಜ್ವಲಮಾನಂ ವೈ ಪಾಯಸಂ ಪ್ರತ್ಯವೇದಯಮ್ |
ತದ್ಭುಕ್ತ್ವೈವ ತು ಸ ಕ್ಷಿಪ್ರಂ ತತೋ ವಚನಮಬ್ರವೀತ್ |
ಕ್ಷಿಪ್ರಮಂಗಾನಿ ಲಿಂಪಸ್ವ ಪಾಯಸೇನೇತಿ ಸ ಸ್ಮ ಹ ॥21॥
ಅನಂತರ ಬಿಸಿಯಾಗಿದ್ದ ಪಾಯಸವನ್ನು ಅವನಿಗೆ ನಿವೇದಿಸಿದೆನು. ಅದನ್ನು ಭುಂಜಿಸಿ, ಅವನು ಪುನಃ ನನ್ನನ್ನು ಕುರಿತು ಉಳಿದ ಪಾಯಸದಿಂದ ನಿನ್ನ ಶರೀರವನ್ನು ಲೇಪಿಸಿಕೊ ಎಂದು ಹೇಳಿದನು.
ಅವಿಮೃಶ್ಯೈವ ಚ ತತಃ ಕೃತವಾನಸ್ಮಿ ತತ್ ತಥಾ |
ತೇನೋಚ್ಛಿಷ್ಟೇನ ಗಾತ್ರಾಣಿ ಶಿರಶ್ಚೈವಾಭ್ಯಮೃಕ್ಷಯಮ್ ॥22॥
ನಾನು ಯಾವ ಯೋಚನೆಯನ್ನೂ ಮಾಡದೆ ಅವನ ಉಚ್ಛಿಷ್ಟವಾದ ಪಾಯಸದಿಂದ ಅವನು ಹೇಳಿದಂತೆಯೇ ನನ್ನ ಶರೀರವನ್ನು ಮತ್ತು ಶಿರಸ್ಸನ್ನು ಲೇಪಿಸಿಕೊಂಡೆನು.
ಸ ದದರ್ಶ ತದಾಭ್ಯಾಶೇ ಮಾತರಂ ತೇ ಶುಭಾನನಾಮ್ |
ತಾಮಪಿ ಸ್ಮಯಮಾನಃ ಸ ಪಾಯಸೇನಾಭ್ಯಲೇಪಯತ್ ॥23॥
ಆಗ ಅವನು ಸಮೀಪದಲ್ಲಿದ್ದ ಶುಭಾನನಳಾದ ನಿನ್ನ ತಾಯಿಯನ್ನು ನೋಡಿ ನಗುತ್ತಾ ಅವಳಿಗೂ ಪಾಯಸದಿಂದ ಲೇಪನವನ್ನು ಮಾಡಿದನು.
ಮುನಿಃ ಪಾಯಸದಿಗ್ಧಾಂಗೀಂ ರಥೇ ತೂರ್ಣಮಯೋಜಯತ್ |
ತಮಾರುಹ್ಯ ರಥಂ ಚೈವ ನಿರ್ಯಯೌ ಸ ಗೃಹಾನ್ಮಮ ॥24॥
ಋಷಿಯು ಪಾಯಸದಿಂದ ಲಿಪ್ತಳಾದ ಅವಳನ್ನು ರಥದಲ್ಲಿ ಹೂಡಿ ಅಶ್ವದಂತೆ ಆ ರಥವನ್ನು ಏರಿ ನನ್ನ ಮನೆಯಿಂದ ಹೊರಟನು.
ಅಗ್ನಿವರ್ಣೋ ಜ್ವಲನ್ ಧೀಮಾನ್ ಸ ದ್ವಿಜೋ ರಥಧುರ್ಯವತ್ |
ಪ್ರತೋದೇನಾತುದದ್ ಬಾಲಾಂ ರುಗ್ಮಿಣೀಂ ಮಮ ಪಶ್ಯತಃ ॥25॥
ಅಗ್ನಿವರ್ಣದಿಂದ ಜ್ವಲಿಸುತ್ತಿದ್ದ, ಮೇಧಾವಿಯಾದ ಆ ಬ್ರಾಹ್ಮಣನು ಅಶ್ವವನ್ನು ಪ್ರಚೋದಿಸಿದಂತೆ ಚಾವಟಿಯಿಂದ ನಾನು ನೋಡುತ್ತಿರುವಂತೆಯೇ ಬಾಲೆಯಾದ ರುಗ್ಮಿಣಿಯನ್ನು ಪ್ರಚೋದಿಸುತ್ತಿದ್ದನು (ಹೊಡೆಯುತ್ತಿದ್ದನು).
ನ ಚ ಮೇ ಸ್ತೋಕಮಪ್ಯಾಸೀದ್ ದುಃಖಮೀರ್ಷ್ಯಾಕೃತಂ ತದಾ |
ತತಃ ಸ ರಾಜಮಾರ್ಗೇಣ ನಿರ್ಯಯೌ ನಗರಾದ್ ಬಹಿಃ ॥26॥
ನನಗೆ ಅಲ್ಪವು ಸಹ ಅಸೂಯೆಯಾಗಲೀ, ದುಃಖವಾಗಲೀ ಆಗ ಉಂಟಾಗಲಿಲ್ಲ. ಅನಂತರ ರಾಜಮಾರ್ಗದಿಂದ ನಗರದ ಹೊರಗೆ ಹೊರಟನು.
ತದ್ ದೃಷ್ಟ್ವಾ ಮಹದಾಶ್ಚರ್ಯಂ ದಾಶಾರ್ಹಾ ಜಾತಮನ್ಯವಃ |
ತತ್ರಾಜಲ್ಪನ್ ಮಿಥಃ ಕೇಚಿತ್ ಸಮಾಭಾಷ್ಯ ಪರಸ್ಪರಮ್ ॥27॥
ಆ ಮಹದಾಶ್ಚರ್ಯವನ್ನು ನೋಡಿ ಕೆಲವರು ದಾಶಾರ್ಹರು ಕೋಪಗೊಂಡು, ಪರಸ್ಪರವಾಗಿ ಸಂಭಾಷಣೆಯನ್ನು ಮಾಡುತ್ತಾ

ಮಾತನಾಡಿದರು.
ಬ್ರಾಹ್ಮಣಾ ಏವ ಜಾಯೇರನ್ ನಾನ್ಯೋ ವರ್ಣಃ ಕಥಂಚನ |
ಕೋ ಹ್ಯೇನಂ ರಥಮಾಸ್ಥಾಯ ಜೀವೇದನ್ಯಃ ಪುಮಾನಿಹ ॥28॥
ಬ್ರಾಹ್ಮಣವರ್ಣದವರು ಮಾತ್ರ ಯಾವಾಗಲೂ ಹುಟ್ಟಬೇಕು. ಬೇರೆ ವರ್ಣದವರು ಜನಿಸಬಾರದು. ಈ ರಥವನ್ನು ಏರಿ ಬೇರೆ ಯಾವ ಪುರುಷನು ಜೀವಿಸಿಯಾನು?
ಆಶೀವಿಷವಿಷಂ ತೀಕ್ಷ್ಣಂ ತತಸ್ತೀಕ್ಷ್ಣತರಂ ವಿಷಮ್ |
ಬ್ರಹ್ಮಾಶೀವಿಷದಗ್ಧಸ್ಯ ನಾಸ್ತಿ ಕಶ್ಚಿತ್ ಚಿಕಿತ್ಸಕಃ ॥29॥
ದೃಷ್ಟಿವಿಷವುಳ್ಳ ಸರ್ಪದ ವಿಷವು ತೀಕ್ಷ್ಣವಾದುದು. ಅದಕ್ಕಿಂತ ತೀಕ್ಷ್ಣವಾದುದು ಬ್ರಾಹ್ಮಣರ ಕೋಪವಿಷ. ಬ್ರಾಹ್ಮಣರೆಂಬ ಸರ್ಪದಿಂದ ದಗ್ಧನಾದವನಿಗೆ ಯಾವ ಚಿಕಿತ್ಸಕನೂ ಇಲ್ಲ (ಎಂದು ಮಾತನಾಡಿಕೊಂಡರು).
ತಸ್ಮಿನ್ ವ್ರಜತಿ ದುರ್ಧರ್ಷೇ ಪ್ರಾಸ್ಖಲದ್ ರುಗ್ಮಿಣೀ ಪಥಿ |
ತಾಂ ನಾಮರ್ಷಯತ ಶ್ರೀಮಾಂಸ್ತತಸ್ತೂರ್ಣಮಚೋದಯತ್ ॥30॥
ದುರ್ಧರ್ಷರಾದ ಅವರು ರಥದಲ್ಲಿ ಹಾಗೆ ಹೋಗುತ್ತಿರಲು ರುಗ್ಮಿಣಿಯು ದಾರಿಯಲ್ಲಿ ಎಡವಿದಳು. ಆ ಕಾಂತಿಯುಕ್ತನಾದ ಬ್ರಾಹ್ಮಣನು ಅದನ್ನು ಸಹಿಸದೆ ಶೀಘ್ರವಾಗಿ ಅವಳನ್ನು ಪ್ರಚೋದಿಸಿದನು.
ತತಃ ಪರಮಸಂಕ್ರುದ್ಧೋ ರಥಾತ್ ಪ್ರಸ್ಕಂದ್ಯ ಸ ದ್ವಿಜಃ |
ಪದಾತಿರುತ್ಪಥೇನೈವ ಪ್ರಾಧಾವದ್ ದಕ್ಷಿಣಾಮುಖಃ॥31॥
ಅನಂತರ ಪರಮಕೋಪಗೊಂಡ ಆ ಬ್ರಾಹ್ಮಣನು ರಥದಿಂದ ಕೆಳಗೆ ಇಳಿದು ಪದಾತಿಯಾಗಿಯೇ, ಮಾರ್ಗವಿಲ್ಲದ ದಾರಿಯಲ್ಲಿಯೇ ದಕ್ಷಿಣಾಭಿಮುಖವಾಗಿ ಓಡಿ ಹೋದನು.
ತಮುತ್ಪಥೇನ ಧಾವಂತಮನ್ವಧಾವಂ ದ್ವಿಜೋತ್ತಮಮ್ |
ತಥೈವ ಪಾಯಸಾದಿಗ್ಧಃ ಪ್ರಸೀದ ಭಗವನ್ನಿತಿ ॥32॥
ದಾರಿಯಿಲ್ಲದ ಕಡೆ ಓಡಿಹೋಗುತ್ತಿದ್ದ ಆ ಬ್ರಾಹ್ಮಣಶ್ರೇಷ್ಠನನ್ನು ನಾನು ಹಾಗೆಯೇ ಪಾಯಸದಿಗ್ಧವಾದ ಶರೀರವುಳ್ಳವನಾಗಿ ಪೂಜ್ಯನೇ ಪ್ರಸನ್ನನಾಗು ಎಂದು ಹೇಳುತ್ತಾ ಓಡುತ್ತಾ ಹಿಂಬಾಲಿಸಿದೆನು.
ತತೋ ವಿಲೋಕ್ಯ ತೇಜಸ್ವೀ ಬ್ರಾಹ್ಮಣೋ ಮಾಮುವಾಚ ಹ |
ಜಿತಃ ಕ್ರೋಧಸ್ತ್ವಯಾ ಕೃಷ್ಣ ಪ್ರಕೃತ್ಯೈವ ಮಹಾಭುಜ ॥33॥
ಆಗ ತೇಜಸ್ವಿಯಾದ ಆ ಬ್ರಾಹ್ಮಣನು ನನ್ನನ್ನು ನೋಡಿ, ನನ್ನನ್ನು ಕುರಿತು ಹೇಳಿದನು: ಕೃಷ್ಣನೇ, ಮಹಾಭುಜನೇ, ನೀನು ಸ್ವಭಾವದಿಂದಲೇ ಕ್ರೋಧವನ್ನು ಜಯಿಸಿದ್ದೀಯೆ.
ನ ತೇಽಪರಾಧಮಿಹ ವೈ ದೃಷ್ಟವಾನಸ್ಮಿ ಸುವ್ರತ |
ಪ್ರೀತೋಽಸ್ಮಿ ತವ ಗೋವಿಂದ ವೃಣು ಕಾಮಾನ್ ಯಥೇಪ್ಸಿತಾನ್ |
ಪ್ರಸನ್ನಸ್ಯ ಚ ಮೇ ತಾತ ಪಶ್ಯ ವ್ಯುಷ್ಟಿರ್ಯಥಾವಿಧಾ ॥34॥
ಎಲೈ ಸುವ್ರತನೇ, ನಿನ್ನಲ್ಲಿ ನಾನು ಯಾವ ಅಪರಾಧವನ್ನೂ ಕಾಣಲಿಲ್ಲ. ಗೋವಿಂದನೇ, ನಾನು ನಿನಗೆ ಪ್ರಸನ್ನನಾಗಿದ್ದೇನೆ. ನಿನಗೆ ಅಭೀಷ್ಟವಾದ ವರವನ್ನು ಕೇಳು. ಪ್ರೀತಿಪಾತ್ರನೇ, ಪ್ರಸನ್ನನಾದ ನನ್ನಿಂದ ಉಂಟಾಗುವ ಫಲವು ಹೇಗಿರುತ್ತದೆ ಎಂಬುದನ್ನು ನೋಡು.
ಯಾವದೇವ ಮನುಷ್ಯಾಣಾಮನ್ನೇ ಭಾವೋ ಭವಿಷ್ಯತಿ |
ಯಥೈವಾನ್ನೇ ತಥಾ ತೇಷಾಂ ತ್ವಯಿ ಭಾವೋ ಭವಿಷ್ಯತಿ ॥35॥
ಎಲ್ಲಿಯವರೆಗೆ ಮನುಷ್ಯರಿಗೆ ಅನ್ನದಲ್ಲಿ ಅಭಿರುಚಿ ಇರುತ್ತದೆಯೋ ಅಲ್ಲಿಯವರೆಗೆ ನಿನ್ನಲ್ಲಿ ಭಕ್ತಿ ಇರುತ್ತದೆ.
ಯಾವಚ್ಚ ಪುಣ್ಯಾ ಲೋಕೇಷು ತ್ವಯಿ ಕೀರ್ತಿರ್ಭವಿಷ್ಯತಿ |
ತ್ರಿಷು ಲೋಕೇಷು ತಾವಚ್ಚ ವೈಶಿಷ್ಟ್ಯಂ ಪ್ರತಿಪತ್ಸ್ಯಸೇ |
ಸುಪ್ರಿಯಃ ಸರ್ವಲೋಕಸ್ಯ ಭವಿಷ್ಯಸಿ ಜನಾರ್ದನ ॥36॥
ಎಲ್ಲಿಯವರೆಗೆ ಲೋಕಗಳಲ್ಲಿ ನಿನ್ನ ಪುಣ್ಯಕೀರ್ತಿ ಇರುತ್ತದೆಯೋ ಅಲ್ಲಿಯವರೆಗೆ ನೀನು ಲೋಕದಲ್ಲಿ ಬಹಳ ಶ್ರೇಷ್ಠತ್ವವನ್ನು ಹೊಂದುವಿ. ಎಲೈ ಜನಾರ್ದನನೇ, ಎಲ್ಲ ಪ್ರಜೆಗಳಿಗೂ ನೀನು ಅತ್ಯಂತ ಪ್ರಿಯನಾಗುವಿ.
ಯತ್ತೇ ಭಿನ್ನಂ ಚ ದಗ್ಧಂ ಚ ಯದ್ವಾ ಕಿಂಚನ ನಾಶಿತಮ್ |
ಸರ್ವಂ ತಥೈವ ದ್ರಷ್ಟಾಸಿ ವಿಶಿಷ್ಟಂ ವಾ ಜನಾರ್ದನ ॥37॥
ನೀನು ಮನೆಯಲ್ಲಿ ನಾನು ಯಾವುದನ್ನು ಒಡೆದೆನೋ, ಸುಟ್ಟೆನೋ ಅಥವಾ ನಾಶ ಮಾಡಿದೆನೋ ಎಲ್ಲವೂ ಹಾಗೆಯೇ ಅಥವಾ ಮೊದಲಿಗಿಂತ ಚೆನ್ನಾಗಿ ಇರುವುದನ್ನು ನೀನು ನೋಡುವಿ.
ಯಾವದೇತತ್ ಪ್ರಲಿಪ್ತಂ ತೇ ಗಾತ್ರೇಷು ಮಧುಸೂದನ |
ಅತೋ ಮೃತ್ಯುಭಯಂ ನಾಸ್ತಿ ಯಾವದಿಚ್ಛಾ ತವಾಚ್ಯುತ ॥38॥
ಎಲೈ ಮಧುಸೂದನನೇ, ನೀನು ಶರೀರದಲ್ಲಿ ಪಾಯಸವನ್ನು ಲೇಪ ಮಾಡಿಕೊಂಡುದುದರಿಂದ, ಎಲೈ ಅಚ್ಯುತನೇ, ಇಚ್ಛಿಸುವವರೆಗೆ ನಿನಗೆ ಮೃತ್ಯುಭಯವಿಲ್ಲ.
ನ ತು ಪಾದತಳೇ ಲಿಪ್ತೇ ಕಸ್ಮಾತ್ ತೇ ಪುತ್ರಕಾದ್ಯ ವೈ |
ನೈತನ್ಮೇ ಪ್ರಿಯಮಿತ್ಯೇವ ಸ ಮಾಂ ಪ್ರೀತೋಽಬ್ರವೀತ್ ತದಾ |
ಇತ್ಯುಕ್ತೋಽಹಂ ಶರೀರಂ ಸ್ವಮಪಶ್ಯಂ ಶ್ರೀಸಮಾಯುತಮ್ ॥39॥
ಪುತ್ರಕನೇ, ಏಕೆ ಪಾದತಳಗಳಿಗೆ ಈ ದಿನ ಪಾಯಸವನ್ನು ಲೇಪಿಸಿಕೊಳ್ಳಲಿಲ್ಲ? ಅದು ನನಗೆ ಸಂತೋಷವನ್ನುಂಟು ಮಾಡಲಿಲ್ಲ ಎಂದು

ಪ್ರಸನ್ನನಾಗಿ ನನಗೆ ಹೇಳಿದನು. ಹೀಗೆ ಹೇಳಲ್ಪಟ್ಟ ನಾನು ನನ್ನ ಶರೀರವು ಮೊದಲಿಗಿಂತಲೂ ಹೆಚ್ಚು ಕಾಂತಿಯುಕ್ತವಾಗಿರುವುದನ್ನು ನೋಡಿದೆನು.
ರುಗ್ಮಿಣೀಂ ಚಾಬ್ರವೀತ್ ಪ್ರೀತಃ ಸರ್ವಸ್ತ್ರೀಣಾಂ ವರಂ ಯಶಃ |
ಕೀರ್ತಿಂ ಚಾನುತ್ತಮಾಂ ಲೋಕೇ ಸಮವಾಪ್ಸ್ಯಸಿ ಶೋಭನೇ ॥40॥
ಸಂತುಷ್ಟನಾದ ಅವನು ರುಗ್ಮಿಣಿಯನ್ನು ಕುರಿತು- `ಎಲೌ ಶೋಭನೆಯೇ, ನೀನು ಎಲ್ಲ ಸ್ತ್ರೀಯರಿಗಿಂತಲೂ ಶ್ರೇಷ್ಠವಾದ ಯಶಸ್ಸನ್ನೂ, ಶ್ರೇಷ್ಠವಾದ ಕೀರ್ತಿಯನ್ನೂ ಹೊಂದುವಿ'.
ನ ತ್ವಾಂ ಜರಾ ವಾ ರೋಗೋ ವಾ ವೈವರ್ಣ್ಯಂ ಚಾಪಿ ಭಾಮಿನಿ |
ಸ್ಪ್ರಕ್ಷ್ಯಂತಿ ಪುಣ್ಯಗಂಧಾ ಚ ಕೃಷ್ಣಮಾರಾಧಯಿಷ್ಯಸಿ ॥41॥
ನಿನಗೆ ಜರೆಯಾಗಲೀ, ರೋಗವಾಗಲೀ, ವರ್ಣಹೀನತೆಯಾಗಲೀ ಉಂಟಾಗುವುದಿಲ್ಲ. ಎಲೌ ಭಾಮಿನಿಯೇ, ಪುಣ್ಯಗಂಧಗಳು ಯಾವಾಗಲೂ ನಿನ್ನ ಸ್ಪರ್ಶವನ್ನು ಹೊಂದುತ್ತವೆ. ನೀನು ಕೃಷ್ಣನನ್ನು ಸಂತೋಷಪಡಿಸುವಿ.
ಷೋಡಶಾನಾಂ ಸಹಸ್ರಾಣಾಂ ವಧೂನಾಂ ಕೇಶವಸ್ಯ ಹ |
ವರಿಷ್ಠಾ ಸರ್ವಲೋಕಸ್ಯ ಕೇಶವಸ್ಯ ಭವಿಷ್ಯಸಿ ॥42॥
ಕೇಶವನ ಹದಿನಾರು ಸಾವಿರ ಪತ್ನಿಯರಲ್ಲಿ ಮತ್ತು ಲೋಕದಲ್ಲಿ ನೀನು ಶ್ರೇಷ್ಠಳಾಗುವಿ.
ತವ ಮಾತರಮಿತ್ಯುಕತ್ವ ತತೋ ಮಾಂ ಪುನರಬ್ರವೀತ್ |
ಪ್ರಸ್ಥಿತಃ ಸುಮಹಾತೇಜಾ ದುರ್ವಾಸಾ ವಹ್ನಿವಜ್ಜ್ವಲನ್ ॥43॥
ನಿನ್ನ ತಾಯಿಯನ್ನು ಕುರಿತು ಹೀಗೆ ಮಾತನಾಡಿ ಪುನಃ ನನ್ನನ್ನು ಕುರಿತು ಮಹಾತೇಜಸ್ವಿಗಳಾದ ದುರ್ವಾಸರು ಅಗ್ನಿಯಂತೆ ಜ್ವಲಿಸುತ್ತಾ ಹೊರಟು ಹೀಗೆ ಹೇಳಿದರು.
ಏಷೈವ ತೇ ಬುದ್ಧಿರಸ್ತು ಬ್ರಾಹ್ಮಣಾನ್ ಪ್ರತಿ ಕೇಶವ |
ಇತ್ಯುಕತ್ವ ಸ ತದಾ ಪುತ್ರ ತತ್ರೈವಾಂತರಧೀಯತ ॥44॥
ಎಲೈ ಕೇಶವನೇ, ಬ್ರಾಹ್ಮಣರ ವಿಷಯದಲ್ಲಿ ನಿನ್ನ ಬುದ್ಧಿಯು ಯಾವಾಗಲೂ ಹೀಗೆಯೇ ಇರಲಿ. ಎಲೈ ಪುತ್ರನೇ, ಹೀಗೆ ಹೇಳಿ ಅವರು ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು.
ತಸ್ಮಿನ್ನಂತರ್ಹಿತೇ ಚಾಹಮುಪಾಂಶುವ್ರತಮಾದಿಶಮ್ |
ಯತ್ ಕಿಂಚಿದ್ ಬ್ರಾಹ್ಮಣೋ ಬ್ರೂಯಾತ್ ಸರ್ವಂ ಕುರ್ಯಾಮಿತಿ ಪ್ರಭೋ ॥
ಅವನು ಅಂತರ್ಧಾನವನ್ನು ಹೊಂದಿದ ಮೇಲೆ ನಾನು, ಬ್ರಾಹ್ಮಣನು ಏನು ಹೇಳಿದರೂ ಅದನ್ನು ನಾನು ಮಾಡುವೆನು ಎಂದು ಒಂದು ರಹಸ್ಯವ್ರತವನ್ನು ಧರಿಸಿದೆನು.
ಏತದ್ ವ್ರತಮಹಂ ಕೃತ್ವಾ ಮಾತ್ರಾ ತೇ ಸಹ ಪುತ್ರಕ |
ತತಃ ಪರಮಹೃಷ್ಟಾತ್ಮಾ ಪ್ರಾವಿಶಂ ಗೃಹಮೇವ ಚ ॥46॥
ಎಲೈ ಪ್ರೀತಿಯ ಪುತ್ರನೇ, ನಿನ್ನ ತಾಯಿಯ ಜೊತೆಯಲ್ಲಿ ಈ ವ್ರತದ ಸಂಕಲ್ಪವನ್ನು ಮಾಡಿ ಪರಮ ಸಂತೋಷದಿಂದ ಕೂಡಿ ಗೃಹಕ್ಕೆ ಹಿಂದಿರುಗಿದೆನು.
ಪ್ರವಿಷ್ಟಮಾತ್ರಶ್ಚ ಗೃಹೇ ಸರ್ವಂ ಪಶ್ಯಾಮಿ ತನ್ನವಮ್ |
ಯದ್ಭಿನ್ನಂ ಯಚ್ಚ ವೈ ದಗ್ಧಂ ತೇನ ವಿಪ್ರೇಣ ಪುತ್ರಕ ॥47॥
ಎಲೈ ಪುತ್ರಕನೇ, ಮನೆಯನ್ನು ಪ್ರವೇಶಿಸಿದ ತಕ್ಷಣವೇ ಆ ಬ್ರಾಹ್ಮಣರಿಂದ ಒಡೆಯಲ್ಪಟ್ಟ, ದಹಿಸಲ್ಪಟ್ಟ ಎಲ್ಲವೂ ಹೊಸದಾಗಿರುವುದನ್ನು ನೋಡಿದೆನು.
ತತೋಽಹಂ ವಿಸ್ಮಯಂ ಪ್ರಾಪ್ತಃ ಸರ್ವಂ ದೃಷ್ಟ್ವಾ ನವಂ ದೃಢಮ್ |
ಅಪೂಜಯಂ ಚ ಮನಸಾ ರೌಗ್ಮಿಣೇಯ ದ್ವಿಜಂ ತದಾ ॥48॥
ಆಗ ನಾನು ಎಲ್ಲವೂ ಹೊಸದೂ ಮತ್ತು ಮೊದಲಿಗಿಂತ ದೃಢವೂ ಆಗಿರುವುದನ್ನು ನೋಡಿ ಎಲೈ ರುಗ್ಮಿಣೀ ಪುತ್ರನೇ, ಆ ಬ್ರಾಹ್ಮಣನನ್ನು ಮನಸ್ಸಿನಲ್ಲಿಯೇ ಪೂಜಿಸಿದೆನು.
ಇತ್ಯಹಂ ರೌಗ್ಮಿಣೇಯಸ್ಯ ಪೃಚ್ಛತೋ ಭರತರ್ಷಭ |
ದ್ವಿಜಮುಖ್ಯಸ್ಯ ಮಾಹಾತ್ಮ್ಯಂ ಸರ್ವಮಾಖ್ಯಾತವಾಂಸ್ತದಾ ॥49॥
ಎಲೈ ಭರತರ್ಷಭನೇ, ಈ ರೀತಿ ನಾನು ನನ್ನನ್ನು ಪ್ರಶ್ನಿಸಿದ, ರುಗ್ಮಿಣೀ ಪುತ್ರನಾದ ಪ್ರದ್ಯುಮ್ನನಿಗೆ ಮುನಿಶ್ರೇಷ್ಠರಾದ ದುರ್ವಾಸರ ಮಹಿಮೆಯನ್ನು ಆಗ ಹೇಳಿದೆನು.
ತಥಾ ತ್ವಮಪಿ ಕೌಂತೇಯ ಬ್ರಾಹ್ಮಣಾನ್ ಸತತಂ ಪ್ರಭೋ |
ಪೂಜಯಸ್ವ ಮಹಾಭಾಗಾನ್ ವಾಗ್ಭಿರ್ದಾನೈಶ್ಚ ನಿತ್ಯದಾ ॥50॥
ಎಲೈ ಕೌಂತೆಯನೇ, ಪ್ರಭುವೇ, ಹಾಗೆಯೇ ನೀನೂ ಸಹ ಮಹಾನುಭಾವರಾದ ಬ್ರಾಹ್ಮಣರನ್ನು ವಚನದಿಂದಲೂ, ದಾನಗಳಿಂದಲೂ ಯಾವಾಗಲೂ ಪೂಜಿಸು.
ಏವಂ ವ್ಯುಷ್ಟಿಮಹಂ ಪ್ರಾಪ್ತೋ ಬ್ರಾಹ್ಮಣಾನಾಂ ಪ್ರಸಾದಜಾಮ್ |
ಯಚ್ಚ ಮಾಮಾಹ ಭೀಷ್ಮೋಽಯಂ ತತ್ ಸತ್ಯಂ ಭರತರ್ಷಭ ॥51॥
ಎಲೈ ಭರತರ್ಷಭನೇ, ಬ್ರಾಹ್ಮಣರ ಪೂಜೆಯನ್ನು ಮಾಡಿ, ಅವರ ಅನುಗ್ರಹದಿಂದ ನಾನು ಇಂತಹ ಸಮೃದ್ಧಿಯನ್ನು ಪಡೆದೆ. ಭೀಷ್ಮರು ನನ್ನ ವಿಷಯದಲ್ಲಿ ಏನು ಹೇಳಿದರೋ ಅದೆಲ್ಲವೂ ಸತ್ಯವಾದುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್

ಅನುಶಾಸನಪರ್ವಣಿ ದಾನಧರ್ಮೇ ಬ್ರಾಹ್ಮಣಪ್ರಶಂಸಾಯಾಂ ದುರ್ವಾಸಚರಿತ್ರಕಥನಂ ನಾಮ
ಸಪ್ತಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತೇಳನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತೆಂಟನೆಯ ಅಧ್ಯಾಯ
ಕೃಷ್ಣನಿಂದ ಈಶ್ವರಪ್ರಶಂಸೆ
ಯುಧಿಷ್ಠಿರಃ
ದುರ್ವಾಸಸಃ ಪ್ರಸಾದಾತ್ ತೇ ಯತ್ ತದಾ ಮಧುಸೂದನ |
ಅವಾಪ್ತಮಿಹ ವಿಜ್ಞಾನಂ ತನ್ಮೇ ವ್ಯಾಖ್ಯಾತುಮರ್ಹಸಿ ॥1॥
ಮಹಾಭಾಗ್ಯಂ ಚ ಯತ್ ತಸ್ಯ ನಾಮಾನಿ ಚ ಮಹಾತ್ಮನಃ |
ತತ್ತ್ವತೋ ಜ್ಞಾತುಮಿಚ್ಛಾಮಿ ಸರ್ವಂ ಮತಿಮತಾಂ ವರ ॥2॥
ಯುಧಿಷ್ಠಿರ ಎಲ್ಲೈ ಮಧುಸೂದನನೇ, ದುರ್ವಾಸರ ಅನುಗ್ರಹದಿಂದ ನೀನು ಆಗ ಪಡೆದ ವಿಜ್ಞಾನವನ್ನು ನನಗೆ ಹೇಳಬೇಕು. ಎಲ್ಲೈ ಮೇಧಾವಿಗಳಲ್ಲಿ ಶ್ರೇಷ್ಠನೇ, ಅವನ ಮಹಾಭಾಗ್ಯವನ್ನೂ, ಮಹಾತ್ಮನಾದ ಅವನ ನಾಮಗಳೆಲ್ಲವನ್ನೂ ನಾನು ಸರಿಯಾಗಿ ತಿಳಿಯಲು ಬಯಸುತ್ತೇನೆ.
ವಾಸುದೇವಃ
ಹಂತ ತೇ ಕಥಯಿಷ್ಯಾಮಿ ನಮಸ್ಕೃತ್ವಾ ಕಪರ್ದಿನೇ |
ಯದವಾಪ್ತಂ ಮಹಾರಾಜ ಶ್ರೇಯೋ ಯಚ್ಚಾರ್ಜಿತಂ ಯಶಃ ॥3॥
ವಾಸುದೇವ ಎಲ್ಲೈ ಮಹಾರಾಜನೇ, ಕಪರ್ದಿಗೆ ನಮಸ್ಕಾರವನ್ನು ಮಾಡಿ ನಾನು ಯಾವ ಶ್ರೇಯಸ್ಸನ್ನು ಪಡದೆನೋ, ಯಾವ ಕೀರ್ತಿಯನ್ನು ಸಂಪಾದಿಸಿದೆನೋ ಅವೆಲ್ಲವನ್ನೂ ನಿನಗೆ ಹೇಳುವೆನು.
ಪ್ರಯತಃ ಪ್ರಾತರುತ್ಥಾಯ ಯದಧೀಯೇ ವಿಶಾಂಪತೇ |
ಪ್ರಾಂಜಲಿಃ ಶತರುದ್ರೀಯಂ ತನ್ಮೇ ನಿಗದತಃ ಶೃಣು ॥4॥
ಎಲ್ಲೈ ರಾಜನೇ, ಪ್ರಾತಃಕಾಲದಲ್ಲಿ ಎದ್ದು, ಶ್ರದ್ಧೆಯಿಂದ ಕೈಗಳನ್ನು ಮುಗಿದು ಶತರುದ್ರೀಯವನ್ನು ಅಧ್ಯಯನ ಮಾಡುತ್ತೇನೆ. ನಾನು ಹೇಳುವಂತೆ ಅದನ್ನು ಕೇಳು.
ಪ್ರಜಾಪತಿಸ್ತತ್ಸಸೃಜೇ ತಪಸೋಽಂತೇ ಮಹಾತಪಾಃ |
ಶಂಕರಸ್ತ್ವಸೃಜತ್ ತಾತ ಪ್ರಜಾಃ ಸ್ಥಾವರಜಂಗಮಾಃ ॥5॥
ಮಹಾತಪಸ್ವಿಗಳಾದ ಬ್ರಹ್ಮದೇವರು ತಪಸ್ಸಿನ ಕೊನೆಯಲ್ಲಿ ಜಗತ್ತನ್ನು ಸೃಷ್ಟಿಸಿದರು. ಪ್ರೀತಿಪಾತ್ರನೇ, ಶಂಕರನು ಸ್ಥಾವರ-ಜಂಗಮಾತ್ಮಕವಾದ ಪ್ರಜೆಗಳನ್ನು ಸೃಷ್ಟಿಸಿದನು.
ನಾಸ್ತಿ ಕಿಂಚಿತ್ ಪರಂ ಭೂತಂ ಮಹಾದೇವಾದ್ ವಿಶಾಂಪತೇ |
ಇಹ ತ್ರಿಷ್ವಪಿ ಲೋಕೇಷು ಭೂತಾನಾಂ ಪ್ರಭವೋ ಹಿ ಸಃ ॥6॥
ಎಲ್ಲೈ ರಾಜನೇ, ಮೂರುಲೋಕಗಳಲ್ಲಿಯೂ ಮಹಾದೇವನಿಗಿಂತ ದೊಡ್ಡದಾದ ಇನ್ನೊಂದು ಭೂತವಿಲ್ಲ. ಎಲ್ಲ ಭೂತಗಳಿಗೆ ಅವನೇ ಉತ್ಪತ್ತಿ ಸ್ಥಾನನಾದವನು.
ನ ಚೈವೋತ್ಸಹತೇ ಸ್ಥಾತುಂ ಕಶ್ಚಿದಗ್ರೇ ಮಹಾತ್ಮನಃ |
ನ ಹಿ ಭೂತಂ ಸಮಂ ತೇನ ತ್ರಿಷು ಲೋಕೇಷು ವಿದ್ಯತೇ ॥7॥
ಯಾವನೂ ಮಹಾತ್ಮನಾದ ಅವನ ಶರೀರದ ಎದುರಿಗೆ ನಿಲ್ಲಲು ಸಾಧ್ಯವಿಲ್ಲ. ಮೂರು ಲೋಕಗಳಲ್ಲಿರುವ ಯಾವ ಭೂತವೂ ಅವನಿಗೆ ಸಮವಲ್ಲ.
ಗಂಧೇನಾಪಿ ಹಿ ಸಂಗ್ರಾಮೇ ತಸ್ಯ ಕ್ರುದ್ಧಸ್ಯ ಶತ್ರವಃ |
ವಿಸಂಜ್ಞಾ ಹತಭೂಯಿಷ್ಠಾ ವೇಪಂತಿ ಚ ಪತಂತಿ ಚ ॥8॥
ಯುದ್ಧದಲ್ಲಿ ಕೋಪಗೊಂಡ ಅವನ ಗಂಧದಿಂದಲೂ ಶತ್ರುಗಳು ಮೂರ್ಛಿತರಾಗಿ ಮೃತರಾದಂತೆಯೇ ಆಗಿ ನಡುಗಿ ಕೆಳಗೆ ಬೀಳುತ್ತಾರೆ.
ಘೋರಂ ಚ ನಿನದಂ ತಸ್ಯ ಪರ್ಜನ್ಯನಿನದೋಪಮಮ್ |
ಶ್ರುತ್ವಾ ವಿದೀರ್ಯೇದ್ ಹೃದಯಂ ದೇವಾನಾಮಪಿ ಸಂಯುಗೇ ॥9॥
ಯುದ್ಧದಲ್ಲಿ ಪರ್ಜನ್ಯ ಘೋಷದಂತಿರುವ ಅವನ ಘೋರ ನಿನಾದವನ್ನು ಕೇಳಿ ದೇವತೆಗಳ ಹೃದಯವೂ ಬಿರಿದು ಹೋದೀತು!
ಯಾಂಶ್ಚ ಘೋರೇಣ ರೂಪೇಣ ಪಶ್ಯೇದ್ ದಗ್ಧಃ ಪತೇದಧಃ |
ನ ಸುರಾ ನಾಸುರಾ ಲೋಕೇ ನ ಗಂಧರ್ವಾ ನ ಚ ಪನ್ನಗಾಃ |
ಕುಪಿತೇ ಸುಖಮೇಧಂತೇ ತಸ್ಮಿನ್ನಪಿ ಗುಹಾಗತಾಃ ॥10॥
ಅವನು ಯಾರನ್ನು ಘೋರರೂಪದಿಂದ ನೋಡುತ್ತಾನೆಯೋ ಅಂತಹವನು ದಗ್ಧನಾಗಿ ಕೆಳಗೆ ಬಿದ್ದಾನು. ಅವನು ಕೋಪಗೊಂಡರೆ ಲೋಕದಲ್ಲಿ ಸುರರಾಗಲೀ, ಅಸುರರಾಗಲೀ, ಗಂಧರ್ವರಾಗಲೀ, ಸರ್ಪಗಳಾಗಲೀ ಗುಹೆಯಲ್ಲಿದ್ದರೂ ಸುಖವನ್ನು ಹೊಂದುವುದಿಲ್ಲ.
ಪ್ರಜಾಪತೇಶ್ಚ ದಕ್ಷಸ್ಯ ಯಜತೋ ವಿತತೇ ಕ್ರತೌ |
ವಿವ್ಯಾಧ ಕುಪಿತೋ ಯಜ್ಞಂ ನಿರ್ಭಯಸ್ತು ಭವಸ್ತದಾ |
ಧನುಷಾ ಬಾಣಮುತ್ಸೃಜ್ಯ ಸಘೋಷಂ ವಿನನಾದ ಚ ॥11॥

ದಕ್ಷ ಪ್ರಜಾಪತಿಯ ವಿಸ್ತಾರವಾದ ಯಜ್ಞದಲ್ಲಿ ಭವನು ಆಗ ಕುಪಿತನಾಗಿ, ನಿರ್ಭಯನಾಗಿ ಯಜ್ಞವನ್ನು ಧ್ವಂಸ ಮಾಡಿದನು. ಧನುಸ್ಸಿನಿಂದ ಬಾಣವನ್ನು ಪ್ರಯೋಗಿಸಿ ಮಹಾಘೋಷದೊಡನೆ ಗರ್ಜಿಸಿದನು.
ತೇ ನ ಶರ್ಮ ಕುತಃ ಶಾಂತಿಂ ಲೇಭಿರೇ ಸ್ಮ ಸುರಾಸ್ತದಾ |
ವಿದ್ರುತೇ ಸಹಸಾ ಯಜ್ಞೇ ಕುಪಿತೇ ಚ ಮಹೇಶ್ವರೇ ॥12॥
ಮಹೇಶ್ವರನು ಕುಪಿತನಾಗಿ ಯಜ್ಞವು ಧ್ವಂಸ ಮಾಡಲ್ಪಡುತ್ತಿರಲು ದೇವತೆಗಳು ಸುಖವನ್ನು ಹೊಂದಲಿಲ್ಲ. ಇನ್ನು ಶಾಂತಿಯು ಎಲ್ಲಿಂದ ಬರಬೇಕು?
ತೇನ ಜ್ಯಾತಳಘೋಷೇಣ ಸರ್ವೇ ಲೋಕಾಃ ಸಮಾಕುಲಾಃ |
ಬಭೂವುರವಶಾಃ ಪಾರ್ಥ ವಿಷೇದುಶ್ಚ ಸುರಾಸುರಾಃ ॥13॥
ಅವನ ಧನುಸ್ಸಿನ ಹೆದೆಯ ಘೋಷದಿಂದ ಎಲ್ಲ ಲೋಕಗಳೂ ಗಾಬರಿಗೊಂಡವು. ಎಲೈ ಪಾರ್ಥನೇ, ಸುರಾಸುರರು ಅವಶರಾಗಿ ವಿಷಾದವನ್ನು ಹೊಂದಿದರು.
ಆಪಶ್ಚುಕ್ಷುಭಿರೇ ಚೈವ ಚಕಂಪೇ ಚ ವಸುಂಧರಾ |
ವ್ಯದ್ರುವನ್ ಗಿರಯಶ್ಚಾಪಿ ದ್ಯೌಃ ಪಫಾಲ ಚ ಸರ್ವಶಃ ॥14॥
ಸಮುದ್ರಗಳ ಜಲವು ಕ್ಷೋಭೆಯನ್ನು ಹೊಂದಿತು. ಭೂಮಿಯು ನಡುಗಿತು. ಪರ್ವತಗಳು ಓಡಿದವು. ಆಕಾಶವು ಬಿರಿಯಿತು.
ಅಂಧೇನ ತಮಸಾ ಲೋಕಾಃ ಪ್ರಾವೃತಾ ನ ಚಕಾಶಿರೇ |
ಪ್ರನಷ್ಟಾ ಜ್ಯೋತಿಷಾಂ ಭಾಶ್ಚ ಸಹ ಸೂರ್ಯೇಣ ಭಾರತ ॥15॥
ಕಗ್ಗತ್ತಲೆಯಿಂದ ಆವೃತವಾದ ಲೋಕಗಳು ಪ್ರಕಾಶಿಸಲಿಲ್ಲ. ಎಲೈ ಭಾರತನೇ, ಸೂರ್ಯನೇ ಮೊದಲಾದ ಜ್ಯೋತಿಸ್ಸುಗಳ ಪ್ರಕಾಶವು ನಷ್ಟವಾಯಿತು.
ಭೃಶಂ ಭೀತಾಸ್ತತಃ ಶಾಂತಿಂ ಚಕ್ರುಃ ಸ್ವಸ್ತ್ಯಯನಾನಿ ಚ |
ಋಷಯಃ ಸರ್ವಭೂತಾನಾಮಾತ್ಮನಶ್ಚ ಹಿತೈಷಿಣಃ ॥16॥
ಸರ್ವಭೂತಗಳ, ತಮ್ಮ ಹಿತೈಷಿಗಳಾದ ಋಷಿಗಳು ಬಹಳ ಹೆದರಿ ಆಗ ಶಾಂತಿಯನ್ನೂ, ಮಂಗಳವಾಚನಗಳನ್ನೂ ಮಾಡಿದರು.
ತತಃ ಸೋಽಭ್ಯದ್ರವದ್ ದೇವಾನ್ ಕ್ರುದ್ಧೋ ರೌದ್ರಪರಾಕ್ರಮಃ |
ಭಗಸ್ಯ ನಯನೇ ಕ್ರುದ್ಧಃ ಪ್ರಹಾರೇಣ ವ್ಯಶಾತಯತ್ ॥17॥
ಅನಂತರ ಭಯಂಕರ ಪರಾಕ್ರಮವುಳ್ಳ ಅವನು ಕೋಪಗೊಂಡು ದೇವತೆಗಳ ಕಡೆಗೆ ನುಗ್ಗಿದನು. ಒಂದು ಪ್ರಹಾರದಿಂದ ಭಗನ ನೇತ್ರಗಳನ್ನು ಪುಡಿ ಮಾಡಿದನು.
ಪೂಷಾಣಂ ಚಾಭಿದುದ್ರಾವ ಪರೇಣ ವಪುಷಾನ್ವಿತಃ |
ಪುರೋಡಾಶಂ ಭಕ್ಷಯತೋ ದಶನಾನ್ ವೈ ವ್ಯಶಾತಯತ್ ॥18॥
ಶ್ರೇಷ್ಠವಾದ ಶರೀರವನ್ನು ಧರಿಸಿದ ಅವನು ಪೂಷನ ಕಡೆಗೆ ಓಡಿದನು. ಪುರೋಡಾಶವನ್ನು ತಿನ್ನುತ್ತಿದ್ದ ಅವನ ದಂತಗಳನ್ನು ಮುರಿದನು.
ತತಃ ಪ್ರಣೇಮುರ್ದೇವಾಸ್ತೇ ವೇಪಮಾನಾಃ ಸ್ಮ ಶಂಕರಮ್ |
ಪುನಶ್ಚ ಸಂದಧೇ ರುದ್ರೋ ದೀಪ್ತಂ ಸುನಿಶಿತಂ ಶರಮ್ ॥19॥
ಆಗ ಆ ದೇವತೆಗಳೆಲ್ಲರೂ ನಡುಗುತ್ತಾ ಶಂಕರನಿಗೆ ನಮಸ್ಕಾರವನ್ನು ಮಾಡಿದರು. ರುದ್ರನು ಪುನಃ ಅತ್ಯಂತ ತೀಕ್ಷ್ಣವಾದ ಬಾಣವನ್ನು ಧನುಸ್ಸಿನಲ್ಲಿ ಹೂಡಿದನು.
ರುದ್ರಸ್ಯ ವಿಕ್ರಮಂ ದೃಷ್ಟ್ವಾ ಭೀತಾ ದೇವಾಃ ಸಹರ್ಷಿಭಿಃ |
ತತಃ ಪ್ರಸಾದಯಾಮಾಸುಃ ಸರ್ವೇ ವಿಬುಧಸತ್ತಮಾಃ ॥20॥
ರುದ್ರನ ಪರಾಕ್ರಮವನ್ನು ನೋಡಿ ದೇವತೆಗಳು, ಋಷಿಗಳು ಭೀತರಾದರು. ಆಗ ವಿಬುಧಶ್ರೇಷ್ಠರೆಲ್ಲರೂ ಅವನನ್ನು ಪ್ರಸನ್ನಗೊಳಿಸಿದರು.
ಜೇಪುಶ್ಚ ಶತರುದ್ರೀಯಂ ದೇವಾಃ ಕೃತ್ವಾಽಂಜಲಿಂ ತತಃ |
ಸಂಸ್ತೂಯಮಾನಸ್ತ್ರಿದಶೈಃ ಪ್ರಸಸಾದ ಮಹೇಶ್ವರಃ ॥21॥
ದೇವತೆಗಳು ಕೈಗಳನ್ನು ಮುಗಿದು ಶತರುದ್ರೀಯ ಜಪವನ್ನು ಮಾಡಿದರು. ದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟ ಮಹೇಶ್ವರನು ಪ್ರಸನ್ನನಾದನು.
ರುದ್ರಸ್ಯ ಭಾಗಂ ಯಜ್ಞೇ ಚ ವಿಶಿಷ್ಟಂ ತೇ ತ್ವಕಲ್ಪಯನ್ |
ಭಯೇನ ತ್ರಿದಶಾ ರಾಜನ್ ಶರಣಂ ಚ ಪ್ರಪೇದಿರೇ ॥22॥
ಅವರು ಯಜ್ಞದಲ್ಲಿ (ಪ್ರಧಾನ ದೇವತೆಗೆ ಕೊಟ್ಟು) ಉಳಿದ ಭಾಗವನ್ನು ರುದ್ರನ ಭಾಗವೆಂದು ಕಲ್ಪಿಸಿದರು. ರಾಜನೇ, ದೇವತೆಗಳು ಭಯದಿಂದ ಈಶ್ವರನಿಗೆ ಶರಣಾಗತರಾದರು.
ತೇನ ಚೈವಾತಿಕೋಪೇನ ಸ ಯಜ್ಞಃ ಸಂಧಿತೋಽಭವತ್ |
ಯದ್ಯಚ್ಚಾಪಿ ಹತಂ ತತ್ರ ತತ್ತಥಾ ಪ್ರತಿಪೇದಿರೇ ॥23॥
ಅತಿ ಕೋಪವನ್ನು ಹೊಂದಿದ್ದ ರುದ್ರನೇ ಆ ಯಜ್ಞವನ್ನು ಪುನಃ ಸರಿಯಾಗಿ ಪೂರ್ಣಗೊಳಿಸಿದನು (ಸಂಧಾನವನ್ನು ಮಾಡಿದನು). ಅವನು ಮೊದಲು ನಾಶಗೊಳಿಸಿದುದೆಲ್ಲವೂ ಮೊದಲಿನಂತೆಯೇ ಆಯಿತು.
ಅಸುರಾಣಾಂ ಪುರಾಣ್ಯಾಸನ್ ತ್ರೀಣಿ ವೀರ್ಯವತಾಂ ದಿವಿ |
ಆಯಸಂ ರಾಜತಂ ಚೈವ ಸೌವರ್ಣಮಪರಂ ತಥಾ ॥24॥

ನಾಶಕತ್ ತಾನಿ ಮಘವಾ ಭೇತ್ತುಂ ಸರ್ವಾಯುಧೈರಪಿ |
ಅಥ ಸರ್ವೇಽಮರಾ ರುದ್ರಂ ಜಗ್ಮುಃ ಶರಣಮರ್ದಿತಾಃ ॥25॥
ಪರಾಕ್ರಮಶಾಲಿಗಳಾದ ಅಸುರರಿಗೆ ದೇವಲೋಕದಲ್ಲಿ ಕಬ್ಬಿಣದ, ಬೆಳ್ಳಿಯ ಮತ್ತು ಚಿನ್ನದ ಮೂರು ಪಟ್ಟಣಗಳಿದ್ದವು. ಇಂದ್ರನು ತನ್ನ ಎಲ್ಲಾ ಆಯುಧಗಳಿಂದಲೂ ಅವುಗಳನ್ನು ಭೇದಿಸಲು ಶಕ್ತನಾಗಲಿಲ್ಲ. ಆಗ ಆ ಅಸುರರಿಂದ ಪೀಡಿಸಲ್ಪಟ್ಟು ಎಲ್ಲಾ ದೇವತೆಗಳೂ ರುದ್ರದೇವರಿಗೆ ಶರಣಾಗತರಾದರು.
ತತ ಊಚುರ್ಮಹಾತ್ಮಾನೋ ದೇವಾಃ ಸರ್ವೇ ಸಮಾಗತಾಃ |
ರುದ್ರ ರೌದ್ರಾ ಭವಿಷ್ಯಂತಿ ಪಶವಃ ಸರ್ವಕರ್ಮಸು |
ಜಹಿ ದೈತ್ಯಾನ್ ಸಹ ಪುರೈರ್ಲೋಕಾನ್ ತ್ರಾಯಸ್ವ ಮಾನದ ॥26॥
ಮಹಾತ್ಮರಾದ ದೇವತೆಗಳೆಲ್ಲರೂ ರುದ್ರದೇವರ ಬಳಿಗೆ ಬಂದು ಎಲೈ ರುದ್ರನೇ, ಈ ಅಸುರರು ಎಲ್ಲಾ ಕರ್ಮಗಳಲ್ಲಿಯೂ ಪಶುಗಳಂತೆ ಘೋರರಾಗುತ್ತಾರೆ. ಎಲೈ ಮಾನದನೇ, ತಮ್ಮ ಪಟ್ಟಣಗಳಿಂದ ಸಹಿತರಾದ ಈ ದೈತ್ಯರನ್ನು ಕೊಂದು ಲೋಕಗಳನ್ನು ರಕ್ಷಿಸು (ಎಂದು ಹೇಳಿದರು).
ಸ ತಥೋಕ್ತಸ್ತಥೇತ್ಯುಕ್ತ್ವಾ ವಿಷ್ಣುಂ ಕೃತ್ವಾ ಶರೋತ್ತಮಮ್ |
ಶಲ್ಯಮಗ್ನಿಂ ತಥಾ ಕೃತ್ವಾ ಪುಂಖಂ ವೈವಸ್ವತಂ ಯಮಮ್ |
ವೇದಾನ್ ಕೃತ್ವಾ ಧನುಃ ಸರ್ವಾನ್ ಸಾವಿತ್ರೀಂ ಜ್ಯಾಂ ಮಹೇಶ್ವರಃ ॥
ದೇವಾನ್ ರಥವರಂ ಕೃತ್ವಾ ವಿನಿಯುಜ್ಯ ಚ ಸರ್ವಶಃ |
ತ್ರಿಪರ್ವಣಾ ತ್ರಿಶಲ್ಯೇನ ತೇನ ತಾನಿ ಬಿಭೇದ ಸಃ ॥28॥
ರುದ್ರನು ಹಾಗೆಯೇ ಆಗಲಿ ಎಂದು ಹೇಳಿ ವಿಷ್ಣುವನ್ನು ಶ್ರೇಷ್ಠವಾದ ಬಾಣವನ್ನಾಗಿ ಮಾಡಿಕೊಂಡು, ಅಗ್ನಿಯನ್ನು ಅದರ ಅಗ್ರವನ್ನಾಗಿಯೂ, ಯಮನನ್ನು ಗರಿಯನ್ನಾಗಿಯೂ, ಎಲ್ಲಾ ವೇದಗಳನ್ನೂ ಧನುಸ್ಸನ್ನಾಗಿ ಮಾಡಿಕೊಂಡು, ಗಾಯತ್ರಿಯನ್ನು ಹೆದೆಯನ್ನಾಗಿ ಮಾಡಿಕೊಂಡು, ದೇವತೆಗಳನ್ನು ಶ್ರೇಷ್ಠ ರಥವನ್ನಾಗಿ ಮಾಡಿಕೊಂಡು, ಎಲ್ಲರನ್ನೂ ಆಯಾ ಕರ್ಮಗಳಲ್ಲಿ ವಿನಿಯೋಗಿಸಿ ಮೂರು ಪರ್ವಗಳನ್ನೂ, ಮೂರು ತುದಿಗಳನ್ನೂ ಹೊಂದಿದ್ದ ಆ ಶಲ್ಯದಿಂದ ಆ ಪಟ್ಟಣಗಳನ್ನು ಭೇದಿಸಿದನು.
ಶರೇಣಾದಿತ್ಯವರ್ಣೇನ ಕಾಲಾಗ್ನಿಸಮತೇಜಸಾ |
ತೇಽಸುರಾಃ ಸಪುರಾಸ್ತತ್ರ ದಗ್ಧಾ ರುದ್ರೇಣ ಭಾರತ ॥29॥
ಎಲೈ ಭಾರತನೇ, ಕಾಲಾಗ್ನಿ ತೇಜಸ್ಸನ್ನು ಹೊಂದಿದ ರುದ್ರನಿಂದ, ಸೂರ್ಯನ ಪ್ರಭೆಯನ್ನು ಹೊಂದಿದ ಬಾಣದಿಂದ ತಮ್ಮ ಪಟ್ಟಣಗಳ ಜೊತೆಯಲ್ಲಿ ಆ ಅಸುರರು ದಗ್ಧರಾದರು.
ತಂ ಚೈವಾಂಕಗತಂ ದೃಷ್ಟ್ವಾ ಬಾಲಂ ಪಂಚಶಿಖಂ ಪುನಃ |
ಉಮಾ ಜಿಜ್ಞಾಸಮಾನಾ ವೈ ಕೋಽಯಮಿತ್ಯಬ್ರವೀತ್ ತದಾ ॥30॥
ಈಶ್ವರನು ಈ ಕಾರ್ಯವನ್ನು ಮಾಡಿ, ಪಾರ್ವತಿಯ ತೊಡೆಯ ಮೇಲೆ ಪಂಚಶಿಖೆಯುಳ್ಳ ಬಾಲನಾಗಿ ಮಲಗಿಕೊಂಡಿರಲು ಅವನನ್ನು ತಿಳಿಯಲು ಬಯಸಿ ಉಮೆಯು ಇವನು ಯಾರು ಎಂದು ಕೇಳಿದಳು.
ಅಸೂಯತಶ್ಚ ಶಕ್ರಸ್ಯ ವಜ್ರೇಣ ಪ್ರಹರಿಷ್ಯತಃ |
ಸವಜ್ರಂ ಸ್ತಂಭಯಾಮಾಸ ತಂ ಬಾಹುಂ ಪರಿಘೋಪಮಮ್ ॥31॥
ಅಸೂಯೆಯಿಂದ ಇಂದ್ರನು ವಜ್ರಾಯುಧದಿಂದ ಅವನಿಗೆ ಪ್ರಹಾರವನ್ನು ಮಾಡಲು ಹವಣಿಸುತ್ತಿರಲು ವಜ್ರ ಸಹಿತವಾದ ಒನಕೆಯಂತಿದ್ದ ಅವನ ಬಾಹುವನ್ನು ಸ್ತಂಭಿಸಿದನು.
ನ ಸಂಬುಬುಧಿರೇ ಚೈನಂ ದೇವಾಸ್ತಂ ಭುವನೇಶ್ವರಮ್ |
ಸಪ್ರಜಾಪತಯಃ ಸರ್ವೇ ತಸ್ಮಿನ್ ಮುಮುಹುರೀಶ್ವರೇ ॥32॥
ದೇವತೆಗಳು ಅವನನ್ನು ಭುವನೇಶ್ವರನೆಂದು ತಿಳಿಯಲಿಲ್ಲ. ಪ್ರಜಾಪತಿಗಳ ಸ್ವರೂಪರಾದ ಅವರೆಲ್ಲರೂ ಈಶ್ವರನ ಸ್ವರೂಪವನ್ನು ತಿಳಿಯುವುದರಲ್ಲಿ ಮೋಹವನ್ನು ಹೊಂದಿದರು.
ತತೋ ಧ್ಯಾತ್ವಾಽಥ ಭಗವಾನ್ ಬ್ರಹ್ಮಾ ತಮಮಿತೌಜಸಮ್ |
ಅಯಂ ಶ್ರೇಷ್ಠ ಇತಿ ಜ್ಞಾತ್ವಾ ವವಂದೇ ತಮುಮಾಪತಿಮ್ ॥33॥
ಅನಂತರ ಪೂಜ್ಯನಾದ ಬ್ರಹ್ಮನು ಧ್ಯಾನ ಮಾಡಿ, ಅಮಿತ ಪರಾಕ್ರಮಿಯಾದ ಇವನು ಶ್ರೇಷ್ಠನಾದವನೆಂದು ತಿಳಿದು ಉಮಾಪತಿಗೆ ನಮಸ್ಕಾರವನ್ನು ಮಾಡಿದನು.
ತತಃ ಪ್ರಸಾದಯಾಮಾಸುರುಮಾಂ ರುದ್ರಂ ಚ ತೇ ಸುರಾಃ |
ಬಭೂವ ಸ ತದಾ ಬಾಹುರ್ಬಲಹಂತುರ್ಯಥಾ ಪುರಾ ॥34॥
ಆಗ ದೇವತೆಗಳು ರುದ್ರನನ್ನೂ ಮತ್ತು ಉಮೆಯನ್ನೂ ಪ್ರಸನ್ನೀಕರಿಸಿದರು. ಆಗ ಇಂದ್ರನ ಬಾಹುವು ಮೊದಲಿನಂತೆಯೇ ಆಯಿತು.
ಸ ಚಾಪಿ ಬ್ರಾಹ್ಮಣೋ ಭೂತ್ವಾ ದುರ್ವಾಸಾ ನಾಮ ವೀರ್ಯವಾನ್ |
ದ್ವಾರವತ್ಯಾಂ ಮಮ ಗೃಹೇ ಚಿರಂ ಕಾಲಮುಪಾವಸತ್ ॥35॥
ಆ ರುದ್ರನೇ ಬ್ರಾಹ್ಮಣನಾಗಿ, ಪರಾಕ್ರಮಶಾಲಿಯಾದ ದುರ್ವಾಸರಾಗಿ ದ್ವಾರಾವತಿಯಲ್ಲಿ ನನ್ನ ಮನೆಯಲ್ಲಿ ಬಹುಕಾಲ ವಾಸವಾಗಿದ್ದನು.
ವಿಪ್ರಕಾರಾನ್ ಪ್ರಯುಂಕ್ತೇ ಸ್ಮ ಸುಬಹೂನ್ ಮಮ ವೇಶ್ಮನಿ |
ತಾನುದಾರತಯಾ ಚಾಹಮಕ್ಷಮಂ ತಸ್ಯ ದುಃಸಹಮ್ ॥36॥
ನನ್ನ ಗೃಹದಲ್ಲಿ ಅವನು ಅನೇಕ ಅಪಚಾರಗಳನ್ನು ಮಾಡಿದನು. ತಡೆಯಲು ಅಸಾಧ್ಯವಾದ ಆ ಅಪಚಾರಗಳನ್ನು ನಾನು

ಔದಾರ್ಯದಿಂದ ಸಹಿಸಿದೆ.
ಸ ದೇವೇಂದ್ರಶ್ಚ ವಾಯುಶ್ಚ ಸೋಽಶ್ವಿನೌ ಸ ಚ ವಿದ್ಯುತಃ |
ಸ ಚಂದ್ರಮಾಃ ಸ ಚೇಶಾನಃ ಸ ಸೂರ್ಯೋ ವರುಣಶ್ಚ ಸಃ ||37||
ಸ ಕಾಲಃ ಸೋಽಂತಕೋ ಮೃತ್ಯುಃ ಸ ತಮೋ ರಾತ್ರ್ಯಹಾನಿ ಚ |
ಮಾಸಾರ್ಧಮಾಸಾ ಋತವಃ ಸಂಧ್ಯೇ ಸಂವತ್ಸರಶ್ಚ ಸಃ ||38||
ಅವನೇ ದೇವೇಂದ್ರ, ವಾಯು. ಅವನೇ ಅಶ್ವಿನೀ ದೇವತೆಗಳು. ಮಿಂಚುಗಳು. ಅವನೇ ಚಂದ್ರ. ಅವನೇ ಈಶ್ವರ, ಸೂರ್ಯ, ವರುಣ. ಅವನೇ ಕಾಲ, ಅಂತಕ, ಮೃತ್ಯು, ತಮಸ್ಸು, ರಾತ್ರಿ, ಹಗಲು, ಮಾಸಗಳು, ಅರ್ಧಮಾಸಗಳು (ಪಕ್ಷಗಳು), ಋತುಗಳು, ಸಂಧ್ಯೆಗಳು ಮತ್ತು ಸಂವತ್ಸರವೂ ಅವನೇ.
ಸ ಧಾತಾ ಸ ವಿಧಾತಾ ಚ ವಿಶ್ವಕರ್ಮಾ ಸ ಸರ್ವವಿತ್ |
ನಕ್ಷತ್ರಾಣಿ ದಿಶಶ್ಚೈವ ಪ್ರದಿಶೋಽಥ ಗ್ರಹಾಸ್ತಥಾ |
ವಿಶ್ವಮೂರ್ತಿರಮೇಯಾತ್ಮಾ ಭಗವಾನ್ ಪರಮೇಶ್ವರಃ ||39||
ಅವನೇ ಧಾತಾ, ವಿಧಾತಾ, ವಿಶ್ವಕರ್ಮ, ಸರ್ವಜ್ಞ. ಅವನೇ ನಕ್ಷತ್ರಗಳು, ದಿಕ್ಕುಗಳು, ಪ್ರದಿಕ್ಕುಗಳು, ಗ್ರಹಗಳು. ಭಗವಂತನಾದ ಪರಮೇಶ್ವರನು ವಿಶ್ವಮೂರ್ತಿಯಾದವನು ಮತ್ತು ಅಚಿಂತ್ಯ ಮಹಿಮೆಯುಳ್ಳವನು (ಹಿಂದೆ ಎಷ್ಟೋ ಬಾರಿ ಅರ್ಥ ಮಾಡಿದಂತೆ ಜಡ-ಚೇತನಗಳ ಅಭೇದವು ಯಾವ ಶಾಸ್ತ್ರಕ್ಕೂ ಸಮ್ಮತವಾದುದಲ್ಲವಾದ್ದರಿಂದ ಒಂದೇ ರೀತಿಯಲ್ಲಿ ಎಲ್ಲವೂ ಅವನ ಅಧೀನ ಎಂದು ಅರ್ಥವನ್ನು ಮಾಡಬೇಕು).
ಏಕಧಾ ಚ ದ್ವಿಧಾ ಚೈವ ಬಹುಧಾ ಚ ಸ ಏವ ಚ |
ಶತಧಾ ಸಹಸ್ರಧಾ ಚೈವ ತಥಾ ಶತಸಹಸ್ರಧಾ ||40||
ಅವನು ಒಂದು ರೂಪವನ್ನೂ, ಎರಡು ರೂಪಗಳನ್ನೂ, ಅನೇಕ ರೂಪಗಳನ್ನೂ, ನೂರು ರೂಪಗಳನ್ನೂ, ಸಹಸ್ರ ರೂಪಗಳನ್ನೂ, ಹಾಗೆಯೇ ಲಕ್ಷ ರೂಪಗಳನ್ನೂ ಧರಿಸಿ ಅಷ್ಟು ಪ್ರಕಾರಗಳಲ್ಲಿ ಇದ್ದಾನೆ.
ಈದೃಶಃ ಸ ಮಹಾದೇವೋ ಭೂಯಶ್ಚ ಭಗವಾನತಃ |
ನ ಹಿ ಶಕ್ಯಾ ಗುಣಾ ವಕ್ತುಮಪಿ ವರ್ಷಶತೈರಪಿ ||41||
ಭಗವಂತನಾದ ಮಹಾದೇವನು ಇಂತಹವನು ಮತ್ತು ಇದಕ್ಕಿಂತಲೂ ಹೆಚ್ಚಿನ ಮಹಿಮೆಯುಳ್ಳವನು. ನೂರು ವರ್ಷಗಳಾದರೂ ಅವನ ಗುಣಗಳನ್ನು ಹೇಳಿ ಮುಗಿಸಲು ಸಾಧ್ಯವಿಲ್ಲ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಈಶ್ವರಮಾಹಾತ್ಮ್ಯಕಥನಂ ನಾಮ ಅಷ್ಟಚತ್ವಾರಿಂಶೋತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ನಲವತ್ತೊಂಬತ್ತನೆಯ ಅಧ್ಯಾಯ
ಶಂಕರನ ಮಹಿಮೆ
ವಾಸುದೇವಃ
ಯುಧಿಷ್ಠಿರ ಮಹಾಬಾಹೋ ಮಹಾಭಾಗ್ಯಂ ಮಹಾತ್ಮನಃ |
ರುದ್ರಾಯ ಬಹುರೂಪಾಯ ಬಹುನಾಮ್ನೇ ನಿಬೋಧ ಮೇ ||1||
ವಾಸುದೇವ ಮಹಾಬಾಹುವಾದ ಯುಧಿಷ್ಠಿರನೇ, ಮಹಾತ್ಮನಾದವನೂ ಮಹಾಭಾಗ್ಯವಂತನೂ, ಬಹುರೂಪನೂ ಆದ ರುದ್ರನ ಅನೇಕ ನಾಮಗಳನ್ನೂ ನನ್ನಿಂದ ಕೇಳುವವನಾಗು.
ವದಂತ್ಯಗ್ನಿಂ ಮಹಾದೇವಂ ತಥಾ ಸ್ಥಾಣುಂ ಮಹೇಶ್ವರಮ್ |
ಏಕಾಕ್ಷಂ ತ್ರ್ಯಂಬಕಂ ಚೈವ ವಿಶ್ವರೂಪಂ ಶಿವಂ ತಥಾ ||2||
ಮಹಾದೇವನನ್ನು ಅಗ್ನಿ ಎಂದೂ, ಸ್ಥಾಣುವೆಂದೂ, ಮಹೇಶ್ವರನೆಂದೂ, ಏಕಾಕ್ಷನೆಂದೂ, ತ್ರ್ಯಂಬಕನೆಂದೂ, ವಿಶ್ವರೂಪನೆಂದೂ, ಶಿವನೆಂದೂ ಕರೆಯುತ್ತಾರೆ.
ದ್ವೇ ತನೂ ತಸ್ಯ ದೇವಸ್ಯ ವೇದಜ್ಞಾ ಬ್ರಾಹ್ಮಣಾ ವಿದುಃ |
ಘೋರಾಮನ್ಯಾಂ ಶಿವಾಮನ್ಯಾಂ ತೇ ತನೂ ಬಹುಧಾ ಪುನಃ ||3||
ವೇದವನ್ನು ತಿಳಿದ ಬ್ರಾಹ್ಮಣರು ಆ ದೇವನಿಗೆ ಎರಡು ಶರೀರಗಳಿವೆ ಎಂದು ಹೇಳುತ್ತಾರೆ. ಒಂದು ಘೋರವಾದುದು, ಇನ್ನೊಂದು ಶಾಂತವಾದುದು. ಆ ಎರಡು ಶರೀರಗಳು ಪುನಃ ಅನೇಕ ವಿಧವಾಗಿವೆ.
ಉಗ್ರಾ ಘೋರಾ ತನೂರ್ಯಾಽಸ್ಯ ಸೋಽಗ್ನಿರ್ವಿದ್ಯುತ್ ಸ ಭಾಸ್ಕರಃ |
ಶಿವಾ ಸೌಮ್ಯಾ ಚ ಯಾ ತಸ್ಯ ಧರ್ಮಸ್ತತ್ವಪೋಽಥ ಚಂದ್ರಮಾಃ ||4||
ಅವನ ಉಗ್ರವೂ, ಘೋರವೂ ಆದ ತನುವು ಯಾವುದಿದೆಯೋ ಅದೇ ಅಗ್ನಿ, ವಿದ್ಯುತ್ ಮತ್ತು ಸೂರ್ಯ. ಶಾಂತವಾದ ಮತ್ತು ಸೌಮ್ಯವಾದ ತನುವು ಧರ್ಮ, ಜಲ ಮತ್ತು ಚಂದ್ರ.
ಆತ್ಮನೋಽರ್ಧಂ ತು ತಸ್ಯಾಗ್ನಿರುಚ್ಯತೇ ಭರತರ್ಷಭ |
ಬ್ರಹ್ಮಚರ್ಯಂ ಚರತ್ಯೇಷ ಶಿವಾ ಯಾಽಸ್ಯ ತನುಸ್ತಥಾ ||5||
ಎಲೈ ಭರತರ್ಷಭನೇ, ಅವನ ಶರೀರದ ಅರ್ಧಭಾಗವನ್ನು ಅಗ್ನಿ ಎಂದು ಹೇಳುತ್ತಾರೆ. ಅವನ ಶಾಂತವಾದ ಶರೀರವು

ಬ್ರಹ್ಮಚರ್ಯವನ್ನು ಆಚರಿಸುತ್ತದೆ.
ಯಾಽಸ್ಯ ಘೋರತಮಾ ಮೂರ್ತಿರ್ಜಗತ್ಸಂಹರತೇ ತಯಾ |
ಈಶ್ವರತ್ವಾನ್ಮಹತ್ತ್ವಚ್ಚ ಮಹೇಶ್ವರ ಇತಿ ಸ್ಮೃತಃ ||6||
ಅವನ ಘೋರತರವಾದ ಶರೀರವು ಜಗತ್ತನ್ನು ಸಂಹರಿಸುತ್ತದೆ. ಅವನು ಈಶ್ವರನಾದುದರಿಂದಲೂ ಮತ್ತು ಮಹಾತ್ಮನಾದುದರಿಂದಲೂ ಮಹೇಶ್ವರನೆಂದು ಹೇಳಲ್ಪಡುತ್ತಾನೆ.
ಯನ್ನಿರ್ದಹತಿ ಯತ್ ತೀಕ್ಷ್ಣೋ ಯದುಗ್ರೋ ಯತ್ಪ್ರತಾಪವಾನ್ |
ಮಾಂಸಶೋಣಿತಮಜ್ಜಾದೋ ಯತ್ ತತೋ ರುದ್ರ ಉಚ್ಯತೇ ||7||
ಜಗತ್ತನ್ನು ಸುಡುವುದರಿಂದ, ತೀಕ್ಷ್ಣವಾಗಿರುವುದರಿಂದ, ಪ್ರತಾಪಶಾಲಿ ಆಗಿರುವುದರಿಂದ, ಮಾಂಸ-ಶೋಣಿತ-ಮಜ್ಜೆಗಳನ್ನು ತಿನ್ನುವುದರಿಂದ ಅವನ ಉಗ್ರವಾದ ಶರೀರವು ರುದ್ರ ಎಂದು ಕರೆಯಲ್ಪಡುತ್ತದೆ.
ದೇವಾನಾಂ ಸುಮಹಾನ್ ಯಚ್ಚ ಯಚ್ಚಾಸ್ಯ ವಿಷಯೋ ಮಹಾನ್ |
ಯಚ್ಚ ವಿಶ್ವಂ ಮಹತ್ಪಾತಿ ಮಹಾದೇವಸ್ತತಃ ಸ್ಮೃತಃ ||8||
ಅವನು ದೇವತೆಗಳಿಗಿಂತ ದೊಡ್ಡವನಾದ ಕಾರಣದಿಂದ, ಅವನು ಭೋಗಿಸುವ ವಿಷಯವೂ ದೊಡ್ಡದಾದ ಕಾರಣದಿಂದ, ಅವನು ವಿಶ್ವವನ್ನು ರಕ್ಷಿಸುವುದರಿಂದ ಮಹಾದೇವನೆಂದು ಕರೆಯಲ್ಪಡುತ್ತಾನೆ.
ಸಮೇಧಯತಿ ಯನ್ನಿತ್ಯಂ ಸರ್ವಾರ್ಥಾನ್ ಸರ್ವಕರ್ಮಭಿಃ |
ಶಿವಮಿಚ್ಛನ್ ಮನುಷ್ಯಾಣಾಂ ತಸ್ಮಾದೇಷ ಶಿವಃ ಸ್ಮೃತಃ ||9||
ಮನುಷ್ಯರ ಕ್ಷೇಮವನ್ನು ಬಯಸುತ್ತಾ ನಿತ್ಯವೂ ಎಲ್ಲ ಕರ್ಮಗಳಿಂದ ಎಲ್ಲ ವಸ್ತುಗಳನ್ನೂ ಸಮೃದ್ಧಿಗೊಳಿಸುವುದರಿಂದ ಅವನನ್ನು ಶಿವನೆಂದು ಕರೆಯುತ್ತಾರೆ.
ದಹತ್ಯೂರ್ಧ್ವಂ ಸ್ಥಿತೋ ಯಚ್ಚ ಪ್ರಾಣೋತ್ಪತ್ತಿಃ ಸ್ಥಿತಿಶ್ಚ ಯತ್ |
ಸ್ಥಿರಲಿಂಗಶ್ಚ ಯನ್ನಿತ್ಯಂ ತಸ್ಮಾತ್ಸ್ಥಾಣುರಿತಿ ಸ್ಮೃತಃ ||10||
ಊರ್ಧ್ವಮುಖವಾಗಿ ಜ್ವಲಿಸುವುದರಿಂದ, ಇಂದ್ರಿಯೋತ್ಪತ್ತಿಗೆ ಮತ್ತು ಸ್ಥಿತಿಗೆ ಕಾರಣನಾಗಿರುವುದರಿಂದ, ಯಾವಾಗಲೂ ಸ್ಥಿರವಾದ ಲಿಂಗವನ್ನು ಹೊಂದಿರುವುದರಿಂದ ಸ್ಥಾಣುವೆಂದು ಕರೆಯುತ್ತಾರೆ.
ಯದಸ್ಯ ಬಹುಧಾ ರೂಪಂ ಭೂತಂ ಭವ್ಯಂ ಭವತ್ತಥಾ |
ಸ್ಥಾವರಂ ಜಂಗಮಂ ಚೈವ ಬಹುರೂಪಸ್ತತಃ ಸ್ಮೃತಃ ||11||
ಭೂತ-ವರ್ತಮಾನ-ಭವಿಷ್ಯತ್ಕಾಲದ ಸ್ಥಾವರ-ಜಂಗಮಗಳೆಲ್ಲವೂ ಅವನ ಅನೇಕ ರೂಪಗಳಾದುದರಿಂದ ಅವನನ್ನು ಬಹುರೂಪನೆಂದು ಕರೆಯುತ್ತಾರೆ.
ಧೂಮ್ರಂ ರೂಪಂ ಚ ಯತ್ತಸ್ಯ ಧೂರ್ಜಟೀತ್ಯತ ಉಚ್ಯತೇ |
ವಿಶ್ವೇ ದೇವಾಶ್ಚ ಯತ್ತಸ್ಮಿನ್ ವಿಶ್ವರೂಪಸ್ತತಃ ಸ್ಮೃತಃ ||12||
ಧೂಮ್ರವರ್ಣದ ಅವನ ರೂಪವನ್ನು ಧೂರ್ಜಟಿ ಎಂದು ಕರೆಯುತ್ತಾರೆ. ಅವನಲ್ಲಿ ಎಲ್ಲ ದೇವತೆಗಳೂ ಆಶ್ರಯಿಸಿಕೊಂಡಿರುವುದರಿಂದ ಅವನನ್ನು ವಿಶ್ವರೂಪನೆಂದು ಕರೆಯುತ್ತಾರೆ.
ಸಹಸ್ರಾಕ್ಷೋಽಯುತಾಕ್ಷೋ ವಾ ಸರ್ವತೋಕ್ಷಿಮಯೋಽಪಿ ವಾ |
ಚಕ್ಷುಷಃ ಪ್ರಭವಸ್ತೇಜೋ ನಾಸ್ತ್ಯಂತೋಽಥಾಸ್ಯ ಚಕ್ಷುಷಾಮ್ ||13||
ಅವನು ಸಹಸ್ರಾಕ್ಷನಾದವನು ಅಥವಾ ಹತ್ತುಸಾವಿರ ಕಣ್ಣುಳ್ಳವನು ಅಥವಾ ಎಲ್ಲ ಕಡೆಗಳಲ್ಲಿಯೂ ಕಣ್ಣುಳ್ಳವನು. ಚಕ್ಷುಸ್ಸಿನ ಉತ್ಪತ್ತಿಗೆ ಕಾರಣನಾದವನು. ತೇಜೋಮಯನಾದವನು. ಅವನ ಚಕ್ಷುಸ್ಸಿನ ಗಣನೆಗೆ ಅಂತವೇ (ಕೊನೆ) ಇಲ್ಲ.
ಸರ್ವಥಾ ಯತ್ ಪಶೂನ್ ಪಾತಿ ತೈಶ್ಚ ಯದ್ರಮತೇ ಪುನಃ |
ತೇಷಾಮಧಿಪತಿರ್ಯಚ್ಚ ತಸ್ಮಾತ್ ಪಶುಪತಿಃ ಸ್ಮೃತಃ ||14||
ಸರ್ವಥಾ ಪಶುಗಳನ್ನು ರಕ್ಷಣೆ ಮಾಡುವುದರಿಂದ ಮತ್ತು ಅವುಗಳ ಜೊತೆಯಲ್ಲಿ ಸಂತೋಷದಿಂದಿರುವುದರಿಂದ ಮತ್ತು ಅವುಗಳಿಗೆ ಅಧಿಪತಿಯಾಗಿರುವುದರಿಂದ ಅವನು ಪಶುಪತಿ ಎನಿಸುತ್ತಾನೆ.
ನಿತ್ಯೇನ ಬ್ರಹ್ಮಚರ್ಯೇಣ ಲಿಂಗಮಸ್ಯ ಯದಾ ಸ್ಥಿತಮ್ |
ಮಹಯಂತ್ಯಸ್ಯ ಲೋಕಾಶ್ಚ ಮಹೇಶ್ವರ ಇತಿ ಸ್ಮೃತಃ ||15||
ನಿತ್ಯವೂ ಬ್ರಹ್ಮಚರ್ಯವನ್ನು ಧರಿಸಿರುವುದರಿಂದ ಅವನ ಲಿಂಗವು ಯಾವಾಗಲೂ ಸ್ಥಿತವಾಗಿದೆ. ಅದನ್ನು ಎಲ್ಲ ಲೋಕಗಳೂ ಪೂಜಿಸುತ್ತವೆ. ಆದ್ದರಿಂದ ಮಹೇಶ್ವರನೆನಿಸುತ್ತಾನೆ.
ವಿಗ್ರಹಂ ಪೂಜಯೇದ್ಯೋ ವೈ ಲಿಂಗಂ ವಾಪಿ ಮಹಾತ್ಮನಃ |
ಲಿಂಗಂ ಪೂಜಯಿತಾ ನಿತ್ಯಂ ಮಹತೀಂ ಶ್ರಿಯಮಶ್ನುತೇ ||16||
ಯಾವನು ಅವನ ಲಿಂಗವನ್ನಾಗಲೀ ಅಥವಾ ಮಹಾತ್ಮನ ವಿಗ್ರಹವನ್ನಾಗಲೀ ಪೂಜಿಸುತ್ತಾನೋ ಅವನು ಅದರಲ್ಲೂ ಲಿಂಗವನ್ನು ಪೂಜಿಸುವವನು ದೊಡ್ಡ ಸಂಪತ್ತನ್ನು ಪಡೆಯುತ್ತಾನೆ.
ಋಷಯಶ್ಚಾಪಿ ದೇವಾಶ್ಚ ಗಂಧರ್ವಾಪ್ಸರಸಸ್ತಥಾ |
ಲಿಂಗಮೇವಾರ್ಚಯಂತಿ ಸ್ಮ ಯದಾರಾಧ್ಯತಮಂ ಸ್ಥಿತಮ್ ||17||
ಋಷಿಗಳು, ದೇವತೆಗಳು, ಗಂಧರ್ವರು, ಅಪ್ಸರೆಯರು, ಅತ್ಯಂತ ಪೂಜ್ಯವಾದ, ಉತ್ಥಿತವಾದ ಅವನ ಲಿಂಗವನ್ನೇ ಪೂಜಿಸುತ್ತಾರೆ.
ಪೂಜ್ಯಮಾನೇ ತತಸ್ತಸ್ಮಿನ್ ಮೋದತೇ ಸ ಮಹೇಶ್ವರಃ |
ಸುಖಂ ದದಾತಿ ಪ್ರೀತಾತ್ಮಾ ಭಕ್ತಾನಾಂ ಭಕ್ತವತ್ಸಲಃ ||18||

ತನ್ನ ಲಿಂಗವು ಪೂಜಿಸಲ್ಪಟ್ಟರೆ ಮಹೇಶ್ವರನು ಸಂತೋಷಪಡುತ್ತಾನೆ. ಭಕ್ತವತ್ಸಲನಾದ ಅವನು ಪ್ರಸನ್ನನಾಗಿ ಭಕ್ತರಿಗೆ ಸುಖವನ್ನು ಕೊಡುತ್ತಾನೆ.
ಏಷ ಏವ ಶ್ಮಶಾನೇಷು ದೇವೋ ವಸತಿ ನಿತ್ಯಶಃ |
ಯಜಂತೇ ತಂ ಜನಾಸ್ತತ್ರ ವೀರಸ್ಥಾನನಿಷೇವಿಣಮ್ ||19||
ಈ ದೇವನೇ ನಿತ್ಯವೂ ಸ್ಮಶಾನಗಳಲ್ಲಿ ವಾಸಿಸುತ್ತಾನೆ. ಆ ವೀರಸ್ಥಾನದಲ್ಲಿರುವ ಅವನನ್ನು ಜನರು ಪೂಜಿಸುತ್ತಾರೆ.
ವಿಷಮಸ್ಥಃ ಶರೀರೇಷು ಸ ಮೃತ್ಯುಃ ಪ್ರಾಣಿನಾಮಿಹ |
ಸ ಚ ವಾಯುಃ ಶರೀರೇಷು ಪ್ರಾಣೋಽಪಾನಃ ಶರೀರಿಣಾಮ್ ||20||
ವಿಷಮವಾದ ಶರೀರಗಳಲ್ಲಿದ್ದು ಅವನೇ ಪ್ರಾಣಿಗಳಿಗೆ ಮೃತ್ಯುವೆನಿಸುತ್ತಾನೆ. ಅವನೇ ವಾಯುವಾಗಿದ್ದು ಶರೀರಗಳಲ್ಲಿ ಪ್ರಾಣಾಪಾನ ರೂಪದಿಂದಿರುತ್ತಾನೆ.
ತಸ್ಯ ಘೋರಾಣಿ ರೂಪಾಣಿ ದೀಪ್ತಾನಿ ಚ ಬಹೂನಿ ಚ |
ಲೋಕೇ ಯಾನ್ಯಸ್ಯ ಪೂಜ್ಯಂತೇ ವಿಪ್ರಾಸ್ತಾನಿ ವಿದುರ್ಬುಧಾಃ ||21||
ಅವನ ರೂಪಗಳು ಘೋರವೂ, ಉಜ್ವಲವೂ, ಅನೇಕವೂ ಇವೆ. ಲೋಕದಲ್ಲಿ ಪೂಜಿಸಲ್ಪಡುವ ಅವನ ರೂಪಗಳನ್ನು ಜ್ಞಾನಿಗಳಾದ ಬ್ರಾಹ್ಮಣರು ತಿಳಿದಿದ್ದಾರೆ.
ನಾಮಧೇಯಾನಿ ವೇದೇಷು ಬಹೂನ್ಯಸ್ಯ ಯಥಾರ್ಥತಃ |
ನಿರುಚ್ಯಂತೇ ಮಹತ್ತ್ವಾಚ್ಚ ವಿಭುತ್ವಾತ್ ಕರ್ಮಭಿಸ್ತಥಾ ||22||
ವೇದದಲ್ಲಿ ಅವನ ಅನೇಕ ನಾಮಗಳು ಅರ್ಥಕ್ಕೆ ಅನುಗುಣವಾಗಿ, ಅವನ ಮಹತ್ವಕ್ಕೆ ಅನುಗುಣವಾಗಿ, ವಿಭುತ್ವಕ್ಕೆ ಅನುಗುಣವಾಗಿ, ಕರ್ಮಗಳಿಗೆ ಅನುಗುಣವಾಗಿ ನಿರ್ವಚನ ಮಾಡಲ್ಪಡುತ್ತವೆ.
ವೇದೇ ಚಾಸ್ಯ ವಿದುರ್ವಿಪ್ರಾಃ ಶತರುದ್ರೀಯಮುತ್ತಮಮ್ |
ವ್ಯಾಸಾದನಂತರಂ ಯಚ್ಚಾಪ್ಯುಪಸ್ಥಾನಂ ಮಹಾತ್ಮನಃ ||23||
ವೇದಗಳಲ್ಲಿರುವ ಶ್ರೇಷ್ಠವಾದ, ಅವನ ಸ್ತುತಿರೂಪವಾದ ಶತರುದ್ರೀಯವನ್ನು ಬ್ರಾಹ್ಮಣರು ತಿಳಿದಿದ್ದಾರೆ. ವ್ಯಾಸರ ಅನಂತರ ಆ ಮಹಾತ್ಮನ ಸ್ತೋತ್ರವು ಮಾಡಲ್ಪಡುತ್ತದೆ.
ಪ್ರದಾತಾ ಸರ್ವಲೋಕಾನಾಂ ವಿಶ್ವಂ ಚಾಪ್ಯುಚ್ಯತೇ ಮಹತ್ |
ಜ್ಯೇಷ್ಠಭೂತಂ ವದಂತ್ಯೇನಂ ಬ್ರಾಹ್ಮಣಾ ಮುನಯಸ್ತಥಾ ||24||
ಸರ್ವಲೋಕಗಳನ್ನು ಪ್ರಧಾನ ಮಾಡುವುದರಿಂದ ಅವನು ವಿಶ್ವನೆಂದೂ ಕರೆಯಲ್ಪಡುತ್ತಾನೆ. ಬ್ರಾಹ್ಮಣರು ಮತ್ತು ಋಷಿಗಳು ಅವನನ್ನು ಜ್ಯೇಷ್ಠನಾದವನೆಂದು ಹೇಳುತ್ತಾರೆ.
ಪ್ರಥಮೋ ಹ್ಯೇಷ ದೇವಾನಾಂ ಮುಖಾದಗ್ನಿರಜಾಯತ |
ಗ್ರಹೈರ್ಬಹುವಿಧೈಃ ಪ್ರಾಣಾನ್ ಸಂರುದ್ಧಾನುತ್ಸೃಜತ್ಯಪಿ ||25||
ಅವನು ದೇವತೆಗಳಲ್ಲಿ ಪ್ರಧಾನನಾದವನು. ಅವನ ಮುಖದಿಂದ ಅಗ್ನಿ ಜನಿಸಿದನು. ಬಹುವಿಧವಾದ ಗ್ರಹಗಳು ತಡೆದಿಟ್ಟ ಜೀವರ ಪ್ರಾಣಗಳನ್ನು ಅವನು ಪುನಃ ಕೊಡುತ್ತಾನೆ.
ಸ ಮೋಚಯತಿ ಪುಣ್ಯಾತ್ಮಾ ಶರಣ್ಯಃ ಶರಣಾಗತಾನ್ |
ಆಯುರಾರೋಗ್ಯಮೈಶ್ವರ್ಯಂ ವಿತ್ತಂ ಕಾಮಾಂಶ್ಚ ಪುಷ್ಕಲಾನ್ ||26||
ಶರಣ್ಯನೂ, ಪುಣ್ಯಾತ್ಮನೂ ಆದ ಅವನು ಶರಣಾಗತರನ್ನು ಸಂಕಟದಿಂದ ಮೋಚನೆಗೊಳಿಸುತ್ತಾನೆ.
ಆಯುರಾರೋಗ್ಯ-ಐಶ್ವರ್ಯಗಳನ್ನೂ, ಧನವನ್ನೂ, ಪುಷ್ಕಳವಾದ ಕಾಮಗಳನ್ನೂ ಕೊಡುತ್ತಾನೆ.
ಸ ದದಾತಿ ಮನುಷ್ಯೇಭ್ಯಃ ಸ ಏವಾಕ್ಷಿಪತೇ ಪುನಃ |
ಶಕ್ರಾದಿಷು ಚ ದೇವೇಷು ತಸ್ಯ ಚೈಶ್ವರ್ಯಮುಚ್ಯತೇ ||27||
ಮನುಷ್ಯರಿಗೆ ಅವನೇ ಕೊಡುತ್ತಾನೆ, ಪುನಃ ಅವನೇ ನಾಶ ಮಾಡುತ್ತಾನೆ. ಇಂದ್ರಾದಿ ದೇವತೆಗಳಲ್ಲಿರುವ ಐಶ್ವರ್ಯವು ಅವನದೇ ಎಂದು ಹೇಳಲ್ಪಡುತ್ತದೆ.
ಸ ಏವಾಭ್ಯಧಿಕೋ ನಿತ್ಯಂ ತ್ರೈಲೋಕ್ಯಸ್ಯ ಶುಭಾಶುಭೇ |
ಐಶ್ವರ್ಯಾಚ್ಚೈವ ಕಾಮಾನಾಮೀಶ್ವರಃ ಪುನರುಚ್ಯತೇ ||28||
ಅವನೇ ಬಹಳ ಶ್ರೇಷ್ಠನಾದವನು. ಮೂರುಲೋಕಗಳ ಪ್ರಜೆಗಳಿಗೂ ಯಾವಾಗಲೂ ಶುಭಾಶುಭಗಳನ್ನು ಉಂಟುಮಾಡುವವನು. ಎಲ್ಲ ಕಾಮಗಳಿಗೆ ಪ್ರಭುವಾದ್ದರಿಂದ ಅವನನ್ನು ಈಶ್ವರನೆಂದು ಕರೆಯುತ್ತಾರೆ.
ಮಹೇಶ್ವರಶ್ಚ ಲೋಕಾನಾಂ ಮಹತಾಮೀಶ್ವರಶ್ಚ ಸಃ |
ಬಹುಭಿರ್ವಿವಿಧೈ ರೂಪೈರ್ವಿಶ್ವಂ ವ್ಯಾಪ್ತಮಿದಂ ಜಗತ್ |
ತಸ್ಯ ದೇವಸ್ಯ ಯದ್ ವಕ್ತ್ರಂ ಸಮುದ್ರೇ ವಡವಾಮುಖಮ್ ||29||
ಲೋಕಗಳಿಗೂ, ಮಹಾತ್ಮರಿಗೂ ಒಡೆಯನಾದ್ದರಿಂದ ಅವನು ಮಹೇಶ್ವರ. ಅವನ ಅನೇಕ ರೂಪಗಳಿಂದ ಈ ಜಗತ್ತು ವ್ಯಾಪ್ತವಾಗಿದೆ. ಆ ದೇವನ ಮುಖವು ಸಮುದ್ರದಲ್ಲಿ ವಡವಾಮುಖವಾಗಿದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಈಶ್ವರಪ್ರಶಂಸಾನಾಮ ಏಕೋನಪಂಚಾಶದುತ್ತರದ್ವಿಶತತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ನಲವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.

* * * * *
ಇನ್ನೂರ ಐವತ್ತನೆಯ ಅಧ್ಯಾಯ
ಧರ್ಮನಿರ್ಣಯ
ವೈಶಂಪಾಯನಃ
ಇತ್ಯುಕ್ತವತಿ ವಾಕ್ಯಂ ತು ಕೃಷ್ಣೇ ದೇವಕಿನಂದನೇ |
ಭೀಷ್ಮಂ ಶಾಂತನವಂ ಭೂಯಃ ಪರ್ಯಪೃಚ್ಛದ್ ಯುಧಿಷ್ಠಿರಃ ॥1॥
ವೈಶಂಪಾಯನ ದೇವಕೀನಂದನನಾದ ಕೃಷ್ಣನು ಹೀಗೆ ಮಾತನಾಡಿದ ಮೇಲೆ ಯುಧಿಷ್ಠಿರನು ಶಂತನು ಪುತ್ರರಾದ ಭೀಷ್ಮರನ್ನು ಪುನಃ ಪ್ರಶ್ನಿಸಿದನು.
ನಿರ್ಣಯೇ ವಾ ಮಹಾಬುದ್ಧೇ ಸರ್ವಧರ್ಮಭೃತಾಂವರ |
ಪ್ರತ್ಯಕ್ಷಂ ಚಾಗಮೋ ವಾಪಿ ಕಿಂ ತಯೋಃ ಕಾರಣಂ ಭವೇತ್ ॥2॥
ಮಹಾಬುದ್ಧಿಯೇ, ಸರ್ವಧರ್ಮಿಷ್ಠರಲ್ಲಿ ಶ್ರೇಷ್ಠನೇ, ಧರ್ಮವನ್ನು ನಿರ್ಣಯಿಸುವಲ್ಲಿ (ಅಥವಾ ತತ್ತ್ವವನ್ನು ನಿರ್ಣಯಿಸುವಲ್ಲಿ) ಪ್ರತ್ಯಕ್ಷ-ಆಗಮಗಳಲ್ಲಿ ಯಾವುದು ಕಾರಣವಾಗುತ್ತದೆ?
ಭೀಷ್ಮಃ
ನಾಸ್ತ್ಯತ್ರ ಸಂಶಯಃ ಕಶ್ಚಿದಿತಿ ಮೇ ವರ್ತತೇ ಮತಿಃ |
ಶೃಣು ವಕ್ಷ್ಯಾಮಿ ತೇ ಪ್ರಾಜ್ಞ ಸಮ್ಯಕ್ ತ್ವಮನುಪೃಚ್ಛಸಿ ॥3॥
ಭೀಷ್ಮ ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲವೆಂದು ನನ್ನ ಅಭಿಪ್ರಾಯ. ಪ್ರಾಜ್ಞನೇ, ಹೇಳುವೆನು, ಕೇಳು. ನಿನ್ನ ಪ್ರಶ್ನೆಯು ಬಹಳ ಸರಿಯಾಗಿದೆ.
ಸಂಶಯಃ ಸುಗಮೋ ರಾಜನ್ ನಿರ್ಣಯಸ್ತ್ವತ್ರ ದುರ್ಗಮಃ |
ದೃಷ್ಟಂ ಶ್ರುತಮನಂತಂ ಹಿ ಯತ್ರ ಸಂಶಯದರ್ಶನಮ್ ॥4॥
ದೃಷ್ಟವಾದ ಮತ್ತು ಶ್ರುತವಾದ, ಸಂಶಯಕ್ಕೆ ಎಡೆಮಾಡಿಕೊಡುವಂತಹ ವಿಷಯಗಳು ಅನಂತವಾಗಿವೆ. ರಾಜನೇ, ಅವುಗಳಲ್ಲಿ ಸಂಶಯವು ಸುಲಭವಾದುದು. ನಿರ್ಣಯವನ್ನು ಪಡೆಯುವುದು ಕಷ್ಟ.
ಪ್ರತ್ಯಕ್ಷಂ ಕಾರಣಂ ದೃಷ್ಟಂ ಹೇತುಕಾಃ ಪ್ರಾಜ್ಞಮಾನಿನಃ |
ನಾಸ್ತೀತ್ಯೇವಂ ವ್ಯವಸ್ಯಂತಿ ಸತ್ಯಂ ಸಂಶಯಮೇವ ಚ |
ತದಯುಕ್ತಂ ವ್ಯವಸ್ಯಂತಿ ಬಾಲಾಃ ಪಂಡಿತಮಾನಿನಃ ॥5॥
ಪ್ರತ್ಯಕ್ಷವು ಕಾರಣವೆಂದು ದೃಷ್ಟವಾಗಿದೆ. ತಮ್ಮನ್ನು ಪ್ರಾಜ್ಞರೆಂದು ತಿಳಿದುಕೊಂಡವರು ಮಾತ್ರ ಎಲ್ಲದಕ್ಕೂ ಹೇತುಗಳನ್ನು ಹುಡುಕಿ ಸತ್ಯವನ್ನೂ ಮತ್ತು ಆಗಮವನ್ನೂ ಅಲ್ಲಗಳೆಯುತ್ತಾರೆ. ಅದು ಸರಿಯಲ್ಲ. ತಮ್ಮನ್ನು ಪಂಡಿತರೆಂದು ತಿಳಿದುಕೊಳ್ಳುವ ಬಾಲಕರು ಹಾಗೆ ನಿರ್ಣಯಿಸುತ್ತಾರೆ.
ಅಥ ಚೇನ್ಮನ್ಯಸೇ ಚೈಕಂ ಕಾರಣಂ ಕಿಂ ಭವೇದಿತಿ |
ಶಕ್ಯಂ ದೀರ್ಘೇಣ ಕಾಲೇನ ಯುಕ್ತೇನಾತಂದ್ರಿತೇನ ಚ |
ಪ್ರಾಣಯಾತ್ರಾಮನೇಕಾಂ ಚ ಕಲ್ಪಯಾನೇನ ಭಾರತ ॥6॥
ಎಲೈ ಭಾರತನೇ, ಈ ಜಗತ್ತಿಗೆ ಕಾರಣವು ಯಾವುದು ಆದೀತು ಎಂದು ಚಿಂತಿಸುವುದಾದರೆ ದೀರ್ಘಕಾಲದಲ್ಲಿ ಆಲಸ್ಯವಿಲ್ಲದೆ ಅನೇಕ ರೀತಿಯಲ್ಲಿ ದೇಹಯಾತ್ರೆಯನ್ನು ನಿರ್ವಾಹ ಮಾಡುತ್ತಾ ಚಿಂತಿಸಬೇಕು.
ತತ್ಪರೇಣೈವ ನಾನ್ಯೇನ ಶಕ್ಯಂ ಹ್ಯೇತತ್ ತು ಕಾರಣಮ್ |
ಹೇತೂನಾಮಂತಮಾಸಾದ್ಯ ವಿಪುಲಂ ಜ್ಞಾನಮುತ್ತಮಮ್ |
ಜ್ಯೋತಿಃ ಸರ್ವಸ್ಯ ಲೋಕಸ್ಯ ವಿಪುಲಂ ಪ್ರತಿಪದ್ಯತೇ ॥7॥
ಅದರಲ್ಲಿಯೇ ನಿರತನಾದ ಪುರುಷನಿಂದ ಆ ಕಾರಣವನ್ನು ತಿಳಿಯಲು ಸಾಧ್ಯ. ಹೇತುಗಳ ಪರ್ಯವಸಾನವನ್ನು ಹೊಂದಿ ಆಗಮದಿಂದ ವಿಪುಲವಾದ, ಸರ್ವ ಲೋಕಪ್ರಕಾಶಕವಾದ ಜ್ಞಾನವನ್ನು ಹೊಂದುತ್ತಾನೆ.
ತತ್ತ್ವೇನಾಗಮನಂ ರಾಜನ್ ಹೇತ್ವಾಗಮನಂ ತಥಾ |
ಅಗ್ರಾಹ್ಯಮನಿಬದ್ಧಂ ಚ ವಾಚಾ ಸಂಪರಿವರ್ಜಯೇತ್ ॥8॥
ಎಲೈ ರಾಜನೇ, ತತ್ತ್ವನಿರ್ಣಯವು ಆಗಮದಿಂದ ಮತ್ತು ಅದಕ್ಕೆ ಅನುಕೂಲವಾದ ಹೇತುಗಳಿಂದ ಆಗುತ್ತದೆ. ಕೇವಲ ಹೇತುವು ಅಗ್ರಾಹ್ಯವಾದುದು. ಆಗಮ ಸಹಾಯವಿಲ್ಲದ ವಚನಗಳೂ ಸಹ ವರ್ಜನೀಯವಾದವುಗಳು.
ಯುಧಿಷ್ಠಿರಃ
ಪ್ರತ್ಯಕ್ಷಂ ಲೋಕತಃ ಸಿದ್ಧಂ ಲೋಕಾಶ್ಚಾಗಮಪೂರ್ವಕಾಃ |
ಶಿಷ್ಟಾಚಾರೋ ಬಹುವಿಧೋ ಬ್ರೂಹಿ ತನ್ಮೇ ಪಿತಾಮಹ ॥9॥
ಯುಧಿಷ್ಠಿರ ಲೋಕಸಿದ್ಧವಾದ ಪ್ರತ್ಯಕ್ಷ, ಆಗಮಪೂರ್ವಕವಾದ ಲೋಕಾಚಾರಗಳು ಮತ್ತು ಶಿಷ್ಟಾಚಾರ- ಇವು ಬಹುವಿಧವಾಗಿವೆ. ಪಿತಾಮಹನೇ, ಇವುಗಳಲ್ಲಿ ಯಾವುದರಿಂದ ಧರ್ಮನಿರ್ಣಯವೆಂದು ಹೇಳು.
ಭೀಷ್ಮಃ
ಧರ್ಮಸ್ಯ ಹ್ರಿಯಮಾಣಸ್ಯ ಬಲವದ್ಭಿರ್ದುರಾತ್ಮಭಿಃ |
ಸಂಸ್ಥಾ ಯತ್ನೈರಪಿ ಕೃತಾ ಕಾಲೇನ ಪರಿಭಿದ್ಯತೇ ॥10॥
ಭೀಷ್ಮ ಬಲಿಷ್ಠರಾದ ದುರಾತ್ಮರು ನಾಶಪಡಿಸುವ ಧರ್ಮವನ್ನು ಮಹಾತ್ಮರು ಪ್ರಯತ್ನಪೂರ್ವಕವಾಗಿ ಸ್ಥಾಪಿಸಿದರೂ ಅದು

ಕಾಲಕ್ರಮದಲ್ಲಿ ಭಿನ್ನವಾಗುತ್ತದೆ.
ಅಧರ್ಮಾ ಧರ್ಮರೂಪೇಣ ತೃಣೈಃ ಕೂಪಾ ಇವಾವೃತಾಃ |
ತತಸ್ತೈರ್ಭಿದ್ಯತೇ ವೃತ್ತಂ ಶೃಣು ಚೈವ ಯುಧಿಷ್ಠಿರ ||11||
ಯುಧಿಷ್ಠಿರನೇ, ತೃಣಗಳಿಂದ ಮುಚ್ಚಿದ ಕೂಪದಂತೆ ಅಧರ್ಮಗಳು ಧರ್ಮ ರೂಪವನ್ನು ಧರಿಸಿ ತೋರುತ್ತವೆ. ಆಗ ನಡತೆಯು ಭಿನ್ನವಾಗುತ್ತದೆ. ಅದನ್ನು ಕೇಳು.
ಅವೃತ್ತ್ಯಾ ಯೇ ಚ ಭಿಂದಂತಿ ಶ್ರುತತ್ಯಾಗಪರಾಯಣಾಃ |
ಧರ್ಮವಿದ್ವೇಷಿಣೋ ಮಂದಾ ಇತ್ಯುಕ್ತಾಸ್ತೇ ನ ಸಂಶಯಃ ||12||
ಯಾರು ಜೀವನೋಪಾಯವನ್ನು ಕಾಣದೆ ಶ್ರುತಿಗಳನ್ನು ನಿಂದಿಸಿ, ಶ್ರುತಿಗಳು ಹೇಳಿದುದನ್ನು ತ್ಯಜಿಸುವುದರಲ್ಲೇ ಆಸಕ್ತರಾಗಿರುತ್ತಾರೆಯೋ ಅವರನ್ನು ಧರ್ಮವಿದ್ವೇಷಿಗಳಾದ ಮಂದರು ಎಂದು ಕರೆಯುತ್ತಾರೆ. ಇದರಲ್ಲಿ ಸಂಶಯವಿಲ್ಲ.
ಅತೃಪ್ಯಂತಸ್ತು ಸಾಧೂನಾಂ ಯ ಏವಾಗಮಬುದ್ಧಯಃ |
ಪರಮಿತ್ಯೇವ ಸಂತುಷ್ಟಾಸ್ತಾನುಪಾಸ್ವ ಚ ಪೃಚ್ಛ ಚ ||13||
ಆಗಮವಿಮರ್ಶೆಯಲ್ಲೇ ಬುದ್ಧಿಯನ್ನು ಹೊಂದಿದ ಯಾರು ಸಜ್ಜನರ ಉಪದೇಶಗಳಲ್ಲಿ ತೃಪ್ತಿಯನ್ನು ಹೊಂದದೆ, ಪುನಃ ಪುನಃ ಅದೇ ಶ್ರೇಷ್ಠವೆಂದು ಸಂತುಷ್ಟರಾಗಿರುತ್ತಾರೆಯೋ ಅವರನ್ನು ಸೇವಿಸು ಮತ್ತು ಪ್ರಶ್ನೆಯನ್ನು ಮಾಡು.
ಕಾಮಾರ್ಥೌ ಪೃಷ್ಠತಃ ಕೃತ್ವಾ ಲೋಭಮೋಹಾನುಸಾರಿಣೌ |
ಧರ್ಮ ಇತ್ಯೇವ ಸಂಬುದ್ಧಾಸ್ತಾನುಪಾಸ್ವ ಚ ಪೃಚ್ಛ ಚ ||14||
ಲೋಭ-ಮೋಹಗಳಿಂದ ಅನುಸರಿಸಲ್ಪಡುವ ಕಾಮ ಮತ್ತು ಅರ್ಥರೂಪವಾದ ಪುರುಷಾರ್ಥಗಳನ್ನು ಹಿಂದೆ ತಳ್ಳಿ ಧರ್ಮವೇ ಶ್ರೇಷ್ಠವೆಂದು ಭಾವಿಸುವವರನ್ನು ಸೇವಿಸು ಮತ್ತು ಪ್ರಶ್ನೆ ಮಾಡು.
ನ ತೇಷಾಂ ಭಿದ್ಯತೇ ವೃತ್ತಂ ಯಜ್ಞಸ್ವಾಧ್ಯಾಯಕರ್ಮಭಿಃ |
ಆಚಾರಃ ಕಾರಣಂ ಚೈವ ಧರ್ಮಶ್ಚೈವ ತ್ರಯಂ ಪುನಃ ||15||
ಅಂತಹವರಿಗೆ, ಯಜ್ಞ-ಸ್ವಾಧ್ಯಾಯ ಮತ್ತು ಸತ್ಕರ್ಮಗಳಲ್ಲಿ ನಿರತರಾದ ಅವರ ನಡತೆಯು ಭಿನ್ನವಾಗಿರುವುದಿಲ್ಲ. ಅವರಿಗೆ ಶಿಷ್ಟಾಚಾರ, ಆಗಮ ಮತ್ತು ಪ್ರತ್ಯಕ್ಷ ಸಿದ್ಧವಾದ ಧರ್ಮ - ಈ ಮೂರೂ ಒಂದೇ ರೀತಿ ಇರುತ್ತವೆ.
ಯುಧಿಷ್ಠಿರಃ
ಪುನರೇವೇಹ ಮೇ ಬುದ್ಧಿಃ ಸಂಶಯೇ ಪರಿಮುಹ್ಯತೇ |
ಅಪಾರೇ ಮಾರ್ಗಮಾಣಸ್ಯ ಪರಂ ತೀರಮಪಶ್ಯತಃ ||16||
ವೇದಾಃ ಪ್ರತ್ಯಕ್ಷಮಾಚಾರಃ ಪ್ರಮಾಣಂ ತತ್ತ್ರಯಂ ಯದಿ |
ಪೃಥಕ್ತ್ವಂ ಲಭ್ಯತೇ ಚೈಷಾಂ ಧರ್ಮಶ್ಚೈಕಸ್ತ್ರಯಂ ಕಥಮ್ ||17||
ಯುಧಿಷ್ಠಿರ ದಡವಿಲ್ಲದ ಸಂಶಯಸಾಗರದಲ್ಲಿ ಆಚೆಯ ದಡವನ್ನು ಹುಡುಕುತ್ತಿರುವ ನನ್ನ ಬುದ್ಧಿಯು ಪುನಃ ಸಂಶಯವನ್ನು ಹೊಂದಿ ಮೋಹಕ್ಕೆ ಒಳಗಾಗುತ್ತದೆ. ವೇದಗಳು, ಪ್ರತ್ಯಕ್ಷ ಮತ್ತು ಶಿಷ್ಟಾಚಾರ-ಮೂರು ಪ್ರಮಾಣವಾಗುವುದಾದರೆ ಭಿನ್ನಭಿನ್ನವಾದ ಆ ಮೂರರಿಂದಲೂ ಪ್ರಾಪ್ತವಾದ ಧರ್ಮವು ಒಂದೇ ಆಗುವುದು ಹೇಗೆ?
ಭೀಷ್ಮಃ
ಧರ್ಮಸ್ಯ ಹ್ರಿಯಮಾಣಸ್ಯ ಬಲವದ್ಭಿರ್ದುರಾತ್ಮಭಿಃ |
ಯದ್ಯೇವಂ ಮನ್ಯಸೇ ರಾಜನ್ ತ್ರಿಧಾ ಧರ್ಮವಿಚಾರಣಾ ||18||
ಏಕ ಏವೇತಿ ಜಾನೀಹಿ ತ್ರಿಧಾ ತಸ್ಯ ಪ್ರದರ್ಶನಮ್ |
ಪೃಥಕ್ತ್ವೇ ಚೈವ ಮೇ ಬುದ್ಧಿಸ್ತ್ರಯಾಣಾಮಪಿ ವೈ ತಥಾ ||19||
ಭೀಷ್ಮ ಎಲೈ ರಾಜನೇ, ದುಷ್ಟರು ನಾಶಪಡಿಸುವ ಧರ್ಮವನ್ನು ನೋಡಿ ಧರ್ಮವು ಮೂರು ವಿಧವಾಗಿದೆ ಎಂದು ನೀನು ಚಿಂತಿಸುವುದಾದರೆ ಧರ್ಮವು ಒಂದೇ ಎಂದು ತಿಳಿ. ಅದು ಮೂರು ರೂಪಗಳಿಂದ ಕಾಣುತ್ತದೆ. ನೀನು ಭಿನ್ನ ಎಂದು ಹೇಳಿದ ವಿಷಯದಲ್ಲಿ ನನ್ನ ಬುದ್ಧಿಗೆ ಹೀಗೆ ತೋರುತ್ತದೆ.
ಉಕ್ತೋ ಮಾರ್ಗಸ್ತ್ರಯಾಣಾಂ ಚ ತತ್ತಥೈವ ಸಮಾಚರ |
ಜಿಜ್ಞಾಸಾ ತು ನ ಕರ್ತವ್ಯಾ ಧರ್ಮೇಣ ಪರತರ್ಕಿಣಾ ||20||
ಮೂರಾಗಿ ಕಾಣುವ ಬಗೆಯನ್ನು ನಿನಗೆ ಹೇಳಿದ್ದೇನೆ. ಅದನ್ನು ಹಾಗೆಯೇ ಆಚರಿಸು. ಧರ್ಮಾಚರಣೆಯ ವಿಷಯದಲ್ಲಿ ತರ್ಕವನ್ನು ಮಾಡಿ ವಿಚಾರವನ್ನು ಮಾಡಬಾರದು.
ಸದೈವ ಭರತಶ್ರೇಷ್ಠ ಮಾ ತೇ ಭೂದತ್ರ ಸಂಶಯಃ |
ಅಂಧೋ ಜಡ ಇವಾಶಂಕೋ ಯದ್ ಬ್ರವೀಮಿ ತದಾಚರ ||21||
ಎಲೈ ಭರತಶ್ರೇಷ್ಠನೇ, ಧರ್ಮದ ವಿಷಯದಲ್ಲಿ ನಿನಗೆ ಯಾವಾಗಲೂ ಸಂಶಯವಿರುವುದು ಬೇಡ. ಶಂಕೆಯನ್ನು ಬಿಟ್ಟು ನಾನು ಹೇಳುವುದನ್ನು ಅಂಧರಂತೆ, ಜಡರಂತೆ ಆಚರಿಸು.
ಅಹಿಂಸಾ ಸತ್ಯಮಕ್ರೋಧೋ ದಾನಮೇತಚ್ಚತುಷ್ಟಯಮ್ |
ಅಜಾತಶತ್ರೋ ಸೇವಸ್ವ ಧರ್ಮ ಏಷ ಸನಾತನಃ ||22||
ಎಲೈ ಅಜಾತಶತ್ರುವೇ, ಅಹಿಂಸೆ, ಸತ್ಯ, ಅಕ್ರೋಧ, ದಾನ - ಈ ನಾಲ್ಕನ್ನು ಸೇವಿಸು. ಇದು ಸನಾತನವಾದ ಧರ್ಮ.
ಬ್ರಾಹ್ಮಣೇಷು ಚ ವೃತ್ತಿರ್ಯಾ ಪಿತೃಪೈತಾಮಹೋಚಿತಾ |
ತಾಮನ್ವೇಹಿ ಮಹಾಬಾಹೋ ಸ್ವರ್ಗಸ್ಯೈತೇ ಹಿ ದೇಶಿಕಾಃ ||23||

ಎಲೈ ಮಹಾಬಾಹುವೇ, ಬ್ರಾಹ್ಮಣರ ವಿಷಯದಲ್ಲಿ ಪಿತೃ-ಪಿತಾಮಹರು ಹೇಗೆ ನಡೆದುಕೊಂಡರೋ ಆ ನಡತೆಯನ್ನು ನೀನು ಅನುಸರಿಸು. ಮಹಾಬಾಹುವೇ, ಅವರೇ ಸ್ವರ್ಗವನ್ನು ನೀಡುವವರು.
ಪ್ರಮಾಣಮಪ್ರಮಾಣಂ ವೈ ಯಃ ಕುರ್ಯಾದಬುಧೋ ನರಃ |
ನ ಸ ಪ್ರಮಾಣತಾಮರ್ಹೋ ವಿವಾದಜನನೋ ಹಿ ಸಃ ॥24॥
ಯಾವ ಅವಿವೇಕಿಯಾದ ಮನುಷ್ಯನು ಪ್ರಮಾಣವನ್ನು ಅಪ್ರಮಾಣವೆಂದು ಹೇಳುತ್ತಾನೆಯೋ ಅವನು ಪ್ರಾಮಾಣಿಕನಲ್ಲ. ಅವನು ವಿವಾದವನ್ನು ಸೃಷ್ಟಿ ಮಾಡುವವನು.
ಬ್ರಾಹ್ಮಣಾನೇವ ಸೇವಸ್ವ ಸತ್ಕೃತ್ಯ ಬಹುಮನ್ಯ ಚ |
ಏತೇಷ್ವೇವ ತ್ವಿಮೇ ಲೋಕಾಃ ಕೃತ್ಸ್ನಾ ಇತಿ ನಿಬೋಧ ತಾನ್ ॥25॥
ಬ್ರಾಹ್ಮಣರನ್ನೇ ಸತ್ಕರಿಸಿ ಬಹುಮಾನವನ್ನು ಮಾಡಿ ಸೇವಿಸು. ಈ ಎಲ್ಲ ಲೋಕಗಳು ಅವರನ್ನೇ ಅವಲಂಬಿಸಿವೆ ಎಂದು ಅವರನ್ನು ತಿಳಿಯುವವನಾಗು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಧರ್ಮಾಧರ್ಮವಿಚಾರೋ ನಾಮ ಪಂಚಾಶದುತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ತನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಐವತ್ತೊಂದನೆಯ ಅಧ್ಯಾಯ
ಧರ್ಮಿಷ್ಠರಿಗೆ ಮತ್ತು ಅಧರ್ಮಿಷ್ಠರಿಗೆ ಆಗುವ ಗತಿಯ ಕಥನ.
ಯುಧಿಷ್ಠಿರಃ
ಯೇ ಚ ಧರ್ಮಮಸೂಯಂತಿ ಯೇ ಚೈನಂ ಪರ್ಯುಪಾಸತೇ |
ಬ್ರವೀತು ಭಗವಾನೇತತ್ ಕ್ವ ತೇ ಗಚ್ಛಂತಿ ತಾದೃಶಾಃ॥1॥
ಯುಧಿಷ್ಠಿರ ಯಾರು ಧರ್ಮವನ್ನು ದ್ವೇಷಿಸುತ್ತಾರೆಯೋ ಮತ್ತು ಯಾರು ಧರ್ಮವನ್ನು ಪೂಜಿಸುತ್ತಾರೆಯೋ ಅಂತಹವರು ಎಲ್ಲಿಗೆ ಹೋಗುತ್ತಾರೆ ಎಂದು ಪೂಜ್ಯನಾದ ನೀನು ಹೇಳಬೇಕು.
ಭೀಷ್ಮಃ
ರಜಸಾ ತಮಸಾ ಚೈವ ಸಮವಸ್ತೀರ್ಣಚೇತಸಃ |
ನರಕಂ ಪ್ರತಿಪದ್ಯಂತೇ ಧರ್ಮವಿದ್ವೇಷಿಣೋ ನರಾಃ ॥2॥
ಭೀಷ್ಮ ಧರ್ಮದ್ವೇಷಿಗಳಾದ ಜನರು ರಜೋಗುಣ ಮತ್ತು ತಮೋಗುಣದಿಂದ ತುಂಬಿದ ಮನಸ್ಸುಳ್ಳವರಾಗಿ ನರಕಕ್ಕೆ ಹೋಗುತ್ತಾರೆ.
ಯೇ ತು ಧರ್ಮಂ ಮಹಾರಾಜ ಸತತಂ ಪರ್ಯುಪಾಸತೇ |
ಸತ್ಯಾರ್ಜವಪರಾಃ ಸಂತಸ್ತೇ ವೈ ಸ್ವರ್ಗಭುಜೋ ನರಾಃ ॥3॥
ಎಲೈ ಮಹಾರಾಜನೇ, ಯಾರು ಸತ್ಯ ಮತ್ತು ಆರ್ಜವಗಳಲ್ಲಿ ನಿರತರಾಗಿ ಸತತವಾಗಿ ಧರ್ಮವನ್ನು ಉಪಾಸನೆ ಮಾಡುತ್ತಾರೆಯೋ ಅಂತಹ ಸಜ್ಜನರು ಸ್ವರ್ಗ ಭೋಗವನ್ನು ಅನುಭವಿಸುತ್ತಾರೆ.
ಧರ್ಮ ಏವ ರತಿಸ್ತೇಷಾಮಾಚಾರ್ಯೋಪಾಸನಾದ್ ಭವೇತ್ |
ದೇವಲೋಕಂ ಪ್ರಪದ್ಯಂತೇ ಯೇ ಧರ್ಮಂ ಪರ್ಯುಪಾಸತೇ ॥4॥
ಗುರುಗಳ ಉಪಾಸನೆಯಿಂದ ಅವರಿಗೆ ಧರ್ಮದಲ್ಲೇ ರತಿಯುಂಟಾಗುತ್ತದೆ. ಧರ್ಮವನ್ನು ಚೆನ್ನಾಗಿ ಸೇವಿಸುವವರು ದೇವಲೋಕವನ್ನು ಹೊಂದುತ್ತಾರೆ.
ಮನುಷ್ಯಾ ಯದಿ ವಾ ದೇವಾಃ ಶರೀರಮುಪತಾಪ್ಯ ವೈ |
ಧರ್ಮಿಣಃ ಸುಖಮೇಧಂತೇ ಲೋಭದ್ವೇಷವಿವರ್ಜಿತಾಃ ॥5॥
ದೇವತೆಗಳಾಗಲೀ, ಮನುಷ್ಯರಾಗಲೀ ಲೋಭ-ದ್ವೇಷಗಳನ್ನು ಬಿಟ್ಟು ಶರೀರವನ್ನು ದಂಡಿಸಿ ಧರ್ಮಾಚರಣೆಯನ್ನು ಮಾಡಿದರೆ ಸುಖವನ್ನು ಹೊಂದುತ್ತಾರೆ.
ಪ್ರಥಮಂ ಬ್ರಹ್ಮಣಃ ಪುತ್ರಂ ಧರ್ಮಮಾಹುರ್ಮನೀಷಿಣಃ |
ಧರ್ಮಿಣಃ ಪರ್ಯುಪಾಸಂತೇ ಫಲಂ ಪಕ್ವಮಿವಾಶಿನಃ ॥6॥
ಜ್ಞಾನಿಗಳು ಧರ್ಮವನ್ನು ಬ್ರಹ್ಮನ ಪ್ರಥಮ ಪುತ್ರನೆಂದು ಹೇಳುತ್ತಾರೆ. ಹಸಿದವರು ಪಕ್ವಫಲವನ್ನು ಅಪೇಕ್ಷಿಸುವಂತೆ ಧರ್ಮಿಷ್ಠರು ಧರ್ಮವನ್ನು ಸೇವಿಸುತ್ತಾರೆ.
ಯುಧಿಷ್ಠಿರಃ
ಅಸತಾಂ ಕೀದೃಶಂ ರೂಪಂ ಸಾಧವಃ ಕಿಂ ಚ ಕುರ್ವತೇ |
ಬ್ರವೀತು ಮೇ ಭವಾನೇತತ್ ಸಂತೋಽಸಂತಶ್ಚ ಕೀದೃಶಾಃ ॥7॥
ಯುಧಿಷ್ಠಿರ ದುಷ್ಟರ ರೂಪವು ಹೇಗಿರುತ್ತದೆ? ಸಜ್ಜನರು ಏನು ಮಾಡುತ್ತಾರೆ? ಸಜ್ಜನರು, ಅಸಜ್ಜನರು ಹೇಗಿರುತ್ತಾರೆ ಎಂದು ನೀವು ನನಗೆ ಹೇಳಬೇಕು.
ಭೀಷ್ಮಃ
ದುರಾಚಾರಾಃ ದುರಾಧರ್ಷಾ ದುರ್ಮುಖಾಶ್ಚಾಪ್ಯಸಾಧವಃ |
ಸಾಧವಃ ಶೀಲಸಂಪನ್ನಾಃ ಶಿಷ್ಟಾಚಾರಸ್ಯ ಲಕ್ಷಣಮ್ ॥8॥

ಭೀಷ್ಮ ಅಸಜ್ಜನರು ದುರಾಚಾರಿಗಳೂ, ಮಾತಿಗೆ ಬಗ್ಗದವರೂ, ದುರ್ಮುಖರೂ ಆಗಿರುತ್ತಾರೆ. ಸಾಧುಗಳು ಶೀಲಸಂಪನ್ನರಾಗಿರುತ್ತಾರೆ. ಶಿಷ್ಟಾಚಾರವು ಅವರ ಲಕ್ಷಣ.
ರಾಜಮಾರ್ಗೇ ಗವಾಂ ಮಧ್ಯೇ ಗೋಷ್ಠಮಧ್ಯೇ ಚ ಧರ್ಮಿಣಃ |
ನೋಪಸೇವಂತಿ ರಾಜೇಂದ್ರ ಸರ್ಗಂ ಮೂತ್ರಪುರೀಷಯೋಃ ||9||
ಎಲೈ ರಾಜೇಂದ್ರನೇ, ರಾಜಮಾರ್ಗದಲ್ಲಿ, ಗೋವುಗಳ ಮಧ್ಯದಲ್ಲಿ ಅಥವಾ ಕೊಟ್ಟಿಗೆಯಲ್ಲಿ ಧರ್ಮಿಷ್ಠರಾದವರು ಮಲ-ಮೂತ್ರ ವಿಸರ್ಜನೆಯನ್ನು ಮಾಡುವುದಿಲ್ಲ.
ಪಂಚಾನಾಮಶನಂ ದತ್ತ್ವಾ ಶೇಷಮಶ್ನಂತಿ ಸಾಧವಃ |
ನ ಜಲ್ಪಂತಿ ಚ ಭುಂಜಾನಾ ನ ನಿದ್ರಾಂತ್ಯಾರ್ದ್ರಪಾಣಯಃ ||10||
ಸಜ್ಜನರು ದೇವ, ಪಿತೃ, ಭೂತ, ಅತಿಥಿ, ಪರಿವಾರಕ್ಕೆ ಅನ್ನವನ್ನು ನೀಡಿ ಉಳಿದುದನ್ನು ಸೇವಿಸುತ್ತಾರೆ. ಭೋಜನವನ್ನು ಮಾಡುವಾಗ ಮಾತನಾಡುವುದಿಲ್ಲ. ಒದ್ದೆಯಾದ ಪಾಣಿ-ಪಾದಗಳಿಂದ ನಿದ್ರೆಯನ್ನು ಮಾಡುವುದಿಲ್ಲ.
ಚಿತ್ರಭಾನುಮನಡ್ವಾಹಂ ದೇವಂ ಗೋಷ್ಠಂ ಚತುಷ್ಪಥಮ್ |
ಬ್ರಾಹ್ಮಣಂ ಧಾರ್ಮಿಕಂ ಚೈತ್ಯಂ ತೇ ಕುರ್ವಂತಿ ಪ್ರದಕ್ಷಿಣಮ್ ||11||
ಅಗ್ನಿ, ಎತ್ತು, ದೇವಪ್ರತಿಮೆ, ಕೊಟ್ಟಿಗೆ, ಚತುಷ್ಪಥ, ಧಾರ್ಮಿಕನಾದ ಬ್ರಾಹ್ಮಣ, ಪೂಜ್ಯವಾದ ಅಶ್ವತ್ಥಾದಿ ವೃಕ್ಷ - ಇವುಗಳ ಪ್ರದಕ್ಷಿಣೆಯನ್ನು ಮಾಡುತ್ತಾರೆ.
ವೃದ್ಧಾನಾಂ ಭಾರತಪ್ತಾನಾಂ ಸ್ತ್ರೀಣಾಂ ಬಾಲಾತುರಸ್ಯ ಚ |
ಬ್ರಾಹ್ಮಣಾನಾಂ ಗವಾಂ ರಾಜ್ಞಾಂ ಪಂಥಾನಂ ದದತೇ ಚ ತೇ ||12||
ವೃದ್ಧರಿಗೆ, ಭಾರವನ್ನು ಹೊತ್ತವರಿಗೆ, ಸ್ತ್ರೀಯರಿಗೆ, ಬಾಲಕರಿಗೆ, ರೋಗಿಗಳಿಗೆ, ಬ್ರಾಹ್ಮಣರಿಗೆ, ಗೋವುಗಳಿಗೆ ಮತ್ತು ರಾಜರಿಗೆ ಮಾರ್ಗವನ್ನು ಬಿಟ್ಟುಕೊಡುತ್ತಾರೆ.
ಅತಿಥೀನಾಂ ಚ ಸರ್ವೇಷಾಂ ಪ್ರೇಷ್ಯಾಣಾಂ ಸ್ವಜನಸ್ಯ ಚ |
ತಥಾ ಶರಣಕಾಮಾನಾಂ ಗೋಪ್ತಾ ಸ್ಯಾತ್ ಸ್ವಾಗತಪ್ರದಃ ||13||
ಎಲ್ಲ ಸೇವಕರನ್ನೂ, ಸ್ವಜನರನ್ನೂ, ಶರಣಾಗತರಾದವರನ್ನೂ ರಕ್ಷಿಸುತ್ತಾರೆ. ಅತಿಥಿಗಳನ್ನು ಸ್ವಾಗತಿಸುತ್ತಾರೆ.
ಸಾಯಂ ಪ್ರಾತರ್ಮನುಷ್ಯಾಣಾಮಶನಂ ದೇವನಿರ್ಮಿತಮ್ |
ನಾಂತರಾ ಭೋಜನಂ ದೃಷ್ಟಮುಪವಾಸವಿಧಿರ್ಹಿ ಸಃ ||14||
ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ಮನುಷ್ಯರಿಗೆ ಭೋಜನವು ದೇವತೆಗಳಿಂದ ನಿರ್ಮಿತವಾಗಿದೆ. ಮಧ್ಯದಲ್ಲಿ ಏನನ್ನೂ ತಿನ್ನಬಾರದು. ಅದು ಉಪವಾಸವಿಧಿಆಗುತ್ತದೆ.
ಹೋಮಕಾಲೇ ಯಥಾ ವಹ್ನಿಃ ಕಾಲಮೇವ ಪ್ರತೀಕ್ಷತೇ |
ಋತುಕಾಲೇ ತಥಾ ನಾರೀ ಋತುಮೇವ ಪ್ರತೀಕ್ಷತೇ |
ನ ಚಾನ್ಯಾಂ ಗಚ್ಛತೇ ಯಸ್ತು ಬ್ರಹ್ಮಚರ್ಯಂ ಹಿ ತತ್ಸ್ಮೃತಮ್ ||15||
ಹೋಮಕಾಲದಲ್ಲಿ ವಹ್ನಿಯು ಹೋಮಕಾಲವನ್ನೇ ನಿರೀಕ್ಷಿಸುವಂತೆ ಋತುಕಾಲದಲ್ಲಿ ನಾರಿಯು ಋತುವನ್ನೇ ನಿರೀಕ್ಷಿಸುತ್ತಾಳೆ. ಆ ಕಾಲದಲ್ಲಿ ಬೇರೆಯವರ ಬಳಿಗೆ ಹೋಗದಿದ್ದರೆ ಅದಕ್ಕೆ ಬ್ರಹ್ಮಚರ್ಯವೆಂದು ಹೇಳುತ್ತಾರೆ.
ಅಮೃತಂ ಬ್ರಾಹ್ಮಣಾ ಗಾವ ಇತ್ಯೇತತ್ ತ್ರಯಮೇಕತಃ |
ತಸ್ಮಾದ್ ಗೋಬ್ರಾಹ್ಮಣಂ ನಿತ್ಯಮರ್ಚಯೇತ ಯಥಾವಿಧಿ ||16||
ಅಮೃತ, ಬ್ರಾಹ್ಮಣರು ಮತ್ತು ಗೋವುಗಳು- ಇವೆಲ್ಲವೂ ಒಂದೇ ಗುಂಪಿಗೆ ಸೇರಿದವುಗಳು. ಆದ್ದರಿಂದ ಗೋವುಗಳನ್ನು ಮತ್ತು ಬ್ರಾಹ್ಮಣರನ್ನು ನಿತ್ಯವೂ ವಿಧಿಗೆ ಅನುಗುಣವಾಗಿ ರಕ್ಷಿಸಬೇಕು.
ಯಜುಷಾ ಸಂಸ್ಕೃತಂ ಮಾಂಸಮುಪಭುಂಜನ್ ನ ದುಷ್ಯತಿ |
ಪೃಷ್ಠಮಾಂಸಂ ವೃಥಾಮಾಂಸಂ ಪುತ್ರಮಾಂಸಂ ಚ ತತ್ಸಮಮ್ ||17||
ಮಂತ್ರಗಳಿಂದ ಯಜುರ್ವೇದದ ಸಂಸ್ಕೃತವಾದ (ಯಜ್ಞಶೇಷವಾದ) ಮಾಂಸಗಳನ್ನು ಭುಂಜಿಸುವವನು ದೋಷಿಯಾಗುವುದಿಲ್ಲ. ಪೃಷ್ಠಮಾಂಸ, ವ್ಯರ್ಥವಾದ ಮಾಂಸಗಳು ಪುತ್ರಮಾಂಸಕ್ಕೆ ಸಮಾನವಾದುದು.
ಸ್ವದೇಶೇ ಪರದೇಶೇ ವಾಪ್ಯತಿಥಿಂ ನೋಪವಾಸಯೇತ್ |
ಕರ್ಮ ವೈ ಸಫಲಂ ಕೃತ್ವಾ ಗುರೂಣಾಮಭಿವಾದಯೇತ್ ||18||
ಸ್ವದೇಶದಲ್ಲಾಗಲೀ, ಪರದೇಶದಲ್ಲಾಗಲೀ ಅತಿಥಿಯು ಉಪವಾಸವನ್ನು ಮಾಡುವಂತೆ ಮಾಡಬಾರದು. ಕರ್ಮವನ್ನು ಪೂರ್ಣವಾಗಿ ಮುಗಿಸಿ ಗುರುಗಳಿಗೆ ನಮಸ್ಕಾರವನ್ನು ಮಾಡಿ ಅದನ್ನು ನಿವೇದಿಸಬೇಕು.
ಗುರುಭ್ಯ ಆಸನಂ ದೇಯಮಭಿವಾದ್ಯಾಭಿಪೂಜ್ಯ ಚ |
ಗುರೂನಭ್ಯರ್ಚ್ಯ ವರ್ಧಂತೇ ಆಯುಷಾ ಯಶಸಾ ಶ್ರಿಯಾ ||19||
ಗುರುಗಳಿಗೆ ನಮಸ್ಕಾರವನ್ನು ಮಾಡಿ ಸತ್ಕರಿಸಿ ಆಸನವನ್ನು ಕೊಡಬೇಕು. ಗುರುಗಳ ಪೂಜೆಯಿಂದ ಆಯುಸ್ಸು, ಕೀರ್ತಿ ಮತ್ತು ಸಂಪತ್ತು ಹೆಚ್ಚಾಗುತ್ತವೆ.
ವೃದ್ಧಾನ್ ನಾತಿವದೇಜ್ಜಾತು ನ ಚ ಸಂಪ್ರೇಷಯೇದಪಿ |
ನಾಸೀನಃ ಸ್ಯಾತ್ ಸ್ಥಿತೇಷ್ವೇವಮಾಯುರಸ್ಯ ನ ರಿಷ್ಯತೇ ||20||
ವೃದ್ಧರನ್ನು ಮೀರಿ ಮಾತನಾಡಬಾರದು. ಅವರನ್ನು ತನ್ನ ಯಾವ ಕಾರ್ಯದಲ್ಲಿಯೂ ತೊಡಗಿಸಬಾರದು. ಅವರು ನಿಂತಿರುವಾಗ ತಾನು ಕುಳಿತುಕೊಳ್ಳಬಾರದು. ಹಾಗೆ ಮಾಡಿದರೆ ಅವನ ಆಯುಸ್ಸು ಕ್ಷೀಣವಾಗುತ್ತದೆ.

ನ ನಗ್ನಾಮೀಕ್ಷತೇ ನಾರೀಂ ನ ವಿದ್ವಾನ್ ಪುರುಷಾನಪಿ |
ಮೈಥುನಂ ಸತತಂ ಗುಪ್ತಮಾಹಾರಂ ಚ ಸಮಾಚರೇತ್ ॥21॥
ವಿದ್ವಾಂಸನಾದವನು ನಗ್ನಳಾದ ಸ್ತ್ರೀಯನ್ನಾಗಲೀ, ನಗ್ನನಾದ ಪುರುಷನನ್ನಾಗಲೀ ನೋಡು (ನೋಡಬಾರದು)ವುದಿಲ್ಲ. ಮೈಥುನ ಮತ್ತು ಭೋಜನಗಳನ್ನು ರಹಸ್ಯವಾಗಿಯೇ ಮಾಡಬೇಕು.
ತೀರ್ಥಾನಾಂ ಗುರವಸ್ತೀರ್ಥಂ ಶುಚೀನಾಂ ಹೃದಯಂ ಶುಚಿ |
ದರ್ಶನಾನಾಂ ಪರಂ ಜ್ಞಾನಂ ಸಂತೋಷಃ ಪರಮಂ ಸುಖಮ್ ॥22॥
ಗುರುಗಳು ತೀರ್ಥಗಳಿಗೆ ತೀರ್ಥರಾದವರು. ಸಜ್ಜನರ ಹೃದಯವು ಶುಚಿಯಾದುದು. ಇಂದ್ರಿಯಜನ್ಯವಾದುದರಲ್ಲಿ ಜ್ಞಾನವು ಶ್ರೇಷ್ಠವಾದುದು. ಸಂತೋಷವು ಪರಮ ಸುಖ.
ಸಾಯಂ ಪ್ರಾತಶ್ಚ ವೃದ್ಧಾನಾಂ ಶೃಣುಯಾತ್ ಪುಷ್ಕಳಾ ಗಿರಃ |
ಶ್ರುತಮಾಪ್ನೋತಿ ಹಿ ನರಃ ಸತತಂ ವೃದ್ಧಸೇವಯಾ ॥23॥
ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿ ಹಿರಿಯರ ಮಾತುಗಳನ್ನು ಬಹಳವಾಗಿ ಕೇಳಬೇಕು. ಹೀಗೆ ವೃದ್ಧರನ್ನು ಸೇವಿಸುವುದರಿಂದ ಮನುಷ್ಯನು ಜ್ಞಾನವನ್ನು ಪಡೆಯುತ್ತಾನೆ.
ಸ್ವಾಧ್ಯಾಯೇ ಭೋಜನೇ ಚೈವ ದಕ್ಷಿಣಂ ಪಾಣಿಮುದ್ಧರೇತ್ |
ಯಚ್ಛೇದ್ವಾಙ್ಮನಸೀ ನಿತ್ಯಮಿಂದ್ರಿಯಾಣಿ ತಥೈವ ಚ ॥24॥
ಸ್ವಾಧ್ಯಾಯದಲ್ಲಿ ಮತ್ತು ಭೋಜನದಲ್ಲಿ ಬಲಗೈಯನ್ನು ಎತ್ತಬೇಕು. ನಿತ್ಯವೂ ಮಾತನ್ನು, ಮನಸ್ಸನ್ನು, ಇಂದ್ರಿಯಗಳನ್ನು ನಿಯಂತ್ರಿಸಬೇಕು.
ಸಂಸ್ಕೃತಂ ಪಾಯಸಂ ನಿತ್ಯಂ ಯವಾಗೂಂ ಕೃಸರಂ ಹವಿಃ |
ಅಷ್ಟಕಾಃ ಪಿತೃದೈವತ್ಯಾ ವೃದ್ಧಾನಾಮಭಿಪೂಜನಮ್ ॥25॥
ಶ್ಮಶ್ರುಕರ್ಮಣಿ ಮಂಗಲ್ಯಂ ಕ್ಷುತಾನಾಮಭಿನಂದನಮ್ |
ವ್ಯಾಧಿತಾನಾಂ ಚ ಸರ್ವೇಷಾಮಾಯುಷಃ ಪ್ರತಿನಂದನಮ್ ॥26॥
ಸಂಸ್ಕೃತವಾದ ಪಾಯಸ, ಗಂಜಿ, ಯವಾನ್ನ, ಹವಿಸ್ಸು, ಪಿತೃದೈವತವಾದ ಅಷ್ಟಕ ಶ್ರಾದ್ಧಗಳು, ವೃದ್ಧರ ಪೂಜೆ, ಶ್ಮಶ್ರುಕರ್ಮದಲ್ಲಿ ಮಾಂಗಲ್ಯ, ಸೀನಿದವರಿಗೆ ಆಶೀರ್ವಾದವನ್ನು ಮಾಡುವುದು, ರೋಗಗ್ರಸ್ತರಿಗೆ ಹಿತವನ್ನು ಬಯಸುವುದು, ಎಲ್ಲರಿಗೂ ಆಯುರ್ವೃದ್ಧಿಯನ್ನು ಬಯಸುವುದು - ಇವು ಎಲ್ಲರಿಗೂ ಆಯುಸ್ಸನ್ನು ಹೆಚ್ಚಿಸುತ್ತವೆ.
ನ ಜಾತು ತ್ವಮಿತಿ ಬ್ರೂಯಾದಾಪನ್ನೋಽಪಿ ಮಹತ್ತರಮ್ |
ಅಹಂಕಾರೋ ವಧೋ ವಾಪಿ ವಿದ್ವತ್ಸು ನ ವಿಶಿಷ್ಯತೇ |
ಅವರಾಣಾಂ ಸಮಾನಾನಾಂ ಶಿಷ್ಯಾಣಾಂ ಚ ಸಮಾಚರೇತ್ ॥27॥
ದೊಡ್ಡ ಆಪತ್ತಿಗೆ ಸಿಕ್ಕಿದರೂ ಹಿರಿಯರನ್ನು ನೀನು ಎಂದು ಸಂಬೋಧಿಸಬಾರದು. ಜ್ಞಾನಿಗಳ ಎದುರಿಗೆ ತೋರಿಸುವ ಅಹಂಕಾರವು ಅವರ ವಧೆಗಿಂತ ಭಿನ್ನವಲ್ಲ. ತನಗಿಂತ ಅಧಮರನ್ನು, ತನ್ನ ಸಮಾನರನ್ನು ಮತ್ತು ಶಿಷ್ಯರನ್ನು ಚೆನ್ನಾಗಿ ನೋಡಿಕೊಳ್ಳಬೇಕು.
ಪಾಪಮಾಚಕ್ಷತೇ ನಿತ್ಯಂ ಹೃದಯಂ ಪಾಪಕರ್ಮಿಣಾಮ್ |
ಜ್ಞಾನಪೂರ್ವಂ ವಿನಶ್ಯಂತಿ ಗೂಹಮಾನಾ ಮಹಾಜನೇ ॥28॥
ಪಾಪಕರ್ಮವನ್ನು ಮಾಡುವವರ ಹೃದಯವು ಯಾವಾಗಲೂ ಪಾಪವನ್ನೇ ಹೇಳುತ್ತದೆ. ಮಹಾಜನರ ಎದುರಿನಲ್ಲಿ ಅದನ್ನು ಮುಚ್ಚಿಡುವವರು ಅವರ ಜ್ಞಾನದ ಜೊತೆಯಲ್ಲೇ ನಾಶವನ್ನು ಹೊಂದುತ್ತಾರೆ.
ಜ್ಞಾನಪೂರ್ವಂ ಕೃತಂ ಕರ್ಮ ಚ್ಛಾದಯಂತೇ ಹ್ಯಸಾಧವಃ |
ನ ಮಾಂ ಮನುಷ್ಯಾಃ ಪಶ್ಯಂತಿ ನ ಮಾಂ ಪಶ್ಯಂತಿ ದೇವತಾಃ |
ಪಾಪೇನಾಭಿಹತಃ ಪಾಪಃ ತಥಾ ಸದ್ಯಃ ಪ್ರಣಶ್ಯತಿ ॥29॥
ಅಸಜ್ಜನರು ನನ್ನನ್ನು ಮನುಷ್ಯರು ನೋಡುತ್ತಿಲ್ಲ, ದೇವತೆಗಳೂ ನೋಡುತ್ತಿಲ್ಲ ಎಂದು ತಿಳಿದು ಬುದ್ಧಿಪೂರ್ವಕವಾಗಿ ದುಷ್ಕರ್ಮವನ್ನು ಮಾಡಿ, ಅದನ್ನು ಮುಚ್ಚಿಡುತ್ತಾರೆ. ಅಂತಹವರು ಪಾಪದ ಪ್ರಹಾರಕ್ಕೆ ಸಿಲುಕಿ ತಕ್ಷಣದಲ್ಲೇ ನಾಶವನ್ನು ಹೊಂದುತ್ತಾರೆ.
ಯಥಾ ವಾರ್ಧುಷಿಕೋ ವೃದ್ಧಿಂ ದೇಹಭೇದೇ ಪ್ರತೀಕ್ಷತೇ |
ಧರ್ಮೇಣಾಪಿಹಿತಂ ಪಾಪಂ ಧರ್ಮಮೇವಾಭಿವರ್ಧಯೇತ್ ॥30॥
ಬಡ್ಡಿಯಿಂದ ಜೀವಿಸುವ ಮನುಷ್ಯನು ದೇಹಾಂತರದಲ್ಲಿಯೂ ಬಡ್ಡಿಯನ್ನೇ ನಿರೀಕ್ಷಿಸುವಂತೆ ಪಾಪವು ಧರ್ಮಾಚರಣೆಯಿಂದ ನಾಶಮಾಡಲ್ಪಟ್ಟರೆ ಆ ಧರ್ಮಾಚರಣೆಯು ಧರ್ಮಾಚರಣೆಯನ್ನೇ ಹೆಚ್ಚಿಸುತ್ತದೆ.
ಯಥಾ ಲವಣಮಂಭೋಭಿರಾಪ್ಲುತಂ ಪ್ರವಿಲೀಯತೇ |
ಪ್ರಾಯಶ್ಚಿತ್ತಹತಂ ಪಾಪಂ ತಥಾ ಸದ್ಯಃ ಪ್ರಣಶ್ಯತಿ ॥31॥
ನೀರಿನಲ್ಲಿ ಹಾಕಿದ ಉಪ್ಪು ಕರಗಿ ಹೋಗುವಂತೆ ಪ್ರಾಯಶ್ಚಿತ್ತದಿಂದ ಹತವಾದ ಪಾಪವು ತಕ್ಷಣದಲ್ಲಿಯೇ ನಾಶವನ್ನು ಹೊಂದುತ್ತದೆ.
ತಸ್ಮಾತ್ ಪಾಪಂ ನ ಗೂಹೇತ ಗೂಹಮಾನಂ ವಿವರ್ಧತೇ |
ಕೃತ್ವಾ ತು ಸಾಧುಷ್ವಾಖ್ಯೇಯಂ ತೇ ತತ್ಪ್ರಶಮಯಂತ್ಯುತ ॥32॥
ಆದ್ದರಿಂದ ಪಾಪವನ್ನು ಮುಚ್ಚಿಡಬಾರದು. ಮುಚ್ಚಿದಷ್ಟೂ ಅದು ಹೆಚ್ಚಾಗುತ್ತದೆ. ಪಾಪವನ್ನು ಮಾಡಿದರೆ ಸಜ್ಜನರಿಗೆ ಹೇಳಬೇಕು. ಸಜ್ಜನರು ಆ ಪಾಪವನ್ನು ಪರಿಹರಿಸುತ್ತಾರೆ.
ಆಶಯಾ ಸಂಚಿತಂ ದ್ರವ್ಯಂ ಯತ್ ಕಾಲೇ ನೋಪಭುಜ್ಯತೇ |

ಅನ್ಯೇ ಚೈತತ್ ಪ್ರಪದ್ಯಂತೇ ವಿಯೋಗೇ ತಸ್ಯ ದೇಹಿನಃ ॥33॥
ಆಸೆಯಿಂದ ಕೂಡಿಟ್ಟ ಹಣವನ್ನು ಯೋಗ್ಯವಾದ ಕಾಲದಲ್ಲಿ ಭೋಗಿಸದಿದ್ದರೆ ಅವನು ಮರಣವನ್ನು ಹೊಂದಿದ ಮೇಲೆ ಉಳಿದವರು ಅದನ್ನು ಭೋಗಿಸುತ್ತಾರೆ.
ಮಾನಸಂ ಸರ್ವಭೂತಾನಾಂ ಧರ್ಮಮಾಹುರ್ಮನೀಷಿಣಃ |
ತಸ್ಮಾತ್ ಸರ್ವಾಣಿ ಭೂತಾನಿ ಧರ್ಮಮೇವ ಸಮಾಸತೇ ॥34॥
ಎಲ್ಲ ಪ್ರಾಣಿಗಳ ಮನಸ್ಸೂ ಧರ್ಮರೂಪವಾದುದೆಂದು ಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಎಲ್ಲ ಪ್ರಾಣಿಗಳೂ ಧರ್ಮವನ್ನೇ ಆಶ್ರಯಿಸುತ್ತವೆ.
ಏಕ ಏವ ಚರೇದ್ ಧರ್ಮಂ ನ ಧರ್ಮಧ್ವಜಿಕೋ ಭವೇತ್ |
ಧರ್ಮವಾಣಿಜಕಾ ಹ್ಯೇತೇ ಯೇ ಧರ್ಮಮುಪಭುಂಜತೇ ॥35॥
ಧರ್ಮವನ್ನು ಒಬ್ಬನೇ ಆಚರಿಸಬೇಕು. ತೋರಿಕೆಗಾಗಿ ಧರ್ಮವನ್ನು ಆಚರಿಸಬಾರದು. ಧರ್ಮದಿಂದ ಜೀವಿಸುವವರು ಧರ್ಮವನ್ನು ವ್ಯಾಪಾರ ಮಾಡುವವರು ಎಂದು ಹೇಳಲ್ಪಡುತ್ತಾರೆ.
ಸರ್ವಥೈವ ನಡಂಭೇನ ಸೇವೇತಾಮಾಯಯಾ ಗುರೂನ್ |
ನಿಧಿಂ ನಿದಧ್ಯಾತ್ ಪಾರತ್ರ್ಯಂ ಯಾತ್ರಾರ್ಥಂ ದಾನಶೇಷಿತಮ್ ॥36॥
ಕಪಟವಿಲ್ಲದೆ, ಡಂಭವಿಲ್ಲದೆ ಸರ್ವರೀತಿಯಿಂದಲೂ ಗುರುಗಳನ್ನು ಸೇವಿಸಬೇಕು. ದಾನವನ್ನು ಮಾಡಿ ಉಳಿದ ಹಣದಿಂದ ಜೀವನವನ್ನು ಮಾಡುವವನು ಪರಲೋಕಕ್ಕಾಗಿ ನಿಧಿಯನ್ನು ಸ್ಥಾಪಿಸಿಕೊಳ್ಳುತ್ತಾನೆ (ಲಕ್ಷ್ಯಾಲಂಕಾರ).
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಧರ್ಮಸ್ವರೂಪವಿಚಾರಕಥನಂ ನಾಮ ಏಕಪಂಚಾಶದುತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಐವತ್ತೆರಡನೆಯ ಅಧ್ಯಾಯ
ಅದೃಷ್ಟದ ಪ್ರಾಬಲ್ಯಕಥನ.
ಯುಧಿಷ್ಠಿರಃ
ನಾಭಾಗಧೇಯಃ ಪ್ರಾಪ್ನೋತಿ ಧನಂ ಸುಬಲವಾನಪಿ |
ಭಾಗಧೇಯಾನ್ವಿತಸ್ತ್ವರ್ಥಾನ್ ಕೃಶೋ ಬಾಲಶ್ಚ ವಿಂದತಿ ॥1॥
ಯುಧಿಷ್ಠಿರ ಅದೃಷ್ಟವಿಲ್ಲದವನು ಎಷ್ಟು ಬಲಿಷ್ಠನಾದರೂ ಧನವನ್ನು ಪಡೆಯುವುದಿಲ್ಲ. ಭಾಗಧೇಯಾನ್ವಿತನಾದವನು (ಅದೃಷ್ಟವನ್ನು ಹೊಂದಿದವನು) ಕೃಶನಾಗಿದ್ದರೂ, ಬಾಲನಾಗಿದ್ದರೂ ಎಲ್ಲವನ್ನೂ ಪಡೆಯುತ್ತಾನೆ.
ನಾಲಾಭಕಾಲೇ ಲಭತೇ ಪ್ರಯತ್ನೇಽಪಿ ಕೃತೇ ಸತಿ |
ಲಾಭಕಾಲೇಽಪ್ರಯತ್ನೇನ ಲಭತೇ ವಿಪುಲಂ ಧನಮ್ |
ಕೃತಯತ್ನಾಫಲಾಶ್ಚೈವ ದೃಶ್ಯಂತೇ ಶತಶೋ ನರಾಃ ॥2॥
ಪ್ರಯತ್ನವನ್ನು ಮಾಡಿದರೂ ಅಲಾಭಕಾಲದಲ್ಲಿ ಮನುಷ್ಯನು ಏನನ್ನೂ ಪಡೆಯುವುದಿಲ್ಲ. ಲಾಭಕಾಲದಲ್ಲಿ ಪ್ರಯತ್ನವನ್ನು ಮಾಡದಿದ್ದರೂ ವಿಪುಲವಾದ ಧನವನ್ನು ಪಡೆಯುತ್ತಾನೆ. ಪ್ರಯತ್ನವನ್ನು ಮಾಡಿ ಫಲವನ್ನು ಪಡೆಯದ ಮನುಷ್ಯರು ನೂರಾರು ಸಂಖ್ಯೆಯಲ್ಲಿ ಕಂಡುಬರುತ್ತಾರೆ.
ಯದಿ ಯತ್ನೋ ಭವೇನ್ಮರ್ತ್ಯಃ ಸ ಸರ್ವಂ ಫಲಮಾಪ್ನುಯಾತ್ |
ನಾಲಭ್ಯಂ ಚೋಪಲಭ್ಯೇತ ನೃಣಾಂ ಭರತಸತ್ತಮ ॥3॥
ಮನುಷ್ಯನು ತನ್ನ ಪ್ರಯತ್ನದಿಂದಲೇ ಎಲ್ಲವನ್ನು ಪಡೆಯುವುದಾಗಿದ್ದರೆ ಅವನು ಎಲ್ಲ ಫಲವನ್ನೂ ಪಡೆಯಬೇಕಾಗಿದ್ದಿತು. ಎಲೈ ಭರತಸತ್ತಮನೇ, ಮನುಷ್ಯರಿಗೆ ಅಲಭ್ಯವಾದುದು ಯಾವುದೂ ಇರಬಾರದಾಗಿದ್ದಿತು.
ಯದಾ ಪ್ರಯತ್ನಂ ಕೃತವಾನ್ ದೃಶ್ಯತೇ ಹ್ಯಫಲೋ ನರಃ |
ಮಾರ್ಗನ್ ನಯಶತೈರರ್ಥಾನಮಾರ್ಗಂಶ್ಚಾಪರಃ ಸುಖೀ ॥4॥
ಒಬ್ಬ ಮನುಷ್ಯನು ಪ್ರಯತ್ನವನ್ನು ಮಾಡಿ ನೂರು ರೀತಿಗಳಿಂದ ಅನ್ವೇಷಣೆ ಮಾಡಿದರೂ ಫಲರಹಿತನಾಗಿರುವುದು ಕಂಡುಬರುತ್ತದೆ. ಇನ್ನೊಬ್ಬನು ಯಾವ ಮಾರ್ಗವನ್ನೂ ಹುಡುಕದೆ ಸುಖವನ್ನು ಹೊಂದುತ್ತಾನೆ.
ಅಕಾರ್ಯಮಸಕೃತ್ಕೃತ್ವಾ ದೃಶ್ಯಂತೇ ಹ್ಯಧನಾ ನರಾಃ |
ಧನಯುಕ್ತಾಸ್ತ್ವಧರ್ಮಸ್ಥಾ ದೃಶ್ಯಂತೇ ಚಾಪರೇ ಜನಾಃ ॥5॥
ಅನೇಕ ಅಕಾರ್ಯಗಳನ್ನು ಮಾಡಿದರೂ ನಿರ್ಧನರಾದ ಮನುಷ್ಯರು ಕಂಡುಬರುತ್ತಾರೆ. ಇನ್ನು ಕೆಲವರು ಅಧರ್ಮಿಷ್ಠರಾಗಿ ಧನಯುಕ್ತರಾಗಿರುವುದು ಕಂಡುಬರುತ್ತದೆ.
ಅಧೀತ್ಯ ನೀತಿಂ ಯಸ್ಮಾಚ್ಚ ನೀತಿಯುಕ್ತೋ ನ ದೃಶ್ಯತೇ |
ಅನಭಿಜ್ಞಶ್ಚ ಸಾಚಿವ್ಯಂ ಗಮಿತಃ ಕೇನ ಹೇತುನಾ |
ವಿದ್ಯಾಯುಕ್ತೋ ಹ್ಯವಿದ್ಯಶ್ಚ ಧನವಾನ್ ದುರ್ಗತಸ್ತಥಾ ॥6॥
ನೀತಿಶಾಸ್ತ್ರವನ್ನು ಅಧ್ಯಯನ ಮಾಡಿದರೂ ನೀತಿಯುಕ್ತನಾಗಿರುವುದು ಕಂಡುಬರುವುದಿಲ್ಲ. ಯಾವ ವಿದ್ಯೆಯೂ ಇಲ್ಲದವನು ಯಾವ ಕಾರಣದಿಂದ ಸಚಿವ ಸ್ಥಾನವನ್ನು ಅಲಂಕರಿಸುತ್ತಾನೆ! ವಿದ್ಯಾಯುಕ್ತನಾದವನು ದರಿದ್ರನಾಗುತ್ತಾನೆ. ವಿದ್ಯಾಹೀನನಾದವನು

ಧನವಂತನಾಗುತ್ತಾನೆ.
ಯದಿ ವಿದ್ಯಾಮುಪಾಶ್ರಿತ್ಯ ನರಃ ಸುಖಮವಾಪ್ನುಯಾತ್ |
ನ ವಿದ್ವಾನ್ ವಿದ್ಯಯಾ ಹೀನಂ ವೃತ್ತ್ಯರ್ಥಮುಪಸಂಶ್ರಯೇತ್ ॥7॥
ವಿದ್ಯೆಯನ್ನು ಸಂಪಾದಿಸಿದ ಮನುಷ್ಯನು ಸುಖವನ್ನು ಹೊಂದುವುದಾಗಿದ್ದರೆ ವಿದ್ಯಾವಂತನು ಜೀವನೋಪಾಯಕ್ಕಾಗಿ ಅವಿದ್ಯಾವಂತನನ್ನು ಆಶ್ರಯಿಸುತ್ತಿರಲಿಲ್ಲ.
ಯಥಾ ಪಿಪಾಸಾಂ ಜಯತಿ ಪುರುಷಃ ಪ್ರಾಪ್ಯ ವೈ ಜಲಮ್ |
ದೃಷ್ಟಾರ್ಥೋ ವಿದ್ಯಯಾಽಪ್ಯೇವಮವಿದ್ಯಾಂ ಪ್ರಜಹೇನ್ನರಃ ॥8॥
ಜಲವನ್ನು ಪಡೆದ ಪುರುಷನು ಬಾಯಾರಿಕೆಯನ್ನು ಜಯಿಸಿದಂತೆ ವಿದ್ಯೆಯಿಂದ ತತ್ತ್ವಜ್ಞಾನವನ್ನು ಪಡೆದವನು ಅವಿದ್ಯೆಯನ್ನು ತ್ಯಜಿಸುತ್ತಾನೆ.
ನಾಪ್ರಾಪ್ತಕಾಲೋ ಮ್ರಿಯತೇ ವಿದ್ಧಃ ಶರಶತೈರಪಿ |
ತೃಣಾಗ್ರೇಣಾಪಿ ಸಂಸ್ಪೃಷ್ಟಃ ಪ್ರಾಪ್ತಕಾಲೋ ನ ಜೀವತಿ ॥9॥
ನೂರು ಬಾಣಗಳಿಂದ ಹೊಡೆದರೂ ಮರಣಕಾಲವು ಬರದಿದ್ದರೆ ಮರಣವನ್ನು ಹೊಂದುವುದಿಲ್ಲ. ಮರಣಕಾಲವು ಪ್ರಾಪ್ತವಾದಾಗ ಒಂದು ಹುಲ್ಲು ಕಡ್ಡಿಯಿಂದ ಮುಟ್ಟಿದರೂ ಬದುಕುವುದಿಲ್ಲ.
ಭೀಷ್ಮಃ
ಈಹಮಾನಃ ಸಮಾರಂಭಾನ್ ಯದಿ ನಾಸಾದಯೇದ್ ಧನಮ್ |
ಉಗ್ರಂ ತಪಃ ಸಮಾರೋಹೇನ್ನ ಹ್ಯನುಪ್ತಂ ಪ್ರರೋಹತಿ ॥10॥
ಭೀಷ್ಮ ಎಷ್ಟೇ ಪ್ರಯತ್ನವನ್ನು ಮಾಡುತ್ತಿದ್ದರೂ ಧನವು ದೊರೆಯದಿದ್ದರೆ ಉಗ್ರವಾದ ತಪಸ್ಸನ್ನು ಆಚರಿಸಬೇಕು. ಬಿತ್ತದ ಬೀಜವು ಅಂಕುರಿಸುವುದಿಲ್ಲವಷ್ಟೆ?
ದಾನೇನ ಭೋಗೀ ಭವತಿ ಮೇಧಾವೀ ವೃದ್ಧಸೇವಯಾ |
ಅಹಿಂಸಯಾ ಚ ದೀರ್ಘಾಯುರಿತಿ ಪ್ರಾಹುರ್ಮನೀಷಿಣಃ ॥11॥
ದಾನದಿಂದ ಭೋಗಿಯಾಗುತ್ತಾನೆ. ವೃದ್ಧರ ಸೇವೆಯಿಂದ ಮೇಧಾವಿಯಾಗುತ್ತಾನೆ. ಅಹಿಂಸೆಯಿಂದ ದೀರ್ಘಾಯುವಾಗುತ್ತಾನೆ ಎಂದು ಜ್ಞಾನಿಗಳು ಹೇಳುತ್ತಾರೆ.
ತಸ್ಮಾದ್ ದದ್ಯಾನ್ನ ಯಾಚೇತ ಪೂಜಯೇದ್ ಧಾರ್ಮಿಕಾನಪಿ |
ಸುಭಾಷೀ ಪ್ರಿಯಕೃಚ್ಛುದ್ಧಃ ಸರ್ವಸತ್ತ್ವವಿಹಿಂಸಕಃ ॥12॥
ದಾನವನ್ನು ಮಾಡಬೇಕು. ಯಾಚಿಸಬಾರದು. ಧಾರ್ಮಿಕರನ್ನು ಪೂಜಿಸಬೇಕು. ಒಳ್ಳೆಯ ಮಾತನ್ನಾಡಬೇಕು. ಇನ್ನೊಬ್ಬರಿಗೆ ಪ್ರಿಯವನ್ನು ಮಾಡಬೇಕು. ಶುದ್ಧನಾಗಿರಬೇಕು. ಯಾವ ಪ್ರಾಣಿಯನ್ನೂ ಹಿಂಸಿಸಬಾರದು.
ಯದಾ ಪ್ರಮಾಣಪ್ರಭವಃ ಸ್ವಭಾವಶ್ಚ ಸುಖಾಸುಖೇ |
ಮಶಕೀಟಪಿಪೀಲಾನಾಂ ಸ್ಥಿರೋ ಭವ ಯುಧಿಷ್ಠಿರ ॥13॥
ಎಲೈ ಯುಧಿಷ್ಠಿರನೇ, ಸುಖ-ದುಃಖಗಳು ಅದೃಷ್ಟರೂಪವಾದ ಪ್ರಮಾಣದಿಂದ ಉಂಟಾಗುತ್ತವೆ ಎಂದು ತಿಳಿದ ಮೇಲೆ ನೊಣ, ಕೀಟ, ಇರುವೆಗಳಿದ್ದರೂ ಸ್ಥಿರವಾಗಿರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಧರ್ಮಾಧರ್ಮಸ್ವರೂಪಕಥನಂ ನಾಮ ದ್ವಿಪಂಚಾಶದುತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಐವತ್ಮೂರನೆಯ ಅಧ್ಯಾಯ
ಶುಭಕಾಲದ ಪ್ರಾಬಲ್ಯಕಥನ
ಭೀಷ್ಮಃ
ಕಾರ್ಯತೇ ಯಚ್ಚ ಕ್ರಿಯತೇ ಸಚ್ಚಾಸಚ್ಚ ಕೃತಂ ತತಃ |
ತತ್ರಾಶ್ವಸೀತ ಸತ್‌ಕೃತ್ವಾ ಅಸತ್‌ಕೃತ್ವಾ ನ ವಿಶ್ವಸೇತ್ ॥1॥
ಭೀಷ್ಮ ಕಾಲವು ಸತ್ಕಾರ್ಯವನ್ನೂ, ಅಸತ್ಕಾರ್ಯವನ್ನೂ ಮಾಡಿಸುತ್ತದೆ. ವಿವೇಕಿಯಾದವನು ಸತ್ಕಾರ್ಯವನ್ನು ಮಾಡಿ ಸಮಾಧಾನವನ್ನು ಹೊಂದಬೇಕು. ಅಸತ್ಕಾರ್ಯವನ್ನು ಮಾಡಿ ಸಮಾಧಾನವನ್ನು ಹೊಂದಬಾರದು.
ಕಾಲ ಏವಾತ್ರ ಕಾಲೇನ ನಿಗ್ರಹಾನುಗ್ರಹೌ ದದತ್ |
ಬುದ್ಧಿಮಾವಿಶ್ಯ ಭೂತಾನಾಂ ಧರ್ಮಾರ್ಥೇಷು ಪ್ರವರ್ತತೇ ॥2॥
ಕಾಲವೇ ಆಯಾ ಕಾಲಗಳಲ್ಲಿ ನಿಗ್ರಹ, ಅನುಗ್ರಹವನ್ನು ಉಂಟುಮಾಡುವುದಾಗಿ ಜೀವರ ಬುದ್ಧಿಯನ್ನು ಪ್ರವೇಶಿಸಿ, ಧರ್ಮದಲ್ಲಿಯೂ ಮತ್ತು ಅರ್ಥದಲ್ಲಿಯೂ ಪ್ರವೃತ್ತಿಯನ್ನು ಉಂಟುಮಾಡುತ್ತದೆ.
ಯದಾ ತ್ವಸ್ಯ ಭವೇದ್ ಬುದ್ಧಿಃ ಧರ್ಮ್ಯಾ ಚಾರ್ಥಪ್ರದರ್ಶಿನೀ |
ತದಾಶ್ವಸೀತ ಧರ್ಮಾತ್ಮಾಽದೃಢಬುದ್ಧಿರ್ನ ವಿಶ್ವಸೇತ್ ॥3॥
ಜೀವರಿಗೆ ಧರ್ಮಾನುಸಾರಿಯಾದ ಅರ್ಥಪ್ರದರ್ಶಕವಾದ ಬುದ್ಧಿಯುಂಟಾದಾಗ ಧರ್ಮಾತ್ಮನಾದವನು ಧರ್ಮಬುದ್ಧಿಯನ್ನು ನಂಬಬೇಕು. ಅದೃಢ ಬುದ್ಧಿಯುಳ್ಳವನು ನಂಬಲಾರ.

ಏತಾವನ್ಮಾತ್ರಮೇತದ್ಧಿ ಭೂತಾನಾಂ ಪ್ರಾಜ್ಞಲಕ್ಷಣಮ್ |
ಕಾಲಯುಕ್ತೋಽಪ್ಯುಭಯವಿಚ್ಛೇಷಮರ್ಥಂ ಸಮಾಚರೇತ್ ॥4॥
ಧರ್ಮದಲ್ಲಿ ವಿಶ್ವಾಸ ಮಾಡುವುದೇ ಜೀವರಲ್ಲಿ ಪ್ರಾಜ್ಞರ ಲಕ್ಷಣ. ಧರ್ಮಾಧರ್ಮಗಳನ್ನು ತಿಳಿದು, ಆಯಾ ಕಾಲಗಳಲ್ಲಿ ಉಳಿದ ಧರ್ಮಗಳನ್ನು ಆಚರಿಸಬೇಕು (ಅರ್ಥಾರ್ಜನೆಯನ್ನು ಮಾಡಬೇಕು).
ಯಥಾ ಹ್ಯುಪಸ್ಥಿತೈಶ್ವರ್ಯಾಃ ಪೂಜಯಂತೇ ನರಾ ನರಾನ್ |
ಏವಮೇವಾತ್ಮನಾತ್ಮಾನಂ ಪೂಜಯಂತೀಹ ಧಾರ್ಮಿಕಾಃ ॥5॥
ಐಶ್ವರ್ಯವಂತರಾದವರು ಮನುಷ್ಯರನ್ನು ಪೂಜಿಸುತ್ತಾರೆ. ಅದರಂತೆ ಧಾರ್ಮಿಕರಾದವರೂ ಸಹ ಧರ್ಮಾತ್ಮರನ್ನು ಪೂಜಿಸುತ್ತಾರೆ.
ನ ಹ್ಯಧರ್ಮತಯಾ ಧರ್ಮಂ ದದ್ಯಾತ್ ಕಾಲಃ ಕಥಂಚನ |
ತಸ್ಮಾದ್ ವಿಶುದ್ಧಮಾತ್ಮಾನಂ ಜಾನೀಯಾದ್ ಧರ್ಮಚಾರಿಣಮ್ ॥6॥
ಕಾಲವು ಎಂದೂ ಧರ್ಮವನ್ನು ಅಧರ್ಮವನ್ನಾಗಿ ಮಾಡಿ ದುಃಖವನ್ನು ಕೊಡುವುದಿಲ್ಲ. ಆದ್ದರಿಂದ ಶುದ್ಧ ಮನಸ್ಸುಳ್ಳವನನ್ನು ಧರ್ಮಾಚರಣೆ ಮಾಡಿದವನೆಂದು ತಿಳಿಯಬೇಕು.
ಸ್ಪ್ರಷ್ಟುಮಪ್ಯಸಮರ್ಥೋ ಹಿ ಜ್ವಲಂತಮಿವ ಪಾವಕಮ್ |
ಅಧರ್ಮಃ ಸತತೋ ಧರ್ಮಂ ಕಾಲೇನ ಪರಿರಕ್ಷಿತಮ್ ॥7॥
ಜ್ವಲಿಸುವ ಅಗ್ನಿಯಂತೆ ಪ್ರಜ್ವಲಿಸುವ, ಕಾಲದಿಂದ ರಕ್ಷಿತವಾದ, ಧರ್ಮವನ್ನು ಅಧರ್ಮವು ಎಂದೂ ಮುಟ್ಟಲು ಸಾಧ್ಯವಿಲ್ಲ.
ಕಾರ್ಯಾವೇತೌ ಹಿ ಕಾಲೇನ ಧರ್ಮೋ ಹಿ ವಿಜಯಾವಹಃ |
ತ್ರಯಾಣಾಮಪಿ ಲೋಕಾನಾಮ್ ಧರ್ಮೋ ಹಿ ಶರಣಂ ಭವೇತ್ ॥8॥
ಧರ್ಮಾಧರ್ಮಗಳು ಪ್ರಯತ್ನದಿಂದ (ನಿಧಾನವಾಗಿ) ಸಾಧಿಸಲು ಶಕ್ಯವಾದವುಗಳು. ಅವುಗಳಲ್ಲಿ ಧರ್ಮವು ಮಾತ್ರ ವಿಜಯವನ್ನು ತಂದುಕೊಡುತ್ತದೆ. ಮೂರು ಲೋಕಗಳಿಗೂ ಧರ್ಮವೇ ಆಶ್ರಯವಾದುದು.
ನ ಹಿ ಕಶ್ಚಿನ್ನಯೇತ್ ಪ್ರಾಜ್ಞೋ ಗೃಹೀತ್ವೈವ ಕರೇ ನರಮ್ |
ಉಹ್ಯಮಾನಃ ಸ ಧರ್ಮೇಣ ಧರ್ಮೇ ಬಹುಭಯಚ್ಛಲೇ ॥9॥
ಯಾವ ಪ್ರಾಜ್ಞನೂ ಇನ್ನೊಬ್ಬ ಮನುಷ್ಯನನ್ನು ಕೈಹಿಡಿದು ನಡೆಸುವುದಿಲ್ಲ. ಬಹು ವಿಘ್ನಗಳೂ, ಭಯಗಳೂ ಇರುವ ಧರ್ಮದ ದಾರಿಯಲ್ಲಿ ಧರ್ಮವು ಕೈಹಿಡಿದು ನಡೆಸುತ್ತದೆ.
ಶೂದ್ರೋಽಹಂ ನಾಧಿಕಾರೋ ಮೇ ಚಾತುರಾಶ್ರಮ್ಯಸೇವನೇ |
ಇತಿ ವಿಜ್ಞಾನಮಪರೇ ನಾತ್ಮನ್ಯುಪದಧತ್ಯುತ ॥10॥
ನಾನು ಶೂದ್ರ. ನನಗೆ ಚತುರಾಶ್ರಮ ಸೇವೆಯಲ್ಲಿ ಅಧಿಕಾರವಿಲ್ಲ ಎಂಬ ಜ್ಞಾನವನ್ನು ಶುದ್ಧಾತ್ಮರಾದವರು ಹೊಂದುವುದಿಲ್ಲ.
ವಿಶೇಷೇಣ ಚ ವಕ್ಷ್ಯಾಮಿ ಚಾತುರ್ವರ್ಣ್ಯಸ್ಯ ಲಿಂಗತಃ |
ಪಂಚಭೂತಶರೀರಾಣಾಂ ಸರ್ವೇಷಾಂ ಸದೃಶಾತ್ಮನಾಮ್ ॥11॥
ಲೋಕಧರ್ಮೇ ಚ ಧರ್ಮೇ ಚ ವಿಶೇಷಕರಣಂ ಕೃತಮ್ |
ಯತ್ರೈಕತ್ವಂ ಪುನರ್ಯಾಂತಿ ಪ್ರಾಣಿನಸ್ತತ್ರ ವಿಸ್ತರಃ ॥12॥
ಚಾತುರ್ವರ್ಣ್ಯವನ್ನು ಆಶ್ರಯಿಸಿದವರೆಲ್ಲರೂ ಪಾಂಚಭೌತಿಕ ಶರೀರವನ್ನು ಹೊಂದಿದವರಾಗಿ ಸದೃಶರಾಗಿದ್ದರೂ ಲೋಕಧರ್ಮದಲ್ಲಿಯೂ, ಸ್ವಧರ್ಮದಲ್ಲಿಯೂ ಇದು ಪವಿತ್ರ, ಇದು ಅಪವಿತ್ರ, ಇದು ಗ್ರಾಹ್ಯ, ಇದು ಅಗ್ರಾಹ್ಯ ಎಂಬ ವಿಭಾಗವನ್ನು ನಾನು ವಿಶೇಷವಾಗಿ ಹೇಳುತ್ತೇನೆ. ವ್ಯತ್ಯಾಸವಿಲ್ಲದೆ ಯಾವ ಧರ್ಮವು ಸಮಾನವಾಗುತ್ತದೆಯೋ ಅದನ್ನು ಎಲ್ಲರೂ ಬಹಳವಾಗಿ ಆಚರಿಸುತ್ತಾರೆ.
ಅಧ್ರುವೋ ಹಿ ಕಥಂ ಲೋಕಃ ಸ್ಮೃತೋ ಧರ್ಮಃ ಕಥಂ ಧ್ರುವಃ |
ಯತ್ರ ಕಾಲೋ ಧ್ರುವಸ್ತಾತ ತತ್ರ ಧರ್ಮಃ ಸನಾತನಃ ॥13॥
ಧರ್ಮವು ಧ್ರುವವಾದುದು. ಧರ್ಮದಿಂದ ಜಯಿಸುವ ಲೋಕವು ಅಧ್ರುವವಾದುದು ಎಂಬ ಶಂಕೆ ಇರಬಹುದು. ಪ್ರೀತಿಪಾತ್ರನೇ, ಎಲ್ಲಿ ಕಾಲವು ಧ್ರುವವೋ ಅಲ್ಲಿ ಸನಾತನ ಧರ್ಮವಿದೆ. (ನಿಷ್ಕಾಮ ಧರ್ಮಾಚರಣೆಯು ಧ್ರುವವಾದ ಫಲವನ್ನು ಕೊಡುತ್ತದೆ. ಅದು ಸನಾತನ ಧರ್ಮದ ಮುಖ್ಯವಾದ ಫಲ. ಸಕಾಮ ಕರ್ಮಗಳು ಅಧ್ರುವವಾದ ಫಲವನ್ನು ಲೋಕವನ್ನು ಕೊಡುತ್ತವೆ).
ಸರ್ವೇಷಾಂ ತುಲ್ಯದೇಹಾನಾಂ ಸರ್ವೇಷಾಂ ಸದೃಶಾತ್ಮನಾಮ್ |
ಕಾಲೋ ಧರ್ಮೇಣ ಸಂಯುಕ್ತಃ ಶೇಷ ಏವ ಸುಸಂಗ್ರಹಃ ॥14॥
ಸದೃಶವಾದ ದೇಹವುಳ್ಳ, ಸದೃಶವಾದ ಮನಸ್ಸುಳ್ಳ ಎಲ್ಲರಿಗೂ ಧರ್ಮಯುಕ್ತವಾದ ಕಾಲವೇ (ಸುಖ-ದುಃಖವನ್ನು ಭೋಗಿಸುವಂತೆ ಮಾಡಿ) ಸ್ವಯಂ ಗುರುವಾಗುತ್ತದೆ.
ಏವಂ ಸತಿ ನ ದೋಷೋಽಸ್ತಿ ಭೂತಾನಾಂ ಧರ್ಮಸೇವನೇ |
ತಿರ್ಯಗ್ಯೋನಾವಪಿ ಸತಾಂ ಲೋಕ ಏವ ಮತೋ ಗುರುಃ ॥15॥
ಜೀವರು ಧರ್ಮವನ್ನು ಆಶ್ರಯಿಸುವುದರಲ್ಲಿ ಯಾವ ಅನಿತ್ಯತ್ವರೂಪವಾದ ದೋಷವೂ ಇಲ್ಲ. ತಿರ್ಯಗ್ಯೋನಿಯಲ್ಲಿ ಇರುವ ಸಜ್ಜೀವರಿಗೂ ಸುಖ-ದುಃಖಗಳನ್ನು ಕೊಡುವ ಲೋಕವೇ (ಕಾಲವೇ) ಗುರುವಾಗುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ತ್ರಿಪಂಚಾಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ಮೂರನೆಯ
ಅಧ್ಯಾಯ ಮುಗಿಯಿತು.

* * * * *

ಇನ್ನೂರ ಐವತ್ನಾಲ್ಕನೆಯ ಅಧ್ಯಾಯ

ಸರ್ವಮಂಗಳವಾದ ದೇವರ್ಷಿನೃಪವಂಶಕಥನ.

ವೈಶಂಪಾಯನಃ

ಶರತಲ್ಪಗತಂ ಭೀಷ್ಮಂ ಪಾಂಡವೋಽಥ ಕುರೂದ್ವಹಃ |
ಯುಧಿಷ್ಠಿರೋ ಹಿತಪ್ರೇಪ್ಸುರಪೃಚ್ಛತ್ ಕಲ್ಮಷಾಪಹಮ್ ॥1॥

ವೈಶಂಪಾಯನ ಅನಂತರ ಕುರೂದ್ವಹನಾದ ಪಾಂಡವನಾದ ಯುಧಿಷ್ಠಿರನು (ಎಲ್ಲರ) ಹಿತವನ್ನು ಬಯಸಿ ಶರತಲ್ಪಗತರಾದ ಭೀಷ್ಮರನ್ನು ಪಾಪಪರಿಹಾರ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದನು.

ಯುಧಿಷ್ಠಿರಃ

ಕಿಂ ಶ್ರೇಯಃ ಪುರುಷಸ್ಯೇಹ ಕಿಂ ಕುರ್ವನ್ ಸುಖಮೇಧತೇ |
ವಿಪಾಪ್ಮಾ ಚ ಭವೇತ್ ಕೇನ ಕಿಂ ವಾ ಕಲ್ಮಷನಾಶನಮ್ ॥2॥

ಯುಧಿಷ್ಠಿರ ಪುರುಷನಿಗೆ ಶ್ರೇಯಸ್ಸು ಯಾವುದು? ಏನು ಮಾಡಿದರೆ ಶುಭವನ್ನು ಹೊಂದುತ್ತಾನೆ? ಯಾವುದರಿಂದ ಪಾಪವು ಪರಿಹಾರವಾದೀತು? ದೋಷ ಪರಿಹಾರಕವಾದುದು ಯಾವುದು?

ಭೀಷ್ಮಃ

ಅಯಂ ದೈವತವಂಶೋ ವೈ ಋಷಿವಂಶಸಮನ್ವಿತಃ |
ದ್ವಿಸಂಧ್ಯಂ ಪಠಿತಃ ಪುತ್ರ ಕಲ್ಮಷಾಪಹರಃ ಪರಃ ॥3॥

ಭೀಷ್ಮ ಪುತ್ರನೇ, ಈ ದೇವತಾವಂಶ ಮತ್ತು ಋಷಿವಂಶವನ್ನು ಎರಡು ಸಂಧ್ಯೆಗಳಲ್ಲಿಯೂ ಪಠಿಸಿದರೆ ಅದು ಶ್ರೇಷ್ಠವಾದ ದೋಷಪರಿಹಾರಕವಾಗುತ್ತದೆ.

ದೇವಾಸುರಗುರುರ್ದೇವಃ ಸರ್ವಭೂತನಮಸ್ಕೃತಃ |
ಅಚಿಂತ್ಯೋಽಥಾಪ್ಯನಿರ್ದೇಶ್ಯಃ ಸರ್ವಪ್ರಾಣೋ ಹ್ಯಯೋನಿಜಃ ॥4॥
ಪಿತಾಮಹೋ ಜಗನ್ನಾಥಃ ಸಾವಿತ್ರೀ ಬ್ರಹ್ಮಣಸ್ತಥಾ |
ವೇದಭೂರಥ ಮಾತಾ ಚ ವಿಷ್ಣುರ್ನಾರಾಯಣಃ ಪ್ರಭುಃ ॥5॥

ದೇವಾಸುರರ ಗುರುವಾದ, ಸರ್ವದೇವನಮಸ್ಕೃತರಾದ ಅಚಿಂತ್ಯರೂ, ಅನಿರ್ದೇಶ್ಯರೂ, ಸರ್ವಪ್ರಾಣರೂ, ಅಯೋನಿಜರೂ ಆದವರು ಬ್ರಹ್ಮದೇವರು. ಜಗನ್ನಾಥನಾದವನು ನಾಭಿಕಮಲದಿಂದ ಬ್ರಹ್ಮನನ್ನು ಪ್ರಸವಿಸುವ ಮಾತೆಯಾದ, ವೇದಕ್ಕೆ ಆಶ್ರಯನಾದವನು ಪ್ರಭುವಾದ ವಿಷ್ಣು ನಾರಾಯಣ (ಲಕ್ಷ್ಮಾಲಂಕಾರ).

ಉಮಾಪತಿರ್ವಿರೂಪಾಕ್ಷಃ ಸ್ಕಂದಃ ಸೇನಾಪತಿಸ್ತಥಾ |
ವಿಶಾಖೋ ಹುತಭುಗ್ವಾಯುಶ್ಚಂದ್ರಾದಿತ್ಯೌ ಪ್ರಭಾಕರೌ ॥6॥
ಶಕ್ರಃ ಶಚೀಪತಿರ್ದೇವೋ ಯಮೋ ಧೂಮೋರ್ಣಯಾ ಸಹ |
ವರುಣಃ ಸಹ ಗೌರ್ಯಾ ಚ ಸಹ ಋದ್ಧ್ಯಾ ಧನೇಶ್ವರಃ ॥7॥

ಉಮಾಪತಿಯಾದ ವಿರೂಪಾಕ್ಷ, ಸೇನಾಪತಿಯಾದ ಸ್ಕಂದ, ವಿಶಾಖ, ಅಗ್ನಿ, ವಾಯು, ಬೆಳಕನ್ನು ಕೊಡುವ ಸೂರ್ಯ-ಚಂದ್ರರು, ಶಚೀಪತಿಯಾದ ಇಂದ್ರ, ಧೂಮೋರ್ಣಳಿಂದ ಸಹಿತನಾದ ಯಮ, ಗೌರಿಯಿಂದ ಸಹಿತನಾದ ವರುಣ, ಋದ್ಧಿಯಿಂದ ಸಹಿತನಾದ ಕುಬೇರ.

ಸೌಮ್ಯಾ ಗೌಃ ಸುರಭಿರ್ದೇವೀ ವಿಶ್ರವಾಶ್ಚ ಮಹಾನೃಷಿಃ |
ಷಟ್ಕಾಲಃ ಸಾಗರೋ ಗಂಗಾ ಸ್ರವಂತ್ಯೋಽಥ ಮರುದ್ಗಣಾಃ ॥8॥
ವಾಲಖಿಲ್ಯಾಸ್ತಪಃಸಿದ್ಧಾಃ ಕೃಷ್ಣದ್ವೈಪಾಯನಸ್ತಥಾ |
ನಾರದಃ ಪರ್ವತಶ್ಚೈವ ವಿಶ್ವಾವಸುರ್ಹಹಾಹುಹೂ ॥9॥

ಶಾಂತ ಗೋವಾದ ಸುರಭಿ, ಮಹರ್ಷಿಗಳಾದ ವಿಶ್ರವ, ಆರು ಕಾಲಗಳು, ಸಾಗರ, ಗಂಗೆ, ಉಳಿದ ನದಿಗಳು, ಮರುದ್ಗಣಗಳು, ತಪಸ್ಸಿದ್ಧರಾದ ವಾಲಖಿಲ್ಯರು, ಕೃಷ್ಣ ದ್ವೈಪಾಯನರು, ನಾರದ, ಪರ್ವತ, ವಿಶ್ವಾವಸು, ಹಹಾಹುಹೂ,

ತುಂಬುರುಶ್ಚಿತ್ರಸೇನಶ್ಚ ದೇವದೂತಶ್ಚ ವಿಶ್ರುತಃ |
ದೇವಕನ್ಯಾ ಮಹಾಭಾಗಾ ದಿವ್ಯಾಶ್ಚಾಪ್ಸರಸಾಂ ಗಣಾಃ ॥10॥
ಊರ್ವಶೀ ಮೇನಕಾ ರಂಭಾ ಮಿಶ್ರಕೇಶೀ ಅಲಂಬುಷಾ |
ವಿಶ್ವಾಚೀ ಚ ಘೃತಾಚೀ ಚ ಪಂಚಚೂಡಾ ತಿಲೋತ್ತಮಾ ॥11॥
ಆದಿತ್ಯಾ ವಸವೋ ರುದ್ರಾಃ ಸಾಶ್ವಿನಃ ಪಿತರೋಽಪಿ ಚ |
ಧರ್ಮಃ ಸತ್ಯಂ ತಪೋ ದೀಕ್ಷಾ ವ್ಯವಸಾಯಃ ಪಿತಾಮಹಃ ॥12॥

ತುಂಬುರು, ಚಿತ್ರಸೇನ, ಪ್ರಖ್ಯಾತನಾದ ದೇವದೂತ, ಮಹಾನುಭಾವರಾದ ದೇವಕನ್ಯೆಯರು, ದಿವ್ಯವಾದ ಅಪ್ಸರೆಯರ ಸಮೂಹಗಳು - ಊರ್ವಶೀ, ಮೇನಕಾ, ರಂಭಾ, ಮಿಶ್ರಕೇಶೀ, ಅಲಂಬುಷಾ, ವಿಶ್ವಾಚೀ, ಘೃತಾಚೀ, ಪಂಚಚೂಡಾ, ತಿಲೋತ್ತಮಾ, ಆದಿತ್ಯರು, ವಸುಗಳು, ರುದ್ರರು, ಅಶ್ವಿನಿಗಳು, ಪಿತೃಗಳು, ಧರ್ಮ, ಸತ್ಯ, ತಪಸ್ಸು, ದೀಕ್ಷಾ, ವ್ಯವಸಾಯ, ಪಿತಾಮಹರು,

ಶರ್ವಯೋರ್ದಿವಸಾಶ್ಚೈವ ಮಾರೀಚಃ ಕಶ್ಯಪಸ್ತಥಾ |
ಶುಕ್ರೋ ಬೃಹಸ್ಪತಿರ್ಭೌಮೋ ಬುಧೋ ರಾಹುಃ ಶನೈಶ್ಚರಃ ॥13॥
ನಕ್ಷತ್ರಾಣ್ಯೃತವಶ್ಚೈವ ಮಾಸಾಃ ಸಂಧ್ಯಾಃ ಸಂವತ್ಸರಾಃ |

ವೈನತೇಯಾಃ ಸಮುದ್ರಾಶ್ಚ ಕದ್ರುಜಾಃ ಪನ್ನಗಾಸ್ತಥಾ ॥14॥
ರಾತ್ರಿಗಳು, ಹಗಲುಗಳು, ಮರೀಚಿಯ ಪುತ್ರರಾದ ಕಶ್ಯಪರು, ಶುಕ್ರ, ಬೃಹಸ್ಪತಿ, ಕುಜ, ಬುಧ, ರಾಹು, ಶನಿ, ನಕ್ಷತ್ರಗಳು, ಋತುಗಳು, ಮಾಸಗಳು, ಸಂಧ್ಯೆಗಳು, ಸಂವತ್ಸರಗಳು, ಪಕ್ಷಿಗಳು, ಸಮುದ್ರಗಳು, ಕದ್ರುವಿನ ಮಕ್ಕಳಾದ ಸರ್ಪಗಳು,
ಶತದ್ರೂಶ್ಚ ವಿಪಾಶಾ ಚ ಚಂದ್ರಭಾಗಾ ಸರಸ್ವತೀ |
ಸಿಂಧುಶ್ಚ ದೇವಿಕಾ ಚೈವ ಪುಷ್ಕರಂ ತೀರ್ಥಮೇವ ಚ ॥15॥
ಗಂಗಾ ಮಹಾನದೀ ಚೈವ ಕಪಿಲಾ ನರ್ಮದಾ ತಥಾ |
ಕಂಪುನಾ ಚ ವಿಶಲ್ಯಾ ಚ ಕರತೋಯಾಂಬುವಾಹಿನೀ ॥16॥
ಶತದ್ರೂ, ವಿಪಾಶಾ, ಚಂದ್ರಭಾಗಾ, ಸರಸ್ವತೀ, ಸಿಂಧು, ದೇವಿಕಾ, ಪುಷ್ಕರ ತೀರ್ಥ, ಮಹಾನದಿಯಾದ ಗಂಗಾ, ಕಪಿಲಾ, ನರ್ಮದಾ, ಕಂಪುನಾ, ವಿಶಲ್ಯಾ, ಕರತೋಯಾ, ಅಂಬುವಾಹಿನೀ,
ಸರಯೂರ್ಗಂಡಕೀ ಚೈವ ಲೋಹಿತ್ಯಶ್ಚ ಮಹಾನದಃ |
ತಾಮ್ರಾರುಣಾ ವೇತ್ರವತೀ ಪರ್ಣಾಶಾ ಗೌತಮೀ ತಥಾ ॥17॥
ಗೋದಾವರೀ ಚ ವೇಣ್ಣಾ ಚ ಕೃಷ್ಣವೇಣಾ ತಥಾದ್ರಿಜಾ |
ದೃಷದ್ವತೀ ಚ ಕಾವೇರೀ ವಂಕ್ಷುಮಂದಾಕಿನೀ ತಥಾ ॥18॥
ಸರಯೂ, ಗಂಡಕೀ, ಮಹಾನದವಾದ ಲೋಹಿತ್ಯ, ತಾಮ್ರಾರುಣಾ, ವೇತ್ರವತೀ, ಪರ್ಣಾಶಾ, ಗೌತಮೀ, ಗೋದಾವರೀ, ವೇಣ್ಣಾ, ಕೃಷ್ಣವೇಣೀ, ತುಂಗಭದ್ರೆ, ದೃಷದ್ವತೀ, ಕಾವೇರೀ, ವಂಕ್ಷು, ಮಂದಾಕಿನೀ,
ಪ್ರಯಾಗಂ ಚ ಪ್ರಭಾಸಂ ಚ ಪುಣ್ಯಂ ನೈಮಿಶಮೇವ ಚ |
ತಚ್ಚ ವಿಶ್ವೇಶ್ವರಸ್ಥಾನಂ ಯತ್ರ ತದ್ ವಿಮಲಂ ಸರಃ॥19॥
ಪುಣ್ಯತೀರ್ಥೈಶ್ಚ ಕಲಿಲಂ ಕುರುಕ್ಷೇತ್ರಂ ಪ್ರಕೀರ್ತಿತಮ್ |
ಸಿಂಧೂತ್ತಮಾ ತಪೋದಾನೀ ಜಂಬೂಮಾರ್ಗಮಥಾಪಿ ಚ ॥20॥
ಪ್ರಯಾಗ, ಪ್ರಭಾಸ, ಪುಣ್ಯಕ್ಷೇತ್ರವಾದ ನೈಮಿಶಾರಣ್ಯ, ಮಾನಸ ಸರೋವರ ವಿಶ್ವೇಶ್ವರ ಸ್ಥಾನವಾದ ಕೈಲಾಸ, ಪುಣ್ಯತೀರ್ಥಗಳಿಂದ ಕೂಡಿದ ಕುರುಕ್ಷೇತ್ರ, ಸಿಂಧೂತ್ತಮ, ತಪೋದಾನ, ಜಂಬೂಮಾರ್ಗ(ಮೊದಲಾದ ಕ್ಷೇತ್ರಗಳು)
ಹಿರಣ್ವತೀ ವಿತಸ್ತಾ ಚ ತಥೈವೇಕ್ಷುಮತೀ ನದೀ |
ವೇದಸ್ಮೃತಿರ್ವೇದಸಿನೀ ಮಲವಾಸಾಶ್ಚ ನದ್ಯಪಿ ॥21॥
ಭೂಮಿಭಾಗಾಸ್ತಥಾ ಪುಣ್ಯಾ ಗಂಗಾದ್ವಾರಮಥಾಪಿ ಚ |
ಋಷಿಕುಲ್ಯಾಸ್ತಥಾ ಮೇಧ್ಯಾ ನದೀ ಚಿತ್ರಪಥಾ ತಥಾ ॥22॥
ಕೌಶಿಕೀ ಯಮುನಾ ಸೀತಾ ತಥಾ ಚರ್ಮಣ್ವತೀ ನದೀ |
ಪುಣ್ಯಾ ಭೀಮರಥೀ ಚೈವ ಬಾಹುದಾ ಚ ಮಹಾನದೀ |
ಮಹೇಂದ್ರವಾಣೀ ತ್ರಿದಿವಾ ನೀಲಿಕಾ ಚ ಸರಸ್ವತೀ ॥23॥
ನದಿಗಳಾದ ಹಿರಣ್ವತೀ, ವಿತಸ್ತಾ, ಇಕ್ಷುಮತೀ, ವೇದಸ್ಮೃತಿ, ವೈದಸಿನೀ, ಮಲವಾಸಾ, ಭೂಮಿಭಾಗಾ, ಪುಣ್ಯಾ, ಗಂಗಾದ್ವಾರ, ಋಷಿಕುಲ್ಯಾ, ಮೇಧ್ಯಾ, ಚಿತ್ರಪಥಾ, ಕೌಶಿಕೀ, ಯಮುನಾ, ಸೀತಾ, ಚರ್ಮಣ್ವತೀ, ಪವಿತ್ರವಾದ ಭೀಮನದೀ, ಮಹಾನದಿಯಾದ ಬಾಹುದಾ, ಮಹೇಂದ್ರವಾಣಿ, ತ್ರಿದಿವಾ, ನೀಲಿಕಾ, ಸರಸ್ವತೀ
ನಂದಾ ಚಾಪರನಂದಾ ಚ ತಥಾ ತೀರ್ಥಂ ಮಹಾಹ್ರದಮ್ |
ಗಯಾಥ ಫಲ್ಗುತೀರ್ಥಂ ಚ ಧರ್ಮಾರಣ್ಯಂ ಸುರೈರ್ವೃತಮ್ ॥24॥
ತಥಾ ದೇವನದೀ ಪುಣ್ಯಾ ಸರಶ್ಚ ಬ್ರಹ್ಮನಿರ್ಮಿತಮ್ |
ಪುಣ್ಯಂ ತ್ರಿಲೋಕವಿಖ್ಯಾತಂ ಸರ್ವಪಾಪಹರಂ ಶಿವಮ್ ॥25॥
ನಂದಾ, ಅಪರನಂದಾ, ಮಹಾಹ್ರದತೀರ್ಥ, ಗಯಾ, ಫಲ್ಗುತೀರ್ಥ, ದೇವತೆಗಳಿಂದ ನಿಬಿಡವಾದ ಧರ್ಮಾರಣ್ಯ, ಪವಿತ್ರವಾದ ದೇವನದಿ, ಬ್ರಹ್ಮ ಸರೋವರ ಇವುಗಳೆಲ್ಲವೂ ಸರ್ವಪಾಪಹರವೆಂದೂ, ಪುಣ್ಯಪ್ರದವೆಂದೂ, ಮಂಗಳಕರಗಳೆಂದೂ ಮೂರು ಲೋಕಗಳಲ್ಲಿಯೂ ವಿಖ್ಯಾತವಾಗಿವೆ.
ಹಿಮವಾನ್ ಪರ್ವತಶ್ಚೈವ ದಿವ್ಯೌಷಧಿಸಮನ್ವಿತಃ |
ವಿಂಧ್ಯೋ ಧಾತುವಿಚಿತ್ರಾಂಗಸ್ತೀರ್ಥವಾನೌಷಧಾನ್ವಿತಃ ॥26॥
ಮೇರುರ್ಮಹೇಂದ್ರೋ ಮಲಯಃ ಶ್ವೇತಾಶ್ವ ರಜತಾಚಿತಃ |
ಶೃಂಗವಾನ್ ಮಂದರೋ ನೀಲೋ ನಿಷಧೋ ದರ್ಧುರಸ್ತಥಾ ॥27॥
ಪರ್ವತಗಳಾದ, ದಿವ್ಯೌಷಧಿ ಸಮನ್ವಿತವಾದ ಹಿಮಾಲಯ, ಧಾತುವಿನಿಂದಲೂ ವಿಚಿತ್ರವಾದ ತೀರ್ಥಗಳಿಂದಲೂ ಔಷಧಿಗಳಿಂದಲೂ ಕೂಡಿದ ವಿಂಧ್ಯ, ಮೇರು, ಮಹೇಂದ್ರ, ಮಲಯ, ರಜತದಿಂದ ಕೂಡಿದ ಶ್ವೇತಾಶ್ವ, ಶೃಂಗವಾನ್, ಮಂದರ, ನೀಲ, ನಿಷಧ, ದರ್ಧುರ,
ಚಿತ್ರಕೂಟೋಽಂಜನಾಭಶ್ಚ ಪರ್ವತೋ ಗಂಧಮಾದನಃ |
ಪುಣ್ಯಃ ಸೋಮಗಿರಿಶ್ಚೈವ ತಥೈವಾನ್ಯೇ ಮಹೀಧರಾಃ |
ದಿಶಶ್ಚ ವಿದಿಶಶ್ಚೈವ ಕ್ಷಿತಿಃ ಸರ್ವೇ ಮಹೀರುಹಾಃ ॥28॥
ವಿಶ್ವೇದೇವಾ ನಭಶ್ಚೈವ ನಕ್ಷತ್ರಾಣಿ ಗ್ರಹಾಸ್ತಥಾ |
ಪಾಂತು ವಃ ಸತತಂ ದೇವಾಃ ಕೀರ್ತಿತಾಽಕೀರ್ತಿತಾ ಮಯಾ ॥29॥
ಚಿತ್ರಕೂಟ, ಅಂಜನಾಭ, ಗಂಧಮಾದನ, ಸೋಮಗಿರಿ, ಹಾಗೆ ಉಳಿದ ಪರ್ವತಗಳು, ದಿಕ್ಕುಗಳು, ವಿದಿಕ್ಕುಗಳು, ಭೂಮಿ, ಎಲ್ಲಾ ವೃಕ್ಷಗಳು,

ವಿಶ್ವೇದೇವತೆಗಳು, ಆಕಾಶ, ನಕ್ಷತ್ರಗಳು, ಗ್ರಹಗಳು, ನನ್ನಿಂದ ಕೀರ್ತಿತರಾದ, ಕೀರ್ತಿತರಲ್ಲದ ಎಲ್ಲಾ ದೇವತೆಗಳು ನಿಮ್ಮನ್ನು ಸತತವಾಗಿ ರಕ್ಷಿಸಲಿ.
ಕೀರ್ತಯಾನೋ ನರೋ ಹ್ಯೇತಾನ್ಮುಚ್ಯತೇ ಸರ್ವಕಿಲ್ಬಿಷೈಃ |
ಸ್ತುವಂಶ್ಚ ಪ್ರತಿನಂದಂಶ್ಚ ಮುಚ್ಯತೇ ಸರ್ವತೋ ಭಯಾತ್ |
ಸರ್ವಸಂಕರಪಾಪೇಭ್ಯೋ ದೇವತಾಸ್ತವನಂದಕಃ ॥30॥
ಇವುಗಳನ್ನು ಕೀರ್ತಿಸುವ ನರನು ಸರ್ವದೋಷಗಳಿಂದಲೂ ಮುಕ್ತನಾಗುತ್ತಾನೆ. ಅವರನ್ನು ಸ್ತೋತ್ರ ಮಾಡಿ ಸಂತೋಷ ಪಡುವವನು ಸರ್ವಭಯಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ದೇವತಾಸ್ತುತಿಯನ್ನು ಮಾಡಿ ಸಂತೋಷ ಪಡುವವನು ಸಂಕರದಿಂದ ಉಂಟಾದ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ದೇವತಾನಂತರಂ ವಿಪ್ರಾಂಸ್ತಪಃಸಿದ್ಧಾಂಸ್ತಪೋಧಿಕಾನ್ |
ಕೀರ್ತಿತಾನ್ ಕೀರ್ತಯಿಷ್ಯಾಮಿ ಸರ್ವಪಾಪಪ್ರಮೋಚನಾನ್ ॥31॥
ದೇವತೆಗಳ ಅನಂತರ ತಪಸ್ಸಿದ್ಧರೂ, ಅಧಿಕ ತಪಸ್ವಿಗಳೂ, ಸರ್ವಪಾಪ ಪರಿಹಾರಕರೂ, ಪ್ರಸಿದ್ಧರೂ ಆದ ಋಷಿಗಳನ್ನು ಹೇಳುವೆನು.
ಯವಕ್ರೀತೋಽಥ ರೈಭ್ಯಶ್ಚ ಕಕ್ಷೀವಾನೌಶಿಜಸ್ತಥಾ |
ಭೃಗ್ವಂಗಿರಾಸ್ತಥಾ ಕಣ್ವೋ ಮೇಧಾತಿಥಿರಥ ಪ್ರಭುಃ |
ಬರ್ಹೀ ಚ ಗುಣಸಂಪನ್ನಃ ಪ್ರಾಚೀಂ ದಿಶಮುಪಾಶ್ರಿತಾಃ ॥32॥
ಯವಕ್ರೀತ, ರೈಭ್ಯ, ಔಶಿಜನಾದ ಕಕ್ಷೀವಾನ್, ಭೃಗು, ಅಂಗಿರಸ್, ಕಣ್ವ, ಮೇಧಾತಿಥಿ, ಗುಣಸಂಪನ್ನರಾದ ಬರ್ಹೀ ಇವರು ಪೂರ್ವದಿಕ್ಕನ್ನು ಆಶ್ರಯಿಸಿದ್ದಾರೆ.
ಭದ್ರಾಂ ದಿಶಂ ಮಹಾಭಾಗಾ ಉಲ್ಮುಚುಃ ಪ್ರಮುಚುಸ್ತಥಾ |
ಮುಮ್ಮುಚುಶ್ಚ ಮಹಾಭಾಗಾ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್ ॥33॥
ಮಿತ್ರಾವರುಣಯೋಃ ಪುತ್ರಸ್ತಥಾಗಸ್ತ್ಯಃ ಪ್ರತಾಪವಾನ್ |
ದೃಢಾಯುಶ್ಚೋರ್ಧ್ವಬಾಹುಶ್ಚ ವಿಶ್ರುತಾವೃಷಿಸತ್ತಮೌ ॥34॥
ದಕ್ಷಿಣದಿಕ್ಕಿನಲ್ಲಿ ಮಹಾನುಭಾವರಾದ ಉಲ್ಮುಚು, ಪ್ರಮುಚು, ಮುಮ್ಮುಚು ಈ ಮಹಾನುಭಾವರಾದ, ಸ್ವಸ್ತ್ಯಾತ್ರೇಯ, ಮಿತ್ರಾವರುಣರ ಪುತ್ರರು (ಭೃಗು), ಪ್ರತಾಪಶಾಲಿಗಳಾದ ಅಗಸ್ತ್ಯ, ಪ್ರಖ್ಯಾತರಾದ ಮುನಿಶ್ರೇಷ್ಠರಾದ ದೃಢಾಯು ಊರ್ಧ್ವಬಾಹು - ಇವರು ಆಶ್ರಯಿಸಿದ್ದಾರೆ.
ಪಶ್ಚಿಮಾಂ ದಿಶಮಾಶ್ರಿತ್ಯ ಯ ಏಧಂತೇ ನಿಬೋಧ ತಾನ್ |
ತ್ರಿಶಂಕುಃ ಸ ಹಿ ಸೋದರ್ಯಃ ಪರಿವ್ಯಾಧಶ್ಚ ವೀರ್ಯವಾನ್ ॥35॥
ಋಷಿರ್ದೀರ್ಘತಮಾಶ್ಚೈವ ಗೌತಮಃ ಕಶ್ಯಪಸ್ತಥಾ |
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹರ್ಷಯಃ |
ಅತ್ರೇಃ ಪುತ್ರಶ್ಚ ಧರ್ಮಾತ್ಮಾ ತಥಾ ಸಾರಸ್ವತಃ ಪ್ರಭುಃ ॥36॥
ಪಶ್ಚಿಮ ದಿಕ್ಕನ್ನು ಆಶ್ರಯಿಸಿ ಅಭಿವೃದ್ಧಿಯನ್ನು ಹೊಂದುವ ಋಷಿಗಳನ್ನು ಕೇಳು. ಸೋದರರಿಂದ ಕೂಡಿದ ತ್ರಿಶಂಕು, ಪರಾಕ್ರಮಶಾಲಿಯಾದ ಪರಿವ್ಯಾಧ, ದೀರ್ಘತಮ, ಗೌತಮ, ಕಶ್ಯಪ, ಏಕತ, ದ್ವಿತ, ತ್ರಿತ, ಧರ್ಮಾತ್ಮನಾದ ಅತ್ರಿಯ ಪುತ್ರ, ಪ್ರಭುವಾದ ಸಾರಸ್ವತ (ಇವರು ಪಶ್ಚಿಮ ದಿಕ್ಕನ್ನು ಆಶ್ರಯಿಸಿದವರು).
ಉತ್ತರಾಂ ದಿಶಮಾಶ್ರಿತ್ಯ ಯ ಏಧಂತೇ ನಿಬೋಧ ತಾನ್ |
ಅತ್ರಿರ್ವಸಿಷ್ಠಃ ಶಕ್ತಿಶ್ಚ ಪಾರಾಶರ್ಯಶ್ಚ ವೀರ್ಯವಾನ್ ॥37॥
ವಿಶ್ವಾಮಿತ್ರೋ ಭರದ್ವಾಜೋ ಜಮದಗ್ನಿಸ್ತಥೈವ ಚ |
ಋಚೀಕಪೌತ್ರೋ ರಾಮಶ್ಚ ಋಷಿರೌದ್ದಾಲಕಿಸ್ತಥಾ ॥38॥
ಶ್ವೇತಕೇತುಃ ಕೋಹಲಶ್ಚ ವಿಪುಲೋ ದೇವಲಸ್ತಥಾ |
ದೇವಶರ್ಮಾ ಚ ಧೌಮ್ಯಶ್ಚ ಹಸ್ತಿಕಾಶ್ಯಪ ಏವ ಚ ॥39॥
ಲೋಮಶೋ ನಾಚಿಕೇತಶ್ಚ ಲೋಮಹರ್ಷಣ ಏವ ಚ |
ಋಷಿರುಗ್ರಶ್ರವಾಶ್ಚೈವ ಭಾರ್ಗವಶ್ಚ್ಯವನಸ್ತಥಾ ॥40॥
ಉತ್ತರ ದಿಕ್ಕನ್ನು ಆಶ್ರಯಿಸಿ ಶ್ರೇಯಸ್ಸನ್ನು ಹೊಂದುವ ಋಷಿಗಳನ್ನು ಕೇಳು. ಅತ್ರಿ, ವಸಿಷ್ಠ, ಶಕ್ತಿ, ಸಾಮರ್ಥ್ಯೋಪೇತರಾದ ವ್ಯಾಸ, ವಿಶ್ವಾಮಿತ್ರ, ಭರದ್ವಾಜ, ಜಮದಗ್ನಿ, ಋಚೀಕಪೌತ್ರನಾದ ಪರಶುರಾಮ, ಔದ್ದಾಲಕಿ, ಶ್ವೇತಕೇತು, ಕೋಹಲ (ಕಹೋಲ), ವಿಪುಲ, ದೇವಲ, ದೇವಶರ್ಮ, ಧೌಮ್ಯ, ಹಸ್ತಿಕಾಶ್ಯಪ, ಲೋಮಶ, ನಚಿಕೇತ, ಲೋಮಹರ್ಷಣ, ಉಗ್ರಶ್ರವ, ಭಾರ್ಗವರಾದ ಚ್ಯವನ.
ಏಷ ವೈ ಸಮವಾಯಸ್ತೇ ಋಷಿದೇವಸಮನ್ವಿತಃ |
ಆದ್ಯಃ ಪ್ರಕೀರ್ತಿತೋ ರಾಜನ್ ಸರ್ವಪಾಪಪ್ರಣಾಶನಃ ॥41॥
ಇದು ಋಷಿಗಳ ಮತ್ತು ದೇವತೆಗಳ ವಂಶದ ಸಮೂಹ. ಎಲೈ ರಾಜನೇ, ಶ್ರೇಷ್ಠವಾದ ಈ ವಂಶಗಳನ್ನು ಕೀರ್ತಿಸಿದರೆ ಸರ್ವಪಾಪಗಳೂ ನಾಶವನ್ನು ಹೊಂದುತ್ತವೆ.
ನೃಗೋ ಯಯಾತಿರ್ನಹುಷೋ ಯದುಃ ಪೂರುಶ್ಚ ವೀರ್ಯವಾನ್ |
ಧುಂಧುಮಾರೋ ದಿಲೀಪಶ್ಚ ಸಗರಶ್ಚ ಪ್ರತಾಪವಾನ್ ॥42॥
ಕೃಶಾಶ್ವೋ ಯೌವನಾಶ್ವಶ್ಚ ಚಿತ್ರಾಶ್ವಃ ಸತ್ಯವಾಂಸ್ತಥಾ |
ದುಷ್ಯಂತೋ ಭರತಶ್ಚೈವ ಚಕ್ರವರ್ತೀ ಮಹಾಯಶಾಃ ॥43॥

(ಚಕ್ರವರ್ತಿಗಳಾದ) ನೃಗ, ಯಯಾತಿ, ನಹುಷ, ಯದು, ಪರಾಕ್ರಮಶಾಲಿ ಆದ ಪೂರು, ಧುಂಧುಮಾರ, ದಿಲೀಪ, ಪ್ರತಾಪಶಾಲಿಯಾದ ಸಗರ, ಕೃಶಾಶ್ವ, ಯೌವನಾಶ್ವನಾದ ಮಾಂಧಾತೃ, ಚಿತ್ರಾಶ್ವ, ಸತ್ಯವಾನ್, ದುಷ್ಯಂತ, ಮಹಾಕೀರ್ತಿವಂತನಾದ ಭರತಚಕ್ರವರ್ತಿ,

ಯವನೋ ಜನಕಶ್ಚೈವ ತಥಾ ದೃಢರಥೋ ನೃಪಃ |
ರಘುರ್ನರವರಶ್ಚೈವ ತಥಾ ದಶರಥೋ ನೃಪಃ ॥44॥
ರಾಮೋ ರಾಕ್ಷಸಹಾ ವೀರಃ ಶಶಬಿಂದುರ್ಭಗೀರಥಃ |
ಹರಿಶ್ಚಂದ್ರೋ ಮರುತ್ತಶ್ಚ ಜಹ್ನುರ್ಜಾಹ್ನವಿಸೇವಿತಾ ॥45॥

ಯವನ, ಜನಕ, ದೃಢರಥ, ರಘು, ದಶರಥ, ರಾಕ್ಷಸಸಂಹೃತವಾದ ವೀರನಾದ ರಾಮ, ಶಶಬಿಂದು, ಭಗೀರಥ, ಹರಿಶ್ಚಂದ್ರ, ಮರುತ್ತ, ಜಾನ್ಹವಿಯನ್ನು ಸೇವಿಸಿದ ಜಹ್ನು.

ಮಹೋದಯೋ ಹ್ಯಲರ್ಕಶ್ಚ ಐಲಶ್ಚೈವ ನರಾಧಿಪಃ |
ಕರಂಧಮೋ ನರಶ್ರೇಷ್ಠಃ ಕಧ್ಮೋರಶ್ಚ ನರಾಧಿಪಃ ॥46॥
ದಕ್ಷೋಽಂಬರೀಷಃ ಕುಕುರೋ ರೈವತಶ್ಚ ಮಹಾಯಶಾಃ |
ಮುಚುಕುಂದಶ್ಚ ರಾಜರ್ಷಿರ್ಮಿತ್ರಭಾನುಃ ಪ್ರಿಯಂಕರಃ ॥47॥

ಮಹೋದಯ, ಅಲರ್ಕ, ಐಲ, ಕರಂಧಮ, ನರಶ್ರೇಷ್ಠನಾದ ಕಧ್ಮೋರ, ದಕ್ಷ, ಅಂಬರೀಷ, ಕುಕುರ, ಮಹಾಯಶಸ್ವಿಯಾದ ರೈವತ, ರಾಜರ್ಷಿಯಾದ ಮುಚುಕುಂದ, ಮಿತ್ರಭಾನು, ಪ್ರಿಯಂಕರ.

ತ್ರಸದಸ್ಯುಸ್ತಥಾ ರಾಜಾ ಶ್ವೇತೋ ರಾಜರ್ಷಿಸತ್ತಮಃ |
ಮಹಾಭಿಷಶ್ಚ ವಿಖ್ಯಾತೋ ನಿಮಿರಾಜಸ್ತಥಾಽಷ್ಟಕಃ ॥48॥
ಆಯುಃ ಕ್ಷುಪಶ್ಚ ರಾಜರ್ಷಿಃ ಕಕ್ಷೇಯುಶ್ಚ ನರಾಧಿಪಃ |
ಶಿಬಿರೌಶೀನರಶ್ಚೈವ ಗಯಶ್ಚೈವ ನರಾಧಿಪಃ ॥49॥

ತ್ರಸದಸ್ಯು, ರಾಜರ್ಷಿಶ್ರೇಷ್ಠನಾದ ಶ್ವೇತ, ಪ್ರಖ್ಯಾತನಾದ ಮಹಾಭಿಷಕ್, ನಿಮಿರಾಜ, ಅಷ್ಟಕ, ಆಯು, ರಾಜರ್ಷಿಯಾದ ಕ್ಷುಪ, ಕಕ್ಷೇಯು, ಔಶೀನರನಾದ ಶಿಬಿ, ಗಯ,

ಪ್ರತರ್ದನೋ ದಿವೋದಾಸಃ ಸೌದಾಸಃ ಕೋಸಲೇಶ್ವರಃ |
ಐಲೋ ನಳಶ್ಚ ರಾಜರ್ಷಿಃ ಭೀಮಶ್ಚೈವ ನರಾಧಿಪಃ ॥50॥
ಹವಿಧ್ರಶ್ಚ ಪೃಷಧ್ರಶ್ಚ ಪ್ರತೀಪಃ ಶಂತನುಸ್ತಥಾ |
ಕಕ್ಷಸೇನಶ್ಚ ರಾಜರ್ಷಿರ್ಯೇ ಚಾನ್ಯೇ ನಾನುಕೀರ್ತಿತಾಃ ॥51॥

ಪ್ರತರ್ದನ, ದಿವೋದಾಸ, ಕೋಸಲೇಶ್ವರನಾದ ಸೌದಾಸ, ಐಲ, ರಾಜರ್ಷಿಯಾದ ನಳ, ಭೀಮ, ಹವಿಧ್ರ, ಪೃಷಧ್ರ, ಪ್ರತೀಪ, ಶಂತನು, ರಾಜರ್ಷಿಯಾದ ಕಕ್ಷಸೇನ - ಇನ್ನೂ ನಾನು ಕೀರ್ತಿಸದ ಅನೇಕ ಚಕ್ರವರ್ತಿಗಳು.

ಮಾ ವಿಘ್ನಂ ಮಾ ಚ ಮೇ ಪಾಪಂ ಮಾ ಚ ಮೇ ಪರಿಪಂಥಿನಃ |
ಧ್ರುವೋ ಜಯೋ ಮೇ ನಿತ್ಯಂ ಸ್ಯಾತ್ ಪರತ್ರ ಚ ಪರಾ ಗತಿಃ ॥52॥

ಇವರೆಲ್ಲರೂ ನನಗೆ ಯಾವ ವಿಘ್ನವನ್ನೂ ಮಾಡದಿರಲಿ. ನನಗೆ ಯಾವ ಪಾಪವನ್ನೂ ಉಂಟುಮಾಡದಿರಲಿ. ನನಗೆ ಯಾವ ಪ್ರತಿಬಂಧಕವನ್ನೂ ಮಾಡದಿರಲಿ. ನನಗೆ ನಿಶ್ಚಿತವಾಗಿ ಜಯವುಂಟಾಗಲಿ. ಪರಲೋಕದಲ್ಲಿ ಶ್ರೇಷ್ಠಗತಿ ಉಂಟಾಗಲಿ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ದೇವರಾಜರ್ಷಿವಂಶಕಥನಂ ನಾಮ ಚತುಃಪಂಚಾಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ನಾಲ್ಕನೆಯ
ಅಧ್ಯಾಯ ಮುಗಿಯಿತು.

* * * * *

## ಇನ್ನೂರ ಐವತ್ತೈದನೆಯ ಅಧ್ಯಾಯ

### ಯುಧಿಷ್ಠಿರನ ಹಸ್ತಿನಪುರಪ್ರಯಾಣ

ಜನಮೇಜಯಃ

ಶರತಲ್ಪಗತೇ ಭೀಷ್ಮೇ ಕೌರವಾಣಾಂ ಧುರಂಧರೇ |
ಶಯಾನೇ ವೀರಶಯನೇ ಪಾಂಡವೈಃ ಸಮುಪಸ್ಥಿತೇ ॥1॥
ಯುಧಿಷ್ಠಿರೋ ಮಹಾಪ್ರಾಜ್ಞೋ ಮಮ ಪೂರ್ವಪಿತಾಮಹಃ |
ಧರ್ಮಾಣಾಮಾಗಮಂ ಶ್ರುತ್ವಾ ವಿದಿತ್ವಾ ಧರ್ಮಸಂಶಯಾನ್ ॥2॥
ದಾನಾನಾಂ ಚ ವಿಧಿಂ ಶ್ರುತ್ವಾ ಛಿನ್ನಧರ್ಮಾರ್ಥಸಂಶಯಃ |
ಯದನ್ಯದಕರೋದ್ ವಿಪ್ರ ತನ್ಮೇ ಶಂಸಿತುಮರ್ಹಸಿ ॥3॥

ಜನಮೇಜಯ ಎಲ್ಲೈ ವಿಪ್ರರೇ, ಕೌರವರ ಧುರಂಧರರಾದ ಭೀಷ್ಮರು ಶರತಲ್ಪದಲ್ಲಿ ವೀರಶಯನದಲ್ಲಿ ಮಲಗಿರಲು ಪಾಂಡವರು ಎಲ್ಲರೂ ಸಮೀಪದಲ್ಲಿರಲು ಮಹಾಪ್ರಾಜ್ಞನೂ, ನನ್ನ ಪೂರ್ವಪಿತಾಮಹನೂ ಆದ ಯುಧಿಷ್ಠಿರನು ಧರ್ಮಗಳ ಉಪದೇಶವನ್ನು ಕೇಳಿ, ದಾನಗಳ ವಿಧಿಗಳನ್ನೂ ಕೇಳಿ, ಧರ್ಮಾರ್ಥ ಸಂಶಯಗಳನ್ನು ಪರಿಹರಿಸಿಕೊಂಡು ಇನ್ನೇನನ್ನು ಮಾಡಿದನೆಂದು ನನಗೆ ಹೇಳಬೇಕು.

ವೈಶಂಪಾಯನಃ

ಅಭೂನ್ಮುಹೂರ್ತಂ ಸ್ತಿಮಿತಿಂ ಸರ್ವಂ ತದ್ ರಾಜಮಂಡಲಮ್ |

ತೂಷ್ಣೀಂಭೂತೇ ತದಾ ಭೀಷ್ಮೇ ಪಟೇ ಚಿತ್ರಮಿವಾರ್ಪಿತಮ್ ॥4॥
ವೈಶಂಪಾಯನ ಭೀಷ್ಮರು ಮೌನವನ್ನು ವಹಿಸುತ್ತಿರಲು ನೆರೆದಿದ್ದ ರಾಜಮಂಡಲವೆಲ್ಲವೂ ಬಟ್ಟೆಯಲ್ಲಿ ಬರೆದ ಚಿತ್ರದಂತೆ ನಿಶ್ಶಬ್ದವಾಯಿತು.
ಮುಹೂರ್ತಮಿವ ಚ ಧ್ಯಾತ್ವಾ ವ್ಯಾಸಃ ಸತ್ಯವತೀಸುತಃ |
ನೃಪಂ ಶಯಾನಂ ಗಾಂಗೇಯಮಿದಮಾಹ ವಚಸ್ತದಾ ॥5॥
ಸತ್ಯವತೀಸುತರಾದ ವ್ಯಾಸರು ಒಂದು ಮುಹೂರ್ತದಷ್ಟು ಕಾಲ ಚಿಂತಿಸಿ, ಮಲಗಿದ್ದ ಗಂಗಾಪುತ್ರರಾದ ಭೀಷ್ಮರನ್ನು ಕುರಿತು ಈ ಮಾತುಗಳನ್ನು ಆಡಿದರು.
ರಾಜನ್ ಪ್ರಕೃತಿಮಾಪನ್ನಃ ಕುರುರಾಜೋ ಯುಧಿಷ್ಠಿರಃ |
ಸಹಿತೋ ಭ್ರಾತೃಭಿಃ ಸರ್ವೈಃ ಪಾರ್ಥಿವೈಶ್ಚಾನುಯಾಯಿಭಿಃ ॥6॥
ಎಲೈ ರಾಜನೇ, ತಮ್ಮಂದಿರಿಂದಲೂ ಮತ್ತು ಅನುಯಾಯಿಗಳಾದ ಎಲ್ಲ ರಾಜರಿಂದಲೂ ಸಹಿತನಾದ, ಕುರುರಾಜನಾದ ಯುಧಿಷ್ಠಿರನು ಸಂಶಯಗಳನ್ನು ಕಳೆದುಕೊಂಡು ನಿಶ್ಚಿಂತನಾಗಿದ್ದಾನೆ.
ಉಪಾಸ್ತೇ ತ್ವಾಂ ನರವ್ಯಾಘ್ರ ಸಹ ಕೃಷ್ಣೇನ ಧೀಮತಾ |
ತಮಿಮಂ ಪುರಯಾನಾಯ ತ್ವಮನುಜ್ಞಾತುಮರ್ಹಸಿ ॥7॥
ಎಲೈ ನರವ್ಯಾಘ್ರನೇ, ಮೇಧಾವಿಯಾದ ಕೃಷ್ಣನ ಜೊತೆಯಲ್ಲಿ ಅವನು ನಿನ್ನ ಸಮೀಪದಲ್ಲಿದ್ದಾನೆ. ಅಂತಹ ಇವನಿಗೆ ತನ್ನ ಪಟ್ಟಣಕ್ಕೆ ಹೋಗುವಂತೆ ನೀನು ಅನುಮತಿಯನ್ನು ಕೊಡಬೇಕು (ಎಂದು ಹೇಳಿದರು).
ಏವಮುಕ್ತೋ ಭಗವತಾ ವ್ಯಾಸೇನ ಪೃಥಿವೀಪತಿಃ |
ಯುಧಿಷ್ಠಿರಂ ಸಹಾಮಾತ್ಯಮನುಜಜ್ಞೇ ನದೀಸುತಃ ॥8॥
ಭಗವಂತನಾದ ವ್ಯಾಸರಿಂದ ಹೀಗೆ ಹೇಳಲ್ಪಟ್ಟ ಪೃಥಿವೀಪತಿಯಾದ, ಗಂಗಾ ಪುತ್ರರಾದ ಭೀಷ್ಮರು ಅಮಾತ್ಯಸಹಿತನಾದ ಯುಧಿಷ್ಠಿರನಿಗೆ ನಗರಕ್ಕೆ ಹಿಂದಿರುಗುವುದಕ್ಕೆ ಅನುಮತಿಯನ್ನು ನೀಡಿದರು.
ಉವಾಚ ಚೈನಂ ಮಧುರಂ ತತಃ ಶಾಂತನವೋ ನೃಪಃ |
ಪ್ರವಿಶಸ್ವ ಪುರಂ ರಾಜನ್ ವ್ಯೇತು ತೇ ಮಾನಸೋ ಜ್ವರಃ ॥9॥
ಶಂತನು ಪುತ್ರರಾದ ಭೀಷ್ಮರು ಮಧುರವಾದ ಮಾತುಗಳಿಂದ ಅವನನ್ನು ಕುರಿತು ರಾಜನೇ, ಪಟ್ಟಣಕ್ಕೆ ಹಿಂದಿರುಗು. ನಿನ್ನ ಮನಸ್ಸಿನ ಆತಂಕವೆಲ್ಲವೂ ದೂರವಾಗಲಿ.
ಯಜಸ್ವ ವಿವಿಧೈರ್ಯಜ್ಞೈರ್ಬಹ್ವನ್ನೈಃ ಸ್ವಾಪ್ತದಕ್ಷಿಣೈಃ |
ಯಯಾತಿರಿವ ರಾಜೇಂದ್ರ ಶ್ರದ್ಧಾದಮಪುರಃಸರಃ ॥10॥
ಎಲೈ ರಾಜೇಂದ್ರನೇ, ಬಹಳ ಅನ್ನದಾನವನ್ನೂ, ದಕ್ಷಿಣೆಯನ್ನು ಕೊಟ್ಟು ಯಯಾತಿಯಂತೆ ಶ್ರದ್ಧಾ ಮತ್ತು ದಮದಿಂದ ಕೂಡಿದವನಾಗಿ ಯಜ್ಞಗಳನ್ನು ಆಚರಿಸು.
ಕ್ಷತ್ರಧರ್ಮರತಃ ಪಾರ್ಥ ಪಿತೄನ್ ದೇವಾಂಶ್ಚ ತರ್ಪಯ |
ಶ್ರೇಯಸಾ ಯೋಕ್ಷ್ಯಸೇ ಚೈವ ವ್ಯೇತು ತೇ ಮಾನಸೋ ಜ್ವರಃ ॥11॥
ಎಲೈ ಪಾರ್ಥನೇ, ಕ್ಷತ್ರಿಯಧರ್ಮದಲ್ಲಿ ರತನಾಗಿ ಪಿತೃಗಳನ್ನೂ ಮತ್ತು ದೇವತೆಗಳನ್ನೂ ತೃಪ್ತಿಪಡಿಸು. ನಿನಗೆ ಶ್ರೇಯಸ್ಸು ಉಂಟಾಗುವುದು. ನಿನ್ನ ಮನಸ್ಸಿನ ಆತಂಕವನ್ನು ಬಿಡು.
ರಂಜಯಸ್ವ ಪ್ರಜಾಃ ಸರ್ವಾಃ ಪ್ರಕೃತೀಃ ಪರಿಸಾಂತ್ವಯ |
ಸುಹೃದಃ ಫಲಸತ್ಕಾರೈರಭ್ಯರ್ಚಯ ಯಥಾರ್ಹತಃ ॥12॥
ಎಲ್ಲ ಪ್ರಜೆಗಳನ್ನೂ ಸಂತೋಷಪಡಿಸು. ಪ್ರಜೆಗಳನ್ನು ಸಮಾಧಾನಪಡಿಸು. ಸುಹೃದರೆಲ್ಲರನ್ನೂ ಯಥಾಯೋಗ್ಯವಾಗಿ ಫಲ, ಸತ್ಕಾರಗಳಿಂದ ಸಮ್ಮಾನಿಸು.
ಅನು ತ್ವಾಂ ತಾತ ಜೀವಂತು ಮಿತ್ರಾಣಿ ಸುಹೃದಸ್ತಥಾ |
ಚೈತ್ಯಸ್ಥಾನೇ ಸ್ಥಿತಂ ವೃಕ್ಷಂ ಫಲವಂತಮಿವ ದ್ವಿಜಾಃ ॥13॥
ಎಲೈ ಪ್ರೀತಿಪಾತ್ರನೇ, ನಿನ್ನ ಸ್ನೇಹಿತರೂ ಮತ್ತು ಸುಹೃದರು ನಿನ್ನನ್ನು, ದೇವಾಲಯದಲ್ಲಿರುವ ಫಲಭರಿತ ವೃಕ್ಷವನ್ನು ಪಕ್ಷಿಗಳು ಉಪಜೀವಿಸುವಂತೆ ಉಪಜೀವಿಸಲಿ.
ಆಗಂತವ್ಯಂ ಚ ಭವತಾ ಸಮಯೇ ಮಮ ಪಾರ್ಥಿವ |
ವಿನಿವೃತ್ತೇ ದಿನಕರೇ ಪ್ರವೃತ್ತೇ ಚೋತ್ತರಾಯಣೇ ॥14॥
ಎಲೈ ಪಾರ್ಥಿವನೇ, ಸೂರ್ಯನು ದಿಕ್ಕನ್ನು ಬದಲಾಯಿಸಿ ಉತ್ತರಾಯಣದಲ್ಲಿ ಪ್ರವೃತ್ತನಾದಾಗ ನನ್ನ ಸಮಯಕ್ಕೆ (ಸನಿಹಕ್ಕೆ) ನೀನು ಬರಬೇಕು.
ತಥೇತ್ಯುಕ್ತ್ವಾ ತು ಕೌಂತೇಯಃ ಸೋಽಭಿವಾದ್ಯ ಪಿತಾಮಹಮ್ |
ಪ್ರಯಯೌ ಸಪರೀವಾರೋ ನಗರಂ ನಾಗಸಾಹ್ವಯಮ್ ॥15॥
ಕೌಂತೇಯನಾದ ಯುಧಿಷ್ಠಿರನು ಹಾಗೆಯೇ ಆಗಲಿ ಎಂದು ಹೇಳಿ ಪಿತಾಮಹನನ್ನು ನಮಸ್ಕರಿಸಿ ಪರಿವಾರ ಸಹಿತನಾಗಿ ಹಸ್ತಿನಾವತಿಗೆ ಹೊರಟನು.
ಧೃತರಾಷ್ಟ್ರಂ ಪುರಸ್ಕೃತ್ಯ ಗಾಂಧಾರೀಂ ಚ ಪತಿವ್ರತಾಮ್ |
ಸಹ ತೈರ್ಋಷಿಭಿಃ ಸರ್ವೈರ್ಭ್ರಾತೃಭಿಃ ಕೇಶವೇನ ಚ ॥16॥
ಪೌರಜಾನಪದೈಶ್ಚೈವ ಮಂತ್ರಿವೃದ್ಧೈಶ್ಚ ಪಾರ್ಥಿವಃ |

ಪ್ರವಿವೇಶ ಕುರುಶ್ರೇಷ್ಠ ಪುರಂ ವಾರಣಸಾಹ್ವಯಮ್ ॥17॥
ಎಲೈ ಕುರುಶ್ರೇಷ್ಠನೇ, ಅವನು ಧೃತರಾಷ್ಟ್ರನನ್ನೂ, ಪತಿವ್ರತೆಯಾದ ಗಾಂಧಾರಿಯನ್ನೂ ಮುಂದೆ ಮಾಡಿಕೊಂಡು ಎಲ್ಲಾ ಸಹೋದರರ, ಋಷಿಗಳ ಮತ್ತು ಕೃಷ್ಣನ ಜೊತೆಯಲ್ಲಿ, ಹಾಗೆಯೇ ಪೌರ-ಜಾನಪದರ ಮತ್ತು ಮಂತ್ರಿವೃದ್ಧರ ಜೊತೆಯಲ್ಲಿ ಹಸ್ತಿನಾವತಿ ಪಟ್ಟಣವನ್ನು ಪ್ರವೇಶಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ದಾನಧರ್ಮೇ ಯುಧಿಷ್ಠಿರಪುರಪ್ರವೇಶೋ ನಾಮ ಪಂಚಪಂಚಾಶೋತ್ತರದ್ವಿಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ತೈದನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ದಾನಧರ್ಮಪರ್ವ ॥
* * * * *
2. ಭೀಷ್ಮಸ್ವರ್ಗಾರೋಹಣಪರ್ವ
ಇನ್ನೂರ ಐವತ್ತಾರನೆಯ ಅಧ್ಯಾಯ
ಭೀಷ್ಮರಿಂದ ದೇಹತ್ಯಾಗಕ್ಕೆ ಅನುಮತಿಯ ಪ್ರಾರ್ಥನೆ
ವೈಶಂಪಾಯನಃ
ತತಃ ಕುಂತೀಸುತೋ ರಾಜಾ ಪೌರಜಾನಪದಂ ಜನಮ್ ।
ಪೂಜಯಿತ್ವಾ ಯಥಾನ್ಯಾಯಂ ಅನುಜಜ್ಞೇ ಗೃಹಾನ್ ಪ್ರತಿ ॥1॥
ಸಾಂತ್ವಯಾಮಾಸ ನಾರೀಶ್ಚ ಹತವೀರಾ ಹತೇಶ್ವರಾಃ ।
ವಿಪುಲೈರರ್ಥದಾನೈಶ್ಚ ತದಾ ಪಾಂಡುಸುತೋ ನೃಪಃ ॥2॥
ವೈಶಂಪಾಯನ ಅನಂತರ ಕುಂತೀಪುತ್ರನಾದ ಯುಧಿಷ್ಠಿರನು ಪೌರಜಾನಪದರನ್ನು ಯಥಾಯೋಗ್ಯವಾಗಿ ಪೂಜಿಸಿ, ಅವರ ಮನೆಗೆ ಹಿಂದಿರುಗಲು ಅನುಮತಿಯನ್ನು ನೀಡಿದನು. ಪತಿಗಳನ್ನೂ, ಮನೆಯ ಒಡೆಯರನ್ನೂ ಕಳೆದುಕೊಂಡ ನಾರಿಯರನ್ನು ಪಾಂಡುಸುತನಾದ ಯುಧಿಷ್ಠಿರನು ವಿಪುಲವಾದ ಧನ-ದಾನಗಳಿಂದ ಸಮಾಧಾನಪಡಿಸಿದನು.
ಸೋಽಭಿಷಿಕ್ತೋ ಮಹಾಪ್ರಾಜ್ಞಃ ಪ್ರಾಪ್ಯ ರಾಜ್ಯಂ ಯುಧಿಷ್ಠಿರಃ ।
ಅವಸ್ಥಾಪ್ಯ ನರಶ್ರೇಷ್ಠಃ ಸರ್ವಾಃ ಸ್ವಪ್ರಕೃತೀಸ್ತದಾ ॥3॥
ದ್ವಿಜೇಭ್ಯೋ ಬಲಮುಖ್ಯೇಭ್ಯೋ ನೈಗಮೇಭ್ಯಶ್ಚ ಸರ್ವಶಃ ।
ಪ್ರತಿಗೃಹ್ಯಾಶಿಷೋ ಮುಖ್ಯಾಸ್ತದಾ ಧರ್ಮಭೃತಾಂ ವರಃ ॥4॥
ಉಷಿತ್ವಾ ಶರ್ವರೀಃ ಶ್ರೀಮಾನ್ ಪಂಚಾಶನ್ನಗರೋತ್ತಮೇ ।
ಸಮಯಂ ಕೌರವಾಗ್ರ್ಯಸ್ಯ ಸಸ್ಮಾರ ಪುರುಷರ್ಷಭಃ ॥5॥
ಮಹಾಪ್ರಾಜ್ಞನಾದ ಯುಧಿಷ್ಠಿರನು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪಡೆದು ಎಲ್ಲ ಪ್ರಜೆಗಳನ್ನು ಅವರವರ ಸ್ಥಾನಗಳಲ್ಲಿ ಇರಿಸಿ, ಬ್ರಾಹ್ಮಣರಿಂದಲೂ, ಸೇನಾ ನಾಯಕರಿಂದಲೂ, ವೇದಜ್ಞರಿಂದಲೂ ಶ್ರೇಷ್ಠವಾದ ಆಶೀರ್ವಾದವನ್ನು ಪಡೆದು ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅವನು ಶ್ರೇಷ್ಠ ಪಟ್ಟಣವಾದ ಹಸ್ತಿನಾವತಿಯಲ್ಲಿ ಐವತ್ತು ರಾತ್ರಿಗಳನ್ನು ಕಳೆದು ಕೌರವಶ್ರೇಷ್ಠನಾದ ಭೀಷ್ಮರ ಪ್ರಯಾಣ ಸಮಯವನ್ನು ಸ್ಮರಿಸಿದನು.
ಸ ನಿರ್ಯಯೌ ಗಜಪುರಾದ್ ಯಾಜಕೈಃ ಪರಿವಾರಿತಃ ।
ದೃಷ್ಟ್ವಾ ನಿವೃತ್ತಮಾದಿತ್ಯಂ ಪ್ರವೃತ್ತಂ ಚೋತ್ತರಾಯಣಮ್ ॥6॥
ಸೂರ್ಯನು ತನ್ನ ದಿಕ್ಕನ್ನು ಬದಲಿಸಿ ಉತ್ತರಾಯಣದಲ್ಲಿ ಪ್ರವೃತ್ತನಾಗಿರುವುದನ್ನು ನೋಡಿ ಪುರೋಹಿತರಿಂದ ಪರಿವಾರಿತನಾಗಿ ಹಸ್ತಿನಪುರದಿಂದ ಹೊರಟನು.
ಘೃತಂ ಮಾಲ್ಯಂ ಚ ಗಂಧಾಂಶ್ಚ ಕ್ಷೌಮಾಣಿ ಚ ಯುಧಿಷ್ಠಿರಃ ।
ಚಂದನಾಗರುಮುಖ್ಯಾನಿ ತಥಾ ಕಾಲಾಗರೂಣಿ ಚ ॥7॥
ಪ್ರಸ್ಥಾಪ್ಯ ಪೂರ್ವಂ ಕೌಂತೇಯೋ ಭೀಷ್ಮಸಂಸ್ಕರಣಾಯ ಚ ।
ಮಾಲ್ಯಾನಿ ಚ ಮಹಾರ್ಹಾಣಿ ರತ್ನಾನಿ ವಿವಿಧಾನಿ ಚ ॥8॥
ಧೃತರಾಷ್ಟ್ರಂ ಪುರಸ್ಕೃತ್ಯ ಗಾಂಧಾರೀಂ ಚ ಯಶಸ್ವಿನೀಮ್ ।
ಮಾತರಂ ಚ ಪೃಥಾಂ ಧೀಮಾನ್ ಭ್ರಾತೄಂಶ್ಚ ಪುರುಷರ್ಷಭಃ ॥9॥
ಜನಾರ್ದನೇನಾನುಗತೋ ವಿದುರೇಣ ಚ ಧೀಮತಾ ।
ಯುಯುತ್ಸುನಾ ಚ ಕೌರವ್ಯೋ ಯುಯುಧಾನೇನ ಚಾಭಿಭೋ ॥10॥
ಮಹತಾ ರಾಜಭೋಗ್ಯೇನ ಪರಿಬರ್ಹೇಣ ಸಂವೃತಃ ।
ಸ್ತೂಯಮಾನೋ ಮಹಾರಾಜ ಭೀಷ್ಮಸ್ಯಾಗ್ನೀನನುವ್ರಜನ್ ॥11॥
ನಿಶ್ಚಕ್ರಾಮ ಪುರಾತ್ ತಸ್ಮಾದ್ ಯಥಾ ದೇವಪತಿಸ್ತಥಾ ।
ಆಸಸಾದ ಕುರುಕ್ಷೇತ್ರೇ ತತಃ ಶಾಂತನವಂ ನೃಪಮ್ ॥12॥
ಕೌಂತೇಯನಾದ ಯುಧಿಷ್ಠಿರನು ಘೃತ, ಮಾಲ್ಯ, ಗಂಧಗಳು, ರೇಷ್ಮೆ ವಸ್ತ್ರಗಳು, ಚಂದನ, ಅಗರು, ಕಾಲಾಗರು ಮುಂತಾದವುಗಳನ್ನು ಮೊದಲೇ ಕಳುಹಿಸಿ, ಬೆಲೆ ಬಾಳುವ ಮಾಲೆಗಳನ್ನು, ವಿವಿಧವಾದ ರತ್ನಗಳನ್ನು ತೆಗೆದುಕೊಂಡು ಧೃತರಾಷ್ಟ್ರನನ್ನು, ಯಶಸ್ವಿನಿಯಾದ ಗಾಂಧಾರಿಯನ್ನು, ತಾಯಿಯಾದ ಕುಂತಿಯನ್ನು, ಸಹೋದರರನ್ನು ಮುಂದೆ ಮಾಡಿಕೊಂಡು, ಪುರುಷಶ್ರೇಷ್ಠನಾದ ಅವನು

ಜನಾರ್ದನನಿಂದಲೂ, ಮೇಧಾವಿಯಾದ ವಿದುರನಿಂದಲೂ, ಯುಯುತ್ಸುವಿನಿಂದಲೂ, ಯುಯುಧಾನನಿಂದಲೂ ಹಿಂಬಾಲಿಸಲ್ಪಟ್ಟು, ರಾಜಭೋಗ್ಯವಾದ ದೊಡ್ಡ ಉಡುಗೊರೆಗಳನ್ನು ತೆಗೆದುಕೊಂಡು ಭೀಷ್ಮರ ಅಗ್ನಿಯ ಹಿಂದೆ ಹೋಗುತ್ತಾ ಸ್ತೋತ್ರ ಮಾಡಲ್ಪಟ್ಟವನಾಗಿ ದೇವಪತಿಯಾದ ಇಂದ್ರನಂತೆ ಆ ಪಟ್ಟಣದಿಂದ ಹೊರಟನು. ಅನಂತರ ಕುರುಕ್ಷೇತ್ರದಲ್ಲಿ ಶಂತನು ಪುತ್ರರಾದ ಭೀಷ್ಮರನ್ನು ಸಮೀಪಿಸಿದನು.

ಉಪಾಸ್ಯಮಾನಂ ವ್ಯಾಸೇನ ಪಾರಾಶರ್ಯೇಣ ಧೀಮತಾ |
ನಾರದೇನ ಚ ರಾಜರ್ಷೇ ದೇವಲೇನಾಸಿತೇನ ಚ ॥13॥
ಹತಶಿಷ್ಟೈರ್ನೃಪೈಶ್ಚಾನ್ಯೈರ್ನಾನಾದೇಶಸಮಾಗತೈಃ |
ರಕ್ಷಿಭಿಶ್ಚ ಮಹಾತ್ಮಾನಂ ರಕ್ಷ್ಯಮಾಣಂ ಸಮಂತತಃ ॥14॥
ಶಯಾನಂ ವೀರಶಯನೇ ದದರ್ಶ ನೃಪತಿಸ್ತತಃ |
ತತೋ ರಥಾದವಾರೋಹದ್ ಭ್ರಾತೃಭಿಃ ಸಹ ಧರ್ಮರಾಟ್ ॥15॥

ಎಲೈ ರಾಜರ್ಷಿಯೇ, ಮೇಧಾವಿಗಳಾದ, ಪರಾಶರ ಪುತ್ರರಾದ ವ್ಯಾಸರಿಂದಲೂ, ನಾರದರಿಂದಲೂ, ದೇವಲರಿಂದಲೂ, ಅಸಿತರಿಂದಲೂ ಉಪಾಸ್ಯಮಾನರಾದ ಅಳಿದುಳಿದ ನಾನಾ ದೇಶದ ರಾಜರಿಂದಲೂ, ಕಾವಲುಗಾರರಿಂದಲೂ ಎಲ್ಲ ಕಡೆಗಳಿಂದಲೂ ರಕ್ಷಿಸಲ್ಪಡುತ್ತಿದ್ದ, ವೀರಶಯನದಲ್ಲಿ ಮಲಗಿದ್ದ ಮಹಾತ್ಮರಾದ ಭೀಷ್ಮರನ್ನು ನೋಡಿದನು. ಆಗ ಧರ್ಮರಾಜನು ಸಹೋದರರ ಜೊತೆಯಲ್ಲಿ ರಥದಿಂದ ಕೆಳಗೆ ಇಳಿದನು.

ಅಭಿವಾದ್ಯಾಥ ಕೌಂತೇಯಃ ಪಿತಾಮಹಮರಿಂದಮಮ್ |
ದ್ವೈಪಾಯನಾದೀನ್ ವಿಪ್ರಾಂಶ್ಚ ತೈಶ್ಚ ಪ್ರತ್ಯಭಿನಂದಿತಃ ॥16॥

ಕೌಂತೇಯನು ಅರಿಂದಮರಾದ, ಪಿತಾಮಹರಾದ ಭೀಷ್ಮರಿಗೆ ನಮಸ್ಕರಿಸಿ, ದ್ವೈಪಾಯನಾದಿ ಬ್ರಾಹ್ಮಣರಿಗೂ ನಮಸ್ಕರಿಸಿ, ಅವರಿಂದ ಪ್ರತಿಯಾಗಿ ಅಭಿನಂದಿಸಲ್ಪಟ್ಟನು.

ಋತ್ವಿಗ್ಭಿರ್ಬ್ರಹ್ಮಕಲ್ಪೈಶ್ಚ ಭ್ರಾತೃಭಿಶ್ಚ ಸಹಾಚ್ಯುತಃ |
ಆಸಾದ್ಯ ಶರತಲ್ಪಸ್ಥಮೃಷಿಭಿಃ ಪರಿವಾರಿತಮ್ ॥17॥
ಅಬ್ರವೀದ್ ಭರತಶ್ರೇಷ್ಠಂ ಧರ್ಮರಾಜೋ ಯುಧಿಷ್ಠಿರಃ |
ಭ್ರಾತೃಭಿಃ ಸಹ ಕೌರವ್ಯ ಶಯಾನಂ ನಿಮ್ನಗಾಸುತಮ್ ॥18॥

ಬ್ರಹ್ಮಸದೃಶರಾದ ಋತ್ವಿಜರಿಂದಲೂ, ಸಹೋದರರಿಂದಲೂ ಕೂಡಿದ, ತನ್ನ ಗುಣಗಳಿಂದ ಚ್ಯುತನಾಗದ ಅವನು ಋಷಿಗಳಿಂದ ಸುತ್ತುವರಿಯಲ್ಪಟ್ಟ ಶರತಲ್ಪಗತರಾದ ಭೀಷ್ಮರನ್ನು ಸಮೀಪಿಸಿ, ಎಲೈ ಕೌರವ್ಯನೇ, ಮಲಗಿದ್ದ ಗಂಗಾಸುತರಾದ ಭೀಷ್ಮರನ್ನು ಕುರಿತು ಸಹೋದರರ ಜೊತೆಯಲ್ಲಿ ಮಾತನಾಡಿದನು.

ಯುಧಿಷ್ಠಿರೋಽಹಂ ನೃಪತೇ ನಮಸ್ತೇ ಜಾಹ್ನವೀಸುತ |
ಶೃಣೋಷಿ ಚೇನ್ಮಹಾಬಾಹೋ ಬ್ರೂಹಿ ಕಿಂ ಕರವಾಣಿ ತೇ ॥19॥

ಗಂಗಾಸುತನೇ, ರಾಜನೇ, ಮಹಾಬಾಹುವೇ, ಯುಧಿಷ್ಠಿರನಾದ ನಾನು ಬಂದಿದ್ದೇನೆ. ನಿಮಗಾಗಿ ನಾನು ಏನು ಮಾಡಬೇಕೆಂದು ತಿಳಿಸಿರಿ.

ಪ್ರಾಪ್ತೋಽಸ್ಮಿ ಸಮಯೇ ರಾಜನ್ನಗ್ನೀನಾದಾಯ ತೇ ವಿಭೋ |
ಆಚಾರ್ಯಾ ಬ್ರಾಹ್ಮಣಾಶ್ಚೈವ ಋತ್ವಿಜೋ ಭ್ರಾತರಶ್ಚ ಮೇ ॥20॥
ಪುತ್ರಶ್ಚ ತೇ ಮಹಾತೇಜಾ ಧೃತರಾಷ್ಟ್ರೋ ಜನೇಶ್ವರಃ |
ಉಪಸ್ಥಿತಃ ಸಹಾಮಾತ್ಯೋ ವಾಸುದೇವಶ್ಚ ವೀರ್ಯವಾನ್ ॥21॥
ಹತಶಿಷ್ಟಾಶ್ಚ ರಾಜಾನಃ ಸರ್ವೇ ಚ ಕುರುಜಾಂಗಲಾಃ |
ತಾನ್ ಪಶ್ಯ ಕುರುಶಾರ್ದೂಲ ಸಮುನ್ಮೀಲ್ಯ ಚ ಲೋಚನೇ ॥22॥

ನೀನು ಹೇಳಿದ ಸಮಯದಲ್ಲಿ ನಿನ್ನ ಅಗ್ನಿಯನ್ನು ತೆಗೆದುಕೊಂಡು ಬಂದಿದ್ದೇನೆ. ಆಚಾರ್ಯರು, ಬ್ರಾಹ್ಮಣರು, ಋತ್ವಿಜರು, ನನ್ನ ತಮ್ಮಂದಿರು, ನಿನ್ನ ಪುತ್ರನಾದ ಮಹಾತೇಜಸ್ವಿಯಾದ, ಅಮಾತ್ಯರಿಂದ ಕೂಡಿದ ಧೃತರಾಷ್ಟ್ರ ರಾಜ, ಪರಾಕ್ರಮಶಾಲಿಯಾದ ಕೃಷ್ಣ ಅಳಿದುಳಿದ ರಾಜರು, ಕುರುಜಾಂಗಲದ ಎಲ್ಲಾ ಪ್ರಜೆಗಳೂ ಬಂದಿದ್ದಾರೆ. ಎಲೈ ಕುರುಶಾರ್ದೂಲನೇ ಕಣ್ಣುಗಳನ್ನು ತೆರೆದು ಅವರನ್ನು ನೋಡು.

ಯಚ್ಚೇಹ ಕಿಂಚಿತ್ ಕರ್ತವ್ಯಂ ತತ್ಸರ್ವಂ ಪ್ರಾಪಿತಂ ಮಯಾ |
ಯಥೋಕ್ತಂ ಭವತಾ ಕಾಲೇ ಸರ್ವಮೇವ ಚ ತತ್ ಕೃತಮ್ ॥23॥

ನೀನು ಹೇಳಿದಂತೆ ನಾನು ಎಲ್ಲವನ್ನೂ ಅಣಿಗೊಳಿಸಿದ್ದೇನೆ. ನೀನು ಹೇಳಿದ ಕಾಲದಲ್ಲಿ ಸಿದ್ಧಪಡಿಸಬೇಕಾದ ಎಲ್ಲವನ್ನೂ ಸಿದ್ಧಪಡಿಸಿದ್ದೇನೆ (ಎಂದು ಹೇಳಿದನು).

ಏವಮುಕ್ತಸ್ತು ಗಾಂಗೇಯಃ ಕುಂತೀಪುತ್ರೇಣ ಧೀಮತಾ |
ದದರ್ಶ ಭಾರತಾನ್ ಸರ್ವಾನ್ ಸ್ಥಿತಾನ್ ಸಂಪರಿವಾರ್ಯ ತಮ್ ॥

ಮೇಧಾವಿಯಾದ ಕುಂತೀಪುತ್ರನಾದ ಯುಧಿಷ್ಠಿರನಿಂದ ಹೀಗೆ ಹೇಳಲ್ಪಟ್ಟ ಭೀಷ್ಮರು ತಮ್ಮನ್ನು ಸುತ್ತುವರಿದು ನಿಂತಿದ್ದ ಎಲ್ಲಾ ಭಾರತರನ್ನೂ ನೋಡಿದರು.

ತತಶ್ಚಲವಲಿರ್ಭೀಷ್ಮಃ ಪ್ರಗೃಹ್ಯ ವಿಪುಲಂ ಭುಜಮ್ |
ಓಘಮೇಘಸ್ವನೋ ವಾಗ್ಮೀ ಕಾಲೇ ವಚನಮಬ್ರವೀತ್ ॥25॥

ಆಗ ಕೈಗಳು ನಡುಗುತ್ತಿದ್ದ ಭೀಷ್ಮರು ತಮ್ಮ ವಿಸ್ತಾರವಾದ ಭುಜವನ್ನು ಹಿಡಿದುಕೊಂಡು, ವಾಗ್ಮಿಗಳಾದ ಅವರು ಆ ಕಾಲದಲ್ಲಿ ಮೇಘಗಂಭೀರವಾದ ಮಾತನ್ನಾಡಿದರು.

ದಿಷ್ಟ್ಯಾ ಪ್ರಾಪ್ತೋಽಸಿ ಕೌಂತೇಯ ಸಹಾಮಾತ್ಯೋ ಯುಧಿಷ್ಠಿರ |
ಪರಿವೃತ್ತೋ ಹಿ ಭಗವಾನ್ ಸಹಸ್ರಾಂಶುರ್ದಿವಾಕರಃ ||26||
ಕೌಂತೇಯನೇ, ಯುಧಿಷ್ಠಿರನೇ, ದೇವರ ದಯೆಯಿಂದ ನೀನು ಅಮಾತ್ಯ ಸಹಿತನಾಗಿ ಬಂದಿದ್ದೀಯೆ. ಸಹಸ್ರಾಂಶುವಾದ ಪೂಜ್ಯನಾದ ಸೂರ್ಯನು ದಿಕ್ಕನ್ನು ಬದಲಿಸಿದ್ದಾನೆ.
ಅಷ್ಟಪಂಚಶತಂ ರಾತ್ರ್ಯಃ ಶಯಾನಸ್ಯಾದ್ಯ ಮೇ ಗತಾಃ |
ಶರೇಷು ನಿಶಿತಾಗ್ರೇಷು ಯಥಾ ವರ್ಷಶತಂ ತಥಾ ||27||
ತೀಕ್ಷ್ಣವಾದ ಬಾಣಗಳ ತುದಿಗಳ ಮೇಲೆ ಮಲಗಿರುವ ನನಗೆ ಈ ದಿನದವರೆಗೆ ಐವತ್ತೆಂಟು ರಾತ್ರಿಗಳು ನೂರು ವರ್ಷಗಳಂತೆ ಕಳೆದಿದೆ.
ಮಾಘೋಽಯಂ ಸಮನುಪ್ರಾಪ್ತೋ ಮಾಸಃ ಪುಣ್ಯೋ ಯುಧಿಷ್ಠಿರ |
ತ್ರಿಭಾಗಶೇಷಃ ಪಕ್ಷೋಽಯಂ ಶುಕ್ಲೋ ಭವಿತುಮರ್ಹತಿ ||28||
ಯುಧಿಷ್ಠಿರನೇ, ಪುಣ್ಯಪ್ರದವಾದ ಈ ಮಾಘಮಾಸವು ಪ್ರಾಪ್ತವಾಗಿದೆ. ಪಕ್ಷದ ಮೂರನೆಯ ಒಂದು ಭಾಗ ಉಳಿದಿರುವ ಈ ದಿನವು ಶುಕ್ಲ ಪಕ್ಷದ ಅಷ್ಟಮಿಯಾಗಬೇಕು (ಪೌರ್ಣಮಾಸಿಯಿಂದ ಮಾಸ ಗಣನೆಯ ದೃಷ್ಟಿಯಿಂದ ಶುಕ್ಲ ಪಕ್ಷದ ಅಷ್ಟಮಿಯಾಗುತ್ತದೆ).
ಏವಮುಕತ್ವ ತು ಗಾಂಗೇಯೋ ಧರ್ಮಪುತ್ರಂ ಯುಧಿಷ್ಠಿರಮ್ |
ಧೃತರಾಷ್ಟ್ರಮಥಾಮಂತ್ರ್ಯ ಕಾಲೇ ವಚನಮಬ್ರವೀತ್ ||29||
ಭೀಷ್ಮರು ಧರ್ಮಪುತ್ರನಾದ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿ, ಧೃತರಾಷ್ಟ್ರನನ್ನು ಹತ್ತಿರಕ್ಕೆ ಕರೆದು ಆ ಕಾಲದಲ್ಲಿ ಮಾತನಾಡಿದರು.
ರಾಜನ್ ವಿದಿತಧರ್ಮೋಽಸಿ ಸುನಿರ್ಣೀತಾರ್ಥಸಂಶಯಃ |
ಬಹುಶ್ರುತಾ ಹಿ ತೇ ವಿಪ್ರಾ ಬಹವಃ ಪರ್ಯುಪಾಸಿತಾಃ ||30||
ರಾಜನೇ, ನೀನು ಧರ್ಮಗಳನ್ನು ತಿಳಿದಿದ್ದೀಯೆ. ಅರ್ಥ-ಸಂಶಯಗಳ ಒಳ್ಳೆಯ ನಿರ್ಣಯಗಳನ್ನು ಬಲ್ಲೆ. ನೀನು ಬಹುಶ್ರುತರಾದ ಅನೇಕ ವಿಪ್ರರನ್ನು ಉಪಾಸನೆ ಮಾಡಿದ್ದೀಯೆ.
ವೇದಶಾಸ್ತ್ರಾಣಿ ಸರ್ವಾಣಿ ಧರ್ಮಾಂಶ್ಚ ಮನುಜೇಶ್ವರ |
ವೇದಾಂಶ್ಚ ಚತುರಃ ಸಾಂಗಾನ್ ಅಖಿಲೇನೈವಬುದ್ಧ್ಯಥಾಃ ||31||
ಎಲೈ ಮನುಜೇಶ್ವರನೇ, ನೀನು ಎಲ್ಲ ವೇದಶಾಸ್ತ್ರಗಳನ್ನೂ, ಧರ್ಮಶಾಸ್ತ್ರಗಳನ್ನೂ, ಸಾಂಗವಾದ ನಾಲ್ಕು ವೇದಗಳನ್ನೂ ಸಂಪೂರ್ಣವಾಗಿ ತಿಳಿದಿದ್ದೀಯೆ.
ನ ಶೋಚಿತವ್ಯಂ ಕೌರವ್ಯ ಭವಿತವ್ಯಂ ಹಿ ತತ್ ತಥಾ |
ಶ್ರುತಂ ದೇವರಹಸ್ಯಂ ತೇ ಕೃಷ್ಣದ್ವೈಪಾಯನಾದಪಿ ||32||
ಕೌರವ್ಯನೇ, ಶೋಕಪಡಬಾರದು. ಆಗಬೇಕಾದುದು ಹಾಗೆಯೇ ಆಗುತ್ತದೆ. ಕೃಷ್ಣದ್ವೈಪಾಯನರಿಂದ ನೀನು ದೇವರಹಸ್ಯವನ್ನು ಕೇಳಿದ್ದೀಯೆ.
ಯಥಾ ಪಾಂಡೋಃ ಸುತಾ ರಾಜಂಸ್ತಥೈವ ತವ ಧರ್ಮತಃ |
ತಾನ್ ಪಾಲಯ ಸ್ಥಿತೋ ಧರ್ಮೇ ಗುರುಶುಶ್ರೂಷಣೇ ರತಾನ್ ||33||
ಎಲೈ ರಾಜನೇ, ಪಾಂಡವರು ಹೇಗೆ ಪಾಂಡುವಿನ ಮಕ್ಕಳೋ ಹಾಗೆಯೇ ಧರ್ಮದ ದೃಷ್ಟಿಯಿಂದ ನಿನ್ನ ಮಕ್ಕಳೂ ಆಗಿದ್ದಾರೆ. ಗುರುಸೇವೆಯಲ್ಲಿ ನಿರತರಾದ ಅವರನ್ನು ಧರ್ಮದಿಂದ ಪಾಲಿಸು.
ಧರ್ಮರಾಜೋ ಹಿ ಶುದ್ಧಾತ್ಮಾ ನಿದೇಶೇ ಸ್ಥಾಸ್ಯತೇ ತವ |
ಆನೃಶಂಸ್ಯಪರಂ ಹ್ಯೇನಂ ಜಾನಾಮಿ ಗುರುವತ್ಸಲಮ್ ||34||
ಶುದ್ಧಾತ್ಮನಾದ ಧರ್ಮರಾಜನು ನಿನ್ನ ಆಜ್ಞೆಯನ್ನು ಪಾಲಿಸುವನು. ದಯಾಪರನೂ, ಗುರುವತ್ಸಲನೂ ಆದ ಅವನನ್ನು ನಾನು ತಿಳಿದಿದ್ದೇನೆ.
ತವ ಪುತ್ರಾ ದುರಾತ್ಮಾನಃ ಕ್ರೋಧಲೋಭಪರಾಯಣಾಃ |
ಈರ್ಷ್ಯಾಭಿಭೂತಾ ದುರ್ವೃತ್ತಾಸ್ತಾನ್ನ ಶೋಚಿತುಮರ್ಹಸಿ ||35||
ನಿನ್ನ ಮಕ್ಕಳು ದುಷ್ಟರು. ಕ್ರೋಧ-ಲೋಭ ಪರಾಯಣರು. ಅಸೂಯೆಯಿಂದ ಕೂಡಿ ದುರ್ನಡತೆಯುಳ್ಳವರು. ಅವರನ್ನು ಕುರಿತು ಶೋಕಿಸಬೇಡ (ಎಂದು ಹೇಳಿದರು).
ವೈಶಂಪಾಯನಃ
ಏತಾವದುಕತ್ವ ವಚನಂ ಧೃತರಾಷ್ಟ್ರಂ ಮನೀಷಿಣಮ್ |
ವಾಸುದೇವಂ ಮಹಾಬಾಹುಮಭ್ಯಭಾಷತ ಕೌರವಃ ||36||
ವೈಶಂಪಾಯನ ಮೇಧಾವಿಯಾದ ಧೃತರಾಷ್ಟ್ರನನ್ನು ಕುರಿತು ಈ ಮಾತುಗಳನ್ನು ಆಡಿ ಭೀಷ್ಮರು ಮಹಾಬಾಹುವಾದ ವಾಸುದೇವನನ್ನು ಕುರಿತು ಮಾತನಾಡಿದರು.
ಭಗವನ್ ದೇವದೇವೇಶ ಸುರಾಸುರನಮಸ್ಕೃತ |
ತ್ರಿವಿಕ್ರಮ ನಮಸ್ತೇಽಸ್ತು ಶಂಖಚಕ್ರಗದಾಧರ ||37||
ಭಗವಂತನೇ, ದೇವದೇವೇಶನೇ, ಸುರಾಸುರ ನಮಸ್ಕೃತನೇ, ತ್ರಿವಿಕ್ರಮನೇ, ಶಂಖಚಕ್ರಗದಾಧರನೇ, ನಿನಗೆ ನಮಸ್ಕಾರ.
ಅನುಜಾನೀಹಿ ಮಾಂ ಕೃಷ್ಣ ವೈಕುಂಠ ಪುರುಷೋತ್ತಮ |
ರಕ್ಷ್ಯಾಶ್ಚ ತೇ ಪಾಂಡವೇಯಾ ಭವಾನ್ ಹ್ಯೇಷಾಂ ಪರಾಯಣಮ್ ||
ವೈಕುಂಠನೇ, ಪುರುಷೋತ್ತಮನೇ, ಕೃಷ್ಣನೇ, ನನಗೆ ಅನುಮತಿಯನ್ನು ಕೊಡು. ನೀನು ಪಾಂಡವರನ್ನು ರಕ್ಷಿಸಬೇಕು. ನೀನೇ ಅವರಿಗೆ

ಮುಖ್ಯಾಶ್ರಯನಷ್ಟೆ?
ಉಕ್ತವಾನಸ್ಮಿ ದುರ್ಬುದ್ಧಿಂ ಮಂದಂ ದುರ್ಯೋಧನಂ ಪುರಾ |
ಯತಃ ಕೃಷ್ಣಸ್ತತೋ ಧರ್ಮೋ ಯತೋ ಧರ್ಮಸ್ತತೋ ಜಯಃ ॥39॥
ವಾಸುದೇವೇನ ತೀರ್ಥೇನ ಪುತ್ರ ಸಂಶಾಮ್ಯ ಪಾಂಡವೈಃ |
ಸಂಧಾನಸ್ಯ ಪರಃ ಕಾಲಸ್ತವೇತಿ ಚ ಪುನಃ ಪುನಃ ॥40॥
ನಾನು ಮಂದಬುದ್ಧಿಯಾದ ದುರ್ಯೋಧನನನ್ನು ಕುರಿತು ಹಿಂದೆಯೇ ಎಲ್ಲಿ ಕೃಷ್ಣನಿದ್ದಾನೋ ಅಲ್ಲಿ ಧರ್ಮವಿದೆ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಿದೆ. ಪುತ್ರನೇ, ಪೂಜ್ಯರಲ್ಲಿ ಶ್ರೇಷ್ಠನಾದ ಕೃಷ್ಣನ ಜೊತೆಯಲ್ಲಿ ಮತ್ತು ಪಾಂಡವರ ಜೊತೆಯಲ್ಲಿ ಸಂಧಿಯನ್ನು ಮಾಡಿಕೊ. ಸಂಧಿಯನ್ನು ಮಾಡಿಕೊಳ್ಳಲು ಇದು ನಿನಗೆ ಶ್ರೇಷ್ಠವಾದ ಕಾಲ ಎಂದು ಪುನಃ ಪುನಃ ಹೇಳಿದೆ.
ನ ಚ ಮೇ ತದ್ವಚೋ ಮೂಢಃ ಕೃತವಾನ್ ಸ ಸುಮಂದಧೀಃ |
ಘಾತಯಿತ್ವೇಹ ಪೃಥಿವೀಂ ತತಃ ಸ ನಿಧನಂ ಗತಃ ॥41॥
ಮೂಢನೂ, ಅತ್ಯಂತ ಮಂದಬುದ್ಧಿಯುಳ್ಳವನೂ ಆದ ಅವನು ನನ್ನ ಮಾತನ್ನು ಕೇಳಲಿಲ್ಲ. ಪೃಥ್ವಿಯನ್ನೆಲ್ಲಾ ಕೊಲ್ಲಿಸಿ ಅವನು ನಿಧನವನ್ನು ಹೊಂದಿದನು.
ತ್ವಾಂ ಚ ಜಾನಾಮ್ಯಹಂ ವೀರ ಪುರಾಣಮೃಷಿಸತ್ತಮಮ್ |
ನರೇಣ ಸಹಿತಂ ದೇವಂ ಬದರ್ಯಾಂ ಸುಚಿರೋಷಿತಮ್ ॥42॥
ತಥಾ ಮೇ ನಾರದಃ ಪ್ರಾಹ ವ್ಯಾಸಶ್ಚ ಸುಮಹಾತಪಾಃ |
ನರನಾರಾಯಣಾವೇತೌ ಸಂಭೂತೌ ಮನುಜೇಷ್ವಿತಿ ॥43॥
ಎಲೈ ದೇವನೇ, ನಿನ್ನನ್ನು ನಾನು ಬದರಿಯಲ್ಲಿ ನರನ ಜೊತೆಯಲ್ಲಿ ಬಹುಕಾಲ ವಾಸ ಮಾಡಿದ, ಋಷಿಶ್ರೇಷ್ಠನಾದ, ಪ್ರಾಚೀನನಾದ ದೇವನೆಂದು ತಿಳಿದಿದ್ದೇನೆ. ನನಗೆ ನಾರದರು, ಮಹಾತಪಸ್ವಿಗಳಾದ ವ್ಯಾಸರು ಇವರಿಬ್ಬರೂ ನರ-ನಾರಾಯಣರು ಮನುಷ್ಯಯೋನಿಯಲ್ಲಿ ಅವತಾರ ಮಾಡಿದ್ದಾರೆ ಎಂದು ಹೇಳಿದ್ದಾರೆ (ಎಂದು ಹೇಳಿದರು).
ವಾಸುದೇವಃ
ಅನುಜಾನಾಮಿ ಭೀಷ್ಮ ತ್ವಾಂ ವಸೂನಾಪ್ನುಹಿ ಪಾರ್ಥಿವ |
ನ ತೇಽಸ್ತಿ ವೃಜಿನಂ ಕಿಂಚಿನ್ಮಯಾ ದೃಷ್ಟಂ ಮಹಾದ್ಯುತೇ ॥44॥
ವಾಸುದೇವ ಭೀಷ್ಮನೇ, ನಿನಗೆ ಅನುಜ್ಞೆಯನ್ನು ಕೊಡುತ್ತಿದ್ದೇನೆ. ಪಾರ್ಥಿವನೇ, ವಸುಗಳ ಜೊತೆಯಲ್ಲಿ ಸೇರುವವನಾಗು. ಮಹಾದ್ಯುತಿಯೇ, ನಿನ್ನಲ್ಲಿ ನನ್ನ ಕಣ್ಣಿಗೆ ಕಾಣುವಂತಹ ಯಾವ ದೋಷವೂ ಇಲ್ಲ.
ಪಿತೃಭಕ್ತೋಽಸಿ ರಾಜರ್ಷೇ ಮಾರ್ಕಂಡೇಯ ಇವಾಪರಃ |
ತೇನ ಮೃತ್ಯುಸ್ತವ ವಶೇ ಸ್ಥಿತೋ ಭೃತ್ಯ ಇವಾನತಃ ॥45॥
ಎಲೈ ರಾಜರ್ಷಿಯೇ, ನೀನು ಇನ್ನೊಬ್ಬ ಮಾರ್ಕಂಡೇಯನಂತೆ ಪಿತೃಭಕ್ತನಾಗಿದ್ದೀಯೆ. ಆದ್ದರಿಂದ ವಿನೀತನಾದ ಕಿಂಕರನಂತೆ ಮೃತ್ಯುವು ನಿನ್ನ ಬಳಿ ನಿಂತಿದೆ.
ವೈಶಂಪಾಯನಃ
ಏವಮುಕ್ತಸ್ತು ಗಾಂಗೇಯಃ ಪಾಂಡವಾನಿದಮಬ್ರವೀತ್ |
ಧೃತರಾಷ್ಟ್ರಮುಖಾಂಶ್ಚಾಪಿ ಸರ್ವಾನ್ಸಸುಹೃದಸ್ತಥಾ ॥46॥
ವೈಶಂಪಾಯನ ಹೀಗೆ ಹೇಳಲ್ಪಟ್ಟ ಭೀಷ್ಮರು ಧೃತರಾಷ್ಟ್ರ ಸಹಿತರಾದ ಪಾಂಡವರನ್ನು ಮತ್ತು ಎಲ್ಲಾ ಸುಹೃದರನ್ನೂ ಕುರಿತು ಹೀಗೆ ಹೇಳಿದರು.
ಪ್ರಾಣಾನುತ್ಸ್ರಷ್ಟುಮಿಚ್ಛಾಮಿ ತನ್ಮಾಽನುಜ್ಞಾತುಮರ್ಹಥ |
ಸತ್ಯೇ ತು ಯತಿತವ್ಯಂ ವಃ ಸತ್ಯಂ ಹಿ ಪರಮಂ ಬಲಮ್ ॥47॥
ನಾನು ಪ್ರಾಣಗಳನ್ನು ಬಿಡಲು ಬಯಸಿದ್ದೇನೆ. ನನಗೆ ಅನುಮತಿಯನ್ನು ನೀಡಿ. ನೀವು ಸತ್ಯದಲ್ಲಿಯೇ ಪ್ರಯತ್ನ ಪಡಬೇಕು. ಸತ್ಯವೇ ಪರಮ ಬಲ.
ಆನೃಶಂಸ್ಯಪರೈರ್ಭಾವ್ಯಂ ಸದೈವ ನಿಯತಾತ್ಮಭಿಃ |
ಬ್ರಹ್ಮಣ್ಯೈರ್ಧರ್ಮಶೀಲೈಶ್ಚ ತಪೋನಿತ್ಯೈಶ್ಚ ಭಾರತ ॥48॥
ಎಲೈ ಭಾರತನೇ, ಆತ್ಮಜಯದಿಂದ ಕೂಡಿ ಯಾವಾಗಲೂ ದಯಾಪರ ಆಗಿರಬೇಕು. ಯಾವಾಗಲೂ ಬ್ರಾಹ್ಮಣ ವತ್ಸಲರೂ, ಧರ್ಮಶೀಲರೂ ಮತ್ತು ನೀಶ್ಯ ತಪಸ್ವಿಗಳೂ ಆಗಿರಬೇಕು.
ಇತ್ಯುಕತ್ವ ಸುಹೃದಃ ಸರ್ವಾನ್ ಸಂಪರಿಷ್ವಜ್ಯ ಚೈವ ಹ |
ಪುನರೇವಾಬ್ರವೀದ್ಧೀಮಾನ್ಯುಧಿಷ್ಠಿರಮಿದಂ ವಚಃ ॥49॥
ಸುಹೃದರನ್ನು ಕುರಿತು ಹೀಗೆ ಹೇಳಿ, ಎಲ್ಲರನ್ನೂ ಆಲಿಂಗಿಸಿ, ಪುನಃ ಯುಧಿಷ್ಠಿರನನ್ನು ಕುರಿತು ಮೇಧಾವಿಗಳಾದ ಭೀಷ್ಮರು ಹೀಗೆ ಹೇಳಿದರು.
ಬ್ರಾಹ್ಮಣಾಶ್ಚೈವ ತೇ ನಿತ್ಯಂ ಪ್ರಾಜ್ಞಾಶ್ಚೈವ ವಿಶೇಷತಃ |
ಆಚಾರ್ಯಾ ಋತ್ವಿಜಶ್ಚೈವ ಪೂಜನೀಯಾ ನರಾಧಿಪ ॥50॥
ಎಲೈ ನರಾಧಿಪನೇ, ನಿನ್ನಿಂದ ನಿತ್ಯವೂ ಬ್ರಾಹ್ಮಣರು, ಅದರಲ್ಲೂ ವಿಶೇಷವಾಗಿ ಪ್ರಾಜ್ಞರೂ, ಆಚಾರ್ಯರೂ, ಋತ್ವಿಜರೂ ಪೂಜಿಸಲ್ಪಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್

ಅನುಶಾಸನಪರ್ವಣಿ ಷಟ್‌ಪಂಚಾಶೋತ್ತರದ್ವಿಶತತಮೋಽಧ್ಯಾಯಃ ॥
॥ ಭೀಷ್ಮಸ್ವರ್ಗಾರೋಹಣಪರ್ವಣಿ ಭೀಷ್ಮವಚನಂ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ಇನ್ನೂರ ಐವತ್ತೇಳನೆಯ ಅಧ್ಯಾಯ
ಭೀಷ್ಮರ ಸ್ವರ್ಗಾರೋಹಣ
ವೈಶಂಪಾಯನಃ
ಏವಮುಕತ್ವ ಕುರೂನ್ ಸರ್ವಾನ್ ಭೀಷ್ಮಃ ಶಾಂತನವಸ್ತದಾ |
ತೂಷ್ಣೀಂಬಭೂವ ಕೌರವ್ಯಃ ಸ ಮುಹೂರ್ತಮರಿಂದಮ ॥1॥
ವೈಶಂಪಾಯನ ಎಲ್ಲೈ ಅರಿಂದಮನೇ, ಎಲ್ಲ ಗುರುಗಳನ್ನು ಕುರಿತು ಹೀಗೆ ಹೇಳಿ ಆಗ ಶಂತನು ಪುತ್ರರಾದ ಭೀಷ್ಮರು ಒಂದು ಮುಹೂರ್ತ ಮೌನವನ್ನು ತಾಳಿದರು.
ಧಾರಯಾಮಾಸ ಚಾತ್ಮಾನಂ ಧಾರಣಾಸು ಯಥಾಕ್ರಮಮ್ |
ತಸ್ಯೋರ್ಧ್ವಮಗಮನ್ ಪ್ರಾಣಾಃ ಸನ್ನಿರುದ್ಧಾ ಮಹಾತ್ಮನಃ ॥2॥
ಅವರು ಶಾಸೋಕ್ತಕ್ರಕ್ತ ಕ್ರಮದಲ್ಲಿ ಧಾರಣೆಯನ್ನು ಮಾಡಿದರು. ಮಹಾತ್ಮರಾದ ಅವರು ತಡೆ ಹಿಡಿದ್ದ ಪ್ರಾಣಗಳು ಊರ್ಧ್ವಮುಖವಾಗಿ ಹೊರಟವು.
ಇದಮಾಶ್ಚರ್ಯಮಾಸೀಚ್ಚ ಮಧ್ಯೇ ತೇಷಾಂ ಮಹಾತ್ಮನಾಮ್ |
ಯದ್ಯನ್ಮುಂಚತಿ ಗಾತ್ರಾಣಾಂ ಸ ಶಂತನುಸುತಸ್ತದಾ |
ತತ್ತದ್ ವಿಶಲ್ಯಂ ಭವತಿ ಯೋಗಯುಕ್ತಸ್ಯ ತಸ್ಯ ವೈ ॥3॥
ಆ ಮಹಾತ್ಮರ ಮಧ್ಯದಲ್ಲಿ ಈ ಒಂದು ಆಶ್ಚರ್ಯಯುತವಾದ ಘಟನೆಯು ನಡೆಯಿತು. ಯೋಗಯುಕ್ತರಾದ ಭೀಷ್ಮರು ತಮ್ಮ ದೇಹದ ಯಾವ ಯಾವ ಅವಯವಗಳಿಂದ ಅಭಿಮಾನವನ್ನು ಹಿಂದೆ ತೆಗೆದುಕೊಂಡು ಹೊರಟರೋ ಆ ಅಂಗಗಳ ವ್ರಣಗಳೆಲ್ಲವೂ ತಕ್ಷಣವೇ ಮಾಯವಾದವು.
ಕ್ಷಣೇನ ಪ್ರೇಕ್ಷತಾಂ ತೇಷಾಂ ವಿಶಲ್ಯಃ ಸೋಽಭವತ್ ತದಾ |
ತಂ ದೃಷ್ಟ್ವಾ ವಿಸ್ಮಿತಾಃ ಸರ್ವೇ ವಾಸುದೇವಪುರೋಗಮಾಃ |
ಸಹ ತೈರ್ಮುನಿಭಿಃ ಸರ್ವೈಸ್ತದಾ ವ್ಯಾಸಾದಿಭಿರ್ನೃಪ ॥4॥
ಎಲ್ಲರೂ ನೋಡುತ್ತಿರುವಂತೆಯೇ ಒಂದು ಕ್ಷಣದಲ್ಲಿ ಅವರ ದೇಹದ ವ್ರಣಗಳೆಲ್ಲವೂ ಪೂರ್ಣವಾಗಿ ನಾಶವನ್ನು ಹೊಂದಿದವು. ಎಲ್ಲೈ ರಾಜನೇ, ಅದನ್ನು ನೋಡಿ ವ್ಯಾಸಾದಿ ಮುನಿಗಳ ಜೊತೆಯಲ್ಲಿ ವಾಸುದೇವನೇ ಮೊದಲಾದವರೆಲ್ಲರೂ ವಿಸ್ಮಿತರಾದರು.
ಸನ್ನಿರುದ್ಧಸ್ತು ತೇನಾತ್ಮಾ ಸರ್ವೇಷ್ವಾಯತನೇಷು ವೈ |
ಜಗಾಮ ಭಿತ್ತ್ವ ಮೂರ್ಧಾನಂ ದಿವಮಭ್ಯುತ್ಪಪಾತ ಚ ॥5॥
ತಮ್ಮನ್ನು ಎಲ್ಲ ಇಂದ್ರಿಯಾಶ್ರಯಗಳಲ್ಲಿ ತಡೆದುಕೊಂಡಿದ್ದ ಭೀಷ್ಮರು ತಮ್ಮ ಶಿರಸ್ಸನ್ನು ಭೇದಿಸಿ ಸ್ವರ್ಗದ ಕಡೆಗೆ ಹಾರಿದರು.
ಮಹೋಲ್ಕೇವ ಚ ಭೀಷ್ಮಸ್ಯ ಮೂರ್ಧದೇಶೇ ನರಾಧಿಪ |
ನಿಃಸೃತ್ಯಾಕಾಶಮಾವಿಶ್ಯ ಕ್ಷಣೇನಾಂತರಧೀಯತ ॥6॥
ಎಲ್ಲೈ ನರಾಧಿಪನೇ, ಭೀಷ್ಮರ ಶಿರಃಪ್ರದೇಶದಲ್ಲಿ ಒಂದು ಜ್ಯೋತಿಸ್ಸು ದೊಡ್ಡ ಉಲ್ಕೆಯಂತೆ ಹೊರಗೆ ಬಂದು ಆಕಾಶವನ್ನು ಪ್ರವೇಶಿಸಿ, ಒಂದು ಕ್ಷಣದಲ್ಲಿ ಅಂತರ್ಧಾನವನ್ನು ಹೊಂದಿತು.
ಏವಂ ಸ ನೃಪಶಾರ್ದೂಲ ನೃಪಃ ಶಾಂತನವಸ್ತದಾ |
ಸಮಯುಜ್ಯತ ಲೋಕೈಃ ಸ್ವೈರ್ಭರತಾನಾಂ ಕುಲೋದ್ವಹಃ ॥7॥
ಎಲ್ಲೈ ನೃಪಶಾರ್ದೂಲನೇ, ಈ ರೀತಿಯಲ್ಲಿ ಭರತಕುಲೋದ್ವಹರಾದ, ಶಂತನು ಪುತ್ರರಾದ ಭೀಷ್ಮರು ತಮ್ಮ ಲೋಕವನ್ನು ಹೊಂದಿದರು.
ತತಸ್ತ್ವದಾಯ ದಾರೂಣಿ ಗಂಧಾಂಶ್ಚ ವಿವಿಧಾನ್ ಬಹೂನ್ |
ಚಿತಾಂ ಚಕ್ರುರ್ಮಹಾತ್ಮಾನಃ ಪಾಂಡವಾ ವಿದುರಸ್ತಥಾ |
ಯುಯುತ್ಸುಶ್ಚಾಪಿ ಕೌರವ್ಯಃ ಪ್ರೇಕ್ಷಕಾಸ್ತ್ವಿತರೇಽಭವನ್ ॥8॥
ಅನಂತರ ಮಹಾತ್ಮರಾದ ಪಾಂಡವರೂ ಮತ್ತು ವಿದುರನೂ ಅನೇಕ ವಿಧವಾದ ಕಾಷ್ಠಗಳನ್ನೂ, ಗಂಧಗಳನ್ನೂ ತೆಗೆದುಕೊಂಡು ಬಂದು ಚಿತೆಯನ್ನು ನಿರ್ಮಿಸಿದರು. ಕೌರವ್ಯನಾದ ಯುಯುತ್ಸುವೂ ಚಿತೆಯನ್ನು ನಿರ್ಮಿಸಿದನು. ಇತರರು ಪ್ರೇಕ್ಷಕರಾದರು.
ಯುಧಿಷ್ಠಿರಸ್ತು ಗಾಂಗೇಯಂ ವಿದುರಶ್ಚ ಮಹಾಮತಿಃ |
ಛಾದಯಾಮಾಸತುರುಭೌ ಕ್ಷೌಮೈರ್ಮಾಲ್ಯೈಶ್ಚ ಕೌರವಮ್ ॥9॥
ಯುಧಿಷ್ಠಿರ ಮತ್ತು ಮಹಾಮತಿಯಾದ ವಿದುರ ಇಬ್ಬರೂ ಭೀಷ್ಮರ ದೇಹವನ್ನು ರೇಷ್ಮೆಯ ವಸ್ತ್ರಗಳಿಂದಲೂ ಮತ್ತು ಮಾಲೆಯಿಂದಲೂ ಆಚ್ಛಾದಿಸಿದರು.
ಧಾರಯಾಮಾಸ ತಸ್ಯಾಥ ಯುಯುತ್ಸುಶ್ಛತ್ರಮುತ್ತಮಮ್ |
ಚಾಮರವ್ಯಜನೇ ಶುಭ್ರೇ ಭೀಮಸೇನಾರ್ಜುನಾವುಭೌ |
ಉಷ್ಣೀಷೇ ಪರ್ಯಗೃಹ್ಣೀತಾಂ ಮಾದ್ರೀಪುತ್ರಾವುಭೌ ತದಾ ॥10॥

ಯುಯುತ಼್ುವು ಶ್ರೇಷ್ಠವಾದ ಛತ್ರವನ್ನು ಹಿಡಿದನು. ಭೀಮಾರ್ಜುನರಿಬ್ಬರೂ ಶುಭ್ರವಾದ ಚಾಮರ-ವ್ಯಜನಗಳನ್ನು ಹಿಡಿದರು. ಮಾದ್ರೀಪುತ್ರರಾದ ನಕುಲ- ಸಹದೇವರು ರುಮಾಲುಗಳನ್ನು ಹಿಡಿದರು.
ಸ್ತ್ರಿಯಃ ಕೌರವನಾಥಸ್ಯ ಭೀಷ್ಮಂ ಕುರುಕುಲೋದ್ಭವಮ್ |
ತಾಳವೃಂತಾನ್ಯುಪಾದಾಯ ಪರ್ಯವೀಜನ್ ಸಮಂತತಃ ||11||
ಕೌರವನಾಥನಾದ ಧೃತರಾಷ್ಟ್ರನ ಸ್ತ್ರೀಯರು ಕುರುಕುಲೋದ್ಭವನಾದ ಭೀಷ್ಮನಿಗೆ ತಾಳವೃಕ್ಷದ ವ್ಯಜನಗಳನ್ನು ಹಿಡಿದು ಬೀಸಿದರು.
ತತೋಽಸ್ಯ ವಿಧಿವಚ್ಚಕ್ರುಃ ಪಿತೃಮೇಧಂ ಮಹಾತ್ಮನಃ |
ಯಾಜಕಾ ಜುಹುವುಶ್ಚಾಗ್ನಿಂ ಜಗುಃ ಸಾಮಾನಿ ಸಾಮಗಾಃ ||12||
ಅನಂತರ ಪುರೋಹಿತರು ವಿಧಿವತ್ತಾಗಿ ಮಹಾತ್ಮರಾದ ಭೀಷ್ಮರಿಗೆ ಪಿತೃಯಜ್ಞವನ್ನು ಮಾಡಿದರು. ಪುರೋಹಿತರು ಅಗ್ನಿಯಲ್ಲಿ ಹೋಮವನ್ನು ಮಾಡಿದರು. ಸಾಮಗರು ಸಾಮಗಾನವನ್ನು ಮಾಡಿದರು.
ತತಶ್ಚಂದನಕಾಷ್ಠೈಶ್ಚ ತಥಾ ಕಾಲೇಯಕೈರಪಿ |
ಕಾಲಾಗರುಪ್ರಭೃತಿಭಿರ್ಗಂಧೈಶ್ಚೋಚ್ಚಾವಚೈಸ್ತಥಾ ||13||
ಸಮವಚ್ಛಾದ್ಯ ಗಾಂಗೇಯಂ ಪ್ರಜ್ವಾಲ್ಯ ಚ ಹುತಾಶನಮ್ |
ಅಪಸವ್ಯಮಕುರ್ವಂತ ಧೃತರಾಷ್ಟ್ರಮುಖಾ ನೃಪಾಃ ||14||
ಅನಂತರ ಚಂದನ ಕಾಷ್ಠಗಳಿಂದಲೂ, ಕಾಲೇಯ ಕಾಷ್ಠಗಳಿಂದಲೂ, ಕಾಲಾಗರು ಮೊದಲಾದ ಉಚ್ಚಾವವಾದ ಗಂಧಗಳಿಂದಲೂ ಭೀಷ್ಮರನ್ನು ಆಚ್ಛಾದಿಸಿ ಅಗ್ನಿಯನ್ನು ಉದ್ದೀಪನಗೊಳಿಸಿ ಧೃತರಾಷ್ಟ್ರ ಮೊದಲಾದ ರಾಜರೆಲ್ಲರೂ ಅಪಸವ್ಯವನ್ನು (ಅಪ್ರದಕ್ಷಿಣೆಯನ್ನು) ಮಾಡಿದರು.
ಸಂಸ್ಕೃತ್ಯ ಚ ಕುರುಶ್ರೇಷ್ಠಂ ಗಾಂಗೇಯಂ ಕುರುಸತ್ತಮಾಃ |
ಜಗ್ಮುರ್ಭಾಗೀರಥೀತೀರಮೃಷಿಜುಷ್ಟಂ ಕುರೂದ್ವಹಾಃ ||15||
ಕುರುಶ್ರೇಷ್ಠರಾದ ಭೀಷ್ಮರಿಗೆ ಶವಸಂಸ್ಕಾರವನ್ನು ಮಾಡಿ, ಕುರೂದ್ವಹರಾದ, ಕುರುಶ್ರೇಷ್ಠರಾದ ಎಲ್ಲರೂ ಋಷಿಗಂಧ ಸೇವಿತವಾದ ಭಾಗೀರಥೀ ತೀರಕ್ಕೆ ಹೋದರು.
ಅನುಗಮ್ಯಮಾನಾ ವ್ಯಾಸೇನ ನಾರದೇನಾಸಿತೇನ ಚ |
ಕೃಷ್ಣೇನ ಭರತಸ್ತ್ರೀಭಿರ್ಯೇ ಚ ಪೌರಾಃ ಸಮಾಗತಾಃ ||16||
ಉದಕಂ ಚಕ್ರಿರೇ ಚೈವ ಗಾಂಗೇಯಸ್ಯ ಮಹಾತ್ಮನಃ |
ವಿಧಿವತ್ ಕ್ಷತ್ರಿಯಶ್ರೇಷ್ಠಾಃ ಸ ಚ ಪೌರಜನಸ್ತದಾ ||17||
ವ್ಯಾಸರಿಂದಲೂ, ನಾರದರಿಂದಲೂ, ಅಸಿತರಿಂದಲೂ, ಭರತಸ್ತ್ರೀಯರಿಂದಲೂ, ಕೃಷ್ಣನಿಂದಲೂ ಪೌರರಿಂದಲೂ ಹಿಂಬಾಲಿಸಲ್ಪಟ್ಟವರಾಗಿ ಮಹಾತ್ಮರಾದ ಭೀಷ್ಮರಿಗೆ ಉದಕ ಕ್ರಿಯೆಯನ್ನು ಮಾಡಿದರು. ಕ್ಷತ್ರಿಯ ಶ್ರೇಷ್ಠರೂ ಮತ್ತು ಪೌರಜನರೂ ಆಗ ಉದಕ ಕ್ರಿಯೆಯನ್ನು ಮಾಡಿದರು.
ತತೋ ಭಾಗೀರಥೀ ದೇವೀ ತನಯಸ್ಯೋದಕೇ ಕೃತೇ |
ಉತ್ಥಾಯ ಸಲಿಲಾತ್ ತಸ್ಮಾದ್ ರುದತೀ ಶೋಕಲಾಲಸಾ ||18||
ಪರಿದೇವಯತೀ ತತ್ರ ಕೌರವಾನಭ್ಯಭಾಷತ |
ನಿಬೋಧತ ಯಥಾವೃತ್ತಮುಚ್ಯಮಾನಂ ಮಯಾನಘಾಃ ||19||
ತನ್ನ ಪುತ್ರನಿಗೆ ಉದಕಕ್ರಿಯೆಯನ್ನು ಮಾಡುತ್ತಿರಲು ಭಾಗೀರಥಿಯು ಆ ಉದಕದಿಂದ ಮೇಲೆದ್ದು ಅಳುತ್ತಾ, ಶೋಕಲಾಲಸಳಾಗಿ ಗೋಳಾಡುತ್ತಾ, ಕೌರವರನ್ನು ಕುರಿತು ಮಾತನಾಡಿದಳು. ಎಲೈ ಅನಘರೇ, ನಾನು ಹೇಳುವ ನಿಜವಾದ ವೃತ್ತಾಂತವನ್ನು ಕೇಳಿ (ಎಂದು ಹೇಳಿದಳು).
ರಾಜವೃತ್ತೇನ ಸಂಪನ್ನಃ ಪ್ರಜ್ಞಯಾಽಭಿಜನೇನ ಚ |
ಸತ್ಕರ್ತಾ ಕುರುವೃದ್ಧಾನಾಂ ಪಿತೃಭಕ್ತೋ ದೃಢವ್ರತಃ ||20||
ಜಾಮದಗ್ನ್ಯೇನ ರಾಮೇಣ ಪುರಾ ಯೋ ನ ಪರಾಜಿತಃ |
ದಿವ್ಯೈರಸ್ತ್ರೈರ್ಮಹಾವೀರ್ಯಃ ಸ ಹತೋಽದ್ಯ ಶಿಖಂಡಿನಾ ||21||
ರಾಜನ ನಡತೆಯಿಂದ ಸಂಪನ್ನನಾಗಿ, ಪ್ರಜ್ಞೆಯಿಂದಲೂ, ಸತ್ಕುಲದಲ್ಲಿ ಜನ್ಮದಿಂದಲೂ ಯುಕ್ತನಾಗಿ, ಕುರುವೃದ್ಧರಿಗೆ ಸತ್ಕಾರ ಮಾಡುವವನಾಗಿ, ಪಿತೃಭಕ್ತನಾಗಿ, ದೃಢವ್ರತನಾಗಿ, ಜಾಮದಗ್ನ್ಯ ಪರಶುರಾಮರಿಂದಲೂ ದಿವ್ಯಾಸ್ತ್ರಗಳಿಂದ ಪರಾಜಿತನಾಗದ ಮಹಾಪರಾಕ್ರಮಿಯಾದ ಈ ನನ್ನ ಪುತ್ರನು ಈ ದಿನ ಶಿಖಂಡಿಯಿಂದ ಹತನಾದನು.
ಅಶ್ಮಸಾರಮಯಂ ನೂನಂ ಹೃದಯಂ ಮಮ ಪಾರ್ಥಿವಾಃ |
ಅಪಶ್ಯಂತ್ಯಾಃ ಪ್ರಿಯಂ ಪುತ್ರಂ ಯನ್ನ ದೀರ್ಯತ್ಯನೇಕಧಾ ||22||
ಎಲೈ ರಾಜರೇ, ನನ್ನ ಪ್ರಿಯಪುತ್ರನನ್ನು ನೋಡದೆ ಬಿರಿದು ಹೋಗದಿರುವ ಈ ನನ್ನ ಹೃದಯವು ಕಲ್ಲಿನ ಸಾರದಿಂದ ಮಾಡಿದುದು.
ಸಮೇತಂ ಪಾರ್ಥಿವಂ ಕ್ಷತ್ರಂ ಕಾಶಿಪುರ್ಯಾಂ ಸ್ವಯಂವರೇ |
ವಿಜಿತ್ಯೈಕರಥೇನಾಜೌ ಕನ್ಯಾಸ್ತಾ ಯೋ ಜಹಾರ ಹ ||23||
ಯಸ್ಯ ನಾಸ್ತಿ ಬಲೇ ತುಲ್ಯಃ ಪೃಥಿವ್ಯಾಮಪಿ ಕಶ್ಚನ |
ಹತಂ ಶಿಖಂಡಿನಾ ಶ್ರುತ್ವಾ ಯನ್ನ ದೀರ್ಯತಿ ಮೇ ಮನಃ ||24||
ಯಾವನು ಕಾಶಿಪಟ್ಟಣದಲ್ಲಿ ಸ್ವಯಂವರದಲ್ಲಿ ಎಲ್ಲ ರಾಜರೂ ಸನ್ನಿಹಿತರಾಗಿದ್ದಾಗ ಯುದ್ಧದಲ್ಲಿ ಏಕರಥನಾಗಿ ಎಲ್ಲರನ್ನೂ ಗೆದ್ದು ಆ ಕನ್ಯೆಯರನ್ನು ಕರೆತಂದನೋ, ಯಾವನ ಬಲಕ್ಕೆ ಸಮನಾದವನು ಭೂಮಿಯಲ್ಲಿ ಯಾವನೂ ಇಲ್ಲವೋ ಅಂತಹವನು

ಶಿಖಂಡಿಯಿಂದ ಹತನಾದನೆಂದು ಕೇಳಿ ನನ್ನ ಹೃದಯವು ಬಿರಿಯದೇ ಇರುವುದರಿಂದ ಅದು ಅಶ್ಮಸಾರಮಯವಾದುದು.
ಜಾಮದಗ್ನ್ಯಃ ಕುರುಕ್ಷೇತ್ರೇ ಯುಧಿ ಯೇನ ಮಹಾತ್ಮನಾ |
ಪೀಡಿತೋ ನಾತಿಯತ್ನೇನ ನಿಹತಃ ಸ ಶಿಖಂಡಿನಾ ॥25॥
ಕುರುಕ್ಷೇತ್ರದಲ್ಲಿ ಯುದ್ಧದಲ್ಲಿ ಯಾವ ಮಹಾತ್ಮನಿಂದ ಪರಶುರಾಮನು ಬಹಳ ಯತ್ನವಿಲ್ಲದೆಯೇ ಪೀಡಿಸಲ್ಪಟ್ಟನೋ ಅವನು ಶಿಖಂಡಿಯಿಂದ ಹತನಾಗಿದ್ದಾನೆ.
ಏವಂವಿಧಂ ಬಹು ತದಾ ವಿಲಪಂತೀಂ ಮಹಾನದೀಮ್ |
ಆಶ್ವಾಸಯಾಮಾಸ ತದಾ ಸಾಮ್ನಾ ದಾಮೋದರೋ ವಿಭುಃ ॥26॥
ಈ ರೀತಿಯಲ್ಲಿ ಬಹುಪ್ರಕಾರವಾಗಿ ಗೋಳಾಡುತ್ತಿದ್ದ ಮಹಾನದಿಯನ್ನು ಪ್ರಭುವಾದ ದಾಮೋದರನು ಮಧುರವಾದ ಮಾತುಗಳಿಂದ ಸಮಾಧಾನ ಪಡಿಸಿದನು.
ಸಮಾಶ್ವಸಿಹಿ ಭದ್ರೇ ತ್ವಂ ಮಾ ಶುಚಃ ಶುಭದರ್ಶನೇ |
ಗತಃ ಸ ಪರಮಾಂ ಸಿದ್ಧಿಂ ತವ ಪುತ್ರೋ ನ ಸಂಶಯಃ ॥27॥
ಮಂಗಳಸ್ವರೂಪಳೇ, ಶುಭದರ್ಶನಳೇ, ಸಮಾಧಾನವನ್ನು ತಂದುಕೊ. ನಿನ್ನ ಪುತ್ರನು ಪರಮಸಿದ್ಧಿಯನ್ನು ಪಡೆದಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ.
ವಸುರೇಷ ಮಹಾತೇಜಾಃ ಶಾಪದೋಷೇಣ ಶೋಭನೇ |
ಮನುಷ್ಯತಾಮನುಪ್ರಾಪ್ತೋ ನೈನಂ ಶೋಚಿತುಮರ್ಹಸಿ ॥28॥
ಎಲೌ ಶೋಭನೆಯೇ, ಮಹಾತೇಜಸ್ವಿಯಾದ ಇವನು ವಸು. ಶಾಪದೋಷದಿಂದ ಮನುಷ್ಯನಾಗಿ ಜನಿಸಿದನು. ಅವನನ್ನು ಕುರಿತು ಶೋಕವನ್ನು ಪಡಬೇಡ.
ಸ ಏಷ ಕ್ಷತ್ರಧರ್ಮೇಣ ಯುಧ್ಯಮಾನೋ ರಣಾಂಗಣೇ |
ಧನಂಜಯೇನ ನಿಹತೋ ನೈಷ ನುನ್ನಃ ಶಿಖಂಡಿನಾ ॥29॥
ಅಂತಹ ಇವನು ರಣಾಂಗಣದಲ್ಲಿ ಕ್ಷತ್ರಿಯ ಧರ್ಮಕ್ಕೆ ಅನುಸಾರವಾಗಿ ಯುದ್ಧವನ್ನು ಮಾಡುತ್ತಾ ಅರ್ಜುನನಿಂದ ಹೊಡೆಯಲ್ಪಟ್ಟನು. ಶಿಖಂಡಿಯಿಂದ ಅವನು ನಿಹತನಾಗಲಿಲ್ಲ.
ಭೀಷ್ಮಂ ಹಿ ಕುರುಶಾರ್ದೂಲಮುದ್ಯತೇಷುಂ ಮಹಾರಣೇ |
ನ ಶಕ್ತಃ ಸಂಯುಗೇ ಹಂತುಂ ಸಾಕ್ಷಾದಪಿ ಶತಕ್ರತುಃ ॥30॥
ಮಹಾರಣಾಂಗಣದಲ್ಲಿ ಕೈಯಲ್ಲಿ ಬಾಣವನ್ನು ಹಿಡಿದ, ಕುರುಶಾರ್ದೂಲನಾದ ಭೀಷ್ಮನನ್ನು ಸಾಕ್ಷಾತ್ ಶತಕ್ರತುವಾದ ಇಂದ್ರನೂ ಕೊಲ್ಲಲಾರ.
ಸ್ವಚ್ಛಂಧೇನ ಸುತಸ್ತುಭ್ಯಂ ಗತಃ ಸ್ವರ್ಗಂ ಶುಭಾನನೇ |
ನ ಶಕ್ತಾಃ ಸ್ಯುರ್ನಿಹಂತುಂ ಹಿ ರಣೇ ತಂ ಸರ್ವದೇವತಾಃ ॥31॥
ಎಲೌ ಶುಭಾನನೆಯೇ, ನಿನ್ನ ಪುತ್ರನು ತನ್ನ ಇಚ್ಛೆಯಿಂದಲೇ ಸ್ವರ್ಗಕ್ಕೆ ಹೋಗಿದ್ದಾನೆ. ಎಲ್ಲ ದೇವತೆಗಳು ಸೇರಿದರೂ ಅವನನ್ನು ಯುದ್ಧದಲ್ಲಿ ಕೊಲ್ಲಲು ಶಕ್ಯವಾಗುತ್ತಿರಲಿಲ್ಲ.
ತಸ್ಮಾತ್ ತ್ವಂ ಸರಿತಾಂ ಶ್ರೇಷ್ಠೇ ಮಾ ಶೋಚಸ್ವ ಕುರುನಂದನಮ್ |
ವಸೂನೇಷ ಗತೋ ದೇವಿ ಪುತ್ರಸ್ತೇ ವಿಜ್ವರಾ ಭವ ॥32॥
ಎಲೈ ಶ್ರೇಷ್ಠ ನದಿಯೇ, ಆದ್ದರಿಂದ ಕುರುನಂದನರಾದ ಭೀಷ್ಮರನ್ನು ಕುರಿತು ಶೋಕಪಡಬೇಡ. ದೇವಿಯೇ, ಅವನು ಹೋಗಿ ವಸುಗಳ ಜೊತೆಯಲ್ಲಿ ಸೇರಿದ್ದಾನೆ. ನೀನು ನಿರಾತಂಕವಾಗಿರು.
ಇತ್ಯುಕ್ತಾ ಸಾ ತು ಕೃಷ್ಣೇನ ವ್ಯಾಸೇನ ಚ ಸರಿದ್ವರಾ |
ತ್ಯಕ್ತ್ವಾ ಶೋಕಂ ಮಹಾರಾಜ ಸ್ವಂ ವಾರ್ಯವತತಾರ ಹ ॥33॥
ಕೃಷ್ಣನಿಂದಲೂ ಮತ್ತು ವ್ಯಾಸರಿಂದಲೂ ಹೀಗೆ ಹೇಳಲ್ಪಟ್ಟ ಆ ಶ್ರೇಷ್ಠ ನದಿಯು ಎಲೈ ಮಹಾರಾಜನೇ, ಶೋಕವನ್ನು ತ್ಯಜಿಸಿ ತನ್ನ ಜಲವನ್ನು ಪ್ರವೇಶಿಸಿದಳು.
ಸತ್ಕೃತ್ಯ ತೇ ತಾಂ ಸರಿತಂ ತತಃ ಕೃಷ್ಣಮುಖಾ ನೃಪಾಃ |
ಅನುಜ್ಞಾತಾಸ್ತಯಾ ಸರ್ವೇ ನ್ಯವರ್ತಂತ ಜನಾಧಿಪಾಃ ॥34॥
ಎಲೈ ಜನಾಧಿಪನೇ, ಕೃಷ್ಣ ಮೊದಲಾದ ರಾಜರು ಗಂಗೆಯನ್ನು ಆ ರೀತಿಯಲ್ಲಿ ಸತ್ಕರಿಸಿ, ಅವಳ ಅನುಮತಿಯನ್ನು ಪಡೆದು ಎಲ್ಲರೂ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಅನುಶಾಸನಪರ್ವಣಿ ಸಪ್ತಪಂಚಾಶೋತ್ತರದ್ವಿಶತತಮೋऽಧ್ಯಾಯಃ ॥
॥ ಭೀಷ್ಮಸ್ವರ್ಗಾರೋಹಣಪರ್ವಣಿ ದ್ವಿತೀಯೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಅನುಶಾಸನಪರ್ವದಲ್ಲಿ ಇನ್ನೂರ ಐವತ್ತೇಳನೆಯ
ಅಧ್ಯಾಯ ಮುಗಿಯಿತು.
॥ ಸಮಾಪ್ತಂ ಭೀಷ್ಮಸ್ವರ್ಗಾರೋಹಣಪರ್ವ ॥
॥ ಸಮಾಪ್ತಮಾನುಶಾಸನಿಕ(ಶಾಸನ)ಪರ್ವ ॥
॥ ಪ್ರೀತೋऽಸ್ತು ಕೃಷ್ಣಃ ಪ್ರಭುಃ ॥
* * * * *

॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಆಶ್ವಮೇಧಿಕ ಪರ್ವ
1. ಅಶ್ವಮೇಧ ಪರ್ವ
ಒಂದನೆಯ ಅಧ್ಯಾಯ
ಶೋಕಮಗ್ನನಾದ ಯುಧಿಷ್ಠಿರನಿಗೆ ಧೃತರಾಷ್ಟ್ರನ ಸಾಂತ್ವನ
ವೈಶಂಪಾಯನಃ
ಕೃತೋದಕಂತು ರಾಜಾನಂ ಧೃತರಾಷ್ಟ್ರಂ ಯುಧಿಷ್ಠಿರಃ |
ಪುರಸ್ಕೃತ್ಯ ಮಹಾಬಾಹುರುತ್ತತಾರಾಕುಲೇಂದ್ರಿಯಃ ॥1॥
ವೈಶಂಪಾಯನ ಜನಮೇಜಯನೇ, ಮಹಾಬಾಹುವಾದ ಯುಧಿಷ್ಠಿರನು ಭೀಷ್ಮರಿಗೆ ಜಲತರ್ಪಣವನ್ನು ನೀಡಿ, ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು, ತಳಮಳಗೊಂಡ ಮನಸ್ಸಿನಿಂದಲೇ ಗಂಗಾನದಿಯಿಂದ ಮೇಲಕ್ಕೆದ್ದನು.
ಉತ್ತೀರ್ಯ ತು ಮಹೀಪಾಲೋ ಬಾಷ್ಪವ್ಯಾಕುಲಲೋಚನಃ |
ಪಪಾತ ತೀರೇ ಗಂಗಾಯಾ ವ್ಯಾಧವಿದ್ಧ ಇವ ದ್ವಿಪಃ ॥2॥
ನದಿಯಿಂದ ಮೇಲೆಬಂದ ಮಹಾರಾಜನು ದುಃಖದ ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳವನಾಗಿ ಗಂಗಾನದಿಯ ತೀರದಲ್ಲಿ ವ್ಯಾಧನಿಂದ ಹೊಡೆಯಲ್ಪಟ್ಟ ಆನೆಯಂತೆ ಧೊಪ್ಪನೆ ಕುಸಿದು ಬಿದ್ದನು.
ತಂ ಸೀದಮಾನಂ ಜಗ್ರಾಹ ಭೀಮಃ ಕೃಷ್ಣೇನ ಚೋದಿತಃ |
ಮೈವಮಿತ್ಯಬ್ರವೀಚ್ಚೈನಂ ಕೃಷ್ಣಃ ಪರಬಲಾರ್ದನಃ ॥3॥
ಶ್ರೀಕೃಷ್ಣನಿಂದ ಪ್ರೇರಿತನಾದ ಭೀಮಸೇನನು ಕುಸಿದು ಬೀಳುತ್ತಿದ್ದ ಧರ್ಮಜನನ್ನು ಹಿಡಿದುಕೊಂಡನು. ಶತ್ರುಸೇನೆಯನ್ನು ಮರ್ದಿಸುವ ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು- `ಯುಧಿಷ್ಠಿರನೇ, ನೀನು ಹೀಗೆ ಅಧೀರನಾಗಬೇಡ' ಎಂದು ಹೇಳಿದನು.
ತಮಾರ್ತಂ ಪತಿತಂ ಭೂಮೌ ಶ್ವಸಂತಂ ಚ ಪುನಃ ಪುನಃ |
ದದೃಶುಃ ಪಾಂಡವಾ ರಾಜನ್ ಧರ್ಮಪುತ್ರಂ ಯುಧಿಷ್ಠಿರಮ್ ॥4॥
ಯುಧಿಷ್ಠಿರನಾದರೋ ನೆಲದ ಮೇಲೆ ಬಿದ್ದು ಆರ್ತನಾಗಿ ಪುನಃ ಪುನಃ ನಿಟ್ಟುಸಿರು ಬಿಡುತ್ತಿದ್ದನು. ಇಂತಹ ಧರ್ಮಪುತ್ರನಾದ ಯುಧಿಷ್ಠಿರನನ್ನು ಅಲ್ಲಿ ನೆರೆದಿರುವ ರಾಜರೆಲ್ಲರೂ ನೋಡಿದರು.
ತಂ ದೃಷ್ಟ್ವಾ ದೀನಮನಸಂ ಗತಸತ್ವಂ ಜನೇಶ್ವರಮ್ |
ಭೂಯಃ ಶೋಕಸಮಾವಿಷ್ಟಾಃ ಪಾಂಡವಾಃ ಸಮುಪಾವಿಶನ್ ॥5॥
ದೀನವಾದ ಮನಸ್ಸಿನಿಂದ ಕೂಡಿರುವ, ಸತ್ವಹೀನನಾಗಿರುವ ಆ ಜನೇಶ್ವರನನ್ನು ನೋಡಿ ಪಾಂಡವರೆಲ್ಲರೂ ಪುನಃ ಶೋಕದಿಂದ ಕಳವಳಗೊಂಡವರಾಗಿ ಧರ್ಮರಾಜನ ಬಳಿಯೇ ನಿಂತುಕೊಂಡರು.
ರಾಜಾ ಚ ಧೃತರಾಷ್ಟ್ರಸ್ತಮುಪಾಸೀನಂ ಮಹಾಭುಜಮ್ |
ವಾಕ್ಯಮಾಹ ಮಹಾಬುದ್ಧಿರ್ಮಹಾಬುದ್ಧಿಂ ಜನೇಶ್ವರಮ್ ॥6॥
ಪುತ್ರಶೋಕದಿಂದ ಪೀಡಿತನಾಗಿರುವ ಪ್ರಜ್ಞಾಚಕ್ಷು ಎನಿಸಿದ, ಮಹಾಬುದ್ಧಿಶಾಲಿ- ಯಾದ ರಾಜ ಧೃತರಾಷ್ಟ್ರನು ಯುಧಿಷ್ಠಿರನನ್ನು ಕುರಿತು ಹೇಳಿದನು.
ಧೃತರಾಷ್ಟ್ರಃ
ಉತ್ತಿಷ್ಠ ನರಶಾರ್ದೂಲ ಕುರು ಕಾರ್ಯಮನಂತರಮ್ |
ಕ್ಷತ್ರಧರ್ಮೇಣ ಕೌರವ್ಯ ಜಿತೇಯಮವನಿಸ್ತ್ವಯಾ ॥7॥
ಧೃತರಾಷ್ಟ್ರ ನರಶಾರ್ದೂಲನೇ, ಎದ್ದೇಳು. ಮುಂದೆ ಮಾಡಬೇಕಾಗಿರುವ ಕಾರ್ಯವನ್ನು ನಿರೂಪಿಸು. ಕ್ಷತ್ರಧರ್ಮಕ್ಕೆ ಅನುಗುಣವಾಗಿ ನೀನು ಈ ಭೂಮಂಡಲವನ್ನು ಗೆದ್ದುಕೊಂಡಿರುವಿ.
ತಾಂ ಭುಂಕ್ಷ್ವ ಭ್ರಾತೃಭಿಃ ಸಾರ್ಧಂ ಸುಹೃದ್ಭಿಶ್ಚ ಜನೇಶ್ವರ |
ನ ಶೋಚಿತವ್ಯಂ ಪಶ್ಯಾಮಿ ತ್ವಯಾ ಧರ್ಮಭೃತಾಂ ವರ ॥8॥
ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ, ನೀನು ನಿನ್ನ ಸಹೋದರರೊಡನೆ, ಸ್ನೇಹಿತರೊಡನೆ ಸೇರಿ ಮನೋವಾಂಛಿತವಾದ ಭೋಗಗಳನ್ನು ಅನುಭವಿಸು. ಈ ಸಮಯದಲ್ಲಿ ಶೋಕಪಡಲು ನಿನ್ನಲ್ಲಿ ಯಾವ ಕಾರಣಗಳೂ ಇರುವುದಿಲ್ಲ. ಧರ್ಮವನ್ನು ಅನುಸರಿಸುವವರಲ್ಲಿ ಶ್ರೇಷ್ಠನಾಗಿರುವಿ. ನಿನಗೆ ದುಃಖಪಡಲು ಬೇಕಾದ ಕಾರಣ ಯಾವುದೂ ನನಗೆ ಕಾಣಿಸುತ್ತಿಲ್ಲ.
ಶೋಚಿತವ್ಯಂ ಮಯಾ ಚೈವ ಗಾಂಧಾರ್ಯಾ ಚ ಮಹಾಮತೇ |
ಯಯೋಃ ಪುತ್ರಶತಂ ನಷ್ಟಂ ಸ್ವಪ್ನಲಬ್ಧಂ ಧನಂ ಯಥಾ ॥9॥
ಒಂದು ವೇಳೆ ಶೋಕಪಡುವುದಾದರೆ ನಾನು ಮತ್ತು ಗಾಂಧಾರಿಯು ಶೋಕ ಪಡಬೇಕು. ಕಾರಣ ನೂರು ಮಕ್ಕಳನ್ನು ಕಳೆದುಕೊಂಡವರು ನಾವು. ಸ್ವಪ್ನದಲ್ಲಿ ಸಿಕ್ಕಿದ ಐಶ್ವರ್ಯವು ಎಚ್ಚರದಲ್ಲಿ ನಷ್ಟವಾದಂತೆ ಕ್ಷಣಮಾತ್ರದಲ್ಲಿ ಪುತ್ರ ಸಂಪತ್ತಿನಿಂದ ವಿಮುಖರಾಗಿದ್ದೇವೆ.
ಅಶ್ರುತ್ವಾ ಹಿತಕಾಮಸ್ಯ ವಿದುರಸ್ಯ ಮಹಾತ್ಮನಃ |
ವಾಕ್ಯಾನಿ ಸುಮಹಾರ್ಥಾನಿ ಪರಿತಪ್ತೋಽಸ್ಮಿ ದುರ್ಮತಿಃ ॥10॥
ಉಕ್ತವಾನೇಷ ಮಾಂ ಪೂರ್ವಂ ಧರ್ಮಾತ್ಮಾ ದಿವ್ಯದರ್ಶನಃ ॥11॥
ನಮ್ಮ ಹಿತಚಿಂತಕನಾದ, ಮಹಾತ್ಮನಾದ ವಿದುರನ ಅರ್ಥಯುಕ್ತವಾದ ಮಹಾವಾಕ್ಯಗಳನ್ನು ಆಗ ಕೇಳದಿದ್ದುದಕ್ಕೆ ಪರಿಣಾಮವಾಗಿ

ಇಂದು ದುಃಖಪಡುತ್ತಿದ್ದೇನೆ. ಮೂರ್ಖನಾಗಿದ್ದೇನೆ. ಭವಿಷ್ಯತ್ತಿನ ಎಚ್ಚರವುಳ್ಳ, ಧರ್ಮಾತ್ಮನಾದ ವಿದುರನು ಹಿಂದೆಯೇ ನನ್ನನ್ನು ಕುರಿತು ಹೀಗೆ ಹೇಳಿದ್ದನು.
ವಿದುರಃ
ದುರ್ಯೋಧನಾಪರಾಧೇನ ಕುಲಂ ತೇ ವಿನಶಿಷ್ಯತಿ |
ಸ್ವಸ್ತಿ ಚೇದಿಚ್ಛಸೇ ಕಾಮಂ ಕುಲಸ್ಯ ಕುರು ಮೇ ವಚಃ |
ಬಧ್ಯತಾಮೇಷ ದುಷ್ಟಾತ್ಮಾ ಮಂದೋ ರಾಜಾ ಸುಯೋಧನಃ ॥12॥
ವಿದುರ ದುರ್ಯೋಧನನ ಅಪರಾಧದಿಂದ ನಿನ್ನ ಕುಲವೇ ನಾಶ ಹೊಂದುತ್ತದೆ. ಕುರುಕುಲಕ್ಕೆ ಒಳ್ಳೆಯದನ್ನು ಬಯಸುವುದಾದರೆ, ದುಷ್ಟಚೇತನನಾದ, ಮಂದ ಬುದ್ಧಿಯವನಾದ ದುರ್ಯೋಧನನನ್ನು ಕೊಂದುಬಿಡು ಎಂದು ಹೇಳಿದ್ದನು.
ಕರ್ಣಶ್ಚ ಶಕುನಿಶ್ಚೈವ ಮೈನಂ ಪಶ್ಯತು ಕರ್ಹಿಚಿತ್ |
ದ್ಯೂತಸಂಪಾತಮಪ್ಯೇಷಾಮಪ್ರಮತ್ತೋ ನಿವಾರಯ ॥13॥
ಕರ್ಣ, ಶಕುನಿಗಳಾದರೋ ದುರ್ಯೋಧನನನ್ನು ಒಮ್ಮೆಯೂ ನೋಡದಂತೆ ಮಾಡು. ಕೌರವ-ಪಾಂಡವರು ಜೂಜಾಡಲು ಒಟ್ಟುಸೇರುವುದನ್ನಾದರೂ ತಡೆ ಎಂದು ಹೇಳಿದ್ದನು.
ಅಭಿಷೇಚಯ ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ಸ ಪಾಲಯಿಷ್ಯತಿ ವಶೀ ಧರ್ಮೇಣ ಪೃಥಿವೀಮಿಮಾಮ್ ॥14॥
ಧರ್ಮಾತ್ಮನಾದ ಯುಧಿಷ್ಠಿರನಿಗೆ ಪಟ್ಟಾಭಿಷೇಕವನ್ನು ಮಾಡು. ಜಿತೇಂದ್ರಿಯನಾದ ಧರ್ಮಜನು ಧರ್ಮದಿಂದ ಈ ಭೂಮಂಡಲವನ್ನು ಪರಿಪಾಲಿಸುತ್ತಾನೆ.
ಅಥ ನೇಚ್ಛಸಿ ರಾಜಾನಂ ಕುಂತೀಪುತ್ರಂ ಯುಧಿಷ್ಠಿರಮ್ |
ಮೇಢೀಭೂತಂ ಸ್ವಯಂ ರಾಜ್ಯಂ ಪ್ರತಿಗೃಹ್ಣೀಷ್ವ ಪಾರ್ಥಿವ ॥15॥
ಒಂದುವೇಳೆ ನಿನಗೆ ಕುಂತಿಯ ಮಗನಾದ ಯುಧಿಷ್ಠಿರನಿಗೆ ಪಟ್ಟಾಭಿಷೇಕ ಮಾಡಲು ಮನಸ್ಸಿಲ್ಲದಿದ್ದರೆ ಮೇಟಿಯ ಕಂಬದಂತೆ ನಿಂತು ನೀನೇ ರಾಜ್ಯಭಾರವನ್ನು ಮಾಡು.
ಅನುಜೀವಂತು ಸರ್ವೇ ತ್ವಾಂ ಜ್ಞಾತಯೋ ಜ್ಞಾತಿವರ್ಧನ ॥16॥
ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಸಮಾನವಾದ ವ್ಯವಹಾರವುಳ್ಳ ನಿನ್ನನ್ನು ಜ್ಞಾತಿಗಳು, ಅಣ್ಣ-ತಮ್ಮಂದಿರು, ಬಂಧುಗಳು ಅನುಸರಿಸಿಕೊಂಡು ಜೀವನವನ್ನು ನಿರ್ವಹಿಸಲಿ.
ಧೃತರಾಷ್ಟ್ರಃ
ಏವಂ ಬ್ರುವತಿ ಕೌಂತೇಯ ವಿದುರೇ ದೀರ್ಘದರ್ಶಿನಿ |
ದುರ್ಯೋಧನಮಹಂ ಪಾಪಮನುವೃತ್ತೋ ವೃಥಾಮತಿಃ ॥17॥
ಧೃತರಾಷ್ಟ್ರ ಯುಧಿಷ್ಠಿರನೇ, ಹೀಗೆ ದೀರ್ಘದರ್ಶಿಯಾದ ವಿದುರನು ಪದೇ ಪದೇ ಹೇಳುತ್ತಿದ್ದರೂ ವ್ಯರ್ಥವಾದ ಬುದ್ಧಿಯನ್ನು ಹೊಂದಿರುವ ನಾನು ಪಾಪಿಷ್ಟನಾದ ದುರ್ಯೋಧನನನ್ನೇ ಅನುಸರಿಸಿದೆನು.
ಅಶ್ರುತ್ವೈವಾಸ್ಯ ವಾಕ್ಯಾನಿ ಹಿತಾನಿ ಮಧುರಾಣಿ ಚ |
ಫಲಂ ಪ್ರಾಪ್ಯ ಮಹದ್ ದುಃಖಂ ನಿಮಗ್ನಃ ಶೋಕಸಾಗರೇ ॥18॥
ಧೀರನಾದ ವಿದುರನ ಸುಮಧುರವಾದ, ಹಿತಕರವಾದ ಮಾತುಗಳನ್ನು ಕೇಳದೆ ಅದರ ಫಲವಾಗಿ ಮಹಾದುಃಖವನ್ನು ಹೊಂದಿ ಶೋಕಸಮುದ್ರದಲ್ಲಿಯೇ ಮುಳುಗಿರುವೆ.
ವೃದ್ಧೌ ಹಿ ತೇಽಂಬಾಪಿತರೌ ಪಶ್ಯಾವಾಂ ದುಃಖಿತೌ ನೃಪ |
ನ ಶೋಚಿತವ್ಯಂ ಭವತಾ ಪಶ್ಯಾಮೀಹ ಜನಾಧಿಪ ॥19॥
ವೃದ್ಧರಾಗಿರುವ ಅತ್ಯಂತ ದುಃಖಿತರಾಗಿರುವ ಈ ನಿನ್ನ ತಂದೆ-ತಾಯಿಗಳನ್ನು ನೋಡು. ಈ ಸಮಯದಲ್ಲಿ ನಮಗೆ ಸಾಂತ್ವನ ಹೇಳಬೇಕಾಗಿರುವ ನೀನು ಖಂಡಿತವಾಗಿಯೂ ದುಃಖವನ್ನು ಪಡಬಾರದು. ಕರ್ತವ್ಯವನ್ನು ಆಚರಿಸಿದ ನಿನ್ನ ಈ ದುಃಖಕ್ಕೆ ಕಾರಣವೇನೆಂಬುದೇ ನನಗೆ ತಿಳಿಯದಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಪ್ರಥಮೋಧ್ಯಾಯಃ ॥
॥ ಅಶ್ವಮೇಧಪರ್ವಣಿ ಪ್ರಥಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ
(ಅಧ್ಯಾಯಃ 30, ಶ್ಲೋಕ 1-48)
ಅಥ ಕೃಷ್ಣಮನುಸ್ಮೃತ್ಯ ಭೀಷ್ಮೇ ಸ್ವಾಂ ವಸುತಾಂ ಗತೇ |
ಕೃತ್ವಾ ಕಾರ್ಯಾಣಿ ಸರ್ವಾಣಿ ಗಂಗಾಮಾಶ್ವಾಸ್ಯ ದುಃಖಿತಾಮ್ ॥
ಆಶ್ವಾಸಿತಶ್ಚ ಕೃಷ್ಣಾಭ್ಯಾಂ ಧರ್ಮಜೋ ದುಃಖಿತಃ ಪುನಃ |
ಪರಾಶರಸುತೇನೋಕ್ತಃ ಕೃಷ್ಣೇನಾನಂತರಾಧಸಾ ॥
ಪಾಂಡವರಿಗೆ ಧರ್ಮಗಳನ್ನು ಉಪದೇಶಿಸಿದ ಬಳಿಕ ಭೀಷ್ಮ ಕೃಷ್ಣನನ್ನು ಧ್ಯಾನಿಸಿ, ತನ್ನ ವಸುರೂಪವನ್ನು ಸೇರಿದಾಗ ಧರ್ಮರಾಜ ಅವನಿಗೆ ಎಲ್ಲ ಉತ್ತರಕ್ರಿಯೆಗಳನ್ನೂ ಮಾಡಿ ದುಃಖಿತಳಾದ ಗಂಗೆಯನ್ನು ಶ್ರೀವೇದವ್ಯಾಸ-ಕೃಷ್ಣರ ಮೂಲಕ ಸಾಂತ್ವನ ಮಾಡಿ ತಾನೂ

ಕೂಡ ಶ್ರೀವೇದವ್ಯಾಸ-ಕೃಷ್ಣರಿಂದ ಸಾಂತ್ವನ ಪಡೆದ. ಆದರೂ ಪುನಃ ದುಃಖಿತನಾದ. ಆಗ ಪೂರ್ಣಕಾಮರಾದ ವೇದವ್ಯಾಸರು ಹೇಳಿದರು.
ಅಪಾಪೇ ಪಾಪಶಂಕಿತ್ವಾದಶ್ವಮೇಧೈರ್ಯಜಾಚ್ಯುತಮ್ ।
ಕುರು ರಾಜ್ಯಂ ಚ ಧರ್ಮೇಣ ಪಾಲಯಾಪಾಲಕಾಃ ಪ್ರಜಾಃ ॥
`ಪಾಪವಲ್ಲದುದನ್ನು ಪಾಪವೆಂದು ನೀನು ಶಂಕಿಸುತ್ತಿರುವುದರಿಂದ ಅಶ್ವಮೇಧ ಯಾಗಗಳಿಂದ ಹರಿಯನ್ನು ಆರಾಧಿಸು. ಧರ್ಮದಿಂದ ರಾಜ್ಯಭಾರ ಮಾಡು. ರಕ್ಷಕರಿಲ್ಲದ ಪ್ರಜೆಗಳನ್ನು ರಕ್ಷಿಸು'.
ಇತ್ಯುಕ್ತಃ ಸ ತಥಾ ಚಕ್ರೇ ತ್ಯಕತತ್ವ ಭೋಗಾಂಶ್ಚ ಕೃತ್ಸ್ನಶಃ ।
ಗೋವ್ರತಾದಿವ್ರತೈರ್ಯುಕ್ತಃ ಪಾಲಯಾಮಾಸ ಮೇದಿನೀಮ್ ॥
ವೇದವ್ಯಾಸರು ಹೀಗೆ ಹೇಳಿದಾಗ ಧರ್ಮರಾಜ ಅದರಂತೆಯೇ ಮಾಡಿದ. ಭೋಗಗಳನ್ನು ಪೂರ್ತಿಯಾಗಿ ತೊರೆದು ಗೋವ್ರತ ಮುಂತಾದ ವ್ರತಗಳಿಂದ ಯುಕ್ತನಾಗಿ ಭೂಮಿಯನ್ನಾಳಿದ.
ದದೌ ದೇಯಾನಿ ಮುಖ್ಯಾನಿ ಯಥಾಕಾಮಮಖಂಡಿತಮ್ ।
ನೈವಾರ್ಥೀ ವಿಮುಖಃ ಕಶ್ಚಿದಭೂದ್ ಯೋಗ್ಯಃ ಕದಾಚನ ॥
ಧರ್ಮರಾಜ ನಿರಂತರ ಯಥೇಚ್ಛ ತುಲಾಪುರುಷಾದಿ ಮಹಾದಾನಗಳನ್ನೂ ಮಾಡಿದ. ಯೋಗ್ಯನಾದ ಯಾವ ದ್ರವ್ಯಾರ್ಥಿಯೂ ದ್ರವ್ಯ ಪಡೆಯದೆ ಎಂದೂ ಹಿಂತಿರುಗಿದುದು ಇಲ್ಲ.
ಪ್ರಷ್ಟಾ ಚ ದಾತಾSಖಿಲರಾಜನಮ್ಯೋ
 ಯಷ್ಟಾ ಚ ಧರ್ಮಾತ್ಮಜ ಏವ ತತ್ರ ।
ಬಭೂವ ಪಾಂಡೋರ್ಗೃಹಮಾವಸಂಶ್ಚ
 ರಾಜಾಧಿರಾಜೋ ವನಿತಾನಿವೃತ್ತಃ ॥
ರಾಜಾಧಿರಾಜನಾದ ಧರ್ಮರಾಜ ಪಾಂಡುವಿನ ಮನೆಯಲ್ಲಿ ವಾಸಮಾಡುತ್ತಾ, ಸ್ತ್ರೀಭೋಗದಿಂದ ನಿವೃತ್ತನಾಗಿ ಎಲ್ಲ ರಾಜರುಗಳಿಂದ ನಮಸ್ಕಾರ ಸ್ವೀಕರಿಸುವವನೂ, ಪ್ರಜೆಗಳ ಸುಖ-ದುಃಖಗಳನ್ನು ವಿಚಾರಿಸುವವನೂ ದಾನ, ಯಾಗ ಮಾಡುವವನೂ ಆದ.
ಭೀಮಸ್ತು ದೌರ್ಯೋಧನಮೇವ ಸದ್ಮ ಪ್ರಪೇದಿವಾನೂರ್ಜಿತವೀರ್ಯಲಬ್ಧಮ್ ।
ಕೃಷ್ಣಾಸಹಾಯಃ ಸುರರಾಜಯೋಗ್ಯಾ-
 ನಭುಂಕ್ತ ಭೋಗಾನ್ಯುವರಾಜ ಏವ ॥
ಭೀಮ ಉತ್ಕೃಷ್ಟ ಪರಾಕ್ರಮದಿಂದ ಪ್ರಾಪ್ತವಾದ ದುರ್ಯೋಧನನ ಮನೆಯನ್ನು ಹೊಂದಿದ. ಯುವರಾಜನಾಗಿಯೇ ದ್ರೌಪದಿಯೊಂದಿಗೆ ದೇವೇಂದ್ರನಿಗೆ ಯೋಗ್ಯವಾದ ಭೋಗಗಳನ್ನು ಅನುಭವಿಸಿದ.
ಕೃಷ್ಣಾ ಚ ಪಾರ್ಥಾಂಶ್ಚತುರೋ ವಿಹಾಯ ಸುವ್ಯಕ್ತಸಾರಸ್ವತಶುದ್ಧಭಾವಾ ।
ರರಾಜ ರಾಜಾವರಜೇನ ನಿತ್ಯಮನನ್ಯಯೋಗೇನ ಶಿಖೇವ ವಹ್ನೇಃ ॥
ದ್ರೌಪದಿ ಆಗ ಭಾರತೀದೇವಿಯ ವ್ಯಕ್ತ ಹಾಗೂ ಶುದ್ಧವಾದ ಸನ್ನಿಧಾನ ಉಳ್ಳವಳಾಗಿ ನಾಲ್ವರು ಪಾಂಡವರನ್ನೂ ಬಿಟ್ಟು, ಭೀಮನೊಡನೆಯೇ ಸದಾ ಇದ್ದು ಅನ್ಯರ ಸಂಪರ್ಕವಿಲ್ಲದೆ ಬೆಂಕಿಯ ಜ್ವಾಲೆಯಂತೆ ಬೆಳಗಿದಳು.
ಪ್ರೀತ್ಯೈವ ವಿಜ್ಞಾನಯುಜಾSನ್ಯಪಾರ್ಥೈಃ
 ಸಂವಾದತಃ ಪರಿಹೃತಾ ಗತಭಾವಿಕಾಲೇ ।
ಅಪಿ ಸ್ವಕೀಯಂ ಪತಿಮೇವ ಭೀಮ-
 ಮವಾಪ್ಯ ಸಾ ಪರ್ಯಚರನ್ಮುದೈವ ॥
ಬೇರೆ ಪಾಂಡವರು ಭೀಮನೊಂದಿಗೆ ಸಹಮತಿಯಿಂದ ದ್ರೌಪದಿ ಭೀಮನಿಗೇ ತಕ್ಕವಳೆಂಬ ವಿಶೇಷ ಜ್ಞಾನಯುಕ್ತವಾದ ಪ್ರೀತಿಯಿಂದಲೇ ದ್ರೌಪದಿಯನ್ನು ಭೀಮನಿಗೆ ಬಿಟ್ಟುಕೊಟ್ಟರು. ಈಗ ಮಾತ್ರವಲ್ಲ, ಭೂತ-ಭವಿಷ್ಯತ್ ಕಾಲಗಳಲ್ಲಿಯೂ ದ್ರೌಪದಿ ತನ್ನ ಪತಿಯೇ ಆದ ಭೀಮನನ್ನು ಹೊಂದಿ ಸಂತೋಷದಿಂದಲೇ ಅವನನ್ನು ಸೇವಿಸಿದಳು.
ರರಾಜ ರಾಜಾವರಜಸ್ತಯಾ ಸ
 ದ್ವಿರೂಪಯಾ ಸೋಮಕಕಾಶಿಜಾತಯಾ ।
ಶ್ರಿಯಾ ಭುವಾ ಚೈವ ಯಥಾSಬ್ಜನಾಭೋ
 ನಿಹತ್ಯ ಸರ್ವಾನ್ ದಿತಿಜಾನ್ ಮಹಾಬ್ಧೌ ॥
ಶ್ರೀಹರಿ ಎಲ್ಲ ದೈತ್ಯರನ್ನೂ ಕೊಂದು ಕ್ಷೀರಸಾಗರದಲ್ಲಿ ಶ್ರೀಭೂ ಎಂಬ ಎರಡು ರೂಪಗಳ ಲಕ್ಷ್ಮಿಯೊಡನೆ ಶೋಭಿಸುವಂತೆ ಭೀಮನೂ ಎಲ್ಲ ಶತ್ರುಗಳನ್ನೂ ಸಂಹರಿಸಿ ದ್ರೌಪದಿ-ಕಾಳಿ ಎಂಬ ಎರಡು ರೂಪಗಳ ಭಾರತೀದೇವಿಯೊಡಗೂಡಿ ಬೆಳಗಿದ.
ಸರ್ವೋತ್ತುಂಗೋ ನಾಮತಃ ಪ್ರಾಣವಾಯೋ-
 ರಂಶೋ ನಿಶಾಯಾಂ ಗುರುಪುತ್ರಸೂದಿತಃ ।
ಮಾತಾSಸ್ಯ ದೇವೀತಿ ಚ ರೌಹಿಣೇಯೀ
 ಭೀಮಪ್ರಿಯಾSSಸೀದ್ವಾ ಪುರಾಸ್ಯೈವ ರಾಕಾ ॥
ಸರ್ವೋತ್ತುಂಗ ಎಂಬ ಹೆಸರಿನ ಭೀಮಪುತ್ರ, ಮುಖ್ಯಪ್ರಾಣನ ಪುತ್ರನೇ ಆದ ಅಹಂಕಾರಿಕ ಪ್ರಾಣ ಎಂಬ ವಾಯುವಿನ ಅಂಶ. ರಾತ್ರಿಯಲ್ಲಿ ಅಶ್ವತ್ಥಾಮನಿಂದ ಹತನಾದ. ಅವನ ತಾಯಿ ವಸುದೇವನ ಹೆಂಡತಿಯಾದ ರೋಹಿಣಿಯ ಮಗಳು, ದೇವಿ ಎಂದೇ ಅವಳಿಗೆ ಹೆಸರು. ಅವಳು ಹಿಂದೆ ಪೂರ್ಣಿಮೆಗೆ ಅಭಿಮಾನಿನಿಯಾದ ರಾಕಾದೇವಿ. ವಾಯುಪತ್ನಿಯೇ ಆಗಿದ್ದವಳು ಅವಳೂ ಭೀಮನ ಹೆಂಡತಿಯಾಗಿದ್ದಳು.

ಅನ್ಯಾಶ್ಚಾಽಸುರ್ವಾಸುದೇವ್ಯೋ ದಿಶೋ ಯಾ
ಆಪಶ್ಚ ಪೂರ್ವಂ ವಿಂಶತಿರಗ್ರ್ಯರೂಪಾಃ |
ತಾಭಿರ್ಯುತೋ ದೈವತೈರಪ್ಯಲಭ್ಯಾ-
ನಭುಂಕ್ತ ಭೋಗಾನ್ ವಿಬುಧಾನುಗಾರ್ಚಿತಃ ॥
ಭೀಮನಿಗೆ ಬೇರೆ ಉತ್ತಮರೂಪವತಿಯರಾದ ಇಪ್ಪತ್ತು ವಸುದೇವ ಪುತ್ರಿಯರೂ ಭಾರ್ಯೆಯಾಗಿದ್ದರು. ಅವರು ಹಿಂದೆ ದಿಗಭಿಮಾನಿನಿಯರೂ ಅಬಭಿಮಾನಿನಿಯರೂ ಆಗಿದ್ದರು. ಅವರೊಡಗೂಡಿ ದೇವತೆಗಳಿಂದ ಮತ್ತು ಗಂಧರ್ವಾದಿಗಳಿಂದ ಸೇವಿತನಾಗಿ ದೇವತೆಗಳಿಗೂ ಅಲಭ್ಯವಾದ ಭೋಗಗಳನ್ನು ಭೀಮನು ಭೋಗಿಸಿದ.
ರರಕ್ಷ ಧರ್ಮಾನಖಿಲಾನ್ ಹರೇಃ ಸ
ನಿಧಾಯ ವಿಪ್ರಾನನುಶಾಸ್ಯ ಯುಕ್ತಾನ್ |
ಸದ್ವೈಷ್ಣವಾನ್ ವಿದುಷಃ ಪಂಚ ಪಂಚ
ಸವೇತನಾನ್ ಗ್ರಾಮಮನು ಸ್ವಕೀಯಾನ್ ॥
ಸದ್ವೈಷ್ಣವರೂ ಪರಸ್ಪರ ಸೌಹಾರ್ದ ಉಳ್ಳವರೂ ತನ್ನವರೂ ಆದ ವಿದ್ವಾಂಸರಾದ ಐದೈದು ಬ್ರಾಹ್ಮಣರನ್ನು ಭೀಮ ಪ್ರತಿ ಗ್ರಾಮಗಳಲ್ಲಿಯೂ ವೇತನ ಸಹಿತರಾಗಿ ನೇಮಿಸಿ ಅವರ ಮೂಲಕ ಏಕಾದಶ್ಯಾದಿ ಸಕಲ ವಿಷ್ಣುಧರ್ಮಗಳನ್ನೂ ಕಾಪಾಡಿದ.
ದಧಾರ ದಂಡಂ ತದವರ್ತಿಷು ಸ್ವಯಂ
ಜಗ್ರಾಹ ಚಾನ್ವೇವ ಮುದಾಽಥ ತದ್ವಾನ್ |
ತದ್ವೃತ್ತಮನ್ಯೈರಪಿ ವಿಪ್ರವರ್ಯೈಃ
ಸಂಶೋಧಯನ್ ಸರ್ವಮಸೌ ಯಥಾ ವ್ಯಧಾತ್ ॥
ಆ ಬ್ರಾಹ್ಮಣರ ಆದೇಶದಂತೆ ನಡೆಯದವರಿಗೆ ಭೀಮ ತಾನೇ ಶಿಕ್ಷೆ ವಿಧಿಸುತ್ತಿದ್ದ. ಅನುಕೂಲರಾಗಿ ನಡೆದವರನ್ನು ಸಂತೋಷದಿಂದ ಅನುಗ್ರಹಿಸುತ್ತಿದ್ದ. ಆ ಬ್ರಾಹ್ಮಣರ ನಡತೆಗಳನ್ನೂ ಬೇರೆ ಬ್ರಾಹ್ಮಣೋತ್ತಮರಿಂದ ಪರೀಕ್ಷೆ ಮಾಡಿಸುತ್ತ ಎಲ್ಲ ಧರ್ಮವನ್ನೂ ಯಥಾವತ್ತಾಗಿ ನಡೆಯುವಂತೆ ವ್ಯವಸ್ಥೆ ಮಾಡಿದ.
ನಾವೈಷ್ಣವಃ ಕಶ್ಚಿದಭೂತ್ ಕುತಶ್ಚಿ-
ನ್ನೈವಾನ್ಯನಿಷ್ಠೋ ನ ಚ ಧರ್ಮಹಂತಾ |
ನ ವಿಧ್ಯವರ್ತೀ ನ ಚ ದುಃಖಿತೋಽಭೂ-
ನ್ನಾಪೂರ್ಣವಿತ್ತಶ್ಚ ತದೀಯರಾಷ್ಟ್ರೇ ॥
ಭೀಮಸೇನನ ರಾಜ್ಯದಲ್ಲಿ ವಿಷ್ಣುದ್ವೇಷಿ ಯಾರೂ ಎಲ್ಲಿಯೂ ಇರಲಿಲ್ಲ. ಅನ್ಯ ದೇವತೋಪಾಸಕನೂ ಇರಲೇ ಇಲ್ಲ. ಧರ್ಮದ್ರೋಹಿ ಇರಲಿಲ್ಲ. ಶಾಸ್ತ್ರವಿಧಿಯನ್ನು ಉಲ್ಲಂಘಿಸುವವನಿರಲಿಲ್ಲ. ದುಃಖಿತನಿರಲಿಲ್ಲ. ದರಿದ್ರನೂ ಇರಲಿಲ್ಲ.
ವಾಸಿಷ್ಠವೃಷ್ಣಿಪ್ರವರೌ ಪ್ರಪಶ್ಯತಾಂ
ತಾಭ್ಯಾಂ ಚ ಭೀಮೇನ ಮುನೀಶ್ವರೈಶ್ಚ |
ಸಂಶಿಕ್ಷಿತಾನಾಂ ಪ್ರಥಮಾದ್ಯುಗಾಚ್ಚ
ಗುಣಾಧಿಕಃ ಕಲಿರಾಸೀತ್ ಪ್ರಜಾನಾಮ್ ॥
ಪ್ರಜೆಗಳು ಶ್ರೀವೇದವ್ಯಾಸರನ್ನೂ ಶ್ರೀಕೃಷ್ಣನನ್ನೂ ದರ್ಶನ ಮಾಡುತ್ತಿದ್ದರು. ಅವರಿಬ್ಬರಿಂದಲೂ ಭೀಮನಿಂದಲೂ ಶ್ರೇಷ್ಠ ಮುನಿಗಳಿಂದಲೂ ಉಪದೇಶ ಪಡೆಯುತ್ತಿದ್ದರು. ಅದರಿಂದ ಅವರಿಗೆ ಕಲಿಯುಗ ಕೃತಯುಗಕ್ಕಿಂತಲೂ ಗುಣದಲ್ಲಿ ಮೇಲೆನಿಸಿತು.
ಶುಭಂ ಮಹತ್ಸ್ವಲ್ಪಫಲಂ ಕೃತೇ ಹಿ
ವಿಪರ್ಯಯೇಣಾಶುಭಮೇಷ ದೋಷಃ |
ತದ್ಧೀನಮಪ್ಯುಚ್ಚಶುಭಂ ಕೃತಾದ್ಯುಗಾ-
ಚ್ಚಕ್ರೇ ಕಲಿಂ ಮಾರುತಿರಚ್ಯುತಾಶ್ರಯಾತ್ ॥
ಕೃತಯುಗದಲ್ಲಿ ಮಹಾಪುಣ್ಯ ಕಾರ್ಯಕ್ಕೂ ಅಲ್ಪಪುಣ್ಯಫಲ. ಇದಕ್ಕೆ ವ್ಯತಿರಿಕ್ತವಾಗಿ ಅಲ್ಪದುಷ್ಕರ್ಮಕ್ಕೆ ಅಧಿಕ ದುಷ್ಫಲ. ಇದು ಆ ಯುಗದ ದೋಷ. ಭೀಮ ಶ್ರೀಕೃಷ್ಣನ ಅನುಗ್ರಹದಿಂದ ಕಲಿಯುಗವನ್ನು ಈ ದೋಷದಿಂದ ಮುಕ್ತಗೊಳಿಸಿ ಕೃತಯುಗಕ್ಕಿಂತ ಹೆಚ್ಚು ಪುಣ್ಯಪ್ರದವನ್ನಾಗಿ ಮಾಡಿದ.
ಧನಂಜಯಃ ಪ್ರೋದ್ಯತದಂಡ ಆಸೀತ್
ಸದಾಽನ್ಯಚಕ್ರೇಷು ನಿಜಾಗ್ರಜೇರಿತಃ |
ವಿಭೀಷಯಿತ್ವಾ ನೃಪತೀನ್ ಸರತ್ನಾನ್
ಪದೋರ್ನೃಪಸ್ಯಾಗ್ರಭುವೋ ನ್ಯಪಾತಯತ್ ॥
ಅರ್ಜುನ ಪರರಾಷ್ಟ್ರಗಳಲ್ಲಿ ದಂಡಯಾತ್ರೆ ಮಾಡುವವನಾದ. ಅವನು ಧರ್ಮರಾಜನ ಆದೇಶಕ್ಕನುಸಾರವಾಗಿ ರತ್ನಯುಕ್ತರಾದ ಪರರಾಜರನ್ನು ಹೆದರಿಸಿಯೇ ಧರ್ಮರಾಜನ ಕಾಲುಗಳ ಮೇಲೆ ಬೀಳಿಸುತ್ತಿದ್ದ.
ಸದೈವ ಕೃಷ್ಣಸ್ಯ ಮುಖಾರವಿಂದಾದ್
ವಿನಿಸ್ಸೃತಂ ತತ್ತ್ವವಿನಿರ್ಣಯಾಮೃತಮ್ |
ಪಿಬನ್ ಸುತಾದ್ಯಾಧಿಮಸೌ ಕ್ರಮೇಣ
ತ್ಯಜಂಶ್ಚ ರೇಮೇ ವಿರತಾತಿಭೋಗಃ ॥
ಸದಾ ಕೃಷ್ಣನ ಮುಖಾರವಿಂದದಿಂದ ಹೊರಡುವ ತತ್ತ್ವನಿರ್ಣಯವೆಂಬ ಅಮೃತವನ್ನು ಅರ್ಜುನ ಪಾನ ಮಾಡುತ್ತಾ, ಪುತ್ರಾದಿ

ಶೋಕಗಳನ್ನು ಕ್ರಮೇಣ ಬಿಟ್ಟು ಅಧಿಕ ಭೋಗಗಳನ್ನು ನಿಲ್ಲಿಸಿ ಸುಖಿಸಿದ.
ದುಶ್ಶಾಸನಸ್ಯಾऽವಸಥಂ ಸುಭದ್ರಾ
ಚಿತ್ರಾಂಗದಾಸಹಿತೋಧ್ಯಾವಸಂಶ್ಚ |
ಸಚಂದ್ರಿಕಾಕಾಂತಿರನೂನಬಿಂಬೋ
ನಭಸ್ಸ್ಥಿತಶ್ಚಂದ್ರ ಇವಾತ್ಯರೋಚತ ॥
ಅರ್ಜುನ ಸುಭದ್ರೆ ಮತ್ತು ಚಿತ್ರಾಂಗದೆಯರಿಂದೊಡಗೂಡಿ ದುಶ್ಶಾಸನನ ಮನೆಯಲ್ಲಿ ವಾಸ ಮಾಡುತ್ತಾ, ಚಂದ್ರಿಕೆ ಮತ್ತು ಕಾಂತಿ ಎಂಬ ಇಬ್ಬರು ಪತ್ನಿಯರಿಂದೊಡಗೂಡಿ ಆಕಾಶದಲ್ಲಿ ನಿಂತ ಪೂರ್ಣಬಿಂಬನಾದ ಚಂದ್ರನಂತೆ ಬಹಳ ಶೋಭಿಸಿದ.
ಸಮಸ್ತಭೃತ್ಯಾಶ್ರಿತವೇತನಾನಾಂ
ಮಾದ್ರೇಯ ಆಸೀತ್ ಪ್ರಥಮಃ ಪ್ರದಾತಾ |
ಸ ದುರ್ಮುಖಸ್ಯಾऽವಸಥೇऽವಸಚ್ಚ
ಸ ಮದ್ರರಾಜಾತ್ಮಜಯಾऽಗ್ರ್ಯವರ್ತೀ ॥
ಎಲ್ಲ ಭೃತ್ಯರಿಗೂ ಆಶ್ರಿತರಿಗೂ ವೇತನ ನೀಡುವವನು ನಕುಲನಾಗಿದ್ದ. ಅವನು ಅಣ್ಣನ ಆಜ್ಞೆಯಂತೆ ನಡೆಯುತ್ತ ಶಲ್ಯನ ಮಗಳೊಂದಿಗೆ ಧೃತರಾಷ್ಟ್ರಪುತ್ರನಾದ ದುರ್ಮುಖನ ಮನೆಯಲ್ಲಿ ವಾಸಮಾಡಿದ.
ಸಂಧಾನಭೇದಾನುಗತಪ್ರವೃತ್ತಿ-
ಸ್ತ್ವಿಷ್ಮಂಶ್ಚ ದುರ್ಮರ್ಷಣಶುಭ್ರಸದ್ಮನಿ |
ನೃಪಾಂಗರಕ್ಷಃ ಪ್ರಗೃಹೀತಖಡ್ಗ-
ಸ್ತಸ್ಯಾನುಜೋ ಮಾಗಧಕನ್ಯಯಾऽऽಸೀತ್ ॥
ಪರರಾಜ್ಯದಲ್ಲಿ ಸಂಧಿಭೇದಗಳನ್ನು ನೋಡಿಕೊಳ್ಳುವವನು ಸಹದೇವ. ಅವನು ಖಡ್ಗಧಾರಿಯಾಗಿ ಧರ್ಮರಾಜನಿಗೆ ಅಂಗರಕ್ಷಕನೂ ಆಗಿದ್ದ. ಜರಾಸಂಧನ ಮಗಳೊಂದಿಗೆ ಧೃತರಾಷ್ಟ್ರ ಪುತ್ರನಾದ ದುರ್ಮರ್ಷಣನ ಶುಭ್ರವಾದ ಮನೆಯಲ್ಲಿ ವಾಸ ಮಾಡಿದ.
ಸೇನಾಪತಿಃ ಕೃಪ ಆಸೀದ್ಯುಯುತ್ಸುಃ
ಸ ಸಂಜಯೋ ವಿದುರಶ್ಚಾऽಂಬಿಕೇಯಮ್ |
ಪಾರ್ಥೇರಿತಾಃ ಪರ್ಯಚರನ್ ಸ್ವಯಂ ಚ
ಸರ್ವೇ ಯಥಾ ದೈವತಮಾದರೇಣ ॥
ಕೃಪ ಸೇನಾಧಿಪತಿಯಾಗಿದ್ದ. ಯುಯುತ್ಸು, ಸಂಜಯ ಮತ್ತು ವಿದುರರು ಪಾಂಡವರ ಆದೇಶದಂತೆ ಧೃತರಾಷ್ಟ್ರನನ್ನು ಸೇವಿಸಿದರು. ಪಾಂಡವರೆಲ್ಲರೂ ತಾವೂ ಕೂಡ ಧೃತರಾಷ್ಟ್ರನನ್ನು ದೇವತೆಯಂತೆ ಆದರದಿಂದ ಸೇವಿಸಿದರು.
ದ್ವಿರೂಪಕೃಷ್ಣಪ್ರಹಿತೇಷು ಪಾಂಡುಷು
ಕ್ಷಿತಿಂ ಪ್ರಶಾಸತ್ಸು ನ ಕಶ್ಚನಾऽತುರಃ |
ನ ಚಾಕ್ರಮಾನ್ಮೃತ್ಯುರಭೂನ್ನ ನಾರ್ಯೋ
ವಿಭರ್ತೃಕಾ ನೋ ವಿಧುರಾ ನರಾಶ್ಚ ॥
ವ್ಯಾಸ-ಕೃಷ್ಣರೆಂದು ಎರಡು ರೂಪಗಳ ಕೃಷ್ಣನಿಂದ ಸ್ಥಾಪಿತರಾದ ಪಾಂಡವರು ಭೂಮಿಯನ್ನು ಆಳುತ್ತಿದ್ದಾಗ ರೋಗಿ ಯಾರೂ ಇರಲಿಲ್ಲ. ಅಕ್ರಮದಿಂದ ಮರಣ ಹೊಂದುತ್ತಿರಲಿಲ್ಲ. ನಾರಿಯರು ವಿಧವೆಯರಾಗುತ್ತಿರಲಿಲ್ಲ. ಪುರುಷರೂ ವಿಧುರರಾಗುತ್ತಿರಲಿಲ್ಲ.
ಶಬ್ದಾದಯಶ್ಚಾऽಸುರತೀವ ಹೃದ್ಯಾ
ನಿಕಾಮವರ್ಷೀ ಚ ಸುರೇಶ್ವರೋऽಭೂತ್ |
ಪ್ರಜಾ ಅನಾಸ್ಪೃಷ್ಟಸಮಸ್ತತಾಪಾ
ಅನನ್ಯಭಕ್ತ್ಯಾऽಚ್ಯುತಮರ್ಚಯಂತಿ ॥
ಶಬ್ದಾದಿ ವಿಷಯ ಪದಾರ್ಥಗಳು ಅತ್ಯಂತ ಮನೋಹರವಾಗಿದ್ದವು. ಇಂದ್ರನೂ ಚೆನ್ನಾಗಿ ಮಳೆಗರೆಯುತ್ತಿದ್ದ. ಪ್ರಜೆಗಳು ಯಾವುದೇ ತಾಪತ್ರಯದ ಸ್ಪರ್ಶವೂ ಇಲ್ಲದವರಾಗಿ ಅನನ್ಯ ಭಕ್ತಿಯಿಂದ ಅಚ್ಯುತನನ್ನು ಆರಾಧಿಸುತ್ತಿದ್ದರು.
ಪೃಥ್ವೀ ಚ ಗಾವಃ ಸಸರಸ್ವತೀಕಾ
ನಿಕಾಮದೋಹಾ ಅಭವನ್ ಸದೈವ |
ಅಬ್ದಾಬ್ಧಿನದ್ಯೋ ಗಿರಿವೃಕ್ಷಜಂಗಮಾಃ
ಸರ್ವೇऽಪಿ ರತ್ನಪ್ರಸವಾ ಬಭೂವುಃ ॥
ಭೂಮಿಯೂ ಗೋವುಗಳೂ ವೇದಗಳೂ ಸದಾ ಯಥೇಚ್ಛ ಹಾಲು ಕೊಡುತ್ತಿದ್ದವು. ಮೋಡ, ಸಮುದ್ರ, ನದಿ, ಬೆಟ್ಟ, ಮರ, ಜಂಗಮ ಪ್ರಾಣಿಗಳು ಎಲ್ಲವೂ ರತ್ನಗಳ ಬೆಳೆಯನ್ನು ಕೊಡುತ್ತಿದ್ದವು.
ಕೃಷ್ಣಾಶ್ರಯಾತ್ ಸರ್ವಮಿದಂ ವಶೇ ತೇ
ವಿಧಾಯ ಸಮ್ಯಕ್ ಪರಿಪಾಯಯಂತಃ |
ದಿವೀವ ದೇವಾ ಮುಮುದುಃ ಸದೈವ ಮುನೀಂದ್ರಗಂಧರ್ವನೃಪಾದಿಭಿರ್ವೃತಾಃ ॥
ಪಾಂಡವರು ಕೃಷ್ಣನ ಆಶ್ರಯದಿಂದ ಭೂಮಿ, ನದಿ, ಬೆಟ್ಟ ಮುಂತಾದ ಎಲ್ಲವನ್ನೂ ತಮ್ಮ ವಶದಲ್ಲಿಟ್ಟುಕೊಂಡು ಚೆನ್ನಾಗಿ ರಾಜ್ಯಪಾಲನೆ ಮಾಡುತ್ತ ಸದಾ ಮುನೀಶ್ವರ, ಗಂಧರ್ವ, ಚಕ್ರವರ್ತಿ ಮುಂತಾದವರಿಂದೊಡಗೂಡಿ ಸ್ವರ್ಗದಲ್ಲಿ ದೇವತೆಗಳಂತೆ ಆನಂದಿಸಿದರು.
ಸಮುಜ್ಜ್ವಲಾ ಪಾಂಡವಕೀರ್ತಿನಾರೀ

ಪದಂ ವಿಧಾಯಾಸುರಪಕ್ಷಮೂರ್ಧಸು |
ವರಾಭಯೇ ಚೈವ ಸತಾಂ ಕರಾಭ್ಯಾಂ
ಕೃಷ್ಣಪ್ರಸೂತಾ ಜಗದಂಡಮಾವೃಣೋತ್ ॥
ಶ್ರೀವೇದವ್ಯಾಸರ ಮುಖಕಮಲದಿಂದ ಮಹಾಭಾರತ ರೂಪದಲ್ಲಿ ಉದಿಸಿದ ಪಾಂಡವರ ಕೀರ್ತಿನಾರಿ ಉಜ್ವಲವಾಗಿ ಬೆಳಗುತ್ತ, ಅಸುರಪಕ್ಷದವರ ತಲೆಮೇಲೆ ಕಾಲಿಟ್ಟು, ಸಜ್ಜನರ ತಲೆಗಳ ಮೇಲೆ ಎರಡು ಕೈಗಳಿಂದ ವರ ಅಭಯಗಳನ್ನಿಟ್ಟು ಬ್ರಹ್ಮಾಂಡವನ್ನು ವ್ಯಾಪಿಸಿದಳು.
ಪಾತಾಳಪಾದಾಂ ಪೃಥಿವೀನಿತಂಬಾ-
ಮಾಕಾಶಮಧ್ಯಾಂ ಕರಸಂತತಾಶಾಮ್ |
ಗ್ರಹರ್ಕ್ಷತಾರಾಭರಣದ್ಯುವಕ್ಷಸಂ
ವಿರಿಂಚಲೋಕಸ್ಥಿತಸನ್ಮುಖಾಂಬುಜಾಮ್ ॥
ಕೀರ್ತಿನಾರಿಗೆ ಪಾತಾಲದಲ್ಲಿ ಪಾದಗಳು, ಪೃಥಿವಿಯಲ್ಲಿ ನಿತಂಬ, ಆಕಾಶದಲ್ಲಿ ನಡು, ದಿಕ್ಕುಗಳಲ್ಲೆಲ್ಲ ವ್ಯಾಪಿಸುವ ಕೈಗಳು, ಗ್ರಹ-ನಕ್ಷತ್ರ ತಾರೆಗಳು ಆಭರಣಗಳು. ದ್ಯುಲೋಕದಲ್ಲಿ ಎದೆ. ಬ್ರಹ್ಮಲೋಕದಲ್ಲಿ ಮುಖಕಮಲ.
ವಿಕುಂಠನಾಥಾಭಯಹಸ್ತಮಾದರಾ-
ನ್ಮೂರ್ಧ್ನಾ ವಹಂತೀಂ ವರಭಾರತಾಖ್ಯಾಮ್ |
ನಿಶಮ್ಯ ತಾಮೀಕ್ಷ್ಯ ಸಮಸ್ತಲೋಕಾಃ
ಪವಿತ್ರಿತಾ ವೇದಿಭವಾಮಿವಾನ್ಯಾಮ್ ॥
ವೈಕುಂಠಮೂರ್ತಿಯ ಅಭಯಹಸ್ತವನ್ನು ಆದರದಿಂದ ತಲೆಯ ಮೇಲೆ ಹೊತ್ತಿದ್ದಾಳೆ, ಶ್ರೇಷ್ಠವಾದ ಭಾರತ ಎಂಬ ಹೆಸರುಳ್ಳ ಪಾಂಡವರ ಕೀರ್ತಿನಾರಿ. ಸಮಸ್ತಲೋಕದ ಜನರು ಯಜ್ಞವೇದಿಕೆಯಿಂದ ಉದಿಸಿದ ದ್ರೌಪದಿಯನ್ನು ನೋಡಿ ಹೇಗೆ ಪವಿತ್ರರಾದರೋ ಹಾಗೇ ಈ ಪಾಂಡವಕೀರ್ತಿನಾರೀ ಸ್ವರೂಪದ ಭಾರತವನ್ನು ಶ್ರವಣ ಮಾಡಿ ಪವಿತ್ರಿತರಾದರು.
ಪ್ರಪಾಲಯತ್ಸ್ವೇವ ಧರಾಂ ಸಕೃಷ್ಣೇ-
ಷ್ವದ್ವೈವ ಪಾರ್ಥೇಷು ಕಲಿರ್ಬಲಿಶ್ಚ |
ಸಪಾಪದೈತ್ಯೌ ಕ್ವ ಚ ರಾಷ್ಟ್ರವಿಪ್ಲವಂ
ಸಂಚಕ್ರತುಸ್ತಚ್ಛ್ರುತಮಾಶು ಪಾರ್ಥೈಃ ॥
ಪಾಂಡವರು ಕೃಷ್ಣನೊಡಗೂಡಿ ಭೂಮಿಯನ್ನು ಚೆನ್ನಾಗಿ ಪಾಲಿಸುತ್ತಿರುವಾಗಲೇ ಕಲಿ ಮತ್ತು ಬಲಿ ಎಂಬ ಇಬ್ಬರು ಮಹಾಪಾಪಿ ದೈತ್ಯರು ಕೆಲವೆಡೆ ರಾಷ್ಟ್ರವಿಪ್ಲವ ಮಾಡಿದರು. ಪಾಂಡವರು ಅದನ್ನು ಬೇಗನೆ ಕೇಳಿ ತಿಳಿದರು.
ನೃಪೇಣ ಕೃಷ್ಣೇನ ಚ ಸಾಧು ಚೋದಿತೋ
ಭೀಮಸ್ತದಾ ತೌ ಸಗಣೌ ವಿಜಿತ್ಯ |
ಬಲಿಂ ಪ್ರವಿದ್ರಾಪ್ಯ ಕಲಿಂ ನಿಬದ್ಧ್ಯ
ಸಮಾನಯತ್ ಕೃಷ್ಣನೃಪೇಂದ್ರಯೋಃ ಪುರಃ ॥
ಧರ್ಮರಾಜನ ಮತ್ತು ಶ್ರೀಕೃಷ್ಣನ ಆದೇಶವನ್ನು ಪಡೆದ ಭೀಮ ಕಲಿ-ಬಲಿಗಳನ್ನು ಪರಿವಾರಸಮೇತರಾಗಿ ಪರಾಭವಗೊಳಿಸಿ ಬಲಿಯನ್ನು ಓಡಿಸಿ, ಕಲಿಯನ್ನು ಬಂಧಿಸಿ ಶ್ರೀಕೃಷ್ಣ-ಯುಧಿಷ್ಠಿರರ ಮುಂದೆ ತಂದು ನಿಲ್ಲಿಸಿದ.
ಪಪ್ರಚ್ಛ ತಂ ಕೃಷ್ಣಪುರೋ ಯುಧಿಷ್ಠಿರ ಉದಾರಧೀಃ |
ಕಲೇ ಕಿಮಿತಿ ಮೇ ರಾಷ್ಟ್ರಂ ವಿಪ್ಲಾವಯಸಿ ದುರ್ಮತೇ ॥
ಉತ್ತಮ ಬುದ್ಧಿಯುಳ್ಳ ಯುಧಿಷ್ಠಿರ ಶ್ರೀಕೃಷ್ಣನ ಸಮಕ್ಷಮದಲ್ಲಿ ಕಲಿಯನ್ನು ಪ್ರಶ್ನಿಸಿದ. ದುರ್ಬುದ್ಧಿಯವನೇ, ನನ್ನ ರಾಷ್ಟ್ರವನ್ನು ಏಕೆ ವಿಪ್ಲವಗೊಳಿಸುತ್ತಿ? ಎಂದು.
ಇತ್ಯುಕ್ತ ಆಹ ಕಾಲೋಽಯಂ ದುರ್ಯೋಧನನಿಪಾತನಮ್ |
ಆರಭ್ಯ ಮಮ ತತ್ರ ತ್ವಂ ಬಲಾದಾಕ್ರಮ್ಯ ತಿಷ್ಠಸಿ ॥
ಧರ್ಮರಾಜ ಹೀಗೆ ಹೇಳಿದಾಗ ಕಲಿ ನುಡಿದ, `ದುರ್ಯೋಧನನ ಪತನವನ್ನಾರಂಭಿಸಿ ಇದು ನನ್ನ ಕಾಲ. ನೀನು ಬಲಾತ್ಕಾರವಾಗಿ ಆಕ್ರಮಿಸಿ ನಿಂತಿರುವೆ.
ತತೋ ಮಯಾ ಕೃತೋ ರಾಷ್ಟ್ರವಿಪ್ಲವಸ್ತೇ ನರಾಧಿಪ |
ತಮಾಹ ರಾಜಾ ರಾಜ್ಞಾಂ ಹಿ ಬಲಾದ್ ರಾಜ್ಯಂ ಪ್ರವರ್ತತೇ ॥
ಅಪಿ ಕಾಲಭವಂ ರಾಷ್ಟ್ರಂ ತ್ವದೀಯಂ ಮಾದೃಶೈರ್ನೃಪೈಃ |
ಹ್ರಿಯತೇ ಬಲವದ್ಭಿರ್ಹಿ ರಾಜ್ಯಾಶಾ ತೇ ಕುತಸ್ತದಾ ॥
`ಅದರಿಂದ, ರಾಜನೇ, ನಾನು ನಿನ್ನ ರಾಷ್ಟ್ರದಲ್ಲಿ ವಿಪ್ಲವ ಮಾಡಿದೆ' ಎಂದು ಕಲಿ ನುಡಿದಾಗ ಧರ್ಮರಾಜನೆಂದ, ರಾಜರ ಬಲದಿಂದಲೇ ರಾಜ್ಯ ನಡೆಯುತ್ತದೆ. ಅದರಿಂದ ಈ ಕಾಲದಲ್ಲಿರುವ ರಾಷ್ಟ್ರ ನಿನ್ನದಾಗಿರಬಹುದು. ಆದರೆ ಬಲಿಷ್ಠರಾದ ನನ್ನಂಥ ರಾಜರಿಂದ ಅದು ಅಪಹೃತವಾಗುತ್ತದೆ. ಆಗ ನಿನಗೆ ರಾಜ್ಯದ ಆಸೆ ಎಲ್ಲಿಯದು?
ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ |
ಇತಿ ತೇ ಸಂಶಯೋ ಮಾಭೂದ್ರಾಜಾ ಕಾಲಸ್ಯ ಕಾರಣಮ್ ॥
`ರಾಜ ಕಾಲಕಾರಣನೋ ಕಾಲಕ್ಕೆ ರಾಜ್ಯ ಕಾರಣನೋ ಎಂದು ನಿನಗೆ ಸಂಶಯ ಬೇಡ. ರಾಜನೇ ಕಾಲಕ್ಕೆ ಕಾರಣ'.
ತಮುವಾಚ ಕಲಿಃ ಕಾಲೇ ಮದೀಯೇ ತ್ವಾದೃಶಃ ಕುತಃ |

ರಾಜಾನಂ ಪೂರ್ವಮಾವಿಶ್ಯ ವಿಪ್ರಾಂಶ್ಚ ಸ್ಯಾಮಹಂ ನೃಪ ॥
ಧರ್ಮರಾಜನಿಗೆ ಕಲಿ ಹೇಳಿದ, `ರಾಜನೇ, ನನ್ನ ಕಾಲದಲ್ಲಿ ನಿನ್ನಂಥ ರಾಜರೆಲ್ಲಿ? ನಾನು ಮೊದಲಿಗೇ ರಾಜನನ್ನೂ ಬ್ರಾಹ್ಮಣರನ್ನೂ ಪ್ರವೇಶಿಸಿ ಇರುತ್ತೇನೆ.
ವಾಸುದೇವಸಹಾಯೇಷು ತೇಜೋ ಯುಷ್ಮಾಸು ಮೇ ನ ಹಿ |
ಕ್ವ ರಾಜಾऽಸಾವೃತೇ ಯುಷ್ಮಾನ್ಯೋ ಮಯಾ ನಾಭಿಭೂಯತೇ ॥
ಮದೀಯಕಾಲೇ ಭೂಪಾಲ ವಿಪ್ರವೇದವಿರೋಧಿನಿ |
ಮದ್ದೃಷ್ಟಿಪಾತೇ ಕ್ವ ಗುಣಾಃ ಕ್ವ ವೇದಾಃ ಕ್ವ ಸುಯುಕ್ತಯಃ ॥
ಕೃಷ್ಣನ ಸಹಾಯ ಉಳ್ಳವರಾದ್ದರಿಂದ ನಿಮ್ಮ ವಿಷಯದಲ್ಲಿ ನನಗೆ ಸಾಮರ್ಥ್ಯವಿಲ್ಲ. ರಾಜನೇ, ಬ್ರಾಹ್ಮಣರಿಗೂ ವೇದಗಳಿಗೂ ವಿರೋಧಿಯಾದ ನನ್ನ ಕಾಲದಲ್ಲಿ ನಿಮ್ಮನ್ನು ಹೊರತುಪಡಿಸಿದರೆ ನನ್ನ ವಶನಾಗದ ರಾಜನೆಲ್ಲಿದ್ದಾನೆ? ನನ್ನ ದೃಷ್ಟಿ ಬಿದ್ದಾಗ ಎಲ್ಲಿ ಗುಣಗಳು? ಎಲ್ಲಿ ವೇದಗಳು? ಮತ್ತೆಲ್ಲಿ ಒಳ್ಳೆಯ ಯುಕ್ತಿಗಳು?'
ಜಗಾದ ನೃಪತಿಃ ಸತ್ಯಂ ಕಲೇ ವಕ್ಷ್ಯನೃತೋऽಪಿ ಸನ್ |
ಮೋಚಯೇ ತ್ವರ್ತವಚನಾದ್ ಯದಾऽಸ್ಮತ್ಸಂತತೇಃ ಪರಮ್ ॥
ಮಿಲುಂಪಸ್ಯಖಿಲಾನ್ ಧರ್ಮಾನ್ ಕರಂ ತತ್ರಾಪಿ ನೋऽರ್ಪಯ |
ಸೀಮಾಧಿರ್ಬಹುವಾಕ್ಯಂ ಚ ತುಲಾಮಾನೇ ಚ ಮೇ ಕರಃ ॥
ಧರ್ಮರಾಜನೆಂದ, ಕಲಿಯೇ, ನೀನು ಅಸತ್ಯರೂಪನಾದರೂ ಸತ್ಯವನ್ನೇ ಹೇಳುತ್ತಿರುವೆ. ಸತ್ಯವನ್ನು ನುಡಿದೆಯಾದ್ದರಿಂದ ನಿನ್ನನ್ನು ಬಿಡುತ್ತೇನೆ. ನಮ್ಮ ಸಂತತಿ ನಿಂತ ಬಳಿಕ ನೀನು ಯಾವಾಗ ಎಲ್ಲ ಧರ್ಮಗಳನ್ನೂ ನಾಶಪಡಿಸುವೆಯೋ ಆಗಲೂ ನಮಗೆ ನೀನು ಕಪ್ಪ ಕೊಡಬೇಕು. ಗ್ರಾಮದ ಗಡಿ, ಅಡವಿಟ್ಟ ವಸ್ತು, ಬಹುಜನರ ಸಾಕ್ಷಿವಚನ, ತಕ್ಕಡಿ, ಅಳತೆ ಪಾತ್ರೆ ಇವೇ ನನಗೆ ಕೊಡಬೇಕಾದ ಕಪ್ಪಗಳು.
ನೈವಾತಿಕ್ರಮಮೇತೇಷಾಂ ಕುರು ಸರ್ವಾತ್ಮನಾ ಕ್ವಚಿತ್ |
ತಮಾಹ ಭಗವಾನ್ ಕೃಷ್ಣೋ ಯಾವತ್ ಪಾಂಡವಸಂತತಿಃ ॥
ತಾವನ್ನ ತೇ ಭವೇಚ್ಛಕ್ತಿಃ ಪ್ರವೃತ್ತಸ್ಯಾಪಿ ಭೂತಳೇ |
ಪಾಂಡವೇಭ್ಯಃ ಪರಂ ಯಾವತ್ ಕ್ಷೇಮಕಃ ಕ್ರಮವರ್ದ್ಧಿತಾ ॥
`ಇವುಗಳ ಅತಿಕ್ರಮವನ್ನು ಎಲ್ಲಿಯೂ ಸರ್ವಥಾ ಮಾಡಬೇಡ' ಎಂದ ಧರ್ಮರಾಜ. ಶ್ರೀಕೃಷ್ಣನೂ ನುಡಿದ, ಪಾಂಡವರ ಸಂತತಿ ಇರುವಷ್ಟು ಕಾಲ ನೀನು ಭೂಮಿಯಲ್ಲಿ ಪ್ರವೃತ್ತಿ ಮಾಡಿದರೂ ನಿನಗೆ ಸಾಮರ್ಥ್ಯ ಬರಲಾರದು. ಪಾಂಡವರ ಅನಂತರ ಕ್ಷೇಮಕನವರೆಗೆ ಅವರ ಸಂತತಿ ಕ್ರಮವಾಗಿ ಬೆಳೆಯುತ್ತದೆ.
ಕ್ಷೇಮಕಾತ್ ಪರತಃ ಪೂರ್ತಿಂ ಶಕ್ತಿಸ್ತೇ ಯಾಸ್ಯತಿ ಧ್ರುವಮ್ |
ನ ದ್ರಷ್ಟವ್ಯಂ ಭೂತಳಂ ತೇ ಕುತ ಏವ ಸ್ಪೃಶೇರ್ಭುವಮ್ ॥
ಯಾವತ್ ಪಾರ್ಥಾ ಅಹಂ ಚಾತ್ರ ತತೋ ಭುವಿ ಪದಂ ಕುರು |
ಇತ್ಯುಕ್ತೋ ವಾಸುದೇವೇನ ಮೋಚಿತೋ ಧರ್ಮಜೇನ ಚ ॥
ತಾನ್ ಪ್ರಣಮ್ಯ ಯಯೌ ಪಾರೇ ಸಮುದ್ರಸ್ಯಾऽಶ್ರಯದ್ ಗುಹಾಮ್|
ಪಾರ್ಥಾಶ್ಚ ಕೃಷ್ಣಸಹಿತಾ ರಕ್ಷಂತಃ ಕ್ಷ್ಮಾಂ ಮುದಂ ಯಯುಃ ॥
`ಕ್ಷೇಮಕನ ಅನಂತರ ನಿನ್ನ ಶಕ್ತಿ ನಿಶ್ಚಯವಾಗಿಯೂ ಪೂರ್ಣ ಬೆಳೆಯುತ್ತದೆ. ಪಾಂಡವರೂ ನಾನೂ ಇಲ್ಲಿ ಇರುವಷ್ಟೂ ಕಾಲ ನೀನು ಭೂತಲವನ್ನು ನೋಡಲೂ ಕೂಡದು ಎಂದ ಮೇಲೆ ಹೇಗೆ ಸ್ಪರ್ಶಿಸುವಿ? ನಾವು ಹೋದ ಬಳಿಕ ನೀನು ಭೂಮಿಯ ಮೇಲೆ ಕಾಲೂರಬಹುದು'. ಹೀಗೆ ಶ್ರೀಕೃಷ್ಣ ಕಲಿಗೆ ಹೇಳಿದ. ಧರ್ಮರಾಜ ಅವನನ್ನು ಬಿಟ್ಟ. ಅವನು ಅವರನ್ನು ನಮಿಸಿ ಹೊರಟುಹೋದ. ಸಮುದ್ರದ ಆಚೆ ದ್ವೀಪದಲ್ಲಿ ಒಂದು ಗುಹೆಯನ್ನು ಆಶ್ರಯಿಸಿದ. ಪಾಂಡವರು ಶ್ರೀಕೃಷ್ಣ ಸಹಿತರಾಗಿ ಭೂಮಿಯನ್ನು ಆಳುತ್ತಾ ಆನಂದಪಟ್ಟರು.
ಏವಂ ಪಾರ್ಥಾನ್ ಪ್ರತಿಷ್ಠಾಪ್ಯ ಶಕ್ರಪ್ರಸ್ಥೇ ತು ಸಾರ್ಜುನಃ |
ಕ್ರೀಡನ್ ದಿವ್ಯಾಃ ಕಥಾಃ ಪ್ರಾಹ ಪುತ್ರಶೋಕಾಪನುತ್ತಯೇ ॥
ಹೀಗೆ ಶ್ರೀಕೃಷ್ಣ ಪಾಂಡವರನ್ನು ಸ್ಥಾಪಿಸಿ ಅರ್ಜುನನೊಡಗೂಡಿ ಇಂದ್ರಪ್ರಸ್ಥದಲ್ಲಿ ವಿಹರಿಸುತ್ತಾ ಅವನ ಪುತ್ರಶೋಕ ಪರಿಹಾರಕ್ಕಾಗಿ ದಿವ್ಯವಾದ ಕಥೆಗಳನ್ನು ಹೇಳಿದ.
* * * * *
ಎರಡನೆಯ ಅಧ್ಯಾಯ
ಶ್ರೀಕೃಷ್ಣ ವ್ಯಾಸರೂಪಗಳಿಂದ ಯುಧಿಷ್ಠಿರನಿಗೆ ಸಾಂತ್ವನ
ವೈಶಂಪಾಯನಃ
ಏವಮುಕ್ತಸ್ತು ರಾಜಾऽಸೌ ಧೃತರಾಷ್ಟ್ರೇಣ ಧೀಮತಾ |
ತೂಷ್ಣೀಂ ಬಭೂವ ಮೇಧಾವೀ ತಮುವಾಚಾಥ ಕೇಶವಃ ॥1॥
ವೈಶಂಪಾಯನ ಜನಮೇಜಯನೇ, ಬುದ್ಧಿವಂತನಾದ ಧೃತರಾಷ್ಟ್ರನು ಧರ್ಮರಾಜನಿಗೆ ಹೀಗೆ ಹೇಳಿದ ನಂತರವೂ ಮೇಧಾವಿಯಾದ ಯುಧಿಷ್ಠಿರನು ಯಾವ ಮಾತನ್ನೂ ಆಡದೆ ಸುಮ್ಮನೆ ಕುಳಿತಿದ್ದನು. ಈ ಸಮಯದಲ್ಲಿ ಯುಧಿಷ್ಠಿರನನ್ನು ಕುರಿತು ಕೇಶವನು ಹೀಗೆ ಹೇಳಿದನು.
ಶ್ರೀಭಗವಾನ್
ಅತೀವ ಮನಸಾ ಶೋಕೋ ಧ್ರಿಯಮಾಣೋ ನರಾಧಿಪ |

ಸಂತಾಪಯತಿ ಚೈತಸ್ಯ ಪೂರ್ವಪ್ರೇತಾನ್ ಪಿತಾಮಹಾನ್ ॥2॥
ಶ್ರೀಭಗವಾನ್ ಜನೇಶ್ವರನೇ, ಸತ್ತು ಹೋದವರ ವಿಷಯದಲ್ಲಿ ಮಾಡುವ ಅತಿಯಾದ ಶೋಕವು ಈ ಮೊದಲೇ ಮರಣ ಹೊಂದಿರುವವರ ಪಿತಾಮಹರಿಗೆ ಬಹಳವಾದ ಸಂತಾಪವನ್ನು ಉಂಟುಮಾಡುತ್ತದೆ.
ಯಜಸ್ವ ವಿವಿಧೈರ್ಯಜ್ಞೈರ್ಬಹುಭಿಶ್ಚಾಪ್ತದಕ್ಷಿಣೈಃ।
ದೇವಾಂಸ್ತರ್ಪಯ ಸೋಮೇನ ಸ್ವಧಯಾ ಚ ಪಿತೄನಪಿ।
ಅತಿಥೀನನ್ನಪಾನೇನ ಕಾಮೈರನ್ಯೈರಕಿಂಚನಾತ್ ॥3॥
ಆದ್ದರಿಂದ ಹೆಚ್ಚು ಶೋಕ ಪಡಬೇಡ. ಬಹುದಕ್ಷಿಣೆಗಳುಳ್ಳ ನಾನಾ ಪ್ರಕಾರವಾದ ಯಜ್ಞಗಳನ್ನು ಆಚರಿಸು. ಸೋಮರಸದ ಮೂಲಕವಾಗಿ ದೇವತೆಗಳನ್ನು ಸಂತೋಷಪಡಿಸು. ಸ್ವಧಾರಸದ ಮೂಲಕವಾಗಿ ಪಿತೃಗಳನ್ನೂ ತೃಪ್ತಿಪಡಿಸು. ಅತಿಥಿಗಳನ್ನು ಅನ್ನ-ಪಾನಗಳಿಂದ, ದರಿದ್ರರನ್ನು ಅವರಿಗೆ ಬೇಕಾದ ಪದಾರ್ಥಗಳನ್ನು ಕೊಡುವುದರಿಂದ ತೃಪ್ತಿಗೊಳಿಸು.
ತ್ವದ್ವಿಧಸ್ಯ ಮಹಾಬುದ್ಧೇ ನೈತದದ್ಯೋಪಪದ್ಯತೇ।
ವಿದಿತಂ ವೇದಿತವ್ಯಂ ತೇ ಕರ್ತವ್ಯಮಪಿ ತೇ ಕೃತಮ್ ॥4॥
ಮಹಾಬುದ್ಧಿವಂತನಾದ ಧರ್ಮಜನೇ, ನಿನಗೆ ಈ ರೀತಿಯಾದ ಶೋಕವು ಸಲ್ಲದು. ತಿಳಿಯಬೇಕಾದುದೆಲ್ಲವನ್ನೂ ನೀನು ತಿಳಿದುಕೊಂಡಿರುವೆ. ಮಾಡಬೇಕಾದ ಕರ್ತವ್ಯವನ್ನು ಮಾಡಿರುವೆ.
ಶ್ರುತಾಶ್ಚ ರಾಜಧರ್ಮಾಸ್ತೇ ಭೀಷ್ಮಾದ್ ಭಾಗೀರಥೀಸುತಾತ್।
ಕೃಷ್ಣದ್ವೈಪಾಯನಾಚ್ಚಾಪಿ ನಾರದಾದ್ ವಿದುರಾತ್ ತಥಾ ॥5॥
ಭಾಗೀರಥಿಯ ಮಗನಾದ ಭೀಷ್ಮನಿಂದ, ಕೃಷ್ಣ-ದ್ವೈಪಾಯನರಿಂದ, ನಾರದರಿಂದ, ವಿದುರನಿಂದ ಸಮಸ್ತ ಧರ್ಮಗಳನ್ನು ಅರಿತಿರುವೆ.
ನೇಮಾಮರ್ಹಸಿ ಮೂಢಾನಾಂ ಮತಿಂ ತ್ವಮನುವರ್ತಿತುಮ್।
ಪಿತೃಪೈತಾಮಹಂ ವೃತ್ತಮಾಸ್ಥಾಯ ಧುರಮುದ್ವಹ ॥6॥
ಇಂತಹ ನೀನು ಮೂಢನಂತೆ ವ್ಯವಹರಿಸುವುದು ಯೋಗ್ಯವಲ್ಲ. ನಿನ್ನ ತಾತ-ಮುತ್ತಾತಂದಿರು ಆಶ್ರಯಿಸಿದ ಕ್ಷತ್ರವೃತ್ತಿಯನ್ನೇ ನೀನು ಆಶ್ರಯಿಸಿ ರಾಜ್ಯಭಾರವನ್ನು ನಡೆಸು.
ಯುಕ್ತಂ ಹಿ ಯಶಸಾ ಕ್ಷಾತ್ರಂ ಸ್ವರ್ಗಂ ಪ್ರಾಪ್ತುಮಸಂಶಯಮ್।
ನ ಹಿ ಕಶ್ಚನ ಶೂರಾಣಾಂ ನಿಹತೋಽತ್ರ ಪರಾಙ್ಮುಖಃ ॥7॥
ಕ್ಷತ್ರಿಯಸಮುದಾಯವು ಯುದ್ಧದಲ್ಲಿ ಪಡೆಯುವ ಯಶಸ್ಸನ್ನು ಹೊಂದಬಯಸುವುದು ಯುಕ್ತವಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಇಷ್ಟು ಮಂದಿ ಶೂರರಲ್ಲಿ ಯಾವ ಒಬ್ಬನೂ ಯುದ್ಧದಿಂದ ಪರಾಙ್ಮುಖನಾಗಿ ಕೊಲ್ಲಲ್ಪಟ್ಟಿರುವುದಿಲ್ಲ. (ಎಲ್ಲರೂ ಯುದ್ಧಧರ್ಮದಿಂದಲೇ ಹತರಾಗಿರುವುದರಿಂದ ಅವರೆಲ್ಲರೂ ಸ್ವರ್ಗವನ್ನು ಹೊಂದಿರುತ್ತಾರೆ. ಉತ್ತಮ ಸ್ಥಾನವನ್ನು ಹೊಂದಿದವರ ಬಗ್ಗೆ ಶೋಕಪಡಲು ಯಾವ ಕಾರಣಗಳೂ ಇಲ್ಲ).
ತ್ಯಜ ಶೋಕಂ ಮಹಾರಾಜ ಭವಿತವ್ಯಂ ಹಿ ತತ್ ತಥಾ।
ನ ಶಕ್ಯಾಸ್ತೇ ಪುನರ್ದ್ರಷ್ಟುಂ ತ್ವಯಾ ಯೇಽಸ್ಮಿನ್ ರಣೇ ಹತಾಃ ॥8॥
ಮಹಾರಾಜನೇ, ಶೋಕವನ್ನು ಬಿಡು. ಈಗ ಏನೆಲ್ಲ ಘಟನೆಗಳು ನಡೆದಿರುವವೆಯೋ, ಅದು ಆಗಬೇಕಾಗಿರುವ ಘಟನೆಗಳು. ನೀನು ಎಷ್ಟು ದುಃಖ ಹೊಂದಿದರೂ ಯುದ್ಧದಲ್ಲಿ ಹತರಾದವರನ್ನು ನೀನು ಪುನಃ ನೋಡಲಾರೆ. ಆದ್ದರಿಂದ ದುಃಖವನ್ನು ನಿಲ್ಲಿಸಿ ಮುಂದಿನ ಕರ್ತವ್ಯಗಳಲ್ಲಿ ಆಸಕ್ತನಾಗು.
ವೈಶಂಪಾಯನಃ
ಏತಾವದುಕ್ತ್ವಾ ಗೋವಿಂದೋ ಧರ್ಮರಾಜಂ ಯುಧಿಷ್ಠಿರಮ್।
ವಿರರಾಮ ತದಾ ರಾಜಾ ಪುನರ್ವಚನಮಬ್ರವೀತ್ ॥9॥
ವೈಶಂಪಾಯನ ಜನಮೇಜಯನೇ, ಧರ್ಮರಾಜನಾದ ಯುಧಿಷ್ಠಿರನಿಗೆ ಮಹಾತೇಜಸ್ವಿಯಾದ ಶ್ರೀಕೃಷ್ಣನು ಇಷ್ಟು ಮಾತನ್ನು ಹೇಳಿ ಮೌನವಹಿಸಿದನು.
ಯುಧಿಷ್ಠಿರಃ
ಗೋವಿಂದ ಮಯಿ ಯಾ ಪ್ರೀತಿಃ ತವ ಸಾ ವಿದಿತಾ ಮಯಾ।
ಸೌಹೃದೇನ ತಥಾ ಪ್ರೇಮ್ಣಾ ಸದಾ ಮಾಮನುಕಂಪಸೇ ॥10॥
ಧರ್ಮರಾಜನು ಕೃಷ್ಣನನ್ನು ಕುರಿತು ಹೇಳುತ್ತಾನೆ- ಗೋವಿಂದನೇ, ನಿನಗೆ ನನ್ನ ಮೇಲೆ ಯಾವ ವಿಧವಾದ ಪ್ರೀತಿಯಿದೆ ಎಂಬುದು ಚೆನ್ನಾಗಿ ತಿಳಿದಿದೆ. ಸೌಹಾರ್ದದಿಂದ, ಪ್ರೇಮದಿಂದ ನೀನು ನನ್ನ ವಿಷಯದಲ್ಲಿ ಯಾವಾಗಲೂ ಅನುಕಂಪವನ್ನೇ ತೋರಿಸುತ್ತಿರುವೆ.
ಪ್ರಿಯಂ ತು ಮೇ ಸ್ಯಾತ್ ಸುಮಹತ್ ಕೃತಂ ಚಕ್ರಗದಾಧರ ॥11॥
ಶ್ರೀಮನ್ ಪ್ರೀತೇನ ಮನಸಾ ಸರ್ವಯಾದವನಂದನ।
ಯದಿ ಮಾಮನುಜಾನೀಯಾದ್ ಭವಾನ್ ಗಂತುಂ ತಪೋವನಮ್ ॥
ಕೃತಕೃತ್ಯೋ ಭವಿಷ್ಯಾಮೀತಿ ಮೇ ನಿಶ್ಚಿತಾ ಮತಿಃ ॥13॥
ಚಕ್ರಗದಾಧರನೇ, ಕಾಂತಿಯುಕ್ತನೇ, ಯಾದವನಂದನನೇ, ನೀನು ನನ್ನಲ್ಲಿ ಅತಿಶಯವಾದ ಪ್ರೀತಿಯನ್ನೇ ತೋರುತ್ತಿರುವೆ. ನೀನೇನಾದರೂ ಪ್ರಸನ್ನವಾದ ಮನಸ್ಸಿನಿಂದ ನನಗೆ ಅರಣ್ಯಕ್ಕೆ ಹೋಗಲು ಅನುಮತಿಯನ್ನಿತ್ತರೆ ಅದಕ್ಕಿಂತ ಪ್ರಿಯವಾದ ಕರ್ಮ ಇನ್ನೊಂದಿಲ್ಲ ಎಂದಾಗುತ್ತಿತ್ತು. ವನವಾಸದ ಕ್ರಿಯೆಯಿಂದ ಕೃತಕೃತ್ಯನಾಗುತ್ತೇನೆ ಎಂಬ ನಿಶ್ಚಯವಾದ ಬುದ್ಧಿಯನ್ನು ಹೊಂದಿರುತ್ತೇನೆ.
ನ ಹಿ ಶಾಂತಿಂ ಪ್ರಪಶ್ಯಾಮಿ ಘಾತಯಿತ್ವಾ ಪಿತಾಮಹಮ್।

ಕರ್ಣಂ ಚ ಪುರುಷವ್ಯಾಘ್ರಂ ಸಂಗ್ರಾಮೇಷ್ವಪಲಾಯಿನಮ್ ॥14॥
ಕರ್ಮಣಾ ಯೇನ ಮುಚ್ಯೇಯಂ ತಸ್ಮಾತ್ ಪಾಪಾದರಿಂದಮ |
ಕರ್ಮ ತತ್ ತ್ವಂ ವಿಧತ್ಸ್ವೇಹ ನ ಹಿ ಶುದ್ಧ್ಯತಿ ಮೇ ಮನಃ ॥15॥
ಪಿತಾಮಹನಾದ ಭೀಷ್ಮನನ್ನು ವಧಿಸಿ ಮನಸ್ಸಿಗೆ ಶಾಂತಿಯನ್ನು ಹೊಂದುತ್ತಿಲ್ಲ. ಎಂದೂ ರಣಹೇಡಿಯಾಗದ, ಪುರುಷವ್ಯಾಘ್ರನೆನಿಸಿದ ಕರ್ಣನನ್ನು ಕೊಂದು ಸಂತುಷ್ಟನಾಗಿಲ್ಲ. ಈಗ ಯಾವ ಕರ್ಮವನ್ನು ಮಾಡಿದರೆ ಕ್ರೌರ್ಯದಿಂದ ಮಾಡಿದ ಪಾಪದಿಂದ ವಿಮುಕ್ತನಾಗುತ್ತೇನೋ ನನ್ನ ಮನಸ್ಸಿನಲ್ಲಿ ಶಾಂತಿಯನ್ನು ಹೊಂದುತ್ತೇನೋ ಅಂತಹ ಕರ್ಮವನ್ನು ಅರಿಂದಮನೇ, ನಿರ್ದೇಶಿಸು.
ವೈಶಂಪಾಯನಃ
ತಮೇವಂ ವಾದಿನಂ ವ್ಯಾಸಸ್ತತಃ ಪ್ರೋವಾಚ ತಂ ಪ್ರಭುಃ |
ಸಾಂತ್ವಯನ್ ಸುಮಹಾತೇಜಾಃ ವೇದವೇದಾಂಗತತ್ತ್ವವಿತ್ ॥16॥
ವೈಶಂಪಾಯನ ಜನಮೇಜಯನೇ, ಶ್ರೀಕೃಷ್ಣನೊಡನೆ ಹೀಗೆ ಮಾತನಾಡುತ್ತಿದ್ದ ಧರ್ಮರಾಜನನ್ನು ಕುರಿತು ಧರ್ಮವಿದರಾದ, ವೇದ-ವೇದಾಂಗವನ್ನರಿತ ಮಹಾತೇಜಸ್ವಿಗಳಾದ ವೇದವ್ಯಾಸರು ಸಾಂತ್ವನಗೊಳಿಸುತ್ತಾ ಅರ್ಥವತ್ತಾದ ಮಾತುಗಳನ್ನು ಹೇಳಿದರು.
ವ್ಯಾಸಃ
ಸುಕೃತಾ ತೇ ಮತಿಸ್ತಾತ ಪುನರ್ಬಾಲ್ಯೇನ ಮುಹ್ಯಸಿ |
ಕಿಮಾಕಾಶೇ ವಯಂ ಸರ್ವೇ ಪ್ರಲಪಾಮೋ ಮುಹುರ್ಮುಹುಃ ॥17॥
ಮಗು ಯುಧಿಷ್ಠಿರನೇ, ನಿಶ್ಚಯವಾಗಿಯೂ ನಿನ್ನ ಬುದ್ಧಿಯು ಇನ್ನೂ ಪರಿಪಕ್ವತೆಯನ್ನು ಪಡೆದಿಲ್ಲ. ಪುನಃ ನೀನು ಬಾಲಕರಂತೆ ಅವಿವೇಕದಿಂದಲೇ ಮೋಹ ಹೊಂದುತ್ತಿರುವಿ. ಇದರಿಂದ ನಾವೆಲ್ಲರೂ ವ್ಯರ್ಥವಾದ ವ್ಯರ್ಥವಾದ ಪ್ರಲಾಪವನ್ನು ಮತ್ತೆ ಮತ್ತೆ ಮಾಡುತ್ತಲೇ ಇದ್ದೇವೆ.
ವಿದಿತಾಃ ಕ್ಷತ್ರಧರ್ಮಾಸ್ತೇ ಯೇಷಾಂ ಯುದ್ಧೇನ ಜೀವಿಕಾ ॥18॥
ಯಾರಿಗೆ ಯುದ್ಧದಿಂದಲೇ ಜೀವಿಕೆಯೋ ಅಂತಹ ಕ್ಷತ್ರಿಯಧರ್ಮವೆಲ್ಲವೂ ನಿನಗೆ ಸಂಪೂರ್ಣವಾಗಿ ತಿಳಿದಿದೆ.
ಯಥಾ ವೈ ಕಾಮಜಾಂ ಮಾಯಾಂ ಪರಿತ್ಯಕ್ತುಂ ತ್ವಮರ್ಹಸಿ |
ತಥಾ ತು ಕುರ್ವನ್ ನೃಪತಿರ್ನಾನುಬಂಧೇನ ಯುಜ್ಯತೇ ॥19॥
ಯಥಾ ಚ ವೈ ತ್ವಂ ನೃಪತೇ ಶೋಕಬಂಧಾದ್ ವಿಮೋಕ್ಷ್ಯಸೇ |
ಮೋಕ್ಷಧರ್ಮಾಶ್ಚ ನಿಖಿಲಾ ಯಥಾವತ್ ಸಂಶ್ರುತಾಸ್ತ್ವಯಾ ॥20॥
ಅಸಕೃಚ್ಚೈವ ಸಂದೇಹಾಶ್ಛಿನ್ನಾಸ್ತೇ ಕಾಮಜಾ ಮಯಾ |
ಅಶ್ರದ್ದಧಾನೋ ದುರ್ಮೇಧಾ ಲುಪ್ತಸ್ಮೃತಿರಸಿ ಧ್ರುವಮ್ ॥21॥
ಅಂತಹ ಕ್ಷತ್ರಿಯಧರ್ಮಾನುಸಾರವಾಗಿ ವ್ಯವಹರಿಸುವ ರಾಜನು ಎಂದಿಗೂ ಮಾನಸಿಕ ಚಿಂತೆಗೆ ತುತ್ತಾಗುವುದಿಲ್ಲ. ಆದ್ದರಿಂದ ಮನಸ್ಸಿನಲ್ಲಿ ಹುಟ್ಟಿದ ಮೋಹವನ್ನು ಬಿಡಲು ನೀನು ಅರ್ಹನಾಗಿರುವಿ. ನಿನ್ನ ಸಂಕಲ್ಪಕ್ಕನುಗುಣವಾಗಿ ಕೇಳಿದ ಸಂದೇಹಗಳೆಲ್ಲವನ್ನೂ ನಾನು ಹಲವು ಬಾರಿ ಪರಿಹರಿಸಿರುತ್ತೇನೆ. ಮೋಕ್ಷಧರ್ಮಗಳೆಲ್ಲವನ್ನೂ ಯಥಾವತ್ತಾಗಿ ನನ್ನಿಂದ ಕೇಳಲ್ಪಟ್ಟಿರುವಿ. ಹೀಗಿದ್ದರೂ ನಿನ್ನ ಅಶ್ರದ್ಧೆಯ ಪರಿಣಾಮ ಹೇಳಿದ ಉಪದೇಶಗಳೆಲ್ಲವೂ ವಿಸ್ಮೃತವಾಗಿವೆ. ಇದು ನಿಶ್ಚಯ.
ಮೈವಂ ಭೂಸ್ತ್ವಂ ನ ತೇ ಯುಕ್ತಮಿದಮಜ್ಞಾನಮೀದೃಶಮ್ ॥22॥
ಯುಧಿಷ್ಠಿರನೇ, ಇನ್ನೆಂದೂ ಈ ರೀತಿ ಮಾತನಾಡಬೇಡ. ಈ ವಿಧವಾದ ಅಜ್ಞಾನವನ್ನು ಆಶ್ರಯಿಸುವುದು ನಿನಗೆ ಯೋಗ್ಯವಲ್ಲ.
ಪ್ರಾಯಶ್ಚಿತ್ತಾನಿ ಸರ್ವಾಣಿ ವಿದಿತಾನಿ ಚ ತೇಽನಘ |
ಯುದ್ಧಧರ್ಮಾಶ್ಚ ತೇ ಸರ್ವೇ ದಾನಧರ್ಮಾಶ್ಚ ತೇ ಶ್ರುತಾಃ ॥23॥
ನಿಷ್ಪಾಪನೇ, ಎಲ್ಲ ವಿಧವಾದ ಪ್ರಾಯಶ್ಚಿತ್ತಗಳನ್ನೂ ಬಲ್ಲವನಾಗಿರುವಿ. ಯುದ್ಧಧರ್ಮಗಳೇನು? ದಾನಧರ್ಮಗಳೇನು? ಎಲ್ಲವೂ ನಿನಗೆ ತಿಳಿದಿದೆ.
ಸ ಕಥಂ ಸರ್ವಧರ್ಮಜ್ಞಃ ಸರ್ವಾಗಮವಿಶಾರದ |
ಪರಿಮುಹ್ಯಸಿ ಭೂಯಸ್ತ್ವಮಜ್ಞಾನಾದಿವ ಭಾರತ ॥24॥
ಭಾರತನೇ, ಈ ರೀತಿ ನೀನು ಸರ್ವಧರ್ಮಗಳನ್ನು ತಿಳಿದವನಾಗಿದ್ದರೂ, ಸರ್ವಶಾಸ್ತ್ರಗಳಲ್ಲಿ ವಿಶಾರದನಾಗಿದ್ದರೂ ಪುನಃ ಅಜ್ಞಾನಕ್ಕೆ ವಶನಾಗಿ ಏಕೆ ವಿಮೋಹಕ್ಕೆ ತುತ್ತಾಗುತ್ತಿರುವೆ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವ್ಯಾಸವಚನಂ ನಾಮ ದ್ವಿತೀಯೋಧ್ಯಾಯಃ ॥
॥ ಅಶ್ವಮೇಧಪರ್ವಣಿ ದ್ವಿತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಯುಧಿಷ್ಠಿರನಿಗೆ ವ್ಯಾಸರಿಂದ ಅಶ್ವಮೇಧಯಾಗಕ್ಕಾಗಿ ಪ್ರಚೋದನೆ
ಮತ್ತು ಉಪಾಯ.
ವ್ಯಾಸಃ
ಯುಧಿಷ್ಠಿರ ತವ ಪ್ರಜ್ಞಾ ನ ಸಮ್ಯಗಿತಿ ಮೇ ಮತಿಃ |

ನ ಹಿ ಕಶ್ಚಿತ್ ಸ್ವಯಂ ಮರ್ತ್ಯಃ ಸ್ವವಶಃ ಕುರುತೇ ಕ್ರಿಯಾಮ್ ॥1॥
ವ್ಯಾಸರು ಮುಂದುವರಿದು ಹೇಳುತ್ತಾರೆ- ಯುಧಿಷ್ಠಿರ, ನಿನ್ನ ಪ್ರಜ್ಞೆ ಸರಿಯಿಲ್ಲವೆಂದೇ ನನ್ನ ಅಭಿಪ್ರಾಯ. ಯಾವ ಮನುಷ್ಯನೇ ಆಗಲಿ ತಾನಾಗಿ ಯಾವ ಕಾರ್ಯವನ್ನೂ ಮಾಡುವುದಿಲ್ಲ. ಸ್ವತಂತ್ರವಾಗಿ ಕಾರ್ಯವನ್ನು ಮಾಡಲು ಸಮರ್ಥನಾಗಿರುವುದಿಲ್ಲ.
ಈಶ್ವರೇಣ ಚ ಯುಕ್ತೋಽಯಂ ಸಾಧ್ವಸಾಧು ಚ ಪಾಂಡವ |
ಕರೋತ್ಯಸುಕರಂ ಕರ್ಮ ತತ್ರ ಕಾ ಪರಿದೇವನಾ ॥2॥
ಈಶ್ವರನ ಪ್ರೇರಣೆಯಿಂದ ಮನುಷ್ಯನು ಒಳ್ಳೆಯದು, ಕೆಟ್ಟದ್ದು ಎಂಬ ಎರಡು ವಿಧವಾದ ಕರ್ಮವನ್ನು ಮಾಡುತ್ತಾನೆ. ಭಗವತ್ಪ್ರೇರಣೆಯಿಂದ ನಡೆದಿರುವ ಈ ಸಂಹಾರದ ವಿಷಯದಲ್ಲಿ ಶೋಕವನ್ನೇಕೆ ಪಡುವಿ?
ಆತ್ಮಾನಂ ಮನ್ಯಸೇ ಪಾರ್ಥ ಪಾಪಕರ್ಮಾಣಮಂತತಃ |
ಶೃಣು ತತ್ರ ಯಥಾ ಪಾಪಮಪಕೃಷ್ಯೇತ ಭಾರತ ॥3॥
ಇಷ್ಟಾದರೂ ನೀನು ನಿನ್ನನ್ನು ಪಾಪಕರ್ಮಿಯೆಂದೇ ಬಗೆಯುವುದಾದರೆ, ಪಾಪಕರ್ಮಕ್ಕೆ ನೀನೇ ಕಾರಣನೆಂದು ಭಾವಿಸುವಿಯಾದರೆ ಆ ಪಾಪವನ್ನು ಕೂಡ ಯಾವ ರೀತಿಯಾಗಿ ಪರಿಹರಿಸಿಕೊಳ್ಳಲು ಸಾಧ್ಯ ಎಂಬುದನ್ನು ನಿನಗೆ ಹೇಳುತ್ತೇನೆ, ಕೇಳು.
ತಪೋಭಿಃ ಕ್ರತುಭಿಶ್ಚೈವ ದಾನೇನ ಚ ಯುಧಿಷ್ಠಿರ |
ತರಂತಿ ನಿತ್ಯಂ ಪುರುಷಾ ಯೇ ಸ್ಮ ಪಾಪಾನಿ ಕುರ್ವತೇ ॥4॥
ಪಾಪಗಳನ್ನು ಮಾಡುವವರು ತಪಸ್ಸುಗಳಿಂದ, ಯಜ್ಞಗಳಿಂದ, ದಾನಗಳಿಂದ ಪಾಪರಾಶಿಯನ್ನು ದಾಟುತ್ತಾರೆ.
ಯಜ್ಞೇನ ತಪಸಾ ಚೈವ ದಾನೇನ ಚ ನರಾಧಿಪ |
ಪೂಯಂತೇ ರಾಜಶಾರ್ದೂಲ ನರಾ ದುಷ್ಕೃತಕಾರಿಣಃ ॥5॥
ನರಾಧಿಪನೇ, ಪಾಪಕರ್ಮವನ್ನು ಮಾಡುವ ಮನುಷ್ಯರು ಯಜ್ಞದಿಂದ, ತಪಸ್ಸಿನಿಂದ, ದಾನದಿಂದ ಪರಿಶುದ್ಧಿಯನ್ನು ಹೊಂದುತ್ತಾರೆ.
ಅಸುರಾಶ್ಚ ಸುರಾಶ್ಚೈವ ಪುಣ್ಯಹೇತೋರ್ಮಖಕ್ರಿಯಾಮ್ |
ಸಹಸ್ಯೈವಾನುವರ್ತಂತೇ ತಸ್ಮಾದ್ ಯಜ್ಞಃ ಪರಾಯಣಮ್ ॥6॥
ಮಹಾತ್ಮರಾದ ದೇವತೆಗಳು ಮತ್ತು ದೈತ್ಯರು ಪುಣ್ಯಸಂಪಾದನೆಗಾಗಿ ಯಜ್ಞಗಳನ್ನು ಮಾಡಲು ಪ್ರಯತ್ನಿಸುತ್ತಾರೆ. ಆದ್ದರಿಂದ ಪಾಪವನ್ನು ಪರಿಹರಿಸಿಕೊಳ್ಳಲು, ಪುಣ್ಯವನ್ನು ಸಂಪಾದಿಸಿಕೊಳ್ಳಲು ಯಜ್ಞವೇ ಪರಮ ಆಶ್ರಯವಾಗಿದೆ.
ಯಜ್ಞೈರೇವ ಮಹಾತ್ಮಾನೋ ಬಭೂವುರಧಿಕಾಃ ಸುರಾಃ |
ತತೋ ದೇವಾಃ ಕ್ರಿಯಾವಂತೋ ದಾನವಾನಭ್ಯಧರ್ಷಯನ್ ॥7॥
ಯಜ್ಞಗಳನ್ನು ಆಚರಿಸುವುದರಿಂದಲೇ ಮಹಾತ್ಮರಾದ ದೇವತೆಗಳು ಹೆಚ್ಚು ಬಲಶಾಲಿಗಳಾಗಿದ್ದಾರೆ. ಯಜ್ಞಕ್ರಿಯೆಯಲ್ಲಿ ನಿಷ್ಠರಾಗಿದ್ದರಿಂದಲೇ ಅವರು ದಾನವರನ್ನು ಪರಾಜಯಗೊಳಿಸಿದರು.
ರಾಜಸೂಯಾಶ್ವಮೇಧೌ ಚ ಸರ್ವಮೇಧಂ ಚ ಭಾರತ |
ನರಮೇಧಂ ಚ ನೃಪತೇ ತ್ವಮಾಹರ ಯುಧಿಷ್ಠಿರ ॥8॥
ಭಾರತನೇ, ಆದುದರಿಂದ ನೀನೂ ಕೂಡ ರಾಜಸೂಯ, ಅಶ್ವಮೇಧ, ಸರ್ವಮೇಧ, ನರಮೇಧ ಎಂಬ ಯಜ್ಞಗಳನ್ನು ಆಚರಿಸು (ಸರ್ವಸ್ವ ತ್ಯಾಗ- ಎಲ್ಲರಿಗಾಗಿ ತ್ಯಾಗ ಎಂಬ ಯಜ್ಞಗಳನ್ನಾಚರಿಸು).
ಯಜಸ್ವ ವಾಜಿಮೇಧೇನ ವಿಧಿವದ್ ದಕ್ಷಿಣಾವತಾ |
ಬಹುಕಾಮಾನ್ನವಿತ್ತೇನ ರಾಮೋ ದಾಶರಥಿರ್ಯಥಾ ॥9॥
ಬಹುದಕ್ಷಿಣೆಯುಳ್ಳ, ಮನಸ್ಸಿನಲ್ಲಿ ಬಯಸಿದ ಪದಾರ್ಥದಿಂದಲೂ, ಅನ್ನದಿಂದಲೂ ಸಂಪನ್ನವಾದ ಅಶ್ವಮೇಧಯಾಗವನ್ನು ದಾಶರಥಿ ಎನಿಸಿದ ಶ್ರೀರಾಮಚಂದ್ರನು ಆಚರಿಸಿದಂತೆ ವಿಧಿವತ್ತಾಗಿ ಆಚರಿಸು.
ಯಥಾ ಹಿ ಭರತೋ ರಾಜಾ ದೌಷ್ಯಂತಿಃ ಪೃಥಿವೀಪತಿಃ |
ಶಾಕುಂತಲೋ ಮಹಾವೀರ್ಯಃ ತವ ಪೂರ್ವಪಿತಾಮಹಃ ॥10॥
ನಿನ್ನ ಪೂರ್ವಪಿತಾಮಹನಾದ, ಮಹಾಪರಾಕ್ರಮಿಯಾದ, ದುಶ್ಯಂತನ ಮಗನಾದ, ಶಕುಂತಲೆಯ ಮಗನಾದ ಭರತ ಚಕ್ರವರ್ತಿಯು ಅಶ್ವಮೇಧಯಾಗವನ್ನು ಆಚರಿಸಿದಂತೆ ನೀನೂ ಆಚರಿಸು.
ಯುಧಿಷ್ಠಿರಃ
ಅಸಂಶಯಂ ವಾಜಿಮೇಧಃ ಪಾವಯೇತ್ ಪೃಥಿವೀಮಪಿ |
ಅಭಿಪ್ರಾಯಸ್ತು ಮೇ ಕಶ್ಚಿತ್ ತಂ ತ್ವಂ ಶ್ರೋತುಮಿಹಾರ್ಹಸಿ ॥11॥
ಯುಧಿಷ್ಠಿರ ವಿಪ್ರಶ್ರೇಷ್ಠರೇ, ನೀವು ಹೇಳಿದಂತೆ ಅಶ್ವಮೇಧ ಯಾಗವು ಸಮಗ್ರ ಭೂಮಂಡಲವನ್ನೂ ಪವಿತ್ರಗೊಳಿಸುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಈ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಕೇಳುವ ಕೃಪೆ ಮಾಡಿರಿ.
ಇಮಂ ಜ್ಞಾತಿವಧಂ ಕೃತ್ವಾ ಸುಮಹಾಂತಂ ದ್ವಿಜೋತ್ತಮ |
ಅಹಮಾರಾಧಯಿಷ್ಯಾಮಿ ಕಥಂ ಶೋಕಪರಾಯಣಃ ॥12॥
ದಾನಮಲ್ಪಂ ನ ಶಕ್ಷ್ಯಾಮಿ ದಾತುಂ ವಿತ್ತಂ ಚ ನಾಸ್ತಿ ಮೇ ॥13॥
ಜ್ಞಾತಿಗಳ ಮಹತ್ವವಾದ ಸಂಹಾರವನ್ನು ಮಾಡಿರುವ ನಾನು ಈ ಸಂದರ್ಭದಲ್ಲಿ ಅತ್ಯಲ್ಪವಾದ ದಾನವನ್ನು ಮಾಡಲು ಅಸಮರ್ಥನಾಗಿದ್ದೇನೆ. ನನ್ನ ಬಳಿ ಐಶ್ವರ್ಯವೇ ಇಲ್ಲವಾಗಿದೆ.
ನ ಚಾಪಲಾದಿನಾ ದೀನಾನುತ್ಸಹೇ ವಸು ಯಾಚಿತುಮ್ |
ತಥೈವಾದ್ರುವಿಣಾನ್ ಕೃಚ್ಛ್ರೇ ವರ್ತಮಾನಾನ್ ನೃಪಾತ್ಮಜಾನ್ ॥14॥
ಸ್ವಯಂ ವಿನಾಶ್ಯ ಪೃಥಿವೀಂ ರಾಜ್ಯಾರ್ಥೇ ದ್ವಿಜಸತ್ತಮ |

ಕರಮಾಹಾರಯಿಷ್ಯಾಮಿ ಕಥಂ ಶೋಕಪರಾಯಣಾನ್ ॥15॥
ಯಜ್ಞ ಮಾಡಬೇಕೆಂಬ ಚಾಪಲ್ಯದಿಂದ ದುಃಖಿತರಾಗಿರುವ ರಾಜಕುಮಾರರಿಂದ ಹಣವನ್ನು ಯಾಚಿಸಲು ನನಗೆ ಉತ್ಸಾಹವೂ ಇರುವುದಿಲ್ಲ. ಹಾಗೆಯೇ ಯುದ್ಧದ ಗಾಯಗಳಿನ್ನೂ ಮಾಸದಿರುವಾಗ, ಕಷ್ಟದಲ್ಲಿ ಸಿಲುಕಿರುವ ರಾಜಪುತ್ರರಿಂದಲೂ ಐಶ್ವರ್ಯವನ್ನು ಬೇಡೆನು.
ದುರ್ಯೋಧನಾಪರಾಧೇನ ವಸುಧಾಯಾಂ ನರಾಧಿಪಾಃ |
ಪುನಷ್ಪ್ಯಾ ಯೋಧಯಿತ್ವಾಽಸ್ಮಾನ್ ಅಕೀರ್ತ್ಯಾ ಮುನಿಸತ್ತಮ ॥16॥
ಮುನಿಶ್ರೇಷ್ಠರೇ, ದುರ್ಯೋಧನನ ಅಪರಾಧದಿಂದ ಭೂಮಂಡಲವೇ ನಾಶ ಹೊಂದಿತು. ಭೂಮಂಡಲದ ಚಕ್ರವರ್ತಿಗಳು ಸಾವನ್ನಪ್ಪಿದರು. ಅವನು ಮಾಡಿದ ಅಪರಾಧವು ನಮ್ಮನ್ನು ಅಪಕೀರ್ತಿಗೀಡು ಮಾಡಿತು.
ದುರ್ಯೋಧನೇನ ಪೃಥಿವೀ ಕ್ಷಪಿತಾ ವಿತ್ತಕಾರಣಾತ್ |
ಕೋಶಶ್ಚಾಪಿ ವಿಶೀರ್ಣೋಽಯಂ ಧಾರ್ತರಾಷ್ಟ್ರಸ್ಯ ದುರ್ಮತೇಃ ॥17॥
ದುರ್ಯೋಧನನು ಐಶ್ವರ್ಯದ ಲೋಭದಿಂದಲೇ ಪೃಥಿವಿಯನ್ನು ಶೋಷಿಸಿದನು. ಪೃಥಿವಿಯನ್ನು ಶೋಷಿಸಿ ಧನವನ್ನು ಸಂಗ್ರಹಿಸಿದ್ದನೋ, ಇಂದು ದುರ್ಮತಿಯಾದ ಅವನ ಭಂಡಾರವೂ ಬರಿದಾಗಿಹೋಗಿದೆ.
ಪೃಥಿವೀ ದಕ್ಷಿಣಾ ಚಾತ್ರ ವಾಜಿಮೇಧೇ ಮಹಾಕ್ರತೌ |
ವಿದ್ವದ್ಭಿಃ ಪರಿದೃಷ್ಟೋಽಯಂ ವಿಶಿಷ್ಟೋ ವಿಧಿಪರ್ಯಯಃ ॥18॥
ಅಶ್ವಮೇಧಯಾಗದಲ್ಲಿ ಪೃಥಿವಿಯನ್ನೇ ದಕ್ಷಿಣೆಯ ರೂಪದಲ್ಲಿ ಕೊಡುವುದು ಮುಖ್ಯಕಲ್ಪವೆಂಬುದು ವಿದ್ವಾಂಸರು ಯೋಚಿಸಿ, ನಿರ್ಣಯಿಸಿದ ವಿಧಿಯಾಗಿದೆ. ಇದನ್ನು ಬಿಟ್ಟು ಅನ್ಯವಿಧಿಯನ್ನು ಆಶ್ರಯಿಸುವುದು ವಿಧಿವಿಪರ್ಯಯ ಎನಿಸುತ್ತದೆ. ಪ್ರಾಚೀನ ವಿಧಿಗೆ ವಿರುದ್ಧವಾಗಿ ನಡೆದಂತಾಗುತ್ತದೆ.
ನ ಚ ಪ್ರತಿನಿಧಿಂ ಕರ್ತುಂ ಚಿಕೀರ್ಷಾಮಿ ತಪೋಧನ |
ಅತ್ರ ಮೇ ಭಗವನ್ ಸಮ್ಯಕ್ ಸಾಚಿವ್ಯಂ ಕರ್ತುಮರ್ಹಸಿ ॥19॥
ಭೂರೂಪವಾದ ದಕ್ಷಿಣೆಗೆ ಬದಲಾಗಿ ಬೇರೆ ದಕ್ಷಿಣೆಯನ್ನು ಕೊಡಲು ನಾನು ಬಯಸುವುದಿಲ್ಲ. ಆದ್ದರಿಂದ ಈ ವಿಷಯದಲ್ಲಿ ನಾನು ಹೇಗೆ ವರ್ತಿಸಬೇಕು ಎಂಬುದರ ಬಗ್ಗೆ ಸಲಹೆಯನ್ನು ನೀಡುವ ಕೃಪೆ ತೋರಿ.
ವೈಶಂಪಾಯನಃ
ಏವಮುಕ್ತಸ್ತು ಪಾರ್ಥೇನ ಕೃಷ್ಣದ್ವೈಪಾಯನಸ್ತದಾ |
ಮುಹೂರ್ತಮಭಿಸಂಚಿಂತ್ಯ ಧರ್ಮರಾಜಾನಮಬ್ರವೀತ್ ॥20॥
ವೈಶಂಪಾಯನ ಜನಮೇಜಯನೇ, ಯುಧಿಷ್ಠಿರನು ಹೀಗೆ ಹೇಳಿದ ನಂತರ ಕೃಷ್ಣದ್ವೈಪಾಯನರು ಒಂದು ಮುಹೂರ್ತದ ಕಾಲ ಆಲೋಚಿಸಿ, ಅನಂತರ ಧರ್ಮರಾಜನಿಗೆ ಹೇಳಿದರು (ವೇದವ್ಯಾಸದೇವರು ನಿತ್ಯಜ್ಞಾನ ಸಂಪನ್ನರಾಗಿದ್ದರೂ ಧರ್ಮರಾಜನಿಗೆ ಅವನು ಕೇಳಿದ ಪ್ರಶ್ನೆಯ ಮಹತ್ವವನ್ನು ತಿಳಿಸಲು ಒಂದು ಮುಹೂರ್ತದ ಕಾಲ ಯೋಚಿಸಿದವರಂತೆ ನಟಿಸಿದರು).
ವ್ಯಾಸಃ
ಕೋಶಶ್ಚಾಪಿ ವಿಶೀರ್ಣೋಽಯಂ ಪರಿಪೂರ್ಣೋ ಭವಿಷ್ಯತಿ |
ವಿದ್ಯತೇ ದ್ರವಿಣಂ ಪಾರ್ಥ ಗಿರೌ ಹಿಮವತಿ ಸ್ಥಿತಮ್॥21॥
ಉತ್ಸೃಷ್ಟಂ ಬ್ರಾಹ್ಮಣೈರ್ಯಜ್ಞೇ ಮರುತ್ತಸ್ಯ ಮಹೀಪತೇಃ |
ತದಾನಯಸ್ವ ಕೌಂತೇಯ ಪರ್ಯಾಪ್ತಂ ತೇ ಭವಿಷ್ಯತಿ ॥22॥
ವ್ಯಾಸರು ಯುಧಿಷ್ಠಿರನೇ, ನೀನು ನಿನ್ನ ಭಂಡಾರದ ವಿಷಯವಾಗಿ ಯೋಚಿಸುವ ಕಾರಣವಿಲ್ಲ. ಇಂದು ಅದು ಬರಿದಾಗಿರುವುದು ಸತ್ಯ. ಆದರೆ ಅದು ಶೀಘ್ರವಾಗಿ ತುಂಬುತ್ತದೆ. ಮಹಾತ್ಮನಾದ ಮರುತ್ತನ ಯಜ್ಞದಲ್ಲಿ ಬ್ರಾಹ್ಮಣರಿಂದ ಹೊರಲಾಗದೆ ವಿಸರ್ಜಿಸಲ್ಪಟ್ಟ ಐಶ್ವರ್ಯವು ಇಂದಿಗೂ ಹಿಮವತ್ಪರ್ವತದ ತಪ್ಪಲಿನಲ್ಲಿ ಇದೆ. ಆ ಐಶ್ವರ್ಯವನ್ನು ತೆಗೆದುಕೊಂಡು ಬಾ. ಅದು ನೀನು ಮಾಡಲಿರುವ ಅಶ್ವಮೇಧಕ್ಕೆ ಸಾಕಾಗುತ್ತದೆ.
ಯುಧಿಷ್ಠಿರಃ
ಕಥಂ ಯಜ್ಞೇ ಮರುತ್ತಸ್ಯ ದ್ರವಿಣಂ ತತ್ ಸಮಾಹಿತಮ್ |
ಕಸ್ಮಿಂಶ್ಚ ಕಾಲೇ ಸ ನೃಪೋ ಬಭೂವ ವದತಾಂ ವರ ॥23॥
ಯುಧಿಷ್ಠಿರ ವಾಗ್ಮಿಗಳಲ್ಲಿ ಶ್ರೇಷ್ಠರಾದವರೇ, ಮರುತ್ತನು ಯಾವ ಕಾಲದಲ್ಲಿದ್ದನು? ಯಜ್ಞದಲ್ಲಿ ಅಷ್ಟೊಂದು ಐಶ್ವರ್ಯವು ಹೇಗೆ ಸಂಗ್ರಹವಾಯಿತು? ಇದನ್ನು ದಯಮಾಡಿ ತಿಳಿಸಿರಿ.
ವ್ಯಾಸಃ
ಯದಿ ಶುಶ್ರೂಷಸೇ ಪಾರ್ಥ ಶೃಣು ಕಾರಂಧಮಂ ನೃಪಮ್ |
ಯಸ್ಮಿನ್ ಕಾಲೇ ಮಹಾವೀರ್ಯಃ ಸ ರಾಜಾಽಽಸೀನ್ಮಹಾಧನಃ ॥24॥
ಯುಧಿಷ್ಠಿರನೇ, ನಿನಗೆ ಕೇಳುವ ಅಪೇಕ್ಷೆ ಇದ್ದರೆ ಕರಂಧಮನ ಮೊಮ್ಮಗನಾದ ಮರುತ್ತನ ವೃತ್ತಾಂತವನ್ನು ಹೇಳುತ್ತೇನೆ, ಕೇಳು. ಮಹಾಧರ್ಮಿಯೂ, ಮಹಾಪರಾಕ್ರಮಿಯೂ ಆಗಿದ್ದ ರಾಜನು ಯಾವ ಕಾಲದಲ್ಲಿ ಇದ್ದನೆಂಬುದನ್ನೂ ಹೇಳುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವಿತ್ತೋಪಾಯಕಥನಂ ನಾಮ ತೃತೀಯೋಧ್ಯಾಯಃ ॥
॥ ಅಶ್ವಮೇಧಪರ್ವಣಿ ತೃತೀಯೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.

* * * * *

నాల్కನೆಯ ಅಧ್ಯಾಯ

ವ್ಯಾಸರು ಯುಧಿಷ್ಠಿರನನ್ನು ಕುರಿತು ಮರುತ್ತನ ಉಪಾಖ್ಯಾನ
ಹೇಳಲು ಆರಂಭಿಸಿದುದು. ರಾಜನಾದ ಮರುತ್ತನು
ಹಿಮವದ್ ಪರ್ವತದ ಉತ್ತರ ಭಾಗದಲ್ಲಿ ಸುವರ್ಣಗಳಿಂದಲೇ
ಕುಂಡ-ಭಾಂಡ ಮೊದಲಾದ ಉಪಕ್ರಮದಿಂದ ಯಜ್ಞವನ್ನು ಆರಂಭಿಸಿದುದು.

ಯುಧಿಷ್ಠಿರಃ

ಶುಶ್ರೂಷೇ ತಸ್ಯ ಧರ್ಮಜ್ಞ ರಾಜರ್ಷೇಃ ಪರಿಕೀರ್ತನಮ್ |
ದ್ವೈಪಾಯನ ಮರುತ್ತಸ್ಯ ಕಥಾಂ ಪ್ರಬ್ರೂಹಿ ಮೇಽನಘ ॥1॥

ಯುಧಿಷ್ಠಿರ ಧರ್ಮಜ್ಞರೇ, ದ್ವೈಪಾಯನ ಮುನಿಗಳೇ, ರಾಜರ್ಷಿಯಾದ ಮರುತ್ತನ ಕಥೆಯನ್ನು ಕೇಳಲು ಆಸಕ್ತಿಯುಂಟಾಗಿದೆ. ನಿರ್ದುಷ್ಟರಾದ ವ್ಯಾಸರೇ, ಸೇವಾಸಕ್ತನಾದ ನನಗೆ ಆ ಕಥೆಯನ್ನು ಹೇಳಿರಿ.

ವ್ಯಾಸಃ

ಆಸೀತ್ ಕೃತಯುಗೇ ಪೂರ್ವಂ ಮನುರ್ದಂಡಧರಃ ಪ್ರಭುಃ |
ತಸ್ಯ ಪುತ್ರೋ ಮಹೇಷ್ವಾಸಃ ಪ್ರಜಾತಿರಭವದ್ ನೃಪಃ ॥2॥

ವ್ಯಾಸರು ಕೃತಯುಗದಲ್ಲಿ ಹಿಂದೆ ದಂಡಧಾರಿಯಾದ ಶಕ್ತನಾದ ಮನು ಎಂಬ ರಾಜನಿದ್ದನು. ಅವನಿಗೆ ಮಹಾಪರಾಕ್ರಮಿಯಾದ ಪ್ರಜಾತಿ ಎಂಬ ಮಗನು ಹುಟ್ಟಿದನು.

ಪ್ರಜಾತೇರಭವತ್ ಪುತ್ರಃ ಕ್ಷುಪ ಇತ್ಯಭಿವಿಶ್ರುತಃ |
ಕ್ಷುಪಸ್ಯ ಪುತ್ರ ಇಕ್ಷ್ವಾಕುರ್ಮಹೀಪಾಲೋಽಭವತ್ ಪ್ರಭುಃ ॥3॥

ಪ್ರಜಾತಿಗೆ ಕ್ಷುಪನೆಂಬ ಹೆಸರಿನ ವಿಖ್ಯಾತನಾದ ಮಗನಿದ್ದನು. ಕ್ಷುಪನ ಅನಂತರ ಅವನ ಮಗನಾದ ಶಕ್ತಿಶಾಲಿಯಾದ ಇಕ್ಷ್ವಾಕುವು ಭೂಮಂಡಲಕ್ಕೆ ರಾಜನಾದನು.

ತಸ್ಯ ಪುತ್ರಶತಂ ರಾಜನ್ನಾಸೀತ್ ಪರಮಧಾರ್ಮಿಕಮ್ |
ತಾಂಸ್ತು ಸರ್ವಾನ್ ಮಹೀಪಾಲಾನ್ ಇಕ್ಷ್ವಾಕುರಕರೋತ್ ಪ್ರಭುಃ ॥4॥

ಇಕ್ಷ್ವಾಕುವಿಗೆ ಪರಮಧಾರ್ಮಿಕರಾದ ನೂರು ಮಕ್ಕಳಿದ್ದರು. ಇಕ್ಷ್ವಾಕುವು ಪ್ರಭಾವಶಾಲಿಗಳಾದ ಅವರೆಲ್ಲರನ್ನೂ ಮಹೀಪತಿಗಳನ್ನಾಗಿ ಮಾಡಿದನು.

ತೇಷಾಂ ಜ್ಯೇಷ್ಠಸ್ತು ವಿಂಶೋಽಭೂತ್ ಪ್ರತಿಮಾನಂ ಧನುಷ್ಮತಾಮ್ |
ವಿಂಶಸ್ಯ ಪುತ್ರಃ ಕಲ್ಯಾಣೋ ವಿವಿಂಶೋ ನಾಮ ಭಾರತ ॥5॥

ಇಕ್ಷ್ವಾಕುವಿನ ನೂರು ಮಕ್ಕಳಲ್ಲಿ ಹಿರಿಯನಾದ ವಿಂಶನೆಂಬುವನು ಧನುರ್ಧಾರಿಗಳಲ್ಲಿಯೇ ಆದರ್ಶನಾಗಿದ್ದನು. ವಿಂಶನಿಗೆ ಮಂಗಳಕರನಾದ ಪುತ್ರನಾಗಿ ವಿವಿಂಶ ಎಂಬುವನು ಹುಟ್ಟಿದನು.

ವಿವಿಂಶಸ್ಯ ಸುತಾ ರಾಜನ್ ಬಭೂವುರ್ದಶ ಪಂಚ ಚ |
ಸರ್ವೇ ಧನುಷಿ ವಿಕ್ರಾಂತಾ ಬ್ರಹ್ಮಣ್ಯಾಃ ಸತ್ಯವಾದಿನಃ ॥6॥

ವಿವಿಂಶನಿಗೆ ಹದಿನೈದು ಜನ ಮಕ್ಕಳು ಹುಟ್ಟಿದರು. ಅವರೆಲ್ಲರೂ ಧನುರ್ಯುದ್ಧದಲ್ಲಿ ಪರಾಕ್ರಮಿಗಳಾಗಿದ್ದರು. ಬ್ರಾಹ್ಮಣ ಪ್ರಿಯರಾಗಿದ್ದರು, ಸತ್ಯವಾದಿಗಳಾಗಿದ್ದರು.

ದಾನಕರ್ಮರತಾಃ ಸಂತಃ ಪ್ರಜಾಹಿತಚಿಕೀರ್ಷವಃ ॥7॥

ದಾನ ಮಾಡುವುದರಲ್ಲಿ, ಸತ್ಕರ್ಮಾಚರಣೆಯಲ್ಲಿಯೂ ನಿರತರಾಗಿದ್ದರು. ಸಜ್ಜನರಾದ ಅವರು ಪ್ರಜೆಗಳ ಹಿತವನ್ನು ಸಾಧಿಸುವವರಾಗಿದ್ದರು.

ತೇಷಾಂ ಜ್ಯೇಷ್ಠಃ ಖನೀನೇತ್ರಃ ಸ ತಾನ್ ಸರ್ವಾನಪೀಡಯತ್ ॥8॥

ಅವರಲ್ಲಿ ಹಿರಿಯನಾದವನು ಖನೀನೇತ್ರನು. ಅವನು ಎಲ್ಲರಂತೆ ಸದ್ಗುಣಿಯಾಗಿರಲಿಲ್ಲ. ತನ್ನ ತಮ್ಮಂದಿರನ್ನು ಬಹಳವಾಗಿ ಪೀಡಿಸುತ್ತಿದ್ದನು.

ಖನೀನೇತ್ರಸ್ತು ವಿಕ್ರಾಂತೋ ಜಿತ್ವಾ ರಾಜ್ಯಮಕಂಟಕಮ್ |
ನಾಶಕ್ನೋದ್ ರಕ್ಷಿತುಂ ರಾಜ್ಯಂ ನಾನುರಂಜಂತಿ ತಂ ಪ್ರಜಾಃ ॥9॥

ಖನೀನೇತ್ರನು ಪರಾಕ್ರಮಿಯಾಗಿದ್ದು, ರಾಜ್ಯವನ್ನು ಗೆದ್ದು ತನ್ನ ರಾಜ್ಯವನ್ನು ಶತ್ರುರಹಿತವನ್ನಾಗಿ ಮಾಡಿಕೊಂಡಿದ್ದರೂ ರಾಜ್ಯದ ರಕ್ಷಣೆಯನ್ನು ಮಾಡಲು ಸಮರ್ಥನಾಗಲಿಲ್ಲ. ಕಾರಣ ಪ್ರಜೆಗಳು ಅವನ ವಿಷಯದಲ್ಲಿ ಅನುರಾಗವುಳ್ಳವರಾಗಿರಲಿಲ್ಲ.

ತಮಪಾಹಾಯ ತದ್ರಾಜ್ಯೇ ತಸ್ಯ ಪುತ್ರಂ ಸುವರ್ಚಸಮ್ |
ಅಭ್ಯಷಿಂಚಂತ ರಾಜೇಂದ್ರ ಮುದಿತಾ ಹ್ಯಭವಂಸ್ತದಾ ॥10॥

ಆ ಕಾರಣದಿಂದ ಕನೀನೇತ್ರನನ್ನು ಪ್ರಜೆಗಳೆಲ್ಲರೂ ರಾಜ್ಯದಿಂದ ಓಡಿಸಿ ಅವನ ಮಗನಾದ ಸುವರ್ಚಸನನ್ನು ರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ಸಂತೋಷದಿಂದ ಪಟ್ಟಾಭಿಷೇಕ ಮಾಡಿದರು. ಅದರಿಂದ ಪ್ರಜೆಗಳಿಗೆ ಆನಂದವಾಯಿತು.

ಸ ಪಿತುರ್ವಿಕ್ರಿಯಾಂ ದೃಷ್ಟ್ವಾ ರಾಜ್ಯಾನ್ನಿರಸನಂ ತಥಾ |
ನಿಯತೋ ವರ್ತಯಾಮಾಸ ಪ್ರಜಾಹಿತಚಿಕೀರ್ಷಯಾ ॥11॥

ಸುವರ್ಚಸನು ತನ್ನ ತಂದೆಯು ಮಾಡಿದ ದುಷ್ಕ್ರಿಯೆಗಳು ಯಾವುದೆಂದು ಅರಿತು, ಆ ಕಾರಣದಿಂದ ಪ್ರಜೆಗಳು ಅವನನ್ನು ರಾಜ್ಯಭ್ರಷ್ಟರನ್ನಾಗಿಸಿದ್ದಾರೆ ಎಂದರಿತು, ಪ್ರಜೆಗಳ ಹಿತವನ್ನುಂಟು ಮಾಡುವ ಇಚ್ಛೆಯಿಂದ ನಿಯಮಬದ್ಧವಾಗಿ ಪ್ರಜೆಗಳ ಜೊತೆಗೆ

ವ್ಯವಹರಿಸಿದನು.
ಬ್ರಹ್ಮಣ್ಯಃ ಸತ್ಯವಾದೀ ಚ ಶುಚಿಃ ಶಮದಮಾನ್ವಿತಃ ॥12॥
ಸುವರ್ಚಸ್ಸನು ಬ್ರಾಹ್ಮಣಪ್ರಿಯನಾಗಿದ್ದನು, ಸತ್ಯನಿಷ್ಠನಾಗಿದ್ದನು. ಶುಚಿಯೂ, ಕ್ಷಮ-ದಮಾದಿಗುಣಗಳಿಂದಲೂ ಕೂಡಿದ್ದನು.
ಪ್ರಜಾಸ್ತಂ ಚಾನ್ವರಜ್ಯಂತ ಧರ್ಮನಿತ್ಯಂ ಮನಸ್ವಿನಮ್ ॥13॥
ಅಂತಹ ಧರ್ಮನಿಷ್ಠನಾದ, ಸ್ಥಿರಚಿತ್ತನಾದ ಸುವರ್ಚಸನನ್ನು ಪ್ರಜೆಗಳೆಲ್ಲರೂ ಬಹಳವಾಗಿ ಪ್ರೀತಿಸತೊಡಗಿದರು.
ತಸ್ಯ ಧರ್ಮಪ್ರವೃತ್ತಸ್ಯ ವ್ಯಶೀರ್ಯತ್ ಕೋಶವಾಹನಮ್ |
ತಂ ಕ್ಷೀಣಕೋಶಂ ಸಾಮಂತಾಃ ಸಮಂತಾತ್ ಪರ್ಯಪೀಡಯನ್ ॥
ಸುವರ್ಚಸನು ನಿತ್ಯ ಧರ್ಮಶೀಲನಾಗಿದ್ದರೂ ಅವನ ಭಂಡಾರವು ಒಮ್ಮೆ ಬರಿದಾಗಿ ಹೋಯಿತು. ಇದನ್ನರಿತ ಸಾಮಂತರು ಎಲ್ಲೆಡೆಯಿಂದಲೂ ಅವನನ್ನು ಪೀಡಿಸಿದರು.
ಸ ಪೀಡ್ಯಮಾನೋ ಬಹುಭಿಃ ಕ್ಷೀಣಕೋಶಾಶ್ವವಾಹನಃ |
ಆರ್ತಿಮಾರ್ಚ್ಛತ್ ಪರಾಂ ರಾಜಾ ಸಹ ಭೃತ್ಯೈಃ ಪುರೇಣ ಚ ॥15॥
ಸಾಮಂತರಾಜನಿಂದ ಪೀಡೆಗೆ ತುತ್ತಾದ ಸುವರ್ಚಸನು ಭಂಡಾರವನ್ನು ಬರಿದು ಮಾಡಿಕೊಂಡನು. ಅಶ್ವ-ರಥ ಮುಂತಾದ ವಾಹನಗಳನ್ನೂ ನಾಶಪಡಿಸಿ- ಕೊಂಡನು. ಇದರಿಂದ ತನ್ನ ಭೃತ್ಯರಿಂದ ಪಟ್ಟಣಗಳಿಂದ ದುಃಖಕ್ಕೆ ಈಡಾದನು.
ನ ಚೈನಂ ಪರಿಹರ್ತುಂ ತೇ ಶಕ್ನುವನ್ ಪರಿಸಂಕ್ಷಯೇ |
ಸಮ್ಯಗ್ ವೃತ್ತೋ ಹಿ ರಾಜಾಽಽಸೌ ಧರ್ಮನಿತ್ಯೋ ಯುಧಿಷ್ಠಿರ ॥16॥
ಕ್ಷೀಣವಾಹನನಾದ ಸುವರ್ಚಸನನ್ನು ಯುದ್ಧದಲ್ಲಿ ಗೆಲ್ಲಲು ಶತ್ರುಗಳು ಸಮರ್ಥರಾಗಲಿಲ್ಲ. ಧರ್ಮನಿಷ್ಠನಾದ, ಶೀಲಸಂಪನ್ನನಾದ ಕಾರಣ ಯುದ್ಧ ಮಾಡುವುದರಲ್ಲಿ ಅಸಮರ್ಥನೇ ಆದನು.
ಯದಾ ತು ಪರಮಾಮಾರ್ತಿಂ ಗತೋಽಸೌ ಸಪುರೋ ನೃಪ |
ತತಃ ಪ್ರದಧ್ಮೌ ಸ ಕರಂ ಪ್ರಾದುರಾಸೀತ್ ತತೋ ಬಲಮ್ ॥17॥
ಯಾವಾಗ ಸುವರ್ಚಸನು ತುಂಬಾ ದುಃಖವನ್ನು ಹೊಂದಿದನೋ ಭೃತ್ಯರು, ಪ್ರಜಾವರ್ಗದಿಂದಲೂ ಕಷ್ಟಕ್ಕೆ ತುತ್ತಾದನೋ, ಇದಕ್ಕೆ ಪರಿಹಾರವನ್ನು ಕಂಡುಹಿಡಿಯಲು ತನ್ನ ಕೈಯನ್ನೇ ಶಂಖವನ್ನಾಗಿ ಮಾಡಿಕೊಂಡು ಗಟ್ಟಿಯಾಗಿ ಊದಿದನು. ಒಡನೆಯೇ ಅವನ ಕೈಯಿಂದ ದೊಡ್ಡದಾದ ಸೈನ್ಯವೇ ಪ್ರಕಟವಾಯಿತು.
ತತಸ್ತಾನಜಯತ್ ಸರ್ವಾನ್ ಪ್ರತಿಸೀಮಾನ್ ನರಾಧಿಪಾನ್ |
ಏತಸ್ಮಾತ್ ಕಾರಣಾದ್ ರಾಜನ್ ವಿಶ್ರುತಃ ಸ ಕರಂಧಮಃ ॥18॥
ಆ ಸೈನ್ಯದ ಸಹಾಯದಿಂದ ಸುವರ್ಚಸನು ತನ್ನ ರಾಜ್ಯದ ಗಡಿಯಲ್ಲಿ ವಾಸ ಮಾಡಿಕೊಂಡಿದ್ದ, ತನ್ನ ಮೇಲೆ ಆಕ್ರಮಣ ಮಾಡಿದ ಎಲ್ಲ ರಾಜರನ್ನು ಪರಾಭವಗೊಳಿಸಿ ಓಡಿಸಿದನು. ಈ ಕಾರಣದಿಂದಲೇ ಈ ರಾಜನು ಕರಂಧಮ (ಕೈಯಿಂದ ಶಬ್ದ ಮಾಡಿದವನು) ಎಂಬ ಹೆಸರಿನಿಂದಲೇ ಪ್ರಸಿದ್ಧನಾದನು.
ಪುತ್ರಸ್ತ್ರೇತಾಯುಗಮುಖೇಽಭವದಾವೀಕ್ಷಿಸಂಜ್ಞಕಃ |
ಇಂದ್ರಾದನವಮಃ ಶ್ರೀಮಾನ್ ದೇವೈರಪಿ ಸುದುರ್ಜಯಃ ॥19॥
ತ್ರೇತಾಯುಗದ ಆರಂಭದಲ್ಲಿ ಕರಂಧಮನಿಗೆ ಆವಿಕ್ಷಿತ ಎಂಬ ಮಗನು ಹುಟ್ಟಿದನು. ಇವನು ಇಂದ್ರನಿಗೆ ಯಾವುದರಲ್ಲಿಯೂ ಕಡಿಮೆಯಾಗಿರಲಿಲ್ಲ. ದೇವತೆಗಳಿಂದಲೂ ಜಯಿಸಲು ಅಸಾಧ್ಯನಾಗಿದ್ದನು.
ಕಾರಂಧಮ ಇತಿ ಖ್ಯಾತೋ ಬಭೂವ ಜಗತೀಪತಿಃ ॥20॥
ಈತನು ಜಗತ್ತಿನಲ್ಲಿ ಕಾರಂಧಮ ಎಂದು ಖ್ಯಾತಿಯನ್ನು ಪಡೆದು ಜಗತ್ಪತಿಯಾದನು, ಚಕ್ರವರ್ತಿಯಾದನು.
ತಸ್ಯ ಸರ್ವೇ ಮಹೀಪಾಲಾ ವರ್ತಂತೇ ಸ್ಮ ವಶೇ ತದಾ |
ಸ ಹಿ ಸಮ್ರಾಡಭೂದ್ ತೇಷಾಂ ವೃತ್ತೇನ ಚ ಬಲೇನ ಚ ॥21॥
ಅವಿಕ್ಷಿತನಿಗೆ ಅಂದಿನ ಎಲ್ಲಾ ಚಕ್ರವರ್ತಿಗಳು ವಶವಾದರು. ತನ್ನ ಶೀಲ-ಬಲಗಳಿಂದ ಸಮ್ರಾಟ್ ಎಂದು ಕರೆಸಿಕೊಂಡನು.
ಅವಿಕ್ಷಿದೇವ ಧರ್ಮಾತ್ಮಾ ಶೌರ್ಯೇಣೇಂದ್ರಸಮೋಽಭವತ್ |
ಯಜ್ಞಶೀಲೋ ಕರ್ಮರತೋ ಧೃತಿಮಾನ್ ಸಂಯತೇಂದ್ರಿಯಃ ॥22॥
ಅವಿಕ್ಷಿತನು ಧರ್ಮಾತ್ಮನಾಗಿದ್ದನು. ಶೌರ್ಯದಲ್ಲಿ ಇಂದ್ರನಿಗೆ ಸಮಾನನಾಗಿದ್ದನು. ಯಜ್ಞಶೀಲನಾಗಿದ್ದನು, ಕರ್ಮದಲ್ಲಿ ಆಸಕ್ತನಾಗಿದ್ದನು, ಧೈರ್ಯವಂತನೂ, ಜಿತೇಂದ್ರಿಯನೂ ಆಗಿದ್ದನು.
ತೇಜಸಾಽಽದಿತ್ಯಸದೃಶಃ ಕ್ಷಮಯಾ ಪೃಥಿವೀಸಮಃ |
ಬೃಹಸ್ಪತಿಸಮೋ ಬುದ್ಧ್ಯಾ ಹಿಮವಾನಿವ ಸುಸ್ಥಿರಃ ॥23॥
ತೇಜಸ್ಸಿನಲ್ಲಿ ಸೂರ್ಯಸದೃಶನೂ, ಕ್ಷಮೆಯಲ್ಲಿ ಭೂಮಿಸದೃಶನೂ, ಬುದ್ಧಿಯಲ್ಲಿ ಬೃಹಸ್ಪತಿ ಸಮಾನನೂ, ಸ್ಥಿರತೆಯಲ್ಲಿ ಹಿಮವಂತನಿಗೆ ಸದೃಶನೂ ಆಗಿದ್ದನು.
ಕರ್ಮಣಾ ಮನಸಾ ವಾಚಾ ದಮೇನ ಪ್ರಶಮೇನ ಚ |
ಮನಾಂಸ್ಯಾರಾಧಯಾಮಾಸ ಪ್ರಜಾನಾಂ ಸ ಮಹೀಪತಿಃ ॥24॥
ಮಹೀಪತಿಯಾದ ಆವಿಕ್ಷಿತನು ಸತ್ಕರ್ಮದಿಂದಲೂ, ಮಾನಸಿಕವಾಗಿ, ವಾಚನಿಕವಾಗಿಯೂ, ಇಂದ್ರಿಯನಿಗ್ರಹ, ವಿನಯದ ಮಾತುಗಳಿಂದಲೂ ಸಜ್ಜನರ ಮನಸ್ಸನ್ನು ಸಂತೋಷಗೊಳಿಸುತ್ತಿದ್ದನು.
ಯ ಈಜೇ ಹಯಮೇಧಾನಾಂ ಶತೇನ ವಿಧಿವತ್ ಪ್ರಭುಃ |
ಯಾಜಯಾಮಾಸ ಯಂ ವಿದ್ವಾನ್ ಸ್ವಯಮೇವಾಂಗಿರಾಃ ಪ್ರಭುಃ ॥

ಅತ್ಯಂತ ಪ್ರಭಾವಶಾಲಿಯಾದ ಈ ಭೂಪತಿಯು ವಿಧಿಪೂರ್ವಕವಾಗಿ ಮೂರು ಅಶ್ವಮೇಧ ಯಾಗವನ್ನು ಮಾಡಿದನು. ಮಹಾವಿದ್ವಾಂಸರಾದ, ಪ್ರಭುವಾದ ಅಂಗೀರಸ ಮುನಿಯೇ ಮೂರು ಯಾಗಗಳನ್ನು ಮಾಡಿಸಿದನು.
ತಸ್ಯ ಪುತ್ರೋಽತಿಚಕ್ರಾಮ ಪಿತರಂ ಗುಣವತ್ತಯಾ |
ಮರುತ್ತೋ ನಾಮ ಧರ್ಮಜ್ಞಃ ಚಕ್ರವರ್ತೀ ಮಹಾಯಶಾಃ ॥26॥
ಇವನ ಮಗನು ತಂದೆಗಿಂತ ಗುಣಗಳಲ್ಲಿ ಶ್ರೇಷ್ಠನೆನಿಸಿದನು. ಚಕ್ರವರ್ತಿ ಎನಿಸಿದನು. ಮಹಾಕೀರ್ತಿವಂತನಾದ, ಧರ್ಮಜ್ಞನಾದ ಇವನ ಮಗನಿಗೆ ಮರುತ್ ಎಂದು ಹೆಸರು.
ನಾಗಾಯುತಸಮಪ್ರಾಣಃ ಸಾಕ್ಷಾದ್ ವಿಷ್ಣುರಿವಾಪರಃ ॥27॥
ಹತ್ತುಸಾವಿರ ಆನೆಗಳ ಬಲದಿಂದ ಕೂಡಿದ ಮರುತ್ತನು ಮತ್ತೊಬ್ಬ ಸಾಕ್ಷಾತ್ ವಿಷ್ಣುವೋ ಎಂಬಂತೆ ಕಾಣಿಸುತ್ತಿದ್ದನು.
ಸ ಯಕ್ಷ್ಯಮಾಣೋ ಧರ್ಮಾತ್ಮಾ ಶಾತಕುಂಭಮಯಾನಿ ತು |
ಕಾರಯಾಮಾಸ ಶುಭ್ರಾಣಿ ಭಾಜನಾನಿ ಸಹಸ್ರಶಃ ॥28॥
ಆ ಧರ್ಮಾತ್ಮನಾದ ಮರುತ್ತನು ಯಜ್ಞ ಮಾಡುವಾಗ ಶುಭ್ರವಾದ ಸುವರ್ಣಮಯವಾದ ಸಾವಿರಾರು ಯಜ್ಞಪಾತ್ರೆಗಳನ್ನು ಮಾಡಿಸಿದನು.
ಮೇರುಂ ಪರ್ವತಮಾಸಾದ್ಯ ಹಿಮವತ್ಪಾರ್ಶ್ವ ಉತ್ತರೇ |
ಕಾಂಚನಃ ಸುಮಹಾನ್ ಪಾದಃ ತತ್ರ ಕರ್ಮ ಚಕಾರ ಸಃ ॥29॥
ಮರುತ್ತನು ಯಜ್ಞ ಮಾಡುವ ಕಾರಣದಿಂದ ಹಿಮವದ್ ಪರ್ವತದ ಉತ್ತರದಿಕ್ಕಿನಲ್ಲಿರುವ ಮೇರುಪರ್ವತಕ್ಕೆ ಹೋದನು. ಅಲ್ಲಿ ಒಂದು ದೊಡ್ಡ ಸುವರ್ಣಪರ್ವತವೂ ಇದೆ. ಆ ಸ್ಥಳದಲ್ಲಿ ಯಜ್ಞಶಾಲೆಯನ್ನು ನಿರ್ಮಿಸಿ ಯಜ್ಞಕರ್ಮವನ್ನು ಆರಂಭಿಸಿದನು.
ತತಃ ಕುಂಡಾನಿ ಪಾತ್ರ್ಯಶ್ಚ ಪಿಠರಾಣ್ಯಾಸನಾನಿ ಚ |
ಚಕ್ರುಃ ಸುವರ್ಣಕರ್ತಾರಃ ತೇಷಾಂ ಸಂಖ್ಯಾ ನ ವಿದ್ಯತೇ ॥30॥
ಮರುತ್ತನ ಆಜ್ಞೆಯಂತೆ ಅನೇಕ ಅಕ್ಕಸಾಲಿಗರು ಯಜ್ಞದ ಸಲುವಾಗಿ ಸುವರ್ಣದ ಕುಂಡಗಳನ್ನು, ಸುವರ್ಣದ ಪಾತ್ರೆಗಳನ್ನು, ಆಸನಗಳನ್ನು, ಅನ್ನವನ್ನು ಬೇಯಿಸುವ ಪಾತ್ರೆಗಳನ್ನು, ತಪ್ಪಲೆಗಳನ್ನು ಸಿದ್ಧಗೊಳಿಸಿದರು. ಅವರು ಎಷ್ಟು ವಸ್ತುಗಳನ್ನು ತಯಾರಿಸಿದರು ಎಂದು ಎಣಿಕೆಯನ್ನು ಮಾಡಲು ಸಾಧ್ಯವಿಲ್ಲ.
ತಸ್ಯೈವ ಚ ಸಮೀಪೇ ತು ಯಜ್ಞವಾಟೋ ಬಭೂವ ಹ ॥31॥
ಆ ಬಂಗಾರದ ಬೆಟ್ಟದ ಸಮೀಪದಲ್ಲಿಯೇ ಯಜ್ಞಮಂಟಪವು ನಿರ್ಮಾಣ- ವಾಯಿತು.
ಈಜೇ ತತ್ರ ಸ ಧರ್ಮಾತ್ಮಾ ವಿಧಿವತ್ ಪೃಥಿವೀಪತಿಃ |
ಮರುತ್ತಃ ಸಹಿತೈಃ ಸರ್ವೈಃ ಪ್ರಜಾಪಾಲೈರ್ನರಾಧಿಪಃ ॥32॥
ಯಜ್ಞಪಾತ್ರೆಗಳೆಲ್ಲವೂ ಸಿದ್ಧವಾದ ಬಳಿಕ ಮೇರುಪರ್ವತದ ತಪ್ಪಲಿನಲ್ಲಿ ಧರ್ಮಾತ್ಮನಾದ ಮರುತ್ತನು ಇತರ ಸಾಮಂತ ರಾಜನೊಡನೆ ಸೇರಿಕೊಂಡು ವಿಧಿಪೂರ್ವಕವಾಗಿ ಯಜ್ಞವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಮರುತ್ತಯಜ್ಞಸ್ಥಳಕಥನಂ ನಾಮ ಚತುರ್ಥೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ಮರುತ್ತನ ಜೊತೆಯಲ್ಲಿ ಸ್ಪರ್ಧೆಗಿಳಿದ ದೇವೇಂದ್ರನು ಮರುತ್ತನನ್ನು ಜಯಿಸಲು ಶ್ರಮಪಟ್ಟ ಬಗೆ. ಬೃಹಸ್ಪತಿಗಳ ಬಳಿ ಮರುತ್ತನ ಯಜ್ಞಕ್ಕೆ ಹೋಗದಿರುವಂತೆ ಪ್ರಾರ್ಥನೆ. ಇಂದ್ರನ ಪ್ರೇರಣೆಯಿಂದ ಮಾನವರಿಗೆ ಯಜ್ಞವನ್ನು ಮಾಡಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದುದು.
ಯುಧಿಷ್ಠಿರಃ
ಕಥಂ ವೀರ್ಯಃ ಸಮಭವತ್ ಸ ರಾಜಾ ದದತಾಂ ವರಃ |
ಕಥಂ ಸ ಜಾತರೂಪೇಣ ಸಮಾಯುಜ್ಯತ ವೈ ನೃಪಃ ॥1॥
ಯುಧಿಷ್ಠಿರ ವಾಗ್ಮಿಗಳಲ್ಲಿ ಶ್ರೇಷ್ಠರಾದ ವೇದವ್ಯಾಸರೆ, ಮರುತ್ತರಾಜನು ಎಂತಹ ಪರಾಕ್ರಮವುಳ್ಳವನಾಗಿದ್ದನು? ಆ ರಾಜನಿಗೆ ಸುವರ್ಣದೊಡನೆ ಸಂಬಂಧವು ಹೇಗೆ ಬೆಳೆಯಿತು?
ಕ್ವ ಚ ತತ್ ಸಾಂಪ್ರತಂ ದ್ರವ್ಯಂ ಭಗವನ್ನವತಿಷ್ಠತೇ |
ಕಥಂ ಚ ಶಕ್ಯಮಸ್ಮಾಭಿಸ್ತದವಾಪ್ತುಂ ತಪೋಧನ ॥2॥
ಪೂಜ್ಯರೇ, ಈಗ ಆ ದ್ರವ್ಯವು ಎಲ್ಲಿದೆ? ತಪೋಧನರೇ, ಅದನ್ನು ನಾವು ಪಡೆದುಕೊಳ್ಳಲು ಹೇಗೆ ಸಾಧ್ಯವಾಗುತ್ತದೆ? ಇವೆಲ್ಲವನ್ನೂ ನಮಗೆ ತಿಳಿಸಿರಿ.
ವ್ಯಾಸಃ
ಅಸುರಾಶ್ಚೈವ ದೇವಾಶ್ಚ ದಕ್ಷಸ್ಯಾಸನ್ ಪ್ರಜಾಪತೇಃ |
ಅಪತ್ಯಂ ಬಹುಲಂ ತಾತ ತೇಽಸ್ಪರ್ಧಂತ ಪರಸ್ಪರಮ್ ॥3॥
ವ್ಯಾಸರು ಯುಧಿಷ್ಠಿರನೇ, ದಕ್ಷಪ್ರಜಾಪತಿಗೆ ದೇವತೆಗಳು ಮತ್ತು ಅಸುರರು ಎಂಬ ಅಪಾರವಾದ ಸಂತಾನವು ಉತ್ಪನ್ನವಾಯಿತು. ಒಬ್ಬನೇ ತಂದೆಯ ಮಕ್ಕಳಾದರೂ ಆ ದೇವಾಸುರರು ಪರಸ್ಪರವಾಗಿ ಸ್ಪರ್ಧಿಸುತ್ತಿದ್ದರು.

ತಥೈವಾಂಗಿರಸಃ ಪುತ್ರೌ ಪಿತೃತುಲ್ಯೌ ಬಭೂವತುಃ |
ಬೃಹಸ್ಪತಿರ್ಬೃಹತ್ತೇಜಾಃ ಸಂವರ್ತಶ್ಚ ತಪೋಧನಃ ||4||
ಇದರಂತೆ ಅಂಗಿರಸನಿಗೆ ಸಮಾನ ವ್ರತನಿಷ್ಠರಾದ ಇಬ್ಬರು ಮಕ್ಕಳು ಇದ್ದರು. ಅವರು ಪರಸ್ಪರ ಸ್ಪರ್ಧಿಸುತ್ತಿದ್ದರು. ಅವರಲ್ಲಿ ಬೃಹಸ್ಪತಿ ಮಹಾತೇಜಸ್ವಿಯಾಗಿದ್ದನು. ಮತ್ತೊಬ್ಬ ಮಗನಾದ ಸಂವರ್ತನು ತಪೋಧನನಾಗಿದ್ದನು.
ತಾವಪಿ ಸ್ಪರ್ಧಿನೌ ರಾಜನ್ ಪೃಥಗಾಸ್ತಾಂ ಪರಸ್ಪರಮ್ |
ಬೃಹಸ್ಪತಿಸ್ತು ಸಂವರ್ತಂ ಬಾಧತೇ ಸ್ಮ ಪುನಃ ಪುನಃ ||5||
ಬೃಹಸ್ಪತಿ-ಸಂವರ್ತರು ಯಾವಾಗಲೂ ಪರಸ್ಪರ ಸ್ಪರ್ಧಿಸುತ್ತಿದ್ದರು. ಅದರಲ್ಲಿಯೂ ಬೃಹಸ್ಪತಿಯು ಸಂವರ್ತನನ್ನು ಪುನಃ ಪುನಃ ಪೀಡಿಸುತ್ತಿದ್ದನು.
ಸ ಬಾಧ್ಯಮಾನಃ ಸತತಂ ಭ್ರಾತ್ರಾ ಜ್ಯೇಷ್ಠೇನ ಭಾರತ |
ಅರ್ಥಾನುತ್ಸೃತ್ಯ ದಿಗ್ವಾಸಾ ವನೇ ವಾಸಮರೋಚಯತ್ ||6||
ಎಲೈ ಭಾರತನೇ, ತನ್ನ ಅಣ್ಣನಿಂದ ಪುನಃ ಪುನಃ ಪೀಡಿತನಾದ ಸಂವರ್ತನು ಬೇಸತ್ತು, ತನ್ನ ಸಮಸ್ತ ಸಂಪತ್ತನ್ನು ತೊರೆದು ದಿಗಂಬರನಾಗಿ ಕಾಡಿಗೆ ಹೊರಟುಹೋದನು.
ವಾಸವೋಽಪ್ಯಸುರಾನ್ ಸರ್ವಾನ್ ವಿಜಿತ್ಯ ಚ ನಿಪಾತ್ಯ ಚ |
ಇಂದ್ರತ್ವಂ ಪ್ರಾಪ್ಯ ಲೋಕೇಷು ತತೋ ವವ್ರೇ ಪುರೋಹಿತಮ್ ||7||
ನಂತರ ಇಂದ್ರನು ಸಮಸ್ತ ದಾನವರನ್ನು ಪರಾಜಯಗೊಳಿಸಿ, ಸಂಹರಿಸಿ, ಮೂರು ಲೋಕಗಳ ಇಂದ್ರ ಪದವಿಯನ್ನು ಪಡೆದು, ಅಂಗಿರಸನ ಜ್ಯೇಷ್ಠ ಸುತನಾದ ಬೃಹಸ್ಪತಿಯನ್ನು ಪುರೋಹಿತನನ್ನಾಗಿ ಸ್ವೀಕರಿಸಿದನು.
ಪುತ್ರಮಂಗಿರಸೋ ಜ್ಯೇಷ್ಠಂ ವಿಪ್ರಜ್ಯೇಷ್ಠಂ ಬೃಹಸ್ಪತಿಮ್ ||8||
ಯಾಜ್ಯಸ್ತ್ವಂಗಿರಸಃ ಪೂರ್ವಮಾಸೀದ್ ರಾಜಾ ಕರಂಧಮಃ |
ವೀರ್ಯೇಣಾಪ್ರತಿಮೋ ಲೋಕೇ ವೃತ್ತೇನ ಚ ಬಲೇನ ಚ ||9||
ಈ ವೃತ್ತಾಂತಕ್ಕಿಂತಲೂ ಮೊದಲು ಕರಂಧಮನೆಂಬ ರಾಜನು ಅಂಗಿರಸನನ್ನು ಪುರೋಹಿತನನ್ನಾಗಿ ಮಾಡಿಕೊಂಡಿದ್ದನು. ಕರಂಧಮ ರಾಜನು ವೀರ್ಯದಿಂದಲೂ, ಸದಾಚಾರದಿಂದಲೂ, ಬಲದಿಂದಲೂ ಲೋಕದಲ್ಲಿ ಅಪ್ರತಿಮನೆನಿಸಿದ್ದನು.
ಶತಕ್ರತುರಿವೌಜಸ್ವೀ ಧರ್ಮಾತ್ಮಾ ಸಂಶಿತವ್ರತಃ ||10||
ಇಂದ್ರನಂತೆ ತೇಜಸ್ವಿಯೂ ಧರ್ಮಾತ್ಮನೂ ಕಠೋರ ವ್ರತನಿಷ್ಠನೂ ಆಗಿದ್ದನು.
ವಾಹನಂ ಯಸ್ಯ ಯೋಧಾಶ್ಚ ದ್ರವ್ಯಾಣಿ ವಿವಿಧಾನಿ ಚ |
ಶಯನಾನಿ ಚ ಮುಖ್ಯಾನಿ ಮಹಾರ್ಹಾಣಿ ಚ ಸರ್ವಶಃ ||11||
ಧ್ಯಾನಾದೇವಾಭವನ್ ರಾಜನ್ ಮುಖವಾತೇನ ಸರ್ವಶಃ ||12||
ವಾಹನಗಳೂ, ಯೋಧರೂ, ಮಿತ್ರರೂ, ವಿಧ-ವಿಧವಾದ ಅಮೂಲ್ಯವಾದ ದ್ರವ್ಯಗಳೂ, ಮುಖ್ಯವಾದ ಹಾಸಿಗೆಗಳೂ, ಅನರ್ಘ್ಯವಾದ ಬೆಲೆಬಾಳುವ ವಸ್ತುಗಳೆಲ್ಲವೂ ಕರಂಧಮರಾಜನು ನೆನೆದೊಡನೆ ಅವನ ಮುಖದಿಂದ ಹೊರಹೊಮ್ಮುವ ಗಾಳಿಯಿಂದಲೇ ಸೃಷ್ಟಿಗೊಳ್ಳುತ್ತಿದ್ದವು.
ಸ ಗುಣೈಃ ಪಾರ್ಥಿವಾನ್ ಸರ್ವಾನ್ ವಶೇ ಚಕ್ರೇ ನರಾಧಿಪಃ |
ಸಂಜೀವ್ಯ ಕಾಲಮಿಷ್ಟಂ ಚ ಸಶರೀರೋ ದಿವಂ ಗತಃ ||13||
ಆ ನರಾಧಿಪನಾದ ಕರಂಧಮರಾಜನು ತನ್ನ ಕಲ್ಯಾಣಗುಣಗಳಿಂದ ಭೂಮಂಡಲದಲ್ಲಿನ ಎಲ್ಲ ರಾಜರನ್ನೂ ವಶವರ್ತಿಗಳನ್ನಾಗಿ ಮಾಡಿಕೊಂಡಿದ್ದನು. ತನಗೆ ಇಷ್ಟವಾದಷ್ಟು ಕಾಲ ಭೂಮಿಯಲ್ಲಿ ಜೀವಿಸಿದ್ದನು. ಕೊನೆಗೆ ಸಶರೀರನಾಗಿಯೇ ಸ್ವರ್ಗಕ್ಕೆ ಹೋದನು.
ಬಭೂವ ತಸ್ಯ ಪುತ್ರಸ್ತು ಯಯಾತಿರಿವ ಧರ್ಮವಿತ್ |
ಅವೀಕ್ಷಿನ್ನಾಮ ಶತ್ರುಘ್ನೋ ಯೋ ವಶೇ ಕೃತವಾನ್ ಮಹೀಮ್ ||14||
ವಿಕ್ರಮೇಣ ಗುಣೈಶ್ಚೈವ ಪಿತೇವಾಸೀತ್ ಸ ಪಾರ್ಥಿವಃ ||15||
ಅವೀಕ್ಷಿತನೆಂಬ ಅವನ ಮಗನು ಯಯಾತಿಯಂತೆ ಸಕಲ ಧರ್ಮಗಳನ್ನೂ ತಿಳಿದವನಾಗಿದ್ದನು. ತನ್ನ ಸಕಲ ಭುಜ-ಬಲ-ಪರಾಕ್ರಮದಿಂದಲೂ, ಕಲ್ಯಾಣ ಗುಣಗಳಿಂದಲೂ ಶತ್ರುಗಳನ್ನು ಜಯಿಸಿ, ಭೂಮಂಡಲವನ್ನು ಸ್ವಾಧೀನ ಪಡಿಸಿಕೊಂಡಿದ್ದನು. ಪ್ರಜೆಗಳಿಗೆ ತಂದೆಯಂತೆ ರಕ್ಷಕನಾಗಿದ್ದನು.
ತಸ್ಯ ವಾಸವತುಲ್ಯೋಽಭೂನ್ಮರುತ್ತೋ ನಾಮ ವೀರ್ಯವಾನ್ |
ಪುತ್ರಸ್ತಮನುರಕ್ತಾಽಭೂತ್ ಪೃಥಿವೀ ಸಾಗರಾಂಬರಾ ||16||
ಈ ಅವೀಕ್ಷಿತನ ಮಗನೇ ಮರುತ್ತನು. ಅವನು ಇಂದ್ರನಿಗೆ ಸಮಾನನಾಗಿದ್ದನು. ಸಾಗರವನ್ನೇ ವಸ್ತ್ರವನ್ನಾಗಿಸಿಕೊಂಡಿರುವ ಭೂಮಿಯು ಇವನ ಗುಣಗಳಲ್ಲಿ ಅನುರಕ್ತಳಾಗಿದ್ದಳು.
ಸ್ಪರ್ಧತೇ ಸತತಂ ಯಸ್ಮಾದ್ ದೇವರಾಜೇನ ಪಾರ್ಥಿವಃ |
ವಾಸವೋಽಪಿ ಮರುತ್ತೇನ ಸ್ಪರ್ಧತೇ ಪಾಂಡುನಂದನ ||17||
ಪಾಂಡುನಂದನನೇ, ಮರುತ್ತನು ಇಂದ್ರನೊಡನೆ ಯಾವಾಗಲೂ ಸ್ಪರ್ಧಿಸುತ್ತಲೇ ಇದ್ದನು. ಇಂದ್ರನೂ ಮರುತ್ತನೊಡನೆ ಸ್ಪರ್ಧಿಸುತ್ತಿದ್ದನು.
ಶುಚಿಃ ಸ ಗುಣವಾನಾಸೀತ್ ಮರುತ್ತಃ ಪೃಥಿವೀಪತಿಃ |
ಯತಮಾನೋಽಪಿ ಯಂ ಶಕ್ರೋ ನ ವಿಶೇಷಯತಿ ಸ್ಮ ಹ ||18||
ಮರುತ್ತನು ಸದಾಚಾರಿಯೂ, ಗುಣವಂತನೂ ಆಗಿದ್ದನು. ಪೃಥಿವಿಗೆ ಸ್ವಾಮಿಯಾಗಿದ್ದನು. ಇವನನ್ನು ಪ್ರಯತ್ನಿಸಿದರೂ ಇಂದ್ರನಿಗೆ

ಗೆಲ್ಲಲಾಗಲಿಲ್ಲ.
ಸೋಽಶಕ್ನುವನ್ ವಿಶೇಷಾಯ ಸಮಾಹೂಯ ಬೃಹಸ್ಪತಿಮ್ |
ಉವಾಚೇದಂ ವಚೋ ದೇವೈಃ ಸಹಿತೋ ಹರಿವಾಹನಃ ॥19॥
ಈ ಸಂದರ್ಭದಲ್ಲಿ ಮರುತ್ತನನ್ನು ಮೀರಿಸಲು ಅಸಮರ್ಥನಾದ ಇಂದ್ರನು ಬೃಹಸ್ಪತಿಯನ್ನು ಅರಮನೆಗೆ ಕರೆಸಿಕೊಂಡು ದೇವತೆಗಳೊಡನೆ ಕೂಡಿಕೊಂಡು ಬೃಹಸ್ಪತಿಗೆ ಹೀಗೆ ಹೇಳಿದನು.
ಇಂದ್ರಃ
ಬೃಹಸ್ಪತೇ ಮರುತ್ತಸ್ಯ ಮಾ ಸ್ಮ ಕಾರ್ಷೀಃ ಕದಾಚನ |
ದೈವಂ ಕರ್ಮಾಥ ಪಿತ್ರ್ಯಂ ಚ ಕರ್ತಾಸಿ ಮಮ ಚೇತ್ ಪ್ರಿಯಮ್ ॥
ಇಂದ್ರ ಬೃಹಸ್ಪತಿಯೇ, ನೀನು ನನಗೇನಾದರೂ ಪ್ರಿಯವನ್ನುಂಟು ಮಾಡುವ ಇಚ್ಛೆಯುಳ್ಳವನಾಗಿದ್ದರೆ ಮರುತ್ತನಿಗೆ ಯಾವುದೇ ಕಾರಣದಿಂದಲೂ ಯಜ್ಞ ಯಾಗಾದಿಗಳನ್ನಾಗಲಿ, ಪಿತೃಕರ್ಮಗಳನ್ನಾಗಲಿ ಮಾಡಿಸಬಾರದು.
ಅಹಂ ಹಿ ತ್ರಿಷು ಲೋಕೇಷು ಸುರಾಣಾಂ ಚ ಬೃಹಸ್ಪತೇ |
ಇಂದ್ರತ್ವಂ ಪ್ರಾಪ್ತವಾನೇಕೋ ಮರುತ್ತಸ್ತು ಮಹೀಪತಿಃ ॥21॥
ಬೃಹಸ್ಪತಿಯೇ, ನಾನು ಮೂರುಲೋಕಗಳಿಗೂ ಏಕಮಾತ್ರಸ್ವಾಮಿಯಾಗಿದ್ದೇನೆ. ದೇವತೆಗಳ ಆಧಿಪತ್ಯವನ್ನು ಪಡೆದಿರುತ್ತೇನೆ. ಮರುತ್ತನಾದರೂ ಭೂಮಿಗೆ ಮಾತ್ರ ರಾಜನಾಗಿದ್ದಾನೆ.
ಕಥಂ ಹ್ಯಮರ್ತ್ಯಂ ಬ್ರಹ್ಮಂಸ್ತ್ವಂ ಯಾಜಯಿತ್ವಾ ಸುರಾಧಿಪಮ್ |
ಯಾಜಯೇರ್ಮೃತ್ಯುಸಂಯುಕ್ತಂ ಮರುತ್ತಮವಿಶಂಕಯಾ ॥22॥
ಬ್ರಾಹ್ಮಣಶ್ರೇಷ್ಠನೇ, ನೀನು ಅಮರನಾದ ದೇವರಾಜನಿಗೆ ಯಜ್ಞವನ್ನು ಮಾಡಿಸುವ ಪುರೋಹಿತನಾಗಿರುವೆ. ಹೀಗಿರಲು ಮರಣಧರ್ಮವುಳ್ಳ ಮರುತ್ತನಿಗೆ ಸಂಕೋಚ ಪಡದೆ ಹೇಗೆ ಯಜ್ಞ ಮಾಡಿಸುತ್ತಿರುವಿ?
ಮಾಂ ವಾ ವೃಣೀಷ್ವ ಭದ್ರಂ ತೇ ಮರುತ್ತಂ ವಾ ಮಹೀಪತಿಮ್ |
ಪರಿತ್ಯಜ್ಯ ಮರುತ್ತಂ ವಾ ಯಥಾಜೋಷಂ ಭಜಸ್ವ ಮಾಮ್ ॥23॥
ಬೃಹಸ್ಪತಿಯೇ, ನಿನಗೆ ಮಂಗಳವಾಗಲಿ. ನೀನು ನನ್ನನ್ನಾದರೂ ಯಜಮಾನನನ್ನಾಗಿ ಪರಿಗ್ರಹಿಸು ಅಥವಾ ಮರುತ್ತನನ್ನಾದರೂ ಸ್ವೀಕರಿಸು. ಅಥವಾ ಮರುತ್ತನನ್ನು ತ್ಯಜಿಸಿ ನನ್ನನ್ನಾಶ್ರಯಿಸಿಕೊಂಡು ಸುಖವಾಗಿರು.
ವ್ಯಾಸಃ
ಏವಮುಕ್ತಃ ಸ ಕೌರವ್ಯ ದೇವರಾಜ್ಞಾ ಬೃಹಸ್ಪತಿಃ |
ಮುಹೂರ್ತಮಪಿ ಸಂಚಿಂತ್ಯ ದೇವರಾಜಾನಮಬ್ರವೀತ್ ॥24॥
ವ್ಯಾಸ ಕುರುಕುಲಶ್ರೇಷ್ಠನೇ, ದೇವರಾಜನಾದ ಇಂದ್ರನು ಬೃಹಸ್ಪತಿಗೆ ಹೀಗೆ ಹೇಳಿದಾಗ ಬೃಹಸ್ಪತಿಯು ಸ್ವಲ್ಪ ಸಮಯ ಚಿಂತಿಸಿ ನಂತರ ಉತ್ತರಿಸಿದನು.
ಬೃಹಸ್ಪತಿಃ
ತ್ವಂ ಭೂತಾನಾಮಧಿಪತಿಸ್ತ್ವಯಿ ಲೋಕಾಃ ಸಮಾಹಿತಾಃ |
ನಮುಚೇರ್ವಿಶ್ವರೂಪಸ್ಯ ನಿಹಂತಾ ತ್ವಂ ಬಲಸ್ಯ ಚ ॥25॥
ಬೃಹಸ್ಪತಿ ದೇವರಾಜನೇ, ನೀನು ಸಕಲ ಪ್ರಾಣಿಗಳಿಗೆ ಸ್ವಾಮಿಯಾಗಿರುವೆ. ನಿನ್ನಲ್ಲಿಯೇ ಲೋಕಗಳೆಲ್ಲವೂ ಪ್ರತಿಷ್ಠಿತವಾಗಿವೆ. ನಮುಚಿ, ವಿಶ್ವರೂಪ, ಬಲ, ಇವರೆಲ್ಲರನ್ನೂ ನೀನು ಸಂಹರಿಸಿರುವಿ.
ತ್ವಮಾಜಹಾರ್ಷೀರ್ದೇವಾನಾಮೇಕವೀರ್ಯಃ ಶ್ರಿಯಂ ಪರಾಮ್ |
ತ್ವಂ ಬಿಭರ್ಷಿ ಭುವಂ ದ್ಯಾಂ ಚ ಸದೈವ ಬಲಸೂದನ ॥26॥
ಬಲಸೂದನನೇ, ಸಕಲ ದೇವತೆಗಳ ಶ್ರೇಷ್ಠವಾದ ವೀರ್ಯಸಂಪತ್ತುಗಳನ್ನು ನೀನೊಬ್ಬನೇ ರಾಕ್ಷಸರಿಂದ ಹಿಂದಿರುಗಿ ಪಡೆದುಕೊಂಡಿರುವೆ. ನಿರಂತರವೂ ಭೂಮಿ, ಸ್ವರ್ಗಲೋಕಗಳ ಭರಣ, ಪೋಷಣಗಳನ್ನು ಮಾಡುತ್ತಿರುವೆ.
ಪೌರೋಹಿತ್ಯಮಹಂ ಕೃತ್ವಾ ತವ ದೇವ ಸುರೇಶ್ವರ |
ಯಾಜಯೇಯಂ ಕಥಂ ಮರ್ತ್ಯಂ ಮರುತ್ತಂ ಪಾಕಶಾಸನ ॥27॥
ಸುರೇಶ್ವರನೇ, ಪಾಕಶಾಸನನೇ, ಅಂತಹ ನಿನಗೆ ಪೌರೋಹಿತ್ಯವನ್ನು ಮಾಡಿಸಿ, ಮರಣಧರ್ಮವುಳ್ಳ ಮರುತ್ತನಿಗೆ ಹೇಗೆ ತಾನೆ ಯಜ್ಞವನ್ನು ಮಾಡಿಸುವೆನು?
ಸಮಾಶ್ವಸಿಹಿ ದೇವೇಶ ನಾಹಂ ಮರ್ತ್ಯಾಯ ಕರ್ಹಿಚಿತ್ |
ಗ್ರಹೀಷ್ಯಾಮಿ ಸ್ರುವಂ ಯಜ್ಞೇ ಶೃಣು ಚೇದಂ ವಚೋ ಮಮ ॥28॥
ದೇವೇಂದ್ರನೇ, ಸಮಾಧಾನ ಮಾಡಿಕೊ. ಇನ್ನೆಂದೂ ನಾನು ಮನುಷ್ಯನ ಸಲುವಾಗಿ ಯಜ್ಞದಲ್ಲಿ ಸ್ರುವವನ್ನು ಹಿಡಿಯುವುದಿಲ್ಲ. ಇಷ್ಟುಮಾತ್ರವಲ್ಲ, ನನ್ನ ಮಾತನ್ನು ಕೇಳು.
ಹಿರಣ್ಯರೇತಾ ನೋಷ್ಣಃ ಸ್ಯಾತ್ ಪರಿವರ್ತೇತ ಮೇದಿನೀ |
ಭಾಸಂ ಚ ನೋ ರವಿಃ ಕುರ್ಯಾತ್ ಮತ್ಸತ್ಯಂ ವಿಚಲೇದ್ ಯದಿ॥
ಮಹೇಂದ್ರನೇ, ಬೆಂಕಿಯು ತಣ್ಣಗಾಗಬಹುದು. ಭೂಮಿಯು ತಲೆಕೆಳಗಾಗಬಹುದು. ಸೂರ್ಯನು ಕಾಂತಿರಹಿತನಾಗಬಹುದು. ಆದರೆ ನನ್ನ ಸತ್ಯಪ್ರತಿಜ್ಞೆ ಎಂದೂ ವ್ಯತ್ಯಯವಾಗುವುದಿಲ್ಲ.
ವೈಶಂಪಾಯನಃ
ಬೃಹಸ್ಪತಿವಚಃ ಶ್ರುತ್ವಾ ಶಕ್ರೋ ವಿಗತಮತ್ಸರಃ |

ಪ್ರಶಸ್ಯೈನಂ ವಿವೇಶಾಥ ಸ್ವಮೇವ ಭವನಂ ತದಾ ॥30॥
ವೈಶಂಪಾಯನ ಜನಮೇಜಯನೇ, ಇಂದ್ರನು ಬೃಹಸ್ಪತಿಯ ಆ ಪ್ರತಿಜ್ಞೆಯನ್ನು ಕೇಳಿಸಿಕೊಂಡು, ಮಾತ್ಸರ್ಯರಹಿತನಾಗಿ ಬೃಹಸ್ಪತಿಯನ್ನು ಬಹಳವಾಗಿ ಪ್ರಶಂಸೆ ಮಾಡಿ ತನ್ನ ಅರಮನೆಗೆ ತೆರಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಬೃಹಸ್ಪತಿಶಪಥವಚನಂ ನಾಮ ಪಂಚಮೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ನಾರದರ ಆಜ್ಞೆಯಂತೆ ಮರುತ್ತನು ಸಂವರ್ತನನ್ನು ಸಂಪರ್ಕಿಸಿದ.
ವ್ಯಾಸಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಬೃಹಸ್ಪತೇಶ್ಚ ಸಂವಾದಂ ಮರುತ್ತಸ್ಯ ಚ ಧೀಮತಃ ॥1॥
ವ್ಯಾಸರು ಯುಧಿಷ್ಠಿರನೇ, ಈ ವಿಷಯದಲ್ಲಿ ಹಿಂದೆ ಬೃಹಸ್ಪತಿಗೂ ಮತ್ತು ಧೀಮಂತನಾದ ಮರುತ್ತನಿಗೂ ಸಂವಾದರೂಪವಾದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ದೇವರಾಜಸ್ಯ ಸಮಯಂ ಕೃತಮಾಂಗೀರಸೇನ ಹ ।
ಶ್ರುತ್ವಾ ಮರುತ್ತೋ ನೃಪತಿರ್ಮನ್ಯುಮಾಹಾರಯತ್ ತದಾ ॥2॥
ಇಂದ್ರದೇವನು ಬೃಹಸ್ಪತಿಗಳಿಂದ ಮನುಷ್ಯರಿಗೆ ಯಜ್ಞವನ್ನು ಮಾಡಿಸುವುದಿಲ್ಲ ಎಂಬ ಪ್ರತಿಜ್ಞೆಯನ್ನು ಸ್ವೀಕಾರ ಮಾಡಿಸಿಕೊಂಡು ಒಂದು ಸಂಕಲ್ಪವನ್ನು ಮಾಡಿದನು.
ಸಂಕಲ್ಪ್ಯ ಮನಸಾ ಯಜ್ಞಂ ಕರಂಧಮಸುತಾತ್ಮಜಃ ।
ಬೃಹಸ್ಪತಿಮುಪಾಗಮ್ಯ ವಾಗ್ಮೀ ವಚನಮಬ್ರವೀತ್ ॥3॥
ಇಂದ್ರದೇವನು ಶ್ರೇಷ್ಠವಾದ ಮಹಾಯಜ್ಞವನ್ನು ಮಾಡಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿ, ಕರಂಧಮನ ಮಗನ ಮಗನಾದ ವಾಗ್ಮಿಯಾದ ಬೃಹಸ್ಪತಿಯನ್ನು ಸಂಪರ್ಕಿಸಿ ಹೀಗೆ ಹೇಳಿದನು.
ಮರುತ್ತಃ
ಭಗವನ್ ಯನ್ಮಯಾ ಪೂರ್ವಮಧಿಗಮ್ಯ ತಪೋಧನ ।
ಕೃತಾಭಿಸಂಧಿರ್ಯಜ್ಞಾಯ ಭವತೋ ವಚನಾದ್ ಗುರೋಃ ॥4॥
ತದಹಂ ಯಷ್ಟುಮಿಚ್ಛಾಮಿ ಸಂಭಾರಾಃ ಸಂಭೃತಾಶ್ಚ ಮೇ ।
ಯಾಜ್ಯೋಽಸ್ಮಿ ಭವತಃ ಸಾಧೋ ತಂ ಪ್ರಾಪ್ನುಹಿ ವಿಧತ್ಸ್ವ ಚ ॥5॥
ಮರುತ್ತ ಪೂಜ್ಯನೇ, ತಪೋಧನನೇ, ಗುರುಶ್ರೇಷ್ಠನೇ, ಹಿಂದೆ ನಾನು ಒಮ್ಮೆ ಬಂದು ಯಜ್ಞದ ವಿಷಯದಲ್ಲಿ ನಿನ್ನ ಸಲಹೆಯನ್ನು ಕೇಳಿದ್ದೆನು. ಅಂದು ನೀನು ಹೇಳಿದ ರೀತಿಯಲ್ಲಿಯೇ ಇಂದು ಆ ಯಜ್ಞವನ್ನು ಪ್ರಾರಂಭಿಸಬೇಕೆಂದು ಸಂಕಲ್ಪಿಸಿದ್ದೇನೆ. ಆ ಯಜ್ಞದ ಸಲುವಾಗಿ ಬೇಕಾದ ಸಾಮಗ್ರಿಗಳೆಲ್ಲವನ್ನೂ ಸಂಗ್ರಹಿಸಿರುತ್ತೇನೆ. ಸತ್ಪುರುಷನೇ, ಮೊದಲಿನಿಂದಲೂ ನಿನ್ನಿಂದಲೇ ಯಾಗವನ್ನು ಮಾಡಿಸಿಕೊಂಡು ಬಂದಿರುತ್ತೇನಷ್ಟೆ! ಆದ್ದರಿಂದ ಇಂದು ನೀನು ನನ್ನ ಯಜ್ಞಶಾಲೆಗೆ ಆಗಮಿಸಿ, ನಾನು ಸಂಕಲ್ಪಿಸಿದ ಯಜ್ಞವನ್ನು ನನ್ನ ಮೂಲಕ ಮಾಡಿಸು.
ಬೃಹಸ್ಪತಿಃ
ನ ಕಾಮಯೇ ಯಾಜಯಿತುಂ ತ್ವಾಮಹಂ ಪೃಥಿವೀಪತೇ ।
ವೃತೋಽಸ್ಮಿ ದೇವರಾಜೇನ ಪ್ರತಿಜ್ಞಾತಂ ಚ ತಸ್ಯ ಮೇ ॥6॥
ಬೃಹಸ್ಪತಿಯು ಉತ್ತರಿಸುತ್ತಾನೆ ಪೃಥಿವೀಪತಿಯಾದ ಮರುತ್ತನೇ, ನಾನು ನಿನಗೆ ಯಜ್ಞವನ್ನು ಮಾಡಿಸಲು ಇಚ್ಛಿಸುವುದಿಲ್ಲ. ನನ್ನನ್ನು ಕುಲಪುರೋಹಿತನನ್ನಾಗಿ ಇಂದ್ರದೇವನು ಸ್ವೀಕರಿಸಿದ್ದಾನೆ. ಅವನನ್ನು ಬಿಟ್ಟು ಮನುಷ್ಯರಿಗೆ ಸಂಬಂಧಿಸಿದ ಯಜ್ಞವನ್ನು ಮಾಡಿಸುವುದಿಲ್ಲವೆಂದು ಇಂದ್ರನ ಬಳಿ ಪ್ರತಿಜ್ಞೆಯನ್ನು ಮಾಡಿರುತ್ತೇನೆ.
ಮರುತ್ತಃ
ಪಿತ್ರ್ಯಮಸ್ಮಿ ತವ ಕ್ಷೇತ್ರಂ ಬಹು ಮನ್ಯೇ ಚ ತೇ ಭೃಶಮ್ ।
ನ ಚಾಸ್ಮ್ಯಯಾಜ್ಯತಾಂ ಪ್ರಾಪ್ತೋ ಭಜಮಾನಂ ಭಜಸ್ವ ಮಾಮ್॥7॥
ಮರುತ್ತನು ಹೇಳುತ್ತಾನೆ ವಿಪ್ರಶ್ರೇಷ್ಠನೇ, ನಾನು ನಿನ್ನ ಪಿತೃ-ಪಿತಾಮಹರ ಕಾಲದಿಂದಲೂ ನಿನ್ನ ವಂಶದವರ ಯಾಜ್ಯವರ್ಗಕ್ಕೆ ಸೇರಿದ ವಂಶದವನಾಗಿದ್ದೇನೆ. ಅಂಗಿರಸರಿಗೆ ಸಂಬಂಧಿಸಿದ ಕ್ಷೇತ್ರದಲ್ಲಿಯೇ ಉತ್ಪನ್ನನಾಗಿದ್ದೇನೆ. ಆದ್ದರಿಂದ ನಿನ್ನಲ್ಲಿ ನನಗೆ ಅಪಾರವಾದ ಗೌರವ. ನಾನು ನಿನ್ನ ಯಾಜ್ಯನಾಗಿದ್ದೇನೆ. ನಿನ್ನ ಸೇವೆಯಲ್ಲಿಯೇ ತತ್ಪರನಾಗಿರುವ ನನ್ನನ್ನು ಅನುಗ್ರಹಿಸು.
ಬೃಹಸ್ಪತಿಃ
ಅಮರ್ತ್ಯಂ ಯಾಜಯಿತ್ವಾಽಹಂ ಯಾಜಯಿಷ್ಯೇ ನ ಮಾನುಷಮ್ ।
ಮರುತ್ತ ಗಚ್ಛ ವಾ ಮಾ ವಾ ನಿವೃತ್ತೋಽಸ್ಮ್ಯದ್ಯ ಯಾಜನಾತ್ ॥8॥
ಬೃಹಸ್ಪತಿಯು ಹೇಳುತ್ತಾನೆ ಯಾರಿಗೆ ಮರಣವಿಲ್ಲವೋ ಅಂತಹವರಿಗೆ ಯಜ್ಞವನ್ನು ಮಾಡಿಸುವ ಸಂಕಲ್ಪವನ್ನು ಮಾಡಿರುವ ನಾನು ಮೃತ್ಯುಧರ್ಮವಿರುವ ಮನುಷ್ಯರಿಗೆ ಹೇಗೆ ಯಜ್ಞ ಮಾಡಿಸಲಿ? ನೀನು ಎಲ್ಲಿಗೆ ಬೇಕಾದರೂ ಹೋಗಬಹುದು ಅಥವಾ ಇಲ್ಲಿಯೇ

ಇರಬಹುದು. ನಾನು ಮನುಷ್ಯರಿಗೆ ಯಾಜಕನಾಗುವುದಿಲ್ಲ.
ನ ತ್ವಾಂ ಯಾಜಯಿತಾಸ್ಮ್ಯದ್ಯ ವೃಣು ಚಾನ್ಯಂ ಯಮಿಚ್ಛಸಿ |
ಉಪಾಧ್ಯಾಯಂ ಮಹಾಬಾಹೋ ಯಸ್ತೇ ಯಜ್ಞಂ ಕರಿಷ್ಯತಿ ॥9॥
ಮಹಾಬಾಹುವೇ, ನಾನಂತೂ ನಿನಗೆ ಯಜ್ಞವನ್ನು ಮಾಡಿಸುವುದಿಲ್ಲ. ಯಾರು ಯಜ್ಞ ಮಾಡಿಸುತ್ತಾರೋ, ಯಾರಿಂದ ಯಜ್ಞ ಮಾಡಿಸಲು ಬಯಸುತ್ತೀಯೋ ಅವರನ್ನೇ ನೀನು ಉಪಾಧ್ಯಾಯನನ್ನಾಗಿ ಸ್ವೀಕರಿಸು.
ವ್ಯಾಸಃ
ಏವಮುಕ್ತಸ್ತು ನೃಪತಿರ್ಮರುತ್ತೋ ವ್ರೀಡಿತೋಽಭವತ್ |
ಪ್ರತ್ಯಾಗಚ್ಛತ್ ಸುಸಂವಿಗ್ನೋ ದದರ್ಶ ಪಥಿ ನಾರದಮ್ ॥10॥
ದೇವರ್ಷಿಣಾ ಸಮಾಗಮ್ಯ ನಾರದೇನ ಸ ಪಾರ್ಥಿವಃ |
ವಿಧಿವತ್ ಪ್ರಾಂಜಲಿಸ್ತಸ್ಥೌ ತಥೈನಂ ನಾರದೋಽಬ್ರವೀತ್ ॥11॥
ವ್ಯಾಸರು ಹೇಳುತ್ತಾರೆ ಯುಧಿಷ್ಠಿರನೇ, ಬೃಹಸ್ಪತಿಯು ಹೀಗೆ ಹೇಳಿದ ಬಳಿಕ ಮರುತ್ತರಾಜನು ತುಂಬಾ ನಾಚಿಕೆ ಹೊಂದಿದನು. ಖಿನ್ನ ಮನಸ್ಕನಾಗಿ ತನ್ನ ದೇಶಕ್ಕೆ ಹಿಂದಿರುಗಿದನು. ಆ ಸಂದರ್ಭದಲ್ಲಿ ನಾರದರನ್ನು ಕಂಡನು. ಕಂಡೊಡನೆ ಮರುತ್ತನು ಯಥಾವಿಧಿಯಿಂದ ಅವರನ್ನು ಸತ್ಕರಿಸಿ ಬದ್ಧಾಂಜಲಿಯಾಗಿ ಅವರ ಮುಂದೆ ನಿಂತಾಗ, ನಾರದರು ಅವನನ್ನು ಪ್ರಶ್ನಿಸುತ್ತಾರೆ.
ನಾರದಃ
ರಾಜರ್ಷೇ ನಾತಿಹೃಷ್ಟೋಽಸಿ ಕಚ್ಚಿತ್ ಕ್ಷೇಮಂ ತವಾನಘ |
ಕ್ವ ಗತೋಽಸಿ ಕುತೋ ವೇದಮಪ್ರೀತಿಸ್ಥಾನಮಾಗತಮ್ ॥12॥
ನಾರದರು ಹೇಳುತ್ತಾರೆ ರಾಜರ್ಷಿಯೇ, ನೀನು ಎಂದಿನಂತೆ ಸಂತುಷ್ಟ ಮನಸ್ಕನಾಗಿ ಕಾಣುತ್ತಿಲ್ಲ. ಅನಘನೇ, ನೀನು ಕ್ಷೇಮವಷ್ಟೇ? ಈಗ ಎಲ್ಲಿಗೆ ಹೋಗಿದ್ದೆ? ಯಾವ ಕಾರಣದಿಂದ ದುಃಖಕ್ಕೀಡಾಗಿರುವಿ?
ಶ್ರೋತವ್ಯಂ ಚೇನ್ಮಯಾ ರಾಜನ್ ಬ್ರೂಹಿ ಮೇ ಪಾರ್ಥಿವರ್ಷಭ |
ವ್ಯಪನೇಷ್ಯಾಮಿ ತೇ ಮನ್ಯುಂ ಸರ್ವಯತ್ನೈರ್ನರಾಧಿಪ ॥13॥
ಪಾರ್ಥಿವಶ್ರೇಷ್ಠನೇ, ನರಾಧಿಪನೇ, ಮಹಾರಾಜನೇ, ನಿನ್ನ ದುಃಖದ ಕಾರಣವನ್ನು ನಾನು ಕೇಳಬಹುದೆನಿಸಿದರೆ ಹೇಳುವಂಥವನಾಗು. ನಾನು ನಿನ್ನ ದುಃಖವನ್ನು ಪರಿಹರಿಸಲು ಎಲ್ಲ ವಿಧವಾದ ಪ್ರಯತ್ನವನ್ನು ಮಾಡುವೆನು.
ವ್ಯಾಸಃ
ಏವಮುಕ್ತೋ ಮರುತ್ತಸ್ತು ನಾರದೇನ ಮಹರ್ಷಿಣಾ |
ವಿಪ್ರಲಂಭಮುಪಾಧ್ಯಾಯಾತ್ ಸರ್ವಮೇವ ನ್ಯವೇದಯತ್ ॥14॥
ವ್ಯಾಸರು ಮಹರ್ಷಿಗಳಾದ ನಾರದರು ಮರುತ್ತರಿಗೆ ಹೀಗೆ ಅಭಯವನ್ನು ನೀಡಲು, ಮರುತ್ತನು ಉಪಾಧ್ಯಾಯನಾದ ಬೃಹಸ್ಪತಿಯು ಮಾಡಿದ ವಂಚನೆಯನ್ನೂ, ಅದಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ತಿಳಿಸಿದನು.
ಮರುತ್ತಃ
ಗತೋಽಸ್ಮ್ಯಂಗಿರಸಃ ಪುತ್ರಂ ದೇವಾಚಾರ್ಯಂ ಬೃಹಸ್ಪತಿಮ್ |
ಯಜ್ಞಾರ್ಥಮೃತ್ವಿಜಂ ಪ್ರಷ್ಟುಂ ಸ ಚ ಮಾಂ ನಾಭ್ಯನಂದತ ॥15॥
ಮರುತ್ತ ನಾರದರೇ, ಯಜ್ಞದ ಸಲುವಾಗಿ ಋತ್ವಿಜರಾಗಬೇಕೆಂದು ಕೇಳಿಕೊಳ್ಳಲು ಅಂಗಿರಸರ ಮಗನಾದ ದೇವಗುರು ಬೃಹಸ್ಪತಿಯನ್ನು ನೋಡಲು ಹೋಗಿದ್ದೆನು. ಆದರೆ ಅವರು ನನ್ನ ಪ್ರಾರ್ಥನೆಯನ್ನು ಸ್ವೀಕರಿಸಲಿಲ್ಲ.
ಪ್ರತ್ಯಾಖ್ಯಾತಶ್ಚ ತೇನಾಹಂ ಜೀವಿತಂ ನಾದ್ಯ ಕಾಮಯೇ |
ಪರಿತ್ಯಕ್ತಶ್ಚ ಗುರುಣಾ ದೂಷಿತಶ್ಚಾಸ್ಮಿ ನಾರದ ॥16॥
ಅವರು ನನ್ನ ಪ್ರಾರ್ಥನೆಯನ್ನು ತಿರಸ್ಕರಿಸುವುದರ ಜೊತೆಗೆ ನನ್ನನ್ನು ಮರಣಧರ್ಮನೆಂದು ದೂಷಿಸಿ ಪರಿತ್ಯಾಗ ಮಾಡಿದರು. ಆದ್ದರಿಂದ ನನಗೆ ಜೀವಿತವೇ ಅಸಹ್ಯವಾಗಿದೆ.
ವ್ಯಾಸಃ
ಏವಮುಕ್ತಸ್ತು ರಾಜ್ಞಾ ಸ ನಾರದಃ ಪ್ರತ್ಯುವಾಚ ಹ |
ಆವಿಕ್ಷಿತಂ ಮಹಾರಾಜ ವಾಚಾ ಸಂಜೀವಯನ್ನಿವ ॥17॥
ವ್ಯಾಸರು ಹೇಳುತ್ತಾರೆ ಯುಧಿಷ್ಠಿರನೇ, ಮರುತ್ತನು ಹೀಗೆ ಹೇಳಿದ ಬಳಿಕ ದೇವರ್ಷಿ ಎನಿಸಿದ ನಾರದರು, ತಮ್ಮ ಅಮೃತಮಯವಾದ ಮಾತಿನ ಮೂಲಕ ಆವಿಕ್ಷಿತನ ಮಗನಾದ ಮರುತ್ತನನ್ನು ಪುನಃ ಬದುಕಿಸುವರೋ ಎಂಬಂತೆ ಮಾತುಗಳನ್ನು ಆಡಿದರು.
ನಾರದಃ
ರಾಜನ್ನಂಗಿರಸಃ ಪುತ್ರಃ ಸಂವರ್ತೋ ನಾಮ ಧಾರ್ಮಿಕಃ |
ಚಂಕ್ರಮೀತಿ ದಿಶಃ ಸರ್ವಾ ದಿಗ್ವಾಸಾ ಮೋಹಯನ್ ಪ್ರಜಾಃ ॥18॥
ನಾರದರು ರಾಜನೇ, ಅಂಗಿರಸನ ಇನ್ನೊಬ್ಬ ಮಗನಾದ, ಧಾರ್ಮಿಕನಾದ ಸಂವರ್ತನೆಂಬ ಹೆಸರಿನ ಮಹರ್ಷಿಯೊಬ್ಬನಿದ್ದಾನೆ. ದಿಗಂಬರನಾಗಿದ್ದಾನೆ. ತನ್ನ ಚರ್ಯೆಯಿಂದ ಪ್ರಜೆಗಳನ್ನು ಭ್ರಾಂತಿಗೊಳಿಸುತ್ತಾ, ಸಮಸ್ತ ದಿಕ್ಕುಗಳಲ್ಲಿ ಸಂಚರಿಸುತ್ತಿದ್ದಾನೆ.
ತಂ ಗಚ್ಛ ಯದಿ ಯಾಜ್ಯಂ ತ್ವಾಂ ನ ವಾಂಛತಿ ಬೃಹಸ್ಪತಿಃ |
ಪ್ರಸನ್ನಸ್ತ್ವಾಂ ಮಹಾತೇಜಾಃ ಸಂವರ್ತೋ ಯಾಜಯಿಷ್ಯತಿ ॥19॥
ಬೃಹಸ್ಪತಿಯು ನಿನ್ನನ್ನು ಯಾಜ್ಯನನ್ನಾಗಿ ಪ್ರತಿಗ್ರಹಿಸಲು ಇಚ್ಛಿಸದಿದ್ದರೆ ಏನಾಯಿತು? ನೀನು ಅದೇ ಅಂಗಿರಸ ಸುತನಾದ ಸಂವರ್ತನ ಬಳಿ ಹೋಗು. ಮಹಾತೇಜಸ್ವಿಯಾದ ಆತನು ಪ್ರಸನ್ನನಾಗಿ ನಿನ್ನಿಂದ ಯಾಗವನ್ನು ಮಾಡಿಸುತ್ತಾನೆ.

ಮರುತ್ತಃ
ಸಂಜೀವಿತೋಽಹಂ ಭವತಾ ವಾಕ್ಯೇನಾನೇನ ನಾರದ |
ಪಶ್ಯೇಯಂ ಕ್ವ ನು ಸಂವರ್ತಂ ಶಂಸ ಮೇ ವದತಾಂ ವರ ॥20॥
ಮರುತ್ತನು ಹೇಳುತ್ತಾನೆ ನಾರದರೇ, ನಿಮ್ಮ ಮಾತಿನಿಂದ ಪುನಃ ಜೀವ ಬಂದಂತಾಗಿದೆ. ವಾಗ್ಮಿಶ್ರೇಷ್ಠರೇ, ಸಂವರ್ತನನ್ನು ನಾನು ಎಲ್ಲಿ ಕಾಣಬೇಕೆಂಬುದನ್ನು ತಿಳಿಸಿರಿ.
ಕಥಂ ಚ ತಸ್ಮೈ ವರ್ತೇಯಂ ಕಥಂ ಮಾಂ ನ ಪರಿತ್ಯಜೇತ್ |
ಪ್ರತ್ಯಾಖ್ಯಾತೋ ಹಿ ತೇನಾಪಿ ನಾಹಂ ಜೀವಿತುಮುತ್ಸಹೇ ॥21॥
ಅವನು ನನ್ನನ್ನು ತಿರಸ್ಕಾರ ಮಾಡದಂತೆ ಅವನ ವಿಷಯದಲ್ಲಿ ನಾನು ಹೇಗೆ ವರ್ತಿಸಬೇಕೆಂಬುದನ್ನೂ ತಿಳಿಸಿರಿ. ಏಕೆಂದರೆ ಆತನೂ ನನ್ನನ್ನು ತಿರಸ್ಕರಿಸಿದರೆ ಮುಂದೆ ನಾನು ಬದುಕಿರಲಾರೆ.
ನಾರದಃ
ಉನ್ಮತ್ತವೇಷಂ ಬಿಭ್ರತ್ ಸ ಚಂಕ್ರಮೀತಿ ಯಥಾಸುಖಮ್ |
ವಾರಾಣಸೀಂ ತು ನಗರೀಮಭೀಕ್ಷ್ಣಮುಪಸೇವತೇ ॥22॥
ನಾರದರು ಹೇಳುತ್ತಾರೆ ಮಹಾರಾಜನೇ, ಸಂವರ್ತನು ಉನ್ಮತ್ತರ ವೇಷವನ್ನು ಧರಿಸಿ, ವಾರಣಾಸಿ ನಗರದಲ್ಲಿ ಸಂಚರಿಸುತ್ತಿದ್ದಾನೆ. ಅಲ್ಲಿರುವ ಮಹೇಶ್ವರನನ್ನು ಸಂದರ್ಶಿಸುತ್ತಾ ನಿಶ್ಚಿಂತೆಯಿಂದ ತಿರುಗುತ್ತಿದ್ದಾನೆ.
ಯತ್ರ ಸಾಕ್ಷಾತ್ ಮಹಾದೇವೋ ದೇಹಾಂತೇ ಪರಮೇಶ್ವರಃ |
ವ್ಯಾಚಷ್ಟೇ ತಾರಕಂ ಜ್ಞಾನಂ ಜಂತೂನಾಮಪವರ್ಗದಮ್ ॥23॥
ವಾರಣಾಸಿಯಲ್ಲಾದರೂ ಮಹಾರುದ್ರನು ಪ್ರತಿಯೊಬ್ಬ ಜೀವರು ಮರಣವನ್ನು ಹೊಂದಿದ ಮೇಲೆ ರಾಮತಾರಕ ಮಂತ್ರವನ್ನು ಪ್ರತಿಯೊಬ್ಬರ ಕಿವಿಯಲ್ಲಿ ಮೋಕ್ಷಕ್ಕೆ ಸಾಧನವಾಗುವಂತೆ ಉಸುರುತ್ತಾನೆ.
ತಸ್ಯಾ ದ್ವಾರಂ ಸಮಾಸಾದ್ಯ ನ್ಯಸೇಥಾಃ ಕುಣಪಂ ಕ್ವಚಿತ್ |
ತಂ ದೃಷ್ಟ್ವಾ ಯೋ ನಿವರ್ತೇತ ಸ ಸಂವರ್ತೋ ಮಹೀಪತೇ ॥24॥
ಅಂತಹ ವಾರಣಾಸಿ ಪಟ್ಟಣದ ಮಹಾದ್ವಾರದಲ್ಲಿ ಒಂದು ಹೆಣವನ್ನು ಇಟ್ಟುಕೊಂಡು, ನೀನು ದಾರಿಹೋಕರ ಪ್ರತಿಕ್ರಿಯೆಯನ್ನು ಗಮನಿಸುತ್ತಿರು. ಆ ಹೆಣವನ್ನು ನೋಡಿದ ಕೂಡಲೇ ಯಾರು ತಾನು ಬಂದ ಹಾದಿಯನ್ನು ಹಿಡಿದು ಹಿಂದಿರುಗುತ್ತಾನೋ ಅವನೇ ಸಂವರ್ತನೆಂದು ತಿಳಿದುಕೊ.
ತಂ ಪೃಷ್ಠತೋಽನುಗಚ್ಛೇಥಾ ಯತ್ರ ಗಚ್ಛೇತ್ ಸ ವೀರ್ಯವಾನ್ |
ತಮೇಕಾಂತೇ ಸಮಾಸಾದ್ಯ ಪ್ರಾಂಜಲಿಃ ಶರಣಂ ವ್ರಜ ॥25॥
ವೀರ್ಯವಂತನಾದ ಸಂವರ್ತನು ಯಾವ ಕಡೆಗೆ ಓಡುತ್ತಾನೋ ನೀನೂ ಅವನು ಸಂಚರಿಸುವ ಸ್ಥಳಗಳಲ್ಲೆಲ್ಲ ಹಿಂಬಾಲಿಸಿಕೊಂಡೇ ಹೋಗು. ಅವನು ಏಕಾಂತ ಸ್ಥಳಕ್ಕೆ ಹೋದ ಬಳಿಕ ಅವನನ್ನು ಬದ್ಧಾಂಜಲಿಯಾಗಿ ಸಂಧಿಸಿ ಶರಣು ಹೊಂದು.
ಪೃಚ್ಛೇತ್ ತ್ವಾಂ ಯದಿ ಕೇನಾಹಂ ತವಾಖ್ಯಾತ ಇತಿ ಸ್ಮ ಹ |
ಬ್ರೂಯಾಸ್ತ್ವಂ ನಾರದೇನೇತಿ ಸಂಜ್ಞಪ್ತ ಇತಿ ಶತ್ರುಹನ್ ॥26॥
ಅವನೇನಾದರೂ ತನ್ನ ಪರಿಚಯವನ್ನು ಯಾರು ಮಾಡಿಕೊಟ್ಟರೆಂದು ಪ್ರಶ್ನಿಸಿದರೆ ನಾರದರೇ ಪರಿಚಯ ಮಾಡಿಕೊಟ್ಟರೆಂದು ತಿಳಿಸು.
ಸ ಚೇತ್ ತ್ವಾಮನುಯುಂಜೀತ ಮಮಾನುಗಮನೇಪ್ಸಯಾ |
ಶಂಸೇಥಾ ವಹ್ನಿಮಾರೂಢಂ ಮಾಮಪಿ ತ್ವಮಶಂಕಯಾ ॥27॥
ಸಂವರ್ತನೇನಾದರೂ ನನ್ನ ಬಳಿಗೆ ಬರುವ ಇಚ್ಛೆಯನ್ನು ಸೂಚಿಸಿದರೆ, ನಾರದರು ಎಲ್ಲಿದ್ದಾರೆಂದು ಪ್ರಶ್ನಿಸಿದರೆ, ನಾರದರು ಬೆಂಕಿಯಲ್ಲಿ ಸೇರಿಹೋದರೆಂದು ಸಂಶಯ ಬಾರದಂತೆ ಹೇಳು.
ವ್ಯಾಸಃ
ಸ ತಥೇತಿ ಪ್ರತಿಶ್ರುತ್ಯ ಪೂಜಯಿತ್ವಾ ಚ ನಾರದಮ್ |
ಅಭ್ಯನುಜ್ಞಾಪ್ಯ ರಾಜರ್ಷಿರ್ಯಯೌ ವಾರಾಣಸೀಂ ಪುರೀಮ್ ॥28॥
ವ್ಯಾಸರು ಯುಧಿಷ್ಠಿರನೇ, ನಾರದರ ಆ ಮಾತನ್ನು ಕೇಳಿ, ರಾಜರ್ಷಿಯಾದ ಮರುತ್ತನು ಹಾಗೆಯೇ ಆಗಲೆಂದು ಹೇಳಿದನು. ಅವರನ್ನು ಯಥೋಚಿತವಾಗಿ ಸತ್ಕರಿಸಿ, ಅವರ ಆಜ್ಞೆಯನ್ನು ಸ್ವೀಕರಿಸಿ ವಾರಾಣಸಿಪುರಕ್ಕೆ ಪಯಣಿಸಿದನು.
ತತ್ರ ಗತ್ವಾ ಯಥೋಕ್ತಂ ಸ ಪುರ್ಯಾ ದ್ವಾರೇ ಮಹಾಯಶಾಃ |
ಕುಣಪಂ ಸ್ಥಾಪಯಾಮಾಸ ನಾರದಸ್ಯ ವಚಃ ಸ್ಮರನ್ ॥29॥
ಶ್ರೇಷ್ಠ ಕೀರ್ತಿಸಂಪನ್ನನಾದ ಮರುತ್ತನು ವಾರಾಣಸಿಗೆ ಹೋಗಿ ನಾರದರ ಮಾತನ್ನು ಜ್ಞಾಪಿಸಿಕೊಂಡು ಅವರು ತಿಳಿಸಿದಂತೆ ಪಟ್ಟಣದ ದ್ವಾರದಲ್ಲಿ ಶವವೊಂದನ್ನು ಇಟ್ಟನು.
ಯೌಗಪದ್ಯೇನ ವಿಪ್ರಃ ಸ ಪುರೀದ್ವಾರಂ ಸಮಾವಿಶತ್ |
ತತಃ ಸ ಕುಣಪಂ ದೃಷ್ಟ್ವಾ ಸಹಸಾ ಸನ್ನ್ಯವರ್ತತ ॥30॥
ದೈವವಿಧಿಯಂತೆ ಆ ಸಮಯಕ್ಕೆ ಸರಿಯಾಗಿ ಸಂವರ್ತನು ಆ ಪಟ್ಟಣದ ಮಹಾದ್ವಾರದ ಬಳಿಗೆ ಬಂದನು. ಮರುತ್ತನಿಟ್ಟಿರುವ ಹೆಣವನ್ನು ನೋಡಿದೊಡನೆ ಸಂವರ್ತನು ರಭಸದಿಂದ ಹಿಂದಿರುಗಿ ಹೊರಟನು.
ಸ ತಂ ನಿವೃತ್ತಮಾಲೋಕ್ಯ ಪ್ರಾಂಜಲಿಃ ಪೃಷ್ಠತೋಽನ್ವಗಾತ್ |
ಆವಿಕ್ಷಿತೋ ಮಹೀಪಾಲಃ ಸಂವರ್ತಮುಪವೀಕ್ಷಿತುಮ್ ॥31॥

ನಾರದರು ಹೇಳಿದಂತೆ ಅವನೇ ಸಂವರ್ತನೆಂದು ನಿಶ್ಚಯಿಸಿಕೊಂಡ, ಅವಿಕ್ಷಿತನ ಮಗನಾದ ಮರುತ್ತನು ಸಂವರ್ತನ ಶಿಷ್ಯನಾಗುವುದಕ್ಕಾಗಿ ಕೈಗಳನ್ನು ಜೋಡಿಸಿಕೊಂಡು ಅವನ ಹಿಂದೆಯೇ ಓಡಿದನು.

ಸ ಚೈನಂ ವಿಜನೇ ದೃಷ್ಟ್ವಾ ಪಾಂಸುಭಿಃ ಕರ್ದಮೇನ ಚ |
ಶ್ಲೇಷ್ಮಣಾ ಚೈವ ರಾಜಾನಂ ಷ್ಠೀವನೈಶ್ಚ ಸಮಾಕಿರತ್ ॥32॥

ಸಂವರ್ತನು ರಭಸವಾಗಿ ಓಡುತ್ತಾ ನಿರ್ಜನವಾದ ಏಕಾಂತ ಸ್ಥಳವನ್ನು ಸೇರಿದನು. ಮರುತ್ತನೂ ಅವನನ್ನು ಹಿಂಬಾಲಿಸುತ್ತಾ ಅಲ್ಲಿಗೆ ಹೋಗಲು, ಸಂವರ್ತನು ರಾಜನನ್ನು ಧೂಳಿನಿಂದಲೂ, ಕೆಸರಿನಿಂದಲೂ, ಕಫದಿಂದಲೂ, ಉಗುಳಿನಿಂದಲೂ ಮುಚ್ಚಿಬಿಟ್ಟನು.

ಸ ತಥಾ ಪೀಡ್ಯಮಾನೋಽಪಿ ಸಂವರ್ತೇನ ಮಹೀಪತಿಃ |
ಅನ್ವಗಾದೇವ ತಮೃಷಿಂ ಪ್ರಾಂಜಲಿಃ ಸಂಪ್ರಸಾದಯನ್ ॥33॥

ಸಂವರ್ತನು ಹೀಗೆ ಬಾಧೆಪಡಿಸುತ್ತಿದ್ದರೂ ಮರುತ್ತನು ಅದನ್ನು ಪರಿಗಣಿಸದೆ ಕರಜೋಡಿಸಿ ಸಂವರ್ತನನ್ನು ಪ್ರಸನ್ನಗೊಳಿಸುತ್ತಾ ಹಿಂದೆಯೇ ಹೋದನು.

ತತೋ ನಿವೃತ್ಯ ಸಂವರ್ತಃ ಪರಿಶ್ರಾಂತ ಉಪಾವಿಶತ್ |
ಶೀತಲಚ್ಛಾಯಮಾಸಾದ್ಯ ನ್ಯಗ್ರೋಧಂ ಬಹುಶಾಖಿನಮ್ ॥34॥

ಬಳಿಕ ರಭಸವಾಗಿ ಓಡುತ್ತಾ ಆಯಾಸಗೊಂಡ ಸಂವರ್ತನು ಹಿಂದಿರುಗಿ ಅನೇಕ ರೆಂಬೆಗಳಿಂದ ಕೂಡಿದ ಆಲದ ಮರದ ತಂಪಾದ ನೆರಳಿನಲ್ಲಿ ಕುಳಿತುಕೊಂಡನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಮರುತ್ತಸ್ಯ ಸಂವರ್ತದರ್ಶನಂ ನಾಮ ಷಷ್ಠೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ಷಷ್ಠೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.

* * * * *

## ಏಳನೆಯ ಅಧ್ಯಾಯ

ಸಂವರ್ತ-ಮರುತ್ತರ ಸಂಭಾಷಣೆ. ಸಂವರ್ತನು ಮರುತ್ತನಿಗೆ
ಯಜ್ಞವನ್ನು ಮಾಡಿಸಲು ಒಪ್ಪಿದುದು.

ವ್ಯಾಸಃ

ಕಥಮಸ್ಮಿ ತ್ವಯಾ ಜ್ಞಾತಃ ಕೇನ ವಾ ಕಥಿತೋಽಸ್ಮಿ ತೇ |
ಏತದಾಚಕ್ಷ್ವ ಮೇ ಸತ್ಯಂ ಜೀವಿತಂ ಚೇತ್ ಪ್ರಿಯಂ ತವ ॥1॥

ವ್ಯಾಸರು ಹೇಳುತ್ತಾರೆ ಮಹಾರಾಜ ಯುಧಿಷ್ಠಿರನೇ, ಮರುತ್ತನಿಗೆ ಸಂವರ್ತನು ಹೇಳುತ್ತಾನೆ- ನಾನಿರುವುದು ನಿನಗೆ ಹೇಗೆ ತಿಳಿಯಿತು? ನನ್ನ ವಿಷಯವಾಗಿ ಯಾರು ನಿನಗೆ ತಿಳಿಸಿದರು? ನನ್ನ ಅನುಗ್ರಹವನ್ನು ಬಯಸುವಿಯಾದರೆ ನಾನು ಕೇಳಿದ ಪ್ರಶ್ನೆಗೆ ಸರಿಯಾಗಿ ಉತ್ತರಿಸು.

ಸತ್ಯಂ ತೇ ಬ್ರುವತಃ ಸರ್ವೇ ಸಂಪತ್ಸ್ಯಂತೇ ಮನೋರಥಾಃ |
ಮಿಥ್ಯಾ ಪ್ರಬ್ರುವತೋ ಮೂರ್ಧಾ ಸಪ್ತಧಾ ತೇ ಫಲಿಷ್ಯತಿ ॥2॥

ನೀನು ಸತ್ಯವಾದ ವಿಚಾರವನ್ನೇ ಹೇಳಿದರೆ ನಿನ್ನ ಮನಸ್ಸಿನ ಅಭಿಲಾಷೆಗಳೆಲ್ಲವೂ ಪೂರ್ಣವಾಗುತ್ತವೆ. ಸುಳ್ಳು ಹೇಳಿದರೆ ನಿನ್ನ ತಲೆಯು ನೂರು ಹೋಳಾಗಿ ಸೀಳಿಹೋಗುತ್ತದೆ.

ಮರುತ್ತಃ

ನಾರದೇನ ಭವಾನ್ ಮಹ್ಯಮಾಖ್ಯಾತೋ ಗಚ್ಛತಾ ಪಥಿ |
ಗುರುಪುತ್ರೋ ಮಮೇತಿ ತ್ವಂ ತತೋ ಮೇ ಪ್ರೀತಿರುತ್ತಮಾ ॥3॥

ಮರುತ್ತನು ಹೇಳುತ್ತಾನೆ ಮಹರ್ಷಿಗಳೇ, ನಾನು ದಾರಿಯಲ್ಲಿ ಸಂಚರಿಸುತ್ತಿರುವಾಗ ಮಹರ್ಷಿಗಳಾದ ನಾರದರು ನಿಮ್ಮ ವಿಷಯವನ್ನು ತಿಳಿಸಿದರು. ಅವರ ಮೂಲಕ ನನ್ನ ಗುರುಗಳಾದ ಅಂಗಿರಸರ ಮಕ್ಕಳು ನೀವು ಎಂಬುದು ತಿಳಿಯಿತು. ಅದರಿಂದ ಎಲ್ಲಿಲ್ಲದ ಸಂತೋಷವೂ ಉಂಟಾಯಿತು.

ಸಂವರ್ತಃ

ಸತ್ಯಮೇತದ್ ಭವಾನಾಹ ಸ ಮಾಂ ಜಾನಾತಿ ಸತ್ತಮ |
ಕಥಯಸ್ವೈತದೇವಂ ಮೇ ಕ್ವ ನು ಸಂಪ್ರತಿ ನಾರದಃ ॥4॥

ಸಂವರ್ತನು ಹೇಳುತ್ತಾನೆ ಮಹಾರಾಜನೇ, ನೀನು ಸತ್ಯವನ್ನೇ ಹೇಳಿರುವೆ. ನಾನು ಯಜ್ಞ ಮಾಡಿಸಲು ಅರ್ಹನಾಗಿದ್ದೇನೆ ಎಂಬ ವಿಚಾರ ನಾರದರಿಗೆ ತಿಳಿದಿದೆ. ಈಗ ನಾರದರು ಎಲ್ಲಿದ್ದಾರೆ ಎಂಬುದನ್ನು ನನಗೆ ತಿಳಿಸು.

ಮರುತ್ತಃ

ಭವಂತಂ ಕಥಯಿತ್ವಾ ತು ಮಮ ದೇವರ್ಷಿಸತ್ತಮಃ |
ತತೋ ಮಾಮಭ್ಯನುಜ್ಞಾಯ ಪ್ರವಿಷ್ಟೋ ಹವ್ಯವಾಹನಮ್ ॥5॥

ಮರುತ್ತನು ಹೇಳುತ್ತಾನೆ ದೇವಶ್ರೇಷ್ಠರಾದ ನಾರದರು ನನಗೆ ನೀವಿರುವ ಸ್ಥಳವನ್ನು, ನಿಮ್ಮನ್ನು ಗುರುತಿಸುವ ವಿಧಾನವನ್ನು ತಿಳಿಸಿ, ನಿಮ್ಮನ್ನು ನೋಡುವಂತೆ ಹೇಳಿ ಕೂಡಲೇ ಅಗ್ನಿಪ್ರವೇಶ ಮಾಡಿದರು.

ವ್ಯಾಸಃ

ಶ್ರುತ್ವಾ ತು ಪಾರ್ಥಿವಸ್ಯೈತತ್ ಸಂವರ್ತಃ ಪರಯಾ ಮುದಾ |

ಏತಾವದಹಮಪ್ಯೇವಂ ಕುರ್ಯಾಮಿತಿ ತಮಬ್ರವೀತ್ ॥6॥
ವ್ಯಾಸರು ಹೇಳುತ್ತಾರೆ ಯುಧಿಷ್ಠಿರನೇ, ಮರುತ್ತ ರಾಜನ ಆ ಮಾತನ್ನು ಕೇಳಿ ಸಂವರ್ತನು ಸಂತುಷ್ಟನಾದನು. ಇಷ್ಟೇ ಆದರೆ ಅದನ್ನು ನಾನು ಮಾಡಲು ಸಮರ್ಥನಾಗಿದ್ದೇನೆ ಎಂದೂ ಹೇಳಿದನು.
ತತಃ ಸಂವರ್ತ ಉನ್ಮತ್ತೋ ವಾಚಾ ನಿರ್ಭರ್ತ್ಸಯನ್ನಿವ |
ರೂಕ್ಷಯಾ ಬ್ರಾಹ್ಮಣೋ ರಾಜನ್ ಪುನಃ ಪುನರಥಾಬ್ರವೀತ್ ॥7॥
ಮರುಕ್ಷಣದಲ್ಲಿಯೇ ಉನ್ಮತ್ತನಂತೆ ವೇಷ ಧರಿಸಿರುವ ಸಂವರ್ತಬ್ರಾಹ್ಮಣನು ಕಠಿಣವಾದ ಮಾತುಗಳಿಂದ ಮರುತ್ತನನ್ನು ಭಯಪಡಿಸುವನೋ ಎಂಬಂತೆ ಪುನಃ ಪುನಃ ಈ ಮಾತುಗಳನ್ನು ಹೇಳಿದನು.
ಸಂವರ್ತಃ
ಮದಪ್ರಧಾನೇನ ಮಯಾ ಸ್ವಚಿತ್ತವಶವರ್ತಿನಾ |
ಏವಂ ವಿಕೃತರೂಪೇಣ ಕಥಂ ಯಾಜಿತುಮಿಚ್ಛಸಿ ॥8॥
ಸಂವರ್ತ ಮಹಾರಾಜನೇ, ನಾನೊಬ್ಬ ಉನ್ಮತ್ತನಾದ ವ್ಯಕ್ತಿ. ನನ್ನ ಮನಸ್ಸಿಗೆ ತೋರಿದಂತೆ ನಡೆಯುವವನು. ವಿಕೃತವಾದ ರೂಪವುಳ್ಳವನು. ಇಂತಹವನಿಂದ ನೀನು ಯಜ್ಞವನ್ನು ಮಾಡಿಸಿಕೊಳ್ಳಲು ಹೇಗೆ ಇಚ್ಛಿಸುವಿ?
ಭ್ರಾತಾ ಮಮ ಸಮರ್ಥಶ್ಚ ವಾಸವೇನ ಚ ಸತ್ಕೃತಃ |
ವರ್ತತೇ ಯಾಜನೇ ಚೈವ ತೇನ ಕರ್ಮಾಣಿ ಕಾರಯ ॥9॥
ನನ್ನ ಅಣ್ಣನಾದ ಬೃಹಸ್ಪತಿಯಾದರೂ ಯಜ್ಞವನ್ನು ಮಾಡಿಸುವುದರಲ್ಲಿ ಸಮರ್ಥನಾಗಿದ್ದಾನೆ. ದೇವತೆಗಳಿಗೆ ಒಡೆಯನಾದ ಇಂದ್ರನ ಜೊತೆಗೆ ಅವನ ಒಡನಾಟವಿದೆ. ಇಷ್ಟಾಗಿ ಯಜ್ಞ ಮಾಡಿಸುವ ಕರ್ಮದಲ್ಲಿ ನಿರಂತರ ಆಸಕ್ತನಾಗಿದ್ದಾನೆ. ಆದ್ದರಿಂದ ಈ ನಿನ್ನ ಯಜ್ಞ ಕರ್ಮವನ್ನು ಅವನಿಂದಲೇ ಮಾಡಿಸು.
ಗಾರ್ಹಸ್ತ್ಯಂ ಚೈವ ಯಾಜ್ಯಾಶ್ಚ ಸರ್ವಾ ಗೃಹ್ಯಾಶ್ಚ ದೇವತಾಃ |
ಪೂರ್ವಜೇನ ಮಮಾಕ್ಷಿಪ್ತಂ ಶರೀರಂ ವರ್ಜಿತಂ ತ್ವಿದಮ್ ॥10॥
ನನ್ನ ಬಳಿ ಇರುವ ಗೃಹಕೃತ್ಯದ ಎಲ್ಲ ಪದಾರ್ಥಗಳು, ಯಜ್ಞದೀಕ್ಷಿತರು, ಗೃಹದೇವತೆಗಳು ಎಲ್ಲವೂ ನನ್ನ ಅಣ್ಣನಾದ ಬೃಹಸ್ಪತಿಯಿಂದ ಹಿಂದೆಯೇ ಅಪಹೃತವಾಗಿವೆ. ಈಗ ನನ್ನ ಬಳಿ ಈ ಶರೀರ ಒಂದೇ ಉಳಿದಿದೆ.
ನಾಹಂ ತೇನಾನನುಜ್ಞಾತಃ ತ್ವಾಮಾವಿಕ್ಷಿತ ಕರ್ಹಿಚಿತ್ |
ಯಾಜಯೇಯಂ ಕಥಂಚಿದ್ ವೈ ಸ ಮೇ ಪೂಜ್ಯತಮೋ ಗುರುಃ ॥11॥
ಅವೀಕ್ಷಿತನೇ, ನಾನು ಅಣ್ಣನ ಅನುಮತಿಯಿಲ್ಲದೆ ಯಾವುದೇ ಕಾರಣದಿಂದಲೂ ಎಂದೂ ಯಜ್ಞವನ್ನು ಮಾಡಿಸುವುದಿಲ್ಲ. ಏಕೆಂದರೆ ಅವನು ನನಗೆ ಪರಮಪೂಜ್ಯನಾದ ಜ್ಯೇಷ್ಠ ಸಹೋದರನಾಗಿದ್ದಾನೆ.
ಸ ತ್ವಂ ಬೃಹಸ್ಪತಿಂ ಗಚ್ಛ ತಮನುಜ್ಞಾಪ್ಯ ಮಾಂ ವ್ರಜ |
ತತೋಽಹಂ ಯಾಜಯಿಷ್ಯೇ ತ್ವಾಂ ಯದಿ ಯಷ್ಟುಮಿಹೇಚ್ಛಸಿ ॥12॥
ನೀನು ಯಜ್ಞ ಮಾಡುವ ಇಚ್ಛೆಯುಳ್ಳವನಾಗಿದ್ದರೆ ಈಗಲೇ ನನ್ನ ಅಣ್ಣನಾದ ಬೃಹಸ್ಪತಿಯ ಸಮೀಪಕ್ಕೆ ಹೋಗು. ಅವನ ಅನುಮತಿಯನ್ನು ಪಡೆದು ಬಾ. ನಂತರವೇ ಯಜ್ಞವನ್ನು ಮಾಡಿಸುತ್ತೇನೆ.
ಮರುತ್ತಃ
ಬೃಹಸ್ಪತಿಂ ಗತಃ ಪೂರ್ವಮಹಂ ಸಂವರ್ತ ತಚ್ಛೃಣು |
ನ ಮಾಂ ಕಾಮಯತೇ ಯಾಜ್ಯಂ ಮುನಿರ್ವಾಸವವಾರಿತಃ ॥13॥
ಮರುತ್ತನು ಹೇಳುತ್ತಾನೆ ಪೂಜ್ಯರೇ, ಈ ಮೊದಲು ನಾನು ಬೃಹಸ್ಪತಿಯ ಬಳಿಯೇ ಹೋಗಿದ್ದೆ. ಅಲ್ಲಿ ನಡೆದ ವೃತ್ತಾಂತವನ್ನು ತಿಳಿಸುವೆನು, ಕೇಳಿರಿ. ಇಂದ್ರನಿಗೆ ಯಾಜಕನಾಗಿರಬೇಕೆಂಬ ಇಚ್ಛೆಯಿಂದ ಬೃಹಸ್ಪತಿಯು ನನ್ನನ್ನು ಯಾಜ್ಯನನ್ನಾಗಿ ಸ್ವೀಕರಿಸಲು ಇಚ್ಛಿಸಲಿಲ್ಲ.
ಅಮರಂ ವಾಸವಂ ಯಾಜ್ಯಂ ಮಹರ್ಷೇ ಮಾ ಸ್ಮ ಮಾನುಷಮ್ |
ಯಾಜಯೇಥಾ ಮರುತ್ತಂ ತ್ವಂ ಮರ್ತ್ಯಧರ್ಮಾಣಮಿತ್ಯುತ ॥14॥
ದೇವತೆಗಳಿಗೆ ಯಾಜಕನಾದ ನಾನು ಮನುಷ್ಯರಿಗೆ ಯಜ್ಞವನ್ನು ಮಾಡಿಸುವುದಿಲ್ಲ. ಇಷ್ಟಾಗಿ ಮನುಷ್ಯರ ಯಜ್ಞವನ್ನು ಮಾಡಿಸಬಾರದೆಂದು ಇಂದ್ರನಿಂದ ತಡೆಯಲ್ಪಟ್ಟಿದ್ದೇನೆ ಎಂದು ಬೃಹಸ್ಪತಿಯು ನನಗೆ ಹೇಳಿದನು.
ಸ್ಪರ್ಧತೇ ಹಿ ಮಯಾ ವಿಪ್ರ ಸದಾ ಹಿ ಸ ಹಿ ವಾಸವಃ |
ಏವಮಸ್ತ್ವಿತಿ ಚಾಪ್ಯುಕ್ತೋ ಭ್ರಾತ್ರಾ ತೇ ಬಲವೃತ್ರಹಾ ॥15॥
ಇಂದ್ರನಾದರೂ ಬೃಹಸ್ಪತಿಗೆ ಮರುತ್ತನಿಗೆ ನೀನು ಯಜ್ಞವನ್ನು ಮಾಡಿಸಬಾರದು. ಮರುತ್ತ ರಾಜನು ಯಾವಾಗಲೂ ನನ್ನೊಡನೆ ಸ್ಪರ್ಧಿಸುತ್ತಲೇ ಇದ್ದಾನೆ ಎಂದು ಹೇಳಿದಾಗ ನಿನ್ನ ಅಣ್ಣನು ಆಗಲಿ ಎಂದು ಪ್ರತಿವಚನವನ್ನು ನೀಡಿದ್ದಾನೆ.
ಸ ಮಾಮಧಿಗತಂ ಪ್ರೇಮ್ಣಾ ಯಾಜ್ಯತ್ವೇ ನ ಬುಭೂಷತಿ |
ದೇವರಾಜಂ ಸಮಾಶ್ರಿತ್ಯ ತದ್ವಿದ್ಧಿ ಮುನಿಪುಂಗವ ॥16॥
ಪೂಜ್ಯರೇ, ನಾನು ಅತ್ಯಂತ ಅಭಿಮಾನದಿಂದಲೇ ಬೃಹಸ್ಪತಿಯ ಬಳಿಗೆ ಹೋಗಿ ಯಜ್ಞವನ್ನು ಮಾಡಿಸುವಂತೆ ನಿವೇದಿಸಿಕೊಂಡೆನು. ಆದರೆ ನನ್ನ ಪ್ರಾರ್ಥನೆಯನ್ನು ಆತ ತಿರಸ್ಕರಿಸಿದನು. ಇದು ಸತ್ಯಸಂಗತಿ ಎಂದು ತಿಳಿಯಿರಿ.
ಸೋಽಹಮಿಚ್ಛಾಮಿ ಭವತಾ ಸರ್ವಸ್ವೇನಾಪಿ ಯಾಜಿತುಮ್ |
ತಂ ಕಾಮಯೇಽತಿಕ್ರಮಿತುಂ ವಾಸವಂ ತ್ವತ್ಕೃತೈರ್ಗುಣೈಃ ॥17॥
ಆದ್ದರಿಂದ ನನ್ನ ಸರ್ವಸ್ವವನ್ನು ತ್ಯಾಗ ಮಾಡಿಯಾದರೂ ನಿಮ್ಮಿಂದಲೇ ಯಜ್ಞ ಮಾಡಿಸಬೇಕೆಂದು ಬಯಸಿದ್ದೇನೆ. ನಿಮ್ಮನ್ನು

ಯಾಜಕನನ್ನಾಗಿ ಪಡೆದು ನಾನು ಸಂಪಾದಿಸಿದ ಗುಣಗಳ ಪ್ರಭಾವದಿಂದ ಇಂದ್ರನನ್ನು ಮೀರಲು ಇಚ್ಛಿಸುತ್ತೇನೆ.
ನ ಹಿ ಮೇ ವರ್ತತೇ ಬುದ್ಧಿರ್ಗಂತುಂ ಬ್ರಹ್ಮನ್ ಬೃಹಸ್ಪತಿಮ್ |
ಪ್ರತ್ಯಾಖ್ಯಾತೋ ಹಿ ತೇನಾಸ್ಮಿ ತಥಾಽನಪಕೃತೇ ಸತಿ ||18||
ನಾನು ಯಾವ ಅಪರಾಧ ಮಾಡದಿದ್ದರೂ ನಿಮ್ಮಣ್ಣನಿಂದ ತಿರಸ್ಕೃತನಾದೆನು. ಆದ್ದರಿಂದ ಪುನಃ ಅವನ ಬಳಿ ಹೋಗಿ ಪ್ರಾರ್ಥಿಸಲು ನನ್ನ ಬುದ್ಧಿಯು ಒಪ್ಪುತ್ತಿಲ್ಲ.
ಸಂವರ್ತಃ
ಚಿಕೀರ್ಷಸಿ ಯಥಾಕಾಮಂ ಸರ್ವಮೇತದ್ ತ್ವಯಿ ಧ್ರುವಮ್ |
ಯದಿ ಸರ್ವಾನಭಿಪ್ರಾಯಾನ್ ಕರ್ತಾಸಿ ಮಮ ಪಾರ್ಥಿವ ||19||
ಸಂವರ್ತನು ಹೇಳುತ್ತಾನೆ ರಾಜನೇ, ನೀನು ನನ್ನ ಮನಸ್ಸಿಗನುಗುಣವಾಗಿ ವರ್ತಿಸಿದರೆ, ನಾನು ಹೇಳಿದ ಕಾರ್ಯಗಳನ್ನು ಮಾಡಿದರೆ, ನಿನ್ನ ಯಾವ ಅಪೇಕ್ಷೆ ಇದೆಯೋ ಅದು ಖಂಡಿತವಾಗಿಯೂ ಸಿದ್ಧಿಸುತ್ತದೆ. ಇದು ಸತ್ಯ.
ಯಾಜ್ಯಮಾನಂ ಮಯಾ ಹಿ ತ್ವಾಂ ಬೃಹಸ್ಪತಿಪುರಂದರೌ |
ದ್ವಿಷೇತಾಂ ಸಮಭಿಕ್ರುದ್ಧಾವೇತದೇಕಂ ಸಮರ್ಥಯೇಃ ||20||
ನಾನು ನಿಮ್ಮ ಮೂಲಕ ಯಜ್ಞವನ್ನು ಮಾಡಿಸಲು ಪ್ರಾರಂಭಿಸಿದ ಕೂಡಲೇ ಬೃಹಸ್ಪತಿ, ಪುರಂದರರು ನಿನ್ನ ವಿಷಯದಲ್ಲಿ ಸಿಟ್ಟಾಗಿ ದ್ವೇಷಿಸುತ್ತಾರೆ. ಆ ಸಮಯದಲ್ಲಿ ನೀನು ನನ್ನ ಪಕ್ಷವನ್ನು ಸಮರ್ಥಿಸಬೇಕು. ನನ್ನನ್ನು ತ್ಯಾಗ ಮಾಡಬಾರದು.
ಸ್ಥೈರ್ಯಮತ್ರ ಕಥಂ ಮೇ ಸ್ಯಾತ್ ಸ ತ್ವಂ ನಿಃಸಂಶಯಂ ಕುರು |
ಕುಪಿತಸ್ತ್ವಂ ನ ಹೀದಾನೀಂ ಭಸ್ಮ ಕುರ್ಯಾಂ ಸಬಾಂಧವಮ್ ||21||
ಬೃಹಸ್ಪತಿ, ಪುರಂದರರು ನನ್ನನ್ನು ದ್ವೇಷ ಮಾಡಿದರೂ ನನಗೆ ಸ್ಥೈರ್ಯ ಹುಟ್ಟುವ ರೀತಿಯಲ್ಲಿ, ಸಂದೇಹಕ್ಕೆ ಅವಕಾಶವಿಲ್ಲದಂತೆ ನೀನು ಕಾರ್ಯವನ್ನು ಮಾಡಬೇಕು. ಒಂದು ವೇಳೆ ಇದಕ್ಕೆ ವಿರುದ್ಧವಾಗಿ ವರ್ತಿಸಿದರೆ ಕ್ರುದ್ಧನಾದ ನಾನು ನಿನ್ನನ್ನು ಬಂಧು-ಬಾಂಧವರ ಸಹಿತವಾಗಿ ಈಗಲೇ ಭಸ್ಮ ಮಾಡಿಬಿಡುತ್ತೇನೆ.
ಮರುತ್ತಃ
ಯಾವತ್ ತಪೇತ್ ಸಹಸ್ರಾಂಶುಃ ತಿಷ್ಠೇರಂಶ್ಚಾಪಿ ಪರ್ವತಾಃ |
ತಾವಲ್ಲೋಕಾನ್ನ ಲಭೇಯಂ ತ್ಯಜೇಯಂ ಸಂಗತಂ ಯದಿ ||22||
ಮರುತ್ತ ಪೂಜ್ಯರೇ, ನಾನು ನಿಮ್ಮನ್ನು ಪರಿತ್ಯಜಿಸಿದರೆ ಈ ಜಗತ್ತಿನಲ್ಲಿ ಸೂರ್ಯನು ಬೆಳಗುತ್ತಿರುವವರೆಗೂ ಪರ್ವತಗಳೆಲ್ಲ ಸ್ಥಿರವಾಗಿರುವ ತನಕವೂ ನನಗೆ ಉತ್ತಮವಾದ ಲೋಕಗಳು ಲಭಿಸದಿರಲಿ.
ಮಾ ವಾಽಪಿ ಶುಭಬುದ್ಧಿತ್ವಂ ಲಭೇಯಮಿಹ ಕರ್ಹಿಚಿತ್ |
ಭೋಗೇಷು ಸಮ್ಯಗಜ್ಞಾನಂ ತ್ಯಜೇಯಂ ಸಂಗತಂ ಯದಿ ||23||
ನಾನೇನಾದರೂ ನಿಮ್ಮ ಸಹವಾಸವನ್ನು ಬಿಟ್ಟಲ್ಲಿ ಈ ಜಗತ್ತಿನಲ್ಲಿ ನನಗೆ ಯಾವಾಗಲೂ ಶುದ್ಧವಾದ ಬುದ್ಧಿ ಹುಟ್ಟದಿರಲಿ. ವಿಷಯದಲ್ಲಿ ಲಂಪಟನಾಗಿರುವಂತಾಗಲಿ.
ಸಂವರ್ತಃ
ಆವಿಕ್ಷಿತ ಶುಭಾ ಬುದ್ಧಿಃ ಧ್ರಿಯತಾಂ ಸರ್ವಕರ್ಮಸು |
ಯಾಜನಂ ಹಿ ಮಮಾಪ್ಯೇವಂ ವರ್ತತೇ ತ್ವಯಿ ಪಾರ್ಥಿವ ||24||
ಸಂವರ್ತನು ಹೇಳುತ್ತಾನೆ ಅವೀಕ್ಷಿತನೇ, ನೀನು ಮಾಡುವ ಕರ್ಮಗಳಲ್ಲಿ ನಿನಗೆ ಯಾವಾಗಲೂ ಶುಭವಾದ ಬುದ್ಧಿಯೇ ಇರಲಿ. ನನ್ನ ಮನಸ್ಸಿನಲ್ಲಿಯೂ ನಿನಗೆ ಯಜ್ಞ ಮಾಡಿಸಬೇಕೆಂಬ ಅಪೇಕ್ಷೆ ಉಂಟಾಗಿದೆ.
ಸಂವಿಧಾಸ್ಯೇ ಚ ತೇ ರಾಜನ್ನಕ್ಷಯಂ ದ್ರವ್ಯಮುತ್ತಮಮ್ |
ಯೇನ ದೇವಾನ್ ಸಗಂಧರ್ವಾನ್ ಶಕ್ರಂ ಚಾಭಿಭವಿಷ್ಯಸಿ ||25||
ಆದ್ದರಿಂದ ನಿನಗೆ ನಾನು ಅಕ್ಷಯವಾದ, ಶ್ರೇಷ್ಠವಾದ, ದ್ರವ್ಯವನ್ನು ಪಡೆಯುವ ಉಪಾಯವನ್ನು ಹೇಳುತ್ತೇನೆ. ಅಂತಹ ಶ್ರೇಷ್ಠವಾದ ದ್ರವ್ಯದಿಂದ ಗಂಧರ್ವರಿಂದ ಸಹಿತರಾದ ದೇವತೆಗಳನ್ನೂ ಮತ್ತು ಇಂದ್ರನನ್ನೂ ಮೀರಿ ನಿಲ್ಲುತ್ತೀಯೆ.
ನ ತು ಮೇ ವರ್ತತೇ ಬುದ್ಧಿರ್ಧನೇ ನಾನ್ಯೇಷು ವಾ ಪುನಃ |
ವಿಪ್ರಿಯಂ ತು ಚಿಕೀರ್ಷಾಮಿ ಭ್ರಾತುಶ್ಚೇಂದ್ರಸ್ಯ ವಾಭಿಭೋ ||26||
ನನಗೆ ಯಾಜ್ಯರನ್ನೂ, ಧನವನ್ನೂ ಸಂಗ್ರಹಿಸುವುದರಲ್ಲಿ ಆಸಕ್ತಿಯಿಲ್ಲ. ಆದರೆ ಈಗ ಮಾತ್ರ ನಿನ್ನನ್ನು ಯಾಜ್ಯನನ್ನಾಗಿ ಪರಿಗ್ರಹಿಸಿ, ಇಂದ್ರ-ಬೃಹಸ್ಪತಿಗಳಿಗೂ ಪ್ರಿಯವಲ್ಲದ ಕಾರ್ಯವನ್ನು ಮಾಡುತ್ತೇನೆ.
ಗಮಯಿಷ್ಯಾಮಿ ಚೇಂದ್ರೇಣ ಸಮತಾಮಪಿ ತೇ ಧ್ರುವಮ್ |
ಪ್ರಿಯಂ ಚ ತೇ ಕರಿಷ್ಯಾಮಿ ಸತ್ಯಮೇತದ್ ಬ್ರವೀಮಿ ತೇ ||27||
ನಿಶ್ಚಯವಾಗಿಯೂ ನಾನು ನಿನ್ನನ್ನು ಇಂದ್ರನಿಗೆ ಸದೃಶನನ್ನಾಗಿ ಮಾಡುತ್ತೇನೆ. ನಿನಗೆ ಪ್ರಿಯವಾದುದನ್ನೂ ಮಾಡುತ್ತೇನೆ. ಈ ಸತ್ಯವಚನವನ್ನು ನಿನಗೆ ಹೇಳುತ್ತಿದ್ದೇನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಸಂವರ್ತಪ್ರತಿಜ್ಞಾ ನಾಮ ಸಪ್ತಮೋಽಧ್ಯಾಯಃ ||
|| ಅಶ್ವಮೇಧಪರ್ವಣಿ ಸಪ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *

ಎಂಟನೆಯ ಅಧ್ಯಾಯ
ಸಂವರ್ತನಿಂದ ಹಿರಣ್ಯಪ್ರಾಪ್ತಿಗಾಗಿ ಮರುತ್ತನಿಗೆ ಮಹಾದೇವನ ಸ್ತೋತ್ರೋಪದೇಶ. ಮರುತ್ತನಿಂದ ಧನದ ಪ್ರಾಪ್ತಿ.
ಮರುತ್ತನ ಐಶ್ವರ್ಯವನ್ನು ಕಂಡು ಬೃಹಸ್ಪತಿಯ ಚಿಂತೆ.
ಸಂವರ್ತಃ
ಮೇರೌ ಹಿಮವತಃ ಪೃಷ್ಠೇ ಮುಂಜವಾನ್ ನಾಮ ಪರ್ವತಃ |
ತಪ್ಯತೇ ತತ್ರ ಭಗವಾನ್ ತಪೋ ನಿತ್ಯಮುಮಾಪತಿಃ ॥1॥
ಸಂವರ್ತನು ಹೇಳುತ್ತಾನೆ ಮರುತ್ತನೇ, ಹಿಮವದ್ ಪರ್ವತದ ಹಿಂಭಾಗದಲ್ಲಿ ಮೇರು ಶಿಖರದಲ್ಲಿ ಮುಂಜವಂತ ಎಂಬ ಹೆಸರಿನ ಪರ್ವತವಿದೆ. ಆ ಪರ್ವತದಲ್ಲಿ ಪೂಜ್ಯನಾದ ಉಮಾಪತಿಯು ನಿತ್ಯವೂ ತಪೋನಿರತನಾಗಿದ್ದಾನೆ.
ವನಸ್ಪತೀನಾಂ ಮೂಲೇಷು ಶೃಂಗೇಷು ಶಿಖರೇಷು ಚ |
ಗುಹಾಸು ಶೈಲರಾಜಸ್ಯ ಯಥಾಕಾಮಂ ಯಥಾಸುಖಮ್ ॥2॥
ಉಮಾಸಹಾಯೋ ಭಗವಾನ್ ಯತ್ರ ನಿತ್ಯಂ ಮಹೇಶ್ವರಃ |
ಆಸ್ತೇ ಶೂಲೀ ಮಹಾತೇಜಾ ನಾನಾಭೂತಸಮಾವೃತಃ ॥3॥
ಆ ಪರ್ವತಶ್ರೇಣಿಗಳಲ್ಲಿ ಅನೇಕ ವೃಕ್ಷಗಳಿವೆ. ಅವುಗಳ ಬುಡದಲ್ಲಿ ಹಳ್ಳ-ತಿಟ್ಟುಗಳಿಂದ ಕೂಡಿದ ಶಿಖರಗಳಲ್ಲಿ ಶೈಲರಾಜನಾದ ಹಿಮವಂತನ ಗುಹೆಗಳಲ್ಲಿ ಮಹಾತೇಜಸ್ವಿಯಾದ, ಶೂಲಪಾಣಿಯಾದ, ನಾನಾವಿಧವಾದ ಭೂತಗಳಿಂದ ಕೂಡಿರುವ ಮಹೇಶ್ವರನು ತನ್ನ ಮನದನ್ನೆಯಾದ ಉಮೆಯೊಡನೆ ಯಥೇಚ್ಛವಾಗಿ ಸುಖದಿಂದ ವಿಹರಿಸುತ್ತಾ ಇದ್ದಾನೆ.
ತತ್ರ ರುದ್ರಾಶ್ಚ ಸಾಧ್ಯಾಶ್ಚ ವಿಶ್ವೇ ಚ ವಸವಸ್ತಥಾ |
ಯಮಶ್ಚ ವರುಣಶ್ಚೈವ ಕುಬೇರಶ್ಚ ಸಹಾನುಗಃ ॥4॥
ಭೂತಾನಿ ಚ ಪಿಶಾಚಾಶ್ಚ ನಾಸತ್ಯಾವಪಿ ಚಾಶ್ವಿನೌ |
ಗಂಧರ್ವಾಪ್ಸರಸಶ್ಚೈವ ಯಕ್ಷಾ ದೇವರ್ಷಯಸ್ತಥಾ ॥5॥
ಆದಿತ್ಯಾ ಮರುತಶ್ಚೈವ ಯಾತುಧಾನಾಶ್ಚ ಸರ್ವಶಃ |
ಉಪಾಸತೇ ಮಹಾತ್ಮಾನಂ ಬಹುರೂಪಮುಮಾಪತಿಮ್ ॥6॥
ರಮತೇ ಭಗವಾಂಸ್ತತ್ರ ಕುಬೇರಾನುಚರೈಃ ಸಹ |
ವಿಕೃತೈರ್ವಿಕೃತಾಕಾರೈಃ ಕ್ರೀಡದ್ಭಿಃ ಪೃಥಿವೀಪತೇ ॥7॥
ಆ ಸ್ಥಳದಲ್ಲಿ ಏಕಾದಶರುದ್ರರು, ಸಾಧ್ಯರು, ವಿಶ್ವೇದೇವತೆಗಳು, ವಸುಗಳು, ಯಮ, ವರುಣ, ಕುಬೇರ, ಅವನ ಪರಿವಾರದವರು, ಭೂತಗಣಗಳು, ಪಿಶಾಚಗಳು, ನಾಸತ್ಯರೆನಿಸಿದ ಅಶ್ವಿನೀದೇವತೆಗಳು, ಗಂಧರ್ವರು, ಅಪ್ಸರಾಸ್ತ್ರೀಯರು, ದೇವರ್ಷಿಗಳು, ದ್ವಾದಶಾದಿತ್ಯರು, ಮರುದ್ಗಣ, ಯಾತುಧಾನರು - ಇವರೆಲ್ಲರೂ ಮಹಾತ್ಮನಾದ, ಉಮಾಪತಿಯಾದ ಪರಮೇಶ್ವರನನ್ನು ಉಪಾಸನೆ ಮಾಡುತ್ತಿದ್ದಾರೆ. ಪೂಜ್ಯನಾದ ಮಹಾರುದ್ರನು ನಾನಾ ವಿಧವಾದ ಭಯಂಕರವಾದ ಆಕಾರಗಳನ್ನು ಹೊಂದಿರುವ ಕುಬೇರನ ಅನುಚರರೊಂದಿಗೆ ಕ್ರೀಡಾವಿನೋದಗಳಲ್ಲಿ ತೊಡಗಿ ಆನಂದದಿಂದ ಇರುತ್ತಾನೆ.
ಶ್ರಿಯಾ ಜ್ವಲನ್ ದೃಶ್ಯತೇ ವೈ ಬಾಲಾದಿತ್ಯಸಮದ್ಯುತಿಃ ॥8॥
ಆ ಮಹರುದ್ರನು ಕಾಂತಿಯಿಂದ ಉದಿಸುವ ಸೂರ್ಯನ ಸದೃಶನಾಗಿ ಬೆಳಗುತ್ತಿದ್ದಾನೆ.
ನ ರೂಪಂ ದೃಶ್ಯತೇ ತಸ್ಯ ಸಂಸ್ಥಾನಂ ವಾ ಕಥಂಚನ |
ನಿರ್ದೇಷ್ಟುಂ ಪ್ರಾಣಿಭಿಃ ಕೈಶ್ಚಿತ್ ಪ್ರಾಕೃತೈರ್ಮಾಂಸಲೋಚನೈಃ ॥9॥
ಅವನ ತೇಜಸ್ಸನ್ನು ಸಾಮಾನ್ಯರಿಂದ ನೋಡಲಾಗುವುದಿಲ್ಲ. ಅವನ ಮನೆಗಳನ್ನೂ ನೋಡಲಾಗುವುದಿಲ್ಲ. ಮಾಂಸಮಯವಾದ ಕಣ್ಣುಗಳಿಂದ ಕೂಡಿದ ಪ್ರಾಣಿಗಳಿಗೆ ಪರಶಿವನ ರೂಪ, ಆಕಾರಗಳನ್ನು ಕಾಣಲಾಗದು.
ನೋಷ್ಣಂ ನ ಶಿಶಿರಂ ತತ್ರ ನ ವಾಯುರ್ನ ಚ ಭಾಸ್ಕರಃ |
ನ ಜರಾ ಕ್ಷುತ್ಪಿಪಾಸೇ ವಾ ನ ಮೃತ್ಯುರ್ನ ಭಯಂ ನೃಪ ॥10॥
ಮಹಾರಾಜನೇ, ಆ ಮಹಾರುದ್ರನಿರುವ ಸ್ಥಳದಲ್ಲಿ ಅತಿಯಾದ ಬಿಸಿಲೂ ಇಲ್ಲ, ಅತಿಯಾದ ತಂಪೂ ಇರುವುದಿಲ್ಲ. ವಾಯುವಿನ ಪ್ರಕೋಪವಿಲ್ಲ, ಸೂರ್ಯನ ತೀಕ್ಷ್ಣತೆಯಿಲ್ಲ. ಮುಪ್ಪು, ಹಸಿವು, ನೀರಡಿಕೆಗಳು, ಮೃತ್ಯು, ಭಯಗಳು ಅಲ್ಲಿ ಇರುವುದಿಲ್ಲ.
ತಸ್ಯ ಶೈಲಸ್ಯ ಪಾರ್ಶ್ವೇಷು ಸರ್ವೇಷು ಜಯತಾಂ ವರ |
ಧಾತವೋ ಜಾತರೂಪಸ್ಯ ರಶ್ಮಯಃ ಸವಿತುರ್ಯಥಾ ॥11॥
ವಿಜಯಿಗಳಲ್ಲಿ ಶ್ರೇಷ್ಠನಾದವನೇ, ಆ ಪರ್ವತದ ನಾಲ್ಕು ಕಡೆಗಳಲ್ಲಿಯೂ ಸೂರ್ಯನ ಕಿರಣಗಳಿಗೆ ಸಮಾನವಾಗಿ ಹೊಳೆಯುವ ಸುವರ್ಣದ ಗಣಿಗಳಿವೆ.
ರಕ್ಷ್ಯಂತೇ ತೇ ಕುಬೇರಸ್ಯ ಸಹಾಯೈರುದ್ಯತಾಯುಧೈಃ |
ಚಿಕೀರ್ಷದ್ಭಿಃ ಪ್ರಿಯಂ ರಾಜನ್ ಕುಬೇರಸ್ಯ ಮಹಾತ್ಮನಃ ॥12॥
ಆ ಗಣಿಗಳು ಮಹಾತ್ಮನಾದ ಕುಬೇರನಿಗೆ ಪ್ರಿಯವನ್ನುಂಟು ಮಾಡಲು ಬಯಸುವ, ಆಯುಧಗಳನ್ನು ಎತ್ತಿ ಹಿಡಿರುವ ಕುಬೇರನ ಸೇವಕರಿಂದ ರಕ್ಷಿಸಲ್ಪಟ್ಟಿವೆ.
ತತ್ರ ಗತ್ವಾ ತ್ವಮನ್ವಾಸ್ಯ ಮಹಾಯೋಗೇಶ್ವರಂ ಶಿವಮ್ |
ಕುರು ಪ್ರಣಾಮಂ ರಾಜರ್ಷೇ ಭಕ್ತ್ಯಾ ಪರಮಯಾ ಯುತಃ ॥13॥
ನೀನು ಅಲ್ಲಿಗೆ ತೆರಳಿ ಮಹಾಯೋಗೇಶ್ವರನಾದ ಶಿವನನ್ನು ಪರಮಭಕ್ತಿಯಿಂದ ನಮಸ್ಕರಿಸು.
ತಸ್ಮೈ ಭಗವತೇ ಕೃತ್ವಾ ನಮಃ ಶರ್ವಾಯ ವೇಧಸೇ |

ಏಭಿಸ್ತಂ ನಾಮಭಿರ್ದೇವಂ ಸರ್ವವಿದ್ಯಾಧರಂ ಸ್ತುಹಿ ॥14॥
ಪೂಜ್ಯನಾದ ಮಹಾರುದ್ರನನ್ನು ನಮಸ್ಕರಿಸಿ ಪೂಜ್ಯನಾದ ಶರ್ವನೆನಿಸಿದ, ಸರ್ವವಿದ್ಯಾಧರನಾದ ಆ ಮಹಾರುದ್ರನನ್ನು ಈ ನಾಮಗಳಿಂದ ಸ್ತುತಿಸು.
ರುದ್ರಾಯ ಶಿತಿಕಂಠಾಯ ಸುರೂಪಾಯ ಸುವರ್ಚಸೇ |
ಕಪರ್ದಿನೇ ಕರಾಲಾಯ ಹರ್ಯಕ್ಷವರದಾಯ ಚ ॥15॥
ರುದ್ರನೆನಿಸಿದ, ಸಂಸಾರಿಗಳ ದುಃಖಮಿಶ್ರವಾದ ಸುಖವನ್ನು ಪರಿಹರಿಸುವ, ಜ್ಞಾನವನ್ನು ನೀಡುವುದರಿಂದ ಶಿತಿಕಂಠನೆನಿಸಿದ, ಸ್ಫುರದ್ರೂಪಿಯಾದ, ವರ್ಚಸ್ವಿಯಾದ, ಜಟಾಜೂಟಗಳಿಂದ ಕೂಡಿದ, ಕರಾಲನೆನಿಸಿದ, ವಿಷ್ಣುವಿನಲ್ಲಿಯೇ ದೃಷ್ಟಿಯುಳ್ಳ, ಸಜ್ಜನರಿಗೆ ವರಪ್ರದನಾದ ಮಹಾರುದ್ರನೇ ನಿನಗೆ ನಮಸ್ಕಾರ.
ತ್ರ್ಯಕ್ಷ್ಣೇ ೕಣೀ ಪೂಷ್ಣೋ ದಂತಭಿದೇ ವಾಮನಾಯ ಶಿವಾಯ ಚ |
ಯಾಮ್ಯಾಯಾವ್ಯಕ್ತಕೇಶಾಯ ಶರ್ವಾಣೀಶಂಕರಸ್ಯ ಚ ॥16॥
ಮೂರುಕಣ್ಣುಗಳನ್ನು ಹೊಂದಿರುವ, ಪೂಷನ ಹಲ್ಲುಗಳನ್ನು ಮುರಿದಿರುವ, ಸುಂದರನಾದ ಶಿವನೇ, ಭಗವಂತನಿಂದ ನಿಯಮನಕ್ಕೆ ಒಳಪಟ್ಟವನೇ, ಅವ್ಯಕ್ತಕೇಶನೇ, ಶರ್ವಾಣಿ ಶಂಕರನೇ ನಿನಗೆ ನಮಸ್ಕಾರ.
ಕ್ಷೇಮ್ಯಾಯ ಹರಿನೇತ್ರಾಯ ಸ್ಥಾಣವೇ ಪುರುಷಾಯ ಚ |
ಹರಿಕೇಶಾಯ ಮುಂಡಾಯ ಕ್ರೋಧಾಯೋತ್ತರಣಾಯ ಚ ॥17॥
ಲೋಕಕ್ಷೇಮಕರನೇ, ಹರಿದ್ವರ್ಣದ ಕಣ್ಣುಳ್ಳವನೇ, ಹರಿಯನ್ನೇ ನೋಡುವ ಕಣ್ಣುಳ್ಳವನೇ, ಸ್ಥಾಣು ಎಂದು ಪ್ರಸಿದ್ಧನಾದವನೇ, ಪುರುಷಶ್ರೇಷ್ಠನೇ, ಹೊಂಬಣ್ಣದ ತಲೆಕೂದಲನ್ನು ಉಳ್ಳವನೇ, ಸಂನ್ಯಾಸಿ ಸ್ವರೂಪಿ ಎನಿಸಿದವನೇ (ಶುಕರೂಪದಿಂದ), ಕೋಪಗೊಳ್ಳುವವನಾದ ಸಂಸಾರದಿಂದ ಭಕ್ತರನ್ನು ಉದ್ಧರಿಸುವವನೂ ಆದ ಮಹಾರುದ್ರನೇ ನಿನಗೆ ನಮಸ್ಕಾರ.
ಭಾಸ್ವರಾಯ ಸುತೀರ್ಥಾಯ ದೇವದೇವಾಯ ರಂಹಸೇ |
ಉಷ್ಣೀಷಿಣೇ ಸುವಕ್ತ್ರಾಯ ಸಹಸ್ರಾಕ್ಷಾಯ ಮೀಢುಷೇ ॥18॥
ಪ್ರಭಾಸಂಪನ್ನನಾದವನೇ, ಪವಿತ್ರ ತೀರ್ಥಸ್ವರೂಪಿ ಎನಿಸಿದವನೇ, ದೇವದೇವನೇ, ವೇದವಂತನಾದವನೇ, ಕಿರೀಟವನ್ನು ಧರಿಸಿದವನೇ ಅಥವಾ ರಾಕ್ಷಸರನ್ನೂ ನಿಯಮನ ಮಾಡಲು ಸಮರ್ಥನಾದವನೇ, ಸುಂದರವಾದ ಮುಖವುಳ್ಳವನೇ, ಸಹಸ್ರಾಕ್ಷನೇ ನಿನಗೆ ನಮಸ್ಕಾರ.
ಗಿರಿಶಾಯ ಪ್ರಶಾಂತಾಯ ಯತಯೇ ಚೀರವಾಸಸೇ |
ಬಿಲ್ವದಂಡಾಯ ಸಿದ್ಧಾಯ ಸರ್ವದಂಡಧರಾಯ ಚ ॥19॥
ಗಿರೀಶನಾದ, ಪ್ರಶಾಂತಸ್ವರೂಪಿಯಾದ, ಜಿತೇಂದ್ರಿಯನಾದ, ನಾರುಮಡಿಯನ್ನು ಧರಿಸಿದ, ಬಿಲ್ವದಂಡಧಾರಿಯಾದ, ಸಿದ್ಧಪುರುಷನಾದ, ಸಮಸ್ತವಿಧವಾದ ದಂಡಗಳನ್ನು ಧರಿಸಿರುವ (ಅಪರಾಧಕ್ಕೆ ತಕ್ಕಂತೆ ಎಲ್ಲ ವಿಧವಾದ ದಂಡನೆಯನ್ನು ನೀಡುವವನಾದ)
ಮೃಗವ್ಯಾಧಾಯ ಮಹತೇ ಧನ್ವಿನೇ ಚ ಭವಾಯ ಚ |
ಪರಾಯ ಸೌಮ್ಯವಕ್ತ್ರಾಯ ಸ್ರುವಹಸ್ತಾಯ ವರ್ಷಿಣೇ ॥20॥
ಆರ್ದ್ರಾನಕ್ಷತ್ರ ಸ್ವರೂಪನಾದ, ಮಹಾತ್ಮನಾದ, ಪಿನಾಕ ಧನುಸ್ಸನ್ನು ಧರಿಸಿರುವ, ಭವ ಎನಿಸಿರುವ, ಉತ್ತಮನಾದ, ಸೌಮ್ಯ ಮುಖದ ಕಾಂತಿಯಿಂದ ಕೂಡಿದ, ಸ್ರುವ ಎನ್ನುವ ಯಜ್ಞ ಪದಾರ್ಥವನ್ನು ಧರಿಸಿರುವ, ಭಕ್ತರಿಗೆ ಇಷ್ಟಾರ್ಥವನ್ನು ಸುರಿಸುವ,
ಹಿರಣ್ಯಬಾಹವೇ ರಾಜನ್ ಉಗ್ರಾಯ ಪತಯೇ ದಿಶಾಮ್ |
ಪಶೂನಾಂ ಪತಯೇ ಚೈವ ಭೂತಾನಾಂ ಪತಯೇ ನಮಃ ॥21॥
ಬಂಗಾರ ಬಣ್ಣದ ತೋಳುಗಳಿಂದ ಕೂಡಿದ, ಉಗ್ರನಾದ, ಹತ್ತುದಿಕ್ಕುಗಳಿಗೂ ಒಡೆಯನಾದ, ಪಶುಪತಿ ಎನಿಸಿದ, ಭೂತಪತಿ ಎನಿಸಿದ ನಿನಗೆ ನಮಸ್ಕಾರ.
ವೃಷಾಯ ಮಾತೃಭಕ್ತಾಯ ಸೇನಾನ್ಯೈ ಮಧ್ಯಮಾಯ ಚ ॥22॥
ಶ್ರೇಷ್ಠನೆನಿಸಿದ, ಮಾತೃಭಕ್ತನೂ ಆದ ಷಣ್ಮುಖನಿಗೆ ಉತ್ತಮನೆನಿಸಿರುವ (ನಿನಗೆ ನಮಸ್ಕಾರ.)
ಅಭಿವಕ್ತ್ರಾಯ ಪತಯೇ ಸರ್ವದೇವಮಯಾಯ ಚ |
ಅಜಾಯ ಕೃಷ್ಣನೇತ್ರಾಯ ವಿರೂಪಾಕ್ಷಾಯ ಚೈವ ಹ ॥23॥
ಉತ್ತಮವಾದ ಮುಖದಿಂದ ಕೂಡಿರುವ, ವೇದಗಳ ಪಠಣವನ್ನು ಮಾಡುವ ಮುಖದಿಂದ ಕೂಡಿರುವ, ಸರ್ವದೇವಮಯನಾದ, ಅಜನೆನಿಸಿದ, ಕಪ್ಪಾದ ಕಣ್ಣುಗಳಿಂದ ಕೂಡಿದ ನಿನಗೆ ನಮಸ್ಕಾರ.
ತೀಕ್ಷ್ಣ ೕಣದಂಷ್ಟ್ರಾಯ ತೀಕ್ಷ್ಣಾಯ ವೈಶ್ವಾನರಮುಖಾಯ ಚ |
ಮಹಾದ್ಯುತೇರನಂಗಸ್ಯ ಸರ್ವಕಾಯಪ್ರಮಾಥಿನೇ ॥24॥
ತೀಕ್ಷ್ಣನೂ, ತೀಕ್ಷ್ಣವಾದ ಕೋರೆಯುಳ್ಳವನೂ, ತೀಕ್ಷ್ಣವಾದ ವೈಶ್ವಾನರ ಎಂಬ ಮುಖವುಳ್ಳವನು, ಮಹಾಕಾಂತಿಯಿಂದ ಕೂಡಿದವನೂ, ಮನ್ಮಥನ ದೇಹವನ್ನು ಭಸ್ಮ ಮಾಡಿದವನೂ ಆದ ನಿನಗೆ ನಮಸ್ಕಾರ.
ತಥಾ ರುದ್ರಾಧಿಪತಯೇ ಪೃಥವೇ ಕೃತ್ತಿವಾಸಸೇ |
ಕಪಾಲಮಾಲಿನೇ ನಿತ್ಯಂ ಸುವರ್ಣಮಕುಟಾಯ ಚ ॥25॥
ರುದ್ರಗಣಗಳಿಗೆ ಅಧಿಪತಿಯಾದ, ಶ್ರೇಷ್ಠನಾದ, ಗಜಚರ್ಮಾಂಬರಧಾರಿಯಾದ, ಕಪಾಲವನ್ನು ಧರಿಸಿರುವ, ನಿತ್ಯವೂ ಬಂಗಾರದ ಕಿರೀಟವನ್ನು ಧರಿಸಿರುವ ನಿನಗೆ ನಮಸ್ಕಾರ.
ಮಹಾದೇವಾಯ ಕೃಷ್ಣಾಯ ತ್ರ್ಯಂಬಕಾಯಾನಘಾಯ ಚ ॥26॥
ಮಹಾದೇವನೆನಿಸಿದ, ಕೃಷ್ಣ ಎಂಬ ಕಾಲನಿಯಾಮಕವಾದ ಪ್ರಳಯ ರೂಪವನ್ನೂ ದಹಿಸಿರುವತ್ರ್ಯಂಬಕನಾದ, ಅನಘನಾದ ನಿನಗೆ

ನಮಸ್ಕಾರ.
ಕ್ರೋಧನಾಯಾನೃಶಂಸಾಯ ಮೃತ್ಯವೇ ಬಾಹುಶಾಲಿನೇ |
ದಂಡಿನೇ ದೃಪ್ತತಪಸೇ ತಥೈವಾಕ್ರೂರಕರ್ಮಣೇ ॥27॥
ಕ್ರೋಧರೂಪಿಯಾದ, ಶುಭ್ರಚರಿತ್ರೆಯನ್ನು ಹೊಂದಿರುವ, ಮೃತ್ಯು ಎನಿಸಿರುವ ಬಾಹುಶಾಲಿಯಾದ, ದಂಡಧಾರಿಯಾದ, ಭಯಂಕರವಾದ ತಪಸ್ಸಿನಿಂದ ಕೂಡಿರುವ, ಯೋಗ್ಯವಾದ ಕರ್ಮಗಳಲ್ಲಿ ನಿರತನಾಗಿರುವ ಮಹಾರುದ್ರನೇ ನಿನಗೆ ನಮಸ್ಕಾರ.
ಸಹಸ್ರಶಿರಸೇ ಚೈವ ಸಹಸ್ರಚರಣಾಯ ಚ |
ವಿರೂಪಾಯ ಸುರೂಪಾಯ ಬಹುರೂಪಾಯ ದಂಷ್ಟ್ರಿಣೇ ॥28॥
ಸಾವಿರಾರು ಶಿರಸ್ಸುಳ್ಳ, ಸಹಸ್ರಾರು ಪಾದಗಳುಳ್ಳ, ವಿರೂಪಾಕ್ಷನೆನಿಸಿದ ಸ್ವರೂಪನೇ, ಬಹುರೂಪನೇ, ದಂಷ್ಟ್ರಿಯೇ ನಿನಗೆ ನಮಸ್ಕಾರ.
ಪಿನಾಕಿನಂ ಮಹಾದೇವಂ ಮಹಾಭೋಗಿನಮವ್ಯಯಮ್ |
ತ್ರಿಶೂಲಪಾಣಿಂ ವರದಂ ತ್ರ್ಯಂಬಕಂ ಭುವನೇಶ್ವರಮ್ ॥29॥
ಪಿನಾಕ ಧನುಸ್ಸನ್ನು ಧರಿಸಿರುವ, ಮಹಾದೇವನಾದ, ಮಹಾಭೋಗಿ ಎನಿಸಿದ, ಅವ್ಯಯನಾದ, ತ್ರಿಶೂಲಪಾಣಿಯಾದ, ವರದನಾದ, ತ್ರ್ಯಂಬಕನಾದ, ಭುವನೇಶ್ವರನಾದ ಮಹಾರುದ್ರನೇ ನಿನಗೆ ನಮಸ್ಕಾರ.
ತ್ರಿಪುರಘ್ನಂ ತ್ರಿನಯನಂ ತ್ರಿಲೋಕೇಶಂ ಮಹೌಜಸಮ್ |
ಪ್ರಭವಂ ಸರ್ವಭೂತಾನಾಂ ಧಾತಾರಂ ಧರಣೀಧರಮ್ ॥30॥
ತ್ರಿಪುರಾಸುರನನ್ನು ಸಂಹರಿಸಿದ, ಮೂರುಕಣ್ಣುಗಳನ್ನು ಹೊಂದಿರುವ, ಮೂರುಲೋಕಗಳಿಗೆ ಒಡೆಯನಾದ, ಶ್ರೇಷ್ಠವಾದ ಓಜಸ್ಸಿನಿಂದ ತುಂಬಿರುವ, ಎಲ್ಲ ಜೀವರ ಉತ್ಪತ್ತಿಗೆ ಅಂಶತಃ ಕಾರಣನಾದ, ಧರಣೀಧರನಾದ, ತಂದೆ ಎನಿಸಿದ ಮಹಾರುದ್ರನೇ ನಿನಗೆ ನಮಸ್ಕಾರ.
ಈಶಾನಂ ಶಂಕರಂ ಸರ್ವಂ ಶಿವಂ ವಿಶ್ವೇಶ್ವರಂ ಭವಮ್ |
ಉಮಾಪತಿಂ ಪಶುಪತಿಂ ವಿಶ್ವರೂಪಂ ಮಹೇಶ್ವರಮ್ ॥31॥
ಎಲ್ಲರನ್ನೂ ನಿಯಮನ ಮಾಡುವ ಸಾಮರ್ಥ್ಯವುಳ್ಳ, ಶಂಕರನೆನಿಸಿದ, ಪ್ರಳಯಕಾರಕನಾಗಿ ಶರ್ವನೆನಿಸಿದ, ಮಂಗಳಕಾರಕನಾಗಿ ಶಿವನೆನಿಸಿದ, ವಿಶ್ವೇಶ್ವರನೆನಿಸಿದ ಭವನೇ, ಉಮಾಪತಿಯೇ, ಪಶುಪತಿಯೇ, ಮಹೇಶ್ವರನೇ ನಿನಗೆ ನಮಸ್ಕಾರ.
ವಿರೂಪಾಕ್ಷಂ ದಶಭುಜಂ ತಿಷ್ಯಂದಂ ಗೋವೃಷಧ್ವಜಮ್ |
ಉಗ್ರಂ ಸ್ಥಾಣುಂ ಶಿವಂ ಘೋರಂ ಶರ್ವಂ ಗೌರೀಶಮೀಶ್ವರಮ್ ॥32॥
ವಿರೂಪಾಕ್ಷನೇ, ದಶಭುಜನೇ, ಧ್ವಜದಲ್ಲಿ ದಿವ್ಯವಾದ ವೃಷಭನ ಚಿಹ್ನೆಯನ್ನು ಹೊಂದಿರುವವನೇ, ಉಗ್ರನಾದ, ಸ್ಥಿರನಾದ, ಎಲ್ಲ ಪ್ರಾಣಿಗಳನ್ನೂ ಪ್ರಳಯಕಾಲದಲ್ಲಿ ಸಂಹರಿಸುವವನೇ, ಗೌರೀಪತಿಯಾದ ಈಶ್ವರನೇ ನಿನಗೆ ನಮಸ್ಕಾರ.
ಶಿತಿಕಂಠಮಜಂ ಶುಭ್ರಂ ಪೃಥುಂ ಪೃಥುಹರಂ ಶಿವಮ್ |
ವಿಶ್ವರೂಪಂ ವಿರೂಪಾಕ್ಷಂ ಬಹುರೂಪಮುಮಾಪತಿಮ್ ॥33॥
ಕೃಷ್ಣಕಂಠನಾದ, ಹುಟ್ಟಿಲ್ಲದ, ಶುಭ್ರಸ್ವರೂಪನಾದ, ಪೂರ್ಣತೆಯಿಂದ ತುಂಬಿರುವ ಶಿವನೇ, ಪೂರ್ಣನೇ (ಪೃಥು ಎಂಬ ರಾಕ್ಷಸನನ್ನು ಸಂಹರಿಸಿದವನೇ), ವಿಶ್ವರೂಪನೇ, ವಿರೂಪಾಕ್ಷನೇ, ಬಹುರೂಪಿಯೇ, ಉಮಾಪತಿಯೇ ನಿನಗೆ ನಮಸ್ಕಾರ.
ಪ್ರಣಮ್ಯ ಶಿರಸಾ ದೇವಮನಂಗಾಂಗಹರಂ ಹರಮ್ |
ಶರಣ್ಯಂ ಶರಣಂ ಯಾಮಿ ಮಹಾದೇವಂ ಚತುರ್ಮುಖಮ್ ॥34॥
ಅನಂಗನ (ಕಾಮನ) ಅಂಗಗಳನ್ನು ಸಂಹರಿಸಿದ, ಶರಣಾರ್ಥಿಗಳಿಗೆ ಶರಣನೆನಿಸಿದ, ಚತುರ್ಮುಖ ಮಹಾದೇವನನ್ನು ಶರಣು ಹೊಂದುತ್ತೇನೆ.
ವಿರೋಚಮಾನಂ ವಪುಷಾ ದಿವ್ಯಾಭರಣಭೂಷಿತಮ್ |
ಅನಾದ್ಯಂತಮಜಂ ಶಂಭುಂ ಸರ್ವವ್ಯಾಪಿನಮೀಶ್ವರಮ್ ॥35॥
ದೇಹದ ಕಾಂತಿಯಿಂದ ಹೊಳೆಯುವ, ದಿವ್ಯಾಭರಣ ಭೂಷಿತನಾದ, ಆದ್ಯಂತ ರಹಿತನಾದ, ಸರ್ವವ್ಯಾಪಿಯಾದ, ಈಶ್ವರನಾದ ಶಂಭುವನ್ನು ನಮಸ್ಕರಿಸುತ್ತೇನೆ.
ವ್ಯಾಖ್ಯಾನ ವಿಶೇಷ ಈ ಎಲ್ಲ ಶ್ಲೋಕಗಳು ಪರಮಮುಖ್ಯವೃತ್ತಿಯಿಂದ ಭಗವದ್ವಾಚಕಗಳೇ ಆಗಿವೆ. ಅಮುಖ್ಯವೃತ್ತಿಯಿಂದ ರುದ್ರನನ್ನು ಕೊಂಡಾಡುತ್ತಿವೆ ಎಂದು ತಿಳಿಯಬೇಕು. ಸತ್ಯಧರ್ಮತೀರ್ಥರು ರುದ್ರಪ್ರಶ್ನೆಗೆ ವ್ಯಾಖ್ಯಾನಿಸುತ್ತಾ, ಎಲ್ಲ ಶಬ್ದಗಳು ಭಗವತ್ಪರ ಎಂದು ತಿಳಿಸಿಕೊಟ್ಟಿರುತ್ತಾರೆ. ವೇದೋಕ್ತನಾಮಗಳೇ ಇಲ್ಲಿ ಬಹುತೇಕ ಹೇಳಲ್ಪಟ್ಟಿವೆ. ಆದ್ದರಿಂದ ಅನೇಕ ವಿಶೇಷಣಗಳು ಮುಖ್ಯವಾಗಿ ಭಗವಂತನಿಗೆ ಅನ್ವಯ ಹೊಂದುತ್ತವೆಂದು ತಿಳಿಯಬೇಕು.
ನಿಸ್ತ್ರೈಗುಣ್ಯಂ ನಿರುದ್ವೇಗಂ ನಿರ್ಮಲಂ ನಿಧಿಮೋಜಸಮ್ |
ಪ್ರಣಮ್ಯ ಪ್ರಾಂಜಲಿಃ ಶರ್ವಂ ಪ್ರಯಾಮಿ ಶರಣಂ ಹರಮ್ ॥36॥
ಯಥಾಯೋಗ್ಯವಾಗಿ ತ್ರಿಗುಣಗಳಿಂದ ರಹಿತನಾದ, ನಿರುದ್ವೇಗನಾದ, ನಿರ್ಮಲನಾದ, ಓಜಸ್ವಿಗಳ ನಿಧಿ ಎನಿಸಿದ, ಶರ್ವನನ್ನು, ಹರನನ್ನು ಪ್ರಾಂಜಲಿಬದ್ಧವಾಗಿ ನಮಸ್ಕರಿಸಿ ಶರಣು ಹೊಂದುತ್ತೇನೆ.
ಸಮ್ಮಾನ್ಯಂ ನಿಶ್ಚಲಂ ನಿತ್ಯಮ್ ಅಕಾರಣಮಲೇಪನಮ್ |
ಅಧ್ಯಾತ್ಮವೇದಮಾಸಾದ್ಯ ವ್ರಜಾಮಿ ಶರಣಂ ಮುಹುಃ ॥37॥
ಜಗತ್ತಿನಿಂದ ಮಾನ್ಯನಾದ, ಆದರೂ ನಿಶ್ಚಲನಾದ, ನಿತ್ಯನಾದ, ಪರಮಾತ್ಮನಿಂದಲೇ ಹುಟ್ಟನ್ನು ಪಡೆದು ನಿರ್ಲಿಪ್ತನಾಗಿರುವ ಮಹಾರುದ್ರನನ್ನು ಅಧ್ಯಾತ್ಮವೇದವನ್ನು ಹೊಂದಿ ಮತ್ತೆ ಮತ್ತೆ ಶರಣು ಹೊಂದುತ್ತೇನೆ.
ಯಸ್ಯ ನಿತ್ಯಂ ವಿದುಃ ಸ್ಥಾನಂ ಮೋಕ್ಷಮ್ ಅಧ್ಯಾತ್ಮಚಿಂತಕಾಃ |

ಯೋಗಿನಸ್ತತ್ವಮಾರ್ಗಸ್ಥಾಃ ಕೈವಲ್ಯಂ ಪದಮಕ್ಷರಮ್ ॥38॥
ಅಧ್ಯಾತ್ಮ ಚಿಂತಕರು ಯಾವ ಮಹಾರುದ್ರನ ಅನುಗ್ರಹದಿಂದ ಮೋಕ್ಷವನ್ನು ಹೊಂದುತ್ತಾರೋ, ತತ್ವಮಾರ್ಗದಲ್ಲಿರುವ ಯೋಗಿಗಳೆಲ್ಲ ಯಾವ ಮಹಾರುದ್ರನ ಅನುಗ್ರಹದಿಂದ ಕೈವಲ್ಯನೆನಿಸಿದ ಅಕ್ಷರನಾಮಕನಾದ ಭಗವಂತನನ್ನು ಹೊಂದುತ್ತಾರೋ ಅಂತಹ ಮಹಾರುದ್ರನನ್ನು ನಮಿಸುತ್ತೇನೆ.
ಯಂ ವಿದುಃ ಸಂಗನಿರ್ಮುಕ್ತಾಃ ಸಾಮಾನ್ಯಂ ಸಮದರ್ಶಿನಃ |
ತಂ ಪ್ರಪದ್ಯೇ ಜಗದ್ಯೋನಿಮ್ ಅಯೋನಿಂ ನಿರ್ಗುಣಾತ್ಮಕಮ್ ॥39॥
ಸಂಗದಿಂದ ನಿರ್ಮುಕ್ತರಾದ ಜ್ಞಾನಿಗಳು ಸಮದರ್ಶಿಗಳಾಗಿದ್ದು, ಅಯೋನಿಯೂ, ನಿರ್ಗುಣನು, ಜಗದ್ಯೋನಿಯು ಆದ ಪರಮಾತ್ಮನನ್ನು ಯಾವ ಮಹಾರುದ್ರನ ಅನುಗ್ರಹದಿಂದ ಹೊಂದುತ್ತಾರೋ, ಅಂತಹ ಮಹಾರುದ್ರನನ್ನು ಹೊಂದುತ್ತೇನೆ.
ಅಸೃಜದ್ ಯಸ್ತು ಭೂರಾದೀನ್ ಸಪ್ತಲೋಕಾನ್ ಸನಾತನಾನ್ |
ಸ್ಥಿತಃ ಸತ್ಯೋಪರಿ ಸ್ಥಾಣುಂ ತಂ ಪ್ರಪದ್ಯೇ ಸನಾತನಮ್ ॥40॥
ಭೂರಾದಿ ಸಪ್ತಲೋಕಗಳನ್ನು ಯಾವನು ನಿರ್ಮಿಸಿದ್ದಾನೋ, ಸತ್ಯಲೋಕದ ಮೇಲ್ಭಾಗದಲ್ಲಿ ನಿತ್ಯದಲ್ಲಿಯೂ ಯಾವ ಭಗವಂತನಿದ್ದಾನೋ, ಅವನ ಪ್ರಾಪ್ತಿ ಪೂರಕವಾದ ಜ್ಞಾನವನ್ನು ದಾನ ಮಾಡುವ ಮಹಾರುದ್ರನನ್ನು ಹೊಂದುತ್ತೇನೆ.
ಭಕ್ತಾನಾಂ ಸುಲಭಂ ತಂ ಹಿ ದುರ್ಲಭಂ ದೂರಪಾತಿನಾಮ್ |
ಅದೂರಸ್ಥಮಮುಂ ದೇವಂ ಪ್ರಕೃತೇಃ ಪರತಃ ಸ್ಥಿತಮ್ ॥41॥
ಭಕ್ತರಿಗೆ ಸುಲಭನಾಗಿರುವ, ಅಭಕ್ತರಿಗೆ ದುರ್ಲಭನೂ ಆಗಿರುವ, ಭಕ್ತರ ಪಾಲಿಗೆ ಸಮೀಪಸ್ಥನಾದ, ಪ್ರಕೃತಿಯ ಗುಣಗಳನ್ನು ಮೀರಿ ನಿಂತಿರುವ ರುದ್ರಾಂತರ್ಯಾಮಿ ಪರಮಾತ್ಮನನ್ನು ಹೊಂದುತ್ತೇನೆ.
ನಮಾಮಿ ಸರ್ವಲೋಕಸ್ಥಂ ವ್ರಜಾಮಿ ಶರಣಂ ಶಿವಮ್ ॥42॥
ಎಲ್ಲ ಲೋಕಗಳಲ್ಲಿಯೂ ಅಂತರ್ಯಾಮಿಯಾಗಿರುವ ಶಿವ ಎಂಬ ಭಗವಂತನನ್ನು ನಮಸ್ಕರಿಸುತ್ತೇನೆ.
ಏವಂ ಕೃತ್ವಾ ನಮಸ್ತಸ್ಮೈ ಮಹಾದೇವಾಯ ಶಂಭವೇ |
ಮಹಾತ್ಮನೇ ಕ್ಷಿತಿಪತೇ ತತ್ ಸುವರ್ಣಮವಾಪ್ಸ್ಯಸಿ ॥43॥
ಪೃಥ್ವೀನಾಥನೇ, ಈ ರೀತಿಯಾಗಿ ಮಹಾದೇವನೆನಿಸಿದ ಶಂಭುವಿಗೆ ನಮಸ್ಕಾರವನ್ನು ಮಾಡಿದ ನಂತರ ಅಕ್ಷಯವಾದ ಸುವರ್ಣವನ್ನು ಹೊಂದುತ್ತಿ.
ವ್ಯಾಖ್ಯಾನವಿಶೇಷ ಈ ಭಾಗದಲ್ಲಿ ಇರುವ ಎಲ್ಲ ಶ್ಲೋಕಗಳಲ್ಲಿಯೂ ಶಿವನ ಅಂತರ್ಯಾಮಿಯಾದ ಶಿವ ಎಂಬ ಭಗವಂತನ ರೂಪವೇ ಸ್ತುತಿಸಲ್ಪಟ್ಟಿದೆ ಎಂದು ತಿಳಿಯಬೇಕು.
ಲಭಂತೇ ಗಾಣಪತ್ಯಂ ಚ ತದೇಕಾಗ್ರಾ ಹಿ ಮಾನವಾಃ |
ಕಿಂ ಪುನಃ ಸ್ವರ್ಣಭಾಂಡಾನಿ ತಸ್ಮಾತ್ ತ್ವಂ ಗಚ್ಛ ಮಾ ಚಿರಮ್ ॥44॥
ಈ ಕ್ರಮದಲ್ಲಿ ಸ್ತುತಿಯನ್ನು ಏಕಾಗ್ರ ಬುದ್ಧಿಯಿಂದ ಮಾನವರು ಮಹಾರುದ್ರನನ್ನು ಹೊಂದುತ್ತಾರೆ. ಹೀಗಿರುವಾಗ ಸ್ವರ್ಣಭಾಂಡವನ್ನು ಹೊಂದುವುದು ಆಶ್ಚರ್ಯವೇ ಅಲ್ಲ. ಆದ್ದರಿಂದ ಮರುತ್ತನೇ ತಡಮಾಡದೆ ನೀನು ಆ ಮಹಾರುದ್ರನ ಬಳಿ, ಮೇರು ಶಿಖರದ ಬಳಿ ಸಾಗು.
ಮಹತ್ತರಂ ಹಿ ತೇ ಲಾಭಂ ಹಸ್ತ್ಯಶ್ವೋಷ್ಟ್ರಾದಿಭಿಃ ಸಹ |
ಸುವರ್ಣಮಾಹರಿಷ್ಯಂತಃ ತತ್ರ ಗಚ್ಛಂತು ತೇ ನರಾಃ ॥45॥
ಆ ಮಹಾರುದ್ರನ ಸ್ತೋತ್ರದಿಂದ ಉತ್ಕೃಷ್ಟವಾದ ಲಾಭವನ್ನು ಹೊಂದಿ ಆನೆ, ಕುದುರೆ, ಒಂಟೆಗಳ ಮೂಲಕ ಸುವರ್ಣವನ್ನು ಯಾವ ಮನುಷ್ಯರು ಹೊತ್ತು ತರುತ್ತಾರೋ, ಅಂತಹ ಮಹಾರುದ್ರನ ಕ್ಷೇತ್ರಕ್ಕೆ ನೀನು ಸಾಗು.
ವ್ಯಾಸಃ
ಇತ್ಯುಕ್ತಸ್ತು ವಚಸ್ತಸ್ಯ ಚಕ್ರೇ ಕಾರಂಧಮಾತ್ಮಜಃ |
ಗಂಗಾಧರಂ ನಮಸ್ಕೃತ್ಯ ಲಬ್ಧವಾನ್ ಧನಮುತ್ತಮಮ್ ॥46॥
ವ್ಯಾಸರು ಹೇಳುತ್ತಾರೆ ಸಂವರ್ತನಿಂದ ಹೀಗೆ ಹೇಳಿಸಿಕೊಳ್ಳಲ್ಪಟ್ಟ ಕರಂಧಮನ ಮಗನಾದ ಮರುತ್ತನು ಅದರಂತೆಯೇ ನಡೆದುಕೊಂಡು, ಗಂಗಾಧಾರಿಯಾದ ಮಹಾರುದ್ರನನ್ನು ನಮಸ್ಕರಿಸಿ ಉತ್ಕೃಷ್ಟವಾದ ಧನವನ್ನು ಹೊಂದಿದನು.
ಕುಬೇರ ಇವ ತತ್ ಪ್ರಾಪ್ಯ ಮಹಾದೇವಪ್ರಸಾದತಃ |
ತತೋऽತಿಮಾನುಷಂ ಸರ್ವಂ ಚಕ್ರೇ ಯಜ್ಞಸ್ಯ ಸಂವಿಧಿಮ್ ॥47॥
ಮಹಾದೇವನ ಅನುಗ್ರಹದಿಂದ ಕುಬೇರನಂತೆ ಸಂಪತ್ತನ್ನು ಪಡೆದು ಅತಿಮಾನುಷವಾದ ಯಜ್ಞದ ವಿಧಿಗಳೆಲ್ಲವನ್ನೂ ಮರುತ್ತನು ಮಾಡಿದನು.
ಸೌವರ್ಣಾನಿ ಚ ಭಾಂಡಾನಿ ಸಂಚಕ್ರುಸ್ತಸ್ಯ ಶಿಲ್ಪಿನಃ |
ಶಾಲಾಶ್ಚ ಸರ್ವಸಂಭಾರಾನ್ ಕೃತೋ ಸಂವರ್ತಶಾಸನಾತ್ ॥48॥
ಸ್ವರ್ಣಕಾರರು ಯಜ್ಞಕ್ಕೆ ಸಮರ್ಪಿಸುವ ಪಾತ್ರೆಗಳೆಲ್ಲವನ್ನೂ ಚಿನ್ನದಿಂದಲೇ ತಯಾರಿಸಿದರು. ಯಜ್ಞದ ಶಾಲೆಗಳು, ಯಜ್ಞದ ಪದಾರ್ಥಗಳೆಲ್ಲವೂ ಸಂವರ್ತನ ಆದೇಶದಂತೆ ರಚಿತವಾದವು.
ಬೃಹಸ್ಪತಿಸ್ತು ತಾಂ ಶ್ರುತ್ವಾ ಮರುತ್ತಸ್ಯ ಮಹೀಪತೇಃ |
ಸಮೃದ್ಧಿಮಿತಿ ದೇವೇಭ್ಯಃ ಸಂತಾಪಮಕರೋದ್ ಭೃಶಮ್ ॥49॥
ಮರುತ್ತನು ದೇವತೆಗಳನ್ನು ಮೀರಿಸಿದ ಸಂಪತ್ತನ್ನು ಪಡೆದುಕೊಂಡಿದ್ದಾನೆ ಎಂಬ ವಿಷಯವನ್ನು ಕೇಳಿಸಿಕೊಂಡ ಬೃಹಸ್ಪತಿಯು ಅತ್ಯಂತ ದುಃಖವನ್ನು ಹೊಂದಿದನು.

ಸಂತಪ್ಯಮಾನೋ ವೈವರ್ಣ್ಯಂ ಕೃಶತ್ವಂ ಚಾಗಮತ್ ಪರಮ್ |
ಭವಿಷ್ಯತಿ ಹಿ ಮೇ ಶತ್ರುಃ ಸಂವರ್ತೋ ವಸುಮಾನಿತಿ ||50||
ನನ್ನ ಶತ್ರುವಾದ ಸಂವರ್ತನು ವಸುಮಂತನಾದನೆಂದು ಯೋಚಿಸುತ್ತಾ ಸಂತಪ್ಯಮಾನ ಹೃದಯವುಳ್ಳ ಬೃಹಸ್ಪತಿಯ ಮುಖವು ಬಿಳುಚಿಕೊಂಡಿತು.ದೇಹವು ಕೃಶತೆಯನ್ನು ಹೊಂದಿತು.
ತಂ ಶ್ರುತ್ವಾ ಭೃಶಸಂತಪ್ತಂ ದೇವರಾಜೋ ಬೃಹಸ್ಪತಿಮ್ |
ಅಭಿಗಮ್ಯಾಮರವೃತಃ ಪ್ರೋವಾಚೇದಂ ವಚಸ್ತದಾ ||51||
ಬೃಹಸ್ಪತಿಯು ಬಹಳ ದುಃಖಿತನಾಗಿದ್ದಾನೆ ಎಂದು ತಿಳಿದ ಇಂದ್ರದೇವನು ಬೃಹಸ್ಪತಿಯ ಬಳಿಗೆ ಪರಿವಾರದವರಿಂದ ಕೂಡಿಕೊಂಡು ಆಗಮಿಸಿ ಈ ಮಾತುಗಳನ್ನು ಹೇಳಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಮರುತ್ತಸ್ಯ ವಿತ್ತಾನಯನಂ ನಾಮ ಅಷ್ಟಮೋಽಧ್ಯಾಯಃ ||
|| ಅಶ್ವಮೇಧಪರ್ವಣಿ ಅಷ್ಟಮೋಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಬೃಹಸ್ಪತಿಯು ಇಂದ್ರನ ಬಳಿ ತನ್ನ ಚಿಂತೆಯ ಕಾರಣವನ್ನು ಹೇಳಿದುದು. ಇಂದ್ರನ ಆದೇಶದಂತೆ ಅಗ್ನಿದೇವನು ಮರುತ್ತನ ಬಳಿ ಸಾಗಿದ. ಸಂವರ್ತನನ್ನು ಕಂಡ ಅಗ್ನಿಯು ಹೆದರಿ ಇಂದ್ರನ ಬಳಿ ಬಂದು ಬೃಹತ್ತೇಜಸ್ಸಿನ
ಮಹತ್ವವನ್ನು ತಿಳಿಸಿದುದು.
ಇಂದ್ರಃ
ಕಚ್ಚಿತ್ ಸುಖಂ ಸ್ವಪಿಷಿ ತ್ವಂ ಬೃಹಸ್ಪತೇ
ಕಚ್ಚಿನ್ಮನೋಜ್ಞಾಃ ಪರಿಚಾರಕಾಸ್ತೇ |
ಕಚ್ಚಿದ್ದೇವಾನಾಂ ಸುಖಕಾಮೋಽಸಿ ವಿಪ್ರ
ಕಚ್ಚಿದೇವಾಸಹತ್ವಂ ಸುಭೃಶಂ ಪಾಲಯಂತಿ ||1||
ಇಂದ್ರನು ಬೃಹಸ್ಪತಿಯನ್ನು ಪ್ರಶ್ನಿಸುತ್ತಾನೆ ಬೃಹಸ್ಪತಿಯೇ, ನೀನು ಯಾವುದೇ ಚಿಂತೆಗಳಿಲ್ಲದೇ ಸುಖವಾಗಿ ನಿದ್ರಿಸುತ್ತಿರುವಿಯಷ್ಟೆ? ನಿನ್ನ ಸೇವಕರು ನಿನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ಸೇವಿಸುತ್ತಿದ್ದಾರಷ್ಟೆ? ವಿಪ್ರನೇ, ಹಿಂದಿನಂತೆ ನೀನೂ ಕೂಡ ದೇವತೆಗಳಿಗೆ ಸುಖವನ್ನು ಬಯಸುತ್ತಿರುವಿಯಷ್ಟೆ? ದೇವತೆಗಳು ನಿನ್ನನ್ನು ಪೂರ್ಣವಾಗಿ ರಕ್ಷಿಸುತ್ತಿದ್ದಾರಷ್ಟೆ?
ಬೃಹಸ್ಪತಿಃ
ಸುಖಂ ಶಯೇಽಹಂ ಶಯನೇ ಮಹೇಂದ್ರ
ತಥಾ ಮನೋಜ್ಞಾಃ ಪರಿಚಾರಕಾ ಮೇ |
ತಥಾ ದೇವಾನಾಂ ಸುಖಕಾಮೋಽಸ್ಮಿ ಶಕ್ರ
ದೇವಾಶ್ಚ ಮಾಂ ಸುಭೃಶಂ ಪಾಲಯಂತಿ ||2||
ಬೃಹಸ್ಪತಿಯು ಉತ್ತರಿಸುತ್ತಾನೆ ಮಹೇಂದ್ರನೇ, ನಾನು ಹಾಸಿಗೆಯಲ್ಲಿ ಸುಖವಾಗಿ ಮಲಗುತ್ತೇನೆ. ಪರಿಚಾರಕರು ತಾವೇ ನನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ಇಷ್ಟವಾದ ಕಾರ್ಯವನ್ನು ಮಾಡುತ್ತಿದ್ದಾರೆ. ನಾನೂ ದೇವತೆಗಳ ಸುಖ ಚಿಂತನೆಯನ್ನೇ ಮಾಡುತ್ತಿದ್ದೇನೆ. ದೇವತೆಗಳೂ ನನ್ನನ್ನು ಚೆನ್ನಾಗಿ ಪಾಲಿಸುತ್ತಿದ್ದಾರೆ.
ಇಂದ್ರಃ
ಕುತೋ ದುಃಖಂ ಮಾನಸಂ ದೇಹಜಂ ವಾ
ಪಾಂಡುರ್ವಿವರ್ಣಶ್ಚ ಕುತಸ್ತ್ವಮದ್ಯ |
ಆಚಕ್ಷ್ವ ಮೇ ತದ್ ದ್ವಿಜವರ್ಯ ಯಾವತ್
ನಿಹನ್ಮಿ ಸರ್ವಾಂಸ್ತವ ದುಃಖಕರ್ತೄನ್ ||3||
ಇಂದ್ರ ವಿಪ್ರಶ್ರೇಷ್ಠನೇ, ನಿನ್ನ ದೇಹವು ಬಿಳಚಿಕೊಂಡಿದೆ, ಬಾಡಿಹೋಗಿದೆ. ಇದಕ್ಕೆ ಕಾರಣ ದೈಹಿಕವಾದ ದುಃಖವೇ ಅಥವಾ ಮಾನಸಿಕ ದುಃಖವೇ? ಬ್ರಾಹ್ಮಣೋತ್ತಮನೇ, ನಿನ್ನ ದುಃಖಕ್ಕೆ ಕಾರಣವೇನೆಂಬುದನ್ನು ಹೇಳು. ದುಃಖಕ್ಕೆ ಕಾರಣರಾದ ಎಲ್ಲರನ್ನೂ ಸಂಹರಿಸುತ್ತೇನೆ.
ಬೃಹಸ್ಪತಿಃ
ಮರುತ್ತಮಾಹುರ್ಮಘವನ್ ಯಕ್ಷ್ಯಮಾಣಂ
ಮಹಾಯಜ್ಞೇನೋತ್ತಮದಕ್ಷಿಣೇನ |
ತಂ ಸಂವರ್ತೋ ಯಾಜಯತೀತಿ ಮೇ ಶ್ರುತಂ
ತದಿಚ್ಛಾಮಿ ನಃ ಸ ನ ತಂ ಯಾಜಯೇತ ||4||
ಬೃಹಸ್ಪತಿ ಮಘವನ್, ಉತ್ತಮವಾದ ದಕ್ಷಿಣೆಯಿಂದ ಕೂಡಿದ ಮಹಾಯಜ್ಞವನ್ನು ಮರುತ್ತ ಚಕ್ರವರ್ತಿಯು ಆಚರಿಸುತ್ತಿದ್ದಾನೆಂದು ಜನರು ಹೇಳುತ್ತಿದ್ದಾರೆ. ಯಾಜಕನಾಗಿ ನನ್ನ ತಮ್ಮನಾದ ಸಂವರ್ತನೇ ಇದ್ದಾನೆಂದು ಕೇಳಿದ್ದೇನೆ. ಮರುತ್ತನಿಂದ ಸಂವರ್ತನು ಮಹಾಯಜ್ಞವನ್ನು ಮಾಡಿಸಬಾರದೆಂದು ನನ್ನ ಅಪೇಕ್ಷೆಯಾಗಿದೆ.
ಇಂದ್ರಃ

ಸರ್ವಾನ್ ಕಾಮಾನನುಜಾನಾಸಿ ವಿಪ್ರ
ತ್ವಂ ದೇವಾನಾಂ ಮಂತ್ರಯಸೇ ಪುರೋಧಾಃ |
ಉಭೌ ಚ ತೇ ಜನ್ಮಮೃತ್ಯೂ ವ್ಯತೀತೌ
ಕಿಂ ಸಂವರ್ತಸ್ತವ ಕರ್ತಾಽದ್ಯ ವಿಪ್ರ ॥5॥
ಇಂದ್ರ ವಿಪ್ರಶ್ರೇಷ್ಠನೇ, ನೀನು ಮಂತ್ರಜ್ಞನಾದ ಪುರೋಹಿತ. ನಿನ್ನ ಮನಸ್ಸಿನ ಅಪೇಕ್ಷೆಗಳೆಲ್ಲವೂ ಪೂರ್ಣಗೊಂಡಿವೆ. ಮುಪ್ಪು-ಸಾವುಗಳು ನಿನ್ನನ್ನು ಬಿಟ್ಟುಹೋಗಿವೆ. ಹೀಗಿರುವಾಗ ಸಂವರ್ತನು ನಿನಗೆ ಏನು ತಾನೇ ಮಾಡಲು ಸಾಧ್ಯ?
ಬೃಹಸ್ಪತಿಃ
ದೇವೈಃ ಸಹ ತ್ವಮಸುರಾನ್ ಸಂಪ್ರಣುದ್ಯ
ಜಿಘಾಂಸಸೇ ಚಾಪ್ಯುತ ಸಾನುಬಂಧಾನ್ |
ಯಂ ಯಂ ಸಮೃದ್ಧಂ ಪಶ್ಯಸಿ ಯತ್ರ ತತ್ರ
ದುಃಖಂ ಸಪತ್ನೇಷು ಸಮೃದ್ಧಭಾವಃ ॥6॥
ಬೃಹಸ್ಪತಿ ದೇವರಾಜನೇ, ನೀನು ಯಾವ ಯಾವ ಅಸುರರು ಸಮೃದ್ಧಿ ಹೊಂದಿದ್ದಾರೆಂದು ನೋಡುತ್ತೀಯೋ ಅಲ್ಲಲ್ಲಿಯೇ ಅವರನ್ನು ಆಕ್ರಮಿಸಿ ಬಂಧು ಸಹಿತವಾಗಿ ಅವರನ್ನು ಸಂಹರಿಸುವಿ. ಇದಕ್ಕೆ ಕಾರಣವಿಷ್ಟೆ- ಶತ್ರುಗಳ ಸಮೃದ್ಧಿಯು ದುಃಖಕ್ಕೆ ಕಾರಣವಾಗುತ್ತದೆ.
ಅತೋಽಸ್ಮಿ ದೇವೇಂದ್ರ ವಿವರ್ಣರೂಪಃ
ಸಪತ್ನೋ ಮೇ ವರ್ಧತೇ ತನ್ನಿಶಮ್ಯ |
ಸರ್ವೋಪಾಯೈರ್ಮಘವಂಸ್ತ್ವಂ ನಿಯಚ್ಛ
ಸಂವರ್ತಂ ವಾ ಪಾರ್ಥಿವಂ ವಾ ಮರುತ್ತಮ್ ॥7॥
ದೇವೇಂದ್ರನೇ, ಈ ಕಾರಣದಿಂದಲೇ ನಾನು ವಿವರ್ಣರೂಪನಾಗಿದ್ದೇನೆ. ನನ್ನ ಶತ್ರುವು ಸಮೃದ್ಧಿಯನ್ನು ಹೊಂದುತ್ತಿದ್ದಾನೆ ಎಂಬುದನ್ನು ಕೇಳಿ, ನನಗೆ ಅಪಾರವಾದ ಚಿಂತೆಯುಂಟಾಗಿದೆ. ಆದ್ದರಿಂದ ಎಲ್ಲ ಉಪಾಯಗಳಿಂದಲೂ ನೀನು ಮರುತ್ತನು ಯಜ್ಞ ಮಾಡುವುದನ್ನು ನಿಲ್ಲಿಸಬೇಕು. ಅಥವಾ ಸಂವರ್ತನು ಯಜ್ಞ ಮಾಡಿಸುವುದನ್ನಾದರೂ ನಿಲ್ಲಿಸು.
ಇಂದ್ರಃ
ಏಹಿ ಗಚ್ಛ ಪ್ರಹಿತೋ ಜಾತವೇದೋ
ಬೃಹಸ್ಪತಿಂ ಪರಿದಾತುಂ ಮರುತ್ತೇ |
ಅಯಂ ವೈ ತ್ವಾಂ ಯಾಜಯಿತಾ ಬೃಹಸ್ಪತಿಃ
ತಥಾಽಮರಂ ಚೈವ ಕರಿಷ್ಯತೀತಿ ॥8॥
ಇಂದ್ರನು ಅಗ್ನಿದೇವನನ್ನು ಕರೆದು ಹೇಳುತ್ತಾನೆ ಅಗ್ನಿದೇವನೇ, ಇಲ್ಲಿ ಬಾ. ನನ್ನ ಸಂದೇಶವನ್ನು ಹೊತ್ತು ಮರುತ್ತನ ಬಳಿ ಸಾಗು. ಬೃಹಸ್ಪತಿಯನ್ನು ಮರುತ್ತನ ಬಳಿ ಕಳುಹಿಸಿಕೊಡುವ ದೃಷ್ಟಿಯಿಂದ ಅವನ ಬಳಿ ಹೀಗೆ ಹೇಳು- ಮರುತ್ತನೇ, ದೇವಗುರುವಾದ ಈ ಬೃಹಸ್ಪತಿಯೇ ಯಜ್ಞವನ್ನು ಮಾಡಿಸುತ್ತಾನೆ, ನಿನ್ನನ್ನು ಅಮರನನ್ನಾಗಿಯೂ ಮಾಡಿಸುತ್ತಾನೆ.
ಅಗ್ನಿಃ
ಅಹಂ ಗಚ್ಛಾಮಿ ತವ ಶಕ್ರಾದ್ಯ ದೂತೋ
ಬೃಹಸ್ಪತಿಂ ಪರಿದಾತುಂ ಮರುತ್ತೇ |
ವಾಚಂ ಸತ್ಯಾಂ ತೇ ಪುರುಹೂತ ಕರ್ತುಂ
ಬೃಹಸ್ಪತೇಶ್ಚಾಪಚಿತಿಂ ಚಿಕೀರ್ಷನ್ ॥9॥
ಇಂದ್ರನ ಮಾತನ್ನು ಕೇಳಿ ಅಗ್ನಿಯು ಹೇಳುತ್ತಾನೆ ದೇವೇಂದ್ರನೇ, ಮರುತ್ತನಿಗೆ ಬೃಹಸ್ಪತಿಯನ್ನು ಒಪ್ಪಿಸಿಕೊಡುವ ಕಾರಣದಿಂದ ನಿನ್ನ ವಾಣಿಯನ್ನು ಸತ್ಯವಾಣಿಯನ್ನಾಗಿ ಮಾಡುವ ಇಚ್ಛೆಯಿಂದ, ಈ ಮೂಲಕ ಬೃಹಸ್ಪತಿಯನ್ನು ಗೌರವಿಸುವ ಸದಿಚ್ಛೆಯಿಂದ ನಿನ್ನ ದೂತನಾಗಿ ಮರುತ್ತನ ಬಳಿ ಈಗಲೇ ಸಾಗುತ್ತೇನೆ.
ವ್ಯಾಸಃ
ತತಃ ಪ್ರಾಯಾದ್ ಧೂಮಕೇತುರ್ಮಹಾತ್ಮಾ
ವನಸ್ಪತೀನ್ ವೀರುಧಶ್ಚಾವಮೃದ್ನನ್ |
ಕಾಮಾದ್ಧಿಮಾಂತೇ ಪರಿವರ್ಧಮಾನಃ
ಕಾಷ್ಠಾಮೃತೌ ಮಾತರಿಶ್ವೇವ ಮೃದ್ನನ್ ॥10॥
ವ್ಯಾಸರು ಯುಧಿಷ್ಠಿರನೇ, ಮಹಾತ್ಮನಾದ ಧೂಮಧ್ವಜನಾದ ಅಗ್ನಿದೇವನು ಈ ರೀತಿಯಾಗಿ ಹೇಳಿ ಗಿಡ-ಮರಗಳನ್ನೂ, ಬಳ್ಳಿಗಳನ್ನೂ ನಾಶಗೈಯ್ಯುತ್ತಾ ಸ್ವೇಚ್ಛೆಯಿಂದ ಬೀಸುವ ವಾಯುವಿನಂತೆ ಗರ್ಜನೆ ಮಾಡುತ್ತಾ ಅಲ್ಲಿಂದ ಹೊರಟು ಮರುತ್ತನ ಯಜ್ಞಶಾಲೆಗೆ ಹೋದನು.
ಮರುತ್ತಃ
ಆಶ್ಚರ್ಯಮದ್ಯ ಪಶ್ಯಾಮಿ ರೂಪಿಣಂ ವಹ್ನಿಮಾಗತಮ್ |
ಆಸನಂ ಸಲ್ಲಿಂ ಪಾದ್ಯಂ ಗಾಂ ಚೋಪಾನಯ ವೈ ಮುನೇ ॥11॥
ಅಗ್ನಿದೇವನು ಆಗಮಿಸಿದ್ದನ್ನು ಕಂಡು ಮರುತ್ತನು ಹೇಳಿದನು ಆಶ್ಚರ್ಯ! ಇಂತಹ ದೃಶ್ಯವನ್ನು ನನ್ನ ಕಣ್ಣಿನಿಂದ ನೋಡುತ್ತಿದ್ದೇನೆ. ಅಗ್ನಿದೇವನು ಮೂರ್ತಿಮತ್ತಾಗಿ ಇಲ್ಲಿ ಆಗಮಿಸಿದ್ದಾನೆ. ಮಹಾಮುನಿಗಳೇ, ಅತಿಥಿಯಾಗಿ ಆಗಮಿಸುವ ಅಗ್ನಿಯನ್ನು ಸತ್ಕರಿಸಲು ಆಸನ, ಪಾದ್ಯ, ಅರ್ಘ್ಯ, ಗೋವುಗಳು ಇವುಗಳನ್ನು ಹೊತ್ತು ತನ್ನಿರಿ.

ಅಗ್ನಿಃ
ಆಸನಂ ಸಲ್ಲಿಂ ಪಾದ್ಯಂ ಪ್ರತಿನಂದಾಮಿ ತೇಽನಘ |
ಇಂದ್ರೇಣ ತು ಸಮಾದಿಷ್ಟಂ ವಿದ್ಧಿ ಮಾಂ ದೂತಮಾಗತಮ್ ॥12॥
ಅಗ್ನಿ ಅನಘನೇ, ನೀನು ನನ್ನನ್ನು ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಲು ಬಯಸಿರುವುದು ಅಭಿನಂದನಾರ್ಹವಾಗಿದೆ. ಆದರೆ ನಾನು ಇಂದ್ರನ ಸಂದೇಶವನ್ನು ಹೊತ್ತು ತಂದಿರುವ ದೂತನೆಂದು ಭಾವಿಸಿಕೊ.
ಮರುತ್ತಃ
ಕಚ್ಚಿಚ್ಛ್ರೀಮಾನ್ ದೇವರಾಜಃ ಸುಖೀ ನಃ
ಕಚ್ಚಿಚ್ಚಾಸ್ಮಾಭಿಃ ಪ್ರೀಯತೇ ಧೂಮಕೇತೋ |
ಕಚ್ಚಿದ್ದೇವಾಶ್ಚಾಸ್ಯ ವಶೇ ಯಥಾವತ್
ತದ್ ಬ್ರೂಹಿ ತ್ವಂ ಮಮ ಕಾರ್ತ್ಸ್ನ್ಯೇನ ದೇವ ॥13॥
ಮರುತ್ತ ಕಾಂತಿಯುಕ್ತನಾದ ಇಂದ್ರನು ಸುಖಿಯಾಗಿದ್ದಾನೆಯೇ? ಧೂಮಕೇತುವೇ, ನಮ್ಮ ವಿಷಯದಲ್ಲಿ ಅವನು ಪ್ರಸನ್ನತೆಯಿಂದ ಕೂಡಿದ್ದಾನೆಯೇ? ದೇವತೆಗಳೆಲ್ಲರೂ ಅವನ ಆಜ್ಞೆಯನ್ನು ಪಾಲಿಸುತ್ತಿದ್ದಾರೆಯೇ? ಈ ವಿಷಯವನ್ನು ಯಥಾವತ್ತಾಗಿ ತಿಳಿಸು.
ಅಗ್ನಿಃ
ಶಕ್ರೋ ಭೃಶಂ ಸ ಸುಖೀ ಪಾರ್ಥಿವೇಂದ್ರ
ಪ್ರೀತಿಂ ಚೇಚ್ಛತ್ಯಜರಾಂ ದೇವರಾಜಃ |
ದೇವಾಶ್ಚ ಸರ್ವೇ ವಶಗಾಸ್ತಸ್ಯ ರಾಜನ್
ಸಂದೇಶಂ ತು ಶೃಣು ಮೇ ದೇವರಾಜ್ಞಃ ॥14॥
ಅಗ್ನಿ ಪಾರ್ಥಿವೇಂದ್ರನೇ, ಶಕ್ರನು ಅತ್ಯಂತ ಸುಖವಾಗಿಯೇ ಇದ್ದಾನೆ. ನಿನ್ನೊಡನೆ ನಿರಂತರವಾದ ಸ್ನೇಹವನ್ನು ಬೆಳೆಸಲು ಇಚ್ಛಿಸಿದ್ದಾನೆ. ದೇವತೆಗಳೆಲ್ಲರೂ ಅವನ ಅಧೀನದಲ್ಲಿದ್ದಾರೆ. ದೇವರಾಜನ ಸಂದೇಶವೇನೆಂಬುದನ್ನು ನೀನು ಕೇಳಿಸಿಕೊ.
ಯದರ್ಥಂ ವೈ ಪ್ರಾಹಿಣೋತ್ ತ್ವತ್ಸಕಾಶಂ
ಬೃಹಸ್ಪತಿಂ ಪರಿದಾತುಂ ಮರುತ್ತೇ |
ಅಯಂ ಗುರುರ್ಯಾಜಯತಾಂ ನೃಪ ತ್ವಾಂ
ಮರ್ತ್ಯಂ ಸಂತಮಮರಂ ತ್ವಾಂ ಕರೋತು ॥15॥
ಯಾವ ಕಾರ್ಯಾರ್ಥವಾಗಿ ಇಂದ್ರನು ನನ್ನನ್ನು ಕಳುಹಿಸಿದ್ದಾನೆಂಬುದನ್ನು ಕೇಳಿಸಿಕೊ. ಇಂದ್ರನು ನನ್ನ ಮೂಲಕ ಬೃಹಸ್ಪತಿಯನ್ನು ನಿನ್ನ ಬಳಿಗೆ ಕಳುಹಿಸಲು ಇಚ್ಛಿಸಿದ್ದಾನೆ. ಇದಕ್ಕಾಗಿ ಅವನು ಹೇಳಿದ ಸಂದೇಶ ಇಂತಿದೆ- ಮೊದಲಿನಿಂದಲೂ ಈ ಬೃಹಸ್ಪತಿಯೇ ನಿನ್ನ ಗುರುವಾಗಿದ್ದಾನೆ. ಆದ್ದರಿಂದ ಅವನ ಮೂಲಕವೇ ಯಜ್ಞವನ್ನು ಮಾಡಿಸು. ಈಗ ನೀನು ಮರಣಧರ್ಮವುಳ್ಳ ಮನುಷ್ಯನಾಗಿರುವಿ. ಬೃಹಸ್ಪತಿಯು ತನ್ನ ಪ್ರಭಾವದಿಂದ ನಿನ್ನನ್ನು ಅಮರನನ್ನಾಗಿ ಮಾಡುತ್ತಾನೆ.
ಮರುತ್ತಃ
ಸಂವರ್ತೋ ಮೇ ಯಾಜಯಿತಾ ದ್ವಿಜೋತ್ತಮೋ
ಬೃಹಸ್ಪತೇರಂಜಲಿರೇಷ ತಸ್ಯ |
ನಾಸೌ ದೇವಂ ಯಾಜಯಿತ್ವಾ ಮಹೇಂದ್ರಂ
ಮರ್ತ್ಯಂ ಸಂತಂ ಯಾಜಯನ್ನದ್ಯ ಶೋಭೇತ್ ॥16॥
ಮರುತ್ತನು ಹೇಳುತ್ತಾನೆ ಅಗ್ನಿದೇವನೇ, ನನ್ನ ಯಾಗವನ್ನು ವಿಪ್ರಶ್ರೇಷ್ಠನಾದ ಸಂವರ್ತನೇ ಮಾಡಿಸುತ್ತಾನೆ. ಬೃಹಸ್ಪತಿಗೆ ನನ್ನ ನಮಸ್ಕಾರವಿರಲಿ. ಅಮರೇಂದ್ರನಾದ ಮಹೇಂದ್ರನಿಗೆ ಯಜ್ಞವನ್ನು ಮಾಡಿಸುವ ಬೃಹಸ್ಪತಿಯು ನನ್ನಂತಹ ಮರಣಧರ್ಮವಿರುವ ಮನುಷ್ಯನಿಂದ ಯಜ್ಞ ಮಾಡಿಸುವುದು ಶೋಭಿಸುವುದಿಲ್ಲ.
ಅಗ್ನಿಃ
ಯೇ ಯೇ ಲೋಕಾ ದೇವಲೋಕೇ ಮಹಾಂತಃ
ಸಂಪ್ರಾಪ್ಸ್ಯಸೇ ದೇವರಾಜಪ್ರಸಾದಾತ್ |
ತ್ವಾಂ ಚೇದಸೌ ಯಾಜಯೇದ್ ವೈ ಬೃಹಸ್ಪತಿಃ
ನೂನಂ ಸ್ವರ್ಗಂ ತ್ವಂ ಜಯೇಃ ಕೀರ್ತಿಯುಕ್ತಃ ॥17॥
ತಥಾ ಲೋಕಾ ಮಾನುಷಾ ಯೇ ಚ ದಿವ್ಯಾಃ
ಪ್ರಜಾಪತೇಶ್ಚಾಪಿ ಯೇ ವೈ ಮಹಾಂತಃ
ಏತೇ ಚ ತೇ ದೇವರಾಜ್ಯಂ ಚ ಕೃತ್ಸ್ನಂ
ಬೃಹಸ್ಪತಿಶ್ಚೇದ್ ಯಾಜಯೇತ್ ತ್ವಾಂ ನರೇಂದ್ರ ॥18॥
ಅಗ್ನಿ ನರೇಂದ್ರನೇ, ಬೃಹಸ್ಪತಿಯೇ ನಿನ್ನ ಯಜ್ಞವನ್ನು ಮಾಡಿಸಿದಲ್ಲಿ ಇಂದ್ರನ ಪ್ರಸನತೆಯನ್ನು ಹೊಂದಿ, ದೇವಲೋಕದಲ್ಲಿರುವ ಉತ್ಕೃಷ್ಟವಾದ ಪುಣ್ಯಲೋಕಗಳನ್ನು ಪಡೆಯುತ್ತಿ. ನೀನು ಯಶೋವಂತನಾಗುವುದಲ್ಲದೆ ಸ್ವರ್ಗಲೋಕವನ್ನೂ ಜಯಿಸುತ್ತಿ. ಇಷ್ಟು ಮಾತ್ರವಲ್ಲ, ಸಮಗ್ರ ಮನುಷ್ಯಲೋಕಗಳು, ಸಮಗ್ರ ದೇವಲೋಕಗಳು, ಪ್ರಜಾಪತಿಯ ಉತ್ಕೃಷ್ಟವಾದ ಲೋಕಗಳು ಎಲ್ಲವೂ ನಿನಗೆ ಲಭಿಸುತ್ತವೆ. ಇಂದ್ರನ ರಾಜ್ಯವೇ ನಿನ್ನ ಅಧೀನವಾಗುತ್ತದೆ. ಆದ್ದರಿಂದ ಬೃಹಸ್ಪತಿಯ ಪೌರೋಹಿತ್ಯದಲ್ಲಿ ಯಜ್ಞವನ್ನು ಮಾಡು.
ಸಂವರ್ತಃ
ಮಾ ಸ್ಮೈವ ತ್ವಂ ಪುನರಾಗಾಃ ಕಥಂಚಿದ್

ಬೃಹಸ್ಪತಿಂ ಪರಿದಾತುಂ ಮರುತ್ತೇ |
ಮಾ ತ್ವಾ ಧಕ್ಷ್ಯೇಯೇ ಚಕ್ಷುಷಾ ದಾರುಣೇನ
ಸಂಕ್ರುದ್ಧೋಽಹಂ ಪಾವಕ ತನ್ನಿಬೋಧ ॥19॥
ಅಗ್ನಿಯ ಮಾತನ್ನು ಕೇಳಿಸಿಕೊಂಡ ಸಂವರ್ತನು ಹೇಳುತ್ತಾನೆ ಅಗ್ನಿದೇವನೇ, ನನ್ನ ಮಾತನ್ನು ಕೇಳಿಸಿಕೊ. ಇನ್ನು ಮುಂದೆ ಮರುತ್ತನಿಗೆ ಬೃಹಸ್ಪತಿಯನ್ನು ಒಪ್ಪಿಸುವ ಕಾರ್ಯದಲ್ಲಿ ನೀನು ಪಾತ್ರ ವಹಿಸಬೇಡ. ಈ ಕಾರಣದಿಂದ ಇಲ್ಲಿಗೆ ಆಗಮಿಸಬೇಡ. ಒಂದು ವೇಳೆ ಈ ದೃಷ್ಟಿಯಿಂದ ನೀನು ಆಗಮಿಸಿದರೆ ಕ್ರುದ್ಧನಾದ ನಾನು ನನ್ನ ಉಗ್ರದೃಷ್ಟಿಯಿಂದ ನಿನ್ನನ್ನು ಭಸ್ಮ ಮಾಡುತ್ತೇನೆ.
ವ್ಯಾಸಃ
ತತೋ ದೇವಾನಾಗಮದ್ ಧೂಮಕೇತುಃ
ದಾಹಾದ್ ಭೀತೋ ವ್ಯಥಿತೋಽಶ್ವತ್ಥಪರ್ಣವತ್ |
ತಂ ವೈ ದೃಷ್ಟ್ವಾ ಪ್ರಾಹ ಶಕ್ರೋ ಮಹಾತ್ಮಾ
ಬೃಹಸ್ಪತೇಃ ಸನ್ನಿಧೌ ಹವ್ಯವಾಹಮ್ ॥20॥
ವ್ಯಾಸರು ಯುಧಿಷ್ಠಿರನೇ, ಸಂವರ್ತನು ಭಸ್ಮ ಮಾಡುತ್ತಾನೆಂಬ ಭಯದಿಂದ ದುಃಖಿತನಾದ ಅಗ್ನಿಯು ಅಶ್ವತ್ಥ ಎಲೆಯಂತೆ ತರತರನೆ ನಡುಗಿ ದೇವತೆಗಳ ಬಳಿ ಓಡಿದ. ಭೀತನಾದ ಅಗ್ನಿದೇವನನ್ನು ಕಂಡು ಇಂದ್ರದೇವನು ಬೃಹಸ್ಪತಿಯ ಬಳಿ ಹೇಳುತ್ತಾನೆ.
ಇಂದ್ರಃ
ಯತ್ ತ್ವಂ ಗತಃ ಪ್ರಹಿತೋ ಜಾತವೇದೋ
ಬೃಹಸ್ಪತಿಂ ಪರಿದಾತುಂ ಮರುತ್ತೇ |
ತತ್ ಕಿಂ ಪ್ರಾಹ ಸ ನೃಪೋ ಯಕ್ಷ್ಯಮಾಣಃ
ಕಚ್ಚಿದ್ ವಚಃ ಪ್ರತಿಗೃಹ್ಣಾತಿ ತಚ್ಚ ॥21॥
ಜಾತವೇದಸನೇ, ಬೃಹಸ್ಪತಿಯನ್ನು ಮರುತ್ತನಿಗೆ ಒಪ್ಪಿಸುವ ಕಾರ್ಯವನ್ನು ಸಾಧಿಸಲೆಂದು ನಿನ್ನನ್ನು ಮರುತ್ತನ ಬಳಿ ಕಳುಹಿಸಿದೆ. ನನ್ನ ಸಂದೇಶವನ್ನು ಕೇಳಿಸಿಕೊಂಡ ಮರುತ್ತನು ಏನು ಹೇಳಿದನು? ನನ್ನ ಮಾತನ್ನು ಅಂಗೀಕರಿಸಿದನೆ?
ಅಗ್ನಿಃ
ನ ತೇ ವಾಕ್ಯಂ ರೋಚಯತೇ ಮರುತ್ತೋ
ಬೃಹಸ್ಪತೇರಂಜಲಿಂ ಪ್ರಾಹಿಣೋತ್ ಸಃ |
ಸಂವರ್ತೋ ಮಾಂ ಯಾಜಯಿತೇತ್ಯಭೀಕ್ಷ್ಣಂ
ಪುನಃ ಪುನಃ ಸ ಮಯಾ ಪ್ರೋಚ್ಯಮಾನಃ ॥22॥
ಅಗ್ನಿ ದೇವರಾಜನೇ, ಮರುತ್ತನಿಗೆ ನೀನು ಕಳುಹಿಸಿದ ಸಂದೇಶವು ಇಷ್ಟವಾಗಲಿಲ್ಲ. ಕೈಜೋಡಿಸಿ ಬೃಹಸ್ಪತಿಗೆ ನಮನಗಳನ್ನು ನನಗೆ ತಿಳಿಸಿದ. ಮತ್ತೆ ಬೃಹಸ್ಪತಿಯನ್ನು ಯಜ್ಞಕಾರ್ಯದಲ್ಲಿ ನಿಯೋಜಿಸಿಕೊಳ್ಳುವಂತೆ ಹೇಳಿದರೂ ಸಂವರ್ತನೇ ನನಗೆ ಯಜ್ಞವನ್ನು ಮಾಡಿಸುತ್ತಾನೆ ಎಂದು ದೃಢವಾಗಿ ಹೇಳಿದ.
ಉವಾಚೇದಂ ಮಾನುಷಾ ಯೇ ಚ ದಿವ್ಯಾಃ
ಪ್ರಜಾಪತೇರ್ಯೇ ಚ ಲೋಕಾ ಮಹಾಂತಃ |
ತಾಂಶ್ಚೇಲ್ಲಭೇಯಂ ಸಂವಿದಂ ತೇನ ಕೃತ್ವಾ
ತಥಾಽಪಿ ನೇಚ್ಛೇಯಮಿತಿ ಪ್ರತೀತಃ ॥23॥
ಇಂದ್ರನೊಡನೆ ಸಖ್ಯವನ್ನು ಪಡೆದರೆ, ಬೃಹಸ್ಪತಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡರೆ ಮನುಷ್ಯಲೋಕಗಳು, ದೇವಲೊಕಗಳು, ಪ್ರಜಾಪತಿಯ ಲೋಕಗಳನ್ನೆಲ್ಲ ಪಡೆಯಬಹುದೆಂದು ಹೇಳಿದನು. ಇಷ್ಟು ಹೇಳಿದರೂ ಬೃಹಸ್ಪತಿಯನ್ನು ಪುರೋಹಿತನನ್ನಾಗಿ ಅಂಗೀಕರಿಸಲು ಇಚ್ಛಿಸುವುದಿಲ್ಲ ಎಂದೇ ಹೇಳಿದನು.
ಇಂದ್ರಃ
ಪುನರ್ಭವಾನ್ ಪಾರ್ಥಿವಂ ತ್ವಂ ಸಮೇತ್ಯ
ವಾಕ್ಯಂ ಮದೀಯಂ ಪ್ರಾಪಯಸ್ವಾರ್ಥಯುಕ್ತಮ್ |
ಪುನರ್ಯದುಕ್ತೋ ನ ಕರಿಷ್ಯತೇ ವಚಃ
ತತೋ ವಜ್ರಂ ಸಂಪ್ರಹರ್ತಾಸ್ಮಿ ತಸ್ಮೈ ॥24॥
ಇಂದ್ರ ಅಗ್ನಿದೇವನೇ, ಪುನಃ ಮರುತ್ತನ ಬಳಿ ನೀನು ತೆರಳು. ಅರ್ಥಯುಕ್ತವಾದ ನನ್ನ ಸಂದೇಶವನ್ನು ತಲುಪಿಸು. ಎರಡನೆಯ ಬಾರಿಯೂ ನನ್ನ ಸಂದೇಶದಂತೆ ನಡೆಯದಿದ್ದಲ್ಲಿ ಆತನ ಮೇಲೆ ನನ್ನ ವಜ್ರಾಯುಧವನ್ನೇ ಪ್ರಯೋಗಿಸುತ್ತೇನೆ.
ಅಗ್ನಿಃ
ಗಂಧರ್ವರಾಟ್ ಯಾತ್ವಯಂ ತತ್ರ ದೂತೋ
ಬಿಭೇಮ್ಯಹಂ ವಾಸವ ತತ್ರ ಗಂತುಮ್ |
ಸಂರಬ್ಧೋ ಮಾಮುಕ್ತವಾಂಸ್ತೀಕ್ಷ್ಣರೋಷಃ
ಸಂವರ್ತೋ ವಾಕ್ಯಂ ಚರಿತಬ್ರಹ್ಮಚರ್ಯಃ ॥25॥
ಅಗ್ನಿ ದೇವರಾಜನೇ, ಗಂಧರ್ವರಾಜನು ಮರುತ್ತನ ಬಳಿ ದೂತನಾಗಿ ಹೋಗಲಿ. ಎರಡನೆಯ ಬಾರಿ ಮರುತ್ತನ ಬಳಿ ಸಾಗಲು ನನಗೆ ಭಯವಿದೆ. ಬ್ರಹ್ಮಚರ್ಯವ್ರತನಿಷ್ಠನಾದ, ಉಗ್ರರೋಷವುಳ್ಳ ಸಂವರ್ತನು ನನ್ನ ಮಾತನ್ನು ಕೇಳಿ ಕ್ರುದ್ಧನಾಗಿ ಹೀಗೆ ಹೇಳಿದನು.
ಯದ್ಯಾಗಚ್ಛೇಃ ಪುನರೇವಂ ಕಥಂಚಿದ್

ಬೃಹಸ್ಪತಿಂ ಪರಿದಾತುಂ ಮರುತ್ತೇ |
ದಹೇಯಂ ತ್ವಾಂ ಚಕ್ಷುಷಾ ದಾರುಣೇನ
ಸಂಕ್ರುದ್ಧ ಇತ್ಯೇತದವೇಹಿ ಶಕ್ರ ॥26॥
ಅಗ್ನಿಯೇ, ಮುಂದೇನಾದರೂ ಬೃಹಸ್ಪತಿಯನ್ನು ಮರುತ್ತನಿಗೆ ಒಪ್ಪಿಸುವ ಕಾರ್ಯನಿಮಿತ್ತದಿಂದ ನೀನು ಇಲ್ಲಿಗೆ ಆಗಮಿಸಿದರೆ ಕ್ರುದ್ಧನಾದ ನಾನು ಉಗ್ರವಾದ ಕಣ್ಣಿನಿಂದಲೇ ನಿನ್ನ ಭಸ್ಮ ಮಾಡುತ್ತೇನೆ. ಇಂದ್ರದೇವ ಅವನು ಹೇಳಿದ ಈ ಮಾತನ್ನು ಗಮನಿಸು.
ಇಂದ್ರಃ
ತ್ವಮೇವಾನ್ಯಾನ್ ದಹಸೇ ಜಾತವೇದೋ
ನ ಚ ತ್ವದನ್ಯೋ ವಿದ್ಯತೇ ಭಸ್ಮಕರ್ತಾ |
ತ್ವತ್ಸಂಸ್ಪರ್ಶಾತ್ ಸರ್ವಲೋಕೋ ಬಿಭೇತಿ
ನ ಶ್ರದ್ದೇಯಂ ಭಾಷಸೇ ಹವ್ಯವಾಹ ॥27॥
ಇಂದ್ರ ಹವಿಷ್ಯಾನ್ನವನ್ನು ಒಯ್ಯುವ ಜಾತವೇದಸನೇ, ನಂಬಿಕೆಗೆ ಅರ್ಹವಲ್ಲದ ಮಾತನ್ನು ನೀನು ಆಡುತ್ತಿರುವೆ. ಕಾರಣ ಎಲ್ಲರನ್ನು ದಹಿಸುವ ವ್ಯಕ್ತಿತ್ವ ನಿನ್ನದು. ಸಮಗ್ರ ವಸ್ತುಗಳೂ ನಿನ್ನಿಂದ ಭಸ್ಮವನ್ನು ಹೊಂದುತ್ತವೆ ವಿನಾ ನಿನ್ನನ್ನು ಭಸ್ಮ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ನಿನ್ನ ಸ್ಪರ್ಶಮಾತ್ರದಿಂದ ಲೋಕಗಳು ಭಯ ಹೊಂದುತ್ತವೆ. ಆದ್ದರಿಂದ ಸಂವರ್ತನು ನಿನ್ನನ್ನು ಸುಡಲು ಸಮರ್ಥನಲ್ಲ. ಅವನ ಮಾತಿಗೆ ನೀನು ಭಯಪಡಬೇಕಾಗಿಲ್ಲ.
ಅಗ್ನಿಃ
ದಿವಂ ದೇವೇಂದ್ರ ಪೃಥಿವೀಂ ಚ ಸರ್ವಾಂ
ಸಂವೇಷ್ಟಯೇಸ್ತ್ವಂ ಸ್ವಬಲೇನೈವ ಶಕ್ರ |
ಏವಂವಿಧಸ್ಯೇಹ ಸ ಯಸ್ತವಾಸೌ
ಕಥಂ ವೃತ್ರಸ್ತ್ರಿದಿವಂ ಪ್ರಾಗ್ಜಹಾರ ॥28॥
ಅಗ್ನಿ ದೇವೇಂದ್ರನೇ, ನೀನು ನಿನ್ನ ಬಾಹುಬಲದಿಂದ ಸಮಗ್ರ ಭೂಮಂಡಲವನ್ನೂ, ಸ್ವರ್ಗವನ್ನೂ ಚಾಪೆಯಂತೆ ಸುತ್ತಿಕೊಂಡಿರುವೆ. ಇಂತಹ ನಿನ್ನನ್ನೂ ಗೆದ್ದು ವೃತ್ರಾಸುರನು ಸ್ವರ್ಗವನ್ನು ಹೊಂದಿದನು. ಆದ್ದರಿಂದ ಬ್ರಾಹ್ಮಣನ ವಿಷಯದಲ್ಲಿ ನಾನು ಭಯಪಡುತ್ತೇನೆ.
ಇಂದ್ರಃ
ನಾದಂಡಕೋ ದಂಡಯಾನೋಽಸ್ಮ್ಯಲಿಂಗಾನ್
ನ ಕಾರುಸೋಮಂ ಪ್ರಪಿಬಾಮಿ ವಹ್ನೇ |
ನ ಕಾರುರ್ವೈ ವಿಸೃಜಾಮಿ ವಜ್ರಂ
ಕೋ ಮೇಽಸುಖಾಯ ಪ್ರಹರೇನ್ಮನುಷ್ಯಃ ॥29॥
ಇಂದ್ರ ನಾನು ದಂಡನೆ ನೀಡುವುದಿಲ್ಲ ಎಂದಿಲ್ಲ. ಅವರವರಿಗೆ ಯೋಗ್ಯವಾದ ಚಿಹ್ನೆಯನ್ನು ಧರಿಸದಿದ್ದಲ್ಲಿ ಅವರನ್ನು ದಂಡಿಸುತ್ತೇನೆ. ಬಡಿಗನಿಂದ ಮುಟ್ಟಲ್ಪಟ್ಟ ಸೋಮರಸವನ್ನು ನಾನೆಂದೂ ಪಾನ ಮಾಡುವುದಿಲ್ಲ. ನನಗೆ ಅಸುಖವನ್ನುಂಟು ಮಾಡಲು ನನ್ನನ್ನು ಪ್ರಹರಿಸುವ ಮನುಷ್ಯರು ಯಾರಿದ್ದಾರೆ? ಬಲಹೀನರ ಮೇಲೆ ವಜ್ರಾಯುಧವನ್ನು ನಾನು ಪ್ರಹರಿಸುವುದಿಲ್ಲ.
ಪ್ರವ್ರಾಜಯೇಯಂ ಕಾಲಕೇಯಾನ್ ಪೃಥಿವ್ಯಾಮ್
ಅಪಾಕರ್ಷನ್ ದಾನವಾನಂತರಿಕ್ಷಾತ್ |
ದಿವಃ ಪ್ರಹ್ಲಾದಂ ವ್ಯಥಮಾನಂ ನಯೇತ
ಕೋ ಮೇಽಸುಖಾಯ ಪ್ರಹರೇತಾದ್ಯ ಮರ್ತ್ಯಃ ॥30॥
ಕಾಲಕೇಯಾದಿ ರಾಕ್ಷಸರನ್ನು ಆಕಾಶದಿಂದ ಸೆಳೆದು ಭೂಮಿಯ ಮೇಲೆ ಹಾಕಿದೆನು. ಪ್ರಹ್ಲಾದನಿಗೆ ಪ್ರಕೃಷ್ಟವಾದ ಸ್ವರ್ಗ ಸುಖವನ್ನು ನನ್ನನ್ನು ಬಿಟ್ಟು ಬೇರೆ ಯಾರಿಂದ ಕೊಡಲು ಸಾಧ್ಯ? ಇಂತಹ ನನಗೆ ಅಸುಖವನ್ನು ನೀಡಲು ನನ್ನನ್ನು ಪ್ರಹರಿಸುವ ಮನುಷ್ಯರು ಯಾರಿದ್ದಾರೆ?
ಅಗ್ನಿಃ
ಯತ್ರ ಶರ್ಯಾತಿಂ ಚ್ಯವನೋ ಯಾಜಯಿಷ್ಯನ್
ಸಹಾಶ್ವಿಭ್ಯಾಂ ಸೋಮಮೇಕೋಽಪ್ಯಗೃಹ್ಣಾತ್ |
ನ ತ್ವಂ ಕ್ರುದ್ಧಃ ಪ್ರತ್ಯಷೇಧೀಃ ಪುರಸ್ತಾತ್
ಶರ್ಯಾತಿಯಜ್ಞಂ ಸ್ಮರ ತಂ ಮಹೇಂದ್ರ ॥31॥
ಅಗ್ನಿ ಮಹೇಂದ್ರನೇ, ಶರ್ಯಾತಿಯ ಯಜ್ಞವನ್ನು ನೆನಪಿಸಿಕೊ. ಚ್ಯವನನು ಶರ್ಯಾತಿಗೆ ಯಜ್ಞವನ್ನು ಮಾಡಿಸುತ್ತಿದ್ದನು. ಈ ಮೊದಲು ನೀನು ಅಶ್ವಿನೀದೇವತೆಗಳಿಗೆ ಸೋಮರಸವನ್ನು ಯಾರೂ ಅರ್ಪಿಸಬಾರದೆಂದು ನಿಷೇಧ ಹೇರಿದ್ದೆ. ಆದರೆ ಚ್ಯವನನ ಪ್ರಭಾವದಿಂದ ನಿನ್ನನ್ನೂ ಮೀರಿ ಅಶ್ವಿನೀದೇವತೆಗಳು ಸೋಮಪಾನ ಮಾಡಿದ್ದಾರೆ.
ವಜ್ರಂ ಗೃಹೀತ್ವಾ ಚ ಪುರಂದರ ತ್ವಂ
ಸಂಪ್ರಹಾರ್ಷೀಶ್ಚ್ಯವನಸ್ಯಾತಿಘೋರಮ್ |
ಸ ತೇ ವಿಪ್ರಃ ಸಹ ವಜ್ರೇಣ ಬಾಹುಮ್
ಅಪಾಗೃಹ್ಣಾತ್ ತಪಸಾ ಜಾತಮನ್ಯುಃ ॥32॥
ಪುರಂದರನೇ, ನೀನು ಆ ವಿಷಯವನ್ನು ತಿಳಿದು ಕ್ರುದ್ಧನಾಗಿ, ಘೋರವಾದ ವಜ್ರಾಯುಧವನ್ನು ಎತ್ತಿ ಚ್ಯವನರನ್ನು ಪ್ರಹರಿಸಲು

ಉದ್ಯುಕ್ತನಾದೆ. ಆದರೆ ಕುಪಿತನಾದ ಬ್ರಹರ್ಷಿಯು ತನ್ನ ತಪಸ್ಸಿನಿಂದ ವಜ್ರಾಯುಧದೊಡನೆ ನಿನ್ನ ತೋಳನ್ನು ಸ್ತಂಭಿಸಿದನು.
ವ್ಯಾಖ್ಯಾನ ವಿಶೇಷ ಚ್ಯವನರನ್ನು ಮೀರುವ ಸಾಮರ್ಥ್ಯವು ಇಂದ್ರನಲ್ಲಿದ್ದರೂ ಬ್ರಹ್ಮರ್ಷಿಗಳಿಗೆ ಮಹತ್ವವನ್ನು ನೀಡುವ ಉದ್ದೇಶದಿಂದ ಚ್ಯವನರು ತನ್ನ ಬಾಹುಗಳನ್ನು ಸ್ತಂಭಿಸಿದಾಗ ಅವರ ಮಂತ್ರಶಕ್ತಿಯ ಮಹತ್ವವನ್ನು ಸಾರಲು ಇಂದ್ರನು ಸ್ತಬ್ಧನಾದಂತೆ ನಟಿಸಿದನು. ಬ್ರಹ್ಮಬಲಕ್ಕೆ ದೇವತೆಗಳೂ ಮಹತ್ವವನ್ನು ನೀಡುತ್ತಾರೆ ವಿನಾ ಚ್ಯವನರಿಂದ ಇಂದ್ರನು ಪರಾಜಿತನಾಗಲಿಲ್ಲ ಎಂದು ಜ್ಞಾನಿಗಳ ಅಭಿಪ್ರಾಯ.

ತತೋ ರೋಷಾತ್ ಸರ್ವತೋ ಘೋರರೂಪಂ
ಸಂವರ್ತಂ ತೇ ಜನಯಾಮಾಸ ಭೂಯಃ |
ಮದಂ ನಾಮ್ನಾ ಚಾಸುರಂ ವಿಶ್ವರೂಪಂ
ಯಂ ತ್ವಂ ದೃಷ್ಟ್ವಾ ಚಕ್ಷುಷೀ ಸನ್ನ್ಯಮೀಲ್ಯಃ ॥33॥

ಅನಂತರ ಚ್ಯವನರು ರೋಷದಿಂದ ಘೋರರೂಪನಾಗಿ ಕಾಣುತ್ತಿದ್ದ ಪ್ರಳಯ ಸದೃಶನಾದ ಮದನೆಂಬ ಅಸುರ ಶತ್ರುವನ್ನು ಸೃಷ್ಟಿಸಿದರು. ಅವನನ್ನು ನೋಡಿದ ಕೂಡಲೇ ನೀನು ನಿನ್ನ ಕಣ್ಣುಗಳನ್ನು ಮುಚ್ಚಿಕೊಂಡೆ.

ಹನುರೇಕಾ ಜಗತೀಸ್ಥಾ ತಥೈಕಾ
ದಿವಂ ಗತಾ ಮಹತೋ ದಾನವಸ್ಯ |
ಸಹಸ್ರಂ ದಂತಾನಾಂ ಶತಯೋಜನಾನಾಂ
ಸುತೀಕ್ಷ್ಣಾನಾಂ ಘೋರರೂಪಂ ಬಭೂವ ॥34॥

ಆ ಮದಾಸುರನ ಒಂದು ದವಡೆಯು ಭೂಮಿಯಲ್ಲಿತ್ತು. ಮತ್ತೊಂದು ಸ್ವರ್ಗದಲ್ಲಿತ್ತು. ಆ ರಾಕ್ಷಸನಿಗೆ ಮೂರು ಯೋಜನಗಳಷ್ಟು ಉದ್ದವಾದ ಅತ್ಯಂತ ಉಗ್ರವಾದ ಹಲ್ಲುಗಳಿದ್ದವು. ಆದ್ದರಿಂದಾಗಿ ರಾಕ್ಷಸನ ರೂಪವು ಮತ್ತೂ ಭಯಂಕರವಾಗಿ ಕಾಣಿಸುತ್ತಿತ್ತು.

ವೃತ್ತಾಃ ಸ್ಥೂಲ ರಾಜತಸ್ತಂಭವರ್ಣಾ
ದಂಷ್ಟ್ರಾಶ್ಚತಸ್ರೋ ದ್ವೇ ಶತೇ ಯೋಜನಾನಾಮ್ |
ಸ ತ್ವಾಂ ದಂತಾನ್ ವಿದಶನ್ನಭ್ಯಧಾವನ್
ಜಿಘಾಂಸಯಾ ಶೂಲಮುದ್ಯಮ್ಯ ಘೋರಮ್ ॥35॥

ಆ ಮದಾಸುರನ ನಾಲ್ಕು ಕೋರೆಹಲ್ಲುಗಳು ದುಂಡಾಗಿಯೂ, ಪ್ರಕಾಶಮಾನವಾಗಿಯೂ ಬೆಳ್ಳಿ ಕಂಬದಂತೆ ಕಾಣುತ್ತಿದ್ದವು. ಆ ನಾಲ್ಕು ಕೋರೆಹಲ್ಲುಗಳು ಇನ್ನೂರು ಯೋಜನದಷ್ಟು ವಿಸ್ತಾರವಾಗಿದ್ದವು. ಅಂತಹ ರಾಕ್ಷಸನು ಭಯಂಕರವಾದ ತ್ರಿಶೂಲವನ್ನು ಹಿಡಿದು ನಿನ್ನನ್ನು ಸಂಹರಿಸುತ್ತೇನೆ ಎಂಬ ಬಯಕೆಯಿಂದ ಹಲ್ಲುಕಡಿಯುತ್ತಾ ಬೆನ್ನಟ್ಟಿ ಬಂದನು.

ತಂ ನಾಪಶ್ಯಸ್ತ್ವಂ ತದಾ ಘೋರರೂಪಂ
ಸರ್ವೇ ತ್ವದನ್ಯೇ ದದೃಶುರ್ದರ್ಶನೀಯಮ್ |
ಯಸ್ಮಾದ್ ಭೀತಃ ಪ್ರಾಂಜಲಿಸ್ತ್ವಂ ಮಹರ್ಷಿಂ
ಗಚ್ಛೇಃ ಶೀಘ್ರಂ ಶರಣಂ ದಾನವಘ್ನ ॥36॥

ದಾನವಾಂತಕನೇ, ಆ ಘೋರರೂಪಿಯಾದ ಮದಾಸುರನ ರೂಪವನ್ನು ನಿನ್ನಿಂದ ನೋಡಲಾಗಲಿಲ್ಲ. ಹೆದರಿದ ನಿನ್ನನ್ನು ಎಲ್ಲರೂ ನೋಡುತ್ತಲೇ ಇದ್ದರು. ಮದಾಸುರನಿಂದ ಭಯಗೊಳಿಸಲ್ಪಟ್ಟ ನೀನು ಕೈಜೋಡಿಸಿಕೊಂಡು ಚ್ಯವನ ಮಹರ್ಷಿಗೆ ಶರಣು ಹೋದೆ.

ಕ್ಷಾತ್ರಾದೇವ ಬ್ರಹ್ಮಬಲಂ ಗರೀಯೋ
ನ ಬ್ರಹ್ಮತಃ ಕಿಂಚಿದನ್ಯದ್ ಗರೀಯಃ |
ಸೋಽಹಂ ಜಾನನ್ ಬ್ರಹ್ಮತೇಜೋ ಯಥಾವತ್
ನ ಸಂವರ್ತಂ ಗಂತುಮಿಚ್ಛಾಮಿ ಶಕ್ರ ॥37॥

ಆದ್ದರಿಂದ ಶಾಸ್ತ್ರಬಲಕ್ಕಿಂತಲೂ ಬ್ರಹ್ಮಬಲವು ಶ್ರೇಷ್ಠವಾದುದು. ಬ್ರಹ್ಮಬಲವನ್ನು ಮೀರುವ ಶಕ್ತಿ ಬೇರೆ ಯಾವ ಶಕ್ತಿಗಳಿಗೂ ಇರುವುದಿಲ್ಲ. ಇಂತಹ ಬ್ರಹ್ಮತೇಜಸ್ಸಿನ ಬಲವನ್ನು ಯಥಾಯೋಗ್ಯವಾಗಿ ತಿಳಿದಿರುವ ನಾನು ಸಂವರ್ತನನ್ನು ಜಯಿಸಲು ಬಯಸುವುದಿಲ್ಲ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಗ್ನಿ-ಶಕ್ರಸಂವಾದೋ ನಾಮ ನವಮೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

## ಹತ್ತನೆಯ ಅಧ್ಯಾಯ

ಇಂದ್ರನು ಗಂಧರ್ವರಾಜನನ್ನು ಕಳುಹಿಸಿ ಹೆದರಿಸಿದುದು.
ಸಂವರ್ತನು ಮಂತ್ರಬಲದಿಂದ ಇಂದ್ರಾದಿದೇವತೆಗಳನ್ನು ಕರೆಸಿ ಯಜ್ಞವನ್ನು ಸಂಪೂರ್ಣಗೊಳಿಸಿದುದು.

ಇಂದ್ರಃ
ಏವಮೇತದ್ ಬ್ರಹ್ಮಬಲಂ ಗರೀಯೋ
ನ ಬ್ರಹ್ಮತಃ ಕಿಂಚಿದನ್ಯದ್ ಗರೀಯಃ |
ಆವಿಕ್ಷಿತಸ್ಯೇಹ ಬಲಂ ನ ಮೃಷ್ಯೇ

वಜ್ರಮಸ್ಮೈ ಪ್ರಹರಿಷ್ಯಾಮಿ ಘೋರಮ್ ॥1॥
ಇಂದ್ರ ಅಗ್ನಿದೇವನೇ, ನೀನು ಹೇಳಿದ ಮಾತು ಸತ್ಯ. ಬ್ರಹ್ಮಬಲವೇ ಎಲ್ಲ ಬಲಗಳಿಗಿಂತಲೂ ಮಿಗಿಲಾಗಿದೆ. ಬ್ರಾಹ್ಮಣನಿಗಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ. ಆದರೆ ಆವಿಕ್ಷಿತನ ಮಗನಾದ ಮರುತ್ತನ ಬಲವನ್ನು ನಾನಂತೂ ಸಹಿಸಲಾರೆ. ಆದ್ದರಿಂದ ಅವನ ಮೇಲೆ ಘೋರವಾದ ಈ ವಜ್ರಾಯುಧವನ್ನು ಪ್ರಯೋಗಿಸುತ್ತೇನೆ.
ಧೃತರಾಷ್ಟ್ರ ಗಚ್ಛ ಪ್ರಹಿತೋ ಮರುತ್ತಂ
ಸಂವರ್ತೇನ ಸಹಿತಂ ತಂ ವದಸ್ವ ।
ಬೃಹಸ್ಪತಿಂ ತ್ವಮುಪಶಿಕ್ಷಸ್ವ ರಾಜನ್
ವಜ್ರಂ ವಾ ತೇ ಪ್ರಹರಿಷ್ಯಾಮಿ ಘೋರಮ್ ॥2॥
ಇಂದ್ರನು ಹೀಗೆ ಹೇಳಿ ತನ್ನ ಬಳಿ ಇರುವ ಧೃತರಾಷ್ಟ್ರನೆಂಬ ಗಂಧರ್ವನನ್ನು ಕುರಿತು ಹೇಳಿದನು ಧೃತರಾಷ್ಟ್ರ, ನನ್ನಿಂದ ಕಳುಹಿಸಲ್ಪಟ್ಟ ನೀನು ಈಗಲೇ ಮರುತ್ತನ ಯಜ್ಞ ಮಂಟಪಕ್ಕೆ ಸಾಗು. ಸಂವರ್ತನ ಜೊತೆಯಲ್ಲಿರುವ ಮರುತ್ತನಿಗೆ ನಾನು ಹೇಳಲಿರುವ ಮಾತನ್ನು ಹೇಳು- `ಮಹಾರಾಜನೇ, ಬೃಹಸ್ಪತಿಯನ್ನು, ಉಪಾಧ್ಯಾಯನನ್ನಾಗಿ ಮಾಡಿಕೊಂಡು ಯಜ್ಞಕರ್ಮದೀಕ್ಷಿತನಾಗು. ಹೀಗೆ ಮಾಡದಿದ್ದಲ್ಲಿ ನಿನ್ನ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತೇನೆ' ಎಂದು.
ವ್ಯಾಸಃ
ತತೋ ಗತ್ವಾ ಧೃತರಾಷ್ಟ್ರೋ ನರೇಂದ್ರಂ
ಪ್ರೋವಾಚೇದಂ ವಚನಾದ್ ವಾಸವಸ್ಯ ॥3॥
ವ್ಯಾಸರು ನರೇಂದ್ರನೇ, ಇಂದ್ರನ ಮಾತಿನಂತೆ ಧೃತರಾಷ್ಟ್ರನೆಂಬ ಗಂಧರ್ವ ರಾಜನು ಮರುತ್ತನ ಬಳಿ ಹೋಗಿ ಇಂದ್ರನು ಹೇಳಿದ ಮಾತನ್ನು ಹೇಳಿದನು.
ಧೃತರಾಷ್ಟ್ರಃ
ಗಂಧರ್ವಂ ಮಾಂ ಧೃತರಾಷ್ಟ್ರಂ ನಿಬೋಧ
ತ್ವಾಮಾಗತಂ ವಕ್ತುಕಾಮಂ ನರೇಂದ್ರ ।
ಐಂದ್ರಂ ವಾಕ್ಯಂ ಶೃಣು ಮೇ ರಾಜಸಿಂಹ
ಯತ್ಪ್ರಾಹ ಲೋಕಾಧಿಪತಿರ್ಮಹಾತ್ಮಾ ॥4॥
ಧೃತರಾಷ್ಟ್ರ ಮರುತ್ತರಾಜನೇ, ನನ್ನನ್ನು ಧೃತರಾಷ್ಟ್ರನೆಂಬ ಹೆಸರಿನ ಗಂಧರ್ವನೆಂದು ತಿಳಿ. ನಿನಗೆ ಒಂದು ವಿಷಯವನ್ನು ತಿಳಿಸುವ ಬಯಕೆಯಿಂದ ನಿನ್ನ ಸನಿಹಕ್ಕೆ ಬಂದಿರುವೆನು. ಲೋಕಾಧಿಪತಿಯಾದ, ಮಹಾತ್ಮನಾದ ಇಂದ್ರನು ನನ್ನ ಬಳಿ ಹೇಳಿರುವ ಮಾತನ್ನು ತಿಳಿಸುತ್ತೇನೆ. ಏಕಾಗ್ರತೆಯಿಂದ ಕೇಳಿಸಿಕೋ
ಬೃಹಸ್ಪತಿಂ ಯಾಜಕಂ ತ್ವಂ ವೃಣೀಷ್ವ
ವಜ್ರಂ ವಾ ತೇ ಪ್ರಹರಿಷ್ಯಾಮಿ ಘೋರಮ್ ।
ವಚಶ್ಚೇದೇತನ್ನ ಕರಿಷ್ಯಸೇ ಮೇ
ಪ್ರಾಹೈತದೇತಾವದಚಿಂತ್ಯಕರ್ಮಾ ॥5॥
ಬೃಹಸ್ಪತಿಂ ಯಾಜಯಿತುಂ ನ ಚೇಚ್ಛೇದ್
ವಜ್ರಂ ತಸ್ಮೈ ಪ್ರಹರಿಷ್ಯಾಮಿ ಘೋರಮ್ ॥6॥
ಅಚಿಂತ್ಯಕರ್ಮನಾದ ಇಂದ್ರನು ಹೀಗೆ ಹೇಳಿದ್ದಾನೆ `ಮರುತ್ತನೇ, ನೀನು ಬೃಹಸ್ಪತಿಯನ್ನು ಯಾಜಕನನ್ನಾಗಿ ವರಿಸು. ನನ್ನ ಈ ಮಾತನ್ನು ಕೇಳದಿದ್ದಲ್ಲಿ ಘೋರವಾದ ವಜ್ರಾಯುಧವು ನಿನ್ನ ಮೇಲೆ ಪ್ರಯೋಗಿಸಲ್ಪಡುತ್ತದೆ'.
ಮರುತ್ತಃ
ತ್ವಂ ಚೈವ ತದ್ವೇತ್ಥ ಪುರುಹೂತಶ್ಚ ಸಾಧ್ಯಾ
ವಿಶ್ವೇ ದೇವಾ ವಸವಶ್ಚಾಶ್ವಿನೌ ಚ ।
ಮಿತ್ರದ್ರೋಹೇ ನಿಷ್ಕೃತಿರ್ವೈ ಯಥೇಹ
ನಾಸ್ತೀತಿ ಲೋಕೇಷು ಸದೈವ ವಾದಃ ॥7॥
ಮರುತ್ತ ಧೃತರಾಷ್ಟ್ರನೇ, ಮಿತ್ರದ್ರೋಹವನ್ನು ಎಸಗಿದವರಿಗೆ ಲೋಕದಲ್ಲಿ ಆ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಮಹಾಪಾತಕವು ಮಿತ್ರದ್ರೋಹವಾಗಿದೆ. ಈ ವಿಷಯವನ್ನು ನೀನು ಅರಿತಿರುವಿ. ಈ ವಿಷಯವು ಪುರಂದರ, ವಿಶ್ವೇದೇವತೆಗಳು, ವಸುಗಳು, ಅಶ್ವಿನೀದೇವತೆಗಳು ಇವರೆಲ್ಲರಿಗೂ ತಿಳಿದಿದೆ.
ಬೃಹಸ್ಪತಿರ್ಯಾಜಯಿತಾ ಮಹೇಂದ್ರಂ
ದೇವಂ ಶ್ರೇಷ್ಠಂ ವಜ್ರಭೃತಾಂ ವರಿಷ್ಠಮ್ ।
ಸಂವರ್ತೋ ಮಾಂ ಯಾಜಯಿತಾऽದ್ಯ ರಾಜನ್
ನ ತೇ ವಾಕ್ಯಂ ತಸ್ಯ ವಾ ರೋಚಯಾಮಿ ॥8॥
ದೇವಶ್ರೇಷ್ಠನಾದ, ವಜ್ರಧಾರಿಗಳಲ್ಲಿ ವರಿಷ್ಠನಾದ ಮಹೇಂದ್ರನಿಗೆ ಬೃಹಸ್ಪತಿಯು ಯಜ್ಞವನ್ನು ಮಾಡಿಸಲಿ. ಈಗ ಸಂವರ್ತನು ನನಗೆ ಯಜ್ಞವನ್ನು ಮಾಡಿಸುತ್ತಾನೆ. ಇಷ್ಟು ಬಿಟ್ಟು; ನಿನ್ನ ಮಾತಾಗಲಿ, ದೇವೇಂದ್ರನ ಮಾತಾಗಲಿ ನನಗೆ ರುಚಿಸುತ್ತಿಲ್ಲ.
ಧೃತರಾಷ್ಟ್ರಃ
ಘೋರೋ ನಾದಃ ಶ್ರೂಯತೇ ವಾಸವಸ್ಯ
ನಭಸ್ಥಲೇ ಗರ್ಜತೋ ರಾಜಸಿಂಹ ।

ವ್ಯಕ್ತಂ ವಜ್ರಂ ಮೋಕ್ಷ್ಯತೇ ತೇ ಮಹೇಂದ್ರಃ
ಕ್ಷೇಮಂ ರಾಜಂಶ್ಚಿಂತ್ಯತಾಮೇಷ ಕಾಲಃ ॥9॥
ಧೃತರಾಷ್ಟ್ರ ರಾಜಸಿಂಹನೇ, ಇಂದ್ರನ ಘೋರವಾದ ನಾದವು ಆಕಾಶದಲ್ಲಿ ಕೇಳಿಬರುತ್ತಿದೆ. ಮಹೇಂದ್ರನು ನಿನ್ನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಲು ಉದ್ಯುಕ್ತನಾಗಿದ್ದಾನೆ. ನಿನ್ನ ಕ್ಷೇಮದ ಬಗ್ಗೆ ಯೋಚಿಸು. ಯೋಚಿಸಿ ಕಾರ್ಯನಿರತನಾಗಲು ಇದು ಸಕಾಲವಾಗಿದೆ.
ವ್ಯಾಸಃ
ಇತ್ಯೇವಮುಕ್ತೋ ಧೃತರಾಷ್ಟ್ರೇಣ ರಾಜನ್
ಶ್ರುತ್ವಾ ನಾದಂ ನದತೋ ವಾಸವಸ್ಯ ।
ತಪೋನಿತ್ಯಂ ಬ್ರಹ್ಮವಿದಾಂ ವರಿಷ್ಠಂ
ಸಂವರ್ತಂ ತಂ ಜ್ಞಾಪಯಾಮಾಸ ಕಾರ್ಯಮ್ ॥10॥
ವ್ಯಾಸರು ಯುಧಿಷ್ಠಿರನೇ, ಧೃತರಾಷ್ಟ್ರನು ಹೀಗೆ ಹೇಳುತ್ತಿರುವಾಗಲೇ ಇಂದ್ರದೇವನ ಗರ್ಜನೆಯ ಶಬ್ದವನ್ನು ಮರುತ್ತನು ಕೇಳಿಸಿಕೊಂಡು ಸಂವರ್ತನ ಬಳಿ ಸಾಗಿದನು. ಮಾಡಬೇಕಾದ ಕಾರ್ಯವೇನೆಂದು ವಿಜ್ಞಾಪಿಸಿಕೊಂಡನು.
ಮರುತ್ತಃ
ಯಸ್ಯಾತ್ಮಾನಂ ಪ್ಲವಮಾನಂ ತ್ವಮಾರಾದ್
ಅದೂರತೋ ದೇವರಾಜಂ ತ್ವಮದ್ಯ ।
ಪ್ರಪದ್ಯೇಽಹಂ ಶರ್ಮ ವಿಪ್ರೇಂದ್ರ ಭೂಯಃ
ಪ್ರಯಚ್ಛ ತಸ್ಮಾದಭಯಂ ವಿಪ್ರಮುಖ್ಯ ॥11॥
ಅಯಮಾಯಾತಿ ವೈ ವಜ್ರೀ ದಿಶೋ ವಿದ್ಯೋತಯನ್ ದಶ ।
ಅಮಾನುಷೇಣ ನಾದೇನ ಸದಸ್ಯಾನ್ ಭೀಷಯನ್ನಿವ ॥12॥
ಮರುತ್ತ ವಿಪ್ರಶ್ರೇಷ್ಠನೇ, ಇಂದ್ರದೇವನು ನನ್ನನ್ನು ಇನ್ನೊಂದು ಕ್ರಮದಲ್ಲಿ ಹೆದರಿಸುತ್ತಿದ್ದಾನೆ. ಆಕಾಶದ ಮಾರ್ಗದಲ್ಲಿ ಆಗಮಿಸುತ್ತಿದ್ದಾನೆ. ಈಗ ಅವನು ಕಾಣಿಸುತ್ತಿಲ್ಲ. ವಿಪೇಂದ್ರನೇ, ನಿನ್ನಿಂದ ನನಗೆ ಸುಖವಾಗಬೇಕೆಂದು ಬಿನ್ನವಿಸುತ್ತೇನೆ. ಆದ್ದರಿಂದ ನನಗೆ ಅಭಯಪ್ರದಾನ ಮಾಡು. ಹತ್ತುದಿಕ್ಕುಗಳನ್ನು ಪ್ರಕಾಶಗೊಳಿಸುತ್ತಾ ಪುರಂದರನು ವಜ್ರಾಯುಧಧಾರಿಯಾಗಿ ಆಗಮಿಸುತ್ತಿದ್ದಾನೆ. ಅಮಾನುಷವಾದ, ಘೋರವಾದ ಅವನ ನಿನಾದದಿಂದ ನಮ್ಮ ಯಜ್ಞದ ಸದಸ್ಯರೆಲ್ಲರೂ ಭಯಗ್ರಸ್ಥರಾಗಿದ್ದಾರೆ.
ಸಂವರ್ತಃ
ಭಯಂ ಶಕ್ರಾದ್ ವ್ಯೇತು ತೇ ರಾಜಸಿಂಹ
ಪ್ರಣೋತ್ಸ್ಯೇಽಹಂ ಭಯಮೇತತ್ ಸುಘೋರಮ್ ।
ಸಂಸ್ತಂಭಿನ್ಯಾ ವಿದ್ಯಯಾ ವಜ್ರಮೇವ
ಮಾ ಭೈಸ್ತ್ವಮಸ್ಮಾದ್ ಭವ ಚಾಪಿ ಪ್ರತೀತಃ ॥13॥
ಸಂವರ್ತ ರಾಜಸಿಂಹನೇ, ಇಂದ್ರನಿಂದ ಉತ್ಪನ್ನವಾದ ನಿನ್ನ ಭಯವು ಉಪಶಮನ ಹೊಂದಲಿ. ಸಂಸ್ತಂಭಿನಿ ಎಂಬ ವಿದ್ಯೆಯಿಂದ ಈ ಕ್ಷಣದಲ್ಲಿಯೇ ಆ ಘೋರವಾದ ನಿನ್ನ ಭಯವನ್ನು ಪರಿಹರಿಸುತ್ತೇನೆ. ನನ್ನನ್ನು ನಂಬು. ಇಂದ್ರನ ಪರಾಭವಕ್ಕೆ ಹೆದರಬೇಡ.
ಅಹಂ ಸಂಸ್ತಂಭಯಿಷ್ಯಾಮಿ ಮಾ ಭೈಸ್ತ್ವಂ ಶಕ್ರತೋ ನೃಪ ।
ಸರ್ವೇಷಾಮೇವ ದೇವಾನಾಂ ಕ್ಷಪಿತಾನ್ಯಾಯುಧಾನಿ ಮೇ ॥14॥
ದಿಶೋ ವಜ್ರಂ ವ್ರಜತಾದ್ ವಾಯುರೇತು
ವರ್ಷಂ ಭೂತ್ವಾ ವರ್ಷತಾತ್ ಕಾನನೇಷು ।
ಆಪಃ ಪ್ಲವಂತ್ವಂತರಿಕ್ಷಾದ್ ವೃಥಾ ಚ
ಸೌದಾಮಿನೀ ವಿದ್ಯತೇ ಮಾ ಬಿಭೇಸ್ತ್ವಮ್ ॥15॥
ನರೇಶ್ವರನೇ, ನಾನು ಇಂದ್ರನನ್ನು ಸ್ತಂಭನಗೊಳಿಸುತ್ತೇನೆ. ಆದ್ದರಿಂದ ನೀನು ಅವನಿಂದ ಭಯಪಡಬೇಕಾಗಿಲ್ಲ. ಎಲ್ಲ ದೇವತೆಗಳ ಆಯುಧವನ್ನೂ ಶಕ್ತಿರಹಿತವನ್ನಾಗಿ ಮಾಡಿದ್ದೇನೆ. ವಜ್ರಾಯುಧವು ಎಲ್ಲ ದಿಕ್ಕುಗಳಿಗೂ ಹೋಗಲಿ. ಗಾಳಿಯು ಬೀಸುವಂತಾಗಲಿ. ಇಂದ್ರನೇ ವೃಷ್ಟಿರೂಪನಾಗಿ ಅರಣ್ಯದಲ್ಲಿ ಮಳೆಯನ್ನು ಸುರಿಸಲಿ. ಅಂತರಿಕ್ಷದಲ್ಲಿ ವ್ಯರ್ಥವಾಗಿ ನೀರು ತುಂಬಿಕೊಳ್ಳಲಿ. ಇವುಗಳ ಜೊತೆಗೆ ಮಿಂಚು ಮಿಂಚಲಿ. ನೀನು ಮಾತ್ರ ಭಯಪಡಬೇಡ.
ಅಥೋ ವಹ್ನಿಸ್ತ್ರಾತು ವಾ ಸರ್ವಶಸ್ತೇ
ಕಾಮಾದ್ ವರ್ಷಂ ವರ್ಷತು ಕಾಮತೋ ವಾ ।
ವಜ್ರಂ ತಥಾ ಸ್ಥಾಪಯಿತಾ ಚ ವಾಯುಃ
ಮಹಾಘೋರಂ ಪ್ಲವಮಾನಂ ಜಲೌಘೈಃ ॥16॥
ಅಗ್ನಿದೇವನು ನಿನ್ನನ್ನು ಎಲ್ಲ ಕಡೆಯಿಂದಲೂ ರಕ್ಷಿಸಲಿ. ನಿನ್ನ ಕಾಮನೆಗಳನ್ನು ಇಂದ್ರನು ಮಳೆಯಂತೆ ಸುರಿಸಲಿ. ನೀರಿನ ಜೊತೆಗೆ ತೇಲಿಹೋಗುತ್ತಿರುವ ನಿನ್ನನ್ನು ಸಂಹರಿಸಲು ಪ್ರಯೋಗಿಸುತ್ತಿರುವ ವಜ್ರಾಯುಧವನ್ನು ದೇವೇಂದ್ರನು ತನ್ನ ಕೈಯಲ್ಲಿಯೇ ಸ್ಥಿರವಾಗಿ ಧರಿಸುವಂತಾಗಲಿ.
ಮರುತ್ತಃ
ಘೋರಃ ಶಬ್ದಃ ಶ್ರೂಯತೇ ವೈ ಮಹಾಸ್ವನೋ
ವಜ್ರಸ್ಯೈಷ ಸಂಹಿತೋ ಮಾರುತೇನ ।

ಆತ್ಮಾಽಪಿ ಮೇ ಪ್ರವ್ಯಥತೇ ಮುಹುರ್ಮುಹುಃ
ನ ಮೇ ಸ್ವಾಸ್ಥ್ಯಂ ಜಾಯತೇ ಹ್ಯದ್ಯ ವಿಪ್ರ ॥17॥
ಮರುತ್ತ ವಿಪ್ರಶ್ರೇಷ್ಠನೇ, ಬಿರುಗಾಳಿಯ ಜೊತೆಗೆ ಘನಘೋರವಾದ ವಜ್ರಾಯುಧದ ಮಹತ್ತರವಾದ ಶಬ್ದವು ಕೇಳಿಸುತ್ತಿದೆ. ಈ ಶಬ್ದವನ್ನು ಕೇಳಿಸಿಕೊಂಡ ನನ್ನ ಹೃದಯವು ಹೆಜ್ಜೆ ಹೆಜ್ಜೆಗೂ ಬಹಳವಾಗಿ ಖಿನ್ನವಾಗುತ್ತಿದೆ. ಮನಸ್ಸಿನಲ್ಲಿ ಶಾಂತಿಯೇ ಇಲ್ಲವಾಗಿದೆ.
ಸಂವರ್ತಃ
ವಜ್ರಾದುಗ್ರಾದ್ ವ್ಯೇತು ಭಯಂ ತವಾದ್ಯ
ವಾತೋ ಭೂತ್ವಾ ಹನ್ಮಿ ನರೇಂದ್ರ ವಜ್ರಮ್ |
ಭಯಂ ತ್ಯಕ್ತ್ವಾ ವರಮನ್ಯಂ ವೃಣೀಷ್ವ
ಕಂ ತೇ ಕಾಮಂ ತಪಸಾ ಯೋಜಯಾಮಿ ॥18॥
ಸಂವರ್ತ ಇಂದ್ರನೇ, ವಜ್ರಾಯುಧದಿಂದ ಉಂಟಾದ ಭಯವು ಈ ಕ್ಷಣದಲ್ಲಿಯೇ ದೂರವಾಗಲಿ. ನಾನು ಗಾಳಿರೂಪನಾಗಿ ಈ ಕ್ಷಣದಲ್ಲಿಯೇ ವಜ್ರಾಯುಧವನ್ನು ನಾಶಗೊಳಿಸುತ್ತೇನೆ. ಈ ಭಯವನ್ನು ತ್ಯಜಿಸಿದ ನೀನು ಬೇರೆ ಯಾವುದಾದರೂ ವರವನ್ನು ಕೇಳು. ನಿನ್ನ ಇಚ್ಛೆಯನ್ನು ನನ್ನ ಮನಸ್ಸಂಕಲ್ಪದಿಂದಲೇ ಸಾಧಿಸಿಕೊಡುತ್ತೇನೆ. ಏನೆಂಬುದನ್ನು ಹೇಳು.
ಮರುತ್ತಃ
ಇಂದ್ರಃ ಸಾಕ್ಷಾತ್ ಸಹಸಾಽಭ್ಯೇತು ವಿಪ್ರ
ಹವಿರ್ಯಜ್ಞೇ ಪ್ರತಿಗೃಹ್ಣಾತು ಚೈವ |
ಸ್ವಂ ಸ್ವಂ ಹವಿಶ್ಚೈವ ಜುಷಂತು ದೇವಾಃ
ಸುತಂ ಸೋಮಂ ಪ್ರತಿಗೃಹ್ಣಂತು ಚೈವ ॥19॥
ಮರುತ್ತ ಬ್ರಹ್ಮರ್ಷಿಯೇ, ಇಂದ್ರನೇ ಸಾಕ್ಷಾತ್ತಾಗಿ ಇಲ್ಲಿಗೆ ಆಗಮಿಸಿ ನನ್ನ ಯಜ್ಞದ ಹವಿಸ್ಸನ್ನು ಸ್ವೀಕರಿಸಲಿ. ದೇವತೆಗಳೆಲ್ಲರೂ ಅವರವರಿಗೆ ಯೋಗ್ಯವಾದ ಸ್ಥಾನವನ್ನು ಅಲಂಕರಿಸಲಿ. ಆಹುತಿರೂಪದಲ್ಲಿ ಕೊಡುವ ಸೋಮರಸವನ್ನು ಪಾನ ಮಾಡಲಿ.
ಸಂವರ್ತಃ
ಅಯಮಿಂದ್ರೋ ಹರಿಭಿರ್ಯಾತಿ ರಾಜನ್
ದೇವೈಃ ಸರ್ವೈಃ ಸಹಿತೈಃ ಸೋಮಪೀಥೀ |
ಮಂತ್ರಾಹೂತೋ ಯಜ್ಞಮಿಮಂ ಮಯಾಽದ್ಯ
ಪಶ್ಯಸ್ವೈನಂ ಮಂತ್ರವಿತ್ರಸ್ತಕಾಯಮ್ ॥20॥
ಮರುತ್ತನು ಹೀಗೆ ಹೇಳಿದ ನಂತರ ಸಂವರ್ತನು ತನ್ನ ಮಂತ್ರಬಲದಿಂದ ಸಮಸ್ತ ದೇವತೆಗಳನ್ನು ಆವಾಹಿಸುತ್ತಾ ಹೇಳಿದನು `ಮಹಾರಾಜ, ಇಂದ್ರದೇವನು ಸಮಸ್ತ ದೇವತಾ ಪರಿವಾರದಿಂದ ಸ್ತುತಿಸಿಕೊಳ್ಳುತ್ತಾ, ವೇಗದಿಂದ ಚಲಿಸುವ ಕುದುರೆಗಳ ರಥದಲ್ಲಿ ಆಸೀನನಾಗಿ ಆಗಮಿಸುತ್ತಿದ್ದಾನೆ. ಮಂತ್ರಮೂಲಕವಾಗಿ ಆಹ್ವಾನಿತನಾದ ಇಂದ್ರನು ಯಜ್ಞಕ್ಕೆ ಸಮೀಪಿಸಲಿದ್ದಾನೆ. ಮಂತ್ರದಿಂದ ಭಯಗ್ರಸ್ತನಾದ ಆ ಇಂದ್ರನನ್ನು ನೀನೇ ನೋಡು'.
ತತೋ ದೇವೈಃ ಸಹಿತೋ ದೇವರಾಜೋ
ರಥೇ ಯುಕ್ತ್ವಾ ತಾನ್ ಹರೀನ್ ವಾಜಿಮುಖ್ಯಾನ್ |
ಆಯಾದ್ಯಜ್ಞಮಥ ರಾಜ್ಞಃ ಪಿಪಾಸುಃ
ಆವಿಕ್ಷಿತಸ್ಯಾಪ್ರಮೇಯಸ್ಯ ಸೋಮಮ್ ॥21॥
ವ್ಯಾಸರು ಧರ್ಮಜನೇ, ದೇವರಾಜನು ದೇವತೆಗಳಿಂದ ಸಹಿತನಾಗಿ, ಹೊಂಬಣ್ಣದ ಕುದುರೆಗಳಿಂದ ಕೂಡಿದ ರಥದಿಂದ ಆವಿಕ್ಷಿತನ ಮಗನಾದ, ಅಪ್ರಮೇಯನಾದ ಮರುತ್ತನ ಯಜ್ಞಕ್ಕೆ ಸಂಬಂಧಿಸಿದ ಸೋಮರಸವನ್ನು ಪಾನ ಮಾಡಲು ಯಜ್ಞಮಂಟಪಕ್ಕೆ ಆಗಮಿಸಿದನು.
ತಮಾಯಾಂತಂ ಸಹಿತಂ ದೇವಸ್ಸಂಘೈಃ
ಪ್ರತ್ಯುದ್ಯಯೌ ಸಪುರೋಧಾ ಮರುತ್ತಃ |
ಚಕ್ರೇ ಪೂಜಾಂ ದೇವರಾಜಾಯ ಚಾಗ್ರ್ಯಾಂ
ಯಥಾಶಾಸ್ತ್ರಂ ವಿಧಿವತ್ ಪ್ರೀಯಮಾಣಃ ॥22॥
ದೇವತಾ ಪರಿವಾರದಿಂದ ಸಹಿತನಾಗಿ ಆಗಮಿಸಿದ ಇಂದ್ರನನ್ನು ಪುರೋಹಿತರಿಂದ ಸಹಿತನಾದ ಮರುತ್ತನು ಸ್ವಾಗತಿಸಿದನು. ಸಂತುಷ್ಟನಾದ ಮರುತ್ತನು ಶಾಸ್ತ್ರವಿಧಿಗೆ ಅನುಗುಣವಾಗಿ ಸುರರಾಜನನ್ನು ಪೂಜಿಸಿದನು. ನಂತರ ಸಂವರ್ತನು ಇಂದ್ರನನ್ನು ಕುರಿತು ಹೇಳುತ್ತಾನೆ.
ಸಂವರ್ತಃ
ಸುಸ್ವಾಗತಂ ತೇ ಪುರುಹೂತೇಹ ವಿದ್ವನ್
ಯಜ್ಞೋಽಪ್ಯಯಂ ಸನ್ನಿಹಿತೇ ತ್ವಯೀಂದ್ರ |
ಶೋಶುಭ್ಯತೇ ಬಲವೃತ್ರಘ್ನ ಭೂಯಃ
ಪಿಬಸ್ವ ಸೋಮಂ ಸುಖಮುದ್ಯತಂ ಮಯಾ ॥23॥
ಸಂವರ್ತ ಪುರುಹೂತನೇ, ವಿದ್ವಾಂಸನೇ, ನಿನಗೆ ಸ್ವಾಗತವು. ಇಂದ್ರನೇ, ನಿನ್ನ ದಿವ್ಯವಾದ ಸಾನ್ನಿಧ್ಯದಿಂದ ಈ ಯಜ್ಞವು ಶೋಭಾಯಮಾನವಾಗಿದೆ. ವೃತ್ರಘ್ನನೇ, ನಾನು ಸಂಸ್ಕರಿಸಿದ ಈ ಸೋಮರಸವು ಪಾನಮಾಡಲು ಸಿದ್ಧವಾಗಿದೆ.
ಮರುತ್ತಃ

ಶಿವೇನ ಮಾಂ ಪಶ್ಯ ನಮಶ್ಚ ತೇಽಸ್ತು
ಪ್ರಾಪ್ತೋ ಯಜ್ಞಃ ಸಫಲಂ ಜೀವಿತಂ ಮೇ |
ಅಯಂ ಯಜ್ಞಂ ಕುರುತೇ ಮೇ ಸುರೇಂದ್ರ
ಬೃಹಸ್ಪತೇರವರೋ ಜನ್ಮನಾ ಚ ॥24॥

ಮರುತ್ತ ಸುರೇಂದ್ರನೇ, ನಿನಗೆ ನಮಸ್ಕಾರವು. ಮಂಗಳಮಯವಾದ ಕಣ್ಣಿನಿಂದ ನನ್ನನ್ನು ವೀಕ್ಷಿಸು. ನಾನು ಮಾಡಿಸುತ್ತಿರುವ ಈ ಯಜ್ಞಭೂಮಿಗೆ ಆಗಮಿಸಿದ್ದರಿಂದಲೇ ನನ್ನ ಜೀವಿತವೂ ನನ್ನ ಯಜ್ಞವೂ ಸಾಫಲ್ಯವನ್ನು ಹೊಂದಿತು. ಸುರರಾಜನೇ, ನನ್ನ ಯಜ್ಞವನ್ನು ಬೃಹಸ್ಪತಿಯ ಸಹೋದರನಾದ ಬ್ರಾಹ್ಮಣಶ್ರೇಷ್ಠನಾದ ಸಂವರ್ತನು ಮಾಡಿಸುತ್ತಿದ್ದಾನೆ.

ಇಂದ್ರಃ

ಜಾನಾಮಿ ತೇ ಗುರುಮೇತಂ ತಪೋಧನಂ
ಬೃಹಸ್ಪತೇರನುಜಂ ತಿಗ್ಮತೇಜಸಮ್ |
ಯಸ್ಯಾಹ್ವಾನಾದಾಗತೋಽಹಂ ನರೇಂದ್ರ
ಪ್ರೀತಿರ್ಮೇಽದ್ಯ ತ್ವಯಿ ಮನ್ಯುಃ ಪ್ರಣಷ್ಟಃ ॥25॥

ಇಂದ್ರ ನರೇಂದ್ರನೇ, ತಪೋಧನನಾದ, ಬೃಹಸ್ಪತಿಯ ಸಹೋದರನಾದ ಉಗ್ರತೇಜಸ್ವಿಯಾದ ಸಂವರ್ತನನ್ನು ನಾನು ಬಲ್ಲವನಾಗಿದ್ದೇನೆ. ಇವನ ಮಂತ್ರ ಪೂರ್ವಕವಾದ ಆಹ್ವಾನದಿಂದಲೇ ಇಲ್ಲಿಗೆ ಆಗಮಿಸಿದ್ದೇನೆ. ನನ್ನ ಕೋಪವು ಉಪಶಮನವಾಗಿದೆ. ನಿನ್ನ ವಿಷಯದಲ್ಲಿ ನನಗೆ ಪ್ರೀತಿಯೇ ಉಂಟಾಗಿದೆ.

ಸಂವರ್ತಃ

ಯದಿ ಪ್ರೀತಸ್ತ್ವಮಸಿ ವೈ ದೇವರಾಜ
ತಸ್ಮಾತ್ ಸ್ವಯಂ ಶಾಧಿ ಯಜ್ಞೇ ವಿಧಾನಮ್ |
ಸ್ವಯಂ ಸರ್ವಾನ್ ಕುರು ಮಾರ್ಗಾನ್ ಸುರೇಂದ್ರ
ಜಾನಾತ್ವಯಂ ಸರ್ವಲೋಕಶ್ಚ ದೇವ ॥26॥

ಸಂವರ್ತ ದೇವರಾಜನೇ, ನೀನು ನಮ್ಮ ವಿಷಯದಲ್ಲಿ ನಿಶ್ಚಿತವಾಗಿಯೂ ಕೂಡ ಪ್ರಸನ್ನನಾಗಿದ್ದಲ್ಲಿ ಯಜ್ಞಕ್ಕೆ ಅಪೇಕ್ಷಿತವಾದ ವಿಧಾನಗಳನ್ನು ನೀನೇ ಶಾಸನಮಾಡು. ಯಜ್ಞಕ್ಕೆ ಅಪೇಕ್ಷಿತವಾದ ಪರಿವೇಷಣಾದಿ ಮಾರ್ಗಗಳನ್ನು ನೀನೇ ಬೋಧಿಸು. ಇಲ್ಲಿಗೆ ಆಗಮಿಸಿರುವ ಎಲ್ಲರಿಗೂ ನಿನ್ನ ಪ್ರಸನ್ನತೆಯ ಅನುಭವವು ಉಂಟಾಗಲಿ.

ವ್ಯಾಸಃ

ಏವಮುಕ್ತಸ್ತ್ವಾಂಗಾರಸೇನ ಶಕ್ರಃ
ಸ ವ್ಯಾದಿದೇಶ ಸ್ವಯಮೇವ ದೇವಾನ್ |
ಸಭಾಃ ಕ್ರಿಯಂತಾಮಾವಸಥಾಶ್ಚ ಮುಖ್ಯಾಃ
ಸಹಸ್ರಶಶ್ಚಿತ್ರಭೌಮಾಃ ಸಮೃದ್ಧಾಃ ॥27॥

ವ್ಯಾಸರು ಅಂಗಿರಸನ ಮಗನಾದ ಸಂವರ್ತನು ಹೀಗೆ ಪ್ರಾರ್ಥಿಸಿದಾಗ ಇಂದ್ರನು ದೇವತೆಗಳಿಗೆ ಚಿತ್ರ-ವಿಚಿತ್ರವಾಗಿರುವ, ಸಕಲ ವಿಧವಾದ ಸಾಮಗ್ರಿಗಳಿಂದ ಪ್ರವೃದ್ಧಮಾನವಾದ ಸಾವಿರಾರು ಸಭಾಭವನಗಳನ್ನು ನಿರ್ಮಿಸಲು ಆದೇಶಿಸಿದನು.

ಇಂದ್ರಃ

ಕ್ಲೃಪ್ತಾಃ ಸ್ಥೂಣಾಃ ಕುರುತಾರೋಹಣಾನಿ
ಗಂಧರ್ವಾಣಾಮಪ್ಸರಸಾಂ ಚ ಶೀಘ್ರಮ್ |
ಯೇಷು ನೃತ್ಯಂತ್ಯಪ್ಸರಸಃ ಸಹಸ್ರಶಃ
ಸ್ವರ್ಗೋದ್ದೇಶಃ ಕ್ರಿಯತಾಂ ಯಜ್ಞವಾಟಃ ॥28॥

ಇಂದ್ರ ದೇವತೆಗಳೇ, ನೀವೆಲ್ಲರೂ ಗಂಧರ್ವಾಪ್ಸರೆಯರಿಗೆ ಯೋಗ್ಯವಾದ ರಂಗಮಂಟಪವನ್ನು ಕೂಡಲೇ ನಿರ್ಮಿಸಿರಿ. ಅದರಲ್ಲಿ ನಿರ್ದಿಷ್ಟ ಸಂಖ್ಯೆಯ ಸ್ತಂಭಗಳಿರಬೇಕು. ಸೋಪಾನವು ಸುಂದರವಾಗಿರಬೇಕು. ಆ ಮಂಟಪದಲ್ಲಿ ಅಪ್ಸರೆಯರು ನೃತ್ಯಗೈಯ್ಯಬೇಕು. ಯಜ್ಞಮಂಟಪವು ಸ್ವರ್ಗಸದೃಶವಾಗಿರಬೇಕು.

ವ್ಯಾಸಃ

ಇತ್ಯುಕ್ತಾಸ್ತೇ ಚಕ್ರುರಾಶು ಪ್ರತೀತಾ
ದಿವೌಕಸಃ ಶಕ್ರವಾಕ್ಯಾನ್ನರೇಂದ್ರ |
ತತೋ ವಾಕ್ಯಂ ಪ್ರಾಹ ರಾಜಾನಮಿಂದ್ರಃ
ಪ್ರೀತೋ ರಾಜನ್ ಪೂಜಯಾನೋ ಮರುತ್ತಮ್ ॥29॥

ವ್ಯಾಸರು ದೇವರಾಜನು ಹೀಗೆ ಹೇಳಿದ ಕೂಡಲೇ ದೇವತೆಗಳೆಲ್ಲರೂ ಸಂತುಷ್ಟರಾಗಿ, ಅವನ ಆದೇಶದಂತೆ ಎಲ್ಲವನ್ನೂ ಸಿದ್ಧಗೊಳಿಸಿದರು. ಇದರಿಂದ ಸುಪ್ರೀತನಾದ ಇಂದ್ರನು ಮರುತ್ತನನ್ನು ಯೋಗ್ಯವಾಗಿ ಸಂಪೂಜಿಸುತ್ತಾ ಹೀಗೆ ಹೇಳಿದನು.

ಇಂದ್ರಃ

ಏಷ ತ್ವಾಹಽಮಿಹ ರಾಜನ್ ಸಮೇತ್ಯ
ಯೇ ಚಾಪ್ಯನ್ಯೇ ತವ ಪೂರ್ವೇ ನರೇಂದ್ರಾಃ |
ಸರ್ವಾಶ್ಚಾನ್ಯಾ ದೇವತಾಃ ಪ್ರೀಯಮಾಣಾ
ಹವಿಸ್ತ್ವತ್ತಃ ಪ್ರತಿಗೃಹ್ಣಂತು ರಾಜನ್ ॥30॥

ಇಂದ್ರ ಮರುತ್ತರಾಜನೇ, ನಾನು ಇಲ್ಲಿಗೆ ಬಂದು ನಿನ್ನ ಬಳಿ ಇದ್ದೇನೆ. ನಿನ್ನ ಪೂರ್ವಜರೆಲ್ಲರೂ ಇಲ್ಲಿಗೆ ಆಗಮಿಸಿದ್ದಾರೆ. ದೇವತೆಗಳೂ ಬಂದಿರುತ್ತಾರೆ. ಇವರೆಲ್ಲರೂ ಪ್ರಸನ್ನರಾಗಿ ನಿನ್ನಿಂದ ಕೊಡಲ್ಪಡುವ ಹವಿಷ್ಯವನ್ನು ಸ್ವೀಕರಿಸುವಂತಾಗಲಿ.
ಆಗ್ನೇಯಂ ವೈ ಲೋಹಿತಮಾಲಭಂತಾಂ
ವೈಶ್ವದೇವಂ ಬಹುರೂಪಂ ಚ ರಾಜನ್ |
ನೀಕಂ ಚೋಕ್ಷಾಣಂ ಮೇಧ್ಯಮದ್ಯಾಲಭಂತಾಂ
ವಿಲೋಭ್ಯ ಚೈತ್ವಾ ಮತ್ಪ್ರತಿಷ್ಠಾಂ ದ್ವಿಜೇಂದ್ರಾಃ ॥31॥
ಮರುತ್ತನೇ, ಹವಿಸ್ಸಿಗಾಗಿ ಅಗ್ನಿದೇವತಾಕವಾದ ಲೋಹಿತಜಾತಿಯ ವೃಷಭವು ಆಲಂಭಿಸಲ್ಪಡಲಿ. ವಿಶ್ವೇದೇವತೆಗಳಿಗೆ ಸಂಬಂಧಿಸಿದ ಹವಿಸ್ಸಿಗಾಗಿ ನೀಲ ಬಣ್ಣದ ವೃಷಭವು ಆಲಂಭಿಸಲ್ಪಡಲಿ. ನನ್ನ ಆದೇಶದಂತೆ ಆಲಂಭಿತವಾದ ವೃಷಭದ ಮೇಧ್ಯದ ಹವಿಷ್ಯವನ್ನು ತುಂಡರಿಸಿ ನೀಡಲಿ.
ವ್ಯಾಖ್ಯಾನ ವಿಶೇಷ ಲಕ್ಷಾಲಂಕಾರದಲ್ಲಿ ರಕ್ತಮ್ ಉಕ್ಷಾಣಮ್ ನೀಲಂ ಉಕ್ಷಾಣಮ್ ಆಲಭಂತಾಮ್ ಎಂದು ವಾದಿರಾಜರು ವ್ಯಾಖ್ಯಾನಿಸಿದ್ದಾರೆ. ಇಲ್ಲಿ ಕೆಲವರು ಕೆಂಪು, ನೀಲಿ ಬಣ್ಣದ ಜಿಂಕೆಗಳನ್ನು ಆಲಂಭಿಸಲಿ ಎಂದು ವ್ಯಾಖ್ಯಾನಿಸಿದ್ದಾರೆ. ಉಕ್ಷ ಶಬ್ದಕ್ಕೆ ವೃಷಭ ಎಂದು ಕೋಶಗಳಲ್ಲಿ, ವೇದಗಳಲ್ಲಿ ಉಕ್ತವಾಗಿದೆ. ಆದ್ದರಿಂದ ವೃಷಭವನ್ನೇ ಇಲ್ಲಿ ಪರಿಗ್ರಹಿಸಬೇಕು. ಪ್ರಮಾಣ `ಉಕ್ಷಾಮಿಮಾತಿ ಪ್ರತಿಯಂತಿ ಧೇನವಃ' - (ಋಗ್ವೇದ 8.71.9)
ವ್ಯಾಸಃ
ತತೋ ಯಜ್ಞೋ ವವೃಧೇ ತಸ್ಯ ರಾಜ್ಞೋ
ಯತ್ರ ದೇವಾಃ ಸ್ವಯಮನ್ನಾನಿ ಜಹ್ರುಃ |
ಯಸ್ಮಿನ್ ಶಕ್ರೋ ಬ್ರಾಹ್ಮಣೈಃ ಪೂಜ್ಯಮಾನಃ
ಸದಸ್ಯೋಽಭೂದ್ಧರಿವಾನ್ ದೇವರಾಜಃ ॥32॥
ವ್ಯಾಸರು ನಂತರ ಮರುತ್ತರಾಜನ ಯಜ್ಞವು ಸಾಂಗವಾಗಿ ಮುಂದುವರಿಯಿತು. ದೇವತೆಗಳು ಸ್ವೇಚ್ಛೆಯಿಂದ ಹವಿಸ್ಸುಗಳನ್ನು ಸ್ವೀಕರಿಸಿದರು. ಹರಿದ್ವರ್ಣದ ಕುದುರೆಗಳಿಂದ ಕೂಡಿದ ಇಂದ್ರನು ಬ್ರಾಹ್ಮಣರಿಂದ ಪೂಜಿತನಾಗಿ ಯಜ್ಞದ ಸದಸ್ಯನಾದನು.
ತತಃ ಸಂವರ್ತಶ್ಚೈತ್ಯಗತೋ ಮಹಾತ್ಮಾ
ಯಥಾ ವಹ್ನಿಃ ಪ್ರಜ್ವಲಿತೋ ದ್ವಿತೀಯಃ |
ಹವೀಂಷ್ಯುಚ್ಚೈರಾಹ್ವಯನ್ ದೇವಸಂಘಾನ್
ಜುಹಾವಾಗ್ನೌ ಮಂತ್ರವತ್ ಸುಪ್ರಣೀತೇ ॥33॥
ಅನಂತರ ಸಂವರ್ತನು ಉಜ್ವಲವಾದ ತೇಜಸ್ಸಿನಿಂದ ಯಜ್ಞೇಶ್ವರನಂತೆಯೇ ವಿರಾಜಿಸಿದನು. ಯಜ್ಞಮಂಟಪವನ್ನು ಪ್ರವೇಶಿಸಿ ಅತ್ಯಂತ ಪ್ರಸನ್ನನಾಗಿ ದೇವತೆಗಳ ಸಮೂಹವನ್ನು ಗಟ್ಟಿಯಾದ ಧ್ವನಿಯಿಂದ ಆಹ್ವಾನಿಸುತ್ತಾ ಮಂತ್ರೋಚ್ಚಾರಣೆಯ ಮೂಲಕ ಹವಿಸ್ಸನ್ನು ಅಗ್ನಿಯಲ್ಲಿ ದಾನ ಮಾಡಿದನು.
ತತಃ ಪೀತ್ವಾ ಬಲಭಿತ್ ಸೋಮಮಗ್ರ್ಯಂ
ಯೇ ಚಾಪ್ಯನ್ಯೇ ಸೋಮಪಾ ವೈ ದಿವೌಕಸಃ |
ಸರ್ವೇಽನುಜ್ಞಾತಾಃ ಪ್ರಯಯುಃ ಪಾರ್ಥಿವೇನ
ತಥಾ ಜೋಷಂ ತರ್ಪಿತಾಃ ಪ್ರೀಯಮಾಣಾಃ ॥34॥
ನಂತರ ಬಲಿಯನ್ನು ನಿಗ್ರಹಿಸಿದ ಇಂದ್ರನೂ ಶ್ರೇಷ್ಠವಾದ ಸೋಮಪಾನಕ್ಕೆ ಅಧಿಕಾರಿಗಳಾದ ದೇವತೆಗಳು ಮಂತ್ರಪೂತವಾದ ಸೋಮರಸವನ್ನು ಪಾನ ಮಾಡಿದರು. ಸಂತೃಪ್ತರಾದ ದೇವತೆಗಳೆಲ್ಲರೂ ಪ್ರಸನ್ನಚಿತ್ತರಾಗಿ ಮರುತ್ತನ ಅನುಮತಿಯನ್ನು ಪಡೆದು ತಮ್ಮ ಲೋಕಗಳಿಗೆ ಪ್ರಯಾಣ ಬೆಳೆಸಿದರು.
ತತೋ ರಾಜಾ ಜಾತರೂಪಸ್ಯ ರಾಶಿಂ
ಪದೇ ಪದೇ ಕಾರಯಾಮಾಸ ಹೃಷ್ಟಃ |
ದ್ವಿಜಾತಿಭ್ಯೋ ವಿಸೃಜನ್ ಭೂರಿ ವಿತ್ತಂ
ರರಾಜ ವಿತ್ತೇಶ ಇವಾರಿಹಂತಾ ॥35॥
ಆ ಅದ್ಭುತವಾದ ಯಜ್ಞವನ್ನು ಮಾಡಿ ಸಂತುಷ್ಟನಾದ ಮರುತ್ತರಾಜನು ಐಶ್ವರ್ಯವನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಆ ಸಮಯದಲ್ಲಿ ಶತ್ರುಹಂತಕನಾದ ಮರುತ್ತರಾಜನು ಮತ್ತೊಬ್ಬ ಕುಬೇರನಂತೆಯೇ ಕಂಗೊಳಿಸಿದನು.
ತತೋ ವಿತ್ತಂ ವಿಧಿವತ್ ಸನ್ನಿಧಾಯ
ಯಥೋತ್ಸಾಹಂ ಕಾರಯಿತ್ವಾ ಚ ಕೋಶಮ್ |
ಅನುಜ್ಞಾತೋ ಗುರುಣಾ ಸನ್ನಿವೃತ್ತ್ಯಂ
ಶಶಾಸ ಗಾಮಖಿಲಾಂ ಸಾಗರಾಂತಾಮ್ ॥36॥
ಅನಂತರ ವಿಧಿಬದ್ಧವಾಗಿ ಸುವರ್ಣರಾಶಿಯನ್ನು ಅನೇಕ ಬ್ರಾಹ್ಮಣರಿಗೆ ದಾನವನ್ನು ಮಾಡಿ, ಉಳಿದ ವಿಧವಿಧವಾದ ಐಶ್ವರ್ಯವೆಲ್ಲವನ್ನೂ ಸಂಗ್ರಹಿಸಿ, ಅದನ್ನು ಭದ್ರವಾಗಿಡಲು ಭಾಂಡಾಗಾರವನ್ನು ಮಾಡಿಸಿದನು. ಗುರುವಾದ ಸಂವರ್ತನ ಅನುಮತಿಯನ್ನು ಪಡೆದು ತನ್ನ ರಾಜಧಾನಿಗೆ ಹಿಂದಿರುಗಿ, ಸಾಗರಾಂತವಾದ ಸಮಗ್ರ ಭೂಮಿಯನ್ನು ಧರ್ಮದಿಂದ ಪರಿಪಾಲಿಸಲು ಆರಂಭಿಸಿದನು.
ಏವಂಗುಣಃ ಸಂಬಭೂವೇಹ ರಾಜಾ
ಯಸ್ಯ ಕ್ರತೌ ತತ್ ಸುವರ್ಣಂ ಪ್ರಭೂತಮ್ |

ತತ್ ತ್ವಂ ಸಮಾದಾಯ ನರೇಂದ್ರ ವಿತ್ತಂ
ಯಜಸ್ವ ದೇವಾಂಸ್ತಪನೀಯೈರ್ವಿಧಾನ್ಯೈಃ ॥37॥
ಯುಧಿಷ್ಠಿರನೇ, ಹೀಗೆ ಮರುತ್ತರಾಜನು ಪ್ರಭಾವಶಾಲಿಯಾಗಿದ್ದನು. ಅವನ ಬಳಿ ಹೇರಳವಾದ ಬಂಗಾರವಿತ್ತು. ಅವನು ತನ್ನ ಭಾಂಡಾಗಾರದಲ್ಲಿ ಶೇಖರಿಸಿರುವ ಸುವರ್ಣವನ್ನು ತಂದು, ಆ ಹವಿರ್ಭಾಗಗಳಿಂದ ದೇವತೆಗಳನ್ನು ಸಂತೋಷಗೊಳಿಸುತ್ತಾ ಯಜ್ಞವನ್ನು ಮಾಡು.
ವೈಶಂಪಾಯನಃ
ತತೋ ರಾಜಾ ಪಾಂಡವೋ ಹೃಷ್ಟರೂಪಃ
ಶ್ರುತ್ವಾ ವಾಕ್ಯಂ ಸತ್ಯವತ್ಯಾಃ ಸುತಸ್ಯ |
ಮನಶ್ಚಕ್ರೇ ತೇನ ವಿತ್ತೇನ ಯಷ್ಟುಂ
ತತೋಽಮಾತ್ಯೈರ್ಮಂತ್ರಯಾಮಾಸ ಭೂಯಃ ॥38॥
ವೈಶಂಪಾಯನ ಜನಮೇಜಯನೇ, ಸತ್ಯವತೀಸುತರಾದ ವ್ಯಾಸರ ಮಾತನ್ನು ಹಿರಿಯನಾದ ಯುಧಿಷ್ಠಿರನು ಕೇಳಿಸಿಕೊಂಡು ಪ್ರಸನ್ನನಾದನು. ವ್ಯಾಸರು ಹೇಳಿದಂತೆ ಹಿಮವತ್ ಪರ್ವತದ ತಪ್ಪಲಿನಿಂದ ಸುವರ್ಣವನ್ನು ಹೊತ್ತುತಂದು ಅದರಿಂದ ಯಜ್ಞ ಮಾಡಲು ಮನಸ್ಸು ಮಾಡಿದನು. ಅದರ ಬಗ್ಗೆ ಮಂತ್ರಿಗಳಲ್ಲಿ ಪುನಃ ಪುನಃ ಸಮಾಲೋಚನೆಯನ್ನೂ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವಿತ್ತಾನಯನೋಪಾಯಕಥನಂ ನಾಮ ದಶಮೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಶ್ರೀಕೃಷ್ಣನು ಚಿಂತಾಗ್ರಸ್ತನಾದ ಯುಧಿಷ್ಠಿರನಿಗೆ ಇಂದ್ರನಿಂದ ವೃತ್ರಾಸುರನ ವಧೆಯ ಕ್ರಮವನ್ನು ತಿಳಿಸಿ ಸಮಾಧಾನ ಪಡಿಸಿದುದು.
ವೈಶಂಪಾಯನಃ
ಇತ್ಯುಕ್ತೇ ನೃಪತೌ ತಸ್ಮಿನ್ ವ್ಯಾಸೇನಾದ್ಭುತಕರ್ಮಣಾ |
ವಾಸುದೇವೋ ಮಹಾತೇಜಾಃ ತತೋ ವಚನಮಾದದೇ ॥1॥
ವೈಶಂಪಾಯನ ಜನಮೇಜಯನೇ, ಅದ್ಭುತಕರ್ಮವನ್ನು ಮಾಡುವ ವೇದವ್ಯಾಸರು ಹೀಗೆ ಹೇಳಿದ ನಂತರ ತೇಜಸ್ಸಂಪನ್ನನಾದ ವಾಸುದೇವನೂ ಯುಧಿಷ್ಠಿರನಿಗೆ ಹೀಗೆ ಹೇಳಿದನು.
ತಂ ನೃಪಂ ದೀನಮನಸಂ ನಿಹತಜ್ಞಾತಿಬಾಂಧವಮ್ |
ಉಪಪ್ಲುತಮಿವಾದಿತ್ಯಂ ಸಧೂಮಮಿವ ಪಾವಕಮ್ ॥2॥
ವೇದವ್ಯಾಸದೇವರು ಸಮಾಧಾನದ ಮಾತುಗಳನ್ನು ಹೇಳಿದ ನಂತರವೂ ಯುಧಿಷ್ಠಿರನ ಮನಸ್ಸು ದುಃಖಿತವಾಗಿಯೇ ಇತ್ತು. ಜ್ಞಾತಿಗಳನ್ನು ಕಳೆದುಕೊಂಡಿದ್ದ ಯುಧಿಷ್ಠಿರನು ರಾಹುಗ್ರಸ್ಥನಾದ ಸೂರ್ಯನಂತೆ, ಹೊಗೆಯಿಂದ ಕೂಡಿದ ಯಜ್ಞೇಶ್ವರನಂತೆ ಕಾಂತಿಹೀನನಾಗಿದ್ದನು.
ವಿಷಣ್ಣಮನಸಂ ಪಾರ್ಥಂ ಜ್ಞಾತ್ವಾ ವೃಷ್ಣಿಕುಲೋದ್ವಹಃ |
ಆಶ್ವಾಸಯನ್ ಧರ್ಮಸುತಂ ಪ್ರವಕ್ತುಮುಪಚಕ್ರಮೇ ॥3॥
ಖೇದಹೊಂದಿರುವ ಮನಸ್ಸಿನಿಂದ ಕೂಡಿರುವ ಧರ್ಮರಾಜನನ್ನು ಕಂಡ ವೃಷ್ಣಿಕುಲದ ಒಡೆಯನಾದ ಶ್ರೀಕೃಷ್ಣನು ಅವನನ್ನು ಪುನಃ ಪುನಃ ಸಮಾಧಾನ ಪಡಿಸಿದನು. ಸಮಾಧಾನಪಡಿಸಲು ಈ ಮಾತುಗಳನ್ನು ಹೇಳಿದನು.
ಶ್ರೀಭಗವಾನ್
ಸರ್ವಂ ಜಿಹ್ಮಂ ಮೃತ್ಯುಪದಮಮೃತಂ ಬ್ರಹ್ಮಣಃ ಪದಮ್ |
ಏತಾವಾನ್ ಜ್ಞಾನವಿಷಯಃ ಕಿಂ ಪ್ರಾಪಃ ಕರಿಷ್ಯತಿ ॥4॥
ಶ್ರೀಭಗವಾನ್ ಯುಧಿಷ್ಠಿರನೇ, ಪರಂಬ್ರಹ್ಮನೆನಿಸಿದ ನಾರಾಯಣನ ಮನೆಗಳಾದ ವೈಕುಂಠ, ಶ್ವೇತದ್ವೀಪ, ಅನಂತಾಸನ - ಈ ಮೂರುಲೋಕಗಳು ಮಾತ್ರ ಮರಣವನ್ನು ತಪ್ಪಿಸುವ ಲೋಕಗಳು ಎನಿಸಿವೆ. ಉಳಿದ ಸತ್ಯಲೋಕದಿಂದ ಆರಂಭಿಸಿ ಸಮಸ್ತ ಲೋಕಗಳೂ ಮರಣಕ್ಕೇ ಸ್ಥಾನವೆನಿಸಿವೆ. ಹಾಗಾಗಿ ಮೃತ್ಯುವಿನ ಸ್ಥಾನದಲ್ಲಿ ನಿಂತ ವ್ಯಕ್ತಿಗಳು ಮರಣ ಹೊಂದಿದ್ದಾರೆ ಎಂಬ ವಿಷಯದಲ್ಲಿ ನೀನು ದುಃಖಪಡುವುದು ವ್ಯರ್ಥವಾಗಿದೆ.
ನೈವ ತೇಽನುಷ್ಠಿತಂ ಕರ್ಮ ನೈವ ತೇ ಶತ್ರವೋ ಜಿತಾಃ |
ಕಥಂ ಶತ್ರುಂ ಶರೀರಸ್ಥಮಾತ್ಮನೋ ನಾವಬುಧ್ಯಸೇ ॥5॥
ಯುಧಿಷ್ಠಿರನೇ, ನೀನು ಮಾಡಬೇಕಾಗಿರುವ ಕರ್ತವ್ಯವನ್ನು ಇನ್ನೂ ಮಾಡಿರುವುದಿಲ್ಲ. ಶತ್ರುಗಳನ್ನು ಪೂರ್ಣವಾಗಿ ಇನ್ನೂ ಜಯಿಸಿಲ್ಲ. ಆ ಶತ್ರುವು ನಿನ್ನ ಶರೀರದಲ್ಲೇ ಅಡಗಿ ಕುಳಿತಿದ್ದಾನೆ. ಆ ಶತ್ರುವನ್ನು ನೀನೇಕೆ ತಿಳಿಯುತ್ತಿಲ್ಲ?
ಅತ್ರ ತೇ ವರ್ತಯಿಷ್ಯಾಮಿ ಯಥಾಧರ್ಮಂ ಯಥಾಶ್ರುತಮ್ |
ಇಂದ್ರಸ್ಯ ಸಹ ವೃತ್ರೇಣ ಯಥಾ ಯುದ್ಧಮವರ್ತತ ॥6॥
ನಿನಗೆ ಇಂದ್ರ-ವೃತ್ರರಿಗೆ ಪರಸ್ಪರ ನಡೆದ ಯುದ್ಧವೃತ್ತಾಂತವನ್ನು ಹೇಳುತ್ತೇನೆ, ಕೇಳಿಸಿಕೊ.
ವೃತ್ರೇಣ ಪೃಥಿವೀ ವ್ಯಾಪ್ತಾ ಪುರಾ ಕಿಲ ನರಾಧಿಪ ॥7॥

ದೃಷ್ಟ್ವಾ ಚ ಪೃಥಿವೀಂ ವ್ಯಾಪ್ತಾಂ ಗಂಧಸ್ಯ ವಿಷಯೇ ಹತೇ |
ಧರಾಹರಣನಿರ್ಗಂಧೋ ವಿಷಯಃ ಸಮಪದ್ಯತ ॥8॥
ನರಾಧಿಪನೇ, ಹಿಂದೊಮ್ಮೆ ವೃತ್ರಾಸುರನಿಂದಲೇ ಸಮಗ್ರ ಪೃಥಿವಿಯೂ ವ್ಯಾಪ್ತವಾಗಿತ್ತು. ದೇವೇಂದ್ರನು ಸಮಗ್ರ ಭೂಮಂಡಲವು ವೃತ್ರಾಸುರನಿಂದ ವ್ಯಾಪಿಸಿರುವುದನ್ನು, ಅದರ ಜೊತೆಗೆ ಪೃಥಿವಿಯಲ್ಲಿರುವ ತನ್ಮಾತ್ರವೆನಿಸಿದ ಗಂಧವು ಅವನಿಂದ ಅಪಹೃತವಾಗಿರುವುದನ್ನು ತಿಳಿದನು. ಪೃಥಿವಿಯ ಅಂಶವಾದ ಗಂಧವೇ ವೃತ್ರಾಸುರನಿಂದ ಅಪಹರಿಸಲ್ಪಟ್ಟಿದ್ದರಿಂದ ಭೂಮಿಯು ನಿರ್ಗಂಧದಿಂದ ಕೂಡಿತು.
ಶತಕ್ರತುಶ್ಚುಕೋಪಾಥ ಗಂಧಸ್ಯ ವಿಷಯೇ ಹೃತೇ |
ಶತಕ್ರತುರಭಿಕ್ರುದ್ಧಃ ತತ್ರ ವಜ್ರಮವಾಸೃಜತ್ ॥9॥
ಅದರಿಂದ ಇಂದ್ರನು ಬಹಳವಾಗಿ ಸಿಟ್ಟುಗೊಂಡನು. ವೃತ್ರಾಸುರನ ವಿಷಯದಲ್ಲಿ ಸಿಟ್ಟುಗೊಂಡ ದೇವೇಂದ್ರನು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು.
ಸ ವಧ್ಯಮಾನೋ ವಜ್ರೇಣ ಸಲಿಲೇ ಭೂರಿತೇಜಸಾ |
ವಿವೇಶ ಸಹಸಾಽಂಭಾಂಸಿ ಜಗ್ರಾಹ ವಿಷಯಂ ತತಃ ॥10॥
ಮಹಾತೇಜಸ್ಸಿನಿಂದ ಕೂಡಿರುವ ಇಂದ್ರನ ವಜ್ರಾಯುಧದಿಂದ ಹೊಡೆಸಿಕೊಂಡ ವೃತ್ರಾಸುರನು ಕೂಡಲೇ ನೀರಿನೊಳಗೆ ಪ್ರವೇಶ ಮಾಡಿ, ನೀರಿನ ವಿಷಯವೆನಿಸಿದ ರಸವನ್ನು ಅಪಹರಿಸಿದನು.
ವ್ಯಾಪ್ತೇ ಚಾಂಭಸಿ ವೃತ್ರೇಣ ರಸಸ್ಯ ವಿಷಯೇ ಹೃತೇ |
ಶತಕ್ರತುರಭಿಕ್ರುದ್ಧಃ ತತ್ರ ವಜ್ರಮವಾಸೃಜತ್ ॥11॥
ಸಮಗ್ರ ನೀರಿನಲ್ಲಿ ವೃತ್ರಾಸುರನು ವ್ಯಾಪ್ತನಾಗಿ, ನೀರಿನ ವಿಷಯಭೂತವಾದ ರಸವನ್ನು ಅಪಹರಿಸಿದಾಗ, ಕ್ರುದ್ಧನಾದ ದೇವೇಂದ್ರನು ನೀರಿನಲ್ಲಿ ಅಡಗಿರುವ ವೃತ್ರನ ಮೇಲೆಯೇ ವಜ್ರಾಯುಧವನ್ನು ಪ್ರಯೋಗಿಸಿದನು.
ಸ ವಧ್ಯಮಾನೋ ವಜ್ರೇಣ ಸಲಿಲೇ ಭೂರಿತೇಜಸಾ |
ವಿವೇಶ ಸಹಸಾ ಜ್ಯೋತಿರ್ಜಗ್ರಾಹ ವಿಷಯಂ ತತಃ ॥12॥
ಅಮಿತವಾದ ತೇಜಸ್ಸಿನಿಂದ ಕೂಡಿದ ವಜ್ರಾಯುಧದಿಂದ ವಧ್ಯಮಾನನಾದ ವೃತ್ರಾಸುರನು ಕೂಡಲೇ ತೇಜಸ್ಸನ್ನು ಪ್ರವೇಶಿಸಿ, ಅದರ ವಿಷಯವಾದ ರೂಪವನ್ನು ಅಪಹರಿಸಿದನು.
ವ್ಯಾಪ್ತೇ ಜ್ಯೋತಿಷಿ ವೃತ್ರೇಣ ರೂಪಸ್ಯ ವಿಷಯೇ ಹೃತೇ |
ಶತಕ್ರತುರಭಿಕ್ರುದ್ಧಃ ತತ್ರ ವಜ್ರಮವಾಸೃಜತ್ ॥13॥
ತೇಜಸ್ಸು ವೃತ್ರಾಸುರನಿಂದ ವ್ಯಾಪ್ತವಾಗಿ ರೂಪಹೀನವಾಗಿರಲು ಅತ್ಯಂತ ಸಿಟ್ಟಾದ ಅಮರೇಂದ್ರನು ಜ್ಯೋತಿಸ್ಸಿನಲ್ಲಿ ಸೇರಿರುವ ವೃತ್ರನ ಮೇಲೆ ಪುನಃ ವಜ್ರಾಯುಧವನ್ನು ಪ್ರಯೋಗಿಸಿದನು.
ಸ ವಧ್ಯಮಾನೋ ವಜ್ರೇಣ ಸುಭೃಶಂ ಭೂರಿತೇಜಸಾ |
ವಿವೇಶ ಸಹಸಾ ವಾಯುಂ ಜಗ್ರಾಹ ವಿಷಯಂ ತತಃ ॥14॥
ತೇಜಸ್ಸಿನಲ್ಲಿ ಸೇರಿದ ವೃತ್ರನು ದಿವ್ಯತೇಜಸ್ಸಿನ ವಜ್ರಾಯುಧದಿಂದ ಹತನಾಗಿ ಕೂಡಲೇ ತೇಜಸ್ಸನ್ನು ಬಿಟ್ಟು, ವಾಯುವನ್ನು ವ್ಯಾಪಿಸಿ ಅದರ ವಿಷಯವಾದ ಸ್ಪರ್ಶವನ್ನು ಅಪಹರಿಸಿದನು.
ವ್ಯಾಪ್ತೇ ವಾಯೌ ಚ ವೃತ್ರೇಣ ಸ್ಪರ್ಶಸ್ಯ ವಿಷಯೇ ಹೃತೇ |
ಶತಕ್ರತುರಭಿಕ್ರುದ್ಧಃ ತತ್ರ ವಜ್ರಮವಾಸೃಜತ್ ॥15॥
ವೃತ್ರನು ವಾಯುವನ್ನು ವ್ಯಾಪಿಸಿ, ಅದರ ವಿಷಯವಾದ ಸ್ಪರ್ಶವನ್ನು ಅಪಹರಿಸಿದ್ದರಿಂದ ಕ್ರುದ್ಧನಾದ ಇಂದ್ರನು ವಾಯುವಿನಲ್ಲಿ ವ್ಯಾಪಿಸಿದ ವೃತ್ರನ ಮೇಲೆ ಪುನಃ ವಜ್ರಾಯುಧವನ್ನು ಪ್ರಯೋಗಿಸಿದನು.
ಸ ವಧ್ಯಮಾನೋ ವಜ್ರೇಣ ತಸ್ಮಿನ್ನಮಿತತೇಜಸಾ |
ಆಕಾಶಮಭಿದುದ್ರಾವ ತಂ ಶಕ್ರಂ ವಿಷಯಂ ತತಃ ॥16॥
ಅಮಿತತೇಜಸ್ಸಿನಿಂದ ಕೂಡಿದ ವಜ್ರಾಯುಧದಿಂದ ಹೊಡೆಯಲ್ಪಟ್ಟ ವೃತ್ರನು ಕೂಡಲೇ ಆಕಾಶದ ಕಡೆ ನೆಗೆದನು. ಸಮಗ್ರ ಆಕಾಶವನ್ನು ವ್ಯಾಪಿಸಿ ಅದರ ವಿಷಯವಾದ ಶಬ್ದವನ್ನು ಅಪಹರಿಸಿದನು ಅರ್ಥಾತ್ ಜ್ಞಾನವನ್ನೇ ಅಪಹರಿಸಿದನು.
ಆಕಾಶೇ ವೃತ್ರಭೂತೇಽಥ ಶಬ್ದಸ್ಯ ವಿಷಯೇ ಹೃತೇ |
ಶತಕ್ರತುರಭಿಕ್ರುದ್ಧಃ ತತ್ರ ವಜ್ರಮವಾಸೃಜತ್ ॥17॥
ಆಕಾಶವು ವೃತ್ರನಿಂದ ವ್ಯಾಪ್ತವಾಗಿ ಅದರ ವಿಷಯವಾದ ಶಬ್ದಾಖ್ಯಜ್ಞಾನವು ಅಪಹೃತವಾದಾಗ ಅವನಲ್ಲಿ ಸಿಟ್ಟಾದ ಇಂದ್ರನು ಪುನಃ ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು.
ಸ ವಧ್ಯಮಾನೋ ವಜ್ರೇಣ ತಸ್ಮಾದಮಿತತೇಜಸಾ |
ವಿವೇಶ ಸಹಸಾ ಶಕ್ರಂ ಜಗ್ರಾಹ ವಿಷಯಂ ತತಃ ॥18॥
ವಜ್ರಾಯುಧದಿಂದ ಹೊಡೆಯಲ್ಪಟ್ಟ ವೃತ್ರಾಸುರನು ಉಪಾಯ ಕಾಣದೆ ಇಂದ್ರನ ಒಳಗಡೆಯೇ ಪ್ರವೇಶ ಮಾಡಿ, ಇಂದ್ರನ ವೀರ್ಯ-ಶೌರ್ಯಾದಿ ಗುಣಗಳನ್ನೇ ಅಪಹರಿಸಿದನು.
ತಸ್ಯ ವೃತ್ರಗೃಹೀತಸ್ಯ ಮೋಹಃ ಸಮಭವನ್ಮಹಾನ್ |
ರಥಂತರೇಣ ತಂ ಸಾಮ್ನಾ ವಸಿಷ್ಠಃ ಪ್ರತ್ಯಬೋಧಯತ್ ॥19॥
ವೃತ್ರಾಸುರನಿಂದ ಇಂದ್ರನೇ ವ್ಯಾಪ್ತನಾದ ಕಾರಣ ಇಂದ್ರನಿಗೆ ಮಹಾಮೋಹವು ಆವೃತವಾಯಿತು. ಇದನ್ನು ಕಂಡು ಮಹರ್ಷಿಗಳಾದ ವಸಿಷ್ಠರು ರಥಂತರ ಸಾಮದ ಮೂಲಕ ಇಂದ್ರನಲ್ಲಿದ್ದ ಮೋಹವನ್ನು ಪರಿಹರಿಸಿ ಅವನನ್ನು ಎಚ್ಚರಗೊಳಿಸಿದರು.

ತತೋ ವೃತ್ರಂ ಶರೀರಸ್ಥಂ ಜಗ್ರಾಹ ಭರತರ್ಷಭ |
ಶತಕ್ರತುರದೃಶ್ಯೇನ ವಜ್ರೇಣೇತೀಹ ನಃ ಶ್ರುತಮ್ ॥20॥
ಅನಂತರ ಇಂದ್ರದೇವನು ತನ್ನ ಶರೀರದಲ್ಲೇ ವ್ಯಾಪಿಸಿರುವ ವೃತ್ರಾಸುರನನ್ನು ಕಂಡು, ಬೇರೆ ಯಾರಿಂದಲೂ ನೋಡಲಾಗದ, ತನ್ನಿಂದ ನೋಡಲ್ಪಡುತ್ತಿರುವ ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸಿದನು ಎಂಬ ವಿಷಯವನ್ನು ನಾವು ತಿಳಿದಿದ್ದೇವೆ.
ಇದಂ ಧರ್ಮರಹಸ್ಯಂ ತು ಶಕ್ರೇಣೋಕ್ತಂ ಮಹರ್ಷಿಷು |
ಋಷಿಭಿಶ್ಚ ಮಮ ಪ್ರೋಕ್ತಂ ತನ್ನಿಬೋಧ ನರಾಧಿಪ ॥21॥
ರಾಜನೇ, ಧರ್ಮಕ್ಕೆ ಸಂಬಂಧಿಸಿದ ಈ ರಹಸ್ಯ ವಿಚಾರವನ್ನು ಇಂದ್ರದೇವನೇ ಋಷಿಗಳಿಗೆ ಹಿಂದೆ ಹೇಳಿದ್ದನು. ಮಹರ್ಷಿಗಳು ನನಗೆ ಹೇಳಿದರು. ಈ ರಹಸ್ಯವನ್ನು ನಿನಗೆ ಹೇಳಿದ್ದೇನೆ, ಮನನ ಮಾಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಅಶ್ವಮೇಧಿಕಪರ್ವಣಿ ವೃತ್ರಾಸುರವಧ ಪ್ರಕಾರಕಥನಂ ನಾಮ ಏಕಾದಶೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ಏಕಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹನ್ನೊಂದನೆಯ
ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ಮನಸ್ಸನ್ನು ಜಯಿಸಲು ಶ್ರೀಕೃಷ್ಣನಿಂದ ಯುಧಿಷ್ಠಿರನಿಗೆ ಉಪದೇಶ.
ಶ್ರೀಭಗವಾನ್
ದ್ವಿವಿಧೋ ಜಾಯತೇ ವ್ಯಾಧಿಃ ಶಾರೀರೋ ಮಾನಸಸ್ತಥಾ |
ಪರಸ್ಪರಂ ತಯೋರ್ಜನ್ಮ ನಿರ್ದ್ವಂದ್ವಂ ನೋಪಲಭ್ಯತೇ ॥1॥
ಶ್ರೀಭಗವಾನ್ ಧರ್ಮರಾಜನೇ, ಎರಡು ವಿಧವಾಗಿ ವ್ಯಾಧಿಯು ಹುಟ್ಟುತ್ತದೆ. ಶಾರೀರಿಕ ವ್ಯಾಧಿ, ಮಾನಸಿಕ ವ್ಯಾಧಿ ಎಂದು. ಈ ಎರಡು ವ್ಯಾಧಿಗಳು ಪರಸ್ಪರ ಸಂಬಂಧವನ್ನು ಹೊಂದಿಯೇ ಹುಟ್ಟುತ್ತವೆ.
ಶರೀರಾಜ್ಜಾಯತೇ ವ್ಯಾಧಿಃ ಶಾರೀರೋ ನಾತ್ರ ಸಂಶಯಃ |
ಮಾನಸೋ ಜಾಯತೇ ವ್ಯಾಧಿಃ ಮನಸ್ಯೇವೇತಿ ನಿಶ್ಚಯಃ ॥2॥
ಶರೀರದ ದೆಶೆಯಿಂದ ಶಾರೀರಿಕವಾದ ವ್ಯಾಧಿಯು ಹುಟ್ಟುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಮನಸ್ಸಿನ ದೆಶೆಯಿಂದ ಮಾನಸಿಕ ವ್ಯಾಧಿಯು ಹುಟ್ಟುತ್ತದೆ.
ಶೀತೋಷ್ಣೇ ಚೈವ ವಾಯುಶ್ಚ ಗುಣಾ ರಾಜನ್ ಶರೀರಜಾಃ |
ತೇಷಾಂ ಗುಣಾನಾಂ ಸಾಮ್ಯಂ ಚೇತ್ ತದಾಹುಃ ಸ್ವಸ್ಥಲಕ್ಷಣಮ್ ॥3॥
ಉಷ್ಣೇನ ಬಾಧ್ಯತೇ ಶೀತಂ ಶೀತೇನೋಷ್ಣಂ ಚ ಬಾಧ್ಯತೇ ॥4॥
ಶರೀರದಲ್ಲಿ ಶೀತ, ಉಷ್ಣ, ವಾಯು ಎಂಬ ಮೂರುಗುಣಗಳು ಹುಟ್ಟುತ್ತವೆ (ಕಫ, ಪಿತ್ತ, ವಾತಗಳು). ಈ ಮೂರುಗುಣಗಳ ಸಾಮ್ಯವೇ ಸ್ವಾಸ್ಥ್ಯದಿಂದಿರುವ ಲಕ್ಷಣವೆಂದು ವಿದ್ವಾಂಸರು ಹೇಳುತ್ತಾರೆ. ದೇಹದಲ್ಲಿ ಉಂಟಾಗುವ ಅತಿಯಾದ ಶೈತ್ಯವನ್ನು ಉಷ್ಣವು ಬಾಧಿಸಿ ಸಮತೋಲನವನ್ನು ಕಾಪಾಡಿದರೆ, ದೇಹದಲ್ಲಿ ಉಂಟಾಗುವ ಅತಿಯಾದ ಔಷ್ಣ್ಯವನ್ನು ಶೀತವು ಬಾಧಿಸಿ ಸಮತೋಲನವನ್ನು ಕಾಪಾಡುತ್ತದೆ.
ಸತ್ವಂ ರಜಸ್ತಮಶ್ಚೇತಿ ತ್ರಯಃ ಸ್ವಾತ್ಮಗುಣಾಃ ಸ್ಮೃತಾಃ |
ತೇಷಾಂ ಗುಣಾನಾಂ ಸಾಮ್ಯಂ ಚೇತ್ ತದಾಹುಃ ಸ್ವಸ್ಥಲಕ್ಷಣಮ್ ॥5॥
ಸತ್ವ, ರಜಸ್ಸು, ತಮಸ್ಸು ಎಂಬ ಈ ಮೂರುಗುಣಗಳು ಆತ್ಮನ ಗುಣಗಳೆನಿಸಿವೆ. ಈ ಮೂರು ಗುಣಗಳು ಸಮಾನವಾಗಿದ್ದರೆ ಅದನ್ನು ಮನುಷ್ಯನ ಮನಸ್ಸಿನ ಸ್ವಾಸ್ಥ್ಯ ಲಕ್ಷಣ ಎನ್ನುತ್ತಾರೆ.
ತೇಷಾಮನ್ಯತಮೋತ್ಸೇಕೇ ವಿಧಾನಮುಪದಿಶ್ಯತೇ |
ಹರ್ಷೇಣ ವಧ್ಯತೇ ಶೋಕೋ ಹರ್ಷಃ ಶೋಕೇನ ವಧ್ಯತೇ ॥6॥
ಈ ತ್ರಿಗುಣಗಳಲ್ಲಿ ಒಂದು ಗುಣವು ಅಧಿಕವಾದರೆ ಆ ಗುಣದೊಡನೆ ಮತ್ತೊಂದು ಗುಣವನ್ನು ಸಮೀಕರಿಸಬೇಕೆಂದು ಮಹರ್ಷಿಗಳು ಉಪದೇಶಿಸುತ್ತಾರೆ. ಸತ್ವಗುಣದ ಉದ್ರೇಕ ಎಂದರೆ ಸಂತೋಷದ ಆಧಿಕ್ಯ. ತಮೋಗುಣದ ಉದ್ರೇಕ ಎಂದರೆ ದುಃಖದ ಆಧಿಕ್ಯ. ದುಃಖವುಂಟಾದಾಗ ಸುಖದ ಸ್ಮರಣೆಯನ್ನು ಮಾಡಿಕೊಳ್ಳುವುದು ರಜೋಗುಣದ ಉದ್ರೇಕವೆನಿಸಿದೆ. ದುಃಖವುಂಟಾದಾಗ ಸುಖವನ್ನು ಸ್ಮರಿಸಿದಲ್ಲಿ ದುಃಖವೂ ಉಪಶಮನ ಹೊಂದುತ್ತದೆ. ಸುಖವುಂಟಾದಾಗ ದುಃಖವನ್ನು ಸ್ಮರಿಸಿದಲ್ಲಿ ಸುಖವೇ ಉಪಶಮನ ಹೊಂದುತ್ತದೆ. ಈ ಗುಣಗಳಿಗೆ ಪರಸ್ಪರ ವಧ್ಯಘಾತಕಭಾವವು ಇದೆ.
ಕಶ್ಚಿದ್ ದುಃಖೇ ವರ್ತಮಾನಃ ಸುಖಸ್ಯ ಸ್ಮರ್ತುಮರ್ಹತಿ |
ಕಶ್ಚಿತ್ ಸುಖೇ ವರ್ತಮಾನೋ ದುಃಖಸ್ಯ ಸ್ಮರ್ತುಮರ್ಹತಿ ॥7॥
ನೀನು ದುಃಖದಲ್ಲಿದ್ದಾಗ ಸುಖವನ್ನು ಸ್ಮರಿಸಿಕೊಳ್ಳಲು ಅರ್ಹನಾಗಿದ್ದಿ. ಸುಖದಲ್ಲಿ ಇದ್ದಾಗ ದುಃಖವನ್ನೂ ಸ್ಮರಣೆಗೆ ತಂದುಕೊಳ್ಳಬೇಕು.

ಸ ತ್ವಂ ನ ದುಃಖೀ ದುಃಖಸ್ಯ ನ ಸುಖೀ ತ್ವಂ ಸುಖಸ್ಯ ಚ |
ಸ್ಮರ್ತುಮಿಚ್ಛಸಿ ಕೌಂತೇಯ ದೈವಂ ಹಿ ಬಲವತ್ತರಮ್ ॥8॥
ನೀನು ವನವಾಸದಲ್ಲಿ ಬಹು ದುಃಖವುಳ್ಳವನಾಗಿದ್ದಿ. ಅಂತಹ ವನವಾಸದ ದುಃಖವನ್ನು ಈಗ ಸ್ಮರಿಸಿಕೊಳ್ಳಬೇಡ. ಇದರಿಂದ ನಿನ್ನ

ಸುಖವು ನಾಶವಾಗುತ್ತದೆ. ಇಂದು ರಾಜ್ಯವನ್ನು ಪಡೆದು ಸುಖವನ್ನು ಹೊಂದಿರುತ್ತಿ. ನ್ಯಾಯಪ್ರಾಪ್ತವಾದ ರಾಜ್ಯಲಾಭ ಸುಖವನ್ನು ಸ್ಮರಿಸಿಕೊಳ್ಳಲು ನೀನು ಇಚ್ಛೆಪಡುತ್ತಿಲ್ಲ. ಈ ಸುಖವನ್ನು ಸ್ಮರಿಸಿಕೊಂಡಲ್ಲಿ ನಿನ್ನ ದುಃಖವು ಉಪಶಮನ ಹೊಂದುತ್ತದೆ. ಏನು ಮಾಡೋಣ? ನಿನ್ನ ವಿಷಯದಲ್ಲಿ ದೈವವು ಪ್ರಬಲವಾಗಿದೆ.
ಅಥವಾ ತೇ ಸ್ವಭಾವೋಽಯಂ ಯೇನ ಪಾರ್ಥಾವಕೃಷ್ಯಸೇ ॥9॥
ಅಥವಾ ಯುಧಿಷ್ಠಿರನೇ, ದುಃಖವನ್ನು ಹೊಂದುವುದೇ ನಿನ್ನ ಸ್ವಭಾವ ಎನಿಸುತ್ತಿದೆ.
ದೃಷ್ಟ್ವಾ ಸಭಾಗತಾಂ ಕೃಷ್ಣಾಮೇಕವಸತ್ರಾಂ ರಜಸ್ವಲಾಮ್ |
ಮಿಷತಾಂ ಪಾಂಡವೇಯಾನಾಂ ನ ತತ್ ಸಂಸ್ಮರ್ತುಮರ್ಹಸಿ ॥10॥
ಪಾಂಡವರು ನೋಡುವ ಸಮಯದಲ್ಲಿಯೇ ರಜಸ್ವಲೆಯಾಗಿದ್ದ, ಒಂದೇ ವಸ್ತ್ರವನ್ನು ಧರಿಸಿದ ದ್ರೌಪದಿಯನ್ನು ದುಷ್ಟರು ಸಭೆಗೆ ಎಳೆದು ತಂದ ಪ್ರಕರಣವನ್ನು ನೀನು ಸ್ಮರಿಸಿಕೊಳ್ಳುತ್ತಿಲ್ಲ (ಇದನ್ನು ಸ್ಮರಿಸಿಕೊಂಡಲ್ಲಿ ನಿನಗೆ ಜ್ಞಾತಿಗಳನ್ನು ಸಂಹರಿಸಿದ ದುಃಖವು ಉಂಟಾಗುವುದಿಲ್ಲ).
ಪ್ರವ್ರಾಜನಂ ಚ ನಗರಾದ್ ಅಜಿನೈಶ್ಚ ವಿವಾಸನಮ್ |
ಮಹಾರಣ್ಯನಿವಾಸಂ ಚ ನ ತಸ್ಯ ಸ್ಮರ್ತುಮರ್ಹಸಿ ॥11॥
ಕಪಟ ದ್ಯೂತಕ್ಕೆ ತುತ್ತಾಗಿ ನಗರದಿಂದ ಹೊರಹೊರಟಿದ್ದು, ಮೃಗಚರ್ಮಗಳನ್ನು ಹೊದ್ದು ಅರಣ್ಯಕ್ಕೆ ಹೋಗಿದ್ದು, ಗೊಂಡಾರಣ್ಯದಲ್ಲಿ ವಾಸ ಮಾಡಿದ್ದು, ಈ ಯಾವ ಹನ್ನೆರಡು ವರ್ಷಗಳ ಕಾಲ ನಡೆದ ಘಟನೆಗಳನ್ನೂ ನೀನು ಸ್ಮರಿಸಿಕೊಳ್ಳುತ್ತಿಲ್ಲ.
ಜಟಾಸುರಾತ್ ಪರಿಕ್ಲೇಶಂ ಚಿತ್ರಸೇನೇನ ಚಾಹವಮ್ |
ಸೈಂಧವಾಚ್ಚ ಪರಿಕ್ಲೇಶಂ ನ ತಸ್ಯ ಸ್ಮರ್ತುಮಿಚ್ಛಸಿ ॥12॥
ಜಟಾಸುರನಿಂದ ಹೊಂದಿದ ದುಃಖವನ್ನಾಗಲಿ, ಚಿತ್ರಸೇನನೊಡನೆ ಯುದ್ಧ ಮಾಡಿದ ಪ್ರಕರಣವನ್ನಾಗಲಿ, ಸೈಂಧವನಿಂದ ಅನುಭವಿಸಿದ ದುಃಖವನ್ನಾಗಲಿ ನೀನು ಸ್ಮರಿಸಿಕೊಳ್ಳಲು ಇಚ್ಛಿಸುತ್ತಿಲ್ಲ.
ಪುನರಜ್ಞಾತಚರ್ಯಾಯಾಂ ಕೀಚಕೇನ ಪದಾ ವಧಮ್ |
ಯಾಜ್ಞಸೇನ್ಯಾಸ್ತಥಾ ಪಾರ್ಥ ನ ತಸ್ಯ ಸ್ಮರ್ತುಮಿಚ್ಛಸಿ ॥13॥
ಕುಂತೀಪುತ್ರನೇ, ಅಜ್ಞಾತವಾಸದ ಕಾಲದಲ್ಲಿ ಕೀಚಕನು ದ್ರೌಪದಿಯನ್ನು ಕಾಲಿನಿಂದ ಒದ್ದ ಪ್ರಕರಣವನ್ನು ಸ್ಮರಿಸಿಕೊಳ್ಳಲು ಬಯಸುತ್ತಿಲ್ಲ.
ಯಚ್ಚ ತೇ ದ್ರೋಣಭೀಷ್ಮಾಭ್ಯಾಂ ಯುದ್ಧಮಾಸೀದರಿಂದಮ |
ಮನಸೈಕೇನ ಬೋದ್ಧವ್ಯಂ ತತ್ ತೇ ಯುದ್ಧಮುಪಸ್ಥಿತಮ್ ॥14॥
ಭೀಷ್ಮ-ದ್ರೋಣರೊಡನೆ ನೀನು ಮಾಡಿದ ಭಯಂಕರ ಯುದ್ಧದ ದೃಶ್ಯವು ಇಂದೂ ನಿನ್ನ ಮನಸ್ಸಿನಲ್ಲಿ ಮೂಡಿರುತ್ತದೆ. ಅಂತಹ ಯುದ್ಧವನ್ನು ನಿನ್ನ ಮನಸ್ಸಿನೊಡನೆಯೇ ಈಗಲೂ ಮಾಡಬೇಕಾಗಿದೆ.
ತಸ್ಮಾದಭ್ಯುಪಗಂತವ್ಯಂ ಯುದ್ಧಾಯ ಭರತರ್ಷಭ |
ಪಾರಮವ್ಯಕ್ತರೂಪಸ್ಯ ಪರಂ ಮುಕ್ತ್ವಾ ಸ್ವಕರ್ಮಭಿಃ ॥15॥
ಯುಧಿಷ್ಠಿರನೇ, ಮನಸ್ಸಿನೊಡನೆ ಸೆಣೆಸಾಡಬೇಕಾದ ಪ್ರಸಂಗವು ನಿನಗೆ ಒದಗಿ ಬಂದಿದೆ. ಅವ್ಯಕ್ತರೂಪನಾದ ಪರಮಾತ್ಮನ ಸಂಕಲ್ಪವನ್ನು ಅರ್ಥಮಾಡಿಕೊಂಡು, ಮನಸ್ಸನ್ನು ಸಮಾಧಾನಪಡಿಸಿಕೊ ಅಥವಾ ಬೃಹನ್ನಳೆ ರೂಪದಿಂದ ಅವ್ಯಕ್ತ ರೂಪನಾದ ಅರ್ಜುನನು ತನ್ನ ಯುದ್ಧಕೌಶಲದಿಂದ ದುಃಖದ ಬಿಡುಗಡೆಯನ್ನು ಹೊಂದಿದ ಪ್ರಕರಣವನ್ನು ಸ್ಮರಿಸಿಕೊ. ಅವನು ಅನುಭವಿಸಿದ ದುಃಖಗಳನ್ನು ಸ್ಮರಿಸಿ, ನಿನ್ನ ಕರ್ತವ್ಯವು ಸಾಧುವಾಗಿದೆ ಎಂದು ಭಾವಿಸಿಕೊ.
ಯತ್ರ ನೈವ ಶರೈಃ ಕಾರ್ಯಂ ನ ಭೃತ್ಯೈಃ ನ ಚ ಬಂಧುಭಿಃ |
ಆತ್ಮನೈಕೇನ ಕರ್ತವ್ಯಂ ತತ್ ತೇ ಯುದ್ಧಮುಪಸ್ಥಿತಮ್ ॥16॥
ನಿನ್ನ ಮನಸ್ಸಿನ ಒಟ್ಟಿಗೆ ಮಾಡಬೇಕಾದ ಯುದ್ಧದಲ್ಲಿ ಬಾಣಗಳಿಂದ ಆಗಬೇಕಾದ ಕೆಲಸವೇನಿಲ್ಲ. ಬಂಧು-ಬಾಂಧವರಿಂದಲೂ ಆಗಬೇಕಾದದ್ದೇನಿಲ್ಲ ಅಥವಾ ಗೋಗ್ರಹಣ ಯುದ್ಧದಲ್ಲಿ ಬಾಣಗಳಿಂದ ಮಾಡಬೇಕಾದ ಕಾರ್ಯವೇನಿಲ್ಲ. ಶಮೀ ವೃಕ್ಷದಲ್ಲಿ ಅಜ್ಞಾತವಾಸಕಾಲದಲ್ಲಿ ರಕ್ಷಣೆಗಾಗಿ ಬಾಣಗಳು ಮುಚ್ಚಿಡಲ್ಪಟ್ಟಿದ್ದರಿಂದ ಅರ್ಜುನನು ಭೃತ್ಯರೂ, ಬಂಧುಗಳೂ ಇಲ್ಲದೆ ಏಕಾಕಿಯಾಗಿ ಹೋರಾಡಿ ಯುದ್ಧವನ್ನು ಮಾಡಿದ ಪ್ರಕರಣವನ್ನು ಸ್ಮರಿಸಿಕೊ. ನಿನ್ನ ಮನಸ್ಸಿನಲ್ಲಿಯೇ ದ್ವಂದ್ವಗಳನ್ನು ಸರಿ ಪಡಿಸಿಕೊಂಡು ಜಯಸಂಪಾದನೆ ಮಾಡುವ ಯುದ್ಧದ ಪ್ರಸಂಗವು ನಿನಗೆ ಒದಗಿ ಬಂದಿದೆ.
ತಸ್ಮಿನ್ನನಿರ್ಜಿತೇ ಯುದ್ಧೇ ಕಾಮವಸ್ಥಾಂ ಗಮಿಷ್ಯಸಿ |
ಏತಜ್ಜ್ಞಾತ್ವಾ ತು ಕೌಂತೇಯ ಕೃತಕೃತ್ಯೋ ಭವಿಷ್ಯಸಿ ॥17॥
ಮನಸ್ಸಿನ ಜೊತೆಗೆ ಮಾಡಲಿರುವ ಯುದ್ಧದಲ್ಲಿ ನೀನು ಜಯಗಳಿಸದಿದ್ದರೆ ಏನು ಅವಸ್ಥೆಯನ್ನು ಹೊಂದುತ್ತಿ ಎಂಬುದನ್ನು ನೀನು ಅರ್ಥಮಾಡಿಕೊಂಡರೆ ಕೃತಕೃತ್ಯನಾಗುತ್ತಿ.
ಏತಾಂ ಬುದ್ಧಿಂ ವಿನಿಶ್ಚಿತ್ಯ ಭೂತಾನಾಮಾಗತಿಂ ಗತಿಮ್ |
ಪಿತೃಪೈತಾಮಹೇ ವೃತ್ತೇ ಶಾಧಿ ರಾಜ್ಯಂ ಯಥೋಚಿತಮ್ ॥18॥
ಸಮಸ್ತ ಪ್ರಾಣಿಗಳ ಆಗಮನವು ಭಗವಂತನ ಸಂಕಲ್ಪದಿಂದ ನಡೆಯುತ್ತದೆ, ಲಯವೂ ಅವನ ಸಂಕಲ್ಪದಿಂದಲೇ ನಡೆಯುತ್ತದೆ ಎನ್ನುವುದನ್ನು ಬುದ್ಧಿಯಿಂದ ನಿಶ್ಚಯಿಸಿಕೊಂಡು, ನಿನ್ನ ತಾತ-ಮುತ್ತಾತಂದಿರು ನಡೆಸಿಕೊಂಡು ಬಂದಿರುವ ಈ ರಾಜ್ಯವನ್ನು ಯೋಗ್ಯವಾಗಿ ಪರಿಪಾಲಿಸು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕೃಷ್ಣವಚನಂ ನಾಮ ದ್ವಾದಶೋಽಧ್ಯಾಯಃ ॥

॥ ಅಶ್ವಮೇಧಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ಶ್ರೀಕೃಷ್ಣನು ಧರ್ಮರಾಜನಿಗೆ ಅಹಂಕಾರ, ಮಮಕಾರವನ್ನು ಬಿಡಲು ಹೇಳುವುದು. ಕಾಮಗೀತೆಯ ಉಲ್ಲೇಖ.
ಯಜ್ಞ ಮಾಡಲು ಯುಧಿಷ್ಠಿರನಿಗೆ ಪ್ರೇರಣೆ.
ಶ್ರೀಭಗವಾನ್
ನ ಬಾಹ್ಯಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ಭಾರತ |
ಶಾರೀರಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ವಾ ನ ವಾ ॥1॥
ಶ್ರೀಭಗವಾನ್ ಯುಧಿಷ್ಠಿರನೇ, ಬಾಹ್ಯದ್ರವ್ಯಗಳನ್ನು ಪರಿತ್ಯಾಗ ಮಾಡುವುದರಿಂದ ಸಿದ್ಧಿಯನ್ನು ಹೊಂದಲು ಸಾಧ್ಯವಿಲ್ಲ. ಶರೀರವೆಂಬ ಅಂತರ್ದ್ರವ್ಯವನ್ನು ತಪಸ್ಸೇ ಮೊದಲಾದ ಕ್ಲೇಶಗಳಿಂದ ತ್ಯಾಗ ಮಾಡಿದರೂ ರಾಜರಿಗೆ ಸಿದ್ಧಿಯಾಗುವುದಿಲ್ಲ. ಇದು ಶರೀರವನ್ನು ದಂಡಿಸುವ ವ್ಯಾಪಾರವು, ಬ್ರಾಹ್ಮಣರ ಧರ್ಮ ಎನಿಸಿದೆ. ರಾಜರಿಗೆ ರಾಜ್ಯಪರಿಪಾಲನೆಯೇ ಪ್ರಧಾನವಾದ ಧರ್ಮ. ಇದನ್ನು ಬಿಟ್ಟು ತಪಸ್ಸನ್ನಾಚರಿಸುವುದು ಅನುಚಿತವಾದ ವರ್ತನೆ ಎನಿಸಿದೆ.
ಬಾಹ್ಯದ್ರವ್ಯವಿಮುಕ್ತಸ್ಯ ಶಾರೀರೇಷು ಚ ಗೃಧ್ಯತಃ |
ಯೋ ಧರ್ಮೋ ಯತ್ಸುಖಂ ಚೈವ ದ್ವಿಷತಾಮಸ್ತು ತತ್ ತವ ॥2॥
ಬಾಹ್ಯದ್ರವ್ಯಗಳೆನಿಸಿದ ರಾಜ್ಯ, ಕೋಶಾದಿಗಳಿಂದ ದೂರವಿದ್ದರೂ ಶಾರೀರಿಕವಾದ ಕಾಮೋಪಭೋಗಗಳಲ್ಲಿ ಆಸಕ್ತನಾದವನಿಗೆ ಯಾವ ಸುಖವಿದೆಯೋ, ಧರ್ಮವಿದೆಯೋ ಅಂತಹ ಧರ್ಮ-ಸುಖಗಳು ನಿನ್ನ ಶತ್ರುಗಳಿಗೇ ಇರಲಿ. ನಿನಗೆ ಅಂತಹ ಸುಖವು ಬೇಡ.
ದ್ವ್ಯಕ್ಷರಸ್ತು ಭವೇನ್ಮೃತ್ಯುಃ ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್ |
ಮಮೇತಿ ದ್ವ್ಯಕ್ಷರೋ ಮೃತ್ಯುಃ ನ ಮಮೇತಿ ಚ ಶಾಶ್ವತಮ್ ॥3॥
ಮೃತ್ಯುವು ಎರಡು ಅಕ್ಷರಗಳಲ್ಲಿ ಇದೆ. ಶಾಶ್ವತವಾದ ಪೂರ್ಣಸುಖವು ಮೂರು ಅಕ್ಷರಗಳಲ್ಲಿ ಇದೆ. `ಮಮ' ಎಂಬ ಎರಡು ಅಕ್ಷರಗಳೇ ಮೃತ್ಯುವೆನಿಸಿದರೆ, `ನ ಮಮ' ಎಂಬ ಮೂರು ಅಕ್ಷರಗಳು ಶಾಶ್ವತವಾದ ಸುಖಕ್ಕೆ ಕಾರಣವಾಗಿವೆ.
ಜನ್ಮಮೃತ್ಯೂ ತತೋ ರಾಜನ್ನಾತ್ಮನ್ಯೇವ ವ್ಯವಸ್ಥಿತೌ |
ಅದೃಶ್ಯಮಾನೌ ಭೂತಾನಿ ಯೋಧಯೇತಾಮಸಂಶಯಮ್ ॥4॥
ಮಹಾರಾಜನೇ, ಜನ್ಮ-ಮರಣಗಳೆರಡು ಶರೀರದಲ್ಲೇ ಇವೆ. ಕಣ್ಣಿಗೆ ಕಾಣದಂತೆ ಶರೀರದಲ್ಲಿ ಹೊಕ್ಕು ಜೀವದ ಜೊತೆಗೆ ಯುದ್ಧವನ್ನು ಮಾಡುತ್ತಿವೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಅವಿನಾಶೋಽಸ್ಯ ತತ್ತ್ವಸ್ಯ ನಿಯತೋ ಯದಿ ಭಾರತ |
ಹತ್ವಾ ಶರೀರಂ ಭೂತಾನಾಮಹಿಂಸಾ ಪ್ರತಿಪದ್ಯತೇ॥5॥
ಒಂದು ವೇಳೆ ಜೀವನು ಅಮೃತತ್ವವನ್ನು ಹೊಂದಿದರೆ, ಶರೀರದಿಂದ ಹೊರ ಬಂದಿರುವ ಜೀವನು ಎಂದಿಗೂ ಹಿಂಸಾರೂಪವಾದ ಪಾಪದಿಂದ ಲೇಪವನ್ನು ಹೊಂದುವುದಿಲ್ಲ.
ಲಬ್ಧ್ವಾಪಿ ಪೃಥಿವೀಂ ಸರ್ವಾಂ ಸಹಸ್ಥಾವರಜಂಗಮಾಮ್ |
ಮಮತ್ವಂ ಯಸ್ಯ ನೈವ ಸ್ಯಾತ್ ಕಿಂ ತಯಾ ಸ ಕರಿಷ್ಯತಿ ॥6॥
ಸ್ಥಾವರ-ಜಂಗಮಾತ್ಮಕವಾದ ಸಮಗ್ರ ಭೂಮಂಡಲವನ್ನು ಪಡೆದು, ಅವನು ಮಮಕಾರವನ್ನು ಹೊಂದಲಿಲ್ಲವೆಂದರೆ ಆ ಭೂಮಂಡಲದಿಂದ ಏನು ಮಾಡಲು ಸಾಧ್ಯ? ಆ ಸಮಗ್ರ ಭೂಮಂಡಲದ ಸಂಪತ್ತು ಅವನಿಗೆ ಅನರ್ಥವನ್ನುಂಟು ಮಾಡಲಾರದು.
ಅಥವಾ ವಸತಃ ಪಾರ್ಥ ವನೇ ವನ್ಯೇನ ಜೀವತಃ |
ಮಮತಾ ಯಸ್ಯ ವಿತ್ತೇಷು ಮೃತ್ಯೋರಾಸ್ಯೇ ಸ ವರ್ತತೇ ॥7॥
ಯುಧಿಷ್ಠಿರನೇ, ಅಥವಾ ಅರಣ್ಯದಲ್ಲೇ ವಾಸಮಾಡುತ್ತಿದ್ದು, ಅರಣ್ಯದಲ್ಲಿ ಸಿಕ್ಕಿದ ಕಂದ-ಮೂಲಾದಿಗಳಿಂದ ಜೀವಿಸುತ್ತಿದ್ದರೂ ಯಾವ ಮನುಷ್ಯನು ಮಮತೆಯಿಂದ ಮುಕ್ತನಾಗಿಲ್ಲವೋ ಅವನು ಮೃತ್ಯುವಿನ ಬಾಯಿಯಲ್ಲೇ ಇದ್ದಾನೆಂದು ತಿಳಿಯಬೇಕು.
ಬಾಹ್ಯಾಂತರಾಣಾಂ ಶತ್ರೂಣಾಂ ಸ್ವಭಾವಂ ಪಶ್ಯ ಭಾರತ |
ಯೋಽನುಪಶ್ಯತಿ ತದ್ಭೂತಂ ಮುಚ್ಯತೇ ಸ ಮಹಾಭಯಾತ್ ॥8॥
ಧರ್ಮರಾಜನೇ, ಬಾಹ್ಯಾಂತರ ಶತ್ರುಗಳ ಸ್ವಭಾವವನ್ನು ಅರ್ಥಮಾಡಿಕೊ. ಯಾವನು ಅಹಂಕಾರ, ಮಮಕಾರಗಳನ್ನು ಬಿಟ್ಟು ಪರಮಾತ್ಮನಲ್ಲಿಯೇ ಮನಸ್ಸನ್ನು ಇಡುತ್ತಾನೋ ಅವನು ಮಹಾಭಯದಿಂದ ಮುಕ್ತನಾಗುತ್ತಾನೆ.
ಕಾಮಾತ್ಮಾನಂ ನ ಪ್ರಶಂಸಂತಿ ಸರ್ವೇ
ನ ಚಾಕಾಮಾತ್ ಕಾಚಿದಸ್ತಿ ಪ್ರವೃತ್ತಿಃ |
ದಾನಂ ಹಿ ವೇದಾಧ್ಯಯನಂ ತಪಶ್ಚ
ಕಾಮೇನ ಕರ್ಮಾಣಿ ಚ ವೈದಿಕಾನಿ ॥9॥
ಜಗತ್ತಿನಲ್ಲಿ ಅಸದ್ವಿಷಯಕ ಕಾಮನೆಗಳನ್ನು ಹೊಂದಿದವರನ್ನು ಯಾರೂ ಪ್ರಶಂಸಿಸುವುದಿಲ್ಲ. ಆದರೆ ಪರಲೋಕ ಕಾಮನೆಯೇ ಇಲ್ಲದೆ ಯಾವ ಪ್ರವೃತ್ತಿಯೂ ಕೂಡುವುದಿಲ್ಲ. ದಾನ, ವೇದಾಧ್ಯಯನ, ತಪಸ್ಸು ಎಲ್ಲವೂ ವೇದವಿಹಿತವಾದ ಪರಲೋಕದ ಸಾಧನೆಗಾಗಿ ಎಂಬುದನ್ನು ಅರ್ಥೈಸಿಕೊ.
ವ್ರತಂ ಯಜ್ಞಾನ್ ನಿಯಮಾನ್ ಧ್ಯಾನಯೋಗಾನ್
ಕಾಮೇನ ಯೋ ನಾರಭತೇ ವಿದಿತ್ವಾ |

ಯದವ್ಯಯಂ ಕಾಮಯತೇ ಸ ಧರ್ಮೋ
ಯೋಽಯಂ ಧರ್ಮೋ ನಿಯಮಸ್ತಸ್ಯ ಮೂಲಮ್ ॥10॥
ವ್ರತಗಳನ್ನಾಗಲಿ, ಯಜ್ಞಗಳನ್ನಾಗಲಿ, ನಿಯಮಗಳನ್ನಾಗಲಿ, ಧ್ಯಾನ- ಯೋಗಗಳನ್ನಾಗಲಿ ಬಾಹ್ಯಕಾಮನೆಗಳಿಂದ ಅನುಷ್ಠಾನ ಮಾಡಬಾರದು. ನಿತ್ಯವಾದ ಕಾಮನೆಗಳನ್ನು ಚಿಂತಿಸುವುದು ಧರ್ಮವೆನಿಸಿದೆ. ಅನಿತ್ಯವಾದ ಕಾಮನೆಗಳನ್ನು ಅಪೇಕ್ಷಿಸಬಾರದು. ಕಾಮನೆಗಳನ್ನು ನಿಗ್ರಹಿಸುವುದೇ ಧರ್ಮವಾಗಿದೆ. ಅದೇ ಮೋಕ್ಷಕ್ಕೆ ಬೀಜವಾಗಿದೆ.
ಅತ್ರ ಗಾಥಾಃ ಕಾಮಗೀತಾಃ ಕೀರ್ತಯಂತಿ ಪುರಾವಿದಃ |
ಶೃಣು ಸಂಕೀರ್ತ್ಯಮಾನಾಸ್ತಾ ನಿಖಿಲೇನ ನರಾಧಿಪ ॥11॥
ಯುಧಿಷ್ಠಿರನೇ, ಈ ವಿಷಯದಲ್ಲಿ ವಿದ್ವಾಂಸರು ಕಾಮಗೀತೆಯ ವೃತ್ತಾಂತವನ್ನು ತಿಳಿಸುತ್ತಾರೆ. ಆ ಕಾಮಗೀತೆಗಳ ಶ್ಲೋಕಗಳನ್ನು ಹೇಳುತ್ತೇನೆ, ಕೇಳಿಸಿಕೊ.
ಕಾಮಃ
ನಾಹಂ ಶಕ್ಯೋಽನುಪಾಯೇನ ಹಂತುಂ ಭೂತೇನ ಕೇನಚಿತ್ ॥12॥
ಯೋ ಮಾಂ ಪ್ರಯತತೇ ಹಂತುಂ ಜ್ಞಾತ್ವಾ ಪ್ರಹರಣೇ ಬಲಮ್ |
ತಸ್ಯ ತಸ್ಮಿನ್ ಪ್ರಹರಣೇ ಪುನಃ ಪ್ರಾದುರ್ಭವಾಮ್ಯಹಮ್ ॥13॥
ಕಾಮವು ಹೇಳುತ್ತದೆ ಉಪಾಯವಿಲ್ಲದೆ ಕಾಮ ಎನಿಸಿದ ನನ್ನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಯಾವಾತನು ನನ್ನನ್ನು ಅಸ್ತ್ರಪ್ರಹಾರದಲ್ಲಿ ಕುಶಲನೆಂದು ಭಾವಿಸಿಕೊಂಡು ಸಂಹರಿಸಲು ಪ್ರಯತ್ನಿಸುತ್ತಾನೋ ಆ ಪ್ರಹರಣದಲ್ಲಿಯೇ (ಆ ಆಯುಧದಲ್ಲಿಯೇ) ಪುನಃ ನಾನು ಹುಟ್ಟಿಕೊಳ್ಳುತ್ತೇನೆ.
ಯೋ ಮಾಂ ಪ್ರಯತತೇ ಹಂತುಂ ಯಜ್ಞೈರ್ವಿವಿಧದಕ್ಷಿಣೈಃ |
ಜಂಗಮೇಷ್ವಿವ ಕರ್ಮಾತ್ಮಾ ಪುನಃ ಪ್ರಾದುರ್ಭವಾಮ್ಯಹಮ್ ॥14॥
ನಾನಾ ಮುಖವಾದ ಯಜ್ಞಗಳು, ದಕ್ಷಿಣೆಗಳಿಂದ ನನ್ನನ್ನು ಸಂಹರಿಸಲು ಯಾವನು ಪ್ರಯತ್ನಿಸುವನೋ ಅಂತಹ ವ್ಯಕ್ತಿಯಲ್ಲಿಯೂ ನಾನು ಜಂಗಮಯೋನಿಗಳಲ್ಲಿ ಕರ್ಮಠನು ಹುಟ್ಟುವಂತೆ ಪ್ರಾದುರ್ಭವಿಸುತ್ತೇನೆ (ಕಾಮ್ಯಯಜ್ಞಗಳಿಂದ ಕಾಮನೆಯನ್ನು ನಿಗ್ರಹಿಸಲು ಸಾಧ್ಯವಿಲ್ಲ).
ಯೋ ಮಾಂ ಪ್ರಯತತೇ ಹಂತುಂ ವೇದೈರ್ವೇದ್ಯಂ ನ ಸಾಧಕೈಃ |
ಸ್ಥಾವರೇಷ್ವಿವ ಶಾಂತಾತ್ಮಾ ಪುನಃ ಪ್ರಾದುರ್ಭವಾಮ್ಯಹಮ್ ॥15॥
ಯಾರು ಕಾಮ್ಯಕರ್ಮ ಪ್ರತಿಪಾದಕವಾದ ವೇದಗಳಿಂದ ಆಪಾತತಃ ತೋರುವ ಅರ್ಥಗಳನ್ನು ಗ್ರಹಿಸಿಕೊಂಡು ನನ್ನನ್ನು ನಿಗ್ರಹಿಸಲು ಬಯಸುತ್ತಾರೋ ತತ್ತ್ವಜ್ಞಾನ ಸಾಧಕವಾದ ವೇದಗಳಿಂದ ನನ್ನನ್ನು ನಿಗ್ರಹಿಸಲು ಬಯಸುವುದಿಲ್ಲವೋ ಅಂತಹವರಲ್ಲಿ ಸ್ಥಾವರ ಪ್ರಾಣಿಗಳಲ್ಲಿ ಇರುವ ಜೀವಾತ್ಮನಂತೆ ಪುನಃ ನಾನು ಪ್ರಕಟನಾಗುತ್ತೇನೆ.
ವ್ಯಾಖ್ಯಾನ ವಿಶೇಷ ವ್ಯಾಸರು ಗಿಡ-ಮರಗಳಲ್ಲಿರುವ ಜೀವಾತ್ಮನನ್ನು ಶಾಂತಾತ್ಮಾ ಎಂದಿದ್ದಾರೆ. ಎಂದರೆ ಗಿಡ-ಮರಗಳು ಹೊರಗಣ್ಣಿನಿಂದ ನಾವು ನೋಡಿದಾಗ ಯಾವುದೇ ಕಾಮನೆಗಳು ಇಲ್ಲದಂತೆ ಬಿಸಿಲಿನ ತಾಪವನ್ನು ಸಹಿಸಿಕೊಂಡು ನೀರನ್ನೂ ಪಾನ ಮಾಡದೆ ತಪಸ್ವಿಗಳಂತೆ ಕಾಣಿಸಿಕೊಂಡರೂ ತನ್ನ ಬೇರುಗಳಿಂದ ಜಲಪಾನವೇ ಮೊದಲಾದ ಸುಖಗಳನ್ನು ಅನುಭವಿಸುತ್ತವೆ. ಹೀಗೆ ಕೆಲವರು ವೇದೋಕ್ತವಾದ ಕರ್ಮಗಳನ್ನೂ ಅನುಷ್ಠಾನ ಮಾಡಿ ಸಾಧಕರು ಎಂದು ಕಂಡುಬಂದರೂ ಅವರ ಅಂತರಂಗವು ಅನೇಕ ಬಾಹ್ಯಕಾಮನೆಗಳಲ್ಲಿಯೇ ಆಸಕ್ತಿಯನ್ನು ತಾಳಿರುತ್ತದೆ. ಇವರು ಕಾಮಹತರಾಗಿದ್ದಾರೆ ಎಂದೇ ಅಭಿಪ್ರಾಯ.
ಯೋ ಮಾಂ ಪ್ರಯತತೇ ಹಂತುಂ ಧೃತ್ಯಾ ಸತ್ಯಪರಾಕ್ರಮಃ |
ಭಾವೋ ಭವಾಮಿ ತಸ್ಯಾಹಂ ಸ ಚ ಮಾಂ ನಾವಬುದ್ಧ್ಯತೇ ॥16॥
ಯಾವನು ಸತ್ಯನಿಷ್ಠನಾಗಿ ಧೃತಿಗೆಡದೆ ನನ್ನನ್ನು ಸಂಹರಿಸಲು ಪ್ರಯತ್ನಿಸುತ್ತಾನೋ ಅಂತಹವನ ಪ್ರಯತ್ನದಲ್ಲಿಯೇ ನಾನು ಸೇರಿರುತ್ತೇನೆ. ಅವನ ಮನಸ್ಸಿನ ಭಾವನೆಯಲ್ಲಿಯೇ ಸೇರಿಕೊಂಡು ಕಾಮನೆಗಳನ್ನೇ ಹೊಂದಿಸುತ್ತೇನೆ. ಇದು ಅವನಿಗೆ ತಿಳಿಯುವುದಿಲ್ಲ.

ಯೋ ಮಾಂ ಪ್ರಯತತೇ ಹಂತುಂ ತಪಸಾ ಸಂಶಿತವ್ರತಃ |
ತತಸ್ತಪಸಿ ತಸ್ಯಾಥ ಪುನಃ ಪ್ರಾದುರ್ಭವಾಮ್ಯಹಮ್ ॥17॥
ಯಾವನು ಕಾಮ್ಯವಾದ ತಪೋನುಷ್ಠಾನಗಳನ್ನು ಮಾಡಿಕೊಂಡು ನನ್ನನ್ನು ನಿಗ್ರಹಿಸಲು ಬಯಸುತ್ತಾನೋ ನಾನು ಅಂತಹ ಕಾಮ್ಯತಪೋನಿರತನ ತಪಸ್ಸಿನಲ್ಲಿಯೇ ಪ್ರಕಟನಾಗುತ್ತೇನೆ.
ಯೋ ಮಾಂ ಪ್ರಯತತೇ ಹಂತುಂ ಮೋಕ್ಷಮಾಸ್ಥಾಯ ಪಂಡಿತಃ |
ತಸ್ಯ ಮೋಕ್ಷಮತಿಸ್ಥಸ್ಯ ನೃತ್ಯಾಮಿ ಚ ಹಸಾಮಿ ಚ ॥18॥
ಅವಧ್ಯಃ ಸರ್ವಭೂತಾನಾಮಹಮೇಕಃ ಸನಾತನಃ ॥19॥
ಯಾವ ವಿದ್ವಾಂಸನು ಭಗವಂತನ ಅನುಗ್ರಹವಿಲ್ಲದೆ, ತನ್ನ ಪ್ರಯತ್ನವಿಲ್ಲದೆ ಮೋಕ್ಷವನ್ನು ಹೊಂದುತ್ತೇನೆ ಎಂದು ಪ್ರಯತ್ನಶೀಲನಾಗುತ್ತಾನೋ ಅಂತಹ ಮೋಕ್ಷಮತಿಸ್ಥನಾದ ವ್ಯಕ್ತಿಯಲ್ಲಿ ಸೇರಿಕೊಂಡು ನರ್ತನವನ್ನೂ ಮಾಡುತ್ತೇನೆ, ಅಟ್ಟಹಾಸಗೈಯ್ಯುತ್ತೇನೆ. ಆದ್ದರಿಂದ ಸರ್ವಕಾಲದಲ್ಲಿಯೂ ಎಲ್ಲ ಪ್ರಾಣಿಗಳಲ್ಲಿ ಅವಧ್ಯನಾಗಿರುವವನು ನಾನೊಬ್ಬನೇ.
ಶ್ರೀಭಗವಾನ್
ತಸ್ಮಾತ್ ತ್ವಮಪಿ ತಂ ಕಾಮಂ ಯಜ್ಞೈರ್ವಿವಿಧದಕ್ಷಿಣೈಃ |
ಧರ್ಮೇ ಕುರು ಮಹಾರಾಜ ತತ್ರ ತೇ ನ ಭವಿಷ್ಯತಿ ॥20॥
ಶ್ರೀಭಗವಾನ್ ಯುಧಿಷ್ಠಿರನೇ, ಆದ್ದರಿಂದ ನೀನೂ ಕೂಡ ನಾನಾ ವಿಧವಾದ ದಕ್ಷಿಣೆಗಳನ್ನೊಳಗೊಂಡ ಯಜ್ಞಗಳಿಂದ

ಭಗವತ್ಪ್ರೀತಿಯನ್ನು ಉಂಟುಮಾಡುವ ಧರ್ಮಾನುಷ್ಠಾನವನ್ನು ಮಾಡಿ, ಭಗವತ್ಪ್ರೀತಿಯ ಕಾಮನೆಯನ್ನು ಮಾಡು, ಹೊರತು ಯಜ್ಞಗಳಿಂದಾಗುವ ಕಾಮ್ಯವೆನಿಸಿದ ಸ್ವರ್ಗಾದಿ ಫಲಗಳ ಆಸಕ್ತಿಯನ್ನು ತಾಳಬೇಡ.

ಯಜಸ್ವ ವಾಜಿಮೇಧೇನ ವಿಧಿವದ್ ದಕ್ಷಿಣಾವತಾ |
ಅನ್ಯೈಶ್ಚ ವಿವಿಧೈರ್ಯಜ್ಞೈಃ ಸಮೃದ್ಧೈರಾಪ್ತದಕ್ಷಿಣೈಃ ॥21॥
ಮಾ ತೇ ವ್ಯಥಾ ಭೂನ್ನಿಹತಾನ್ ಬಂಧೂನ್ ವೀಕ್ಷ್ಯ ಪುನಃ ಪುನಃ |
ನ ಶಕ್ಯಾಸ್ತೇ ಪುನರ್ದ್ರಷ್ಟುಂ ಹತಾ ಯೇಽಸ್ಮಿನ್ ರಣಾಜಿರೇ ॥22॥

ಯುಧಿಷ್ಠಿರನೇ, ಅಶ್ವಮೇಧ ಯಜ್ಞದಿಂದ ವಿಧಿವತ್ತಾಗಿ ಭಗವಂತನನ್ನು ಆರಾಧಿಸು. ಸಮೃದ್ಧವಾದ ದಕ್ಷಿಣೆಗಳಿಂದ ಕೂಡಿದ ವಿಧವಿಧವಾದ ಯಜ್ಞಗಳಿಂದ ದೇವತಾಂತರ್ಯಾಮಿಯಾದ ಹರಿಯನ್ನು ತೃಪ್ತಿಪಡಿಸು. ಯುದ್ಧದಲ್ಲಿ ಮರಣ ಹೊಂದಿದ ಬಂಧುಗಳ ವಿಷಯವಾಗಿ ಪುನಃ ಪುನಃ ದುಃಖಪಡಬೇಡ. ನೀನು ಎಷ್ಟೇ ದುಃಖ ಹೊಂದಿದರೂ ಯುದ್ಧದಲ್ಲಿ ಹತರಾದವರನ್ನು ಪುನಃ ನೋಡಲು ಅಶಕ್ತನಾಗಿರುವಿ.

ಸ ತ್ವಮಿಷ್ಟ್ವಾ ಮಹಾಯಜ್ಞೈಃ ಸಮೃದ್ಧೈರಾಪ್ತದಕ್ಷಿಣೈಃ |
ಲೋಕೇ ಕೀರ್ತಿಂ ಪರಾಂ ಪ್ರಾಪ್ಯ ಗತಿಮಗ್ರ್ಯಾಂ ಗಮಿಷ್ಯಸಿ ॥23॥

ಸಮೃದ್ಧವಾದ, ಪೂರ್ಣವಾದ ದಕ್ಷಿಣೆಗಳಿಂದ ತುಂಬಿದ ಮಹಾಯಜ್ಞದಿಂದ ಭಗವಂತನನ್ನು ಆರಾಧಿಸಿ, ಲೋಕದಲ್ಲಿ ಅಪಾರವಾದ ಕೀರ್ತಿಯನ್ನು ಗಳಿಸಿಕೊ. ಪರಲೋಕದಲ್ಲಿ ಶ್ರೇಷ್ಠವಾದ ಸದ್ಗತಿಯನ್ನು ಹೊಂದುವಂತಾಗು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕಾಮವಿಚಾರೋ ನಾಮ ತ್ರಯೋದಶೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹದಿಮೂರನೆಯ
ಅಧ್ಯಾಯ ಮುಗಿಯಿತು.

* * * * *

## ಹದಿನಾಲ್ಕನೆಯ ಅಧ್ಯಾಯ

ಋಷಿಗಳು ಉಪದೇಶಿಸಿ ಅದೃಶ್ಯರಾದುದು.
ಭೀಷ್ಮರೇ ಮೊದಲಾದವರಿಗೆ ಔರ್ಧ್ವದೇಹಿಕ ವಿಧಿಗಳನ್ನು
ಪೂರೈಸಿದ ಧರ್ಮರಾಜನು ಹಸ್ತಿನಾವತಿಗೆ ಪ್ರವೇಶಿಸಿದುದು.

ವೈಶಂಪಾಯನಃ
ಏವಂ ಬಹುವಿಧೈರ್ವಾಕ್ಯೈರ್ಮುನಿಭಿಸ್ತೈಸ್ತಪೋಧನೈಃ |
ಸಮಾಶ್ವಸ್ತಸ್ತು ರಾಜರ್ಷಿರ್ಹತಬಂಧುರ್ಯುಧಿಷ್ಠಿರಃ ॥1॥

ವೈಶಂಪಾಯನ ತಪೋಧನರಾದ ಮುನಿಗಳೆಲ್ಲರೂ ಅನೇಕ ವಿಧವಾದ ಮಾತುಗಳಿಂದ ರಾಜರ್ಷಿಯಾದ, ಬಂಧುಗಳನ್ನು ಯುದ್ಧದಲ್ಲಿ ಕಳೆದುಕೊಂಡು ದುಃಖಿಸುತ್ತಿದ್ದ ಯುಧಿಷ್ಠಿರನನ್ನು ಸಂತೈಸಿದರು.

ಸೋಽನುನೀತೋ ಭಗವತಾ ವಿಷ್ಟರಶ್ರವಸಾ ಸ್ವಯಮ್ |
ದ್ವೈಪಾಯನೇನ ಕೃಷ್ಣೇನ ದೇವಸ್ಥಾನೇನ ಚೈವ ಹಿ ॥2॥
ನಾರದೇನಾಥ ಭೀಮೇನ ನಕುಲೇನ ಚ ಪಾರ್ಥಿವ |
ಕೃಷ್ಣಾಯಾ ಸಹದೇವೇನ ವಿಜಯೇನ ಚ ಧೀಮತಾ ॥3॥
ಅನ್ಯೈಶ್ಚ ಪುರುಷವ್ಯಾಘ್ರೈರ್ಬ್ರಾಹ್ಮಣೈಃ ಶಾಸ್ತ್ರದೃಷ್ಟಿಭಿಃ |
ವ್ಯಜಹಾಚ್ಛೋಕಜಂ ದುಃಖಂ ಸಂತಾಪಂ ಚೈವ ಮಾನಸಮ್ ॥4॥

ಸ್ವಯಂ ಪುಂಡರೀಕಾಕ್ಷನಾದ ಭಗವಂತನಿಂದ ಸಂತೈಸಲ್ಪಟ್ಟ, ವೇದವ್ಯಾಸ ದೇವರಿಂದ ಸಂತೈಸಲ್ಪಟ್ಟ ಯುಧಿಷ್ಠಿರನು ದೇವಸ್ಥಾನವೆಂಬ ಋಷಿಗಳಿಂದ, ನಾರದರಿಂದ, ಭೀಮಸೇನ, ನಕುಲರಿಂದ, ದ್ರೌಪದಿದೇವಿಯರಿಂದ, ಸಹದೇವನಿಂದ, ಬುದ್ಧಿವಂತನಾದ ಅರ್ಜುನನಿಂದ, ಇನ್ನೂ ಉಳಿದ ಶ್ರೇಷ್ಠ ಮಹಾಪುರುಷರಿಂದ, ಬ್ರಾಹ್ಮಣರಿಂದ, ಶಸ್ತ್ರ-ಶಾಸ್ತ್ರ ಸಂಪನ್ನರಿಂದ ಸಾಂತ್ವನಗೊಳಿಸಲ್ಪಟ್ಟವನಾಗಿ ಶೋಕದಿಂದ ಉಂಟಾದ ದುಃಖವನ್ನು, ಮಾನಸಿಕ ಸಂತಾಪವನ್ನು ತೊರೆದನು.

ಅರ್ಚಯಾಮಾಸ ದೇವಾಂಶ್ಚ ಬ್ರಾಹ್ಮಣಾಂಶ್ಚ ಯುಧಿಷ್ಠಿರಃ ॥5॥
ಕೃತ್ವಾ ಚ ಪ್ರೇತಕಾರ್ಯಾಣಿ ಸರ್ವೇಷಾಂ ಕುರುನಂದನಃ |
ಅನ್ವಶಾಸತ ಧರ್ಮಾತ್ಮಾ ಪೃಥಿವೀಂ ಸಾಗರಾಂಬರಾಮ್ ॥6॥

ಯುಧಿಷ್ಠಿರನು ಬ್ರಾಹ್ಮಣರನ್ನು, ದೇವತೆಗಳನ್ನು ಆರಾಧಿಸಿ, ಗತಿಸಿದವರಿಗೆಲ್ಲ ಪ್ರೇತಕಾರ್ಯಗಳನ್ನು ಯಥಾವಿಧಿಯಾಗಿ ಮಾಡಿ, ಸಮುದ್ರಪರ್ಯಂತವಾದ ಭೂಮಿಯನ್ನು ಪರಿಪಾಲಿಸಲು ಆರಂಭಿಸಿದನು.

ಪ್ರಶಾಂತಚೇತಾಃ ಕೌರವ್ಯಃ ಸ್ವರಾಜ್ಯಂ ಪ್ರಾಪ್ಯ ಕೇವಲಮ್ |
ವ್ಯಾಸಂ ಚ ನಾರದಂ ಚೈವ ತಾಂಶ್ಚಾನ್ಯಾನಬ್ರವೀನ್ನೃಪಃ ॥7॥

ಕುರುವಂಶದ ರಾಜಶ್ರೇಷ್ಠನಾದ ಧರ್ಮರಾಜನು ತನ್ನ ರಾಜ್ಯವನ್ನು ಪಡೆದುಕೊಂಡು ಪ್ರಶಾಂತವಾದ ಮನಸ್ಸಿನಿಂದ ಕೂಡಿದವನಾಗಿ ವೇದವ್ಯಾಸದೇವರನ್ನೂ, ನಾರದರನ್ನೂ, ಅಲ್ಲಿ ಉಪಸ್ಥಿತರಾಗಿರುವ ಇತರ ಋಷಿಗಳನ್ನು ಕುರಿತು ಹೀಗೆ ಹೇಳಿದನು.

ಯುಧಿಷ್ಠಿರಃ
ಆಶ್ವಾಸಿತೋಽಹಂ ಪ್ರಾಗ್ವೃದ್ಧೈರ್ಭವದ್ಭಿರ್ಮುನಿಪುಂಗವೈಃ |

ನ ಸ್ತೋಕಮಪಿ ನಃ ಕಿಂಚಿದ್ ವ್ಯಲೀಕಮಿಹ ವಿದ್ಯತೇ ॥8॥
ಯುಧಿಷ್ಠಿರ ಮಹಾನುಭಾವರೇ, ಮುನಿಶ್ರೇಷ್ಠರಾದ, ಜ್ಞಾನವೃದ್ಧರಾದ ನಿಮ್ಮಿಂದ ಸಾಂತ್ವನವನ್ನು ಹೊಂದಿದ್ದೇನೆ. ಈಗ ನನ್ನ ಮನಸ್ಸಿನಲ್ಲಿ ಅಣುವಿನಷ್ಟೂ ದುಃಖವು ಇರುವುದಿಲ್ಲ.
ಅರ್ಥಶ್ಚ ಸುಮಹಾನ್ ಪ್ರಾಪ್ತೋ ಯೇನ ಯಕ್ಷ್ಯಾಮಿ ದೇವತಾಃ |
ಪುರಸ್ಕೃತ್ಯೇಹ ಭವತಃ ಸಮಾನೇಷ್ಯಾಮ್ಯತೋ ಮಖಮ್ ॥9॥
ನಿಮ್ಮ ಮಾತಿನಂತೆ ಹಿಮವದ್ ಪರ್ವತದ ತಪ್ಪಲಿನಲ್ಲಿ ಐಶ್ವರ್ಯವು ಲಭ್ಯವಾಗಿದೆ. ಆ ಐಶ್ವರ್ಯದಿಂದ ದೇವತೆಗಳನ್ನು, ಅಂತರ್ಯಾಮಿಯಾದ ವಿಷ್ಣುವನ್ನು ಆರಾಧಿಸುತ್ತೇನೆ. ನಿಮ್ಮೆಲ್ಲರನ್ನು ಮುಂದೆ ಮಾಡಿಕೊಂಡು ಹಿಮವದ್ ಪರ್ವತದ ತಪ್ಪಲಿಗೆ ಹೋಗಿ ಆ ಐಶ್ವರ್ಯವನ್ನು ಯಜ್ಞಶಾಲೆಗೆ ತೆಗೆದುಕೊಂಡು ಬರುತ್ತೇನೆ.
ಹಿಮವಂತಂ ತ್ವಯಾ ಗುಪ್ತಾ ಗಮಿಷ್ಯಾಮಃ ಪಿತಾಮಹ |
ಬಹ್ವಾಶ್ಚರ್ಯೋ ಹಿ ದೇಶಃ ಸ ಶ್ರೂಯತೇ ದ್ವಿಜಸತ್ತಮ ॥10॥
ದ್ವಿಜಶ್ರೇಷ್ಠರೇ, ನಿಮ್ಮೆಲ್ಲರ ಸಹಕಾರದಿಂದ ನಾವೆಲ್ಲರೂ ಹಿಮವದ್ ಪರ್ವತಕ್ಕೆ ಸಾಗೋಣ. ಆ ಪ್ರದೇಶವು ಅನೇಕ ಆಶ್ಚರ್ಯದಿಂದ ಕೂಡಿದೆ ಎಂದು ನಾನು ಕೇಳಿಸಿಕೊಂಡಿದ್ದೇನೆ.
ತಥಾ ಭಗವತಾ ಚಿತ್ರಂ ಕಲ್ಯಾಣಂ ಬಹು ಭಾಷಿತಮ್ |
ದೇವರ್ಷಿಣಾ ನಾರದೇನ ದೇವಸ್ಥಾನೇನ ಚೈವ ಹ ॥11॥
ಪೂಜ್ಯರಾದ ನಾರದರು, ದೇವಸ್ಥಾನರಾದ ಋಷಿಗಳು ಆಶ್ಚರ್ಯಕರವಾದ, ಕಲ್ಯಾಣಕರವಾದ ಅನೇಕ ಮಾತುಗಳನ್ನು ಹೇಳಿರುವಿರಿ.
ನಾಭಾಗಧೇಯಃ ಪುರುಷಃ ಕಶ್ಚಿದೇವಂವಿಧಾನ್ ಗುರೂನ್ |
ಭತೇ ವ್ಯಸನಂ ಪ್ರಾಪ್ಯ ಸುಹೃದಃ ಸಾಧುಸಮ್ಮತಾನ್ ॥12॥
ಭಾಗ್ಯವಂತನಲ್ಲದ ಯಾವ ಪುರುಷನೂ ಕಷ್ಟಬಂದಾಗ ಇಂತಹ ಸಾಧು ಸಮ್ಮತರಾದ, ಹಿತೈಷಿಗಳಾದ ಗುರುಗಳನ್ನು ಪಡೆದುಕೊಳ್ಳಲು ಸಾಧ್ಯವಿಲ್ಲ.
ವೈಶಂಪಾಯನಃ
ಏವಮುಕ್ತಾಸ್ತು ತೇ ರಾಜ್ಞಾ ಸರ್ವ ಏವ ಮಹರ್ಷಯಃ |
ಅಭ್ಯನುಜ್ಞಾಪ್ಯ ರಾಜಾನಂ ತಥೋಭೌ ಕೃಷ್ಣಫಲ್ಗುನೌ ॥13॥
ಪಶ್ಯತಾಮೇವ ಸರ್ವೇಷಾಂ ತತ್ರೈವಾದರ್ಶನಂ ಯಯುಃ ॥14॥
ವೈಶಂಪಾಯನ ಜನಮೇಜಯನೇ, ಧರ್ಮರಾಜನು ಈ ರೀತಿ ಮಾತುಗಳನ್ನು ಹೇಳಿದ ಬಳಿಕ ಎಲ್ಲ ಮಹರ್ಷಿಗಳೂ ಧರ್ಮರಾಜನಿಂದ ಸಹಿತರಾಗಿ ಕೃಷ್ಣಾರ್ಜುನರ ಅನುಮತಿಯನ್ನು ಪಡೆದು ಎಲ್ಲರೂ ನೋಡುತ್ತಿರುವಂತೆ ಅದೃಶ್ಯರಾದರು.
ತತೋ ಧರ್ಮಸುತೋ ರಾಜಾ ತತ್ರೈವೋಪಾವಿಶತ್ ಪ್ರಭುಃ |
ಏವಂ ನಾತಿಮಹಾನ್ ಕಾಲಃ ಸ ತೇಷಾಮತ್ಯವರ್ತತ ॥15॥
ಋಷಿಗಳು ಅದೃಶ್ಯರಾದ ಬಳಿಕವೂ ರಾಜನಾದ ಯುಧಿಷ್ಠಿರನು ಸ್ವಲ್ಪ ಸಮಯ ಅಲ್ಲಿಯೇ ಕುಳಿತಿದ್ದನು.
ಕುರ್ವತಾಂ ಶೌಚಕರ್ಮಾಣಿ ಭೀಷ್ಮಸ್ಯ ನಿಧನೇ ತಥಾ |
ಮಹಾದಾನಾನಿ ವಿಪ್ರೇಭ್ಯೋ ದದತಾಮೌರ್ಧ್ವದೈಹಿಕಮ್ ॥16॥
ಭೀಷ್ಮಾಚಾರ್ಯರ ಅವಸಾನವಾದ ನಂತರ ಮಾಡಬೇಕಾದ ಔರ್ಧ್ವದೈಹಿಕ ಕರ್ಮವನ್ನು ಮಾಡುವುದರಲ್ಲಿ ಪಾಂಡವರು ಸ್ವಲ್ಪ ಕಾಲವನ್ನು ಕಳೆದರು. ನಂತರ ಬ್ರಾಹ್ಮಣರಿಗೆ ಮಹಾದಾನಗಳನ್ನು ಮಾಡಿದರು.
ಭೀಷ್ಮಕರ್ಣಪುರೋಗಾಣಾಂ ಕುರೂಣಾಂ ಕುರುನಂದನ |
ಸಹಿತೋ ಧೃತರಾಷ್ಟ್ರೇಣ ಸ ದದಾವೌರ್ಧ್ವದೈಹಿಕಮ್ ॥17॥
ತತೋ ದತ್ತ್ವಾ ಬಹು ಧನಂ ವಿಪ್ರೇಭ್ಯಃ ಪಾಂಡುನಂದನಃ |
ಧೃತರಾಷ್ಟ್ರಂ ಪುರಸ್ಕೃತ್ಯ ವಿವೇಶ ಗಜಸಾಹ್ವಯಮ್ ॥18॥
ಧೃತರಾಷ್ಟ್ರನಿಂದ ಸಹಿತರಾದ ಪಾಂಡವರು ಭೀಷ್ಮ-ಕರ್ಣ ಮೊದಲಾದವರಿಗೆ ಕ್ರಮಬದ್ಧವಾಗಿ ಔರ್ಧ್ವದೈಹಿಕ ವಿಧಿಗಳನ್ನು ಆಚರಿಸಿ, ಬ್ರಾಹ್ಮಣರಿಗೆಲ್ಲ ಬಹು ದಕ್ಷಿಣೆಗಳನ್ನು ದಾನ ಮಾಡಿ, ಧೃತರಾಷ್ಟ್ರನಿಂದ ಸಹಿತನಾಗಿ ಹಸ್ತಿನಾವತಿಯನ್ನು ಧರ್ಮಜನು ಪ್ರವೇಶಿಸಿದನು.

ಸ ಸಮಾಶ್ವಾಸ್ಯ ಪಿತರಂ ಪ್ರಜ್ಞಾಚಕ್ಷುಷಮೀಶ್ವರಮ್ |
ಅನ್ವಶಾಸತ ಧರ್ಮಾತ್ಮಾ ಪೃಥಿವೀಂ ಭ್ರಾತೃಭಿಃ ಸಹ ॥19॥
ಧರ್ಮಾತ್ಮನಾದ ಯುಧಿಷ್ಠಿರನು ಪ್ರಜ್ಞಾಚಕ್ಷುವೆನಿಸಿದ, ಪ್ರಭುವಾದ, ತಂದೆಯಾದ ಧೃತರಾಷ್ಟ್ರನನ್ನು ಸಮಾಧಾನಗೊಳಿಸುತ್ತಾ ತಮ್ಮಂದಿರೊಂದಿಗೆ ರಾಜ್ಯದ ರಕ್ಷಣೆಯನ್ನು ಮಾಡಲು ಆರಂಭಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಧರ್ಮರಾಜಪುರಪ್ರವೇಶೋ ನಾಮ ಚತುರ್ದಶೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ವೈಶಂಪಾಯನರಿಂದ ಕುರುವಿಜಯದ ಬಳಿಕ ಹಸ್ತಿನಾಪುರದಲ್ಲಿ

ಕೃಷ್ಣಾರ್ಜುನರು ವಿಹರಿಸಿದ ಪ್ರಕಾರದ ವರ್ಣನೆ. ಕೃಷ್ಣನು ಅರ್ಜುನನಿಗೆ ತನ್ನ
ದ್ವಾರಕೆಗೆ ಹೊರಡುವ ಅಭಿಪ್ರಾಯವನ್ನು ಯುಧಿಷ್ಠಿರನಿಗೆ ತಿಳಿಸಲು ಹೇಳಿದುದು.
ಜನಮೇಜಯಃ
ವಿಜಿತೇ ಪಾಂಡವೇಯೈಸ್ತು ಪ್ರಶಾಂತೇ ಚ ದ್ವಿಜೋತ್ತಮ |
ರಾಷ್ಟ್ರೇ ಕಿಂ ಚಕ್ರತುರ್ವೀರೌ ವಾಸುದೇವಧನಂಜಯೌ ॥1॥
ಜನಮೇಜಯ ದ್ವಿಜಶ್ರೇಷ್ಠರೇ, ಪಾಂಡವರೆಲ್ಲರೂ ವಿಜಯಿಗಳಾದ ಬಳಿಕ, ಸಮಗ್ರ ರಾಷ್ಟ್ರದಲ್ಲಿ ಪ್ರಶಾಂತ ವಾತಾವರಣ ಸೃಷ್ಟಿಯಾದ ನಂತರ ಕೃಷ್ಣಾರ್ಜುನರು ಏನು ಮಾಡಿದರೆಂದು ತಿಳಿಸಿರಿ.
ವೈಶಂಪಾಯನಃ
ವಿಜಿತೇ ಪಾಂಡವೈ ರಾಜನ್ ಪ್ರಶಾಂತೇ ಚ ವಿಶಾಂಪತೌ |
ರಾಷ್ಟ್ರೇ ಬಭೂವತುರ್ಹೃಷ್ಟೌ ವಾಸುದೇವಧನಂಜಯೌ ॥2॥
ವೈಶಂಪಾಯನ ಪ್ರಜೆಗಳಿಗೆ ಸ್ವಾಮಿಯಾದವನೇ, ಪಾಂಡವರು ವಿಜಯಶಾಲಿಗಳಾದ ಬಳಿಕ ರಾಷ್ಟ್ರದಲ್ಲಿ ಎಲ್ಲೆಡೆಯಲ್ಲಿಯೂ ಪ್ರಶಾಂತ ವಾತಾವರಣ ಸೃಷ್ಟಿಯಾಯಿತು. ಇದರಿಂದ ಕೃಷ್ಣಾರ್ಜುನರು ಪರಮ ಸಂತುಷ್ಟರಾದರು.
ವಿಜಹ್ರಾತೇ ಮುದಾ ಯುಕ್ತೌ ದಿವಿ ದೇವೇಶ್ವರಾವಿವ ॥3॥
ತೌ ವನೇಷು ವಿಚಿತ್ರೇಷು ಪರ್ವತಾನಾಂ ಚ ಸಾನುಷು |
ಶೈಲೇಷು ಗಹ್ವರಾರಣ್ಯೇ ಪಲ್ವಲೇಷು ನದೀಷು ಚ ॥4॥
ಚಂಕ್ರಮ್ಯಮಾಣೌ ಸಂಹೃಷ್ಟಾವಶ್ವಿನಾವಿವ ನಂದನೇ |
ಇಂದ್ರಪ್ರಸ್ಥೇ ಮಹಾತ್ಮಾನೌ ರೇಮಾತೇ ಕೃಷ್ಣಪಾಂಡವೌ ॥5॥
ಕೃಷ್ಣಾರ್ಜುನರು ಸ್ವರ್ಗಲೋಕದಲ್ಲಿ ವಿಹರಿಸುವ ದೇವೇಶ್ವರರಂತೆ ಸಂತುಷ್ಟರಾಗಿ ವಿಚಿತ್ರವಾದ ಅರಮನೆಗಳಲ್ಲಿಯೂ, ರಮಣೀಯವಾದ ಪರ್ವತಶ್ರೇಣಿಗಳಲ್ಲಿಯೂ, ಪವಿತ್ರವಾದ ತೀರ್ಥಗಳಲ್ಲಿಯೂ, ನದಿಗಳಲ್ಲಿಯೂ ಸಂಚರಿಸುತ್ತಾ ನಂದನವನದಲ್ಲಿ ವಿಹರಿಸುವ ಅಶ್ವಿನೀದೇವತೆಗಳಂತೆ ಇಂದ್ರಪ್ರಸ್ಥದಲ್ಲಿ ಸಂತುಷ್ಟರಾಗಿ ವಿಹರಿಸುತ್ತಿದ್ದರು.
ಪ್ರವಿಶ್ಯ ತಾಂ ಸಭಾಂ ರಮ್ಯಾಂ ವಿಜಹ್ರಾತೇ ಚ ಭಾರತ ॥6॥
ಮಹಾತ್ಮರಾದ ಕೃಷ್ಣಾರ್ಜುನರು ಪಾಂಡವರ ಹಿಂದಿನ ರಾಜಧಾನಿಯಾಗಿದ್ದ ಇಂದ್ರಪ್ರಸ್ಥಕ್ಕೆ ಹೋಗಿ, ಮಯನಿಂದ ನಿರ್ಮಿತವಾದ ಸಭಾಭವನದಲ್ಲಿ ಸಂತೋಷದಿಂದ ಕಾಲ ಕಳೆಯುತ್ತಿದ್ದರು.
ತತ್ರ ಯುದ್ಧಕಥಾಶ್ಚಿತ್ರಾಃ ಪರಿಕ್ಲೇಶಾಂಶ್ಚ ಭಾರತ |
ಕಥಾಯೋಗೇ ಕಥಾಯೋಗೇ ಕಥಯಾಮಾಸತುಃ ಸದಾ ॥7॥
ಆ ಇಂದ್ರಪ್ರಸ್ಥದಲ್ಲಿಯಾದರೂ ಚಿತ್ರವಿಚಿತ್ರವಾದ ಯುದ್ಧದ ಚರಿತ್ರೆಯನ್ನು, ಹಿಂದೆ ಹೊಂದಿದ ಕ್ಲೇಶಗಳನ್ನು ಪರಸ್ಪರವಾಗಿ ಕಥೆಯ ಮೂಲಕ ಹೇಳಿಕೊಂಡರು.
ಋಷೀಣಾಂ ದೇವತಾನಾಂ ಚ ವಂಶಾನ್ ವ್ಯಾಹರತಾಂ ತದಾ |
ಪ್ರೀಯಮಾಣೌ ಮಹಾತ್ಮಾನೌ ಪುರಾಣಾವೃಷಿಸತ್ತಮೌ ॥8॥
ಮಧುರಾಸ್ತು ಕಥಾಶ್ಚಿತ್ರಾಃ ಚಿತ್ರಾರ್ಥಪದನಿಶ್ಚಯಾಃ |
ನಿಶ್ಚಯಜ್ಞಃ ಸ ಪಾರ್ಥಾಯ ಕಥಯಾಮಾಸ ಕೇಶವಃ ॥9॥
ಋಷಿಗಳು, ದೇವತೆಗಳು, ಇವರ ವಂಶಗಳ ವಿಸ್ತಾರವಿಚಾರಗಳನ್ನು, ಪ್ರತಿಯೊಂದು ಕಥಾ ಪ್ರಸಂಗಗಳನ್ನು ಸಂತೋಷದಿಂದಲೇ ಹೇಳಿಕೊಳ್ಳುತ್ತಿದ್ದರು. ನರ- ನಾರಾಯಣರೇ ಎನಿಸಿದ ಕೃಷ್ಣಾರ್ಜುನರು ಮಧುರವಾದ, ಚಿತ್ರ-ವಿಚಿತ್ರವಾದ ಕಥೆಗಳನ್ನು ವಿಚಿತ್ರವಾದ ಅರ್ಥಪದಗಳ ನಿಶ್ಚಯದಿಂದ ಹೇಳಿಕೊಳ್ಳುತ್ತಿರಲು ಎಲ್ಲ ಕಥೆಗಳ ಸಾರವನ್ನು ಸಿದ್ಧಾಂತಜ್ಞನಾದ ಕೃಷ್ಣನು ಅರ್ಜುನನಿಗೆ ಬೋಧಿಸಿದನು.
ಪುತ್ರಶೋಕಾಭಿಸಂತಪ್ತಂ ಜ್ಞಾತೀನಾಂ ಚ ಸಹಸ್ರಶಃ |
ಕಥಾಭಿಃ ಶಮಯಾಮಾಸ ಪಾರ್ಥಂ ಶೌರಿರ್ಜನಾರ್ದನಃ ॥10॥
ವಸುದೇವನ ಮಗನಾದ ಜನಾರ್ದನನು ಪುತ್ರಶೋಕದಿಂದ, ಸಾವಿರಾರು ಜ್ಞಾತಿ ಬಂಧುಗಳ ಮರಣದಿಂದ ಪರಿತಪಿಸುತ್ತಿದ್ದ ಅರ್ಜುನನನ್ನು ಅನೇಕ ಕಥೆಗಳಿಂದ ಸಮಾಧಾನ ಪಡಿಸಿದನು.
ಸ ತಮಾಶ್ವಾಸ್ಯ ವಿಧಿವದ್ ವಿಧಾನಜ್ಞೋ ಮಹಾತಪಾಃ |
ಅಪಹೃತ್ಯಾತ್ಮನೋ ಭಾರಂ ವಿಶಶ್ರಾಮ ಸಸಾತ್ವತಃ ॥11॥
ಮಹಾತಪಸ್ವಿಯಾದ, ಜ್ಞಾನ-ವಿಜ್ಞಾನಗಳನ್ನು ವಿಧಿವತ್ತಾಗಿ ತಿಳಿದಿರುವ ಶ್ರೀಕೃಷ್ಣನು ಅರ್ಜುನನನ್ನು ಶಾಸೊತ್ರೇಕ್ತ ಮಾತುಗಳಿಂದ ಸಮಾಧಾನ ಪಡಿಸಿ, ತನ್ನ ಮನಸ್ಸಿನ ಭಾರವನ್ನು ಪರಿಹರಿಸಿಕೊಂಡು ಅರ್ಜುನನ ಜೊತೆಗೆ ವಿಶ್ರಮಿಸಿಕೊಳ್ಳುತ್ತಿರುವನೋ ಎಂಬಂತೆ ಕಂಡನು.
ತತಃ ಕಥಾಂತೇ ಗೋವಿಂದೋ ಗುಡಾಕೇಶಮುವಾಚ ಹ |
ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಹೇತುಯುಕ್ತಮಿದಂ ವಚಃ ॥12॥
ಅನೇಕ ವಿಚಾರಗಳನ್ನು ಮಾಡಿದ ಬಳಿಕ ಗೋವಿಂದನು ಅರ್ಜುನನಿಗೆ ಸಾಂತ್ವನ ಯುಕ್ತವಾದ, ಸುಮಧುರವಾದ ಮಾತಿನಿಂದ ಯುಕ್ತಿಯುಕ್ತವಾದ ನುಡಿಯೊಂದನ್ನು ನುಡಿದನು.
ಶ್ರೀಭಗವಾನ್
ವಿಜಿತೇಯಂ ಧರಾ ಕೃತ್ಸ್ನಾ ಸವ್ಯಸಾಚಿನ್ ಪರಂತಪ |

ತ್ವದ್ ಬಾಹುಬಲಮಾಶ್ರಿತ್ಯ ರಾಜ್ಞಾ ಧರ್ಮಸುತೇನ ಹ ॥13॥
ಶ್ರೀಭಗವಾನ್ ಶತ್ರುಗಳನ್ನು ಸದೆಬಡಿಯುವ ಸವ್ಯಸಾಚಿಯೇ, ನಿನ್ನ ಬಾಹುಬಲಗಳನ್ನು ಆಶ್ರಯಿಸಿ ಧರ್ಮಸುತನಾದ ಯುಧಿಷ್ಠಿರನು ಸಮಗ್ರ ಭೂಮಂಡಲವನ್ನು ಜಯಿಸಿಕೊಂಡಿದ್ದಾನೆ.
ಅಸಪತ್ನಾಂ ಮಹೀಂ ಭುಂಕ್ತೇ ಧರ್ಮರಾಜೋ ಯುಧಿಷ್ಠಿರಃ।
ಭೀಮಸೇನಪ್ರತಾಪೇನ ಯಮಯೋಶ್ಚ ನರೋತ್ತಮ ॥14॥
ಭೀಮಸೇನನ ಮಹಾಪ್ರತಾಪದಿಂದ, ನಕುಲ-ಸಹದೇವರ ಪ್ರಭಾವದಿಂದ ಧರ್ಮರಾಜನು ನಿಷ್ಕಂಟಕವಾದ ಭೂಮಂಡಲವನ್ನು ಅನುಭವಿಸುತ್ತಿದ್ದಾನೆ.
ಧರ್ಮೇಣ ರಾಜ್ಞಾ ಧರ್ಮಜ್ಞ ಪ್ರಾಪ್ತಂ ರಾಜ್ಯಮಕಂಟಕಮ್।
ಧರ್ಮೇಣ ನಿಹತಃ ಸಂಖ್ಯೇ ಸ ಚ ರಾಜಾ ಸುಯೋಧನಃ ॥15॥
ನಿಷ್ಕಂಟಕವಾದ ಈ ರಾಜ್ಯವು ಧರ್ಮರಾಜನ ಧರ್ಮದ ಬಲದಿಂದಲೇ ಒದಗಿ ಬಂದಿದೆ. ದುರ್ಯೋಧನನಾದರೂ ಯುದ್ಧದಲ್ಲಿ ಧರ್ಮದಿಂದಲೇ ಹತನಾಗಿದ್ದಾನೆ.
ಅಧರ್ಮರುಚಯೋ ಲುಬ್ಧಾಃ ಸದಾ ಚಾಪ್ರಿಯವಾದಿನಃ।
ಧಾರ್ತರಾಷ್ಟ್ರಾ ದುರಾತ್ಮಾನಃ ಸಾನುಬಂಧಾ ನಿಪಾತಿತಾಃ ॥16॥
ಅಧರ್ಮದಲ್ಲಿಯೇ ಆಸಕ್ತಿಯನ್ನು ಹೊಂದಿದ ಧೃತರಾಷ್ಟ್ರನ ಎಲ್ಲ ಮಕ್ಕಳು ಕೃಪಣರಾಗಿದ್ದರು, ಅಪ್ರಿಯವಾದಿಗಳಾಗಿದ್ದರು. ಆದ್ದರಿಂದಲೇ ಬಂಧು- ಬಾಂಧವರಿಂದ ಸಹಿತರಾಗಿ ದುರಾತ್ಮರಾದ ಅವರೆಲ್ಲರೂ ಹತರಾದರು.
ಪ್ರಶಾಂತಾಮಖಿಲಂ ಪಾರ್ಥ ಪೃಥಿವೀಂ ಪೃಥಿವೀಪತಿಃ।
ಭುಂಕ್ತೇ ಧರ್ಮಸುತೋ ರಾಜಾ ತ್ವಯಾ ಗುಪ್ತಃ ಕುರೂದ್ವಹ ॥17॥
ಕುರುಕುಲಶ್ರೇಷ್ಠನೇ, ಧರ್ಮಪುತ್ರನಾದ, ಭೂಮಿಯ ರಾಜನಾದ ಯುಧಿಷ್ಠಿರನು ನಿನ್ನಿಂದ ರಕ್ಷಿತನಾಗಿ ಖಂಡಿತವಾಗಿಯೂ ಪ್ರಶಾಂತವಾದ ಭೂಮಿಯನ್ನು ಚೆನ್ನಾಗಿ ಅನುಭವಿಸುತ್ತಾನೆ.
ಕೇನ ವಾಹಂ ತ್ವಯಾ ಸಾರ್ಧಮರಣ್ಯೇಷ್ವಿಹ ಪಾಂಡವ।
ಕಿಮು ಯತ್ರ ಜನೋಽಯಂ ವೈ ವೃಥಾ ಚಾಮಿತ್ರಕರ್ಶನ ॥18॥
ಈ ಧರ್ಮರಾಜನು ಅಕ್ಷಕ್ರೀಡೆಯಲ್ಲಿ ಸ್ವಯಂ ತಾನು ಮೊದಲು ಸೋತು, ನಂತರ ಅರಣ್ಯಕ್ಕೆ ಆಗಮಿಸಿ ಅರಣ್ಯದಲ್ಲಿಯೂ ನಿನ್ನ ಜೊತೆಯಾಗಲಿ ಅಥವಾ ಬೇರೆಯವರ ಜೊತೆಯಲ್ಲಿ ಅಕ್ಷಕ್ರೀಡೆಯನ್ನು ವ್ಯರ್ಥವಾಗಿ ಆಟವಾಡುತ್ತಿದ್ದನು. ಅರಣ್ಯದಲ್ಲಿ ಲೀಲೆಯಿಂದ ಸಂಚರಿಸುವಾಗ ನಿನ್ನ ಜೊತೆಗೆ ಅಕ್ಷಕ್ರೀಡೆಯನ್ನು ಯಾವ ಉದ್ದೇಶದಿಂದಲೂ ಆಡದೆ ವಿನೋದದಿಂದಲೇ ಆಡಿದ್ದೇವೆ. ಆದರೆ ಇನ್ನು ಮುಂದೆ ಯಾವ ಕ್ರೀಡೆಗಳನ್ನಾದರೂ ಧರ್ಮರಾಜನು ಆಡಲಿ. ಅವನೊಂದಿಗೆ ಈ ಅಕ್ಷಕ್ರೀಡೆಯಲ್ಲಿ ಮಾತ್ರ ತೊಡಗಬೇಡ.
ಯತ್ರ ಧರ್ಮಸುತೋ ರಾಜಾ ಯತ್ರ ಭೀಮೋ ಮಹಾಬಲಃ।
ಯತ್ರ ಮಾದ್ರವತೀಪುತ್ರೌ ರತಿಸ್ತತ್ರ ಪರಾ ಮಮ ॥19॥
ಕುರುನಂದನನೇ, ಎಲ್ಲಿ ಯಮಧರ್ಮನ ಮಗನಾದ ಯುಧಿಷ್ಠಿರನಿದ್ದಾನೋ, ಮಹಾಬಲಶಾಲಿಯಾದ ಭೀಮಸೇನನಿದ್ದಾನೋ, ಮಾದ್ರಿಯ ಮಕ್ಕಳಾದ ನಕುಲ- ಸಹದೇವರಿದ್ದಾರೋ ಅಲ್ಲಿ ನಮಗೆ ಪರಮಾನಂದ ಉಂಟಾಗುತ್ತದೆ.
ತಥೈವ ಸ್ವರ್ಗಕಲ್ಪೇಷು ಸಭೋದ್ದೇಶೇಷು ಭಾರತ।
ರಮಣೀಯೇಷು ಪುಣ್ಯೇಷು ಸಹಿತಸ್ಯ ತ್ವಯಾಽನಘ ॥20॥
ಪಾಪರಹಿತನಾದ ಕುರುಶ್ರೇಷ್ಠನೇ, ಈ ಸಭಾಭವನದ, ರಮಣೀಯವಾದ, ಪವಿತ್ರವಾದ ಸ್ಥಾನಗಳೆಲ್ಲವೂ ಸ್ವರ್ಗತುಲ್ಯವಾಗಿವೆ.
ಕಾಲೋ ಮಹಾಂಸ್ತ್ವತೀತೋ ಮೇ ಶೂರಪುತ್ರಮಪಶ್ಯತಃ।
ಬಲದೇವಂ ಚ ಕೌರವ್ಯ ತಥಾಽನ್ಯಾನ್ ವೃಷ್ಣಿಪುಂಗವಾನ್ ॥21॥
ಇಂತಹ ಆನಂದಪ್ರದವಾದ ಸ್ಥಳಗಳಲ್ಲಿ ನಾನು ನಿಮ್ಮೊಂದಿಗೆ ಬಹಳ ಕಾಲ ಕಳೆದಿದ್ದೇನೆ. ನನ್ನ ಅಣ್ಣನಾದ ಬಲದೇವನನ್ನು, ಬೇರೆ ವೃಷ್ಣಿಪುಂಗವರನ್ನು (ಯದುಶ್ರೇಷ್ಠರನ್ನು) ನೋಡಬೇಕೆಂದು ಮನಸ್ಸು ಮಾಡಿದ್ದೇನೆ.
ಸೋಽಹಂ ಗಂತುಮಭೀಪ್ಸಾಮಿ ಪುರೀಂ ದ್ವಾರವತೀಂ ಪ್ರತಿ।
ರೋಚತಾಂ ಗಮನಂ ತುಭ್ಯಂ ಮಮಾಪಿ ಭರತರ್ಷಭ ॥22॥
ಅರ್ಜುನನೇ, ಆದ್ದರಿಂದ ದ್ವಾರಕೆಯನ್ನು ಕುರಿತು ಹೋಗಬೇಕೆಂದು ಅಪೇಕ್ಷೆ ಉಳ್ಳವನಾಗಿದ್ದೇನೆ. ನನ್ನ ಗಮನದ ವಾರ್ತೆಯು ನಿಮಗೂ ಸಂತೋಷವುಂಟು ಮಾಡಲಿ.
ಉಕ್ತೋ ಬಹುವಿಧಂ ರಾಜಾ ತತ್ರ ತತ್ರ ಯುಧಿಷ್ಠಿರಃ।
ಸಹ ಭೀಷ್ಮೇಣ ಯದ್ಯುಕ್ತಮಸ್ಮಾಭಿಃ ಶೋಕಕರ್ಶಿತಃ ॥23॥
ಅರ್ಜುನನೇ, ಶೋಕವನ್ನು ಪರಿಹರಿಸುವ ಉದ್ದೇಶದಿಂದ, ಆಯಾ ಕಾಲದಲ್ಲಿ ಯೋಗ್ಯವೆನಿಸಿದ ವಿವೇಕದ ಮಾತುಗಳನ್ನು ಶೋಕದಿಂದ ಕೂಡಿರುವ ಯುಧಿಷ್ಠಿರನಿಗೆ ಭೀಷ್ಮನೂ ಕೂಡ ಹೇಳಿದ್ದಾನೆ, ನಾವೂ ಹೇಳಿದ್ದೇವೆ.
ಶಿಷ್ಟೋ ಯುಧಿಷ್ಠಿರೋಽಸ್ಮಾಭಿಃ ಶಾಸ್ತಾ ಸನ್ನಪಿ ಪಾಂಡವಃ।
ತೇನ ತಚ್ಚ ವಚಃ ಸಮ್ಯಗ್ ಗೃಹೀತಂ ಸುಮಹಾತ್ಮನಾ ॥24॥
ವಾಸ್ತವಿಕವಾಗಿ ಧರ್ಮರಾಜನು ನಮ್ಮೆಲ್ಲರಿಗೂ ರಾಜನಾಗಿದ್ದರೂ ಮಹಾತ್ಮನಾದ ಅವನು ನಮ್ಮಿಂದ ಶಾಸನ ಮಾಡಲ್ಪಟ್ಟಿದ್ದಾನೆ.
ಧರ್ಮಪುತ್ರೇ ಹಿ ಧರ್ಮಜ್ಞೇ ಕೃತಜ್ಞೇ ಸತ್ಯವಾದಿನಿ।
ಸತ್ಯಂ ಧರ್ಮೋ ಮತಿಶ್ಚಾಗ್ರ್ಯಾ ಸ್ಥಿತಿಶ್ಚ ಸತತಂ ಸ್ಥಿತೌ ॥25॥
ಧರ್ಮಜ್ಞನಾದ, ಕೃತಜ್ಞನಾದ, ಸತ್ಯವಾದಿಯಾದ ಧರ್ಮರಾಜನಲ್ಲಿ ಸತ್ಯ-ಧರ್ಮ ಉತ್ತಮವಾದ ಬುದ್ಧಿ, ಔನ್ನತ್ಯವು ಸ್ಥಿರವಾಗಿ ಇವೆ.

ತದ್ಗತ್ವಾ ತಂ ಮಹಾತ್ಮಾನಂ ಯದಿ ತೇ ರೋಚತೇऽರ್ಜುನ |
ಅಸ್ಮದ್ಗಮನಸಂಯುಕ್ತಂ ವಚೋ ಬ್ರೂಹಿ ಜನಾಧಿಪಮ್ ॥26॥
ಅರ್ಜುನನೇ, ಅಂತಹ ಮಹಾತ್ಮನಾದ ಯುಧಿಷ್ಠಿರನ ಬಳಿ ನೀನು ಹೋಗಿ ಉಚಿತವೆನಿಸಿದರೆ ಈಗಲೇ ನಾನು ದ್ವಾರಕೆಗೆ ಪ್ರಯಾಣ ಮಾಡುವ ವಿಷಯವನ್ನು ತಿಳಿಸು.
ನ ಹಿ ತಸ್ಯಾಪ್ರಿಯಂ ಕುರ್ಯಾಂ ಪ್ರಾಣತ್ಯಾಗೇऽಪ್ಯುಪಸ್ಥಿತೇ |
ಕುತೋ ಗಂತುಂ ಮಹಾಬಾಹೋ ಪುರೀಂ ದ್ವಾರವತೀಂ ಪ್ರತಿ ॥27॥
ಮಹಾಬಾಹುವೇ, ಧರ್ಮರಾಜನಿಗೆ ಅಪ್ರಿಯವಾಗುವುದಾದಲ್ಲಿ ನನಗೆ ಪ್ರಾಣ ಸಂಕಟ ಒದಗಿಬಂದರೂ ಆ ಕಾರ್ಯವನ್ನು ನಾನು ಮಾಡುವುದಿಲ್ಲ. ಆದ್ದರಿಂದ ಧರ್ಮಜನ ಒಪ್ಪಿಗೆಯನ್ನು ಪಡೆದು ದ್ವಾರಾವತಿಗೆ ಹೋಗುತ್ತೇನೆ ವಿನಾ ಅವನ ಅನುಮತಿ ಇಲ್ಲದೆ ಹೋಗಲಾರೆನು.
ಸರ್ವಮೇತದಹಂ ಪಾರ್ಥ ತ್ವತ್ಪ್ರೀತಿಹಿತಕಾಮ್ಯಯಾ |
ಬ್ರವೀಮಿ ಸತ್ಯಂ ಕೌರವ್ಯ ನ ಮಿಥ್ಯೈತತ್ ಕಥಂಚನ ॥28॥
ಪಾರ್ಥನೇ, ಈ ಎಲ್ಲ ವಿಷಯಗಳನ್ನು ನಿನಗೆ ಸಂತೋಷವಾಗಲಿ ಎಂಬ ಕಾರಣದಿಂದ ಹೇಳುತ್ತಿದ್ದೇನೆ. ನಾನು ನಿನ್ನ ಬಳಿ ಎಂದೂ ಸತ್ಯವನ್ನೇ ಹೇಳಿದ್ದೇನೆ, ಸುಳ್ಳನ್ನು ಎಂದೂ ಹೇಳುವುದಿಲ್ಲ.
ಪ್ರಯೋಜನಂ ಚ ನಿರ್ವೃತ್ತಮಿಹ ವಾಸೇನ ಮೇऽರ್ಜುನ |
ಧಾರ್ತರಾಷ್ಟ್ರೋ ಹತೋ ರಾಜಾ ಸಬಲಃ ಸಪದಾನುಗಃ ॥29॥
ಅರ್ಜುನನೇ, ನಾನು ಇಲ್ಲಿ ವಾಸ ಮಾಡಿ ಯಾವ ಪ್ರಯೋಜನಗಳನ್ನು ಸಾಧಿಸಿಕೊಳ್ಳಬೇಕೆಂದುಕೊಂಡಿದ್ದೆನೋ ಅವೆಲ್ಲವೂ ಪೂರ್ಣವಾಗಿವೆ. ಧೃತರಾಷ್ಟ್ರನ ಮಗನಾದ ದುರ್ಯೋಧನನು ಸೇನಾಸಹಿತನಾಗಿ ಸೇವಕರೊಡನೆ ಮೃತ್ಯು ಹೊಂದಿದ್ದಾನೆ.
ಪೃಥಿವೀ ಚ ವಶೇ ತಾತ ಧರ್ಮಪುತ್ರಸ್ಯ ಧೀಮತಃ |
ಸ್ಥಿತಾ ಸಮುದ್ರವಸನಾ ಸಶೈಲವನಕಾನನಾ ॥30॥
ಚಿತಾ ರತ್ನೈರ್ಬಹುವಿಧೈಃ ಕುರುರಾಜಸ್ಯ ಪಾಂಡವ ॥31॥
ನಾನಾ ವಿಧವಾದ ರತ್ನಗಳ ಸಂಗ್ರಹದಿಂದ ಸಂಪನ್ನವಾಗಿರುವ, ಸಮುದ್ರಾಂತವಾದ ಪರ್ವತ, ವನ, ಕಾನನಗಳಿಂದ ಸಮೃದ್ಧವಾದ ಭೂಮಂಡಲವು ಬುದ್ಧಿವಂತನಾದ ಧರ್ಮರಾಜನ ವಶವಾಗಿದೆ.
ಧರ್ಮೇಣ ರಾಜ್ಞಾ ಧರ್ಮಜ್ಞಃ ಪಾತು ಸರ್ವಾಂ ವಸುಂಧರಾಮ್ |
ಉಪಾಸ್ಯಮಾನೋ ಮುನಿಭಿಃ ಸಿದ್ಧೈಶ್ಚಾಪಿ ಮಹಾತ್ಮಭಿಃ ॥32॥
ಸಂಸ್ತೂಯಮಾನಃ ಸತತಂ ವಂದಿಭಿರ್ಭರತರ್ಷಭ ॥33॥
ಧರ್ಮಜ್ಞನಾದ ಯುಧಿಷ್ಠಿರನು ಮಹಾತ್ಮರಾದ ಅನೇಕ ಸಿದ್ಧರಿಂದ ಉಪಾಸಿಸಲ್ಪಡುತ್ತ, ವಂದಿ-ಮಾಗದರಿಂದ ಸ್ತುತಿಗೆ ಯೋಗ್ಯನಾಗಿ ಭೂಮಿಯನ್ನು ಧರ್ಮದಿಂದಲೇ ಪರಿಪಾಲಿಸುವಂತಾಗಲಿ.
ತ್ವಂ ಮಯಾ ಸಹ ಗತ್ವಾऽದ್ಯ ರಾಜಾನಂ ಕುರುವರ್ಧನಮ್ |
ಆಪೃಚ್ಛ ಕುರುಶಾರ್ದೂಲಂ ಗಮನಂ ದ್ವಾರಕಾಂ ಪ್ರತಿ ॥34॥
ಈಗ ನೀನು ನನ್ನೊಡನೆ ರಾಜನ ಬಳಿಗೆ ಬಂದು, ಅವನನ್ನು ಅಭಿನಂದಿಸಿ, ದ್ವಾರಕೆಗೆ ಹೊರಡುವ ವಿಷಯವನ್ನು ಹೇಳಿ ಪ್ರಯಾಣಕ್ಕೆ ಅನುಮತಿಯನ್ನು ಕೊಡಿಸು.
ಇದಂ ಶರೀರಂ ವಸು ಯಚ್ಚ ಮೇ ಗೃಹೇ
ನಿವೇದಿತಂ ಪಾರ್ಥ ಸದಾ ಯುಧಿಷ್ಠಿರೇ |
ಪ್ರಿಯಶ್ಚ ಮಾನ್ಯಶ್ಚ ಹಿ ಮೇ ಯುಧಿಷ್ಠಿರಃ
ಸದಾ ಕುರೂಣಾಮಧಿಪೋ ಮಹಾಮತಿಃ ॥35॥
ಈ ನನ್ನ ಶರೀರ, ನನ್ನ ಮನೆಯಲ್ಲಿರುವ ಸಮಗ್ರ ಐಶ್ವರ್ಯ, ಇವೆಲ್ಲವೂ ಸಂಪೂರ್ಣವಾಗಿ ಯುಧಿಷ್ಠಿರನಿಗೆ ಸಮರ್ಪಿತವಾಗಿವೆ. ಕುರುಗಳಿಗೆ ರಾಜನಾದ, ಬುದ್ಧಿಶಾಲಿಯಾದ ಧರ್ಮರಾಜನು ನನಗೆ ನಿತ್ಯವೂ ಪ್ರಿಯನೂ, ಮಾನ್ಯನೂ ಆಗಿದ್ದಾನೆ.
ಪ್ರಯೋಜನಂ ಚಾಪಿ ವಿವಾಸಕಾರಣೇ
ನ ವಿದ್ಯತೇ ಮೇ ತ್ವದೃತೇ ಮಹಾಭುಜೇ |
ಸ್ಥಿತಾ ಹಿ ಪೃಥ್ವೀ ತವ ಪಾರ್ಥ ಶಾಸನೇ
ಗುರೋಃ ಸುವೃತ್ತಸ್ಯ ಯುಧಿಷ್ಠಿರಸ್ಯ ಹಿ ॥36॥
ಅರ್ಜುನನೇ, ಇನ್ನು ಮುಂದೆ ನಿನ್ನೊಡನೆ ಸಂತೋಷದಿಂದ ಕಾಲ ಕಳೆಯುವುದನ್ನು ಬಿಟ್ಟು ಬೇರೆ ಯಾವ ಹೆಚ್ಚು ಪ್ರಯೋಜನವು ಇಲ್ಲಿ ಇರುವುದಿಲ್ಲ. ಅರ್ಜುನನೇ, ಈ ಅಖಂಡ ಭೂಮಂಡಲವು ನಿನ್ನ ಮತ್ತು ಸಚ್ಚಾರಿತ್ರ್ಯಸಂಪನ್ನನಾದ ಯುಧಿಷ್ಠಿರನ ಶಾಸನಕ್ಕೆ ಒಳಪಟ್ಟಿದೆ.
ವೈಶಂಪಾಯನಃ
ಇತೀದಮುಕ್ತಃ ಸ ತದಾ ಮಹಾತ್ಮನಾ
ಜನಾರ್ದನೇನಾಮಿತವಿಕ್ರಮೋऽರ್ಜುನಃ |
ತಥೇತಿ ಕೃಚ್ಛ್ರಾದಿವ ವಾಚಮೀರಯನ್
ಜನಾರ್ದನಂ ಸಂಪ್ರತಿಪೂಜ್ಯ ಪಾರ್ಥಿವಃ ॥37॥
ವೈಶಂಪಾಯನ ಜನಮೇಜಯನೇ, ಮಹಾತ್ಮನಾದ ಜನಾರ್ದನನಿಂದ ಹೀಗೆ ಹೇಳಲ್ಪಟ್ಟ, ಪರಾಕ್ರಮಿಯಾದ ಅರ್ಜುನನು ಕೃಷ್ಣನನ್ನು

ಸಮಾಧಾನಪಡಿಸುತ್ತಾ ದುಃಖದಿಂದ ಹಾಗೆಯೇ ಆಗಲಿ ಎಂದು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕೃಷ್ಣಸ್ಯ ದ್ವಾರಾವತೀಂ ಪ್ರತಿಗಮನಂ ನಾಮ
ಪಂಚದಶೋಽಧ್ಯಾಯಃ ॥
॥ ಅಶ್ವಮೇಧಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಮ್ ಅಶ್ವಮೇಧಪರ್ವ ॥
* * * * *
2. ಅನುಗೀತಾಪರ್ವ
ಮಹಾಭಾರತತಾತ್ಪರ್ಯನಿರ್ಣಯಃ - ಅಧ್ಯಾಯಃ 30
ಗೀತೋಕ್ತಂ ವಿಸ್ಮೃತಂ ಚಾಸ್ಮೈ ಪುನರ್ವಿಸ್ತರತೋಽವದತ್ ।
ವಾಣೀ ಪ್ರಾಣೋ ವಾಸುದೇವ ಇತ್ಯೇತೈರಖಿಲಂ ತತಮ್ ॥
ಸರ್ವೋತ್ತಮತ್ವಮೇತೇಷಾಂ ಸರ್ವಮೇತದ್ವಶೇ ಜಗತ್ ।
ಉತ್ತರೋತ್ತರಮೇತೇಽಪಿ ಗುಣೋಚ್ಚಾಸ್ತದ್ವಶೇಽಪರೇ ॥
ಅರ್ಜುನನಿಗೆ ಶ್ರೀಕೃಷ್ಣನು ಗೀತೆಯಲ್ಲಿ ಉಪದೇಶಿಸಿದ್ದು ಮರೆತುಹೋಯಿತು. ಅದನ್ನು ಪುನಃ ವಿಸ್ತಾರವಾಗಿ ಅನುಗೀತೆಯಲ್ಲಿ ಶ್ರೀಕೃಷ್ಣ ಉಪದೇಶಿಸಿದನು. ಭಾರತೀ, ಮುಖ್ಯಪ್ರಾಣ, ಶ್ರೀಕೃಷ್ಣ - ಈ ಮೂವರಿಂದಲೇ ಎಲ್ಲ ಜಗತ್ತು ವ್ಯಾಪ್ತವಾಗಿದೆ. ಸರ್ವೋತ್ತಮತ್ವ ಈ ಮೂವರಿಗೆ ಮಾತ್ರ ಇದೆ. ಈ ಎಲ್ಲ ಜಗತ್ತು ಇವರ ವಶದಲ್ಲಿದೆ. ಇವರಲ್ಲಿ ಮೇಲು ಮೇಲಿನವರು ಹೆಚ್ಚು ಹೆಚ್ಚು ಗುಣವಂತರು. ಬೇರೆ ರುದ್ರಾದಿಗಳು ಇವರ ವಶದಲ್ಲಿ ಇರುತ್ತಾರೆ.
ಇತ್ಥಂ ಹರೇರ್ವಶೇ ಸರ್ವಗುಣಪೂರ್ಣಶ್ಚ ಸ ಪ್ರಭುಃ ।
ಏಕ ಏವ ನ ಚಾನ್ಯೋಽಸ್ತಿ ಪ್ರಾಣೋಚ್ಚಾ ತದಧೋ ರಮಾ ॥
\`ಹೀಗೆ ಹರಿಯ ವಶದಲ್ಲಿಯೇ ಎಲ್ಲವೂ ಇದೆ. ಗುಣಪೂರ್ಣ ಆ ಪ್ರಭು ಒಬ್ಬನೆ ಹೊರತು ಇನ್ನೊಬ್ಬನಿಲ್ಲ. ಅವನಿಗಿಂತ ಕಡಿಮೆಯವಳು, ಮುಖ್ಯಪ್ರಾಣನಿಗಿಂತ ಹೆಚ್ಚಿನವಳು ರಮೆ.
ಸ ಹುತಾಶ ಇತಿ ಪ್ರೋಕ್ತೋ ಹುತಮತ್ತ್ಯಖಿಲಂ ಯತಃ ।
ವಾಕ್ಪ್ರಾಣಮಧ್ಯಗೋ ನಿತ್ಯಂ ಧಾರಯತ್ಯಖಿಲಂ ಜಗತ್ ॥
ಸ ಈಶೋ ಬ್ರಹ್ಮರುದ್ರಾದ್ಯಾ ಜೀವಾ ಏವ ಪ್ರಕೀರ್ತಿತಾಃ ।
ಯೇ ತಸ್ಯಾನಾದಿಸದ್ಭಕ್ತಾ ಮುಕ್ತಿಯೋಗ್ಯಾ ಹಿ ತೇ ಸ್ಮೃತಾಃ ॥
\`ಹೋಮಿಸಿದ್ದನ್ನೆಲ್ಲ ಉಣ್ಣುವುದರಿಂದ ಶ್ರೀಹರಿಯು ಹುತಾಶನನೆನಿಸಿದ್ದಾನೆ. ವಾಕ್ ಪ್ರಾಣರ ಹೃದಯಕಮಲದಲ್ಲಿದ್ದು ನಿತ್ಯವೂ ಸಕಲ ಜಗತ್ತನ್ನು ಅವನೇ ಧರಿಸುತ್ತಾನೆ. ಅವನೇ ಈಶ. ಬ್ರಹ್ಮ-ರುದ್ರಾದಿಗಳೆಲ್ಲ ಜೀವರೆಂದೇ ಕರೆಸಿಕೊಂಡಿದ್ದಾರೆ. ಅವನ ಅನಾದಿ ಸದ್ಭಕ್ತರು ಯಾರೋ ಅವರು ಮುಕ್ತಿಯೋಗ್ಯರೆನಿಸುತ್ತಾರೆ.
ಅನಾದಿದ್ವೇಷಿಣೋ ಯೇಽಸ್ಮಿಂಸ್ತಮೋಯೋಗ್ಯಾಃ ಸುಪಾಪಿನಃ ।
ಮಿಶ್ರಾ ಮಧ್ಯಾ ಇತಿ ಜ್ಞೇಯಾಃ ಸಂಸಾರಪರಿವರ್ತಿನಃ ॥
ಏವಂ ಜೀವಾಸ್ತ್ರಿಧಾ ಪ್ರೋಕ್ತಾ ಭವಂತ್ಯೇತೇ ನ ಚಾನ್ಯಥಾ ।
ತಾರತಮ್ಯಂ ಚ ವಿಜ್ಞೇಯಂ ಲಿಂಗೈರ್ದೈಹಿಕಮಾನಸೈಃ ॥
ಶ್ರೀಹರಿಯಲ್ಲಿ ಅನಾದಿ ದ್ವೇಷಿಗಳು ಮಹಾಪಾಪಿಗಳು, ತಮೋಯೋಗ್ಯರು. ಮಿತ್ರರು, ಮಧ್ಯರು, ಸಂಸಾರದಲ್ಲಿರುವವರು ಎಂದು ತಿಳಿಯಬೇಕು. ಹೀಗೆ ಜೀವರು ತ್ರಿವಿಧರೆನಿಸುತ್ತಾರೆ. ಇದಕ್ಕೆ ವ್ಯತ್ಯಾಸವಾಗುವುದಿಲ್ಲ. ಜೀವರಲ್ಲಿ ದೈಹಿಕ ಮತ್ತು ಮಾನಸಿಕ ಚಿಹ್ನೆಗಳಿಂದ ತಾರತಮ್ಯವನ್ನು ತಿಳಿಯಬೇಕು.
ವಿಷ್ಣೋರ್ಲಿಂಗಾನುಸಾರಿತ್ವಾತ್ ತಾರತಮ್ಯಾತ್ ತದೀಕ್ಷಣಮ್ ।
ವಿಷ್ಣೋಸ್ತದನುಗಾನಾಂ ಚ ಪ್ರೀತಿಕೃದ್ ಧರ್ಮ ಈರಿತಃ ॥
ಅಧರ್ಮೋಽನ್ಯ ಇಯಂ ನಿಷ್ಠಾ ಪ್ರಲಾಪಃ ಕಿಂ ಕರಿಷ್ಯತಿ ।
ಏವಮಾದ್ಯನುಶಾಸ್ಯಾಜಃ ಪಾರ್ಥಂ ಪಾರ್ಥೈಃ ಸುಸತ್ಕೃತಃ ॥
\`ಈ ದೈಹಿಕ, ಮಾನಸಿಕ ಚಿಹ್ನೆಗಳಿಗೆ ಅನುಗುಣವಾಗಿಯೇ ಶ್ರೀಹರಿ ಅನುಗ್ರಹಿಸುವುದರಿಂದ ಜೀವರನ್ನು ತಾರತಮ್ಯದಿಂದಲೇ ತಿಳಿಯಬೇಕು. ಮತ್ತು ವಿಷ್ಣುವಿಗೂ ಅವನ ಭಕ್ತರಿಗೂ ಸಂತೋಷ ಉಂಟುಮಾಡಬೇಕು. ಇದೇ ಧರ್ಮ. ಬೇರೆ ಎಲ್ಲವೂ ಅಧರ್ಮ. ಇದು ಶಾಸ್ತ್ರನಿರ್ಣಯ. ಪುತ್ರಶೋಕದಿಂದ ಅತ್ತರೆ ಏನು ಫಲ? ಇತ್ಯಾದಿಯಾಗಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿ ಹಸ್ತಿನಾಪುರಕ್ಕೆ ಹೋಗಿ ಅಲ್ಲಿ ಪಾಂಡವರಿಂದ ಬಹಳ ಸತ್ಕಾರ ಹೊಂದಿದ.
ಕಥಂಚಿತ್ ತಾನವಸ್ಥಾಪ್ಯ ಸುದೂರಾನುಗತಾನ್ ಪ್ರಭುಃ ।
ಸುಭದ್ರಾಸಹಿತಃ ಪ್ರಾಯಾದ್ ಯಾನೇನ ದ್ವಾರಕಾಂ ಪುರೀಮ್ ॥
ಬಲುದೂರದವರೆಗೆ ಹಿಂಬಾಲಿಸಿ ಬಂದ ಪಾಂಡವರನ್ನು ಕಷ್ಟದಿಂದ ಹಿಂದೆ ನಿಲ್ಲಿಸಿ ಶ್ರೀಕೃಷ್ಣನು ಸುಭದ್ರಾಸಹಿತನಾಗಿ ರಥದಿಂದ ದ್ವಾರಕಾ ಪಟ್ಟಣಕ್ಕೆ ತೆರಳಿದ.
* * * * *

ಹದಿನಾರನೆಯ ಅಧ್ಯಾಯ
ಅರ್ಜುನನು ಕೃಷ್ಣನ ಬಳಿ, ಹಿಂದೆ ಉಪದೇಶ ಮಾಡಿದ ಗೀತೆಯ
ಅರ್ಥವನ್ನು ಪುನಃ ಉಪದೇಶಿಸಲು ಪ್ರಾರ್ಥಿಸಿದುದು.
ಕೃಷ್ಣನು ಅರ್ಜುನನಿಗೆ ತನಗೆ ಬ್ರಾಹ್ಮಣನು ಹೇಳಿದ ಸಿದ್ಧರು
ಮತ್ತು ಕಾಶ್ಯಪರ ಸಂವಾದವನ್ನು ಅನುವಾದಿಸಿದುದು.
ಜನಮೇಜಯಃ
ಸಭಾಯಾಂ ವಸತೋಸ್ತಸ್ಯಾಂ ನಿಹತ್ಯಾರೀನ್ ಮಹಾತ್ಮನೋಃ |
ಕೇಶವಾರ್ಜುನಯೋಃ ಕಾ ನು ಕಥಾ ಸಮಭವದ್ ದ್ವಿಜ ||1||
ಜನಮೇಜಯ ಬ್ರಾಹ್ಮಣಶ್ರೇಷ್ಠರೇ, ಮಹಾತ್ಮರಾದ ಕೃಷ್ಣಾರ್ಜುನರು ಇಂದ್ರಪ್ರಸ್ಥದ ದಿವ್ಯಸಭಾಭವನದಲ್ಲಿ ಇದ್ದಾಗ ಪ್ರಸಂಗವಶದಿಂದ ಯಾವ ಮಾತುಕತೆಗಳು ನಡೆದವು?
ವೈಶಂಪಾಯನಃ
ಕೃಷ್ಣೇನ ಸಹಿತಃ ಪಾರ್ಥಃ ಸ್ವರಾಜ್ಯಂ ಪ್ರಾಪ್ಯ ಕೇವಲಮ್ |
ತಸ್ಯಾಂ ಸಭಾಯಾಂ ರಮ್ಯಾಯಾಂ ವಿಜಹಾರ ಮುದಾ ಯುತಃ ||2||
ವೈಶಂಪಾಯನ ಜನಮೇಜಯನೇ, ಸಮಸ್ತ ಶತ್ರುಗಳನ್ನು ಸದೆಬಡಿದು, ಸಮಗ್ರ ಸಾಮ್ರಾಜ್ಯವನ್ನು ಧರ್ಮರಾಜನು ಹೊಂದಿದ ನಂತರ ಅರ್ಜುನನು ಕೃಷ್ಣನ ಜೊತೆಗೆ ದಿವ್ಯವಾದ ಸಭಾಮಂಟಪದಲ್ಲಿ ಸಂತೋಷದಿಂದ ವಿಹರಿಸುತ್ತಿದ್ದನು.
ತತಃ ಕಂಚಿತ್ ಸಭೋದ್ದೇಶಂ ಸ್ವರ್ಗೋದ್ದೇಶೋಪಮಂ ನೃಪ |
ಯದೃಚ್ಛಯಾ ತೌ ಮುದಿತೌ ಜಗ್ಮತುಃ ಸ್ವಜನಾವೃತೌ ||3||
ಹೀಗೆ ಇರಲಾಗಿ ಒಂದು ದಿನ ಅವರಿಬ್ಬರೂ ಬಂಧು-ಬಾಂಧವರಿಂದ ಕೂಡಿದವರಾಗಿ, ಸಂತುಷ್ಟರಾಗಿ ಸ್ವೇಚ್ಛೆಯಿಂದ ಸಂಚರಿಸುತ್ತಾ ಸ್ವರ್ಗಸದೃಶವಾದ ಒಂದು ಸ್ಥಳಕ್ಕೆ ಹೋದರು.
ತತ್ರ ಪ್ರತೀತಃ ಕೃಷ್ಣೇನ ಸಹಿತಃ ಪಾಂಡವೋಽರ್ಜುನಃ |
ನಿರೀಕ್ಷ್ಯ ತಾಂ ಸಭಾಂ ರಮ್ಯಾಮಿದಂ ವಚನಮಬ್ರವೀತ್ ||4||
ಕೃಷ್ಣನ ಜೊತೆಗೆ ಇರುವ ಅರ್ಜುನನು ಅತಿ ರಮಣೀಯವಾದ ಆ ಸಭಾಭವನವನ್ನು ಕಂಡು ಸಂತುಷ್ಟನಾಗಿ ಈ ಮಾತನ್ನು ಹೇಳಿದನು.
ಅರ್ಜುನಃ
ವಿದಿತಂ ಮೇ ಮಹಾಬಾಹೋ ಸಂಗ್ರಾಮೇ ಸಮುಪಸ್ಥಿತೇ |
ಮಾಹಾತ್ಮ್ಯಂ ದೇವಕೀಪುತ್ರ ತಚ್ಚ ತೇ ರೂಪಮೈಶ್ವರಮ್ ||5||
ಅರ್ಜುನ ಮಹಾಬಾಹುವೇ, ದೇವಕೀಪುತ್ರನೇ, ಹಿಂದೆ ಯುದ್ಧವು ಸನ್ನಿಹಿತವಾಗಿದ್ದಾಗ ನಾನು ನಿನ್ನ ಮಾಹಾತ್ಮ್ಯವನ್ನು, ಐಶ್ವರ್ಯಯುಕ್ತವಾದ ರೂಪವನ್ನು ಕಂಡಿದ್ದೇನೆ.
ಯತ್ತು ತದ್ ಭವತಾ ಪ್ರೋಕ್ತಂ ತದಾ ಕೇಶವ ಸೌಹೃದಾತ್ |
ತತ್ಸರ್ವಂ ಪುರುಷವ್ಯಾಘ್ರ ನಷ್ಟಂ ಮೇ ವ್ಯಗ್ರಚೇತಸಃ ||6||
ಪುರುಷಸಿಂಹನೇ, ಕೇಶವನೇ, ಆ ಸಂದರ್ಭದಲ್ಲಿ ಪೂಜ್ಯನಾದ ನೀನು ನನ್ನ ಮೇಲಿನ ಪ್ರೀತಿಯಿಂದ ಯಾವ ಉಪದೇಶಗಳನ್ನು ಮಾಡಿದೆಯೋ ಅವೆಲ್ಲವೂ ವ್ಯಗ್ರ ಬುದ್ಧಿಯಿಂದ ಮರೆತುಹೋಗಿವೆ.
ಮಮ ಕೌತೂಹಲಂ ತ್ವಸ್ತಿ ತೇಷ್ವರ್ಥೇಷು ಪುನಃ ಪ್ರಭೋ |
ಭವಾಂಸ್ತು ದ್ವಾರಕಾಂ ಗಂತಾ ನ ಚಿರಾದಿವ ಕೇಶವ ||7||
ಇಂದು ಹಿಂದೆ ಹೇಳಿದ ಆ ವಿಷಯಗಳನ್ನು ಮತ್ತೆ ಮನನ ಮಾಡಬೇಕೆಂಬ ಕುತೂಹಲವೂ ನನ್ನಲ್ಲಿ ಉಂಟಾಗಿದೆ. ನೀನಾದರೋ ಸ್ವಲ್ಪ ಸಮಯದಲ್ಲಿಯೇ ದ್ವಾರಕೆಗೆ ಹೊರಡಲಿರುವಿ. ಆದ್ದರಿಂದ ಯುದ್ಧಕ್ಕೆ ಮೊದಲು ಉಪದೇಶಿಸಿದ ವಿಷಯಗಳನ್ನು ಪುನಃ ಹೇಳಿ ಕೃಪೆ ತೋರು.
ವೈಶಂಪಾಯನಃ
ಏವಮುಕ್ತಸ್ತತಃ ಕೃಷ್ಣಃ ಫಲ್ಗುನಂ ಪ್ರತ್ಯಭಾಷತ |
ಪರಿಷ್ವಜ್ಯ ಮಹಾತೇಜಾ ವಚನಂ ವದತಾಂ ವರಃ ||8||
ವೈಶಂಪಾಯನ ಜನಮೇಜಯನೇ, ಅರ್ಜುನನು ಹೀಗೆ ಹೇಳಿದಾಗ ಮಹಾತೇಜಸ್ವಿಯಾದ, ವಾಗ್ಮಿಶ್ರೇಷ್ಠನಾದ ಕೃಷ್ಣನು ಅರ್ಜುನನನ್ನು ಆಲಿಂಗಿಸಿಕೊಂಡು ಹೀಗೆ ಹೇಳಿದನು.
ಶ್ರೀಭಗವಾನ್
ಶ್ರಾವಿತಸ್ತ್ವಂ ಮಯಾ ಗುಹ್ಯಂ ಜ್ಞಾಪಿತಶ್ಚ ಸನಾತನಮ್ |
ಧರ್ಮಸ್ವರೂಪಿಣಂ ಪಾರ್ಥ ಸರ್ವಲೋಕಾಂಶ್ಚ ಶಾಶ್ವತಾನ್ ||9||
ಶ್ರೀಭಗವಾನ್ ಅರ್ಜುನನೇ, ನಾನು ಹಿಂದೆ ಅತ್ಯಂತ ರಹಸ್ಯವಾದ, ಸನಾತನವಾದ ಜ್ಞಾನದ ಸ್ವರೂಪವನ್ನು, ಧರ್ಮಸ್ವರೂಪವನ್ನು, ಪುರುಷೋತ್ತಮನ ತತ್ತ್ವವನ್ನು, ಶಾಶ್ವತಗಳಾದ ಲೋಕದ ಮಹಿಮೆಗಳನ್ನು ಹೇಳಿದ್ದೇನೆ.
ಅಬುದ್ಧ್ಯಾ ಯನ್ನ ಗೃಹ್ಣೀಥಾಸ್ತನ್ಮೇ ಸುಮಹದಪ್ರಿಯಮ್ |
ನೂನಮಶ್ರದ್ದಧಾನೋಽಸಿ ದುರ್ಮೇಧಾಶ್ಚಾಸಿ ಪಾಂಡವ ||10||
ಆದರೆ ನಿನ್ನ ತಿಳಿಗೇಡಿತನದಿಂದ ಅಂತಹ ಪರತತ್ವವನ್ನು ಗ್ರಹಿಸದೆ ನೀನು ನನಗೆ ಅಸಮಾಧಾನವನ್ನೇ ಉಂಟುಮಾಡಿರುವೆ.

ಅಶ್ರದ್ಧೆಯನ್ನು ಹೊಂದಿದ ನೀನು ಉತ್ಕೃಷ್ಟವಾದ ಬುದ್ಧಿಯನ್ನು ಹೊಂದಲಿಲ್ಲ.
ಸ ಹಿ ಧರ್ಮಃ ಸುಪರ್ಯಾಪ್ತೋ ಬ್ರಹ್ಮಣಃ ಪದವೇದನೇ |
ನ ಶಕ್ಯಂ ತನ್ಮಯಾ ಭೂಯಸ್ತಥಾ ವಕ್ತುಮಶೇಷತಃ ॥11॥
ಭಗವಂತನ ಸ್ವರೂಪವನ್ನು ತಿಳಿಸುವುದರಲ್ಲಿ ಹಿಂದೆ ಉಪದೇಶಿಸಿದ ಗೀತಾಧರ್ಮವು ಪರಿಪೂರ್ಣವಾಗಿದ್ದಿತು. ಆ ಗೀತೆಯನ್ನು ಪುನಃ ಸಮಗ್ರವಾಗಿ ನನ್ನಿಂದಲೂ ಉಪದೇಶಿಸಲು ಸಮಯವಿಲ್ಲ.
ಪರಂ ಹಿ ಬ್ರಹ್ಮ ಕಥಿತಂ ಯೋಗಯುಕ್ತೇನ ತನ್ಮಯಾ |
ಇತಿಹಾಸಂ ತು ವಕ್ಷ್ಯಾಮಿ ತಸ್ಮಿನ್ನರ್ಥೇ ಪುರಾತನಮ್ ॥12॥
ನಾನು ಪರಬ್ರಹ್ಮನ ತತ್ವವನ್ನು ಯೋಗಯುಕ್ತವಾದ ಮನಸ್ಸಿನಿಂದ ಹೇಳಿದ್ದೆನು. ಆದರೆ ಅದೇ ಪರತತ್ವದ ವಿಷಯವಾಗಿ ಒಂದು ಪುರಾತನವಾದ ಇತಿಹಾಸವನ್ನು ಹೇಳುತ್ತೇನೆ.
ಯಥಾ ತಾಂ ಬುದ್ಧಿಮಾಸ್ಥಾಯ ಗತಿಮಗ್ರ್ಯಾಂ ಗಮಿಷ್ಯಸಿ |
ಶೃಣು ಧರ್ಮಭೃತಾಂ ಶ್ರೇಷ್ಠ ಗದತಃ ಸರ್ವಮೇವ ಮೇ ॥13॥
ನಾನು ಹೇಳಿದ ಈ ಇತಿಹಾಸವನ್ನು ಸರಿಯಾಗಿ ತಿಳಿದಲ್ಲಿ ಸರಿಯಾದ ಗತಿಯನ್ನು ಹೊಂದುವಿ. ಧರ್ಮವನ್ನು ಧರಿಸುವವರಲ್ಲಿ ಶ್ರೇಷ್ಠನಾದವನೇ, ನಾನು ಹೇಳುವ ವಿಚಾರವನ್ನು ಕೇಳಿಸಿಕೊ.
ಆಗಚ್ಛದ್ ಬ್ರಾಹ್ಮಣಃ ಕಶ್ಚಿತ್ ಸ್ವರ್ಗಲೋಕಾದರಿಂದಮ |
ಬ್ರಹ್ಮಲೋಕಾಚ್ಚ ದುರ್ಧರ್ಷಃ ಸೋಽಸ್ಮಾಭಿಃ ಪೂಜಿತೋಽವಸತ್ ॥14॥
ಅರಿಂದಮನೇ, ಹಿಂದೆ ಸ್ವರ್ಗಲೋಕದಿಂದ ಒಬ್ಬ ಬ್ರಾಹ್ಮಣನು ಆಗಮಿಸಿದನು. ಬ್ರಹ್ಮಲೋಕದಿಂದ ಆಗಮಿಸಿದ ಆ ಬ್ರಾಹ್ಮಣನು ಸ್ವರ್ಗಲೋಕದಿಂದ ಭೂಮಿಗೆ ಆಗಮಿಸಿ ನನ್ನಿಂದ ಪೂಜಿತನಾಗಿ ನನ್ನ ಬಳಿಯೇ ವಾಸಿಸಿದನು.
ಪರಿಪೃಷ್ಟಶ್ಚ ಸ ತದಾ ಯದಾಹ ದ್ವಿಜಸತ್ತಮಃ |
ದಿವ್ಯೇನ ವಿಧಿನಾ ಪಾರ್ಥ ತಚ್ಛೃಣುಷ್ವಾವಿಚಾರಯನ್ ॥15॥
ಆ ಬ್ರಾಹ್ಮಣಶ್ರೇಷ್ಠನನ್ನು ನಾನು ಪ್ರಶ್ನಿಸಿದೆನು. ದಿವ್ಯವಾದ ವಿಧಿಯಿಂದ ಕೇಳಿದ ಅವನು ಪ್ರಶ್ನಿಸಿದ, ಉತ್ತರಿಸಿದ ಕ್ರಮವನ್ನು ತಿಳಿಸುವೆನು, ತಿಳಿದುಕೊ.
ಬ್ರಾಹ್ಮಣಃ
ಮೋಕ್ಷಧರ್ಮಂ ಸಮಾಶ್ರಿತ್ಯ ಕೃಷ್ಣ ಯನ್ಮಾಽನುಪೃಚ್ಛಸಿ |
ಭೂತಾನಾಮನುಕಂಪಾರ್ಥಂ ಮನ್ಮೋಹಚ್ಛೇದನಂ ಪ್ರಭೋ ॥16॥
ಬ್ರಾಹ್ಮಣ ಮೋಕ್ಷಧರ್ಮವನ್ನು ಆಶ್ರಯಿಸಿ ಕೃಷ್ಣನೇ, ಯಾವ ವಿಚಾರವನ್ನು ನನ್ನ ಬಳಿ ಕೇಳಿದ್ದೀಯೋ ಈ ನಿನ್ನ ಪ್ರಶ್ನೆಯು ಸಮಗ್ರ ಜಗತ್ತಿನ ಮೇಲಿನ ಕರುಣೆಯಿಂದ ನನ್ನ ಅಜ್ಞಾನವನ್ನು ಪರಿಹರಿಸುವ ದೃಷ್ಟಿಯಿಂದ ಎಂದು ತಿಳಿದಿದ್ದೇನೆ.
ತತ್ ತೇಽಹಂ ಸಂಪ್ರವಕ್ಷ್ಯಾಮಿ ಯಥಾವನ್ಮಧುಸೂದನ |
ಶೃಣುಷ್ವಾವಹಿತೋ ಭೂತ್ವಾ ಗದತೋ ಮಮ ಮಾಧವ ॥17॥
ನೀನು ಕೇಳಿದ ಪ್ರಶ್ನೆಗೆ ನಾನು ತಿಳಿದಂತೆ, ಮಧುಸೂದನನೇ ಉತ್ತರಿಸುತ್ತೇನೆ. ನಾನು ಹೇಳುವ ಮಾತುಗಳನ್ನು ಮಾಧವನೇ ಏಕಾಗ್ರತೆಯಿಂದ ಕೇಳಿಸಿಕೊ.
ಕಶ್ಚಿದ್ ವಿಪ್ರಸ್ತಪೋಯುಕ್ತಃ ಕಾಶ್ಯಪೋ ನಾಮ ಧರ್ಮವಿತ್ |
ಆಸಸಾದ ದ್ವಿಜಂ ಕಂಚಿದ್ ಧರ್ಮಾಣಾಮಾಗಮಾಗಮಮ್ ॥18॥
ಹಿಂದೊಮ್ಮೆ ತಪೋಯುಕ್ತನಾದ, ವೇದವೇತ್ತನಾದ, ಕಶ್ಯಪನೆಂಬ ಹೆಸರಿನ ಬ್ರಾಹ್ಮಣನು ಧರ್ಮದ ವಿಷಯದಲ್ಲಿ ಶಾಸ್ತ್ರಗಳಲ್ಲಿ ಹೇಳಿದ ರಹಸ್ಯಗಳನ್ನು ಸಮಗ್ರವಾಗಿ ಅರಿತಿದ್ದನು.
ಗತಾಗಮಂ ಸುಬಹುಶೋ ಜ್ಞಾನವಿಜ್ಞಾನಪಾರಗಮ್ |
ಲೋಕತತ್ತ್ವಾರ್ಥಕುಶಲಂ ಜ್ಞಾತಾರಂ ಸುಖದುಃಖಯೋಃ ॥19॥
ಹಿಂದೆ ಆಗಿದ್ದು, ಮುಂದೆ ಆಗುವುದನ್ನೂ ತಿಳಿದಿದ್ದ, ಜ್ಞಾನ-ವಿಜ್ಞಾನಗಳಲ್ಲಿ ಪ್ರವೀಣನಾಗಿದ್ದ, ಲೋಕತತ್ತ್ವಗಳಲ್ಲಿ ಕುಶಲನಾಗಿದ್ದ, ಸುಖ-ದುಃಖಗಳ ರಹಸ್ಯಗಳನ್ನು ಬಲ್ಲವನಾಗಿದ್ದ.
ಜಾತಿಸ್ಮರಣತತ್ತ್ವಜ್ಞಂ ಕೋವಿದಂ ಪಾಪಪುಣ್ಯಯೋಃ |
ದ್ರಷ್ಟಾರಮುಚ್ಚನೀಚಾನಾಂ ಕರ್ಮಭಿರ್ದೇಹಿನಾಂ ಗತಿಮ್ ॥20॥
ಹುಟ್ಟು-ಸಾವುಗಳ ರಹಸ್ಯವನ್ನು ತಿಳಿದ, ಪುಣ್ಯ-ಪಾಪಗಳ ಮರ್ಮವನ್ನು ಅರಿತ, ಉಚ್ಚ-ನೀಚ ಪ್ರಾಣಿಗಳ ಕರ್ಮಾನುಗುಣವಾಗಿ ಗತಿಯ ಕ್ರಮವನ್ನು ತಿಳಿದಿದ್ದ ಒಬ್ಬ ಬ್ರಾಹ್ಮಣ ಶ್ರೇಷ್ಠನನ್ನು ಸಂಧಿಸಿದನು.
ಚರಂತಂ ಮುಕ್ತವತ್ ಸಿದ್ಧಂ ಪ್ರಶಾಂತಂ ಸಂಯತೇಂದ್ರಿಯಮ್ |
ದೀಪ್ಯಮಾನಂ ಶ್ರಿಯಾ ಬ್ರಾಹ್ಮ್ಯಾ ಕ್ರಮಮಾಣಂ ಚ ಸರ್ವಶಃ ॥21॥
ಸಂಸಾರದಿಂದ ಮುಕ್ತನಾದವನಂತಿರುವ, ಎಲ್ಲ ಕಡೆಯೂ ಸ್ವಚ್ಛಂದವಾಗಿ ಸಂಚರಿಸುವಂತಿದ್ದ, ಪ್ರಶಾಂತ ಮನಸ್ಕನಾದ, ಜಿತೇಂದ್ರಿಯನಾದ, ದೇದೀಪ್ಯಮಾನವಾದ ಬ್ರಹ್ಮಕಾಂತಿಯಿಂದ ಎಲ್ಲ ಕಡೆಯಲ್ಲಿಯೂ ಸಂಚರಿಸುವ ಸಿದ್ಧ ಪುರುಷನು ಆತನು.
ಅಂತರ್ಧಾನಗತಿಜ್ಞಂ ಚ ಶ್ರುತ್ವಾ ತತ್ತ್ವೇನ ಕಾಶ್ಯಪಃ |
ತಥೈವಾಂತರ್ಹಿತೈಃ ಸಿದ್ಧೈರ್ಯಾತ ಚಕ್ರಧರೈಃ ಸಹ ॥22॥
ಅವನು ಅಂತರ್ಧಾನಶಕ್ತಿಯನ್ನು ಹೊಂದಿದ್ದನು. ಅದೃಶ್ಯರಾಗಿರುವ, ಶಂಖ- ಚಕ್ರಧಾರಿಗಳಾದ ವೈಷ್ಣವರ ಜೊತೆಗೆ ಸಂಚರಿಸುತ್ತಾ, ಅವರೊಡನೆ ಏಕಾಂತದಲ್ಲಿ ಸಂಭಾಷಣೆಯನ್ನು ಮಾಡುತ್ತಿದ್ದನು.

ಸಂಭಾಷಮಾಣಮೇಕಾಂತೇ ಸಮಾಸೀನಂ ಚ ತೈಃ ಸಹ |
ಯದೃಚ್ಛಯಾ ಚ ಗಚ್ಛಂತಮಸಕ್ತಂ ಪವನಂ ಯಥಾ ॥23॥
ಹೀಗೆ ಏಕಾಂತದಲ್ಲಿ ವಿಷ್ಣುಭಕ್ತರ ಜೊತೆಗೆ ಕುಳಿತುಕೊಂಡು ಸಂಭಾಷಣೆಯನ್ನು ಮಾಡುತ್ತಿರುವ, ಯದೃಚ್ಛೆಯಿಂದ ಸಂಚರಿಸುವಂತಹ, ನಿರ್ಲಿಪ್ತವಾದ ವಾಯುವಿನಂತಿರುವ ಸಿದ್ಧಪುರುಷನನ್ನು ಕಶ್ಯಪನು ನೋಡಿದನು.
ತಂ ಸಮಾಸಾದ್ಯ ಮೇಧಾವೀ ಸ ತದಾ ದ್ವಿಜಸತ್ತಮಃ |
ಚರಣೌ ಧರ್ಮಕಾಮೋ ವೈ ಸ ತಸ್ಯ ಸುಸಮಾಹಿತಃ ॥24॥
ಪ್ರತಿಪೇದೇ ಯಥಾನ್ಯಾಯಂ ಭಕ್ತ್ಯಾ ಪರಮಯಾ ಯುತಃ ॥25॥
ಮೇಧಾವಿಯಾದ, ದ್ವಿಜಶ್ರೇಷ್ಠನಾದ, ಧರ್ಮಕಾಮನಾದ, ತಪಸ್ವಿಯಾದ ಕಾಶ್ಯಪನು ಸಿದ್ಧಪುರುಷನ ಬಳಿ ಹೋಗಿ, ಯಥಾವಿಧಿಯಾಗಿ ಬುದ್ಧಿಯನ್ನು ನಿಗ್ರಹಿಸಿಕೊಂಡು, ಅವನ ಕಾಲುಗಳಿಗೆ ಭಕ್ತಿಯಿಂದ ಎರಗಿದನು.
ವಿಸ್ಮಿತಶ್ಚಾದ್ಭುತಂ ದೃಷ್ಟ್ವಾ ಕಾಶ್ಯಪಸ್ತಂ ದ್ವಿಜೋತ್ತಮಮ್ |
ಪರಿಚಾರೇಣ ಮಹತಾ ಗುರುಂ ವೈ ಪರ್ಯತೋಷಯತ್ ॥26॥
ಬ್ರಾಹ್ಮಣಶ್ರೇಷ್ಠನಾದ ಸಿದ್ಧಪುರುಷನು ಅದ್ಭುತವಾದ ತೇಜಸ್ಸಿನಿಂದ ಕೂಡಿದ ಸಂತನಾಗಿದ್ದನು. ಇಂತಹ ಗುರುವನ್ನು ಹೊಂದಿದ ಕಾಶ್ಯಪನು ಪರಮಗುರುವೇ ದೊರೆತನೆಂದು ಸಂತುಷ್ಟನಾದನು.
ಉಪಸನ್ನಶ್ಚ ಧರ್ಮಾತ್ಮಾ ಶ್ರುತಚಾರಿತ್ರಸಂಯುತಃ |
ಭಾವೇನಾತೋಷಯತ್ ತಂ ವೈ ಗುರುವೃತ್ತಿಂ ಸಮಾಶ್ರಿತಃ ॥27॥
ಸರ್ವಗುಣಗಳಿಂದಲೂ ಪೂರ್ಣನಾದ, ವಿದ್ಯೆ-ಚಾರಿತ್ರ್ಯಸಂಪನ್ನನಾದ ಸಿದ್ಧಪುರುಷನ ದರ್ಶನದಿಂದಲೇ ವಿಸ್ಮಿತನಾದ ಕಾಶ್ಯಪನು ಅವನನ್ನೇ ಗುರುವನ್ನಾಗಿ ಮಾಡಿಕೊಂಡು, ಅವನ ಸೇವಾನಿರತನಾದನು. ತನ್ನ ಶುಶ್ರೂಷೆಯಿಂದ, ಗುರುಭಕ್ತಿಯಿಂದ ಅವನನ್ನು ಸಂತೋಷಪಡಿಸಿದನು.
ತಸ್ಮೈ ತುಷ್ಟಃ ಸ ಶಿಷ್ಯಾಯ ಯತ್ ಪ್ರಸನ್ನೋಽಬ್ರವೀದ್ ಗುರುಃ |
ಸಿದ್ಧಿಂ ಪರಾಮಭಿಪ್ರೇಕ್ಷ್ಯ ಶೃಣು ತನ್ಮೇ ಜನಾರ್ದನ ॥28॥
ಜನಾರ್ದನನೇ, ಕಾಶ್ಯಪನ ವಿಷಯದಲ್ಲಿ ಸಂತುಷ್ಟನಾದ ಸಿದ್ಧಪುರುಷನು ಶಿಷ್ಯನಿಗೆ ಉತ್ಕೃಷ್ಟವಾದ ಸಿದ್ಧಿಯ ವಿಷಯವಾಗಿ ಉಪದೇಶ ಮಾಡಿದ ವಿಷಯವನ್ನೇ ನಿನಗೆ ಹೇಳುತ್ತೇನೆ, ಕೇಳಿಸಿಕೊ.
ಸಿದ್ಧಃ
ವಿವಿಧೈಃ ಕರ್ಮಭಿಸ್ತಾತ ಪುಣ್ಯಯೋಗೈಶ್ಚ ಕೇವಲೈಃ |
ಗಚ್ಛಂತೀಹ ಗತಿಂ ಮರ್ತ್ಯಾ ದೇವಲೋಕೇ ಚ ವಾ ಸ್ಥಿತಿಮ್ ॥29॥
ಸಿದ್ಧಪುರುಷ ಮಗು ಕಶ್ಯಪನೇ, ಮನುಷ್ಯರು ನಾನಾ ವಿಧವಾದ ಕರ್ಮಗಳನ್ನು ಅನುಷ್ಠಾನ ಮಾಡಿ, ಆ ಕರ್ಮಗಳ ಪುಣ್ಯದ ಫಲವನ್ನು ಹೊಂದಿ, ಉತ್ತಮ ಲೋಕಗಳನ್ನು, ದೇವಲೋಕದಲ್ಲಿ ಸ್ಥಾನವನ್ನೂ ಪಡೆದುಕೊಳ್ಳುತ್ತಾರೆ.
ನ ಕ್ವಚಿತ್ ಸುಖಮತ್ಯಂತಂ ನ ಕ್ವಚಿಚ್ಛಾಶ್ವತೀ ಸ್ಥಿತಿಃ |
ಸ್ಥಾನಾಚ್ಚ ಮಹತೋ ಭ್ರಂಶೋ ದುಃಖಲಬ್ಧಾತ್ ಪುನಃ ಪುನಃ ॥30॥
ಇಷ್ಟಾದರೂ ಜೀವನಿಗೆ ಯಾವ ಲೋಕಗಳಲ್ಲಿಯೂ ಶಾಶ್ವತವಾದ ಸುಖವು ದೊರೆಯುವುದಿಲ್ಲ. ಯಾವ ಲೋಕಗಳೂ ಅವನಿಗೆ ಸ್ಥಿರವಲ್ಲ. ಬಹಳ ಕಷ್ಟದಿಂದ ತಪಸ್ಸು ಮಾಡಿ ಸಂಪಾದಿಸಿದ ಶ್ರೇಷ್ಠ ಲೋಕಗಳು ಅಸ್ಥಿರವಾಗಿವೆ. ಅಲ್ಲಿಂದ ಜೀವನು ಪುನಃ ಕೆಳಗಿಳಿಯುತ್ತಾನೆ.
ಅಶುಭಾ ಗತಯಃ ಪ್ರಾಪ್ತಾಃ ಕಷ್ಟಾ ಮೇ ಪಾಪಸೇವನಾತ್ |
ಕಾಮಮನ್ಯುಪರೀತೇನ ತೃಷ್ಣಯಾ ಮೋಹಿತೇನ ಚ ॥31॥
ಕಾಮ-ಕ್ರೋಧಗಳಿಂದ ಕೂಡಿರುವ, ಆಸೆಯಿಂದ ಮೋಹಿತನಾದ, ಪಾಪ ಕರ್ಮಗಳನ್ನೇ ಆಶ್ರಯಿಸಿದ ಕಾರಣದಿಂದ ಅಶುಭ ಗತಿಗಳು ನನಗೆ ಉಂಟಾದವು.
ಪುನಃ ಪುನಶ್ಚ ಮರಣಂ ಜನ್ಮ ಚೈವ ಪುನಃ ಪುನಃ |
ಆಹಾರಾ ವಿವಿಧಾ ಭುಕ್ತಾಃ ಪೀತಾ ನಾನಾವಿಧಾಃ ಸ್ತನಾಃ ॥32॥
ಪುನಃ ಪುನಃ ಜನನ-ಮರಣಗಳನ್ನು ಹೊಂದುತ್ತಲೇ ಇದ್ದೆನು. ಅನೇಕ ಜನ್ಮಗಳಲ್ಲಿ ಬಗೆಬಗೆಯ ಆಹಾರಗಳನ್ನು ಸೇವಿಸಿ, ಅನೇಕ ತಾಯಂದಿರ ಸ್ತನ್ಯಗಳನ್ನು ಪಾನ ಮಾಡುತ್ತಿದ್ದೆನು.
ಮಾತರೋ ವಿವಿಧಾ ದೃಷ್ಟಾಃ ಪಿತರಶ್ಚ ಪೃಥಗ್ ವಿಧಾಃ |
ಸುಖಾನಿ ಚ ವಿಚಿತ್ರಾಣಿ ದುಃಖಾನಿ ಚ ಮಯಾಽನಘ ॥33॥
ಅನಘನೇ, ಇಲ್ಲಿಯ ತನಕ ಅನೇಕ ತಾಯಂದಿರನ್ನು ನೋಡಿದ್ದೇನೆ. ನಾನಾ ವಿಧವಾದ ಸ್ವಭಾವಗಳಿಂದ ಕೂಡಿದ ತಂದೆಗಳನ್ನೂ ಕಂಡಿದ್ದೇನೆ. ಚಿತ್ರ-ವಿಚಿತ್ರ ಸುಖಗಳನ್ನು ಅನುಭವಿಸಿದ್ದೇನೆ.
ಪ್ರಿಯೈರ್ವಿವಾಸೋ ಬಹುಶಃ ಸಂವಾಸಶ್ಚಾಪ್ರಿಯೈಃ ಸಹ |
ಧನನಾಶಶ್ಚ ಸಂಪ್ರಾಪ್ತೋ ಲಬ್ಧ್ವಾ ದುಃಖೇನ ತದ್ಧನಮ್ ॥34॥
ಹಲವು ಬಾರಿ ಪ್ರೀತಿಪಾತ್ರರಾದವರ ವಿಯೋಗವನ್ನು ಅನೇಕ ಜನ್ಮಗಳಲ್ಲಿ ಹೊಂದಿದ್ದೇನೆ. ಅಪ್ರಿಯವಾದವರ ಸಹವಾಸವನ್ನೂ ಮಾಡಿದ್ದೇನೆ. ಬಹಳ ದುಃಖದಿಂದ ಸಂಪಾದಿಸಿದ ಧನವು ನನ್ನ ಕಣ್ಣ ಮುಂದೆಯೇ ನಾಶ ಹೊಂದಿದೆ.
ಅವಮಾನಾಃ ಸುಕಷ್ಟಾಶ್ಚ ಪರತಃ ಸ್ವಜನಾತ್ ತಥಾ |
ಶಾರೀರಾ ಮಾನಸಾಶ್ಚಾಪಿ ವೇದನಾ ಭೃಶದಾರುಣಾಃ ॥35॥

ಅವಮಾನಗಳು, ಕಷ್ಟಗಳು ಬಂಧುಜನರಿಂದ ಅನೇಕ ಬಾರಿ ಒದಗಿಬಂದಿವೆ. ಈ ಕಾರಣದಿಂದ ನನ್ನ ಶರೀರಕ್ಕೂ ಮನಸ್ಸಿಗೂ ಅತಿಯಾದ ದಾರುಣ ವೇದನೆಗಳು ಉಂಟಾಗಿವೆ.
ಪತನಂ ನಿರಯೇ ಚೈವ ಯಾತನಾಶ್ಚ ಯಮಕ್ಷಯೇ |
ಪ್ರಾಪ್ತಾ ವಿಮಾನನಾಶ್ಚೋಗ್ರಾ ವಧಂ ಬಂಧಾಶ್ಚ ದಾರುಣಾಃ ॥36॥
ನರಕಗಳಲ್ಲಿ ಬಿದ್ದಿದ್ದೇನೆ. ಅನೇಕ ಯಾತನೆಗಳನ್ನು ಅನುಭವಿಸಿದ್ದೇನೆ. ಎಷ್ಟೋ ಬಾರಿ ಅವಮಾನ ಹೊಂದಿದ್ದೇನೆ. ಪ್ರಾಣದಂಡಕ್ಕೆ ತುತ್ತಾಗಿದ್ದೇನೆ. ದಾರುಣವಾದ ಬಂಧನಗಳಿಗೂ ತುತ್ತಾಗಿದ್ದೇನೆ.
ಜರಾ ರೋಗಾಶ್ಚ ಸತತಂ ವ್ಯಸನಾನಿ ಚ ಭೂರಿಶಃ |
ಲೋಕೇಽಸ್ಮಿನ್ನನುಭೂತಾನಿ ದ್ವಂದ್ವಜಾನಿ ಭೃಶಂ ಮಯಾ ॥37॥
ನಿರಂತರವೂ ಅನೇಕ ಜನ್ಮಗಳನ್ನು ತಾಳಿ ಮುಪ್ಪಿನಿಂದ, ರೋಗಗಳಿಂದ ಬಳಲಿದ್ದೇನೆ. ವ್ಯಸನಗಳನ್ನೂ ಅನುಭವಿಸಿದ್ದೇನೆ. ಸುಖ-ದುಃಖಗಳ ದ್ವಂದ್ವಗಳನ್ನು ಅನುಭವಿಸಿದ್ದೇನೆ.
ತತಃ ಕದಾಚಿನ್ನಿರ್ವೇದಾನ್ನಿರಾಕಾರಾಶ್ರಿತೇನ ಚ |
ಲೋಕತಂತ್ರಂ ಪರಿತ್ಯಕ್ತಂ ದುಃಖಾರ್ತೇನ ಭೃಶಂ ಮಯಾ ॥38॥
ಹೀಗೆ ಇರುತ್ತಿರುವಾಗ ಅತ್ಯಂತ ನಿರಾಸೆಯನ್ನು ಹೊಂದಿದ ನಾನು ರಹಸ್ಯನಾದ, ಅವ್ಯಕ್ತ ಸ್ವಭಾವನಾದ ಪರಮಾತ್ಮನನ್ನು ಆಶ್ರಯಿಸಿದೆನು. ಅತ್ಯಂತ ದುಃಖಪೀಡಿತನಾದ ನಾನು ಶೋಕವ್ಯವಹಾರವನ್ನೇ ಪೂರ್ಣವಾಗಿ ತ್ಯಜಿಸಿದೆನು.
ತತಃ ಸಿದ್ಧಿರಿಯಂ ಪ್ರಾಪ್ತಾ ಪ್ರಸಾದಾದಾತ್ಮನೋ ಮಯಾ ॥39॥
ನಾಹಂ ಪುನರಿಹಾಗಂತಾ ಲೋಕಾನಾಲೋಕಯಾಮ್ಯಹಮ್ ॥40॥
ಆ ಬ್ರಹ್ಮತತ್ತ್ವವನ್ನು ಆಶ್ರಯಿಸಿದ ಕಾರಣದಿಂದ ಅವನ ಅನುಗ್ರಹವನ್ನು ಪಡೆದು ಈ ಸಿದ್ಧಿಯನ್ನು ಪಡೆದುಕೊಂಡಿದ್ದೇನೆ. ನಾನು ಪುನಃ ಇನ್ನು ಮುಂದೆ ಸಂಸಾರಕ್ಕೆ ಬರುವವನಲ್ಲ.
ಆಸಿದ್ಧೇರಾಪ್ರಜಾಸರ್ಗಾದಾತ್ಮನೋಽಪಿ ಗತೀಃ ಶುಭಾಃ |
ಉಪಲಬ್ಧಾ ದ್ವಿಜಶ್ರೇಷ್ಠ ತಥೇಯಂ ಸಿದ್ಧಿರುತ್ತಮಾ ॥41॥
ಎಲ್ಲಿಯ ತನಕ ಸೃಷ್ಟಿಕಾರ್ಯವು ನಡೆಯುತ್ತಲೇ ಇರುತ್ತದೋ, ನಾನು, ನನ್ನ ಮತ್ತು ಇತರ ಜೀವರ ಶುಭಗತಿಯನ್ನು ನೋಡುತ್ತಲೇ ಇರುತ್ತೇನೆ. ಇಂತಹ ಉತ್ತಮ ಸಿದ್ಧಿಯು ಭಗವಂತನ ಅನುಗ್ರಹದಿಂದ ನನಗೆ ಪ್ರಾಪ್ತವಾಗಿದೆ.
ಇತಃ ಪರಂ ಗಮಿಷ್ಯಾಮಿ ತತಃ ಪರತರಂ ಮಹತ್ |
ಬ್ರಹ್ಮಣಃ ಪದಮವ್ಯಗ್ರಂ ಮಾಂ ತೇಽಭೂದತ್ರ ಸಂಶಯಃ ॥42॥
ಇಂದು ಆ ಭಗವಂತನ ಅನುಗ್ರಹದಿಂದ ಉತ್ತಮ ಸಿದ್ಧಿಯು ಪ್ರಾಪ್ತವಾಗಿದೆ. ಲೋಕಯಾತ್ರೆಯನ್ನು ಮುಗಿಸಿ ಇದಕ್ಕಿಂತಲೂ ಉತ್ತಮವಾದ ಲೋಕಕ್ಕೆ ಹೋಗುತ್ತೇನೆ. ಗುಣಪರಿಪೂರ್ಣನಾದ, ಯಾವ ದೋಷಗಳೂ ಇಲ್ಲದ ಭಗವಂತನ ಸ್ಥಾನವನ್ನು ಹೊಂದುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ನಾಹಂ ಪುನರಿಹಾಗಂತಾ ಮರ್ತ್ಯಲೋಕಂ ದ್ವಿಜೋತ್ತಮ |
ಪ್ರೀತೋಽಸ್ಮಿ ತೇ ಮಹಾಪ್ರಾಜ್ಞ ಬ್ರೂಹಿ ಕಿಂ ಕರವಾಣಿ ತೇ ॥43॥
ಪುನಃ ಈ ಲೋಕಕ್ಕೆ ನಾನು ಮರಳಿ ಬರುವುದಿಲ್ಲ. ನಿನ್ನ ವಿಷಯದಲ್ಲಿ ಪ್ರೀತನಾಗಿದ್ದೇನೆ. ಏನು ಮಾಡಲಿ? ಹೇಳು.
ಯದೀಪ್ಸ್ಸರೂಪಸಂಪನ್ನಂ ತಸ್ಯ ಕಾಲೋಽಯಮಾಗತಃ |
ಅಭಿಜಾನೇ ಚ ತದಹಂ ಯದರ್ಥಂ ಮಾಂ ತ್ವಮಾಗತಃ ॥44॥
ಅಚಿರಾತ್ ತು ಗಮಿಷ್ಯಾಮಿ ಯೇನಾಹಂ ತ್ವಾಮಚೂಚುದಮ್ ॥45॥
ನೀನು ಯಾವ ವಸ್ತುವನ್ನು ಹೊಂದಲು ಅಪೇಕ್ಷಿಸಿ ನನ್ನ ಬಳಿ ಬಂದಿರುವೆಯೋ ಆ ವಸ್ತುವನ್ನು ಪಡೆದುಕೊಳ್ಳಲು ಈಗ ಯೋಗ್ಯವಾದ ಕಾಲವಾಗಿದೆ. ನೀನು ಯಾವ ಉದ್ದೇಶದಿಂದ ಬಂದಿರುವಿ ಎಂಬುದನ್ನು ನಾನು ತಿಳಿದಿದ್ದೇನೆ. ನಾನು ಇಲ್ಲಿ ಹೆಚ್ಚು ಸಮಯ ಇರುವುದಿಲ್ಲ. ಆದ್ದರಿಂದ ಬೇಕಾದ್ದನ್ನು ಪ್ರಾರ್ಥಿಸು, ನೀಡುತ್ತೇನೆ.
ಭೃಶಂ ಪ್ರೀತೋಽಸ್ಮಿ ಭವತಃ ಚಾರಿತ್ರೇಽಥ ವಿಚಕ್ಷಣ |
ಪರಿಪೃಚ್ಛ ಯಾವದ್ ಭವತೋ ಭಾಷೇ ಯದ್ಯತ್ ತವೇಪ್ಸಿತಮ್ ॥46॥
ವಿದ್ವಾಂಸನೇ, ನಿನ್ನ ಉತ್ತಮವಾದ ಆಚರಣೆಯಿಂದ ಬಹಳ ಸಂತುಷ್ಟನಾಗಿದ್ದೇನೆ. ನಿನ್ನ ಶ್ರೇಯಸ್ಸಿನ ವಿಷಯವಾಗಿ ಪ್ರಶ್ನಿಸು. ಇಷ್ಟವಾದ ನಿನ್ನ ಪ್ರಶ್ನೆಗೆ ಉತ್ತರಿಸುತ್ತೇನೆ.
ಬಹು ಮನ್ಯೇ ಚ ಬುದ್ಧಿಂ ತೇ ಭೃಶಂ ಸಂಪೂಜಯಾಮಿ ಚ |
ಯೇನಾಹಂ ಭವತಾ ಬುದ್ಧೋ ಮೇಧಾವೀ ಹ್ಯಸಿ ಕಾಶ್ಯಪ ॥47॥
ಕಾಶ್ಯಪನೇ, ನಾನು ನಿನ್ನ ಸಾತ್ವಿಕವಾದ ಶ್ರದ್ಧೆ, ಬುದ್ಧಿಯನ್ನು ಸನ್ಮಾನಿಸುತ್ತೇನೆ. ಕಾರಣ ನಾನು ಅತ್ಯಂತ ನಿಗೂಢನಾಗಿ ಸಂಚರಿಸುತ್ತಿದ್ದರೂ ನನ್ನನ್ನು ನೀನು ಗುರುತಿಸಿದ್ದಿ. ನಿಶ್ಚಯವಾಗಿಯೂ ನೀನು ಮೇಧಾವಿಯಾಗಿರುವಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕಾಶ್ಯಪಬ್ರಾಹ್ಮಣಸಮಾಗಮೋ ನಾಮ ಷೋಡಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *

## ಹದಿನೇಳನೆಯ ಅಧ್ಯಾಯ

ಬ್ರಾಹ್ಮಣನು ಕೃಷ್ಣನನ್ನು ಕುರಿತು ಸಕಲ ಪ್ರಾಣಿಗಳ ಜನನ-ಮರಣಾದಿ ಪ್ರತಿಪಾದಕವಾದ ಸಿದ್ಧ-ಕಾಶ್ಯಪರ ಸಂವಾದವನ್ನು ಅನುವಾದಿಸಿದುದು.

ವಾಸುದೇವಃ

ತತಸ್ತಸ್ಯೋಪಸಂಗೃಹ್ಯ ಪಾದೌ ಸ ದ್ವಿಜಸತ್ತಮಃ |
ಪ್ರಶ್ನಾಂಶ್ಚೈತಾನ್ ಸ ಧರ್ಮಾತ್ಮಾ ಪ್ರಾಹ ಧರ್ಮಭೃತಾಂ ವರಃ ॥1॥

ವಾಸುದೇವ ಅರ್ಜುನನೇ, ಸಿದ್ಧಪುರುಷನು ಹೀಗೆ ಹೇಳಿದ ಬಳಿಕ ಶ್ರೇಷ್ಠನಾದ ಬ್ರಾಹ್ಮಣನು ಸಿದ್ಧಪುರುಷನ ಎರಡು ಕಾಲುಗಳನ್ನು ಹಿಡಿದುಕೊಂಡು ನಮಸ್ಕರಿಸಿ ಈ ಪ್ರಶ್ನೆಗಳನ್ನು ಕೇಳಿದನು. ಬುದ್ಧಿವಂತನಾದ ಸಿದ್ಧಪುರುಷನು ಆ ಪ್ರಶ್ನೆಗಳಿಗೆ ಉತ್ತರಿಸಿದನು.

ಕಾಶ್ಯಪಃ

ಕಥಂ ಶರೀರಾಚ್ಚ್ಯವತೇ ಕಥಂ ಚೈವೋಪಪದ್ಯತೇ |
ಕಥಂ ಕಷ್ಟಾಚ್ಚ ಸಂಸಾರಾತ್ ಸಂಸಾರೀ ಪರಿಮುಚ್ಯತೇ ॥2॥

ಕಾಶ್ಯಪ ಮಹಾತ್ಮನೇ, ಈ ಶರೀರವು ಹೇಗೆ ನಾಶ ಹೊಂದುತ್ತದೆ? ಹೇಗೆ ಮತ್ತೆ ಜೀವನಿಗೆ ಸಂಬಂಧವನ್ನು ಹೊಂದುತ್ತದೆ? ಈ ಕಷ್ಟಕರವಾದ ಸಂಸಾರದಿಂದ ಸಂಸಾರಿ ಎನಿಸಿದ ಜೀವನು ಹೇಗೆ ಬಿಡುಗಡೆಯನ್ನು ಹೊಂದುತ್ತಾನೆ?

ಆತ್ಮಾನಂ ವಾ ಕಥಂ ಯುಕ್ತಂ ತಚ್ಛರೀರಂ ವಿಮುಚ್ಯತೇ |
ಶರೀರೇ ತಚ್ಚ ನಿರ್ಮುಕ್ತೋ ಕಥಮನ್ಯತ್ ಪ್ರಪದ್ಯತೇ ॥3॥

ಜೀವಾತ್ಮನು ಮೂಲ ಪ್ರಕೃತಿಯಿಂದ ಸೇರಿದ ಈ ಶರೀರವನ್ನು ಹೇಗೆ ಬಿಟ್ಟುಹೋಗುತ್ತಾನೆ? ಶರೀರದಿಂದ ಮುಕ್ತನಾದ ಬಳಿಕ ಮತ್ತೊಂದು ಶರೀರವನ್ನು ಹೊಂದುವ ಬಗೆ ಹೇಗೆ?

ಕಥಂ ಶುಭಾಶುಭೇ ಚಾಯಂ ಕರ್ಮಣೀ ಸ್ವಕೃತೇ ನರಃ |
ಉಪಭುಂಕ್ತೇ ಕ್ವ ವಾ ಕರ್ಮ ವಿದೇಹಸ್ಯೋಪತಿಷ್ಠತಿ ॥4॥

ಜೀವನು ತಾನು ಮಾಡಿದ ಒಳ್ಳೆಯ ಮತ್ತು ಕೆಟ್ಟ ಕರ್ಮಗಳನ್ನು ಹೇಗೆ ಅನುಭವಿಸುತ್ತಾನೆ? ದೇಹವನ್ನು ಬಿಟ್ಟ ಬಳಿಕ ಶರೀರರಹಿತನಾಗಿರುವ ಜೀವನ ಕರ್ಮವು ಎಲ್ಲಿ ಇರುತ್ತದೆ?

ಏವಂ ಸಂಚೋದಿತಃ ಸಿದ್ಧಃ ಪ್ರಶ್ನಾಂಸ್ತಾನ್ ಪ್ರತ್ಯಭಾಷತ |
ಆನುಪೂರ್ವ್ಯೇಣ ವಾರ್ಷ್ಣೇಯ ಯಥಾ ತನ್ಮೇ ವಚಃ ಶೃಣು ॥5॥

ಈ ರೀತಿಯಾಗಿ ಕಾಶ್ಯಪನು ಪ್ರಶ್ನಿಸಿದಾಗ ಸಿದ್ಧಪುರುಷನು ಅವನ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರಿಸಿದನು. ಅದನ್ನೇ ನಿನಗೆ ಹೇಳುತ್ತೇನೆ, ಕೇಳು.

ಸಿದ್ಧಃ

ಅಸ್ಮಿನ್ನೇವಾಶು ಫಲದಾ ಆಯುಷ್ಯಾಸ್ತು ಕ್ರಿಯಾಃ ಸ್ಮೃತಾಃ |
ಆಯುಃಕೃತ್ಯಕರಾಣೀಹ ಯಾನಿ ಕರ್ಮಾಣಿ ಸೇವತೇ॥6॥

ಸಿದ್ಧಪುರುಷ ಆಯುಷ್ಯವನ್ನು ಅಭಿವೃದ್ಧಿ ಮಾಡುವ ಶುಭಕರ್ಮಗಳನ್ನು ಏನು ಆಚರಿಸುತ್ತಾನೋ ಆ ಶುಭಕರ್ಮಗಳು ಇದೇ ಜನ್ಮದಲ್ಲಿಯೇ ಆಯುಷ್ಯವನ್ನು ಅಭಿವೃದ್ಧಿ ಪಡಿಸುವ ಫಲವನ್ನು ಕೊಡುವ ಶುಭಕರ್ಮಗಳೆಂದು ಪ್ರಸಿದ್ಧವಾಗಿವೆ.

ಶರೀರಗ್ರಹಣೇಽನ್ಯಸ್ಮಿನ್ ತೇಷು ಕ್ಷೀಣೇಷು ಸರ್ವಶಃ |
ಆಯುಃಕ್ಷಯಪರೀತಾತ್ಮಾ ವಿಪರೀತಾನಿ ಸೇವತೇ ॥7॥

ಇಂತಹ ಶುಭಕರ್ಮಗಳಿಂದ ಇನ್ನೊಂದು ಶರೀರವನ್ನು ಪಡೆದುಕೊಳ್ಳುತ್ತಾನೆ. ಆ ಶರೀರದಲ್ಲಿ ಮಾಡಿದ ಶುಭಕರ್ಮಗಳು ಕ್ಷಯ ಹೊಂದಿದಾಗ ಆಯುಷ್ಯವು ಕ್ಷೀಣತೆಯನ್ನು ಹೊಂದುತ್ತದೆ. ಅಂತಹ ಅವಸ್ಥೆಯಲ್ಲಿ ವಿಪರೀತವಾದ ಧರ್ಮ ಅಸಮ್ಮತವಾದ ಕರ್ಮಗಳನ್ನೇ ಜೀವನು ಮಾಡುತ್ತಾನೆ.

ಬುದ್ಧಿರ್ವ್ಯಾವರ್ತತೇ ಚಾಸ್ಯ ವಿನಾಶೇ ಪ್ರತ್ಯುಪಸ್ಥಿತೇ ॥8॥

ವಿನಾಶಕಾಲವು ಸಮೀಪಿಸಿದಾಗ ಜೀವನ ಬುದ್ಧಿಯು ವ್ಯತ್ಯಾಸವನ್ನೇ ಹೊಂದುತ್ತದೆ.

ಸತ್ತ್ವಂ ಬಲಂ ಚ ಕಾಲಂ ಚಾಪ್ಯವಿದಿತ್ವಾಽಽತ್ಮನಸ್ತಥಾ |
ಅತಿವೇಲಮುಪಾಶ್ನಾತಿ ತೈರ್ವಿರುದ್ಧಾನ್ಯನಾತ್ಮವಾನ್ ॥9॥

ವಿನಾಶಕಾಲದಲ್ಲಿ ತನ್ನ ಸತ್ವವನ್ನೂ, ಬಲವನ್ನೂ, ಕಾಲವನ್ನೂ ತಿಳಿದವನಾಗಿದ್ದರೂ ಮನೋನಿಗ್ರಹವನ್ನು ತಿಳಿಯದ ಕಾರಣ ಪ್ರಕೃತಿಗೆ ವಿರುದ್ಧವಾದ ವಿಷಯಗಳನ್ನು ಅಧಿಕವಾಗಿ ಸ್ವೀಕರಿಸುತ್ತಾನೆ.

ಯದಾಽಯಮತಿಕಷ್ಟಾನಿ ಸರ್ವಾಣ್ಯುಪನಿಷೇವತೇ |
ಅತ್ಯರ್ಥಮಪಿ ವಾ ಭುಂಕ್ತೇ ನ ವಾ ಭುಂಕ್ತೇ ಕದಾಚನ ॥10॥

ಮನೋನಿಗ್ರಹವಿಲ್ಲದೆ ಶರೀರಕ್ಕೆ ಹಾನಿಯುಂಟು ಮಾಡುವ ವಿಷಯಗಳನ್ನು ಸೇವಿಸುತ್ತಾನೆ. ಕೆಲವೊಮ್ಮೆ ಅಧಿಕವಾಗಿ ಊಟ ಮಾಡುತ್ತಾನೆ, ಕೆಲವೊಂದು ಸಮಯದಲ್ಲಿ ಏನನ್ನೂ ತಿನ್ನದೆ ಇರುತ್ತಾನೆ.

ದುಷ್ಟಾನ್ನಂ ವಿಷಮಾನ್ನಂ ವಾ ಸಾತ್ಮ್ಯತೇನ ವಿರೋಧಿ ಚ |
ಗುರು ವಾಽಪಿ ಸಮಂ ಭುಂಕ್ತೇ ನಾತಿಜೀರ್ಣೇಽಪಿ ವಾ ಪುನಃ ॥11॥

ಕೆಲವೊಮ್ಮೆ ದೂಷಿತವಾದ ನಿಷಿದ್ಧವಾದ ಅನ್ನ ಉಣ್ಣುವ ಕೆಲವೊಮ್ಮೆ ಹಳಸಿದ ಅನ್ನವನ್ನು ತಿನ್ನುತ್ತಾನೆ. ಕೆಲವೊಮ್ಮೆ ಶಾಸ್ತ್ರವಿರುದ್ಧವಾದ ಅನ್ನವನ್ನು ಉಣ್ಣುತ್ತಾನೆ. ಕೆಲವೊಮ್ಮೆ ಜೀರ್ಣವಾಗದ ಆಹಾರವನ್ನು ಸ್ವೀಕರಿಸುತ್ತಾನೆ. ಕೆಲವೊಮ್ಮೆ ಜೀರ್ಣವಾಗುವ ಮುನ್ನವೇ ಊಟ ಮಾಡುತ್ತಾನೆ.

ವ್ಯಾಯಾಮಮತಿಮಾತ್ರಂ ವಾ ವ್ಯವಾಯಂ ವೋಪಸೇವತೇ |
ಸತತಂ ಕರ್ಮಲೋಭಾದ್ವಾ ಪ್ರಾಪ್ತವೇಗವಿಧಾರಣಮ್ ॥12॥
ತನ್ನ ದೈಹಿಕಸಾಮರ್ಥ್ಯವನ್ನು ಅರಿಯದೆ ಅತಿಯಾದ ವ್ಯಾಯಾಮಗಳನ್ನು ಮಾಡುತ್ತಾನೆ. ಮಿತಿ ಮೀರಿದ ಸ್ತ್ರೀಸಂಗವನ್ನು ಮಾಡುತ್ತಾನೆ. ನಿರಂತರವೂ ಚಟುವಟಿಕೆಯಿಂದಿರಬೇಕೆಂಬ ಏಕಾಗ್ರತೆಯಲ್ಲಿ ಮಲ-ಮೂತ್ರಗಳ ವೇಗವನ್ನು ತಡೆದುಕೊಳ್ಳುತ್ತಾನೆ.
ರಸಾನುಯುಕ್ತಮನ್ನಂ ವಾ ದಿವಾ ಸ್ವಪ್ನಂ ನಿಷೇವತೇ |
ಅಪಕ್ವಾನ್ನಂ ಗತೇ ಕಾಲೇ ಸ್ವಯಂ ದೋಷಾನ್ ಪ್ರಕೋಪಯೇತ್ ॥13॥
ಅತ್ಯಂತ ರಸಭರಿತವಾದ ಅನ್ನವನ್ನು ತಿನ್ನುತ್ತಾನೆ. ಹಗಲೆಲ್ಲ ಮಲಗಿರುತ್ತಾನೆ. ಕಾಲ ಮೀರಿದ ಮೇಲೆ ಪಕ್ವವಾಗದೆ ಇರುವ ಆಹಾರವನ್ನು ತಿಂದು, ಶರೀರದಲ್ಲಿರುವ ವಾತಾದಿ ದೋಷಗಳು ಕೆರಳುವಂತೆ ಮಾಡಿಕೊಳ್ಳುತ್ತಾನೆ.
ಸ್ವದೋಷಕೋಪನಾದ್ ರೋಗಂ ಲಭತೇ ಮರಣಾಂತಿಕಮ್ ॥14॥
ಕೆಟ್ಟ ಆಹಾರಸೇವನೆಯ ಪರಿಣಾಮವಾಗಿ ಕಫ-ವಾತಾದಿಗಳು ಕೆರಳುವಂತೆ ಮಾಡಿ ಮನುಷ್ಯನು ಮಾರಣಾಂತಿಕವಾದ ರೋಗವನ್ನು ಹೊಂದುತ್ತಾನೆ.
ಅಥ ಚೇದ್ಬಂಧನಾದೀನಿ ಪರೀತಾನಿ ವ್ಯವಸ್ಯತಿ |
ತಸ್ಯ ತೈಃ ಕಾರಣೈರ್ಜಂತೋಃ ಶರೀರಾಚ್ಚ್ಯವತೇ ಯಥಾ ॥15॥
ಮಾರಣಾಂತಿಕವಾದ ರೋಗವನ್ನು ಅನುಭವಿಸಲಾಗದೆ ಶಾಸ್ತ್ರವಿರುದ್ಧವಾದ ಮಾರ್ಗವನ್ನಾಶ್ರಯಿಸಿಯಾದರೂ ದೇಹತ್ಯಾಗವನ್ನು ಮಾಡಿಕೊಳ್ಳುತ್ತಾನೆ. ಇಂತಹ ಅನೇಕ ಕಾರಣಗಳಿಂದ ಜೀವನ ಶರೀರವು ನಾಶವನ್ನು ಹೊಂದುತ್ತದೆ.
ಜೀವಿತಂ ಪ್ರೋಚ್ಯಮಾನಂ ತದ್ ಯಥಾವದುಪಧಾರಯ ॥16॥
ಹೀಗೆ ಜೀವನ ಜೀವಿತ ಎಂದು ಯಾವುದು ಹೇಳಲ್ಪಟ್ಟಿರುವುದೋ ಅದನ್ನು ತಿಳಿದುಕೊ.
ಊಷ್ಮಾ ಪ್ರಕುಪಿತಃ ಕಾಯೇ ತೀವ್ರವಾಯುಸಮೀರಿತಃ |
ಶರೀರಮನುಪರ್ಯೇತ್ಯ ಸರ್ವಾನ್ ಪ್ರಾಣಾನ್ ರುಣದ್ಧಿ ಚ ॥17॥
ಶರೀರದಲ್ಲಿ ತೀಕ್ಷ್ಣವಾದ ವಾಯುವಿನಿಂದ ಪ್ರೇರಿತವಾಗಿ ಪಿತ್ತವು ಕೆರಳುತ್ತದೆ. ಅಂತಹ ಪಿತ್ತವು ಶರೀರವನ್ನೆಲ್ಲ ವ್ಯಾಪಿಸಿ, ಪ್ರಾಣಿಗಳ ಸಹಜವಾದ ಕ್ರಿಯೆಗಳನ್ನು ತಡೆಯುತ್ತದೆ.
ಅತ್ಯರ್ಥಂ ಬಲವಾನೂಷ್ಮಾ ಶರೀರೇ ಪರಿಕೋಪಿತಃ |
ಭಿನತ್ತಿ ಜೀವಸ್ಥಾನಾನಿ ತಾನಿ ಮರ್ಮಾಣಿ ವಿದ್ಧಿ ಚ ॥18॥
ಈ ಶರೀರದಲ್ಲಿ ಅತ್ಯಂತ ಪ್ರಬಲವಾದ ಪಿತ್ತದ ಪ್ರಕೋಪದಿಂದ ಜೀವನ ಮರ್ಮಸ್ಥಳಗಳೇ ಸೀಳಿ ಹೋಗುತ್ತವೆ. ಈ ವಿಷಯವನ್ನು ಯಥಾರ್ಥವಾಗಿ ತಿಳಿದುಕೊ.
ತತಃ ಸವೇದನಃ ಸದ್ಯೋ ಜೀವಃ ಪ್ರಚ್ಯವತೇ ಕ್ಷರನ್ |
ಶರೀರಂ ತ್ಯಜತೇ ಜಂತುಶ್ಛಿದ್ಯಮಾನೇಷು ಮರ್ಮಸು ॥19॥
ವೇದನಾಭಿಃ ಪರೀತಾತ್ಮಾ ತದ್ವಿದ್ಧಿ ದ್ವಿಜಸತ್ತಮ ॥20॥
ಬ್ರಾಹ್ಮಣನೇ, ಪ್ರಕೋಪ ಹೊಂದಿದ ಪಿತ್ತದಿಂದ ಜೀವನ ಮರ್ಮಸ್ಥಾನಗಳು ಛಿನ್ನ-ಭಿನ್ನವಾದ ಬಳಿಕ ವೇದನೆಯನ್ನು ತಡೆಯಲಾರದ ಜೀವವು ಈ ಶರೀರದಿಂದ ಹೊರಟು ದೇಹವನ್ನು ಸಂಪೂರ್ಣವಾಗಿ ತ್ಯಜಿಸುತ್ತದೆ.
ಜನೀಮರಣಸಂವಿಗ್ನಾನ್ ಸತತಂ ಸರ್ವಜಂತವಃ |
ದೃಶ್ಯಂತೇ ಸಂತ್ಯಜಂತಶ್ಚ ಶರೀರಾಣಿ ದ್ವಿಜರ್ಷಭ ॥21॥
ಗರ್ಭಸಂಕ್ರಮಣೇ ಚಾಪಿ ಗರ್ಭಾಣಾಮಪಸರ್ಪಣೇ |
ತಾದೃಶೀಮೇವ ಲಭತೇ ವೇದನಾಂ ಮಾನವಃ ಪುನಃ ॥22॥
ಭಿನ್ನಸಂಧಿರಥ ಕ್ಲೇದಮದ್ಭಿಃ ಸ ಲಭತೇ ನರಃ ॥23॥
ಹೀಗೆ ಜನನ-ಮರಣಗಳ ದುಃಖದಿಂದ ಎಲ್ಲ ಜಂತುಗಳು ಉದ್ವಿಗ್ನವಾಗಿರುತ್ತವೆ. ಎಲ್ಲ ಜೀವರು ಶರೀರವನ್ನು ಬಿಟ್ಟು ಹೋಗುವಾಗ, ಗರ್ಭದಿಂದ ಹೊರಗೆ ಬರುವಾಗಲೂ ಉಲ್ಬಣವಾದ ವೇದನೆಯನ್ನು ಅನುಭವಿಸಿಯೇ ತೀರುತ್ತಾರೆ. ಈ ವೇದನೆಯು ಯೋಗಿಗಳಿಗೂ ಬಿಟ್ಟಿದ್ದಲ್ಲ. ಹೀಗಿರಲು ಮಾನವರ ಅವಸ್ಥೆಯನ್ನು ಹೇಳುವುದೇನು? ಮರಣಕಾಲದಲ್ಲಿ ಶರೀರದಲ್ಲಿರುವ ಸಂಧಿಗಳೆಲ್ಲ ಒಡೆದು ಹೋಗುತ್ತಿರಲು ವೇದನೆ ಉಂಟಾಗುತ್ತದೆ. ಉತ್ಪತ್ತಿಯ ಸಮಯದಲ್ಲಿ ಗರ್ಭಸ್ಥವಾದ ನೀರಿನಿಂದ ಉಪದ್ರವ ಹೊಂದುತ್ತಾನೆ.
ಅಥ ಪಂಚಸು ಭೂತೇಷು ಸಂಶ್ರಿತತ್ವಂ ನಿಗಚ್ಛತಿ |
ಶ್ಲೇಷ್ಮಾ ಪ್ರಕುಪಿತಃ ಕಾಯೇ ತೀವ್ರವಾಯುಸಮೀರಿತಃ ॥24॥
ಜೀವನು ಪಂಚಭೂತಗಳಲ್ಲಿ ಸೇರಿದ್ದಾನೆ. ತೀವ್ರವಾದ ವಾಯುವಿನಿಂದ ಪ್ರೇರಿತನಾಗಿ ದೇಹದಲ್ಲಿ ಶ್ಲೇಷ್ಮವು ಪ್ರಕುಪಿತವಾದಾಗ ಜೀವನು ಪಂಚಭೂತಗಳಲ್ಲಿ ಸೇರಿಹೋಗುತ್ತಾನೆ.
ಯಸ್ಯ ಪಂಚಸು ಭೂತೇಷು ಪ್ರಾಣಾಪಾನೌ ವ್ಯವಸ್ಥಿತೌ |
ಸ ಗಚ್ಛತ್ಯೂರ್ಧ್ವಗೋ ವಾಯುಃ ಕೃಚ್ಛ್ರಾನ್ಮುಕ್ತ್ವಾ ಶರೀರಿಣಮ್ ॥25॥
ಶರೀರಂ ಚ ಜಹಾತ್ಯೇವ ನಿರುಚ್ಛ್ವಾಸಶ್ಚ ದೃಶ್ಯತೇ ॥26॥
ಈ ಪಂಚಭೂತದ ದೇಹದಲ್ಲಿ ಪ್ರಾಣ, ಅಪಾನ, ವಾಯುಗಳ ಸಂಚಾರವಿದೆ. ಪ್ರಾಣವಾಯುವು ಜೀವನನ್ನು ಬಹಳ ಕಷ್ಟದಿಂದ ಪರಿತ್ಯಜಿಸಿ ಮೇಲಕ್ಕೆ ಹೊರಟು ಹೋಗುತ್ತದೆ. ಜೀವವು ಶರೀರವನ್ನು ಬಿಟ್ಟ ಬಳಿಕ ಆ ಶರೀರವು ಶ್ವಾಸೋಚ್ಛ್ವಾಸ ರಹಿತವಾಗುತ್ತದೆ.
ಸ ನಿರೂಷ್ಮಾ ನಿರುಚ್ಛ್ವಾಸೋ ನಿಃಶ್ರೀಕೋ ಗತಚೇತನಃ |
ಬ್ರಹ್ಮಣಾ ಸಂಪರಿತ್ಯಕ್ತೋ ಮೃತ ಇತ್ಯುಚ್ಯತೇ ನರಃ ॥27॥

ಬಳಿಕ ಆ ಶರೀರವು ಉಷ್ಣತೆಯಿಂದ ಉಚ್ಛ್ವಾಸದಿಂದಲೂ, ಕಾಂತಿಯಿಂದಲೂ, ಜೀವನಿಂದಲೂ ವಿಹೀನವಾಗುತ್ತದೆ. ಭಗವಂತನಿಂದ ಬಿಡಲ್ಪಟ್ಟ ವ್ಯಕ್ತಿಯನ್ನು ಮೃತ ಎಂದು ಕರೆಯುತ್ತಾರೆ.
ಸ್ರೋತೋಭಿರ್ಯೈರ್ವಿಜಾನಾತಿ ತ್ವಿಂದ್ರಿಯಾರ್ಥಾನ್ ಶರೀರಭೃತ್ |
ತೈರೇವ ನಾಭಿಜಾನಾತಿ ಪ್ರಾಣಮಾಹಾರಸಂಭವಮ್ ॥28॥
ತತ್ರೈವ ಕುರುತೇ ಕಾಯೇ ಯಃ ಸ ಜೀವನ್ ಸನಾತನಃ ॥29॥
ದೇಹವನ್ನು ಧರಿಸಿದ ಜೀವನು ಇಂದ್ರಿಯಗಳ ಮೂಲಕ ರೂಪ, ರಸ, ಗಂಧ ಮೊದಲಾದ ವಿಷಯಗಳನ್ನು ಅನುಭವಿಸುತ್ತಾನೆ. ಪುನಃ ಅದೇ ಇಂದ್ರಿಯದ ಮೂಲಕ ಆಹಾರವನ್ನು ಸೇವಿಸಿ ಪುಷ್ಟಿಯನ್ನು ಹೊಂದುವ ಪ್ರಾಣಗಳನ್ನು ಜೀವನು ತಿಳಿದಿರುವುದಿಲ್ಲ. ಅಂತಹ ಶರೀರದಲ್ಲೇ ಇದ್ದುಕೊಂಡು ಕರ್ಮಗಳನ್ನು ಮಾಡುತ್ತಾ ಇರುವವನೇ ಸನಾತನನಾದ ಜೀವ ಎನಿಸಿದ್ದಾನೆ.
ತೇಷಾಂ ಯದ್ಯದ್ ಭವೇದ್ಯುಕ್ತಂ ಸನ್ನಿಪಾತೇ ಕ್ವಚಿತ್ ಕ್ವಚಿತ್ |
ತತ್ತನ್ಮರ್ಮ ವಿಜಾನೀಹಿ ಶಾಸ್ತ್ರದೃಷ್ಟಂ ಹಿ ತತ್ ತಥಾ ॥30॥
ಜೀವನ ಸಂಧಿಸ್ಥಾನಗಳಲ್ಲಿ ಯಾವ ಯಾವ ಅಂಗಗಳು ಸೇರಿವೆಯೋ ಆ ಅಂಗಗಳ ಸಂಧಿಸ್ಥಾನವನ್ನು ಮರ್ಮಸ್ಥಾನಗಳೆಂದು ತಿಳಿ. ಮರ್ಮಸ್ಥಾನಗಳ ಲಕ್ಷಣಗಳು ಶಾಸ್ತ್ರಗಳಲ್ಲಿ ಕಂಡುಬರುತ್ತವೆ.
ತೇಷು ಮರ್ಮಸು ಭಿನ್ನೇಷು ತತಃ ಸ ಸಮುದೀರಯನ್ |
ಆವಿಶ್ಯ ಹೃದಯಂ ಜಂತೋಃ ಸತ್ತ್ವಂ ಚಾಶು ರುಣದ್ಧಿ ವೈ ॥31॥
ಆ ಮರ್ಮಸ್ಥಾನಗಳು ಭಿನ್ನವಾದ ಬಳಿಕ ದೇಹಸ್ಥ ವಾಯುವು ಊರ್ಧ್ವಗಮನವನ್ನು ಹೊಂದುತ್ತಾ, ಜೀವನ ಹೃದಯವನ್ನು ಪ್ರವೇಶಿಸಿ ಕೂಡಲೇ ಆ ಜೀವನ ಬುದ್ಧಿಯನ್ನು ತಡೆದುಬಿಡುತ್ತದೆ.
ತತಃ ಸಚೇತನೋ ಧಾತುಂ ನಾಭಿಜಾನಾತಿ ಕಿಂಚನ ॥32॥
ತಮಸಾ ಸಂವೃತಜ್ಞಾನಂ ಸಂವೃತೇಷ್ವಥ ಮರ್ಮಸು |
ಸ ಜೀವೋ ನಿರಧಿಷ್ಠಾನಶ್ಚಾಲ್ಯತೇ ಮಾತರಿಶ್ವನಾ ॥33॥
ನಂತರ ಅಂತ್ಯಕಾಲವು ಸನ್ನಿಹಿತವಾದಾಗ ಈ ಶರೀರದಲ್ಲಿ ಚೇತನ ಇದ್ದರೂ ಆ ಜೀವನಿಗೆ ಯಾವ ಸಮಯದಲ್ಲೂ ಇರುವುದಿಲ್ಲ. ಅಜ್ಞಾನದಿಂದ ಅವನ ಜ್ಞಾನಶಕ್ತಿಯು ಮುಚ್ಚಿಹೋಗಿರುತ್ತದೆ. ಅಂತಹ ಅವಸ್ಥೆಯಲ್ಲಿ ಶರೀರದಿಂದ ಹೊರಬರುವ ಜೀವನು ಆಶ್ರಯವನ್ನು ಪಡೆಯದೆ ಮುಖ್ಯಪ್ರಾಣನ ಮೂಲಕ ಮೇಲೆ ಒಯ್ಯಲ್ಪಡುತ್ತಾನೆ.
ತತಃ ಸ ತಂ ಮಹೋಚ್ಛ್ವಾಸಂ ಭೃಶಮುಚ್ಛ್ವಸ್ಯ ದಾರುಣಮ್ |
ನಿಷ್ಕ್ರಾಮನ್ ಕಂಪಯತ್ಯಾಶು ತಚ್ಛರೀರಮಚೇತನಮ್ ॥34॥
ಪ್ರಾಣೋತ್ಕ್ರಮಣ ಸಮಯದಲ್ಲಿ ಜೀವನು ಭಯಂಕರವಾದ ಉಚ್ಛ್ವಾಸವನ್ನು ಬಿಡುತ್ತಾನೆ. ಉಚ್ಛ್ವಾಸವನ್ನು ಬಿಡುತ್ತಲೆ ದೇಹದಿಂದ ಹೊರಬರುತ್ತಿರುತ್ತಾನೆ. ಚೇತನ ರಹಿತವಾದ ಜಡ ಶರೀರವನ್ನು ಭಯಂಕರವಾದ ವಾಯುವು ಅಲ್ಲಾಡಿಸಿಬಿಡುತ್ತದೆ.
ಸ ಜೀವಃ ಪ್ರಚ್ಯುತಃ ಕಾಯಾತ್ ಕರ್ಮಭಿಃ ಸ್ವೈಃ ಸಮಾವೃತಃ |
ಅಭಿತಃ ಸ್ವೈಃ ಶುಭೈಃ ಪುಣ್ಯೈಃ ಪಾಪೈರ್ವಾಽಪ್ಯುಪಪದ್ಯತೇ ॥35॥
ಶರೀರದಿಂದ ಜೀವನು ಹೊರಬಂದ ಬಳಿಕ ಶರೀರವನ್ನು ಬಿಟ್ಟರೂ ಆ ಶರೀರದಲ್ಲಿ ತಾನು ಮಾಡಿದ ಕರ್ಮಗಳಿಂದ ಜೀವನು ಆವೃತನಾಗುತ್ತಾನೆ. ಯಾವಾಗಲೂ ಜೀವನು ಪುಣ್ಯಕರ್ಮಗಳಿಂದಲೂ ಪಾಪಕರ್ಮಗಳಿಂದಲೂ ಕೂಡಿಕೊಂಡೇ ಇರುತ್ತಾನೆ.
ಬ್ರಾಹ್ಮಣಾ ಜ್ಞಾನಸಂಪನ್ನಾ ಯಥಾವಚ್ಛ್ರುತನಿಶ್ಚಯಾಃ |
ಇತರಂ ಕೃತಪುಣ್ಯಂ ವಾ ತಂ ವಿಜಾನಂತಿ ಲಕ್ಷಣೈಃ ॥36॥
ಯಾವ ಜೀವನು ವೇದ-ಶಾಸ್ತ್ರಗಳ ಸಿದ್ಧಾಂತವನ್ನು ಯಥಾವತ್ತಾಗಿ ಅಧ್ಯಯನ ಮಾಡಿ ಜ್ಞಾನಸಂಪನ್ನನಾಗಿರುತ್ತಾನೋ ಅಂತಹವನು ಪ್ರಾಣೋತ್ಕ್ರಮಣ ಕಾಲದ ಲಕ್ಷಣವನ್ನು ಪುಣ್ಯಜೀವನು ಯಾರು, ಪಾಪ ಜೀವನು ಯಾರು ಎಂಬುದನ್ನು ತಿಳಿದುಕೊಳ್ಳುತ್ತಾನೆ.
ಯಥಾಽಂಧಕಾರೇ ಖದ್ಯೋತಂ ದೀಪ್ಯಮಾನಂ ತತಸ್ತತಃ |
ಚಕ್ಷುಷ್ಮಂತಃ ಪ್ರಪಶ್ಯಂತಿ ತಥಾ ತಂ ಜ್ಞಾನಚಕ್ಷುಷಃ ॥37॥
ಪಶ್ಯಂತ್ಯೇವಂವಿಧಾಃ ಸಿದ್ಧಾ ಜೀವಂ ದಿವ್ಯೇನ ಚಕ್ಷುಷಾ |
ಕ್ಷರಂತಂ ಜಾಯಮಾನಂ ಚ ಯೋನಿಂ ಚಾನುಪ್ರವೇಶಿತಮ್ ॥38॥
ಯಾವ ರೀತಿಯಲ್ಲಿ ಕಣ್ಣನ್ನು ಹೊಂದಿರುವ ಮನುಷ್ಯನು ಕತ್ತಲು ಕವಿದಿರುವಾಗ ಆ ಕತ್ತಲಿನಲ್ಲಿ ಸಂಚರಿಸುವ ಮಿಣುಕು ಹುಳವನ್ನು ನೋಡುತ್ತಾನೋ ಅದೇ ರೀತಿ ಜ್ಞಾನ ದೃಷ್ಟಿಯನ್ನು ಹೊಂದಿರುವ ಸಿದ್ಧರು ತಮ್ಮ ದಿವ್ಯದೃಷ್ಟಿಯಿಂದ ಶರೀರದಿಂದ ಹೊರಬರುವ, ಶರೀದ ಒಳಗೆ ಪ್ರವೇಶಿಸುವ ಜೀವರನ್ನು ತಿಳಿದುಕೊಳ್ಳುತ್ತಾರೆ.
ತಸ್ಯ ಸ್ಥಾನಾನಿ ದೃಷ್ಟಾನಿ ವಿವಿಧಾನೀಹ ಶಾಸ್ತ್ರತಃ |
ಕರ್ಮಭೂಮಿರಿಯಂ ಭೂಮಿಃ ಯತ್ರ ತಿಷ್ಠಂತಿ ಜಂತವಃ ॥39॥
ಶಾಸ್ತ್ರದಲ್ಲಿ ಹೇಳಿದಂತೆ ಜೀವರಿಗೆ ಸ್ವರ್ಗಲೋಕ, ಮನುಷ್ಯಲೋಕ, ನರಕಲೋಕ- ಗಳೆಂಬ ಮೂರು ಸ್ಥಾನಗಳಿವೆ. ಎಲ್ಲ ಪ್ರಾಣಿಗಳಿಗೂ ವಾಸಸ್ಥಾನವಾಗಿರುವ ಈ ಲೋಕವನ್ನು ಕರ್ಮಭೂಮಿ ಎಂದು ಕರೆಯುತ್ತಾರೆ.
ಇತಃ ಶುಭಾಶುಭಂ ಕೃತ್ವಾ ಲಭಂತೇ ಕರ್ಮ ದೇಹಿನಃ |
ಇಹೈವೋಚ್ಚಾವಚಾನ್ ಭೋಗಾನ್ ಪ್ರಾಪ್ನುವಂತಿ ಸ್ವಕರ್ಮಭಿಃ ॥40॥
ಈ ಕರ್ಮಭೂಮಿಯಿಂದ ಶುಭಾಶುಭ ಕರ್ಮಗಳನ್ನು ಆಚರಿಸಿ, ಆ ಕರ್ಮಕ್ಕೆ ಅನುಗುಣವಾಗಿ ದೇಹಗಳನ್ನು,
ಸುಖ-ದುಃಖಭೋಗಗಳನ್ನು ಅನುಭವಿಸುತ್ತಾರೆ.
ಇಹೈವಾಶುಭಕರ್ಮಾ ತು ಕರ್ಮಭಿರ್ನಿರಯಂ ಗತಃ |

ಅವಾಕ್ ಸ ನಿರಯೇ ಪಾಪೋ ಮಾನವಃ ಪಾತ್ಯತೇ ಭೃಶಮ್ ॥41॥
ತಸ್ಮಾತ್ ಸುದುರ್ಲಭೋ ಮೋಕ್ಷ ಆತ್ಮಾ ರಕ್ಷ್ಯೋ ಭೃಶಂ ತತಃ ॥42॥
ಇಲ್ಲಿ ಪಾಪಕರ್ಮವನ್ನು ಮಾಡುವ ಮನುಷ್ಯರು ಆ ಪಾಪಕರ್ಮಗಳಿಗೆ ಅನುಸಾರವಾಗಿ ನರಕಕ್ಕೆ ಹೋಗುತ್ತಾರೆ. ಪಾಪಕರ್ಮದಿಂದ ಲಭಿಸುವ ಅಧೋಗತಿಯ ನಿಲಯವು ಅತ್ಯಂತ ಕ್ಲೇಶದಾಯಕವಾದುದು. ಪಾಪಿಷ್ಠನಾದ ಮನುಷ್ಯನನ್ನು ನರಕದಲ್ಲಿ ಉಗ್ರವಾಗಿ ಶಿಕ್ಷಿಸುತ್ತಾರೆ. ಆದ್ದರಿಂದ ಈ ನರಕದಿಂದ ಬಿಡುಗಡೆಯನ್ನು ಹೊಂದುವುದು ಬಹಳ ಕಷ್ಟಸಾಧ್ಯವು. ಈ ನರಕಕ್ಕೆ ಹೋಗದಂತೆ ತನ್ನನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸಿಕೊಳ್ಳಬೇಕು.
ಊರ್ಧ್ವಂ ತು ಜಂತವೋ ಗತ್ವಾ ಯೇಷು ಸ್ಥಾನೇಷ್ವವಸ್ಥಿತಾಃ |
ಕೀರ್ತ್ಯಮಾನಾನಿ ತಾನೀಹ ತತ್ತ್ವತಃ ಸನ್ನಿಬೋಧ ಮೇ ॥43॥
ತಚ್ಛ್ರುತ್ವಾ ನೈಷ್ಠಿಕೀಂ ಬುದ್ಧಿಂ ಬುಧ್ಯೇಥಾಃ ಕರ್ಮನಿಶ್ಚಯಾತ್ ॥44॥
ಸ್ವರ್ಗಲೋಕವೇ ಮೊದಲಾದ ಊರ್ಧ್ವಲೋಕಗಳಿಗೆ ಹೋಗುವ ಜೀವರು ಯಾವ ಯಾವ ಸ್ಥಾನಗಳಲ್ಲಿ ಇರುತ್ತಾರೆ ಎಂಬುದನ್ನು ಯಥಾವತ್ತಾಗಿ ನಿರೂಪಿಸಿದ್ದೇನೆ. ಏಕಾಗ್ರತೆಯಿಂದ ಈ ವಿಷಯವನ್ನು ತಿಳಿದುಕೊ. ಈ ವಿಷಯವನ್ನು ಕೇಳುವುದರಿಂದ ಕರ್ಮಗಳ ನಿಶ್ಚಯ ಗತಿಯನ್ನು ತಿಳಿದುಕೊಳ್ಳುತ್ತಿ.
ತಾರಾರೂಪಾಣಿ ಸರ್ವಾಣಿ ಯತ್ರೈತಚ್ಚಂದ್ರಮಂಡಲಮ್ |
ಯಚ್ಚ ವಿಭ್ರಾಜತೇ ಲೋಕೇ ಸ್ವಭಾಸಾ ಸೂರ್ಯಮಂಡಲಮ್ ॥45॥
ಸ್ಥಾನಾನ್ಯೇತಾನಿ ಜಾನೀಹಿ ನರಾಣಾಂ ಪುಣ್ಯಕರ್ಮಣಾಮ್ ॥46॥
ಯಾವ ಅಂತರಿಕ್ಷ ಲೋಕದಲ್ಲಿ ಎಲ್ಲ ನಕ್ಷತ್ರಗಳೂ, ಚಂದ್ರಮಂಡಲವೂ ಪ್ರಕಾಶಿಸುತ್ತಿವೆಯೋ, ಎಲ್ಲಿ ಸೂರ್ಯಮಂಡಲವು ತನ್ನ ಪ್ರಭೆಯಿಂದ ವಿಶೇಷವಾಗಿ ಪ್ರಕಾಶಿಸುತ್ತಿರುವುದೋ ಆ ಎಲ್ಲ ಸ್ಥಾನಗಳು ಪುಣ್ಯಕರ್ಮಿಗಳಿಗೆ ಲಭಿಸುವ ಸ್ಥಾನಗಳು. ಪುಣ್ಯಾತ್ಮರಾದ ಮನುಷ್ಯರು ಅಂತಹ ಪುಣ್ಯಲೋಕಗಳಿಗೆ ಹೋಗಿ ಸತ್ಫಲವನ್ನು ಅನುಭವಿಸುತ್ತಾರೆಂದು ತಿಳಿ.
ಕರ್ಮಕ್ಷಯಾಚ್ಚ ತೇಭ್ಯೋ ಹಿ ಚ್ಯವಂತೇ ವೈ ಪುನಃ ಪುನಃ |
ತತ್ರಾಪಿ ಚ ವಿಶೇಷೋಽಸ್ತಿ ದಿವಿ ನೀಚೋಚ್ಚಮಧ್ಯಮಃ ॥47॥
ಪುಣ್ಯಜೀವಿಗಳ ಪುಣ್ಯಫಲವು ಮುಗಿದ ಕೂಡಲೆ ಅವರು ಆ ಲೋಕದಿಂದ ಕ್ರಮವಾಗಿ ಕೆಳಗಿನ ಲೋಕಗಳಲ್ಲಿ ಇಳಿದು ಬರುತ್ತಾರೆ. ಪುನಃ ಇಲ್ಲಿ ಕರ್ಮಗಳನ್ನು ಮಾಡಿ ಪುನಃ ಊರ್ಧ್ವಲೋಕಗಳಿಗೆ ಹೋಗುತ್ತಾರೆ. ಈ ಗಮನಾಗಮನಗಳು ನಿರಂತರ ನಡೆಯುತ್ತಲೇ ಇರುತ್ತವೆ. ಸ್ವರ್ಗದಲ್ಲಿಯೂ ಸ್ಥಾನಗಳಲ್ಲಿ ತಾರತಮ್ಯವಿದೆ. ಅವರವರ ಸತ್ಕರ್ಮಕ್ಕೆ ಅನುಗುಣವಾಗಿ ಉತ್ತಮ, ಮಧ್ಯಮ, ನೀಚ ಎಂಬ ಸ್ಥಾನಗಳು ಅಲ್ಲಿಯೂ ದೊರೆಯುತ್ತವೆ.
ನ ತತ್ರಾಪ್ಯಸ್ತಿ ಸಂತೋಷೋ ದೃಷ್ಟ್ವಾ ದೀಪ್ತಾಂ ಪರಶ್ರಿಯಮ್ |
ಇತ್ಯೇತಾ ಗತಯಃ ಸರ್ವಾಃ ಪೃಥಕ್ ತೇ ಸಮುದೀರಿತಾಃ ॥48॥
ಸ್ವರ್ಗಲೋಕಕ್ಕೆ ಹೋದರೂ ಉತ್ತರಲ್ಲಿರುವ ಐಶ್ವರ್ಯವನ್ನು ನೋಡಿದಾಗ ಜೀವನಿಗೆ ಸಂತೋಷವುಂಟಾಗುವುದಿಲ್ಲ. ತನಗಿಲ್ಲ ಎಂಬ ದುಃಖ ಅಲ್ಲಿಯೂ ಉಂಟಾಗುತ್ತದೆ. ಈ ರೀತಿಯಾದ ಎಲ್ಲ ವಿಧವಾದ ಗತಿಗಳು ಪ್ರತ್ಯೇಕವಾಗಿ ನಿನಗೆ ಹೇಳಲ್ಪಟ್ಟಿವೆ.
ಉಪಪತ್ತಿಂ ತು ಗರ್ಭಸ್ಯ ವಕ್ಷ್ಯಾಮ್ಯಹಮತಃಪರಮ್ |
ಯಥಾವತ್ ತಾಂ ನಿಗದತಃ ಶೃಣುಷ್ವಾವಹಿತೋ ದ್ವಿಜ ॥49॥
ಬ್ರಾಹ್ಮಣಶ್ರೇಷ್ಠನೇ, ಇನ್ನು ಮುಂದೆ ಜೀವನು ಯಾವ ಕ್ರಮದಲ್ಲಿ ಗರ್ಭವನ್ನು ಪ್ರವೇಶಿಸುತ್ತಾನೆ, ಉತ್ಪತ್ತಿಯನ್ನು ಪಡೆಯುತ್ತಾನೆ ಎಂದು ಹೇಳುತ್ತೇನೆ. ಏಕಾಗ್ರ ಬುದ್ಧಿಯಿಂದ ಕೇಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಗತಿಪ್ರಕಾರಕಥನಂ ನಾಮ ಸಪ್ತದಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹದಿನೇಳನೆಯ
ಅಧ್ಯಾಯ ಮುಗಿಯಿತು.
* * * * *
ಹದಿನೆಂಟನೆಯ ಅಧ್ಯಾಯ
ಬ್ರಾಹ್ಮಣನು ಕೃಷ್ಣನನ್ನು ಕುರಿತು ಜೀವನ ಗರ್ಭಪ್ರವೇಶ, ಕರ್ಮಫಲದ ಅನಿವಾರ್ಯತೆ, ಸಂಸಾರ ದಾಟುವ ಉಪಾಯಗಳನ್ನು ಕಾಶ್ಯಪ-ಸಿದ್ಧಪುರುಷರ ಸಂವಾದದ ಉಲ್ಲೇಖದ ಮೂಲಕ ತಿಳಿಸಿದುದು.
ಬ್ರಾಹ್ಮಣಃ
ಶುಭಾನಾಮಶುಭಾನಾಂ ಚ ನೇಹ ನಾಶೋಽಸ್ತಿ ಕರ್ಮಣಾಮ್ |
ಪ್ರಾಪ್ಯ ಪ್ರಾಪ್ಯ ತು ಪಚ್ಯಂತೇ ಕ್ಷೇತ್ರಂ ಕ್ಷೇತ್ರಂ ತಥಾ ತಥಾ ॥1॥
ಬ್ರಾಹ್ಮಣ ಕಾಶ್ಯಪನೇ, ಲೋಕದಲ್ಲಿ ಜೀವರು ಮಾಡುವ ಪುಣ್ಯಪಾಪಗಳ ಫಲಗಳನ್ನು ಅವರು ಅನುಭವಿಸಿಯೇ ತೀರಬೇಕು. ಅನುಭವಿಸದೆ ಆ ಕರ್ಮಗಳು ನಾಶ ಹೊಂದುವುದಿಲ್ಲ. ಆ ಕರ್ಮಗಳ ಫಲವಾಗಿಯೇ ಜೀವನು ಅನೇಕ ಯೋನಿಗಳಲ್ಲಿ ಹುಟ್ಟುತ್ತಲೇ ಇರುತ್ತಾನೆ. ಪ್ರತಿ ಯೋನಿಗಳಲ್ಲಿಯೂ ಕರ್ಮದ ಫಲಗಳನ್ನು ಅನುಭವಿಸುತ್ತಲೇ ಇರುತ್ತಾನೆ.
ಯಥಾ ಪ್ರಸೂಯಮಾನಸ್ತು ಸಮಾದದ್ಯಾತ್ ಫಲಂ ಬಹು |
ತಥಾ ಸ್ಯಾದ್ ವಿಪುಲಂ ಪುಣ್ಯಂ ಶುದ್ಧೇನ ಮನಸಾ ಕೃತಮ್ ॥2॥
ಯಾವ ರೀತಿಯಾಗಿ ಫಲಗಳನ್ನು ಕೊಡುವ ಮರವು ಫಲ ನೀಡುವ ಸಂದರ್ಭದಲ್ಲಿ ಸಾವಿರಾರು ಫಲಗಳನ್ನು ಏಕಕಾಲದಲ್ಲಿಯೇ

ನೀಡುತ್ತದೋ ಅದರಂತೆ ಶುದ್ಧವಾದ ಮನಸ್ಸಿನಿಂದ ಮಾಡಿದ ಪುಣ್ಯಕಾರ್ಯವು ಫಲಿಸುವ ಕಾಲವು ಒದಗಿ ಬಂದಾಗ ನಿರೀಕ್ಷೆಯನ್ನೂ ಮೀರಿ ಅತ್ಯಧಿಕವಾದ ಫಲವನ್ನೇ ನೀಡುತ್ತದೆ.
ಪಾಪಂ ಚಾಪಿ ತಥೈವ ಸ್ಯಾತ್ ಪಾಪೇನ ಮನಸಾ ಕೃತಮ್ |
ಪುರೋಧಾಯ ಮನೋ ಹೀಹ ಕರ್ಮಣ್ಯಾತ್ಮಾ ಪ್ರವರ್ತತೇ ॥3॥
ಅದರಂತೆ ಕಲುಷಿತವಾದ ಮನಸ್ಸಿನಿಂದ ಮಾಡಿದ ಪಾಪಕರ್ಮವು ಫಲಿಸುವ ಕಾಲ ಒದಗಿಬಂದಾಗ ನಿರೀಕ್ಷೆಗೂ ಮೀರಿದ ಅಧಿಕವಾದ ಪಾಪಫಲವನ್ನೇ ನೀಡುತ್ತದೆ. ಆದ್ದರಿಂದ ಪ್ರತಿಯೊಬ್ಬ ಜೀವನು ಮನಸ್ಸನ್ನು ಮುಂದೆ ಮಾಡಿಕೊಂಡೇ ಶುಭಾಶುಭ ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ.
ಯಥಾ ಕರ್ಮಸಮಾವಿಷ್ಟಃ ಕಾಮಮನ್ಯುಸಮಾವೃತಃ |
ನರೋ ಗರ್ಭಂ ಪ್ರವಿಶತಿ ತತ್ರಾಪಿ ಶೃಣು ಚೋತ್ತರಮ್ ॥4॥
ಜೀವನು ಅನಾದಿಯಾದ ಕಾಮ, ಕ್ರೋಧಗಳಿಗೆ ತುತ್ತಾಗಿ, ಕರ್ಮವೆಂಬ ಬಲೆಯಲ್ಲಿ ಬಂಧಿತನಾಗಿ, ಆ ಕರ್ಮಕ್ಕನುಗುಣವಾದ ಯೋನಿಯಲ್ಲಿ ಹೇಗೆ ಪ್ರವೇಶಿಸುತ್ತಾನೆ ಎಂಬುದನ್ನು ಹೇಳುತ್ತೇನೆ, ಕೇಳು.
ಶುಕ್ರಂ ಶೋಣಿತಸಂಯುಕ್ತಂ ಸ್ತ್ರಿಯಾ ಗರ್ಭಾಶಯಂ ಗತಮ್ |
ಕ್ಷೇತ್ರಧರ್ಮಮವಾಪ್ನೋತಿ ಶುಭಂ ವಾ ಯದಿ ವಾಽಶುಭಮ್ ॥5॥
ಜೀವನು ಪುರುಷನ ವೀರ್ಯದ ಮೂಲಕ ಸ್ತ್ರೀಯ ರಜಸ್ಸಿನ ಜೊತೆಗೆ ಬೆರೆತು ಆಕೆಯ ಗರ್ಭವನ್ನು ಸೇರುತ್ತಾನೆ. ಗರ್ಭಾಶಯವನ್ನು ಸೇರಿದ ಜೀವನು ಪಡೆಯುವ ಕ್ಷೇತ್ರವು ಶ್ರೇಷ್ಠವೂ ಆಗಿರಬಹುದು, ನೀಚವೂ ಆಗಿರಬಹುದು. ಈ ಶುಭಾಶುಭ ಕ್ಷೇತ್ರಗಳು ಕರ್ಮಕ್ಕನುಗುಣವಾಗಿಯೇ ದೊರೆಯುತ್ತವೆ.
ಸೌಕ್ಷ್ಮ್ಯಾದವ್ಯಕ್ತಭಾವಾಚ್ಚ ನ ಸ ಕ್ವಚನ ಸಜ್ಜತಿ |
ಸಂಪ್ರಾಪ್ಯ ಬ್ರಹ್ಮಣಃ ಕಾಯಂ ತಸ್ಮಾತ್ ತದ್ ಬ್ರಹ್ಮ ಶಾಶ್ವತಮ್ ॥6॥
ತದ್ಬೀಜಂ ಸರ್ವಜಂತೂನಾಂ ತೇನ ಜೀವಂತಿ ಜಂತವಃ ॥7॥
ಜೀವನು ತನ್ನ ಜೊತೆಗೆ ಇರುವ ಸೂಕ್ಷ್ಮನಾದ ಅವ್ಯಕ್ತ ಸ್ವಭಾವನಾದ ಪರಮಾತ್ಮನನ್ನು ಅರಿಯುವುದೇ ಇಲ್ಲ. ಅವನು ಕೊಟ್ಟಿರುವ ಶರೀರವನ್ನು ಅವನ ದೆಸೆಯಿಂದಲೇ ಹೊಂದಿದ್ದರೂ ಆ ಗುಣಪರಿಪೂರ್ಣವಾದ ವಸ್ತುವನ್ನು ಅರಿಯದೆ ಆ ಶರೀರವನ್ನು ಪ್ರವೇಶಿಸುತ್ತಾನೆ. ಎಲ್ಲ ಜೀವರಾಶಿಗಳಿಗೂ ಗುಣಪರಿಪೂರ್ಣವಾದ ವಸ್ತುವೇ ಕಾರಣವಾಗಿದೆ. ಆ ಭಗವಂತನಿಂದಲೇ ಎಲ್ಲ ಜೀವರೂ ಜೀವಿಸುತ್ತಿದ್ದಾರೆ.
ಸ ಜೀವಃ ಸರ್ವಜಂತೂನಾಂ ಗರ್ಭಮಾವಿಶ್ಯ ಭಾಗಶಃ |
ಸ ಯಾತಿ ತೇಜಸಾ ಸಮ್ಯಕ್ ಪ್ರಾಣಸ್ಥಾನೇಷ್ವವಸ್ಥಿತಃ ॥8॥
ಆ ಗರ್ಭವನ್ನು ಪ್ರವೇಶಿಸಿದ ಜೀವಾತ್ಮನು ಗರ್ಭದ ಎಲ್ಲ ಅವಯವಗಳನ್ನು ಭಾಗಶಃ ಆವರಿಸಿ, ಪ್ರಾಣಸ್ಥಾನಗಳಲ್ಲಿ ಇದ್ದುಕೊಂಡು ತೇಜಸ್ಸಿನ ಮೂಲಕವಾಗಿ ಪುಷ್ಟಿಯನ್ನು ಹೊಂದುತ್ತಾನೆ.
ತತಃ ಸ್ಪಂದಯತೇಽಂಗಾನಿ ಸ ಗರ್ಭಶ್ಚೇತನಾನ್ವಿತಃ ॥9॥
ಚೇತನಾಯುಕ್ತವಾದ ಗರ್ಭವು ಎಲ್ಲ ಅವಯವಗಳನ್ನು ಸಂಚಾಲನಗೊಳಿಸುತ್ತದೆ.
ಯಥಾಲೋಹಿತವಿಷ್ಯಂದೋ ನಿಷಿಕ್ತೋ ಬಿಂಬವಿಗ್ರಹಮ್ |
ಉಪೈತಿ ತದ್ವಜ್ಜಾನೀಹಿ ಗರ್ಭೇ ಜೀವಪ್ರವೇಶನಮ್ ॥10॥
ಯಾವ ರೀತಿಯಾಗಿ ಕಾಯಿಸಿದ ಲೋಹದ ದ್ರವವು ಎರಕದ ಅಚ್ಚನ್ನು ಪ್ರವೇಶ ಮಾಡಿ, ಆ ಎರಕದ ಅಚ್ಚಿನ ರೂಪವನ್ನೇ ಹೊಂದುತ್ತದೋ ಅದರಂತೆ ಜೀವನು ರೇತಸ್ಸಿನ ರೂಪವಾಗಿ ಗರ್ಭವನ್ನು ಪ್ರವೇಶಿಸಿ, ಆ ಯೋನಿಗೆ ಅನುಗುಣವಾದ ಆಕಾರವನ್ನು ಪಡೆಯುತ್ತಾನೆ.
ಲೋಹಪಿಂಡಂ ಯಥಾ ವಹ್ನಿಃ ಸ ಪ್ರವಿಶ್ಯಾತಿತಾಪಯೇತ್ |
ತಥಾ ತ್ವಮಪಿ ಜಾನೀಹಿ ಗರ್ಭೇ ಜೀವೋಪಪಾದನಮ್ ॥11॥
ಯಾವ ರೀತಿಯಲ್ಲಿ ಕಬ್ಬಿಣದ ಗುಂಡನ್ನು ಪ್ರವೇಶಿಸಿದ ಬೆಂಕಿಯು ಆ ಕಬ್ಬಿಣದ ಪಿಂಡವನ್ನು ಅಧಿಕವಾಗಿ ತಾಪಯುಕ್ತವನ್ನಾಗಿ ಮಾಡುತ್ತದೋ, ಅದೇ ರೀತಿ ಗರ್ಭಪಿಂಡದಲ್ಲಿ ಪ್ರವೇಶಿಸಿದ ಜೀವನು ಅದನ್ನು ಚೈತನ್ಯಗೊಳಿಸುತ್ತಾನೆ.
ಯಥಾ ಚ ದೀಪಃ ಶರಣಂ ದೀಪ್ಯಮಾನಃ ಪ್ರಕಾಶಯೇತ್ |
ಏವಮೇವ ಶರೀರಾಣಿ ಪ್ರಕಾಶಯತಿ ಚೇತನಾ ॥12॥
ಹೇಗೆ ದೇವರ ಮನೆಯಲ್ಲಿ ಹಚ್ಚಿಟ್ಟ ದೀಪವು ಆ ಕೋಣೆಯನ್ನು ಬೆಳಗುತ್ತದೋ, ಅದರಂತೆ ಚೇತನವು ಶರೀರವನ್ನು ಬೆಳಗುತ್ತಾನೆ.
ಯದ್ಯಚ್ಚ ಕುರುತೇ ಕರ್ಮ ಶುಭಂ ವಾ ಯದಿ ವಾಽಶುಭಮ್ |
ಪೂರ್ವದೇಹಕೃತಂ ಸರ್ವಮವಶ್ಯಮುಪಭುಜ್ಯತೇ ॥13॥
ಪುಣ್ಯಕರ್ಮಗಳನ್ನಾಗಲಿ, ಪಾಪಕರ್ಮಗಳನ್ನಾಗಲಿ ಯಾವ ಜೀವನು ಆಚರಿಸುತ್ತಾನೋ ಆ ಎಲ್ಲ ಕರ್ಮಗಳು ಹಿಂದಿನ ಜನ್ಮದ ದೇಹದಲ್ಲಿ ಮಾಡಲ್ಪಟ್ಟ ಕರ್ಮಗಳನ್ನು ಅನುಸರಿಸಿಕೊಂಡು ಬಂದಿರುತ್ತವೆ. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳೆಲ್ಲವನ್ನೂ ಇಂದಿನ ಜನ್ಮದಲ್ಲಿ ಅನುಭವಿಸಲೇಬೇಕು.
ತತಸ್ತು ಕ್ಷೀಯತೇ ಚೈವ ಪುನಶ್ಚಾನ್ಯತ್ ಪ್ರಚೀಯತೇ |
ಯಾವತ್ ತು ಮೋಕ್ಷಯೋಗಸ್ಥಂ ಧರ್ಮಂ ನೈವಾವಬುಧ್ಯತೇ ॥14॥
ಪಾಪಕರ್ಮಗಳ ಫಲವಾಗಲಿ, ಪುಣ್ಯಕರ್ಮಗಳ ಫಲವಾಗಲಿ ಭೋಗಿಸುತ್ತಾ ಕ್ಷೀಣಿಸುತ್ತದೆ. ಅದರ ಜೊತೆಗೆ ಈ ಜನ್ಮದಲ್ಲಿ ಮಾಡುವ ಕರ್ಮಫಲಗಳ ಸಂಚಯವು ಉಂಟಾಗುತ್ತಿರುತ್ತದೆ. ಆದ್ದರಿಂದ ಮನುಷ್ಯನು ಎಲ್ಲಿಯ ತನಕ ಮೋಕ್ಷಫಲಪ್ರಾಪ್ತಿಗೆ ಸಹಾಯಕವಾದ

ಧರ್ಮವನ್ನು ಅರಿತುಕೊಳ್ಳುವುದಿಲ್ಲವೋ ಅಲ್ಲಿಯತನಕ ಈ ಕರ್ಮಚಕ್ರದಿಂದ ಹೊರಗೆ ಬರುವುದೇ ಇಲ್ಲ.
ತತ್ ತೇ ಧರ್ಮಂ ಪ್ರವಕ್ಷ್ಯಾಮಿ ಸುಖೀ ಭವತಿ ಯೇನ ವೈ |
ಆವರ್ತಮಾನೋ ಜಾತೀಷು ಯಥಾಽನ್ಯೋನ್ಯಾಸು ಸತ್ತಮ ॥15॥
ಆ ಮೋಕ್ಷಕ್ಕೆ ಯೋಗ್ಯವಾದ ಧರ್ಮಗಳ್ಯಾವವು ಎಂಬುದನ್ನು ನಿನಗೆ ಹೇಳುತ್ತೇನೆ. ಇವುಗಳನ್ನು ಕೇಳಿದ ಮಾತ್ರದಿಂದ ಸುಖವನ್ನು ಹೊಂದುತ್ತಿ. ಭಿನ್ನ ಭಿನ್ನವಾದ ಯೋನಿಗಳಲ್ಲಿ ಹುಟ್ಟಿ-ಸಾಯುವ ಮನುಷ್ಯನು ಯಾವ ಯಾವ ಕರ್ಮಗಳ ಅನುಷ್ಠಾನದಿಂದ ಸುಖಿಯಾಗುತ್ತಾನೆಂಬುದನ್ನು ತಿಳಿದುಕೊ.
ದಾನಂ ವ್ರತಂ ಬ್ರಹ್ಮಚರ್ಯಂ ಯಥೋಕ್ತವ್ರತಧಾರಣಮ್ |
ದಮಃ ಪ್ರಶಾಂತತಾ ಚೈವ ಭೂತಾನಾಂ ಚಾನುಕಂಪನಮ್ ॥16॥
ಸಂಯಮಶ್ಚಾನೃಶಂಸ್ಯಂ ಚ ಪರಸ್ವಾದಾನವರ್ಜನಮ್ |
ವ್ಯಲೀಕಾನಾಮಕರಣಂ ಭೂತಾನಾಮನುಕಂಪನಮ್ ॥17॥
ಮಾತಾಪಿತ್ರೋಶ್ಚ ಶುಶ್ರೂಷಾ ದೇವತಾತಿಥಿಪೂಜನಮ್ |
ಗುರುಪೂಜಾ ಘೃಣಾ ಶೌಚಂ ನಿತ್ಯಮಿಂದ್ರಿಯಸಂಯಮಃ ॥18॥
ಪ್ರವರ್ತನಂ ಶುಭಾನಾಂ ಚ ತತ್ ಸತಾಂ ವ್ರತಮುಚ್ಯತೇ |
ತತೋ ಧರ್ಮಃ ಪ್ರಭವತಿ ಯಃ ಪ್ರಜಾಃ ಪಾತಿ ಶಾಶ್ವತಮ್ ॥19॥
ದಾನ, ವ್ರತ, ಬ್ರಹ್ಮಚರ್ಯ, ಶಾಸ್ತ್ರವಿಧಾನದಲ್ಲಿ ಹೇಳಿದ ವೇದಗಳ ಸ್ವೀಕಾರ, ಇಂದ್ರಿಯನಿಗ್ರಹ, ಪ್ರಶಾಂತಚಿತ್ತತೆ, ಭೂತದಯಾ, ಚಿತ್ತಸಂಯಮ, ದಯಾಪರತೆ, ಇತರರ ಸಂಪತ್ತಿನಲ್ಲಿ ಅನಾಸಕ್ತಿ, ಪ್ರಪಂಚದಲ್ಲಿರುವ ಪ್ರಾಣಿಗಳ ವಿಷಯದಲ್ಲಿ ಮಾನಸಿಕವಾಗಿಯೂ ಅಹಿತವನ್ನು ಬಯಸದಿರುವುದು, ತಂದೆ-ತಾಯಿಗಳ ಸೇವೆ, ದೇವತಾ ಪೂಜೆ, ಅತಿಥಿ ಸತ್ಕಾರ, ಗುರುಜನರ ಪೂಜೆ, ದಯೆ, ಶೌಚ, ಇಂದ್ರಿಯಗಳಲ್ಲಿ ನಿಗ್ರಹ, ಬೇರೆಯವರನ್ನು ಶುಭಕರ್ಮಗಳಲ್ಲಿ ತೊಡಗುವಂತೆ ಪ್ರೇರಿಸುವುದು- ಇವೆಲ್ಲವೂ ಕೂಡ ಸತ್ಪುರುಷರ ಆಚರಣೆಗಳೆಂದು ಜ್ಞಾನಿಗಳು ಹೇಳುತ್ತಾರೆ. ಇವುಗಳ ಅನುಷ್ಠಾನದಿಂದ ಧರ್ಮವು ಉತ್ಪನ್ನವಾಗುತ್ತದೆ. ಈ ಧರ್ಮವೇ ಸಮಸ್ತ ಪ್ರಜೆಗಳನ್ನು ರಕ್ಷಿಸುತ್ತದೆ.
ಸದ್ಭಿರಾಚರಿತೋ ಧರ್ಮಃ ಸದಾಚಾರೇ ಪ್ರತಿಷ್ಠಿತಃ |
ಉಭಯಾರ್ಥೋ ಭವತ್ಯೇವ ಸ್ವರ್ಗಾರ್ಥೋ ಮೋಕ್ಷದಸ್ತಥಾ ॥20॥
ಧರ್ಮವು ಸದಾಚಾರದಲ್ಲಿ ಸನ್ನಿಹಿತವಾಗಿದೆ. ಸಜ್ಜನರು ಇದನ್ನು ಆಚರಿಸುತ್ತಾರೆ. ಈ ಸದ್ಧರ್ಮಾಚರಣೆಯು ಸ್ವರ್ಗಫಲವನ್ನೂ ನೀಡುತ್ತದೆ, ಕಾಲಕ್ರಮದಲ್ಲಿ ಹರಿಪ್ರೀತಿ ಜನಕಗಳಾಗಿ ಮೋಕ್ಷವನ್ನೂ ನೀಡುತ್ತದೆ.
ಏವಂ ಸತ್ಸು ಸದಾ ಪಶ್ಯೇತ್ ತತ್ರ ಹ್ಯೇಷಾ ಧ್ರುವಾ ಸ್ಥಿತಿಃ |
ಆಚಾರೋ ಧರ್ಮಮಾಚಷ್ಟೇ ಯಸ್ಮಿನ್ ಸಂತೋ ವ್ಯವಸ್ಥಿತಾಃ ॥21॥
ಸತ್ಪುರುಷರಲ್ಲಿ ಇಂತಹ ಸದಾಚಾರಗಳನ್ನು ನಾವು ಯಾವಾಗಲೂ ಕಾಣಬಹುದಾಗಿದೆ. ಅವರಲ್ಲಿ ಈ ಧರ್ಮಗಳು ಶಾಶ್ವತ ಸ್ಥಾನಗಳನ್ನು ಅಲಂಕರಿಸಿರುತ್ತವೆ. ನಮ್ಮ ಸದಾಚಾರವೇ ಧರ್ಮದ ಪರಿಚಯವನ್ನು ಮಾಡಿಕೊಡುತ್ತದೆ. ಆದ್ದರಿಂದ ಸಜ್ಜನರು ಸದಾಚಾರಗಳಲ್ಲೇ ನಿರತರಾಗಿರುತ್ತಾರೆ.
ತೇಷು ತದ್ಧರ್ಮನಿಕ್ಷಿಪ್ತೋ ಯಃ ಸ ಧರ್ಮಃ ಸನಾತನಃ |
ಯಸ್ತಂ ಸಮಭಿಪದ್ಯೇತ ನ ಸ ದುರ್ಗತಿಮಾಪ್ನುಯಾತ್ ॥22॥
ಅಂತಹ ಸತ್ಪುರುಷರಲ್ಲಿ ನಾನು ಹೇಳಿದ ದಾನ, ವ್ರತ, ಬ್ರಹ್ಮಚರ್ಯಾದಿ ಧರ್ಮಗಳು ಇಡಲ್ಪಟ್ಟಿವೆ. ಅನೂಚಾನವಾಗಿ ನಡೆದುಬಂದ ಈ ಧರ್ಮಗಳನ್ನೇ ಸನಾತನ ಎನ್ನುತ್ತಾರೆ. ಯಾವನು ಈ ಸನಾತನ ಧರ್ಮವನ್ನು ಆಶ್ರಯಿಸುತ್ತಾನೋ ಅವನು ಎಂದೂ ದುರ್ಗತಿಯನ್ನು ಹೊಂದುವುದಿಲ್ಲ.
ಅತೋ ನಿಯಮ್ಯತೇ ಲೋಕಃ ಪ್ರಮುಹ್ಯನ್ ಧರ್ಮವರ್ತ್ಮಸು |
ಯಸ್ತು ಯೋಗೀ ಚ ಮುಕ್ತಶ್ಚ ಸ ವೈ ತೇಭ್ಯೋ ವಿಶಿಷ್ಯತೇ ॥23॥
ಸಮಾಜವು ಧರ್ಮಮಾರ್ಗದಿಂದ ಭ್ರಷ್ಟವಾಗುತ್ತಿರುವಾಗ ಸತ್ಪುರುಷರು ಮಾಡಿದ ಸನಾತನ ಧರ್ಮ, ಸತ್ಕರ್ಮಗಳ ಅನುಷ್ಠಾನವು ಧರ್ಮಭ್ರಷ್ಟವಾಗದಂತೆ ತಡೆಯುತ್ತದೆ. ಯಾವ ವ್ಯಕ್ತಿಯು ಈ ಧರ್ಮಾಚರಣೆಗಳ ಪೂರ್ಣಫಲಗಳನ್ನು ಪಡೆದಿದ್ದಾನೋ ಅವನು ಯೋಗಿ ಎನಿಸಿದ್ದಾನೆ, ಮುಕ್ತನಾಗುತ್ತಾನೆ. ಅನುಷ್ಠಾನಶೀಲರಿಗಿಂತಲೂ, ಸದಾಚಾರಿಗಳಿಗಿಂತಲೂ ಇವನು ಶ್ರೇಷ್ಠನೆನಿಸುತ್ತಾನೆ.
ವರ್ತಮಾನಸ್ಯ ಧರ್ಮೇಣ ಪುರುಷಸ್ಯ ಯಥಾ ತಥಾ |
ಸಂಸಾರತಾರಣಂ ಯಸ್ಯ ಕಾಲೇನ ಮಹತಾ ಭವೇತ್ ॥24॥
ಯಾವ ವ್ಯಕ್ತಿಯು ನಿರಂತರವೂ ಧರ್ಮಮಾರ್ಗದಲ್ಲಿಯೇ ವ್ಯವಹಾರವನ್ನು ಮಾಡುತ್ತಾನೋ ಅವನು ಎಲ್ಲ ಸ್ಥಿತಿಗಳಲ್ಲಿಯೂ ಶುಭಫಲಗಳನ್ನೇ ಪಡೆಯುತ್ತಾನೆ. ಕಾಲಾಂತರದಲ್ಲಿ ಅವನು ಈ ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಏವಂ ಪೂರ್ವಕೃತಂ ಕರ್ಮ ಸರ್ವೋ ಜಂತುರ್ನಿಷೇವತೇ |
ಸರ್ವಂ ತತ್ ಕಾರಣಂ ಯೇನ ನಿಕೃತೋಽಯಮಿಹಾಗತಃ ॥25॥
ಈ ರೀತಿಯಾಗಿ ಎಲ್ಲ ಜೀವರು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದ ಫಲಗಳನ್ನೇ ಇಂದು ಅನುಭವಿಸುತ್ತಾರೆ. ಆ ಕರ್ಮವನ್ನು ನಿಯಮಿಸುವ ಭಗವಂತನ ಅಧೀನವಾಗಿ ಜೀವನು ನಿರ್ವಿಕಾರ ಸ್ವರೂಪಿಯಾಗಿದ್ದರೂ ಈ ವಿಕಾರಾತ್ಮಕವಾದ ಜಗತ್ತಿನಲ್ಲಿ ಹುಟ್ಟು ಸಾವುಗಳನ್ನು ಪಡೆಯುತ್ತಿದ್ದಾನೆ. ಇದಕ್ಕೆ ಮೂಲಕಾರಣ ಅನಾದಿಕರ್ಮ.
ಶರೀರಗ್ರಹಣಂ ಚಾಸ್ಯ ಕೇನ ಪೂರ್ವಂ ಪ್ರಕಲ್ಪಿತಮ್ |
ಇತ್ಯೇವಂ ಸಂಶಯೇ ಲೋಕೇ ತಚ್ಚ ವಕ್ಷ್ಯಾಮ್ಯತಃಪರಮ್ ॥26॥

ಈ ಆತ್ಮನಿಗೆ ಶರೀರವು ಹೇಗೆ ಒದಗಿತು? ಇದನ್ನು ತಂದೊಡ್ಡಿದವರು ಯಾರು? ಈ ರೀತಿಯಾದ ಸಂಶಯವು ಎಲ್ಲರಿಗೂ ಹುಟ್ಟುತ್ತದೆ. ಇದು ಸಹಜವಾದ ಸಂಶಯ. ಈ ಸಂಶಯವನ್ನು ಮುಂದೆ ಪರಿಹರಿಸುತ್ತೇನೆ.
ಶರೀರಮಾತ್ಮನಃ ಕೃತ್ವಾ ಸರ್ವಲೋಕಪಿತಾಮಹಃ |
ತ್ರೈಲೋಕ್ಯಮಸೃಜದ್ ಬ್ರಹ್ಮಾ ಕೃತ್ಸ್ನಂ ಸ್ಥಾವರಜಂಗಮಮ್ ॥27॥
ಸಮಸ್ತ ಜಗತ್ತಿಗೆ ಪಿತಾಮಹನೆನಿಸಿದ ಚತುರ್ಮುಖಬ್ರಹ್ಮನು ತನ್ನ ಶರೀರವನ್ನೇ ನೆಪಮಾಡಿಕೊಂಡು ಸ್ಥಾವರ-ಜಂಗಮಾತ್ಮಕವಾದ ಈ ಹದಿನಾಲ್ಕು ಲೋಕಗಳನ್ನು ಸೃಷ್ಟಿ ಮಾಡಿದನು.
ತತಃ ಪ್ರಧಾನಮಸೃಜದ್ ಚೇತನಾನಾಂ ಶರೀರಿಣಾಮ್ |
ಮಯಾ ಸರ್ವಮಿದಂ ವ್ಯಾಪ್ತಂ ಯಾಂ ಲೋಕೇ ಪರಮಾಂ ವಿದುಃ ॥
ಆ ಚತುರ್ಮುಖ ಬ್ರಹ್ಮನು ಪ್ರಧಾನವೆಂಬ ತತ್ತ್ವವನ್ನು ಸೃಷ್ಟಿಸಿದನು. ಅದನ್ನೇ ಜೀವರ ಪ್ರಕೃತಿ ಎಂದು ಕರೆಯುತ್ತಾರೆ. ಆ ಪ್ರಕೃತಿಯಿಂದಲೇ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಆ ಪ್ರಕೃತಿಯನ್ನೇ ಮೂಲಪ್ರಕೃತಿ ಎಂದು ಹೇಳುತ್ತಾರೆ.
ಇಹ ತತ್ ಕ್ಷರಮಿತ್ಯುಕ್ತಂ ಪರಂ ತ್ವಮೃತಮಕ್ಷರಮ್ |
ತ್ರಯಾಣಾಂ ಮಿಥುನಂ ಸರ್ವಮ್ ಏಕೈಕಸ್ಯ ಪೃಥಕ್ ಪೃಥಕ್ ॥29॥
ಈ ಪ್ರಾಕೃತವಾದ ಜಗತ್ತು ಕ್ಷರ ಎಂದು ಕರೆಸಿಕೊಳ್ಳುತ್ತದೆ. ಈ ಜಗತ್ತನ್ನು, ಈ ಚತುರ್ಮುಖಬ್ರಹ್ಮನನ್ನು ಮೀರಿನಿಂತ ಭಗವಂತನು ಪರತತ್ತ್ವ, ಅಮೃತತತ್ತ್ವ, ಅಕ್ಷರತತ್ತ್ವ ಎನಿಸಿದ್ದಾನೆ. ಎಲ್ಲವನ್ನೂ ಮೀರಿನಿಂತ ಭಗವಂತ, ಮೂಲಪ್ರಕೃತಿ, ಜೀವ. ಈ ಮೂರರ ಸಮಾವೇಶವು ಜಗತ್ತಿನ ಎಲ್ಲ ಜೀವರಾಶಿಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಇದೆ.
ಅಸೃಜತ್ ಸರ್ವಭೂತಾನಾಂ ಪೂರ್ವಸೃಷ್ಟಿಂ ಪ್ರಜಾಪತಿಃ |
ಸ್ಥಾವರಾಣಿ ಚ ಬೀಜಾನಿ ಇತ್ಯೇಷಾ ಪೌರ್ವಿಕೀ ಶ್ರುತಿಃ ॥30॥
ಚತುರ್ಮುಖ ಬ್ರಹ್ಮನು ಹಿಂದೆ ಆದ ಸೃಷ್ಟಿಯನ್ನೇ ಎಲ್ಲ ಜೀವರಾಶಿಗಳ ಪಾಲಿಗೆ ಮತ್ತೆ ಮಾಡಿದನು. ಸ್ಥಾವರ-ಜಂಗಮಾತ್ಮಕವಾದ ಪ್ರಾಣಿಗಳನ್ನು ಸೃಷ್ಟಿಸಿದನು ಎಂಬುದು ಪುರಾತನ ಶ್ರುತಿಯು.
ತಸ್ಯ ಕಾಲಪರಿಣಾಮಮಕರೋತ್ ಸ ಪಿತಾಮಹಃ |
ಭೂತೇಷು ಪರಿವೃತ್ತಿಂ ಚ ಪುನರಾವೃತ್ತಿಮೇವ ಚ ॥31॥
ಪಿತಾಮಹನಾದ ಚತುರ್ಮುಖಬ್ರಹ್ಮನು ಜೀವರಿಗೆ ಯೋಗ್ಯವಾದ ಕಾಲದ ತನಕ ಶರೀರವನ್ನು ಧಾರಣೆ ಮಾಡಿಕೊಂಡಿರುವುದಕ್ಕೆ, ಭಿನ್ನ ಭಿನ್ನ ಯೋನಿಗಳಲ್ಲಿ ಹುಟ್ಟುವುದಕ್ಕೆ, ಪರಲೋಕಕ್ಕೆ ಹೋಗಿ ಪುನಃ ಈ ಲೋಕಕ್ಕೆ ಆಗಮಿಸುವುದಕ್ಕೆ ವ್ಯವಸ್ಥೆಯನ್ನು ಕಲ್ಪಿಸಿರುತ್ತಾನೆ.
ಯಥಾಽತ್ರ ಕಶ್ಚಿನ್ಮೇಧಾವೀ ದೃಷ್ಟ್ವಾ ಕರ್ಮ ತು ಪೂರ್ವಕಮ್ |
ಯತ್ ಪ್ರವಕ್ಷ್ಯಾಮಿ ತತ್ಸರ್ವಂ ಯಥಾವದುಪಪದ್ಯತೇ ॥32॥
ಹಿಂದಿನ ಜನ್ಮದಲ್ಲಿ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಂಡು ಒಬ್ಬ ಮೇಧಾವಿಯು ಸಂಸಾರದ ಅನಿತ್ಯತೆಯ ವಿಷಯದಲ್ಲಿ ಯಾವ ಮಾತನ್ನು ಹೇಳಿದ್ದಾನೋ ಅದನ್ನೇ ನಿನಗೆ ಹೇಳುತ್ತೇನೆ.
ಸುಖಂ ದುಃಖಂ ಯಥಾ ಸಮ್ಯಗನಿತ್ಯೇ ಯಃ ಪ್ರಪಶ್ಯತಿ |
ಕಾಯಂ ಚಾಮೇಧ್ಯಸಂಘಾತಂ ವಿನಾಶಂ ಕರ್ಮಸಂಹಿತಮ್ ॥33॥
ಯಾವ ಮನುಷ್ಯನು ಜೀವನದಲ್ಲಿ ಒದಗಿ ಬರುವ ಸುಖ-ದುಃಖಗಳೆರಡನ್ನೂ ಅನಿತ್ಯವೆಂದು ತಿಳಿಯುತ್ತಾನೋ, ಶರೀರವನ್ನು ಹೊಲಸು ವಸ್ತುಗಳ ಸಂಘಾತವೆಂದು, ನಾಶಹೊಂದುತ್ತದೆ ಎಂದು, ಕರ್ಮದ ಹಿನ್ನೆಲೆಯಲ್ಲಿ ಒದಗಿಬಂದಿದೆ ಎಂದು, ಆತ್ಮನಿಗಿಂತ ಭಿನ್ನವೆಂದು ತಿಳಿಯುತ್ತಾನೋ;
ಯಚ್ಚ ಕಿಂಚಿತ್ ಸುಖಂ ದೃಷ್ಟಂ ತಚ್ಚ ದುಃಖಮಿತಿ ಸ್ಮರನ್ |
ಸಂಸಾರಸಾಗರಂ ಘೋರಂ ತರಿಷ್ಯತಿ ಸುದುಸ್ತರಮ್ ॥34॥
ಈ ದೇಹದಲ್ಲಿ ಅನುಭವಿಸುವ ಅಲ್ಪವಾದ ಸುಖದಂತೆ ಕಾಣುವ ಸುಖವನ್ನು ದುಃಖವೆಂದೇ ತಿಳಿಯುತ್ತಾನೋ ಅಂತಹ ಮನುಷ್ಯನು ಸಾಮಾನ್ಯರಿಂದ ದಾಟಲು ಅಸಾಧ್ಯವಾದ ಈ ಘೋರವಾದ ಸಂಸಾರವನ್ನು ದಾಟುತ್ತಾನೆ.
ಜನೀಮರಣರೋಗೈಶ್ಚ ಸಮಾವಿಷ್ಟಃ ಪ್ರಧಾನವಿತ್ |
ಚೇತನಾವತ್ಸು ಚೈತನ್ಯಂ ಸಮಂ ಭೂತೇಷು ಪಶ್ಯತಿ ॥35॥
ಯಾವ ಮನುಷ್ಯನು ಜನನ-ಮರಣ, ರೋಗಗಳಿಂದ ಕೂಡಿರುವ ಈ ದೇಹದ ಬಗ್ಗೆ ಸರಿಯಾಗಿ ಅರ್ಥ ಮಾಡಿಕೊಂಡಿರುತ್ತಾನೋ, ಎಲ್ಲ ಜೀವರಲ್ಲಿ ಇರುವ ಪರಬ್ರಹ್ಮನನ್ನು ಅರ್ಥಮಾಡಿಕೊಂಡಿರುತ್ತಾನೋ, ಆ ಪರಬ್ರಹ್ಮನಲ್ಲಿ ವ್ಯತ್ಯಾಸವಿಲ್ಲವೆಂದು ಅರ್ಥ ಮಾಡಿಕೊಂಡಿರುತ್ತಾನೋ ಅವನು ಈ ಸಂಸಾರವನ್ನು ದಾಟುತ್ತಾನೆ.
ನಿರ್ವಿದ್ಯತೇ ಸ್ವತಃ ಕಶ್ಚಿನ್ಮಾರ್ಗಮಾಣಃ ಪರಂ ಪದಮ್ |
ತಸ್ಯೋಪದೇಶಂ ವಕ್ಷ್ಯಾಮಿ ಯಾಥಾತಥ್ಯೇನ ಸತ್ತಮ ॥36॥
ಸ್ವತಃ ಯಾವ ಮನುಷ್ಯನು ಈ ಜೀವನದಲ್ಲಿ ಪರಬ್ರಹ್ಮ ವಸ್ತುವನ್ನೇ ಅನ್ವೇಷಣೆ ಮಾಡುತ್ತಾ ಇರುತ್ತಾನೋ ಅದನ್ನು ಯೋಚಿಸುತ್ತಾ ನಿರ್ಲಿಪ್ತನಾಗಿರುತ್ತಾನೋ ಅಂತಹ ವ್ಯಕ್ತಿಯ ಉಪದೇಶವನ್ನು ಯಥಾವತ್ತಾಗಿ ಹೇಳುತ್ತೇನೆ, ತಿಳಿದುಕೊ.
ಶಾಶ್ವತಸ್ಯಾವ್ಯಯಸ್ಯಾಥ ಪದಸ್ಯ ಜ್ಞಾನಮುತ್ತಮಮ್ |
ಪ್ರೋಚ್ಯಮಾನಂ ಮಯಾ ವಿಪ್ರ ನಿಬೋಧೇದಮಶೇಷತಃ ॥37॥
ಅಂತಹ ನಿರ್ಲಿಪ್ತನಾದ ಜ್ಞಾನಿಗೆ ಯಾವ ಸನಾತನವಾದ, ಎಂದೂ ನಾಶವನ್ನು ಹೊಂದದ ಪರಮಾತ್ಮನ ಉತ್ತಮವಾದ ಜ್ಞಾನವು ಇಷ್ಟವಾಗಿದೆಯೋ ಅಂತಹ ಜ್ಞಾನವನ್ನೇ ಹೇಳುತ್ತೇನೆ. ನಾನು ಹೇಳುವ ಜ್ಞಾನೋಪದೇಶವನ್ನು ಸಮಾಧಾನಚಿತ್ತದಿಂದ ಆಲಿಸು.

‖ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಗರ್ಭವಿಚಾರಕಥನಂ ನಾಮ ಅಷ್ಟಾದಶೋಽಧ್ಯಾಯಃ ‖
‖ ಅನುಗೀತಾಪರ್ವಣಿ ತೃತೀಯೋಽಧ್ಯಾಯಃ ‖
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ಮಾಡಿದ ಮೋಕ್ಷಸಾಧನ ಮೊದಲಾದವುಗಳನ್ನು ಪ್ರತಿಪಾದಿಸುವ ಸಿದ್ಧ-ಕಾಶ್ಯಪರ ಸಂವಾದರೂಪವಾದ ಅನುಗೀತೆಯ ಉಪದೇಶ.
ಬ್ರಾಹ್ಮಣಃ
ಯಸ್ಮಾದೇಕಾಂತಮಾಸೀನಃ ತೂಷ್ಣೀಂ ಕಿಂಚಿದಚಿಂತಯನ್ |
ಪೂರ್ವಂ ಪೂರ್ವಂ ಪರಿತ್ಯಜ್ಯ ಸ ನಿರಾರಂಭಕೋ ಭವೇತ್ ‖1‖
ಬ್ರಾಹ್ಮಣ ಕಾಶ್ಯಪನೇ, ಯಾವ ಮನುಷ್ಯನು ಏಕಾಂತದಲ್ಲಿ ಕುಳಿತುಕೊಂಡು, ಬಾಹ್ಯವಾದ ಯಾವ ವಿಚಾರಗಳನ್ನೂ ಮಾಡದೆ, ಹಿಂದೆ ನಡೆದ ಘಟನೆಗಳನ್ನು ಪರಿತ್ಯಾಗ ಮಾಡುತ್ತಾ, ಅಭಿಮಾನವನ್ನು ಪರಿತ್ಯಾಗ ಮಾಡಿದಲ್ಲಿ ಅವನು ಸಂಸಾರಕ್ಕೆ ಕಾರಣವಾದ ಕರ್ಮಗಳನ್ನು ಮಾಡುವುದಿಲ್ಲ.
ಸರ್ವಮಿತ್ರಃ ಸರ್ವಸಹಃ ಸಮರಕ್ತೋ ಜಿತೇಂದ್ರಿಯಃ |
ವ್ಯಪೇತಭಯಮನ್ಯುಶ್ಚ ಕಾಮಹಾ ಮುಚ್ಯತೇ ನರಃ ‖2‖
ಎಲ್ಲರಲ್ಲಿಯೂ ಮೈತ್ರಿಭಾವವುಳ್ಳ, ಎಲ್ಲವನ್ನೂ ಸಹಿಸಿಕೊಳ್ಳುವ ಸ್ವಭಾವವುಳ್ಳ, ಎಲ್ಲ ಕಡೆಗಳಲ್ಲಿಯೂ ಭಗವಂತನಿದ್ದಾನೆ ಎಂದು ಅವನಲ್ಲಿಯೇ ರತಿಯುಳ್ಳ, ಜಿತೇಂದ್ರಿಯನಾದ, ಭಯದಿಂದ ಮುಕ್ತನಾದ, ಕ್ರೋಧದಿಂದ ಮುಕ್ತನಾದ, ಕಾಮನೆಯನ್ನು ಗೆದ್ದಿರುವ ಮನುಷ್ಯನು ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಆತ್ಮವತ್ ಸರ್ವಭೂತೇಷು ಯಶ್ಚರೇನ್ನಿಯತಃ ಶುಚಿಃ |
ನಿತ್ಯಮೇವ ಯಥಾನ್ಯಾಯಂ ಯಶ್ಚರೇನ್ನಿಯತೇಂದ್ರಿಯಃ ‖3‖
ಯಾರು ಜಿತೇಂದ್ರಿಯನಾಗಿ, ಶುಚಿಯಾಗಿ, ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ತನ್ನಂತೆಯೇ ಸುಹೃದ್ಭಾವನೆಯಿಂದ ಕಾಣುತ್ತಾನೋ, ಯಾವಾಗಲೂ ಅವರವರ ಅರ್ಹತೆಯನ್ನು ನೋಡಿ ವರ್ತಿಸುತ್ತಾನೋ ಇಂತಹ ಜಿತೇಂದ್ರಿಯನಾದ ವ್ಯಕ್ತಿಯು ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ.
ಅಮಾನೀ ನಿರಭಿಮಾನಃ ಸರ್ವತೋ ಮುಕ್ತ ಏವ ಸಃ ‖4‖
ಯಾರು ಸನ್ಮಾನಗಳಿಗೆ ಅಪೇಕ್ಷೆ ಪಡುವುದಿಲ್ಲವೋ, ಅತಿಯಾದ ಆತ್ಮಾಭಿಮಾನವನ್ನು ಹೊಂದಿರುವುದಿಲ್ಲವೋ ಅವನು ಎಲ್ಲ ಬಂಧನಗಳಿಂದಲೂ ಬಿಡುಗಡೆ ಹೊಂದಿದಂತೆಯೇ ಸರಿ.
ಜೀವಿತಂ ಮರಣಂ ಚೋಭೇ ಸುಖದುಃಖೇ ತಥೈವ ಚ |
ಲಾಭಾಲಾಭೌ ಪ್ರಿಯದ್ವೇಷ್ಯೌ ಯಸ್ಯ ಸಾಮ್ಯೇನ ವರ್ತತೇ ‖5‖
ಯಾರಿಗೆ ಹುಟ್ಟು-ಸಾವುಗಳು, ಸುಖ-ದುಃಖಗಳು, ಲಾಭ-ನಷ್ಟಗಳು, ಪ್ರೀತಿಪಾತ್ರರು ದ್ವೇಷಿಗಳು ಸಮಾನವಾಗಿ ಕಾಣಿಸುತ್ತಾರೋ ಅವನು ಮುಕ್ತನಾದಂತೆಯೇ.
ಕಂಚಿನ್ನ ತು ಸ್ಪೃಹಯೇತ ನಾಭಿಜಾನಾತಿ ಕಿಂಚನ |
ನಿರ್ದ್ವಂದ್ವೋ ವೀತರಾಗಾತ್ಮಾ ಸರ್ವತೋ ಮುಕ್ತ ಏವ ಸಃ ‖6‖
ಯಾವನು ಮತ್ತೊಬ್ಬರ ಧನಕ್ಕೆ ಆಸೆಪಡುವುದಿಲ್ಲವೋ, ಮತ್ತೊಬ್ಬರನ್ನು ತಿರಸ್ಕಾರ ಬುದ್ಧಿಯಿಂದ ನೋಡುವುದಿಲ್ಲವೋ, ಸುಖ-ದುಃಖಗಳ ಪ್ರಭಾವಕ್ಕೆ ತುತ್ತಾಗುವುದಿಲ್ಲವೋ, ಜಗತ್ತಿನ ವಿಷಯಗಳಲ್ಲಿ ಆಸಕ್ತಿರಹಿತನಾದ ಮನಸ್ಸಿನಿಂದ ಕೂಡಿದ್ದಾನೋ ಅಂತಹವನು ಮುಕ್ತನೇ ಸರಿ.
ಅನಮಿತ್ರೋ ನ ಬದ್ಧಶ್ಚಾಪ್ಯನಪತ್ಯಶ್ಚ ಯಃ ಕ್ವಚಿತ್ |
ತ್ಯಕ್ತಧರ್ಮಾರ್ಥಕಾಮಶ್ಚ ನಿರಾಕಾಂಕ್ಷೀ ಸ ಮುಚ್ಯತೇ ‖7‖
ಯಾವನು ಶತ್ರುರಹಿತನಾಗಿದ್ದಾನೋ, ಬಂಧುಗಳಲ್ಲಿ, ಪುತ್ರರಲ್ಲಿ ಮಮತಾ ತ್ಯಾಗ ಮಾಡಿದ್ದಾನೋ, ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನು ಸ್ವಾರ್ಥಕ್ಕಾಗಿ ವಿನಿಯೋಗಿಸಿಕೊಳ್ಳುವುದಿಲ್ಲವೋ ಅವನು ಸಂಸಾರದಿಂದ ಮುಕ್ತನಾದಂತೆಯೇ ಸರಿ.
ನೈವ ಧರ್ಮೀ ನ ಚಾಧರ್ಮೀ ಪೂರ್ವೋಪಚಿತಹಾ ಚ ಯಃ |
ಕ್ಷೀಣಧಾತುಃ ಪ್ರಶಾಂತಶ್ಚ ನಿರ್ದ್ವಂದ್ವಃ ಸ ವಿಮುಚ್ಯತೇ ‖8‖
ಯಾವನು ಕಾಮ್ಯಧರ್ಮಗಳನ್ನು ಆಚರಿಸುವುದಿಲ್ಲವೋ, ಅಧರ್ಮಾಚರಣೆಯಲ್ಲಿ ರತನಾಗಿರುವುದಿಲ್ಲವೋ, ಪೂರ್ವಸಂಚಿತವಾದ ಕರ್ಮಭೋಗಗಳನ್ನು ಕಳೆದುಕೊಂಡಿದ್ದಾನೋ, ಶಬ್ದಾದಿ ವಿಷಯಗಳ ಬಯಕೆಯಿಂದ ಮುಕ್ತನಾಗಿದ್ದಾನೋ, ಪ್ರಶಾಂತ ಮನಸ್ಕನಾಗಿದ್ದಾನೋ, ಸುಖ-ದುಃಖಗಳಲ್ಲಿ ಸಮತೋಲನ ಕಂಡಿದ್ದಾನೋ ಅವನು ಬಿಡುಗಡೆಯನ್ನು ಹೊಂದುತ್ತಾನೆ.
ಅಕರ್ಮಾ ಚಾವಿಕಾಂಕ್ಷಶ್ಚ ಪಶ್ಯನ್ ಜಗದಶಾಶ್ವತಮ್ |
ಅಸ್ವಸ್ಥಮವಶಂ ನಿತ್ಯಂ ಜನ್ಮಸಂಸಾರಮೋಹಿತಮ್ ‖9‖
ಯಾರು ತನ್ನಿಂದ ಕರ್ಮ ನಡೆಯುತ್ತಿರುವಾಗಲೂ ಇದು ಭಗವಂತನಿಂದ ನಡೆಯುವ ಕರ್ಮ ಎಂದು ಅನುಸಂಧಾನ ಮಾಡುತ್ತಾನೋ, ಆ ಕರ್ಮದ ಫಲವನ್ನು ಬಯಸುವುದಿಲ್ಲವೋ, ಜಗತ್ತಿನ ಸುಖಗಳಲ್ಲಿ ಅಶಾಶ್ವತ ಬುದ್ಧಿಯನ್ನು ಹೊಂದಿದ್ದಾನೋ, ಜಗತ್ತು ಅಸ್ವತಂತ್ರವು, ನಿತ್ಯವೂ ಭಗವಂತನ ವಶವು, ಜನ್ಮ-ಸಂಸಾರಗಳ ಬಂಧನವುಳ್ಳದ್ದು ಎಂದು ತಿಳಿದಿದ್ದಾನೋ ಅವನು

ಬಂಧನದಿಂದ ಮುಕ್ತನಾದಂತೆಯೇ ಸರಿ.
ವೈರಾಗ್ಯಬುದ್ಧಿಃ ಸತತಂ ತಾಪದೋಷವ್ಯಪೇಕ್ಷಕಃ |
ಆತ್ಮಬಂಧವಿನಿರ್ಮೋಕ್ಷಂ ಸ ಕರೋತ್ಯಚಿರಾದಿವ ॥10॥
ಯಾವನು ವೈರಾಗ್ಯಬುದ್ಧಿಯುಳ್ಳವನಾಗಿದ್ದಾನೋ, ಸಂಸಾರದ ತಾಪತ್ರಯ ದೋಷಗಳನ್ನು ಅರಿತವನಾಗಿದ್ದಾನೋ ಅವನು ಆತ್ಮಬಂಧನದಿಂದ ಬಿಡುಗಡೆ ಹೊಂದಿ ಕೂಡಲೇ ಮುಕ್ತನಾಗುತ್ತಾನೆ.
ಅಗಂಧರಸಮಸ್ಪರ್ಶಮಶಬ್ದಮಪರಿಗ್ರಹಮ್ |
ಅರೂಪಮನಭಿಜ್ಞೇಯಂ ದೃಷ್ಟ್ವಾಽಽತ್ಮಾನಂ ವಿಮುಚ್ಯತೇ ॥11॥
ಗಂಧ-ರಸ-ಸ್ಪರ್ಶ-ಶಬ್ದ-ರೂಪಗಳಿಗೆ ಗೋಚರವಲ್ಲದ, ಬಾಹ್ಯವಾದ ರೂಪ ರಹಿತವಾದ, ಸಂಪೂರ್ಣವಾಗಿ ತಿಳಿಯಲು ಅಶಕ್ಯವಾದ, ಹೃದಯಗೃಹ ವಾಸಿಯಾದ ಪರಮಾತ್ಮನನ್ನು ನೋಡಿದ ಕೂಡಲೇ ಬಿಡುಗಡೆ ಹೊಂದುತ್ತಾನೆ.
ಪಂಚಭೂತಗುಣೈರ್ಭಗ್ನಮಮೂರ್ತಿಮವಿಲೇಪನಮ್ |
ಅಗುಣಂ ಗುಣಭೋಕ್ತಾರಂ ಯಃ ಪಶ್ಯತಿ ಸ ಮುಚ್ಯತೇ ॥12॥
ಪಂಚಭೂತಗುಣಗಳಿಂದ ರಹಿತನಾದ, ಬಾಹ್ಯವಾದ ಮಾನವರ ರೂಪಗಳಂತೆ ಇಲ್ಲದ, ಯಾವ ಪ್ರಕೃತಿಯ ಸಂಬಂಧಗಳಿಂದಲೂ ಲಿಪ್ತನಾಗದ, ಸತ್ವ-ರಜಸ್-ತಮೋ ಗುಣಗಳಿಂದ ದೂರನಾದ, ಜೀವರ ಸ್ವರೂಪಗುಣದ ಸುಖವನ್ನು ಅನುಭವಿಸುವ ಪರಮಾತ್ಮನನ್ನು ಯಾವನು ನೋಡುತ್ತಾನೋ ಅವನು ಬಂಧನದಿಂದ ಬಿಡುಗಡೆ ಹೊಂದುತ್ತಾನೆ.
ವಿಹಾಯ ಸರ್ವಸಂಕಲ್ಪಾನ್ ಬುದ್ಧ್ಯಾ ಶಾರೀರಮಾನಸಾನ್ |
ಶನೈರ್ನಿರ್ವಾಣಮಾಪ್ನೋತಿ ನಿರಿಂಧನ ಇವಾನಲಃ ॥13॥
ಯಾವನು ಬುದ್ಧಿಯಿಂದ ವಿಚಾರ ಮಾಡಿ ಶಾರೀರಿಕವಾಗಿ, ಮಾನಸಿಕವಾಗಿ ನಡೆಯುವ ಎಲ್ಲ ಸಂಕಲ್ಪಗಳನ್ನು (ಬಂಧಕವಾದ ಕಾಮನೆಗಳನ್ನು) ಕ್ರಮವಾಗಿ ಪರಿತ್ಯಾಗ ಮಾಡುತ್ತಾನೋ ಅವನು ಕಟ್ಟಿಗೆಯಿಲ್ಲದ ಅಗ್ನಿಯಂತೆ ಕಾಲಾನುಕ್ರಮವಾಗಿ ಶಾಂತಿಯನ್ನು ಹೊಂದುತ್ತಾನೆ.
ವಿಮುಕ್ತಃ ಸರ್ವಸಂಸ್ಕಾರೈಸ್ತತೋ ಬ್ರಹ್ಮ ಸನಾತನಮ್ |
ಪರಮಾಪ್ನೋತಿ ವೈ ಶಾಂತೋ ಹ್ಯಚಲಂ ದಿವ್ಯಮಕ್ಷರಮ್ ॥14॥
ಎಲ್ಲ ವಿಧವಾದ ಸಂಸ್ಕಾರಗಳಿಂದ ವಿಮುಕ್ತನಾದ (ಪ್ರಕೃತಿಯ ವಾಸನಾ ಸಂಸ್ಕಾರಗಳಿಂದ ಬಿಡುಗಡೆ ಹೊಂದಿದ), ಶಾಂತಾತ್ಮನಾದ ಸಾಧಕನು, ಸನಾತನನಾದ, ಗುಣಪರಿಪೂರ್ಣನಾದ, ಅಚಲನಾದ, ದಿವ್ಯ ಮತ್ತು ಅಕ್ಷರನೆನಿಸಿದ ಪರಬ್ರಹ್ಮನನ್ನು ಯಾವಾಗ ಹೊಂದುತ್ತಾನೋ ಆಗ ಸಂಸಾರದಿಂದ ಬಿಡುಗಡೆ ಹೊಂದುತ್ತಾನೆ.
ಅತಃ ಪರಂ ಪ್ರವಕ್ಷ್ಯಾಮಿ ಯೋಗಶಾಸ್ತ್ರಮನುತ್ತಮಮ್ |
ಯಜ್ಜ್ಞಾತ್ವಾ ಸಿದ್ಧಮಾತ್ಮಾನಂ ಲೋಕೇ ಪಶ್ಯಂತಿ ಯೋಗಿನಃ ॥15॥
ಕಾಶ್ಯಪನೇ, ಇನ್ನು ಮುಂದೆ ನಿನಗೆ ಶ್ರೇಷ್ಠವಾದ ಯೋಗಶಾಸ್ತ್ರವನ್ನು ಹೇಳುತ್ತೇನೆ. ಯಾವ ಯೋಗಾಭ್ಯಾಸವನ್ನು ಸಾಧಿಸಿಕೊಂಡ ಸಿದ್ಧಪುರುಷರು ಪರಮಾತ್ಮನನ್ನು ಹೇಗೆ ನೋಡುತ್ತಾರೆ ಎಂಬುದನ್ನು ತಿಳಿಸುತ್ತೇನೆ.
ತಸ್ಯೋಪದೇಶಂ ವಕ್ಷ್ಯಾಮಿ ಯಥಾವತ್ ತನ್ನಿಬೋಧ ಮೇ |
ಯೈರ್ಯೋಗೈರ್ಭಾವಯನ್ ನಿತ್ಯಂ ಪಶ್ಯತ್ಯಾತ್ಮಾನಮಾತ್ಮನಿ ॥16॥
ಸಿದ್ಧಪುರುಷನು ಮಾಡಿದ ಉಪದೇಶವನ್ನು ಯಥಾವತ್ತಾಗಿ ನಿನಗೆ ತಿಳಿಸುತ್ತೇನೆ, ಅದನ್ನು ತಿಳಿದುಕೊ. ಯಾವ ಯೋಗಗಳನ್ನು ನಿತ್ಯವೂ ಅನುಸಂಧಾನ ಮಾಡುತ್ತಾ, ಹೃದಯದಲ್ಲಿ ಪರಮಾತ್ಮನನ್ನು ಕಾಣುವೆಯೋ ಅಂತಹ ತತ್ತ್ವದ ಬಗ್ಗೆ ತಿಳಿಸುತ್ತೇನೆ.
ಇಂದ್ರಿಯಾಣ್ಯುಪಸಂಹೃತ್ಯ ಮನ ಆತ್ಮನಿ ಧಾರಯೇತ್ |
ತೀವ್ರಂ ತಪ್ತ್ವಾ ತಪಃ ಪೂರ್ವಂ ತತೋ ಯೋಕ್ತುಮುಪಕ್ರಮೇತ್ ॥17॥
ಬಾಹ್ಯವಾದ ವಿಷಯಪದಾರ್ಥಗಳ ಕಡೆ ಸಾಗುವ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು, ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿಕೊಳ್ಳಬೇಕು. ಹೀಗೆ ಉಗ್ರವಾದ ತಪಸ್ಸನ್ನು ಮಾಡಿ ನಂತರ ಮೋಕ್ಷ ಸಾಧನೆಯ ಉಪಾಯವನ್ನು ಆಶ್ರಯಿಸಬೇಕು.
ತಪಸ್ವೀ ನಿತ್ಯಸಂಕಲ್ಪೋ ದಂಭಾಹಂಕಾರವರ್ಜಿತಃ |
ಮನೀಷೀ ಮನಸಾ ವಿಪ್ರಃ ಪಶ್ಯತ್ಯಾತ್ಮಾನಮಾತ್ಮನಿ ॥18॥
ವಿದ್ವಾಂಸನಾದ ಬ್ರಾಹ್ಮಣನು ನಿರಂತರ ತಪಸ್ಸನ್ನು ಮಾಡುತ್ತಾ ಜಂಬ, ಅಹಂಕಾರಗಳನ್ನು ದೂರೀಕರಿಸಿ, ಜ್ಞಾನಿಯಾಗಿ ಮನಸ್ಸಿನಿಂದ ಪರಮಾತ್ಮನನ್ನು ಕಂಡುಕೊಳ್ಳುತ್ತಾನೆ.
ನ ಚೇಚ್ಛಕ್ನೋತ್ಯಯಂ ಸಾಧುರ್ಯೋಕ್ತುಮಾತ್ಮಾನಮಾತ್ಮನಿ |
ತತ ಏಕಾಂತಶೀಲಃ ಸನ್ ಪಶ್ಯತ್ಯಾತ್ಮಾನಮಾತ್ಮನಿ ॥19॥
ಏಕಾಂತವನ್ನು ಬಯಸುವ ಸಾಧಕನು ತನ್ನ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸುವ ಪ್ರಯತ್ನದಲ್ಲಿ ಸಾಫಲ್ಯವನ್ನು ಹೊಂದಿದರೆ ನಿಶ್ಚಿತವಾಗಿಯೂ ತನ್ನ ಶರೀರದಲ್ಲಿಯೇ ಪರಮಾತ್ಮನ ದರ್ಶನವನ್ನು ಹೊಂದುತ್ತಾನೆ.
ಸಂಯತಃ ಸತತಂ ಯುಕ್ತ ಆತ್ಮವಾನ್ ನಿಯತೇಂದ್ರಿಯಃ |
ಯಥಾಽಯಮಾತ್ಮನ್ಯಾತ್ಮಾನಂ ಸಾಧು ಯುಕ್ತಃ ಪ್ರಪಶ್ಯತಿ ॥20॥
ಇಂದ್ರಿಯಗಳನ್ನು ನಿಗ್ರಹಿಸಿಕೊಂಡಿರುವ, ಯೋಗಯುಕ್ತನಾದ, ದೃಢವಾದ ಮನಸ್ಸುಳ್ಳ, ಜಿತೇಂದ್ರಿಯನಾದ, ಸಮಾಧಿಸ್ಥನಾದ ಸಾಧಕನು ಬುದ್ಧಿಯ ಮೂಲಕವಾಗಿ ಪರಮಾತ್ಮನನ್ನು ಚೆನ್ನಾಗಿ ನೋಡುತ್ತಾನೆ.
ಯಥಾ ಹಿ ಪುರುಷಂ ಸ್ವಪ್ನೇ ದೃಷ್ಟ್ವಾ ಪಶ್ಯತ್ಯಸಾವಿತಿ |
ತಥಾರೂಪಮಿವಾತ್ಮಾನಂ ಸಾಧು ಯುಕ್ತಃ ಪ್ರಪಶ್ಯತಿ ॥21॥

ಯಾವ ರೀತಿಯಾಗಿ ಸ್ವಪ್ನ ಕಾಣುವ ಪುರುಷನು ಸ್ವಪ್ನದಲ್ಲಿ ಯಾರನ್ನಾದರೂ ಕಂಡರೆ ಅವನು ಎಚ್ಚರದಲ್ಲಿ ಪುನಃ ಅವನೇ ಇವನೆಂದು ಗುರುತಿಸುತ್ತಾನೋ, ಅದೇ ರೀತಿಯಾಗಿ ಸಾಧನಾನುಷ್ಠಾನವನ್ನು ಮಾಡುವ ಯೋಗಿಯು ಸೌಂದರ್ಯ-ಲಾವಣ್ಯಗಳಿಂದ ಕೂಡಿರುವ ಆಕಾರವನ್ನು ಮಾಂಸದ ಕಣ್ಣಿನಿಂದ ನೋಡುವಂತೆ ಅಂತರಂಗದ ಕಣ್ಣಿನಿಂದಲೂ ನೋಡಲು ಸಮರ್ಥನಾಗುತ್ತಾನೆ.
ಇಷೀಕಾಂ ವಾ ಯಥಾ ಮುಂಜಾತ್ ಕಶ್ಚಿನ್ನಿಹೃತ್ಯ ದರ್ಶಯೇತ್ |
ಯೋಗೀ ನಿವಿಷ್ಟಮಾತ್ಮಾನಂ ತಥಾ ಸಂಪಶ್ಯತೇ ತನೌ ॥22॥
ಒಬ್ಬಾತನು ಯಾವ ವಿಧವಾಗಿ ಮುಂಜದ ಹುಲ್ಲಿನಿಂದ ಅದರಲ್ಲಿರುವ ಇಷೀಕವನ್ನು ತೆಗೆದು ತೋರಿಸುತ್ತಾನೋ ಅದೇ ರೀತಿಯಾಗಿ ಯೋಗಿಯಾದವನು ತನ್ನ ದೇಹದಿಂದ ವಿಭಿನ್ನನಾದ ಪರಮಾತ್ಮನನ್ನು ಪೃಥಕ್ಕರಿಸಿ ನೋಡುತ್ತಾನೆ.
ಮುಂಜಂ ಶರೀರಂ ತಸ್ಯಾಹುರಿಷೀಕಾಮಾತ್ಮನಿ ಶ್ರಿತಾಮ್ |
ಏತನ್ನಿದರ್ಶನಂ ಪ್ರೋಕ್ತಂ ಯೋಗವಿದ್ಭಿರನುತ್ತಮಮ್ ॥23॥
ಮುಂಜವನ್ನೇ ಶರೀರವೆಂದು ಹೇಳುತ್ತಾರೆ. ಪರಮಾತ್ಮನನ್ನು ಆಶ್ರಯಿಸಿಕೊಂಡಿರುವ ಜೀವನನ್ನು ಇಷೀಕ ಎನ್ನುತ್ತಾರೆ. ಈ ದೇಹ ಮತ್ತು ಆತ್ಮಗಳು ಪೃಥಕ್ಕಾಗಿವೆ ಎಂಬುದನ್ನು ಯೋಗವಿದ್ಯೆಯನ್ನು ತಿಳಿದ ವಿದ್ವಾಂಸರು ಈ ಉತ್ತಮವಾದ ನಿದರ್ಶನವನ್ನು ಹೇಳಿರುತ್ತಾರೆ.
ಯದಾ ಹಿ ಯುಕ್ತಮಾತ್ಮಾನಂ ಸಮ್ಯಕ್ ಪಶ್ಯತಿ ದೇಹಭೃತ್ |
ತದಾऽಸ್ಯ ಕೇಶವೇ ಭಕ್ತಿಸ್ತ್ರೈಲೋಕ್ಯಸ್ಯಾಪಿ ಯಃ ಪ್ರಭುಃ ॥24॥
ದೇಹವನ್ನು ಧರಿಸಿರುವ ಪುರುಷನು ಯೋಗದ ಮೂಲಕ ಪರಮಾತ್ಮನನ್ನು ಒಳಗಣ್ಣಿನಿಂದ ಚೆನ್ನಾಗಿ ನೋಡುತ್ತಾನೋ ಆ ಸಮಯದಲ್ಲಿ ಮೂರು ಲೋಕಗಳಿಗೂ ಒಡೆಯನಾಗಿರುವ ಸ್ವಾಮಿಯನ್ನೇ ಅರ್ಥಮಾಡಿಕೊಂಡ ಬಳಿಕ ಶ್ರೀಹರಿಯನ್ನು ಬಿಟ್ಟು ತನಗೆ ಮತ್ತೊಬ್ಬರು ನಿಯಾಮಕರಿಲ್ಲ ಎಂಬುದನ್ನು ಅರ್ಥಮಾಡಿಕೊಂಡಿರುತ್ತಾನೆ. ಕೇಶವನಲ್ಲಿ ಭಕ್ತಿಯೂ ದೃಢವಾಗುತ್ತದೆ.
ಅನ್ಯಾ ಅನ್ಯಾಶ್ಚ ತನವೋ ಯಥೇಷ್ಟಂ ಪ್ರತಿಪದ್ಯತೇ |
ವಿನಿರ್ಭಿದ್ಯ ಜರಾಂ ಮೃತ್ಯುಂ ನ ಹೃಷ್ಯತಿ ನ ಶೋಚತಿ ॥25॥
ಯೋಗಿಯಾದವನು ತನ್ನ ಇಚ್ಛೆಗನುಗುಣವಾಗಿ ನಾನಾ ವಿಧ ಶರೀರಗಳನ್ನು ಪಡೆಯುತ್ತಾನೆ. ಮುಪ್ಪು-ಸಾವುಗಳನ್ನೂ ಗೆಲ್ಲುತ್ತಾನೆ. ಅವನು ಶೋಕಿಸುವುದೂ ಇಲ್ಲ, ಬಾಹ್ಯಸುಖಗಳಿಂದ ಸಂತುಷ್ಟನಾಗುವುದೂ ಇಲ್ಲ.
ದೇವಾನಾಮಪಿ ದೇವತ್ವಂ ಯುಕ್ತಃ ಕಾರಯತೇ ವಶೀ |
ಬ್ರಹ್ಮ ಚಾವ್ಯಯಮಾಪ್ನೋತಿ ಹಿತ್ವಾ ದೇಹಮಶಾಶ್ವತಮ್ ॥26॥
ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವ ಸಿದ್ಧಪುರುಷನು ದೇವತೆಗಳಿಗೂ ದೇವತೆಯಾಗಬಲ್ಲನು. ಅನಿತ್ಯವಾದ ಶರೀರವನ್ನು ತ್ಯಾಗ ಮಾಡಿ, ಅವ್ಯಯನಾದ ಪರಬ್ರಹ್ಮನ ಪದವನ್ನು ಹೊಂದುತ್ತಾನೆ.
ವಿನಶ್ಯತ್ಸ್ವಪಿ ಲೋಕೇಷು ನ ಭಯಂ ತಸ್ಯ ಜಾಯತೇ |
ಕ್ಲಿಶ್ಯಮಾನೇಷು ಭೂತೇಷು ನ ಸ ಕ್ಲಿಶ್ಯತಿ ಕೇನಚಿತ್ ॥27॥
ಯೋಗಸಿದ್ಧಿಯನ್ನು ಪಡೆದ ವ್ಯಕ್ತಿಗೆ ಸಮಸ್ತ ಪ್ರಾಣಿಗಳು ನಾಶ ಹೊಂದಿದರೂ ಭಯವಾಗುವುದಿಲ್ಲ. ಎಲ್ಲರೂ ಕ್ಲೇಶವನ್ನು ಹೊಂದುತ್ತಿದ್ದರೂ ಅವನಿಗೆ ಯಾವುದೇ ವಿಧವಾದ ಕ್ಲೇಶವಿರುವುದಿಲ್ಲ.
ದುಃಖಶೋಕಮಯೈರ್ಘೋರೈಃ ಸಂಗಸ್ನೇಹಸಮುದ್ಭವೈಃ |
ನ ವಿಚಾಲ್ಯೇತ ಯುಕ್ತಾತ್ಮಾ ನಿಸ್ಪೃಹಃ ಶಾಂತಮಾನಸಃ ॥28॥
ಯೋಗಯುಕ್ತನಾದ, ಶಾಂತಚಿತ್ತನಾದ, ಸಮಸ್ತ ಬಾಹ್ಯ ಆಕಾಂಕ್ಷೆಗಳನ್ನು ಗೆದ್ದಿರುವ ಸಿದ್ಧಪುರುಷನು ಮೋಹ-ಸ್ನೇಹಗಳಿಂದ ಒದಗಿ ಬರುವ ದುಃಖ-ಶೋಕ-ಭಯಗಳಿಂದ ವಿಚಲಿತನಾಗುವುದಿಲ್ಲ.
ನೈನಂ ಶಸತ್ರಣಿ ವಿಧ್ಯಂತೇ ನ ಮೃತ್ಯುಶ್ಚಾಸ್ಯ ವಿದ್ಯತೇ |
ನಾತಃ ಸುಖತರಂ ಕಿಂಚಿಲ್ಲೋಕೇ ಕ್ವಚನ ವಿದ್ಯತೇ ॥29॥
ಯೋಗಿಯನ್ನು ಶಸ್ತ್ರಗಳೂ ಭೇದಿಸವು. ಮರಣ ಬಾಧಿಸದು. ಪ್ರಪಂಚದಲ್ಲಿ ಅವನಷ್ಟು ಸುಖಿಗಳಾದವರು ಬೇರೆ ಯಾರೂ ಕಾಣರು.
ಸಮ್ಯಗ್ಯುಕ್ತೋ ಯದಾऽऽತ್ಮಾನಮಾತ್ಮನ್ಯೇವ ಪ್ರಪಶ್ಯತಿ |
ತದೈವ ನ ಸ್ಪೃಹಯತಿ ಸಾಕ್ಷಾದಪಿ ಮರುತ್ಪತೇಃ ॥30॥
ಯೋಗಿಯು ತನ್ನ ಬುದ್ಧಿಯನ್ನು ಪರಮಾತ್ಮನಲ್ಲಿ ಸಮರ್ಪಿಸಿ, ಅವನಲ್ಲೇ ರತನಾಗಿರುತ್ತಾನೆ. ಸುಖ-ದುಃಖಗಳನ್ನು ದೂರೀಕರಿಸಿಕೊಂಡು ಉತ್ತಮವಾದ ಸ್ಥಾನಗಳು ಸಿಕ್ಕಿದರೂ ಅಪೇಕ್ಷಿಸದೆ ಸುಖವಾಗಿ ಇರುತ್ತಾನೆ.
ನಿರ್ವೇದಸ್ತು ನ ಗಂತವ್ಯೋ ಯುಂಜಾನೇನ ಕಥಂಚನ ॥31॥
ಯೋಗಜನಿತವಾದ ಐಶ್ವರ್ಯವನ್ನು ಉಪಭೋಗಿಸುವ ಯೋಗಿಯು ಯಾವುದೇ ಕಾರಣದಿಂದ ಯೋಗದಿಂದ ವಿರಕ್ತನಾಗಬಾರದು.
ಯೋಗಮೇಕಾಂತಶೀಲಸ್ತು ಯಥಾ ವಿಂದತಿ ತಚ್ಛೃಣು ॥32॥
ಏಕಾಂತಶೀಲನಾದ ವ್ಯಕ್ತಿಯು ಯೋಗವನ್ನು ಹೇಗೆ ಹೊಂದುತ್ತಾನೆ ಎಂದು ಹೇಳುತ್ತೇನೆ, ಕೇಳಿಸಿಕೊ.
ದೃಷ್ಟಪೂರ್ವಾಂ ದಿಶಂ ಧ್ಯಾತ್ವಾ ಯಸ್ಮಿನ್ ಸನ್ನಿವಸೇತ್ ಪುರೇ |
ಪುರಸ್ಯಾಭ್ಯಂತರೇ ತಸ್ಯ ಮನಶ್ಚಾರ್ಯಂ ನ ಬಾಹ್ಯತಃ ॥33॥
ಹಿಂದೆ ಗುರುಗಳಿಂದ ಉಪದಿಷ್ಟವಾದಾಗ ಕಂಡ ಸೂಕ್ಷ್ಮವಾದ ಮಾರ್ಗವನ್ನು ಧ್ಯಾನಿಸುತ್ತಾ, ಪರಮಾತ್ಮನು ಯಾವ ಶರೀರದ ಸ್ಥಳದಲ್ಲಿ ಇದ್ದಾನೋ ಅಲ್ಲಿಯೇ ಮನಸ್ಸನ್ನು ಸಂಯೋಜಿಸಬೇಕು. ಶರೀರದಿಂದ ಹೊರಗಿರುವ ಪ್ರಪಂಚದಲ್ಲಿ ಸಂಚಲನಶೀಲವಾದ ಮನಸ್ಸನ್ನು ಹರಿಬಿಡಬಾರದು.
ಪುರಸ್ಯಾಭ್ಯಂತರೇ ತಿಷ್ಠನ್ ಯಸ್ಮಿನ್ನಾವಸಥೇ ವಸೇತ್ |

ತಸ್ಮಿನ್ನಾವಸಥೇ ಚಾರ್ಯಂ ನ ಬಾಹ್ಯಾಭ್ಯಂತರೇ ಮನಃ ॥34॥
ಶರೀರದಲ್ಲಿರುವ ಜೀವನು ವಿಷಯಗಳನ್ನು ಇಂದ್ರಿಯಗಳಲ್ಲಿಯೂ, ಇಂದ್ರಿಯಗಳನ್ನು ಮನಸ್ಸಿನಲ್ಲಿಯೂ ನೆಲೆಗೊಳಿಸಿ, ಮನಸ್ಸನ್ನು ಪರಮಾತ್ಮನು ಸನ್ನಿಹಿತನಾಗಿರುವ ಮೂಲಾಧಾರಾದಿ ಚಕ್ರಗಳಲ್ಲಿ ನೆಲೆಗೊಳಿಸಬೇಕು.
ಪ್ರಚಿಂತ್ಯಾವಸಥಂ ಕೃತ್ಸ್ನಂ ಯಸ್ಮಿನ್ ಕಾಯೇಽವತಿಷ್ಠತೇ |
ತಸ್ಮಿನ್ ಕಾಯೇ ಮನಶ್ಚಾರ್ಯಂ ನ ಕಥಂಚನ ಬಾಹ್ಯತಃ ॥35॥
ಪರಮಾತ್ಮನಿರುವ ಮೂಲಾಧಾರವೇ ಮೊದಲಾದ ಚಕ್ರಗಳಲ್ಲಿ ಮನಸ್ಸನ್ನು ಸಂಪೂರ್ಣವಾಗಿ ವಿಲೀನಗೊಳಿಸಿ ಧ್ಯಾನ ಮಾಡುತ್ತಿರುವಾಗ ಯಾವ ಕಾಲದಲ್ಲಿ ಶ್ರೀಹರಿಯ ದರ್ಶನವಾಗುವುದೋ ಆ ಸಮಯದಲ್ಲಿಯೇ ಬಾಹ್ಯ ಸುಖಗಳ್ಯಾವುವೂ ಮನಸ್ಸಿನಲ್ಲಿ ಗೋಚರಿಸುವುದಿಲ್ಲ. ಮನಸ್ಸು ಶುಭ್ರವಾದ ಕನ್ನಡಿಯಂತಾಗುತ್ತದೆ. ಆ ಶುಭ್ರತೆ ಇದ್ದಾಗಲೇ ಪರಮಾತ್ಮನ ದರ್ಶನವು ಸಿದ್ಧಿಸುತ್ತದೆ.
ಸನ್ನಿಯಮ್ಯೇಂದ್ರಿಯಗ್ರಾಮಂ ನಿರ್ಘೋಷೇ ನಿರ್ಜನೇ ಶುಭೇ |
ಕಾಯಮಭ್ಯಂತರೇ ಕೃತ್ಸ್ನಮೇಕಾಗ್ರಃ ಪರಿಚಿಂತಯೇತ್ ॥36॥
ಇಂದ್ರಿಯಗಳ ಸಮುದಾಯವನ್ನು ನಿಯಂತ್ರಣಗೊಳಿಸಿ, ಶಬ್ದರಹಿತವಾದ ಜನರಿಂದ ದೂರವಾದ ಏಕಾಂತ ಸ್ಥಳದಲ್ಲಿ ಅವಿತುಕೊಂಡು ದೇಹದ ಒಳಗಡೆಯೇ ಇರುವ ಪರಮಾತ್ಮನನ್ನು ಏಕಾಗ್ರ ಬುದ್ಧಿಯಿಂದ ಧ್ಯಾನ ಮಾಡಬೇಕು.
ದಂತಾಂಸ್ತಾಲು ಚ ಜಿಹ್ವಾಂ ಚ ಗಲಂ ಗ್ರೀವಾಂ ತಥೈವ ಚ |
ಹೃದಯಂ ಚಿಂತಯೇಚ್ಚಾಪಿ ತಥಾ ಹೃದಯಬಂಧನಮ್ ॥37॥
ಹಲ್ಲುಗಳು, ದವಡೆಗಳು, ನಾಲಿಗೆ, ಗಂಟಲು, ಕುತ್ತಿಗೆ, ಹೃದಯಬಂಧನ- ಇವುಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಿಸಬೇಕು.
ಇತ್ಯುಕ್ತಃ ಸ ಮಯಾ ಶಿಷ್ಯೋ ಮೇಧಾವೀ ಮಧುಸೂದನ |
ಪಪ್ರಚ್ಛ ಪುನರೇವೇಮಂ ಮೋಕ್ಷಧರ್ಮಂ ಸುದುರ್ವಚಮ್ ॥38॥
ಈ ರೀತಿಯಾಗಿ ಮೇಧಾವಿಯಾದ ಸಿದ್ಧಪುರುಷನು ಅನೇಕ ತತ್ತ್ವಗಳನ್ನು ಉಪದೇಶಿಸಿದ ಬಳಿಕ ಪುನಃ ಯಾರೂ ತಿಳಿಸದ ಮೋಕ್ಷಧರ್ಮದ ಬಗ್ಗೆ ಕಾಶ್ಯಪನು ಪ್ರಶ್ನಿಸಿದನು.
ಶಿಷ್ಯಃ
ಭುಕ್ತಂ ಭುಕ್ತಂ ಕಥಮಿದಮನ್ನಂ ಕೋಷ್ಠೇ ವಿಪಚ್ಯತೇ |
ಕಥಂ ರಸತ್ವಂ ವ್ರಜತಿ ಶೋಣಿತಂ ಜಾಯತೇ ಕಥಮ್ ॥39॥
ಶಿಷ್ಯ ಪ್ರತಿದಿನವೂ ಮನುಷ್ಯನು ತಿನ್ನುವ ಆಹಾರವು ಹೊಟ್ಟೆಯನ್ನು ಸೇರಿದ ಮೇಲೆ ಹೇಗೆ ಜೀರ್ಣವಾಗುತ್ತದೆ? ಜೀರ್ಣವಾದ ಬಳಿಕ ಹೇಗೆ ರಸರೂಪವನ್ನು ಹೊಂದುತ್ತದೆ? ಹೇಗೆ ರಕ್ತರೂಪದಲ್ಲಿ ಪರಿಣಾಮವನ್ನು ಹೊಂದುತ್ತದೆ?
ಕಥಂ ಮಾಂಸಂ ಚ ಮೇದಶ್ಚ ಸ್ನಾಯ್ವಸ್ಥೀನಿ ಚ ಪೋಷಯೇತ್ |
ಕಥಮೇತಾನಿ ಸರ್ವಾಣಿ ಶರೀರಾಣಿ ಶರೀರಿಣಾಮ್ ॥40॥
ಹೇಗೆ ಮಾಂಸವಾಗುತ್ತದೆ? ಮೇದಸ್ಸಾಗುತ್ತದೆ? ಸ್ನಾಯು, ಅಸ್ಥಿಗಳಾಗಿ ದೇಹವನ್ನು ಪೋಷಿಸುತ್ತದೆ? ದೇಹಧಾರಿಗಳಾದ ಎಲ್ಲರ ಶರೀರಗಳು ಹೇಗೆ ವೃದ್ಧಿಯನ್ನು ಹೊಂದುತ್ತವೆ?
ವರ್ಧಂತೇ ವರ್ಧಮಾನಸ್ಯ ವರ್ಧತೇ ಚ ಕಥಂ ಬಲಮ್ |
ನಿರಾಸನಂ ನಿಷ್ಕಸನಂ ಮಲಾನಾಂ ಚ ಪೃಥಕ್ ಪೃಥಕ್ ॥41॥
ವೃದ್ಧಿಯನ್ನು ಹೊಂದುತ್ತಿರುವ ಮನುಷ್ಯನ ಬಲವು ಹೇಗೆ ವೃದ್ಧಿಯನ್ನು ಹೊಂದುತ್ತದೆ? ಸುತ್ತಲೂ ತಡೆಯಲ್ಪಟ್ಟ ಮಲ-ಮೂತ್ರಾದಿಗಳು ಪ್ರತ್ಯೇಕ ಪ್ರತ್ಯೇಕವಾಗಿ ಶರೀರದಿಂದ ಹೇಗೆ ಹೊರಗೆ ಹೋಗುತ್ತವೆ?
ಕುತೋ ವಾಯುಃ ಪ್ರಶ್ವಸಿತಿ ಉಚ್ಛ್ವಸಿತ್ಯಪಿ ವಾ ಪುನಃ |
ಕಥಂ ದೇಹಮಧಿಷ್ಠಾಯ ತಿಷ್ಠತ್ಯಾತ್ಮಾಽಯಮಾತ್ಮನಿ ॥42॥
ಜೀವಾತ್ಮನು ಯಾರ ದೆಸೆಯಿಂದ ಉಸಿರು ಬಿಡುತ್ತಿದ್ದಾನೆ? ಯಾರ ದೆಸೆಯಿಂದ ಉಸಿರನ್ನು ಸೆಳೆದುಕೊಳ್ಳುತ್ತಾನೆ? ಪರಮಾತ್ಮನು ಮನುಷ್ಯನಲ್ಲಿ ಯಾವ ಸ್ಥಾನವನ್ನು ಆಶ್ರಯಿಸಿ ನೆಲೆಸಿದ್ದಾನೆ?
ಜೀವಃ ಕಾಯಂ ವಹತಿ ಚೇಚ್ಚೇಷ್ಟಮಾನಃ ಕಲೇಬರಮ್ |
ಕಿಂವರ್ಣಃ ಕೀದೃಶಶ್ಚೈವ ನಿವೇಶಯತಿ ವೈ ಮನಃ ॥43॥
ಯಾಥಾತಥ್ಯೇನ ಭಗವನ್ ವಕ್ತುಮರ್ಹಸಿ ಮೇಽನಘ ॥44॥
ಜೀವಾತ್ಮನು ಈ ಶರೀರದಲ್ಲಿ ವ್ಯಾಪಾರ ಮಾಡುತ್ತಾ ಶರೀರವನ್ನು ಹೇಗೆ ಧಾರಣ ಮಾಡಿಕೊಳ್ಳುತ್ತಾನೆ? ಹೇಗಿದ್ದಾನೆ? ಅವನ ಬಣ್ಣ ಯಾವುದು? ನಿಷ್ಪಾಪನೇ, ಪೂಜ್ಯನೇ? ಇದನ್ನು ಯಥಾವತ್ತಾಗಿ ನನಗೆ ಹೇಳಲು ಅರ್ಹರಾಗಿದ್ದೀರಿ.
ಬ್ರಾಹ್ಮಣಃ
ಇತಿ ಸಂಪರಿಪೃಷ್ಟೋಽಹಂ ತೇನ ವಿಪ್ರೇಣ ಮಾಧವ |
ಪ್ರತ್ಯಬ್ರುವಂ ಮಹಾಪ್ರಾಜ್ಞ ಯಥಾಶ್ರುತಮರಿಂದಮ ॥45॥
ಬ್ರಾಹ್ಮಣ ಮಾಧವನೇ, ಅರಿಂದಮನೇ, ಮಹಾಪ್ರಾಜ್ಞನೇ, ಆ ಬ್ರಾಹ್ಮಣನಿಂದ ಪ್ರಶ್ನಿಸಲ್ಪಟ್ಟ ನಾನು ಹಿಂದೆ ಹೇಗೆ ಹೇಳಿದ್ದೆನೋ ಹಾಗೆಯೇ ಉತ್ತರಿಸಿದೆನು.
ಯಥಾ ಶ್ವಗೋಷ್ಠೇ ಪ್ರಕ್ಷಿಪ್ಯ ನಷ್ಟೇ ಭಾಂಡಮನಾ ಭವೇತ್ ॥46॥
ತಥಾ ಸ್ವಕಾಯಂ ಪ್ರಕ್ಷಿಪ್ಯ ಮನೋದ್ವಾರೈರನಿಶ್ಚಲೈಃ |
ಆತ್ಮಾನಂ ತತ್ರ ಮಾರ್ಗೇತ ಪ್ರಮಾದಂ ಪರಿವರ್ಜಯೇತ್ ॥47॥

ಯಾವ ರೀತಿಯಾಗಿ ಒಬ್ಬ ಮನುಷ್ಯನು ಧನಾದಿಗಳ ಭಾಂಡವನ್ನು ತನ್ನ ಕೋಣೆಯಲ್ಲಿಟ್ಟಿದ್ದರೂ ಅದರ ಬಗ್ಗೆಯೇ ಯೋಚಿಸುತ್ತಿರುವನೋ ಅದೇ ರೀತಿಯಲ್ಲಿ ಸಾಧಕನು ಚಂಚಲವಾದ ಇಂದ್ರಿಯಗಳ ಮೂಲಕ ಮನಸ್ಸನ್ನು ತನ್ನ ಶರೀರದಲ್ಲಿರಿಸಿ ಅಲ್ಲಿರುವ ನಿಧಿರೂಪನಾದ ಪರಮಾತ್ಮನನ್ನು ಚಿಂತಿಸುತ್ತಿರಬೇಕು. ಪರಮಾತ್ಮನನ್ನು ಚಿಂತಿಸುತ್ತಿರುವಾಗ ಲೌಕಿಕ ವಿಷಯಗಳ ಪ್ರಮಾದಕ್ಕೆ ವಶನಾಗಬಾರದು, ಜಾಗ್ರತನಾಗಿರಬೇಕು.

ಏವಂ ಸತತಮುದ್ಯುಕ್ತಃ ಪ್ರೀತಾತ್ಮಾ ನಚಿರಾತ್ ಸ ಚ |
ಆಸಾದಯತಿ ತದ್ ಬ್ರಹ್ಮ ಯದ್ ದೃಷ್ಟ್ವಾ ಸ್ಯಾತ್ ಪ್ರಧಾನವಿತ್ ॥48॥

ಹೀಗೆ ನಿರಂತರ ಧ್ಯಾನಪರನಾಗಿರುವವನು ಬಹಳ ಬೇಗ ಪ್ರಸನ್ನವಾದ ಮನಸ್ಸನ್ನು ಹೊಂದಿ, ಹೃದಯಗುಹೆಯಲ್ಲಿರುವ ಪರಬ್ರಹ್ಮನನ್ನು ಕಂಡುಕೊಳ್ಳುತ್ತಾನೆ. ಆತ್ಮಸಾಕ್ಷಾತ್ಕಾರವನ್ನು ಹೊಂದಿದ ಅವನಿಗೆ ತನಗೆ ಬಂಧಕವಾದ ಪ್ರಕೃತಿಯ ಎಚ್ಚರವೂ ಉಂಟಾಗುತ್ತದೆ.

ನ ತ್ವಸೌ ಚಕ್ಷುಷಾ ಗ್ರಾಹ್ಯೋ ನ ಚ ಸರ್ವೈರಪೀಂದ್ರಿಯೈಃ |
ಮನಸಾ ತು ಪ್ರದೀಪೇನ ಮಹಾನಾತ್ಮಾ ಪ್ರದೃಶ್ಯತೇ ॥49॥

ಆ ಹೃದಯಾಂತರ್ಗತನಾದ ಪರಬ್ರಹ್ಮನಾದರೂ ಕಣ್ಣಿಗೆ ಕಾಣುವವನಲ್ಲ, ಯಾವ ಇಂದ್ರಿಯಗಳಿಗೂ ಗೋಚರನಾಗುವವನಲ್ಲ. ದೀಪದಂತಿರುವ ಮನಸ್ಸಿನಿಂದ ಮಾತ್ರವೇ ಪರಬ್ರಹ್ಮನ ದರ್ಶನವು ಉಂಟಾಗುತ್ತದೆ.

ಸರ್ವತಃ ಪಾದಪಾಣಿಂ ತಂ ಸರ್ವತೋಕ್ಷಿಶಿರೋಮುಖಮ್ |
ಜೀವೋ ನಿಷ್ಕ್ರಾಂತಮಾತ್ಮಾನಂ ಶರೀರಾತ್ ಸಂಪ್ರಪಶ್ಯತಿ ॥50॥

ಆ ಪರಬ್ರಹ್ಮನು ಎಲ್ಲೆಡೆಯಲ್ಲಿಯೂ ಕಾಲು, ಕೈ, ಕಿವಿ, ಕಣ್ಣು, ತಲೆ, ಮುಖಗಳನ್ನು ಹೊಂದಿರುವವನಾಗಿದ್ದಾನೆ. ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಂಡು ಜೀವನು ತನ್ನ ಶರೀರದಲ್ಲಿರುವ ಭಗವಂತನನ್ನು ಅನುಭವದಿಂದ ತಿಳಿಯುತ್ತಾನೆ.

ಸ ತಮುತ್ಸೃಜ್ಯ ದೇಹಂ ತತ್ ಪ್ರಧ್ಯಾಯದ್ ಬ್ರಹ್ಮ ಕೇವಲಮ್ |
ಆತ್ಮಾನಮಾಲೋಕಯತಿ ಮನಸಾ ಪ್ರಹಸನ್ನಿವ ॥51॥

ಇಂತಹ ಜೀವನು ಶರೀರದಲ್ಲಿಯೇ ಇದ್ದರೂ ಶರೀರಸಂಬಂಧವಾದ ಬಂಧಕ ಸಂಸ್ಕಾರಗಳನ್ನು ಸಂಪೂರ್ಣವಾಗಿ ಪರಿತ್ಯಜಿಸಿ, ಪರಮಾತ್ಮನನ್ನೇ ಮನಸ್ಸಿನಿಂದ ಧ್ಯಾನ ಮಾಡುತ್ತಾನೆ.

ಇದಂ ಸರ್ವಂ ರಹಸ್ಯಂ ತೇ ಮಯೋಕ್ತಂ ದ್ವಿಜಸತ್ತಮ |
ಆಪೃಚ್ಛೇ ಸಾಧಯಿಷ್ಯಾಮಿ ಗಚ್ಛ ವಿಪ್ರ ಯಥಾಸುಖಮ್ ॥52॥

ಈ ಎಲ್ಲ ರಹಸ್ಯಗಳು ಬ್ರಾಹ್ಮಣಶ್ರೇಷ್ಠನೇ, ನಿನಗೆ ನನ್ನಿಂದ ಹೇಳಲ್ಪಟ್ಟವು. ನಾನಿನ್ನು ಪ್ರಯಾಣ ಮಾಡಲು ನಿನ್ನ ಅನುಮತಿಯನ್ನು ಬೇಡುತ್ತೇನೆ. ನೀನೂ ಸುಖವಾಗಿ ನಿನ್ನ ನಿವಾಸಕ್ಕೆ ಹೊರಡು.

ಇತ್ಯುಕ್ತಃ ಸ ತದಾ ಕೃಷ್ಣ ಮಯಾ ಶಿಷ್ಯೋ ಮಹಾತಪಾಃ |
ಅಗಚ್ಛದ್ ವೈ ಯಥಾಕಾಮಂ ಬ್ರಾಹ್ಮಣಶ್ಛಿನ್ನಸಂಶಯಃ ॥53॥

ಈ ರೀತಿಯಾಗಿ ಹೇಳಿದ ಬಳಿಕ ಕಠೋರವ್ರತನಿಷ್ಠನಾದ, ಮಹಾತಪಸ್ವಿಯಾದ, ಶಿಷ್ಯನಾದ ಕಾಶ್ಯಪಬ್ರಾಹ್ಮಣನು ಸಂಶಯಗಳನ್ನೆಲ್ಲ ಪರಿಹರಿಸಿ, ತನ್ನ ಸಂಕಲ್ಪಕ್ಕನುಗುಣವಾಗಿ ಹೊರಟು ಹೋದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಏಕೋನವಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಚತುರ್ಥೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

* * * * *

ಇಪ್ಪತ್ತನೆಯ ಅಧ್ಯಾಯ

ಕೃಷ್ಣನು ಅರ್ಜುನನಿಗೆ ಅನುಗೀತೆಯ ರಹಸ್ಯವನ್ನು ಹೇಳಿದುದು.

ಶ್ರೀಭಗವಾನ್

ಇತ್ಯುಕತ್ವ ಸ ತದಾ ಪಾರ್ಥ ವಾಕ್ಯಂ ಮಾಂ ದ್ವಿಜಪುಂಗವಃ |
ಮೋಕ್ಷಧರ್ಮಾಶ್ರಿತಂ ಸಮ್ಯಕ್ ತತ್ರೈವಾಂತರಧೀಯತ ॥1॥

ಶ್ರೀಭಗವಾನ್ ಮೋಕ್ಷಧರ್ಮವನ್ನೇ ಸಂಪೂರ್ಣವಾಗಿ ಆಶ್ರಯಿಸಿದ್ದ ಬ್ರಾಹ್ಮಣ ಶ್ರೇಷ್ಠನು ನನಗೆ ಈ ರೀತಿಯಾದ ಮಾತುಗಳನ್ನು ಹೇಳಿ ಅಂತರ್ಧಾನ ಹೊಂದಿದನು.

ಕಚ್ಚಿದೇತತ್ ತ್ವಯಾ ಪಾರ್ಥ ಶ್ರುತಮೇಕಾಗ್ರಚೇತಸಾ |
ತದಾಽಪಿ ಹಿ ರಥಸ್ಥಸ್ತ್ವಂ ಶ್ರುತವಾನೇತದೇವ ಹಿ ॥2॥

ಪಾರ್ಥನೇ, ಈಗಲಾದರೂ ನಾನು ಹೇಳಿದ ವಿಚಾರವನ್ನು ಏಕಾಗ್ರಚಿತ್ತನಾಗಿ ಕೇಳಿಸಿಕೊಂಡೆಯಾ? ಯುದ್ಧದ ಸಮಯದಲ್ಲಿಯೂ ಈ ಪರಬ್ರಹ್ಮವಿಚಾರವನ್ನೇ ರಥಾರೂಢನಾಗಿ ಕೇಳಿರುವಿ.

ನೈತತ್ ಪಾರ್ಥ ಸುವಿಜ್ಞೇಯಂ ವ್ಯಾಮಿಶ್ರೇಣೇತಿ ಮೇ ಮತಿಃ |
ನರೇಣಾಕೃತಸಂಗೇನಾವಿದಗ್ಧೇನಾಕೃತಾತ್ಮನಾ ॥3॥

ಅರ್ಜುನನೇ, ಬುದ್ಧಿಯು ಗೊಂದಲಕ್ಕೀಡಾಗಿದ್ದಾಗ ಈ ಪರಬ್ರಹ್ಮತತ್ತ್ವವು ತಿಳಿಯಲು ಕಷ್ಟವಾದುದು. ಯಾರು ಸ್ವಚ್ಛವಾದ ಅಂತಃಕರಣವುಳ್ಳವನೋ, ಅಸಂಗನಾಗಿರುವನೋ, ವಿಷಯಪದಾರ್ಥಗಳಿಂದ ಮನಸ್ಸು ದಗ್ಧವಾಗಿಲ್ಲವೋ ಅಂತಹ ಸತ್ಕರ್ಮಶೀಲನಿಗೆ ಈ ಪರಬ್ರಹ್ಮ ತತ್ತ್ವವು ತಿಳಿಯುತ್ತದೆ.

ಸರಹಸ್ಯಮಿದಂ ಪ್ರೋಕ್ತಂ ದೇವಾನಾಂ ಭರತರ್ಷಭ |
ಕಚ್ಚಿನ್ನೇದಂ ಶ್ರುತಂ ಪಾರ್ಥ ಮನ್ಯೇ ನಾನ್ಯೇನ ಕೇನಚಿತ್ ॥4॥
ಈ ಪರಬ್ರಹ್ಮತತ್ತ್ವವು ಅತ್ಯಂತ ರಹಸ್ಯವಾದುದು. ದೇವತೆಗಳಿಗೆ ಮಾತ್ರ ಹೇಳಲ್ಪಟ್ಟಿದೆ. ಈ ತತ್ತ್ವವನ್ನು ಮನುಷ್ಯಲೋಕದಲ್ಲಿ ಯಾರೂ ಪೂರ್ಣವಾಗಿ ತಿಳಿದಿರುವುದಿಲ್ಲ.
ನ ಹ್ಯೇತಚ್ಛ್ರೋತುಮರ್ಹೋಽನ್ಯೋ ಮನುಷ್ಯಸ್ತ್ವದೃತೇಽನಘ |
ನೈತದನ್ಯಸ್ಯ ವಿಜ್ಞೇಯಂ ವ್ಯಾಮಿಶ್ರೇಣಾಂತರಾತ್ಮನಾ ॥5॥
ನಿಷ್ಪಾಪನೇ, ಮನುಷ್ಯರಲ್ಲಿ ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರೂ ಈ ಪರಬ್ರಹ್ಮ ತತ್ತ್ವವನ್ನು ಕೇಳಲು ಅರ್ಹರಲ್ಲ. ಸಂದೇಹಗ್ರಸ್ತವಾದ ಮನುಷ್ಯನು ಈ ಪರಬ್ರಹ್ಮ ತತ್ತ್ವವನ್ನು ಅರಿಯಲಾರನು.
ಕ್ರಿಯಾವದ್ಭಿರ್ಹಿ ಕೌಂತೇಯ ದೇವಲೋಕಃ ಸಮಾವೃತಃ |
ನ ಚೈತದಿಷ್ಟಂ ದೇವಾನಾಂ ಮರ್ತ್ಯೈ ರ್ೃರುಪರಿ ವರ್ತನಮ್ ॥6॥
ಕುಂತೀಸುತನೇ, ಸತ್ಕರ್ಮವಂತರಾದ ದೇವತೆಗಳಿಂದ ದೇವಲೋಕವು ತುಂಬಿಹೋಗಿದೆ. ಮರಣಶೀಲರಾದ ಮನುಷ್ಯರು ದೇವಲೋಕದಲ್ಲಿ ಅಮರರಾಗಿ ಸಂಚರಿಸುವುದು ದೇವತೆಗಳಿಗೆ ಇಷ್ಟವಾದುದಲ್ಲ.
ಪರಾ ಹಿ ಸಾ ಗತಿಃ ಪಾರ್ಥ ಯತ್ತದ್ಬ್ರಹ್ಮ ಸನಾತನಮ್ |
ಯತ್ರಾಮೃತತ್ವಂ ಪ್ರಾಪ್ನೋತಿ ತ್ಯಕ್ತತ್ವ ದುಃಖಂ ಸದಾ ಸುಖೀ ॥7॥
ಅರ್ಜುನನೇ, ಸನಾತನವಾದ ಈ ಪರಬ್ರಹ್ಮನೇ ಜೀವರಿಗೆ ಪರಮಗತಿ ಎನಿಸಿದ್ದಾನೆ. ಜ್ಞಾನಿಯಾದವನು ದೇಹವನ್ನು ತ್ಯಾಗ ಮಾಡಿದ ಬಳಿಕ ಪರಬ್ರಹ್ಮನ ಧ್ಯಾನದ ಫಲವಾಗಿ ಅಮೃತತತ್ವವನ್ನು ಹೊಂದುತ್ತಾನೆ. ದುಃಖದಿಂದ ಬಿಡುಗಡೆ ಹೊಂದಿ ಸುಖೀಪುರುಷ ಎನಿಸುತ್ತಾನೆ.
ಏವಂ ಹಿ ಧರ್ಮಮಾಸ್ಥಾಯ ಯೇಽಪಿ ಸ್ಯುಃ ಪಾಪಯೋನಯಃ |
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥8॥
ಈ ಪರಬ್ರಹ್ಮನನ್ನು ತಿಳಿಯುವ ರಹಸ್ಯಯೋಗವನ್ನು ಆಶ್ರಯಿಸಿದ ಯಾವುದೇ ಯೋನಿಯ ವ್ಯಕ್ತಿಗಳಾಗಲಿ, ಸ್ತ್ರೀಯರಾಗಲಿ, ವೈಶ್ಯರಾಗಲಿ, ಶೂದ್ರರಾಗಲಿ ಪರಮ ಗತಿಯನ್ನು ನಿಶ್ಚಿತವಾಗಿ ಹೊಂದುತ್ತಾರೆ.
ಕಿಂ ಪುನರ್ಬ್ರಾಹ್ಮಣಾಃ ಪಾರ್ಥ ಕ್ಷತ್ರಿಯಾ ವಾ ಬಹುಶ್ರುತಾಃ |
ಸ್ವಧರ್ಮರತಯೋ ನಿತ್ಯಂ ಬ್ರಹ್ಮಲೋಕಪರಾಯಣಾಃ ॥9॥
ಹೀಗಿರುವಾಗ ಸ್ವಧರ್ಮನಿರತರಾದ ಬ್ರಾಹ್ಮಣರು, ಅನೇಕ ಶಾಸ್ತ್ರಗಳನ್ನು ಶ್ರವಣ ಮಾಡಿದ ಕ್ಷತ್ರಿಯರು, ಬ್ರಹ್ಮಲೋಕಪರಾಯಣರಾದ, ಸ್ವಧರ್ಮರತರಾದ ಇವರು ಖಂಡಿತವಾಗಿಯೂ ಪರಮಗತಿಯನ್ನು ಪಡದೇ ತೀರುತ್ತಾರೆ.
ಹೇತುಮತ್ ಚೈತದುದ್ದಿಷ್ಟಮುಪಾಯಾಶ್ಚಾಸ್ಯ ಸಾಧನೇ |
ಸಿದ್ಧೌ ಫಲಂ ಚ ಮೋಕ್ಷಶ್ಚ ದುಃಖಸ್ಯ ಚ ವಿನಿರ್ಣಯಃ ॥10॥
ಅರ್ಜುನನೇ, ನಿನಗೆ ಮೋಕ್ಷಧರ್ಮದ ಉಪಾಯಗಳನ್ನು ಯುಕ್ತಿಯುಕ್ತವಾಗಿ ಉಪದೇಶಿಸಿದ್ದೇನೆ. ಅದರ ಸಾಧನೋಪಾಯಗಳನ್ನೂ ಹೇಳಿದ್ದೇನೆ. ಸಿದ್ಧಿ, ಫಲ, ಮೋಕ್ಷ, ದುಃಖ - ಇವುಗಳ ಸ್ವರೂಪವನ್ನೂ ವಿಮರ್ಶಿಸಿ ಹೇಳಿದ್ದೇನೆ.
ಅತಃ ಪರಂ ಸುಖಂ ತ್ವನ್ಯತ್ ಕಿಂ ನು ಸ್ಯಾದ್ ಭರತರ್ಷಭ |
ಶ್ರುತವಾನ್ ಶ್ರದ್ದಧಾನಶ್ಚ ಪಾರಗಂತಾ ಚ ಪಾಂಡವ ॥11॥
ಇದಕ್ಕಿಂತಲೂ ಮಿಗಿಲಾದ ಸುಖವನ್ನು ತಂದೊಡ್ಡುವ ಧರ್ಮವು ಬೇರೆ ಯಾವುದೂ ಇರುವುದಿಲ್ಲ. ಬುದ್ಧಿವಂತನಾದ, ಶ್ರದ್ಧಾಳುವಾದ, ಸಂಸಾರದ ದಡವನ್ನು ಮುಟ್ಟುವ ಬಯಕೆಯುಳ್ಳ ಸಾಧಕನು ಈ ಪರಬ್ರಹ್ಮನನ್ನು ಹೊಂದಬಲ್ಲನು.
ಯಃ ಪರಿತ್ಯಜ್ಯತೇ ಮರ್ತ್ಯೋರ್ಲೋಕತಂತ್ರಮಸಾರವತ್ |
ಏತೈರುಪಾಯೈಃ ಸ ಕ್ಷಿಪ್ರಂ ಪರಾಂ ಗತಿಮವಾಪ್ನುತೇ ॥12॥
ಯಾವ ಸಾಧಕನು ಲೋಕದ ದೃಷ್ಟಿಯಿಂದ ಕಾಣುವ ಲೌಕಿಕ ಸುಖವನ್ನು ಸಾರಹೀನವೆಂದು ಅರಿತು, ಎಲ್ಲವನ್ನೂ ಪರಿತ್ಯಾಗ ಮಾಡಿ, ನಾನು ಹೇಳುವ ಉಪಾಯದಿಂದ ಸಾಧನೆಯನ್ನು ಮಾಡುತ್ತಾನೋ ಅವನು ಬೇಗ ಪರಮಗತಿಯನ್ನು ಹೊಂದುತ್ತಾನೆ.
ಏತಾವದೇವ ವಕ್ತವ್ಯಂ ನ ತೇ ಭೂಯೋಽಸ್ತಿ ಕಿಂಚನ |
ಷಣ್ಮಾಸಾನ್ ನಿತ್ಯಯುಕ್ತಸ್ಯ ಯೋಗಃ ಪಾರ್ಥ ಪ್ರವರ್ತತೇ ॥13॥
ಅರ್ಜುನನೇ, ಪರಮಾತ್ಮನ ಸಾಕ್ಷಾತ್ಕಾರದ ವಿಷಯದಲ್ಲಿ ಇಷ್ಟು ಮಾತ್ರ ಹೇಳಬಹುದಾಗಿದೆ. ಇದಕ್ಕಿಂತಲೂ ಹೆಚ್ಚು ಹೇಳಬೇಕಾದುದು ಯಾವುದೂ ಇರುವುದಿಲ್ಲ. ಯಾವನು ಈ ನನ್ನ ಉಪದೇಶವನ್ನು ನಿರಂತರ ಆರು ತಿಂಗಳು ಕಾಲ ಅಭ್ಯಾಸ ಮಾಡುತ್ತಾನೋ ಅವನು ಯೋಗಸಿದ್ಧಿಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *

ಇಪ್ಪತ್ತೊಂದನೆಯ ಅಧ್ಯಾಯ

ಕೃಷ್ಣನು ಅರ್ಜುನನನ್ನು ಕುರಿತು ಭೂತ-ಪ್ರಾಣಾದಿ ಸೃಷ್ಟಿ ಮೊದಲಾದವುಗಳನ್ನು ಪ್ರತಿಪಾದಿಸುವ ಬ್ರಾಹ್ಮಣದಂಪತಿಗಳ ಸಂವಾದವನ್ನು ಅನುವಾದಿಸಿದುದು.

ಶ್ರೀಭಗವಾನ್
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ದಂಪತ್ಯೋಃ ಪಾರ್ಥ ಸಂವಾದಮಭಯಂ ನಾಮ ನಾಮತಃ ||1||
ಶ್ರೀಭಗವಾನ್ ಅರ್ಜುನನೇ, ಹಿಂದೆ ಹೇಳಿದ ವಿಷಯದಲ್ಲಿ ಪತಿ-ಪತ್ನಿಯರ ಸಂವಾದರೂಪವಾದ, ಪುರಾತನವಾದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಬ್ರಾಹ್ಮಣೀ ಬ್ರಾಹ್ಮಣಂ ಕಂಚಿತ್ ಜ್ಞಾನವಿಜ್ಞಾನಪಾರಗಮ್ |
ದೃಷ್ಟ್ವಾ ವಿವಿಕ್ತ ಆಸೀನಂ ಭಾರ್ಯಾ ಭರ್ತಾರಮಬ್ರವೀತ್ ||2||
ಜ್ಞಾನ-ವಿಜ್ಞಾನ ಪಾರಂಗತನಾದ ಬ್ರಾಹ್ಮಣನೊಬ್ಬನು ನಿರ್ಜನವಾದ ಅರಣ್ಯದಲ್ಲಿ ಕುಳಿತಿರುವಾಗ ಅವನ ಭಾರ್ಯೆಯು ಪತಿಯ ಬಳಿ ಹೋಗಿ ವಿನಯದಿಂದ ಪ್ರಶ್ನಿಸುತ್ತಾಳೆ.
ಬ್ರಾಹ್ಮಣೀ
ಕಂ ನು ಲೋಕಂ ಗಮಿಷ್ಯಾಮಿ ತ್ವಾಮಹಂ ಪತಿಮಾಶ್ರಿತಾ |
ನ್ಯಸ್ತಕರ್ಮಾಣಮಾಸೀನಂ ಕೀನಾಶಮವಿಚಕ್ಷಣಮ್ ||3||
ಭಾರ್ಯಾಃ ಪತಿಕೃತಾನ್ ಲೋಕಾನ್ ಆಪ್ನುವಂತೀಹ ನಃ ಶ್ರುತಮ್ |
ತ್ವಾಮಹಂ ಪತಿಮಾಸಾದ್ಯ ಕಾಂ ಗಮಿಷ್ಯಾಮಿ ವೈ ಗತಿಮ್ ||4||
ಬ್ರಾಹ್ಮಣೀ ಪ್ರಾಣನಾಥನೇ, ಯಾವ ಬಾಹ್ಯಕಾರ್ಯವನ್ನು ಮಾಡದೆ ಕುಳಿತಿರುವ, ದುರ್ಬಲನಾದ, ಅವಿದ್ವಾಂಸನಾದ ನಿನ್ನನ್ನು ಪತಿಯಾಗಿ ಹೊಂದಿರುವ ನಾನು ಯಾವ ಲೋಕಕ್ಕೆ ಹೋಗುತ್ತೇನೆ? ಗಂಡಂದಿರು ಹೋಗುವ ಲೋಕಗಳಿಗೆ ಪತ್ನಿಯರೂ ಹೋಗುತ್ತಾರೆ ಎಂಬುದಾಗಿ ಕೇಳಿದ್ದೇನೆ. ನನಗೆ ಯಾವ ಗತಿಯು ಸಿಕ್ಕುತ್ತದೆ ಎಂದು ಉತ್ತರಿಸು.
ಶ್ರೀಭಗವಾನ್
ಏವಮುಕ್ತಃ ಸ ಶಾಂತಾತ್ಮಾ ತಾಮುವಾಚ ಹಸನ್ನಿವ ||5||
ಶ್ರೀಭಗವಾನ್ ಪತ್ನಿಯು ಹೀಗೆ ಕೇಳಲಾಗಿ ಶಾಂತಾತ್ಮನಾದ ಬ್ರಾಹ್ಮಣನು ನಗುತ್ತಿರುವನೋ ಎಂಬ ಮುಖಭಾವದಿಂದ ಹೀಗೆ ಉತ್ತರಿಸಿದನು.
ಬ್ರಾಹ್ಮಣಃ
ಸುಭಗೇ ನಾಭ್ಯಸೂಯಾಮಿ ವಾಕ್ಯಸ್ಯಾಸ್ಯ ತವಾನಘೇ ||6||
ಗ್ರಾಹ್ಯಂ ದೃಶ್ಯಂ ತಥಾ ಶ್ರಾವ್ಯಂ ಯದಿದಂ ಕರ್ಮ ವಿದ್ಯತೇ |
ಏತದೇವ ವ್ಯವಸ್ಯಂತಿ ಕರ್ಮ ಕರ್ಮೇತಿ ಕರ್ಮಿಣಃ ||7||
ಬ್ರಾಹ್ಮಣ ಸುಭಗೇ, ಪಾಪರಹಿತಳೇ, ನೀನು ಹೇಳುತ್ತಿರುವ ಮಾತುಗಳು ದೋಷಯುಕ್ತವಾಗಿವೆ ಎಂದು ನಾನು ಭಾವಿಸುವುದಿಲ್ಲ. ಲೋಕದ ಜನರು ದೀಕ್ಷಾ, ವ್ರತಾದಿಗಳನ್ನು ಏನು ಸ್ವೀಕರಿಸುತ್ತಾರೋ ಅವುಗಳು ಕಣ್ಣಿಗೆ ಕಾಣಿಸುವ ಸ್ಥೂಲ ಕರ್ಮಗಳು ಎನಿಸುತ್ತವೆ. ಅವುಗಳನ್ನೇ ಕರ್ಮ ಎನ್ನುತ್ತಾರೆ. ಇಂತಹ ಸ್ಥೂಲಕರ್ಮಗಳನ್ನು ಮಾಡುವವರು ಕರ್ಮಠರಾಗುತ್ತಾರೆ.
ಮೋಹಮೇವ ನಿಗಚ್ಛಂತಿ ಕರ್ಮಿಣೋ ಜ್ಞಾನವರ್ಜಿತಾಃ |
ನೈಷ್ಕರ್ಮ್ಯಂ ನ ಚ ಲೋಕೇಽಸ್ಮಿನ್ ಮೌರ್ತಮಿತ್ಯುಪಲಭ್ಯತೇ ||8||
ತಿಳುವಳಿಕೆ ಇಲ್ಲದ ವ್ಯಕ್ತಿಗಳು ಇಂತಹ ಸ್ಥೂಲಕರ್ಮಗಳನ್ನು ಆಚರಿಸಿ ಮೋಹವನ್ನೇ ಹೊಂದುತ್ತಾರೆ. ಭಗವಂತನ ಬಗ್ಗೆ ಅಂತರಂಗದ ಆಲೋಚನೆಗಳಿಲ್ಲದೆ, ಪ್ರವೃತ್ತಿ ಕರ್ಮಗಳಲ್ಲಿಯೇ ರತರಾಗಿ, ಮುಂದೆ ಹೇಳುವ ಕ್ರಮದಲ್ಲಿ ಭಗವಂತನ ಮೂರ್ತಿಗಳನ್ನು ಲೌಕಿಕ ಕಾಮನೆಗಳಿಗೋಸ್ಕರ ಉಪಾಸಿಸುತ್ತಾ ಕರ್ಮಠರೇ ಎನಿಸಿಕೊಳ್ಳುತ್ತಾರೆ. ಶ್ರದ್ಧಾ ರಹಿತರಾಗಿ ಸಂಪಾದಿಸುವ ಕರ್ಮಗಳು ಬಂಧಕವಾಗುತ್ತವೆಯೇ ವಿನಾ ಮೋಕ್ಷ ಸಾಧಕವಾದ ಜ್ಞಾನವು ಈ ಲೋಕದಲ್ಲಿ ಪ್ರಾಯಶಃ ದೊರಕುವುದಿಲ್ಲ.
ಕರ್ಮಣಾ ಮನಸಾ ವಾಚಾ ಶುಭಂ ವಾ ಯದಿ ವಾಽಶುಭಮ್ |
ಜನ್ಮಾದಿ ಮೂರ್ತಿಭೇದಾದ್ವೈ ಕರ್ಮ ಭೂತೇಷು ವರ್ತತೇ ||9||
ಕರ್ಮಗಳಿಂದ, ಮನಸ್ಸಿನಿಂದ, ಮಾತುಗಳಿಂದ ನಡೆಯುವ ಶುಭಾಶುಭ ಕರ್ಮಗಳು ಬ್ರಾಹ್ಮಣ-ಕ್ಷತ್ರಿಯಾದಿ ಜಾತಿಗೆ ಅನುಗುಣವಾಗಿ ಎಲ್ಲ ಪ್ರಾಣಿಗಳಿಂದಲೂ ಅನುಷ್ಠಾನ ಮಾಡಲ್ಪಡುತ್ತವೆ. ಎಲ್ಲರೂ ಕೂಡ ತಮ್ಮ ಜಾತಿಗನುಸಾರವಾಗಿ ಕರ್ಮಗಳನ್ನು ಆಚರಿಸುತ್ತಾ, ಬಂಧಕವಾದ ಪ್ರವೃತ್ತಿಕರ್ಮದಲ್ಲಿಯೇ ರತರಾಗಿರುತ್ತಾರೆ.
ರಕ್ಷೋಭಿರ್ವಧ್ಯಮಾನೇಷು ದೃಶ್ಯಾದೃಶ್ಯೇಷು ಕರ್ಮಸು |
ಆತ್ಮಸ್ಥಮಾತ್ಮನಾ ತೇನ ದೃಷ್ಟಮಾಯತನಂ ಮಯಾ ||10||
ಹಾದಿ-ಬೀದಿಗಳಲ್ಲಿ ಯಜ್ಞದ ಸಾಮಗ್ರಿಗಳನ್ನು ರಾಕ್ಷಸರು ಧ್ವಂಸ ಮಾಡತೊಡಗಿದರು. ಬಾಹ್ಯವಾದ ಕರ್ಮಗಳು ಆ ರಾಕ್ಷಸರಿಂದ ಹತವಾಗುತ್ತವೆ. ಅದನ್ನು ನೋಡಿದ ನಾನು ಬಾಹ್ಯವಾದ ಕರ್ಮಗಳನ್ನು ಮಾಡದೆ ನನ್ನ ಅಂತರ್ಯಾಮಿಯಾಗಿರುವ ಭಗವಂತನ ವಿಶೇಷಾನುಗ್ರಹವನ್ನು ಪಡೆದುಕೊಂಡು, ಬ್ರಹ್ಮಾದಿ ಸಕಲ ಜಗತ್ತಿಗೂ ಆಧಾರಭೂತನಾದ ಅವನ ಸ್ವರೂಪವನ್ನೇ ನಾನು ನೋಡಿದ್ದೇನೆ. ಆದ್ದರಿಂದ ನಾನು ಜ್ಞಾನನಿಷ್ಠನಾಗಿರುವುದರಿಂದ ಪ್ರವೃತ್ತಿ ಕರ್ಮಗಳಲ್ಲಿ ಶ್ರದ್ಧೆಯನ್ನು ತೋರಿಸುವುದಿಲ್ಲ. ನೀನಾದರೂ ದಡ್ಡ ಜನರಂತೆ ಬಾಹ್ಯಕರ್ಮಗಳನ್ನು ಮಾಡುತ್ತಾ, ಜ್ಞಾನಮಾರ್ಗವನ್ನು ತೊರೆದು ನನ್ನನ್ನು ದುರ್ಬಲ, ಅಪಂಡಿತ ಎಂದು ಅಪಹಾಸ್ಯ ಮಾಡುತ್ತಿರುವಿ.
ಯತ್ರ ತದ್ ಬ್ರಹ್ಮ ನಿರ್ದ್ವಂದ್ವಂ ಯತ್ರ ಸೋಮಃ ಸಹಾಗ್ನಿನಾ |
ವ್ಯವಾಯಂ ಕುರುತೇ ನಿತ್ಯಂ ಧೀರೋ ಭೂತಾನಿ ಧಾರಯನ್ ||11||
ಯಾವ ಪರಬ್ರಹ್ಮನನ್ನು ಹೊಂದಿದ ಮುಕ್ತಚೇತನರು ಸುಖ-ದುಃಖಗಳ ಪೀಡೆಗಳಿಗೆ ಎಂದಿಗೂ ತುತ್ತಾಗುವುದಿಲ್ಲ. ಆ ಪರಬ್ರಹ್ಮ

ವಸ್ತುವಿನ ಸ್ವರೂಪವೇ ಅಂತಹದು. ಮುಕ್ತಿಯಲ್ಲಿ ಮುಕ್ತನಾಗಿರುವಂತಹ ಚಂದ್ರನ ಜೊತೆಗೆ ಅಗ್ನಿಯು ಮುಕ್ತಜೀವರಿಗೆ ಹಿತವನ್ನೇ ಬಗೆಯುತ್ತಾನೆ. ಮುಕ್ತರಾದ ಚಂದ್ರ-ಅಗ್ನಿಗಳಲ್ಲಿ ಸ್ವಭಾವದ ಗುಣಗಳ ವಿರೋಧವಿರುವುದಿಲ್ಲ. ಅಗ್ನಿಯು ದಹಿಸಲಾರ, ಚಂದ್ರನು ಶೈತ್ಯನೀಡಲಾರ. ಈರ್ವರೂ ಮುಕ್ತರಿಗೆ ಸುಖದಾಯಕರಾಗಿಯೇ ಕಾಣಿಸುತ್ತಾರೆ. ಹೀಗೆ ವಿರುದ್ಧಗುಣಧರ್ಮಗಳನ್ನೇ ತೊರೆದು ಸುಖವಾಗಿ ವಾಸಿಸುವ ಸ್ಥಳ ಮುಕ್ತಿ ಎನಿಸಿದೆ. ಇಂತಹ ಸ್ಥಾನನಿಯಾಮಕನು ಪರಬ್ರಹ್ಮನಾಗಿದ್ದಾನೆ.

ಯತ್ರ ಬ್ರಹ್ಮಾದಯೋ ಯುಕ್ತಾಃ ತದಕ್ಷರಮುಪಾಸತೇ |
ವಿದ್ವಾಂಸಃ ಸುವ್ರತಾ ಯತ್ರ ಶಾಂತಾತ್ಮಾನೋ ಜಿತೇಂದ್ರಿಯಾಃ ॥12॥

ಯಾವ ಮುಖ್ಯಲೋಕಗಳಲ್ಲಿ ಬ್ರಹ್ಮಾದಿ ದೇವತೆಗಳು ಬಂಧಮುಕ್ತರಾಗಿ ಇದ್ದರೂ ಸಹ ಅಕ್ಷರನಾದ ಅವನನ್ನು ಉಪಾಸಿಸುತ್ತಾರೆ. ಎಲ್ಲರೂ ವ್ರತಾಚರಣಶೀಲರಾಗಿರುತ್ತಾರೆ, ವಿದ್ವಾಂಸರಾಗಿರುತ್ತಾರೆ, ಜಿತೇಂದ್ರಿಯರೂ, ಶಾಂತಾತ್ಮರಾಗಿರುತ್ತಾರೆ.

ಘ್ರಾಣೇನ ನ ತದಾಘ್ರೇಯಂ ನ ಚಾಸ್ವಾದ್ಯಂ ಚ ಜಿಹ್ವಯಾ |
ಸ್ಪರ್ಶನೇನ ಚ ತದತ್ಸ್ಪೃಶ್ಯಂ ಮನಸಾ ನಾವಗಮ್ಯತೇ ॥13॥
ಚಕ್ಷುಷಾ ನ ವಿಷಹ್ಯಂ ಚ ಯತ್ ಕಿಂಚಿಚ್ಛ್ರವಣಾತ್ ಪರಮ್ |
ಅಗಂಧರಸಮಸ್ಪರ್ಶಮ್ ಅರೂಪಂ ಶಬ್ದವರ್ಜಿತಮ್ ॥14॥
ಯತಃ ಪ್ರವರ್ತತೇ ತಂತ್ರಂ ಯತ್ರ ಚ ಪ್ರತಿತಿಷ್ಠತಿ |
ತತಃ ಪ್ರವರ್ತತೇ ತಂತ್ರಂ ತತ್ರ ಚ ಪ್ರತಿತಿಷ್ಠತಿ ॥15॥

ಆ ಪರಬ್ರಹ್ಮ ಸ್ವರೂಪವಾದರೂ ಘ್ರಾಣೇಂದ್ರಿಯದಿಂದ ಆಘ್ರಾಣಿಸಲ್ಪಡುವುದಿಲ್ಲ. ಜಿಹ್ವೇಂದ್ರಿಯದಿಂದ ಆಸ್ವಾದ್ಯವಲ್ಲ. ತ್ವಗಿಂದ್ರಿಯದಿಂದ ಸ್ಪರ್ಶನಕ್ಕೆ ಅರ್ಹವಲ್ಲ. ಮನಸ್ಸಿನಿಂದಲೂ ತಿಳಿಯಲಾಗದು. ಚಕ್ಷುರಿಂದ್ರಿಯಕ್ಕೆ ಗೋಚರವಾಗುವುದಿಲ್ಲ. ಶ್ರವಣೇಂದ್ರಿಯದಿಂದಲೂ ತಿಳಿಯಲ್ಪಡುವುದಿಲ್ಲ. ಪ್ರಾಕೃತಿಕವಾದ ಗಂಧ-ರಸ-ಸ್ಪರ್ಶ- ರೂಪ-ಶಬ್ದಗಳಿಂದ ಸ್ಥೂಲವಾದುದು. ಪ್ರಾಕೃತ ಗಂಧಾದಿಗಳನ್ನು ಗ್ರಹಿಸುವ ಇಂದ್ರಿಯಗಳು ಮುಕ್ತಿಯಲ್ಲಿರುವುದಿಲ್ಲವಾದ್ದರಿಂದ, ಭಗವಂತನಲ್ಲಿ ಪ್ರಕೃತಿಯಲ್ಲಿ ಇರುವುದಿಲ್ಲವಾದ್ದರಿಂದಲೂ ಪ್ರಾಕೃತ ಇಂದ್ರಿಯಗಳಿಗೆ ಭಗವಂತನು ಅಗೋಚರನೇ ಆಗಿದ್ದಾನೆ. ಜಗತ್ತೆಲ್ಲವನ್ನೂ ಅವನೇ ನಿಯಮನ ಮಾಡುತ್ತಿದ್ದಾನೆ. ಅವನಲ್ಲಿಯೇ ಜಗತ್ತು ನೆಲೆಗೊಂಡಿದೆ. ಅವನಿಂದಲೇ ಪ್ರವೃತ್ತಿಯನ್ನು ಹೊಂದುತ್ತದೆ. ಅವನಲ್ಲಿಯೇ ಲಯವನ್ನೂ ಹೊಂದುತ್ತದೆ.

ಪ್ರಾಣೋಪಾನಃ ಸಮಾನಶ್ಚ ವ್ಯಾನಶ್ಚೋದಾನ ಏವ ಚ |
ತತ ಏವ ಪ್ರವರ್ತಂತೇ ತಮೇವ ಪ್ರವಿಶಂತಿ ಚ ॥16॥

ಪ್ರಾಣ-ಅಪಾನ-ಸಮಾನ-ವ್ಯಾನ-ಉದಾನ ಈ ಪಂಚಪ್ರಾಣರು ಈ ಸೃಷ್ಟಿಯಲ್ಲಿ ಅವನಿಂದಲೇ ಪ್ರವೃತ್ತಿಯನ್ನು ಹೊಂದುತ್ತಾರೆ. ಅವನಲ್ಲಿಯೇ ಲಯವನ್ನು ಹೊಂದುತ್ತಾರೆ.

ಸಮಾನವ್ಯಾನಯೋರ್ಮಧ್ಯೇ ಪ್ರಾಣಾಪಾನೌ ವಿಚೇರತುಃ |
ತಸ್ಮಿನ್ ಸುಪ್ತೇ ಪ್ರಲೀಯಂತೇ ಸಮಾನೋ ವ್ಯಾನ ಏವ ಚ ॥17॥

ಸಮಾನ-ವ್ಯಾನರ ಮಧ್ಯದಲ್ಲಿ ಪ್ರಾಣಾಪಾನರ ಸಂಚಾರವಾಗುತ್ತದೆ. ಪ್ರಾಣಾಪಾನರು ಲಯ ಹೊಂದಿದರೆ ಸಮಾನ-ವ್ಯಾನರೂ ಪ್ರಾಣರಲ್ಲಿಯೇ ಲಯ ಹೊಂದುತ್ತಾರೆ.

ಅಪಾನಪ್ರಾಣಯೋರ್ಮಧ್ಯೇ ಉದಾನೋ ವ್ಯಾಪ್ಯ ತಿಷ್ಠತಿ |
ತಸ್ಮಾಚ್ಛಯಾನಂ ಪುರುಷಂ ಪ್ರಾಣಾಪಾನೌ ನ ಮುಂಚತಃ ॥18॥

ಅಪಾನ-ಪ್ರಾಣವಾಯುಗಳ ಮಧ್ಯದಲ್ಲಿ ಉದಾನವು ಎಲ್ಲವನ್ನೂ ವ್ಯಾಪಿಸಿಕೊಂಡಿರುತ್ತದೆ. ಈ ಕಾರಣದಿಂದಲೇ ಮಲಗಿರುವ ಮನುಷ್ಯನನ್ನು ಪ್ರಾಣಾಪಾನಗಳೆರಡೂ ಬಿಟ್ಟಿರುವುದಿಲ್ಲ.

ಪ್ರಾಣೋ ನೋಪಹತೇ ಯತ್ತು ತಮುದಾನಂ ಪ್ರಚಕ್ಷತೇ |
ತಸ್ಮಾತ್ ತಪೋ ವ್ಯವಸ್ಯಂತಿ ತದ್ಭವಂ ಬ್ರಹ್ಮವಾದಿನಃ ॥19॥

ಯಾವ ವಾಯುವಿನಿಂದ ಪ್ರಾಣವು ಮಲಗಿಕೊಳ್ಳುವುದಿಲ್ಲವೋ, ನಾಶ ಹೊಂದುವುದಿಲ್ಲವೋ, ಅಂಥ ಪ್ರಾಣಕ್ಕೆ ಆಧಾರವಾದ ವಾಯುವನ್ನೇ ಉದಾನವೆನ್ನುತ್ತಾರೆ. ಪ್ರಾಣಾದಿಗಳು ಉದಾನಾದಿಗಳಲ್ಲಿ ಹೊಂದುವ ಅಂತರ್ಧಾನವನ್ನೇ ಬ್ರಹ್ಮಜ್ಞಾನಿಗಳು ತಪಸ್ಸೆಂದು ಭಾವಿಸುತ್ತಾರೆ.

ತೇಷಾಮನ್ಯೋನ್ಯಭಕ್ಷಾಣಾಂ ಸರ್ವೇಷಾಂ ದೇಹಚಾರಿಣಾಮ್ |
ಅಗ್ನಿರ್ವೈಶ್ವಾನರೋ ಮಧ್ಯೇ ಸಪ್ತಧಾ ವಿಹಿತೋಽಂತರಾ ॥20॥

ಒಂದರಲ್ಲಿ ಮತ್ತೊಂದನ್ನು ಲಯಗೊಳಿಸುವ ಸ್ವಭಾವವುಳ್ಳ ಎಲ್ಲ ಪ್ರಾಣಿಗಳ ದೇಹದಲ್ಲಿಯೂ ಸಂಚರಿಸುವ ಪ್ರಾಣವಾಯುಗಳ ಮಧ್ಯದಲ್ಲಿ ನಾಭಿಮಂಡಲದಲ್ಲಿ ಸಮಾನವಾಯುವಿದೆ. ಅದರ ಮಧ್ಯದಲ್ಲಿರುವ ವೈಶ್ವಾನರಾಗ್ನಿಯು ಏಳು ರೂಪಗಳಾಗಿ ಪ್ರಕಾಶಿಸುತ್ತಿದೆ.

ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ತ್ವಕ್ ಚ ಶ್ರೋತ್ರಂ ಚ ಪಂಚಮೀ |
ಮನೋ ಬುದ್ಧಿಶ್ಚ ಸಪ್ತೈತಾ ಜಿಹ್ವಾ ವೈಶ್ವಾನರಾರ್ಚಿಷಃ ॥21॥
ಘ್ರೇಯಂ ಪೇಯಂ ಚ ದೃಶ್ಯಂ ಚ ಸ್ಪೃಶ್ಯಂ ಶ್ರಾವ್ಯಂ ತಥೈವ ಚ |
ಮಂತವ್ಯಮವಬೋದ್ಧವ್ಯಂ ತಾಃ ಸಪ್ತ ಸಮಿಧೋ ಮತಾಃ ॥22॥

ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ, ಮನಸ್ಸು, ಬುದ್ಧಿ - ಇವು ವೈಶ್ವಾನರ ಅಗ್ನಿಗೆ ಏಳು ನಾಲಿಗೆಗಳಾಗಿವೆ. ಆಘ್ರಾಣಿಸಲು ಯೋಗ್ಯವಾದ ಗಂಧ, ನೋಡಲು ಯೋಗ್ಯವಾದ ರೂಪ, ಪಾನ ಮಾಡಲು ಯೋಗ್ಯವಾದ ರಸ, ಮುಟ್ಟಲು ಯೋಗ್ಯವಾದ ಸ್ಪರ್ಶ, ಕೇಳಲು ಯೋಗ್ಯವಾದ ಶಬ್ದ, ಮನನ ಮಾಡಲು ಯೋಗ್ಯವಾದ ಬುದ್ಧಿಯ ಮೂಲಕ ತಿಳಿದುಕೊಳ್ಳಲು ಯೋಗ್ಯವಾದ ವಿಷಯ - ಈ

ಏಳು ವೈಶ್ವಾನರಾಗ್ನಿಗೆ ಸಮಿತ್ತುಗಳಂತಿವೆ.
ಘ್ರಾತಾ ಭಕ್ಷಯಿತಾ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಚ ಪಂಚಮಃ |
ಮಂತಾ ಬೋದ್ಧಾ ಚ ಸಪ್ತೈತೇ ಭವಂತಿ ಪರಮರ್ತ್ವಿಜಃ ||23||
ಆಘ್ರಾಣಿಸುವವನು, ತಿನ್ನುವವನು, ನೋಡುವವನು, ಮುಟ್ಟುವವನು, ಕೇಳುವವನು, ಮನನ ಮಾಡುವವನು, ತಿಳಿದುಕೊಳ್ಳುವವನು - ಈ ಏಳು ಮಂದಿ ವೈಶ್ವಾನರಾಗ್ನಿಗೆ ಸಂಬಂಧಿಸಿದ ಯಜ್ಞದಲ್ಲಿ ಶ್ರೇಷ್ಠರಾದ ಋತ್ವಿಜರು ಎಂದು ಭಾವಿಸಬೇಕು.
ಘ್ರೇಯೇ ಪೇಯೇ ಚ ದೃಶ್ಯೇ ಚ ಸ್ಪೃಶ್ಯೇ ಶ್ರಾವ್ಯೇ ತಥೈವ ಚ |
ಮಂತವ್ಯೇಪ್ಯವಬೋದ್ಧವ್ಯೇ ಸುಭಗೇ ಪಶ್ಯ ಸರ್ವದಾ ||24||
ಸೌಭಾಗ್ಯವತಿಯೇ, ಆಘ್ರಾಣಿಸಲು ಯೋಗ್ಯವಾದ, ಆಸ್ವಾದಿಸಲು ಯೋಗ್ಯವಾದ, ನೋಡಲು ಯೋಗ್ಯವಾದ, ಮುಟ್ಟಲು ಯೋಗ್ಯವಾದ, ಕೇಳಲು ಯೋಗ್ಯವಾದ ಐದು ಇಂದ್ರಿಯಗಳು ಹೊರಗಡೆಯಿಂದ ವ್ಯಾಪಾರಗಳನ್ನು ನಡೆಸಿದರೆ, ಮನನ ಮಾಡಲು ಯೋಗ್ಯವಾದ, ತಿಳಿಯಲು ಯೋಗ್ಯವಾದ ಇಂದ್ರಿಯಗಳು ಒಳಮುಖವಾದ ಇಂದ್ರಿಯಗಳೆನಿಸಿವೆ. ಇವುಗಳನ್ನೇ ಹವಿಸ್ಸುಗಳನ್ನಾಗಿ ಚಿಂತಿಸಬೇಕು.
ಹವೀಂಷ್ಯಗ್ನಿಷು ಹೋತಾರಃ ಸಪ್ತಧಾ ಸಪ್ತ ಸಪ್ತಸು |
ಸಮ್ಯಕ್ ಪ್ರಕ್ಷಿಪ್ಯ ವಿದ್ವಾಂಸೋ ಜನಯಂತಿ ಸ್ವಯೋನಿಷು ||25||
ಘಾತಾ, ಭಕ್ಷಯಿತಾ ಮೊದಲಾದ ಏಳು ಹೋತೃಗಳ ಜೊತೆಗೆ ಕೂಡಿಕೊಂಡು ಘ್ರೇಯ, ದೃಶ್ಯ ಮೊದಲಾದ ಏಳು ಸಮಿತ್ತುಗಳನ್ನು ಘ್ರಾಣ, ಜಿಹ್ವೆ ಮೊದಲಾದ ವೈಶ್ವಾನರ ನಾಲಿಗೆಗಳಲ್ಲಿ ವಿದ್ವಾಂಸರು ಹೋಮ ಮಾಡಿ, ಪೃಥಿವ್ಯಾದಿಗಳಲ್ಲಿ ಶಬ್ದಾದಿ ವಿಷಯಗಳನ್ನು ಉತ್ಪತ್ತಿ ಮಾಡುತ್ತಾರೆ. ಪ್ರತಿಕ್ಷಣದಲ್ಲಿ ಇಂದ್ರಿಯಗಳಿಂದ ನಡೆಯುವ ವ್ಯಾಪಾರವನ್ನು ವೈಶ್ವಾನರನಿಗೆ ನಡೆಯುವ ಆಹುತಿ ಎಂದು ಚಿಂತಿಸುತ್ತಾ, ಕ್ರಿಯೆಗಳನ್ನು ನಡೆಸುತ್ತಾರೆ.
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ |
ಮನೋ ಬುದ್ಧಿಶ್ಚ ಸಪ್ತೈತೇ ಯೋನಿರಿತ್ಯೇವ ಶಬ್ದಿತಾಃ ||26||
ಪೃಥಿವೀ, ವಾಯು, ಆಕಾಶ, ಜಲ, ಜ್ಯೋತಿ, ಮನ, ಬುದ್ಧಿ - ಇವುಗಳನ್ನು ಸಪ್ತಯೋನಿಗಳು ಎಂದು ಹೇಳುತ್ತಾರೆ.
ಹವಿರ್ಗತಾ ಗುಣಾಃ ಸರ್ವೇ ಪ್ರವಿಶಂತ್ಯಗ್ನಿಮುನ್ಮುಖಮ್ |
ಅಂತರ್ವಾಸಮುಷಿತ್ವಾ ಚ ಜಾಯಂತೇ ಸ್ವಾಸು ಯೋನಿಷು ||27||
ಪೃಥಿವಿಯೇ ಮೊದಲಾದ ಯಾವ ಗಂಧಾದಿ ಗುಣಗಳಿವೆಯೋ ಇವುಗಳು ಹವಿಷ್ಯ ರೂಪವೆನಿಸಿವೆ. ಅವೆಲ್ಲವೂ ವೈಶ್ವಾನರಾಗ್ನಿಯಿಂದಲೇ ಹುಟ್ಟನ್ನು ಪಡೆದ ಬುದ್ಧಿಯನ್ನು ಪ್ರವೇಶಿಸುತ್ತದೆ. ಆ ಗುಣಗಳೆಲ್ಲವೂ ಬುದ್ಧಿಯಲ್ಲಿ ಸೇರಿಕೊಂಡು, ಯೋಗ್ಯವಾದ ಕಾಲದಲ್ಲಿ ತಮ್ಮ ಸ್ಥಾನಗಳಲ್ಲಿ ಅಭಿವ್ಯಕ್ತಿಯನ್ನು ಹೊಂದುತ್ತವೆ. ಗಂಧವು ಮೂಗಿನಲ್ಲಿ, ರಸವು ನಾಲಿಗೆಯಲ್ಲಿ, ರೂಪವು ಕಣ್ಣಿನಲ್ಲಿ ಮುಂತಾಗಿ.
ತತ್ರೈವ ಚ ನಿರುದ್ಧ್ಯಂತೇ ಪ್ರಲಯೇ ಭೂತಭಾವನೇ |
ತತಃ ಸಂಜಾಯತೇ ಗಂಧಃ ತತಃ ಸಂಜಾಯತೇ ರಸಃ ||28||
ಜೀವರ ಮರಣದ ಸಮಯದಲ್ಲಿ ಈ ಗುಣಗಳು ಜೀವನ ಬುದ್ಧಿಯಲ್ಲಿಯೇ ಬಂಧಿಸುತ್ತವೆ. ಪ್ರಾಣಿಗಳ ಸೃಷ್ಟಿಯ ಸಮಯದಲ್ಲಿ ಜೀವನ ಜೊತೆಗೆ ಇರುವ ಬುದ್ಧಿಯಲ್ಲಿ ಸಂಸ್ಕಾರರೂಪದಲ್ಲಿರುವ ಈ ಗುಣಗಳು ಪುನಃ ಪ್ರಾಕಟ್ಯವನ್ನು ಹೊಂದುತ್ತವೆ.
ತತಃ ಸಂಜಾಯತೇ ರೂಪಂ ತತಃ ಸ್ಪರ್ಶೋಽಭಿಜಾಯತೇ |
ತತಃ ಸಂಜಾಯತೇ ಶಬ್ದಃ ಸಂಶಯಸ್ತತ್ರ ಜಾಯತೇ ||29||
ತತಃ ಸಂಜಾಯತೇ ನಿಷ್ಠಾ ಜನ್ಮೈತತ್ ಸಪ್ತಧಾ ವಿದುಃ ||30||
ರೂಪ, ಸ್ಪರ್ಶ, ಶಬ್ದ, ಸಂಶಯ, ನಿಶ್ಚಯಾತ್ಮಕವಾದ ಬುದ್ಧಿ - ಇವೆಲ್ಲವೂ ಜೀವನ ಜೊತೆಗೆ ಇರುವ ಬುದ್ಧಿಯ ಮೂಲಕ ಅಭಿವ್ಯಕ್ತಿಯನ್ನು ಹೊಂದುತ್ತವೆ. ಹೀಗೆ ಈ ಗುಣಗಳು ಏಳು ಪ್ರಕಾರವಾಗಿ ಹುಟ್ಟುವವೆಂದು ವಿದ್ವಾಂಸರು ತಿಳಿಯುತ್ತಾರೆ.
ಅನೇನೈವ ಪ್ರಕಾರೇಣ ಪ್ರಗೃಹೀತಾಃ ಪುರಾತನೈಃ |
ಪೂರ್ಣಾಹುತಿಭಿರಾಪೂರ್ಣಾಸ್ತೈಃ ಪೂರ್ಯಂತೇ ಮಹಾಜನಾಃ ||31||
ಈ ಪ್ರಕಾರವಾಗಿಯೇ ಪುರಾತನರಾದ ಋಷಿಗಳು ಜ್ಞಾನವೇ ಮುಂತಾದವುಗಳ ಸ್ವರೂಪವನ್ನು ಗ್ರಹಣ ಮಾಡಿದ್ದಾರೆ. ತಿಳಿಯುವ ವ್ಯಕ್ತಿ, ತಿಳಿಯುವ ವಿಷಯ, ತಿಳಿಯುವ ಜ್ಞಾನ - ಈ ಮೂರರ ಪೂರ್ಣಾಹುತಿಯಿಂದಲೇ ಸಮಸ್ತ ಲೋಕಗಳು ವ್ಯಾಪ್ತವಾಗಿವೆ. ಈ ತತ್ವಗಳಿಂದಲೇ ಸಮಸ್ತ ಲೋಕಗಳೂ ತುಂಬಿಹೋಗಿವೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಪಂಚಪ್ರಾಣೇ ಸ್ಥಿತಿಕಥನಂ ನಾಮ ಏಕವಿಂಶೋಽಧ್ಯಾಯಃ ||
|| ಅನುಗೀತಾಪರ್ವಣಿ ಷಷ್ಠೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ಹತ್ತು ಇಂದ್ರಿಯಗಳ ಗುಣಾದಿಗಳನ್ನು ಪ್ರತಿಪಾದಿಸುವ ಬ್ರಾಹ್ಮಣದಂಪತಿಗಳ ಸಂವಾದವನ್ನು ಹೇಳಿದುದು.
ಬ್ರಾಹ್ಮಣಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಿಬೋಧ ದಶಹೋತೄಣಾಂ ವಿಧಾನಮಿಹ ಯಾದೃಶಮ್ ||1||

ಬ್ರಾಹ್ಮಣ ಪ್ರಿಯಳೇ, ಈ ವಿಷಯದಲ್ಲಿ ಪುರಾತನವಾದ ಇತಿಹಾಸವನ್ನು ಯಾವ ವಿದ್ವಾಂಸರು ಉದಾಹರಿಸುತ್ತಾ, ಹತ್ತು ಮಂದಿ ಹೋತೃಗಳು ಸೇರಿ ಯಾವ ರೀತಿಯಲ್ಲಿ ಯಜ್ಞ ಮಾಡುತ್ತಾರೆ ಎಂದು ಹೇಳುತ್ತಾರೋ ಅದನ್ನು ತಿಳಿಸುತ್ತೇನೆ, ಕೇಳು.
ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ನಾಸಿಕಾ ಚರಣೌ ಕರೌ |
ಉಪಸ್ಥಂ ಪಾಯುರಿತಿ ವಾ ಹೋತೄಣಿ ದಶ ಭಾಮಿನಿ ॥2॥
ಭಾಮಿನಿಯೇ, ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು, ಎರಡು ಕಾಲುಗಳು, ಕೈಗಳು, ಜನನೇಂದ್ರಿಯ, ಪಾಯು - ಇವುಗಳೇ ನಾನು ಹೇಳಿದ ಹತ್ತು ಮಂದಿ ಹೋತೃಗಳು.
ಶಬ್ದಸ್ಪರ್ಶೌ ರೂಪರಸೌ ಗಂಧೋ ವಾಕ್ಯಂ ಕ್ರಿಯಾ ಗತಿಃ |
ರೇತೋಮೂತ್ರಪುರೀಷಾಣಾಂ ತ್ಯಾಗೋ ದಶ ಹವೀಂಷಿ ಚ ॥3॥
ಶಬ್ದ, ಸ್ಪರ್ಶ, ರೂಪ, ರಸ, ಗಂಧ, ವಾಣಿ, ಕ್ರಿಯೆ, ಗತಿ, ವೀರ್ಯಮೂತ್ರ ತ್ಯಾಗ, ಮಲತ್ಯಾಗ - ಈ ವಿಷಯಗಳೇ ಹತ್ತು ಹವಿಸ್ಸುಗಳು.
ದಿಶೋ ವಾಯೂ ರವಿಶ್ಚಂದ್ರಃ ಪೃಥ್ವಗ್ನೀ ವಿಷ್ಣುರೇವ ಚ |
ಇಂದ್ರಃ ಪ್ರಜಾಪತಿರ್ಮಿತ್ರಮಗ್ನಯೋ ದಶ ಭಾಮಿನಿ ॥4॥
ಭಾಮಿನಿಯೇ, ದಿಕ್ಕು, ವಾಯು, ಸೂರ್ಯ, ಚಂದ್ರ, ಪೃಥಿವೀ, ಅಗ್ನಿ, ವಿಷ್ಣು, ಇಂದ್ರ, ಪ್ರಜಾಪತಿ, ಮಿತ್ರ - ಈ ಹತ್ತು ದೇವತೆಗಳೇ ಅಗ್ನಿಗಳು.
ದಶೇಂದ್ರಿಯಾಣಿ ಹೋತೄಣಿ ಹವೀಂಷಿ ದಶ ಭಾಮಿನಿ |
ವಿಷಯಾ ನಾಮ ಸಮಿಧೋ ಹೂಯಂತೇ ತು ದಶಾಗ್ನಿಷು ॥5॥
ಭಾಮಿನಿಯೇ, ಇಂದ್ರಿಯರೂಪರಾದ ಹೋತೃಗಳು ದಿಕ್ಕು ಮೊದಲಾದ ಹತ್ತು ಅಗ್ನಿಗಳಲ್ಲಿ ಶಬ್ದ ಮೊದಲಾದ ಹತ್ತು ಹವಿಸ್ಸುಗಳನ್ನು ಹೋಮ ಮಾಡುತ್ತಾರೆ.
ಚಿತ್ರಂ ಸ್ರುವಶ್ಚ ವಿತ್ತಂ ಚ ಪವಿತ್ರಂ ಜ್ಞಾನಮುತ್ತಮಮ್ |
ಸುವಿಭಕ್ತಮಿದಂ ಸರ್ವಂ ಜಗದಾಸೀದಿತಿ ಶ್ರುತಮ್ ॥6॥
ಈ ದೇಹಪ್ರಾಪ್ತಿಯ ಯಜ್ಞದಲ್ಲಿ ಚಿತ್ತವೇ ಹೋಮ ಮಾಡುವ ಸ್ರುವ ಎನಿಸಿದೆ. ಪವಿತ್ರವೂ ಶ್ರೇಷ್ಠವಾದ ಜ್ಞಾನವು ವಿತ್ತ ಎನಿಸಿದೆ. ಈ ಎಲ್ಲ ಜಗತ್ತು ಹಿಂದೆ ಚೆನ್ನಾಗಿ ವಿಭಾಗಿಸಲ್ಪಟ್ಟಿದೆ ಎಂದು ನಾವು ಕೇಳಿದ್ದೇವೆ.
ಸರ್ವಮೇವಾತ್ರ ವಿಜ್ಞೇಯಂ ಚಿತ್ತಂ ಜ್ಞಾನಮವೇಕ್ಷತೇ ॥7॥
ತಿಳಿಯಲ್ಪಡಬೇಕಾಗಿರುವ ಎಲ್ಲ ಜಗತ್ತು ಚಿತ್ತರೂಪವಾಗಿಯೇ ಇದೆ. ಚಿತ್ತ ಸ್ವಾಭಾವಿಕವಾಗಿ ಜ್ಞಾನವನ್ನು ಅಪೇಕ್ಷಿಸುತ್ತದೆ.
ಚೇತಃ ಶರೀರಭೋಕ್ತಾ ಯೋ ವಿಜ್ಞಾತಾ ತು ಶರೀರಭೃತ್ |
ಶರೀರಭೃದ್ ಗಾರ್ಹಪತ್ಯಸ್ತಸ್ಮಾದನ್ಯಃ ಪ್ರಣೀಯತೇ ॥8॥
ತತಶ್ಚಾಹವನೀಯಸ್ತು ತಸ್ಮಿನ್ ಪ್ರಕ್ಷಿಪ್ಯತೇ ಹವಿಃ |
ತತೋ ವಾಚಸ್ಪತಿರ್ಯಜ್ಞೋ ಮನಸಾ ಪರ್ಯವೇಕ್ಷತೇ ॥9॥
ಚಿತ್ತಾಭಿಮಾನಿಯಾದ ಚತುರ್ಮುಖ ಬ್ರಹ್ಮನು ಶರೀರದಲ್ಲಿದ್ದು, ಸಾರಭೋಕ್ತೃವಾದ ನಾರಾಯಣನು, ವಿಜ್ಞಾನತತತ್ತ್ವಭಿಮಾನಿಯಾದ ಸರಸ್ವತೀ, ಪಾರ್ವತೀ ಮೊದಲಾದವರು, ಶರೀರಧಾರಕನಾದ ಮುಖ್ಯಪ್ರಾಣ - ಇವರು ಐದು ಮಂದಿ ಅಂತಃಕರಣ ದೇವತೆಗಳೆನಿಸಿದ್ದಾರೆ. ಇವರಲ್ಲಿ ಶರೀರಭೃನ್ನಾಮಕನಾದ ಮುಖ್ಯಪ್ರಾಣನೇ ಗಾರ್ಹಪತ್ಯ ಅಗ್ನಿಸ್ಥಾನನಾಗಿದ್ದಾನೆ. ಈ ಮುಖ್ಯಪ್ರಾಣನಿಗಿಂತ ಭಿನ್ನರಾದ ವಿಜ್ಞಾನತತತ್ತ್ವಭಿ- ಮಾನಿನಿಯರು ಅಗ್ನಿಸ್ಥಾನೀಯರಾಗಿದ್ದಾರೆ. ಇವರ ದೆಶೆಯಿಂದ ಆವಹನ ಯೋಗ್ಯವಾದ ಜಠರಾಗ್ನಿಯು ಹುಟ್ಟುತ್ತದೆ. ಅದರ ದೆಶೆಯಿಂದ ವಾಗಭಿಮಾನಿ ದೇವನು ಅನಂತರ ಮನಸ್ಸಿನ ಮೂಲಕ ನೋಡುತ್ತಾನೆ. ಮನಸ್ಸಿನ ಮೂಲಕ ತಿಳಿಯುವ ಅಭಿಮಾನಿಯ ದೆಶೆಯಿಂದಲೇ ಧ್ಯಾನಯೋಗ್ಯವಾದ ಭಗವಂತನ ಮೂರ್ತಿಗಳು ಕಾಣಲ್ಪಡುತ್ತವೆ. ಪ್ರಾಣಭೃನ್ನಾಮಕನಾದ ಮುಖ್ಯಪ್ರಾಣನು ಪ್ರಾಣಾಪಾನಾದಿ ದೇವದತ್ತಾದಿ ರೂಪಗಳಿಂದ ಚಿಂತಿಸಿದಾಗ ದಶಹೋತೃಗಳು ಆಗುತ್ತಾರೆ.
ರೂಪಂ ಭವತಿ ವೈ ವಕ್ತ್ರಂ ತದನುದ್ರವತೇ ಮನಃ ॥10॥
ಅನಂತರ ರೂಪದ ಪ್ರಾದುರ್ಭಾವವಾಗುತ್ತದೆ. ರೂಪವು ಮನಸ್ಸಿನ ಕಡೆ ಧಾವಿಸುತ್ತದೆ.
ಬ್ರಾಹ್ಮಣೀ
ಕಸ್ಮಾದ್ ವಾಗಭವತ್ ಪೂರ್ವಂ ಕಸ್ಮಾತ್ ಪಶ್ಚಾನ್ಮನೋಽಭವತ್ |
ಮನಸಾ ಚಿಂತಿತಂ ಪೂರ್ವಂ ವಾಕ್ಯಂ ಸಮಭಿಪದ್ಯತೇ ॥11॥
ಬ್ರಾಹ್ಮಣಿ ಪ್ರಿಯತಮನೇ, ಯಾವ ಕಾರಣದಿಂದ ವಾಗಿಂದ್ರಿಯವು ಮೊದಲು ಹುಟ್ಟಿತು? ವಾಗಿಂದ್ರಿಯದ ನಂತರವೇ ಏಕೆ ಮನಸ್ಸು ಹುಟ್ಟಿತು? ಕಾರಣ ವ್ಯವಹಾರದಲ್ಲಿ ಮನಸ್ಸು ಯೋಚಿಸಿದ ನಂತರವೇ ಮಾತು ಹೊರಬರುತ್ತದಲ್ಲವೇ?
ಕೇನ ವಿಜ್ಞಾನಯೋಗೇನ ಮತಿಶ್ಚಿತ್ತಂ ಸಮಾಪ್ನುತೇ |
ಸಮುನ್ನೀತಾ ನಾಧಿಗಚ್ಛೇತ್ ಕೋ ವೈನಾಂ ಪ್ರತಿಷೇಧತಿ ॥12॥
ಯಾವ ವಿಜ್ಞಾನದ ಪ್ರಭಾವದಿಂದ ಬುದ್ಧಿಯು ಚಿತ್ತವನ್ನು ಆಶ್ರಯಿಸಿದೆ? ಬುದ್ಧಿಯು ಲಯ ಹೊಂದಿದಾಗ ಸುಷುಪ್ತಿಯ ಅವಸ್ಥೆಯಲ್ಲಿ ವಿಷಯಗಳ ಕಡೆ ಏಕೆ ಸಾಗುವುದಿಲ್ಲ? ಸಾಗದಿರುವಂತೆ ಯಾರು ನಿಯಮಿಸುತ್ತಾರೆ?
ಬ್ರಾಹ್ಮಣಃ
ತಾಮುದಾನಃ ಪತಿರ್ಭೂತ್ವಾ ತಸ್ಮಾತ್ ಪ್ರೇಕ್ಷತ್ಯಪಾನಿತಿ |
ತಾಂ ಮತಿಂ ಮನಸಃ ಪ್ರಾಹುರ್ಮನಸ್ತಸ್ಮಾದವೇಕ್ಷತೇ ॥13॥
ಬ್ರಾಹ್ಮಣ ಬುದ್ಧಿತತ್ವಕ್ಕೆ ಉದಾನವಾಯುವು ಸ್ವಾಮಿಯಾಗಿ ಯಾವಾಗಲೂ ನೋಡುತ್ತಿರುತ್ತಾನೆ. ಅಪಾನವಾಯುವನ್ನು

ಕೆಳಮುಖವಾಗಿಯೇ ಸಂಚರಿಸುವಂತೆ ಮಾಡುತ್ತಾನೆ. ಆ ಬುದ್ಧಿಯು ಮನಸ್ಸಿನ ದೆಸೆಯಿಂದ ಹುಟ್ಟಿದೆ ಎಂದು ಹೇಳುತ್ತಾರೆ. ಉದಾನವಾಯುವಿನ ದೆಸೆಯಿಂದ ಮನಸ್ಸು ವಿಷಯಗಳನ್ನು ನೋಡುತ್ತದೆ.
ಪ್ರಶ್ನಂ ತು ವೈ ವಾಙ್ಮನಸೋರ್ಯಸ್ಮಾತ್ ತ್ವಮನುಪೃಚ್ಛಸಿ |
ತಸ್ಮಾತ್ ತೇ ವರ್ತಯಿಷ್ಯಾಮಿ ತಯೋರೇವ ಸಮಾಹ್ವಯಮ್ ॥14॥
ಭಾಮಿನಿಯೇ, ನೀನು ಹಿಂದೆ ವಾಙ್ಮನಸ್ಸುಗಳ ಬಗ್ಗೆ ಏನು ಪ್ರಶ್ನಿಸಿದೆಯೋ ನಾನು ಅವೆರಡಕ್ಕೂ ಸಂಬಂಧಪಟ್ಟಂತೆ ಹಿಂದೆ ನಡೆದ ಒಂದು ಸಂವಾದವನ್ನು ಹೇಳುತ್ತೇನೆ. ಆ ಸಂವಾದದಲ್ಲಿ ನಿನಗೆ ಉತ್ತರ ಸಿಗುತ್ತದೆ.
ಉಭೇ ವಾಙ್ಮನಸೀ ಗತ್ವಾ ಭೂತಾತ್ಮಾನಮಪೃಚ್ಛತಾಮ್ |
ಆವಯೋಃ ಶ್ರೇಷ್ಠಮಾಚಕ್ಷ್ವ ಛಿಂಧಿ ನೌ ಸಂಶಯಂ ವಿಭೋ ॥15॥
ಒಮ್ಮೆ ವಾಕ್ ಮತ್ತು ಮನಸ್ಸು ಎರಡೂ ಜೀವಾತ್ಮನ ಬಳಿ ಹೋಗಿ- `ಪ್ರಭುವೇ, ನಮ್ಮಿಬ್ಬರಲ್ಲಿ ಯಾರು ಶ್ರೇಷ್ಠರು? ಇದನ್ನು ತಿಳಿಸಿ ನಮ್ಮ ಸಂಶಯವನ್ನು ಪರಿಹರಿಸು' ಎಂದು ಪ್ರಾರ್ಥಿಸಿದವು.
ಮನ ಇತ್ಯೇವ ಭಗವಾನ್ ತದಾ ಪ್ರಾಹ ಸರಸ್ವತೀಮ್ |
ಅಹಂ ವೈ ಕಾಮಧುಕ್ ತುಭ್ಯಮಿತಿ ತಂ ಪ್ರಾಹ ವಾಗಥ ॥16॥
ಇದಕ್ಕೆ ಉತ್ತರವಾಗಿ ಜೀವನು ಮನಸ್ಸೇ ಶ್ರೇಷ್ಠವೆಂದು ಉತ್ತರಿಸಿದನು. ಆ ಮಾತನ್ನು ಕೇಳಿ ವಾಗಭಿಮಾನಿಯಾದ ಸರಸ್ವತಿಯು- `ಜೀವೇಶ್ವರನೇ, ನಾನು ನಿನಗೆ ಕಾಮಧೇನುವಾಗಿ ನಿಂತು ಎಲ್ಲವನ್ನೂ ಒದಗಿಸಿಕೊಡುತ್ತಿದ್ದೇನೆ. ಹೀಗಿರುವಾಗ ನಾನು ಶ್ರೇಷ್ಠಳಾಗುವುದು ಬಿಟ್ಟು ಮನಸ್ಸು ಶ್ರೇಷ್ಠವೆಂದು ಹೇಗೆ ಹೇಳಿದೆ?' ಎಂದು ಅವನನ್ನು ಕುರಿತು ಹೇಳಿದಳು. ಅದಕ್ಕೆ ಜೀವಾಭಿಮಾನಿಯಾದ ಪ್ರಜಾಪತಿಯು ಉತ್ತರಿಸುತ್ತಾನೆ.
ಪ್ರಜಾಪತಿಃ
ಸ್ಥಾವರಂ ಜಂಗಮಂ ಚೈವ ವಿದ್ಧ್ಯುಭೇ ಮನಸೀ ಮಮ |
ಸ್ಥಾವರಂ ಮತ್ಸಕಾಶೇ ವೈ ಜಂಗಮಂ ವಿಷಯೇ ತವ ॥17॥
ಪ್ರಜಾಪತಿ ಸ್ಥಾವರ-ಜಂಗಮ ಎರಡು ನನ್ನ ಮನಸ್ಸಿನಿಂದ ಸೃಷ್ಟಿಯನ್ನು ಹೊಂದಿರುವುದರಿಂದ, ಜ್ಞಾನಹೇತುವಾಗಿರುವುದರಿಂದ ನನ್ನ ಮನಸ್ಸೇ ಎನಿಸಿವೆ. ಸ್ಥಾವರವು ಮನೋನಿಯಾಮಕನಾದ ನನ್ನ ಬಳಿ ಇದೆ, ಜಂಗಮವು ವಾಗಭಿಮಾನಿಯಾದ ನಿನ್ನ ಬಳಿ ಇದೆ. ವ್ಯಾಖ್ಯಾನ ವಿಶೇಷ ಇಲ್ಲಿ ಸ್ಥಾವರ ಎಂದರೆ ಮುಖ್ಯಪ್ರಾಣ ಎಂದು ಅರ್ಥ. ಜಂಗಮ ಶಬ್ದಕ್ಕೆ ವರ್ಣ-ಮಂತ್ರ-ಸ್ವರಾದಿಗಳಿಂದ ಕೂಡಿದ ವೇದಗಳು ಎಂದು ಅರ್ಥ. ಇವೆರಡೂ ಚತುರ್ಮುಖ ಬ್ರಹ್ಮನ ಸಮೀಪ ಇವೆ ಎಂದು ಅರ್ಥ. ಮುಖ್ಯಪ್ರಾಣನು ಸ್ಥಿರನಾಗಿರುವುದರಿಂದ ಸ್ಥಾವರ ಶಬ್ದವಾಚ್ಯನಾಗಿದ್ದಾನೆ. ಅವನು ಚತುರ್ಮುಖಬ್ರಹ್ಮನ ಲೋಕದಲ್ಲಿಯೇ ಇದ್ದಾನೆ. ಚತುರ್ಮುಖ ಬ್ರಹ್ಮನಂತೆ ಪೂಜ್ಯನೂ ಆಗಿದ್ದಾನೆ. ಇನ್ನೊಬ್ಬರನ್ನು ಅನುಸರಿಸಲಾರ. ಸ್ಥಿರನಾಗಿರುವುದರಿಂದ ಸ್ಥಾವರ ಎನಿಸಿಕೊಳ್ಳುತ್ತಾನೆ. `ಜಂಗಮ' ಶಬ್ದಕ್ಕೆ `ಜಂ' ಎಂದರೆ ಪ್ರತಿಕಲ್ಪದಲ್ಲಿಯೂ ಮನ್ವಂತರ ಮನ್ವಂತರದಲ್ಲಿಯೂ ಹುಟ್ಟನ್ನು ಪಡೆಯುವ ಇಂದ್ರಾದಿಗಳು ಎಂದರ್ಥ. ಅವರನ್ನು ಅನುಸರಿಸಿ ಇರುವ ವರ್ಣ-ಮಂತ್ರ-ಸ್ವರಾದಿಗಳನ್ನು ಜಂಗಮ ಎನ್ನಲಾಗಿದೆ. ಈ ವರ್ಣ-ಮಂತ್ರ-ಸ್ವರಾದಿ ಸಮುದಾಯಾತ್ಮಕವಾದ ವೇದಗಳು ನಿನ್ನ ಸಮೀಪದಲ್ಲಿ,ಅಧೀನದಲ್ಲಿವೆ. ನೀನಾದರೂ ನನ್ನ ಅಧೀನದಲ್ಲಿರುವಿ.
ಯತ್ತು ತೇ ವಿಷಯಂ ಗಚ್ಛನ್ ಮಂತ್ರೋ ವರ್ಣಃ ಸ್ವರೋಽಪಿ ವಾ |
ತನ್ಮನೋ ಜಂಗಮಂ ನಾಮ ತಸ್ಮಾದಪಿ ಗರೀಯಸೀ॥18॥
ಮಂತ್ರವಾಗಲಿ, ವರ್ಣವಾಗಲಿ, ಸ್ವರವಾಗಲಿ ಇಂದ್ರಿಯಾತೀತವಾದ ಸ್ವರ್ಗಾದಿಗಳಿಗೆ ಹೋದುದೇ ಆದರೆ ಮನಸ್ಸು ಅದನ್ನೇ ಅನುಸರಿಸಿ ಹೋಗುತ್ತದೆ. ಇಲ್ಲಿ ಅಭಿಮಾನಿಗಳನ್ನು ಗ್ರಹಿಸಬೇಕು. ಅತೀಂದ್ರಿಯಜ್ಞಾನವನ್ನು ಪಡೆಯುವ ಮನಸ್ಸಿಗೂ ಜಂಗಮವೆಂಬ ಹೆಸರೇ ಬರುತ್ತದೆ. ಹೀಗೆ ಮನಸ್ಸು ವಾಕ್‌ನಿಂದಲೇ ಇಂದ್ರಿಯಾತೀತವಾದ ಸ್ವರ್ಗಾದಿಗಳಿಗೆ ಹೋಗುವುದರಿಂದ ಮನಸ್ಸಿಗಿಂತಲೂ ಶ್ರೇಷ್ಠಳಾಗಿರುವಿ.
ಯಸ್ಮಾದಿದಂ ತು(ತ್ವಂ) ಮಾ ವೋಚಃ ಸ್ವಯಮಭ್ಯೇತ್ಯ ಶೋಭನೇ |
ತಸ್ಮಾದುಚ್ಛ್ವಾಸಮಾಸಾದ್ಯ ಮಾ ವಕ್ಷ್ಯಸಿ ಸರಸ್ವತಿ ॥19॥
ಶೋಭನಮಯಳಾದ ಸರಸ್ವತಿಯೇ, ನೀನು ನಿನ್ನ ಅಭಿಮಾನಿಯಾದ ವಾಯುವಿನ ಸಹಾಯವನ್ನು ಪಡೆಯದೆ ನನ್ನ ಬಳಿ ಬಂದು ಸಕಲ ವಸ್ತುಗಳನ್ನೂ ಕಾಮಧೇನುವಿನಂತೆ ಒದಗಿಸಿಕೊಡುತ್ತಿದ್ದೇನೆ ಎಂದು ನಿನ್ನ ಪಕ್ಷವನ್ನು ಪುಷ್ಟೀಕರಿಸುವ ಮಾತನ್ನಾಡಿರುವಿ. ನೀನು ಇಲ್ಲಿಗೆ ಬಂದು ಮೇಲ್ಮುಖದ ಶ್ವಾಸವನ್ನು ಆಶ್ರಯಿಸಿಕೊಂಡು ನನಗೆ ಹೇಳಿರುವಿ. ಊರ್ಧ್ವಶ್ವಾಸದ ಸಮಯದಲ್ಲಿ ನಿನ್ನ ಪ್ರವೃತ್ತಿಯು ಉಂಟಾಗಲು ಸಾಧ್ಯವಿಲ್ಲ.
ಪ್ರಾಣಾಪಾನಾಂತರೇ ತಸ್ಮಾದ್ ಆವಾಂ ನಿತ್ಯಂ ಪ್ರತಿಷ್ಠಿತಾಮ್ |
ಪ್ರೀಯಮಾಣಂ ಮಹಾಭಾಗೇ ವಿನಾ ಪ್ರಾಣಮಪಾನಿತಿ ॥20॥
ಭಾಗ್ಯಶಾಲಿನಿಯೇ, ಪ್ರಾಣ ಮತ್ತು ಅಪಾನಗಳ ಮಧ್ಯದಲ್ಲಿ ನೀನು ಯಾವಾಗಲೂ ಉಪಸ್ಥಿತಳಾಗಿರುತ್ತಿ. ಪ್ರಾಣಪ್ರೇರಣೆಯಿಲ್ಲದೆ ವಾಗ್ದೇವಿಯಾದ ನೀನು ಯಾವಾಗ ಅಪಾನದ ಕಡೆ ಹೋಗುತ್ತೀಯೋ ಆಗ ಅಲ್ಲಿರುವ ಪ್ರಜಾಪತಿಯ ಬಳಿ ಹೋಗಿ ಭಗವಂತನೇ ನೀನು ಪ್ರಸನ್ನನಾಗು ಎಂದು ಪ್ರಾರ್ಥಿಸುತ್ತಿ.
ಪ್ರಜಾಪತಿಮುಪಾಧಾವತ್ ಪ್ರಸೀದ ಭಗವನ್ನಿತಿ ॥21॥
ತತಃ ಪ್ರಾಣಃ ಪ್ರಾದುರಭೂದ್ ವಾಚಮಾಪ್ಯಾಯಯನ್ನಪಿ |
ತಸ್ಮಾದುಚ್ಛ್ವಾಸಮಾಸಾದ್ಯ ನ ವಾಗ್ವದತಿ ಕರ್ಹಿಚಿತ್ ॥22॥
ಆ ಸಮಯದಲ್ಲಿ ವಾಗ್ದೇವಿಗೆ ಸಹಕಾರವನ್ನು ನೀಡುವ ದೃಷ್ಟಿಯಿಂದ ಪ್ರಾಣವು ಮತ್ತೆ ಪ್ರಕಟವಾಗುತ್ತದೆ. ಆದ್ದರಿಂದಲೇ ಉಸಿರನ್ನು ಎಳೆದುಕೊಳ್ಳುವ ಸಮಯದಲ್ಲಿ ಯಾವುದೇ ಮಾತು ಹೊರಡುವುದಿಲ್ಲ.

ಘೋಷಿಣೀ ಜಾತನಿರ್ಘೋಷಾ ನಿತ್ಯಮೇಷಾ ಪ್ರವರ್ತತೇ |
ತಯೋರಪಿ ಚ ಘೋಷಿಣ್ಯಾ ನಿರ್ಘೋಷೈವ ಗರೀಯಸೀ ||23||
ವಾಗ್ದೇವಿಯೇ, ನೀನು ಎರಡು ಪ್ರಕಾರವಾಗಿರುವಿ. ಪ್ರಾಣನಿಂದ ಪ್ರೇರಿತಳಾಗಿ ಅಲ್ಪಘೋಷವುಳ್ಳವಳಾಗಿರುವಿ. ಪ್ರಾಣನಿಂದ ಪ್ರೇರಿತಳಾಗಿ ಉತ್ಕೃಷ್ಟವಾದ ಶಬ್ದವುಳ್ಳವಳೂ ಆಗಿರುವಿ. ಪ್ರಾಣನಿಂದ ಪ್ರೇರಿತಳಾಗಿ ನಡೆಯುವ ಈ ಚೇಷ್ಟೆಗಳಲ್ಲಿ ಅಲ್ಪಶಬ್ದಕ್ಕಿಂತ ನಿರ್ಘೋಷವೆನಿಸಿದ (ನಿತರಾಂ ಘೋಷ) ಗಟ್ಟಿಯಾದ ಶಬ್ದವೇ ಶ್ರೇಷ್ಠವೆನಿಸಿದೆ.
ಗೌರಿವ ಪ್ರಸ್ರುವತ್ಯರ್ಥಾನ್ ರಸಮುತ್ತಮಪಾಲಿನೀ |
ಸತತಂ ಸ್ಯಂದತೇ ಹ್ಯೇಷಾ ಶಾಶ್ವತೀ ಬ್ರಹ್ಮವಾದಿನೀ ||24||
ದಿವ್ಯಾ ದಿವ್ಯಪ್ರಭಾವೇಣ ಭಾರತೀ ಗೌಃ ಶುಚಿಸ್ಮಿತಾ |
ಏತಯೋರಂತರಂ ಪಶ್ಯ ಸೂಕ್ಷ್ಮಯೋಃ ಸ್ಯಂದಮಾನಯೋಃ ||25||
ಶುಚಿಸ್ಮಿತಳೇ, ಘೋಷಯುಕ್ತವಾದ ವೈದಿಕವಾಣಿಯು ಉತ್ತಮಗುಣಗಳಿಂದ ಶೋಭಿತಳಾಗಿದ್ದಾಳೆ. ವೇದವಾಣಿಯು ಹಾಲನ್ನು ಕೊಡುವ ಹಸುವಿನಂತೆಯೇ ಮನುಷ್ಯನಿಗೆ ಯಾವಾಗಲೂ ಉತ್ತಮವಾದ ರಸವನ್ನೂ, ಮನೋವಾಂಛಿತವಾದ ಉತ್ತಮವಾದ ಪದಾರ್ಥಗಳನ್ನು ಸುರಿಸುತ್ತದೆ. ಬ್ರಹ್ಮನನ್ನು ಪ್ರತಿಪಾದಿಸುವ ಉಪನಿಷದ್ವಾಣಿಯು ಶಾಶ್ವತ ಪರಬ್ರಹ್ಮವಸ್ತುವಿನ ವಿಷಯವಾಗಿ ಬೋಧಿಸುತ್ತದೆ. ಪ್ರಾಣ ಪ್ರೇರಣೆಯಿಂದ ಜ್ಞಾನ ರಸವನ್ನು, ಜೀವನನ್ನು ಪಾಲನೆ ಮಾಡುತ್ತಾಳೆ. ಈ ಪ್ರಾಣ-ಭಾರತಿಯರನ್ನು ನಿಯಮನ ಮಾಡುವವಳು ವೇದಾಭಿಮಾನಿನಿಯಾದ ಲಕ್ಷ್ಮೀದೇವಿಯಾಗಿದ್ದಾಳೆ. ಹೀಗೆ ದೇವತೆಗಳ ಪ್ರಭಾವದಿಂದ ವಾಗಭಿಮಾನಿಯಾದ ಭಾರತಿಯು ಗೋವಿನಂತೆ ಅಭೀಷ್ಟಗಳನ್ನು ಪದಾರ್ಥವನ್ನು ಸುರಿಸುವವಳಾಗಿದ್ದಾಳೆ. ಈ ವಾಕ್ ಮತ್ತು ಮನಸ್ಸುಗಳ ಸೂಕ್ಷ್ಮವಾದ ಅಂತರವನ್ನು ನೀನೇ ತಿಳಿದುಕೊ.
ಬ್ರಾಹ್ಮಣೀ
ಅನುತ್ಪನ್ನೇಷು ವಾಕ್ಯೇಷು ಚೋದ್ಯಮಾನಾ ಸಿಸೃಕ್ಷಯಾ |
ಕಿಂ ನು ಪೂರ್ವಂ ತತೋ ದೇವೀ ವ್ಯಾಜಹಾರ ಸರಸ್ವತೀ ||26||
ಬ್ರಾಹ್ಮಣೀ ಪ್ರಾಣನಾಥನೇ, ವಾಕ್‌ಗಳೇ ಹುಟ್ಟದಿದ್ದಾಗ ಏನನ್ನಾದರೂ ಹೇಳಬೇಕೆಂದು ಪ್ರೇರಿತಳಾದ ಸರಸ್ವತೀದೇವಿಯು ಎಲ್ಲಕ್ಕಿಂತಲೂ ಮೊದಲು ಯಾವ ಮಾತನ್ನು ಹೇಳಿದಳು?
ಬ್ರಾಹ್ಮಣಃ
ಪ್ರಾಣೇನ ಯಾ ಸಂಶ್ರಯತೇ ಶರೀರೇ
ಪ್ರಾಣಾದಪಾನಂ ಪ್ರತಿಪದ್ಯತೇ ತು |
ಉದಾನಭೂತಾ ಚ ವಿಸೃಜ್ಯ ದೇಹಂ
ವ್ಯಾನೇನ ಸರ್ವಾಂ ದಿವಮಾವೃಣೋತಿ ||27||
ಬ್ರಾಹ್ಮಣ ಪ್ರಿಯಳೇ, ವಾಗ್ದೇವಿಯು ಪ್ರಾಣನ ಮೂಲಕವಾಗಿ ಶರೀರದಲ್ಲಿ ಪ್ರಕಟಳಾಗುತ್ತಾಳೆ. ಪ್ರಾಣನಿಂದಲೇ ಅಪಾನಭಾವವನ್ನು ಹೊಂದುತ್ತಾಳೆ. ನಂತರ ಉದಾನಸ್ವರೂಪಳಾಗಿ ಶರೀರವನ್ನು ಬಿಟ್ಟು ವ್ಯಾನದಿಂದ ಸಂಪೂರ್ಣವಾದ ಆಕಾಶವನ್ನು ವ್ಯಾಪಿಸುತ್ತಾಳೆ.
ತತಃ ಸಮಾನೇ ಪ್ರತಿತಿಷ್ಠತೀಹ
ಇತ್ಯೇವ ಸರ್ವಂ ಪ್ರಜಜಲ್ಪ ವಾಗಪಿ |
ತಸ್ಮಾನ್ಮನಃ ಸ್ಥಾವರತ್ವಾತ್ ವಿಶಿಷ್ಟಃ
ತಥಾ ದೇವೀ ಜಂಗಮತ್ವಾದ್ ವಿಶಿಷ್ಟಾ||28||
ಹೀಗೆ ವಾಗ್ದೇವಿಯು ಸಮಾನವಾಯುವಿನಲ್ಲಿ ಪ್ರತಿಷ್ಠಿತಳಾಗಿರುತ್ತಾಳೆ. ಈ ರೀತಿಯಾಗಿ ಪಂಚವಿಧ ಪ್ರಾಣರನ್ನು ಅನುಸರಿಸಿಕೊಂಡೇ ಸರಸ್ವತಿಯ ಪ್ರವೃತ್ತಿಯು. ಸ್ವೇಚ್ಛೆಯಿಂದ ಈ ಸರಸ್ವತಿಯು ಪ್ರವೃತ್ತಿಯನ್ನು ಹೊಂದಲಾರಳು ಎಂದು ಚತುರ್ಮುಖ ಬ್ರಹ್ಮನನ್ನು ಕುರಿತು ಸರಸ್ವತಿಯು ಹೇಳಿದಳು. ಆದ್ದರಿಂದ ಮನಃಶಬ್ದವಾಚ್ಯನಾದ ಮುಖ್ಯಪ್ರಾಣನು ಮತ್ತೊಬ್ಬರನ್ನು ಅನುಸರಿಸದೆ ಸ್ಥಿರನಾಗಿರುವುದರಿಂದ ವಾಗ್ರೂಪಳಾದ ಭಾರತಿಯ ಪ್ರವೃತ್ತಿಗೆ ಕಾರಣನಾಗಿರುವುದರಿಂದಲೂ ಎಲ್ಲ ಜೀವರಿಗಿಂತಲೂ ಉತ್ಕೃಷ್ಟನಾಗಿದ್ದಾನೆ. ಇದರಂತೆ ವಾಗ್ದೇವಿಯು ಎಲ್ಲರಿಂದಲೂ ಅಪೇಕ್ಷಿತವಾದ ಮಂತ್ರ- ಸ್ವರ-ವರ್ಣ ಇವುಗಳಿಗೆ ಪ್ರೇರಕಳಾಗಿರುವುದರಿಂದ, ಮುಖ್ಯಪ್ರಾಣನ ಅನಂತರವೇ ಸ್ಥಾನವನ್ನು ಹೊಂದಿರುವುದರಿಂದ ಎಲ್ಲ ಜೀವರಿಗಿಂತಲೂ ವಿಶಿಷ್ಟಳಾಗಿದ್ದಾಳೆ ಎಂದು ಅಭಿಪ್ರಾಯ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವಾಙ್ಮನೋವಿಹಾರಕಥನಂ ನಾಮ ದ್ವಾವಿಂಶೋಽಧ್ಯಾಯಃ ||
|| ಅನುಗೀತಾಪರ್ವಣಿ ಸಪ್ತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಮೂರನೆಯ ಅಧ್ಯಾಯ
ಕೃಷ್ಣನು ಅರ್ಜುನನನ್ನು ಕುರಿತು ಘ್ರಾಣ ಮೊದಲಾದ ಇಂದ್ರಿಯ ಗುಣಗಳನ್ನು ಪ್ರತಿಪಾದಿಸುವ ಬ್ರಾಹ್ಮಣ ದಂಪತಿಗಳ ಸಂವಾದವನ್ನು ಅನುವಾದಿಸಿದುದು.
ಬ್ರಾಹ್ಮಣಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |

ಸುಭಗೇ ಸಪ್ತಹೋತೄಣಾಂ ವಿಧಾನಮಿಹ ಯಾದೃಶಮ್ ॥1॥
ಬ್ರಾಹ್ಮಣ ಸೌಭಾಗ್ಯವತಿಯೇ, ಈ ವಿಷಯದಲ್ಲಿ ಪುರಾತನವಾದ ಇತಿಹಾಸವೊಂದನ್ನು ಜ್ಞಾನಿಗಳು ಹೇಳಿರುತ್ತಾರೆ. ಏಳು ಹೋತೃಗಳ ಯಜ್ಞದ ವಿಧಾನವು ಹೇಗೆಂಬುದನ್ನು ಆ ಇತಿಹಾಸವು ಹೇಳಿದೆ. ಅದನ್ನೇ ನಿನಗೂ ಹೇಳುತ್ತೇನೆ, ಕೇಳಿಸಿಕೊ.
ಘ್ರಾಣಂ ಚಕ್ಷುಶ್ಚ ಜಿಹ್ವಾ ಚ ತ್ವಕ್ ಶ್ರೋತ್ರಂ ಚೈವ ಪಂಚಮಮ್ |
ಮನೋ ಬುದ್ಧಿಶ್ಚ ಸಪ್ತೈತೇ ಹೋತಾರಃ ಪೃಥಗಾಶ್ರಿತಾಃ ॥2॥
ಸೂಕ್ಷ್ಮೇಽವಕಾಶೇ ಸಂತಪ್ತೇ ನ ಪಶ್ಯಂತೀತರೇತರಮ್ |
ಏಷಾಂ ಚ ಸಪ್ತಹೋತೄಣಾಂ ವಿಧಾನಾಂ ವಿದ್ಧಿ ಶೋಭನೇ ॥3॥
ಶೋಭನಳೇ, ಮೂಗು-ಕಣ್ಣು-ಕಿವಿ-ನಾಲಿಗೆ-ಚರ್ಮ-ಮನಸ್ಸು-ಬುದ್ಧಿ - ಈ ಏಳು ಹೋತೃಗಳು ಪ್ರತ್ಯೇಕ ಪ್ರತ್ಯೇಕವಾಗಿ ಇರುತ್ತವೆ. ಸೂಕ್ಷ್ಮ ಶರೀರದಲ್ಲಿ ಏಳು ಹೋತೃಗಳಿದ್ದರೂ ಒಂದು ಮತ್ತೊಂದನ್ನು ನೋಡುವುದಿಲ್ಲ. ಏಳು ಮಂದಿ ಹೋತೃಗಳನ್ನು ನೀನು ಅವುಗಳ ಸ್ವಭಾವದಿಂದಲೇ ತಿಳಿಯಬಹುದಾಗಿದೆ.
ಬ್ರಾಹ್ಮಣೀ
ಸೂಕ್ಷ್ಮೇಽವಕಾಶೇ ಸಂತಪ್ತೇ ಕಥಂ ನಾನ್ಯೋನ್ಯದರ್ಶಿನಃ |
ಕಥಂ ಸ್ವಭಾವಾದ್ ಭಗವನ್ ಏತದಾಚಕ್ಷ್ವ ಮೇ ವಿಭೋ ॥4॥
ಬ್ರಾಹ್ಮಣಿ ಪೂಜ್ಯನೇ, ಪ್ರಭುವೇ, ಈ ಏಳು ಹೋತೃಗಳು ಒಂದೇ ಶರೀರದಲ್ಲಿದ್ದರೂ ಒಂದು ಮತ್ತೊಂದನ್ನು ಏಕೆ ನೋಡುವುದಿಲ್ಲ? ಅವುಗಳ ಸ್ವಭಾವವೇನು? ಈ ವಿಷಯವನ್ನು ವಿಷದಪಡಿಸಿ.
ಬ್ರಾಹ್ಮಣಃ
ಗುಣಜ್ಞಾನಮಭಿಜ್ಞಾನಂ ಗುಣಜ್ಞಾನಾಮಭಿಜ್ಞತಾ |
ಪರಸ್ಪರಂ ಗುಣಾನೇತೇ ನ ವಿಜಾನಂತಿ ಕರ್ಹಿಚಿತ್ ॥5॥
ಬ್ರಾಹ್ಮಣ ಗುಣಗಳನ್ನು ತಿಳಿದುಕೊಳ್ಳದಿದ್ದರೆ ಜೊತೆಯಲ್ಲಿದ್ದ ಅವನನ್ನು ತಿಳಿದುಕೊಂಡಿಲ್ಲವೆಂದೇ ಅರ್ಥ. ಗುಣಗಳನ್ನು ತಿಳಿದುಕೊಂಡರೆ ತಿಳಿದಂತೆ. ಇದರಂತೆ ಈ ಏಳು ಮಂದಿ ಹೋತೃಗಳು ಅವರವರ ಯೋಗ್ಯವಾದ ಗುಣವನ್ನು ಅರಿತಿದ್ದಾರೆ. ಅವರ ಗುಣಜ್ಞಾನದ ಜೊತೆಗೆ ಇನ್ನೊಬ್ಬರ ಗುಣಜ್ಞಾನವನ್ನು ಹೊಂದಿಲ್ಲ. ಕಣ್ಣಿನ ಗುಣವನ್ನು ಮೂಗು ತಿಳಿದಿಲ್ಲ, ಮೂಗಿನ ಗುಣವನ್ನು ಕಣ್ಣು ತಿಳಿದಿಲ್ಲ. ಹೀಗೆ ಪರಸ್ಪರವಾಗಿ ಗುಣಗಳನ್ನು ಈ ಏಳು ಹೋತೃಗಳು ತಿಳಿದಿರುವುದಿಲ್ಲ.
ಜಿಹ್ವಾ ಚಕ್ಷುಸ್ತಥಾ ಶ್ರೋತ್ರಂ ತ್ವಙ್ಮನೋ ಬುದ್ಧಿರೇವ ಚ |
ನ ಗಂಧಾನಧಿಗಚ್ಛಂತಿ ಘ್ರಾಣಸ್ತಾನಧಿಗಚ್ಛತಿ ॥6॥
ನಾಲಿಗೆ, ಕಣ್ಣು, ಕಿವಿ, ತ್ವಕ್, ಮನಸ್ಸು, ಬುದ್ಧಿ ಇವುಗಳು ಗಂಧಗಳನ್ನು ತಿಳಿದಿರುವುದಿಲ್ಲ. ಆದರೆ ಮೂಗಿಗೆ ಗಂಧದ ಆಸ್ವಾದನೆಯೇ ಮುಂತಾದ ಸ್ವಯೋಗ್ಯವಾದ ಗುಣವನ್ನು ಗ್ರಹಿಸುವ ಜ್ಞಾನವಿದೆ. ಆದ್ದರಿಂದ ಮೂಗು ಗಂಧವನ್ನು ಆಘ್ರಾಣಿಸುತ್ತದೆ.
ಘ್ರಾಣಂ ಚೈವ ಚ ಚಕ್ಷುಃ ತ್ವಕ್ ಶ್ರೋತ್ರಂ ಚ ಮನ ಏವ ಚ |
ನ ರಸಾನಧಿಗಚ್ಛಂತಿ ವಿನಾ ಜಿಹ್ವಾಂ ತಥೈವ ಚ ॥7॥
ಮೂಗು, ಕಣ್ಣು, ಕಿವಿ, ಚರ್ಮ, ಮನಸ್ಸು, ಬುದ್ಧಿಗಳು ರಸದ ಆಸ್ವಾದನೆಯನ್ನು ಮಾಡವು. ಆದರೆ ನಾಲಿಗೆಗೆ ತನಗೆ ಯೋಗ್ಯವಾದ ರಸಗುಣಜ್ಞಾನವು ಇರುತ್ತದೆ. ರಸವನ್ನು ಆಸ್ವಾದಿಸುತ್ತದೆ.
ಘ್ರಾಣಂ ಜಿಹ್ವಾ ತಥಾ ಶ್ರೋತ್ರಂ ತ್ವಙ್ಮನೋ ಬುದ್ಧಿರೇವ ಚ |
ನ ರೂಪಾಣ್ಯಧಿಗಚ್ಛಂತಿ ಚಕ್ಷುಸ್ತದಧಿಗಚ್ಛತಿ ॥8॥
ಮೂಗು, ನಾಲಿಗೆ, ಕಿವಿ, ತ್ವಕ್, ಮನಸ್ಸು, ಬುದ್ಧಿ ಇವುಗಳು ರೂಪವನ್ನು ನೋಡಲಾರವು. ಆದರೆ ಕಣ್ಣಿಗೆ ತನಗೆ ಯೋಗ್ಯವೆನಿಸಿದ ರೂಪಗ್ರಹಣ ಜ್ಞಾನವು ಇರುತ್ತದೆ. ಆದ್ದರಿಂದ ಕಣ್ಣು ರೂಪವನ್ನು ನೋಡುತ್ತದೆ.
ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ಶ್ರೋತ್ರಂ ಬುದ್ಧಿರ್ಮನಸ್ತಥಾ |
ನ ಸ್ಪರ್ಶಾನಧಿಗಚ್ಛಂತಿ ತ್ವಕ್ಚ ತಾನಧಿಗಚ್ಛತಿ ॥9॥
ಮೂಗು, ನಾಲಿಗೆ, ಕಣ್ಣು, ಕಿವಿ, ಬುದ್ಧಿ, ಮನಸ್ಸುಗಳು ಸ್ಪರ್ಶವನ್ನು ಅನುಭವಿಸಲಾರವು. ಆದರೆ ಚರ್ಮಕ್ಕೆ ಸ್ಪರ್ಶಾನುಭವವು ತನಗೆ ಯೋಗ್ಯವಾದ ಗುಣವೆನಿಸಿದೆ. ಆ ಜ್ಞಾನವನ್ನು ಸ್ಪರ್ಶವು ಹೊಂದಿರುವುದರಿಂದ ಸ್ಪರ್ಶಾನುಭವವನ್ನು ಪಡೆದುಕೊಳ್ಳುತ್ತದೆ.
ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ತ್ವಙ್ಮನೋ ಬುದ್ಧಿರೇವ ಚ |
ನ ಶಬ್ದಾನಧಿಗಚ್ಛಂತಿ ಶ್ರೋತ್ರಂ ತಾನಧಿಗಚ್ಛತಿ ॥10॥
ಮೂಗು, ನಾಲಿಗೆ, ಕಣ್ಣು, ಚರ್ಮ, ಮನಸ್ಸು, ಬುದ್ಧಿ ಶಬ್ದಗಳನ್ನು ಕೇಳಲಾರವು. ಆದರೆ ಕಿವಿಗೆ ಶಬ್ದವನ್ನು ಕೇಳುವುದು ಸ್ವಾಭಾವಿಕ ಗುಣವೆನಿಸಿದೆ. ಆದ್ದರಿಂದ ಕಿವಿಯು ಶಬ್ದವನ್ನು ತಿಳಿಯುತ್ತದೆ.
ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ತ್ವಕ್ ಶ್ರೋತ್ರಂ ಬುದ್ಧಿರೇವ ಚ |
ಸಂಕಲ್ಪಾನ್ನಾಧಿಗಚ್ಛಂತಿ ಮನಸ್ತಾನಧಿಗಚ್ಛತಿ ॥11॥
ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ, ಬುದ್ಧಿ ಇವು ಸಂಶಯವನ್ನು ಹೊಂದುವುದಿಲ್ಲ. ಸಂಶಯವನ್ನು ಹೊಂದುವುದು, ಸಂಕಲ್ಪ-ವಿಕಲ್ಪವನ್ನು ಹೊಂದುವುದು ಮನಸ್ಸಿನ ಸ್ವಾಭಾವಿಕವಾದ ಗುಣವೆನಿಸಿದೆ. ಆದ್ದರಿಂದ ಮನಸ್ಸು ಸಂಶಯವನ್ನು ಹೊಂದುತ್ತದೆ.
ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ತ್ವಕ್ ಶ್ರೋತ್ರಂ ಮನ ಏವ ಚ |
ನ ನಿಷ್ಠಾಮಧಿಗಚ್ಛಂತಿ ಬುದ್ಧಿಸ್ತಾಮಧಿಗಚ್ಛತಿ ॥12॥
ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ, ಮನಸ್ಸು ನಿಶ್ಚಯಾತ್ಮಕವಾದ ಜ್ಞಾನವನ್ನು ಹೊಂದಲಾರವು. ಇದು ಬುದ್ಧಿಯ ಗುಣ.

ಬುದ್ಧಿಯು ನಿಶ್ಚಯಜ್ಞಾನವನ್ನು ಹೊಂದುತ್ತದೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಇಂದ್ರಿಯಾಣಾಂ ಚ ಸಂವಾದಂ ಮನಸಶ್ಚೈವ ಭಾಮಿನಿ ॥13॥
ಭಾಮಿನಿಯೇ, ಈ ವಿಷಯದಲ್ಲಿ ಇಂದ್ರಿಯಗಳಿಗೂ ಮನಸ್ಸಿಗೂ ನಡೆದ ಪುರಾತನವಾದ ಸಂವಾದವೊಂದನ್ನು ಅಭಿಜ್ಞರು ಉದಾಹರಿಸುತ್ತಾರೆ. ನಿನಗೆ ಹೇಳುತ್ತೇನೆ, ಕೇಳು.
ಒಮ್ಮೆ ಇಂದ್ರಿಯಗಳಿಗೂ ಮನಸ್ಸಿಗೂ ಯಾರು ಶ್ರೇಷ್ಠರೆಂದು ವಿವಾದ ಉಂಟಾದಾಗ ಮನಸ್ಸು ಇಂದ್ರಿಯಗಳಿಗೆ ಹೇಳುತ್ತದೆ.
ಮನಃ
ನಾಘ್ರಾತಿ ಮಾಮೃತೇ ಘ್ರಾಣಂ ರಸಂ ಜಿಹ್ವಾ ನ ವೇತ್ತಿ ಚ |
ರೂಪಂ ಚಕ್ಷುರ್ನ ಗೃಹ್ಣಾತಿ ತ್ವಕ್ ಸ್ಪರ್ಶಂ ನಾವಬುದ್ಧ್ಯತೇ ॥14॥
ನ ಶ್ರೋತ್ರಂ ಶ್ರುಣುಯಾತ್ ಶಬ್ದಂ ಮಯಾ ಹೀನಂ ಕಥಂಚನ |
ಪ್ರವರಂ ಸರ್ವಭೂತಾನಾಮಹಮಸ್ಮಿ ಸನಾತನಮ್ ॥15॥
ಮನಸ್ಸು ನನ್ನ ಸಂಬಂಧವಿಲ್ಲದೆ ಯಾವ ಹೇತುವಿನಿಂದಲೂ ಘ್ರಾಣೇಂದ್ರಿಯವು ಆಘ್ರಾಣಿಸುವುದಿಲ್ಲ. ನಾಲಿಗೆಯು ರುಚಿಯನ್ನು ಸವಿಯುವುದಿಲ್ಲ. ಕಣ್ಣು ರೂಪವನ್ನೂ, ಚರ್ಮವು ಸ್ಪರ್ಶವನ್ನೂ, ಕಿವಿಯು ಶಬ್ದವನ್ನೂ ತಿಳಿಯುವುದಿಲ್ಲ. ಆದ್ದರಿಂದ ಎಲ್ಲ ಪ್ರಾಣಿಗಳಲ್ಲಿ ನಾನೇ ಶ್ರೇಷ್ಠನು, ಶಾಶ್ವತನು.
ಅಗಾರಾಣೀವ ಶೂನ್ಯಾನಿ ಶಾಂತಾರ್ಚಿಷ ಇವಾಗ್ನಯಃ |
ಇಂದ್ರಿಯಾಣಿ ನ ಭಾಸಂತೇ ಮಯಾ ಹೀನಾನಿ ನಿತ್ಯಶಃ ॥16॥
ಶೂನ್ಯವಾದ ಮನೆಗಳಂತೆ, ಜ್ವಾಲೆಯು ಆರಿಹೋದ ಅಗ್ನಿಯಂತೆ ನನ್ನ ಸಂಬಂಧವಿಲ್ಲದೆ ಯಾವ ಇಂದ್ರಿಯವೂ ಬೆಳಗವು.
ಕಾಷ್ಠಾನೀವಾರ್ದ್ರಶುಷ್ಕಾನಿ ಯತಮಾನೈರಪೀಂದ್ರಿಯೈಃ |
ಗುಣಾರ್ಥಾನ್ನಾಧಿಗಚ್ಛಂತಿ ಮಾಮೃತೇ ಸರ್ವಜಂತವಃ ॥17॥
ಜಗತ್ತಿನಲ್ಲಿರುವ ಎಲ್ಲ ಪ್ರಾಣಿಗಳು ಇಂದ್ರಿಯಗಳ ಮೂಲಕ ವಿಷಯವನ್ನು ಗ್ರಹಿಸಲು ಪ್ರಯತ್ನಿಸುತ್ತಿದ್ದರೂ ಮನಸ್ಸಿನ ಸಂಬಂಧವಿಲ್ಲದಿದ್ದರೆ ಹಸಿಯಾದ, ಟೊಳ್ಳಾದ ಕಟ್ಟಿಗೆಯಂತೆ ವಿಷಯಾನುಭವವನ್ನು ಹೊಂದವು.
ಇದಕ್ಕೆ ಉತ್ತರವಾಗಿ ಇಂದ್ರಿಯಗಳು ಹೇಳುತ್ತವೆ
ಇಂದ್ರಿಯಾಣಿ
ಏವಮೇತದ್ ಭವೇತ್ ಸತ್ಯಂ ಯಥೈತನ್ಮನ್ಯತೇ ಭವಾನ್ |
ಋತೇಸ್ಮಾನಸ್ಮದರ್ಥಾಂಸ್ತ್ವಂ ಭೋಗಾನ್ ಭುಂಕ್ತೇ ಭವಾನ್ ಯದಿ ॥
ಮಹಾಶಯನೇ, ಇಂದ್ರಿಯಗಳ ಸಂಬಂಧವಿಲ್ಲದೆ ವಿಷಯಭೋಗಗಳನ್ನು ನಿನ್ನಿಂದ ಅನುಭವಿಸಲು ಸಾಧ್ಯವಾಗಿದ್ದರೆ ನೀನು ತಿಳಿದಿರುವುದು, ಹೇಳುತ್ತಿರುವುದು ಸತ್ಯವಾಗಬಹುದು.
ಯದ್ಯಸ್ಮಾಸು ಪ್ರಲೀನೇಷು ತರ್ಪಣಂ ಪ್ರಾಣಧಾರಣಮ್ |
ಭೋಗಾನ್ ಭುಂಕ್ತೇ ಭವಾನ್ ಸತ್ಯಂ ಯಥೈತನ್ಮನ್ಯತೇ ತಥಾ ॥19॥
ಇಂದ್ರಿಯಗಳು ತಾಟಸ್ಥ್ಯವನ್ನು ಹೊಂದಿದರೆ, ಇಂದ್ರಿಯಗಳು ಲಯಹೊಂದಿದ ಬಳಿಕವೂ ನೀನು ತೃಪ್ತನಾಗುವುದಾದರೆ, ನಿನ್ನ ಕ್ರಿಯೆಗಳನ್ನು ತೋರಿಸಿಕೊಡುವುದಾದಲ್ಲಿ, ಎಲ್ಲ ವಿಧವಾದ ಭೋಗಗಳನ್ನು ಅನುಭವಿಸಲು ಸಾಧ್ಯವಾದಲ್ಲಿ ನೀನು ನಿನ್ನನ್ನು ಸನಾತನನೆಂದು ಭಾವಿಸಿಕೊಂಡಿರುವುದು ಸತ್ಯವಾಗುತ್ತಿತ್ತು.
ಅಥವಾಽಸ್ಮಾಸು ಲೀನೇಷು ತಿಷ್ಠತ್ಸು ವಿಷಯೇಷು ಚ |
ಯದಿ ಸಂಕಲ್ಪಮಾತ್ರೇಣ ಭುಂಕ್ತೇ ಭೋಗಾನ್ಯಥಾರ್ಥವತ್ ॥20॥
ಅಥ ಚೇನ್ಮನ್ಯಸೇ ಸಿದ್ಧಿಮಸ್ಮದರ್ಥೇಷು ನಿತ್ಯದಾ |
ಘ್ರಾಣೇನ ರೂಪಮಾದತ್ಸ್ವ ರಸಮಾದತ್ಸ್ವ ಚಕ್ಷುಷಾ ॥21॥
ಶ್ರೋತ್ರೇಣ ಗಂಧಾನಾದತ್ಸ್ವ ಸ್ಪರ್ಶಾನಾದತ್ಸ್ವ ಜಿಹ್ವಯಾ |
ತ್ವಚಾ ಚ ಶಬ್ದಮಾದತ್ಸ್ವ ಬುದ್ಧ್ಯಾ ಸ್ಪರ್ಶಮಥಾಪಿ ಚ ॥22॥
ಅಥವಾ ಶಬ್ದ-ಸ್ಪರ್ಶಾದಿಗಳು ಇದ್ದಾಗ ಸಂಕಲ್ಪ ಮಾತ್ರದಿಂದಲೇ ಆ ಭೋಗಗಳನ್ನು ನೀನು ಅನುಭವಿಸುವುದಾಗಿದ್ದಲ್ಲಿ ನೀನು ಭಾವಿಸಿರುವುದು ಸತ್ಯವಾಗುತ್ತಿತ್ತು. ಇಂದ್ರಿಯಗಳ ವಿಷಯದಲ್ಲಿ ನಿನಗೆ ಸದಾ ಸಿದ್ಧಿ ಇರುವುದಾದಲ್ಲಿ ನೀನು ಮೂಗಿನಿಂದ ರೂಪವನ್ನು ಗ್ರಹಿಸು, ಕಣ್ಣಿನಿಂದ ರಸವನ್ನು ಆಸ್ವಾದಿಸು, ಕಿವಿಯಿಂದ ಗಂಧವನ್ನು ಆಘ್ರಾಣಿಸು, ನಾಲಿಗೆಯಿಂದ ಸ್ಪರ್ಶಸುಖವನ್ನು ಅನುಭವಿಸು, ತ್ವಗಿಂದ್ರಿಯದಿಂದ ಶಬ್ದವನ್ನು ಕೇಳಿಸಿಕೊ, ಬುದ್ಧಿಯ ಮೂಲಕ ಸ್ಪರ್ಶ ಸುಖವನ್ನು ಅನುಭವಿಸು. ಹೀಗೆ ಮಾಡಲು ನಿನ್ನಿಂದ ಸಾಧ್ಯವೇ?
ಬಲವಂತೋ ಹ್ಯನಿಯಮಾ ನಿಯಮಾ ದುರ್ಬಲೀಯಸಾಮ್ |
ಭೋಗಾನಪೂರ್ವಾನಾದತ್ಸ್ವ ನೋಚ್ಛಿಷ್ಟಂ ಭೋಕ್ತುಮರ್ಹತಿ ॥23॥
ಬಲಿಷ್ಠರಿಗೆ ನಿಯಮಗಳಿಲ್ಲ. ದುರ್ಬಲರಿಗೆ ನೀತಿ-ನಿಯಮಗಳು ವಿಧಿಸಲ್ಪಟ್ಟಿವೆ. ನೀನು ಬಲಿಷ್ಠನಾಗಿದ್ದಲ್ಲಿ ಇನ್ನು ಮುಂದೆ ನಮ್ಮ ಸಹಕಾರವಿಲ್ಲದೆ ಅಪೂರ್ವವಾದ ಭೋಗಗಳನ್ನು ಅನುಭವಿಸು. ನಾವು ಅನುಭವಿಸಿದ ನಂತರ ಉಪಭೋಗವನ್ನು ಹೊಂದಬೇಡ.
ಯಥಾ ಹಿ ಶಿಷ್ಯಃ ಶಾಸ್ತಾರಂ ಶ್ರುತ್ಯರ್ಥಮಭಿಧಾವತಿ |
ತತಃ ಶ್ರುತಮುಪಾದಾಯ ಶ್ರುತ್ಯರ್ಥಮುಪತಿಷ್ಠತಿ ॥24॥
ವಿಷಯಾನೇವಮಸ್ಮಾಭಿರ್ದರ್ಶಿತಾನಭಿಮನ್ಯಸೇ |

ಅನುಭೂತಾನತೀತಾಂಶ್ಚ ಸ್ವಪ್ನೇ ಜಾಗರಣೇ ತಥಾ ॥25॥
ಯಾವ ರೀತಿ ಶಿಷ್ಯನು ಶ್ರುತಿಯ ಅರ್ಥವನ್ನು ತಿಳಿಯುವ ದೃಷ್ಟಿಯಿಂದ ಗುರುವನ್ನು ಉಪಾಶ್ರಯಿಸಿ, ಅವನಿಂದ ಉಪದೇಶವನ್ನು ಪಡೆದ ಬಳಿಕ ಅವನಲ್ಲಿಯೇ ಆಸಕ್ತನಾಗಿರುವಂತೆ ಸ್ವಪ್ನದಲ್ಲೇ ಆಗಲಿ, ಜಾಗ್ರದವಸ್ಥೆಯಲ್ಲಾಗಲಿ ನಮ್ಮಿಂದಲೇ ತೋರಿಸಿದ ವಿಷಯಗಳನ್ನು ನೀನು ನೋಡಿ ಅಭಿಮಾನಪಟ್ಟುಕೊಳ್ಳುತ್ತಿರುವೆ.
ವೈಮನಸ್ಯಂ ಗತಾನಾಂ ಚ ಜಂತೂನಾಮಲ್ಪಚೇತಸಾಮ್ ।
ಅಸ್ಮದರ್ಥೇ ಕೃತೇ ಕಾರ್ಯೇ ದೃಶ್ಯತೇ ಪ್ರಾಣಧಾರಣಮ್ ॥26॥
ಮನಸ್ಸೇ ಇಲ್ಲದ ಅಲ್ಪ ಪ್ರಾಣಿಗಳೇ ಆಗಿದ್ದರೂ ನಮ್ಮನ್ನು ತೃಪ್ತಿ ಪಡಿಸುವ ದೃಷ್ಟಿಯಿಂದ ಮಾಡುವ ಕಾರ್ಯಗಳಿಂದಲೇ ಅವು ಬದುಕಿವೆ ಎಂದು ಕಂಡುಬರುತ್ತದೆ. ಮನಸ್ಸಿಲ್ಲದಿದ್ದಾಗಲೂ ಊಟ ಮಾಡುವುದು ಕಂಡುಬಂದಿದೆ. ಮನಸ್ಸಿಲ್ಲದೆಯೂ ಮಾಡಿದ ಇಂದ್ರಿಯಗಳ ವ್ಯಾಪಾರಗಳು ಕಂಡುಬಂದಿದೆ.
ಬಹೂನಪಿ ಹಿ ಸಂಕಲ್ಪಾನ್ಮತ್ವಾ ಸ್ವಪ್ನಾನುಪಾಸ್ಯ ಚ ।
ಬುಭುಕ್ಷಯಾ ಪೀಡ್ಯಮಾನೋ ವಿಷಯಾನೇವ ಧಾವತಿ ॥27॥
ಕೆಲವನ್ನು ಮನಸ್ಸು ಅನೇಕ ಸಂಕಲ್ಪಗಳನ್ನು ಮನಸ್ಸಿನಲ್ಲಿಯೇ ಹೊಂದುತ್ತದೆ. ಅನೇಕ ಭೋಗಗಳನ್ನು ಮನಸ್ಸಿನಲ್ಲಿಯೇ ಸಂಕಲ್ಪಿಸಿದರೂ ಸ್ವಪ್ನಗಳಲ್ಲಿ ಆ ಭೋಗಗಳನ್ನು ಅನುಭವಿಸಿದ್ದರೂ (ಸ್ವಪ್ನದಲ್ಲಿ ಊಟ ಮಾಡಿದ್ದರೂ) ಹಸಿವೆಯಿಂದ ಪೀಡಿತನಾದಲ್ಲಿ ಊಟ ಮಾಡುವ ದೃಷ್ಟಿಯಿಂದ ಪ್ರವೃತ್ತಿಯನ್ನು ಮಾಡುತ್ತಾನೆ. ನಾಲಿಗೆಗೆ ಆಹಾರವನ್ನು ಹಾಕುತ್ತಾನೆ. ಮನಸ್ಸು ಉಪಭೋಗಿಸಿದ ಮಾತ್ರಕ್ಕೆ ಇಂದ್ರಿಯಗಳ ಸಹಕಾರದ ಅಪೇಕ್ಷೆ ಇಲ್ಲದೆ ಬದುಕಲಾಗುವುದಿಲ್ಲ.
ಅಗಾರಮದ್ವಾರಮಿವ ಪ್ರವಿಶ್ಯ
ಸಂಕಲ್ಪಭೋಗಾನ್ ವಿಷಯಾನವಿಂದನ್ ।
ಪ್ರಾಣಕ್ಷಯೇ ಶಾಂತಿಮುಪೈತಿ ನಿತ್ಯಂ
ದಾರುಕ್ಷಯೇಽಗ್ನಿರ್ಜ್ವಲಿತೋ ಯಥೈವ ॥28॥
ಬಾಗಿಲೇ ಇಲ್ಲದ ಮನೆಯನ್ನು ಪ್ರವೇಶಿಸುವಂತೆ ಇಂದ್ರಿಯಗಳ ಸಹಕಾರವೇ ಇಲ್ಲದ ಭೋಗಗಳನ್ನು ಮನಸ್ಸು ಅನುಭವಿಸುತ್ತದೆ. ಆದರೆ ಇವುಗಳಿಂದ ತೃಪ್ತಿ ಉಂಟಾಗದು. ಕಟ್ಟಿಗೆಯು ಉರಿದ ಬಳಿಕ ಅಗ್ನಿಯು ಶಾಂತವಾಗುವಂತೆ ಪ್ರಾಣ ಹೊರಟ ಬಳಿಕ ಮನಸ್ಸೂ ಶಾಂತವಾಗುತ್ತದೆ.
ಕಾಮಂ ತು ಸ್ವಪ್ನೇಷು ಗುಣೇಷು ಸಂಗಃ
ಕಾಮಂ ಚ ನಾನ್ಯೋನ್ಯಗುಣೋಪಲಬ್ಧಿಃ ।
ಅಸ್ಮಾನ್ ವಿನಾ ನಾಸ್ತಿ ತಪೋಪಲಬ್ಧಿಃ
ತಾಮಪ್ಯೃತೇ ತ್ವಾಂ ನ ಭಜೇತ್ ಪ್ರಹರ್ಷಃ ॥29॥
ನಮ್ಮ ನಮ್ಮ ವಿಷಯದಲ್ಲಿ ನಮಗೆ ಆಸಕ್ತಿ ಇರಬಹುದು. ಪರಸ್ಪರವಾಗಿ ಒಬ್ಬರ ಗುಣವನ್ನು ಮತ್ತೊಬ್ಬರು ಅರಿಯದಿರಬಹುದು. ಆದರೆ ನಮ್ಮ ಸಹಯೋಗವಿಲ್ಲದೆ ಮನಸ್ಸಿಗೆ ವಿಷಯಗಳ ಅನುಭವವಾಗುವುದಿಲ್ಲ ಎಂಬುದು ಸತ್ಯ. ಆದರೆ ಮನಸ್ಸೇ ನಿನ್ನ ಸಹಯೋಗವು ನಮಗಿಲ್ಲದಿದ್ದರೆ ನಾವು ಸಂತೋಷದಿಂದ ವಂಚಿತರಾಗುವುದು ಸತ್ಯ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ಪ್ರಾಣಾಪಾನಾದಿಗಳ ಸಂವಾದವನ್ನು
ಬ್ರಾಹ್ಮಣ ದಂಪತಿಗಳ ಸಂವಾದದ ಮೂಲಕ ಅನುವಾದಿಸಿದುದು.
ಅಲ್ಲೂ ವಾಯುಗಳು ಶ್ರೇಷ್ಠವೆಂದು ಬ್ರಹ್ಮನು ನಿರ್ಣಯ ಮಾಡಿದ ಪ್ರಸಂಗ.
ಬ್ರಾಹ್ಮಣಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಸುಭಗೇ ಪಂಚಹೋತೄಣಾಂ ವಿಧಾನಮಿಹ ಯಾದೃಶಮ್ ॥1॥
ಬ್ರಾಹ್ಮಣ ಪಂಚಹೋತೃಗಳ ಯಜ್ಞವಿಧಾನವು ಯಾವ ರೀತಿಯಾಗಿದೆ ಎನ್ನಲು ಪುರಾತನ ಇತಿಹಾಸವನ್ನು ವಿದ್ವಾಂಸರು ಹೇಳಿರುತ್ತಾರೆ.
ಪ್ರಾಣಾಪಾನಾವುದಾನಶ್ಚ ಸಮಾನೋ ವ್ಯಾನ ಏವ ಚ ।
ಪಂಚಹೋತೄನಥೈತಾನ್ ವೈ ಪರಂ ಭಾವಂ ವಿದುರ್ಬುಧಾಃ ॥2॥
ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ - ಈ ಐವರು ಪಂಚಹೋತೃರು ಎನಿಸಿದ್ದಾರೆ. ವಿದ್ವಾಂಸರು ಎಲ್ಲಕ್ಕಿಂತಲೂ ಶ್ರೇಷ್ಠವಾದ ಭಾವಗಳು ಈ ಐದು ಎನ್ನುತ್ತಾರೆ.
ಬ್ರಾಹ್ಮಣೀ
ಸ್ವಭಾವಾತ್ ಸಪ್ತ ಹೋತಾರ ಇತಿ ತೇ ಪೂರ್ವಿಕಾ ಮತಿಃ ।
ಯಥಾ ವೈ ಪಂಚ ಹೋತಾರಃ ಪರೋ ಭಾವಸ್ತಥೋಚ್ಯತಾಮ್ ॥3॥
ಬ್ರಾಹ್ಮಣೀ ಸ್ವಾಭಾವಿಕವಾಗಿ ಏಳು ಹೋತೃಗಳಿದ್ದಾರೆ ಎಂದು ತಿಳಿದಿದ್ದೇವೆ. ನೀನು ಪಂಚ ಹೋತೃಗಳು ಎಂದು ಹೇಳಿದೆ. ಏಳು

ಐದಾದದ್ದು ಹೇಗೆ? ಹೇಳು.
ಬ್ರಾಹ್ಮಣಃ
ಪ್ರಾಣೇನ ಸಂಭೃತೋ ವಾಯುರಪಾನೋ ಜಾಯತೇ ತತಃ |
ಅಪಾನೇ ಸಂಭೃತೋ ವಾಯುಸ್ತತೋ ವ್ಯಾನಃ ಪ್ರವರ್ತತೇ ॥4॥
ತೇಽಪೃಚ್ಛಂತ ಪುರೋ ಗತ್ವಾ ಪೂರ್ವಜಾತಂ ಪ್ರಜಾಪತಿಮ್ |
ಯೋ ನೋ ಜ್ಯೇಷ್ಠಸ್ತದಾಚಕ್ಷ್ವ ಸ ನಃ ಶ್ರೇಷ್ಠೋ ಭವಿಷ್ಯತಿ ॥5॥
ಬ್ರಾಹ್ಮಣ ಪ್ರಾಣನಿಂದ ಪುಷ್ಟಿಗೊಂಡ ವಾಯುವು ಅಪಾನ ಎನಿಸುತ್ತಾನೆ. ಅಪಾನನಿಂದ ಪುಷ್ಟಿಗೊಂಡ ವಾಯು ವ್ಯಾನ. ವ್ಯಾನನಿಂದ ಪುಷ್ಟಿಗೊಂಡ ವಾಯುವು ಉದಾನ. ಉದಾನನಿಂದ ಪುಷ್ಟಿಗೊಂಡ ವಾಯುವು ಸಮಾನ. ಈ ಐದು ವಾಯುಗಳು ಪೂರ್ವಜನಾದ ಚತುರ್ಮುಖ ಬ್ರಹ್ಮನ ಬಳಿ ಹೋಗಿ ಪೂಜ್ಯನೇ, ಪ್ರಾಣನು ಧರಿಸಿರುವ ನಮ್ಮಲ್ಲಿ ಶ್ರೇಷ್ಠರು ಯಾರೆಂದು ಹೇಳು. ಯಾರ ಪ್ರವೃತ್ತಿಯಿಂದ ಜೀವರ ಪ್ರವೃತ್ತಿ ಉಂಟಾಗುತ್ತದೆ? ನೀನು ಯಾರನ್ನು ಶ್ರೇಷ್ಠನೆಂದು ಹೇಳುತ್ತೀಯೋ ಅವನೇ ಶ್ರೇಷ್ಠನೆಂದು ಹೇಳಿದಾಗ, ಬ್ರಹ್ಮನು ಉತ್ತರಿಸಿದನು.
ಪ್ರಜಾಪತಿಃ
ಯಸ್ಮಿನ್ ಪ್ರಲೀನೇ ಪ್ರಲಯಂ ವ್ರಜಂತಿ
ಸರ್ವೇ ಪ್ರಾಣಾಃ ಪ್ರಾಣಭೃತಾಂ ಶರೀರೇ |
ಯಸ್ಮಿನ್ ಪ್ರವೃತ್ತೇ ಚ ಪುನಶ್ಚರಂತಿ
ಸ ವಃ ಶ್ರೇಯಾನ್ ಗಚ್ಛತ ಯತ್ರ ಕಾಮಃ ॥6॥
ಪ್ರಜಾಪತಿ ಪ್ರಾಣಗಳನ್ನು ಧರಿಸಿರುವ ಶರೀರದಲ್ಲಿ ನಿಮ್ಮಲ್ಲಿ ಯಾರು ಲಯ ಹೊಂದಿದ ಬಳಿಕ ಉಳಿದ ಎಲ್ಲ ಪ್ರಾಣಗಳು ಲಯವನ್ನು ಹೊಂದುತ್ತವೋ, ಯಾವ ವಾಯು ಚಲಿಸಿದಾಗ ಯಾವ ಪ್ರಾಣಿಗಳಿಗೂ ಚಲನೆ ಉಂಟಾಗುತ್ತದೋ ಅವನೇ ಶ್ರೇಷ್ಠತಮನು. ಅವನು ಯಾರೆಂದು ನೀವೇ ನಿಶ್ಚಯಿಸಿಕೊಂಡು ನಿಮ್ಮ ಸ್ಥಾನಗಳಿಗೆ ತೆರಳಿರಿ ಎಂದು ಬ್ರಹ್ಮನು ಹೇಳಿದಾಗ,
ಪ್ರಾಣವಾಯುವು ಹೇಳುತ್ತಾನೆ
ಪ್ರಾಣಃ
ಮಯಿ ಪ್ರಲೀನೇ ಪ್ರಲಯಂ ವ್ರಜಂತಿ
ಸರ್ವೇ ಪ್ರಾಣಾಃ ಪ್ರಾಣಭೃತಾಂ ಶರೀರೇ |
ಮಯಿ ಪ್ರವೃತ್ತೇ ಚ ಪುನಶ್ಚರಂತಿ
ಶ್ರೇಷ್ಠೋ ಹ್ಯಹಂ ಪಶ್ಯತ ಮಾ ಪ್ರಲೀನಮ್ ॥7॥
ವಾಯುಗಳೇ, ಪ್ರಾಣಿಗಳ ಶರೀರದಲ್ಲಿ ನಾನು ಲಯಹೊಂದಿದರೆ ಪ್ರಾಣಗಳು ಲಯ ಹೊಂದುತ್ತದೆ. ನಾನು ಚಲಿಸಿದಲ್ಲಿ ಪ್ರಾಣಗಳು ಚಲಿಸುತ್ತವೆ. ಆದ್ದರಿಂದ ನಾನೇ ಶ್ರೇಷ್ಠ. ನನ್ನ ಶ್ರೇಷ್ಠತೆಯನ್ನು ನೀವು ನೋಡಿರಿ. ನಾನು ಲಯ ಹೊಂದುತ್ತೇನೆ, ನೀವು ಲಯ ಹೊಂದುತ್ತೀರಿ.
ಬ್ರಾಹ್ಮಣಃ
ಪ್ರಾಣಃ ಪ್ರಾಲೀಯತ ತತಃ ಪುನಶ್ಚ ಪ್ರಚಚಾರ ಸಃ |
ಸಮಾನಶ್ಚಾಪ್ಯುದಾನಶ್ಚ ವಚೋಽಬ್ರೂತಾಂ ಪುನಃ ಶುಭೇ ॥8॥
ಬ್ರಾಹ್ಮಣ ಶುಭಾಂಗಿಯೇ, ಹೀಗೆ ಪ್ರಾಣವಾಯುವು ಸ್ವಲ್ಪ ಸಮಯ ಲಯ ಹೊಂದಿತು. ಕೂಡಲೇ ಅಪಾನವೂ ಲಯ ಹೊಂದಿತು. ಸ್ವಲ್ಪ ಸಮಯದ ಬಳಿಕ ಪ್ರಾಣವು ಚಲಿಸಿತು, ಆ ಸಮಯದಲ್ಲಿ ಸಮಾನ-ಉದಾನ ವಾಯುಗಳು ಹೇಳಿದವು.
ಸಮಾನೋದಾನೌ
ನ ತ್ವಂ ಸರ್ವಮಿದಂ ಪ್ರಾಪ್ಯ ತಿಷ್ಠಸ್ಯುತ ಯಥಾ ವಯಮ್ |
ನ ತ್ವಂ ಶ್ರೇಷ್ಠೋ ಹಿ ನಃ ಪ್ರಾಣ ಅಪಾನೋ ಹಿ ವಶೇ ತವ ॥9॥
ಪ್ರಾಣವಾಯುವೇ, ನಾವು ಪ್ರಾಣಿಗಳ ಶರೀರವನ್ನು ವ್ಯಾಪಿಸಿರುವಂತೆ ನೀನು ವ್ಯಾಪಿಸಿಲ್ಲ. ಆದ್ದರಿಂದ ನಮಗಿಂತ ನೀನು ಅಧಿಕನಲ್ಲ. ಆದರೆ ಅಪಾನ ವಾಯುವು ನಿನಗೆ ಅಧೀನವಾಗಿದ್ದಾನೆ. ಇದು ಸತ್ಯ.
ಬ್ರಾಹ್ಮಣಃ
ಪ್ರಚಚಾರ ತತಃ ಪ್ರಾಣಃ ತತೋಽಪಾನೋಽಭ್ಯಭಾಷತ ॥10॥
ಬ್ರಾಹ್ಮಣ ಪ್ರಾಣವಾಯುವು ಚಲಿಸಲಾರಂಭಿಸಿದ ಬಳಿಕ ಅಪಾನ ವಾಯುವು ಹೇಳುತ್ತದೆ.
ಅಪಾನಃ
ಮಯಿ ಪ್ರಲೀನೇ ಪ್ರಲಯಂ ವ್ರಜಂತಿ
ಸರ್ವೇ ಪ್ರಾಣಾಃ ಪ್ರಾಣಭೃತಾಂ ಶರೀರೇ |
ಮಯಿ ಪ್ರವೃತ್ತೇ ಚ ಪುನಶ್ಚರಂತಿ
ಶ್ರೇಷ್ಠೋ ಹ್ಯಹಂ ಪಶ್ಯತ ಮಾ ಪ್ರಲೀನಮ್ ॥11॥
ಅಪಾನ ಪ್ರಾಣಿಗಳ ಶರೀರದಲ್ಲಿ ನಾನು ಲಯ ಹೊಂದಿದರೆ ಉಳಿದೆಲ್ಲ ಪ್ರಾಣಗಳು ಲಯಹೊಂದುತ್ತವೆ. ನಾನು ಚಲಿಸಿದರೆ ಇತರ ಪ್ರಾಣಗಳ ಚಲನೆ. ಆದ್ದರಿಂದ ನಾನೇ ಶ್ರೇಷ್ಠ. ಈಗ ನೀವು ನೋಡಿ, ನಾನು ಲಯ ಹೊಂದುವೆ. ನನ್ನೊಡನೆ ನೀವು ಲಯ ಹೊಂದುತ್ತೀರಿ ಎಂದು ಹೇಳಿ ಅಪಾನವು ಲಯಹೊಂದಿತು. ಅದರೊಡನೆ ಪ್ರಾಣವೂ ಲಯಹೊಂದಿತು. ಪುನಃ ಅಪಾನವು ಚಲಿಸಿತು.
ಬ್ರಾಹ್ಮಣಃ

ವ್ಯಾನಶ್ಚ ತಮುದಾನಶ್ಚ ಭಾಷಮಾಣಮಥೋಚತುಃ ॥12॥
ಹೀಗೆ ನಾನೇ ಶ್ರೇಷ್ಠನೆಂದು ಅಪಾನ ವಾಯುವು ಹೇಳಿದಾಗ ವ್ಯಾನ, ಉದಾನ ವಾಯುಗಳು ಹೇಳಿದವು.
ವ್ಯಾನೋದಾನೌ
ಅಪಾನ ನ ತ್ವಂ ಶ್ರೇಷ್ಠೋ ನಃ ಪ್ರಾಣೋ ಹಿ ವಶಗಸ್ತವ ॥13॥
ಅಪಾನವಾಯುವೇ, ನೀನು ನಮ್ಮೆಲ್ಲರಿಗಿಂತಲೂ ಶ್ರೇಷ್ಠನಲ್ಲ. ಅವನು ನಿನ್ನ ವಶದಲ್ಲಿರುವುದು ನಿಜ.
ಬ್ರಾಹ್ಮಣಃ
ಅಪಾನಃ ಪ್ರಚಚಾರಾಥ ವ್ಯಾನಸ್ತಂ ಪುನರಬ್ರವೀತ್ ॥14॥
ಬ್ರಾಹ್ಮಣ ಅಪಾನವು ಚಲಿಸಿದಾಗ ವ್ಯಾನವಾಯುವು ಅಪಾನವಾಯುವನ್ನು ಕುರಿತು ಪುನಃ ಹೇಳಿತು.
ವ್ಯಾನಃ
ಶ್ರೇಷ್ಠೋಽಹಮಸ್ಮಿ ಸರ್ವೇಷಾಂ ಶ್ರೂಯತಾಂ ಯೇನ ಹೇತುನಾ ॥15॥
ವ್ಯಾನ ಅಪಾನವಾಯುವೇ, ನಾನು ಎಲ್ಲರಿಗಿಂತ ಶ್ರೇಷ್ಠನಾಗಿದ್ದೇನೆ. ಕಾರಣವನ್ನು ಹೇಳುತ್ತೇನೆ, ಕೇಳಿಸಿಕೊ.
ಮಯಿ ಪ್ರಲೀನೇ ಪ್ರಲಯಂ ವ್ರಜಂತಿ
ಸರ್ವೇ ಪ್ರಾಣಾಃ ಪ್ರಾಣಭೃತಾಂ ಶರೀರೇ |
ಮಯಿ ಪ್ರವೃತ್ತೇ ಚ ಪುನಶ್ಚರಂತಿ
ಶ್ರೇಷ್ಠೋ ಹ್ಯಹಂ ಪಶ್ಯತ ಮಾ ಪ್ರಲೀನಮ್ ॥16॥
ನಾನು ಪ್ರಾಣಿಗಳ ಶರೀರದಲ್ಲಿ ಲಯವನ್ನು ಹೊಂದಿದರೆ ಎಲ್ಲ ಪ್ರಾಣಗಳು ಚಲಿಸುತ್ತವೆ. ಆದ್ದರಿಂದ ನಾನೇ ಪ್ರಾಣ ಧರಿಸಿದವರಲ್ಲಿ ಶ್ರೇಷ್ಠ. ನಾನು ಲಯ ಹೊಂದಿದರೆ ಏನಾಗುತ್ತದೆ ಎಂಬುದನ್ನು ನೋಡಿರಿ. ನನ್ನೊಡನೆ ನೀವೆಲ್ಲ ಲಯ ಹೊಂದುತ್ತೀರಿ.
ಬ್ರಾಹ್ಮಣಃ
ಪ್ರಾಲೀಯತ ತತೋ ವ್ಯಾನಃ ಪುನಶ್ಚ ಪ್ರಚಚಾರ ಹ |
ಪ್ರಾಣಾಪಾನಾವುದಾನಶ್ಚ ಸಮಾನಶ್ಚ ತಮಬ್ರುವನ್ ॥17॥
ಬ್ರಾಹ್ಮಣ ಹೀಗೆ ಹೇಳಿ ವ್ಯಾನವು ಸ್ವಲ್ಪ ಕಾಲ ಲಯವನ್ನು ಹೊಂದಿತು. ವ್ಯಾನ ವಾಯುವಿನ ಜೊತೆ ಸಮಾನ ವಾಯುವು ಲಯ ಹೊಂದಿತು. ಪುನಃ ವ್ಯಾನ ವಾಯುವು ಚಲಿಸಿತು.
ಆ ಸಂದರ್ಭದಲ್ಲಿ  ಪ್ರಾಣ, ಅಪಾನ, ಉದಾನ, ಸಮಾನ ವ್ಯಾನಕ್ಕೆ ಹೇಳಿದವು
ಪ್ರಾಣೋಪಾನೋದಾನಸಮಾನಃ
ನ ತ್ವಂ ಶ್ರೇಷ್ಠೋಽಸಿ ನೋ ವ್ಯಾನ ಸಮಾನೋ ಹಿ ವಶೇ ತವ ॥18॥
ವ್ಯಾನವಾಯುವೇ, ನೀನು ನಮಗಿಂತಲೂ ಶ್ರೇಷ್ಠನಲ್ಲ. ಆದರೆ ಸಮಾನ ವಾಯುವು ನಿನ್ನ ವಶದಲ್ಲಿದ್ದಾನೆ ಎಂಬುದು ಮಾತ್ರ ನಿಜ.
ಬ್ರಾಹ್ಮಣಃ
ಪ್ರಚಚಾರ ತತೋ ವ್ಯಾನಃ ಸಮಾನಃ ತಮಥಾಬ್ರವೀತ್ ॥19॥
ಬ್ರಾಹ್ಮಣ ಹಿಂದೆ ಹೇಳಿದಂತೆ ವ್ಯಾನವು ಚಲಿಸತೊಡಗಿತು. ಸಮಾನವು ಹೇಳಿತು.
ಸಮಾನಃ
ಶ್ರೇಷ್ಠೋಽಹಮಸ್ಮಿ ಸರ್ವೇಷಾಂ ಶ್ರೂಯತಾಂ ಯೇನ ಹೇತುನಾ ॥20॥
ಸಮಾನ ನಿಮ್ಮೆಲ್ಲರಿಗಿಂತಲೂ ನಾನೇ ಶ್ರೇಷ್ಠನಾಗಿದ್ದೇನೆ. ಯಾವ ಕಾರಣದಿಂದ ಶ್ರೇಷ್ಠನೆಂದು ಕೇಳಿಸಿಕೊಳ್ಳಿರಿ.
ಮಯಿ ಪ್ರಲೀನೇ ಪ್ರಲಯಂ ವ್ರಜಂತಿ
ಸರ್ವೇ ಪ್ರಾಣಾಃ ಪ್ರಾಣಭೃತಾಂ ಶರೀರೇ |
ಮಯಿ ಪ್ರವೃತ್ತೇ ಚ ಪುನಶ್ಚರಂತಿ
ಶ್ರೇಷ್ಠೋ ಹ್ಯಹಂ ಪಶ್ಯತ ಮಾ ಪ್ರಲೀನಮ್ ॥21॥
ನಾನು ಪ್ರಾಣಿಗಳ ಶರೀರದಲ್ಲಿ ಲಯ ಹೊಂದಿದಲ್ಲಿ ಎಲ್ಲ ಪ್ರಾಣಗಳು ಲಯ ಹೊಂದುತ್ತವೆ. ನಾನು ಚಲಿಸಿದರೆ ಚಲನೆ. ಆದ್ದರಿಂದ ನಾನೇ ಶ್ರೇಷ್ಠ. ಈಗ ನಾನು ಲಯ ಹೊಂದಿದರೆ ಎಂದು ಅನುಭವಿಸಿ ನೋಡಿ. ಅನಿವಾರ್ಯವಾಗಿ ನೀವು ನನ್ನೊಡನೆ ಲಯ ಹೊಂದುವಿರಿ.
ಬ್ರಾಹ್ಮಣಃ
ತತಃ ಸಮಾನಃ ಪ್ರಾಲೀಲ್ಯೇ ಪುನಶ್ಚ ಪ್ರಚಚಾರ ಹ |
ಪ್ರಾಣಾಪಾನಾವುದಾನಶ್ಚ ವ್ಯಾನಶ್ಚೈವ ತಮಬ್ರುವನ್ ॥22॥
ಬ್ರಾಹ್ಮಣ ಹೀಗೆ ಹೇಳಿ ಸಮಾನ ವಾಯುವು ಲಯ ಹೊಂದಿತು. ಅದರ ಜೊತೆಗೆ ವ್ಯಾನವೂ ಲಯ ಹೊಂದಿತು. ಪುನಃ ಸಮಾನವಾಯುವು ಚಲಿಸಿತು. ಈ ಸಮಯದಲ್ಲಿ ಪ್ರಾಣ, ಅಪಾನ, ಉದಾನ, ವ್ಯಾನಗಳು ಸಮಾನನಿಗೆ ಹೇಳಿದವು.
ಪ್ರಾಣಾಪಾನವ್ಯಾನೋದಾನಾಃ
ನ ತ್ವಂ ಸಮಾನ ಶ್ರೇಷ್ಠೋಽಸಿ ಉದಾನೋ ಹಿ ವಶೇ ತವ ॥23॥
ಸಮಾನವಾಯುವೇ, ನೀನು ನಮ್ಮೆಲ್ಲರಿಗಿಂತಲೂ ಶ್ರೇಷ್ಠನಲ್ಲ. ಆದರೆ ವ್ಯಾನ ವಾಯುವು ನಿನ್ನ ವಶದಲ್ಲಿರುವುದು ಸತ್ಯ.
ಬ್ರಾಹ್ಮಣಃ
ಸಮಾನಃ ಪ್ರಚಚಾರಾಥ ಉದಾನಸ್ತಮುವಾಚ ಹ ॥24॥
ಬ್ರಾಹ್ಮಣ ಹೀಗೆ ಹೇಳಿದ ಬಳಿಕ ಸಮಾನ ವಾಯುವು ಚಲಿಸಿತು. ಆಗ ಉದಾನ ವಾಯುವು ಇತರ ವಾಯುಗಳನ್ನು ಕುರಿತು ಹೇಳಿತು.

ಉದಾನಃ
ಶ್ರೇಷ್ಠೋಽಹಮಸ್ಮಿ ಸರ್ವೇಷಾಂ ಶ್ರೂಯತಾಂ ಯೇನ ಹೇತುನಾ ॥25॥
ಉದಾನ ಪ್ರಾಣರೇ, ನಿಮ್ಮೆಲ್ಲರಿಗಿಂತ ನಾನು ಶ್ರೇಷ್ಠ. ಕಾರಣ ಕೇಳಿರಿ.
ಮಯಿ ಪ್ರಲೀನೇ ಪ್ರಲಯಂ ವ್ರಜಂತಿ
ಸರ್ವೇ ಪ್ರಾಣಾಃ ಪ್ರಾಣಭೃತಾಂ ಶರೀರೇ |
ಮಯಿ ಪ್ರವೃತ್ತೇ ಚ ಪುನಶ್ಚರಂತಿ
ಶ್ರೇಷ್ಠೋ ಹ್ಯಹಂ ಪಶ್ಯತ ಮಾ ಪ್ರಲೀನಮ್ ॥26॥
ಪ್ರಾಣಿಗಳ ಶರೀರದಲ್ಲಿ ನಾನು ಲಯ ಹೊಂದಿದರೆ ಪ್ರಾಣಗಳು ಲಯ ಹೊಂದುತ್ತವೆ. ನಾನು ಚಲಿಸಿದರೆ ಚಲನೆ. ಆದ್ದರಿಂದ ನಾನೇ ಶ್ರೇಷ್ಠ. ನನ್ನ ಲಯದ ಪರಿಣಾಮ ಏನೆಂಬುದನ್ನು ನೋಡಿದರೆ ನನ್ನ ಜೊತೆಗೆ ನೀವೆಲ್ಲ ಲಯ ಹೊಂದುವಿರಿ.
ಬ್ರಾಹ್ಮಣಃ
ತತಃ ಪ್ರಾಲೀಯತೋದಾನಃ ಪುನಶ್ಚ ಪ್ರಚಚಾರ ಹ |
ಪ್ರಾಣಾಪಾನೌ ಸಮಾನಶ್ಚ ವ್ಯಾನಶ್ಚೈವ ತಮಬ್ರುವನ್ ॥27॥
ಬ್ರಾಹ್ಮಣ ನಂತರ ಉದಾನವಾಯುವು ಲಯ ಹೊಂದಿತು. ಅದರ ಜೊತೆ ವ್ಯಾನವೂ ಲಯ ಹೊಂದಿತು. ಉದಾನವು ಚಲಿಸಿತು. ನಂತರ ಪ್ರಾಣ, ಅಪಾನ, ಸಮಾನ, ವ್ಯಾನಗಳು ಉದಾನವಾಯುವನ್ನು ಕುರಿತು ಹೇಳಿದವು.
ಪ್ರಾಣಾಪಾನವ್ಯಾನಸಮಾನಾಃ
ಉದಾನ ನ ತ್ವಂ ಶ್ರೇಷ್ಠೋಽಸಿ ಸಮಾನೋ ಹಿ ವಶೇ ತವ ॥28॥
ಉದಾನ ವಾಯುವೇ, ನೀನು ನಮ್ಮೆಲ್ಲರಿಗಿಂತಲೂ ಶ್ರೇಷ್ಠನಲ್ಲ. ವ್ಯಾನನು ಮಾತ್ರ ನಿನ್ನ ವಶದಲ್ಲಿದ್ದಾನೆ ಎಂಬುದು ಸತ್ಯ.
ಬ್ರಾಹ್ಮಣಃ
ತತಸ್ತಾನಬ್ರವೀತ್ ಸರ್ವಾನ್ ಸ್ಮಯಮಾನಃ ಪ್ರಜಾಪತಿಃ ॥29॥
ಬ್ರಾಹ್ಮಣ ಹೀಗೆ ವಾಯುಗಳೆಲ್ಲವೂ ತಮ್ಮ ತಮ್ಮ ಶಕ್ತಿಗಳನ್ನು ಪ್ರದರ್ಶಿಸಿದ ಬಳಿಕ ಪುನಃ ಒಟ್ಟಾಗಿ ಚತುರ್ಮುಖ ಬ್ರಹ್ಮನ ಬಳಿ ಎಲ್ಲರೂ ಆಗಮಿಸಿದರು.
ನಿರ್ಣಯ ಮಾಡಿಕೊಳ್ಳದೆ ಬಂದಿರುವ ವಾಯುಗಳನ್ನು ಕುರಿತು ಬ್ರಹ್ಮನು ಹೇಳಿದನು
ಬ್ರಹ್ಮಾ
ಸರ್ವೇ ಶ್ರೇಷ್ಠಾ ನ ವಾ ಶ್ರೇಷ್ಠಾಃ ಸರ್ವೇ ಚಾನ್ಯೋನ್ಯರಕ್ಷಿಣಃ |
ಸರ್ವೇ ಸ್ವವಿಷಯೇ ಶ್ರೇಷ್ಠಾಃ ಸರ್ವೇ ಚಾನ್ಯೋನ್ಯರಕ್ಷಿಣಃ ॥30॥
ಬ್ರಹ್ಮ ವಾಯುಗಳೇ, ನೀವೆಲ್ಲರೂ ಶ್ರೇಷ್ಠರಾಗಿಯೇ ಇದ್ದೀರಿ ಅಥವಾ ಯಾರೂ ಶ್ರೇಷ್ಠರಲ್ಲ. ನಿಮ್ಮೆಲ್ಲರಲ್ಲಿಯೂ ಇರುವ ಧರ್ಮವು ಒಂದನ್ನು ಇನ್ನೊಂದು ಆಶ್ರಯಿಸಿದೆ. ನಿಮ್ಮ ನಿಮ್ಮ ಸ್ಥಾನಗಳಲ್ಲಿ ನೀವು ಶ್ರೇಷ್ಠರು. ಪರಸ್ಪರ ಧರ್ಮವುಳ್ಳವರಾಗಿದ್ದೀರಿ. ಒಬ್ಬನಲ್ಲಿ ಇರುವ ಧರ್ಮವು ಮತ್ತೊಬ್ಬನಲ್ಲಿಯೂ ಇದೆ. ನಿಮ್ಮ ಕಾರ್ಯಗಳು ಇನ್ನೊಬ್ಬರ ಅಪೇಕ್ಷೆಯಿಂದ ನಡೆಯುತ್ತವೆ.
ಬ್ರಾಹ್ಮಣಃ
ಇತಿ ತಾನಬ್ರವೀತ್ ಸರ್ವಾನ್ ಸಮವೇತಾನ್ ಪ್ರಜಾಪತಿಃ ॥31॥
ಬ್ರಾಹ್ಮಣ ಹೀಗೆ ಆಗಮಿಸಿದ ಪ್ರಾಣರನ್ನು ಕುರಿತು ಚತುರ್ಮುಖ ಬ್ರಹ್ಮನು ಹೀಗೆ ಹೇಳಿದನು.
ಬ್ರಹ್ಮಾ
ಏಕಃ ಸ್ಥಿರಶ್ಚರಾಶ್ಚಾನ್ಯೇ ವಿಶೇಷಾತ್ ಪಂಚ ವಾಯವಃ |
ಏಕ ಏವ ಮಮೈವಾತ್ಮಾ ಬಹುಧಾಽಪ್ಯುಪಚೀಯತೇ ॥32॥
ಬ್ರಹ್ಮ ಮುಖ್ಯಪ್ರಾಣನೇ ಬ್ರಹ್ಮಪದವಿಗೆ ಯೋಗ್ಯನಾಗಿರುವುದರಿಂದ ಮುಖ್ಯಪ್ರಾಣನನ್ನೇ ಆತ್ಮ ಎಂದು ಕರೆಯುತ್ತಾರೆ. ಪಂಚರೂಪಗಳೂ ಕೂಡ ಮುಖ್ಯಪ್ರಾಣನೇ ಆಗಿದ್ದಾನೆ. ಆ ಮುಖ್ಯಪ್ರಾಣನು ಮುಂದಿನ ಕಲ್ಪದ ಬ್ರಹ್ಮನಾಗಿದ್ದಾನೆ. ಆದ್ದರಿಂದ ಕಲಹವನ್ನು ಮಾಡಬೇಡಿರಿ.
ಪರಸ್ಪರಸ್ಯ ಸುಹೃದೋ ಭಾವಯಂತಃ ಪರಸ್ಪರಮ್ |
ಸ್ವಸ್ತಿ ವ್ರಜತ ಭದ್ರಂ ವೋ ಧಾರಯಧ್ವಂ ಪರಸ್ಪರಮ್ ॥33॥
ವಾಯುಗಳೇ, ನೀವೆಲ್ಲರೂ ಪರಸ್ಪರವಾಗಿ ಒಬ್ಬರಲ್ಲಿ ಮತ್ತೊಬ್ಬರು ವಿಶ್ವಾಸವಿಟ್ಟು ಮೈತ್ರಿಯಿಂದ ಒಬ್ಬರು ಮತ್ತೊಬ್ಬರನ್ನು ಪೋಷಿಸಿರಿ. ನಿಮಗೆ ಮಂಗಳವಾಗಲಿ. ನೀವಿನ್ನು ಹೋಗಿ ಬನ್ನಿರಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಇಂದ್ರಿಯಾಣಾಂ ಪರಸ್ಪರಸಂವಾದೋ ನಾಮ ಚತುರ್ವಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ನವಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ, ಬ್ರಾಹ್ಮಣನು ಬ್ರಾಹ್ಮಣಿಯನ್ನು ಕುರಿತು ಹೇಳಿದ ಸೃಷ್ಟ್ಯಾದಿ ಪ್ರತಿಪಾದಕವಾದ ನಾರದ ಮತ್ತು ದೇವತಮನ ಸಂವಾದವನ್ನು ಉಪದೇಶಿಸಿದುದು.
ಬ್ರಾಹ್ಮಣಃ

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ನಾರದಸ್ಯ ಚ ಸಂವಾದಮೃಷೇರ್ದೇವತಮಸ್ಯ ಚ ॥1॥
ಬ್ರಾಹ್ಮಣ ಪ್ರಿಯಳೇ, ಈ ವಿಷಯದಲ್ಲಿ ದೇವರ್ಷಿಗಳಾದ ನಾರದರಿಗೂ, ದೇವತಮನೆಂಬ ಮುನಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ವಿದ್ವಾಂಸರು ಹೇಳುತ್ತಾರೆ.
ನಾರದರು ದೇವತಮನನ್ನು ಸಂಧಿಸಿದಾಗ ದೇವತಮನು ನಾರದರ ಬಳಿ ಪ್ರಶ್ನಿಸುತ್ತಾನೆ
ದೇವತಮಃ
ಜಂತೋಃ ಸಂಜಾಯಮಾನಸ್ಯ ಕಿಂ ನು ಪೂರ್ವಂ ಪ್ರವರ್ತತೇ |
ಪ್ರಾಣೋಽಪಾನಃ ಸಮಾನೋ ವಾ ವ್ಯಾನೋ ವೋದಾನ ಏವ ಚ ॥
ದೇವತಮ ನಾರದರೇ, ಜೀವನು ಹುಟ್ಟುವ ಸಮಯದಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಪಂಚವಾಯುಗಳಲ್ಲಿ ಯಾವ ವಾಯುವು ಮೊದಲು ತಾಯಿಯ ಶರೀರದಲ್ಲಿ ಪ್ರವೃತ್ತವಾಗುತ್ತದೆ.
ನಾರದಃ
ಯೇನಾಯಂ ಸೃಜ್ಯತೇ ಜಂತುಸ್ತತೋಽನ್ಯಃ ಪೂರ್ವಮೇತಿ ತಮ್ |
ಪ್ರಾಣದ್ವಂದ್ವಂ ಚ ವಿಜ್ಞೇಯಂ ತಿರ್ಯಗೂರ್ಧ್ವಂ ಗತಂ ಚ ಯತ್ ॥3॥
ನಾರದ ದೇವತಮನೇ, ಒಂದು ಜೀವ ಯಾವ ಕಾರಣದಿಂದ ಹುಟ್ಟನ್ನು ಪಡೆಯುವುದೋ ಅದೇ ಕಾರಣದಿಂದ ಅದಕ್ಕಿಂತಲೂ ಭಿನ್ನವಾದ ಮತ್ತೊಂದು ಪದಾರ್ಥವು ಆ ಜೀವನು ಹುಟ್ಟುವ ಮೊದಲೇ ಕಾರಣರೂಪದಿಂದ ಇರುತ್ತದೆ. ಅದಕ್ಕೆ ಪ್ರಾಣದ್ವಂದ್ವ ಎಂದು ಹೆಸರು. ಅದು ಮನುಷ್ಯಲೋಕದಲ್ಲಿಯೂ ದೇವಲೋಕದಲ್ಲಿಯೂ ವ್ಯಾಪಿಸಿರುತ್ತದೆ.
ದೇವತಮಃ
ಕೇನಾಯಂ ಸೃಜ್ಯತೇ ಜಂತುಃ ಕಶ್ಚಾನ್ಯಃ ಪೂರ್ವಮೇತಿ ತಮ್ |
ಪ್ರಾಣದ್ವಂದ್ವಂ ಚ ಮೇ ಬ್ರೂಹಿ ತಿರ್ಯಗೂರ್ಧ್ವಂ ಚ ನಿಶ್ಚಯಾತ್ ॥4॥
ದೇವತಮ ನಾರದರೇ, ಯಾವ ಕಾರಣದಿಂದ ಜೀವನ ಸೃಷ್ಟಿಯಾಗುತ್ತದೆ? ಜೀವನು ಹುಟ್ಟಲು ಮೊದಲೇ ಇರುವ ಕಾರಣವಸ್ತುವು ಯಾವುದು? ಪ್ರಾಣದ್ವಂದ್ವ ಎಂದರೇನು? ದೇವ, ಮನುಷ್ಯ, ಪಾತಾಳಲೋಕದಲ್ಲಿ ವ್ಯಾಪ್ತವಾದುದು ಯಾವುದು?
ನಾರದಃ
ಸಂಕಲ್ಪಾಜ್ಜಾಯತೇ ಹರ್ಷಃ ಶಬ್ದಾದಪಿ ಚ ಜಾಯತೇ |
ರಸಾತ್ ಸಂಜಾಯತೇ ಚಾಪಿ ರೂಪಾದಪಿ ಚ ಜಾಯತೇ ॥5॥
ನಾರದ ದೇವತಮನೇ, ಸಂಕಲ್ಪದಿಂದ ಸಂತೋಷವುಂಟಾಗುತ್ತದೆ. ಶಬ್ದವನ್ನು ಕೇಳುವುದರಿಂದಲೂ, ರಸವನ್ನು ಆಸ್ವಾದಿಸುವುದರಿಂದಲೂ, ರೂಪದ ದರ್ಶನದಿಂದಲೂ ಸಂತೋಷವುಂಟಾಗುತ್ತದೆ.
ಸ್ಪರ್ಶಾತ್ ಸಂಜಾಯತೇ ಚಾಪಿ ಗಂಧಾದಪಿ ಚ ಜಾಯತೇ |
ಏತದ್ರೂಪಮುದಾನಸ್ಯ ಹರ್ಷೋ ಮಿಥುನಮಂತರಾ ॥6॥
ಸ್ಪರ್ಶದಿಂದ ಹರ್ಷವುಂಟಾಗುತ್ತದೆ. ಗಂಧವನ್ನು ಆಘ್ರಾಣಿಸುವುದರಿಂದ, ಪರಸ್ಪರ ಸೇರುವಿಕೆಯಿಂದ ಹರ್ಷವು ಉಂಟಾಗುತ್ತದೆ. ಈ ಹರ್ಷವು ಉದಾನದ ವ್ಯಾಪಾರವಾಗಿದೆ.
ಕಾಮಾತ್ ಸಂಜಾಯತೇ ಶುಕ್ಲಃ ಕಾಮಾತ್ ಸಂಜಾಯತೇ ರಜಃ |
ಸಮಾನವ್ಯಾನಜನಿತೇ ಸಮಾನೇ ಶುಕ್ಲಶೋಣಿತೇ ॥7॥
ಪ್ರವೃತ್ತಿಯ ಮೂಲವಾದ ಕಾಮದಿಂದ ವೀರ್ಯವು ಹುಟ್ಟುತ್ತದೆ. ವೀರ್ಯದಿಂದ ರಜಸ್ಸಿನ ಉತ್ಪತ್ತಿಯಾಗುತ್ತದೆ. ಈ ಎಲ್ಲರಲ್ಲಿಯೂ ಶುಕ್ಲ-ಶೋಣಿತವು, ಸಮಾನ ಮತ್ತು ವ್ಯಾನ ವಾಯುಗಳಿಂದ ಹುಟ್ಟನ್ನು ಪಡೆಯುತ್ತದೆ.
ಶುಕ್ಲಾಚ್ಛೋಣಿತಸಂಸೃಷ್ಟಾತ್ ಪೂರ್ವಂ ಪ್ರಾಣಃ ಪ್ರವರ್ತತೇ |
ಪ್ರಾಣೇನ ವಿಕೃತೇ ಶುಕ್ಲೇ ತತೋಽಪಾನಃ ಪ್ರವರ್ತತೇ ॥8॥
ರಜಸ್ಸಿನಿಂದ ಮಿಶ್ರವಾದ ವೀರ್ಯದಿಂದ ಮೊದಲು ಪ್ರಾಣವು ಹುಟ್ಟಿ ಅದರಲ್ಲಿ ಕಾರ್ಯವನ್ನು ಆರಂಭಿಸುತ್ತದೆ. ಪ್ರಾಣವಾಯುವಿನ ಕಾರ್ಯದಿಂದ ವೀರ್ಯವು ವಿಕಾರವನ್ನು ಪಡೆದು ಅಪಾನವಾಯುವಿನ ಕಾರ್ಯವು ಆರಂಭವಾಗುತ್ತದೆ.
ಶುಕ್ಲಾತ್ ಸಂಜಾಯತೇ ಚಾಪಿ ರಸಾದಪಿ ಚ ಜಾಯತೇ |
ಪ್ರಾಣಾಪಾನಾವಿಮೌ ದ್ವಂದ್ವಮರ್ವಾಕ್ ಚೋರ್ಧ್ವಂ ಚ ಗಚ್ಛತಃ ॥9॥
ವ್ಯಾನಃ ಸಮಾನಶ್ಚೈವೋಭೌ ವಹ್ನಿಶ್ಚೈವ ಪ್ರವರ್ತತೇ ॥10॥
ಈ ವಾಯುವು ಶುಕ್ಲದಿಂದ ರಸದಿಂದಲೂ ಉಂಟಾಗುತ್ತದೆ. ಈ ಪ್ರಾಣ-ಅಪಾನ ವಾಯುಗಳು ಊರ್ಧ್ವಲೋಕ, ಅಧೋಲೋಕಗಳಲ್ಲಿಯೂ ಸಂಚರಿಸುತ್ತವೆ. ವ್ಯಾನ, ಸಮಾನ ವಾಯುಗಳು ಜಾಠರಾಗ್ನಿಯನ್ನು ಅಭಿವೃದ್ಧಿಗೊಳಿಸುತ್ತವೆ.
ಅಗ್ನಿರ್ವೈ ದೇವತಾಃ ಸರ್ವಾ ಇತಿ ದೇವಸ್ಯ ಶಾಸನಾತ್ |
ಸಂಜಾಯತೇ ಹಿ ಪ್ರಾಣೇಷು ಜ್ಞಾನಂ ಬುದ್ಧಿಸಮನ್ವಿತಮ್ ॥11॥
ತಸ್ಯ ಧೂಮಃ ತಮೋ ರೂಪಂ ರಜೋ ಭಸ್ಮ ಸುರೇತಸಃ |
ಸತ್ತ್ವಂ ಸಂಜಾಯತೇ ತಸ್ಯ ಯತ್ರ ಪ್ರಕ್ಷಿಪ್ಯತೇ ಹವಿಃ ॥12॥
ಅಗ್ನಿಯೇ ಸಕಲ ದೇವತೆಗಳಿಗೆ ಆಹುತಿಯನ್ನು ಪ್ರದಾನ ಮಾಡುವವನು. ಆದ್ದರಿಂದ ಎಲ್ಲ ದೇವತೆಗಳ ಸ್ಥಿತಿಯನ್ನು ಅಗ್ನಿಯಲ್ಲಿ ಚಿಂತನೆ ಮಾಡಬೇಕು ಎಂಬುದು ವೇದದ ಶಾಸನವಾಗಿದೆ. ಆದ್ದರಿಂದ ಅಗ್ನಿಯಿಂದಲೇ ಬ್ರಾಹ್ಮಣನಿಗೆ ಸತ್ವ ಬುದ್ಧಿಯಿಂದ ಕೂಡಿದ ಜ್ಞಾನವುಂಟಾಗುತ್ತದೆ.

ವ್ಯಾಖ್ಯಾನ ವಿಶೇಷ ಈ ಪದ್ಯಕ್ಕೆ ವಾದಿರಾಜ ಗುರುಸಾರ್ವಭೌಮರು ಹೀಗೆ ವಿವರಿಸಿದ್ದಾರೆ: ಅಗ್ನಿಯು ಸಮಸ್ತ ದೇವತೆಗಳಿಗೂ ಆಹುತಿಯನ್ನು ಕೊಡುವ ಮೂಲಕ ತೃಪ್ತಿಯನ್ನು ಉಂಟು ಮಾಡುವವನು. ಆದ್ದರಿಂದ ಅಗ್ನಿಯನ್ನೇ ಸರ್ವಾದೇವತಾ ಎಂದು ಹೇಳಿದ್ದಾರೆ. ಆದ್ದರಿಂದ ಬ್ರಾಹ್ಮಣರಿಗೆ ಜಠರಸ್ಥವಾದ ವೈಶ್ವಾನರ ಅಗ್ನಿಯೂ ಕೂಡ ಪ್ರಾಣಾಗ್ನಿ ಹೋತ್ರದಿಂದ ಸಕಲ ಇಂದ್ರಿಯಾಭಿಮಾನಿದೇವತೆಗಳಿಗೆ ಅನ್ನ-ರಸ-ಆಹುತಿಗಳನ್ನು ಕೊಡುವ ಮೂಲಕ ತೃಪ್ತಿ ಕಾರಣನಾಗಿರುವುದರಿಂದ ನಮ್ಮ ದೇಹದಲ್ಲಿಯೂ ಅಗ್ನಿಯನ್ನು `ಸರ್ವಾದೇವತಾ' ಎಂದು ಕರೆಯುತ್ತಾರೆ. ಈ ರೀತಿಯಾಗಿ ಅಗ್ನಿಯು ಮನಸ್ಸೇ ಮೊದಲಾದ ಎಲ್ಲ ಇಂದ್ರಿಯಗಳನ್ನು ಪೋಷಿಸುತ್ತಿರಲು ಮೊದಲು ನಾನು ಈ ಕರ್ಮವನ್ನು ಮಾಡುತ್ತೇನೆ, ಆ ಕರ್ಮವನ್ನು ಮಾಡುತ್ತೇನೆ, ಈ ಕರ್ಮವನ್ನು ಮಾಡಲೋ, ಆ ಕರ್ಮವನ್ನು ಮಾಡಲೋ ಎಂಬ ಸಂಶಯಾತ್ಮಕವಾದ ಬುದ್ಧಿಯು ಉತ್ಪನ್ನವಾಗುತ್ತದೆ. ಪುನಃ ಬುದ್ಧಿಯು ಇದೇ ಕರ್ಮವನ್ನು ಮಾಡುತ್ತೇನೆ ಎಂದು ನಿಶ್ಚಯವನ್ನು ಪಡೆಯುತ್ತದೆ. ಆದ್ದರಿಂದ ಅಗ್ನಿಯು ಧೂಮದಂತೆ ಇದೆ. ಬುದ್ಧಿಯು ಶುಕ್ಲ-ಭಾಸ್ವರ ರೂಪಸ್ಥಾನೀಯವಾಗಿದೆ. ಸರ್ವದೇವಾತ್ಮಕನಾದ ಅಗ್ನಿಯು ಧೂಮರೂಪನು, ತಪೋರೂಪನು ಎಂದು ಭಾವಿಸಬಹುದು. ಭಸ್ಮವು ರಜೋರೂಪವಾಗಿದೆ. ಆದ್ದರಿಂದ ಯಾವ ಅಗ್ನಿಯಲ್ಲಿ ಹವಿಸ್ಸು ಹಾಕಲ್ಪಡುವುದೋ ಅದರಿಂದ ಸತ್ವವು ಹುಟ್ಟುತ್ತದೆ. ಇಲ್ಲಿ ಸುರೇತಸಃ ಎಂದರೆ ಪುತ್ರೋತ್ಪಾದನ ಯೋಗ್ಯವಾದ ರೇತಸ್ಸು ಎಂದು ಅರ್ಥ. ರಜಸ್ಸು ಎಂದರೆ ಅನ್ನದಿಂದ ಉತ್ಪನ್ನವಾದ ಕಣಗಳು. ಅದನ್ನೇ ಭಸ್ಮ ಎಂದಿದ್ದಾರೆ. ಆ ರಜಸ್ಸು ದೇಹಕ್ಕೆ ಬಲವನ್ನು ನೀಡುವ ಮೂಲಕ ಸಂತಾನ ರೂಪದಿಂದ ಜೀವಾತ್ಮನ ಉತ್ಪತ್ತಿಯಾಗುತ್ತದೆ. ಆ ಕಾರಣದಿಂದ ಯಾವ ಜಾಠರಾಗ್ನಿಯಲ್ಲಿ ಹವಿಷ್ಯ ಪದಾರ್ಥಗಳನ್ನು ಹಾಕುತ್ತೇವೋ ಆ ಜಾಠರಾಗ್ನಿಯಲ್ಲಿರುವ ಅಗ್ನಿದೇವನು ಸಮಾನ, ವ್ಯಾನ ಎಂಬ ವಾಯುಗಳ ಅಧೀನನಾಗಿ ಇದ್ದಾನೆ. ಅಧಿಕವಾದ ರಸವನ್ನು ಜಾಠರದಲ್ಲಿ ದಾನ ಮಾಡಿದಾಗ ಅಧಿಕವಾಗಿ ಅಗ್ನಿಯು ಶಾಂತನಾಗುತ್ತಾನೆ. ಆದ್ದರಿಂದ ಈ ಅಜೀರ್ಣ ರೋಗ ಬಾರದಿರುವಂತೆ ಸಮಾನನು ಅವನನ್ನು ರಕ್ಷಿಸುತ್ತಾನೆ. ಎಲ್ಲ ನಾಡಿಗಳಲ್ಲಿ ಜಾಠರಾಗ್ನಿಯ ಶಿಖೆಯ ಸಂಚಾರಕ್ಕಾಗಿ ವ್ಯಾನನ ಅಪೇಕ್ಷೆಯು ಇದೆ. ಆದ್ದರಿಂದಲೇ ಜಾಠರದಲ್ಲಿ ಬಿದ್ದ ಆಹಾರವು ಅಗ್ನಿಶಿಖಾ ರೂಪವಾಗಿ ಇಂದ್ರಿಯಗಳ ದ್ವಾರಾ ಚೈತನ್ಯವನ್ನು ಹುಟ್ಟಿಸುತ್ತದೆ.

ಹವಿಃ ಸಮಾನೋ ವ್ಯಾನಶ್ಚ ಇತಿ ಯಜ್ಞವಿದೋ ವಿದುಃ |
ಪ್ರಾಣಾಪಾನಾವಾಜ್ಯಭಾಗೌ ತಯೋರ್ಮಧ್ಯೇ ಹುತಾಶನಃ ॥13॥
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥14॥

ಸಮಾನ-ವ್ಯಾನರನ್ನು ಯಜ್ಞವೇತ್ತೃಗಳು ಹವಿಸ್ಸು ಎಂದೂ, ಪ್ರಾಣಾಪಾನರನ್ನು ಆದ್ಯರೆಂದೂ, ಅವರಿಬ್ಬರ ಮಧ್ಯದಲ್ಲಿ ಅಗ್ನಿ ಇದ್ದಾನೆಂದು, ಇದು ಉದಾನನ ಉತ್ಕೃಷ್ಟವಾದ ರೂಪವೆಂದು ಬ್ರಾಹ್ಮಣರು ತಿಳಿದಿದ್ದಾರೆ.

ನಿರ್ದ್ವಂದ್ವಮಿತಿ ಯತ್ತ್ವೇತತ್ ತನ್ಮೇ ನಿಗದತಃ ಶೃಣು ॥15॥

ಸಮಾನಾದಿ ಚತುಷ್ಟಯವು ಉದಾನನ ರೂಪವು. ಎಲ್ಲೆಡೆಯೂ ಇರುವಂತಹ ಈ ರೂಪವೇನಿದೆಯೋ ಅದರ ಬಗ್ಗೆ ನಾನು ವಿವರಿಸುತ್ತೇನೆ, ತಿಳಿದುಕೊ.

ಅಹೋರಾತ್ರಮಿದಂ ದ್ವಂದ್ವಂ ತಯೋರ್ಮಧ್ಯೇ ಹುತಾಶನಃ |
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥16॥

ರಾತ್ರಿಯು ಕಳೆದಾಗ ಹಗಲು ಆರಂಭವಾಗುತ್ತದೆ. ಹಗಲಿನ ಬಳಿಕ ಸಾಯಂಕಾಲವಾಗುತ್ತದೆ. ಹಗಲೆಲ್ಲ ಕಳೆದು ರಾತ್ರಿಯ ಆರಂಭದಲ್ಲಿ ಅಗ್ನಿಯನ್ನು ಸೇವಿಸುವುದರಿಂದ ಹಗಲು-ರಾತ್ರಿಗಳ ನಡುವೆ ಹುತಾಶನನು ಇದ್ದಾನೆ. ಇದು ಉದಾನನ ರೂಪವೆಂದು ಬ್ರಾಹ್ಮಣರು ತಿಳಿದಿದ್ದಾರೆ.

ಉಭೇ ಚೈವಾಯನೇ ದ್ವಂದ್ವಂ ತಯೋರ್ಮಧ್ಯೇ ಹುತಾಶನಃ |
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥17॥

ದಕ್ಷಿಣಾಯನದ ನಂತರ ಉತ್ತರಾಯಣವು ಆರಂಭವಾಗುತ್ತದೆ. ಉತ್ತರಾಯಣದ ಆರಂಭದಲ್ಲಿ ಯಜ್ಞಾದಿಗಳ ಆರಂಭವು ಆಗುವುದರಿಂದ ಯಜ್ಞರೂಪದಲ್ಲಿ ಅಗ್ನಿಯು ಇರುತ್ತಾನೆ. ಉತ್ತರಾಯಣ ಕಳೆದ ನಂತರ ಬಿಸಿ ರೂಪದಲ್ಲಿ ಅಗ್ನಿಯು ಇರುವುದರಿಂದ ಉತ್ತರಾಯಣ, ದಕ್ಷಿಣಾಯನ ಮಧ್ಯದಲ್ಲಿ ಅಗ್ನಿದೇವ ಇದ್ದಾನೆ. ಇದನ್ನು ಉದಾನನ ರೂಪವೆಂದು ಬ್ರಾಹ್ಮಣರು ತಿಳಿದಿದ್ದಾರೆ.

ಉಭೇ ಸತ್ಯಾನೃತೇ ದ್ವಂದ್ವಂ ತಯೋರ್ಮಧ್ಯೇ ಹುತಾಶನಃ |
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥18॥

ಸತ್ಯವು ಸಂಹಾರವಾಗಲು ಸುಳ್ಳು ಹುಟ್ಟಿಕೊಳ್ಳುತ್ತದೆ. ಸುಳ್ಳಿನಿಂದ ನರಕ ರೂಪ ಅಗ್ನಿಯುಂಟಾಗುತ್ತದೆ. ಸುಳ್ಳು ದಾಟಿ ಸತ್ಯಾರಂಭದಲ್ಲಿ ತೇಜೋಮಯ ಲೋಕಪ್ರಾಪ್ತಿಯು ಅಗ್ನಿ ಎನಿಸಿದೆ. ಇದು ಉದಾನನ ರೂಪವೆನಿಸಿದೆ ಎಂದು ಬ್ರಾಹ್ಮಣರು ತಿಳಿದಿದ್ದಾರೆ.

ಉಭೇ ಶುಭಾಶುಭೇ ದ್ವಂದ್ವಂ ತಯೋರ್ಮಧ್ಯೇ ಹುತಾಶನಃ |
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥19॥

ಶುಭವು ಕಳೆದ ಮೇಲೆ ಅಶುಭವು ಉಂಟಾಗುತ್ತದೆ. ಅಶುಭದ ಆರಂಭದಲ್ಲಿ ಅಗ್ನಿ ಇದ್ದಾನೆ. ಈ ಶುಭಾಶುಭಗಳ ನಡುವೆ ಇರುವ ಹುತಾಶನರೂಪವು ಉದಾನ ಎಂದು ಬ್ರಾಹ್ಮಣರಿಂದ ತಿಳಿಯಲ್ಪಟ್ಟಿದೆ.

ಸಚ್ಚಾಸಚ್ಚೈವ ತದ್ ದ್ವಂದ್ವಂ ತಯೋರ್ಮಧ್ಯೇ ಹುತಾಶನಃ |
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥20॥

ಸತ್ ಮತ್ತು ಅಸತ್ ಎರಡನ್ನೂ ದ್ವಂದ್ವವೆನ್ನುತ್ತಾರೆ. ಈ ಎರಡರ ಮಧ್ಯದಲ್ಲಿ ಅಗ್ನಿ ಇದ್ದಾನೆ. ಬ್ರಾಹ್ಮಣರು ಇದನ್ನು ಉದಾನನ ಪರಮರೂಪವೆಂದು ಕೊಂಡಾಡುತ್ತಾರೆ.

ಪೂರ್ವಂ ಸಮಾನೋ ವ್ಯಾನೋಽಥ ವ್ಯಸ್ಯತೇ ಕಿಂ ನ ಕರ್ಮಕೃತ್ |
ತೃತೀಯಂ ತು ಸಮಾನೇನ ಪುನರೇವ ವ್ಯವಸ್ಯತೇ ॥21॥

ಮೊದಲು ಸಮಾನ-ವ್ಯಾನ ವಾಯುಗಳು ಭಗವಂತನ ಸಂಕಲ್ಪದಿಂದ ಪರಿವರ್ತನೆ ಹೊಂದುತ್ತವೆ. ಅವುಗಳಿಂದ ಕರ್ಮದ ವಿಸ್ತಾರವು ಉಂಟಾಗುತ್ತದೆ. ಈ ಸಮಾನ ವಾಯುವಿನಿಂದ ಸ್ವಪ್ನಕ್ಕಿಂತ ಅತಿರಿಕ್ತವಾದ ಮೂರನೆಯ ಸುಷುಪ್ತಿಯ ಅವಸ್ಥೆಯು ನಿಶ್ಚಿತವಾಗುತ್ತದೆ.
ಶಾಂತ್ಯರ್ಥಂ ವಾಮದೇವಶ್ಚ ಶಾಂತಿರ್ಬ್ರಹ್ಮ ಸನಾತನಮ್ |
ಏತದ್ ರೂಪಮುದಾನಸ್ಯ ಪರಮಂ ಬ್ರಾಹ್ಮಣಾ ವಿದುಃ ॥22॥
ಶಾಂತಿಗೋಸ್ಕರವೇ ವಾಮದೇವ ಎಂಬ ಋಷಿವರ್ಗವಿದೆ. ಸನಾತನವಾದ ವೇದವರ್ಗಗಳು ಶಾಂತಿಗೋಸ್ಕರ ಉತ್ಪನ್ನವಾಗಿವೆ. ಶಮಾಖ್ಯ ಗುಣವನ್ನು ಕೊಡುವುದರಿಂದಲೇ ಶಾಂತಿ ಎಂದು ಕರೆದಿದ್ದಾರೆ. ಇದು ಉದಾನನ ರೂಪವೆಂದು ಬ್ರಹ್ಮಜ್ಞಾನಿಗಳು ತಿಳಿದಿದ್ದಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ನಾರದ-ದೇವತಮಸಂವಾದೋ ನಾಮ ಪಂಚವಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ದಶಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಕೃಷ್ಣನು ಅರ್ಜುನನನ್ನು ಕುರಿತು ಕರ್ತೃ-ಕರ್ಮ ಮೊದಲಾದವುಗಳನ್ನು ಪ್ರತಿಪಾದಿಸುವ ಬ್ರಾಹ್ಮಣದಂಪತಿಗಳ ಸಂವಾದವನ್ನು ಅನುವಾದಿಸಿದುದು.
ಬ್ರಾಹ್ಮಣಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಚಾತುಹೋರ್ತ್ರವಿಧಾನಸ್ಯ ವಿಧಾನಮಿಹ ಯಾದೃಶಮ್ ॥1॥
ಬ್ರಾಹ್ಮಣ ಪ್ರಿಯಳೇ, ನಾಲ್ಕು ಹೋತೃಗಳಿಂದ ಸಂಪನ್ನವಾಗುವ ಯಜ್ಞವು ಯಾವ ರೀತಿಯಾಗಿರುತ್ತದೆ ಎನ್ನುವ ವಿಷಯದಲ್ಲಿ ವಿದ್ವಾಂಸರು ಹೇಳುವ ಒಂದು ಇತಿಹಾಸವನ್ನು ಹೇಳುತ್ತೇನೆ, ಕೇಳು.
ತಸ್ಯ ಸರ್ವಸ್ಯ ವಿಧಿವದ್ ವಿಧಾನಮುಪದೇಕ್ಷ್ಯತೇ |
ಶೃಣು ಮೇ ಗದತೋ ಭದ್ರೇ ರಹಸ್ಯಮಿದಮುತ್ತಮಮ್ ॥2॥
ಎಲ್ಲದರ ವಿಧಾನವು ವಿಧಿವತ್ತಾಗಿ ಉಪದೇಶಿಸಲ್ಪಟ್ಟಿದೆ. ಮಂಗಳ ಸ್ವರೂಪಳೇ, ಅದ್ಭುತವೂ ರಹಸ್ಯವೂ ಆದ ನಾನು ಹೇಳುವ ವಿಷಯವನ್ನು ಕೇಳಿಸಿಕೊ.
ಕರಣಂ ಕರ್ಮ ಕರ್ತಾ ಚ ಮೋಕ್ಷ ಇತ್ಯೇವ ಭಾಮಿನಿ |
ಚತ್ವಾರ ಏತೇ ಹೋತಾರೋ ಯೈರಿದಂ ಜಗದಾವೃತಮ್ ॥3॥
ಹೋತೄಣಾಂ ಸಾಧನಂ ಚೈವ ಶೃಣು ಸರ್ವಂ ಸಮಾಹಿತಃ ॥4॥
ಕರಣ, ಕರ್ಮ, ಕರ್ತಾ, ಮೋಕ್ಷ- ಈ ನಾಲ್ಕು ಹೋತೃಗಳು ಎನಿಸಿವೆ. ಈ ನಾಲ್ಕರಿಂದಲೇ ಜಗತ್ತು ಸಂಪೂರ್ಣವಾಗಿ ಆವೃತವಾಗಿವೆ. ಈ ನಾಲ್ಕು ಹೋತೃಗಳ ಸಾಧನವು ಯಾವುದೆಂಬುದನ್ನು ಹೇಳುತ್ತೇನೆ, ಕೇಳಿಸಿಕೊ.
ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ತ್ವಕ್ ಶ್ರೋತ್ರಂ ಚ ಪಂಚಮಮ್ |
ಮನೋ ಬುದ್ಧಿಶ್ಚ ಸಪ್ತೈತೇ ಜ್ಞೇಯಾಃ ಕರಣಹೇತವಃ ॥5॥
ಮೂಗು, ನಾಲಿಗೆ, ಕಣ್ಣು, ಚರ್ಮ, ಐದನೆಯದ್ದಾದ ಕಿವಿ, ಮನಸ್ಸು, ಬುದ್ಧಿ ಎಂಬ ಏಳು ಹೋತೃಗಳು ಕರಣಹೇತುಗಳು ಎಂದು ತಿಳಿಯಬೇಕು.
ಗಂಧೋ ರಸಶ್ಚ ರೂಪಂ ಚ ಸ್ಪರ್ಶಃ ಶಬ್ದಶ್ಚ ಪಂಚಮಃ |
ಮಂತವ್ಯಮವಬೋದ್ಧವ್ಯಂ ಸಪ್ತೈತೇ ಕರ್ಮಹೇತವಃ ॥6॥
ಗಂಧ-ರಸ-ರೂಪ-ಶಬ್ದ, ಐದನೆಯದ್ದಾದ ಸ್ಪರ್ಶ, ಮನನ ಮಾಡುವುದು, ತಿಳಿದುಕೊಳ್ಳುವುದು - ಈ ಏಳು ಕರ್ಮಹೇತುಗಳು ಎಂದು ತಿಳಿಯಬೇಕು.
ಘ್ರಾತಾ ಭಕ್ಷಯಿತಾ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಚ ಪಂಚಮಃ |
ಮಂತಾ ಬೋದ್ಧಾ ಚ ಸಪ್ತೈತೇ ವಿಜ್ಞೇಯಾಃ ಕರ್ತೃಹೇತವಃ ॥7॥
ಆಘ್ರಾಣಿಸುವುದು, ತಿನ್ನುವುದು, ನೋಡುವುದು, ಸ್ಪರ್ಶಿಸುವುದು, ಐದನೆಯದ್ದಾದ ಕೇಳುವುದು, ಮನನ ಮಾಡುವುದು, ತಿಳಿಯುವುದು - ಈ ಏಳು ಕರ್ತೃರೂಪವಾದ ಕಾರಣವೆಂದು ಹೇಳುತ್ತಾರೆ.
ಸ್ವಗುಣಂ ಭಕ್ಷಯಂತ್ಯೇತೇ ಗುಣವಂತಃ ಶುಭಾಶುಭಾನ್ |
ಅಹಂ ತು ನಿರ್ಗುಣೋಽತ್ರೇತಿ ಸಪ್ತೈತೇ ಮೋಕ್ಷಹೇತವಃ ॥8॥
ಈ ಏಳು ಕರ್ತೃಹೇತುಗಳು ಇಂದ್ರಿಯಗುಣವುಳ್ಳವುಗಳು. ಇವುಗಳು ಶುಭಾಶುಭಗಳಿಂದ ಕೂಡಿರುವ ತಮ್ಮ ತಮ್ಮ ಗುಣಗಳನ್ನು ಅನುಭವಿಸುತ್ತವೆ. ಕರಣ ಹೇತು, ಕರ್ಮಹೇತು, ಕರ್ತೃಹೇತು ಇವುಗಳ ಮಧ್ಯದಲ್ಲಿ ಅಹಂ ಶಬ್ದವಾಚ್ಯನಾದ ಜೀವನು ಉಪದೇಶಕನಾದ, ಆಶಾರಹಿತನಾದ, ಬ್ರಾಹ್ಮಣನಾದ ನನ್ನಂತೆ ಯಾವಾಗ ವಿರಕ್ತನಾಗಿರುತ್ತಾನೋ ಆಗ ಈ ಏಳು ಹೇತುಗಳು ಮೋಕ್ಷಕ್ಕೆ ಕಾರಣವಾಗುತ್ತವೆ.
ವಿದುಷಾಂ ಬುಧ್ಯಮಾನಾನಾಂ ಸ್ವಂ ಸ್ವಂ ಸ್ಥಾನಂ ಯಥಾವಿಧಿ |
ಗುಣಾಸ್ತೇ ದೇವತಾ ಭೂತ್ವಾ ಸತತಂ ಭುಂಜತೇ ಹವಿಃ ॥9॥
ವಿದ್ವಾಂಸರಿಗೆ ಈ ಗುಣಗಳೇ ದೇವತಾಸ್ವರೂಪವಾಗಿ ಹವಿಸ್ಸನ್ನು ಸೇವಿಸುತ್ತವೆ ಎಂಬ ಜ್ಞಾನವಿದೆ. ಇವುಗಳಿಗೆ ಅಭಿಮಾನಿಗಳಾದ ದೇವತೆಗಳು ಗುಣಪ್ರವರ್ತಕರಾಗಿ ನಾನಾ ಗುಣಗಳನ್ನು ಆಸ್ವಾದಿಸುವುದರಿಂದ ಉಂಟಾದ ಸುಖವೆಂಬ ಹವಿಷ್ಯವನ್ನು ನಿರಂತರವೂ

ಸ್ವೀಕರಿಸುತ್ತಾರೆ.
ಅದನ್ ಹ್ಯವಿದ್ವಾನನ್ನಾನಿ ಮಮತ್ವೇನೋಪಹನ್ಯತೇ |
ಆತ್ಮಾರ್ಥೇ ಪಾಚಯನ್ನಿತ್ಯಂ ಮಮತ್ವೇನೋಪಹನ್ಯತೇ ॥10॥
ಯಾವನು ಈ ಏಳು ಕರಣಗಳ ಮೂಲಕ ಆಹಾರವನ್ನು ಸ್ವೀಕರಿಸುವಾಗ ಅವುಗಳಲ್ಲಿನ ಯಜ್ಞಾನುಸಂಧಾನವನ್ನು ಮಾಡದೆ ಮಮಕಾರದಿಂದಲೇ ಅನ್ನವನ್ನು ತಿನ್ನುತ್ತಾನೋ, ಆ ತಿಂದ ಅನ್ನವೇ ಅವನನ್ನು ಕೊಲ್ಲುತ್ತದೆ. ಯಾವನು ಸ್ವಾರ್ಥಕ್ಕೋಸ್ಕರ ಅಡುಗೆ ಮಾಡಿ ನನಗೆಂದು ಊಟ ಮಾಡುತ್ತಾನೋ ಅವನು ತಿನ್ನುವ ಅನ್ನವೇ ಪಾಪರೂಪವಾಗಿ ಅವನನ್ನು ಕೊಲ್ಲುತ್ತದೆ.
ಅಭಕ್ಷ್ಯಭಕ್ಷಣಂ ಚೈವ ಅನ್ನಪಾನಂ ಚ ಹಂತಿ ತಮ್ |
ಸ ಚಾನ್ನಂ ಹಂತಿ ತಚ್ಚಾನ್ನಂ ಸ ಬುಧ್ವಾ ಹನ್ಯತೇ ಬುಧಃ ॥11॥
ತಿನ್ನಬಾರದ್ದನ್ನು ತಿನ್ನುವುದು, (ಮದ್ಯಪಾನ ಮಾಡುವುದು), ಅಭಕ್ಷ್ಯವಾದ ಅನ್ನ- ಪಾನಗಳಲ್ಲಿ ರತನಾಗಿದ್ದಾಗ ಆ ಅಭಕ್ಷ್ಯಭಕ್ಷಣವೇ ಅವನನ್ನು ಕೊಲ್ಲುತ್ತದೆ. ಆದ್ದರಿಂದ ಮೊದಲು ಅನ್ನವನ್ನು ತಿಂದು ಅದನ್ನು ವಿನಾಶಗೊಳಿಸುತ್ತಾನೆ, ಅನ್ನವು ವ್ಯಸನಿಯಾದ ಅವನನ್ನು ಕೊಲ್ಲುತ್ತದೆ.
ಮಾದ್ಯಮನ್ನಮದನ್ ವಿದ್ವಾನ್ ಪುನರ್ಜನಯತೀಶ್ವರಃ |
ಸ ಚಾನ್ನಾಜ್ಜಾಯತೇ ತಸ್ಮಿನ್ ಸೂಕ್ಷ್ಮೋ ನಾಮ ವ್ಯತಿಕ್ರಮಃ ॥12॥
ಸಂತೋಷಕರವಾದ ಜ್ಞಾನಿಗಳಿಗೆ ಕೊಡಲ್ಪಟ್ಟ ಅನ್ನವು ಪರಮಾತ್ಮನಿಗೆ ಕೊಟ್ಟ ಅನ್ನದಂತೆ. ಪರಮಾತ್ಮನು ಜ್ಞಾನಿಗೆ ಅನ್ನ ಕೊಟ್ಟಾಗ ಪುನಃ ಪುನಃ ಅನ್ನವನ್ನು ಅಭಿವೃದ್ಧಿಗೊಳಿಸುತ್ತಾನೆ. ಅನ್ನವನ್ನು ಅಕ್ಷಯ ಮಾಡಿಸುತ್ತಾನೆ. ಆ ಜ್ಞಾನಿಯು ತಿನ್ನಲ್ಪಟ್ಟ ಅನ್ನದಿಂದ ಬಾಹ್ಯವಾದ ದೇಹದ ಸಂಬಂಧವನ್ನೇ ಪರಿಹರಿಸಿಕೊಳ್ಳುತ್ತಾನೆ. ತುತ್ತು- ತುತ್ತಿಗೂ ಭಗವಂತನ ನಾಮಸಂಕೀರ್ತನೆಯನ್ನು ಮಾಡುತ್ತಾ ಅನ್ನವನ್ನು ತಿಂದಾಗ ಸಮಸ್ತ ದುರಿತಗಳು ನಾಶವಾಗುತ್ತವೆ. ಹೀಗಾಗಿ ತಿಂದ ಅನ್ನವೇ ಯಜ್ಞರೂಪವಾಗಿ ಬಂಧಕವಾದ ದೇಹಗಳನ್ನು ನಾಶ ಮಾಡುತ್ತದೆ. ನಂತರ ಜ್ಞಾನಿಯಾದ ಆ ವ್ಯಕ್ತಿಯು ಪರಮಾತ್ಮನ ದೆಸೆಯಿಂದ ಉತ್ತಮ ಯೋನಿಗಳಲ್ಲಿ ಉತ್ಪತ್ತಿಯನ್ನು ಪಡೆಯುತ್ತಾನೆ.
ಮನಸಾ ಮನ್ಯತೇ ಯಚ್ಚ ಯಚ್ಚ ಬುದ್ಧ್ಯಾ ನಿರುದ್ಧ್ಯತೇ |
ಶ್ರೋತ್ರೇಣ ಶ್ರೂಯತೇ ಯಚ್ಚ ಚಕ್ಷುಷಾ ಯಚ್ಚ ದೃಶ್ಯತೇ ॥13॥
ಸ್ಪರ್ಶೇನ ಸ್ಪೃಶ್ಯತೇ ಯಚ್ಚ ಘ್ರಾಣೇನ ಘ್ರಾಯತೇ ಚ ಯತ್ ॥14॥
ಮನಃ ಷಷ್ಠಾನಿ ಸಂಯಮ್ಯ ಹವೀಂಷ್ಯೇತಾನಿ ಸರ್ವಶಃ |
ಗುಣವಿತ್ ಪಾವಕೋ ಮಹ್ಯಂ ದೀಪ್ಯತೇ ಹವ್ಯವಾಹನಃ ॥15॥
ಮನಸ್ಸಿನಿಂದ ಯಾವುದು ಮನನ ಮಾಡಲ್ಪಡುತ್ತದೋ, ಮಾತಿನಿಂದ ಯಾವುದು ಹೇಳಲ್ಪಡುವುದೋ, ಕಿವಿಯಿಂದ ಯಾವುದು ಕೇಳಲ್ಪಡುವುದೋ, ಕಣ್ಣಿನಿಂದ ಯಾವುದನ್ನು ನೋಡುತ್ತೇವೋ, ತ್ವಕ್‌ನಿಂದ ಯಾವುದನ್ನು ಮುಟ್ಟುತ್ತೇವೋ, ಮೂಗಿನಿಂದ ಯಾವುದನ್ನು ಮೂಸುತ್ತೇವೋ ಇವೆಲ್ಲವೂ ಆರನೆಯದ್ದಾದ ಮನಸ್ಸಿನ ಮೂಲಕ ಇಂದ್ರಿಯವ್ಯಾಪಾರಗಳನ್ನು ಪರಮಾತ್ಮನಿಗೆ ಹವಿಷ್ಯರೂಪವಾಗಿ ಶರೀರದ ಮಧ್ಯದಲ್ಲಿರುವ ಅಗ್ನಿಯಲ್ಲಿ ಹೋಮ ಮಾಡಬೇಕು. ಇಂದ್ರಿಯದ ಮೂಲಕ ಅನುಭವಿಸುವ ವಿಷಯ ಸುಖಗಳನ್ನು ಪರಮಾತ್ಮನಿಗೆ ಸಮರ್ಪಿಸಬೇಕು. ಪರಮಾತ್ಮನ ಸ್ವಾತಂತ್ರ್ಯವೆಂಬ ಗುಣವನ್ನು ತಿಳಿದು ಸತ್ಕರ್ಮಗಳನ್ನು ಮಾಡುವ ಜ್ಞಾನಿಯು ಅಗ್ನಿದೇವನಂತೆ ಬೆಳಗುತ್ತಾನೆ.
ಯೋಗಯಜ್ಞಃ ಪ್ರವೃತ್ತೋ ಮೇ ಜ್ಞಾನಬ್ರಹ್ಮಮನೋಭವಃ ॥16॥
ಪ್ರೀತಿಪಾತ್ರಳೇ, ಯೋಗರೂಪವಾದ ನನ್ನ ಯಜ್ಞದ ಅನುಷ್ಠಾನವು ಜ್ಞಾನದಾಯಕ ಆಗಿರುವುದರಿಂದಲೇ ಮನನದಿಂದ ಉತ್ಪತ್ತಿಯನ್ನು ಪಡೆದಿದೆ. ಯೋಗಯಜ್ಞವು ಜ್ಞಾನರೂಪವಾದ ಅಗ್ನಿಯನ್ನು ಪ್ರಕಾಶಗೊಳಿಸುತ್ತದೆ.
ಪ್ರಾಣಸ್ತೋತ್ರೋಽಪಾನಶಸ್ತ್ರಃ ಸರ್ವತ್ಯಾಗಸು ದಕ್ಷಿಣಃ |
ಕರ್ತಾಽನುಮಂತಾ ಬ್ರಹ್ಮಾತ್ಮಾ ಕರ್ತಾಽಧ್ವರ್ಯುಃ ಕೃತಸ್ತುತಿಃ ॥17॥
ಕೃತಃ ಪ್ರಶಸ್ತಾ ತಚ್ಛಸ್ತ್ರಮಪವರ್ಗೋಽಸ್ಯ ದಕ್ಷಿಣಾ ॥18॥
ಈ ಯಜ್ಞದಲ್ಲಿ ಪ್ರಾಣವೇ ಸ್ತೋತ್ರವಾಗಿದೆ, ಅಪಾನವೇ ಶಸ್ತ್ರವಾಗಿದೆ, ಸರ್ವ ಪರಿತ್ಯಾಗವೇ ದಕ್ಷಿಣೆಯಾಗಿದೆ. ಕರ್ತಾ, ಅನುಮಂತಾ ಎಂದರೆ ಯೋಗಯಜ್ಞವನ್ನು ಮಾಡುವ ನನಗೆ ಸರ್ವಕರ್ತನಾದ ವಿಷ್ಣುವೇ ನಿಯಾಮಕನಾಗಿದ್ದಾನೆ. `ಓಶ್ರಾವಯ, ಅಸ್ತು, ಶ್ರೌಷಟ್, ವಾಯುಮುಪಬ್ರೂಹಿ, ವಿಷ್ಣುಮುಪಬ್ರೂಹಿ' ಇತ್ಯಾದಿ ಮಂತ್ರಗಳಿಂದ ಅನುಮತಿಯನ್ನು ನೀಡುವ ಋತ್ವಿಗ್ವಿಶೇಷನು ಕರ್ತೃವಾದ ನಾರಾಯಣನೇ ಆಗಿದ್ದಾನೆ. ಬ್ರಹ್ಮನೆಂಬ ಋತ್ವಿಕ್ ಕೂಡ ಸರ್ವಕರ್ತೃವಾದ ನಾರಾಯಣನೇ ಆಗಿದ್ದಾನೆ. ಅಧ್ವರ್ಯುಗಳಲ್ಲಿ ಕರ್ಮವನ್ನು ಮಾಡುವವನು ನಾರಾಯಣನೇ ಆಗಿದ್ದಾನೆ. `ಕೃತಸ್ತುತಿಃ' ಯಾರಿಂದ ಭಗವಂತನು ಸ್ತುತಿಸಿಕೊಳ್ಳಲ್ಪಡುತ್ತಾನೋ ಅಂತಹ ಉದ್ಗಾತೃವೂ ಕೂಡ ನಾರಾಯಣನೇ ಆಗಿದ್ದಾನೆ. ಮಾಡಿದ ಕರ್ಮವನ್ನು ಉತ್ಕೃಷ್ಟವಾಗಿ ಶಾಸನ ಮಾಡುವ ಆಚಾರ್ಯಪುರುಷನು ನಾರಾಯಣನೇ ಆಗಿದ್ದಾನೆ. ಕರ್ಮಮೀಮಾಂಸಾಶಾಸ್ತ್ರವು ನಾರಾಯಣನೇ ಆಗಿದ್ದಾನೆ. ಯೋಗಯಜ್ಞಫಲೀಭೂತವಾದ ಮೋಕ್ಷವು ನಾರಾಯಣನೇ ಆಗಿದ್ದಾನೆ. ಯಜ್ಞದ ದಕ್ಷಿಣೆಯೂ ಕೂಡ ನಾರಾಯಣನೇ ಆಗಿದ್ದಾನೆ. ಎಂದರೆ ಎಲ್ಲವೂ ನಾರಾಯಣನ ಅಧೀನವಾಗಿಯೇ ಇದೆ ಎಂದರ್ಥ.
ಋಚಶ್ಚಾಪ್ಯತ್ರ ಶಂಸಂತಿ ನಾರಾಯಣವಿದೋ ಜನಾಃ |
ನಾರಾಯಣಾಯ ದೇವಾಯ ಯದಬಧ್ನಂ ಪಶುಂ ಪುರಾ ॥19॥
ಯೋಗಯಜ್ಞದಲ್ಲಿ ಎಲ್ಲ ಮಂತ್ರಗಳಿಂದಲೂ ನಾರಾಯಣನನ್ನು ಚೆನ್ನಾಗಿ ತಿಳಿದ ಜ್ಞಾನಿಗಳು ಪ್ರಶಂಸೆ ಮಾಡುತ್ತಾರೆ. `ಅಬಧ್ನನ್ ಪುರುಷಂ ಪಶುಮ್' ಮುಂತಾದ ಯಾವ ಋಕ್‌ಗಳಿವೆಯೋ ಅವುಗಳಿಂದ ನಾರಾಯಣನಾದ ಪರಮಾತ್ಮನಿಗೋಸ್ಕರ ಹಿಂದೆ ಪುರುಷ ಎಂಬ ಪಶುವನ್ನು ಬಂಧ ಮಾಡಿದವು.

ತತ್ರ ಸಾಮಾನಿ ಗಾಯಂತಿ ತಾನಿ ಚಾಹುರ್ನಿದರ್ಶನಮ್ |
ದೇವಂ ನಾರಾಯಣಂ ಭೀರು ಸರ್ವಾತ್ಮಾನಂ ನಿಬೋಧ ಮೇ ॥20॥
ಭಗವತ್ಪ್ರಾಪ್ತಿಯಾದ ಬಳಿಕ ಪೂರ್ಣತೆಯನ್ನು ಪಡೆದ ಸಾಮಗಾನವನ್ನು ಮಾಡುತ್ತಾರೆ. ಈ ಸಾಮಗಾನವು ನಾರಾಯಣ ಜ್ಞಾನಕ್ಕೆ ನಿದರ್ಶನವಾಗಿದೆ. ಎಲೌ ಬ್ರಾಹ್ಮಣಿಯೇ, ನೀನೂ ಕೂಡ ಸರ್ವಸ್ವಾಮಿಯಾದ ನಾರಾಯಣನನ್ನೇ ನನ್ನ ಅಂತರ್ಯಾಮಿಯಾಗಿದ್ದಾನೆ, ನನ್ನ ಮನಸ್ಸಿನಲ್ಲಿದ್ದಾನೆ ಎಂದು ತಿಳಿದುಕೊ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಅನುಗೀತಾಸು
ಚತುರ್ಹೋತ್ರವಿಧಾನಕಥನಂ ನಾಮ ಷಡ್ವಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಏಕಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ಚತುರ್ಮುಖ ಬ್ರಹ್ಮನಿಂದ ಒಂದೇ ಶಬ್ದದಿಂದ ಪರಬ್ರಹ್ಮನನ್ನು ಉಪದೇಶಿಸಲಾಗಿ ದೇವರ್ಷಿ ಮೊದಲಾದ ಸಾಧಕರಿಗೆ ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಬೇರೆ ಬೇರೆ ಅರ್ಥಗಳಿಂದ ತಿಳಿಯಲ್ಪಟ್ಟನು ಎಂಬ ವಿಚಾರವು ಬ್ರಾಹ್ಮಣದಂಪತಿಗಳ ಸಂವಾದದ ಮೂಲಕ ಉಪದೇಶಿಸಿದುದು.
ಬ್ರಾಹ್ಮಣಃ
ಏಕಃಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ
ಯೋ ಹೃಚ್ಛಯಸ್ತಮಹಮನು ಬ್ರವೀಮಿ |
ತೇನೈವ ಯುಕ್ತಃ ಪ್ರವಣಾದಿವೋದಕಂ
ಯಥಾ ನಿಯುಕ್ತೋಽಸ್ಮಿ ತಥಾ ವಹಾಮಿ ॥1॥
ಬ್ರಾಹ್ಮಣ ಪ್ರಿಯಳೇ, ಈ ಸಮಸ್ತ ಜಗತ್ತಿಗೆ ಒಬ್ಬನೇ ನಿಯಾಮಕನು. ಎರಡನೆಯ ನಿಯಾಮಕನು ಇಲ್ಲ. ಎಲ್ಲರ ಹೃದಯದಲ್ಲಿ ಸನ್ನಿಹಿತನಾಗಿರುವ ಆ ಪರಮಾತ್ಮನನ್ನೇ ನಿಯಾಮಕನೆಂದು ಹೇಳುತ್ತೇನೆ. ತಗ್ಗಾದ ಪ್ರದೇಶಕ್ಕೆ ಗುಡ್ಡದಿಂದ ನೀರು ಹರಿದು ಬರಲು ಹವಣಿಸುವಂತೆ ಪರಮಾತ್ಮನ ಗುಣಚಿಂತನೆಯಲ್ಲಿಯೇ ನನ್ನ ಮನಸ್ಸು ಹವಣಿಸುತ್ತಿದೆ. ಅವನು ಹೇಗೆ ನನ್ನನ್ನು ನಿಯಮಿಸುತ್ತಾನೋ ಹಾಗೆ ನಡೆದುಕೊಳ್ಳುತ್ತೇನೆ.
ಏಕೋ ಗುರುರ್ನಾಸ್ತಿ ತತೋ ದ್ವಿತೀಯೋ
ಯೋ ಹೃಚ್ಛಯಸ್ತಮನು ಪ್ರಬ್ರವೀಮಿ |
ಯೇನಾನುಶಿಷ್ಟಾ ಗುರುಣಾ ಸದೈವ
ಪುರಾ ಹತಾ ದಾನವಾಃ ಸರ್ವ ಏವ ॥2॥
ಜಗತ್ತಿಗೆ ಅವನೊಬ್ಬನೇ ಗುರು. ಎರಡನೆಯ ಗುರುವೇ ಇಲ್ಲ. ಯಾವ ಭಗವಂತನು ಸಮಸ್ತ ಜೀವರ ಹೃದಯಗುಹೆಯಲ್ಲಿ ನೆಲೆಸಿರುವನೋ ಆ ನಾರಾಯಣನನ್ನೇ ಅನುಸರಿಸಿ ಪ್ರವಚನವನ್ನು ಮಾಡುತ್ತೇನೆ. ಆ ಭಗವಂತನಿಂದಲೇ ಎಲ್ಲ ದಾನವರು ಪರಾಜಿತರಾಗಿದ್ದಾರೆ. ಅವನ ಶಾಸನವು ಅಷ್ಟು  ಪ್ರಬಲವಾದುದು.
ಏಕೋ ಬಂಧುರ್ನಾಸ್ತಿ ತತೋ ದ್ವಿತೀಯೋ
ಯೋ ಹೃಚ್ಛಯಸ್ತಮಹಮನು ಬ್ರವೀಮಿ |
ತೇನಾನುಶಿಷ್ಟಾ ಬಾಂಧವಾ ಬಂಧುಮಂತಃ
ಸಪ್ತರ್ಷಯಶ್ಚೈವ ದಿವಿ ಪ್ರಭಾಂತಿ ॥3॥
ನಾರಾಯಣನೇ ನಮಗೆಲ್ಲ ಬಂಧುವು. ಅವನಿಗಿಂತ ಮಿಗಿಲಾದ ಇನ್ನೊಬ್ಬ ಬಂಧುವು ಇರುವುದಿಲ್ಲ. ಯಾವ ನಾರಾಯಣನು ಎಲ್ಲ ಪ್ರಾಣಿಗಳ ಹೃದಯ ಗುಹೆಯಲ್ಲಿಯೂ ಸನ್ನಿಹಿತನಾಗಿರುವನೋ ಅವನನ್ನೇ ಬಂಧುವೆಂದು ಹೇಳುತ್ತೇನೆ. ಅವನ ಸಂಕಲ್ಪದಿಂದಲೇ ಬಂಧು-ಬಾಂಧವರು ಒದಗಿ ಬರುತ್ತಾರೆ. ಅವನ ಉಪದೇಶವನ್ನು ಪಡೆದು ಸಪ್ತರ್ಷಿಗಳು ಉತ್ಕೃಷ್ಟವಾದ ಸ್ಥಾನವನ್ನು ಪಡೆದು ಆಕಾಶದಲ್ಲಿ ಬೆಳಗುತ್ತಿದ್ದಾರೆ.
ಏಕಃ ಶ್ರೋತಾ ನಾಸ್ತಿ ತತೋ ದ್ವಿತೀಯೋ
ಯೋ ಹೃಚ್ಛಯಸ್ತಮಹಮನು ಬ್ರವೀಮಿ |
ತಸ್ಮಿನ್ ಗುರೌ ಗುರುವಾಸಂ ನಿರೂಪ್ಯ
ಶಕ್ರೋ ಗತಃ ಸರ್ವಲೋಕಾಮರತ್ವಮ್ ॥4॥
ಜಗತ್ತಿನಲ್ಲಿ ಕೇಳುವವನೂ ಅವನೇ, ಎರಡನೆಯವನಲ್ಲ. ಸಮಸ್ತ ಪ್ರಾಣಿಗಳ ಹೃದಯದಲ್ಲಿ ಯಾವ ಶ್ರೀಹರಿಯನ್ನು ನೆಲೆಸಿದ್ದಾನೋ ಅವನನ್ನೇ ಶ್ರೋತ್ರುವೆಂದು ಕರೆಯುತ್ತೇನೆ. ಇಂದ್ರನು ಹೃದಯಸ್ಥನಾದ ಶ್ರೀಹರಿಯನ್ನೇ ಗುರುವನ್ನಾಗಿ ಸ್ವೀಕರಿಸಿ ಗುರುಕುಲವಾಸವನ್ನು ನಿಯಮಬದ್ಧವಾಗಿ ಪೂರೈಸಿ, ಶ್ರೀಹರಿಯನ್ನೇ ಶರಣು ಹೊಂದಿದನು. ಅದರಿಂದ ಇಂದ್ರದೇವನು ಸುರರಾಜನಾಗಿ ಅಮರತ್ವವನ್ನು ಹೊಂದಿದನು.
ಏಕೋ ದ್ವೇಷ್ಟಾ ನಾಸ್ತಿ ತತೋ ದ್ವಿತೀಯೋ
ಯೋ ಹೃಚ್ಛಯಸ್ತಮಹಮನು ಬ್ರವೀಮಿ |
ತೇನಾನುಶಿಷ್ಟಾ ಗುರುಣಾ ಸದೈವ

ಲೋಕೇ ದ್ವಿಷ್ಟಾಃ ಪನ್ನಗಾಃ ಸರ್ವ ಏವ ॥5॥
ಲೋಕದಲ್ಲಿ ದುಷ್ಟರಿಗೆ ಶತ್ರುವಾಗಿ ಇರುವವನೂ ಅವನೊಬ್ಬನೇ. ಯಾವ ಹರಿಯು ಎಲ್ಲ ಜೀವರ ಹೃದಯದಲ್ಲಿ ನೆಲೆಸಿದ್ದಾನೋ ಆ ಪರಮಾತ್ಮನನ್ನೇ ನಾನು ದುಷ್ಟರ ಪಾಲಿನ ಶತ್ರುವೆಂದು ಭಾವಿಸಿದ್ದೇನೆ. ಶ್ರೀಹರಿಯ ಆದೇಶಕ್ಕನುಸಾರವಾಗಿಯೇ ಜಗತ್ತಿನ ಸರ್ಪಗಳೆಲ್ಲವೂ ಮತ್ತೊಬ್ಬರನ್ನು ಕಚ್ಚುವ ದ್ವೇಷವನ್ನು ಹೊಂದಿವೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಪ್ರಜಾಪತೇಃ ಪನ್ನಗಾನಾಂ ದೇವರ್ಷೀಣಾಂ ಚ ಸಂವಿದಮ್ ॥6॥
ಸೌಭಾಗ್ಯಶೀಲಳೇ, ಈ ವಿಷಯದಲ್ಲಿ ಚತುರ್ಮುಖ ಬ್ರಹ್ಮನಿಗೂ ಸರ್ಪಗಳಿಗೂ ಮತ್ತು ನಾರದರಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ಬಲ್ಲವರು ಹೇಳುತ್ತಾರೆ, ಕೇಳಿಸಿಕೊ.
ದೇವರ್ಷಯಶ್ಚ ನಾಗಾಶ್ಚಾಪ್ಯಸುರಾಶ್ಚ ಪ್ರಜಾಪತಿಮ್ |
ಪರ್ಯಪೃಚ್ಛನ್ನುಪಾಸೀನಾಃ ಶ್ರೇಯೋ ನಃ ಪ್ರೋಚ್ಯತಾಮಿತಿ ॥7॥
ಒಮ್ಮೆ ದೇವತೆಗಳು, ಋಷಿಗಳು, ನಾಗಗಳು, ಅಸುರರು ಚತುರ್ಮುಖ ಬ್ರಹ್ಮನ ಬಳಿಯಲ್ಲಿ ಕುಳಿತು ತಮ್ಮ ಶ್ರೇಯಸ್ಸಿನ ಬಗ್ಗೆ ತಿಳಿಸಬೇಕೆಂದು ಪ್ರಾರ್ಥಿಸಿದರು.
ತೇಷಾಂ ಪ್ರೋವಾಚ ಭಗವಾನ್ ಶ್ರೇಯಃ ಸಮನುಪೃಚ್ಛತಾಮ್ |
ಓಮಿತ್ಯೇಕಾಕ್ಷರಂ ಬ್ರಹ್ಮ ತೇ ಶ್ರುತ್ವಾ ಪ್ರಾದ್ರವನ್ ದಿಶಃ ॥8॥
ಅವರಿಗೆ ಪೂಜ್ಯನಾದ ಚತುರ್ಮುಖ ಬ್ರಹ್ಮನು ಶ್ರೀಹರಿಯ ಸ್ವರೂಪವೆನಿಸಿದ `ಓಂ' ಎಂಬ ಒಂದು ಅಕ್ಷರವನ್ನು ಉಪದೇಶಿಸಿದನು. ಆ ಒಂದು ಅಕ್ಷರದ ಉಪದೇಶವನ್ನು ಪಡೆದ ಅವರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.
ತೇಷಾಂ ಪ್ರದ್ರವತಾಮೇವ ಉಪದೇಶಾರ್ಥಮಾತ್ಮನಃ |
ಸರ್ಪಾಣಾಂ ದಂಶನೇ ಭಾವಃ ಪ್ರವೃತ್ತಃ ಪೂರ್ವಮೇವ ತು ॥9॥
ಹೀಗೆ ಅವರು ತಮ್ಮ ಸ್ಥಾನಗಳಿಗೆ ಹೋಗುತ್ತಿರುವಾಗ ಪ್ರತಿಯೊಬ್ಬರೂ ಬ್ರಹ್ಮದೇವರ ಓಂಕಾರದ ಉಪದೇಶದ ಅರ್ಥವನ್ನು ಚಿಂತಿಸತೊಡಗಿದರು. ಓಂ ಎಂದರೆ ಅಂಗೀಕಾರ ಎಂದೂ ಅರ್ಥ. ಬ್ರಹ್ಮನು ಹೇಳುವ ಓಂಕಾರಕ್ಕೆ ಮೊದಲೇ ಕಚ್ಚುವ ಸ್ವಭಾವವುಳ್ಳ ಸರ್ಪಗಳು ನಾವು ಇನ್ನೊಬ್ಬರನ್ನು ಕಚ್ಚಬೇಕು ಎಂದು ತಿಳಿದು ಆ ಪ್ರವೃತ್ತಿಯಲ್ಲಿಯೇ ನಿರತವಾದವು.
ಅಸುರಾಣಾಂ ಪ್ರವೃತ್ತಸ್ತು ದರ್ಪೋ ಭಾವಃ ಸ್ವಭಾವಜಃ |
ದಾನಂ ದೇವಾ ವ್ಯವಸಿತಾ ದಮಮೇವ ಮಹರ್ಷಯಃ ॥10॥
ಅಸುರರು ತಮ್ಮ ಸ್ವಭಾವಕ್ಕನುಗುಣವಾದ ಅಹಂಕಾರದ ಪ್ರವೃತ್ತಿಯಲ್ಲಿ ತೊಡಗಬೇಕೆಂದು ಓಂಕಾರದ ಅರ್ಥವೆಂದು ಭಾವಿಸಿದರು. ದೇವತೆಗಳು ದಾನ ಮಾಡುವ ಬುದ್ಧಿಯಲ್ಲಿ ಪ್ರವೃತ್ತಿಯನ್ನು ಹೊಂದಬೇಕೆಂದು ಭಾವಿಸಿದರು. ಮಹರ್ಷಿಗಳು ಇಂದ್ರಿಯನಿಗ್ರಹವನ್ನು ಸಾಧಿಸಿಕೊಳ್ಳಬೇಕೆಂದು ಅರ್ಥೈಸಿಕೊಂಡರು. ಹೀಗೆ ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಬ್ರಹ್ಮನ ಉಪದೇಶವನ್ನು ಅರ್ಥೈಸಿಕೊಂಡರು.
ಏಕಂ ವಕ್ತಾರಮಾಸಾದ್ಯ ಶಬ್ದೇನೈಕೇನ ಸತ್ಕೃತಾಃ |
ಏವಂ ಧರ್ಮಂ ವ್ಯವಸಿತಾಃ ಸರ್ವೇ ದೇವರ್ಷಿದಾನವಾಃ ॥11॥
ಉಪದೇಶಿಸಿದವನು ಒಬ್ಬನೇ ಗುರುವಾಗಿದ್ದರೂ ಒಂದೇ ಶಬ್ದವಾಗಿದ್ದರೂ ಅವರವರ ಸ್ವಭಾವಕ್ಕೆ ಅನುಗುಣವಾಗಿ ನಾನಾ ವಿಧವಾದ ಭಾವನೆಗಳನ್ನು ಅಳವಡಿಸಿಕೊಂಡರು. ಗುರುವು ಒಬ್ಬನೇ ಆಗಿದ್ದರೂ, ಮಂತ್ರವು ಒಂದೇ ವಿಧವಾಗಿದ್ದರೂ, ಆಯಾ ಅಧಿಕಾರಿಗಳ ಸ್ವಭಾವವು ವಿಭಿನ್ನವಾಗಿರುವುದರಿಂದ ಅವರ ಪ್ರವೃತ್ತಿಗಳೂ, ಅವರಿಗೆ ದೊರಕುವ ಫಲಗಳೂ ವೈಚಿತ್ರ್ಯದಿಂದಲೇ ಕೂಡಿರುತ್ತವೆ.
ಶೃಣೋತ್ಯಯಂ ಪ್ರೋಚ್ಯಮಾನಂ ಗೃಹ್ಣಾತಿ ಚ ಯಥಾತಥಮ್ |
ಪೃಚ್ಛತಸ್ತಾವತೋ ಭೂಯೋ ಗುರೋರನ್ಯೋಽನುಮನ್ಯತೇ ॥12॥
ಯೋಗ್ಯನಾದ ಶಿಷ್ಯನು ಗುರುವಿನಿಂದ ಉಪದೇಶ ಮಾಡಿದ ಅಭಿಪ್ರಾಯವನ್ನು ಯಥಾರ್ಥವಾಗಿ ಸ್ವೀಕರಿಸುತ್ತಾನೆ. ತನಗೆ ಎಷ್ಟು ಅರ್ಥಗಳ ಅಪೇಕ್ಷೆ ಇದೆಯೋ ಅಷ್ಟನ್ನು ಗುರುವಿನ ಮೂಲಕ ಸ್ವೀಕರಿಸುತ್ತಾನೆ. ಈ ಗುರು-ಶಿಷ್ಯರ ಸಂವಾದವನ್ನು ಕೇಳಿಸಿಕೊಂಡ ಒಬ್ಬ ತಟಸ್ಥ ವ್ಯಕ್ತಿಯು ಶ್ರದ್ಧಾವಂತನಾಗಿದ್ದಲ್ಲಿ ಯೋಗ್ಯವಾದ ಆ ವಿಚಾರವನ್ನು ಅನುಷ್ಠಾನಕ್ಕೆ ತರುತ್ತಾನೆ.
ತಸ್ಯ ಚಾನುಮತೇ ಕರ್ಮ ತತಃ ಪಶ್ಚಾತ್ ಪ್ರವರ್ತತೇ |
ಗುರುರ್ಬಂಧುಶ್ಚ ಶತ್ರುಶ್ಚ ದ್ವೇಷ್ಟಾ ಚ ಹೃದಿ ಸಂಸ್ಥಿತಃ ॥13॥
ಗುರುವಾದವನು ಶಿಷ್ಯನಿಗೆ ಕರ್ತವ್ಯಗಳನ್ನು ಮಾಡಲು ಉಪದೇಶಿಸುತ್ತಾನೆ. ಶಿಷ್ಯನು ಅದರಂತೆ ಕಾರ್ಯಪ್ರವೃತ್ತನಾಗುತ್ತಾನೆ. ಹೀಗೆ ಪ್ರತಿಯೊಬ್ಬರ ಹೃದಯದಲ್ಲಿ ಉಪದೇಶಕನಾಗಿರುವ ಭಗವಂತನೇ ಗುರುವಾಗಿದ್ದಾನೆ, ಬಂಧುವಾಗಿದ್ದಾನೆ, ಅನಾದಿಯಾದ ಕಾಮ-ಕ್ರೋಧಾದಿಗಳಿಗೆ ಶತ್ರುವಾಗಿದ್ದಾನೆ, ಕಲ್ಯಾದಿಗಳಿಗೆ ದ್ವೇಷಿಯಾಗಿದ್ದಾನೆ. ಆದ್ದರಿಂದ ಹೃದಿಸ್ಥನಾದ ಶ್ರೀಹರಿಯೇ ಮುಖ್ಯಗುರುವಾಗಿದ್ದಾನೆ. ಉಳಿದೆಲ್ಲ ಗುರುಗಳು ಅಮುಖ್ಯ ಗುರುಗಳು ಎನಿಸಿದ್ದಾರೆ.
ಪಾಪೇನ ವಿಚರನ್ ಲೋಕೇ ಪಾಪಚಾರೀ ಭವತ್ಯಯಮ್ |
ಶುಭೇನ ವಿಚರನ್ ಲೋಕೇ ಶುಭಚಾರೀ ಭವತ್ಯುತ ॥14॥
ಪ್ರಪಂಚದಲ್ಲಿ ಯಾವ ಪುರುಷನು ಪಾಪವನ್ನಾಚರಿಸುತ್ತಾ ಸಂಚರಿಸುತ್ತಾನೆಯೋ ಅವನು ಪಾಪಚಾರಿ ಎನಿಸುತ್ತಾನೆ. ಪುಣ್ಯಕರ್ಮಗಳನ್ನೇ ಆಚರಿಸುವವನು ಶುಭಚಾರಿ ಎನಿಸುತ್ತಾನೆ.
ಕಾಮಚಾರೀ ತು ಕಾಮೇನ ಯ ಇಂದ್ರಿಯಸುಖೇ ರತಃ |
ವ್ರತಚಾರೀ ಸದೈವೈಷ ಯ ಇಂದ್ರಿಯಜಯೇ ರತಃ ॥15॥
ಹೀಗೆಯೇ ಅನೇಕ ಕಾಮನೆಗಳ ಮೂಲಕ ಇಂದ್ರಿಯಸುಖವನ್ನೇ ಬಯಸುವ ವ್ಯಕ್ತಿಯು ಕಾಮಚಾರಿ ಎಂದೂ, ಇಂದ್ರಿಯ ಜಯದಲ್ಲಿ

ಆಸಕ್ತನಾದ ವ್ಯಕ್ತಿಯು ವ್ರತಚಾರಿ ಎಂದೂ ಕರೆಸಿಕೊಳ್ಳುತ್ತಾನೆ.
ಅಪೇತವ್ರತಕರ್ಮಾ ತು ಕೇವಲಂ ಬ್ರಹ್ಮಣಿ ಸ್ಥಿತಃ |
ಬ್ರಹ್ಮಭೂತಶ್ಚರನ್ ಲೋಕೇ ಬ್ರಹ್ಮಚಾರೀ ಭವತ್ಯಯಮ್ ॥16॥
ಯಾವನು ವ್ರತ ಮತ್ತು ಕರ್ಮಗಳನ್ನು ಭಗವಂತನಲ್ಲಿಯೇ ಸಮರ್ಪಣ ಬುದ್ಧಿಯಿಂದ ಆಚರಿಸುತ್ತಾರೋ, ಭಗವನ್ನಿಷ್ಠರಾಗಿ ಸಂಚರಿಸುತ್ತಾರೋ ಅವನು ಬ್ರಹ್ಮಚಾರಿ ಎನಿಸಿಕೊಳ್ಳುತ್ತಾನೆ.
ಬ್ರಹ್ಮೈವ ಸಮಿಧಸ್ತಸ್ಯ ಬ್ರಹ್ಮಾಗ್ನಿರ್ಬ್ರಹ್ಮಸಂಸ್ತರಃ |
ಆಪೋ ಬ್ರಹ್ಮ ಗುರುರ್ಬ್ರಹ್ಮ ಸ ಬ್ರಹ್ಮಣಿ ಸಮಾಹಿತಃ ॥17॥
ಜ್ಞಾನಯಜ್ಞರತನಾದ ಸಾಧಕನಿಗೆ ಬ್ರಹ್ಮನೇ ಸಮಿತ್ತಾಗಿರುತ್ತಾನೆ, ಬ್ರಹ್ಮನೇ ಅಗ್ನಿಯಾಗಿರುತ್ತಾನೆ, ಸಂಸ್ತರಣವೂ ಬ್ರಹ್ಮನೇ ಆಗಿರುತ್ತಾನೆ. ಬ್ರಹ್ಮನೇ ಯಜ್ಞಕ್ಕೆ ಯೋಗ್ಯವಾದ ನೀರು ಆಗಿರುತ್ತಾನೆ. ಎಲ್ಲವೂ ಬ್ರಹ್ಮನೇ ಆಗಿದ್ದಾನೆ. ಆ ಸಾಧಕನ ಮನಸ್ಸು ಬ್ರಹ್ಮನಲ್ಲಿಯೇ ಆಸಕ್ತವಾಗಿರುತ್ತದೆ.
ಏತದೇವೇದೃಶಂ ಸೂಕ್ಷ್ಮಮಂ ಬ್ರಹ್ಮಚರ್ಯಂ ವಿದುರ್ಬುಧಾಃ |
ವಿದಿತ್ವಾ ಚಾನ್ವಪದ್ಯಂತ ಕ್ಷೇತ್ರಜ್ಞೇನಾನುದರ್ಶಿನಾ ॥18॥
ಜ್ಞಾನಿಗಳಾದವರು ಸೂಕ್ಷ್ಮವಾದ ಬ್ರಹ್ಮಚರ್ಯವು ಇದೇ ಆಗಿದೆ ಎಂದು ತಿಳಿದಿದ್ದಾರೆ. ಇಂತಹ ಸೂಕ್ಷ್ಮವಾದ ಬ್ರಹ್ಮಚರ್ಯಜ್ಞಾನವನ್ನು ತಿಳಿದುಕೊಂಡು ಸರ್ವಜ್ಞನಾದ ಭಗವಂತನಿಂದ ಪ್ರೇರಿತನಾಗಿ, ಬಾಹ್ಯವಾದ ವ್ಯಾಪಾರಗಳಲ್ಲಿ ಪ್ರವೃತ್ತಿಯನ್ನು ಹೊಂದುತ್ತಾರೆ. ಆದ್ದರಿಂದಲೇ ಬ್ರಹ್ಮಯಜ್ಞದಲ್ಲಿ ಅಧಿಕಾರಿಗಳು ಆಗಿರುತ್ತಾರೆ. ಅವನ ಪ್ರೇರಣೆಯಿಲ್ಲದೆ ಯಾವುದೂ ನಡೆಯಲು ಸಾಧ್ಯವಿಲ್ಲ. ಈ ರೀತಿಯಾಗಿ ಆಂತರಬ್ರಹ್ಮಯಜ್ಞದಲ್ಲಿ ಆಸಕ್ತನಾಗಿರುವ ನನಗೆ ಯಾವ ಯಜ್ಞದಲ್ಲಿಯೂ ಆಸಕ್ತಿಯಿಲ್ಲ ಎಂದು ನೀನು ಭಾವಿಸಬೇಡ. ಅದು ನಿನ್ನ ಭ್ರಮೆ ಎನಿಸುತ್ತದೆ ಎಂದು ಬ್ರಾಹ್ಮಣನು ತನ್ನ ಹೆಂಡತಿಯನ್ನು ಕುರಿತು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಅನುಗೀತಾಸು
ಬ್ರಹ್ಮಪನ್ನಗದೇವರ್ಷಿಸಂವಾದೋ ನಾಮ ಸಪ್ತವಿಂಶೋಧ್ಯಾಯಃ ॥
॥ ಅನುಗೀತಾಪರ್ವಣಿ ದ್ವಾದಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಕೃಷ್ಣನು ಅರ್ಜುನನನ್ನು ಕುರಿತು ವಿದ್ಯಾಬ್ರಹ್ಮರಿಗೆ ಅರಣ್ಯತ್ವವನ್ನು ನಿರೂಪಣೆ ಮಾಡುವ ಬ್ರಾಹ್ಮಣ ದಂಪತಿಗಳ ಸಂವಾದವನ್ನು ಅನುವಾದಿಸಿದುದು.
ಬ್ರಾಹ್ಮಣಃ
ಸಂಕಲ್ಪದಂಶಮಶಕಂ ಶೋಕಹರ್ಷಹಿಮಾತಪಮ್ |
ಮೋಹಾಂಧಕಾರತಿಮಿರಂ ಲೋಭವ್ಯಾಧಿಸರೀಸೃಪಮ್ ॥1॥
ವಿಷಯೈಕಾಂತ್ಯಕಾಧ್ವಾನಂ ಕಾಮಕ್ರೋಧವಿರೋಧಕಮ್ |
ತದತೀತ್ಯ ಮಹಾದುರ್ಗಂ ಪ್ರವಿಷ್ಟೋಽಸ್ಮಿ ಮಹದ್ವನಮ್ ॥2॥
ಬ್ರಾಹ್ಮಣ ಸುಭಗೇ, ಯಾವ ಸ್ಥಳದಲ್ಲಿ ಸಂಕಲ್ಪ ರೂಪದ ಕಾಡು ನೊಣಗಳು, ಸೊಳ್ಳೆಗಳು ಅಧಿಕವಾಗಿವೆಯೋ, ಶೋಕ-ಹರ್ಷ ಎಂಬ ಛಳಿ ಮತ್ತು ಬಿಸಿಲುಗಳಿವೆಯೋ, ಮೋಹ-ಅಂಧಕಾರವೆಂಬ ಕತ್ತಲೆಯು ಕವಿದಿದೆಯೋ, ಲೋಭ-ವ್ಯಾಧಿಗಳೆಂಬ ಸರ್ಪಗಳು ಸಂಚರಿಸುತ್ತಿವೆಯೋ ವಿಷಯಗಳೆಂಬ ಪ್ರತಿಬಂಧಕವಾದ ಮಾರ್ಗಗಳಿಂದ ಕೂಡಿದೆಯೋ, ಕಾಮ-ಕ್ರೋಧಗಳೆಂಬ ಕೆಟ್ಟ ವೈರಿಗಳಿಂದ ಕೂಡಿದ ಮಾರ್ಗವು ಎದುರಾಗಿದೆಯೋ ಇಂತಹ ಕಷ್ಟಕರವಾದ ದುರ್ಗಮವಾದ ಸಂಸಾರರೂಪವಾದ ಅರಣ್ಯವನ್ನು ದಾಟಿ ನಾನು ಮಹಾವಸ್ತುವನ್ನು ಪ್ರವೇಶಿಸಿದ್ದೇನೆ.
ಬ್ರಾಹ್ಮಣೀ
ಕ್ವ ತದ್ ವನಂ ಮಹಾಪ್ರಾಜ್ಞ ಕೇ ವೃಕ್ಷಾಃ ಸರಿತಶ್ಚ ಕಾಃ |
ಕಿಯಂತಃ ಪರ್ವತಾಶ್ಚೈವ ಕಿಯತ್ಯಧ್ವನಿ ತದ್ವನಮ್ ॥3॥
ಬ್ರಾಹ್ಮಣೀ ಪ್ರಾಜ್ಞನೇ, ನೀನು ಹೇಳಿದ ಆ ವನ ಎಲ್ಲಿದೆ? ಎಷ್ಟು ದೂರವಾಗಿದೆ? ವೃಕ್ಷಗಳು ಯಾವುವು? ನದಿ-ಗಿರಿ-ಪರ್ವತಗಳು ಎಲ್ಲಿವೆ? ಇವುಗಳನ್ನು ತಿಳಿಸು.
ಬ್ರಾಹ್ಮಣಃ
ನೈತದಸ್ತಿ ಪೃಥಗ್ಭಾವೇ ಮಂದಸ್ಯ ಚ ತತಃ ಸುಖಮ್ ॥4॥
ನ ತದಸ್ತ್ಯಪೃಥಗ್ಭಾವೇ ಕಿಂಚಿದ್ ದೂರತರಂ ತತಃ |
ತಸ್ಮಾದ್ ಹ್ರಸ್ವತರಂ ನಾಸ್ತಿ ನ ತತೋಽನ್ಯದ್ ಬೃಹತ್ತರಮ್ ॥5॥
ನಾಸ್ತಿ ತಸ್ಮಾದ್ ದುಃಖತರಂ ನಾಸ್ತ್ಯನ್ಯತ್ ತತ್ಸಮಂ ಸುಖಮ್ ॥6॥
ಬ್ರಾಹ್ಮಣ ಬ್ರಾಹ್ಮಣೀ, ಮೋಕ್ಷವೆಂಬ ಈ ವನವು ಜೀವ-ಬ್ರಹ್ಮರಿಗೆ ಭೇದವನ್ನು ಅಂಗೀಕರಿಸಿದ ವ್ಯಕ್ತಿಗೂ ಅವನು ದಡ್ಡನಾಗಿದ್ದಲ್ಲಿ ದೊರೆಯುವುದಿಲ್ಲ. ಮಂದನಾದವನ ಬುದ್ಧಿಯು ಭೇದದಲ್ಲಿ ಸ್ಥಿರವಾಗಿರುವುದಿಲ್ಲವಾದ್ದರಿಂದ ಆ ಮಧ್ಯಮ ಜೀವನಿಗೆ ಅರ್ಥಾತ್ ನಿತ್ಯಸಂಸಾರಿಗೆ ಮೋಕ್ಷವು ದೊರೆಯುವುದಿಲ್ಲ. ಯಾರು ಜೀವರಲ್ಲಿ ಐಕ್ಯವನ್ನು ಅಂಗೀಕರಿಸಿದ್ದಾರೋ ಅವರಿಗಂತೂ ಮೋಕ್ಷವು ಬಹಳ ದೂರ. ಅಂತಹ ಜೀವರು ಅಧಮರಾಗಿರುವುದರಿಂದ ಅವರಿಗೆ ಅಂಧಂತಮಸ್ಸೇ ಗತಿ. ಅಂಧಂತಮಸ್ಸಿಗೂ ವೈಕುಂಠಕ್ಕೂ ಬಹಳ

ಅಂತರವಿದೆ. ಆದ್ದರಿಂದಲೇ ಬಹಳ ದೂರ. ಅದಕ್ಕಿಂತಲೂ ಮಧ್ಯಮ ಜೀವನು ಸ್ವರ್ಗ-ನರಕ-ಭೂಮಿಗಳಲ್ಲಿ ಸಂಚರಿಸುವುದರಿಂದ ಸ್ವಲ್ಪ ದೂರದಲ್ಲಿದ್ದಾನೆ ಎಂದು ಹೇಳಬಹುದು. `ಅಣೋರಣೀಯಾನ್ಮಹತೋ ಮಹೀಯಾನ್' ಎಂಬ ಶ್ರುತಿಯಂತೆ ಭಗವಂತನಿಗಿಂತ ಅಣುವಾದ ವ್ಯಕ್ತಿ, ಬೃಹತ್ತಾದ ವ್ಯಕ್ತಿಯು ಇರುವುದಿಲ್ಲ. ಶ್ರೀಹರಿಯು ಭಕ್ತರನ್ನು ದುಃಖದಿಂದ ದಾಟಿಸುವಂತೆ ದುಃಖದಿಂದ ಪಾರು ಮಾಡುವ ವ್ಯಕ್ತಿಯು ಇರುವುದಿಲ್ಲ. ಅವನು ಸುಖ ನೀಡುವಂತೆ ಸುಖ ನೀಡುವ ವ್ಯಕ್ತಿಗಳು ಇರುವುದಿಲ್ಲ.

ನ ತತ್ರಾವಿಶ್ಯ ಶೋಚಂತಿ ನ ಪ್ರಹೃಷ್ಯಂತಿ ಚ ದ್ವಿಜಾಃ |
ನ ಚ ಬಿಭ್ಯತಿ ಕೇಭ್ಯಶ್ಚಿನ್ನೇಭ್ಯೋ ಬಿಭ್ಯತಿ ಕೇಚನ ॥7॥

ಆ ಪರಬ್ರಹ್ಮನಲ್ಲಿ ಆಸಕ್ತರಾದ ವ್ಯಕ್ತಿಗಳಿಗೆ ಎಂದಿಗೂ ದುಃಖವೆಂಬುದೇ ಇಲ್ಲ. ಎಂದೂ ಸಂತೋಷಪಡುವುದಿಲ್ಲ ಎಂದಿಲ್ಲ. ಎಂದೆಂದಿಗೂ ಸಂತುಷ್ಟರಾಗಿಯೇ ಇರುತ್ತಾರೆ. ಯಾವುದೇ ಪ್ರಾಣಿಗಳ ಭಯವಿರುವುದಿಲ್ಲ. ಅವರಿಂದಲೂ ಪ್ರಾಣಿಗಳಿಗೆ ಭಯವಿರುವುದಿಲ್ಲ.

ತಸ್ಮಿನ್ ವನೇ ಸಪ್ತ ಮಹಾದ್ರುಮಾ ಹಿ
ಫಲಾನಿ ಸಪ್ತಾತಿಥಯಶ್ಚ ಸಪ್ತ |
ಸಪ್ತಾಶ್ರಮಾಃ ಸಪ್ತ ಸಮಾಧಯಶ್ಚ
ದೀಕ್ಷಾಶ್ಚ ಸಪ್ತೈತದರಣ್ಯರೂಪಮ್ ॥8॥

ಆ ಮಹಾರಣ್ಯದಲ್ಲಿ ಏಳು ಮಹಾಮರಗಳಿದ್ದಾವೆ. ಅಗ್ನಿಷ್ಟೋಮ, ಗಾರ್ಹಪತ್ಯ, ಆಹವನೀಯ ಮುಂತಾದ ಏಳು ಕ್ರತು(ಯಜ್ಞ)ಗಳೇ ಮಹಾಮರಗಳು. ಈ ಕ್ರತುಗಳ ಮೂಲಕ ಕೃಷ್ಣಾರ್ಪಣ ಬುದ್ಧಿಯಿಂದ ಭಗವಂತನನ್ನು ಆರಾಧಿಸಿದರೆ ಆ ಮಹಾಮರಗಳು ಫಲಗಳನ್ನು ಕೊಡುತ್ತವೆ ಎಂದು ಭಾವ. ಈ ಮರದಲ್ಲಿ ಫಲಗಳು ಏಳು (ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಮಂತ್ರ, ಬೋಧ). ಅತಿಥಿಗಳು ಏಳು (ಘ್ರಾತ, ಭಕ್ಷಯಿತ, ದ್ರಷ್ಟ, ವಕ್ತ, ಶ್ರೋತ, ಮಂತ, ಬೋದ್ಧ). ಸಪ್ತರ್ಷಿಗಳ ಆಶ್ರಮಗಳು ಇದ್ದಾವೆ. ಏಳು ದೀಕ್ಷೆಗಳಿದ್ದಾವೆ (ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಅಪೈಶುನ). ಈ ರೀತಿಯಾದ ಏಳರಿಂದ ಕೂಡಿದ ಭಗವದ್ರೂಪವಾದ ಅರಣ್ಯವು ಸಾಧಕರಿಂದ ಹೊಂದಲು ಯೋಗ್ಯವಾಗಿದೆ.

ಪಂಚ ಪರ್ವಾಣಿ ದಿವ್ಯಾನಿ ಪುಷ್ಪಾಣಿ ಚ ಫಲಾನಿ ಚ |
ಸೃಜಂತಃ ಪಾದಪಾಸ್ತತ್ರ ವ್ಯಾಪ್ಯ ತಿಷ್ಠಂತಿ ತದ್ವನಮ್ ॥9॥

ಭಗವಂತನೆಂಬ ಈ ಮಹಾವೃಕ್ಷವು ಪಂಚರಾತ್ರದಲ್ಲಿ ಹೇಳಲ್ಪಟ್ಟ ಪಂಚ ಪರ್ವಗಳಿಂದ ಕೂಡಿದೆ. ಪುಷ್ಪಗಳನ್ನು, ಫಲಗಳನ್ನು ಸೃಷ್ಟಿಸುತ್ತಾ ತನ್ನನ್ನು ಆಶ್ರಯಿಸಿಕೊಂಡಿರುವ ಮುಕ್ತರನ್ನು ರಕ್ಷಿಸುತ್ತಾ ವ್ಯಾಪಿಸಿದೆ.

ಸುರಭೀಣ್ಯೇವ ಪರ್ಣಾನಿ ಪುಷ್ಪಾಣಿ ಚ ಫಲಾನಿ ಚ |
ಸೃಜಂತಃ ಪಾದಪಾಸ್ತತ್ರ ವ್ಯಾಪ್ಯ ತಿಷ್ಠಂತಿ ತದ್ವನಮ್ ॥10॥

ಮುಕ್ತಿಯಲ್ಲಿ ಮಂದಾರ, ಪಾರಿಜಾತ ಮೊದಲಾದ ವೃಕ್ಷರೂಪದಲ್ಲಿ ಮುಕ್ತ ಜೀವರು ವಿಹರಿಸುತ್ತಾರೆ. ಈ ವೃಕ್ಷಗಳ ಎಲೆಗಳು, ಪುಷ್ಪಗಳು, ಫಲಗಳು ಎಲ್ಲವೂ ಪರಿಮಳ ಯುಕ್ತವಾಗಿವೆ. ಇಂತಹ ಮರಗಳಿಂದ ತುಂಬಿದ ಬೃಹದ್ವನವೇ ಮುಕ್ತಿ ಎನಿಸಿದೆ.

ಶಂಕರಾಣಿ ತ್ರಿವರ್ಣಾನಿ ಪುಷ್ಪಾಣಿ ಚ ಫಲಾನಿ ಚ |
ಸೃಜಂತಃ ಪಾದಪಾಸ್ತತ್ರ ವ್ಯಾಪ್ಯ ತಿಷ್ಠಂತಿ ತದ್ವನಮ್ ॥11॥

ಸುಖವನ್ನು ನೀಡುವ ಸುಂದರವಾದ ತ್ರಿವರ್ಣದಿಂದ ಕೂಡಿದ ಪುಷ್ಪಗಳು, ಫಲಗಳಿಂದ ತುಂಬಿರುವ ಮರಗಳು ಫಲ-ಪುಷ್ಪಗಳನ್ನು ಸೃಷ್ಟಿಸುತ್ತಾ, ಮುಕ್ತರಿಗೆ ಆನಂದವನ್ನು ಕೊಡುತ್ತಾ ವೈಕುಂಠಲೋಕದಲ್ಲಿ ತುಂಬಿಕೊಂಡಿವೆ.

ಏಕೋ ಹ್ಯಗ್ನಿಃ ಸುಮನಾ ಬ್ರಾಹ್ಮಣೋಽತ್ರ
ಸಪ್ತೇ(ಪಂಚೇ)ಂದ್ರಿಯಾಣಿ ಸಮಿಧಶ್ಚಾತ್ರ ಸಂತಿ |
ತೇಭ್ಯೋ ಮೋಕ್ಷಾತ್ ಸಪ್ತ ಫಲಂತಿ ದೀಕ್ಷಾ
ಗುಣಾಃ ಫಲಾನ್ಯತಿಥಯಃ ಫಲಾಶಾಃ ॥12॥

ಆ ಅರಣ್ಯದಲ್ಲಿ ಭಗವಂತನಿಗೆ ಸಂಬಂಧಿಸಿದ ಶ್ರೇಷ್ಠವಾದ ಒಂದೇ ಜ್ಞಾನವೆಂಬ ಅಗ್ನಿಯು ವ್ಯಾಪಾರ ಮಾಡುತ್ತವೆ. ಸ್ವರೂಪಭೂತಗಳಾದ ಏಳು ಇಂದ್ರಿಯಗಳೇ ಸಮಿತ್ತುಗಳಾಗಿರುತ್ತದೆ. ಮೋಕ್ಷ ಲಭಿಸಿದ ಬಳಿಕ ಇಂದ್ರಿಯಗಳ ಮೂಲಕ ಜ್ಞಾನಾದಿ ಗುಣಗಳು ನಾನಾ ವಿಧವಾದ ಸುಖವೆಂಬ ಫಲಗಳನ್ನು ನೀಡುತ್ತವೆ. ಆ ಸುಖಗಳನ್ನು ಅನುಭವಿಸುವ ಜೀವರು ಪರಸ್ಪರ ಅತಿಥಿಗಳಂತೆ ಭಗವಂತನೆಂಬ ಸಂತೋಷದ ವನವನ್ನು ಪ್ರವೇಶ ಮಾಡಿ, ಎಲ್ಲೆಡೆಯೂ ಸಂಚಾರ ಮಾಡುತ್ತಾರೆ. ಅಂತಹ ಭಗವಂತನೆಂಬ ವನವನ್ನು ನಾನು ಪ್ರವೇಶಿಸಿರುತ್ತೇನೆ.

ಆತಿಥ್ಯಂ ಪ್ರತಿಗೃಹ್ಣಂತಿ ತತ್ರ ಸಪ್ತ ಮಹರ್ಷಯಃ |
ಅರ್ಚಿತೇಷು ವ್ಯತೀತೇಷು ತೇಷ್ವನ್ಯದ್ ರೋಚತೇ ವನಮ್ ॥13॥

ಮೋಕ್ಷದಲ್ಲಿ ಭಗವಂತನ ರೂಪಗಳನ್ನು ಪರಸ್ಪರ ಆರಾಧಿಸುತ್ತಾರೆ. ಆಯಾ ಅಧಿಷ್ಠಾನಗಳಲ್ಲಿ ಭಗವಂತನ ಆರಾಧನೆಯು ಮುಗಿಯುತ್ತಿರಲು ಭಗವಂತನನ್ನು ಪೂಜಿಸಲು ಯೋಗ್ಯವಾದ ಇನ್ನೊಂದು ರೂಪವನ್ನು ಹೊಂದುತ್ತಾರೆ.

ಪ್ರತಿಜ್ಞಾವೃಕ್ಷಮ್ ಅಫಲಂ ಶಾಂತಿಚ್ಛಾಯಾಸಮನ್ವಿತಮ್ |
ಜ್ಞಾನಾಶ್ರಯಂ ತೃಪ್ತಿತೋಯಂ ತಮಃ ಕ್ಷೇತ್ರಜ್ಞಭಾಸ್ಕರಮ್ ॥14॥
ಯೇಽಧಿಗಚ್ಛಂತಿ ತತ್ ಸಂತಸ್ತೇಷಾಂ ನಾಸ್ತಿ ಪುನರ್ಭವಃ |
ಊರ್ಧ್ವಂ ಚಾಧಶ್ಚ ತಿರ್ಯಕ್ ಚ ತಸ್ಯ ನಾಂತೋಽಧಿಗಮ್ಯತೇ ॥15॥

ಆ ಮೋಕ್ಷವೆಂಬ ವನದಲ್ಲಿ ತಮ್ಮ ಹೃದಯದಲ್ಲಿರುವ ಬಿಂಬರೂಪವನ್ನು ಮುಕ್ತರು ಯಾವಾಗಲೂ ನೋಡುತ್ತಿರುತ್ತಾರೆ. ಆದ್ದರಿಂದಲೇ ಅವರೆಂದಿಗೂ ಸಂಸಾರವೆಂಬ ಬಂಧನಕ್ಕೆ ತುತ್ತಾಗುವುದಿಲ್ಲ. ಭಗವಂತನ ರೂಪವು ಸಂಸಾರವನ್ನು ಛೇದಿಸುವ

ವೃಕ್ಷವೆನಿಸಿದೆ. ಕಾಮ್ಯಫಲಗಳ ವಿರೋಧಿ ಎನಿಸಿದೆ. ಶಾಂತಿ ಎಂಬ ನೆರಳಿನಿಂದ ಕೂಡಿದೆ. ಜ್ಞಾನಕ್ಕೆ ಆಶ್ರಯವಾಗಿದೆ. ತೃಪ್ತಿ ಎಂಬ ನೀರನ್ನು ನೀಡುತ್ತಿದೆ. ಕತ್ತಲೆಯಿಂದ ಕುರುಡಾಗಿರುವ ಜೀವನಿಗೆ ನಿರಂತರವೂ ತತ್ತ್ವಜ್ಞಾನವನ್ನು ಉಂಟುಮಾಡುತ್ತಿದೆ. ಇಂತಹ ನಾರಾಯಣನೆಂಬ ವನವನ್ನು ಯಾರು ಪ್ರವೇಶಿಸುತ್ತಾರೋ ಅವರೇ ಸಜ್ಜನರು, ಅವರಿಗೆ ಎಂದಿಗೂ ಸಂಸಾರವಿರುವುದಿಲ್ಲ.
ಸಪ್ತ ಸ್ತ್ರಿಯಸ್ತತ್ರ ಚರಂತಿ ಸತ್ಯಾಃ
ತ್ವವಾಙ್ಮುಖಾ ಭಾನುಮತ್ಯೋ ಜನಿತ್ರ್ಯಃ |
ಊರ್ಧ್ವಂ ರಸಾನಾದದತೇ ಪ್ರಜಾಭ್ಯಃ
ಸರ್ವಾನ್ ಯಥಾ ನಿತ್ಯಮನಿತ್ಯತಾ ಚ ||16||
ಆ ವೈಕುಂಠದಲ್ಲಿ ಕಾಲಿಂದಿ, ಮಿತ್ರವಿಂದಾ, ಭದ್ರಾ, ಲಕ್ಷಣಾ, ಜಾಂಬವತೀ, ಸತ್ಯಾ ಎಂಬ ಷಣ್ಮಹಿಷಿಯರ ಜೊತೆಯಲ್ಲಿ ಲಕ್ಷ್ಮೀದೇವಿಯು ಸೇರಿಕೊಂಡು ಏಳು ಜನ ಸ್ತ್ರೀಯರ ಜೊತೆಯಲ್ಲಿ ಭಗವಂತನು ವಿಹರಿಸುತ್ತಾನೆ. ಆ ಎಲ್ಲ ಸ್ತ್ರೀಯರು ಜಗತ್ತಿನ ತಾಯಂದಿರಾಗಿ, ಕಾಂತಿಯುಕ್ತರಾಗಿ ಲಜ್ಜೆಯಿಂದ ತಗ್ಗಿಸಿದ ಮುಖವುಳ್ಳವರಾಗಿ ಇರುತ್ತಾರೆ. ಸಸ್ತ್ರೀಕನಾದ ಭಗವಂತನಿಗೆ ಅರ್ಪಿಸಿದ ಷಡ್ರಸಗಳನ್ನು ಉತ್ಕೃಷ್ಟವಾಗುವ ರೀತಿಯಲ್ಲಿ ಸ್ವೀಕರಿಸುತ್ತಾರೆ. ಇವರೆಲ್ಲರನ್ನೂ ಮೀರಿ ಶ್ರೀಹರಿಯು ಆ ರಸಗಳನ್ನು ಸ್ವೀಕರಿಸುತ್ತಾನೆ. ಅದರ ಸ್ವಾಖ್ಯ ಸುಖಭೋಗವನ್ನು ಅನುಭವಿಸುತ್ತಾನೆ. ಇಲ್ಲಿ ಅನುಭವಿಸುವ ಸುಖಗಳೆಲ್ಲವೂ ಅನಿತ್ಯವೆನಿಸಿದರೆ, ಅಲ್ಲಿ ಅನುಭವಿಸುವ ಸುಖಗಳೆಲ್ಲವೂ ನಿತ್ಯ ಎನಿಸಿವೆ.
ತತ್ರೈವ ಪ್ರತಿತಿಷ್ಠಂತಿ ಪುನಸ್ತತ್ರೋದಯಂತಿ ಚ |
ತೇ ಚ ಸಪ್ತರ್ಷಯಃ ಸಿದ್ಧಾ ವಸಿಷ್ಠಪ್ರಮುಖೈಸಿತ್ವಹ ||17||
ಸಿದ್ಧಪುರುಷರು ಎನಿಸಿದ ಸಪ್ತರ್ಷಿಗಳು, ವಸಿಷ್ಠರೇ ಮೊದಲಾದವರು ಈ ಲೋಕದಲ್ಲಿಯೇ ಮುಕ್ತರಾದ ಬಳಿಕ ಸ್ಥಿರವಾಗಿ ಇರುತ್ತಾರೆ. ಇಲ್ಲಿಯೇ ಪ್ರಕಟರಾಗುತ್ತಾರೆ. ಹುಟ್ಟು-ಸಾವುಗಳಿಂದ ಮುಕ್ತರಾಗಿರುತ್ತಾರೆ.
ಯಶೋ ವರ್ಚೋ ಭಗಶ್ಚೌಜೋ ವಿಜಯಃ ಸಿದ್ಧತೇಜಸೀ |
ಏವಮೇವಾನುವರ್ತಂತೇ ಸಪ್ತ ಜ್ಯೋತೀಂಷಿ ಭಾಸ್ಕರಮ್ ||18||
ಅದರಂತೆ ಯಶಸ್ಸು, ಪ್ರಭೆ, ಐಶ್ವರ್ಯ, ಕಾಂತಿ, ವಿಜಯ, ಸಿದ್ಧಿ ಮತ್ತು ತೇಜಸ್ಸು - ಈ ಏಳು ಜ್ಯೋತಿಗಳು ಸೂರ್ಯಸದೃಶನಾದ ಪರಮಾತ್ಮನನ್ನು ಅನುಸರಿಸಿ ಹೋಗುತ್ತವೆ.
ಋಷಯಃ ಪರ್ವತಾಶ್ಚೈವ ಸಂತಿ ತತ್ರ ಸಮಾಸತಃ |
ನದ್ಯಶ್ಚ ಪರ್ವತೋ ವಾರಿ ವಹಂತ್ಯೋ ಬ್ರಹ್ಮಸಂಭವಮ್ ||19||
ಋಷಿಗಳು, ಪರ್ವತಗಳು ಆ ಲೋಕದಲ್ಲಿ ಇವೆ. ನದಿಗಳು, ಪರ್ವತಗಳು, ನೀರು ಎಲ್ಲವೂ ಬ್ರಹ್ಮನಿಂದಲೇ ಸೃಷ್ಟವಾಗಿ ಹರಿಯುತ್ತವೆ.
ನದೀನಾಂ ಸಂಗಮಸ್ತತ್ರ ವೈತಾನೇ ಸಮುಪಹ್ವರೇ |
ಸ್ವಾತ್ಮತೃಪ್ತಾ ಯತೋ ಯಾಂತಿ ಸಾಕ್ಷಾದ್ ದಾಂತಾಃ ಪಿತಾಮಹಮ್ ||
ಪ್ರಾಕೃತಿಕ ಲೇಪವಿಲ್ಲದ ಮುಕ್ತವಾದ ನದಿಗಳ ಸಂಚಾರ ಮೋಕ್ಷದಲ್ಲಿದೆ. ಆ ನದಿಗಳ ಹತ್ತಿರದಲ್ಲಿ ಮುಕ್ತರಾದ ಬ್ರಹ್ಮರುಗಳಿದ್ದಾರೆ. ಸ್ವಾತ್ಮತೃಪ್ತರಾದ, ಪೂರ್ಣತೆಯನ್ನು ಪಡೆದ ಮುಕ್ತಚೇತನರೆಲ್ಲರೂ ಕೂಡ ಆ ಮುಕ್ತಬ್ರಹ್ಮರುಗಳ ಬಳಿ ಸಾಗುತ್ತಾರೆ.
ಕೃಶಾಂಗಾಃ ಸುವ್ರತಾಃ ಶಾಂತಾಃ ತಪಸಾ ದಗ್ಧಕಿಲ್ಬಿಷಾಃ |
ಆತ್ಮನ್ಯಾತ್ಮಾನಮಾವೇಶ್ಯ ಬ್ರಾಹ್ಮಣಾಸ್ತಮುಪಾಸತೇ ||21||
ಸೂಕ್ಷ್ಮಚೇತನರಾದ, ಉತ್ತಮವ್ರತನಿಷ್ಠರಾದ, ಶಾಂತರಾದ, ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡಿರುವ, ಕೃಶಕಾಯರಾದ ಸಚ್ಚೇತನರು ತಮ್ಮ ಹೃದಯದಲ್ಲಿ ಪರಮಾತ್ಮನನ್ನು ಸ್ಥಿರಗೊಳಿಸಿ ಅವನನ್ನೇ ಉಪಾಸನೆ ಮಾಡುತ್ತಾರೆ.
ಋಚಮಪ್ಯತ್ರ ಶಂಸಂತಿ ವಿದ್ಯಾರಣ್ಯವಿದೋ ಜನಾಃ |
ತದರಣ್ಯಮಭಿಪ್ರೇತ್ಯ ಕಥಾ ಕಥಮಜಾಯತ ||22||
ಜ್ಞಾನಸ್ವರೂಪವಾದ ಈ ಅರಣ್ಯವನ್ನು ತಿಳಿದ ಜನರು ವೇದದ ಸ್ತೋತ್ರಗಳನ್ನು ಪಠಣ ಮಾಡುತ್ತಿರುತ್ತಾರೆ. ಈ ಅರಣ್ಯವನ್ನು ಉದ್ದೇಶವಾಗಿಟ್ಟುಕೊಂಡೇ ಸಮಸ್ತ ವೇದ- ಪುರಾಣ-ಇತಿಹಾಸಗಳು ಪ್ರವೃತ್ತವಾಗಿವೆ.
ಏತದೇವೇದೃಶಂ ದಿವ್ಯಮರಣ್ಯಂ ಬ್ರಾಹ್ಮಣಾ ವಿದುಃ |
ವಿದಿತ್ವಾ ಚಾನುತಿಷ್ಠಂತಿ ಕ್ಷೇತ್ರಜ್ಞೇನಾನುದರ್ಶಿನಾ ||23||
ಇಂತಹ ದಿವ್ಯವಾದ, ಪವಿತ್ರವಾದ ಅರಣ್ಯವನ್ನು ಬ್ರಹ್ಮಜ್ಞಾನಿಗಳು ಅರಿತಿರುತ್ತಾರೆ. ಈ ಬ್ರಹ್ಮವನವನ್ನು ಯಥಾರ್ಥವಾಗಿ ತಿಳಿದುಕೊಂಡು, ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಲು ಶಮ-ದಮಾದಿಗಳ ಅನುಷ್ಠಾನವನ್ನು ಮಾಡುತ್ತಾರೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು
ಸಂಸಾರವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ ||
|| ಅನುಗೀತಾಪರ್ವಣಿ ತ್ರಯೋದಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ಕೃಷ್ಣನು ಅರ್ಜುನನನ್ನು ಕುರಿತು ಯಾಗೀಯ ಹಿಂಸೆಯು ಅಧರ್ಮವಾಗುವುದಿಲ್ಲ ಎಂದು ಪ್ರತಿಪಾದಿಸಲು ಅಧ್ವರ್ಯು ಮತ್ತು ಯತಿ ಎಂಬ ವ್ಯಕ್ತಿಗಳಿಗೆ ನಡೆದ ಸಂವಾದವನ್ನು ಅನುವಾದಿಸುತ್ತಾನೆ.
ಬ್ರಾಹ್ಮಣಃ

ಗಂಧಾನ್ ನ ಜಿಘ್ರಾಮಿ ರಸಾನ್ ನ ವೇದ್ಮಿ
ರೂಪಂ ನ ಪಶ್ಯಾಮಿ ನ ಚ ಸ್ಪೃಶಾಮಿ |
ನ ಚಾಪಿ ಶಬ್ದಾನ್ ವಿವಿಧಾನ್ ಶೃಣೋಮಿ
ನ ಚಾಪಿ ಸಂಕಲ್ಪಮುಪೈಮಿ ಕಂಚಿತ್ ॥1॥
ಬ್ರಾಹ್ಮಣ ನಾನು ಗಂಧವನ್ನು ಆಘ್ರಾಣಿಸುವುದಿಲ್ಲ. ರಸವನ್ನು ಆಸ್ವಾದಿಸುವುದಿಲ್ಲ. ರೂಪಗಳನ್ನು ನೋಡುವುದಿಲ್ಲ. ಪದಾರ್ಥಗಳನ್ನು ಮುಟ್ಟುವುದಿಲ್ಲ. ಶಬ್ದಗಳ ಬಗ್ಗೆ ಆಸಕ್ತನಾಗಿಲ್ಲ. ಯಾವುದೇ ವಿಧವಾದ ಸಂಕಲ್ಪವನ್ನೂ ಮಾಡುವುದಿಲ್ಲ.
ಅರ್ಥಾನಿಷ್ಟಾನ್ ಕಾಮಯತೇ ಸ್ವಭಾವಃ
ಸರ್ವಾನ್ ದ್ವೇಷ್ಯಾನ್ ದ್ವೇಷ್ಟಿ ಚೈವ ಸ್ವಭಾವಃ |
ಕಾಮದ್ವೇಷಾವುದ್ಭವತಃ ಸ್ವಭಾವಾತ್
ಪ್ರಾಣಾಪಾನೌ ಜಂತುದೇಹಾದಿವೈತ್ಯ ॥2॥
ನಮ್ಮ ನಮ್ಮ ಸ್ವಭಾವಗಳೇ ಇಷ್ಟವಾದ ಪದಾರ್ಥಗಳನ್ನು ಬಯಸುತ್ತವೆ. ಸ್ವಭಾವವೇ ಯಾವುದನ್ನು ದ್ವೇಷಿಸಬೇಕೋ ಅದನ್ನು ದ್ವೇಷಿಸುತ್ತದೆ. ಪ್ರಾಣಾಪಾನಗಳು ಸ್ವಾಭಾವಿಕವಾಗಿಯೇ ದೇಹದಲ್ಲಿದ್ದು ಪಚನಾದಿ ಕ್ರಿಯೆಗಳನ್ನು ಮಾಡುತ್ತವೆ. ರಾಗ- ದ್ವೇಷಗಳು ಸ್ವಭಾವದಿಂದಲೇ ಹುಟ್ಟುತ್ತವೆ.
ತೇಭ್ಯಶ್ಚಾನ್ಯಾಂಸ್ತೇಷ್ವನನ್ಯಾಂಶ್ಚ ಭಾವಾನ್
ಭೂತಾತ್ಮಾನಂ ಲಕ್ಷಯೇಽಹಂ ಶರೀರೇ |
ತಸ್ಮಿಂಸ್ತಿಷ್ಠನ್ ನಾಸ್ತಿ ಶಕ್ತಃ ಕಥಂಚಿತ್
ಕಾಮಕ್ರೋಧಾಭ್ಯಾಂ ಜರಯಾ ಮೃತ್ಯುನಾ ಚ ॥3॥
ಆ ಪ್ರಾಣಾಪಾನಾದಿಗಳಿಗಿಂತ ಬೇರೆಯಾದ ಪಂಚಭೂತಗಳು, ಅವುಗಳಲ್ಲಿ ಬೇರೆಯಾದ ಪಂಚತನ್ಮಾತ್ರಗಳು, ಇವುಗಳೆಲ್ಲದಕ್ಕೂ ನಿಯಾಮಕನಾದ ಪರಮಾತ್ಮ ಈ ಶರೀರದಲ್ಲಿ ಸನ್ನಿಹಿತರಾಗಿದ್ದಾರೆ. ನಾನು ಈ ಶರೀರದಲ್ಲಿ ಎಲ್ಲದಕ್ಕೂ ನಿಯಾಮಕನಾದ ಪರಮಾತ್ಮನನ್ನೇ ನೋಡುತ್ತಿದ್ದೇನೆ. ಆದ್ದರಿಂದ ನನ್ನ ಈ ಶರೀರದಲ್ಲಿ ಉತ್ಪನ್ನವಾಗುವ ಆಯಾ ಮನೋವ್ಯಾಪಾರಗಳಲ್ಲಿ ತೊಡಗಿಸಿಕೊಂಡಿದ್ದರೂ ಅವುಗಳ ವಿಕಾರಗಳಿಗೆ ನಾನು ತುತ್ತಾಗುತ್ತಿಲ್ಲ. ಕಾಮ-ಕ್ರೋಧಗಳಿಗಾಗಲಿ, ಜರಾ-ಮರಣಗಳಿಗಾಗಲಿ ತುತ್ತಾಗಿರುವುದಿಲ್ಲ.
ಅನಿಶ್ಚಿತಶ್ಚೈವ ಹಿ ಸರ್ವಕಾಮಾನ್
ಅವಿದ್ವಿಷಾಣಸ್ಯ ಚ ಸರ್ವದೋಷಾನ್ |
ನ ಮೇ ಸ್ವಭಾವೇಷು ಭವಂತಿ ಲೇಪಾಃ
ತೋಯಸ್ಯ ಬಿಂದೋರಿವ ಪುಷ್ಕರೇಷು ॥4॥
ಯಾವುದೇ ಕಾಮನ ಪದಾರ್ಥಗಳನ್ನು ಕಾಮಿಸದಿರುವ, ದ್ವೇಷ್ಯವಸ್ತುಗಳನ್ನು ದ್ವೇಷಿಸದಿರುವ ನನ್ನ ಸ್ವಭಾವವು ಅಸಂಗವಾಗಿದೆ. ಕಮಲದ ಎಲೆಗಳಲ್ಲಿ ನೀರಿನ ಕಣಗಳು ಲಿಪ್ತವಾಗದಿರುವಂತೆ ಯಾವ ವಿಧವಾದ ದೋಷಗಳು ನನ್ನ ಮನಸ್ಸಿನಲ್ಲಿ ಅಂಟಿರುವುದಿಲ್ಲ.
ನಿರಸ್ಯ ಚೈತಸ್ಯ ಭವಂತಿ ನಿತ್ಯಾ
ನಿರೀಕ್ಷಮಾಣಸ್ಯ ಬಹುಸ್ವಭಾವಾನ್ |
ನ ಸಜ್ಜತೇ ಕರ್ಮಸು ಭೋಗಜಾಲಂ
ದಿವೀವ ಸೂರ್ಯಸ್ಯ ಮಯೂಖಜಾಲಮ್ ॥5॥
ಎಲ್ಲ ಜೀವರೂ ಒಂದು ಬಾರಿ ವಿಷಯಪದಾರ್ಥಗಳನ್ನು ಮನಸ್ಸಿನಿಂದ ನಿರಾಕರಿಸಿ ಇದ್ದರೂ ವಿಷಯಪದಾರ್ಥಗಳು ಪುನಃ ಪುನಃ ಮನಸ್ಸನ್ನು ಮುತ್ತಿ ಪೀಡಿಸುತ್ತಿರುತ್ತವೆ. ಆದರೆ ಪರಬ್ರಹ್ಮನಲ್ಲಿ ನೆಟ್ಟ ಮನಸ್ಸುಳ್ಳ ನನಗೆ ಬಹುಸ್ವಭಾವಗಳನ್ನು ನೋಡುತ್ತಿದ್ದರೂ ವಿಷಯಪದಾರ್ಥಗಳ ಆಸಕ್ತಿಯು ಹುಟ್ಟುತ್ತಿಲ್ಲ. ಆಕಾಶದಲ್ಲಿ ಸೂರ್ಯನ ಕಿರಣಗಳ ಸಮುದಾಯವು ಸೂರ್ಯನನ್ನು ಹೇಗೆ ಲೇಪಗೊಳಿಸಲು ಸಮರ್ಥವಾಗುವುದಿಲ್ಲವೋ ಹಾಗೆ.
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಧ್ವರ್ಯುಯತಿಸಂವಾದಂ ತಂ ನಿಬೋಧ ಯಶಸ್ವಿನಿ ॥6॥
ಯಶಸ್ವಿನಿಯೇ, ಈ ವಿಷಯದಲ್ಲಿ ಅಧ್ವರ್ಯು ಮತ್ತು ಯತಿ ಇವರಿಗೆ ನಡೆದ ಸಂವಾದವನ್ನು ವಿದ್ವಾಂಸರು ಹೇಳುತ್ತಾರೆ. ಅದನ್ನು ವಿವರಿಸುತ್ತೇನೆ, ಕೇಳು.
ಪ್ರೋಕ್ಷ್ಯಮಾಣಂ ಪಶುಂ ದೃಷ್ಟ್ವಾ ಯಜ್ಞಕರ್ಮಣ್ಯಥಾಬ್ರವೀತ್ |
ಯತಿರಧ್ವರ್ಯುಮಾಸೀನೋ ಹಿಂಸೇಯಮಿತಿ ಕುತ್ಸಯನ್ ॥7॥
ಒಂದು ಯಜ್ಞದಲ್ಲಿ ಯಜ್ಞಪಶುವನ್ನು ವಧಿಸುತ್ತಿರುವುದನ್ನು ಕಂಡು ಅಲ್ಲಿಯೇ ಕುಳಿತಿದ್ದ ಯತಿಯು ಆ ಕಾರ್ಯವನ್ನು ಧಿಕ್ಕರಿಸುತ್ತಾನೆ. ಇದು ಹಿಂಸಾಕರ್ಮವಾಗಿದೆ, ಇದನ್ನು ಮಾಡಬಾರದು ಎಂದು ಹೇಳುತ್ತಾನೆ.
ತಮಧ್ವರ್ಯುಃ ಪ್ರತ್ಯುವಾಚ ನಾಯಂ ಛಾಗೋ ವಿನಶ್ಯತಿ |
ಶ್ರೇಯಸಾ ಯೋಕ್ಷ್ಯತೇ ಜಂತುಃ ಯಜ್ಞಸ್ತುತಿರಿಯಂ ತಥಾ ॥8॥
ಅದಕ್ಕೆ ಅಧ್ವರ್ಯುವು ಉತ್ತರಿಸುತ್ತಾನೆ. ಈ ಯಜ್ಞದಲ್ಲಿ ವಧಿಸುವ ಈ ಪಶುವು ಆಡು ವಿನಾಶವನ್ನು ಹೊಂದುವುದಿಲ್ಲ. ವೇದವಾಕ್ಯಗಳು ಸತ್ಯವಾದರೆ ಈ ಪ್ರಾಣಿಯು ಶ್ರೇಯಸ್ಸನ್ನೇ ಹೊಂದುತ್ತದೆ.
ವ್ಯಾಖ್ಯಾನ ವಿಶೇಷ `ಪಶುರ್ವೈ ನಿಯಾಮಾನಃ ಸ ಮೃತ್ಯುಂ ಪ್ರಾಪಶ್ಯತ್ ಸ ದೇವಾನ್ನಾನ್ವಕಾಮಯತ ಏತು ತಂ ದೇವಾ ಅಬ್ರುವನ್ ಏಹಿ ಸ್ವರ್ಗಂ ವೈ ತ್ವಾ ಲೋಕಂ ಗಮಿಶ್ಯಾಮಃ' (5-7-80).

ಯೋ ಹ್ಯಸ್ಯ ಪಾರ್ಥಿವೋ ಭಾವಃ ಪೃಥಿವೀಂ ಸ ಗಮಿಷ್ಯತಿ |
ಯದಸ್ಯ ವಾರಿಜಂ ಕಿಂಚಿದ್ ಅಪಸ್ತತ್ ಪ್ರತಿಪದ್ಯತೇ ॥9॥
ಯಜ್ಞದಲ್ಲಿ ಖಂಡಿತವಾದ ಪ್ರಾಣಿಯ ಶರೀರದ ಪಾರ್ಥಿವಭಾಗವು ಭೂಮಿಯಲ್ಲಿ ಸೇರಿ ಹೋಗುತ್ತದೆ. ಈ ಶರೀರದಲ್ಲಿರುವ ನೀರಿನ ಭಾಗವು ನೀರಿನಲ್ಲಿ ಸೇರಿಹೋಗುತ್ತದೆ.
ಸೂರ್ಯಂ ಚಕ್ಷುರ್ದಿಶಂ ಶ್ರೋತ್ರೇ ಪ್ರಾಣೋಽಸ್ಯ ದಿವಮೇವ ಚ |
ಆಗಮೇ ವರ್ತಮಾನಸ್ಯ ನ ಮೇ ದೋಷೋಽಸ್ತಿ ಕಶ್ಚನ ॥10॥
ಈ ಪ್ರಾಣಿಯ ಕಣ್ಣುಗಳು ಸೂರ್ಯನಲ್ಲಿಯೇ, ಕಿವಿಗಳು ದಿಕ್ಕುಗಳಲ್ಲಿಯೂ, ಪ್ರಾಣಗಳು ಅಂತರಿಕ್ಷದಲ್ಲಿಯೂ ಲೀನವಾಗುತ್ತವೆ. ಶಾಸ್ತ್ರೀಯವಾದ ವ್ಯವಹಾರದಲ್ಲಿ ರತನಾದ ನನಗೆ ಇದರಿಂದ ಯಾವ ದೋಷಗಳೂ ಬರುವುದಿಲ್ಲ.
ಯತಿಃ
ಪ್ರಾಣೈರ್ವಿಯೋಗೇ ಚ್ಛಾಗಸ್ಯ ಯದಿ ಶ್ರೇಯಃ ಪ್ರಪಶ್ಯತಿ |
ಛಾಗಾರ್ಥೇ ವರ್ತತೇ ಯಜ್ಞೋ ಭವತಃ ಕಿಂ ಪ್ರಯೋಜನಮ್ ॥11॥
ಯತಿ ಅಧ್ವರ್ಯುವೇ, ನೀನು ಈ ಆಡಿನ ಪ್ರಾಣಗಳ ವಿಯೋಗದ ಜೊತೆಗೆ ಆಡಿಗೆ ಶ್ರೇಯಸ್ಸುಂಟಾಗುವುದನ್ನು ನೋಡುತ್ತಿರುವಿಯಾದರೆ ಆ ಶ್ರೇಯಸ್ಸು ಆಡಿಗೆ ಉಂಟಾಯಿತು. ಇದರಿಂದ ನಿನಗೇನು ಪ್ರಯೋಜನವಾಯಿತು?
ಅನು ತ್ವಾಂ ಮನ್ಯತೇ ಮಾತಾ ಅನು ತ್ವಾಂ ಮನ್ಯತೇ ಪಿತಾ |
ಮಂತ್ರಮಸ್ಯೈವಮುನ್ನೀಯ ಪರವಂತಂ ವಿಶೇಷತಃ ॥12॥
ಆಗಮೋಕ್ತ ವಿಧಿಯಲ್ಲಿ ವರ್ತಿಸುವುದಾದಲ್ಲಿ ಪಶುವಿನ ವಿಷಯದಲ್ಲಿ ಹೇಳುವ ಮಂತ್ರದಂತೆ ವರ್ತಿಸಬೇಕು. `ಅನ್ವೇವಂ ಮಾತಾ ಅನುಮನ್ಯತ ಅನುಪಿತಾ ಅನುಭ್ರಾತಾ ಸಗರ್ಭ್ಯೋ ಅನುಸಖಾ ಸಯೂಥ್ಯಃ'. ಈ ಮಂತ್ರದಲ್ಲಿ ಪಶುವೇ ಈ ಯಜ್ಞಕಾರ್ಯಕ್ಕೆ ನಿನ್ನ ತಾಯಿ, ತಂದೆ, ಅಣ್ಣ, ತಮ್ಮ, ಸ್ನೇಹಿತ, ಸಂಗಡಿಗರು ಎಲ್ಲರೂ ಅನುಮೋದನೆಯನ್ನು ನೀಡಲಿ ಎಂದರ್ಥ. ಈ ಶ್ರುತಿಗೆ ಅನುಗುಣವಾಗಿ ಇದಕ್ಕೂ ಒಬ್ಬ ನಾಥನಿದ್ದಾನೆ ಎಂದು ಅರ್ಥವಾಗುತ್ತದೆ. ಆದ್ದರಿಂದ ವಿಶೇಷವಾಗಿ ಈ ಮಂತ್ರೋಚ್ಚಾರಣೆಯನ್ನು ಮಾಡಿ ಹನನಕ್ಕೆ ಅನುಮತಿಯನ್ನು ಪಡೆದುಕೊಳ್ಳಬೇಕು. ಇಲ್ಲವಾದಲ್ಲಿ ಪಶುಹಿಂಸೆಯು ದೋಷವಾಗಿಯೇ ತೀರುವುದು.
ಯ ಏವಮನುಮನ್ಯೇರನ್ ತಾನ್ ಭವಾನ್ ಪ್ರಷ್ಟುಮರ್ಹತಿ |
ತೇಷಾಮನುಮತಿಂ ಶ್ರುತ್ವಾ ಶಕ್ಯಾ ಕರ್ತುಂ ವಿಚಾರಣಾ ॥13॥
ನೀನು ಪಶುವಿನ ಸಂಬಂಧಿಗಳನ್ನು ಪ್ರಾರ್ಥಿಸಿ, ಅವರು ಅನುಮತಿಯನ್ನು ನೀಡಿದ ಬಳಿಕ ಯಜ್ಞದಲ್ಲಿ ಹನನ ಮಾಡುವ ವಿಚಾರವನ್ನು ಮಾಡಬಹುದು.
ಅಧ್ವರ್ಯುಃ
ಪ್ರಾಣಾ ಅಪ್ಯಸ್ಯ ಚ್ಛಾಗಸ್ಯ ಪ್ರಾಪಿತಾಸ್ತೇ ಸ್ವಯೋನಿಷು |
ಶರೀರಂ ಕೇವಲಂ ಶಿಷ್ಟಂ ನಿಶ್ಚೇಷ್ಟಮಿತಿ ಮೇ ಮತಿಃ ॥14॥
ಅಧ್ವರ್ಯು `ಸೂರ್ಯಂ ತೇ ಚಕ್ಷುರ್ಗಮಯತಾ ವಾತಂ ಪ್ರಾಣಮನ್ವವ ಸೃಜತಾತ್' ಎಂಬ ಮಂತ್ರವನ್ನು ಉಚ್ಚಾರಣೆ ಮಾಡಿ, ತ್ಯಾಗವನ್ನು ಅಭಿಮಂತ್ರಿಸಿ ಅವುಗಳ ಇಂದ್ರಿಯಗಳನ್ನು ಆಯಾ ಲೋಕಕ್ಕೆ ಕಳುಸಿರುವಿಯಾದಲ್ಲಿ ದುಷ್ಕರ್ಮದಿಂದ ಆಡು ಆಗಿ ಹುಟ್ಟಿರುವ ಈ ಚೇತನವು ಈ ಕರ್ಮಬಂಧನವನ್ನು ಬಿಡಿಸಿಕೊಂಡು ತನ್ನ ಸಹಜ ಯೋನಿಯಲ್ಲಿ ಉತ್ಪತ್ತಿಯನ್ನು ಪಡೆಯುವುದು. ವೇದಗಳು ಪ್ರಮಾಣವಾಗಿರುವುದರಿಂದ ಮಂತ್ರಪೂರ್ವವಾಗಿ ಪ್ರೋಕ್ಷಿಸಲ್ಪಟ್ಟ ಈ ಛಾಗದ ಶರೀರವು ಇಲ್ಲಿ ಉಳಿದುಕೊಂಡಿದೆ. ಆ ಚೇತನವು ಸದ್ಗತಿಯನ್ನು ಹೊಂದುತ್ತದೆ ಎಂದು ನನ್ನ ಅಭಿಪ್ರಾಯ.
ಯತಿಃ
ಇಂಧನಸ್ಯ ತು ತುಲ್ಯೇನ ಶರೀರೇಣ ವಿಚೇತಸಾ |
ಹಿಂಸಾಂ ನಿರ್ವೇಷ್ಟುಕಾಮಾನಾಮಿಂಧನಂ ಪಶುಸಂಜ್ಞಿತಮ್ ॥15॥
ಯತಿ ಅಧ್ವರ್ಯುವೇ, ನೀನು ಯಜ್ಞದಲ್ಲಿ ಆಹುತಿಯನ್ನು ನೀಡುತ್ತಿರುವುದು ಕೇವಲ ಜಡವಾದ ಈ ಮೇಕೆಯ ಪಾರ್ಥಿವ ಶರೀರದ ಆಹುತಿಯಷ್ಟೇ! ಮೇಕೆಯು ಗತಪ್ರಾಣವಾಗಿದೆ. ಪ್ರಾಣಿಗಳ ಜಡವಾದ ಈ ದೇಹವು ಅವುಗಳ ಸುಖಕ್ಕೆ ಆಶ್ರಯವಾಗಿದೆ. ಪ್ರತಿಯೊಂದು ಪ್ರಾಣಿಗಳಿಗೂ ಭೋಗಾಯತನವಾದ ಶರೀರವು ನಾಶವಾಗುವುದು ಬೇಡ ಎಂಬ ಅಭಿಪ್ರಾಯವಿರುತ್ತದೆ. ಕಟ್ಟಿಗೆಯಂತಿರುವ ಶರೀರವೇ ಪಶುರೂಪ ಜೀವ ಎಂದು ಕರೆಯಲ್ಪಟ್ಟಿದೆ. ಆ ಪಶುವಾದರೂ ತನ್ನ ದೇಹನಾಶವನ್ನೇ ತನ್ನ ನಾಶ ಎಂದು ತಿಳಿಯುತ್ತದೆ. ಆದ್ದರಿಂದ ನೀನು ಅದರ ದೇಹವನ್ನು ಹಿಂಸೆ ಪಡಿಸಿದರೂ ಆ ಮೇಕೆಯನ್ನು ಹಿಂಸೆ ಪಡಿಸಿದಂತೆಯೇ ಆಗುತ್ತದೆ. ಇಂತಹ ಹಿಂಸೆಯು ಅಪ್ರಾಮಾಣಿಕವಾಗಿದೆ. ಮಂತ್ರದ ಅಭಿಮಂತ್ರಣದಿಂದ ಜಡವಾದ ಶರೀರವನ್ನು ಹೋಮಿಸಿ ನಿನ್ನ ಅಭಿಲಾಷೆಯನ್ನು ಹೊಂದುತ್ತೀ ಎಂದಾದರೆ ಕಟ್ಟಿಗೆಗೆ ಸಮಾನವಾದ ಶರೀರದಿಂದ ಅಭೀಷ್ಟವನ್ನು ಪಡೆಯುವ ನೀನು ಕಟ್ಟಿಗೆಯಿಂದಲೇ ಯಾಕೆ ಹೋಮಿಸಬಾರದು. ಪ್ರಾಣಿ ಹಿಂಸೆಯನ್ನು ಏಕೆ ಮಾಡುತ್ತಿ? ಅರ್ಥವಾಗುತ್ತಿಲ್ಲ.
ಅಹಿಂಸಾ ಸರ್ವಭೂತಾನಾಮಿತಿ ವೃದ್ಧಾನುಶಾಸನಮ್ |
ಯದಹಿಂಸ್ರಂ ಭವೇತ್ ಕರ್ಮ ತತ್ ಕಾರ್ಯಮಿತಿ ವಿದ್ಮಹೇ ॥16॥
ಎಲ್ಲ ಧರ್ಮಗಳಿಗಿಂತಲೂ ಅಹಿಂಸಾಧರ್ಮವೇ ಶ್ರೇಷ್ಠವಾದುದು ಎಂದು ಜ್ಞಾನವೃದ್ಧರ ಅನುಶಾಸನವು. ಯಾವ ಕಾರ್ಯವು ಹಿಂಸಾರಹಿತವಾಗಿದೆಯೋ ಅದೇ ಮಾಡಲು ಯೋಗ್ಯವಾದ ಕಾರ್ಯ ಎಂದು ತಿಳಿಯುತ್ತೇವೆ.
ಅಹಿಂಸೇತಿ ಪ್ರತಿಜ್ಞೇಯಂ ಯದಿ ವಕ್ಷ್ಯಾಮ್ಯತಃ ಪರಮ್ |
ಶಕ್ಯಂ ಬಹುವಿಧಂ ವಕ್ತುಂ ಭವತಃ ಕಾರ್ಯದೂಷಣಮ್ ॥17॥
ನಾನು ಏನಾದರೂ ಹೇಳಲು ಬಯಸಿದರೆ ಒಂದು ಮಾತನ್ನು ಹೇಳುತ್ತೇನೆ. ನಾನು ಅಹಿಂಸಾಧರ್ಮವನ್ನು ಪಾಲಿಸುತ್ತೇನೆ ಎಂಬ

ಪ್ರತಿಜ್ಞೆಯನ್ನು ಮಾಡಿಸಬೇಕಾಗಿದೆ. ಹೀಗೆ ಮಾಡಿಸದಿದ್ದರೆ ನಿಮ್ಮ ಮೂಲಕ ಅನೇಕ ಹಿಂಸಾಕಾರ್ಯಗಳು ನಡೆಯಲು ಸಾಧ್ಯವಿದೆ.
ಅಹಿಂಸಾ ಸರ್ವಭೂತಾನಾಮಸ್ಮಭ್ಯಂ ರೋಚತೇ ಸದಾ |
ಪ್ರತ್ಯಕ್ಷತಃ ಸಾಧಯಾಮೋ ನ ಪರೋಕ್ಷಮುಪಾಸ್ಮಹೇ ॥18॥
ಯಾವುದೇ ಪ್ರಾಣಿಗಳನ್ನು ಹಿಂಸೆ ಮಾಡದಿರುವುದು ನಮಗೆ ಪ್ರಿಯವಾದುದು. ಅದನ್ನು ಪ್ರತ್ಯಕ್ಷವಾಗಿಯೇ ಸಾಧಿಸೋಣ. ಸ್ವರ್ಗಾದಿಗಳ ಉಪಾಸನೆಯನ್ನು ಮಾಡಲು ಈ ಪ್ರಾಣಿಗಳನ್ನು ಕೊಲ್ಲುವುದು ಬೇಡ.
ಅಧ್ವರ್ಯುಃ
ಭೂಮೇರ್ಗಂಧಗುಣಾನ್ ಭುಂಕ್ಷೇ ಪಿಬಸ್ಯಾಪೋಮಯಾನ್ ರಸಾನ್|
ಜ್ಯೋತಿಷಾಮೀಕ್ಷಸೇ ರೂಪಂ ಸ್ಪೃಶಸ್ಯನಿಲಜಾನ್ ಗುಣಾನ್ ॥19॥
ಶೃಣೋಷ್ಯಾಕಾಶಜಂ ಶಬ್ದಂ ಮನಸಾ ಮನ್ಯಸೇ ಮತಿಮ್ |
ಸರ್ವಾಣ್ಯೇತಾನಿ ಭೂತಾನಿ ಪ್ರಾಣಾ ಇತಿ ಚ ಮನ್ಯಸೇ ॥20॥
ಅಧ್ವರ್ಯು ಯತೀಶ್ವರನೇ, ನೀನು ಭೂಮಿಯಲ್ಲಿರುವ ಗಂಧವನ್ನು ಭೋಗಿಸುತ್ತಿ. ರಸವನ್ನು ಆಸ್ವಾದಿಸುವಿ. ತೇಜಸ್ಸಿನ ಗುಣವಾದ ರೂಪವನ್ನು, ವಾಯುವಿನ ಗುಣವಾದ ಸ್ಪರ್ಶವನ್ನು, ಆಕಾಶದಿಂದ ಹುಟ್ಟುವ ಶಬ್ದವನ್ನು ಸ್ವೀಕರಿಸುತ್ತಿ. ಮನಸ್ಸಿನಿಂದ ಬುದ್ಧಿಯನ್ನು ಹೊಂದುತ್ತಿ. ಆದರೆ ಎಲ್ಲ ಪ್ರಾಣಿಗಳನ್ನು ಪ್ರಾಣ ಉಳ್ಳವುಗಳು ಎಂದು ತಿಳಿದಿರುವಿ. ಅರ್ಥಾತ್ ಪ್ರಾಣವುಳ್ಳ ಭೂತಗಳಿಂದ ಆಯಾ ಗುಣಗಳನ್ನು ಸ್ವೀಕರಿಸಿದರೆ ಅದೂ ಹಿಂಸೆ ಎಂದೇ ಪರಿಗಣಿತವಾಗುವುದಿಲ್ಲವೇ? ಎಂದು ಅಧ್ವರ್ಯುವಿನ ಭಾವ.
ಪ್ರಾಣಾದಾನೇ ನಿವೃತ್ತೋಽಸಿ ಹಿಂಸಾಯಾಂ ವರ್ತತೇ ಭವಾನ್ |
ನಾಸ್ತಿ ಚೇಷ್ಟಾ ವಿನಾ ಹಿಂಸಾ ಕಿಂ ವಾ ತ್ವಂ ಮನ್ಯಸೇ ದ್ವಿಜ ॥21॥
ನೀನು ಪ್ರಾಣಿಗಳ ಪ್ರಾಣವನ್ನು ತೆಗೆಯಬಾರದು ಎಂದು ಕೇಳುತ್ತಿರುವೆ. ಆದರೆ ಪ್ರಾಣಿಗಳಲ್ಲಿರುವ ಗುಣಗಳನ್ನು ಸ್ವೀಕರಿಸುತ್ತಿರುವೆ. ಅದು ಹಿಂಸೆ ಎಂದೇ ಅನಿಸಿದೆ. ಹಿಂಸೆ ಮಾಡಬಾರದೆಂದು ಹೇಳುತ್ತಾ ಹಿಂಸಾ ಕರ್ಮದಲ್ಲಿ ನಿರತನಾದ ಯತಿವರ್ಯನೇ, ಯಾವ ಚೇಷ್ಟೆಗಳು, ಹಿಂಸೆ ಇಲ್ಲದೆ ನಡೆಯುವುದಿಲ್ಲ ಎಂದು ತಿಳಿದುಕೊ. ಹೂವು ಕಿತ್ತಿದಾಗ ಗಿಡಕ್ಕೆ ಹಿಂಸೆಯಾಗುತ್ತದೆ. ನೀರು ಕುಡಿದಾಗ, ಅಗ್ನಿಯನ್ನು ಮಥಿಸಿದಾಗ, ಗಾಳಿಯನ್ನು ಸ್ವೀಕರಿಸಿದಾಗಲೂ ಅಲ್ಲಲ್ಲಿ ಸನ್ನಿಹಿತವಾಗಿರುವ ಪ್ರಾಣಿಗಳ ಹಿಂಸೆಯು ನಿಶ್ಚಿತವಾಗಿಯೂ ಆಗುತ್ತದೆ ಎಂದು ಭಾವಿಸುತ್ತೇನೆ.
ಯತಿಃ
ಅಕ್ಷರಂ ಚ ಕ್ಷರಂ ಚೈವ ದ್ವೈಧೀಭಾವೋಽಯಮಾತ್ಮನಃ |
ಅಕ್ಷರಂ ತತ್ರ ತದ್ಭಾವಃ ಸ್ವಭಾವಃ ಕ್ಷರ ಉಚ್ಯತೇ ॥22॥
ಯತಿ ಅಧ್ವರ್ಯುವೇ, ಈ ಜೀವರಲ್ಲಿ ಕ್ಷರಭಾವ, ಅಕ್ಷರಭಾವ ಎಂಬ ಎರಡು ಸ್ವಭಾವಗಳಿವೆ. ಕ್ಷರಭಾವ, ಅಕ್ಷರಭಾವಗಳಲ್ಲಿ ಅಕ್ಷರಭಾವಗಳನ್ನು ತೊಡೆದುಕೊಂಡು ಕ್ಷರಭಾವವನ್ನು ಹೊಂದಬೇಕು. ಅಕ್ಷರಭಾವವೆಂದರೆ ವಿಷಯಪದಾರ್ಥಗಳಲ್ಲಿ ಯಾವಾಗಲೂ ಆಸಕ್ತಿಯನ್ನು ಹೊಂದಿ ವೈರಾಗ್ಯವನ್ನು ತಾಳದಿರುವುದು ಅಕ್ಷರಭಾವ ಎನಿಸುತ್ತದೆ. ಕ್ಷರಭಾವವೆಂದರೆ ವಿಷಯವನ್ನು ಪರಿತ್ಯಜಿಸಿ ಸ್ವತಂತ್ರನಾದ ಪರಮಾತ್ಮನಲ್ಲಿ ಆಸಕ್ತನಾಗಿರುವುದು. ಪರಮಾತ್ಮನಲ್ಲಿ ಆಸಕ್ತನಾಗಿ ವಿಷಯಗಳನ್ನು ಭುಂಜಿಸಿದಾಗ ಹಿಂಸೆ ಎನಿಸುವುದಿಲ್ಲ ಎಂಬುದು ಯತಿಯ ಅಭಿಪ್ರಾಯವಾಗಿದೆ.
ಘ್ರಾಣಂ ಜಿಹ್ವಾ ಮನಃ ಸತ್ತ್ವಂ ಸ್ವಭಾವೋ ರಾಜಸೋ ಗುಣಃ ॥23॥
ಭಾವೈರೇತೈರ್ವಿಯುಕ್ತಸ್ಯ ನಿರ್ದ್ವಂದ್ವಸ್ಯ ನಿರಾಶಿಷಃ |
ಸಮಸ್ಯ ಸರ್ವಭೂತೇಷು ನಿರ್ಮಮಸ್ಯ ಜಿತಾತ್ಮನಃ ॥24॥
ಸಮಂತಾತ್ ಪರಿಮುಕ್ತಸ್ಯ ನ ಭಯಂ ವಿದ್ಯತೇ ಕ್ವಚಿತ್ ॥25॥
ಘ್ರಾಣೇಂದ್ರಿಯ, ಜಿಹ್ವೆ, ಮನಸ್ಸು, ಸತ್ತ್ವ, ಸ್ವಭಾವ - ಇವುಗಳಲ್ಲಿ ಸಹಜವಾಗಿ ನಡೆಯುವ ಪ್ರವೃತ್ತಿಗಳು ರಾಜಸ ಸ್ವಭಾವ ಎನಿಸುತ್ತವೆ. ಈ ರಾಜಸ ಸ್ವಭಾವಗಳಿಂದ ಮುಕ್ತನಾಗಿ ಸುಖ-ದುಃಖಗಳನ್ನು ನೆನೆಯದೆ, ಅತಿಯಾದ ಆಕಾಂಕ್ಷೆಗಳನ್ನು ಹೊಂದದೆ, ಎಲ್ಲೆಡೆಯೂ ಪರಮಾತ್ಮನೇ ಇದ್ದಾನೆ ಎಂದು ಚಿಂತಿಸುತ್ತಾ, ಮಮತೆಯನ್ನು ತ್ಯಾಗ ಮಾಡಿ, ಜಿತೇಂದ್ರಿಯನಾಗಿದ್ದು, ಎಲ್ಲೆಡೆಯೂ ಅಸಂಗನಾಗಿಯೇ ವರ್ತಿಸುವ ವ್ಯಕ್ತಿಗೆ ಎಂದಿಗೂ ಭಯವಿರುವುದಿಲ್ಲ.
ಅಧ್ವರ್ಯುಃ
ಸದ್ಭಿರೇವೇಹ ಸಂವಾಸಃ ಕಾರ್ಯೋ ಮತಿಮತಾಂ ವರ |
ಭವತಾಂ ಕಥಿತಂ ಶ್ರುತ್ವಾ ಪ್ರತಿಭಾತಿ ಮತಿರ್ಮಮ ॥26॥
ಅಧ್ವರ್ಯು ಬುದ್ಧಿವಂತರಲ್ಲಿ ಶ್ರೇಷ್ಠನಾದ ಯತಿಯೇ, ನಿನ್ನ ಅಭಿಪ್ರಾಯವನ್ನು ಕೇಳಿಸಿಕೊಂಡ ಬಳಿಕ ನನಗೆ ಹೀಗೆ ಎನಿಸುತ್ತಿದೆ- ನಿಶ್ಚಿತವಾಗಿಯೂ ಸತ್ಪುರುಷರ ಸಹವಾಸವನ್ನೇ ಮಾಡಬೇಕು ಎಂದು.
ಭಗವನ್ ಭಗವದ್‌ಬುದ್ಧ್ಯಾ ಪ್ರತಿಬುದ್ಧೋ ಬ್ರವೀಮ್ಯಹಮ್ |
ಮತಂ ಮಂತುಃ ಕ್ರತುಃ ಕರ್ತುಃ ನಾಪರಾಧೋಽಸ್ತಿ ಮೇ ದ್ವಿಜ ॥27॥
ಪೂಜ್ಯನೇ, ಭಗವಂತನ ಪ್ರಜ್ಞೆಯಿಂದ ನನ್ನನ್ನು ಚೆನ್ನಾಗಿ ಬೋಧಿಸಿದೆ. ಇದನ್ನು ಅರ್ಥ ಮಾಡಿಕೊಂಡು ನಾನು ಹೀಗೆ ಹೇಳುತ್ತೇನೆ- ಮನನಶೀಲನಾದ ಮುನಿಗೆ ಮನನ ವಿಷಯಭೂತವಾದ ಪರಮಾತ್ಮಸ್ವರೂಪವೇ ಹೊಂದಲು ಯೋಗ್ಯವಾಗುತ್ತದೆ. ಯಾಗವನ್ನು ಮಾಡುವ ಕರ್ತೃವಿಗೆ ಯಜ್ಞದಿಂದ ಪೂಜಿತನಾದ ಪರಮಾತ್ಮನು ಹೊಂದಲು ಯೋಗ್ಯನಾಗುತ್ತಾನೆ. ಪ್ರವೃತ್ತಿ ಕರ್ಮದಲ್ಲಿ ಮಾಡಲ್ಪಡುವ ಹಿಂಸೆಗಳು ತನ್ನ ಸ್ವಾರ್ಥಫಲದಲ್ಲಿ ಕೂಡಿರುವುದರಿಂದ ತನ್ನ ಹೊಟ್ಟೆ ತುಂಬಿಸಿಕೊಳ್ಳಲು ಮಾಡುವ ಕರ್ಮವಾದುದರಿಂದ ಹಿಂಸೆಯೇ ಆಗುತ್ತದೆ. ನಿವೃತ್ತಿಕರ್ಮದಲ್ಲಿ ನಿರತನಾಗಿ ಮಾಡುವ ಕರ್ಮಗಳು ವಿಷ್ಣುಪೂಜಾಂಗವಾಗುವುದರಿಂದ ಹಿಂಸೆಯಾಗುವುದಿಲ್ಲ ಎಂದು ಅಭಿಪ್ರಾಯ. ಆದ್ದರಿಂದ ಬ್ರಾಹ್ಮಣನೇ, ವಿಷ್ಣುಪೂಜೆಯಾದ

ಕರ್ಮವನ್ನು ಮಾಡಿ ಹಿಂಸಾ ರೂಪವಾದ ಅಪರಾಧದಿಂದ ಮುಕ್ತನಾಗು ಎಂದು ನಿನ್ನ ಅಭಿಪ್ರಾಯ ಎಂದು ಭಾವಿಸುತ್ತೇನೆ.
ಬ್ರಾಹ್ಮಣಃ
ಉಪಪತ್ತ್ಯಾ ಯತಿಸ್ತೂಷ್ಣೀಂ ವರ್ತಮಾನಸ್ತತಃ ಪರಮ್ |
ಅಧ್ವರ್ಯುರಪಿ ನಿರ್ಮೋಹಃ ಪ್ರಚಚಾರ ಮಹಾಮಖೇ ॥28॥
ಬ್ರಾಹ್ಮಣ ಅಧ್ವರ್ಯುವು ಹೇಳಿದ ಯುಕ್ತಿಯುಕ್ತವಾದ ಮಾತನ್ನು ಕೇಳಿಸಿಕೊಂಡ ಯತಿಯು ಮುಂದೆ ಯಾವ ಮಾತನ್ನೂ ಆಡದೆ ಮೌನವಹಿಸಿದನು. ಅಧ್ವರ್ಯುವೂ ಮೋಹರಹಿತನಾಗಿದ್ದು ಮಹಾಯಾಗದಲ್ಲಿ ತನ್ನನ್ನು ತೊಡಗಿಸಿಕೊಂಡನು.
ಏವಮೇತಾದೃಶಂ ಮೋಕ್ಷಂ ಸುಸೂಕ್ಷ್ಮಮಂ ಬ್ರಾಹ್ಮಣಾ ವಿದುಃ |
ವಿದಿತ್ವಾ ಚಾನುತಿಷ್ಠಂತಿ ಕ್ಷೇತ್ರಜ್ಞೇನಾನುದರ್ಶಿನಾ ॥29॥
ಹೀಗೆ ಮೋಕ್ಷವು ಅತ್ಯಂತ ಸೂಕ್ಷ್ಮಸ್ವರೂಪವಾದದ್ದೆಂದು ಬ್ರಾಹ್ಮಣರು ಹೇಳುತ್ತಾರೆ. ಸಾಧಕರು, ತತ್ತ್ವದರ್ಶನವುಳ್ಳ ಸತ್ಪುರುಷರು ಈ ಉಪದೇಶಕ್ಕನುಗುಣವಾಗಿ ಮೋಕ್ಷ ಧರ್ಮವನ್ನು ತಿಳಿದುಕೊಂಡು ಅನುಷ್ಠಾನ ಮಾಡುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಯತಿ-ಅಧ್ವರ್ಯುಸಂವಾದೋ ನಾಮ ಏಕೋನತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಬ್ರಾಹ್ಮಣನು ತನ್ನ ಪತ್ನಿಯನ್ನು ಕುರಿತು ಹಿಂಸೆ ಮಾಡಬಾರದೆಂಬ ವಿಷಯದಲ್ಲಿ ಮಹರ್ಷಿಗಳ ಮಾತುಗಳನ್ನು ಪ್ರಮಾಣವನ್ನಾಗಿ ಹೇಳಲು, ಪರಶುರಾಮನ ಚರಿತ್ರೆಯನ್ನು ಹೇಳಿದುದು. ಪರಶುರಾಮನು ಕಾರ್ತವೀರ್ಯನನ್ನು ಸಂಹರಿಸಿದ ಬಳಿಕ ಅವನ ಬಂಧುಗಳು ಜಮದಗ್ನಿಯನ್ನು ಸಂಹರಿಸಿದುದು. ಅದರಿಂದ ಕ್ರುದ್ಧನಾದ ಪರಶುರಾಮನು ಇಪ್ಪತ್ತೊಂದು ಬಾರಿ ಭೂಮಂಡಲವನ್ನು ಸಂಚರಿಸಿ, ಕ್ಷತ್ರಿಯರನ್ನು ಸಂಹರಿಸುತ್ತಿರಲು ಪರಶುರಾಮನ ಪಿತೃಗಳು ರಾಮನನ್ನು ಸಾಂತ್ವನಗೊಳಿಸಿದ ಪ್ರಸಂಗವನ್ನು ಕೃಷ್ಣನು ಅರ್ಜುನನಿಗೆ ಉಪದೇಶಿಸಿದುದು.
ಬ್ರಾಹ್ಮಣಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಕಾರ್ತವೀರ್ಯಸ್ಯ ಸಂವಾದಂ ಸಮುದ್ರಸ್ಯ ಚ ಭಾಮಿನಿ ॥1॥
ಬ್ರಾಹ್ಮಣ ಭಾಮಿನಿಯೇ, ಈ ವಿಷಯದಲ್ಲಿ ಕಾರ್ತವೀರ್ಯನಿಗೂ, ಸಮುದ್ರರಾಜನಿಗೂ ನಡೆದ ಸಂವಾದರೂಪವಾದ ಹಿಂದೆ ನಡೆದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ |
ಯೇನ ಸಾಗರಪರ್ಯಂತಾ ಧನುಷಾ ನಿರ್ಜಿತಾ ಮಹೀ ॥2॥
ಹಿಂದೆ ಕಾರ್ತವೀರ್ಯನೆಂಬ ಸಹಸ್ರಬಾಹುಗಳುಳ್ಳ ರಾಜನು ಇದ್ದನು. ಅವನು ಸಾಗರಪರ್ಯಂತವಾದ ಭೂಮಿಯನ್ನು ತನ್ನ ಧನುಸ್ಸಿನ ಸಹಾಯದಿಂದ, ಆತ್ಮಬಲದಿಂದ ಜಯಿಸಿದ್ದನು.
ಸ ಕದಾಚಿತ್ ಸಮುದ್ರಾಂತೇ ವಿಚರನ್ ಬಲದರ್ಪಿತಃ |
ಅವಾಕಿರಚ್ಛರಶತೈಃ ಸಮುದ್ರಮಿತಿ ನಃ ಶ್ರುತಮ್ ॥3॥
ಅವನು ಒಂದು ಬಾರಿ ಬಲದಿಂದ ಅಹಂಕಾರಗೊಂಡು ಸಮುದ್ರದ ತೀರದ ಪ್ರದೇಶದಲ್ಲಿ ಸಂಚಾರ ಮಾಡುತ್ತಾ ನೂರಾರು ಬಾಣಗಳಿಂದ ಸಮುದ್ರವನ್ನೇ ಮುಚ್ಚಿಬಿಟ್ಟನು. ಈ ಕಥೆಯನ್ನು ನಾವು ಕೇಳಿದ್ದೇವೆ.
ತಂ ಸಮುದ್ರಂ ನಮಸ್ಕೃತ್ಯ ಕೃತಾಂಜಲಿರುವಾಚ ಹ ॥4॥
ಆ ಸಮಯದಲ್ಲಿ ಸಮುದ್ರರಾಜನು ಕಾರ್ತವೀರ್ಯನ ಬಳಿ ಬಂದು ಕೈಮುಗಿದು ಇಂತು ಹೇಳಿದನು.
ಸಮುದ್ರಃ
ಮಾ ಮುಂಚ ವೀರ ನಾರಾಚಾನ್ ಬ್ರೂಹಿ ಕಿಂ ಕರವಾಣಿ ತೇ ॥5॥
ಮದಾಶ್ರಯಾಣಿ ಭೂತಾನಿ ತ್ವದುತ್ಸೃಷ್ಟೈರ್ಮಹೇಷುಭಿಃ |
ವಧ್ಯಂತೇ ರಾಜಶಾರ್ದೂಲ ಏಭ್ಯೋ ದೇಹ್ಯಭಯಂ ಪ್ರಭೋ ॥6॥
ಸಮುದ್ರ ವೀರನೇ, ನನ್ನ ಮೇಲೆ ಬಾಣಗಳನ್ನು ಹೂಡಬೇಡ. ನಾನು ನಿನಗಾಗಿ ಏನು ಮಾಡಬೇಕೆಂಬುದನ್ನು ಹೇಳು. ನನ್ನ ಆಶ್ರಯದಲ್ಲಿ ಇರುವ ಅನೇಕ ಪ್ರಾಣಿಗಳು ನಿನ್ನಿಂದ ಹತವಾಗಿವೆ. ವಿಭುವೇ, ಆ ಪ್ರಾಣಿಗಳಿಗೆ ಕೃಪೆದೋರಿ ಅಭಯವನ್ನು ನೀಡಲು ಅರ್ಹನಾಗಿರುವಿ.
ಅರ್ಜುನಃ
ಮತ್ಸಮೋ ಯದಿ ಸಂಗ್ರಾಮೇ ಶರಾಸನಧರಃ ಕ್ವಚಿತ್ |
ವಿದ್ಯತೇ ತಂ ಸಮಾಚಕ್ಷ್ವ ಯಃ ಸಮೋ ಹಿ ಮಹಾಮೃಧೇ ॥7॥
ಕಾರ್ತವೀರ್ಯಾರ್ಜುನ ಸಮುದ್ರರಾಜನೇ, ಈ ಪ್ರಪಂಚದಲ್ಲಿ ಯುದ್ಧದಲ್ಲಿ ಎಲ್ಲಿಯಾದರೂ ನನಗೆ ಸಮಾನನಾದ ಧನುರ್ಧಾರಿಯು ಇದ್ದಾನೆಯೇ? ಒಂದು ವೇಳೆ ಇದ್ದಲ್ಲಿ ನನ್ನೆದುರು ನಿಂತು ಆತ ಯುದ್ಧ ಮಾಡುವನೆ? ಅಂತಹ ವ್ಯಕ್ತಿ ಇದ್ದರೆ ಅವನ್ಯಾರೆಂದು ತಿಳಿಸು.
ಸಮುದ್ರಃ
ಮಹರ್ಷಿರ್ಜಮದಗ್ನಿಸ್ತೇ ಯದಿ ರಾಜನ್ ಪರಿಶ್ರುತಃ |

ತಸ್ಯ ಪುತ್ರಸ್ತವಾತಿಥ್ಯಂ ಯಥಾವತ್ ಕರ್ತುಮರ್ಹತಿ ॥8॥
ಸಮುದ್ರ ಅರ್ಜುನನೇ, ನೀನು ಮಹರ್ಷಿ ಜಮದಗ್ನಿಯ ಹೆಸರನ್ನು ಕೇಳಿರುವೆಯಾ? ನಿನಗೆ ಅವನ ಪರಿಚಯವಿದ್ದಲ್ಲಿ ಅವನ ಆಶ್ರಮಕ್ಕೆ ಹೋಗಿ, ಅವನ ಮಗನಾದ ಪರಶುರಾಮನು ನೀಡುವ ವಿಧಿವತ್ತಾದ ಆತಿಥ್ಯವನ್ನು ಸ್ವೀಕರಿಸು.
ಬ್ರಾಹ್ಮಣಃ
ತತಃ ಸ ರಾಜಾ ಪ್ರಯಯೌ ಕ್ರೋಧೇನ ಮಹತಾಽನ್ವಿತಃ ।
ಸ ತಮಾಶ್ರಮಮಾಗಮ್ಯ ರಾಮಮೇವಾನ್ವಪದ್ಯತ ॥9॥
ಬ್ರಾಹ್ಮಣನು ನಂತರ ಕ್ರೋಧಾವಿಷ್ಟನಾದ ಕಾರ್ತವೀರ್ಯನು ಜಮದಗ್ನಿಯ ಆಶ್ರಮಕ್ಕೆ ಆಗಮಿಸಿ ಪರಶುರಾಮನನ್ನು ಸಂಧಿಸಿದನು.
ಸ ರಾಮಪ್ರತಿಕೂಲಾನಿ ಚಕಾರ ಸಹ ಬಂಧುಭಿಃ ।
ಆಯಾಸಂ ಜನಯಾಮಾಸ ರಾಮಸ್ಯ ಚ ಮಹಾತ್ಮನಃ ॥10॥
ಪರಿವಾರ, ಬಂಧುಗಳೊಡನೆ ಆಗಮಿಸಿದ ಕಾರ್ತವೀರ್ಯನು ಪರಶುರಾಮನಿಗೆ ಪ್ರತಿಕೂಲವಾಗಿಯೇ ವರ್ತಿಸಿದನು. ತನ್ನ ಕೃಚ್ಛ್ರತವಾದ ಕರ್ಮಗಳಿಂದ ಮಹಾತ್ಮನಾದ ಪರಶುರಾಮನ ಮನಸ್ಸಿನಲ್ಲಿ ಉದ್ವೇಗವನ್ನು ಹುಟ್ಟಿಸಿದನು.
ತತಸ್ತೇಜಃ ಪ್ರಜಜ್ವಾಲ ರಾಮಸ್ಯಾಮಿತತೇಜಸಃ ।
ಪ್ರದಹನ್ ರಿಪುಸೈನ್ಯಾನಿ ತದಾ ಕಮಲಲೋಚನೇ ॥11॥
ಮಹಾತೇಜಸ್ವಿಯಾದ ಪರಶುರಾಮನ ತೇಜಸ್ಸು ಕೂಡಲೇ ಭಯಂಕರವಾಗಿ ಪ್ರಜ್ವಲಿಸಲು ಆರಂಭಿಸಿತು. ಆ ಸಮಯದಲ್ಲಿ ಪರಶುರಾಮನು ತನ್ನ ತೇಜಸ್ಸಿನಿಂದಲೇ ಅವನ ಸಹಿತವಾಗಿ ಪರಿವಾರವನ್ನು ಸುಡಲು ಇಚ್ಛಿಸಿದನು.
ತತಃ ಪರಶುಮಾದಾಯ ಸ ತಂ ಬಾಹುಸಹಸ್ರಿಣಮ್ ।
ಚಿಚ್ಛೇದ ಸಹಸಾ ರಾಮೋ ಬಹುಶಾಖಮಿವ ದ್ರುಮಮ್ ॥12॥
ಬಳಿಕ ಪರಶುರಾಮನು ಕೊಡಲಿಯನ್ನು ಹಿಡಿದುಕೊಂಡು ಕಾರ್ತವೀರ್ಯನ ಬಾಹುಗಳನ್ನು ನೂರಾರು ಕೊಂಬೆಗಳುಳ್ಳ ಮರವನ್ನು ಕಡಿಯುವಂತೆ ಕತ್ತರಿಸಿ ಹಾಕಿದನು.
ತಂ ಹತಂ ಪತಿತಂ ದೃಷ್ಟ್ವಾ ಸಮೇತಾಃ ಸರ್ವಬಾಂಧವಾಃ ।
ಅಸೀನಾದಾಯ ಶಕ್ತೀಶ್ಚ ಭಾರ್ಗವಂ ಪರ್ಯವಾರಯನ್ ॥13॥
ಕಾರ್ತವೀರ್ಯನು ಗತಪ್ರಾಣನಾಗಿ ಭೂಮಿಯಲ್ಲಿ ಬಿದ್ದದ್ದನ್ನು ಕಂಡ ಬಾಂಧವೆಲ್ಲರೂ ಒಟ್ಟಾಗಿ ಪರಶುರಾಮನನ್ನು ಶಕ್ತ್ಯಾಯುಧಗಳನ್ನು ಹಿಡಿದು ಹೊಡೆಯಲು ಸುತ್ತುಗಟ್ಟಿದರು.
ಸ ರಾಮೋ ರಥಮಾರುಹ್ಯ ಧನುರಾದಾಯ ಸತ್ವರಃ ।
ವಿಸೃಜನ್ ಶರವರ್ಷಾಣಿ ವ್ಯಧಮತ್ ಪಾರ್ಥಿವಂ ಬಲಮ್ ॥14॥
ವೇದವಂತನಾದ ಪರಶುರಾಮನು ರಥದಲ್ಲಿ ಕುಳಿತುಕೊಂಡು, ಧನುಸ್ಸನ್ನು ಹಿಡಿದು ಬಾಣಗಳ ಮಳೆಗರೆಯುತ್ತಾ ರಾಜನ ಸೈನಿಕರನ್ನೆಲ್ಲ ಧ್ವಂಸ ಮಾಡಿದನು.
ತತಸ್ತು ಕ್ಷತ್ರಿಯಾಃ ಕೇಚಿತ್ ಜಮದಗ್ನಿಂ ನಿಹತ್ಯ ಹಿ ।
ವಿವಿಶುರ್ಗಿರಿದುರ್ಗಾಣಿ ಮೃಗಾಃ ಸಿಂಹಾರ್ದಿತಾ ಇವ ॥15॥
ಪರಶುರಾಮನ ಭಯದಿಂದ ಜಮದಗ್ನಿಗಳನ್ನು ಹೊಂದಿರುವ ಆ ಕ್ಷತ್ರಿಯರೆಲ್ಲರೂ ಗಿರಿ-ದುರ್ಗಗಳನ್ನು ಹೆದರಿ ಆಶ್ರಯಿಸಿದರು. ಸಿಂಹದ ಪೀಡೆಗೆ ತುತ್ತಾದ ಮೃಗಗಳು ಹೆದರಿ ಓಡಿಹೋಗುವಂತೆ, ಗಿರಿ-ದುರ್ಗಗಳನ್ನು ಆಶ್ರಯಿಸುವಂತೆ ಪರಶುರಾಮರಿಂದ ಹೆದರಿದ ಸೈನ್ಯವೆಲ್ಲವೂ ಚದುರಿಹೋಯಿತು.
ತೇಷಾಂ ಸ್ವವಿಹಿತಂ ಕರ್ಮ ತದ್ಭಯಾನ್ನಾನುತಿಷ್ಠತಾಮ್ ।
ಪ್ರಜಾ ವೃಷಲತಾಂ ಪ್ರಾಪ್ತಾ ಬ್ರಾಹ್ಮಣಾನಾಮದರ್ಶನಾತ್ ॥16॥
ಪರಶುರಾಮನ ಭಯದಿಂದ ಕ್ಷತ್ರಿಯರು ಸ್ವವರ್ಣಾಶ್ರಮವಿಹಿತವಾದ ಕರ್ಮಗಳನ್ನೇ ತ್ಯಾಗ ಮಾಡಿದರು. ಅನೇಕ ವರ್ಷಗಳ ತನಕ ಬ್ರಾಹ್ಮಣರನ್ನೇ ಕಾಣದಿರುವ ಅವರೆಲ್ಲರೂ ಕರ್ಮಭ್ರಷ್ಟರಾಗಿ ಶೂದ್ರತ್ವವನ್ನೇ ಹೊಂದಿದರು.
ತ ಏತೇ ದ್ರಮಿಳಾಃ ಆಭೀರಾ ಪುಂಡ್ರಾಶ್ಚ ಶಬರೈಃ ಸಹ ।
ವೃಷಲತ್ವಂ ಪರಿಗತಾ ವ್ಯುತ್ಥಾನಾತ್ ಕ್ಷತ್ರಧರ್ಮಿಣಃ॥17॥
ಈ ರೀತಿಯಾಗಿ ಕ್ಷತ್ರಿಯರು ದ್ರವಿಡ, ಆಭೀರ, ಪುಂಡ್ರ, ಶಬರರ ಸಹವಾಸದಲ್ಲಿದ್ದು ಕ್ಷತ್ರಧರ್ಮ ಪರಿತ್ಯಾಗದಿಂದ ಶೂದ್ರತ್ವವನ್ನೇ ಪಡೆದರು.
ತತಸ್ತು ಹತವೀರಾಸು ಕ್ಷತ್ರಿಯಾಸು ಪುನಃ ಪುನಃ ।
ದ್ವಿಜೈರುತ್ಪಾದಿತಂ ಕ್ಷತ್ರಂ ನ್ಯಕೃಂತಜ್ಜಮದಗ್ನಿಜಃ ॥18॥
ಕ್ಷತ್ರಿಯವೀರರೆಲ್ಲರೂ ಪರಶುರಾಮರಿಂದ ಪುನಃ ಪುನಃ ಹತರಾಗಿ ಬ್ರಾಹ್ಮಣರು ಕ್ಷತ್ರಿಯ ಸ್ತ್ರೀಯರಲ್ಲಿ ನಿಯೋಗ ಪದ್ಧತಿಯಂತೆ ಸಂತಾನವನ್ನು ಪಡೆದರು.
ಏಕವಿಂಶತಿಕೇ ಯಾತೇ ರಾಮಂ ವಾಗಶರೀರಿಣೀ ।
ದಿವ್ಯಾ ಪ್ರೋವಾಚ ಮಧುರಾ ಸರ್ವಲೋಕಪರಿಶ್ರುತಾ ॥19॥
ನಂತರ ಪರಶುರಾಮನು ಭೂಮಂಡಲದಲ್ಲಿರುವ ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ ಪ್ರದಕ್ಷಿಣೆ ಮಾಡಿ ಸಂಹರಿಸಿದ ಬಳಿಕ ಸಮಸ್ತ ಜನರಿಗೆ ಕೇಳುವಂತಹ ದಿವ್ಯವಾದ, ಮಧುರವಾದ ಅಶರೀರವಾಣಿಯು ಹೀಗೆ ಹೇಳಿತು.
ರಾಮ ರಾಮ ನಿವರ್ತಸ್ವ ಕಂ ಗುಣಂ ತ್ವತ್ರ ಪಶ್ಯಸಿ ।
ಕ್ಷತ್ರಬಂಧೂನಿಮಾನ್ ಪ್ರಾಣೈರ್ವಿಯೋಜ್ಯ ಚ ಪುನಃ ಪುನಃ ॥20॥

ಪರಶುರಾಮನೇ, ರಾಮನೇ, ಇಂತಹ ಭಯಂಕರವಾದ ಹನನಕರ್ಮದಿಂದ ವಿಶ್ರಾಂತಿಯನ್ನು ಪಡೆ. ಕ್ಷತ್ರಬಂಧುಗಳನ್ನು ಪುನಃ ಪುನಃ ಸಂಹರಿಸುವುದರಿಂದ ಯಾವ ಪ್ರಯೋಜನವನ್ನು ಪಡೆಯುತ್ತಿರುವಿ?
ತಥೈವ ತಂ ಮಹಾತ್ಮಾನಮೃಚೀಕಪ್ರಮುಖಾಸ್ತಥಾ |
ಪಿತಾಮಹಾ ಮಹಾಭಾಗ ನಿವರ್ತಸ್ವೇತ್ಯಥಾಬ್ರುವನ್ ॥21॥
ಅಶರೀರವಾಣಿಯು ಹೀಗೆ ಕೇಳಿ ಬಂದ ಬಳಿಕ ಭಾಗ್ಯಶಾಲಿಯಾದ ಪರಶುರಾಮರ ಪಿತಾಮಹರಾದ ಋಚೀಕನೇ ಮೊದಲಾದ ಮಹರ್ಷಿಗಳು ಪರಶುರಾಮನಿಗೆ ಕ್ಷತ್ರ ಹನನದಿಂದ ವಿಮುಖನಾಗುವಂತೆ ಉಪದೇಶಿಸಿದರು.
ಪಿತುರ್ವಧಮಮೃಷ್ಯಂಶ್ಚ ರಾಮಃ ಪ್ರೋವಾಚ ತಾನೃಷೀನ್ |
ನಾರ್ಹಂತೀಹ ಭವಂತೋ ಮಾಂ ನಿವಾರಯಿತುಮಿತ್ಯುತ ॥22॥
ಜಮದಗ್ನಿಯ ವಧೆಯಿಂದ ಕ್ರುದ್ಧನಾದ ಪರಶುರಾಮನು ಪಿತಾಮಹರನ್ನು ಕುರಿತು ಹೇಳಿದನು- ಪಿತಾಮಹರೇ, ನೀವು ನನ್ನನ್ನು ದುಷ್ಟಕ್ಷತ್ರಿಯರನ್ನು ಸಂಹರಿಸುವ ಕಾರ್ಯದಿಂದ ವಿಮುಖನನ್ನಾಗಿಸುವುದು ಸೂಕ್ತವಲ್ಲ.
ಪಿತರಃ
ನಾರ್ಹಸಿ ಕ್ಷತ್ರಬಂಧೂನ್ ತ್ವಂ ನಿಹಂತುಂ ಜಯಕಾಂಕ್ಷಯಾ |
ನ ಹಿ ಯುಕ್ತಂ ತ್ವಯಾ ಹಂತುಂ ಬ್ರಾಹ್ಮಣೇನ ಸತಾ ನೃಪಾನ್ ॥23॥
ಪಿತೃಗಳು ವಿಜಯಿಗಳಲ್ಲಿ ಶ್ರೇಷ್ಠನಾದವನೇ, ಕ್ಷತ್ರಬಂಧುಗಳನ್ನು ನಿರಂತರ ಸಂಹರಿಸುವುದು ನಿನಗೆ ಯೋಗ್ಯವಾಗುವುದಿಲ್ಲ. ಬ್ರಾಹ್ಮಣನಾದ ನೀನು ರಾಜರನ್ನು ಸಂಹರಿಸುವುದು ನಿಶ್ಚಿತವಾಗಿಯೂ ಯೋಗ್ಯವಾದುದಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಅನುಗೀತಾಸು ರಾಮ-ಕಾರ್ತವೀರ್ಯಯುದ್ಧೇ ಪ್ರತಿಸಾಮವಚನಕಥನಂ ನಾಮ ತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಪರಶುರಾಮನನ್ನು ಕುರಿತು ಪಿತಾಮಹರು ಕ್ಷತ್ರಿಯ ವಧೆಯಿಂದ ನಿವೃತ್ತನಾಗು ಎಂದು ಹೇಳಲು ಅಲರ್ಕೋಪಾಖ್ಯಾನವನ್ನು ಹೇಳಿದುದು. ಇದನ್ನು ಕೇಳಿಸಿಕೊಂಡ ಪರಶುರಾಮನು ಯುದ್ಧದಿಂದ ನಿವೃತ್ತನಾದುದು.
ಪಿತರಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಶ್ರುತ್ವಾ ಚ ತತ್ ತಥಾ ಕಾರ್ಯಂ ಭವತಾ ದ್ವಿಜಸತ್ತಮ ॥1॥
ಪಿತೃಗಳು ದ್ವಿಜಶ್ರೇಷ್ಠನೇ, ಈ ವಿಷಯದಲ್ಲಿ ಪುರಾತನ ಇತಿಹಾಸವೊಂದನ್ನು ವಿದ್ವಾಂಸರು ಉಲ್ಲೇಖಿಸುತ್ತಾರೆ. ಅದನ್ನು ಕೇಳಿಸಿಕೊಂಡು ಹಾಗೆ ಆಚರಿಸು.
ಅಲರ್ಕೋ ನಾಮ ರಾಜರ್ಷಿರಭವತ್ ಸುಮಹಾತಪಾಃ |
ಧರ್ಮಜ್ಞಃ ಸತ್ಯಸಂಧಶ್ಚ ಮಹಾತ್ಮಾ ಸುಮಹಾವ್ರತಃ ॥2॥
ಹಿಂದೆ ಅಲರ್ಕ ಎಂಬ ಹೆಸರಿನ ಮಹಾತಪಸ್ವಿಯಾದ ರಾಜರ್ಷಿ ಇದ್ದನು. ಮಹಾತಪಸ್ವಿಯೂ ಧರ್ಮಜ್ಞನೂ ಸತ್ಯಸಂಧನೂ ದೃಢಪ್ರತಿಜ್ಞನೂ ಆಗಿದ್ದನು.
ಸ ಸಾಗರಾಂತಾಂ ಧನುಷಾ ವಿನಿರ್ಜಿತ್ಯ ಮಹೀಮಿಮಾಮ್ |
ಕೃತ್ವಾ ಸುದುಷ್ಕರಂ ಕರ್ಮ ಮನಃ ಸೂಕ್ಷ್ಮೇ ಮನೋ ಸಮಾದಧೇ ॥3॥
ಅವನು ಸಮಗ್ರ ಭೂಮಂಡಲವನ್ನು ತನ್ನ ಧನುಸ್ಸಿನಿಂದ ಜಯಿಸಿಕೊಂಡು, ಯಾರಿಂದಲೂ ಮಾಡಲಾಗದ ಕರ್ಮವನ್ನು ಮಾಡಿ ಅನಂತರ ಪರಮಾತ್ಮನಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸಿದನು.
ಸ್ಥಿತಸ್ಯ ವೃಕ್ಷಮೂಲೇಽಥ ತಸ್ಯ ಚಿಂತಾ ಬಭೂವ ಹ |
ಉತ್ಸೃಜ್ಯ ಸುಮಹದ್ ರಾಜ್ಯಂ ಸೂಕ್ಷ್ಮಂ ಪ್ರತಿ ಮಹಾಮತೇ ॥4॥
ಮಹಾಮತಿಯೇ, ಯುದ್ಧ ಮಾಡಿ ರಾಜ್ಯವನ್ನು ಕಟ್ಟುವ ಮಹಾಕರ್ಮಗಳನ್ನು ಮಾಡಬೇಕಾದ ಅಲರ್ಕನು ಪರಮಾತ್ಮನನ್ನು ಅರಸುತ್ತಾ ವೃಕ್ಷದ ಬುಡದಲ್ಲಿ ಕುಳಿತಿರುವಾಗ ಹೀಗೆ ಯೋಚನೆಯೊಂದು ಮೂಡಿತು.
ಅಲರ್ಕಃ
ಮನಸೋ ಮೇ ಬಲಂ ಜಾತಂ ಮನೋ ಜಿತ್ವಾ ಧ್ರುವೋ ಜಯಃ |
ಅನ್ಯತ್ರ ಬಾಣಾನ್ ದಾಸ್ಯಾಮಿ ಶತ್ರುಭಿಃ ಪರಿವಾರಿತಃ ॥5॥
ಅಲರ್ಕ ನನ್ನ ಮನಸ್ಸಿಗೆ ಅಧಿಕವಾದ ಬಲವು ಬಂದಿದೆ. ಮನೋಬಲವೇ ಪ್ರಬಲವಾಗಿದೆ. ಇಂತಹ ಮನಸ್ಸನ್ನು ಜಯಿಸಿದರೆ ಶಾಶ್ವತ ಜಯ ಸಿಕ್ಕಿದಂತೆ. ನಾನು ಇಂದ್ರಿಯರೂಪದ ಶತ್ರುಗಳನ್ನು ಜಯಿಸಬೇಕು. ಆದ್ದರಿಂದ ಬಾಹ್ಯ ಯುದ್ಧಕ್ಕಿಂತ ಅಂತರಂಗದಲ್ಲಿ ಅಡಗಿದ ಶತ್ರುಗಳ ಕಡೆಗೆ ತಿರುಗಿ ಬಾಣ ಹೂಡುತ್ತೇನೆ.
ಯದಿದಂ ಚಾಪಲಾತ್ ಕರ್ಮ ಸರ್ವಮೇತದ್ ವಿಕರ್ಷತಿ |
ಮನಃ ಪ್ರತಿ ಸುತೀಕ್ಷ್ಣಾಗ್ರಾನ್ ಅಹಂ ಮೋಕ್ಷ್ಯಾಮಿ ಸಾಯಕಾನ್ ॥6॥
ಚಿತ್ತಚಾಂಚಲ್ಯದಿಂದಲೇ ಜೀವರೆಲ್ಲರೂ ಬಹುಮುಖದ ಕರ್ಮಗಳನ್ನು ಮಾಡುತ್ತಿರುತ್ತಾರೆ. ಈ ಚಾಂಚಲ್ಯವನ್ನು ಬಿಟ್ಟು ಸ್ಥಿರತೆಯನ್ನು ಹೊಂದಬೇಕು. ಆದ್ದರಿಂದ ನಾನು ಮನಸ್ಸಿನ ಮೇಲೆಯೇ ಗುರಿ ಇಟ್ಟು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತೇನೆ.

ಮನಃ
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ಭಿನ್ನಮರ್ಮಾ ಮರಿಷ್ಯಸಿ ॥7॥
ಮನಸ್ಸು ಅಲರ್ಕನೇ, ನಿನ್ನ ಯಾವ ಬಾಣಗಳೂ ನನ್ನನ್ನು ಮುಟ್ಟಲಾರವು. ನಿನ್ನ ಮರ್ಮಸ್ಥಳವನ್ನೇ ಭೇದಿಸುತ್ತವೆ. ಇದರಿಂದ ನೀನೇ ಮರಣಕ್ಕೆ ತುತ್ತಾಗುತ್ತಿ.
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥8॥
ಆದ್ದರಿಂದ ನನ್ನನ್ನು ನಾಶಪಡಿಸಲು ಸಮರ್ಥವಾದ ಬೇರೆ ಯಾವುದಾದರೂ ಬಾಣವಿದ್ದರೆ ಪರಿಶೀಲಿಸು.
ಪಿತರಃ
ತಚ್ಛ್ರುತ್ವಾ ಸ ವಿಚಿಂತ್ಯಾಥ ತತೋ ವಚನಮಬ್ರವೀತ್ ॥9॥
ಪಿತೃಗಳು ಮನಸ್ಸು ಹೇಳಿದ ಮಾತನ್ನು ಕೇಳಿಸಿಕೊಂಡ ಅಲರ್ಕನು ಸ್ವಲ್ಪ ಹೊತ್ತು ಯೋಚಿಸಿ ಹೀಗೆ ಹೇಳಿದನು.
ಅಲರ್ಕಃ
ಆಘ್ರಾಯ ಸುಬಹೂನ್ ಗಂಧಾನ್ ತಾನೇವ ಪ್ರತಿ ಗೃಧ್ಯತಿ |
ತಸ್ಮಾದ್ ಘ್ರಾಣಂ ಪ್ರತಿ ಶರಾನ್ ಪ್ರತಿಮೋಕ್ಷ್ಯಾಮ್ಯಹಂ ಶಿತಾನ್ ॥10॥
ಅಲರ್ಕ ನನ್ನ ಈ ಘ್ರಾಣೇಂದ್ರಿಯವು ಅನೇಕ ಪರಿಮಳದ್ರವ್ಯಗಳನ್ನು ಆಘ್ರಾಣಿಸಿದರೂ ಪುನಃ ಪುನಃ ನೂತನ ಗಂಧಗಳನ್ನು ಬಯಸುತ್ತಿದೆ. ಆದ್ದರಿಂದ ಈ ಮೂಗಿನ ಕಡೆಯೇ ಗುರಿಯಿಟ್ಟು ಬಾಣಪ್ರಯೋಗಿಸುತ್ತೇನೆ.
ಘ್ರಾಣಃ
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ಭಿನ್ನಮರ್ಮಾ ಮರಿಷ್ಯಸಿ ॥11॥
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥12॥
ಘ್ರಾಣೇಂದ್ರಿಯ ಅಲರ್ಕನೇ, ನೀನು ಬಿಡುವ ಬಾಣಗಳು ಯಾವುದೇ ಕ್ರಮದಿಂದ ನನ್ನನ್ನು ಮುಟ್ಟಲಾರವು. ಅವು ನಿನ್ನ ಮರ್ಮಸ್ಥಳವನ್ನೇ ಭೇದಿಸುತ್ತವೆ. ಮರ್ಮಸ್ಥಳವು ಭಗ್ನವಾದೊಡನೆ ನೀನು ಮರಣವನ್ನಪ್ಪುವೆ. ಆದ್ದರಿಂದ ನನ್ನನ್ನು ನಾಶಪಡಿಸಲು ಬೇರೆ ಯಾವುದಾದರೂ ಬಾಣಗಳಿದ್ದಲ್ಲಿ ಪರಿಶೀಲಿಸು.
ಅಲರ್ಕಃ
ಇಯಂ ಸ್ವಾದೂನ್ ರಸಾನ್ ಭುಕ್ತ್ವಾ ತಾನೇವ ಪ್ರತಿ ಗೃಧ್ಯತಿ |
ತಸ್ಮಾಜ್ಜಿಹ್ವಾಂ ಪ್ರತಿ ಶರಾನ್ ಪ್ರತಿಮೋಕ್ಷ್ಯಾಮ್ಯಹಂ ಶಿತಾನ್ ॥13॥
ಅಲರ್ಕ ಈ ನನ್ನ ನಾಲಿಗೆಯು ರಸಭರಿತವಾದ ಪದಾರ್ಥಗಳ ರಸವನ್ನು ಸವಿಯುತ್ತಿದ್ದರೂ ಪುನಃ ಅಂತಹ ರಸವನ್ನೇ ಬಯಸುತ್ತಿದೆ. ಆದ್ದರಿಂದ ಈ ನಾಲಿಗೆಯ ಕಡೆಯೇ ಗುರಿಯಿಟ್ಟು ಬಾಣ ಪ್ರಯೋಗಿಸುತ್ತೇನೆ.
ಜಿಹ್ವಾ
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ತತೋ ಹಾಸ್ಯಸಿ ಜೀವಿತಮ್ ॥14॥
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥15॥
ನಾಲಿಗೆ ಅಲರ್ಕನೇ, ನೀನು ಬಿಡುವ ಬಾಣವು ನನ್ನನ್ನು ಮುಟ್ಟವು. ನಿನ್ನ ಮರ್ಮಸ್ಥಳವನ್ನೇ ಭೇದಿಸುತ್ತವೆ. ಮರ್ಮಸ್ಥಳ ಭಗ್ನವಾದಲ್ಲಿ ನೀನು ಮರಣ ಹೊಂದುವಿ. ಆದ್ದರಿಂದ ಬೇರೆ ಬಾಣಗಳನ್ನು ಯೋಚಿಸು.
ಅಲರ್ಕಃ
ಸ್ಪೃಷ್ಟ್ವಾ ತ್ವಗ್ ವಿವಿಧಾನ್ ಸ್ಪರ್ಶಾನ್ ತಾನೇವ ಪ್ರತಿ ಗೃಧ್ಯತಿ |
ತಸ್ಮಾತ್ ತಾನ್ ಸೂದಯಿಷ್ಯೇಽಹಂ ವಿವಿಧೈಃ ಕಂಕಪತ್ರಿಭಿಃ ॥16॥
ಅಲರ್ಕ ನನ್ನ ತ್ವಗಿಂದ್ರಿಯವು ಅನೇಕ ವಿಧವಾದ ಸುಖವಸ್ತುವನ್ನು ಮುಟ್ಟುತ್ತಾ ಸ್ಪರ್ಶಸುಖವನ್ನು ಅನುಭವಿಸುತ್ತಲೇ ಇದೆ. ಆದರೆ ಇದಕ್ಕೆ ತೃಪ್ತಿಯಿಲ್ಲ. ಆದ್ದರಿಂದ ಈ ತ್ವಗಿಂದ್ರಿಯದ ಮೇಲೆ ರಣಹದ್ದುಗಳ ರೆಕ್ಕೆಗಳನ್ನು ಹೊಂದಿರುವ ಬಾಣಗಳನ್ನು ಹೂಡುತ್ತೇನೆ. ತ್ವಗಿಂದ್ರಿಯವನ್ನು ಸೀಳುತ್ತೇನೆ.
ತ್ವಕ್
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ತತೋ ಹಾಸ್ಯಸಿ ಜೀವಿತಮ್ ॥17॥
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥18॥
ತ್ವಗಿಂದ್ರಿಯ ಅಲರ್ಕನೇ, ನಿನ್ನ ಯಾವುದೇ ಬಾಣಗಳು ನನ್ನನ್ನು ಮುಟ್ಟಲಾರವು. ನಿನ್ನ ಮರ್ಮವನ್ನೇ ಭೇದಿಸುತ್ತವೆ. ನಂತರ ನೀನು ಸಾಯುವಿ. ಆದ್ದರಿಂದ ಬೇರೆ ಬಾಣಗಳನ್ನು ಯೋಚಿಸು.
ಅಲರ್ಕಃ
ಶ್ರುತ್ವಾ ವೈ ವಿವಿಧಾನ್ ಶಬ್ದಾನ್ ತಾನೇವ ಪ್ರತಿ ಗೃಧ್ಯತಿ |
ತಸ್ಮಾಚ್ಛ್ರೋತ್ರಂ ಪ್ರತಿ ಶರಾನ್ ಮೋಕ್ಷಯಿಷ್ಯಾಮ್ಯಹಂ ಶಿತಾನ್ ॥19॥
ಅಲರ್ಕ ನನ್ನ ಈ ಕಿವಿಯು ಬಹು ಬಗೆಯ ಶಬ್ದಗಳನ್ನು ಕೇಳುತ್ತಿದ್ದರೂ ಪುನಃ ಶಬ್ದಗಳ ಬಯಕೆಯಲ್ಲಿಯೂ ಹಾತೊರೆಯುತ್ತಿದೆ. ಆದ್ದರಿಂದ ಕಿವಿಗೇ ಗುರಿಯಿಟ್ಟು ತೀಕ್ಷ್ಣ ಬಾಣಗಳನ್ನು ಪ್ರಯೋಗಿಸುತ್ತೇನೆ.

ಶ್ರೋತ್ರಮ್
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ತತೋ ಹಾಸ್ಯಸಿ ಜೀವಿತಮ್ ॥20॥
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥21॥
ಶ್ರೋತ್ರೇಂದ್ರಿಯ ಈ ಬಾಣಗಳು ನನ್ನನ್ನು ಯಾವುದೇ ಕಾರಣದಿಂದ ಮುಟ್ಟಲಾರವು. ನಿನ್ನ ಮರ್ಮವನ್ನೇ ಭೇದಿಸುತ್ತವೆ. ಇದರಿಂದ ನಿನ್ನ ಪ್ರಾಣ ಹೊರಟು ಹೋಗುವುದು. ಆದ್ದರಿಂದ ನನ್ನನ್ನು ಕೊಲ್ಲಲು ಸಮರ್ಥವಾದ ಬೇರೆ ಬಾಣಗಳನ್ನು ಪರಿಶೀಲಿಸು.
ಅಲರ್ಕಃ
ದೃಷ್ಟ್ವೈವ ವಿವಿಧಾನ್ ಭಾವಾನ್ ತಾನೇವ ಪ್ರತಿ ಗೃಧ್ಯತಿ |
ತಸ್ಮಾಚ್ಚಕ್ಷುಃ ಪ್ರತಿ ಶರಾನ್ ಮೋಕ್ಷಯಿಷ್ಯಾಮ್ಯಹಂ ಶಿತಾನ್ ॥22॥
ಅಲರ್ಕ ಅನೇಕ ರೂಪಗಳನ್ನು ಸಾವಿರಾರು ಬಾರಿ ನೋಡಿದರೂ ನನ್ನ ಕಣ್ಣು ಪುನಃ ಪುನಃ ವಿಧವಿಧ ರೂಪಗಳನ್ನು ನೋಡಬೇಕೆಂದು ಬಯಸುತ್ತದೆ. ಆದ್ದರಿಂದ ತೀಕ್ಷ್ಣವಾದ ಬಾಣಗಳಿಂದ ಕಣ್ಣನ್ನೇ ಸಂಹರಿಸುತ್ತೇನೆ.
ಚಕ್ಷುಃ
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ಭಿನ್ನಮರ್ಮಾ ಮರಿಷ್ಯಸಿ ॥23॥
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥24॥
ಚಕ್ಷುರಿಂದ್ರಿಯ ಅಲರ್ಕನೇ, ನಿನ್ನ ಬಾಣಗಳು ಯಾವುದೇ ಕಾರಣದಿಂದ ಗುರಿ ಮುಟ್ಟವು. ನಿನ್ನ ಮರ್ಮಸ್ಥಳವನ್ನೇ ಭೇದಿಸುತ್ತವೆ. ಬಳಿಕ ನೀನು ಮರಣ ಹೊಂದುವಿ. ಆದ್ದರಿಂದ ನನ್ನನ್ನು ಕೊಲ್ಲಲು ಸಮರ್ಥವಾದ ಬೇರೆ ಬಾಣಗಳನ್ನು ಪರಿಶೀಲಿಸು.
ಅಲರ್ಕಃ
ಇಯಂ ನಿಷ್ಠಾ ಬಹುವಿಧಾಃ ಪ್ರಜ್ಞಯಾ ತ್ವಧ್ಯವಸ್ಯತಿ |
ತಸ್ಮಾತ್ ಬುದ್ಧಿಂ ಪ್ರತಿ ಶರಾನ್ ಪ್ರತಿಮೋಕ್ಷ್ಯಾಮ್ಯಹಂ ಶಿತಾನ್ ॥25॥
ಅಲರ್ಕ ಈ ನನ್ನ ಬುದ್ಧಿಯು ಜ್ಞಾನಶಕ್ತಿಯಿಂದ ಅನೇಕ ನಿಶ್ಚಯಗಳನ್ನು ಹೊಂದುತ್ತದೆ. ಅನೇಕ ನಿರ್ಣಯಗಳನ್ನು ಮಾಡುವ ಈ ಬುದ್ಧಿಯನ್ನೇ ಸಂಹರಿಸುತ್ತೇನೆ. ಇದರ ಮೇಲೆ ಬಾಣಗಳನ್ನು ಪ್ರಯೋಗಿಸುತ್ತೇನೆ.
ಬುದ್ಧಿಃ
ನೇಮೇ ಬಾಣಾಸ್ತರಿಷ್ಯಂತಿ ಮಾಮಲರ್ಕ ಕಥಂಚನ |
ತವೈವ ಮರ್ಮ ಭೇತ್ಸ್ಯಂತಿ ಭಿನ್ನಮರ್ಮಾ ಮರಿಷ್ಯಸಿ ॥26॥
ಅನ್ಯಾನ್ ಬಾಣಾನ್ ಸಮೀಕ್ಷಸ್ವ ಯೈಸ್ತ್ವಂ ಮಾಂ ಸೂದಯಿಷ್ಯಸಿ ॥27॥
ಬುದ್ಧಿ ಅಲರ್ಕನೇ, ನಿನ್ನ ಬಾಣಗಳು ಯಾವ ಕಾರಣದಿಂದಲೂ ನನ್ನನ್ನು ಮುಟ್ಟವು. ನಿನ್ನ ಮರ್ಮಸ್ಥಳ ಭೇದಿಸುವ ಮೂಲಕ ನಿನ್ನನ್ನೇ ಸಾಯಿಸುತ್ತವೆ. ಆದ್ದರಿಂದ ನನ್ನನ್ನು ನಾಶಗೊಳಿಸಲು ಬೇರೆ ಯಾವುದಾದರೂ ಬಾಣಗಳಿದ್ದರೆ ಪರಿಶೀಲಿಸು.
ಪಿತರಃ
ತತೋಽಲರ್ಕಸ್ತಪೋ ಘೋರಮಾಸ್ಥಾಯ ತು ಸುದುಷ್ಕರಮ್ |
ನಾಭ್ಯಗಚ್ಛತ್ ಪರಂ ಶಕ್ತ್ಯಾ ಬಾಣಮೇತೇಷು ಸಪ್ತಸು ॥28॥
ಪಿತೃಗಳು ನಂತರ ಅಲರ್ಕನು ಪಂಚೇಂದ್ರಿಯಗಳನ್ನು, ಬುದ್ಧಿಯನ್ನು, ಮನಸ್ಸನ್ನು ಕೊಲ್ಲಲು ಸಮರ್ಥವಾದ ಬಾಣಗಳ ಪ್ರಾಪ್ತಿಗೆ ಆ ವೃಕ್ಷದ ಬುಡದಲ್ಲಿ ಕುಳಿತು ದುಷ್ಕರವಾದ ತಪಸ್ಸನ್ನಾಚರಿಸಿದನು.
ಸುಸಮಾಹಿತಚೇತಾಸ್ತು ಸತತಂ ಚಿಂತಯತ್ ಪ್ರಭುಃ ॥29॥
ಸ ವಿಚಿಂತ್ಯ ಚಿರಂ ಕಾಲಮಲರ್ಕೋ ದ್ವಿಜಸತ್ತಮ |
ನಾಧ್ಯಗಚ್ಛತ್ ಪರಂ ಶ್ರೇಯೋ ಯೋಗಾನ್ ಮತಿಮತಾಂ ವರಃ ॥30॥
ಮನಸ್ಸನ್ನು ಏಕಾಗ್ರತೆಗೊಳಿಸಿಕೊಂಡು ಯಾವಾಗಲೂ ಚಿಂತಿಸುತ್ತಿದ್ದರೂ ಅವುಗಳನ್ನು ವಿನಾಶಗೊಳಿಸುವಂತಹ ಬಾಣಗಳು ಅವನಿಗೆ ದೊರೆಯಲೇ ಇಲ್ಲ.
ಸ ಏಕಾಗ್ರಂ ಮನಃ ಕೃತ್ವಾ ನಿಶ್ಚಲೋ ಯೋಗಮಾಸ್ಥಿತಃ |
ಇಂದ್ರಿಯಾಣಿ ಜಘಾನಾಶು ಬಾಣೇನೈಕೇನ ವೀರ್ಯವಾನ್ ॥31॥
ಪರಶುರಾಮನೇ, ಬಳಿಕ ಅಲರ್ಕನು ಏಕಾಗ್ರಚಿತ್ತದಿಂದ ಬಹಳ ಕಾಲದವರೆಗೆ ಯೋಚಿಸಿದ ಬಳಿಕ ಬುದ್ಧಿವಂತನಾದ ಅಲರ್ಕನಿಗೆ ಶ್ರೇಯಃಪ್ರಾಪ್ತಿಗೆ ಯೋಗಕ್ಕಿಂತಲೂ ಮಿಗಿಲಾದ ಸಾಧನ ಯಾವುದೂ ಕಂಡುಬರಲಿಲ್ಲ. ಮನಸ್ಸನ್ನು ಏಕಾಗ್ರಗೊಳಿಸಿ ಆಸನದಲ್ಲಿ ಸ್ಥಿರವಾಗಿ ಕುಳಿತು ಧ್ಯಾನಯೋಗವನ್ನು ಹೊಂದಿದನು. ಈ ಪರಮಾತ್ಮನ ಧ್ಯಾನಯೋಗದ ಒಂದೇ ಬಾಣದಿಂದ ಸಮಸ್ತ ಇಂದ್ರಿಯಗಳನ್ನು ವಿನಾಶಗೊಳಿಸಿದನು.
ಯೋಗೇನಾತ್ಮಾನಮಾವಿಶ್ಯ ಸ ಸಿದ್ಧಿಂ ಪರಮಾಂ ಯಯೌ |
ವಿಸ್ಮಿತಶ್ಚಾಪಿ ರಾಜರ್ಷಿಃ ಇಮಾಂ ಗಾಥಾಂ ಜಗಾದ ಹ ॥32॥
ಧ್ಯಾನಯೋಗದಿಂದ ಪರಮಾತ್ಮನಲ್ಲಿ ಮನಸ್ಸನ್ನು ನೆಲೆಗೊಳಿಸಿ ಶ್ರೇಷ್ಠವಾದ ಸಿದ್ಧಿಯನ್ನು ಹೊಂದಿದನು. ಧ್ಯಾನಯೋಗ ಒಂದರಿಂದಲೇ ಎಲ್ಲ ಇಂದ್ರಿಯಗಳು ಪರಾಜಯ ಹೊಂದಿದ್ದನ್ನು ಕಂಡ ಅಲರ್ಕನು ಆಶ್ಚರ್ಯಚಕಿತನಾಗಿ ಈ ಮಾತನ್ನು ಹೇಳಿದನು.
ಅಲರ್ಕಃ
ಅಹೋ ಕಷ್ಟಂ ಯದಸ್ಮಾಭಿಃ ಪೂರ್ವಂ ರಾಜ್ಯಮನುಷ್ಠಿತಮ್ |

ಅತಃ ಪಶ್ಚಾನ್ಮಯಾ ಜ್ಞಾತಂ ಯೋಗಾನ್ನಾಸ್ತಿ ಪರಂ ಸುಖಮ್ ॥33॥
ಕಷ್ಟ-ಕಷ್ಟ. ನಾವು ಇಲ್ಲಿಯ ತನಕ ಬಾಹ್ಯಕರ್ಮಗಳಲ್ಲಿಯೇ ಆಸಕ್ತಿಹೊಂದಿದ್ದೇವೆ. ಭೋಗದ ಬಯಕೆಯಿಂದ ತುಂಬಿರುವ ನಾವು ರಾಜ್ಯವನ್ನೇ ಬಯಸುತ್ತಿದ್ದೇವೆ. ಸುಖ ಬೇಕೆಂದರೆ ಧ್ಯಾನಯೋಗಕ್ಕೆ ಸಾಗಬೇಕು. ಇದಕ್ಕಿಂತ ಮಿಗಿಲಾದ ಸಾಧನವು ಬೇರೆ ಯಾವುದೂ ಇಲ್ಲವೆಂದು ಬಹಳ ಕಾಲದ ಬಳಿಕ ನನಗೆ ತಿಳಿದಿದೆ.
ಪಿತರಃ
ಇತಿ ತ್ವಮಪಿ ಜಾನೀಹಿ ರಾಮ ಮಾ ಕ್ಷತ್ರಿಯಾನ್ ವಧೀಃ |
ತಪೋ ಘೋರಮುಪಾತಿಷ್ಠ ತತಃ ಶ್ರೇಯೋಽಭಿಪತ್ಸ್ಯಸೇ ॥34॥
ಪಿತೃಗಳು ಪರಶುರಾಮನೇ, ಈ ವಿಷಯವನ್ನು ನೀನೂ ಚೆನ್ನಾಗಿ ತಿಳಿದುಕೊ. ಇನ್ನು ಮುಂದೆ ಕ್ಷತ್ರಿಯರನ್ನು ಸಂಹರಿಸಬೇಡ. ಘೋರವಾದ ತಪಸ್ಸನ್ನು ಆಚರಿಸು, ಶ್ರೇಯಸ್ಸನ್ನು ಹೊಂದುವಿ.
ಬ್ರಾಹ್ಮಣಃ
ಇತ್ಯುಕ್ತಃ ಪಿತೃಭಿಃ ಸೋಽಥ ತಪೋ ಘೋರಂ ಸಮಾಸ್ಥಿತಃ |
ಜಾಮದಗ್ನ್ಯೋ ಮಹಾಭಾಗೇ ಸಿದ್ಧಿಂ ಚ ಪರಮಾಂ ಗತಃ ॥35॥
ಬ್ರಾಹ್ಮಣ ಸುಭಗೇ, ಪಿತೃಗಳಿಂದ ಹೀಗೆ ಹೇಳಿಸಿಕೊಂಡ ಸೌಭಾಗ್ಯಶಾಲಿಯಾದ ಜಾಮದಗ್ನಿಯು ಘೋರವಾದ ತಪಸ್ಸನ್ನು ಮಾಡಿ ಸಾಮಾನ್ಯರಿಂದ ಹೊಂದಲಾರದ ಸಿದ್ಧಿಯನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಅನುಗೀತಾಸು ಅಲರ್ಕಚರಿತ್ರಕಥನಂ ನಾಮ
ಏಕತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೆರಡನೆಯ ಅಧ್ಯಾಯ
ಬ್ರಾಹ್ಮಣನು ಬ್ರಾಹ್ಮಣಿಗೆ ಕಾಮ-ಕ್ರೋಧಗಳನ್ನು ಬಿಟ್ಟು ಭಗವಂತನನ್ನು ಚಿಂತಿಸಬೇಕು. ಇದೇ ಪರಮಪುರುಷಾರ್ಥ ಎಂದು ತಿಳಿಸಲು ಅಂಬರೀಶ ಹಾಡಿದ ಆಧ್ಯಾತ್ಮಿಕ ಸ್ವಾರಾಜ್ಯಗೀತೆಯನ್ನು ಉಪದೇಶಿಸಿದುದು.
ಬ್ರಾಹ್ಮಣಃ
ತ್ರಯೋ ವೈ ರಿಪವೋ ಲೋಕೇ ನವಧಾ ಗುಣತಃ ಸ್ಮೃತಾಃ |
ಹರ್ಷಃ ಸ್ತಂಭೋಽತಿಮಾನಶ್ಚ ತ್ರಯಸ್ತೇ ಸಾತ್ವಿಕಾ ಗುಣಾಃ ॥1॥
ಜಗತ್ತಿನಲ್ಲಿ ಮಾನವರಿಗೆ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಶತ್ರುಗಳಿದ್ದಾರೆ. ಮೂರು ಗುಣಗಳ ಪ್ರಭೇದದಿಂದಲೇ ಒಂಬತ್ತು ಪ್ರಕಾರವಾಗಿ ವಿಂಗಡಿಸಲ್ಪಟ್ಟಿವೆ. ಸತ್ವಗುಣವು ಜ್ಞಾನಜನಕವೆನಿಸಿದೆ. ಜ್ಞಾನದ ಮೂಲಕ ಮನಸ್ಸನ್ನು ನಿಗ್ರಹಿಸಿಕೊಳ್ಳದಿದ್ದಲ್ಲಿ ನಾನೇ ವಿದ್ವಾಂಸನು ಎಂಬ ಅಹಂಕಾರ, ಜಗತ್ತಿನ ವಿಷಯಸುಖಗಳಲ್ಲಿಯೇ ಸಂತೋಷ, ಜಂಭ ಇವುಗಳು ಉಂಟಾಗುತ್ತವೆ.
ಶೋಕಃ ಕ್ರೋಧೋಽಭಿಸಂರಂಭೋ ರಾಜಸಾಸ್ತೇ ಗುಣಾಃ ಸ್ಮೃತಾಃ |
ಸ್ವಪ್ನಸ್ತಂದ್ರೀ ಚ ಮೋಹಶ್ಚ ತ್ರಯಸ್ತೇ ತಾಮಸಾ ಗುಣಾಃ ॥2॥
ರಜೋಗುಣದಿಂದ ಹುಟ್ಟುವ ದುರ್ಗುಣಗಳು ಶೋಕ, ಕ್ರೋಧ, ಅತಿಯಾದ ದ್ವೇಷಭಾವ. ತಮೋಗುಣದಿಂದ ಹುಟ್ಟುವ ಗುಣಗಳು ಸ್ವಪ್ನ, ಆಲಸ್ಯ, ಮೋಹ.
ಏತಾನ್ ನಿಕೃತ್ಯ ಧೃತಿಮಾನ್ ಬಾಣಸ್ಯರ್ಂರತಂದ್ರಿತಃ |
ಜಿತ್ವಾ ಪರಾನುತ್ಸಹತೇ ಪ್ರಶಾಂತಃ ಸ್ಯಾಜ್ಜಿತೇಂದ್ರಿಯಃ ॥3॥
ಜಿತೇಂದ್ರಿಯನಾದ, ಪ್ರಶಾಂತ ಮನಸ್ಕನಾದ, ಆಲಸ್ಯರಹಿತನಾದ ಧೀರಪುರುಷನು ಶಮ-ದಮಾದಿಗಳೆಂಬ ಬಾಣಗಳ ಮೂಲಕ ಸತ್ವಾದಿ ಗುಣಗಳನ್ನು ಕತ್ತರಿಸಿದರೆ ಶತ್ರುಗಳನ್ನು ಗೆಲ್ಲಬಹುದು.
ಅತ್ರ ಗಾಥಾಃ ಕೀರ್ತಯಂತಿ ಪುರಾಕಲ್ಪವಿದೋ ಜನಾಃ |
ಅಂಬರೀಷೇಣ ಯಾ ಗೀತಾ ರಾಜ್ಞಾ ರಾಜ್ಯಂ ಪ್ರಶಾಸತಾ ॥4॥
ಈ ವಿಷಯದಲ್ಲಿ ಹಿಂದಿನ ಕಲ್ಪವನ್ನು ತಿಳಿದ ಜನರು ಕೆಲವು ಶ್ಲೋಕವನ್ನು ಹೇಳುತ್ತಾರೆ. ಶಾಂತಿಯಲ್ಲಿ ಆಸಕ್ತನಾದ ಅಂಬರೀಶ ರಾಜನು ಪಠಿಸಿದ ಶ್ಲೋಕಗಳಿವು.
ಸಮುದೀರ್ಣೇಷು ದುಷ್ಟೇಷು ವಧ್ಯಮಾನೇಷು ಸರ್ವಶಃ |
ಜಗ್ರಾಹ ತರಸಾ ರಾಜ್ಯಮಂಬರೀಷ ಇತಿ ಶ್ರುತಿಃ ॥5॥
ಲೋಕದಲ್ಲಿ ಅಪರಾಧಗಳು ಅಧಿಕವಾಗುತ್ತಿರಲು, ಅವುಗಳಿಂದ ಸಜ್ಜನರಿಗೆ ಪೀಡೆಯುಂಟಾಗುತ್ತಿರಲು ಯಶೋವಂತನಾದ ಅಂಬರೀಶ ಚಕ್ರವರ್ತಿಯು ಈ ತನ್ನ ಪ್ರಜ್ಞಾವಂತಿಕೆಯಿಂದ ರಾಜ್ಯವನ್ನು ಸ್ವಾಧೀನ ಪಡಿಸಿಕೊಂಡನು.
ಸನ್ನಿಗೃಹ್ಯ ಮಹಾದೋಷಾನ್ ಸಾಧೂನ್ ಸಮಭಿಪೂಜ್ಯ ಚ |
ಜಗಾಮ ಮಹತೀಂ ಸಿದ್ಧಿಂ ಗಾಥಾಶ್ಚೇಮಾ ಜಗಾದ ಹ ॥6॥
ಅದಕ್ಕಿಂತ ಮೊದಲು ಅವನು ತನ್ನಲ್ಲಿರುವ ದೋಷಗಳನ್ನೆಲ್ಲ ಪರಿಹರಿಸಿಕೊಂಡು, ಆ ದೇಶದಲ್ಲಿರುವ ಅಪರಾಧಗಳನ್ನು ತಡೆಗಟ್ಟಿ, ಸತ್ಪುರುಷರನ್ನು ಗೌರವಿಸಿ ಸತ್ಕರಿಸಿ ಮಹಾಸಿದ್ಧಿಯನ್ನು ಪಡೆದುಕೊಂಡನು. ಈ ಪ್ರಸಂಗದಲ್ಲಿ ಅವನು ಹೇಳಿದ ನುಡಿಗಳು.

ಅಂಬರೀಷಃ
ಭೂಯಿಷ್ಠಂ ಮೇ ಜಿತಾ ದೋಷಾ ನಿಹತಾಃ ಸರ್ವಶತ್ರವಃ |
ಏಕೋ ದೋಷೋಽವಶಿಷ್ಟಸ್ತು ವಧ್ಯೇಷ್ವನಿಹತೋ ಮಯಾ ॥7॥
ನನ್ನಲ್ಲಿ ಅನೇಕ ದೋಷಗಳಿದ್ದವು. ಅದೆಲ್ಲವನ್ನೂ ನಾನು ಪರಿಹರಿಸಿಕೊಂಡು ಬಳಿಕ ಶತ್ರುಗಳನ್ನು ನಿಗ್ರಹಿಸಿದೆನು. ಆದರೂ ನನ್ನಲ್ಲಿ ಒಂದು ದೊಡ್ಡ ದೋಷವು ಹಾಗೆಯೇ ಉಳಿದುಕೊಂಡಿದೆ. ಅದನ್ನು ಸಂಹರಿಸಲು ನನ್ನಿಂದ ಸಾಧ್ಯವಾಗಲಿಲ್ಲ.
ಯೇನ ಯುಕ್ತೋ ಜಂತುರಯಂ ತೃಷ್ಣಾಮೇವಾಧಿಗಚ್ಛತಿ |
ತೃಷಾರ್ತ ಇವ ನಿಮ್ನಾನಿ ಪರಿಧಾವತಿ ನಿತ್ಯದಾ ॥8॥
ಈ ದೋಷದಿಂದ ಕೂಡಿದ ವೈರಾಗ್ಯವನ್ನು ಪಡೆಯುವುದಿಲ್ಲ. ಆಸೆಗೆ ವಶನಾದ ಮಾನವನು ಜಗತ್ತಿನಲ್ಲಿ ಅತ್ಯಂತ ಕೆಟ್ಟದ್ದಾದ ಕರ್ಮಗಳನ್ನು ಮಾಡಲು ಮುಂದಾಗುತ್ತಾನೆ. ನಾನು ಈ ಪ್ರಶ್ನೆಗೆ ತುತ್ತಾಗಿ ಹೀನಕರ್ಮಗಳನ್ನು ಮಾಡುತ್ತಿದ್ದೇನೆ. ಅವನು ಅರಿಯುವುದೇ ಇಲ್ಲ.
ಅಕಾರ್ಯಮಪಿ ಯೇನೇಹ ಪ್ರಯುಕ್ತಃ ಸೇವತೇ ನರಃ |
ತಂ ಲೋಭಮಸಿಭಿಸ್ತೀಕ್ಷ್ಣೈರ್ನಿಕೃತ್ಯ ಸುಖಮೇಧತೇ ॥9॥
ಲೋಭದಿಂದ ಪ್ರೇರಿತನಾದ ಮಾನವನು ಮಾಡಬಾರದ ಕರ್ಮಗಳನ್ನೇ ಮಾಡುತ್ತಾನೆ. ಅಂತಹ ಲೋಭವೆಂಬ ದೋಷವನ್ನು ತೀಕ್ಷ್ಣವಾದ ಜ್ಞಾನವೆಂಬ ಕತ್ತಿಯಿಂದ ತುಂಡರಿಸಿದ ವ್ಯಕ್ತಿಯು ಸುಖವನ್ನು ಹೊಂದುತ್ತಾನೆ.
ಲೋಭಾದ್ಧಿ ಜಾಯತೇ ತೃಷ್ಣಾ ತತಶ್ಚಿತ್ತಂ ಪ್ರಸಜ್ಯತೇ |
ಸ ಲಿಪ್ಸಮಾನೋ ಲಭತೇ ಭೂಯಿಷ್ಠಂ ರಾಜಸಾನ್ ಗುಣಾನ್ ॥10॥
ತದವಾಪ್ತೌ ತು ಲಭತೇ ಭೂಯಿಷ್ಠಂ ತಾಮಸಾನ್ ಗುಣಾನ್ ॥11॥
ಲೋಭದಿಂದ ತೃಷ್ಣೆಯು, ತೃಷ್ಣೆಯಿಂದ ಚಿಂತೆಯು ಹುಟ್ಟುತ್ತದೆ. ಈ ತೃಷ್ಣೆಯ ಆದಿಕ್ಯವೇ ಧನ-ಕನಕಾದಿಗಳ ಅಪೇಕ್ಷೆಯನ್ನು ಹುಟ್ಟಿಸುತ್ತದೆ. ಇವುಗಳ ಲೋಭದ ಆಧಿಕ್ಯವು ರಜೋಗುಣವನ್ನು ಅಭಿವೃದ್ಧಿಗೊಳಿಸುತ್ತದೆ. ಇದರಿಂದ ತಾನು ಅಪೇಕ್ಷಿಸಿದ ವಸ್ತುಗಳೆಲ್ಲವನ್ನೂ ಪಡೆದುಕೊಂಡು ಬಳಿಕ ತಾಮಸ ಗುಣದ ಕಡೆ ಸಾಗುತ್ತಾನೆ.
ಸ ತೈರ್ಗುಣೈಃ ಸಂಹತದೇಹಬಂಧನಃ
ಪುನಃ ಪುನರ್ಜಾಯತಿ ಕರ್ಮ ಚೇಹತೇ |
ಜನ್ಮಕ್ಷಯೇ ಭಿನ್ನವಿಕೀರ್ಣದೇಹೋ
ಪುನರ್ಮೃತ್ಯುಂ ಗಚ್ಛತಿ ಜನ್ಮನಿ ಸ್ವೇ ॥12॥
ಆದ್ದರಿಂದ ಮನುಷ್ಯನು ಈ ಮೂರುಗುಣಗಳ ಮೂಲಕವಾಗಿಯೇ ಸಂಸಾರದ ಬಂಧನಕ್ಕೆ ತುತ್ತಾಗಿದ್ದಾನೆ. ಪುನಃ ಪುನಃ ಹುಟ್ಟುತ್ತಾನೆ. ಅನೇಕ ವಿಧವಾದ ಕರ್ಮಗಳನ್ನು ಮಾಡುತ್ತಿರುತ್ತಾನೆ. ಒಂದು ಜನ್ಮವು ನಾಶವಾದ ಬಳಿಕ ಆ ದೇಹವನ್ನು ಕಳೆದುಕೊಂಡು ಪಂಚಭೂತಗಳಲ್ಲಿ ಆ ದೇಹವು ಲಯ ಹೊಂದಿದರೂ ನಿತ್ಯನಾದ ಚೇತನನು ಕರ್ಮವನ್ನು ಕಳೆದುಕೊಂಡು ಜನ್ಮವನ್ನು ಪುನಃ ಪಡೆಯುತ್ತಾನೆ, ಪುನಃ ಸಾಯುತ್ತಾನೆ. ಜನನ-ಮರಣಗಳೆಂಬ ಚಕ್ರದಲ್ಲಿ ಸಂಚರಿಸುತ್ತಲೇ ಇರುತ್ತಾನೆ.
ತಸ್ಮಾದೇನಂ ಸಮ್ಯಗವೇಕ್ಷ್ಯ ಲೋಭಂ
ನಿಗೃಹ್ಯ ಧೃತ್ಯಾಽಽತ್ಮನಿ ರಾಜ್ಯಮಿಚ್ಛೇತ್ |
ಏತದ್ ರಾಜ್ಯಂ ನಾನ್ಯದಸ್ತೀತಿ ವಿದ್ಯಾತ್
ಯಸ್ತ್ವೇನ ರಾಜ್ಞಾ ವಿಜಿತೋಽಮುಯೈಕಃ ॥13॥
ಆದ್ದರಿಂದ ಲೋಭದ ಸ್ವರೂಪವನ್ನು ಅರ್ಥೈಸಿಕೊಂಡು ಧೈರ್ಯದಿಂದ ಇದನ್ನು ನಿಗ್ರಹಿಸಿ ಪರಮಾತ್ಮನ ಚಿಂತನೆಯಲ್ಲಿ ಸಾಮ್ರಾಜ್ಯವನ್ನು ಕಟ್ಟಲು ಬಯಸಬೇಕು. ಅದೇ ನಿಜವಾದ ರಾಜ್ಯವೆನಿಸಿದೆ. ಜೀವನಿಗೆ ಸಂಬಂಧಿಸಿದ ಈ ರಾಜ್ಯವನ್ನು ಬಿಟ್ಟು ಬೇರೆ ಯಾವುದೂ ಇಲ್ಲ. ಯಾವನು ತನ್ನನ್ನು ಗೆದ್ದುಕೊಂಡು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದಾನೋ ಅವನೇ ನಿಜವಾದ ರಾಜನು.
ಬ್ರಾಹ್ಮಣಃ
ಇತಿ ರಾಜ್ಞಾಽಂಬರೀಷೇಣ ಗಾಥಾ ಗೀತಾ ಯಶಸ್ವಿನೀ |
ಆಧಿರಾಜ್ಯಂ ಪುರಸ್ಕೃತ್ಯ ಲೋಭಮೇಕಂ ನಿಕೃಂತತಾ ॥14॥
ಬ್ರಾಹ್ಮಣ ಬ್ರಾಹ್ಮಣಿ, ಈ ರೀತಿಯಾಗಿ ಪರಮಾತ್ಮನೆಂಬ ರಾಜ್ಯವನ್ನು ಮುಂದೆ ಮಾಡಿಕೊಂಡು ಪರಮಶತ್ರುವಾದ ಲೋಭವನ್ನು ನಿಗ್ರಹಿಸಿದ ಯಶೋವಂತನಾದ ಅಂಬರೀಶ ರಾಜನು ಹಾಡಿದ ಶ್ಲೋಕಗಳು ಇವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಅಂಬರೀಷಚರಿತ್ರಕಥನಂ ನಾಮ ದ್ವಾತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ಮೂರನೆಯ ಅಧ್ಯಾಯ
ಬ್ರಾಹ್ಮಣನು ತನ್ನ ಪತ್ನಿಗೆ ಮಮತೆಯನ್ನು ತ್ಯಾಗ ಮಾಡಲು ದೃಷ್ಟಾಂತವಾಗಿ ಬ್ರಾಹ್ಮಣ-ಜನಕಸಂವಾದವನ್ನು ಹೇಳಿದುದು.
ಬ್ರಾಹ್ಮಣಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಬ್ರಾಹ್ಮಣಸ್ಯ ಚ ಸಂವಾದಂ ಜನಕಸ್ಯ ಚ ಭಾಮಿನಿ ॥1॥

ಬ್ರಾಹ್ಮಣ ಬ್ರಾಹ್ಮಣಿ, ಈ ವಿಷಯದಲ್ಲಿ ಬ್ರಾಹ್ಮಣನಿಗೂ ಜನಕರಾಜನಿಗೂ ನಡೆದ ಸಂವಾದ ರೂಪ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಬ್ರಾಹ್ಮಣಂ ಜನಕೋ ರಾಜಾ ಸನ್ನಂ ಕಸ್ಮಿಂಶ್ಚಿದಾಗಸಿ |
ವಿಷಯೇ ಮೇ ನ ವಸ್ತವ್ಯಮಿತಿ ಶಿಷ್ಟ್ಯಾರ್ಥಮಬ್ರವೀತ್ ॥2॥
ಜನಕರಾಜನ ಆಸ್ಥಾನದಲ್ಲಿ ಪಾತಕನಾಗಿರುವ ಬ್ರಾಹ್ಮಣನು ಯಾವುದೋ ಒಂದು ಅಪರಾಧವನ್ನು ಮಾಡಿ ಸಿಕ್ಕಿಬಿದ್ದ. ಅವನನ್ನು ಶಿಕ್ಷಿಸುವ ದೃಷ್ಟಿಯಿಂದ ಜನಕರಾಜನು ಇನ್ನು ಮುಂದೆ ನೀನು ನನ್ನ ದೇಶದಲ್ಲಿ ಇರಬಾರದು ಎಂದು ಆದೇಶಿಸಿದನು.
ಇತ್ಯುಕ್ತಃ ಪ್ರತ್ಯುವಾಚಾಥ ಬ್ರಾಹ್ಮಣೋ ರಾಜಸತ್ತಮಃ ॥3॥
ಈ ರೀತಿ ಜನಕರಾಜನು ಹೇಳಿದಾಗ ಅವನಿಂದ ಆಜ್ಞಪ್ತನಾದ ಬ್ರಾಹ್ಮಣನು ಜನಕರಾಜನನ್ನು ಕುರಿತು ಪ್ರಶ್ನಿಸಿದನು.
ಆಚಕ್ಷ್ವ ವಿಷಯಾನ್ ರಾಜನ್ ಯಾನ್ ಯಾಂಸ್ತವ ವಶೇ ಸ್ಥಿತಾನ್ |
ಸೋಽನ್ಯಸ್ಯ ವಿಷಯೇ ರಾಜ್ಞೋ ವಸ್ತುಮಿಚ್ಛಾಮ್ಯಹಂ ವಿಭೋ ॥4॥
ವಚಸ್ತೇ ಕರ್ತುಮಿಚ್ಛಾಮಿ ಯಥಾಶಾಸ್ತ್ರಂ ಮಹೀಪತೇ ॥5॥
ಜನಕರಾಜನೇ, ನಿನ್ನ ರಾಜ್ಯದ ಗಡಿ ಎಷ್ಟು ಎಂಬುದನ್ನು ಹೇಳು. ಇದನ್ನು ತಿಳಿದುಕೊಂಡು ಇನ್ನೊಂದು ರಾಜ್ಯಕ್ಕೆ ತೆರಳುತ್ತೇನೆ. ನೀನು ಹೇಳಿದಂತೆ ನಡೆದುಕೊಳ್ಳಲು ಬಯಸುತ್ತೇನೆ.
ಬ್ರಾಹ್ಮಣಃ
ಇತ್ಯುಕ್ತಸ್ತು ತದಾ ರಾಜಾ ಬ್ರಾಹ್ಮಣೇನ ಯಶಸ್ವಿನಾ |
ಮುಹುರುಷ್ಣಂ ಚ ನಿಃಶ್ವಸ್ಯ ನ ಸ ತಂ ಪ್ರತ್ಯಭಾಷತ ॥6॥
ಬ್ರಾಹ್ಮಣ ಸುಭಗಳೇ, ಈ ರೀತಿಯಾಗಿ ಬ್ರಾಹ್ಮಣನು ಹೇಳಲು ಜನಕರಾಜನು ಬಿಸಿ ಉಸಿರನ್ನು ದುಃಖದಿಂದ ಬಿಟ್ಟು ಸ್ವಲ್ಪ ಸಮಯ ಬ್ರಾಹ್ಮಣನನ್ನು ಕುರಿತು ಯಾವ ಮಾತುಗಳನ್ನೂ ಹೇಳಲಿಲ್ಲ.
ತಮಾಸೀನಂ ಧ್ಯಾಯಮಾನಂ ರಾಜಾನಮಮಿತೌಜಸಮ್ |
ಕಶ್ಮಲಂ ಸಹಸಾಽಗಚ್ಛದ್ ಭಾನುಮಂತಮಿವ ಗ್ರಹಃ ॥7॥
ಬಹಳ ಕಾಲ ಚಿಂತಿಸುತ್ತಿರುವ ರಾಜನನ್ನು ರಾಹುವೆಂಬ ಕಶ್ಮಲವು ಸೂರ್ಯನನ್ನು ಆವರಿಸುವಂತೆ ಮೋಹವು ರಾಜನನ್ನು ಆವರಿಸಿತು.
ತಮಾಶ್ವಾಸ್ಯ ತತೋ ರಾಜಾ ವ್ಯಪೇತೇ ಕಶ್ಮಲೇ ತದಾ |
ತತೋ ಮುಹೂರ್ತಾದಿವ ತಂ ಬ್ರಾಹ್ಮಣಂ ವಾಕ್ಯಮಬ್ರವೀತ್ ॥8॥
ಮುಹೂರ್ತಕಾಲ ಸ್ಮರಿಸಿಕೊಂಡ ರಾಜನು ಮೋಹವು ಪರಿಹಾರವಾದ ಮೇಲೆ ಬ್ರಾಹ್ಮಣನನ್ನು ಕುರಿತು ಹೀಗೆ ನುಡಿದನು.
ಜನಕಃ
ಪಿತೃಪೈತಾಮಹೇ ರಾಜ್ಯೇ ವಶ್ಯೇ ಜನಪದೇ ಸತಿ |
ವಿಷಯಂ ನಾಧಿಗಚ್ಛಾಮಿ ವಿಚಿನ್ವನ್ ಪೃಥಿವೀಮಿಮಾಮ್ ॥9॥
ಜನಕರಾಜ ಬ್ರಾಹ್ಮಣನೇ, ಇದೇ ರಾಜ್ಯಕ್ಕೆ ನನ್ನ ತಂದೆ, ನನ್ನ ಮುತ್ತಾತಂದಿರು ರಾಜರಾಗಿದ್ದರು. ಅವರು ಗತಿಸಿದ ಬಳಿಕ ಅವರಿಗೆ ಈ ರಾಜ್ಯವು ಸಂಬಂಧ ಪಡಲಿಲ್ಲ. ಅದರಂತೆ ಈ ರಾಜ್ಯವು ಇಂದಲ್ಲ ನಾಳೆ ನನ್ನಿಂದಲೂ ತ್ಯಾಗವಾಗುವುದರಿಂದ ನನ್ನ ರಾಜ್ಯ ಎಂಬುದು ಈ ಭೂಮಂಡಲದಲ್ಲಿ ಹುಡುಕಿದರೂ ಯಾವುದೂ ಕಾಣಿಸುತ್ತಿಲ್ಲ.
ವ್ಯಾಖ್ಯಾನ ವಿಶೇಷ ಸಮಗ್ರದೇಶವು ಜನಕರಾಜನ ದೇಶವೇ ಆಗಿದೆ. ಜನಕರಾಜನ ದೇಶವಲ್ಲದ ತುಣುಕು ಭೂಮಿಯು ಇರುವುದಿಲ್ಲ ಎಂದು ಜನಕರಾಜನು ಸ್ವಲ್ಪ ಸಮಯ ಆಲೋಚಿಸಿ, ಎಲ್ಲವೂ ನನ್ನದೇ ಆಗಿದೆ ಎಂದು ಬ್ರಾಹ್ಮಣನಿಗೆ ಹೇಳಿದನು ಎಂಬುದಾಗಿ ಕೆಲವರು ವ್ಯಾಖ್ಯಾನಿಸಿದ್ದಾರೆ. ಆದರೆ ಜನಕರಾಜನು ಪರಮಬ್ರಹ್ಮಜ್ಞಾನಿಯಾದುದರಿಂದ ಮೋಹವನ್ನು ತ್ಯಾಗ ಮಾಡಿ, ನನಗೆ ಸಂಬಂಧಿಸಿದ ರಾಜ್ಯವೇ ಇಲ್ಲ ಎಂಬುದನ್ನು ಅರ್ಥೈಸಿಕೊಂಡನು ಎಂಬುದು ವ್ಯಾಸರ ಹಿಂದಿನ, ಮುಂದಿನ ಮಾತುಗಳಿಗೆ ಯೋಗ್ಯವಾದ ಅನ್ವಯವಾಗುತ್ತದೆ. ಲಕ್ಷಾಲಂಕಾರದ ವ್ಯಾಖ್ಯಾನ ಅರ್ಥವತ್ತಾಗಿದೆ.
ನಾಧ್ಯಗಚ್ಛಂ ಯದಾ ಪೃಥ್ವ್ಯಾಂ ಮಿಥಿಲಾ ಮಾರ್ಗಿತಾ ಮಯಾ |
ನಾಧ್ಯಗಚ್ಛಂ ಯದಾ ತಸ್ಯಾಂ ಸ್ವಪ್ರಜಾ ಮಾರ್ಗಿತಾ ಮಯಾ ॥10॥
ಅಖಂಡಭೂಮಂಡಲದಲ್ಲಿ ನನ್ನ ದೇಶವು ಯಾವುದೆಂಬುದನ್ನು ನನಗೆ ಗುರುತಿಸಲಾಗದಿದ್ದಾಗ ಮಿಥಿಲಾಪ್ರಾಂತದಲ್ಲಿಯೇ ನನ್ನ ದೇಶ ಯಾವುದೆಂದು ಹುಡುಕಿದೆ.
ನಾಧ್ಯಗಚ್ಛಂ ಯದಾ ತಾಸು ತತೋ ಮೇ ಕಶ್ಮಲೋಽಭವತ್ |
ತತೋ ಮೇ ಕಶ್ಮಲಸ್ಯಾಂತೇ ಮತಿಃ ಪುನರುಪಸ್ಥಿತಾ ॥11॥
ಆ ಮಿಥಿಲಾ ಪಟ್ಟಣದಲ್ಲಿಯೂ ನನ್ನ ಅಧಿಕಾರಕ್ಕೊಳಪಟ್ಟ ಪ್ರದೇಶವು ಸಿಕ್ಕದೆ ಇದ್ದುದರಿಂದ ಪ್ರಜೆಗಳ ಮೇಲಾದರೂ ನನ್ನ ಅಧಿಕಾರವಿದೆಯೇ ಎಂಬುದನ್ನು ಪುನಃ ವಿಚಾರ ಮಾಡಿದೆ. ಪ್ರಜೆಗಳ ಮೇಲೂ ನನ್ನ ಅಧಿಕಾರವಿಲ್ಲ ಎಂದು ತಿಳಿದ ಕೂಡಲೆ ನಾನು ಮೋಹವಶನಾದೆನು. ಬಹಳ ಸಮಯ ವಿಚಾರ ಮಾಡುತ್ತಾ ನನ್ನ ಮೋಹವನ್ನು ಕಳೆದು ಕೊಂಡೆನು. ನನ್ನ ಬುದ್ಧಿಯು ಪುನಃ ಸ್ಥಿಮಿತಕ್ಕೆ ಬಂದಿತು.
ತಯಾ ನ ವಿಷಯಂ ಮನ್ಯೇ ಸರ್ವೋ ವಾ ವಿಷಯೋ ಮಮ |
ಆತ್ಮಾಽಪಿ ಚಾಯಂ ನ ಮಮ ಸರ್ವಾ ವಾ ಪೃಥಿವೀ ಮಮ ॥12॥
ಬುದ್ಧಿಯಿಂದ ವಿಚಾರ ಮಾಡಿದಾಗ ಯಾವ ಪ್ರದೇಶವೂ ನನ್ನದಲ್ಲ ಎಂದು ಅರ್ಥ ಮಾಡಿಕೊಂಡೆ. ಕಾರಣ ಮರಣದ ಸಮಯದಲ್ಲಿ ಯಾವ ರಾಜ್ಯವೂ ನಮ್ಮ ಜೊತೆಗೆ ಬರುವುದಿಲ್ಲ. ಕೇವಲ ದೇಶಗಳಿಗೆ ಹೋಗಿ ಬರುವುದು, ಸಂಚರಿಸುವುದು ಇಷ್ಟು ಮಾತ್ರದಿಂದ ನನ್ನ

ರಾಜ್ಯ ಎಂದು ಹೇಳುವುದಾದರೆ ಸಮಗ್ರ ಭೂಮಂಡಲಕ್ಕೂ ನಾನೇ ರಾಜನಾಗುತ್ತೇನೆ. ಆದ್ದರಿಂದ ದೇಹಕ್ಕೇ ರಾಜನಲ್ಲದ ನಾನು ದೇಶಕ್ಕೆ ಹೇಗೆ ರಾಜನಾಗುತ್ತೇನೆ?
ಯಥಾ ಮಮ ತಥಾಽನ್ಯೇಷಾಮಿತಿ ಮನ್ಯೇ ದ್ವಿಜೋತ್ತಮ |
ಉಷ್ಯತಾಂ ಯಾವದುತ್ಸಾಹಂ ಭುಜ್ಯತಾಂ ಯಾವದಿಷ್ಯತೇ ॥13॥
ಈ ರಾಜ್ಯವು ಇಂದು ನನ್ನ ರಾಜ್ಯ ಎಂದು ಹೇಗೋ ಹಾಗೆ ಇನ್ನೊಂದು ಸಮಯ ಬೇರೆಯವರದ್ದೂ ಆಗಿದೆ. ಆದ್ದರಿಂದ ಬ್ರಾಹ್ಮಣನೇ, ನೀನು ನಿನ್ನ ಕರ್ತವ್ಯ-ಕರ್ಮ ಮುಗಿಯುವ ತನಕವೂ ಎಲ್ಲ ದೇಶಗಳಲ್ಲಿಯೂ ವಾಸ ಮಾಡಬಹುದು. ಎಷ್ಟು ಕಾಲ ಕರ್ಮ ಮಾಡುತ್ತಾ ಇರಬಹುದೋ ಅಷ್ಟು ಕಾಲ ಆ ದೇಶದಲ್ಲಿದ್ದು ಸುಖಭೋಗಗಳನ್ನು ಅನುಭವಿಸು.
ಬ್ರಾಹ್ಮಣಃ
ಪಿತೃಪೈತಾಮಹೇ ರಾಜ್ಯೇ ವಶ್ಯೇ ಜನಪದೇ ಸತಿ |
ಬ್ರೂಹಿ ಕಾಂ ಬುದ್ಧಿಮಾಸ್ಥಾಯ ಮಮತ್ವಂ ವರ್ಜಿತಂ ತ್ವಯಾ ॥14॥
ಬ್ರಾಹ್ಮಣ ಜನಕರಾಜನೇ, ಪಿತೃ-ಪಿತಾಮಹರ ಈ ರಾಜ್ಯದಲ್ಲಿ ಸಮಗ್ರ ದೇಶವೇ ನಿನ್ನ ಅಧೀನದಲ್ಲಿರುವಾಗ ಇಂತಹ ಮಮತ್ವವನ್ನು ಯಾವ ಬುದ್ಧಿಬಲದಿಂದ ತ್ಯಾಗ ಮಾಡಿದೆ ಎಂಬುದನ್ನು ನನಗೆ ಹೇಳು.
ಕಾಲಂ ವೈ ಬುದ್ಧಿಂ ವಿನಿಶ್ಚಿತ್ಯ ಸರ್ವೋ ವೈ ವಿಷಯಸ್ತವ |
ನಾವೈಷಿ ವಿಷಯಂ ಯೇನ ಸರ್ವೋ ವಾ ವಿಷಯಸ್ತವ ॥15॥
ಸಮಗ್ರ ದೇಶವೆಲ್ಲವೂ ನಿನ್ನದೇ ಆಗಿದೆ. ಆದರೂ ಯಾವ ಬುದ್ಧಿಯನ್ನಾಶ್ರಯಿಸಿ ನನಗೆ ರಾಜ್ಯವೆಂಬುದೇ ಇಲ್ಲ ಎಂದು ಹೇಳಿದೆ? ಯಾವ ಬುದ್ಧಿಯನ್ನು ಆಶ್ರಯಿಸಿ ನನ್ನ ರಾಜ್ಯವೂ ಆಗಿದೆ ಎಂದು ಹೇಳಿದೆ.
ಜನಕಃ
ಅಭವಂತ ಇಹಾರಂಭಾಃ ವಿದಿತಾಃ ಸರ್ವಕರ್ಮಸು |
ನಾಧ್ಯಗಚ್ಛಮಹಂ ತಸ್ಮಾನ್ಮಮೇದಮಿತಿ ಯದ್ ಭವೇತ್ ॥16॥
ಜನಕರಾಜ ಈ ಪ್ರಪಂಚದಲ್ಲಿ ಕರ್ಮದಿಂದ ಪ್ರಾಪ್ತವಾಗುವ ಎಲ್ಲ ಕರ್ಮಗಳಲ್ಲಿಯೂ ಕರ್ಮಗಳ ಆರಂಭವನ್ನು ಅರ್ಥಮಾಡಿಕೊಳ್ಳುತ್ತೇವೆಯೇ ವಿನಾ ಅದರ ಕೊನೆಯನ್ನು ಹೇಗೆಂದು ತಿಳಿಯಲಾರೆವು. ಅದರಂತೆ ಈ ಪ್ರಪಂಚ ಯಾರಿಗೆ ಸಂಬಂಧಿಸಿದೆ ಎಂಬುದನ್ನು ಯಾರಿಂದಲೂ ಹೇಳಲಾಗದು ಎಂಬುದಾಗಿ ವೇದ ವಚನವೇ ಇದೆ.
ಕಸ್ಯೇದಮಿತಿ ಕಸ್ಯ ಸ್ವಮಿತಿ ವೇದವಚಃ ಸದಾ |
ನಾಧ್ಯಗಚ್ಛಮಹಂ ಬುದ್ಧ್ಯಾ ಮಮೇದಮಿತಿ ಯದ್ ಭವೇತ್ ॥17॥
ಇದು ಯಾರ ಸ್ವತ್ತು? ಇದು ಯಾರ ಧನ? ಎಂಬ ವೇದವಚನವಿದೆ. ಈ ಕಾರಣದಿಂದ ನಾನು ಬುದ್ಧಿಯಿಂದ ವಿಚಾರಿಸಿದಾಗ ಇದು ನನ್ನದು ಎಂದು ಹೇಳಿಕೊಳ್ಳುವ ಯಾವ ಪದಾರ್ಥವೂ ನನಗೆ ತಿಳಿಯುತ್ತಿಲ್ಲ.
ಏತಾಂ ಬುದ್ಧಿಂ ವಿನಿಶ್ಚಿತ್ಯ ಮಮತ್ವಂ ವರ್ಜಿತಂ ಮಯಾ |
ಶೃಣು ಬುದ್ಧಿಂ ತು ಯಾಂ ಶ್ರುತ್ವಾ ಸರ್ವಸ್ತು ವಿಷಯೋ ಮಮ ॥18॥
ಈ ವಿಧವಾದ ಬುದ್ಧಿಯನ್ನು ಆಶ್ರಯಿಸಿ ನಾನು ಮಮತ್ವವನ್ನು ತ್ಯಾಗ ಮಾಡಿದ್ದೇನೆ. ಇನ್ನು ಯಾವ ಬುದ್ಧಿಯನ್ನು ಆಶ್ರಯಿಸಿ ಎಲ್ಲವೂ ನನ್ನ ದೇಶವೇ ಆಗಿದೆ ಎಂದು ಹೇಳಿದೆನು ಎಂಬುದನ್ನು ಹೇಳುತ್ತೇನೆ, ಕೇಳು.
ನಾಹಮಾತ್ಮಾರ್ಥಮಿಚ್ಛಾಮಿ ಗಂಧಾನ್ ಘ್ರಾಣಗತಾನಪಿ |
ತಸ್ಮಾನ್ಮೇ ನಿರ್ಜಿತಾ ಭೂಮಿರ್ವಶೇ ತಿಷ್ಠತಿ ನಿತ್ಯಶಃ ॥19॥
ನನ್ನ ಘ್ರಾಣೇಂದ್ರಿಯದ ಒಳಗೆ ಪರಿಮಳವು ಹೊಕ್ಕರೂ ಅದನ್ನು ಆತ್ಮಸುಖಕ್ಕಾಗಿ ನಾನು ಆಘ್ರಾಣಿಸುವುದಿಲ್ಲ. ಆದ್ದರಿಂದಲೇ ಗಂಧಕ್ಕೆ ಜನಕವಾದ ಭೂಮಿಯನ್ನು ಜಯಿಸಿದಂತಾಗುತ್ತದೆ. ಆ ಭೂಮಿಯ ಗಂಧದ ವಶಕ್ಕೆ ನಾನು ತುತ್ತಾಗದಿರುವುದರಿಂದ ಭೂಮಿಯ ವಶಕ್ಕೆ ನಾನು ತುತ್ತಾಗಲಿಲ್ಲ, ಭೂಮಿಯೇ ನನ್ನ ವಶದಲ್ಲಿದೆ.
ನಾಹಮಾತ್ಮಾರ್ಥಮಿಚ್ಛಾಮಿ ರಸಾನಾಸ್ಯೇಽಪಿ ವರ್ತತಃ |
ಆಪೋ ಮೇ ನಿರ್ಜಿತಾಸ್ತಸ್ಮಾದ್ ವಶೇ ತಿಷ್ಠಂತಿ ನಿತ್ಯಶಃ ॥20॥
ನನ್ನ ನಾಲಿಗೆಯಲ್ಲಿ ಬಿದ್ದಿರುವ ಪದಾರ್ಥದ ರಸವನ್ನು ನನ್ನ ತೃಪ್ತಿಗಾಗಿ ನಾನು ಆಸ್ವಾದಿಸುವುದಿಲ್ಲ. ಆದ್ದರಿಂದ ರಸದ ಉಗಮಸ್ಥಾನವಾದ ನೀರನ್ನು ನಾನು ಜಯಿಸಿದ್ದೇನೆ. ಅದರ ಅಧೀನಕ್ಕೆ ನಾನು ಒಳಪಡದ ಕಾರಣ ಜಲತತ್ವವು ಯಾವಾಗಲೂ ನನ್ನ ಅಧೀನವಾಗಿದೆ. ಹೀಗೆ ಗಂಧ-ರಸಗಳನ್ನು ನನ್ನ ಭೋಗಕ್ಕೋಸ್ಕರ ನಾನು ಅನುಭವಿಸುವುದಿಲ್ಲ. ಹರಿಯ ಪೂಜಾನಿಮಿತ್ತವಾಗಿಯೇ ಇದನ್ನು ಸ್ವೀಕರಿಸುತ್ತೇನೆ. ಆದ್ದರಿಂದ ಹರಿಯ ಅನುಗ್ರಹದಿಂದ ಎಲ್ಲ ವಿಷಯಗಳು ನನಗೆ ಶ್ರೇಯಸ್ಸನ್ನೇ ಉಂಟು ಮಾಡುತ್ತಿವೆ.
ನಾಹಮಾತ್ಮಾರ್ಥಮಿಚ್ಛಾಮಿ ರೂಪಂ ಜ್ಯೋತಿಶ್ಚ ಚಕ್ಷುಷಃ |
ತಸ್ಮಾನ್ಮೇ ನಿರ್ಜಿತಂ ಜ್ಯೋತಿರ್ವಶೇ ತಿಷ್ಠತಿ ನಿತ್ಯದಾ ॥21॥
ನನ್ನ ಕಣ್ಣುಗಳು ನೋಡುವ ರೂಪಗಳನ್ನು, ಜ್ಯೋತಿಗಳನ್ನು ನನ್ನ ಸುಖಕ್ಕಾಗಿ ನೋಡುವುದಿಲ್ಲ. ಪರಮಾತ್ಮನ ಪ್ರೀತಿಗಾಗಿ ನೋಡುತ್ತೇನೆ. ಆದ್ದರಿಂದಲೇ ಜ್ಯೋತಿಯು ಯಾವಾಗಲೂ ನನ್ನ ವಶವಾಗಿದೆ.
ನಾಹಮಾತ್ಮಾರ್ಥಮಿಚ್ಛಾಮಿ ಸ್ಪರ್ಶಾಂಸ್ತ್ವಚಿ ಗತಾಶ್ಚ ಯೇ |
ತಸ್ಮಾನ್ಮೇ ನಿರ್ಜಿತೋ ವಾಯುರ್ವಶೇ ತಿಷ್ಠತಿ ನಿತ್ಯದಾ ॥22॥
ತ್ವಕ್‌ನಲ್ಲಿ ಸಂಬಂಧ ಹೊಂದಿದ ಎಲ್ಲ ಪದಾರ್ಥಗಳನ್ನು ನಾನು ನನ್ನ ಸುಖಕ್ಕಾಗಿ ಸ್ಪರ್ಶಿಸುವುದಿಲ್ಲ. ಪರಮಾತ್ಮನ ಪ್ರೀತಿಗೋಸ್ಕರ ಮುಟ್ಟುತ್ತೇನೆ. ಆದ್ದರಿಂದ ಸ್ಪರ್ಶಕ್ಕೆ ಉಗಮ ಸ್ಥಾನವಾದ ವಾಯುವು ಯಾವಾಗಲೂ ನನ್ನ ಅಧೀನದಲ್ಲಿದೆ.
ನಾಹಮಾತ್ಮಾರ್ಥಮಿಚ್ಛಾಮಿ ಶಬ್ದಾನ್ ಶ್ರೋತ್ರಗತಾನಪಿ |

ಆಕಾಶಂ ಮೇ ಜಿತಂ ತಸ್ಮಾದ್ ವಶೇ ತಿಷ್ಠತಿ ನಿತ್ಯಶಃ ॥23॥
ನನ್ನ ಕಿವಿಗಳಲ್ಲಿ ಇಂಪಾದ ಶಬ್ದಗಳನ್ನು ನನ್ನ ಸುಖಕ್ಕಾಗಿ ಕೇಳಲು ಬಯಸುವುದಿಲ್ಲ. ಭಗವಂತನ ಪ್ರೀತಿಗೋಸ್ಕರ ಶಬ್ದಗಳನ್ನು ಕೇಳಿಸಿಕೊಳ್ಳುತ್ತೇನೆ. ಆದ್ದರಿಂದ ಶಬ್ದಕ್ಕೆ ಉಗಮ ಸ್ಥಾನವಾದ ಆಕಾಶವು ನನ್ನ ಅಧೀನದಲ್ಲಿದೆ.
ನಾಹಮಾತ್ಮಾರ್ಥಮಿಚ್ಛಾಮಿ ಮನೋ ನಿತ್ಯಂ ಮನೋಂತರೇ |
ಮನೋ ಮೇ ನಿರ್ಜಿತಂ ತಸ್ಮಾದ್ ವಶೇ ತಿಷ್ಠತಿ ನಿತ್ಯಶಃ ॥24॥
ನನ್ನ ಮನಸ್ಸಿನಲ್ಲಿ ಹುಟ್ಟುವ ವಿಷಯಗಳನ್ನು ನನ್ನ ಸುಖಕ್ಕಾಗಿ ನಾನು ಬಯಸುವುದಿಲ್ಲ. ಮನಸ್ಸಿನಲ್ಲಿ ಹುಟ್ಟುವ ಸಂಕಲ್ಪ-ವಿಕಲ್ಪಗಳನ್ನು ಭಗವಂತನಿಗೆ ಸಮರ್ಪಿಸುತ್ತೇನೆ. ಆದ್ದರಿಂದಲೇ ನನ್ನ ಮನಸ್ಸನ್ನು ನಾನು ಜಯಿಸಿದ್ದು, ಮನಸ್ಸು ನನ್ನ ಅಧೀನದಲ್ಲಿ ಯಾವಾಗಲೂ ಇರುತ್ತದೆ.
ದೇವೇಭ್ಯಶ್ಚ ಪಿತೃಭ್ಯಶ್ಚ ಭೂತೇಭ್ಯೋಽತಿಥಿಭಿಃ ಸಹ |
ಭುಕ್ತ್ಯರ್ಥಂ ಸರ್ವ ಏವೇಮೇ ಸಮಾರಂಭಾ ಭವಂತಿ ವೈ ॥25॥
ನನ್ನ ಸಮಸ್ತ ವಿಧವಾದ ಕಾರ್ಯಗಳು ದೇವತೆಗಳ, ಪಿತೃಗಳ, ಭೂತಗಳ, ಅತಿಥಿಗಳ ಅಂತರ್ಯಾಮಿಯಾದ ಭಗವಂತನ ತೃಪ್ತಿಗೋಸ್ಕರವೇ ಆರಂಭವಾಗುತ್ತವೆ.
ಬ್ರಾಹ್ಮಣಃ
ತತಃ ಪ್ರಹಸ್ಯ ಜನಕಂ ಬ್ರಾಹ್ಮಣಃ ಪುನರಬ್ರವೀತ್ |
ತ್ವಜ್ಜಿಜ್ಞಾಸಾರ್ಥಮದ್ಯೇಹ ವಿದ್ಧಿ ಮಾಂ ಧರ್ಮಮಾಗತಮ್ ॥26॥
ತ್ವಮದ್ಯ ಬ್ರಹ್ಮಭಾವಸ್ಯ ಬುದ್ಧಾವಪ್ಯನಿವರ್ತಿನಃ |
ಸತ್ವನೇಮಿನಿರುದ್ಧಸ್ಯ ಚಕ್ರಸ್ಯೈವ ಪ್ರವರ್ತಕಃ ॥27॥
ಬ್ರಾಹ್ಮಣ ಬ್ರಾಹ್ಮಣಿಯೇ, ಜನಕನು ಹೇಳಿದ ಈ ಮಾತುಗಳನ್ನು ಕೇಳಿದ ಕೂಡಲೇ ಬ್ರಾಹ್ಮಣನು ನಸುನಕ್ಕು ಜನಕನಿಗೆ ಪುನಃ ಹೇಳುತ್ತಾನೆ. ಜನಕರಾಜನೇ, ಪರಮಾತ್ಮನ ವಿಷಯದಲ್ಲಿ ನಿನ್ನ ಬುದ್ಧಿಯು ಹೇಗೆ ರತವಾಗಿದೆ ಎಂದು ತಿಳಿದುಕೊಳ್ಳುವ ಅಭಿಪ್ರಾಯದಿಂದ ಆಗಮಿಸಿರುವ ನನ್ನನ್ನು ಯಮಧರ್ಮನೇ ಎಂದು ತಿಳಿ. ಪ್ರಪಂಚದಲ್ಲಿ ಸತ್ವಗುಣವೆಂಬ ನೇಮಿಯಿಂದ ತಡೆಯಲ್ಪಟ್ಟ ದುರ್ಲಭವಾದ ಬ್ರಹ್ಮನಲ್ಲಿ ಸ್ಥಿರವಾದ ಮನಸ್ಸೆಂಬ ಚಕ್ರವನ್ನು ತಿರುಗಿಸುವವನು ನೀನೊಬ್ಬನೇ ಆಗಿದ್ದಿ ಎಂದು ಭಾವಿಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಜನಕ-ಬ್ರಾಹ್ಮಣಸಂವಾದೋ ನಾಮ ತ್ರಯಸ್ತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ನಾಲ್ಕನೆಯ ಅಧ್ಯಾಯ
ಬ್ರಾಹ್ಮಣನು ಬ್ರಾಹ್ಮಣಿಗೆ ತನ್ನ ಮಹಿಮೆಯನ್ನು ತೋರಿಸಿದುದು.
ಬ್ರಾಹ್ಮಣಃ
ನಾಹಂ ತಥಾ ಭೀರು ಚರಾಮಿ ಲೋಕೇ
ಯಥಾ ತ್ವಂ ಮಾಂ ತರ್ಕಯಸೇ ಸ್ವಬುದ್ಧ್ಯಾ |
ವಿಪ್ರೋಽಸ್ಮಿ ಮುಕ್ತೋಽಸ್ಮಿ ವನೇಚರೋಽಸ್ಮಿ
ಗೃಹಸ್ಥಧರ್ಮಾ ಬ್ರಹ್ಮಚಾರೀ ತಥಾಽಸ್ಮಿ ॥1॥
ನಾಹಮಸ್ಮಿ ಯಥಾ ಮಾಂ ತ್ವಮೀಕ್ಷಸೇ ಚಕ್ಷುಷಾ ಶುಭೇ |
ಮಯಾ ವ್ಯಾಪ್ತಮಿದಂ ಸರ್ವಂ ಯತ್ ಕಿಂಚಿಜ್ಜಗತೀಗತಮ್ ॥2॥
ಬ್ರಾಹ್ಮಣ ಭೀರುವೇ, ನೀನು ನನ್ನ ಪತಿಯು ಹೇಗೇಗೋ ಇದ್ದಾನೆಂದು ತಿಳಿದು ನನ್ನನ್ನು ಭಯಪಡಿಸುತ್ತಿರುವೆಯಲ್ಲವೆ? ಆದರೆ ನಾನು ನೀನು ತಿಳಿದಂತೆ ಇಲ್ಲ. ಇತರ ದೇಹಾಭಿಮಾನ ಪಡೆದ ಮನುಷ್ಯರಂತೆ ನನ್ನ ಆಚರಣೆಗಳಿಲ್ಲ. ನೀನು ಎಲ್ಲರಂತೆ ನನ್ನನ್ನು ಪಾಪ-ಪುಣ್ಯಗಳಲ್ಲಿ ಆಸಕ್ತನಾದ ಮನುಷ್ಯನೆಂದು ಭಾವಿಸಿರುವೆ. ಆದರೆ ನಾನು ಯಾವುದೇ ಕರ್ಮಗಳಲ್ಲಿಯೂ ಆಸಕ್ತನಾಗಿರುವುದಿಲ್ಲ. ನಾನು ಬ್ರಾಹ್ಮಣನೂ ಆಗಿದ್ದೇನೆ, ಜೀವನ್ಮುಕ್ತನಾಗಿದ್ದೇನೆ, ಕಾಡಿನಲ್ಲಿ ಸಂಚರಿಸುವ ವಾನಪ್ರಸ್ಥನಾಗಿದ್ದೇನೆ, ಗೃಹಸ್ಥ ಧರ್ಮಗಳನ್ನೂ ಅನುಸರಿಸುವವನಾಗಿದ್ದೇನೆ, ಬ್ರಹ್ಮಜ್ಞಾನಿಯಾಗಿದ್ದೇನೆ, ವ್ರತನಿಷ್ಠನಾಗಿದ್ದೇನೆ, ಭೂತ-ಭವಿಷ್ಯತ್-ವರ್ತಮಾನಗಳಲ್ಲಿ ಬುದ್ಧಿಯುಳ್ಳವನಾಗಿದ್ದೇನೆ.
ಯೇ ಕೇಚಿದಿಹ ವೈ ಲೋಕೇ ಜಂಗಮಾಃ ಸ್ಥಾವರಾಶ್ಚ ಹ |
ತೇಷಾಮಂತರ್ಗತಂ ವಿದ್ಧಿ ದಾರೂಣಾಮಿವ ಪಾವಕಮ್ ॥3॥
ಪ್ರಪಂಚದಲ್ಲಿ ಸ್ಥಾವರ-ಜಂಗಮಗಳನ್ನು ನಾಶಮಾಡುವ ಮೃತ್ಯುದೇವತೆಯಾದ ನಾನು ಕಟ್ಟಿಗೆಗಳನ್ನು ಭಸ್ಮ ಮಾಡುವ ಅಗ್ನಿಯಂತೆ ನಿನ್ನ ಮುಂದೆ ಇದ್ದೇನೆ ಎಂದು ತಿಳಿ.
ರಾಜ್ಯಂ ಪೃಥಿವ್ಯಾಂ ಸರ್ವಸ್ಯಾಮಥವಾ ಯತ್ ತ್ರಿವಿಷ್ಟಪೇ |
ತನ್ಮೇ ಬುದ್ಧಿರಿಯಂ ವೇತ್ತಿ ಬುದ್ಧಿರೇವ ಧನಂ ಮಮ ॥4॥
ಅಖಂಡ ಭೂಮಂಡಲದಲ್ಲಿ ಸ್ವರ್ಗದಲ್ಲಿಯೂ ಯಾವ ರಾಜ್ಯವಿದೆಯೋ ಆ ರಾಜ್ಯವನ್ನು ನನ್ನ ಬುದ್ಧಿಯು ತಿಳಿದಿದೆ. ಆದ್ದರಿಂದ ಬುದ್ಧಿಯೇ ನನ್ನ ಧನವಾಗಿದೆ.

ಏಕಃ ಪಂಥಾ ಬ್ರಾಹ್ಮಣಾನಾಂ ಯೇನ ಗಚ್ಛಂತಿ ತದ್ವಿದಃ |
ಗೃಹೇಷು ವನವಾಸೇಷು ಗುರುವಾಸೇಷು ಭಿಕ್ಷುಷು ॥5॥
ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು ನಾಲ್ಕು ಆಶ್ರಮಗಳಲ್ಲಿ ಯಾವುದನ್ನು ಅನುಸರಿಸಿದರೂ ಅವರಿಗೆ ಜ್ಞಾನವೇ ಮುಖ್ಯಮಾರ್ಗವೆನಿಸಿದೆ. ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ, ಬ್ರಹ್ಮಚರ್ಯ ಎಲ್ಲ ಆಶ್ರಮಗಳು ಜ್ಞಾನಮಾರ್ಗವನ್ನು ತಿಳಿಸುವ ದೃಷ್ಟಿಯಿಂದಲೇ ಪ್ರವೃತ್ತವಾಗಿವೆ.
ಲಿಂಗೈರ್ಬಹುಭಿರವ್ಯಗ್ರೈರೇಕಾ ಬುದ್ಧಿರುಪಾಸ್ಯತೇ |
ನಾನಾಲಿಂಗಾಶ್ರಮಸ್ಥಾನಾಂ ಯೇಷಾಂ ಬುದ್ಧಿಃ ಶಮಾತ್ಮಿಕಾ ॥6॥
ತೇ ಭಾವಮೇಕಮಾಯಾಂತಿ ಸರಿತಃ ಸಾಗರಂ ಯಥಾ ॥7॥
ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಗಳೆಂಬ ಯಾವ ಚಿಹ್ನೆಯನ್ನು ಹೊಂದಿದ್ದರೂ ಬ್ರಹ್ಮಜ್ಞಾನಿಗಳ ಬುದ್ಧಿಯು ಶಮ, ಭಗವನ್ನಿಷ್ಠವಾದ ಬುದ್ಧಿಯಿಂದ ಕೂಡಿರುತ್ತದೆ. ಅವರು ನಾನಾ ವಿಧವಾದ ಚಿಹ್ನೆಗಳನ್ನು ಹೊಂದಿದ್ದರೂ, ಬ್ರಹ್ಮಚರ್ಯಾದಿ ಆಶ್ರಮದಲ್ಲಿದ್ದರೂ ಭಗವತ್ಪ್ರಜ್ಞೆಯಲ್ಲಿಯ ಸಾಧನೆಯಲ್ಲಿ ಸ್ಥಿರತೆಯನ್ನು ಹೊಂದಿರುತ್ತಾರೆ. ನದಿಗಳೆಲ್ಲವೂ ಸಮುದ್ರವನ್ನೇ ಸೇರುವಂತೆ ಯಾವ ಆಶ್ರಮರೂಪವಾಗಿ ಭಗವತ್ಪೂಜಾ ರೂಪವಾಗಿ ಕರ್ಮವನ್ನು ಮಾಡುವವರು ಪರಬ್ರಹ್ಮನನ್ನೇ ಹೊಂದುತ್ತಾರೆ.
ಬುದ್ಧ್ಯಾಽಯಂ ಗಮ್ಯತೇ ಮಾರ್ಗಃ ಶರೀರೇಣ ನ ಗಮ್ಯತೇ |
ಆದ್ಯಂತವಂತಿ ಕರ್ಮಾಣಿ ಶರೀರಂ ಕರ್ಮಬಂಧನಮ್ ॥8॥
ಇಂತಹ ಗಮ್ಯವಾದ ಮುಕ್ತಿಮಾರ್ಗವು ಬುದ್ಧಿಯಿಂದಲೇ ಹೊಂದಬೇಕೇ ವಿನಾ ಶರೀರದಿಂದ ಹೊಂದಲು ಸಾಧ್ಯವಿಲ್ಲ. ಎಲ್ಲ ಕರ್ಮಗಳಿಗೂ ಆದ್ಯಂತಗಳಿದೆ. ಈ ಶರೀರವು ಕರ್ಮಬಂಧನಕ್ಕೆ ತುತ್ತಾಗಿದೆ.
ತಸ್ಮಾನ್ನೇ ಸುಭಗೇ ನಾಸ್ತಿ ಪರಲೋಕಕೃತಂ ಭಯಮ್ |
ಮದ್ಭಾವಭಾವನಿರತಾ ಮಮ್ಯೆವಾತ್ಮಾನಮೇಷ್ಯತಿ ॥9॥
ಸುಭಗೇ, ಆದ್ದರಿಂದ ಕಾಮ-ಕ್ರೋಧಾದಿ ಶತ್ರುಜನರಿಂದ ಉಂಟಾಗಬಹುದಾದ ಯಾವ ಭಯಗಳೂ ನನಗಿರುವುದಿಲ್ಲ. ನನ್ನ ಸ್ವರೂಪವನ್ನು ಧ್ಯಾನ ಮಾಡುವ ನೀನು ನನ್ನನ್ನೇ ಹೊಂದುತ್ತಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ವಿಪ್ರಾಣಾಂ ಸನ್ಮಾರ್ಗಕಥನಂ ನಾಮ ಚತುಃತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಏಕೋನವಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ಬ್ರಾಹ್ಮಣ-ಬ್ರಾಹ್ಮಣಿಶಬ್ದಗಳಿಂದ ನಿರ್ದಿಷ್ಟವಾದ ಬುದ್ಧಿ ಮತ್ತು ಮನಸ್ಸುಗಳ ವಿಚಾರವನ್ನು ಹೇಳಿದುದು.
ಬ್ರಾಹ್ಮಣೀ
ನೇದಮಲ್ಪಾತ್ಮನಾ ಶಕ್ಯಂ ವೇದಿತುಂ ನಾಕೃತಾತ್ಮನಾ |
ಬಹು ಚಾಲ್ಪಂ ಚ ಸಂಕ್ಷಿಪ್ತಂ ವಿಸ್ಮಿತಂ ಚ ಮನೋ ಮಮ ॥1॥
ಬ್ರಾಹ್ಮಣೀ ಪ್ರಿಯನೇ, ನೀನು ಹೇಳಿದ ಬ್ರಹ್ಮಜ್ಞಾನವನ್ನು ಅಜಿತೇಂದ್ರಿಯಳಾದ, ಅಲ್ಪಬುದ್ಧಿಯವಳಾದ ನಾನು ಗ್ರಹಿಸಲು ಅಶಕ್ತಳಾಗಿದ್ದೇನೆ. ಪರಬ್ರಹ್ಮನ ವಿಷಯವಾಗಿ ಬಹಳ ಸಂಕ್ಷಿಪ್ತವಾಗಿ ಹೇಳಿದೆ. ಇದರಿಂದ ನನಗೆ ಮತ್ತೂ ಗೊಂದಲವುಂಟಾಗಿದೆ ಎನಿಸುತ್ತಿದೆ.
ಉಪಾಯಂ ತು ಮಮ ಬ್ರೂಹಿ ಯೇನೈಷಾ ಲಭ್ಯತೇ ಮತಿಃ |
ತನ್ಮನ್ಯೇ ಕಾರಣತಮಂ ಯತ ಏಷಾ ಪ್ರವರ್ತತೇ ॥2॥
ಆದ್ದರಿಂದ ನನ್ನ ಬುದ್ಧಿಯು ನಿನ್ನಂತೆ ಪರಬ್ರಹ್ಮನ ವಿಷಯದಲ್ಲಿ ಏಕಾಗ್ರತೆಯನ್ನು ಹೊಂದಲು ಯಾವುದಾದರೂ ಒಂದು ಉಪಾಯವನ್ನು ತಿಳಿಸು. ನನಗೆ ಬೇಕಾದ ಉಪಾಯವನ್ನು ನೀನು ಹೇಳಬಹುದೆಂದು ನನಗೆ ವಿಶ್ವಾಸವಿದೆ.
ಬ್ರಾಹ್ಮಣಃ
ಅರಣೀಂ ಬ್ರಾಹ್ಮಣೀ ವಿದ್ಧಿ ಗುರುರಸ್ಯೋತ್ತರಾರಣಿಃ |
ತಪಃ ಶ್ರುತೇಽಥ ಮಥಿತೇ ಜ್ಞಾನಾಗ್ನಿರ್ಜಾಯತೇ ತತಃ ॥3॥
ಬ್ರಾಹ್ಮಣ ಸುಭಗೇ, ನೀನು ನಿನ್ನ ಬುದ್ಧಿಯನ್ನು ಕೆಳಗಿನ ಅರಣಿ ಎಂದು ಭಾವಿಸು. ಅರ್ಥಾತ್ ನನ್ನ ಬಳಿ ಶಿಷ್ಯತ್ವವನ್ನು ವಹಿಸು. ನನ್ನನ್ನು ಮೇಲಿನ ಅರಣಿಯನ್ನಾಗಿ ಭಾವಿಸು. ಅಗ್ನಿ ಉತ್ಪತ್ತಿಯಾಗಬೇಕಾದಲ್ಲಿ ಎರಡು ಅರಣಿಗಳು ಹೇಗೆ ಬೇಕೋ, ಇದರಂತೆ ಗುರು-ಶಿಷ್ಯರೆಂಬ ಅರಣಿಗಳಿಂದ ಮಥಿಸಲ್ಪಟ್ಟಾಗ ತಪಸ್ಸು, ವೇದಾಂತ ಪಠನ, ಮನನಗಳ ಮೂಲಕವಾಗಿ ಶಿಷ್ಯನ ಬುದ್ಧಿ ಎಂಬ ಅರಣಿಯನ್ನು ಗುರುವು ತನ್ನ ಬುದ್ಧಿ ಎಂಬ ಅರಣಿಯಿಂದ ಮಥನ ಮಾಡಿದರೆ ಬ್ರಹ್ಮಜ್ಞಾನವೆಂಬ ಅಗ್ನಿಯು ಹುಟ್ಟುತ್ತದೆ.
ಬ್ರಾಹ್ಮಣೀ
ಯದಿದಂ ಬ್ರಹ್ಮಣೋ ಲಿಂಗಂ ಕ್ಷೇತ್ರಜ್ಞ ಇತಿ ಸಂಜ್ಞಿತಮ್ |
ಗ್ರಹೀತುಂ ಯೇನ ತಚ್ಛಕ್ಯಂ ಲಕ್ಷಣಂ ತಸ್ಯ ತದ್ವದ ॥4॥
ಬ್ರಾಹ್ಮಣೀ ಗುಣಪರಿಪೂರ್ಣನಾದ ಪರಬ್ರಹ್ಮನ ಗುರುತನ್ನು ಕ್ಷೇತ್ರಜ್ಞ ಎಂಬ ಹೆಸರಿನಿಂದ ಹೇಳಲಾಗುತ್ತಿದೆ. ಅದನ್ನು ಯಾವ

ಲಕ್ಷಣದಿಂದ ಗ್ರಹಿಸಬೇಕು? ಹೇಗೆ ಅದನ್ನು ತಿಳಿಯಲು ಸಾಧ್ಯವಾಗುತ್ತದೆ ಎಂಬುದನ್ನು ಹೇಳು.
ಬ್ರಾಹ್ಮಣಃ
ಅಲಿಂಗೋ ನಿರ್ಗುಣಶ್ಚೈವ ಕಾರಣಂ ನಾಸ್ಯ ವಿದ್ಯತೇ |
ಉಪಾಯಂ ತು ಪ್ರವಕ್ಷ್ಯಾಮಿ ಯೇನ ಗೃಹ್ಯೇತ ಮಾನವಃ ॥5॥
ಬ್ರಾಹ್ಮಣ ಈ ಗುಣಪರಿಪೂರ್ಣನಾದ ಬ್ರಹ್ಮನಿಗೆ ನಿರ್ದಿಷ್ಟವಾದ ಹೇತುವೆಂಬುದು ಇರುವುದಿಲ್ಲ. ಪ್ರಾಕೃತ ಗುಣರಹಿತನಾದ ಕಾರಣದಿಂದ ಈ ಮಾಂಸದ ಕಣ್ಣಿನಿಂದಲೂ ಅವನನ್ನು ತಿಳಿಯಲು ಸಾಧ್ಯವಿಲ್ಲ. ಇದಕ್ಕೆ ನಾನೊಂದು ಉಪಾಯವನ್ನು ಹೇಳುತ್ತೇನೆ. ಈ ಉಪಾಯದಿಂದ ಮಾನವನು ಅವನನ್ನು ಗ್ರಹಿಸಬಹುದು.
ಸಮ್ಯಗಪ್ಯುಪದಿಷ್ಟಸ್ಯ ಅಮೃತಸ್ಯೇವ ತೃಪ್ಯಸೇ |
ಕರ್ಮಭುಗ್ ಬುದ್ಧಿಪೂರ್ವಃ ಸ್ಯಾತ್ ಜ್ಞಾನಲಿಂಗೈರಧಿಷ್ಠಿತಃ ॥6॥
ದುಂಬಿಗಳು ವಾಸನೆಯಿಂದ ಪುಷ್ಪರಸವಿದೆ ಎಂದು ತಿಳಿಯುವಂತೆ ಬ್ರಹ್ಮನ ಸ್ವರೂಪವನ್ನು ಗುರುಗಳ ಉಪದೇಶದಿಂದ, ಸಂಸ್ಕಾರಗಳಿಂದ ತಿಳಿಯಬಹುದು. ಕರ್ಮಗಳನ್ನೇ ಭೋಗಿಸುವಂತಹ ವ್ಯಕ್ತಿಯು ಜ್ಞಾನದ ಚಿಹ್ನೆಗಳನ್ನು ಅಳವಡಿಸಿಕೊಂಡಲ್ಲಿ ಕ್ಷೇತ್ರಜ್ಞನಾದ ಬ್ರಹ್ಮನನ್ನು ತಿಳಿಯಬಹುದು.
ಇದಂ ಕಾರ್ಯಮಿದಂ ನೇತಿ ನ ಮೋಕ್ಷೇಷೂಪದಿಶ್ಯತೇ |
ಪಶ್ಯತಃ ಶೃಣ್ವತೋ ಬುದ್ಧಿಃ ಆತ್ಮನ್ಯೇವೋಪಜಾಯತೇ ॥7॥
ಮೋಕ್ಷಸಾಧನದ ಉಪಾಯಗಳಲ್ಲಿ ಇದನ್ನು ಮಾಡಬೇಕು, ಇದನ್ನು ಮಾಡಬಾರದು ಎಂದು ವಿಧಿ-ನಿಷೇಧಗಳನ್ನು ಹೇರುವುದಿಲ್ಲ. ಕಾರಣ ಪರಮಾತ್ಮನ ವಿಷಯದಲ್ಲಿ ನಿರಂತರ ಶ್ರವಣವನ್ನು ಮಾಡುತ್ತಿದ್ದರೆ ಬುದ್ಧಿಯು ಪರಮಾತ್ಮನಲ್ಲಿಯೇ ರತವಾಗಿರುತ್ತದೆ.
ಯಾವಂತ ಇವ ಶಕ್ಯೇರನ್ ತಾವತೋಂಶಾನ್ ಪ್ರಕಲ್ಪಯೇತ್ |
ವ್ಯಕ್ತಾನವ್ಯಕ್ತರೂಪಾಂಶ್ಚ ಶತಶೋಽಥ ಸಹಸ್ರಶಃ ॥8॥
ಬುದ್ಧಿಯನ್ನು ಪರಬ್ರಹ್ಮನ ವಿಷಯದಲ್ಲಿ ಎಷ್ಟು ಸಾಧ್ಯವೋ ಅಷ್ಟು ವ್ಯಯಿಸಬೇಕು. ಭಗವಂತನ ಪ್ರಕಟವಾದ ಅನೇಕ ರೂಪ, ಪ್ರಕಟವಾಗದೆ ಇರುವ ಸಾವಿರಾರು ರೂಪಗಳನ್ನು ಬುದ್ಧಿಯಿಂದ ಮನನ ಮಾಡಬೇಕು.
ಸರ್ವಾನುಮಾನಯುಕ್ತಾಂಶ್ಚ ಸರ್ವಾನ್ ಪ್ರತ್ಯಕ್ಷಹೇತುಕಾನ್ ॥9॥
ಯತಃ ಪರಂ ನ ವಿದ್ಯೇತ ತರ್ಹ್ಯಾಕಾಶಂ ಭವಿಷ್ಯತಿ ॥10॥
ಎಲ್ಲ ಯುಕ್ತಿಗಳನ್ನು, ಎಲ್ಲ ವಿಧವಾದ ಪ್ರತ್ಯಕ್ಷಗಳನ್ನು ಪರಬ್ರಹ್ಮನ ಜ್ಞಾನಕ್ಕೆ ಉಪಯೋಗಿಸಿಕೊಳ್ಳಬೇಕು. ನೂರಾರು ಯುಕ್ತಿ-ಪ್ರತ್ಯಕ್ಷಗಳು ತಲೆಯಲ್ಲಿದ್ದರೂ ಪರಬ್ರಹ್ಮನನ್ನು ತಿಳಿಯದಿದ್ದರೆ ಅದನ್ನು ಆಕಾಶದಂತೆ ಬರಿದಾದ ಬುದ್ಧಿ ಎಂದೇ ಹೇಳುತ್ತಾರೆ.
ಶ್ರೀಭಗವಾನ್
ತತಸ್ತು ತಸ್ಯಾ ಬ್ರಾಹ್ಮಣ್ಯಾ ಮತಿಃ ಕ್ಷೇತ್ರಜ್ಞಸಂಶಯೇ |
ಕ್ಷೇತ್ರಜ್ಞಾದೇವ ಪರತಃ ಕ್ಷೇತ್ರಜ್ಞೋಽನ್ಯಃ ಪ್ರವರ್ತತೇ ॥11॥
ಶ್ರೀಭಗವಾನ್ ಬ್ರಾಹ್ಮಣನು ಹೀಗೆ ಹೇಳಿದ ನಂತರ ಬ್ರಾಹ್ಮಣಿಯು ಕ್ಷೇತ್ರಜ್ಞನಾದ ಪರಮಾತ್ಮನಲ್ಲಿ ತನ್ನ ಬುದ್ಧಿಯನ್ನು ನೆಲೆಗೊಳಿಸಿದಳು. ನಂತರ ಆ ಕ್ಷೇತ್ರಜ್ಞನಾದ ಪರಮಾತ್ಮನಿಂದಲೇ ತಾನು ನಿಯಮ್ಯಳು ಎಂಬ ನಿಶ್ಚಯವು ಉಂಟಾಯಿತು.
ಅರ್ಜುನಃ
ಕ್ವ ನು ಸಾ ಬ್ರಾಹ್ಮಣೀ ಕೃಷ್ಣ ಕ್ವ ಚಾಸೌ ಬ್ರಾಹ್ಮಣರ್ಷಭಃ |
ಯಥಾ ಸಿದ್ಧಿರಿಯಂ ಪ್ರಾಪ್ತಾ ತಾವುಭೌ ವದ ಮೇಽಚ್ಯುತ ॥12॥
ಅರ್ಜುನ ಕೃಷ್ಣನೇ, ಪರಬ್ರಹ್ಮನಲ್ಲಿ ಸಿದ್ಧಿಯನ್ನು ಪಡೆದ ದಂಪತಿಗಳಲ್ಲಿ ಬ್ರಾಹ್ಮಣಿ ಯಾರು? ಬ್ರಾಹ್ಮಣ ಯಾರು? ಅವರ ಪರಿಚಯವನ್ನು ಹೇಳು.
ಶ್ರೀಭಗವಾನ್
ಮನೋ ಮೇ ಬ್ರಾಹ್ಮಣಂ ವಿದ್ಧಿ ಬುದ್ಧಿಂ ಮೇ ಬ್ರಾಹ್ಮಣೀಮಥ |
ಕ್ಷೇತ್ರಜ್ಞ ಇತಿ ಯಶ್ಚೋಕ್ತಃ ಸೋಽಹಮೇವ ಧನಂಜಯ ॥13॥
ಶ್ರೀಭಗವಾನ್ ಧನಂಜಯನೇ, ನನ್ನ ಮನಸ್ಸೇ ಬ್ರಾಹ್ಮಣ, ನನ್ನ ಬುದ್ಧಿಯೇ ಬ್ರಾಹ್ಮಣಿ. ಕ್ಷೇತ್ರಜ್ಞನೆಂದು ಹೇಳಲ್ಪಟ್ಟಿರುವವನು ನಾನೇ ಆಗಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ತತ್ವರಹಸ್ಯಕಥನಂ ನಾಮ ಪಂಚತ್ರಿಂಶೋಽಧ್ಯಾಯಃ॥
॥ ಅನುಗೀತಾಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತಾರನೆಯ ಅಧ್ಯಾಯ
ಕೃಷ್ಣನು ಅರ್ಜುನನಿಗೆ ಪರಬ್ರಹ್ಮಸ್ವರೂಪವನ್ನು ಹೊಂದಲು
ಯೋಗ್ಯವಾದ, ಸಾಧನೆಯನ್ನು ಪ್ರತಿಪಾದನೆ ಮಾಡುವ
ಗುರು-ಶಿಷ್ಯರ ಸಂವಾದವನ್ನು ಉಪದೇಶಿಸುತ್ತಾನೆ.
ಅರ್ಜುನಃ

ಬ್ರಹ್ಮ ಯತ್ ಪರಮಂ ವೇದ್ಯಂ ತನ್ಮೇ ವ್ಯಾಖ್ಯಾತುಮರ್ಹಸಿ |
ಭವತೋ ಹಿ ಪ್ರಸಾದೇನ ಸುಸೂಕ್ಷ್ಮೇ ರಮತೇ ಮತಿಃ ||1||
ಅರ್ಜುನ ಗುಣಪರಿಪೂರ್ಣನಾದ, ಸರ್ವೋತ್ಕೃಷ್ಟನಾದ, ಸಾಧಕರು ತಿಳಿಯಲು ಯೋಗ್ಯವಾದ ಪರಬ್ರಹ್ಮ ಸ್ವರೂಪವನ್ನು ತಿಳಿಯಬೇಕೆಂದು ನನ್ನ ಬುದ್ಧಿಯು ಆಸಕ್ತವಾಗಿದೆ. ಆದ್ದರಿಂದ ಆ ಪರಬ್ರಹ್ಮ ಸ್ವರೂಪವನ್ನು ಹೇಳುವ ಕೃಪೆ ತೋರು.
ಶ್ರೀಭಗವಾನ್
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಸಂವಾದಂ ಮೋಕ್ಷಸಂಯುಕ್ತಂ ಶಿಷ್ಯಸ್ಯ ಗುರುಣಾ ಸಹ ||2||
ಶ್ರೀಭಗವಾನ್ ಅರ್ಜುನನೇ, ಈ ವಿಷಯದಲ್ಲಿ ಗುರು-ಶಿಷ್ಯರಿಗೆ ನಡೆದ ಮೋಕ್ಷ ವಿಷಯಕ ಸಂವಾದವು ಹಿಂದೆ ನಡೆದಿದೆ. ಈ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಕಂಚಿದ್ ಬ್ರಾಹ್ಮಣಮಾಸೀನಮಾಚಾರ್ಯಂ ಸಂಶಿತವ್ರತಮ್ |
ಶಿಷ್ಯಃ ಪಪ್ರಚ್ಛ ಮೇಧಾವೀ ಕಿಂಸ್ವಿಚ್ಛ್ರೇಯಃ ಪರಂತಪ ||3||
ಶತ್ರುಸಂತಾಪಕನೇ, ಮೇಧಾವಿಯಾದ ಒಬ್ಬ ಶಿಷ್ಯನು ಸುಖಾಸನದಲ್ಲಿ ಕುಳಿತಿದ್ದ, ನಿಯಮನಿಷ್ಠನಾದ, ಆಚಾರ್ಯನಾದ ಬ್ರಾಹ್ಮಣನನ್ನು ಪ್ರಶ್ನಿಸಿದನು.
ಭಗವಂತಂ ಪ್ರಪನ್ನೋಽಹಂ ನಿಃಶ್ರೇಯಸಪರಾಯಣಃ |
ಯಾಚೇ ತ್ವಾಂ ಶಿರಸಾ ವಿಪ್ರ ಯದ್ ಬ್ರೂಯಾಂ ತದ್ ವಿಚಕ್ಷ್ವ ಮೇ ||
ಪೂಜ್ಯರೇ, ಶಾಶ್ವತವಾದ ಮೋಕ್ಷಸುಖದಲ್ಲಿಯೇ ಆಸಕ್ತಿಯನ್ನು ಹೊಂದಿದ ನಾನು ಅದರ ಬಗ್ಗೆ ತಿಳಿದುಕೊಳ್ಳಲು ನಿಮ್ಮ ಬಳಿ ಬಂದಿದ್ದೇನೆ. ತಲೆಬಾಗಿ ನಮಸ್ಕರಿಸುತ್ತಾ ಬೇಡಿಕೊಳ್ಳುತ್ತೇನೆ. ಶ್ರೇಯಸ್ಸಿನ ಬಗ್ಗೆ ತಿಳಿಸಿರಿ.
ಶ್ರೀಭಗವಾನ್
ತಮೇವಂವಾದಿನಂ ಪಾರ್ಥ ಶಿಷ್ಯಂ ಗುರುರುವಾಚ ಹ ||5||
ಶ್ರೀಭಗವಾನ್ ಅರ್ಜುನ, ಹೀಗೆ ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಂಡ ಶಿಷ್ಯನಿಗೆ ಗುರುವು ಹೇಳುತ್ತಾನೆ.
ಗುರುಃ
ಕಥಯಸ್ವ ಪ್ರವಕ್ಷ್ಯಾಮಿ ಯತ್ರ ತೇ ಸಂಶಯೋ ದ್ವಿಜ ||6||
ಗುರು ಬ್ರಾಹ್ಮಣನೇ, ನಿನಗೆ ಯಾವ ವಿಷಯದಲ್ಲಿ ಸಂಶಯವಿದೆ, ಹೇಳು. ಪರಿಹರಿಸುತ್ತೇನೆ.
ಶ್ರೀಭಗವಾನ್
ಇತ್ಯುಕ್ತಃ ಸ ಕುರುಶ್ರೇಷ್ಠ ಗುರುಣಾ ಗುರುವತ್ಸಲಃ |
ಪ್ರಾಂಜಲಿಃ ಪರಿಪಪ್ರಚ್ಛ ಯತ್ ತಚ್ಛೃಣು ಮಹಾಮತೇ ||7||
ಶ್ರೀಭಗವಾನ್ ಮಹಾಮತಿಯೇ, ಕುರುಶ್ರೇಷ್ಠನೇ, ಗುರುಪ್ರಿಯನಾದ ಆ ಶಿಷ್ಯನಿಗೆ ಗುರುವು ಹೀಗೆ ಹೇಳಿದಾಗ, ಆ ಶಿಷ್ಯನು ಕರಮುಗಿದು ಯಾವ ಪ್ರಶ್ನೆಗಳನ್ನು ಕೇಳಿದನೆಂದು ಹೇಳುತ್ತೇನೆ, ಕೇಳು.
ಶಿಷ್ಯಃ
ಕುತಶ್ಚಾಹಂ ಕುತಶ್ಚ ತ್ವಂ ತತ್ ಸರ್ವಂ ಬ್ರೂಹಿ ಯತ್ ಪರಮ್ |
ಕುತೋ ಜಾತಾನಿ ಭೂತಾನಿ ಚರಾಣಿ ಸ್ಥಾವರಾಣಿ ಚ ||8||
ಶಿಷ್ಯ ವಿಪ್ರಶ್ರೇಷ್ಠರೇ, ನಾನು ಎಲ್ಲಿಂದ ಬಂದೆ? ನೀವು ಎಲ್ಲಿಂದ ಬಂದಿರುವಿರಿ? ಜಗತ್ತಿನ ಎಲ್ಲ ಚರಾಚರ ಪ್ರಾಣಿಗಳು ಯಾರಿಂದ ಹುಟ್ಟನ್ನು ಪಡೆದಿವೆ? ಪರಮ ತತ್ತ್ವವು ಯಾವುದು? ಇದನ್ನು ಯಥಾವತ್ತಾಗಿ ಹೇಳಿರಿ.
ಕೇನ ಜೀವಂತಿ ಜಾತಾನಿ ತೇಷಾಮಾಯುಃ ಕಿಮಾತ್ಮಕಮ್ |
ಕಿಂ ಸತ್ಯಂ ಕಿಂ ತಪೋ ವಿಪ್ರ ಕೇ ಗುಣಾಃ ಸದ್ಭಿರೀರಿತಾಃ ||9||
ಪ್ರಾಣಿಗಳು ಯಾರನ್ನಾಶ್ರಯಿಸಿಕೊಂಡು ಜೀವಿಸುತ್ತಿವೆ? ಅವುಗಳ ಆಯುಸ್ಸು ಎಷ್ಟು? ಸತ್ಯ ಮತ್ತು ತಪಸ್ಸೆಂದರೇನು? ಸತ್ಪುರುಷರನ್ನು ಪ್ರಶಂಸಿಸುವ ಗುಣಗಳು ಯಾವುವು?
ಕೇ ಪಂಥಾನಃ ಶಿವಾಃ ಸಂತಿ ಸುಕೃತಂ ಕಿಂ ಚ ದುಷ್ಕೃತಮ್ ||10||
ಏತಾನ್ ಮೇ ಭಗವನ್ ಪ್ರಶ್ನಾನ್ ಯಾಥಾತಥ್ಯೇನ ಸತ್ತಮ |
ವಕ್ತುಮರ್ಹಸಿ ವಿಪ್ರರ್ಷೇ ಯಥಾವದಿಹ ತತ್ತ್ವತಃ ||11||
ಮಂಗಳಕರವಾದ ಮಾರ್ಗಗಳು ಯಾವುವು? ಸುಖ ಎಂದರೇನು? ಪಾಪ ಎಂದರೇನು? ವ್ರತನಿಷ್ಠರಾದ ವಿಪ್ರರ್ಷಿಗಳೇ, ಪೂಜ್ಯರೇ, ಈ ಪ್ರಶ್ನೆಗಳಿಗೆ ಯಥಾವತ್ತಾಗಿ ಉತ್ತರವನ್ನು ಹೇಳುವ ಕೃಪೆ ತೋರಿ.
ಶ್ರೀಭಗವಾನ್
ತಸ್ಮೈ ಸಂಪ್ರತಿಪನ್ನಾಯ ಯಥಾವತ್ ಪರಿಪೃಚ್ಛತೇ |
ಶಿಷ್ಯಾಯ ಗುಣಯುಕ್ತಾಯ ಶಾಂತಾಯ ಪ್ರಿಯವರ್ತಿನೇ ||12||
ಛಾಯಾಭೂತಾಯ ದಾಂತಾಯ ಯತಯೇ ಬ್ರಹ್ಮಚಾರಿಣೇ |
ತಾನ್ ಪ್ರಶ್ನಾನಬ್ರವೀತ್ ಪಾರ್ಥ ಮೇಧಾವೀ ಸುದೃಢವ್ರತಃ ||13||
ಗುರುಃ ಕುರುಕುಲಶ್ರೇಷ್ಠ ಸಮ್ಯಕ್ ಸರ್ವಾನಶೇಷತಃ ||14||
ಶ್ರೀಭಗವಾನ್ ಕುರುಕುಲಶ್ರೇಷ್ಠನೇ, ಶತ್ರುನಿಗ್ರಹ ಸಮರ್ಥನೇ, ಅರ್ಜುನನೇ, ಅತ್ಯಂತ ವಿನೀತನಾಗಿ, ಉಚಿತವಾದ ಪ್ರಶ್ನೆಗಳನ್ನು ಕೇಳಿದ ಗುಣವಂತನೂ, ಶಾಂತನೂ, ಗುರುವಿನ ಆಜ್ಞೆಯ ಪರಿಪಾಲಕನೂ ಆಗಿರುವ, ಗುರುವಿಗೆ ಪ್ರಿಯವಾದ ರೀತಿಯಲ್ಲಿ ವರ್ತಿಸುವ,

ಜಿತೇಂದ್ರಿಯನೂ, ಪ್ರಯತ್ನಶೀಲನೂ, ಬ್ರಹ್ಮಚಾರಿಯೂ, ಮೇಧಾವಿಯೂ ಆದ ಶಿಷ್ಯನಿಗೆ ವ್ರತನಿಷ್ಠನಾದ ಗುರುವು ಸಮಂಜಸವಾದ ಉತ್ತರವನ್ನು ಹೀಗೆ ಹೇಳಿದನು.
ಗುರುಃ
ಬ್ರಹ್ಮಪ್ರೋಕ್ತಮಿದಂ ಧರ್ಮಮೃಷಿಪ್ರವರಸೇವಿತಮ್ |
ವೇದವಿದ್ಯಾಸಮಾವಾಪ್ತಂ ತತ್ತ್ವಭೂತಾರ್ಥಭಾವನಮ್ ॥15॥
ಗುರು ವೇದೋಕ್ತವಾದ ಧರ್ಮವು ಇದು. ಋಷಿಗಳು ಸೇವಿಸಿದ ಧರ್ಮವು ಇದು. ಗುಣಪರಿಪೂರ್ಣನಾದ ಬ್ರಹ್ಮನ ಉಪದೇಶವು ಇದು. ಋಷಿಶ್ರೇಷ್ಠರೆಲ್ಲರೂ ಆ ಬ್ರಹ್ಮತತ್ತ್ವವನ್ನೇ ಆಶ್ರಯಿಸಿದ್ದಾರೆ.
ಭೂತಭವ್ಯಭವಿಷ್ಯಾದಿಧರ್ಮಕಾಮಾರ್ಥನಿಶ್ಚಯಮ್ |
ಸಿದ್ಧಸಂಘಪರಿಜ್ಞಾತಂ ಪುರಾಕಲ್ಪಂ ಸನಾತನಮ್ ॥16॥
ಪ್ರವಕ್ಷ್ಯಾಮಿ ಮಹಾಪ್ರಾಜ್ಞ ಪರಮುತ್ತಮಮದ್ಯ ತೇ |
ಬುದ್ಧ್ವಾ ಯದಿಹ ಸಂಸಿದ್ಧಾ ಭವಂತೀಹ ಮನೀಷಿಣಃ ॥17॥
ಮಹಾಪ್ರಾಜ್ಞನೇ, ಯಾವುದು ಭೂತ-ಭವಿಷ್ಯತ್-ವರ್ತಮಾನಗಳಿಗೆ ಸೇರಿದ, ಧರ್ಮಾರ್ಥ-ಕಾಮಗಳ ನಿಶ್ಚಯವನ್ನು ಹುಟ್ಟಿಸುವ, ಸಿದ್ಧರ ಸಮುದಾಯದಿಂದ ತಿಳಿದು ಬಂದಿರುವ ಶ್ರೇಷ್ಠವೂ, ಸನಾತನವೂ ಆದ ಧರ್ಮವನ್ನು ನಿನಗೆ ಹೇಳುತ್ತೇನೆ. ಈ ಧರ್ಮವನ್ನು ನಿನ್ನಿಂದ ಕೇಳಿಸಿಕೊಂಡವರು ವಿದ್ವಾಂಸರೂ, ಸಿದ್ಧಿಯನ್ನು ಹೊಂದುವವರೇ ಆಗುತ್ತಾರೆ.
ಉಪಾಗಮ್ಯರ್ಷಯಃ ಪೂರ್ವಂ ಜಿಜ್ಞಾಸಂತಃ ಪರಸ್ಪರಮ್ ॥18॥
ಬೃಹಸ್ಪತಿರ್ಭರದ್ವಾಜೋ ಗೌತಮೋ ಭಾರ್ಗವಸ್ತಥಾ |
ವಸಿಷ್ಠಃ ಕಶ್ಯಪಶ್ಚೈವ ವಿಶ್ವಾಮಿತ್ರೋಽತ್ರಿರೇವ ಚ ॥19॥
ಮಾರ್ಗಾನ್ ಸರ್ವಾನ್ ಪರಿಕ್ರಮ್ಯ ಪರಿಶ್ರಾಂತಾಃ ಸ್ವಕರ್ಮಭಿಃ ॥20॥
ಹಿಂದೆ ಸಮಸ್ತ ಋಷಿಗಳು ಈ ಧರ್ಮಗಳ ಬಗ್ಗೆಯೇ ಪರಸ್ಪರ ಜಿಜ್ಞಾಸೆಯನ್ನು ಮಾಡಿದರು. ಬೃಹಸ್ಪತಿ, ಭರದ್ವಾಜ, ಗೌತಮ, ಭೃಗುವಿನ ಮಗನಾದ ಶುಕ್ರ, ವಸಿಷ್ಠ, ಕಶ್ಯಪ, ವಿಶ್ವಾಮಿತ್ರ, ಅತ್ರಿ - ಇವರೆಲ್ಲ ತಮ್ಮ ಕರ್ಮಗಳ ಮೂಲಕ ಸಮಸ್ತ ಮಾರ್ಗಗಳನ್ನೂ ಸುತ್ತುತ್ತಾ ಬಹಳವಾಗಿ ಆಯಾಸಗೊಂಡರು.
ಋಷಿಮಾಂಗಿರಸಂ ವೃದ್ಧಂ ಪುರಸ್ಕೃತ್ಯ ತು ತೇ ದ್ವಿಜಾಃ |
ದದೃಶುರ್ಬ್ರಹ್ಮಭವನೇ ಬ್ರಹ್ಮಾಣಂ ವೀತಕಲ್ಮಷಮ್ ॥21॥
ನಂತರ ಅವರೆಲ್ಲರೂ ನಿರ್ಣಯಕ್ಕೆ ಬರಲಾಗದೆ, ವೃದ್ಧನಾದ ಆಂಗಿರಸ ಮುನಿಯನ್ನು ಮುಂದೆ ಮಾಡಿಕೊಂಡು, ಬ್ರಹ್ಮನ ಲೋಕಕ್ಕೆ ಸಾಗಿ ದೋಷದೂರನಾದ ಬ್ರಹ್ಮನನ್ನು ಸಂದರ್ಶಿಸಿದರು.
ತಂ ಪ್ರಣಮ್ಯ ಮಹಾತ್ಮಾನಂ ಸುಖಾಸೀನಂ ಮಹರ್ಷಯಃ |
ಪಪ್ರಚ್ಛುರ್ವಿನಯೋಪೇತಾ ನೈಃಶ್ರೇಯಸಮಿದಂ ಪರಮ್ ॥22॥
ಸುಖಾಸನದಲ್ಲಿ ಮಂಡಿಸಿದ ಮಹಾತ್ಮನಾದ ಬ್ರಹ್ಮನಿಗೆ ಮಹರ್ಷಿಗಳೆಲ್ಲರೂ ವಿನಯ ಪೂರ್ವಕವಾಗಿ ನಮಸ್ಕರಿಸಿ,
ಕಲ್ಯಾಣಸಾಧನವಾದ ಪ್ರಶ್ನೆಯನ್ನು ಕೇಳಿದರು.
ಋಷಯಃ
ಕಥಂ ಕರ್ಮ ಕೃತಂ ಸಾಧು ಕಥಂ ಮುಚ್ಯೇತ ಕಿಲ್ಬಿಷಾತ್ |
ಕೇ ನೋ ಮಾರ್ಗಾಃ ಶಿವಾಶ್ಚ ಸ್ಯುಃ ಕಿಂ ಸತ್ಯಂ ಕಿಂ ಚ ದುಷ್ಕೃತಮ್ ॥
ಋಷಿಗಳು ಪಿತಾಮಹರೇ, ಯಾವ ಕರ್ಮ ಮಾಡಿದಲ್ಲಿ ಒಳ್ಳೆಯದಾಗುತ್ತದೆ? ಪಾಪಗಳಿಂದ ಬಿಡುಗಡೆಯನ್ನು ಹೊಂದುವ ಕರ್ಮ ಯಾವುದು? ಯಾವ ಮಾರ್ಗದಿಂದ ನಮಗೆ ಕಲ್ಯಾಣವಾಗುತ್ತದೆ? ಸತ್ಯವೆಂದರೇನು? ಪಾಪವೆಂದರೇನು?
ಕೌ ವೇಮೌ ಕರ್ಮಪಂಥಾನೌ ಮಹತ್ತ್ವಂ ಕೇನ ವಿಂದತಿ |
ನಿರಯಂ ಚಾಪವರ್ಗಂ ಚ ಭೂತಾನಾಂ ಪ್ರಭವಾಪ್ಯಯೌ ॥24॥
ಕರ್ಮಗಳ ಎರಡು ಮಾರ್ಗಗಳು ಯಾವುವು? ಯಾವ ಮಾರ್ಗದಲ್ಲಿ ಮಹತ್ವವನ್ನು ಹೊಂದುತ್ತಾನೆ? ಮೋಕ್ಷ ಎಂದರೇನು? ನಿರಯ ಎಂದರೇನು? ಪ್ರಾಣಿಗಳ ಹುಟ್ಟು- ಸಾವುಗಳು ಹೇಗೆ ಉಂಟಾಗುತ್ತವೆ?
ಗುರುಃ
ಇತ್ಯುಕ್ತಃ ಸ ಮುನಿಶ್ರೇಷ್ಠೈರ್ಯದಾಹ ಪ್ರಪಿತಾಮಹಃ |
ತತ್ ತೇಽಹಂ ಸಂಪ್ರವಕ್ಷ್ಯಾಮಿ ಶೃಣು ಶಿಷ್ಯ ಯಥಾತಥಮ್ ॥25॥
ಗುರು ಈ ರೀತಿಯಾಗಿ ಪ್ರಶ್ನಿಸಿದಾಗ ಬ್ರಹ್ಮನು ಶಾಸ್ತ್ರಾನುಸಾರವಾಗಿ ಅವರಿಗೆ ಹೇಳಿದುದನ್ನು ನಿನಗೂ ಸಮಗ್ರವಾಗಿ ಹೇಳುತ್ತೇನೆ, ಕೇಳು.
ಚತುರ್ಮುಖ ಬ್ರಹ್ಮನು ಹೇಳುತ್ತಾನೆ
ಬ್ರಹ್ಮಾ
ಸತ್ಯಾದ್ ಭೂತಾನಿ ಜಾತಾನಿ ಸ್ಥಾವರಾಣಿ ಚರಾಣಿ ಚ |
ತಪಸಾ ತಾನಿ ಜೀವಂತಿ ಜೀವಿತಂ ತದ್ಧಿ ಸುವ್ರತಮ್ ॥26॥
ಉತ್ತಮ ವ್ರತಗಳನ್ನು ಪರಿಪಾಲಿಸುವ ಋಷಿಗಳೇ, ಚರಾಚರ ಪ್ರಾಣಿ ಪ್ರಪಂಚವು ಸತ್ಯನಾಮಕನಾದ ನಾರಾಯಣನಿಂದಲೇ ಉತ್ಪತ್ತಿಯನ್ನು ಪಡೆಯುತ್ತದೆ. ಅವನ ತಪೋರೂಪವಾದ ಕರ್ಮಗಳಿಂದ ಜೀವಿಸುತ್ತವೆ. ತಮ್ಮ ಉತ್ಪತ್ತಿಗೆ ನಾರಾಯಣನನ್ನೇ ಕಾರಣನನ್ನಾಗಿ ಹೊಂದಿವೆ.
ಸ್ವಾಂ ಯೋನಿಂ ಪುನರಾಗಮ್ಯ ವರ್ತಂತೇ ಯೇನ ಕರ್ಮಣಾ ॥27॥

ಆದರೆ ಆ ಪರಮಾತ್ಮನನ್ನು ಮರೆತು ತಮ್ಮ ತಮ್ಮ ಕರ್ಮಕ್ಕನುಗುಣವಾಗಿ ಪುನಃ ಈ ಹುಟ್ಟು-ಸಾವುಗಳೆಂಬ ಚಕ್ರದಲ್ಲಿ ಸುತ್ತುತ್ತಿರುತ್ತಾರೆ.
ಸತ್ಯಂ ಹಿ ಗುಣಸಂಯುಕ್ತಂ ನಿಯತಂ ಪಂಚಲಕ್ಷಣಮ್ ॥28॥
ಗುಣಗಳಿಂದ ಯುಕ್ತವಾದ ಸತ್ಯವು ಐದು ಲಕ್ಷಣದಿಂದ ಕೂಡಿದೆ.
ಬ್ರಹ್ಮ ಸತ್ಯಂ ತಪಃ ಸತ್ಯಂ ಸತ್ಯಂ ಚೈವ ಪ್ರಜಾಪತಿಃ |
ಸತ್ಯಾದ್ ಭೂತಾನಿ ಜಾತಾನಿ ಭೂತಂ ಸತ್ಯಮಯಂ ಮಹತ್ ॥29॥
ಬ್ರಹ್ಮವೂ ಸತ್ಯವಾಗಿದೆ, ತಪಸ್ಸೂ ಸತ್ಯವಾಗಿದೆ, ಚತುರ್ಮುಖ ಬ್ರಹ್ಮನೂ ಸತ್ಯನಾಗಿದ್ದಾನೆ, ಸತ್ಯದಿಂದಲೇ ಎಲ್ಲ ಪ್ರಾಣಿಗಳು ಹುಟ್ಟುತ್ತವೆ, ಈ ಭೌತಿಕ ಜಗತ್ತು ಸತ್ಯಸ್ವರೂಪವಾಗಿಯೇ ಇದೆ.
ವ್ಯಾಖ್ಯಾನ ವಿಶೇಷ ಇಲ್ಲಿ `ಬ್ರಹ್ಮ ಸತ್ಯಂ' ಎಂದರೆ ವೇದವು ಸತ್ಯವಾಗಿವೆ ಎಂದು ಹೇಳಬಹುದು. ಗುಣಪರಿಪೂರ್ಣನಾದ ನಾರಾಯಣನೂ ಸತ್ಯ. ಸತ್ಯನಾಮಕನಾದ ಪರಮಾತ್ಮನೇ ತಪೋರೂಪನು. ಚತುರ್ಮುಖ ಬ್ರಹ್ಮನಲ್ಲಿಯೂ ಸತ್ಯನಾಮಕನಾದ ಭಗವಂತನು ಸನ್ನಿಹಿತನಾಗಿದ್ದಾನೆ. ಸತ್ಯನಾಮಕನಾದ ನಾರಾಯಣನಿಂದಲೇ ಭೂತಗಳ ಉತ್ಪತ್ತಿ, ಸತ್ಯನಾಮಕನಾದ ಭಗವಂತನೇ ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದಾನೆ ಎಂದು ಅಂತರ್ಯಾಮಿ ತತ್ವವನ್ನು ವಿವಕ್ಷೆ ಮಾಡಿ ವ್ಯಾಖ್ಯಾನಿಸಿದ್ದಾರೆ.
ತಸ್ಮಾತ್ ಸತ್ಯಾಶ್ರಯಾ ವಿಪ್ರಾ ನಿತ್ಯಂ ಯೋಗಪರಾಯಣಾಃ |
ಅತೀತಕ್ರೋಧಸಂತಾಪಾ ನಿಯತಾ ಧರ್ಮಸೇತವಃ ॥30॥
ಆದ್ದರಿಂದಲೇ ಯೋಗವನ್ನು ಆಶ್ರಯಿಸಿರುವ, ಕ್ರೋಧ-ಸಂತಾಪಗಳಿಂದ ದೂರವಿರುವ, ನಿಯಮ ಪರಿಪಾಲಕರಾದ ಬ್ರಾಹ್ಮಣರು ಧರ್ಮವನ್ನು ಸೇವಿಸುವ ದೃಷ್ಟಿಯಿಂದ ಸತ್ಯನಾಮಕನಾದ ನಾರಾಯಣನನ್ನೇ ಆಶ್ರಯಿಸಿರುತ್ತಾರೆ.
ಅನ್ಯೋನ್ಯನಿಯತಾನ್ ವೈದ್ಯಾನ್ ಧರ್ಮಸೇತುಪ್ರವರ್ತಕಾನ್ |
ತಾನಹಂ ಸಂಪ್ರವಕ್ಷ್ಯಾಮಿ ಶಾಶ್ವತಾನ್ ಲೋಕಭಾವನಾನ್ ॥31॥
ಧರ್ಮಭೀರುಗಳಾದ, ಪರಸ್ಪರ ಸಾಮರಸ್ಯದಿಂದಿರುವ ಜ್ಞಾನಿಗಳಾದ ಧರ್ಮವೆಂಬ ಸೇತುವೆಯನ್ನು ಪ್ರವೃತ್ತಿಗೊಳಿಸುವ ಬ್ರಾಹ್ಮಣರನ್ನು ಲೋಕ- ಕಲ್ಯಾಣಕಾರಕರು ಎಂದು ಹೇಳುತ್ತೇನೆ.
ಚಾತುರ್ವೈದ್ಯಾಂಸ್ತಥಾ ವರ್ಣಾನ್ ಆಶ್ರಮಾಂಶ್ಚ ಪೃಥಕ್ ಪೃಥಕ್ |
ಧರ್ಮಮೇಕಂ ಚತುಷ್ಪಾದಂ ನಿತ್ಯಮಾಹುರ್ಮನೀಷಿಣಃ ॥32॥
ಇದರಂತೆ ಪ್ರತ್ಯೇಕವಾದ ನಾಲ್ಕು ವರ್ಣಗಳ, ನಾಲ್ಕು ಆಶ್ರಮಗಳಿಗೆ ಸಂಬಂಧಿಸಿದ ನಾಲ್ಕು ವಿದ್ಯೆಗಳನ್ನು ವಿವರಿಸುತ್ತೇನೆ, ಕೇಳಿ.
ಪಂಥಾನಂ ವಃ ಪ್ರವಕ್ಷ್ಯಾಮಿ ಶಿವಂ ಕ್ಷೇಮಕರಂ ದ್ವಿಜಾಃ |
ನಿತ್ಯಂ ಬ್ರಹ್ಮವಿದಾಮಿಷ್ಟಂ ಗತಂ ಪೂರ್ವಮಹರ್ಷಿಭಿಃ ॥33॥
ವಿದ್ವಾಂಸರು ನಿತ್ಯವಾದ ಧರ್ಮವೇ ನಾಲ್ಕು ಪಾದಗಳುಳ್ಳದ್ದೆಂದು ಹೇಳುತ್ತಾರೆ. ದ್ವಿಜಶ್ರೇಷ್ಠರೇ, ವಿದ್ವಾಂಸರು ಭಗವಂತನನ್ನು ಹೊಂದಲು ಕ್ಷೇಮಕರವಾದ ಯಾವ ಮಂಗಳ ಮಾರ್ಗವನ್ನು ಅನುಸರಿಸುತ್ತಿದ್ದರೆಂದು ಹೇಳುತ್ತೇನೆ, ಕೇಳಿ.
ಗದತಸ್ತು ಮಮಾದ್ಯೇಹ ಪಂಥಾನಂ ದುರ್ವಿದಂ ಪರಮ್ |
ನಿಬೋಧತ ಮಹಾಭಾಗಾ ನಿಖಿಲೇನ ಪರಂ ಪದಮ್ ॥34॥
ಭಾಗ್ಯವಂತರಾದ ಮುನಿಗಳೇ, ನಾನೀಗ ಹೇಳುವ, ತಿಳಿದುಕೊಳ್ಳಲು ಕಷ್ಟವಾದ, ಶ್ರೇಷ್ಠವಾದ ಪರಮಾತ್ಮನ ಸ್ವರೂಪವನ್ನು ಕೇಳಿಸಿಕೊಳ್ಳಿರಿ.
ಬ್ರಹ್ಮಚಾರಿಕಮೇವಾಹುರಾಶ್ರಮಂ ಪರಮಂ ಪದಮ್ |
ದ್ವಿತೀಯಂ ಗಾರ್ಹಪತ್ಯಂ ತು ವಾನಪ್ರಸ್ಥಮತಃ ಪರಮ್ ॥35॥
ತತಃ ಪರಂ ತು ವಿಜ್ಞೇಯಮ್ ಅಧ್ಯಾತ್ಮಂ ಪರಮಂ ಪದಮ್ ॥36॥
ನಾಲ್ಕು ಆಶ್ರಮಗಳಲ್ಲಿ ಬ್ರಹ್ಮಚರ್ಯಾಶ್ರಮವು ಮೊದಲೆಯದ್ದು, ನಂತರ ಗೃಹಸ್ಥಾಶ್ರಮ, ವಾನಪ್ರಸ್ಥವು ಮೂರನೆಯದ್ದು. ನಾಲ್ಕನೆಯದ್ದೇ ಆಧ್ಯಾತ್ಮಿಕವೂ, ಶ್ರೇಷ್ಠ ಗತಿಯೂ ಆಗಿರುವ ಸಂನ್ಯಾಸಾಶ್ರಮವು.
ಜ್ಯೋತಿರಾಕಾಶಮಾದಿತ್ಯೋ ವಾಯುರಿಂದ್ರಃ ಪ್ರಜಾಪತಿಃ |
ನೋಪೈತಿ ಯಾವದಧ್ಯಾತ್ಮಂ ತಾವದೇತಾನ್ ನ ಪಶ್ಯತಿ ॥37॥
ಎಲ್ಲಿಯ ತನಕ ಪರಬ್ರಹ್ಮನ ಜ್ಞಾನವನ್ನು ಮನುಷ್ಯನು ಹೊಂದುವುದಿಲ್ಲವೋ ಅಷ್ಟರವರೆಗೆ ಜ್ಯೋತಿ, ಆಕಾಶ, ವಾಯು, ಸೂರ್ಯ, ಇಂದ್ರ, ಪ್ರಜಾಪತಿ - ಇವುಗಳ ನಿಜರೂಪವನ್ನು ಅವನು ತಿಳಿಯುವುದಿಲ್ಲ. ಬ್ರಹ್ಮಜ್ಞಾನದಿಂದಲೇ ಇವುಗಳ ಜ್ಞಾನ ಉಂಟಾಗುತ್ತದೆ.
ತಸ್ಯ ರೂಪಂ ಪ್ರವಕ್ಷ್ಯಾಮಿ ಪುರಸ್ತಾತ್ ತಂ ನಿಬೋಧತ ॥38॥
ಫಲಮೂಲಾಶನವತಾಂ ಮುನೀನಾಂ ವಸತಾಂ ವನೇ |
ವಾನಪ್ರಸ್ಥಂ ದ್ವಿಜಾತೀನಾಂ ತ್ರಯಾಣಾಮುಪದಿಶ್ಯತೇ ॥39॥
ಸರ್ವೇಷಾಮೇವ ವರ್ಣಾನಾಂ ಗೃಹಸ್ಥೋಽಯಂ ವಿಶಿಷ್ಯತೇ ॥40॥
ಆದ್ದರಿಂದ ಅಧ್ಯಾತ್ಮಜ್ಞಾನದ ಉಪಾಯವನ್ನು ಹೇಳುತ್ತೇನೆ, ಕೇಳಿರಿ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ - ಈ ಮೂರು ವರ್ಗದವರಿಗೂ ವಾನಪ್ರಸ್ಥಾಶ್ರಮವು ವಿಹಿತವಾಗಿದೆ. ಮುನಿವೃತ್ತಿಯನ್ನು ಆಶ್ರಯಿಸಿ, ಕಂದ-ಮೂಲಗಳಲ್ಲಿ ಜೀವಿಕೆಯನ್ನು ನಡೆಸುತ್ತಾ, ಗಾಳಿಯನ್ನು ಆಹಾರವನ್ನಾಗಿ ಸ್ವೀಕರಿಸಿ ಅರಣ್ಯದಲ್ಲಿ ವಾಸಿಸುವುದೇ ವಾನಪ್ರಸ್ಥವೆನಿಸಿದೆ. ನಾಲ್ಕು ವರ್ಣದವರಿಗೂ ಗೃಹಸ್ಥಾಶ್ರಮವು ವಿಹಿತವಾಗಿದೆ.
ನೈಷ್ಠಿಕೋಽಥ ಯತಿರ್ವಾಽಪಿ ವಿರಕ್ತೋ ಬ್ರಹ್ಮದರ್ಶನೇ |

ಶ್ರದ್ಧಾಲಕ್ಷಣಮಿತ್ಯೇವಂ ಧರ್ಮಂ ಧೀರಾಃ ಪ್ರಚಕ್ಷತೇ ॥41॥
ಸದೇವಯಾನಾಃ ಪಂಥಾನಃ ಪಂಥಾನಃ ಪರಿಕೀರ್ತಿತಾಃ ॥42॥
ನಿಷ್ಠಾವಂತನಾದ, ವಿರಕ್ತನಾದ ಯತಿಯು ಬ್ರಹ್ಮದರ್ಶನಕ್ಕೆ ಅರ್ಹನಾಗಿದ್ದಾನೆ. ವಿದ್ವಾಂಸರು ಶ್ರದ್ಧೆಯೇ ಧರ್ಮದ ಮುಖ್ಯಲಕ್ಷಣ ಎಂದು ಹೇಳುತ್ತಾರೆ. ಮುಕ್ತಿಗೆ ಹೋಗುವ ದಾರಿಗಳಲ್ಲಿ ದೇವಯಾನ ದಾರಿಯು ಶ್ರೇಷ್ಠ ಎಂದು ಪರಿಗಣಿಸಲ್ಪಟ್ಟಿದೆ.
ಸದ್ಭಿರಧ್ಯಾಸಿತಾ ಧೀರೈಃ ಕರ್ಮಭಿರ್ಧರ್ಮಸೇತವಃ |
ಏತೇಷಾಂ ಪೃಥಗಧ್ಯಾಸ್ತೇ ಯೋ ಧರ್ಮಂ ಸಂಶಿತವ್ರತಃ |
ಕಾಲಾತ್ ಪಶ್ಯತಿ ಭೂತಾನಾಂ ಸತಾಂ ಹಿ ಪ್ರಭವಾಪ್ಯಯೌ ॥43॥
ಧೀರರಾದ ಸತ್ಪುರುಷರು ತಮ್ಮ ಕರ್ಮಗಳಿಂದ ಧರ್ಮದ ಮರ್ಯಾದೆ- ಯಾಗಿರುವ ಈ ಮಾರ್ಗವನ್ನು ಪರಿಪಾಲಿಸುತ್ತಾರೆ. ಕಠೋರನಿಷ್ಠನಾದ ಯಾವನು ಈ ಧರ್ಮಗಳಲ್ಲಿ ಯಾವುದಾದರೊಂದನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡುತ್ತಾನೋ ಅವನು ಕಾಲಕ್ರಮದಲ್ಲಿ ಎಲ್ಲ ಪ್ರಾಣಿಗಳ ಹುಟ್ಟು-ಸಾವುಗಳನ್ನು ಪ್ರತ್ಯಕ್ಷವಾಗಿಯೇ ನೋಡಲು ಅರ್ಹನಾಗುತ್ತಾನೆ.
ಅತಸ್ತತತ್ವಾನಿ ವಕ್ಷ್ಯಾಮಿ ಯಾಥಾತಥ್ಯೇನ ಹೇತುನಾ |
ವಿಷಯಸ್ಥಾನಿ ಸರ್ವಾಣಿ ವರ್ತಮಾನಾನಿ ಭಾಗಶಃ ॥44॥
ಈಗ ನಾನು ಯಥಾರ್ಥವಾದ ಯುಕ್ತಿಗಳ ಮೂಲಕ ವಿಷಯಗಳನ್ನು ವಿಭಾಗಿಸಿ ಸಂಪೂರ್ಣವಾಗಿ ತತ್ತ್ವಗಳನ್ನು ನಿರೂಪಿಸುತ್ತೇನೆ.
ಮಹಾನಾತ್ಮಾ ತಥಾऽವ್ಯಕ್ತಮಹಂಕಾರಸ್ತಥೈವ ಚ |
ಇಂದ್ರಿಯಾಣಿ ದಶೈಕಂ ಚ ಮಹಾಭೂತಾನಿ ಪಂಚ ಚ ॥45॥
ವಿಶೇಷಾಃ ಪಂಚಭೂತಾನಾಮಿತ್ಯೇಷಾ ವೈದಿಕೀ ಶ್ರುತಿಃ |
ಚತುರ್ವಿಂಶತಿರೇಷಾ ವೈ ತತತತ್ವಾನಾಂ ಸಂಪ್ರಕೀರ್ತಿತಾ ॥46॥
ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರ ತತ್ತ್ವ, ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಮನಸ್ಸು, ಪಂಚಮಹಾಭೂತಗಳು, ಶಬ್ದ-ಸ್ಪರ್ಶಾದಿ ಮಹಾಭೂತಗಳ ವಿಶೇಷ ಗುಣಗಳು - ಈ ಇಪ್ಪತ್ನಾಲ್ಕು ಸನಾತನ ಸೃಷ್ಟಿಯಾಗಿದೆ. ಜೀವಾತ್ಮನನ್ನೂ ಸೇರಿಸಿದಲ್ಲಿ ಇಪ್ಪತ್ತೈದು ತತ್ತ್ವಗಳ ಸೃಷ್ಟಿಯಾಗುತ್ತದೆ.
ತತತತ್ವಾನಾಮಥ ಯೋ ವೇದ ಸರ್ವೇಷಾಂ ಪ್ರಭವಾಪ್ಯಯೌ |
ಸ ಧೀರಃ ಸರ್ವಭೂತೇಷು ನ ಮೋಹಮಧಿಗಚ್ಛತಿ ॥47॥
ಯಾವನು ಈ ತತ್ತ್ವಗಳ ಉತ್ಪತ್ತಿ ಮತ್ತು ಲಯಗಳನ್ನು ಚೆನ್ನಾಗಿ ಬಲ್ಲನೋ ಅವನು ಪ್ರಾಣಿಗಳಲ್ಲಿ ಧೀರನೆನಿಸುತ್ತಾನೆ. ಅವನಿಗೆ ಎಂದೂ ಮೋಹವುಂಟಾಗುವುದಿಲ್ಲ.
ತತತತ್ವಾನಿ ಯೋ ವೇದಯತೇ ಯಥಾತಥಂ
ಗುಣಾಂಶ್ಚ ಸರ್ವಾನಖಿಲಾಂ ಚ ದೇವತಾಃ |
ವಿಧೂತಪಾಪ್ಮಾ ಹಿ ವಿಮುಚ್ಯ ಬಂಧನಂ
ಸ ಸರ್ವಲೋಕಾನಮಲಾನ್ ಸಮಶ್ನುತೇ ॥48॥
ಯಾವನು ಈ ತತ್ತ್ವಗಳನ್ನು ಸಂಪೂರ್ಣವಾಗಿ ತಿಳಿಯುತ್ತಾನೋ, ಗುಣಗಳನ್ನು ಮತ್ತು ದೇವತೆಗಳನ್ನು ಯಥಾವತ್ತಾಗಿ ಅರ್ಥೈಸಿಕೊಳ್ಳುತ್ತಾನೋ ಅವನು ಎಲ್ಲ ಪಾಪಗಳನ್ನೂ ತೊಡೆದುಕೊಂಡು ಭವಬಂಧನದಿಂದ ಮುಕ್ತನಾಗಿ ಸಮಸ್ತ ಲೋಕದ ದಿವ್ಯಸುಖಗಳನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಗುರು-ಶಿಷ್ಯಸಂವಾದೇ ತತ್ವಕಥನಂ ನಾಮ ಷಟ್‌ತ್ರಿಂಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೇಳನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಕಶ್ಯಪಾದಿ ಮಹರ್ಷಿಗಳನ್ನು ಕುರಿತು
ತಮೋಗುಣದ ಕಾರ್ಯವನ್ನು ನಿರೂಪಿಸಿದುದು.
ಬ್ರಹ್ಮಾ
ತದವ್ಯಕ್ತಮನುದ್ರಿಕ್ತಂ ಸರ್ವವ್ಯಾಪಿ ಧ್ರುವಂ ಸ್ಥಿರಮ್ |
ನವದ್ವಾರಂ ಪುರಂ ವಿದ್ಯಾತ್ ತ್ರಿಗುಣಂ ಪಂಚಧಾತುಕಮ್ ॥1॥
ಬ್ರಹ್ಮಾ ಮಹರ್ಷಿಗಳೇ, ಉದ್ರೇಕಗೊಳ್ಳದ, ಸರ್ವವ್ಯಾಪಿಯಾದ, ಸ್ಥಿರವಾಗಿರುವ ತತ್ವವು ಅವ್ಯಕ್ತತತ್ವ ಎನಿಸಿದೆ. ಈ ಅವ್ಯಕ್ತ ತತ್ವದ ಮೂಲಕ ಸತ್ವ-ರಜಸ್-ತಮೋ ಗುಣಗಳು ಅಭಿವ್ಯಕ್ತಿಯನ್ನು ಪಡೆದು, ಪಂಚಭೂತಗಳ ಮೂಲಕ ನವದ್ವಾರಗಳುಳ್ಳ ಶರೀರವು ಉತ್ಪನ್ನವಾಗುತ್ತದೆ.
ಏಕಾದಶಪರಿಕ್ಷೇಪಂ ಮನೋವ್ಯಾಕರಣಾತ್ಮಕಮ್ |
ಬುದ್ಧಿಸ್ವಾಮಿಕಮಿತ್ಯೇತತ್ ಪರಮೇಕಾದಶಾದ್ ಭವೇತ್ ॥2॥
ಈ ದೇಹವೆಂಬ ಪಟ್ಟಣದಲ್ಲಿ ಜೀವಾತ್ಮನನ್ನು ವಿಷಯಪದಾರ್ಥಗಳ ಕಡೆಗೆ ಪ್ರೇರಿಸುವ ಮನಸ್ಸಿನಿಂದ ಕೂಡಿದ ಹನ್ನೊಂದು ಇಂದ್ರಿಯಗಳಿವೆ. ಈ ಇಂದ್ರಿಯಗಳ ಅಭಿವ್ಯಕ್ತಿಯು ಮನಸ್ಸಿನ ಮೂಲಕವೇ ಆಗುತ್ತದೆ. ಈ ಶರೀರದಲ್ಲಿ ಹನ್ನೊಂದು ಇಂದ್ರಿಯಗಳಿಗೆ ಬುದ್ಧಿಯೇ ಅರಸ. ಹನ್ನೊಂದೆಯನದ್ದಾದ ಮನಸ್ಸೇ ಹತ್ತು ಇಂದ್ರಿಯಗಳಿಗಿಂತ ಶ್ರೇಷ್ಠವಾದುದು.
ತ್ರೀಣಿ ಸ್ರೋತಾಂಸಿ ಯಾನ್ಯಸ್ಮಿನ್ನಾಪ್ಯಾಯಂತೇ ಪುನಃ ಪುನಃ |

ಪುನಾಡ್ಯಸ್ಮಿಸ್ರು ಏತೇಷಾಂ ಪ್ರವರ್ತಂತೇ ಗುಣಾತ್ಮಿಕಾಃ ॥3॥
ಈ ದೇಹದಲ್ಲಿ ಸಾತ್ವಿಕ, ರಾಜಸ, ತಾಮಸ ದೇಹದಿಂದ ಮೂರು ಪ್ರವಾಹಗಳು ಹರಿಯುತ್ತಿವೆ. ಮೂರು ಗುಣಗಳು ಪುನಃ ಪುನಃ ಈ ಜೀವನಿಗೆ ಸಂಬಂಧಿಸಿ ಹರಿಯುತ್ತಲೇ ಇರುತ್ತವೆ. ಸತ್ವ-ರಜಸ್-ತಮೋಗುಣಗಳ ಪ್ರವಾಹಗಳು ಮನಸ್ಸಿನಲ್ಲಿ ನಿರಂತರ ಹರಿಯುತ್ತಲೇ ಇರುತ್ತವೆ.
ತಮೋ ರಜಸ್ತಥಾ ಸತ್ವಂ ಗುಣಾನೇತಾನ್ ಪ್ರಚಕ್ಷತೇ |
ಅನ್ಯೋನ್ಯಮಿಥುನಾಃ ಸರ್ವೇ ತಥಾಽನ್ಯೋನ್ಯಾನುಜೀವಿನಃ ॥4॥
ಅನ್ಯೋನ್ಯಾಶ್ರಯಿಣಶ್ಚೈವ ತಥಾಽನ್ಯೋನ್ಯಾನುವರ್ತಿನಃ |
ಅನ್ಯೋನ್ಯವ್ಯತಿಷಕ್ತಾಶ್ಚ ತ್ರಿಗುಣಾಃ ಪಂಚಧಾತವಃ ॥5॥
ಸತ್ವ, ರಜಸ್ಸು, ತಮಸ್ಸು - ಈ ಮೂರನ್ನು ಗುಣಗಳೆಂದು ಕರೆಯುತ್ತಾರೆ. ಇವುಗಳು ಪರಸ್ಪರ ಸಂಬದ್ಧವಾಗಿವೆ. ಪರಸ್ಪರ ಆಶ್ರಯ-ಆಶ್ರಯಿ ಭಾವವಿದೆ. ಪರಸ್ಪರ ಪೋಷಕಗಳಾಗಿವೆ. ಪರಸ್ಪರ ಅನುಸರಿಸುವ ಸ್ವಭಾವವುಳ್ಳವುಗಳು. ಒಂದು ಗುಣವು ಮತ್ತೊಂದು ಗುಣದೊಡನೆ ಸೇರುತ್ತದೆ. ಪಂಚಮಹಾಭೂತಗಳು ಈ ತ್ರಿಗುಣಗಳಿಂದ ಸಂಬದ್ಧವಾಗಿವೆ.
ತಮಸೋ ಮಿಥುನಂ ಸತ್ವಂ ಸತ್ವಸ್ಯ ಮಿಥುನಂ ರಜಃ |
ರಜಸಶ್ಚಾಪಿ ಸತ್ವಂ ಸ್ಯಾತ್ ಸತ್ವಸ್ಯ ಮಿಥುನಂ ತಮಃ ॥6॥
ಸತ್ವಗುಣವು ತಮೋಗುಣದ ಜೊತೆಯಾಗಿರುತ್ತದೆ. ಸತ್ವಕ್ಕೆ ರಜಸ್ಸು ಜೊತೆಯಾಗಿರುತ್ತದೆ. ರಜಸ್ಸಿಗೆ ಸತ್ವವು ಜೊತೆಯಾಗಿರುತ್ತದೆ. ಸತ್ವಕ್ಕೆ ತಮಸ್ಸು ಜೊತೆಯಾಗಿರುತ್ತದೆ.
ನಿಯಮ್ಯತೇ ತಮೋ ಯತ್ರ ರಜಸ್ತತ್ರ ಪ್ರವರ್ತತೇ |
ನಿಯಮ್ಯತೇ ರಜೋ ಯತ್ರ ಸತ್ವಂ ತತ್ರ ಪ್ರವರ್ತತೇ ॥7॥
ತಮೋಗುಣಕ್ಕೆ ತಡೆಯುಂಟಾದರೆ ರಜೋಗುಣವು ಹುಟ್ಟುತ್ತದೆ. ರಜೋಗುಣಕ್ಕೂ ತಡೆಯುಂಟಾದರೆ ಸತ್ವಗುಣವು ಅಭಿವ್ಯಕ್ತಿಯನ್ನು ಹೊಂದುತ್ತದೆ.
ನೈಶಾತ್ಮಕಂ ತಮೋ ವಿದ್ಯಾತ್ ತ್ರಿಗುಣಂ ಮೋಹಸಂಜ್ಞಿತಮ್ |
ಅಧರ್ಮಲಕ್ಷಣಂ ಚೈವ ನಿಯತಂ ಪಾಪಕರ್ಮಸು ॥8॥
ತಮೋಗುಣವು ಅಂಧಕಾರರೂಪವಾಗಿದೆ, ತ್ರಿಗುಣಮಯವಾಗಿದೆ. ಮೋಹವೆಂಬ ಇನ್ನೊಂದು ಹೆಸರಿದೆ. ಅಧರ್ಮಲಕ್ಷಣವಾಗಿದೆ. ಪಾಪಕರ್ಮಿಗಳಲ್ಲಿ ನಿಯಮೇನ ಇರುತ್ತದೆ.
ಪ್ರಕೃತ್ಯಾತ್ಮಕಮೇವಾಭೂದ್ ರಜಃ ಪರ್ಯಾಯಕಾರಣಮ್ |
ಪ್ರವೃತ್ತಂ ಸರ್ವಭೂತೇಷು ಪಶ್ಯತ್ಯುತ್ಪತ್ತಿಲಕ್ಷಣಮ್ ॥9॥
ರಜೋಗುಣವನ್ನು ಪ್ರಕೃತಿರೂಪ ಎನ್ನುತ್ತಾರೆ. ಇದು ಸೃಷ್ಟಿಗೆ ಕಾರಣವಾಗಿದೆ. ಪ್ರಾಣಿಗಳಲ್ಲಿಯೂ ರಜೋಗುಣದ ಪ್ರವೃತ್ತಿಯು ಹೆಚ್ಚಿರುತ್ತದೆ. ಪ್ರಪಂಚವೆಲ್ಲವೂ ರಜೋಗುಣ ಸ್ವರೂಪವಾಗಿದೆ. ಉತ್ಪತ್ತಿ-ಪ್ರವೃತ್ತಿಗಳು ರಜೋಗುಣದ ಲಕ್ಷಣ.
ಪ್ರಕಾಶಂ ಸರ್ವಭೂತೇಷು ಲಾಘವಂ ಶ್ರದ್ದಧಾನತಾ |
ಸಾತ್ವಿಕಂ ರೂಪಮೇವಂ ತು ಲಾಘವಂ ಸಾಧುಸಮ್ಮಿತಮ್ ॥10॥
ಎಲ್ಲ ಭೂತಗಳಲ್ಲಿ ಅಂತರಂಗದಲ್ಲಿರುವ ಪ್ರಕಾಶವೇ ಸತ್ವ ಎನಿಸಿದೆ. ಲಾಘವ, ಶ್ರದ್ಧೆ ಇವುಗಳು ಸತ್ವಗುಣದ ಕ್ರಿಯೆಗಳು. ನಿರಾಡಂಬರತೆಯನ್ನು ಸಾಧುಸಮ್ಮತವಾದ ಸತ್ವಗುಣವೆಂದು ಪ್ರಶಂಸಿಸುತ್ತಾರೆ.
ಏತೇಷಾಂ ಗುಣತತ್ತ್ವಂ ಹಿ ವಕ್ಷ್ಯತೇ ಪ್ರಾಪ್ತಹೇತುಭಿಃ |
ಸಮಾಸವ್ಯಾಸಯುಕ್ತಾನಿ ತತ್ತ್ವತಸ್ತಾನಿ ವಿತ್ತ ಮೇ ॥11॥
ಮಹರ್ಷಿಗಳೇ, ನಾನು ತಾತ್ವಿಕವಾದ ಯುಕ್ತಿಯಿಂದ ಸಂಕ್ಷಿಪ್ತವಾಗಿ ಮತ್ತು ವಿಸ್ತಾರವಾಗಿಯೂ ಮೂರು ಗುಣಗಳ ಕಾರ್ಯವನ್ನು ಯಥಾವತ್ತಾಗಿ ಹೇಳುತ್ತೇನೆ, ಕೇಳಿರಿ.
ಸಮ್ಮೋಹೋ ಮನಸಸ್ತ್ಯಾಗಃ ಕರ್ಮಣಾಮವಿನಿರ್ಣಯಃ |
ಸಪ್ತಃ ಸ್ತಂಭೋ ಭಯಂ ಲೋಭಃ ಶೋಕಃ ಸುಕೃತದೂಷಣಮ್ ॥12॥
ವಿಸ್ಮೃತಿಶ್ಚಾವಿವೇಕಶ್ಚ ನಾಸ್ತಿಕ್ಯಂ ಭಿನ್ನವೃತ್ತಿತಾ |
ನಿರ್ವಿಶೇಷತ್ವಮಂಧತ್ವಂ ಜಘನ್ಯಗುಣವೃತ್ತಿತಾ ॥13॥
ಅಕೃತೇ ಕೃತಮಾನಿತ್ವಮಜ್ಞಾನೇ ಜ್ಞಾನಮಾನಿತಾ |
ಅಮೈತ್ರೀ ವಿಕೃತೋ ಭಾವೋ ಹ್ಯಶ್ರದ್ಧಾ ಗೂಢಭಾವನಾ ॥14॥
ಅನಾರ್ಜವಮಸಂಜ್ಞತ್ವಂ ಕರ್ಮ ಪಾಪಮಚೇತನಾ |
ಗುರುತ್ವಂ ಸನ್ನಭಾವತ್ವಮಶೀತತ್ವಮವಾಗ್ಗತಿಃ ॥15॥
ಸರ್ವ ಏತೇ ಗುಣಾಶ್ಚೈವ ತಾಮಸಾಃ ಪರಿಕೀರ್ತಿತಾಃ ॥16॥
ಮೋಹ, ಅಜ್ಞಾನ, ಅತ್ಯಾಗ, ಕರ್ಮಗಳ ಬಗ್ಗೆ ಅನಿಶ್ಚಿತತೆ, ನಿದ್ರಾ, ಗರ್ವ, ಭಯ, ಲೋಭ, ಸತ್ಕರ್ಮಗಳ ದೂಷಣೆ, ವಿಸ್ಮರಣೆ, ಕಾರ್ಯದ ಪರಿಣಾಮವನ್ನು ಯೋಚಿಸದೆ ಇರುವುದು, ನಾಸ್ತಿಕತೆ, ದುಶ್ಚರಿತೆ, ಅವಿವೇಕ, ಇಂದ್ರಿಯ ಶೈಥಿಲ್ಯ, ಕೀಳುಮಟ್ಟದ ಅಭಿರುಚಿ, ಕರ್ಮ ಮಾಡದಿದ್ದರೂ ದುರಭಿಮಾನ ಪಡುವುದು, ಅಜ್ಞಾನಿಯಾಗಿದ್ದರೂ ಜ್ಞಾನಿಯೆಂಬ ವಿಭ್ರಮ, ಎಲ್ಲರೊಡನೆ ಕದನ, ಶತ್ರುತ್ವ, ಮಾಡಬೇಕಾದ ಕೆಲಸದಲ್ಲಿ ಅನಾಸಕ್ತಿ, ಮಾಡುವ ಕೆಲಸವನ್ನು ಅಶ್ರದ್ಧೆಯಿಂದ ಮಾಡುವುದು, ಗೂಢಭಾವ, ಕುಟಿಲತೆ, ತಿಳಿಗೇಡಿತನ, ಪಾಪಕರ್ಮಾಸಕ್ತಿ, ಅಜ್ಞಾನ-ಆಲಸ್ಯಗಳಿಂದ ಮೈ- ಮನಸ್ಸುಗಳನ್ನು ಜಡವಾಗಿಸುವುದು, ಸದ್ಭಾವ ಇಲ್ಲದಿರುವಿಕೆ, ಇಂದ್ರಿಯಗಳ ವಶವಾಗಿರುವುದು, ನೀಚಕರ್ಮಾಸಕ್ತಿ - ಈ ಎಲ್ಲ ದುಷ್ಕಾರ್ಯಗಳು ತಮೋಗುಣದ ಕಾರ್ಯವೆಂದು ಹೇಳಲ್ಪಟ್ಟಿವೆ. ಇದಲ್ಲದೆ

ಲೋಕದಲ್ಲಿ ಮೋಹ-ಭಾವಗಳು ಯಾವವು ಇವೆ ಅವೆಲ್ಲ ತಾಮಸಿಕ ಗುಣವೆಂದು ನಿರ್ಣಯಿಸಲ್ಪಟ್ಟಿವೆ.
ಯೇ ಚಾನ್ಯೇ ನಿಯತಾ ಭಾವಾ ಲೋಕೇಽಸ್ಮಿನ್ ಮೂಢಸಂಜ್ಞಿತಾಃ |
ತತ್ರ ತತ್ರ ನಿಯಮ್ಯಂತೇ ಸರ್ವೇ ತೇ ತಾಮಸಾ ಗುಣಾಃ ॥17॥
ಪರಿವಾದಕಥಾ ನಿತ್ಯಂ ದೇವಬ್ರಾಹ್ಮಣವೈರಿತಾ |
ಅತ್ಯಾಗಶ್ಚಾತಿಮಾನಶ್ಚ ಮೋಹೋ ಮನ್ಯುಸ್ತಥಾಕ್ಷಮಾ ॥18॥
ಮತ್ಸರಶ್ಚೈವ ಭೂತೇಷು ತಾಮಸಂ ವೃತ್ತಮಿಷ್ಯತೇ ॥19॥
ದೇವ-ಬ್ರಾಹ್ಮಣರನ್ನು, ವೇದಗಳನ್ನು ನಿಂದಿಸುವುದು, ದಾನ ಮಾಡದಿರುವುದು, ಅತ್ಯಂತ ಅಭಿಮಾನ ಪಡುವುದು,
ಮೋಹ-ಕೋಪ-ಅಸಹನೆ-ಹೊಟ್ಟೆಕಿಚ್ಚು - ಇವು ತಾಮಸಿಕ ವ್ಯವಹಾರವೆಂದು ಹೇಳಲ್ಪಟ್ಟಿವೆ.
ವೃಥಾಽಽರಂಭಾ ಹಿ ಯೇ ಕೇಚಿದ್ ವೃಥಾ ದಾನಾನಿ ಯಾನಿ ಚ |
ವೃಥಾ ಭಕ್ಷಣಮಿತ್ಯೇತತ್ ತಾಮಸಂ ವೃತ್ತಮಿಷ್ಯತೇ ॥20॥
ಶಾಸ್ತ್ರನಿಷಿದ್ಧವಾದ ಕರ್ಮಗಳಲ್ಲಿ ಉತ್ಸಾಹ, ದೇಶ-ಪಾತ್ರ ವಿವೇಚನೆ ಇಲ್ಲದ ಜಂಬದ ದಾನ, ಹರಿ ಅನರ್ಪಿತ ಭೋಜನ - ಇವುಗಳು ತಾಮಸ ವೃತ್ತಿಗಳು.
ಅತಿವಾದೋಽತಿತಿಕ್ಷಾ ಚ ಮಾತ್ಸರ್ಯಮತಿಮಾನಿತಾ |
ಅಶ್ರದ್ದಧಾನತಾ ಚೈವ ತಾಮಸಂ ವೃತ್ತಮಿಷ್ಯತೇ ॥21॥
ಹೆಚ್ಚು ಮಾತನಾಡುವುದು, ಕ್ಷಮೆ ಇಲ್ಲದಿರುವುದು, ಮಾತ್ಸರ್ಯ, ಅಹಂಕಾರ, ಅಶ್ರದ್ಧೆ - ಇವುಗಳು ತಾಮಸ ಪ್ರವೃತ್ತಿಗಳು ಎನಿಸಿವೆ.
ಏವಂವಿಧಾಸ್ತು ಯೇ ಕೇಚಿಲ್ಲೋಕೇಽಸ್ಮಿನ್ ಪಾಪಕರ್ಮಿಣಃ |
ಮನುಷ್ಯಾ ಭಿನ್ನಮರ್ಯಾದಾಸ್ತೇ ಸರ್ವೇ ತಾಮಸಾ ಜನಾಃ ॥22॥
ಈ ರೀತಿ ಪಾಪಕರ್ಮಿಗಳಾದ, ಧರ್ಮದ ಮರ್ಯಾದೆಯನ್ನು ಮೀರಿರುವ ಜನರನ್ನು ತಾಮಸರೆಂದು ಹೇಳಲಾಗುತ್ತದೆ. ಅಂತಹ ಮನುಷ್ಯರು ವಿಧಿಯನ್ನು ಉಲ್ಲಂಘಿಸಿದ ಪ್ರಭಾವದಿಂದ ಅಧಃಪತನವನ್ನು ಹೊಂದುತ್ತಾರೆ.
ತೇಷಾಂ ಯೋನಿಂ ಪ್ರವಕ್ಷ್ಯಾಮಿ ನಿಯತಾಂ ಪಾಪಕರ್ಮಿಣಾಮ್ ॥23॥
ಪಾಪಕರ್ಮಿಗಳಿಗೆ ನಿಯತವಾದ ಯೋನಿಗಳು ಯಾವುವೆಂದು ಹೇಳುತ್ತೇನೆ, ಕೇಳಿಸಿಕೊ.
ಅವಾಙ್ನಿರಯಭಾಗಾ ವೈ ತಿರ್ಯಙ್ನಿರಯಗಾಮಿನಃ ॥24॥
ತಾಮಸಯೋನಿಯವರು ಅಧೋಲೋಕವೆನಿಸಿದ ನರಕಗಳಿಗೆ ಭಾಗಿಗಳಾಗುತ್ತಾರೆ. ಪ್ರಾಣಿ-ಪಕ್ಷಿಗಳೆಂಬ ನರಕ ಯೋನಿಗಳಲ್ಲಿ ಹುಟ್ಟುತ್ತಾರೆ.
ಸ್ಥಾವರಾಣಿ ಚ ಭೂತಾನಿ ಪಶವೋ ವಾಹನಾನಿ ಚ |
ಕ್ರವ್ಯಾದಾ ದಂದಶೂಕಾಶ್ಚ ಕೃಮಿಕೀಟವಿಹಂಗಮಾಃ ॥25॥
ಅಪರೇ ಜಂತವೋ ಯೇ ಚ ಸರ್ವೇ ಚಾಪಿ ಚತುಷ್ಪದಾಃ |
ಉನ್ಮತ್ತಾ ಬಧಿರಾ ಮೂಕಾ ಯೇ ಚಾನ್ಯೇ ಪಾಪರೋಗಿಣಃ ॥26॥
ವೃಕ್ಷ-ಪರ್ವತಾದಿ ಸ್ಥಾವರ ಜೀವಿಗಳು, ಪಶುಗಳು, ಆನೆ-ಕುದುರೆ ಮೊದಲಾದ ವಾಹನಗಳು, ರಾಕ್ಷಸರು, ಮಾಂಸಭಕ್ಷಕ ಜಂತುಗಳು, ಕ್ರಿಮಿ-ಕೀಟ-ಪಕ್ಷಿಗಳು, ಉಳಿದ ಜಂತು ಎಂಬ ಹೆಸರಿನಿಂದ ಕರೆಸಿಕೊಳ್ಳುವ ಪ್ರಾಣಿಗಳು, ನಾಲ್ಕು ಕಾಲಿನ ಪ್ರಾಣಿಗಳು, ಹುಚ್ಚರು, ಕಿವುಡರು, ಮೂಕರು, ಪಾಪರೋಗಗ್ರಸ್ಥರು - ಇವರೆಲ್ಲರೂ ತಮೋಗುಣದಲ್ಲೇ ಮುಳುಗಿರುತ್ತಾರೆ.
ಮಗ್ನಾಸ್ತಮಸಿ ದುರ್ವೃತ್ತಾಃ ಸ್ವಕರ್ಮಕೃತಲಕ್ಷಣಾಃ |
ಅರ್ವಾಕ್ ಸ್ರೋತಸ ಇತ್ಯೇತೇ ಮಗ್ನಾಸ್ತಮಸಿ ತಾಮಸಾಃ ॥27॥
ತಮೋಗುಣಗಳಲ್ಲಿ ಮುಳುಗಿರುವ ಇವರು ತಮ್ಮ ಕರ್ಮಾನುಸಾರ ದುರ್ಲಕ್ಷಣಗಳನ್ನು ಹೊಂದಿ ದುರಾಚಾರಿಗಳಾಗಿ, ಕೀಳು ಅಭಿರುಚಿಗಳಿಂದ ಅಧೋ ಯೋನಿಗಳಲ್ಲೇ ಉತ್ಪತ್ತಿಯನ್ನು ಪಡೆಯುತ್ತಾರೆ. ಇವರನ್ನು ಅರ್ವಾಕ್ ಸ್ರೋತಸರು ಎಂದು ಕರೆಯುತ್ತಾರೆ. ತಮೋಗುಣದಲ್ಲಿ ಮುಳುಗಿರುವ ಎಲ್ಲ ಪ್ರಾಣಿಗಳನ್ನೂ ತಾಮಸರೆಂದೇ ಕರೆಯಲಾಗಿದೆ.
ತೇಷಾಮುತ್ಕರ್ಷಮುದ್ರೇಕಂ ವಕ್ಷ್ಯಾಮ್ಯಹಮತಃ ಪರಮ್ |
ಯಥಾ ತೇ ಸುಕೃತಾನ್ ಲೋಕಾನ್ ಲಭಂತೇ ಪುಣ್ಯಕರ್ಮಣಾಮ್ ॥
ತಾಮಸ ಪ್ರಾಣಿಗಳೂ ಉನ್ನತಿಯನ್ನು, ಸಮೃದ್ಧಿಯನ್ನು ಪುಣ್ಯ-ಕರ್ಮಗಳ ಮೂಲಕ ಹೇಗೆ ಹೊಂದಬಹುದು, ಪುಣ್ಯಲೋಕಗಳನ್ನು ಹೇಗೆ ಹೊಂದುತ್ತಾರೆ ಎಂಬುದನ್ನು ಹೇಳುತ್ತೇನೆ, ಕೇಳಿಸಿಕೊಳ್ಳಿ.
ಅನ್ಯಥಾ ಪ್ರತಿಪನ್ನಾಸ್ತು ವಿವೃದ್ಧಾ ಯೇ ಚ ಕರ್ಮಸು ॥29॥
ಸ್ವಕರ್ಮನಿರತಾನಾಂ ಚ ಬ್ರಾಹ್ಮಣಾನಾಂ ಶುಭೈಷಿಣಾಮ್ |
ಸಂಸ್ಕಾರೇಣೋರ್ಧ್ವಮಾಯಾಂತಿ ಯತಮಾನಾಃ ಸಲೋಕತಾಮ್ ॥30॥
ಸ್ವರ್ಗಂ ಗಚ್ಛಂತಿ ದೇವಾನಾಮಿತ್ಯೇಷಾ ವೈದಿಕೀ ಶ್ರುತಿಃ ॥31॥
ತಿರ್ಯಕ್ ಸ್ಥಾವರಯೋನಿಗಳನ್ನು ಪಡೆದ ಪ್ರಾಣಿಗಳನ್ನು ಬ್ರಾಹ್ಮಣರ ಮೂಲಕ ಅಗ್ನಿಹೋತ್ರಾದಿ ಕರ್ಮಗಳಿಗೆ ಸೇವಾರೂಪವಾಗಿ ಬಳಸಿಕೊಂಡಾಗ ಉತ್ತಮ ಸಂಸ್ಕಾರಗಳಿಂದ ಊರ್ಧ್ವಲೋಕಗಳಿಗೆ ಹೋಗಬಹುದು. ಸ್ವಕರ್ಮನಿರತರಾದ, ಶುಭಕರ್ಮಗಳನ್ನು ಮಾಡುವ ಬ್ರಾಹ್ಮಣರಲ್ಲಿ ಪ್ರಾಣಿಗಳಾಗಿಯೋ, ಅಧಮ ಕರ್ಮಿಗಳಾಗಿಯೋ ಹುಟ್ಟುವ ಮೂಲಕ ಅವರನ್ನು ಸತತವಾಗಿ ಸೇವಿಸಿ ಕೊನೆಗೆ ಸ್ವರ್ಗಲೋಕದ ಸುಖವನ್ನು ಹೊಂದಬಹುದು ಎಂದು ವೇದವಚನವೇ ಇದೆ.
ಅನ್ಯಥಾ ಪ್ರತಿಪನ್ನಾಸ್ತು ವಿಬುದ್ಧಾಃ ಸ್ವೇಷು ಕರ್ಮಸು |
ಪುನರಾವೃತ್ತಿಧರ್ಮಾಣಸ್ತೇ ಭವಂತೀಹ ಮಾನುಷಾಃ ॥32॥

ಹೀಗೆ ದೇವಲೋಕದಲ್ಲಿ ಸ್ವಲ್ಪ ಕಾಲ ವಾಸಿಸಿದ ಅವರು ಕರ್ಮಾನುಗುಣವಾಗಿ ತಮ್ಮ ಕರ್ತವ್ಯಗಳಲ್ಲಿ ಪ್ರಜ್ಞೆಯನ್ನು ಹೊಂದಿ, ಪುನರಾವೃತ್ತಿ ಧರ್ಮವುಳ್ಳ ಮನುಷ್ಯರಾಗಿ ಈ ಲೋಕದಲ್ಲಿ ಹುಟ್ಟುತ್ತಾರೆ.
ಪಾಪಯೋನಿಂ ಸಮಾಪನ್ನಾಶ್ಚಂಡಾಲಾ ವೃಕಚೂಚುಕಾಃ |
ವರ್ಣಾನ್ ಪರ್ಯಾಯತಶ್ಚೈವ ಪ್ರಾಪ್ನುವನ್ತ್ಯುತ್ತರೋತ್ತರಮ್ ॥33॥
ಅವರಲ್ಲಿ ಕೆಲವರು ನೀಚಯೋನಿಗಳಲ್ಲಿ ಹುಟ್ಟಿ ಚಂಡಾಲ, ಮೂಕರು ಆಗುತ್ತಾರೆ. ತೊದಲು ಮಾತುಗಳನ್ನು ಆಡುವವರಾಗುತ್ತಾರೆ. ಇಂತಹವರು ಕ್ರಮವಾಗಿ ಉಚ್ಚ ವರ್ಣಗಳಲ್ಲಿ ಜನಿಸುತ್ತಾರೆ.
ಶೂದ್ರಯೋನಿಮತಿಕ್ರಮ್ಯ ಯೇ ಚಾನ್ಯೇ ತಾಮಸಾ ಗುಣಾಃ |
ಸ್ರೋತೋಮಧ್ಯಮಥಾಗಮ್ಯ ವರ್ತಂತೇ ತಾಮಸೇ ಗುಣೇ ॥34॥
ಶೂದ್ರಯೋನಿಯನ್ನು ದಾಟಿ ಮುಂದಿನ ಉಚ್ಚವರ್ಣದಲ್ಲಿ ಹುಟ್ಟಿದರೂ ಯಾರು ತಾಮಸ ಗುಣವನ್ನೇ ಹೊಂದಿರುತ್ತಾರೋ ಅವರು ಗುಣತ್ರಯಗಳ ಪ್ರವಾಹದಲ್ಲಿ ಬಿದ್ದು ತಾಮಸಿಕ ಫಲವನ್ನೇ ಹೊಂದುತ್ತಾರೆ.
ಅಭಿಷ್ವಂಗಸ್ತು ಕಾಮೇಷು ಮಹಾಮೋಹ ಇತಿ ಸ್ಮೃತಃ |
ಋಷಯೋ ಮುನಯೋ ದೇವಾ ಮುಹ್ಯಂತ್ಯತ್ರ ಸುಖೇಪ್ಸವಃ ॥35॥
ಕಾಮಭೋಗಗಳಲ್ಲೇ ಆಸಕ್ತಿಯನ್ನು ಹೊಂದುವುದು ಮಹಾಮೋಹವೆನಿಸುತ್ತದೆ. ಋಷಿ-ಮುನಿಗಳು, ದೇವತೆಗಳೂ ಕೂಡ ಮಹಾಮೋಹದಲ್ಲಿ, ಕೆಲವೊಮ್ಮೆ ಸುಖಕ್ಕಾಗಿ ಸಿಕ್ಕಿಬಿದ್ದು ದುಃಖಪಡುತ್ತಾರೆ.
ತಮೋ ಮೋಹೋ ಮಹಾಮೋಹಃ ತಾಮಿಸ್ರೋ ಹ್ಯಂಧಸಂಜ್ಞಿತಃ |
ಮರಣಂ ತ್ವಂಧತಾಮಿಸ್ರಸ್ತಾಮಿಸ್ರಃ ಕ್ರೋಧ ಉಚ್ಯತೇ ॥36॥
ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ಮುಖದ ತಮೋಗುಣದ ಅಜ್ಞಾನಗಳಿವೆ. ಇವುಗಳಲ್ಲಿ ಅಂಧತಾಮಿಸ್ರವು ಮೃತ್ಯು ಸ್ವರೂಪವಾಗಿದೆ. ಕ್ರೋಧವನ್ನೇ ತಾಮಿಸ್ರ ಎನ್ನುತ್ತಾರೆ.
ಭಾವತೋ ಗುಣತಶ್ಚೈವ ಯೋನಿತಶ್ಚೈವ ತತ್ತ್ವತಃ |
ಸರ್ವಮೇತತ್ ತಮೋ ವಿಪ್ರಾಃ ಕೀರ್ತಿತಂ ವೋ ಯಥಾವಿಧಿ ॥37॥
ಸ್ವಭಾವದಿಂದ, ಗುಣದಿಂದ, ಯೋನಿಯಿಂದ, ತತ್ತ್ವದಿಂದ ತಮೋಗುಣದ ವ್ಯಾಪಾರವನ್ನು ವಿಧಿವತ್ತಾಗಿ ಹೇಳಿದ್ದೇನೆ.
ಕೋ ನ್ವೇತದ್ ಬುಧ್ಯತೇ ಸಾಧು ಕೋನ್ವೇತತ್ ಸಾಧು ಪಶ್ಯತಿ |
ಅತತ್ತ್ವೇ ತತ್ತ್ವದರ್ಶೀ ಯಸ್ತಮಸಸ್ತಚ್ಚ ಲಕ್ಷಣಮ್ ॥38॥
ಇಂತಹ ಅತತ್ತ್ವದಲ್ಲೇ ತತ್ತ್ವದೃಷ್ಟಿಯುಳ್ಳವನು ಯಾವನು ತಾನೇ ಬ್ರಹ್ಮತತ್ತ್ವವನ್ನು ಸರಿಯಾಗಿ ತಿಳಿಯುತ್ತಾನೆ? ಕಂಡುಕೊಳ್ಳುತ್ತಾನೆ? ತಮೋಗುಣದಲ್ಲಿ ಪ್ರವೃತ್ತರಾದವರಿಗೆ ಬ್ರಹ್ಮಜ್ಞಾನವು ಲಭಿಸುವುದಿಲ್ಲ.
ತಮೋಗುಣಾ ವೋ ಬಹವೋಽನುಕೀರ್ತಿತಾ
ಯಥಾವದುಕ್ತಂ ಚ ತಮಃ ಪರಾವರಮ್ |
ನರೋ ಹಿ ಯೋ ವೇದ ಗುಣಾನಿಮಾನ್ ಸದಾ
ಸ ತಾಮಸೈಃ ಸರ್ವಗುಣೈರ್ವಿಮುಚ್ಯತೇ ॥39॥
ಬ್ರಾಹ್ಮಣಶ್ರೇಷ್ಠರೇ, ತಮೋಗುಣದ ಸ್ವರೂಪ, ಅದರ ಪ್ರಕಾರ, ತಮೋಗುಣದಿಂದ ಪ್ರಾಪ್ತವಾಗುವ ಉಚ್ಚ-ನೀಚ ಯೋನಿಗಳು ಎಲ್ಲವನ್ನೂ ಯಥಾವತ್ತಾಗಿ ತಿಳಿಸಿದ್ದೇನೆ. ತಮೋಗುಣದಿಂದ ಆಗುವ ದುರ್ದಶೆಯನ್ನು ತಿಳಿದುಕೊಂಡು ಯಾವನು ಜಾಗೃತನಾಗುತ್ತಾನೋ ಅವನು ತಾಮಸಗುಣದಿಂದ ಬಿಡುಗಡೆ ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ತಮೋಗುಣವಿಚಾರಕಥನಂ ನಾಮ ಸಪ್ತತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆಂಟನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು ರಜೋಗುಣದ ಕಾರ್ಯವನ್ನು ನಿರೂಪಿಸಿದುದು.
ಬ್ರಹ್ಮಾ
ರಜೋಽಹಂ ವೈ ಪ್ರವಕ್ಷ್ಯಾಮಿ ಯಾಥಾತಥ್ಯೇನ ಸತ್ತಮಾಃ |
ನಿಬೋಧತ ಮಹಾಭಾಗಾ ಗುಣವೃತ್ತಂ ಚ ಸರ್ವಶಃ ॥1॥
ಬ್ರಹ್ಮಾ ಮಹಾಭಾಗ್ಯಶಾಲಿಗಳಾದ ಮುನಿಶ್ರೇಷ್ಠರೇ, ನಿಮಗೆ ರಜೋಗುಣದ ವಿಷಯವನ್ನು ನಾನು ಯಥಾರ್ಥವಾಗಿ ತಿಳಿಸುತ್ತೇನೆ. ರಜೋಗುಣಕ್ಕೆ ಸಂಬಂಧಿಸಿದ ಗುಣವೃತ್ತವನ್ನು ಸಮಗ್ರವಾಗಿ ಕೇಳಿರಿ.
ಸಂಕಲ್ಪೋ ರೂಪಮಾಯಾಸಃ ಸುಖದುಃಖೇ ಹಿಮಾತಪೌ |
ಐಶ್ವರ್ಯಂ ವಿಗ್ರಹಃ ಸಿದ್ಧಿರ್ಹೇತುವಾದೋಽರತಿಃ ಕ್ಷಮಾ ॥2॥
ಬಲಂ ಶೌರ್ಯಂ ಮದೋ ರೋಷೋ ವ್ಯಾಯಾಮಕಲಹಾವಪಿ |
ಈರ್ಷ್ಯೇಪ್ಸಾ ಪೈಶುನಂ ಯುದ್ಧಂ ಮಮತ್ವಂ ಪರಿಪಾಲನಮ್ ॥3॥
ವಧಬಂಧಪರಿಕ್ಲೇಶಾಃ ಕ್ರಯೋ ವಿಕ್ರಯ ಏವ ಚ |
ನಿಕೃಂತ ಚ್ಛಿಂಧಿ ಭಿಂಧೀತಿ ಪರಮರ್ಮಾವಕರ್ತನಮ್ ॥4॥

ಉಗ್ರಂ ದಾರುಣಮಾಕ್ರೋಶಃ ಪರವಿತ್ತಾನುರಾಗಿತಾ |
ಲೋಕಚಿಂತಾ ವಿಚಿಂತಾ ಚ ಮತ್ಸರಃ ಪರಿಭಾಷಣಮ್ ॥5॥
ವೃಥಾ ಶಾಸ್ತ್ರಂ ಮೃಷಾವಾದೋ ವಿಕಲ್ಪಪರಿಭಾಷಣಮ್ |
ನಿಂದಾ ಸ್ತುತಿಃ ಪ್ರಶಂಸಾ ಚ ಪ್ರತಾಪಃ ಪರಿತರ್ಪಣಮ್ ॥6॥
ಪರಿಚರ್ಯಾ ಚ ಶುಶ್ರೂಷಾ ಸೇವಾ ತೃಷ್ಣಾ ವ್ಯಪಾಶ್ರಯಃ |
ವ್ಯೂಹೋ ನಯಃ ಪ್ರಮಾದಶ್ಚ ಪರಿತಾಪಃ ಪರಿಗ್ರಹಃ ॥7॥
ಸಂಕಲ್ಪ, ರೂಪ, ಆಯಾಸ, ಸುಖ-ದುಃಖಗಳು, ಚಳಿ, ಬಿಸಿಲು, ಐಶ್ವರ್ಯ, ಕಲಹ, ಸಿದ್ಧಿಗಳು, ಕುತರ್ಕ, ಸಹನೆ, ಅಪ್ರಸನ್ನತೆ, ಬಲ, ಶೌರ್ಯ, ಮದ, ರೋಷ, ವ್ಯಾಯಾಮ, ಕಲಹಗಳು, ಈರ್ಷ್ಯೆ, ಆಸೆ, ಚಾಡಿ ಹೇಳುವಿಕೆ, ಯುದ್ಧ ಮಾಡುವಿಕೆ, ಮಮತ್ವ, ಕುಟುಂಬ ಪಾಲನೆ, ವಧೆ, ಬಂಧನ, ಕ್ಲೇಶ, ಕ್ರಯ, ವಿಕ್ರಯ, ಕತ್ತರಿಸುವುದು, ಹೊಡೆಯುವುದು, ಸೀಳುವುದು, ಮರ್ಮಸ್ಥಳಗಳನ್ನು ಭೇದಿಸುವುದು, ಉಗ್ರತೆ, ನಿಷ್ಠುರತೆ, ಕೂಗಾಟ, ಇತರರ ಸ್ವತ್ತಿನಲ್ಲಿ ಆಸಕ್ತಿ, ಶೋಕ, ಚಿಂತೆ, ತಿರಸ್ಕಾರ, ಮತ್ಸರ, ಸಾಂಸಾರಿಕ ಭಾವನೆಯಿಂದ ಮಾತನಾಡುವುದು, ಬೇಡವಾದ ಪುರಾಣಗಳನ್ನು ಓದುವುದು, ಸುಳ್ಳು ಹೇಳುವುದು, ಸಂಶಯದಿಂದ ಮಾತನಾಡುವುದು, ನಿಂದಾ, ಸ್ತುತಿ, ಪ್ರಶಂಸೆ, ಪ್ರತಾಪ, ಮತ್ತೊಬ್ಬರನ್ನು ಸಂತೋಷ ಪಡಿಸುವುದು, ಸೇವಿಸುವುದು, ಚಾಕರಿ, ಸೇವೆ, ತೃಷ್ಣಾ, ವ್ಯಪಾಶ್ರಯ, ವ್ಯೂಹ, ಪ್ರಮಾದ, ನಯ, ಪ್ರಮಾದ, ಪರಿತಾಪ, ಪರಿಗ್ರಹ.
ಸಂಸ್ಕಾರಾ ಯೇ ಚ ಲೋಕೇಽಸ್ಮಿನ್ ಪ್ರವರ್ತಂತೇ ವೃಥಾ ಪೃಥಕ್ |
ನೃಷು ನಾರೀಷು ಭೂತೇಷು ದ್ರವ್ಯೇಷು ಶರಣೇಷು ಚ ॥8॥
ಪ್ರಪಂಚದಲ್ಲಿ ಸ್ತ್ರೀಯರು, ಪುರುಷರು, ಪ್ರಾಣಿಗಳು, ದ್ರವ್ಯ, ಮನೆ - ಇವುಗಳಿಗೆ ಯಾವ ಸಂಸ್ಕಾರಗಳಾಗುತ್ತವೋ ಅವೆಲ್ಲವೂ ರಜೋಗುಣದ ಪ್ರೇರಣೆಯಿಂದಲೇ ಆಗುತ್ತವೆ.
ಸಂತಾಪೋಽಪ್ರತ್ಯಯಶ್ಚೈವ ವ್ರತಾನಿ ನಿಯಮಾಶ್ಚ ಯೇ |
ಪ್ರಮದಾ ಶೀಲಯುಕ್ತಾ ಚ ಸತತಂ ಮೇ ಭವಿಷ್ಯತಿ ॥9॥
ಸ್ವಧಾಕಾರೋ ನಮಸ್ಕಾರಃ ಸ್ವಾಹಾಕಾರೋ ವಷಟ್ಕ್ರಿಯಾ |
ಯಾಜನಾಧ್ಯಾಪನೇ ಚೋಭೇ ತಥೈವಾಹುಃ ಪ್ರತಿಗ್ರಹಮ್ ॥10॥
ಸಂತಾಪ, ಅವಿಶ್ವಾಸ, ವ್ರತ, ನಿಯಮ, ಇಷ್ಟವಾದುದನ್ನು ಪ್ರಾರ್ಥಿಸುವುದು, ಪ್ರಮದೆಯರಲ್ಲಿ ಆಸಕ್ತಿ, ಸ್ವಧಾಕಾರ, ನಮಸ್ಕಾರ, ಸ್ವಾಹಾಕಾರ, ವಷಟ್ಕ್ರಿಯಾ, ಯಜನ, ಅಧ್ಯಾಪನ, ಪ್ರತಿಗ್ರಹ - ಇವೆಲ್ಲವೂ ರಜೋಗುಣದಿಂದಲೇ ಉಂಟಾಗುತ್ತವೆ.
ಇದಂ ಮೇ ಸ್ಯಾದಿದಂ ಮೇ ಸ್ಯಾತ್ ಸ್ನೇಹೋ ಗುಣಸಮುದ್ಭವಃ ॥11॥
ಇದು ನನಗೆ ಒದಗಲಿ, ಇದು ನನಗೆ ಸಿಕ್ಕಲಿ ಎಂಬ ಸ್ನೇಹ, ಇವೆಲ್ಲವೂ ರಜೋಗುಣದಿಂದ ಉತ್ಪನ್ನವಾಗುತ್ತವೆ.
ಅಭಿದ್ರೋಹಸ್ತಥಾ ಮಾಯಾ ನಿಕೃತಿರ್ಮಾನ ಏವ ಚ |
ಸ್ತೇಯಂ ಹಿ ಸಂಪರೀವಾದಃ ಪರಿತಾಪಃ ಪ್ರಜಾಗರಃ ॥12॥
ದಂಭೋ ದರ್ಪೋಽಥ ರಾಗಶ್ಚ ಭಕ್ತಿಃ ಪ್ರೀತಿಃ ಪ್ರಮೋದನಮ್ |
ದ್ಯೂತಂ ಚ ಜನವಾದಶ್ಚ ಸಂಬಂಧಾಃ ಸ್ತ್ರೀಕೃತಾಶ್ಚ ಯೇ ॥13॥
ನೃತ್ತವಾದಿತ್ರಗೀತಾನಿ ಪ್ರಸಂಗಾ ಯೇ ಚ ಕಿಂಚನ |
ಸರ್ವ ಏತೇ ಗುಣಾ ವಿಪ್ರಾ ರಾಜಸಾಃ ಸಂಪ್ರಕೀರ್ತಿತಾಃ ॥14॥
ದ್ರೋಹ, ಮಾಯಾ, ತಿರಸ್ಕಾರ, ವಂಚನೆ, ಮಾನ, ಕಳ್ಳತನ, ಅಪವಾದ, ಪರಿತಾಪ, ಜಾಗರಣ, ದಂಭ, ದರ್ಪ, ರಾಗ, ಭಕ್ತಿ, ಪ್ರೀತಿ, ಪ್ರಮೋದ, ದ್ಯೂತ ಕ್ರೀಡೆ, ಲೋಕವಿವಾದ, ಸ್ತ್ರೀಜನರ ಸಂಬಂಧ, ನೃತ್ಯ-ವಾದ್ಯ-ಗಾಯನಗಳಲ್ಲಿ ಆಸಕ್ತಿ - ಇವೆಲ್ಲವೂ ರಾಜಸಕರ್ಮಗಳೆಂದು ಹೇಳಲ್ಪಟ್ಟಿವೆ.
ಭೂತಭವ್ಯಭವಿಷ್ಯಾಣಾಂ ಭೂತಾನಾಂ ಭುವಿ ಭಾವನಾತ್ |
ತ್ರಿವರ್ಗನಿರತಾ ನಿತ್ಯಂ ಧರ್ಮೋಽರ್ಥಃ ಕಾಮ ಇತ್ಯಪಿ ॥15॥
ಕಾಮವೃತ್ತಾಃ ಪ್ರಮೋದಂತೇ ಸರ್ವಕಾಮಸಮೃದ್ಧಿಭಿಃ |
ಅರ್ವಾಕ್ಸ್ರೋತಸ ಇತ್ಯೇತೇ ತೇ ಜನಾ ರಾಜಸಾಃ ಸ್ಮೃತಾಃ ॥16॥
ಪ್ರಪಂಚದಲ್ಲಿ ಹಿಂದಿನದ್ದು, ಈಗಿನದ್ದು, ಮುಂದಿನದ್ದನ್ನು ಯಾರು ಯೋಚಿಸುತ್ತಾರೋ, ಧರ್ಮ-ಅರ್ಥ-ಕಾಮ ಸೇವನೆಯಲ್ಲಿ ರತರಾಗಿರುತ್ತಾರೋ, ಸ್ವೇಚ್ಛಾಚಾರಿಗಳಾಗಿ ಭೋಗಸಮೃದ್ಧಿಯಿಂದಲೇ ಆನಂದ ಪಡುತ್ತಾರೋ ಅವರೇ ರಜೋಗುಣದಿಂದ ಆವೃತರಾದ ಮನುಷ್ಯರು. ಅವರು ಭೂಮಿಯಿಂದ ಕೆಳಮುಖವಾಗಿಯೇ ಗಮನವುಳ್ಳವರು.
ಅಸ್ಮಿನ್ ಲೋಕೇ ಪ್ರಮೋದಂತೇ ಜಾಯಮಾನಾಃ ಪುನಃ ಪುನಃ ॥17॥
ಪ್ರೇತ್ಯಭಾವಿಕಮಿಚ್ಛಂತಿ ಐಹಲೌಕಿಕಮೇವ ಚ |
ದಾನಾನಿ ಪ್ರತಿಗೃಹ್ಣಂತಿ ತೃಪ್ಯಂತ್ಯಥ ಚ ಜುಹ್ವತಿ ॥18॥
ಇಂತಹ ಜನರು ಭೂಲೋಕದಲ್ಲಿ ಪುನಃ ಹುಟ್ಟುತ್ತಾ, ವಿಷಯಸುಖದಲ್ಲಿಯೇ ಮಗ್ನರಾಗಿರುತ್ತಾರೆ. ಈ ಲೋಕದಲ್ಲಿ, ಪರಲೋಕದಲ್ಲಿ ಸುಖವನ್ನು ಪಡೆಯಲು ಕರ್ಮಗಳನ್ನು ಮಾಡಿ ಪ್ರಯತ್ನಿಸುತ್ತಾರೆ. ಆದ್ದರಿಂದಲೇ ಕಾಮನೆಯ ಹಿನ್ನೆಲೆಯಲ್ಲಿಯೇ ದಾನ ಮಾಡುತ್ತಾರೆ, ದಾನವನ್ನು ಸ್ವೀಕರಿಸುತ್ತಾರೆ, ಅತಿಥಿಗಳನ್ನು ತೃಪ್ತಿಗೊಳಿಸುತ್ತಾರೆ, ಯಜ್ಞಗಳನ್ನು ಮಾಡುತ್ತಾರೆ.
ರಜೋಗುಣಾ ವೋ ಬಹುಧಾಽನುಕೀರ್ತಿತಾ
ಯಥಾವದುಕ್ತಂ ಗುಣವೃತ್ತಮೇವ ಚ |
ನರೋ ಹಿ ಯೋ ವೇದ ಗುಣಾನಿಮಾನ್ ಸದಾ

ಸ ರಾಜಸ್ಯೈಃ ಸರ್ವಗುಣ್ಯೈರ್ವಿಮುಚ್ಯತೇ ॥19॥
ಮುನಿಶ್ರೇಷ್ಠರೇ, ನಿಮಗೆ ರಜೋಗುಣದ ಅನೇಕ ಪ್ರಕಾರಗಳನ್ನು, ಸ್ವರೂಪಗಳನ್ನು, ಅದರಿಂದ ನಡೆಯುವ ಕರ್ಮಗಳನ್ನು ಯಥಾವತ್ತಾಗಿ ಹೇಳಿದ್ದೇನೆ. ಯಾವ ಮನುಷ್ಯನು ರಜೋಗುಣಕ್ಕೆ ಸಂಬಂಧಿಸಿದ ಈ ಗುಣಗಳನ್ನು ತಿಳಿದುಕೊಳ್ಳುತ್ತಾನೋ ಅವನು ರಜೋಗುಣದಿಂದ ಬಿಡುಗಡೆಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ರಜೋಗುಣಲಕ್ಷಣಕಥನಂ ನಾಮ ಅಷ್ಟತ್ರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂಬತ್ತನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು
ಸತ್ವಗುಣದ ಕಾರ್ಯವನ್ನು ನಿರೂಪಿಸಿದುದು.
ಬ್ರಹ್ಮಾ
ಅತಃ ಪರಂ ಪ್ರವಕ್ಷ್ಯಾಮಿ ತೃತೀಯಂ ಗುಣಮುತ್ತಮಮ್ |
ಸರ್ವಭೂತಹಿತಂ ಲೋಕೇ ಸತಾಂ ಧರ್ಮಮನಿಂದಿತಮ್ ॥1॥
ಬ್ರಹ್ಮಾ ಮಹರ್ಷಿಗಳೇ, ಇನ್ನು ಮುಂದೆ ಸಕಲ ಪ್ರಾಣಿಗಳಿಗೆ ಹಿತಕರವಾದ, ಅನಿಂದ್ಯವಾದ, ಸಜ್ಜನರು ಆಶ್ರಯಿಸಲು ಅರ್ಹವಾದ, ಮೂರನೆಯದ್ದಾದ ಸತ್ವ ಗುಣದ ಮಹತ್ವವನ್ನು ವಿವರಿಸುತ್ತೇನೆ.
ಆನಂದಃ ಪ್ರೀತಿರುದ್ರೇಕಃ ಪ್ರಾಕಾಶ್ಯಂ ಸುಖಮೇವ ಚ |
ಅಕಾರ್ಪಣ್ಯಮಸಂರಂಭಃ ಸಂತೋಷಃ ಶ್ರದ್ದಧಾನತಾ ॥2॥
ಕ್ಷಮಾ ಧೃತಿರಹಿಂಸಾ ಚ ಸಮತಾ ಸತ್ಯಮಾರ್ಜವಮ್ |
ಅಕ್ರೋಧಶ್ಚಾನಸೂಯಾ ಚ ಶೌಚಂ ದಾಕ್ಷ್ಯಂ ಪರಾಕ್ರಮಃ ॥3॥
ಆನಂದ, ಪ್ರೀತಿ, ಉನ್ನತಿ, ಪ್ರಕಾಶ, ಸುಖ, ಕೃಪಣತೆ (ಜಿಪುಣತೆ) ಇಲ್ಲದಿರುವಿಕೆ, ನಿರ್ಭಯತೆ, ನಿರಂತರ ಕಾರ್ಯಚಟುವಟಿಕೆ, ಸಂತೋಷ, ಶ್ರದ್ಧೆ, ಕ್ಷಮೆ, ಧೈರ್ಯ, ಅಹಿಂಸೆ, ಸಮತ್ವ, ಸತ್ಯ, ಸರಳತೆ, ಅಕ್ರೋಧ, ಅಮಾತ್ಸರ್ಯ, ಪಾವಿತ್ರ್ಯ, ಚತುರತೆ, ಪರಾಕ್ರಮ - ಇವುಗಳು ಸತ್ವಗುಣದ ಕಾರ್ಯವಾಗಿವೆ.
ಮುಧಾ ಜ್ಞಾನಂ ಮುಧಾ ವೃತ್ತಂ ಮುಧಾ ಸೇವಾ ಮುಧಾ ಶ್ರಮಃ |
ಏವಂ ಯೋ ಯುಕ್ತಧರ್ಮಃ ಸ್ಯಾತ್ ಸೋಽಮುತ್ರಾನಂತ್ಯಮಶ್ನುತೇ ॥
ಪ್ರಯೋಜನವಿಲ್ಲದೆ ಜ್ಞಾನವನ್ನು ಆಕಾಂಕ್ಷಿಸುವುದು, ಪ್ರಯೋಜನದ ಅಪೇಕ್ಷೆ ಇಲ್ಲದೆ ಭಗವತ್ಪ್ರೀತಿಗಾಗಿ ಕರ್ಮಗಳನ್ನು ಮಾಡುವುದು, ಭಗವಂತನನ್ನು ಸೇವಿಸುವುದು, ಭಗವಂತನಿಗಾಗಿಯೇ ಶ್ರಮ ಹೊಂದುವುದು - ಈ ರೀತಿಯಾದ ಸತ್ವಗುಣದ ಧರ್ಮದಲ್ಲಿ ಯಾವನು ನಿರತನಾಗಿರುತ್ತಾನೋ ಅಂತಹವನು ಪರಲೋಕದಲ್ಲಿ ಅಕ್ಷಯವಾದ ಸುಖವನ್ನು ಹೊಂದುತ್ತಾನೆ.
ಅಥವಾ ಈ ಶ್ಲೋಕವನ್ನು ಇನ್ನೊಂದು ಕ್ರಮದಲ್ಲಿಯೂ ವ್ಯಾಖ್ಯಾನಿಸಬಹುದು. ವ್ಯರ್ಥವಾದ ಜ್ಞಾನವನ್ನು ಪಡೆಯದೆ ಲೌಕಿಕ ವ್ಯವಹಾರವನ್ನು ವ್ಯರ್ಥ ಎಂದು ಪರಿಗಣಿಸಿ, ವ್ಯರ್ಥವಾದ ಅನೀತಿವಂತರ ಸೇವೆಯನ್ನು ಮಾಡದೆ ಭೌತಿಕ ಸುಖಗಳು ವ್ಯರ್ಥವೆಂದು ಭಾವಿಸಿ ಯಾವನು ಯೋಗ್ಯಧರ್ಮಗಳನ್ನು ಅನುಷ್ಠಾನ ಮಾಡುತ್ತಾನೋ ಅವನು ಪರಲೋಕದಲ್ಲಿ ಸುಖ ಅನುಭವಿಸುತ್ತಾನೆ.
ನಿರ್ಮಮೋ ನಿರಹಂಕಾರೋ ನಿರಾಶೀಃ ಸರ್ವತಃ ಸಮಃ |
ಅಕಾಮಹತ ಇತ್ಯೇಷ ಸತಾಂ ಧರ್ಮಃ ಸನಾತನಃ ॥5॥
ಮಮತೆಯನ್ನು ಬಿಟ್ಟು, ಅಹಂಕಾರ ವರ್ಜಿಸಿ, ಆಶಾರಹಿತನಾಗಿ, ಎಲ್ಲರಲ್ಲಿಯೂ ಭಗವಂತನನ್ನು ಕಾಣುತ್ತಾ, ನಿಷ್ಕಾಮಭಾವದಿಂದ ಇರುವುದೇ ಸತ್ಪುರುಷರ ಸನಾತನ ಧರ್ಮವಾಗಿದೆ.
ವಿಸ್ರಂಭೋ ಹ್ರೀಸ್ತಿತಿಕ್ಷಾ ಚ ತ್ಯಾಗಃ ಶೌಚಮತಂದ್ರಿತಾ |
ಆನೃಶಂಸ್ಯಮಸಮ್ಮೋಹೋ ದಯಾ ಭೂತೇಷ್ವಪೈಶುನಮ್ ॥6॥
ಹರ್ಷಸ್ತುಷ್ಟಿರ್ವಿಸ್ಮಯಶ್ಚ ವಿನಯಃ ಸಾಧುವೃತ್ತಿತಾ |
ಶಾಂತಿಃ ಕರ್ಮವಿಶುದ್ಧಿಶ್ಚ ಶುಭಾ ಬುದ್ಧಿರ್ವಿಮೋಚನಮ್ ॥7॥
ಉಪೇಕ್ಷಾ ಬ್ರಹ್ಮಚರ್ಯಂ ಚ ಪರಿತ್ಯಾಗಶ್ಚ ಸರ್ವಶಃ |
ನಿರ್ಮಮತ್ವಮನಾಶೀಷ್ಟ್ವಮ್ ಅಪರಿಕ್ಷತಧರ್ಮತಾ ॥8॥
ವಿಶ್ವಾಸ, ಲಜ್ಜೆ, ಸಹನೆ, ತ್ಯಾಗ, ಪಾವಿತ್ರ್ಯ, ಉತ್ಸಾಹ, ಕಾರುಣ್ಯ, ಯಥಾರ್ಥ ಜ್ಞಾನ, ಪ್ರಾಣಿದಯಾ, ಸತ್ಯವಚನ, ಹರ್ಷ, ಪುಷ್ಟಿ, ನಿಗರ್ವ, ವಿನಯ, ಪ್ರಾಮಾಣಿಕ ವ್ಯವಹಾರ, ಶಾಂತಿ-ಕರ್ಮಗಳಲ್ಲಿ ಶುದ್ಧ ಮನಸ್ಸು, ಉತ್ತಮ ಬುದ್ಧಿ, ಸಂಸಾರ ಬಿಡುಗಡೆಯ ಯೋಚನೆ, ಲೌಕಿಕ ವ್ಯವಹಾರದಲ್ಲಿ ಉಪೇಕ್ಷೆ, ಬ್ರಹ್ಮಚರ್ಯ, ಸರ್ವ ಸಂಗ ಪರಿತ್ಯಾಗ, ನಿರ್ಮಮತೆ, ನಿಷ್ಕಾಮನೆ, ನಿರಂತರ ಧರ್ಮಕಾರ್ಯಗಳಲ್ಲಿ ಆಸಕ್ತಿ - ಇವುಗಳು ಸತ್ವಗುಣದ ಕಾರ್ಯಗಳು.
ಮುಧಾ ದಾನಂ ಮುಧಾ ಯಜ್ಞೋ ಮುಧಾಽಧೀತಂ ಮುಧಾ ವ್ರತಮ್ |
ಮುಧಾ ಪ್ರತಿಗ್ರಹಶ್ಚೈವ ಮುಧಾ ಧರ್ಮೋ ಮುಧಾ ತಪಃ ॥9॥
ಏವಂ ವೃತ್ತಾಸ್ತು ಯೇ ಕೇಚಿಲ್ಲೋಕೇಽಸ್ಮಿನ್ ಸತ್ವಸಂಶ್ರಯಾಃ |

ಬ್ರಾಹ್ಮಣಾ ಬ್ರಹ್ಮಯೋನಿಸ್ಥಾಸ್ತೇ ಧೀರಾಃ ಸಾಧುದರ್ಶಿನಃ ॥10॥
ಸಕಾಮದ ದಾನ, ಸಕಾಮದ ಯಜ್ಞ, ಸಕಾಮದ ಅಧ್ಯಯನ, ಸಕಾಮ ವ್ರತ, ಸಕಾಮ ಪರಿಗ್ರಹ, ಸಕಾಮ ಧರ್ಮ, ತಪಸ್ಸುಗಳು ವ್ಯರ್ಥವಾದುವೆಂದು ತಿಳಿದು ಯಾರು ನಿಷ್ಕಾಮದಿಂದ ಧರ್ಮಗಳನ್ನು ಆಚರಿಸುತ್ತಾರೋ, ಸತ್ವಗುಣವನ್ನೇ ಆಶ್ರಯಿಸಿಕೊಂಡು ಪರಬ್ರಹ್ಮನಲ್ಲಿ ಆಸಕ್ತರಾಗಿ ಕರ್ಮಗಳನ್ನು ಮಾಡುತ್ತಾರೋ ಅವರು ಸಾಧುದರ್ಶಿಗಳು, ಧೀರರು ಎಂದು ಕರೆಸಿಕೊಳ್ಳುತ್ತಾರೆ.
ಜಿತ್ವಾ ಸರ್ವಾಣಿ ಪಾಪಾನಿ ನಿಃಶೋಕಾ ಹ್ಯಜರಾಮರಾಃ|
ದಿವ್ಯಂ ಪ್ರಾಪ್ಯ ತು ತೇ ಧೀರಾಃ ಕುರ್ವತೇ ವೈ ತತಸ್ತನೂಃ ॥11॥
ಎಲ್ಲ ಪಾಪಕರ್ಮಗಳನ್ನು ಶೋಕದಿಂದ ದಾಟಿ, ಅಜರಾಮರರಾಗಿ, ಅನೇಕ ಭೋಗ ಯೋಗ್ಯವಾದ ಶರೀರಗಳನ್ನು ಧರಿಸಿ, ದಿವ್ಯಲೋಕಕ್ಕೆ ಹೋಗಿ ವಿಹರಿಸುತ್ತಾರೆ.
ಈಶಿತ್ವಂ ಚ ವಶಿತ್ವಂ ಚ ಲಘುತ್ವಂ ಚಾಣುತಾ ತಥಾ|
ವಿಕುರ್ವಂತೋ ಮಹಾತ್ಮಾನೋ ದೇವಾಸ್ತ್ರಿದಿವಗಾ ಇವ ॥12॥
ಸತ್ವಗುಣಸಂಪನ್ನರಾದ ಮಹಾತ್ಮರು ಸ್ವರ್ಗಸ್ಥ ದೇವತೆಗಳಂತೆ ಈಶಿತ್ವ, ವಶಿತ್ವ, ಲಘುತ್ವ, ಅಣುತ್ವ ಇವುಗಳ ಸಿದ್ಧಿಯನ್ನು ಪಡೆದು ದೇವತೆಗಳಂತೆ ವಿಹರಿಸುತ್ತಾರೆ.
ಊರ್ಧ್ವಸ್ರೋತಸ ಇತ್ಯೇತೇ ದೇವಾ ವೈಕಾರಿಕಾಃ ಸ್ಮೃತಾಃ|
ವಿಕುರ್ವಂತಃ ಪ್ರಕೃತ್ಯಾ ವೈ ದಿವಂ ಪ್ರಾಪ್ತಾಸ್ತತಸ್ತತಃ ॥13॥
ಯದ್ಯದಿಚ್ಛಂತಿ ತತ್ಸರ್ವಂ ಭಜಂತೇ ವಿಭಜಂತಿ ಚ ॥14॥
ಊರ್ಧ್ವಸ್ರೋತ ಎಂದು ಕರೆಸಿಕೊಳ್ಳಲ್ಪಡುವ ಇವರು ವೈಕಾರಿಕ ದೇವತೆಗಳೆಂದೂ ಕರೆಸಿಕೊಳ್ಳುತ್ತಾರೆ. ಯೋಗಬಲದಿಂದ ಸ್ವರ್ಗಕ್ಕೆ ತೆರಳಿ, ಅಲ್ಲಿಯ ಭೋಗಜನಕವಾದ ಸಂಸ್ಕಾರಗಳಿಂದ ಅವರ ಮನಸ್ಸು ವಿಕಾರಗೊಳ್ಳುತ್ತದೆ. ಅಲ್ಲಿ ಏನೇನನ್ನು ಬಯಸುತ್ತಾರೋ ಅವೆಲ್ಲವನ್ನೂ ಹೊಂದುತ್ತಾರೆ, ಮತ್ತೊಬ್ಬರಿಗೂ ದಾನ ಮಾಡುತ್ತಾರೆ.
ಇತ್ಯೇತತ್ ಸಾತ್ವಿಕಂ ವೃತ್ತಂ ಕಥಿತಂ ವೋ ದ್ವಿಜರ್ಷಭಾಃ|
ಏತದ್ ವಿಜ್ಞಾಯ ವಿಧಿವತ್ ಲಭತೇ ಯದ್ಯದಿಚ್ಛತಿ ॥15॥
ಬ್ರಾಹ್ಮಣರೇ, ಸತ್ವಗುಣದ ಕಾರ್ಯವನ್ನು ನಿಮಗೆ ಹೇಳಿದ್ದೇನೆ. ಯಾರು ಈ ಗುಣದ ಕಾರ್ಯವನ್ನು ಚೆನ್ನಾಗಿ ತಿಳಿಯುತ್ತಾರೋ ಅವರು ಅಪೇಕ್ಷಿಸಿದ ವಸ್ತುಗಳೆಲ್ಲವನ್ನೂ ಪಡೆದುಕೊಳ್ಳುತ್ತಾರೆ.
ಪ್ರಕೀರ್ತಿತಾಃ ಸತ್ತ್ವಗುಣಾ ವಿಶೇಷತೋ
ಯಥಾವದುಕ್ತಂ ಗುಣವೃತ್ತಮೇವ ಚ|
ನರಸ್ತು ಯೋ ವೇದ ಗುಣಾನಿಮಾನ್ ಸದಾ
ಗುಣಾನ್ ಸ ಭುಂಕ್ತೇ ನ ಗುಣೈಸ್ತು ಭುಜ್ಯತೇ ॥16॥
ಸತ್ವಗುಣದ ವಿಷಯವಾಗಿ ಅನೇಕ ವಿಷಯವನ್ನು ಹೇಳಿದ್ದೇನೆ. ಅದರ ಕಾರ್ಯವನ್ನು ಹೇಳಿದ್ದೇನೆ. ಯಾವ ಮನುಷ್ಯನು ಈ ಗುಣವನ್ನು ತಿಳಿದುಕೊಳ್ಳುತ್ತಾನೋ ಅವನು ಸತ್ವಗುಣ ಯೋಗ್ಯವಾದ ಫಲವನ್ನೇ ಹೊಂದುತ್ತಾನೆ. ತ್ರಿಗುಣಗಳ ಬಂಧನವು ಇವನಿಗಿರುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಸತ್ವಗುಣವಿಚಾರೋ ನಾಮ ಏಕೋನಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಮೂವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು
ಸತ್ವಾದಿಗುಣತ್ರಯವನ್ನು ನಿರೂಪಿಸಿದುದು.
ಬ್ರಹ್ಮಾ
ನ ವೈ ಶಕ್ಯಾ ಮಯಾ ವಕ್ತುಂ ಪೃಥಕ್ತ್ವೇನೈವ ಸರ್ವಶಃ|
ಅವಿಚ್ಛಿನ್ನಾನಿ ದೃಶ್ಯಂತೇ ರಜಃ ಸತ್ವಂ ತಮಸ್ತಥಾ ॥1॥
ಬ್ರಹ್ಮಾ ಮಹರ್ಷಿಗಳೇ, ಮೂರುಗುಣಗಳ ಬಗ್ಗೆ ಪ್ರತ್ಯೇಕ, ಪ್ರತ್ಯೇಕವಾಗಿ ನಿರೂಪಿಸುವುದು ಅಶಕ್ಯವಾದುದು. ಕಾರಣ ಈ ಮೂರುಗುಣಗಳು ಯಾವಾಗಲೂ ಮನುಷ್ಯರಲ್ಲಿ ಅವಿಚ್ಛಿನ್ನವಾಗಿ ವ್ಯಾಪಾರ ಮಾಡುತ್ತಲೇ ಇರುತ್ತವೆ.
ಅನ್ಯೋನ್ಯೇನಾನುರಜ್ಯಂತೇ ತ್ವನ್ಯೋನ್ಯೇನಾನುಜೀವಿನಃ|
ಅನ್ಯೋನ್ಯಾಪಾಶ್ರಯಾಃ ಸರ್ವೇ ತಥಾಽನ್ಯೋನ್ಯಾನುವರ್ತಿನಃ ॥2॥
ಈ ಗುಣಗಳು ಪರಸ್ಪರ ಒಂದಕ್ಕೊಂದು ಸೇರಿಕೊಂಡೇ ಸಂತೋಷಪಡುತ್ತವೆ. ಒಂದಕ್ಕೊಂದು ಸೇರಿಕೊಂಡು ಜೀವಿಸುತ್ತವೆ. ಎಲ್ಲ ಗುಣಗಳು ಪರಸ್ಪರವಾಗಿ ಒಂದನ್ನು ಇನ್ನೊಂದು ಆಶ್ರಯಿಸಿಯೇ ಇರುತ್ತವೆ. ಒಂದನ್ನು ಇನ್ನೊಂದು ಅನುಸರಿಸಿಯೇ ಹೋಗುತ್ತದೆ.
ಯಾವತ್ ಸತ್ವಂ ರಜಸ್ತಾವದ್ ವರ್ತತೇ ನಾತ್ರ ಸಂಶಯಃ|
ಯಾವತ್ ತಮಶ್ಚ ಸತ್ವಂ ಚ ರಜಸ್ತಾವದಿಹೋಚ್ಯತೇ ॥3॥
ಎಲ್ಲಿಯ ತನಕ ಜಗತ್ತಿನಲ್ಲಿ ಸತ್ವಗುಣವಿರುತ್ತದೋ ಅಲ್ಲಿಯ ತನಕವೂ ರಜೋಗುಣವು ಇದ್ದೇ ಇರುತ್ತದೆ. ಇದರಲ್ಲಿ ಯಾವ

ಸಂಶಯವೂ ಬೇಡ. ಇದರಂತೆ ಎಷ್ಟರವರೆಗೆ ತಮಸ್ಸು, ಸತ್ವಗುಣಗಳು ಇರುತ್ತವೋ ಅಲ್ಲಿಯ ತನಕ ರಜೋಗುಣವು ಇರುತ್ತದೆ.
ಸಂಹತ್ಯ ಕುರ್ವತೇ ಯಾತ್ರಾಂ ಸಹಿತಾಃ ಸಂಘಚಾರಿಣಃ |
ಸಂಘಾತವೃತ್ತಯೋ ಹ್ಯೇತೇ ವರ್ತಂತೇ ಹೇತ್ವಹೇತುಭಿಃ ॥4॥
ಈ ಮೂರು ಗುಣಗಳು ಒಟ್ಟಾಗಿ ಸಂಘಟಿತವಾಗಿ ಯಾತ್ರೆಯನ್ನು ಮಾಡುತ್ತವೆ. ಒಟ್ಟಾಗಿ ಸೇರಿಕೊಂಡೇ ಸಂಚರಿಸುತ್ತವೆ. ಪರಸ್ಪರ ಸೇರಿಕೊಂಡೇ ಶರೀರದಲ್ಲಿ ಇರುತ್ತವೆ.
ಉದ್ರೇಕವ್ಯತಿರಿಕ್ತಾನಾಂ ತೇಷಾಮನ್ಯೋನ್ಯವರ್ತಿನಾಮ್ |
ವರ್ತತೇ ಯದ್ಯಥಾಽನ್ಯೂನಂ ವ್ಯತಿರಿಕ್ತಂ ಚ ಸರ್ವಶಃ ॥5॥
ಈ ಗುಣಗಳು ಪರಸ್ಪರವಾಗಿ ಹೊಂದಾಣಿಕೆಯಿಂದ ಇದ್ದರೂ ಅಧಿಕವಾಗಿ ಕೆಲವೊಮ್ಮೆ ಒಂದೊಂದು ಗುಣವು ಉನ್ನತಿಯನ್ನು ಹೊಂದುತ್ತದೆ. ಒಂದು ಗುಣವು ಮತ್ತೊಂದು ಗುಣವನ್ನು ಅನುಸರಿಸಿಕೊಂಡಿದ್ದರೂ ಒಂದು ಗುಣಕ್ಕಿಂತ ಮತ್ತೊಂದು ಗುಣವು ಹೆಚ್ಚಾಗಿರುವುದು ಕಂಡುಬರುತ್ತದೆ.
ವ್ಯತಿರಿಕ್ತಂ ತಮೋ ಯತ್ರ ತಿರ್ಯಗ್ಭಾವಗತಂ ಭವೇತ್ |
ಅಲ್ಪಂ ತತ್ರ ರಜೋ ಜ್ಞೇಯಂ ಸತ್ವಮಲ್ಪತರಂ ತಥಾ ॥6॥
ಪಶು-ಪಕ್ಷ್ಯಾದಿಗಳಲ್ಲಿ ತಮೋಗುಣವು ಅಧಿಕವಾಗಿರುತ್ತದೆ. ಅವುಗಳಲ್ಲಿ ರಜಸ್ಸು ಮತ್ತು ಸತ್ವಗುಣಗಳು ಅಲ್ಪವಾಗಿರುತ್ತವೆ.
ಉದ್ರಿಕ್ತಂ ತು ರಜೋ ಯತ್ರ ಮಧ್ಯಸ್ರೋತೋಗತಂ ಭವೇತ್ |
ಅಲ್ಪಂ ತತ್ರ ತಮೋ ಜ್ಞೇಯಂ ಸತ್ವಂ ಚಾಲ್ಪತರಂ ತತಃ ॥7॥
ಮನುಷ್ಯರಲ್ಲಿ ರಜೋಗುಣವು ಅಧಿಕವಾಗಿರುತ್ತದೆ, ತಮೋಗುಣವು ಅಲ್ಪವಾಗಿರುತ್ತದೆ, ಸತ್ವಗುಣವು ಮತ್ತೂ ಅಲ್ಪವಾಗಿಯೇ ಇರುತ್ತದೆ.
ಉದ್ರಿಕ್ತಂ ತು ಯದಾ ಸತ್ವಮೂರ್ಧ್ವಸ್ರೋತೋಗತಂ ಭವೇತ್ |
ಅಲ್ಪಂ ತತ್ರ ತಮೋ ಜ್ಞೇಯಂ ರಜಶ್ಚಾಲ್ಪತರಂ ತಥಾ ॥8॥
ಭಗವಂತನನ್ನೇ ಚಿಂತಿಸುವ ಯೋಗಿಯಲ್ಲಿ ಸತ್ವಗುಣವು ಅಧಿಕವಾಗಿ, ರಜೋಗುಣವು ಅಲ್ಪವಾಗಿ, ತಮೋಗುಣವು ಅತ್ಯಲ್ಪವಾಗಿ ಇರುತ್ತದೆ.
ಸತ್ವಂ ವೈಕಾರಿಕೀ ಯೋನಿರಿಂದ್ರಿಯಾಣಾಂ ಪ್ರಕಾಶಿಕಾ |
ನ ಹಿ ಸತ್ವಾತ್ ಪರೋ ಭಾವಃ ಕಶ್ಚಿದನ್ಯೋ ವಿಧೀಯತೇ ॥9॥
ಸತ್ವಗುಣವು ಇಂದ್ರಿಯಗಳಿಗೆ ಕಾರಣವಾಗಿದೆ. ಇಂದ್ರಿಯಗಳನ್ನು ಪ್ರಕಾಶಗೊಳಿಸುವುದು, ಅವುಗಳ ಸ್ವಭಾವವನ್ನು ಬದಲಿಸುವುದು ಸತ್ವಗುಣದ ವ್ಯಾಪಾರ. ಇದಕ್ಕಿಂತ ಅಧಿಕವಾದ ಧರ್ಮವು ಬೇರೆ ಯಾವುದೂ ಇಲ್ಲ.
ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ |
ಜಘನ್ಯಗುಣಸಂಯುಕ್ತಾ ಯಾಂತ್ಯಧಸ್ತಾಮಸಾ ಜನಾಃ ॥10॥
ಸತ್ವಗುಣವು ಅಧಿಕವಾಗಿರುವ ಜೀವರು ಸ್ವರ್ಗಾದಿ ಊರ್ಧ್ವಲೋಕಗಳಿಗೆ ಹೋಗುತ್ತಾರೆ. ರಜೋಗುಣವು ಅಧಿಕವಾಗಿರುವ ಜೀವರು ಮನುಷ್ಯಲೋಕದಲ್ಲೇ ಸಂಚರಿಸುತ್ತಾರೆ. ತಮೋಗುಣವು ಅಧಿಕವಾಗಿರುವ ಜೀವರು ನಿದ್ರಾಲಸ್ಯಗಳಿಗೆ ತುತ್ತಾಗಿ ಕ್ರಮವಾಗಿ ಹೀನಯೋನಿಗಳಲ್ಲಿ ಹುಟ್ಟಿ, ಅಧೋಗತಿಯನ್ನು ಹೊಂದುತ್ತಾರೆ.
ತಮಃ ಶೂದ್ರೇ ರಜಃ ಕ್ಷತ್ರೇ ಬ್ರಾಹ್ಮಣೇ ಸತ್ವಮುತ್ತಮಮ್ |
ಇತ್ಯೇವಂ ತ್ರಿಷು ವರ್ಣೇಷು ವಿವರ್ತಂತೇ ಗುಣಾಸ್ತ್ರಯಃ ॥11॥
ಶೂದ್ರನಲ್ಲಿ ತಮೋಗುಣವು, ಕ್ಷತ್ರಿಯನಲ್ಲಿ ರಜೋಗುಣವು, ಬ್ರಾಹ್ಮಣನಲ್ಲಿ ಸತ್ವಗುಣವು ಪ್ರಧಾನವಾಗಿರುತ್ತದೆ. ಹೀಗೆ ಮೂರುವರ್ಣದವರಲ್ಲಿ ಮೂರು ಗುಣಗಳು ವಿಶೇಷವಾಗಿ ಕಾಣುತ್ತವೆ.
ದೂರಾದಪಿ ಚ ದೃಶ್ಯಂತೇ ಸಹಿತಾಃ ಸಂಘಚಾರಿಣಃ |
ತಮಃ ಸತ್ವಂ ರಜಶ್ಚೈವ ಪೃಥಕ್ತ್ವಂ ನಾನುಶುಶ್ರುಮ ॥12॥
ಈ ಮೂರು ಗುಣಗಳು ಪರಸ್ಪರ ಒಟ್ಟಾಗಿ ಸಂಚರಿಸುವುದನ್ನು ನಾವು ದೂರದಿಂದಲೂ ಕಾಣಬಹುದು. ಈ ಗುಣಗಳು ಪ್ರತ್ಯೇಕವಾಗಿ ಇರುವುದನ್ನು ನಾವು ಕೇಳಿಯೇ ಇಲ್ಲ.
ದೃಷ್ಟ್ವಾ ಚಾದಿತ್ಯಮುದ್ಯಂತಂ ಕುಚೋರಾಣಾಂ ಭಯಂ ಭವೇತ್ |
ಅಧ್ವಗಾಃ ಪರಿತಪ್ಯೇರನ್ ತೃಷ್ಣಾರ್ತಾ ದುಃಖಭಾಗಿನಃ ॥13॥
ಕೆಟ್ಟ ಕರ್ಮಗಳಲ್ಲೇ ಆಸಕ್ತರಾದ ಕಳ್ಳರಿಗೆ ಸೂರ್ಯನ ಉದಯವೇ ಭಯಜನಕ- ವಾಗುತ್ತದೆ. ಪ್ರಯಾಣ ಮಾಡುವ ವ್ಯಕ್ತಿಗಳು ಸೂರ್ಯನ ಪ್ರಖರತೆಯಿಂದ ಪೀಡಿತರಾಗಿ ಪರಿತಪಿಸುತ್ತಾರೆ.
ಆದಿತ್ಯಃ ಸತ್ವಮುದ್ದಿಷ್ಟಃ ಕುಚೋರಾಸ್ತು ಯಥಾ ತಮಃ |
ಪರಿತಾಪೋಽಧ್ವಗಾನಾಂ ಚ ರಾಜಸೋ ಗುಣ ಉಚ್ಯತೇ ॥14॥
ಇಲ್ಲಿ ಸೂರ್ಯೋದಯವೆಂಬುದೇ ಸತ್ವಗುಣದ ಆವಿರ್ಭಾವ. ದುರಾಚಾರಿಗಳ ಭಯವೇ ತಮೋಗುಣದ ಕಾರ್ಯ. ಪಯಣಿಗರ ಪರಿತಾಪವೇ ರಜೋಗುಣದ ವ್ಯಾಪಾರ.
ಪ್ರಕಾಶಃ ಸತ್ವಮಾದಿತ್ಯೇ ಸಂತಾಪೋ ರಾಜಸೋ ಗುಣಃ |
ಉಪಪ್ಲವಸ್ತು ವಿಜ್ಞೇಯಃ ತಾಮಸಸ್ತಸ್ಯ ಪರ್ವಸು ॥15॥
ಸೂರ್ಯನಲ್ಲಿರುವ ಪ್ರಕಾಶಗುಣವು ಸತ್ವ ಎನಿಸಿದೆ. ಅವನಿಂದ ಉಂಟಾಗುವ ಸಂತಾಪ ರಜಸ್ಸು ಎನಿಸಿದೆ. ಸೂರ್ಯೋಪರಾಗದಲ್ಲಿ ಆಗುವ ಗ್ರಹಣವು ತಮೋಗುಣವೆನಿಸಿದೆ.

ಏವಂ ಜ್ಯೋತಿಷ್ಷು ಸರ್ವೇಷು ಪ್ರವರ್ತಂತೇ ಗುಣಾಸ್ತ್ರಯಃ |
ಪರ್ಯಾಯೇಣ ಚ ವರ್ತಂತೇ ತತ್ರ ತತ್ರ ತಥಾ ತಥಾ ||16||
ಹೀಗೆ ಸೂರ್ಯನ ಜ್ಯೋತಿಗಳಲ್ಲಿ ಮೂರು ಗುಣಗಳು ಕ್ರಮವಾಗಿ ಒಟ್ಟಿಗೆ ಪ್ರಾಕಟ್ಯವನ್ನು ಹೊಂದುತ್ತವೆ ಮತ್ತು ಲೀನವಾಗುತ್ತವೆ (ಇದನ್ನೇ ದೂರದಿಂದಲೂ ಮೂರುಗುಣಗಳ ಸಂಚಾರವನ್ನು ನೋಡಬಹುದು ಎಂದು ಹಿಂದೆ ಹೇಳಿದ್ದಾರೆ).
ಸ್ಥಾವರೇಷು ಚ ಭೂತೇಷು ತಿರ್ಯಗ್ಭಾವಗತಂ ತಮಃ |
ರಾಜಸಾಸ್ತು ವಿವರ್ಧಂತೇ ಸ್ನೇಹಭಾವಾತ್ತು ಸಾತ್ತ್ವಿಕಾಃ ||17||
ಸ್ಥಾವರ ಪ್ರಾಣಿಗಳಲ್ಲಿ ತಮೋಗುಣವು ಅಧಿಕ. ಬದಲಾವಣೆ ಇಲ್ಲದ ಗುಣವೇ ರಾಜಸ ಗುಣ. ಸ್ನೇಹಭಾವವು ಸಾತ್ವಿಕ ಗುಣ.
ಅಹಸ್ತ್ರಿಧಾ ತು ವಿಜ್ಞೇಯಂ ತ್ರಿಧಾ ರಾತ್ರಿರ್ವಿಧೀಯತೇ |
ಮಾಸಾರ್ಧಮಾಸವರ್ಷಾಣಿ ಋತವಃ ಸಂಧಯಸ್ತಥಾ ||18||
ಗುಣಗಳ ಪ್ರಭೇದದಿಂದ ಹಗಲು ಮೂರು ಪ್ರಕಾರವಾಗಿದೆ, ರಾತ್ರಿಯೂ ಮೂರು ಪ್ರಕಾರವಾಗಿದೆ. ಮಾಸ, ವರ್ಷ, ಋತು, ಇವುಗಳ ಸಂಧಿಭಾಗಗಳೂ ಮೂರು ಪ್ರಕಾರವಾಗಿರುತ್ತವೆ.
ವ್ಯಾಖ್ಯಾನ ವಿಶೇಷ ಪ್ರಾತಃಕಾಲವು ಸಾತ್ವಿಕವೆನಿಸಿದೆ. ಮಧ್ಯಾಹ್ನವು ರಾಜಸವೆನಿಸಿದೆ. ಸಾಯಂಕಾಲವು ಆಲಸ್ಯದಿಂದ ತುಂಬಿರುವುದರಿಂದ ತಾಮಸವೆನಿಸಿದೆ. ಇದರಂತೆ ರಾತ್ರಿಯಲ್ಲಿಯೂ ಮೊದಲನೆಯ ರಾತ್ರಿಯ ಕಾಲವು ರಾಜಸವೆನಿಸಿದೆ, ಮಧ್ಯರಾತ್ರಿಯ ಕಾಲವು ತಾಮಸವೆನಿಸಿದೆ. ಅಪರರಾತ್ರಿಯ ಕಾಲವು ಪ್ರಸನ್ನವಾಗಿರುವ ಕಾರಣದಿಂದ ಸಾತ್ವಿಕವೆನಿಸಿದೆ. ಇದೇ ರೀತಿಯಾಗಿ ಮಾಸ, ಅರ್ಧಮಾಸಾದಿಗಳಲ್ಲಿಯೂ ಶುಕ್ಲ ಪಕ್ಷದ ಕೊನೆಯ ಭಾಗವು ಸಾತ್ವಿಕವೆನಿಸಿದೆ. ಕೃಷ್ಣ ಪಕ್ಷದ ಕೊನೆಯ ಭಾಗವು ತಾಮಸವೆನಿಸಿದೆ. ಅಷ್ಟಮಿಯ ತನಕ ಎರಡೂ ಪಕ್ಷಗಳಲ್ಲಿ ಬೆಳಕು-ಕತ್ತಲುಗಳು ಇರುವುದರಿಂದ ರಾಜಸವೆನಿಸಿದೆ. ಎರಡು ಪಕ್ಷದಲ್ಲಿಯೂ ಕೂಡ ಹುಣ್ಣಿಮೆ, ಅಮಾವಾಸ್ಯೆ ಇವುಗಳು ಸಾತ್ವಿಕ-ತಾಮಸವೆನಿಸಿವೆ. ಪಕ್ಷದ ಆರಂಭದಲ್ಲಿ ಕೃಷ್ಣಪಕ್ಷದ ಆರಂಭವು ಸಾತ್ವಿಕವೆನಿಸಿದೆ. ಕೊನೆಯದ್ದು ರಾಜಸವೆನಿಸಿದೆ. ಶುಕ್ಲಪಕ್ಷದಲ್ಲಿ ಆರಂಭದ ಭಾಗವು ತಾಮಸವೆನಿಸಿದೆ, ಮಧ್ಯಭಾಗವು ರಾಜಸವೆನಿಸಿದೆ. ವರ್ಷದಲ್ಲಿಯೂ ಉತ್ತರಾಯಣ ಸಾತ್ವಿಕವೆನಿಸಿದೆ, ದಕ್ಷಿಣಾಯನ ತಾಮಸವೆನಿಸಿದೆ. ಉತ್ತರಾಯಣ-ದಕ್ಷಿಣಾಯನಗಳ ಕೊನೆಯ ಭಾಗವು ರಾಜಸವೆನಿಸಿದೆ.
ತ್ರಿಧಾ ದಾನಾನಿ ದೀಯಂತೇ ತ್ರಿಧಾ ಯಜ್ಞಃ ಪ್ರವರ್ತತೇ |
ತ್ರಿಧಾ ಲೋಕಾಸ್ತ್ರಿಧಾ ದೇವಾಸ್ತ್ರಿಧಾ ವಿದ್ಯಾಸ್ತ್ರಿಧಾ ಗತಿಃ ||19||
ಈ ಗುಣಭೇದಕ್ಕೆ ಅನುಗುಣವಾಗಿ ಮೂರು ವಿಧದ ದಾನಗಳು ಮಾಡಲ್ಪಡುತ್ತವೆ. ಯಜ್ಞಗಳೂ ಮೂರು ಪ್ರಕಾರ ಇವೆ. ಮೂರುಗುಣಗಳಿಗೆ ಅನುಗುಣವಾಗಿ ಮೂರು ಲೋಕಗಳು ಇವೆ. ಮೂರು ಪ್ರಕಾರವಾದ ದೇವತೆಗಳಿದ್ದಾರೆ. ಮೂರು ಪ್ರಕಾರವಾದ ವಿದ್ಯೆಗಳಿವೆ. ಮೂರು ಪ್ರಕಾರವಾದ ಮಾರ್ಗಗಳೂ ಇವೆ.
ಭೂತಂ ಭವ್ಯಂ ಭವಿಷ್ಯಂ ಚ ಧರ್ಮೋಽರ್ಥಃ ಕಾಮ ಇತ್ಯಪಿ |
ಪ್ರಾಣಾಪಾನಾವುದಾನಶ್ಚಾಪ್ಯೇತ ಏವ ತ್ರಯೋ ಗುಣಾಃ ||20||
ಭೂತ-ಭವಿಷ್ಯತ್-ವರ್ತಮಾನ, ಧರ್ಮ-ಅರ್ಥ-ಕಾಮ, ಪ್ರಾಣ-ಅಪಾನ- ಉದಾನ - ಇವುಗಳು ತ್ರಿಗುಣಾತ್ಮಕವಾಗಿಯೇ ಇವೆ.
ಯತ್ ಕಿಂಚಿದಿಹ ವೈ ಲೋಕೇ ಸರ್ವಮೇಷ್ವೇವ ತು ತ್ರಿಷು |
ತ್ರಯೋ ಗುಣಾಃ ಪ್ರವರ್ತಂತೇ ಹ್ಯವ್ಯಕ್ತಾ ನಿತ್ಯಮೇವ ತು ||21||
ಈ ಲೋಕದಲ್ಲಿ ಯಾವ ವಸ್ತುವನ್ನು ಕಂಡರೂ ಅಲ್ಲಿಯೂ ಮೂರು ಗುಣಗಳು ಇದ್ದೇ ಇವೆ. ಮೂರು ಗುಣಗಳು ಪ್ರತಿಯೊಂದು ಕಾರ್ಯದಲ್ಲಿಯೂ ತೊಡಗಿರುತ್ತವೆ.
ಸತ್ವಂ ರಜಸ್ತಮಶ್ಚೈವ ಗುಣಸರ್ಗಃ ಸನಾತನಃ |
ತದವ್ಯಕ್ತಂ ಶಿವಂ ನಿತ್ಯಮಜಂ ಯೋನಿಂ ಸನಾತನಮ್ ||22||
ಪ್ರಕೃತಿರ್ವಿಕಾರಾಃ ಪ್ರಲಯಂ ಪ್ರಧಾನಂ ಪ್ರಭವಾಪ್ಯಯಮ್ |
ಅನುದ್ರಿಕ್ತಮನೂನಂ ಚ ವ್ಯಕ್ತಮಪ್ಯಚಲಂ ಧ್ರುವಮ್ ||23||
ಸದಸಚ್ಚೈವ ತತ್ ಸರ್ವಮವ್ಯಕ್ತಂ ತ್ರಿಗುಣಂ ಸ್ಮೃತಮ್ |
ಜ್ಞೇಯಾನಿ ನಾಮಧೇಯಾನಿ ನರೈರಧ್ಯಾತ್ಮಚಿಂತಕೈಃ ||24||
ಸತ್ವ-ರಜಸ್-ತಮೋಗುಣಗಳ ಸೃಷ್ಟಿಯು ಅನಾದಿಯಾದುದು. ಪ್ರಕೃತಿಗೆ ತಮಸ್ಸು, ಅವ್ಯಕ್ತ, ಶಿವ, ಭಾವ, ನಿತ್ಯ, ಅಜ, ಯೋನಿ, ಸನಾತನ, ಪ್ರಕೃತಿ, ವಿಕಾರ, ಪ್ರಲಯ, ಪ್ರಧಾನ, ಪ್ರಭವ, ನಾಶ, ಅನುದ್ರಿಕ, ನೂನ, ವ್ಯಕ್ತ, ಅಚಲ, ಧ್ರುವ, ಸತ್, ಅಸತ್, ಅವ್ಯಕ್ತ ಎಂಬ ನಾಮಗಳು ತ್ರಿಗುಣಗಳ ನಾಮಗಳು. ಅಧ್ಯಾತ್ಮಚಿಂತಕರು ಈ ನಾಮಗಳನ್ನು ತಿಳಿದುಕೊಂಡಿರಬೇಕು.
ಅವ್ಯಕ್ತನಾಮಾನಿ ಗುಣಾಂಶ್ಚ ತತ್ತ್ವತೋ
ಯೋ ವೇದ ಸರ್ವಾಣಿ ಗತೀಶ್ಚ ಕೇವಲಾಃ |
ವಿಮುಕ್ತದೇಹಃ ಪ್ರವಿಭಾಗತತ್ತ್ವವಿತ್
ಸ ಮುಚ್ಯತೇ ಸರ್ವಗುಣೈರ್ನಿರಾಮಯಃ ||25||
ಯಾವ ಮನುಷ್ಯನು ಮೂಲಪ್ರಕೃತಿಯ ಈ ನಾಮಗಳನ್ನು, ಸತ್ವಾದಿಗುಣಗಳನ್ನು, ವಿಶುದ್ಧವಾದ ಗತಿಗಳನ್ನು ಚೆನ್ನಾಗಿ ಬಲ್ಲವನಾಗಿರುವನೋ, ಅಂತಹ ಗುಣವಿಭಾಗನಾದ, ತತ್ತ್ವಜ್ಞನಾದ ಸಾಧಕನು ಯಾವ ವಿಧವಾದ ಸಾಂಸಾರಿಕ ಉಪದ್ರವಗಳಿಗೂ ತುತ್ತಾಗದೆ ಮೃತನಾದ ಬಳಿಕ ತ್ರಿಗುಣಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಗುಣತ್ರಯಾಶ್ರಯಕಥನಂ ನಾಮ ಚತ್ವಾರಿಂಶೋಽಧ್ಯಾಯಃ ||

॥ ಅನುಗೀತಾಪರ್ವಣಿ ಪಂಚವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂದನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು
ಮಹತತ್ತ್ವವನ್ನು ನಿರೂಪಿಸಿದುದು.
ಬ್ರಹ್ಮಾ
ಅವ್ಯಕ್ತಾತ್ ಪೂರ್ವಮುತ್ಪನ್ನೋ ಮಹಾನಾತ್ಮಾ ಮಹಾಮತಿಃ |
ಅನಿರ್ಗುಣಾನಾಂ ಸರ್ವೇಷಾಂ ಪ್ರಥಮಃ ಸರ್ಗ ಉಚ್ಯತೇ ॥1॥
ಬ್ರಹ್ಮಾ ಮಹರ್ಷಿಗಳೇ, ಅವ್ಯಕ್ತ ಪ್ರಕೃತಿಯು ಹುಟ್ಟುವುದಕ್ಕಿಂತ ಮೊದಲು ಪರಮಚೇತನನಾದ, ಸರ್ವಜ್ಞನಾದ ಪರಮಾತ್ಮನು ಪ್ರಾಕೃತಿಕ ಗುಣರಹಿತರಲ್ಲಿ ಮೊದಲಿಗನೆಂದು ಕರೆಸಿಕೊಂಡು ಇದ್ದಾನೆ. ಪ್ರಕೃತಿಯ ಕಾರ್ಯಗಳು ನಡೆಯುವುದಕ್ಕಿಂತ ಮೊದಲೇ ಹುಟ್ಟಿಲ್ಲದ ಪರಮಾತ್ಮನ ಅಸ್ತಿತ್ವವನ್ನು ಉಲ್ಲೇಖಿಸಿದ್ದಾರೆ.
ಮಹಾನಾತ್ಮಾ ವಿಭುರ್ವಿಷ್ಣುರ್ಜಿಷ್ಣುಃ ಶಮ್ಭುಶ್ಚ ವೀರ್ಯವಾನ್ |
ಬುದ್ಧಿಃ ಪ್ರಜ್ಞೋಪಲಬ್ಧಿಶ್ಚ ತಥಾ ಖ್ಯಾತಿರ್ಧೃತಿಃ ಸ್ಮೃತಿಃ ॥2॥
ಪರ್ಯಾಯವಾಚಕೈಃ ಶಬ್ದೈರ್ಮಹಾನಾತ್ಮಾ ವಿಭಾವ್ಯತೇ |
ತಜ್ಜಾನನ್ನಾದ್ ಬ್ರಾಹ್ಮಣೋ ವಿದ್ವಾನ್ ಪ್ರಮೋಹಂ ನೈವ ಗಚ್ಛತಿ ॥3॥
ಪರಮಾತ್ಮನು ಅನೇಕ ಅವತಾರಗಳನ್ನು ತಾಳುತ್ತಾನೆ. ವ್ಯಾಪ್ತನಾಗಿದ್ದಾನೆ, ಜಯಶೀಲನಾಗಿದ್ದಾನೆ. ವೀರ್ಯವಂತನಾಗಿ ಭಕ್ತರಿಗೆ ಸುಖವನ್ನು ಉತ್ಪತ್ತಿ ಮಾಡುವವನಾಗಿ, ಬುದ್ಧಿ, ಪ್ರಜ್ಞಾ, ಉಪಲಬ್ಧಿ, ಖ್ಯಾತಿ, ಧೃತಿ, ಸ್ಮೃತಿ ಮುಂತಾದ ಪರ್ಯಾಯವಾಚಕ ಶಬ್ದಗಳಿಂದ ಪರಮಚೇತನನಾದ ಪರಮಾತ್ಮನು ಕೊಂಡಾಡಲ್ಪಡುತ್ತಾನೆ. ಇಂತಹ ಪರಮಾತ್ಮನ ತತ್ತ್ವವನ್ನು ತಿಳಿದ ವಿದ್ವಾಂಸನಾದ ಬ್ರಾಹ್ಮಣನು ಎಂದೂ ಮೋಹವನ್ನು ಹೊಂದುವುದಿಲ್ಲ.
ಸರ್ವತಃ ಪಾಣಿಪಾದಂ ಚ ಸರ್ವತೋಕ್ಷಿಶಿರೋಮುಖಮ್ |
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥4॥
ಪರಮಾತ್ಮನ ಕೈ, ಕಾಲು, ಕಣ್ಣು, ತಲೆ, ಮುಖ, ಕಿವಿ ಎಲ್ಲವೂ ಜಗತ್ತಿನ ತುಂಬಾ ವ್ಯಾಪಿಸಿಕೊಂಡಿದೆ.
ಮಹಾನ್ ಪ್ರಭಾಭಿಃ ಪುರುಷಃ ಸರ್ವಸ್ಯ ಹೃದಿ ಸಂಶ್ರಿತಃ |
ಅಣಿಮಾ ಲಘಿಮಾ ಪ್ರಾಪ್ತಿರೀಶಾನೋ ಜ್ಯೋತಿರವ್ಯಯಃ ॥5॥
ಪರಮಾತ್ಮನು ಪ್ರತಿಯೊಬ್ಬ ಜೀವರ ಹೃದಯಗುಹೆಯಲ್ಲಿ ಅನಂತ ತೇಜೋರೂಪನಾಗಿ ಬೆಳಗುತ್ತಿದ್ದಾನೆ. ಅಣಿಮಾ, ಲಘಿಮಾ, ಪ್ರಾಪ್ತಿ, ಈಶಿತ್ವ, ಜ್ಯೋತಿ, ಅವ್ಯಯ ಮುಂತಾದ ಗುಣಗಳಿಂದ ಪೂರ್ಣನಾಗಿದ್ದಾನೆ.
ಯೇ ತು ಬುದ್ಧಿಮತಾಂ ಲೋಕೇ ಸನ್ನ್ಯಾಸನಿರತಾಶ್ಚ ಯೇ |
ಧ್ಯಾನಿನೋ ನಿತ್ಯಯೋಗಾಶ್ಚ ಸತ್ಯಸಂಧಾ ಜಿತೇಂದ್ರಿಯಾಃ ॥6॥
ಜ್ಞಾನವಂತಶ್ಚ ಯೇ ಕೇಚಿದ್ ಅಲುಬ್ಧಾ ಜಿತಮನ್ಯವಃ |
ಪ್ರಸನ್ನಮನಸೋ ಧೀರಾ ನಿರ್ಮಮಾ ನಿರಹಂಕೃತಾಃ ॥7॥
ವಿಮುಕ್ತಾಃ ಸರ್ವ ಏವೈತೇ ಮಹತ್ತ್ವಮುಪಯಾಂತಿ ವೈ ॥8॥
ಆತ್ಮನೋ ಮಹತೋ ವೇದ ಯಃ ಪುಣ್ಯಾಂ ಗತಿಮುತ್ತಮಾಮ್ |
ಸ ಧೀರಃ ಸರ್ವಲೋಕೇಷು ನ ಮೋಹಮಧಿಗಚ್ಛತಿ ॥9॥
ಜಗತ್ತಿನಲ್ಲಿ ಬುದ್ಧಿವಂತರು, ಸಾತ್ತ್ವಿಕ ಭಕ್ತಿನಿರತರು, ಜ್ಞಾನಯೋಗನಿಷ್ಣಾತರು, ನಿತ್ಯಯೋಗಿಗಳು, ಸತ್ಯಸಂಧರು, ಜಿತೇಂದ್ರಿಯರು, ಅಜ್ಞಾನರಹಿತರು, ಕ್ರೋಧ ಮುಕ್ತರು, ಪ್ರಸನ್ನ ಮನಸ್ಕರು, ಧೀರರು, ಮಮಕಾರರಹಿತರು, ಅಹಂಕಾರ ದೂರರು ಆಗಿರುವ ಸಜ್ಜನರು ಮುಕ್ತಿಗಾಗಿ ಈ ಪರಮಾತ್ಮನನ್ನೇ ಆಶ್ರಯಿಸುತ್ತಾರೆ. ಯಾರು ಈ ಪರಮಾತ್ಮನ ಶ್ರೇಷ್ಠವಾದ ಮಹಿಮೆಯನ್ನು ತಿಳಿದುಕೊಳ್ಳುತ್ತಾರೋ ಅವರು ಪುಣ್ಯದಾಯಕವಾದ ಉತ್ತಮ ಗತಿಯನ್ನೇ ಹೊಂದುತ್ತಾರೆ. ಧೀರರಾಗಿ ಸಕಲ ಲೋಕಗಳಲ್ಲಿಯೂ ಮೋಹದಿಂದ ದೂರರಾಗಿರುತ್ತಾರೆ.
ವಿಷ್ಣುರೇವಾದಿಸರ್ಗೇಷು ಸ್ವಯಂಭೂರ್ಭವತಿ ಪ್ರಭುಃ ॥10॥
ಈ ಸರ್ವೋತ್ತಮನಾದ ವಿಷ್ಣುವೇ ಸೃಷ್ಟಿಯ ಆರಂಭದಲ್ಲಿ ಸ್ವಯಂಭೂ, ಪ್ರಭು ಎಂದು ಕರೆಸಿಕೊಂಡಿದ್ದಾನೆ.
ಏವಂ ಹಿ ಯೋ ವೇದ ಗುಹಾಶಯಂ ಪ್ರಭುಂ
ನವಂ ಪುರಾಣಂ ಪುರುಷಂ ವಿಶ್ವರೂಪಮ್ |
ಹಿರಣ್ಮಯಂ ಬುದ್ಧಿಮತಾಂ ಪರಾಂ ಗತಿಂ
ಸ ಬುದ್ಧಿಮಾನ್ ಬುದ್ಧಿಮತೀತ್ಯ ತಿಷ್ಠತಿ ॥11॥
ಯಾವಾತನು ಈ ಹೃದಯಗುಹೆಯಲ್ಲಿರುವ ಸರ್ವೋತ್ತಮನಾದ, ಪುರಾಣ ಪುರುಷೋತ್ತಮನಾದ, ನೂತನನಾದ, ವಿಶ್ವರೂಪಿಯಾದ, ಹಿರಣ್ಮಯನಾದ ಪರಮಾತ್ಮನ ಸ್ವರೂಪವನ್ನು ತಿಳಿಯುತ್ತಾನೋ ಅಂತಹವನು ಬುದ್ಧಿವಂತರ ಗುಂಪಿನಲ್ಲಿ ಅತ್ಯಂತ ಬುದ್ಧಿವಂತನಾಗಿ ಬುದ್ಧಿಯ ಮಿತಿಯನ್ನೇ ಮೀರಿ ನಿಲ್ಲುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಅವ್ಯಕ್ತಮಹತ್ಸರ್ಗಕಥನಂ ನಾಮ ಏಕಚತ್ವಾರಿಂಶೋಽಧ್ಯಾಯಃ ॥

॥ ಅನುಗೀತಾಪರ್ವಣಿ ಷಡ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *

ನಲವತ್ತೆರಡನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು
ಅಹಂಕಾರತತ್ತ್ವವನ್ನು ನಿರೂಪಿಸುತ್ತಾನೆ.
ಬ್ರಹ್ಮಾ
ಯ ಉತ್ಪನ್ನೋ ಮಹಾನ್ ಪೂರ್ವಮಹಂಕಾರಃ ಸ ಉಚ್ಯತೇ |
ಅಹಮಿತ್ಯೇವ ಸಂಭೂತೋ ದ್ವಿತೀಯಃ ಸರ್ಗ ಉಚ್ಯತೇ ॥1॥
ಬ್ರಹ್ಮಾ ಈ ಸೃಷ್ಟಿಯ ಆರಂಭದಲ್ಲಿ ಮೊದಲಿಗೆ ಯಾವ ತತ್ತ್ವವು ಉತ್ಪನ್ನವಾಯಿತೋ ಅದು ಶ್ರೇಷ್ಠವಾದ ಮಹತತ್ತ್ವವೆನಿಸಿತು. ಮಹತತ್ತ್ವಕ್ಕೆ ಚತುರ್ಮುಖನು ಅಭಿಮಾನಿ. ಈ ಮಹತತ್ತ್ವದ ದೆಸೆಯಿಂದ ಉತ್ಪನ್ನವಾದ ತತ್ತ್ವವು ಎರಡನೆಯದಾದ ಅಹಂಕಾರ ತತ್ತ್ವ ಎನಿಸಿತು. ಅಹಂಕಾರ ತತ್ತ್ವಕ್ಕೆ ಮಹಾರುದ್ರನು ಅಭಿಮಾನಿ.
ಅಹಂಕಾರಸ್ತು ಭೂತಾದಿರ್ವೈಕಾರಿಕ ಇತಿ ಸ್ಮೃತಃ |
ತೈಜಸಶ್ಚೇತನಾ ಧಾತುಃ ಪ್ರಜಾಸರ್ಗಃ ಪ್ರಜಾಪತಿಃ ॥2॥
ಅಹಂಕಾರವು ಪ್ರಾಣಿಗಳ ಸೃಷ್ಟಿಗೆ ಕಾರಣವಾಗಿದೆ. ಪಂಚಭೂತಗಳಿಗೆ ಮೂಲ ಕಾರಣವಾಗಿದೆ. ಇದನ್ನು ವೈಕಾರಿಕ ಎಂದು ಕರೆದಿದ್ದಾರೆ. ಮನಸ್ಸು, ಇಂದ್ರಿಯಾಭಿಮಾನಿ ದೇವತೆಗಳು ದೇಹವನ್ನು ಹುಟ್ಟಿಸುವ ಸಾಮರ್ಥ್ಯ ವೈಕಾರಿಕ ಅಹಂಕಾರ ತತ್ವಕ್ಕೆ ಇದೆ. ತೈಜಸವೆನಿಸಿದ ಇಂದ್ರಿಯಗಳನ್ನು ಹುಟ್ಟಿಸುವ ಸಾಮರ್ಥ್ಯ ತೈಜಸ ಅಹಂಕಾರದ ಶಕ್ತಿ. ಜೀವರನ್ನು ಸೃಷ್ಟಿ ಮಾಡುವ ಚತುರ್ಮುಖ ಬ್ರಹ್ಮನು ಧಾತು ಎನಿಸಿದ್ದಾನೆ.
ದೇವಾನಾಂ ಪ್ರಥಮೋ ದೇವೋ ಮನಸಶ್ಚ ತ್ರಿಲೋಕಕೃತ್ |
ಅಹಮಿತ್ಯೇವ ತತ್ಸರ್ವಮಭಿಮಂತಾ ಸ ಉಚ್ಯತೇ ॥3॥
ಅಹಂಕಾರ ತತ್ವಾಭಿಮಾನಿ ದೇವನು ದೇವತೆಗಳಿಗೆ ಮೊದಲಿಗನೆನಿಸಿದ್ದಾನೆ. ಮನಸ್ಸಿಗೆ ಜನಕನಾಗಿದ್ದಾನೆ. ಮನಸ್ಸುಳ್ಳ ಲೋಕಗಳಿಗೆಲ್ಲ ನಿಯಾಮಕನಾಗಿದ್ದಾನೆ. ಜಗತ್ತಿನಲ್ಲಿ ಜೀವರು `ಅಹಂ' ಎಂದು ನಿತ್ಯವೂ ಅನುವ್ಯವಸಾಯವನ್ನು ಹೊಂದುತ್ತಿದ್ದಾರೆ. ಆ ಜ್ಞಾನವನ್ನು ತಂದುಕೊಡುವವ ಅಭಿಮಂತನೆನಿಸಿದ ಮಹಾರುದ್ರನಾಗಿದ್ದಾನೆ.
ಅಧ್ಯಾತ್ಮಜ್ಞಾನತೃಪ್ತಾನಾಂ ಮುನೀನಾಂ ಭಾವಿತಾತ್ಮನಾಮ್ |
ಸ್ವಾಧ್ಯಾಯಕ್ರತುಸಿದ್ಧಾನಾಮೇಷ ಲೋಕಃ ಸನಾತನಃ ॥4॥
ಅಧ್ಯಾತ್ಮ ಜ್ಞಾನದಿಂದ ತೃಪ್ತರಾದ, ಅಧ್ಯಾತ್ಮ ಚಿಂತನೆ ಮಾಡುವ ಸ್ವಾಧ್ಯಾಯನ ಯಜ್ಞದಲ್ಲಿ ಸಿದ್ಧಿಯನ್ನು ಹೊಂದಿದ ಮುನಿಗಳಿಗೆ ಸನಾತನನಾದ ಚತುರ್ಮುಖ ಬ್ರಹ್ಮನು ಜ್ಞಾನವನ್ನು ನೀಡುತ್ತಾನೆ (ಇಲ್ಲಿ ಲೋಕ ಎಂದರೆ ಜ್ಞಾನಪ್ರದ ಎಂದು ಅರ್ಥ).
ಅಹಂಕಾರೇಣಾಹರತೋ ಗುಣಾನಿಮಾನ್
ಭೂತಾದಿರೇವಂ ಸೃಜತೇ ಸ ಭೂತಕೃತ್ |
ವೈಕಾರಿಕಃ ಸರ್ವಮಿದಂ ವಿಚೇಷ್ಟತೇ
ಸ್ವತೇಜಸಾ ರಂಜಯತೇ ಜಗತ್ ತಥಾ ॥5॥
ಅಹಂಕಾರ ತತ್ತ್ವದಿಂದ ಪ್ರಕೃತಿಯ ಗುಣಗಳನ್ನು ಸ್ವೀಕರಿಸಿಕೊಂಡು ಜೀವನ ಉತ್ಪತ್ತಿಯಾಗುತ್ತದೆ. ಆದ್ದರಿಂದ ಅಹಂಕಾರ ತತ್ತ್ವವನ್ನು ಭೂತಾದಿ ಎಂದು ಕರೆಯುತ್ತಾರೆ. ಪ್ರಾಣಿಗಳ ಉತ್ಪತ್ತಿಗೆ ನಿಯಾಮಕ. ವೈಕಾರಿಕ ಅಹಂಕಾರ ತತ್ತ್ವವೇ ಈ ಜಗತ್ತೆಲ್ಲವನ್ನೂ ವ್ಯಾಪಾರವುಳ್ಳದ್ದನ್ನಾಗಿ ಮಾಡುತ್ತದೆ. ತನ್ನ ಶಕ್ತಿಯ ಪ್ರಭಾವದಿಂದ ಜಗತ್ತನ್ನು ಸಂತೋಷಗೊಳಿಸುತ್ತಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಮಹದಹಂಕಾರಸರ್ಗಕಥನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *

ನಲವತ್ಮೂರನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು ಅಹಂಕಾರತತ್ತ್ವದಿಂದ ಪಂಚಭೂತ ಮೊದಲಾದ ಸೃಷ್ಟಿ ಪ್ರಕಾರವನ್ನು ಹೇಳಿದುದು.
ಬ್ರಹ್ಮಾ
ಅಹಂಕಾರಾತ್ ಪ್ರಸೂತಾನಿ ಮಹಾಭೂತಾನಿ ಪಂಚ ವೈ |
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ ॥1॥
ಬ್ರಹ್ಮಾ ಮಹರ್ಷಿಗಳೇ, ಅಹಂಕಾರದಿಂದ ಉತ್ಪತ್ತಿಯನ್ನು ಪಂಚಭೂತಗಳು ಹೊಂದಿವೆ. ಪೃಥಿವಿ, ವಾಯು, ಆಕಾಶ, ಜಲ, ಐದನೆಯದ್ದಾದ ಜ್ಯೋತಿ ಹೀಗೆ ಪಂಚಭೂತಗಳು.
ತೇಷು ಭೂತಾನಿ ಮುಹ್ಯಂತಿ ಮಹಾಭೂತೇಷು ಪಂಚಸು |
ಶಬ್ದಸ್ಪರ್ಶನರೂಪೇಷು ರಸಗಂಧಕ್ರಿಯಾಸು ಚ
ಸರ್ವಪ್ರಾಣಭೃತಾಂ ಧೀರಾ ಮಹದುತ್ಪದ್ಯತೇ ಭಯಮ್ ॥3॥

ಆ ಪಂಚಭೂತಗಳಲ್ಲಿ ಎಲ್ಲ ಪ್ರಾಣಿಗಳಿಗೂ ಮೋಹವಿದೆ. ಅರ್ಥಾತ್ ಪಂಚಭೂತಗಳಿಂದ ಉತ್ಪತ್ತಿಯನ್ನು ಪಡೆದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಲ್ಲಿ ಎಲ್ಲ ಪ್ರಾಣಿಗಳು ಆಸಕ್ತವಾಗಿವೆ.
ಯದ್ ಯಸ್ಮಾಜ್ಜಾಯತೇ ಭೂತಂ ತತ್ರ ತತ್ ಪ್ರವಿಲೀಯತೇ |
ಲೀಯಂತೇ ಪ್ರತಿಲೋಮಾನಿ ಜಾಯಂತೇ ಚೋತ್ತರೋತ್ತರಮ್ ॥4॥
ಪಂಚಮಹಾಭೂತಗಳೆಲ್ಲವೂ ವಿಕಾರವನ್ನು ಪಡೆದು ನಾಶ ಹೊಂದಿದ ಬಳಿಕ ಪ್ರಲಯದ ಕಾಲವು ಸನ್ನಿಹಿತವಾಗುತ್ತದೆ. ಆ ಸಂದರ್ಭದಲ್ಲಿ ಎಲ್ಲ ಪ್ರಾಣಿಗಳಿಗೂ ದೊಡ್ಡ ಭಯವು ಉಂಟಾಗುತ್ತದೆ.
ತತಃ ಪ್ರಲೀನೇ ಸರ್ವಸ್ಮಿನ್ ಭೂತೇ ಸ್ಥಾವರಜಂಗಮೇ |
ಸ್ಮೃತಿಮಂತಸ್ತತೋ ಧೀರಾ ನ ಲೀಯಂತೇ ಕಥಂಚನ ॥5॥
ಯಾವ ಭೂತವು ಯಾವ ತತ್ತ್ವದ ದೆಸೆಯಿಂದ ಉತ್ಪತ್ತಿಯನ್ನು ಪಡೆದಿದೆಯೋ ಅದರಲ್ಲಿಯೇ ಲಯವನ್ನು ಹೊಂದುತ್ತದೆ. ಅನುಲೋಮ ಕ್ರಮದಿಂದ ಹುಟ್ಟನ್ನು ಪಡೆದ ಪಂಚಭೂತಗಳು ವಿಲೋಮಕ್ರಮದಿಂದ ತಮ್ಮ ಕಾರಣದಲ್ಲಿ ಲಯವನ್ನು ಹೊಂದುತ್ತವೆ. ಉದಾಹರಣೆ ಜಲತತ್ತ್ವದಿಂದ ಉತ್ಪನ್ನವಾದ ಪೃಥಿವಿತತ್ತ್ವವು ಜಲತತ್ತ್ವದಲ್ಲಿಯೇ ಲಯವನ್ನು ಹೊಂದುತ್ತದೆ. ಚರಾಚರ ಪ್ರಾಣಿಗಳೆಲ್ಲವೂ ಲಯಗೊಂಡರೂ ಸ್ಮರಣ ಶಕ್ತಿಸಂಪನ್ನರಾದ, ಧೀರರಾದ ಯೋಗಿಪುರುಷರು ಲಯ ಹೊಂದುವುದಿಲ್ಲ.
ಶಬ್ದಃ ಸ್ಪರ್ಶಸ್ತಥಾ ರೂಪಂ ರಸೋ ಗಂಧಶ್ಚ ಪಂಚಮಃ |
ಕ್ರಿಯಾಃ ಕಾರಣಯುಕ್ತಾಃ ಸ್ಯುರನಿತ್ಯಾ ಮೋಹಸಂಜ್ಞಿತಾಃ ॥6॥
ಶಬ್ದ, ಸ್ಪರ್ಶ, ರೂಪ, ರಸ, ಐದನೆಯದ್ದಾದ ಗಂಧ ಇವುಗಳ ಕ್ರಿಯೆಗಳು ಕಾರಣ ರೂಪದಿಂದ ನಿತ್ಯವಾಗಿರುತ್ತವೆ. ಸ್ಥೂಲಪದಾರ್ಥಗಳು ಅನಿತ್ಯವಾದವುಗಳು. ಇವುಗಳಿಗೆ ಮೋಹವೆಂದು ಹೆಸರು.
ವ್ಯಾಖ್ಯಾನ ವಿಶೇಷ ಪ್ರಕೃತಿಯು ನಿತ್ಯಾನಿತ್ಯವೆಂಬ ವಿಭಾಗದಿಂದ ಕೂಡಿದೆ. ಕಾರಣರೂಪವು ನಿತ್ಯವಾಗಿದೆ, ಸ್ಥೂಲರೂಪವು ಅನಿತ್ಯವಾಗಿದೆ ಎಂದು ತಿಳಿಯಬೇಕು.
ಲೋಕಪ್ರಜನಸಂಯುಕ್ತಾ ನಿರ್ವಿಶೇಷಾ ಹ್ಯಕಿಂಚನಾಃ |
ಮಾಂಸಶೋಣಿತಸಂಘಾತಾ ಅನ್ಯೋನ್ಯಸ್ಯೋಪಜೀವಿನಃ ॥7॥
ಬಹಿರಾತ್ಮಾನ ಇತ್ಯೇತೇ ಕ್ರೂರಾಃ ಕೃಪಣವೃತ್ತಯಃ ॥8॥
ಆತ್ಮನ ಹೊರಭಾಗದಲ್ಲಿ ಸ್ತ್ರೀ-ಪುರುಷರ ಲೋಭ-ಸಂಯೋಗಗಳಿಂದ ಉತ್ಪನ್ನವಾದ ಸಮಾನವಾಗಿ ಸಹಕಾರದಿಂದ ಬೆಳೆಯುವ ಮಾಂಸ-ರಕ್ತ ಸಮೂಹಗಳು ಈ ಶರೀರದಲ್ಲಿ ಅಡಕವಾಗಿವೆ. ಇವೆಲ್ಲವೂ ಸ್ಥೂಲವಾದುದರಿಂದ ಅನಿತ್ಯವೆನಿಸಿವೆ. ಆದ್ದರಿಂದಲೇ ಇವುಗಳನ್ನು ದೀನ, ಕೃಪಣ ಶಬ್ದಗಳಿಂದ ಕರೆಯಲಾಗುತ್ತದೆ.
ಪ್ರಾಣಾಪಾನಾವುದಾನಶ್ಚ ಸಮಾನೋ ವ್ಯಾನ ಏವ ಚ |
ಅಂತರಾತ್ಮೇತಿ ಚಾಪ್ಯೇತೇ ನಿಯತಾಃ ಪಂಚ ವಾಯವಃ ॥9॥
ವಾಙ್ಮನೋಬುದ್ಧಿರಿತ್ಯೇಭಿಃ ಸಾರ್ಧಮಷ್ಟಾತ್ಮಕಂ ಜಗತ್ ॥10॥
ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ ಎಂಬ ಪಂಚಪ್ರಾಣರು ಪರಮಾತ್ಮನಿಂದ ಜೀವರ ದೇಹದಲ್ಲಿ ನಿಯತರಾಗಿದ್ದಾರೆ. ಮನಸ್ಸು, ಮಾತು, ಬುದ್ಧಿ ಇವುಗಳೂ ಸೇರಿಕೊಂಡಾಗ ಪಂಚಪ್ರಾಣರಿಂದ ಯುಕ್ತವಾದ ಸೂಕ್ಷ್ಮ ಜಗತ್ತು ಎಂಟು ವಿಧವಾಗುತ್ತದೆ.
ತ್ವಗ್ಘ್ರಾಣಶ್ರೋತ್ರಚಕ್ಷೂಂಷಿ ರಸನಂ ವಾಕ್ ಚ ಸಂಯತಾಃ |
ವಿಶುದ್ಧಂ ಚ ಮನೋ ಯಸ್ಯ ಬುದ್ಧಿಶ್ಚಾವ್ಯಭಿಚಾರಿಣೀ ॥11॥
ಅಷ್ಟೌ ಯಸ್ಯಾಗ್ನಯೋ ಹ್ಯೇತೇ ದಹಂತ್ಯೇವಂ ಕ್ರಿಯಾಃ ಸದಾ |
ಸ ತದ್ ಬ್ರಹ್ಮ ಶುಭಂ ಯಾತಿ ಯಸ್ಮಾದ್ ಭೂಯೋ ನ ವಿದ್ಯತೇ ॥
ತ್ವಕ್, ಘ್ರಾಣ, ಶ್ರೋತ್ರ, ಚಕ್ಷುಸ್ಸು, ರಸನ, ಮಾತು, ಇಂದ್ರಿಯಗಳು ಯಾರ ವಶದಲ್ಲಿವೆಯೋ, ಯಾರ ಮನಸ್ಸು ಅವ್ಯಭಿಚರಿತವಾಗಿದೆಯೋ, ವಿಷಯಗಳಲ್ಲಿ ಅನಾಸಕ್ತವಾಗಿದೆಯೋ, ಯಾರ ಮನಸ್ಸನ್ನು ಈ ತ್ವಗಿಂದ್ರಿಯ, ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ, ಘ್ರಾಣೇಂದ್ರಿಯ ಮೊದಲಾದವುಗಳು ಸಂತಾಪಗೊಳಿಸುವುದಿಲ್ಲವೋ ಅಂತಹ ಶ್ರೇಷ್ಠನಾದ ಪುರುಷನು ಕಲ್ಯಾಣಕ್ರಮವಾದ, ಗುಣಪರಿಪೂರ್ಣನಾದ ಪರಬ್ರಹ್ಮನ ಪಾದವನ್ನು ಹೊಂದಲು ಅರ್ಹನಾಗುತ್ತಾನೆ. ಆ ಗುಣಪರಿಪೂರ್ಣನಾದ ಭಗವಂತನಿಗಿಂತಲೂ ಶ್ರೇಷ್ಠವಾದ ವಸ್ತುವು ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ.
ಏಕಾದಶ ಚ ಯಾನ್ಯಾಹುರಿಂದ್ರಿಯಾಣಿ ವಿಶೇಷತಃ |
ಅಹಂಕಾರಾತ್ ಪ್ರಸೂತಾನಿ ತಾನಿ ವಕ್ಷ್ಯಾಮ್ಯಹಂ ದ್ವಿಜಾಃ ॥13॥
ಬ್ರಾಹ್ಮಣಶ್ರೇಷ್ಠರೇ, ಅಹಂಕಾರದಿಂದ ಉತ್ಪನ್ನವಾದ, ಮನಸ್ಸಿನಿಂದ ಸಹಿತವಾದ ಏಕಾದಶ ಇಂದ್ರಿಯಗಳ ವೈಶಿಷ್ಟ್ಯವನ್ನು ಹೇಳುತ್ತೇನೆ, ಕೇಳಿ.
ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ |
ಪಾದೌ ಪಾಯುರುಪಸ್ಥಂ ಚ ಹಸ್ತೌ ವಾಗ್ ದಶಮೀ ಭವೇತ್ ॥14॥
ಇಂದ್ರಿಯಗ್ರಾಮ ಇತ್ಯೇತನ್ಮನ ಏಕಾದಶಂ ಭವೇತ್ |
ಏತದ್ ಗ್ರಾಮಂ ಜಯೇತ್ ಪೂರ್ವಂ ತತೋ ಬ್ರಹ್ಮ ಪ್ರಕಾಶತೇ ॥15॥
ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವೆ, ಘ್ರಾಣ, ಕೈ-ಕಾಲುಗಳು, ಗುದ-ಉಪಸ್ಥ, ವಾಗಿಂದ್ರಿಯ - ಈ ಹತ್ತು ಇಂದ್ರಿಯಗಳ ಸಮೂಹಕ್ಕೆ ಇಂದ್ರಿಯಗ್ರಾಮವೆಂದು ಹೆಸರು. ಇದರ ಜೊತೆಗೆ ಮನಸ್ಸು ಸೇರಿದಾಗ ಹನ್ನೊಂದು ಆಗುತ್ತವೆ. ಈ ಇಂದ್ರಿಯ ಗ್ರಾಮವನ್ನು ಯಾರು ಜಯಿಸುತ್ತಾರೋ ಅವರ ಹೃದಯದಲ್ಲಿ ಬ್ರಹ್ಮನು ಕಾಣಿಸುತ್ತಾನೆ.
ಬುದ್ಧೀಂದ್ರಿಯಾಣಿ ಪಂಚಾಹುಃ ಪಂಚ ಕರ್ಮೇಂದ್ರಿಯಾಣಿ ಚ |

ಶ್ರೋತ್ರಾದೀನಿ ತು ಪಂಚಾಹುರ್ಬುದ್ಧಿಯುಕ್ತಾನಿ ತತ್ತ್ವತಃ ॥16॥
ಅವಿಶೇಷಾಣಿ ಚಾನ್ಯಾನಿ ಕರ್ಮಯುಕ್ತಾನಿ ತಾನಿ ತು |
ಉಭಯತ್ರ ಮನೋ ಜ್ಞೇಯಂ ಬುದ್ಧಿಸ್ತು ದ್ವಾದಶೀ ಭವೇತ್ ॥17॥
ಈ ಹತ್ತು ಇಂದ್ರಿಯಗಳಲ್ಲಿ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಇವೆ. ಶ್ರೋತ್ರ, ಚರ್ಮ, ಚಕ್ಷುಸ್ಸು, ಜ್ಞಾನ - ಇವುಗಳೇ ಜ್ಞಾನೇಂದ್ರಿಯಗಳು, ಉಳಿದವು ಕರ್ಮೇಂದ್ರಿಯಗಳು. ಈ ಹತ್ತು ಇಂದ್ರಿಯಗಳಿಗೂ ಮನಸ್ಸಿನ ಸಂಬಂಧವಿದೆ. ಈ ಮನಸ್ಸನ್ನು ನಿಯಂತ್ರಿಸುವ ಹನ್ನೆರಡನೆಯ ಇಂದ್ರಿಯ ಬುದ್ಧಿ ಎಂದು ಕರೆಯಲ್ಪಟ್ಟಿದೆ.
ಇತ್ಯುಕ್ತಾನೀಂದ್ರಿಯಾಣ್ಯೇತಾನ್ಯೇಕಾದಶ ತಥಾ ಕ್ರಮಾತ್ |
ಮನ್ಯಂತೇ ಕೃತಮಿತ್ಯೇವ ವಿಜಿತ್ಯೈತಾನಿ ಪಂಡಿತಾಃ ॥18॥
ಹೀಗೆ ಕ್ರಮವಾಗಿ ಹನ್ನೊಂದು ಇಂದ್ರಿಯಗಳ ಬಗ್ಗೆ ತಿಳಿಸಿದ್ದೇನೆ. ಇಂದ್ರಿಯ ಗ್ರಾಮವನ್ನು ಅರ್ಥೈಸಿಕೊಂಡ ವಿದ್ವಾಂಸರು ಕೃತಕೃತ್ಯರೆಂದು ಭಾವಿಸುತ್ತಾರೆ. ಇನ್ನು ಮುಂದೆ ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳನ್ನು ನಿರೂಪಿಸುತ್ತೇನೆ.
ಆಕಾಶಂ ಪ್ರಥಮಂ ಭೂತಂ ಶ್ರೋತ್ರಮಧ್ಯಾತ್ಮಮಿಷ್ಯತೇ |
ಅಧಿಭೂತಂ ತಥಾ ಶಬ್ದೋ ದಿಶಶ್ಚಾತ್ರಾಧಿದೈವತಮ್ ॥19॥
ಪಂಚಭೂತಗಳಲ್ಲಿ ಆಕಾಶವು ಮೊದಲನೆಯದು. ಶ್ರೋತ್ರೇಂದ್ರಿಯವು ಆಕಾಶದಿಂದ ಉತ್ಪನ್ನವಾದ ಇಂದ್ರಿಯವಾಗಿದೆ. ಶಬ್ದವೇ ಅಧಿಭೂತವೆನಿಸಿದ ಅದರ ವಿಷಯ. ದಿಕ್ಕುಗಳೇ ಆಕಾಶಕ್ಕೆ ಅಧಿದೈವವೆನಿಸಿದೆ.
ದ್ವಿತೀಯಂ ಮಾರುತಂ ಭೂತಂ ತ್ವಗಧ್ಯಾತ್ಮಂ ಚ ವಿಶ್ರುತಮ್ |
ಸ್ಪ್ರಷ್ಟವ್ಯಮಧಿಭೂತಂ ತು ವಿದ್ಯುತ್ ತತ್ರಾಧಿದೈವತಮ್ ॥20॥
ಎರಡನೆಯ ಭೂತವು ವಾಯು ಎನಿಸಿದೆ. ತ್ವಗಿಂದ್ರಿಯವು ಇದರ ಅಧ್ಯಾತ್ಮ, ಸ್ಪರ್ಶವು ಅಧಿಭೂತ, ವಿದ್ಯುತ್ ಇದರ ಅಧಿದೈವ.
ತೃತೀಯಂ ಜ್ಯೋತಿರಿತ್ಯಾಹುಶ್ಚಕ್ಷುರಧ್ಯಾತ್ಮಮಿಷ್ಯತೇ |
ಅಧಿಭೂತಂ ತತೋ ರೂಪಂ ಸೂರ್ಯಸ್ತತ್ರಾಧಿದೈವತಮ್ ॥21॥
ಮೂರನೆಯದ್ದು ತೇಜೋಭೂತವೆನಿಸಿದೆ. ಕಣ್ಣು ಅಧ್ಯಾತ್ಮ, ರೂಪ ಅಧಿಭೂತ, ಸೂರ್ಯದೇವನೇ ಅಧಿದೈವ.
ಚತುರ್ಥಮಾಪೋ ವಿಜ್ಞೇಯಂ ಜಿಹ್ವಾ ಚಾಧ್ಯಾತ್ಮಮಿಷ್ಯತೇ |
ಅಧಿಭೂತಂ ರಸಶ್ಚಾತ್ರ ಸೋಮಸ್ತತ್ರಾಧಿದೈವತಮ್ ॥22॥
ನಾಲ್ಕನೆಯ ಭೂತ ಜಲತತ್ತ್ವವಾಗಿದೆ. ಜಿಹ್ವೆ ಅಧ್ಯಾತ್ಮ, ರಸ ಅಧಿಭೂತ, ಸೋಮ ಅಧಿದೈವ ಎನಿಸಿದ್ದಾನೆ.
ಪೃಥಿವೀ ಪಂಚಮಂ ಭೂತಂ ಘ್ರಾಣಮಧ್ಯಾತ್ಮಮಿಷ್ಯತೇ |
ಅಧಿಭೂತಂ ತತೋ ಗಂಧೋ ವಾಯುಸ್ತತ್ರಾಧಿದೈವತಮ್ ॥23॥
ಏಷು ಪಂಚಸು ಭೂತೇಷು ಚತುಷ್ಟಯವಿಧಿಃ ಸ್ಮೃತಃ |
ಅತಃ ಪರಂ ಪ್ರವಕ್ಷ್ಯಾಮಿ ಸರ್ವಂ ತ್ರಿವಿಧಮಿಂದ್ರಿಯಮ್ ॥24॥
ಪೃಥಿವಿಯು ಐದನೆಯ ತತ್ತ್ವ. ಪ್ರಾಣವು ಅಧ್ಯಾತ್ಮ, ಗಂಧವು ಅಧಿಭೂತ, ವಾಯುವು ಅಧಿದೈವ. ಹೀಗೆ ಪಂಚಭೂತಗಳಲ್ಲಿ ಅಧ್ಯಾತ್ಮ, ಅಧಿಭೂತ, ಅಧಿದೈವಗಳೆಂಬ ಮೂರು ಪ್ರಭೇದಗಳು ಇವೆ. ಇನ್ನು ಮುಂದೆ ಕರ್ಮೇಂದ್ರಿಯಗಳ ವಿಷಯವನ್ನು ನಿರೂಪಿಸುತ್ತೇನೆ.
ಪದಾವಧ್ಯಾತ್ಮಮಿತ್ಯಾಹುರ್ಬ್ರಾಹ್ಮಣಾಸ್ತತ್ತ್ವದರ್ಶಿನಃ |
ಅಧಿಭೂತಂ ತು ಗಂತವ್ಯಂ ವಿಷ್ಣುಸ್ತತ್ರಾಧಿದೈವತಮ್ ॥25॥
ಜ್ಞಾನಿಗಳು ಎರಡು ಪಾದಗಳನ್ನು ಅಧ್ಯಾತ್ಮವೆಂದೂ, ಗಂತವ್ಯವಾದ ಸ್ಥಾನವನ್ನು ಅಧಿಭೂತವೆಂದೂ, ವಿಷ್ಣುವು ಈ ಪಾದಗಳಿಗೆ ಅಧಿದೈವವೆಂದು ಎನಿಸಿದ್ದಾನೆ.
ಅವಾಗ್ಗತಿರಪಾನಶ್ಚ ವಾಯುರಧ್ಯಾತ್ಮಮಿಷ್ಯತೇ |
ಅಧಿಭೂತಂ ವಿಸರ್ಗಶ್ಚ ಮಿತ್ರಸ್ತತ್ರಾಧಿದೈವತಮ್ ॥26॥
ಕೆಳಮುಖವಾಗಿ ಸಂಚರಿಸುವ ವಾಯುವಿಗೆ ಅಪಾನವೆಂದೂ, ಅಧ್ಯಾತ್ಮವೆಂದು ಹೆಸರು. ಮಲ-ಮೂತ್ರ ತ್ಯಾಗಗಳೇ ವಿಸರ್ಗವೆನಿಸಿದೆ. ಮಿತ್ರನು ಅಧಿದೈವ ಎನಿಸಿದ್ದಾನೆ.
ಪ್ರಜನಃ ಸರ್ವಭೂತಾನಾಮುಪಸ್ಥೋಽಧ್ಯಾತ್ಮಮಿಷ್ಯತೇ |
ಅಧಿಭೂತಂ ತಥಾ ಶುಕ್ಲಂ ದೈವತಂ ಚ ಪ್ರಜಾಪತಿಃ ॥27॥
ಸಕಲ ಪ್ರಾಣಿಗಳ ಉತ್ಪತ್ತಿಗೆ ಕಾರಣವಾದ ಸ್ತ್ರೀ-ಪುರುಷರ ಜನನೇಂದ್ರಿಯಗಳು ಅಧ್ಯಾತ್ಮವೆನಿಸಿದೆ, ವೀರ್ಯವೇ ಅಧಿಭೂತ, ಚತುರ್ಮುಖ ಬ್ರಹ್ಮನು ಅಧಿದೈವ.
ಹಸ್ತಾವಧ್ಯಾತ್ಮಮಿತ್ಯಾಹುರಧ್ಯಾತ್ಮವಿದುಷೋ ಜನಾಃ |
ಅಧಿಭೂತಂ ತು ಕರ್ಮಾಣಿ ಶಕ್ರಸ್ತತ್ರಾಧಿದೈವತಮ್ ॥28॥
ಕೈಗಳ ಮೂಲಕ ನಡೆಯುವ ಕಾರ್ಯವನ್ನು ಅಧಿಭೂತವೆಂದೂ, ಕೈಗಳನ್ನು ಅಧ್ಯಾತ್ಮವೆಂದೂ, ಇದಕ್ಕೆ ಇಂದ್ರನೇ ಅಧಿದೈವವೆಂದೂ ಅಧ್ಯಾತ್ಮವನ್ನರಿತ ಜ್ಞಾನಿಗಳು ಹೇಳುತ್ತಾರೆ.
ವೈಶ್ವದೇವೀ ಮನಃಪೂರ್ವಾ ವಾಗಧ್ಯಾತ್ಮಮಿಹೋಚ್ಯತೇ |
ವಕ್ತವ್ಯಮಧಿಭೂತಂ ಚ ವಹ್ನಿಸ್ತತ್ರ ದ್ವಿದೈವತಮ್ ॥29॥
ಸಮಸ್ತ ದೇವತಾಮಂತ್ರಗಳನ್ನು ಆವೃತ್ತಿ ಮಾಡುವ ಮನಸ್ಸಿನ ಸಹಾಯವನ್ನು ಪಡೆದ ವಾಗಿಂದ್ರಿಯವನ್ನು ಅಧ್ಯಾತ್ಮ ಎಂದು ಕರೆಯುತ್ತಾರೆ. ಯಾವುದನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾನೋ ಅದನ್ನು ಮಾತಿನಲ್ಲಿ ಹೇಳುತ್ತಾನೆ. ಹೇಳುವಂತಹ ಮಾತು ಅಧಿಭೂತವೆನಿಸಿದೆ. ಈ ಮಾತಿಗೆ ಜೀವಾಂತರ್ಯಾಮಿ, ದೇಹಾಂತರ್ಯಾಮಿ ಎಂಬ ಇಬ್ಬರು ಅಧಿದೈವವೆನಿಸಿದ್ದಾರೆ.

ಅಧ್ಯಾತ್ಮಂ ಮನ ಇತ್ಯಾಹುಃ ಪಂಚಭೂತಾನುಕಾರಕಮ್ |
ಅಧಿಭೂತಂ ಚ ಮಂತವ್ಯಂ ಚಂದ್ರಮಾಶ್ಚಾಧಿದೈವತಮ್ ॥30॥
ಪಂಚಭೂತಗಳನ್ನೂ ಕಾರ್ಯನಿರತವನ್ನಾಗಿ ಮಾಡಿಸುವ ಮನಸ್ಸನ್ನು ಅಧ್ಯಾತ್ಮ ಎನ್ನುತ್ತಾರೆ. ಸಂಕಲ್ಪವೇ ಮನಸ್ಸಿಗೆ ಅಧಿಭೂತ, ಚಂದ್ರನೇ ಅಧಿದೇವತೆ.
ಅಧ್ಯಾತ್ಮಂ ಬುದ್ಧಿರಿತ್ಯಾಹುಃ ಷಡಿಂದ್ರಿಯವಿಚಾರಿಣೀ |
ಅಧಿಭೂತಂ ಚ ವಿಜ್ಞೇಯಂ ಮಹತ್ ತತ್ರಾಧಿದೈವತಮ್ ॥31॥
ಮನಸ್ಸಿನಿಂದ ಕೂಡಿರುವ ಆರು ಇಂದ್ರಿಯಗಳನ್ನು ತಿಳಿಯುವ ಬುದ್ಧಿಯನ್ನು ಅಧ್ಯಾತ್ಮವೆನ್ನುತ್ತಾರೆ. ತಿಳಿಯಲ್ಪಡುವಿಕೆಯೇ ಅಧಿಭೂತವು. ಬ್ರಹ್ಮನೇ ಅಧಿದೇವತೆ ಎನಿಸಿದ್ದಾನೆ.
ತ್ರೀಣಿ ಸ್ಥಾನಾನಿ ಭೂತಾನಾಂ ಚತುರ್ಥಂ ನೋಪಪದ್ಯತೇ |
ಸ್ಥಲಮಾಪಸ್ತಥಾಽಽಕಾಶಂ ಜನ್ಮ ಚಾಪಿ ಚತುರ್ವಿಧಮ್ ॥32॥
ಅಂಡಜೋದ್ಭಿಜ್ಜಸಂಸ್ವೇದಜರಾಯುಜಮಥಾಪಿ ಚ |
ಚತುರ್ಧಾ ಜನ್ಮ ಇತ್ಯೇತದ್ ಭೂತಗ್ರಾಮಸ್ಯ ವಕ್ಷ್ಯತೇ ॥33॥
ಪ್ರಾಣಿಗಳು ವಾಸ ಮಾಡಲು ಇರುವ ಮೂರು ಸ್ಥಾನಗಳು ಭೂಮಿ, ನೀರು, ಆಕಾಶವೆನಿಸಿವೆ. ನಾಲ್ಕನೆಯ ಸ್ಥಾನವೇ ಇರುವುದಿಲ್ಲ. ಪ್ರಾಣಿಗಳಿಗೆ ಅಂಡಜಾ, ಉದ್ಭಿಜ, ಸ್ವೇದಜ, ಜರಾಯುಜ ಎಂಬ ಜನ್ಮವಿದೆ. ಪ್ರಾಣಿಗಳಿಗೆ ಮಾತ್ರ ಈ ನಾಲ್ಕು ವಿಧವಾದ ಜನ್ಮಗಳು ಕಂಡುಬರುತ್ತವೆ.
ಅಚರಾಣ್ಯಪಿ ಭೂತಾನಿ ಖೇಚರಾಣಿ ತಥೈವ ಚ |
ಅಂಡಜಾನಿ ವಿಜಾನೀಯಾತ್ ಸರ್ವಾಂಶ್ಚೈವ ಸರೀಸೃಪಾನ್ ॥34॥
ಹುಟ್ಟಿದ ಕೂಡಲೇ ಸಂಚರಿಸಲಾಗದ, ಮೊಟ್ಟೆಯನ್ನು ಒಡೆದು ಹುಟ್ಟುವ ಅಂಡಜಗಳು ಆಕಾಶದಲ್ಲಿ ಸಂಚರಿಸುವ ಹಕ್ಕಿಗಳು ಮತ್ತು ಭೂಮಿಯಲ್ಲಿ ಸಂಚರಿಸುವವು ಸರ್ಪಗಳು ಎಂದು ತಿಳಿಯಬೇಕು.
ಸ್ವೇದಜಾಃ ಕೃಮಯಃ ಪ್ರೋಕ್ತಾ ಜಂತವಶ್ಚ ತಥಾವಿಧಾಃ |
ಜನ್ಮ ದ್ವಿತೀಯಮಿತ್ಯೇತತ್ ಜಘನ್ಯತರಮುಚ್ಯತೇ ॥35॥
ಬೆವರಿನಿಂದ ಹುಟ್ಟುವ ಪ್ರಾಣಿಗಳನ್ನು ಕ್ರಿಮಿಗಳು ಎಂದೂ, ಜಂತುಗಳು ಎಂದೂ ಕರೆಯುತ್ತಾರೆ. ಕ್ರಿಮಿಯ ಜನ್ಮಕ್ಕಿಂತಲೂ ಜಂತುವಿನ ಜನ್ಮವು ನೀಚವಾದುದು.
ಭಿತ್ತ್ವಾ ತು ಪೃಥಿವೀಂ ಯಾನಿ ಜಾಯಂತೇ ಕಾಲಪರ್ಯಯಾತ್ |
ಉದ್ಭಿಜ್ಜಾನೀತಿ ತಾನ್ಯಾಹುಃ ಭೂತಾನಿ ದ್ವಿಜಸತ್ತಮಾಃ ॥36॥
ಕಾಲವು ಪಕ್ವವಾದ ಬಳಿಕ ಭೂಮಿಯನ್ನು ಭೇದಿಸಿಕೊಂಡು ಹೊರ ಬರುವ ಮರ, ಗಿಡ, ಬಳ್ಳಿಗಳನ್ನು ಉಭಿಜವೆನ್ನುತ್ತಾರೆ.
ದ್ವಿಪಾದಬಹುಪಾದಾನಿ ತಿರ್ಯಗ್ಗತಮತೀನಿ ಚ |
ಜರಾಯುಜಾನಿ ಭೂತಾನಿ ವಿತತಾನ್ಯಪಿ ಸತ್ತಮಾಃ ॥37॥
ಬ್ರಾಹ್ಮಣರೇ, ಎರಡು ಪಾದವುಳ್ಳವುಗಳು, ಬಹುಪಾದವುಳ್ಳವುಗಳು, ವಕ್ರ ಗತಿಯುಳ್ಳವುಗಳು, ವಕ್ರಬುದ್ಧಿಯುಳ್ಳವುಗಳು, ವಿಕಾರರೂಪವುಳ್ಳ ಪ್ರಾಣಿಗಳು ಇವೆಲ್ಲವೂ ಜರಾಯುಜ ಎನಿಸಿವೆ.
ವಿವಿಧಾನೀಹ ವಿಜ್ಞೇಯಾ ಬ್ರಹ್ಮ ಯೋನಿಃ ಸನಾತನಮ್ |
ತಪಃ ಕರ್ಮ ಚ ಯತ್ ಪುಣ್ಯಮಿತ್ಯೇಷ ವಿದುಷಾಂ ನಯಃ ॥38॥
ಬ್ರಾಹ್ಮಣ್ಯಕ್ಕೆ ಕಾರಣವಾದ ಎರಡು ಪ್ರಕಾರಗಳೆಂದರೆ ತಪಸ್ಸು ಮತ್ತು ಪುಣ್ಯಕರ್ಮಗಳ ಅನುಷ್ಠಾನ. ಇದರಿಂದ ಬ್ರಾಹ್ಮಣತ್ವವು ಪ್ರಾಪ್ತವಾಗುತ್ತದೆ ಎನ್ನುತ್ತಾರೆ ಬಲ್ಲವರು.
ದ್ವಿವಿಧಂ ಕರ್ಮ ವಿಜ್ಞೇಯಮಿಜ್ಯಾ ದಾನಂ ಚ ತನ್ಮಖೇ |
ಜ್ಞಾನಂ ಸ್ವಾಧ್ಯಾಯಜನನಮಿತಿ ವೃದ್ಧಾನುಶಾಸನಮ್ ॥39॥
ಕರ್ಮಗಳಲ್ಲಿ ಎರಡು ವಿಧವಿದೆ. ಅಗ್ನಿಮುಖದಲ್ಲಿ ದಾನ ಮಾಡುವುದು, ಸ್ವಾಧ್ಯಾಯ (ಅಧ್ಯಯನ ಮಾಡುವುದು) ಎಂಬುದಾಗಿ. ಸ್ವಾಧ್ಯಾಯ ಜ್ಞಾನಯಜ್ಞವು ವೃದ್ಧರ ಅನುಶಾಸನವೆನಿಸಿದೆ.
ಏತದ್ ಯೋ ವೇದ ವಿಧಿವತ್ ಸ ಮುಕ್ತಃ ಸ್ಯಾದ್ ದ್ವಿಜರ್ಷಭಾಃ |
ವಿಮುಕ್ತಃ ಸರ್ವಪಾಪೇಭ್ಯ ಇತಿ ಚೈವ ನಿಬೋಧತ ॥40॥
ದ್ವಿಜಶ್ರೇಷ್ಠರೇ, ಯಾವ ಮನುಷ್ಯನು ಈ ವಿಷಯಗಳನ್ನು ವಿಧಿವತ್ತಾಗಿ ತಿಳಿಯುವನೋ ಅವನು ಎಲ್ಲ ಪಾಪಗಳಿಂದ ವಿಮುಕ್ತನಾಗಿ ಯೋಗಿ ಎನಿಸುತ್ತಾನೆ.
ಯಥಾವದಧ್ಯಾತ್ಮವಿಧಿರೇಷ ವಃ ಕೀರ್ತಿತೋ ಮಯಾ |
ಜ್ಞಾನಮಸ್ಯ ಹಿ ಧರ್ಮಜ್ಞಾಃ ಪ್ರಾಪ್ತಂ ಬುದ್ಧಿಮತಾಮಿಹ ॥41॥
ಹೀಗೆ ಅಧ್ಯಾತ್ಮವಿಧಿಯನ್ನು ನಿಮಗೆ ವಿಧಿವತ್ತಾಗಿ ತಿಳಿಸಿದ್ದೇನೆ. ಜ್ಞಾನಿಗಳಾದ ನಿಮಗೆ ಈ ವಿಷಯಕಜ್ಞಾನವು ಚೆನ್ನಾಗಿ ಉಂಟಾಗಿದೆ.
ಇಂದ್ರಿಯಾಣೀಂದ್ರಿಯಾರ್ಥಾಶ್ಚ ಮಹಾಭೂತಾನಿ ಪಂಚ ಚ |
ಸರ್ವಾಣ್ಯೇತಾನಿ ಸಂಧಾಯ ಮನಸಾ ಸಂಪ್ರಧಾರಯೇತ್ ॥42॥
ಇಂದ್ರಿಯಗಳು, ಇಂದ್ರಿಯಗಳ ವಿಷಯಗಳು, ಐದು ಭೂತಗಳು ಎಲ್ಲವನ್ನೂ ಸೇರಿಸಿಕೊಂಡು ಮನಸ್ಸಿನಲ್ಲಿ ಚೆನ್ನಾಗಿ ಧಾರಣೆ ಮಾಡಿಕೊಳ್ಳಬೇಕು.
ಕ್ಷೀಣೇ ಮನಸಿ ಸರ್ವಸ್ಮಿನ್ ನ ಜನ್ಮಸುಖಮಿಷ್ಯತೇ |

ಜ್ಞಾನಸಂಪನ್ನಸತತ್ತ್ವನಾಂ ತತ್ಸುಖಂ ವಿದುಷಾಂ ಹಿತಮ್ ॥43॥
ಇಂದ್ರಿಯ ಸಂಬದ್ಧವಾದ ವಿಷಯದಿಂದ ಮನಸ್ಸು ಸಂಬಂಧ ಹೊಂದಿದೆ. ಮನಸ್ಸು ಕ್ಷೀಣವಾದರೆ ಜ್ಞಾನಸಂಪನ್ನ ಮನಸ್ಸಿನಿಂದ ಜ್ಞಾನಪೂರ್ವಕವಾಗಿ ಹುಟ್ಟುವ ಸುಖವೇ ಸುಖವೆನಿಸಿದೆ.
ಅತಃ ಪರಂ ಪ್ರವಕ್ಷ್ಯಾಮಿ ಸೂಕ್ಷ್ಮಮಭಾವಕರಂ ಶಿವಮ್ |
ನಿವೃತ್ತಂ ಸರ್ವಭೂತೇಷು ಮೃದುನಾ ದಾರುಣೇನ ವಾ ॥44॥
ಇನ್ನು ಮುಂದೆ ಎಲ್ಲ ಪ್ರಾಣಿಗಳಲ್ಲಿಯೂ ಇರುವ ಪರಮಮಂಗಳವಾದ ಮನಸ್ಸಿನ ಸೂಕ್ಷ್ಮಭಾವವನ್ನು, ಮೃದು-ಕಠಿಣ ಭಾವಗಳನ್ನು, ನಿವೃತ್ತಿಯ ವಿಷಯವನ್ನು ತಿಳಿಸುತ್ತೇನೆ.
ಗುಣಾಗುಣಮನಾಸಂಗಮೇಕಚರ್ಯಮ್ ಅನಂತರಮ್ |
ಏತದ್ ಬ್ರಾಹ್ಮಣಜಂ ವೃತ್ತಮಾಹುರೇಕಪದಂ ಸುಖಮ್ ॥45॥
ಬ್ರಾಹ್ಮಣರಲ್ಲಿ ಅಹಂಕಾರಕ್ಕೆ ಕಾರಣವಾದ ಗುಣಗಳಿದ್ದರೂ, ದುರ್ಗುಣಗಳಿದ್ದರೂ ಅವುಗಳಲ್ಲಿ ಅಸಂಗನಾಗದೆ, ಪರಬ್ರಹ್ಮವಸ್ತುವನ್ನೇ ಅರಸುವ ವ್ಯಕ್ತಿತ್ವವುಳ್ಳ ವ್ಯಾಪಾರವನ್ನು ಬ್ರಾಹ್ಮಣನ ಗುಣವೆನ್ನುತ್ತಾರೆ. ಪರಮಾತ್ಮನ ಪಾದವನ್ನು ಧ್ಯಾನಿಸುವುದೇ ಸುಖ ಎಂದು ತಿಳಿದವನು ಬ್ರಾಹ್ಮಣ.
ವಿದ್ವಾನ್ ಕೂರ್ಮ ಇವಾಂಗಾನಿ ಕಾಮಾನ್ ಸಂಹೃತ್ಯ ಸರ್ವಶಃ |
ವಿರಜಾಃ ಸರ್ವತೋ ಮುಕ್ತೋ ಯೋ ನರಃ ಸ ಸುಖೀ ಸದಾ ॥46॥
ಆಮೆಯು ತನ್ನ ಅವಯವಗಳನ್ನು ಒಳಕ್ಕೆ ಸೆಳೆದುಕೊಳ್ಳುವಂತೆ ವಿದ್ವಾಂಸನು ಇಂದ್ರಿಯ ಕಾಮನೆಗಳನ್ನು ಸಂಕೋಚಗೊಳಿಸಿಕೊಂಡು, ರಜೋಗುಣದಿಂದ ರಹಿತನಾಗಿ ಸಮಸ್ತ ಬಂಧನಗಳಿಂದಲೂ ಮುಕ್ತನಾಗಿ ಯಾವಾಗಲೂ ಸುಖಿಯಾಗಿರುತ್ತಾನೆ.
ಕಾಮಾನಾತ್ಮನಿ ಸಂಯಮ್ಯ ಕ್ಷೀಣತೃಷ್ಣಃ ಸಮಾಹಿತಃ |
ಸರ್ವಭೂತಸುಹೃನ್ಮೈತ್ರೋ ಬ್ರಹ್ಮಭೂಯಾಯ ಕಲ್ಪತೇ ॥47॥
ಯಾವನು ಕಾಮನೆಗಳನ್ನು ನಿಗ್ರಹಿಸಿಕೊಂಡು, ತೃಷ್ಣಾರಹಿತನಾಗಿ, ಎಲ್ಲ ಪ್ರಾಣಿಗಳಿಗೂ ಸುಹೃನ್ಮಿತ್ರನಾಗಿ, ಏಕಾಗ್ರತೆಯಿಂದ ಬ್ರಹ್ಮನನ್ನೇ ಧ್ಯಾನಿಸುತ್ತಾನೋ ಅವನು ಹರಿಪದವನ್ನೇ ಸೇರುತ್ತಾನೆ.
ಇಂದ್ರಿಯಾಣಾಂ ನಿರೋಧೇನ ಸರ್ವೇಷಾಂ ವಿಷಯೈಷಿಣಾಮ್ |
ಮುನೇರ್ಜನಪದತ್ಯಾಗಾದ್ ಅಧ್ಯಾತ್ಮಾಗ್ನಿಃ ಸಮಿಧ್ಯತೇ ॥48॥
ವಿಷಯಸುಖವನ್ನು ಅಪೇಕ್ಷಿಸುವ ಇಂದ್ರಿಯಗಳನ್ನು ಮನಸ್ಸಿನ ಮೂಲಕ ನಿಗ್ರಹಿಸಿಕೊಂಡು, ಜನರ ಸಮುದಾಯದಲ್ಲಿ ವಾಸ ಮಾಡದೆ, ಏಕಾಂತದಲ್ಲಿದ್ದು ಹರಿಯನ್ನು ಧ್ಯಾನಿಸುವವನಿಗೆ ಅಧ್ಯಾತ್ಮ ಎಂಬ ಅಗ್ನಿಯು ಚೆನ್ನಾಗಿ ಉರಿಯುತ್ತದೆ.
ಯಥಾಽಗ್ನಿರಿಂಧನೈರಿದ್ಧೋ ಮಹಾಜ್ಯೋತಿಃ ಪ್ರಕಾಶತೇ |
ತಥೇಂದ್ರಿಯನಿರೋಧೇನ ಮಹಾನಾತ್ಮಾ ಪ್ರಕಾಶತೇ ॥49॥
ಹೇಗೆ ಕಟ್ಟಿಗೆಗಳಿಂದ ಅಗ್ನಿಯು ಜ್ಯೋತಿಯಾಗಿ ಉರಿಯುತ್ತಾ ಪ್ರಕಾಶಿಸುವುದೋ ಇದರಂತೆ ಇಂದ್ರಿಯಗಳನ್ನು ನಿರೋಧಿಸುವುದರಿಂದ ಪರಮಾತ್ಮನು ಹೃದಯದಲ್ಲಿ ಪ್ರಕಾಶ ಹೊಂದುತ್ತಾನೆ.
ಯದಾ ಪಶ್ಯತಿ ಭೂತಾನಿ ಪ್ರಸನ್ನಾತ್ಮಾಽಽತ್ಮನೋ ಹೃದಿ |
ಸ್ವಯಂ ಜ್ಯೋತಿಸ್ತದಾ ಸೂಕ್ಷ್ಮಾತ್ ಸೂಕ್ಷ್ಮಮಾಪ್ನೋತ್ಯನುತ್ತಮಮ್ ॥50॥
ಯಾವಾಗ ಯೋಗಿಯು ಪ್ರಸನ್ನ ಮನಸ್ಕನಾಗಿ, ಸ್ವಯಂ ಜ್ಯೋತಿರೂಪನಾದ, ಸಕಲ ಪ್ರಾಣಿಗಳಿಗೂ ಅಂತರ್ಯಾಮಿಯಾದ, ಸೂಕ್ಷ್ಮರೂಪಿಯಾದ ಶ್ರೀಹರಿಯನ್ನು ಹೃದಯ ಗುಹೆಯಲ್ಲಿ ಕಾಣುತ್ತಾನೋ ಆ ಪುಣ್ಯದಿಂದ ಅವನನ್ನೇ ಹೊಂದುತ್ತಾನೆ.
ಅಗ್ನೀ ರೂಪಂ ರಸಂ ಸ್ರೋತೋ ವಾತಃ ಸ್ಪರ್ಶನಮೇವ ಚ |
ಮಹೀ ಗಂಧಧರಾ ಘ್ರಾಣಮಾಕಾಶಃ ಶ್ರವಣಂ ತಥಾ ॥51॥
ದೃಶ್ಯಮಾದಿತ್ಯಮೇವಾಹುರಧ್ಯಾತ್ಮವಿದುಷೋ ಜನಾಃ ॥52॥
ಜ್ಞಾನಿಗಳು ದೇಹದಲ್ಲಿರುವ ಪಂಚಭೂತಗಳಲ್ಲಿ ಅಧ್ಯಾತ್ಮ ಚಿಂತನೆಯನ್ನು ಹೀಗೆ ಮಾಡಿದ್ದಾರೆ: ದೇಹದಲ್ಲಿರುವ ಅಗ್ನಿಯೇ ಬಾಹ್ಯಪ್ರಪಂಚದಲ್ಲಿ ಕಾಣುವ ರೂಪ ಎನಿಸಿದೆ. ರಸವು ಹರಿಯುವ ನದಿ ಎನಿಸಿದೆ. ಸ್ಪರ್ಶವು ಬೀಸುವ ಗಾಳಿ ಎನಿಸಿದೆ. ಗಂಧವನ್ನು ಧರಿಸುವ ಘ್ರಾಣವು ಕಣ್ಣಿಗೆ ಕಾಣುವ ಪೃಥಿವಿ ಎನಿಸಿದೆ. ಶಬ್ದಶ್ರವಣವು ಆಕಾಶವೆನಿಸಿದೆ. ಹೃದಯದಲ್ಲಿ ಕಾಣುವ ಪರಮಾತ್ಮನು ಬಾಹ್ಯಪ್ರಪಂಚದಲ್ಲಿ ಕಾಣುವ ಸೂರ್ಯನೆನಿಸಿದ್ದಾನೆ. ಹೀಗೆ ಪಿಂಡಾಂಡದಲ್ಲಿ ಬ್ರಹ್ಮಾಂಡವನ್ನು ಕಾಣಬಹುದು.
ರೋಗಶೋಕಸಮಾವಿಷ್ಟಂ ಪಂಚಸ್ರೋತಃ ಸಮಾವೃತಮ್ |
ಪಂಚಭೂತಸಮಾಯುಕ್ತಂ ನವದ್ವಾರಂ ದ್ವಿಜೋತ್ತಮಾಃ ॥53॥
ರಜಸ್ವಲಮಥಾದೃಶ್ಯಂ ತ್ರಿಗುಣಂ ಸಪ್ತಧಾತುಕಮ್ |
ಸಂಸರ್ಗಾಭಿರತಂ ಮೂಢಂ ಶರೀರಮಿತಿ ಧಾರಣಾ ॥54॥
ರೋಗ-ಶೋಕಗಳಿಂದ ಸುತ್ತುವರಿದ, ಪ್ರವಾಹರೂಪವಾದ ಐದು ಇಂದ್ರಿಯಗಳಿಂದ ಕೂಡಿರುವ, ಪಂಚಭೂತಗಳಿಂದ ತುಂಬಿರುವ, ಒಂಬತ್ತು ಬಾಗಿಲುಗಳುಳ್ಳ, ರಜೋಗುಣಗಳಿಂದ ತುಂಬಿರುವ, ತ್ರಿಗುಣಾತ್ಮಕವಾದ, ಸಪ್ತ ಧಾತುಗಳಿಂದ ಕೂಡಿರುವ, ಬಾಹ್ಯ ಭೋಗಗಳಲ್ಲಿಯೇ ಆಸಕ್ತವಾಗಿರುವ ಈ ದೇಹವನ್ನೇ ಶರೀರ ಎಂದು ಕರೆಯುತ್ತಾರೆ.
ದುಸ್ತರಂ ಪ್ರತಿಲೋಕೇಽಸ್ಮಿನ್ ಸತ್ವಂ ಪ್ರತಿ ಸಮಾಶ್ರಿತಮ್ |
ಏತದೇವ ಹಿ ಲೋಕೇಽಸ್ಮಿನ್ ಕಾಲಚಕ್ರಂ ಪ್ರವರ್ತತೇ ॥55॥
ಪ್ರತಿಯೊಬ್ಬ ಜೀವರನ್ನು ಆಶ್ರಯಿಸಿಕೊಂಡಿರುವ ಯಾವ ಶರೀರವಿದೆಯೋ ಇದನ್ನೇ ವಿದ್ವಾಂಸರು ಕಾಲಚಕ್ರ ಎನ್ನುತ್ತಾರೆ. ಬಾಲ್ಯಾದಿ

ಅವಸ್ಥೆಗಳಿಂದ ಕೂಡಿದ ಈ ಶರೀರವೇ ಕಾಲ ಎನಿಸಿದೆ. ಇದೇ ಕಾಲಚಕ್ರವನ್ನು ನಡೆಸುತ್ತಿರುತ್ತದೆ.
ಏತನ್ಮಹಾರ್ಣವಂ ಘೋರಮಗಾಧಂ ಮೋಹಸಂಜ್ಞಿತಮ್ |
ವಿಸೃಜನ್ ಸಂಕ್ಷಿಪಂಶ್ಚೈವ ಮೋಹಯನ್ ಸ್ಥಾಪಯನ್ ಜಗತ್ ॥56॥
ಈ ಶರೀರವೆಂಬ ಕಾಲಚಕ್ರವು ಘೋರವಾದ, ಅಗಾಧವಾದ ದೊಡ್ಡ ಸಮುದ್ರದಂತಿದೆ. ಈ ಶರೀರವನ್ನು ಮೋಹ ಎಂದು ಕರೆಯುತ್ತಾರೆ. ಈ ಶರೀರವು ಜಗತ್ತನ್ನು ಸಂಕ್ಷೇಪಗೊಳಿಸುತ್ತದೆ, ಮೋಹಗೊಳಿಸುತ್ತದೆ, ಮಲಗುವಂತೆ ಮಾಡುತ್ತದೆ.
ಕಾಮಕ್ರೋಧೌ ಭಯಂ ಮೋಹಮಭಿದ್ರೋಹಮಥಾನೃತಮ್ |
ಇಂದ್ರಿಯಾಣಾಂ ನಿರೋಧೇನ ಸದಾ ತ್ಯಜತಿ ದುಸ್ತ್ಯಜಾನ್ ॥57॥
ಮನುಷ್ಯನು ಕಾಮ, ಕ್ರೋಧ, ಭಯ, ಮೋಹ, ದ್ರೋಹ, ಅಸತ್ಯ - ಇವೆಲ್ಲ ದುರ್ಗುಣಗಳನ್ನು ಇಂದ್ರಿಯಗಳನ್ನು ನಿಗ್ರಹಿಸುವುದರಿಂದ ಬಿಡಲು ಸಮರ್ಥನಾಗುತ್ತಾನೆ.
ಯಸ್ಯೈತೇ ನಿರ್ಜಿತಾ ಲೋಕೇ ತ್ರಿಗುಣಾಃ ಪಂಚ ಧಾತವಃ |
ವ್ಯೋಮ್ನಿ ತಸ್ಯ ಪರಂ ಸ್ಥಾನಮನಂತಮುಪಲಭ್ಯತೇ ॥58॥
ಯಾವನಿಂದ ಸತ್ವ-ರಜಸ್-ತಮೋಗುಣಗಳಿಂದ ಕೂಡಿದ ಶರೀರದ ಅಭಿಮಾನವು ತೊರೆಯಲ್ಪಟ್ಟಿದೆಯೋ ಅವನ ಹೃದಯಾಕಾಶದಲ್ಲಿ ಅನಂತಕಲ್ಯಾಣಗುಣ- ಪರಿಪೂರ್ಣನಾದ ಪರಬ್ರಹ್ಮನು ನಿತ್ಯವೂ ನೆಲೆಗೊಳ್ಳುತ್ತಾನೆ. ಇದರಿಂದ ಜೀವನು ನಿತ್ಯಸುಖವನ್ನು ಹೊಂದುತ್ತಾನೆ.
ಕಾಲಕೂಲಮಪಾರಾಂತಾಂ ಮನಃ ಸ್ರೋತೋ ಭಯಾವಹಾಮ್ |
ನದೀಂ ದುರ್ಗಹ್ರದಾಂ ತೀರ್ಣಃ ಕಾಮಕ್ರೋಧಾವುಭೌ ಜಯೇತ್ ॥59॥
ಸರ್ವದೋಷವಿನಿರ್ಮುಕ್ತಸ್ತತಃ ಪಶ್ಯತಿ ತತ್ಪರಮ್ |
ಮನೋ ಮನಸಿ ಸಂಧಾಯ ಪಶ್ಯತ್ಯಾತ್ಮಾನಮಾತ್ಮನಿ ॥60॥
ಸರ್ವವಿತ್ ಸರ್ವಭೂತೇಷು ದೃಕ್ಷ್ಯತ್ಯಾತ್ಮಾನಮಾತ್ಮನಿ ॥61॥
ಕೊನೆಯೇ ಇಲ್ಲದ ಕಾಲವೆಂಬ ದಡದಿಂದ ಕೂಡಿದ, ಪರಮಾತ್ಮ-ಜಗತ್ತು ಎಂದು ಎರಡು ಕಡೆ ಹರಿಯುವ ಮನಸ್ಸುಳ್ಳ, ಭಯಂಕರವಾದ ಕಷ್ಟಗಳೆಂಬ ನದಿಗಳಿಂದ ಕೂಡಿದ ಈ ಶರೀರವನ್ನು ದಾಟಿದವನು ಕಾಮ-ಕ್ರೋಧಗಳನ್ನು ಜಯಿಸುತ್ತಾನೆ. ಇವುಗಳನ್ನು ಜಯಿಸಿದ ಬಳಿಕ ಎಲ್ಲ ದೋಷಗಳಿಂದ ಮುಕ್ತನಾಗುತ್ತಾ ಸರ್ವೋತ್ತಮನಾದ ಪರಮಾತ್ಮನನ್ನು ನೋಡುತ್ತಾನೆ. ಯಾವನು ತನ್ನ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ, ಹೃದಯಗುಹಾವಾಸಿಯಾದ ಪರಮಾತ್ಮನನ್ನೇ ನೋಡುತ್ತಾನೋ ಅವನು ಸರ್ವಜ್ಞನಾಗಿ ಎಲ್ಲ ಭೂತಗಳಲ್ಲೂ ಅಂತರ್ಯಾಮಿಯಾದ ಪರಮಾತ್ಮನನ್ನು ತನ್ನ ಅಂತರ್ಯಾಮಿಯನ್ನು ಕಾಣುವಂತೆ ಕಾಣುತ್ತಾನೆ.
ಏಕಧಾ ಬಹುಧಾ ಚೈವ ವಿಕುರ್ವಾಣಸ್ತತಸ್ತತಃ |
ಧ್ರುವಂ ಪಶ್ಯತಿ ರೂಪಾಣಿ ದೀಪಾದ್ ದೀಪಶತಂ ಯಥಾ ॥62॥
ಸ ವೈ ವಿಷ್ಣುಶ್ಚ ರುದ್ರುಶ್ಚ ವರುಣೋಽಗ್ನೀ(ಗ್ನಿಃ) ಪ್ರಜಾಪತಿಃ |
ಸ ಹಿ ಧಾತಾ ವಿಧಾತಾ ಚ ಸ ಪ್ರಭುಃ ಸರ್ವತೋಮುಖಃ ॥63॥
ಯಾವ ಪರಮಾತ್ಮನ ದೆಸೆಯಿಂದ ಒಂದು ವಿಧವಾಗಿ, ಅನಂತ ವಿಧವಾಗಿ ವಿಕಾರವನ್ನು ಹೊಂದುವ ಜೀವನು ತನಗೆ ಉಂಟಾಗುವ ಮನುಷ್ಯ, ಪಶು-ಪಕ್ಷ್ಯಾದಿ ರೂಪಗಳನ್ನು ಒಂದು ದೀಪದಿಂದ ನೂರಾರು ದೀಪ ಉರಿಸಿದಂತೆ ಯಥಾವತ್ತಾಗಿ ನೋಡುತ್ತಾನೆ. ಒಬ್ಬನೇ ಜೀವನಿಗೆ ಆಗಮಿಸಿದ ಅನೇಕ ಉಪಾಧಿಗಳನ್ನು ನೋಡುತ್ತಾನೆ. ನಾನಾ ಯೋನಿಗಳನ್ನು ತಂದೊಡ್ಡುವ ಪರಮಾತ್ಮನು ವಿಷ್ಣು-ರುದ್ರ-ವರುಣ-ಅಗ್ನಿ- ಪ್ರಜಾಪತಿ-ಧಾತಾ-ವಿಧಾತಾ ಹೀಗೆ ಅನೇಕ ಶಬ್ದಗಳಿಂದ ಕರೆಸಿಕೊಳ್ಳುತ್ತಾನೆ. ಎಲ್ಲ ನಾಮಗಳು ಪರಮಾತ್ಮನ ನಾಮಗಳೇ ಆಗಿವೆ. ವ್ಯಕ್ತಿಗಳು ಬೇರೆ. ಎಲ್ಲರ ಅಂತರ್ಯಾಮಿಯು ಸರ್ವಶಕ್ತನಾಗಿ ಎಲ್ಲೆಡೆಯೂ ವ್ಯಾಪಾರಗಳನ್ನು ಮಾಡುತ್ತಿದ್ದಾನೆ.
ಹೃದಯಂ ಸರ್ವಭೂತಾನಾಂ ಮಹಾನಾತ್ಮಾ ಪ್ರಕಾಶತೇ ॥64॥
ಎಲ್ಲ ಜೀವರ ಹೃದಯದಲ್ಲಿಯೂ ಜ್ಞಾನಿಗಳಿಗೆ ಸರ್ವೋತ್ತಮನಾದ ಪರಮಾತ್ಮನು ಕಾಣಿಸುತ್ತಾನೆ.
ತಂ ವಿಪ್ರಸಂಘಾಶ್ಚ ಸುರಾಸುರಾಶ್ಚ
ಯಕ್ಷಾಃ ಪಿಶಾಚಾಃ ಪಿತರೋ ವಯಾಂಸಿ |
ರಕ್ಷೋಗಣಾ ಭೂತಗಣಾಶ್ಚ ಸರ್ವೇ
ಮಹರ್ಷಯಶ್ಚೈವ ಸದಾ ಸ್ತುವಂತಿ ॥65॥
ಬ್ರಾಹ್ಮಣರ ಸಮುದಾಯವು, ದೇವತೆಗಳು, ಅಸುರರು, ಯಕ್ಷ-ಪಿಶಾಚಿಗಳು, ಪಿತೃಗಳು, ಪಕ್ಷಿಗಳು, ರಾಕ್ಷಸರು, ಭೂತಗಣಗಳು, ಎಲ್ಲ ಮಹರ್ಷಿಗಳು ಈ ಸರ್ವೋತ್ತಮನಾದ ಪರಮಾತ್ಮನನ್ನೇ ಸ್ತೋತ್ರ ಮಾಡುತ್ತಿರುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಪಂಚಭೂತವಿಚಾರಕಥನಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ನಾಲ್ಕನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು, ಮನುಷ್ಯರು

ಕ್ಷತ್ರಿಯರು ರಜೋಗುಣ ಕಾರ್ಯದ ಬಲವನ್ನು ಪ್ರಧಾನವಾಗಿ
ಹೊಂದಿರುವುದರಿಂದ ಸತ್ವಗುಣ ಪ್ರಧಾನರಾದ ಬ್ರಾಹ್ಮಣರನ್ನು ರಕ್ಷಿಸುವುದು ಕರ್ತವ್ಯವಾಗಿದೆ ಎಂದು ಹೇಳುವ ಮೂಲಕ ಬ್ರಾಹ್ಮಣ ಜಾತಿಯ ಶ್ರೇಷ್ಠತ್ವವನ್ನು ಹೇಳಿದುದು. ಇದರಂತೆ ಅಹಿಂಸಾದಿ ಧರ್ಮಗಳನ್ನು ಪ್ರತಿಪಾದಿಸಿದುದು.
ಬ್ರಹ್ಮಾ
ಮನುಷ್ಯಾಣಾಂ ತು ರಾಜನ್ಯಃ ಕ್ಷತ್ರಿಯೋ ಮಧ್ಯಮೋ ಗುಣೈಃ |
ಕುಂಜರೋ ವಾಹನಾನಾಂ ತು ಸಿಂಹಶ್ಚಾರಣ್ಯವಾಸಿನಾಮ್ ॥1॥
ಬ್ರಹ್ಮಾ ಮನುಷ್ಯರಲ್ಲಿ ರಜೋಗುಣಯುಕ್ತರಾದ ಕ್ಷತ್ರಿಯ ರಾಜನು ಶ್ರೇಷ್ಠನು. ಕುದುರೆ, ಆನೆ, ಹೇಸರಗತ್ತೆ ಮುಂತಾದ ವಾಹನಗಳಲ್ಲಿ ಆನೆಯು ಶ್ರೇಷ್ಠವಾದುದು. ಅರಣ್ಯವಾಸಿ ಪ್ರಾಣಿಗಳಲ್ಲಿ ಸಿಂಹವು ಶ್ರೇಷ್ಠವಾದುದು.
ಅವಿಃ ಪಶೂನಾಂ ಸರ್ವೇಷಾಮಾಖುಶ್ಚ ಬಿಲವಾಸಿನಾಮ್ |
ಗವಾಂ ಗೋವೃಷಭಶ್ಚೈವ ಸ್ತ್ರೀಣಾಂ ಪುರುಷ ಏವ ಚ ॥2॥
ಪಶುಗಳಲ್ಲಿ ಕುರಿಗಳು ಶ್ರೇಷ್ಠವಾದವು. ಬಿಲದಲ್ಲಿ ವಾಸ ಮಾಡುವ ಪ್ರಾಣಿಗಳಲ್ಲಿ ಸರ್ಪವು (ಇಲಿಯು), ಗೋವುಗಳಲ್ಲಿ ವೃಷಭವು ಶ್ರೇಷ್ಠವಾದುದು. ಸ್ತ್ರೀ-ಪುರುಷರಲ್ಲಿ ಪುರುಷನೇ ಶ್ರೇಷ್ಠನು.
ನ್ಯಗ್ರೋಧೋ ಜಂಬುವೃಕ್ಷಶ್ಚ ಪಿಪ್ಪಲಃ ಶಾಲ್ಮಲಿಸ್ತಥಾ |
ಶಿಂಶುಪಾ ಮೇಷಶೃಂಗಶ್ಚ ತಥಾ ಕೀಚಕವೇಣವಃ ॥3॥
ಏತೇ ದ್ರುಮಾಣಾಮಧಿಕಾ ಲೋಕೇಽಸ್ಮಿನ್ ನಾತ್ರ ಸಂಶಯಃ ॥4॥
ಆಲದ ಮರ, ನೇರಳೆಯ ಮರ, ಅರಳಿ, ಬೂರುಗ, ಅಗರು, ಕುರುಟಿಗ, ಬಿದಿರು ಈ ವೃಕ್ಷಗಳು ಜಗತ್ತಿನ ಎಲ್ಲ ವೃಕ್ಷಗಳಿಗಿಂತಲೂ ಶ್ರೇಷ್ಠವಾದವುಗಳು.
ಹಿಮವಾನ್ ಪಾರಿಯಾತ್ರಶ್ಚ ಸಹ್ಯೋ ವಿಂಧ್ಯಸ್ತ್ರಿಕೂಟವಾನ್ |
ಶ್ವೇತೋ ನೀಲಶ್ಚ ಭಾಸಶ್ಚ ಕ್ರೋಷ್ಟವಾಂಶ್ಚೈವ ಪರ್ವತಃ ॥5॥
ಶುಭಸ್ಕಂದೋ ಮಹೇಂದ್ರಶ್ಚ ಮಾಲ್ಯವಾನ್ ಪರ್ವತಸ್ತಥಾ |
ಏತೇ ಪರ್ವತರಾಜಾನೋ ಗಣಾನಾಂ ಮರುತಸ್ತಥಾ ॥6॥
ಹಿಮವಂತ, ಪಾರಿಯಾತ್ರ,ಸಹ್ಯ, ವಿಂಧ್ಯ, ತ್ರಿಕೂಟ, ಶ್ವೇತ, ನೀಲ, ಭಾಸ, ಕ್ರೋಷ್ಟವಾನ್ ಎಂಬ ಪರ್ವತ, ಶುಭಸ್ಕಂದ, ಮಹೇಂದ್ರ, ಮಾಲ್ಯವಾನ್ ಎಂಬ ಪರ್ವತಗಳು ಇವೆಲ್ಲ ಪರ್ವತಶ್ರೇಷ್ಠಗಳೆಂದೂ, ಇಂದ್ರಿಯಗಣಗಳಲ್ಲಿ ಪಂಚಪ್ರಾಣರು ಶ್ರೇಷ್ಠರೆಂದು ಕರೆಸಿಕೊಳ್ಳುತ್ತಾರೆ.
ಸೂರ್ಯೋ ಗ್ರಹಾಣಾಮಧಿಪೋ ನಕ್ಷತ್ರಾಣಾಂ ಚ ಚಂದ್ರಮಾಃ |
ಯಮಃ ಪಿತೄಣಾಮಧಿಪಃ ಸರಿತಾಮಥ ಸಾಗರಃ ॥7॥
ಅಂಭಸಾಂ ವರುಣೋ ರಾಜಾ ಸತತ್ವಾನಾಂ ಮಿತ್ರ ಉಚ್ಯತೇ ॥8॥
ಗ್ರಹಗಳಿಗೆ ಸೂರ್ಯನು, ನಕ್ಷತ್ರಗಳಿಗೆ ಚಂದ್ರನು, ಪಿತೃಗಳಿಗೆ ಯಮನು, ನದಿಗಳಿಗೆ ಸಮುದ್ರನು, ಜಲಾಶಯಗಳಿಗೆ ವರುಣನು, ಇಂದ್ರಿಯಗಳಿಗೆ ಮಿತ್ರನು ಒಡೆಯರಾಗಿದ್ದಾರೆ.
ಅರ್ಕೋಽಧಿಪತಿರುಷ್ಣಾನಾಂ ಜ್ಯೋತಿಷಾಮಿಂದುರುಚ್ಯತೇ |
ಅಗ್ನಿರ್ಭೂತಪತಿರ್ನಿತ್ಯಂ ಬ್ರಾಹ್ಮಣಾನಾಂ ಬೃಹಸ್ಪತಿಃ ॥9॥
ಉಷ್ಣಪದಾರ್ಥಗಳಿಗೆ ಸೂರ್ಯನು ಅಧಿಪತಿಯು. ಚಂದ್ರನು ನಕ್ಷತ್ರಗಳಿಗೆ, ಎಲ್ಲ ಪ್ರಾಣಿಗಳಿಗೆ ಅಗ್ನಿಯು, ಬ್ರಾಹ್ಮಣರಿಗೆ ಬೃಹಸ್ಪತಿಯು ಅಧಿಪತಿಯು.
ಓಷಧೀನಾಂ ಪತಿಃ ಸೋಮೋ ವಿಷ್ಣುರ್ಬಲವತಾಂ ವರಃ |
ತ್ವಷ್ಟಾಽಧಿರಾಜೋ ರೂಪಾಣಾಂ ಪಶೂನಾಮೀಶ್ವರಃ ಶಿವಃ ॥10॥
ಓಷಧಿಗಳಿಗೆ ಚಂದ್ರನು, ಬಲಿಷ್ಠರಿಗೆ ವಿಷ್ಣುವು, ಶಿಲ್ಪಿಗಳಿಗೆ ವಿಶ್ವಕರ್ಮನು, ರೂಪಗಳಲ್ಲಿ ಸೂರ್ಯನು ಅಥವಾ ಪಶುಗಳಿಗೆ ಶಿವನು ಒಡೆಯನಾಗಿದ್ದಾನೆ.
ದಕ್ಷಿಣಾನಾಂ ತಥಾ ಯಜ್ಞೋ ವೇದಾನಾಂ ಸಾಮ ಏವ ಚ |
ದಿಶಾಮುದೀಚೀ ವಿಪ್ರಾಣಾಂ ಸೋಮೋ ರಾಜಾ ಪ್ರತಾಪವಾನ್ ॥11॥
ಯಜ್ಞಗಳಲ್ಲಿ ದಕ್ಷಿಣೆಯು, ವೇದಗಳಲ್ಲಿ ಸಾಮವೇದವು, ದಿಕ್ಕುಗಳಲ್ಲಿ ಉತ್ತರ ದಿಕ್ಕು, ಪ್ರತಾಪಗಳಲ್ಲಿ ಸೋಮನೇ ರಾಜಶ್ರೇಷ್ಠನಾಗಿದ್ದಾನೆ.
ಕುಬೇರಃ ಸರ್ವಯಕ್ಷಾಣಾಂ ದೇವತಾನಾಂ ಪುರಂದರಃ |
ಏಷ ಭೂತಾಧಿಕಃ ಸರ್ಗಃ ಪ್ರಜಾನಾಂ ಚ ಪ್ರಜಾಪತಿಃ ॥12॥
ಸರ್ವಯಕ್ಷರಲ್ಲಿ ಕುಬೇರನು, ದೇವತೆಗಳಿಗೆ ಪುರಂದರನು ಸ್ವಾಮಿಯು. ಪ್ರಜೆಗಳಿಗೆ ಪ್ರಜಾಪತಿಯು ಸ್ವಾಮಿಯಾಗಿದ್ದಾನೆ. ಇದು ಪ್ರಾಣಿಗಳ ಅಧಿಪತಿಗಳ ಸೃಷ್ಟಿ ಎನಿಸಿದೆ.
ಸರ್ವೇಷಾಮೇವ ಭೂತಾನಾಮಹಂ ಬ್ರಹ್ಮಮಯೋ ಮಹಾನ್ |
ಭೂತಂ ಪರತರಂ ಮತ್ತೋ ವಿಷ್ಣೋರ್ವಾಽಪಿ ನ ವಿದ್ಯತೇ ॥13॥
ಹೀಗೆ ಸೃಷ್ಟಿಯನ್ನು ಪಡೆಯುವ ಅಧಿಕಾರಿಗಳಲ್ಲಿ ನನ್ನಷ್ಟು ಶ್ರೇಷ್ಠರು ಯಾರೂ ಇರುವುದಿಲ್ಲ (ಚತುರ್ಮುಖ ಬ್ರಹ್ಮನಷ್ಟು). ನನಗಿಂತಲೂ ಅನಂತ ಗುಣಗಳಿಂದ ಶ್ರೇಷ್ಠನಾದವನು ವಿಷ್ಣುವಾಗಿದ್ದಾನೆ. ಇವನೇ ಪರತರ. ಸಮಗ್ರ ಪ್ರಪಂಚದಲ್ಲಿ ಇವನಿಗಿಂತ ಮಿಗಿಲಾದವರು ಯಾರೂ ಇರುವುದಿಲ್ಲ.

ರಾಜಾಧಿರಾಜಃ ಸರ್ವೇಷಾಂ ವಿಷ್ಣುರ್ಬ್ರಹ್ಮಮಯೋ ಮಹಾನ್ |
ಈಶ್ವರಂ ತಂ ವಿಜಾನೀಮಃ ಸ ವಿಭುಃ ಸ ಪ್ರಜಾಪತಿಃ ॥14॥
ಮಹಾವಿಷ್ಣುವೇ ಗುಣಪರಿಪೂರ್ಣನಾದವನು. ಇವನೇ ರಾಜಾಧಿರಾಜನೂ, ಸರ್ವೇಶ್ವರನೂ, ಎಲ್ಲದಕ್ಕೂ ಕರ್ತೃವೂ, ಇವನಿಗೆ ಯಾರೂ ಕರ್ತೃಗಳು ಇರುವುದಿಲ್ಲ.
ನರಕಿನ್ನರಯಕ್ಷಾಣಾಂ ಗಂಧರ್ವೋರಗರಕ್ಷಸಾಮ್ |
ದೇವದಾನವನಾಗಾನಾಂ ಸರ್ವೇಷಾಮೀಶ್ವರೋ ಹಿ ಸಃ ॥15॥
ಮನುಷ್ಯರು, ಕಿನ್ನರರು, ಯಕ್ಷರು, ಗಂಧರ್ವರು, ರಾಕ್ಷಸರು, ದೇವತೆಗಳು, ದಾನವರು, ಸರ್ಪಗಳು - ಇವರೆಲ್ಲರಿಗೂ ನಿಯಾಮಕನು ವಿಷ್ಣುವೇ ಆಗಿದ್ದಾನೆ.
ಭದ್ರಾದೇವಾನುಯಾತಾನಾಂ ಸರ್ವಾಸಾಂ ವಾಮಲೋಚನಾ |
ಮಾಹೇಶ್ವರೀ ಮಹಾದೇವೀ ಪ್ರೋಚ್ಯತೇ ಪಾರ್ವತೀ ತ್ರಿಧಾ ॥16॥
ಉಮಾಂ ದೇವೀಂ ವಿಜಾನೀತ ನಾರೀಣಾಮುತ್ತಮಾಂ ಶುಭಾಮ್ |
ರತೀನಾಂ ವಸುಮತ್ಯಸ್ತು ಸ್ತ್ರೀಣಾಮಪ್ಸರಸಸ್ತಥಾ ॥17॥
ಪರಮಮಂಗಳರಾದ ದೇವತೆಗಳನ್ನು ಅನುಸರಿಸುವ ವಾಮಲೋಚನೆಯರಾದ ಸಮಸ್ತ ಸ್ತ್ರೀಯರಿಗೂ ಮಾಹೇಶ್ವರಿ ಎನಿಸಿದ ಮಹಾದೇವಿಯಾದ ಪಾರ್ವತಿಯು ಶ್ರೇಷ್ಠಳೆಂದು ಕರೆಸಿಕೊಳ್ಳುತ್ತಾಳೆ. ಉಮಾದೇವಿಯು ನಾರಿಯರಲ್ಲೇ ಉತ್ತಮಳೆಂದು ತಿಳಿದುಕೊಳ್ಳಿರಿ. ರತಿಯರಲ್ಲಿ, ಆಭರಣಭೂಷಿತರಾದ ಸ್ತ್ರೀಯರಲ್ಲಿ ಅಪ್ಸರೆಯರನ್ನು ಶ್ರೇಷ್ಠರೆಂದು ತಿಳಿಯಿರಿ.
ಧರ್ಮಕಾಮಾಶ್ಚ ರಾಜಾನೋ ಬ್ರಾಹ್ಮಣಾ ಧರ್ಮಲಕ್ಷಣಾಃ |
ತಸ್ಮಾದ್ ರಾಜಾ ದ್ವಿಜಾತೀನಾಂ ಪ್ರಯತೇತೇಹ ರಕ್ಷಣೇ ॥18॥
ರಾಜರುಗಳು ಧರ್ಮ-ಕಾಮಗಳ ಲಕ್ಷಣವುಳ್ಳವರು. ಬ್ರಾಹ್ಮಣರು ಧರ್ಮದ ಲಕ್ಷಣವುಳ್ಳವರು. ಆದ್ದರಿಂದ ರಾಜರು ಧರ್ಮವೇ ಸೇತುವೆಯಾಗಿ ಉಳ್ಳ ಬ್ರಾಹ್ಮಣರನ್ನು ರಕ್ಷಿಸಲು ಪ್ರಯತ್ನಿಸಬೇಕು.
ರಾಜ್ಞಾಂ ಹಿ ವಿಷಯೇ ಯೇಷಾಮವಸೀದಂತಿ ಸಾಧವಃ |
ಹೀನಾಸ್ತೇ ಸ್ವಗುಣೈಃ ಸರ್ವೈಃ ಪ್ರೇತ್ಯಾವಾರ್ಙ್ಮಾರ್ಗಗಾಮಿನಃ ॥19॥
ಯಾವ ರಾಜನ ರಾಜ್ಯದಲ್ಲಿ ಸಾಧುಗಳಾದ ಬ್ರಾಹ್ಮಣರು ದುಃಖಿತರಾಗಿದ್ದಾರೋ, ಅಸಮಾಧಾನವನ್ನು ಹೊಂದಿದ್ದಾರೋ ಅಂತಹ ಬ್ರಾಹ್ಮಣರ ಅಸಮಾಧಾನಕ್ಕೆ ತುತ್ತಾದ ರಾಜರು ತಮ್ಮ ರಾಜೋಚಿತವಾದ ಗುಣಗಳಿಂದ ಹೀನರಾಗಿ ಸತ್ತ ಬಳಿಕ ದುರ್ಗತಿಯನ್ನು ಹೊಂದುತ್ತಾರೆ.
ರಾಜ್ಞಾಂ ತು ವಿಷಯೇ ಯೇಷಾಂ ಸಾಧವಃ ಪರಿರಕ್ಷಿತಾಃ |
ತೇಽಸ್ಮಿನ್ ಲೋಕೇ ಪ್ರಮೋದಂತೇ ಪ್ರೇತ್ಯ ಚಾನಂತ್ಯಮೇವ ಚ ॥20॥
ಪ್ರಾಪ್ನುವಂತಿ ಮಹಾತ್ಮಾನ ಇತಿ ವಿತ್ತ ದ್ವಿಜರ್ಷಭಾಃ |
ಅತ ಊರ್ಧ್ವಂ ಪ್ರವಕ್ಷ್ಯಾಮಿ ನಿಯತಂ ಧರ್ಮಲಕ್ಷಣಮ್ ॥21॥
ಬ್ರಾಹ್ಮಣರೇ, ಯಾವ ರಾಜನ ವಿಷಯದಲ್ಲಿ ಬ್ರಾಹ್ಮಣರು ರಕ್ಷಕರಾಗಿ ನಿಲ್ಲುತ್ತಾರೋ ಆ ರಾಜರು ಲೋಕದಲ್ಲಿಯೂ ಆನಂದ ಹೊಂದುತ್ತಾರೆ, ಗತಿಸಿದ ಬಳಿಕವೂ ಸದ್ಗತಿಯನ್ನು ಹೊಂದುತ್ತಾರೆ. ಇನ್ನು ಮುಂದೆ ನಿಯತವಾದ ಧರ್ಮದ ಲಕ್ಷಣವನ್ನು ಹೇಳುತ್ತೇನೆ, ಕೇಳಿ.
ಅಹಿಂಸಾಲಕ್ಷಣೋ ಧರ್ಮೋ ಹಿಂಸಾ ಚಾಧರ್ಮಲಕ್ಷಣಾ |
ಪ್ರಕಾಶಲಕ್ಷಣಾ ದೇವಾ ಮನುಷ್ಯಾಃ ಕರ್ಮಲಕ್ಷಣಾಃ ॥22॥
ಅಹಿಂಸೆಯೇ ಶ್ರೇಷ್ಠವಾದ ಧರ್ಮವೆನಿಸಿದೆ. ಯಜ್ಞಾದಿ ಕರ್ಮಗಳನ್ನು ಮಾಡುವುದು ಮನುಷ್ಯರ ಲಕ್ಷಣವೆನಿಸಿದೆ. ಹಿಂಸೆಯು ಅಧರ್ಮವೆನಿಸಿದರೆ ಅಹಿಂಸೆಯು ಧರ್ಮವೆನಿಸಿದೆ.
ಶಬ್ದಲಕ್ಷಣಮಾಕಾಶಂ ವಾಯುಸ್ತು ಸ್ಪರ್ಶಲಕ್ಷಣಃ |
ಜ್ಯೋತಿಷಾಂ ಲಕ್ಷಣಂ ರೂಪಮಾಪಶ್ಚ ರಸಲಕ್ಷಣಾಃ ॥23॥
ಶಬ್ದವು ಆಕಾಶದ ಲಕ್ಷಣವು. ಸ್ಪರ್ಶವು ವಾಯುವಿನ ಲಕ್ಷಣವು. ರೂಪವು ತೇಜಸ್ಸಿನ ಲಕ್ಷಣವು. ರಸವು ನೀರಿನ ಲಕ್ಷಣವು.
ಧರಣೀ ಸರ್ವಭೂತಾನಾಂ ಪೃಥಿವೀ ಗಂಧಲಕ್ಷಣಾ |
ಸ್ವರವ್ಯಂಜನಸಂಸ್ಕಾರಾ ಭಾರತೀ ಸತ್ಯಲಕ್ಷಣಾ ॥24॥
ಸಮಸ್ತ ಪ್ರಾಣಿಗಳನ್ನು ಧರಿಸಿರುವ ಭೂಮಿಯು ಗಂಧದ ಲಕ್ಷಣವನ್ನು ಹೊಂದಿದೆ. ಸ್ವರ-ವ್ಯಂಜನಗಳಿಂದ ಸಂಸ್ಕೃತವಾದ ಮಾತು ಶಬ್ದವೆಂಬ ಲಕ್ಷಣವನ್ನು ಹೊಂದಿದೆ.
ಮನಸೋ ಲಕ್ಷಣಂ ಚಿಂತಾ ತಥೋಕ್ತಾ ಬುದ್ಧಿರನ್ವಯಾ |
ಮನಸಾ ಚಿಂತಯಾನೋಽರ್ಥಾನ್ ಬುದ್ಧ್ಯಾ ಚೈವ ವ್ಯವಸ್ಯತಿ ॥25॥
ಚಿಂತೆಯು ಯುಕ್ತಾಯುಕ್ತ ಮನಸ್ಸಿನ ಲಕ್ಷಣವಾಗಿದೆ. ಪದಾರ್ಥಗಳಿಗೆ ಅನುಸಾರವಾಗಿ ಜ್ಞಾನವನ್ನು ಹೊಂದುವುದು ಬುದ್ಧಿಯ ಲಕ್ಷಣವಾಗಿದೆ. ಮನಸ್ಸಿನಿಂದ ಪದಾರ್ಥಗಳ ಬಗ್ಗೆ ಯೋಚಿಸುತ್ತಾ, ಪದಾರ್ಥಗಳನ್ನು ಬುದ್ಧಿಯಿಂದ ನಿರ್ಣಯಿಸಿಕೊಳ್ಳುತ್ತಾನೆ.
ಬುದ್ಧಿರ್ಹಿ ವ್ಯವಸಾಯೇನ ಲಕ್ಷ್ಯತೇ ನಾತ್ರ ಸಂಶಯಃ |
ಲಕ್ಷಣಂ ಮಹತೋ ಧ್ಯಾನಮವ್ಯಕ್ತಂ ಸಾಧುಲಕ್ಷಣಮ್ ॥26॥
ಕಾರ್ಯಶೀಲತೆಯಿಂದ ಬುದ್ಧಿಯು ಲಕ್ಷ್ಯಕ್ಕೆ ಬರುತ್ತದೆ. ಇದರಲ್ಲಿ ಯಾವ ಸಂಶಯವೂ ಬೇಡ. ಬುದ್ಧಿಯ ಮತ್ತೊಂದು ಲಕ್ಷಣವೇ ಧ್ಯಾನ. ಬಾಹ್ಯ ಪ್ರಪಂಚವನ್ನು ಮೀರಿ ಅವ್ಯಕ್ತ ಪ್ರಪಂಚವೆನಿಸಿದ ಪರಮಾತ್ಮನನ್ನು ಧ್ಯಾನಿಸುವುದೇ ಸಜ್ಜನರ ಲಕ್ಷಣವೆನಿಸಿದೆ.

ಪ್ರವೃತ್ತಿಲಕ್ಷಣೋ ಯೋಗೋ ಜ್ಞಾನಂ ಸನ್ನ್ಯಾಸಲಕ್ಷಣಮ್ |
ತಸ್ಮಾಜ್ಜ್ಞಾನಂ ಪುರಸ್ಕೃತ್ಯ ಸನ್ನ್ಯಸೇದಿಹ ಬುದ್ಧಿಮಾನ್ ॥27॥
ಪ್ರವೃತ್ತಿಯು ಕರ್ಮಯೋಗದ ಲಕ್ಷಣವಾಗಿದೆ. ಜ್ಞಾನವು ಸಂನ್ಯಾಸದ ಲಕ್ಷಣವಾಗಿದೆ. ಆದ್ದರಿಂದ ಬುದ್ಧಿವಂತನಾದವನು ಜ್ಞಾನಲಕ್ಷಣವನ್ನು ಆಶ್ರಯಿಸಿ ಸಂನ್ಯಾಸವನ್ನು ಸ್ವೀಕರಿಸಬೇಕು.
ಸನ್ನ್ಯಾಸೀ ಜ್ಞಾನಸಂಯುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ |
ಅತೀತದ್ವಂದ್ವಮಭ್ಯೇತಿ ತಮೋಮೃತ್ಯುಜರಾತಿಗಮ್ ॥28॥
ಜ್ಞಾನಯುಕ್ತನಾದ ಸಂನ್ಯಾಸಿಯು ಶೀತೋಷ್ಣ-ಸುಖ-ದುಃಖಾದಿ ದ್ವಂದ್ವಗಳಿಂದ ಅತೀತನಾಗಿ, ಅಜ್ಞಾನ, ಮುಪ್ಪು, ಸಾವುಗಳನ್ನು ದಾಟಿ, ಸರ್ವೋತ್ತಮನಾದ ಭಗವಂತನನ್ನು ಹೊಂದುತ್ತಾನೆ.
ಧರ್ಮಲಕ್ಷಣಸಂಯುಕ್ತಮುಕ್ತಂ ವೋ ವಿಧಿವತ್ ತಥಾ ॥29॥
ಹೀಗೆ ಲಕ್ಷಣಸಂಯುಕ್ತವಾದ ಧರ್ಮದ ಮಹತ್ವವನ್ನು ವಿಧಿವತ್ತಾಗಿ ತಿಳಿಸಿದ್ದೇನೆ.
ಗುಣಾನಾಂ ಗ್ರಹಣಂ ಸಮ್ಯಗ್ ವಕ್ಷ್ಯಾಮ್ಯಹಮತಃ ಪರಮ್ ॥30॥
ಇನ್ನು ಮುಂದೆ ಯಾವ ಯಾವ ಗುಣಗಳನ್ನು ಯಾವ ಯಾವ ಇಂದ್ರಿಯಗಳು ಗ್ರಹಿಸುತ್ತವೆ ಎಂಬುದನ್ನು ಹೇಳುತ್ತೇನೆ.
ಪಾರ್ಥಿವೋ ಯಸ್ತು ಗಂಧೋ ವೈ ಘ್ರಾಣೇನೈವ ಸ ಗೃಹ್ಯತೇ |
ಘ್ರಾಣಸ್ಥಶ್ಚ ತಥಾ ವಾಯುರ್ಗಂಧಜ್ಞಾನೇ ವಿಧೀಯತೇ ॥31॥
ಪೃಥಿವಿಯ ಗುಣವಾದ ಗಂಧವನ್ನು ಮೂಗು ಗ್ರಹಿಸುತ್ತದೆ. ಮೂಗಿನಲ್ಲಿರುವ ವಾಯುವು ಗಂಧವನ್ನು ಆಘ್ರಾಣಿಸಲು ಅನುವು ಮಾಡಿಕೊಡುತ್ತದೆ.
ಅಬಾಶ್ರಯೋ ರಸೋ ನಿತ್ಯಂ ಜಿಹ್ವಯಾ ಸ ತು ಗೃಹ್ಯತೇ |
ಜಿಹ್ವಾಸ್ಥಶ್ಚ ತಥಾ ಸೋಮೋ ರಸಜ್ಞಾನೇ ವಿಧೀಯತೇ ॥32॥
ರಸವು ನೀರನ್ನು ಆಶ್ರಯಿಸಿಕೊಂಡಿದೆ. ಆ ರಸವು ಜಿಹ್ವೇಂದ್ರಿಯದಿಂದ ಗ್ರಹಿಸಲ್ಪಡುತ್ತದೆ. ಆ ಜಿಹ್ವೆಗೆ ಚಂದ್ರನು ನಿಯಾಮಕನಾಗಿ ರಸಜ್ಞಾನಕ್ಕೆ ಅನುವು ಮಾಡಿಕೊಡುತ್ತಾನೆ.
ಜ್ಯೋತಿಷಶ್ಚ ಗುಣೋ ರೂಪಂ ಚಕ್ಷುಷಾ ತಚ್ಚ ಗೃಹ್ಯತೇ |
ಚಕ್ಷುಸ್ಥಶ್ಚ ತಥಾಽಽದಿತ್ಯೋ ರೂಪಜ್ಞಾನೇ ವಿಧೀಯತೇ ॥33॥
ರೂಪವು ತೇಜಸ್ಸಿನ ಗುಣವಾಗಿದೆ. ಅದನ್ನು ಕಣ್ಣು ಗ್ರಹಿಸುತ್ತದೆ. ಕಣ್ಣಿನಲ್ಲಿರುವ ಸೂರ್ಯನು ರೂಪಜ್ಞಾನವನ್ನು ಹೊಂದಲು ಸಹಾಯ ಮಾಡುತ್ತಾನೆ.
ವಾಯವ್ಯಶ್ಚ ತಥಾ ಸ್ಪರ್ಶಸ್ತ್ವಚಾ ಪ್ರಜ್ಞಾಯತೇ ಚ ಸಃ |
ತ್ವಕ್ಸ್ಥಶ್ಚೈವ ತಥಾ ವಾಯುಃ ಸ್ಪರ್ಶಜ್ಞಾನೇ ವಿಧೀಯತೇ ॥34॥
ವಾಯುವು ಸ್ಪರ್ಶವೆಂಬ ಗುಣವನ್ನು ಹೊಂದಿದೆ. ಚರ್ಮವು ಅದನ್ನು ಗ್ರಹಿಸುತ್ತದೆ. ಚರ್ಮದಲ್ಲಿರುವ ಅಹಂಕಾರಿಕ ವಾಯುವು ಸ್ಪರ್ಶಾನುಭವಕ್ಕೆ ಅನುವು ಮಾಡಿಕೊಡುತ್ತಾನೆ.
ಆಕಾಶಸ್ಯ ಗುಣೋ ಘೋಷಃ ಶ್ರೋತ್ರೇಣ ಸ ತು ಗೃಹ್ಯತೇ |
ಶ್ರೋತ್ರಸ್ಥಾಶ್ಚ ದಿಶಃ ಸರ್ವಾಃ ಶಬ್ದಜ್ಞಾನೇ ಪ್ರಕೀರ್ತಿತಾಃ ॥35॥
ಆಕಾಶದ ಗುಣವು ಶಬ್ದವು. ಕಿವಿಯು ಶಬ್ದವನ್ನು ಗ್ರಹಿಸುತ್ತದೆ. ಕಿವಿಯಲ್ಲಿರುವ ದಿಗ್ದೇವತೆಗಳು ಶಬ್ದಜ್ಞಾನವನ್ನು ಹೊಂದಲು ಸಹಾಯ ಮಾಡುತ್ತಾರೆ.
ಮನಸಸ್ತು ಗುಣಶ್ಚಿಂತಾ ಪ್ರಜ್ಞಯಾ ಸಾ ತು ಗೃಹ್ಯತೇ |
ಹೃದಿಸ್ಥಶ್ಚೇತನಾಧಾತುಃ ಮನೋಜ್ಞಾನೇ ವಿಧೀಯತೇ ॥36॥
ಚಿಂತಿಸುವುದು ಮನಸ್ಸಿನ ಗುಣವಾಗಿದೆ. ಬುದ್ಧಿಯು ಅದನ್ನು ಗ್ರಹಿಸುತ್ತದೆ. ಹೃದಯದಲ್ಲಿರುವ ಆತ್ಮನು ಚಿಂತನೆಯ ಕಾರ್ಯದಲ್ಲಿ ಸಹಾಯ ಮಾಡುತ್ತಾನೆ.
ಬುದ್ಧಿರಧ್ಯವಸಾಯೇನ ಧ್ಯಾನೇನ ಚ ಮಹಾಂಸ್ತಥಾ |
ನಿಶ್ಚಿತ್ಯ ಗ್ರಹಣಂ ನಿತ್ಯಮವ್ಯಕ್ತಂ ನಾತ್ರ ಸಂಶಯಃ ॥37॥
ನಿರ್ಣಯದ ಮೂಲಕವಾಗಿ ಎಂದರೆ ಸಕಲ ಜಗತ್ತಿಗೆ ಮೂಲಕಾರಣವನ್ನು ನಿಶ್ಚಯಿಸಿ ಗ್ರಹಿಸುವುದು ಬುದ್ಧಿಯ ಲಕ್ಷಣವಾಗಿದೆ. ನಿರ್ಣಯಿಸುವುದು, ಧ್ಯಾನ ಮಾಡುವುದು ಬುದ್ಧಿ ತತ್ತ್ವದ ಗುಣವಾಗಿದ್ದರೆ, ಇದನ್ನು ನಿಯಮಿಸುವುದು ಪ್ರಕೃತಿ ತತ್ತ್ವವಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಅಲಿಂಗಗ್ರಹಣೋ ನಿತ್ಯಃ ಕ್ಷೇತ್ರಜ್ಞೋ ನಿರ್ಗುಣಾತ್ಮಕಃ |
ತಸ್ಮಾದಲಿಂಗ ಕ್ಷೇತ್ರಜ್ಞಃ ಕೇವಲಂ ಜ್ಞಾನಲಕ್ಷಣಃ ॥38॥
ಪರಮಾತ್ಮನನ್ನು ನಿಶ್ಚಿತವಾದ ಹೇತುವಿನಿಂದ ತಿಳಿಯಲಾಗುವುದಿಲ್ಲ. ಕ್ಷೇತ್ರಜ್ಞನೆನಿಸಿದ ಪರಮಾತ್ಮನು ಪ್ರಕೃತಿಯ ಯಾವ ಗುಣಗಳಿಂದಲೂ ನಿರ್ಣಯಿಸಲ್ಪಡುವವನಲ್ಲ. ಆದ್ದರಿಂದ ಅಲಿಂಗ ಎಂದು ಕ್ಷೇತ್ರಜ್ಞನ ಹೆಸರು. ಕೇವಲ ಜ್ಞಾನದಿಂದಲೇ ಗಮ್ಯನಾಗಿದ್ದಾನೆ.
ಅವ್ಯಕ್ತಂ ಕ್ಷೇತ್ರಮುದ್ದಿಷ್ಟಂ ಗುಣಾನಾಂ ಪ್ರಭವಾಪ್ಯಯಮ್ |
ಸದಾ ಪಶ್ಯಾಮ್ಯಹಂ ಲೀನಂ ವಿಜಾನಾಮಿ ಶೃಣೋಮಿ ಚ ॥39॥
ಅವ್ಯಕ್ತ ತತ್ತ್ವದಲ್ಲಿ ಅಡಗಿದ ಮಹದಾದಿ ಜಗತ್ತನ್ನು ಚತುರ್ಮುಖ ಬ್ರಹ್ಮನಾದ ನಾನು ಯಾವಾಗಲೂ ನೋಡುತ್ತಿದ್ದೇನೆ, ಇದರ ಬಗ್ಗೆ ಕೇಳುತ್ತಿದ್ದೇನೆ. ಜಗತ್ತಿನ ಸೃಷ್ಟಿ- ಸ್ಥಿತಿ-ಲಯಗಳನ್ನು ಭಗವಂತನ ಅನುಗ್ರಹದಿಂದ ನೋಡುವವನು ನಾನೇ.

ಪುರುಷಸ್ತದ್ವಿಜಾನೀತೇ ತಸ್ಮಾತ್ ಕ್ಷೇತ್ರಜ್ಞ ಉಚ್ಯತೇ |
ಗುಣವೃತ್ತಂ ತಥಾ ಕೃತ್ಸ್ನಂ ಕ್ಷೇತ್ರಜ್ಞಃ ಪರಿಪಶ್ಯತಿ ॥40॥
ನನಗಿಂತಲೂ ಮಿಗಿಲಾದ, ಅವ್ಯಕ್ತ ತತಅತ್ವಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ನಾರಾಯಣನು ತಿಳಿದಿದ್ದಾನೆ. ಆದ್ದರಿಂದಲೇ ಭಗವಂತನಿಗೆ ಕ್ಷೇತ್ರಜ್ಞ ಎಂದು ಹೆಸರು. ಸಮಗ್ರ ಗುಣಾತ್ಮಕವಾದ ಪ್ರಪಂಚವನ್ನು ಕ್ಷೇತ್ರಜ್ಞನೊಬ್ಬನೇ ಚೆನ್ನಾಗಿ ನೋಡುತ್ತಾನೆ.
ಆದಿಮಧ್ಯಾವಸಾನಂ ತಂ ಸೃಜ್ಯಮಾನಮಚೇತನಮ್ |
ನ ಗುಣಾ ವಿದುರಾತ್ಮಾನಂ ಸೃಜ್ಯಮಾನಾಃ ಪುನಃ ಪುನಃ ॥41॥
ಮತ್ತೂ ಮತ್ತೂ ಭಗವಂತನಿಂದ ಸೃಷ್ಟಿಯನ್ನು ಪಡೆಯುವ ಆದಿ, ಮಧ್ಯ, ಅವಸಾನಗಳಿಂದ ತುಂಬಿರುವ ಜಡಪ್ರಪಂಚದ ಗುಣಗಳು ಜಡವಾಗಿರುವುದರಿಂದಲೇ ತಮ್ಮ ಬಗ್ಗೆ ಅರಿವನ್ನು ಹೊಂದಿರುವುದಿಲ್ಲ.
ನ ಸತ್ತ್ವಂ ವೇತ್ತಿ ವೈ ಕಶ್ಚಿತ್ ಕ್ಷೇತ್ರಜ್ಞಸ್ತ್ವೇವ ವಿಂದತಿ |
ಗುಣಾನಾಂ ಗುಣಭೂತಾನಾಂ ಯತ್ ಪರಂ ಪರತೋ ಮಹತ್ ॥
ಪ್ರಾಣಿಗಳ ಯಾವ ಸಮುದಾಯವೂ ಸತಅತ್ವದಿ ಗುಣಗಳಿಂದ ಉತ್ಪನ್ನವಾದ ಮಹದಾದಿ ತತ್ತ್ವಗಳನ್ನು ತಿಳಿಯಲು ಸಮರ್ಥವಾಗಿರುವುದಿಲ್ಲ. ಪರಬ್ರಹ್ಮನೊಬ್ಬನೇ ಈ ಎಲ್ಲ ವ್ಯಾಪಾರಗಳನ್ನು ತಿಳಿದಿದ್ದಾನೆ. ಆ ಪರಬ್ರಹ್ಮನು ಮುಕ್ತ ಬ್ರಹ್ಮಾದಿ ದೇವತೆಗಳಿಗಿಂತಲೂ ಶ್ರೇಷ್ಠನೆನಿಸಿದ್ದಾನೆ.
ತಸ್ಮಾದ್ ಗುಣಾಂಶ್ಚ ತತ್ತ್ವಂ ಚ ಪರಿತ್ಯಜ್ಯೇಹ ತತ್ತ್ವವಿತ್ |
ಕ್ಷೀಣದೋಷೋ ಗುಣಾನ್ ಹಿತ್ವಾ ಕ್ಷೇತ್ರಜ್ಞಂ ಪ್ರವಿಶತ್ಯಥ ॥43॥
ಆ ಭಗವಂತನ ಅನುಗ್ರಹದಿಂದಲೇ ಯೋಗ್ಯನಾದ ಚೇತನನು ಪ್ರಾಕೃತಿಕ ಗುಣಗಳನ್ನು, ಪಂಚಭೂತಗಳ ದೇಹವನ್ನು ತ್ಯಾಗ ಮಾಡಿ, ದೋಷಗಳಿಂದ ಮುಕ್ತನಾಗಿ ಭಗವಂತನ ಅನುಗ್ರಹದಿಂದ ಅವನನ್ನೇ ಹೊಂದುತ್ತಾನೆ.
ನಿರ್ದ್ವಂದ್ವೋ ನಿರ್ನಮಸ್ಕಾರೋ ನಿಃಸ್ವಧಾಕಾರ ಏವ ಚ |
ಅಚಲಶ್ಚಾನಿಕೇತಶ್ಚ ಕ್ಷೇತ್ರಜ್ಞಃ ಸ ಪರೋ ಭುವಿ ॥44॥
ಎಂದಿಗೂ ದ್ವಂದ್ವಕ್ಕೆ ಸಿಲುಕದ, ಯಾರಿಗೂ ನಮಸ್ಕರಿಸಲು ಅರ್ಹನಲ್ಲದ, ಸ್ವಾಹಾ, ಸ್ವಧಾಕಾರಗಳನ್ನು ಮಾಡಬೇಕೆಂಬ ವಿಧಿಯಿಂದ ಮುಕ್ತನಾದ, ಅಚಲನಾದ, ಮತ್ತೊಬ್ಬರ ಆಶ್ರಯವನ್ನು ಪಡೆಯದಿರುವ, ಕ್ಷೇತ್ರಜ್ಞನೆನಿಸಿದ ಪರಮಾತ್ಮನೇ ಈ ಜಗತ್ತಿನಲ್ಲಿ ಸರ್ವೋತ್ತಮನೆನಿಸಿದ್ದಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಕ್ಷೇತ್ರಜ್ಞಕಥನಂ ನಾಮ
ಚತುಶ್ಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *

ನಲವತ್ತೈದನೆಯ ಅಧ್ಯಾಯ

ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು, ತಮ್ಮ ತಮ್ಮ ಜಾತಿಗಳಲ್ಲಿ ಶ್ರೇಷ್ಠ ವಸ್ತು ಯಾವುದು ಎಂಬುದನ್ನು ಪ್ರತಿಪಾದನೆ ಮಾಡುವ ಮೂಲಕ ಜ್ಞಾನದ ನಿತ್ಯತ್ವವನ್ನು, ಭಗವದ್ಧ್ಯಾನವೇ ಶ್ರೇಯಸ್ಸಾಧನ ಎಂದೂ ನಿರೂಪಿಸಿದುದು.
ಬ್ರಹ್ಮಾ
ಯದಾದಿಮಧ್ಯಪರ್ಯಂತಂ ಗ್ರಹಣೋಪಾಯಮೇವ ಚ |
ನಾಮಲಕ್ಷಣಸಂಯುಕ್ತಂ ಸರ್ವಂ ವಕ್ಷ್ಯಾಮಿ ತತ್ತ್ವತಃ ॥1॥
ಬ್ರಹ್ಮಾ ಮಹರ್ಷಿಗಳೇ, ನಿಮ್ಮನ್ನು ಕುರಿತು ನಾನು ಸಮಸ್ತ ಪದಾರ್ಥಗಳ ನಾಮ ಲಕ್ಷಣಸಹಿತವಾದ ಆದಿ, ಮಧ್ಯ, ಅಂತಗಳನ್ನು, ಅವುಗಳನ್ನು ಗ್ರಹಿಸುವ ಉಪಾಯವನ್ನು ವಿಧಿವತ್ತಾಗಿ ಹೇಳುತ್ತೇನೆ.
ಅಹಂ ಪೂರ್ವಂ ತತೋ ರಾತ್ರಿರ್ಮಾಸಾಃ ಶುಕ್ಲಾದಯಃ ಸ್ಮೃತಾಃ |
ಶ್ರವಿಷ್ಠಾದೀನಿಚರ್ಕ್ಷಾಣಿ ಋತವಃ ಶಿಶಿರಾದಯಃ (ಶ್ರವಣಾದೀನಿ) ॥2॥
ಹಗಲು ಮೊದಲು ಹುಟ್ಟಿತು, ಅನಂತರ ರಾತ್ರಿ ಹುಟ್ಟಿತು. ಮಾಸಗಳು ಶುಕ್ಲ ಪಕ್ಷದಿಂದ ಆರಂಭವಾದವು. ನಕ್ಷತ್ರಗಳು ಶ್ರವಣಾ ನಕ್ಷತ್ರದಿಂದ ಪ್ರಾರಂಭಗೊಂಡವು. ಋತುಗಳು ಶಿಶಿರ ಋತುವಿನಿಂದ ಪ್ರಾರಂಭವಾದವು.
ಭೂಮಿರಾದಿಸ್ತು ಗಂಧಾನಾಂ ರಸಾನಾಮಾಪ ಏವ ಚ |
ರೂಪಾಣಾಮಾದಿರಗ್ನಿಸ್ತು ಸ್ಪರ್ಶಾದಿರ್ವಾಯುರುಚ್ಯತೇ ॥3॥
ಶಬ್ದಸ್ಯಾದಿಸ್ತಥಾಽಽಕಾಶಮೇಷ ಭೂತಗುಣೋತ್ತರಃ ॥4॥
ಗಂಧಗಳಿಗೆ ಮೂಲಕಾರಣವಾದುದು ಭೂಮಿಯು. ರಸಗಳಿಗೆ ಮೂಲವಾದುದು ನೀರು. ರೂಪಗಳಿಗೆ ಮೂಲ ಜ್ಯೋತಿರೂಪನಾದ ಆದಿತ್ಯ. ಸ್ಪರ್ಶಗಳಿಗೆ ಆದಿಕಾರಣ ವಾಯು. ಶಬ್ದಗಳಿಗೆ ಆದಿ ಕಾರಣ ಆಕಾಶ. ಹೀಗೆ ತನ್ಮಾತ್ರಗಳೆಲ್ಲವೂ ಪಂಚಭೂತಗಳಿಂದ ಉತ್ಪನ್ನವಾಗಿವೆ.
ಅತಃ ಪರಂ ಪ್ರವಕ್ಷ್ಯಾಮಿ ಭೂತಾನಾಮಾದಿಮುತ್ತಮಮ್ ॥5॥

ಇನ್ನು ಮುಂದೆ ಭೂತಗಳ ಉತ್ತಮವಾದ ಗುಣಗಳನ್ನು, ಆದಿಯನ್ನೂ ಹೇಳುತ್ತೇನೆ.
ಆದಿತ್ಯೋ ಜ್ಯೋತಿಷಾಮಾದಿರಗ್ನಿರ್ಭೂತಾದಿರುಚ್ಯತೇ |
ಸಾವಿತ್ರೀ ಸರ್ವವಿದ್ಯಾನಾಂ ದೇವತಾನಾಂ ಪ್ರಜಾಪತಿಃ ॥6॥
ಸಮಸ್ತ ತೇಜಸ್ಸುಗಳಿಗೆ ಸೂರ್ಯನೇ ಆದಿಯು. ಎಲ್ಲ ಭೂತಗಳಿಗೆ ಜಠರಾಗ್ನಿಯು ಆದಿಯು. ಎಲ್ಲ ವಿದ್ಯೆಗಳಿಗೂ ಸಾವಿತ್ರಿಯೇ ಆದಿಯು. ಸಕಲ ದೇವತೆಗಳಿಗೂ ಚತುರ್ಮುಖ ಬ್ರಹ್ಮನೇ ಆದಿಯಾಗಿದ್ದಾನೆ.
ಓಂಕಾರಃ ಸರ್ವವೇದಾನಾಂ ವಚಸಾಂ ಪ್ರಾಣ ಉಚ್ಯತೇ |
ಇತ್ಯಸ್ಮಿನ್ ನಿಧನಂ ಲೋಕೇ ಸರ್ವಂ ಸಾವಿತ್ರ್ಯನೂಚ್ಯತೇ ॥7॥
ವೇದಗಳಿಗೆ ಓಂಕಾರ, ವಾಕ್‌ಗಳಿಗೆ ಪ್ರಾಣ ಆದಿಯಾಗಿದೆ. ಪ್ರಪಂಚದಲ್ಲಿ ನಿಯತವಾದ ಯಾವ ಉಚ್ಚಾರಣೆ ಇದೆಯೋ ಅದೆಲ್ಲದಕ್ಕೂ ಸಾವಿತ್ರಿ ಎನ್ನುತ್ತಾರೆ.
ಗಾಯತ್ರೀ ಚ್ಛಂದಸಾಮಾದಿಃ ಪಶೂನಾಮಜ ಉಚ್ಯತೇ |
ಗಾವಶ್ಚತುಷ್ಪದಾಮಾದಿರ್ಮನುಷ್ಯಾಣಾಂ ದ್ವಿಜಾತಯಃ ॥8॥
ಛಂದಸ್ಸುಗಳಲ್ಲಿ ಗಾಯತ್ರಿ ಛಂದಸ್ಸು ಮೊದಲನೆಯದ್ದು. ಪ್ರಜೆಗಳಿಗೆ ಸೃಷ್ಟಿಯೇ ಮೊದಲನೆಯದ್ದು. ನಾಲ್ಕು ಕಾಲುಗಳುಳ್ಳ ಪ್ರಾಣಿಗಳಿಗೆ ಗೋವು ಮೊದಲನೆಯದು. ಮನುಷ್ಯರಿಗೆ ಬ್ರಾಹ್ಮಣರು ಶ್ರೇಷ್ಠರು.
ಶ್ಯೇನಃ ಪತತ್ರಿಣಾಮಾದಿರ್ಯಜ್ಞಾನಾಂ ಹೋತ್ರಮುತ್ತಮಮ್ |
ಪ್ರಸರ್ಪಿಣಾಂ ತು ಸರ್ವೇಷಾಂ ಶ್ರೇಷ್ಠಃ ಸರ್ಪೋ ದ್ವಿಜೋತ್ತಮಾಃ ॥9॥
ಬ್ರಾಹ್ಮಣಶ್ರೇಷ್ಠರೇ, ಪಕ್ಷಿಗಳಲ್ಲಿ ಗಿಡುಗ, ಯಜ್ಞಗಳಲ್ಲಿ ಅಗ್ನಿಹೋತ್ರ, ತೆವಳಿ ನಡೆಯುವ ಪ್ರಾಣಿಗಳಲ್ಲಿ ಸರ್ಪವು ಶ್ರೇಷ್ಠವು.
ಕೃತಮಾದಿರ್ಯುಗಾನಾಂ ಚ ಸರ್ವೇಷಾಂ ನಾತ್ರ ಸಂಶಯಃ |
ಹಿರಣ್ಯಂ ಸರ್ವರತ್ನಾನಾಮೋಷಧೀನಾಂ ಯವಾಸ್ತಥಾ ॥10॥
ಯುಗಗಳಲ್ಲಿ ಕೃತಯುಗವು, ರತ್ನಗಳಲ್ಲಿ ಸುವರ್ಣವು, ಓಷಧಿಗಳಲ್ಲಿ ಗೋಧಿಯು ಶ್ರೇಷ್ಠವಾದುದು. ಇದರಲ್ಲಿ ಸಂಶಯವಿಲ್ಲ.
ಸರ್ವೇಷಾಂ ಭಕ್ಷ್ಯಭೋಜ್ಯಾನಾಮನ್ನಂ ಪರಮಮುಚ್ಯತೇ |
ದ್ರವಾಣಾಂ ಚೈವ ಸರ್ವೇಷಾಂ ಪೇಯಾನಾಮಾಪ ಉತ್ತಮಾಃ ॥11॥
ಭಕ್ಷ್ಯ-ಭೋಜ್ಯಗಳಲ್ಲಿ ಅನ್ನವು ಶ್ರೇಷ್ಠ, ದ್ರವಪದಾರ್ಥಗಳಲ್ಲಿ ಮತ್ತು ಪಾನೀಯಗಳಲ್ಲಿ  ನೀರೇ ಶ್ರೇಷ್ಠವಾದುದು.
ಸ್ಥಾವರಾಣಾಂ ಚ ಭೂತಾನಾಂ ಸರ್ವೇಷಾಮವಿಶೇಷತಃ |
ಬ್ರಹ್ಮವೃಕ್ಷಃ ಸದಾ ಪುಣ್ಯಃ ಪ್ಲಕ್ಷಃ ಪ್ರಥಮಜಃ ಸ್ಮೃತಃ ॥12॥
ಸ್ಥಾವರಗಳಲ್ಲಿ ಪುಷ್ಕರ ಕ್ಷೇತ್ರ ಅಥವಾ ಬ್ರಹ್ಮವೃಕ್ಷವು, ದ್ವೀಪಗಳಲ್ಲಿ ಪ್ಲಕ್ಷವು ಪ್ರಥಮತಃ ಉತ್ಪನ್ನವಾದುದು.
ಅಹಂ ಪ್ರಜಾಪತೀನಾಂ ಚ ಸರ್ವೇಷಾಂ ನಾತ್ರ ಸಂಶಯಃ |
ಮಮ ವಿಷ್ಣುರಚಿಂತ್ಯಾತ್ಮಾ ಸ್ವಯಂಭೂರಿತಿ ಸಂಸ್ಮೃತಃ ॥13॥
ಪ್ರಜಾಪತಿಗಳಿಗೆ ನಾನು ಮೊದಲಿಗನು, ಇದರಲ್ಲಿ ಯಾವ ಸಂಶಯವೂ ಇಲ್ಲ. ನನಗಿಂತಲೂ ಮೊದಲಿಗನಾದವನು ಅಚಿಂತ್ಯ ಮಹಿಮನಾದ ವಿಷ್ಣುವೇ ಆಗಿದ್ದಾನೆ. ಸ್ವಯಂಭೂ ಶಬ್ದದಿಂದ ಕರೆಯಲು ಅವನೇ ಅರ್ಹನಾಗಿದ್ದಾನೆ.
ಪರ್ವತಾನಾಂ ಮಹಾಮೇರುಃ ಸರ್ವೇಷಾಮಗ್ರಜಃ ಸ್ಮೃತಃ |
ದಿಶಾಂ ಚೋಪದಿಶಾಂ ಚೋರ್ಧ್ವಂ ದಿಗ್ಜಾತಾ ಪ್ರಥಮಾ ತಥಾ ॥14॥
ಪರ್ವತಗಳಲ್ಲಿ ಮೇರುಪರ್ವತವು ಮೊದಲನೆಯದ್ದು. ಆದುದರಿಂದಲೇ ಮಹಾಮೇರುವಿಗೆ ಪರ್ವತಗಳ ಅಗ್ರಜನೆಂದು ಹೇಳುತ್ತಾರೆ. ದಿಕ್ಕುಗಳಲ್ಲಿ ಪೂರ್ವ ದಿಕ್ಕು ಶ್ರೇಷ್ಠವಾದುದು ಮತ್ತು ಮೊದಲನೆಯದ್ದು.
ತಥಾ ಗಂಗಾ ನದೀನಾಂ ತು ಸರ್ವಾಸಾಮಗ್ರಜಾ ಸ್ಮೃತಾ |
ಸರಸಾಂ ಸೋದಪಾನಾನಾಂ ಸರ್ವೇಷಾಂ ಸಾಗರಃ ಸ್ಮೃತಃ ॥15॥
ನದಿಗಳಲ್ಲಿ ಗಂಗೆಯು ಎಲ್ಲ ನದಿಗಳಿಗಿಂತ ಶ್ರೇಷ್ಠವೆನಿಸಿದೆ. ಸರೋವರಗಳಲ್ಲಿ, ಜಲಾಶಯಗಳಲ್ಲಿ ಸಾಗರವು ಶ್ರೇಷ್ಠವೆನಿಸಿದೆ.
ದೇವದಾನವಭೂತಾನಾಂ ಪಿಶಾಚೋರಗರಾಕ್ಷಸಾಮ್ |
ನರಕಿನ್ನರಯಕ್ಷಾಣಾಂ ಸರ್ವೇಷಾಮೀಶ್ವರಃ ಪ್ರಭುಃ ॥16॥
ದೇವ-ದಾನವ-ಭೂತ-ಪಿಶಾಚ-ಉರಗ-ರಾಕ್ಷಸ-ಮನುಷ್ಯ-ಕಿನ್ನರ-ಯಕ್ಷ ಇವರೆಲ್ಲರಿಗೂ ಶಂಕರನೇ ನಿಯಾಮಕನಾಗಿದ್ದಾನೆ.
ಆದಿರ್ವಿಶ್ವಸ್ಯ ಜಗತೋ ವಿಷ್ಣುರ್ಬ್ರಹ್ಮಮಯೋ ಮಹಾನ್ |
ಭೂತಂ ಪರತರಂ ತಸ್ಮಾತ್ ತ್ರೈಲೋಕ್ಯೇ ನೇಹ ವಿದ್ಯತೇ ॥17॥
ಗುಣಪರಿಪೂರ್ಣನಾದ ವಿಷ್ಣುವು ಸಮಸ್ತ ಜಗತ್ತಿಗೆ ಆದಿಕಾರಣನು. ಮೂರು ಲೋಕಗಳಲ್ಲಿಯೂ ವಿಷ್ಣುವಿಗಿಂತ ಅಧಿಕರಾದವರು ಬೇರೆ ಯಾರೂ ಇರುವುದಿಲ್ಲ.
ಆಶ್ರಮಾಣಾಂ ಚ ಸರ್ವೇಷಾಂ ಗಾರ್ಹಸ್ಥ್ಯಂ ನಾತ್ರ ಸಂಶಯಃ |
ಲೋಕಾನಾಮಾದಿರವ್ಯಕ್ತಃ ಸರ್ವಸ್ಯಾಂತಸ್ತದೇವ ಚ ॥18॥
ಸಮಸ್ತ ಆಶ್ರಮಗಳಿಗೆ ಮೊದಲನೆಯದ್ದು ಶ್ರೇಷ್ಠವಾದ ಗ್ರಹಸ್ಥಾಶ್ರಮವಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಸಮಸ್ತ ಜಗತ್ತುಗಳೂ ಕೂಡ ಮೂಲ ಪ್ರಕೃತಿಯಿಂದ ಅಭಿವ್ಯಕ್ತಿಯನ್ನು ಹೊಂದುವುದರಿಂದ, ಮೂಲಪ್ರಕೃತಿಯಲ್ಲಿಯೇ ನಾಶವನ್ನು ಹೊಂದುವುದರಿಂದ ಸಮಸ್ತ ಜಗತ್ತಿಗೂ ಅವ್ಯಕ್ತ ತತ್ತ್ವವೆನಿಸಿದ ಮೂಲ ಪ್ರಕೃತಿಯು ಶ್ರೇಷ್ಠವೆನಿಸಿದೆ.
ಅಹಾನ್ಯಸ್ತಮಯಾಂತಾನಿ ಉದಯಾಂತಾ ಚ ಶರ್ವರೀ |
ಸುಖಸ್ಯಾಂತಂ ತಥಾ ದುಃಖಂ ದುಃಖಸ್ಯಾಂತಂ ತಥಾ ಸುಖಮ್ ॥19॥

ಹಗಲಿಗೆ ಸೂರ್ಯಾಸ್ತಮಾನವೇ ಕೊನೆ ಎನಿಸಿದೆ. ರಾತ್ರಿಗೆ ಸೂರ್ಯೋದಯವೇ ಕೊನೆ ಎನಿಸಿದೆ. ಸುಖದ ಅಂತ ದುಃಖವು, ದುಃಖದ ಅಂತವೇ ಸುಖವು.
ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ |
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಚ ಜೀವಿತಮ್ ॥20॥
ಎಲ್ಲ ವಿಧವಾದ ಸಂಗ್ರಹಗಳಿಗೂ ವಿನಾಶವಿದೆ. ಉನ್ನತ ಸ್ಥಿತಿಗೆ ಅಧಃಪತನವೇ ಕೊನೆ ಎನಿಸಿದೆ. ಸೇರುವಿಕೆಗೆ ವಿಯೋಗವು ಕೊನೆ ಎನಿಸಿದೆ. ಜೀವನಕ್ಕೆ ಮರಣವೇ ಕೊನೆ ಎನಿಸಿದೆ.
ಸರ್ವಂ ಕೃತಂ ವಿನಾಶಾಂತಂ ಜಾತಸ್ಯ ಮರಣಂ ಧ್ರುವಮ್ |
ಅಶಾಶ್ವತಂ ಹಿ ಲೋಕೇಽಸ್ಮಿನ್ ಸದಾ ಸ್ಥಾವರಜಂಗಮಮ್ ॥21॥
ಸೃಷ್ಟಿಯನ್ನು ಪಡೆದ ವಸ್ತುಗಳೆಲ್ಲವೂ ವಿನಾಶದಲ್ಲಿಯೇ ಪರ್ಯವಸಾನ ಹೊಂದುತ್ತವೆ. ಹುಟ್ಟಿದವನಿಗೆ ಮರಣವು ನಿಶ್ಚಯ. ಜಗತ್ತಿನಲ್ಲಿರುವ ಸ್ಥಾವರ-ಜಂಗಮ, ಎಲ್ಲವೂ ಅಶಾಶ್ವತ.
ಇಷ್ಟಂ ದತ್ತಂ ತಪೋಽಧೀತಂ ವ್ರತಾನಿ ನಿಯಮಾಶ್ಚ ಯೇ |
ಸರ್ವಮೇತದ್ ವಿನಾಶಾಂತಂ ಜ್ಞಾನಸ್ಯಾಂತೋ ನ ವಿದ್ಯತೇ ॥22॥
ಯಜ್ಞ, ದಾನ, ಅಧ್ಯಯನ, ವ್ರತ, ನಿಯಮ - ಇವೆಲ್ಲವೂ ವಿನಾಶ ಹೊಂದುತ್ತವೆ. ಆದರೆ ಜ್ಞಾನಕ್ಕೆ ಕೊನೆಯಿಲ್ಲ.
ತಸ್ಮಾಜ್ಜ್ಞಾನೇನ ಶುದ್ಧೇನ ಪ್ರಸನ್ನಾತ್ಮಾ ಸಮಾಹಿತಃ |
ನಿರ್ಮಮೋ ನಿರಹಂಕಾರೋ ಮುಚ್ಯತೇ ಸರ್ವಪಾಪ್ಮಭಿಃ ॥23॥
ಆದ್ದರಿಂದ ಪ್ರಶಾಂತಮನಸ್ಕನಾಗಿ ಯಾವನು ಜಿತೇಂದ್ರಿಯನಾಗಿ, ಅಹಂಕಾರ ರಹಿತನಾಗಿ, ಶುದ್ಧಾತ್ಮನೆನಿಸಿದ ಪರಮಾತ್ಮನ ಜ್ಞಾನವನ್ನು ಸಂಗ್ರಹಿಸಿಕೊಳ್ಳುತ್ತಾನೋ ಅವನು ಸಮಸ್ತ ವಿಧವಾದ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಜ್ಞಾನಸ್ಯೋತ್ತಮತ್ವಕಥನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತೈದನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತಾರನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಋಷಿಗಳನ್ನು ಕುರಿತು ಶರೀರವು ಕಾಲಚಕ್ರದಂತೆ ಸರ್ವನಾಶಕವಾಗಿದೆ ಎಂದು ಹೇಳುವ ಮೂಲಕ ಗೃಹಸ್ಥಧರ್ಮವು ಶ್ರೇಯಸ್ಸಾಧನವೆಂದು ನಿರೂಪಿಸಿದುದು.
ಬ್ರಹ್ಮಾ
ಬುದ್ಧ್ಯಾಧಾರಂ ಮನಸ್ತಂಭಮಿಂದ್ರಿಯಗ್ರಾಮವರ್ಧನಮ್ |
ಮಹಾಭೂತಾರವಿಷ್ಕಂಭಂ ನಿಮೇಷಪರಿವೇಷಣಮ್ ॥1॥
ಬ್ರಹ್ಮಾ ಮಹರ್ಷಿಗಳೇ, ಬುದ್ಧಿಯೇ ಆಧಾರವಾಗುಳ್ಳ, ಮನಸ್ಸೆಂಬ ಸ್ತಂಭವುಳ್ಳ, ಇಂದ್ರಿಯಗಳೆಂಬ ಅಭಿವೃದ್ಧಿಯುಳ್ಳ, ಪಂಚಮಹಾಭೂತಗಳ ಅಲೆಗಳ ತಡೆಗಳುಳ್ಳ, ನಿಮೇಷವೆಂಬ ಸುತ್ತಳತೆಯಿಂದ ಕೂಡಿದ;
ಜರಾಶೋಕಸಮಾವಿಷ್ಟಂ ವ್ಯಾಧಿವ್ಯಸನಪಂಜರಮ್ |
ದೇಶಕಾಲವಿಚಾರೀದಂ ಶ್ರಮವ್ಯಾಯಾಮನಿಃಸ್ವನಮ್ ॥2॥
ಮುಪ್ಪು-ಶೋಕಗಳಿಂದ ಆವೃತವಾದ, ರೋಗಗಳಿಗೂ ವ್ಯಸನಗಳಿಗೂ ಆಶ್ರಯ ಪಂಜರದಂತಿರುವ, ದೇಶ-ಕಾಲಗಳಿಗೆ ಅನುಸಾರವಾಗಿ ಸಂಚರಿಸುತ್ತಿರುವ, ಶ್ರಮ ಮತ್ತು ವ್ಯಾಯಾಮಗಳೆಂಬ ಶಬ್ದಗಳಿಂದ ತುಂಬಿರುವ;
ಅಹೋರಾತ್ರಪರಿಕ್ಷೇಪಂ ಶೀತೋಷ್ಣಪರಿಮಂಡಲಮ್ |
ಸುಖದುಃಖಸಮಶ್ಲೇಷಂ ಕ್ಷುತ್ಪಿಪಾಸಾವಕೀಲನಮ್ ॥3॥
ರಾತ್ರಿ ಮತ್ತು ಹಗಲು ಎಂಬ ಸಂಚಲನ ಶಕ್ತಿಯಿಂದ ಕೂಡಿದ, ಶೀತೋಷ್ಣಗಳಿಂದ ಆವೃತವಾದ, ಸುಖ-ದುಃಖಗಳೆಂಬ ಬಂಧನವುಳ್ಳ, ಹಸಿವು-ಬಾಯಾರಿಕೆಗಳೆಂಬ ಕೀಲುಗಳಿಂದ ಕೂಡಿರುವ;
ಛಾಯಾತಪವಿಲೇಖಂ ಚ ನಿಮೇಷೋನ್ಮೇಷವಿಹ್ವಲಮ್ |
ಶೋಕಮೋಹಜರಾಕೀರ್ಣಂ ವರ್ತಮಾನಮಚೇತನಮ್ ॥4॥
ಛಾಯೆ ಮತ್ತು ಆತಪಗಳೆಂಬ (ನೆರಳು-ಬಿಸಿಲು) ಕೆತ್ತನೆಯುಳ್ಳ, ಕಣ್ಣುಮುಚ್ಚುವಿಕೆ ತೆರೆಯುವಿಕೆ ಎಂಬ ವ್ಯಾಕುಲತೆಗಳುಳ್ಳ, ಶೋಕ-ಮೋಹ-ಜರೆಗಳಿಂದ ಕೆದರಿದ, ಅಚೇತನವಾಗಿದ್ದರೂ ಚಲಿಸುತ್ತಿರುವ;
ಮಾಸಾರ್ಧಮಾಸಗುಣಿತಂ ವಿಷಮಂ ಲೋಕಸಂಚರಮ್ |
ತಮೋನಿಯತಪಂಕಂ ಚ ರಜೋವೇಗಪ್ರವರ್ತಕಮ್ ॥5॥
ಪಕ್ಷ-ಮಾಸಗಳ ಮೂಲಕ ಗಣನೆಯಾಗುತ್ತಿರುವ, ಯಾವಾಗಲೂ ವಿಷಮಾವಸ್ಥೆಯಲ್ಲಿ ಸಂಚರಿಸುತ್ತಿರುವ, ತಮೋಗುಣದ ಕೆಸರಿನಲ್ಲಿ ಮುಳುಗಿರುವ, ರಜೋಗುಣದಿಂದ ವೇಗವಾಗಿ ಸಂಚರಿಸುತ್ತಿರುವ;
ಸತ್ತ್ವಾಲಂಕಾರದೀಪ್ತಂ ಚ ಗುಣಸಂಘಾತಮಂಡಲಮ್ |
ಸಾರವಿಗ್ರಹನಾಭೀಕಂ ಶೋಕಸಂಘಾತವರ್ತಕಮ್ ॥6॥
ಸತ್ತ್ವಗುಣವೆಂಬ ಅಲಂಕಾರದಿಂದ ಬೆಳಗುತ್ತಿರುವ, ತ್ರಿಗುಣಗಳ ಸಮುದಾಯ ಮಂಡಲದಿಂದ ಶೋಭಿತವಾದ, ಸೌಂದರ್ಯದಿಂದ

ಕೂಡಿದಮ ವಿಗ್ರಹವೆಂಬ ನಾಭಿಯಿಂದ ಸಹಿತವಾದ, ಶೋಕಗಳ ಸಮುದಾಯವೆಂಬ ಸುಳಿಗಳುಳ್ಳ;
ಕ್ರಿಯಾಕಾರಣಸಂಯುಕ್ತಂ ರಾಗವಿಸ್ತಾರಮಾಯತಮ್ |
ಲೋಭೇಪ್ಸಾಪರಸಂಘಾತ-ವಿವಿಕ್ತಜ್ಞಾನಸಂಭವಮ್ ॥7॥
ಕ್ರಿಯೆಗಳು- ಅದಕ್ಕೆ ಸಂಬಂಧಪಟ್ಟ ಕಾರಣಗಳಿಂದ ತುಂಬಿರುವ, ಮೋಹಗಳೆಂಬ ವಿಸ್ತಾರವಾದ ಪ್ರದೇಶವುಳ್ಳ, ಲೋಭ-ತೃಷ್ಣೆಗಳೆಂಬ ಮಹಾಹೊಡೆತಗಳಿಂದ ವಿಭಿನ್ನವಾದ ಜ್ಞಾನಗಳನ್ನು ಪಡೆದು ಹುಟ್ಟನ್ನು ಪಡೆಯುತ್ತಿರುವ;
ಭಯಮೋಹಪರೀವಾರಂ ಭೂತಸಮ್ಮೋಹಕಾರಕಮ್ |
ಆನಂದಪ್ರೀತಿಚಾರಂ ಚ ಕಾಮಕ್ರೋಧಪರಿಗ್ರಹಮ್ ॥8॥
ಭಯ ಮತ್ತು ಮೋಹಗಳೆಂಬ ಪರಿವಾರಗಳಿಂದ ಕೂಡಿರುವ, ಪ್ರಾಣಿಗಳನ್ನು ಮೋಹಗೊಳಿಸುವ ಶಕ್ತಿಯುಳ್ಳ, ಆನಂದ ಮತ್ತು ಪ್ರೀತಿಯ ವಿಷಯವಾಗಿ ಸಂಚರಿಸುತ್ತಿರುವ, ಕಾಮ-ಕ್ರೋಧಗಳೆಂಬ ಸ್ವೀಕಾರಗಳುಳ್ಳ;
ಮಹದಾದಿವಿಶೇಷಾಂತಮಸಕ್ತಂ ಪ್ರಭವಾಪ್ಯಯಮ್ |
ಮನೋಜವಮವಿಶ್ರಾಂತಂ ಕಾಲಚಕ್ರಂ ಪ್ರವರ್ತತೇ ॥9॥
ಮಹತತ್ತ್ವವೇ ಮೊದಲಾದ ವಿಶೇಷ ಗುಣಗಳಿಂದ ಕೊನೆಗೊಳ್ಳುವ, ಅಸಕ್ತವಾದ, ಹುಟ್ಟು-ಸಾವುಗಳಿಗೆ ತುತ್ತಾಗುವ, ಮನಸ್ಸಿನ ವೇಗವುಳ್ಳ, ಯಾವಾಗಲೂ ಸಾವನ್ನು ಹೊಂದದ, ಕಾಲಚಕ್ರವು ಪ್ರವೃತ್ತಿಯನ್ನು ಹೊಂದುತ್ತಿರುತ್ತದೆ.
ಏತದ್ ದ್ವಂದ್ವಸಮಾಯುಕ್ತಂ ಕಾಲಚಕ್ರಮಚೇತನಮ್ |
ವಿಸೃಜನ್ ಸಂಕ್ಷಿಪಂಶ್ಚಾಪಿ ಬೋಧಯನ್ ಸ್ಥಾಪಯನ್ ಜಗತ್ ॥10॥
ಈ ರಾಗ-ದ್ವೇಷಾದಿ ದ್ವಂದ್ವಗಳಿಂದ ಕೂಡಿದ ಜಡವೆಂಬ ದೇಹದ ಕಾಲಚಕ್ರವು ದೇವತೆಗಳೇ ಮೊದಲಾದ ಜಗತ್ತನ್ನು ಸೃಷ್ಟಿಸುತ್ತದೆ, ನಾಶಪಡಿಸುತ್ತದೆ, ಬೋಧಿಸುತ್ತದೆ, ಜಗತ್ತಿಗೆ ಅಜ್ಞಾನವನ್ನೂ ನೀಡುತ್ತದೆ.
ಕಾಲಚಕ್ರಪ್ರವೃತ್ತಿಂ ಚ ನಿವೃತ್ತಿಂ ಚೈವ ತತ್ತ್ವತಃ |
ಯಸ್ತು ವೇದ ನರೋ ನಿತ್ಯಂ ನ ಸ ಭೂತೇಷು ಮುಹ್ಯತಿ ॥11॥
ಯಾವ ಮನುಷ್ಯನು ಕಾಲಚಕ್ರದ ಪ್ರವೃತ್ತಿಯನ್ನು, ನಿವೃತ್ತಿಯನ್ನು ತಾತ್ವಿಕವಾಗಿ ಮನನ ಮಾಡುತ್ತಾನೋ ಅವನು ಎಂದಿಗೂ ಮೋಹಕ್ಕೆ ತುತ್ತಾಗುವುದಿಲ್ಲ.
ವಿಮುಕ್ತಃ ಸರ್ವಸಂಕ್ಲೇಶೈಃ ಸರ್ವದ್ವಂದ್ವಾತಿಗೋ ಮುನಿಃ |
ವಿಮುಕ್ತಃ ಸರ್ವಪಾಪೇಭ್ಯಃ ಪ್ರಾಪ್ನೋತಿ ಪರಮಾಂ ಗತಿಮ್ ॥12॥
ಕಾಲಚಕ್ರದ ಪ್ರವೃತ್ತಿ-ನಿವೃತ್ತಿಗಳನ್ನು ಅರಿತ ವ್ಯಕ್ತಿಯು ಎಲ್ಲ ವಿಧವಾದ ಸುಖ- ದುಃಖಾದಿ ದ್ವಂದ್ವಗಳಿಂದ, ಸಮಸ್ತ ಪಾಪಗಳಿಂದ ಮುಕ್ತನಾಗಿ ಪರಮಶ್ರೇಷ್ಠವಾದ ಮುಕ್ತಿಯನ್ನೇ ಹೊಂದುತ್ತಾನೆ.
ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋಽಥ ಭಿಕ್ಷುಕಃ |
ಚತ್ವಾರ ಆಶ್ರಮಾಃ ಪ್ರೋಕ್ತಾಃ ಸರ್ವೇ ಗಾರ್ಹಸ್ಥ್ಯಮೂಲಕಾಃ ॥13॥
ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಎಂಬ ನಾಲ್ಕು ಆಶ್ರಮಗಳು ಏನು ಹಿಂದೆ ಹೇಳಲ್ಪಟ್ಟಿವೆ, ಇವೆಲ್ಲಾ ಆಶ್ರಮಗಳಿಗೂ ಮೂಲವಾದದ್ದು ಗೃಹಸ್ಥಾಶ್ರಮವು.
ಯಃ ಕಶ್ಚಿದಿಹ ಲೋಕೇ ಚ ಹ್ಯಾಶ್ರಮಃ ಸಂಪ್ರಕೀರ್ತಿತಃ |
ತಸ್ಯಾಂತಗಮನಂ ಜ್ಞೇಯಂ ಕೀರ್ತಿರೇಷಾ ಸನಾತನೀ ॥14॥
ಈ ಜಗತ್ತಿನಲ್ಲಿ ಯಾವ ಯಾವ ಆಶ್ರಮಗಳಿವೆಯೋ ಆ ಆಶ್ರಮಗಳ ಗುರಿಯನ್ನು ತಿಳಿಯಬೇಕು. ಗುರಿ ತಿಳಿಯುವುದೇ ಜೀವನದ ಶ್ರೇಷ್ಠವಾದ ಕೀರ್ತಿ ಎನಿಸಿದೆ.
ಸಂಸ್ಕಾರೈಃ ಸಂಸ್ಕೃತಃ ಪೂರ್ವಂ ಯಥಾವಚ್ಚರಿತವ್ರತಃ |
ಜಾತೌ ಗುಣವಿಶಿಷ್ಟಾಯಾಂ ಸಮಾವರ್ತೇತ ವೇದವಿತ್ ॥15॥
ಉಪನಯನವೇ ಮೊದಲಾದ ಎಲ್ಲ ವಿಧವಾದ ಸಂಸ್ಕಾರಗಳಿಂದ ಕೂಡಿ, ವೇದೋಕ್ತವಾದ ವಿಧಿಯಿಂದ ಅಧ್ಯಯನವನ್ನು ಮಾಡಿ, ಗುಣಗಳಿಂದ ತುಂಬಿದ ಜಾತಿಯಲ್ಲಿ ಹುಟ್ಟಿದವನಾಗಿ, ವೇದಾಧ್ಯಯನವನ್ನು ಮಾಡಿ, ಯೋಗ್ಯವಾದ ಕಾಲದಲ್ಲಿ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕು.
ಸ್ವದಾರನಿರತೋ ನಿತ್ಯಂ ಶಿಷ್ಟಾಚಾರೋ ಜಿತೇಂದ್ರಿಯಃ |
ಪಂಚಭಿಶ್ಚ ಮಹಾಯಜ್ಞೈಃ ಶ್ರದ್ದಧಾನೋ ಯಜೇದಿಹ ॥16॥
ನಂತರ ತನ್ನ ಪತ್ನಿಯಲ್ಲಿ ಅನುರಾಗದಿಂದ ಇರುತ್ತಾ, ಜಿತೇಂದ್ರಿಯನಾಗಿ, ಶಿಷ್ಟಾಚಾರಯುಕ್ತನಾಗಿ, ದೇವ-ಪಿತೃ-ಅತಿಥಿ-ಋಷಿ-ಭೂತ ಎಂಬ ಐದು ಯಜ್ಞಗಳ ಮೂಲಕ ಭಗವಂತನನ್ನು ಆರಾಧಿಸಬೇಕು.
ದೇವತಾತಿಥಿಶಿಷ್ಟಾಶೀ ನಿರತೋ ವೇದಕರ್ಮಸು |
ಇಜ್ಯಾಪ್ರದಾನಯುಕ್ತಶ್ಚ ಯಥಾಶಕ್ತಿ ಯಥಾವಿಧಿ ॥17॥
ಗೃಹಸ್ಥನಾದವನು ಮೊದಲು ದೇವತೆಗಳಿಗೆ ನಿವೇದನ ಮಾಡಿ, ಬಳಿಕ ಅತಿಥಿಗಳಿಗೆ ಸತ್ಕರಿಸಿ, ಉಳಿದ ಅನ್ನವನ್ನು ಊಟ ಮಾಡಬೇಕು. ವೇದೋಕ್ತವಾದ ಕರ್ಮಗಳಲ್ಲಿ ನಿರತನಾಗಿರಬೇಕು. ತನ್ನ ಶಕ್ತ್ಯನುಗುಣವಾಗಿ ಸಂತೋಷದಿಂದ ಯಜ್ಞವನ್ನಾಚರಿಸಬೇಕು. ಯಥಾಶಕ್ತಿ ದಾನ ಮಾಡಬೇಕು.
ನ ಪಾಣಿಪಾದಚಪಲೋ ನ ನೇತ್ರಚಪಲೋ ಮುನಿಃ |
ನ ಚ ವಾಗಂಗಚಪಲ ಇತಿ ಶಿಷ್ಟಸ್ಯ ಗೋಚರಃ ॥18॥
ಮನನಶೀಲನಾದ ಗೃಹಸ್ಥನು ಕೈ-ಕಾಲು-ಕಣ್ಣು-ಮಾತು-ಶರೀರಗಳ ಮೂಲಕ ಆಗುವ ಚಪಲತೆಗಳನ್ನು ತ್ಯಾಗ ಮಾಡಿ,

ಭಗವನ್ಮುಖವಾದ ವ್ಯಾಪಾರಗಳಲ್ಲಿ ನಿರತನಾಗಬೇಕು.
ನಿತ್ಯಂ ಯಜ್ಞೋಪವೀತೀ ಸ್ಯಾತ್ ಶುಕ್ಲವಾಸಾಃ ಶುಚಿವ್ರತಃ |
ನಿಯತೋ ದಮದಾನಾಭ್ಯಾಂ ಸದಾ ಶಿಷ್ಟೈಶ್ಚ ಸಂವಿಶೇತ್ ॥19॥
ಗೃಹಸ್ಥನು ಯಜ್ಞೋಪವೀತವನ್ನು ಎಂದಿಗೂ ತ್ಯಜಿಸಬಾರದು. ಶುದ್ಧವಾದ ಬಿಳಿಯಾದ ವಸ್ತ್ರವನ್ನು ಧರಿಸಬೇಕು. ಉತ್ತಮ ವ್ರತಾನುಷ್ಠವನ್ನು ಮಾಡಬೇಕು. ಶೌಚ, ಸಂತೋಷ ಮೊದಲಾದ ನಿಯಮಗಳನ್ನೂ, ಸತ್ಯ, ಅಹಿಂಸೆ ಮೊದಲಾದ ಯಮಗಳನ್ನು ಪರಿಪಾಲಿಸುತ್ತಾ, ಯಥಾಶಕ್ತಿ ದಾನ ಮಾಡುತ್ತಿರಬೇಕು. ಯಾವಾಗಲೂ ಸತ್ಪುರುಷರ ಜೊತೆಗೆ ತತ್ತ್ವವಿಚಾರಗಳನ್ನು ಮಾಡುತ್ತಿರಬೇಕು.
ಜಿತಶಿಶ್ನೋದರೋ ಮೈತ್ರಃ ಶಿಷ್ಟಾಚಾರಸಮಾಹಿತಃ |
ವೈಣವೀಂ ಧಾರಯೇದ್ ಯಷ್ಟಿಂ ಸೋದಕಂ ಚ ಕಮಂಡಲುಮ್ ॥
ಜಿಹ್ವೆ-ಉಪಸ್ಥಗಳನ್ನು ನಿಗ್ರಹಿಸಿಕೊಂಡು, ಮೈತ್ರಿಭಾವದಿಂದ ಶಿಷ್ಟಾಚಾರಯುಕ್ತನಾಗಿ, ಬಿದಿರಿನ ದಂಡವನ್ನು ನೀರು. ತುಂಬಿದ ಕಮಂಡಲವನ್ನು ಧರಿಸಬೇಕು.
ತ್ರೀಣಿ ಧಾರಯತೇ ನಿತ್ಯಂ ಕಮಂಡಲುಮತಂದ್ರಿತಃ ॥21॥
ಮೂರು ಕಮಂಡಲುಗಳನ್ನು ಜಿತೇಂದ್ರಿಯನಾಗಿ ಯಾವಾಗಲೂ ಧರಿಸಿರಬೇಕು.
ಏಕಮಾಚಮನಾರ್ಥಾಯ ಏಕಂ ವೈ ಪಾದಧಾವನಮ್ |
ಏಕಂ ಶೌಚವಿಧಾನಾರ್ಥಮಿತ್ಯೇತತ್ ತ್ರಿತಯಂ ತಥಾ ॥22॥
ಒಂದು ಕಮಂಡಲನ್ನು ಆಚಮನಕ್ಕಾಗಿ ಉಪಯೋಗಿಸಬೇಕು. ಮತ್ತೊಂದು ಕಮಂಡಲಿನ ನೀರನ್ನು ಪಾದವನ್ನು ತೊಳೆಯುವುದಕ್ಕೆ ಉಪಯೋಗಿಸಿಕೊಳ್ಳಬೇಕು. ಮತ್ತೊಂದು ಕಮಂಡಲಿನ ನೀರನ್ನು ಶುಚಿಗಾಗಿ ಧರಿಸಬೇಕು. ಹೀಗೆ ಮೂರು ಕಮಂಡಲುಗಳನ್ನು ಧರಿಸಬೇಕು.
ಅಧೀತ್ಯಾಧ್ಯಾಪನಂ ಕುರ್ಯಾತ್ ತಥಾ ಯಜನಯಾಜನೇ |
ದಾನಂ ಪ್ರತಿಗ್ರಹಂ ಚೈವ ಷಡ್ಗುಣಾಂ ವೃತ್ತಿಮಾಚರೇತ್ ॥23॥
ಬ್ರಾಹ್ಮಣನು ಅಧ್ಯಯನವನ್ನೂ ಮಾಡಬೇಕು, ಅಧ್ಯಾಪನವನ್ನೂ ಮಾಡಬೇಕು. ಯಜನ-ಯಾಜನಗಳನ್ನು ಮಾಡಬೇಕು. ದಾನ-ಪ್ರತಿಗ್ರಹವನ್ನು ಮಾಡಬೇಕು. ಹೀಗೆ ಬ್ರಾಹ್ಮಣನಿಗೆ ಷಟ್ಕರ್ಮವೃತ್ತಿಯು ವಿಹಿತವಾಗಿದೆ.
ತ್ರೀಣಿ ಕರ್ಮಾಣಿ ಯಾನೀಹ ಬ್ರಾಹ್ಮಣಾನಾಂ ತು ಜೀವಿಕಾಃ |
ಯಾಜನಾಧ್ಯಾಪನೇ ಚೋಭೇ ಶುದ್ಧಾಚ್ಚಾಪಿ ಪ್ರತಿಗ್ರಹಃ ॥24॥
ಈ ಷಟ್ಕರ್ಮಗಳ ನಡುವೆ ಯಜ್ಞ ಮಾಡಿಸುವುದು, ಅಧ್ಯಯನ ಮಾಡಿಸುವುದು, ದಾನ ಸ್ವೀಕರಿಸುವುದು - ಈ ಮೂರು ಬ್ರಾಹ್ಮಣನ ಬದುಕಿಗೆ ಆಧಾರವಾದ ವೃತ್ತಿಗಳೆನಿಸಿವೆ. ದಾನವು ಶುದ್ಧನಾದ ವ್ಯಕ್ತಿಯಿಂದಲೇ ಸ್ವೀಕರಿಸಲು ಯೋಗ್ಯವಾಗಿದೆ.
ಅವಶೇಷಾಣಿ ಚಾನ್ಯಾನಿ ತ್ರೀಣಿ ಕರ್ಮಾಣಿ ಯಾನ್ಯುತ |
ದಾನಮಧ್ಯಯನಂ ಯಜ್ಞೋ ಧರ್ಮಯುಕ್ತಾನಿ ತಾನಿ ತು ॥25॥
ಉಳಿದಿರುವ ದಾನ, ಅಧ್ಯಯನ, ಯಜ್ಞಾನುಷ್ಠಾನ ಎಂಬ ಮೂರು ಕರ್ಮಗಳು ಧರ್ಮಯುಕ್ತವಾಗಿವೆ. ಇವು ಧರ್ಮೋಪಾಸನೆಗೆ ಸಾಧಕವಾಗಿವೆ. ಹೊರತು ಜೀವಿಕೆಗೆ ಯೋಗ್ಯವಾಗಿರುವುದಿಲ್ಲ.
ತೇಷ್ವಪ್ರಮಾದಂ ಕುರ್ವೀತ ತ್ರಿಷು ಕರ್ಮಸು ಕರ್ಮವಿತ್ |
ದಾಂತೋ ಮೈತ್ರಃ ಕ್ಷಮಾಯುಕ್ತಃ ಸರ್ವಭೂತೇಷು ವೈ ಮುನಿಃ ॥26॥
ಸರ್ವಮೇತದ್ ಯಥಾಶಕ್ತಿ ವಿಪ್ರೋ ನಿರ್ವರ್ತಯೇಚ್ಛುಚಿಃ |
ಏವಂ ಯುಕ್ತೋ ಜಯೇತ್ ಸ್ವರ್ಗಂ ಗೃಹಸ್ಥಃ ಸಂಶಿತವ್ರತಃ ॥27॥
ಧರ್ಮವನ್ನು ತಿಳಿದಿರುವ ಬ್ರಾಹ್ಮಣನು ಅಧ್ಯಯನ, ದಾನ, ಯಜ್ಞ ಎಂಬ ಈ ಕರ್ಮಗಳನ್ನು ಮಾಡುವುದರಲ್ಲಿ ಆಲಸ್ಯ ಹೊಂದಬಾರದು. ಜಿತೇಂದ್ರಿಯನಾಗಿರುವ, ಸಮಸ್ತ ಪ್ರಾಣಿಗಳಲ್ಲಿ ಮೈತ್ರಿಭಾವವಿರುವ, ಕ್ಷಮಾವಂತನಾದ, ಎಲ್ಲರಲ್ಲಿಯೂ ಭಗವಂತನನ್ನು ಕಾಣುವ, ಮನನಶೀಲನಾದ, ಕಠೋರವ್ರತನಿಷ್ಠನಾದ, ಪವಿತ್ರಾತ್ಮ ಎನಿಸಿದ ಗೃಹಸ್ಥನು ತನ್ನ ಶಕ್ತಿಗೆ ಅನುಗುಣವಾಗಿ ನಿಯಮವನ್ನು ಪರಿಪಾಲಿಸುತ್ತಿದ್ದರೆ ಸ್ವರ್ಗಲೋಕವನ್ನೂ ಜಯಿಸುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ತ್ರಿಕರ್ಮಶಂಸನಂ ನಾಮ
ಷಟ್‌ಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತಾರನೆಯ
ಅಧ್ಯಾಯ ಮುಗಿಯಿತು.
* * * * *
ನಲವತ್ತೇಳನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು ಬ್ರಹ್ಮಚರ್ಯ,
ವಾನಪ್ರಸ್ಥ ಧರ್ಮಗಳನ್ನು ನಿರೂಪಣೆ ಮಾಡುವ ಮೂಲಕ ಆ ಧರ್ಮಗಳ ಅನುಷ್ಠಾನವು ಶ್ರೇಯಸ್ಸಾಧನವಾಗಿದೆ ಎಂದು ಹೇಳಿದುದು.
ಸಂನ್ಯಾಸಧರ್ಮವನ್ನು ನಿರೂಪಿಸಿದುದು.
ಬ್ರಹ್ಮಾ

ಏವಮೇತೇನ ಮಾರ್ಗೇಣ ಪೂರ್ವೋಕ್ತೇನ ಯಥಾವಿಧಿ |
ಅಧೀತವಾನ್ ಯಥಾಶಕ್ತಿ ತಥೈವ ಬ್ರಹ್ಮಚರ್ಯವಾನ್ ॥1॥
ಬ್ರಹ್ಮಾ ಮಹರ್ಷಿಗಳೇ, ಹಿಂದೆ ಹೇಳಿದ ಮಾರ್ಗಗಳಲ್ಲಿ ಬ್ರಹ್ಮಚಾರಿಯು ವಿಧಿವತ್ತಾಗಿ ಕರ್ಮಗಳನ್ನಾಚರಿಸಬೇಕು. ಯಥಾಶಕ್ತಿ ಅಧ್ಯಯನವನ್ನು ಮಾಡುತ್ತಾ ಬ್ರಹ್ಮಚರ್ಯ ಪರಿಪಾಲನೆಯನ್ನು ಮಾಡಬೇಕು.
ಸ್ವಧರ್ಮನಿರತೋ ವಿದ್ವಾನ್ ಸರ್ವೇಂದ್ರಿಯಯತೋ ಮುನಿಃ |
ಗುರೋಃ ಪ್ರಿಯಹಿತೇ ಯುಕ್ತಃ ಸತ್ಯಧರ್ಮಪರಃ ಶುಚಿಃ ॥2॥
ಸ್ವಧರ್ಮನಿಷ್ಠನಾದ ವಿದ್ವಾಂಸನು ಇಂದ್ರಿಯನಿಗ್ರಹವನ್ನು ಸಂಪಾದಿಸಿಕೊಂಡು, ಮನನಶೀಲನಾಗಿ ಗುರುವಿಗೆ ಹಿತವನ್ನೂ, ಪ್ರಿಯವನ್ನು ಉಂಟು ಮಾಡುವುದರಲ್ಲಿಯೇ ಆಸಕ್ತನಾಗಿ, ಸತ್ಯ-ಧರ್ಮರತನೂ, ಶುಚಿಯೂ ಆಗಿರಬೇಕು.
ಗುರುಣಾ ಸಮನುಜ್ಞಾತೋ ಭುಂಜೀತಾನ್ನಮಕುತ್ಸಯನ್ |
ಹವಿಷ್ಯಭೈಕ್ಷ್ಯಭುಗ್ವಾಽಪಿ ಸ್ಥಾನಾಸನವಿಹಾರವಾನ್ ॥3॥
ಗುರುವಿನ ಆಜ್ಞೆಯನ್ನು ಪಡೆದು ಊಟ ಮಾಡಬೇಕು. ಊಟ ಮಾಡುವಾಗ ಅನ್ನವನ್ನು ನಿಂದಿಸಬಾರದು. ಬೇಡಿ ತಂದ ಅನ್ನವನ್ನು ಹವಿಷ್ಯವೆಂದು ಭಾವಿಸಬೇಕು. ಸರಿಯಾದ ಸ್ಥಳದಲ್ಲಿ ಕುಳಿತುಕೊಳ್ಳಬೇಕು. ಸರಿಯಾದ ಆಸನ ಚಿಹ್ನೆ ಇರಬೇಕು. ಶುದ್ಧ ಆಚಾರವುಳ್ಳವನಾಗಿರಬೇಕು.
ದ್ವಿಕಾಲಮಗ್ನಿಂ ಜುಹುಯಾತ್ ಶುಚಿರ್ಭೂತ್ವಾ ಸಮಾಹಿತಃ |
ಧಾರಯೇತ ಸದಾ ದಂಡಂ ಬೈಲ್ವಂ ಪಾಲಾಶಮೇವ ವಾ ॥4॥
ಶುಚಿಯಾಗಿ, ಏಕಾಗ್ರಚಿತ್ತನಾಗಿ, ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಅಗ್ನಿಯಲ್ಲಿ ಆಹುತಿಯನ್ನು ನೀಡಬೇಕು. ಮುತ್ತುಗ ಅಥವಾ ಬಿಲ್ವದಂಡವನ್ನು ಬ್ರಹ್ಮಚಾರಿಯು ಯಾವಾಗಲೂ ಧರಿಸಿರಬೇಕು.
ಕ್ಷೌಮಂ ಕಾರ್ಪಾಸಿಕಂ ವಾಽಪಿ ಮೃಗಾಜಿನಮಥಾಪಿ ವಾ |
ಸರ್ವಕಾಷಾಯರಕ್ತಂ ಸ್ಯಾದ್ ವಾಸೋ ವಾಽಪಿ ದ್ವಿಜಸ್ಯ ಹ ॥5॥
ಬ್ರಹ್ಮಚಾರಿಯು ರೇಷ್ಮೆ, ಹತ್ತಿ ಅಥವಾ ಕೃಷ್ಣಾಜಿನ ವಸ್ತ್ರಗಳನ್ನು ಧಾರಣೆ ಮಾಡಬೇಕು. ಬ್ರಾಹ್ಮಣನು ಪೂರ್ಣವಾಗಿ ಕಾವಿ ಹಾಕಿದ ವಸ್ತ್ರವನ್ನಾದರೂ ಧರಿಸಬಹುದು.
ಮೇಖಲಾ ಚ ಭವೇನ್ಮೌಂಜೀ ಜಟೀ ನಿತ್ಯೋದಕೀ ತಥಾ |
ಯಜ್ಞೋಪವೀತೀ ಸ್ವಾಧ್ಯಾಯೀ ಅಲುಪ್ತನಿಯಮವ್ರತಃ ॥6॥
ಬ್ರಹ್ಮಚಾರಿಯು ಮುಂಜ ಎಂಬ ಹುಲ್ಲಿನಿಂದ (ನಜೆಯಿಂದ) ಉಡಿದಾರವನ್ನು ರಚಿಸಿ ಸೊಂಟಕ್ಕೆ ಕಟ್ಟಿಕೊಳ್ಳಬೇಕು. ಜಟಾಧಾರಿಯಾಗಿರಬೇಕು. ನಿತ್ಯಸ್ನಾನವನ್ನು ಆಚರಿಸಬೇಕು. ಸರ್ವದಾ ಯಜ್ಞೋಪವೀತವನ್ನು ಧರಿಸಿ, ಸ್ವಾಧ್ಯಾಯ ನಿರತನಾಗಿ, ನಿಯಮಗಳನ್ನು ಉಲ್ಲಂಘಿಸದೆ ವರ್ತಿಸಬೇಕು.
ಪೂತಾಭಿಃ ಸಪವಿತ್ರಾಭಿರದ್ಭಿರ್ದೈವತತರ್ಪಣಮ್ |
ಭಾವೇನ ನಿಯಮಂ ಕುರ್ವನ್ ಬ್ರಹ್ಮಚಾರೀ ಪ್ರಶಸ್ಯತೇ ॥7॥
ಪವಿತ್ರವನ್ನು ಧರಿಸಿ, ಪವಿತ್ರವಾದ ನೀರಿನಿಂದ ದೇವತೆಗಳನ್ನು ತೃಪ್ತಿಪಡಿಸಬೇಕು. ಇಂತಹ ಬ್ರಹ್ಮಚಾರಿಯು ಪ್ರಶಂಸೆಗೆ ಪಾತ್ರನಾಗುತ್ತಾನೆ.
ಏವಂ ಯುಕ್ತೋ ಜಯೇತ್ ಸ್ವರ್ಗಮೂರ್ಧ್ವರೇತಾಃ ಸಮಾಹಿತಃ |
ನ ಸಂಸರತಿ ಜಾತೀಷು ಪರಮಂ ಸ್ಥಾನಮಾಶ್ರಿತಃ ॥8॥
ಹೀಗೆಯೇ ಮುಂದೆ ಹೇಳುವ ಉತ್ತಮಗುಣದಿಂದ ಕೂಡಿದ, ಜಿತೇಂದ್ರಿಯನಾದ, ವಾನಪ್ರಸ್ಥನಾದ ಪುರುಷನು ಉತ್ತಮ ಲೋಕಗಳನ್ನು ಹೊಂದುತ್ತಾನೆ. ಅನಂತರ ಸಂಸಾರದಲ್ಲಿ ಮರುಹುಟ್ಟನ್ನು ಪಡೆಯುವುದಿಲ್ಲ.
ಸಂಸ್ಕೃತಃ ಸರ್ವಸಂಸ್ಕಾರೈಸ್ತಥೈವ ಬ್ರಹ್ಮಚರ್ಯವಾನ್ |
ಗ್ರಾಮಾನ್ನಿಷ್ಕ್ರಮ್ಯ ಚಾರಣ್ಯಂ ಮುನಿಃ ಪ್ರವ್ರಜಿತೋ ವಸೇತ್ ॥9॥
ಸಂಸ್ಕಾರಗಳಿಂದ ಸಂಸ್ಕೃತನಾದ, ಬ್ರಹ್ಮಚರ್ಯನಿಷ್ಠನಾದ ವಾನಪ್ರಸ್ಥನು ಸಂಸಾರದ ಮೋಹವನ್ನು ತೊರೆದು, ಗ್ರಾಮದಿಂದ ಅರಣ್ಯಕ್ಕೆ ಹೋಗಿ ವಾಸ ಮಾಡಬೇಕು.
ಚರ್ಮವಲ್ಕಲಸಂವೀತಃ ಸಾಯಂ ಪ್ರಾತರುಪಸ್ಪೃಶೇತ್ |
ಅರಣ್ಯಗೋಚರೋ ನಿತ್ಯಂ ನ ಗ್ರಾಮಂ ಪ್ರವಿಶೇತ್ ಪುನಃ ॥10॥
ವಾನಪ್ರಸ್ಥಾಶ್ರಮಿಯು ಜಿಂಕೆಯ ಚರ್ಮವನ್ನು ಅಥವಾ ನಾರುಮಡಿಯನ್ನು ಧರಿಸಬೇಕು. ಬೆಳಿಗ್ಗೆ, ಸಾಯಂಕಾಲ ಸ್ನಾನ ಮಾಡಬೇಕು. ಅರಣ್ಯದಲ್ಲೇ ವಾಸ ಮಾಡಿ ಬದುಕನ್ನು ಅಲ್ಲಿಯೇ ಪೂರ್ಣಗೊಳಿಸಬೇಕು. ಎಂದಿಗೂ ವಾನಪ್ರಸ್ಥಾಶ್ರಮ ಎಂದು ಹೊರಟ ವ್ಯಕ್ತಿಯು ಮರಳಿ ಗ್ರಾಮಕ್ಕೆ ಪ್ರವೇಶಿಸಬಾರದು.
ಅರ್ಚಯನ್ನತಿಥೀನ್ ಕಾಲೇ ದತತ್ವ ಚಾಪಿ ಪ್ರತಿಶ್ರಯಮ್ |
ಫಲಪತ್ರಚಯ್ಯೈರ್ವನ್ಯೈಃ ಶ್ಯಾಮಾಕೇನ ಚ ವರ್ತಯನ್ ॥11॥
ಅರಣ್ಯದಲ್ಲಿರುವಾಗ ಅತಿಥಿಗಳಾಗಿ ಬಂದವರಿಗೆ ಆಶ್ರಯ ನೀಡಬೇಕು. ಅವರನ್ನು ಸತ್ಕರಿಸಬೇಕು. ಅರಣ್ಯದಲ್ಲಿ ಸಿಗುವ ಹಣ್ಣು, ಗೆಡ್ಡೆ-ಗೆಣಸು, ಎಲೆಗಳು, ಶ್ಯಾಮೆ ಅಕ್ಕಿ ಇವುಗಳನ್ನೇ ಆಹಾರವನ್ನಾಗಿಸಿಕೊಂಡು ಜೀವನ ಕಳೆಯಬೇಕು.
ಸ ನಿತ್ಯಮುದಕಂ ವಾಯುಂ ಸರ್ವಂ ವಾನ್ಯಂ ತಥಾ ತೃಣಮ್ |
ಪ್ರಾಶ್ನೀಯಾದಾನುಪೂರ್ವ್ಯೇಣ ಯಥಾದೀಕ್ಷಮತಂದ್ರಿತಃ ॥12॥
ವಾನಪ್ರಸ್ಥಾಶ್ರಮಿಯು ಯಾವಾಗಲೂ ನೀರು, ಗಾಳಿ ಅಥವಾ ಅರಣ್ಯದಲ್ಲಿ ಸಿಗುವ ಪದಾರ್ಥಗಳು, ಹುಲ್ಲು ಇವುಗಳನ್ನೇ

ಆಶ್ರಯಿಸಿಕೊಂಡಿರಬೇಕು. ದೀಕ್ಷಾಬದ್ಧನಾಗಿ, ಜಿತೇಂದ್ರಿಯನಾಗಿ ವರ್ತಿಸಬೇಕು.
ಆಮೂಲಫಲಶಾಕಾದ್ಯೈರರ್ಚೇದತಿಥಿಮಾಗತಮ್ |
ಯದ್ ಭಕ್ಷ್ಯಃ ಸ್ಯಾತ್ ತತೋ ದದ್ಯಾದ್ ಭಿಕ್ಷಾಂ ನಿತ್ಯಮತಂದ್ರಿತಃ ॥
ಆಶ್ರಮಕ್ಕೆ ಆಗಮಿಸಿದ ಅತಿಥಿಯನ್ನು ಹಣ್ಣುಗಳಿಂದ, ಗೆಡ್ಡೆ-ಗೆಣಸುಗಳಿಂದ ಸತ್ಕರಿಸಬೇಕು. ತಾನು ತಿನ್ನುವ ಪದಾರ್ಥವನ್ನು ಅತಿಥಿಗೆ ಕೊಟ್ಟು, ಆಲಸ್ಯ ತೋರಿಸದೆ ಸತ್ಕರಿಸಿ ನಂತರ ತಾನು ಸ್ವೀಕರಿಸಬೇಕು.
ದೇವತಾತಿಥಿಪೂಜಾಂ ಚ ಕೃತ್ವಾ ಭುಂಜೀತ ವಾಗ್ಯತಃ |
ಅಸ್ಕಂದಿತಮನಾಶ್ಯೈವ ಲಘ್ವಾಶೀ ದೇವತಾಶ್ರಯಃ ॥14॥
ಪ್ರತಿದಿನವೂ ದೇವತೆಗಳಿಗೆ ನೈವೇದ್ಯ ಮಾಡಿ, ಅತಿಥಿಗಳನ್ನೂ ಸತ್ಕರಿಸಿ, ಮೌನಿಯಾಗಿ ಭೋಜನ ಮಾಡಬೇಕು. ಮಾನಸಿಕವಾಗಿಯೂ ಯಾರ ಜೊತೆಗೂ ಸ್ಪರ್ಧೆಯನ್ನು ತಾಳದೆ, ಅಲ್ಪ ಆಹಾರಿಯಾಗಿ, ಭಗವಂತನನ್ನೇ ಆಶ್ರಯಿಸಿ ಬದುಕು ಸಾಗಿಸಬೇಕು.
ದಾಂತೋ ಮೈತ್ರಃ ಕ್ಷಮಾಯುಕ್ತಃ ಕೇಶಶ್ಮಶ್ರೂಣಿ ಧಾರಯೇತ್ |
ಜುಹ್ವನ್ ಸ್ವಾಧ್ಯಾಯಶೀಲಶ್ಚ ಸತ್ಯಧರ್ಮಪರಾಯಣಃ ॥15॥
ಇಂದ್ರಿಯನಿಗ್ರಹ ಸಂಪಾದಿಸಿಕೊಂಡು, ಮೈತ್ರೀಭಾವದಿಂದ ಕೂಡಿದವನಾಗಿ, ಕ್ಷಮಾಶೀಲನಾಗಿ, ಗಡ್ಡ-ಮೀಸೆ-ತಲೆಕೂದಲುಗಳನ್ನು ಧರಿಸಿಕೊಂಡು, ಸ್ವಾಧ್ಯಾಯ ಶೀಲನಾಗಿ, ಸತ್ಯಧರ್ಮಪರಾಯಣನಾಗಿ, ಅಗ್ನಿಹೋತ್ರನಿರತನಾಗಿ ಕಾಲ ಕಳೆಯಬೇಕು.
ತ್ಯಕ್ತದೇಹಃ ಸದಾ ದಕ್ಷೋ ವನೇ ನಿತ್ಯಂ ಸಮಾಹಿತಃ |
ಏವಂ ಯುಕ್ತೋ ವ್ರಜೇತ್ ಸ್ವರ್ಗಂ ವಾನಪ್ರಸ್ಥೋ ಜಿತೇಂದ್ರಿಯಃ ॥16॥
ದೇಹಾಭಿಮಾನವನ್ನು ತ್ಯಾಗ ಮಾಡಿ, ಧರ್ಮಕಾರ್ಯಗಳಲ್ಲಿ ಕುಶಲನಾಗಿ, ವನದಲ್ಲೇ ಸಂಚರಿಸುತ್ತಾ, ಜಿತೇಂದ್ರಿಯನಾಗಿ ಇರುವ ವಾನಪ್ರಸ್ಥಾಶ್ರಮಿಯು ಸ್ವರ್ಗವನ್ನು ಜಯಿಸುತ್ತಾನೆ.
ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋಽಪಿ ವಾ ಪುನಃ |
ಯ ಇಚ್ಛೇನ್ಮೋಕ್ಷಮಾದಾತುಮುತ್ತಮಾಂ ವೃತ್ತಿಮಾವ್ರಜೇತ್ ॥17॥
ಮೋಕ್ಷವನ್ನು ಬಯಸುವ ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ ಈ ಮೂರು ಆಶ್ರಮಗಳಿಗಿಂತ ಉತ್ತಮವಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು.
ಅಭಯಂ ಸರ್ವಭೂತೇಭ್ಯೋ ದತ್ತ್ವಾ ನೈಷ್ಕರ್ಮ್ಯಮಾಚರೇತ್ |
ಸರ್ವಭೂತಹಿತೋ ಮೈತ್ರಃ ಸರ್ವೇಂದ್ರಿಯಯತೋ ಮುನಿಃ ॥18॥
ಸಮಸ್ತ ಪ್ರಾಣಿಗಳಿಗೆ ಅಭಯವನ್ನು ನೀಡಿ, ಕರ್ಮತ್ಯಾಗರೂಪವಾದ ಅರ್ಥಾತ್ ಸ್ವಾರ್ಥವಿಲ್ಲದೆ ಭಗವತ್ಪ್ರೀತಿಯಿಂದ ಸಂನ್ಯಾಸ ಧರ್ಮವನ್ನು ಆಚರಿಸಬೇಕು. ಎಲ್ಲ ಪ್ರಾಣಿಗಳಿಗೂ ಸುಖವನ್ನೇ ಬಯಸಬೇಕು. ಎಲ್ಲರಿಗೂ ಮಿತ್ರನಾಗಿ, ಸಮಸ್ತ ಇಂದ್ರಿಯಗಳನ್ನೂ ನಿಗ್ರಹಿಸಿ ಮುನಿವೃತ್ತಿಯನ್ನು ಆಶ್ರಯಿಸಬೇಕು.
ಅಯಾಚಿತಮಸಂಕ್ಲೃಪ್ತಮುಪಪನ್ನಂ ಯದೃಚ್ಛಯಾ |
ಜೋಷಯೇತ ಸದಾ ಭೋಜ್ಯಂ ಗ್ರಾಸಮಾಗತಮಸ್ಪೃಹಃ ॥19॥
ಯಾತ್ರಾಮಾತ್ರಂ ಚ ಭುಂಜೀತ ಕೇವಲಂ ಪ್ರಾಣಯಾತ್ರಿಕಮ್ |
ಧರ್ಮಲಬ್ಧಂ ತಥಾಽಶ್ನೀಯಾತ್ ನ ಕಾಮಮನುವರ್ತಯೇತ್ ॥20॥
ಯಾರ ಬಳಿಯೂ ಯಾಚನೆ ಮಾಡಬಾರದು. ಕೂಡಿಡಬಾರದು. ಭಗವತ್ ಸಂಕಲ್ಪದಿಂದ ದೊರೆತ ಪದಾರ್ಥವನ್ನು ಸ್ವೀಕರಿಸಬೇಕು. ದೊರೆತ ತುತ್ತನ್ನು ಭಗವದರ್ಪಣ ಬುದ್ಧಿಯಿಂದ ಸ್ವೀಕರಿಸಬೇಕು. ದೇಹದ ಯಾತ್ರೆ ನಡೆಯುವಷ್ಟು ಆಹಾರವನ್ನು ಮಾತ್ರ ಸ್ವೀಕರಿಸಬೇಕು. ಪ್ರಾಣಧಾರಣೆಗಿಂತ ಅಧಿಕವಾದ ಆಹಾರವನ್ನು ಸ್ವೀಕರಿಸಬಾರದು. ಆ ಆಹಾರವು ಧರ್ಮದಿಂದ ಪ್ರಾಪ್ತವಾಗಿರಬೇಕು. ಸ್ವಚ್ಛಂದವಾಗಿ ಸಂನ್ಯಾಸಿಯು ಎಂದೂ ವರ್ತಿಸಬಾರದು.
ಗ್ರಾಸಾದಾಚ್ಛಾದನಾದನ್ಯನ್ನ ಗೃಹ್ಣೀಯಾತ್ ಕದಾಚನ |
ಯಾವದಾಹಾರಯೇತ್ ತಾವತ್ ಪ್ರತಿಗೃಹ್ಣೀತ ನಾನ್ಯಥಾ ॥21॥
ಹೊಟ್ಟೆಗೆ ಬೇಕಾದ ತುತ್ತು, ಮೈಮುಚ್ಚಲು ಬೇಕಾದ ವಸ್ತ್ರ, ಇಷ್ಟನ್ನು ಬಿಟ್ಟು ಬೇರೆ ಯಾವ ಪದಾರ್ಥಗಳನ್ನೂ ಸ್ವೀಕರಿಸಿ, ಸಂಗ್ರಹಿಸಿ ಇಡಬಾರದು. ಎಷ್ಟು ಆಹಾರಕ್ಕೆ ಯೋಗ್ಯವೋ ಅಷ್ಟನ್ನೇ ಸ್ವೀಕರಿಸಬೇಕು. ಬೇರೆ ರೀತಿ ವರ್ತಿಸಬಾರದು.
ಪರೇಭ್ಯೋ ನ ಪ್ರತಿಗ್ರಾಹ್ಯಂ ನ ಚಾದೇಯಂ ಕಥಂಚನ |
ದದ್ಯಾತ್ ತು ಸರ್ವಭೂತಾನಾಂ ಸಂವಿಭಾಗಂ ಸಮಾಚರೇತ್ ॥22॥
ಮತ್ತೊಬ್ಬರಿಂದ ದಾನ ತೆಗೆದುಕೊಳ್ಳಬಾರದು. ಎಂದೂ ಯಾವ ಕಾರಣದಿಂದಲೂ ದಾನ ಸ್ವೀಕಾರ ಮಾಡಲು ಯೋಗ್ಯವಾಗಿರುವುದಿಲ್ಲ. ತನಗೆ ಯದೃಚ್ಛಾಲಾಭದಿಂದ ಬಂದ ಪದಾರ್ಥವನ್ನೇ ವಿಭಾಗಿಸಿ ದಾನ ಮಾಡಬೇಕು.
ನಾದದೀತ ಪರಸ್ವಾನಿ ನ ಗೃಹ್ಣೀಯಾದಯಾಚಿತಮ್ |
ನ ಕಿಂಚಿದ್ ವಿಷಯಂ ಭುಕ್ತ್ವಾ ಸ್ಪೃಹಯೇತ್ ತಸ್ಯ ವೈ ಪುನಃ ॥23॥
ಮತ್ತೊಬ್ಬರ ಸಂಪತ್ತನ್ನು ಸ್ವೀಕರಿಸಲು ಬಯಸಬಾರದು. ದಾನ ಮಾಡುವ ವ್ಯಕ್ತಿಯಿಂದ ನಾನು ಇದನ್ನು ಸ್ವೀಕರಿಸಲೇಬೇಕು ಎಂಬ ಭಾವನೆಯನ್ನು ತಾಳಿ ಯಾವುದನ್ನೂ ಸ್ವೀಕರಿಸಬಾರದು. ವಿಷಯಪದಾರ್ಥಗಳನ್ನು ಎಂದಿಗೂ ಅಪೇಕ್ಷಿಸದೆ ಭಗವದ್ಧ್ಯಾನ ನಿರತನಾಗಿರಬೇಕು.
ಮೃದಮಾಪಸ್ತಥಾನ್ನಾನಿ ಪತ್ರಂ ಪುಷ್ಪಂ ಫಲಾನಿ ಚ |
ಅಸಂವೃತಾನಿ ಗೃಹ್ಣೀಯಾತ್ ಪ್ರವೃತ್ತಾನಿ ಚ ಕಾರ್ಯವಾನ್ ॥24॥
ನೀರಾಗಲಿ, ಮಣ್ಣಾಗಲಿ, ಅನ್ನವಾಗಲಿ, ಪತ್ರ-ಪುಷ್ಪ-ಫಲಗಳೇ ಆಗಲಿ, ಯಾರಿಗಾದರೂ ತೆಗೆದಿಟ್ಟಿದ್ದಲ್ಲಿ ಅದನ್ನು ಸ್ವೀಕರಿಸಬಾರದು.

ಯಾರ ಸ್ವಾಮಿತ್ವವೂ ಇಲ್ಲದೆ ಭಗವತ್ಸ್ವಾಮಿತ್ವದಲ್ಲಿ ಇದ್ದ ಪದಾರ್ಥಗಳನ್ನು ಜೀವನದ ನಿರ್ವಹಣೆಗೆ ಅಗತ್ಯವಿದ್ದಷ್ಟು ಸ್ವೀಕರಿಸಬಹುದು.
ನ ಶಿಲ್ಪಜೀವಿಕಾಂ ಜೀವೇದ್ ವಿರಾಮಂ ಕಾಮಯೀತ ಚ |
ನ ದ್ವೇಷ್ಟಾ ನೋಪದೇಷ್ಟಾ ಚ ಭವೇಚ್ಚ ನಿರುಪಸ್ಕೃತಃ ॥25॥
ಸಂನ್ಯಾಸಿಯಾದವನು ಶಿಲ್ಪಕಾರ್ಯವನ್ನು ಮಾಡಿ, ಅದರ ಮೂಲಕ ಜೀವನ ನಿರ್ವಹಣೆ ಮಾಡಬಾರದು. ಎಂದಿಗೂ ವಿಶೇಷವಾದ ಕ್ರೀಡೆಗಳಲ್ಲಿ, ಸ್ತ್ರೀಸಂಗ ಇತ್ಯಾದಿಗಳಲ್ಲಿ ಆಸಕ್ತಿಯನ್ನು ಹೊಂದಲೇ ಬಾರದು. ಯಾರನ್ನೂ ದ್ವೇಷಿಸಬಾರದು, ಅಯೋಗ್ಯರಿಗೆ ಉಪದೇಶಿಸಬಾರದು, ಅಲಂಕಾರಗಳನ್ನು ಮಾಡಿಕೊಳ್ಳಬಾರದು ಅಥವಾ ಯಾವುದೇ ಪದಾರ್ಥಗಳನ್ನು, ಉಪಕರಣಗಳನ್ನು ಸಂಗ್ರಹಿಸಿಕೊಳ್ಳಬಾರದು.
ಶ್ರದ್ಧಾಪೂತಾನಿ ಭುಂಜೀತ ನಿಮಿತ್ತಾನಿ ವಿವರ್ಜಯೇತ್ |
ಮುಧಾವೃತ್ತಿರಸಕ್ತಿಶ್ಚ ಸರ್ವಭೂತೈರಸಂದಿತಃ ॥26॥
ಶ್ರದ್ಧೆಯಿಂದ ಪವಿತ್ರವಾದ ಅನ್ನವನ್ನು ಸ್ವೀಕರಿಸಬೇಕು. ಶ್ರಾದ್ಧಾದಿ ಕ್ರಿಯೆಗಳಲ್ಲಿ ಭೋಜನಕ್ಕೆ ಹೋಗಬಾರದು. ಯಾವುದೇ ಪ್ರಯೋಜನದ ಉದ್ದೇಶವಿಲ್ಲದೆ ಸತ್ಕರ್ಮಗಳನ್ನು ಆಚರಿಸಬೇಕು. ಯಾವುದೇ ಪ್ರಾಣಿಗಳನ್ನಾಗಲಿ ಅತಿಯಾಗಿ ಪರಿಚಯ ಮಾಡಿಕೊಳ್ಳಬಾರದು.
ಕೃತ್ವಾ ಪ್ರಾಹ್ಣೇ ಚರೇದ್ ಭೈಕ್ಷ್ಯಂ ವಿಧೂಮೇ ಭುಕ್ತವಜ್ಜನೇ |
ವೃತ್ತೇ ಧಾರಾವಸಂಪಾತೇ ಭೈಕ್ಷ್ಯಂ ಲಿಪ್ಸೇತ ಮೋಕ್ಷವಿತ್ ॥27॥
ಪೂರ್ವಾಹ್ಣದಲ್ಲಿ ಭಿಕ್ಷೆಯನ್ನು ಬೇಡಬೇಕು. ಭಿಕ್ಷೆ ಬೇಡುವ ಮನೆಯಲ್ಲಿ ಎಲ್ಲ ಜನರು ಊಟ ಮಾಡಿದ ಬಳಿಕ, ಅಡುಗೆ ಮನೆಯ ಹೊಗೆ ಎಲ್ಲವೂ ನಿಂತ ಬಳಿಕ ಭಿಕ್ಷೆಯನ್ನು ಬೇಡಬೇಕು. ಯಾವ ಗ್ರಾಮದಲ್ಲಿ ಯಥೇಷ್ಟವಾದ ಮಳೆ ಉಂಟಾಗಿದೆಯೋ ಅಂತಹ ಗ್ರಾಮದಲ್ಲಿ ಮಾತ್ರ ಭಿಕ್ಷಾಟನೆಯನ್ನು ಮಾಡಬೇಕು. ಮಳೆಯಿಲ್ಲದೆ, ಧಾನ್ಯಗಳ ಅಭಿವೃದ್ಧಿಯಿಲ್ಲದೆ ಕಷ್ಟಪಡುತ್ತಿರುವ ಗ್ರಾಮದಲ್ಲಿ ಸಂನ್ಯಾಸಿಯು ಭಿಕ್ಷೆ ಬೇಡಬಾರದು.
ಲಾಭೇನ ಚ ನ ಹೃಷ್ಯೇತ ನಾಲಾಭೇ ವಿಮನಾ ಭವೇತ್ |
ಮಾತ್ರಾಶೀ ಕಾಲಾಕಾಂಕ್ಷನ್ ಚರೇದ್ ಭೈಕ್ಷ್ಯಂ ಸಮಾಹಿತಃ ॥28॥
ಸಂನ್ಯಾಸಿಯು ಲಾಭ ದೊರೆತಾಗ ಸಂತುಷ್ಟನಾಗಬಾರದು, ದೊರೆಯದಿದ್ದಾಗ ದುಃಖ ಹೊಂದಬಾರದು. ಸ್ವಲ್ಪ ಮಾತ್ರ ಊಟ ಮಾಡಬೇಕು. ಕಾಲವನ್ನು ನಿರೀಕ್ಷಿಸಿ ಭಿಕ್ಷೆಯನ್ನು ಬೇಡಬೇಕು.
ಲಾಭಂ ಸಾಧಾರಣಂ ನೇಚ್ಛೇನ್ನ ಭುಂಜೀತಾಭಿಪೂಜಿತಃ |
ಅಭಿಪೂಜಿತಲಾಭಾದ್ಧಿ ವಿಜುಗುಪ್ಸೇತ ಪಂಡಿತಃ ॥29॥
ಸಾಧಾರಣವಾದ ಲಾಭಗಳನ್ನೂ ಇಚ್ಛಿಸಬಾರದು. ತುಂಬಾ ಸನ್ಮಾನಿಸಿ, ಸತ್ಕರಿಸುವ ಜಾಗದಲ್ಲಿ ಊಟ ಮಾಡಬಾರದು. ಬಹಳ ಚೆನ್ನಾಗಿ ಪೂಜಿಸಿ, ಸತ್ಕರಿಸುವ ಜನರಿಂದ ವಿದ್ವಾಂಸನಾದ ಸಂನ್ಯಾಸಿಯು ಜುಗುಪ್ಸಿತನೇ ಆಗಿರಬೇಕು.
ಶುಕ್ತಾನ್ಯಮ್ಲಾನಿ ತಿಕ್ತಾನಿ ಕಷಾಯಕಟುಕಾನಿ ಚ |
ನಾಸ್ವಾದಯೀತ ಭುಂಜಾನೋ ರಸಾಂಶ್ಚ ಮಧುರಾಂಸ್ತಥಾ ॥30॥
ನರಕ ಶೋಕದಿಂದ ತುಂಬಿದ ಅರ್ಥಾತ್ ಪಾಪಸಾಧನವೆನಿಸಿದ ಬದನೆಕಾಯಿ ಮೊದಲಾದವುಗಳನ್ನು, ಅತಿಯಾದ ಪಿತ್ತ, ಕಷಾಯ, ಕಟುಗಳನ್ನು, ಮಧುರವಾದ ರಸಗಳನ್ನು ಎಂದಿಗೂ ಸಂನ್ಯಾಸಿಯು ಆಸ್ವಾದಿಸಬಾರದು.
ಯಾತ್ರಾಮಾತ್ರಂ ಚ ಭುಂಜೀತ ಕೇವಲಂ ಪ್ರಾಣಧಾರಣಮ್ |
ಅಸಂರೋಧೇನ ಭೂತಾನಾಂ ವೃತ್ತಿಂ ಲಿಪ್ಸೇತ ಮೋಕ್ಷವಿತ್ ॥31॥
ದೇಹಧಾರಣೆಗೆ ಯೋಗ್ಯವಾಗುವಷ್ಟು ಮಾತ್ರ ಊಟ ಮಾಡಬೇಕು. ಎಲ್ಲ ಪ್ರಾಣಿಗಳನ್ನು ಮನಸ್ಸಿನಲ್ಲಿ ನೆನೆದು, ಅವುಗಳ ಬದುಕಿಗೆ ಹಿಂಸೆಯಾಗದಿರುವಂತೆ ಮುಕ್ತಿಯನ್ನು ಬಯಸುವ ಸಂನ್ಯಾಸಿಯು ಬದುಕನ್ನು ಸಾಗಿಸಬೇಕು.
ನ ಚಾನ್ಯಮನುವೀಕ್ಷೇತ ಭಿಕ್ಷಮಾಣಃ ಕಥಂಚನ |
ನ ಸನ್ನಿಕಾಶಯೇದ್ ಧರ್ಮಂ ವಿವಿಕ್ತೇ ಚಾರಜಾಶ್ಚರೇತ್ ॥32॥
ಊಟ ಮಾಡುವಾಗ ಯಾರನ್ನೂ ನೋಡಬಾರದು. ಖಂಡಿತವಾಗಿಯೂ ಧರ್ಮಶೀಲನೆಂದು ತೋರಿಸಿಕೊಳ್ಳಬಾರದು. ಏಕಾಂತದಲ್ಲಿ ರಜೋಗುಣ ರಹಿತನಾಗಿ ಬದುಕನ್ನು ಸಾಗಿಸಬೇಕು.
ಶೂನ್ಯಾಗಾರಮರಣ್ಯಂ ವಾ ವೃಕ್ಷಮೂಲಂ ನದೀಂ ತಥಾ |
ಪ್ರತಿಶ್ರಯಾರ್ಥಂ ಸೇವೇತ ಪಾರ್ವತೀಂ ವಾ ಪುನರ್ಗುಹಾಮ್ ॥33॥
ಶೂನ್ಯಾಗಾರವನ್ನಾಗಲಿ, ಅರಣ್ಯವನ್ನಾಗಲಿ, ಮರದ ಬುಡವನ್ನಾಗಲಿ, ನದಿಯನ್ನಾಗಲಿ ಆಶ್ರಯಕ್ಕಾಗಿ ಸೇವಿಸಬೇಕು. ಅಥವಾ ಪರ್ವತದಲ್ಲಿರುವ ಗುಹೆಗಳಲ್ಲಿಯೂ ವಾಸ ಮಾಡಬಹುದು.
ಗ್ರಾಮೈಕರಾತ್ರಿಕೋ ಗ್ರೀಷ್ಮೇ ವರ್ಷಾಸ್ವೇಕತ್ರ ವಾ ವಸೇತ್ |
ಬುದ್ಧ್ವಾ ಸೂರ್ಯೇಣ ನಿರ್ದಿಷ್ಟಂ ಕೀಟವಚ್ಚ ಚರೇನ್ಮಹೀಮ್ ॥34॥
ದಯಾರ್ಥಂ ಚೈವ ಭೂತಾನಾಂ ಸಮೀಕ್ಷ್ಯ ಪೃಥಿವೀಂ ಚರೇತ್ |
ಸಂಚಯಾಂಶ್ಚ ನ ಕುರ್ವೀತ ಸ್ನೇಹಭಾಗಂ ಚ ವರ್ಜಯೇತ್ ॥35॥
ಗ್ರೀಷ್ಮ ಋತುವಿನಲ್ಲಿ ಒಂದು ಗ್ರಾಮದಲ್ಲಿ ಒಂದು ರಾತ್ರಿಗಿಂತಲೂ ಅಧಿಕ ಕಾಲ ತಂಗಬಾರದು. ವರ್ಷಾಋತುವಿನಲ್ಲಿ ಮಾತ್ರ ಚಾತುರ್ಮಾಸ್ಯವ್ರತಕ್ಕಾಗಿ ಉಳಿದು- ಕೊಳ್ಳಬಹುದು. ಹಗಲಿನಲ್ಲಿ ಸೂರ್ಯನು ಮಾರ್ಗದರ್ಶನ ಮಾಡುವಾಗ ಸಂನ್ಯಾಸಿಯು ಸಂಚರಿಸಬಹುದು. ಈ ಮಾರ್ಗದಲ್ಲಿ ಪ್ರಾಣಿಗಳು ಇಲ್ಲ, ನೀನು ಕಾಲಿಟ್ಟಲ್ಲಿ ಅವುಗಳ ಸಂಹಾರವಾಗುವುದಿಲ್ಲ ಎಂದು ಸೂರ್ಯನು

ಬೆಳಕಿನಿಂದ ತೋರಿಸಿದಾಗ ಸಂನ್ಯಾಸಿಯು ಹಿಂಸೆಯಾಗದಂತೆ ಹಗಲಿನಲ್ಲಿ ಹೆಜ್ಜೆಗಳನ್ನು ಹಾಕಬಹುದು. ಸಂನ್ಯಾಸಿಯು ಸೂರ್ಯಾಸ್ತಮಾನವಾದ ಬಳಿಕ ಸಂಚರಿಸಬಾರದು. ಪ್ರಾಣಿಗಳ ದಯದಿಂದಲೇ ಭೂಮಿಯನ್ನು ಸರಿಯಾಗಿ ನೋಡಿಕೊಂಡು, ಕ್ರಿಮಿ-ಕೀಟಗಳಿಗೆ ಹಿಂಸೆಯಾಗದಂತೆ ಸಂಚರಿಸಬೇಕು. ಸಂಚಾರಸಮಯದಲ್ಲಿ ಗ್ರಾಮದಲ್ಲಿ ಸಿಗುವ ದ್ರವ್ಯಗಳಲ್ಲಿ ಸ್ನೇಹವನ್ನಾಗಲಿ, ಸಂಗ್ರಹ ಬುದ್ಧಿಯನ್ನಾಗಲಿ ಮಾಡಬಾರದು.

ಪೂತೇನ ಚಾಂಭಸಾ ನಿತ್ಯಂ ಕಾರ್ಯಂ ಕುರ್ವೀತ ಮಂತ್ರವಿತ್ |
ಉಪಸ್ಪೃಶೇದುದ್ಧೃತಾಭಿರದ್ಭಿಶ್ಚೈವ ನರೋತ್ತಮಃ ॥36॥
ಮಂತ್ರಜ್ಞನಾದ ಸಂನ್ಯಾಸಿಯು ಪವಿತ್ರವಾದ ನೀರಿನಿಂದ ಸತ್ಕರ್ಮಗಳನ್ನು ಆಚರಿಸಬೇಕು. ಬಾವಿಯ ನೀರಿನಿಂದ ಅಥವಾ ಹರಿಯುವ ನದಿಯ ನೀರಿನಿಂದ ಸತ್ಕರ್ಮಗಳನ್ನು ಆಚರಿಸಬೇಕು.

ಅಹಿಂಸಾ ಬ್ರಹ್ಮಚರ್ಯಂ ಚ ಸತ್ಯಮಾರ್ಜವಮೇವ ಚ |
ಅಕ್ರೋಧಶ್ಚಾನಸೂಯಾ ಚ ದಮೋ ನಿತ್ಯಮಪೈಶುನಮ್ ॥37॥
ಅಷ್ಟಸ್ವೇತೇಷು ಯುಕ್ತಃ ಸ್ಯಾದ್ ವ್ರತೇಷು ನಿಯತೇಂದ್ರಿಯಃ ॥38॥
ಅಹಿಂಸೆ, ಬ್ರಹ್ಮಚರ್ಯ, ಸತ್ಯ, ಸರಳತೆ, ಅಕ್ರೋಧ, ದೋಷದೃಷ್ಟಿ ಇಲ್ಲದಿರುವುದು, ಇಂದ್ರಿಯಸಂಯಮ, ಚಾಡಿ ಹೇಳದಿರುವುದು - ಈ ಎಂಟು ವ್ರತಗಳಲ್ಲಿ ಆಸಕ್ತನಾಗಿರಬೇಕು. ಇಂದ್ರಿಯನಿಗ್ರಹವುಳ್ಳವನಾಗಿರಬೇಕು.

ಅಪಾಪ್ಮಾನಂ ಶಠಂ ವೃತ್ತಮಜಿಹ್ಮಂ ನಿತ್ಯಮಾಚರೇತ್ ॥39॥
ತಾಪರಹಿತವಾದ, ಮೋಸವಿಲ್ಲದ, ಕುಟಿಲತೆ ಇಲ್ಲದ ವ್ಯವಹಾರವನ್ನೇ ಯಾವಾಗಲೂ ಮಾಡಬೇಕು.

ಆಶೀರ್ಯುಕ್ತಾನಿ ಕರ್ಮಾಣಿ ಹಿಂಸಾಯುಕ್ತಾನಿ ಯಾನಿ ಚ |
ಕಾಲಸಂಗ್ರಹಧರ್ಮಂ ಚ ನೈವ ಕುರ್ಯಾನ್ನ ಕಾರಯೇತ್ ॥40॥
ಸಂನ್ಯಾಸಿಯು ಕಾಮ್ಯಕರ್ಮಗಳನ್ನು, ಹಿಂಸಾಕರ್ಮಗಳನ್ನು, ಕಾಲಸಂಗ್ರಹ ಧರ್ಮಗಳನ್ನು ಎಂದಿಗೂ ಮಾಡಬಾರದು, ಬೇರೆಯವರಿಂದ ಮಾಡಿಸಬಾರದು.

ಸರ್ವಾನೇತಾನತಿಕ್ರಮ್ಯ ಲಘುಮಾತ್ರಪರಿಗ್ರಹಃ |
ಸಮಃ ಸರ್ವೇಷು ಭೂತೇಷು ಸ್ಥಾವರೇಷು ಚರೇಷು ಚ ॥41॥
ಸಂನ್ಯಾಸಿಯು ಸಮಸ್ತ ಪದಾರ್ಥಗಳಲ್ಲಿಯೂ ಮೋಹವನ್ನು ತ್ಯಜಿಸಿ, ಅಲ್ಪತೃಪ್ತನಾಗಿ, ಭೂಮಿಯಲ್ಲಿ ಎಲ್ಲ ಕಡೆಯೂ ಸಂಚರಿಸುತ್ತಾ, ಚರಾಚರ ಪ್ರಾಣಿಗಳಲ್ಲಿ ಭಗವಂತನೇ ಇದ್ದಾನೆ ಎಂದು ಭಾವಿಸುತ್ತಿರಬೇಕು.

ಪರಂ ನೋದ್ವೇಜಯೇತ್ ಕಂಚಿನ್ನ ಚ ಕಸ್ಮಾಚ್ಚಿದುದ್ವಿಜೇತ್ |
ವಿಶ್ವಸ್ತಃ ಸರ್ವಭೂತಾನಾಮ್ಮೈಕಾಗ್ರ್ಯಂ ಮೋಕ್ಷ ಉಚ್ಯತೇ ॥42॥
ಯಾವುದೇ ಪ್ರಾಣಿಗಳಿಗೂ ಉದ್ವೇಗವನ್ನು ಉಂಟು ಮಾಡಬಾರದು. ತಾನೂ ಉದ್ವೇಗಕ್ಕೆ ತುತ್ತಾಗಬಾರದು. ಎಲ್ಲರಲ್ಲೂ ವಿಶ್ವಾಸ ಹೊಂದಬೇಕು. ಇಂಥವನನ್ನೇ ಶ್ರೇಷ್ಠನೆಂದೂ, ಮೋಕ್ಷಧರ್ಮವನ್ನು ತಿಳಿದವನೆಂದೂ ಹೇಳುತ್ತಾರೆ.

ಅನಾಗತಂ ಚ ನ ಧ್ಯಾಯೇನ್ನಾತೀತಮನುಚಿಂತಯೇತ್ |
ವರ್ತಮಾನಮುಪೇಕ್ಷೇತ ಕಾಲಕಾಂಕ್ಷೀ ಸಮಾಹಿತಃ ॥43॥
ಸಂನ್ಯಾಸಿಯು ಭವಿತವ್ಯವನ್ನು ಚಿಂತಿಸಬಾರದು. ಭೂತವನ್ನು ಯೋಚಿಸಬಾರದು. ವರ್ತಮಾನ ಕಾಲದಲ್ಲಿಯೂ ಅತಿಯಾದ ಉತ್ಸಾಹ ತಾಳಬಾರದು. ಯಾವಾಗಲೂ ಪರಮಾತ್ಮನ ಅಪರೋಕ್ಷ ಜ್ಞಾನದ ಪ್ರಾಪ್ತಿಗೆ ಕಾಲವನ್ನು ಪ್ರತೀಕ್ಷಿಸುತ್ತಾ ಧ್ಯಾನದಲ್ಲಿಯೇ ನಿರತನಾಗಿರಬೇಕು.

ನ ಚಕ್ಷುಷಾ ನ ಮನಸಾ ನ ವಾಚಾ ದೂಷಯೇತ್ ಕ್ವಚಿತ್ |
ನ ಪ್ರತ್ಯಕ್ಷಂ ಪರೋಕ್ಷಂ ವಾ ಕಿಂಚಿದ್ ದುಷ್ಟಂ ಸಮಾಚರೇತ್ ॥44॥
ಕಣ್ಣಿನಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಯಾರನ್ನೂ ದೂಷಿಸಬಾರದು. ಪ್ರತ್ಯಕ್ಷ-ಪರೋಕ್ಷದಲ್ಲಾಗಲಿ ಕೆಟ್ಟ ಕೆಲಸಗಳನ್ನು ಮಾಡಬಾರದು.

ಇಂದ್ರಿಯಾಣ್ಯುಪಸಂಹೃತ್ಯ ಕೂರ್ಮೋಽಂಗಾನೀವ ಸರ್ವಶಃ |
ಕ್ಷೀಣೇಂದ್ರಿಯಮನೋಬುದ್ಧಿಃ ನಿರೀಕ್ಷೇತ ಜಿತೇಂದ್ರಿಯಃ ॥45॥
ಕೂರ್ಮದಂತೆ ಸಂನ್ಯಾಸಿಯು ಇಂದ್ರಿಯಗಳನ್ನು ನಿಗ್ರಹಿಸಿಕೊಂಡಿರಬೇಕು. ಮನಸ್ಸಿಗೆ ವಿಷಯಪದಾರ್ಥಗಳ ಸಂಸ್ಕಾರವನ್ನು ನೀಡದೆ, ಮನಸ್ಸು-ಬುದ್ಧಿಗಳನ್ನು ವಿಷಯಪದಾರ್ಥಗಳಿಂದ ದುರ್ಬಲಗೊಳಿಸಿ, ಬ್ರಹ್ಮನ ವಿಷಯದಲ್ಲಿ ಪ್ರಬಲಗೊಳಿಸಿಕೊಳ್ಳಬೇಕು.

ನಿರ್ದ್ವಂದ್ವೋ ನಿರ್ನಮಸ್ಕಾರೋ ನಿಃಸ್ವಾಹಾಕಾರ ಏವ ಚ |
ನಿರ್ಮಮೋ ನಿರಹಂಕಾರೋ ನಿರ್ಯೋಗಕ್ಷೇಮ ಆತ್ಮವಾನ್ ॥46॥
ಸಂನ್ಯಾಸಿಯಾದವನು ಸುಖ-ದುಃಖಾದಿ ದ್ವಂದ್ವಗಳನ್ನು ತ್ಯಜಿಸಬೇಕು. ಇನ್ನೊಬ್ಬರ ನಮಸ್ಕಾರದ ಮೋಹವನ್ನು, ಅಪೇಕ್ಷೆಯನ್ನು ಹೊಂದಬಾರದು. ಅಗ್ನಿಹೋತ್ರಾದಿಗಳನ್ನು ಅನುಷ್ಠಾನ ಮಾಡಬಾರದು. ಮಮಕಾರರಹಿತನಾಗಿ, ಅಹಂಕಾರರಹಿತನಾಗಿ ತನ್ನ ಯೋಗಕ್ಷೇಮದ ಬಗ್ಗೆ ತಲೆಕೆಡಿಸಿಕೊಳ್ಳದೆ ಬ್ರಹ್ಮನಿಷ್ಠನಾಗಿ ವರ್ತಿಸಬೇಕು.

ನಿರಾಶೀಃ ಸರ್ವಭೂತೇಷು ನಿರಾಸಂಗೋ ನಿರಾಶ್ರಯಃ |
ಸರ್ವಜ್ಞಃ ಸರ್ವತೋ ಮುಕ್ತೋ ಮುಚ್ಯತೇ ನಾತ್ರ ಸಂಶಯಃ ॥47॥
ನಿಷ್ಕಾಮನೂ, ನಿಸ್ಸಂಗನೂ, ಯಾವ ವ್ಯಕ್ತಿಯನ್ನೂ ಆಶ್ರಯಿಸದವನೂ, ಸರ್ವಜ್ಞನೂ, ಎಲ್ಲ ಕಡೆಯಿಂದಲೂ ಮುಕ್ತನಾದವನು ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

ಅಪಾಣಿಪಾದಪೃಷ್ಠಂ ತದ್ ಅಶಿರಸ್ಕಮನೂದರಮ್ |

ಅಭಿನ್ನಗುಣಕರ್ಮಾಣಂ ಕೇವಲಂ ವಿಮಲಂ ಸ್ಥಿರಮ್ ॥48॥
ಪ್ರಾಕೃತವಾದ ಕೈ-ಕಾಲುಗಳಿಲ್ಲದ, ಪ್ರಾಕೃತವಾದ ತಲೆ ಇಲ್ಲದ, ಮನುಷ್ಯರ ಉದರದಂತೆ ಉದರವಿಲ್ಲದ, ಮನುಷ್ಯರ ಗುಣ-ಕರ್ಮಗಳಿಗೆ ಅನುಗುಣವಾದ ವ್ಯಾಪಾರವಿಲ್ಲದ, ನಿರ್ಮಲನಾದ, ಸ್ಥಿರನಾದ, ಕೇವಲನೆನಿಸಿದ;
ಅಗಂಧರಸಮಸ್ಪರ್ಶಮರೂಪಾಶಬ್ದಮೇವ ಚ |
ಅನಸ್ಥಿಮನಸೃಜ್ಮಜ್ಜಮ್ ಅಮಾಂಸಮಪಿ ಚೈವ ಹಿ ॥49॥
ಪ್ರಾಕೃತ ಗಂಧರಹಿತನಾದ, ಪ್ರಾಕೃತ ಸ್ಪರ್ಶರಹಿತನಾದ, ಪ್ರಾಕೃತ ರೂಪರಹಿತನಾದ, ಪ್ರಾಕೃತ ಶಬ್ದ ಅಭೇದ್ಯನಾದ, ಅಸ್ಥಿ, ಮಾಂಸ, ಮಜ್ಜ ಮುಂತಾದವುಗಳಿಂದ ರಹಿತನಾದ;
ಅಚಿಂತ್ಯಮವ್ಯಯಂ ದಿವ್ಯಂ ಕೂಟಸ್ಥಮಪಿ ನಿತ್ಯದಾ |
ಸರ್ವಭೂತಸ್ಥಮಾತ್ಮಾನಂ ಯೇ ಪಶ್ಯಂತಿ ನ ತೇ ಮೃತಾಃ ॥50॥
ಅಚಿಂತ್ಯನಾದ, ನಾಶರಹಿತನಾದ, ದಿವ್ಯನಾದ, ಅವ್ಯಾಕೃತಾಕಾಶದಂತೆ ಎಂದಿಗೂ ನಿರ್ವಿಕಾರನಾದ, ಸಮಸ್ತ ಪ್ರಾಣಿಗಳ ಅಂತರ್ಯಾಮಿಯಾದ ಪರಮಾತ್ಮನನ್ನು ನಿತ್ಯವೂ ಧ್ಯಾನಿಸುವವರಿಗೆ ಎಂದಿಗೂ ಸಾವು ಉಂಟಾಗದು.
ನ ತತ್ರ ಕ್ರಮತೇ ಬುದ್ಧಿರ್ನೇಂದ್ರಿಯಾಣಿ ನ ದೇವತಾಃ |
ವೇದಾ ಯಜ್ಞಾಶ್ಚ ಲೋಕಾಶ್ಚ ನ ತಪೋ ನ ಪರಾಕ್ರಮಃ ॥51॥
ಭಗವಂತನ ವಿಷಯದಲ್ಲಿ ಬುದ್ಧಿಯಾಗಲಿ, ಇಂದ್ರಿಯವಾಗಲಿ, ದೇವ-ವೇದ- ಯಜ್ಞ-ಲೋಕ-ತಪ-ಪರಾಕ್ರಮಗಳಾಗಲಿ ಚಲಿಸಲು ಶಕ್ಯವಾದವುಗಳಲ್ಲ.
ಯತ್ರ ಜ್ಞಾನವತಾಂ ಪ್ರಾಪ್ತಿರಲಿಂಗಗ್ರಹಣೇ ಸ್ಮೃತೇ ॥52॥
ಪರಮಾತ್ಮನ ಸ್ವರೂಪವನ್ನು ಕುತರ್ಕಗಳಿಂದ ತಿಳಿಯಲು ಸಾಧ್ಯವಿಲ್ಲ. ಜ್ಞಾನವಂತರ ಶ್ರದ್ಧಾ-ಭಕ್ತಿಗಳಿಗೆ ಒಲಿಯುವವನು ಶ್ರೀಹರಿಯು.
ತಸ್ಮಾದಲಿಂಗಧರ್ಮಜ್ಞೋ ಧರ್ಮತತ್ವಮುಪಾಚರೇತ್ |
ಗೂಢಧರ್ಮಾಶ್ರಿತೋ ವಿದ್ವಾನ್ ಅಜ್ಞಾತಚರಿತಂ ಚರೇತ್ ॥53॥
ಆದ್ದರಿಂದ ಪರಬ್ರಹ್ಮನ ಚಿಂತನೆಯನ್ನು ಕುತರ್ಕಗಳನ್ನು ತ್ಯಾಗ ಮಾಡಿ ವೇದೋಕ್ತವಾದ ತತ್ತ್ವದಿಂದಲೇ ತಿಳಿಯಬೇಕು. ರಹಸ್ಯವಾದ ಉಪನಿಷತ್ತಿನ ವಿದ್ಯೆಗಳನ್ನು ಬಲ್ಲವನಾಗಿ ಯಾರೂ ತಿಳಿಯದಂತೆ ಅವನನ್ನು ಧ್ಯಾನಿಸಬೇಕು.
ಅಗೂಢೋ ಗೂಢರೂಪೇಣ ಚರೇದ್ ಧರ್ಮಮದೂಷಯನ್ ॥54॥
ಎಂದಿಗೂ ಧರ್ಮವನ್ನು ನಿಂದಿಸದೆ ಅಂತರಂಗದಲ್ಲಿ ಭಗವದ್ಧ್ಯಾನವನ್ನು ಹೊಂದಿ ಗೂಢನಾಗಿದ್ದು, ಬಾಹ್ಯವಾಗಿ ದೇಹವ್ಯಾಪಾರಗಳನ್ನು ಮಾಡುತ್ತಾ ಸಂಚರಿಸಬೇಕು.
ಯಥೈನಮವಮನ್ಯೇರನ್ ಪರೇ ಸತತಮೇವ ಹಿ |
ತಥಾವೃತ್ತಶ್ಚರೇದ್ ಧರ್ಮಂ ಸತಾಂ ಧರ್ಮಮದೂಷಯನ್ ॥55॥
ಸಜ್ಜನರ ಧರ್ಮವನ್ನು ದೂಷಿಸದೆ, ಭಗವದ್ಧರ್ಮಕ್ಕೆ ಅವಮಾನವಾಗದಂತೆ ಸಂನ್ಯಾಸಿಯಾದವನು ತನ್ನ ಬದುಕಿನ ಆಚರಣೆಯನ್ನು ನಡೆಸಿಕೊಂಡು ಹೋಗಬೇಕು.
ಯೋಽಪ್ಯೇವಂ ವೃತ್ತಸಂಪನ್ನಃ ಸ ಮುನಿಃ ಶ್ರೇಷ್ಠ ಉಚ್ಯತೇ ॥56॥
ಈ ರೀತಿಯಾಗಿ ಸಚ್ಚಾರಿತ್ರ್ಯಸಂಪನ್ನನಾದ ಸಂನ್ಯಾಸಿಯೇ ಮುನಿಶ್ರೇಷ್ಠನೆಂದು ಕರೆಸಿಕೊಳ್ಳುತ್ತಾನೆ.
ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ಮಹಾಭೂತಾನಿ ಪಂಚ ಚ |
ಮನೋ ಬುದ್ಧಿಮಥಾತ್ಮಾನಮವ್ಯಕ್ತಂ ಪುರುಷಂ ತಥಾ ॥57॥
ಸರ್ವಮೇತತ್ ಪ್ರಸಂಖ್ಯಾಯ ಸಮ್ಯಕ್ ಸಂಪೂಜ್ಯ ನಿರ್ಮಲಃ |
ತತಃ ಸ್ವರ್ಗಮವಾಪ್ನೋತಿ ವಿಮುಕ್ತಃ ಸರ್ವಬಂಧನೈಃ ॥58॥
ಯಾವ ಮನುಷ್ಯನು ಇಂದ್ರಿಯಗಳು, ಅವುಗಳಿಗೆ ಸಂಬಂಧಿಸಿದ ವಿಷಯಗಳು, ಪಂಚಮಹಾಭೂತಗಳು, ಮನಸ್ಸು, ಬುದ್ಧಿ, ಅಹಂಕಾರಗಳು, ಅವ್ಯಕ್ತ ಪ್ರಕೃತಿ, ಪುರುಷ ಈ ಎಲ್ಲವನ್ನೂ ಚೆನ್ನಾಗಿ ವಿಚಾರ ಮಾಡಿ, ಅವುಗಳನ್ನು ಯಥಾರ್ಥವಾಗಿ ತಿಳಿದು ಅಂತರ್ಯಾಮಿಯನ್ನು ನಿರ್ಮಲವಾದ ಮನಸ್ಸಿನಿಂದ ಆರಾಧಿಸಿದಾಗ ಸಮಸ್ತ ವಿಧವಾದ ಬಂಧಗಳಿಂದ ಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತಾನೆ.
ಏತದೇವಾಂತವೇಲಾಯಾಂ ಪರಿಸಂಖ್ಯಾಯ ತತ್ತ್ವವಿತ್ |
ಧ್ಯಾಯೇದೇಕಾಂತಮಾಸ್ಥಾಯ ಮುಚ್ಯತೇಽಥ ನಿರಾಶ್ರಯಃ ॥59॥
ನಿರ್ಮುಕ್ತಃ ಸರ್ವಸಂಗೇಭ್ಯೋ ವಾಯುರಾಕಾಶಗೋ ಯಥಾ |
ಕ್ಷೀಣಶೋಕೋ ನಿರಾತಂಕಃ ಪ್ರಾಪ್ನೋತಿ ಪರಮಾಂ ಗತಿಮ್ ॥60॥
ಈ ಬ್ರಹ್ಮತತ್ತ್ವವನ್ನು ತಿಳಿದ ಯಾವ ಮನುಷ್ಯನು ತನ್ನ ಕೊನೆಯ ಕಾಲದಲ್ಲಿ ನಿಯಮಬದ್ಧವಾಗಿ, ಏಕಾಂತದಲ್ಲಿ ಕುಳಿತು ಹೃದಯದಲ್ಲಿರುವ ಶ್ರೀಹರಿಯನ್ನು ಧ್ಯಾನಿಸುತ್ತಾನೋ ಅಂತಹ ವ್ಯಕ್ತಿಯು ಸಮಸ್ತ ಸಂಗಗಳಿಂದ ಮುಕ್ತನಾಗಿ, ನಿಸ್ಸಂಗವಾಗಿ ಸಂಚರಿಸುವ ವಾಯುವಿನಂತೆ, ಯಾವುದೇ ಶೋಕವಿಲ್ಲದೆ ನಿರಾತಂಕನಾಗಿ ಪರಬ್ರಹ್ಮಗತಿಯನ್ನು ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಜ್ಞಾನವರ್ತನಕಥನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ ॥
॥ ಅನುಗೀತಾಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿಯಿತು.

* * * * *

नलवत्तॆंटनॆय अध्याय

ಚತುರ್ಮುಖ ಬ್ರಹ್ಮನು ಋಷಿಗಳನ್ನು ಕುರಿತು ಸಂನ್ಯಾಸ, ಜ್ಞಾನ, ತಪಸ್ಸುಗಳನ್ನು ಪರಮಪುರುಷಾರ್ಥಸಾಧನ ಎಂದು ಹೇಳಿದುದು.
ಬ್ರಹ್ಮಾ
ಸನ್ನ್ಯಾಸಂ ತಪ ಇತ್ಯಾಹುರ್ವೃದ್ಧಾ ನಿಶ್ಚಿತದರ್ಶಿನಃ |
ಬ್ರಾಹ್ಮಣಾ ಬ್ರಹ್ಮಯೋನಿಸ್ಥಾ ಜ್ಞಾನಂ ಬ್ರಹ್ಮ ಪರಂ ವಿದುಃ ॥1॥
ಬ್ರಹ್ಮಾ `ಇದಮಿತ್ಥಂ' ಎಂದು ನಿರ್ಣಯ ಮಾಡಿ ಹೇಳಲು ಸಮರ್ಥರಾದ, ವೇದಜ್ಞರಾದ, ಪರಮಾತ್ಮನಲ್ಲೇ ನೆಲೆಗೊಳಿಸಿದ ಮನಸ್ಸುಳ್ಳ ಜ್ಞಾನವೃದ್ಧರು ಸಂನ್ಯಾಸವನ್ನೇ ತಪಸ್ಸೆಂದು ಹೇಳುತ್ತಾರೆ. ಪರಬ್ರಹ್ಮನ ಜ್ಞಾನವೇ ಶ್ರೇಷ್ಠವಾದುದೆಂದು ಹೇಳುತ್ತಾರೆ.
ಅತಿದೂರಾತ್ಮಕಂ ಬ್ರಹ್ಮ ವೇದವಿದ್ಯಾವ್ಯಪಾಶ್ರಯಮ್ |
ನಿರ್ದ್ವಂದ್ವಂ ನಿರ್ಗುಣಂ ನಿತ್ಯಮಚಿಂತ್ಯಂ ಗುಹ್ಯಮುತ್ತಮಮ್ ॥2॥
ವೇದವಿದ್ಯೆಗಳನ್ನು ಆಶ್ರಯಿಸದೆ ಬ್ರಹ್ಮನ ಸ್ವರೂಪವನ್ನು ನಿರೂಪಿಸಲಾಗದು. ವೇದವಿದ್ಯೆಗಳಿಲ್ಲದಿದ್ದಲ್ಲಿ ಬ್ರಹ್ಮನು ದೂರನಾಗುತ್ತಾನೆ. ಪರಬ್ರಹ್ಮನು ದ್ವಂದ್ವರಹಿತನು, ಪ್ರಾಕೃತಗುಣರಹಿತನು, ನಿತ್ಯವೂ ಅಚಿಂತ್ಯನು, ಶ್ರೇಷ್ಠವಾದ ರಹಸ್ಯತತ್ತ್ವವೂ ಆಗಿದ್ದಾನೆ.
ಧ್ಯಾನೇನ ತಪಸಾ ಚೈವ ಧೀರಾಃ ಪಶ್ಯಂತಿ ತತ್ಪದಮ್ ॥3॥
ಇವನನ್ನು ಧ್ಯಾನ, ತಪಸ್ಸು ಇವುಗಳಿಂದ ಜ್ಞಾನಿಗಳು ನೋಡಲು ಬಯಸುತ್ತಾರೆ.
ನಿರ್ಮುಕ್ತತಮಸಃ ಪೂತಾ ವ್ಯುತ್ಕ್ರಾಂತರಜಸೋಽಮಲಾಃ |
ತಪಸಾ ಕ್ಷೇಮಮಧ್ವಾನಂ ಗಚ್ಛಂತೀತಿ ಮನೀಷಿಣಃ |
ಸನ್ನ್ಯಾಸನಿರತಾ ನಿತ್ಯಂ ಯೇ ಚ ಬ್ರಹ್ಮವಿದೋ ಜನಾಃ ॥4॥
ಅಜ್ಞಾನದಿಂದ ಮುಕ್ತರಾದ, ಶುದ್ಧ ಮನಸ್ಕರಾದ, ರಜೋಗುಣದಿಂದ ರಹಿತರಾದ, ನಿರ್ಮಲರಾದ ತಪಸ್ವಿಗಳು ತಮ್ಮ ತಪಸ್ಸಿನಿಂದ ಕ್ಷೇಮಕರವಾದ ಮಾರ್ಗವನ್ನು ಅನುಸರಿಸಿ, ಸಂನ್ಯಾಸಧರ್ಮನಿರತರಾಗಿ ನಿತ್ಯವೂ ಪರಬ್ರಹ್ಮನನ್ನು ತಿಳಿಯುತ್ತಾರೆ.
ತಪಃ ಪ್ರದೀಪ ಇತ್ಯಾಹುರಾಚಾರೋ ಧರ್ಮಸಾಧಕಃ |
ಜ್ಞಾನಂ ತ್ವೇವ ಪರಂ ವಿದ್ಮಃ ಸನ್ನ್ಯಾಸಂ ತಪ ಉತ್ತಮಮ್ ॥5॥
ಜ್ಞಾನಿಗಳು ತಪಸ್ಸನ್ನು ಬೆಳಕು ಎಂದೂ, ಆಚಾರವು ಧರ್ಮಸಾಧಕವು ಎಂದೂ, ಪರತತ್ತ್ವವನ್ನು ಜ್ಞಾನವೆಂದೂ ತಿಳಿದಿದ್ದಾರೆ. ಸಂನ್ಯಾಸವೇ ಉತ್ತಮವಾದ ತಪಸ್ಸು ಎನಿಸಿದೆ.
ಯಸ್ತು ವೇದ ನಿರಾಬಾಧಂ ಜ್ಞಾನಂ ತತ್ತ್ವವಿನಿಶ್ಚಯಾತ್ |
ಸರ್ವಭೂತಸ್ಥಮಾತ್ಮಾನಂ ಸ ಸರ್ವವಿದಿಹೋಚ್ಯತೇ ॥6॥
ಯಾವನು ಯಾವುದೇ ತಡೆಯಿಲ್ಲದ ಬ್ರಹ್ಮಜ್ಞಾನವನ್ನು ಹೊಂದಿದ್ದಾನೋ ಅವನಿಗೆ ತತ್ತ್ವನಿಶ್ಚಯವಾದುದರಿಂದ ಪರಮಾತ್ಮನನ್ನು ಎಲ್ಲ ಪ್ರಾಣಿಗಳ ಅಂತರ್ಯಾಮಿಯನ್ನಾಗಿ ನೋಡುತ್ತಾನೆ. ಅವನನ್ನು ಸರ್ವಜ್ಞನೆಂದೇ ಹೇಳುತ್ತಾರೆ.
ಯೋ ವಿದ್ವಾನ್ ಸಹವಾಸಂ ಚ ವಿವಾಸಂ ಚೈವ ಪಶ್ಯತಿ |
ತಥೈವೈಕತ್ವನಾನಾತ್ವೇ ಸ ದುಃಖಾತ್ ಪ್ರತಿಮುಚ್ಯತೇ ॥7॥
ಯಾವನು ಜ್ಞಾನಿಯಾಗಿ ಮುನಿಗಳ ಸಹವಾಸವನ್ನು ಮಾಡುತ್ತಾನೋ, ಮನೆ- ಬಂಧು-ಜನರಲ್ಲಿ ಸಂಗವನ್ನು ತೊರೆದಿದ್ದಾನೋ, ಪರಬ್ರಹ್ಮನ ಗುಣ-ಕ್ರಿಯಾಗಳಲ್ಲಿ ಏಕತ್ವವನ್ನೇ ನೋಡುತ್ತಾನೋ, ಜೀವರಲ್ಲಿ ಭೇದಗಳನ್ನೇ ಕಾಣುತ್ತಾನೋ ಅವನು ದುಃಖದಿಂದ ಬಿಡುಗಡೆ ಹೊಂದುತ್ತಾನೆ.
ಯೋ ನ ಕಾಮಯತೇ ಕಿಂಚಿನ್ನ ಕಿಂಚಿದಿತಿ ಮನ್ಯತೇ |
ಇಹ ಲೋಕಸ್ಥ ಏವೈಷ ಬ್ರಹ್ಮಭೂಯಾಯ ಕಲ್ಪತೇ ॥8॥
ಯಾವನು ಯಾವ ವಸ್ತುವನ್ನೂ ಅಪೇಕ್ಷಿಸದೆ, ಯಾವ ವ್ಯಕ್ತಿಗಳನ್ನೂ ಅವಮಾನ ಮಾಡದೆ ಇದ್ದಾನೋ ಅಂತಹ ವ್ಯಕ್ತಿಯು ಈ ಲೋಕದಲ್ಲಿ ಇದ್ದುಕೊಂಡೇ ಪರಬ್ರಹ್ಮನನ್ನು ಹೊಂದಬಹುದು.
ಪ್ರಧಾನಗುಣತತ್ತ್ವಜ್ಞಃ ಸರ್ವಭೂತವಿಧಾನವಿತ್ |
ನಿರ್ಮಮೋ ನಿರಹಂಕಾರೋ ಮುಚ್ಯತೇ ನಾತ್ರ ಸಂಶಯಃ ॥9॥
ಯಾವನು ಸಮಸ್ತ ಪ್ರಾಣಿಗಳಿಗೆ ನಿಯಾಮಕನಾದ ಪರಬ್ರಹ್ಮನನ್ನು ತಿಳಿದಿದ್ದಾನೋ, ಪ್ರಧಾನವಾದ ವಿಷ್ಣುವಿನ ಗುಣಗಳನ್ನು ಯಥಾರ್ಥವಾಗಿ ಬಲ್ಲವನಾಗಿದ್ದಾನೋ ಇಂತಹ ಮಮಕಾರ-ಅಹಂಕಾರ ರಹಿತನಾದ ವ್ಯಕ್ತಿಯು ಸಂಶಯವಿಲ್ಲದೆ ಬಂಧ ಮುಕ್ತನಾಗುತ್ತಾನೆ.
ನಿರ್ದ್ವಂದ್ವೋ ನಿರ್ನಮಸ್ಕಾರೋ ನಿಃಸ್ವಧಾಕಾರ ಏವ ಚ |
ನಿರ್ದ್ವಂದ್ವಂ ನಿರ್ಗುಣಂ ನಿತ್ಯಂ ಪ್ರಶಮೇನೈವ ಗಚ್ಛತಿ ॥10॥
ಸುಖ-ದುಃಖಾದಿ ದ್ವಂದ್ವರಹಿತನಾಗಿ, ಮತ್ತೊಬ್ಬರ ನಮಸ್ಕಾರದ ಅಭಿಮಾನವನ್ನು ಹೊಂದದೆ, ಸ್ವಾಹಾ-ಸ್ವಧಾಕಾರವರ್ಜಿತನಾಗಿ, ದ್ವಂದ್ವರಹಿತನಾದ, ಪ್ರಾಕೃತಗುಣ ರಹಿತನಾದ, ನಿತ್ಯನಾದ ಪರಮಾತ್ಮನನ್ನು ತನ್ನ ಶಾಂತ ಸಂನ್ಯಾಸಗುಣದಿಂದಲೇ ಹೊಂದುತ್ತಾನೆ.
ಹಿತ್ವಾ ಗುಣಮಯಂ ಸರ್ವಂ ಕರ್ಮ ಜಂತುಃ ಶುಭಾಶುಭಮ್ |
ಉಭೇ ಸತ್ಯಾನೃತೇ ಹಿತ್ವಾ ಮುಚ್ಯತೇ ನಾತ್ರ ಸಂಶಯಃ ॥11॥
ಯಾವ ಸಂನ್ಯಾಸಿಯು ಬಂಧಕವಾದ ಸಮಸ್ತ ಕರ್ಮಗಳನ್ನು ತ್ಯಜಿಸಿ, ಶುಭಾಶುಭ ಕರ್ಮಗಳನ್ನು ತ್ಯಾಗ ಮಾಡಿ, ನಾನು ಕೊಡುವುದಿಲ್ಲ, ನಾನು ಕೊಡುತ್ತೇನೆ ಎಂಬ ಮಾತುಗಳನ್ನೂ ತ್ಯಾಗ ಮಾಡಿ ವಿರಕ್ತನಾಗಿರುತ್ತಾನೋ ಅಂತಹ ವ್ಯಕ್ತಿಯು ಬಂಧನದಿಂದ ಬಿಡುಗಡೆ ಹೊಂದುತ್ತಾನೆ.

ಅವ್ಯಕ್ತಬುದ್ಧಿಪ್ರಭವೋ ಬುದ್ಧಿಸ್ಕಂಧಮಯೋ ಮಹಾನ್ |
ಮಹಾಹಂಕಾರವಿಟಪ ಇಂದ್ರಿಯಾಂತರಕೋಟರಃ ||12||
ಬಾಲ್ಯದ ಬುದ್ಧಿಯು ಅಲ್ಪವಾದುದರಿಂದ ಪ್ರೌಢಿಮೆಯು ಬೆಳೆಯದೆ ಇದ್ದಾಗ ಶೈಶವಾವಸ್ಥೆಯಲ್ಲಿ ಅಂಕುರದಂತೆ ಉತ್ಪನ್ನವಾದ ಅರ್ಥಾತ್ ಅಲ್ಪಬುದ್ಧಿಯಿಂದ ಉತ್ಪನ್ನವಾದ ನಂತರ ವಿಸ್ತಾರವೆಂಬ ಬುದ್ಧಿಯೆಂಬ ಶಾಖೆಗಳಿಂದ ಕೂಡಿದ, ಮಹಾ ಅಹಂಕಾರವೆಂಬ ರೆಂಬೆಯಿಂದ ಕೂಡಿದ, ಇಂದ್ರಿಯಗಳೆಂಬ ಪೊಟರೆಗಳಿಂದ ತುಂಬಿರುವ;
ಮಹಾಭೂತವಿಶಾಖಶ್ಚ ವಿಶೇಷಪ್ರತಿಶಾಖವಾನ್ |
ಸದಾ ಪತ್ರಃ ಸದಾ ಪುಷ್ಪಃ ಶುಭಾಶುಭಫಲೋದಯಃ ||13||
ಮಹಾಭೂತಗಳೆಂಬ ಶಾಖೋಪಶಾಖೆಗಳಿಂದ ಕೂಡಿದ, ಆಶ್ರಮವಿಶೇಷಗಳೆಂಬ ಪ್ರತಿಶಾಖೆಗಳಿಂದಲೂ ಕೂಡಿದ, ಯಾವಾಗಲೂ ಸಂಕಲ್ಪರೂಪವಾದ ಎಲೆಗಳು, ಕಾಮರೂಪವಾದ ಪುಷ್ಪಗಳು, ಶುಭಾಶುಭಗಳೆಂಬ ಫಲೋದಯಗಳಿಂದಲೂ ತುಂಬಿರುವ;
ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ |
ಏನಂ ಛಿತ್ತ್ವಾ ಚ ಭಿತ್ತ್ವಾ ಚ ತತ್ತ್ವಜ್ಞಾನಾಸಿನಾ ಬುಧಃ ||14||
ಸಮಸ್ತ ಜೀವರಿಗೂ ಬದುಕಲು ಆಶ್ರಯಸ್ಥಾನವಾದ, ಸನಾತನವಾದ, ಸಮಿತ್ತುಗಳನ್ನು ಸ್ವೀಕರಿಸಲು ಬ್ರಾಹ್ಮಣರಿಗೆ ಯೋಗ್ಯವೆನಿಸಿದ ಅಶ್ವತ್ಥವೃಕ್ಷದಂತೆ ಇರುವ ಈ ಸಂಸಾರವೆಂಬ ಅಶ್ವತ್ಥವೃಕ್ಷವನ್ನು ತತ್ತ್ವಜ್ಞಾನವೆಂಬ ಕೊಡಲಿಯಿಂದ ಜ್ಞಾನಿಯಾದವನು ತುಂಡರಿಸಿ, ಛಿನ್ನ-ಭಿನ್ನವನ್ನಾಗಿಸಿ;
ಹಿತ್ವಾ ಸಂಗಮಯಾನ್ ಪಾಶಾನ್ ಮೃತ್ಯುಜನ್ಮಜರೋದಯಾನ್ |
ನಿರ್ಮಮೋ ನಿರಹಂಕಾರೋ ಮುಚ್ಯತೇ ನಾತ್ರ ಸಂಶಯಃ ||15||
ಪುಣ್ಯ-ಪಾಪಗಳನ್ನು ತ್ಯಾಗ ಮಾಡಿ, ಸಂಗವೆಂಬ ಪಾಶಗಳನ್ನು ತೊರೆದು, ಜನನ- ಮರಣಗಳೆಂಬ ಜರಾದಿಗಳನ್ನೂ ನಿರ್ಮಮನಾಗಿ, ನಿರಹಂಕಾರನಾಗಿ ತ್ಯಜಿಸಿದಲ್ಲಿ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.
ದ್ವಾವೇತೌ ಪಕ್ಷಿಣೌ ನಿತ್ಯೌ ಸಂಕ್ಷೇಪೌ ಚಾಪ್ಯಚೇತನೌ |
ಏತಾಭ್ಯಾಂ ತು ಪರೋ ಯೋನ್ಯಃ ಚೇತನಾವಾನ್ ಸ ಉಚ್ಯತೇ ||16||
ನಿತ್ಯವೂ ಈ ದೇಹವೆಂಬ ವೃಕ್ಷದಲ್ಲಿ ಬದ್ಧವಾಗಿ, ಜೀವ-ದೇಹವೆಂಬ ಎರಡು ಪಕ್ಷಿಗಳು ಇವೆ. ಇವುಗಳು ಕ್ರಿಯಾಶೀಲವಾಗಿದ್ದರೂ ಅಚೇತನಗಳಾಗಿವೆ. ಇವುಗಳಿಂದ ಉತ್ತಮನೆನಿಸಿದ ಪರಮಾತ್ಮನು ಚೇತನ, ಜ್ಞಾನಸ್ವರೂಪಿ ಎಂದು ಕರೆಸಿಕೊಳ್ಳುತ್ತಾನೆ.
ವ್ಯಾಖ್ಯಾನ ವಿಶೇಷ ಈ ಪದ್ಯದಲ್ಲಿ ವ್ಯಾಸರು ಜೀವನಿಗೂ ಅಚೇತನ ಎಂದಿದ್ದಾರೆ. ಇದರ ಅರ್ಥ ಅಚೇತನವಾದ ದೇಹಸಂಬಂಧದಿಂದ ಸ್ವರೂಪಭೂತವಾದ ಜೀವನ ಜ್ಞಾನವು ತಿರಸ್ಕೃತವಾದುದರಿಂದ ಜೀವನೂ ಅಚೇತನನೆಂದೇ ಕರೆಸಿಕೊಂಡಿದ್ದಾನೆ ಎಂದು ತಿಳಿಯಬೇಕು.
ಅಚೇತನಃ ಸತ್ವಸಂಘಾತಯುಕ್ತಃ
ಸತಶ್ಚತ್ವಾತ್ ಪರಂ ಚೇತಯತೇऽಂತರಾತ್ಮಾ |
ಸ ಕ್ಷೇತ್ರಜ್ಞಃ ಸತ್ವಸಂಘಾತಬುದ್ಧಿಃ
ಗುಣಾತಿಗೋ ಮುಚ್ಯತೇ ಮೃತ್ಯುಪಾಶಾತ್ ||17||
ಈ ಅಚೇತನನೆನಿಸಿದ ಜೀವಾತ್ಮನು ಅಂತಃಕರಣ, ಪಂಚಭೂತಗಳು ಇವುಗಳಿಂದ ಕೂಡಿದ್ದಾನೆ. ಇಂತಹ ಅಂತರಾತ್ಮನೆನಿಸಿದ ಜೀವನು ಸಮಸ್ತ ಪ್ರಾಣಿಗಳ ಸಮುದಾಯಕ್ಕಿಂತ ಪರಬ್ರಹ್ಮನನ್ನು ವಿಲಕ್ಷಣನನ್ನಾಗಿ ತಿಳಿಯುತ್ತಾನೆ. ಆ ಶ್ರೀಮನ್ನಾರಾಯಣನು ಸಂಸಾರವೆಂಬ ವೃಕ್ಷವನ್ನು ನಾಶಪಡಿಸುವುದರಿಂದ ಕ್ಷೇತ್ರ ಎನಿಸಿದ್ದಾನೆ. `ಕ್ಷಿ ಕ್ಷಯೇ' ಎಂಬ ಧಾತುವು ನಾಶ ಎಂದು ಅರ್ಥವನ್ನು ಹೇಳುತ್ತದೆ. ಅಥವಾ ಕ್ಷೇತ್ರ ಎಂದರೆ ನಾರಾಯಣ. ಅವನನ್ನು ತಿಳಿದ ಜೀವನು ಕ್ಷೇತ್ರಜ್ಞನಾಗಿದ್ದಾನೆ. ಅಥವಾ ಕ್ಷೇತ್ರ ಎಂದರೆ ನಾಶ ಹೊಂದುವ ದೇಹ ಎಂದೂ ಅರ್ಥ. ಈ ದೇಹವು ನನ್ನದಲ್ಲ ಎಂಬ ಜ್ಞಾನವುಳ್ಳವನು ಕ್ಷೇತ್ರಜ್ಞನಾಗುತ್ತಾನೆ. ಇಂತಹ ಜೀವನು ಸಮಸ್ತ ಗುಣಗಳಿಗೆ ಆಶ್ರಯನಾದ ಪರಮಾತ್ಮನಲ್ಲಿ ನೆಲೆಗೊಂಡ ಬುದ್ಧಿಯುಳ್ಳವನಾಗಿ, ತ್ರಿಗುಣಗಳ ಸಂಬಂಧವನ್ನು ದಾಟಿ ಮೃತ್ಯುಪಾಶದಿಂದ ಬಿಡುಗಡೆಯನ್ನು ಹೊಂದುತ್ತಾನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಬ್ರಹ್ಮವೃಕ್ಷವರ್ಣನಂ ನಾಮ ಅಷ್ಟಚತ್ವಾರಿಂಶೋऽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೊಂಬತ್ತನೆಯ ಅಧ್ಯಾಯ
ಚತುರ್ಮುಖ ಬ್ರಹ್ಮನು ಮಹರ್ಷಿಗಳನ್ನು ಕುರಿತು
ಜೀವಾತ್ಮ-ಪರಮಾತ್ಮರ ಸ್ವರೂಪವನ್ನು ಹೇಳಿದುದು.
ಬ್ರಹ್ಮಾ
ಕೇಚಿದ್ ಬ್ರಹ್ಮಮಯಂ ವೃಕ್ಷಂ ಕೇಚಿದ್ ಬ್ರಹ್ಮಮಯಂ ಮಹತ್ |
ಕೇಚಿತ್ ಪರಮಮವ್ಯಕ್ತಂ ಕೇಚಿತ್ ಪರಮನಾಮಯಮ್ ||1||
ಮನ್ಯಂತೇ ಸರ್ವಮಪ್ಯೇತದ್ ಅವ್ಯಕ್ತಪ್ರಭವಾಪ್ಯಯಮ್ ||2||
ಬ್ರಹ್ಮಾ ಕೆಲವು ಜ್ಞಾನಿಗಳು, ಪ್ರಾಣಬಿಡುವ ಸಮಯದಲ್ಲಿ ದೇಹಾಭಿಮಾನವನ್ನು ತ್ಯಾಗ ಮಾಡುವುದರಿಂದ ಯೋಗಿಗಳಿಗೆ ವೃಕ್ಷ ಎಂದು ಹೆಸರು ಎನ್ನುತ್ತಾರೆ. ಇನ್ನು ಕೆಲವು ಜ್ಞಾನಿಗಳು ಶ್ವಾಸವಾಯುವು ತನ್ನ ಶರೀರದಲ್ಲಿರುವ ಉದಾನವಾಯುವಿನಲ್ಲಿ ಪ್ರವೇಶ ಹೊಂದುತ್ತಿರಲು ಕಣ್ಣನ್ನು ಮುಚ್ಚುವ ಸಮಯದಲ್ಲಿ ಕೇವಲ ಪರಬ್ರಹ್ಮನನ್ನೇ ಚಿಂತಿಸುತ್ತಾ, ದೇಹಾಭಿಮಾನವನ್ನು ಬಿಟ್ಟು

ದೇಹತ್ಯಾಗವನ್ನು ಮಾಡುವುದರಿಂದ ಹಿಂದಿನ ಯೋಗಿಗಿಂತಲೂ ಮಹತ್ವವುಳ್ಳವನಾದುದರಿಂದ ಯೋಗಿಯ ಸ್ವರೂಪವು ಮಹನ್ನಾಮಕ ಎಂದು ಹೇಳುತ್ತಾರೆ. ಇನ್ನು ಕೆಲವರು ದೇಹವಿದ್ದಾಗಲೂ ಪುನಃ ಪುನಃ ಪ್ರಾಣಾಯಾಮಗಳ ಮೂಲಕ ಮನಸ್ಸಿನ ಎಲ್ಲ ವಿಧವಾದ ಕಶ್ಮಲವನ್ನು ಪರಿಹರಿಸಿಕೊಂಡು, ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡು ಯಾವ ವ್ಯಕ್ತಿಗಳಿಗೂ ಕಣ್ಣಿಗೆ ಕಾಣಿಸಿಕೊಳ್ಳದೆ ಇರುತ್ತಾರೆ. ಆದ್ದರಿಂದ ಇವರು ಅವ್ಯಕ್ತ ಯೋಗಿಗಳು ಎಂದು ಕರೆಸಿಕೊಳ್ಳುತ್ತಾರೆ. ಇನ್ನು ಕೆಲವರು ಲಕ್ಷ್ಮೀತತ್ತ್ವಕ್ಕಿಂತ ಶ್ರೇಷ್ಠನಾದ ನಾರಾಯಣನನ್ನು ಹೊಂದಿ, ಸಂಸಾರದಿಂದ ಬಿಡುಗಡೆ ಹೊಂದುವುದರಿಂದ ಈ ಮುಕ್ತರು ತಮ್ಮ ಯೋಗ್ಯತೆಗೆ ಅನುಗುಣವಾಗಿ ಸುಖವನ್ನು ಹೊಂದುವುದರಿಂದ ಪರ ಎಂದು ಕರೆಸಿಕೊಳ್ಳುತ್ತಾರೆ. ಈ ರೀತಿಯಾಗಿ ಮುಕ್ತಿಗೆ ಹೋಗುವ ವಿಷ್ಣುಭಕ್ತರಲ್ಲಿಯೇ ಅವಸ್ಥಾ ಭೇದದಿಂದ ನಾಲ್ಕು ವಿಧವು ಇದೆ ಎಂದು ಹೇಳುತ್ತಾರೆ. ಇದೆಲ್ಲವೂ ಯೋಗ್ಯಜೀವರಲ್ಲಿ ಇರುವ ವಿಭಾಗ. ಬೇರೆ ಯಾರಿಂದಲೂ ತಿಳಿಯಲಾಗದ ಸ್ವಭಾವವು ಉತ್ಕೃಷ್ಟವಾಗಿದೆ. ಆದ್ದರಿಂದ ಪ್ರಭವಾ ಎನಿಸಿಕೊಂಡಿದೆ. ಸಂಸಾರದಿಂದ ಬಿಡುಗಡೆಯನ್ನು ಹೊಂದುವುದರಿಂದ ಅಪ್ಯಯ ಎನಿಸಿಕೊಂಡಿದೆ.

ಉಚ್ಛ್ವಾಸಮಾತ್ರಮಪಿ ಚೇದ್ ಯೋಽಂತಕಾಲೇ ಸಮೋ ಭವೇತ್ |
ಆತ್ಮಾನಮುಪಸಂಗಮ್ಯ ಸೋಽಮೃತತ್ವಾಯ ಕಲ್ಪತೇ ॥3॥

ಯಾವ ಮನುಷ್ಯನು ಮರಣಸಮಯದಲ್ಲಿ ಉಸಿರನ್ನು ಸೆಳೆದುಕೊಳ್ಳುವಷ್ಟು ಕಾಲವಾದರೂ ಬುದ್ಧಿಯನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ, ಪರಮಾತ್ಮನ ಅಪರೋಕ್ಷವನ್ನು ಹೊಂದಿ, ದೇಹತ್ಯಾಗವನ್ನು ಮಾಡುತ್ತಾನೋ ಅವನು ಮುಕ್ತಿಗೆ ಹೋಗುತ್ತಾನೆ.

ನಿಮೇಷಮಾತ್ರಮಪಿ ಚ ಪಶ್ಯತ್ಯಾತ್ಮಾನಮಾತ್ಮನಿ |
ಗಚ್ಛತ್ಯಾತ್ಮಪ್ರಸಾದೇನ ವಿದುಷಾಂ ಪ್ರಾಪ್ತಿಮವ್ಯಯಾಮ್ ॥4॥

ಯಾವನು ಕಣ್ಣುಮುಚ್ಚಿ ತೆಗೆಯುವಷ್ಟು ಕಾಲವಾದರೂ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿದ್ದೇ ಆದರೆ ಆ ಪರಮಾತ್ಮನನ್ನು ಕಂಡ ಸುಖದಿಂದಲೇ ನಾಶರಹಿತವಾದ, ಅಕ್ಷಯವಾದ ಗತಿಯನ್ನು ಹೊಂದುತ್ತಾನೆ.

ಪ್ರಾಣಾಯಾಮೈರಥ ಪ್ರಾಣಾನ್ ಸಂಯಮ್ಯ ಚ ಪುನಃ ಪುನಃ |
ದಶದ್ವಾದಶಭಿರ್ವಾಽಪಿ ಚತುರ್ವಿಂಶಾತ್ ಸಮಂತತಃ ॥5॥

ಯಾವ ಸಾಧಕನು ಹತ್ತು ಅಥವಾ ಹನ್ನೆರಡು ಪ್ರಾಣಾಯಾಮಗಳ ಮೂಲಕ ಪುನಃ ಪುನಃ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಪರಮಾತ್ಮನನ್ನು ಧ್ಯಾನಿಸುತ್ತಾನೋ ಅವನು ಇಪ್ಪತ್ನಾಲ್ಕು ತತ್ತ್ವಗಳಿಂದ ಆಚೆಗಿರುವ ಇಪ್ಪತ್ತೈದನೆಯ ತತ್ತ್ವವೆನಿಸಿದ ಪರಮಾತ್ಮನನ್ನು ಹೊಂದುತ್ತಾನೆ.

ಏವಂ ಪೂರ್ವಂ ಪ್ರಸನ್ನಾತ್ಮಾ ಲಭತೇ ಯದ್ಯದಿಚ್ಛತಿ |
ಅವ್ಯಕ್ತಾತ್ ಸತ್ತ್ವಮುದ್ರಿಕ್ತಮಮೃತತ್ವಾಯ ಕಲ್ಪತೇ ॥6॥

ಹೀಗೆ ಮೊದಲು ಯಾವನು ಪ್ರಸನ್ನವಾದ ಮನಸ್ಸುಳ್ಳವನಾಗಿ ಭಗವಂತನನ್ನು ಸಂತೋಷಗೊಳಿಸಿ, ಲಕ್ಷ್ಮೀತತ್ತ್ವಕ್ಕಿಂತ ಶ್ರೇಷ್ಠವೆನಿಸಿದ, ಸತ್ತ್ವಗುಣಪ್ರವರ್ತಕನಾದ, ಶೋಭನ ಗುಣಸ್ವರೂಪಿಯಾದ ನಾರಾಯಣನನ್ನು ಹೊಂದುತ್ತಾನೋ ಅವನು ತಾನು ಬಯಸಿದ ವಸ್ತುಗಳೆಲ್ಲವನ್ನೂ ಪಡೆಯುತ್ತಾನೆ.

ಸತ್ತ್ವಾತ್ ಪರತರಂ ನಾನ್ಯತ್ ಪ್ರಶಂಸಂತೀಹ ತದ್ವಿದಃ |
ಅನುಮಾನಾದ್ ವಿಜಾನೀಮಃ ಪುರುಷಂ ಸತ್ವಮಾಶ್ರಿತಮ್ ॥7॥

ಸತ್ತ್ವಗುಣಪ್ರವರ್ತಕನಾದ ಅಥವಾ ಶೋಭನ ಗುಣಾತ್ಮಕನಾದ ನಾರಾಯಣನಿಗಿಂತ ಶ್ರೇಷ್ಠವಾದ ವಸ್ತುವು ಬೇರೆ ಯಾವುದೂ ಇರುವುದಿಲ್ಲ ಎಂದು ಜ್ಞಾನಿಗಳು ಹೇಳುತ್ತಾರೆ. ಇಂತಹ ಪರಮಾತ್ಮನನ್ನು ವೇದದಿಂದ ಉಪೋದ್ಬಲಿತವಾದ ಅನುಮಾನದಿಂದ ಸತ್ತ್ವರೂಪವಾದ ಪ್ರಕೃತಿಯನ್ನು ಆಶ್ರಯಿಸಿದ ಪುರುಷ ಎಂದು ತಿಳಿಯುತ್ತೇವೆ.

ನ ಶಕ್ಯಮನ್ಯಥಾ ಗಂತುಂ ಪುರುಷಂ ತಮಥೋ ದ್ವಿಜಾಃ ॥8॥

ಈ ತತ್ತ್ವವನ್ನು ತಿಳಿಯದೆ ಪುರುಷನನ್ನು ತಿಳಿಯಲು ಶಕ್ಯವಿಲ್ಲ.

ಕ್ಷಮಾ ಧೃತಿರಹಿಂಸಾ ಚ ಸಂತೋಷಃ ಸತ್ಯಮಾರ್ಜವಮ್ |
ಜ್ಞಾನಂ ತ್ಯಾಗೋಽಥ ಸನ್ನ್ಯಾಸಃ ಸಾತ್ವಿಕಂ ವ್ರತಮಿಷ್ಯತೇ ॥9॥

ಕ್ಷಮಾ, ಧೈರ್ಯ, ಅಹಿಂಸೆ, ಸಂತೋಷ, ಸತ್ಯ, ಸರಳತೆ, ಜ್ಞಾನ, ತ್ಯಾಗ, ಸಂನ್ಯಾಸ -ಇವುಗಳನ್ನು ಸಾತ್ವಿಕ ವ್ರತವೆಂದು ಹೇಳುತ್ತಾರೆ.

ಏತೇನೈವಾನುಮಾನೇನ ಮನ್ಯಂತೇಽಥ ಮನೀಷಿಣಃ |
ಸತ್ವಂ ಚ ಪುರುಷಶ್ಚೈವ ತತ್ರ ನಾಸ್ತಿ ವಿಚಾರಣಾ ॥10॥

ವಿದ್ವಾಂಸರಾದ ಪುರುಷರು ಯುಕ್ತಿಗಳಿಂದ ಸತ್ತ್ವ-ಪುರುಷ ಎಂಬ ಎರಡು ತತ್ತ್ವಗಳನ್ನು ತಿಳಿಯುತ್ತಾರೆ. ಇಲ್ಲಿ ವಿಚಾರ ಮಾಡಬೇಕಾದ ಪ್ರಮೇಯವು ಇರುವುದಿಲ್ಲ.

ಆಹುರೇತೇ ಮಹಾತ್ಮಾನೋ ಯೇ ಜ್ಞಾನೇಷು ಪ್ರತಿಷ್ಠಿತಾಃ |
ಕ್ಷೇತ್ರಜ್ಞಸತ್ವಯೋರೈಕ್ಯಮಿತ್ಯೇತನ್ನೋಪಪದ್ಯತೇ ॥11॥

ಜ್ಞಾನದಲ್ಲಿಯೇ ಮುಳುಗಿರುವ ಕೆಲವು ವಿದ್ವಾಂಸರು ಹಿಂದೆ ಹೇಳಿದಂತೆ ಯೋಗಿಗಳಲ್ಲಿ ನಾಲ್ಕು ಪ್ರಕಾರಗಳನ್ನು ಹೇಳುತ್ತಾ, ಬ್ರಹ್ಮ-ಜೀವರಲ್ಲಿ ಐಕ್ಯ ಇದೆ ಎಂಬ ಮತವನ್ನು ಅವರು ಅಂಗೀಕರಿಸುವುದಿಲ್ಲ.

ಪೃಥಗ್ಭೂತಂ ತತೋ ನಿತ್ಯಮಿತ್ಯೇತದಪಿ ವಾರಿತಮ್ |
ಪೃಥಗ್ಭಾವಶ್ಚ ವಿಜ್ಞೇಯಃ ಸಹಜಶ್ಚಾಪಿ ತತ್ತ್ವತಃ ॥12॥

ನಿತ್ಯವೂ ಈ ಜಗತ್ತು ಪರಮಾತ್ಮನಿಗಿಂತ ಭಿನ್ನವಾಗಿ, ಅನಿತ್ಯವಾಗಿದೆ. ಈಶ್ವರನಿಂದ ಪೃಥಕ್ ಆಗಿ ಇದೆ. ಪರಮಾತ್ಮನ ಅಪೇಕ್ಷೆಗಿಂತ ಮಿಥ್ಯಾ ಎನಿಸಿದೆ. ಈ ಕ್ಷೇತ್ರಜ್ಞನೆನಿಸಿದ ಜೀವನಿಗೂ ಸತ್ತ್ವ ಎನಿಸಿದ ಪರಮಾತ್ಮನಿಗೂ ಸ್ವಾಭಾವಿಕವಾದ ಭೇದವೇ ಇದೆ. ಆದ್ದರಿಂದ ಪರಮಾತ್ಮನ ದೆಸೆಯಿಂದ ಜಗತ್ತನ್ನು ಪೃಥಕ್ ಆಗಿಯೇ ತಿಳಿಯಬೇಕು. ಹಿಂದಿನ ಪದ್ಯದಲ್ಲಿ ಸ್ಪಷ್ಟವಾಗಿ ಐಕ್ಯವನ್ನು ನಿಷೇಧಿಸಿ, ಈ

ಪದ್ಯದಲ್ಲಿ ಭೇದವನ್ನು ಸಮರ್ಥನೆ ಮಾಡುವುದರಿಂದ ಮೇಲ್ನೋಟದಲ್ಲಿ ತೋರುವ ಈ ಪದದ ಅರ್ಥಗಳನ್ನು ಸ್ವೀಕರಿಸಬಾರದು. ಐಕ್ಯವನ್ನು ನಿಷೇಧಿಸಿ ಭೇದ ಸತ್ಯ ಎಂಬ ಅರ್ಥವನ್ನೇ ಇಲ್ಲಿ ಸ್ವೀಕರಿಸಬೇಕು. ಒಂದು ವೇಳೆ ಹೀಗೆ ಅರ್ಥವನ್ನು ಹೇಳದಿದ್ದಲ್ಲಿ `ಅಹಂ ಬ್ರಾಹ್ಮಣಃ' `ನಾಹಂ ಬ್ರಾಹ್ಮಣಃ' ಎಂಬ ವಾಕ್ಯಗಳು ಪರಸ್ಪರ ವಿರುದ್ಧವಾಗುವಂತೆ `ಪೃಥಕ್ ಭಾವಃ ನ' `ಪೃಥಕ್ ಭಾವೋಽಪಿ ವಿಜ್ಞೇಯಃ' ಎಂಬ ವಾಕ್ಯಗಳಲ್ಲಿ ಪರಸ್ಪರ ವಿರೋಧ ಉಂಟಾಗಿ ವ್ಯಾಹತಿ ದೋಷವು ಬಂದೀತು. ಎಲ್ಲಿ ಐಕ್ಯವನ್ನು ನಿಷೇಧಿಸುತ್ತಾರೋ ಅಲ್ಲಿ ನಿಯಮೇನ ಭೇದವನ್ನು ಸಾಧಿಸಲೇಬೇಕು. ಇಲ್ಲದಿದ್ದಲ್ಲಿ ಪ್ರಕ್ರಮವಿರೋಧವು ಉಂಟಾಗುತ್ತದೆ. ಆದ್ದರಿಂದಲೇ ಹಿಂದೆ `ಯೇ ಜ್ಞಾನೇಷು ಪ್ರತಿಷ್ಠಿತಾಃ, ಏತೇ ಮಹಾತ್ಮಾನಃ' ಮುಂತಾದ ವಾಕ್ಯಗಳಲ್ಲಿ ಮೀಮಾಂಸಾ ನಿಪುಣರಾದ ಮಹಾಪುರುಷರನ್ನು ಸಂಗ್ರಹಿಸಲು ಈ ವಿಶೇಷಣವನ್ನು ನೀಡಿದ್ದಾರೆ.

ಮುಂದಿನ ಪದ್ಯದಲ್ಲಿ ಸಮಸ್ತ ಸಕಲ ಜೀವರಿಗೆ ಆಧಾರವಾಗಿರುವ, ಜೀವರ ಹೃದಯದಲ್ಲಿರುವ ಭಗವಂತನ ರೂಪಗಳಲ್ಲಿ ಭೇದಗಳನ್ನು ತಿಳಿಯಬಾರದು. ಹೊರತು ಸ್ವಗತಭೇದ ವರ್ಜಿತನಾದ ನಾರಾಯಣನಿಂದ ನಿಯಮ್ಯರಾದ ಜೀವರಲ್ಲಿ ಭೇದವನ್ನೇ ಹೇಳಬೇಕು ಎಂದು ತಿಳಿಸಲು ದೃಷ್ಟಾಂತವನ್ನು ನೀಡುತ್ತಾರೆ.

ತಥಾ ವೈಕತ್ವನಾನಾತ್ವಮಿಷ್ಯತೇ ವಿದುಷಾಂ ನಯಾತ್ |
ಮಶಕೌದುಂಬರೇ ತ್ವೈಕ್ಯಂ ಪೃಥಗ್ಭಾವಶ್ಚ ದೃಶ್ಯತೇ ॥13॥

`ಮಶಕೌದುಂಬರಮ್' ಎಂಬಲ್ಲಿ ದ್ವಂದ್ವೈಕವದ್ಭಾವವನ್ನು ತಿಳಿಯಬೇಕು. ಸೊಳ್ಳೆಗಳಿಗೆ ಆಧಾರವಾದ ಅತ್ತಿಯ ಹಣ್ಣಿನಲ್ಲಿ ಐಕ್ಯವನ್ನು ಹೇಳಿದಂತೆ ಇಲ್ಲಿ ಆಧೇಯ ಎನಿಸಿದ ಸೊಳ್ಳೆಗಳಿಗೆ ಅತ್ತಿಹಣ್ಣಿನಿಂದ ಅತ್ಯಂತ ಭೇದವೇ ಇದೆ. ಆ ಅತ್ತಿಯ ಹಣ್ಣಿನ ಒಳಗಡೆ ಇರುವ ಸೊಳ್ಳೆಗಳಲ್ಲಿ ಪರಸ್ಪರ ಭೇದವಿದೆ. ಆ ಸೊಳ್ಳೆಗಳು ಅನೇಕ ಸಂಖ್ಯೆಯಲ್ಲಿ ಇರುವುದರಿಂದ ನಾನಾತ್ವವೂ ಇದೆ. ಹೀಗೆ ಅತ್ತಿ ಹಣ್ಣಿಗೂ ಸೊಳ್ಳೆಗಳಿಗೂ ಬಹುಸಂಖ್ಯಾಕವಾದ್ದರಿಂದ ನಾನಾತ್ವವು ಎಂಬುದಾಗಿ ಪೃಥಕ್ ಭಾವವು ಮೂರು ವಿಧವಾಗಿದೆ. ಸೊಳ್ಳೆಗಳಿಗೂ ಮತ್ತು ಅತ್ತಿಹಣ್ಣಿಗೂ ಆಧಾರ-ಆಧೇಯ ಭಾವರೂಪ ಸಂಬಂಧವು ಚೆನ್ನಾಗಿ ತೋರುತ್ತಿದೆ. ಇಲ್ಲಿ ಜಡವಾದ ಅತ್ತಿಹಣ್ಣಿಗೂ ಚೇತನವಾದ ಸೊಳ್ಳೆಗಳಿಗೂ ಐಕ್ಯವನ್ನು ಹೇಳಲಾಗುವುದಿಲ್ಲ. ಇದರಿಂದ ಪರಮಾತ್ಮನೆಂಬ ಅತ್ತಿಯ ಹಣ್ಣನ್ನು ಆಶ್ರಯವಾಗಿ ಪಡೆದಿರುವ ಜೀವರಿಗೂ, ಪರಮಾತ್ಮನಿಗೂ ಪರಸ್ಪರ ಭೇದವೇ ಕಾಣಿಸುತ್ತದೆ ಎಂದು ತಾತ್ಪರ್ಯ.

ಮತ್ಸ್ಯೋ ಯಥಾಽನ್ಯಃ ಸ್ಯಾದ್ ಅಪ್ಸು ಸಂಪ್ರಯೋಗಸ್ತಥಾನಯೋಃ |
ಸಂಬಂಧತೋಯಬಿಂದೂನಾಂ ಪರ್ಣೈಃ ಕೋಕನದಸ್ಯ ಚ ॥14॥

ನೀರಿನಲ್ಲಿರುವ ಮತ್ಸ್ಯಕ್ಕೂ, ನೀರಿಗೂ ಆಧಾರ-ಆಧೇಯ ಭಾವವಿರುವುದರಿಂದ ಹೇಗೆ ಐಕ್ಯವಿರುವುದಿಲ್ಲವೋ ಪೃಥಕ್ತ್ವವೇ ಇದೆಯೋ ಮತ್ಸ್ಯ-ಜಲಗಳಿಗೆ ಆಧಾರ- ಆಧೇಯ ಭಾವರೂಪಸಂಬಂಧವು ತೋರುತ್ತಿದೆಯೋ ಇದರಂತೆ ಜೀವ- ಪರಮಾತ್ಮರಿಗೆ ಪರಸ್ಪರ ಆಧಾರ-ಆಧೇಯ ಭಾವರೂಪ ಸಂಬಂಧ ಇರುವುದರಿಂದ ಜಡವಾದ ನೀರಿಗೂ ಚೇತನವಾದ ಮತ್ಸ್ಯಕ್ಕೂ ಐಕ್ಯ ಹೇಳಲು ಬಾರದಂತೆ ಜೀವನಿಗೂ ಪರಮಾತ್ಮನಿಗೂ ವೈಲಕ್ಷಣ್ಯ ಇರುವುದರಿಂದ ಐಕ್ಯವನ್ನು ಹೇಳಲು ಬರುವುದಿಲ್ಲ. ನೀಲ ಕಮಲದ ಎಲೆಗೂ, ಆ ಎಲೆಯಲ್ಲಿ ಇರುವ ನೀರಿಗೂ ಹೇಗೆ ಆಧಾರ-ಆಧೇಯದಿಂದ ಭೇದವಿದೆಯೋ ಇದರಂತೆ ಜೀವಾತ್ಮನಿಗೂ ಪರಮಾತ್ಮನಿಗೂ ಭೇದವೇ ಇದೆ.

ವ್ಯಾಖ್ಯಾನ ವಿಶೇಷ ಭಾಸ್ಕರರು ಆಧಾರಭೂತನಾದ ಬ್ರಹ್ಮನಿಗೂ ಆಧೇಯನೆನಿಸಿದ ಜೀವನಿಗೂ ಭೇದಾಭೇದವಿದೆ ಎಂದು ಹೇಳುತ್ತಾರೆ. ಈ ದೃಷ್ಟಾಂತಗಳನ್ನು ತಿಳಿದಾಗ ಭೇದಾಭೇದವೆಂಬ ಮತವು ನಿರಾಕೃತವಾಗಿದೆ ಎಂದು ತಿಳಿಯುತ್ತದೆ. ಸೊಳ್ಳೆಗಳಿಗೂ-ಅತ್ತಿಯ ಹಣ್ಣಿಗೂ, ನೀರಿಗೂ-ಮತ್ಸ್ಯಗಳಿಗೂ, ನೀಲಕಮಲಕ್ಕೂ-ನೀಲಕಮಲದಲ್ಲಿರುವ ನೀರಿನ ಹನಿಗೂ ಭೇದಾಭೇದವನ್ನು ಹೇಳಲು ಸಾಧ್ಯವಿಲ್ಲ. ಈ ದೃಷ್ಟಾಂತವನ್ನು ಹೊಂದಾಣಿಕೆ ಮಾಡಬೇಕಾದಲ್ಲಿ ಪರಸ್ಪರ ಭೇದವನ್ನೇ ಹೇಳಬೇಕೇ ವಿನಾ ಜೀವ-ಪರಮಾತ್ಮರಿಗೆ ಐಕ್ಯವನ್ನು ಹೇಳಲಾಗದು. ಇನ್ನು ಭೂತ-ಭವಿಷ್ಯತ್-ವರ್ತಮಾನ ಕಾಲಗಳಲ್ಲಿ ಇರುವ ದೇಹಗಳಲ್ಲಿ ಜೀವನು ಒಬ್ಬನೇ ಸಂಚರಿಸುತ್ತಾನೆ, ದೇಹಗಳು ಮಾತ್ರ ಭಿನ್ನ-ಭಿನ್ನವಾಗಿರುತ್ತವೆ. ಆದ್ದರಿಂದ ಎಲ್ಲರ ದೇಹದಲ್ಲಿರುವ ಆತ್ಮನು ಒಬ್ಬನೇ ಎಂದು ಕೆಲವರು ಹೇಳುತ್ತಾರೆ. ಇದೂ ಸರಿಯಲ್ಲ. ಹೀಗೆ ಹೇಳಿದರೆ `ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಪರಾಣಿ' ಮುಂತಾಗಿ ಗೀತೆಯಲ್ಲಿ ಕೃಷ್ಣ ಹೇಳಿದಂತೆ ಪಟಗಳಲ್ಲಿ ಅನೇಕತ್ವವಿದೆ. ಆ ಬಟ್ಟೆಯನ್ನು ಧರಿಸುವ ಜೀವನಲ್ಲಿ ಏಕತ್ವವೇ ಇದೆ ಎಂದು ಹೇಳಿದಂತಾಗುತ್ತದೆ. ನೀವು ತಿಳಿಸಿದಂತೆ ಹೇಳುವುದಾಗಿದ್ದಲ್ಲಿ ಮಹಾಭಾರತವು ಈ ರೀತಿಯಾದ ದೃಷ್ಟಾಂತವನ್ನು ಹೇಳದೆ ಒಂದೇ ಸರ್ಪವು ಅನೇಕ ಪೊರೆಗಳನ್ನು ಬಿಡುವಂತೆ ಒಬ್ಬನೇ ಚೇತನನು ಅನೇಕ ದೇಹಗಳನ್ನು ಪಡೆಯುತ್ತಾನೆ, ನಾಶಪಡಿಸಿಕೊಳ್ಳುತ್ತಾನೆ ಎಂದು ಸರ್ಪದ ದೃಷ್ಟಾಂತವನ್ನು ಹೇಳಬೇಕಾಗಿತ್ತು. ಇಲ್ಲಿ ಅತ್ತಿಹಣ್ಣು-ಸೊಳ್ಳೆಗಳು ಎಂದು ದೃಷ್ಟಾಂತವನ್ನು ಹೇಳಿರುವುದರಿಂದ ಆಧಾರವಾದ ಹಣ್ಣು ಒಂದೇ ಆಗಿದೆ. ಅದನ್ನು ಆಶ್ರಯಿಸಿದ ಸೊಳ್ಳೆಗಳು ಒಂದೇ ಸಮಯದಲ್ಲಿ ಅನೇಕವಾಗಿ ಭಿನ್ನಭಿನ್ನವಾಗಿವೆ ಎಂದು ಹೇಳುವ ಮೂಲಕ ಒಬ್ಬನೇ ಪರಬ್ರಹ್ಮನನ್ನು ಆಶ್ರಯಿಸಿದ ಅನಂತ ಜೀವರಲ್ಲಿ ಭೇದವೂ, ನಾನಾತ್ವವೂ ಇದೆ ಎಂದು ಹೇಳಿದಂತಾಯಿತು. ದೃಷ್ಟಾಂತದಲ್ಲಿ ಹೇಳಿದ್ದನ್ನು ಸಂಪೂರ್ಣವಾಗಿ ದ್ರಾಷ್ಟಾಂತಿಕದಲ್ಲಿಯೂ ಅನ್ವಯ ಮಾಡಿಕೊಳ್ಳಬೇಕು. ಆಧಾರಭೂತನಾದ ಬ್ರಹ್ಮನು ಒಬ್ಬನಾಗಿದ್ದಾನೆ, ಆಧೇಯರಾದ ಜೀವರು ಒಂದೇ ಕಾಲದಲ್ಲಿ ನಾನಾ ವಿಧವಾಗಿ ಆಶ್ರಯವನ್ನು ಹೊಂದಿದ್ದಾರೆ ಎಂದಾಗ ಈ ದೃಷ್ಟಾಂತವು ಸರಿಯಾಗುತ್ತದೆ. ಇಲ್ಲವಾದಲ್ಲಿ ದೃಷ್ಟಾಂತವೇ ತಪ್ಪಾಗುತ್ತದೆ. ಆದ್ದರಿಂದ ಜೀವರ ಏಕತ್ವ, ದೇಹಗಳ ನಾನಾತ್ವ ಎಂಬ ಯೋಜನೆಯು ಅಪ್ರಾಮಾಣಿಕವೇ ಆಗಿದೆ. ಆದ್ದರಿಂದ ಕ್ಷೇತ್ರಜ್ಞನಾದ ಪರಮಾತ್ಮ, ಜೀವರ ನಡುವೆ ಆಧಾರಭೂತನಾದ ಬ್ರಹ್ಮನನ್ನು ಒಬ್ಬನನ್ನಾಗಿ, ಅವನ ಉದರದ ಮಧ್ಯದಲ್ಲಿ ಜೀವರನ್ನು ನಾನಾ ವಿಧವಾಗಿ; ಆಧಾರಭೂತನಾದ ಬ್ರಹ್ಮನು ಭಿನ್ನನಾಗಿದ್ದಾನೆಂದು, ಆಧೇಯರಾದ ಜೀವರು ಪರಸ್ಪರ ಭೇದವನ್ನು ಹೊಂದಿದ್ದಾರೆಂದೂ; ಜೀವರು ಬಹುಸಂಖ್ಯೆಯಲ್ಲಿರುವುದರಿಂದ ನಾನಾತ್ವವು ಇದೆ ಎಂದು ಮೂರು ವಿಧವಾದ ನಾನಾತ್ವವು ಹೇಳಲ್ಪಟ್ಟಿದೆ. ಬ್ರಹ್ಮನಿಗೂ ಜೀವರಿಗೂ ಆಧಾರ-ಆಧೇಯಭಾವರೂಪವಾದ ಸಂಬಂಧವೂ ಹೇಳಲ್ಪಟ್ಟಂತಾಗಿದೆ. ಮುಕ್ತಿಯಲ್ಲಿಯೂ ಕೂಡ ಈ ಭೇದವು ಸತ್ಯವಾಗಿದೆ ಎಂದು ತಿಳಿಸಲು ವ್ಯಾಸರು ಶ್ಲೋಕದಲ್ಲಿ `ಯೋಗ' ಎಂದು ಇಷ್ಟೇ ಹೇಳದೆ `ಸಂಪ್ರಯೋಗ' ಎಂದು ಎರಡು ಉಪಸರ್ಗಗಳನ್ನು ಹೇಳಿದ್ದಾರೆ. ಸರ್ವಜ್ಞನಾದ ಪರಮಾತ್ಮನಿಗೂ ಅಲ್ಪಜ್ಞನಾದ ಜೀವನಿಗೂ ಐಕ್ಯವನ್ನು ಹೇಳಲಾಗುವುದಿಲ್ಲ. ಇದನ್ನು ಸೂಚಿಸಲು ಹಿಂದೆ

ಬ್ರಹ್ಮನಲ್ಲಿ ಕ್ಷೇತ್ರಜ್ಞ ಪದವನ್ನು ಜೀವರಲ್ಲಿ ಜಂತುಸಾಧಾರಣವಾದ ಸತ್ತ್ವ ಪದವನ್ನು ಹೇಳಿದ್ದಾರೆ. ಇಲ್ಲದಿದ್ದಲ್ಲಿ ಜೀವ-ಬ್ರಹ್ಮ ಎಂದು ಹೇಳಬೇಕಾಗಿತ್ತು. `ನೇಹ ನಾನಾಸ್ತಿ ಕಿಂಚನ' `ದ್ವಾ ಸುಪರ್ಣಾ ಸಯುಜಾ ಸಖಾಯ' ಇತ್ಯಾದಿ ವಾಕ್ಯಗಳನ್ನು ವಿಚಾರ ಮಾಡುವವರು ವಿದ್ವಾಂಸರೇ ಆದುದರಿಂದ `ವಿದುಷಾಂ ನಯಾತ್ ಇಷ್ಯತೇ' ಎಂದು ವ್ಯಾಸರು ಹೇಳಿದ್ದಾರೆ. ಅಥವಾ `ಶಾರೀರಶ್ಚೋಭಯೇಪಿ ಹಿ ಭೇದೇನೈನಮಧೀಯತೇ' ಎಂಬ ಬ್ರಹ್ಮಸೂತ್ರನ್ಯಾಯವನ್ನು ಸೂಚಿಸುವ ಶಬ್ದ `ನಯಾತ್' ಎಂಬ ಶಬ್ದ. `ವಿದುಷಾಂ ನಯಾತ್' ಎಂದರೆ ಜ್ಞಾನಿಗಳು ಹೇಳುವ ಬ್ರಹ್ಮಸೂತ್ರ ನ್ಯಾಯದಿಂದಲೂ ಎಂದು ಅರ್ಥ. ಆದ್ದರಿಂದ ಜೀವ-ಬ್ರಹ್ಮರಿಗೆ ಸಹಜವಾದ ಭೇದವನ್ನು, ಪರಬ್ರಹ್ಮನ ಮಹತ್ವವನ್ನು ತಿಳಿದ ಯೋಗಿಯು ಮುಕ್ತನಾಗುತ್ತಾನೆ ಎಂದು ಭಾವ.

ಗುರುರುವಾಚ

ಇತ್ಯುಕ್ತವಂತಸ್ತೇ ವಿಪ್ರಾಸ್ತದಾ ಲೋಕಪಿತಾಮಹಮ್ |
ಪುನಃ ಸಂಶಯಮಾಪನ್ನಾಃ ಪಪ್ರಚ್ಛುರ್ಮುನಿಸತ್ತಮಾಃ ॥15॥

ಗುರು ಹೀಗೆ ಹೇಳಿದ ನಂತರ ಅವನ ಸುತ್ತಲೂ ಇದ್ದ (ದಕ್ಷಪ್ರಜಾಪತಿಯೇ ಮೊದಲಾದ) ಮುನಿಶ್ರೇಷ್ಠರು ಪುನಃ ಸಂಶಯಗೊಂಡವರಾಗಿ ಬ್ರಹ್ಮನನ್ನು ಪ್ರಶ್ನಿಸಿದರು.

ಕೋ ವಾ ಸ್ವಿದಿಹ ಧರ್ಮಾಣಾಮನುಷ್ಠೇಯತಮೋ ಮತಃ |
ವ್ಯಾಹತಾಮಿವ ಪಶ್ಯಾಮೋ ಧರ್ಮಸ್ಯ ವಿವಿಧಾಂ ಗತಿಮ್ ॥16॥

ದೇವಶ್ರೇಷ್ಠನೇ, ಜಗತ್ತಿನಲ್ಲಿರುವ ಧರ್ಮಗಳಲ್ಲಿ ಯಾವ ಧರ್ಮವು ಅನುಷ್ಠಾನ ಮಾಡಲು ಉತ್ತಮವಾಗಿದೆ ಎಂದು ತಿಳಿಸು. ಧರ್ಮದ ಮಾರ್ಗಗಳು ಪರಸ್ಪರ ವ್ಯಾಹತವಾಗಿವೆ ಎಂದು, ಅನೇಕ ಗತಿಯುಳ್ಳವುಗಳು ಎಂದು ನಾವು ತಿಳಿದಿದ್ದೇವೆ.

ಊರ್ಧ್ವಂ ದೇಹಾದ್ ವದಂತ್ಯೇಕೇ ನೈತದಸ್ತೀತಿ ಚಾಪರೇ |
ಕೇಚಿತ್ ಸಂಶಯಿತಂ ಸರ್ವಂ ನಿಃಸಂಶಯಮಥಾಪರೇ ॥17॥

ಕೆಲವರು ನಾಸ್ತಿಕರಿಗಿಂತ ಭಿನ್ನರಾದ ಆಸ್ತಿಕ ಪುರುಷರು ದೇಹದ ಪತನದ ನಂತರವೂ ಪರಲೋಕಾದಿಗಳು ಇದೆ ಎಂದು ಹೇಳುತ್ತಾರೆ. ಚಾರ್ವಾಕಾದಿಗಳು ಪರಲೋಕಾದಿಗಳು ಇಲ್ಲ ಎಂದು ಹೇಳುತ್ತಾರೆ. ಮಧ್ಯಮ ಜೀವರು ಸಜ್ಜನರ ಸಮಾಗಮವಾದಾಗ ಪರಲೋಕವು ಇವೆ ಎಂದು ಹೇಳುತ್ತಾರೆ. ದುರ್ಜನರ ಸಮಾಗಮವಾದಾಗ ಪರಲೋಕ ಇಲ್ಲ ಎಂದು ಹೇಳುತ್ತಾರೆ. ಉತ್ತಮ ಜೀವರು ನಿಸ್ಸಂಶಯವಾಗಿ ಭಗವಂತನ ಸರ್ವೋತ್ತಮತ್ವಾದಿಗಳನ್ನೇ ಹೇಳುತ್ತಾರೆ. ಅಧಮ ಜೀವರು ನಿಸ್ಸಂಶಯವಾಗಿ ಐಕ್ಯಾದಿಗಳನ್ನೇ ಹೇಳುತ್ತಾರೆ.

ಅನಿತ್ಯಂ ನಿತ್ಯಮಿತ್ಯೇಕೇ ನಾಸ್ತ್ಯಸ್ತೀತ್ಯಪಿ ಚಾಪರೇ |
ತ್ರಿಧೇತ್ಯೇಕೇ ದ್ವಿಧೇತ್ಯೇಕೇ ವ್ಯಾಕೀರ್ಣಮಿತಿ ಚಾಪರೇ ॥18॥
ಮನ್ಯಂತೇ ಬ್ರಾಹ್ಮಣಾ ಏವ ಪ್ರೌಢಸ್ತತ್ತ್ವಾರ್ಥದರ್ಶಿನಃ |
ಏವಮೇಕೇ ಪೃಥಕ್ ಚಾನ್ಯೇ ಬಹುತ್ವಮಿತಿ ಚಾಪರೇ ॥19॥

ಬೌದ್ಧಧರ್ಮೀಯರು ಎಲ್ಲವನ್ನೂ ಅನಿತ್ಯವೆಂದೂ, ಕ್ಷಣಿಕವೆಂದೂ ಹೇಳುತ್ತಾರೆ. ಸತ್ಕಾರ್ಯವಾದಿಗಳು ಎಲ್ಲವೂ ನಿತ್ಯವೆಂದು ಹೇಳುತ್ತಾರೆ. ಮಾಯಾವಾದಿಗಳು ಜಗತ್ತು ಪಾರಮಾರ್ಥಿಕವಾಗಿ ಇರುವುದಿಲ್ಲ, ವ್ಯಾವಹಾರಿಕವಾಗಿ ಇದೆ ಎಂದು ಹೇಳುತ್ತಾರೆ. ಆ ಮಾಯಾವಾದಿಗಳಲ್ಲೇ ಕೆಲವರು ಬ್ರಹ್ಮಚೈತನ್ಯ, ಜೀವಚೈತನ್ಯ ಎಂಬ ಎರಡು ವಿಧವಾದ ಚೈತನ್ಯವನ್ನು ಕಲ್ಪಿಸಿ ಹೇಳುತ್ತಾರೆ. ಇನ್ನು ಕೆಲವರು ಜೀವ-ಈಶ್ವರ-ನಿರ್ಗುಣ ಬ್ರಹ್ಮ ರೂಪದಿಂದ ಮೂರು ವಿಧವಾಗಿ ಬ್ರಹ್ಮನು ಇದ್ದಾನೆ ಎಂದು ಹೇಳುತ್ತಾರೆ.
ಮಾಯಾವಾದಿಗಳಲ್ಲೇ ಕೆಲವರು ಅಜ್ಞಾನ ಬ್ರಹ್ಮ ಎಂದು ಹೇಳುತ್ತಾರೆ. ಅಜ್ಞಾನ ಶಬಲ ಬ್ರಹ್ಮ, ಮಾಯಾ ಶಬಲ ಬ್ರಹ್ಮ ಎಂಬುದು ಮಾಯಾವಾದಿಗಳ ವಾದ. ಜ್ಞಾನಿಗಳು ನನ್ನಿಂದ ಹೇಳಲ್ಪಟ್ಟ ಅರ್ಥವೇ ನಿಜವಾದ ತತತ್ತ್ವರ್ಥವೆಂದು ಸತ್ತರ್ಕಗಳ ಮೂಲಕವೂ, ದುಷ್ಟತರ್ಕಗಳ ಮೂಲಕವೂ ಯುಕ್ತಿಬದ್ಧವಾಗಿಯೇ ಸಮರ್ಥಿಸುತ್ತಾರೆ.

ದೇಶಕಾಲಾವುಭೌ ಕೇಚಿನ್ನೈತದಸ್ತೀತಿ ಚಾಪರೇ |
ಜಟಾಜಿನಧರಾಶ್ಚಾನ್ಯೇ ಮುಂಡಾಃ ಕೇಚಿದಸಂವೃತಾಃ ॥20॥

ಪುಣ್ಯದೇಶ, ಪುಣ್ಯಕಾಲ ಇದೆ ಎಂದು ಕೆಲವರು ಹೇಳುತ್ತಾರೆ. ನಾಸ್ತಿಕರು ಪುಣ್ಯಕಾಲಾದಿಗಳು ಎಂಬುವೇ ಇಲ್ಲ ಎಂದು ಹೇಳುತ್ತಾರೆ. ಕೆಲವರು ಜಟೆಯನ್ನು ಧರಿಸಿರುತ್ತಾರೆ, ಕೆಲವರು ಜಿಂಕೆಯ ತೊಗಲನ್ನು ಧರಿಸಿರುತ್ತಾರೆ, ಕೆಲವರು ತಲೆಯನ್ನು ಮುಂಡನ ಮಾಡಿಸಿಕೊಂಡಿರುತ್ತಾರೆ, ಕೆಲವರು ದಿಗಂಬರರಾಗಿರುತ್ತಾರೆ.

ಅಸ್ನಾನಂ ಕೇಚಿದಿಚ್ಛಂತಿ ಸ್ನಾನಮಪ್ಯಪರೇ ಜನಾಃ |
ಮನ್ಯಂತೇ ಬ್ರಾಹ್ಮಣಾ ದೇವಾ ಬ್ರಹ್ಮಜ್ಞಾಸ್ತತ್ತ್ವದರ್ಶಿನಃ ॥21॥

ಕೆಲವರು ಸ್ನಾನವೇ ಬೇಕಿಲ್ಲ ಎಂದು ಹೇಳುತ್ತಾರೆ. ವೇದಜ್ಞರಾದ, ತತ್ತ್ವವೇತ್ತೃಗಳಾದ ಬ್ರಾಹ್ಮಣರು ಸ್ನಾನ ಮಾಡುವುದು ಶ್ರೇಷ್ಠ ಎಂದು ಹೇಳುತ್ತಾರೆ.

ಆಹಾರಂ ಕೇಚಿದಿಚ್ಛಂತಿ ಕೇಚಿಚ್ಚಾನಶನೇ ರತಾಃ |
ಕರ್ಮ ಕೇಚಿತ್ ಪ್ರಶಂಸಂತಿ ಪ್ರಶಾಂತಿಂ ಚಾಪರೇ ಜನಾಃ ॥22॥

ಕೆಲವರು ಭೋಜನ ಮಾಡುವುದು ಒಳ್ಳೆಯದೆಂದು ಹೇಳುತ್ತಾರೆ. ಕೆಲವರು ಭೋಜನ ಮಾಡದೆ ಇರುವುದರಲ್ಲಿಯೇ ಅಭಿರುಚಿಯನ್ನು ಹೊಂದಿರುತ್ತಾರೆ. ಕೆಲವರು ಕರ್ಮಗಳನ್ನು ಪ್ರಶಂಸಿಸುತ್ತಾರೆ, ಕೆಲವರು ಪರಮ ಶಾಂತಿಯನ್ನೇ ಪ್ರಶಂಸೆ ಮಾಡುತ್ತಾರೆ.

ಕೇಚಿನ್ಮೋಕ್ಷಂ ಪ್ರಶಂಸಂತಿ ಕೇಚಿದ್ ಭೋಗಾನ್ ಪೃಥಗ್ವಿಧಾನ್ |
ಧನಾನಿ ಕೇಚಿದಿಚ್ಛಂತಿ ನಿರ್ಧನತ್ವಮಥಾಪರೇ |
ಉಪಾಸ್ಯಾಂ ಸಾಧಯಂತ್ಯೇಕೇ ನೈತದಸ್ತೀತಿ ಚಾಪರೇ ॥23॥

ಕೆಲವರು ಮೋಕ್ಷವನ್ನು ಪ್ರಶಂಸಿಸುತ್ತಾರೆ. ಕೆಲವರು ನಾನಾ ವಿಧವಾದ ಭೋಗಗಳನ್ನೇ ಹೊಗಳುತ್ತಾರೆ. ಕೆಲವರು ಧನಗಳನ್ನು ಅಪೇಕ್ಷಿಸುತ್ತಾರೆ. ಕೆಲವರು ದಾರಿದ್ರ್ಯವನ್ನೇ ಬಯಸುತ್ತಾರೆ. ಕೆಲವರು ದೇವತೆಗಳ ಉಪಾಸನೆಯನ್ನು ಮಾಡುತ್ತಾರೆ. ಕೆಲವರು ಈ

ಉಪಾಸನೆಗೆ ಅರ್ಥವಿಲ್ಲ ಎಂದು ಹೇಳುತ್ತಾರೆ.
ಅಹಿಂಸಾನಿರತಾಶ್ಚಾನ್ಯೇ ಕೇಚಿದ್ ಹಿಂಸಾಪರಾಯಣಾಃ |
ಪುಣ್ಯೇನ ಯಶಸಾ ಚಾನ್ಯೇ ನೈತದಸ್ತೀತಿ ಚಾಪರೇ ||24||
ಕೆಲವರು ಅಹಿಂಸಾವ್ರತ ಪರಾಯಣರಾಗಿರುತ್ತಾರೆ. ಕೆಲವರು ಹಿಂಸೆಯೇ ಬದುಕಿನ ಧರ್ಮವೆನ್ನುತ್ತಾರೆ. ಕೆಲವರು ಯಶಸ್ಸಿನಿಂದಲೂ, ಪುಣ್ಯದಿಂದಲೂ ಸಂಪನ್ನರಾಗಿರುತ್ತಾರೆ. ಇನ್ನು ಕೆಲವರು ಯಶಸ್ಸು, ಪುಣ್ಯಗಳನ್ನು ನಿರಾಕರಿಸುತ್ತಾರೆ.
ಸದ್ಭಾವನಿರತಾಶ್ಚಾನ್ಯೇ ಕೇಚಿತ್ಸಂಶಯಿತೇ ಸ್ಥಿತಾಃ |
ದುಃಖಾದನ್ಯೇ ಸುಖಾದನ್ಯೇ ಧ್ಯಾನಮಿತ್ಯಪರೇ ಜನಾಃ ||25||
ಕೆಲವರು ಉತ್ತಮ ಸ್ವಭಾವ ಹೊಂದಿರುತ್ತಾರೆ. ಕೆಲವರು ಮಿಶ್ರಸ್ವಭಾವವನ್ನು ಹೊಂದಿರುತ್ತಾರೆ. ಕೆಲವರು ತಪಸ್ವಿಗಳು ಕಾಯಕ್ಲೇಶದ ದುಃಖಗಳನ್ನೂ ತಪಸ್ಸು ಎಂದು ಭಾವಿಸುತ್ತಾರೆ. ಕೆಲವರು ಧ್ಯಾನವನ್ನು ಹೇಳುತ್ತಾರೆ.
ಯಜ್ಞ ಇತ್ಯಪರೇ ವಿಪ್ರಾಃ ಪ್ರದಾನಮಿತಿ ಚಾಪರೇ |
ತಪಸ್ತ್ವನ್ಯೇ ಪ್ರಶಂಸಂತಿ ಸ್ವಾಧ್ಯಾಯಮಪರೇ ಜನಾಃ ||26||
ಕೆಲವು ಬ್ರಾಹ್ಮಣರು ಯಜ್ಞವನ್ನು ಶ್ರೇಷ್ಠವೆನ್ನುತ್ತಾರೆ, ಕೆಲವರು ದಾನವನ್ನು ಶ್ರೇಷ್ಠವೆನ್ನುತ್ತಾರೆ. ಕೆಲವರು ತಪಸ್ಸನ್ನು ಪ್ರಶಂಸೆ ಮಾಡಿದರೆ, ಕೆಲವರು ಸ್ವಾಧ್ಯಾಯವೇ ಶ್ರೇಷ್ಠವೆನ್ನುತ್ತಾರೆ.
ಜ್ಞಾನಂ ಸನ್ನ್ಯಾಸಮಿತ್ಯೇಕೇ ಸ್ವಭಾವಂ ಭೂತಚಿಂತಕಾಃ |
ಸರ್ವಮೇಕೇ ಪ್ರಶಂಸಂತಿ ನ ಸರ್ವಮಿತಿ ಚಾಪರೇ ||27||
ಕೆಲವರು ಜ್ಞಾನವೇ ಸಂನ್ಯಾಸ ಎಂದರೆ, ಭೌತಿಕವಿಚಾರವುಳ್ಳ ಜನರು ಸ್ವಭಾವವೇ ಮುಖ್ಯ ಎನ್ನುತ್ತಾರೆ. ಕೆಲವರು ಎಲ್ಲವೂ ಸರಿ ಎನ್ನುತ್ತಾರೆ, ಕೆಲವರು ಎಲ್ಲವೂ ಸರಿಯಲ್ಲ ಎನ್ನುತ್ತಾರೆ.
ಏವಂ ವ್ಯುತ್ಥಾಪಿತೇ ಧರ್ಮೇ ಬಹುಧಾ ವಿಪ್ರಬೋಧಿತೇ |
ನಿಶ್ಚಯಂ ನಾಧಿಗಚ್ಛಾಮಃ ಶ್ರೇಯಃ ಕಿಮಿತಿ ಸತ್ತಮ ||28||
ಚತುರ್ಮುಖನೇ, ಹೀಗೆ ಧರ್ಮದ ವ್ಯವಸ್ಥೆಯು ಪರಸ್ಪರ ವಿರುದ್ಧವಾಗಿ ಅನೇಕ ವಿಧವಾಗಿ ಹೇಳಲ್ಪಟ್ಟಿರುವುದರಿಂದ ನಮಗೆ ಶ್ರೇಯಸ್ಸಾಧನ ಯಾವುದು ಎಂದು ತಿಳಿಯಲು ನಿಶ್ಚಯ ಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ.
ಇದಂ ಶ್ರೇಯ ಇದಂ ಶ್ರೇಯ ಇತ್ಯೇವಂ ವ್ಯುತ್ಥಿತೋ ಜನಃ |
ಯೋ ಹಿ ಯಸ್ಮಿನ್ ರತೋ ಧರ್ಮೇ ಸ ತಂ ಪೂಜಯತೇ ಸದಾ ||
ಈ ಮಾರ್ಗವೇ ಶ್ರೇಯಸ್ಕರವಾದುದು, ಈ ಮಾರ್ಗವೇ ಶ್ರೇಯಸ್ಕರವಾದುದು ಎಂದು ಹೇಳಿಕೊಂಡು ಅನೇಕ ಜನರು ಒಬ್ಬರ ಧರ್ಮವನ್ನು ಮತ್ತೊಬ್ಬರು ವಿರೋಧಿಸುತ್ತಿದ್ದಾರೆ. ಯಾವನು ಯಾವ ಧರ್ಮದಲ್ಲಿ ನಿರತನಾಗಿರುತ್ತಾನೋ ಅವನು ಆ ಧರ್ಮವನ್ನು ಮಾತ್ರ ಪೂಜಿಸುತ್ತಾನೆ.
ತೇನ ನೋಽವಹಿತಾ ಪ್ರಜ್ಞಾ ಮನಶ್ಚ ಬಹುಲೀಕೃತಮ್ |
ಏತದಾಖ್ಯಾತುಮಿಚ್ಛಾಮಃ ಶ್ರೇಯಃ ಕಿಮಿತಿ ಸತ್ತಮ ||30||
ಈ ಕಾರಣದಿಂದ ನಮ್ಮ ಬುದ್ಧಿಯಲ್ಲಿ ಗೊಂದಲವುಂಟಾಗಿದೆ. ಮನಸ್ಸು ಸಂಕಲ್ಪ- ವಿಕಲ್ಪವನ್ನು ಮಾಡುತ್ತಾ ಗೊಂದಲಕ್ಕೀಡಾಗಿದೆ. ಆದ್ದರಿಂದ ನಿನ್ನ ಮುಖದಿಂದ ನಮ್ಮ ಬದುಕಿನ ಶ್ರೇಯಸ್ಸು ಏನೆಂದು ತಿಳಿದುಕೊಳ್ಳಲು ಬಯಸುತ್ತೇವೆ.
ಅತಃ ಪರಂ ತು ಯದ್ ಗುಹ್ಯಂ ತದ್ ಭವಾನ್ ವಕ್ತುಮರ್ಹತಿ |
ಸತ್ತ್ವಕ್ಷೇತ್ರಜ್ಞಯೋಶ್ಚೈವ ಸಂಬಂಧಃ ಕೇನ ಹೇತುನಾ ||31||
ಈ ಎಲ್ಲ ಮಾರ್ಗಗಳಿಗಿಂತ ಶ್ರೇಷ್ಠವಾದ, ಗುಹ್ಯತಮವಾದ ರಹಸ್ಯವನ್ನು ನೀನು ಹೇಳಲು ಅರ್ಹನಾಗಿದ್ದಿ. ಸತ್ತ್ವಪದದಿಂದ ಉಪಲಕ್ಷಿತನಾದ ಗುಣತ್ರಯಾತ್ಮಕ ದೇಹವುಳ್ಳ ಜೀವನಿಗೂ ಕ್ಷೇತ್ರಜ್ಞ ಪದದಿಂದಲೂ ಹೇಳಲ್ಪಟ್ಟಿರುವ ಪರಮಾತ್ಮನಿಗೂ ಸಂಬಂಧವು ಏನು ಎಂಬುದಾಗಿ ತಿಳಿಸು.
ಏವಮುಕ್ತಃ ಸ ತೈರ್ವಿಪ್ರೈಃ ಭಗವಾನ್ ಲೋಕಭಾವನಃ |
ತೇಭ್ಯಃ ಶಶಂಸ ಧರ್ಮಾತ್ಮಾ ಯಾಥಾತಥ್ಯೇನ ಬುದ್ಧಿಮಾನ್ ||32||
ಹೀಗೆ ದಕ್ಷಪ್ರಜಾಪತಿಯೇ ಮೊದಲಾದ ಬ್ರಾಹ್ಮಣರು ಚತುರ್ಮುಖ ಬ್ರಹ್ಮನಲ್ಲಿ ಪ್ರಶ್ನಿಸಲಾಗಿ, ಪೂಜ್ಯನಾದ, ಸೃಷ್ಟಿಕಾರಣನಾದ, ಧರ್ಮಾತ್ಮನಾದ, ಬುದ್ಧಿವಂತನಾದ ಬ್ರಹ್ಮನು ಅವರ ಪ್ರಶ್ನೆಗಳಿಗೆಲ್ಲ ಯಥಾವತ್ತಾಗಿ ಉತ್ತರಿಸತೊಡಗಿದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಋಷೀಣಾಂ ಪುನಃ ಪ್ರಶ್ನಕರಣಂ ನಾಮ ಏಕೋನಪಂಚಾಶೋಽಧ್ಯಾಯಃ ||
|| ಅನುಗೀತಾಪರ್ವಣಿ ಚತುಃತ್ರಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

ಐವತ್ತನೆಯ ಅಧ್ಯಾಯ
ಚತುರ್ಮುಖ ಬ್ರಹ್ಮದೇವರು ಮಹರ್ಷಿಗಳನ್ನು ಕುರಿತು, ಧರ್ಮಪ್ರದರ್ಶನ ಪೂರ್ವಕವಾಗಿ ಅದನ್ನು ಅನುಷ್ಠಾನ ಮಾಡಿದಾಗ ಉಂಟಾಗುವ ಜ್ಞಾನವೇ ಪರಮಪುರುಷಾರ್ಥ ಸಾಧನವಾಗುತ್ತದೆ ಎಂದು ಹೇಳುತ್ತಾ, ದೃಷ್ಟಾಂತವನ್ನು ನೀಡಿದುದು. ಇದರಂತೆ ಕ್ಷೇತ್ರ-ಕ್ಷೇತ್ರಜ್ಞರ ಸಂಬಂಧವನ್ನು ಹೇಳಿದುದು.
ಹಾಗೆ ಪೃಥಿವ್ಯಾದಿ ಪಂಚಭೂತಗಳ ಗುಣಗಳನ್ನು ಪ್ರತಿಪಾದಿಸಿದುದು.
ಬ್ರಹ್ಮಾ

ಹಂತ ವಃ ಸಂಪ್ರವಕ್ಷ್ಯಾಮಿ ಯನ್ಮಾಂ ಪೃಚ್ಛಥ ಸತ್ತಮಾಃ |
ಸಮಸ್ತಮಿಹ ತತ್ತ್ವೇನ ಶ್ರುತ್ವಾ ಚೈವಾವಧಾರ್ಯತಾಮ್ ॥1॥
ಬ್ರಹ್ಮಾ ಋಷಿಶ್ರೇಷ್ಠರೇ, ನೀವು ಯಾವ ವಿಷಯವಾಗಿ ಪ್ರಶ್ನೆ ಮಾಡಿದ್ದೀರೋ ಆ ಎಲ್ಲ ಪ್ರಶ್ನೆಗಳಿಗೂ ನಿಮಗೆ ಉತ್ತರಿಸುತ್ತೇನೆ. ಏಕಾಗ್ರತೆಯಿಂದ ಶ್ರವಣ ಮಾಡಿರಿ.
ಅಹಿಂಸಾ ಸರ್ವಭೂತಾನಾಮೇತತ್ ಕೃತ್ಯತಮಂ ಮತಮ್ |
ಏತತ್ಪದಮನುದ್ವಿಗ್ನಂ ವರಿಷ್ಠಂ ಧರ್ಮಲಕ್ಷಣಮ್ ॥2॥
ಯಾವುದೇ ಪ್ರಾಣಿಗಳನ್ನಾಗಲಿ ಹಿಂಸೆ ಮಾಡದಿರುವುದು ಶ್ರೇಷ್ಠವಾದ ಕರ್ತವ್ಯ ಎನಿಸಿದೆ. ಅಹಿಂಸಾ ವ್ರತವು ಯಾವುದೇ ಉದ್ವೇಗವಿಲ್ಲದೆ ಶ್ರೇಷ್ಠವೆನಿಸಿದ ಧರ್ಮದ ಲಕ್ಷಣವಾಗಿದೆ.
ಜ್ಞಾನಾನ್ನಿಃಶ್ರೇಯಸಂ ಪ್ರಾಹುರ್ವೃದ್ಧಾ ನಿಶ್ಚಯದರ್ಶಿನಃ |
ತಸ್ಮಾಜ್ಜ್ಞಾನೇನ ಶುದ್ಧೇನ ಮುಚ್ಯತೇ ಸರ್ವಕಿಲ್ಬಿಷೈಃ ॥3॥
ಬ್ರಹ್ಮಸೂತ್ರದಲ್ಲಿ ಹೇಳಿದ ಪ್ರಕಾರದಂತೆ, ಉಪಕ್ರಮಾದಿ ಲಿಂಗಗಳಿಂದ ಸಕಲ ಗುಣಪೂರ್ಣನಾದ, ನಿರ್ದುಷ್ಟನಾದ, ಸಕಲ ಜಗತ್ತಿಗಿಂತ ಭಿನ್ನನಾದ ನಾರಾಯಣನನ್ನು ಶ್ರುತಿವಾಕ್ಯಗಳು ನಿಶ್ಚಯ ಮಾಡಿವೆ. ಅಂತಹ ನಿಶ್ಚಯನಾದ ಪರಮಾತ್ಮನನ್ನು ಕಾಣುವ ಜ್ಞಾನವೇ ಶ್ರೇಷ್ಠವಾದ ಕಲ್ಯಾಣ ಸಾಧನ ಎಂದು ನಿಶ್ಚಯ ಜ್ಞಾನ ಹೊಂದಿದ ಜ್ಞಾನಿಗಳು, ದೇವತೆ-ಋಷಿ ಮುಂತಾದವರು ಹೇಳುತ್ತಾರೆ. `ತಮೇವಂ ವಿದ್ವಾನ್' ಮುಂತಾದ ಶ್ರುತಿಯಲ್ಲಿ ಹೇಳಿದ ರೀತಿಯಲ್ಲಿ ಪುರುಷಸೂಕ್ತಪ್ರತಿಪಾದ್ಯನಾದ ನಾರಾಯಣನ ಜ್ಞಾನವನ್ನು ಹೊಂದಿದರೆ ಸಮಸ್ತ ಪಾಪಗಳಿಂದ ಮುಕ್ತರಾಗಿ ಮೋಕ್ಷ ಹೊಂದುತ್ತಾರೆ.
ಹಿಂಸಾಪರಾಶ್ಚ ಲೋಕೇ ಯೇ ಯೇ ಚ ನಾಸ್ತಿಕವೃತ್ತಯಃ |
ಲೋಭಮೋಹಸಮಾಯುಕ್ತಾಸ್ತೇ ವೈ ನಿರಯಗಾಮಿನಃ ॥4॥
ಯಾರು ಜಗತ್ತಿನಲ್ಲಿ ಪ್ರಾಣಿ ಹಿಂಸಕರೋ, ನಾಸ್ತಿಕರೋ, ಅಂಥವರು ಲೋಭ-ಮೋಹದಿಂದ ತುಂಬಿದ ಅವರು ನರಕದಲ್ಲಿ ಬೀಳುತ್ತಾರೆ.
ಆಶೀರ್ಯುಕ್ತಾನಿ ಕರ್ಮಾಣಿ ಕುರ್ವತೇ ಯೇ ತ್ವತಂದ್ರಿತಾಃ |
ತೇಽಸ್ಮಿನ್ ಲೋಕೇ ಪ್ರಮೋದಂತೇ ಜಾಯಮಾನಾಃ ಪುನಃ ಪುನಃ ॥5॥
ಯಾರು ಆಲಸ್ಯವಿಲ್ಲದೆ ಸಕಾಮ ಕರ್ಮಗಳನ್ನೇ ಅನುಷ್ಠಾನ ಮಾಡುತ್ತಿರುತ್ತಾರೋ ಅವರು ಈ ಲೋಕದಲ್ಲಿ ಪುನಃ ಪುನಃ ಹುಟ್ಟಿ ಆನಂದವಾಗಿರುತ್ತಾರೆ.
ಕುರ್ವತೇ ಯೇ ತು ಕರ್ಮಾಣಿ ಶ್ರದ್ದಧಾನಾ ವಿಪಶ್ಚಿತಃ |
ಅನಾಶೀರ್ಯೋಗಸಂಯುಕ್ತಾಸ್ತೇ ಧೀರಾಃ ಸಾಧುದರ್ಶಿನಃ ॥6॥
ಯಾರು ವಿದ್ವಾಂಸರಾಗಿ, ನಿಷ್ಕಾಮಕರ್ಮದಲ್ಲಿ ಆಸಕ್ತರಾಗಿ, ಧ್ಯಾನಯೋಗ ರತರಾಗಿರುತ್ತಾರೋ ಅವರೇ ಸಜ್ಜನರು, ಧೀರರು ಎನಿಸಿಕೊಳ್ಳುತ್ತಾರೆ.
ಪೀಠಿಕೆ ಜೀವನಿಗೂ ದೇಹಕ್ಕೂ ಆಕಾಶಕ್ಕೂ ದೇಹಕ್ಕೂ ಇರುವ ಸಂಬಂಧದಂತೆ ಕೇವಲ ದೇಹದ ಸಂಬಂಧವು ಮಾತ್ರ ಇರುವುದಲ್ಲ, ಹೊರತು ಅಭಿಮಾನವಿಶೇಷವು ಈ ದೇಹದ ಸಂಬಂಧದಿಂದ ಉಂಟಾಗುತ್ತದೆ ಎಂದು ಹಿಂದೆ ನಿರೂಪಿಸಿ, ಪುನಃ ದೇಹ ವಿಯೋಗವೆಂಬ ಮೋಕ್ಷವು ಯಾವಾಗ ಆಗುತ್ತದೆ ಎಂದು ಆಶಂಕಿಸಿಕೊಂಡು, ಆವರಕವಾದ ಅತ್ತಿ ಹಣ್ಣು ಸೊಳ್ಳೆಗಳ ಪಾಲಿಗೆ ಆಹಾರವೆನಿಸಿದೆ. ಆ ಅತ್ತಿಹಣ್ಣಿನಲ್ಲಿರುವ ಸೊಳ್ಳೆಗಳು ತಮ್ಮಿಂದ ಉಪಭೋಜ್ಯವಾದ ಅತ್ತಿಯ ಹಣ್ಣನ್ನು ನಾಶಗೊಳಿಸಿದ ಬಳಿಕ ಅಲ್ಲಿಂದ ಬಿಡುಗಡೆಯಾಗುವಂತೆ ಜೀವರು ಉಪಭೋಗ್ಯವೆನಿಸಿದ ಈ ಶರೀರದ ನಾಶವಾದ ಬಳಿಕ ಬಿಡುಗಡೆಯನ್ನು ಹೊಂದುತ್ತಾರೆ ಎಂದು ಹಿಂದೆ ಹೇಳಿದ್ದರು. ಈಗ ಅದನ್ನೇ ದೃಷ್ಟಾಂತವನ್ನಾಗಿ ಹೇಳುತ್ತಾ, ಮೋಕ್ಷದ ಪ್ರಕಾರವನ್ನು ವಿಸ್ತಾರವಾಗಿ ಹೇಳಲು ಆರಂಭಿಸುತ್ತಾರೆ-
ಅತಃ ಪರಂ ಪ್ರವಕ್ಷ್ಯಾಮಿ ಸತ್ತ್ವಕ್ಷೇತ್ರಜ್ಞಯೋರ್ಯಥಾ |
ಸಂಯೋಗೋ ವಿಪ್ರಯೋಗಶ್ಚ ತನ್ನಿಬೋಧತ ಸತ್ತಮಾಃ ॥7॥
ಇನ್ನು ಮುಂದೆ ನಾನು ಸತ್ತ್ವಪದ ಉಪಲಕ್ಷಿತ ತ್ರಿಗುಣಾತ್ಮಕ ದೇಹಕ್ಕೂ, ಕ್ಷೇತ್ರಜ್ಞನೆನಿಸಿದ ಜೀವನಿಗೂ ಹೇಗೆ ಹಿಂದೆ ಸಂಬಂಧಗಳನ್ನು ವಿವರಿಸಿದ್ದೆನೋ ಅದರಂತೆ `ದ್ವಾಸುಪರ್ಣಾ ಸಯುಜಾ ಸಖಾಯೌ' ಎಂಬ ಶ್ರುತಿಯಲ್ಲಿ ಹೇಳಿದ ಜೀವ-ಬ್ರಹ್ಮರ ಸಂಬಂಧ-ವಿಯೋಗಗಳ ಬಗ್ಗೆ ಇಲ್ಲಿ ವಿವರಿಸುತ್ತೇನೆ, ಕೇಳಿಸಿಕೊಳ್ಳಿರಿ.
ವಿಷಯೋ ವಿಷಯಿತ್ವಂ ಚ ಸಂಬಂಧೋಽಯಮಿಹೋಚ್ಯತೇ |
ವಿಷಯೀ ಪುರುಷೋ ನಿತ್ಯಂ ಸತ್ತ್ವಂ ಚ ವಿಷಯಃ ಸ್ಮೃತಃ ॥8॥
ವ್ಯಾಖ್ಯಾತಂ ಪೂರ್ವಕಲ್ಪೇನ ಮಶಕೋದುಂಬರಂ ಯಥಾ |
ಭುಜ್ಯಮಾನಂ ನ ಜಾನೀತೇ ನಿತ್ಯಂ ಸತ್ತ್ವಮಚೇತನಮ್ ॥9॥
ಯಸ್ತ್ವೇವಂ ತಂ ವಿಜಾನೀತೇ ಯೋ ಭುಂಕ್ತೇ ಯಚ್ಚ ಭುಜ್ಯತೇ |
ಅನಿತ್ಯಂ ದ್ವಂದ್ವಸಂಯುಕ್ತಂ ಸತ್ತ್ವಮಾಹುರ್ಮನೀಷಿಣಃ ॥10॥
ಹಿಂದೆ ಅತ್ತಿಹಣ್ಣು-ಸೊಳ್ಳೆಗಳು ಎಂದು ಜೀವೇಶ್ವರರ ಭೇದ ವಿಷಯದಲ್ಲಿ ಹೇಗೆ ದೃಷ್ಟಾಂತವನ್ನು ಹೇಳಿದ್ದರೋ ಅದರಂತೆ ಈ ದೇಹಕ್ಕೂ ಜೀವರಿಗೂ ಇದೇ ದೃಷ್ಟಾಂತವಾಗುತ್ತದೆ. ಈ ದೇಹದಲ್ಲಿ ಕುಳಿತು ಅನೇಕ ಸುಖಗಳನ್ನು ಜೀವನು ಅನುಭವಿಸುತ್ತಿದ್ದರೂ ತನ್ನಿಂದ ಭಿನ್ನವಾದ ಈ ದೇಹವನ್ನು ಮಮತೆಯಿಂದ ಭಿನ್ನವೆಂದು ತಿಳಿಯುವುದಿಲ್ಲ. ಯಾವ ಜೀವನು ಈ ದೇಹವನ್ನು ತಿಳಿದಿರುವುದಿಲ್ಲವೋ, ಯಾವ ದೇಹದಲ್ಲಿ ವಿಷಯಸುಖಗಳನ್ನು ಅನುಭವಿಸುತ್ತಾನೋ, ಅಂತಹ ದೇಹವು ತ್ರಿಗುಣಾತ್ಮಕವಾಗಿದೆ, ದ್ವಂದ್ವಸಂಯುಕ್ತವಾಗಿದೆ, ಅಯುಕ್ತವಾಗಿದೆ ಎಂದು ಜ್ಞಾನಿಗಳು ಹೇಳುತ್ತಾರೆ.
ವ್ಯಾಖ್ಯಾನವಿಶೇಷ ಇಲ್ಲಿ ದೇಹಾದಿಗಳು ವಿಷಯ. ತನ್ನ ಸಾಕ್ಷಿಯಿಂದ ಆ ದೇಹಾದಿಗಳನ್ನು ನನ್ನದು ಎಂದು ನೋಡುವ ಜೀವಾತ್ಮನು

ವಿಷಯೀ. ಈ ಸಂಸಾರವೇ ದೇಹಕ್ಕೂ, ಜೀವಕ್ಕೂ ಇರುವ ಸಂಬಂಧ ಹೊರತು ಕಾಲ-ಆಕಾಶಾದಿಗಳಂತೆ ಸಾಧಾರಣವಾದ ಸಂಯೋಗವೆಂಬ ಸಂಬಂಧವನ್ನು ಇಲ್ಲಿ ಗ್ರಹಿಸಬಾರದು. ಹಿಂದಿನಂತೆ ಇಲ್ಲಿಯೂ ಜೀವೇಶ್ವರ ವಿಷಯದಲ್ಲಿ ಅತ್ತಿಹಣ್ಣು-ಸೊಳ್ಳೆಗಳು ಎಂಬ ದೃಷ್ಟಾಂತವನ್ನೇ ಇಟ್ಟುಕೊಳ್ಳಬೇಕು. ಅತ್ತಿಹಣ್ಣು ಸೊಳ್ಳೆಗಳಿಗೆ ಆಧಾರವಾಗಿದೆ. ಅದರಂತೆ ಭಗವಂತನು ಜೀವರಿಗೆ ಆಧಾರವಾಗಿದ್ದಾನೆ ಎಂದು ಹಿಂದೆ ದೃಷ್ಟಾಂತವನ್ನು ನೀಡಿದ್ದರು. ಅತ್ತಿಹಣ್ಣು ರಸದ ಮೂಲಕ ಸೊಳ್ಳೆಗಳಿಗೆ ಸುಖಕ್ಕೆ ಆಶ್ರಯವಾಗಿರುವುದರಿಂದ, ಸೊಳ್ಳೆಗಳಿಗೆ ಆವರಕವೂ ಆಗಿರುವುದರಿಂದ ಜೀವದೇಹದಂತೆ ಇರುವ ದೇಹಕ್ಕೂ ದೃಷ್ಟಾಂತವಾಗುತ್ತದೆ. ಹೀಗೆ ಎರಡು ಪಕ್ಷಗಳನ್ನು ಸೂಚಿಸಲು `ಪೂರ್ವಕಲ್ಪೇನ' ಹಿಂದೆ ಹೇಳುವ ರೀತಿ, ಈಗ ಹೇಳುವ ರೀತಿ ಎಂದು ತಿಳಿಸಿದ್ದಾರೆ. ಹಿಂದೆ ಈಶ್ವರ-ಜೀವರಿಗೆ ಭೇದವನ್ನು ಹೇಳಿದ್ದಾರೆ. ಈಗ ದೇಹಕ್ಕೂ ಜೀವರಿಗೂ ಭೇದವನ್ನು ತಿಳಿಸುತ್ತಿದ್ದಾರೆ. ಹಿಂದೆ ಏಕಕಾಲದಲ್ಲಿಯೇ ಏಕತ್ವವನ್ನೂ, ನಾನಾತ್ವವನ್ನೂ ಜೀವದೇಹ ವಿಷಯದಲ್ಲಿ ಹೇಳಲು ಬರುವುದಿಲ್ಲವಾದ್ದರಿಂದ ಬಹುಜೀವಾಶ್ರಯನಾಗಿರುವ ಭಗವಂತನೇ ಅಲ್ಲಿ ನಿರೂಪಿತನಾಗಿದ್ದಾನೆ. ಇಲ್ಲಿಯಾದರೂ ಏಕತ್ವ-ನಾನಾತ್ವಗಳ ಪ್ರಸ್ತಾವವು ಮೂಲದಲ್ಲಿ ಹೇಳದಿರುವುದರಿಂದ ದೇಹ-ದೇಹಿಗಳ ಸಂಯೋಗ-ವಿಯೋಗಗಳನ್ನೇ ಹೇಳಿರುವುದರಿಂದ ಜೀವ ಮತ್ತು ದೇಹದ ವಿಷಯದಲ್ಲಿಯೇ ವಿವಕ್ಷಾಭೇದದಿಂದ ಅತ್ತಿಹಣ್ಣು-ಸೊಳ್ಳೆಗಳ ದೃಷ್ಟಾಂತವನ್ನು ಕೊಟ್ಟಿದ್ದಾರೆಂದು ತಿಳಿಯಬೇಕು.

ನಿರ್ದ್ವಂದ್ವೋ ನಿಷ್ಕಲೋ ನಿತ್ಯಂ ಕ್ಷೇತ್ರಜ್ಞೋ ನಿಷ್ಕಲಾತ್ಮಕಃ |
ಸಮಾಸಜ್ಞಾನತತ್ತ್ವೇನ ಯದಾ ಸರ್ವತ್ರ ದೃಶ್ಯತೇ ॥11॥

ಕ್ಷೇತ್ರಜ್ಞನೆನಿಸಿದ ಈ ದೇಹದಲ್ಲಿ ಜೀವಾಂತರ್ಯಾಮಿಯಾಗಿರುವ ಪರಮಾತ್ಮನು ನಿಷ್ಕಲನೆನಿಸಿದ್ದಾನೆ. ಅರ್ಥಾತ್ ಪ್ರಾಕೃತ-ಷೋಡಶ ಕಲೆಗಳಿಂದ ರಹಿತನಾಗಿದ್ದಾನೆ. ಶೀತೋಷ್ಣಾದಿ ದ್ವಂದ್ವಗಳಿಂದ ದೂರನಾಗಿದ್ದಾನೆ. ಇವನ ಸ್ವರೂಪವನ್ನು ಬ್ರಹ್ಮಸೂತ್ರದಲ್ಲಿ ಸಂಕ್ಷಿಪ್ತವಾಗಿ ತಿಳಿಸಿಕೊಟ್ಟಿದ್ದಾರೆ. ಅಂತಹ ಬ್ರಹ್ಮಸೂತ್ರೋಕ್ತ ತತ್ತ್ವದಿಂದ ಅಣುರೇಣು ತೃಣ-ಕಾಷ್ಠಗಳಲ್ಲಿ ಸನ್ನಿಹಿತನಾದ ಪರಮಾತ್ಮನನ್ನು ಜೀವನು ಯಾವಾಗ ನೋಡುತ್ತಾನೋ ಆಗ ಈ ದೇಹದ ಅಭಿಮಾನವನ್ನು ಬಿಡುತ್ತಾನೆ. ಕಮಲದ ಎಲೆಯ ಮೇಲೆ ಅಸಂಗವಾಗಿ ಕುಳಿತ ನೀರಿನ ಹನಿಯಂತೆ ಈ ದೇಹದಲ್ಲಿ ಅಸಂಗನಾಗಿ ವಾಸಿಸುತ್ತಾನೆ.

ನ ಸಜ್ಜತೇ ತದಾ ಸತ್ತ್ವಮಾಪಃ ಪುಷ್ಕರಪತ್ರವತ್ |
ಸರ್ವೈರಪಿ ಗುಣೈರ್ವಿದ್ವಾನ್ ವ್ಯತಿಷಕ್ತೋ ನ ಲಿಪ್ಯತೇ ॥12॥

ಕಮಲಪತ್ರದ ಎಲೆಯ ಮೇಲೆ ಕುಳಿತಿರುವ ನೀರು ಆ ಪತ್ರದ ಸಂಬಂಧವನ್ನು ಹೇಗೆ ಹೊಂದಿರುವುದಿಲ್ಲವೋ ಹಾಗೆ ಈ ದೇಹದಲ್ಲಿ ಸನ್ನಿಹಿತನಾಗಿದ್ದರೂ ದೇಹಾಭಿಮಾನ ಹೊಂದಿರುವುದಿಲ್ಲ. ಪ್ರಾಕೃತರೂಪಾದಿ ಗುಣಗಳನ್ನು ಸ್ವೀಕರಿಸುತ್ತಿದ್ದರೂ ಪರಮಾತ್ಮನ ಜ್ಞಾನವನ್ನು ಹೊಂದಿದ ಸಾಧಕನು ದೇಹದ ಸಂಬಂಧದಲ್ಲಿ ಲಿಪ್ತನಾಗುವುದಿಲ್ಲ.

ಜಲಬಿಂದುರ್ಯಥಾ ಲೋಲಃ ಪದ್ಮಿನೀಪತ್ರಸಂಸ್ಥಿತಃ |
ಏವಮೇವಾಪ್ಯಸಂಯುಕ್ತಃ ಪುರುಷಃ ಸ್ಯಾನ್ನ ಸಂಶಯಃ ॥13॥

ಯಾವ ರೀತಿಯಾಗಿ ಕಮಲದ ಪತ್ರದ ಮೇಲೆ ಬಿದ್ದಿರುವ ಚಂಚಲವಾದ ನೀರಿನ ಹನಿಯು ಕಮಲಪತ್ರದಲ್ಲಿ ಇದ್ದರೂ ಲೇಪವನ್ನು ಹೊಂದಿರುವುದಿಲ್ಲವೋ ಅದೇ ರೀತಿಯಾಗಿ ಸಮಸ್ತ ಗುಣಗಳ ಸಂಬಂಧವನ್ನಿಟ್ಟುಕೊಂಡಿದ್ದರೂ ಅವುಗಳಿಂದ ಲಿಪ್ತನಾಗುವುದಿಲ್ಲ. ಇದರಲ್ಲಿ ಯಾವ ಸಂಶಯವೂ ಇಲ್ಲ.

ದ್ರವ್ಯಮಾತ್ರಮಭೂತ್ ಸತ್ತ್ವಂ ಪುರುಷಸ್ಯೇತಿ ನಿಶ್ಚಯಃ |
ಯಥಾ ದ್ರವ್ಯಂ ಚ ಕರ್ತಾ ಚ ಸಂಯೋಗೋಽಪ್ಯನಯೋಸ್ತಥಾ ॥14॥

ಜೀವನು ಉಪಭೋಗಿಸಲು ಅರ್ಹವಾದ ಧನ-ಕನಕಾದಿ ದ್ರವ್ಯಗಳಿಗೆ ಸತ್ತ್ವ ಎಂದು ಹೆಸರು. ದ್ರವ್ಯಕ್ಕೂ ಕರ್ತೃವಿಗೂ ಯಾವ ಸಂಬಂಧವಿದೆಯೋ ಅದೇ ಸಂಬಂಧವು ಪುರುಷನಿಗೂ ದೇಹಕ್ಕೂ ಇದೆ. ಸಂಯೋಗವೇ ಸಂಬಂಧವಾಗಿ ಇದೆ. ಹಿಂದೆ ಹೇಳಿದ ಆಕಾಶದ ಸಂಬಂಧದಂತೆ ಎಂದು ತಿಳಿಯಬೇಕು.

ಯಥಾ ಪ್ರದೀಪಮಾದಾಯ ಕಶ್ಚಿತ್ ತಮಸಿ ಗಚ್ಛತಿ |
ತಥಾ ಸತ್ತ್ವಪ್ರದೀಪೇನ ಗಚ್ಛಂತಿ ಪರಮೈಷಿಣಃ ॥15॥

ಭಗವದ್ಗೀತೆಯಲ್ಲಿ `ಸತ್ತ್ವಾತ್ ಸಂಜ್ಞಾಯತೇ ಜ್ಞಾನಮ್' ಎಂದು ಶ್ರೀಕೃಷ್ಣನ ವಚನವಿದೆ. ಸತ್ತ್ವಗುಣದಿಂದ ಉತ್ಪನ್ನವಾದ ಜ್ಞಾನವೆಂಬ ದೀಪವನ್ನು ಸ್ವೀಕರಿಸಿ ಅಜ್ಞಾನದ ಮಾರ್ಗವನ್ನು ದಾಟುತ್ತಾನೆ. ಕತ್ತಲಿನಲ್ಲಿ ದೀಪವನ್ನು ಹಿಡಿದು ಸಂಚರಿಸುವಂತೆ ಸತ್ತ್ವಗುಣೋತ್ಪನ್ನವೆಂಬ ಜ್ಞಾನವೆಂಬ ದೀಪದಿಂದ ಜ್ಞಾನಿಗಳು ಪ್ರಯಾಣ ಮಾಡುತ್ತಾರೆ.

ಯಾವದ್ ದ್ರವ್ಯಂ ಗುಣಸ್ತಾವತ್ ಪ್ರದೀಪಃ ಸಂಪ್ರಕಾಶತೇ |
ಕ್ಷೀಣೇ ದ್ರವ್ಯೇ ಗುಣೇ ಜ್ಯೋತಿರಂತರ್ಧಾನಾಯ ಗಚ್ಛತಿ ॥16॥

ಎಲ್ಲಿಯವರೆಗೆ ದೀಪದಲ್ಲಿ ಎಣ್ಣೆ-ಬತ್ತಿಗಳಿವೆಯೋ ಅಲ್ಲಿಯವರೆಗೂ ದೀಪವು ಬೆಳಗುತ್ತಲೇ ಇರುತ್ತದೆ. ದ್ರವ್ಯಗುಣಗಳು ಕ್ಷೀಣಿಸಿದ ಬಳಿಕ ಜ್ಯೋತಿಯು ನಂದಿ ಹೋಗುತ್ತದೆ. ಇದರಂತೆ ದೇಹದಲ್ಲಿ ಪಂಚಭೂತಗಳು ಎಂಬ ದ್ರವ್ಯವು, ರೂಪ- ರಸಾದಿಗಳೆಂಬ ಗುಣಗಳು ದಂಡಪಟಗಳಂತೆ ಎಲ್ಲಿಯ ತನಕ ಇದ್ದಾವೋ ಅಲ್ಲಿಯ ತನಕವೂ ಜ್ಯೋತಿರೂಪನಾದ ಜೀವನು ಬೆಳಗುತ್ತಿರುತ್ತಾನೆ. ಈ ಪಂಚಭೂತಗಳಿಂದ ವಿಹೀನವಾದ ಬಳಿಕ ಆತ್ಮನಲ್ಲಿಯೇ ಜ್ಞಾನವು ಸುಪ್ತವಾಗಿರುತ್ತದೆ.

ವ್ಯಕ್ತಃ ಸತ್ತ್ವಗುಣಸ್ತ್ವೇವಂ ಪುರುಷೋ ದ್ರವ್ಯಮುಚ್ಯತೇ |
ಏತದ್ ವಿಪ್ರಾ ವಿಜಾನೀತ ಹಂತ ಭೂಯೋ ಬ್ರವೀಮಿ ವಃ ॥17॥

ಗುಣಾತ್ಮಕವಾದ ದೇಹವು ಯಾವನಿಗೆ ಇದೆಯೋ ಅಂತಹ ಪುರುಷನು ಸತ್ತ್ವಗುಣನೂ, ವ್ಯಕ್ತನೂ, ದ್ರವ್ಯನೂ ಎಂದು ಕರೆಸಿಕೊಳ್ಳುತ್ತಾನೆ. ಈ ವಿಷಯದಲ್ಲಿ ಮಹರ್ಷಿಗಳೇ, ಇನ್ನೂ ಹೆಚ್ಚಾಗಿ ಹೇಳುತ್ತೇನೆ, ತಿಳಿದುಕೊಳ್ಳಿರಿ.

ಸಹಸ್ರೇಣಾಪಿ ದುರ್ಮೇಧಾ ನ ಬುದ್ಧಿಮಧಿಗಚ್ಛತಿ |
ಚತುರ್ಥೇನಾಪ್ಯಥಾಂಶೇನ ಬುದ್ಧಿಮಾನ್ ಸುಖಮೇಧತೇ ॥18॥

ಮಂದಬುದ್ಧಿಯುಳ್ಳವನು ಸಹಸ್ರ ಉಪದೇಶದಿಂದಲೂ, ಉಪಾಯದಿಂದಲೂ ತತ್ತ್ವಜ್ಞಾನವನ್ನು ಹೊಂದಲಾರ. ಯಾವನು ಬುದ್ಧಿವಂತನಾದ ಮೂವತ್ತೆರಡು ತುತ್ತುಗಳನ್ನು ನಾಲ್ಕರಿಂದ ಭಾಗಿಸಿ ಎಂಟು ತುತ್ತಿನಲ್ಲಿ ಜೀವನವನ್ನು ನಿರ್ವಹಿಸುತ್ತಿರುತ್ತಾನೋ ಅಂತಹವನು ಈ ಜ್ಞಾನವನ್ನು ಪಡೆದು ಸುಖವನ್ನು ಹೊಂದುತ್ತಾನೆ. ಅರ್ಥಾತ್ ವಿರಕ್ತನಾದ ಸಂನ್ಯಾಸಿ ತತ್ತ್ವಜ್ಞಾನವನ್ನು ಪಡೆದು ಸುಖ ಹೊಂದುತ್ತಾನೆ ಎಂದು ಭಾವ.
ಏವಂ ಧರ್ಮಸ್ಯ ವಿಜ್ಞೇಯಂ ಸಂಸಾಧನಮುಪಾಯತಃ |
ಉಪಾಯಜ್ಞೋ ಹಿ ಮೇಧಾವೀ ಸುಖಮತ್ಯಂತಮಶ್ನುತೇ ॥19॥
ಹೀಗೆ ವಿಚಾರ ಮಾಡಿ ಯಾವುದಾದರೂ ಉಪಾಯದಿಂದ ಧರ್ಮಸಾಧನೆಯ ಜ್ಞಾನವನ್ನು ಪಡೆದುಕೊಳ್ಳಬೇಕು. ಉಪಾಯವನ್ನು ತಿಳಿದ ಮೇಧಾವಿ ಪುರುಷನು ಪರಮ ಸುಖವನ್ನು ಹೊಂದುತ್ತಾನೆ.
ಯಥಾಽಧಾನ್ಯಮುಪಾದೇಯಂ ಪ್ರವಪನ್ ಮಾನವಃ ಕ್ವಚಿತ್ |
ಕ್ಲೇಶೇನ ಯಾತಿ ಮಹತಾ ವಿನಶ್ಯತ್ಯಂತರಾಽಪಿ ಚ ॥20॥
ಹೇಗೆ ಒಬ್ಬ ಯಾತ್ರಿಕನು ಆಹಾರದ ಬುದ್ಧಿಯನ್ನು ಸ್ವೀಕರಿಸದೆ ಪ್ರಯಾಣಕ್ಕೆ ಹೊರಟರೆ ದುಃಖಕ್ಕೆ ತುತ್ತಾಗುತ್ತಾನೋ, ಆಹಾರವನ್ನು ಸ್ವೀಕರಿಸದೆ ಮಾರ್ಗದ ಮಧ್ಯದಲ್ಲಿ ವಿನಾಶವನ್ನು ಹೊಂದುತ್ತಾನೋ, ಇದರಂತೆ ಕರ್ಮಫಲವನ್ನು ತಿಳಿಯದ ಮನುಷ್ಯನು ದುಃಖಕ್ಕೆ ಈಡಾಗುತ್ತಾನೆ. ಅಥವಾ ಕ್ಷೇತ್ರಗಳಲ್ಲಿ ಬಿತ್ತನೆ ಮಾಡಲು ಯೋಗ್ಯವಾದ ಬೀಜವನ್ನು ಬಿತ್ತಿದರೂ ತಡೆಗಳು ಬಂದಾಗ ಆ ಬೀಜದ ಫಲವನ್ನು ಹೇಗೆ ಹೊಂದುವುದಿಲ್ಲವೋ ಅದರಂತೆ ಯೋಗ್ಯವಾದ ಕರ್ಮಗಳನ್ನು ಕಷ್ಟಪಟ್ಟು ಆಚರಿಸಿದರೂ ಕರ್ಮಮಾರ್ಗದಲ್ಲಿ ತಡೆಗಳು ಬಂದಾಗ ಉದ್ದಿಷ್ಟವಾದ ಫಲವನ್ನು ಪಡೆಯುವುದಿಲ್ಲ. ಹೀಗಾಗಿ ಜ್ಞಾನಮಾರ್ಗವೇ ಶ್ರೇಯಸ್ಸಾಧನವೆನಿಸಿದೆ.
ತಥಾ ಕರ್ಮಸು ವಿಜ್ಞೇಯಂ ಫಲಂ ಭವತಿ ವಾ ನ ವಾ |
ಪುರುಷಸ್ಯಾತ್ಮನಿಃಶ್ರೇಯಃ ಶುಭಾಶುಭನಿದರ್ಶನಮ್ ॥21॥
ಶುಭಾಶುಭ ಕರ್ಮಗಳಲ್ಲಿ ಫಲವಾಗುತ್ತದೆಯೋ ಇಲ್ಲವೋ ಎಂದು ಜೀವನಿಗೆ ತಿಳಿಯುವುದಿಲ್ಲ.
ಯಥಾ ಚ ದೀರ್ಘಮಧ್ವಾನಂ ಪದ್ಭ್ಯಾಮೇವ ಪ್ರವರ್ತತೇ |
ಅದೃಷ್ಟಪೂರ್ವಂ ಸಹಸಾ ತತ್ತ್ವದರ್ಶನವರ್ಜಿತಃ ॥22॥
ಯಾವ ರೀತಿಯಲ್ಲಿ ಹಿಂದೆ ಎಂದೂ ನೋಡದ, ಸುದೀರ್ಘವಾದ ದಾರಿಯನ್ನು ಕಾಲ್ನಡಿಗೆಯಲ್ಲಿಯೇ ಪ್ರಯಾಣ ಮಾಡಿ ಹೋಗಬೇಕೆಂದು ಹೊರಟು, ಸ್ಥಾನವನ್ನು ತಲುಪಲು ಕಷ್ಟ ಹೊಂದುವನೋ ಇದೇ ರೀತಿ ತತ್ತ್ವಜ್ಞಾನರಹಿತನಾದವನು ತಲುಪಬೇಕಾದ ಕರ್ಮಫಲವನ್ನು ಕರ್ಮಮಾರ್ಗದಿಂದ ಹೊಂದಲಾಗುವುದಿಲ್ಲ.
ತಮೇವ ಚ ಯಥಾಽಧ್ವಾನಂ ರಥೇನೈವಾಶುಗಾಮಿನಾ |
ಯಾಯಾದಶ್ವಪ್ರಯುಕ್ತೇನ ತಥಾ ಬುದ್ಧಿಮತಾಂ ಗತಿಃ ॥23॥
ಅದೇ ದೀರ್ಘವಾದ, ಹಿಂದೆಂದೂ ಕಾಣದ ಮಾರ್ಗವನ್ನು, ವೇಗವಾಗಿ ಸಾಗುವ ಕುದುರೆಗಳನ್ನು ಹೂಡಿರುವ ರಥದಲ್ಲಿ ಕುಳಿತು ಶೀಘ್ರವಾಗಿ ದಾಟುತ್ತಾನೋ ಅದರಂತೆ ಜ್ಞಾನಿಗಳು ಜ್ಞಾನಮಾರ್ಗದಿಂದ ಉದ್ದಿಷ್ಟವಾದ ಗುರಿಯನ್ನು ಮುಟ್ಟುತ್ತಾರೆ.
ಊರ್ಧ್ವಂ ಪರ್ವತಮಾರುಹ್ಯ ನಾನ್ವವೇಕ್ಷೇತ ಭೂತಲಮ್ |
ರಥೇನ ರಥಿನಂ ಪಶ್ಯೇತ್ ಕ್ಲಿಶ್ಯಮಾನಮಚೇತನಮ್ ॥24॥
ಯಾವ ರೀತಿಯಾಗಿ ಎತ್ತರದ ಬೆಟ್ಟವನ್ನು ಏರಿದವನು ಭೂಮಿಯನ್ನು ನೋಡುವುದಿಲ್ಲವೋ, ರಥದಲ್ಲಿ ಪ್ರಯಾಣ ಮಾಡುವವನು ಕಾಲ್ನಡಿಗೆಯಲ್ಲಿ ಹೋಗುವವರ ದುಃಖವನ್ನು ಅರಿಯುವುದಿಲ್ಲವೋ, ಅದೇ ರೀತಿ ಜ್ಞಾನಮಾರ್ಗದಲ್ಲಿ ಸಾಗುವ ಸಾಧಕನು ಜಗನ್ನಿಮಿತ್ತವಾದ ಕರ್ಮಮಾರ್ಗಗಳನ್ನು ನೋಡುವುದಿಲ್ಲ.
ಯಾವದ್ ರಥಪಥಸ್ತಾವದ್ ರಥೇನ ಸ ತು ಗಚ್ಛತಿ |
ಕ್ಷೀಣೇ ರಥಪಥೇ ಪ್ರಾಜ್ಞೋ ರಥಮುತ್ಸೃಜ್ಯ ಗಚ್ಛತಿ ॥25॥
ಯಾವ ರೀತಿಯಾಗಿ ಯಾತ್ರಿಕನು ರಥದಲ್ಲಿ ಸಾಗುತ್ತಾ, ರಥಕ್ಕೆ ಯೋಗ್ಯವಾದ ದಾರಿಯು ಮುಗಿಯುವ ತನಕ ರಥದಲ್ಲಿಯೇ ಪ್ರಯಾಣ ಮಾಡುತ್ತಾನೋ ರಥಪಥವು ನಿಂತ ಮೇಲೆ ರಥವನ್ನೇ ತ್ಯಾಗ ಮಾಡಿ ತಾನು ತಲುಪಬೇಕಾದ ಸ್ಥಳವನ್ನು ಸ್ವಯಂ ನಡೆದೇ ಹೋಗುತ್ತಾನೆ.
ಏವಂ ಗಚ್ಛತಿ ಮೇಧಾವೀ ತತ್ತ್ವಜ್ಞೋ ಮೋಕ್ಷಮಾರ್ಗವಿತ್ |
ಸಮಾಜ್ಞಾಯ ಮಹಾಬುದ್ಧಿರುತ್ತರಾದುತ್ತರೋತ್ತರಮ್ ॥26॥
ಇದೇ ರೀತಿಯಾಗಿ ಮೇಧಾವಿಯಾದ, ತತ್ತ್ವಜ್ಞನಾದ, ಮೋಕ್ಷಮಾರ್ಗವನ್ನು ತಿಳಿದ ಜ್ಞಾನಿಯು ಕರ್ಮಮಾರ್ಗವನ್ನು ತೊರೆದು, ತನ್ನ ತತ್ತ್ವಜ್ಞಾನದ ದೆಸೆಯಿಂದಲೇ ಉತ್ತಮೋತ್ತಮವಾದ ಗುರಿಯನ್ನು ಹೊಂದುತ್ತಾನೆ.
ಯಥಾ ಮಹಾರ್ಣವಂ ಘೋರಮಪ್ಲವಃ ಸಂಪ್ರಗಾಹತೇ |
ಬಾಹುಭ್ಯಾಮೇವ ಸಮ್ಮೋಹಾದ್ ವಧಮಿಚ್ಛತ್ಯಸಂಶಯಮ್ ॥27॥
ಘೋರವಾದ ಸಮುದ್ರವನ್ನು ದೋಣಿಯಿಲ್ಲದೆ ಮೋಹದಿಂದ ಕೈಯಿಂದಲೇ ದಾಟುತ್ತೇನೆ ಎಂದು ಇಚ್ಛಿಸಿದ ವ್ಯಕ್ತಿಯು ಸಮುದ್ರದಲ್ಲಿ ಮುಳುಗುವಂತೆ ಸಂಸಾರವೆಂಬ ಸಮುದ್ರವನ್ನು ಜ್ಞಾನದ ಆಶ್ರಯವಿಲ್ಲದೆ ದಾಟುತ್ತೇನೆ ಎನ್ನುವವನು ಹೀಗೆ ಮೂರ್ಖನಾಗುತ್ತಾನೆ.
ನಾವಾ ಕಯಾಪಿ ಚ ಪ್ರಾಜ್ಞಃ ವಿಭಾಗಜ್ಞಸ್ತ್ವರಿತ್ರಯಾ |
ಅಶ್ರಾಂತಃ ಸಲಿಲಂ ಗಾಹೇತ್ ಶೀಘ್ರಂ ಸಂತರತೇ ಹ್ರದಮ್ ॥28॥
ತೀರ್ಣೋ ಗಚ್ಛೇತ್ ಪರಂ ಪಾರಂ ನಾವಮುತ್ಸೃಜ್ಯ ನಿರ್ಮಮಃ |
ವ್ಯಾಖ್ಯಾತಂ ಪೂರ್ವಕಲ್ಪೇನ ಯಥಾ ರಥಪದಾತಿನೋಃ ॥29॥
ಯಾವ ರೀತಿಯಲ್ಲಿ ಸಮುದ್ರಮಾರ್ಗದ ವಿಭಾಗಗಳನ್ನು ತಿಳಿದ ನಾವಿಕನು ಹುಟ್ಟಿನಿಂದ ಕೂಡಿರುವ ದೋಣಿಯನ್ನು ಸಾಗಿಸುತ್ತಾ

ಅನಾಯಾಸವಾಗಿ ಸಮುದ್ರವನ್ನು ದಾಟಿ ದಡವನ್ನು ಸೇರುತ್ತಾನೋ ಇದರಂತೆ ಸಂಸಾರಸಾಗರವನ್ನು ಕರ್ಮಗಳ ಮೇಲಿನ ವ್ಯಾಮೋಹವನ್ನು ತ್ಯಜಿಸಿದ ಜ್ಞಾನಿಯು, ಜ್ಞಾನೋಪಾಯಗಳನ್ನು ಸರಿಯಾಗಿ ತಿಳಿದು ಪರಬ್ರಹ್ಮನೆಂಬ ಗುರಿಯನ್ನು ಮುಟ್ಟುತ್ತಾನೆ. ಈ ವಿಷಯವನ್ನೇ ಹಿಂದೆ ರಥದಲ್ಲಿ ಹೋಗುವವನ, ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡುವವನ ಉದಾಹರಣೆಯನ್ನು ಕೊಟ್ಟು ತಿಳಿಸಿದ್ದಾರೆ.

ಸ್ನೇಹಾತ್ ಸಮ್ಮೋಹಮಾಪನ್ನೋ ನಾವಿ ದಾಶೋ ಯಥಾ ತಥಾ |
ಮಮತ್ವೇನಾಭಿಭೂತಸ್ತು ಸ ಕಥಂಚಿತ್ ನ ಮುಹ್ಯತೇ(ತಿ) ॥30॥

ಹಡಗಿನಲ್ಲಿಯೇ ಆಸಕ್ತಿಯನ್ನು ಹೊಂದಿ, ಅದರ ಮೋಹದಲ್ಲೇ ತನ್ನದೆಂಬ ಅಭಿಮಾನದಿಂದ ಹಡಗಿನಲ್ಲಿಯೇ ಕುಳಿತುಕೊಂಡರೆ ಯಾವಾಗಲೂ ಸಮುದ್ರದಲ್ಲೇ ಸುತ್ತುವಂತೆ ಯಾರು ಹಡಗಿನಂತಿರುವ ಈ ದೇಹದಲ್ಲಿಯೇ ಮಮತ್ವದಿಂದ ಅಭಿಭೂತನಾಗಿ, ಇಲ್ಲಿಯೇ ಕುಳಿತುಕೊಂಡಲ್ಲಿ ಸಂಸಾರಚಕ್ರದಲ್ಲಿ ಸುತ್ತುತ್ತಾನೆ. ಇದರ ಮೋಹ ಹೋಗುತ್ತದೆ ಎಂಬ ನಿಶ್ಚಯವು ಇರುವುದಿಲ್ಲ.

ನಾವಂ ನ ಶಕ್ಯಮಾರುಹ್ಯ ಸ್ಥಲೇ ವಿಪರಿಧಾವಿತುಮ್ |
ತಥೈವ ರಥಮಾರುಹ್ಯ ನಾಪ್ಸು ಚರ್ಯಾ ವಿಧೀಯತೇ ॥31॥
ಏವಂ ಕರ್ಮಕೃತಂ ವೃತ್ತಂ ವಿವಿಧಸ್ಥಂ ಪೃಥಕ್ ಪೃಥಕ್ |
ಯಥಾ ಕರ್ಮಕೃತಂ ಲೋಕೇ ತಥಾ ತದುಪಪದ್ಯತೇ ॥32॥

ಹಡಗಿನಲ್ಲಿ ಕುಳಿತವನು ಹೇಗೆ ನೆಲದಲ್ಲಿ ಸಂಚರಿಸಲು ಸಾಧ್ಯವಾಗುವುದಿಲ್ಲವೋ, ರಥದಲ್ಲಿ ಕುಳಿತವನು ಸಮುದ್ರದಲ್ಲಿ ಸಾಗಲು ಹೇಗೆ ಸಾಧ್ಯವಾಗುವುದಿಲ್ಲವೋ ಹೀಗೆಯೇ ಬಗೆಬಗೆಯಾದ ಕರ್ಮಗಳಲ್ಲಿ ಆಸಕ್ತನಾದವನು ಗುರಿಯನ್ನು ಹೊಂದಲು ಸಾಧ್ಯವಾಗುವುದಿಲ್ಲ. ಕರ್ಮದಿಂದ ಸಿಗುವ ಫಲವು ಆ ಕರ್ಮಕ್ಕೆ ಅನುಗುಣವಾಗಿರುತ್ತದೆ. ಪುನಃ ಪುನಃ ಸಂಸಾರಚಕ್ರದಲ್ಲಿಯೇ ತಿರುಗುವಂತೆ ಮಾಡುತ್ತದೆ. ಆದ್ದರಿಂದ ಜ್ಞಾನಮಾರ್ಗವನ್ನೇ ಆಶ್ರಯಿಸಬೇಕು.

ಯನ್ನೈವ ಗಂಧಿ ನೋ ರಸ್ಯಂ ರೂಪಸಂಸ್ಪರ್ಶಶಬ್ದವತ್ |
ಮನ್ಯತೇ ನ ಮನೋ ಬುದ್ಧ್ಯಾ ತತ್ ಪ್ರಧಾನಂ ಪ್ರಚಕ್ಷತೇ ॥33॥

ಯಾವ ರೀತಿಯಾಗಿ ಚಕ್ಕುಲಿ ಮೊದಲಾದವುಗಳ ರಸವನ್ನು ಆಸ್ವಾದಿಸುವವನು ಬೇರೆ ಎಲ್ಲ ವಿಷಯಗಳನ್ನೂ ಮರೆತು ಆಸ್ವಾದಿಸುತ್ತಾನೋ ಇದರಂತೆ ಪರಮಾತ್ಮನನ್ನು ಜಗತ್ತಿನಿಂದ ವಿಷಯಗಳನ್ನೇ ಅನುಭವಿಸುವ ಸಾಧಕನು ಮರೆಯುತ್ತಾನೆ. ವ್ಯಾಖ್ಯಾನ ವಿಶೇಷ ಚಕ್ಕುಲಿಯನ್ನು ತಿನ್ನುವಾಗ ಜ್ಞಾನೇಂದ್ರಿಯವೆನಿಸಿದ ತ್ವಗಿಂದ್ರಿಯವು ಚಕ್ಕುಲಿಯ ಸ್ಪರ್ಶದಲ್ಲಿ ಏಕಾಗ್ರತೆಯನ್ನು ಹೊಂದಿರುತ್ತದೆ. ಚಕ್ಷುರಿಂದ್ರಿಯವು ಚಕ್ಕುಲಿಯ ರೂಪದಲ್ಲಿ, ಘ್ರಾಣೇಂದ್ರಿಯವು ಗಂಧದಲ್ಲಿ, ಶ್ರೋತ್ರೇಂದ್ರಿಯವು ತಿನ್ನುವಾಗ ಉಂಟಾಗುವ ಶಬ್ದದಲ್ಲಿ, ಜಿಹ್ವೇಂದ್ರಿಯವು ರುಚಿಯಲ್ಲಿಯೂ ಆಸಕ್ತವಾಗಿರುವುದರಿಂದ ಬೇರೆ ಜ್ಞಾನಗಳು ಹೇಗೆ ಬರುವುದಿಲ್ಲವೋ ಹಾಗೆಯೇ ಪ್ರಕೃತಿಯಲ್ಲಿಯೇ ಬದ್ಧನಾದವನು ಪ್ರಕೃತಿಯ ಗುಣಗಳನ್ನು ಆಸ್ವಾದಿಸುತ್ತಾ ಪರಮಾತ್ಮನನ್ನು ತಿಳಿಯುವುದಿಲ್ಲ.

ತತ್ರ ಪ್ರಧಾನಮವ್ಯಕ್ತಮವ್ಯಕ್ತಸ್ಯ ಗುಣೋ ಮಹಾನ್ |
ಮಹಾನ್ ಪ್ರಧಾನಭೂತಸ್ಯ ಗುಣೋಽಹಂಕಾರ ಏವ ಚ ॥34॥

ಪ್ರಧಾನವನ್ನೇ ಅವ್ಯಕ್ತ ಎನ್ನುತ್ತಾರೆ. ಅವ್ಯಕ್ತವೆನಿಸಿದ ಮೂಲಪ್ರಕೃತಿಯ ಕಾರ್ಯವೇ ಮಹತತ್ತ್ವವೆನಿಸಿದೆ. ಅವ್ಯಕ್ತ ಪ್ರಕೃತಿಯಿಂದ ಅಪ್ರಧಾನವಾಗಿ ಹುಟ್ಟಿದ ಮಹತ್ತತ್ತ್ವದ ಕಾರ್ಯವೇ ಅಹಂಕಾರತತ್ತ್ವದ ಕಾರ್ಯವಾಗಿದೆ.

ಅಹಂಕಾರಾತ್ ಪ್ರಧಾನಸ್ಯ ಮಹಾಭೂತಕೃತೋ ಗುಣಃ |
ಪೃಥಕ್ತ್ವೇನ ಚ ಭೂತಾನಾಂ ವಿಷಯಾ ವೈ ಗುಣಾಃ ಸ್ಮೃತಾಃ ॥35॥

ಅವ್ಯಕ್ತ ತತ್ತ್ವದ ಮೂಲಕ ಮಹತ್ತತ್ತ್ವದ ದೆಸೆಯಿಂದ ಹುಟ್ಟಿದ ಅಹಂಕಾರ ತತ್ತ್ವದಿಂದ ಪಂಚಭೂತದ ವಿಷಯಗಳು ಪ್ರತ್ಯೇಕ-ಪ್ರತ್ಯೇಕವಾಗಿ ಶಬ್ದ-ಸ್ಪರ್ಶಾದಿ ಗುಣಗಳೆಂದು ಹೇಳಲ್ಪಟ್ಟಿವೆ.

ಬೀಜಧರ್ಮಂ ಯಥಾऽವ್ಯಕ್ತಂ ತಥೈವ ಪ್ರಸವಾತ್ಮಕಮ್ |
ಬೀಜಧರ್ಮೀ ಮಹಾನಾತ್ಮಾ ಪ್ರಸವಶ್ಚೇತಿ ನಃ ಶ್ರುತಮ್ ॥36॥

ಅವ್ಯಕ್ತ ಪ್ರಕೃತಿಯು ಕಾರಣವಾಗಿದೆ, ಕಾರ್ಯವೂ ಆಗಿದೆ. ಅವ್ಯಕ್ತ ಪ್ರಕೃತಿಯಿಂದ ಹುಟ್ಟಿದ ಮಹತ್ತತ್ತ್ವವು ಕಾರಣವೂ ಆಗಿದೆ, ಕಾರ್ಯವೂ ಆಗಿದೆ ಎಂಬುದನ್ನು ನಾವು ಕೇಳಿದ್ದೇವೆ.

ಬೀಜಧರ್ಮೀ ತ್ವಹಂಕಾರಃ ಪ್ರಸವಶ್ಚ ಪುನಃ ಪುನಃ |
ತಥೈವ ಬೀಜಧರ್ಮಾಣಿ ಮಹಾಭೂತಾನಿ ಪಂಚ ವೈ ॥37॥

ಮಹತ್ತತ್ತ್ವದಿಂದ ಹುಟ್ಟಿದ ಅಹಂಕಾರ ತತ್ತ್ವವೂ ಕೂಡ ಕಾರಣವೂ ಆಗಿದೆ, ಕಾರ್ಯವೂ ಆಗಿದೆ. ಅಹಂಕಾರದಿಂದ ಹುಟ್ಟಿದ ಪಂಚಮಹಾಭೂತಗಳು ಕಾರಣವೂ ಆಗಿವೆ, ಕಾರ್ಯವೂ ಆಗಿವೆ.

ಬೀಜಧರ್ಮಿಣ ಇತ್ಯಾಹುಃ ಪ್ರಸವಂ ಚ ಪ್ರಕುರ್ವತೇ |
ವಿಶೇಷಾಃ ಪಂಚಭೂತಾನಾಂ ತೇಷಾಂ ವಿತ್ತ ವಿಶೇಷಣಮ್ ॥38॥

ಪಂಚಮಹಾಭೂತಗಳು ಬೀಜಧರ್ಮವುಳ್ಳವುಗಳೆಂದು ಅರ್ಥಾತ್ ಕಾರ್ಯವೆಂದು, ಪ್ರಸವಧರ್ಮಗಳುಳ್ಳವುಗಳೆಂದು ಅರ್ಥಾತ್ ಕಾರಣಗಳೆಂದು ಹೇಳುತ್ತಾರೆ. ಪಂಚಭೂತಗಳ ವಿಶೇಷವೆನಿಸಿದ ಕಾರ್ಯವು ಶಬ್ದಸ್ಪರ್ಶಾದಿ ವಿಷಯವೇ ಆಗಿದೆ. ಆ ಕಾರ್ಯಕ್ಕೆ ಪಂಚಭೂತಗಳ ಕಾರ್ಯವಿಶೇಷವು ಶಬ್ದಾದಿಗಳು ಎಂದು ತಿಳಿಯಿರಿ.

ತತ್ರೈಕಗುಣಮಾಕಾಶಂ ದ್ವಿಗುಣೋ ವಾಯುರುಚ್ಯತೇ |
ತ್ರಿಗುಣಂ ಜ್ಯೋತಿರಿತ್ಯಾಹುರಾಪಶ್ಚಾಪಿ ಚತುರ್ಗುಣಾಃ ॥39॥

ಪಂಚಭೂತಗಳಲ್ಲಿ ಆಕಾಶವು ಶಬ್ದ ಎಂಬ ಒಂದೇ ಗುಣವನ್ನು ಹೊಂದಿದೆ. ವಾಯುವಿನಲ್ಲಿ ಶಬ್ದ-ಸ್ಪರ್ಶಗಳೆಂಬ ಎರಡು ಗುಣಗಳಿವೆ. ತೇಜಸ್ಸಿನಲ್ಲಿ ಶಬ್ದ-ಸ್ಪರ್ಶ- ರೂಪ ಎಂಬ ಮೂರು ಗುಣಗಳಿವೆ. ನೀರಿನಲ್ಲಿ ಶಬ್ದ-ಸ್ಪರ್ಶ-ರೂಪ-ರಸ ಎಂಬ ನಾಲ್ಕು ಗುಣಗಳು ಇವೆ.

ಪೃಥ್ವೀ ಪಂಚಗುಣಾ ಜ್ಞೇಯಾ ತತ್ರ ಸ್ಥಾವರಜಂಗಮಾಃ |
ಸರ್ವಭೂತಕರೀ ದೇವೀ ಶುಭಾಶುಭನಿದರ್ಶನಾ ॥40॥
ಪೃಥಿವಿಯಲ್ಲಿ ಶಬ್ದ-ಸ್ಪರ್ಶ-ರೂಪ-ರಸ-ಗಂಧ ಎಂಬ ಐದು ಗುಣಗಳಿವೆ. ಆ ಪೃಥಿವೀತತ್ತ್ವದಲ್ಲಿ ಸ್ಥಾವರ-ಜಂಗಮಗಳೆಲ್ಲವೂ ವಿಹರಿಸುತ್ತವೆ. ಎಲ್ಲ ಪ್ರಾಣಿಗಳಿಗೂ ಜನ್ಮವನ್ನು ನೀಡುವವಳು, ಶುಭಾಶುಭಕರ್ಮಗಳಿಗೆ ಸಾಕ್ಷಿಯು ಈ ಪೃಥಿವಿಯೇ ಆಗಿದ್ದಾಳೆ.
ಶಬ್ದಃ ಸ್ಪರ್ಶಸ್ತಥಾ ರೂಪಂ ರಸೋ ಗಂಧಶ್ಚ ಪಂಚಮಃ |
ಏತೇ ಪಂಚ ಗುಣಾ ಭೂಮೇರ್ವಿಜ್ಞೇಯಾ ದ್ವಿಜಸತ್ತಮಾಃ ॥41॥
ವಿಪ್ರಶ್ರೇಷ್ಠರೇ, ಶಬ್ದ-ಸ್ಪರ್ಶ-ರೂಪ-ರಸ-ಗಂಧ ಎಂಬ ಐದು ಗುಣಗಳು ಪೃಥಿವಿಯ ಗುಣಗಳೆಂದು ತಿಳಿಯಬೇಕು.
ಪಾರ್ಥಿವಶ್ಚ ಸದಾ ಗಂಧೋ ಗಂಧಶ್ಚ ಬಹುಧಾ ಸ್ಮೃತಃ |
ತಸ್ಯ ಗಂಧಸ್ಯ ವಕ್ಷ್ಯಾಮಿ ವಿಸ್ತರೇಣ ಬಹೂನ್ ಗುಣಾನ್ ॥42॥
ಪೃಥಿವಿಯ ಮುಖ್ಯವಾದ ಗುಣವು ಗಂಧವು. ಆ ಗಂಧವು ಅನೇಕ ಪ್ರಕಾರವಾಗಿ ಇದೆ. ಆ ಗಂಧದ ಅನೇಕ ಪ್ರಕಾರವಾದ ಗುಣಗಳನ್ನು ವಿಸ್ತಾರವಾಗಿ ಹೇಳುತ್ತೇನೆ.
ಇಷ್ಟಶ್ಚಾನಿಷ್ಟಗಂಧಶ್ಚ ಮಧುರೋಽಮ್ಲಃ ಕಟುಸ್ತಥಾ |
ನಿರ್ಹಾರೀ ಸಂಹತಃ ಸ್ನಿಗ್ಧೋ ರೂಕ್ಷೋ ವಿಶದ ಏವ ಚ |
ಏವಂ ದಶವಿಧೋ ಜ್ಞೇಯಃ ಪಾರ್ಥಿವೋ ಗಂಧ ಇತ್ಯುತ ॥43॥
ಇಷ್ಟಗಂಧ, ಅನಿಷ್ಟಗಂಧ, ಮಧುರ, ಹುಳಿ, ಕಟು, ನಿರ್ಹಾರಿ, ಮಿಶ್ರಿತ, ಸ್ನಿಗ್ಧ, ಕಠಿಣ, ವಿಶದ - ಹೀಗೆ ಪೃಥಿವಿಯ ಗುಣಗಳನ್ನು ಹತ್ತು ಎಂದು ಹೇಳುತ್ತಾರೆ.
ಶಬ್ದಃ ಸ್ಪರ್ಶಸ್ತಥಾ ರೂಪಂ ರಸಶ್ಚಾಪಾಂ ಗುಣಾಃ ಸ್ಮೃತಾಃ |
ರಸಜ್ಞಾನಂ ತು ವಕ್ಷ್ಯಾಮಿ ರಸಸ್ತು ಬಹುಧಾ ಸ್ಮೃತಃ |
ಮಧುರೋಽಮ್ಲಃ ಕಟುಸ್ತಿಕ್ತಃ ಕಷಾಯೋ ಲವಣಸ್ತಥಾ ॥44॥
ಏವಂ ಷಡ್ವಿಧವಿಸ್ತಾರೋ ರಸೋ ವಾರಿಸಮುದ್ಭವಃ ॥45॥
ಶಬ್ದ-ಸ್ಪರ್ಶ-ರೂಪ-ರಸ ಎಂಬ ನೀರಿನ ಗುಣಗಳು ನಾಲ್ಕು. ಅವುಗಳಲ್ಲಿ ರಸವೇ ನೀರಿನ ಮುಖ್ಯಗುಣವು. ರಸಗಳು ಬಹುಪ್ರಕಾರವಾಗಿವೆ. ಆ ರಸವಿಜ್ಞಾನವನ್ನು ಹೇಳುತ್ತೇನೆ- ಮಧುರ-ಆಮ್ಲ-ಕಟು-ತಿಕ್ತ-ಕಷಾಯ-ಲವಣ ಎಂಬುದಾಗಿ ರಸವು ಆರು ವಿಧವಾಗಿ ವಿಸ್ತಾರವನ್ನು ಹೊಂದಿದೆ. ಈ ಎಲ್ಲ ರಸಗಳು ನೀರಿನಿಂದಲೇ ಹುಟ್ಟಿದವುಗಳು.
ಶಬ್ದಃ ಸ್ಪರ್ಶಸ್ತಥಾ ರೂಪಂ ತ್ರಿಗುಣಂ ಜ್ಯೋತಿರುಚ್ಯತೇ ॥46॥
ಜ್ಯೋತಿಷಶ್ಚ ಗುಣೋ ರೂಪಂ ರೂಪಂ ಚ ಬಹುಧಾ ಸ್ಮೃತಮ್ |
ಶುಕ್ಲಂ ಕೃಷ್ಣಂ ತಥಾ ರಕ್ತಂ ನೀಲಂ ಪೀತಾರುಣಂ ತಥಾ ॥47॥
ಹ್ರಸ್ವಂ ದೀರ್ಘಂ ತಥಾ ಸ್ಥೂಲಂ ಚತುರಸ್ರಾಣುವೃತ್ತಕಮ್ |
ಏವಂ ದ್ವಾದಶವಿಸ್ತಾರಂ ಜ್ಯೋತಿಷಾಂ ರೂಪಮಿಷ್ಯತೇ ॥48॥
ಶಬ್ದ-ಸ್ಪರ್ಶ-ರೂಪ ಎಂಬ ಮೂರುಗುಣಗಳು ತೇಜಸ್ಸಿನ ಗುಣಗಳು. ತೇಜಸ್ಸಿಗೆ ಬಹುಪ್ರಕಾರಗಳು ಹೇಳಲ್ಪಟ್ಟಿವೆ. ಬಿಳಿ, ಕಪ್ಪು, ಕೆಂಪು, ನೀಲಿ, ಹಳದಿ, ಅರುಣ, ಹ್ರಸ್ವ, ದೀರ್ಘ, ಕೃಶ, ಸ್ಥೂಲ, ಚಚ್ಚೌಕ, ದುಂಡು - ಈ ಹನ್ನೆರಡು ತೇಜಸ್ಸಿನ ಬಹುರೂಪಗಳು.
ವಿಜ್ಞೇಯಂ ಬ್ರಾಹ್ಮಣೈರ್ನಿತ್ಯಂ ಧರ್ಮಜ್ಞೈಃ ಸತ್ಯವಾದಿಭಿಃ ॥49॥
ಇವುಗಳ ಸ್ವರೂಪವನ್ನು ಸತ್ಯವಾದಿಗಳಾದ, ವೃದ್ಧರಾದ, ಧರ್ಮಜ್ಞರಾದ ಬ್ರಾಹ್ಮಣರು ತಿಳಿದುಕೊಳ್ಳುತ್ತಾರೆ.
ಶಬ್ದಸ್ಪರ್ಶೌ ಚ ವಿಜ್ಞೇಯೌ ದ್ವಿಗುಣೋ ವಾಯುರುಚ್ಯತೇ ॥50॥
ವಾಯೋಽಶ್ಚಾಪಿ ಗುಣಃ ಸ್ಪರ್ಶಃ ಸ್ಪರ್ಶಶ್ಚ ಬಹುಧಾ ಸ್ಮೃತಃ ॥51॥
ಶಬ್ದ ಮತ್ತು ಸ್ಪರ್ಶ ಎರಡೂ ವಾಯುವಿನ ಗುಣಗಳು. ಸ್ಪರ್ಶವು ವಾಯುವಿನ ಮುಖ್ಯಗುಣ. ಸ್ಪರ್ಶದ ಗುಣಗಳೂ ಅನೇಕ ಪ್ರಕಾರವಾಗಿವೆ ಎಂದು ಹೇಳುತ್ತಾರೆ.
ಉಷ್ಣಃ ಶೀತಃ ಸುಖೋ ದುಃಖಃ ಸ್ನಿಗ್ಧೋ ವಿಶದ ಏವ ಚ |
ಕಠಿನಶ್ಚಿಕ್ಕಣಃ ಶ್ಲಕ್ಷ್ಣಃ ಪಿಚ್ಛಿಲೋ ದಾರುಣೋ ಮೃದುಃ ॥52॥
ಉಷ್ಣ, ಶೀತ, ಸುಖ, ದುಃಖ, ಸ್ನಿಗ್ಧ, ವಿಶದ, ಕಠಿಣ, ನುಣುಪು, ಶ್ಲಕ್ಷ್ಣ, ಜಿಡ್ಡು, ದಾರುಣ, ಕೋಮಲ ಎಂಬುದಾಗಿ.
ಏವಂ ದ್ವಾದಶವಿಸ್ತಾರೋ ವಾಯವ್ಯೋ ಗುಣ ಉಚ್ಯತೇ |
ವಿಧಿವದ್ ಬ್ರಾಹ್ಮಣೈಃ ಸಿದ್ಧೈರ್ಧರ್ಮಜ್ಞೈಸ್ತತ್ತ್ವದರ್ಶಿಭಿಃ ॥53॥
ಈ ರೀತಿಯಾಗಿ ಹನ್ನೆರಡು ವಾಯುವಿನ ಗುಣವಾದ ಸ್ಪರ್ಶದ ವಿಸ್ತಾರವಾದ ಗುಣಗಳು ಎಂಬುದಾಗಿ ತತ್ತ್ವದರ್ಶಿಗಳಾದ, ಸಿದ್ಧರಾದ ಬ್ರಾಹ್ಮಣರು ವಿಧಿವತ್ತಾಗಿ ಹೇಳುತ್ತಾರೆ.
ತತ್ರೈಕಗುಣ ಆಕಾಶಃ ಶಬ್ದ ಇತ್ಯೇವ ಸ ಸ್ಮೃತಃ ॥54॥
ಇವುಗಳಲ್ಲಿ ಆಕಾಶವು ಒಂದೇ ಗುಣವನ್ನು ಹೊಂದಿದೆ. ಅದಕ್ಕೆ ಶಬ್ದ ಎಂದು ಹೆಸರು.
ತಸ್ಯ ಶಬ್ದಸ್ಯ ವಕ್ಷ್ಯಾಮಿ ವಿಸ್ತರೇಣ ಬಹೂನ್ ಗುಣಾನ್ ॥55॥
ಆ ಶಬ್ದಕ್ಕೂ ಅನೇಕ ಪ್ರಕಾರಗಳಿವೆ. ಅದಕ್ಕಿರುವ ಬಹುಗುಣಗಳನ್ನು ಹೇಳುತ್ತೇನೆ.
ಷಡ್ಜರ್ಷಭಃ ಸ ಗಾಂಧಾರೋ ಮಧ್ಯಮಃ ಪಂಚಮಃ ಸ್ಮೃತಃ |
ಅತಃಪರಂ ತು ವಿಜ್ಞೇಯೋ ನಿಷಾದೋ ಧೈ(ದ್ಯೆ)ವತಸ್ತಥಾ ॥56॥
ಇಷ್ಟಶ್ಚಾನಿಷ್ಟಶಬ್ದಶ್ಚ ಸಂಹತಃ ಪ್ರತಿಭಾನವಾನ್ |

ಏವಂ ಬಹುವಿಧೋ ಜ್ಞೇಯಃ ಶಬ್ದ ಆಕಾಶಸಂಭವಃ ॥57॥
ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ನಿಷಾದ, ದೈವತ, ಇಷ್ಟ, ಅನಿಷ್ಟ, ಸಂಹತ - ಹೀಗೆ ಆಕಾಶದಿಂದ ಹುಟ್ಟಿದ ಶಬ್ದವು ಹತ್ತು ಭಾಗಗಳಾಗಿ ವಿಸ್ತಾರ ಹೊಂದಿದೆ.
ಆಕಾಶಮುತ್ತಮಂ ಭೂತಮಹಂಕಾರಸ್ತತಃ ಪರಃ |
ಅಹಂಕಾರಾತ್ ಪರಾ ಬುದ್ಧಿಃ ಬುದ್ಧೇರಾತ್ಮಾ ತತಃ ಪರಃ ॥58॥
ತಸ್ಮಾತ್ ತು ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ॥59॥
ಆಕಾಶವೇ ಎಲ್ಲ ಭೂತಗಳಿಗಿಂತಲೂ ಶ್ರೇಷ್ಠವಾದುದು. ಅದಕ್ಕಿಂತಲೂ ಶ್ರೇಷ್ಠವಾದುದು ಅಹಂಕಾರತತ್ತ್ವ. ಅಹಂಕಾರತತ್ತ್ವಕ್ಕಿಂತ ಬುದ್ಧಿತತ್ತ್ವ ಶ್ರೇಷ್ಠ. ಬುದ್ಧಿ ತತ್ತ್ವಕ್ಕಿಂತಲೂ ಮಹತ್ತತತ್ತ್ವಭಿಮಾನಿಯಾದ ಚತುರ್ಮುಖನು ಶ್ರೇಷ್ಠ. ಆ ಚತುರ್ಮುಖಬ್ರಹ್ಮನಿಗಿಂತಲೂ ಅವ್ಯಕ್ತತತತ್ತ್ವಭಿಮಾನಿನಿಯಾದ ಮಹಾಲಕುಮಿಯು ಶ್ರೇಷ್ಠಳು. ಆ ಅವ್ಯಕ್ತತತ್ತ್ವಕ್ಕಿಂತಲೂ ಪರಮಪುರುಷನಾದ ನಾರಾಯಣನು ಸರ್ವೋತ್ತಮನು.
ಪರಾವರಜ್ಞೋ ಭೂತಾನಾಂ ಯಂ ಪ್ರಾಪ್ಯಾನಂತ್ಯಮಶ್ನುತೇ ॥60॥
ಈ ಪಂಚಭೂತಗಳ ತಾರತಮ್ಯವನ್ನು ಸರಿಯಾಗಿ ತಿಳಿದವರು ಭಗವಂತನನ್ನು ಹೊಂದಿ ಅನಂತ ಸುಖವನ್ನು ಪಡೆಯುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಗುಣವಿಸ್ತಾರಕಥನಂ ನಾಮ ಪಂಚಾಶೋಽಧ್ಯಾಯಃ॥
॥ ಅನುಗೀತಾಪರ್ವಣಿ ಪಂಚತ್ರಿಂಶೋಽಧ್ಯಾಯಃ ॥35॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೊಂದನೆಯ ಅಧ್ಯಾಯ
ಕೃಷ್ಣನು ಅರ್ಜುನನನ್ನು ಕುರಿತು ಮುಕ್ತಿಯ ಉಪಾಯವನ್ನು ಹೇಳುವ
ಗುರು-ಶಿಷ್ಯ ಸಂವಾದವನ್ನು ಅನುವಾದಿಸುವ ಮೂಲಕ ಕಥಾವಿಸ್ತಾರವನ್ನು ಮುಕ್ತಾಯಗೊಳಿಸಿ, ತನ್ನ ಪಟ್ಟಣಕ್ಕೆ ಹೋಗುವ ಆಕಾಂಕ್ಷೆಯನ್ನು ತಿಳಿಸಿದುದು. ಅರ್ಜುನನು ಶ್ರೀಕೃಷ್ಣನಿಗೆ ಯುಧಿಷ್ಠಿರನ ಅನುಮತಿಯನ್ನು ಕೊಡಿಸುವ
ಮೂಲಕ ದ್ವಾರಕೆಗೆ ಹೊರಡಲು ಒಪ್ಪಿದುದು.
ಬ್ರಹ್ಮಾ
ಭೂತಾನಾಮಥ ಪಂಚಾನಾಂ ಸರ್ವೇಷಾಮೀಶ್ವರಂ ಮನಃ |
ನಿಯಮೇ ಚ ವಿಸರ್ಗೇ ಚ ಭೂತಾನಾಂ ಮನ ಏವ ಚ ॥1॥
ಬ್ರಹ್ಮಾ ಮಹರ್ಷಿಗಳೇ, ಪಂಚಭೂತಗಳ ಸೃಷ್ಟಿ ಮತ್ತು ನಿಯಮಗಳಲ್ಲಿ ಮನಸ್ಸು ಯಾವ ಸಾಮರ್ಥ್ಯವನ್ನು ಹೊಂದಿರುತ್ತದೋ ಆ ಸಾಮರ್ಥ್ಯವು ಉಳಿದ ಇಂದ್ರಿಯಗಳಿಗೆ ಇರುವುದಿಲ್ಲ. ಆದ್ದರಿಂದ ಎಲ್ಲರನ್ನೂ ನಿಯಮನ ಮಾಡುವ ಶಕ್ತಿಯು ಮನಸ್ಸಿನ ಶಕ್ತಿಯಾಗಿದೆ.

ಅಧಿಷ್ಠಾತೃ ಮನೋ ನಿತ್ಯಂ ಭೂತಾನಾಂ ಮಹತಾಂ ತಥಾ |
ಬುದ್ಧಿರೈಶ್ವರ್ಯಮಾಚಷ್ಟೇ ಕ್ಷೇತ್ರಜ್ಞಃ ಸರ್ವ ಉಚ್ಯತೇ ॥2॥
ಪಂಚಮಹಾಭೂತಗಳಿಗೆ ಮನಸ್ಸು ಆಧಾರವಾಗಿದೆ. ಬುದ್ಧಿಯು ಜೀವನಲ್ಲಿರುವ ಐಶ್ವರ್ಯವನ್ನು ಹೇಳುತ್ತದೆ. ಮನಸ್ತತ್ತ್ವಕ್ಕಿಂತಲೂ ಶ್ರೇಷ್ಠವಾಗಿದೆ. ಮನಸ್ಸು, ಬುದ್ಧಿ ಪಂಚಭೂತಗಳಿಗೆಲ್ಲ ನಿಯಾಮಕನಾದ, ದೇಹವೆಂಬ ರಥವನ್ನು ಸ್ವತಂತ್ರವಾಗಿ ಚಲಿಸುವಂತೆ ಮಾಡುವ ಕ್ಷೇತ್ರಜ್ಞನಾದ ಪರಮಾತ್ಮನು ಸರ್ವ ಎಂದು ಕರೆಸಿಕೊಳ್ಳುತ್ತಾನೆ.
ಇಂದ್ರಿಯಾಣಿ ಮನೋ ಯುಕ್ತೇ ಸದಶ್ವಾನಿವ ಸಾರಥಿಃ |
ಇಂದ್ರಿಯಾಣಿ ಮನೋ ಬುದ್ಧಿಃ ಕ್ಷೇತ್ರಜ್ಞೇ ಯುಜ್ಯತೇ ಸದಾ ॥3॥
ನಿಪುಣನಾದ ಸಾರಥಿಯು ಪಳಗಿದ ಕುದುರೆಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡು ರಥವನ್ನು ನಡೆಸುವಂತೆ, ಮನಸ್ಸು ಸಮಸ್ತ ಇಂದ್ರಿಯಗಳೆಂಬ ಕುದುರೆಗಳನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡು ನಡೆಸುತ್ತದೆ. ಆದರೆ ಈ ಮನಸ್ಸು, ಬುದ್ಧಿಗಳೆಲ್ಲವೂ ಕ್ಷೇತ್ರಜ್ಞನೆನಿಸಿದ ಪರಮಾತ್ಮನಿಂದ ನಿಯಮಿಸಲ್ಪಟ್ಟಿವೆ.
ಭೂತಬುದ್ಧಿಸಮಾಯುಕ್ತಂ ಬುದ್ಧಿಸಂಯಮನಂ ರಥಮ್ |
ಸಮಾರುಹ್ಯ ಸ ಭೂತಾತ್ಮಾ ಸಮಂತಾತ್ ಪರಿಧಾವತಿ ॥4॥
ಪಂಚಭೂತಗಳು, ಬುದ್ಧಿತತ್ತ್ವವು ಇದರಿಂದ ಕೂಡಿರುವ, ಬುದ್ಧಿಯಿಂದ ನಿಯಂತ್ರಿತವಾದ ರಥವನ್ನು ಏರಿಕೊಂಡ ಭೂತಾತ್ಮನಾದ ಪರಮಾತ್ಮನು ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತಾನೆ.
ಇಂದ್ರಿಯಗ್ರಾಮಸಂಯುಕ್ತೋ ಮನಃ ಸಾರಥಿಮೇವ ಚ |
ಬುದ್ಧಿಸಂಯಮನೋ ನಿತ್ಯಂ ಮಹಾನ್ ಬ್ರಹ್ಮಮಯೋ ರಥಃ ॥5॥
ಇಂದ್ರಿಯಸಮೂಹದಿಂದ ಕೂಡಿರುವ ಶರೀರವೇ ಪರಬ್ರಹ್ಮನ ರಥ ಎನಿಸಿದೆ. ಏಕಾಗ್ರತೆಯ ಮನಸ್ಸು ಸಾರಥಿ ಎನಿಸಿದೆ. ಬುದ್ಧಿಯು ನಿಯಂತ್ರಿಸುವ ಹಗ್ಗವೆನಿಸಿದೆ.
ಏವಂ ಯೋ ವೇತ್ತಿ ವಿದ್ವಾನ್ ವೈ ಸದಾ ಬ್ರಹ್ಮಮಯಂ ರಥಮ್ |
ಸ ಧೀರಃ ಸರ್ವಲೋಕೇಷು ನ ಮೋಹಮಧಿಗಚ್ಛತಿ ॥6॥
ಯಾವ ವಿದ್ವಾಂಸನು ಪರಬ್ರಹ್ಮನಿಂದ ನಿಯಮನ ಹೊಂದುವ ಈ ದೇಹವೆಂಬ ರಥವನ್ನು ತಿಳಿದುಕೊಳ್ಳುತ್ತಾನೋ ಅಂತಹ ಧೀರನು ಪ್ರಾಣಿಗಳಲ್ಲಿ ಶ್ರೇಷ್ಠನಾಗಿದ್ದಾನೆ, ಎಂದಿಗೂ ಮೋಹಕ್ಕೆ ತುತ್ತಾಗುವುದಿಲ್ಲ.

ಅವ್ಯಕ್ತಾದಿವಿಶೇಷಾಂತಂ ಚರಸ್ಥಾವರಸಂಕುಲಮ್ |
ಚಂದ್ರಸೂರ್ಯಪ್ರಭಾಲೋಕಂ ಗ್ರಹನಕ್ಷತ್ರಮಂಡಿತಮ್ ॥7॥
ನದೀಪರ್ವತಜಾಲೈಶ್ಚ ಸರ್ವತಃ ಪರಿಭೂಷಿತಮ್ |
ವಿವಿಧಾಭಿಸ್ತಥಾSದ್ಭಿಶ್ಚ ಸತತಂ ಸಮಲಂಕೃತಮ್ ॥8॥
ಅಜಿತಂ ಸರ್ವಭೂತಾನಾಂ ಸರ್ವಪ್ರಾಣಭೃತಾಂ ಗತಿಃ |
ಏತದ್ ಬ್ರಹ್ಮಪದಂ ನಿತ್ಯಂ ಕ್ಷೇತ್ರಜ್ಞೋ ಯತ್ರ ತಿಷ್ಠತಿ ॥9॥
ಈ ಭೂಗೋಲವೆಂಬ ಪರಬ್ರಹ್ಮನ ಸ್ಥಾನವು ಅವ್ಯಕ್ತತತ್ತ್ವವೇ ಪ್ರಧಾನವಾಗಿ ಕಾರಣವಾಗಿರುವ ಪೃಥಿವಿ ಎಂಬ ವಿಶಾಲವಾದ ಸ್ಥಳದಿಂದ ಕೂಡಿದೆ. ಸ್ಥಾವರ- ಜಂಗಮಗಳಿಂದ ತುಂಬಿದೆ. ಸೂರ್ಯ-ಚಂದ್ರರಿಂದ ಪ್ರಕಾಶಮಾನವಾಗಿದೆ. ಗ್ರಹ- ನಕ್ಷತ್ರಗಳಿಂದ ಅಲಂಕೃತವಾಗಿದೆ. ನದಿಗಳಿಂದಲೂ, ಪರ್ವತಗಳಿಂದಲೂ ಎಲ್ಲೆಡೆಯೂ ಅಲಂಕೃತವಾಗಿದೆ. ವಿಧವಿಧವಾದ ತೀರ್ಥಗಳಿಂದಲೂ ಅಲಂಕೃತವಾಗಿದೆ. ಸಮಸ್ತ ಪ್ರಾಣಿಗಳಿಗೆ ಆಧಾರವು, ಗತಿಪ್ರದವೂ ಆಗಿದೆ. ಈ ರೀತಿಯಾಗಿ ಭೂಮಿ ಎಂಬ ಸ್ಥಾನದಲ್ಲಿ `ಅತ್ಯತಿಷ್ಠದ್ ದಶಾಂಗುಲಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪರಮಾತ್ಮನು ದಶಾಂಗುಲಮೂರ್ತಿಯಾಗಿ ರಥದಲ್ಲಿ ಕುಳಿತುಕೊಂಡು ಈಚೆ-ಆಚೆ ಸಂಚರಿಸುತ್ತಾನೆ. ಈ ರೀತಿಯಾಗಿ ವ್ಯಾಪ್ತಮೂರ್ತಿಯಾದ ಪರಮಾತ್ಮನು ರಾಜಮಂದಿರದಂತಿರುವ ಭೂಗೋಲವೆಂಬ ಸ್ಥಾನದಲ್ಲಿ ಕ್ಷೇತ್ರಜ್ಞನೆನಿಸಿ ವಾಸ ಮಾಡುತ್ತಾನೆ.
ಲೋಕೇSಸ್ಮಿನ್ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ತಾನ್ಯೇವಾಗ್ರೇ ಪ್ರಲೀಯಂತೇ ಪಶ್ಚಾದ್ ಭೂತಕೃತಾ ಗುಣಾಃ ॥10॥
ಗುಣೇಭ್ಯಃ ಪಂಚ ಭೂತಾನಿ ಏಷ ಭೂತಸಮುಚ್ಛ್ರಯಃ ॥11॥
ಈ ಲೋಕದಲ್ಲಿ ಯಾವ ಸ್ಥಾವರ-ಜಂಗಮ ಪ್ರಾಣಿಗಳಿವೆಯೋ ಅವೆಲ್ಲವೂ ಪ್ರಲಯಕಾಲ ಬಂದ ಕೂಡಲೇ ಮೂಲಪ್ರಕೃತಿಯಲ್ಲಿ ಲಯ ಹೊಂದುತ್ತವೆ. ಬಳಿಕ ಪಂಚಮಹಾಭೂತಗಳ ಕಾರ್ಯವು ಲಯಹೊಂದುತ್ತದೆ. ಬಳಿಕ ಪಂಚಭೂತಗಳು ಮೂಲಪ್ರಕೃತಿಯಲ್ಲಿ ಲಯಹೊಂದುತ್ತವೆ.
ದೇವಾ ಮನುಷ್ಯಾ ಗಂಧರ್ವಾಃ ಪಿಶಾಚೋರಗರಾಕ್ಷಸಾಃ |
ಸರ್ವೇ ಸ್ವಭಾವತಃ ಸೃಷ್ಟಾ ನ ಕ್ರಿಯಾಭ್ಯೋ ನ ಕಾರಣಾತ್ ॥12॥
ದೇವತೆಗಳು, ಮನುಷ್ಯರು, ಗಂಧರ್ವರು, ಪಿಶಾಚರು, ಅಸುರರು, ರಾಕ್ಷಸರು ಅದೃಷ್ಟವೆಂಬ ಕರ್ಮದಿಂದಲೇ ಸೃಷ್ಟಿ ಹೊಂದಿದವರಲ್ಲ. ಕೇವಲ ಮೂಲಪ್ರಕೃತಿ ಎಂಬ ಕಾರಣದಿಂದಲೂ ಸೃಷ್ಟಿಹೊಂದಿದವರಲ್ಲ. ಒಂದು ವೇಳೆ ಹಾಗಿದ್ದಲ್ಲಿ ದೇವರ್ಷಿಗಳು ಸತ್ಕರ್ಮಶೀಲರು, ದಾನವರು ದುಷ್ಕರ್ಮಶೀಲರು, ಮಾನವರು ಉಭಯ ಕರ್ಮಶೀಲರು ಎಂಬ ಕಾರ್ಯವೈಚಿತ್ರ್ಯವು ಉಂಟಾಗುತ್ತಿರಲಿಲ್ಲ. ಆದ್ದರಿಂದ ಕೇವಲ ಅದೃಷ್ಟ ಪ್ರಧಾನಗಳೇ ಕಾರಣವಾಗದೆ ಆಯಾ ಜೀವರ ಉತ್ತಮ-ಮಧ್ಯಮ-ಅಧಮ ಎಂಬ ಸ್ವಭಾವಗಳನ್ನು ಅನುಸರಿಸಿ ಪರಮಾತ್ಮನು ಸೃಷ್ಟಿಸಿದ್ದಾನೆ ಎಂದು ತಿಳಿಯಬೇಕು.
ಏತೇ ವಿಶ್ವಕೃತೋ ವಿಪ್ರಾ ಜಾಯಂತೀಹ ಪುನಃ ಪುನಃ ॥13॥
ಈ ವಿಶ್ವವನ್ನು ಸೃಷ್ಟಿಸುವ ಮಹದಾದಿ ತತ್ತ್ವಗಳೇ ಪುನಃ ಪುನಃ ಹುಟ್ಟುತ್ತಿರುತ್ತವೆ.
ತೇಭ್ಯಃ ಪ್ರಸೂತಾಸ್ತೇಷ್ವೇವ ಮಹಾಭೂತೇಷು ಪಂಚಸು |
ಪ್ರಲೀಯಂತೇ ಯಥಾಕಾಲಮೂರ್ಮಯಃ ಸಾಗರೇ ಯಥಾ ॥14॥
ಈ ಮಹದಾದಿ ತತ್ತ್ವಗಳಿಂದ ಹುಟ್ಟಿದ ಪಂಚಭೂತಗಳು ಅಲ್ಲಿಯೇ ಲಯ ಹೊಂದುತ್ತವೆ. ಸಮುದ್ರದಲ್ಲಿ ಉತ್ಪನ್ನವಾದ ಅಲೆಗಳು ಅಲ್ಲಿಯೇ ಲಯ ಹೊಂದುವಂತೆ.
ವಿಶ್ವಸೃಗ್ಭ್ಯಸ್ತು(ಶ್ಚ) ಭೂತೇಭ್ಯೋ ಮಹಾಭೂತಾನಿ ಗಚ್ಛತಿ |
ಭೂತೇಭ್ಯಶ್ಚಾಪಿ ಪಂಚಭ್ಯೋ ಮುಕ್ತೋ ಗಚ್ಛೇತ್ ಪರಾಂ ಗತಿಮ್ ॥
ವಿಶ್ವವನ್ನು ಸೃಷ್ಟಿಸುವ ಪಂಚಭೂತಗಳಿಂದ ಹುಟ್ಟಿದ ಕಾರ್ಯವು ಸೂಕ್ಷ್ಮ ಮಹಾಭೂತದಲ್ಲಿ ವ್ಯಾಪಿಸಿಕೊಂಡಿದೆ. ಹೀಗೆ ಸೂಕ್ಷ್ಮರೂಪದಲ್ಲಿರುವ ಪಂಚಭೂತಗಳಿಂದಲೂ ಯಾವನು ಮುಕ್ತನಾಗುತ್ತಾನೋ ಅವನು ಪರಮಗತಿಯನ್ನು ಹೊಂದುತ್ತಾನೆ.
ಪ್ರಜಾಪತಿರಿದಂ ಸರ್ವಂ ತಪಸೈವಾಸೃಜತ್ ಪ್ರಭುಃ |
ತಥೈವ ದೇವಾನೃಷಯಸ್ತಪಸಾ ಪ್ರತಿಪೇದಿರೇ ॥16॥
ಈ ಸಮಗ್ರವಾದ ಜಗತ್ತನ್ನು ಚತುರ್ಮುಖ ಬ್ರಹ್ಮನು ತನ್ನ ತಪಸ್ಸಿನಿಂದ ಸೃಷ್ಟಿಸಿದನು. ಅದೇ ರೀತಿ ದೇವತೆಗಳು, ಋಷಿಗಳು ತಪಸ್ಸಿನಿಂದಲೇ ಆಯಾ ಸ್ಥಾನವನ್ನು ಹೊಂದಿದರು.
ತಪಸಶ್ಚಾನುಪೂರ್ವ್ಯೇಣ ಫಲಮೂಲಾಶಿನಸ್ತಥಾ |
ತ್ರೈಲೋಕ್ಯಂ ತಪಸಾ ಸಿದ್ಧಾಃ ಪಶ್ಯಂತೀಹ ಸಮಾಹಿತಾಃ ॥17॥
ತಪಸ್ಸಿನ ಪ್ರಭಾವದಿಂದಲೇ ಹಣ್ಣು, ಗೆಡ್ಡೆ, ಗೆಣಸುಗಳನ್ನು ತಿನ್ನುವ ಸಿದ್ಧಪುರುಷರು ಏಕಾಗ್ರ ಮನಸ್ಸಿನಿಂದ, ತಪಸ್ಸಿನಿಂದ ಮೂರುಲೋಕಗಳನ್ನು ಪ್ರತ್ಯಕ್ಷವಾಗಿಯೇ ನೋಡುತ್ತಾರೆ.
ಔಷಧಾನ್ಯಗದಾದೀನಿ ನಾನಾವಿದ್ಯಾಶ್ಚ ಸರ್ವಶಃ |
ತಪಸೈವ ಪ್ರಸಿದ್ಧ್ಯಂತಿ ತಪೋಮೂಲಂ ಹಿ ಸಾಧನಮ್ ॥18॥
ಆರೋಗ್ಯಕ್ಕೆ ಸಾಧನವಾದ ಔಷಧಿಗಳು, ಸಮಸ್ತ ವಿದ್ಯೆಗಳು ತಪಸ್ಸಿನಿಂದಲೇ ಸಿದ್ಧಿಸುತ್ತವೆ. ಎಲ್ಲದಕ್ಕೂ ಮೂಲ ತಪಸ್ಸು.
ಯದ್ ದುರಾಪಂ ದುರಾಮ್ನಾಯಂ ದುರಾಧರ್ಷಂ ದುರನ್ವಯಮ್ |
ತತ್ಸರ್ವಂ ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಮ್ ॥19॥
ಯಾವುದು ಹೊಂದಲು ಅಸಾಧ್ಯವೋ, ಯಾವುದು ಅಭ್ಯಾಸ ಮಾಡಲು ಅಸಾಧ್ಯವೋ, ಯಾವುದು ಸಹಿಸಲು ಅಸಾಧ್ಯವೋ,

ಯಾವುದು ಸಂಬಂಧ ಹೊಂದಲು ಅಸಾಧ್ಯವೋ ಅವೆಲ್ಲವೂ ತಪಸ್ಸಿನಿಂದಲೇ ಸಾಧ್ಯವೆನಿಸುತ್ತವೆ. ಆದ್ದರಿಂದ ತಪಸ್ಸಿನ ಪ್ರಭಾವವು ದಾಟಲು ಅಸಾಧ್ಯವಾದುದು.
ಸುರಾಪೋ ಬ್ರಹ್ಮಹಾ ಸ್ತೇನೋ ಭ್ರೂಣಹಾ ಗುರುತಲ್ಪಗಃ |
ತಪಸ್ಯೈವ ಸುತಪ್ತೇನ ಮುಚ್ಯತೇ ಕಿಲ್ಬಿಷಾತ್ ತತಃ ॥20॥
ಸುರೆಯನ್ನು ಕುಡಿದವನು, ಬ್ರಹ್ಮಹತ್ಯೆಯನ್ನು ಎಸಗಿದವನು, ಕಳ್ಳತನದಲ್ಲಿ ಪ್ರವೃತ್ತನಾದವನು, ಭ್ರೂಣಹತ್ಯೆಯನ್ನು ಮಾಡಿದವನು, ಗುರುಪತ್ನಿಯ ಸಂಗ ಮಾಡಿದವನು ಇಂತಹ ಪಾಪಿಷ್ಠರು ಶ್ರದ್ಧೆಯಿಂದ ತಪಸ್ಸನ್ನು ಮಾಡಿ ಆ ಮಹಾಪಾಪಗಳಿಂದ ಮುಕ್ತರಾಗುತ್ತಾರೆ.
ಮನುಷ್ಯಾಃ ಪಿತರೋ ದೇವಾಃ ಪಶವೋ ಮೃಗಪಕ್ಷಿಣಃ |
ಯಾನಿ ಚಾನ್ಯಾನಿ ಭೂತಾನಿ ಚರಾಣಿ ಸ್ಥಾವರಾಣಿ ಚ ॥21॥
ತಪಃಪರಾಯಣಾ ನಿತ್ಯಂ ಸಿದ್ಧ್ಯಂತೇ ತಪಸಾ ಸದಾ ॥22॥
ಮನುಷ್ಯರು, ಪಿತೃಗಳು, ದೇವತೆಗಳು, ಪಶುಗಳು, ಮೃಗ-ಪಕ್ಷಿಗಳು, ಸಮಸ್ತ ಚರಾಚರ ಪ್ರಾಣಿಗಳು, ನಿತ್ಯವೂ ತಪಸ್ಸಿನಲ್ಲಿಯೇ ಆಸಕ್ತವಾಗಿ ಸಿದ್ಧಿಯನ್ನು ಹೊಂದುತ್ತಾರೆ.
ತಥೈವ ತಪಸಾ ದೇವಾ ಮಹಾಭಾಗಾ ದಿವಂ ಗತಾಃ ॥23॥
ಅದರಂತೆ ತಪಸ್ಸಿನ ಬಲದಿಂದಲೇ ಮಹಾಭಾಗ್ಯಶಾಲಿಗಳಾದ ದೇವತೆಗಳು ಸ್ವರ್ಗವನ್ನು ಸೇರಿರುತ್ತಾರೆ.
ಆಶೀರ್ಯುಕ್ತಾನಿ ಕರ್ಮಾಣಿ ಕುರ್ವತೇ ಯೇ ತ್ವತಂದ್ರಿತಾಃ |
ಅಹಂಕಾರಸಮಾಯುಕ್ತಾಃ ತೇ ಸಕಾಶೇ ಪ್ರಜಾಪತೇಃ ॥24॥
ಯಾರು ಸಕಾಮ ಕರ್ಮಗಳನ್ನು ಆಲಸ್ಯವಿಲ್ಲದೆ ಆಚರಿಸುತ್ತಾರೋ ಇವರೆಲ್ಲರೂ ಅಹಂಕಾರ-ಮಮಕಾರಗಳಿಂದ ಯುಕ್ತರಾಗಿ ಕರ್ಮ ಮಾಡಿರುವುದರಿಂದ ಚತುರ್ಮುಖ ಬ್ರಹ್ಮನ ಲೋಕಕ್ಕೆ ಹೋಗುತ್ತಾರೆ.
ಧ್ಯಾನಯೋಗೇನ ಶುದ್ಧೇನ ನಿರ್ಮಮಾ ನಿರಹಂಕೃತಾಃ |
ಆಪ್ನುವಂತಿ ಮಹಾತ್ಮಾನೋ ಮಹಾಂತಂ ಲೋಕಮುತ್ತಮಮ್ ॥25॥
ಯಾರು ಶುದ್ಧ ಮನಸ್ಕರಾಗಿ, ಅಹಂಕಾರ-ಮಮಕಾರದಿಂದ ದೂರರಾಗಿ, ಧ್ಯಾನ ಯೋಗದಲ್ಲಿ ನಿರತರಾಗಿ, ಭಗವಂತನನ್ನು ಧ್ಯಾನಿಸುತ್ತಾರೋ ಅವರು ಪ್ರಜಾಪತಿಯ ಲೋಕಕ್ಕಿಂತಲೂ ಅತ್ಯಂತ ಶ್ರೇಷ್ಠವಾದ ವೈಕುಂಠಲೋಕವನ್ನು ಸೇರುತ್ತಾರೆ.
ಧ್ಯಾನಯೋಗಮುಪಾಗಮ್ಯ ಪ್ರಸನ್ನಮತಯಃ ಸದಾ |
ಸುಖೋಪಚಯಮವ್ಯಕ್ತಂ ಪ್ರವಿಶಂತ್ಯಾತ್ಮವತ್ತಯಾ ॥26॥
ಧ್ಯಾನಯೋಗವನ್ನು ಆಶ್ರಯಿಸಿ, ಪ್ರಸನ್ನಮತಿಗಳಾಗಿ ಜೀವರ ಆತ್ಮಸುಖಕ್ಕೆ ಉಪಾಯ ಎನಿಸಿದ, ಅವ್ಯಕ್ತಶಬ್ದವಾಚ್ಯನಾದ ಪರಮಾತ್ಮನನ್ನು ಜಿತಮನಸ್ಕರಾಗಿ ತಿಳಿದು ಅವನನ್ನೇ ಹೊಂದುತ್ತಾರೆ.
ಧ್ಯಾನಯೋಗಾದುಪಾಗಮ್ಯ ನಿರ್ಮಮಾ ನಿರಹಂಕೃತಾಃ |
ಅವ್ಯಕ್ತಂ ಪ್ರವಿಶಂತೀಹ ಮಹತಾಂ ಲೋಕಮುತ್ತಮಮ್ ॥27॥
ಯಾರು ಅಹಂಕಾರ-ಮಮಕಾರಗಳನ್ನು ತೊರೆದು, ಧ್ಯಾನಯೋಗದಿಂದ ಸಿದ್ಧಿಯನ್ನು ಪಡೆದವರಾಗಿ ಇದ್ದಾರೋ ಎಲ್ಲ ಲೋಕಗಳಿಗಿಂತಲೂ ಶ್ರೇಷ್ಠವಾದ ಅವ್ಯಕ್ತ ಎನಿಸಿದ ಪರಮಾತ್ಮನನ್ನು ಹೊಂದುತ್ತಾರೆ.
ಅವ್ಯಕ್ತಾದೇವ ಸಂಭೂತಾಃ ಸಮಯಜ್ಞಾ ಗತಾಃ ಪುನಃ |
ತಮೋರಜೋಭ್ಯಾಂ ನಿರ್ಮುಕ್ತಾಃ ಸಂಗಾತ್ ಸಂಜ್ಞಾಂ ಗತಾ ಹಿ ತೇ ॥
ಅವ್ಯಕ್ತನೆನಿಸಿದ ಪರಮಾತ್ಮನಿಂದಲೇ ಈ ಜೀವರೆಲ್ಲರೂ ಹುಟ್ಟನ್ನು ಪಡೆದಿದ್ದಾರೆ. ಇವರು ಎಲ್ಲೆಡೆಯೂ ಸತ್ತ್ವಗುಣದಿಂದ ಪರಮಾತ್ಮನನ್ನೇ ಹೊಂದಿದವರಾಗಿ ತಮಸ್ಸು, ರಜಸ್ಸು ಎಂಬ ಗುಣಗಳಿಂದ ಮುಕ್ತರಾಗಿ ಸಜ್ಜನರ ಸಂಗದಿಂದ ಯಥಾರ್ಥ ಜ್ಞಾನವನ್ನು ಹೊಂದಿರುತ್ತಾರೆ.
ನಿರ್ಮುಕ್ತಃ ಸರ್ವಪಾಪೇಭ್ಯಃ ಸರ್ವಂ ತ್ಯಜತಿ ಸರ್ವಶಃ ॥29॥
ಹೀಗೆ ಎಲ್ಲ ಪಾಪಗಳನ್ನು ಭಗವದ್‌ಜ್ಞಾನದಿಂದ ಪರಿಹರಿಸಿಕೊಂಡು, ಎಲ್ಲ ವಿಧವಾದ ಬಿಡುಗಡೆಯನ್ನು ಹೊಂದುತ್ತಾರೆ.
ಕ್ಷೇತ್ರಜ್ಞ ಇತಿ ತಂ ಚಿಂತ್ಯಾತ್ ಯಸ್ತಂ ವೇದ ಸ ವೇದವಿತ್ ॥30॥
ಯಾರು ಈ ರೀತಿಯಾಗಿ ಚಿಂತೆಯನ್ನು ಹುಟ್ಟಿಸುವ ವಿಷಯಪದಾರ್ಥಗಳನ್ನು ತೊರೆದು, ಮುಕ್ತಿಸ್ಥಾನದಲ್ಲಿರುವ ಪರಮಾತ್ಮನನ್ನು ಚಿಂತಿಸುತ್ತಾರೋ ಅವರೇ ವೇದಜ್ಞರು ಎನಿಸುತ್ತಾರೆ.
ಚಿತ್ತಂ ಚಿತ್ತಾದುಪಾಗಮ್ಯ ಮುನಿರಾಸೀತ ಸಂಯತಃ |
ತಚ್ಚಿತ್ತಸ್ತನ್ಮನಾ ಭೂತ್ವಾ ಗ್ರಾಹ್ಯಮೇತತ್ ಸನಾತನಮ್ ॥31॥
ಮುನಿಯು ಚಿತ್ತವನ್ನು ಚಿತ್ತದಿಂದ ಹೊಂದಿ (ಏಕಾಗ್ರತೆಯನ್ನು ಮನಸ್ಸಿನ ಮೂಲಕ ಸಾಧಿಸಿಕೊಂಡು) ಜಿತೇಂದ್ರಿಯನಾಗಿ ಇದ್ದಾನೋ ಅಂತಹ ಮುನಿಯ ಮನಸ್ಸು ಭಗವಂತನಲ್ಲಿಯೇ ಸಂಲಗ್ನವಾಗುತ್ತಾ ಸನಾತನವಾದ ಈ ಬ್ರಹ್ಮತತ್ತ್ವವನ್ನೇ ಗ್ರಹಿಸಬೇಕು.
ಅವ್ಯಕ್ತಾದಿವಿಶೇಷಾಂತಮವಿದ್ಯಾಲಕ್ಷಣಂ ಸ್ಮೃತಮ್ |
ನಿಬೋಧತ ಯಥಾ ಹೀನಂ ಗುಣೈರ್ಲಕ್ಷಣಮಿತ್ಯುತ ॥32॥
ಅವ್ಯಕ್ತಪ್ರಕೃತಿಯಿಂದ ಆರಂಭಿಸಿ ಮಹಾಭೂತಾದಿ ಹದಿನಾರು ತತ್ತ್ವಗಳ ತನಕ ಎಲ್ಲವನ್ನೂ ಅವಿದ್ಯಾಲಕ್ಷಣವೆನ್ನುತ್ತಾರೆ. ಇವುಗಳನ್ನು ಹೊಂದಿದವರು ಅಜ್ಞಾನಕ್ಕೂ ತುತ್ತಾಗಿರುತ್ತಾರೆ. ಪರಮಾತ್ಮನು ಜ್ಞಾನಾದಿ ಗುಣಲಕ್ಷಣವುಳ್ಳವನು. ಆದ್ದರಿಂದ ಈ ಅವ್ಯಕ್ತಾದಿ ಪಂಚಮಹಾಭೂತಗಳ ಗುಣಗಳು ಪರಮಾತ್ಮನಲ್ಲಿ ಇರುವುದಿಲ್ಲ. ಆದ್ದರಿಂದಲೇ ಎಂದಿಗೂ ಅಜ್ಞಾನವು ಈತನಲ್ಲಿ ಸುಳಿಯುವುದಿಲ್ಲ. ಅಥವಾ `ಜನ್ಮಾದ್ಯಸ್ಯ ಯತಃ' ಎಂಬ ಬ್ರಹ್ಮಸೂತ್ರದ ವಚನದಂತೆ ಜನ್ಮಕಾರಣತ್ವಾದಿ ಗುಣಗಳ ಲಕ್ಷಣವುಳ್ಳವನು ಪರಮಾತ್ಮ ಎಂದು ತಿಳಿಯಬೇಕೇ ವಿನಾ ಅವ್ಯಕ್ತಾದಿ ಮಹಾಭೂತಗಳ ಗುಣಗಳನ್ನು ಶ್ರೀಹರಿಯಲ್ಲಿ ತಿಳಿಯಬಾರದು.

ದ್ವ್ಯಕ್ಷರಸ್ತು ಭವೇನ್ಮೃತ್ಯುಃ ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್ |
ಮಮೇತಿ ಹಿ ಭವೇನ್ಮೃತ್ಯುರ್ನ ಮಮೇತಿ ಹಿ ಶಾಶ್ವತಮ್ ॥33॥
ಎರಡು ಅಕ್ಷರಗಳ ಪದವು ಮೃತ್ಯು ಎನಿಸಿದೆ. ಮೂರು ಅಕ್ಷರದ ಪದವು ಬ್ರಹ್ಮ ಪದವನ್ನು ದೊರಕಿಸಿಕೊಡುತ್ತದೆ. `ಮಮ' ಎಂಬ ಎರಡಕ್ಷರದ ಪದವೇ ಮೃತ್ಯುವೆನಿಸಿದೆ. `ನ ಮಮ' ಎಂಬ ಮೂರಕ್ಷರದ ಪದವೇ ಶಾಶ್ವತ ಸುಖಕ್ಕೆ ಕಾರಣವಾಗಿದೆ.
ಕರ್ಮ ಕೇಚಿತ್ ಪ್ರಶಂಸಂತಿ ಮಂದಬುದ್ಧಿರತಾ ನರಾಃ |
ಯೇ ತು ಬುದ್ಧ್ಯಾ ಮಹಾತ್ಮಾನೋ ನ ಪ್ರಶಂಸಂತಿ ಕರ್ಮ ತೇ ॥34॥
ಕೆಲವರು ಸ್ವರ್ಗಾದಿ ಫಲಗಳನ್ನು ಕೊಡುವ ಕಾಮ್ಯಕರ್ಮಗಳನ್ನೇ ಪ್ರಶಂಸೆ ಮಾಡುತ್ತಾರೆ. ಇವರು ಮಂದಬುದ್ಧಿಯುಳ್ಳವರು. ಆದರೆ ಮಹಾತ್ಮರಾದ ಜ್ಞಾನವೃದ್ಧರು ಕಾಮ್ಯಕರ್ಮಗಳನ್ನು ಎಂದಿಗೂ ಪ್ರಶಂಸೆ ಮಾಡುವುದಿಲ್ಲ.
ಕರ್ಮಣಾ ಜಾಯತೇ ಜಂತುರ್ಮೂರ್ತಿಮಾನ್ ಷೋಡಶಾತ್ಮಕಃ |
ಪುರುಷಂ ಪ್ರಜತೇಽವಿದ್ಯಾ ಅಗ್ರಾಹ್ಯಮಮೃತಾಶಿನಮ್ ॥35॥
ಸಕಾಮಕರ್ಮಗಳಿಂದ ಜೀವನು ಹದಿನಾರು ವಿಕಾರಗಳಿಂದ ಕೂಡಿದ ಸ್ಥೂಲ ಶರೀರವನ್ನು ಪಡೆಯುತ್ತಲೇ ಇರುತ್ತಾನೆ. ಈ ಅವಿದ್ಯೆಯು ಜೀವನನ್ನು ಆವರಿಸುತ್ತದೆ. ಸೂಕ್ಷ್ಮನಾಗಿರುವ ಬುದ್ಧಿ-ಇಂದ್ರಿಯಗಳಿಂದ ನೋಡಲಾಗದಿರುವ, ಅಮೃತಾಶನಿಯಾದ ಜೀವನನ್ನು ಕರ್ಮಗಳ ಮೂಲಕ ಅವಿದ್ಯೆಯು ಆವರಿಸುತ್ತದೆ.
ತಸ್ಮಾತ್ ಕರ್ಮಸು ನಿಃಸ್ನೇಹಾ ಯೇ ಕೇಚಿತ್ ಪಾರದರ್ಶಿನಃ |
ವಿದ್ಯಾಮಯೋಽಯಂ ಪುರುಷೋ ನ ತು ಕರ್ಮಮಯಃ ಸ್ಮೃತಃ ॥
ಆದ್ದರಿಂದ ಕಾಮ್ಯಕರ್ಮಗಳಲ್ಲಿ ಸಂಗವನ್ನು, ಮೋಹವನ್ನು ತಾಳಬಾರದು. ಯಾರು ಪರಬ್ರಹ್ಮತತ್ತ್ವವನ್ನು ಕಂಡುಕೊಳ್ಳುತ್ತಾರೋ ಅವರು ತತ್ತ್ವಜ್ಞಾನಿ ಪುರುಷರು ಎನಿಸುತ್ತಾರೆ. ಕಾಮ್ಯಕರ್ಮಗಳನ್ನು ಮಾಡಿದವರನ್ನು ಹೀಗೆ ಕರೆಯಲಾಗುವುದಿಲ್ಲ.
ಅಪೂರ್ವಮಮೃತಂ ನಿತ್ಯಂ ಸ್ವಯ್ಯೆನಮಭಿಚಾರಿಣಮ್ |
ಯ ಏನಂ ವಿಂದತೇ ತ್ಮಾನಮಮೇಯಮವಿನಾಶಿನಮ್ ॥37॥
ಅಗ್ರಾಹ್ಯೋಽಮೃತೋ ಭವತಿ ಸ ಏಭಿಃ ಕಾರಣೈರ್ಧ್ರುವಮ್ ॥38॥
ಯಾವನು ಅಪೂರ್ವನೆನಿಸಿದ, ಅಮೃತನೆನಿಸಿದ, ನಿತ್ಯನಾದ ಜೀವನನ್ನು ಅವಿದ್ಯೆಯ ಮೂಲಕ ಸ್ವರ್ಗ-ನರಕಾದಿಗಳಲ್ಲಿ ಸಂಚರಿಸುವಂತೆ ಮಾಡುವ, ಹೃದಯಸ್ಥನಾದ, ಅಮೇಯನಾದ, ಅವಿನಾಶಿಯಾದ ಪರಮಾತ್ಮನನ್ನು ತಿಳಿದುಕೊಳ್ಳುತ್ತಾನೋ ಆ ವ್ಯಕ್ತಿಯು ಇಂತಹ ಗುಣಗಳಿಂದ ಭಗವಂತನನ್ನು ಚಿಂತಿಸಿದುದರ ಫಲವಾಗಿ, ಅಗ್ರಾಹ್ಯನಾದ ಪರಮಾತ್ಮನನ್ನು ಹೊಂದಿ ಸುಖಭಾಗಿಯಾಗುತ್ತಾನೆ.
ಅಪೋಹ್ಯ ಸರ್ವಸಂಕಲ್ಪಾನ್ ಸಂಯಮ್ಯಾತ್ಮಾನಮಾತ್ಮನಿ |
ಸ ತದ್ ಬ್ರಹ್ಮ ಶುಭಂ ವೇತ್ತಿ ಯಸ್ಮಾದ್ ಭೂಯೋ ನ ವಿದ್ಯತೇ ॥39॥
ಯಾವನು ಸಂಸಾರಕ್ಕೆ ಕಾರಣವಾದ ಎಲ್ಲ ವಿಧವಾದ ಆಸೆಗಳನ್ನೂ ತೊರೆದು, ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿದಲ್ಲಿ ಆ ಗುಣಪರಿಪೂರ್ಣನಾದ ಪರಬ್ರಹ್ಮನ ಜ್ಞಾನವನ್ನು ಪಡೆದು ಸುಖ ಹೊಂದುತ್ತಾನೆ. ಆ ಪರಬ್ರಹ್ಮನಿಗಿಂತ ಮಿಗಿಲಾದ ಮತ್ತೊಂದು ಪದಾರ್ಥವು ಜಗತ್ತಿನಲ್ಲಿ ಇರುವುದಿಲ್ಲ.
ಪ್ರಸಾದೇನ ಹಿ(ಚ) ಸತ್ತ್ವಸ್ಯ ಪ್ರಸಾದಂ ಸಮವಾಪ್ನುಯಾತ್ |
ಲಕ್ಷಣಂ ಹಿ ಪ್ರಸಾದಸ್ಯ ಯಥಾ ಸ್ಯಾತ್ ಸ್ವಪ್ನದರ್ಶನಮ್ ॥40॥
ಮನಸ್ಸಿನ ಪ್ರಸನ್ನತೆಯಿಂದ ಭಗವಂತನ ಅನುಗ್ರಹವನ್ನು ಹೊಂದುತ್ತಾನೆ. ಯಾವ ರೀತಿಯಾಗಿ ಬಾಹ್ಯಪದಾರ್ಥಗಳ ಸಂಯೋಜನೆ ಇಲ್ಲದೆ ಸ್ವಪ್ನದಲ್ಲಿ ಉಂಟಾಗುವ ಪದಾರ್ಥಗಳಿಂದಲೇ ಸುಖವನ್ನು ಹೊಂದುತ್ತಾನೋ, ಸ್ವಪ್ನ ನಿರ್ಮಾತೃವಾದ ಪರಮಾತ್ಮನಿಂದಲೇ ಸ್ವಪ್ನಸುಖವನ್ನು ಪಡೆಯುತ್ತಾನೋ, ಅದರಂತೆ ಬಾಹ್ಯ ಪದಾರ್ಥಗಳ ಸಂಯೋಜನೆ ಇಲ್ಲದೆಯೇ ಮನಸ್ಸಿನಲ್ಲಿ ಪ್ರಸನ್ನತೆಯು ಉಂಟಾದರೆ ಇದು ಭಗವಂತನ ಅನುಗ್ರಹದ ಸೂಚನೆ ಎನಿಸಿದೆ.
ಗತಿರೇಷಾ ತು ಮುಕ್ತಾನಾಂ ಯೇ ಜ್ಞಾನಪರಿನಿಷ್ಠಿತಾಃ |
ಪ್ರವೃತ್ತಯಶ್ಚ ಯಾಃ ಸರ್ವಾಃ ಪಶ್ಯಂತಿ ಪರಿಣಾಮಜಾಃ ॥41॥
ಜ್ಞಾನನಿಷ್ಠರಾದ, ಜೀವನ್ಮುಕ್ತರಾದ ಮಹಾತ್ಮರಿಗೆ ಪರಮಾತ್ಮನ ದರ್ಶನವೇ ಪರಮಗತಿ ಎನಿಸಿದೆ. ಕಾರಣ ಆ ಮಹಾತ್ಮರು ಪ್ರವೃತ್ತಿ ಮಾರ್ಗದಲ್ಲಿರುವ ಸಮಸ್ತ ಕರ್ಮಗಳಲ್ಲಿಯೂ ಶುಭಕರ್ಮದಿಂದಾಗುವ ಒಳಿತು, ಅಶುಭ ಕರ್ಮದಿಂದಾಗುವ ಅನರ್ಥಗಳನ್ನು ಅರಿತಿರುತ್ತಾರೆ.
ಏಷಾ ಗತಿರಸಕ್ತಾನಾಮೇಷ ಧರ್ಮಃ ಸನಾತನಃ |
ಏಷಾ ಜ್ಞಾನವತಾಂ ಪ್ರಾಪ್ತಿಃ ಏತದ್ ವೃತ್ತಮನಿಂದಿತಮ್ ॥42॥
ವಿರಕ್ತರಾದ ಸಜ್ಜನರಿಗೆ ಪರಮಾತ್ಮನೇ ಪರಮ ಆಶ್ರಯನಾಗಿದ್ದಾನೆ. ಇದೇ ಸನಾತನವಾದ ಧರ್ಮವೂ ಆಗಿದೆ. ಜ್ಞಾನಿಗಳಿಂದ ಹೊಂದಬೇಕಾದ ಸ್ಥಾನವೂ ಆಗಿದೆ. ಈ ಆಚರಣೆಯು ಯಾವ ದೋಷವೂ ಇಲ್ಲದ್ದಾಗಿದೆ.
ಸಮೇನ ಸರ್ವಭೂತೇಷು ನಿಸ್ಪೃಹೇಣ ನಿರಾಶಿಷಾ |
ಶಕ್ಯಾ ಗತಿರಿಯಂ ಗಂತುಂ ಸರ್ವತ್ರ ಸಮದರ್ಶಿನಾ ॥43॥
ಯಾವನು ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾದ ಪರಮಾತ್ಮನನ್ನು ನೋಡುತ್ತಾನೋ, ಯಾವುದೇ ಜಗತ್ತಿನ ಆಸೆಗಳಿಲ್ಲದೆ ನಿಸ್ಪೃಹನಾಗಿ ಬದುಕುತ್ತಾನೋ ಅಂತಹ ಸಮದರ್ಶಿಯಾದ ವ್ಯಕ್ತಿಯು ಈ ಪರಬ್ರಹ್ಮನ ಗತಿಯನ್ನು ಹೊಂದುತ್ತಾನೆ.
ಏತದ್ ಸರ್ವಮಾಖ್ಯಾತಂ ಮಯಾ ವಿಪ್ರರ್ಷಿಸತ್ತಮಾಃ |
ಏವಮಾಚರತ ಕ್ಷಿಪ್ರಂ ತತಃ ಸಿದ್ಧಿಮವಾಪ್ಸ್ಯಥ ॥44॥

ಬ್ರಹ್ಮರ್ಷಿಗಳೇ, ಈ ಎಲ್ಲ ವಿಷಯವನ್ನೂ ನಾನು ನಿಮಗೆ ವಿಸ್ತಾರವಾಗಿ ಹೇಳಿದ್ದೇನೆ. ನಾನು ಹೇಳಿದಂತೆ ನೀವು ಆಚರಿಸಿ, ಬೇಗನೆ ಸಿದ್ಧಿಯನ್ನು ಹೊಂದುತ್ತೀರಿ.

ಗುರುಃ

ಇತ್ಯುಕ್ತಾ ಗುರುಣಾ ತೇ ತು ಬ್ರಾಹ್ಮಣಾ ಮುನಯಸ್ತಥಾ |
ಕೃತವಂತೋ ಮಹಾತ್ಮಾನಸ್ತತೋ ಲೋಕಮವಾಪ್ನುವನ್ ||45||

ಗುರು ಶಿಷ್ಯನೇ, ಗುರುವಾದ ಬ್ರಹ್ಮನು ಹೀಗೆ ಮುನಿಗಳನ್ನು ಕುರಿತು ಹೇಳಿದ ಬಳಿಕ, ಆ ಮುನಿಗಳು ಬ್ರಹ್ಮನ ಉಪದೇಶಕ್ಕನುಗುಣವಾಗಿ ಸತ್ಕರ್ಮಗಳನ್ನು ಆಚರಿಸಿ ಉತ್ತಮ ಲೋಕಗಳನ್ನೇ ಹೊಂದಿದರು.

ತ್ವಮಪ್ಯೇವಂ ಮಹಾಭಾಗ ಯಥೋಕ್ತಂ ಬ್ರಹ್ಮಣೋ ವಚಃ |
ಸಮ್ಯಗಾಚರ ಶುದ್ಧಾತ್ಮನ್ ತತಃ ಸಿದ್ಧಿಮವಾಪ್ಸ್ಯಸಿ ||46||

ಮಹಾಭಾಗ್ಯಶಾಲಿಯೇ, ಶುದ್ಧಾತ್ಮನೇ, ನೀನೂ ಕೂಡ ಆ ಮುನಿಗಳಂತೆ ನಾನು ಹೇಳಿದ ಬ್ರಹ್ಮನನ್ನು ಚೆನ್ನಾಗಿ ಅರಿತು, ಶ್ರದ್ಧೆಯಿಂದ ಸತ್ಕರ್ಮಗಳನ್ನು ಆಚರಿಸು, ಸಿದ್ಧಿಯನ್ನು ಹೊಂದುತ್ತಿ.

ಶ್ರೀಭಗವಾನ್

ಇತ್ಯುಕ್ತಃ ಸ ತದಾ ಶಿಷ್ಯೋ ಗುರುಣಾ ಧರ್ಮಮುತ್ತಮಮ್ |
ಚಕಾರ ಸರ್ವಂ ಕೌಂತೇಯ ತತೋ ಮೋಕ್ಷಮವಾಪ್ತವಾನ್ ||47||

ಶ್ರೀಭಗವಾನ್ ಅರ್ಜುನನೇ, ಗುರುವು ಈ ರೀತಿಯಾದ ಧರ್ಮಸಮ್ಮತವಾದ ಮಾತುಗಳನ್ನು ಹೇಳಿದ ಬಳಿಕ, ಶಿಷ್ಯನು ಗುರುವು ಹೇಳಿದಂತೆಯೇ ಎಲ್ಲವನ್ನೂ ಆಚರಿಸಿದನು. ಬಳಿಕ ಕೃತಕೃತ್ಯನಾಗಿ ಮುಕ್ತನಾದನು.

ಕೃತಕೃತ್ಯಶ್ಚ ಸ ತದಾ ಶಿಷ್ಯಃ ಕುರುಕುಲೋದ್ವಹ |
ತತ್ಪದಂ ಸಮನುಪ್ರಾಪ್ತೋ ಯತ್ರ ಗತ್ವಾ ನ ಶೋಚತಿ ||48||

ಕೃತಕೃತ್ಯನಾದ ಆ ಶಿಷ್ಯನು ಮುಕ್ತನಾದನು. ಯಾವ ಸ್ಥಾನವನ್ನು ಪಡೆದರೆ ಶೋಕಕ್ಕೆ ಅವಕಾಶವೇ ಇಲ್ಲವೋ ಅಂತಹ ಬ್ರಹ್ಮನ ಸ್ಥಾನವನ್ನು ಹೊಂದಿದನು.

ತ್ವಮಪ್ಯೇತನ್ಮಹಾಭಾಗ ಯಥೋಕ್ತಂ ಬ್ರಹ್ಮಣೋ ವಚಃ |
ಸಮ್ಯಗಾಚರ ಶುದ್ಧಾತ್ಮನ್ ತತಃ ಸಿದ್ಧಿಮವಾಪ್ಸ್ಯಸಿ ||49||

ಮಹಾಬಾಹುವಾದ ಅರ್ಜುನನೇ, ನೀನು ಆ ಬ್ರಾಹ್ಮಣನು ಹೇಳಿದಂತೆ ಸತ್ಕರ್ಮಗಳನ್ನು ಆಚರಿಸಿ, ಪರಬ್ರಹ್ಮನನ್ನು ಶುದ್ಧಮನಸ್ಸಿನಿಂದ ಧ್ಯಾನಿಸಿದಲ್ಲಿ ಸಿದ್ಧಿಯನ್ನು ಹೊಂದುತ್ತಿ.

ಅರ್ಜುನಃ

ಕೋ ನ್ವಸೌ ಬ್ರಾಹ್ಮಣಃ ಕೃಷ್ಣ ಕಶ್ಚ ಶಿಷ್ಯೋ ಜನಾರ್ದನ |
ಜ್ಞಾತವ್ಯಂ ಚೇನ್ಮಯೈತದ್ ವೈ ತನ್ಮಮಾಚಕ್ಷ್ವ ಮೇ ವಿಭೋ ||50||

ಜನಾರ್ದನನೇ, ಬ್ರಹ್ಮನಿಷ್ಠನಾದ ಆ ಬ್ರಾಹ್ಮಣ ಗುರುವು ಯಾರು? ಆ ಶಿಷ್ಯನು ಯಾರು? ಪ್ರಭುವೇ, ಈ ವಿಷಯವನ್ನು ನಾನು ತಿಳಿಯಬಹುದಾಗಿದ್ದಲ್ಲಿ ಯಥಾವತ್ತಾಗಿ ತಿಳಿಸು.

ಶ್ರೀಭಗವಾನ್

ಅಹಂ ಗುರುರ್ಮಹಾಬಾಹೋ ಮನಃ ಶಿಷ್ಯೋ ಹಿ ವಿದ್ಧಿ ಮೇ |
ತ್ವತ್ಪ್ರೀತ್ಯಾ ಸರ್ವಮೇತದ್ ವೈ ಕಥಿತಂ ತೇ ಧನಂಜಯ ||51||

ಶ್ರೀಭಗವಾನ್ ಮಹಾಬಾಹುವೇ, ಆ ಗುರುವೇ ನಾನು. ನನ್ನ ಮನಸ್ಸೇ ಶಿಷ್ಯ ಎಂದು ತಿಳಿ. ಧನಂಜಯನೇ, ನಿನ್ನಲ್ಲಿರುವ ಪ್ರೀತಿಯಿಂದ ರಹಸ್ಯವಾದ ಈ ವಿಷಯವನ್ನು ನಿನಗೆ ಹೇಳಿದೆನು.

ಮಯಿ ಚೇದಸ್ತಿ ತೇ ಭಕ್ತಿರ್ನಿತ್ಯಂ ಕುರುಕುಲೋದ್ವಹ |
ಅಧ್ಯಾತ್ಮಮೇತಚ್ಛ್ರುತ್ವಾ ತ್ವಂ ಸಮ್ಯಗಾಚರ ಸುವ್ರತ ||52||

ಸುವ್ರತನೇ, ಕುರುಕುಲಶ್ರೇಷ್ಠನೇ, ನಿನಗೆ ನನ್ನ ಮೇಲೆ ಪ್ರೀತಿಯಿದ್ದಲ್ಲಿ ಇಷ್ಟರವರೆಗೆ ಕೇಳಿದ ಈ ಅಧ್ಯಾತ್ಮವಿದ್ಯೆಯನ್ನು ನಿತ್ಯವೂ ಚೆನ್ನಾಗಿ ಆಚರಿಸು.

ತತಸ್ತ್ವಂ ಸಮ್ಯಗಾಚಾರೋ ಧರ್ಮೇಽಸ್ಮಿನ್ ಕುರುನಂದನ |
ಸರ್ವಪಾಪವಿಶುದ್ಧಾತ್ಮಾ ಮೋಕ್ಷಂ ಪ್ರಾಪ್ಸ್ಯಸಿ ಕೇವಲಮ್ ||53||

ಶತ್ರುಸೂದನನೇ, ಈ ಮೋಕ್ಷಧರ್ಮವನ್ನು ಪೂರ್ಣವಾಗಿ ನೀನು ಆಚರಿಸಿದಲ್ಲಿ ಸಮಸ್ತ ಪಾಪಗಳಿಂದ ದೂರನಾಗಿ ವಿಶುದ್ಧವಾದ ಮುಕ್ತಿಯನ್ನು ಹೊಂದುವಿ.

ಪೂರ್ವಮಪ್ಯೇತದೇವೋಕ್ತಂ ಯುದ್ಧಕಾ ಉಪಸ್ಥಿತೇ |
ಮಯಾ ತವ ಮಹಾಬಾಹೋ ತಸ್ಮಾದತ್ರ ಮನಃ ಕುರು ||54||

ಮಹಾಬಾಹುವೇ, ಹಿಂದೆಯೂ ಕೂಡ ಯುದ್ಧವು ಸನ್ನಿಹಿತವಾದಾಗ ಈ ಅಧ್ಯಾತ್ಮ ಉಪದೇಶವನ್ನೇ ನಿನಗೆ ಮಾಡಿದ್ದೆನು. ಅದನ್ನು ಮರೆತ ನೀನು ಈಗಲಾದರೂ ನಾನು ಹೇಳಿದ್ದನ್ನು ಮನನ ಮಾಡು.

ಮಯಾ ತು ಭರತಶ್ರೇಷ್ಠ ಚಿರದೃಷ್ಟಃ ಪಿತಾ ವಿಭೋ |
ತಮಹಂ ದ್ರಷ್ಟುಮಿಚ್ಛಾಮಿ ಸಮ್ಮತೇ ತವ ಫಲ್ಗುನ ||55||

ಭರತಶ್ರೇಷ್ಠನೇ, ಅರ್ಜುನನೇ, ಪ್ರಭುವಾದ ನನ್ನ ತಂದೆಯನ್ನು ನಾನು ನೋಡಿ ಬಹಳ ಕಾಲವಾಗಿದೆ. ನಾನು ನಿನ್ನ ಸಮ್ಮತಿಯನ್ನು ಪಡೆದು ಅವನನ್ನು ಕಾಣಲು ದ್ವಾರಕೆಗೆ ತೆರಳುತ್ತೇನೆ.

ಇತ್ಯುಕ್ತವಚನಂ ಕೃಷ್ಣಂ ಪ್ರತ್ಯುವಾಚ ಧನಂಜಯಃ ॥56॥
ಕೃಷ್ಣನ ಮಾತನ್ನು ಕೇಳಿಸಿಕೊಂಡ ಧನಂಜಯನು ಕೃಷ್ಣನಿಗೆ ಹೇಳುತ್ತಾನೆ.
ಯದಿಷ್ಟಂ ಕುರು ಸರ್ವಸ್ಯಾಪೀಶ್ವರೋಽಸ್ಮಾನ್ ಪ್ರಪಾಲಯ ॥57॥
ಕೃಷ್ಣನೇ, ನಿನಗೆ ಯಾವುದು ಇಷ್ಟವೋ ಅದನ್ನು ಆಚರಿಸು. ಸಮಸ್ತ ಪ್ರಪಂಚಕ್ಕೂ ನೀನೇ ಒಡೆಯನಾಗಿದ್ದಿ. ನಮ್ಮನ್ನು ಚೆನ್ನಾಗಿ ರಕ್ಷಿಸುವವನೂ ನೀನೇ ಆಗಿರುವಿ.
ನಮಸ್ತೇ ಸರ್ವಲೋಕಾತ್ಮನ್ ನಾರಾಯಣ ಪರಾತ್ಪರ |
ಮನೋಮಲಾತ್ ತಪೋಽಶಕ್ಯಂ ಕರ್ಮ ಚಾವಿದ್ಯಯಾ ತಥಾ ॥58॥
ಸರ್ವಲೋಕಗಳ ಅಂತರ್ಯಾಮಿಯಾದ ಪರಮಾತ್ಮನೇ, ಪರಾತ್ಪರನಾದ ನಾರಾಯಣನೇ, ನಿನಗೆ ನಮಸ್ಕಾರ. ಮನಸ್ಸಿನಲ್ಲಿ ಕಶ್ಮಲವನ್ನು ತುಂಬಿಕೊಂಡವರು, ಅಜ್ಞಾನಗ್ರಸ್ತರಾದವರು ನಿನ್ನ ಧ್ಯಾನರೂಪವಾದ ಕರ್ಮವನ್ನು ಮಾಡಲು ಅಸಮರ್ಥರಾಗಿದ್ದಾರೆ.

ದಾನಮಪ್ಯರ್ಥದೋಷೇಣ ನಾಮ ತಸ್ಮಾತ್ ಕಲೌ ಸ್ಮರೇತ್ ॥59॥
ಕಲಿಯುಗದಲ್ಲಿ ಎಲ್ಲ ವಿಧವಾದ ದಾನಗಳು ತಪ್ಪಾಗಿ ಸಂಪಾದಿಸಿದ ಅರ್ಥ- ದೋಷದಿಂದ ಕೂಡಿವೆ. ಆದ್ದರಿಂದ ನಿನ್ನ ಈ ನಾಮಸ್ಮರಣೆಗಳನ್ನೇ ಕಲಿಯುಗದಲ್ಲಿ ಮಾಡಬೇಕು.
ಯದಿ ಗಂತುಂ ಕೃತಾ ಬುದ್ಧಿರ್ವಾಸುದೇವ ನಮೋಽಸ್ತು ತೇ |
ಗಚ್ಛಾವೋ ನಗರಂ ಕೃಷ್ಣ ಗಜಸಾಹ್ವಯಮದ್ಯ ವೈ ॥60॥
ಕೃಷ್ಣನೇ, ದ್ವಾರಕೆಗೆ ತೆರಳಲು ನೀನು ಮನಸ್ಸು ಮಾಡಿರುವಿ. ವಾಸುದೇವನೇ, ನಿನಗೆ ನಮಸ್ಕಾರವಿರಲಿ. ಕೃಷ್ಣನೇ, ನಾವು ಹಸ್ತಿನಾವತಿ ನಗರವನ್ನು ಕುರಿತು ಸಾಗೋಣ.
ಸಮೇತ್ಯ ತತ್ರ ರಾಜಾನಂ ಧರ್ಮಾತ್ಮಾನಂ ಯುಧಿಷ್ಠಿರಮ್ |
ಸಮನುಜ್ಞಾಪ್ಯ ದುರ್ಧರ್ಷಂ ಸ್ವಾಂ ಪುರೀಂ ಯಾತುಮರ್ಹಸಿ ॥61॥
ಅಲ್ಲಿ ಧರ್ಮಾತ್ಮನಾದ ಯುಧಿಷ್ಠಿರನ ಜೊತೆಗೆ ಸೇರಿ ಆಲೋಚಿಸೋಣ. ಅವನ ಅನುಮತಿಯಂತೆ ನೀನು ದ್ವಾರಕೆಗೆ ಹೊರಡಬಹುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನುಗೀತಾಸು ಗುರುಶಿಷ್ಯಸಂವಾದೇ
ತಪಃಸಾಮರ್ಥ್ಯಕಥನಂ ನಾಮ ಏಕಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯಿತು.
॥ ಅನುಗೀತಾ ಸಮಾಪ್ತಾ ॥
* * * * *

ಐವತ್ತೆರಡನೆಯ ಅಧ್ಯಾಯ
ಅನುಗೀತೆಯ ಉಪದೇಶದ ಬಳಿಕ ಕೃಷ್ಣಾರ್ಜುನರು ಹಸ್ತಿನಾವತಿಯನ್ನು
ಕುರಿತು ಹೊರಟಿದುದು. ಮಾರ್ಗಮಧ್ಯದಲ್ಲಿ ವ್ಯಾಸ-ನಾರದಾದಿಗಳಿಂದ
ಕೃಷ್ಣನ ಮಹಾತ್ಮ್ಯವನ್ನು ಅರ್ಜುನನು ತಿಳಿದುಕೊಂಡಿದುದು.
ನಂತರ ಕೃಷ್ಣನು ಅರ್ಜುನನಿಂದ ಸಹಿತನಾಗಿ ಹಸ್ತಿನಾವತಿಗೆ ಆಗಮಿಸಿ, ಧೃತರಾಷ್ಟ್ರಾದಿಗಳಿಗೆ ವಂದಿಸಿ, ಕುಂತಿ-ಧರ್ಮರಾಜಾದಿಗಳ ಅನುಮತಿಯನ್ನು ಪಡೆದು, ದ್ವಾರಕೆಯನ್ನು ಕುರಿತು ಪಯಣ ಬೆಳೆಸಿದುದು.
ವೈಶಂಪಾಯನಃ
ತತೋ ಹ್ಯಚೋದಯತ್ ಕೃಷ್ಣೋ ಯುಜ್ಯತಾಮಿತಿ ದಾರುಕಮ್ |
ಮುಹೂರ್ತಾದಿವ ಚಾಚಷ್ಟ ಯುಕ್ತಮಿತ್ಯೇವ ದಾರುಕಃ ॥1॥
ವೈಶಂಪಾಯನ ಜನಮೇಜಯನೇ, ನಂತರ ಕೃಷ್ಣನು ಕುದುರೆಗಳನ್ನು ರಥಕ್ಕೆ ಸಂಯೋಜಿಸುವಂತೆ ಸಾರಥಿಯಾದ ದಾರುಕನಿಗೆ ಹೇಳಿದನು. ಸ್ವಲ್ಪ ಹೊತ್ತಿನಲ್ಲಿಯೇ ದಾರುಕನು ರಥವು ಸಿದ್ಧವಾಗಿದೆ ಎಂದು ಹೇಳಿದನು.
ತಥೈವ ಚಾನುಯಾತ್ರಾಣಿ ಚೋದಯಾಮಾಸ ಪಾಂಡವಃ ॥2॥
ಅರ್ಜುನನೂ ಕೂಡ ತನ್ನ ಸೇವಕರಿಗೆ ಹಸ್ತಿನಾಪಟ್ಟಣಕ್ಕೆ ಹೋಗೋಣ, ರಥವನ್ನು ಸಜ್ಜುಗೊಳಿಸಿರಿ ಎಂದು ಹೇಳಿದನು.
ಸನ್ನಹ್ಯಧ್ವಂ ಪ್ರಯಾಸ್ಯಾಮೋ ನಗರಂ ಗಜಸಾಹ್ವಯಮ್ ॥3॥
ಇತ್ಯುಕ್ತಾಃ ಸೈನಿಕಾಸ್ತೇ ತು ಸಜ್ಜೀಭೂತಾ ವಿಶಾಂಪತೇ |
ಆಚಖ್ಯುಃ ಸಜ್ಜಮಿತ್ಯೇವಂ ಪಾರ್ಥಾಯಾಮಿತತೇಜಸೇ ॥4॥
ಈ ರೀತಿಯಾಗಿ ಆಜ್ಞಪ್ತರಾದ ಸೈನಿಕರು ಕೂಡಲೇ ರಥಗಳನ್ನು ಸಜ್ಜುಗೊಳಿಸಿ ಮಹಾತಪಸ್ವಿಯಾದ ಅರ್ಜುನನಿಗೆ, ಪ್ರಯಾಣಿಸಲು ಎಲ್ಲವೂ ಸಿದ್ಧವಾಗಿದೆ ಎಂದು ಹೇಳಿದರು.
ತತಸ್ತೌ ರಥಮಾಸ್ಥಾಯ ಪ್ರಯಾತೌ ಕೃಷ್ಣಪಾಂಡವೌ |
ತೌ ಕುರ್ವಾಣೌ ಕಥಾಶ್ಚಿತ್ರಾಃ ಪ್ರೀಯಮಾಣೌ ವಿಶಾಂಪತೇ ॥5॥
ನಂತರ ಸೈನಿಕರ ಜೊತೆಗೆ ಕೃಷ್ಣಾರ್ಜುನರು ರಥದಲ್ಲಿ ಕುಳಿತು ಪ್ರಯಾಣ ಬೆಳೆಸಿದರು. ಪ್ರಯಾಣದ ಸಮಯದಲ್ಲಿ ಕೃಷ್ಣಾರ್ಜುನರು ಅನೇಕ ಆಶ್ಚರ್ಯಕರವಾದ ಪ್ರಸಂಗದಿಂದ ಕೂಡಿದ ಕಥೆಗಳನ್ನು ಹೇಳಿಕೊಳ್ಳುತ್ತಾ ಪ್ರಯಾಣೋನ್ಮುಖರಾದರು.
ರಥಸ್ಥಂ ತಂ ಮಹಾತೇಜಾ ವಾಸುದೇವಂ ಧನಂಜಯಃ |
ಪುನರೇವಾಬ್ರವೀದ್ ವಾಕ್ಯಮಿದಂ ಭರತಸತ್ತಮ ॥6॥

ಮಹಾತೇಜಸ್ವಿಯಾದ ಧನಂಜಯನು ರಥದಲ್ಲಿದ್ದಾಗ ಕೃಷ್ಣನನ್ನು ಕುರಿತು ಈ ಮಾತನ್ನು ಹೇಳಿದನು.
ಅರ್ಜುನಃ
ತ್ವತ್ಪ್ರಸಾದಾಜ್ಜಯಂ ಪ್ರಾಪ್ತೋ ರಾಜಾ ವೃಷ್ಣಿಕುಲೋದ್ವಹ |
ನಿಹತಾಃ ಶತ್ರವಶ್ಚಾಪಿ ಪ್ರಾಪ್ತಂ ರಾಜ್ಯಮಕಂಟಕಮ್ ॥7॥
ಅರ್ಜುನ ವೃಷ್ಣಿಕುಲದ ಶ್ರೇಷ್ಠ ಪುರುಷನೇ, ನಿನ್ನ ಅನುಗ್ರಹದಿಂದಲೇ ರಾಜನಾದ ಯುಧಿಷ್ಠಿರನಿಗೆ ವಿಜಯವು ದೊರಕಿತು. ಯಾವ ಶತ್ರುಗಳೂ ಇಲ್ಲದೆ ಇರುವ ರಾಜ್ಯವು ಲಭಿಸಿತು.
ನಾಥವಂತಶ್ಚ ಭವತಾ ಪಾಂಡವಾ ಮಧುಸೂದನ |
ಭವಂತಂ ಪ್ಲವಮಾಸಾದ್ಯ ತೀರ್ಣಾಃ ಸ್ಮ ಕುರುಸಾಗರಮ್ ॥8॥
ಮಧುಸೂದನನೇ, ನಿನ್ನಿಂದ ನಾವೆಲ್ಲರೂ ಸನಾಥರಾಗಿದ್ದೇವೆ. ನಾವೆಲ್ಲರೂ ನಿನ್ನನ್ನೇ ದೋಣಿಯನ್ನಾಗಿ ಮಾಡಿಕೊಂಡು ಕೌರವ ಸೇನೆ ಎಂಬ ಸಾಗರವನ್ನು ದಾಟಿದ್ದೇವೆ.
ಭಕ್ತಾನ್ ತ್ವಮಾಶ್ರಿತಾನಸ್ಮಾನ್ ಪಾಲಯಾಮುತ್ರ ಚೇಹ ಚ ॥9॥
ನಿನ್ನನ್ನೇ ಆಶ್ರಯಿಸಿದ ಭಕ್ತರಾದ ನಮ್ಮನ್ನು ಇಲ್ಲಿಯೂ, ಪರಲೋಕದಲ್ಲಿಯೂ ನೀನೇ ರಕ್ಷಿಸು.
ವಿಶ್ವಕರ್ಮನ್ ನಮಸ್ತೇಽಸ್ತು ವಿಶ್ವಾತ್ಮನ್ ವಿಶ್ವಸಂಭವ |
ಯಥಾಽಹಂ ತ್ವಾಂ ವಿಜಾನಾಮಿ ತಥಾ ಹಿ ಭಗವಾನ್ ಮಮ ॥10॥
ವಿಶ್ವಕರ್ಮಸ್ವರೂಪನೇ ನಿನಗೆ ನಮಸ್ಕಾರ. ಜಗತ್ತಿನ ಅಂತರ್ಯಾಮಿಯೇ, ವಿಶ್ವಸಂಭವನೇ, ನಿನಗೆ ನಮಸ್ಕಾರ. ನಾನು ನಿನಗೆ ತುಂಬಾ ಹತ್ತಿರದವನಾಗಿ ಸಾಕಷ್ಟು ನಿನ್ನ ಮಹಿಮೆಯನ್ನು ತಿಳಿದಿದ್ದೇನೆ. ಆದರೂ ನೀನು ನನ್ನ ಪಾಲಿಗೆ ಭಗವಂತನೆಂದೇ ತೋರುತ್ತಿದ್ದಿ.
ತ್ವತ್ತೇಜಃಸಂಭವೋ ನಿತ್ಯಂ ಹುತಾಶೋ ಮಧುಸೂದನ |
ರತಿಃ ಕ್ರೀಡಾಮಯೀ ತುಭ್ಯಂ ಮಾಯಾ ತೇ ರೋದಸೀ ವಿಭೋ ॥11॥
ಮಧುಸೂದನನೇ, ನಿನ್ನ ತೇಜಸ್ಸಿನಿಂದಲೇ ಉತ್ಪನ್ನನಾದ ಅಗ್ನಿದೇವನು ಯಾವಾಗಲೂ ವ್ಯಾಪಾರ ಮಾಡುತ್ತಿದ್ದಾನೆ. ಈ ಭೂಮಂಡಲವೇ ನಿನಗೆ ಕ್ರೀಡಾ ಸ್ಥಾನವಾಗಿದೆ. ಆಕಾಶ-ಭೂಮಿಗಳು ನಿನ್ನ ಸಂಕಲ್ಪದಿಂದಲೇ ಉತ್ಪನ್ನವಾಗಿವೆ.
ತ್ವಯಿ ಸರ್ವಮಿದಂ ವಿಶ್ವಂ ಯದಿದಂ ಸ್ಥಾಣುಜಂಗಮಮ್ ॥12॥
ಸಮಗ್ರ ಈ ವಿಶ್ವವು, ಚರಾಚರ ಪ್ರಪಂಚವು ನಿನ್ನಲ್ಲಿಯೇ ಸನ್ನಿಹಿತವಾಗಿದೆ.
ತ್ವಂ ಹಿ ಸರ್ವಂ ವಿಕುರುಷೇ ಭೂತಗ್ರಾಮಂ ಸನಾತನಮ್ |
ಪೃಥಿವೀಂ ಚಾಂತರಿಕ್ಷಂ ಚ ತಥಾ ಸ್ಥಾವರಜಂಗಮಮ್ ॥13॥
ಸಮಗ್ರ ಪ್ರಪಂಚವನ್ನು, ಚೇತನರನ್ನು ನೀನೇ ಸೃಷ್ಟಿಗೆ ತರುತ್ತಿ. ಪೃಥಿವೀ, ಅಂತರಿಕ್ಷ, ಆಕಾಶ, ಸ್ಥಾವರ-ಜಂಗಮಗಳೆಲ್ಲವೂ ನಿನ್ನಿಂದಲೇ ಉತ್ಪನ್ನವಾಗಿವೆ.
ಹಸಿತಂ ತೇಽಮಲಾ ಜ್ಯೋತ್ಸ್ನಾ ಋತವಶ್ಚೇಂದ್ರಿಯಾಣಿ ಚ |
ಪ್ರಾಣೋ ವಾಯುಃ ಸತತಗಃ ಕ್ರೋಧೋ ಮೃತ್ಯುಃ ಸನಾತನಃ ॥14॥
ನಿನ್ನ ನಿರ್ಮಲವಾದ ಮಂದಹಾಸವೇ ಬೆಳಗುವ ಬೆಳದಿಂಗಳಂತೆ ಇದೆ. ನಿನ್ನ ಇಂದ್ರಿಯಗಳೇ ಋತುಗಳಂತೆ ಇವೆ. ನಿನ್ನ ಪ್ರಾಣವು ಚಲಿಸುವ ವಾಯುವಾಗಿದೆ. ನಿನ್ನ ಕ್ರೋಧವೇ ಸನಾತನವಾದ ಮೃತ್ಯುವಾಗಿದೆ.
ಪ್ರಸಾದೇ ಚಾಪಿ ಪದ್ಮಾ ಶ್ರೀಃ ನಿತ್ಯಂ ತವ ಮಹಾಮತೇ |
ರತಿಸ್ತುಷ್ಟಿರ್ಧೃತಿಃ ಕ್ಷಾಂತಿಸ್ತ್ವಯಿ ಚೇದಂ ಚರಾಚರಮ್ ॥15॥
ಮಹಾಮತಿಯೇ, ನಿನ್ನ ಪ್ರಸನ್ನತೆಯಲ್ಲಿ ಲಕ್ಷ್ಮಿಯು ಸನ್ನಿಹಿತಳಾಗಿದ್ದಾಳೆ. ವಿಶ್ವಾಪ್ತನೇ, ರತಿ, ತುಷ್ಟಿ, ಧೃತಿ, ಕ್ಷಾಂತಿ ಇವೆಲ್ಲವೂ ಚರಾಚರ ಪ್ರಪಂಚವೂ ನಿನ್ನನ್ನೇ ಆಶ್ರಯಿಸಿದೆ.
ತ್ವಮೇವ ಹಿ ಯುಗಾಂತೇಷು ನಿಧನಂ ಪ್ರೋಚ್ಯತೇಽನಘ ॥16॥
ಲಯಕಾಲದಲ್ಲಿ ಸಮಗ್ರ ಜಗತ್ತನ್ನು ಉದರದಲ್ಲಿ ಹೊತ್ತುಕೊಳ್ಳುವ ಪರಬ್ರಹ್ಮ ನೀನು ಎಂದು ಹೇಳುತ್ತಾರೆ.
ಸುದೀರ್ಘೇಣಾಪಿ ಕಾಲೇನ ನ ತೇ ಶಕ್ಯಾ ಗುಣಾ ಮಯಾ |
ಆತ್ಮಾ ಚ ಪರಮೋ ವಕ್ತುಂ ನಮಸ್ತೇ ನಲಿನೇಕ್ಷಣ ॥17॥
ದೀರ್ಘಕಾಲದ ತನಕ ನಿನ್ನ ಗುಣಗಳನ್ನು ಹೇಳುತ್ತಿದ್ದರೂ ಆ ಗುಣಗಳ ತೀರವನ್ನು ಮುಟ್ಟುವುದು ನನ್ನಿಂದ ಸಾಧ್ಯವಿಲ್ಲ. ಪುಂಡರೀಕಾಕ್ಷನೇ, ಈ ನಿನ್ನ ಮಹಿಮೆಗಳನ್ನು ಸ್ವಯಂ ನೀನೇ ಹೇಳಲು ಸಮರ್ಥನಾಗಿದ್ದಿ.
ವಿದಿತೋ ಮೇ ಸುದುರ್ಧರ್ಷಂ ನಾರದಾದ್ ದೇವಲಾತ್ ತಥಾ |
ಕೃಷ್ಣದ್ವೈಪಾಯನಾಚ್ಚೈವ ತಥಾ ಕುರುಪಿತಾಮಹಾತ್ ॥18॥
ದುರ್ಧರ್ಷನೇ, ದೇವರ್ಷಿಗಳಾದ ನಾರದರಿಂದ, ದೇವಲದಿಂದ, ವ್ಯಾಸರಿಂದ, ಕುರುಕುಲಪಿತಾಮಹರಾದ ಭೀಷ್ಮರಿಂದಲೂ ನಿನ್ನ ಮಹಿಮೆಯನ್ನು ಅರಿತಿದ್ದೇನೆ.
ತ್ವಯಿ ಸರ್ವಂ ಸಮಾಸಕ್ತಂ ತ್ವಮೇವೈಕೋ ಜನಾರ್ದನಃ ॥19॥
ಯಚ್ಚಾನುಗ್ರಹಸಂಯುಕ್ತಮೇತದುಕ್ತಂ ತ್ವಯಾಽನಘ |
ಏತತ್ಸರ್ವಮಹಂ ಸಮ್ಯಕ್ ಕರಿಷ್ಯಾಮಿ ಜನಾರ್ದನ ॥20॥
ಜನಾರ್ದನನೇ, ಭಗವಂತನೇ, ನೀನು ನನ್ನ ಮೇಲಿನ ದಯೆಯಿಂದ ಇಷ್ಟರ ತನಕ ಏನನ್ನು ಉಪದೇಶಿಸಿದ್ದೀಯೋ ಅದೆಲ್ಲವನ್ನೂ ಚೆನ್ನಾಗಿ ಆಚರಿಸುತ್ತೇನೆ.
ಇದಂ ಚಾದ್ಭುತಮವ್ಯಗ್ರಂ ಕೃತಮಸ್ಮತ್ಪ್ರಿಯೇಪ್ಸಯಾ |

ಯತ್ಪಾಪಾ ನಿಹತಾಃ ಸಂಖ್ಯೇ ಕೌರವ್ಯಾ ಧೃತರಾಷ್ಟ್ರಜಾಃ ॥21॥
ಭಗವಂತನೇ, ನಮ್ಮೆಲ್ಲರಿಗೂ ಹಿತವಾಗಬೇಕೆಂಬ ಸಂಕಲ್ಪದಿಂದ ಪರಮಶ್ರೇಷ್ಠವಾದ ಕಾರ್ಯವನ್ನೇ ಮಾಡಿದ್ದಿ. ಧೃತರಾಷ್ಟ್ರನ ಮಗನಾದ, ಕುರುಕುಲಕ್ಕೆ ಕಳಂಕನಾದ ಪಾಪಿಷ್ಟ ದುರ್ಯೋಧನನು ಯುದ್ಧದಲ್ಲಿ ಹತನಾದನು.
ತ್ವಯಾ ದಗ್ಧಂ ಹಿ ತತ್ಸೈನ್ಯಂ ಮಯಾ ವಿಜಿತಮಾಹವೇ |
ಭವತಾ ತತ್ಕೃತಂ ಕರ್ಮ ಯೇನಾವಾಪ್ತೋ ಜಯೋ ಮಯಾ ॥22॥
ಭಗವಂತನೇ, ಆ ಕೌರವ ಸೈನ್ಯವು ನಿನ್ನ ತೇಜಸ್ಸಿನಿಂದಲೇ ದಗ್ಧವಾಯಿತು. ಬಳಿಕ ಆ ಯುದ್ಧದ ಜಯವೆಂಬ ಫಲ ನನ್ನ ಪಾಲಿಗೆ ದೊರೆಯಿತು.
ದುರ್ಯೋಧನಸ್ಯ ಸಂಗ್ರಾಮೇ ತವ ಬುದ್ಧಿಪರಾಕ್ರಮೈಃ |
ಕರ್ಣಸ್ಯ ಚ ವಧೋಪಾಯೋ ಯಥಾವತ್ ಸಂಪ್ರದರ್ಶಿತಃ ॥23॥
ಸೈಂಧವಸ್ಯ ಚ ಪಾಪಸ್ಯ ಭೂರಿಶ್ರವಸ ಏವ ಚ ॥24॥
ಆ ಯುದ್ಧದಲ್ಲಿ ನಿನ್ನ ಬುದ್ಧಿಯ ಸಾಮರ್ಥ್ಯದಿಂದಲೇ ದುರ್ಯೋಧನ, ಕರ್ಣ, ಪಾಪಿ ಜಯದ್ರಥ, ಭೂರಿಶ್ರವ ಮುಂತಾದವರ ವಧೆಯ ಉಪಾಯವು ಚೆನ್ನಾಗಿ ತಿಳಿಯಲ್ಪಟ್ಟಿತು.
ತಸ್ಮಾತ್ ತ್ವಮೇವ ಸಂಚಿಂತ್ಯ ಹಿತಂ ಕುರು ಯಥಾ ತಥಾ ॥25॥
ದೇವಕೀನಂದನನೇ, ಆದ್ದರಿಂದ ನಮ್ಮ ಬದುಕಿಗೆ ಮುಂದಿನ ಹಿತ ಯಾವುದು ಎಂಬುದನ್ನು ನೀನೇ ಚಿಂತಿಸಿ ಅದನ್ನು ಮಾಡು.
ಅಹಂ ಚ ಪ್ರೀಯಮಾಣೋಽಸ್ಮಿ ತ್ವಯಾ ದೇವಕಿನಂದನ |
ಯದುಕ್ತಂ ತತ್ಕರಿಷ್ಯಾಮಿ ನ ಹಿ ಮೇಽಸ್ತಿ ವಿಚಾರಣಾ ॥26॥
ದೇವಕಿನಂದನನೇ, ಇಲ್ಲಿಯ ತನಕ ನನಗೆ ಯಾವ ಕಾರ್ಯವನ್ನು ಮಾಡಲು ಬೋಧಿಸಿರುವೆಯೋ ಅದನ್ನು ಯಥಾವತ್ತಾಗಿ ಮಾಡುತ್ತೇನೆ. ಇದರಲ್ಲಿ ಸಂಶಯ ಬೇಡ.
ರಾಜಾನಂ ಚ ಸಮಾಸಾದ್ಯ ಧರ್ಮಾತ್ಮಾನಂ ಯುಧಿಷ್ಠಿರಮ್ |
ಚೋದಯಿಷ್ಯಾಮಿ ಧರ್ಮಜ್ಞ ಗಮನಾರ್ಥಂ ತವಾನಘ ॥27॥
ದೋಷರಹಿತನೇ, ಧರ್ಮಜ್ಞನೇ, ಜನಾರ್ದನನೇ, ನಾನು ಈಗಲೇ ಯುಧಿಷ್ಠಿರನ ಬಳಿಗೆ ಸಾಗಿ, ದ್ವಾರವತಿಗೆ ಹೊರಡಲು ನಿನಗೆ ಅನುಮತಿ ನೀಡೆಂದು ಪ್ರಾರ್ಥಿಸಿಕೊಳ್ಳುತ್ತೇನೆ, ಪ್ರೇರಿಸುತ್ತೇನೆ.
ರುಚಿತಂ ಹಿ ಮಮಾಪ್ಯೇತದ್ ದ್ವಾರಕಾಗಮನಂ ಪ್ರತಿ ॥28॥
ನೀನು ದ್ವಾರಕೆಗೆ ಹೋಗುವುದು ಸರಿಯಾಗಿದೆ ಎಂದು ನನಗೂ ತೋರುತ್ತಿದೆ.
ದ್ರಷ್ಟಾಸಿ ನಚಿರಾದೇವ ಮಾತುಲಂ ಮಧುಸೂದನ |
ಬಲದೇವಂ ಚ ದುರ್ಧರ್ಷಂ ತಥಾಽನ್ಯಾನ್ ವೃಷ್ಣಿಪುಂಗವಾನ್ ॥29॥
ಮಧುಸೂದನನೇ, ಸ್ವಲ್ಪ ಸಮಯದಲ್ಲಿಯೇ ನೀನು ದ್ವಾರಕೆಗೆ ಹೋಗಿ, ನನ್ನ ಸೋದರಮಾವನಾದ ವಸುದೇವನನ್ನೂ, ದುರ್ಧರ್ಷನಾದ ಬಲದೇವನನ್ನು, ಬೇರೆ ವೃಷ್ಣಿಕುಲದ ಶ್ರೇಷ್ಠ ಪುರುಷರನ್ನು ನೋಡುವವನಾಗಿದ್ದಿ.
ವೈಶಂಪಾಯನಃ
ಏವಂ ಸಂಭಾಷಮಾಣೌ ತೌ ಪ್ರಾಪ್ತೌ ವಾರಣಸಾಹ್ವಯಮ್ |
ತಥಾ ವಿವಿಶತುಶ್ಚೋಭೌ ಸಂಪ್ರಹೃಷ್ಟಜನಾಕುಲಮ್ ॥30॥
ವೈಶಂಪಾಯನ ಜನಮೇಜಯ, ಹೀಗೆ ಅವರು ಮಾತನಾಡಿಕೊಳ್ಳುತ್ತಾ ಹಸ್ತಿನಾವತಿಯನ್ನು ಮುಟ್ಟಿದರು. ಇಬ್ಬರೂ ಸಂತೋಷದಿಂದ ಕೂಡಿರುವ, ಪ್ರಜೆಗಳಿಂದ ತುಂಬಿಹೋಗಿದ್ದ ನಗರವನ್ನು ಪ್ರವೇಶಿಸಿದರು.
ತೌ ಗತ್ವಾ ಧೃತರಾಷ್ಟ್ರಸ್ಯ ಗೃಹಂ ಶಕ್ರಗೃಹೋಪಮಮ್ |
ದೃಷ್ಟವಂತೌ ಮಹಾರಾಜ ಧೃತರಾಷ್ಟ್ರಂ ಜನೇಶ್ವರಮ್ ॥31॥
ವಿದುರಂ ಚ ಮಹಾಬುದ್ಧಿಂ ರಾಜಾನಂ ಚ ಯುಧಿಷ್ಠಿರಮ್ |
ಭೀಮಸೇನಂ ಚ ದುರ್ಧರ್ಷಂ ಮಾದ್ರೀಪುತ್ರೌ ಚ ಪಾಂಡವೌ ॥32॥
ಬಳಿಕ ಇಂದ್ರನ ಮನೆಗೆ ಸಮಾನವಾದ ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿ ಅಲ್ಲಿ ಜನೇಶ್ವರನಾದ ಧೃತರಾಷ್ಟ್ರನನ್ನೂ, ಮಹಾಬುದ್ಧಿಶಾಲಿಯಾದ ವಿದುರನನ್ನೂ, ರಾಜನಾದ ಯುಧಿಷ್ಠಿರನನ್ನೂ, ದುರ್ಧರ್ಷನಾದ ಭೀಮಸೇನನನ್ನೂ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರನ್ನೂ ಸಂದರ್ಶಿಸಿದರು.
ಧೃತರಾಷ್ಟ್ರಮುಪಾಸೀನಂ ಯುಯುತ್ಸುಂ ಚಾಪರಾಜಿತಮ್ |
ಗಾಂಧಾರೀಂ ಚ ಮಹಾಪ್ರಾಜ್ಞಾಂ ಪೃಥಾಂ ಕೃಷ್ಣಾಂ ಚ ಭಾಮಿನೀಮ್ ॥
ಸುಭದ್ರಾಂ ಚಾಪಿ ತಾಃ ಸರ್ವಾ ಭರತಾನಾಂ ಸ್ತ್ರಿಯಸ್ತಥಾ |
ದೃಷ್ಟವಂತೌ ಸ್ಥಿತಾಃ ಸರ್ವಾ ಗಾಂಧಾರೀಂ ಪರಿವಾರ್ಯ ತೇ ॥34॥
ತತಃ ಸಮೇತ್ಯ ರಾಜಾನಂ ಧೃತರಾಷ್ಟ್ರಮರಿಂದಮೌ |
ನಿವೇದ್ಯ ನಾಮಧೇಯೇ ಸ್ವೇ ವಂದೇತಾಂ ಚರಣೌ ತತಃ ॥35॥
ಬಳಿಕ ಕುಳಿತಿರುವ ಧೃತರಾಷ್ಟ್ರನನ್ನೂ, ಯುದ್ಧದಲ್ಲಿ ಸೋಲನ್ನು ಅನುಭವಿಸದ ಯುಯುತ್ಸುವನ್ನೂ, ಮಹಾಪ್ರಾಜ್ಞಳಾದ ಗಾಂಧಾರಿಯನ್ನೂ, ಕುಂತಿಯನ್ನೂ, ಹೆಂಡತಿಯಾದ ದ್ರೌಪದಿಯನ್ನೂ, ಸುಭದ್ರೆಯನ್ನೂ, ಇತರ ಭರತಕುಲ ಸ್ತ್ರೀಯರನ್ನೂ ನೋಡಿದರು. ಗಾಂಧಾರಿಯನ್ನು ಸಂಪರ್ಕಿಸಿದ ಬಳಿಕ ಧೃತರಾಷ್ಟ್ರನ ಬಳಿ ಹೋಗಿ, ತಮ್ಮ ನಾಮಧೇಯಗಳನ್ನು ಹೇಳಿಕೊಂಡು, ಅಭಿವಾದನ ಪೂರ್ವಕವಾಗಿ ಅವನ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದರು.

ಗಾಂಧಾರ್ಯಾಶ್ಚ ಪೃಥಾಯಾಶ್ಚ ಧರ್ಮರಾಜಸ್ಯ ಧೀಮತಃ |
ಭೀಮಸ್ಯ ಚ ವವಂದಾತೇ ತಥಾ ಪಾದೌ ಮಹಾತ್ಮನಃ ||36||
ಅದರಂತೆ ಗಾಂಧಾರೀ, ಕುಂತೀ, ಧರ್ಮರಾಜನಿಗೂ, ಜಾಣನಾದ ಭೀಮನಿಗೂ ಮಹಾತ್ಮರಾದ ಅವರೀರ್ವರೂ ನಮಸ್ಕರಿಸಿದರು.
ಪರಿಷ್ವಜ್ಯ ಮಹಾತ್ಮಾನಂ ವೇಶ್ಯಾಪುತ್ರಂ ಮಹಾರಥಮ್ |
ಕ್ಷತ್ತಾರಂ ಚಾಭಿಸಂಪೂಜ್ಯ ಪೃಷ್ಟ್ವಾ ಕುಶಲಮವ್ಯಯಮ್ ||37||
ಬಳಿಕ ಮಹಾತ್ಮನಾದ, ದಾಸೀಪುತ್ರನಾದ, ಮಹಾರಥನಾದ ವಿದುರನನ್ನು ಆಲಿಂಗಿಸಿ, ಅವನಿಂದ ಸತ್ಕೃತರಾಗಿ ನಿತ್ಯಕುಶಲ ಪ್ರಶ್ನೆಯನ್ನು ಕೇಳಿದರು.
ತೈಃ ಸಾರ್ಧಂ ನೃಪತಿಂ ವೃದ್ಧಂ ಉಪಾಸಾತೇ ತತಸ್ತು ತೌ ||38||
ಬಳಿಕ ವಿದುರಾದಿಗಳಿಂದ ಕೂಡಿಕೊಂಡು ಹಿರಿಯರಾಜನಾದ ಧೃತರಾಷ್ಟ್ರನ ಬಳಿ ಅವರೀರ್ವರು ತೆರಳಿದರು.
ತತೋ ನಿಶಿ ಮಹಾರಾಜೋ ಧೃತರಾಷ್ಟ್ರೋ ಜನೇಶ್ವರಾನ್ |
ಜನಾರ್ದನಂ ಚ ಮೇಧಾವೀ ವ್ಯಸರ್ಜಯತ ವೈ ಗೃಹಾನ್ ||39||
ಬಳಿಕ ರಾತ್ರಿಕಾಲದಲ್ಲಿ ಬಹಳ ಹೊತ್ತಿನವರೆಗೆ ಪರಸ್ಪರ ಮಾತುಗಳನ್ನು ಆಡಿ ಧೃತರಾಷ್ಟ್ರನು ಜನಾರ್ದನನನ್ನೂ, ಧರ್ಮರಾಜನೇ ಮೊದಲಾದ ಕುರುಶ್ರೇಷ್ಠರನ್ನೂ ಅವರವರ ಮನೆಗೆ ಕಳುಹಿಸಿಕೊಟ್ಟನು.
ತೇಽನುಜ್ಞಾತಾ ನೃಪತಿನಾ ಯಯುಃ ಸ್ವಂ ಸ್ವಂ ನಿವೇಶನಮ್ |
ಧನಂಜಯಗೃಹಾನೇವ ಯಯೌ ಕೃಷ್ಣಸ್ತು ವೀರ್ಯವಾನ್ ||40||
ರಾಜನಾದ ಧೃತರಾಷ್ಟ್ರನಿಂದ ಆಜ್ಞಪ್ತರಾದ ಪಾಂಡವರು ತಮ್ಮ ತಮ್ಮ ಮನೆಗಳಿಗೆ ತೆರಳಿದರು. ವೀರ್ಯವಂತನಾದ ಕೃಷ್ಣನಾದರೂ ಅರ್ಜುನನ ಮನೆಗೇ ಹೊರಟನು.
ತತ್ರಾರ್ಚಿತೋ ಯಥಾನ್ಯಾಯಂ ಸರ್ವಕಾಮೈರುಪಸ್ಥಿತಃ |
ಕೃಷ್ಣಃ ಸುಷ್ವಾಪ ಮೇಧಾವೀ ಧನಂಜಯಸಹಾಯವಾನ್ ||41||
ಯಥಾಯೋಗ್ಯವಾಗಿ, ಸಮಸ್ತ ವೈಭವಗಳಿಂದ ಕೃಷ್ಣನು ಅರ್ಜುನನಿಂದ ಆರಾಧಿತನಾದನು. ಧನಂಜಯನ ಹಿತಚಿಂತಕನಾದ, ಮೇಧಾವಿಯಾದ ಕೃಷ್ಣನು ಧನಂಜಯನ ಮನೆಯಲ್ಲಿಯೇ ಮಲಗಿದನು.
ಪ್ರಭಾತಾಯಾಂ ತು ಶರ್ವರ್ಯಾಂ ಕೃತಸರ್ವಾಹ್ನಿಕಕ್ರಿಯೌ |
ಧರ್ಮರಾಜಸ್ಯ ಭವನಂ ಜಗ್ಮತುಃ ಪರಮಾರ್ಚಿತೌ ||42||
ಪ್ರಾತಃಕಾಲವಾಗುತ್ತಿರಲು ಎಲ್ಲ ವಿಧವಾದ ಆಹ್ನಿಕ ಕ್ರಿಯೆಗಳನ್ನು ಪೂರೈಸಿ ಧರ್ಮರಾಜನ ಮನೆಗೆ ತೆರಳಿದರು.
ಯತ್ರಾಸ್ತೇ ತು ಸಹಾಮಾತ್ಯೋ ಧರ್ಮರಾಜೋ ಮಹಾಮನಾಃ ||43||
ಮಂತ್ರಿಯಿಂದ ಸಹಿತನಾಗಿರುವ ಧರ್ಮರಾಜನು ಎಲ್ಲಿದ್ದಾನೋ ಅಲ್ಲಿಗೇ ಕೃಷ್ಣಾರ್ಜುನರು ತೆರಳಿದರು.
ತತಸ್ತು ತತ್ ಪ್ರವಿಶ್ಯಾಥ ದದೃಶಾತೇ ಮಹಾಬಲೌ |
ಧರ್ಮರಾಜಂ ತಮಾಸೀನಂ ದೇವರಾಜಮಿವಾಶ್ವಿನೌ ||44||
ಧರ್ಮರಾಜನ ಅರಮನೆಯನ್ನು ಪ್ರವೇಶಿಸಿದ ಮಹಾಬಲಿಷ್ಠರಾದ ಕೃಷ್ಣಾರ್ಜುನರು ಅಶ್ವಿನೀದೇವತೆಗಳ ಜೊತೆಗೆ ಕುಳಿತಿರುವ ದೇವರಾಜನಂತೆ ನಕುಲ-ಸಹದೇವರ ಜೊತೆಗೆ ಕುಳಿತಿರುವ ಧರ್ಮರಾಜನನ್ನು ಕಂಡರು.
ತೌ ಸಮಾಸಾದ್ಯ ರಾಜಾನಂ ವಾರ್ಷ್ಣೇಯಕುರುಪುಂಗವೌ |
ನಿಷೀದತುರನುಜ್ಞಾತೌ ಪ್ರೀಯಮಾಣೇನ ತೇನ ವೈ ||45||
ವೃಷ್ಣಿಕುಲದ ವೀರನಾದ ಕೃಷ್ಣನು, ಕುರುಕುಲದ ವೀರನಾದ ಅರ್ಜುನನು ಧರ್ಮರಾಜನನ್ನು ಸಮೀಪಿಸಿ, ಅವನಿಗೆ ಸಂತೋಷವಾಗುವಂತೆ ಅನುಮತಿಯನ್ನು ಪಡೆದು ಅವನ ಬಳಿಯಲ್ಲಿಯೇ ಕುಳಿತರು.
ತತಃ ಸ ರಾಜಾ ಮೇಧಾವೀ ವಿವಕ್ಷೂ ಪ್ರೇಕ್ಷ್ಯ ತಾವುಭೌ |
ಪ್ರೋವಾಚ ವದತಾಂ ಶ್ರೇಷ್ಠೌ ವಚನಂ ರಾಜಸತ್ತಮಃ ||46||
ಮೇಧಾವಿಯಾದ ಧರ್ಮರಾಜನು ಕೃಷ್ಣಾರ್ಜುನರು ಏನೋ ಹೇಳಲು ಬಂದಿದ್ದಾರೆ ಎಂಬುದನ್ನು ಕಂಡು ರಾಜಶ್ರೇಷ್ಠನಾದ ಧರ್ಮರಾಜನು ಇಂತು ನುಡಿದನು.
ಯುಧಿಷ್ಠಿರಃ
ವಿವಕ್ಷೂ ಹಿ ಯುವಾಂ ಮನ್ಯೇ ವೀರೌ ಯದುಕುರೂದ್ವಹೌ |
ಬ್ರೂತಂ ಕರ್ತಾಸ್ಮಿ ಸರ್ವಂ ವಾಂ ನ ಚಿರಾನ್ಮಾಂ ವಿಚಾರ್ಯತಾಮ್ ||
ಯುಧಿಷ್ಠಿರ ಯದುಕುಲ-ಕುರುಗಳ ವೀರರೇ, ನೀವೀರ್ವರೂ ನನಗೆ ಏನೋ ಹೇಳಬೇಕು ಎಂದು ತವಕವುಳ್ಳವರಾಗಿದ್ದೀರಿ ಎಂದು ಭಾವಿಸಿದ್ದೇನೆ. ನಾನು ಏನು ಮಾಡಬೇಕೆಂಬುದನ್ನು ಕೂಡಲೇ ತಿಳಿಸಿರಿ. ನನಗೆ ಹೇಳಿರಿ.
ವೈಶಂಪಾಯನಃ
ಇತ್ಯುಕ್ತಃ ಫಲ್ಗುನಸ್ತತ್ರ ಧರ್ಮರಾಜಾನಮಬ್ರವೀತ್ |
ವಿನೀತವದುಪಾಗಮ್ಯ ವಾಕ್ಯಂ ವಾಕ್ಯವಿಶಾರದಃ ||48||
ವೈಶಂಪಾಯನ ಈ ರೀತಿಯಾಗಿ ಧರ್ಮರಾಜನು ನುಡಿದಾಗ, ಅರ್ಜುನನು ಧರ್ಮರಾಜನನ್ನು ವಿನೀತನಾಗಿ ಸಮೀಪಿಸಿ ಶ್ರೇಷ್ಠವಾದ ಈ ಮಾತನ್ನು ನುಡಿದನು.
ಅರ್ಜುನಃ
ಅಯಂ ಚಿರೋಷಿತೋ ರಾಜನ್ ವಾಸುದೇವಃ ಪ್ರತಾಪವಾನ್ |

ಭವಂತಂ ಸಮನುಜ್ಞಾಪ್ಯ ಪಿತರಂ ದ್ರಷ್ಟುಮಿಚ್ಛತಿ ॥49॥
ಅರ್ಜುನ ಧರ್ಮರಾಜನೇ, ಪ್ರತಾಪಶಾಲಿಯಾದ ವಾಸುದೇವನು ನಮ್ಮ ಮನೆಗಳಲ್ಲಿ ಬಹಳ ಕಾಲದಿಂದ ಇದ್ದಾನೆ. ನಿನ್ನ ಅನುಮತಿಯನ್ನು ಪಡೆದು ತನ್ನ ತಂದೆಯನ್ನು ನೋಡಲು ಹೋಗಬೇಕೆಂದು ಬಯಸುತ್ತಿದ್ದಾನೆ.
ಸ ಗಚ್ಛತ್ವಭ್ಯನುಜ್ಞಾತೋ ಭವತಾ ಯದಿ ಮನ್ಯಸೇ |
ಆನರ್ತನಗರಂ ವೀರಸ್ತದನುಜ್ಞಾತುಮರ್ಹಸಿ ॥50॥
ನೀನು ಸಮ್ಮತಿಸಿದರೆ ನಿನ್ನ ಅನುಮತಿಯನ್ನು ಪಡೆದು ಅವನು ದ್ವಾರಕೆಗೆ ತೆರಳುತ್ತಾನೆ. ಅಲ್ಲಿಗೆ ತೆರಳಲು ನೀನು ಅನುಮತಿಯನ್ನು ನೀಡಬೇಕು.
ಯುಧಿಷ್ಠಿರಃ
ಪುಂಡರೀಕಾಕ್ಷ ಭದ್ರಂ ತೇ ಗಚ್ಛ ತ್ವಂ ಮಧುಸೂದನ |
ಪುರೀಂ ದ್ವಾರಾವತೀಮದ್ಯ ದ್ರಷ್ಟುಂ ಶೂರಸುತಂ ವಿಭುಮ್ ॥51॥
ಯುಧಿಷ್ಠಿರ ಮಧುಸೂದನನೇ, ಪುಂಡರೀಕಾಕ್ಷನೇ, ನಿನಗೆ ಮಂಗಳವಾಗಲಿ. ನೀನು ಹೊರಡಬಹುದು. ಶೂರಸುತನಾದ ವಸುದೇವನನ್ನು ನೋಡಲು ದ್ವಾರಾವತಿಗೆ ಇಂದೇ ನೀನು ತೆರಳಬಹುದು.
ರೋಚತೇ ಮೇ ಮಹಾಬಾಹೋ ಗಮನಂ ತವ ಕೇಶವ |
ಮಾತುಲಶ್ಚಿರದೃಷ್ಟಸ್ತೇ ತ್ವಯಾ ದೇವೀ ಚ ದೇವಕೀ ॥52॥
ಮಹಾಬಾಹುವೇ, ಕೇಶವನೇ, ನನ್ನ ಸೋದರಮಾವನಾದ ವಸುದೇವನನ್ನು, ದೇವಕಿಯನ್ನು ನೀನು ನೋಡದೆ ಬಹಳ ಕಾಲವಾಗಿದೆ. ಆದ್ದರಿಂದ ನೋಡಲು ತೆರಳುವುದು ಯೋಗ್ಯವಾಗಿದೆ ಎಂದು ನನಗನಿಸುತ್ತಿದೆ.
ಮಾತುಲಂ ವಸುದೇವಂ ತ್ವಂ ಬಲದೇವಂ ಚ ಮಾಧವ |
ಪೂಜಯೇಥಾ ಮಹಾಪ್ರಾಜ್ಞ ಮದ್ವಾಕ್ಯೇನ ಯಥಾರ್ಹತಃ ॥53॥
ನನ್ನ ಸೋದರಮಾವನಾದ ವಸುದೇವನನ್ನೂ, ಬಲದೇವನನ್ನೂ, ಮಹಾಪ್ರಾಜ್ಞನಾದ ಮಾಧವನೇ, ನನ್ನ ಮಾತಿನಿಂದಲೂ ಪೂಜಿಸಿದ್ದೇನೆ ಎಂಬುದಾಗಿ ತಿಳಿಸು.
ಸ್ಮರೇಥಾಶ್ಚಾಪಿ ಮಾಂ ನಿತ್ಯಂ ಭೀಮಂ ಚ ಬಲಿನಾಂ ವರಮ್ |
ಫಲ್ಗುನಂ ನಕುಲಂ ಚೈವ ಸಹದೇವಂ ಚ ಮಾಧವ ॥54॥
ನನ್ನನ್ನು ಎಂದಿಗೂ ಮರೆಯಬಾರದೆಂದು ತಿಳಿಸು. ಬಲಿಷ್ಠರಲ್ಲಿಯೇ ಶ್ರೇಷ್ಠನಾದ ಭೀಮನನ್ನಾಗಲಿ, ಅರ್ಜುನನನ್ನಾಗಲಿ, ನಕುಲ-ಸಹದೇವರನ್ನಾಗಲಿ ಮಾಧವನೇ, ಮರೆಯಬಾರದೆಂದು ತಿಳಿಸು.
ಆನರ್ತಾನವಲೋಕ್ಯ ತ್ವಂ ಪಿತರಂ ಚ ಮಹಾಭುಜಮ್ |
ವೃಷ್ಣೀಂಶ್ಚ ಪುನರಾಗಚ್ಛೇಃ ಹಯಮೇಧೇ ಮಮಾನಘ ॥55॥
ದೋಷರಹಿತನೇ, ಆನರ್ತದೇಶದ ಪ್ರಜೆಗಳನ್ನೂ, ನಿನ್ನ ತಂದೆಯನ್ನೂ, ವೃಷ್ಣಿ ಕುಲಶ್ರೇಷ್ಠರನ್ನು ನೋಡಿ, ನಾನು ಮಾಡಲಿರುವ ಅಶ್ವಮೇಧ ಯಾಗಕ್ಕೆ ಪುನಃ ನೀನು ಆಗಮಿಸಬೇಕು.
ಸಂಗಚ್ಛ ರತ್ನಾನ್ಯಾದಾಯ ವಿವಿಧಾನಿ ವಸೂನಿ ಚ |
ಯಚ್ಚಾಪ್ಯನ್ಯನ್ಮನೋಜ್ಞಂ ತೇ ತಚ್ಚಾಪ್ಯಾದತ್ಸ್ವ ಸಾತ್ವತ ॥56॥
ಸಾತ್ವತನೇ, ವಿಧವಿಧವಾದ ರತ್ನಗಳನ್ನೂ, ಐಶ್ವರ್ಯಗಳನ್ನೂ, ನಿನಗೆ ಪ್ರಿಯವಾದ ಮನೋಜ್ಞವಾದ ಯಾವುದೇ ಇತರ ವಸ್ತುಗಳನ್ನು ತೆಗೆದುಕೊಂಡು ಪ್ರಯಾಣ ಬೆಳೆಸು.
ಇಯಂ ಹಿ ವಸುಧಾ ಸರ್ವಾ ಪ್ರಸಾದಾತ್ ತವ ಮಾಧವ |
ಅಸ್ಮಾನುಪಾಗತಾ ವೀರ ನಿಹತಾಶ್ಚಾಪಿ ಶತ್ರವಃ ॥57॥
ಕೇಶವನೇ, ನಿನ್ನ ಅನುಗ್ರಹದಿಂದಲೇ ಸಮಗ್ರ ಭೂಮಂಡಲವು ನಮ್ಮ ವಶವಾಯಿತು. ಶತ್ರುಗಳು ಹತರಾಗಿದ್ದಾರೆ.
ಸ್ವರ್ಗಾಪವರ್ಗವಿಷಯಂ ತ್ವದ್ಭಕ್ತಾನಾಂ ನ ದುರ್ಲಭಮ್ |
ಸಂಸಾರಗಹನೇ ಚೇದ್ಧಪಾಪಾಗ್ನೇಃ ಪ್ರಶಮಾಂಬುದ ॥58॥
ಭಗವಂತನೇ, ನಿನ್ನನ್ನು ಆಶ್ರಯಿಸಿದ ನಮಗೆ ಸ್ವರ್ಗಾಪವರ್ಗಗಳು ದುರ್ಲಭವಾದವುಗಳಲ್ಲ. ಈ ಗಹನವಾದ ಸಂಸಾರದಲ್ಲಿ ಪಾಪಾಗ್ನಿಗಳಿಂದ ಸುಡುತ್ತಿರುವ ನಮ್ಮನ್ನು ಉದ್ಧರಿಸು.
ವೈಶಂಪಾಯನಃ
ಏವಂ ಬ್ರುವತಿ ಕೌರವ್ಯೇ ಧರ್ಮರಾಜೇ ಯುಧಿಷ್ಠಿರೇ |
ವಾಸುದೇವಃ ಪರಃ ಪುಂಸಾಮಿದಂ ವಚನಮಬ್ರವೀತ್ ॥59॥
ವೈಶಂಪಾಯನ ಈ ರೀತಿಯಾಗಿ ಕುರುಕುಲಶ್ರೇಷ್ಠನಾದ ಧರ್ಮರಾಜನು ಹೇಳುತ್ತಿರಲು ಸರ್ವೋತ್ತಮನಾದ ವಾಸುದೇವನು ಧರ್ಮರಾಜನನ್ನು ಕುರಿತು ಇಂತು ನುಡಿದನು.
ಶ್ರೀಭಗವಾನ್
ತವೈವ ರತ್ನಾನಿ ಧನಂ ಚ ಕೇವಲಂ
ಧರಾ ಚ ಕೃತ್ಸ್ನಾ ಚ ಮಹಾಭುಜಾದ್ಯ ವೈ |
ಯದಸ್ತಿ ಚಾನ್ಯದ್ ದ್ರವಿಣಂ ಗೃಹೇಷು ಮೇ
ತ್ವಮೇವ ತಸ್ಯೇಶ್ವರ ನಿತ್ಯಮೀಶ್ವರಃ ॥60॥
ಶ್ರೀಭಗವಾನ್ ಮಹಾಭುಜನೇ, ನರೇಶ್ವರನೇ, ರತ್ನಗಳು, ಧನ, ಸಮಗ್ರವಾದ ಭೂಮಂಡಲವು ಎಲ್ಲವೂ ನಿನ್ನದೇ ಆಗಿದೆ. ಇಷ್ಟೇ ಏನು,

ಯಾವ ಯಾವ ಐಶ್ವರ್ಯವು ನನ್ನ ಮನೆಯಲ್ಲಿ ಇರುವುದೋ ಅಂತಹದ್ದೇ ಆದ ಸಕಲ ಐಶ್ವರ್ಯಕ್ಕೂ ನೀನೇ ಈಶ್ವರನಾಗಿರುವಿ.
ವೈಶಂಪಾಯನಃ
ತಥೇತ್ಯಥೋಕ್ತಃ ಪ್ರತಿಪೂಜಿತಸ್ತದಾ
ಗದಾಗ್ರಜೋ ಧರ್ಮಸುತೇನ ವೀರ್ಯವಾನ್ |
ಪಿತೃಷ್ವಸಾರಂ ತ್ವಭಿವಾದ್ಯ ಸಾತ್ಯಕಿಂ
ಸಂಪೂಜಯಂಶ್ಚಾಪ್ಯಗಮತ್ ಪ್ರದಕ್ಷಿಣಮ್ ॥61॥
ವೈಶಂಪಾಯನ ಶ್ರೀಕೃಷ್ಣನು ಹೀಗೆ ಹೇಳಿದ ಬಳಿಕ ಯುಧಿಷ್ಠಿರನು ಹಾಗೆಯೇ ಆಗಲಿ ಎಂದು ಹೇಳಿ ಕೃಷ್ಣನನ್ನು ಸತ್ಕರಿಸಿದನು. ಗದನಿಗೆ ಅಣ್ಣನಾದ, ವೀರ್ಯವಂತನಾದ ಶ್ರೀಕೃಷ್ಣನು ಧರ್ಮರಾಜನಿಂದ ಸಮ್ಮಾನಿತನಾಗಿ, ತನ್ನ ತಂದೆಯ ತಂಗಿಯಾದ ಕುಂತಿಯ ಬಳಿ ಸಾಗಿ ಅವಳೊಡನೆಯೂ ಯಥೋಚಿತವಾದ ಮಾತುಗಳನ್ನಾಡಿ, ವಿಧಿವತ್ತಾಗಿ ಸತ್ಕಾರವನ್ನು ಪಡೆದು ಪ್ರದಕ್ಷಿಣೆ-ನಮಸ್ಕಾರವನ್ನು ಮಾಡಿದನು.
ತಯಾ ಸ ಸಮ್ಯಕ್ ಪ್ರತಿಪೂಜಿತಸ್ತದಾ
ತಥೈವ ಸರ್ವೈರ್ವಿದುರಾದಿಭಿಸ್ತತಃ |
ವಿನಿರ್ಯಯೌ ನಾಗಪುರಾದ್ ಗದಾಗ್ರಜೋ
ರಥೇನ ದಿವ್ಯೇನ ಚತುರ್ಯುಜಾ ಹರಿಃ ॥62॥
ಹೀಗೆ ಶ್ರೀಕೃಷ್ಣನು ಕುಂತಿ-ವಿದುರಾದಿಗಳಿಂದ, ಸಮಸ್ತರಿಂದಲೂ ಅಭಿನಂದಿಸಲ್ಪಟ್ಟವನಾಗಿ ಅವರೆಲ್ಲರಿಂದಲೂ ಅನುಮತಿಯನ್ನು ಪಡೆದು ದಿವ್ಯವಾದ ರಥದಲ್ಲಿ ಕುಳಿತು ನಾಗಪುರದಿಂದ ದ್ವಾರಕೆಯತ್ತ ಪ್ರಯಾಣ ಬೆಳೆಸಿದನು.
ರಥೇ ಸುಭದ್ರಾಮಧಿರೋಪ್ಯ ಭಾಮಿನೀಂ
ಯುಧಿಷ್ಠಿರಸ್ಯಾನುಮತೇ ಜನಾರ್ದನಃ |
ಪಿತೃಷ್ವಸುಶ್ಚಾಪಿ ಜನಾರ್ದನಸ್ತದಾ
ವಿನಿರ್ಯಯೌ ಪೌರಜನಾಭಿಸತ್ಕೃತಃ ॥63॥
ರಥದಲ್ಲಿ ತಂಗಿಯಾದ ಸುಭದ್ರೆಯನ್ನು ಕುಳ್ಳಿರಿಸಿಕೊಂಡು, ಯುಧಿಷ್ಠಿರನ ಅನುಮತಿಯನ್ನು ಪಡೆದ ಜನಾರ್ದನನು, ತಂದೆಯ ತಂಗಿಯಾದ ಕುಂತಿಯ ಅನುಮತಿಯಿಂದ ಪುರಜನರಿಂದ ಸತ್ಕೃತನಾಗಿ ಹೊರಟನು.
ತಮನ್ವಗಾದ್ ವಾನರವರ್ಯಕೇತನಃ
ಸಸಾತ್ಯಕೀ ಮಾದ್ರವತೀಸುತಾವಪಿ |
ಅಗಾಧಬುದ್ಧಿರ್ವಿದುರಶ್ಚ ಮಾಧವಂ
ಸ್ವಯಂ ಚ ಭೀಮೋ ಗಜರಾಜವಿಕ್ರಮಃ ॥64॥
ಶ್ರೀಕೃಷ್ಣನ ರಥವು ಹೊರಡುತ್ತಲೇ ಕಪಿಧ್ವಜನಾದ ಅರ್ಜುನನೂ, ಸಾತ್ಯಕಿಯೂ, ನಕುಲ-ಸಹದೇವರೂ, ಮಹಾಬುದ್ಧಿಶಾಲಿಯಾದ ವಿದುರನೂ, ಗಜವಿಕ್ರಮನಾದ ಭೀಮನೂ ಕೃಷ್ಣನನ್ನು ಹಿಂಬಾಲಿಸಿ ಸ್ವಲ್ಪ ದೂರದ ತನಕ ಹೊರಟರು.
ನಿವರ್ತ್ಯ ವೈತಾನ್ ಕುರುರಾಷ್ಟ್ರವರ್ಧನಾನ್
ತತಶ್ಚ ಸರ್ವಾನ್ ವಿದುರಂ ಚ ವೀರ್ಯವಾನ್ |
ಜನಾರ್ದನೋ ದಾರುಕಮಾಹ ಸತ್ವರಃ
ಪ್ರಚೋದಯಾಶ್ವಾನಿತಿ ಸಾತ್ಯಕಿಂ ತದಾ ॥65॥
ಬಳಿಕ ವೀರ್ಯವಂತನಾದ ಕೃಷ್ಣನು ಕುರುವಂಶ ವರ್ಧನರಾದ ಭೀಮಾದಿಗಳನ್ನು, ವಿದುರನನ್ನು, ತನ್ನನ್ನು ಅನುಸರಿಸಿ ಬರುತ್ತಿರುವ ಸಮಸ್ತರನ್ನೂ ಸವಿಯಾದ ಮಾತುಗಳಿಂದ ಹಿಂದಕ್ಕೆ ಕಳುಹಿಸಿದನು. ದಾರುಕನಿಗೂ, ಸಾತ್ಯಕಿಗೂ ಕುದುರೆಗಳನ್ನು ವೇಗವಾಗಿ ನಡೆಸಿಕೊಂಡು ಹೋಗುವಂತೆ ಆಜ್ಞಾಪಿಸಿದನು.
ತತೋ ಯಯೌ ಶತ್ರುಗಣಾವಮರ್ದನಃ
ಶಿನಿಪ್ರವೀರಾನುಗತೋ ಜನಾರ್ದನಃ |
ಯಥಾ ನಿಹತ್ಯಾರಿಗಣಂ ಶತಕ್ರತುಃ
ದಿವಂ ತಥಾಽಽನರ್ತಪುರೀಂ ಪ್ರತಾಪವಾನ್ ॥66॥
ಶತ್ರುಗಳನ್ನು ಸದೆಬಡಿಯುವ ಸಾಮರ್ಥ್ಯವುಳ್ಳ, ಶಿನಿಪ್ರವೀರನಾದ ಸಾತ್ಯಕಿಯಿಂದ ಹಿಂಬಾಲಿಸಲ್ಪಟ್ಟ ಶ್ರೀಕೃಷ್ಣನು ಶತಕ್ರತುವಾದ, ಪ್ರತಾಪವಂತನಾದ ಇಂದ್ರನು ಶತ್ರುಗಳನ್ನು ಸಂಹರಿಸಿ ಸ್ವರ್ಗಕ್ಕೆ ಸಾಗುವಂತೆ ದ್ವಾರಕೆಯನ್ನು ಪ್ರವೇಶಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕೃಷ್ಣಸ್ಯ ದ್ವಾರಾವತೀಗಮನಂ ನಾಮ ದ್ವಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ (ಅಧ್ಯಾಯ-30)
ಸಮಾಧಿವಿರತೋದಂಕಪರಿಪೃಷ್ಟಃ ಪಥಿ ಪ್ರಭುಃ |
ಹತಂ ದುರ್ಯೋಧನಂ ಪ್ರಾಹ ಸಭ್ರಾತೃಸುತಸೈನಿಕಮ್ ॥
ದಾರಿಯಲ್ಲಿ ಸಮಾಧಿಯನ್ನು ಬಿಟ್ಟು ಎದ್ದಿದ್ದ ಉದಂಕಮುನಿ ಶ್ರೀಕೃಷ್ಣನನ್ನು ಕೇಳಿದಾಗ, ದುರ್ಯೋಧನನು ತನ್ನ ಸಹೋದರರಿಂದ, ಮಕ್ಕಳಿಂದ, ಸೈನಿಕರಿಂದ ಸಮೇತನಾಗಿ ಹತನಾದನು ಎಂದು ಹೇಳಿದನು.

ತಂ ಶಿಷ್ಯವಧಕೋಪೇನ ಶಪ್ತು ಮಾತ್ಮಾನಮುದ್ಯತಮ್ |
ಕೇಶವೋऽಶಮಯದ್ ವಾಕ್ಯೈರ್ವಿಶ್ವರೂಪಂ ಪ್ರದರ್ಶ್ಯ ಚ ॥
ಶಿಷ್ಯನಾದ ದುರ್ಯೋಧನನ ವಧೆಯ ಕೋಪದಿಂದ ಉದಂಕಮುನಿಯು ಶ್ರೀಕೃಷ್ಣನನ್ನು ಶಪಿಸಲು ಉದ್ಯುಕ್ತನಾದನು. ಶ್ರೀಕೃಷ್ಣನು ವಿಶ್ವರೂಪವನ್ನು ತೋರಿ, ಒಳ್ಳೆಯ ಮಾತುಗಳಿಂದ ಅವನನ್ನು ಸಮಾಧಾನ ಪಡಿಸಿದನು.
ಮದ್ಭಕ್ತೋ ನಿತರಾಮೇಷ ಮದಾರಾಧನತತ್ಪರಃ |
ಮಾಮವಜ್ಞಾಯ ನಿರಯಂ ಮಾನುತ್ಥಾನಂ ವ್ರಜೇದಿತಿ ॥
ಕೃಪಯಾ ವಾಸುದೇವೇನ ಬೋಧಿತಃ ಶಾಂತಮಾನಸಃ |
ಪಶ್ಚಾತ್ತಾಪಾಭಿತಪ್ತಾತ್ಮಾ ತಮೇವ ಶರಣಂ ಯಯೌ ॥
ಈತ ನನ್ನಲ್ಲಿ ಬಹಳ ಭಕ್ತಿ ಉಳ್ಳವ. ನನ್ನ ಆರಾಧನೆಯಲ್ಲಿ ನಿರತ. ನನ್ನನ್ನು ತಿರಸ್ಕರಿಸಿ ಶಾಶ್ವತ ನರಕವನ್ನು ಹೊಂದದಿರಲಿ ಎಂದು ಕೃಪೆಯಿಂದ ಶ್ರೀಕೃಷ್ಣ ಬೋಧಿಸಿದಾಗ ಉದಂಕಮುನಿಯ ಮನಸ್ಸು ಸಮಾಧಾನಗೊಂಡಿತು. ಆತ ಪಶ್ಚಾತ್ತಾಪದಿಂದ ಬೆಂದ ಮನಸ್ಸಿನಿಂದ ಕೃಷ್ಣನನ್ನೇ ಶರಣು ಹೊಂದಿದ.
ತಸ್ಮೈ ದೇವೋऽಭಯಂ ದತ್ವಾ ಪ್ರೇಷಯಿಷ್ಯೇऽಮೃತಂ ತವ |
ದಾತುಂ ಶಕ್ರಮಿತಿ ಪ್ರೋಕ್ತಸ್ತ್ವ ಯಯೌ ದ್ವಾರವತೀಂ ಪ್ರಭುಃ ॥
ದೇವ ಶ್ರೀಕೃಷ್ಣ ಉದಂಕನಿಗೆ ಅಭಯ ನೀಡಿ, ನಿನಗೆ ಅಮೃತವನ್ನು ಕೊಡಲು ದೇವೇಂದ್ರನನ್ನು ಕಳಿಸುವೆನೆಂದು ಹೇಳಿ ದ್ವಾರಕೆಗೆ ತೆರಳಿದ.
ಅಥಾऽದಿದೇಶ ದೇವೇಶಂ ವಾಸುದೇವೋऽಮೃತಂ ಮುನೇಃ |
ದೇಹೀತಿ ವಂಚಯಿಷ್ಯಾಮೀತ್ಯಾಹ ಸೋऽಪಿ ಕ್ಷಮಾಪಯನ್ ॥
ಬಳಿಕ ಶ್ರೀಕೃಷ್ಣನು ಮುನಿಗೆ ಅಮೃತ ನೀಡೆಂದು ದೇವೇಂದ್ರನಿಗೆ ಆದೇಶಿಸಿದನು. ಇಂದ್ರನು ಕ್ಷಮೆ ಬೇಡುತ್ತಾ ಮುನಿಯನ್ನು ವಂಚಿಸುವೆನೆಂದನು.
ಓಮಿತ್ಯುಕ್ತೋ ಭಗವತಾ ತತ್ಸ್ನೇಹಾತ್ಸ ಶಚೀಪತಿಃ |
ಸುಜುಗುಪ್ಸಿತಮಾತಂಗವೇಷೋ ಭೂತ್ವಾ ಮುನಿಂ ಯಯೌ ॥
ಇಂದ್ರನ ಮೇಲಿನ ಪ್ರೀತಿಯಿಂದ ಶ್ರೀಕೃಷ್ಣ `ಆಗಲಿ' ಎಂದನು. ಇಂದ್ರನು ಬಲು ಜುಗುಪ್ಸಿತವಾದ ಚಂಡಾಲವೇಷ ಧರಿಸಿ ಮುನಿಯ ಬಳಿಗೆ ನಡೆದನು.
ಮೂತ್ರಸ್ರೋತಸಿ ಸೋಧಶ್ಚ ನಿಧಾಯ ಕಲಶಂ ವಶೀ |
ಮೂತ್ರಯನ್ನಿವ ತಂ ಪ್ರಾಹ ವಾಸುದೇವಃ ಸುಧಾಮಿಮಾಮ್ |
ಮಹರ್ಷೇ ಪ್ರೇಷಯಾಮಾಸ ತವಾರ್ಥೇ ತತ್ ಪಿಬೇತಿ ಚ ॥
ಸ ಮೂತ್ರಮಿತಿ ಮತ್ವಾ ತಂ ಯಾಹೀತ್ಯೇऽವಾಹ ಭತ್ಸಯನ್ |
ವಂಚಯಿತ್ವೈವ ತಂ ಶಕ್ರೋ ಯಯೌ ಪ್ರೀತಃ ಸ್ವಮಾಲಯಮ್ ॥
ಯೋಗಿ ಇಂದ್ರ ಮೂತ್ರದ್ವಾರದಲ್ಲಿ ಅಮೃತಕಲಶವನ್ನಿಟ್ಟುಕೊಂಡು, ಮೂತ್ರ ಮಾಡುವವನಂತೆ ತೋರುತ್ತಾ, `ಮಹರ್ಷಿಯೇ, ಕೃಷ್ಣ ಈ ಅಮೃತವನ್ನು ನಿನಗಾಗಿ ಕಳಿಸಿಕೊಟ್ಟಿದ್ದಾನೆ. ಆದ್ದರಿಂದ ಕುಡಿ' ಎಂದನು. ಮುನಿಯು ಅದನ್ನು ಮೂತ್ರವೆಂದೇ ಬಗೆದು ನಿಂದಿಸುತ್ತಾ `ಆಚೆ ತೊಲಗು' ಎಂದನು. ದೇವೇಂದ್ರನು ಹೀಗೆ ಮುನಿಯನ್ನು ವಂಚಿಸಿ ಸಂತುಷ್ಟನಾಗಿ ಸ್ವರ್ಗಕ್ಕೆ ಹೊರಟುಹೋದನು.
ಅಸಾಧಾರಣಮನ್ನಂ ಹಿ ದೇವಾನಾಮಮೃತಂ ಸದಾ |
ಅನ್ಯಪೀತಿಸ್ತತಸ್ತಸ್ಯ ದೇವಾನಾಂ ಪರಮಾ ಪ್ರಿಯಾ ॥
ಅಮೃತ ಸದಾ ದೇವತೆಗಳಿಗೇ ಮೀಸಲಾದ ಆಹಾರ. ಆದ್ದರಿಂದ ಅದನ್ನು ಅನ್ಯರು ಕುಡಿಯುವುದು ದೇವತೆಗಳಿಗೆ ಏನೂ ಇಷ್ಟವಿಲ್ಲ. ಆದ್ದರಿಂದ ವಂಚಿಸಿದನು.
ಆತ್ಮದತ್ತಪ್ರಸಾದಾಚ್ಚ ಸ್ವಾಪರಾಧಾತ್ ಪ್ರಚಾಲಿತೇ |
ಉದಂಕೇ ವಾಸುದೇವಸ್ತು ಯುಕ್ತಮಿತ್ಯೇವ ಮನ್ಯತೇ ॥
ಉದಂಕಮುನಿಯು ಸ್ವಾಪರಾಧದಿಂದಲೇ ಶ್ರೀಕೃಷ್ಣನು ಕೊಡುತ್ತಿದ್ದ ಅನುಗ್ರಹದಿಂದ ವಂಚಿತನಾದಾಗ ಶ್ರೀಕೃಷ್ಣನು ಇದು ಸರಿಯೆಂದೇ ಭಾವಿಸಿದನು.
ಸ್ವಪುರೀಂ ಪ್ರಾಪ್ಯ ಯದುಭಿಃ ಪೂಜಿತಃ ಶೂರಸೂನವೇ |
ವೃತ್ತಾಂತಂ ಕಥಯಾಮಾಸ ಕೇಶವೋ ಯದುಸಂಸದಿ ॥
ಶ್ರೀಕೃಷ್ಣನು ದ್ವಾರಕೆಗೆ ಹೋಗಿ, ಯಾದವರಿಂದ ಸತ್ಕೃತನಾಗಿ, ಯಾದವರ ಸಭೆಯಲ್ಲಿ ವಸುದೇವನಿಗೆ ಕುರುಕ್ಷೇತ್ರ ಯುದ್ಧದ ವೃತ್ತಾಂತವನ್ನು ಹೇಳಿದನು.
ವಧಮಂತರಿತಂ ಸೂನೋಃ ಸಾತ್ವತೇಶೇನ ಸಾತ್ವತೀ |
ಪ್ರಣಮ್ಯ ಕಥಯೇತ್ಯೂಚೇ ತತ ಆಹ ಜನಾರ್ದನಃ ॥
ಶ್ರೀಕೃಷ್ಣನು ಅಭಿಮನ್ಯು ವಧೆಯ ವೃತ್ತಾಂತವನ್ನು ಹೇಳದೆ ಬಿಟ್ಟಾಗ ಸುಭದ್ರೆಯು ನಮಿಸಿ ಅದನ್ನೂ ಹೇಳೆಂದಳು. ಆಗ ಶ್ರೀಕೃಷ್ಣನು ಅದನ್ನೂ ಹೇಳಿದನು.
ತತಃ ಸುದುಃಖಿತಾಃ ಶೂರಪುತ್ರಾದ್ಯಾ ಅಭಿಮನ್ಯವೇ |
ಶ್ರಾದ್ಧದಾನಾನಿ ಬಹುಶಶ್ಚಕ್ರುಃ ಕೇಶವಸಂಯುತಾಃ ॥
ಆಗ ವಸುದೇವ ಮುಂತಾದವರು ಬಹಳ ದುಃಖಿತರಾಗಿ, ಶ್ರೀಕೃಷ್ಣನೊಡಗೂಡಿ ಅಭಿಮನ್ಯುವಿಗೆ ಬಹಳ ಶ್ರಾದ್ಧ-ದಾನಗಳನ್ನು

ನಡೆಸಿದರು.
ನಿವಸತ್ಯತ್ರ ವಿಶ್ವೇಶೇ ಧರ್ಮಪುತ್ರಃ ಕ್ರತೂತ್ತಮಮ್ |
ಅಶ್ವಮೇಧಮನುಷ್ಠಾತುಂ ನಾವಿಂದದ್ ವಿತ್ತಮಂಜಸಾ ॥
ಶ್ರೀಕೃಷ್ಣನು ದ್ವಾರಕೆಯಲ್ಲಿ ವಾಸಮಾಡುತ್ತಿದ್ದಾಗ ಧರ್ಮರಾಜನು ಅಶ್ವಮೇಧವೆಂಬ ಶ್ರೇಷ್ಠ ಯಾಗವನ್ನು ವೈಭವದಿಂದ ನಡೆಸಲು ಬಯಸಿದನು. ಆದರೆ ಅವಶ್ಯವಾದ ಧನವನ್ನು ಅವನಿಗೆ ಪಡೆಯಲಾಗಲಿಲ್ಲ.
ಹತಶೇಷಾತ್ ಕ್ಷತ್ರಸಂಘಾತ್ ಕರಂ ನೈಚ್ಛದ್ ದಯಾಪರಃ |
ನ ಚ ಮಧ್ಯಮಕಲ್ಪೇನ ಯಷ್ಟುಂ ತಸ್ಯ ಮನೋಗತಮ್ ॥
ಅಳಿದುಳಿದ ಕ್ಷತ್ರಿಯ ಸಮುದಾಯದಿಂದ ಕಪ್ಪವನ್ನು ಕೊಳ್ಳಲು ದಯಾಪರನಾದ ಧರ್ಮರಾಜನು ಬಯಸಲಿಲ್ಲ. ಗುರುಜನರ ಹಿಂಸೆ ಮಾಡಿಯೂ ಮಧ್ಯಮಕಲ್ಪದಿಂದ ಯಾಗ ಮಾಡುವುದು ಅವನ ಮನಸ್ಸಿಗೆ ಬರಲಿಲ್ಲ.
ವಿಜ್ಞಾಯ ನಿತ್ಯವಿಜ್ಞಾತನಿಖಿಲೋ ಬಾದರಾಯಣಃ |
ಆವಿರ್ಭೂತೋ ಹಿಮವತಃ ಶೃಂಗಂ ಯತ್ರಾಭಿಸಂಗತಮ್ ॥
ಮೇರುಶೃಂಗೇಣ ಯತ್ರೈವ ವಿಷ್ಣುಃ ಸ್ವಾತ್ಮಾನಮವ್ಯಯಮ್ |
ಲೋಕಸ್ಯ ಸಂಗ್ರಹಾಯೇಜೇ ಕರ್ಮಬಂಧೋಜ್ಝಿತೋಽಪಿ ಸನ್ ॥
ಶಂಕರಾದ್ಯಾಃ ಸುರಾ ಯತ್ರ ಮರುತ್ತಶ್ಚೇಜಿರೇ ಹರಿಮ್ |
ದಾನವೋ ವೃಷಪರ್ವಾ ಚ ತತ್ರಾಸ್ತಿ ಧನಮಕ್ಷಯಮ್ ॥
ತಚ್ಛಂಕರಶರೀರಸ್ಥಂ ಜಾಮದಗ್ನ್ಯಂ ಹರಿಂ ಪರಮ್ |
ಇಷ್ಟ್ವೈವಾನುಜ್ಞಯಾ ತಸ್ಯ ಸ್ವೀಕೃತ್ಯ ಯಜ ತೇನ ಚ |
ಇತ್ಯಾಹ ವ್ಯಾಸವಾಕ್ಯಾನು ಭೀಮೋಽಪ್ಯಾಹ ನೃಪೋತ್ತಮಮ್ ॥
ಸದಾ ಸರ್ವಜ್ಞರಾದ ಶ್ರೀಬಾದರಾಯಣರು ಇದನ್ನು ತಿಳಿದು ಆವಿರ್ಭೂತರಾದರು. `ಹಿಮಾಲಯ ಶಿಖರ ಮೇರು ಶಿಖರದೊಂದಿಗೆ ಸೇರುವಲ್ಲಿ ಹಿಂದೆ ವಿಷ್ಣು ಕರ್ಮಬಂಧರಹಿತನಾಗಿದ್ದರೂ ಲೋಕಶಿಕ್ಷಣಕ್ಕಾಗಿ ತನ್ನ ನಾಶರಹಿತ ರೂಪವನ್ನೇ ಯಜ್ಞದಿಂದ ಆರಾಧಿಸಿದನು. ರುದ್ರಾದಿ ದೇವತೆಗಳೂ ಮರುತ್ತರಾಜನೂ ವೃಷಪರ್ವದಾನವನೂ ವಿಷ್ಣುವನ್ನು ಯಜ್ಞದಿಂದ ಆರಾಧಿಸಿದರು. ಅಲ್ಲಿ ಅಕ್ಷಯ ಧನವಿದೆ. ಆದ್ದರಿಂದ ಶಿವಶರೀರಾಂತರ್ಗತನಾದ ಸರ್ವೋತ್ತಮನಾದ ಪರಶುರಾಮ ರೂಪಿ ನಾರಾಯಣನನ್ನು ಯಜ್ಞದಿಂದ ಆರಾಧಿಸಿ, ಅವನ ಅನುಜ್ಞೆಯಿಂದಲೇ ಆ ಧನವನ್ನು ಸ್ವೀಕರಿಸಿ ಅದರಿಂದ ಯಾಗ ಮಾಡು' ಎಂದರು ಬಾದರಾಯಣರು. ಅವರು ಹಾಗೆ ಹೇಳಿದಾಗ ಭೀಮನೂ ಧರ್ಮರಾಜನಿಗೆ ಹಾಗೇ ಹೇಳಿದನು.
ಧನಸ್ಯ ದೇವತಾ ವಿಷ್ಣುರ್ಜಾಮದಗ್ನ್ಯೋಽಖಿಲೇಶ್ವರಃ |
ಸ ಶಂಕರಶರೀರಸ್ಥೋ ಯಜ್ಞೋಚ್ಛಿಷ್ಟಧನಾಧಿಪಃ ॥
`ಸರ್ವೇಶ್ವರನಾದ, ಪರಶುರಾಮರೂಪನಾದ ವಿಷ್ಣುವೇ ಧನಕ್ಕೆ ದೇವತೆ. ಅವನೇ ಶಿವಶರೀರಾಂತರ್ಗತನಾಗಿ ಯಜ್ಞಶೇಷವಾದ ಧನಕ್ಕೆ ಒಡೆಯನಾಗಿರುತ್ತಾನೆ.
ತೇನೈವ ವಿಷ್ಣುನಾ ದತ್ತಮರ್ಜುನಾಯಾಸ್ತ್ರಮುತ್ತಮಮ್ |
ಕಾರ್ಯಾಣ್ಯನ್ಯಾನಿ ಚಾಸ್ಮಾಕಂ ಕೃತಾನ್ಯೇತೇನ ವಿಷ್ಣುನಾ ॥
ಆ ವಿಷ್ಣುವೇ ಅರ್ಜುನನಿಗೆ ಉತ್ತಮವಾದ ಪಾಶುಪತ ಅಸ್ತ್ರವನ್ನು ಕೊಟ್ಟಿದ್ದಾನೆ. ನಮ್ಮ ಬೇರೆ ಕಾರ್ಯಗಳೂ ಆ ವಿಷ್ಣುವಿನ ಅನುಗ್ರಹದಿಂದಲೇ ಸಾಧಿತವಾಗಿವೆ.
ಸ ಬ್ರಹ್ಮರುದ್ರಶಕ್ರಾದಿಪದದಾತಾಽಖಿಲೇಶ್ವರಃ |
ಸ್ವತಂತ್ರಃ ಪರತಂತ್ರಾಂಸ್ತಾನಾವರ್ತಯತಿ ಚೇಚ್ಛಯಾ ॥
ಅವನೇ ಬ್ರಹ್ಮ-ರುದ್ರ-ಇಂದ್ರಾದಿಗಳಿಗೆ ಅವರ ಪದವಿಗಳನ್ನು ನೀಡುವವನು. ಸರ್ವೇಶ್ವರ, ಸ್ವತಂತ್ರ. ಪರತಂತ್ರರಾದ ಬ್ರಹ್ಮಾದಿಗಳನ್ನು ಅವನೇ ಸ್ವೇಚ್ಛೆಯಿಂದ ಸಂಸಾರದಲ್ಲಿ ತಿರುಗಿಸುತ್ತಾನೆ.
ಪ್ರಿಯೋಽಸ್ಮಾಕಂ ಪ್ರಿಯಾಸ್ತಸ್ಯ ಸರ್ವದೈವ ವಯಂ ನೃಪ |
ಅತಸ್ತದಭ್ಯನುಜ್ಞಾತಧನೇನೈವ ಯಜಾಮಹೇ ॥
ಅವನೇ ನಮಗೆ ಸದಾ ಪ್ರಿಯನು. ಅವನಿಗೆ ನಾವು ಸದಾ ಪ್ರಿಯರು. ಅದರಿಂದ ಅವನ ಅನುಮತಿಯಿಂದ ಸಿಗುವ ಹಣದಿಂದಲೇ ನಾವು ಯಜ್ಞ ಮಾಡೋಣ.
ಸೋಽಯಂ ಪಿತಾಮಹೋಽಸ್ಮಾಕಂ ವ್ಯಾಸಸ್ತನ್ನಃ ಪ್ರದಾಸ್ಯತಿ |
ಇತ್ಯುಕ್ತ್ವಾ ತಂ ಪುರಸ್ಕೃತ್ಯ ಕೃಷ್ಣದ್ವೈಪಾಯನಂ ಯಯುಃ ॥
ಆ ಪರಶುರಾಮರೇ ಇನ್ನೊಂದು ರೂಪದಿಂದ ನಮ್ಮ ತಾತನಾದ ವೇದವ್ಯಾಸರೆನಿಸಿದ್ದಾರೆ. ಅವರೇ ಆ ಸಂಪತ್ತನ್ನು ನಮಗೆ ಕೊಡಿಸುತ್ತಿದ್ದಾರೆ. ಹೀಗೆ ಹೇಳಿಕೊಂಡು ಪಾಂಡವರು ವೇದವ್ಯಾಸರನ್ನು ಮುಂದೆ ಮಾಡಿಕೊಂಡು ಹೋದರು.
ಧನಂ ಕೃಷ್ಣಃ ಸಮಾದಾಯ ಸಮಂತಾಚ್ಛತಯೋಜನಮ್ |
ದದೌ ತೇಷಾಂ ತೇಽಪಿ ಚೋಹುರ್ಹಸ್ತ್ಯುಷ್ಟ್ರಾಶ್ವನರಾದಿಭಿಃ ॥
ವೇದವ್ಯಾಸರು ಸುತ್ತಲೂ ನೂರುಯೋಜನ ಪರಿಮಿತವಾದ ಧನವನ್ನು ತೆಗೆದುಕೊಟ್ಟರು. ಪಾಂಡವರು ಅದನ್ನು ಆನೆ, ಕುದುರೆ, ಒಂಟೆ, ಮನುಷ್ಯರಿಂದ ಹೊರಿಸಿದರು.
ಯುಧಿಷ್ಠಿರಮೃತೇ ಸರ್ವೇ ಭೀಮಸೇನಪುರೋಗಮಾಃ |
ಯಜ್ಞಾರ್ಥಮೂಹಿರೇ ಭೂರಿಸ್ವರ್ಣಮುದ್ಯದ್ರವಿಪ್ರಭಮ್ ॥

ಧರ್ಮರಾಜನ ಹೊರತು ಭೀಮಸೇನ ಮುಂತಾದವರೆಲ್ಲರೂ ಉದಿಸುವ ಸೂರ್ಯನಂತೆ ಹೊಳೆಯುವ ಬಹಳ ಚಿನ್ನವನ್ನು ಯಜ್ಞಕ್ಕಾಗಿ ಆನೆ ಮುಂತಾದವುಗಳಿಂದ ಹೊರಿಸಿದರು.
ತದೈವ ವಾಸುದೇವೋಽಪಿ ಸಭಾರ್ಯಃ ಸಹ ಭದ್ರಯಾ |
ಆಗಚ್ಛನ್ ಹಸ್ತಿನಪುರಂ ಪಥ್ಯುದಂಕೇನ ಪೂಜಿತಃ ॥
ಆಗಲೇ ಶ್ರೀಕೃಷ್ಣನೂ ಭಾರ್ಯೆಯರೊಂದಿಗೆ ಮತ್ತು ಸುಭದ್ರೆಯೊಂದಿಗೆ ಹಸ್ತಿನಾಪುರಕ್ಕೆ ಹೊರಟನು. ಬರುತ್ತ ದಾರಿಯಲ್ಲಿ ಪುನಃ ಉದಂಕನಿಂದ ಪೂಜಿತನಾದನು.
ತತ್ಕಾಮವರ್ಷಿಣೋ ಮೇಘಾಂಸ್ತಸ್ಯ ದತ್ವೋದಕಾರ್ಥಿನಃ |
ಸಫಲಂ ಸ್ವವರಂ ಕೃತ್ವಾ ಜಗಾಮ ಗಜಸಾಹ್ವಯಮ್ ॥
ಉದಂಕನು ಜಲಾರ್ಥಿಯಾಗಿದ್ದರಿಂದ ಶ್ರೀಕೃಷ್ಣನು ಅವನಿಗೆ ಯಥೇಚ್ಛವಾಗಿ ಮಳೆಗರೆವ ಮೋಡಗಳನ್ನು ಕೊಟ್ಟು, ತನ್ನ ವರವನ್ನು ಸಫಲವನ್ನಾಗಿ ಮಾಡಿ ಹಸ್ತಿನಾಪುರಕ್ಕೆ ತೆರಳಿದನು.
* * * * *
ಐವತ್ತೊಂದನೆಯ ಅಧ್ಯಾಯ
ಶ್ರೀಕೃಷ್ಣನು ಹಸ್ತಿನಾವತಿಯಿಂದ ದ್ವಾರಕೆಗೆ ತೆರಳುವಾಗ ಮಾರ್ಗಮಧ್ಯದಲ್ಲಿ ಉದಂಕ ಮುನಿಯ ಭೇಟಿಯಾದುದು. ಕೌರವರ ವಿನಾಶವನ್ನು ತಿಳಿದ ಉದಂಕ ಮುನಿಯು ಇದಕ್ಕೆಲ್ಲ ಕೃಷ್ಣನೇ ಕಾರಣನೆಂದು ಶಾಪ ಕೊಡಲು ಹೊರಟಿದುದು. ಅವನನ್ನು ಸಾಂತ್ವನಗೊಳಿಸಲು ತತ್ವೋಪದೇಶವನ್ನು ಮಾಡಿದುದು.
ವೈಶಂಪಾಯನಃ
ತಥಾ ಪ್ರಯಾಂತಂ ವಾರ್ಷ್ಣೇಯಂ ದ್ವಾರಕಾಂ ಭರತರ್ಷಭಾಃ |
ಪರಿಷ್ವಜ್ಯ ನ್ಯವರ್ತಂತ ಸಾನುಯಾತ್ರಾಃ ಪರಂತಪಾಃ ॥1॥
ವೈಶಂಪಾಯನ ಜನಮೇಜಯನೇ, ದ್ವಾರಕೆಯತ್ತ ಪ್ರಯಾಣ ಬೆಳೆಸಿದ ಕೃಷ್ಣನನ್ನು ಭರತಶ್ರೇಷ್ಠರಾದ, ಶತ್ರುಗಳನ್ನು ಸದೆಬಡಿಯಲು ಸಾಮರ್ಥ್ಯವುಳ್ಳ ಭೀಮಸೇನಾದಿಗಳು ಗಾಢವಾಗಿ ಆಲಿಂಗಿಸಿ, ಬೀಳ್ಕೊಟ್ಟು ತಮ್ಮ ಸೇವಕರೊಡನೆ ಹಸ್ತಿನಾವತಿಗೆ ಮರಳಿದರು.
ಪುನಃ ಪುನಶ್ಚ ವಾರ್ಷ್ಣೇಯಂ ಪರ್ಯಷ್ವಜತ ಫಲ್ಗುನಃ |
ಆಚಕ್ಷುರ್ವಿಷಯಾದೇನಂ ದದರ್ಶ ಸ ಪುನಃ ಪುನಃ ॥2॥
ಕೃಷ್ಣನಿಗೆ ಪ್ರಿಯಸಖನಾದ ಅರ್ಜುನನು ವೃಷ್ಣಿಕುಲದ ಅರಸನಾದ ಕೃಷ್ಣನನ್ನು ಪುನಃ ಪುನಃ ಆಲಿಂಗಿಸಿದನು. ಬಳಿಕ ಕಣ್ಣುಗಳಿಗೆ ಎಟುಕುವವರೆಗೂ ಕೃಷ್ಣನನ್ನು ನೋಡುತ್ತಲೇ ಇದ್ದನು.
ಕೃಚ್ಛ್ರೇಣೈವ ಚ ತಾಂ ಪಾರ್ಥೋ ಗೋವಿಂದೇ ವಿನಿವೇಶಿತಾಮ್ |
ಸಂಜಹಾರ ತತೋ ದೃಷ್ಟಿಂ ಕೃಷ್ಣಶ್ಚಾಪ್ಯಪರಾಜಿತಃ ॥3॥
ಗೋವಿಂದನಲ್ಲಿಯೇ ದೃಷ್ಟಿಯುಳ್ಳ ಅರ್ಜುನನು ಕೃಷ್ಣನ ರಥವು ದೂರ ಹೋಗುತ್ತಾ ಕಣ್ಮರೆಯಾಗುತ್ತಿರಲು ಅನಿವಾರ್ಯವಾಗಿ ತನ್ನ ದೃಷ್ಟಿಯನ್ನು ಹಿಂಪಡೆದನು. ಅರ್ಜುನನ ವಿಷಯದಲ್ಲಿ ಕೃಷ್ಣನ ಸ್ಥಿತಿಯೂ ಹೀಗೆಯೇ ಇತ್ತು.
ತತ್ರ ಪ್ರಯಾಣೇ ಯಾನ್ಯಾಸನ್ ನಿಮಿತ್ತಾನಿ ಮಹಾತ್ಮನಃ |
ಬಹೂನ್ಯದ್ಭುತರೂಪಾಣಿ ತಾನಿ ಮೇ ಗದತಃ ಶೃಣು ॥4॥
ಕೃಷ್ಣನು ತನ್ನ ಪ್ರಯಾಣದ ಸಮಯದಲ್ಲಿ ಅನೇಕ ಶಕುನಗಳನ್ನು ಕಂಡನು. ಅದನ್ನು ಹೇಳುತ್ತೇನೆ, ಕೇಳಿಸಿಕೊ.
ವಾಯುರ್ವೇಗೇನ ಮಹತಾ ರಥಸ್ಯ ಪುರತೋ ವವೌ |
ಕುರ್ವನ್ ನಿಃಶರ್ಕರಂ ಮಾರ್ಗಂ ವಿರಜಸ್ಕಮಕಂಟಕಮ್ ॥5॥
ಮಾತರಿಶ್ವನೆನಿಸಿದ ಮುಖ್ಯಪ್ರಾಣನು ಕೃಷ್ಣನು ಸಾಗುವ ಮಾರ್ಗದಲ್ಲಿರುವ ಕಲ್ಲು, ಧೂಳುಗಳನ್ನು ತನ್ನ ವೇಗವಾದ ಗಾಳಿಯ ಮೂಲಕ ಗುಡಿಸುತ್ತಾ, ಕೃಷ್ಣನ ರಥವು ಚಲಿಸುವ ಭೂಶುದ್ಧಿಯನ್ನು ಮಾಡುವಂತೆ ವೇಗವಾಗಿ ಬೀಸುತ್ತಿದ್ದನು.
ವವರ್ಷ ವಾಸವಶ್ಚೈವ ತೋಯಂ ಶುಚಿ ಸುಗಂಧಿ ಚ |
ದಿವ್ಯಾನಿ ಚೈವ ಪುಷ್ಪಾಣಿ ಪುರತಃ ಶಾರ್ಙ್ಗಧನ್ವನಃ ॥6॥
ಇಂದ್ರನು ಶುಭ್ರವೂ, ಗಂಧಯುಕ್ತವಾದ ಮಳೆಯ ನೀರನ್ನು, ದಿವ್ಯವಾದ ಪುಷ್ಪಗಳನ್ನು ಕೃಷ್ಣನ ರಥದ ಮುಂಭಾಗಗಳಲ್ಲಿ ಸುರಿಸುತ್ತಿದ್ದನು.
ಸಂಪ್ರಯಾತೋ ಮಹಾಬಾಹುಃ ಸಮೇಷು ಮರುಧನ್ವಸು |
ಆಗಚ್ಛಂತಮಪಶ್ಯದ್ವೈ ಉದಂಕಂ ನಾಮ ನಾಮತಃ ॥7॥
ಶ್ರೀಕೃಷ್ಣನು ಹೀಗೆ ದ್ವಾರಕೆಯನ್ನು ಕುರಿತು ಪ್ರಯಾಣಿಸುವಾಗ ಸಮದಟ್ಟಾದ ನೆಲದಲ್ಲಿಯೂ, ಮರುಭೂಮಿಯಲ್ಲಿಯೂ ಪ್ರಯಾಣವು ಆರಂಭವಾಯಿತು. ಅಲ್ಲಿ ಮಹಾತೇಜಸ್ವಿಯಾದ, ಮುನಿಶ್ರೇಷ್ಠನಾದ ಉದಂಕನನ್ನು ನೋಡಿದನು.
ಮಹರ್ಷಿಂ ಸಿದ್ಧತಪಸಂ ತ್ರಿಷು ಲೋಕೇಷು ವಿಶ್ರುತಮ್ |
ಸ ತಂ ಸಂಪೂಜ್ಯ ತೇಜಸ್ವೀ ಮುನಿಂ ಕಮಲಲೋಚನಃ ॥8॥
ಮಹರ್ಷಿಯಾದ ಉದಂಕನನ್ನು ವಿಶಾಲಾಕ್ಷನಾದ, ತೇಜಸ್ವಿಯಾದ ಕೃಷ್ಣನು ಯೋಗ್ಯವಾಗಿ ಸತ್ಕರಿಸಿದನು. ಅದಕ್ಕೆ ಪ್ರತಿಯಾಗಿ ಉದಂಕನು ಕೃಷ್ಣನನ್ನು ಯಥಾ ಯೋಗ್ಯವಾಗಿ ಗೌರವಿಸಿದನು.
ಪೂಜಿತಸ್ತೇನ ಚ ತದಾ ಪರ್ಯಪೃಚ್ಛದನಾಮಯಮ್ ॥9॥
ಪೂಜಿತನಾದ ಶ್ರೀಕೃಷ್ಣನು ಉದಂಕನ ಯೋಗಕ್ಷೇಮವನ್ನು ವಿಚಾರಿಸಿದನು.
ಸ ಪೃಷ್ಟಃ ಕುಶಲಂ ತೇನ ಸಂಪೂಜ್ಯ ಮಧುಸೂದನಮ್ |

ಉದಂಕೋ ಬ್ರಾಹ್ಮಣಶ್ರೇಷ್ಠಃ ತತಃ ಪಪ್ರಚ್ಛ ಮಾಧವಮ್ ॥10॥
ಕುಶಲಪ್ರಶ್ನೆಯನ್ನು ಕೇಳಿದ ಮಧುಸೂದನನಿಗೆ ಬ್ರಾಹ್ಮಣಶ್ರೇಷ್ಠನಾದ ಉದಂಕನು ಸತ್ಕರಿಸಿ ಪ್ರಶ್ನಿಸಿದನು.
ಉದಂಕಃ
ಕಚ್ಚಿಚ್ಛೌರೇ ತ್ವಯಾ ಗತ್ವಾ ಕುರುಪಾಂಡವಸದ್ಮ ತತ್ |
ಕೃತಂ ಸೌಭ್ರಾತ್ರಮಮಲಂ ತನ್ಮೇ ವ್ಯಾಖ್ಯಾತುಮರ್ಹಸಿ ॥11॥
ಉದಂಕ ಶ್ರೀಕೃಷ್ಣನೇ, ನೀನು ಕೌರವರು ಮತ್ತು ಪಾಂಡವರ ಮನೆಗಳಿಗೆ ಹೋಗಿ, ಪರಸ್ಪರ ಭ್ರಾತೃತ್ವದ ಪ್ರೀತಿಯು ಹುಟ್ಟುವಂತೆ ಅವರನ್ನು ಕುರಿತು ಉಪದೇಶಿಸಿ ಸಂಬಂಧವನ್ನು ಏರ್ಪಡಿಸಿದೆಯಾ? ನೀನು ಮಾಡಿದ ಈ ಸತ್ಕರ್ಮದ ಬಗ್ಗೆ ವಿಸ್ತಾರವಾಗಿ ಹೇಳು.
ಅಪಿ ಸಂಧಾಯ ತಾನ್ ವೀರಾನ್ ಉಪಾವೃತ್ತೋಽಸಿ ಕೇಶವ |
ಸಂಬಂಧಿನಃ ಸುದಯಿತಾನ್ ಸತತಂ ವೃಷ್ಣಿಪುಂಗವ ॥12॥
ಕೇಶವನೇ, ನಿನಗೆ ಸಂಬಂಧಿಗಳೂ, ಪ್ರೀತಿಪಾತ್ರರೂ ಆಗಿರುವ ಕೌರವ- ಪಾಂಡವರಲ್ಲಿ ಸಂಧಾನವನ್ನು ಏರ್ಪಡಿಸಿ ದ್ವಾರಕೆಗೆ ತೆರಳುತ್ತಿರುವೆಯಾ?
ಕಚ್ಚಿತ್ ಪಾಂಡುಸುತಾಃ ಪಂಚ ಧೃತರಾಷ್ಟ್ರಸ್ಯ ಚಾತ್ಮಜಾಃ |
ಲೋಕೇಷು ವಿಹರಿಷ್ಯಂತಿ ತ್ವಯಾ ಸಹ ಪರಂತಪಾಃ ॥13॥
ಐದು ಜನ ಪಾಂಡವರು ಧೃತರಾಷ್ಟ್ರನ ನೂರು ಜನ ಮಕ್ಕಳು ಒಟ್ಟಾಗಿ ಸೇರಿ ನಿನ್ನ ಜೊತೆಗೆ ಸುಖ-ಸಂತೋಷದಿಂದ ಲೋಕದಲ್ಲಿ ವಿಹರಿಸುತ್ತಿರುವರಾ?
ಸ್ವರಾಷ್ಟ್ರೇಷು ಚ ರಾಜಾನಃ ಕಚ್ಚಿತ್ ಪ್ರಾಪ್ಸ್ಯಂತಿ ವೈ ಸುಖಮ್ |
ಕೌರವೇಷು ಪ್ರಶಾಂತೇಷು ತ್ವಯಾ ನಾಥೇನ ಮಾಧವ ॥14॥
ಎಲ್ಲರಿಗೂ ಸ್ವಾಮಿಯಾದ ನೀನು ಕೌರವರಿಗೂ-ಪಾಂಡವರಿಗೂ ಸಂಧಾನ ಏರ್ಪಡಿಸಿದ ಬಳಿಕ ರಾಜರೆಲ್ಲರೂ ಸಂತುಷ್ಟರಾಗಿ ತಮ್ಮ ತಮ್ಮ ರಾಜ್ಯಗಳಲ್ಲಿ ಸುಖದಿಂದ ಇದ್ದಾರಷ್ಟೆ?
ಯಾ ಮೇ ಸಂಭಾವನಾ ತಾತ ತ್ವಯಿ ನಿತ್ಯಮವರ್ತತ |
ಅಪಿ ಸಾ ಸಫಲಾ ಕೃಷ್ಣ ಕೃತಾ ತೇ ಭಾರತಾನ್ ಪ್ರತಿ ॥15॥
ಕೃಷ್ಣನೇ, ನೀನು ಅವರಿಬ್ಬರಿಗೆ ಶಾಂತಿ-ಸಂಧಾನವನ್ನು ಏರ್ಪಡಿಸುತ್ತಿ ಎಂಬ ಊಹೆಯನ್ನು ನಾನು ಎಂದೋ ಮಾಡಿಕೊಂಡಿದ್ದೆನು. ಕಾರಣ ಕೌರವ-ಪಾಂಡವರ ವಿಷಯದಲ್ಲಿ, ಅವರ ವಂಶದಲ್ಲಿ ನಿನಗೆ ಪರಿಪೂರ್ಣವಾದ ಕೃಪೆ ಇದೆ. ಆದ್ದರಿಂದ ನಿನ್ನ ಸಂಧಾನವು ಫಲಿಸಿದೆ ಎಂದು ಭಾವಿಸುತ್ತೇನೆ.
ಶ್ರೀಭಗವಾನ್
ಕೃತೋ ಯತ್ನೋ ಮಯಾ ಬ್ರಹ್ಮನ್ ಸೌಶಾಮ್ಯೇ ಕೌರವಾನ್ ಪ್ರತಿ |
ನ ಚಾಶಕ್ಯಂತ ಸಂಧಾತುಮಧರ್ಮರುಚಯೋ ಮಯಾ ॥16॥
ಶ್ರೀಭಗವಾನ್ ಮಹಾಮುನಿಯೇ, ನೀನು ಹೇಳಿದಂತೆ ಕೌರವರ ಬಳಿ ಸಾಗಿ ಮಹಾಸಂಧಾನವನ್ನು ಏರ್ಪಡಿಸಲು ಬಹಳವಾಗಿಯೇ ನಾನು ಪ್ರಯತ್ನಿಸಿದೆನು. ಆದರೆ ಯಾವುದೇ ವಿಧಾನದಿಂದಲೂ ಅವರನ್ನು ಸಂಧಿಗೆ ಒಪ್ಪಿಸಲು ನನ್ನಿಂದ ಸಾಧ್ಯವಾಗಲಿಲ್ಲ.
ತತಸ್ತೇ ನಿಧನಂ ಪ್ರಾಪ್ತಾಃ ಸರ್ವೇ ಸಸುತಬಾಂಧವಾಃ ॥17॥
ಸಂಧಾನಕ್ಕೆ ಒಪ್ಪಿಕೊಳ್ಳದ ಕೌರವರೆಲ್ಲರೂ ಪುತ್ರ-ಮಿತ್ರ-ಬಂಧುಗಳಿಂದ ಸಹಿತರಾಗಿ ಯುದ್ಧಭೂಮಿಯಲ್ಲಿ ನಿಧನ ಹೊಂದಿದರು.
ನ ದಿಷ್ಟಮಪ್ಯತಿಕ್ರಾಂತುಂ ಶಕ್ಯಂ ಬುದ್ಧ್ಯಾ ಬಲೇನ ವಾ |
ಮಹರ್ಷೇ ವಿದಿತಂ ನೂನಂ ಸರ್ವಮೇತತ್ ತವಾನಘ ॥18॥
ಉದಂಕರೇ, ವಿಧಿನಿಯಮವನ್ನು ಬುದ್ಧಿಯಿಂದಲಾಗಲಿ, ಬಲದಿಂದಲಾಗಲಿ ಅತಿಕ್ರಮಿಸಲಾಗದು. ಇದೆಲ್ಲವೂ ಜ್ಞಾನಿಗಳಾದ ನಿಮ್ಮಿಂದ ತಿಳಿಯಲ್ಪಟ್ಟಿದೆಯಷ್ಟೆ?
ಅತ್ಯಕ್ರಾಮನ್ ವಚೋ ಮಹ್ಯಂ ಭೀಷ್ಮಸ್ಯ ವಿದುರಸ್ಯ ಚ |
ತತೋ ಯಮಕ್ಷಯಂ ಜಗ್ಮುಃ ಸಮಾಸಾದ್ಯೇತರೇತರಮ್ ॥19॥
ಕೌರವರು ನನ್ನ, ಭೀಷ್ಮರ, ವಿದುರನ ನೀತಿಮಾತುಗಳನ್ನು ತಿರಸ್ಕರಿಸಿದರೆಂಬುದನ್ನು ನೀನೂ ಚೆನ್ನಾಗಿ ತಿಳಿದುಕೊಂಡಿರುವೆ. ಆದ್ದರಿಂದ ಅವರೆಲ್ಲರೂ ಪರಸ್ಪರ ಹೊಡೆದಾಡಿ ಯಮನ ಸದನವನ್ನು ಸೇರಿದ್ದಾರೆ.
ಪಂಚೈವ ಪಾಂಡವಾಃ ಶಿಷ್ಟಾ ಹತಾಮಿತ್ರಾ ಹತಾತ್ಮಜಾಃ |
ಧಾರ್ತರಾಷ್ಟ್ರಾಶ್ಚ ನಿಹತಾಃ ಸರ್ವೇ ಸಸುತಬಾಂಧವಾಃ ॥20॥
ಈಗ ಉಳಿದವರು ಐವರು ಪಾಂಡವರು ಮಾತ್ರ. ಧೃತರಾಷ್ಟ್ರನ ಮಕ್ಕಳೆಲ್ಲರೂ ಪುತ್ರ ಮತ್ತು ಬಂಧುಗಳಿಂದ ಸಹಿತರಾಗಿ ಮರಣ ಹೊಂದಿದ್ದಾರೆ.
ವೈಶಂಪಾಯನಃ
ಇತ್ಯುಕ್ತವಚನೇ ಕೃಷ್ಣೇ ಭೃಶಂ ಕ್ರೋಧಸಮನ್ವಿತಃ |
ಉದಂಕಃ ಪ್ರತ್ಯುವಾಚೇದಂ ಕ್ರೋಧಾದುದ್ವೃತ್ಯ ಲೋಚನೇ ॥21॥
ವೈಶಂಪಾಯನ ಶ್ರೀಕೃಷ್ಣನು ಹೀಗೆ ಹೇಳುತ್ತಿರುವಾಗಲೇ ಕೋಪಾವಿಷ್ಟರಾದ ಉದಂಕರು ಕೋಪದಿಂದ ಕಣ್ಣನ್ನು ಅರಳಿಸಿ, ಕೆರಳಿದ ಕಣ್ಣಿನಿಂದಲೇ ಕೃಷ್ಣನನ್ನು ಕುರಿತು ಹೇಳುತ್ತಾರೆ.
ಉದಂಕಃ
ಯಸ್ಮಾಚ್ಛಕ್ತೇನ ತೇ ಕೃಷ್ಣ ನ ತ್ರಾತಾಃ ಕುರುಪಾಂಡವಾಃ |

ಸಂಬಂಧಿನಃ ಪ್ರಿಯಾಸ್ತಸ್ಮಾತ್ ಶಪ್ಸ್ಯೇಹಂ ತ್ವಾಂ ನ ಸಂಶಯಃ ॥22॥
ಉದಂಕ ಸರ್ವಶಕ್ತನಾದ ಶ್ರೀಕೃಷ್ಣನೇ, ನೀನು ಸಂಬಂಧಿಗಳೂ, ಪ್ರೀತಿಪಾತ್ರರೂ ಆಗಿರುವ ಕೌರವಶ್ರೇಷ್ಠರನ್ನು ಏಕೆ ರಕ್ಷಿಸಲಿಲ್ಲ? ಇದರಿಂದ ಕ್ರುದ್ಧನಾದ ನಾನು ನಿನ್ನನ್ನೇ ಶಪಿಸುತ್ತೇನೆ, ಸಂಶಯವೇ ಬೇಡ.
ನ ಚ ವೈ ಪ್ರಸಭಂ ಯಸ್ಮಾತ್ ತೇ ನಿಗೃಹ್ಯ ನಿವರ್ತಿತಾಃ |
ತಸ್ಮಾನ್ಮನ್ಯುಪರೀತಸ್ತ್ವಂ ಶಪ್ಸ್ಯಾಮಿ ಮಧುಸೂದನ ॥23॥
ಮಧುಸೂದನನೇ, ಮಾತು ಕೇಳದಿದ್ದ ಕೌರವರನ್ನು ಬಲಾತ್ಕರಿಸಿಯಾದರೂ ತಡೆಯಬಹುದಾಗಿತ್ತು. ವಿನಾಶದಿಂದ ರಕ್ಷಿಸಬಹುದಾಗಿತ್ತು. ಆದರೆ ನೀನು ಹಾಗೆ ಮಾಡಲಿಲ್ಲ. ಇದರಿಂದ ಕ್ರುದ್ಧನಾದ ನಾನು ನಿನ್ನನ್ನು ಶಪಿಸುತ್ತೇನೆ.
ತ್ವಯಾ ಶಕ್ತೇನ ಹಿ ಸತಾ ಮಿಥ್ಯಾಚಾರೇಣ ಮಾಧವ |
ಪ್ರಮಾಪಿತಾಃ ಕುರುಶ್ರೇಷ್ಠಾ ಯತ್ ತ್ವಯಾ ಸಮುಪೇಕ್ಷಿತಾಃ ॥24॥
ಮಾಧವನೇ, ನೀನು ಯುದ್ಧವನ್ನು ತಡೆಯುವ ಸಾಮರ್ಥ್ಯವುಳ್ಳವನು. ಕ್ರೋಧ ವಶರಾಗಿರುವ ಕೌರವರು ಪರಸ್ಪರವಾಗಿ ಯುದ್ಧ ಮಾಡಿ ಸಾಯುತ್ತಿದ್ದರೂ ಕಪಟ ಬುದ್ಧಿಯಿಂದ ನೀನು ಅವರು ಸಾಯಲೆಂದು ರಕ್ಷಿಸಲು ಉಪೇಕ್ಷಿಸಿದೆ.
ಶ್ರೀಭಗವಾನ್
ಶೃಣು ಮೇ ವಿಸ್ತರೇಣೇದಂ ಯದ್ ವಕ್ಷ್ಯೇ ಭೃಗುನಂದನ |
ಗೃಹಾಣಾನುನಯಂ ಚೈವ ತಪಸ್ವೀ ಹ್ಯಸಿ ಭಾರ್ಗವ ॥25॥
ಶ್ರೀಭಗವಾನ್ ಭಾರ್ಗವನೇ, ನೀನು ತಪಸ್ವಿಯಾಗಿರುವಿ. ಕ್ರೋಧವಶನಾಗಬೇಡ. ನಾನು ಹೇಳುವ ವಿಷಯವನ್ನು ಸಮಾಧಾನಚಿತ್ತದಿಂದ ಪೂರ್ಣವಾಗಿ ಕೇಳಿಸಿಕೊ. ನನ್ನ ಪ್ರಾರ್ಥನೆಯನ್ನು ಸ್ವೀಕರಿಸು.
ಶ್ರುತ್ವಾ ತು ಮೇ ತದಧ್ಯಾತ್ಮಂ ಮುಂಚೇಥಾಃ ಶಾಪಮದ್ಯ ವೈ |
ನ ಚ ಮಾಂ ತಪಸಾಽಲ್ಪೇನ ಶಕ್ನೋತಿ ಶಪಿತುಂ ಭವಾನ್ ॥26॥
ನನ್ನಿಂದ ಅಧ್ಯಾತ್ಮ ಗೀತೆಯನ್ನು ಕೇಳಿಸಿಕೊಂಡ ನೀನು ಶಾಪವನ್ನು ಕೊಡಲು ಮುಂದಾಗುವುದಿಲ್ಲ. ಕೇಳಿಸಿಕೊಂಡ ಬಳಿಕ ಶಾಪ ಕೊಡುವುದು ಯೋಗ್ಯವಾಗಿದೆ. ಯಾವ ಮನುಷ್ಯನೇ ಆಗಲಿ, ತನ್ನ ಅಲ್ಪತಪಸ್ಸಿನಿಂದ ನನ್ನನ್ನು ಶಪಿಸಲಾರನು.
ನ ಚ ತೇ ತಪಸೋ ನಾಶಮಿಚ್ಛಾಮಿ ತಪತಾಂ ವರ |
ತಪಸ್ತೇ ಸುಮಹತ್ ತಪ್ತಂ ಗುರವಶ್ಚಾಪಿ ತೋಷಿತಾಃ ॥27॥
ನಿನ್ನ ತಪಸ್ಸು ವ್ಯರ್ಥವಾಗಿ ನಾಶವಾಗುವುದನ್ನು ನಾನು ಇಚ್ಛಿಸುವುದಿಲ್ಲ. ಅತ್ಯಂತ ತೇಜೋವಿಶಿಷ್ಟವಾದ ತಪಸ್ಸನ್ನು ಮಾಡಿರುವೆ. ನೀನು ಗುರುಜನರನ್ನು ಸೇವಿಸಿ, ಅವರ ಪ್ರೀತಿಗೆ ಪಾತ್ರನಾಗಿರುವೆ.
ಕೌಮಾರಂ ಬ್ರಹ್ಮಚರ್ಯಂ ತೇ ಜಾನಾಮಿ ದ್ವಿಜಸತ್ತಮ |
ದುಃಖಾರ್ಜಿತಸ್ಯ ತಪಸಃ ತಸ್ಮಾನ್ನೇಚ್ಛಾಮಿ ತೇ ವ್ಯಯಮ್ ॥28॥
ಬಾಲ್ಯಾವಸ್ಥೆಯಿಂದಲೇ ಬ್ರಹ್ಮಚರ್ಯನಿಷ್ಠನಾಗಿ ನೀನು ಸಿದ್ಧಿಸಿಕೊಂಡಿರುವ ತಪಸ್ಸಿನ ಬಗ್ಗೆ ನಾನು ಅರಿತಿರುವೆ. ಆದ್ದರಿಂದಲೇ ಕಷ್ಟದಿಂದ ಸಂಪಾದಿಸಿದ ನಿನ್ನ ತಪಸ್ಸಿನ ಫಲವು ನನಗೆ ಶಾಪ ಕೊಡುವ ಮೂಲಕ ನಾಶವಾಗಬಾರದು ಎಂದು ಬಯಸುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಉದಂಕದರ್ಶನಂ ನಾಮ ತ್ರಿಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೂರನೆಯ ಅಧ್ಯಾಯ ಮುಗಿಯಿತು.
* * * * *

ಐವತ್ನಾಲ್ಕನೆಯ ಅಧ್ಯಾಯ

ಕೃಷ್ಣನು ಉದಂಕರನ್ನು ಕುರಿತು ತನ್ನ ಮಹಿಮೆಯನ್ನು ಹೇಳುವ ಮೂಲಕ ಕೌರವರ ನಾಶಕ್ಕೆ ಕಾರಣವಾದುದು ಕೃಷ್ಣನ ಮಾತಿನ ಉಲ್ಲಂಘನೆ. ಸ್ವಯಂಕೃತ ಅಪರಾಧದಿಂದ ಮರಣೋನ್ಮುಖರಾಗಿದ್ದಾರೆ ಎಂದು ತಿಳಿಸಿದುದು.
ಉದಂಕಃ
ಬ್ರೂಹಿ ಕೇಶವ ತತ್ತ್ವೇನ ತ್ವಂ ಮೇಽಧ್ಯಾತ್ಮಮನಿಂದಿತಮ್ |
ಶ್ರುತ್ವಾ ಶ್ರೇಯೋ ವಿಧಾಸ್ಯಾಮಿ ನ ಶಾಪಂ ತೇ ಜನಾರ್ದನ ॥1॥
ಉದಂಕ ಕೇಶವನೇ, ಜನಾರ್ದನನೇ, ನೀನು ನನ್ನನ್ನುಉದ್ದೇಶಿಸಿ ನಿರ್ದುಷ್ಟವಾದ ಅಧ್ಯಾತ್ಮ ತತ್ತ್ವವನ್ನು ಉಪದೇಶಿಸು. ಅದನ್ನು ಕೇಳಿದ ಬಳಿಕ ಯೋಗ್ಯವೆನಿಸಿದಲ್ಲಿ ನಿನ್ನ ಕಲ್ಯಾಣಕ್ಕೆ ಶ್ರೇಯಸ್ಸಿನ ಮಾತುಗಳನ್ನಾದರೂ ಆಡುತ್ತೇನೆ, ಶಾಪವನ್ನು ನೀಡುವುದಿಲ್ಲ.
ಶ್ರೀಭಗವಾನ್
ತಮೋ ರಜಶ್ಚ ಸತ್ವಂ ಚ ವಿದ್ಧಿ ಭಾವಾನ್ ಮದಾಶ್ರಯಾನ್ |
ಸ್ಥಿತಿಸೃಷ್ಟಿಲಯಾಧ್ಯಕ್ಷೋ ವಿಷ್ಣುಬ್ರಹ್ಮೇಶಸಂಜ್ಞತಃ ॥2॥
ಶ್ರೀಭಗವಾನ್ ವಿಪ್ರಶ್ರೇಷ್ಠನೇ, ತಮೋಗುಣ, ರಜೋಗುಣ, ಸತ್ತ್ವಗುಣಗಳು ನನ್ನನ್ನು ಆಶ್ರಯಿಸಿಕೊಂಡಿವೆ ಎಂದು ತಿಳಿದುಕೊ. ಸ್ಥಿತಿ-ಸೃಷ್ಟಿ-ಲಯಗಳಿಗೆ ವಿಷ್ಣು- ಬ್ರಹ್ಮ-ರುದ್ರ ಎನ್ನುವ ಹೆಸರಿನಿಂದ ನಾನೇ ನಿಯಾಮಕನಾಗಿದ್ದೇನೆ.
ಕದಾಚಿತ್ ತಮಸಾ ರುದ್ರೋ ವಿಷ್ಣುಃ ಸತ್ವಗುಣೇ ಸ್ಥಿತಃ |
ರಜಸ್ಯಪಿ ತಥಾ ಬ್ರಹ್ಮಾ ಸ್ವಗುಣಾನ್ಯಗುಣಾವುಭೌ ॥3॥
ಕೆಲವೊಮ್ಮೆ ತಮೋಗುಣದ ಕಾರ್ಯವನ್ನು ರುದ್ರ ನಡೆಸುತ್ತಾನೆ. ಆಗ ಅವನಲ್ಲಿ ರುದ್ರ ಎಂಬ ಹೆಸರಿನಲ್ಲಿ ನಿಂತು ಜಗತ್ತಿನ ಲಯವನ್ನು ಮಾಡುತ್ತೇನೆ. ನಾನು ಸ್ವಯಂ ಸತ್ವಗುಣದಲ್ಲಿ ಸನ್ನಿಹಿತನಾಗಿ ಪಾಲನೆಯಲ್ಲಿ ನಿರತನಾಗಿದ್ದೇನೆ. ರಜೋಗುಣದಲ್ಲಿ ಬ್ರಹ್ಮನನ್ನು ನಿಯೋಜಿಸಿ, ನಾನೇ ಸೃಷ್ಟಿಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದೇನೆ. ಹೀಗೆ ಇತರರಲ್ಲಿರುವ ಗುಣಗಳಿಗೂ, ನನ್ನ

ಗುಣಗಳಿಗೂ ನಾನೇ ನಿಯಾಮಕನಾಗಿದ್ದೇನೆ.
ಪ್ರವಣಾತ್ಮಾ ಚ ಶಬ್ದಾದಿ ತ್ರಿಗುಣಾತ್ಮಾ ಚರಾಚರಮ್ |
ತಥಾ ರುದ್ರಾನ್ ವಸೂನ್ ವಾಽಪಿ ವಿದ್ಧಿ ಮತ್ಪ್ರಭವಾನ್ ದ್ವಿಜ ॥4॥
ಮೂರು ಗುಣಗಳಿಂದ ಸಮಸ್ತ ಚರಾಚರ ಪ್ರಪಂಚವನ್ನು, ಪ್ರಣವಸ್ವರೂಪಿಯಾದ ನಾನು ಶಬ್ದಾದಿ ತನ್ಮಾತ್ರಗಳ ಮೂಲಕ ನಿಯಮಿಸುತ್ತಿದ್ದೇನೆ. ಅದರಂತೆ ರುದ್ರರನ್ನೂ, ವಸುದೇವತೆಗಳನ್ನೂ ನನ್ನ ಪ್ರಭಾವದಿಂದಲೇ ಹುಟ್ಟಿದವರೆಂದು ತಿಳಿದುಕೊ.
ಮಯಿ ಸರ್ವಾಣಿ ಭೂತಾನಿ ಸರ್ವಭೂತೇಷು ಚಾಪ್ಯಹಮ್ |
ಸ್ಥಿತ ಇತ್ಯಭಿಜಾನೀಹಿ ಮಾ ತೇ ಭೂದತ್ರ ಸಂಶಯಃ ॥5॥
ಎಲ್ಲ ಪ್ರಾಣಿಗಳು ನನ್ನನ್ನೇ ಆಶ್ರಯಿಸಿಕೊಂಡಿವೆ. ಎಲ್ಲ ಪ್ರಾಣಿಗಳಿಗೂ ನಾನೇ ಅಂತರ್ಯಾಮಿಯಾಗಿದ್ದೇನೆ. ಈ ವಿಷಯವನ್ನು ಚೆನ್ನಾಗಿ ಮನನ ಮಾಡಿಕೊ. ಯಾವ ಸಂಶಯವೂ ಬೇಡ.
ತಥಾ ದೈತ್ಯಗಣಾನ್ ಸರ್ವಾನ್ ಯಕ್ಷಗಂಧರ್ವರಾಕ್ಷಸಾನ್ |
ವಿಬುಧಾಪ್ಸರಸಶ್ಚೈವ ವಿದ್ಧಿ ಮತ್ಪ್ರಭವಾನ್ ದ್ವಿಜ ॥6॥
ದ್ವಿಜಶ್ರೇಷ್ಠನೇ, ದೈತ್ಯರು, ಯಕ್ಷ-ಗಂಧರ್ವರು, ರಾಕ್ಷಸರು, ನಾಗಗಳು, ಅಪ್ಸರೆಯರು ಇವರೆಲ್ಲರೂ ನನ್ನಿಂದಲೇ ಉತ್ಪನ್ನರಾಗಿದ್ದಾರೆಂದು ತಿಳಿ.
ಸದಸಚ್ಚೈವ ಯತ್ ಪ್ರಾಹುರವ್ಯಕ್ತಂ ವ್ಯಕ್ತಮೇವ ಚ |
ಅಕ್ಷರಂ ಚ ಕ್ಷರಂ ಚೈವ ಸರ್ವಮೇತನ್ಮದಾಶ್ರಯಮ್ ॥7॥
ಜ್ಞಾನಿಗಳು ಸತ್-ಅಸತ್ ಎಂದು ಹೇಳುವ, ವ್ಯಕ್ತ-ಅವ್ಯಕ್ತ ಎಂದು ಹೇಳುವ, ಕ್ಷರ-ಅಕ್ಷರ ಎಂದು ಹೇಳುವ ಈ ಎಲ್ಲವೂ ನನ್ನನ್ನೇ ಆಶ್ರಯಿಸಿಕೊಂಡಿವೆ.
ಯೇ ಚಾಶ್ರಮೇಷು ವೈ ಧರ್ಮಾಶ್ಚತುರ್ಷು ವಿಹಿತಾ ಮುನೇ |
ದೈವತಾನಿ ಚ ಕರ್ಮಾಣಿ ವಿದ್ಧಿ ಸರ್ವಾನ್ ಗುಣಾತ್ಮಕಾನ್ ॥8॥
ಮುನಿಶ್ರೇಷ್ಠನೇ, ಜಗತ್ತಿನಲ್ಲಿ ಪ್ರಸಿದ್ಧಗಳಾದ ನಾಲ್ಕು ಆಶ್ರಮಗಳಲ್ಲಿ ನಾಲ್ಕು ಯಾವ ಧರ್ಮಗಳಿವೆಯೋ ವೇದೋಕ್ತ ಕರ್ಮಗಳಿವೆಯೋ ಅವೆಲ್ಲವೂ ನನ್ನನ್ನೇ ಆಶ್ರಯಿಸಿಕೊಂಡಿವೆ ಎಂದು ತಿಳಿ.
ಅಸಚ್ಚ ಸಚ್ಚೈವ ಚ ಯದ್ ವಿಶ್ವಂ ಸದಸತಃ ಪರಮ್ |
ತತಃ ಪರತರಂ ನಾಸ್ತಿ ದೇವದೇವಾತ್ ಸನಾತನಾತ್ ॥9॥
ಅಸತ್, ಸತ್ ಮತ್ತು ಸದಸತ್, ಇದಕ್ಕಿಂತಲೂ ಆಚೆ ಇರುವ ಜಗತ್ತು - ಈ ಎಲ್ಲದಕ್ಕೂ ನಾನೇ ನಿಯಾಮಕನಾಗಿದ್ದೇನೆ. ಇದಕ್ಕಿಂತ ಅತಿರಿಕ್ತವಾದುದು ಯಾವುದೂ ಇರುವುದಿಲ್ಲ. ದೇವದೇವನೆನಿಸಿದ ಪರತರ ವಸ್ತುವು ನಾನೇ.
ಓಂಕಾರಪ್ರಭವಾನ್ ವೇದಾನ್ ವಿದ್ಧಿ ಮಾ ತ್ವಂ ಭೃಗೂದ್ವಹ |
ತಥೈವ ಯೂಪಂ ಸೋಮಂ ಚ ತ್ರಿದಶಾಪ್ಯಾಯನಂ ಮಖೇ ॥10॥
ಹೋತಾರಮಪಿ ಹವ್ಯಂ ಚ ವಿದ್ಧಿ ಮಾಂ ಭೃಗುನಂದನ |
ಅಧ್ವರ್ಯುಃ ಕಲ್ಪಕೃಚ್ಚಾಪಿ ಹವಿಃ ಪರಮಸಂಸ್ಕೃತಮ್ ॥11॥
ಭೃಗುಶ್ರೇಷ್ಠನೇ, ಓಂಕಾರದಿಂದ ಉತ್ಪತ್ತಿಯನ್ನು ಪಡೆದ ವೇದಗಳು ನನ್ನನ್ನೇ ಬೋಧಿಸುತ್ತಿವೆ ಎಂದು ತಿಳಿ. ಯಜ್ಞದಲ್ಲಿರುವ ಯೂಪ, ಸೋಮ, ಚರು, ದೇವತೆಗಳಿಗೆ ತೃಪ್ತಿಯನ್ನುಂಟು ಮಾಡುವ ಹೋಮ-ಹವನ-ಸಾಮಗ್ರಿ-ಅಧ್ವರ್ಯು- ನಿರ್ಮಾಪಕ-ಶ್ರೇಷ್ಠವಾದ ಸಂಸ್ಕೃತ ಹವಿಸ್ಸು, ಇವೆಲ್ಲವೂ ನನ್ನ ಸನ್ನಿಧಾನವನ್ನು ಹೊಂದಿವೆ ಎಂದು ತಿಳಿ.
ಉದ್ಗಾತಾ ಚಾಪಿ ಮಾಂ ಸ್ತೌತಿ ಗೀತಘೋಷೈರ್ಮಹಾಧ್ವರೇ ॥12॥
ಉಚ್ಚಸ್ವರದಲ್ಲಿ ಯಜ್ಞದಲ್ಲಿ ಗಾನ ಮಾಡುವ ಉದ್ಗಾತೃವು ಸಾಮಗಾನವನ್ನು ಹೇಳುತ್ತಾ ನನ್ನನ್ನೇ ಮಹಾಧ್ವರಗಳಲ್ಲಿ ಸ್ತುತಿಸುತ್ತಾನೆ.
ಪ್ರಾಯಶ್ಚಿತ್ತೇಷು ಮಾಂ ಬ್ರಹ್ಮನ್ ಶಾಂತಿಮಂಗಲವಾಚಕಾಃ |
ಸ್ತುವಂತಿ ವಿಶ್ವಕರ್ಮಾಣಂ ಸತತಂ ದ್ವಿಜಸತ್ತಮಾಃ ॥13॥
ಪ್ರಾಯಶ್ಚಿತ್ತ ಕರ್ಮಗಳಲ್ಲಿ ಮಂಗಳಮಯವಾದ ಶಾಂತಿಸೂಕ್ತವನ್ನು ಹೇಳುವ ಬ್ರಾಹ್ಮಣರು ಜಗತ್ಸೃಷ್ಟಿಕರ್ತನಾದ ನನ್ನನ್ನೇ ಸ್ತುತಿಸುತ್ತಾರೆ.
ವಿದ್ಧಿ ಮೇಽದ್ಯ ಸುತಂ ಧರ್ಮಮಗ್ರಜಂ ದ್ವಿಜಸತ್ತಮ |
ಮಾನಸಂ ದಯಿತಂ ವಿಪ್ರ ಸರ್ವಭೂತಗುಣಾತ್ಮಕಮ್ ॥14॥
ಅತ್ರಾಹಂ ವರ್ತಮಾನೈಶ್ಚ ನಿವೃತ್ತೈಶ್ಚಾಪಿ ಮಾನವೈಃ |
ಬಹುಧಾ ಜಾಯಮಾನೋ ವೈ ವರ್ತೇಯ ದ್ವಿಜಸತ್ತಮ ॥15॥
ಲೋಕಸಂರಕ್ಷಣಾರ್ಥಾಯ ಧರ್ಮಸಂಸ್ಥಾಪನಾಯ ಚ |
ತೈಸ್ತೈರ್ವೇಷೈಶ್ಚ ರೂಪೈಶ್ಚ ತ್ರಿಷು ಲೋಕೇಷು ಭಾರ್ಗವ ॥16॥
ಸಕಲ ಪ್ರಾಣಿಗಳ ವಿಷಯದಲ್ಲಿಯೂ ಕರುಣೆಯ ದೃಷ್ಟಿಯನ್ನು ಬೀರುವ ಧರ್ಮನು ನನ್ನ ಮನಸ್ಸಂಕಲ್ಪದಿಂದ ಹುಟ್ಟಿದ, ನನಗೆ ಪ್ರೀತಿಪಾತ್ರನಾದ ಕಿರಿಯ ಮಗನು ಎಂದು ತಿಳಿದುಕೊ. ಭಾರ್ಗವನೇ, ಜಗತ್ತಿನಲ್ಲಿ ಪ್ರವೃತ್ತಿಧರ್ಮವ್ರತರಾದವರಲ್ಲಿ, ನಿವೃತ್ತಿ ಧರ್ಮ ವ್ರತರಾದವರಲ್ಲಿ ಎಲ್ಲರಿಗೂ ನಿಯಾಮಕನಾಗಿ ನಾನು ಸನ್ನಿಹಿತನಾಗಿರುತ್ತೇನೆ. ನಾನು ಧರ್ಮದ ರಕ್ಷಣೆಗಾಗಿ ಮೂರು ಲೋಕಗಳಲ್ಲಿಯೂ ಅನೇಕ ರೂಪಗಳಿಂದ ಅವತರಿಸಿ, ಆಯಾ ಯೋನಿಗಳಿಗೆ ಅನುಗುಣವಾದ ರೂಪಗಳಿಂದ, ವೇಷಗಳಿಂದ, ವ್ಯವಹಾರಗಳಿಂದ ಧರ್ಮದ ರಕ್ಷಣೆ ಮತ್ತು ಸ್ಥಾಪನೆಗಳನ್ನು ಮಾಡುತ್ತಿದ್ದೇನೆ.
ಅಹಂ ವಿಷ್ಣುರಹಂ ಬ್ರಹ್ಮಾ ಶಕ್ರೋಽಹಂ ಪ್ರಭವಾಪ್ಯಯಃ |

ಭೂತಗ್ರಾಮಸ್ಯ ಸರ್ವಸ್ಯ ಸ್ರಷ್ಟಾ ಸಂಹಾರ ಏವ ಚ ॥17॥
ನಾನೇ ವಿಷ್ಣುವು, ನಾನೇ ಚತುರ್ಮುಖ ಬ್ರಹ್ಮನು, ನಾನೇ ಇಂದ್ರನು. ಎಲ್ಲ ಪ್ರಾಣಿಗಳ ಹುಟ್ಟು-ಸಾವುಗಳಿಗೂ ನಾನೇ ಕಾರಣ. ಸಮಸ್ತ ಪ್ರಾಣಿಸಮುದಾಯವು ನನ್ನಿಂದಲೇ ಹುಟ್ಟು-ಸಾವುಗಳನ್ನು ಹೊಂದುತ್ತಿದೆ.
ವ್ಯಾಖ್ಯಾನ ವಿಶೇಷ ಇಲ್ಲಿ ನಾನೇ ಬ್ರಹ್ಮ, ನಾನೇ ಇಂದ್ರ ಮುಂತಾಗಿ ಕೃಷ್ಣನು ಹೇಳಿದ್ದಾನೆ. ಇಂದ್ರ-ಬ್ರಹ್ಮ ಎನ್ನುವ ನಾಮಗಳಿಂದ ಪ್ರಸಿದ್ಧರಾದ ದೇವತೆಗಳೇ ನಾನು ಎಂದು ಹೇಳಿರುವುದಿಲ್ಲ. ಹೀಗಾಗಿ ಬ್ರಹ್ಮಶಬ್ದವಾಚ್ಯತ್ವ, ಶಕ್ರಶಬ್ದವಾಚ್ಯತ್ವ ಪರಮಾತ್ಮನಲ್ಲಿಯೇ ಇದೆ. ಆಯಾ ದೇವತೆಗಳಲ್ಲಿ ತನ್ನ ಪ್ರಸಿದ್ಧವಾದ ಈ ನಾಮಗಳನ್ನು ಇರಿಸಿ, ಅವರ ಮೂಲಕ ಜಗತ್ತಿನ ವ್ಯಾಪಾರವನ್ನು ನಡೆಸುತ್ತಾನೆ. ಮೂಲಭೂತವಾಗಿ ಬ್ರಹ್ಮನಲ್ಲಿರುವ ಗುಣಗಳಿಗೆ ನಿಯಾಮಕನಾದ ಭಗವಂತನೇ ಬ್ರಹ್ಮ ಎನಿಸಿದ್ದಾನೆ. ರುದ್ರ-ಇಂದ್ರಾದಿಗಳಲ್ಲಿರುವ ಗುಣಗಳಿಗೆ ನಿಯಾಮಕನಾದ ಭಗವಂತನು ಆಯಾ ಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂದು ತಿಳಿಯಬೇಕು.
ಅಧರ್ಮೇ ವರ್ತಮಾನಾನಾಂ ಸರ್ವೇಷಾಮಹಮಚ್ಯುತಃ |
ಧರ್ಮಸ್ಯ ಸೇತುಂ ಬಧ್ನಾಮಿ ಚಲಿತೇ ಚಲಿತೇ ಯುಗೇ ॥18॥
ತಾಸ್ತಾ ಯೋನೀಃ ಪ್ರವಿಶ್ಯಾಹಂ ಪ್ರಜಾನಾಂ ಹಿತಕಾಮ್ಯಯಾ ॥19॥
ಅಧರ್ಮ ಮಾರ್ಗದಲ್ಲಿರುವ ಮನುಷ್ಯರನ್ನು ಶಿಕ್ಷಿಸುವವನು ನಾನೇ. ಧರ್ಮದ ಮರ್ಯಾದೆಯಿಂದ ವರ್ತಿಸುವವರಿಗೂ ನಿಯಾಮಕನು ನಾನೇ. ಧರ್ಮದ ಮರ್ಯಾದೆಯನ್ನು ರಕ್ಷಿಸುತ್ತಾ, ಯುಗದ ಪರಿವರ್ತನವು ಆದಾಗಲೆಲ್ಲ ಆಯಾ ಯೋನಿಗಳಲ್ಲಿ ಅದಕ್ಕನುಗುಣವಾದ ಶರೀರವನ್ನು ಧಾರಣೆ ಮಾಡಿಕೊಂಡು, ಧರ್ಮದ ಮರ್ಯಾದೆಯನ್ನು ಕಾಪಾಡುತ್ತೇನೆ. ಇದರಿಂದ ಪ್ರಜೆಗಳು ಹಿತವನ್ನು ಹೊಂದುತ್ತಿದ್ದಾರೆ.
ಯದಾ ತ್ವಹಂ ದೇವಯೋನೌ ವರ್ತೇ ಭೃಗುಕುಲೋದ್ವಹ |
ತದಾಽಹಂ ದೇವವತ್ ಸರ್ವಮಾಚರಾಮಿ ನ ಸಂಶಯಃ ॥20॥
ಭಾರ್ಗವನೇ, ನಾನು ದೇವಯೋನಿಯಲ್ಲಿ ಅವತರಿಸಿದಾಗ ದೇವತೆಯಂತೆ ವರ್ತಿಸುತ್ತೇನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಯದಾ ಗಂಧರ್ವಯೋನೌ ತು ವರ್ತೇಽಹಂ ಭೃಗುನಂದನ |
ತದಾ ಗಂಧರ್ವವಚ್ಚೇಷ್ಟಾಃ ಸರ್ವಾಶ್ಚೇಷ್ಟಾಮಿ ಭಾರ್ಗವ ॥21॥
ನಾನು ಗಂಧರ್ವಯೋನಿಯಲ್ಲಿ ಅವತರಿಸಿದಾಗ ಗಂಧರ್ವನಂತೆಯೇ ಸಮಸ್ತ ವ್ಯವಹಾರಗಳನ್ನು ನಡೆಸುತ್ತೇನೆ. ಇದರಲ್ಲಿಯೂ ಸಂಶಯವಿಲ್ಲ.
ನಾಗಯೋನೌ ಯದಾ ವರ್ತೇ ತದಾ ಚೇಷ್ಟಾ ತು ನಾಗವತ್ |
ಯಕ್ಷರಾಕ್ಷಸಯೋನೌ ತು ತಥಾವೃತ್ತಿಶ್ಚರಾಮ್ಯಹಮ್ ॥22॥
ನಾನು ನಾಗಯೋನಿಯಲ್ಲಿ ಅವತರಿಸಿದಾಗ ನಾಗನಂತೆ, ಯಕ್ಷ-ರಾಕ್ಷಸರ ಯೋನಿಯಲ್ಲಿ ಹುಟ್ಟಿದಾಗ ಯಕ್ಷ-ರಾಕ್ಷಸರಂತೆಯೇ ವ್ಯವಹರಿಸುತ್ತೇನೆ.
ಮಾನುಷ್ಯೇ ವರ್ತಮಾನೇ ತು ಕೃಪಣಂ ಯಾಚಿತಾ ಮಯಾ |
ನ ಚ ತೇ ಜಾತಸಮ್ಮೋಹಾ ವಚೋ ಗೃಹ್ಣಂತಿ ಮೇ ಹಿತಮ್ ॥23॥
ಈಗ ಮನುಷ್ಯಯೋನಿಯಲ್ಲಿ ಅವತರಿಸಿದ್ದೇನೆ. ಆದ್ದರಿಂದ ಮನುಷ್ಯಸಹಜವಾದ ಬುದ್ಧಿಯಿಂದಲೇ ಕೌರವರ ಬಳಿ ಹೋಗಿ ಸಂಧಿ ಮಾಡಿಕೊ ಎಂದು ದೈನ್ಯದಿಂದಲೇ ಪ್ರಾರ್ಥಿಸಿದೆ. ಆದರೆ ಮೋಹಗ್ರಸ್ಥರಾದ ಅವರು ನನ್ನ ಹಿತೋಪದೇಶವನ್ನು, ಸಲಹೆಯನ್ನು ಸ್ವೀಕರಿಸಲಿಲ್ಲ.
ಭಯಂ ಚ ಮಹದುದ್ದಿಶ್ಯ ತ್ರಾಸಿತಾಃ ಕುರವೋ ಮಯಾ |
ಕ್ರುದ್ಧೇನ ಭೂತ್ವಾ ತು ಪುನರ್ಯಥಾವದಭಿಗರ್ಹಿತಾಃ ॥24॥
ತೇಽಧರ್ಮೇಣೇಹ ಸಂಯುಕ್ತಾಃ ಪರೀತಾಃ ಕಾಲಧರ್ಮಣಾ |
ಧರ್ಮೇಣ ನಿಹತಾ ಯುದ್ಧೇ ಗತಾಃ ಸ್ವರ್ಗಂ ನ ಸಂಶಯಃ ॥25॥
ಯುದ್ಧದ ಪರಿಣಾಮವಾಗಿ ಮುಂದೆ ಒದಗುವ ಭಯವನ್ನು ನಿರೂಪಿಸಿ ಕೌರವನನ್ನು ಭಯಪಡಿಸಿದೆ. ಸಿಟ್ಟಿನಿಂದಲೇ ಯುದ್ಧದ ದುಷ್ಪರಿಣಾಮಗಳನ್ನು ದೃಷ್ಟಾಂತ ಪೂರ್ವಕ ವಿವರಿಸಿದೆ. ಆದರೂ ಅಧರ್ಮಶೀಲರಾದ, ಕಾಲಗ್ರಸ್ತರಾದ ಅವರಿಗೆ ನನ್ನ ಹಿತೋಪದೇಶ ರುಚಿಸಲಿಲ್ಲ. ಯುದ್ಧಧರ್ಮದಿಂದಲೇ ಅವರೆಲ್ಲರೂ ಪಾಂಡವರಿಂದ ವಧ್ಯರಾಗಿ ಸ್ವರ್ಗ ಸೇರಿದ್ದಾರೆ. ಇದರಲ್ಲಿ ಯಾವ ಸಂಶಯವೂ ಬೇಡ.
ಲೋಕೇಷು ಪಾಂಡವಾಃ ಖ್ಯಾತಿಂ ಗಮಿಷ್ಯಂತಿ ದ್ವಿಜೋತ್ತಮ |
ಏತತ್ ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ॥26॥
ದ್ವಿಜಶ್ರೇಷ್ಠನೇ, ಪಾಂಡವರು ಧರ್ಮಾಚರಣೆಯಿಂದ ಮೂರು ಲೋಕದಲ್ಲಿಯೂ ವಿಖ್ಯಾತರು. ನೀನು ಹೇಳಿದ ಪ್ರಶ್ನೆಗೆ ಅನುಸಾರವಾಗಿ ಎಲ್ಲವನ್ನೂ ವಿವರಿಸಿರುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕೌರವಾಪರಾಧಕಥನಂ ನಾಮ ಚತುಃಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೈದನೆಯ ಅಧ್ಯಾಯ
ಕೃಷ್ಣನು ಉದಂಕನಿಗೆ ವಿಶ್ವರೂಪವನ್ನು ತೋರಿಸುವ ಮೂಲಕ ಮರುಭೂಮಿಯಲ್ಲಿ ಬಾಯಾರಿಕೆಯಾದಾಗ ನೀರು ಸಿಗಲೆಂದು

ವರವನ್ನು ಕೊಟ್ಟಿದುದು. ಕೃಷ್ಣನು ಉದಂಕನಿಗೆ ಅಮೃತವನ್ನು ನೀಡು ಎಂದು ಇಂದ್ರನಿಗೆ ಹೇಳಿದುದು. ಒಂದು ಬಾರಿ ಕಾಡಿನ ಮಧ್ಯದಲ್ಲಿ ಬಾಯಾರಿದ ಉದಂಕನಿಗೆ ಇಂದ್ರನು ಚಂಡಾಲವೇಷದಿಂದ ಆಗಮಿಸಿ, ನೀರನ್ನು ಸ್ವೀಕರಿಸು ಎಂದು ಪ್ರಾರ್ಥಿಸಿದಾಗ, ಉದಂಕನು ಇಂದ್ರನನ್ನು ಚಂಡಾಲನೆಂದು ಭಾವಿಸಿ, ಅಮೃತಮಯವಾದ ಜಲವನ್ನು ನಿರಾಕರಿಸಿದುದು. ನಂತರ ಚಂಡಾಲ ರೂಪನಾದ ಇಂದ್ರನು ಅದೃಶ್ಯನಾಗಲು ದುಃಖಿತನಾದ ಉದಂಕನನ್ನು ಕುರಿತು ಅಲ್ಲೇ ಇರುವ ಕೃಷ್ಣನು ಇಂದ್ರ ಮಾಡಿದ ವಂಚನೆಯನ್ನು ತಿಳಿಸಿ, ಮರು ಪ್ರದೇಶದಲ್ಲಿ ನೀರು ಸಿಗುವಂತಹ ವರವನ್ನು ನೀಡಿದುದು.

ಉದಂಕಃ

ಅಭಿಜಾನಾಮಿ ಜಗತಃ ಕರ್ತಾರಂ ತ್ವಾಂ ಜನಾರ್ದನ |
ನೂನಂ ಭವತ್ಪ್ರಸಾದೋಽಯಮಿತಿ ಮೇ ನಾತ್ರ ಸಂಶಯಃ ॥1॥

ಉದಂಕ ಜನಾರ್ದನನೇ, ನೀನೇ ಜಗತ್ತಿನ ಕರ್ತೃ ಎಂಬುದನ್ನು ನಾನು ಚೆನ್ನಾಗಿ ತಿಳಿದಿದ್ದೇನೆ. ನಿನ್ನಿಂದ ಅಧ್ಯಾತ್ಮ ಉಪದೇಶವನ್ನು ನಾನು ಪಡೆದದ್ದು ಪರಮಾನುಗ್ರಹವೆಂದು ಭಾವಿಸುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

ಚಿತ್ತಂ ಚ ಸುಪ್ರಸನ್ನಂ ಮೇ ತ್ವದ್ಭಾವಗತಮಚ್ಯುತ |
ವಿನಿವೃತ್ತಶ್ಚ ಮೇ ಶಾಪ ಇತಿ ವಿದ್ಧಿ ಯದೂತ್ತಮ ॥2॥

ಯದುಶ್ರೇಷ್ಠನೇ, ನಿನ್ನ ಮೇಲಿನ ಭಕ್ತಿಯಿಂದ ತುಂಬಿರುವ ನನ್ನ ಮನಸ್ಸು ಈಗ ಪ್ರಸನ್ನತೆಯನ್ನು ಪಡೆದಿದೆ. ನಿನ್ನನ್ನು ಶಪಿಸಲು ಬಯಸುತ್ತಿಲ್ಲ.

ಯದಿ ತ್ವನುಗ್ರಹಂ ಕಂಚಿತ್ ತ್ವತ್ತೋಽರ್ಹೋಽಹಂ ಜನಾರ್ದನ |
ದ್ರಷ್ಟುಮಿಚ್ಛಾಮಿ ತೇ ರೂಪಂ ವೈಷ್ಣವಂ ಮಾಂ ನಿದರ್ಶಯ ॥3॥

ಜನಾರ್ದನನೇ, ನಿನ್ನ ಅನುಗ್ರಹವನ್ನು ಪಡೆಯುವ ಯೋಗ್ಯತೆ ನನ್ನಲ್ಲಿ ಅಲ್ಪವಾದರೂ ಇದ್ದಲ್ಲಿ ನಿನ್ನ ವಿಶ್ವರೂಪವನ್ನು ನೋಡಲು ಬಯಸುತ್ತೇನೆ. ಅಂತಹ ವಿಶ್ವರೂಪವನ್ನು ತೋರಿಸು.

ವೈಶಂಪಾಯನಃ

ತತಃ ಸ ತಸ್ಮೈ ಪ್ರೀತಾತ್ಮಾ ದರ್ಶಯಾಮಾಸ ತದ್ ವಪುಃ |
ಶಾಶ್ವತಂ ವೈಷ್ಣವಂ ಧೀಮಾನ್ ಯದ್ ದದರ್ಶ ಧನಂಜಯಃ ॥4॥

ವೈಶಂಪಾಯನ ಜನಮೇಜಯನೇ, ಉದಂಕನು ಹೀಗೆ ಪ್ರಾರ್ಥಿಸಿದಾಗ ಧೀಮಂತನಾದ ಉದಂಕನ ಮೇಲೆ ಪ್ರೀತನಾದ ಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನೇ ಉದಂಕನಿಗೂ ತೋರಿಸಿದನು.

ಸ ದದರ್ಶ ಮಹಾತ್ಮಾನಂ ವಿಶ್ವರೂಪಂ ಮಹಾಭುಜಮ್ |
ವಿಸ್ಮಯಂ ಚ ಯಯೌ ವಿಪ್ರಸ್ತದ್ ದೃಷ್ಟ್ವಾ ರೂಪಮೈಶ್ವರಮ್ ॥5॥

ಉದಂಕನು ಮಹಾಭುಜಗಳಿಂದ ಕೂಡಿರುವ ಸಮಸ್ತ ಸೂರ್ಯಪ್ರಕಾಶನಾದ, ಸಮಸ್ತ ದಿಕ್ಕುಗಳನ್ನು ಬೆಳಗಿಸುತ್ತಿರುವ, ಯಜ್ಞೇಶ್ವರನಂತೆ ದೇದೀಪ್ಯಮಾನವಾಗಿರುವ ವಿಶ್ವರೂಪವನ್ನು ನೋಡಿದನು.

ಉದಂಕಃ

ನಮೋ ನಮಸ್ತೇ ಸರ್ವಾತ್ಮನ್ ನಾರಾಯಣ ಪರಾತ್ಪರ |
ಪರಮಾತ್ಮನ್ ಪದ್ಮನಾಭ ಪುಂಡರೀಕಾಕ್ಷ ಮಾಧವ ॥6॥

ಉದಂಕ ಎಲ್ಲರ ಅಂತರ್ಯಾಮಿಯಾದ, ಪರಾತ್ಪರನೆನಿಸಿದ ನಾರಾಯಣನೇ ನಿನಗೆ ನಮಸ್ಕಾರ. ಪದ್ಮನಾಭನೇ, ಮಾಧವನೇ, ಪುಂಡರೀಕಾಕ್ಷನೇ, ಶ್ರೇಷ್ಠ ಚೇತನನೇ ನಿನಗೆ ನಮಸ್ಕಾರ.

ಹಿರಣ್ಯಗರ್ಭರೂಪಾಯ ಸಂಸಾರೋತ್ತಾರಣಾಯ ಚ |
ಪುರುಷಾಯ ಪುರಾಣಾಯ ಚಾಂತರ್ಯಾಮಾಯ ತೇ ನಮಃ ॥7॥

ಹಿರಣ್ಯಗರ್ಭನೆನಿಸಿದವನೇ, ಸಂಸಾರದಿಂದ ಉದ್ಧರಿಸುವವನೇ, ಪುರಾಣ ಪುರುಷನೇ, ಅಂತರ್ಯಾಮಿಯೇ ನಿನಗೆ ನಮಸ್ಕಾರ.

ಅವಿದ್ಯಾತಿಮಿರಾದಿತ್ಯಂ ಭವವ್ಯಾಧಿಮಹೌಷಧಿಮ್ |
ಸಂಸಾರಾರ್ಣವಪಾರಂ ತ್ವಾಂ ಪ್ರಣಮಾಮಿ ಗತಿರ್ಭವ ॥8॥

ಅವಿದ್ಯೆ ಎಂಬ ಕತ್ತಲೆಗೆ ಸೂರ್ಯನಂತಿರುವವನೇ, ಸಂಸಾರವೆಂಬ ವ್ಯಾಧಿಗೆ ದಿವ್ಯೌಷಧಿಯಂತಿರುವವನೇ, ಸಂಸಾರವೆಂಬ ಸಾಗರದಿಂದ ದಾಟಿಸುವ ನಿನ್ನನ್ನು ನಮಸ್ಕರಿಸುತ್ತೇನೆ. ನನಗೆ ನೀನೇ ಗತಿ.

ಸರ್ವವೇದೈಕವೇದ್ಯಾಯ ಸರ್ವದೇವಮಯಾಯ ಚ |
ವಾಸುದೇವಾಯ ನಿತ್ಯಾಯ ನಮೋ ಭಕ್ತಪ್ರಿಯಾಯ ತೇ ॥9॥

ಸಮಸ್ತ ವೇದಗಳಿಂದ ತಿಳಿಯಲ್ಪಡುವವನೇ, ಸರ್ವದೇವಮಯನೇ, ವಾಸುದೇವನೇ, ನಿತ್ಯನೇ, ಭಕ್ತಪ್ರಿಯನೇ ನಿನಗೆ ನಮಸ್ಕಾರ.

ದಯಯಾ ದುಃಖಮೋಹಾನ್ಮಾಂ ಸಮುದ್ಧರ್ತುಮಿಹಾರ್ಹಸಿ |
ಕರ್ಮಭಿರ್ಬಹುಭಿಃ ಪಾಪೈರ್ಬದ್ಧಂ ಪಾಹಿ ಜನಾರ್ದನ ॥10॥

ದುಃಖದಿಂದ ಮೋಹಿತನಾದ ನಾನು ತಿಳಿಯದೆ ಏನನ್ನೋ ಹೇಳಿದೆ. ನನ್ನನ್ನು ಉದ್ಧರಿಸಲು ನೀನು ಅರ್ಹನಾಗಿದ್ದಿ. ಅನೇಕ ಪಾಪಕರ್ಮಗಳಿಂದ ಬಂಧಿತನಾದ ನನ್ನನ್ನು ಉದ್ಧರಿಸು ಜನಾರ್ದನ.

ವಿಶ್ವರೂಪ ನಮಸ್ತೇಽಸ್ತು ಯಸ್ಯ ತೇ ರೂಪಮೈಶ್ವರಮ್ ॥11॥

ವಿಶ್ವರೂಪನೇ ನಿನಗೆ ನಮಸ್ಕಾರ. ನಿನ್ನ ಐಶ್ವರ್ಯರೂಪವನ್ನು ನಾನು ನೋಡಿದ್ದೇನೆ.

ಪದ್ಭ್ಯಾಂ ತೇ ಪೃಥಿವೀ ವ್ಯಾಪ್ತಾ ಶಿರಸಾ ಚಾವೃತಂ ನಭಃ ॥12॥

ನಿನ್ನ ಪಾದಗಳಿಂದ ಪೃಥಿವಿಯು ವ್ಯಾಪಿಸಿದೆ. ಶಿರಸ್ಸಿನಿಂದ ಅಂತರಿಕ್ಷ ಲೋಕವು ಆವೃತವಾಗಿದೆ.

ದ್ಯಾವಾಪೃಥಿವ್ಯೋರ್ಯನ್ಮಧ್ಯಂ ಜಠರೇಣ ತದಾವೃತಮ್ |
ಭುಜಾಭ್ಯಾಮಾವೃತಾಶ್ಚಾಶಾಸ್ತ್ವಮಿದಂ ಸರ್ವಮಚ್ಯುತ ॥13॥
ದ್ಯುಲೋಕ ಪೃಥಿವಿ ಲೋಕಗಳ ಮಧ್ಯೆ ಇರುವ ಅಂತರಿಕ್ಷಲೋಕವು ನಿನ್ನ ಉದರದಿಂದ ಆವೃತವಾಗಿದೆ. ನಿನ್ನ ಭುಜಗಳಿಂದ ದಿಕ್ಕುಗಳೆಲ್ಲವೂ ತುಂಬಿವೆ. ಜಗತ್ತಿನಲ್ಲಿ ನೀನೇ ವ್ಯಾಪಕನಾದವನು. ನೀನೇ ಅಚ್ಯುತ.
ಸಂಹರಸ್ವ ಪುನರ್ದೇವ ರೂಪಮಕ್ಷಯ್ಯಮುತ್ತಮಮ್ |
ಪುನಸ್ತ್ವಾಂ ಸ್ವೇನ ರೂಪೇಣ ದ್ರಷ್ಟುಮಿಚ್ಛಾಮಿ ಶಾಶ್ವತಮ್ ॥14॥
ನಿನ್ನ ಈ ಅಕ್ಷಯವಾದ, ಉತ್ತಮವಾದ ರೂಪವನ್ನು ದೇವನೇ ಉಪಸಂಹರಿಸು. ನಿನ್ನ ಮೊದಲಿನ ರೂಪವನ್ನೇ ನೋಡಬಯಸುತ್ತೇನೆ.
ವೈಶಂಪಾಯನಃ
ತಮುವಾಚ ಪ್ರಸನ್ನಾತ್ಮಾ ಗೋವಿಂದೋ ಜನಮೇಜಯ |
ವರಂ ವೃಣೀಷ್ವೇತಿ ತದಾ ತಮುದಂಕೋಽಬ್ರವೀದಿದಮ್ ॥15॥
ವೈಶಂಪಾಯನ ಜನಮೇಜಯನೇ, ಗೋವಿಂದನು ಪ್ರಸನ್ನನಾಗಿ ಉದಂಕನನ್ನು ಕುರಿತು ಹೇಳಿದನು ಉದಂಕನೇ, ನಾನು ನಿನಗೆ ವರವನ್ನು ಕೊಡುತ್ತೇನೆ, ಕೇಳಿಕೊ. ಹೀಗೆ ಹೇಳಿದಾಗ ಉದಂಕನು ಈ ಮಾತನ್ನು ಹೇಳಿದನು.
ಉದಂಕಃ
ಪರ್ಯಾಪ್ತ ಏಷ ಏವಾದ್ಯ ವರಸ್ತ್ವತ್ತೋ ಮಹಾದ್ಯುತೇ |
ಯತ್ ತೇ ರೂಪಮಿದಂ ಕೃಷ್ಣ ಪಶ್ಯಾಮಿ ಪ್ರಭವಾಪ್ಯಯಮ್ ॥16॥
ಉದಂಕ ಶ್ರೀಕೃಷ್ಣನೇ, ಮಹಾದ್ಯುತಿಯೇ, ಪುರುಷೋತ್ತಮನೇ, ನಿನ್ನ ಅನುಗ್ರಹದಿಂದ ನಿನ್ನ ದಿವ್ಯವಾದ ರೂಪವನ್ನು ನಾನು ಕಂಡೆನಲ್ಲವೇ! ನೀನು ನೀಡಿದ ಈ ವರವೇ ಸಾಕು. ಸೃಷ್ಟಿ-ಸಂಹಾರನಿಯಾಮಕವಾದ ನಿನ್ನ ರೂಪದಿಂದಲೇ ತೃಪ್ತಿಯನ್ನು ಹೊಂದಿದ್ದೇನೆ.
ವೈಶಂಪಾಯನಃ
ತಮಬ್ರವೀತ್ ಪುನಃ ಕೃಷ್ಣೋ ಮಾ ತ್ವಮತ್ರ ವಿಚಾರಯ |
ಅವಶ್ಯಮೇತತ್ ಕರ್ತವ್ಯಮಮೋಘಂ ದರ್ಶನಂ ಮಮ ॥17॥
ವೈಶಂಪಾಯನ ಈ ರೀತಿ ನುಡಿದ ಉದಂಕನನ್ನು ಕುರಿತು ಕೃಷ್ಣನು ಹೇಳುತ್ತಾನೆ- ಉದಂಕನೇ, ನೀನು ನನ್ನ ವಿಷಯದಲ್ಲಿ ಏನೂ ಚಿಂತಿಸಬೇಡ. ನನ್ನ ವಿಶ್ವರೂಪವು ಅಮೋಘವಾದುದು. ಅಂತಹ ನನ್ನ ಬಳಿ ವರವನ್ನು ಬಯಸುವುದು ಕರ್ತವ್ಯವೇ ಆಗಿದೆ.
ಉದಂಕಃ
ಅವಶ್ಯಂ ಕರಣೀಯಂ ಚೇದ್ ಯದೇವಂ ಮನ್ಯಸೇ ವಿಭೋ |
ತೋಯಮಿಚ್ಛಾಮಿ ಯತ್ರೇಷ್ಟಂ ಮರುಷ್ವೇತದ್ಧಿ ದುರ್ಲಭಮ್ ॥18॥
ಉದಂಕ ಪ್ರಭುವೇ, ಅವಶ್ಯವಾಗಿ ವರವನ್ನು ಬೇಡಲೇಬೇಕು ಎನ್ನುವುದಾದರೆ ಏನು ಬೇಡಬೇಕು ಎಂದು ಯೋಚಿಸಿದಾಗ, ನಾನು ಬಯಸಿದ ಜಾಗದಲ್ಲಿ ನೀರು ದೊರೆಯಲೆಂದು ಅಪೇಕ್ಷಿಸುತ್ತೇನೆ. ಈ ಮರುಭೂಮಿಯಲ್ಲಿ ನೀರು ಅತ್ಯಂತ ದುರ್ಲಭವಾಗಿದೆ.
ವೈಶಂಪಾಯನಃ
ತತಃ ಸಂಹೃತ್ಯ ತತ್ ತೇಜಃ ಪ್ರೋವಾಚೋದಂಕಮೀಶ್ವರಃ |
ಏಷ್ಟವ್ಯೇ ಸತಿ ಚಿಂತ್ಯೋಽಹಮಿತ್ಯುಕ್ತ್ವಾ ದ್ವಾರಕಾಂ ಯಯೌ ॥19॥
ವೈಶಂಪಾಯನ ಜನಮೇಜಯನೇ, ಉದಂಕನು ಹೀಗೆ ಪ್ರಾರ್ಥಿಸಿದ ಬಳಿಕ ಕೃಷ್ಣನು ತನ್ನ ತೇಜೋಮಯವಾದ ವಿಶ್ವರೂಪವನ್ನು ಉಪಸಂಹರಿಸಿ ಉದಂಕನಿಗೆ ಹೇಳುತ್ತಾನೆ- ಮುನಿಯೇ, ನಿನಗೆ ಯಾವಾಗ ನೀರಿನ ಬಯಕೆ ಹುಟ್ಟುತ್ತದೋ ಆಗ ನನ್ನನ್ನು ಸ್ಮರಿಸಿಕೊ. ಹೀಗೆ ನುಡಿದು ದ್ವಾರಕೆಯತ್ತ ಚಿತ್ತ ಬೆಳೆಸಿದನು.
ತತಃ ಕದಾಚಿದ್ ಭಗವಾನ್ ಉದಂಕಸ್ತೋಯಕಾಂಕ್ಷಯಾ |
ತೃಷಿತಃ ಪರಿಚಕ್ರಾಮ ಮರೌ ಸಸ್ಮಾರ ಚಾಚ್ಯುತಮ್ ॥20॥
ಕೆಲವು ದಿನಗಳ ಬಳಿಕ ಪೂಜ್ಯನಾದ ಉದಂಕನು ಬಾಯಾರಿದಾಗ, ನೀರಿನ ಬಯಕೆಯಿಂದ ಮರುಭೂಮಿಯಲ್ಲಿ ನೀರಿಗಾಗಿ ಹಪಹಪಿಸುತ್ತಾ ಕೃಷ್ಣನನ್ನು ಸ್ಮರಿಸಿದನು.
ತತೋ ದಿಗ್ವಾಸಸಂ ಧೀಮಾನ್ ಮಾತಂಗಂ ಮಲಪಂಕಿನಮ್ |
ಅಪಶ್ಯತ ಮರೌ ತಸ್ಮಿನ್ ಶ್ವಗಣೈಃ ಪರಿವಾರಿತಮ್ ॥21॥
ಆ ಪ್ರಸಂಗದಲ್ಲಿಯೇ ಧೀಮಂತನಾದ ಉದಂಕನು ದಿಗಂಬರನಾದ, ಕೆಸರಿನಿಂದ ಆವೃತನಾದ, ನಾಯಿಗಳಿಂದ ಸುತ್ತುವರಿದ ಒಬ್ಬ ಚಂಡಾಲನನ್ನು ಆ ಪರಿಸರದಲ್ಲಿ ಕಂಡನು.
ಭೀಷಣಂ ಬದ್ಧನಿಸ್ತ್ರಿಂಶಂ ಬಾಣಕಾರ್ಮುಕಧಾರಿಣಮ್ |
ತಸ್ಯಾಧಃ ಸ್ರೋತಸೋಽಪಶ್ಯದ್ ವಾರಿ ಭೂರಿ ದ್ವಿಜೋತ್ತಮಃ ॥22॥
ಅವನು ನೋಡಲು ಭಯಂಕರವಾಗಿ ಕಾಣಿಸುತ್ತಿದ್ದನು. ಸೊಂಟಕ್ಕೆ ಕತ್ತಿಯನ್ನು ಸಿಗಿಸಿ, ಧನುರ್ಬಾಣಗಳನ್ನು ಧರಿಸಿದ್ದನು. ಅವನು ನಿಂತಿರುವ ಜಾಗದಲ್ಲಿ ಒಂದು ಜಲಧಾರೆಯು ಹರಿಯುತ್ತಿರುವುದನ್ನು ಕಂಡನು.
ಸ್ಮರಂತಂ ಸ ಚ ತಂ ಪ್ರಾಹ ಮಾತಂಗಃ ಪ್ರಹಸನ್ನಿವ ॥23॥
ಚಂಡಾಲನಾದರೂ ಪಾತ್ರೆಯನ್ನು ಹಿಡಿದು ಮೂತ್ರದಂತೆ ಆ ಜಲಧಾರೆಯನ್ನು ತೋರಿಸಿದ್ದನು. ಇವನೂ ಹಾಗೆ ಭಾವಿಸಿದನು. ಆ ದ್ವಿಜಶ್ರೇಷ್ಠನಾದ ಉದಂಕನು ಕೃಷ್ಣನನ್ನು ಸ್ಮರಿಸಿದ ಕೂಡಲೇ ಪ್ರತ್ಯಕ್ಷನಾಗಿರುವ ಈ ಚಂಡಾಲನನ್ನು ಕಂಡಿದ್ದನು. ಆ ಚಂಡಾಲನಾದರೂ ಮಂದಹಾಸವನ್ನು ಬೀರುತ್ತಾ ಉದಂಕನಿಗೆ ಹೇಳಿದನು.

ಮಾತಂಗಃ
ಏಹ್ಯುದಂಕ ಪ್ರತೀಚ್ಛಸ್ವ ಮತ್ತೋ ವಾರಿ ಭೃಗೂದ್ವಹ |
ಕೃಪಾ ಹಿ ಮೇ ಸುಮಹತೀ ತ್ವಾಂ ದೃಷ್ಟ್ವಾ ತೃಟ್ಸಮನ್ವಿತಮ್ ॥24॥
ಮಾತಂಗ ಭೃಗುಶ್ರೇಷ್ಠನೇ, ಉದಂಕನೇ, ಈಚೆ ಬಾ. ನಾನು ಕೊಡುವ ನೀರನ್ನು ಸ್ವೀಕರಿಸು. ಬಾಯಾರಿಕೆಯಿಂದ ಬಳಲಿದ ನಿನ್ನನ್ನು ಕಂಡು ನಿನ್ನ ಬಗ್ಗೆ ಅತಿಶಯವಾದ ದಯೆಯು ನನ್ನಲ್ಲಿ ಉಂಟಾಗಿದೆ.
ವೈಶಂಪಾಯನಃ
ಇತ್ಯುಕ್ತಸ್ತೇನ ಸ ಮುನಿಃ ತತ್ತೋಯಂ ನಾಭ್ಯನಂದತ |
ಚುಕೋಪ ಚ ಸ ತಂ ಧೀಮಾನ್ ವಾಗ್ಭಿರುಗ್ರಾಭಿರಚ್ಯುತಮ್ ॥25॥
ವೈಶಂಪಾಯನ ಮಾತಂಗನು ಅರ್ಥಾತ್ ಚಂಡಾಲನು ಹೀಗೆ ಹೇಳಿದರೂ ಉದಂಕನು ಆ ನೀರನ್ನು ಸ್ವೀಕರಿಸಲಿಲ್ಲ. ಸ್ಮರಿಸಿದ ಕೂಡಲೇ ನೀರು ಸಿಗುವಂತೆ ಮಾಡುತ್ತೇನೆ ಎಂದು ಕೃಷ್ಣನು ವರವನ್ನು ಕೊಟ್ಟು, ಈಗ ಚಂಡಾಲನ ಮೂಲಕ ನೀರನ್ನು ಒದಗಿಸುತ್ತಿರುವುದನ್ನು ಕಂಡ ಉದಂಕನು ಕೃಷ್ಣನನ್ನೇ ಕಠೋರವಾದ ಮಾತುಗಳಿಂದ ನಿಂದಿಸಿದನು.
ಪುನಃ ಪುನಶ್ಚ ಮಾತಂಗಃ ಪಿಬಸ್ವೇತಿ ತಮಬ್ರುವೀತ್ |
ನ ಚಾಪಿಬತ್ ಸ ಚ ಕ್ರೋಧಾತ್ ಕ್ಷುಭಿತೇನಾಂತರಾತ್ಮನಾ ॥26॥
ಆದರೆ ಚಂಡಾಲನು ಮಾತ್ರ ಉದಂಕನನ್ನು ಕುರಿತು ಪುನಃ ಪುನಃ ನೀರನ್ನು ಕುಡಿ, ನೀರನ್ನು ಕುಡಿ ಎಂದು ಹೇಳುತ್ತಿದ್ದನು. ಆದರೂ ಉದಂಕನು ನೀರನ್ನು ಕುಡಿಯಲಿಲ್ಲ. ಕೋಪವನ್ನೇ ಹೊಂದಿದ್ದನು. ಅವನ ಮನಸ್ಸು ಕ್ಷುಬ್ಧವಾಯಿತು.
ಸ ತಥಾ ನಿಶ್ಚಯಾತ್ ತೇನ ಪ್ರತ್ಯಾಖ್ಯಾತೋ ಮಹಾಮನಾಃ |
ಶ್ವಭಿಃ ಸಹ ಮಹಾರಾಜ ತತ್ರೈವಾಂತರಧೀಯತ ॥27॥
ಮಹಾತ್ಮನಾದ ಉದಂಕನು ನೀರನ್ನು ಕುಡಿಯಲೇಬಾರದೆಂದು ನಿಶ್ಚಯಿಸಿಕೊಂಡು ಚಂಡಾಲನ ಮಾತುಗಳನ್ನು ತಿರಸ್ಕರಿಸಿದನು. ಬಳಿಕ ನಾಯಿಗಳಿಂದ ಕೂಡಿದ ಚಂಡಾಲನು ಅಲ್ಲಿಯೇ ಅದೃಶ್ಯನೂ ಆದನು.
ಉದಂಕಸ್ತಂ ತಥಾ ದೃಷ್ಟ್ವಾ ತತೋ ವ್ರೀಡಿತಮಾನಸಃ |
ಮೇನೇ ಪ್ರಲಬ್ಧಮಾತ್ಮಾನಂ ಕೃಷ್ಣೇನಾಮಿತತೇಜಸಾ ॥28॥
ಅಥ ತೇನೈವ ಮಾರ್ಗೇಣ ಶಂಖಚಕ್ರಗದಾಧರಃ |
ಆಜಗಾಮ ಮಹಾಬಾಹುರುದಂಕಶ್ಚೈನಮಬ್ರುವೀತ್ ॥29॥
ಬಳಿಕ ಉದಂಕನು ಶ್ರೀಕೃಷ್ಣನೇ ತನಗೆ ಹೀಗೆ ವಂಚಿಸಿರಬಹುದೆಂದು ಭಾವಿಸಿ ಲಜ್ಜೆಗೊಂಡವನಾಗಿ ಇರುವಾಗ ಅದೇ ಮಾರ್ಗದಲ್ಲಿ ಶಂಖ-ಚಕ್ರ-ಗದಾಧಾರಿಯಾದ ಕೃಷ್ಣನು ಆಗಮಿಸಿದನು. ಮಹಾಬಾಹುವಾದ ಕೃಷ್ಣನನ್ನು ಕುರಿತು ಉದಂಕನು ಹೀಗೆ ನುಡಿದನು.
ಉದಂಕಃ
ನ ಯುಕ್ತಂ ತಾದೃಶಂ ದಾತುಂ ತ್ವಯಾ ಪುರುಷಸತ್ತಮ |
ಸಲಿಲಂ ವಿಪ್ರಮುಖ್ಯೇಭ್ಯೋ ಮಾತಂಗಸ್ರೋತಸಾ ವಿಭೋ ॥30॥
ಉದಂಕ ಪುರುಷೋತ್ತಮನೇ, ವಿಭುವೇ, ಚಂಡಾಲನಿಗೆ ಸಂಬಂಧಿಸಿದ ಮೇಢ್ರದಿಂದ ಬಂದಿರುವ ಅಪವಿತ್ರವಾದ ನೀರನ್ನು ಬ್ರಾಹ್ಮಣನಿಗೆ ನೀಡುವುದು ಉಚಿತವಾಗಿರುವುದಿಲ್ಲ.
ವೈಶಂಪಾಯನಃ
ಇತ್ಯುಕ್ತವಚನಂ ತಂ ತು ಮಹಾಬುದ್ಧಿರ್ಜನಾರ್ದನಃ |
ಉದಂಕಂ ಶ್ಲಕ್ಷ ್ಣಯಾ ವಾಚಾ ಸಾಂತ್ವಯನ್ನಿದಮಬ್ರುವೀತ್ ॥31॥
ವೈಶಂಪಾಯನ ಉದಂಕನು ಹೀಗೆ ಹೇಳಿದಾಗ, ಮಹಾಬುದ್ಧಿವಂತನಾದ ಜನಾರ್ದನನು ಮಧುರವಾದ ಮಾತುಗಳಿಂದ ಅವನನ್ನು ಸಂತೈಸುತ್ತಾ ಇಂತು ನುಡಿದನು.
ಶ್ರೀಭಗವಾನ್
ಯಾದೃಶೇನೈವ ರೂಪೇಣ ಯೋಗ್ಯಂ ದಾತುಮನೇನ ವೈ |
ತಾದೃಶಂ ಖಲು ತೇ ದತ್ತಂ ತ್ವಂ ತು ತನ್ನಾವಬುಧ್ಯಸೇ ॥32॥
ಮಯಾ ತ್ವದರ್ಥಮುಕ್ತೋ ಹಿ ವಜ್ರಪಾಣಿಃ ಪುರಂದರಃ |
ಉದಂಕಾಯಾಮೃತಂ ದೇಹಿ ತೋಯರೂಪಮಿತಿ ಪ್ರಭುಃ ॥33॥
ಶ್ರೀಭಗವಾನ್ ಮಹರ್ಷಿಯೇ, ಮರುಭೂಮಿಯಲ್ಲಿ ಯಾವ ರೂಪವನ್ನು ಧರಿಸಿ ನಿನಗೆ ನೀರನ್ನು ಕೊಡುವುದು ಯೋಗ್ಯವಾಗಿತ್ತೋ ಅದೇ ರೂಪವನ್ನು ಧರಿಸಿಯೇ ಇಂದ್ರನು ನಿನಗೆ ನೀರನ್ನು ಕುಡಿಯಲು ಕೊಟ್ಟನು. ಆದರೆ ಈ ರಹಸ್ಯವನ್ನು ನೀನು ಅರಿಯಲಿಲ್ಲ. ನಿಶ್ಚಿತವಾಗಿಯೂ ಆ ನೀರಿನ ರೂಪದಲ್ಲಿ ಅಮೃತವನ್ನು ಕೊಡಬೇಕೆಂದು ವಜ್ರಪಾಣಿಯಾದ ಪುರಂದರನಿಗೆ ನಾನು ಹೇಳಿದ್ದೆನು.
ಸ ಮಾಮುವಾಚ ದೇವೇಂದ್ರೋ ನ ಮರ್ತ್ಯೋಽಮರ್ತ್ಯತಾಂ ವ್ರಜೇತ್ |
ಅನ್ಯಮಸ್ಮೈ ವರಂ ದೇಹೀತ್ಯಸಕೃದ್ ಭೃಗುನಂದನ ॥34॥
ಆ ಇಂದ್ರನು ನನ್ನನ್ನು ಕುರಿತು ಹೇಳಿದನು- ಪ್ರಭುವೇ, ನಾನು ಅಮೃತವನ್ನು ನೀಡಿದರೆ ಮರ್ತ್ಯನು ಅಮೃತನಾಗುತ್ತಾನೆ. ಆದ್ದರಿಂದ ಬೇರೆ ಯಾವುದಾದರೂ ವರವನ್ನು ಕೊಡು ಎಂದು ಇಂದ್ರನು ಬಾರಿ ಬಾರಿಗೂ ನನ್ನನ್ನು ಒತ್ತಾಯಿಸಿದನು.
ಅಮೃತಂ ದೇಯಮಿತ್ಯೇವ ಮಯೋಕ್ತಃ ಸ ಶಚೀಪತಿಃ |
ಸ ಮಾಂ ಪ್ರಸಾದ್ಯ ದೇವೇಂದ್ರಃ ಪುನರೇವೇದಮಬ್ರುವೀತ್ ॥35॥
ಆಗ ನಾನು ಅವನಿಗೆ ಅಮೃತವನ್ನೇ ನೀಡಬೇಕೆಂದು ಹಠದಿಂದ ಹೇಳಿದೆನು. ಆ ಸಮಯದಲ್ಲಿ ಇಂದ್ರನು ನನ್ನನ್ನು

ಸವಿಮಾತುಗಳಿಂದ ಸಂತೋಷಗೊಳಿಸಿ ಇಂತು ನುಡಿದನು.
ದೇವೇಂದ್ರಃ
ಯದಿ ದೇಯಮವಶ್ಯಂ ಚೇನ್ಮಾತಂಗೋಽಹಂ ಮಹಾದ್ಯುತೇ |
ಭೂತ್ವಾಽಮೃತಂ ಪ್ರದಾಸ್ಯಾಮಿ ಭಾರ್ಗವಾಯ ಮಹಾತ್ಮನೇ ॥36॥
ದೇವೇಂದ್ರ ಮಹಾಮತಿಯಾದ ಕೃಷ್ಣನೇ, ಉದಂಕನಿಗೆ ಅಮೃತವನ್ನು ಕೊಡಲೇಬೇಕು ಎಂಬ ಭಾವ ನಿನ್ನದಾಗಿದ್ದಲ್ಲಿ ನಾನು ಮಾತಂಗನ ರೂಪವನ್ನು ಧರಿಸಿ ಮಹಾತ್ಮನಾದ ಭಾರ್ಗವನಿಗೆ ಅಮೃತವನ್ನು ಕೊಡುತ್ತೇನೆ.
ಯದ್ಯೇತತ್ ಪ್ರತಿಗೃಹ್ಣಾತಿ ಭಾರ್ಗವೋಽಮೃತಮದ್ಯ ವೈ |
ಪ್ರದಾತುಮೇಷ ಗಚ್ಛಾಮಿ ಭಾರ್ಗವಾಯಾಮೃತಂ ವಿಭೋ ॥37॥
ಪ್ರತ್ಯಾಖ್ಯಾತಸ್ತ್ವಹಂ ತೇನ ನ ದಾಸ್ಯಾಮೀತಿ ಭಾರ್ಗವ ॥38॥
ಚಂಡಾಲರೂಪಿಯಾದ ನನ್ನಿಂದ ಉದಂಕನು ಅಮೃತವನ್ನು ಸ್ವೀಕರಿಸುವುದಾದಲ್ಲಿ ನಾನು ಅವನಿಗೆ ಅಮೃತವನ್ನು ಕೊಡಲು ತೆರಳುತ್ತೇನೆ. ಅವನೇನಾದರೂ ತಿರಸ್ಕರಿಸಿದರೆ ಖಂಡಿತವಾಗಿಯೂ ನಾನು ನೀಡುವುದಿಲ್ಲ.
ಶ್ರೀಭಗವಾನ್
ಸ ತಥಾ ಸಮಯಂ ಕೃತ್ವಾ ತೇನ ರೂಪೇಣ ವಾಸವಃ |
ಉಪಸ್ಥಿತಸ್ತ್ವಯಾ ಚಾಪಿ ಪ್ರತ್ಯಾಖ್ಯಾತೋಽಮೃತಂ ದದತ್ ॥39॥
ಶ್ರೀಭಗವಾನ್ ಹೀಗೆ ಇಂದ್ರನು ನನ್ನ ಜೊತೆಯಲ್ಲಿ ಒಪ್ಪಂದವನ್ನು ಮಾಡಿಕೊಂಡು, ಚಂಡಾಲರೂಪವನ್ನು ಧರಿಸಿ, ಅಮೃತವನ್ನು ನಿನಗೆ ಕೊಡಲು ಬಂದನು. ಆದರೆ ನೀನು ಅದನ್ನು ತಿರಸ್ಕರಿಸಿದೆ.
ಚಾಂಡಾಲರೂಪೀ ಭಗವಾನ್ ಸುಮಹಾಂಸ್ತೇ ವ್ಯತಿಕ್ರಮಃ ॥40॥
ಚಂಡಾಲರೂಪವನ್ನು ಧರಿಸಿದ ಇಂದ್ರನ ವಿಷಯದಲ್ಲಿ ಮಹಾಪರಾಧವನ್ನೇ ಎಸಗಿರುವೆ.
ಯತ್ತು ಶಕ್ಯಂ ಮಯಾ ಕರ್ತುಂ ಭೂಯ ಏವ ತವೇಪ್ಸಿತಮ್ |
ತೋಯೇಪ್ಸಾಂ ತವ ದುರ್ಧರ್ಷಾಂ ಕರಿಷ್ಯೇ ಸಫಲಾಮಹಮ್ ॥41॥
ಆದರೂ ನಿನ್ನ ಬಯಕೆಯಂತೆ ನಾನು ಏನು ಮಾಡಲು ಸಾಧ್ಯವೋ ಅದನ್ನು ಮಾಡುತ್ತೇನೆ. ನಿನ್ನ ಸಹಿಸಲಾಗದ ನೀರಡಿಕೆಯನ್ನು ಪರಿಹರಿಸುತ್ತೇನೆ.
ಯೇಷ್ವಹಃಸು ತವ ಬ್ರಹ್ಮನ್ ಸಲಿಲೇಪ್ಸಾ ಭವಿಷ್ಯತಿ |
ತದಾ ಮರೌ ಭವಿಷ್ಯಂತಿ ಜಲಪೂರ್ಣಾಃ ಪಯೋಧರಾಃ ॥42॥
ರಸವಚ್ಚ ಪ್ರದಾಸ್ಯಂತಿ ತೋಯಂ ತೇ ಭೃಗುನಂದನ |
ಉದಂಕಮೇಘಾ ಇತ್ಯುಕ್ತಾಃ ಖ್ಯಾತಿಂ ಯಾಸ್ಯಂತಿ ಚಾಪಿ ತೇ ॥43॥
ನಿನಗೆ ಯಾವ ದಿನ ನೀರನ್ನು ಕುಡಿಯಲು ಬಯಕೆ ಉಂಟಾಗುತ್ತದೋ ಆ ದಿನವೇ ಮರುಭೂಮಿಯಲ್ಲಿ ಜಲದಿಂದ ತುಂಬಿದ ಮೋಡಗಳನ್ನು ನಿರ್ಮಿಸುತ್ತೇನೆ. ಆ ಮೇಘಗಳು ನಿನಗೆ ಸವಿಯಾದ ನೀರನ್ನು ನೀಡುತ್ತವೆ. ಅಂದಿನಿಂದ ಆ ಮೇಘಗಳಿಗೆ ಉದಂಕ ಮೇಘಗಳು ಎಂದು ಜಗತ್ತಿನಲ್ಲಿ ಖ್ಯಾತಿ ಉಂಟಾಗುತ್ತದೆ.
ವೈಶಂಪಾಯನಃ
ಇತ್ಯುಕ್ತಃ ಪ್ರೀತಿಮಾನ್ ವಿಪ್ರಃ ಕೃಷ್ಣೇನ ಸ ಬಭೂವ ಹ |
ಅದ್ಯಾಪ್ಯುದಂಕಮೇಘಾಶ್ಚ ಮರೌ ವರ್ಷಂತಿ ಭಾರತ ॥44॥
ವೈಶಂಪಾಯನ ಈ ರೀತಿಯಾಗಿ ಕೃಷ್ಣನು ಹೇಳುತ್ತಿರಲು ಉದಂಕನು ಕೃಷ್ಣನ ಮಾತುಗಳಿಂದ ಪ್ರಸನ್ನನಾದನು. ಕೃಷ್ಣನ ವರದಾನದಂತೆ ಈಗಲೂ ಮರುಭೂಮಿಯಲ್ಲಿ ಉದಂಕ ಮೇಘಗಳು ಮಳೆಯನ್ನು ಸುರಿಸುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಉದಂಕಸ್ಯ ಜಲದಾನಪ್ರಕಾರಕಥನಂ
ನಾಮ ಪಂಚಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತಾರನೆಯ ಅಧ್ಯಾಯ
ವೈಶಂಪಾಯನರು ಜನಮೇಜಯರಾಜನಿಗೆ ಉದಂಕೋಪಾಖ್ಯಾನವನ್ನು ಹೇಳಲು ಆರಂಭಿಸಿದುದು. ಉದಂಕನು ಗುರುಸೇವೆಯನ್ನು ಮಾಡಿದ್ದರೂ ಗೌತಮರು ಉದಂಕನಲ್ಲಿ ಸಂತುಷ್ಟರಾಗಿಯೇ ಗುರುಕುಲದಿಂದ ಬಿಡದಿರುವುದು. ಒಂದು ಬಾರಿ ಗೌತಮರ ಶಾಸನದಂತೆ ಕಾಡಿನಿಂದ ಕಟ್ಟಿಗೆಯನ್ನು ತರುವಾಗ ಕಾಷ್ಠದಲ್ಲಿ ಸಿಕ್ಕಿಬಿದ್ದ ತನ್ನ ನೆರೆಕೂದಲನ್ನು ಕಂಡು ಉದಂಕನು ದುಃಖ ಹೊಂದುವುದು. ನಂತರ ತನ್ನ ವೃದ್ಧಾಪ್ಯದಿಂದ ದುಃಖಪಡುತ್ತಿರುವ ಉದಂಕನಿಗೆ ಗುರುಗಳು ಸಮಾಧಾನಪಡಿಸಿ, ಗುರುಪತ್ನಿಯ ಆದೇಶದಂತೆ ಕುಂಡಲವನ್ನು ತರಲು ಸೌದಾಸನನ್ನು ಕುರಿತು ಉದಂಕನು ಹೊರಟಿದುದು.
ಜನಮೇಜಯಃ
ಉದಂಕಃ ಕೇನ ತಪಸಾ ಸಂಯುಕ್ತಃ ಸ ಮಹಾತಪಾಃ |
ಯಃ ಶಾಪಂ ದಾತುಕಾಮೋಽಭೂದ್ ವಿಷ್ಣವೇ ಪ್ರಭವಿಷ್ಣವೇ ॥1॥
ಜನಮೇಜಯ ಬ್ರಾಹ್ಮಣಶ್ರೇಷ್ಠರೇ, ಎಲ್ಲ ಪ್ರಾಣಿಗಳ ಉತ್ಪತ್ತಿಗೆ ಕಾರಣನಾದ ಭಗವಂತನಿಗೂ ಉದಂಕಮುನಿಯು ಶಾಪವನ್ನು ಕೊಡಲು ಮುಂದಾದನು. ಕೃಷ್ಣನಿಗೂ ಶಾಪಕೊಡುವ ಮಹಾಸಿದ್ಧಪುರುಷನು ಇವನಾಗಿದ್ದಾನೆ ಎಂದಾದರೆ ಆ ಉದಂಕನು ಮಾಡಿದ

ತಪಸ್ಸು ಯಾವುದು? ಅದನ್ನು ನನಗೆ ತಿಳಿಸಿರಿ.
ವೈಶಂಪಾಯನಃ
ಉದಂಕೋ ಮಹತಾ ಯುಕ್ತಃ ತಪಸಾ ಜನಮೇಜಯ |
ಗುರುಭಕ್ತಃ ಸ ತೇಜಸ್ವೀ ನಾನ್ಯತ್ ಕಿಂಚಿದಪೂಜಯತ್ ||2||
ವೈಶಂಪಾಯನ ಜನಮೇಜಯನೇ, ಉದಂಕನು ಮಹಾತಪಸ್ವಿಯೂ, ಗುರುಭಕ್ತನೂ, ತೇಜಸ್ವಿಯೂ ಆಗಿದ್ದನು. ಗುರುದೇವತೆಯನ್ನು ಬಿಟ್ಟು ಬೇರೆ ಯಾರನ್ನೂ ಆರಾಧಿಸಲಿಲ್ಲ.
ಸರ್ವೇಷಾಮೃಷಿಪುತ್ರಾಣಾಮೇಷ ಚಾಸೀನ್ಮನೋರಥಃ |
ಔದಂಕೀಂ ಗುರುವೃತ್ತಿಂ ವೈ ಪ್ರಾಪ್ನುಯಾಮೇತಿ ಭಾರತ ||3||
ಗುರುಕುಲದಲ್ಲಿದ್ದಾಗ ಅವನ ಸಂಗಡಿಗರಾದ ಋಷಿಕುಮಾರರಿಗೂ ಉದಂಕನ ಗುರುಭಕ್ತಿಗೆ ಸಮಾನವಾದ ಭಕ್ತಿಯನ್ನು ತಾವೂ ಹೊಂದಬೇಕೆಂಬ ಅಭಿಲಾಷೆ ಇತ್ತು. ಉದಂಕನ ಗುರುವೃತ್ತಿಯು ಅಷ್ಟು ಆದರ್ಶಪ್ರಾಯವಾಗಿತ್ತು.
ಗೌತಮಸ್ಯ ತು ಶಿಷ್ಯಾಣಾಂ ಬಹೂನಾಂ ಜನಮೇಜಯ |
ಉದಂಕೇಽಭ್ಯಧಿಕಾ ಪ್ರೀತಿಃ ಸ್ನೇಹಶ್ಚೈವಾಭವತ್ ತದಾ ||4||
ಗೌತಮರೆಂಬ ಗುರುಗಳಿಗೆ ಅನೇಕ ಶಿಷ್ಯರಿದ್ದರು. ಆದರೆ ಗೌತಮರ ಅಧಿಕವಾದ ಪ್ರೀತಿ-ಸ್ನೇಹಗಳು ಉದಂಕನಲ್ಲಿಯೇ ಕೇಂದ್ರೀಕೃತವಾಗಿದ್ದವು.
ಸ ತಸ್ಯ ದಮಶೌಚಾಭ್ಯಾಂ ವಿಕ್ರಾಂತೇನ ಚ ಕರ್ಮಣಾ |
ಸಮ್ಯಕ್ ಚೈವೋಪಚಾರೇಣ ಗೌತಮಃ ಪ್ರೀತಿಮಾನಭೂತ್ ||5||
ಶ್ರದ್ಧೆಯಿಂದ ಕರ್ತವ್ಯವನ್ನು ಮಾಡುವ, ಇಂದ್ರಿಯಸಂಯಮ, ಅಂತಃಕರಣ ಶುದ್ಧಿ, ಬಹಿಶುದ್ಧಿ, ಪರಾಕ್ರಮ, ಮುಂತಾದ ಉದಂಕನ ಗುಣಗಳಿಂದ ಗೌತಮರು ಪ್ರೀತರಾಗಿದ್ದರು.
ಅಥ ಶಿಷ್ಯಸಹಸ್ರಾಣಿ ಸಮನುಜ್ಞಾಯ ಗೌತಮಃ |
ಉದಂಕಂ ಪರಯಾ ಪ್ರೀತ್ಯಾ ನಾಭ್ಯನುಜ್ಞಾತುಮೈಚ್ಛತ ||6||
ಗೌತಮರು ತಮ್ಮ ಬಳಿ ಇರುವ ಸಹಸ್ರಾರು ಶಿಷ್ಯರಿಗೆ ಅವರವರ ವಿದ್ಯಾಭ್ಯಾಸವು ಮುಗಿದ ಬಳಿಕ ಮನೆಗೆ ತೆರಳಲು ಅನುಮತಿಯನ್ನಿತ್ತರು.ಆದರೆ ಉದಂಕನ ಮೇಲಿನ ಪ್ರೀತಿಯಿಂದ ಅವನಿಗೆ ಮನೆಗೆ ಹೋಗಲು ಅನುಮತಿಯನ್ನು ನೀಡಲೇ ಇಲ್ಲ.
ತಂ ಕ್ರಮೇಣ ಜರಾ ತಾತ ಪರಿರೇಭೇ ಮಹಾಮುನಿಮ್ |
ನ ಚಾನ್ವಬುಧ್ಯತ ತದಾ ಸ ಮುನಿರ್ಗುರುವತ್ಸಲಃ ||7||
ಗುರುವಾತ್ಸಲ್ಯದಿಂದಲೇ ಕಾಲ ಕಳೆಯುತ್ತಿರುವ ಉದಂಕನಿಗೆ ಮುಪ್ಪು ಆವರಿಸಿತು. ಆದರೆ ತನಗೆ ಬಂದಿರುವ ಮುಪ್ಪನ್ನು ಉದಂಕನು ತಿಳಿಯಲೇ ಇಲ್ಲ.
ತತಃ ಕದಾಚಿದ್ ರಾಜೇಂದ್ರ ಕಾಷ್ಠಾನ್ಯಾನಯಿತುಂ ಯಯೌ |
ಉದಂಕಃ ಕಾಷ್ಠಭಾರಂ ತು ಮಹಾಂತಂ ಸಮುಪಾನಯತ್ ||8||
ಜನಮೇಜಯನೇ, ಒಂದು ಬಾರಿ ಉದಂಕನು ಗುರುಗಳ ಆದೇಶದಂತೆ ಕಟ್ಟಿಗೆಯನ್ನು ತರಲು ಕಾಡಿಗೆ ಹೋದನು. ಅಲ್ಲಿ ಅವನು ಕಟ್ಟಿಗೆಯ ರಾಶಿ ಮಾಡಿ, ದೊಡ್ಡದಾದ ಹೊರೆಯನ್ನು ಕಟ್ಟಿ ಅದನ್ನು ಹೊತ್ತುಕೊಂಡು ಆಶ್ರಮದ ಕಡೆ ಹೊರಟನು.
ಸ ತದ್ಭಾರಾಭಿಭೂತಾತ್ಮಾ ಕಾಷ್ಠಭಾರಮರಿಂದಮ |
ನಿಷ್ಪಿಪೇಷ ಕ್ಷಿತೌ ರಾಜನ್ ಪರಿಶ್ರಾಂತೋ ಬುಭುಕ್ಷಿತಃ ||9||
ಆ ಕಟ್ಟಿಗೆಯ ಭಾರದಿಂದ ಬಳಲಿದ ಉದಂಕನು ತಲೆಯ ಮೇಲಿದ್ದ ಹೊರೆಯನ್ನು ಕೆಳಗಡೆ ಇಳಿಸಲು ಪ್ರಯತ್ನಿಸಿದನು. ಆ ಭಾರದಿಂದ ಕಂಗಾಲಾದ, ಹಸಿವೆಯಿಂದ ಬಳಲಿದ ಉದಂಕನು ಕಟ್ಟಿಗೆ ಸಹಿತವಾಗಿ ಭೂಮಿಯ ಮೇಲೆ ಬಿದ್ದನು.
ತಸ್ಯ ಕಾಷ್ಠೇ ವಿಲಗ್ನಾಽಭೂತ್ ಜಟಾ ರೂಪ್ಯಸಮಪ್ರಭಾ |
ತತಃ ಕಾಷ್ಠೈಃ ಸಹ ತದಾ ಪಪಾತ ಧರಣೀತಳೇ ||10||
ಆ ಕೆಳಗೆ ಬಿದ್ದ ಕಾಷ್ಠಭಾರದಲ್ಲಿ ತನ್ನ ಜಟೆಯ ಕೂದಲೊಂದು ಸಿಕ್ಕಿ ಬಿದ್ದಿತು. ಬೆಳ್ಳಿಯ ಕಾಂತಿಯಂತೆ ತನ್ನ ಕೂದಲು ಹೊಳೆಯುತ್ತಾ ಕಾಷ್ಠದಲ್ಲಿ ಸಂಲಗ್ನವಾದುದನ್ನು ಕಂಡು ಉದಂಕನು ಭೂಮಿಯ ಮೇಲೆ ದುಃಖದಿಂದಲೇ ಕುಸಿದನು.
ತತಃ ಸ ಭಾರನಿಷ್ಪಿಷ್ಟಃ ಕ್ಷುಧಾವಿಷ್ಟಶ್ಚ ಭಾರ್ಗವಃ |
ದೃಷ್ಟ್ವಾ ತಾಂ ವಯಸೋಽವಸ್ಥಾಂ ರುರೋದಾರ್ತಸ್ವರಂ ತದಾ ||11||
ಬಳಿಕ ಭಾರದಿಂದ ಕಂಗಾಲಾಗಿರುವ, ಹಸಿವೆಯಿಂದ ಕಂಗೆಟ್ಟಿರುವ ಭಾರ್ಗವನು ತನ್ನ ಕೂದಲು ಬಿಳಿಯಾದದ್ದನ್ನು ಕಂಡು ಆರ್ತಸ್ವರದಿಂದ ರೋದಿಸಿದನು.
ತತೋ ಗುರುಸುತಾ ತಸ್ಯ ಪದ್ಮಪತ್ರಾಯತೇಕ್ಷಣಾ |
ಜಗ್ರಾಹಾಶ್ರೂಣಿ ಸುಶ್ರೋಣೀ ತಪೋಯುಕ್ತಸ್ಯ ಧೀಮತಃ ||12||
ಪಿತುರ್ನಿಯೋಗಾದ್ ಧರ್ಮಜ್ಞಾ ಶಿರಸಾಽವನತಾ ತದಾ ||13||
ಆ ಸಮಯದಲ್ಲಿ ತಂದೆಯ ಆದೇಶದಂತೆ ತಲೆಬಾಗಿ ಧರ್ಮಜ್ಞಳಾದ, ಕಮಲಪತ್ರದಂತೆ ವಿಶಾಲವಾದ ಮುಖವನ್ನು ಹೊಂದಿದ್ದ, ಸುಂದರಿಯೂ ಆಗಿದ್ದ, ಗುರುಗಳ ಪುತ್ರಿಯು ತಪೋಯುಕ್ತನಾದ ಉದಂಕನ ಕಣ್ಣೀರನ್ನು ಬೊಗಸೆಯಿಂದ ತುಂಬಿಕೊಂಡಳು.
ತಸ್ಯಾ ನಿಪೇತತುರ್ದಗ್ಧೌ ಕರೌ ತೈರಶ್ರುಬಿಂದುಭಿಃ |
ನ ಹಿ ತಾನಶ್ರುಪಾತಾನ್ ವೈ ಶಕ್ತಾ ಧಾರಯಿತುಂ ಮಹೀ ||14||
ಬೊಗಸೆಯಲ್ಲಿ ಉದಂಕನ ಕಣ್ಣೀರನ್ನು ಧರಿಸಿದ ಕೂಡಲೇ ಗುರುಪುತ್ರಿಯ ಕೈಗಳನ್ನು ಬಿಸಿಯಾದ ಕಣ್ಣೀರಿನಿಂದ ಸುಟ್ಟುಹೋಗಿ ನೆಲದ

ಮೇಲೆ ಬಿದ್ದವು. ಆ ದುಃಖಿತನಾದ ಉದಂಕನ ಅಶ್ರುಗಳನ್ನು ಧರಿಸಲು ಭೂದೇವಿಗೂ ಸಾಧ್ಯವಾಗಲಿಲ್ಲ.
ಗೌತಮಸ್ತ್ವಬ್ರುವೀದ್ ವಿಪ್ರಮುದಂಕಂ ಪ್ರೀತಿಮಾನಸಃ ॥15॥
ಗೌತಮರು ಪ್ರಸನ್ನಚಿತ್ತರಾಗಿ ಉದಂಕನಿಗೆ ಹೀಗೆ ಹೇಳಿದರು.
ಗೌತಮಃ
ಕಸ್ಮಾತ್ ತಾತ ತವಾದ್ಯೇಹ ಶೋಕೋತ್ತರಮಿದಂ ಮನಃ |
ಸ ಸ್ವೈರಂ ಬ್ರೂಹಿ ವಿಪ್ರರ್ಷೇ ಶ್ರೋತುಮಿಚ್ಛಾಮಿ ತೇ ವಚಃ ॥16॥
ಗೌತಮ ವಿಪ್ರರ್ಷಿಯೇ, ನಿನ್ನ ಶೋಕದ ಕಾರಣವು ಏನೆಂಬುದನ್ನು ಬೇಗ ತಿಳಿಸು. ಅದನ್ನು ತಿಳಿದು ಪರಿಹರಿಸಲು ಬಯಸುತ್ತೇನೆ.
ಉದಂಕಃ
ಭವದ್ಗತೇನ ಮನಸಾ ಭವತ್ಪ್ರಿಯಚಿಕೀರ್ಷಯಾ |
ಭವದ್ಭಕ್ತಿಗತೇನೇಹ ಭವದ್ಭಾವಾನುಗೇನ ಚ ॥17॥
ಉದಂಕ ಗುರುದೇವನೇ, ನಿಮ್ಮ ಪ್ರೀತಿಗೋಸ್ಕರವೇ ಸತ್ಕರ್ಮವನ್ನು ಮಾಡುತ್ತಾ ನಿಮ್ಮ ಸೇವೆಯಲ್ಲಿಯೇ ನನ್ನನ್ನು ತೊಡಗಿಸಿಕೊಂಡಿದ್ದೇನೆ. ನಿಮ್ಮ ಮೇಲಿನ ಭಕ್ತಿಯಿಂದ ನನ್ನ ಮನಸ್ಸು ನಿಮ್ಮ ಭಾವಕ್ಕನುಗುಣವಾಗಿ ವರ್ತಿಸುತ್ತಿದೆ.
ಜರೇಯಂ ನಾವಬುದ್ಧಾ ಮೇ ನಾಭಿಜ್ಞಾತಂ ಸುಖಂ ಚ ಮೇ |
ಶತವರ್ಷೋಷಿತಂ ಹಿ ತ್ವಂ ನ ಮಾಮಭ್ಯನುಜಜ್ಞಿವಾನ್ ॥18॥
ಗುರುಸೇವೆಯಲ್ಲಿಯೇ ನಿರತನಾಗಿ ವರ್ತಿಸುತ್ತಿರುವ ನನಗೆ ಮುಪ್ಪು ಬಂದದ್ದೇ ತಿಳಿಯಲಿಲ್ಲ. ಲೌಕಿಕವಾದ ಸುಖವೆಂದರೆ ಏನೆಂಬುದೇ ನನಗೆ ತಿಳಿಯಲಿಲ್ಲ. ನಿನ್ನ ಆಶ್ರಮಕ್ಕೆ ಬಂದು ನೂರುವರ್ಷಗಳು ಕಳೆದುಹೋದರೂ ನೀವು ನನಗೆ ಮನೆಗೆ ಹೋಗಲು ಅನುಮತಿಯನ್ನು ನೀಡಲಿಲ್ಲ.
ಭವತಾ ಹ್ಯಭ್ಯನುಜ್ಞಾತಾಃ ಶಿಷ್ಯಾಃ ಪ್ರತ್ಯವರಾ ಮಮ |
ಉಪಪನ್ನಾ ದ್ವಿಜಶ್ರೇಷ್ಠ ಶತಶೋಽಥ ಸಹಸ್ರಶಃ ॥19॥
ಇತ್ತೀಚಿಗೆ ಗುರುಕುಲಕ್ಕೆ ಬಂದ ಸಾವಿರಾರು ವಿದ್ಯಾರ್ಥಿಗಳು ವಿದ್ಯಾಸಂಪನ್ನರಾಗಿ ನಿಮ್ಮ ಅನುಮತಿಯನ್ನು ಪಡೆದು ತಮ್ಮ ಗ್ರಾಮಗಳಿಗೆ ತೆರಳಿದ್ದಾರೆ.
ಗೌತಮಃ
ತ್ವತ್ಪ್ರೀತಿಯುಕ್ತೇನ ಮಯಾ ಗುರುಶುಶ್ರೂಷಯಾ ತವ |
ವ್ಯತಿಕ್ರಾಮನ್ಮಹಾನ್ ಕಾಲೋ ನಾವಬುದ್ಧೋ ದ್ವಿಜರ್ಷಭ ॥20॥
ಗೌತಮ ಮಗು ಉದಂಕ, ಶ್ರದ್ಧೆಯಿಂದ ನೀನು ಮಾಡಿದ, ನಿರಂತರವಾದ ನಿನ್ನ ಶುಶ್ರೂಷೆಯಿಂದ ನಿನ್ನ ವಿಷಯದಲ್ಲಿ ಪ್ರೀತಿ ಹೊಂದಿರುವ ನನಗೆ ನೀನು ಆಗಮಿಸಿ ನೂರು ವರ್ಷವಾಗಿದೆ ಎಂಬ ಕಾಲದ ಅರಿವೇ ಉಂಟಾಗಲಿಲ್ಲ.
ಕಿಂ ತ್ವದ್ಯ ಯದಿ ತೇ ಶ್ರದ್ಧಾ ಗಮನಂ ಪ್ರತಿ ಭಾರ್ಗವ |
ಅನುಜ್ಞಾಂ ಪ್ರಾಪ್ಯ ಮತ್ತಸ್ತ್ವಂ ಸ್ವಗೃಹಾನ್ ಗಚ್ಛ ಮಾ ಚಿರಮ್ ॥21॥
ಈಗ ನೀನು ನಿನ್ನ ಊರಿಗೆ ಹೋಗುವುದರಲ್ಲಿ ಶ್ರದ್ಧೆಯನ್ನು ಹೊಂದಿದವನಾಗಿದ್ದರೆ ನನ್ನ ಅನುಜ್ಞೆಯನ್ನು ಪಡೆದು ಈಗಲೇ ನಿನ್ನ ಮನೆಗೆ ತೆರಳಬಹುದು.
ಉದಂಕಃ
ಗುರ್ವರ್ಥಂ ಕಿಂ ಪ್ರಯಚ್ಛಾಮಿ ಬ್ರೂಹಿ ತ್ವಂ ದ್ವಿಜಸತ್ತಮ |
ಕಿಮುಪಾಹೃತ್ಯ ಗಚ್ಛೇಯಮನುಜ್ಞಾತಸ್ತ್ವಯಾ ವಿಭೋ ॥22॥
ಉದಂಕ ಬ್ರಾಹ್ಮಣಶ್ರೇಷ್ಠರೇ, ನಾನು ತೆರಳುತ್ತೇನೆ. ಅದಕ್ಕೆ ಮುನ್ನ ಗುರುದಕ್ಷಿಣೆಯಾಗಿ ಏನನ್ನು ನೀಡಲಿ? ದಯಮಾಡಿ ತಿಳಿಸಿರಿ. ತಾವು ಹೇಳಿದ್ದನ್ನು ತಂದುಕೊಟ್ಟು, ಬಳಿಕ ತಮ್ಮ ಅನುಮತಿಯನ್ನು ಪಡೆದು ಮನೆಗೆ ತೆರಳುತ್ತೇನೆ.
ಗೌತಮಃ
ದಕ್ಷಿಣಾ ಪರಿತೋಷೋ ವೈ ಗುರೂಣಾಂ ಸದ್ಭಿರುಚ್ಯತೇ |
ತವ ಹ್ಯಾಚರತೋ ಧರ್ಮಂ ತುಷ್ಟೋಽಹಂ ವೈ ನ ಸಂಶಯಃ ॥23॥
ಗೌತಮ ಉದಂಕನೇ, ಶಿಷ್ಯರಾದವರಿಗೆ ಗುರುಸೇವೆಯನ್ನು ಮಾಡಿ ತೃಪ್ತಿ ಪಡಿಸುವುದೇ ಉತ್ಕೃಷ್ಟವಾದ ಗುರುದಕ್ಷಿಣೆಯಾಗಿದೆ ಎಂದು ಸತ್ಪುರುಷರ ಅಭಿಪ್ರಾಯ. ನೀನು ಗುರುಸೇವೆಯನ್ನು ನಿರ್ದುಷ್ಟವಾಗಿ ಆಚರಿಸಿರುವೆ. ಇದರಿಂದ ನಾನು ಸಂತುಷ್ಟನಾಗಿದ್ದೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಇತ್ಥಂ ಹಿ ಪರಿತುಷ್ಟಂ ಮಾಂ ವಿಜಾನೀಹಿ ಭೃಗೂದ್ವಹ ॥24॥
ಯುವಾ ಷೋಡಶವರ್ಷೋ ಹಿ ತದದ್ಯ ತ್ವಂ ಭವಿಷ್ಯಸಿ |
ದದಾನಿ ಪತ್ನೀಂ ಕನ್ಯಾಂ ಚ ಸ್ವಾಂ ತೇ ದುಹಿತರಂ ದ್ವಿಜ ॥25॥
ಏತಾಮೃತೇ ಹಿ ನಾನ್ಯಾ ವೈ ತ್ವತ್ತೇಜೋಽರ್ಹತಿ ಸೇವಿತುಮ್ ॥26॥
ಭೃಗುನಂದನನೇ, ನೀನು ನನ್ನ ಅನುಗ್ರಹದಿಂದ ನನ್ನನ್ನು ಸಂತೋಷ ಪಡಿಸಿರುವ ಕಾರಣದಿಂದ ಹದಿನಾರು ವರ್ಷದ ಯೌವನವನ್ನು ಪಡೆಯುವವನಾಗುತ್ತಿ. ನನ್ನ ಮಗಳನ್ನೇ ಸಂತುಷ್ಟಿಯಿಂದ ನಿನಗೆ ಮದುವೆ ಮಾಡಿಕೊಡುತ್ತೇನೆ. ನಿನ್ನ ವಿಷಯದಲ್ಲಿ ಸಂತುಷ್ಟನಾಗಿದ್ದೇನೆಂದು ತಿಳಿ. ತೇಜೋವಿಶಿಷ್ಟನಾದ ನಿನ್ನನ್ನು ನನ್ನ ಮಗಳು ಚೆನ್ನಾಗಿ ಉಪಚರಿಸುತ್ತಾಳೆ. ಇವಳಷ್ಟು ಚೆನ್ನಾಗಿ ನಿನ್ನನ್ನು ಸೇವಿಸಲು ಬೇರೆ ಯಾರಿಗೂ ಸಾಧ್ಯವಿರುವುದಿಲ್ಲ.
ವೈಶಂಪಾಯನಃ

ತತಸ್ತಾಂ ಪ್ರತಿಜಗ್ರಾಹ ಯುವಾ ಭೂತ್ವಾ ತಪಸ್ವಿನೀಮ್ |
ಗುರುಣಾ ಚಾಭ್ಯನುಜ್ಞಾತೋ ಗುರುಪತ್ನೀಮಥಾಬ್ರವೀತ್ ॥27॥
ವೈಶಂಪಾಯನ ಜನಮೇಜಯನೇ, ಕುಲಪತಿಗಳಾದ ಗೌತಮರ ಅನುಗ್ರಹದಿಂದ ಉದಂಕನು ಹದಿನಾರು ವರ್ಷದ ನವಯುವಕನಾದನು. ಯಶೋವಂತಳಾದ ಗುರುಪುತ್ರಿಯನ್ನು ಅವರ ಆದೇಶದಂತೆ ಸ್ವೀಕರಿಸಿದನು. ಬಳಿಕ ಗೌತಮರ ಅನುಮತಿಯನ್ನು ಪಡೆದು ಅವರ ಪತ್ನಿಯ ಬಳಿ ಹೋಗಿ ಹೇಳಿದನು.
ಉದಂಕಃ
ಕಿಂ ಭವತ್ಯೈ ಪ್ರಯಚ್ಛಾಮಿ ಗುರ್ವರ್ಥಂ ವಿನಿಯುಂಕ್ಷ್ವ ಮಾಮ್ |
ಪ್ರಿಯಂ ಹಿ ತವ ಕಾಂಕ್ಷಾಮಿ ಪ್ರಾಣೈರಪಿ ಧನೈರಪಿ ॥28॥
ಉದಂಕ ಗುರುಪತ್ನಿಯೇ, ನಾನು ನಿನಗೆ ಗುರುದಕ್ಷಿಣಾ ರೂಪವಾಗಿ ಏನನ್ನು ಕೊಡಲಿ? ಆದೇಶಿಸು. ಪ್ರಾಣವನ್ನು ಒತ್ತೆಯಿಟ್ಟಾದರೂ ಐಶ್ವರ್ಯದಿಂದಾಗಲಿ ನಿನ್ನನ್ನು ಸೇವಿಸುವುದು ನನಗೆ ಹಿತವೆನಿಸಿದೆ. ನಿನಗೆ ಇಷ್ಟವಾದ ಕಾರ್ಯವನ್ನು ಮಾಡಲು ಬಯಸಿದ್ದೇನೆ.
ಯದ್ ದುರ್ಲಭಂ ಹಿ ಲೋಕೇಽಸ್ಮಿನ್ ರತ್ನಮತ್ಯದ್ಭುತಂ ಭವೇತ್ |
ತದಾನಯೇಯಂ ತಪಸಾ ನ ಹಿ ಮೇಽತ್ರಾಸ್ತಿ ಸಂಶಯಃ ॥29॥
ಈ ಲೋಕದಲ್ಲಿ ಅತ್ಯಂತ ದುರ್ಲಭವಾದ, ಮಹತ್ವವಾದ, ಅದ್ಭುತಪೂರ್ಣವಾದ ಯಾವ ವಸ್ತುವಿದೆ ಎನಿಸುತ್ತದೋ ಅದನ್ನು ಬೇಕಾದರೂ ತಪಸ್ಸಿನಿಂದ ಸಂಪಾದಿಸಿಕೊಂಡು ತಂದುಕೊಡುತ್ತೇನೆ. ಯಾವ ಸಂಶಯವನ್ನೂ ತಾಳಬೇಡ.
ಅಹಲ್ಯಾ
ಪರಿತುಷ್ಟಾಽಸ್ಮಿ ತೇ ವಿಪ್ರ ನಿತ್ಯಂ ಭಗವತಾ ಸಹ |
ಪರ್ಯಾಪ್ತಮೇತದ್ ಭದ್ರಂ ತೇ ಗಚ್ಛ ತಾತ ಯಥೇಪ್ಸಿತಮ್ ॥30॥
ಅಹಲ್ಯಾ ಪಾಪರಹಿತ ವಿಪ್ರನೇ, ನೀನು ಪ್ರತಿದಿನವೂ ಭಕ್ತಿಯಿಂದ ಮಾಡುತ್ತಿರುವ ಸೇವೆಯಿಂದಲೇ ನಾನು ಸಂತುಷ್ಟಳಾಗಿದ್ದೇನೆ. ನನಗೆ ದೊಡ್ಡ ಗುರುದಕ್ಷಿಣೆಯು ಸಂದಾಯವಾಗಿದೆ. ನೀನು ನಿನ್ನ ಮನಸ್ಸಿದ್ದೆಡೆ ಪ್ರಯಾಣ ಬೆಳೆಸಬಹುದು.
ವೈಶಂಪಾಯನಃ
ಉದಂಕಸ್ತು ಮಹಾರಾಜ ಪುನರೇವಾಬ್ರವೀದ್ ವಚಃ ॥31॥
ವೈಶಂಪಾಯನ ರಾಜನೇ, ಉದಂಕನು ಗೌತಮರ ಪತ್ನಿಯು ಹೀಗೆ ಹೇಳುತ್ತಿದ್ದರೂ ಪುನಃ ಈ ಮಾತುಗಳನ್ನು ಆಡಿದನು.
ಉದಂಕಃ
ಆಜ್ಞಾಪಯಸ್ವ ಮಾಂ ಮಾತಃ ಕಿಂ ಕರ್ತವ್ಯಂ ಪ್ರಿಯಂ ತವ ॥32॥
ಉದಂಕ ತಾಯಿಯೇ ಆಜ್ಞಾಪಿಸು. ನಿನಗೆ ಪ್ರಿಯವಾದುದನ್ನು ತಂದುಕೊಡುತ್ತೇನೆ. ನಾನು ಏನು ಮಾಡಲೆಂದು ಹೇಳು ಎಂದು ಮತ್ತೂ ಮತ್ತೂ ಕೇಳಿದನು.
ಅಹಲ್ಯಾ
ಸೌದಾಸಪತ್ನ್ಯಾ ವಿಧೃತೇ ದಿವ್ಯೇ ಯೇ ಮಣಿಕುಂಡಲೇ |
ತೇ ಮಮಾನಯ ಭದ್ರಂ ತೇ ಗುರ್ವರ್ಥಃ ಸ ಕೃತೋ ಭವೇತ್ ॥33॥
ಅಹಲ್ಯಾ ಉದಂಕನೇ, ನಿನಗೆ ಮಂಗಳವಾಗಲಿ. ರಾಜನಾಗಿರುವ ಸೌದಾಸನ ಪತ್ನಿಯು ತನ್ನ ಕಿವಿಗಳಲ್ಲಿ ರತ್ನಮಯವಾದ ಎರಡು ಕುಂಡಲಗಳನ್ನು ಧರಿಸಿದ್ದಾಳೆ. ಅವುಗಳನ್ನು ತಂದುನೀಡು. ನೀನು ಗುರುವಿನ ನಿಮಿತ್ತ ಸತ್ಕರ್ಮವನ್ನು ಮಾಡಿದಂತಾಗುತ್ತದೆ.
ವೈಶಂಪಾಯನಃ
ಸ ತಥೇತಿ ಪ್ರತಿಶ್ರುತ್ಯ ಜಗಾಮ ಜನಮೇಜಯ |
ಗುರುಪತ್ನೀಪ್ರಿಯಾರ್ಥಂ ವೈ ತೇ ಸಮಾನಯಿತುಂ ತದಾ ॥34॥
ವೈಶಂಪಾಯನ ಜನಮೇಜಯ, ಬಳಿಕ ಉದಂಕನು ಹಾಗೆಯೇ ಆಗಲೆಂದು ಗುರುಪತ್ನಿಗೆ ಪ್ರಿಯವನ್ನುಂಟು ಮಾಡುವ ಕಾರಣದಿಂದ ಸೌದಾಸನ ಪತ್ನಿಯ ಕರ್ಣ- ಕುಂಡಲಗಳನ್ನು ತರಲು ಹೊರಟು ಹೋದನು.
ಸ ಜಗಾಮ ತತಃ ಶೀಘ್ರಮುದಂಕೋ ಬ್ರಾಹ್ಮಣರ್ಷಭಃ |
ಸೌದಾಸಂ ಪುರುಷಾದಂ ವೈ ಭಿಕ್ಷಿತುಂ ಮಣಿಕುಂಡಲೇ ॥35॥
ಬ್ರಾಹ್ಮಣಶ್ರೇಷ್ಠನಾದ ಉದಂಕನು ಕರ್ಣಕುಂಡಲಗಳನ್ನು ಬೇಡಿ ತರುವ ದೃಷ್ಟಿಯಿಂದ ಈಗಾಗಲೇ ರಾಕ್ಷಸನಾಗಿರುವ, ನರಭಕ್ಷಕನಾಗಿರುವ ಸೌದಾಸನ ಬಳಿ ಭಿಕ್ಷೆ ಬೇಡಲು ಹೋದನು.
ಗೌತಮಸ್ತ್ವಬ್ರವೀದ್ ಪತ್ನೀಮುದಂಕೋ ನಾತ್ರ ದೃಶ್ಯತೇ |
ಇತಿ ಪೃಷ್ಟಾ ತಮಾಚಷ್ಟ ಕುಂಡಲಾರ್ಥಂ ಗತಂ ತು ವೈ ॥36॥
ಆಶ್ರಮದಲ್ಲಿ ಉದಂಕನು ಕಣ್ಮರೆಯಾದುದನ್ನು ಕಂಡು ಗೌತಮರು ಪತ್ನಿಯ ಬಳಿ ವಿಚಾರಿಸಿದರು. ಅಹಲ್ಯೆಯು ಉದಂಕನು ಸೌದಾಸನ ಪತ್ನಿಯಿಂದ ಕರ್ಣಕುಂಡಲವನ್ನು ತರಲು ಹೋಗಿದ್ದಾನೆ, ನಾನೇ ಹೇಳಿದ್ದೇನೆ ಎಂದು ತಿಳಿಸಿದಳು.
ತತಃ ಪ್ರೋವಾಚ ಪತ್ನೀಂ ಸ ನ ತೇ ಸಮ್ಯಗಿದಂ ಕೃತಮ್ |
ಶಪ್ತಃ ಸ ಪಾರ್ಥಿವೋ ನೂನಂ ಬ್ರಾಹ್ಮಣಂ ತಂ ಹನಿಷ್ಯತಿ ॥37॥
ಅಹಲ್ಯೆಯ ಮಾತನ್ನು ಕೇಳಿಸಿಕೊಂಡ ಗೌತಮರು ದುಃಖದಿಂದ ಇಂತು ನುಡಿದರು- ದೇವಿಯೇ, ನೀನು ಚೆನ್ನಾಗಿ ಯೋಚಿಸಿ ಕಾರ್ಯವನ್ನು ಆದೇಶಿಸಬೇಕಿತ್ತು. ಸೌದಾಸನು ಇಂದು ಶಾಪದ ಕಾರಣದಿಂದ ರಾಕ್ಷಸನಾಗಿದ್ದಾನೆ. ಅವನ ಬಳಿ ಉದಂಕನು ಹೊರಟರೆ ಅವನನ್ನು ತಿಂದೇ ಮುಗಿಸುತ್ತಾನೆ.
ಅಹಲ್ಯಾ

ಅಜಾನಂತ್ಯಾ ನಿಯುಕ್ತಃ ಸ ಭಗವನ್ ಬ್ರಾಹ್ಮಣೋಽದ್ಯ ವೈ |
ಭವತ್ಪ್ರಸಾದಾನ್ನ ಭಯಂ ಕಿಂಚಿತ್ ತಸ್ಯ ಭವಿಷ್ಯತಿ ॥38॥
ಅಹಲ್ಯಾ ಪೂಜ್ಯರೇ, ನಾನು ಈ ವಿಷಯವನ್ನು ತಿಳಿಯದವಳಾದೆ. ಸೌದಾಸನ ಪತ್ನಿಯಿಂದ ಕುಂಡಲವನ್ನು ತರಲು ಹೇಳಿದೆ. ಆದರೆ ನಿಮ್ಮ ಅನುಗ್ರಹವಿರುವ ಉದಂಕನಿಗೆ ಯಾವ ತೊಂದರೆಯೂ ಉಂಟಾಗುವುದಿಲ್ಲವೆಂಬ ವಿಶ್ವಾಸ ನನಗಿದೆ.
ವೈಶಂಪಾಯನಃ
ಇತ್ಯುಕ್ತಃ ಪ್ರಾಹ ತಾಂ ಪತ್ನೀಮೇವಮಸ್ತ್ವಿತಿ ಗೌತಮಃ |
ಉದಂಕೋಽಪಿ ವನೇ ಶೂನ್ಯೇ ರಾಜಾನಂ ತಂ ದದರ್ಶ ಹ ॥39॥
ವೈಶಂಪಾಯನ ಈ ರೀತಿಯಾಗಿ ಅಹಲ್ಯೆಯು ಹೇಳಿದಾಗ ಗೌತಮರು, ಹಾಗೆಯೇ ಆಗಲಿ. ಉದಂಕನಿಗೆ ಸೌದಾಸನಿಂದ ತೊಂದರೆಯಾಗದಿರಲಿ ಎಂದು ಆಶೀರ್ವದಿಸಿದರು. ಅತ್ತ ಉದಂಕನು ಒಂದು ನಿರ್ಜನವಾದ ಅರಣ್ಯದಲ್ಲಿ ರಾಕ್ಷಸನಾಗಿರುವ ಸೌದಾಸರಾಜನನ್ನು ನೋಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಸೌದಾಸದರ್ಶನಕಥನಂ ನಾಮ ಷಟ್‌ಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೇಳನೆಯ ಅಧ್ಯಾಯ
ಶಾಪದಿಂದ ರಾಕ್ಷಸನಾಗಿರುವ ಸೌದಾಸನ ಬಳಿ ಉದಂಕನು ಸಾಗಿದುದು. ಸೌದಾಸನು ಉದಂಕನನ್ನು ತಿನ್ನಲು ಬಂದಾಗ ಕರ್ತವ್ಯವನ್ನು ಮುಗಿಸಿ ಪುನಃ ಬರುತ್ತೇನೆಂದು ಸಮಾಧಾನ ಪಡಿಸಿದುದು. ಸೌದಾಸನ ಬಳಿ ಕುಂಡಲವನ್ನು ಬೇಡಿದುದು. ಸೌದಾಸನ ಮಾತಿಗನುಗುಣವಾಗಿ ಉದಂಕನು ಅವನ ಪತ್ನಿಯ ಬಳಿ ಹೋಗಿ ಕುಂಡಲವನ್ನು ಬೇಡಿದಾಗ, ಗಂಡನ ಅನುಮತಿಯ ಚಿಹ್ನೆಯನ್ನು ಧರಿಸಿ ಬರುವಂತೆ ಮದಯಂತಿಯು ಹೇಳಿದುದು.
ವೈಶಂಪಾಯನಃ
ಸ ತಂ ದೃಷ್ಟ್ವಾ ತಥಾಭೂತಂ ರಾಜಾನಂ ಘೋರದರ್ಶನಮ್ |
ದೀರ್ಘಶ್ಮಶ್ರುಧರಂ ನೄಣಾಂ ಶೋಣಿತೇನ ಸಮುಕ್ಷಿತಮ್ ॥1॥
ಚಕಾರ ನ ವ್ಯಥಾಂ ವಿಪ್ರೋ ರಾಜಾ ತ್ವೇನಮಥಾಬ್ರವೀತ್ |
ಪ್ರತ್ಯುತ್ಥಾಯ ಮಹಾತೇಜಾ ಭಯಕರ್ತಾ ಯಮೋಪಮಃ ॥2॥
ವೈಶಂಪಾಯನ ಜನಮೇಜಯನೇ, ಉದಂಕನು ಮಹಾಭಯಂಕರನಾಗಿರುವ, ದೀರ್ಘವಾದ ಗಡ್ಡ-ಮೀಸೆಗಳನ್ನು ಹೊಂದಿರುವ, ಮನುಷ್ಯರನ್ನು ಭಕ್ಷಿಸಿ ಅವರ ರಕ್ತದಿಂದ ತೊಯ್ದು ಹೋಗಿರುವ ರಾಕ್ಷಸನಾದ ಸೌದಾಸನನ್ನು ನೋಡಿ ವಿಪ್ರಶ್ರೇಷ್ಠನು ಹೆದರಿಕೊಳ್ಳಲಿಲ್ಲ. ಉದಂಕನು ತನ್ನ ಬಳಿ ಬಂದೊಡನೆ ಭಯವನ್ನು ಹುಟ್ಟಿಸುತ್ತಿದ್ದ ಸೌದಾಸನು ಯಮಸದೃಶನಾಗಿಯೇ ಕಾಣಿಸುತ್ತಿದ್ದ. ಇಂತಹ ಸೌದಾಸನು ಮಹಾತೇಜಸ್ವಿಯಾದ ಉದಂಕನ ಎದುರು ಬಂದು ಹೇಳುತ್ತಾನೆ.
ಸೌದಾಸಃ
ದಿಷ್ಟ್ಯಾ ತ್ವಮಸಿ ಕಲ್ಯಾಣ ಷಷ್ಠೇ ಕಾಲೇ ಮಮಾಂತಿಕಮ್ |
ಭಕ್ಷ್ಯಂ ಮೃಗಯಮಾಣಸ್ಯ ಸಂಪ್ರಾಪ್ತೋ ದ್ವಿಜಸತ್ತಮ ॥3॥
ಸೌದಾಸ ಕಲ್ಯಾಣರೂಪಿಯಾದ ವಿಪ್ರನೇ, ದಿನದ ಆರನೆಯ ಭಾಗದಲ್ಲಿ ನನ್ನ ಅದೃಷ್ಟದಿಂದ ನೀನು ಇಲ್ಲಿಗೆ ಆಗಮಿಸಿರುವಿ. ನಾನು ಆಹಾರವನ್ನು ಹುಡುಕುವ ಸಮಯದಲ್ಲಿಯೇ ನೀನು ಸರಿಯಾಗಿ ನನಗೆ ಖಾದ್ಯವಾಗಿ ಸಿಕ್ಕಿರುವಿ.
ನ ಚ ಶಕ್ಯಸ್ತ್ವಮುತ್ಸ್ರಷ್ಟುಂ ಕ್ಷುಧಿತಸ್ಯ ಮಮಾದ್ಯ ವೈ ॥4॥
ನೀನು ಹಸಿದಿರುವ ನನ್ನ ಕೈಯಿಂದ ತಪ್ಪಿಸಿಕೊಳ್ಳಲು ಸಮರ್ಥನಾಗಿರುವುದಿಲ್ಲ. ಇಂದು ನಿನ್ನನ್ನು ತಿಂದುಬಿಡುತ್ತೇನೆ.
ಉದಂಕಃ
ರಾಜನ್ ಗುರ್ವರ್ಥಿನಂ ವಿದ್ಧಿ ಚರಂತಂ ಮಾಮಿಹಾಗತಮ್ |
ನ ಚ ಗುರ್ವರ್ಥಮುದ್ಯುಕ್ತಂ ಹಿಂಸ್ಯಮಾಹುರ್ಮನೀಷಿಣಃ ॥5॥
ಉದಂಕ ರಾಜನೇ, ನಾನು ಗುರುದಕ್ಷಿಣೆಯನ್ನು ಸಂಗ್ರಹಿಸಲು ಅಲ್ಲಲ್ಲಿ ಸುತ್ತಾಡುತ್ತಾ ನಿನ್ನ ಬಳಿ ಬಂದಿದ್ದೇನೆ. ಗುರುದಕ್ಷಿಣೆಗೋಸ್ಕರ ಸಂಚರಿಸುವ ವ್ಯಕ್ತಿಯನ್ನು ಹಿಂಸಿಸಬಾರದೆಂದು ತಿಳಿದವರು ಹೇಳುತ್ತಾರೆ.
ಸೌದಾಸಃ
ಷಷ್ಠೇ ಕಾಲೇ ಮಮಾಹಾರೋ ವಿಹಿತೋ ದ್ವಿಜಸತ್ತಮ |
ನ ಶಕ್ಯಸ್ತ್ವಂ ಸಮುತ್ಸ್ರಷ್ಟುಂ ಕ್ಷುಧಿತೇನ ಮಯಾಽದ್ಯ ವೈ ॥6॥
ಸೌದಾಸ ಬ್ರಾಹ್ಮಣಶ್ರೇಷ್ಠನೇ, ದಿನದ ಆರನೆಯ ಭಾಗದಲ್ಲಿ ರಾಕ್ಷಸನಾದ ನನಗೆ ಆಹಾರವು ವಿಹಿತವಾಗಿದೆ. ಇದು ನನ್ನ ಆಹಾರದ ಸಮಯ. ಹಸಿವೆಯಿಂದ ಪೀಡಿತನೂ ಆಗಿದ್ದೇನೆ. ಆದ್ದರಿಂದ ನೀನು ನನಗೆ ತಿನ್ನಲು ಅರ್ಹನಾಗಿರುವಿ. ನನ್ನಿಂದ ಈ ಮಾತುಗಳ ಮೂಲಕ ತಪ್ಪಿಸಿಕೊಳ್ಳಲು ನಿನ್ನಿಂದ ಸಾಧ್ಯವಿಲ್ಲ.
ಉದಂಕಃ
ಏವಮಸ್ತು ಮಹಾರಾಜ ಸಮಯಃ ಕ್ರಿಯತಾಂ ತು ವೈ |
ಗುರ್ವರ್ಥಮಭಿನಿರ್ವರ್ತ್ಯ ಪುನರೇಷ್ಯಾಮಿ ತೇ ವಶಮ್ ॥7॥
ಉದಂಕ ರಾಜನೇ, ಹಾಗಾದರೆ ನಾನೂ ನೀನು ಒಂದು ನಿರ್ಬಂಧನೆಯನ್ನು ಮಾಡಿಕೊಳ್ಳೋಣ. ಗುರುದಕ್ಷಿಣೆಯನ್ನು ಸಂಗ್ರಹಿಸುವ

ತನಕ ನೀನು ನನ್ನನ್ನು ತಿನ್ನಬಾರದು. ಗುರುದಕ್ಷಿಣೆಯನ್ನು ಸಮರ್ಪಿಸಿದ ಬಳಿಕ ನಾನು ನಿನ್ನ ಬಳಿ ಬರಬೇಕು ಎಂಬ ನಿಯಮವನ್ನು ಹಾಕಿಕೊಳ್ಳೋಣ. ಗುರುದಕ್ಷಿಣೆಯನ್ನು ನೀಡಿ ನಿನ್ನ ವಶನಾಗುತ್ತೇನೆ.

ಸಂಶ್ರುತಶ್ಚ ಮಯಾ ಯೋಽರ್ಥೋ ಗುರವೇ ರಾಜಸತ್ತಮ |
ತ್ವದಧೀನಃ ಸ ರಾಜೇಂದ್ರ ತಂ ತ್ವಾ ಭಿಕ್ಷೇ ನರೇಶ್ವರ ॥8॥

ಇಷ್ಟಾಗಿ ನಾನು ಗುರುಗಳಿಗೆ ಯಾವ ವಸ್ತುವನ್ನು ನೀಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದೇನೋ ಅದು ನಿನ್ನ ಅಧೀನವಾಗಿಯೇ ಇದೆ. ಅಂತಹ ವಸ್ತುವನ್ನು ನಿನ್ನಿಂದ ನಾನು ಬೇಡುತ್ತಿದ್ದೇನೆ.

ದದಾಸಿ ವಿಪ್ರಮುಖ್ಯೇಭ್ಯಃ ತ್ವಂ ಹಿ ರತ್ನಾನಿ ನಿತ್ಯದಾ |
ದಾತಾ ಚ ತ್ವಂ ನರವ್ಯಾಘ್ರ ಪಾತ್ರಭೂತಃ ಕ್ಷಿತಾವಹಮ್ ॥9॥
ಪಾತ್ರಂ ಪ್ರತಿಗ್ರಹೇ ಚಾಪಿ ವಿದ್ಧಿ ಮಾಂ ನೃಪಸತ್ತಮ ॥10॥

ರಾಜನ್, ನೀನು ವಿಪ್ರಶ್ರೇಷ್ಠರಿಗೆ ಅನೇಕ ವಿಧಗಳಾದ ರತ್ನಗಳನ್ನು ದಾನ ಮಾಡುತ್ತಲೇ ಇರುವೆ. ನೀನು ಈ ಭೂಮಿಯಲ್ಲಿ ಶ್ರೇಷ್ಠ ದಾನಿ ಎನಿಸಿದರೆ, ದಾನ ಸ್ವೀಕರಿಸುವವರಲ್ಲಿ ನಾನು ಸತ್ಪಾತ್ರನಾಗಿದ್ದೇನೆ ಎಂದು ಅರ್ಥೈಸಿಕೊ.

ಉಪಾಹೃತ್ಯ ಗುರೋರರ್ಥಂ ತ್ವದಾಯತ್ತಮರಿಂದಮ |
ಸಮಯೇನೇಹ ರಾಜೇಂದ್ರ ಪುನರೇಷ್ಯಾಮಿ ತೇ ವಶಮ್ ॥11॥

ಅರಿಂದಮನೇ, ಗುರುಗಳಿಗೆ ಬೇಕಾದ ವಸ್ತು ನಿನ್ನ ಅಧೀನದಲ್ಲಿದೆ. ಅದನ್ನು ತೆಗೆದುಕೊಂಡು ಗುರುಗಳಿಗೆ ಅರ್ಪಿಸಿ ಪುನಃ ಪ್ರತಿಜ್ಞೆಗನುಗುಣವಾಗಿ ಇಲ್ಲಿಗೆ ಮರಳಿ ಬರುತ್ತೇನೆ, ನಿನ್ನ ಅಧೀನವಾಗುತ್ತೇನೆ.

ಸತ್ಯಂ ತೇ ಪ್ರತಿಜಾನಾಮಿ ನಾತ್ರ ಮಿಥ್ಯಾ ಕಥಂಚನ |
ಅನೃತಂ ನೋಕ್ತಪೂರ್ವಂ ಮೇ ಸ್ವೈರೇಷ್ವಪಿ ಕುತೋಽನ್ಯಥಾ ॥12॥

ಮಹಾರಾಜ, ನಾನು ಸತ್ಯಪ್ರತಿಜ್ಞನು. ನಾನೆಂದಿಗೂ ಸುಳ್ಳು ಹೇಳುವುದಿಲ್ಲ. ಹಿಂದೆ ಎಂದೂ ತಮಾಷೆಗಾಗಿಯೂ ಸುಳ್ಳನ್ನು ಹೇಳಿರುವುದಿಲ್ಲ. ಹೀಗಿರುವಾಗ ಹೇಗೆ ಸುಳ್ಳನ್ನು ಹೇಳುತ್ತೇನೆ ಎಂಬುದನ್ನು ಯೋಚಿಸು.

ಸೌದಾಸಃ
ಯದ್ಯಸ್ಮಾಸು ತವಾಯತ್ತೋ ಗುರ್ವರ್ಥಃ ಕೃತ ಏವ ಸಃ |
ಯದಿ ಚಾಸ್ತಿ ಪ್ರತಿಗ್ರಾಹ್ಯಂ ಸಾಂಪ್ರತಂ ತದ್ ಬ್ರವೀಹಿ ಮೇ ॥13॥

ಸೌದಾಸ ನೀನು ಗುರುಗಳಿಗೆ ಅರ್ಪಿಸಬೇಕಾದ ಪದಾರ್ಥ ನನ್ನ ಅಧೀನವಾಗಿದೆ ಎಂದು ಹೇಳಿದೆ. ಇದು ಸತ್ಯವಾದಲ್ಲಿ ಅದು ಖಂಡಿತವಾಗಿಯೂ ನಿನಗೆ ದೊರೆಯುತ್ತದೆ ಎಂದು ತಿಳಿದುಕೊ. ನೀನು ಸ್ವೀಕರಿಸಲು ಯೋಗ್ಯವಾದ ವಸ್ತುವಾದರೂ ಯಾವುದೆಂದು ತಿಳಿಸು.

ಉದಂಕಃ
ಪ್ರತಿಗ್ರಾಹ್ಯೋ ವರೋ ಮೇ ತ್ವಂ ಸದೈವ ಪುರುಷರ್ಷಭ |
ಸೋಽಹಂ ತ್ವಾಮನು ಸಂಪ್ರಾಪ್ತೋ ಭಿಕ್ಷಿತುಂ ಮಣಿಕುಂಡಲೇ ॥14॥

ಉದಂಕ ಪುರುಷಶ್ರೇಷ್ಠನೇ, ನೀನು ದಾನಿಶ್ರೇಷ್ಠನಾಗಿದ್ದಿ ಎಂದು ನನ್ನ ಅಭಿಪ್ರಾಯ. ಆದ್ದರಿಂದ ನಿನ್ನ ಬಳಿ ಎರಡು ಮಣಿಕುಂಡಲಗಳನ್ನು ಬೇಡಲು ಆಗಮಿಸಿದ್ದೇನೆ.

ಸೌದಾಸಃ
ಪತ್ನ್ಯಾಸ್ತ್ವಮಪಿ ವಿಪ್ರರ್ಷೇ ರುಚಿರೇ ಮಣಿಕುಂಡಲೇ |
ವರಯಾರ್ಥಂ ತ್ವಮನ್ಯಂ ಮೇ ತಂ ತೇ ದಾಸ್ಯಾಮಿ ಸುವ್ರತ ॥15॥

ಸೌದಾಸ ವಿಪ್ರರ್ಷಿಯೇ, ನೀನು ಬಯಸಿರುವ ಸುಂದರವಾದ ಮಣಿ ಕುಂಡಲಗಳು ನನ್ನ ಪತ್ನಿಯ ಬಳಿ ಇರಲು ಯೋಗ್ಯವಾಗಿವೆ. ಆದ್ದರಿಂದ ಅವುಗಳನ್ನು ಅವಳ ಬಳಿ ಹೋಗಿ ಬೇಡಿಕೊ. ಇವುಗಳನ್ನು ಬಿಟ್ಟು ನನ್ನ ಬಳಿ ಬೇರೆ ಯಾವುದಾದರೂ ವಸ್ತುವನ್ನು ಕೇಳು, ಅದನ್ನು ಕೊಡುತ್ತೇನೆ.

ಉದಂಕಃ
ಅಲಂ ತೇ ವ್ಯಪದೇಶೇನ ಪ್ರಮಾಣಂ ಯದಿ ತೇ ವಯಮ್ |
ಪ್ರಯಚ್ಛ ಕುಂಡಲೇ ಮೇ ತ್ವಂ ಸತ್ಯವಾಗ್ ಭವ ವೈ ವಿಭೋ ॥16॥

ಉದಂಕ ಪಾರ್ಥಿವನೇ, ನೆಪವನ್ನು ಹೇಳುವುದು ಸಾಕು ಮಾಡು. ನನ್ನಲ್ಲಿ ನಿನಗೆ ನಂಬಿಕೆ ಇದ್ದಲ್ಲಿ, ನಾನು ಸತ್ಯವಾದಿ ಎಂದು ನೀನು ಭಾವಿಸಿದ್ದಲ್ಲಿ ನಿನ್ನ ಪತ್ನಿಯ ಕರ್ಣಕುಂಡಲವನ್ನು ನನಗೆ ಕೊಟ್ಟು ಸತ್ಯಪ್ರತಿಜ್ಞನಾಗು.

ವೈಶಂಪಾಯನಃ
ಇತ್ಯುಕ್ತಸ್ತ್ವಬ್ರವೀದ್ ರಾಜಾ ತಮುದಂಕಂ ವಚಸ್ತದಾ ॥17॥

ವೈಶಂಪಾಯನ ಉದಂಕನು ಹೀಗೆ ಹೇಳಲು ರಾಜನು ಉದಂಕನಿಗೆ ಪುನಃ ಉತ್ತರಿಸಿದನು.

ಸೌದಾಸಃ
ಗಚ್ಛ ಮದ್ವಚನಾದ್ ದೇವೀಂ ಬ್ರೂಹಿ ದೇಹೀತಿ ಸತ್ತಮ ॥18॥
ಸೈವಮುಕ್ತಾ ತ್ವಯಾ ನೂನಂ ಮದ್ವಾಕ್ಯೇನ ಶುಚಿವ್ರತಾ |
ಪ್ರದಾಸ್ಯತಿ ದ್ವಿಜಶ್ರೇಷ್ಠ ಕುಂಡಲೇ ತೇ ನ ಸಂಶಯಃ ॥19॥

ಸೌದಾಸ ಬ್ರಾಹ್ಮಣನೇ, ನನ್ನ ರಾಣಿಯ ಬಳಿ ಸಾಗು. ಕರ್ಣಕುಂಡಲಗಳನ್ನು ಕೊಡಬೇಕೆಂದು ಹೇಳಿದ್ದೇನೆ ಎಂದು ತಿಳಿಸು. ನನ್ನ ಮಾತನ್ನು ಕೇಳಿದೊಡನೆ ಶುಚಿವ್ರತಳಾದ ಆಕೆಯು ನಿಶ್ಚಿತವಾಗಿಯೂ ತನ್ನ ಕರ್ಣಕುಂಡಲಗಳನ್ನು ಕೊಡುತ್ತಾಳೆ. ಇದರಲ್ಲಿ ಯಾವ

ಸಂಶಯವೂ ಇಲ್ಲ.
ಉದಂಕಃ
ಕ್ವ ಪತ್ನೀ ಭವತಃ ಶಕ್ಯಾ ಮಯಾ ದ್ರಷ್ಟುಂ ನರೇಶ್ವರ |
ಸ್ವಯಂ ವಾಽಪಿ ಭವಾನ್ ಪತ್ನೀಂ ಕಿಮರ್ಥಂ ನೋಪಸರ್ಪತಿ ||20||
ಉದಂಕ ನರೇಶ್ವರನೇ, ನಿನ್ನ ಪತ್ನಿಯನ್ನು ನಾನು ಎಲ್ಲಿ ನೋಡಲಿ? ನೀನು ನಿನ್ನ ಪತ್ನಿಯ ಸಮೀಪಕ್ಕೆ ಹೋಗದಿರಲು ಕಾರಣವೇನು?
ಸೌದಾಸಃ
ದ್ರಕ್ಷ್ಯತೇ ಭವತಾ ಸಾದ್ಯ ಕಸ್ಮಿಂಶ್ಚಿದ್ ವನನಿರ್ಝರೇ |
ಷಷ್ಠೇ ಕಾಲೇ ನ ಹಿ ಮಯಾ ಸಾ ಶಕ್ಯಾ ದ್ರಷ್ಟುಮದ್ಯ ವೈ ||21||
ಸೌದಾಸ ಬ್ರಾಹ್ಮಣನೇ, ನೀನು ನಿರ್ಜನವಾದ ಅರಣ್ಯದಲ್ಲಿ ಅವಳನ್ನು ಕಾಣಬಹುದು. ಈ ದಿನದ ಆರನೆಯ ಭಾಗದಲ್ಲಿ ಆಹಾರಕ್ಕಾಗಿ ಪರಿಗ್ರಹಿಸುತ್ತಿರುವ ನಾನು ಅವಳನ್ನು ನೋಡಲು ಸಾಧ್ಯವಿಲ್ಲ.
ವೈಶಂಪಾಯನಃ
ಉದಂಕಸ್ತು ತಥೇತ್ಯುಕತ್ತ್ವ ಜಗಾಮ ಭರತರ್ಷಭ |
ಮದಯಂತೀಂ ಚ ತಾಂ ದೃಷ್ಟ್ವಾ ಜ್ಞಾಪಯತ್ ಸ್ವಂ ಪ್ರಯೋಜನಮ್ ||
ವೈಶಂಪಾಯನ ಸೌದಾಸನ ಮಾತನ್ನು ಅಂಗೀಕರಿಸಿದ ಉದಂಕನು ಮದಯಂತಿಯನ್ನು ಅರಸಿಕೊಂಡು ಹೊರಟನು. ಮದಯಂತಿಯು ಅರಣ್ಯದ ಚಿಲುಮೆಯ ಸಮೀಪದಲ್ಲಿ ವಾಸಿಸುತ್ತಿದ್ದಳು. ಅವಳನ್ನು ಕಂಡು ತನ್ನ ಆಗಮನದ ಉದ್ದೇಶವನ್ನು ತಿಳಿಸಿದನು.
ಸೌದಾಸವಚನಂ ಶ್ರುತ್ವಾ ತತಃ ಸಾ ಪೃಥುಲೋಚನಾ |
ಪ್ರತ್ಯುವಾಚ ಮಹಾಬುದ್ಧಿಮುದಂಕಂ ಜನಮೇಜಯ ||23||
ಜನಮೇಜಯನೇ, ಅರಳಿದ ವಿಶಾಲವಾದ ಕಣ್ಣಿನಿಂದ ಕೂಡಿದ ಮದಯಂತಿಯಾದರೂ ಸೌದಾಸನ ಮಾತನ್ನು ಕೇಳಿಸಿಕೊಂಡು ಮಹಾಬುದ್ಧಿವಂತನಾದ ಉದಂಕನಿಗೆ ಪ್ರತ್ಯುತ್ತರಿಸಿದಳು.
ಮದಯಂತೀ
ಏವಮೇತನ್ಮಹಾಬ್ರಹ್ಮನ್ ನಾನೃತಂ ಭಾಷಸೇಽನಘ |
ಅಭಿಜ್ಞಾನಂ ತು ಕಿಂಚಿನ್ಮೇ(ತ್ವಂ) ಸಮಾನಯಿತುಮರ್ಹಸಿ ||24||
ಮದಯಂತಿ ಮಹಾಬ್ರಾಹ್ಮಣನೇ, ನೀನು ಹೇಳಿದಂತೆಯೇ ಆಗಲಿ. ನೀನು ಸತ್ಯವಾದಿಯೇ ಆಗಿರುವೆ. ಆದರೆ ನನ್ನ ಪತಿಯೇ ಈ ಸಂದೇಶವನ್ನು ಕಳುಹಿಸಿದ್ದಾನೆ ಎನ್ನಲು ನೀನು ಅವನಿಂದ ಯಾವುದಾದರೂ ಒಂದು ಗುರುತನ್ನು ತರಲು ಅರ್ಹನಾಗಿರುವಿ.
ಇಮೇ ಹಿ ದಿವ್ಯೇ ಮಣಿಕುಂಡಲೇ ಶುಭೇ
ದೇವಾಶ್ಚ ಯಕ್ಷಾಶ್ಚ ಮಹೋರಗಾಶ್ಚ |
ತೈಸ್ತೈರುಪಾಯೈರಪಹರ್ತುಕಾಮಾಃ
ಛಿದ್ರೇಷು ನಿತ್ಯಂ ಪರಿತರ್ಕಯಂತೇ ||25||
ಉದಂಕನೇ, ನಿನ್ನ ಕಣ್ಣಿಗೆ ಕಾಣಿಸುತ್ತಿರುವ ಈ ದಿವ್ಯವಾದ ಮಣಿಕುಂಡಲಗಳನ್ನು ದೇವತೆಗಳು, ಯಕ್ಷರು, ಮಹರ್ಷಿಗಳು ನಾನಾ ವಿಧವಾದ ಉಪಾಯವನ್ನು ಮಾಡಿ ಅಪಹರಿಸಲು ಬಯಸುತ್ತಿದ್ದಾರೆ. ಅದಕ್ಕಾಗಿ ನನ್ನಲ್ಲಿ ದೋಷಗಳನ್ನು ಕಂಡುಹಿಡಿಯಲು ಮಗ್ನರೂ ಆಗಿದ್ದಾರೆ.
ನಿಕ್ಷಿಪ್ತಮೇತದ್ ಭುವಿ ಪನ್ನಗಾಸ್ತು
ರತ್ನಂ ಸಮಾಸಾದ್ಯ ಪರಾಮೃಶೇಯುಃ |
ಯಕ್ಷಾಸ್ತಥೋಚ್ಛಿಷ್ಟಧೃತಂ ಸುರಾಶ್ಚ
ನಿದ್ರಾವಶಂ ತ್ವಾಂ ಪರಿಧರ್ಷಯೇಯುಃ ||26||
ಈ ಕುಂಡಲಗಳನ್ನು ನೆಲದಲ್ಲಿಟ್ಟರೆ ಕೂಡಲೇ ಸರ್ಪಗಳೇ ಇವುಗಳನ್ನು ಹೊತ್ತೊಯ್ಯುತ್ತವೆ. ನಾನು ಅಶುಚಿಯಾಗಿ ಈ ಕುಂಡಲಗಳನ್ನು ಧರಿಸಿದಲ್ಲಿ ಅಥವಾ ಕುಂಡಲಗಳನ್ನು ಧರಿಸಿ ನಿದ್ರೆ ಮಾಡಿದಲ್ಲಿ ಯಕ್ಷರು-ದೇವತೆಗಳು ಬಲಾತ್ಕರಿಸಿ ಅಪಹರಿಸಿಕೊಂಡು ಸಾಗುತ್ತಾರೆ.
ಛಿದ್ರೇಷ್ವೇತೇಷು ಚ ಸದಾ ಧೃಷ್ಯಸೇ ಚ ದ್ವಿಜರ್ಷಭ |
ದೈವರಾಕ್ಷಸಯಕ್ಷಾಣಾಮಪ್ರಮತ್ತೇನ ಧಾರ್ಯತೇ ||27||
ಇಂತಹ ದೋಷವಿರುವ ದಿನದ ಆರನೆಯ ಭಾಗದಲ್ಲಿ ದೇವ-ರಾಕ್ಷಸ-ಯಕ್ಷರಿಂದ ಜಾಗರೂಕನಾಗಿರುವವನು ಮಾತ್ರವೇ ಇವುಗಳನ್ನು ಧರಿಸಬಲ್ಲ.
ಏತೇ ದಿವಾಽಪಿ ಭಾಸೇತೇ ರಾತ್ರೌ ಚ ದ್ವಿಜಸತ್ತಮ |
ನಕ್ತಂ ನಕ್ಷತ್ರತಾರಾಣಾಂ ಪ್ರಭಾಮಾಕ್ಷಿಪ್ಯ ವರ್ತತಃ ||28||
ಈ ಕರ್ಣಕುಂಡಲಗಳು ಹಗಲು-ರಾತ್ರಿ ಹೊಳೆಯುತ್ತಿರುತ್ತವೆ. ರಾತ್ರಿ ಕಾಲದಲ್ಲಿ ಮಿನುಗುವ ನಕ್ಷತ್ರ, ತಾರಾಮಂಡಲಗಳ ಪ್ರಭೆಯನ್ನು ಮಸುಕುಗೊಳಿಸುವ ಸಾಮರ್ಥ್ಯವನ್ನು ಹೊಂದಿವೆ.
ಏತೇ ಹ್ಯಾಮುಚ್ಯ ಭಗವನ್ ಕ್ಷುತ್ಪಿಪಾಸಾಭಯಂ ಕುತಃ |
ವಿಷಾಗ್ನಿಶ್ವಾಪದೇಭ್ಯಶ್ಚ ಭಯಂ ಜಾತು ನ ವಿದ್ಯತೇ ||29||
ಪೂಜ್ಯನೆ, ಈ ಕುಂಡಲಗಳನ್ನು ಧರಿಸಿದಲ್ಲಿ ಹಸಿವು, ಬಾಯಾರಿಕೆಗಳ ಬಾಧೆಗಳು ಇರುವುದಿಲ್ಲ. ಇವುಗಳನ್ನು ಧರಿಸಿದವನಿಗೆ

ಅಗ್ನಿ-ವಿಷಗಳ ಭಯಗಳು ಆವರಿಸುವುದಿಲ್ಲ. ಮಾಂಸಾಹಾರಿ ಪ್ರಾಣಿಗಳ ಭಯವೂ ಇರುವುದಿಲ್ಲ.
ಹ್ರಸ್ವೇನ ಚೈತೇ ಆಮುಕ್ತೇ ಭವತೋ ಹ್ರಸ್ವಕೇ ಸದಾ |
ಅನುರೂಪೇಣ ಚಾಮುಕ್ತೇ ತತ್ಪ್ರಮಾಣೇ ತಥೈವ ತೇ ||30||
ಕುಳ್ಳಗಿರುವ ವ್ಯಕ್ತಿಯು ಈ ಕುಂಡಲಗಳನ್ನು ಧರಿಸಿದರೆ ಅವರ ದೇಹಕ್ಕನುಗುಣವಾಗಿ ಈ ಕುಂಡಲಗಳು ಹ್ರಸ್ವತ್ವವನ್ನು ಹೊಂದುತ್ತವೆ. ದೊಡ್ಡ ಆಕಾರವುಳ್ಳ ವ್ಯಕ್ತಿಯು ಇವುಗಳನ್ನು ಧರಿಸಿದರೆ ಆ ಆಕಾರಕ್ಕೆ ತಕ್ಕಂತೆ ದೊಡ್ಡದಾಗುತ್ತವೆ. ಹೀಗೆ ಅವರವರ ದೇಹ ಪ್ರಮಾಣಕ್ಕೆ ಅನುಗುಣವಾದ ಆಕಾರವನ್ನು ಹೊಂದುವ ಸಾಮರ್ಥ್ಯ ಈ ಕುಂಡಲಗಳಲ್ಲಿದೆ.
ಏವಂವಿಧೇ ಮಮಾಪ್ಯೇತೇ ಕುಂಡಲೇ ಪರಮಾರ್ಚಿತೇ |
ತ್ರಿಷು ಲೋಕೇಷು ವಿಖ್ಯಾತೇ ತದಭಿಜ್ಞಾನಮಾನಯ ||31||
ಇಂತಹ ದಿವ್ಯವಾದ ನನ್ನ ಕರ್ಣಕುಂಡಲಗಳು ಸಮಸ್ತ ಲೋಕಗಳಲ್ಲಿಯೂ ಪ್ರಶಂಸೆಗೆ ಪಾತ್ರವಾಗಿವೆ, ಪ್ರಸಿದ್ಧವಾಗಿವೆ. ಆದ್ದರಿಂದ ಇವುಗಳನ್ನು ಕೊಂಡೊಯ್ಯಲು ನನ್ನ ಗಂಡನಿಂದ ಏನಾದರೂ ಒಂದು ಗುರುತನ್ನು ಹೊತ್ತು ತಾ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕುಂಡಲಮಾಹಾತ್ಮ್ಯಕಥನಂ ನಾಮ ಸಪ್ತಪಂಚಾಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಐವತ್ತೆಂಟನೆಯ ಅಧ್ಯಾಯ
ಉದಂಕನು ಸೌದಾಸನ ಬಳಿ ಚಿಹ್ನೆಯನ್ನು ಸ್ವೀಕರಿಸಿ ಮದಯಂತಿಯಿಂದ ಕುಂಡಲಗಳನ್ನು ಸ್ವೀಕರಿಸಿ ಹೊರಟಿದುದು. ಮಾರ್ಗಮಧ್ಯದಲ್ಲಿ ಹಸಿವೆಯಿಂದ
ಬಿಲ್ವವೃಕ್ಷದ ಹಣ್ಣನ್ನು ಸ್ವೀಕರಿಸುವಾಗ ಕುಂಡಲಗಳನ್ನು ಕೃಷ್ಣಾಜಿನದಲ್ಲಿ ಕಟ್ಟಿ ಇಟ್ಟಿದುದು. ಹಣ್ಣುಗಳು ಮರದಿಂದ ಉದುರುವಾಗ ಕುಂಡಲಗಳು ನೆಲದ ಮೇಲೆ ಬಿದ್ದಿದುದು. ನೆಲದಲ್ಲಿ ಬಿದ್ದ ಕುಂಡಲಗಳನ್ನು ಸರ್ಪ ಒಂದು ಅಪಹರಿಸಿ ನಾಗಲೋಕಕ್ಕೆ ಹೋಗಿದುದು. ಉದಂಕನು ಇಂದ್ರನ ಸಹಾಯದಿಂದ ಭೂಮಿಯನ್ನು ಸೀಳಿಕೊಂಡು ನಾಗಲೋಕಕ್ಕೆ ತೆರಳಿ ಅಲ್ಲಿರುವ ಕುದುರೆಯ ಮಾತಿನಂತೆ ಅದರ ಅಪಾನದ
ದೇಶವನ್ನು ಊದಿದಾಗ ಅದರಿಂದ ಹೊರಹೊಮ್ಮಿದ ಹೊಗೆಯಿಂದ
ಸರ್ಪಲೋಕವೇ ಕಂಗಾಲಾಗಿ ಉದಂಕನಿಗೆ ಕುಂಡಲವನ್ನು ತಂದು ಒಪ್ಪಿಸಿದುದು.
ಬಳಿಕ ಉದಂಕನು ಗುರುಪತ್ನಿಗೆ ಕುಂಡಲವನ್ನು ಕೊಟ್ಟಿದುದು.
ವೈಶಂಪಾಯನಃ
ಸ ಮಿತ್ರಸಹಮಾಸಾದ್ಯ ತ್ವಭಿಜ್ಞಾನಮಯಾಚತ |
ತಸ್ಮೈ ದದಾವಭಿಜ್ಞಾನಂ ಸ ಚೇಕ್ಷ್ವಾಕುವರಸ್ತದಾ ||1||
ವೈಶಂಪಾಯನ ಜನಮೇಜಯನೇ, ಉದಂಕನು ಮದಯಂತಿಯ ಮಾತಿಗೆ ಅನುಗುಣವಾಗಿ ಸೌದಾಸನ ಬಳಿ ಸಾಗಿ ಗುರುತನ್ನು ಕೇಳಿದನು. ಅದರಂತೆ ಸೌದಾಸನು ಉದಂಕನಿಗೆ ಗುರುತನ್ನು ಕೊಟ್ಟನು.
ಸೌದಾಸಃ
ನ ಚೈವೇಷಾ ಗತಿಃ ಕ್ಷೇಮ್ಯಾ ನ ಚಾನ್ಯಾ ವಿದ್ಯತೇ ಗತಿಃ |
ಏತನ್ಮೇ ತತ್ತ್ವಮಾಜ್ಞಾಯ ಪ್ರಯಚ್ಛ ಮಣಿಕುಂಡಲೇ ||2||
ಸೌದಾಸ ಪ್ರಿಯೇ, ನಾನು ಈಗ ಇರುವ ದುಃಸ್ಥಿತಿಯು ಮಂಗಳಮಯ- ವಾಗಿರುವುದಿಲ್ಲ. ಬೇರೆ ಯಾವ ಮಾರ್ಗವೂ ನನ್ನ ಪಾಲಿಗೆ ಇಲ್ಲವಾಗಿದೆ. ಈ ನನ್ನ ಅಭಿಪ್ರಾಯವನ್ನು ತಿಳಿದ ನೀನು ಬ್ರಾಹ್ಮಣನಿಗೆ ಆ ಕುಂಡಲಗಳನ್ನು ನೀಡು.
ವೈಶಂಪಾಯನಃ
ಇತ್ಯುಕ್ತಸ್ತಾಮುದಂಕಸ್ತು ಭರ್ತುರ್ವಾಕ್ಯಮಥಾಬ್ರವೀತ್ |
ಶ್ರುತ್ವಾ ತು ಸಾ ತತಃ ಪ್ರಾದಾತ್ ತಸ್ಮೈ ತೇ ಮಣಿಕುಂಡಲೇ ||3||
ಅವಾಪ್ಯ ಕುಂಡಲೇ ತೇ ತು ರಾಜಾನಂ ಪುನರಬ್ರವೀತ್ ||4||
ವೈಶಂಪಾಯನ ಜನಮೇಜಯನೇ, ಸೌದಾಸನು ಹೀಗೆ ಹೇಳಿದ ಮಾತನ್ನೇ ಅಭಿಜ್ಞಾನವನ್ನಾಗಿ ಮಾಡಿಕೊಂಡು ಉದಂಕನು ಮದಯಂತಿಯ ಬಳಿ ಹೋಗಿ ಆ ಮಾತುಗಳನ್ನು ಉಚ್ಚರಿಸಿದನು. ಪತಿಯ ಮಾತನ್ನು ಕೇಳಿದ ರಾಣಿಯು ವಿಚಾರ ಮಾಡದೆ ತನ್ನ ಕಿವಿಯಲ್ಲಿದ್ದ ಮಣಿಕುಂಡಲಗಳನ್ನು ಉದಂಕನಿಗೆ ಕೊಟ್ಟಳು. ಮದಯಂತಿಯಿಂದ ಕುಂಡಲಗಳನ್ನು ಸ್ವೀಕರಿಸಿದ ಉದಂಕನು ಪುನಃ ಸೌದಾಸನ ಬಳಿ ಬಂದು ಹೀಗೆ ನುಡಿದನು.
ಉದಂಕಃ
ಕಿಮೇತದ್ ಗುಹ್ಯವಚನಂ ಶ್ರೋತುಮಿಚ್ಛಾಮಿ ತೇ ವಚಃ ||5||
ಉದಂಕ ಪಾರ್ಥಿವನೇ, ನೀನು ನಿನ್ನ ಪತ್ನಿಗೆ ಹೇಳಿದ ಮಾತಿನ ಗೂಢಾರ್ಥವನ್ನು ನಾನು ತಿಳಿಯಬಯಸುತ್ತೇನೆ.
ಸೌದಾಸಃ
ಪ್ರಜಾತಿಸರ್ಗಾದ್ ವಿಪ್ರಾನ್ ವೈ ಕ್ಷತ್ರಿಯಾಃ ಪೂಜಯಂತಿ ಹ |
ವಿಪ್ರೇಭ್ಯಶ್ಚಾಪಿ ಬಹವೋ ದೋಷಾಃ ಪ್ರಾದುರ್ಭವಂತಿ ನಃ ||6||
ಸೌದಾಸ ಸರ್ವೋತ್ತಮನಾದ ನಾರಾಯಣನಿಂದ ಬ್ರಾಹ್ಮಣರು ಉತ್ಪನ್ನರಾಗಿದ್ದಾರೆ ಎಂಬ ಕಾರಣದಿಂದ ಕ್ಷತ್ರಿಯರೆಲ್ಲರೂ ಬ್ರಾಹ್ಮಣರನ್ನು ಪೂಜಿಸುತ್ತಾರೆ. ಹೀಗಿದ್ದರೂ ಬ್ರಾಹ್ಮಣರಲ್ಲಿಯೂ ಅನೇಕ ದೋಷಗಳು ಕೆಲವೊಮ್ಮೆ ಉತ್ಪನ್ನವಾಗುತ್ತವೆ.

ಸೋಽಹಂ ದ್ವಿಜೇಭ್ಯಃ ಪ್ರಣತೋ ವಿಪ್ರಾದ್ ದೋಷಮವಾಪ್ತವಾನ್ |
ಗತಿಮನ್ಯಾಂ ನ ಪಶ್ಯಾಮಿ ಮದಯಂತೀಸಹಾಯವಾನ್ ॥7॥
ನಾನು ಬ್ರಾಹ್ಮಣರ ವಿಷಯದಲ್ಲಿ ಯಾವಾಗಲೂ ನಮಸ್ಕಾರ ಬುದ್ಧಿಯುಳ್ಳವನಾಗಿಯೇ ಇರುತ್ತಿದ್ದೆನು. ಆದರೆ ಇಂದು ಅಂತಹ ಬ್ರಾಹ್ಮಣನಿಂದಲೇ ಶಾಪವನ್ನು ಪಡೆದು ಇಂತಹ ಸ್ಥಿತಿಯನ್ನು ಅನುಭವಿಸುತ್ತಿದ್ದೇನೆ. ಈ ಸಮಯದಲ್ಲಿ ನನಗೆ ಮದಯಂತಿಯೊಬ್ಬಳೇ ಸಹಾಯಕಳು. ಬೇರೆ ಯಾವ ಮಾರ್ಗವೂ  ಕಾಣಿಸುತ್ತಿಲ್ಲ.
ನ ಚಾನ್ಯಾಮಪಿ ಪಶ್ಯಾಮಿ ಗತಿಂ ಗತಿಮತಾಂ ವರ |
ಸ್ವರ್ಗದ್ವಾರಸ್ಯ ಗಮನೇ ಸ್ಥಾನೇ ಚೇಹ ದ್ವಿಜೋತ್ತಮ ॥8॥
ಜಂಗಮ ಪ್ರಾಣಿಗಳಲ್ಲಿ ಶ್ರೇಷ್ಠನಾದ ದ್ವಿಜವರ್ಯನೇ, ಈ ಲೋಕದಲ್ಲಿ ನಾನು ಸುಖವಾಗಿರುವುದಕ್ಕೆ, ಪರಲೋಕದಲ್ಲಿ ಸುಖವನ್ನು ಹೊಂದುವುದಕ್ಕೆ, ಸತ್ಪಾತ್ರನಾದ ನಿನಗೆ ದಾನ ಮಾಡುವುದಕ್ಕಿಂತ ಬೇರೆ ಯಾವ ಮಾರ್ಗವನ್ನೂ ಕಾಣದಾಗಿದ್ದೇನೆ.
ನ ಹಿ ರಾಜ್ಞಾ ವಿಶೇಷೇಣ ವಿರುದ್ಧೇನ ದ್ವಿಜಾತಿಭಿಃ |
ಶಕ್ಯಂ ತ್ರಿಲೋಕೇ ಸಂಸ್ಥಾತುಂ ಪ್ರೇತ್ಯ ವಾ ಸುಖಮೇಧಿತುಮ್ ॥9॥
ಬ್ರಾಹ್ಮಣರಲ್ಲಿ ದ್ವೇಷ ಕಟ್ಟಿಕೊಂಡ ರಾಜನು ಈ ಲೋಕದಲ್ಲಿ ಬದುಕಲು ಅರ್ಹನಾಗಿರುವುದಿಲ್ಲ. ಪರಲೋಕಕ್ಕೆ ಹೋಗಿ ಅಲ್ಲಿ ಸುಖವನ್ನು ಹೊಂದಲು ಸಾಧ್ಯವಾಗುವುದಿಲ್ಲ.
ತದಿಷ್ಟೇನ ಮಯ್ಯೈವೈತೇ ದತ್ತೇ ಸ್ವೇ ಮಣಿಕುಂಡಲೇ |
ಯಃ ಕೃತಸ್ತೇಽದ್ಯ ಸಮಯಃ ಸಫಲಂ ತಂ ಕುರುಷ್ವ ಮೇ ॥10॥
ಆದ್ದರಿಂದ ಬ್ರಾಹ್ಮಣನು ಇಷ್ಟಪಟ್ಟ ಪದಾರ್ಥವನ್ನು ಕೊಡಬೇಕೆಂಬ ಭಾವದಿಂದಲೇ ಈ ಮಣಿಕುಂಡಲಗಳನ್ನು ನಿನಗೆ ನೀಡಿರುತ್ತೇನೆ. ನಿನ್ನ ನಿಬಂಧನೆಯ ಪ್ರಕಾರ ನೀನು ಮಾಡಬೇಕಾಗಿರುವುದನ್ನು ಸಫಲಗೊಳಿಸು.
ಉದಂಕಃ
ರಾಜಂಸ್ತಥೈವ ಕರ್ತಾಸ್ಮಿ ಪುನರೇಷ್ಯಾಮಿ ತೇ ವಶಮ್ |
ಪ್ರಶ್ನಂ ಚ ಕಂಚಿತ್ ಪ್ರಷ್ಟುಂ ತ್ವಾಂ ವ್ಯವಸಿಷ್ಯೇ ಪರಂತಪ ॥11॥
ಉದಂಕ ಮಹಾರಾಜನೇ, ಹಾಗೆಯೇ ಆಗಲಿ. ನೀನು ಹೇಳಿದಂತೆಯೇ ಮಾಡುತ್ತೇನೆ. ಕರ್ಣಕುಂಡಲಗಳನ್ನು ಗುರುಗಳಿಗೆ ಒಪ್ಪಿಸಿ ನಿನ್ನ ಅಧೀನನಾಗುತ್ತೇನೆ. ಇನ್ನೊಂದು ಮುಖ್ಯವಾದ ಪ್ರಶ್ನೆಯು ನನ್ನ ತಲೆಯಲ್ಲಿದೆ. ಈ ಗುರುದಕ್ಷಿಣೆಯನ್ನು ಒಪ್ಪಿಸಿ ಬಂದು ಆ ಪ್ರಶ್ನೆಯನ್ನು ಕೇಳುತ್ತೇನೆ.
ಸೌದಾಸಃ
ಬ್ರೂಹಿ ವಿಪ್ರ ಯಥಾಕಾಮಂ ಪ್ರತಿವಕ್ತಾಸ್ಮಿ ತೇ ವಚಃ |
ಛೇತ್ತಾಸ್ಮಿ ಸಂಶಯಂ ತೇಹಂ ನ ಮೇಽತ್ರಾಸ್ತಿ ವಿಚಾರಣಾ ॥12॥
ಸೌದಾಸ ವಿಪ್ರಶ್ರೇಷ್ಠನೇ, ನಿನ್ನ ಇಚ್ಛೆಯಂತೆ ಪ್ರಶ್ನಿಸು. ಅದಕ್ಕೆ ಉತ್ತರಿಸುತ್ತೇನೆ. ನಿನ್ನ ಸಂಶಯವನ್ನೂ ಪರಿಹರಿಸುತ್ತೇನೆ, ಯಾವ ಸಂಶಯವೂ ಬೇಡ.
ಉದಂಕಃ
ಪ್ರಾಹುರ್ವಾಕ್ಸಂಗಮಂ ಮಿತ್ರಂ ಧರ್ಮನೈಪುಣ್ಯದರ್ಶಿನಃ |
ಮಿತ್ರೇಷು ಯಶ್ಚ ವಿಷಮಃ ಸ್ತೇನ ಇತ್ಯೇವ ತಂ ವಿದುಃ ॥13॥
ಉದಂಕ ಧರ್ಮಶಾಸ್ತ್ರ ಪ್ರವೀಣರಾದ ಪಂಡಿತರು ಮಾತಿನಲ್ಲಿ ಸಂಯಮ ಇರುವ ವ್ಯಕ್ತಿಯನ್ನೇ ಬ್ರಾಹ್ಮಣನೆನ್ನುತ್ತಾರೆ. ಯಾವನು ಸ್ನೇಹಿತನ ವಿಷಯದಲ್ಲಿ ವಿರುದ್ಧವಾಗಿ ವರ್ತಿಸುತ್ತಾನೋ ಅವನು ಕಳ್ಳನೆಂದೇ ಕರೆಸಿಕೊಳ್ಳುತ್ತಾನೆಂದು ಬಲ್ಲವರು ಹೇಳುತ್ತಾರೆ.
ಸ ಭವಾನ್ ಮಿತ್ರತಾಮದ್ಯ ಸಂಪ್ರಾಪ್ತೋ ಮಮ ಪಾರ್ಥಿವ |
ಸ ಮೇ ಬುದ್ಧಿಂ ಪ್ರಯಚ್ಛ ತ್ವಂ ಯುಕ್ತಾಂ ಬುದ್ಧಿಮತಾಂ ವರ ॥14॥
ಭೂಮಿಪಾಲಕನೇ, ಪುರುಷಶ್ರೇಷ್ಠನೇ, ಈಗ ನೀನು ನನ್ನ ಬಳಿ ಸ್ನೇಹಭಾವ ಹೊಂದಿರುವೆ. ಆದ್ದರಿಂದ ನೀನು ನನಗೆ ಒಳ್ಳೆಯ ಬುದ್ಧಿವಾದವನ್ನು ಹೇಳು.
ಅವಾಪ್ತಾರ್ಥೋಽಹಮದ್ಯಾಸ್ಮಿ ಭವಾಂಶ್ಚ ಪುರುಷಾದಕಃ |
ಭವತ್ಸಕಾಶಮಾಗಂತುಂ ಕ್ಷಮಂ ಮಮ ನ ವೇತಿ ವೈ ॥15॥
ನಿನ್ನ ಬಳಿ ಬಂದು ನನ್ನ ಮನಸ್ಸಿನ ಅಭಿಲಾಷೆಯನ್ನು ಈಡೇರಿಸಿಕೊಂಡಿದ್ದೇನೆ. ನೀನು ನರಭಕ್ಷಕನಾದ ರಾಕ್ಷಸ. ಇಂತಹ ಸ್ಥಿತಿಯಲ್ಲಿ ಪುನಃ ನಾನು ನಿನ್ನ ಬಳಿಗೆ ಬರುವುದು ಯೋಗ್ಯವಾಗುತ್ತದೆಯೇ? ತಿಳಿಸು.
ಸೌದಾಸಃ
ಸಮಶ್ಚೇದಿಹ ವಕ್ತವ್ಯಂ ಮಯಾ ದ್ವಿಜವರೋತ್ತಮ |
ಮತ್ಸಮೀಪಂ ದ್ವಿಜಶ್ರೇಷ್ಠ ನಾಗಂತವ್ಯಂ ಕಥಂಚನ ॥16॥
ಸೌದಾಸ ಬ್ರಾಹ್ಮಣಶ್ರೇಷ್ಠನೇ, ಈ ವಿಷಯದಲ್ಲಿ ನಿನಗೆ ಯೋಗ್ಯವಾದ ಒಂದು ಮಾತನ್ನು ಹೇಳುತ್ತೇನೆ. ನನ್ನ ಬಳಿ ಯಾವುದೇ ಕಾರಣದಿಂದ ನೀನು ಬರುವ ಅಗತ್ಯವಿರುವುದಿಲ್ಲ. ಇಂತಹ ರಾಕ್ಷಸನಲ್ಲಿಯೂ ವಿಶ್ವಾಸವನ್ನು ತಾಳಿದ್ದಾದಲ್ಲಿ ನನ್ನ ಮಾತನ್ನು ಅಂಗೀಕರಿಸು.
ತವೈವ ತು ಪ್ರಪಶ್ಯಾಮಿ ಶ್ರೇಯೋ ಭೃಗುಕುಲೋದ್ವಹ |
ಆಗಚ್ಛತೋ ಹಿ ತೇ ವಿಪ್ರ ಭವೇನ್ಮೃತ್ಯುರಸಂಶಯಃ ॥17॥
ಭಾರ್ಗವನೇ, ನಿನ್ನ ಶ್ರೇಯಸ್ಸಿನ ದೃಷ್ಟಿಯಿಂದ ಈ ಮಾತುಗಳನ್ನು ಆಡಿದ್ದೇನೆ. ಪುನಃ ನೀನು ಮರಳಿ ಬಂದದ್ದೇ ಆದಲ್ಲಿ ನಿನಗೆ

ಮೃತ್ಯುವು ಸಮೀಪಿಸುತ್ತದೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ವೈಶಂಪಾಯನಃ
ಇತ್ಯುಕ್ತಃ ಸ ತದಾ ರಾಜ್ಞಾ ಕ್ಷಮಂ ಬುದ್ಧಿಸಮಾಹಿತಮ್ |
ಸಮನುಜ್ಞಾಪ್ಯ ರಾಜಾನಮಹಲ್ಯಾಂ ಪ್ರತಿ ಜಗ್ಮಿವಾನ್ ॥18॥
ವೈಶಂಪಾಯನ ಜನಮೇಜಯನೇ, ಹೀಗೆ ಬುದ್ಧಿವಂತನಾದ ಸೌದಾಸನು ಉಚಿತವಾದ, ಹಿತಕರವಾದ ಮಾತುಗಳನ್ನು ಹೇಳಿದ ಬಳಿಕ ಅವನ ಅನುಮತಿಯನ್ನು ಸ್ವೀಕರಿಸಿದ ಉದಂಕನು ಅಹಲ್ಯೆ ಇದ್ದ ಆಶ್ರಮದ ಕಡೆ ಪ್ರಯಾಣ ಬೆಳೆಸಿದನು.
ಗೃಹೀತ್ವಾ ಕುಂಡಲೇ ದಿವ್ಯೇ ಗುರುಪತ್ನ್ಯಾಃ ಪ್ರಿಯಂಕರಃ |
ಜವೇನ ಮಹತಾ ಪ್ರಾಯಾದ್ ಗೌತಮಸ್ಯಾಶ್ರಮಂ ಪ್ರತಿ ॥19॥
ದಿವ್ಯವಾದ ಕರ್ಣಕುಂಡಲಗಳನ್ನು ಸ್ವೀಕರಿಸಿ ಗುರುಪತ್ನಿಗೆ ಹಿತವನ್ನು ಮಾಡಬೇಕೆಂದು ಗೌತಮರ ಆಶ್ರಮವನ್ನು ಕುರಿತು ವೇಗವಾಗಿ ಹೊರಟನು.
ಯಥಾ ತಥಾ ರಕ್ಷಣಂ ಚ ಮದಯಂತ್ಯಾಭಿಭಾಷಿತಮ್ |
ತಥಾ ತೇ ಕುಂಡಲೇ ಬದ್ಧ್ವಾ ತದಾ ಕೃಷ್ಣಾಜಿನೇನ ತತ್ ॥20॥
ಮದಯಂತಿಯು ಉದಂಕನಿಗೆ ಕರ್ಣಕುಂಡಲಗಳನ್ನು ರಕ್ಷಿಸುವ ವಿಷಯದಲ್ಲಿ ಯಾವ ವಿಧಿಗಳನ್ನು ತಿಳಿಸಿದ್ದಳೋ ಅದನ್ನು ನೆನಪಿಸಿಕೊಂಡು ಆ ಕುಂಡಲಗಳನ್ನು ಶುದ್ಧವಾಗಿ ಹೊತ್ತೊಯ್ಯಲು ಕೃಷ್ಣಾಜಿನದಲ್ಲಿ ಕಟ್ಟಿದನು.
ಸ ಕಸ್ಮಿಂಶ್ಚಿತ್ ಕ್ಷುಧಾಽಽವಿಷ್ಟಃ ಫಲಭಾರಾವನಾಮಿತಮ್ |
ಬಿಲ್ವಂ ದದರ್ಶ ತಸ್ಮಿಂಶ್ಚಾಪ್ಯಾರುರೋಹ ಕ್ಷುಧಾಽನ್ವಿತಃ ॥21॥
ಉದಂಕನು ದಾರಿಯಲ್ಲಿ ಹೋಗುವಾಗ ಹಸಿವೆಯಿಂದ ಕಂಗಾಲಾಗಿ ಹಣ್ಣಿನಿಂದ ತುಂಬಿದ ಮರವೊಂದರ ಬಳಿ ಸಾಗಿದನು. ಆ ಮರದಲ್ಲಿ ಸಾಕಷ್ಟು ಬಿಲ್ವಫಲಗಳು ತುಂಬಿದ್ದವು. ಅಂತಹ ಬಿಲ್ವವೃಕ್ಷವನ್ನು ಹಸಿವೆಯಿಂದ ಏರಿದನು.
ಶಾಖಾಸ್ವಾಸಜ್ಯ ತಸ್ಯೈವ ಕೃಷ್ಣಾಜಿನಮರಿಂದಮ ॥22॥
ಒಂದು ಶಾಖೆಯ ಮೇಲೆ ಕುಂಡಲಗಳಿರುವ ಕೃಷ್ಣಾಜಿನವನ್ನು ಇಟ್ಟನು.
ಯಸ್ಮಿಂಸ್ತೇ ಕುಂಡಲೇ ಬದ್ಧೇ ತದಾ ದ್ವಿಜವರೇಣ ವೈ |
ವಿಶೀರ್ಣಬಂಧನೇ ತಸ್ಮಿನ್ ಗತೇ ಕೃಷ್ಣಾಜಿನೇ ಮಹೀಮ್ ॥23॥
ಯಾವ ಕುಂಡಲಗಳುಳ್ಳ ಕೃಷ್ಣಾಜಿನವನ್ನು ಮರದ ಶಾಖೆಯಲ್ಲಿ ಬ್ರಾಹ್ಮಣನು ಸಿಕ್ಕಿಸಿ ಫಲಗಳನ್ನು ಉದುರಿಸುತ್ತಿದ್ದನೋ ಆ ಫಲಗಳ ಪತನದಿಂದ ಕೃಷ್ಣಾಜಿನದ ಬಂಧನವು ಸಡಿಲವಾಯಿತು. ಆ ಕೃಷ್ಣಾಜಿನದಲ್ಲಿರುವ ಕುಂಡಲಗಳು ಭೂಮಿಯಲ್ಲಿ ಬಿದ್ದವು.
ಅಪಶ್ಯದ್ ಭುಜಗಃ ಕಶ್ಚಿತ್ ತೇ ತತ್ರ ಮಣಿಕುಂಡಲೇ ॥24॥
ಆ ಕುಂಡಲಗಳನ್ನು ಸರ್ಪ ಒಂದು ನೋಡಿತು.
ಐರಾವತಕುಲೋದ್ಭೂತಃ ಶೀಘ್ರೋ ಭೂತ್ವಾ ತದಾ ಸ ವೈ |
ವಿಗೃಹ್ಯಾಸ್ಯೇನ ವಲ್ಮೀಕಂ ವಿವೇಶಾಥ ಸಕುಂಡಲಃ ॥25॥
ಐರಾವತ ಕುಲದಲ್ಲಿ ಹುಟ್ಟಿದ ತಕ್ಷಕವೆಂಬ ಸರ್ಪವು ಆ ಕುಂಡಲಗಳನ್ನು ನೋಡಿ ಅವುಗಳನ್ನು ಬಾಯಿಂದ ಕಚ್ಚಿಕೊಂಡು ಶೀಘ್ರವಾಗಿ ಒಂದು ಹುತ್ತದ ಒಳಗಡೆ ಪ್ರವೇಶಿಸಿತು.
ಹ್ರಿಯಮಾಣೇ ಸ ದೃಷ್ಟ್ವಾ ತು ಕುಂಡಲೇ ಪನ್ನಗೇನ ತು |
ಪಪಾತ ವೃಕ್ಷಾತ್ ಸೋದ್ವೇಗೋ ದುಃಖಾತ್ ಪರಮಕೋಪನಃ ॥26॥
ಸರ್ಪವು ಕುಂಡಲಗಳನ್ನು ಅಪಹರಿಸಿಕೊಂಡು ಹೋಗುತ್ತಿರುವುದನ್ನು ಉದಂಕನು ಮರದ ಮೇಲಿಂದ ನೋಡಿದನು. ತುಂಬಾ ಉದ್ವಿಗ್ನನಾಗಿ ದುಃಖದಿಂದ ಸಿಟ್ಟುಗೊಳ್ಳುತ್ತಾ ನೆಲದಲ್ಲಿ ಹಾರಿದನು.
ಸ ದಂಡಕಾಷ್ಠಮಾದಾಯ ವಲ್ಮೀಕಂ ನ್ಯಖನನ್ ತದಾ |
ಅಹಾನಿ ತ್ರಿಂಶದವ್ಯಗ್ರಃ ಪಂಚ ಚಾನ್ಯಾನಿ ಭಾರತ ॥27॥
ಕ್ರೋಧಾಮರ್ಷಾಭಿತಪ್ತಾಂಗಸ್ತತೋ ವೈ ದ್ವಿಜಸತ್ತಮಃ ॥28॥
ಅತ್ಯಂತ ಕೋಪಾವಿಷ್ಟನಾದ ಉದಂಕನು ಸಿಟ್ಟು-ದುಃಖಗಳಿಂದ ಸಹಿತನಾಗಿ ಒಂದು ಕೋಲನ್ನು ತೆಗೆದುಕೊಂಡು ಸರ್ಪವು ಪ್ರವೇಶಿಸಿದ ಹುತ್ತವನ್ನು ಅಗೆಯ ತೊಡಗಿದನು. ನಿರಂತರವೂ ಮೂವತ್ತೈದು ಹಗಲುಗಳಲ್ಲಿ ಉದಂಕನ ಈ ಪ್ರಯತ್ನವು ನಡೆಯಿತು.
ತಸ್ಯ ವೇಗಮಸಹ್ಯಂ ತಮಸಹಂತೀ ವಸುಂಧರಾ |
ದಂಡಕಾಷ್ಠಾಭಿನುನ್ನಾಂಗೀ ಚಚಾಲ ಭೃಶಮಾತುರಾ ॥29॥
ಸಹಿಸಲು ಅಸಾಧ್ಯವಾದ ಉದಂಕನ ವೇಗವನ್ನು ಭೂಮಿಯು ಸಹಿಸಲಾರದಾಯಿತು. ಮರದ ದೊಣ್ಣೆಯ ಪೆಟ್ಟಿನಿಂದ ದುಃಖಿತಳಾದ ಭೂಮಾತೆಯು ಚಿಂತಾಗ್ರಸ್ತಳಾಗಿ ನಡುಗತೊಡಗಿದಳು.
ತತಃ ಖನತ ಏವಾಸ್ಯ ವಿಪ್ರರ್ಷೇರ್ಧರಣೀತಳಮ್ |
ನಾಗಲೋಕಸ್ಯ ಪಂಥಾನಂ ಕಾಮಯಾನಸ್ಯ ನಿಶ್ಚಯಾತ್ ॥30॥
ರಥೇನ ಹರಿಯುಕ್ತೇನ ತಂ ದೇಶಮಭಿಜಗ್ಮಿವಾನ್ |
ವಜ್ರಪಾಣಿರ್ಮಹಾತೇಜಾ ದದರ್ಶಾಥ ದ್ವಿಜೋತ್ತಮಮ್ ॥31॥
ನಾಗಲೋಕಕ್ಕೆ ಉದಂಕನಿಗೆ ಮಾರ್ಗವನ್ನು ಕಲ್ಪಿಸಿಕೊಡಬೇಕೆಂದು ನಿಶ್ಚಯಿಸಿಕೊಂಡು ಉದಂಕನು ಭೂಮಿಯನ್ನು ಅಗೆಯುತ್ತಿರುವಾಗಲೇ ತೇಜಸ್ವಿಯಾದ ವಜ್ರಪಾಣಿಯಾದ ಇಂದ್ರನು ಕುದುರೆಗಳಿಂದ ಕೂಡಿರುವ ರಥದಲ್ಲಿ ಕುಳಿತು ಉದಂಕನು ಅಗೆಯುತ್ತಿರುವ ಭೂಮಿಯ ಕಡೆ ಆಗಮಿಸಿದನು. ಅಲ್ಲಿ ದ್ವಿಜಶ್ರೇಷ್ಠನಾದ ಉದಂಕನನ್ನು ನೋಡಿದನು.

ಸ ತತ್ರ ಬ್ರಾಹ್ಮಣೋ ಭೂತ್ವಾ ತಸ್ಯ ದುಃಖೇನ ದುಃಖಿತಃ |
ಉದಂಕಮಬ್ರವೀತ್ ತಾತ ನೈತಚ್ಛಕ್ಯಂ ತ್ವಯೇತಿ ವೈ ||32||
ಬ್ರಾಹ್ಮಣ ವೇಷವನ್ನು ಧರಿಸಿ ಇಂದ್ರನು ಉದಂಕನಿಗೆ ಹೇಳಿದನು- ಉದಂಕನೇ, ಈ ನಾಗಲೋಕಕ್ಕೆ ಮಾರ್ಗವನ್ನು ಮಾಡಲು ನಿನ್ನ ದೊಣ್ಣೆಯಿಂದ ಸಾಧ್ಯವಾಗುವುದಿಲ್ಲ.
ಇತೋಽಸ್ತಿ ನಾಗಲೋಕೋ ವೈ ಯೋಜನಾನಿ ಸಹಸ್ರಶಃ |
ನ ದಂಡಕಾಷ್ಠಸಾಧ್ಯಂ ಚ ಮನ್ಯೇ ಕಾರ್ಯಮಿದಂ ತವ ||33||
ಇಲ್ಲಿಂದ ನಾಗಲೋಕವು ಸಾವಿರಾರು ಯೋಜನಗಳ ದೂರದಲ್ಲಿದೆ. ಅಷ್ಟು ದೂರದ ಮಾರ್ಗವನ್ನು ಕಲ್ಪಿಸುವುದು ಈ ದಂಡಕಾಷ್ಠಕ್ಕೆ ಸಾಧ್ಯವಾಗುವುದಿಲ್ಲ.
ಉದಂಕಃ
ನಾಗಲೋಕಾದ್ ಯದಿ ಬ್ರಹ್ಮನ್ ನ ಶಕ್ಯೇ ಕುಂಡಲೇ ಮಯಾ |
ಪ್ರಾಪ್ತುಂ ಪ್ರಾಣಾನ್ ವಿಮೋಕ್ಷ್ಯಾಮಿ ಪಶ್ಯತಸ್ತೇ ದ್ವಿಜೋತ್ತಮ ||34||
ಉದಂಕ ಬ್ರಾಹ್ಮಣವರ್ಯನೇ, ಈ ಕಾಷ್ಠದ ಮೂಲಕವಾಗಿಯೇ ಮಾರ್ಗವನ್ನು ಕಲ್ಪಿಸಿಕೊಂಡು ನಾಗಲೋಕಕ್ಕೆ ಹೋಗಿ ಕುಂಡಲಗಳನ್ನು ತರಲಾಗದಿದ್ದಲ್ಲಿ ನೀನು ನೋಡುತ್ತಿರುವಂತೆ ನನ್ನ ಪ್ರಾಣಗಳನ್ನೇ ತ್ಯಾಗ ಮಾಡುತ್ತೇನೆ.
ವೈಶಂಪಾಯನಃ
ಯದಾ ಸ ನಾಶಕತ್ ತಸ್ಯ ನಿಶ್ಚಯಂ ಕರ್ತುಮನ್ಯಥಾ |
ವಜ್ರಪಾಣಿಸ್ತದಾ ದಂಡಂ ವಜ್ರಾಸ್ತ್ರೇಣ ಯುಯೋಜ ಹ ||35||
ವೈಶಂಪಾಯನ ಜನಮೇಜಯನೇ, ಉದಂಕನ ನಿಶ್ಚಯವಾದ ಮಾತುಗಳನ್ನು ಇಂದ್ರನು ಕೇಳಿಸಿಕೊಂಡನು. ಅವನನ್ನು ಬದಲಾಯಿಸಲು ಸಾಧ್ಯವಿಲ್ಲ ಎಂದು ನಿಶ್ಚಯವಾದಾಗ ವಜ್ರಪಾಣಿಯಾದ ಇಂದ್ರನು ಅವನ ದಂಡಕಾಷ್ಠದಲ್ಲಿ ವಜ್ರಾಯುಧವನ್ನು ಪ್ರವೇಶಿಸಿದನು.
ತತೋ ವಜ್ರಪ್ರಹಾರೈಸ್ತೈರ್ದಾರ್ಯಮಾಣಾ ವಸುಂಧರಾ |
ನಾಗಲೋಕಸ್ಯ ಪಂಥಾನಮಕರೋಜ್ಜನಮೇಜಯ ||36||
ನಿರಂತರ ವಜ್ರಾಯುಧ ಪ್ರಹಾರದಿಂದ ಸೀಳಿದ ಭೂಮಿಯು ವೇಗವಾಗಿ ನಾಗಲೋಕಕ್ಕೆ ದಾರಿ ಮಾಡಿಕೊಟ್ಟಿತು.
ಸ ತೇನ ಮಾರ್ಗೇಣ ತದಾ ನಾಗಲೋಕಂ ವಿವೇಶ ಹ ||37||
ಆ ಮಾರ್ಗದ ಮೂಲಕ ಉದಂಕನು ನಾಗಲೋಕವನ್ನು ಪ್ರವೇಶಿಸಿದನು.
ದದರ್ಶ ನಾಗಲೋಕಂ ಚ ಯೋಜನಾನಿ ಸಹಸ್ರಶಃ ||38||
ಸಾವಿರಾರು ಯೋಜನಗಳಿಂದ ವಿಸ್ತೀರ್ಣವಾಗಿರುವ ನಾಗಲೋಕವನ್ನು ನೋಡಿದನು.
ಪ್ರಾಕಾರನಿಚಯೈರ್ದಿವ್ಯೈರ್ಮಣಿಮುಕ್ತಾದ್ಯಲಂಕೃತೈಃ |
ಉಪಪನ್ನಂ ಮಹಾಭಾಗ ಶಾತಕುಂಭಮಯೈಸ್ತಥಾ ||39||
ನಾಗಲೋಕವಾದರೂ ಅನೇಕ ಪ್ರಾಕಾರಗಳಿಂದ ಕೂಡಿದ್ದಿತು. ದಿವ್ಯವಾದ ಮಣಿಗಳಿಂದಲೂ, ಮುತ್ತುಗಳಿಂದಲೂ ಅಲಂಕೃತವಾಗಿದ್ದಿತು. ಬಂಗಾರದ ಕುಂಭಗಳಿಂದ ತುಂಬಿರುವ ಈ ನಾಗಲೋಕವನ್ನು ಉದಂಕನು ಕಂಡನು.
ವಾಪೀಃ ಸ್ಫಟಿಕಸೋಪಾನಾ ನದೀಶ್ಚ ವಿಮಲೋದಕಾಃ |
ದದರ್ಶ ವೃಕ್ಷಾಂಶ್ಚ ಬಹೂನ್ ನಾನಾದ್ವಿಜಗಣಾಯುತಾನ್ ||40||
ಸ್ಫಟಿಕಮಯವಾದ ಮೆಟ್ಟಿಲುಗಳಿಂದ ಕೂಡಿರುವ ಬಾವಿಗಳನ್ನೂ, ನಿರ್ಮಲವಾದ ನೀರಿನ ಸ್ರೋತಗಳುಳ್ಳ ನದಿಗಳನ್ನೂ, ಅನೇಕ ವಿಧವಾದ ಪಕ್ಷಿಗಳಿಂದ ತುಂಬಿದ ವೃಕ್ಷವಿಶೇಷಗಳನ್ನೂ ಕಂಡನು.
ನಾಗಲೋಕಸ್ಯ ವಿವರಂ ಸ ದದರ್ಶ ಭೃಗೂದ್ವಹಃ |
ಪಂಚಯೋಜನವಿಸ್ತಾರಮಾಯತಂ ಶತಯೋಜನಮ್ ||41||
ಐದು ಯೋಜನ ವಿಸ್ತಾರವುಳ್ಳ, ನೂರು ಯೋಜನ ಉದ್ದವಾಗಿರುವ ನಾಗಲೋಕದ ಮಹಾದ್ವಾರವನ್ನು ಕಂಡು ಆಶ್ಚರ್ಯಚಕಿತನಾದನು.
ನಾಗಲೋಕಮುದಂಕಸ್ತು ಪ್ರೇಕ್ಷ್ಯ ದೀನೋಽಭವತ್ ತದಾ |
ನಿರಾಶಶ್ಚಾಭವತ್ ತತ್ರ ಕುಂಡಲಾಹರಣೇ ತತಃ ||42||
ವಿಸ್ತಾರವಾದ ನಾಗಲೋಕವನ್ನು ನೋಡಿ ಕಳೆದು ಹೋಗಿರುವ ತನ್ನ ಮಣಿಯನ್ನು ಎಲ್ಲಿ ಹುಡುಕಬೇಕೆಂದೇ ತಿಳಿಯದೆ ಉದಂಕನ ಉತ್ಸಾಹವು ಉಡುಗಿತು. ತನ್ನ ಕರ್ಣಕುಂಡಲಗಳನ್ನು ಪಡೆಯುವುದರಲ್ಲಿ ನಿರಾಸೆ ಹೊಂದಿದನು.
ತತ್ರ ಪ್ರೋವಾಚ ತುರಗಸ್ತಂ ಕೃಷ್ಣಶ್ವೇತವಾಲಧಿಃ |
ತಾಮ್ರಾಸ್ಯನೇತ್ರಃ ಕೌರವ್ಯ ಪ್ರಜ್ವಲನ್ನಿವ ತೇಜಸಾ ||43||
ಇದೇ ಸಮಯಕ್ಕೆ ಸರಿಯಾಗಿ ಕಪ್ಪು-ಬಿಳಿ ಕೂದಲುಗಳ ಬಾಲವುಳ್ಳ, ಕೆಂಪಾದ ಮುಖ, ಕಣ್ಣುಗಳಿಂದ ಕೂಡಿರುವ, ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವುದೋ ಎಂಬಂತಿರುವ ಒಂದು ಕುದುರೆಯು ಉದಂಕನ ಬಳಿ ಬಂದು ಹೇಳಿತು.
ಅಶ್ವಃ
ಧಮ ಹ್ಯಪಾನಮೇತನ್ಮೇ ತತಸ್ತ್ವಂ ವಿಪ್ರ ಲಪ್ಸ್ಯಸೇ |
ಐರಾವತಸುತೇನೇಹ ತವಾನೀತೇ ಹಿ ಕುಂಡಲೇ ||44||
ಅಶ್ವ ವಿಪ್ರವರ್ಯನೇ, ನನ್ನ ಅಪಾನಸ್ಥಳವನ್ನು ಜೋರಾಗಿ ಊದು. ಹೀಗೆ ನೀನು ಮಾಡುವುದರಿಂದ ಐರಾವತನ ಸುತನು

ತೆಗೆದುಕೊಂಡಿರುವ ನಿನ್ನ ಕರ್ಣ ಕುಂಡಲಗಳನ್ನು ನೀನು ಪಡೆಯಬಹುದು.
ಮಾ ಜುಗುಪ್ಸಾಂ ಕೃಥಾಃ ಪುತ್ರ ತ್ವಮತ್ರಾರ್ಥೇ ಕಥಂಚನ |
ಆಸೇವಿತಸ್ತ್ವಯ್ಯೈತದ್ಧಿ ಗೌತಮಸ್ಯಾಶ್ರಮೇ ತದಾ ॥45॥
ವಿಪ್ರವರ್ಯನೇ, ಈ ಕರ್ತವ್ಯದಲ್ಲಿ ಹೇಸಿಗೆ ಪಡಬೇಡ. ಗೌತಮರ ಆಶ್ರಮದಲ್ಲಿ ಅನೇಕ ಬಾರಿ ಇಂತಹ ಕರ್ಮಗಳನ್ನು ಮಾಡಿರುತ್ತಿ.
ಉದಂಕಃ
ಕಥಂ ಭವಂತಂ ಜಾನೀಯಾಮುಪಾಧ್ಯಾಯಾಶ್ರಮಂ ಪ್ರತಿ |
ತನ್ಮಯಾ ಚೀರ್ಣಪೂರ್ವಂ ಚ ಶ್ರೋತುಮಿಚ್ಛಾಮಿ ತತ್ತ್ವತಃ ॥46॥
ಉದಂಕ ಅಶ್ವಶ್ರೇಷ್ಠನೇ, ಉಪಾಧ್ಯಾಯರ ಆಶ್ರಮದಲ್ಲಿ ನಾನು ನಿನ್ನನ್ನು ಯಾವಾಗ ನೋಡಿದೆ? ಆ ಆಶ್ರಮದಲ್ಲಿದ್ದಾಗ ನಿನ್ನ ಅಪಾನಸ್ಥಳವನ್ನು ಯಾವಾಗ ಊದಿದೆ? ಈ ವಿಷಯವನ್ನು ತಿಳಿಯಲು ಬಯಸುತ್ತೇನೆ.
ಅಶ್ವಃ
ಗುರೋರ್ಗುರುಂ ಮಾಂ ಜಾನೀಹಿ ಜ್ವಲಿತಂ ಜಾತವೇದಸಮ್ ॥47॥
ತ್ವಯಾ ಹ್ಯಹಂ ಸದಾ ವತ್ಸ ಗುರೋರರ್ಥೇ ತಪೋಧನ |
ಸತತಂ ಪೂಜಿತೋ ವಿಪ್ರ ಶುಚಿನಾ ಭೃಗುಸತ್ತಮ ॥48॥
ತತಃ ಶ್ರೇಯೋ ವಿಧಾಸ್ಯಾಮಿ ತವೈವ ಕುರು ಮಾ ಚಿರಮ್ ॥49॥
ಅಶ್ವ ಭೃಗುನಂದನನೇ, ವಿಪ್ರಶ್ರೇಷ್ಠನೇ, ನನ್ನನ್ನು ನಿನ್ನ ಗುರುವಿಗೂ ಗುರುವಾದ ಅಗ್ನಿದೇವನೆಂದು ಭಾವಿಸು. ಗುರುವಿನ ಸಲುವಾಗಿ ಶುಚಿಯಾಗಿ ಹೋಮಾದಿಗಳನ್ನು ವಿಧಿವತ್ತಾಗಿ ಅನುಷ್ಠಾನ ಮಾಡಿ ನನ್ನನ್ನು ಪೂಜಿಸಿರುವೆ. ಅದರಂತೆ ನಿನಗೆ ಶ್ರೇಯಸ್ಸನ್ನು ಮಾಡುತ್ತೇನೆ. ನಾನು ಹೇಳಿದಂತೆ ಕೂಡಲೇ ಮಾಡುವುದು ನಿನಗೆ ಯೋಗ್ಯವಾಗಿದೆ.
ವೈಶಂಪಾಯನಃ
ಇತ್ಯುಕ್ತಃ ಸ ತಥಾऽಕಾರ್ಷೀದ್ ಉದಂಕಶ್ಚಿತ್ರಭಾನುನಾ |
ಘೃತಾರ್ಚಿಃ ಪ್ರೀತಿಮಾಂಶ್ಚಾಪಿ ಪ್ರಜಜ್ವಾಲ ದಿಧಕ್ಷಯಾ ॥50॥
ವೈಶಂಪಾಯನ ಅಶ್ವವು ಹೀಗೆ ಹೇಳಿದ ಬಳಿಕ ಉದಂಕನು ಅದರಂತೆ ಆಚರಿಸಿದನು. ತುಪ್ಪದಿಂದ ಯುಕ್ತವಾದ ಜ್ವಾಲೆಯುಳ್ಳ ಅಗ್ನಿಯು ಇದರಿಂದ ಪ್ರೀತನಾಗಿ ನಾಗಲೋಕವನ್ನೇ ಸುಡುವಂತೆ ಬೆಳಗಿದನು.
ತತೋऽಸ್ಯ ರೋಮಕೂಪೇಭ್ಯೋ ಧ್ಮಾಯಮಾನಸ್ಯ ಭಾರತ |
ಘನಃ ಪ್ರಾದುರಭೂದ್ ಧೂಮೋ ನಾಗಲೋಕಭಯಾವಹಃ ॥51॥
ಉದಂಕನು ಅಪಾನಸ್ಥಳವನ್ನು ಊದುತ್ತಿರುವಂತೆ ಕುದುರೆಯ ರೋಮಕೂಪದಿಂದ ದಟ್ಟವಾದ ಹೊಗೆಯು ಹೊರಹೊಮ್ಮಿತು. ಆ ಭಯಂಕರವಾದ ಘನವಾದ ಹೊಗೆಯು ನಾಗಲೋಕಕ್ಕೆ ಭಯವನ್ನು ಹುಟ್ಟಿಸಿತು.
ತೇನ ಧೂಮೇನ ಸಹಸಾ ವರ್ಧಮಾನೇನ ಭಾರತ |
ನಾಗಲೋಕೇ ಮಹಾರಾಜ ನ ಪ್ರಾಜ್ಞಾಯತ ಕಿಂಚನ ॥52॥
ಕ್ಷಣಕ್ಷಣಕ್ಕೂ ಬೆಳೆಯುತ್ತಿರುವ ಹೊಗೆಯಿಂದಾಗಿ ನಾಗಲೋಕದಲ್ಲಿರುವ ಸರ್ಪಗಳು ಕಂಗಾಲಾದವು. ಯಾವ ಭಾಗದಲ್ಲಿ ಏನಿದೆ ಎಂದು ತಿಳಿಯಲು ಸಾಧ್ಯವಾಗಲಿಲ್ಲ.
ಹಾಹಾಕೃತಮಭೂತ್ ಸರ್ವಮೈರಾವತನಿವೇಶನಮ್ |
ವಾಸುಕಿಪ್ರಮುಖಾನಾಂ ಚ ನಾಗಾನಾಂ ಜನಮೇಜಯ ॥53॥
ಹೊಗೆಯಿಂದ ಆವೃತವಾದ ಸರ್ಪಗಳು ಹಾಹಾಕಾರವನ್ನು ಮಾಡಿದವು. ಐರಾವತನ ಮನೆಯೆಲ್ಲವೂ ವಾಸುಕಿ ಪ್ರಮುಖರಿಂದ ದುಃಖಿತವಾಯಿತು.
ನ ಪ್ರಾಕಾಶಂತ ವೇಶ್ಮಾನಿ ಧೂಮರುದ್ಧಾನಿ ಸರ್ವಶಃ |
ನೀಹಾರಸಂವೃತಾನೀವ ವನಾನಿ ಗಿರಯಸ್ತದಾ ॥54॥
ಹೊಗೆಯಿಂದ ವ್ಯಾಪಿಸಿದ ಯಾರ ಮನೆಗಳೂ ಕಣ್ಣಿಗೆ ಕಾಣಿಸಲಿಲ್ಲ. ಮಂಜಿನಿಂದ ಕವಿದ ವನಗಳು, ಪರ್ವತಗಳು ಕಣ್ಣಿಗೆ ಕಾಣಿಸದಿರುವಂತೆ ಹೊಗೆಯಿಂದ ನಾಗಲೋಕವೇ ಮುಚ್ಚಿಹೋಯಿತು.
ತೇ ಧೂಮರಕ್ತನಯನಾ ವಹ್ನಿತೇಜೋಭಿತಾಪಿತಾಃ |
ಆಜಗ್ಮುರ್ನಿಶ್ಚಯಂ ಜ್ಞಾತುಂ ಭಾರ್ಗವಸ್ಯಾತಿತೇಜಸಃ ॥55॥
ಕೆಂಪಾದ ಕಣ್ಣುಗಳಿಂದ ಕೂಡಿದ, ಬೆಂಕಿಯ ಜ್ವಾಲೆಗಳಂತೆಯೇ ಪ್ರಜ್ವಲಿಸುತ್ತಿರುವ ನಾಗಗಳೆಲ್ಲವೂ ಒಟ್ಟಾಗಿ ಸೇರಿ ಮಹಾತ್ಮನಾದ ಉದಂಕನ ಭಾವವೇನೆಂಬುದನ್ನು ತಿಳಿದುಕೊಳ್ಳಲು ಅವನ ಬಳಿ ಆಗಮಿಸಿದವು.
ಶ್ರುತ್ವಾ ತು ನಿಶ್ಚಯಂ ತಸ್ಯ ಮಹರ್ಷೇಸ್ತಿಗ್ಮತೇಜಸಃ |
ಸಂಭ್ರಾಂತಮನಸಃ ಸರ್ವೇ ಪೂಜಾಂ ಚಕ್ರುರ್ಯಥಾವಿಧಿ ॥56॥
ಮಹಾತೇಜಸ್ವಿಯಾದ ಉದಂಕನ ನಿರ್ಧಾರವೇನೆಂದು ತಿಳಿದು ಸರ್ಪಗಳೆಲ್ಲವೂ ಕಂಗಾಲಾದ ಮನಸ್ಸಿನಿಂದ ಕೂಡಿಕೊಂಡು ಉದಂಕನನ್ನು ಯೋಗ್ಯವಾಗಿ ಸತ್ಕರಿಸಿದವು.
ಸರ್ವೇ ಪ್ರಾಂಜಲಯೋ ನಾಗಾ ಬಾಲವೃದ್ಧಪುರೋಗಮಾಃ |
ಶಿರೋಭಿಃ ಪ್ರಣಿಪತ್ಯೋಚುಃ ಪ್ರಸೀದ ಭಗವನ್ನಿತಿ ॥57॥
ಸರ್ಪಗಳೆಲ್ಲವೂ ಉದಂಕನಿಗೆ ತಲೆಬಾಗಿ ನಮಸ್ಕರಿಸಿ ಪೂಜ್ಯನೇ, ಪ್ರಸನ್ನನಾಗು ಎಂದು ಪ್ರಾರ್ಥಿಸಿದವು.
ಪ್ರಸಾದ್ಯ ಬ್ರಾಹ್ಮಣಂ ತೇ ತು ಪಾದ್ಯಮರ್ಘ್ಯಂ ನಿವೇದ್ಯ ಚ |

ಪ್ರಾಯಚ್ಛತ್ ಕುಂಡಲೇ ದಿವ್ಯೇ ಪನ್ನಗಾಃ ಪರಮಾರ್ಚಿತೇ ॥58॥
ಬ್ರಾಹ್ಮಣನನ್ನು ಸಂತೋಷಪಡಿಸುತ್ತಾ ಅರ್ಘ್ಯ-ಪಾದ್ಯಾದಿಗಳನ್ನು ನೀಡಿ, ಪವಿತ್ರವಾದ ಮಣಿಕುಂಡಲವನ್ನು ತೆಗೆದುಕೊಂಡು ಬಂದು ಉದಂಕನಿಗೆ ಒಪ್ಪಿಸಿದವು.
ತತಃ ಸ ಪೂಜಿತೋ ನಾಗೈಃ ತದೋದಂಕಃ ಪ್ರತಾಪವಾನ್ |
ಅಗ್ನಿಂ ಪ್ರದಕ್ಷಿಣಂ ಕೃತ್ವಾ ಜಗಾಮ ಗುರುಸದ್ಮ ತತ್ ॥59॥
ಹೀಗೆ ಪ್ರತಾಪಶಾಲಿಯಾದ ಉದಂಕನು ಸರ್ಪದಿಂದ ಪೂಜಿತನಾಗಿ, ಅಗ್ನಿಯನ್ನು ಪ್ರದಕ್ಷಿಸಿ ಗುರುಗಳ ಆಶ್ರಮದೆಡೆ ನಡೆದನು.
ಸ ಗತ್ವಾ ತ್ವರಿತೋ ರಾಜನ್ ಗೌತಮಸ್ಯ ನಿವೇಶನಮ್ |
ಪ್ರಾಯಚ್ಛತ್ ಕುಂಡಲೇ ದಿವ್ಯೇ ಗುರುಪತ್ನ್ಯಾಸ್ತದಾಽನಘ ॥60॥
ಉದಂಕನು ವೇಗವಾಗಿ ಗೌತಮರ ಆಶ್ರಮಕ್ಕೆ ಹೋಗಿ, ದಿವ್ಯವಾದ ಮಣಿಕುಂಡಲಗಳನ್ನು ಗುರುಪತ್ನಿಗೆ ನಿವೇದಿಸಿದನು.
ಏವಂ ಲೋಕದ್ವಯಂ ತೇನ ವಿಪ್ರೇಣ ಜನಮೇಜಯ |
ಪರಿಕ್ರಮ್ಯಾಹೃತೇ ದಿವ್ಯೇ ತತಸ್ತೇ ಮಣಿಕುಂಡಲೇ ॥61॥
ಹೀಗೆ ಭೂಲೋಕ, ನಾಗಲೋಕಗಳನ್ನು ಸಂಚರಿಸಿ ದಿವ್ಯವಾದ ಮಣಿಕುಂಡಲಗಳನ್ನು ಸಂಗ್ರಹಿಸಿ, ವಿಪ್ರಶ್ರೇಷ್ಠನಾದ ಉದಂಕನು ಗುರುಪತ್ನಿಗೆ ನೀಡಿದನು.
ಏವಂಪ್ರಭಾವಃ ಸ ಮುನಿರುದಂಕೋ ಭರತರ್ಷಭ |
ಪರೇಣ ತಪಸಾ ಯುಕ್ತೋ ಯನ್ಮಾಂ ತ್ವಂ ಪರಿಪೃಚ್ಛಸಿ ॥62॥
ಭರತಶ್ರೇಷ್ಠನೇ, ಇಂತಹ ಉತ್ತಮವಾದ ಪ್ರಭಾವದಿಂದ ಕೂಡಿದವನು ಮುನಿಶ್ರೇಷ್ಠನಾದ ಉದಂಕನು. ಶ್ರೇಷ್ಠವಾದ ತಪಸ್ಸಿನಿಂದ ಕೂಡಿದ ಉದಂಕನ ಬಗ್ಗೆ ಪ್ರಶ್ನಿಸಿದಾಗ ಇಷ್ಟು ಉತ್ತರಿಸಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಉದಂಕೋಪಾಖ್ಯಾನೇ ಕುಂಡಲಾಹರಣಪ್ರಕಾರಕಥನಂ ನಾಮ ಅಷ್ಟಪಂಚಾಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.
॥ ಉದಂಕೋಪಾಖ್ಯಾನಂ ಸಮಾಪ್ತಮ್ ॥
* * * * *
ಐವತ್ತೊಂಬತ್ತನೆಯ ಅಧ್ಯಾಯ
ಉದಂಕನಿಗೆ ವರವನ್ನು ನೀಡಿ ಶ್ರೀಕೃಷ್ಣನು ದ್ವಾರಕೆಗೆ ಆಗಮಿಸುವಾಗ ಮಧ್ಯದಲ್ಲಿ ರೈವತ ಪರ್ವತಕ್ಕೆ ಹೋದುದು. ರೈವತ ಮಹೋತ್ಸವದಲ್ಲಿ ಕೃಷ್ಣನು ಭಾಗವಹಿಸಿ ಬಳಿಕ ದ್ವಾರಕೆಗೆ ಆಗಮಿಸಿ, ತಂದೆ-ತಾಯಿಗಳನ್ನು ನಮಸ್ಕರಿಸಿದುದು.
ಜನಮೇಜಯಃ
ಉದಂಕಾಯ ವರಂ ದತ್ತ್ವಾ ಗೋವಿಂದೋ ದ್ವಿಜಸತ್ತಮ |
ಅತ ಊರ್ಧ್ವಂ ಮಹಾಬಾಹುಃ ಕಿಂ ಚಕಾರ ಮಹಾಯಶಾಃ ॥1॥
ಜನಮೇಜಯ ದ್ವಿಜಶ್ರೇಷ್ಠರಾದ ವೈಶಂಪಾಯನರೇ, ಮಹಾಕೀರ್ತಿ ಸಂಪನ್ನನಾದ, ಬಾಹುಬಲಶಾಲಿಯಾದ ಶ್ರೀಕೃಷ್ಣನು ಉದಂಕನಿಗೆ ಮರುಭೂಮಿಯಲ್ಲೂ ನೀರು ಸಿಗುವಂತೆ ವರವನ್ನು ಕೊಟ್ಟು ಮುಂದೇನು ಮಾಡಿದನು ಎಂದು ತಿಳಿಸಿರಿ.
ವೈಶಂಪಾಯನಃ
ದತ್ತ್ವಾ ವರಮುದಂಕಾಯ ಪ್ರಾಯಾತ್ ಸಾತ್ಯಕಿನಾ ಸಹ |
ದ್ವಾರಕಾಮೇವ ಗೋವಿಂದಃ ಶೀಘ್ರವೇಗೈರ್ಹಯೋತ್ತಮೈಃ ॥2॥
ವೈಶಂಪಾಯನ ಜನಮೇಜಯನೇ, ಕೃಷ್ಣನು ಉದಂಕನಿಗೆ ವರದಾನ ಮಾಡಿದ ಬಳಿಕ ಶೀಘ್ರವಾಗಿ ಸಾಗುವ ಕುದುರೆಗಳಿಂದ ಕೂಡಿದ ರಥವನ್ನೇರಿ ಸಾತ್ಯಕಿಯ ಜೊತೆಗೆ ದ್ವಾರಕೆಯ ಕಡೆಗೆ ನಡೆದನು.
ಸ ಸರಾಂಸಿ ನದೀಶ್ಚೈವ ವನಾನಿ ವಿವಿಧಾನಿ ಚ |
ಅತಿಕ್ರಮ್ಯಾಸಸಾದಾಥ ರಮ್ಯಾಂ ದ್ವಾರವತೀಂ ಪುರೀಮ್ ॥3॥
ದಾರಿಯಲ್ಲಿ ಸಿಗುವ ಸರೋವರಗಳನ್ನು, ನದಿಗಳನ್ನು, ಅರಣ್ಯಗಳನ್ನು, ಬಗೆಬಗೆಯ ಗಿರಿ-ಪರ್ವತಗಳನ್ನು ದಾಟಿ, ಕೃಷ್ಣನು ಸಾತ್ಯಕಿಯ ಜೊತೆಗೆ ರಮಣೀಯವಾದ ದ್ವಾರಕಾ ಪಟ್ಟಣವನ್ನು ಸೇರಿದನು.
ವರ್ತಮಾನೇ ಮಹಾರಾಜ ಮಹೇ ರೈವತಕಸ್ಯ ತು |
ಉಪಾಯಾತ್ ಪುಂಡರೀಕಾಕ್ಷೋ ಯುಯುಧಾನಾನುಗಸ್ತಥಾ ॥4॥
ಶ್ರೀಕೃಷ್ಣನು ದ್ವಾರಕೆಗೆ ಹೋಗುವ ಸಮಯದಲ್ಲಿ ರೈವತ ಪರ್ವತದಲ್ಲಿ ಒಂದು ಪೂಜಾರೂಪವಾದ ಉತ್ಸವವು ನಡೆಯುತ್ತಿತ್ತು. ಸಾತ್ಯಕಿಯಿಂದ ಸಹಿತನಾಗಿ ಪುಂಡರೀಕಾಕ್ಷನು ಆ ಉತ್ಸವಕ್ಕೆ ಹೋದನು.
ಅಲಂಕೃತಸ್ತು ಸ ಗಿರಿರ್ನಾನಾರೂಪೈರ್ವಿಚಿತ್ರಕೈಃ |
ಬಭೌ ರುಗ್ಮಮಯೈಃ ಕೋಶೈಃ ಸರ್ವತ್ರ ಪುರುಷರ್ಷಭ ॥5॥
ಆ ಉತ್ಸವದಲ್ಲಿ ರೈವತ ಪರ್ವತವು ಬಗೆಬಗೆಯ ಆಕಾರಗಳುಳ್ಳ, ವಿಚಿತ್ರವಾದ, ಸುವರ್ಣಮಯವಾದ ಡೇರೆಗಳಿಂದ ಕೂಡಿಕೊಂಡು ಶೋಭಾಯಮಾನವಾಗಿ ಕಾಣಿಸುತ್ತಿತ್ತು.
ಕಾಂಚನಸ್ರಗ್ಭಿರಗ್ರ್ಯಾಭಿಃ ಸುಮನೋಭಿಸ್ತಥೈವ ಚ |
ವಾಸೋಭಿಶ್ಚ ಮಹಾಶೈಲಃ ಕಲ್ಪವೃಕ್ಷೈಶ್ಚ ಸರ್ವಶಃ ॥6॥
ಬಂಗಾರಮಯವಾದ ಶ್ರೇಷ್ಠವಾದ ಮಾಲೆಗಳಿಂದಲೂ, ದೇವತೆಗಳಿಂದಲೂ, ವಸ್ತ್ರಗಳಿಂದಲೂ, ಕಲ್ಪವೃಕ್ಷಗಳಿಂದಲೂ

ಮಹಾಪರ್ವತವೆನಿಸಿದ ರೈವತ ಪರ್ವತವು ಶೋಭಿಸುತ್ತಿತ್ತು.
ದೀಪವೃಕ್ಷೈಶ್ಚ ಸೌವರ್ಣೈರಭೀಕ್ಷ್ಣಮಭಿಶೋಭಿತಃ |
ಗುಹಾನಿರ್ಝರಭಾಗೇಷು ದೀಪಭೂತೋ ಬಭೂವ ಹ ॥7॥
ಬಂಗಾರಮಯವಾದ ದೀಪವೃಕ್ಷಗಳಿಂದ ನಿರಂತರವಾಗಿ ಶೋಭಿಸುತ್ತಿರುವ ಆ ಪರ್ವತದ ಗುಹೆಗಳಲ್ಲಿ, ಚಿಲುಮೆಗಳಿದ್ದ ಪ್ರದೇಶಗಳಲ್ಲಿ ಸದಾ ಬೆಳಕೇ ಇರುವಂತೆ ಕಾಣಿಸುತ್ತಿತ್ತು.
ಪತಾಕಾಭಿಶ್ಚ ಚಿತ್ರಾಭಿಃ ಸಂಘಟ್ಟಾಭಿಃ ಸಮಂತತಃ |
ಪುಂಭಿಃ ಸ್ತ್ರೀಭಿಶ್ಚ ಸಂಪೂರ್ಣಃ ಪ್ರಗೀತ ಇವ ಚಾಭವತ್ ॥8॥
ಚಿತ್ರ-ವಿಚಿತ್ರವಾದ ಪತಾಕೆಗಳಿಂದ, ಗಂಟೆಗಳಿಂದ, ಸ್ತ್ರೀ-ಪುರುಷರಿಂದ ಉಚ್ಚರಿಸಲ್ಪಡುವ ಸುಮಧುರ ಶಬ್ದಗಳಿಂದ ಸಂಗೀತಮಯವಾಗಿ ಕಾಣಿಸುತ್ತಿತ್ತು.
ಅತೀವ ಪ್ರೇಕ್ಷಣೀಯೋಽಭೂನ್ಮೇರುರ್ಮುನಿಗಣೈರಿವ ॥9॥
ಮುನಿಗಳಿಗೆ ಅತ್ಯಂತ ಶ್ರೇಷ್ಠವಾದ ಪ್ರೇಕ್ಷಣೀಯ ಸ್ಥಳವಾದ ಮೇರುಪರ್ವತದಂತೆ ರೈವತಕವು ಶೋಭಿಸುತ್ತಿತ್ತು.
ಮತ್ತಾನಾಂ ಹೃಷ್ಟರೂಪಾಣಾಂ ಸ್ತ್ರೀಣಾಂ ಪುಂಸಾಂ ಚ ಭಾರತ |
ಗಾಯತಾಂ ಪರ್ವತೇಂದ್ರಸ್ಯ ದಿವಿಸ್ಪೃಗಿವ ನಿಃಸ್ವನಃ ॥10॥
ಶ್ರೇಷ್ಠವಾದ ಪರ್ವತದ ಶಿಖರದಲ್ಲಿ ಸಂತೋಷದಿಂದ ಉನ್ಮತ್ತರಾದ, ಗಾನ ಮಾಡುತ್ತಿರುವ ಸ್ತ್ರೀ-ಪುರುಷರ ಶಬ್ದವು ಆಕಾಶವನ್ನೇ ತುಂಬಿತ್ತು.
ಮತ್ತಪ್ರಮತ್ತಸಮ್ಮತ್ತಕ್ಷ್ವೇಡಿತಾಕೃಷ್ಟಸಂಕುಲಃ |
ತಥಾ ಕಿಲಕಿಲಾಶಬ್ದೈಃ ಭೂರಭೂತ್ ಸುಮನೋರಮಾ ॥11॥
ಮತ್ತರಾದ, ಪ್ರಮತ್ತರಾದ, ಸನ್ಮತ್ತರಾದ ಈ ಸ್ತ್ರೀ-ಪುರುಷರು ಕುಣಿದು ಕುಪ್ಪಳಿಸುತ್ತಿರುವ ಸಂದರ್ಭದಲ್ಲಿ ಮಧುರವಾದ ಕಿಲಕಿಲಾ ಮೊದಲಾದ ಶಬ್ದಗಳಿಂದ ಆ ಪರ್ವತವು ತುಂಬಿಹೋಗಿತ್ತು.
ವಿಪಣಾಪಣವಾನ್ ರಮ್ಯೋ ಭಕ್ಷ್ಯಭೋಜ್ಯವಿಹಾರವಾನ್ |
ವಸ್ತ್ರಮಾಲ್ಯೋತ್ಕರಯುತೋ ವೀಣಾವೇಣುಮೃದಂಗವಾನ್ ॥12॥
ಆ ಪರ್ವತದಲ್ಲಿ ರಮಣೀಯವಾದ ಅಂಗಡಿಗಳು, ಮುಂಗಟ್ಟುಗಳು ತುಂಬಿಕೊಂಡಿದ್ದವು. ಭಕ್ಷ್ಯ-ಭೋಜ್ಯಾದಿಗಳು ಯಥೇಷ್ಟವಾಗಿದ್ದವು. ವಸ್ತ್ರಗಳು, ಮಾಲೆಗಳು ರಾಶಿರಾಶಿಯಾಗಿ ತುಂಬಿದ್ದವು. ವೀಣೆ, ಕೊಳಲು, ಮೃದಂಗಗಳ ನಿನಾದ ಕೇಳಿ ಬರುತ್ತಿತ್ತು.
ಸುರಾಮೈರೇಯಮಿಶ್ರೇಣ ಭಕ್ಷ್ಯಭೋಜ್ಯೇನ ಚೈವ ಹಿ |
ದೀನಾಂಧಕೃಪಣಾದಿಭ್ಯೋ ದೀಯಮಾನೇನ ಚಾನಿಶಮ್ ॥13॥
ಸುರಾ ಮತ್ತು ಮೈರೇಯ ಮಿಶ್ರವಾದ ಭಕ್ಷ್ಯ-ಭೋಜ್ಯಗಳನ್ನು ದೀನರಿಗೂ, ಕುರುಡರಿಗೂ, ಕೃಪಣರಿಗೂ ನಿರಂತರವಾಗಿ ಕೊಡುತ್ತಿದ್ದರು.
ಬಭೌ ಪರಮಕಲ್ಯಾಣೋ ಮಹಸ್ತಸ್ಯ ಮಹಾಗಿರೇಃ ॥14॥
ಹೀಗೆ ಆ ಮಹಾಗಿರಿ ಎನಿಸಿದ ರೈವತಕವು ಈ ಎಲ್ಲ ವ್ಯಾಪಾರಗಳಿಂದ ಪರಮ ಮಂಗಳವಾಗಿ ಶೋಭಿಸಿತು.
ಪುಣ್ಯಾವಸಥವಾನ್ ವೀರೈಃ ಪುಣ್ಯಕೃದ್ಭಿರ್ನಿಷೇವಿತಃ |
ವಿಹಾರೋ ವೃಷ್ಣಿವೀರಾಣಾಂ ಬಭೌ ರೈವತಕಸ್ಯ ಚ ॥15॥
ಆ ಪರ್ವತದಲ್ಲಿ ಸತ್ಕರ್ಮಾನುಷ್ಠಾನಕ್ಕಾಗಿ ನಿರ್ಮಾಣ ಮಾಡಿದ ಮನೆಗಳಿದ್ದವು, ಆಶ್ರಮಗಳಿದ್ದವು. ಅವುಗಳಲ್ಲಿ ವೃಷ್ಣಿವೀರರು ವಿಹರಿಸುತ್ತಿದ್ದರು. ಅನುಷ್ಠಾನ ನಿರತರಾಗಿ ಶೋಭಿಸುತ್ತಿದ್ದರು.
ಸ ತಥಾ ವೇಶ್ಮಸಂಕೀರ್ಣೋ ದೇವಲೋಕ ಇವಾಬಭೌ |
ತದಾ ಚ ಕೃಷ್ಣಸಾನ್ನಿಧ್ಯಾನ್ಮುದಾ ದೇವಗಣೈರ್ಯುತಃ ॥16॥
ಇಂತಹ ಶ್ರೇಷ್ಠವಾದ ಮನೆಗಳಿಂದ ತುಂಬಿದ ರೈವತಕವು ದೇವಲೋಕದಂತೆ ಶೋಭಿಸಿತು. ಈ ಪ್ರಸಂಗದಲ್ಲಿ ಕೃಷ್ಣನ ಸಾನ್ನಿಧ್ಯವನ್ನು ಹೊಂದಿರುವ ವ್ಯಕ್ತಿಗಳು ದೇವತೆಗಳಂತೆ ಸಂತೋಷಪಟ್ಟರು.
ಸ್ತುವಂತ್ಯಂತರ್ಹಿತಾ ದೇವಾ ಗಂಧರ್ವಾಶ್ಚ ಸಹರ್ಷಿಭಿಃ ॥17॥
ಆ ಪರ್ವತದಲ್ಲಿ ಋಷಿಗಳಿಂದ ಸಹಿತರಾದ ಗಂಧರ್ವರು, ದೇವತೆಗಳು ಅವ್ಯಕ್ತವಾಗಿ ನಿಂತು ಭಗವಂತನನ್ನು ಸ್ತುತಿಸಿದರು.
ದೇವ-ಗಂಧರ್ವಾಃ
ಸಾಧಕಃ ಸರ್ವಧರ್ಮಾಣಾಮಸುರಾಣಾಂ ವಿನಾಶಕಃ |
ತ್ವಂ ಸ್ರಷ್ಟಾ ಸೃಜ್ಯಮಾಧಾರಂ ಕಾರಣಂ ಧರ್ಮವೇದವಿತ್ ॥18॥
ದೇವಗಂಧರ್ವ ಭಗವಂತನೇ, ನೀನು ಸಮಸ್ತ ಧರ್ಮಗಳನ್ನು ಸಾಧಿಸುವವನು, ಅಸುರರನ್ನು ಸಂಹರಿಸುವವನು, ಸಮಸ್ತ ಜೀವರಿಗೆ ಆಧಾರವಾದ ಈ ಜಗತ್ತಿಗೆ ನೀನೇ ಕಾರಣ, ನೀನೇ ಸೃಷ್ಟಿಕರ್ತಾ, ನೀನೇ ಧರ್ಮವೇತ್ತ.
ತ್ವಯಾ ಯತ್ ಕ್ರಿಯತೇ ದೇವ ನ ಜಾನೀಮೋಽತ್ರ ಮಾಯಯಾ ॥
ಭಗವಂತನೇ, ನಿನ್ನ ಸಂಕಲ್ಪಕ್ಕನುಗುಣವಾಗಿ ಸೃಷ್ಟಿಯನ್ನು ಹೊಂದುವ ಈ ಜಗತ್ತನ್ನು, ನಿನ್ನ ವ್ಯಾಪಾರಗಳನ್ನು ನಾವು ತಿಳಿಯದಾಗಿದ್ದೇವೆ.
ಕೇವಲಂ ತ್ವಾಽಭಿಜಾನೀಮಃ ಶರಣಂ ಪರಮೇಶ್ವರಮ್ |
ಬ್ರಹ್ಮಾದೀನಾಂ ಚ ಗೋವಿಂದ ಸಾನ್ನಿಧ್ಯಂ ಶರಣಂ ನಮಃ ॥20॥
ಭಗವಂತನೇ, ಸರ್ವೋತ್ತಮನಾದ ನಿನ್ನನ್ನು ನಾವು ಮಾತ್ರ ತಿಳಿಯದವರಲ್ಲ. ಬ್ರಹ್ಮಾದಿ ದೇವತೆಗಳಿಗೂ ನಿನ್ನ ಮಹಿಮೆಯು ತಿಳಿಯದಾಗದು. ಅಂತಹ ನಿನ್ನ ಸನ್ನಿಧಾನಕ್ಕೆ ನಾವು ಪೊಡಮಡುತ್ತೇವೆ (ನಮಿಸುತ್ತೇವೆ).

ವೈಶಂಪಾಯನಃ
ಇತಿ ಸ್ತುತೇ ಮಾನುಷೈಶ್ಚ ಪೂಜಿತೇ ದೇವಕೀಸುತೇ |
ಶಕ್ರಸದ್ಮಪ್ರತೀಕಾಶೋ ಬಭೂವ ಸ ಹಿ ರೈವತಃ ॥21॥
ವೈಶಂಪಾಯನ ಈ ರೀತಿಯಾಗಿ ದೇವಕೀ ಸುತನಾದ ಶ್ರೀಕೃಷ್ಣನು ಮನುಷ್ಯರಿಂದ ಸ್ತುತಿಸಲ್ಪಡುತ್ತಿರಲು, ಇಂದ್ರನ ಭವನದಂತೆ ಕಂಗೊಳಿಸುತ್ತಿರುವ ಆ ರೈವತಕ ಪರ್ವತವು ವಿಶೇಷವಾಗಿ ಕೃಷ್ಣನ ಸಾನ್ನಿಧ್ಯದಿಂದ ಶೋಭಿಸಿತು.
ತತಃ ಸಂಪೂಜ್ಯಮಾನಃ ಸ ವಿವೇಶ ಭವನಂ ಶುಭಮ್ |
ಗೋವಿಂದಃ ಸಾತ್ಯಕಿಶ್ಚಾಪಿ ಜಗ್ಮತುರ್ಭವನಂ ಸ್ವಕಮ್ ॥22॥
ಬಳಿಕ ವೃಷ್ಣಿಪುಂಗವರಿಂದ ಸನ್ಮಾನಿತನಾದ ಶ್ರೀಕೃಷ್ಣನು ತನ್ನ ಸುಂದರವಾದ ಅರಮನೆಯನ್ನು ಪ್ರವೇಶಿಸಿದನು. ಅದರಂತೆ ಸಾತ್ಯಕಿಯೂ ತನ್ನ ಅರಮನೆಗೆ ಪ್ರವೇಶಿಸಿದನು.
ವಿವೇಶ ಚ ಸ ಹೃಷ್ಟಾತ್ಮಾ ಚಿರಕಾಲಪ್ರವಾಸಕಃ |
ಕೃತ್ವಾ ನಸುಕರಂ ಕರ್ಮ ದಾನವೇಷ್ವಿವ ವಾಸವಃ ॥23॥
ದಾನವರ ಬಳಿ ಯುದ್ಧಕ್ಕೆ ಸಾಗಿದ ಇಂದ್ರದೇವನು ಕಾರ್ಯವನ್ನು ಸಾಧಿಸಿ, ತುಂಬಾ ಸಮಯದ ಬಳಿಕ ತನ್ನ ಅರಮನೆಯನ್ನು ಪ್ರವೇಶಿಸುವಂತೆ, ಶ್ರೀಕೃಷ್ಣನು ದುರ್ಯೋಧನಾದಿಗಳನ್ನು ಪಾಂಡವರ ಮೂಲಕ ವಧಿಸಿ, ಕಾರ್ಯವನ್ನು ಸಾಧಿಸಿ, ತುಂಬಾ ಕಾಲದ ಬಳಿಕ ದ್ವಾರಕೆಗೆ ಆಗಮಿಸಿ ತನ್ನ ಅರಮನೆಯನ್ನು ಪ್ರವೇಶಿಸಿದನು.
ಉಪಾಯಾಂತಂ ತು ವಾರ್ಷ್ಣೇಯಂ ಭೋಜವೃಷ್ಣ್ಯಂಧಕಾಸ್ತದಾ |
ಅಭ್ಯಗಚ್ಛನ್ಮಹಾತ್ಮಾನಂ ದೇವಾ ಇವ ಶತಕ್ರತುಮ್ ॥24॥
ವಿಜಯಶೀಲನಾಗಿ ಬಂದ ಇಂದ್ರನನ್ನು ದೇವತಾ ವೃಂದವು ಮುಂದೆ ಹೋಗಿ ಸ್ವಾಗತಿಸುವಂತೆ, ಬಹಳ ಕಾಲದ ಜೈತ್ರಯಾತ್ರೆಯನ್ನು ಮುಗಿಸಿ ಆಗಮಿಸಿದ ಶ್ರೀಕೃಷ್ಣನನ್ನು ಭೋಜರು-ವೃಷ್ಣಿಗಳು-ಅಂಧಕರು ಮುಂದೆ ಬಂದು ಸ್ವಾಗತಿಸಿದರು.
ಸ ತಾನಭ್ಯರ್ಚ್ಯ ಮೇಧಾವೀ ಪೃಷ್ಟ್ವಾ ಚ ಕುಶಲಂ ತದಾ |
ಅಭ್ಯವಾದಯತ ಪ್ರೀತಃ ಪಿತರಂ ಮಾತರಂ ತದಾ ॥25॥
ಮೇಧಾವಿಯಾದ ಕೃಷ್ಣನು ಅವರೆಲ್ಲರ ಸತ್ಕಾರವನ್ನು ಸ್ವೀಕರಿಸಿ, ಅವರ ಕುಶಲ ಪ್ರಶ್ನೆಗಳನ್ನು ಮಾಡಿದನು. ಬಳಿಕ ತಂದೆ-ತಾಯಿಗಳನ್ನು ನೋಡಿ, ಸಂತುಷ್ಟನಾಗಿ ಅವರಿಗೆ ಅಭಿವಂದಿಸಿದನು.
ತಾಭ್ಯಾಂ ಚ ಸಂಪರಿಷ್ವಕ್ತಃ ಸಾಂತ್ವಿತಃ ಸ ಮಹಾಭುಜಃ |
ಉಪೋಪವಿಷ್ಟಸ್ತೈಃ ಸರ್ವೈರ್ವೃಷ್ಣಿಭಿಃ ಪರಿವಾರಿತಃ ॥26॥
ತಂದೆ-ತಾಯಿಗಳಿಬ್ಬರೂ ಮಹಾಭುಜನಾದ ಕೃಷ್ಣನನ್ನು ತಬ್ಬಿಕೊಂಡು ಸಂತೈಸಿದರು. ತಂದೆ-ತಾಯಿಗಳ ಬಳಿ ಕುಳಿತಿರುವ ಕೃಷ್ಣನ ಬಳಿ ವೃಷ್ಣಿವೀರರೆಲ್ಲರೂ ಸೇರಿ, ಕುಳಿತುಕೊಂಡರು.
ಸ ವಿಶ್ರಾಂತೋ ಮಹಾತೇಜಾಃ ಕೃತಪಾದಾವನೇಜನಃ |
ಕಥಯಾಮಾಸ ತಂ ಕೃತ್ಸ್ನಂ ಪೃಷ್ಟಃ ಪಿತ್ರಾ ಮಹಾಹವಮ್ ॥27॥
ಕೃಷ್ಣನು ತಂದೆಯ ಅನುಮತಿಯಂತೆ ಕೈ-ಕಾಲುಗಳನ್ನು ತೊಳೆದುಕೊಂಡು ಸ್ವಲ್ಪ ಸಮಯ ವಿಶ್ರಾಂತಿಯನ್ನು ಪಡೆದನು. ಬಳಿಕ ತಂದೆಯು ಪ್ರಶ್ನಿಸಿದಾಗ ಮಹಾಯುದ್ಧದ ಪ್ರಸಂಗವೆಲ್ಲವನ್ನೂ ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಕೃಷ್ಣಸ್ಯ ರೈವತಗಿರೇರುತ್ಸವದರ್ಶನಂ ನಾಮ ಏಕೋನಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಐವತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತನೆಯ ಅಧ್ಯಾಯ
ವಸುದೇವಾದಿಗಳನ್ನು ಕುರಿತು ಕೃಷ್ಣನು ಕುರು-ಪಾಂಡವರ
ಯುದ್ಧಪ್ರಕಾರವನ್ನು ನಿರೂಪಿಸಿದುದು.
ವಸುದೇವಃ
ಶ್ರುತವಾನಸ್ಮಿ ವಾರ್ಷ್ಣೇಯ ಸಂಗ್ರಾಮಂ ಪರಮಾದ್ಭುತಮ್ |
ನರಾಣಾಂ ವದತಾಂ ಪುತ್ರ ಕಥೋದ್ಘಾತೇಷು ನಿತ್ಯಶಃ ॥1॥
ವಸುದೇವ ವೃಷ್ಣಿಕುಮಾರನೇ, ಪರಮಾದ್ಭುತವಾದ ಮಹಾಭಾರತ ಯುದ್ಧವು ನಡೆಯಿತೆಂದು ಜನರು ಮಾತನಾಡಿಕೊಳ್ಳುವುದನ್ನು ನಾನು ಕೇಳಿದ್ದೇನೆ. ಕೌರವ- ಪಾಂಡವರ ಯುದ್ಧವು ಪ್ರತಿದಿನವು ಹೇಗೆ ನಡೆಯಿತು?
ತ್ವಂ ತು ಪ್ರತ್ಯಕ್ಷದರ್ಶೀ ಚ ಕಾರ್ಯಜ್ಞಶ್ಚ ಮಹಾಭುಜ |
ತಸ್ಮಾತ್ ಪ್ರಬ್ರೂಹಿ ಸಂಗ್ರಾಮಂ ಯಾಥಾತಥ್ಯೇನ ಮೇಽನಘ ॥2॥
ನೀನು ಆ ಯುದ್ಧವನ್ನು ಪ್ರತ್ಯಕ್ಷವಾಗಿ ನೋಡಿರುವಿ. ಆ ಯುದ್ಧಕಾರ್ಯದ ಸ್ವರೂಪವನ್ನು ತಿಳಿದವನಾಗಿರುವಿ. ಆದ್ದರಿಂದ ಯಥಾರ್ಥವಾಗಿ ಯುದ್ಧವು ಹೇಗೆ ನಡೆಯಿತು ಎಂಬುದನ್ನು ನನಗೆ ತಿಳಿಸು.
ಕಥಂ ತದಭವದ್ ಯುದ್ಧಂ ಪಾಂಡವಾನಾಂ ಮಹಾತ್ಮನಾಮ್ |
ಭೀಷ್ಮಕರ್ಣಕೃಪದ್ರೋಣಶಲ್ಯಾದಿಭಿರನುತ್ತಮಮ್ ॥3॥
ಮಹಾತ್ಮರಾದ ಭೀಷ್ಮ-ದ್ರೋಣ-ಕೃಪ-ಶಲ್ಯಾದಿಗಳ ಜೊತೆಗೆ ಪಾಂಡವರ ಶ್ರೇಷ್ಠವಾದ ಯುದ್ಧವು ಹೇಗೆ ನಡೆಯಿತು?

ಅನ್ಯೇಷಾಂ ಕ್ಷತ್ರಿಯಾಣಾಂ ಚ ಕೃತಾಸ್ತ್ರಾಣಾಮನೇಕಶಃ |
ನಾನಾವೇಷಾಕೃತಿಮತಾಂ ನಾನಾದೇಶನಿವಾಸಿನಾಮ್ ॥4॥
ಬೇರೆ ದೇಶದಲ್ಲಿ ಇರುವ, ನಾನಾ ವಿಧವಾದ ವೇಷಭೂಷಣಗಳನ್ನು ಧರಿಸಿರುವ, ಬಗೆಬಗೆಯ ಆಕಾರಗಳಿಂದ ಕೂಡಿರುವ, ಅಸ್ತ್ರವಿದ್ಯಾವಿಶಾರದರಾದ ವ್ಯಕ್ತಿಗಳಿಗೂ ಪರಸ್ಪರ ಯುದ್ಧವು ಹೇಗೆ ನಡೆಯಿತು? ವಿಷದವಾಗಿ ತಿಳಿಸು.
ವೈಶಂಪಾಯನಃ
ಇತ್ಯುಕ್ತಃ ಪುಂಡರೀಕಾಕ್ಷಃ ಪಿತ್ರಾ ಮಾತುಸ್ತಥಾಂತಿಕೇ |
ಶಶಂಸ ಕುರುವೀರಾಣಾಂ ಸಂಗ್ರಾಮೇ ನಿಧನಂ ಯಥಾ ॥5॥
ವೈಶಂಪಾಯನ ಹೀಗೆ ತಂದೆಯಾದ ವಸುದೇವನು ಪ್ರಶ್ನಿಸಿದಾಗ ದೇವಕಿಯ ಬಳಿ ಕುಳಿತಿರುವ ಪುಂಡರೀಕಾಕ್ಷನಾದ ಕೃಷ್ಣನು ಕೌರವರ ಯುದ್ಧವು ಹೇಗೆ ನಡೆಯಿತು, ನಿಧನವು ಹೇಗೆ ಉಂಟಾಯಿತು ಎಂಬುದನ್ನು ವಿವರಿಸಿದನು.
ಶ್ರೀಭಗವಾನ್
ಅತ್ಯದ್ಭುತಾನಿ ಕರ್ಮಾಣಿ ಕ್ಷತ್ರಿಯಾಣಾಂ ಮಹಾತ್ಮನಾಮ್ |
ಬಹುಲತ್ವಾನ್ನ ಸಂಖ್ಯಾತುಂ ಶಕ್ಯಾನ್ಯಂದಗಣೈರಪಿ ॥6॥
ಶ್ರೀಭಗವಾನ್ ತಂದೆಯೇ, ಮಹಾತ್ಮರಾದ ಕ್ಷತ್ರಿಯರು ಯುದ್ಧದಲ್ಲಿ ತೋರಿಸಿದ ಸಾಹಸ ಕರ್ಮಗಳು ಅದ್ಭುತವಾಗಿದ್ದವು. ಅವರ ಸಾಹಸ ಕರ್ಮಗಳು ಬಹಳವಾಗಿ ಇರುವುದರಿಂದ ನಿರಂತರ ಹೇಳಿದರೂ ಹೇಳಿ ಮುಗಿಸಲಾಗುವುದಿಲ್ಲ.
ಪ್ರಾಧಾನ್ಯತಸ್ತು ಗದತಃ ಸಮಾಸೇನೈವ ಮೇ ಶೃಣು |
ಕರ್ಮಾಣಿ ಕುರುವೀರಾಣಾಂ ಯಥಾವದಮರದ್ಯುತೇ ॥7॥
ಆದರೂ ಮುಖ್ಯವಾದ ಘಟನೆಗಳನ್ನು ಮಾತ್ರ ಸಂಕ್ಷಿಪ್ತವಾಗಿ ಹೇಳುತ್ತೇನೆ. ದೇವತಾ ತೇಜಸ್ಸಿಗೆ ಸಮಾನನಾದ ತಂದೆಯೇ, ಪೃಥಿವೀಪಾಲರ ಸಾಹಸಕರ್ಮಗಳನ್ನು ಕೇಳಿಸಿಕೊ.
ಭೀಷ್ಮಃ ಸೇನಾಪತಿರಭೂದ್ ಏಕಾದಶಚಮೂಪತಿಃ |
ಕೌರವ್ಯಃ ಕೌರವೇಯಾಣಾಂ ದೇವಾನಾಮಿವ ಪಾವಕಿಃ ॥8॥
ಹನ್ನೊಂದು ಅಕ್ಷೋಹಿಣಿಗೆ ಒಡೆಯರಾಗಿರು, ಕುರುಶ್ರೇಷ್ಠರಾದ ಭೀಷ್ಮಾಚಾರ್ಯರು ಕೌರವರ ಸೇನೆಗೆ ಸೇನಾಪತಿಗಳಾದರು. ದೇವತೆಗಳಿಗೆ ಅಗ್ನಿದೇವನು ಹೇಗೋ ಹಾಗೆ ಇಲ್ಲಿ ಭೀಷ್ಮರು ಇದ್ದರು.
ಶಿಖಂಡೀ ಪಾಂಡುಪುತ್ರಾಣಾಂ ನೇತಾ ಸಪ್ತಚಮೂಪತಿಃ |
ಬಭೂವ ರಕ್ಷಿತೋ ನಿತ್ಯಂ ಧೀಮತಾ ಸವ್ಯಸಾಚಿನಾ ॥9॥
ಪಾಂಡುಪುತ್ರರ ಸೇನಾನಾಯಕನಾದ, ಏಳು ಅಕ್ಷೋಹಿಣಿ ಸೇನೆಯ ನೇತಾರನಾದ ಶಿಖಂಡಿಯನ್ನು ಬುದ್ಧಿವಂತನಾದ ಸವ್ಯಸಾಚಿ ಎನಿಸಿದ ಅರ್ಜುನನು ಯಾವಾಗಲೂ ರಕ್ಷಿಸುತ್ತಿದ್ದನು.
ತೇಷಾಂ ತದಭವದ್ಯುದ್ಧಂ ದಶಾಹಾನಿ ಮಹಾತ್ಮನಾಮ್ |
ಕುರೂಣಾಂ ಪಾಂಡವೇಯಾನಾಂ ಸುಮಹದ್ ರೋಮಹರ್ಷಣಮ್ ॥
ಈ ರೀತಿಯಾಗಿ ರೋಮಾಂಚಕಾರಿಯಾದ ಯುದ್ಧವು ಹತ್ತು ದಿವಸಗಳವರೆಗೆ ಕೌರವರಿಗೂ ಪಾಂಡವರಿಗೂ ನಡೆಯಿತು.
ಅಯುಧ್ಯಮಾನಂ ಗಾಂಗೇಯಂ ಶಿಖಂಡೀ ತಂ ಮಹಾದ್ಯುತಿಮ್ |
ಜಘಾನ ಬಹುಭಿರ್ಬಾಣೈಃ ಸಹ ಗಾಂಡೀವಧನ್ವನಾ ॥11॥
ಆ ಯುದ್ಧರಂಗದಲ್ಲಿ ಭೀಷ್ಮಾಚಾರ್ಯರನ್ನು ಅನೇಕ ಬಾಣಗಳಿಂದ ಅರ್ಜುನನಿಂದ ಸಹಿತನಾದ ಶಿಖಂಡಿಯು ಪ್ರಹರಿಸಿದನು. ಭೀಷ್ಮಾಚಾರ್ಯರಾದರೋ ಶಿಖಂಡಿಯ ಜೊತೆಗೆ ಯುದ್ಧವನ್ನು ಮಾಡುವುದಿಲ್ಲ ಎಂದು ಪ್ರತಿಜ್ಞೆಯನ್ನು ಮಾಡಿದ್ದರು.
ಅಕರೋತ್ ಸ ತತಃ ಕಾಲಂ ಶರತಲ್ಪಗತೋ ಮುನಿಃ |
ಅಯನಂ ದಕ್ಷಿಣಂ ಹಿತ್ವಾ ಸಂಪ್ರಾಪ್ತೇ ಚೋತ್ತರಾಯಣೇ ॥12॥
ಬಾಣಗಳ ನಿರಂತರ ಪ್ರಹಾರದಿಂದ ಭೀಷ್ಮರಿಗೆ ಪ್ರಾಣ ಹೋಗುವ ಸನ್ನಿವೇಶ ಒದಗಿ ಬಂದಿದ್ದರೂ ಸ್ವೇಚ್ಛಾ ಮರಣಿಗಳಾದ ಭೀಷ್ಮರು ಬಾಣಗಳ ಹಾಸಿಗೆಯಲ್ಲಿ ಮಲಗಿ, ದಕ್ಷಿಣಾಯನವನ್ನು ಕಳೆದು ಉತ್ತರಾಯಣ ಬಂದ ಬಳಿಕ ಪ್ರಾಣತ್ಯಾಗ ಮಾಡಬೇಕೆಂದು ನಿಶ್ಚಯಿಸಿಕೊಂಡರು.
ತತಃ ಸೇನಾಪತಿರಭೂದ್ ದ್ರೋಣೋ ಬ್ರಹ್ಮವಿದಾಂ ವರಃ |
ವಿಪ್ರೇಂದ್ರಃ ಕೌರವೇಂದ್ರಸ್ಯ ಕಾವ್ಯೋ ದೈತ್ಯಪತೇರಿವ ॥13॥
ಮಹಾವೀರರಾದ, ಅಸ್ತ್ರವಿದ್ಯೆಯನ್ನು ತಿಳಿದವರಲ್ಲಿ ಶ್ರೇಷ್ಠರಾದ ದ್ರೋಣರು ಭೀಷ್ಮರ ಬಳಿಕ ಸೇನಾನಾಯಕರಾದರು. ಇದು ದೈತ್ಯಪತಿಯಾದ ಬಲಿಚಕ್ರವರ್ತಿಗೆ ಶುಕ್ರಾಚಾರ್ಯರು ಗುರುಗಳಾದಂತೆ ಇತ್ತು.
ಅಕ್ಷೌಹಿಣೀಭಿಃ ಶಿಷ್ಟಾಭಿರ್ನವಭಿರ್ದ್ವಿಜಸತ್ತಮಃ|
ಸಂವೃತಃ ಸಮರಶ್ಲಾಘೀ ಗುಪ್ತಃ ಕೃಪಸುತಾದಿಭಿಃ ॥14॥
ದ್ರೋಣಾಚಾರ್ಯರು ಯುದ್ಧವನ್ನು ಪ್ರಶಂಸೆ ಮಾಡುವವರಾಗಿದ್ದರು. ಹತರಾಗಿ ಉಳಿದಿದ್ದ ಒಂಬತ್ತು ಅಕ್ಷೋಹಿಣಿ ಸೇನೆಯಿಂದ ಕೂಡಿಕೊಂಡಿರುವ ದ್ರೋಣರನ್ನು ಕೃಪ-ಕರ್ಣರು ರಕ್ಷಿಸುತ್ತಿದ್ದರು.
ಧೃಷ್ಟದ್ಯುಮ್ನಸ್ತ್ವಭೂನ್ನೇತಾ ಪಾಂಡವಾನಾಂ ಮಹಾಸ್ತ್ರವಿತ್ |
ಗುಪ್ತೋ ಭೀಮೇನ ಮೇಧಾವೀ ಮಿತ್ರೇಣ ವರುಣೋ ಯಥಾ ॥15॥
ದ್ರೋಣರು ಕುರುಸೇನೆಗೆ ಸೇನಾಪತಿಯಾದಾಗ ಧೃಷ್ಟದ್ಯುಮ್ನನು ಪಾಂಡವರ ಸೇನಾ ನಾಯಕನಾಗಿದ್ದನು. ಮಿತ್ರನು ವರುಣನನ್ನು ರಕ್ಷಿಸುವಂತೆ ಭೀಮಸೇನನು ಮೇಧಾವಿಯಾದ ಧೃಷ್ಟದ್ಯುಮ್ನನನ್ನು ರಕ್ಷಿಸುತ್ತಿದ್ದನು.

ಪಾಂಡುಸೇನಾಪರಿವೃತೋ ದ್ರೋಣಪ್ರೇಪ್ಸುರ್ಮಹಾಮನಾಃ |
ಪಿತುರ್ನಿಕಾರಾನ್ ಸಂಸ್ಮೃತ್ಯ ರಣೇ ಕರ್ಮಾಕರೋನ್ಮಹತ್ ॥16॥
ಮಹಾತ್ಮರಾದ ದ್ರೋಣರನ್ನು ಸೆರೆಹಿಡಿಯಬೇಕೆಂಬ ಪ್ರಯತ್ನ ಧೃಷ್ಟದ್ಯುಮ್ನನದ್ದಾಗಿತ್ತು. ಇವರಿಗೆ ಪಾಂಡವರು ರಕ್ಷಕರಾಗಿ ನಿಂತಿದ್ದರು. ತನ್ನ ತಂದೆಯಾದ ದ್ರುಪದನಿಗೆ ಮಾಡಿದ ಅವಮಾನವನ್ನು ಸ್ಮರಿಸಿಕೊಂಡು, ತನ್ನ ಪ್ರಭಾವವನ್ನು ಯುದ್ಧದಲ್ಲಿ ತೋರಿಸುತ್ತಿದ್ದನು.
ತಸ್ಮಿಂಸ್ತೇ ಪೃಥಿವೀಪಾಲಾ ದ್ರೋಣಪಾರ್ಷತಸಂಗಮೇ |
ನಾನಾದೇಶಾಗತಾ ವೀರಾಃ ಪ್ರಾಯಶೋ ನಿಧನಂ ಗತಾಃ ॥17॥
ಧೃಷ್ಟದ್ಯುಮ್ನ-ದ್ರೋಣಾಚಾರ್ಯರ ಪರಸ್ಪರ ಯುದ್ಧದಿಂದ ಬೇರೆ ಬೇರೆ ದೇಶದಿಂದ ಆಗಮಿಸಿದ ನೂರಾರು ಕ್ಷತ್ರಿಯರಾಜರು ಪ್ರಾಯಶಃ ನಿಧನವನ್ನು ಹೊಂದಿದರು.
ದಿನಾನಿ ಪಂಚ ತದ್ಯುದ್ಧಮಭೂತ್ ಪರಮದಾರುಣಮ್ |
ತತೋ ದ್ರೋಣಃ ಪರಿಶ್ರಾಂತೋ ಧೃಷ್ಟದ್ಯುಮ್ನವಶಂ ಗತಃ ॥18॥
ದ್ರೋಣಾಚಾರ್ಯರು ಐದು ದಿನಗಳ ತನಕ ಸೇನಾನಾಯಕರಾಗಿ ಮಹಾಯುದ್ಧವನ್ನು ಮಾಡಿದರು. ಬಳಿಕ ಆಯಾಸಗೊಂಡ ದ್ರೋಣರು ಧೃಷ್ಟದ್ಯುಮ್ನನಿಗೆ ವಶರಾದರು.
ತತಃ ಸೇನಾಪತಿರಭೂತ್ ಕರ್ಣೋ ದೌರ್ಯೋಧನೇ ಬಲೇ |
ಅಕ್ಷೌಹಿಣೀಭಿಃ ಶಿಷ್ಟಾಭಿಃ ವೃತಃ ಪಂಚಭಿರಾಹವೇ ॥19॥
ದ್ರೋಣರು ಮರಣ ಹೊಂದಿದ ಬಳಿಕ ದುರ್ಯೋಧನನ ಸೇನೆಗೆ ಕರ್ಣನು ಅಧಿಪತಿಯಾದನು. ಯುದ್ಧದಲ್ಲಿ ಉಳಿದಿರುವ ಐದು ಅಕ್ಷೋಹಿಣಿ ಸೈನ್ಯದಿಂದ ಪರಿವೃತನಾದ ಕರ್ಣನು ವಿಶಿಷ್ಟವಾದ ಯುದ್ಧವನ್ನು ಮಾಡಿದನು.
ತಿಸ್ರಸ್ತು ಪಾಂಡುಪುತ್ರಾಣಾಂ ಶಿಷ್ಟಾ ಬೀಭತ್ಸುಪಾಲಿತಾಃ |
ಹತಪ್ರವೀರಭೂಯಿಷ್ಠಾ ಬಭೂವುಃ ಪರ್ಯವಸ್ಥಿತಾಃ ॥20॥
ಕರ್ಣನು ಸೇನಾಪತಿಯಾದಾಗ ಪಾಂಡವರ ಬಳಿ ಮೂರು ಅಕ್ಷೋಹಿಣಿ ಸೈನ್ಯವು ಮಾತ್ರ ಉಳಿದಿತ್ತು. ಅದನ್ನು ಅರ್ಜುನನು ರಕ್ಷಿಸುತ್ತಿದ್ದನು. ಇಷ್ಟರಲ್ಲಿ ಅನೇಕ ಕ್ಷತ್ರಿಯ ಪ್ರಮುಖರೆಲ್ಲರೂ ಹತರಾಗಿದ್ದರು.
ತತಃ ಪಾರ್ಥಂ ಸಮಾಸಾದ್ಯ ಪತಂಗ ಇವ ಪಾವಕಮ್ |
ಸ ದ್ವಿತೀಯೇಽಹನಿ ತದಾ ಫಲ್ಗುನೇನ ನಿಪಾತಿತಃ ॥21॥
ದುರ್ಯೋಧನನ ದಂಡನಾಯಕತ್ವದಲ್ಲಿ ಕರ್ಣನು ಎರಡನೆಯ ದಿವಸ, ಪತಂಗದ ಹುಳುವು ಬೆಂಕಿಯ ಬಳಿ ಹೋಗಿ ನಾಶ ಹೊಂದುವಂತೆ ಅರ್ಜುನನ ಬಳಿ ಯುದ್ಧವನ್ನು ಮಾಡಲು ಹೋಗಿ ಶತ್ರುಭಯಂಕರನಾಗಿದ್ದರೂ ಮರಣ ಹೊಂದಿದನು.
ಹತೇ ಕರ್ಣೇ ತು ಕೌರವ್ಯಾ ನಿರುತ್ಸಾಹಾ ಹತೌಜಸಃ |
ಅಕ್ಷೋಹಿಣೀಭಿಸ್ತಿಸೃಭಿಃ ಮದ್ರೇಶಂ ಪರ್ಯವಾರಯನ್ ॥22॥
ಕರ್ಣನ ಮರಣದ ಬಳಿಕ ದುರ್ಯೋಧನನೇ ಮೊದಲಾದ ಕೌರವರು ಉತ್ಸಾಹವನ್ನು ಕಳೆದುಕೊಂಡರು, ತೇಜೋವಿಹೀನರಾದರು. ಕರ್ಣನ ಅನಂತರ ಶಲ್ಯನಿಗೆ ಸೇನಾಧಿಪತ್ಯದ ಪಟ್ಟವನ್ನು ದುರ್ಯೋಧನನು ಕೊಟ್ಟನು.
ಹತವಾಹನಭೂಯಿಷ್ಠಾಃ ಪಾಂಡವಾಸ್ತು ಯುಧಿಷ್ಠಿರಮ್ |
ಅಕ್ಷೋಹಿಣ್ಯಾ ನಿರುತ್ಸಾಹಾಃ ಶಿಷ್ಟಯಾ ಪರ್ಯವಾರಯನ್ ॥23॥
ಕೌರವರು ಮೂರು ಅಕ್ಷೋಹಿಣಿ ಸೈನ್ಯದಿಂದ ಕೂಡಿಕೊಂಡು ಶಲ್ಯನಿಗೆ ರಕ್ಷಣೆಯನ್ನು ಒದಗಿಸಿದರು. ಪಾಂಡವರೂ ಅನೇಕ ಸೈನ್ಯವನ್ನು ಕಳೆದುಕೊಂಡು ಯುದ್ಧದಲ್ಲಿಯೇ ಅನಾಸಕ್ತರಾಗಿದ್ದರು.
ಅವಧೀನ್ಮದ್ರರಾಜಾನಂ ಕುರುರಾಜೋ ಯುಧಿಷ್ಠಿರಃ |
ತಸ್ಮಿಂಸ್ತದಾರ್ಧದಿವಸೇ ಕೃತ್ವಾ ಕರ್ಮ ಸುದುಷ್ಕರಮ್ ॥24॥
ಈ ಪ್ರಸಂಗದಲ್ಲಿ ಪಾಂಡವರ ಬಳಿ ಒಂದು ಅಕ್ಷೋಹಿಣಿ ಸೈನ್ಯವು ಉಳಿದಿತ್ತು. ಈ ಪಾಂಡವರ ಸೇನೆಯಲ್ಲಿದ್ದ ಯುಧಿಷ್ಠಿರನು ಅರ್ಧದಿವಸದ ಕಾಲ ದುಷ್ಕರವಾದ ಪರಾಕ್ರಮವನ್ನು ತೋರಿಸುತ್ತಾ, ಮದ್ರರಾಜನನ್ನು ಎದುರಿಸಿ ಅವನನ್ನು ಸಂಹರಿಸಿದನು.
ಹತೇ ಶಲ್ಯೇ ತು ಶಕುನಿಂ ಸಹದೇವೋ ಮಹಾಮನಾಃ |
ಆಹರ್ತಾರಂ ಕಲೇಸ್ತಸ್ಯ ಜಘಾನಾಮಿತವಿಕ್ರಮಃ ॥25॥
ಶಲ್ಯನು ಮರಣ ಹೊಂದಿದ ಬಳಿಕ ಪರಾಕ್ರಮಿಯಾದ, ಮಹಾತ್ಮನಾದ ಸಹದೇವನು ಯುದ್ಧಕ್ಕೆ ಮೂಲಕಾರಣನಾದ ಶಕುನಿಯನ್ನು ಎದುರಿಸಿ, ಅಮಿತವಾದ ತನ್ನ ಪರಾಕ್ರಮದಿಂದ ಶಕುನಿಯನ್ನು ಕೊಂದನು.
ನಿಹತೇ ಶಕುನೌ ರಾಜಾ ಧಾರ್ತರಾಷ್ಟ್ರಃ ಸುದುರ್ಮನಾಃ |
ಅಪಾಕ್ರಾಮದ್ ಗದಾಪಾಣಿರ್ಹತಭೂಯಿಷ್ಠಸೈನಿಕಃ ॥26॥
ಶಕುನಿಯ ನಿಧನದ ಬಳಿಕ ದುರ್ಯೋಧನನ ಮನಸ್ಸು ದುಃಖಗೊಂಡಿತು. ಖಿನ್ನನಾದ ಕೌರವನು ಗದಾಪಾಣಿಯಾಗಿ ಯುದ್ಧಭೂಮಿಯನ್ನೇ ತೊರೆದು ಹೊರಟು ಹೋದನು.
ತಮನ್ವಧಾವತ್ ಸಂಕ್ರುದ್ಧೋ ಭೀಮಸೇನಃ ಪ್ರತಾಪವಾನ್ |
ಹ್ರದೇ ದ್ವೈಪಾಯನೇ ಚೈವ ಸಲಿಲಸ್ಥಂ ದದರ್ಶ ಸಃ ॥27॥
ಆದರೆ ಅತ್ಯಂತ ಕ್ರುದ್ಧನಾದ ಭೀಮಸೇನನು ಪ್ರತಾಪವಂತನಾಗಿ ಕೌರವನನ್ನು ಬೆನ್ನಟ್ಟಿ ಹೊರಟನು. ದ್ವೈಪಾಯನ ಸರೋವರದ ನೀರಿನ ಮಧ್ಯದಲ್ಲಿ ಅಡಗಿರುವ ದುರ್ಯೋಧನನನ್ನು ಕಂಡುಹಿಡಿದನು.
ತತಃ ಶಿಷ್ಟೇನ ಸೈನ್ಯೇನ ಸಮಂತಾತ್ ಪರ್ಯವಾರಯತ್ |

ಉಪೋಪವಿವಿಶುರ್ಹೃಷ್ಟಾ ಹ್ರದಸ್ಥಂ ಪಂಚ ಪಾಂಡವಾಃ ॥28॥
ಬಳಿಕ ಪಾಂಡವರು ಸಂತುಷ್ಟವಾಗಿ, ಅಳಿದುಳಿದ ಸೈನ್ಯದೊಂದಿಗೆ ಕೂಡಿಕೊಂಡು ದ್ವೈಪಾಯನ ಸರೋವರದ ಬಳಿ ಆಗಮಿಸಿದರು. ನೀರಿನಲ್ಲಿ ಮುಳುಗಿದ್ದ ದುರ್ಯೋಧನನನ್ನು ಸುತ್ತುಗಟ್ಟಿದರು.
ವಿಗಾಹ್ಯ ಸಲಿಲಂ ತ್ವಾಶು ವಾಗ್ಬಾಣೈರ್ಭೃಶವಿಕ್ಷತಃ |
ಉತ್ಥಾಯ ಸ ಗದಾಪಾಣಿರ್ಯುದ್ಧಾಯ ಸಮುಪಸ್ಥಿತಃ ॥29॥
ನೀರಿನಲ್ಲಿ ಅಡಗಿರುವ ಕೌರವನನ್ನು ಕುರಿತು ಭೀಮನು ವಾಗ್ಬಾಣಗಳಿಂದ ಘಾಸಿಗೊಳಿಸಿದನು. ಇದರಿಂದ ನೀರಿನಲ್ಲಿ ಕುಳಿತುಕೊಳ್ಳಲಾಗದ ದುರ್ಯೋಧನನು ಒಡನೆಯೇ ಮೇಲಕ್ಕೆ ಬಂದು ಗದಾಪಾಣಿಯಾಗಿ ಯುದ್ಧಕ್ಕೆ ನಿಂತನು.
ತತಃ ಸ ನಿಹತೋ ರಾಜಾ ಧಾರ್ತರಾಷ್ಟ್ರೋ ಮಹಾಮೃಧೇ |
ಭೀಮಸೇನೇನ ವಿಕ್ರಮ್ಯ ಪಶ್ಯತಾಂ ಪೃಥಿವೀಕ್ಷಿತಾಮ್ ॥30॥
ಆ ಸಂದರ್ಭದಲ್ಲಿ ಅವರೀರ್ವರಿಗೂ ಮಹಾಯುದ್ಧವು ನಡೆಯಿತು. ಎಲ್ಲರೂ ನೋಡುತ್ತಿದ್ದಂತೆ ಅತುಲವಾದ ಪರಾಕ್ರಮದಿಂದ ಭೀಮಸೇನನು ಧೃತರಾಷ್ಟ್ರನ ಸುತನನ್ನು ಸಂಹರಿಸಿದನು.
ತತಸ್ತತ್ ಪಾಂಡವಂ ಸೈನ್ಯಂ ಸಂಸುಪ್ತಂ ಶಿಬಿರೇ ನಿಶಿ |
ನಿಹತಂ ದ್ರೋಣಪುತ್ರೇಣ ಪಿತುರ್ವಧಮಮೃಷ್ಯತಾ ॥31॥
ಯುದ್ಧವೆಲ್ಲವೂ ಮುಗಿದ ರಾತ್ರಿಯಲ್ಲಿ, ಶಿಬಿರಗಳಲ್ಲಿ ಅಳಿದುಳಿದ ಪಾಂಡವರ ಸೈನ್ಯವೆಲ್ಲವೂ ಮಲಗಿ ನಿದ್ರಿಸುತ್ತಿತ್ತು. ಈ ಪ್ರಸಂಗದಲ್ಲಿ ತಂದೆಯ ಮರಣವನ್ನು ಸಹಿಸದ ಅಶ್ವತ್ಥಾಮನು ಶಿಬಿರಕ್ಕೆ ನುಗ್ಗಿ ಮಲಗಿದವರನ್ನೆಲ್ಲ ಸಂಹಾರಗೈದನು.
ಹತಪುತ್ರಾ ಹತಬಲಾ ಹತಮಿತ್ರಾ ಮಯಾ ಸಹ |
ಯುಯುಧಾನದ್ವಿತೀಯೇನ ಪಂಚ ಶಿಷ್ಟಾಸ್ತು ಪಾಂಡವಾಃ ॥32॥
ಇದರ ಪರಿಣಾಮವಾಗಿ ಪಾಂಡವರ ಮಕ್ಕಳು, ಮಿತ್ರರು, ಸೈನಿಕರು ಎಲ್ಲರೂ ಮರಣೋನ್ಮುಖರಾದರು. ನನ್ನ ಜೊತೆ ಸಾತ್ಯಕಿ ಹಾಗೂ ಐದು ಮಂದಿ ಪಾಂಡವರು ಮಾತ್ರ ಉಳಿದುಕೊಂಡರು.
ಸಹೈವ ಕೃಪಭೋಜಾಭ್ಯಾಂ ದ್ರೌಣಿರ್ಯುದ್ಧಾದಮುಚ್ಯತ |
ಯುಯುತ್ಸುಶ್ಚಾಪಿ ಕೌರವ್ಯೋ ಮುಕ್ತಃ ಪಾಂಡವಸಂಶ್ರಯಾತ್ ॥33॥
ದುರ್ಯೋಧನನ ಪಕ್ಷದಲ್ಲಿ ಕೃಪ-ಕೃತವರ್ಮ-ಅಶ್ವತ್ಥಾಮರು ಯುದ್ಧವೆಂಬ ಕಾಡ್ಗಿಚ್ಚಿನಿಂದ ಪಾರಾಗಿ ಉಳಿದಿದ್ದರು. ಪಾಂಡವರ ಆಶ್ರಯವನ್ನು ಹೊಂದಿದ ಕಾರಣದಿಂದ ಧೃತರಾಷ್ಟ್ರನ ಮೂಲಕ ವೇಶ್ಯೆಯಲ್ಲಿ ಹುಟ್ಟಿರುವ ಯುಯುತ್ಸುವು ಉಳಿದುಕೊಂಡಿದ್ದನು.
ನಿಹತೇ ಕೌರವೇಂದ್ರೇ ಚ ಸಾನುಬಂಧೇ ಸುಯೋಧನೇ |
ವಿದುರಃ ಸಂಜಯಶ್ಚೈವ ಧರ್ಮರಾಜಮುಪಸ್ಥಿತೌ ॥34॥
ಕೌರವರಿಗೆ ಇಂದ್ರನಂತಿರುವ ದುರ್ಯೋಧನನು ಬಂಧು-ಬಾಂಧವರೊಂದಿಗೆ ನಿಧನ ಹೊಂದುತ್ತಿರಲು ವಿದುರ, ಸಂಜಯ ಈರ್ವರು ಧರ್ಮರಾಜನನ್ನು ಸಮೀಪಿಸಿದರು.
ಏವಂ ತದಭವದ್ ಯುದ್ಧಮಹಾನ್ಯಷ್ಟಾದಶ ಪ್ರಭೋ |
ಯತ್ರ ತೇ ಪೃಥಿವೀಪಾಲಾ ನಿಹತಾಃ ಸ್ವರ್ಗಮಾವಸನ್ ॥35॥
ಪ್ರಭುವೇ, ಹೀಗೆ ಭಾರತ ಯುದ್ಧವು ಹದಿನೆಂಟು ದಿನಗಳ ಪರ್ಯಂತ ನಡೆಯಿತು. ಯುದ್ಧದಲ್ಲಿ ನಿಧನ ಹೊಂದಿದ ಕ್ಷತ್ರಿಯ ರಾಜರೆಲ್ಲರೂ ಸ್ವರ್ಗವನ್ನು ಹೊಂದಿದರು.
ವೈಶಂಪಾಯನಃ
ಶೃಣ್ವತಾಂ ತು ತಥಾ ತೇಷಾಂ ಕಥಾಂ ತಾಂ ರೋಮಹರ್ಷಣೀಮ್ |
ದುಃಖಾಮರ್ಷಪರಿಕ್ಲೇಶೋ ವೃಷ್ಣೀನಾಮಭವತ್ ತದಾ ॥36॥
ವೈಶಂಪಾಯನ ರೋಮಾಂಚನವನ್ನುಂಟು ಮಾಡುವ ಯುದ್ಧದ ವಾರ್ತೆಯನ್ನು ಕೇಳಿಸಿಕೊಂಡ ಯಾದವರೆಲ್ಲರೂ ಶೋಕದಿಂದ ಕಳವಳ ಹೊಂದಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಪುನರ್ಯುದ್ಧಪ್ರಕಾರಕಥನಂ ನಾಮ ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂದನೆಯ ಅಧ್ಯಾಯ
ಸಭೆಯಲ್ಲಿ ವಸುದೇವನಿಗೆ ಯುದ್ಧದ ಕಥೆಯನ್ನು ಕೃಷ್ಣನು ಹೇಳುವಾಗ ಅಭಿಮನ್ಯುವಿನ ವಧೆಯ ಕಥೆಯನ್ನು ಹೇಳಲಿಲ್ಲ. ಇದರಿಂದ ಸುಭದ್ರೆಯು ದುಃಖಿತಳಾಗಿ, ಆ ಕಥೆಯನ್ನು ಹೇಳುವಂತೆ ಕೃಷ್ಣನನ್ನು ಪ್ರಚೋದಿಸಿದಳು. ಸುಭದ್ರೆಯ ಮಾತಿನಂತೆ ಅಭಿಮನ್ಯುವಿನ ಮರಣದ ವಾರ್ತೆಯನ್ನು ವಸುದೇವನಿಗೆ ಹೇಳುವಾಗ ಮೋಹದಿಂದ ಸುಭದ್ರೆಯು ಭೂಮಿಯಲ್ಲಿ ಮೂರ್ಛಿತಳಾಗಿ ಬಿದ್ದಳು. ಬಳಿಕ ಕೃಷ್ಣ-ವಸುದೇವರು ಸಂತೈಸಿದರು.
ವೈಶಂಪಾಯನಃ
ಕಥಯನ್ನೇವ ತು ತದಾ ವಾಸುದೇವಃ ಪ್ರತಾಪವಾನ್ |
ಮಹಾಭಾರತಯುದ್ಧಂ ತತ್ ಕಥಾಂತೇ ಪಿತುರಗ್ರತಃ ॥1॥
ವೈಶಂಪಾಯನ ಜನಮೇಜಯನೇ, ಪ್ರತಾಪಶಾಲಿಯಾದ, ಮಹಾಮತಿಯಾದ ವಾಸುದೇವನು ತಂದೆಯ ಮುಂದೆ ಮಹಾಭಾರತದ ಯುದ್ಧದ ಕಥೆಯನ್ನು ಹೇಳುತ್ತಿದ್ದನು.

ಅಭಿಮನ್ಯೋರ್ವಧಂ ವೀರಃ ಸೋಽತ್ಯಕ್ರಾಮತ ಭಾರತ |
ಅಪ್ರಿಯಂ ವಸುದೇವಸ್ಯ ಮಾ ಭೂದಿತಿ ಮಹಾಮನಾಃ ॥2॥
ಮಹಾಜ್ಞಾನಿಯಾದ ಕೃಷ್ಣನು ಆ ಸಭೆಯಲ್ಲಿ ಸುಭದ್ರೆ ಇದ್ದದ್ದನ್ನು ಕಂಡು, ಅಭಿಮನ್ಯುವಿನ ಮರಣ ವಾರ್ತೆಯನ್ನು ಹೇಳದೆ ಮುಂದೆ ಕಥೆಗಳನ್ನು ಹೇಳಿದನು. ವಸುದೇವನಿಗಾಗಲಿ, ಸುಭದ್ರೆಗಾಗಲಿ ಅಪ್ರಿಯವಾದದ್ದನ್ನು ಹೇಳಬಾರದೆಂಬ ಅಭಿಪ್ರಾಯ ಕೃಷ್ಣನಲ್ಲಿದ್ದಿತು.
ಮಾ ದೌಹಿತ್ರವಧಂ ಶ್ರುತ್ವಾ ವಸುದೇವೋ ಮಹಾತ್ಯಯಮ್ |
ದುಃಖಶೋಕಾಭಿಸಂತಪ್ತೋ ಭವೇದಿತಿ ಮಹಾದ್ಯುತಿಃ ॥3॥
ಮೊಮ್ಮಗನ ಅನಿಷ್ಟಕರವಾದ ಮರಣವಾರ್ತೆಯನ್ನು ಕೇಳಿಸಿಕೊಂಡ ತಂದೆಯಾದ ವಸುದೇವನು ದುಃಖ-ಶೋಕಗಳಿಂದ ಪರಿತಪಿಸಬಾರದು ಎಂಬ ದೂರದೃಷ್ಟಿ ಕೃಷ್ಣನಲ್ಲಿತ್ತು.
ಸುಭದ್ರಾ ತು ತಮುತ್ಕ್ರಾಂತಮಾತ್ಮಜಸ್ಯ ವಧಂ ರಣೇ |
ಆಚಕ್ಷ್ವ ಕೃಷ್ಣ ಸೌಭದ್ರವಧಮಿತ್ಯಪತದ್ ಭುವಿ ॥4॥
ಆದರೆ ಆ ಸಭೆಯಲ್ಲಿ ಕುಳಿತಿದ್ದ ಸುಭದ್ರೆಯು, ಮಗನ ಮರಣದ ವೃತ್ತಾಂತವನ್ನು ಕೃಷ್ಣನು ತಿಳಿಸಲಿಲ್ಲ ಎಂದು ಗಮನಿಸಿ, ಕೃಷ್ಣನೇ, ಅಭಿಮನ್ಯುವಿನ ವಧೆಯ ವಾರ್ತೆಯನ್ನು ಹೇಳು ಎಂದು ಕೇಳುತ್ತಲೇ ಮೂರ್ಛಿತಳಾಗಿ ನೆಲದಲ್ಲಿ ಬಿದ್ದಳು.
ತಾಮಪಶ್ಯನ್ನಿಪತಿತಾಂ ವಸುದೇವಃ ಕ್ಷಿತೌ ತದಾ |
ತಥೈವ ಚ ಪಪಾತೋರ್ವ್ಯಾಂ ಸೋಽಪಿ ದುಃಖೇನ ಮೂರ್ಛಿತಃ ॥5॥
ವಸುದೇವನು ತನ್ನ ಮಗಳ ದುಃಖದ ಅವಸ್ಥೆಯನ್ನು ಕಂಡು, ತಾನೂ ವಿಮೋಹಿತನಾಗಿ ದುಃಖದಿಂದ ನೆಲದಲ್ಲಿ ಕುಸಿದು ಬಿದ್ದನು.
ತತಃ ಸ ದೌಹಿತ್ರವಧಾದ್ ದುಃಖಶೋಕಸಮನ್ವಿತಃ |
ವಸುದೇವೋ ಮಹಾರಾಜ ಕೃಷ್ಣಂ ವಾಕ್ಯಮಥಾಬ್ರವೀತ್ ॥6॥
ಸ್ವಲ್ಪ ಹೊತ್ತಿನ ಬಳಿಕ ಸಾವರಿಸಿಕೊಂಡು, ಮೊಮ್ಮಗನು ಹೇಗೆ ಯುದ್ಧದಲ್ಲಿ ಮರಣವನ್ನು ಹೊಂದಿದನು ಎಂಬುದನ್ನು ತಿಳಿಸಬೇಕೆಂದು ಕೃಷ್ಣನಲ್ಲಿ ಕೇಳಿದನು.
ವಸುದೇವಃ
ನನು ತ್ವಂ ಪುಂಡರೀಕಾಕ್ಷ ಸತ್ಯವಾಗ್ ಭುವಿ ವಿಶ್ರುತಃ |
ಯದ್ ದೌಹಿತ್ರವಧಂ ಮೇಽದ್ಯ ನ ಖ್ಯಾಪಯಸಿ ಶತ್ರುಹನ್ ॥7॥
ವಸುದೇವ ಪುಂಡರೀಕಾಕ್ಷನೇ, ನೀನು ಸತ್ಯವಾದಿ ಎಂದು ಜಗತ್ತಿನಲ್ಲೇ ಪ್ರಸಿದ್ಧನಾಗಿರುವಿ. ಹೀಗಿದ್ದರೂ ಯಾವ ಕಾರಣದಿಂದ ಅಭಿಮನ್ಯುವಿನ ವಧೆಯ ವಾರ್ತೆಯನ್ನು ಹೇಳಲಿಲ್ಲ?
ತ್ವದ್ ಭಾಗಿನೇಯನಿಧನಂ ತತ್ತ್ವೇನಾಚಕ್ಷ್ವ ಮೇ ವಿಭೋ |
ಸದೃಶಾಕ್ಷಸ್ತವ ಕಥಂ ಶತ್ರುಭಿರ್ನಿಹತೋ ರಣೇ ॥8॥
ಪ್ರಭಾವಶಾಲಿಯೇ, ನಿನ್ನ ಸೋದರಳಿಯನ ಮರಣದ ವಾರ್ತೆಯನ್ನು ಯಥಾವತ್ತಾಗಿ ನನಗೆ ತಿಳಿಸು. ಕೃಷ್ಣನೇ, ನಿನ್ನ ಕಣ್ಣುಗಳಂತೆ ಅಭಿಮನ್ಯುವಿನ ಕಣ್ಣುಗಳಿದ್ದವು. ಇಂತಹ ಅಭಿಮನ್ಯುವು ಶತ್ರುಗಳಿಂದ ಹೇಗೆ ಹತನಾದನು? ತಿಳಿಸು.
ದುಷ್ಕರಂ ಬತ ವಾರ್ಷ್ಣೇಯ ಕಾಲೇ ಪ್ರಾಪ್ತೇ ನೃಭಿಃ ಸದಾ |
ಯತ್ರ ಮೇ ಹೃದಯಂ ದುಃಖಾತ್ ಶತಧಾ ನ ವಿದೀರ್ಯತೇ ॥9॥
ವೃಷ್ಣಿಕುಲಶ್ರೇಷ್ಠನೇ, ಕಾಲವು ಸನ್ನಿಹಿತವಾಗಿದ್ದಲ್ಲಿ ಮರಣವನ್ನು ಹೊಂದುವುದೂ ಕಷ್ಟವೇ. ಏಕೆಂದರೆ ದೌಹಿತ್ರನ ಮರಣದ ವಾರ್ತೆಯನ್ನು ಕೇಳಿಸಿಕೊಂಡರೂ ಈ ದುಃಖದಿಂದ ನನ್ನ ಹೃದಯವು ನೂರು ಹೋಳಾಗಿ ಸೀಳದೆ ಇನ್ನೂ ಉಳಿದುಕೊಂಡಿದೆಯಲ್ಲ!
ಕಿಮಬ್ರವೀತ್ ತ್ವಾಂ ಸಂಗ್ರಾಮೇ ಸುಭದ್ರಾಂ ಮಾತರಂ ಪ್ರತಿ |
ಮಾಂ ಚಾಪಿ ಪುಂಡರೀಕಾಕ್ಷ ಚಪಲಾಕ್ಷಃ ಪ್ರಿಯೋ ಮಮ ॥10॥
ಪುಂಡರೀಕಾಕ್ಷನೇ, ರಣಭೂಮಿಯಲ್ಲಿ ನಿನ್ನನ್ನು ಉದ್ದೇಶಿಸಿ ಅಭಿಮನ್ಯುವು ಏನು ಹೇಳಿದನು? ತಾಯಿಗೆ ಸಂಬಂಧಿಸಿದಂತೆ ಯಾವ ಸಂದೇಶವನ್ನು ಹೇಳಿದ್ದಾನೆ? ನನಗೂ ಏನಾದರೂ ಹೇಳಿದ್ದಾನೋ? ಚಂಚಲಾಕ್ಷನಾದ ಅಭಿಮನ್ಯುವು ನನಗೆ ಅತ್ಯಂತ ಪ್ರೀತಿಪಾತ್ರನು.
ಆಹವಂ ಪೃಷ್ಠತಃ ಕೃತ್ವಾ ಕ್ವಚಿನ್ನ ನಿಹತಃ ಪರೈಃ |
ಕಚ್ಚಿದ್ ದುಃಖೇನ ಗೋವಿಂದ ತೇನಾಜೌ ವಿಮುಖಃ ಕೃತಃ ॥11॥
ಯುದ್ಧರಂಗಕ್ಕೆ ಬೆನ್ನು ಹಾಕಿ ಓಡುವ ಶತ್ರುಗಳನ್ನು ಅವನೇನು ಸಂಹರಿಸಿಲ್ಲವಷ್ಟೆ! ಭಯದಿಂದ ಅವನ ಮುಖವು ವಿಕಾರ ಹೊಂದಲಿಲ್ಲವಷ್ಟೆ!
ಸ ಹಿ ಕೃಷ್ಣ ಮಹಾತೇಜಾಃ ಶ್ಲಾಘಮಾನೋ ಮಮಾಗ್ರತಃ |
ಬಲಾಭಾವೇನ ವಿಜಯಮಾತ್ಮನೋಽಕಥಯತ್ ಪ್ರಭುಃ ॥12॥
ಕೃಷ್ಣನೇ, ಮಹಾತೇಜಸ್ವಿಯಾಗಿರುವ, ಪ್ರಭಾವಶಾಲಿಯಾಗಿದ್ದ ನಮ್ಮ ಅಭಿಮನ್ಯುವು ಬಾಲಭಾವದಿಂದ, ತನ್ನ ಪರಾಕ್ರಮದಿಂದ ಅನೇಕ ಬಾರಿ ನನ್ನ ಬಳಿ ಪ್ರಶಂಸಿಸಿಕೊಂಡಿದ್ದಾನೆ.
ಕಚ್ಚಿನ್ನ ನಿಕೃತೋ ಬಾಣೈರ್ದ್ರೋಣಕರ್ಣಕೃಪಾದಿಭಿಃ |
ಧರಣ್ಯಾಂ ನಿಹತಃ ಶೇತೇ ತನ್ಮಮಾಚಕ್ಷ್ವ ಕೇಶವ ॥13॥
ಅಂತಹ ಅಭಿಮನ್ಯುವು ದ್ರೋಣ-ಕರ್ಣ-ಕೃಪ ಮೊದಲಾದವರ ಬಾಣಗಳಿಂದ ವಂಚನೆಗೀಡಾಗದೆ ಹತನಾಗಿರುವನಷ್ಟೆ? ಭೂಮಿಯಲ್ಲಿ ವಂಚನೆಯಿಂದ ಹತನಾಗಿ ಬೀಳಲಿಲ್ಲವಷ್ಟೇ? ಈ ವೃತ್ತಾಂತವನ್ನು ವಿಷದೀಕರಿಸು ಕೇಶವ.
ಸ ಹಿ ಭೀಷ್ಮಂ ತಥಾ ದ್ರೋಣಂ ಕರ್ಣಂ ಚ ರಥಿನಾಂ ವರಮ್ |
ಸ್ಪರ್ಧತೇ ಸ್ಮ ರಣೇ ನಿತ್ಯಂ ದುಹಿತುಃ ಪುತ್ರಕೋ ಮಮ ॥14॥

ಆ ಅಭಿಮನ್ಯುವು ದ್ರೋಣ, ಭೀಷ್ಮ, ಬಲಿಷ್ಠನಾದ ಕರ್ಣನನ್ನು ಯುದ್ಧದಲ್ಲಿ ನಿತ್ಯವೂ ಸ್ಪರ್ಧಿಸುತ್ತೇನೆ ಎಂಬುದಾಗಿ ನನ್ನ ಬಳಿ ಹೇಳುತ್ತಿದ್ದನು. ಅವನಿಗೇನಾಯಿತೆಂದು ತಿಳಿಸು.
ಏವಂವಿಧಂ ಬಹು ತದಾ ವಿಲಪಂತಂ ಸುದುಃಖಿತಮ್ |
ಪಿತರಂ ದುಃಖಿತತರೋ ಗೋವಿಂದೋ ವಾಕ್ಯಮಬ್ರವೀತ್ ॥15॥
ಹೀಗೆ ದುಃಖದಿಂದ ಅನೇಕ ರೀತಿ ಅಳುತ್ತಿರುವ ತಂದೆಯನ್ನು ಉದ್ದೇಶಿಸಿ ಗೋವಿಂದನು ಬಹಳ ದುಃಖದಿಂದಲೇ ಈ ಮಾತುಗಳನ್ನು ಹೇಳಿದನು.
ಶ್ರೀಭಗವಾನ್
ನ ತೇನ ವಿಹಿತಂ ವಕ್ತ್ರಂ ಕೃತಂ ಸಂಗ್ರಾಮಮೂರ್ಧನಿ |
ನ ಪೃಷ್ಠತಃ ಕೃತಶ್ಚಾಪಿ ಸಂಗ್ರಾಮಸ್ತೇನ ದುಸ್ತರಃ ॥16॥
ಶ್ರೀಭಗವಾನ್ ತಂದೆಯೇ, ರಣರಂಗದ ಮುಂಭಾಗದಲ್ಲಿಯೇ ಅಭಿಮನ್ಯುವು ಯಾವಾಗಲೂ ಯುದ್ಧ ಮಾಡುತ್ತಿದ್ದ. ತನ್ನ ಮುಖವನ್ನು ಯಾವತ್ತೂ ವಿಕಾರಗೊಳಿಸಿಕೊಳ್ಳಲಿಲ್ಲ, ಅರ್ಥಾತ್ ಉತ್ಸಾಹವನ್ನು ಕಳೆದುಕೊಳ್ಳಲಿಲ್ಲ. ಸಾಧಾರಣ ಮನುಷ್ಯರಿಂದ ದಾಟಲು ಅಶಕ್ಯವಾದ ಸಮರಾಂಗಣವನ್ನು ಬಿಟ್ಟು ಅಭಿಮನ್ಯುವು ಎಂದೂ ಬೆನ್ನು ಹಾಕಿ ಓಡಲಿಲ್ಲ. ಯಾರಿಗೂ ಹಿಂದಿನಿಂದ ಬಾಣ ಪ್ರಯೋಗವನ್ನು ಮಾಡಲಿಲ್ಲ.
ನಿಹತ್ಯ ಪೃಥಿವೀಪಾಲಾನ್ ಶತಶೋಽಥ ಸಹಸ್ರಶಃ |
ವೇದಿತೋ ದ್ರೋಣಕರ್ಣಾಭ್ಯಾಂ ದೌಃಶಾಸನಿವಶಂ ಗತಃ ॥17॥
ನೂರಾರು, ಸಾವಿರಾರು ಪೃಥಿವೀಪಾಲರನ್ನು ಕೊಂದಿರುವ ನಿನ್ನ ಮೊಮ್ಮಗನು ದುಶ್ಶಾಸನನ ಮಗನಿಂದ, ದ್ರೋಣ-ಕರ್ಣರೊಡನೆ ಯುದ್ಧ ಮಾಡುವಾಗ ಹತನಾದನು.
ಏಕೋ ಹ್ಯೇಕೇನ ಸತತಂ ಯುಧ್ಯಮಾನೋ ಯದಿ ಪ್ರಭೋ |
ಸ ಹಿ ಶಕ್ಯೋ ನ ಸಂಗ್ರಾಮೇ ನಿಹಂತುಮಪಿ ವಜ್ರಿಣಾ ॥18॥
ಒಬ್ಬನ ಬಳಿ ಒಬ್ಬನೇ ಯುದ್ಧ ಮಾಡಬೇಕು ಎಂಬ ನಿಯಮವೇನಾದರೂ ಇದ್ದಿದ್ದಲ್ಲಿ ಅಭಿಮನ್ಯುವನ್ನು ಸಂಗ್ರಾಮದಲ್ಲಿ ಕೊಲ್ಲಲು ವಜ್ರಾಯುಧವನ್ನು ಧರಿಸಿದ ಇಂದ್ರನಿಗೂ ಸಾಧ್ಯವಾಗುತ್ತಿರಲಿಲ್ಲ.
ಸಮಾಹೂತೇ ತು ಸಂಗ್ರಾಮೇ ಪಾರ್ಥೇ ಸಂಶಪ್ತಕೈಸ್ತದಾ |
ಪರಿವಾರ್ಯ ತು ಸಂಕ್ರುದ್ಧೈಃ ಸ ದ್ರೋಣಾದಿಭಿರಾಹವೇ ॥19॥
ಅರ್ಜುನನು ಸಂಶಪ್ತಕರೊಡನೆ ಯುದ್ಧ ಮಾಡಬೇಕೆಂದು ರಣರಂಗದಿಂದ ಬಹಳ ದೂರಕ್ಕೆ ಹೊರಟು ಹೋಗಿದ್ದನು. ಅದೇ ಸಮಯದಲ್ಲಿ ದ್ರೋಣರೇ ಮೊದಲಾದ ಅನೇಕ ಜನರು ಅಭಿಮನ್ಯುವನ್ನು ಕ್ರುದ್ಧರಾಗಿ ಸುತ್ತುವರಿದರು.
ತತಃ ಶತ್ರುಕ್ಷಯಂ ಕೃತ್ವಾ ಸುಮಹಾಂತಂ ರಣೇ ಪಿತಃ |
ದೌಹಿತ್ರಸ್ತವ ವಾರ್ಷ್ಣೇಯ ದೌಃಶಾಸನಿವಶಂ ಗತಃ ॥20॥
ತಂದೆಯೇ, ಆ ಸಮಯದಲ್ಲಿ ನಿನ್ನ ಮೊಮ್ಮಗನಾದ ಅಭಿಮನ್ಯುವು ಮಹಾವೀರರಿಂದ ಸುತ್ತುಗಟ್ಟಲ್ಪಟ್ಟಿದ್ದರೂ ಅಪಾರ ಸಂಖ್ಯೆಯಲ್ಲಿ ಶತ್ರುಗಳನ್ನು ಸದೆಬಡಿದು ಕೊನೆಯಲ್ಲಿ ದುಶ್ಶಾಸನನ ಪುತ್ರನಿಗೆ ವಶನಾದನು.
ವ್ಯಕ್ತಂ ಚ ಸ ಗತಃ ಸ್ವರ್ಗಂ ಜಹಿ ಶೋಕಂ ಮಹಾಮತೇ |
ನ ಹಿ ವ್ಯಸನಮಾಸಾದ್ಯ ಸೀದೇಯುಃ ಸುನರಾಃ ಕ್ವಚಿತ್ ॥21॥
ಮಹಾಮತಿಯೇ, ನಿನ್ನ ದೌಹಿತ್ರನೂ ನಿಶ್ಚಿತವಾಗಿ ಸ್ವರ್ಗಕ್ಕೆ ಹೋಗಿದ್ದಾನೆ. ಆದ್ದರಿಂದ ಉತ್ತಮ ಪಕ್ವತೆಯ ಬುದ್ಧಿಯುಳ್ಳ ಸತ್ಪುರುಷನಾದ ನೀನು ದುಃಖಿಸಬೇಡ. ಸತ್ಪುರುಷರು ಸಂಸ್ಕಾರಬುದ್ಧಿಯನ್ನು ಹೊಂದಿದ್ದು ವ್ಯಸನದಲ್ಲಿ ಖಿನ್ನರಾಗುವುದಿಲ್ಲ.
ದ್ರೋಣಕರ್ಣಪ್ರಭೃತಯೋ ಯೇನ ಪ್ರತಿಸಮಾಹಿತಾಃ |
ರಣೇ ಮಹೇಂದ್ರಪ್ರತಿಮಃ ಸ ಕಥಂ ನಾಪ್ನುಯಾದ್ ದಿವಮ್ ॥22॥
ಸ ಶೋಕಂ ಜಹಿ ದುರ್ಧರ್ಷ ಮಾ ಚ ಮನ್ಯುವಶಂ ಗಮಃ |
ಶಸ್ತ್ರಪೂತಾಂ ಹಿ ಸ ಗತಿಂ ಗತಃ ಪರಮದುರ್ಜಯಃ ॥23॥
(*ಈ ಎರಡು ಶ್ಲೋಕಗಳಿಗೆ ಪೂರ್ತಿ ಅನುವಾದವಾಗಿಲ್ಲ ಅನಿಸುತ್ತದೆ) ಯಾರಿಂದಲೂ ಗೆಲ್ಲಲಾಗದ ಅಭಿಮನ್ಯುವು ಶಸ್ತ್ರಗಳಿಂದ ಪೂತನಾಗಿ ಸ್ವರ್ಗವನ್ನು ಸೇರಿದ್ದಾನೆ.
ತಸ್ಮಿಂಸ್ತು ನಿಹತೇ ಪುತ್ರೇ ಸುಭದ್ರೇಯಂ ಸ್ವಸಾ ಮಮ |
ದುಃಖಾರ್ತಾ ಚ ಪೃಥಾಂ ಪ್ರಾಪ್ಯ ಕುರರೀವ ನನಾದ ಹ ॥24॥
ಅಭಿಮನ್ಯುವು ಹತನಾದ ಬಳಿಕ ಅವನ ತಾಯಿ, ನನ್ನ ತಂಗಿಯಾದ ಸುಭದ್ರೆಯು ಮಗನ ಬಳಿ ಹೋಗಿ ಕುರರಿಯಂತೆ ಬಹುವಾಗಿ ರೋದನಗೈದಳು.
ದ್ರೌಪದೀಂ ಚ ಸಮಾಸಾದ್ಯ ಪರ್ಯಪೃಚ್ಛತ್ ಸುದುಃಖಿತಾ ॥25॥
ದ್ರೌಪದಿಯನ್ನು ಸಮೀಪಿಸಿ ದುಃಖಿತಳಾಗಿ ಅವಳ ಬಳಿ ಪ್ರಶ್ನಿಸಿದಳು.
ಸುಭದ್ರಾ
ಆರ್ಯೇ ಕ್ವ ದಾರಕಾಃ ಸರ್ವೇ ದ್ರಷ್ಟುಮಿಚ್ಛಾಮಿ ತಾನಹಮ್ ॥26॥
ಸುಭದ್ರಾ ಪೂಜ್ಯಳೇ, ನನ್ನ ಮಕ್ಕಳೆಲ್ಲರೂ ಎಲ್ಲಿ ಹೋಗಿದ್ದಾರೆ? ಅವರೆಲ್ಲರನ್ನೂ ನಾನು ನೋಡಬಯಸುತ್ತೇನೆ.
ಶ್ರೀಭಗವಾನ್
ಅಸ್ಯಾಸ್ತು ವಚನಂ ಶ್ರುತ್ವಾ ಸರ್ವಾಸ್ತಾಃ ಕುರುಯೋಷಿತಃ |

ಭುಜಾಭ್ಯಾಂ ಪರಿಗೃಹ್ಯೈನಾಂ ಚುಕ್ರುಶುಃ ಪರಮಾರ್ತವತ್ ॥27॥
ಶ್ರೀಭಗವಾನ್ ಸುಭದ್ರೆಯ ಮಾತುಗಳನ್ನು ಕೇಳಿ ಖಿನ್ನರಾದ ಸ್ತ್ರೀಯರೆಲ್ಲರೂ ಅವಳ ಕೈಗಳನ್ನು ಹಿಡಿದುಕೊಂಡು ಅತ್ಯಂತ ದುಃಖದಿಂದ ರೋದನಗೈದರು.
ಉತ್ತರಾಂ ಚಾಬ್ರುವೀದ್ ಭದ್ರಾಂ ಭದ್ರೇ ಭರ್ತಾ ಕ್ವ ತೇ ಗತಃ |
ಕ್ಷಿಪ್ರಮಾಗಮನಂ ಮಹ್ಯಂ ತಸ್ಯ ತ್ವಂ ವೇದಯಸ್ವ ಹ ॥28॥
ನಂತರ ದ್ರೌಪದಿಯು ಉತ್ತರೆಯ ಕೈಗಳನ್ನು ಹಿಡಿದು ಮಂಗಳಾಂಗಿಯೇ, ನಿನ್ನ ಗಂಡನು ಎಲ್ಲಿಗೆ ಹೋಗಿದ್ದಾನೆ? ಅವನ ಆಗಮನವನ್ನು ಬೇಗನೆ ಬಂದು ನನಗೆ ತಿಳಿಸು ಎಂದು ಹೇಳಿದಳು.
ನನು ನಾಮಾಸ್ಮಿ ವೈರಾಟಿ ಶ್ರುತ್ವಾ ಮಮ ಗಿರಂ ಸದಾ |
ಭವನಾನ್ನಿಷ್ಪತತ್ಯಾಶು ಕಸ್ಮಾನ್ನಾಭ್ಯೇತಿ ತೇ ಪತಿಃ ॥29॥
ಉತ್ತರೆಯೇ, ನಾನು ನನ್ನ ಮಗನ ಜೊತೆಗೆ ಇಲ್ಲವಷ್ಟೆ? ಯಾವಾಗಲೂ ನನ್ನ ಧ್ವನಿಯನ್ನು ಕೇಳಿದ ಕೂಡಲೇ ನಿನ್ನ ಗಂಡನು (ಅಭಿಮನ್ಯುವು) ಕೂಡಲೇ ನಿನ್ನ ಅಂತಃಪುರದಿಂದ ಓಡಿಬರುತ್ತಿದ್ದನು. ಆ ನಿನ್ನ ಪತಿಯು ಈಗ ಏಕೆ ಬರುತ್ತಿಲ್ಲ?
ಅಭಿಮನ್ಯೋ ಕುಶಲಿನೋ ಮಾತುಲಸ್ತೇ ಮಹಾರಥಾಃ |
ಕುಶಲಂ ಚಾಬ್ರುವನ್ ಸರ್ವೇ ತ್ವಾಂ ಯುಯುತ್ಸುಮಿಹಾಗತಮ್॥30॥
ಅಭಿಮನ್ಯುವೇ, ಮಹಾರಥನಾದ ನಿನ್ನ ಮಾವಂದಿರೆಲ್ಲರೂ ಕುಶಲಿಗಳಾಗಿದ್ದಾರೆ. ಯುದ್ಧ ಮಾಡಲು ಆಗಮಿಸಿದ ನಿನ್ನನ್ನು ಅವರು ಕುಶಲಪ್ರಶ್ನೆ ಕೇಳುತ್ತಿದ್ದಾರೆ. ಹೀಗೆ ಗೋಳಿಟ್ಟಳು.
ಆಚಕ್ಷ್ವ ಮೇಽದ್ಯ ಸಂಗ್ರಾಮಂ ಯಥಾಪೂರ್ವಮರಿಂದಮ |
ಕಸ್ಮಾದೇವಂ ವಿಲಪತೀಂ ನಾದ್ಯ ವೈ ಪ್ರತಿಭಾಷಸೇ ॥31॥
ಅರಿಂದಮನೇ, ಹಿಂದೆ ಯುದ್ಧದ ವಿಷಯವಾಗಿ ಹೇಳುತ್ತಿದ್ದಂತೆ ಈಗಲೂ ಹೇಳು. ನಾನು ಅಳುತ್ತಿದ್ದರೂ ನೀನೇಕೆ ಪ್ರತ್ಯುತ್ತರವನ್ನು ನೀಡುತ್ತಿಲ್ಲ ಎಂದು ಹೇಳುತ್ತಾ ದುಃಖಿತಳಾದಳು.
ಏವಮಾದಿ ತು ವಾರ್ಷ್ಣೇಯ್ಯಾಃ ತದಾಽಸ್ಯಾಃ ಪರಿದೇವಿತಮ್ |
ಶ್ರುತ್ವಾ ಪೃಥಾ ಸುದುಃಖಾರ್ತಾ ಶನೈರ್ವಾಕ್ಯಮಥಾಬ್ರವೀತ್ ॥32॥
ಇದೇ ಮೊದಲಾದ ರೀತಿಯಲ್ಲಿ ಸುಭದ್ರೆಯು ಅಳುತ್ತಿದ್ದಾಗ, ಇವಳ ದುಃಖವನ್ನು ಕೇಳಿ, ಮೊಮ್ಮಗನ ಮರಣದಿಂದ ದುಃಖಪೀಡಿತಳಾದ ಕುಂತಿಯು ಸುಭದ್ರೆಯನ್ನು ಸಂತೈಸುತ್ತಾ ಮೆಲ್ಲನೆ ಇಂತು ನುಡಿದಳು.
ಪೃಥಾ
ಸುಭದ್ರೇ ವಾಸುದೇವೇನ ತಥಾ ಸಾತ್ಯಕಿನಾ ರಣೇ |
ಪಿತ್ರಾ ಚ ಪಾಲಿತೋ ಬಾಲಃ ಸ ಗತಃ ಕಾಲಧರ್ಮಣಾ ॥33॥
ಕುಂತಿ ಸುಭದ್ರೆಯೇ, ಶ್ರೀಕೃಷ್ಣ, ಸಾತ್ಯಕಿ ಮತ್ತು ತಂದೆಯಾದ ಅರ್ಜುನನಿಂದ ರಕ್ಷಿಸಲ್ಪಡುತ್ತಿದ್ದ ಬಾಲಕನಾದ ಅಭಿಮನ್ಯುವು ಕಾಲಧರ್ಮದಿಂದಲೇ ಹತನಾಗಿದ್ದಾನೆ.
ಈದೃಶೋ ಮರ್ತ್ಯಭಾವೋಽಯಂ ಮಾ ಶುಚೋ ಯದುನಂದಿನಿ |
ಪುತ್ರೋ ಹಿ ತವ ದುರ್ಧರ್ಷಃ ಸಂಪ್ರಾಪ್ತಃ ಪರಮಾಂ ಗತಿಮ್ ॥34॥
ಯದುನಂದಿನಿಯೇ, ಮರ್ತ್ಯಧರ್ಮವೇ ಈ ರೀತಿಯಾದುದು. ಮನುಷ್ಯ ಲೋಕದಲ್ಲಿ ಹುಟ್ಟಿದವರು ಸತ್ತೇ ತೀರುತ್ತಾರೆ. ನಿನ್ನ ಮಗನು ಶ್ರೇಷ್ಠ ಗತಿ ಹೊಂದಿದ್ದಾನೆ. ಆದ್ದರಿಂದ ಶೋಕಿಸಬೇಡ.
ಕುಲೇ ಮಹತಿ ಜಾತಾಽಸಿ ಕ್ಷತ್ರಿಯಾಣಾಂ ಮಹಾತ್ಮನಾಮ್ |
ಮಾ ಶುಚಶ್ಚಪಲಾಕ್ಷಿ ತ್ವಂ ಪುಂಡರೀಕನಿಭೇಕ್ಷಣಮ್ ॥35॥
ಶ್ರೇಷ್ಠವಾದ ಕುಲದಲ್ಲಿ ಸಂಜಾತಳಾಗಿರುವಿ. ಮಹಾತ್ಮರಾದ ಕ್ಷತ್ರಿಯರ ಕುಲವು ನಿನ್ನದು. ಚಪಲಾಕ್ಷಿಯೇ, ನೀನು ಪುಂಡರೀಕ ಸದೃಶ ಕಣ್ಣುಗಳನ್ನು ಹೊಂದಿದ್ದ ಮಗನ ವಿಷಯದಲ್ಲಿ ದುಃಖವನ್ನು ಹೊಂದಬೇಡ.
ಉತ್ತರಾಂ ತ್ವಮವೇಕ್ಷಸ್ವ ಗರ್ಭಿಣೀಂ ಮಾ ಶುಚಃ ಶುಭೇ |
ಪುತ್ರಮೇಷಾ ಹಿ ತಸ್ಯಾಶು ಜನಯಿಷ್ಯತಿ ಭಾಮಿನೀ ॥36॥
ಗರ್ಭಿಣಿಯಾಗಿರುವ ನಿನ್ನ ಸೊಸೆ ಉತ್ತರೆಯನ್ನಾದರೂ ನೋಡಿಕೊಂಡು ನಿನ್ನ ದುಃಖವನ್ನು ಪರಿತ್ಯಜಿಸು. ಭಾಮಿನಿಯಾದ ಈ ಉತ್ತರೆಯು ಅಭಿಮನ್ಯುವಿನ ಮಗುವಿಗೆ ಬೇಗ ಜನ್ಮವನ್ನು ನೀಡುತ್ತಾಳೆ.
ಶ್ರೀಭಗವಾನ್
ಏವಂ ತು ಸಾಂತ್ವಯಿತ್ವೈನಾಂ ಕುಂತೀ ಯದುಕುಲೋದ್ವಹಾಮ್ |
ವಿಹಾಯ ಶೋಕಂ ದುರ್ಧರ್ಷ ಶ್ರಾದ್ಧಮಸ್ಯಾಪ್ಯಕಲ್ಪಯತ್ ॥37॥
ಶ್ರೀಭಗವಾನ್ ತಂದೆಯೇ, ಈ ರೀತಿಯಾಗಿ ಕುಂತೀದೇವಿಯು ಸುಭದ್ರೆಯನ್ನು ಸಂತೈಸಿ, ದುಸ್ತರವಾದ ಶೋಕವನ್ನು ತ್ಯಾಗ ಮಾಡಿ, ಅಭಿಮನ್ಯುವಿನ ಶ್ರಾದ್ಧದ ಸಿದ್ಧತೆಗಳನ್ನು ಮಾಡಿದಳು.
ಸಮನುಜ್ಞಾಪ್ಯ ಧರ್ಮಜ್ಞಂ ರಾಜಾನಂ ಭೀಮಮೇವ ಚ |
ಯಮೌ ಯಮೋಪಮೌ ಚೈವ ದದೌ ದಾನಾನ್ಯನೇಕಶಃ ॥38॥
ಧರ್ಮಜ್ಞನಾದ ಯುಧಿಷ್ಠಿರನ, ಭೀಮನ, ಯಮನಿಗೆ ಸದೃಶವಾದ ಪರಾಕ್ರಮವುಳ್ಳ ನಕುಲ-ಸಹದೇವರ ಅನುಮತಿಯನ್ನು ಪಡೆದು, ಅಭಿಮನ್ಯುವಿಗೆ ಸದ್ಗತಿಯಾಗಲೆಂದು ಅನೇಕ ವಿಧವಾದ ದಾನಗಳನ್ನು ಸತ್ಪಾತ್ರರಿಗೆ ಮಾಡಿದಳು.
ತತಃ ಪ್ರದಾಯ ಬಹ್ವೀರ್ಗಾ ಬ್ರಾಹ್ಮಣೇಭ್ಯೋ ಯದೂದ್ವಹ |

ಸಮಹೃಷ್ಯತ ವಾರ್ಷ್ಣೇಯೀ ವೈರಾಟೀಂ ಚಾಬ್ರವೀದಿದಮ್ ॥39॥
ಬ್ರಾಹ್ಮಣರಿಗೆ ಬಹುಸಂಖ್ಯಾತವಾದ ಗೋವುಗಳನ್ನು ದಾನವಾಗಿ ಕೊಟ್ಟು ಸಮಾಧಾನ ಮಾಡಿಕೊಂಡು ಉತ್ತರೆಯನ್ನುದ್ದೇಶಿಸಿ ಹೇಳಿದಳು.
ಕುಂತೀ
ವೈರಾಟಿ ನೇಹ ಸಂತಾಪಸ್ತ್ವಯಾ ಕಾರ್ಯೋ ಯಶಸ್ವಿನಿ |
ಭರ್ತಾರಂ ಪ್ರತಿ ಸುಶ್ರೋಣಿ ಗರ್ಭಸ್ಥಂ ರಕ್ಷ ಮೇ ಶಿಶುಮ್ ॥40॥
ಕುಂತೀ ನಿರ್ದುಷ್ಟಳೇ, ಸುಂದರಿಯೇ, ವಿರಾಟಪುತ್ರಿಯೇ, ನೀನು ನಿನ್ನ ಪತಿಯ ನಿಮಿತ್ತವಾಗಿ ದುಃಖಿಸಬೇಡ. ಗರ್ಭದಲ್ಲಿರುವ ಶಿಶುವನ್ನು ಚೆನ್ನಾಗಿ ರಕ್ಷಿಸು.
ಶ್ರೀಭಗವಾನ್
ಏವಮುಕತ್ವ ತತಃ ಕುಂತೀ ವಿರರಾಮ ಮಹಾದ್ಯುತೇ |
ತಾಮನುಜ್ಞಾಪ್ಯ ಚೇಹೇಮಾಂ ಸುಭದ್ರಾಂ ಪುನರಾನಯಮ್ ॥41॥
ಶ್ರೀಭಗವಾನ್ ಈ ರೀತಿಯಾಗಿ ಉತ್ತರೆಗೆ ಸಾಂತ್ವನವನ್ನು ಹೇಳಿ ಕುಂತಿಯು ಮಾತಿನಿಂದ ವಿರಮಿಸಿದಳು. ಅವಳ ಅನುಮತಿಯನ್ನು ಪಡೆದು ನಾನು ಸುಭದ್ರೆಯನ್ನು ಪುನಃ ಇಲ್ಲಿಗೆ ಕರೆದು ತಂದಿದ್ದೇನೆ.
ಏವಂ ಸ ನಿಧನಂ ಪ್ರಾಪ್ತೋ ದೌಹಿತ್ರಸ್ತವ ಮಾನದ |
ಸಂತಾಪಂ ತ್ಯಜ ದುರ್ಧರ್ಷ ಮಾ ಚ ಶೋಕೇ ಮನಃ ಕೃಥಾಃ ॥42॥
ಮಾನದನೇ, ಹೀಗೆ ನಿನ್ನ ಮೊಮ್ಮಗನು ಯುದ್ಧದಲ್ಲಿ ಮರಣವನ್ನು ಹೊಂದಿದ್ದಾನೆ. ದುರ್ಧರ್ಷನೇ, ಸಂತಾಪವನ್ನು ಬಿಟ್ಟುಬಿಡು. ದುಃಖಪಡಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವಸುದೇವಶೋಕಹರಣಂ ನಾಮ ಏಕಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತೊಂದನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ತೆರಡನೆಯ ಅಧ್ಯಾಯ
ವಸುದೇವಾದಿಗಳಿಂದ ಅಭಿಮನ್ಯುವಿಗೆ ಶ್ರಾದ್ಧಪ್ರಕ್ರಿಯೆ. ವೇದವ್ಯಾಸರು ಉತ್ತರೆಯನ್ನು, ಅರ್ಜುನನನ್ನು ಸಮಾಧಾನಪಡಿಸಿ, ಯುಧಿಷ್ಠಿರನಿಗೆ
ಅಶ್ವಮೇಧ ಯಾಗವನ್ನು ಮಾಡಲು ಹೇಳಿ ಅಂತರ್ಧಾನ ಹೊಂದಿದುದು.
ವೈಶಂಪಾಯನಃ
ಏತಚ್ಛ್ರುತ್ವಾ ತು ಪುತ್ರಸ್ಯ ವಚಃ ಶೂರಾತ್ಮಜಸ್ತದಾ |
ವಿಹಾಯ ಶೋಕಂ ಧರ್ಮಾತ್ಮಾ ದದೌ ಶ್ರಾದ್ಧಮನುತ್ತಮಮ್ ॥1॥
ವೈಶಂಪಾಯನ ಜನಮೇಜಯನೇ, ಶೂರಸೇನನ ಸುತನಾದ, ಧರ್ಮಾತ್ಮನಾದ ವಸುದೇವನು ಕೃಷ್ಣನು ಹೇಳಿದ ಮಾತುಗಳನ್ನು ಕೇಳಿ, ಶೋಕವನ್ನು ತ್ಯಜಿಸಿ, ಅಭಿಮನ್ಯುವಿಗಾಗಿ ಉತ್ತಮ ರೀತಿಯಾದ ಶ್ರಾದ್ಧ ಕ್ರಿಯೆಗಳನ್ನು ನಡೆಸಿದನು.
ತಥೈವ ವಾಸುದೇವೋಽಪಿ ಸ್ವಸ್ರೀಯಸ್ಯ ಮಹಾತ್ಮನಃ |
ದಯಿತಸ್ಯ ಪಿತುರ್ನಿತ್ಯಮಕರೋದೌರ್ಧ್ವದೈಹಿಕಮ್ ॥2॥
ಇದರಂತೆ ಶ್ರೀಕೃಷ್ಣನೂ ತಂಗಿಯ ಮಗನಾದ, ಮಹಾತ್ಮನಾದ, ತನ್ನ ತಂದೆಗೆ ಪ್ರೀತಿಪಾತ್ರನಾದ ಅಭಿಮನ್ಯುವಿಗೆ ಔರ್ಧ್ವದೈಹಿಕ ಕ್ರಿಯೆಗಳನ್ನು ಮಾಡಿದನು.
ಷಷ್ಟಿಂ ಶತಸಹಸ್ರಾಣಿ ಬ್ರಾಹ್ಮಣಾನಾಂ ಮಹಾಭುಜ |
ವಿಧಿವದ್ ಭೋಜಯಾಮಾಸ ಭೋಜ್ಯಂ ಸರ್ವಗುಣಾನ್ವಿತಮ್ ॥3॥
ಮಹಾತೇಜಸ್ವಿಗಳಾದ, ಅರವತ್ತು ಲಕ್ಷ ಬ್ರಾಹ್ಮಣರಿಗೆ ಸ್ವೀಕರಿಸಲು ಯೋಗ್ಯವಾದ, ಸಮಸ್ತ ಗುಣಗಳಿಂದ ತುಂಬಿದ ಅನ್ನವನ್ನು ವಿಧಿವತ್ತಾಗಿ ದಾನ ಮಾಡಿದನು.
ಆಚ್ಛಾದ್ಯ ಚ ಮಹಾಬಾಹುರ್ಧನತೃಷ್ಣಾಮಪಾನುದತ್ |
ಬ್ರಾಹ್ಮಣಾನಾಂ ತದಾ ಕೃಷ್ಣಸ್ತದಭೂದ್ ರೋಮಹರ್ಷಣಮ್ ॥4॥
ಆ ಸಮಯದಲ್ಲಿ ಶ್ರೀಕೃಷ್ಣನು ಬ್ರಾಹ್ಮಣರಿಗೆ ವಸ್ತ್ರಗಳನ್ನು ಹೊದ್ದಿಸಿ, ಅವರಿಗೆ ಮತ್ತೂ ಹಣದ ಬಯಕೆ ಉಂಟಾಗದಿರುವ ರೀತಿಯಲ್ಲಿ ಅಪಾರವಾದ ಧನ-ಕನಕಗಳನ್ನು ದಾನ ಮಾಡಿದನು. ಕೃಷ್ಣನ ಈ ಪ್ರಕ್ರಿಯೆಯು ರೋಮಾಂಚನವನ್ನು ಉಂಟುಮಾಡುವಂತಿತ್ತು.
ಸುವರ್ಣಂ ಚೈವ ಗಾಶ್ಚೈವ ಶಯನಾಚ್ಛಾದನಂ ತಥಾ |
ದೀಯಮಾನಂ ತದಾ ವಿಪ್ರಾಃ ಪ್ರಭೂತಮಿತಿ ಚಾಬ್ರುವನ್ ॥5॥
ಸುವರ್ಣವನ್ನೂ, ಗೋವುಗಳನ್ನೂ, ಹಾಸಿಗೆ-ಹೊದ್ದಿಗೆಗಳನ್ನೂ ದಾನ ಮಾಡುತ್ತಿದ್ದಾಗ ಬ್ರಾಹ್ಮಣರು `ವರ್ಧತಾಂ' (ಅಭಿವೃದ್ಧಿಯನ್ನು ಹೊಂದಲಿ) ಎಂಬ ಮಾತುಗಳನ್ನು ಮತ್ತೂ ಹೆಚ್ಚಾದ ಸಂಪತ್ತು ಉಂಟಾಗಲಿ ಎಂಬ ಮಾತುಗಳನ್ನು ಆಡಿದರು.
ವಾಸುದೇವೋಽಥ ದಾಶಾರ್ಹೋ ಬಲದೇವಃ ಸಸಾತ್ಯಕಿಃ |
ಅಭಿಮನ್ಯೋಸ್ತದಾ ಶ್ರಾದ್ಧಮಕುರ್ವನ್ ಸತ್ಯವಿಕ್ರಮಾಃ ॥6॥
ವಾಸುದೇವನು ಶ್ರಾದ್ಧ ಪ್ರಕ್ರಿಯೆಯನ್ನು ಮಾಡಿದ ನಂತರ ಬಲಭದ್ರ, ಸಾತ್ಯಕಿ ಮೊದಲಾದ ಸತ್ಯವಿಕ್ರಮರು ಅಭಿಮನ್ಯುವನ್ನು

ಉದ್ದೇಶಿಸಿಕೊಂಡು ಶ್ರಾದ್ಧವನ್ನು ಮಾಡಿದರು.
ತತಃ ಶೋಕಂ ಕುರುಶ್ರೇಷ್ಠ ಜಹಿ ತ್ವಮರಿಮರ್ದನ |
ಅತೀವ ದುಃಖಸಂತಪ್ತಾ ನ ಶಮಂ ಚೋಪಲೇಭಿರೇ ॥7॥
ಅಭಿಮನ್ಯುವಿನ ವಧೆಯಿಂದ ಯಾದವರು ಎಷ್ಟೇ ಸಮಾಧಾನವನ್ನು ತಂದುಕೊಂಡರೂ ಮನಶ್ಶಾಂತಿಯನ್ನು ಹೊಂದಲಿಲ್ಲ.
ತಥೈವ ಪಾಂಡವಾ ಧೀರಾ ನಗರೇ ನಾಗಸಾಹ್ವಯೇ |
ನೋಪಾಗಚ್ಛಂಸ್ತಥಾ ಶಾಂತಿಮಭಿಮನ್ಯುವಿನಾಕೃತಾಃ ॥8॥
ಇದರಂತೆ ವೀರರಾಗಿರುವಂತಹ ಪಾಂಡವರಿಗೂ ಹಸ್ತಿನಾವತಿಯಲ್ಲಿದ್ದಾಗ ಅಭಿಮನ್ಯುವಿನ ವಿಯೋಗದ ದುಃಖವು
ಮರೆಯದಾಯಿತು, ಮನಶ್ಶಾಂತಿ ಸಿಗದಂತಾಯಿತು.
ಸುಬಹೂನಿ ಚ ರಾಜೇಂದ್ರ ದಿವಸಾನಿ ವಿರಾಟಜಾ |
ನಾಭುಂಕ್ತ ಪತಿಶೋಕಾರ್ತಾ ತದಭೂತ್ ಕರುಣಂ ಮಹತ್ ॥9॥
ವಿರಾಟನ ಮಗಳಾದ ಉತ್ತರೆಯು ಪತಿಯನ್ನು ಕಳೆದುಕೊಂಡ ದುಃಖದಿಂದ ಅನೇಕ ದಿನಗಳ ತನಕ ಊಟವನ್ನೂ ಮಾಡಲಿಲ್ಲ. ಇವಳ
ಸ್ಥಿತಿಯು ಅತ್ಯಂತ ಕರುಣಾಜನಕವಾಗಿತ್ತು.
ಧ್ರಿಯಮಾಣೇ ತು ತಸ್ಮಿಂಸ್ತು ಗರ್ಭೇ ಕುಕ್ಷಿಸ್ಥ ಏವ ಚ |
ಆಜಗಾಮ ತದಾ ವ್ಯಾಸೋ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥10॥
ಈ ಪ್ರಸಂಗದಲ್ಲಿ ಉತ್ತರೆಯು ಗರ್ಭವನ್ನು ಧರಿಸಿದ್ದಳು. ಅನೇಕ ದಿನಗಳ ತನಕ ನಿರಶನಳಾಗಿಯೇ ಇದ್ದುದರಿಂದ ಗರ್ಭಸ್ಥ ಶಿಶುವು
ದಿನದಿನಕ್ಕೂ ಕ್ಷೀಣಿಸಲಾರಂಭಿಸಿತು.
ಆಗಮ್ಯ ಚಾಬ್ರವೀದ್ ಧೀಮಾನ್ ಪೃಥಾಂ ಪೃಥುಲಲೋಚನಾಮ್ |
ಉತ್ತರಾಂ ಚ ಮಹಾತೇಜಾಃ ಶೋಕಃ ಸಂತ್ಯಜ್ಯತಾಮಿತಿ ॥11॥
ಈ ವಿಷಯವನ್ನು ದಿವ್ಯದೃಷ್ಟಿಯಿಂದ ತಿಳಿದ ವೇದವ್ಯಾಸದೇವರು ಹಸ್ತಿನಾವತಿಗೆ ಆಗಮಿಸಿದರು. ತೇಜಸ್ವಿಗಳಾದ ವ್ಯಾಸರು
ವಿಶಾಲಾಕ್ಷಿಯಾದ ಕುಂತಿಯನ್ನು, ಉತ್ತರೆಯನ್ನು ಸಂಪರ್ಕಿಸಿ, ಶೋಕವನ್ನು ಬಿಟ್ಟುಬಿಡಿರಿ ಎಂದು ತಿಳಿಸಿದರು.
ವ್ಯಾಸಃ
ಜನಿಷ್ಯತಿ ಮಹಾತೇಜಾಃ ಪುತ್ರಸ್ತವ ಯಶಸ್ವಿನಿ ॥12॥
ವ್ಯಾಸರು ಯಶಸ್ವಿನಿಯಾದ ಉತ್ತರೆಯೇ, ನಿನಗೆ ಮಹಾತೇಜಸ್ವಿಯಾದ ಮಗನು ಹುಟ್ಟುತ್ತಾನೆ.
ಪ್ರಭಾವಾದ್ ವಾಸುದೇವಸ್ಯ ಮಮ ವ್ಯಾಹರಣಾದಪಿ |
ಪಾಂಡವಾನಾಮಯಂ ಚಾಂತೇ ಪಾಲಯಿಷ್ಯತಿ ಮೇದಿನೀಮ್ ॥13॥
ಶ್ರೀಕೃಷ್ಣ ಪರಮಾತ್ಮನ ಅನುಗ್ರಹದಿಂದ, ನಾನು ಆಡಿದ ಆಶೀರ್ವಾದದ ಮಾತುಗಳಿಂದಲೂ ಪಾಂಡವರ ಬಳಿಕ ಈ
ಭೂಮಂಡಲವನ್ನು ರಕ್ಷಿಸುವವನು ನಿನ್ನ ಮಗನೇ ಆಗಿದ್ದಾನೆ.
ವೈಶಂಪಾಯನಃ
ಧನಂಜಯಂ ಚ ಸಂಪ್ರೇಕ್ಷ್ಯ ಧರ್ಮರಾಜಸ್ಯ ಪಶ್ಯತಃ |
ವ್ಯಾಸೋ ವಾಕ್ಯಮುವಾಚೇದಂ ಹರ್ಷಯನ್ನಿವ ಭಾರತ ॥14॥
ವೈಶಂಪಾಯನ ಜನಮೇಜಯನೇ, ವ್ಯಾಸರು ಉತ್ತರೆಯನ್ನು ಸಂತೈಸಿ, ಅರ್ಜುನನ ಕಡೆ ನೋಡಿ, ಧರ್ಮರಾಜನು
ನೋಡುತ್ತಿರುವಾಗಲೇ ಅರ್ಜುನನಿಗೆ ಸಂತೋಷವಾಗುವ ಈ ಮಾತನ್ನು ಆಡಿದರು.
ವ್ಯಾಸಃ
ಪೌತ್ರೋ ಧ್ರುವಂ ಮಹಾಭಾಗೋ ಭವಿಷ್ಯತಿ ಮಹಾಮತಿಃ |
ಪೃಥ್ವೀಂ ಸಾಗರಪರ್ಯಂತಾಂ ಪಾಲಯಿಷ್ಯತಿ ಚೈವ ಹ ॥15॥
ವ್ಯಾಸರು ಕುರುಶ್ರೇಷ್ಠನೇ, ನಿನಗೆ ನಿಶ್ಚಿತವಾಗಿಯೂ ಮಹಾಭಾಗ್ಯಶಾಲಿಯಾದ, ಮಹಾಮತಿಯಾದ ಮೊಮ್ಮಗನು ಹುಟ್ಟುತ್ತಾನೆ.
ಅವನು ಸಾಗರಪರ್ಯಂತವಾದ ಭೂಮಿಯನ್ನು ಪರಿಪಾಲಿಸುತ್ತಾನೆ.
ತಸ್ಮಾಚ್ಛೋಕಂ ಕುರುಶ್ರೇಷ್ಠ ಜಹಿ ತ್ವಮರಿಮರ್ದನ |
ವಿಚಾರ್ಯಮತ್ರ ನ ಹಿ ತೇ ಸತ್ಯಮೇತದ್ ಭವಿಷ್ಯತಿ ॥16॥
ಕುರುಶ್ರೇಷ್ಠನೇ, ಆದ್ದರಿಂದ ನಿನ್ನ ಮಗನ ವಧೆಯಿಂದ ಉಂಟಾದ ಶೋಕವನ್ನು ತ್ಯಾಗ ಮಾಡು. ನನ್ನ ಮಾತಿನಲ್ಲಿ ವಿಶ್ವಾಸವಿಡು.
ನನ್ನ ಮಾತು ಸತ್ಯವೇ ಆಗುತ್ತದೆ. ಇದರಲ್ಲಿ ವಿಚಾರ ಮಾಡುವ ಅಂಶವು ಯಾವುದೂ ಇರುವುದಿಲ್ಲ.
ಯಚ್ಚಾಪಿ ವೃಷ್ಣಿವೀರೇಣ ಕೃಷ್ಣೇನ ಕುರುನಂದನ |
ಪುರಾ ಚೋಕ್ತಂ ತಥಾ ಭಾವಿ ಮಾ ತೇ ಭೂದತ್ರ ಸಂಶಯಃ ॥17॥
ಇಷ್ಟೇ ಅಲ್ಲದೆ ವೃಷ್ಣಿವೀರನಾದ ಕೃಷ್ಣನಿಂದ ಹಿಂದೆ ಏನು ಹೇಳಲ್ಪಟ್ಟಿದೆಯೋ ಅದೆಲ್ಲವೂ ಹಾಗೆಯೇ ನಡೆಯುತ್ತದೆ.
ಕುರುನಂದನನೇ, ದುಃಖ ಪಡಬೇಡ.
ವಿಬುಧಾನಾಂ ಗತೋ ಲೋಕಾನ್ ಅಕ್ಷಯಾನಾತ್ಮನಿರ್ಜಿತಾನ್ |
ನ ಸ ಶೋಚ್ಯಸ್ತಥಾ ವತ್ಸ ನ ಚಾನ್ಯೈಃ ಕುರುಭಿಸ್ತಥಾ ॥18॥
ವೀರನಾದ ಅಭಿಮನ್ಯುವು ಪರಾಕ್ರಮದಿಂದ ಈಗಾಗಲೇ ದೇವತೆಗಳ ಅಕ್ಷಯ ಲೋಕವನ್ನು ಹೊಂದಿರುತ್ತಾನೆ. ಆದ್ದರಿಂದ ನೀನಾಗಲೀ,
ಬೇರೆ ಕುರುವಂಶದವರಾಗಲೀ ಅಭಿಮನ್ಯುವಿನ ನಿಮಿತ್ತ ದುಃಖಿಸಬೇಡಿರಿ.
ವೈಶಂಪಾಯನಃ

ಏವಂ ಪಿತಾಮಹೇನೋಕ್ತೋ ಧರ್ಮಾತ್ಮಾ ಸ ಧನಂಜಯಃ |
ತ್ಯಕ್ತ್ವಾ ಶೋಕಂ ಮಹಾರಾಜ ಹೃಷ್ಟರೂಪೋಽಭವದ್ ತದಾ ॥19॥
ವೈಶಂಪಾಯನ ಹೀಗೆ ಕುರುಕುಲ ಪಿತಾಮಹರಾದ ವೇದವ್ಯಾಸರು ಹೇಳಿದ ಬಳಿಕ, ಧರ್ಮಾತ್ಮನಾದ ಧನಂಜಯನು ಶೋಕವನ್ನು ಬಿಟ್ಟನು. ವೀರನಾದ ಮೊಮ್ಮಗನು ಹುಟ್ಟುತ್ತಾನೆ ಎಂದು ಸಂತಸವನ್ನೂ ಪಟ್ಟನು.
ಪಿತಾಽಪಿ ತವ ಧರ್ಮಜ್ಞ ಗರ್ಭೇ ತಸ್ಮಿನ್ ಮಹಾಮತೇ |
ಅವರ್ಧತ ಯಥಾಕಾಲಂ ಶುಕ್ಲಪಕ್ಷೇ ಯಥಾ ಶಶೀ ॥20॥
ಜನಮೇಜಯನೇ, ನಿನ್ನ ತಂದೆಯೂ ಕೂಡ ಉತ್ತರೆಯ ಗರ್ಭದಲ್ಲಿ ಶುಕ್ಲ ಪಕ್ಷದ ಚಂದ್ರನಂತೆ ದಿನದಿನಕ್ಕೂ ಬೆಳೆಯ ತೊಡಗಿದನು.
ತತಃ ಸಂಚೋದಯಾಮಾಸ ವ್ಯಾಸೋ ಧರ್ಮಾತ್ಮಜಂ ನೃಪಮ್ |
ಅಶ್ವಮೇಧಂ ಪ್ರತಿ ತದಾ ತತಃ ಸೋಽಂತರ್ಹಿತೋಽಭವತ್ ॥21॥
ಬಳಿಕ ವ್ಯಾಸರು ಧರ್ಮರಾಜನನ್ನು ಅಶ್ವಮೇಧಯಾಗ ಮಾಡುವಂತೆ ಹುರಿದುಂಬಿಸಿದರು. ನಂತರ ಆ ಸ್ಥಳದಿಂದ ಅಂತರ್ಧಾನವನ್ನು ಹೊಂದಿದರು.
ಧರ್ಮರಾಜಶ್ಚ ಮೇಧಾವೀ ಶ್ರುತ್ವಾ ವ್ಯಾಸಸ್ಯ ತದ್ ವಚಃ |
ವಿತ್ತೋಪನಯನೇ ತಾತ ಚಕಾರ ಮತಿಮಾನ್ ಮತಿಮ್ ॥22॥
ಮೇಧಾವಿಯಾದ ಧರ್ಮರಾಜನು ವ್ಯಾಸರ ಮಾತುಗಳನ್ನು ಕೇಳಿಸಿಕೊಂಡು, ಐಶ್ವರ್ಯವನ್ನು ತರಬೇಕೆಂದು ಹಿಮಾಲಯಕ್ಕೆ ಸಾಗಲು ಮತಿ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವ್ಯಾಸವಚನಂ ನಾಮ ದ್ವಿಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತೆರಡನೆಯ
ಅಧ್ಯಾಯ ಮುಗಿಯಿತು.
* * * * *
ಅರವತ್ಮೂರನೆಯ ಅಧ್ಯಾಯ
ಯುಧಿಷ್ಠಿರನು ವೇದವ್ಯಾಸದೇವರ ಆದೇಶದಂತೆ ಭೀಮಸೇನನೇ ಮೊದಲಾದವರ ಜೊತೆ ಸಮಾಲೋಚಿಸಿ, ಯಜ್ಞಕ್ಕಾಗಿ ಧನವನ್ನು ತರಬೇಕೆಂದು ಎಲ್ಲರೊಟ್ಟಿಗೆ ಹಿಮಾಲಯದ ತಪ್ಪಲಿಗೆ ಸಾಗಿದುದು.
ಜನಮೇಜಯಃ
ಶ್ರುತ್ವೈತದ್ ವಚನಂ ಬ್ರಹ್ಮನ್ ವ್ಯಾಸೇನೋಕ್ತಂ ಮಹಾತ್ಮನಾ |
ಅಶ್ವಮೇಧಂ ಪ್ರತಿ ತದಾ ಕಿಂ ಚಕಾರ ಯುಧಿಷ್ಠಿರಃ ॥1॥
ಜನಮೇಜಯ ಬ್ರಾಹ್ಮಣೋತ್ತಮರೇ, ಮಹಾತ್ಮರಾದ ವೇದವ್ಯಾಸರ ವಚನವನ್ನು ಕೇಳಿಸಿಕೊಂಡ ಯುಧಿಷ್ಠಿರನು ಅಶ್ವಮೇಧ ಸಂಬಂಧವಾಗಿ ಯಾವ ಕಾರ್ಯವನ್ನು ಮಾಡಿದನೆಂದು ತಿಳಿಸಿರಿ.
ರತ್ನಂ ಚ ಯನ್ಮರುತ್ತೇನ ನಿಹಿತಂ ಪೃಥಿವೀತಳೇ |
ತದವಾಪ್ತಂ ಕಥಂ ಚೈತತ್ ತನ್ಮೇ ಬ್ರೂಹಿ ದ್ವಿಜೋತ್ತಮ ॥2॥
ಮರುತ್ತನು ಭೂಮಿಯ ಅಡಿಯಲ್ಲಿ ಹುದುಗಿಸಿಟ್ಟಿರುವ ರತ್ನಮಯವಾದ ಯಜ್ಞೋಪಕರಣಗಳನ್ನು ಹೇಗೆ ಪಡೆದುಕೊಂಡನೆಂದು ನನಗೆ ವಿಸ್ತಾರವಾಗಿ ತಿಳಿಸಿರಿ.
ವೈಶಂಪಾಯನಃ
ಶ್ರುತ್ವಾ ದ್ವೈಪಾಯನವಚೋ ಧರ್ಮರಾಜೋ ಯುಧಿಷ್ಠಿರಃ |
ಭ್ರಾತೄನ್ ಸರ್ವಾನ್ ಸಮಾಭಾಷ್ಯ ಕಾಲೇ ವಚನಮಬ್ರವೀತ್ ॥3॥
ಅರ್ಜುನಂ ಭೀಮಸೇನಂ ಚ ಮಾದ್ರೀಪುತ್ರೌ ಯಮಾವಪಿ ॥4॥
ವೈಶಂಪಾಯನ ಯುಧಿಷ್ಠಿರನು ಕೃಷ್ಣದ್ವೈಪಾಯನರ ಮಾತನ್ನು ಕೇಳಿಸಿಕೊಂಡು ತನ್ನ ಸಹೋದರರಾದ ಭೀಮಸೇನ, ಅರ್ಜುನ, ನಕುಲ-ಸಹದೇವರನ್ನು ಕರೆಸಿದನು. ಸಮಯೋಚಿತವಾದ ಮಾತುಗಳನ್ನು ಹೇಳಿದನು.
ಯುಧಿಷ್ಠಿರಃ
ಶ್ರುತಂ ವೋ ವಚನಂ ವೀರಾಃ ಸೌಹೃದಾದ್ ಯನ್ಮಹಾತ್ಮನಾ |
ಕುರೂಣಾಂ ಹಿತಕಾಮೇನ ಪ್ರೋಕ್ತಂ ಕೃಷ್ಣೇನ ಧೀಮತಾ ॥5॥
ಯುಧಿಷ್ಠಿರ ವೀರರೇ, ಕುರುಗಳಿಗೆ ಹಿತವನ್ನೇ ಯಾವಾಗಲೂ ಬಯಸುವ, ಬುದ್ಧಿವಂತರಾದ, ಮಹಾನುಭಾವರಾದ ವೇದವ್ಯಾಸದೇವರು ನಮ್ಮ ಹಿತಚಿಂತನೆಗಾಗಿ ಹೇಳಿದ ಮಾತನ್ನು ನೀವೆಲ್ಲ ಕೇಳಿಸಿಕೊಂಡಿರುವಿರಿ.
ತಪೋವೃದ್ಧೇನ ಮಹತಾ ಸುಹೃದಾಂ ಭೂತಿಮಿಚ್ಛತಾ |
ಗುರುಣಾ ಧರ್ಮಶೀಲೇನ ವ್ಯಾಸೇನಾದ್ಭುತಕರ್ಮಣಾ ॥6॥
ಪಿತಾಮಹೇನ ಭೀಷ್ಮೇಣ ಗೋವಿಂದೇನ ಚ ಧೀಮತಾ |
ಸಂಸ್ಮೃತ್ಯ ತದಹಂ ಸಮ್ಯಕ್ ಕರ್ತುಮಿಚ್ಛಾಮಿ ಪಾಂಡವಾಃ ॥7॥
ಭಕ್ತರ ಅಭಿವೃದ್ಧಿಯನ್ನೇ ಬಯಸುವ, ತಪೋವೃದ್ಧರಾದ, ಮಹಾತ್ಮರಾದ, ಗುರುಗಳಾದ, ಧರ್ಮಶೀಲರಾದ, ಅದ್ಭುತಕರ್ಮಸಂಪನ್ನರಾದ ವೇದವ್ಯಾಸದೇವರು, ಪಿತಾಮಹನಾದ ಭೀಷ್ಮನು, ಧೀಮಂತನಾದ ಗೋವಿಂದನು - ಇವರೆಲ್ಲರನ್ನೂ ಕೂಡ ಸ್ಮರಿಸಿಕೊಂಡು, ಪಾಂಡವರೇ ಅವರು ಹೇಳಿದ ಕರ್ಮವನ್ನು ಮಾಡಲು ಬಯಸಿದ್ದೇನೆ.

ಆಯತ್ಯಾಂ ಚ ತದಾತ್ವೇ ಚ ಸರ್ವೇಷಾಂ ತದ್ಧಿ ನೋ ಹಿತಮ್ |
ಅನುಬಂಧೇ ಚ ಕಲ್ಯಾಣಂ ಯದ್ವಚೋ ಬ್ರಹ್ಮವಾದಿನಃ ॥8॥
ವ್ಯಾಸ-ಭೀಷ್ಮ-ಕೃಷ್ಣರ ಮಾತುಗಳು ನಮಗೆ ಈಗಾಗಲಿ, ಮುಂದಾಗಲಿ ಕಲ್ಯಾಣಕ್ಕೆ ಕಾರಣಗಳಾಗಿವೆ. ಬ್ರಹ್ಮವಾದಿಗಳ ಮಾತು ನಮ್ಮ ಶ್ರೇಯಸ್ಸಿಗೆ ಕಾರಣವಾದವುಗಳು.
ಇಯಂ ಹಿ ವಸುಧಾ ಸರ್ವಾ ಕ್ಷೀಣರತ್ನಾ ಕುರೂದ್ವಹಾಃ |
ತಚ್ಚಾಚಷ್ಟ ಬಹು ವ್ಯಾಸೋ ಮರುತ್ತಸ್ಯ ಧನಂ ನೃಪಾಃ ॥9॥
ಈ ಸಮಗ್ರ ಭೂಮಂಡಲವು ರತ್ನಗಳಿಂದ, ಐಶ್ವರ್ಯದಿಂದ ಕ್ಷೀಣವಾಗಿದೆ. ಕುರುಕುಲಶ್ರೇಷ್ಠರೇ, ಆದ್ದರಿಂದಲೇ ವೇದವ್ಯಾಸದೇವರು ಮರುತ್ತನ ಧನದ ಬಗ್ಗೆ ನಮಗೆ ತಿಳಿಸಿರುತ್ತಾರೆ.
ಯದ್ಯೇತದ್ ವೋ ಬಹುಮತಂ ಮನ್ಯಧ್ವಂ ವಾ ಕ್ಷಮಂ ಯದಿ |
ತದಾನಯಾಮಹೇ ಸರ್ವೇ ಕಥಂ ವಾ ಭೀಮ ಮನ್ಯಸೇ ॥10॥
ನೀವು ಮರುತ್ತನು ಇಟ್ಟಿರುವ ಐಶ್ವರ್ಯವು ಸಾಕೆಂದು ತಿಳಿಯುವಿರಾದರೆ, ವ್ಯಾಸರ ಮಾತು ಯೋಗ್ಯವೆನಿಸಿದಾದಲ್ಲಿ, ಆ ಸಂಪತ್ತನ್ನು ತರುವ ಅರ್ಹತೆಯನ್ನು ಪಡೆದಿದ್ದೇವೆ ಎಂದು ಭಾವಿಸಿದ್ದಲ್ಲಿ, ವ್ಯಾಸರು ಹೇಳಿದಂತೆ ಆ ಐಶ್ವರ್ಯವನ್ನು ತೆಗೆದುಕೊಂಡು ಬರೋಣ. ಭೀಮನೇ, ಇದಕ್ಕೆ ನಿನ್ನ ವಿಚಾರವೇನು?
ವೈಶಂಪಾಯನಃ
ಇತ್ಯುಕ್ತವಾಕ್ಯೇ ನೃಪತೌ ತದಾ ಕುರುಕುಲೋದ್ವಹ |
ಭೀಮಸೇನೋ ನೃಪಶ್ರೇಷ್ಠಂ ಪ್ರಾಂಜಲಿರ್ವಾಕ್ಯಮಬ್ರವೀತ್ ॥11॥
ವೈಶಂಪಾಯನ ಈ ವಿಷಯದಲ್ಲಿ ಧರ್ಮರಾಜನು ಹೀಗೆ ಹೇಳುತ್ತಿರಲು ಕುರುಕುಲಶ್ರೇಷ್ಠನಾದ ಭೀಮಸೇನನು ಧರ್ಮರಾಜನನ್ನು ಕುರಿತು, ಕೈಮುಗಿದು ಇಂತು ನುಡಿದನು.
ಭೀಮಸೇನಃ
ರೋಚತೇ ಮೇ ಮಹಾಬಾಹೋ ಯದಿದಂ ಭಾಷಿತಂ ತ್ವಯಾ |
ವ್ಯಾಸಾಖ್ಯಾತಸ್ಯ ವಿತ್ತಸ್ಯ ಸಮುಪಾನಯನಂ ಪ್ರತಿ ॥12॥
ತತ್ ಪ್ರಾಪ್ನುಯಾಮಹೇ ಧರ್ಮಾದ್ ಧನಮುದ್ವೀಕ್ಷಿತಂ ಪ್ರಭೋ |
ಕೃತಮೇವ ಮಹಾರಾಜ ಭವೇದಿತಿ ಮತಿರ್ಮಮ ॥13॥
ಭೀಮಸೇನ ಮಹಾಬಾಹುವಾದ ಧರ್ಮರಾಜನೇ, ವೇದವ್ಯಾಸರು ಹೇಳಿದ ಮರುತ್ತನ ಐಶ್ವರ್ಯವನ್ನು ತರುವ ವಿಷಯದಲ್ಲಿ ಯಾವ ಮಾತುಗಳನ್ನು ನೀನು ಆಡಿದ್ದೀಯೋ ಪ್ರಭುವೇ, ಆ ಮರುತ್ತನ ಐಶ್ವರ್ಯವನ್ನು ತರುವ ವಿಷಯದಲ್ಲಿ ನಾನು ಉತ್ಸುಕನಾಗಿದ್ದೇನೆ. ಧರ್ಮದಿಂದ ಆ ಧನವನ್ನು ನಾವು ಪಡೆದುಕೊಂಡಲ್ಲಿ ಯಜ್ಞಕ್ಕೆ ಸಂಬಂಧವಾದ ಸಕಲ ಕರ್ಮಗಳೂ ಮುಗಿದಂತೆಯೇ ಸರಿ ಎಂದು ನನಗನಿಸುತ್ತಿದೆ.
ತೇ ವಯಂ ಪ್ರಣಿಪಾತೇನ ಗಿರೀಶಸ್ಯ ಮಹಾತ್ಮನಃ |
ತದಾನಯಾಮ ಭದ್ರಂ ತೇ ತಮಭ್ಯರ್ಚ್ಯ ಕಪರ್ದಿನಮ್ ॥14॥
ಮಹಾರಾಜನೇ, ಮಹಾತ್ಮನಾದ ಗೌರೀಶನಿಗೆ ನಾವೆಲ್ಲರೂ ನಮಸ್ಕರಿಸಿ, ಅವನನ್ನು ಆರಾಧಿಸಿ, ಅವನ ಅನುಗ್ರಹದಿಂದಲೇ ಆ ಸಂಪತ್ತನ್ನು ತೆಗೆದುಕೊಂಡು ಬರೋಣ.
ತಂ ವಿಭುಂ ದೇವದೇವೇಶಂ ಶೂಲಪಾಣಿಂ ತ್ರಿಲೋಚನಮ್ |
ಅನಾದಿನಿಧನಂ ಶಂಭುಂ ನಮಸ್ಯಾಮ ಮಹೇಶ್ವರಮ್ ॥15॥
ದೇವದೇವೇಶನಾದ, ಶೂಲಪಾಣಿಯಾದ, ಶಕ್ತನಾದ, ತ್ರಿಲೋಕೇಶನಾದ, ಅನಾದಿ ನಿಧನನೆನಿಸಿದ, ಮಹೇಶ್ವರನಾದ ಶಂಭುವನ್ನು ನಾವೆಲ್ಲರೂ ನಮಸ್ಕರಿಸೋಣ.
ಲೋಕನಾಥಂ ಗಣಾಧ್ಯಕ್ಷಂ ತಸ್ಯೈವಾನುಚರಾನ್ ಸ್ಥಿತಾನ್ |
ಪ್ರಸಾದ್ಯಾರ್ಥಮವಾಪ್ಸ್ಯಾಮೋ ಮನೋ ವಾಗ್ಬುದ್ಧಿಕರ್ಮಭಿಃ ॥16॥
ಲೋಕನಾಥನಾದ, ಗಣಾಧ್ಯಕ್ಷನಾದ, ಮಹಾರುದ್ರನನ್ನು, ಅವನ ಅನುಚರರನ್ನು ಸಂತೋಷಪಡಿಸಿ, ಮನಸ್ಸು, ಮಾತು, ಬುದ್ಧಿ, ಕರ್ಮಗಳಿಂದ ಆ ಸಂಪತ್ತನ್ನು ಪಡೆಯೋಣ.
ರಕ್ಷಂತಿ ಯೇ ಚ ತದ್ ದ್ರವ್ಯಂ ಕಿನ್ನರಾ ರೌದ್ರದರ್ಶನಾಃ |
ತೇ ಚ ವಶ್ಯಾ ಭವಿಷ್ಯಂತಿ ಪ್ರಸನ್ನೇ ವೃಷಭಧ್ವಜೇ ॥17॥
ಭಯಂಕರ ದರ್ಶನವುಳ್ಳ ಕಿನ್ನರರು ಆ ದ್ರವ್ಯವನ್ನು ರಕ್ಷಿಸುತ್ತಿದ್ದಾರೆ. ಮಹಾರುದ್ರನು ನಮ್ಮಲ್ಲಿ ಪ್ರಸನ್ನನಾಗಲು ಆ ಕಿನ್ನರರು ನಮಗೆ ವಶರಾಗುತ್ತಾರೆ.
ಸ ಹಿ ದೇವಃ ಪ್ರಸನ್ನಾತ್ಮಾ ಭಕ್ತಾನಾಂ ಪರಮೇಶ್ವರಃ |
ದದಾತ್ಯಮರತಾಂ ಚಾಪಿ ಕಿಂ ಪುನಃ ಕಾಂಚನಂ ಪ್ರಭುಃ ॥18॥
ಭಕ್ತರ ವಿಷಯದಲ್ಲಿ ಪ್ರಸನ್ನಾತ್ಮನಾದ ಪರಮೇಶ್ವರನು ಶಕ್ತನಾಗಿದ್ದಾನೆ. ನಮ್ಮ ಪಾಲಿಗೆ ಅಮರತ್ವವನ್ನೂ ನೀಡುತ್ತಾನೆಂದ ಬಳಿಕ ಬಂಗಾರವನ್ನು ಕೊಡದಿರುವನೆ?
ವನಸ್ಥಸ್ಯ ಪುರಾ ಜಿಷ್ಣೋರಸ್ತ್ರಂ ಪಾಶುಪತಂ ಮಹತ್ |
ರೌದ್ರಂ ಬ್ರಹ್ಮಶಿರಶ್ಚಾದಾತ್ ಪ್ರಸನ್ನಃ ಕಿಂ ಪುನರ್ಧನಮ್ ॥19॥
ಹಿಂದೆ ಜಯಶೀಲನಾದ ಅರ್ಜುನನಿಗೆ ಮಹತ್ತರವಾದ ಪಾಶುಪತಾಸ್ತ್ರವನ್ನೇ ನೀಡಿದ್ದಾನೆ. ಭಯಂಕರವಾದ ಬ್ರಹ್ಮಶಿರೋಸ್ತ್ರವನ್ನು

ಪ್ರಸನ್ನನಾಗಿ ಕೊಟ್ಟಿರುವ ಮಹಾರುದ್ರನು ಧನವನ್ನು ಕೊಡದಿರುವನೆ?
ವಯಂ ಸರ್ವೇ ಚ ತದ್ಭಕ್ತಾಃ ಸ ಚಾಸ್ಮಾಕಂ ಪ್ರಸೀದತಿ |
ತತ್ಪ್ರಸಾದಾದ್ ವಯಂ ರಾಜ್ಯಂ ಪ್ರಾಪ್ತಾಃ ಕೌರವನಂದನ ॥20॥
ನಾವೆಲ್ಲರೂ ಅವನ ಭಕ್ತರೇ ಆಗಿದ್ದೇವೆ. ಆದ್ದರಿಂದ ನಮ್ಮ ವಿಷಯದಲ್ಲಿ ಮಹಾರುದ್ರನು ಪ್ರಸನ್ನನಾಗುತ್ತಾನೆ. ಅವನ ಅನುಗ್ರಹದಿಂದ ನಾವೆಲ್ಲರೂ ರಾಜ್ಯವನ್ನು ಹೊಂದಿದ್ದೇವೆ.
ಅಭಿಮನ್ಯೋರ್ವಧೇ ವೃತ್ತೇ ಪ್ರತಿಜ್ಞಾತೇ ಧನಂಜಯೇ |
ಜಯದ್ರಥವಧಾರ್ಥಾಯ ಸ್ವಪ್ನೇ ಲೋಕಗುರುರ್ನಿಶಿ ॥21॥
ಪ್ರಸಾದ್ಯ ಲಬ್ಧವಾನಸ್ತ್ರಮರ್ಜುನಃ ಸಹಕೇಶವಃ ॥22॥
ಅಭಿಮನ್ಯುವಿನ ವಧೆಯು ನಡೆಯುತ್ತಿರಲು, ಧನಂಜಯನು ಜಯದ್ರಥನ ವಧೆಗಾಗಿ ಪ್ರತಿಜ್ಞೆಯನ್ನು ಮಾಡಿದನು. ಅಂದು ರಾತ್ರಿ ಲೋಕಗುರುವಾದ ಮಹಾರುದ್ರನು ಸ್ವಪ್ನದಲ್ಲಿ ಕಾಣಿಸಿ, ಅಸ್ತ್ರವನ್ನು ಕೃಷ್ಣನ ಜೊತೆಗಿದ್ದ ಅರ್ಜುನನಿಗೆ ಪ್ರಸನ್ನತೆಯಿಂದಲೇ ನೀಡಿದನು.
ತತಃ ಪ್ರಭಾತಾಂ ರಜನೀಂ ಫಲ್ಗುನಸ್ಯಾಗ್ರತಃ ಪ್ರಭುಃ |
ಜಘಾನ ಸೈನ್ಯಂ ಶೂಲೇನ ಪ್ರತ್ಯಕ್ಷಂ ಸವ್ಯಸಾಚಿನಃ ॥23॥
ಮರುದಿನ ಪ್ರಾತಃಕಾಲ ಅರ್ಜುನನ ಮುಂಭಾಗದಲ್ಲಿಯೇ ಸಮಗ್ರ ಸೈನ್ಯವನ್ನು ಸವ್ಯಸಾಚಿಯು ನೋಡುತ್ತಿರುವಾಗಲೇ ಮಹಾರುದ್ರನು ಸಂಹರಿಸಿದನು.
ಕಸ್ತಾಂ ಸೇನಾಂ ಮಹಾರಾಜ ಮನಸಾಽಪಿ ಪ್ರಧರ್ಷಯೇತ್ |
ದ್ರೋಣಕರ್ಣಮುಖ್ಯೈರ್ಯುಕ್ತಾಂ ಮಹೇಷ್ವಾಸೈಃ ಪ್ರಹಾರಿಭಿಃ ॥24॥
ಋತೇ ದೇವಾನ್ಮಹೇಷ್ವಾಸಾದ್ ಬಹುರೂಪಾನ್ಮಹೇಶ್ವರಾತ್ ॥25॥
ದ್ರೋಣ-ಕರ್ಣ ಮೊದಲಾದವರಿಂದ ಕೂಡಿದ ಶ್ರೇಷ್ಠ ಅಸ್ತ್ರಜ್ಞರ ಪ್ರಹಾರಗಳಿಂದ ತುಂಬಿದ ಆ ಸೇನೆಯನ್ನು, ಮಹಾರಾಜನೇ, ಯಾರಿಂದಲೂ ಮನಸ್ಸಿನಿಂದಲೂ ಎದುರಿಸಲು ಸಾಧ್ಯವಾಗಿರಲಿಲ್ಲ. ದೇವಶ್ರೇಷ್ಠನಾದ, ಬಹುರೂಪವನ್ನು ಧರಿಸುವ, ಮಹೇಶ್ವರನೆನಿಸಿದ, ಮಹಾಧನುರ್ಧಾರಿಯಾದ ಈಶ್ವರನನ್ನು ಹೊರತು ಯಾರಿಂದ ಎದುರಿಸಲು ಸಾಧ್ಯವಾಗಿತ್ತು?
ತಸ್ಯೈವ ಚ ಪ್ರಸಾದೇನ ನಿಹತಾಃ ಶತ್ರವಸ್ತವ |
ಅಶ್ವಮೇಧಸ್ಯ ಸಂಸಿದ್ಧಿಂ ಸ ತು ಸಂಪಾದಯಿಷ್ಯತಿ ॥26॥
ಅವನ ಅನುಗ್ರಹದಿಂದಲೇ ಶತ್ರುಗಳೆಲ್ಲರೂ ಕೊಲ್ಲಲ್ಪಟ್ಟಿದ್ದಾರೆ. ಆದ್ದರಿಂದ ಅಶ್ವಮೇಧ ಯಜ್ಞದ ಪೂರ್ಣತೆಯೂ ಕೂಡ ಅವನಿಂದಲೇ ಉಂಟಾಗುತ್ತದೆ.
ವೈಶಂಪಾಯನಃ
ಶ್ರುತ್ವೈವ ಬ್ರುವತಸ್ತಸ್ಯ ವಾಕ್ಯಂ ಭೀಮಸ್ಯ ಪಾರ್ಥಿವ |
ಪ್ರೀತೋ ಧರ್ಮಾತ್ಮಜೋ ರಾಜಾ ಬಭೂವಾತೀವ ಭಾರತ ॥27॥
ವೈಶಂಪಾಯನ ಜನಮೇಜಯನೇ, ಭೀಮನು ಧರ್ಮರಾಜನ ಮುಂದೆ ಹೀಗೆ ನುಡಿಯುತ್ತಿರಲು ಧರ್ಮರಾಜನು ಅತ್ಯಂತ ಸಂತುಷ್ಟನಾದನು.
ಅರ್ಜುನಪ್ರಮುಖಾಶ್ಚೈವ ತಥೇತ್ಯೇವಾಬ್ರುವನ್ ಮುದಾ ॥28॥
ಅರ್ಜುನನೇ ಮೊದಲಾದವರೆಲ್ಲರೂ ಭೀಮನ ಮಾತನ್ನು ಹಾಗೆ ಆಗಲೆಂದು ಸಂತೋಷದಿಂದ ಅನುಮೋದಿಸಿದರು.
ಕೃತ್ವಾ ತು ಪಾಂಡವಾಃ ಸರ್ವೇ ರತ್ನಾಹರಣನಿಶ್ಚಯಮ್ |
ಸೇನಾಮಾಜ್ಞಾಪಯಾಮಾಸುಃ ನಕ್ಷತ್ರೇಽಹನಿ ಪೂಜಿತೇ ॥29॥
ಪಾಂಡವರೆಲ್ಲರೂ ರತ್ನಾಹರಣ ನಿಶ್ಚಯವನ್ನು ಮಾಡಿಕೊಂಡು, ಶ್ರೇಷ್ಠವಾದ ನಕ್ಷತ್ರದಿಂದ ಕೂಡಿದ ಶುಭದಿನದಲ್ಲಿ ಸೇನೆಗೆ ಸಜ್ಜಾಗುವಂತೆ ಆಜ್ಞಾಪಿಸಿದರು.
ತತೋ ಯಯುಃ ಪಾಂಡುಸುತಾ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಚ |
ಅರ್ಚಯಿತ್ವಾ ಸುರಶ್ರೇಷ್ಠಂ ಪೂರ್ವಮೇವ ಮಹೇಶ್ವರಮ್ ॥30॥
ಮೋದಕೈಃ ಪಾಯಸೇನಾಥ ಮಾಷಾಪೂಪೈಸ್ತಥೈವ ಚ |
ಆರಾಧ್ಯ ಚ ಮಹಾತ್ಮಾನಂ ಪ್ರಯಯುರ್ಮುದಿತಾ ಭೃಶಮ್ ॥31॥
ಬಳಿಕ ಪಾಂಡವರೆಲ್ಲರೂ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಪಡೆದುಕೊಂಡು, ಸುರಶ್ರೇಷ್ಠನಾದ ಮಹಾರುದ್ರನನ್ನೂ ಮೊದಲೇ ಚೆನ್ನಾಗಿ ಆರಾಧಿಸಿ, ಮೋದಕಗಳಿಂದ, ಪಾಯಸದಿಂದ, ಉದ್ದಿನ ಅಪೂಪಗಳಿಂದಲೂ ಮಹಾತ್ಮನಾದ ಮಹಾರುದ್ರನನ್ನು ಆರಾಧಿಸಿ, ಸಂತುಷ್ಟರಾಗಿ, ವೇಗವಾಗಿ ಐಶ್ವರ್ಯವನ್ನು ತರಲು ಹೊರಟರು.
ತೇಷಾಂ ಪ್ರಯಾಸ್ಯತಾಂ ತತ್ರ ಮಂಗಲಾನಿ ಶುಭಾನ್ಯಥ |
ಪ್ರಾಹುಃ ಪ್ರಹೃಷ್ಟಮನಸೋ ದ್ವಿಜಾಗ್ರ್ಯಾ ನಾಗರಾಶ್ಚ ಯೇ ॥32॥
ಅವರು ಪ್ರಯಾಣಕ್ಕೆ ಹೊರಟಿರುವಾಗ ಮಂಗಳಮಯವಾದ ಶಕುನಗಳು ಕಂಡುಬಂದವು. ಅದನ್ನು ಕಂಡು ಸಂತುಷ್ಟರಾದ ಬ್ರಾಹ್ಮಣ ಶ್ರೇಷ್ಠರು, ಪ್ರಜಾಜನರು ಶುಭ ಶಕುನಗಳನ್ನು ಹೇಳಿದರು.
ತತಃ ಪ್ರದಕ್ಷಿಣೀಕೃತ್ಯ ಶಿರೋಭಿಃ ಪ್ರಣಿಪತ್ಯ ಚ |
ಬ್ರಾಹ್ಮಣಾನಗ್ನಿಸಹಿತಾನ್ ಪ್ರಯಯುಃ ಪಾಂಡವರ್ಷಭಾಃ ॥33॥
ಬಳಿಕ ಪಾಂಡವರು ಬ್ರಾಹ್ಮಣರನ್ನು ಅಗ್ನಿಸಹಿತರಾಗಿರುವಾಗ ಪ್ರದಕ್ಷಿಣೆ ಮಾಡಿ, ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟರು.

ಸಮನುಜ್ಞಾಪ್ಯ ರಾಜಾನಂ ಪುತ್ರಶೋಕಸಮಾಹತಮ್ |
ಧೃತರಾಷ್ಟ್ರಂ ಸಭಾರ್ಯಂ ವೈ ಪೃಥಾಂ ಚ ಪೃಥುಲೋಚನಾಮ್ ||34||
ಮೂಲೇ ನಿಕ್ಷಿಪ್ಯ ಕೌರವ್ಯಂ ಯುಯುತ್ಸುಂ ಧೃತರಾಷ್ಟ್ರಜಮ್ ||35||
ಯಾತ್ರೆಗೆ ಹೊರಡುವ ಮೊದಲು ಪುತ್ರಶೋಕದಿಂದ ಕಂಗಾಲಾಗಿರುವ ಧೃತರಾಷ್ಟ್ರ, ಗಾಂಧಾರಿಯರ, ವಿಸ್ತಾರವಾದ ದೃಷ್ಟಿಯುಳ್ಳ ಕುಂತಿಯ ಆಶೀರ್ವಾದವನ್ನು ಪಡೆದು, ಧೃತರಾಷ್ಟ್ರನ ಮಗನಾದ ಯುಯುತ್ಸುವಿನ ಅಧೀನದಲ್ಲಿ ರಾಜ್ಯವನ್ನು ಒಪ್ಪಿಸಿ ಹೊರಟರು.
ಸಂಪೂಜ್ಯಮಾನಾಃ ಪೌರೈಶ್ಚ ಬ್ರಾಹ್ಮಣೈಶ್ಚ ಮಹರ್ಷಿಭಿಃ |
ಪ್ರಯಯುಃ ಪಾಂಡವಾ ವೀರಾ ನಿಯಮಸ್ಥಾಃ ಶುಚಿವ್ರತಾಃ ||36||
ವಿದ್ವಾಂಸರಾದ ಬ್ರಾಹ್ಮಣರಿಂದಲೂ, ಮಹರ್ಷಿಗಳಿಂದಲೂ, ನಾಗರಿಕರಿಂದಲೂ ಸಂಪೂಜಿತರಾದ ವೀರರಾದ ಪಾಂಡವರು ಶುಚಿವ್ರತರಾಗಿ, ನಿಯಮಸ್ಥರಾಗಿ ಪಟ್ಟಣದಿಂದ ಹೊರಹೊರಟರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ದ್ರವ್ಯಾನಯನಾರ್ಥಗಮನಪ್ರಕಾರಕಥನಂ ನಾಮ ತ್ರಿಷಷ್ಟಿತಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ಮೂರನೆಯ ಅಧ್ಯಾಯ ಮುಗಿಯಿತು.
* * * * *

## ಅರವತ್ನಾಲ್ಕನೆಯ ಅಧ್ಯಾಯ

ಯುಧಿಷ್ಠಿರನು ಹಿಮವತ್ಪರ್ವತದ ಬಳಿಗೆ ಸೇನಾ ಸಹಿತವಾಗಿ ಬಂದುದು. ಅಲ್ಲಿರುವ ಬ್ರಾಹ್ಮಣರ ಪ್ರೇರಣೆಯಂತೆ ಉಪವಾಸವೇ ಮೊದಲಾದ ವ್ರತಗಳನ್ನು ಆಚರಿಸಿ ರಾತ್ರಿಯನ್ನು ಕಳೆದುದು.
ವೈಶಂಪಾಯನಃ
ತತಸ್ತೇ ಪ್ರಯಯುರ್ಹೃಷ್ಟಾಃ ಸಬಲಾಃ ಸಹವಾಹನಾಃ |
ರಥಘೋಷೇಣ ಮಹತಾ ಪೂರಯಂತೋ ವಸುಂಧರಾಮ್ ||1||
ವೈಶಂಪಾಯನ ಜನಮೇಜಯನೇ, ಸಂತುಷ್ಟರಾದ ಮನುಷ್ಯರಿಂದ, ವಾಹನಗಳಿಂದ ಕೂಡಿ ಪ್ರಹೃಷ್ಟರಾದ ಪಾಂಡವರು ರಥಗಳ ಶಬ್ದದಿಂದ ಭೂಮಿಯನ್ನು ತುಂಬುತ್ತಾ ಪ್ರಯಾಣವನ್ನು ಬೆಳೆಸಿದರು.
ಸಂಸ್ತೂಯಮಾನಾಃ ಸ್ತುತಿಭಿಃ ಸೂತಮಾಗಧವಂದಿಭಿಃ |
ಸ್ವೇನ ಸೈನ್ಯೇನ ಸಹಿತಾ ಯಥಾಽಽದಿತ್ಯಾಃ ಸ್ವರಶ್ಮಿಭಿಃ ||2||
ಸೂತ, ಮಾಗಧ, ವಂದಿಗಳಿಂದ ಹೊಗಳಿಸಿಕೊಳ್ಳುತ್ತಿದ್ದ ಪಾಂಡವರು, ದ್ವಾದಶಾದಿತ್ಯರು ತಮ್ಮ ರಶ್ಮಿಗಳಿಂದ ಪ್ರಕಾಶಿಸುವಂತೆ ತಮ್ಮ ಸೈನ್ಯಗಳಿಂದ ಪರಿವೃತರಾಗಿ ಪ್ರಕಾಶಿಸುತ್ತಿದ್ದರು.
ಪಾಂಡುರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ಬಭೌ ಯುಧಿಷ್ಠಿರಸ್ತತ್ರ ಪೌರ್ಣಮಾಸ್ಯಾಮಿವೋಡುರಾಟ್ ||3||
ತಲೆಯ ಮೇಲೆ ಧರಿಸಿದ ಶ್ವೇತಚ್ಛತ್ರವೆಂಬ ಪಡೆಯುಳ್ಳ ಯುಧಿಷ್ಠಿರನು ಹುಣ್ಣಿಮೆಯ ಚಂದ್ರನಂತೆ ಶೋಭಿಸಿದನು.
ಜಯಾಶಿಷಃ ಪ್ರಹೃಷ್ಟಾನ್ತೇ ನರಾಣಾಂ ಪಥಿ ಪಾರ್ಥಿವಾಃ |
ಪ್ರತ್ಯಗೃಹ್ಣನ್ ಯಥಾನ್ಯಾಯಂ ಯಥಾವದ್ ಭರತರ್ಷಭ ||4||
ಪಾಂಡವರೆಲ್ಲರೂ ದಾರಿಯಲ್ಲಿ ಮನುಷ್ಯರ ಜಯಘೋಷಗಳಿಂದ, ಆಶೀರ್ವಚನಗಳಿಂದ ಸಂತುಷ್ಟರಾಗಿ ನೀಡುತ್ತಿದ್ದ ಅವರ ಪ್ರೀತಿಪೂರ್ವಕವಾದ ವಚನಗಳನ್ನೂ, ಪದಾರ್ಥಗಳನ್ನೂ ಯಥಾಯೋಗ್ಯವಾಗಿ ಸ್ವೀಕರಿಸುತ್ತಿದ್ದರು.
ತಥೈವ ಸೈನಿಕಾ ರಾಜನ್ ರಾಜಾನಮನುಯಾಂತಿ ಯೇ |
ತೇಷಾಂ ಹಲಹಲಾಶಬ್ದೋ ದಿಗಂತಂ ವ್ಯಾಪ್ಯ ತಿಷ್ಠತಿ ||5||
ಅದರಂತೆ ಧರ್ಮರಾಜನ ಸೈನಿಕರೆಲ್ಲರೂ ಧರ್ಮರಾಜನನ್ನು ಹಿಂಬಾಲಿಸುತ್ತಿದ್ದರು. ಅವರೆಲ್ಲರೂ ಸಾಗುವ ಹಲಹಲ ಎಂಬ ಶಬ್ದವು ದಿಗಂತ ವ್ಯಾಪಿಸಿತ್ತು.
ಸ ಸರಾಂಸಿ ನದೀಶ್ಚೈವ ವನಾನ್ಯುಪವನಾನಿ ಚ |
ಅತ್ಯಕ್ರಾಮನ್ಮಹಾರಾಜೋ ಗಿರಿಂ ಚಾಪ್ಯನ್ವಪದ್ಯತ ||6||
ಅವರೆಲ್ಲರೂ ಸರೋವರಗಳನ್ನೂ, ನದಿಗಳನ್ನೂ, ವನಗಳನ್ನೂ, ಉಪವನಗಳನ್ನೂ ಅತಿಕ್ರಮಿಸಿ ಹಿಮವದ್ ಪರ್ವತವನ್ನು ಸೇರಿದರು.
ತಸ್ಮಿನ್ ದೇಶೇ ಚ ರಾಜೇಂದ್ರ ಯತ್ರ ತದ್ ದ್ರವ್ಯಮುತ್ತಮಮ್ |
ಚಕ್ರೇ ನಿವೇಶನಂ ರಾಜಾ ಪಾಂಡವಃ ಸಹಸೈನಿಕೈಃ ||7||
ಆ ಹಿಮವದ್ ಪರ್ವತ ಪ್ರದೇಶದಲ್ಲಿ ವ್ಯಾಸರು ತಿಳಿಸಿದ ಉತ್ತಮವಾದ ದ್ರವ್ಯವು ಎಲ್ಲಿ ಇರುವುದೋ ಪಾಂಡವರೆಲ್ಲರೂ ಸೇನಾ ಸಹಿತರಾಗಿ ಅಲ್ಲಿಯೇ ಬೀಡುಬಿಟ್ಟರು.
ಶಿವೇ ದೇಶೇ ಸಮೇ ಚೈವ ತದಾ ಭರತಸತ್ತಮ ||8||
ಪರಮಮಂಗಳವಾದ, ಸಮತಟ್ಟಾದ ಪ್ರದೇಶದಲ್ಲಿ ಅವರೆಲ್ಲರೂ ಕೂಡ ತಂಗಿದರು.
ಅಗ್ರತೋ ಬ್ರಾಹ್ಮಣಾನ್ ಕೃತ್ವಾ ತಪೋವಿದ್ಯಾದಮಾನ್ವಿತಾನ್ |
ಪುರೋಹಿತಂ ಚ ಕೌರವ್ಯ ವೇದವೇದಾಂಗಪಾರಗಮ್ ||9||
ಪ್ರಾನಿವೇಶಾತ್ತು ರಾಜಾನಂ ಬ್ರಾಹ್ಮಣಾಃ ಸಪುರೋಹಿತಾಃ |
ಕೃತ್ವಾ ಶಾಂತಿಂ ಯಥಾನ್ಯಾಯಂ ಸರ್ವತಃ ಪರ್ಯವಾರಯನ್ ||10||

ವೇದವೇದಾಂಗ ಪಾರಂಗತರಾದ ಧೌಮ್ಯರನ್ನು, ತಪಸ್ವಿಗಳೂ, ವಿದ್ವಾಂಸರೂ, ಜಿತೇಂದ್ರಿಯರೂ ಆಗಿದ್ದ ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು, ಯುಧಿಷ್ಠಿರನು ಶುಭಕರವಾದ, ಸಮತಟ್ಟಾದ ಪ್ರದೇಶದಲ್ಲಿ ಸೈನ್ಯದೊಂದಿಗೆ ಬಿಡಾರ ಹೂಡಿದನು.
ಯುಧಿಷ್ಠಿರನೊಡನೆ ಆಗಮಿಸಿದ ರಾಜರು, ಮಂತ್ರಿಗಳು, ಬ್ರಾಹ್ಮಣರು ರಾಜನಿಗೆ ಯಥಾ ವಿಧಿಯಾಗಿ ಶಾಂತಿಕರ್ಮಗಳನ್ನು ಮಾಡಿಸಿ ಸುತ್ತಲೂ ಕುಳಿತುಕೊಂಡರು.
ಕೃತ್ವಾ ಮಧ್ಯೇ ಚ ರಾಜಾನಮಮಾತ್ಯಾಂಶ್ಚ ಯಥಾವಿಧಿ |
ಷಟ್ಪದಂ ನವಸಂಸ್ಥಾನಂ ನಿವೇಶಂ ಚಕ್ರಿರೇ ಜನಾಃ ||11||
ಧರ್ಮರಾಜನನ್ನು ಮಧ್ಯ ಮಾಡಿಕೊಂಡು ಮಂತ್ರಿಗಳು ಯಥಾವಿಧಿಯಾಗಿ ಆರು ರಾಜಮಾರ್ಗಗಳನ್ನು, ಒಂಬತ್ತು ನಿವೇಶನದ ಗುಂಪುಗಳನ್ನು ರಚಿಸಿದರು.
ಮತ್ತಾನಾಂ ವಾರಣೇಂದ್ರಾಣಾಂ ನಿವೇಶಂ ಚ ಯಥಾವಿಧಿ |
ಕಾರಯಿತ್ವಾ ಸ ರಾಜೇಂದ್ರೋ ಬ್ರಾಹ್ಮಣಾನಿದಮಬ್ರವೀತ್ ||12||
ಮದಭರಿತವಾದ ಆನೆಗಳಿಗೂ ಯಥಾಯೋಗ್ಯವಾಗಿ ಶಿಬಿರಗಳನ್ನು ಕಲ್ಪಿಸಿ, ರಾಜಶ್ರೇಷ್ಠನಾದ ಧರ್ಮರಾಜನು ಬ್ರಾಹ್ಮಣರುಗಳನ್ನುದ್ದೇಶಿಸಿ ಇಂತು ನುಡಿದನು.
ಯುಧಿಷ್ಠಿರಃ
ಅಸ್ಮಿನ್ ಕಾರ್ಯೇ ದ್ವಿಜಶ್ರೇಷ್ಠಾ ನಕ್ಷತ್ರೇ ದಿವಸೇ ಶುಭೇ |
ಯಥಾ ಭವಂತೋ ಮನ್ಯಂತೇ ಕರ್ತುಮರ್ಹಂತಿ ತದ್ವಿದಃ ||13||
ಯುಧಿಷ್ಠಿರ ಬ್ರಾಹ್ಮಣರೇ, ಧನವನ್ನು ತರುವ ಕಾರ್ಯದಲ್ಲಿ ಯಾವ ನಕ್ಷತ್ರ, ಯಾವ ಶುಭದಿನವನ್ನು ಗುರುತು ಪಡಿಸುತ್ತೀರೋ ಅಂದಿನ ದಿನವೇ ಈ ಸಂಪತ್ತಿಗಾಗಿ ಕರ್ತವ್ಯವನ್ನು ಮಾಡಲು ಯೋಗ್ಯವಾಗಿದೆ ಎಂದು ಜ್ಞಾನಿಗಳಾದ ನೀವೆಲ್ಲರೂ ತಿಳಿದಿರುತ್ತೀರಿ.
ನ ನಃ ಕಾಲಾತ್ಯಯೋ ವೈ ಸ್ಯಾದ್ ಇಹೈವ ಪರಿತಿಷ್ಠತಾಮ್ |
ಇತಿ ನಿಶ್ಚಿತ್ಯ ವಿಪ್ರೇಂದ್ರಾಃ ಕ್ರಿಯತಾಂ ಯದನಂತರಮ್ ||14||
ಇಲ್ಲಿಯೇ ಹೆಚ್ಚು ಕಾಲಹರಣವಾಗದಂತೆ ಸಾಧ್ಯವಾದಷ್ಟು ಬೇಗ ಕಾರ್ಯಸಿದ್ಧಿಯು ನಡೆಯಬೇಕು. ಅದರಂತೆ ನೀವು ಆಶೀರ್ವದಿಸಿರಿ.
ವೈಶಂಪಾಯನಃ
ಶ್ರುತ್ವೈತದ್ ವಚನಂ ರಾಜ್ಞೋ ಬ್ರಾಹ್ಮಣಾಃ ಸಪುರೋಧಸಃ |
ಇದಮೂಚುರ್ವಚೋ ಹೃಷ್ಟಾ ಧರ್ಮರಾಜಪ್ರಿಯೇಪ್ಸವಃ ||15||
ವೈಶಂಪಾಯನ ಧರ್ಮರಾಜನ ಈ ಮಾತುಗಳನ್ನು ಕೇಳಿಸಿಕೊಂಡ ಪುರೋಹಿತರೇ ಮುಖ್ಯರಾದ ಬ್ರಾಹ್ಮಣರು ಸಂತುಷ್ಟ ಮನಸ್ಕರಾಗಿ, ಧರ್ಮರಾಜನಿಗೆ ಪ್ರಿಯವನ್ನುಂಟು ಮಾಡುವ ದೃಷ್ಟಿಯಿಂದ ಈ ಮಾತನ್ನು ಆಡಿದರು.
ಬ್ರಾಹ್ಮಣಾಃ
ಅದ್ಯೈವ ನಕ್ಷತ್ರಮಹಶ್ಚ ಪುಣ್ಯಂ
ಯತಾಮಹೇ ಶ್ರೇಷ್ಠತಮಂ ಕ್ರಿಯಾಸು |
ತಪೋಭಿರದ್ಯೇಹ ವಸಾಮ ರಾಜನ್
ಉಪೋಷ್ಯತಾಂ ಚಾಪಿ ಭವದ್ಭಿರದ್ಯ ||16||
ಬ್ರಾಹ್ಮಣರು ಮಹಾರಾಜನೇ, ಇಂದಿನ ದಿನವೇ ಪವಿತ್ರವಾದ ನಕ್ಷತ್ರದಿಂದ ಕೂಡಿದ ಶುಭದಿನವಾಗಿದೆ. ಆದ್ದರಿಂದ ಈ ಶ್ರೇಷ್ಠತಮವಾದ ಕರ್ಮವನ್ನು ಮಾಡಲು ಇಂದೇ ಪ್ರಯತ್ನಿಸುತ್ತೇವೆ. ನಾವು ತಪಸ್ಸನ್ನು ಮಾಡುತ್ತಾ ವಾಸ ಮಾಡುತ್ತೇವೆ. ಉಪವಾಸವಿದ್ದು ಯಾವ ಆಹಾರವನ್ನೂ ತೆಗೆದುಕೊಳ್ಳದೆ ನಿನಗಾಗಿ ಶ್ರೇಯಸ್ಸನ್ನು ಬಯಸುತ್ತೇವೆ.
ವೈಶಂಪಾಯನಃ
ಶ್ರುತ್ವಾ ತು ತೇಷಾಂ ದ್ವಿಜಸತ್ತಮಾನಾಂ
ಕೃತೋಪವಾಸಾ ರಜನೀಂ ನರೇಂದ್ರಾಃ |
ಊಷುಃ ಪ್ರತೀತಾಃ ಕುಶಸಂಸ್ತರೇಷು
ಯಥಾಧ್ವರೇಷೂಜ್ಜ್ವಲಿತಾ ಹವ್ಯವಾಹಾಃ ||17||
ವೈಶಂಪಾಯನ ಜನಮೇಜಯನೇ, ದ್ವಿಜಶ್ರೇಷ್ಠರ ಈ ಮಾತನ್ನು ಕೇಳಿಸಿಕೊಂಡು ಸಂತುಷ್ಟರಾದ ರಾಜರೆಲ್ಲರೂ ಅಂದು ಉಪವಾಸವೇ ಇದ್ದು, ಆ ರಾತ್ರಿ ಯಾವ ಆಹಾರವನ್ನು ತೆಗೆದುಕೊಳ್ಳದೆ, ದರ್ಭೆಯನ್ನೇ ಹಾಸಿಕೊಂಡು ಮಲಗಿದರು. ಆ ಪಂಚಪಾಂಡವರು ಮಲಗಿದ್ದನ್ನು ನೋಡಿದರೆ ಯಜ್ಞದಲ್ಲಿ ಪ್ರಜ್ವಲಿಸುವ ಪಂಚಾಗ್ನಿಗಳಂತೆಯೇ ಕಾಣುತ್ತಿದ್ದರು.
ತತೋ ನಿಶಾ ಸಾ ವ್ಯಗಮನ್ಮಹಾತ್ಮನಾಂ
ಸಂಶೃಣ್ವತಾಂ ವಿಪ್ರಸಮೀರಿತಾ ಗಿರಃ |
ತತಃ ಪ್ರಭಾತೇ ವಿಮಲೇ ದ್ವಿಜರ್ಷಭಾ
ವಚೋಽಬ್ರುವನ್ ಧರ್ಮಸುತಂ ನರಾಧಿಪಮ್ ||18||
ಬ್ರಾಹ್ಮಣರು ಹೇಳುತ್ತಿರುವ ಮಧುರವಾದ ಮಾತುಗಳನ್ನು ಕೇಳುವಾಗಲೇ ಮಹಾತ್ಮರಾದ ಪಾಂಡವರಿಗೆ ಆ ರಾತ್ರಿಯು ಕಳೆದು ಹೋಯಿತು. ನಿರ್ಮಲವಾದ ಪ್ರಾತಃಕಾಲದ ಸಮಯದಲ್ಲಿ ಬ್ರಾಹ್ಮಣಶ್ರೇಷ್ಠರು ನರಶ್ರೇಷ್ಠನಾದ ಧರ್ಮಜನ ಬಳಿ ಬಂದು ಹೀಗೆ ಹೇಳಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ದ್ರವ್ಯಾನಯನೇ ದೇಹಶುದ್ಧಿಕಥನಂ ನಾಮ ಚತುಃಷಷ್ಟಿತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ನಾಲ್ಕನೆಯ  ಅಧ್ಯಾಯ ಮುಗಿಯಿತು.
* * * * *
ಅರವತ್ತೈದನೆಯ ಅಧ್ಯಾಯ
ಯುಧಿಷ್ಠಿರನು ಬ್ರಾಹ್ಮಣರ ಆದೇಶದಂತೆ ಮಹಾರುದ್ರನನ್ನು, ಭೂತಗಣಗಳನ್ನು ಬಲಿಹರಣಾದಿಗಳಿಂದ ಸಂತೋಷಪಡಿಸಿದುದು. ಭೂಮಿಯನ್ನಗೆದು ಧನರಾಶಿಯನ್ನು ತುಂಬಿಕೊಂಡು, ಹಸ್ತಿನಾವತಿಯ ಕಡೆ ಪ್ರಯಾಣ ಬೆಳೆಸಿದುದು.
ಬ್ರಾಹ್ಮಣಾಃ
ಕ್ರಿಯತಾಮುಪಹಾರೋಽದ್ಯ ತ್ರ್ಯಂಬಕಸ್ಯ ಮಹಾತ್ಮನಃ |
ಕೃತ್ವೋಪಹಾರಂ ನೃಪತೇ ತತಃ ಸ್ವಾರ್ಥಂ ಯತಾಮಹೇ ||1||
ಬ್ರಾಹ್ಮಣರು ರಾಜಶ್ರೇಷ್ಠನೇ, ಆರಂಭದಲ್ಲಿ ತ್ರ್ಯಂಬಕನಾದ ಶಂಕರನಿಗೆ ಬಲಿಯನ್ನು ಸಮರ್ಪಿಸು. ಬಳಿಕ ನಮ್ಮ ಇಷ್ಟಾರ್ಥವನ್ನು ಪಡೆಯೋಣ.
ವೈಶಂಪಾಯನಃ
ತೇಷಾಂ ತು ವಚನಂ ಶ್ರುತ್ವಾ ಬ್ರಾಹ್ಮಣಾನಾಂ ಯುಧಿಷ್ಠಿರಃ |
ಗಿರೀಶಸ್ಯ ಯಥಾನ್ಯಾಯಮುಪಹಾರಮುಪಾಹರತ್ ||2||
ವೈಶಂಪಾಯನ ಜನಮೇಜಯನೆ, ಯುಧಿಷ್ಠಿರನು ಬ್ರಾಹ್ಮಣರ ಮಾತಿನಂತೆ ಗಿರೀಶನನ್ನು ವಿಧಿವತ್ತಾಗಿ ಪೂಜಿಸಿ, ನೈವೇದ್ಯವನ್ನು ಸಮರ್ಪಿಸಿದನು.
ಆಜ್ಯೇನ ತರ್ಪಯಿತ್ವಾಽಗ್ನಿಂ ವಿಧಿವತ್ ಸಂಸ್ಕೃತೇನ ಹ |
ಮಂತ್ರಸಿದ್ಧಂ ಚರುಂ ಕೃತ್ವಾ ಪುರೋಧಾಃ ಪ್ರಯಯೌ ತದಾ ||3||
ತುಪ್ಪದಿಂದ ಅಗ್ನಿದೇವನನ್ನು ವಿಧಿವತ್ತಾಗಿ ತೃಪ್ತಿಗೊಳಿಸಿ, ಮಂತ್ರಪೂರ್ವಕವಾಗಿ ಚರುವನ್ನು ಸಿದ್ಧಮಾಡಿಕೊಂಡು, ರುದ್ರನಿಗೆ ಬಲಿಯನ್ನು ಕೊಡುವ ದೃಷ್ಟಿಯಿಂದ ಪುರೋಹಿತರ ಸಹಿತವಾಗಿ ಬಂದರು.
ಸ ಗೃಹೀತ್ವಾ ಸುಮನಸೋ ಮಂತ್ರಪೂತಾ ಜನಾಧಿಪ |
ಮೋದಕೈಃ ಪಾಯಸೇನಾಥ ಮಾಂಸೈಶ್ಚೋಪಾಹರದ್ ಬಲಿಮ್ ||4||
ಸುಮನೋಭಿಶ್ಚ ಚಿತ್ರಾಭಿರ್ಲಾಜೈರುಚ್ಚಾವಚೈರಪಿ ||5||
ಪುರೋಹಿತರೆಲ್ಲರೂ ಮಂತ್ರಪೂತವಾದ ಪುಷ್ಪಗುಚ್ಛವನ್ನು ಕೈಯಲ್ಲಿ ಹಿಡಿದು ಮೋದಕ, ಪಾಯಸ, ಮಾಂಸ ಮುಂತಾದವು, ವಿಚಿತ್ರವಾದ ಪುಷ್ಪಗಳು, ಅರಳುಗಳು, ನಾನಾ ವಿಧವಾದ ವಸ್ತುಗಳಿಂದಲೂ ಬಲಿಯನ್ನು ಸಮರ್ಪಣೆ ಮಾಡಿದರು.
ಸರ್ವಂ ಸ್ವಿಷ್ಟಕೃತಂ ಹುತ್ವಾ ವಿಧಿವದ್ ವೇದಪಾರಗಃ |
ಕಿಂಕರಾಣಾಂ ತತಃ ಪಶ್ಚಾತ್ ಚಕಾರ ಬಲಿಮುತ್ತಮಮ್ ||6||
ವೇದಪಾರಂಗತರು ವಿಧಿಬದ್ಧವಾಗಿ ಸ್ವಿಷ್ಟಕೃತ್ ಹೋಮವನ್ನು ಪೂರೈಸಿ, ಬಳಿಕ ರುದ್ರಗಣಗಳಿಗೆ ಆರಾಧನೆಯನ್ನೂ ಮಾಡಿದರು.
ಯಕ್ಷೇಂದ್ರಾಯ ಕುಬೇರಾಯ ಮಣಿಭದ್ರಾಯ ಚೈವ ಹ |
ತಥಾಽನ್ಯೇಷಾಂ ಚ ಯಕ್ಷೇಭ್ಯೋ ಭೂತಾಧಿಪತಯಶ್ಚ ಯೇ ||7||
ಕೃಸರೇಣ ಸಮಾಂಸೇನ ನಿವಾಪೈಸ್ತಿಲಸಂಯುತೈಃ |
ಪಿತೄಣಾಮಂಜಲಿಂ ಕೃತ್ವಾ ಪುರೋಧಾಃ ಸಮುಪಾಹರತ್ ||8||
ಯಕ್ಷಶ್ರೇಷ್ಠನಾದ ಕುಬೇರನಿಗೂ, ಮಣಿಭದ್ರನಿಗೂ, ಇತರ ಯಕ್ಷರಿಗೂ, ಭೂತಗಳ ಅಧಿಪತಿಗಳಿಗೂ ಎಳ್ಳು-ಅನ್ನಗಳಿಂದ ಕೂಡಿದ ಮಾಂಸದಿಂದಲೂ, ಎಳ್ಳಿನಿಂದ ಕೂಡಿದ ನೀರಿನಿಂದಲೂ ಬಲಿಯನ್ನು ಸಮರ್ಪಿಸಿದರು. ಪಿತೃಗಳಿಗೆ ತರ್ಪಣಗಳನ್ನೂ ನೀಡಿದರು.
ಬ್ರಾಹ್ಮಣೇಭ್ಯಃ ಸಹಸ್ರಾಣಿ ಗವಾಂ ದತ್ತ್ವಾ ತು ಭೂಮಿಪಃ |
ನಕ್ತಂಚರೇಭ್ಯೋ ಭೂತೇಭ್ಯೋ ವ್ಯಾದಿದೇಶ ಬಲಿಂ ತದಾ ||9||
ರಾಜನಾದ ಧರ್ಮಜನು ಬ್ರಾಹ್ಮಣರಿಗೆ ಸಾವಿರಾರು ಗೋವುಗಳನ್ನು ದಾನ ಮಾಡಿದನು. ರಾತ್ರಿ ಸಂಚರಿಸುವ ಭೂತಗಳಿಗೂ ಬಲಿಯನ್ನು ಕೊಡುವಂತೆ ಆದೇಶಿಸಿದನು.
ಧೂಪಗಂಧನಿರುದ್ಧಂ ತತ್ ಸುಮನೋಭಿಶ್ಚ ಸಂವೃತಮ್ |
ಶುಶುಭೇ ಸ್ಥಾನಮತ್ಯಂತಂ ದೇವದೇವಸ್ಯ ಪಾರ್ಥಿವ ||10||
ಧೂಪ-ಗಂಧಗಳಿಂದ, ದೇವತೆಗಳಿಂದಲೂ ಆ ಪ್ರದೇಶವು ತುಂಬಿ ಹೋಗಿತ್ತು. ದೇವದೇವನಾದ ಈಶ್ವರನ ಸ್ಥಾನವು ಧರ್ಮರಾಜನ ಆರಾಧನೆಯಿಂದ ಅತ್ಯಂತ ಮನೋಹರವಾಗಿ ಕಂಗೊಳಿಸಿತು.
ಕೃತ್ವಾ ಪೂಜಾಂ ತು ರುದ್ರಸ್ಯ ಗಣಾನಾಂ ಚೈವ ಸರ್ವಶಃ |
ಯಯೌ ವ್ಯಾಸಂ ಪುರಸ್ಕೃತ್ಯ ತತ್ರ ರತ್ನನಿಧಿಂ ಪ್ರತಿ ||11||
ಮಹಾರುದ್ರದೇವರಿಗೆ ಪೂಜೆಯನ್ನು ಸಲ್ಲಿಸಿ ಅವನ ಪರಿವಾರದವರಿಗೂ ತೃಪ್ತಿಪಡಿಸಿ ವೇದವ್ಯಾಸದೇವರನ್ನು ಮುಂದಿಟ್ಟುಕೊಂಡು ಐಶ್ವರ್ಯವಿದ್ದ ಜಾಗಕ್ಕೆ ಪಾಂಡವರು ಪರಿವಾರಸಹಿತರಾಗಿ ಹೊರಟರು.
ಪೂಜಯಿತ್ವಾ ಧನಾಧ್ಯಕ್ಷಂ ರುದ್ರಂ ಪ್ರತ್ಯಭಿವಾದ್ಯ ಚ |
ಸುಮನೋಭಿರ್ವಿಚಿತ್ರಾಭಿರಪೂಪೈಃ ಕೃಸರೇಣ ಚ ||12||
ಅಲ್ಲಿ ಧನಾಧ್ಯಕ್ಷನಾದ ಕುಬೇರನನ್ನು ಆರಾಧಿಸಿ, ರುದ್ರನನ್ನು ಅಭಿವಂದಿಸಿ, ಸಮಸ್ತ ದೇವತೆಗಳನ್ನು ವಿಚಿತ್ರವಾದ ಅಪೂಪಗಳಿಂದಲೂ, ಎಳ್ಳನ್ನಗಳಿಂದಲೂ ಆರಾಧಿಸಿದರು.
ಶಂಖಾದೀಂಶ್ಚ ನಿಧೀನ್ ಸರ್ವಾನ್ ನಿಧಿಪಾಲಾಂಶ್ಚ ಸರ್ವಶಃ |

ಅರ್ಚಯಿತ್ವಾ ದ್ವಿಜಾಗ್ರ್ಯಾನ್ ಸ ಸ್ವಸ್ತಿ ಸಂವಾಚ್ಯ ವೀರ್ಯವಾನ್ ॥13॥
ಶಂಖವೇ ಮೊದಲಾದ ನಿಧಿಗಳನ್ನೂ, ನಿಧಿಪಾಲಕರನ್ನೂ, ಬ್ರಾಹ್ಮಣರನ್ನೂ ಚೆನ್ನಾಗಿ ಆರಾಧಿಸಿ, ಅವರ ಮೂಲಕ ವೀರ್ಯವಂತನಾದ ಧರ್ಮರಾಜನು ಮಂಗಳವಾಚಕಗಳಾದ ಪುಣ್ಯಾಹ ಮಂತ್ರಗಳನ್ನು ಧರಿಸಿದನು.
ತೇಷಾಂ ಪುಣ್ಯಾಹಘೋಷೇಣ ತೇಜಸಾ ಸಮವಸ್ಥಿತಃ |
ಪ್ರೀತಿಮಾನ್ ಸ ಕುರುಶ್ರೇಷ್ಠಃ ಖಾನಯಾಮಾಸ ತಂ ನಿಧಿಮ್ ॥14॥
ಆ ಬ್ರಾಹ್ಮಣರ ಪುಣ್ಯಾಹದ ಘೋಷದಿಂದ ಶಕ್ತಿಯನ್ನು ಪಡೆದ ಧರ್ಮರಾಜನು ಸಂತುಷ್ಟನಾಗಿ, ಐಶ್ವರ್ಯವಿದ್ದ ಜಾಗವನ್ನು ಭೃತ್ಯರ ಮೂಲಕ ಅಗೆಸಿದನು.
ತತಃ ಪತ್ರಾಣಿ ಕರಕಾ ಸಾಶ್ಮಂತಕಮನೋರಮಾಃ |
ಭೃಂಗರಾಣಿ ಕಟಾಹಾನಿ ಕಲಶಾನ್ ವರ್ಧಮಾನಕಾಃ ॥15॥
ಅಗೆಯುತ್ತಿದ್ದಂತೆ ಸುವರ್ಣಮಯವಾದ, ರತ್ನಖಚಿತವಾದ, ಬಹಳ ನಯನ ಮನೋಹರಗಳಾದ ದೊಡ್ಡದೊಡ್ಡ ಪಾತ್ರೆಗಳೂ, ಕಡಾಯಿಗಳು, ಕಲಶಗಳು, ಶರಾವೆಗಳು (ಮೊರ), ಒಲೆಗಳು, ಊದುಕೊಳವೆಗಳು ಇವೆಲ್ಲವೂ ದೊರೆತವು. ಎಲ್ಲವೂ ಬಂಗಾರಮಯವಾಗಿದ್ದವು.
ಬಹೂನಿ ಚ ವಿಚಿತ್ರಾಣಿ ಭಾಜನಾನಿ ಸಹಸ್ರಶಃ |
ಉದ್ಧಾರಯಾಮಾಸ ತದಾ ಧರ್ಮಪುತ್ರೋ ಯುಧಿಷ್ಠಿರಃ ॥16॥
ಚಿತ್ರವಿಚಿತ್ರವಾದ ಸಾವಿರಾರು ಸಂಖ್ಯೆಯ ಪಾತ್ರೆಗಳು ದೊರೆತವು. ಧರ್ಮರಾಜನು ಅವೆಲ್ಲವನ್ನೂ ಅಲ್ಲಿಂದ ಹೊರ ತೆಗೆಸಿದನು.
ತೇಷಾಂ ಲಕ್ಷಾಣಿ ಚಾಪ್ಯಾಸನ್ ಮಹಾಕರಪುಟಸ್ತದಾ |
ನದ್ಧಂ ಚ ಭಾಜನಂ ರಾಜನ್ ತುಲಾರ್ಧಮಭವನ್ನೃಪ ॥17॥
ಆ ಬಿಲದಿಂದ ಸಮಸ್ತ ವೈಭವದ ಪರಿಕರಗಳನ್ನು ತೆಗೆಯುವಾಗ ಮಹಾಭಾರವಾದ ಪಾತ್ರೆಗಳನ್ನು ಹೊತ್ತು ತರಲು ಬಿಲದ ಒಳಗಡೆ ಆನೆ, ಒಂಟೆಗಳನ್ನು ಹೋಗಿಸಿದರು. ಆ ಬಿಲದಲ್ಲಿ ಆನೆ, ಒಂಟೆಗಳು ಹೋಗುವುದು ಕಷ್ಟವಾದುದರಿಂದ ಮಹಾರುದ್ರದೇವರು ಆ ಪ್ರಾಣಿಗಳು ಬಿಲದ ಒಳಗಡೆ ನುಗ್ಗುವಾಗ ಹ್ರಸ್ವ ದೇಹವನ್ನು ಪಡೆಯುವಂತೆ ಅನುಗ್ರಹಿಸಿದನು. ಆ ಪದಾರ್ಥಗಳನ್ನು ಹೊತ್ತು ತಂದ ಬಳಿಕ ಯಥಾರೀತಿಯಾಗಿ ಒಂಟೆಯೇ ಮೊದಲಾದ ಪ್ರಾಣಿಗಳು ಹಿಂದಿನಂತೆಯೇ ದೇಹವನ್ನು ಹೊಂದಿದವು. ಈ ರೀತಿಯಾಗಿ ಪ್ರಾಣಿಗಳನ್ನು ಈ ಐಶ್ವರ್ಯ ತರುವ ಪ್ರಕ್ರಿಯೆಯಲ್ಲಿ ಉಪಯೋಗಿಸಿಕೊಂಡರು. ಅಲ್ಲಿಂದ ತೆಗೆದ ಐಶ್ವರ್ಯವು ಅರ್ಧತುಲೆಗೆ ಸಮಾನವಾಗಿತ್ತು.
ವ್ಯಾಖ್ಯಾನ ವಿಶೇಷ ನೀಲಕಂಠೀಯ ವ್ಯಾಖ್ಯಾನದಲ್ಲಿ ಹದಿನಾರು ಕೋಟಿ ಎಂಟು ಲಕ್ಷದ ಇಪ್ಪತ್ನಾಲ್ಕು ಸಾವಿರ ಭಾರದ ಸುವರ್ಣವು ಅಲ್ಲಿ ದೊರೆಯಿತೆಂದು ಅರ್ಧತುಲೆಯನ್ನು ವ್ಯಾಖ್ಯಾನಿಸಿ ತಿಳಿಸಿದ್ದಾರೆ.
ವಾಹನಂ ಪಾಂಡುಪುತ್ರಸ್ಯ ತತ್ರಾಸೀತ್ತು ವಿಶಾಂಪತೇ |
ಷಷ್ಟಿರುಷ್ಟ್ರಸಹಸ್ರಾಣಿ ಶತಾನಿ ದ್ವಿಗುಣಾ ಹಯಾಃ ॥18॥
ವಾರಣಾಶ್ಚ ಮಹಾರಾಜ ಸಹಸ್ರಶತಸಮ್ಮಿತಾಃ |
ಶಕಟಾನಿ ರಥಾಶ್ಚೈವ ತಾವದೇವ ಯಥಾ ಗಜಾಃ ॥19॥
ಖರಾಣಾಂ ಪುರುಷಾಣಾಂ ಚ ಪರಿಸಂಖ್ಯಾ ನ ವಿದ್ಯತೇ ॥20॥
ಪಾಂಡುಪುತ್ರನಾದ ಧರ್ಮಜನ ವಾಹನಗಳು ಅಲ್ಲಿರುವ ಸಮಸ್ತ ಸಾಧನಗಳನ್ನು ಹೊತ್ತು ಸಾಗಲು ಸಿದ್ಧವಾಗಿ ನಿಂತವು. ಅರವತ್ತು ಲಕ್ಷ ಒಂಟೆಗಳು, ಒಂದು ಕೋಟಿ ಇಪ್ಪತ್ತು ಲಕ್ಷ ಕುದುರೆಗಳು, ಒಂದು ಲಕ್ಷ ಆನೆಗಳು, ಒಂದು ಲಕ್ಷ ಎತ್ತಿನ ಗಾಡಿಗಳು, ಒಂದು ಲಕ್ಷ ರಥಗಳು, ಒಂದು ಲಕ್ಷ ಹೆಣ್ಣಾನೆಗಳು, ಮನುಷ್ಯರು, ಕತ್ತೆಗಳು ಅಸಂಖ್ಯೆಯಿಂದಲೂ ಅಲ್ಲಿ ಉಪಸ್ಥಿತವಾದವು.
ಏತಾವದ್ ವಿತ್ತಮಭವದ್ ಯದುದ್ದಧ್ರೇ ಯುಧಿಷ್ಠಿರಃ ॥21॥
ಇಷ್ಟು ಪ್ರಾಣಿಗಳು, ಮಾನವರು, ರಥಗಳು ಹೊತ್ತುಕೊಳ್ಳುವಷ್ಟು ಸಂಪತ್ತನ್ನು ಆ ಸ್ಥಳದಿಂದ ಯುಧಿಷ್ಠಿರನು ಹೊರ ತೆಗೆದಿದ್ದನು.
ಷೋಡಶಾಷ್ಟೌ ಚತುರ್ವಿಂಶತ್ಸಹಸ್ರಂ ಭಾರಲಕ್ಷಣಮ್ |
ಏತೇಷ್ವಾಧಾಯ ತದ್ ದ್ರವ್ಯಂ ಪುನರಭ್ಯರ್ಚ್ಯ ಪಾಂಡವಃ ॥22॥
ಮಹಾದೇವಂ ಮಹಾರಾಜ ಪ್ರತ್ಯಾಗಚ್ಛದ್ ಯುಧಿಷ್ಠಿರಃ ॥23॥
ಹದಿನಾರು ಕೋಟಿ ಎಂಟು ಲಕ್ಷ ಇಪ್ಪತ್ನಾಲ್ಕು ಸಾವಿರದ ಸುವರ್ಣವನ್ನು ಒಂದು ಭಾರ ಎಂದು ಕರೆದಿದ್ದಾರೆ. ಇಷ್ಟು ಸಂಪತ್ತನ್ನು ಆ ಪ್ರಾಣಿಗಳಲ್ಲಿ ಹೊತ್ತುಕೊಂಡು, ಪುನಃ ಮಹಾರುದ್ರದೇವರನ್ನು ನಮಸ್ಕರಿಸಿ ಪಾಂಡವರು ಯುಧಿಷ್ಠಿರನಿಂದ ಕೂಡಿಕೊಂಡು ಹಸ್ತಿನಾವತಿಗೆ ಮರಳಿ ಬಂದರು.
ದ್ವೈಪಾಯನಾಭ್ಯನುಜ್ಞಾತಃ ಪುರಸ್ಕೃತ್ಯ ಪುರೋಹಿತಮ್ |
ಗೋರುತೇ ಗೋರುತೇ ಚಾಪಿ ನ್ಯವಸತ್ ಪುರುಷರ್ಷಭಃ ॥24॥
ವೇದವ್ಯಾಸದೇವರಿಂದ ಅನುಜ್ಞಾತರಾದ ಪಾಂಡವರು ಪುರೋಹಿತರನ್ನು ಮುಂದಿಟ್ಟುಕೊಂಡು ಪ್ರಯಾಣ ಬೆಳೆಸುತ್ತಾ, ಒಂದು ಬಲಿಷ್ಠವಾದ ಗೂಳಿಯು ಧ್ವನಿಗೈದಾಗ ಎಷ್ಟು ದೂರ ಪ್ರದೇಶದ ತನಕ ಕೇಳಿಸುತ್ತದೋ ಅಲ್ಲಿಯ ತನಕ ಪ್ರಯಾಣ ಬೆಳೆಸಿ, ಅಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದರು. ಹೀಗೆ ಸ್ವಲ್ಪ ಸ್ವಲ್ಪ ದೂರದಲ್ಲಿ ಭಾರ ಹೊತ್ತ ಸೈನಿಕರಿಗೆ ವಿಶ್ರಾಂತಿಯನ್ನು ನೀಡಿಸುತ್ತಾ, ಸಂಪತ್ತನ್ನು ತೆಗೆದುಕೊಂಡು ಹಸ್ತಿನಾವತಿಯ ಕಡೆಗೆ ಧರ್ಮಜನು ಹೊರಟನು.
ಸಾ ಪುರಾಭಿಮುಖೀ ರಾಜನ್ ಜಗಾಮ ಮಹತೀ ಚಮೂಃ |
ಕೃಚ್ಛ್ರಾದ್ ದ್ರವಿಣಭಾರಾರ್ತಾ ವಾಹಯಂತೀ ಕುರೂತ್ತಮಾನ್ ॥25॥
ಆ ಹಸ್ತಿನಾವತಿಯ ಕಡೆಗೆ ಹೊರಟಿರುವ ಮಹಾಸೈನ್ಯವು ದ್ರವ್ಯ, ಧನಗಳ ಭಾರದಿಂದ ಪೀಡಿಸಲ್ಪಟ್ಟಿತ್ತು. ಹೀಗಿದ್ದರೂ

ಕುರುಶ್ರೇಷ್ಠರನ್ನು ಸಂತೋಷಗೊಳಿಸುತ್ತಾ, ಬಹಳ ಕಷ್ಟದಿಂದಲೇ ಮಹಾ ಐಶ್ವರ್ಯವನ್ನು ಹೊತ್ತು ಹಸ್ತಿನಾವತಿಗೆ ಪ್ರಯಾಣ ಮಾಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವಿತ್ತಂ ಗೃಹೀತ್ವಾ ಪುನರಾಗಮನಂ ನಾಮ
ಪಂಚಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ 30ನೇ ಅಧ್ಯಾಯ
ಆಸನ್ನೇಷ್ವೇವ ಪಾರ್ಥೇಷು ವ್ಯಾಸೇ ಚ ಪುರುಷೋತ್ತಮೇ |
ಪ್ರವಿವೇಶ ಪುರಂ ಕೃಷ್ಣಸ್ತದಾಸೂತೋತ್ತರಾ ಮೃತಮ್ ॥
ಪಾಂಡವರೂ ಪುರುಷೋತ್ತಮ ಶ್ರೀವೇದವ್ಯಾಸರೂ ಸಮೀಪಕ್ಕೆ ಬರುತ್ತಿದ್ದಾಗಲೇ ಶ್ರೀಕೃಷ್ಣನೂ ಹಸ್ತಿನಾಪುರವನ್ನು ಪ್ರವೇಶಿಸಿದ. ಆಗಲೇ ಉತ್ತರೆ ಮೃತಶಿಶುವನ್ನು ಪ್ರಸವಿಸಿದಳು.
ದ್ರೌಣ್ಯಸ್ತ್ರಸೂದಿತಂ ಬಾಲಂ ದೃಷ್ಟ್ವಾ ಕುಂತ್ಯಾದಿಕಾಃ ಸ್ತ್ರಿಯಃ |
ಶರಣ್ಯಂ ಶರಣಂ ಜಗ್ಮುರ್ವಾಸುದೇವಂ ಜಗತ್ಪತಿಮ್ ॥
ಹುಟ್ಟುವಾಗಲೆ ಅಶ್ವತ್ಥಾಮರ ಅಸ್ತ್ರದಿಂದ ಹತವಾಗಿದ್ದ ಶಿಶುವನ್ನು ಕಂಡು ಕುಂತಿ ಮುಂತಾದ ಸ್ತ್ರೀಯರು ಸರ್ವರಕ್ಷಕನಾದ ಜಗದೊಡೆಯ ಶ್ರೀಕೃಷ್ಣನನ್ನು ಮೊರೆಹೊಕ್ಕರು.
ಪ್ರತ್ಯಕ್ಷಮಾತ್ಮನಾ ಗರ್ಭೇ ರಕ್ಷಿತಂ ಪ್ರಸವೇ ಹತಮ್ |
ಪುನರುಜ್ಜೀವಯಾಮಾಸ ಕೇಶವಃ ಪಾರ್ಥತಂತವೇ ॥
ಗರ್ಭದಲ್ಲಿ ಪ್ರತ್ಯಕ್ಷವಾಗಿ ತನ್ನಿಂದ ರಕ್ಷಿತನಾಗಿದ್ದು, ಪ್ರಸವಕಾಲದಲ್ಲಿ ಹತನಾದ ಬಾಲಕ ಪರೀಕ್ಷಿತನನ್ನು ಪಾಂಡವರ ಸಂತತಿಯ ರಕ್ಷಣೆಗಾಗಿ ಶ್ರೀಕೃಷ್ಣನು ಪುನಃ ಬದುಕಿಸಿದನು.
ತದೈವ ವಿವಿಶುಃ ಪಾರ್ಥಾಃ ಸಕೃಷ್ಣಾಃ ಸಧನೋಚ್ಚಯಾಃ |
ಸರ್ವೇ ಮುಮುದಿರೇ ದೃಷ್ಟ್ವಾ ಪೌತ್ರಂ ಕೇಶವರಕ್ಷಿತಮ್ ॥
ಆಗಲೇ ವೇದವ್ಯಾಸರೊಂದಿಗೆ ಪಾಂಡವರು ಧನರಾಶಿಯುಕ್ತರಾಗಿ ಹಸ್ತಿನಾವತಿಯನ್ನು ಪ್ರವೇಶಿಸಿದರು. ಶ್ರೀಕೃಷ್ಣನಿಂದ ರಕ್ಷಿತನಾದ ಮೊಮ್ಮಗನನ್ನು ಕಂಡು ಆನಂದಿಸಿದರು.
ದದೌ ದಾನಾನಿ ಬಹುಶೋ ಧರ್ಮಪುತ್ರೋ ಯುಧಿಷ್ಠಿರಃ |
ಪೌತ್ರಜನ್ಮನಿ ಹೃಷ್ಟಾತ್ಮಾ ವಾಸುದೇವಂ ನನಾಮ ಚ ॥
ಧರ್ಮಪುತ್ರನಾದ ಯುಧಿಷ್ಠಿರನು ಮೊಮ್ಮಗನ ಜನನದಿಂದ ಸಂತುಷ್ಟ ಮನಸ್ಕನಾಗಿ ಬಹಳ ದಾನಗಳನ್ನು ಮಾಡಿದ ಮತ್ತು ಶ್ರೀಕೃಷ್ಣನನ್ನು ನಮಿಸಿದನು.
ಕುಂತೀಕೃಷ್ಣಾಸುಭದ್ರಾಭಿರ್ವೈರಾಟ್ಯಾಽನ್ಯಾಭಿರೇವ ಚ |
ಪಾಂಡವೈಃ ಪುರುಷೈಶ್ಚಾನ್ಯೈಃ ಸಂಸ್ತುತಃ ಪ್ರಣತೋ ಹರಿಃ ॥
ಕುಂತಿ, ದ್ರೌಪದಿ, ಸುಭದ್ರೆ, ಉತ್ತರೆ, ಬೇರೆ ಸ್ತ್ರೀಯರು, ಪಾಂಡವರು ಮತ್ತು ಬೇರೆ ಜನರೂ ಕೃಷ್ಣನನ್ನು ಹೊಗಳಿ ನಮಿಸಿದರು.
* * * * *
ಅರವತ್ತಾರನೆಯ ಅಧ್ಯಾಯ
ಕೃಷ್ಣನು, ಬಲರಾಮ, ಸುಭದ್ರೆ ಮೊದಲಾದವರಿಂದ ಕೂಡಿಕೊಂಡು ಪಾಂಡವರು ನಡೆಸುವ ಯಜ್ಞಕ್ಕಾಗಿ ಹಸ್ತಿನಾವತಿಗೆ ಆಗಮಿಸಿದುದು. ಅದೇ ಪ್ರಸಂಗದಲ್ಲಿ ಉತ್ತರೆಯು ಪರೀಕ್ಷಿತನಿಗೆ ಜನ್ಮ ನೀಡಿದುದು. ಅಶ್ವತ್ಥಾಮರ ಬ್ರಹ್ಮಶಿರೋಸ್ತ್ರದಿಂದ ಹುಟ್ಟುವ ಸಮಯದಲ್ಲಿ ಹೆಣವಾಗಿರುವ ಆ ಶಿಶುವನ್ನು ಬದುಕಿಸುವಂತೆ ಕುಂತಿ ಮೊದಲಾದವರು ಕೃಷ್ಣನ ಬಳಿ ಪ್ರಾರ್ಥಿಸಿದುದು.
ವೈಶಂಪಾಯನಃ
ಏತಸ್ಮಿನ್ನೇವ ಕಾಲೇ ತು ವಾಸುದೇವಃ ಪ್ರತಾಪವಾನ್ |
ಉಪಾಯಾದ್ ವೃಷ್ಣಿಭಿಃ ಸಾರ್ಧಂ ಪುರಂ ವಾರಣಸಾಹ್ವಯಮ್ ॥1॥
ವೈಶಂಪಾಯನ ಇದೇ ಕಾಲದಲ್ಲಿ ಪ್ರತಾಪಿಯಾದ ವಾಸುದೇವನು ಯಾದವರೊಡನೆ ಕೂಡಿಕೊಂಡು ಹಸ್ತಿನಾವತಿಗೆ ಆಗಮಿಸಿದನು.
ಸಮಯಂ ವಾಜಿಮೇಧಸ್ಯ ವಿದಿತ್ವಾ ಪುರುಷರ್ಷಭ |
ಯಥೋಕ್ತೋ ಧರ್ಮಪುತ್ರೇಣ ಪ್ರವ್ರಜನ್ ಸ್ವಪುರೀಂ ಪ್ರತಿ ॥2॥
ಅಶ್ವಮೇಧ ಯಜ್ಞವು ನಡೆಯುತ್ತಿದೆ ಎಂಬುದನ್ನು ತಿಳಿದ ಶ್ರೀಕೃಷ್ಣನು ಹಿಂದೆ ದ್ವಾರಕೆಗೆ ತೆರಳುವಾಗಲೇ ಧರ್ಮರಾಜನಿಂದ ಈ ಯಜ್ಞದ ಕುರಿತು ಆಹ್ವಾನಿತನಾಗಿದ್ದನು.
ರೌಗ್ಮಿಣೇಯೇನ ಸಹಿತೋ ಯುಯುಧಾನೇನ ಚೈವ ಹಿ |
ಚಾರುದೇಷ್ಣೇನ ಸಾಂಬೇನ ಗದೇನ ಕೃತವರ್ಮಣಾ ॥3॥
ಸಾರಣೇನ ಚ ವೀರೇಣ ನಿಶಠೇನೋನ್ಮುಖೇನ ಚ ॥4॥
ಬಲದೇವಂ ಪುರಸ್ಕೃತ್ಯ ಸುಭದ್ರಾಸಹಿತಸ್ತದಾ ॥5॥
ರುಗ್ಮಿಣಿಯ ಮಗನಾದ ಪ್ರದ್ಯುಮ್ನ, ಸಾತ್ಯಕಿ, ಚಾರುದೇಷ್ಣ, ಸಾಂಬ, ಗದ, ಕೃತವರ್ಮ, ಸಾರಣ, ನಿಶಠ, ಉನ್ಮುಖ, ಬಲಭದ್ರ, ಸುಭದ್ರಾ - ಇವರೆಲ್ಲರನ್ನೂ ಮುಂದೆ ಮಾಡಿಕೊಂಡು ಯುಧಿಷ್ಠಿರನ ಮನೆಗೆ ಆಗಮಿಸಿದನು.

ದ್ರೌಪದೀಮುತ್ತರಾಂ ಚಾಪಿ ಪೃಥಾಂ ಚಾಪವಲೋಕಕಃ |
ಸಮಾಶ್ವಾಸಯಿತುಂ ಚಾಪಿ ಕ್ಷತ್ರಿಯಾನ್ ನಿಹತೇಶ್ವರಾನ್ ॥6॥
ದ್ರೌಪದಿಯನ್ನೂ, ಉತ್ತರೆಯನ್ನೂ, ಕುಂತಿಯನ್ನೂ ನೋಡಿ ಅವರ ಯೋಗಕ್ಷೇಮಗಳನ್ನು ವಿಚಾರಿಸಿ, ಪತಿಗಳನ್ನು ಕಳೆದುಕೊಂಡ ಕ್ಷತ್ರಿಯ ಸ್ತ್ರೀಯರನ್ನು ಸಮಾಧಾನ ಪಡಿಸುವುದು ಮುಂತಾದ ಕೆಲಸಗಳೇ ಕೃಷ್ಣನ ಆಗಮನದ ಮುಖ್ಯ ಉದ್ದೇಶವಾಗಿತ್ತು.
ತಾನಾಗತಾನ್ ಸಮೀಕ್ಷ್ಯೈವ ಧೃತರಾಷ್ಟ್ರೋ ಮಹೀಪತಿಃ |
ಪ್ರತ್ಯಗೃಹ್ಣಾದ್ ಯಥಾನ್ಯಾಯಂ ವಿದುರಶ್ಚ ಮಹಾಮನಾಃ ॥7॥
ಬಲರಾಮನೇ ಮೊದಲಾದ ಪರಾಕ್ರಮಿಗಳೊಂದಿಗೆ ಆಗಮಿಸಿದ, ವೃಷ್ಣಿಕುಲ ವೀರನಾದ ಕೃಷ್ಣನನ್ನು ರಾಜನಾದ ಧೃತರಾಷ್ಟ್ರನು, ಮಹಾಮತಿಯಾದ ವಿದುರನು ನೋಡುತ್ತಲೇ ಮುಂದೆ ಹೋಗಿ ಸ್ವಾಗತಿಸಿದರು.
ತತ್ರೈವ ನ್ಯವಸತ್ ಕೃಷ್ಣಃ ಸತ್ಕೃತಃ ಪುರುಷರ್ಷಭಃ |
ವಿದುರೇಣ ಮಹಾತೇಜಾಸ್ತಥೈವ ಚ ಯುಯುತ್ಸುನಾ ॥8॥
ವಿದುರನಿಂದ, ಯುಯುತ್ಸುವಿನಿಂದ ಸತ್ಕೃತನಾದ, ಪುರುಷಶ್ರೇಷ್ಠನಾದ, ತೇಜಸ್ವಿಯಾದ ಕೃಷ್ಣನು ಸ್ವಲ್ಪ ದಿವಸಗಳ ತನಕ ಅವರ ಬಳಿಯೇ ವಾಸ ಮಾಡಿದನು.
ವಸತ್ಸು ವೃಷ್ಣಿವೀರೇಷು ತತ್ರಾಥ ಜನಮೇಜಯ |
ಜಜ್ಞೇ ತವ ಪಿತಾ ರಾಜಾ ಪರೀಕ್ಷಿತ್ ಪರವೀರಹಾ ॥9॥
ಜನಮೇಜಯನೇ, ಶ್ರೀಕೃಷ್ಣನೊಡನೆ ಆಗಮಿಸಿದ್ದ ವೃಷ್ಣಿವೀರರು ಅಲ್ಲಿಯೇ ವಾಸಿಸುವ ಪ್ರಸಂಗದಲ್ಲಿ ಶತ್ರುಹಂತಕನಾದ, ನಿನ್ನ ತಂದೆಯಾದ ಪರೀಕ್ಷಿತನ ಜನ್ಮವಾಯಿತು.
ಸ ತು ಜಾತೋ ಮಹಾರಾಜ ಬ್ರಹ್ಮಾಸ್ತ್ರೇಣ ಚ ಪೀಡಿತಃ |
ಶವೋ ಬಭೂವ ನಿಶ್ಚೇಷ್ಟೋ ಹರ್ಷಶೋಕವಿವರ್ಧನಃ ॥10॥
ಆ ನಿನ್ನ ತಂದೆಯಾದರೋ ಅಶ್ವತ್ಥಾಮರ ಬ್ರಹ್ಮಾಸ್ತ್ರದಿಂದ ಪೀಡಿತನಾಗಿ ಚೇಷ್ಟಾರಹಿತವಾದ ಶವವಾಗಿದ್ದನು. ಅವನ ಜನ್ಮದ ಪ್ರಸಂಗದಲ್ಲಿ ಬಂಧುಗಳಿಗೆ ಹರ್ಷದ ಜೊತೆಗೆ ಶೋಕವೇ ಅಧಿಕವಾಯಿತು.
ಹೃಷ್ಟಾನಾಂ ಸಿಂಹನಾದೇನ ಜನಾನಾಂ ತತ್ರ ನಿಃಸ್ವನಃ |
ಆವಿವೇಶ ದಿಶಃ ಸರ್ವಾ ಪುನರೇವಾಪ್ಯುಪಾರಮತ್ ॥11॥
ರಾಜಪುತ್ರನ ಜನ್ಮದ ಸಮಾಚಾರವನ್ನು ಕೇಳಿ ಸಂತುಷ್ಟರಾದ ಪ್ರಜೆಗಳ ಸಿಂಹನಾದವು ಪ್ರತಿದಿಕ್ಕುಗಳಲ್ಲಿ ವ್ಯಾಪಿಸಿತು.
ಮರುಕ್ಷಣದಲ್ಲಿಯೇ ಆ ಶಿಶುವು ಮರಣ ಹೊಂದಿದೆ ಎಂಬ ವಾರ್ತೆಯು ಜನ್ಮದ ಸುಖವಾರ್ತೆಯನ್ನು ತಡೆಯಿತು.
ತತಃ ಸೋಽಭಿತ್ವರನ್ ಕೃಷ್ಣೋ ವಿವೇಶಾಂತಃಪುರಂ ತದಾ |
ಯುಯುಧಾನದ್ವಿತೀಯೋ ವೈ ವ್ಯಥಿತೇಂದ್ರಿಯಮಾನಸಃ ॥12॥
ಆ ಸಮಯದಲ್ಲಿ ಅತ್ಯಂತ ಅವಸರದಿಂದ, ವ್ಯಾಕುಲವಾದ ಇಂದ್ರಿಯ, ಮನಸ್ಸುಗಳಿಂದ ಕೂಡಿದ ಕೃಷ್ಣನು ಸಾತ್ಯಕಿಯೊಡನೆ ಅಂತಃಪುರವನ್ನು ಪ್ರವೇಶಿಸಿದನು.
ತತಸ್ತ್ವರಿತಮಾಯಾಂತೀಂ ದದರ್ಶ ಸ್ವಾಂ ಪಿತೃಷ್ವಸಾಮ್ |
ಕ್ರೋಶಂತೀಮಭಿಧಾವಂತೀಂ ವಾಸುದೇವಂ ಪುನಃ ಪುನಃ ॥13॥
ಅತ್ಯಂತ ವೇಗವಾಗಿ ಆಗಮಿಸಿದ ಕೃಷ್ಣನನ್ನು ಸೋದರತ್ತೆಯಾದ ಕುಂತಿಯು ನೋಡಿದಳು. ಶ್ರೀಕೃಷ್ಣನು ತನ್ನ ಬಳಿ ಗಟ್ಟಿಯಾಗಿ, ದುಃಖದಿಂದ ಕಿರುಚಿಕೊಂಡು ಓಡಿಬರುತ್ತಿರುವ ಕುಂತಿಯನ್ನು ನೋಡಿದನು.
ಪೃಷ್ಠತೋ ದ್ರೌಪದೀಂ ಚೈವ ಸುಭದ್ರಾಂ ಚ ಯಶಸ್ವಿನೀಮ್ |
ವಿಕ್ರೋಶಂತ್ಯಶ್ಚ ಕರುಣಂ ಪಾಂಡವಾನಾಂ ಸ್ತ್ರಿಯೋ ನೃಪ ॥14॥
ಆ ಕುಂತಿಯ ಹಿಂದೆ ದ್ರೌಪದಿಯೂ, ಯಶಸ್ವಿನಿಯಾದ ಸುಭದ್ರೆಯೂ, ಪಾಂಡವ ಸ್ತ್ರೀಯರು ಕರುಣೆ ಹುಟ್ಟುವಂತೆ ಕಿರುಚುತ್ತಾ ಆಗಮಿಸಿದರು.
ತತಃ ಕೃಷ್ಣಂ ಸಮಾಸಾದ್ಯ ಕುಂತೀ ರಾಜಸುತಾ ತದಾ |
ಪ್ರೋವಾಚ ರಾಜಶಾರ್ದೂಲ ಬಾಷ್ಪಗದ್ಗದಯಾ ಗಿರಾ ॥15॥
ಆ ಪ್ರಸಂಗದಲ್ಲಿ ರಾಜಸುತೆಯಾದ ಕುಂತಿಯು ಕೃಷ್ಣನನ್ನು ಸಮೀಪಿಸಿ, ಬಾಷ್ಪಗದ್ಗದವಾದ ಕಂಠದಿಂದ ಜನಮೇಜಯನೇ, ಈ ಮಾತುಗಳನ್ನು ಹೇಳಿದಳು.
ಕುಂತೀ
ವಾಸುದೇವ ಮಹಾಬಾಹೋ ಸುಪ್ರಜಾ ದೇವಕೀ ತ್ವಯಾ |
ತ್ವಂ ನೋ ಗತಿಃ ಪ್ರತಿಷ್ಠಾ ಚ ತ್ವದಾಯತ್ತಮಿದಂ ಕುಲಮ್ ॥16॥
ಕುಂತೀ ಮಹಾಬಾಹುವಾದ ಶ್ರೀಕೃಷ್ಣನೇ, ದೇವಕೀದೇವಿಯು ನಿನ್ನಂತಹ ಮಗನನ್ನು ಹಡೆದು ಸುಪ್ರಜಾ ಎಂಬ ಬಿರುದಿಗೆ ಭಾಜನಳಾಗಿದ್ದಾಳೆ. ನೀನೇ ನಮ್ಮೆಲ್ಲರಿಗೂ ಗತಿಪ್ರದನು. ನೀನೇ ನಮ್ಮೆಲ್ಲರಿಗೂ ಸ್ತುತಿಪ್ರದನು. ನಮ್ಮ ಕೌರವಕುಲವು ನಿನ್ನ ಅಧೀನವಾಗಿದೆ.
ಯದುಪ್ರವೀರ ಯೋಽಯಂ ತೇ ಸ್ವಸ್ರೀಯಸ್ಯಾತ್ಮಜಃ ಪ್ರಭೋ |
ಅಶ್ವತ್ಥಾಮ್ನಾ ಹತೋ ಜಾತಸ್ತಮುಜ್ಜೀವಯ ಕೇಶವ ॥17॥
ಯದುಶ್ರೇಷ್ಠನೇ, ಈಗ ಜನ್ಮವನ್ನು ತಾಳಿದ ಶಿಶುವು ನಿನ್ನ ಸೋದರಳಿಯನ ಮಗುವಾಗಿದೆ. ಅಶ್ವತ್ಥಾಮರ ಬ್ರಹ್ಮಾಸ್ತ್ರದಿಂದ ಮರಣವನ್ನು ಹೊಂದಿಯೇ ಹುಟ್ಟಿದೆ. ಕೇಶವನೇ ಇದನ್ನು ಬದುಕಿಸು.

ತ್ವಯಾ ಹ್ಯೇತತ್ ಪ್ರತಿಜ್ಞಾತಮೈಷೀಕೇ ಯದುನಂದನ |
ಅಹಂ ಸಂಜೀವಯಿಷ್ಯಾಮಿ ಮೃತಂ ಜಾತಮಿತಿ ಪ್ರಭೋ ||18||
ಯದುನಂದನನೇ, ಅಶ್ವತ್ಥಾಮರು ಇಷೀಕವನ್ನು ಬ್ರಹ್ಮಾಸ್ತ್ರವನ್ನಾಗಿ ಅಭಿಮಂತ್ರಿಸಿ ಪಾಂಡವಕುಲವನ್ನೇ ಗುರಿಯಾಗಿಟ್ಟುಕೊಂಡು ಪ್ರಯೋಗಿಸಿದಾಗ ಸತ್ತು ಹುಟ್ಟುವ ಮಗುವನ್ನೂ ನಾನು ಬದುಕಿಸುತ್ತೇನೆ ಎಂದು ಹಿಂದೆ ನೀನು ಪ್ರತಿಜ್ಞೆಯನ್ನು ಮಾಡಿರುವಿಯಷ್ಟೆ?
ಸೋಽಯಂ ಜಾತೋ ಮೃತಸ್ತಾತ ಪಶ್ಯೈನಂ ಪುರುಷರ್ಷಭ |
ಉತ್ತರಾಂ ಚ ಸುಭದ್ರಾಂ ಚ ದ್ರೌಪದೀಂ ಮಾಂ ಚ ಮಾಧವ ||19||
ಧರ್ಮಪುತ್ರಂ ಚ ಭೀಮಂ ಚ ಫಲ್ಗುನಂ ನಕುಲಂ ತಥಾ |
ಸಹದೇವಂ ಚ ದುರ್ಧರ್ಷಂ ಸರ್ವಾಂಶ್ಚ ಭರತಾನಪಿ ||20||
ಪುರುಷಶ್ರೇಷ್ಠನೇ, ಆ ಶಿಶುವನ್ನು ಈಗ ನೋಡು. ಇದು ಮರಣವನ್ನು ಹೊಂದಿದೆ. ಇದರ ಮೇಲೆ ಕೃಪೆಯನ್ನು ತೋರು. ಈ ಶಿಶುವನ್ನು ಬದುಕಿಸಿ, ಉತ್ತರೆ, ಸುಭದ್ರೆ, ದ್ರೌಪದಿಯರನ್ನು, ಧರ್ಮಪುತ್ರನಾದ ಭೀಮ, ಅರ್ಜುನ, ನಕುಲ-ಸಹದೇವರನ್ನು, ಸಮಸ್ತ ಭರತವಂಶೀಯರನ್ನು ನೀನೇ ರಕ್ಷಿಸು.
ತಸ್ಮಿನ್ ಪ್ರಾಣಾಃ ಸಮಾಯತ್ತಾಃ ಪಾಂಡವಾನಾಂ ಮಮೈವ ಚ |
ಪಾಂಡೋಶ್ಚ ಪಿಂಡೋ ದಾಶಾರ್ಹ ತಥೈವ ಶ್ವಶುರಸ್ಯ ಮೇ ||21||
ಈ ಸಮಯದಲ್ಲಿ ಮಹಾಸಂಕಟದಿಂದ ಕೂಡಿರುವ ಪಾಂಡವರನ್ನೂ, ನಮ್ಮೆಲ್ಲರನ್ನೂ ಉದ್ಧರಿಸುವುದು ನಿನಗೆ ಯೋಗ್ಯವಾಗಿದೆ. ನನ್ನ ಮತ್ತು ಪಾಂಡವರ ಪ್ರಾಣಗಳು ಈ ಶಿಶುವಿನ ಅಧೀನವಾಗಿವೆ. ನನ್ನ ಮಾವನಾದ ವಿಚಿತ್ರವೀರ್ಯನಿಗೂ, ಪತಿಯಾದ ಪಾಂಡುವಿಗೂ ಕೊಡಬೇಕಾದ ಪಿಂಡದಾನವು ಈ ಶಿಶುವನ್ನೇ ಅವಲಂಬಿಸಿಕೊಂಡಿದೆ.
ಅಭಿಮನ್ಯೋಶ್ಚ ಭದ್ರಂ ತೇ ಪ್ರಿಯಸ್ಯ ಸದೃಶಸ್ಯ ತೇ |
ಪ್ರಿಯಮುತ್ಪಾದಯಾದ್ಯ ತ್ವಂ ಪ್ರೇತಸ್ಯಾಪಿ ಜನಾರ್ದನ ||22||
ಜನಾರ್ದನನೇ, ನಿನಗೆ ಮಂಗಳವಾಗಲಿ. ನಿನ್ನ ಮೂಲಕ ಪರಲೋಕದಲ್ಲಿರುವ ಅಭಿಮನ್ಯುವಿಗೂ ಹಿತವುಂಟಾಗಲಿ. ಈ ಶಿಶುವನ್ನು ಬದುಕಿಸುವುದರ ಮೂಲಕ ಅಭಿಮನ್ಯುವಿಗೆ ಸಂತೋಷವನ್ನುಂಟು ಮಾಡು.
ಉತ್ತರಾ ಹಿ ಪುರೋಕ್ತಂ ವೈ ಕಥಯತ್ಯರಿಸೂದನ |
ಅಭಿಮನ್ಯೋರ್ವಚಃ ಕೃಷ್ಣ ಪ್ರಿಯಂ ತತ್ ತೇ ನ ಸಂಶಯಃ ||23||
ಅಬ್ರವೀತ್ ಕಿಲ ದಾಶಾರ್ಹ ವೈರಾಟೀಮಾರ್ಜುನಿಸ್ತದಾ ||24||
ಶತ್ರುಸೂದನನೇ, ಕೃಷ್ಣನೇ, ಹಿಂದೆ ಉತ್ತರಾದೇವಿಯು ಅಭಿಮನ್ಯುವು ಅವಳ ಬಳಿ ಹೇಳಿದ ಮಾತುಗಳನ್ನು ಅತ್ಯಂತ ಪ್ರಿಯವಾಗಿದ್ದರಿಂದ ನನ್ನ ಬಳಿ ಹೆಜ್ಜೆ ಹೆಜ್ಜೆಗೂ ಹೇಳುತ್ತಿದ್ದಳು. ವಿರಾಟನ ಮಗಳಾದ ಉತ್ತರೆಗೆ ಅಭಿಮನ್ಯುವು ಹೀಗೆ ಹೇಳುತ್ತಿದ್ದನು.
ಅಭಿಮನ್ಯುಃ
ಮಾತುಲಸ್ಯ ಕುಲಂ ಭದ್ರೇ ತವ ಪುತ್ರೋ ಗಮಿಷ್ಯತಿ |
ಗತ್ವಾ ವೃಷ್ಣ್ಯಂಧಕಕುಲಂ ಧನುರ್ವೇದಂ ಗ್ರಹೀಷ್ಯತಿ ||25||
ಅಸ್ತ್ರಾಣಿ ಚ ವಿಚಿತ್ರಾಣಿ ನೀತಿಶಾಸ್ತ್ರಂ ಚ ಕೇವಲಮ್ ||26||
ಅಭಿಮನ್ಯು ಕಲ್ಯಾಣಿಯೇ, ನಿನ್ನ ಮಗನು ನನ್ನ ಸೋದರಮಾವನ ಮನೆಗೆ ಹೋಗುತ್ತಾನೆ. ಅರ್ಥಾತ್ ಕೃಷ್ಣನ ಬಳಿ ಹೋಗುತ್ತಾನೆ. ವೃಷ್ಣ್ಯಂಧಕರ ಮನೆಗೆ ಹೋಗಿ ಧನುರ್ವೇದ ಮತ್ತು ಚಿತ್ರ-ವಿಚಿತ್ರವಾದ ಅಸ್ತ್ರ-ಶಸ್ತ್ರಗಳನ್ನೂ ಮತ್ತು ನೀತಿಶಾಸ್ತ್ರಗಳನ್ನೂ ಪಡೆದುಕೊಳ್ಳುತ್ತಾನೆ.
ಕುಂತೀ
ಇತ್ಯೇತತ್ ಪ್ರಣಯಾತ್ ತಾತ ಸೌಭದ್ರಃ ಪರವೀರಹಾ |
ಕಥಯಾಮಾಸ ದುರ್ಧರ್ಷಸ್ತಥೈವೈತನ್ನ ಸಂಶಯಃ ||27||
ಕುಂತೀ ಕೃಷ್ಣನೇ, ಇಂತಹ ಮಾತುಗಳನ್ನು ಅಭಿಮನ್ಯುವು ತನ್ನ ಪ್ರಿಯತಮೆಯಾದ ಉತ್ತರೆಯ ಬಳಿ ಅತ್ಯಂತ ಪ್ರೀತಿಯಿಂದ ಹೇಳುತ್ತಿದ್ದನು. ಶತ್ರುವೀರಹಂತಕನಾದ, ಶತ್ರುಗಳಿಂದ ಎದುರಿಸಲು ಅಸಾಧ್ಯನಾದ ಅಭಿಮನ್ಯುವಿನ ಮಾತುಗಳು ಇವು.
ತಾಸ್ತ್ವಾಂ ವಯಂ ಪ್ರಣಮ್ಯೇಹ ಚಾಯಾಮೋ ಮಧುಸೂದನ |
ಕುಲಸ್ಯಾಸ್ಯ ಹಿತಾರ್ಥಂ ತ್ವಂ ಕುರು ಕಲ್ಯಾಣಮುತ್ತಮಮ್ ||28||
ಮಧುಸೂದನನೇ, ಈ ಕುರುಕುಲಕ್ಕೆ ಸೇರಿರುವ ಸ್ತ್ರೀಯರೆಲ್ಲರೂ ನಿನ್ನ ಪಾದಗಳಿಗೆ ನಮಿಸಿ ಪ್ರಾರ್ಥಿಸುತ್ತೇವೆ. ಈ ಕುರುಕುಲದ ಹಿತಕ್ಕೋಸ್ಕರ ಈ ಮಗುವನ್ನು ಬದುಕಿಸಿಕೊಡುವ ಪರಮಶ್ರೇಷ್ಠವಾದ ಮಂಗಳಕಾರ್ಯವನ್ನು ನೀನು ಮಾಡು.
ವೈಶಂಪಾಯನಃ
ಏವಮುಕ್ತ್ವಾ ತು ವಾರ್ಷ್ಣೇಯಂ ಪೃಥಾ ಪೃಥುಲೋಚನಾ |
ಉದ್ಧೃತ್ಯ ಬಾಹೂ ದುಃಖಾರ್ತಾ ಪ್ರಾಪತದ್ ಭುವಿ ವಿಹ್ವಲಾ ||29||
ವೈಶಂಪಾಯನ ಜನಮೇಜಯನೇ, ವಿಶಾಲಾಕ್ಷಿಯಾದ ಕುಂತಿಯು ಕೃಷ್ಣನ ಬಳಿ ಹೀಗೆ ದುಃಖಪೀಡಿತಳಾಗಿ, ಕೈಗಳೆರಡನ್ನು ಮೇಲಕ್ಕೆತ್ತಿ ಪ್ರಾರ್ಥಿಸುತ್ತಾ ದೊಪ್ಪನೆ ನೆಲದಲ್ಲಿ ಬಿದ್ದಳು.
ಅಬ್ರುವಂಶ್ಚ ಮಹಾರಾಜ ಸರ್ವಾಃ ಸಸ್ರಾವಿಲೇಕ್ಷಣಾಃ |
ಸ್ವಸ್ರೀಯೋ ವಾಸುದೇವಸ್ಯ ಮೃತೋ ಜಾತ ಇತಿ ಪ್ರಭೋ ||30||
ಅವಳ ಜೊತೆಯಲ್ಲಿಯೇ ಇದ್ದ ದ್ರೌಪದಿ ಮೊದಲಾದ ಇತರ ಸ್ತ್ರೀಯರೂ ಭೂಮಿಯ ಮೇಲೆ ಬಿದ್ದರು. ಅರಮನೆಯಲ್ಲಿದ್ದ ಸ್ತ್ರೀಯರೆಲ್ಲರೂ ಕಣ್ಣೀರು ಸುರಿಸುತ್ತಾ ಅಯ್ಯೋ! ಶ್ರೀಕೃಷ್ಣನ ಸೋದರಿಯ ಮೊಮ್ಮಗನು ಸತ್ತುಹುಟ್ಟಿದ್ದಾನೆ ಎಂದು ಬೊಬ್ಬೆ

ಹೊಡೆಯುತ್ತಿದ್ದರು.
ಏವಂ ಗತೇ ತತಃ ಕುಂತೀಂ ಪರ್ಯಗೃಹ್ಣಾಜ್ಜನಾರ್ದನಃ |
ಭೂಮೌ ನಿಪತಿತಾಂ ಚೈನಾಂ ಸಾಂತ್ವಯಾಮಾಸ ಭಾರತ ॥31॥
ಇವರೆಲ್ಲರ ಮಾತುಗಳನ್ನು ಕೇಳಿದ ಶ್ರೀಕೃಷ್ಣನು, ಭೂಮಿಯಲ್ಲಿ ಬಿದ್ದಿರುವ ತನ್ನ ಸೋದರತ್ತೆಯಾದ ಕುಂತಿಯನ್ನು ಹಿಡಿದೆಬ್ಬಿಸಿ ಕುಳ್ಳಿರಿಸಿ, ಸವಿಯಾದ ಮಾತುಗಳಿಂದ ಇಂತು ಸಂತೈಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಪರೀಕ್ಷಿಜ್ಜನನಪ್ರಕಾರಕಥನಂ ನಾಮ ಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೇಳನೆಯ ಅಧ್ಯಾಯ
ಸುಭದ್ರೆಯು ಕೃಷ್ಣನ ಬಳಿ ಅವನ ಮಹಿಮೆಯನ್ನು ವರ್ಣಿಸುತ್ತಾ ಶಿಶುವನ್ನು ಬದುಕಿಸು ಎಂದು ಪ್ರಾರ್ಥಿಸಿದುದು.
ವೈಶಂಪಾಯನಃ
ಉತ್ಥಿತಾಯಾಂ ಪೃಥಾಯಾಂ ತು ಸುಭದ್ರಾ ಭ್ರಾತರಂ ತದಾ |
ದೃಷ್ಟ್ವಾ ಚುಕ್ರೋಶ ದುಃಖಾರ್ತಾ ವಚನಂ ಚೇದಮಬ್ರವೀತ್ ॥1॥
ವೈಶಂಪಾಯನ ನೆಲದಲ್ಲಿ ಬಿದ್ದು ಕೃಷ್ಣನಿಂದ ಎತ್ತಲ್ಪಟ್ಟ ಕುಂತಿಯು ಎದ್ದು ಕುಳಿತ ಬಳಿಕ ಸುಭದ್ರೆಯು ತನ್ನ ಅಣ್ಣನೆನಿಸಿದ ಕೃಷ್ಣನನ್ನು ಕುರಿತು ದುಃಖಾರ್ತಳಾಗಿ ಅಳುತ್ತಲೇ ಕೃಷ್ಣನ ಬಳಿ ಹೀಗೆ ನುಡಿದಳು.
ಸುಭದ್ರಾ
ಪುಂಡರೀಕಾಕ್ಷ ಪಶ್ಯ ತ್ವಂ ಪೌತ್ರಂ ಪಾರ್ಥಸ್ಯ ಧೀಮತಃ |
ಪರಿಕ್ಷೀಣೇಷು ಕುರುಷು ಪರಿಕ್ಷೀಣಂ ಗತಾಯುಷಮ್ ॥2॥
ಸುಭದ್ರಾ ಪುಂಡರೀಕಾಕ್ಷನೇ, ಕುರುವಂಶೀಯರೆಲ್ಲರೂ ಸಂತಾನವಿಲ್ಲದೆ ನಾಶ ಹೊಂದುತ್ತಿರುವಾಗ, ಹುಟ್ಟುತ್ತಲೇ ಆಯುಷ್ಯವಿಲ್ಲದೆ ಹುಟ್ಟಿರುವ ಧೀಮಂತನಾದ ಅರ್ಜುನನ ಮೊಮ್ಮಗನನ್ನು ನೋಡು.
ಇಷೀಕಾ ದ್ರೋಣಪುತ್ರೇಣ ಭೀಮಸೇನಾರ್ಥಮುದ್ಯತಾ |
ಸೋತ್ತರಾಯಾಂ ನಿಪತಿತಾ ವಿಜಯೇ ಮಯಿ ಚೈವ ಹ ॥3॥
ದ್ರೋಣಪುತ್ರನಾದ ಅಶ್ವತ್ಥಾಮರು ಭೀಮಸೇನನನ್ನು ಸಂಹರಿಸುವ ದೃಷ್ಟಿಯಿಂದ ಬ್ರಹ್ಮಶಿರೋಸ್ತ್ರವನ್ನು ಹಿಂದೆ ಪ್ರಯೋಗಿಸಿದ್ದರು. ಅದೇ ಇಷೀಕಾಸ್ತ್ರವು ಉತ್ತರೆಯ ಮೇಲೂ, ನನ್ನ ಮೇಲೂ, ಅರ್ಜುನನ ಮೇಲೂ ಬಿದ್ದಿತು.
ಸೇಯಂ ಜ್ವಲಂತೀ ಹೃದಯೇ ಮಮ ತಿಷ್ಠತಿ ಕೇಶವ |
ಯನ್ನ ಪಶ್ಯಾಮಿ ದುರ್ಧರ್ಷಮಹಂ ಪುತ್ರಸುತಂ ವಿಭೋ ॥4॥
ದುರ್ಧರ್ಷನೇ, ಕೇಶವನೇ, ಪ್ರಭುವೇ, ಈ ಇಷೀಕಾಸ್ತ್ರವು ಈಗಲೂ ಸೀಳಿ ಹೋಗಿರುವ ನನ್ನ ಹೃದಯದಲ್ಲಿ ಸಂಕಟವನ್ನುಂಟು ಮಾಡುತ್ತಿದೆ. ಪುತ್ರಸಹಿತನಾದ ಅಭಿಮನ್ಯುವನ್ನು ನಾನು ಈಗ ಕಾಣುತ್ತಿಲ್ಲ. ಇದಕ್ಕಿಂತಲೂ ದುಃಖಕರವಾದ ಸಂಗತಿಯು ನನ್ನ ಪಾಲಿಗೆ ಬೇರೆ ಯಾವುದಿದೆ?
ಕಿಂ ನು ವಕ್ಷ್ಯತಿ ಧರ್ಮಾತ್ಮಾ ಧರ್ಮಪುತ್ರೋ ಯುಧಿಷ್ಠಿರಃ |
ಭೀಮಸೇನಾರ್ಜುನೌ ಚೋಭೌ ಮಾದ್ರವತ್ಯಾಃ ಸುತೌ ಚ ತೌ ॥5॥
ಶ್ರುತ್ವಾಽಭಿಮನ್ಯೋಸ್ತನಯಂ ಜಾತಂ ಚ ಮೃತಮೇವ ಚ |
ಮುಷಿತಾ ಇವ ವಾರ್ಷ್ಣೇಯ ದ್ರೋಣಪುತ್ರೇಣ ಪಾಂಡವಾಃ ॥6॥
ಅಭಿಮನ್ಯುವಿನ ಶಿಶುವು ಹುಟ್ಟುವಾಗಲೇ ಸತ್ತಿದೆ ಎಂಬ ವಾರ್ತೆಯನ್ನು ಕೇಳಿಸಿಕೊಂಡ ಯುಧಿಷ್ಠಿರನ ಸ್ಥಿತಿ ಏನು? ಭೀಮಾರ್ಜುನರು, ಸಹದೇವರಾದರೂ ಹೇಗೆ ಸಹಿಸುತ್ತಾರೆ? ವೃಷ್ಣಿಕುಲಶ್ರೇಷ್ಠನೇ, ಸತ್ಯ ಹೇಳುವುದಾದಲ್ಲಿ ದ್ರೋಣಸುತರಾದ ಅಶ್ವತ್ಥಾಮರು ಈ ಶಿಶುವನ್ನು ಕೊಲ್ಲುವ ಮೂಲಕ ಪಾಂಡವರ ಸರ್ವಸ್ವವನ್ನೂ ನಾಶ ಮಾಡಿದ್ದಾರೆ.
ಅಭಿಮನ್ಯುಃ ಪ್ರಿಯಃ ಕೃಷ್ಣ ಪಿತೄಣಾಂ ನಾತ್ರ ಸಂಶಯಃ |
ತೇ ಶ್ರುತ್ವಾ ಕಿಂ ನು ವಕ್ಷ್ಯಂತಿ ದ್ರೋಣಪುತ್ರಾಸ್ತ್ರನಿರ್ಜಿತಾಃ ॥7॥
ಕೃಷ್ಣನೇ, ಪಾಂಡವರಿಗೆ ಅಭಿಮನ್ಯುವು ಅತ್ಯಂತ ಪ್ರೀತಿಪಾತ್ರನಾದವನು. ಇದರಲ್ಲಿ ಯಾವ ಸಂಶಯವೂ ಇಲ್ಲ. ಅಂತಹವನಿಗೆ ಇಂತಹ ಮೃತಪುತ್ರನು ಹುಟ್ಟಿದ್ದಾನೆ ಎಂಬುದನ್ನು ಕೇಳಿದ ಪಾಂಡವರು ದ್ರೋಣಪುತ್ರನ ಅಸ್ತ್ರದ ಈ ಪರಾಜಯವನ್ನು ಕೇಳಿ ಏನು ಹೇಳಿಯಾರು?
ಭವಿತಾ ನಃ ಪರಂ ದುಃಖಂ ಕಿಂ ನು ಮನ್ಯೇ ಜನಾರ್ದನ |
ಅಭಿಮನ್ಯೋಃ ಸುತಾತ್ ಕೃಷ್ಣ ಮೃತಾಜ್ಜಾತಾದರಿಂದಮ ॥8॥
ಶತ್ರುಸೂದನನೇ, ಜನಾರ್ದನನೇ, ಅಭಿಮನ್ಯುವಿಗೆ ಮೃತಶಿಶುವಿನ ಜನ್ಮವಾಗಿದೆ ಎಂಬ ವಾರ್ತೆಗಿಂತ ಮಿಗಿಲಾದ ದುಃಖ ಅವರ ಜೀವನದಲ್ಲಿ ಯಾವುದಿದ್ದಿತು? ಯೋಚಿಸು.
ಸಾಹಂ ಪ್ರಸಾದಯೇ ಕೃಷ್ಣ ತ್ವಾಮದ್ಯ ಶಿರಸಾ ನತಾ |
ಪೃಥಾಂ ಚ ದ್ರೌಪದೀಂ ಚೈವ ಮಾಂ ಪಶ್ಯ ಪುರುಷೋತ್ತಮ ॥9॥
ಪುರುಷೋತ್ತಮನೇ, ಶ್ರೀಕೃಷ್ಣನೇ, ನಿನ್ನ ಬಳಿ ಶಿರಬಾಗಿ ನಮಿಸುತ್ತೇನೆ. ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ. ನಮ್ಮ ಅತ್ತೆಯಾದ ಕುಂತಿ,

ದ್ರೌಪದಿ, ಎಲ್ಲರೂ ಅಂಗಲಾಚಿ ಬೇಡುತ್ತಿರುವುದನ್ನು ನೋಡು, ದಯೆತೋರು.
ಯದಾ ದ್ರೋಣಸುತೋ ಗರ್ಭಾನ್ ಪಾಂಡೂನಾಂ ಹಂತಿ ಮಾಧವ |
ತ್ವಯಾ ಕಿಲ ಪುರಾ ದ್ರೌಣಿಃ ಕ್ರುದ್ಧೇನೋಕ್ತೋರಿಮರ್ದನ ॥10॥
ಮಾಧವನೇ, ಅಶ್ವತ್ಥಾಮರು ಪಾಂಡುಪುತ್ರನ ಗರ್ಭವನ್ನು ನಾಶಪಡಿಸಲು ಪ್ರಯತ್ನಿಸಿದಾಗ ಸಿಟ್ಟಾದ ನೀನು ಅವನಿಗೆ ಹೇಳಿದ ಮಾತು ಇಂತಿದೆ.
ಶ್ರೀಭಗವಾನ್
ಅಕಾಮಂ ತ್ವಾಂ ಕರಿಷ್ಯಾಮಿ ಬ್ರಹ್ಮಬಂಧೋ ನರಾಧಮ |
ಅಹಂ ಸಂಜೀವಯಿಷ್ಯಾಮಿ ಕಿರೀಟಿತನಯಾತ್ಮಜಮ್ ॥11॥
ಶ್ರೀಭಗವಾನ್ ಬ್ರಹ್ಮಬಂಧುವೇ, ನರಾಧಮನೇ, ನಿನ್ನ ಅಪೇಕ್ಷೆಯು ನೆರವೇರದಂತೆ ಮಾಡುತ್ತೇನೆ. ಅರ್ಜುನನ ಮೊಮ್ಮಗನನ್ನು ನಾನು ಬದುಕಿಸುತ್ತೇನೆ.
ಸುಭದ್ರಾ
ಇತ್ಯೇತದ್ ವಚನಂ ಶ್ರುತ್ವಾ ಜಾನಾನಾಽಹಂ ಬಲಂ ತವ |
ಪ್ರಸಾದಯೇ ತ್ವಾಂ ದುರ್ಧರ್ಷ ಜೀವತಾಮಭಿಮನ್ಯುಜಃ ॥12॥
ಸುಭದ್ರಾ ಶತ್ರುಗಳಿಂದಲೂ ಎದುರಿಸಲು ಅಸಾಧ್ಯನಾದ ಕೃಷ್ಣನೇ, ಅಶ್ವತ್ಥಾಮರ ಬಳಿ ಅಂದು ನೀನು ಹೇಳಿದ ಮಾತನ್ನು ಕೇಳಿದಾಗ ನಿನ್ನ ಬಲವೇನೆಂಬುದನ್ನು ನಾನು ಅರಿತೆನು. ಕೃಷ್ಣನೇ, ಪುನಃ ಪುನಃ ಬಿನ್ನವಿಸುತ್ತೇನೆ, ಅಶ್ವತ್ಥಾಮರಿಗೆ ಅಂದು ಹೇಳಿದಂತೆ ನೀನು ಅಭಿಮನ್ಯುವಿನ ಪುತ್ರನನ್ನು ಬದುಕಿಸು.
ಯದ್ಯೇತತ್ ತ್ವಂ ಪ್ರತಿಶ್ರುತ್ಯ ನ ಕರೋಷಿ ವಚಃ ಶುಭಮ್ |
ಸಫಲಂ ವೃಷ್ಣಿಶಾರ್ದೂಲ ಮೃತಾಂ ಮಾಮವಧಾರಯ ॥13॥
ವೃಷ್ಣಿಕುಲವೀರನೇ, ನಾನು ಬದುಕಿಸುತ್ತೇನೆ ಎಂದು ಮಾಡಿದ ಆ ಮಂಗಳ ಪ್ರತಿಜ್ಞೆಯನ್ನು ನೀನು ಪೂರ್ಣಗೊಳಿಸದಿದ್ದಲ್ಲಿ ನನ್ನನ್ನೂ ಸತ್ತಂತೆ ಭಾವಿಸು. ನಾನೂ ಪ್ರಾಣತ್ಯಾಗ ಮಾಡುತ್ತೇನೆ.
ಅಭಿಮನ್ಯೋಃ ಸುತೋ ವೀರ ನ ಸಂಜೀವತಿ ಯದ್ಯಯಮ್ |
ಜೀವತಿ ತ್ವಯಿ ದುರ್ಧರ್ಷ ಕಿಂ ಕರಿಷ್ಯಾಮ್ಯಹಂ ತ್ವಯಾ ॥14॥
ದುರ್ಧರ್ಷನೇ, ವೀರನೇ, ಕೃಷ್ಣನಾದ, ಸರ್ವಶಕ್ತನಾದ ನೀನಿದ್ದಾಗಲೂ ನನ್ನ ಮೊಮ್ಮಗನು ಬದುಕದಿದ್ದರೆ ನಿನ್ನ ಅಸ್ತಿತ್ವದಿಂದ ನಾನು ಪಡೆದ ಲಾಭವಾದರೂ ಏನು?
ಸಂಜೀವಯೈನಂ ದುರ್ಧರ್ಷ ಮೃತಂ ತ್ವಮಭಿಮನ್ಯುಜಮ್ |
ಸದೃಶಾಕ್ಷಸುತಂ ವೀರ ಸತ್ಯಂ ವರ್ಷಾಸ್ವಿವಾಂಬುದಃ ॥15॥
ದುರ್ಧರ್ಷನೇ, ಮೃತನಾದ ಅಭಿಮನ್ಯುವಿನ ಶಿಶುವನ್ನು ಬದುಕಿಸು. ಸೊರಗಿ ಹೋದ ಸಸ್ಯಪ್ರಪಂಚವನ್ನು ಮೇಘಗಳು ಮಳೆಗರೆದು ಚೈತನ್ಯಗೊಳಿಸುವಂತೆ ನಿನ್ನ ಕರುಣಾಪೂರ್ಣವಾದ ದೃಷ್ಟಿಯನ್ನು ಮೃತಶಿಶುವಿನ ಮೇಲೆ ಬೀರಿ ಚೈತನ್ಯಗೊಳಿಸು.
ತ್ವಂ ಹಿ ಕೇಶವ ಧರ್ಮಾತ್ಮಾ ಸತ್ಯವಾಕ್ ಸತ್ಯವಿಕ್ರಮಃ |
ಸ ತಾಂ ವಾಚಮೃತಾಂ ಕರ್ತುಮರ್ಹಸಿ ತ್ವಮರಿಂದಮ ॥16॥
ಕೇಶವನೇ, ನೀನು ಧರ್ಮಾತ್ಮನೂ, ಸತ್ಯವಂತನೂ, ಸತ್ಯಪರಾಕ್ರಮಿಯು. ಅರಿಂದಮನೇ, ಅಂದು ಅಶ್ವತ್ಥಾಮರ ಬಳಿ ಮಾಡಿದ ಪ್ರತಿಜ್ಞೆಯನ್ನು ಇಂದು ಸತ್ಯವಾಗಿಸು.
ಇಚ್ಛನ್ನಪಿ ಹಿ ಲೋಕಾಂಸ್ತ್ರೀನ್ ಜೀವಯೇಥಾ ಮೃತಾನಪಿ |
ಕಿಂ ಪುನರ್ದಯಿತಂ ಜಾತಂ ಸ್ವಸ್ರೀಯಸ್ಯಾತ್ಮಜಂ ಮೃತಮ್ ॥17॥
ಮಾಧವನೇ, ನೀನು ಅಪೇಕ್ಷಿಸಿದಲ್ಲಿ ಮೃತವಾಗಿರುವ ಮೂರುಲೋಕಗಳನ್ನೂ ಬದುಕಿಸಬಲ್ಲೆ. ನಿನ್ನ ಸಾಮರ್ಥ್ಯದ ಅರಿವು ನನಗಿದೆ. ಹೀಗಿರುವಾಗ ನಿನ್ನ ಪ್ರೀತಿಗೆ ಅರ್ಹನಾದ, ಈ ಸೋದರಳಿಯನಾದ ಅಭಿಮನ್ಯುವಿನ ಮಗನನ್ನು ಬದುಕಿಸಲು ಅಶಕ್ಯವೇ?
ಪ್ರಭಾವಜ್ಞಾಽಸ್ಮಿ ತೇ ಕೃಷ್ಣ ತಸ್ಮಾದೇತದ್ ಬ್ರವೀಮಿ ತೇ |
ಕುರುಷ್ವ ಪಾಂಡುಪುತ್ರಾಣಾಮಿಮಂ ಪರಮನುಗ್ರಹಮ್ ॥18॥
ಕೃಷ್ಣನೇ, ನಿನ್ನ ಮಹತ್ವವನ್ನು ಚೆನ್ನಾಗಿ ಅರಿತಿರುವೆನು. ಆದ್ದರಿಂದ ಬಿನ್ನವಿಸಿಕೊಳ್ಳುತ್ತಿದ್ದೇನೆ. ಈ ಕ್ಷಣದಲ್ಲಿಯೇ ಮೃತಶಿಶುವನ್ನು ಬದುಕಿಸಿ ಪಾಂಡುವಿನ ಸಂತತಿಯನ್ನು ಅನುಗ್ರಹಿಸು.
ಸ್ವಸೇತಿ ವಾ ಮಹಾಬಾಹೋ ಹತಪುತ್ರೇತಿ ವಾ ಪುನಃ |
ಪ್ರಪನ್ನಾ ಮಾಮಿಯಂ ವೇತಿ ದಯಾಂ ಕರ್ತುಮಿಹಾರ್ಹಸಿ ॥19॥
ಮಹಾಬಾಹುವಾದ ಕೃಷ್ಣನೇ, ತಂಗಿ ಎಂಬ ಪ್ರೀತಿಯಿಂದ ನನ್ನ ಮೇಲೆ ದಯೆತೋರು. ಇರುವ ಒಬ್ಬ ಸುತನನ್ನು ಕಳೆದುಕೊಂಡ ನತದೃಷ್ಟಳೆಂದು ಭಾವಿಸಿಯಾದರೂ ನಿನ್ನ ಪ್ರತಿಜ್ಞೆಯಂತೆ ನಡೆದುಕೊ. ನನ್ನನ್ನೇ ಶರಣು ಹೊಂದಿದ್ದಾಳೆ ಎಂಬ ದಯಾಭಾವದಿಂದಲಾದರೂ ನನ್ನ ಮೊಮ್ಮಗನನ್ನು ಬದುಕಿಸಿಕೊಡು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ಶ್ರೀಕೃಷ್ಣಪ್ರಾರ್ಥನಂ ನಾಮ ಸಪ್ತಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೆಂಟನೆಯ ಅಧ್ಯಾಯ

ಕೃಷ್ಣನು ಪ್ರಸೂತಿಗೃಹಕ್ಕೆ ತೆರಳಿದುದು. ಉತ್ತರೆಯ ವಿಲಾಪ.
ಮಗನನ್ನು ಬದುಕಿಸಿಕೊಡುವಂತೆ ಅನೇಕ ಪ್ರಕಾರದಿಂದ
ವಿಲಾಪಗೈಯ್ಯುತ್ತಾ ಉತ್ತರೆಯು ಪ್ರಾರ್ಥಿಸಿದುದು.
ವೈಶಂಪಾಯನಃ
ಏವಮುಕ್ತಃ ಸ ರಾಜೇಂದ್ರ ಕೇಶಿಹಾ ದುಃಖಮೂರ್ಚ್ಛಿತಃ |
ತಥೇತಿ ವ್ಯಾಜಹಾರೋಚ್ಚೈಃ ಹ್ಲಾದಯನ್ನಿವ ತಂ ಜನಮ್ ॥1॥
ವೈಶಂಪಾಯನ ಜನಮೇಜಯನೇ, ಸುಭದ್ರೆಯು ಕೃಷ್ಣನಿಗೆ ಹೀಗೆ ಹೇಳಿದ ಬಳಿಕ ಕೇಶಿ ಎಂಬ ದೈತ್ಯನನ್ನು ಸಂಹರಿಸಿದ ಕೇಶವನು ಅಲ್ಲಿ ನೆರೆದಿರುವ ಎಲ್ಲರನ್ನೂ ಸಂತೋಷಗೊಳಿಸುವನೋ ಎಂಬಂತೆ ಸುಭದ್ರೆಯನ್ನುದ್ದೇಶಿಸಿ ಈ ಮಾತುಗಳನ್ನು ಗಟ್ಟಿಯಾಗಿಯೇ ಹೇಳಿದನು.
ವಾಕ್ಯೇನೈತೇನ ಸಹಸಾ ತಂ ಜನಂ ಪುರುಷರ್ಷಭಃ |
ಹ್ಲಾದಯಾಮಾಸ ಸ ವಿಭುರ್ಘರ್ಮಾರ್ತಂ ಸಲಿಲೈರಿವ ॥2॥
ಅಲ್ಲಿರುವ ಜನರೆಲ್ಲರನ್ನೂ ಬಿಸಿಲಿನಲ್ಲಿ ಬೆಂದ ವ್ಯಕ್ತಿಗಳಿಗೆ ಮಳೆಸುರಿಸಿ ತಣಿಸುವಂತೆ ಸುಭದ್ರೆಯೇ ನೀನು ಹೇಳಿದಂತೆ ಮಾಡುತ್ತೇನೆ ಎಂಬ ಮಾತಿನ ಮೂಲಕ ಕೃಷ್ಣನು ಸಂತೋಷಪಡಿಸಿದನು.
ತತಃ ಸ ಪ್ರಾವಿಶತ್ ತೂರ್ಣಂ ಜನ್ಮವೇಶ್ಮ ಪಿತುಸ್ತವ |
ಅರ್ಚಿತಂ ಪುರುಷವ್ಯಾಘ್ರ ಸಿತೈರ್ಮಾಲ್ಯೈರ್ಯಥಾವಿಧಿ ॥3॥
ಬಳಿಕ ವೇಗವಾಗಿ ಕೃಷ್ಣನು ಬಿಳಿಯ ಹೂಗಳಿಂದ ಪೂಜಿಸಲ್ಪಟ್ಟು ಅಲಂಕರಿಸಲ್ಪಟ್ಟ ನಿನ್ನ ತಂದೆ ಇದ್ದ ಪ್ರಸೂತಿ ಗೃಹವನ್ನು ಪ್ರವೇಶಿಸಿದನು.
ಅಪಾಂ ಕುಂಭೈಃ ಸುಪೂರ್ಣೈಶ್ಚ ವಿನ್ಯಸ್ತೈಃ ಸರ್ವತೋದಿಶಮ್ |
ಘೃತೇನ ತಿಂದುಕಾಲಾಜ್ಯೈಃ ಸರ್ಷಪೈಶ್ಚ ಮಹಾಭುಜಃ ॥4॥
ಮಹಾಬಾಹುವೇ, ಆ ಪ್ರಸೂತಿಗೃಹವು ಜಲಪೂರ್ಣವಾದ ಕುಂಭಗಳಿಂದ ಶೋಭಿಸುತ್ತಿತ್ತು. ತುಪ್ಪದಲ್ಲಿ ನೆನೆದ ತುಂಬೇಗಿಡ ಪಂಜುಗಳಿಂದ ಬೆಳಗುತ್ತಿತ್ತು. ಪ್ರಸೂತಿ ಗೃಹದ ಸುತ್ತಲೂ ಬಿಳಿ ಸಾಸುವೆಗಳನ್ನು ಎಸೆದಿದ್ದರು.
ಶಸ್ತ್ರೈಶ್ಚ ವಿಮಲೈರ್ನ್ಯಸ್ತೈಃ ಪಾವಕೈಶ್ಚ ಸಮಂತತಃ ॥5॥
ವೃದ್ಧಾಭಿಶ್ಚಾನುರೂಪಾಭಿಃ ಪರಿವಾರಾರ್ಥಮಪ್ಯುತ |
ದಕ್ಷೈಶ್ಚ ಪರಿತೋ ವೀರ ಭಿಷಗ್ಭಿಃ ಕುಶಲೈಸ್ತಥಾ ॥6॥
ಶುಭ್ರವಾಗಿ ಹೊಳೆಯುವ ಶಸ್ತ್ರಗಳಿಂದಲೂ ಪ್ರಸೂತಿಗೃಹವು ಶೋಭಾಯಮಾನ- ವಾಗಿತ್ತು. ಅಗ್ನಿಗಳು ಪ್ರಜ್ವಲಿಸುತ್ತಿದ್ದವು. ರಾಜಪುತ್ರಿಯನ್ನು ಉಪಚರಿಸುವ ದೃಷ್ಟಿಯಿಂದ ವೃದ್ಧಸ್ತ್ರೀಯರು ಅಲ್ಲಿ ನೆರೆದಿದ್ದರು. ದಕ್ಷರಾದ, ಕುಶಲರಾದ ವೈದ್ಯರೂ ಅಲ್ಲಿಯೇ ನಿಂತಿದ್ದರು.
ದದರ್ಶ ಸ ಚ ಸ ತೇಜಸ್ವೀ ರಕ್ಷೋಘ್ನಾನ್ಯಪಿ ಸರ್ವಶಃ |
ದ್ರವ್ಯಾಣಿ ಸ್ಥಾಪಿತಾನಿ ಸ್ಮ ವಿಧಿವತ್ ಕುಶಲೈಸ್ತಥಾ ॥7॥
ಕುಶಲರಾಗಿರುವ ಜನರೆಲ್ಲರೂ ರಾಕ್ಷಸರನ್ನು ವಿನಾಶಗೊಳಿಸಲು ಸಮರ್ಥವಾದ ಪದಾರ್ಥಗಳನ್ನು ಪ್ರಸೂತಿ ಗೃಹದ ಸುತ್ತಲೂ ವಿಧಿಬದ್ಧವಾಗಿ ಇಟ್ಟಿದ್ದರು. ತೇಜಸ್ವಿಯಾದ ಕೃಷ್ಣನು ಈ ಎಲ್ಲ ವ್ಯವಸ್ಥೆಗಳನ್ನು ಅಲ್ಲಿ ಕಂಡನು.
ಜನೈರ್ಯುಕ್ತಂ ಚ ತದ್ ದೃಷ್ಟ್ವಾ ಜನ್ಮವೇಶ್ಮ ಪಿತುಸ್ತವ |
ಹೃಷ್ಟೋಽಭವದ್ ಹೃಷೀಕೇಶಃ ಸಾಧು ಸಾಧ್ವಿತಿ ಸೋಽಬ್ರವೀತ್ ॥8॥
ಅನೇಕ ವಸ್ತುಗಳಿಂದ, ಜನರಿಂದ ಸಂಪನ್ನವಾಗಿರುವ ಸೂತಿಕಾಗೃಹವನ್ನು ಕಂಡ ಕೃಷ್ಣನು ಸಂತುಷ್ಟನಾದನು. ಈ ವ್ಯವಸ್ಥೆಗಳೆಲ್ಲವೂ ಸರಿಯಾಗಿದೆ, ಸರಿಯಾಗಿದೆ ಎಂದು ಕೃಷ್ಣನು ಹೇಳಿದನು.
ತಥಾ ಬ್ರುವತಿ ಗೋವಿಂದೇ ಪ್ರಹೃಷ್ಟವದನೇ ತದಾ |
ದ್ರೌಪದೀ ತ್ವರಿತಾ ಗತ್ವಾ ವೈರಾಟೀಂ ವಾಕ್ಯಮಬ್ರವೀತ್ ॥9॥
ಸಂತುಷ್ಟಮನಸ್ಕನಾಗಿ ಕೃಷ್ಣನು ಹೀಗೆ ಹೇಳುತ್ತಿರುವಾಗ ದ್ರೌಪದಿಯು ಅವಸರದಿಂದ ಬಂದು ಉತ್ತರೆಯನ್ನು ಕುರಿತು ಹೇಳಿದಳು.
ದ್ರೌಪದೀ
ಅಯಮಾಯಾತಿ ತೇ ಭರ್ತುರ್ಮಾತುಲೋ ಮಧುಸೂದನಃ |
ಪುರಾಣರ್ಷಿರಚಿಂತ್ಯಾತ್ಮಾ ಸಮೀಪಮಪರಾಜಿತಃ ॥10॥
ದ್ರೌಪದೀ ಕಲ್ಯಾಣಿಯೇ, ಇಲ್ಲಿ ನೋಡು. ನಿನ್ನ ಮಾವನಾದ, ಅಚಿಂತ್ಯ ಮಹಿಮನಾದ, ಅಪರಾಜಿತನಾದ, ಪುರಾತನ ಮಹರ್ಷಿಯಾದ, ಪೂಜ್ಯನಾದ ಮಧುಸೂದನನು ನಿನ್ನ ಬಳಿ ಆಗಮಿಸುತ್ತಿದ್ದಾನೆ.
ವೈಶಂಪಾಯನಃ
ಸಾ ತು ಬಾಷ್ಪಕಲಾಂ ವಾಚಂ ನಿಗೃಹ್ಯಾಶ್ರೂಣಿ ಚೈವ ಹ |
ಸುಸಂವೀತಾ ತದಾ ಭೂತ್ವಾ ದೇವವತ್ ಕೃಷ್ಣಮೀಕ್ಷತಿ ॥11॥
ವೈಶಂಪಾಯನ ದ್ರೌಪದಿಯ ಈ ಮಾತನ್ನು ಕೇಳಿಸಿಕೊಂಡ ಉತ್ತರೆಯು ತನ್ನ ಕಣ್ಣೀರನ್ನು ಒರೆಸಿಕೊಂಡಳು. ವಸ್ತ್ರವನ್ನು ಸರಿಪಡಿಸಿಕೊಂಡಳು. ಕೃಷ್ಣನನ್ನು ದೇವರೆಂದೇ ಭಾವಿಸುತ್ತಾ ನೋಡಿದಳು.
ಸಾ ತದಾ ದೂಯಮಾನೇನ ಹೃದಯೇನ ಮನಸ್ವಿನೀ |
ದೃಷ್ಟ್ವಾ ಗೋವಿಂದಮಾಯಾಂತಂ ಕೃಪಣಂ ಪರ್ಯದೇವಯತ್ ॥12॥

ಉತ್ತರೆಯು ದೀನವಾದ ಹೃದಯದಿಂದ ಕೂಡಿದವಳಾಗಿ, ಆಗಮಿಸುತ್ತಿರುವ ಕೃಷ್ಣನನ್ನು ಕಂಡು ಬಿಕ್ಕಿ ಬಿಕ್ಕಿ ಅಳುತ್ತಾ ಇಂತು ನುಡಿದಳು.

ಉತ್ತರಾ

ಪುಂಡರೀಕಾಕ್ಷ ಪಶ್ಯ ತ್ವಂ ಬಾಲಾವಿಹ ವಿನಾಕೃತೌ |
ಅಭಿಮನ್ಯುಂ ಚ ಮಾಂ ಚೈವ ಹತೌ ತುಲ್ಯಂ ಜನಾರ್ದನ ॥13॥

ಉತ್ತರಾ ಪುಂಡರೀಕಾಕ್ಷನೇ, ಜನಾರ್ದನನೇ, ನಾನೂ ಮತ್ತು ನನ್ನ ಪತಿಯು ಇಬ್ಬರೂ ಸಂತಾನರಾಗಿರುವುದನ್ನು ನೋಡು. ಅಭಿಮನ್ಯುವು ಹತನಾಗಿದ್ದಾನೆ. ನಾನು ಬದುಕಿದ್ದೂ, ಹತಳಾಗಿದ್ದೇನೆ. ನಮ್ಮೀರ್ವರನ್ನೂ ನೋಡು.

ವಾರ್ಷ್ಣೇಯ ಮಧುಹನ್ ವೀರ ಶಿರಸಾ ತ್ವಾಂ ಪ್ರಸಾದಯೇ |
ದ್ರೋಣಪುತ್ರಾಸ್ತ್ರನಿರ್ದಗ್ಧಂ ಜೀವಯೈನಂ ಜನಾರ್ದನ ॥14॥

ವೃಷ್ಣಿನಂದನನೇ, ಮಧುಸೂದನನೇ, ವೀರನೇ, ಶಿರಬಾಗಿ ನಮಿಸಿ ನಿನ್ನ ಬಳಿ ಬಿನ್ನವಿಸುತ್ತೇನೆ. ದ್ರೌಣಿಯ ಬ್ರಹ್ಮಾಸ್ತ್ರದಿಂದ ಬೆಂದುಹೋದ ನನ್ನ ಶಿಶುವನ್ನು ಬದುಕಿಸು.

ಯದಿ ಸ್ಮ ಧರ್ಮರಾಜೇನ ಭೀಮಸೇನೇನ ವಾ ಪುನಃ |
ತ್ವಯಾ ವಾ ಪುಂಡರೀಕಾಕ್ಷ ವಾಕ್ಯಮುಕ್ತಮಿದಂ ಭವೇತ್ ॥15॥

ಪುಂಡರೀಕಾಕ್ಷನೇ, ಧರ್ಮರಾಜನಾಗಲೀ, ಭೀಮನಾಗಲೀ, ನೀನಾಗಲೀ ದ್ರೌಣಿಯು ಬಿಟ್ಟ ಹೆಸರಿಗೆ ಮಾತ್ರ ಹೊಡೆಯುವ ಅರ್ಥಾತ್ ಮೃತಶಿಶುವಿಗೆ ಹೊಡೆಯುವ ತಾಯಿಗೆ ಪ್ರಯೋಗಿಸಲ್ಪಡಲಿ.

ಅಜಾತಾನಾಮಿಷೀಕೇಯಂ ಜನಿತ್ರೀಂ ಹಂತ್ವಿತಿ ಪ್ರಭೋ |
ಅಹಮೇವ ವಿನಷ್ಟಾ ಸ್ಯಾಂ ನೇದಮೇವಂ ಗತಂ ಭವೇತ್ ॥16॥

ನಿಜವಾದ ಮಗುವನ್ನು ಹಡೆದ ತಾಯಿಯನ್ನು ಬ್ರಹ್ಮಾಸ್ತ್ರವು ಕೊಲ್ಲುವುದು ಬೇಡ ಎಂದು ಹೇಳಿದ್ದಲ್ಲಿ ಇಂದು ಆ ಬ್ರಹ್ಮಾಸ್ತ್ರವು ನನಗೂ ತಾಗಿ ನಾನೂ ಮರಣವನ್ನು ಹೊಂದಿ ಸುಖವನ್ನು ಹೊಂದುತ್ತಿದ್ದೆನು. ಆದರೆ ನೀವು ಹಿಂದೆ ಇಂತು ನುಡಿಯದೆ ಮಗುವಿನ ತಾಯಿಯನ್ನು ಕೊಲ್ಲುವುದು ಬೇಡ ಎಂದು ಹೇಳಿದ್ದರಿಂದ ಈ ಶವದ ತಾಯಿಯಾದ ನಾನು ಬದುಕಿದ್ದೇನೆ ಎಂಬುದೇ ದುಃಖಕ್ಕೆ ಕಾರಣವಾಗಿದೆ. ಈ ಬ್ರಹ್ಮಾಸ್ತ್ರದಿಂದ ನಾನೇ ಮರಣ ಹೊಂದಿದ್ದಲ್ಲಿ ಈ ಮೃತಪುತ್ರನನ್ನು ನೋಡುವ ದುರ್ಗತಿಯು ನನಗೆ ಬರುತ್ತಿರಲಿಲ್ಲ. ಆದ್ದರಿಂದ ಈ ಮಗನನ್ನು ನೀನು ಬದುಕಿಸಿದಲ್ಲಿ ನಿಜವಾದ ಮಗುವಿಗೆ ತಾಯಿ ಎನಿಸುತ್ತೇನೆ. ಆದ್ದರಿಂದ ನನ್ನ ರಕ್ಷಣೆಯಾದಂತಾಗುತ್ತದೆ. ಇಲ್ಲದಿದ್ದಲ್ಲಿ ಮಗನಂತೂ ಸತ್ತಿದ್ದಾನೆ, ನಾನೂ ಸಾಯುತ್ತೇನೆ.

ಗರ್ಭಸ್ಥಸ್ಯಾಸ್ಯ ಬಾಲಸ್ಯ ಬ್ರಹ್ಮಾಸ್ತ್ರೇಣ ನಿಪಾತನಮ್ |
ಕೃತ್ವಾ ನೃಶಂಸಂ ದುರ್ಬುದ್ಧಿರ್ದ್ರೌಣಿಃ ಕಿಂ ಫಲಮಶ್ನುತೇ ॥17॥

ಗರ್ಭದಲ್ಲಿರುವ ಈ ಬಾಲಕನನ್ನು ಬ್ರಹ್ಮಾಸ್ತ್ರದಿಂದ ಸಂಹರಿಸುವ ಅತ್ಯಂತ ಕ್ರೂರ ಕರ್ಮವನ್ನು ಅಶ್ವತ್ಥಾಮನು ಮಾಡಿರುತ್ತಾನೆ. ಇದರಿಂದ ಅವನಿಗಾದ ಲಾಭವೇನೆಂದು ತಿಳಿಯೆನು!

ಸಾ ತ್ವಾಂ ಪ್ರಣಮ್ಯ ಶಿರಸಾ ಯಾಚೇ ಶತ್ರುನಿಬರ್ಹಣ |
ಪ್ರಾಣಾಂಸ್ತ್ಯಕ್ಷ್ಯಾಮಿ ಗೋವಿಂದ ನಾಯಂ ಜೀವತಿ ವಾ ಯದಿ ॥18॥

ಗೋವಿಂದನೇ, ಶತ್ರುವಿನಾಶಕನಾದ ನಿನ್ನ ಬಳಿ ಶಿರಬಾಗಿ ಬೇಡುತ್ತೇನೆ. ದಯೆಯಿಟ್ಟು ಈ ಶಿಶುವನ್ನು ಬದುಕಿಸಿಕೊಡು. ಒಂದು ವೇಳೆ ಈ ಶಿಶುವನ್ನು ಬದುಕಿಸದಿದ್ದಲ್ಲಿ ನಿಶ್ಚಿತವಾಗಿಯೂ ಪ್ರಾಣತ್ಯಾಗ ಮಾಡುತ್ತೇನೆ.

ಅಸ್ಮಿನ್ ಹಿ ಬಹವಃ ಕೃಷ್ಣ ಯೇ ಮಮಾಸನ್ ಮನೋರಥಾಃ |
ತೇ ದ್ರೋಣಪುತ್ರೇಣ ಹತಾಃ ಕಿಂ ನು ಜೀವಾಮಿ ಕೇಶವ ॥19॥

ಸತ್ಪುರುಷನೇ, ಈ ಮಗನಲ್ಲಿಯೇ ನನ್ನ ಮನಸ್ಸಿನ ಅನೇಕ ಆಸೆಗಳನ್ನು ಇಟ್ಟುಕೊಂಡಿದ್ದೇನೆ. ಆ ಮನೋರಥಗಳೆಲ್ಲವೂ ದ್ರೌಣಿಯ ಅಸ್ತ್ರದಿಂದ ವಿಫಲವಾಗಿವೆ. ಕೇಶವನೇ, ನನ್ನ ಬದುಕಿಗೆ ಏನು ಅರ್ಥವಿದೆ?

ಆಸೀನ್ಮಮ ಮತಿಃ ಕೃಷ್ಣ ಪೂರ್ಣೋತ್ಸಂಗಾ ಜನಾರ್ದನ |
ಅಭಿವಾದಯಿಷ್ಯೇ ಹೃಷ್ಟೇತಿ ತದಿದಂ ವಿತಥಂ ಕೃತಮ್ ॥20॥

ಕೃಷ್ಣನೇ, ಇದು ನನ್ನ ಪುಟ್ಟ ಕಂದ ಎಂದು ನನ್ನ ಕಂಕುಳಿನಲ್ಲಿ ಧರಿಸಿ ಸಂತೋಷದಿಂದ ನಿನ್ನ ಪಾದದ ಬಳಿ ಬಂದು ನಮಸ್ಕರಿಸಿ ನಿನ್ನಿಂದ ಆಶೀರ್ವಾದವನ್ನು ಪಡೆಯಬೇಕೆಂದು ಬಯಸಿದ್ದೆನು. ಆ ನನ್ನ ಆಸೆಯೆಲ್ಲವೂ ಮಣ್ಣುಪಾಲಾಗಿ ಹೋಯಿತು.

ಚಪಲಾಕ್ಷಸ್ಯ ದಾಯಾದೇ ಮೃತೇಽಸ್ಮಿನ್ ಪುರುಷರ್ಷಭ |
ವಿಫಲಾ ಮೇ ಕೃತಾಃ ಕೃಷ್ಣ ಹೃದಿ ಸರ್ವೇ ಮನೋರಥಾಃ ॥21॥

ಪುಂಡರೀಕಾಕ್ಷನೇ, ಕೃಷ್ಣನೇ, ಅತ್ಯಂತ ಆಸೆ-ಆಕಾಂಕ್ಷೆಯಿಂದ ತುಂಬಿದ ಕಣ್ಣುಗಳುಳ್ಳ ನನ್ನ ಪತಿದೇವನ ಈ ಸುತನು ಸತ್ತ ಬಳಿಕ ನನ್ನ ಮನದ ಸಮಸ್ತ ಬಯಕೆಗಳು ನಿಷ್ಫಲಗೊಂಡಿವೆ.

ಚಪಲಾಕ್ಷಃ ಕಿಲಾತೀವ ಪ್ರಿಯಸ್ತೇ ಮಧುಸೂದನ |
ಸುತಮೀಕ್ಷಸ್ವ ತಸ್ಯೈನಂ ಬ್ರಹ್ಮಾಸ್ತ್ರೇಣ ನಿಪಾತಿತಮ್ ॥22॥

ಮಧುಸೂದನನೇ, ಚಪಲಾಕ್ಷನಾದ ನನ್ನ ಪತಿಯು ನಿನಗೆ ಅತ್ಯಂತ ಪ್ರಿಯನಲ್ಲವೇ? ಅಂತಹ ಅಭಿಮನ್ಯುವಿನ ಮಗನು ಬ್ರಹ್ಮಾಸ್ತ್ರ ಪ್ರಹಾರದಿಂದ ಈಗ ಸತ್ತಿರುವ ಪ್ರಸಂಗವನ್ನು ನೋಡು.

ಕೃತಘ್ನೋಽಯಂ ನೃಶಂಸೋಽಯಂ ಯಥಾಸ್ಯ ಜನಕಸ್ತಥಾ |
ಯಃ ಪಾಂಡವೀಂ ಶ್ರಿಯಂ ತ್ಯಕ್ತ್ವಾ ಗತೋಽದ್ಯ ಯಮಸಾದನಮ್ ॥

ಈ ನನ್ನ ಗರ್ಭದಿಂದ ಸಂಜಾತನಾದ ಬಾಲಕನು ತಂದೆಯಂತೆಯೇ ಕೃತಘ್ನನೂ, ಕ್ರೂರಿಯೂ ಆಗಿದ್ದಾನೆ. ತಂದೆಯು ಪಾಂಡವರ

ರಾಜ್ಯಲಕ್ಷ್ಮಿಯನ್ನು ತ್ಯಜಿಸಿ ಯಮಲೋಕಕ್ಕೆ ಹೊರಟಂತೆ ತಂದೆಯ ಮಾರ್ಗವನ್ನೇ ಇವನೂ ಅನುಸರಿಸಿದ್ದಾನೆ.
ಮಯಾ ಚೈತತ್ ಪ್ರತಿಜ್ಞಾತಂ ರಣಮೂರ್ಧನಿ ಕೇಶವ |
ಅಭಿಮನ್ಯೌ ಹತೇ ವೀರ ತ್ವಾಮೇಷ್ಯಾಮ್ಯಚಿರಾದಿವ ॥24॥
ಕೇಶವನೇ, ನಾನು ನನ್ನ ಗಂಡನ ಬಳಿ ಹೀಗೆ ಪ್ರತಿಜ್ಞೆ ಮಾಡಿದ್ದೆನು. ವೀರನೇ, ನೀನೇನಾದರೂ ರಣಾಂಗಣದಲ್ಲಿ ಹತನಾದರೆ ನಾನೂ ನಿನ್ನ ಬಳಿ ಬೇಗ ಬಂದು ಬಿಡುತ್ತೇನೆ ಎಂದು.
ತಚ್ಚ ನಾಕರವಂ ಕೃಷ್ಣ ನೃಶಂಸಾ ಜೀವಿತಪ್ರಿಯಾ |
ಇದಾನೀಮಾಗತಾಂ ತತ್ರ ಕಿಂ ನು ವಕ್ಷ್ಯತಿ ಫಾಲ್ಗುನಿಃ ॥25॥
ಆದರೆ ನಿರ್ದಯಳಾದ, ಬದುಕಿನಲ್ಲಿ ಆಸೆ ಕಟ್ಟಿಕೊಂಡಿರುವ ನಾನು ನನ್ನ ಪತಿಗೆ ಮಾತು ಕೊಟ್ಟ ಪ್ರತಿಜ್ಞೆಯಂತೆ ನಡೆಯಲಿಲ್ಲ. ಈ ಸಮಯದಲ್ಲಿ ಪರಲೋಕಕ್ಕೆ ನಾನು ಹೋದರೆ ಅಲ್ಲಿ ನನ್ನ ಪತಿಯು ನನ್ನನ್ನು ಹಿಯಾಳಿಸುವುದಿಲ್ಲವೇ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಜನ್ಮಗೃಹಪ್ರವೇಶನೇ ಉತ್ತರಾಯಾ ವಚನಪ್ರಕಾರಕಥನಂ ನಾಮ
ಅಷ್ಟಷಷ್ಟಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಅರವತ್ತೊಂಬತ್ತನೆಯ ಅಧ್ಯಾಯ
ಉತ್ತರೆಯ ವಿಲಾಪವನ್ನು ಕೇಳಿಸಿಕೊಂಡ ಕೃಷ್ಣನು ಶಪಥ ಮಾಡುತ್ತಾ ಪರೀಕ್ಷಿತರಾಜನನ್ನು ಸ್ಪರ್ಶ ಮಾಡಿದುದು. ಪರೀಕ್ಷಿತನು ಜೀವಂತನಾದುದು.
ವೈಶಂಪಾಯನಃ
ಏವಂ ವಿಲಪ್ಯ ಕರುಣಂ ಸೋನ್ಮಾದೇವ ತಪಸ್ವಿನೀ |
ಉತ್ತರಾ ನ್ಯಪತದ್ ಭೂಮೌ ಕೃಪಣಾ ಪುತ್ರಗರ್ದ್ಧಿನೀ ॥1॥
ವೈಶಂಪಾಯನ ಪುತ್ರಪ್ರಿಯಳಾದ, ದುಃಖಿತಳಾದ ಉತ್ತರೆಯು ಹೀಗೆ ಕರುಣಾಜನಕವಾದ ಮಾತುಗಳನ್ನು ಹೇಳುತ್ತಲೇ ದುಃಖಿತಳಾಗಿ ಭೂಮಿಯ ಮೇಲೆ ಬಿದ್ದುಬಿಟ್ಟಳು.
ತಾಂ ತು ದೃಷ್ಟ್ವಾ ನಿಪತತಾಂ ಹತಬಂಧುಪರಿಚ್ಛದಾಮ್ |
ಚುಕ್ರೋಶ ಕುಂತೀ ದುಃಖಾರ್ತಾ ಸರ್ವಾಶ್ಚ ಭರತಸ್ತ್ರಿಯಃ ॥2॥
ಪುತ್ರನನ್ನೂ, ಬಂಧುಗಳನ್ನೂ ಕಳೆದುಕೊಂಡಿರುವ ಉತ್ತರೆಯು ಭೂಮಿಯಲ್ಲಿ ಬಿದ್ದಿರುವುದನ್ನು ಕಂಡು ದುಃಖಿತಳಾದ ಕುಂತಿ ಮತ್ತು ಕುರುವಂಶದ ಸ್ತ್ರೀಯರು ಗಟ್ಟಿಯಾಗಿ ಅಳತೊಡಗಿದರು.
ಮುಹೂರ್ತಮಿವ ತದ್ ರಾಜನ್ ಪಾಂಡವಾನಾಂ ನಿವೇಶನಮ್ |
ಅಪ್ರೇಕ್ಷಣೀಯಮಭವದ್ ಆರ್ತಸ್ವರವಿನಾದಿತಮ್ ॥3॥
ಒಂದು ಮುಹೂರ್ತಕಾಲ ಆ ಪಾಂಡವರ ಅರಮನೆಯಲ್ಲಿ ದುಃಖದ ಧ್ವನಿಯೇ ಪ್ರತಿಧ್ವನಿಸುತ್ತಿತ್ತು. ಈ ಪ್ರಸಂಗವು ನೋಡಲು ಅಸಾಧ್ಯವಾಗಿತ್ತು.
ಸಾ ಮುಹೂರ್ತಂ ಚ ರಾಜೇಂದ್ರ ಪುತ್ರಶೋಕಾಭಿಪೀಡಿತಾ |
ಕಶ್ಮಲಾಭಿಹತಾ ವೀರ ವೈರಾಟೀ ತ್ವಭವತ್ ತದಾ ॥4॥
ಪ್ರತಿಲಭ್ಯ ತು ಸಾ ಸಂಜ್ಞಾಮುತ್ತರಾ ಭರತರ್ಷಭ |
ಅಂಕಮಾರೋಪ್ಯ ತಂ ಪುತ್ರಮಿದಂ ವಚನಮಬ್ರವೀತ್ ॥5॥
ಒಂದು ಮುಹೂರ್ತಕಾಲ ಉತ್ತರೆಯು ಮೂರ್ಛಿತಳಾಗಿಯೇ ಬಿದ್ದಿದ್ದಳು. ಬಳಿಕ ಎಚ್ಚರಗೊಂಡು, ತನ್ನ ತೊಡೆಯ ಮೇಲೆ ಮೃತವಾಗಿದ್ದ ಶಿಶುವನ್ನು ಮಲಗಿಸಿಕೊಂಡು ಈ ಮಾತುಗಳನ್ನು ಹೇಳಲಾರಂಭಿಸಿದಳು.
ಉತ್ತರಾ
ಧರ್ಮಜ್ಞಸ್ಯ ಸುತಃ ಸಂಸ್ತ್ವಂ ನ ಧರ್ಮಮವಬುಧ್ಯಸೇ |
ಯಸ್ತ್ವಂ ವೃಷ್ಣಿಪ್ರವೀರಸ್ಯ ಕುರುಷೇ ನಾಭಿವಾದನಮ್ ॥6॥
ಉತ್ತರಾ ಮಗುವೇ, ನೀನು ಧರ್ಮಜ್ಞನಾದ ತಂದೆಯ ಮಗನಾಗಿರುವಿ. ಹೀಗಿದ್ದರೂ ಅಧರ್ಮಕಾರ್ಯವನ್ನು ನೀನು ಮಾಡುತ್ತಿರುವಿ. ನಿನಗೆ ತಿಳಿಯುತ್ತಿಲ್ಲ. ವೃಷ್ಣಿವಂಶಶ್ರೇಷ್ಠನಾದ ಕೃಷ್ಣನು ನಿನ್ನ ಸಮೀಪದಲ್ಲಿಯೇ ಇದ್ದಾನೆ. ಅವನನ್ನು ಧರ್ಮ ಬುದ್ಧಿಯಿಂದ ನಮಸ್ಕರಿಸಬೇಕು. ಏಕೆ ನಮಸ್ಕರಿಸುತ್ತಿಲ್ಲ?
ಪುತ್ರ ಗತ್ವಾ ಮಮ ವಚೋ ಬ್ರೂಯಾಸ್ತ್ವಂ ಪಿತರಂ ತವ |
ದುರ್ಮರಂ ಪ್ರಾಣಿನಾಂ ವೀರ ಕಾಲೇಪ್ರಾಪ್ತೇ ಕಥಂಚನ ॥7॥
ಮಗುವೇ, ನೀನು ಪರಲೋಕಕ್ಕೆ ಸಾಗಿ ನಾನು ಹೇಳುವ ಈ ಮಾತುಗಳನ್ನು ನಿನ್ನ ತಂದೆಯ ಬಳಿ ಹೇಳು. ಪ್ರಾಣನಾಥನೇ, ಕಾಲವು ಸನ್ನಿಹಿತವಾಗದೆ ಪ್ರಾಣಿಗಳಿಗೆ ಮರಣವು ಸಂಭವಿಸುವುದು ಅಸಾಧ್ಯವೇ ಸರಿ.
ಯಾಽಹಂ ತ್ವಯಾ ವಿಹೀನಾಽದ್ಯ ಹೀನಾ ಪುತ್ರೇಣ ಚೈವ ಹ |
ಮರಣಂ ನಾಧಿಗಚ್ಛಾಮಿ ತವ ಸ್ವಸ್ತಿ ನ ಕಿಂಚನ ॥8॥
ಯಾವ ನಾನು ನಿನ್ನಂತಹ ಪತಿಯಿಂದಲೂ ಪರೀಕ್ಷಿತನಂತಹ ಪುತ್ರನಿಂದಲೂ ವಿಹೀನಳಾಗಿದ್ದೇನೆ. ಇಂತಹ ದುಃಖದ ಪ್ರಸಂಗದಲ್ಲಿಯೂ ನಾನು ಸಾಯುತ್ತಿಲ್ಲ ಎಂದರೆ ಅಮಂಗಳೆಯಾದ ನನ್ನಿಂದ ನಿನಗೂ ಕಲ್ಯಾಣವಾಗುತ್ತಿಲ್ಲ ಎಂದೇ ಭಾವಿಸುತ್ತೇನೆ

ಎಂದು ನಿನ್ನ ತಂದೆಯ ಬಳಿ ಹೇಳು.
ಅಥವಾ ಧರ್ಮರಾಜ್ಞಾಹಮನುಜ್ಞಾತಾ ಮಹಾಭುಜ |
ಖಾದಯಿಷ್ಯೇ ವಿಷಂ ತೀಕ್ಷ್ಣಂ ಪ್ರವೇಕ್ಷ್ಯಾಮ್ಯಥವಾಽನಲಮ್ ॥9॥
ಅಥವಾ ಮಹಾಬಾಹುವೇ, ಧರ್ಮರಾಜನಿಂದ ಆಜ್ಞಪ್ತಳಾದ ನಾನು ತೀಕ್ಷ್ಣವಾದ ವಿಷವನ್ನು ತಿನ್ನುತ್ತೇನೆ ಅಥವಾ ಬೆಂಕಿಯಲ್ಲಿ ಹಾರಿಕೊಳ್ಳುತ್ತೇನೆ.
ಅಥವಾ ದುರ್ಮರಂ ತಾತ ಯದಿದಂ ಮೇ ಸಹಸ್ರಧಾ |
ಪತಿಪುತ್ರವಿಹೀನಾಯಾ ಹೃದಯಂ ನಾವದೀರ್ಯತೇ ॥10॥
ಅಥವಾ ಕಠಿಣವಾದ ಮರಣವನ್ನು ಹೊಂದುತ್ತೇನೆ. ಪುತ್ರ-ಪತಿ ವಿಹೀನಳಾದ ನನ್ನ ಹೃದಯವು ಇನ್ನೂ ಸಾವಿರ ಹೋಳಾಗದೆ ಇರುವುದರಿಂದ ದುಃಖಿತಳಾದ ನಾನು ಸಾವಿಗೆ ಬೇಕಾದ ಈ ಉಪಾಯಗಳನ್ನೇ ಮಾಡುತ್ತೇನೆ.
ಉತ್ತಿಷ್ಠ ಪುತ್ರ ಪಶ್ಯೇಮಾಂ ದುಃಖಿತಾಂ ಪ್ರಪಿತಾಮಹೀಮ್ |
ಆರ್ತಾಮುಪಪ್ಲುತಾಂ ದೀನಾಂ ನಿಮಗ್ನಾಂ ಶೋಕಸಾಗರೇ ॥11॥
ಮಗುವೇ ಎದ್ದೇಳು. ದುಃಖಿತಳಾದ, ಆರ್ತಳಾದ, ದೀನಳಾದ, ಶೋಕಸಾಗರದಲ್ಲಿ ಮುಳುಗಿರುವ ನಿನ್ನ ಮುತ್ತಜ್ಜಿಯನ್ನು ನೋಡು.
ಆರ್ಯಾಂ ಚ ಪಶ್ಯ ಪಾಂಚಾಲೀಂ ಸಾತ್ವತೀಂ ಚ ತಪಸ್ವಿನೀಮ್ |
ಮಾಂ ಚ ಪಶ್ಯ ಸುದುಃಖಾರ್ತಾಂ ವ್ಯಾಧವಿದ್ಧಾಂ ಮೃಗೀಮಿವ ॥12॥
ಆರ್ತಳಾದ, ಪೂಜ್ಯಳಾದ ಪಾಂಚಾಲಿಯನ್ನು ನೋಡು. ದುಃಖದಿಂದ ಅಳುತ್ತಿರುವ ಸುಭದ್ರೆಯನ್ನು ನೋಡು. ಬಾಣದಿಂದ ಪೆಟ್ಟುತಿಂದ ಹೆಣ್ಣು ಜಿಂಕೆಯಂತೆ ದುಃಖದಿಂದ ಸಂಕಟಪಡುತ್ತಿರುವ ನನ್ನನ್ನಾದರೂ ನೋಡು.
ಉತ್ತಿಷ್ಠ ಪಶ್ಯ ವದನಂ ಲೋಕನಾಥಸ್ಯ ಪಶ್ಯತಃ |
ಪುಂಡರೀಕವಿಶಾಲಾಕ್ಷಂ ಪುರೇವ ಚಪಲೇಕ್ಷಣಮ್ ॥13॥
ಮಗನೇ, ಎದ್ದೇಳು. ಧೀಮಂತನಾದ, ಲೋಕನಾಥನಾದ ಪುಂಡರೀಕಾಕ್ಷನ ದಿವ್ಯವಾದ ಮುಖವನ್ನು ನೋಡು. ಹಿಂದೆ ಚಂಚಲಾಕ್ಷನಾದ ನನ್ನ ಪತಿಯನ್ನು ನಾನು ನೋಡಿದಂತೆ ನಿನ್ನ ಹತ್ತಿರದಲ್ಲಿರುವ ಕಮಲದ ಎಲೆಯಂತೆ ವಿಶಾಲವಾದ ಕಣ್ಣುಗಳಿಂದ ಕೂಡಿರುವ ಮಾಧವನನ್ನು ನೋಡು.
ವೈಶಂಪಾಯನಃ
ಏವಂ ವಿಲಪತೀಂ ತಾಂ ತು ದೃಷ್ಟ್ವಾ ನಿಪತಿತಾಂ ಪುನಃ |
ಉತ್ತರಾಂ ತಾಂ ಸ್ತ್ರಿಯಃ ಸರ್ವಾಃ ಪುನರುತ್ಥಾಪಯಂತ್ಯುತ ॥14॥
ವೈಶಂಪಾಯನ ಹೀಗೆ ಹೇಳಿಕೊಂಡು ಪುನಃ ಪುನಃ ಅಳುತ್ತಿರುವ ಭೂಮಿಯ ಮೇಲೆ ಬೀಳುತ್ತಿರುವ ಉತ್ತರೆಯನ್ನು ಕಂಡು ಭರತಕುಲದ ಸ್ತ್ರೀಯರೆಲ್ಲರೂ ಪುನಃ ಅವಳನ್ನು ಎತ್ತಿ ಕುಳ್ಳಿರಿಸಿದರು.
ಉತ್ಥಾಯ ಚ ಪುನರ್ಧೈರ್ಯಾತ್ ತದಾ ಮತ್ಸ್ಯಪತೇಃ ಸುತಾ |
ಪ್ರಾಂಚಾಲಿಃ ಪುಂಡರೀಕಾಕ್ಷಂ ಭೂಮಾವೇವಾಭ್ಯವಂದತ ॥15॥
ಮತ್ಸ್ಯದೇಶದ ಅರಸನಾದ, ವಿರಾಟನ ಮಗಳಾದ ಉತ್ತರೆಯು ಎದ್ದು ಕುಳಿತು, ಧೈರ್ಯವನ್ನು ಆಶ್ರಯಿಸಿ, ಕರಗಳನ್ನೆತ್ತಿ ಕುಳಿತಲ್ಲಿಯೇ ವಾಸುದೇವನನ್ನು ನಮಿಸಿದಳು.
ಶ್ರುತ್ವಾ ತಸ್ಯಾಪಿ ವಿಪುಲಂ ವಿಲಾಪಂ ಪುರುಷರ್ಷಭಃ |
ಉಪಸ್ಪೃಶ್ಯ ತತಃ ಕೃಷ್ಣೋ ಬ್ರಹ್ಮಾಸ್ತ್ರಂ ಸಂಜಹಾರ ತತ್ ॥16॥
ಯದುಶ್ರೇಷ್ಠನಾದ ಕೃಷ್ಣನು ಅವಳ ಅಪಾರವಾದ ದುಃಖವನ್ನು ಕೇಳಿಸಿಕೊಂಡು ದಯಾರ್ದಹೃದಯದಿಂದ ಕೂಡಿ, ಆಚಮನ ಮಾಡಿ, ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದ ಪ್ರಭಾವವನ್ನು ಉಪಶಮನಗೊಳಿಸಿದನು.
ಪ್ರತಿಜಜ್ಞೇ ಸ ದಾಶಾರ್ಹಸ್ತಸ್ಯ ಜೀವಿತಮಚ್ಯುತಃ |
ಅಬ್ರವೀಚ್ಚ ವಿಶುದ್ಧಾತ್ಮಾ ಸರ್ವಂ ವಿಶ್ರಾವಯನ್ ಜಗತ್ ॥17॥
ಹಿಂದೆ ದಾಶಾರ್ಹನಾದ ಅಚ್ಯುತನು ಈ ಮಗುವನ್ನು ಬದುಕಿಸುವುದಾಗಿ ಪ್ರತಿಜ್ಞೆಯನ್ನು ಮಾಡಿದ್ದನು. ಅದೇ ಪ್ರತಿಜ್ಞೆಯನ್ನು ಜಗತ್ತೆಲ್ಲವೂ ಕೇಳುವಂತೆ ವಿಶುದ್ಧಾತ್ಮನಾಗಿ, ಗಟ್ಟಿಯಾಗಿ ಮಗದೊಮ್ಮೆ ಉಚ್ಚರಿಸಿದನು.
ಶ್ರೀಭಗವಾನ್
ನ ಬ್ರವೀಮ್ಯುತ್ತರೇ ಮಿಥ್ಯಾ ಸತ್ಯಮೇತದ್ ಭವಿಷ್ಯತಿ |
ಏಷ ಸಂಜೀವಯಾಮ್ಯೇನಂ ಪಶ್ಯತಾಂ ಸರ್ವದೇಹಿನಾಮ್ ॥18॥
ಶ್ರೀಭಗವಾನ್ ಉತ್ತರೆಯೇ, ನಾನೆಂದಿಗೂ ಸುಳ್ಳು ಹೇಳುವವನಲ್ಲ. ನಾನು ಹೇಳಿದ್ದು ನಿಜವೇ ಆಗುತ್ತದೆ. ಇಲ್ಲಿ ಬದುಕಿರುವ ಸಮಸ್ತ ಪ್ರಾಣಿಗಳು ನೋಡುತ್ತಿರುವಾಗಲೇ ಸತ್ತಿರುವ ಈ ಮಗುವನ್ನು ನಾನು ಬದುಕಿಸುತ್ತೇನೆ.
ನೋಕ್ತಪೂರ್ವಂ ಮಯಾ ಮಿಥ್ಯಾ ಸ್ವೈರೇಷ್ವಪಿ ಕದಾಚನ |
ನ ಚ ಯುದ್ಧಾತ್ ಪರಾವೃತ್ತಸ್ತಥಾ ಸಂಜೀವಯಾಮ್ಯಹಮ್ ॥19॥
ನಾನು ಸ್ವೇಚ್ಛೆಯಿಂದ ಆಟವಾಡುವಾಗಲೂ ತಮಾಷೆಗಾಗಿ ಹೇಳಿದ ಮಾತುಗಳು ಸುಳ್ಳಾಗಿರುವುದಿಲ್ಲ. ಎಂದೂ ಸುಳ್ಳು ಹೇಳಿರುವವನಲ್ಲ. ಯುದ್ಧದಿಂದ ಹಿಮ್ಮೆಟ್ಟಿದವನೂ ಅಲ್ಲ. ನನ್ನ ಸತ್ಯನಿಷ್ಠೆ ಮತ್ತು ಯುದ್ಧದಿಂದ ಹಿಂದಿರುಗದೆ ಇರುವಿಕೆ ಈ ಎರಡು ಶ್ರೇಷ್ಠ ಧರ್ಮಗಳ ಫಲವಾಗಿ ಈ ಶಿಶುವು ಬದುಕುವಂತಾಗಲಿ.
ಯಥಾ ಮೇ ದಯಿತೋ ಧರ್ಮೋ ಬ್ರಾಹ್ಮಣಾಶ್ಚ ವಿಶೇಷತಃ |
ಅಭಿಮನ್ಯೋಃ ಸುತೋ ಜಾತೋ ಮೃತೋ ಜೀವತ್ವಯಂ ತಥಾ ॥20॥

ನನಗೆ ಧರ್ಮವು ಬಹಳ ಪ್ರಿಯವಾಗಿದೆ. ಅದರಲ್ಲಿಯೂ ಬ್ರಾಹ್ಮಣರು ನನಗೆ ಅತ್ಯಂತ ಪ್ರೀತಿಪಾತ್ರರು. ಈ ಮಾತು ಸತ್ಯವಾದಲ್ಲಿ ಹುಟ್ಟಿರುವ ಈ ಅಭಿಮನ್ಯುವಿನ ಮಗನು ಬದುಕುವಂತಾಗಲಿ.
ಯಥಾऽಹಂ ನಾಭಿಜಾನಾಮಿ ವಿಜಯೇ ನ ಕದಾಚನ |
ವಿರೋಧಂ ತೇನ ಸತ್ಯೇನ ಮೃತೋ ಜೀವತ್ವಯಂ ಶಿಶುಃ ॥21॥
ನಾನು ಎಂದಿಗೂ ಅರ್ಜುನನ ವಿಷಯದಲ್ಲಿ ವಿರೋಧವನ್ನೇ ಮನಸ್ಸಿನಲ್ಲಿಯೂ ಭಾವಿಸಿಲ್ಲ. ಈ ಮಾತು ಸತ್ಯವಾಗಿದ್ದಲ್ಲಿ ಈ ಶಿಶುವು ಬದುಕುವಂತಾಗಲಿ.
ತಥಾ ಸತ್ಯಂ ಚ ಧರ್ಮಶ್ಚ ಮಯಾ ನಿತ್ಯಂ ಪ್ರತಿಷ್ಠಿತೌ |
ತಥಾ ಮೃತಃ ಶಿಶುರಯಂ ಜೀವತ್ವದ್ಯಾಭಿಮನ್ಯುಜಃ ॥22॥
ನನ್ನಲ್ಲಿ ಸತ್ಯ-ಧರ್ಮಗಳು ನಿರಂತರ ನೆಲೆಗೊಂಡಿವೆ. ಈ ಮಾತು ಸತ್ಯವಾದಲ್ಲಿ ಅಭಿಮನ್ಯುವಿನ ಮೃತಶಿಶುವು ಜೀವಂತವಾಗಲಿ.
ಯಥಾ ಕಂಸಶ್ಚ ಕೇಶೀ ಚ ಧರ್ಮೇಣ ನಿಹತೌ ಮಯಾ |
ತೇನ ಸತ್ಯೇನ ಬಾಲೋऽಯಂ ಪುನರುಜ್ಜೀವಯಾಮಿ ಹ ॥23॥
ಕಂಸನನ್ನೂ, ಕೇಶಿ ಎಂಬ ದೈತ್ಯನನ್ನೂ ನಾನು ಕ್ಷಾತ್ರಧರ್ಮದಿಂದಲೇ ಸಂಹರಿಸಿದ್ದೇನೆ. ಈ ಮಾತು ಸತ್ಯವಾದಲ್ಲಿ ಅದರ ಪ್ರಭಾವದಿಂದ ಶಿಶುವು ಜೀವಂತವಾಗಲಿ.
ಯದಿ ಮೇ ಬ್ರಹ್ಮಚರ್ಯಂ ಸ್ಯಾತ್ ಯ ತ್ವಂ ಚ ಮಯಿ ತಿಷ್ಠತಿ |
ಅವ್ಯಾಹತಂ ಮಮೈಶ್ವರ್ಯಂ ತೇನ ಜೀವತು ಬಾಲಕಃ ॥24॥
ನಾನು ಗೋಪಿಯರ ಸಂಗ, ಅನೇಕ ಸ್ತ್ರೀಯರ ಸಂಗವನ್ನು ಮಾಡಿದ್ದರೂ ಬ್ರಹ್ಮಚರ್ಯನಿಷ್ಠನಾಗಿದ್ದೇನೆ. ಈ ನನ್ನ ಮಾತು ಸತ್ಯವಾದಲ್ಲಿ, ಎಂದೂ ನಾಶವಾಗದ ಐಶ್ವರ್ಯವು ಕೃಷ್ಣನಲ್ಲಿಯೇ ಇದೆ ಎಂಬ ಮಾತು ಸತ್ಯವಾದಲ್ಲಿ, ಅದರಿಂದ ಈ ಮಗುವು ಬದುಕುವಂತಾಗಲಿ.
ವೈಶಂಪಾಯನಃ
ಇತ್ಯುಕತ್ವ ವಾಸುದೇವೋऽಥ ತಂ ಬಾಲಂ ಭರತರ್ಷಭ |
ಹಸ್ತೇನ ಕಮಲಾಭೇನ ಬ್ರಹ್ಮರುದ್ರಾರ್ಚಿತೇನ ಚ ॥25॥
ಪಸ್ಪರ್ಶ ಪುಂಡರೀಕಾಕ್ಷ ಆಪಾದತಲಮಸ್ತಕಮ್ ॥26॥
ವೈಶಂಪಾಯನ ಈ ರೀತಿಯಾಗಿ ವಾಸುದೇವನು ಹೇಳಿ, ಬ್ರಹ್ಮ- ರುದ್ರಾದಿಗಳಿಂದ ಅರ್ಚಿತನಾದ ಕಮಲಸದೃಶವಾದ, ತನ್ನ ಕೈಗಳಿಂದ ಪುಂಡರೀಕಾಕ್ಷನು ಆ ಶಿಶುವಿನ ಪಾದದಿಂದ ಆರಂಭಿಸಿ ತಲೆಯ ತನಕ ದೇಹವನ್ನು ಸ್ಪರ್ಶ ಮಾಡಿದನು.
ಸ್ಪೃಷ್ಟಮಾತ್ರಸ್ತು ಕೃಷ್ಣೇನ ಸ ಬಾಲೋ ಅಭಿಮನ್ಯುಜಃ |
ಶನೈಃ ಶನೈರ್ಮಹಾರಾಜ ಪ್ರಾಪದ್ಯತ ಸ ಚೇತನಾಮ್ ॥27॥
ಕೃಷ್ಣನ ಕೇವಲ ಹಸ್ತಸ್ಪರ್ಶಮಾತ್ರದಿಂದಲೆ ಅಭಿಮನ್ಯುವಿನ ಮಗನು ಮೆಲ್ಲ ಮೆಲ್ಲನೆ ಚೈತನ್ಯವನ್ನು ಹೊಂದಲು ಆರಂಭಿಸಿದನು.
ಶನೈಃ ಶನೈರ್ಮಹಾರಾಜ ಪ್ರಾಸ್ಪಂದತ ಸಚೇತನಃ ॥28॥
ಮಹಾರಾಜನೇ, ಚೈತನ್ಯವನ್ನು ಹೊಂದುತ್ತಾ ಮೆಲ್ಲಮೆಲ್ಲನೆ ಜಗತ್ತಿಗೆ ಸ್ಪಂದಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಮೃತಪರೀಕ್ಷಿತ್ ಸಂಜೀವನಪ್ರಕಾರಕಥನಂ ನಾಮ ಏಕೋನಸಪ್ತತಿತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಅರವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತನೆಯ ಅಧ್ಯಾಯ
ಕೃಷ್ಣನು ಅಭಿಮನ್ಯುವಿನ ಮಗನಿಗೆ ನಾಮಕರಣವನ್ನು ಮಾಡಿದುದು.
ಈ ಮಧ್ಯದಲ್ಲಿ ಯುಧಿಷ್ಠಿರಾದಿಗಳು ಸ್ವರ್ಣದ ಭಾರವನ್ನು ಹೊತ್ತುಕೊಂಡು ಹಸ್ತಿನಾಪಟ್ಟಣದ ಬಳಿಗೆ ಆಗಮಿಸಿದುದು. ಅವರನ್ನು ಕೃಷ್ಣನನ್ನು
ಮುಂದಿಟ್ಟುಕೊಂಡು ನಾಗರಿಕರು ಸ್ವಾಗತಿಸಿದುದು.
ವೈಶಂಪಾಯನಃ
ಬ್ರಹ್ಮಾಸ್ತ್ರಂ ತು ಮಹಾರಾಜ ಕೃಷ್ಣೇನ ಪ್ರತಿಸಂಹೃತಮ್ |
ತದಾ ತದ್ವೇಶ್ಮ ತೇ ಪಿತ್ರಾ ಸರ್ವತೋऽಪಿ ವಿದೀಪಿತಮ್ ॥1॥
ವೈಶಂಪಾಯನ ಜನಮೇಜಯನೇ, ಶ್ರೀಕೃಷ್ಣನು ಬ್ರಹ್ಮಾಸ್ತ್ರವನ್ನು ಉಪಶಮನಗೊಳಿಸಿದ ಕೂಡಲೇ ಪ್ರಸೂತಿಗೃಹವು ನಿನ್ನ ತಂದೆಯ ತೇಜಸ್ಸಿನಿಂದ ಬೆಳಗಲಾರಂಭಿಸಿತು.
ತತೋ ರಕ್ಷಾಂಸಿ ಸರ್ವಾಣಿ ನೇಶುಸ್ತ್ಯಕತ್ವ ಗೃಹಂ ತು ತತ್ |
ಅಂತರಿಕ್ಷೇ ಚ ವಾಗಾಸೀತ್ ಸಾಧು ಕೇಶವ ಸಾಧ್ವಿತಿ ॥2॥
ಅವನ ಉತ್ಪತ್ತಿಯ ಪ್ರಭಾವದಿಂದ, ಅವನನ್ನು ಕೊಲ್ಲಲು ಆಗಮಿಸಿರುವ ರಾಕ್ಷಸರೆಲ್ಲರೂ ಅರಮನೆಯನ್ನು ಬಿಟ್ಟು ಹೊರಟು ಹೋದರು. ಅಂತರಿಕ್ಷದಿಂದ, ಕೇಶವನೇ ಸಾಧು-ಸಾಧು ಎಂಬ ಮಾತು ಕೇಳಿಸಿದವು.
ತದಸ್ತ್ರಂ ಜ್ವಲಿತಂ ಚಾಪಿ ಪಿತಾಮಹಮಗಾತ್ ತದಾ |
ತತಃ ಪ್ರಾಣಾನ್ ಪುನರ್ಲೇಭೇ ಪಿತಾ ತವ ಜನೇಶ್ವರ ॥3॥
ಪ್ರಜ್ವಲಿಸುತ್ತಿರುವ ಆ ಬ್ರಹ್ಮಾಸ್ತ್ರವು ಚತುರ್ಮುಖ ಬ್ರಹ್ಮನ ಬಳಿಯೇ ಹೊರಟು ಹೋಯಿತು. ಹೀಗೆ ನಿನ್ನ ತಂದೆಯು ಮರುಜೀವವನ್ನು

ಪಡೆದುಕೊಂಡನು.
ವ್ಯಚೇಷ್ಟತ ಚ ಬಾಲೋऽಸೌ ಯಥೋಕ್ತಂ ಶೌರಿಣಾ ತದಾ |
ಬಭೂವುರ್ಮುದಿತಾ ರಾಜನ್ ತತಸ್ತಾ ಭರತಸ್ತ್ರಿಯಃ ॥4॥
ಕೃಷ್ಣನ ಮಾತಿಗನುಗುಣವಾಗಿ ಅಭಿಮನ್ಯುವಿನ ಮಗುವು ಉತ್ಸಾಹ ಮತ್ತು ಬಲಗಳಿಗೆ ಅನುಸಾರವಾಗಿ ಆಟವಾಡಲು ಆರಂಭಿಸಿತು. ಭರತವಂಶದ ಸ್ತ್ರೀಯರೆಲ್ಲರಿಗೂ ಅವನ ಚೇಷ್ಟೆಗಳು ಸಂತೋಷವನ್ನು ನೀಡಿದವು.
ಬ್ರಾಹ್ಮಣಾ ವಾಚಯಾಮಾಸುರ್ಗೋವಿಂದಸ್ಯ ಚ ಶಾಸನಾತ್ |
ತತಸ್ತಾ ಮುದಿತಾಃ ಸರ್ವಾಃ ಪ್ರಶಶಂಸುರ್ಜನಾರ್ದನಮ್ ॥5॥
ಭರತವಂಶದವರೆಲ್ಲರೂ ಗೋವಿಂದನ ಆದೇಶದಂತೆ ಬ್ರಾಹ್ಮಣರಿಂದ ಸ್ವಸ್ತಿವಾಚನಗಳನ್ನು ಮಾಡಿಸಿದರು. ಪ್ರತಿಯೊಬ್ಬರು ಸಂತುಷ್ಟರಾಗಿ ಜನಾರ್ದನನನ್ನು ಪ್ರಶಂಸಿಸಿದರು.
ಸ್ತ್ರಿಯೋ ಭರತಸಿಂಹಾನಾಂ ನಾವಂ ದೃಷ್ಟ್ವೇವ ಪಾರಗಾಃ ॥6॥
ಕುಂತೀ ದ್ರುಪದಪುತ್ರೀ ಚ ಸುಭದ್ರಾ ಚೋತ್ತರಾ ತಥಾ |
ಸ್ತ್ರಿಯಶ್ಚಾನ್ಯಾ ನೃಸಿಂಹಾನಾಂ ಬಭೂವುರ್ಹೃಷ್ಟಮಾನಸಾಃ ॥7॥
ನದಿಯನ್ನು ದಾಟಲು ಬಯಸುವ ವ್ಯಕ್ತಿಗಳು ದೋಣಿಯನ್ನು ಕಂಡಾಗ ಸಂತೋಷ ಹೊಂದುವಂತೆ ಭರತಶ್ರೇಷ್ಠರಾದ ಪಾಂಡವ ಪತ್ನಿಯರೂ, ಕುಂತೀ, ದ್ರೌಪದಿ, ಸುಭದ್ರೆ, ಉತ್ತರೆ ಮೊದಲಾದವರು ವಂಶೋದ್ಧಾರಕನಾದ ಪುತ್ರನನ್ನು ನೋಡಿ ಅತ್ಯಂತ ಸಂತುಷ್ಟ ಮನಸ್ಕರಾದರು.
ತತ್ರ ಮಲ್ಲಾ ನಟಾ ಝಲ್ಲಾ ರಂಜಿಕಾಃ ಸೌಖಶಾಯಿಕಾಃ |
ಸೂತಮಾಗಧಸಂಘಾಶ್ಚಾಪ್ಯಸ್ತುವಂಸ್ತಂ ಜನಾರ್ದನಮ್ ॥8॥
ಬಳಿಕ ಮಲ್ಲರು, ನಾಟ್ಯವಾಡುವವರು, ಪ್ರಾಣಿಗಳಂತೆ ಶಬ್ದವನ್ನು ಮಾಡುವವರು (ಮಿಮಿಕ್ರಿ), ಅಲಂಕಾರ ಮಾಡುವವರು, ಪಾದವನ್ನು ಒತ್ತುವ ಪರಿಚಾರಕರು, ಸೂತ- ಮಾಗಧರು ಕುರುವಂಶದ ಸ್ತುತಿ ಮತ್ತು ಆಶೀರ್ವಾದಗಳೊಂದಿಗೆ ಕೃಷ್ಣನನ್ನು ಸ್ತೋತ್ರ ಮಾಡಿದರು.
ಕುರುವಂಶಸ್ತವಾರ್ಥಾಭಿರಾಶೀರ್ಭಿರ್ಭರತರ್ಷಭ |
ಸಭಾಜಯತ ಸಂಹೃಷ್ಟೋ ಮಹಾರಾಜ ಮಹಾಜನಃ ॥9॥
ಕುರುವಂಶವನ್ನು ಸ್ತುತಿಗಳ ಮೂಲಕ ಆಶೀರ್ವದಿಸುತ್ತಾ ಮಹಾಜನರೆಲ್ಲರೂ ಸಂಹೃಷ್ಟ ಮನಸ್ಕರಾಗಿ ಅಲ್ಲಿ ಕಂಗೊಳಿಸಿದರು.
ಉತ್ಥಾಯ ತು ಯಥಾಕಾಲಮುತ್ತರಾ ಯದುನಂದನಮ್ |
ಅಭ್ಯವಾದಯತ ಪ್ರೀತಾ ಸಹ ಪುತ್ರೇಣ ಭಾರತ ॥10॥
ಯದುನಂದನನನ್ನು ಉತ್ತರೆಯು ತನ್ನ ಕಂಕುಳಿನಲ್ಲಿ ಮಗುವನ್ನು ಹೊತ್ತುಕೊಂಡು ಎದ್ದುಬಂದು ನಮಸ್ಕರಿಸಿದಳು.
ತಸ್ಯೈ ಕೃಷ್ಣೋ ದದೌ ಪ್ರೀತೋ ಬಹುರತ್ನಂ ವಿಶೇಷವಿತ್ |
ತಥೈವ ವೃಷ್ಣಿಶಾರ್ದೂಲೋ ನಾಮ ಚಾಸ್ಯಾಕರೋತ್ ಪ್ರಭುಃ ॥11॥
ಸರ್ವಶಕ್ತನಾದ ಶ್ರೀಕೃಷ್ಣನು ಆ ಉತ್ತರೆಗೆ ಪ್ರೀತಿಯಿಂದ ವಿಶೇಷವಾದ ಬಹುರತ್ನಗಳನ್ನುು ನೀಡಿದನು. ವೃಷ್ಣಿಶಾರ್ದೂಲನಾದ ಕೃಷ್ಣನು ಉತ್ತರೆಯ ಮಗನಿಗೆ ಯೋಗ್ಯವಾದ ಹೆಸರನ್ನೂ ಇಟ್ಟನು.
ಪಿತುಸ್ತವ ಮಹಾರಾಜ ಸತ್ಯಸಂಧೋ ಜನಾರ್ದನಃ ॥12॥
ಮಹಾರಾಜನೇ, ಸತ್ಯಸಂಧನಾದ ಜನಾರ್ದನನು ನಿನ್ನ ತಂದೆಗೆ ನಾಮಕರಣವನ್ನು ಮಾಡಿರುತ್ತಾನೆ.
ಪರಿಕ್ಷೀಣೇ ಕುಲೇ ಯಸ್ಮಾತ್ ಜಾತೋऽಯಮಭಿಮನ್ಯುಜಃ |
ಪರೀಕ್ಷಿದಿತಿ ನಾಮಾಸ್ಯ ಭವತ್ವಿತ್ಯಬ್ರವೀತ್ ತದಾ ॥13॥
ಕುರುಕುಲವು ನಾಶವೇ ಹೊಂದುತ್ತಿರುವಾಗ ಯಾವ ಈ ಶಿಶುವು ಅಭಿಮನ್ಯುವಿನ ಮೂಲಕ ಜನಿಸಿದೆಯೋ ಆದ್ದರಿಂದ ಅರ್ಥವತ್ತಾಗಿ ಈ ಶಿಶುವಿಗೆ ಪರೀಕ್ಷಿತ ಎಂಬ ಹೆಸರೇ ಬರಲಿ ಎಂದು ಕೃಷ್ಣನು ನುಡಿದನು.
ಸೋऽವರ್ಧತ ಯಥಾಕಾಲಂ ಪಿತಾ ತವ ನರಾಧಿಪ |
ಮನಃಪ್ರಹ್ಲಾದನಶ್ಚಾಸೀತ್ ಸರ್ವಲೋಕಸ್ಯ ಭಾರತ ॥14॥
ನರಾಧಿಪನೇ, ನಿನ್ನ ತಂದೆಯು ಕಾಲಕ್ಕನುಗುಣವಾದ ಬೆಳವಣಿಗೆಯನ್ನು ಹೊಂದಿದನು. ಅವನ ಬೆಳವಣಿಗೆಯಿಂದ ಭರತವಂಶೀಯರೆಲ್ಲರ, ಪ್ರಜೆಗಳೆಲ್ಲರ ಮನಸ್ಸಿಗೆ ಅತ್ಯಂತ ಸಂತೋಷವಾಯಿತು.
ಮಾಸಂ ಜಾತಸ್ತು ತೇ ವೀರ ಪಿತಾ ಭವತಿ ಭಾರತ |
ಅಥಾಜಗ್ಮುಃ ಸುಬಹುಲಂ ರತ್ನಮಾದಾಯ ಪಾಂಡವಾಃ ॥15॥
ಜನಮೇಜಯನೇ, ನಿನ್ನ ತಂದೆಗೆ ಒಂದು ತಿಂಗಳು ಪೂರ್ಣವಾಗುತ್ತಿರಲು ಹಿಮವದ್ ಪರ್ವತಕ್ಕೆ ರತ್ನಗಳನ್ನು ಹೊತ್ತು ತರಲು ಹೋದ ಪಾಂಡವರೆಲ್ಲರೂ ಆಗಮಿಸಿದರು.
ಮೇರುಕೂಟನಿಭಾನ್ ಭಾಂಡಾನ್ ಕಲಶಾನ್ ಭಾಜನಾನಿ ಚ |
ಕೃತಾಕೃತಂ ಮಹದ್ರೈಮಮಾದಾಯ ಪುರುಷೋತ್ತಮಾಃ ॥16॥
ಮೇರುಪರ್ವತದ ಶಿಖರಕ್ಕೆ ಸದೃಶವಾದ ಭಾಂಡಗಳನ್ನು, ಕಲಶಗಳನ್ನು, ಪಾತ್ರೆಗಳನ್ನು, ಬಂಗಾರದ ಗಟ್ಟಿಗಳನ್ನು ಪುರುಷಶ್ರೇಷ್ಠರು ತೆಗೆದುಕೊಂಡು ಬರುತ್ತಿದ್ದರು.
ಭಾರಾರ್ತೈರ್ವಾಹನೈಸ್ತತ್ರ ಗೋರುತೇ ಗೋರುತೇ ಪಥಿ |
ನಿವಸಂತೋ ಯಯುರ್ದೇವಂ ಸ್ಮರಂತಃ ಪರಮೇಷ್ಠಿನಮ್ ॥17॥

ಆ ಬಂಗಾರದ ಭಾರಗಳಿಂದ ದುಃಖಿತವಾದ ಒಂಟೆ, ಕುದುರೆಗಳಿಂದ ಕೂಡಿರುವ ಆ ಸೈನ್ಯವು ಗೂಳಿಯು ಕೂಗುವ ಧ್ವನಿಯು ಮುಕ್ತಾಯವಾಗುವಷ್ಟು ಸ್ಥಳದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಾ, ಭಗವಂತನನ್ನು ಸ್ಮರಿಸುತ್ತಾ ಆಗಮಿಸುತ್ತಿತ್ತು.
ನಾಸೀತ್ ತತ್ರ ನರಃ ಕಶ್ಚಿದ್ ಅಭಾರಾರ್ತೋ ನೃಪಂ ವಿನಾ |
ಭೀಮಾದಯೋಽಪಿ ಯಜ್ಞಾರ್ಥಂ ವಹಂತೇ ಕಿಂ ಪುನರ್ಜನಾಃ ॥18॥
ಧರ್ಮರಾಜನನ್ನು ಬಿಟ್ಟು ಬಂಗಾರವನ್ನು ಹೊರದೆ, ದುಃಖಿತರಾಗದೆ ಇರುವ ಒಬ್ಬ ವ್ಯಕ್ತಿಯೂ ಆ ಸೇನೆಯಲ್ಲಿರಲಿಲ್ಲ. ಭೀಮಸೇನನೇ ಮೊದಲಾದವರು ಯಜ್ಞಕ್ಕಾಗಿ ಪದಾರ್ಥಗಳನ್ನು ಹೊತ್ತು ತರುತ್ತಿರಲು ಜನರ ಬಗ್ಗೆ ಹೇಳುವುದೇನು?
ತಾನ್ ಸಮೀಪಗತಾನ್ ದೃಷ್ಟ್ವಾ ನಿರ್ಯಯುರ್ವೃಷ್ಣಿಪುಂಗವಾಃ |
ಅಲಂಚಕ್ರುಶ್ಚ ಮಾಲ್ಯೌಘೈರ್ನಗರಂ ನಾಗಸಾಹ್ವಯಮ್ ॥19॥
ಆ ಬೃಹತ್ತಾದ ಸೇನೆಯು ನಗರದ ಸಮೀಪಕ್ಕೆ ಆಗಮಿಸುತ್ತಿರುವುದನ್ನು ಕಂಡು ವೃಷ್ಣಿಪುಂಗವರೆಲ್ಲರೂ ಅವರನ್ನು ಎದುರುಗೊಳ್ಳಲು ಹೊರಟರು. ಅನೇಕ ಮಾಲೆಗಳಿಂದ ಹಸ್ತಿನಾವತಿಯನ್ನು ಅಲಂಕರಿಸಿದರು.
ಪತಾಕಾಭಿರ್ವಿಚಿತ್ರಾಭಿರ್ಧ್ವಜೈಶ್ಚ ವಿವಿಧೈರಪಿ |
ವೇಶ್ಮಾನಿ ಸಮಲಂಚಕ್ರುಃ ಪೌರಾಶ್ಚಾಪಿ ನರಾಧಿಪ ॥20॥
ಚಿತ್ರ-ವಿಚಿತ್ರವಾದ ಪತಾಕೆಗಳಿಂದ, ನಾನಾವಿಧವಾದ ಧ್ವಜಗಳಿಂದ ಮನೆಗಳನ್ನು ಅಲಂಕರಿಸಿದರು. ಸ್ವತಃ ತಮ್ಮನ್ನೂ ಅಲಂಕರಿಸಿಕೊಂಡರು.
ದೇವತಾಯತನಾನಾಂ ಚ ಪೂಜಾ ಬಹುವಿಧಾಸ್ತಥಾ |
ಸಂದಿದೇಶಾಥ ವಿದುರಃ ಪಾಂಡುಪುತ್ರಪ್ರಿಯೇಪ್ಸಯಾ ॥21॥
ದೇವಾಲಯಗಳಲ್ಲಿ ಬಗೆ ಬಗೆಯ ಪೂಜೆಗಳನ್ನು ಸಲ್ಲಿಸಿದರು. ವಿದುರನು ಪಾಂಡುವಿನ ಮಕ್ಕಳಿಗೆ ಪ್ರಿಯವನ್ನುಂಟು ಮಾಡುವ ನಿಮಿತ್ತದಿಂದ ಎಲ್ಲೆಡೆಯೂ ದೇವತಾರಾಧನೆಯನ್ನು ಮಾಡಲು ಆದೇಶಿಸಿದನು.
ರಾಜಮಾರ್ಗಾಶ್ಚ ತತ್ರಾಸನ್ ಸುಮನೋಭಿರಲಂಕೃತಾಃ |
ಶುಶುಭೇ ತತ್ಪುರಂ ಚಾಪಿ ಸಮುದ್ರೌಘನಿಭಸ್ವನಮ್ ॥22॥
ಶ್ರೇಷ್ಠವಾದ ಪುಷ್ಪಗಳಿಂದಲೂ, ಸುಗಂಧಯುಕ್ತವಾದ ಮಾಲೆಗಳಿಂದಲೂ ರಾಜಮಾರ್ಗವು ಅಲಂಕೃತವಾಗಿತ್ತು. ಆ ಪಟ್ಟಣದಲ್ಲಿ ಬೃಹತ್ತಾದ ಸೇನೆಯು ಆಗಮಿಸುತ್ತಿರಲು ಸಮುದ್ರದ ಬೋರ್ಗರೆಯುವ ಶಬ್ದಕ್ಕೆ ಸದೃಶವಾದ ಶಬ್ದವು ಕೇಳಿ ಬರುತ್ತಿತ್ತು.
ನರ್ತಕೈಶ್ಚಾಪಿ ನೃತ್ಯದ್ಭಿರ್ಗಾಯಕಾನಾಂ ಚ ನಿಃಸ್ವನೈಃ |
ಆಸೀದ್ವೈಶ್ರವಣಸ್ಯೇವ ನಿವಾಸಸ್ತತ್ ಪುರಂ ತದಾ ॥23॥
ನರ್ತಕರು, ನೃತ್ಯ ಮಾಡುವ ಶಬ್ದಗಳು, ಗಾಯಕರು ಹಾಡು ಹೇಳುವ ಶಬ್ದಗಳು, ಇವೆಲ್ಲದರಿಂದ ದೂರದಿಂದ ನೋಡಿದರೆ ಹಸ್ತಿನಾವತಿಯು ಕುಬೇರನ ಅಲಕಾಪಟ್ಟಣಕ್ಕೆ ಸಮಾನವಾಗಿ ಕಂಡುಬರುತ್ತಿತ್ತು.
ವಂದಿಭಿಶ್ಚ ನರೈ ರಾಜನ್ ಸ್ತ್ರೀಸಹಾಯೈಃ ಸಹಸ್ರಶಃ |
ತತ್ರ ತತ್ರ ವಿವಿಕ್ತೇಷು ಸಮಂತಾದುಪಶೋಭಿತಮ್ ॥24॥
ಸ್ತ್ರೀಯರಿಂದ, ಸಾವಿರಾರು ಸಂಖ್ಯೆಯಲ್ಲಿ ಕೂಡಿರುವ ವಂದಿ-ಮಾಗಧರಿಂದ ಆ ಪಟ್ಟಣವು ಅಲಂಕೃತವಾಗಿತ್ತು. ಹಸ್ತಿನಾಪುರವು ಶೋಭಾಯಮಾನವಾಗಿ ಎಲ್ಲೆಡೆಯೂ ಕಾಣುತ್ತಿತ್ತು.
ಪತಾಕಾ ಧೂಯಮಾನಾಶ್ಚ ಸಮಂತಾನ್ಮಾತರಿಶ್ವನಾ |
ಅದರ್ಶಯನ್ನಿವ ತದಾ ಕುರೂನ್ ವೈ ದಕ್ಷಿಣೋತ್ತರಾನ್ ॥25॥
ಅಲ್ಲಲ್ಲಿ ಪತಾಕೆಗಳು ಗಾಳಿ ಬೀಸುವುದರಿಂದ ಎಲ್ಲೆಡೆಯೂ ಹಾರಾಡುತ್ತಿದ್ದವು. ದಕ್ಷಿಣ ಮತ್ತು ಉತ್ತರ ಕುರುದೇಶಗಳ ಶೋಭೆಯನ್ನು ಆ ಹಸ್ತಿನಾಪಟ್ಟಣದಲ್ಲಿಯೇ ನೋಡಬಹುದಾಗಿತ್ತು.
ಅಘೋಷಯಂಸ್ತದಾ ಚಾಪಿ ಪುರುಷಾ ರಾಜಮಾರ್ಗತಃ |
ಸರ್ವರಾತ್ರವಿಹಾರೋಽದ್ಯ ರತ್ನಾಭರಣಲಕ್ಷಣಃ ॥26॥
ರಾಜಕಾರ್ಯದಲ್ಲಿ ಸತ್ಪರರಾದ ಪುರುಷರು ಇಂದು ರಾಜ್ಯೋತ್ಸವವಾಗಿದೆ. ಸ್ತ್ರೀ- ಪುರುಷರೆಲ್ಲರೂ ಉತ್ತಮೋತ್ತಮವಾದ ರತ್ನಾಭರಣವನ್ನು ಧರಿಸಿಕೊಂಡು, ಬಹು ಮೌಲ್ಯವಾದ ಆಭರಣಗಳನ್ನು ಧರಿಸಿ ಈ ರಾಷ್ಟ್ರೋತ್ಸವದಲ್ಲಿ ಭಾಗವಹಿಸಿ ಎಂದು ಎಲ್ಲ ಕಡೆಯೂ ಸಾರುತ್ತಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಹಸ್ತಿನಾಪುರಿ ಶೃಂಗಾರಕಥನಂ ನಾಮ ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 30ನೇ ಅಧ್ಯಾಯ
ತತಃ ಕೃಷ್ಣಾಭ್ಯನುಜ್ಞಾತಾಃ ಪಾರಾಶರ್ಯಸದಸ್ಯಕಾಃ |
ಆರೇಭಿರೇಽಶ್ವಮೇಧಂ ತೇ ಮುನಿಭಿರ್ಬ್ರಹ್ಮವಾದಿಭಿಃ ॥
ಬಳಿಕ ಪಾಂಡವರು ಶ್ರೀಕೃಷ್ಣನಿಂದ ಅನುಜ್ಞೆಯನ್ನು ಪಡೆದು ವೇದವ್ಯಾಸರನ್ನು ಸದಸ್ಯರನ್ನಾಗಿ ಮಾಡಿಕೊಂಡು ಬ್ರಹ್ಮವಾದಿಗಳಾದ ಮುನಿಗಳೊಂದಿಗೆ ಅಶ್ವಮೇಧ ಯಾಗವನ್ನು ಆರಂಭಿಸಿದರು.
ಸರ್ವಯಜ್ಞಾತ್ಮಕಂ ತೇಷಾಮಶ್ವಮೇಧಂ ಜಗತ್ಪತಿಃ |
ಕಾರಯಾಮಾಸ ಭಗವಾನ್ ಕೃಷ್ಣದ್ವೈಪಾಯನಃ ಸ್ವಯಮ್ ॥

ಜಗದೊಡೆಯರಾದ ಭಗವಾನ್ ಶ್ರೀವೇದವ್ಯಾಸರು ಸ್ವತಃ ಪಾಂಡವರ ಅಶ್ವಮೇಧ ಯಾಗವನ್ನು ಸರ್ವಯಜ್ಞ ಸ್ವರೂಪವಾಗುವಂತೆ ನಡೆಸಿಕೊಟ್ಟರು.
ಸಾಧನಾನಿ ತು ಸರ್ವಾಣಿ ಶಾಲಾಂ ಚೈವ ಹಿರಣ್ಮಯೀಮ್ |
ಪವಮಾನಸುತಶ್ಚಕ್ರೇ ಕೃಷ್ಣದ್ವೈಪಾಯನೇರಿತಃ ||
ಎಲ್ಲ ಯಜ್ಞ ಸಾಧನಗಳನ್ನೂ ಸುವರ್ಣಮಯವಾದ ಯಜ್ಞಶಾಲೆಯನ್ನೂ ವೇದವ್ಯಾಸರ ಆದೇಶದಂತೆ ಭೀಮಸೇನನೇ ಸಿದ್ಧಪಡಿಸಿದನು.
* * * * *
ಎಪ್ಪತ್ತೊಂದನೆಯ ಅಧ್ಯಾಯ
ಕೃಷ್ಣನು ಪರಿವಾರದವರ ಜೊತೆ ಪಾಂಡವರನ್ನು ಸ್ವಾಗತಿಸಿದುದು.
ಸ್ವರ್ಣಭಾರ ಸಹಿತರಾಗಿ ಪಾಂಡವರು ಹಸ್ತಿನಾವತಿಗೆ ಆಗಮಿಸಿದುದು. ವ್ಯಾಸ-ಕೃಷ್ಣರು ಧರ್ಮಜನಿಗೆ ಯಾಗ ಮಾಡಲು ಆದೇಶಿಸಿದುದು.
ವೈಶಂಪಾಯನಃ
ತಾನ್ ಸಮೀಪಗತಾನ್ ಶ್ರುತ್ವಾ ಪಾಂಡವಾನ್ ಶತ್ರುಕರ್ಶನಃ |
ವಾಸುದೇವಃ ಸಹಾಮಾತ್ಯಃ ಪ್ರತ್ಯುದ್ಯಾತೋ ದಿದೃಕ್ಷಯಾ ||1||
ವೈಶಂಪಾಯನ ಶತ್ರುಕರ್ಶನನಾದ ಶ್ರೀಕೃಷ್ಣನು ಹಸ್ತಿನಾಪುರದ ಸಮೀಪಕ್ಕೆ ಪಾಂಡವರು ಬಂದಿರುವ ಸಮಾಚಾರವನ್ನು ತಿಳಿದು ಮಿತ್ರರಿಂದಲೂ, ಅಮಾತ್ಯರಿಂದಲೂ ಸೇರಿಕೊಂಡು ಸ್ವಾಗತಿಸಲು ಮಹಾದ್ವಾರದ ಬಳಿ ಸಾಗಿದನು.
ತೇ ಸಮೇತ್ಯ ಯಥಾನ್ಯಾಯಂ ಪಾಂಡವಾ ವೃಷ್ಣಿಭಿಃ ಸಹ |
ವಿವಿಶುಃ ಸಹಿತಾ ರಾಜನ್ ಪುರಂ ವಾರಣಸಾಹ್ವಯಮ್ ||2||
ಅಂಧಕರು, ವೃಷ್ಣಿಗಳು ಪಾಂಡವರನ್ನು ನೋಡಲು ಮುಂದೆ ಸಾಗಿ ಹೃದಯ ಪೂರ್ಣವಾಗಿ ಸ್ವಾಗತಿಸಿದರು. ನ್ಯಾಯಮಾರ್ಗದಿಂದ ಧರ್ಮಾನುಸಾರವಾಗಿ ಇಬ್ಬರೂ ಸೇರಿ ಹಸ್ತಿನಾಪುರವನ್ನು ಪ್ರವೇಶಿಸಿದರು.
ಮಹತಸ್ತಸ್ಯ ಸೈನ್ಯಸ್ಯ ರಥನೇಮಿಸ್ವನೇನ ಚ |
ದ್ಯಾವಾಪೃಥಿವ್ಯೌ ಖಂ ಚೈವ ಶಬ್ದೇನಾಸೀತ್ ಸಮಾವೃತಮ್ ||3||
ಪಾಂಡವರ ದೊಡ್ಡದಾದ ಸೈನ್ಯದ ಶಬ್ದದಿಂದಲೂ, ಕುದುರೆಗಳ ಗೊರಸಿನ ರಥ ಶಬ್ದದಿಂದಲೂ ಭೂಮಿ-ಸ್ವರ್ಗಗಳ ನಡುವಿನ ಅಂತರಿಕ್ಷಲೋಕವು ತುಂಬಿಹೋಯಿತು.
ತೇ ಕೋಶಮಗ್ರತಃ ಕೃತ್ವಾ ವಿವಿಶುಃ ಸ್ವಪುರಂ ತದಾ |
ಪಾಂಡವಾಃ ಪ್ರೀತಮನಸಃ ಸಾಮಾತ್ಯಾಃ ಸಸುಹೃದ್ಗಣಾಃ ||4||
ಪ್ರಸನ್ನಚಿತ್ತರಾದ ಪಾಂಡವರು ಅಮಾತ್ಯರಿಂದೊಡಗೂಡಿ, ಸ್ನೇಹಿತರಿಂದ ಕೂಡಿಕೊಂಡು ಹಿಮವದ್ ಪರ್ವತದಿಂದ ತಂದಿರುವ ರತ್ನದಿಂದ ತುಂಬಿದ್ದ ಪೆಟ್ಟಿಗೆಗಳನ್ನು ಹೊತ್ತುಕೊಂಡು ಹಸ್ತಿನಾವತಿಯನ್ನು ಪ್ರವೇಶಿಸಿದರು.
ತೇ ಸಮೇತ್ಯ ಯಥಾನ್ಯಾಯಂ ಧೃತರಾಷ್ಟ್ರಂ ಜನೇಶ್ವರಮ್ |
ಕೀರ್ತಯಂತಃ ಸ್ವನಾಮಾನಿ ತಸ್ಯ ಪಾದೌ ವವಂದಿರೇ ||5||
ಅರಮನೆಯನ್ನು ಸೇರಿದ ಪಾಂಡವರು ಒಟ್ಟಾಗಿ ಜನೇಶ್ವರನಾದ ಧೃತರಾಷ್ಟ್ರನ ಬಳಿಗೆ ಬಂದು ನ್ಯಾಯೋಚಿತವಾದ ರೀತಿಯಲ್ಲಿ ತಮ್ಮ ತಮ್ಮ ಹೆಸರುಗಳನ್ನು ಹೇಳಿ ಅವನ ಪಾದಗಳಿಗೆ ನಮಸ್ಕರಿಸಿದರು.
ಧೃತರಾಷ್ಟ್ರಸ್ಯಾನುಮತೇ ಗಾಂಧಾರೀಂ ಸುಬಲಾತ್ಮಜಾಮ್ |
ಕುಂತೀಂ ಚ ರಾಜಶಾರ್ದೂಲ ತದಾ ಭರತಸತ್ತಮಾಃ ||6||
ಧೃತರಾಷ್ಟ್ರನಿಗೆ ನಮಿಸಿದ ತರುವಾಯ ಸುಬಲನ ಮಗಳಾದ ಗಾಂಧಾರಿಯನ್ನೂ, ಕುಂತಿಯನ್ನು ನಮಸ್ಕರಿಸಿದರು.
ವಿದುರಂ ಪೂಜಯಿತ್ವಾ ಚ ವೈಶ್ಯಾಪುತ್ರಂ ಸಮೇತ್ಯ ಚ |
ಪೂಜ್ಯಮಾನಾಸ್ತು ತೇ ವೀರಾ ವ್ಯರಾಜಂತ ವಿಶಾಂಪತೇ ||7||
ವಿದುರನನ್ನು ಯಥೋಚಿತವಾಗಿ ಪೂಜಿಸಿ, ವೈಶ್ಯ ಜಾತಿಯವಳಲ್ಲಿ ಹುಟ್ಟಿದವನಾದ ಯುಯುತ್ಸುವನ್ನು ಕಂಡು ಪ್ರೀತಿಯಿಂದ ಆಲಂಗಿಸಿಕೊಂಡರು. ಅವರೆಲ್ಲರಿಂದಲೂ ಸಮ್ಮಾನಿತರಾದ ಪಾಂಡವರು ಸುಂದರವಾಗಿ ಬೆಳಗಿದರು.
ತತಸ್ತತ್ ಪರಮಾಶ್ಚರ್ಯಂ ವಿಚಿತ್ರಂ ಮಹದದ್ಭುತಮ್ |
ಶುಶ್ರುವುಸ್ತೇ ಮಹಾವೀರಾಃ ಪಿತುಸ್ತೇ ಜನ್ಮ ಭಾರತ ||8||
ಬಳಿಕ ವೀರಶಿರೋಮಣಿಗಳಾದ ಪಾಂಡವರು ಅತ್ಯಂತ ಆಶ್ಚರ್ಯಕರವಾದ, ವಿಚಿತ್ರವಾದ, ಪರಮಾದ್ಭುತವಾದ ನಿನ್ನ ತಂದೆಯ ಜನ್ಮವೃತ್ತಾಂತವನ್ನು ಕೇಳಿಸಿಕೊಂಡರು.
ತದುಪಶ್ರುತ್ಯ ತೇ ಕರ್ಮ ವಾಸುದೇವಸ್ಯ ಧೀಮತಃ |
ಪೂಜಾರ್ಹಂ ಪೂಜಯಾಮಾಸುಃ ಕೃಷ್ಣಂ ದೇವಕಿನಂದನಮ್ ||9||
ಶ್ರೀಕೃಷ್ಣನ ಅಲೌಕಿಕವಾದ ಮಹಿಮೆಯನ್ನು ಕೇಳಿಸಿಕೊಂಡ ಪಾಂಡವರು ದೇವಕೀ ಸುತನಾದ, ಪೂಜಿಸಲು ಅರ್ಹನಾದ ಕೃಷ್ಣನನ್ನು ಯಥಾಯೋಗ್ಯವಾಗಿ ಪೂಜಿಸಿದರು.
ತತಃ ಕತಿಪಯಾಹಸ್ಸು ವ್ಯಾಸಃ ಸತ್ಯವತೀಸುತಃ |
ಆಜಗಾಮ ಮಹಾತೇಜಾ ನಗರಂ ನಾಗಸಾಹ್ವಯಮ್ ||10||
ಈ ಎಲ್ಲ ಕಾರ್ಯಗಳು ನಡೆದು ಕೆಲವು ದಿವಸಗಳ ಬಳಿಕ ಸತ್ಯವತೀಸುತರಾದ, ಮಹಾತೇಜಸ್ವಿಗಳಾದ ವ್ಯಾಸರು ಹಸ್ತಿನಾವತಿಯನ್ನು

ಆಗಮಿಸಿದರು.
ತಸ್ಯ ಸರ್ವೇ ಯಥಾನ್ಯಾಯಂ ಪೂಜಾಂ ಚಕ್ರುಃ ಕುರೂದ್ವಹಾಃ |
ಸಹ ವೃಷ್ಣ್ಯಂಧಕವ್ಯಾಘ್ರೈಃ ಉಪಾಸಾಂಚಕ್ರಿರೇ ತದಾ ॥11॥
ಆಗಮಿಸಿದ ವ್ಯಾಸರನ್ನೂ, ಕುರುಕುಲ ತಿಲಕರಾದ ಪಾಂಡವರೆಲ್ಲರೂ ಯಥಾ ಯೋಗ್ಯವಾಗಿ ಸತ್ಕರಿಸಿ ನಮಿಸಿದರು. ವೃಷ್ಣ್ಯಂಧಕ ಶ್ರೇಷ್ಠರೊಡನೆ ವ್ಯಾಸರ ಸೇವೆಯಲ್ಲಿ ನಿರತರಾದರು.
ತತ್ರ ನಾನಾವಿಧಾಕಾರಾಃ ಕಥಾಃ ಸಮನುಕೀರ್ತ್ಯ ವೈ |
ಯುಧಿಷ್ಠಿರೋ ಧರ್ಮಸುತೋ ವ್ಯಾಸಂ ವಚನಮಬ್ರವೀತ್ ॥12॥
ಅನೇಕ ವಿಧವಾದ ಕಥೆಗಳನ್ನೂ ವ್ಯಾಸರ ಮುಖದಿಂದ ಕೇಳುತ್ತಾ ಇರುವಾಗಲೇ ಧರ್ಮಸುತನಾದ ಯುಧಿಷ್ಠಿರನು ವ್ಯಾಸರನ್ನು ಕುರಿತು ಇಂತು ನುಡಿದನು.
ಯುಧಿಷ್ಠಿರಃ
ಭವತ್ಪ್ರಸಾದಾದ್ ಭಗವನ್ ಯದಿದಂ ರತ್ನಮಾಹೃತಮ್ |
ಉಪಯೋಕ್ತುಂ ತದಿಚ್ಛಾಮಿ ವಾಜಿಮೇಧೇ ಮಹಾಕ್ರತೌ ॥13॥
ಯುಧಿಷ್ಠಿರ ಪೂಜ್ಯರೇ, ತಮ್ಮ ಅನುಗ್ರಹದಿಂದ ಕಣ್ಣಿಗೆ ಕಾಣಿಸುತ್ತಿರುವ ಈ ಮಹೇಶ್ವರ್ಯವನ್ನು ತಂದಿರುತ್ತೇವೆ. ಅಶ್ವಮೇಧ ಮಹಾಯಜ್ಞದಲ್ಲಿ ಇದೆಲ್ಲವನ್ನೂ ವಿನಿಯೋಗಿಸುವಂತೆ ನೀವು ಅನುಮತಿಯನ್ನು ನೀಡಿರಿ.
ತದನುಜ್ಞಾತುಮಿಚ್ಛಾಮಿ ಭವತಾ ಮುನಿಸತ್ತಮ |
ತ್ವದಧೀನಾ ವಯಂ ಸರ್ವೇ ಕೃಷ್ಣೇನ ಚ ಮಹಾತ್ಮನಾ ॥14॥
ಮುನಿಶ್ರೇಷ್ಠರೇ, ಪೂಜ್ಯರಾದ ನಿಮ್ಮಿಂದ ಅಶ್ವಮೇಧ ಯಜ್ಞಕ್ಕೆ ಅನುಮತಿಯನ್ನು ಬಯಸುತ್ತಿದ್ದೇನೆ. ನಾವೆಲ್ಲರೂ ಮಹಾತ್ಮನಾದ ಶ್ರೀಕೃಷ್ಣ ಮತ್ತು ನಿಮ್ಮ ವಶರಾಗಿದ್ದೇವೆ.
ವ್ಯಾಸಃ
ಅನುಜಾನಾಮಿ ರಾಜಂಸ್ತ್ವಂ ಕ್ರಿಯತಾಂ ಯದನಂತರಮ್ |
ಯಜಸ್ವ ವಾಜಿಮೇಧೇನ ವಿಧಿವದ್ ದಕ್ಷಿಣಾವತಾ ॥15॥
ವ್ಯಾಸರು ಮಹಾರಾಜನೇ, ನಿನಗೆ ಯಜ್ಞ ಮಾಡಲು ಅನುಮತಿಯನ್ನು ನೀಡುತ್ತಿದ್ದೇನೆ. ಮುಂದೆ ಮಾಡಬೇಕಾದ ಕಾರ್ಯಗಳನ್ನು ತಡಮಾಡದೆ ಮಾಡು. ವಿಧಿವತ್ತಾಗಿ ಬಹುದಕ್ಷಿಣಾಕವಾದ ಅಶ್ವಮೇಧ ಯಾಗವನ್ನು ಮಾಡುವ ಮೂಲಕ ದೇವತೆಗಳನ್ನು ಸಂತೋಷಪಡಿಸು.
ಅಶ್ವಮೇಧೋ ಹಿ ರಾಜೇಂದ್ರ ಪಾವನಃ ಸರ್ವಪಾಪ್ಮನಾಮ್ |
ತೇನೇಷ್ಟ್ವಾ ತ್ವಂ ವಿಪಾಪ್ಮಾ ವೈ ಭವಿತಾ ನಾತ್ರ ಸಂಶಯಃ ॥16॥
ಮಹಾರಾಜನೇ, ಅಶ್ವಮೇಧ ಯಾಗವು ಸಮಸ್ತ ಪಾಪನಾಶಕವಾದ ಯಾಗವಾಗಿ ಯಜಮಾನನನ್ನು ಪವಿತ್ರಗೊಳಿಸುತ್ತದೆ. ಅಶ್ವಮೇಧದ ಮೂಲಕ ನೀನು ದೇವತೆಗಳನ್ನು ತೃಪ್ತಿಗೊಳಿಸಿ ಪಾಪಮುಕ್ತನಾಗುವಿ. ಇದರಲ್ಲಿ ಸಂಶಯವಿಲ್ಲ.
ವೈಶಂಪಾಯನಃ
ಇತ್ಯುಕ್ತಃ ಸ ತು ಧರ್ಮಾತ್ಮಾ ಕುರುರಾಜೋ ಯುಧಿಷ್ಠಿರಃ |
ಅಶ್ವಮೇಧಸ್ಯ ಕೌರವ್ಯ ಚಕಾರಾಹರಣೇ ಮತಿಮ್ ॥17॥
ವೈಶಂಪಾಯನ ಧರ್ಮಾತ್ಮನಾದ ಯುಧಿಷ್ಠಿರನು ವ್ಯಾಸರಿಂದ ಹೀಗೆ ಅಶ್ವಮೇಧ ಯಾಗವನ್ನು ಮಾಡಲು ಆಜ್ಞಾಪಿಸಿಕೊಂಡ ಬಳಿ ಅದರಂತೆ ಯಜ್ಞ ಮಾಡಲು ನಿರ್ಧರಿಸಿಕೊಂಡನು.
ಸಮನುಜ್ಞಾಪ್ಯ ತು ಸ ತಂ ಕೃಷ್ಣದ್ವೈಪಾಯನಂ ನೃಪ |
ವಾಸುದೇವಮಥಾಮಂತ್ರ್ಯ ವಾಗ್ಮೀ ವಚನಮಬ್ರವೀತ್ ॥18॥
ವೇದವ್ಯಾಸರಿಂದ ಧರ್ಮರಾಜನು ಎಲ್ಲ ಕಾರ್ಯಗಳಿಗೂ ಅನುಮತಿಯನ್ನು ಪಡೆದು ಬಳಿಕ ವಾಗ್ಮಿಯಾದ ಧರ್ಮಜನು ವಾಸುದೇವನ ಬಳಿ ತೆರಳಿ ಇಂತು ನುಡಿದನು.
ಯುಧಿಷ್ಠಿರಃ
ದೇವಕೀ ಸುಪ್ರಜಾ ದೇವ ತ್ವಯಾ ಪುರುಷಸತ್ತಮ |
ಯದ್ ಬ್ರೂಯಾಸ್ತ್ವಂ ಮಹಾಬಾಹೋ ತತ್ ಕುರ್ಯಾಮಹಮಚ್ಯುತ॥
ಯುಧಿಷ್ಠಿರ ಪುರುಷೋತ್ತಮನಾದ, ಮಹಾಬಾಹುವಾದ ಅಚ್ಯುತನೇ, ನಿನ್ನನ್ನು ಪಡೆದ ದೇವಕಿಯು ಸುಪ್ರಜಾ ಎಂಬ ಕೀರ್ತಿಗೆ ಭಾಜನಳಾದಳು. ನಾನು ನಿನಗೆ ಯಾವ ಕಾರ್ಯವನ್ನು ಮಾಡಲು ಪ್ರಾರ್ಥಿಸುತ್ತೇನೋ ಅದನ್ನು ನೀನು ಇಲ್ಲಿ ಪೂರೈಸಿಕೊಡಬೇಕು.
ತ್ವಂ ಗತಿಃ ಸರ್ವಭೂತಾನಾಮಿತಿ ಮೇ ನಿಶ್ಚಿತಾ ಮತಿಃ |
ತ್ವತ್ಪ್ರಭಾವಾರ್ಜಿತಾನ್ ಭೋಗಾನಶ್ನೀಮೋ ಯದುನಂದನ ॥20॥
ಕೃಷ್ಣನೇ, ಸಮಸ್ತ ಪ್ರಾಣಿ ಪ್ರಪಂಚಕ್ಕೂ ನೀನೇ ಗತಿಯು ಎಂದು ನನ್ನ ಮತಿಯು ನಿಶ್ಚಯ ಹೊಂದಿದೆ. ನಿನ್ನ ಅನುಗ್ರಹದಿಂದಲೇ ಸಂಪಾದಿತವಾದ ಐಶ್ವರ್ಯಗಳು, ನಿನ್ನ ಅನುಗ್ರಹದಿಂದಲೇ ನಾವೆಲ್ಲರೂ ಸುಖವನ್ನು ಅನುಭವಿಸುತ್ತಿದ್ದೇವೆ.
ಪರಾಕ್ರಮೇಣ ಬುದ್ಧ್ಯಾ ಚ ತವೇಯಂ ನಿರ್ಜಿತಾ ಮಹೀ ॥21॥
ನಿನ್ನ ಪರಾಕ್ರಮದಿಂದಲೇ, ನಿನ್ನ ಬುದ್ಧಿಯಿಂದಲೇ ಸಮಗ್ರ ಈ ಭೂಮಂಡಲವು ನಮ್ಮಿಂದ ಹೊಂದಲ್ಪಟ್ಟಿದೆ.
ದೀಕ್ಷಯಸ್ವ ತ್ವಮಾತ್ಮಾನಂ ತ್ವಂ ಹಿ ನಃ ಪರಮೋ ಗುರುಃ |
ತ್ವಯೀಷ್ಟವತಿ ಧರ್ಮಜ್ಞ ವಿಪಾಪ್ಮಾ ಸ್ಯಾಮಹಂ ವಿಭೋ ॥22॥

ಶ್ರೀಕೃಷ್ಣನೇ, ನೀನೇ ನಮ್ಮ ಪಾಪಿಗೆ ಪರಮಗುರುವಾಗಿರುವಿ. ಆದ್ದರಿಂದ ಈ ಅಶ್ವಮೇಧ ಯಜ್ಞದಲ್ಲಿ ನೀನೇ ದೀಕ್ಷೆಯನ್ನು ಸ್ವೀಕರಿಸು. ವಿಭುವೇ, ನೀನು ಧರ್ಮಜ್ಞನಾಗಿರುವಿ. ಈ ಅಶ್ವಮೇಧ ಯಜ್ಞದಲ್ಲಿ ನೀನು ಕ್ರಿಯಾಶೀಲನಾದಲ್ಲಿ ನಾನು ಪಾಪದಿಂದ ಬಿಡುಗಡೆಯನ್ನು ಹೊಂದುತ್ತೇನೆ.

ತ್ವಂ ಹಿ ಯಜ್ಞೋಽಕ್ಷರಃಶರ್ಬ್ವೋ ಧರ್ಮಜ್ಞಸ್ತ್ವಂ ಪ್ರಜಾಪತಿಃ ॥23॥

ಶ್ರೀಕೃಷ್ಣನೇ, ನೀನೇ ಯಜ್ಞನಾಗಿರುವಿ. ನೀನೇ ಅಕ್ಷರನಾಗಿರುವಿ. ನೀನೇ ವೇದರೂಪನೂ ಆಗಿರುವಿ. ನೀನೇ ಪ್ರಜಾಪತಿಯು, ನೀನೇ ಧರ್ಮಜ್ಞನು.

ಶ್ರೀಭಗವಾನ್

ತ್ವಮೇವೈತನ್ಮಹಾಬಾಹೋ ವಕ್ತುಮರ್ಹಸ್ಯರಿಂದಮ |
ತ್ವಂ ಗತಿಃ ಸರ್ವಭೂತಾನಾಮಿತಿ ಮೇ ನಿಶ್ಚಿತಾ ಮತಿಃ ॥24॥

ಶ್ರೀಭಗವಾನ್ ಮಹಾಬಾಹುವಾದ ಧರ್ಮಜನೇ, ಇಂತಹ ಸುಂದರವಾದ ಮಾತುಗಳನ್ನಾಡಲು ನೀನೇ ಅರ್ಹನಾಗಿದ್ದಿ. ಆದರೆ ಇಂದು ವಾಸಿಸುವ ಎಲ್ಲ ಪ್ರಾಣಿಗಳಿಗೂ ನೀನೇ ರಾಜನಾಗಿರುವಿ ಎಂಬ ನಿಶ್ಚಯವು ನನಗಿರುವುದು.

ತ್ವಂ ಚಾದ್ಯ ಕುರುವೀರಾಣಾಂ ಧರ್ಮೇಣಾತಿ ವಿರಾಜಸೇ |
ಗುರುಭೂತಸ್ತು ಮೇ ರಾಜನ್ ತ್ವಂ ನೋ ರಾಜಾ ಮತೋ ಗುರುಃ ॥

ಕುರುವೀರರಲ್ಲಿ ಧರ್ಮದಿಂದ ಕಂಗೊಳಿಸುವ ರಾಜನು ಇಂದು ನೀನಾಗಿರುವಿ. ರಾಜನಾದ ನೀನೇ ಎಲ್ಲರಿಗೂ ಗುರುವಾಗಿರುವಿ. ನನಗೂ ಗುರುವಾಗಿರುವಿ ಎಂದು ಭಾವಿಸುತ್ತೇನೆ.

ಯಜಸ್ವ ವಾಜಿಮೇಧೇನ ಪ್ರಾಪ್ತ ಏಷ ಕ್ರತುಸ್ತ್ವಯಾ |
ಯುನಕ್ತು ನೋ ಭವಾನ್ ಕಾರ್ಯೇ ಯತ್ರ ವಾಚ್ಛತಿ ಭಾರತ ॥26॥

ಭಗವದನುಗ್ರಹದಿಂದ ಅಶ್ವಮೇಧ ಯಾಗವನ್ನು ಮಾಡುವ ಯೋಗವು ನಿನಗೆ ಲಭಿಸಿದೆ. ಅಶ್ವಮೇಧ ಯಾಗವನ್ನು ಉಪಕ್ರಮಿಸು. ನೀನು ಬಯಸಿದ ಯಾವ ಕಾರ್ಯವನ್ನಾದರೂ ಮಾಡಲು ನಾನು ಸಿದ್ಧನಿದ್ದೇನೆ. ಸತ್ಕರ್ಮದಲ್ಲಿ ನನ್ನನ್ನು ನಿಯೋಜಿಸು.

ಸತ್ಯಂ ತೇ ಪ್ರತಿಜಾನಾಮಿ ಸರ್ವಂ ಕರ್ತಾಸ್ಮಿ ತೇಽನಘ ॥27॥

ಧರ್ಮಜನೇ, ನಿನ್ನ ಬಳಿ ಸತ್ಯಪ್ರತಿಜ್ಞೆಯನ್ನು ಮಾಡುತ್ತೇನೆ. ನೀನೇ ಆದೇಶಿಸು. ಎಲೈ ಅನಘನೇ, ನೀನು ಹೇಳಿದ್ದೆಲ್ಲವನ್ನೂ ನಾನು ಆಚರಿಸುತ್ತೇನೆ.

ಭೀಮಸೇನಾರ್ಜುನೌ ಚೈವ ತಥಾ ಮಾದ್ರವತೀಸುತೌ |
ಇಷ್ಟವಂತೋ ಭವಿಷ್ಯಂತಿ ತ್ವಯೀಷ್ಟವತಿ ಪಾರ್ಥಿವ ॥28॥

ಧರ್ಮಜನೇ, ನೀನು ಯಜ್ಞವನ್ನು ಮಾಡಿದಲ್ಲಿ ಭೀಮಾರ್ಜುನರೂ, ಮಾದ್ರೀ ಸುತರಾದ ನಕುಲ-ಸಹದೇವರೂ ಯಜ್ಞ ಮಾಡಿದವರೇ ಆಗುತ್ತಾರೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ದೀಕ್ಷಾಂ ಕುರ್ವತಿ ಕೃಷ್ಣವಚನಂ ನಾಮ
ಏಕಸಪ್ತತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೊಂದನೆಯ
ಅಧ್ಯಾಯ ಮುಗಿಯಿತು.

* * * * *

ಎಪ್ಪತ್ತೆರಡನೆಯ ಅಧ್ಯಾಯ

ವೇದವ್ಯಾಸರು ಯುಧಿಷ್ಠಿರನಿಗೆ ಪೃಥಿವಿಯಲ್ಲಿ ಸಂಚರಿಸಲು
ಯಜ್ಞಾಶ್ವವನ್ನು ಬಿಡುವಂತೆ ಪ್ರಚೋದಿಸಿದುದು. ಅದರಂತೆ ಅಶ್ವವನ್ನು
ರಕ್ಷಿಸಲು ಅರ್ಜುನನನ್ನು ನಿಯೋಜಿಸಿದುದು.

ವೈಶಂಪಾಯನಃ

ಏವಮುಕ್ತಸ್ತು ಕೃಷ್ಣೇನ ಧರ್ಮರಾಜೋ ಯುಧಿಷ್ಠಿರಃ |
ವ್ಯಾಸಮಾಮಂತ್ರ್ಯ ಮೇಧಾವೀ ತತೋ ವಚನಮಬ್ರವೀತ್ ॥1॥

ವೈಶಂಪಾಯನ ಜನಮೇಜಯನೇ, ಶ್ರೀಕೃಷ್ಣನು ಅಶ್ವಮೇಧ ಯಾಗವನ್ನು ಮಾಡುವಂತೆಯೇ, ಅದಕ್ಕೆ ತನ್ನ ಸಂಪೂರ್ಣವಾದ ಸಹಕಾರವಿದೆ ಎಂದು ಹೇಳಲು ಮೇಧಾವಿಯಾದ ಧರ್ಮಪುತ್ರನಾದ ಯುಧಿಷ್ಠಿರನು ವ್ಯಾಸರನ್ನು ಕರೆಸಿ ಇಂತು ನುಡಿದನು.

ಯುಧಿಷ್ಠಿರಃ

ಯದಾ ಕಾಲಂ ಭವಾನ್ ವೇತ್ತಿ ಹಯಮೇಧಸ್ಯ ತತ್ತ್ವತಃ |
ದೀಕ್ಷಯಸ್ವ ತದಾಽಽತ್ಮಾನಂ ತ್ವದಾಯತ್ತೋ ಹಿ ಮೇ ಕ್ರತುಃ ॥2॥

ಯುಧಿಷ್ಠಿರ ಪೂಜ್ಯರೇ, ಅಶ್ವಮೇಧ ಯಾಗವನ್ನು ಮಾಡಲು ಯೋಗ್ಯವಾದ ಕಾಲ ಯಾವುದು? ನೀವು ವಿಧಿವತ್ತಾಗಿ ಎಲ್ಲವನ್ನೂ ತಿಳಿದಿರುವಿರಿ. ನಿಮ್ಮ ಅಧೀನವಾಗಿ ನನ್ನ ಯಜ್ಞವು ನಡೆಯುತ್ತದೆ. ನೀವು ಹೇಳಿದಾಗ ಅಶ್ವಮೇಧ ಯಜ್ಞದಲ್ಲಿ ನಾನು ದೀಕ್ಷೆಯನ್ನು ಸ್ವೀಕರಿಸುತ್ತೇನೆ.

ವ್ಯಾಸಃ

ಅಹಂ ಪೈಲೋಽಥ ಕೌಂತೇಯ ಯಾಜ್ಞವಲ್ಕ್ಯಸ್ತಥೈವ ಚ |
ವಿಧಾನಂ ಯದ್ಯಥಾಕಾಂ ತತ್ ಕರ್ತಾರೋ ನ ಸಂಶಯಃ ॥3॥

ವ್ಯಾಸರು ಧರ್ಮರಾಜನೇ, ನಿನ್ನಿಂದ ಯಜ್ಞವನ್ನು ಮಾಡುವ ಕಾಲವು ಸನ್ನಿಹಿತವಾದ ಕೂಡಲೇ ಪೈಲ, ಯಾಜ್ಞವಲ್ಕ್ಯ ಇವರೇ ಮುಂತಾದ ಋತ್ವಿಜರೊಡನೆ ನಾನೇ ಆಗಮಿಸಿ ನಿನ್ನ ಯಜ್ಞವಿಧಾನಗಳೆಲ್ಲವನ್ನೂ ಸಮಗ್ರವಾಗಿ ಮಾಡಿಸಿಕೊಡುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಚೈತ್ರ್ಯಾಂ ಹಿ ಪೌರ್ಣಮಾಸ್ಯಾಂ ವೈ ತವ ದೀಕ್ಷಾ ಭವಿಷ್ಯತಿ |
ಸಂಭಾರಾಃ ಸಂಭ್ರಿಯಂತಾಂ ವೈ ಯಜ್ಞಾರ್ಥಂ ಪುರುಷರ್ಷಭ ॥4॥
ಪುರುಷಶ್ರೇಷ್ಠನೇ, ಮುಂದೆ ಬರುವ ಚೈತ್ರ ಶುಕ್ಲ ಪೂರ್ಣಿಮೆಯಂದು ನಿನ್ನ ಯಜ್ಞದೀಕ್ಷೆಗೆ ಯೋಗ್ಯವಾದ ಸಮಯವಾಗಿರುತ್ತದೆ. ಅಷ್ಟರೊಳಗಾಗಿ ಯಜ್ಞಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸು.
ಅಶ್ವವಿದ್ಯಾವಿದಶ್ಚೈವ ಸೂತಾ ವಿಪ್ರಾಶ್ಚ ತದ್ವಿದಃ |
ಮೇಧ್ಯಮಶ್ವಂ ಪರೀಕ್ಷಂತಾಂ ತವ ಯಜ್ಞಾರ್ಥಸಿದ್ಧಯೇ ॥5॥
ಯಜ್ಞಕ್ಕೆ ಯೋಗ್ಯವಾದ ಪವಿತ್ರವಾದ ಕುದುರೆ ಯಾವುದು ಎಂಬುದನ್ನು ಅಶ್ವವಿದ್ಯೆಯನ್ನು ಚೆನ್ನಾಗಿ ತಿಳಿದಿರುವ ಸೂತರು, ಬ್ರಾಹ್ಮಣರು ಇವರುಗಳು ಪರೀಕ್ಷಿಸಲಿ.
ತಮುತ್ಸೃಜ್ಯ ಯಥಾಶಾಸ್ತ್ರಂ ಪೃಥಿವೀಂ ಸಾಗರಾಂಬರಾಮ್ |
ಸ ಪರ್ಯೇತು ಯಶೋ ದೀಪ್ತಂ ತವ ಪಾರ್ಥಿವ ವರ್ಧಯನ್ ॥6॥
ಶಾಸ್ತ್ರವಿಧಿಗೆ ಅನುಗುಣವಾಗಿ ಕುದುರೆಯನ್ನು ಸ್ವೀಕರಿಸಿ ಅದನ್ನು ದೇಶ ಪರ್ಯಟನೆಗೆ ಬಿಟ್ಟು ಬಿಡು. ಆ ಕುದುರೆಯು ನಿನ್ನ ಉಜ್ವಲವಾದ ಯಶಸ್ಸನ್ನು ಜಗತ್ತಿಗೆ ತೋರಿಸುತ್ತಾ ಸಮುದ್ರವೇ ಬಟ್ಟೆಯಾಗಿ ಉಳ್ಳ ಅಖಂಡಭೂಮಂಡಲದಲ್ಲಿ ಸಂಚರಿಸಲಿ.
ವೈಶಂಪಾಯನಃ
ಇತ್ಯುಕ್ತಃ ಸ ತಥೇತ್ಯುಕತ್ವ ಪಾಂಡವಃ ಪೃಥಿವೀಪತಿಃ |
ಚಕಾರ ಸರ್ವಂ ರಾಜೇಂದ್ರೋ ಯಥೋಕ್ತಂ ಬ್ರಹ್ಮವಾದಿನಾ ॥7॥
ವೈಶಂಪಾಯನ ಜನಮೇಜಯನೇ, ಬ್ರಹ್ಮವಾದಿಗಳಾದ ವೇದವ್ಯಾಸರು ಹೀಗೆ ಹೇಳಲಾಗಿ ಯುಧಿಷ್ಠಿರನು ಹಾಗೆಯೇ ಆಗಲೆಂದು ಹೇಳಿದನು. ಪೃಥಿವೀಪತಿಯಾದ ಯುಧಿಷ್ಠಿರನು ವ್ಯಾಸರ ಮಾತಿನಂತೆ ಎಲ್ಲವನ್ನೂ ಮಾಡಿದನು.
ಸಂಭಾರಾಶ್ಚೈವ ರಾಜೇಂದ್ರ ಸರ್ವೇ ಸಂಕಲ್ಪಿತಾ ಭವನ್ ॥8॥
ಯಜ್ಞಕ್ಕೆ ಸಂಬಂಧಪಟ್ಟ ಯಾವ ಯಾವ ಪದಾರ್ಥಗಳನ್ನು ತರಬೇಕೆಂದು ಸಂಕಲ್ಪಿಸಲಾಗಿತ್ತೋ ಅದೆಲ್ಲವನ್ನೂ ಮಹಾತ್ಮನಾದ ಯುಧಿಷ್ಠಿರನು ಸಂಗ್ರಹಿಸಿದನು.
ಸ ಸಂಭಾರಾನ್ ಸಮಾಹೃತ್ಯ ನೃಪೋ ಧರ್ಮಾತ್ಮಜಸ್ತದಾ |
ನ್ಯವೇದಯದಮೇಯಾತ್ಮಾ ಕೃಷ್ಣದ್ವೈಪಾಯನಾಯ ವೈ ॥9॥
ಆ ಪದಾರ್ಥಗಳನ್ನೆಲ್ಲ ಸಂಗ್ರಹಿಸಿದ ಧರ್ಮಾತ್ಮಜನಾದ ಯುಧಿಷ್ಠಿರನು ಕೃಷ್ಣದ್ವೈಪಾಯನರಿಗೆ ಎಲ್ಲ ಪದಾರ್ಥಗಳನ್ನು ತಂದಿರುವುದಾಗಿ ತಿಳಿಸಿದನು.
ತತೋಽಬ್ರವೀನ್ಮಹಾತೇಜಾ ವ್ಯಾಸೋ ಧರ್ಮಾತ್ಮಜಂ ನೃಪಮ್ ॥10॥
ಬಳಿಕ ಮಹಾತೇಜಸ್ವಿಯಾದ ವ್ಯಾಸರು ಧರ್ಮರಾಜನನ್ನು ಕುರಿತು ಹೇಳಿದರು.
ವ್ಯಾಸಃ
ಯಥಾಕಾಲಂ ಯಥಾಯೋಗಂ ಸಜ್ಜಾಃ ಸ್ಮ ತವ ದೀಕ್ಷಣೇ ॥11॥
ವ್ಯಾಸರು ಯುಧಿಷ್ಠಿರನೇ, ನಾವು ಯೋಗ್ಯವಾದ ಕಾಲದಲ್ಲಿ, ಯೋಗ್ಯವಾದ ಯೋಗದಲ್ಲಿ ನಿನ್ನನ್ನು ಯಜ್ಞದೀಕ್ಷಿತನನ್ನಾಗಿ ಮಾಡಲು ಸಿದ್ಧರಾಗಿದ್ದೇವೆ.
ಸ್ರುಕ್ ಚ ಕೂರ್ಚಂ ಚ ಸೌವರ್ಣಂ ಯಚ್ಚಾನ್ಯದಪಿ ಕೌರವ |
ಯತ್ತು ಯೋಗ್ಯಂ ಭವೇತ್ ಕಿಂಚಿತ್ ತದ್ರೌಕ್ಮಂ ಕ್ರಿಯತಾಮಿಹ ॥12॥
ಯಜ್ಞಕ್ಕೆ ಬೇಕಾದ ಸ್ರುಕ್‌ಗಳನ್ನೂ, ಕೂರ್ಚಗಳನ್ನೂ, ಬಂಗಾರದ ಬೇರೆ ಸಾಮಗ್ರಿಗಳನ್ನೂ, ಏನೇನು ಬೇಕೋ ಅವೆಲ್ಲವನ್ನೂ ಬಂಗಾರದಿಂದ ಬೇಗನೆ ಸಿದ್ಧಗೊಳಿಸು.
ಅಶ್ವಶ್ಚೋತ್ಸೃಜ್ಯತಾಮದ್ಯ ಪೃಥ್ವ್ಯಾಮಥ ಯಥಾಕ್ರಮಮ್ |
ಸುಗುಪ್ತಶ್ಚ ಚರತ್ವೇಷ ಯಥಾಶಾಸ್ತ್ರಂ ಯುಧಿಷ್ಠಿರ ॥13॥
ಶಾಸ್ತ್ರವಿಧಿಗೆ ಅನುಗುಣವಾಗಿ ಇಂದೇ ಭೂಮಿಯಲ್ಲಿ ಸಂಚರಿಸಲು ಯಜ್ಞಾಶ್ವವನ್ನು ಬಿಟ್ಟುಬಿಡು. ಆ ಕುದುರೆಯು ಶಾಸ್ತ್ರವಿಧಿಗೆ ಅನುಗುಣವಾಗಿ ಸುರಕ್ಷಿತವಾಗಿ ಭೂಮಿಯಲ್ಲಿ ಸಂಚರಿಸಲಿ.
ಯುಧಿಷ್ಠಿರಃ
ಅಯಮಶ್ವೋ ಯಥಾ ಬ್ರಹ್ಮನ್ನುತ್ಸೃಷ್ಟಃ ಪೃಥಿವೀಮಿಮಾಮ್ |
ಚರಿಷ್ಯತಿ ಯಥಾಕಾಮಂ ತತ್ರ ಸಮ್ಯಗ್ ವಿಧೀಯತಾಮ್ ॥14॥
ಯುಧಿಷ್ಠಿರ ಬ್ರಾಹ್ಮಣಶ್ರೇಷ್ಠರೇ, ನಿಮ್ಮೆದುರು ಕಾಣಿಸುತ್ತಿರುವ ಈ ಯಜ್ಞಾಶ್ವವು ಬ್ರಾಹ್ಮಣರು ಮತ್ತು ಸೂತರಿಂದ ಪರೀಕ್ಷಿಸಲ್ಪಟ್ಟ ಅಶ್ವವೆನಿಸಿದೆ. ನಮ್ಮಿಂದ ಬಿಡಲ್ಪಡುವ ಈ ಕುದುರೆಯು ಸ್ವಚ್ಛಂದವಾಗಿ ಭೂಮಿಯಲ್ಲಿ ಸಂಚರಿಸುತ್ತದೆ. ಇದಕ್ಕೆ ಸಂಬಂಧಪಟ್ಟ ಸಲಹೆಗಳನ್ನು ನೀವೇ ನೀಡಬೇಕಾಗಿದೆ.
ಪೃಥಿವೀಂ ಪರ್ಯಟಂತಂ ಹಿ ತುರಗಂ ಕಾಮಚಾರಿಣಮ್ |
ಕಃ ಪಾಲಯೇದಿತಿ ಮುನೇ ತದ್ಭವಾನ್ ವಕ್ತುಮರ್ಹತಿ ॥15॥
ಸ್ವಚ್ಛಂದವಾಗಿ ಭೂಮಂಡಲದಲ್ಲಿ ಸಂಚರಿಸುವ ಈ ಕುದುರೆಯನ್ನು ಯಾರು ರಕ್ಷಿಸಬೇಕೆಂದು ವ್ಯಾಸಮುನಿಗಳೇ ನೀವೇ ಹೇಳಲು

ಯೋಗ್ಯರಾಗಿದ್ದೀರಿ.
ವೈಶಂಪಾಯನಃ
ಇತ್ಯುಕ್ತಃ ಸ ತು ರಾಜೇಂದ್ರ ಕೃಷ್ಣದ್ವೈಪಾಯನೋಽಬ್ರವೀತ್ ॥16॥
ವೈಶಂಪಾಯನ ಈ ರೀತಿಯಾಗಿ ಧರ್ಮಜನಿಂದ ಹೇಳಿಸಿಕೊಳ್ಳಲ್ಪಟ್ಟ ವ್ಯಾಸರು ಪ್ರತ್ಯುತ್ತರಿಸುತ್ತಾರೆ.
ವ್ಯಾಸಃ
ಭೀಮಸೇನಾದವರಜಃ ಶ್ರೇಷ್ಠಃ ಸರ್ವಧನುಷ್ಮತಾಮ್ |
ಜಿಷ್ಣುಃ ಸಹಿಷ್ಣುರ್ಧರ್ಮಿಷ್ಠಃ ಸ ಏನಂ ಪಾಲಯಿಷ್ಯತಿ ॥17॥
ವ್ಯಾಸರು ಭೀಮಸೇನನ ತಮ್ಮನಾದ ಶ್ರೇಷ್ಠ ಧನುರ್ವಿದ್ಯೆಯನ್ನು ಹೊಂದಿರುವ, ಜಯಶೀಲನೂ, ಸಹನಶೀಲನೂ, ಧರ್ಮನಿಷ್ಠನೂ ಆಗಿರುವ ಅರ್ಜುನನು ಈ ಯಜ್ಞಾಶ್ವವನ್ನು ರಕ್ಷಿಸುತ್ತಾನೆ.
ಶಕ್ತಃ ಸ ಹಿ ಮಹೀಂ ಜೇತುಂ ನಿವಾತಕವಚಾಂತಕಃ |
ತಸ್ಮಿನ್ನಸ್ತ್ರಾಣಿ ದಿವ್ಯಾನಿ ವರ್ತಂತೇ ಖಲು ಸರ್ವದಾ ॥18॥
ನಿವಾತಕವಚರನ್ನು ಸಂಹರಿಸಿರುವ ಅರ್ಜುನನು ಈ ಭೂಮಂಡಲವನ್ನೂ ಜಯಿಸಲು ಸಮರ್ಥನಾಗಿದ್ದಾನೆ. ನಿರಂತರವೂ ಅವನ ಬಳಿ ದಿವ್ಯವಾದ ಅಸ್ತ್ರಗಳು ಇರುತ್ತವೆ.
ದಿವ್ಯಂ ಧನುಶ್ಚೇಷುಧೀ ಚ ಸ ಏನಮನುಯಾಸ್ಯತಿ ॥19॥
ದಿವ್ಯವಾದ ಧನುಸ್ಸುಳ್ಳ, ಬಾಣಗಳುಳ್ಳ ಆ ಅರ್ಜುನನು ಯಜ್ಞಾಶ್ವವನ್ನು ಅನುಸರಿಸಿ ಹೋಗುತ್ತಾನೆ.
ಸ ಹಿ ಧರ್ಮಾರ್ಥಕುಶಲಃ ಸರ್ವವಿದ್ಯಾವಿಶಾರದಃ |
ಯಥಾಶಾಸ್ತ್ರಂ ನೃಪಶ್ರೇಷ್ಠ ಚಾರಯಿಷ್ಯತಿ ತೇ ಹಯಮ್ ॥20॥
ಆ ಅರ್ಜುನನಾದರೂ ಧರ್ಮಾರ್ಥಕುಶಲನಾಗಿದ್ದಾನೆ, ಸರ್ವವಿದ್ಯಾ ವಿಶಾರದನಾಗಿದ್ದಾನೆ. ಶಾಸ್ತ್ರವಿಧಿಗೆ ಅನುಗುಣವಾಗಿ ಈ ಯಜ್ಞಾಶ್ವವನ್ನು ನಿಶ್ಚಿತವಾಗಿಯೂ ಸಂಚರಿಸಿಕೊಂಡು ಬರುತ್ತಾರೆ. ಧರ್ಮರಾಜನೇ, ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ರಾಜಪುತ್ರೋ ಮಹಾಬಾಹುಃ ಶ್ಯಾಮೋ ರಾಜೀವಲೋಚನಃ |
ಅಭಿಮನ್ಯೋಃ ಪಿತಾ ವೀರಃ ಸ ಏನಮನುಯಾಸ್ಯತಿ ॥21॥
ರಾಜಪುತ್ರನಾದ, ಮಹಾಬಾಹುವಾದ, ರಾಜೀವಲೋಚನನಾದ, ಶ್ಯಾಮ ವರ್ಣದವನಾದ, ಅಭಿಮನ್ಯುವಿನ ತಂದೆಯಾದ, ವೀರಶ್ರೇಷ್ಠನಾದ ಆ ಅರ್ಜುನನು ಈ ಯಜ್ಞಾಶ್ವವನ್ನು ರಕ್ಷಿಸುತ್ತಾನೆ.
ಭೀಮಸೇನೋಽಪಿ ತೇಜಸ್ವೀ ಕೌಂತೇಯೋಽಮಿತವಿಕ್ರಮಃ |
ಸಮರ್ಥೋ ರಕ್ಷಿತುಂ ರಾಷ್ಟ್ರಂ ನಕುಲಶ್ಚ ವಿಶಾಂಪತೇ ॥22॥
ಕೌಂತೇಯನೇ, ಅಮಿತವಿಕ್ರಮನಾದ, ತೇಜಸ್ವಿಯಾದ ಭೀಮಸೇನನು ಈ ರಾಷ್ಟ್ರವನ್ನು ರಕ್ಷಿಸಲು ಸಮರ್ಥನಾಗಿದ್ದಾನೆ. ಇವನಿಗೆ ಸಹಕಾರಿಯಾಗಿ ನಕುಲನೂ ಇರುತ್ತಾನೆ.
ಸಹದೇವಸ್ತು ಕೌರವ್ಯ ಸರ್ವಮನ್ಯತ್ ಕರಿಷ್ಯತಿ |
ಕುಟುಂಬತಂತ್ರಂ ವಿಧಿವತ್ ಸರ್ವಮೇತನ್ಮಹಾಯಶಾಃ ॥23॥
ಕುರುಶ್ರೇಷ್ಠನೇ, ಸಹದೇವನು ನಕುಲನಂತೆ ಭೀಮಸೇನನಿಗೆ ಸಂಬಂಧಿಸಿದ ಇತರ ಕಾರ್ಯಗಳನ್ನು ಮಾಡುತ್ತಾನೆ. ಕುಟುಂಬ ರಕ್ಷಣೆಗೆ ಸಂಬಂಧಪಟ್ಟ ಕೆಲಸಗಳನ್ನು ಮಹಾಕೀರ್ತಿಸಂಪನ್ನನಾದ ಸಹದೇವನು ವಿಧಿಬದ್ಧವಾಗಿಯೇ ಮಾಡುತ್ತಾನೆ.
ವೈಶಂಪಾಯನಃ
ಏತತ್ಸರ್ವಂ ಯಥಾನ್ಯಾಯಮುಕ್ತಂ ಕುರುಕುಲೋದ್ವಹಃ |
ಚಕಾರ ಫಲ್ಗುನಂ ಚಾಪಿ ಸಂದಿದೇಶ ಹಯಂ ಪ್ರತಿ ॥24॥
ವೈಶಂಪಾಯನ ಕುರುಕುಲತಿಲಕನಾದ ಯುಧಿಷ್ಠಿರನು ವ್ಯಾಸರು ಹೇಗೆ ನುಡಿದರೋ ಹಾಗೆಯೇ ನ್ಯಾಯೋಚಿತವಾದ ರೀತಿಯಲ್ಲಿ ಪೂರೈಸಿದನು. ಯಜ್ಞಾಶ್ವವನ್ನು ಕರೆದುಕೊಂಡು ಹೋಗಲು ಅರ್ಜುನನಿಗೆ ಆದೇಶಿಸಿದನು.
ಯುಧಿಷ್ಠಿರಃ
ಏಹ್ಯರ್ಜುನ ತ್ವಯಾ ವೀರ ಹಯೋಽಯಂ ಪರಿಪಾಲ್ಯತಾಮ್ |
ತ್ವಮರ್ಹೋ ರಕ್ಷಿತುಂ ಹ್ಯೇನಂ ನಾನ್ಯಃ ಕಶ್ಚನ ಮಾನವಃ ॥25॥
ಯುಧಿಷ್ಠಿರ ಅರ್ಜುನನೇ, ಇತ್ತ ಬಾ. ವೀರನೇ, ಈ ಯಜ್ಞಾಶ್ವವನ್ನು ನೀನೇ ಪರಿಪಾಲಿಸು. ಈ ಯಜ್ಞಾಶ್ವವನ್ನು ರಕ್ಷಿಸಲು ನಿನ್ನ ಹೊರತು ಬೇರೆ ಯಾವ ಪುರುಷರೂ ಸಮರ್ಥರಾಗಿರುವುದಿಲ್ಲ.
ಯೇ ಚಾಪಿ ತ್ವಾಂ ಮಹಾಬಾಹೋ ಪ್ರತ್ಯುದೀಯುರ್ನರಾಧಿಪಾಃ |
ತೈರ್ವಿಗ್ರಹೋ ಯಥಾ ನ ಸ್ಯಾತ್ ತಥಾ ಕಾರ್ಯಂ ತ್ವಯಾನಘ ॥26॥
ಮಹಾಬಾಹುವಾದ ಅರ್ಜುನನೇ, ಈ ಯಜ್ಞಾಶ್ವವನ್ನು ಕರೆದೊಯ್ಯುವಾಗ ಕೆಲವು ಕ್ಷತ್ರಿಯರು ಯುದ್ಧಕ್ಕಾಗಿ ಆಗಮಿಸಬಹುದು. ಆದರೆ ನಿರ್ದುಷ್ಟನಾದ ಅರ್ಜುನನೇ, ಎಂದಿಗೂ ನೀನು ಅವರ ಬಳಿ ಯುದ್ಧೋನ್ಮುಖನಾಗದೆ ಕಾರ್ಯವನ್ನು ಸಾಧಿಸಿಕೊಂಡು ಆಗಮಿಸಬೇಕು.
ಆಖ್ಯಾತವ್ಯಶ್ಚ ಭವತಾ ಯಜ್ಞೋಽಯಂ ಮಮ ಸರ್ವಶಃ |
ಪಾರ್ಥಿವೇಭ್ಯೋ ಮಹಾಬಾಹೋ ಸಮಯೇ ಗಮ್ಯತಾಮಿತಿ ॥27॥
ಪ್ರತಿ ಕ್ಷತ್ರಿಯರಿಗೂ ನನ್ನ ಯಜ್ಞಕ್ಕೆ ಆಗಮಿಸುವಂತೆ ಆಹ್ವಾನವನ್ನು ನೀಡಬೇಕು. ಸಮಗ್ರ ಪಾರ್ಥಿವರಿಗೂ ಮಹಾಬಾಹುವೂ ಯಜ್ಞದ ಸಂಬಂಧದಲ್ಲಿ ಬರುವಂತೆ ಪ್ರಚೋದಿಸಬೇಕು.

ವೈಶಂಪಾಯನಃ
ಏವಮುಕತತ್ವ ಸ ಧರ್ಮಾತ್ಮಾ ಭ್ರಾತರಂ ಸವ್ಯಸಾಚಿನಮ್ |
ಭೀಮಂ ಚ ನಕುಲಂ ಚೈವ ಪುರಗುಪ್ತೌ ಸಮಾದಧತ್ ॥28॥
ವೈಶಂಪಾಯನ ಧರ್ಮಾತ್ಮನಾದ ಯುಧಿಷ್ಠಿರನು ಸವ್ಯಸಾಚಿಯಾದ ಸಹೋದರನಾದ ಅರ್ಜುನನಿಗೆ ಈ ಕ್ರಮದಲ್ಲಿ ಹೇಳಿ ಭೀಮ, ನಕುಲ ಇವರನ್ನು ಪಟ್ಟಣವನ್ನು ರಕ್ಷಿಸಲು ಆದೇಶಿಸಿದನು.
ಕುಟುಂಬತಂತ್ರೇ ಚ ತದಾ ಸಹದೇವಂ ಯುಧಾಂಪತಿಮ್ |
ಅನುಮಾನ್ಯ ಮಹೀಪಾಲಂ ಧೃತರಾಷ್ಟ್ರಂ ಯುಧಿಷ್ಠಿರಃ ॥29॥
ಕುಟುಂಬ ರಕ್ಷಣೆಯ ಜವಾಬ್ದಾರಿಯನ್ನು ಯುದ್ಧನಿಪುಣನಾದ ಸಹದೇವನಿಗೆ ವಹಿಸಿದನು. ಯುಧಿಷ್ಠಿರನು ಧೃತರಾಷ್ಟ್ರನ ಅನುಮತಿಯನ್ನು ಪಡೆದು ಸಹದೇವನನ್ನು ನಿಯೋಜಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವರಕ್ಷಣಸನ್ದೇಶೋ ನಾಮ ದ್ವಾಸಪ್ತತಿತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ಮೂರನೆಯ ಅಧ್ಯಾಯ
ಅರ್ಜುನನು ಸೇನೆಯೊಡನೆ ಯಜ್ಞಾಶ್ವವನ್ನು ರಕ್ಷಿಸಿಕೊಂಡು
ಉತ್ತರ ದಿಕ್ಕಿನೆಡೆ ನಡೆದುದು.
ವೈಶಂಪಾಯನಃ
ದೀಕ್ಷಾಕಾಲೇ ತು ಸಂಪ್ರಾಪ್ತೇ ತತಸ್ತೇ ಸುಮಹರ್ತ್ವಿಜಃ |
ವಿಧಿವದ್ ದೀಕ್ಷಯಾಮಾಸುರಶ್ವಮೇಧಾಯ ಪಾರ್ಥಿವಮ್ ॥1॥
ವೈಶಂಪಾಯನ ವೇದವ್ಯಾಸರು ತಿಳಿಸಿದ ದೀಕ್ಷಾಕಾಲವು ಸನ್ನಿಹಿತವಾದಾಗ ಮಹಾತ್ಮರಾದ ಋತ್ವಿಜರು ಅಶ್ವಮೇಧ ಯಾಗಕ್ಕಾಗಿ ಯುಧಿಷ್ಠಿರನನ್ನು ವಿಧಿವತ್ತಾಗಿ ದೀಕ್ಷಾಬದ್ಧನನ್ನಾಗಿಸಿದರು.
ಕೃತ್ವಾ ಸ ಪಶುಮೇಧಾಂಸ್ತು ದೀಕ್ಷಿತಃ ಪಾಂಡುನಂದನಃ |
ಧರ್ಮರಾಜೋ ಮಹಾತೇಜಾಃ ಸಹರ್ತ್ವಿಗ್ಭಿರ್ವ್ಯರೋಚತ ॥2॥
ಅವನ ಮೂಲಕ ಪಶುಬಂಧಾದಿ ಕರ್ಮಗಳನ್ನು ಮಾಡಿಸಿದರು. ಇದರಿಂದ ಪಾಂಡುನಂದನನಾದ, ಮಹಾತೇಜಸ್ವಿಯಾದ ಧರ್ಮರಾಜನು ಋತ್ವಿಕ್ಕುಗಳಿಂದ ಸಹಿತನಾಗಿ ವಿಶೇಷವಾಗಿ ಶೋಭಿಸಿದನು.
ಹಯಶ್ಚ ಹಯಮೇಧಾರ್ಥಂ ಸ್ವಯಂ ಸ ಬ್ರಹ್ಮವಾದಿನಾ |
ಉತ್ಸೃಷ್ಟಃ ಶಾಸ್ತ್ರವಿಧಿನಾ ವ್ಯಾಸೇನಾಮಿತತೇಜಸಾ ॥3॥
ಆ ಪ್ರಸಂಗದಲ್ಲಿ ಬ್ರಹ್ಮವಾದಿಗಳಾದ, ಮಹಾತೇಜಸ್ವಿಗಳಾದ ವೇದವ್ಯಾಸರು ಶಾಸ್ತ್ರವಿಧಿಗೆ ಅನುಸಾರವಾಗಿ ಅಶ್ವಮೇಧ ಯಜ್ಞದ ನಿಮಿತ್ತದಿಂದ ಕುದುರೆಯನ್ನು ದೇಶವನ್ನು ಸಂಚರಿಸಲು ಬಿಟ್ಟು ಬಿಟ್ಟರು.
ಸ ರಾಜಾ ಧರ್ಮತೋ ರಾಜನ್ ದೀಕ್ಷಿತೋ ವಿಬಭೌ ತದಾ |
ಹೇಮಮಾಲೀ ರುಗ್ಮಕಂಠಃ ಪ್ರದೀಪ್ತ ಇವ ಪಾವಕಃ ॥4॥
ಆ ಪ್ರಸಂಗದಲ್ಲಿ ಸುವರ್ಣಮಯವಾದ ಮಾಲೆಯನ್ನು ಧರಿಸಿದ, ಸುವರ್ಣ ಕಂಠನಾಗಿದ್ದ, ಯಜ್ಞದೀಕ್ಷಿತನಾದ ರಾಜನಾದ ಯುಧಿಷ್ಠಿರನು ಪ್ರಜ್ವಲಿಸುವ ಬೆಂಕಿಯಂತೆ ತೋರುತ್ತಿದ್ದನು.
ಕೃಷ್ಣಾಜಿನೀ ದಂಡಪಾಣಿಃ ಕ್ಷೌಮವಾಸಾಃ ಸ ಧರ್ಮಜಃ |
ವಿಬಭೌ ದ್ಯುತಿಮಾನ್ ಭೂಯಃ ಪ್ರಜಾಪತಿರಿವಾಧ್ವರೇ ॥5॥
ಕೃಷ್ಣಾಜಿನವನ್ನು ಧರಿಸಿರುವ, ದಂಡಪಾಣಿಯಾದ, ರೇಶ್ಮೆವಸ್ತ್ರವನ್ನು ಧರಿಸಿರುವ ಧರ್ಮಜನು ಕಾಂತಿಯಿಂದ ಈ ಅಶ್ವಮೇಧ ಯಾಗದಲ್ಲಿ ಮತ್ತೊಬ್ಬ ಕಾಂತಿಸಂಪನ್ನನಾದ ಪ್ರಜಾಪತಿಯಂತೆ ಕಂಗೊಳಿಸಿದನು.
ತಥೈವಾಸ್ಯರ್ತ್ವಿಜಃ ಸರ್ವೇ ತುಲ್ಯವೇಷಾ ವಿಶಾಂಪತೇ |
ಬಭೂವುರರ್ಜುನಶ್ಚೈವ ಪ್ರದೀಪ್ತ ಇವ ಪಾವಕಃ ॥6॥
ಇದರಂತೆ ಇತರ ಋತ್ವಿಕ್‌ಗಳು ಎಲ್ಲರೂ ಸಮಾನವಾದ ವೇಷವನ್ನು ಧರಿಸಿದ್ದರು. ಅರ್ಜುನನು ಜ್ವಲಿಸುವ ಬೆಂಕಿಯಂತಲೇ ಕಾಣಿಸುತ್ತಿದ್ದನು.
ಶ್ವೇತಾಶ್ವಃ ಕೃಷ್ಣಸಾರಂಗಂ ಸಸಾರಾಶ್ವಂ ಧನಂಜಯಃ |
ವಿಧಿವದ್ ಪೃಥಿವೀಪಾಲ ಧರ್ಮರಾಜಸ್ಯ ಶಾಸನಾತ್ ॥7॥
ಬಿಳಿಯಾದ ಕುದುರೆಯುಳ್ಳ, ಕೃಷ್ಣಸಾರಮೃಗದಂತೆ ಚಿತ್ರದಿಂದ ಕೂಡಿದ ಅವಯವವುಳ್ಳ ಶ್ರೇಷ್ಠವಾದ ಅಶ್ವವನ್ನು ಧನಂಜಯನು ವಿಧಿವತ್ತಾಗಿ ಧರ್ಮರಾಜನ ಶಾಸನದಿಂದ ಅನುಸರಿಸುತ್ತಾ ಹೊರಟನು.
ವಿಕ್ಷಿಪನ್ ಗಾಂಡಿವಂ ರಾಜನ್ ಬದ್ಧಗೋಧಾಂಗುಲಿತ್ರವಾನ್ |
ತಮಶ್ವಂ ಪೃಥಿವೀಪಾಲ ಮುದಾ ಯುಕ್ತಃ ಸಸಾರ ಹ ॥8॥
ಅರ್ಜುನನು ಸಂತೋಷಭರಿತನಾಗಿ ಗಾಂಡೀವ ಧನುಸ್ಸನ್ನು ಠೇಂಕರಿಸುತ್ತಾ, ಕೈಯಲ್ಲಿ ಧನುಸ್ಸಿನ ಘಾಸಿಯನ್ನು ತಡೆಯುವ ಗೋದ ಎಂಬ ಹೆಸರಿನ ಚರ್ಮವನ್ನು ಧರಿಸಿರುವ ಅರ್ಜುನನು ಸಂತೋಷದಿಂದ ಆ ಕುದುರೆಯನ್ನು ಭೂಮಿಯಲ್ಲಿ ಸಂಚರಿಸುವಂತೆ ಮಾಡುತ್ತಾ ಅನುಸರಿಸಿ ಹೊರಟನು.

ಆಕುಮಾರಂ ತದಾ ರಾಜನ್ನಾಗಮತ್ ತತ್ಪುರಂ ವಿಭೋ |
ದ್ರಷ್ಟುಕಾಮಂ ಕುರುಶ್ರೇಷ್ಠಂ ಪ್ರಯಾಸ್ಯಂತಂ ಧನಂಜಯಮ್ ॥9॥
ಕುರುಶ್ರೇಷ್ಠನಾದ ಅರ್ಜುನನು ಯಾವ ಪ್ರದೇಶಕ್ಕೆ ಹೋಗುತ್ತಾನೋ ಆ ಪ್ರದೇಶದಲ್ಲಿ ಅರ್ಜುನನನ್ನು ನೋಡುವ ನಿಮಿತ್ತದಿಂದ ಬಾಲಕರೇ ಮೊದಲಾಗಿ ಮುದುಕರ ತನಕವೂ ಪ್ರಜೆಗಳು ಆಗಮಿಸಿದರು.
ತೇಷಾಮನ್ಯೋನ್ಯಸಮ್ಮರ್ದಾದ್ ಊಷ್ಮೇವ ಸಮಜಾಯತ |
ದಿದೃಕ್ಷೂಣಾಂ ಹಯಂ ತಂ ಚ ತಂ ಚೈವ ಹಯಸಾರಿಣಮ್ ॥10॥
ಆ ಪ್ರಜೆಗಳ ಪರಸ್ಪರ ನುಗ್ಗಾಟದಿಂದ ಎಲ್ಲರ ಮುಖದಲ್ಲಿಯೂ ಸೆಕೆಯು ಉಂಟಾಯಿತು. ಎಲ್ಲರೂ ಯಜ್ಞಾಶ್ವವನ್ನೂ, ಅರ್ಜುನನನ್ನೂ ನೋಡಲು ಆಗಮಿಸುತ್ತಿದ್ದರು.
ತತಃ ಶಬ್ದೋ ಮಹಾರಾಜ ದಶಾಶಾಃ ಪ್ರತಿಪೂರಯನ್ |
ಬಭೂವ ವೀಕ್ಷತಾಂ ನೃಣಾಂ ಕುಂತೀಪುತ್ರಂ ಧನಂಜಯಮ್ ॥11॥
ಆ ಸಮಯದಲ್ಲಿ ಉಂಟಾದ ಶಬ್ದವು ಮಹಾರಾಜನೇ, ಹತ್ತು ದಿಕ್ಕುಗಳನ್ನು ತುಂಬಿದವು. ಕುಂತೀಪುತ್ರನಾದ ಧನಂಜಯನನ್ನು ನೋಡಲು ಬರುವ ಮಾನವರ ಸಂಖ್ಯೆಯು ವಿಶೇಷವಾಗಿ ಶೋಭಿಸಿತು.
ಏಷ ಗಚ್ಛತಿ ಕೌಂತೇಯಸ್ತುರಗಶ್ಚೈವ ದೀಪ್ತಿಮಾನ್ |
ಸಮನ್ವೇತಿ ಮಹಾಬಾಹುಃ ಸಂಸ್ಪೃಶನ್ ಧನುರುತ್ತಮಮ್ ॥12॥
ಅರ್ಜುನನು ಸಾಗುತ್ತಿದ್ದಾನೆ, ಕೌಂತೇಯನಾದ ಅರ್ಜುನನ ಜೊತೆ ಕಾಂತಿಯುಕ್ತವಾದ ಯಜ್ಞಾಶ್ವವೂ ಸಾಗುತ್ತಿದೆ. ಮಹಾಬಾಹುವಾದ ಅರ್ಜುನನು ಶ್ರೇಷ್ಠವಾದ ಗಾಂಡೀವ ಧನುಸ್ಸನ್ನು ಧರಿಸಿರುತ್ತಾನೆ.
ಏವಂ ಶುಶ್ರಾವ ವದತಾಂ ಗಿರೋ ಜಿಷ್ಣುರುದಾರಧೀಃ |
ಸ್ವಸ್ತಿ ತೇಽಸ್ತು ವ್ರಜಾರಿಷ್ಟಂ ಪುನಶ್ಚೈಹೀತಿ ಭಾರತ ॥13॥
ಈ ರೀತಿಯಾಗಿ ಜನರು ಹೇಳುವ ಶಬ್ದಗಳು ಕೇಳಿಸುತ್ತಿದ್ದವು. ಜಯಶೀಲನಾದ, ಉದಾರಚೇತನನಾದ ಅರ್ಜುನನಿಗೆ ಜಯವಾಗಲಿ, ಕ್ಷೇಮಕರವಾದ ಮಾರ್ಗದಲ್ಲಿ ನೀನು ಸಂಚರಿಸು. ಪುನಃ ಹಸ್ತಿನಾವತಿಯನ್ನು ಕುರಿತು ಆಗಮಿಸು ಎಂಬ ಆಶೀರ್ವಾದ ಯುಕ್ತವಾದ ದುರ್ದರ ಮಾತುಗಳು ಆ ಗುಂಪಿನಲ್ಲಿ ಕೇಳಿ ಬರುತ್ತಿದ್ದವು.
ಅಥಾಪರೇ ಮನುಷ್ಯೇಂದ್ರ ಪುರುಷಾ ವಾಕ್ಯಮಬ್ರುವನ್ |
ನೈನಂ ಪಶ್ಯಾಮ ಸಮ್ಮರ್ದೇ ಧನುರೇತತ್ ಪ್ರದೃಶ್ಯತೇ ॥14॥
ಬಳಿಕ ಮನುಷ್ಯಶ್ರೇಷ್ಠನೇ, ಜನಮೇಜಯನೇ, ಇನ್ನು ಕೆಲವು ಪುರುಷರು ಈ ಜನಜಂಗುಳಿಯಲ್ಲಿ ಅರ್ಜುನನನ್ನು ಕಾಣುತ್ತಿಲ್ಲ. ಅವನ ವಿಖ್ಯಾತವಾದ ಧನುಸ್ಸು ನಮ್ಮ ಕಣ್ಣಿಗೆ ಕಾಣಿಸುತ್ತಿದೆ.
ಏತದ್ಧಿ ಮೇಘನಿರ್ಹ್ರಾದಂ ವಿಶ್ರುತಂ ಗಾಂಡಿವಂ ಧನುಃ |
ಸ್ವಸ್ತಿ ಗಚ್ಛತ್ವರಿಷ್ಟಂ ವೈ ಪಂಥಾನಮಕುತೋಭಯಮ್ ॥15॥
ಭಯಂಕರವಾಗಿ ಶಬ್ದ ಮಾಡುವ ಆ ಧನುಸ್ಸು ಗಾಂಡೀವ ಎಂಬ ಹೆಸರಿನಿಂದ ವಿಖ್ಯಾತವಾಗಿದೆ. ಯಜ್ಞದ ಕುದುರೆಯನ್ನು ಅನುಸರಿಸಿ ಹೋಗುತ್ತಿರುವ ಈ ಅರ್ಜುನನಿಗೆ ಮಂಗಳವಾಗಲಿ. ಯಾವ ವಿಧದ ತೊಂದರೆಯೂ ಇಲ್ಲದೆ ನಿರ್ಭಯವಾದ ಮಾರ್ಗದಲ್ಲಿ ಸಂಚರಿಸಲಿ.
ನಿವೃತ್ತಮೇನಂ ದ್ರಕ್ಷ್ಯಾಮಃ ಪುನರೇವಂ ಚ ತೇಽಬ್ರುವನ್ ॥16॥
ಕ್ಷೇಮದಿಂದ ಪುನಃ ಹಸ್ತಿನಾವತಿಗೆ ಮರಳುವ ಅರ್ಜುನನನ್ನು ನಾವೆಲ್ಲರೂ ನೋಡೋಣ ಎಂದು ಆ ಗುಂಪಿನಲ್ಲಿ ಸೇರಿದ ಹಲವರು ಹೇಳಿದರು.
ಏವಮಾದಿ ಮನುಷ್ಯಾಣಾಮ್ ಅರ್ಜುನೋ ಭರತರ್ಷಭ |
ಶುಶ್ರಾವ ಮಧುರಾ ವಾಚಃ ಪುನಃ ಪುನರುದೀರಿತಾಃ ॥17॥
ಭರತರ್ಷಭನೇ, ಅರ್ಜುನನು ಈ ಜನಜಂಗುಳಿಯಲ್ಲಿ ಮನುಷ್ಯರಿಂದ ಹೇಳಲ್ಪಟ್ಟ ಮಧುರವಾದ ಮಾತುಗಳನ್ನು ಪುನಃ ಪುನಃ ಕೇಳಿಸಿಕೊಳ್ಳುತ್ತಲೇ ಇದ್ದನು.
ಯಾಜ್ಞವಲ್ಕ್ಯಃ ಸಶಿಷ್ಯಶ್ಚ ಕುಶಲೋ ಯಜ್ಞಕರ್ಮಣಿ |
ಪ್ರಾಯಾತ್ ಪಾರ್ಥೇನ ಸಹಿತಃ ಶಾಂತ್ಯರ್ಥಂ ವೇದಪಾರಗಃ ॥18॥
ಯಾಜ್ಞವಲ್ಕ್ಯರು ಶಿಷ್ಯರಿಂದ ಸಹಿತರಾಗಿ ಯಜ್ಞಕರ್ಮದಲ್ಲಿ ಕುಶಲರಾಗಿ, ವೇದಪಾರಂಗತರಾಗಿ, ಅರ್ಜುನನಿಂದ ಸಹಿತರಾಗಿ ಅವನ ಶಾಂತಿಗಾಗಿ ಪ್ರಯಾಣ ಬೆಳೆಸಿದರು.
ಬ್ರಾಹ್ಮಣಾಶ್ಚ ಮಹೀಪಾಲ ಬಹವೋ ವೇದಪಾರಗಾಃ |
ಅನುಜಗ್ಮುರ್ಮಹಾತ್ಮಾನಂ ಕ್ಷತ್ರಿಯಾಶ್ಚ ವಿಶೋಽಪಿ ಚ ॥19॥
ಅರ್ಜುನನನ್ನು ವೇದಪಾರಂಗತರಾದ ಅನೇಕ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಹಿಂಬಾಲಿಸಿದರು.
ಪಾಂಡವೈಃ ಪೃಥಿವೀಮಶ್ವೋ ನಿರ್ಜಿತಾಂ ಶಸ್ತ್ರತೇಜಸಾ |
ಚಚಾರ ಸ ಮಹಾರಾಜ ಯಥಾದೇಶಂ ಚ ಸತ್ತಮ ॥20॥
ಪಾಂಡವರಿಂದ ಸಹಿತವಾದ ಕುದುರೆಯು ಶಸ್ತ್ರತೇಜಸ್ಸಿನಿಂದ ಭೂಮಿಯನ್ನೆಲ್ಲ ಜಯಿಸಿಕೊಂಡು ಯೋಗ್ಯವಾದ ದೇಶಗಳಲ್ಲಿ ಸಂಚರಿಸುತ್ತಾ ಮುಂದೆ ಹೊರಟಿತು.
ಯತ್ರ ಯುದ್ಧಾನಿ ವೃತ್ತಾನಿ ಯಾನ್ಯಾಸನ್ ಪಾಂಡವಸ್ಯ ಹ |
ತಾನಿ ವಕ್ಷ್ಯಾಮಿ ತೇ ವೀರ ವಿಚಿತ್ರಾಣಿ ಮಹಾಂತಿ ಚ ॥21॥

ಯಾವ ಪ್ರದೇಶದಲ್ಲಿ ಯಜ್ಞಾಶ್ವ ನಿಮಿತ್ತವಾಗಿ ಯುದ್ಧಗಳು ಅರ್ಜುನನಿಗೂ ಅಲ್ಲಿನ ರಾಜರಿಗೂ ನಡೆದವೋ ಅಂತಹ ವಿಚಿತ್ರವಾದ, ಮಹತ್ವಪೂರ್ಣವಾದ ಯುದ್ಧದ ವೃತ್ತಾಂತಗಳನ್ನು ವೀರನಾದ ಜನಮೇಜಯನೇ ನಿನಗೆ ತಿಳಿಸುತ್ತೇನೆ.
ಸ ಹಯಃ ಪೃಥಿವೀಂ ರಾಜನ್ ಪ್ರದಕ್ಷಿಣಮರಿಂದಮ |
ಸಸಾರೋತ್ತರತಃ ಪೂರ್ವಂ ತನ್ನಿಬೋಧ ಮಹೀಪತೇ ॥22॥
ಅರಿಂದಮನೇ, ಆ ಯಜ್ಞಾಶ್ವವು ಉತ್ತರದಿಕ್ಕಿನ ಕಡೆ ಇರುವ ಪೃಥಿವಿಯನ್ನು ಸಂಚರಿಸುತ್ತಾ ಹೇಗೆ ಸಾಗಿತು ಎಂಬುದನ್ನು ತಿಳಿಸುತ್ತೇನೆ. ರಾಜನೇ ಕೇಳಿಸಿಕೋ.
ಅಪಾಮಾರ್ಜನ್ ಸ ರಾಷ್ಟ್ರಾಣಿ ಪಾರ್ಥಿವಾನಾಂ ಹಯೋತ್ತಮಃ |
ಶನೈಸ್ತಥಾ ಪರಿಯಯೌ ಶ್ವೇತಾಶ್ವಶ್ಚ ಮಹಾರಥಃ ॥23॥
ಆ ಶ್ರೇಷ್ಠವಾದ ಯಜ್ಞಾಶ್ವವು ಶ್ರೇಷ್ಠ ಚಕ್ರವರ್ತಿಗಳ ರಾಷ್ಟ್ರವನ್ನು ಶುದ್ಧೀಕರಿಸುತ್ತಾ ಮೆಲ್ಲನೆ ಸಾಗುತ್ತಿತ್ತು. ಬಿಳಿಯಾದ ಕುದುರೆಯು ಅರ್ಜುನನಿಂದ ಸಹಿತವಾಗಿ ಸಾಗುವ ಪರಿಯೇ ರಮಣೀಯವಾಗಿತ್ತು.
ತತ್ರ ಸಂಕಲ್ಪನಾ ನಾಸ್ತಿ ರಾಜ್ಞಾಮಯುತಶಸ್ತದಾ ॥24॥
ಮಹಾಭಾರತದ ಯುದ್ಧದಲ್ಲಿ ಬಂಧುಗಳನ್ನು ಕಳೆದುಕೊಂಡಿದ್ದ ಸಾವಿರಾರು ಕ್ಷತ್ರಿಯರು ಸೇಡುತೀರಿಸಿಕೊಳ್ಳುವ ನೆಪದಿಂದ ಅರ್ಜುನನ ಜೊತೆ ಯುದ್ಧ ಮಾಡಿದರು.
ಯೇಽಯುಧ್ಯಂತ ಮಹಾರಾಜ ಕ್ಷತ್ರಿಯಾ ಹತಬಾಂಧವಾಃ |
ಕಿರಾತಾ ವಿಷ್ಕೃತಾ ರಾಜನ್ ಬಹವೋ ಹಿ ಧನುರ್ಧರಾಃ ॥25॥
ಆಗಮಿಸಿದ ಆ ರಾಜರ ಸಂಖ್ಯೆಗೆ ಪರಿಮಿತಿ ಇರಲಿಲ್ಲ. ಎಣಿಸಲಾಗದಷ್ಟು ಆವಿಷ್ಕಾರವನ್ನು ಹೊಂದಿದ ಕಿರಾತರೂ ಬಹುಸಂಖ್ಯೆಯಿಂದ ಧನುರ್ಧಾರಿಗಳಾಗಿ ಆಗಮಿಸಿದರು.
ಮ್ಲೇಚ್ಛಾಶ್ಚಾನ್ಯೇ ವಿನಿಕೃತಾಃ ಪುರಾ ರಾಜನ್ ಮಹಾರಣೇ ॥26॥
ಮ್ಲೇಚ್ಛರು, ಯವನರು, ಹಿಂದೆ ಪಾಂಡವರಿಂದ ಪರಾಭವಗೊಂಡಿದ್ದನ್ನು ನೆನೆದು ಅರ್ಜುನನ ಬಳಿ ಯುದ್ಧಕ್ಕೆ ಆಗಮಿಸಿದರು.
ಆರ್ಯಾಶ್ಚ ಪೃಥಿವೀಪಾಲಾಃ ಪ್ರಹೃಷ್ಟನರವಾಹನಾಃ |
ಸಮೀಯುಃ ಪಾಂಡುಪುತ್ರೇಣ ಬಹವೋ ಯುದ್ಧದುರ್ಮದಾಃ ॥27॥
ಅನೇಕ ಜನರ ಶ್ರೇಷ್ಠರಾದ ಚಕ್ರವರ್ತಿಗಳು ಸಂತುಷ್ಟರಾದ ಸೈನಿಕರಿಂದಲೂ, ವಾಹನಗಳಿಂದಲೂ ಕೂಡಿದವರಾಗಿ ಯುದ್ಧೋತ್ಸಾಹದಿಂದ ಬಹುಸಂಖ್ಯೆಯಿಂದ ಅರ್ಜುನನನ್ನು ಎದುರುಗೊಂಡರು.
ಏವಂ ಯುದ್ಧಾನಿ ವೃತ್ತಾನಿ ತತ್ರ ತತ್ರ ವಿಶಾಂಪತೇ |
ಅರ್ಜುನಸ್ಯ ಮಹೀಪಾಲೈರ್ನಾನಾದೇಶನಿವಾಸಿಭಿಃ ॥28॥
ಈ ರೀತಿಯಾಗಿ ನಾನಾ ದೇಶಗಳಲ್ಲಿ ಅರ್ಜುನನಿಗೂ, ನಾನಾ ದೇಶ ನಿವಾಸಿಗಳಾದ ಚಕ್ರವರ್ತಿಗಳಿಗೂ ಭಯಂಕರವಾದ ಯುದ್ಧವು ನಡೆಯಿತು.
ಯಾನಿ ತೂಭಯತೋ ರಾಜನ್ ಪ್ರವೃತ್ತಾನಿ ಮಹಾಂತಿ ಚ |
ತಾನಿ ಯುದ್ಧಾನಿ ವಕ್ಷ್ಯಾಮಿ ಕೌಂತೇಯಸ್ಯ ಮಹಾತ್ಮನಃ ॥29॥
ಯಾವ ಯಾವ ಯುದ್ಧಗಳು ಎರಡೂ ಪಕ್ಷಗಳ ದೃಷ್ಟಿಯಿಂದ ಕಷ್ಟದಾಯಕ ಆಗಿದ್ದವೋ, ಮಹತ್ವಪೂರ್ಣವಾಗಿದ್ದವೋ ಅಂತಹ ಅರ್ಜುನನ ಯುದ್ಧದ ಪ್ರಸಂಗಗಳನ್ನು ವಿವರಿಸಿ ಹೇಳುತ್ತೇನೆ. ರಾಜನೇ ಕೇಳಿಸಿಕೋ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ತ್ರಿಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ಮೂರನೆಯ
ಅಧ್ಯಾಯ ಮುಗಿಯಿತು.
* * * * *
ಎಪ್ಪತ್ನಾಲ್ಕನೆಯ ಅಧ್ಯಾಯ
ಅರ್ಜುನನಿಂದ ತ್ರಿಗರ್ತರ ಪರಾಜಯ.
ವೈಶಂಪಾಯನಃ
ತ್ರಿಗರ್ತೈರಭವದ್ ಯುದ್ಧಂ ಕೃತವೈರೈಃ ಕಿರೀಟಿನಃ |
ಮಹಾರಥಸಮಾಜ್ಞಾತೈರ್ಹತಾನಾಂ ಪುತ್ರನಪ್ತೃಭಿಃ ॥1॥
ವೈಶಂಪಾಯನ ಜನಮೇಜಯನೇ, ಭೂಮಂಡಲದಲ್ಲಿ ಯುದ್ಧದ ಕುದುರೆಯು ಸಂಚರಿಸುತ್ತಿರುವಾಗ ತ್ರಿಗರ್ತರ ದೇಶಕ್ಕೆ ಕುದುರೆಯು ಸಾಗಿತು. ಕುರುಕ್ಷೇತ್ರದಲ್ಲಿ ಹತರಾಗಿರುವ ತ್ರಿಗರ್ತರ ಮಕ್ಕಳು, ಮೊಮ್ಮಕ್ಕಳು ಆ ರಾಜ್ಯವನ್ನು ಆಳುತ್ತಿದ್ದರು. ಅವರೆಲ್ಲರೂ ಮಹಾರಥರೆಂದೇ ಪ್ರಸಿದ್ಧಿಯನ್ನು ಹೊಂದಿದ್ದರು.
ತೇ ತಮಾಜ್ಞಾಯ ಸಂಪ್ರಾಪ್ತಂ ಯಾಜ್ಞಿಯಂ ತುರಗೋತ್ತಮಮ್ |
ವಿಷಯಾಂತೇ ತತೋ ವೀರಾ ದಂಸಿತಾಃ ಪರ್ಯವಾರಯನ್ ॥2॥
ಅವರೆಲ್ಲರಿಗೂ ಅರ್ಜುನನ ಬಗ್ಗೆ ಬಹಳ ಸಿಟ್ಟಿತ್ತು. ಯುಧಿಷ್ಠಿರನ ಮೇಧಾಶ್ವವು ತಮ್ಮ ರಾಜ್ಯಕ್ಕೆ ಬಂದೊಡನೆಯೇ ಅದನ್ನು ಬಂಧಿಸಿದರು. ಈ ವಿಷಯದಿಂದ ಅರ್ಜುನನಿಗೂ ತ್ರಿಗರ್ತರಿಗೂ ಭಯಂಕರವಾದ ಯುದ್ಧವಾಯಿತು.
ರಥಿನೋ ಬದ್ಧತೂಣೀರಾಃ ಸದಶ್ವೈಃ ಸಮಂಕೃತೈಃ |
ಪರಿವಾರ್ಯ ಹಯಂ ರಾಜನ್ ಗೃಹೀತುಮುಪಚಕ್ರಮುಃ ॥3॥

ಅಶ್ವಮೇಧ ಅಶ್ವವು ತಮ್ಮ ರಾಜ್ಯದ ಗಡಿಗೆ ಬಂದಿರುವುದನ್ನು ಅರಿತ ತ್ರಿಗರ್ತರು ಕವಚಧಾರಿಗಳಾಗಿ, ಬೆನ್ನಿಗೆ ಬತ್ತಳಿಕೆಗಳನ್ನು ಕಟ್ಟಿ ಉತ್ತಮವಾದ ಅಲಂಕೃತವಾದ ಕುದುರೆಗಳಿಂದ ಯುಕ್ತವಾದ ರಥಗಳಲ್ಲಿ ಕುಳಿತುಕೊಂಡು ಯಜ್ಞದ ಕುದುರೆಯನ್ನು ವಶಕ್ಕೆ ತೆಗೆದುಕೊಳ್ಳಲು ಆಗಮಿಸಿದರು.
ತತಃ ಕಿರೀಟೀ ಸಂಚಿಂತ್ಯ ತೇಷಾಂ ರಾಜ್ಞಾಂ ಚಿಕೀರ್ಷಿತಮ್ |
ವಾರಯಾಮಾಸ ತಾನ್ ಸರ್ವಾನ್ ಸಾಂತ್ವಪೂರ್ವಮರಿಂದಮಃ ॥4॥
ಆ ಪ್ರಸಂಗದಲ್ಲಿ ಅರ್ಜುನನು ತ್ರಿಗರ್ತವೀರರು ಯಜ್ಞದ ಕುದುರೆಯನ್ನು ತಡೆಯುತ್ತಿರುವುದನ್ನು ಕಂಡು ಸ್ವಲ್ಪ ಕಾಲ ಹೀಗೆ ಯೋಚಿಸುತ್ತಾ ಯುಧಿಷ್ಠಿರನ ಮಾತನ್ನು ನೆನಪಿಸಿಕೊಂಡು ಸಾಂತ್ವನ ಪೂರ್ವಕ ಮಾತುಗಳಿಂದಲೇ ಕುದುರೆಯನ್ನು ಬಂಧಿಸಬಾರದೆಂದು ಹೇಳಿದನು.
ತಮನಾದೃತ್ಯ ತೇ ಸರ್ವೇ ಶರೈರಭ್ಯಹನಂಸ್ತದಾ |
ತಮೋರಜೋಭ್ಯಾಂ ಸಂಭಾನ್ನಾನ್ ತಾನ್ ಕಿರೀಟೀ ನ್ಯವಾರಯತ್ ॥
ಆದರೆ ತ್ರಿಗರ್ತ ಯೋಧರು ಅರ್ಜುನನ ಸಮಾಧಾನದ ಮಾತುಗಳಿಗೆ ಬೆಲೆ ಕೊಡಲಿಲ್ಲ. ಬಾಣಗಳಿಂದ ಅವನನ್ನು ಹೊಡೆಯಲು ತೊಡಗಿದರು. ರಜೋಗುಣ, ತಮೋಗುಣಗಳಿಂದ ಆವಿಷ್ಟರಾಗಿರುವ ತ್ರಿಗರ್ತ ಯೋಧರನ್ನು ಅರ್ಜುನನ್ನು ಪ್ರತ್ಯಸ್ತ್ರಗಳ ಪ್ರಯೋಗದಿಂದ ನಗುತ್ತಲೇ ತಡೆದನು.
ಅಬ್ರವೀಚ್ಚ ತತೋ ಜಿಷ್ಣುಃ ಪ್ರಹಸನ್ನಿವ ಭಾರತ ॥6॥
ಮಂದಹಾಸವನ್ನು ಬೀರುತ್ತಾ ಅವರನ್ನುದ್ದೇಶಿಸಿ ಜಯಶೀಲನಾದ ಅರ್ಜುನನು ಇಂತು ನುಡಿದನು.
ಅರ್ಜುನಃ
ನಿವರ್ತಧ್ವಮಧರ್ಮಜ್ಞಾಃ ಶ್ರೇಯೋ ಜೀವಿತಮೇವ ವಃ ॥7॥
ಅರ್ಜುನ ಧರ್ಮವನ್ನು ತಿಳಿದ ವೀರರೇ, ಯುದ್ಧದಿಂದ ಹಿಮ್ಮೆಟ್ಟಿರಿ. ಈ ಸಮಯದಲ್ಲಿ ಜೀವಂತವಾಗಿ ಸಾಗುವುದೇ ನಿಮಗೆ ಶ್ರೇಯಸ್ಕರವೆಂದು ಭಾವಿಸುತ್ತೇನೆ.
ವೈಶಂಪಾಯನಃ
ಸ್ವಯಂ ವೀರಃ ಪ್ರಯಾಸ್ಯನ್ ವೈ ಧರ್ಮರಾಜೇನ ವಾರಿತಃ |
ಅಬಾಂಧವಾ ರಣೇ ವೀರ ಹಂತವ್ಯಾಃ ಕ್ಷತ್ರಿಯಾ ಇತಿ ॥8॥
ವೈಶಂಪಾಯನ ಜನಮೇಜಯನೇ, ಅರ್ಜುನನು ಶತ್ರುಗಳೊಡನೆ ಹೀಗೆ ಹೇಳಲು ಕಾರಣವೇನೆಂದರೆ ಯಜ್ಞಾಶ್ವದ ರಕ್ಷಣೆಗಾಗಿ ಯುಧಿಷ್ಠಿರನು ನಿಯೋಜಿಸಿದಾಗ ಬಂಧುಗಳನ್ನು ಕಳೆದುಕೊಂಡ ರಾಜರನ್ನು ನೀನು ಕೊಲ್ಲಬಾರದು ಎಂದು ಕಟ್ಟಪ್ಪಣೆ ಮಾಡಿದ್ದನು. ಆ ಮಾತನ್ನು ಸ್ಮರಿಸಿಕೊಂಡು ಯುದ್ಧಭೂಮಿಯಿಂದ ಹಿಂದಿರುಗುವಂತೆ ಅರ್ಜುನನು ನೀತಿ ಮಾತನ್ನು ಹೇಳಿದನು.
ಸ ತದಾ ತದ್ವಚಃ ಶ್ರುತ್ವಾ ಧರ್ಮರಾಜಸ್ಯ ಧೀಮತಃ |
ತಾನ್ ನಿವರ್ತಧ್ವಮಿತ್ಯಾಹ ನ ನ್ಯವರ್ತಂತ ಚಾಪಿ ತೇ ॥9॥
ಜ್ಞಾನಿಯಾದ ಧರ್ಮರಾಜನ ಯುದ್ಧದಿಂದ ಹಿಂದಿರುಗಿರಿ ಎಂಬ ಸಮಾಧಾನದ ಮಾತುಗಳನ್ನು ಕೇಳಿಸಿಕೊಂಡರೂ ಅವರ್ಯಾರೂ ಯುದ್ಧದಿಂದ ಹಿಮ್ಮೆಟ್ಟಲೇ ಇಲ್ಲ.
ತತಸ್ತ್ರಿಗರ್ತರಾಜಾನಂ ಸೂರ್ಯವರ್ಮಾಣಮಾಹವೇ |
ವಿತತ್ಯ ಶರಜಾಲೇನ ಪ್ರಜಹಾಸ ಧನಂಜಯಃ ॥10॥
ಬಳಿಕ ಆ ಯುದ್ಧದಲ್ಲಿ ಅರ್ಜುನನು ತ್ರಿಗರ್ತಾಧಿಪತಿಯಾದ ಸೂರ್ಯವರ್ಮನನ್ನು ಬಾಣಗಳ ಸಮೂಹದಿಂದ ಮುಚ್ಚಿ ಗಹಗಹಿಸಿ ನಕ್ಕನು.
ತತಸ್ತೇ ರಥಘೋಷೇಣ ಖುರನೇಮಿಸ್ವನೇನ ಚ |
ಪೂರಯಂತೋ ದಿಶಃ ಸರ್ವಾ ಧನಂಜಯಮುಪಾದ್ರವನ್ ॥11॥
ಮರುಕ್ಷಣದಲ್ಲಿಯೇ ತ್ರಿಗರ್ತದೇಶದ ಯೋಧರು ರಣಘೋಷದಿಂದ, ರಥ ಚಕ್ರದ ಗಡಗಡ ಶಬ್ದಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬುತ್ತಾ ಅರ್ಜುನನನ್ನು ಆಕ್ರಮಿಸಿದರು.
ಸೂರ್ಯವರ್ಮಾ ತತಃ ಪಾರ್ಥೇ ಶರಾಣಾಂ ನತಪರ್ವಣಾಮ್ |
ಶತಾನ್ಯಮುಂಚದ್ ರಾಜೇಂದ್ರ ಲಾಘವಂ ತ್ವಭಿದರ್ಶಯನ್ ॥12॥
ಸೂರ್ಯವರ್ಮನು ತನ್ನ ಕೈಚಳಕವನ್ನು ತೋರಿಸುತ್ತಾ ಕೆಳಮುಖವಾಗಿ ಬಿಲ್ಲುಗಳಿಂದ ಬಗ್ಗಿರುವ ನೂರಾರು ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು.
ತಥಾ ಚಾನ್ಯೇ ಮಹೇಷ್ವಾಸಾ ಯೇ ತಸ್ಯೈವಾನುಯಾಯಿನಃ |
ಮುಮುಚುಃ ಶರವರ್ಷಾಣಿ ಧನಂಜಯಮುಪಾದ್ರವನ್ ॥13॥
ಅವನನ್ನು ಅನುಸರಿಸಿದ ಮಹಾಧನುಷ್ಮಂತರಾದ ತ್ರಿಗರ್ತಯೋಧರು ಅರ್ಜುನನನ್ನು ಕೊಲ್ಲುವ ಇಚ್ಛೆಯಿಂದಲೇ ಬಾಣಗಳ ಮಳೆಯನ್ನು ಸುರಿಸಿದರು.
ತತಸ್ತ್ರಿಗರ್ತೈರ್ನಿರ್ಮುಕ್ತಾನ್ ಬಹುಭಿಃ ಸುಬಹೂನ್ ಶರಾನ್ |
ಚಿಚ್ಛೇದ ಪಾಂಡವೋ ರಾಜನ್ ತೇ ಭೂಮೌ ನ್ಯಪತನ್ ತದಾ ॥14॥
ಅದಕ್ಕೆ ಪ್ರತಿಯಾಗಿ ಅರ್ಜುನನು ಶಿಂಜಿನಿಯ ಮುಖದಿಂದ ಹೊರಟ ಅನೇಕ ಬಾಣಗಳಿಂದ ತ್ರಿಗರ್ತಯೋಧರು ಬಿಟ್ಟ ಬಾಣಗಳನ್ನು ಕತ್ತರಿಸಿದನು. ಒಡನೆಯೇ ಅವೆಲ್ಲವೂ ಭೂಮಿಯಲ್ಲಿ ದೊಪ್ಪನೆ ಬಿದ್ದವು.
ಕೇತುವರ್ಮಾ ತು ತೇಜಸ್ವೀ ತಸ್ಯೈವಾವರಜೋ ಯುವಾ |

ಯುಯುಧೇ ಭ್ರಾತುರರ್ಥಾಯ ಪಾಂಡವೇನ ಮಹಾತ್ಮನಾ ॥15॥
ಬಳಿಕ ಸೂರ್ಯವರ್ಮನ ಸಹೋದರನಾದ, ತೇಜಸ್ವಿಯಾದ, ಯುವಕನಾದ ಕೇತುವರ್ಮನು ತನ್ನ ಅಣ್ಣನ ಗೆಲುವಿನ ದೃಷ್ಟಿಯಿಂದ ಯಶೋವಂತನಾದ ಅರ್ಜುನನ ಜೊತೆಯಲ್ಲಿ ಯುದ್ಧದಲ್ಲಿ ತೊಡಗಿಸಿಕೊಂಡನು.
ತಮಾಪತಂತಂ ಸಂಪ್ರೇಕ್ಷ್ಯ ಕೇತುವರ್ಮಾಣಮಾಹವೇ।
ಅಭ್ಯಘ್ನನ್ ನಿಶಿತೈರ್ಬಾಣೈಃ ಬೀಭತ್ಸುಃ ಪರವೀರಹಾ ॥16॥
ಯುದ್ಧದಲ್ಲಿ ಕೇತುವರ್ಮನು ತನ್ನ ಮೇಲೆ ಬೀಳುತ್ತಿರುವುದನ್ನು ನೋಡಿದ ಶತ್ರುಹಂತಕನಾದ ಬೀಭತ್ಸುವು ನಿಶಿತವಾದ ಬಾಣಗಳಿಂದ ಅವನನ್ನು ಸಂಹರಿಸಿದನು.
ಕೇತುವರ್ಮಣ್ಯಭಿಹತೇ ಧೃತವರ್ಮಾ ಮಹಾರಥಃ।
ರಥೇನಾಶು ಸಮಾವೃತ್ಯ ಶರೈರ್ಜಿಷ್ಣುಮವಾಕಿರತ್ ॥17॥
ಕೇತುವರ್ಮನು ಹತನಾದ ಬಳಿಕ ಮಹಾರಥನಾದ ಧೃತವರ್ಮನು ರಥದಲ್ಲಿ ಕುಳಿತು ಅರ್ಜುನನನ್ನು ಸಮೀಪಿಸಿ ಕೂಡಲೇ ಜಯಶೀಲನಾದ ಅರ್ಜುನನನ್ನು ಬಾಣಗಳಿಂದ ಮುಚ್ಚಿಬಿಟ್ಟನು.
ತಸ್ಯ ತಾಂ ಶೀಘ್ರತಾಂ ಜ್ಞಾತ್ವಾ ತುತೋಷಾತೀವ ವೀರ್ಯವಾನ್।
ಗುಡಾಕೇಶೋ ಮಹಾತೇಜಾ ಬಾಲಸ್ಯ ಧೃತವರ್ಮಣಃ ॥18॥
ಇನ್ನೂ ಬಾಲಕನಾಗಿರುವ ಧೃತವರ್ಮನ ಬಾಣಪ್ರಯೋಗದ ಕುಶಲವನ್ನು ನೋಡಿದ ವೀರನಾದ ಮಹಾತೇಜಸ್ವಿಯಾದ ಗುಡಾಕೇಶನು ಅವನ ವಿಷಯದಲ್ಲಿ ಸಂತೋಷಪಟ್ಟನು.
ನ ಸಂದಧಾನಂ ದದೃಶೇ ನಾದದಾನಂ ಚ ತಂ ತದಾ।
ಕಿರಂತಮೇವ ಸ ಶರಾನ್ ದದೃಶೇ ಪಾಕಶಾಸನಿಃ ॥19॥
ಧೃತವರ್ಮನು ಬತ್ತಳಿಕೆಯಿಂದ ಬಾಣವನ್ನು ತೆಗೆದುಕೊಳ್ಳುವುದಾಗಲಿ, ಅವುಗಳನ್ನು ಧನುಸ್ಸಿನಲ್ಲಿ ಅನುಸಂಧಾನ ಮಾಡುವುದನ್ನಾಗಲಿ ಅರ್ಜುನನಿಗೆ ನೋಡಲು ಸಾಧ್ಯವಾಗುತ್ತಿರಲಿಲ್ಲ. ಬಾಣಗಳು ಮಳೆಗರೆಯುವುದನ್ನು ಮಾತ್ರ ನೋಡುತ್ತಿದ್ದನು. ಇಂತಹ ಕೈಚಳಕವನ್ನು ಧೃತವರ್ಮನು ತೋರಿಸಿದನು.
ಸ ತು ತಂ ಪೂಜಯಾಮಾಸ ಧೃತವರ್ಮಾಣಮಾಹವೇ।
ಪರಿವವ್ರುರ್ಗುಡಾಕೇಶಂ ತತ್ರಾಕ್ರುದ್ಧ್ಯದ್ ಧನಂಜಯಃ ॥20॥
ಅರ್ಜುನನು ಧೃತವರ್ಮನ ರಣೋತ್ಸಾಹವನ್ನು ಹೆಚ್ಚಿಸುತ್ತಾ ಬಾಣಪ್ರಯೋಗದಲ್ಲಿ ಅವನಿಗಿರುವ ಕೈಚಳಕವನ್ನು ಮನಸ್ಸಿನಲ್ಲಿಯೇ ಸ್ವಲ್ಪ ಸಮಯ ಶ್ಲಾಘಿಸಿದನು. ಧೃತವರ್ಮನು ಕ್ರುದ್ಧನಾಗಿ ಯುದ್ಧ ಮಾಡುತ್ತಿದ್ದರೂ ಪ್ರೀತಿಯಿಂದ ಅವನನ್ನು ಸಂಹರಿಸಲಿಲ್ಲ.
ತತೋ ಯೋಧಾನ್ ಜಘಾನಾಶು ತೇಷಾಂ ಸ ದಶ ಚಾಷ್ಟ ಚ।
ಮಹೇಂದ್ರವಜ್ರಪ್ರತಿಮೈರಾಯಸೈಃ ನಿಶಿತೈಃ ಶರೈಃ ॥21॥
ಬಳಿಕ ತೇಜಸ್ವಿಯಾದ ಅರ್ಜುನನು ಪ್ರೀತಿಯಿಂದ ಶತ್ರುವಿನ ಮೇಲೆ ಪ್ರಾಣವನ್ನು ತೆಗೆಯುವಂತೆ ಬಾಣಗಳನ್ನು ಪ್ರಯೋಗಿಸದೆ ಮೃದುಯೋಧಿಯಾಗಿದ್ದನು. ಈ ಅವಕಾಶವನ್ನು ಉಪಯೋಗಿಸಿಕೊಂಡು ಧೃತವರ್ಮನು ಅರ್ಜುನನ ಯೋಧರ ಮೇಲೆ ನಿಶಿತವಾದ, ವಜ್ರಾಯುಧಕ್ಕೆ ಸಮಾನವಾದ ಎಂಟು-ಹತ್ತು ಬಾಣಗಳನ್ನು ಪ್ರಯೋಗಿಸಿದನು.
ತಾಂಸ್ತು ಭಗ್ನಾನ್ ಸ ಸಂಪ್ರೇಕ್ಷ್ಯ ತ್ವರಮಾಣೋ ಧನಂಜಯಃ।
ಶರೈರಾಶೀವಿಷಾಕಾರೈರ್ಜಘಾನ ಸ್ವನವದ್ಧಸನ್ ॥22॥
ನಿಶಿತವಾದ ಬಾಣಗಳು ಭಗ್ನವಾದುದನ್ನು ಕಂಡು ಧನಂಜಯನು ವೇಗವಾಗಿ ಸರ್ಪದಂತೆ ಆಕಾರವನ್ನು ಹೊಂದಿರುವ ಬಾಣಗಳಿಂದ ಧೃತವರ್ಮನ ಬಾಣಗಳನ್ನು ನಗುತ್ತಲೇ ತುಂಡರಿಸಿದನು.
ತೇ ಭಗ್ನಮನಸಃ ಸರ್ವೇ ತ್ರೈಗರ್ತಾಸ್ತು ಮಹಾರಥಾಃ।
ದಿಶೋ ವಿದುದ್ರುವೂ ರಾಜನ್ ಧನಂಜಯಶರಾರ್ದಿತಾಃ ॥23॥
ತಮ್ಮ ಉದ್ದೇಶ ಸಿದ್ಧಿಯೂ ಆಗದೆ ತ್ರಿಗರ್ತ ಯೋಧ ಮಹಾರಥರೆಲ್ಲರೂ ಧನಂಜಯನ ಬಾಣಗಳಿಂದ ಪೀಡಿತರಾಗಿ ಹತ್ತು ದಿಕ್ಕುಗಳ ಕಡೆ ಓಡಿದರು.
ಹತಾವಶಿಷ್ಟಾ ಹಿ ಪುರಾ ಪಾರ್ಥಂ ದೃಷ್ಟಪರಾಕ್ರಮಾಃ।
ತಮೂಚುಃ ಪುರುಷವ್ಯಾಘ್ರಂ ಸಂಶಪ್ತಕನಿಷೂದನಮ್ ॥24॥
ಹಿಂದೆಯೇ ಅರ್ಜುನನ ಪರಾಕ್ರಮವನ್ನು ಅನುಭವಿಸಿದ ರಣರಂಗದಲ್ಲಿ ಹತರಾಗದೆ ಉಳಿದಿರುವ ಆ ಯೋಧರು ಸಂಶಪ್ತಕರನ್ನು ಕೊಂದಿರುವ ಪುರುಷವ್ಯಾಘ್ರನಾದ ಅರ್ಜುನನನ್ನು ಕುರಿತು ಇಂತು ನುಡಿದರು.
ತ್ರೈಗರ್ತಾಃ
ತವ ಸ್ಮ ಕಿಂಕರಾಃ ಸರ್ವೇ ಸರ್ವೇ ಚ ವಶಗಾಸ್ತವ।
ಆಜ್ಞಾಪಯಸ್ವ ನಃ ಪಾರ್ಥ ಪ್ರಹ್ವಾನ್ ಪ್ರೇಷ್ಯಾನಿವ ಸ್ಥಿತಾನ್ ॥25॥
ಕರಿಷ್ಯಾಮಃ ಪ್ರಿಯಂ ಸರ್ವೇ ತವ ಕೌರವನಂದನ ॥26॥
ತ್ರೈಗರ್ತರು ಅರ್ಜುನನೇ, ನಾವೆಲ್ಲರೂ ನಿನ್ನ ಸೇವಕರಾಗಿದ್ದೇವೆ. ನಿನ್ನ ಅಧೀನರಾಗಿದ್ದೇವೆ. ವಿನೀತರಾದ ಸೇವಕರಾದ ನಮಗೆ ಕರ್ತವ್ಯವನ್ನು ಆಜ್ಞಾಪಿಸು. ನಿನಗೆ ಪ್ರಿಯವಾದುದನ್ನೆಲ್ಲ ಮಾಡುತ್ತೇವೆ.
ವೈಶಂಪಾಯನಃ
ಏತದಾಜ್ಞಾಯ ವಚನಂ ಸರ್ವಾಂಸ್ತಾನಬ್ರವೀತ್ ತದಾ ॥27॥
ವೈಶಂಪಾಯನ ಜನಮೇಜಯನೇ, ತ್ರಿಗರ್ತಯೋಧರು ವಿನಯ ಪೂರ್ವಕವಾಗಿ ಇಂತು ನುಡಿದ ಬಳಿಕ ಅವರನ್ನುದ್ದೇಶಿಸಿ ಅರ್ಜುನನು

ಹೇಳಿದನು.
ಅರ್ಜುನಃ
ಜೀವಿತಂ ರಕ್ಷತ ನೃಪಾಃ ಶಾಸನಂ ಗೃಹ್ಯತಾಂ ಮಮ ॥28॥
ಅರ್ಜುನ ರಾಜರೇ, ನೀವು ನಮ್ಮ ಅಧಿಕಾರವನ್ನೊಪ್ಪಿಕೊಂಡು ನಿಮ್ಮ ಪ್ರಾಣಗಳನ್ನು ಉಳಿಸಿಕೊಳ್ಳಿರಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ತ್ರಿಗರ್ತಯುದ್ಧವರ್ಣನಂ ನಾಮ ಚತುಃಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೈದನೆಯ ಅಧ್ಯಾಯ
ಪ್ರಾಗ್ಜ್ಯೋತಿಷ ಪುರವನ್ನು ಹೊಂದಿದ ಅರ್ಜುನನು
ಭಗದತ್ತನ ಮಗನಾದ ವಜ್ರದತ್ತನೊಡನೆ ಯುದ್ಧ ಮಾಡಿದ ಪ್ರಸಂಗ.
ವೈಶಂಪಾಯನಃ
ಪ್ರಾಗ್ಜ್ಯೋತಿಷಮಥಾಭ್ಯೇತ್ಯ ವ್ಯಚರತ್ ಸ ಹಯೋತ್ತಮಃ |
ಭಗದತ್ತಾತ್ಮಜಸ್ತತ್ರ ನಿರ್ಯಯೌ ರಣಕರ್ಕಶಃ ॥1॥
ವೈಶಂಪಾಯನ ಜನಮೇಜಯನೇ, ಅನಂತರ ಅರ್ಜುನನು ಯುಧಿಷ್ಠಿರನ ಮೇಧಾಶ್ವವು ಪ್ರಾಗ್ಜ್ಯೋತಿಷ ನಗರಕ್ಕೆ ಪ್ರವೇಶಿಸುತ್ತಿರಲು ಅದನ್ನು ಅನುಸರಿಸಿ ಹೊರಟನು. ಆ ಪುರದಲ್ಲಿಯಾದರೂ ರಣಭಯಂಕರನಾದ ಭಗದತ್ತನ ಮಗನಾದ ವಜ್ರದತ್ತನು ಕುದುರೆಯನ್ನು ಬಂಧಿಸಬೇಕೆಂದು ತನ್ನ ರಾಜಧಾನಿಯಿಂದ ಹೊರಟನು.
ಸಹಯಂ ಪಾಂಡುಪುತ್ರಂ ತಂ ವಿಷಯಾಂತಮುಪಾಗತಮ್ |
ಯುಯುಧೇ ಭರತಶ್ರೇಷ್ಠ ವಜ್ರದತ್ತೋ ಮಹೀಪತಿಃ ॥2॥
ಪಾಂಡುಪುತ್ರನಾದ ಯುಧಿಷ್ಠಿರನ ಯಜ್ಞಾಶ್ವವು ತನ್ನ ಪುರಕ್ಕೆ ಆಗಮಿಸಿದೆ. ಆ ಯಜ್ಞಾಶ್ವದ ಜೊತೆಗೆ ಅರ್ಜುನನೂ ಆಗಮಿಸಿದ್ದಾನೆ ಎಂಬುದನ್ನು ತಿಳಿದು ವಜ್ರದತ್ತನು ಆ ಕುದುರೆಯನ್ನು ಬಂಧಿಸಿ ಯುದ್ಧ ಮಾಡಬೇಕೆಂದು ಬಯಸಿದನು.
ಸೋಽಭಿನಿರ್ಯಾಯ ನಗರಾದ್ ಭಗದತ್ತಸುತೋ ನೃಪಃ |
ಅಶ್ವಮಾಯಾಂತಮುನ್ಮಥ್ಯ ನಗರಾಭಿಮುಖೋ ಯಯೌ ॥3॥
ವಜ್ರದತ್ತನು ನಗರದಿಂದ ಹೊರಟು ತನ್ನ ಕಡೆ ಬರುತ್ತಿರುವ ಕುದುರೆಯನ್ನು ಬಂಧಿಸಿ ಕುದುರೆಯೊಡನೆ ಪಟ್ಟಣದ ಕಡೆ ಪ್ರಯಾಣ ಮಾಡಿದನು.
ತಮಾಲಕ್ಷ್ಯ ಮಹಾಬಾಹುಃ ಕುರೂಣಾಮೃಷಭಸ್ತದಾ |
ಗಾಂಡೀವಂ ವಿಕ್ಷಿಪಂಸ್ತೂರ್ಣಂ ಸಹಸಾ ಸಮುಪಾದ್ರವತ್ ॥4॥
ಇದನ್ನು ಕಂಡ ಕುರುಶ್ರೇಷ್ಠನಾದ ಮಹಾಬಾಹುವಾದ ಅರ್ಜುನನು ಗಾಂಡೀವ ಧನುಸ್ಸನ್ನು ಠೇಂಕರಿಸುತ್ತಾ ವೇಗವಾಗಿ ವಜ್ರದತ್ತನನ್ನು ಆಕ್ರಮಿಸಿದನು.
ತತೋ ಗಾಂಡೀವನಿರ್ಮುಕ್ತೈರಿಷುಭಿರ್ಮೋಹಿತೋ ನೃಪಃ |
ಹಯಮುತ್ಸೃಜ್ಯ ತಂ ವೀರಃ ತತಃ ಪಾರ್ಥಮುಪಾದ್ರವತ್ ॥5॥
ಗಾಂಡೀವ ಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ವಿಮೋಹಿತನಾದ ವಜ್ರದತ್ತನು ಕುದುರೆಯನ್ನು ಬಿಟ್ಟು ನಗರಕ್ಕೆ ಹೋಗಿ ಯುದ್ಧ ಸನ್ನದ್ಧನಾಗಿ ಪಾರ್ಥನನ್ನು ಆಕ್ರಮಿಸಿದನು.
ಪುನಃ ಪ್ರವಿಶ್ಯ ನಗರಂ ದಂಸಿತಸ್ತು ನೃಪೋತ್ತಮಃ |
ಆರುಹ್ಯ ನಾಗಪ್ರವರಂ ನಿರ್ಯಯೌ ಯೋದ್ಧುಕಾಂಕ್ಷಯಾ ॥6॥
ಅರ್ಜುನನ ಬಾಣಗಳಿಂದ ಪೆಟ್ಟು ತಿಂದಿರುವ ವಜ್ರದತ್ತನು ಪುನಃ ನಗರವನ್ನು ಪ್ರವೇಶಿಸಿ ಶ್ರೇಷ್ಠವಾದ ಆನೆಯೊಂದನ್ನು ಏರಿಕೊಂಡು ಯುದ್ಧ ಮಾಡುವ ದೃಷ್ಟಿಯಿಂದ ಆಗಮಿಸಿದನು.
ಪಾಂಡುರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ದೋಧೂಯಮಾನೇನ ತದಾ ಚಾಮರೇಣ ಮಹಾರಥಃ ॥7॥
ಯುದ್ಧಕ್ಕೆ ಆಗಮಿಸಿದ ವಜ್ರದತ್ತನು ಶ್ವೇತಚ್ಛತ್ರವನ್ನು ತನ್ನ ತಲೆಯ ಮೇಲೆ ಧರಿಸಿದ್ದನು. ಸೇವಕರು ಬಿಳಿಯ ಚಾಮರಗಳನ್ನು ಬೀಸುತ್ತಿದ್ದರು.
ತತಃ ಪಾರ್ಥಂ ಸಮಾಸಾದ್ಯ ಪಾಂಡವಾನಾಂ ಮಹಾರಥಮ್ |
ಆಹೂತವಾನ್ ಹಿ ಕೌರವ್ಯಂ ಬಾಲ್ಯಾನ್ಮೋಹಾಚ್ಚ ಸಂಯುಗೇ ॥8॥
ಯುದ್ಧ ಮದದಿಂದ ಅರ್ಜುನನ ಬಳಿ ಆಗಮಿಸಿದ ವಜ್ರದತ್ತನು ಬಾಲ್ಯ ಚಾಪಲ್ಯತೆಯಿಂದಲೂ, ಮೌಢ್ಯದಿಂದಲೂ ಅರ್ಜುನನನ್ನು ಯುದ್ಧಕ್ಕೆ ಕರೆದನು.
ಸ ವಾರಣಂ ನಗಪ್ರಖ್ಯಂ ಪ್ರಭಿನ್ನಕರಟಾಮುಖಮ್ |
ಪ್ರೇಷಯಾಮಾಸ ಸಂಕ್ರುದ್ಧಸ್ತತಃ ಶ್ವೇತಹಯಂ ಪ್ರತಿ ॥9॥
ಅತ್ಯಂತ ಕೋಪಗೊಂಡಿರುವ ವಜ್ರದತ್ತನು ಮದೋದಕವನ್ನು ಸುರಿಸುತ್ತಿದ್ದ, ಪರ್ವತದಂತೆ ಕಾಣುತ್ತಿದ್ದ ಮಹಾಗಜವನ್ನು ಅರ್ಜುನನ ಮೇಲೆ ಎರಗಿ ಬೀಳುವಂತೆ ಪ್ರಚೋದಿಸಿದನು.
ವಿಕ್ಷರಂತಂ ಯಥಾ ಮೇಘಂ ಪರವಾರಣವಾರಣಮ್ |

ಶಸ್ತ್ರವತ್ ಕಲ್ಪಿತಂ ಸಂಖೇ ತ್ರಿಸಾಹಂ ಯುದ್ಧದುರ್ಮದಮ್ ॥10॥
ಆ ಮಹಾಗಜವು ಮಹಾಮೇಘವು ಮಳೆಯನ್ನು ಸುರಿಸುವಂತೆ ತನ್ನ ತಲೆಯಿಂದ ಮದೋದಕವನ್ನು ಸುರಿಸುತ್ತಿತ್ತು. ಅದರ ಎರಡು ದಂತಗಳು ಎರಡು ಶಸ್ತ್ರದಂತೆ ಇದ್ದವು. ಆ ಆನೆಯ ಎರಡು ಕರ್ಣಮೂಲಗಳು ಕಾಲುಗಳಿಂದ ಉಂಟಾಗುವ ವೇದನೆಯನ್ನು ಸಹಿಸಿಕೊಳ್ಳುತ್ತಿದ್ದವು (ಮಾವುತನು ಆನೆಯ ಕಿವಿಗಳನ್ನು ಕಾಲಿನಿಂದ ತುಳಿಯುತ್ತಿರುವಾಗ ವೇದನೆಯು ಉಂಟಾಗುತ್ತದೆ. ಈ ಮಹಾಗಜಕ್ಕೆ ಅಂತಹ ವೇದನೆಯು ಉಂಟಾಗುತ್ತಿರಲಿಲ್ಲ ಎಂದು ಭಾವ). ತಲೆಯಲ್ಲಿ ಅಂಕುಶದ ದಾತವನ್ನು ಸಹಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿತ್ತು. ಈ ಅಭಿಪ್ರಾಯದಲ್ಲಿ `ತ್ರಿಸಾಹಂ' ಎರಡು ಕಿವಿಗಳು, ತಲೆ - ಮೂರು ಸ್ಥಳಗಳಲ್ಲಿ ವೇದನೆಯನ್ನು ಸಹಿಸಿಕೊಳ್ಳುವ ಗಜ ಎಂದಿದ್ದಾರೆ.
ಪ್ರಚೋದ್ಯಮಾನಃ ಸ ಗಜಸ್ತೇನ ರಾಜ್ಞಾ ಮಹಾಬಲಃ।
ತದಾಽಂಕುಶೇನ ವಿಬಭಾವುತ್ಪತಿಷ್ಯನ್ನಿವಾಂಬರಮ್ ॥11॥
ಯುದ್ಧ ದುರ್ಮದವಾದ ಇಂತಹ ಗಜವನ್ನು ವಜ್ರದತ್ತನು ಅರ್ಜುನನ ಮೇಲೆ ಬೀಳಲು ಪ್ರಚೋದಿಸಿದನು. ಮಹಾಬಲಿಷ್ಠವಾದ ಆನೆಯು ಅಂಕುಶದಿಂದ ಪ್ರಚೋದಿತವಾಗಿ ಅರ್ಜುನನ ಮೇಲೆ ಎರಗುತ್ತಾ ಆಕಾಶಕ್ಕೆ ಹಾರುತ್ತಿರುವುದೋ ಎಂಬಂತೆ ಕಾಣಿಸುತ್ತಿತ್ತು.
ತಮಾಪತಂತಂ ಸಂಪ್ರೇಕ್ಷ್ಯ ಕ್ರುದ್ಧೋ ರಾಜನ್ ಧನಂಜಯಃ।
ಭೂಮಿಷ್ಠೋ ವಾರಣಗತಂ ಯೋಧಯಾಮಾಸ ಭಾರತ ॥12॥
ವಜ್ರದತ್ತನು ಈ ಕ್ರಮದಲ್ಲಿ ಆನೆಯನ್ನೇರಿ ತನ್ನನ್ನು ಅತಿಕ್ರಮಿಸಲು ಬರುತ್ತಿರುವುದನ್ನು ಕಂಡ ಕ್ರುದ್ಧನಾದ ಅರ್ಜುನನು ತಾನು ಭೂಮಿಯ ಮೇಲೆ ನಿಂತಿದ್ದರೂ ಆನೆಯ ಮೇಲಿದ್ದ ವಜ್ರದತ್ತನೊಡನೆ ಯುದ್ಧದಲ್ಲಿ ತೊಡಗಿದನು.
ವಜ್ರದತ್ತಸ್ತು ಸಂಕ್ರುದ್ಧೋ ಮುಮೋಚಾಶು ಧನಂಜಯೇ।
ತೋಮರಾನಗ್ನಿಸಂಕಾಶಾನ್ ಶಲಭಾನಿವ ವೇಗಿತಾನ್ ॥13॥
ಕ್ರುದ್ಧನಾದ ವಜ್ರದತ್ತನು ಅಗ್ನಿಸದೃಶವಾಗಿದ್ದ ಶಲಬಗಳಂತೆ ವೇಗವುಳ್ಳವುಗಳಾಗಿದ್ದ ತೋಮರಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು.
ಅರ್ಜುನಸ್ತಾನಸಂಪ್ರಾಪ್ತಾನ್ ಗಾಂಡೀವಪ್ರೇಷಿತೈಃ ಶರೈಃ।
ದ್ವಿಧಾ ತ್ರಿಧಾ ಚ ಚಿಚ್ಛೇದ ಖ ಏವ ಖಗಮೈಸ್ತದಾ ॥14॥
ವಜ್ರದತ್ತನು ಪ್ರಯೋಗಿಸಿದ ತೋಮರಗಳು ಹತ್ತಿರಕ್ಕೆ ಬರುವ ಮೊದಲೇ ಅರ್ಜುನನು ಆಕಾಶಚಾರಿಗಳಾದ ತೀಕ್ಷ್ಣವಾದ ಬಾಣಗಳನ್ನು ಗಾಂಡೀವ ಧನುಸ್ಸಿನಿಂದ ಪ್ರಯೋಗಿಸಿ ವಜ್ರದತ್ತನ ಬಾಣಗಳನ್ನು ಎರಡು-ಮೂರು ಭಾಗಗಳಾಗಿ ಕತ್ತರಿಸಿದನು.
ಸ ತಾನ್ ದೃಷ್ಟ್ವಾ ತದಾ ಛಿನ್ನಾನ್ ತೋಮರಾನ್ ಭಗದತ್ತಜಃ।
ಇಷೂನಸಕ್ತಾಂಸ್ತ್ವರಿತಃ ಪ್ರಾಹಿಣೋತ್ ಪಾಂಡವಂ ಪ್ರತಿ ॥15॥
ವಜ್ರದತ್ತನು ಬಿಡಲ್ಪಟ್ಟ ತೋಮರಗಳೆಲ್ಲವೂ ಕೆಳಗೆ ಬಿದ್ದುದನ್ನು ಕಂಡು ಪುನಃ ವೇಗವಾಗಿ ಸುವರ್ಣಮಯವಾದ ಗರಿಗಳನ್ನು ಹೊಂದಿರುವ ನೇರವಾಗಿ ಹೋಗುವ ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು.
ತತೋಽರ್ಜುನಸ್ತೂರ್ಣತರಂ ರುಗ್ಮಪುಂಖಾನಜಿಹ್ಮಗಾನ್।
ಪ್ರೇಷಯಾಮಾಸ ಸಂಕ್ರುದ್ಧೋ ಭಗದತ್ತಾತ್ಮಜಂ ಪ್ರತಿ ॥16॥
ಭಗದತ್ತನ ಸುತನಲ್ಲಿ ಕ್ರುದ್ಧನಾದ ಅರ್ಜುನನು ವೇಗವಾಗಿ ಸುವರ್ಣಮಯವಾದ ಪುಂಖಗಳನ್ನು ಹೊಂದಿರುವ ನೇರವಾಗಿ ಸಾಗುವ ಬಾಣಗಳನ್ನು ವಜ್ರದತ್ತನ ಮೇಲೆ ಪ್ರಯೋಗಿಸಿದನು.
ಸ ತೈರ್ವಿದ್ಧೋ ಮಹಾತೇಜಾ ವಜ್ರದತ್ತೋ ಮಹಾಹವೇ।
ಭೃಶಂ ಹತಃ ಪಪಾತೋರ್ವ್ಯಾಂ ನ ತ್ವೇನಮಜಹಾತ್ ಸ್ಮೃತಿಃ ॥17॥
ಆ ಮಹಾಯುದ್ಧದಲ್ಲಿ ಅರ್ಜುನನ ತೀಕ್ಷ್ಣಬಾಣಗಳಿಂದ ಹೊಡೆಯಲ್ಪಟ್ಟ ತೇಜಸ್ವಿಯಾದ ವಜ್ರದತ್ತನು ಗಾಯಗೊಂಡವನಾಗಿ ನೆಲದ ಮೇಲೆ ಬಿದ್ದನು. ಆದರೆ ಮೂರ್ಛೆ ಹೊಂದಲಿಲ್ಲ.
ತತಃ ಸ ಪುನರಾರುಹ್ಯ ವಾರಣಪ್ರವರಂ ರಣೇ।
ಅವ್ಯಗ್ರಂ ಪ್ರೇಷಯಾಮಾಸ ಜಯಾರ್ಥೀ ವಿಜಯಂ ಪ್ರತಿ ॥18॥
ಪುನಃ ವಜ್ರದತ್ತನು ಶ್ರೇಷ್ಠವಾದ ಆನೆಯ ಮೇಲೆ ಕುಳಿತು ಜಯಾಕಾಂಕ್ಷಿಯಾಗಿ ಏಕಾಂಗಿಯಾಗಿ ವಿಜಯನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದನು.
ತಸ್ಮೈ ಬಾಣಾಂಸ್ತತೋ ಜಿಷ್ಣುರ್ನಿರ್ಮುಕ್ತಾಶೀವಿಷೋಪಮಾನ್।
ಪ್ರೇಷಯಾಮಾಸ ಸಂಕ್ರುದ್ಧೋ ಜ್ವಲಿತಾನಿವ ಪಾವಕಾನ್ ॥19॥
ಇದರಿಂದ ಕ್ರುದ್ಧನಾದ ಧನಂಜಯನೂ ಯಜ್ಞೇಶ್ವರನು ತೇಜೋವಿಶಿಷ್ಟನಾಗಿ ಬೆಳಗುವಂತೆ ಬೆಳಗುವ ಬಾಣಗಳನ್ನು ವಜ್ರದತ್ತನ ಆನೆಯ ಮೇಲೆ ಪ್ರಯೋಗಿಸಿದನು.
ಸ ತೈರ್ವಿದ್ಧೋ ಮಹಾಭಾಗೋ ವಿಸ್ರುವನ್ ರುಧಿರಂ ಬಭೌ।
ಹಿಮವಾನಿವ ಶೈಲೇಂದ್ರೋ ಬಹುಪ್ರಸ್ರವಣಸ್ತದಾ ॥20॥
ಅರ್ಜುನನು ಪ್ರಯೋಗಿಸಿದ ಬಾಣಗಳಿಂದ ವ್ಯಥಿತವಾದ ಆನೆಯು ಧಾರಾಕಾರವಾಗಿ ರಕ್ತವನ್ನು ಸುರಿಸುತ್ತಾ ಗೈರಿಕಾರಿ ಧಾತುಗಳಿಂದ ಮಿಶ್ರಿತವಾದ, ನೀರಿನಿಂದ ಪ್ರವಹಿಸುವ ಝರಿಗಳುಳ್ಳ ಹಿಮವದ್ ಪರ್ವತದಂತೆಯೇ ಕಾಣಿಸುತ್ತಿತ್ತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಚರಣೋ ನಾಮ ಪಂಚಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿಯಿತು.

* * * * *
॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಆಶ್ವಮೇಧಿಕ ಪರ್ವ
ಎಪ್ಪತ್ತಾರನೆಯ ಅಧ್ಯಾಯ
ಅರ್ಜುನನಿಂದ ವಜ್ರದತ್ತನ ಪರಾಜಯ
ವೈಶಂಪಾಯನಃ
ಏವಂ ತ್ರಿರಾತ್ರಮಭವತ್ ತದ್ಯುದ್ಧಂ ಭರತರ್ಷಭ |
ಅರ್ಜುನಸ್ಯ ನರೇಂದ್ರೇಣ ವೃತ್ರೇಣೇವ ಶತಕ್ರತೋಃ ॥1॥
ವೈಶಂಪಾಯನ ಹೀಗೆ ವಜ್ರದತ್ತನಿಗೂ ಅರ್ಜುನನಿಗೂ ಇಂದ್ರ-ವೃತ್ರರಿಗೂ ನಡೆದ ಯುದ್ಧದಂತೆ ಮೂರು ದಿವಸಗಳ ಪರ್ಯಂತ ಘೋರವಾದ ಯುದ್ಧವು ನಡೆಯಿತು.
ತತಶ್ಚತುರ್ಥೇ ದಿವಸೇ ವಜ್ರದತ್ತೋ ಮಹಾಬಲಃ |
ಜಹಾಸ ಸಸ್ವನಂ ಹಾಸಂ ವಾಕ್ಯಂ ಚೇದಮಥಾಬ್ರವೀತ್ ॥2॥
ನಾಲ್ಕನೆಯ ದಿವಸದಲ್ಲಿ ಮಹಾಬಲಿಷ್ಠನಾದ ವಜ್ರದತ್ತನು ಅಟ್ಟಹಾಸಪೂರ್ವಕವಾಗಿ ಜೋರಾಗಿ ನಗುತ್ತಾ ಇಂತು ನುಡಿದನು.
ವಜ್ರದತ್ತಃ
ಅರ್ಜುನಾರ್ಜುನ ತಿಷ್ಠ ತ್ವಂ ನ ಮೇ ಜೀವನ್ ವಿಮೋಕ್ಷ್ಯಸೇ |
ತ್ವಾಂ ನಿಹತ್ಯ ಕರಿಷ್ಯಾಮಿ ಪಿತುಸ್ತೋಯಂ ಯಥಾವಿಧಿ ॥3॥
ವಜ್ರದತ್ತ ಎಲೈ ಅರ್ಜುನನೇ, ನಿಲ್ಲು. ಜೀವಸಹಿತವಾಗಿ ನನ್ನಿಂದ ಹೋಗಲಾರೆ. ನಿನ್ನನ್ನು ಸಂಹರಿಸಿ ನನ್ನ ತಂದೆಗೆ ವಿಧಿಬದ್ಧವಾದ ತರ್ಪಣವನ್ನು ನೀಡುತ್ತೇನೆ.
ತ್ವಯಾ ವೃದ್ಧೋ ಮಮ ಪಿತಾ ಭಗದತ್ತಃ ಪಿತುಃ ಸಖಾ |
ಹತೋ ವೃದ್ಧೋಽಪಚಾಯಿತ್ವಾ ಶಿಶುಂ ಮಾಮದ್ಯ ಯೋಧಯ ॥4॥
ವೃದ್ಧನಾದ ನಿನ್ನ ತಂದೆಯು ನನ್ನ ತಂದೆಗೆ ಮಿತ್ರನಾಗಿದ್ದನು. ಹೀಗಿದ್ದರೂ ಅಂತಹ ವೃದ್ಧನಾದ ನನ್ನ ತಂದೆಯನ್ನು ನೀನು ಸಂಹರಿಸಿರುವಿ. ನಾನು ಬಾಲಕನೇ ಆಗಿದ್ದರೂ ಸಾಮರ್ಥ್ಯವಿದ್ದಲ್ಲಿ ನನ್ನೊಡನೆ ಯುದ್ಧವನ್ನು ಮಾಡು.
ವೈಶಂಪಾಯನಃ
ಇತ್ಯೇವಮುಕತ್ವ ಸಂಕ್ರುದ್ಧೋ ವಜ್ರದತ್ತೋ ನರಾಧಿಪಃ |
ಪ್ರೇಷಯಾಮಾಸ ಕೌರವ್ಯ ವಾರಣಂ ಪಾಂಡವಂ ಪ್ರತಿ ॥5॥
ವೈಶಂಪಾಯನ ಹೀಗೆ ಕ್ರುದ್ಧನಾದ ವಜ್ರದತ್ತನು ಪುನಃ ತನ್ನ ಆನೆಯನ್ನು ಅರ್ಜುನನ ಮೇಲೆ ಅತಿಕ್ರಮಿಸುವಂತೆ ಪ್ರಚೋದಿಸಿದನು.
ಸ ಪ್ರೇಷ್ಯಮಾಣೋ ನಾಗೇಂದ್ರೋ ವಜ್ರದತ್ತೇನ ಧೀಮತಾ |
ಉತ್ಪತಿಷ್ಯನ್ನಿವಾಕಾಶೇ ಹ್ಯಭಿದುದ್ರಾವ ಪಾಂಡವಮ್ ॥6॥
ಬುದ್ಧಿವಂತನಾದ ವಜ್ರದತ್ತನಿಂದ ಪ್ರೇರಿತವಾದ ಗಜಶ್ರೇಷ್ಠವು ಆಕಾಶಕ್ಕೆ ಹಾರಿ ಹೋಗುತ್ತಿರುವುದೋ ಎಂಬಂತೆ ವೇಗವಾಗಿ ಅರ್ಜುನನ ಕಡೆ ಅಟ್ಟಿಸಿಕೊಂಡು ಬಂದಿತು.
ಅಗ್ರಹಸ್ತಪ್ರಯುಕ್ತೇನ ಶೀಕರೇಣ ಸ ಫಲ್ಗುನಮ್ |
ಸಮುಕ್ಷತ ಮಹಾರಾಜ ಶೈಲಂ ನೀಲ ಇವಾಂಬುದಃ ॥7॥
ಆ ಮಹಾಗಜವು ಮೇಘವೊಂದು ನೀಲಪರ್ವತದ ಮೇಲೆ ಮಳೆಗರೆಯುವಂತೆ ಸೊಂಡಿಲಿನಿಂದ ನೀರಿನ ತುಂತುರುವನ್ನು ಅರ್ಜುನನ ಮೇಲೆ ಪೂತ್ಕಾರದಿಂದ ಎರಚಿತು.
ಸ ತೇನ ಪ್ರೇಷಿತೋ ರಾಜ್ಞಾ ಮೇಘವದ್ ವಿನದನ್ ಮುಹುಃ |
ಮುಖಾಡಂಬರಘೋಷೇಣ ಸಮಾದ್ರವತ ಫಲ್ಗುನಮ್ ॥8॥
ವಜ್ರದತ್ತನಿಂದ ಪ್ರೇರಿತವಾದ ಆನೆಯು ಮೇಘದಂತೆ ಮತ್ತೆ ಮತ್ತೆ ಘೀಳಿಡುತ್ತಾ ಮುಖದಿಂದ ಹೊರಹೊಮ್ಮುವ ಚೀತ್ಕಾರ, ಕೋಲಾಹಲದ ಜೊತೆಗೆ ಅರ್ಜುನನನ್ನು ಆಕ್ರಮಿಸಲು ಜೋರಾಗಿ ಆಗಮಿಸಿತು.
ಸ ನೃತ್ಯನ್ನಿವ ನಾಗೇಂದ್ರೋ ವಜ್ರದತ್ತಪ್ರಚೋದಿತಃ |
ಆಸಸಾದ ದ್ರುತಂ ರಾಜನ್ ಕೌರವಾಣಾಂ ಮಹಾರಥಮ್ ॥9॥
ಆ ಗಜರಾಜನು ನರ್ತನ ಮಾಡುತ್ತಿರುವನೋ ಎಂಬಂತೆ ಹೆಜ್ಜೆಗಳನ್ನಿಡುತ್ತಾ ಮಹಾರಥಿಕನಾದ ಅರ್ಜುನನ ಬಳಿ ಧಾವಿಸಿ ಬಂದಿತು.
ತಮಾಪತಂತಂ ಸಂಪ್ರೇಕ್ಷ್ಯ ವಜ್ರದತ್ತಸ್ಯ ವಾರಣಮ್ |
ಗಾಂಡೀವಮಾಶ್ರಿತ್ಯ ಬಲೀ ನ ಹ್ಯಕಂಪತ ಶತ್ರುಹಾ ॥10॥
ತನ್ನ ಕಡೆಗೆ ವೇಗವಾಗಿ ಬರುತ್ತಿರುವ ವಜ್ರದತ್ತನ ಆನೆಯನ್ನು ಕಂಡ, ಶತ್ರುಹಂತಕನಾದ ಅರ್ಜುನನು ಹೆದರದೆ ಗಾಂಡೀವ ಧನುಸ್ಸನ್ನು ಆಶ್ರಯಿಸಿ ಯುದ್ಧ ಸನ್ನದ್ಧನಾಗಿ ನಿಂತನು.
ಚುಕ್ರೋಧ ಬಲವಚ್ಚಾಪಿ ಪಾಂಡವಸ್ತಸ್ಯ ಭೂಪತೇಃ |
ಕಾರ್ಯವಿಘ್ನಮನುಸ್ಮೃತ್ಯ ಪೂರ್ವವೈರಂ ಚ ಭಾರತ ॥11॥
ವಜ್ರದತ್ತನು ಯಜ್ಞದ ಕುದುರೆಯನ್ನು ಬಂಧಿಸಿದ್ದನ್ನೂ, ತನ್ನ ಸತ್ಕರ್ಮಗಳಿಗೆ ವಿಘ್ನವನ್ನುಂಟು ಮಾಡುತ್ತಿರುವುದನ್ನೂ, ಭಗದತ್ತನಿಗೂ ತನಗೂ ಇದ್ದ ವೈರವನ್ನೂ ಸ್ಮರಿಸಿ, ಎಲ್ಲವನ್ನೂ ಕಂಡು ಅರ್ಜುನನು ಬಹಳ ಸಿಟ್ಟುಕೊಂಡನು.

ತತಸ್ತು ವಾರಣಂ ಕ್ರುದ್ಧಃ ಶರಜಾಲೇನ ಪಾಂಡವಃ |
ನಿವಾರಯಾಮಾಸ ತದಾ ವೇಲೇವ ಮಕರಾಲಯಮ್ ॥12॥
ಬಳಿಕ ಅರ್ಜುನನು ಉಕ್ಕಿಬರುವ ಸಮುದ್ರವನ್ನು ತಡೆಯುವಂತೆ ಬಾಣಗಳನ್ನು ಪ್ರಯೋಗಿಸಿ ಮಹಾಗಜವನ್ನು ತಡೆದು ನಿಲ್ಲಿಸಿದನು.
ಸ ನಾಗಪ್ರವರೋ ವೀರ್ಯಾದ್ ಅರ್ಜುನೇನ ನಿವಾರಿತಃ |
ತಸ್ಥೌ ಶರೈರ್ವಿನುನ್ನಾಂಗಃ ಶ್ವಾವಿಚ್ಛಲಲಿತೋ ಯಥಾ ॥13॥
ಅರ್ಜುನನ ಬಾಣಗಳಿಂದ ತಡೆಯಲ್ಪಟ್ಟ ಶೋಭಿಸುತ್ತಿರುವ ಶ್ರೇಷ್ಠವಾದ ಆ ಗಜವು ಬಾಣಗಳಿಂದ ಚುಚ್ಚಲ್ಪಟ್ಟ ಅಂಗಾಂಗವುಳ್ಳದ್ದಾಗಿ ಮೈತುಂಬ ಮುಳ್ಳಿನಿಂದ ನಿಮಿರಿ ನಿಂತಿರುವ ಮುಳ್ಳುಹಂದಿಯಂತೆ ಕಾಣಿಸುತ್ತಿತ್ತು.
ನಿವಾರಿತಂ ಗಜಂ ದೃಷ್ಟ್ವಾ ಭಗದತ್ತಾತ್ಮಜೋ ನೃಪಃ |
ಉತ್ಸಸರ್ಜ ಶಿತಾನ್ ಬಾಣಾನ್ ಅರ್ಜುನೇ ಕ್ರೋಧಮೂರ್ಚ್ಛಿತಃ ॥
ಅರ್ಜುನನು ಬಾಣಪ್ರಹಾರದಿಂದ ತನ್ನ ಮಹಾಗಜವನ್ನು ನಿಯಂತ್ರಿಸಿದ್ದನ್ನು ಕಂಡ ವಜ್ರದತ್ತನು ಅತ್ಯಂತ ಕ್ರೋಧದಿಂದ ಚೂಪಾದ ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು.
ಅರ್ಜುನಸ್ತು ಮಹಾರಾಜಃ ಶರೈಃ ಶರವಿಘಾತಿಭಿಃ |
ವಾರಯಾಮಾಸ ತಾನ್ ಬಾಣಾನ್ ತದದ್ಭುತಮಿವಾಭವತ್ ॥15॥
ಮಹಾಬಾಹುವಾದ ಅರ್ಜುನನಾದರೂ ಶತ್ರುಗಳಿಗೆ ಘಾಸಿಯನ್ನುಂಟು ಮಾಡುವ ಬಾಣಗಳಿಂದ ವಜ್ರದತ್ತನು ಪ್ರಯೋಗಿಸಿದ ಎಲ್ಲ ಬಾಣಗಳನ್ನೂ ತಡೆದನು. ಈ ಅರ್ಜುನನ ಬಾಣಪ್ರಯೋಗದ ಕುಶಲತೆಯು ಪರಮಾದ್ಭುತವಾಗಿ ಕಾಣಿಸುತ್ತಿತ್ತು.
ತತಃ ಪುನರಪಿ ಕ್ರುದ್ಧೋ ರಾಜಾ ಪ್ರಾಗ್ಜ್ಯೋತಿಷಾಧಿಪಃ |
ಪ್ರೇಷಯಾಮಾಸ ನಾಗೇಂದ್ರಂ ಬಲವತ್ ಪರ್ವತೋಪಮಮ್ ॥16॥
ಪುನಃ ಪ್ರಾಗ್ಜ್ಯೋತಿಷಪುರದ ರಾಜನಾದ ವಜ್ರದತ್ತನು ಕ್ರುದ್ಧನಾಗಿ ಪರ್ವತದಂತಿರುವ ಮಹಾಗಜವನ್ನು ಬಲಾತ್ಕಾರವಾಗಿ ಅರ್ಜುನನ ಮೇಲೆ ನುಗ್ಗಿಸಿದನು.
ತಮಾಪತಂತಂ ಸಂಪ್ರೇಕ್ಷ್ಯ ಬಲವಾನ್ ಪಾಕಶಾಸನಿಃ |
ನಾರಾಚಮಗ್ನಿಸಂಕಾಶಂ ಪ್ರಾಹಿಣೋದ್ ವಾರಣಂ ಪ್ರತಿ ॥17॥
ಪಾಕಶಾಸನಿ ಎನಿಸಿದ ಅರ್ಜುನನು ಮಹಾಗಜವು ತನ್ನ ಮೇಲೆ ಎರಗಿ ಬರುತ್ತಿರುವುದನ್ನು ಕಂಡು ಅಗ್ನಿಗೆ ಸದೃಶವಾದ ಬಾಣ ಒಂದನ್ನು ಅದರ ಮೇಲೆ ಮಹಾಬಲವನ್ನು ಪ್ರಯೋಗಿಸಿ ಎಸೆದನು.
ತೇನ ತದ್ವಾರಣೋ ರಾಜನ್ ಮರ್ಮಣ್ಯಭಿಹತೋ ಭೃಶಮ್ |
ಪಪಾತ ಭೂಮೌ ಸಹಸಾ ವಜ್ರಾಹತ ಇವಾಚಲಃ ॥18॥
ಆ ಬಾಣವಾದರೂ ಮಹಾಗಜದ ಮರ್ಮಸ್ಥಳವನ್ನು ಹೊಕ್ಕು ಘಾಸಿಪಡಿಸಿತು. ಕೂಡಲೇ ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ ಭೂಮಿಯ ಮೇಲೆ ಕುಸಿದು ಬಿದ್ದಿತು.
ಸ ಪತನ್ ಶುಶುಭೇ ನಾಗೋ ಧನಂಜಯಶರಾಹತಃ |
ವಿಶನ್ನಿವ ಮಹಾಶೈಲೋ ಮಹೀಂ ವಜ್ರಪ್ರಪೀಡಿತಃ ॥19॥
ಧನಂಜಯನ ಬಾಣದಿಂದ ಘಾಸಿಗೊಂಡು ನೆಲದ ಮೇಲೆ ಬೀಳುತ್ತಿದ್ದ ಆ ಆನೆಯು ವಜ್ರಾಯುಧದಿಂದ ಪೀಡಿಸಲ್ಪಟ್ಟು ಭೂಮಿಯ ಒಳಗೆ ಪರ್ವತವು ಕುಸಿಯುವಂತೆ ಕುಸಿಯುವುದು ಕಾಣಿಸುತ್ತಿತ್ತು.
ತಸ್ಮಿನ್ ನಿಪತಿತೇ ನಾಗೇ ವಜ್ರದತ್ತಸ್ಯ ಪಾಂಡವಃ |
ತಂ ನ ಭೇತವ್ಯಮಿತ್ಯಾಹ ತತೋ ಭೂಮಿಗತಂ ನೃಪಮ್ ॥20॥
ಆನೆಯ ಸಹಿತವಾಗಿ ವಜ್ರದತ್ತನೂ ಕೆಳಗೆ ಬೀಳುತ್ತಿರಲು ಅರ್ಜುನನು ಅವನನ್ನು ಸಮಾಧಾನ ಪಡಿಸುತ್ತಾ, ವಜ್ರದತ್ತನೇ ನೀನು ಭಯಪಡುವ ಕಾರಣವಿಲ್ಲ ಎಂದು ಕೂಗಿ ಹೇಳಿದನು.
ಅರ್ಜುನಃ
ಅಬ್ರುವೀಚ್ಚ ಮಹಾತೇಜಾಃ ಪ್ರಸ್ಥಿತಂ ಮಾಂ ಯುಧಿಷ್ಠಿರಃ |
ರಾಜಾನಸ್ತೇ ನ ಹಂತವ್ಯಾಃ ತಾನ್ ಮೋಚಯ ಕಥಂಚನ ॥21॥
ಅರ್ಜುನ ರಾಜಕುಮಾರನೇ, ಕುದುರೆಯ ರಕ್ಷಣೆಗಾಗಿ ಹೊರಟ ನನಗೆ ಯುಧಿಷ್ಠಿರನು ಹೇಳಿದ್ದಾನೆ. ಧನಂಜಯನೇ, ರಾಜರನ್ನು ಯಾವುದೇ ಕಾರಣದಿಂದ ಸಂಹರಿಸಬೇಡ ಎಂದು.
ಸರ್ವಮೇತನ್ನರವ್ಯಾಘ್ರ ಭವತ್ವೇತಾವತಾ ಕೃತಮ್ |
ಯೋಧಾಶ್ಚಾಪಿ ನ ಹಂತವ್ಯಾ ಕಥಂಚನ ರಣೇ ತ್ವಯಾ ॥22॥
ಆದ್ದರಿಂದ ನರವ್ಯಾಘ್ರನೇ, ಇಲ್ಲಿಯ ತನಕ ನಡೆದ ಈ ಯುದ್ಧ ಪ್ರಕ್ರಿಯೆ ಸಾಕು. ಯುದ್ಧದಲ್ಲಿ ಯಾವ ಯೋಧರನ್ನೂ ಸಂಹರಿಸಬಾರದು ಎಂದು ನನಗೆ ಯುಧಿಷ್ಠಿರನು ಮತ್ತೂ ಹೇಳಿರುತ್ತಾನೆ.
ವಕ್ತವ್ಯಾಶ್ಚಾಪಿ ರಾಜಾನಃ ಸರ್ವೈಃ ಸಹ ಸುಹೃಜ್ಜನೈಃ |
ಯುಧಿಷ್ಠಿರಸ್ಯಾಶ್ವಮೇಧೋ ಭವದ್ಭಿರನುಭೂಯತಾಮ್ ॥23॥
ಇಷ್ಟೇ ಅಲ್ಲದೆ ಯುಧಿಷ್ಠಿರನು ಹೇಳಿದ್ದಾನೆ. ನೀನು ಯಾವ ರಾಜಧಾನಿಯಲ್ಲಿ ಸಾಗುತ್ತೀಯೋ ಅಲ್ಲಿರುವ ರಾಜರಿಗೆ ಅಶ್ವಮೇಧ ಯಾಗದ ಮಹೋತ್ಸವದಲ್ಲಿ ಭಾಗವಹಿಸಿ, ಆನಂದವನ್ನು ಅನುಭವಿಸಬೇಕೆಂದು ರಾಜರಿಗೆ ಆಮಂತ್ರಣವನ್ನು ನೀಡಬೇಕೆಂದೂ ಹೇಳಿರುವನು.
ಇತಿ ಭ್ರಾತೃವಚಃ ಶ್ರುತ್ವಾ ನ ಹನ್ಮಿ ತ್ವಾಂ ನರಾಧಿಪ |

ಉತ್ತಿಷ್ಠ ನ ಭಯಂ ತೇಽಸ್ತಿ ಸ್ವಸ್ತಿಮಾನ್ ಭವ ಪಾರ್ಥಿವ ॥24॥
ರಾಜಕುಮಾರನೇ, ಹೀಗೆ ನನ್ನ ಅಣ್ಣನು ಹೇಳಿರುವ ಮಾತನ್ನು ಕೇಳಿಸಿಕೊಂಡಿರುವ ನಾನು ಅವನ ಅಭಿಪ್ರಾಯಕ್ಕನುಗುಣವಾಗಿ ನಿನ್ನನ್ನು ಕೊಲ್ಲುವುದಿಲ್ಲ. ನನ್ನಿಂದ ನಿನಗೆ ಯಾವ ಭಯವೂ ಇಲ್ಲ.
ಆಗಚ್ಛೇಸ್ತ್ವಂ ಮಹಾರಾಜ ಪರಾಂ ಚೈತ್ರೀಮುಪಸ್ಥಿತಾಮ್ |
ತದಾಽಶ್ವಮೇಧೋ ಭವಿತಾ ಧರ್ಮರಾಜಸ್ಯ ಧೀಮತಃ ॥25॥
ನೀನು ಕ್ಷೇಮವಾಗಿ ಹಿಂದಿರುಗು. ಮುಂದೆ ಬರಲಿರುವ ಚೈತ್ರ ಮಾಸದ ಶುದ್ಧ ಹುಣ್ಣಿಮೆಯಂದು ಹಸ್ತಿನಾಪುರಕ್ಕೆ ಆಗಮಿಸು. ಧೀಮಂತನಾದ ಯುಧಿಷ್ಠಿರನ ಅಶ್ವಮೇಧ ಯಾಗವು ಅಂದು ಪ್ರಾರಂಭವಾಗುತ್ತದೆ.
ವೈಶಂಪಾಯನಃ
ಏವಮುಕ್ತಃ ಸ ರಾಜಾ ತು ಭಗದತ್ತಾತ್ಮಜಸ್ತದಾ |
ತಥೇತ್ಯೇವಾಬ್ರುವೀದ್ ವಾಕ್ಯಂ ಪಾಂಡವೇನಾಭಿನಿರ್ಜಿತಃ ॥26॥
ವೈಶಂಪಾಯನ ಅರ್ಜುನನು ಹೀಗೆ ಹೇಳಲು ಸೋಲನ್ನೊಪ್ಪಿದ ವಜ್ರದತ್ತನು ಹಾಗೆಯೇ ಆಗಲಿ ಎಂದು ಉತ್ತರಿಸಿ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಭರಣೇ ವಜ್ರದತ್ತವಿಸರ್ಜನಂ ನಾಮ ಷಟ್‌ಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ಎಪ್ಪತ್ತೇಳನೆಯ ಅಧ್ಯಾಯ
ಅರ್ಜುನನು ಅಶ್ವವನ್ನು ಅನುಸರಿಸಿಕೊಂಡು ಸಿಂಧುದೇಶಕ್ಕೆ ಆಗಮಿಸಿ, ಸೈಂಧವರ ಜೊತೆ ಯುದ್ಧ ಮಾಡಿದುದು. ಅವರ ಬಳಿ ಯುದ್ಧ ಮಾಡುವಾಗ ಅರ್ಜುನನ ಗಾಂಡೀವ ಧನುಸ್ಸು ಬೀಳುವುದು. ಆ ಪ್ರಸಂಗದಲ್ಲಿ ದೇವತೆಗಳು, ಋಷಿಗಳು ಮೊದಲಾದವರು ಜಪವನ್ನು ಮಾಡಿ ಅರ್ಜುನನಿಗೆ ತೇಜಸ್ಸನ್ನು ತುಂಬುವುದು. ಪುನಃ ಅರ್ಜುನನು ಸೈಂಧವರೊಡನೆ ಯುದ್ಧ ಮಾಡಿದುದು.
ವೈಶಂಪಾಯನಃ
ಜಿತ್ವಾ ಪ್ರಸಾದ್ಯ ರಾಜಾನಂ ಭಗದತ್ತಸುತಂ ತದಾ |
ವಿಸೃಜ್ಯ ಯಾತೇ ತುರಗೇ ಸೈಂಧವಾನ್ ಪ್ರತಿ ಭಾರತ ॥1॥
ವೈಶಂಪಾಯನ ಅರ್ಜುನನು ಭಗದತ್ತನ ಮಗನಾದ ವಜ್ರದತ್ತನನ್ನು ತನ್ನ ಮಾತುಗಳಿಂದ ಸಂತೋಷಪಡಿಸಿ ಅವನ ಬಳಿ ಇರುವ ಯಜ್ಞಾಶ್ವವನ್ನು ಬಿಡಿಸಿಕೊಂಡು ಅಲ್ಲಿಂದ ಸೈಂಧವರಿರುವ ದೇಶದ ಕಡೆ ಕುದುರೆಯ ಜೊತೆ ಪ್ರಯಾಣ ಬೆಳೆಸಿದನು.
ಸೈಂಧವೈರಭವದ್ ಯುದ್ಧಂ ತತಸ್ತಸ್ಯ ಕಿರೀಟಿನಃ |
ಹತಶೇಷೈರ್ಮಹಾಯುದ್ಧೇ ಹತಾನಾಂ ಚ ಸುತೈರಪಿ ॥2॥
ಆ ಸಿಂಧುದೇಶದಲ್ಲಿಯಾದರೂ ಸೈಂಧವರು ಕುದುರೆಯನ್ನು ಕಟ್ಟಿ ಹಾಕಿದರು. ಬಳಿಕ ಮಹಾಭಾರತದ ಯುದ್ಧದಲ್ಲಿ ಅಳಿದುಳಿದಿದ್ದ ಕ್ಷತ್ರಿಯರಿಗೂ, ಯುದ್ಧದಲ್ಲಿ ಮರಣವನ್ನು ಹೊಂದಿದ ಕ್ಷತ್ರಿಯರ ಮಕ್ಕಳಿಗೂ ಅರ್ಜುನನ ಜೊತೆಗೆ ಯುದ್ಧವು ಏರ್ಪಟ್ಟಿತು.
ತೇಽವತೀರ್ಣಮುಪಶ್ರುತ್ಯ ವಿಷಯಂ ಶ್ವೇತವಾಹನಮ್ |
ಪ್ರತ್ಯುದ್ಯಯುರಮೃಷ್ಯಂತೋ ರಾಜಾನಃ ಪಾಂಡವರ್ಷಭಮ್ ॥3॥
ಯಜ್ಞಾಶ್ವವು ಮತ್ತು ಅರ್ಜುನನು ತಮ್ಮ ದೇಶಕ್ಕೆ ಬಂದಿರುವುರೆಂಬುದನ್ನು ತಿಳಿದ ಸಿಂಧುದೇಶದ ಕ್ಷತ್ರಿಯರು ಈ ವಿಷಯವನ್ನು ಸಹಿಸಲಾರದೆ ಅರ್ಜುನನನ್ನು ಎದುರಿಸಲು ಧಾವಿಸಿ ಬಂದರು.
ಅಶ್ವವಂತಂ ಪರಾಮೃಶ್ಯ ವಿಷಯಾಂತೇ ವಿಗಾಹಿತಮ್ |
ನ ಭಯಂ ಚಕ್ರಿರೇ ಪಾರ್ಥಾದ್ ಭೀಮಸೇನಾದನಂತರಾತ್ ॥4॥
ದೂರದಿಂದ ಯಜ್ಞಾಶ್ವದ ಜೊತೆಗೆ ಬರುತ್ತಿರುವ ಅರ್ಜುನನನ್ನು ಕಂಡ ಸೈಂಧವರು ವಿಮರ್ಶೆಯನ್ನು ಮಾಡಿ, ಅಸ್ಪಷ್ಟವಾಗಿ ಕಾಣಿಸುತ್ತಿದ್ದರೂ ಆಗಮಿಸುತ್ತಿರುವವನು ಅರ್ಜುನನೆಂದೇ ತೀರ್ಮಾನಿಸಿದರು. ಭೀಮಸೇನನ ಸಹೋದರನಾದ ಅರ್ಜುನನ ವಿಷಯದಲ್ಲಿ ಅವರು ಭಯವನ್ನು ಹೊಂದಲಿಲ್ಲ.
ತೇಽವಿದೂರಾದ್ ಧನುಷ್ಪಾಣಿಂ ಯಾಜ್ಞಯಸ್ಯ ಹಯಸ್ಯ ಚ |
ಬೀಭತ್ಸುಂ ಪ್ರತ್ಯಪಶ್ಯಂತ ಪದಾತಿಂ ಪ್ರತ್ಯುಪಸ್ಥಿತಮ್ ॥5॥
ಅರ್ಜುನನು ಹತ್ತಿರ ಆಗಮಿಸಿದಾಗ ಅಶ್ವಮೇಧ ಯಜ್ಞಕ್ಕೆ ಕುದುರೆಯನ್ನು ಅನುಸರಿಸಿಕೊಂಡು ಬರುತ್ತಿರುವದು ಧನುಷ್ಪಾಣಿಯಾದ ಅರ್ಜುನನೇ ಎಂದು ನಿಶ್ಚಯಿಸಿಕೊಂಡರು. ಕಾಲ್ನಡಿಗೆಯಿಂದಲೇ ಆಗಮಿಸುತ್ತಿರುವ ಅರ್ಜುನನನ್ನು ನೋಡಿದರು.
ತತಸ್ತೇ ತಂ ಮಹಾವೀರ್ಯಂ ರಾಜಾನಃ ಪರ್ಯವಾರಯನ್ |
ಜಿಗೀಷಂತೋ ನರವ್ಯಾಘ್ರಾಃ ಪೂರ್ವಂ ವಿನಿಕೃತಾ ಯುಧಿ ॥6॥
ಬಳಿಕ ಮಹಾವೀರ್ಯನಾದ ಅರ್ಜುನನನ್ನು ರಾಜರೆಲ್ಲರೂ ತಡೆದು ನಿಲ್ಲಿಸಿದರು. ಆ ನರಶ್ರೇಷ್ಠರೆಲ್ಲರೂ ಹಿಂದೆ ಈ ಅರ್ಜುನನಿಂದ ಯುದ್ಧದಲ್ಲಿ ಪರಾಜಿತರಾಗಿದ್ದರು. ಈ ಪ್ರಸಂಗದಲ್ಲಿ ಅವನನ್ನು ಗೆಲ್ಲಬೇಕೆಂಬ ಛಲವು ಅವರಲ್ಲಿ ಹುಟ್ಟಿತು.
ತೇ ನಾಮಾನ್ಯಥ ಗೋತ್ರಾಣಿ ಕರ್ಮಾಣಿ ವಿವಿಧಾನಿ ಚ |
ಕೀರ್ತಯಂತಸ್ತದಾ ಪಾರ್ಥಂ ಶರವರ್ಷೈರವಾಕಿರನ್ ॥7॥
ಬಳಿಕ ಸೈಂಧವರು ತಮ್ಮ ಹೆಸರುಗಳನ್ನೂ, ಗೋತ್ರಗಳನ್ನೂ, ತಾವು ಮಾಡಿರುವ ಬೇರೆ ಬೇರೆ ಸಾಹಸಕರ್ಮಗಳನ್ನೂ ಪ್ರಶಂಸಾ ಪೂರ್ವಕವಾಗಿ ಹೇಳಿಕೊಳ್ಳುತ್ತಾ, ಅರ್ಜುನನನ್ನು ಬಾಣಗಳಿಂದ ಮುಚ್ಚಿದರು.
ತೇ ಕಿರಂತಃ ಶರಾಂಸ್ತೀಕ್ಷ್ಣಾನ್ ವಾರಣೇಂದ್ರನಿವಾರಣಾನ್ |

ರಣೇ ಜಯಮಭೀಪ್ಸಂತಃ ಕೌಂತೇಯಂ ಪರ್ಯವಾರಯನ್ ॥8॥
ಆನೆಗಳನ್ನೂ ತಡೆದು ನಿಲ್ಲಿಸಲು ಸಮರ್ಥವಾಗಿರುವಂತಹ ಬಾಣಗಳನ್ನು ಪ್ರಯೋಗಿಸುತ್ತಾ ವಿಜಯವನ್ನು ಬಯಸಿದ ಸೈಂಧವರು ಅರ್ಜುನನನ್ನು ಸುತ್ತುವರಿದರು.
ತೇ ಸಮೀಕ್ಷ್ಯ ತು ತಂ ವೀರಮುಗ್ರಕರ್ಮಾಣಮಾಹವೇ |
ಸರ್ವೇ ಯುಯುಧಿರೇ ವೀರಾ ರಥಸ್ಥಾಸ್ತಂ ಪದಾತಿನಮ್ ॥9॥
ಯುದ್ಧದಲ್ಲಿ ಭಯಂಕರವಾದ ಕರ್ಮವನ್ನು ಮಾಡುವ ಅರ್ಜುನನು ತಮ್ಮ ಮುಂದೆ ವಾಹನವನ್ನೇರದೇ ನೆಲದಲ್ಲಿ ನಿಂತಿರುವುದನ್ನು ಕಂಡು ರಥವನ್ನೇರಿದ ಆ ಎಲ್ಲ ಸೈಂಧವರು ಯುದ್ಧದಲ್ಲಿ ತೊಡಗಿದರು.
ತೇ ತಮಾಜಘ್ನಿರೇ ವೀರಾ ನಿವಾತಕವಚಾಂತಕಮ್ |
ಸಂಶಪ್ತಕನಿಹಂತಾರಂ ಹಂತಾರಂ ಸೈಂಧವಸ್ಯ ಚ ॥10॥
ನಿವಾತಕವಚರನ್ನು ಸಂಹರಿಸಿರುವ, ಸಂಶಪ್ತಕರನ್ನೂ ಸಂಹರಿಸಿರುವ, ಸೈಂಧವ ಹಂತಕನಾದ ಅರ್ಜುನನನ್ನು ಎಲ್ಲ ಸೈಂಧವ ವೀರರು ಬಾಣಗಳಿಂದ ಹೊಡೆಯಲು ಆರಂಭಿಸಿದರು.
ತತೋ ರಥಸಹಸ್ರೇಣ ಗಜಾನಾಮಯುತೇನ ಚ |
ಕೋಷ್ಠಕೀಕೃತ್ಯ ಕೌಂತೇಯಂ ಸಂಪ್ರಹೃಷ್ಟಮವಾರಯನ್ ॥11॥
ಸಾವಿರ ರಥಸೈನ್ಯದಿಂದಲೂ, ಹತ್ತುಸಾವಿರ ಗಜಸೈನ್ಯದಿಂದಲೂ ಅರ್ಜುನನನ್ನು ಸುತ್ತುವರಿದು ಅವನನ್ನು ಮಧ್ಯದಲ್ಲಿ ಮಾಡಿಕೊಂಡು ಜಯಾಕಾಂಕ್ಷಿಗಳಾಗಿ ಸಂತುಷ್ಟರಾಗಿ ಯುದ್ಧಮಾಡಲು ಆರಂಭಿಸಿದರು.
ಸಂಸ್ಮರಂತೋ ವಧಂ ವೀರಾಃ ಸಿಂಧುರಾಜಸ್ಯ ಧೀಮತಃ |
ಜಯದ್ರಥಸ್ಯ ಕೌರವ್ಯ ಸಮರೇ ಸವ್ಯಸಾಚಿನಾ ॥12॥
ಹಿಂದೆ ನಡೆದ ಭಾರತ ಯುದ್ಧದಲ್ಲಿ ಅರ್ಜುನನು ಸಿಂಧುರಾಜನಾದ ಜಯದ್ರಥನನ್ನು ಸಂಹರಿಸಿದನೆಂದು ಸ್ಮರಿಸಿಕೊಳ್ಳುತ್ತಾ ಅವರೆಲ್ಲರೂ ಮೇಘದಂತಿರುವ ಅರ್ಜುನನ ಮೇಲೆ ಬಾಣಗಳನ್ನು ಎಸೆದರು.
ತತಃ ಪರ್ಜನ್ಯವತ್ ಸರ್ವೇ ಶರವೃಷ್ಟಿಮವಾಸೃಜನ್ |
ತೈಃ ಕೀರ್ಣಃ ಶುಶುಭೇ ಪಾರ್ಥೋ ರವಿರ್ಮೇಘಾಂತರೇ ಯಥಾ ॥
ಪ್ರತಿಯೊಬ್ಬರೂ ಯುದ್ಧಮದದಿಂದ ಮಳೆಯಂತೆಯೇ ಬಾಣಗಳ ವೃಷ್ಟಿಯನ್ನು ಅರ್ಜುನನ ಮೇಲೆ ಸುರಿದರು. ಈ ಪ್ರಸಂಗದಲ್ಲಿ ಅರ್ಜುನನು ಸೂರ್ಯನು ಮೇಘಗಳ ಮಧ್ಯದಲ್ಲಿ ಶೋಭಿಸುವಂತೆ ಅವರು ಎಸೆದ ಬಾಣಗಳಿಂದ ಶೋಭಿಸಿದನು.
ಸ ಶರೈಃ ಸಮವಚ್ಛನ್ನೋ ದದೃಶೇ ಪಾಂಡವರ್ಷಭಃ |
ಪಂಜರಾಂತರಸಂಚಾರೀ ಶಕುಂತ ಇವ ಭಾರತ ॥14॥
ಸೈಂಧವರ ಬಾಣಗಳಿಂದ ಆಚ್ಛಾದಿತನಾದ ಪಾಂಡವಶ್ರೇಷ್ಠನು ಒಂದು ಪಂಜರದಲ್ಲಿ ಸಂಚರಿಸುವ ಶಕುಂತ ಪಕ್ಷಿಯಂತೆ ಕಂಡುಬಂದನು.
ತತೋ ಹಾಹಾಕೃತಂ ಸರ್ವಂ ಕೌಂತೇಯೇ ಶರಪೀಡಿತೇ |
ತ್ರೈಲೋಕ್ಯಮಭವತ್ ಸರ್ವಂ ರವಿಶ್ಚಾಸೀದ್ ರಜೋರುಣಃ ॥15॥
ಅರ್ಜುನನು ಬಾಣಗಳಿಂದ ಪೀಡಿತನಾಗುತ್ತಿರಲು ಅವರೆಲ್ಲರೂ ಸಂತೋಷದಿಂದ ಹಾಹಾಕಾರವನ್ನು ಮಾಡಿದರು. ಮೂರುಲೋಕಗಳಿಗೇ ಮುಸುಕು ಕವಿದಂತಾಯಿತು. ಸೂರ್ಯನು ಧೂಳು ಮುಚ್ಚಿದಂತಾದನು.
ತತೋ ವವೌ ಮಹಾರಾಜ ಮಾರುತೋ ರೋಮಹರ್ಷಣಃ |
ರಾಹುರಗ್ರಸದಾದಿತ್ಯಂ ಯುಗಪತ್ ಸೋಮಮೇವ ಚ ॥16॥
ಆ ಸಮಯದಲ್ಲಿ ರೋಮಾಂಚಕಾರಿಯಾದ ಚಂಡಮಾರುತವು ಬೀಸತೊಡಗಿತು. ರಾಹುವು ಸೂರ್ಯ-ಚಂದ್ರರಿಬ್ಬರನ್ನೂ ಏಕಕಾಲದಲ್ಲಿ ನುಂಗಿದನು.
ಉಲ್ಕಾಶ್ಚ ಜಘ್ನಿರೇ ಸೂರ್ಯಂ ಕೀರ್ಯಮಾಣಾಃ ಸಮಂತತಃ |
ವೇಪಥುಶ್ಚಾಭವದ್ ರಾಜನ್ ಕೈಲಾಸಸ್ಯ ಮಹಾಗಿರೇಃ ॥17॥
ಎಲ್ಲ ಕಡೆಗಳಲ್ಲಿಯೂ ಉಲ್ಕಾಪಾತಗಳಾದವು. ಸೂರ್ಯನ ಮೇಲೆಯೂ ಉಲ್ಕೆಗಳು ಬೀಳುತ್ತಿದ್ದವು. ಕೈಲಾಸ ಪರ್ವತವು ನಡುಗಲಾರಂಭಿಸಿತು.
ಮುಮುಚುಶ್ಚಾಸ್ರಮತ್ಯುಷ್ಣಂ ದುಃಖಶೋಕಸಮನ್ವಿತಾಃ |
ಸಪ್ತರ್ಷಯೋ ಜಾತಭಯಾಸ್ತಥಾ ದೇವರ್ಷಯೋಽಪಿ ಚ ॥18॥
ಅರ್ಜುನನಿಗುಂಟಾದ ದುಃಸ್ಥಿತಿಯನ್ನು ಕಂಡು ದುಃಖ-ಶೋಕಗಳಿಂದ ತುಂಬಿದ ಸಪ್ತರ್ಷಿಗಳು ಬಿಸಿಯಾದ ಕಣ್ಣೀರನ್ನು ಸುರಿಸಿದರು. ಭಯವನ್ನು ಹೊಂದಿದರು. ದೇವರ್ಷಿಗಳ ಸ್ಥಿತಿಯೂ ಹೀಗೇ ಆಯಿತು.
ಶಶಶ್ಚಾಶು ವಿನಿರ್ಭಿದ್ಯ ಮಂಡಲಂ ಶಶಿನೋಽಗಮತ್ |
ವಿಪರೀತಸ್ತಥಾಽಽಕಾಶಸ್ತಸ್ಮಿನ್ನುತ್ಪಾತಲಕ್ಷಣೇ ॥19॥
ಚಂದ್ರನಲ್ಲಿದ್ದ ಮೊಲವನ್ನು ಭೇದಿಸಿಕೊಂಡು ಉಲ್ಕೆಗಳು ಚಂದ್ರಮಂಡಲದ ಸುತ್ತಲೂ ಬೀಳತೊಡಗಿದವು. ಎಲ್ಲ ದಿಕ್ಕುಗಳೂ ಹೊಗೆಯಿಂದ ವ್ಯಾಪ್ತವಾಗಿದ್ದು ವಿಪರೀತವಾಗಿ ಕಾಣಿಸುತ್ತಿದ್ದವು.
ರಾಸಭಾರುಣಸಂಕಾಶಾ ಧನುಷ್ಮಂತಃ ಸವಿದ್ಯುತಃ |
ಆವೃತ್ಯ ಗಗನಂ ಮೇಘಾ ಮುಮುಚುರ್ಮಾಂಸಶೋಣಿತಮ್ ॥20॥
ಕತ್ತೆಯ ಬಣ್ಣದಂತೆ ಬಣ್ಣವುಳ್ಳ ಮತ್ತು ಎಣ್ಣೆಗೆಂಪಿನ ಬಣ್ಣಗಳಿಂದ ಉಂಟಾದ ಬಣ್ಣವುಳ್ಳ ಕಾಮನ ಬಿಲ್ಲಿನಿಂದ ಕೂಡಿದ,

ಮಿಂಚಿನಿಂದ ಯುಕ್ತವಾದ ಮೇಘಗಳು ಆಕಾಶದಲ್ಲಿ ವ್ಯಾಪಿಸಿ ರಕ್ತ-ಮಾಂಸಗಳನ್ನು ಸುರಿಸಲಾರಂಭಿಸಿದವು.
ಏವಮಾಸೀತ್ ತದಾ ವೀರೇ ಶರವರ್ಷಾಭಿಸಂವೃತೇ |
ಲೋಕೇಽಸ್ಮಿನ್ ಭರತಶ್ರೇಷ್ಠ ತದದ್ಭುತಮಿವಾಭವತ್ ॥21॥
ಅರ್ಜುನನು ಶತ್ರುಗಳಿಂದ ಬಿಟ್ಟ ಬಾಣಗಳಿಂದ ಮುಚ್ಚಿಹೋದಾಗ ಇಂತಹ ಉತ್ಪಾತಗಳು ಪರಮಾದ್ಭುತವಾಗಿ ಕಾಣಿಸಿಕೊಂಡವು.
ತಸ್ಯ ತೇನಾಭಿಕೀರ್ಣೇನ ಶರಜಾಲೇನ ಸರ್ವತಃ |
ಮೋಹಾತ್ ಪಪಾತ ಗಾಂಡೀವಮಾವಾಪಶ್ಚ ಕರಾದಪಿ ॥22॥
ಎಲ್ಲ ಕಡೆಗಳಿಂದಲೂ ಎರಚಲ್ಪಟ್ಟ ಬಾಣಗಳ ಸಮುದಾಯದಿಂದ ಅರ್ಜುನನು ವಿಮೋಹಿತನಾದನು. ಅವನ ಕೈಯಲ್ಲಿರುವ ಗಾಂಡೀವವೂ, ಕೈಗೆ ಹಾಕಿಕೊಂಡಿರುವ ಕಂಕಣವೂ ಜಾರಿಬಿದ್ದವು.
ತಸ್ಮಿನ್ ಮೋಹಮನುಪ್ರಾಪ್ತೇ ಶರಜಾಲಂ ಮಹತ್ತರಮ್ |
ಸೈಂಧವಾ ಮುಮುಚುಸ್ತೂರ್ಣಂ ಗತಸತ್ತ್ವೇ ಮಹಾರಥೇ ॥23॥
ಹೀಗೆ ಮಹಾರಥನಾದ ಅರ್ಜುನನು ಮೋಹವನ್ನು ಹೊಂದಿದ್ದರೂ ಸೈಂಧವರು ಗತಸತ್ವನಾದ, ಮಹಾರಥನಾದ ಅರ್ಜುನನ ಮೇಲೆ ಬಾಣಗಳನ್ನು ಸುರಿಸುತ್ತಲೇ ಇದ್ದರು.
ತತೋ ಮೋಹಸಮಾಪನ್ನಂ ಜ್ಞಾತ್ವಾ ಪಾರ್ಥಂ ದಿವೌಕಸಃ |
ಸರ್ವೇ ವಿತ್ರಸ್ತಮನಸಃ ಸರ್ವೇ ಶಾಂತಿಪರಾಃ ಸ್ಥಿತಾಃ ॥24॥
ಅರ್ಜುನನು ಮೋಹವನ್ನು ಹೊಂದಿರುವನೆಂದು ತಿಳಿದಿರುವ ದೇವತೆಗಳು ಎಲ್ಲರೂ ಕಳವಳಗೊಂಡ ಮನಸ್ಸುಳ್ಳವರಾಗಿ ಶಾಂತಿಕರ್ಮವನ್ನು ಆಲೋಚಿಸಲು ಆರಂಭಿಸಿದರು.
ತತೋ ದೇವರ್ಷಯಃ ಸರ್ವೇ ತಥಾ ಸಪ್ತರ್ಷಯೋಽಪಿ ಚ |
ಬ್ರಹ್ಮರ್ಷಯಶ್ಚ ವಿಜಯಂ ಜೇಪುಃ ಪಾರ್ಥಸ್ಯ ಧೀಮತಃ ॥25॥
ಅರ್ಜುನನಿಗೆ ಜಯವಾಗಲೆಂದು ದೇವರ್ಷಿಗಳು, ಸಪ್ತರ್ಷಿಗಳು, ಬ್ರಹ್ಮರ್ಷಿಗಳು ಜಪಿಸಲಾರಂಭಿಸಿದರು.
ತತಃ ಪ್ರದೀಪಿತೇ ದೇವೈಃ ಪಾರ್ಥತೇಜಸಿ ಪಾರ್ಥಿವ |
ತಸ್ಥಾವಚಲವದ್ಧೀಮಾನ್ ಸಂಗ್ರಾಮೇ ಪರಮಾಸ್ತ್ರವಿತ್ ॥26॥
ದೇವತೆಗಳೆಲ್ಲರೂ ಅರ್ಜುನನು ತೇಜಸ್ಸಂಪನ್ನನಾಗಲೆಂದು ಪ್ರಾರ್ಥಿಸಿದಾಗ, ಅವರ ಮಂತ್ರದ ಬಲದಿಂದ ಅರ್ಜುನನು ತೇಜೋಯುಕ್ತನಾದನು. ಶ್ರೇಷ್ಠವಾದ ಅಸ್ತ್ರಜ್ಞನಾದ ಅರ್ಜುನನು ಯುದ್ಧದಲ್ಲಿ ಬುದ್ಧಿಸ್ವಾಸ್ಥ್ಯವನ್ನು ಪಡೆದು ಅಚಲನಾಗಿ ನಿಂತನು.
ವಿಚಕರ್ಷ ಧನುರ್ದಿವ್ಯಂ ತತಃ ಕೌರವನಂದನಃ |
ವಜ್ರಸ್ಯೇವೇಹ ಶಬ್ದೋಽಭೂನ್ಮಹಾಂಸ್ತಸ್ಯ ಪುನಃ ಪುನಃ ॥27॥
ಕೌರವನಂದನನಾದ ಅರ್ಜುನನು ದಿವ್ಯವಾದ ಧನುಸ್ಸಿನ ಜ್ಯಾವನ್ನು ಬಲವಾಗಿ ಸೆಳೆದನು. ಆ ಧನುಸ್ಸಿನ ಠೇಂಕಾರದಿಂದ ಉಂಟಾದ ಶಬ್ದದ ಅಲೆಯು ವಜ್ರಾಯುಧದ ಶಬ್ದದಂತೆ ಪುನಃ ಪುನಃ ಪ್ರತಿಧ್ವನಿಸಿತು.
ತತಃ ಸ ಶರವರ್ಷಾಣಿ ಪ್ರತ್ಯಮಿತ್ರಾನ್ ಪ್ರತಿ ಪ್ರಭುಃ |
ವವರ್ಷ ಚ ತಥಾ ಪಾರ್ಥೋ ವರ್ಷಾಣೀವ ಪುರಂದರಃ ॥28॥
ಶತ್ರುಗಳನ್ನು ಉದ್ದೇಶಿಸಿಕೊಂಡು ಪ್ರಭುವಾದ ಅರ್ಜುನನು ಬಾಣಗಳ ಮಳೆಯನ್ನೇ ಸುರಿದನು. ಇಂದ್ರದೇವನು ವರ್ಷಋತುವಿನಲ್ಲಿ ಸುರಿಸುವ ಮಳೆಹನಿಗಳಂತೆ ಅನೇಕ ಸಂಖ್ಯೆಯ ಬಾಣಗಳ ಮಳೆಯನ್ನು ಸೈಂಧವರ ಮೇಲೆ ಸುರಿದನು.
ತತಸ್ತೇ ಸೈಂಧವಾ ಯೋಧಾಃ ಸರ್ವ ಏವ ಸರಾಜಕಾಃ |
ನಾದೃಶ್ಯಂತ ಶರೈಃ ಕೀರ್ಣಾಃ ಶಲಭೈರಿವ ಪಾದಪಾಃ ॥29॥
ರಾಜರಿಂದ ಸಹಿತರಾದ ಸೈಂಧವ ಯೋಧರೆಲ್ಲರೂ ಅರ್ಜುನನ ಬಾಣಗಳಿಂದ ತುಂಬಿಹೋದರು. ಪರಸ್ಪರ ಯಾರೂ ಕಣ್ಣಿಗೆ ಕಾಣಿಸಲಿಲ್ಲ. ಪತಂಗಗಳಿಂದ ಆವೃತವಾದ ವೃಕ್ಷಗಳಂತೆ ಅರ್ಜುನನ ಬಾಣಗಳಿಂದ ಸೈಂಧವಯೋಧರೆಲ್ಲರೂ ಆವೃತವಾಗಿ ಅದೃಶ್ಯರಾದರು.
ತಸ್ಯ ಶಬ್ದೇನ ವಿತ್ರೇಸುರ್ಭಯಾರ್ತಾಶ್ಚ ವಿದುದ್ರುವುಃ |
ಮುಮುಚುಶ್ಚಾಶ್ರು ಶೋಕಾರ್ತಾ ನಿಕೃತ್ತಾಶ್ಚಾಪಿ ಸೈಂಧವಾಃ ॥30॥
ನಿರಂತರವೂ ಕೇಳಿಬರುತ್ತಿದ್ದ ಗಾಂಡೀವ ಧನುಸ್ಸಿನ ಠೇಂಕಾರ ಶಬ್ದದಿಂದ ಸೈಂಧವ ಕ್ಷತ್ರಿಯರೆಲ್ಲರೂ ಭಯ ಹೊಂದಿದರು. ಕೆಲವರು ಓಡಿಹೋದರು, ಮತ್ತೆ ಕೆಲವರು ದುಃಖಿತರಾಗಿ ಕಣ್ಣೀರನ್ನು ಸುರಿಸಿದರು. ಕೆಲವರು ಬಾಣಗಳಿಂದ ಅವಯವ ಛೇದವನ್ನೇ ಹೊಂದಿದರು.
ತಾಂಸ್ತು ಸರ್ವಾನ್ ನರಶ್ರೇಷ್ಠಃ ಸರ್ವತೋ ವಿಚರದ್ ಬಲೀ |
ಅಲಾತಚಕ್ರವದ್ ರಾಜನ್ ಶರಜಾಲೈಃ ಸಮರ್ಪಯನ್ ॥31॥
ಆ ಎಲ್ಲ ಸೈಂಧವ ಯೋಧರನ್ನು ನರಶ್ರೇಷ್ಠನಾದ ಅರ್ಜುನನು ಹತ್ತು ದಿಕ್ಕುಗಳಿಗೆ ಓಡಿಸಿದನು. ಪಂಜಿನ ಚಕ್ರದಂತೆ ಎಲ್ಲೆಡೆಯೂ ಸಂಚರಿಸುತ್ತಾ ಸೈಂಧವರ ಮೇಲೆ ಬಾಣಪ್ರಯೋಗಗಳನ್ನು ಮಾಡುತ್ತಲೇ ಇದ್ದನು.
ತಮಿಂದ್ರಜಾಲಪ್ರತಿಮಂ ಬಾಣಜಾಲಮಮಿತ್ರಹಾ |
ವ್ಯಸೃಜದ್ ದಿಕ್ಷು ಸರ್ವಾಸು ಮಹೇಂದ್ರ ಇವ ಸರ್ವತಃ ॥32॥
ಶತ್ರುಸೂದನನಾದ ಅರ್ಜುನನು ವಜ್ರಧರನಾದ ಇಂದ್ರನಂತೆ ಎಲ್ಲ ದಿಕ್ಕುಗಳಲ್ಲಿಯೂ ಇಂದ್ರಜಾಲಸದೃಶವಾದ ಬಾಣಜಾಲಗಳನ್ನು ಸುರಿಸಲಾರಂಭಿಸಿದನು.
ಮೇಘಜಾಲನಿಭಂ ಸೈನ್ಯಂ ವಿದಾರ್ಯ ಸ ರವಿಪ್ರಭಃ |

ವಿಬಭೌ ಕೌರವಶ್ರೇಷ್ಠಃ ಶರದೀವ ದಿವಾಕರಃ ॥33॥
ಶರತ್ಕಾಲದಲ್ಲಿ ಮೇಘಗಳ ಸಮೂಹವನ್ನು ಛಿನ್ನ-ಭಿನ್ನಗೊಳಿಸುವ ಸೂರ್ಯನಂತೆ ಮೇಘಸದೃಶವಾದ ಸೈಂಧವಸೈನ್ಯವನ್ನು ತನ್ನ ಬಾಣಗಳೆಂಬ ವೃಷ್ಟಿಯಿಂದ ಛಿನ್ನ- ಭಿನ್ನಗೊಳಿಸಿ ಅರ್ಜುನನು ಶೋಭಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಚರಣೇ ಸೈಂಧವಯುದ್ಧಂ ನಾಮ ಸಪ್ತಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಪ್ಪತ್ತೆಂಟನೆಯ ಅಧ್ಯಾಯ
ಅರ್ಜುನ-ಸೈಂಧವರ ಯುದ್ಧ.
ದುಶ್ಶಲೆಯ ಪ್ರಾರ್ಥನೆಯಂತೆ ಯುದ್ಧವನ್ನು ನಿಲ್ಲಿಸಿದುದು.
ವೈಶಂಪಾಯನಃ
ತತೋ ಗಾಂಡೀವಭೃಚ್ಛೂರೋ ಯುದ್ಧಾಯ ಸಮುಪಸ್ಥಿತಃ |
ವಿಬಭೌ ಯುಧಿ ದುರ್ಧರ್ಷೋ ಹಿಮವಾನಚಲೋ ಯಥಾ ॥1॥
ವೈಶಂಪಾಯನ ಜನಮೇಜಯನೇ, ಗಾಂಡೀವಧನುರ್ಧಾರಿಯಾದ, ಯುದ್ಧಕ್ಕಾಗಿ ಸಿದ್ಧನಾಗಿ ನಿಂತಿರುವ, ಶತ್ರುಗಳಿಂದ ಎದುರಿಸಲು ಅಸಾಧ್ಯನಾದ ಅರ್ಜುನನು ರಣಭೂಮಿಯಲ್ಲಿ ಅಚಲವಾದ ಹಿಮವದ್ ಪರ್ವತದಂತೆ ಶೋಭಿಸಿದನು.
ತತಃ ಸೈಂಧವಯೋಧಾಸ್ತೇ ಪುನರೇವ ವ್ಯವಸ್ಥಿತಾಃ |
ವಿಮುಂಚಂತಃ ಸುಸಂರಬ್ಧಾಃ ಶರವರ್ಷಾಣಿ ಭಾರತ ॥2॥
ಬಳಿಕ ಬಹಳವಾಗಿ ಕೋಪಗೊಂಡಿರುವ ಸೈಂಧವ ಯೋಧರು ಪುನಃ ಒಟ್ಟಾಗಿ ಅರ್ಜುನನನ್ನು ಎದುರಿಸಲು ಬಾಣಗಳ ಮಳೆಯನ್ನು ಸುರಿದರು.
ತಾನ್ ಪ್ರಹಸ್ಯ ಮಹಾವೀರ್ಯಃ ಪುನರೇವ ವ್ಯವಸ್ಥಿತಾನ್ |
ತತಃ ಪ್ರೋವಾಚ ಕೌಂತೇಯೋ ಮುಮೂರ್ಷುನ್ ಶ್ಲಕ್ಷ್ಣಯಾ ಗಿರಾ ॥
ಸೈಂಧವ ವೀರರು ಯುದ್ಧದಲ್ಲಿ ಮರಣವನ್ನು ಹೊಂದುವ ಆಸೆಯಿಂದಲೇ ಸಂಘಟಿತರಾಗಿ ಬಂದು ತಮ್ಮ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಿರುವುದಾಗಿ ಅರ್ಜುನನು ನೋಡಿ ಮಧುರವಾದ ಮಾತುಗಳಿಂದಲೇ ಇಂತು ನುಡಿದನು.
ಅರ್ಜುನಃ
ಯುಧ್ಯಧ್ವಂ ಪರಯಾ ಶಕ್ತ್ಯಾ ಯತಧ್ವಂ ಚ ವಧೇ ಮಮ |
ಕುರುಧ್ವಂ ಸರ್ವಕಾರ್ಯಾಣಿ ಮಹದ್ ವೋ ಭಯಮಾಗತಮ್ ॥4॥
ಅರ್ಜುನ ಸೈಂಧವ ವೀರರೇ, ನಿಮ್ಮಲ್ಲಿರುವ ಸಮಗ್ರ ಶಕ್ತಿಯನ್ನೂ ಪ್ರಯೋಗಿಸಿ ನನ್ನೊಡನೆ ಯುದ್ಧ ಮಾಡಿರಿ. ನನ್ನನ್ನು ಜಯಿಸುವ ದೃಷ್ಟಿಯಿಂದಲೇ ನಿಮ್ಮ ಸಮಗ್ರ ಪ್ರಯತ್ನವಿರಲಿ. ನೀವು ಮಾಡಬೇಕಾದ ಕರ್ಮಗಳನ್ನೆಲ್ಲ ಮುಗಿಸಿ ಬನ್ನಿರಿ. ನಿಮಗೆ ಪ್ರಾಣಭಯವು ಸನ್ನಿಹಿತವಾಗಿದೆ.
ಏಷ ಯೋತ್ಸ್ಯಾಮಿ ವಃ ಸರ್ವಾನ್ ನಿವಾರ್ಯ ಶರವಾಗುರಾಮ್ |
ತಿಷ್ಠಧ್ವಂ ಯುದ್ಧಮನಸೋ ದರ್ಪಾನ್ ವಿನಯಿತಾಸ್ಮಿ ವಃ ॥5॥
ನೀವು ಪ್ರಯೋಗಿಸುತ್ತಿರುವ ಬಾಣಗಳ ಸಮುದಾಯವೆಲ್ಲವನ್ನೂ ಕ್ಷಣಮಾತ್ರದಲ್ಲಿ ತುಂಡರಿಸುತ್ತೇನೆ. ಯುದ್ಧ ಮಾಡುವ ಮನಸ್ಸಿನಿಂದ ನನ್ನೆದುರು ನಿಲ್ಲಿರಿ. ನಿಮ್ಮೆಲ್ಲರ ದರ್ಪವನ್ನು ಕ್ಷಣಮಾತ್ರದಲ್ಲಿ ಶಾಂತಗೊಳಿಸುತ್ತೇನೆ.
ವೈಶಂಪಾಯನಃ
ಏತಾವದುಕ್ತ್ವಾ ಕೌರವ್ಯೋ ರೋಷಾದ್ ಗಾಂಡೀವಭೃತ್ ತದಾ |
ನ ತತಾಪ ವಚಃ ಸ್ಮೃತ್ವಾ ಭ್ರಾತುರ್ಜ್ಯೇಷ್ಠಸ್ಯ ಭಾರತ ॥6॥
ನ ಹಂತವ್ಯಾ ರಣೇ ತಾತ ಕ್ಷತ್ರಿಯಾ ವಿಜಿಗೀಷವಃ |
ಜೇತವ್ಯಾಶ್ಚೇತಿ ಯತ್ಪ್ರೋಕ್ತಂ ಧರ್ಮರಾಜ್ಞಾ ಮಹಾತ್ಮನಾ ॥7॥
ವೈಶಂಪಾಯನ ಗಾಂಡೀವಧಾರಿಯಾದ ಅರ್ಜುನನು ರೋಷದಿಂದ ಹೀಗೆ ಹೇಳುತ್ತಾ ಯುದ್ಧಕ್ಕೆ ಸಜ್ಜಾಗಿ ನಿಂತನು. ಆದರೆ ಧರ್ಮಾತ್ಮನಾದ ಯುಧಿಷ್ಠಿರನು ಹೇಳಿದ ಯುದ್ಧದಲ್ಲಿ ಕ್ಷತ್ರಿಯರನ್ನು ಕೊಲ್ಲಬಾರದು, ಜಯಿಸಬೇಕು ಎಂಬ ಮಾತು ಅರ್ಜುನನಿಗೆ ನೆನಪಾಯಿತು.
ಚಿಂತಯಾಮಾಸ ಚ ತದಾ ಫಲ್ಗುನಃ ಪುರುಷರ್ಷಭಃ ॥8॥
ಧರ್ಮರಾಜನ ಮಾತುಗಳನ್ನು ನೆನೆದು ಪುರುಷರ್ಷಭನಾದ ಫಲ್ಗುನನು ಹೀಗೆ ಆಲೋಚಿಸಿದನು.
ಇತ್ಯುಕ್ತೋಽಹಂ ನರೇಂದ್ರೇಣ ನ ಹಂತವ್ಯಾ ನೃಪಾ ಇತಿ |
ಕಥಂ ತನ್ನ ಮೃಷೇಹ ಸ್ಯಾದ್ ಧರ್ಮರಾಜವಚಃ ಶುಭಮ್ ॥9॥
ನರಶ್ರೇಷ್ಠನಾದ ಧರ್ಮರಾಜನು ಯಾವುದೇ ಕ್ಷತ್ರಿಯರನ್ನು ಕೊಲ್ಲಬಾರದು ಎಂದು ಹೇಳಿದ್ದಾನೆ. ಈ ಪ್ರಸಂಗದಲ್ಲಿ ಧರ್ಮರಾಜನ ಈ ಮಂಗಳಮಯವಾದ ಮಾತನ್ನು ನಾನು ಹೇಗೆ ಸುಳ್ಳಾಗದಿರುವಂತೆ ವರ್ತಿಸಲಿ?
ನ ಹಂತವ್ಯಾಶ್ಚ ರಾಜಾನೋ ರಾಜ್ಞಶ್ಚಾಜ್ಞಾ ಕೃತಾ ಭವೇತ್ ॥10॥
ಯಾವುದೇ ರಾಜರನ್ನು ಸಂಹರಿಸಬಾರದು. ಕುದುರೆಯನ್ನು ರಕ್ಷಿಸಿಕೊಂಡು ಬರಬೇಕೆಂಬ ಆಜ್ಞೆಯನ್ನು ನಾನು ಹೇಗೆ ಸಾಧಿಸಲಿ?
ಇತಿ ಸಂಚಿಂತ್ಯ ತು ತದಾ ಭ್ರಾತುಃ ಪ್ರಿಯಹಿತೇ ರತಃ |

ಪ್ರೋವಾಚ ವಾಕ್ಯಂ ಧರ್ಮಜ್ಞಃ ಸೈಂಧವಾನ್ ಯುದ್ಧದುರ್ಮದಾನ್ ॥
ಹೀಗೆ ಅರ್ಜುನನು ಸ್ವಲ್ಪ ಸಮಯ ಆಲೋಚಿಸಿ, ಯುದ್ಧದುರ್ಮದರಾದ ಸೈಂಧವರನ್ನು ಕುರಿತು, ಅಣ್ಣನಿಗೆ ಸಂತೋಷವನ್ನುಂಟು ಮಾಡುವ ಮಾತುಗಳನ್ನು ಆಡಿದನು.
ಅರ್ಜುನಃ
ಬಾಲಾಂಸ್ತ್ರಿಯೋ ವಾ ಯುದ್ಧೇಷು ನ ಹಿಂಸೇ ಸಮುಪಸ್ಥಿತಾನ್ ।
ಯಶ್ಚ ವಕ್ಷ್ಯತಿ ಸಂಗ್ರಾಮೇ ತವಾಸ್ಮೀತಿ ಪರಾಜಿತಃ ॥12॥
ಅರ್ಜುನ ಬಾಲಕರನ್ನಾಗಲೀ, ಸ್ತ್ರೀಯರನ್ನಾಗಲೀ ಯುದ್ಧಕ್ಕೆ ಆಗಮಿಸಿರುವ ಇವರನ್ನು ನಾನು ಹಿಂಸೆ ಪಡಿಸುವುದಿಲ್ಲ. ಯಾವ ಪರಾಕ್ರಮಿಯಾದ ವ್ಯಕ್ತಿಯು ನನ್ನಿಂದ ಪರಾಜಿತರಾಗಿ ಈ ಸಂಗ್ರಾಮದಲ್ಲಿ ನಾನು ನಿನ್ನ ಅಧೀನನಾಗಿದ್ದೇನೆ ಎಂದು ಹೇಳುತ್ತಾನೋ ಅವನನ್ನೂ ನಾನು ವಧಿಸುವುದಿಲ್ಲ.
ಏತಚ್ಛ್ರುತ್ವಾ ವಚೋ ಮಹ್ಯಂ ಕುರುಧ್ವಂ ಹಿತಮಾತ್ಮನಃ ॥13॥
ಈ ನನ್ನ ಮಾತುಗಳನ್ನು ಕೇಳಿಸಿಕೊಂಡ ನೀವು ಹಿತವಾದುದು ಯಾವುದೆಂದು ಆಲೋಚಿಸಿ ಕೆಲಸ ಮಾಡಿರಿ.
ಅತೋಽನ್ಯಥಾ ಕೃಚ್ಛ್ರಗತಾ ಭವಿಷ್ಯಥ ಮಯಾರ್ದಿತಾಃ ॥14॥
ಇದಕ್ಕೆ ವಿರುದ್ಧವಾಗಿ ವರ್ತಿಸಿದಲ್ಲಿ ನನ್ನ ಬಾಣಗಳಿಂದ ಪೀಡಿತರಾಗಿ ಕಷ್ಟವನ್ನು ಹೊಂದುತ್ತೀರಿ.
ವೈಶಂಪಾಯನಃ
ಏವಮುಕ್ತ್ವಾ ತು ತಾನ್ ವೀರಾನ್ ಯುಯುಧೇ ನರಪುಂಗವಃ ।
ಅತ್ವರಾವಾನಸಂರಬ್ಧಃ ಸಂರಬ್ಧೈರ್ವಿಜಿಗೀಷುಭಿಃ ॥15॥
ವೈಶಂಪಾಯನ ಅರ್ಜುನನು ಹೀಗೆ ಹೇಳಿ ಅವರ ಪ್ರತಿಕ್ರಿಯೆಯನ್ನು ವೀಕ್ಷಿಸಿದನು. ಆದರೆ ಯಾರೂ ಅರ್ಜುನನ ಮಾತಿಗೆ ಶರಣಾಗರಾಗಲಿಲ್ಲ. ಅತಿ ಕ್ರುದ್ಧರಾಗಿ ವಿಜಯವನ್ನು ಹೊಂದುವ ಆಸೆಯಿಂದಲೇ ಯುದ್ಧಕ್ಕೆ ಮುಂದೆ ಬಂದರು. ಅವರನ್ನು ಅರ್ಜುನನು ಎದುರಿಸಿದನು.
ತತಃ ಶತಸಹಸ್ರಾಣಿ ಶರಾಣಾಂ ನತಪರ್ವಣಾಮ್ ।
ಮುಮುಚುಃ ಸೈಂಧವಾ ರಾಜನ್ ತದಾ ಗಾಂಡೀವಧನ್ವನಿ ॥16॥
ಆ ಸಮಯದಲ್ಲಿ ಸೈಂಧವರು ಬಗ್ಗಿದ ಬಿಲ್ಲುಗಳಿಂದ ಕೂಡಿರುವ ಒಂದು ಲಕ್ಷ ಬಾಣಗಳನ್ನು ಗಾಂಡೀವಧಾರಿಯಾದ ಅರ್ಜುನನ ಮೇಲೆ ನಿರಂತರ ಸುರಿಸಿದರು.
ಸ ತಾನಾಪತತಃ ಕ್ರೂರಾನ್ ಆಶೀವಿಷವಿಷೋಪಮಾನ್ ।
ಚಿಚ್ಛೇದ ನಿಶಿತೈರ್ಬಾಣೈರಂತರಿಕ್ಷೇ ಧನಂಜಯಃ ॥17॥
ಸರ್ಪಗಳ ವಿಷಕ್ಕೆ ಸಮಾನವಾಗಿರುವ, ಅತ್ಯಂತ ಕ್ರೂರವಾದ ಬಾಣಗಳು ತನ್ನ ಮೇಲೆ ರಭಸದಿಂದ ಬರುತ್ತಿರುವುದನ್ನು ಕಂಡ ಅರ್ಜುನನು ಹರಿತವಾದ ಬಾಣಗಳಿಂದ ಅವುಗಳೆಲ್ಲವನ್ನೂ ತುಂಡರಿಸಿದನು.
ಛಿತ್ತ್ವಾ ತು ತಾನಾಶು ಜವಾನ್ ಕಂಕಪತ್ರಾನ್ ಶಿಲಾಸಿತಾನ್ ।
ಏಕೈಕಮೇಷ ದಶಭಿರ್ಬಿಭೇದ ಸಮರೇ ಶರೈಃ ॥18॥
ಹದ್ದಿನ ರೆಕ್ಕೆಗಳನ್ನು ಹೊಂದಿರುವ, ಸೈಂಧವ ಯೋಧರಿಂದ ಪ್ರಯೋಗಿಸಲ್ಪಟ್ಟ ಬಾಣಗಳನ್ನು ವೇಗವಾಗಿ ಕತ್ತರಿಸಿ ಒಬ್ಬೊಬ್ಬ ಯೋಧನನ್ನೂ ತನ್ನ ಹರಿತವಾದ ಬಾಣಗಳಿಂದ ಘಾಸಿಗೊಳಿಸಿದನು.
ತತಃ ಪ್ರಾಸಾಂಶ್ಚ ಶಕ್ತೀಶ್ಚ ಪುನರೇವ ಧನಂಜಯೇ ।
ಜಯದ್ರಥಂ ಹತಂ ಸ್ಮೃತ್ವಾ ಚಿಕ್ಷಿಪುಃ ಸೈಂಧವಾ ನೃಪ ॥19॥
ಜಯದ್ರಥನು ಅರ್ಜುನನಿಂದ ಹತನಾದನೆಂದು ಸ್ಮರಿಸಿಕೊಳ್ಳುತ್ತಾ ಸೈಂಧವ ಯೋಧರು ಅರ್ಜುನನ ಮೇಲೆ ಪ್ರಾಸ ಆಯುಧಗಳನ್ನೂ, ಶಕ್ತ್ಯಾಯುಧಗಳನ್ನೂ ಪುನಃ ಪುನಃ ಪ್ರಯೋಗಿಸುತ್ತಲೇ ಇದ್ದರು.
ತೇಷಾಂ ಕಿರೀಟೀ ಸಂಕಲ್ಪಂ ಮೋಘಂ ಚಕ್ರೇ ಮಹಾಮನಾಃ ।
ಸರ್ವಾಂಸ್ತಾನಂತರಾ ಛಿತ್ತ್ವಾ ಮುದಾ ಚುಕ್ರೋಶ ಪಾಂಡವಃ ॥20॥
ಸಮಸ್ತ ಆಯುಧಗಳನ್ನು ಅರ್ಜುನನು ಮಧ್ಯದಲ್ಲಿಯೇ ಕತ್ತರಿಸಿ ಗರ್ಜನೆ ಮಾಡಿದನು. ಸೈಂಧವ ರಾಜರ ಸಂಕಲ್ಪವನ್ನು ವಿಫಲಗೊಳಿಸಿದನು.
ತಥೈವಾಪತತಾಂ ತೇಷಾಂ ಯೋಧಾನಾಂ ಜಯಗೃದ್ಧಿನಾಮ್ ।
ಶಿರಾಂಸಿ ಪಾತಯಾಮಾಸ ಭಲ್ಲೈಃ ಸನ್ನತಪರ್ವಭಿಃ ॥21॥
ವಿಜಯವನ್ನು ಬಯಸುತ್ತಾ ಆಕ್ರಮಿಸಲು ಮುನ್ನುಗ್ಗಿ ಬರುತ್ತಿದ್ದವರ ತಲೆಗಳನ್ನು ಬಗ್ಗಿದ ಗಿಣ್ಣುಗಳಿಂದ ಕೂಡಿದ ಭಲ್ಲಗಳಿಂದ ತುಂಡರಿಸಿದನು.
ತೇಷಾಂ ವಿದ್ರವತಾಂ ಚೈವ ಪುನರೇವ ಚ ಧಾವತಾಮ್ ।
ನಿವೃತ್ತಾನಾಂ ಚ ಶಬ್ದೋಽಭೂತ್ ಪೂರ್ಣಸ್ಯೇವ ಮಹೋದಧೇಃ ॥22॥
ಅದರಿಂದ ಭಯಗ್ರಸ್ತರಾದ ಸೈಂಧವ ಯೋಧರು ಪಲಾಯನರಾದರು. ಕೆಲವರು ಸಂಘಟಿತರಾಗಿ ಪುನಃ ಯುದ್ಧಕ್ಕೆ ಆಗಮಿಸುತ್ತಿದ್ದರು. ಹೀಗೆ ಸೈಂಧವ ಯೋಧರ ಗಮನಾಗಮನಗಳ ಶಬ್ದವು ತುಂಬಿದ ಮಹೋದಧಿಯ ಗಂಭೀರ ಧ್ವನಿಯನ್ನು ಅನುಕರಿಸುತ್ತಿತ್ತು.
ತೇ ವಧ್ಯಮಾನಾ ಹಿ ತದಾ ಪಾರ್ಥೇನಾಮಿತತೇಜಸಾ ।
ಯಥೋತ್ಸಾಹಂ ಯಥಾಶಕ್ತಿ ಯೋಧಯಾಮಾಸುರರ್ಜುನಮ್ ॥23॥
ಅಮಿತ ತೇಜಸ್ವಿಯಾದ ಅರ್ಜುನನಿಂದ ಸೈಂಧವ ಯೋಧರು ಅಪಾರ ಸಂಖ್ಯೆಯಲ್ಲಿ ಹತರಾಗುತ್ತಿದ್ದರೂ ತಮಗೆ ಶಕ್ತಿ ಇರುವಷ್ಟು

ಉತ್ಸಾಹದಿಂದಲೇ ಅರ್ಜುನನ ಬಳಿ ಯುದ್ಧ ಮಾಡಿದರು.
ತತಸ್ತೇ ಫಲ್ಗುನೇನಾಜೌ ಶರೈಃ ಸನ್ನತಪರ್ವಭಿಃ |
ಕೃತಾ ವಿಸಂಜ್ಞಾ ಭೂಯಿಷ್ಠಾಃ ಕ್ಲಾಂತವಾಹನಸೈನಿಕಾಃ ॥24॥
ಅರ್ಜುನನು ಪುನಃ ಬಗ್ಗಿದ ಗಿಣ್ಣುಗಳಿಂದ ಕೂಡಿದ ಬಾಣಗಳ ಪ್ರಹಾರದಿಂದ ಸೈಂಧವ ಸೈನಿಕರನ್ನು ಪ್ರಜ್ಞಾಹೀನರನ್ನಾಗಿ ಮಾಡಿದನು. ಅವರೆಲ್ಲರೂ, ಅವರ ವಾಹನಗಳೂ ಬಹಳವಾಗಿ ಅರ್ಜುನನಿಂದ ಬಳಲಿದವು.
ತಾಂಸ್ತು ಸರ್ವಾನ್ ಪರಿಗ್ಲಾನಾನ್ ವಿದಿತ್ವಾ ಧೃತರಾಷ್ಟ್ರಜಾ |
ದುಃಶಲಾ ಬಾಲಮಾದಾಯ ನಪ್ತಾರಂ ಪ್ರಯಯೌ ತದಾ ॥25॥
ಸೈಂಧವ ವೀರರೆಲ್ಲರೂ ತುಂಬಾ ದಣಿದಿದ್ದಾರೆಂದು ತಿಳಿದ ಧೃತರಾಷ್ಟ್ರನ ಮಗಳಾದ ದುಃಶಲೆಯು ಯೋಧರೆಲ್ಲರೂ ಶಾಂತರಾಗಲೆಂಬ ಅಭಿಲಾಷೆಯಿಂದ ಮೊಮ್ಮಗನನ್ನು ರಥದಲ್ಲಿ ಕೂಡಿಸಿಕೊಂಡು ಅರ್ಜುನನ ಸಮೀಪಕ್ಕೆ ಆಗಮಿಸಿದಳು.
ಮಹಾರಥಸುತಂ ವೀರಂ ರಥೇನಾನುಗತಂ ತದಾ ॥26॥
ಮಹಾರಥನಾದ ಸುರಥನ ವೀರಪುತ್ರನಾದ ಮೊಮ್ಮಗನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಅರ್ಜುನನ ಸಮೀಪಕ್ಕೆ ಆಗಮಿಸಿದಳು.
ಶಾಂತ್ಯರ್ಥಂ ಸರ್ವಯೋಧಾನಾಮಭ್ಯಗಚ್ಛದ್ಧಿ ಪಾಂಡವಮ್ ॥27॥
ಆ ದುಃಶಲೆಯ ಉದ್ದೇಶವು ಎಲ್ಲ ಯೋಧರ ಶಾಂತಿಗಾಗಿ ಆಗಿತ್ತು. ಅರ್ಜುನನನ್ನು ದುಃಶಲೆಯು ಸಮೀಪಿಸಿದಳು.
ಸಾ ಧನಂಜಯಮಾಸಾದ್ಯ ಮುಮೋಚಾರ್ತಸ್ವರಂ ತದಾ |
ಧನಂಜಯೋಽಪಿ ತಾಂ ದೃಷ್ಟ್ವಾ ಧನುರ್ವಿಸಸೃಜೇ ತದಾ ॥28॥
ದುಃಶಲೆಯು ಅರ್ಜುನನನ್ನು ಸಮೀಪಿಸಿ ಆರ್ತಸ್ವರದಿಂದ ಅಳತೊಡಗಿದಳು. ಅರ್ಜುನನಾದರೂ ಧನುಸ್ಸನ್ನು ತ್ಯಜಿಸಿ ಅವಳನ್ನು ಸಂತೈಸಲಾರಂಭಿಸಿದನು.
ಸಮುತ್ಸೃಷ್ಟಧನುಃ ಪಾರ್ಥೋ ವಿಧಿವದ್ ಭಗಿನೀಂ ತದಾ |
ಪ್ರಾಹ ಕಿಂ ಕರವಾಣೀತಿ ಸಾ ಚ ತಂ ವಾಕ್ಯಮಬ್ರವೀತ್ ॥29॥
ತಂಗಿಯಾದ ದುಃಶಲೆಯನ್ನು ಉದ್ದೇಶಿಸಿ, ಧನುಸ್ಸನ್ನು ವಿಧಿಬದ್ಧವಾಗಿ ವಿಸರ್ಜಿಸಿದ ಅರ್ಜುನನು ಅವಳ ಬಳಿ, ನಿನಗಾಗಿ ಏನು ಮಾಡಲಿ ಎಂದು ಕೇಳಿದನು. ದುಃಶಲೆಯು ಅರ್ಜುನನ ಮಾತಿಗೆ ಇಂತು ನುಡಿದಳು.
ದುಃಶಲಾ
ಏಷ ತೇ ಭರತಶ್ರೇಷ್ಠ ಸ್ವಸ್ರೀಯಸ್ಯಾತ್ಮಜಃ ಶಿಶುಃ |
ಅಭಿವಾದಯತೇ ವೀರ ತಂ ಪಶ್ಯ ಭರತರ್ಷಭ ॥30॥
ದುಃಶಲೆ ಪಾರ್ಥನೇ, ನಾನು ಕರೆದು ತಂದಿರುವ ಈ ಬಾಲಕನು ನಿನ್ನ ತಂಗಿಯ ಮಗನ ಮಗನು. ಅರ್ಥಾತ್ ನನ್ನ ಮೊಮ್ಮಗನು. ಇವನನ್ನು ನೋಡು. ಪುರುಷಶ್ರೇಷ್ಠನೇ, ಇವನು ನಿನಗೆ ಅಭಿವಾದನ ಮಾಡುತ್ತಿದ್ದಾನೆ.
ವೈಶಂಪಾಯನಃ
ಇತ್ಯುಕ್ತಸ್ತಸ್ಯ ಪಿತರಂ ಸ ಪಪ್ರಚ್ಛಾರ್ಜುನಸ್ತದಾ |
ಕ್ವಾಸಾವಿತಿ ತತೋ ರಾಜನ್ ದುಃಶಲಾ ವಾಕ್ಯಮಬ್ರವೀತ್ ॥31॥
ವೈಶಂಪಾಯನ ದುಶ್ಶಲೆಯು ಹೀಗೆ ಹೇಳಲು ಅರ್ಜುನನು ಈ ಬಾಲಕನ ತಂದೆಯಾದ ಸುರಥನು ಎಲ್ಲಿದ್ದಾನೆ ಎಂದು ದುಶ್ಶಲೆಯನ್ನು ಪ್ರಶ್ನಿಸಿದನು. ಪ್ರತಿಯಾಗಿ ದುಶ್ಶಲೆಯು ಇಂತು ನುಡಿದಳು.
ದುಃಶಲಾ
ಪಿತೃಶೋಕಾಭಿಸಂತಪ್ತೋ ವಿಷಾದಾರ್ತೋಽಸ್ಯ ವೈ ಪಿತಾ |
ಪಂಚತ್ವಮಗಮದ್ ವೀರೋ ಯಥಾ ತನ್ಮೇ ನಿಶಾಮಯ ॥32॥
ದುಶ್ಶಲೆ ಅರ್ಜುನನೇ, ಈ ಬಾಲಕನ ತಂದೆಯಾದ ಸುರಥನು ಪಿತೃಶೋಕದಿಂದ ದುಃಖಿತನಾಗಿ ತುಂಬಾ ದುಃಖದಿಂದ ಮೃತ್ಯುವಶನಾದನು.
ಸ ಪೂರ್ವಂ ಪಿತರಂ ಶ್ರುತ್ವಾ ಹತಂ ಯುದ್ಧೇ ತ್ವಯಾಽನಘ |
ತ್ವಾಮಾಗತಂ ಚ ಸಂಶ್ರುತ್ಯ ಯುದ್ಧಾಯ ಹಯಸಾರಿಣಮ್ ॥33॥
ಪಿತುಶ್ಚ ಮೃತ್ಯುದುಃಖಾರ್ತೋ ಜಹೌ ಪ್ರಾಣಾನ್ ಧನಂಜಯ ॥34॥
ಸುರಥನು ಹಿಂದೆ ಅರ್ಜುನನು ತನ್ನ ತಂದೆಯನ್ನು ಸಂಹರಿಸಿದನೆಂಬ ಸಮಾಚಾರವನ್ನು ಕೇಳಿದ್ದನು. ತಂದೆಯ ಮರಣದಿಂದ ದುಃಖಿತನಾದ ನನ್ನ ಮಗನಾದ ಸುರಥನು, ನೀನು ಯಜ್ಞಾಶ್ವದ ಜೊತೆಯಲ್ಲಿ ಆಗಮಿಸಿ ಸೈಂಧವರೊಡನೆ ಯುದ್ಧ ಮಾಡುತ್ತಿರುವಿ ಎಂಬ ವಾರ್ತೆಯನ್ನು ಕೇಳಿದೊಡನೆ ಪ್ರಾಣವನ್ನು ತೊರೆದುಬಿಟ್ಟನು.
ಪ್ರಾಪ್ತೋ ಬೀಭತ್ಸುರಿತ್ಯೇವ ನಾಮ ಶ್ರುತ್ವೈವ ತೇಽನಘ |
ವಿಷಾದಾರ್ತಃ ಪಪಾತೋರ್ವ್ಯಾಂ ಮಮಾರ ಚ ಮಮಾತ್ಮಜಃ ॥35॥
ಅರ್ಜುನನು ಬಂದಿದ್ದಾನೆ ಎಂಬ ನಾಮವನ್ನು ಕೇಳಿದೊಡನೆ ದುಃಖದಿಂದ ಆರ್ತನಾದ ನನ್ನ ಮಗನು ಭೂಮಿಯಲ್ಲಿ ಬಿದ್ದು ಮರಣವನ್ನು ಹೊಂದಿರುವನು.
ತಂ ದೃಷ್ಟ್ವಾಹಂ ನಿಪತಿತಂ ತತಸ್ತಸ್ಯಾತ್ಮಜಂ ವಿಭೋ |
ಗೃಹೀತ್ವಾ ಸಮನುಪ್ರಾಪ್ತಾ ತ್ವಾಮದ್ಯ ಶರಣೈಷಿಣೀ ॥36॥
ಅಂತಹ ಬಿದ್ದಿರುವ ಪುತ್ರನನ್ನು ನೋಡಿ ಬಳಿಕ ಅವನ ಮಗನಾಗಿರುವ ಇವನನ್ನು ಕರೆದುಕೊಂಡು ನಿನ್ನ ರಕ್ಷಣೆಯನ್ನು ಬಯಸಿ ನಾನು ಇಲ್ಲಿಗೆ ಆಗಮಿಸಿದ್ದೇನೆ.

ವೈಶಂಪಾಯನಃ
ಇತ್ಯುಕ್ತ್ವಾSSರ್ತಸ್ವರಂ ಸಾ ತು ಮುಮೋಚ ಧೃತರಾಷ್ಟ್ರಜಾ |
ದೀನಾ ದೀನಂ ಸ್ಥಿತಂ ಪಾರ್ಥಮಬ್ರವೀಚ್ಚಾಪ್ಯಧೋಮುಖಮ್ ॥37॥
ವೈಶಂಪಾಯನ ಹೀಗೆ ಹೇಳಿದ ದೀನಳಾದ ದುಶ್ಶಲೆಯು ಪುನಃ ಆರ್ತಸ್ವರದಿಂದ ಅಳಲು ಆರಂಭಿಸಿದಳು. ಅವಳ ಹೃದಯವಿದ್ರಾವಕವಾದ ಮಾತನ್ನು ಕೇಳಿ ದೈನ್ಯದಿಂದ ಮುಖವನ್ನು ಕೆಳಗೆ ಮಾಡಿಕೊಂಡು ನಿಂತಿರುವ ಅರ್ಜುನನನ್ನು ಕುರಿತು ದುಶ್ಶಲೆಯು ಪುನಃ ಹೇಳಿದಳು.
ದುಃಶಲಾ
ಸ್ವಸಾರಂ ಮಾಮವೇಕ್ಷಸ್ವ ಸ್ವಸ್ರೀಯಾತ್ಮಜಮೇವ ಚ |
ಕರ್ತುಮರ್ಹಸಿ ಧರ್ಮಜ್ಞ ದಯಾಂ ಮಯಿ ಕುರೂದ್ವಹ ॥38॥
ದುಶ್ಶಲೆ ಕುರುಕುಲಶ್ರೇಷ್ಠನೇ, ಧರ್ಮಜ್ಞನೇ, ದೀನಳಾದ, ಆರ್ತಳಾದ ನಿನ್ನ ಸಹೋದರಿಯನ್ನು ನೋಡು. ನಿನ್ನ ತಂಗಿಯ ಮೊಮ್ಮಗನಾದ ಈ ಹಸುಳೆ ಸುತನನ್ನು ನೋಡು.
ವಿಸ್ಮೃತ್ಯ ಕುರುರಾಜಾನಂ ತಂ ಚ ಮಂದಂ ಜಯದ್ರಥಮ್ ॥39॥
ಅಭಿಮನ್ಯೋರ್ಯಥಾ ಜಾತಃ ಪರೀಕ್ಷಿತ್ ಪರವೀರಹಾ |
ತಥಾSಯಂ ಸುರಥಾಜ್ಜಾತೋ ಮಮ ಪೌತ್ರೋ ಮಹಾಭುಜ ॥40॥
ನನ್ನ ಅಣ್ಣನಾದ ಮಂದಬುದ್ಧಿಯಾದ ದುರ್ಯೋಧನನನ್ನು, ನನ್ನ ಪತಿಯಾದ ಜಯದ್ರಥನನ್ನು ಮರೆತು, ಶತ್ರುಹಂತಕನಾದ ಪರೀಕ್ಷಿತನು ಅಭಿಮನ್ಯುವಿಗೆ ಹುಟ್ಟಿದಂತೆ ಮಹಾಭುಜನಾದ ನನ್ನ ಮೊಮ್ಮಗನು ಸುರಥನಿಗೆ ಹುಟ್ಟಿದ್ದಾನೆಂದು ಭಾವಿಸು.
ತಮಾದಾಯ ನರವ್ಯಾಘ್ರ ಪ್ರಾಪ್ತಾSಸ್ಮ್ಯದ್ಯ ತವಾಂತಿಕಮ್ |
ಶಮಾರ್ಥಂ ಸರ್ವಯೋಧಾನಾಂ ಶೃಣು ಚೇದಂ ವಚೋ ಮಮ ॥41॥
ನರವ್ಯಾಘ್ರನೇ, ಇವನನ್ನು ಕರೆದುಕೊಂಡು ಯುದ್ಧವನ್ನು ಶಾಂತಗೊಳಿಸುವ ದೃಷ್ಟಿಯಿಂದ ನಿನ್ನ ಬಳಿಗೆ ಆಗಮಿಸಿದ್ದೇನೆ. ಈ ನನ್ನ ಮಾತನ್ನು ಕೇಳಿಸಿಕೊ.
ಆಗತೋSಯಂ ಮಹಾಬಾಹೋ ತಸ್ಯ ಮಂದಸ್ಯ ಪುತ್ರಕಃ |
ಪ್ರಸಾದಮಸ್ಯ ಬಾಲಸ್ಯ ತಸ್ಮಾತ್ ತ್ವಂ ಕರ್ತುಮರ್ಹಸಿ ॥42॥
ಮಹಾಬಾಹುವಾದ ಅರ್ಜುನನೇ, ಮಂದಬುದ್ಧಿಯವನಾದ ಜಯದ್ರಥನ ಮೊಮ್ಮಗನು ಶರಣಾರ್ಥಿಯಾಗಿ ಇಲ್ಲಿ ಆಗಮಿಸಿದ್ದಾನೆ. ಇವನ ವಿಷಯದಲ್ಲಿ ದಯೆ ತೋರುವುದು ಯೋಗ್ಯವಾಗಿದೆ.
ಏಷ ಪ್ರಸಾದ್ಯ ಶಿರಸಾ ಮಯಾ ಸಾರ್ಧಮರಿಂದಮ |
ಯಾಚತೇ ತ್ವಾಂ ಮಹಾಬಾಹೋ ಶಮಂ ಗಚ್ಛ ಧನಂಜಯ ॥43॥
ಅರಿಂದಮನೇ, ಈ ಬಾಲಕನು ತಲೆಬಾಗಿ ನಮಸ್ಕರಿಸುತ್ತಾ ಯುದ್ಧದ ಶಾಂತಿಯನ್ನು ನಿನ್ನಿಂದ ಬಯಸುತ್ತಿದ್ದಾನೆ. ಸಿಟ್ಟಾಗಬೇಡ. ಶಾಂತನಾಗು.
ಬಾಲಸ್ಯ ಹತಬಂಧೋಶ್ಚ ಪಾರ್ಥ ಕಿಂಚಿದಜಾನತಃ |
ಪ್ರಸಾದಂ ಕುರು ಧರ್ಮಜ್ಞ ಮಾ ತ್ವಂ ಮನ್ಯುವಶಂ ಗಮಃ ॥44॥
ಬಾಲಕನಾದ, ಬಂಧುಗಳನ್ನು ಕಳೆದುಕೊಂಡಿರುವ, ಏನೂ ತಿಳಿಯದ ಈ ಮಗುವಿನ ವಿಷಯದಲ್ಲಿ  ಕೃಪೆ ತೋರು. ನೀನು ಖಂಡಿತ ಸಿಟ್ಟಾಗಬೇಡ.
ತಮನಾರ್ಯಂ ನೃಶಂಸಂ ಚ ವಿಸ್ಮೃತ್ಯಾಸ್ಯ ಪಿತಾಮಹಮ್ |
ಆಗಸ್ಕಾರಿಣಮತ್ಯರ್ಥಂ ಪ್ರಸಾದಂ ಕರ್ತುಮರ್ಹಸಿ ॥45॥
ಅನಾರ್ಯನಾದ, ಕ್ರೂರಿಯಾದ, ಪಾಂಡವರೆಲ್ಲರಿಗೂ ಅಪರಾಧವನ್ನೆಸಗಿದ ಈ ಬಾಲಕನ ಅಜ್ಜನಾದ ಜಯದ್ರಥನನ್ನು ಮರೆತುಬಿಡು. ಬಾಲಕನ ವಿಷಯದಲ್ಲಿ ಪ್ರಸನ್ನನಾಗು.
ವೈಶಂಪಾಯನಃ
ಏವಂ ಬ್ರುವತ್ಯಾಂ ಕರುಣಂ ದುಃಶಲಾಯಾಂ ಧನಂಜಯಃ |
ಸಂಸ್ಮೃತ್ಯ ದೇವೀಂ ಗಾಂಧಾರೀಂ ಧೃತರಾಷ್ಟ್ರಂ ಜನೇಶ್ವರಮ್ ॥46॥
ಪ್ರೋವಾಚ ಪುತ್ರಶೋಕಾರ್ತಃ ಕ್ಷತ್ರಧರ್ಮಂ ವಿಗರ್ಹಯನ್ ॥47॥
ವೈಶಂಪಾಯನ ಹೀಗೆ ಕರುಣಾಜನಕವಾದ ಮಾತುಗಳನ್ನು ದುಶ್ಶಲೆಯು ಹೇಳಿದಾಗ ಅರ್ಜುನನು ಗಾಂಧಾರಿಯನ್ನೂ, ರಾಜನಾದ ಧೃತರಾಷ್ಟ್ರನನ್ನೂ ಸ್ಮರಿಸಿಕೊಂಡು, ದುಃಖ-ಶೋಕಗಳಿಂದ ಕೂಡಿದವನಾಗಿ ಇದೆಲ್ಲದಕ್ಕೂ ಕಾರಣವಾದ ಕ್ಷತ್ರಧರ್ಮವನ್ನೇ ನಿಂದಿಸಿದನು.
ಅರ್ಜುನಃ
ಧಿಕ್ ತಂ ದುರ್ಯೋಧನಂ ಕ್ಷುದ್ರಂ ರಾಜ್ಯಲುಬ್ಧಂ ಚ ಮಾನಿನಮ್ |
ಯತ್ಕೃತೇ ಬಾಂಧವಾಃ ಸರ್ವೇ ಮಯಾ ನೀತಾ ಯಮಕ್ಷಯಮ್ ॥48॥
ಅರ್ಜುನ ರಾಜ್ಯಕಾಮುಕನಾದ, ದುರಭಿಮಾನಿಯಾದ, ಕ್ಷುದ್ರನಾದ ದುರ್ಯೋಧನನಿಗೆ ಧಿಕ್ಕಾರವಿರಲಿ. ಅವನ ನಿಮಿತ್ತದಿಂದಲೇ ನನ್ನ ಬಂಧು- ಬಾಂಧವರೆಲ್ಲರೂ ಯಮಪುರಿಗೆ ಸಾಗುವಂತಾಯಿತು.
ವೈಶಂಪಾಯನಃ
ಇತ್ಯುಕ್ತ್ವಾ ಬಹು ಸಾಂತ್ವಾದಿ ಪ್ರಸಾದಮಕರೋಜ್ಜಯಃ |

ಪರಿಷ್ವಜ್ಯ ಚ ತಾಂ ಪ್ರೀತೋ ವಿಸಸರ್ಜ ಗೃಹಾನ್ ಪ್ರತಿ ॥49॥
ವೈಶಂಪಾಯನ ಈ ರೀತಿಯಾಗಿ ಅರ್ಜುನನು ಸಾಂತ್ವನ ಪೂರ್ವಕವಾದ ಅನೇಕ ಮಾತುಗಳಿಂದ ದುಶ್ಶಲೆಯನ್ನು ಸಂತೈಸಿದನು. ಪ್ರೀತಿಯಿಂದ ತಂಗಿ ಎಂಬ ಭಾವದಿಂದ ಅವಳನ್ನು ಆಲಿಂಗಿಸಿಕೊಂಡು ಒಳ್ಳೆಯ ಮಾತುಗಳನ್ನಾಡಿ ಅವಳನ್ನು ಮನೆಗೆ ಕಳುಹಿಸಿಕೊಟ್ಟನು.
ದುಃಶಲಾ ಚಾಪಿ ತಾನ್ ಸರ್ವಾನ್ ನಿವಾರ್ಯ ಮಹತೋ ರಣಾತ್ |
ಸಂಪೂಜ್ಯ ಪಾರ್ಥಂ ಪ್ರಯಯೌ ಗೃಹಾನ್ ಪ್ರತಿ ಶುಭಾನನಾ ॥50॥
ಸುಮುಖಿಯಾದ ದುಶ್ಶಲೆಯು ಮಹಾಸಮರದಿಂದ ತನ್ನ ಸಂಬಂಧಿಗಳಾದ ಯೋಧರಿಗೆಲ್ಲ ವಿಶ್ರಾಂತಿ ಹೊಂದುವಂತೆ ಉಪದೇಶಿಸಿದಳು. ಅರ್ಜುನನನ್ನು ಯಥೋಚಿತವಾಗಿ ಸತ್ಕರಿಸಿ ಸಂತೋಷದ ಮುಖದಿಂದ ಅರಮನೆಗೆ ಹಿಂದಿರುಗಿದಳು.
ತತಃ ಸೈಂಧವಕಾನ್ ಯೋಧಾನ್ ನಿರ್ಜಿತ್ಯ ಸ ನರರ್ಷಭಃ ॥51॥
ನರಶ್ರೇಷ್ಠನಾದ ಅರ್ಜುನನು ಈ ಕ್ರಮದಲ್ಲಿ ಎಲ್ಲ ಯೋಧರನ್ನು ಗೆದ್ದನು.
ಪುನರೇವಾಶ್ವಮೇಧಾರ್ಥಂ ಹಯಂ ಕಾಮವಿಚಾರಿಣಮ್ | ತಾರಾಮೃಗಮಿವಾಕಾಶಂ ದೇವದೇವಃ ಪಿನಾಕಧೃಕ್ ॥52॥
ಸಸಾರ ತಂ ತಥಾ ವೀರೋ ವಿಧಿವತ್ ಯಜ್ಞಿಯಂ ಹಯಮ್ ॥53॥
ಯಾವ ರೀತಿಯಾಗಿ ಪಿನಾಕಪಾಣಿಯಾದ ಈಶ್ವರನು ನಕ್ಷತ್ರಗಳ ಮಧ್ಯದಲ್ಲಿ ಸಾಗುವ ಜಿಂಕೆಯನ್ನು ಅನುಸರಿಸಿ ಹೋಗುತ್ತಿರುವನೋ ಅಥವಾ ತಾರಕಾಸುರನನ್ನು ಎಲ್ಲ ಕಡೆಯೂ ಹುಡುಕುತ್ತಾ ಷಣ್ಮುಖನು ಹೇಗೆ ಸಾಗುತ್ತಾನೋ ಅದರಂತೆ ಅರ್ಜುನನು ಯಜ್ಞಸಂಬಂಧವಾದ ಕುದುರೆಯನ್ನು ಶಾಸ್ತ್ರವಿಧಿಗೆ ಅನುಸಾರವಾಗಿ ಅನುಸರಿಸಿ ಹೊರಟನು.
ವ್ಯಾಖ್ಯಾನ ವಿಶೇಷ ಕೈಯಲ್ಲಿ ಜಿಂಕೆಯನ್ನು ಧರಿಸಿರುವ ಪಿನಾಕಧಾರಿಯಾದ ಈಶ್ವರನು ಹೇಗೆ ಆಕಾಶಮಾರ್ಗದಲ್ಲಿ ಸಂಚರಿಸುತ್ತಾನೋ ಅದರಂತೆ ಅರ್ಜುನನು ಮಣಲೂರು ಪತಿಯ ದೇಶಕ್ಕೆ ಆಗಮಿಸಿದನು ಎಂಬ ಈ ಕಥಾ ಪ್ರಸಂಗವು ಪುನಃ ಇಲ್ಲಿ ಹೇಳಲ್ಪಟ್ಟಿದೆ. ಇದೇ ಕಥಾ ಪ್ರಸಂಗವು ಆದಿಪರ್ವದಲ್ಲಿಯೂ ಹೇಳಲ್ಪಟ್ಟಿತ್ತು. ಈ ಕಥಾಪ್ರಸಂಗವು ಪುನರುಕ್ತವಾಗಿದೆಯೇ ವಿನಾ ಎರಡು ಬಾರಿ ನಡೆದಿಲ್ಲ ಎಂದು ತಿಳಿದುಕೊಳ್ಳಬೇಕು.
ಸ ಪಾರ್ಥಿವಾನ್ ವಶೇ ಕೃತ್ವಾ ತಾಂಸ್ತಾನ್ ದೇಶಾನ್ ಯಥಾಸುಖಮ್|
ವಿಚಚಾರ ಯಥಾಕಾಮಂ ಕರ್ಮ ಪಾರ್ಥಸ್ಯ ವರ್ಧಯನ್ ॥54॥
ಯಜ್ಞಾಶ್ವವು ಮನಬಂದಂತೆ ಆಯಾ ದೇಶಗಳಲ್ಲಿ ಅರ್ಜುನನ ಯುದ್ಧಕರ್ಮವನ್ನು ಹೆಚ್ಚು ಹೆಚ್ಚಾಗಿ ಹೆಚ್ಚಿಸುತ್ತಾ ಕ್ರಮವಾಗಿ ಸಂಚರಿಸುತ್ತಿತ್ತು. ಹೀಗೆ ಸಂಚರಿಸುತ್ತಾ ಮಣಲೂರು ಅಧಿಪತಿಯಾದ ರಾಜನ ರಾಜ್ಯವನ್ನು ಅರ್ಜುನನ ಜೊತೆಗೆ ಪ್ರವೇಶಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಭರಣೇ ವಜ್ರದತ್ತವಿಸರ್ಜನಂ ನಾಮ ಅಷ್ಟಸಪ್ತತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೆಂಟನೆಯ
ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 30ನೇ ಅಧ್ಯಾಯ
ಅಥಾನುಮಂತ್ರಿತೋತ್ಸೃಷ್ಟಂ ಪುರೋಹಿತಪುರಸ್ಕೃತಮ್ |
ತುರಗಂ ಕೃಷ್ಣಸಾರಂಗಮನುವವ್ರಾಜ ವಾಸವಿಃ ॥
ಬಳಿಕ ಪಾಂಡವರು ಕಪ್ಪು ಮತ್ತು ಚಿತ್ರ ಬಣ್ಣಗಳಿಂದ ಕೂಡಿದ ಕುದುರೆಯನ್ನು ಅಭಿಮಂತ್ರಿಸಿ ಬಿಟ್ಟರು. ಪುರೋಹಿತರಾದ ಧೌಮ್ಯರನ್ನು ಮುಂದೆ ಮಾಡಿಕೊಂಡು ಅರ್ಜುನನು ಕುದುರೆಯನ್ನು ಹಿಂಬಾಲಿಸಿದರು.
ಸ ಜಿತ್ವಾ ರುಂಧತಸ್ಸರ್ವಾನ್ ನೃಪತೀಂಛಸ್ತ್ರತೇಜಸಾ |
ಚಾರಯಾಮಾಸ ಸರ್ವೇಷು ರಾಷ್ಟ್ರೇಷ್ವವಿಜಿತೋಽರಿಭಿಃ ॥
ಶತ್ರುಗಳಿಂದ ಪರಾಭವವಿಲ್ಲದ ಅರ್ಜುನನು ಆ ಕುದುರೆಯನ್ನು ತಡೆಯುವ ಎಲ್ಲ ರಾಜರನ್ನು ಶಸ್ತ್ರಬಲದಿಂದ ಗೆದ್ದು ಎಲ್ಲ ರಾಷ್ಟ್ರಗಳಲ್ಲಿ ತಿರುಗಿಸಿದನು.
ಯುಧಿಷ್ಠಿರಾಜ್ಞಯಾ ತೇನ ನ ಕಶ್ಚಿನ್ನಿಹತಸ್ತದಾ |
ಆಹೂತಾಶ್ಚ ನೃಪಾಸ್ತೇನ ಯಜ್ಞಾರ್ಥಂ ಪ್ರೀಯತಾಽಖಿಲಾಃ ॥
ಯುಧಿಷ್ಠಿರನ ಆಜ್ಞೆ ಇದ್ದುದರಿಂದ ಅರ್ಜುನನು ಯಾರನ್ನೂ ಆಗ ಕೊಲ್ಲಲಿಲ್ಲ. ಸಂತುಷ್ಟನಾದ ಆತ ಯಜ್ಞಕ್ಕೆ ಎಲ್ಲ ರಾಜರನ್ನೂ ಆಹ್ವಾನಿಸಿದನು.
ಮಣಲೂರಂ ಕ್ರಮಾತ್ ಪ್ರಾಪ್ತಸ್ತತ್ರೈನಂ ಬಭ್ರುವಾಹನಃ |
ಅಭ್ಯಯಾದರ್ಘ್ಯಪಾದ್ಯಾದ್ಯೈಸ್ತಮಾಹ ವಿಜಯಃ ಸುತಮ್ ॥
ಅರ್ಜುನನು ಕ್ರಮವಾಗಿ ಮಣಲೂರಿಗೆ ಬಂದಾಗ ಬಭ್ರುವಾಹನನು ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಎದುರುಗೊಂಡನು. ಅರ್ಜುನನು ಮಗನಿಗೆ ಹೇಳಿದನು.
ಯೋದ್ಧುಕಾಮೋಽರ್ಘ್ಯಮಾದಾಯ ತ್ವಯಾಽದ್ಯಾಭಿಗತೋ ಹ್ಯಹಮ್ |
ನ ಪ್ರೀಯೇ ಪೌರುಷಂ ಧಿಕ್ತೇ ಯನ್ಮೇಧ್ಯಾಶ್ವೋ ನ ವಾರಿತಃ ॥
ಯುದ್ಧ ಮಾಡಲು ಬಯಸಿದ್ದ ನನ್ನನ್ನು ನೀನು ಅರ್ಘ್ಯವನ್ನು ಹಿಡಿದು ಎದುರುಗೊಂಡೆ. ಅದರಿಂದ ನನಗೆ ಸಂತೋಷವಿಲ್ಲ. ನನ್ನ ಯಜ್ಞಾಶ್ವವನ್ನು ನೀನು ತಡೆಯಲಿಲ್ಲ. ನಿನ್ನ ಪೌರುಷಕ್ಕೆ ಧಿಕ್ಕಾರವಿರಲಿ!
ತದಾಽಪಿ ಪಿತೃಭಕ್ತ್ಯೈನಮಯುಧ್ಯಂತಮುಲೂಪಿಕಾ |

ಪ್ರಾಹ ಯುಧ್ಯಸ್ವ ಯತ್ಪ್ರೀತ್ಯೈ ಗುರೋಃ ಕಾರ್ಯಮಸಂಶಯಮ್ ॥
ಆಗಲೂ ತಂದೆಯ ಮೇಲಿನ ಭಕ್ತಿಯಿಂದ ಬಭ್ರುವಾಹನನು ಯುದ್ಧ ಮಾಡದಿದ್ದಾಗ ಉಲೂಪಿಯು ಹೇಳಿದಳು. `ಯುದ್ಧ ಮಾಡು. ತಂದೆಗೆ ಯಾವುದು ಸಂತೋಷಕರವೋ ಅದನ್ನು ನಿಸ್ಸಂಶಯವಾಗಿ ಮಗ ಮಾಡಬೇಕು'.
ಪ್ರೀಣನಾಯೈವ ಯುಧ್ಯಸ್ವ ಪಿತ್ರೇ ಸಂದರ್ಶಯಂಬಲಮ್ |
ಇತ್ಯುಕ್ತೋ ಯುಯುಧೇ ಪಿತ್ರಾ ಬಲಂ ಸರ್ವಂ ಪ್ರದರ್ಶಯನ್ ॥
`ತಂದೆಗೆ ನಿನ್ನ ಬಲವನ್ನು ತೋರುತ್ತ ಅವನನ್ನು ಸಂತೋಷಪಡಿಸುವುದಕ್ಕಾಗಿಯೇ ಯುದ್ಧಮಾಡು'. ಉಲೂಪಿ ಹೀಗೆ ಹೇಳಿದಾಗ ಬಭ್ರುವಾಹನನು ತನ್ನೆಲ್ಲ ಬಲವನ್ನೂ ತೋರುತ್ತಾ ತಂದೆಯೊಡನೆ ಯುದ್ಧ ಮಾಡಿದನು.
ಅರ್ಜುನಸ್ತು ಸುತಸ್ನೇಹಾನ್ಮಂದಂ ಯೋಧಯತಿ ಸ್ಮಯನ್ |
ಸ ತು ಸರ್ವಾಯುಧಕ್ಷೇಪೇಽಪ್ಯವಿಕಾರಂ ಧನಂಜಯಮ್ ॥
ದೃಷ್ಟ್ವಾ ಬಾಲ್ಯಾತ್ ಪರೀಕ್ಷಾಯೈ ಮಂತ್ರಪೂತಂ ಮಹಾಶರಮ್ |
ಚಿಕ್ಷೇಪ ಪಿತ್ರೇ ದೈವೇನ ತೇನೈನಂ ಮೋಹ ಆವಿಶತ್ ॥
ಅರ್ಜುನನು ಮಗನ ಮೇಲಿನ ಪ್ರೀತಿಯಿಂದ ನಗುತ್ತಾ ಮೆಲ್ಲಗೆ ಯುದ್ಧ ಮಾಡಿದನು. ಬಭ್ರುವಾಹನನು ಎಲ್ಲ ಆಯುಧಗಳನ್ನೆಸೆದರೂ ಅರ್ಜುನನಲ್ಲಿ ಏನೂ ವಿಕಾರವಾಗದಿದ್ದುದನ್ನು ಕಂಡು ಹುಡುಗತನದಿಂದ ಅರ್ಜುನನ ಸಾಮರ್ಥ್ಯವನ್ನು ಪರೀಕ್ಷಿಸುವುದಕ್ಕಾಗಿ ದೈವಾತ್ ಮಂತ್ರಪೂರಿತವಾದ ಮಹಾಬಾಣವನ್ನೇ ಅವನ ಮೇಲೆ ಎಸೆದನು. ಅದರಿಂದ ಅವನನ್ನು ಮೂರ್ಛೆ ಕವಿಯಿತು.
ಮೂರ್ಚ್ಛಿತಂ ತಂ ಗುರುಂ ದೃಷ್ಟ್ವಾ ತದ್ಭಕ್ತ್ಯಾ ಭೃಶದುಃಖಿತಃ |
ಪ್ರಾಯೋಪವಿಷ್ಟಸ್ತನ್ಮಾತಾ ವಿಲಲಾಪಾತಿದುಃಖಿತಾ ॥
ತಂದೆ ಮೂರ್ಛಿತನಾದುದನ್ನು ಕಂಡು ಅವನ ಮೇಲೆ ಭಕ್ತಿಯಿಂದ ಬಭ್ರುವಾಹನ ಬಹುದುಃಖಿತನಾಗಿ ಪ್ರಾಯೋಪ್ರವೇಶಕ್ಕೆ ಕುಳಿತನು. ಅವನ ತಾಯಿ ಚಿತ್ರಾಂಗದೆ ಅತಿ ದುಃಖಿತಳಾಗಿ ವಿಲಾಪ ಮಾಡಿದಳು.
ವಿಜಗರ್ಹ ತದೋಲೂಪೀಂ ಧಿಗ್ ಜಗತ್ತ್ರಯಪೂಜಿತಮ್ |
ಅಜೀಘನೋ ಮೇ ಭರ್ತಾರಂ ಪುತ್ರೇಣೈವಾವಿಜಾನತಾ ॥
ಚಿತ್ರಾಂಗದೆ ಉಲೂಪಿಯನ್ನು ನಿಂದಿಸಿದಳು. `ನಿನಗೆ ಧಿಕ್ಕಾರವಿರಲಿ, ಮೂರ್ಲೋಕದಲ್ಲಿ ಪೂಜಿತನಾದ ನನ್ನ ಪತಿಯನ್ನು ಏನೂ ತಿಳಿಯದ ಮಗನಿಂದಲೇ ಕೊಲ್ಲಿಸಿದೆ.
ಲೋಕವೀರಂ ಪತಿಂ ಹತ್ವಾ ನ ಮೇ ಕಾರ್ಯಂ ಸುತೇನ ಚ |
ಪತಿಲೋಕಮಹಂ ಯಾಸ್ಯೇ ತೃಪ್ತಾ ಭವ ಕಲಿಪ್ರಿಯೇ ॥
ಲೋಕದಲ್ಲಿಯೇ ಶ್ರೇಷ್ಠ ವೀರನಾದ ಪತಿಯನ್ನು ಕಳೆದುಕೊಂಡು ನನಗೆ ಮಗನಿಂದ ಏನೂ ಪ್ರಯೋಜನ ಆಗಬೇಕಾಗಿಲ್ಲ. ಪತಿಲೋಕವನ್ನೇ ನಾನು ಸೇರುವೆ. ಕಲಪ್ರಿಯಳೇ, ನೀನು ತೃಪ್ತಳಾಗು.
ಇತ್ಯುಕತ್ವ ಮರಣಾಯೈವ ತಾಂ ವಿನಿಶ್ಚಿತಮಾನಸಾಮ್ |
ಧರಾಯಾಂ ವಿಲುಠಂತೀಂ ಚ ದೃಷ್ಟ್ವಾ ಭುಜಗನಂದಿನೀ ॥
ನಾಗಲೋಕಾತ್ ಸಮಾದಾಯ ವಿಶಲ್ಯಕರಣೀಂ ಕ್ಷಣಾತ್ |
ಉತ್ಥಾಪಯಾಮಾಸ ಪತಿಂ ತ್ರಿಲೋಕಾತಿರಥಂ ತಯಾ ॥
ಹೀಗೆ ಹೇಳಿ ಚಿತ್ರಾಂಗದೆಯು ಪ್ರಾಣತ್ಯಾಗಕ್ಕೆ ಮನಸ್ಸಿನಲ್ಲಿ ನಿಶ್ಚಯಿಸಿ ನೆಲದಲ್ಲಿ ಹೊರಳಾಡುತ್ತಿದ್ದುದನ್ನು ಕಂಡು ಉಲೂಪಿಯು ಕ್ಷಣದಲ್ಲಿ ನಾಗಲೋಕದಿಂದ ವಿಶಲ್ಯಕರಣಿಯನ್ನು ಎತ್ತಿಕೊಂಡು ಅದರಿಂದ ಮೂರ್ಲೋಕದ ಅತಿರಥನಾದ ಪತಿಯನ್ನು ಎಬ್ಬಿಸಿದಳು.
ಪ್ರಹಸ್ಯೋವಾಚ ಚ ತದಾ ಶ್ರುತಂ ವಾಕ್ಯಂ ಪುರಾ ಮಯಾ |
ಸುರಲೋಕೇ ಸುರೈಃ ಪ್ರೋಕ್ತಂ ಭೀಷ್ಮಾದ್ಯಾ ನಾತಿಧರ್ಮತಃ ॥
ಯದ್ಧತಾಸ್ತೇನ ದೋಷೇಣ ಪಾರ್ಥಸ್ತೇನಾತಿವೇದನಾಮ್ |
ರಣೇ ವ್ರಜೇದಿತಿ ನ ತತ್ಪರತಃ ಸ್ಯಾದಿತಿ ಹ್ಯಹಮ್ |
ವಚನಾದೇವ ದೇವಾನಾಂ ಯುದ್ಧ್ಯೇತ್ಯಾತ್ಮಜಮಬ್ರುವಮ್ ॥
ಬಳಿಕ ಉಲೂಪಿ ನಕ್ಕು ಹೇಳಿದಳು, `ಅರ್ಜುನ ಭೀಷ್ಮಾದಿಗಳನ್ನು ಕೇವಲ ಧರ್ಮದಿಂದ ವಧಿಸಲಿಲ್ಲ. ಆ ದೋಷದಿಂದ ಅವನು ಯುದ್ಧದಲ್ಲಿ ಅತಿಯಾದ ವೇದನೆಯನ್ನು ಹೊಂದುವನು' ಎಂದು ದೇವಲೋಕದಲ್ಲಿ ವಸುದೇವತೆಗಳು ಹೇಳಿದ ಮಾತನ್ನು ಹಿಂದೆ ನಾನು ಕೇಳಿದ್ದೆ. ಅದು ಇನ್ನೊಬ್ಬನಿಂದಾಗಕೂಡದು ಎಂದು ದೇವತೆಗಳ ಮಾತಿನಿಂದಲೇ ಮಗನಿಗೆ `ನೀನು ಯುದ್ಧಮಾಡು' ಎಂದು ಹೇಳಿದೆ.
ದೇವಾನಾಮೇವ ಸಂಕಲ್ಪಾನ್ಮೂರ್ಛಿತಶ್ಚಾರ್ಜುನೋಽಭವತ್ |
ಭುಕ್ತದೋಷಫಲಶ್ಚಾಯಂ ಪುನರ್ಭೋಕ್ಷ್ಯತಿ ನಾನ್ಯತಃ ॥
ದೇವತೆಗಳ ಸಂಕಲ್ಪದಿಂದಲೇ ಅರ್ಜುನ ಮೂರ್ಛಿತನಾದ. ಈಗ ಅವನ ಅಪರಾಧದ ಫಲವನ್ನು ಅವನು ಭೋಗಿಸಿದ್ದಾನೆ. ಇನ್ನು ಪುನಃ ಇನ್ನೊಬ್ಬರಿಂದ ಅದನ್ನು ಭೋಗಿಸುವುದಿಲ್ಲ.
ಅನ್ಯೇನ ಪಾತಿತಸ್ಯಾಸ್ಯ ಯಶೋ ನಶ್ಯೇತ್ ತ್ರಿಲೋಕಗಮ್ |
ನಾರ್ಜುನಸ್ಯ ಯಶೋ ನಶ್ಯೇದಿತಿ ದೈವೈರಿದಂ ಕೃತಮ್ ॥
ಬೇರೆಯವರಿಂದ ಅರ್ಜುನನು ಯುದ್ಧದಲ್ಲಿ ಬೀಳಿಸಲ್ಪಟ್ಟಿದ್ದರೆ ಮೂರ್ಲೋಕದಲ್ಲಿ ಹರಡಿದ್ದ ಅವನ ಕೀರ್ತಿ ನಶಿಸುತ್ತಿತ್ತು. ನಶಿಸಕೂಡದೆಂದೇ ದೇವತೆಗಳು ಈ ಕಾರ್ಯ ಮಾಡಿದರು.

ಇತ್ಯುಕ್ತಃ ಪ್ರೀತಿಮಾಪೇದೇ ಪುತ್ರಭಾರ್ಯಾಯುತೋऽರ್ಜುನಃ |
ಯಜ್ಞಾರ್ಥಂ ತಾವಥಾಹೂಯ ಪೂಜಿತಃ ಪ್ರಯಯೌ ತತಃ ॥
ಉಲೂಪಿ ಹೀಗೆ ಹೇಳಿದಾಗ ಪುತ್ರ ಭಾರ್ಯೆಯರಿಂದ ಯುಕ್ತನಾದ ಅರ್ಜುನನು ಸಂತೋಷಗೊಂಡನು. ಯಜ್ಞಕ್ಕೆ ಅವರನ್ನು ಆಹ್ವಾನಿಸಿ ಸತ್ಕೃತನಾಗಿ ಅಲ್ಲಿಂದ ಮುಂದೆ ನಡೆದನು.
ದ್ವಾರಕಾಯಾಸ್ಸಮೀಪಸ್ಥಂ ಪ್ರದ್ಯುಮ್ನಾದ್ಯಾಃ ಸುತಾ ಹರೇಃ |
ಪ್ರಸಹ್ಯಾಶ್ವಮಪಾಜಹ್ರುರಾಹ್ವಯಂತೋऽರ್ಜುನಂ ಯುಧೇ ॥
ದ್ವಾರಕೆಯ ಸಮೀಪಕ್ಕೆ ಅರ್ಜುನನು ಬಂದಾಗ ಕೃಷ್ಣನ ಮಕ್ಕಳು ಪ್ರದ್ಯುಮ್ನ ಮುಂತಾದವರು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತ ಬಲಾತ್ಕಾರವಾಗಿ ಕುದುರೆಯನ್ನು ಅಪಹರಿಸಿದರು.
ಸುಭದ್ರಾಹರಣಂ ಮಾರ್ಷ್ಟುಂ ನೀತೇऽಶ್ವೇ ತೈರ್ಧನಂಜಯಃ |
ಗೌರವಾದ್ ವಾಸುದೇವಸ್ಯ ಮಾತುಲಸ್ಯ ಚ ಕೇವಲಮ್ ॥
ಮಾತುಲಯಾಬ್ರವೀದಶ್ವಂ ಹೃತಂ ಪೌತ್ರೈರಬಂಧುವತ್ |
ಸ ನಿರ್ಭರ್ತ್ಸ್ಯ ಕುಮಾರಾಂಸ್ತಾನ್ ಮೇಧ್ಯಮಶ್ವಮಮೋಚಯತ್ ॥
ಸುಭದ್ರಾಹರಣದಿಂದ ಬಂದ ಅಪಕೀರ್ತಿಯನ್ನು ತೊಡೆದುಕೊಳ್ಳಲು ಪ್ರದ್ಯುಮ್ನ ಮುಂತಾದವರು ಕುದುರೆಯನ್ನು ಅಪಹರಿಸಿದಾಗ ಅರ್ಜುನ ಕೃಷ್ಣನ ಹಾಗೂ ವಸುದೇವನ ಮೇಲಿನ ಗೌರವ ಭಾವನೆಯಿಂದ ವಸುದೇವನಿಗೆ ಹೇಳಿದ. ನಿನ್ನ ಮೊಮ್ಮಕ್ಕಳು ಶತ್ರುಗಳಂತೆ ನಮ್ಮ ಕುದುರೆಯನ್ನು ಅಪಹರಿಸಿದ್ದಾರೆ ಎಂದು. ಆಗ ವಸುದೇವ ಕುಮಾರರನ್ನು ಬೈದು ಯಾಗದ ಕುದುರೆಯನ್ನು ಬಿಡಿಸಿದನು.
ಮಾತುಲಂ ಸ ಪ್ರಣಮ್ಯಾಥ ಯಜ್ಞಾರ್ಥಂ ತಾನ್ ನಿಮಂತ್ರ್ಯ ಚ |
ಗಚ್ಛನ್ ಗಜಾಹ್ವಯಂ ದೂತಮಗ್ರತೋऽಯಾಪಯನ್ನೃಪೇ ॥
ಬಳಿಕ ಅರ್ಜುನನು ವಸುದೇವನನ್ನು ನಮಿಸಿ ಯಜ್ಞಕ್ಕೆ ಅವರನ್ನು ಆಮಂತ್ರಿಸಿ ಹಸ್ತಿನಾವತಿಗೆ ಹೋಗುತ್ತ ಧರ್ಮರಾಜನಿಗೆ ದೂತನನ್ನು ಮುಂಚಿತವಾಗಿ ಕಳುಹಿಸಿಕೊಟ್ಟನು.
ಸಕೃಷ್ಣಃ ಸಹಸೋದರ್ಯೈಃ ಶ್ರುತ್ವಾऽಸೌ ಪ್ರಾಪ್ತಮರ್ಜುನಮ್ |
ಪ್ರೀತೋ ಬಾಷ್ಪಾಭಿಪೂರ್ಣಾಕ್ಷೋ ಭ್ರಾತೃಸ್ನೇಹಾದಭಾಷತ ॥
ಶ್ರೀಕೃಷ್ಣನಿಂದಲೂ ಸೋದರರಿಂದಲೂ ಸಮೇತನಾದ ಧರ್ಮರಾಜ ಅರ್ಜುನನು ಹಿಂತಿರುಗಿ ಬಂದುದನ್ನು ಕೇಳಿ ಸಂತುಷ್ಟನಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಂಡು ಸೋದರಸ್ನೇಹದಿಂದ ಹೇಳಿದನು.
ವಾಸುದೇವ ನ ಪಶ್ಯಾಮಿ ದುಲರ್ಕ್ಷಣಮಜಾರ್ಜುನೇ |
ಕೇನ ದುಲರ್ಕ್ಷಣೇನಾಯಂ ಬಹುದುಃಖೀ ಪ್ರವಾಸಗಃ ॥
`ಕೃಷ್ಣನೇ, ಅರ್ಜುನನಲ್ಲಿ ದುರ್ಲಕ್ಷಣವನ್ನು ನಾ ಕಾಣೆ. ಯಾವ ದುರ್ಲಕ್ಷಣದಿಂದ ಈತ ಸದಾ ಪ್ರವಾಸದಲ್ಲಿದ್ದು ಬಹಳ ಕ್ಲೇಶ ಅನುಭವಿಸುತ್ತಿದ್ದಾನೆ?'
ಪೃಷ್ಟಸ್ತಂ ಕೇಶವಃ ಪ್ರಾಹ ಭ್ರಾತಾ ತೇ ದೀರ್ಘಪಿಂಡಿಕಃ |
ತೇನಾಯಂ ದುಃಖಬಹುಲ ಇತ್ಯುಕ್ತತ್ವ ಪುನರೇವ ಚ ॥
ವದಂತಮೇವ ಪಾಂಚಾಲೀ ಕಟಾಕ್ಷೇಣ ನ್ಯವಾರಯತ್ |
ಸಮಸ್ತಲಕ್ಷಣಾಭಿಜ್ಞಾಃ ಕೃಷ್ಣಃ ಸತ್ಯಾ ವೃಕೋದರಃ ॥
ಕೃಷ್ಣಾ ಚ ಪಂಚಮೋ ನಾಸ್ತಿ ವಿದ್ಯಾ ಶುದ್ಧೇಯಮಂಜಸಾ |
ಪ್ರಸಂಗಾತ್ ಪ್ರಾಪ್ತುಮಿಚ್ಛೇತ್ತಾಂ ವಿದ್ಯಾಶೀಲೋ ಯುಧಿಷ್ಠಿರಃ |
ಇತಿ ಲೋಭಾತ್ತು ಪಾಂಚಾಲೀ ವಾಸುದೇವಂ ನ್ಯವಾರಯತ್ ॥
ಧರ್ಮರಾಜನು ಹೀಗೆ ಕೇಳಿದಾಗ ಶ್ರೀಕೃಷ್ಣನು `ಅರ್ಜುನನ ಶರೀರ ಉದ್ದ. ಅದರಿಂದ ಅವನಿಗೆ ಹೆಚ್ಚು ಕ್ಲೇಶ' ಹೀಗೆ ಹೇಳಿದ ಕೃಷ್ಣ ಪುನಃ ಮುಂದುವರಿದು ಹೇಳಲು ತೊಡಗಿದಾಗಲೇ ದ್ರೌಪದಿಯು ಕಡೆಗಣ್ಣ ನೋಟದಿಂದಲೇ ತಡೆದಳು. ಸಕಲ ಸಾಮುದ್ರಿಕ ಲಕ್ಷಣಜ್ಞರು ಶ್ರೀಕೃಷ್ಣ, ಸತ್ಯಭಾಮೆ, ಭೀಮ, ದ್ರೌಪದಿಯರು ಹೊರತು ಐದನೆಯವನಿಲ್ಲ. ಈ ಸಾಮುದ್ರಿಕಶಾಸ್ತ್ರ ಬಹಳ ಶುದ್ಧವಾದುದು. ವಿದ್ಯಾರ್ಜನ ಸ್ವಭಾವದವನಾದ ಧರ್ಮರಾಜ ಈ ಪ್ರಸಂಗದಿಂದ ಅದನ್ನು ಕಲಿಯಲು ಬಯಸಬಹುದೆಂದು ಲೋಭದಿಂದ ದ್ರೌಪದಿ ಕೃಷ್ಣನನ್ನು ತಡೆದಿದ್ದಳು.
ತದ್ಗೌರವಾದ್ ವಾಸುದೇವೋ ನೋತ್ತರಂ ಪ್ರತ್ಯಭಾಷತ |
ವಿಸ್ಮಾರಯಾಮಾಸ ಚ ತಂ ಪ್ರಬ್ರುವಾಣಃ ಕಥಾಂತರಮ್ ॥
ದ್ರೌಪದಿಯ ಕಣ್ಣ ಸನ್ನೆಗೆ ಬೆಲೆಕೊಟ್ಟು ಶ್ರೀಕೃಷ್ಣನು ಮುಂದೆ ಹೇಳಲಿಲ್ಲ. ಬೇರೆ ಮಾತನ್ನು ಹೇಳುತ್ತಾ ಈ ಪ್ರಸಂಗವನ್ನು ಮರೆಸಿದನು.
ಉದರಸ್ಯ ಕಿಂಚಿದಾಧಿಕ್ಯಂ ವೃಷಣಾಧಿಕ್ಯಮೇವ ಚ |
ಸವ್ಯಬಾಹೋಽಽಸ್ತಥಾಧಿಕ್ಯಂ ದುಲರ್ಕ್ಷಣಮತೋऽರ್ಜುನೇ ॥
ಅರ್ಜುನನಲ್ಲಿ ಹೊಟ್ಟೆ ಸ್ವಲ್ಪ ಉದ್ದವಾಗಿರುವುದು ವೃಷ್ಣವೂ ಸ್ವಲ್ಪ ದಪ್ಪವಾಗಿರುವುದು ಎಡತೋಳೂ ಉದ್ದವಾಗಿರುವುದು ಬೇರೆ ದುರ್ಲಕ್ಷಣವಾಗಿತ್ತು.
ನೈವೋಕ್ತಂ ವಾಸುದೇವೇನ ದೃಶ್ಯಮಾನಮಪಿ ಸ್ಫುಟಮ್ |
ಜ್ಞಾನಾನಂದಹ್ರಾಸಕರಾ ಹ್ಯೇತೇ ದೋಷಾಃ ಸದಾತನಾಃ ॥
ಅದು ಸ್ಫುಟವಾಗಿ ಕಾಣುತ್ತಿದ್ದರೂ ಶ್ರೀಕೃಷ್ಣನು ಹೇಳಲಿಲ್ಲ. ಈ ದೋಷಗಳು ಸದಾ ಇದ್ದು ಜ್ಞಾನಾನಂದಗಳಿಗೆ ಹ್ರಾಸಕರವಾಗಿವೆ.
ಸಮಸ್ತಜೀವರಾಶೌ ತದ್ ದುಲರ್ಕ್ಷಣವಿವರ್ಜಿತೌ |

ಪೂರ್ಣಚಿತ್ಸುಖಶಕ್ತ್ಯಾದೇರ್ಯೋಗ್ಯೌ ಕೃಷ್ಣಾ ಚ ಮಾರುತಿಃ ॥
ಅನಾದಿದುಃಖಹೀನತ್ವೇ ಸುಖಾಧಿಕ್ಯೇ ಚ ಲಕ್ಷಣಮ್ ।
ರುಗ್ಮಿಣೀಸತ್ಯಭಾಮಾದಿರೂಪಾಯಾಃ ಶ್ರಿಯ ಏವ ತು ॥
ಮುಖ್ಯಂ ತತೋಽಪಿ ಮುಖ್ಯಂ ತು ಸ್ವಾತಂತ್ರ್ಯಾದೇರಶೇಷತಃ ।
ಗುಣರಾಶೇಃ ಪರಂ ಲಿಂಗಂ ನಿತ್ಯಂ ವ್ಯಾಸಾದಿರೂಪಿಣಃ ।
ವಿಷ್ಣೋರೇವ ನ ಚಾನ್ಯಸ್ಯ ಸ ಹ್ಯೇಕಃ ಪೂರ್ಣಸದ್ಗುಣಃ ॥
ಸಮಸ್ತ ಜೀವರಾಶಿಯಲ್ಲಿ ದುರ್ಲಕ್ಷಣ ರಹಿತರು ಪೂರ್ಣ ಜ್ಞಾನಾನಂದ ಬಲಾದಿಗಳಿಗೆ ಯೋಗ್ಯರಾದ ದ್ರೌಪದೀ ಭೀಮರು ಮಾತ್ರ. ಅನಾದಿಕಾಲದಿಂದ ದುಃಖಹೀನರಾಗಿರುವುದರಲ್ಲಿಯೂ ಅಧಿಕ ಸುಖಿಗಳಾಗಿರುವುದರಲ್ಲಿಯೂ ಸೂಚಕವಾದ ಲಕ್ಷಣ ವಾಯುಭಾರತಿಯರಿಗಿಂತಲೂ ಮುಖ್ಯವಾಗಿ ರುಕ್ಮಿಣೀ ಸತ್ಯಭಾಮಾ ಮುಂತಾದ ರೂಪಗಳುಳ್ಳ ಲಕ್ಷ್ಮಿಗೇ ಇರುತ್ತದೆ. ಅವಳಿಗಿಂತಲೂ ಮುಖ್ಯವಾಗಿ ಸ್ವಾತಂತ್ರ್ಯಾದಿ ಸಕಲ ಗುಣರಾಶಿಗಳಿಗೆ ಉತ್ತಮ ಸೂಚಕವಾದ ಲಕ್ಷಣಗಳು ಸದಾಕಾಲ ವ್ಯಾಸಾದಿರೂಪನಾದ ವಿಷ್ಣುವಿಗೇ ಹೊರತು ಇನ್ನೊಬ್ಬನಿಗಿಲ್ಲ. ಅವನೊಬ್ಬನೇ ಪೂರ್ಣ ಸದ್ಗುಣ ಉಳ್ಳವನು.
ಸಾರ್ಶ್ವೇಽರ್ಜುನೇ ಯಜ್ಞವಾಟಂ ಪ್ರವಿಷ್ಟೇಽಸ್ಯ ಸಹೋದರಾಃ ।
ಪೂಜಿತಾಃ ಪೂಜಯಾಮಾಸುರ್ಮುದಿತಾಃ ಸಹಕೇಶವಾಃ ॥
ಅರ್ಜುನನು ಕುದುರೆಯೊಂದಿಗೆ ಯಜ್ಞಶಾಲೆಯನ್ನು ಪ್ರವೇಶಿಸಿದಾಗ ಅವನ ಸೋದರರರೂ ಶ್ರೀಕೃಷ್ಣನೂ ಸಂತುಷ್ಟರಾದರು. ಪರಸ್ಪರ ಆಲಿಂಗನಾದಿಗಳಿಂದ ಸತ್ಕೃತರಾದರು ಮತ್ತು ಸತ್ಕರಿಸಿದರು.
* * * * *
ಎಪ್ಪತ್ತೊಂಬತ್ತನೆಯ ಅಧ್ಯಾಯ
ಅರ್ಜುನ-ಬಭ್ರುವಾಹನರ ಯುದ್ಧ. ಅರ್ಜುನನ ಮರಣ.
ವೈಶಂಪಾಯನಃ
ಕ್ರಮೇಣ ಸ ಹಯಸ್ತ್ವೇವಂ ವಿಚರನ್ ಭರತರ್ಷಭ ।
ಮಣಲೂರುಪತೇರ್ದೇಶಮುಪಾಯಾತ್ ಸಹಪಾಂಡವಃ ॥1॥
ವೈಶಂಪಾಯನ ಯಜ್ಞಾಶ್ವವು ಕ್ರಮವಾಗಿ ಸಂಚಾರ ಮಾಡುತ್ತಾ ಮಣಲೂರು ಪತಿಯಾದ ಬಭ್ರುವಾಹನನ ದೇಶಕ್ಕೆ ಆಗಮಿಸಿತು. ಅರ್ಜುನನು ಆ ಯಜ್ಞಾಶ್ವವನ್ನು ಅನುಸರಿಸಿಕೊಂಡು ಆಗಮಿಸಿದನು.
ಶ್ರುತ್ವಾ ತು ನೃಪತಿರ್ವೀರಂ ಪಿತರಂ ಬಭ್ರುವಾಹನಃ ।
ನಿರ್ಯಯೌ ವಿನಯೇನಾರ್ಯೋ ಬ್ರಾಹ್ಮಣಾರ್ಘ್ಯಪುರಸ್ಸರಃ ॥2॥
ಜನಮೇಜಯನೇ, ಆ ಸಮಯದಲ್ಲಿ ಮಣಲೂರ, ಪಟ್ಟಣಕ್ಕೆ ರಾಜನಾಗಿರುವ ಬಭ್ರುವಾಹನನು ತನ್ನ ತಂದೆಯಾದ ಅರ್ಜುನನು ಕುದುರೆಯನ್ನು ಹಿಂಬಾಲಿಸಿ ತನ್ನ ಪ್ರದೇಶಕ್ಕೆ ಬಂದಿರುವನೆಂಬ ವಾರ್ತೆಯನ್ನು ಕೇಳಿ, ವಿನಯದಿಂದ ಅವನನ್ನು ಎದುರುಗೊಳ್ಳಲು ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಅರ್ಘ್ಯಪಾದ್ಯಾದಿಗಳಿಂದ ಸಹಿತನಾಗಿ ಹೋದನು.
ಮಣಲೂರೇಶ್ವರಂ ತ್ವೇವಮುಪಯಾತಂ ಧನಂಜಯಃ ।
ನಾಭ್ಯನಂದತ ಮೇಧಾವೀ ಕ್ಷಾತ್ರಧರ್ಮಮನುಸ್ಮರನ್ ॥3॥
ಮೇಧಾವಿಯಾದ ಧನಂಜಯನು ಮಣಲೂರು ಪಟ್ಟಣಕ್ಕೆ ಒಡೆಯನಾದ ರಾಜನು ಕ್ಷತ್ರಧರ್ಮಕ್ಕೆ ವಿರುದ್ಧವಾಗಿ ವಿನೀತನಾಗಿ ತನ್ನ ಬಳಿ ಬರುತ್ತಿರುವುದನ್ನು ಅಭಿನಂದಿಸಲಿಲ್ಲ.
ಉವಾಚ ಚೈನಂ ಧರ್ಮಾತ್ಮಾ ಸಮನ್ಯುಃ ಫಲ್ಗುನಸ್ತದಾ ॥4॥
ಧರ್ಮಾತ್ಮನಾದ ಫಲ್ಗುನನು ಸಿಟ್ಟಿನಿಂದ ತನ್ನ ಮಗನಿಗೆ ಹೀಗೆ ಹೇಳಿದನು.
ಅರ್ಜುನಃ
ಪ್ರಕ್ರಿಯೇಯಂ ನ ತೇ ಯುಕ್ತಾ ಬಹಿಸ್ತ್ವಂ ಕ್ಷತ್ರಧರ್ಮತಃ ॥5॥
ಅರ್ಜುನ ಮಗುವೇ, ಈ ವಿಧವಾದ ವ್ಯವಹಾರವು ನಿನಗೆ ಯೋಗ್ಯ ಎನಿಸುವುದಿಲ್ಲ. ಈ ರೀತಿಯಾದ ವಿನಯದ ವ್ಯವಹಾರದಿಂದ ನೀನು ಕ್ಷತ್ರಧರ್ಮದಿಂದ ಬಹಿಷ್ಕೃತನಾಗಿದ್ದಿ ಎಂದು ತಿಳಿಯುತ್ತೇನೆ.
ಸಂರಕ್ಷ್ಯಮಾಣಂ ತುರಗಂ ಯೌಧಿಷ್ಠಿರಮುಪಾಗತಮ್ ।
ಯಾಜ್ಞಿಯಂ ವಿಷಯಂ ತ್ವಂ ಮಾಂ ನಾಯೋತ್ಸೀಃ ಕಿಂ ನು ಪುತ್ರಕ ॥6॥
ಯುಧಿಷ್ಠಿರನಿಗೆ ಸಂಬಂಧಿಸಿದ ಯಜ್ಞಾಶ್ವವನ್ನು ಸಂರಕ್ಷಿಸುತ್ತಾ ನಾನು ಈ ಕುದುರೆಯನ್ನೇ ಅನುಸರಿಸಿ ನಿನ್ನ ದೇಶಕ್ಕೆ ಆಗಮಿಸಿದ್ದೇನೆ. ಕ್ಷತ್ರಧರ್ಮಕ್ಕನುಗುಣವಾಗಿ ಯಜ್ಞದ ಕುದುರೆಯನ್ನು ಕಟ್ಟಿಹಾಕಬೇಕಿತ್ತು. ನನ್ನೊಡನೆ ಯುದ್ಧವನ್ನು ಮಾಡಬೇಕಿತ್ತು. ಮಗನೇ, ಹೀಗೇಕೆ ಆಚರಿಸಲಿಲ್ಲ?
ಧಿಕ್ ಧಿಕ್ ತ್ವಾಂ ತು ಸುದುರ್ಬುದ್ಧಿಂ ಕ್ಷತ್ರಧರ್ಮಾಽವಿಶಾರದಮ್ ।
ಯೋ ಮಾಂ ಯುಧಿ ಸುಸಂಪ್ರಾಪ್ತಂ ಸಾಮ್ನೈವಾಥೋ ತ್ವಮಗ್ರಹೀಃ ॥
ಕ್ಷತ್ರಧರ್ಮದಿಂದ ಬಹಿಷ್ಕೃತನಾದ, ದುರ್ಬುದ್ಧಿಯವನಾದ ನಿನಗೊಂದು ಧಿಕ್ಕಾರ. ಯುದ್ಧಕ್ಕಾಗಿ ಆಗಮಿಸಿರುವ ನನ್ನನ್ನು ಸಾಮೋಪಾಯದಿಂದ ಸ್ವಾಗತಿಸಿರುವುದು ಕ್ಷತ್ರಧರ್ಮಕ್ಕೆ ಮಾಡಿದ ಅವಮಾನ.
ನ ತ್ವಯಾ ಪುರುಷಾರ್ಥಶ್ಚ ಕಶ್ಚಿದಸ್ತೀಹ ಜೀವತಾ ।
ಯಸ್ತ್ವಂ ಸ್ತ್ರೀವದ್ ಯುಧಾ ಪ್ರಾಪ್ತಂ ಸಾಮ್ನಾ ಮಾಂ ಪ್ರತಿಗೃಹ್ಣಥಾಃ ॥
ನೀನು ಜೀವಂತವಾಗಿ ಬದುಕಿರುವಿ. ಯಾವ ಪುರುಷಾರ್ಥವನ್ನೂ ಸಾಧಿಸಿಲ್ಲ. ಯುದ್ಧ ಮಾಡಲು ಆಗಮಿಸಿರುವ ನನ್ನನ್ನು ಒಂದು

ಸ್ತ್ರೀಯನ್ನು ವಿನಯದಿಂದ ಸ್ವಾಗತಿಸುವಂತೆ ಸ್ವಾಗತಿಸುತ್ತಿರುವಿ.
ಯದ್ಯಹಂ ನ್ಯಸ್ತಶಸ್ತ್ರಂ ತ್ವಾಮಾಗಚ್ಛೇಯಂ ಸುದುರ್ಮತೇ |
ಪ್ರಕ್ರಿಯೇಯಂ ತತೋ ಯುಕ್ತಾ ಭವೇತ್ ತವ ನರಾಧಮ ॥9॥
ದುರ್ಬುದ್ಧಿಯವನೇ, ನರಾಧಮನೇ, ನಾನೇನಾದರೂ ಶಸ್ತ್ರಗಳನ್ನು ಬದಿಗಿಟ್ಟು ಇಲ್ಲಿಗೆ ಬಂದಿದ್ದಲ್ಲಿ ನೀನು ಈ ಕ್ರಮದಲ್ಲಿ ಸ್ವಾಗತಿಸುವುದು ಯುಕ್ತವಾಗುತ್ತಿತ್ತು.
ವೈಶಂಪಾಯನಃ
ತಮೇವಮುಕ್ತಂ ಭರ್ತ್ರಾ ಚ ವಿದಿತ್ವಾ ಪನ್ನಗಾತ್ಮಜಾ |
ಅಮೃಷ್ಯಮಾಣಾ ಭಿತ್ತ್ವೋರ್ವೀಮುಲೂಪೀ ತಮುಪಾಗಮತ್ ॥10॥
ವೈಶಂಪಾಯನ ಜನಮೇಜಯನೇ, ತನ್ನ ಪತಿಯು ಮಗನೊಡನೆ ಹೀಗೆ ಹೇಳುತ್ತಿರುವ ಮಾತನ್ನು ಕೇಳಿಸಿಕೊಂಡ ರಾಜಕನ್ಯೆಯಾದ ಉಲೂಪಿಯು ತನ್ನ ಮಗನಾದ ಬಭ್ರುವಾಹನನಿಗೆ ಅವಮಾನವಾಯಿತೆಂದು ಸಹಿಸಿಕೊಳ್ಳಲಾಗದೆ ಭೂಮಿಯನ್ನೇ ಭೇದಿಸಿಕೊಂಡು ಆ ಪ್ರಸಂಗದಲ್ಲಿ ಪ್ರತ್ಯಕ್ಷಳಾದಳು.
ಸಾ ದದರ್ಶ ತತಃ ಪುತ್ರಂ ವಿಮೃಶಂತಮಧೋಮುಖಮ್ |
ಸಂತರ್ಜ್ಯಮಾನಮಸಕೃದ್ ಭರ್ತ್ರಾ ಯುದ್ಧಾರ್ಥಿನಾ ವಿಭೋ ॥11॥
ಆ ಸಂದರ್ಭದಲ್ಲಿ ಬಭ್ರುವಾಹನನು ಏನು ಮಾಡಬೇಕೆಂದು ಸಮಾಲೋಚಿಸುತ್ತಾ ಮುಖವನ್ನು ತಗ್ಗಿಸಿಕೊಂಡು ನಿಂತಿರುವುದನ್ನೂ, ಯುದ್ಧಾರ್ಥಿಯಾದ ಅರ್ಜುನನು ಮಗನಿಗೆ ಪುನಃ ಪುನಃ ಕಠೋರವಾದ ಮಾತುಗಳಿಂದ ಧಿಕ್ಕರಿಸುತ್ತಿರುವ ದೃಶ್ಯವನ್ನು ಕಂಡಳು.
ತತಃ ಸಾ ಚಾರುಸರ್ವಾಂಗೀ ತಮುಪೇತ್ಯೋರಗಾತ್ಮಜಾ |
ಉಲೂಪೀ ಪ್ರಾಹ ವಚನಂ ಕ್ಷತ್ರಧರ್ಮಾವಿಶಾರದಮ್ ॥12॥
ಮನೋಹರವಾದ ಅಂಗಗಳಿಂದ ಕೂಡಿದ್ದ, ನಾಗಕನ್ಯೆಯಾದ ಉಲೂಪಿಯು ಧರ್ಮವಿಶಾರದನಾದ ಬಭ್ರುವಾಹನನಿಗೆ ಧರ್ಮಸಮ್ಮತವಾದ ಮಾತುಗಳನ್ನು ಹೇಳಿದಳು.
ಉಲೂಪೀ
ಉಲೂಪೀಂ ಮಾಂ ನಿಬೋಧ ತ್ವಂ ಮಾತರಂ ಪನ್ನಗಾತ್ಮಜಾಮ್ |
ಕುರುಷ್ವ ವಚನಂ ಪುತ್ರ ಧರ್ಮಸ್ತೇ ಭವಿತಾ ಮಹಾನ್ ॥13॥
ಉಲೂಪೀ ಮಗನೇ, ನನ್ನನ್ನು ನಾಗಕನ್ಯೆಯಾದ ಉಲೂಪಿ ಎಂದು ತಿಳಿ. ನಿನ್ನ ತಾಯಿ ನಾನು. ನನ್ನ ಮಾತಿನಂತೆ ನಡೆದುಕೊ. ಇದರಿಂದ ಮಹಾಧರ್ಮವೇ ನಿನಗೆ ಲಭಿಸುತ್ತದೆ.
ಯುದ್ಧ್ಯಸ್ವೈನಂ ಕುರುಶ್ರೇಷ್ಠಂ ಧನಂಜಯಮರಿಂದಮಮ್ |
ಏವಮೇಷ ಪಿತಾ ಪ್ರೀತೋ ಭವಿಷ್ಯತಿ ನ ಸಂಶಯಃ ॥14॥
ಯುದ್ಧದ ಮದದಿಂದ ಕೊಬ್ಬಿರುವ ಕುರುಕುಲಶ್ರೇಷ್ಠನಾದ ಅರ್ಜುನನೊಡನೆ ನೀನು ಸಂಶಯಪಡದೆ ಸೆಣೆಸು. ಹೀಗೆ ಯುದ್ಧ ಮಾಡುವುದರಿಂದ ನಿನ್ನ ತಂದೆಯು ಪ್ರಸನ್ನನಾಗುತ್ತಾನೆ. ಯಾವ ಸಂಶಯವನ್ನೂ ತಾಳಬೇಡ.
ವೈಶಂಪಾಯನಃ
ಏವಮುದ್ಧರ್ಷಿತೋ ಮಾತ್ರಾ ಸ ರಾಜಾ ಬಭ್ರುವಾಹನಃ |
ಮನಶ್ಚಕ್ರೇ ಮಹಾತೇಜಾ ಯುದ್ಧಾಯ ಭರತರ್ಷಭ ॥15॥
ವೈಶಂಪಾಯನ ಹೀಗೆ ತಾಯಿಯಿಂದ ಉತ್ಸಾಹವನ್ನು ಪಡೆದ ತೇಜಸ್ವಿಯಾದ ಬಭ್ರುವಾಹನನು ತಂದೆಯೊಡನೆ ಸೆಣೆಸಾಡಲು ಮನಸ್ಸು ಮಾಡಿದನು.
ಸನ್ನಹ್ಯ ಕಾಂಚನಂ ವರ್ಮ ಶಿರಸ್ತ್ರಾಣಂ ಚ ಭಾನುಮತ್ |
ತೂಣೀರಶರಸಂಬಾಧಮಾರುರೋಹ ಮಹಾರಥಮ್ ॥16॥
ಬಳಿಕ ರಾಜಕುಮಾರನು ಸುವರ್ಣಕವಚವನ್ನು ತೊಟ್ಟು, ಶಿರಸ್ತ್ರಾಣವನ್ನು ಧರಿಸಿ, ನೂರಾರು ಬಾಣಗಳಿಂದ ತುಂಬಿದ ಬತ್ತಳಿಕೆ ಸಹಿತವಾಗಿ ರಥವನ್ನು ಯುದ್ಧಕ್ಕಾಗಿ ಏರಿದನು.
ಸರ್ವೋಪಕರಣೈರ್ಯುಕ್ತಂ ಯುಕ್ತಮಶ್ವೈರ್ಮನೋಜವೈಃ |
ಸುಚಕ್ರೋಪಸ್ಕರಂ ಧೀಮಾನ್ ಹೇಮಭಾಂಡಪರಿಷ್ಕೃತಮ್ ॥17॥
ಪರಮಾರ್ಚಿತಮುಚ್ಛ್ರಿತ್ಯ ಧ್ವಜಂ ಹಂಸಂ ಹಿರಣ್ಮಯಮ್ |
ಪ್ರಯಯೌ ಪಾರ್ಥಮುದ್ದಿಶ್ಯ ಸ ರಾಜಾ ಬಭ್ರುವಾಹನಃ ॥18॥
ಸಮಸ್ತ ಯುದ್ಧಕ್ಕೆ ಬೇಕಾದ ವಸ್ತುಗಳಿಂದ ತುಂಬಿರುವ, ಆಭರಣಗಳಿಂದ ಅಲಂಕೃತವಾದ, ಕಾಂತಿಯುಕ್ತವಾದ ಸುವರ್ಣಮಯ ರಥದಲ್ಲಿ ಕುಳಿತು, ಸಿಂಹಧ್ವಜವನ್ನು ರಥದ ಮೇಲಿರಿಸಿಕೊಂಡು, ಅರ್ಜುನನೊಡನೆ ಯುದ್ಧ ಮಾಡಲು ಹೊರಟನು. ಅವನ ರಥವು ಕಬ್ಬಿಣದ್ದಾಗಿತ್ತು, ಧ್ವಜವು ಬಂಗಾರಮಯವಾಗಿತ್ತು.
ತತೋऽಭ್ಯೇತ್ಯ ಹಯಂ ವೀರೋ ಯಾಜ್ಞಿಯಂ ಪಾರ್ಥರಕ್ಷಿತಮ್ |
ಗ್ರಾಹಯಾಮಾಸ ಪುರುಷೈರ್ಹಯಶಿಕ್ಷಾವಿಶಾರದೈಃ ॥19॥
ಬಳಿಕ ವೀರನಾದ ಅರ್ಜುನನ ಮಗನು ಪಾರ್ಥನಿಂದ ರಕ್ಷಿಸಲ್ಪಡುತ್ತಿದ್ದ ಯಜ್ಞದ ಕುದುರೆಯನ್ನು ಹಯಶಿಕ್ಷಾಪ್ರವೀಣರಾದ ಪುರುಷರ ಮೂಲಕ ಬಂಧಿಸಿದನು.
ಗೃಹೀತಂ ವಾಜಿನಂ ದೃಷ್ಟ್ವಾ ಪ್ರೀತಾತ್ಮಾ ಸ ಧನಂಜಯಃ |
ಪುತ್ರಂ ರಥಸ್ಥಂ ಭೂಮಿಷ್ಠಃ ಸನ್ನ್ಯವಾರಯದಾಹವೇ ॥20॥

ಯಜ್ಞಾಶ್ವವನ್ನು ಮಗನು ಬಂಧಿಸಿದ್ದನ್ನು ಕಂಡು ನಡೆದುಬರುತ್ತಿರುವ ಅರ್ಜುನನು ತಡೆದನು.
ತತಃ ಸ ರಾಜಾ ತಂ ವೀರಃ ಶರವ್ರಾತೈಃ ಸಹಸ್ರಶಃ |
ಅರ್ದಯಾಮಾಸ ನಿಶಿತೈರಾಶೀವಿಷವಿಷೋಪಮೈಃ ||21||
ಮಣಲೂರುಪುರದ ರಾಜನಾದ ಬಭ್ರುವಾಹನನು ಸರ್ಪದಂತಿರುವ ಹರಿತವಾದ ಬಾಣಗಳ ಸಮೂಹದಿಂದ ಅರ್ಜುನನನ್ನು ಏಕಪ್ರಕಾರವಾಗಿ ಪೀಡಿಸಿದನು.
ತಯೋಃ ಸಮಭವದ್ ಯುದ್ಧಂ ಪಿತುಃ ಪುತ್ರಸ್ಯ ಚಾತುಲಮ್ |
ದೇವಾಸುರರಣಪ್ರಖ್ಯಮ್ ಉಭಯೋಃ ಪ್ರೀಯಮಾಣಯೋಃ ||22||
ತಂದೆ-ಮಗನ ನಡುವೆ ಮಹಾಭಯಂಕರವಾದ, ದೇವಾಸುರರಿಗೆ ಸಮಾನವಾದ ಯುದ್ಧವೇ ಸಂತೋಷದಿಂದಲೇ ನಡೆಯುತ್ತಿತ್ತು.
ಕಿರೀಟಿನಂ ತು ವಿವ್ಯಾಧ ಶರೇಣಾನತಪರ್ವಣಾ |
ಜತ್ರುದೇಶೇ ನರವ್ಯಾಘ್ರ ಪ್ರಹಸನ್ ಬಭ್ರುವಾಹನಃ ||23||
ಆ ಯುದ್ಧಕ್ಕೆ ಸಮಾನವಾದ ಯುದ್ಧ ಹಿಂದೆಂದೂ ನಡೆದಿಲ್ಲವೋ ಎಂಬಂತೆ ನಡೆಯುತ್ತಿರುವಾಗ ಬಭ್ರುವಾಹನನು ನಗುತ್ತಲೇ ಬಗ್ಗಿದ ಗಿಣ್ಣಿನಿಂದ ಕೂಡಿದ ಬಾಣದಿಂದ ಅರ್ಜುನನ ಕೊರಳಿಗೆ ಹೊಡೆದನು.
ಸೋಽತ್ಯಗಾತ್ ಸಹ ಪುಂಖೇನ ವಲ್ಮೀಕಮಿವ ಪನ್ನಗಃ |
ವಿನಿರ್ಭಿದ್ಯ ಚ ಕೌಂತೇಯಂ ಮಹೀತಲಮುಪಾವಿಶತ್ ||24||
ಆ ಬಾಣವು ಬಿಲದೊಳಗೆ ಹಾವು ನುಸುಳಿ ಹೋಗುವಂತೆ ರೆಕ್ಕೆಗಳ ಸಹಿತವಾಗಿ ಅರ್ಜುನನ ಕುತ್ತಿಗೆ ಪ್ರದೇಶದಲ್ಲಿ ಹೊಕ್ಕು ಅವನ ಕೊರಳನ್ನೇ ಭೇದಿಸಿ ಹೊರಬಂದು ಭೂಮಿಯಲ್ಲಿ ಸೇರಿಕೊಂಡಿತು.
ಸ ಗಾಢವೇದನೋ ಧೀಮಾನ್ ಆಲಂಬ್ಯ ಧನುರುತ್ತಮಮ್ |
ದಿವ್ಯಂ ತೇಜಃ ಸಮಾವಿಶ್ಯ ನಿಮೀಲಿತ ಇವಾಬಭೌ ||25||
ಈ ಪ್ರಹಾರದಿಂದ ಧೀಮಂತನಾದ ಅರ್ಜುನನಿಗೆ ತಡೆಯಲಾರದ ವೇದನೆ ಉಂಟಾಯಿತು. ತನ್ನ ಧನುಸ್ಸನ್ನು ಅವಲಂಬಿಸಿ ಕಷ್ಟದಲ್ಲಿ ನಿಂತನು. ಆ ಸಂದರ್ಭದಲ್ಲಿ ಕಣ್ಣನ್ನು ಮುಚ್ಚಿ ಮೂರ್ಛಿತನಾಗುತ್ತಿರುವಂತೆ ಕಾಣಿಸುತ್ತಿದ್ದನು.
ಸ ಸಂಜ್ಞಾಮುಪಲಭ್ಯಾಥ ಪ್ರಶಸ್ಯ ಪುರುಷರ್ಷಭಃ |
ಪುತ್ರಂ ಶಕ್ರಾತ್ಮಜೋ ವಾಕ್ಯಮಿದಮಾಹ ಮಹೀಪತೇ ||26||
ಸ್ವಲ್ಪ ಸಮಯದ ಬಳಿಕ ಇಂದ್ರನ ಮಗನಾದ, ಪುರುಷಶ್ರೇಷ್ಠನಾದ ಅರ್ಜುನನು ಎಚ್ಚರಗೊಂಡು ಮಗನನ್ನು ಪ್ರಶಂಸಿಸುತ್ತಾ ಇಂತು ನುಡಿದನು.
ಅರ್ಜುನಃ
ಸಾಧು ಸಾಧು ಮಹಾಬಾಹೋ ವತ್ಸ ಚಿತ್ರಾಂಗದಾತ್ಮಜ |
ಸದೃಶಂ ಕರ್ಮ ತೇ ದೃಷ್ಟ್ವಾ ಪ್ರೀತಿಮಾನಸ್ಮಿ ಪುತ್ರಕ ||27||
ವಿಮುಂಚಾಮ್ಯದ್ಯ ಬಾಣಾಂಶ್ಚ ಯುದ್ಧೇ ಧೀರೋ ಭವಾದ್ಯ ವೈ ||28||
ಸಾಧು-ಸಾಧು, ಮಹಾಬಾಹುವೇ, ಚಿತ್ರಾಂಗದೆಯ ಸುತನೇ, ವತ್ಸನೇ, ಭಲೆ, ಭಲೆ. ಅರ್ಜುನನಿಗೆ ಅನುರೂಪವಾದ ನಿನ್ನ ಸಾಹಸಕಾರ್ಯವನ್ನು ಕಂಡು ನಾನು ಸಂತುಷ್ಟನಾಗಿದ್ದೇನೆ. ನಾನೀಗಲೇ ನಿನ್ನ ಮೇಲೆ ಬಾಣಗಳನ್ನು ಬಿಡುತ್ತೇನೆ. ಸ್ಥಿರವಾಗಿ ಧೈರ್ಯದಿಂದ ನನ್ನ ಬಾಣಗಳನ್ನು ಎದುರಿಸಿ ನಿಲ್ಲು.
ವೈಶಂಪಾಯನಃ
ಇತ್ಯೇವಮುಕತ್ವ ನಾರಾಚೈರಭ್ಯವರ್ಷದಮಿತ್ರಹಾ ||29||
ವೈಶಂಪಾಯನ ಹೀಗೆ ಶತ್ರುಹಂತಕನಾದ ಅರ್ಜುನನು ಬಭ್ರುವಾಹನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು.
ತಾಂಸ್ತಾನ್ ಗಾಂಡೀವನಿರ್ಮುಕ್ತಾನ್ ವಜ್ರಾಶನಿಸಮಸ್ವನಾನ್ |
ನಾರಾಚಾನಚ್ಛಿನದ್ ರಾಜಾ ಸರ್ವಾನೇವ ತ್ರಿಧಾ ತ್ರಿಧಾ ||30||
ಅರ್ಜುನನ ಗಾಂಡೀವ ಧನುಸ್ಸಿನಿಂದ ಬಿಡಲ್ಪಟ್ಟ ವಜ್ರಾಯುಧಕ್ಕೂ, ಸಿಡಿಲಿಗೂ ಸಮಾನವಾದ ಅರ್ಜುನನ ನಾರಾಚಗಳನ್ನು ಬಭ್ರುವಾಹನನು ಮೂರು-ಮೂರು ತುಂಡುಗಳಾಗಿ ಭಲ್ಲಗಳಿಂದ ಕತ್ತರಿಸಿದನು.
ತಸ್ಯ ಪಾರ್ಥಃ ಶರೈಸ್ತೀಕ್ಷ್ಣೈರ್ಧ್ವಜಂ ಹೇಮಪರಿಷ್ಕೃತಮ್ |
ಸುವರ್ಣತಾಲಪ್ರತಿಮಂ ಕ್ಷಣೇನಾಪಾಹರದ್ ರಥಾತ್ ||31||
ಮರುಕ್ಷಣದಲ್ಲಿಯೇ ಅರ್ಜುನನು ಸುವರ್ಣದಿಂದ ಪರಿಷ್ಕೃತವಾದ, ತಾಲ ವೃಕ್ಷದಂತಿದ್ದ, ಸುವರ್ಣಾಭರಣಭೂಷಿತವಾದ ಬಭ್ರುವಾಹನನ ರಥದ ಧ್ವಜವನ್ನು ದಿವ್ಯವಾದ ಬಾಣಗಳಿಂದ ಕ್ಷಣ ಮಾತ್ರದಲ್ಲಿ ರಥದಿಂದ ಕತ್ತರಿಸಿ ಕೆಡವಿದನು.
ಹಯಾಂಶ್ಚಾಸ್ಯ ಮಹಾಕಾಯಾನ್ ಮಹಾವೇಗಪರಾಕ್ರಮಾನ್ |
ಚಕಾರ ರಾಜನ್ ನಿರ್ಜೀವಾನ್ ಪ್ರಹಸನ್ ಪಾಂಡವರ್ಷಭಃ ||32||
ಪುನಃ ಅರ್ಜುನನು ನಗುತ್ತಲೇ ಮಹಾಕಾಯವುಳ್ಳ, ಮಹಾವೇಗ- ಪರಾಕ್ರಮದಿಂದ ಕೂಡಿರುವ ಬಭ್ರುವಾಹನನ ಕುದುರೆಗಳನ್ನು ಬಾಣದ ಪ್ರಹಾರದಿಂದ ನಿರ್ಜೀವಗಳನ್ನಾಗಿ ಮಾಡಿದನು.
ಸ ರಥಾದವತೀರ್ಯಾಶು ರಾಜಾ ಪರಮಕೋಪನಃ |
ಪದಾತಿಃ ಪಿತರಂ ಕೋಪಾದ್ ಯೋಧಯಾಮಾಸ ಪಾಂಡವಮ್||33||
ಆ ಪ್ರಸಂಗದಲ್ಲಿ ಬಭ್ರುವಾಹನನು ರಥದಿಂದ ಹಾರಿ, ಸಿಟ್ಟಿನಿಂದ ಪದಾತಿಯಾಗಿಯೇ ತಂದೆಯ ಬಳಿ ಯುದ್ಧವನ್ನು ಮಾಡಿದನು.
ಸಂಪ್ರೀಯಮಾಣಃ ಪಾಂಡೂನಾಮೃಷಭಃ ಪುತ್ರವಿಕ್ರಮಾತ್ |

ನಾತ್ಯರ್ಥಂ ಪೀಡಯಾಮಾಸ ಪುತ್ರಂ ವಜ್ರಧರಾತ್ಮಜಃ ॥34॥
ಅರ್ಜುನನು ಮಗನ ಪರಾಕ್ರಮವನ್ನು ಕಂಡು ಪ್ರೀತನಾದನು. ಮಗನನ್ನು ಬಹಳವಾಗಿ ಪೀಡಿಸಹೋಗಲಿಲ್ಲ.
ಸ ಹನ್ಯಮಾನೋಽಭಿಮುಖಂ ಪಿತರಂ ಬಭ್ರುವಾಹನಃ |
ಶರೈರಾಶೀವಿಷಾಕಾರೈಃ ಪುನರೇವಾರ್ದಯದ್ ಬಲೀ ॥35॥
ಹೀಗೆ ಅಭಿಮುಖವಾಗಿ ಯುದ್ಧ ಮಾಡುತ್ತಿರುವ ಅರ್ಜುನನನ್ನು ಬಭ್ರುವಾಹನನು ಸರ್ಪದ ಆಕಾರವುಳ್ಳ ಬಾಣಗಳಿಂದ ಪುನಃ ಚೆನ್ನಾಗಿ ಪೀಡಿಸಿದನು.
ತತಃ ಸ ಬಾಲ್ಯಾತ್ ಪಿತರಂ ವಿವ್ಯಾಧ ಹೃದಿ ಪತ್ರಿಣಾ |
ನಿಶಿತೇನ ಸುಪುಂಖೇನ ಬಲವದ್ ಬಭ್ರುವಾಹನಃ ॥36॥
ಬಾಲ್ಯಬುದ್ಧಿಯಿಂದ ತಂದೆಯನ್ನು ಹರಿತವಾದ, ರೆಕ್ಕೆಗಳಿಂದ ಕೂಡಿದ ಬಾಣಗಳಿಂದ ಬಭ್ರುವಾಹನನು ಪ್ರಬಲವಾಗಿ ಹೃದಯಕ್ಕೆ ಚುಚ್ಚಿದನು.
ಸ ಶರಸ್ತೇಜಸಾ ದೀಪ್ತೋ ಜ್ವಲನ್ನಿವ ಹುತಾಶನಃ |
ವಿವೇಶ ಪಾಂಡವಂ ರಾಜನ್ ಮರ್ಮ ಭಿತ್ತ್ವಾಽತಿದುಃಖಕೃತ್ ॥37॥
ಆ ಬಾಣವಾದರೂ ತೇಜಸ್ಸಿನಿಂದ ಬೆಳಗುತ್ತಾ, ಬೆಂಕಿಯಂತೆ ಜ್ವಲಿಸುತ್ತಾ, ಅರ್ಜುನನ ಕವಚವನ್ನು ಸೀಳಿಕೊಂಡು, ಅತ್ಯಂತ ದುಃಖವನ್ನುಂಟು ಮಾಡುತ್ತಾ ಹೃದಯವನ್ನು ಪ್ರವೇಶಿಸಿತು.
ಸ ತೇನಾತಿಭೃಶಂ ವಿದ್ಧಃ ಪುತ್ರೇಣ ಕುರುನಂದನಃ |
ಮಹೀಂ ಜಗಾಮ ಮೋಹಾರ್ತಸ್ತತೋ ರಾಜನ್ ಧನಂಜಯಃ ॥38॥
ಮಗನಿಂದ ಬಿಡಲ್ಪಟ್ಟ ಬಾಣದಿಂದ ಹೊಡೆತ ತಿಂದು ಅರ್ಜುನನು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು.
ತಸ್ಮಿನ್ ನಿಪತಿತೇ ವೀರೇ ಕೌರವಾಣಾಂ ಧುರಂಧರೇ |
ಸೋಽಪಿ ಮೋಹಂ ಜಗಾಮಾಶು ತತ್ರ ಚಿತ್ರಾಂಗದಾತ್ಮಜಃ ॥39॥
ಕೌರವದುರಂಧರನಾದ ಅರ್ಜುನನು ಗತಪ್ರಾಣನಾಗಿ ನೆಲದ ಮೇಲೆ ಬಿದ್ದಾಗ, ಇದನ್ನು ಕಂಡು ಚಿತ್ರಾಂಗದನ ಸುತನಾದ ಬಭ್ರುವಾಹನನೂ ಮೋಹಿತನಾಗಿ ಕ್ಷಣಕಾಲ ಮೂರ್ಛಿತನಾದನು.
ವ್ಯಾಯಮ್ಯ ಸಂಯುಗೇ ರಾಜಾ ದೃಷ್ಟ್ವಾ ಚ ಪಿತರಂ ಹತಮ್ |
ಪೂರ್ವಮೇವ ಚ ಬಾಣೌಘೈರ್ಗಾಢವಿದ್ಧೋಽರ್ಜುನೇನ ಸಃ ॥40॥
ರಣಾಂಗಣದಲ್ಲಿ ಕಾದಾಡುತ್ತಾ ಅರ್ಜುನನ ಬಾಣಗಳಿಂದ ಗಾಯಗೊಂಡಿದ್ದ ಬಭ್ರುವಾಹನನು ಅರ್ಜುನನು ಯುದ್ಧದಲ್ಲಿ ಹತನಾದದ್ದನ್ನು ನೋಡಿದ ಕೂಡಲೇ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು.
ಭರ್ತಾರಂ ನಿಹತಂ ಶ್ರುತ್ವಾ ಪುತ್ರಂ ಚ ಪತಿತಂ ಭುವಿ |
ಚಿತ್ರಾಂಗದಾ ಪರಿತ್ರಸ್ತಾ ಪ್ರವಿವೇಶ ರಣಾಜಿರಮ್ ॥41॥
ಗಂಡನು ಹತನಾಗಿರುವುದನ್ನೂ, ಮಗನು ನೆಲಕ್ಕುರುಳಿರುವುದನ್ನೂ ಕೇಳಿದ ಚಿತ್ರಾಂಗದೆಯು ದುಃಖಿತಳಾಗಿ ರಣರಂಗಕ್ಕೆ ಪ್ರವೇಶಿಸಿದಳು.
ಶೋಕಸಂತಪ್ತಹೃದಯಾ ರುದತೀ ಸಾ ತತಃ ಶುಭಾ |
ಮಣಲೂರಪತೇರ್ಮಾತಾ ದದರ್ಶ ನಿಹತಂ ಪತಿಮ್ ॥42॥
ಶೋಕದಿಂದ ಸಂತಪ್ತವಾದ ಹೃದಯವುಳ್ಳ, ಗಳಗಳನೆ ಅಳುತ್ತಿರುವ, ಭಯಂಕರವಾದ ದೃಶ್ಯವನ್ನು ನೋಡುತ್ತಿದ್ದ ಮಣಲೂರಿನ ರಾಜನಾದ ಬಭ್ರುವಾಹನನ ತಾಯಿಯು ತನ್ನ ಗಂಡನು ಸತ್ತುಬಿದ್ದಿರುವುದನ್ನು ಕಂಡಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಬಭ್ರುವಾಹನೇನ ಅರ್ಜುನವಧೋ ನಾಮ ಏಕೋನಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತನೆಯ ಅಧ್ಯಾಯ
ಚಿತ್ರಾಂಗದೆಯ ವಿಲಾಪ. ಮೂರ್ಛೆಯಿಂದ ಎಚ್ಚರಗೊಂಡ ಬಭ್ರುವಾಹನನ ಶೋಕ. ಉಲೂಪಿಯ ಪ್ರಯತ್ನದಿಂದ ಸಂಜೀವನಿ ಔಷಧಿಯ
ಮೂಲಕ ಅರ್ಜುನನನ್ನು ಬದುಕಿಸಿದುದು.
ವೈಶಂಪಾಯನಃ
ತತೋ ಬಹುವಿಧಂ ಭೀರುರ್ವಿಲಪ್ಯ ಕಮಲೇಕ್ಷಣಾ |
ಮುಮೋಹ ದುಃಖಾದ್ ದುರ್ಧರ್ಷಾ ನಿಪಪಾತ ಚ ಭೂತಲೇ ॥1॥
ವೈಶಂಪಾಯನ ಜನಮೇಜಯನೇ, ಭೀರುಸ್ವಭಾವದವಳಾದ, ಕಮಲ ನಯನಳಾದ ಚಿತ್ರಾಂಗದೆಯು ಪತಿವಿಯೋಗದಿಂದ ದುಃಖಿತಳಾಗಿ ಬಹಳ ಹೊತ್ತು ದುಃಖಿಸುತ್ತಲೇ ಮೂರ್ಛಿತಳಾಗಿ ನೆಲದ ಮೇಲೆ ಬಿದ್ದಳು.
ಪ್ರತಿಲಭ್ಯ ಚ ಸಾ ಸಂಜ್ಞಾಂ ದೇವೀ ದಿವ್ಯವಪುರ್ಧರಾ |
ಉಲೂಪೀಂ ಪನ್ನಗಸುತಾಂ ದೃಷ್ಟ್ವೇದಂ ವಾಕ್ಯಮಬ್ರವೀತ್ ॥2॥
ಸ್ವಲ್ಪ ಸಮಯದ ಬಳಿಕ ದಿವ್ಯರೂಪವತಿಯಾದ ಚಿತ್ರಾಂಗದೆಯು ಎಚ್ಚರಗೊಂಡು ನಾಗಕನ್ಯೆಯಾದ ಉಲೂಪಿಯನ್ನು ನೋಡುತ್ತಾ ಇಂತು ನುಡಿದಳು.

ಚಿತ್ರಾಂಗದಾ
ಉಲೂಪಿ ಪಶ್ಯ ಭರ್ತಾರಂ ಶಯಾನಂ ನಿಹತಂ ರಣೇ |
ತ್ವತ್ಕೃತೇ ಮಮ ಪುತ್ರೇಣ ಬಾಣೇನ ಸಮಿತಿಂಜಯಮ್ ॥3॥
ಚಿತ್ರಾಂಗದೆ ಉಲೂಪಿಯೆ, ನನ್ನ ಸ್ವಾಮಿಯಾದ ಅರ್ಜುನನು ರಣಭೂಮಿಯಲ್ಲಿ ಸತ್ತು ಬಿದ್ದಿರುವುದನ್ನು ನೋಡು.
ಯುದ್ಧಭೂಮಿಯಲ್ಲಿ ಎಂದೂ ಜಯಶೀಲನಾಗಿರುವ ಅರ್ಜುನನು ನಿನ್ನ ಪ್ರೇರಣೆಯಿಂದಲೇ ನನ್ನ ಮಗನ ಬಾಣದಿಂದ ಹತನಾಗಿದ್ದಾನೆ.
ನನು ತ್ವಮಾರ್ಯಾ ಧರ್ಮಜ್ಞಾ ನನು ಚಾಸಿ ಪತಿವ್ರತಾ |
ಯತ್ ತ್ವತ್ಕೃತೇಽಯಂ ಪತಿತಃ ಪತಿಸ್ತೇ ನಿಹತೋ ರಣೇ ॥4॥
ಸಹೋದರಿಯೇ, ನೀನು ಆರ್ಯಧರ್ಮವನ್ನು ತಿಳಿದವಳು. ಪತಿವ್ರತೆಯು. ಹೀಗಿದ್ದರೂ ನನ್ನ ಪತಿಯೊಡನೆ ಯುದ್ಧ ಮಾಡುವಂತೆ ಮಗನನ್ನು ಏಕೆ ಪ್ರಚೋದಿಸಿದೆ? ನಿನ್ನ ಪ್ರೇರಣೆಯಿಂದಲೇ ಬಭ್ರುವಾಹನನು ಯುದ್ಧದಲ್ಲಿ ತಂದೆಯನ್ನು ಸಂಹರಿಸಿದ್ದಾನೆ.
ಕಿಂ ನು ಮಂದೋಽಪರಾದ್ಧೋಽಯಂ ಯದಿ ತೇಽದ್ಯ ಧನಂಜಯಃ |
ಉಲೂಪಿ ಯಾಚ್ಯಮಾನಾ ಮೇ ಸಂಜೀವಯ ಧನಂಜಯಮ್ ॥5॥
ಒಂದು ವೇಳೆ ಧನಂಜಯನು ನಿನಗೆ ಅನ್ಯಾಯವೆಸಗಿದ್ದಾನೆ ಎಂದು ಭಾವಿಸಿದ್ದರೂ ಅವನನ್ನು ನನಗಾಗಿ ಕ್ಷಮಿಸು. ನನ್ನ ಪ್ರಾರ್ಥನೆಯನ್ನು ಕೇಳಿಕೊ. ಅರ್ಜುನನನ್ನು ಬದುಕಿಸು.
ನನು ತ್ವಮಾರ್ಯಾ ಧರ್ಮಜ್ಞಾ ತ್ರೈಲೋಕ್ಯವಿದಿತಂ ಶುಭೇ |
ಯದ್ ಘಾತಯಿತ್ವಾ ಭರ್ತಾರಂ ಪುತ್ರೇಣ ನ ಹಿ ಶೋಚಸಿ ॥6॥
ನೀನು ಪೂಜ್ಯಳಾಗಿರುವಿ. ಶೋಭನಳೇ, ಧರ್ಮಜ್ಞಳಾಗಿರುವಿ. ಈ ಸತ್ಕರ್ಮದಿಂದ ಮೂರುಲೋಕದಗಳಲ್ಲಿ ಖ್ಯಾತಿಯನ್ನು ಪಡೆಯುವಿ. ಮಗನ ಮೂಲಕ ಪತಿಯು ಮರಣೋನ್ಮುಖಳಾಗಿದ್ದರೂ ನೀನು ದುಃಖಿಸುತ್ತಿಲ್ಲ.
ನಾಹಂ ಶೋಚಾಮಿ ತನಯಂ ನಿಹತಂ ಪನ್ನಗಾತ್ಮಜೇ |
ಪತಿಮೇವ ತು ಶೋಚಾಮಿ ಯಸ್ಯಾತಿಥ್ಯಮಿದಂ ಕೃತಮ್ ॥ 7॥
ನಾನು ಮಗನು ಪೀಡಿತನಾಗಿರುವುದಕ್ಕೆ ದುಃಖಪಡುವುದಿಲ್ಲ. ಪತಿಯು ಹತನಾಗಿರುವುದಕ್ಕೆ ಶೋಕಿಸುತ್ತೇನೆ. ಅನೇಕ ದಿನಗಳ ನಂತರ ಆಗಮಿಸಿದ ಪತಿಗೆ ಇಂತಹ ಆತಿಥ್ಯವನ್ನು ನೀಡಿದ್ದು ಅಪರಾಧವಾಯಿತು ಎಂದು ಭಾವಿಸುತ್ತೇನೆ.
ವೈಶಂಪಾಯನಃ
ಇತ್ಯುಕತ್ವಾ ಸಾ ತದಾ ದೇವೀಮುಲೂಪೀಂ ಪನ್ನಗಾತ್ಮಜಾಮ್ |
ಭರ್ತಾರಮಭಿಗಮ್ಯೇದಮಿತ್ಯುವಾಚ ಯಶಸ್ವಿನೀ ॥8॥
ವೈಶಂಪಾಯನ ಜನಮೇಜಯನೇ, ಯಶಸ್ವಿನಿಯಾದ ಚಿತ್ರಾಂಗದೆಯು ನಾಗಕನ್ಯೆಯಾದ ಉಲೂಪಿಗೆ ಹೀಗೆ ಹೇಳುತ್ತಾ, ಕ್ರಿಯಾಶೂನ್ಯನಾದ ಪತಿಯ ಬಳಿ ಸಾಗಿ ಬಿಕ್ಕಿ ಬಿಕ್ಕಿ ಅಳುತ್ತಾ ಇಂತು ನುಡಿದಳು.
ಚಿತ್ರಾಂಗದಾ
ಉತ್ತಿಷ್ಠ ಕುರುಮುಖ್ಯ ತ್ವಂ ಪ್ರಿಯಕಾಮ ಮಮ ಪ್ರಿಯ |
ಅಯಮಶ್ವೋ ಮಹಾಬಾಹೋ ಮಯಾ ತೇ ಪರಿಮೋಕ್ಷಿತಃ ॥9॥
ಚಿತ್ರಾಂಗದೆ ಕುರುರಾಜನಿಗೆ ಪ್ರಿಯನಾಗಿರುವ, ಮಹಾಬಾಹುವಾದ ಪ್ರಾಣಕಾಂತನೇ ಎದ್ದೇಳು. ಇದು ನಿನ್ನ ಯಜ್ಞದ ಕುದುರೆಯು. ನಾನೇ ಇದನ್ನು ಬಿಟ್ಟುಬಿಟ್ಟಿದ್ದೇನೆ.
ನನು ನಾಮ ತ್ವಯಾ ವೀರ ಧರ್ಮರಾಜಸ್ಯ ಯಾಜ್ಞಯಃ |
ಅಯಮಶ್ವೋಽನುಸರ್ತವ್ಯಃ ಸಂಶೇಷೇ ಕಿಂ ಮಹೀತಲೇ ॥10॥
ಧರ್ಮರಾಜನ ಯಜ್ಞಕ್ಕೆ ಸಂಬಂಧಿಸಿದ ಈ ಕುದುರೆಯ ಜೊತೆಯಲ್ಲೇ ನೀನು ಹೋಗಬೇಕಷ್ಟೆ! ಹೀಗಿದ್ದರೂ ಕರ್ತವ್ಯವನ್ನು ಮರೆತು ಏಕೆ ಮಲಗಿರುವಿ?
ತ್ವಯಿ ಪ್ರಾಣಾಃ ಸಮಾಯತ್ತಾಃ ಕುರೂಣಾಂ ಕುರುವರ್ಧನ |
ಸ ಕಸ್ಮಾತ್ ಪ್ರಾಣದೋಽನ್ಯೇಷಾಂ ಪ್ರಾಣಾನ್ ಸಂತ್ಯಕ್ತವಾನಸಿ ॥11॥
ಪ್ರಾಣಕಾಂತನೇ, ಯುಧಿಷ್ಠಿರಾದಿಗಳ ಪ್ರಾಣಗಳು ನಿನ್ನನ್ನೇ ಆಶ್ರಯಿಸಿವೆ. ಮತ್ತೊಬ್ಬರಿಗೆ ಪ್ರಾಣದಾನ ಮಾಡಬೇಕಾದ ನೀನು ಏಕೆ ಪ್ರಾಣವನ್ನು ತ್ಯಜಿಸಿರುವಿ?
ಉಲೂಪಿ ಸಾಧು ಸಂಪಶ್ಯ ಭರ್ತಾರಂ ನಿಹತಂ ರಣೇ |
ಪುತ್ರಂ ಚೈನಂ ಸಮುತ್ಸಾಹ್ಯ ಪಾತಯಿತ್ವಾ ನ ಶೋಚಸಿ ॥12॥
ಚಿತ್ರಾಂಗದೆಯು ಪುನಃ ಉಲೂಪಿಯ ಕಡೆ ತಿರುಗಿ ಹೇಳುತ್ತಾಳೆ. ಉಲೂಪಿಯೇ, ಗತಪ್ರಾಣನಾಗಿ ನೆಲದ ಮೇಲೆ ಬಿದ್ದಿರುವ ನಿನ್ನ ಗಂಡನನ್ನು ನೋಡು. ಮಗನನ್ನು ಪ್ರೋತ್ಸಾಹಿಸಿ ಪತಿಘಾತಿನಿ ಎನಿಸಿರುವಿ. ಹೀಗಿದ್ದರೂ ದುಃಖಪಡುತ್ತಿಲ್ಲ.
ಕಾಮಂ ಸ್ವಪಿತು ಬಾಲೋಽಯಂ ಭೂಮೌ ಪ್ರೇತಗತಿಂ ಗತಃ |
ಲೋಹಿತಾಕ್ಷೋ ಗುಡಾಕೇಶೋ ವಿಜಯಃ ಸಾಧು ಜೀವತು ॥13॥
ಮೋಹಪೀಡಿತನಾಗಿ ಭೂಮಿಯಲ್ಲಿ ಬಿದ್ದಿರುವ ಬಾಲಕನು ಬಹಳ ಹೊತ್ತು ಹೀಗೆಯೇ ಮಲಗಿರಲಿ. ಆದರೆ ಗುಡಾಕೇಶನಾದ, ಲೋಹಿತಾಕ್ಷನಾದ, ನನ್ನ ಪತಿಯಾದ ವಿಜಯನು ಚೆನ್ನಾಗಿ ಬದುಕಲಿ.
ನಾಪರಾಧೋಽಸ್ತಿ ಸುಭಗೇ ನರಾಣಾಂ ಬಹುಭಾರ್ಯತಾ |
ನಾರೀಣಾಂ ನ ಭವತ್ಯೇತನ್ಮಾ ತೇ ಭೂದ್ ಬುದ್ಧಿರೀದೃಶೀ ॥14॥

ಸೌಭಾಗ್ಯವತಿಯೇ, ಪುರುಷರಿಗೆ ಬಹುಪತ್ನಿಯರಿದ್ದರೆ ಅದು ದೋಷ ಎನಿಸುವುದಿಲ್ಲ. ಸ್ತ್ರೀಯರಿಗೆ ಬಹುಪತಿತ್ವವು ಅಪರಾಧವೆನಿಸುತ್ತದೆ. ಆದ್ದರಿಂದ ಇಂತಹ ಕ್ರೂರಬುದ್ಧಿಯನ್ನು ಹೊಂದಬೇಡ.
ಸಖ್ಯಂ ಚೈತತ್ ಕೃತಂ ಧಾತ್ರಾ ಶಾಶ್ವತಂ ಚಾವ್ಯಯಂ ಚ ತತ್ |
ಸಖ್ಯಂ ಸಮಭಿಜಾನೀಹಿ ಸತ್ಯಂ ಸಂಗತಮಸ್ತು ತೇ ॥15॥
ಪತಿ-ಪತ್ನಿಯರ ಸಂಬಂಧವು ಚತುರ್ಮುಖ ಬ್ರಹ್ಮನಿಂದಲೇ ಏರ್ಪಟ್ಟಿದೆ. ಅವರಿಬ್ಬರ ಮೈತ್ರಿಯು ನಾಶರಹಿತವಾದುದು, ಶಾಶ್ವತವಾದುದು. ನಿನಗೂ ಅರ್ಜುನನ ಜೊತೆ ಇಂತಹ ಸಂಬಂಧವಿದೆ. ಸಖ್ಯದ ಮರ್ಮವನ್ನರಿತು ಮೈತ್ರಿಯು ಸಾರ್ಥಕವಾಗುವಂತೆ ವರ್ತಿಸು.
ಪುತ್ರೇಣ ಪಾತಯಿತ್ವೇಮಂ ಪತಿಂ ಯದಿ ನ ಲಜ್ಜಸೇ |
ಜೀವಿತಂ ದರ್ಶಯಸ್ವಾದ್ಯ ಪರಿತ್ಯಕ್ಷ್ಯಾಮಿ ಜೀವಿತಮ್ ॥16॥
ಮಗನ ಮೂಲಕವಾಗಿ ಪತಿಯನ್ನು ಸಂಹರಿಸಿರುವ ನೀನು ನನ್ನ ಪತಿಯನ್ನು ಜೀವಂತಗೊಳಿಸದಿದ್ದರೆ ನಿನ್ನ ಹೆಸರಿನಲ್ಲಿ ನಾನು ಪ್ರಾಣತ್ಯಾಗವನ್ನು ಮಾಡುತ್ತೇನೆ.
ಸಾಽಹಂ ದುಃಖಾನ್ವಿತಾ ಭೀರುಃ ಪತಿಪುತ್ರವಿನಾಕೃತಾ |
ಇಹೈವ ಪ್ರಾಯಮಾಸಿಷ್ಯೇ ಪಶ್ಯಂತ್ಯಾಸ್ತೇ ನ ಸಂಶಯಃ ॥17॥
ದೇವಿ, ನಾನು ನನ್ನ ಪತಿಯಿಂದಲೂ, ಪುತ್ರನಿಂದಲೂ ವಿಹೀನಳಾಗಿ ದುಃಖದಿಂದ ಮುಳುಗಿದ್ದೇನೆ. ನೀನು ನೋಡುತ್ತಿರುವಂತೆ ಪ್ರಾಯೋಪವೇಶ ಮಾಡಿ ಪ್ರಾಣತ್ಯಾಗ ಮಾಡುತ್ತೇನೆ. ಸಂಶಯವಿಲ್ಲ.
ವೈಶಂಪಾಯನಃ
ಇತ್ಯುಕತ್ವ ಪನ್ನಗಸುತಾಂ ಸಪತ್ನೀ ಚೈತ್ರವಾಹಿನೀ |
ತತಃ ಪ್ರಾಯಮುಪಾಸೀನಾ ತೂಷ್ಣೀಮಾಸೀಜ್ಜನಾಧಿಪ ॥18॥
ವೈಶಂಪಾಯನ ಈ ರೀತಿಯಾಗಿ ಉಲೂಪಿಯನ್ನು ಕುರಿತು ಚಿತ್ರಾಂಗದೆಯು ಹೇಳುತ್ತಾ ಪ್ರಾಯೋಪವೇಶ ವ್ರತವನ್ನು ಕೈಗೊಂಡು ಮೌನವಾಗಿ ಕುಳಿತಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಚರಣೇ ಚಿತ್ರಾಂಗದಾಪ್ರಾಯೋಪವೇಶೋ ನಾಮ ಅಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂದನೆಯ ಅಧ್ಯಾಯ
ಬಹಳ ಕಾಲದ ಬಳಿಕ ಎಚ್ಚರಗೊಂಡ ಬಭ್ರುವಾಹನನು
ಉಲೂಪಿಯನ್ನು ಕಂಡು ತಾನೂ ಪ್ರಾಯೋಪವೇಶಕ್ಕೆ ಕುಳಿತಿದುದು.
ವೈಶಂಪಾಯನಃ
ತಥಾ ವಿಲಪ್ಯೋಪರತಾ ಭರ್ತುಃ ಪಾದೌ ಪ್ರಗೃಹ್ಯ ಸಾ |
ಉಪವಿಷ್ಟಾಽಭವದ್ ದೇವೀ ಸೋಚ್ಛ್ವಾಸಂ ಪುತ್ರಮೀಕ್ಷತೀ ॥1॥
ವೈಶಂಪಾಯನ ಹೀಗೆ ಚಿತ್ರಾಂಗದೆಯು ಬಹಳ ಕಾಲದ ತನಕ ಕಣ್ಣೀರಿಟ್ಟು, ಕೊನೆಯಲ್ಲಿ ಗಂಡನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕುಳಿತುಕೊಂಡಳು. ಕಣ್ಣೀರಿನ ಸಹಿತವಾಗಿ ಬಿಸಿ ಉಸಿರನ್ನು ಬಿಡುತ್ತಾ, ಪುತ್ರನನ್ನೇ ನೋಡುತ್ತಾ ಚಿತ್ರಾಂಗದೆಯು ಕುಳಿತಿದ್ದಳು.
ತತಃ ಸಂಜ್ಞಾಂ ಪುನರ್ಲಬ್ಧ್ವಾ ಸ ರಾಜಾ ಬಭ್ರುವಾಹನಃ |
ಮಾತರಂ ತಾಮಥಾಲೋಕ್ಯ ರಣಭೂಮಾವಥಾಬ್ರವೀತ್ ॥2॥
ಅದೇ ಸಮಯದಲ್ಲಿ ಬಭ್ರುವಾಹನನು ಎಚ್ಚರಗೊಂಡು ತನ್ನ ತಾಯಿಯಾದ ಚಿತ್ರಾಂಗದೆಯನ್ನು ನೋಡಿ ರಣಭೂಮಿಯಲ್ಲಿ ಇಂತು ನುಡಿದನು.
ಬಭ್ರುವಾಹನಃ
ಇತೋ ದುಃಖತರಂ ಕಿಂ ನು ಯನ್ಮೇ ಮಾತಾ ಸುಖೈಧಿತಾ |
ಭೂಮೌ ನಿಪತಿತಂ ವೀರಮನುಶೇತೇ ಪತಿವ್ರತಾ ॥3॥
ಬಭ್ರುವಾಹನ ಅಯ್ಯೋ ವಿಧಿಯೇ! ಇಷ್ಟರತನಕ ಸುಖದಿಂದಲೇ ವೃದ್ಧಿಯನ್ನು ಹೊಂದುತ್ತಿರುವ ನನ್ನ ತಾಯಿಯು ಈ ರಣಭೂಮಿಯಲ್ಲಿ ಬಿದ್ದಿರುವ ಮೃತನಾದ ನನ್ನ ತಂದೆಯೊಡನೆ ಮರಣ ಹೊಂದಲು ನಿಶ್ಚಯಿಸಿ ಮಲಗಿರುವುದು ಸಹಿಸಲಾರದ ದುಃಖವನ್ನು ಉಂಟುಮಾಡುತ್ತಿದೆ. ಇದಕ್ಕಿಂತ ಕಠಿಣವಾದ ದುಃಖವನ್ನು ಇನ್ನೆಲ್ಲಿ ನೋಡಲಿ?
ನಿಹಂತಾರಂ ರಣೇಽರೀಣಾಂ ಸರ್ವಶಸ್ತ್ರಭೃತಾಂ ವರಮ್ |
ಮಯಾ ವಿನಿಹತಂ ಸಂಖ್ಯೇ ಪ್ರೇಕ್ಷತೇ ದುರ್ಮರಂ ಪತಿಮ್ ॥4॥
ರಣರಂಗದಲ್ಲಿ ಶತ್ರುಗಳನ್ನು ಕೊಲ್ಲುತ್ತಿದ್ದ, ಸರ್ವಶಸತ್ರಸ್ತ್ರವೇತ್ತರಲ್ಲಿ ಶ್ರೇಷ್ಠನಾಗಿರುವ ಯಾವ ಅರ್ಜುನನು ನನ್ನಿಂದಲೇ ಮರಣಹೊಂದಿರುವ ದೃಶ್ಯವನ್ನು ನನ್ನ ತಾಯಿ ನೋಡುತ್ತಿದ್ದಾಳೆ.
ಅಹೋಽಸ್ಯಾ ಹೃದಯಂ ದೇವ್ಯಾ ದೃಢಂ ಯನ್ನ ವಿದೀರ್ಯತೇ |
ವ್ಯೂಢೋರಸ್ಕಂ ಮಹಾಬಾಹುಂ ಪ್ರೇಕ್ಷಂತ್ಯಾಃ ಪತಿತಂ ಪತಿಮ್ ॥5॥
ನಿಶ್ಚಯವಾಗಿಯೂ ಚಿತ್ರಾಂಗದೆಯ ಹೃದಯವು ಬಹಳ ಗಟ್ಟಿಯಾದುದೆಂದೇ ಭಾವಿಸುತ್ತೇನೆ. ಕಾರಣ ವಿಶಾಲವಕ್ಷಸ್ಸ್ಥಲದಿಂದ

ಕೂಡಿರುವ ಮೃತನಾದ ಪತಿಯನ್ನು ಕಾಣುತ್ತಿದ್ದರೂ ಇವಳಿಗೆ ಹೃದಯಾಘಾತವಾಗಿಲ್ಲ.
ದುರ್ಮರಂ ಪುರುಷೇಣೇಹ ಮನ್ಯೇ ಕಾಲೇ ಹ್ಯನಾಗತೇ |
ಯತ್ರ ನಾಹಂ ನ ಮೇ ಮಾತಾ ವಿಪ್ರಯುಕ್ತೌ ಸ್ವಜೀವಿತಾತ್ ||6||
ಕಾಲವು ಸನ್ನಿಹಿತವಾಗದಿದ್ದಲ್ಲಿ ಮನುಷ್ಯನು ಯಾವುದೇ ಸ್ಥಿತಿಯಲ್ಲಿದ್ದರೂ ಮರಣ ಹೊಂದುವುದು ಕಠಿಣವೇ ಎಂದು ಭಾವಿಸುತ್ತೇನೆ. ಅತಿಸಂಕಟ ಒದಗಿಬಂದಾಗಲೂ ಮೂರ್ಖನು ಜೀವಿತಾಸೆಯನ್ನು ಹೊಂದುತ್ತಾನೆಯೇ ಹೊರತು ಪ್ರಾಣವನ್ನು ತ್ಯಜಿಸಲು ಇಚ್ಛಿಸುವುದಿಲ್ಲ. ಇಂತಹ ಸಂಕಟದ ಸಮಯದಲ್ಲಿಯೂ ನನ್ನ ಪ್ರಾಣವಾಗಲಿ, ನನ್ನ ತಾಯಿಯ ಪ್ರಾಣವಾಗಲಿ ಹೊರಟು ಹೋಗುತ್ತಿಲ್ಲ ಎಂದರೆ ಈ ಜೀವಿತಾಸೆಯು ಎಷ್ಟು ಬಲವಾದುದು!
ಅಹೋ ಧಿಕ್ ಕುರುವೀರಸ್ಯ ಕಿರೀಟಂ ಕಾಂಚನಂ ಭುವಿ |
ಅಪವಿದ್ಧಂ ಹತಸ್ಯೇಹ ಮಯಾ ಪುತ್ರೇಣ ಪಶ್ಯತಾ ||7||
ಭೋ ಭೋ ಪಶ್ಯತ ಮೇ ವೀರಂ ಪಿತರಂ ಬ್ರಾಹ್ಮಣಾ ಭುವಿ |
ಶಯಾನಂ ವೀರಶಯನೇ ಮಯಾ ಪುತ್ರೇಣ ಪಾತಿತಮ್ ||8||
ನನಗೆ ಧಿಕ್ಕಾರವಿರಲಿ! ಕುರುವೀರನಾದ ಅರ್ಜುನನ ಕವಚವು ಮಗನಾದ ನನ್ನಿಂದಲೇ ಕಳಚಿ ಬಿದ್ದಿರುವ ದೃಶ್ಯವನ್ನು ನೋಡಿರಿ. ಬ್ರಾಹ್ಮಣರೇ, ಮಗನಾದ ನಾನೇ ಕೊಂದಿರುವ ನನ್ನ ತಂದೆಯ ಕಳೆಬರಹವನ್ನು ನೀವು ನೋಡಿರಿ.
ಬ್ರಾಹ್ಮಣಾಃ ಕುರುಮುಖ್ಯಸ್ಯ ಪ್ರಯುಕ್ತಾ ಹಯಸಾರಿಣಃ |
ಕುರ್ವಂತು ಶಾಂತಿಕಂ ತ್ವದ್ಯ ರಣೇ ಯೋಽಯಂ ಮಯಾ ಹತಃ ||9||
ಬ್ರಾಹ್ಮಣರೇ, ಯಜ್ಞದ ಕುದುರೆಯನ್ನು ಅನುಸರಿಸಿ ಬಂದಿರುವ ಪಾಂಡವ ವೀರನಿಗೆ ಯಾವ ಶಾಂತಿಕರ್ಮವನ್ನು ನಾನು ಮಾಡಬೇಕು? ಅದನ್ನು ತಿಳಿಸಿರಿ.
ಆದಿಶಂತು ಚ ಕಿಂ ವಿಪ್ರಾಃ ಪ್ರಾಯಶ್ಚಿತ್ತಮಿಹಾದ್ಯ ಮೇ |
ಸುನೃಶಂಸಸ್ಯ ಪಾಪಸ್ಯ ಪಿತೃಹಂತೂ ರಣಾಜಿರೇ ||10||
ಬ್ರಾಹ್ಮಣರೇ, ಅತ್ಯಂತ ಕ್ರೂರನಾಗಿರುವ, ಪಾಪಿಷ್ಠನಾದ, ರಣರಂಗದಲ್ಲಿ ತಂದೆಯನ್ನೇ ಸಂಹರಿಸುವ ನನಗೆ ಯಾವ ಪ್ರಾಯಶ್ಚಿತ್ತವೆಂದು ನಿರ್ದೇಶಿಸಿರಿ.
ದುಶ್ಚರಾ ದ್ವಾದಶ ಸಮಾ ಹತ್ವಾ ಪಿತರಮದ್ಯ ವೈ |
ಮಮೇಹ ಸುನೃಶಂಸಸ್ಯ ಸಂವೀತಸ್ಯಾಸ್ಯ ಕರ್ಮಣಾ ||11||
ಶಿರಃಕಪಾಲೇ ಚಾಸ್ಯೈವ ಭುಂಜತಃ ಪಿತುರದ್ಯ ಮೇ |
ಪ್ರಾಯಶ್ಚಿತ್ತಂ ಹಿ ನಾಸ್ತ್ಯನ್ಯದ್ಧತ್ವಾದ್ಯ ಪಿತರಂ ಮಮ ||12||
ತಂದೆಯನ್ನು ಕೊಂದಿರುವ ನಾನು ಮುಂದಿನ ಹನ್ನೆರಡು ವರ್ಷಗಳನ್ನು ಕಷ್ಟದಿಂದ ಕಳೆಯಬೇಕಾಗಿದೆ. ಅತ್ಯಂತ ಕ್ರೂರಿಯಾದ ನಾನು ಮೃತನಾದ ತಂದೆಯ ಚರ್ಮವನ್ನು ಹೊದ್ದುಕೊಂಡು, ಇವನ ಕಪಾಲವನ್ನೇ ಕೈಯಲ್ಲಿ ಹಿಡಿದು ಈ ಭೂಮಂಡಲದಲ್ಲಿ ಸಂಚಾರವನ್ನು ಮಾಡಬೇಕು. ತಂದೆಯನ್ನು ಕೊಂದಿರುವವನಿಗೆ ಇದಕ್ಕಿಂತಲೂ ಬೇರೆಯಾದ ಪ್ರಾಯಶ್ಚಿತ್ತವು ಇರುವುದಿಲ್ಲ.
ಪಶ್ಯ ನಾಗೋತ್ತಮಸುತೇ ಭರ್ತಾರಂ ನಿಹತಂ ಮಯಾ |
ಕೃತಂ ಪ್ರಿಯಂ ಮಯಾ ತೇಽದ್ಯ ನಿಹತ್ಯ ಸಮರೇಽರ್ಜುನಮ್ ||13||
ಜನಮೇಜಯನೇ, ಬಭ್ರುವಾಹನನು ಹೀಗೆ ಅಳುತ್ತಾ ಮಲತಾಯಿಯಾದ ಉಲೂಪಿಯನ್ನು ನೋಡಿ ಇಂತು ನುಡಿದನು: ನಾಗರಾಜಸುತೆಯೇ, ಇಲ್ಲಿ ನೋಡು. ನಿನ್ನ ಪತಿಯನ್ನು ವಧಿಸಿದ್ದೇನೆ. ಅವನನ್ನು ಸಂಹರಿಸಿ ನಿನ್ನ ಈಪ್ಸಿತವನ್ನು ಸಾಧಿಸಿದ್ದೇನೆ.
ಸೋಽಹಮಪ್ಯದ್ಯ ಯಾಸ್ಯಾಮಿ ಗತಿಂ ಪಿತೃನಿಷೇವಿತಾಮ್ |
ನ ಶಕ್ನೋಮ್ಯಾತ್ಮನಾಽಽತ್ಮಾನಮಹಂ ಧಾರಯಿತುಂ ಶುಭೇ ||14||
ಇದರಿಂದ ನಾನು ಮಾತ್ರ ಇನ್ನು ಮುಂದೆ ಬದುಕಿರಲು ಸಾಧ್ಯವಿಲ್ಲ. ತಂದೆಯ ಮಾರ್ಗವನ್ನೇ ಅನುಸರಿಸಿ ಹೋಗುತ್ತೇನೆ.
ಸಾ ತ್ವಂ ಮಯಿ ಮೃತೇ ಮಾತಸ್ತಥಾ ಗಾಂಡೀವಧನ್ವನಿ |
ಭವ ಪ್ರೀತಿಮತೀ ದೇವಿ ಸತ್ಯೇನಾತ್ಮಾನಮಾಲಭೇ ||15||
ನಾನೂ ಅರ್ಜುನನ ಮಾರ್ಗವನ್ನು ಅನುಸರಿಸಿದ ಬಳಿಕ ನೀನು ಸಂಪ್ರೀತಳಾಗು. ತಂದೆಯಿಲ್ಲದೆ ನಾನು ಬದುಕಲಾರೆ ಎಂಬುದನ್ನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ.
ವೈಶಂಪಾಯನಃ
ಇತ್ಯುಕ್ತ್ವಾ ಸ ತತೋ ರಾಜಾ ದುಃಖಶೋಕಸಮಾಹತಃ |
ಉಪಸ್ಪೃಶ್ಯ ಮಹಾರಾಜ ದುಃಖಾದ್ ವಚನಮಬ್ರವೀತ್ ||16||
ವೈಶಂಪಾಯನ ಜನಮೇಜಯನೇ, ಶೋಕದಿಂದ ಪೀಡಿತನಾದ ಬಭ್ರುವಾಹನನು ಹೀಗೆ ಹೇಳಿ ಆಚಮನ ಮಾಡಿ ದುಃಖದಿಂದ ಇಂತು ನುಡಿದನು.
ಬಭ್ರುವಾಹನಃ
ಶೃಣ್ವಂತು ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ |
ತ್ವಂ ಚ ಮಾತರ್ಯಥಾ ಸತ್ಯಂ ಬ್ರವೀಮಿ ಭುಜಗೋತ್ತಮೇ ||17||
ಬಭ್ರುವಾಹನ ಪ್ರಪಂಚದಲ್ಲಿರುವ ಚರಾಚರ ಪ್ರಾಣಿಗಳೆಲ್ಲವೂ ನನ್ನ ಮಾತನ್ನು ಕೇಳಲಿ. ನಾಗರಾಜಕುಮಾರಿಯೇ, ತಾಯಿಯೇ, ನೀನು ನಾನು ಹೇಳಲಿರುವ ಸತ್ಯವಾದ ಮಾತುಗಳನ್ನು ಕೇಳಿಸಿಕೊ. ಸತ್ಯವನ್ನೇ ಹೇಳುತ್ತೇನೆ.
ಯದಿ ನೋತ್ತಿಷ್ಠತಿ ಜಯಃ ಪಿತಾ ಮೇ ಭರತರ್ಷಭಃ |

ಅಸ್ಮಿನ್ನೇವ ರಣೋದ್ದೇಶೇ ಶಾಯಯಿಷ್ಯೇ ಕಲೇಬರಮ್ ॥18॥
ನನ್ನ ಭರತವಂಶಶ್ರೇಷ್ಠನಾದ, ತಂದೆಯಾದ, ಜಯನಾಮಕನಾದ ಅರ್ಜುನನು ಈ ರಣಭೂಮಿಯಿಂದ ಬದುಕಿ ಏಳದಿದ್ದಲ್ಲಿ ನಾನು ಈ ರಣರಂಗದಲ್ಲಿಯೇ ಆಮರಣಾಂತವಾಗಿ ಉಪವಾಸವಿದ್ದು ದೇಹವನ್ನು ಹೀಗೆಯೇ ಒಣಗಿಸಿ ತ್ಯಜಿಸುತ್ತೇನೆ.
ನ ಹಿ ಮೇ ಪಿತರಂ ಹತ್ವಾ ನಿಷ್ಕೃತಿರ್ವಿದ್ಯತೇ ಕ್ವಚಿತ್ |
ನರಕಂ ಪ್ರತಿಪತ್ಸ್ಯಾಮಿ ಧ್ರುವಂ ಗುರುವಧಾರ್ದಿತಃ ॥19॥
ತಂದೆಯನ್ನು ಕೊಲೆ ಮಾಡಿದ ನನಗೆ ಪ್ರಾಯಶ್ಚಿತ್ತವೆಂಬುದೇ ಇರುವುದಿಲ್ಲ. ತಂದೆಯನ್ನು ವಧಿಸಿದ ಪಾಪದಿಂದ ನಿಶ್ಚಿತವಾಗಿಯೂ ನರಕದಲ್ಲಿ ಪತನ ಹೊಂದುತ್ತೇನೆ.
ವೀರಂ ಹಿ ಕ್ಷತ್ರಿಯಂ ಹತ್ವಾ ಗೋಸಹಸ್ರೇಣ ಮುಚ್ಯತೇ |
ಪಿತರಂ ತು ನಿಹತ್ಯೈವಂ ದುಷ್ಕರಾ ನಿಷ್ಕೃತಿರ್ಮಮ ॥20॥
ವೀರಕ್ಷತ್ರಿಯನೊಬ್ಬನನ್ನು ರಣರಂಗದಲ್ಲಿ ಎದುರಾಳಿಯಾಗಿ ಬಂದಾಗ ಕೊಂದರೆ ನೂರು ಗೋವುಗಳನ್ನು ದಾನ ಮಾಡಿದಾಗ ನಾಶವಾಗುವಷ್ಟು ಪಾಪಗಳು ನಾಶವಾಗುತ್ತವೆ. ಆದರೆ ತಂದೆಯನ್ನೇ ಕೊಂದಿರುವ ನನಗೆ ಮಹಾಪಾತಕವು ಉಂಟಾಗಿದೆ. ಈ ಕೃತಘ್ನತೆಗೆ ಬಿಡುಗಡೆಯೇ ಇರುವುದಿಲ್ಲ.
ಏವಂ ಹ್ಯೇಷ ಮಹಾತೇಜಾಃ ಪಾಂಡುಪುತ್ರೋ ಧನಂಜಯಃ |
ಪಿತಾ ಚ ಮಮ ಧರ್ಮಾತ್ಮಾ ತಸ್ಯ ಮೇ ನಿಷ್ಕೃತಿಃ ಕುತಃ ॥21॥
ಪಾಂಡುವಿನ ಸುತನಾದ ಧನಂಜಯನು ಅದ್ವಿತೀಯನಾದ ವೀರನೂ, ಮಹಾತೇಜಸ್ವಿಯೂ, ಧರ್ಮಾತ್ಮನು. ಇಂತಹ ತಂದೆಯನ್ನು ಕೊಂದ ನನಗೆ ಯಾವ ಪ್ರಾಯಶ್ಚಿತ್ತವೂ, ಪರಿಹಾರವೂ ಇರುವುದಿಲ್ಲ.
ವೈಶಂಪಾಯನಃ
ಇತ್ಯೇವಮುಕತ್ತ್ವ ನೃಪತೇ ಧನಂಜಯಸುತೋ ನೃಪಃ |
ಉಪಸ್ಪೃಶ್ಯಾಭವತ್ ತೂಷ್ಣೀಂ ಪ್ರಾಯೋಪೇತೋ ಮಹಾಮತಿಃ ॥22॥
ವೈಶಂಪಾಯನ ಧನಂಜಯನ ಮಗನಾದ, ಮಹಾಬುದ್ಧಿಶಾಲಿಯಾದ ಬಭ್ರುವಾಹನನು ಹೀಗೆ ಹೇಳಿ, ಆಚಮನ ಮಾಡಿ, ಆಮರಣಾಂತ ಉಪವಾಸ ವ್ರತವನ್ನು ಸ್ವೀಕರಿಸಿ ಮೌನವಾಗಿ ಕುಳಿತುಕೊಂಡನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಚರಣೇ ಬಭ್ರುವಾಹನಪ್ರಾಯೋಪವೇಶೋ ನಾಮ ಏಕಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆರಡನೆಯ ಅಧ್ಯಾಯ
ಬಭ್ರುವಾಹನನು ಪ್ರಾಯೋಪ್ರವೇಶಕ್ಕೆ ಕುಳಿತಿದ್ದನ್ನು ಕಂಡು ಉಲೂಪಿಯು ಸಂಜೀವನ ಮಣಿಯನ್ನು ಸ್ಮರಿಸಿ, ಅದರ ಸಹಾಯದಿಂದ ಅರ್ಜುನನನ್ನು ಬದುಕಿಸಿದುದು. ಮಲಗಿ ಎದ್ದವನಂತೆ ಅರ್ಜುನನು ಮೇಲೆದ್ದು ಬಭ್ರುವಾಹನನನ್ನು ಕುರಿತು ಚಿತ್ರಾಂಗದೆ-ಉಲೂಪಿಯರು
ಯುದ್ಧಭೂಮಿಗೆ ಏಕೆ ಬಂದಿದ್ದಾರೆಂದು ಪ್ರಶ್ನಿಸುವುದು.
ವೈಶಂಪಾಯನಃ
ಪ್ರಾಯೋಪವಿಷ್ಟೇ ನೃಪತೌ ಮಣಲೂರೇಶ್ವರೇ ತದಾ |
ಪಿತೃಶೋಕಸಮಾವಿಷ್ಟೇ ಸಹ ಮಾತ್ರಾ ಪರಂತಪ ॥1॥
ಉಲೂಪೀ ಚಿಂತಯಾಮಾಸ ತದಾ ಸಂಜೀವನಂ ಮಣಿಮ್ ॥2॥
ವೈಶಂಪಾಯನ ಮಣಲೂರಿನ ಒಡೆಯನಾದ ಬಭ್ರುವಾಹನನು ತನ್ನ ತಾಯಿಯ ಜೊತೆಗೆ ತಂದೆಯ ನಿಮಿತ್ತದಿಂದ ಪ್ರಾಯೋಪ್ರವೇಶ ವ್ರತವನ್ನು ಕೈಗೊಂಡಾಗ ನಾಗಕನ್ಯೆಯಾದ ಉಲೂಪಿಯು ಸಂಜೀವನ ಮಣಿಯನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡಳು.
ಸ ಚೋಪಾತಿಷ್ಠತ ತದಾ ಪನ್ನಗಾನಾಂ ಪರಾಯಣಮ್ ॥3॥
ಸರ್ಪಗಳ ಜೀವನಕ್ಕೆ ಆಧಾರವೆನಿಸಿದ ಸಂಜೀವನ ಮಣಿಯು ಅವಳು ಸ್ಮರಿಸಿದ ಕೂಡಲೇ ಅವಳ ಸಮೀಪಕ್ಕೆ ಬಂದಿತು.
ತಂ ಗೃಹೀತ್ವಾ ತು ಕೌರವ್ಯ ಪನ್ನಗಾಧಿಪತೇಃ ಸುತಾ |
ಮನಃಪ್ರಹ್ಲಾದನೀಂ ವಾಚಂ ಸೈನಿಕಾನಾಮಥಾಬ್ರವೀತ್ ॥4॥
ನಾಗಕನ್ಯೆಯಾದ ಉಲೂಪಿಯು ಆ ಮಣಿಯನ್ನೆತ್ತಿಕೊಂಡು, ಸೈನಿಕರ ಮನಸ್ಸಿಗೆ ಸಂತೋಷವನ್ನುಂಟು ಮಾಡುವ ಮಾತುಗಳನ್ನು ಇಂತು ನುಡಿದಳು.
ಉಲೂಪೀ
ಉತ್ತಿಷ್ಠ ಮಾ ಶುಚಃ ಪುತ್ರ ನೈಷ ಜಿಷ್ಣುಸ್ತ್ವಯಾ ಹತಃ |
ಅಜಯ್ಯಃ ಪುರುಷೈರನ್ಯೈರ್ದೇವೈರಪಿ ಸವಾಸವೈಃ ॥5॥
ಉಲೂಪೀ ಬಭ್ರುವಾಹನನೇ ಎದ್ದೇಳು, ದುಃಖಿಸಬೇಡ. ನೀನು ಅರ್ಜುನನನ್ನು ಜಯಿಸಿರುವುದಿಲ್ಲ. ಜಯಶೀಲನಾದ ಅರ್ಜುನನು ಅಜೇಯನಾಗಿದ್ದಾನೆ. ಯಾವ ಪುರುಷರಿಂದಲೂ, ದೇವತೆಗಳಿಂದಲೂ, ಇಂದ್ರನಿಂದಲೂ ಗೆಲ್ಲಲು ಸಾಧ್ಯವಿಲ್ಲದ ಅರ್ಜುನನನ್ನು ನೀನು ಕೊಂದಿರುವುದಿಲ್ಲ.
ಮಯಾ ತು ಮೋಹನೀ ನಾಮ ಮಾಯೈಷಾ ಸಂಪ್ರಯೋಜಿತಾ |
ಪ್ರಿಯಾರ್ಥಂ ಪುರುಷವ್ಯಾಘ್ರ ಪಿತುಸ್ತೇಽದ್ಯ ಯಶಸ್ವಿನಃ ॥6॥

ಜಿಜ್ಞಾಸುರ್ಹ್ಯೇಷ ವೈ ಪುತ್ರ ಬಲಸ್ಯ ತವ ಕೌರವಃ |
ಸಂಗ್ರಾಮೇ ಯುದ್ಧ್ಯಮಾನಸ್ಯ ಸಂಪ್ರಾಪ್ತಃ ಪರವೀರಹಾ ॥7॥
ನಾನು ಮೋಹಿನಿ ಎಂಬ ಮಾಯಾವಿದ್ಯೆಯನ್ನು ಇಲ್ಲಿ ಪ್ರಯೋಗಿಸಿದ್ದೇನೆ. ಶತ್ರುವೀರರನ್ನು ಸಂಹರಿಸಲು ಸಮರ್ಥನಾದ ಅರ್ಜುನನು ರಣರಂಗದಲ್ಲಿ ಯುದ್ಧ ಮಾಡುವಾಗ ತನ್ನ ಮಗನ ಬಲವೆಷ್ಟು ಎಂದು ಜಿಜ್ಞಾಸೆ ಮಾಡುತ್ತಿದ್ದನು. ಅವನ ಪ್ರೀತಿಯ ಇಂಗಿತವನ್ನು ತಿಳಿದ ನಾನು ನಿನ್ನನ್ನು, ನಿನ್ನ ಕೀರ್ತಿಯನ್ನು ಪ್ರಸಿದ್ಧಿ ಪಡಿಸಲು ಯುದ್ಧದಲ್ಲಿ ಪ್ರೇರಿಸಿದ್ದೇನೆ. ನಿನ್ನ ಮೇಲಿನ ಪ್ರೀತಿಯಿಂದಲೇ ಇಂತಹ ಪ್ರೇರಣೆಯನ್ನು ನಾನು ಮಾಡಿದ್ದೇನೆ.
ತಸ್ಮಾದಸಿ ಮಯಾ ಪುತ್ರ ಯುದ್ಧಾರ್ಥಂ ಪರಿಚೋದಿತಃ |
ಸ ಪಾಪಮಾತ್ಮನಃ ಪುತ್ರ ಶಂಕೇಥಾ ಹ್ಯಣ್ವಪಿ ಪ್ರಭೋ ॥8॥
ನಿನ್ನ ತಂದೆಯ ಇಚ್ಛೆಗೆ ಅನುಸಾರವಾಗಿ ಅವನೊಡನೆ ಯುದ್ಧ ಮಾಡುವಂತೆ ನಾನೇ ಪ್ರೇರಣೆ ಮಾಡಿರುವುದರಿಂದ ನಿನಗೆ ಅಣುಮಾತ್ರದಷ್ಟೂ ಪಾಪ ಬಂದಿರುವುದಿಲ್ಲ. ಪಾಪದ ಬಗ್ಗೆ ಸ್ವಲ್ಪವೂ ಸಂಶಯವನ್ನು ಹೊಂದಬೇಡ.
ಋಷಿರೇಷ ಮಹಾತೇಜಾಃ ಪುರುಷಃ ಶಾಶ್ವತೋಽವ್ಯಯಃ |
ನೈನಂ ಶಕ್ತೋ ಹಿ ಸಂಗ್ರಾಮೇ ಜೇತುಂ ಶಕ್ರೋಽಪಿ ಪಾರ್ಥಿವ ॥9॥
ಮಗುವೇ, ಅರ್ಜುನನು ಸಾಮಾನ್ಯ ಕ್ಷತ್ರಿಯನಲ್ಲ. ಮಹಾತ್ಮನಾದ ಇವನನ್ನು ಶಾಶ್ವತನೂ, ಅವ್ಯಯನೂ ಎಂದು ತಿಳಿ.
ಬಭ್ರುವಾಹನನೇ, ಈ ಅರ್ಜುನನನ್ನು ಯುದ್ಧರಂಗದಲ್ಲಿ ಗೆಲ್ಲಲು ಇಂದ್ರನೂ ಸಮರ್ಥನಾಗಿರುವುದಿಲ್ಲ.
ಅಯಂ ತು ಮೇ ಮಣಿರ್ದಿವ್ಯಃ ಸಮಾನೀತೋ ವಿಶಾಂಪತೇ |
ಮೃತಾನ್ ಮೃತಾನ್ ಪನ್ನಗೇಂದ್ರಾನ್ ಸಂಜೀವಯತಿ ಸರ್ವದಾ ॥10॥
ಪ್ರಜಾನಾಥನೇ, ನಾನು ಈ ದಿವ್ಯಮಣಿಯನ್ನು ತಂದಿದ್ದೇನೆ. ಈ ಮಣಿಯು ಸಾಯುತ್ತಿರುವ ಸರ್ಪಗಳನ್ನು ನಿರಂತರ ಬದುಕಿಸುತ್ತಲೇ ಇರುತ್ತದೆ.
ಏನಮಸ್ಯೋರಸಿ ತ್ವಂ ಚ ಸ್ಥಾಪಯಾದ್ಯ ಪಿತುಃ ಪ್ರಭೋ |
ಸಜೀವಿತಂ ಪುನಃ ಪುತ್ರ ತತೋ ದ್ರಷ್ಟಾಸಿ ಪಾಂಡವಮ್ ॥11॥
ಈ ಮಣಿಯನ್ನು ನೀನು ಹಿಡಿದುಕೊ. ನೀನೇ ನಿನ್ನ ತಂದೆಯ ಎದೆಯ ಮೇಲೆ ಈ ಮಣಿಯನ್ನು ಇಡು. ಕೂಡಲೇ ಪುನಃ ಬದುಕಿ ಮೇಲೇಳುವ ಕುಂತೀಪುತ್ರನನ್ನು ಈ ಕ್ಷಣದಲ್ಲೇ ನೀನು ನೋಡುವೆ.
ವೈಶಂಪಾಯನಃ
ಇತ್ಯುಕ್ತಃ ಸ್ಥಾಪಯಾಮಾಸ ತಸ್ಯೋರಸಿ ಮಣಿಂ ತದಾ |
(ಪಾರ್ಥಸ್ಯಾಮಿತತೇಜಾಃ ಸ ಪಿತುಃ ಸ್ನೇಹಾದಪಾಪಕೃತ್) ॥12॥
ವೈಶಂಪಾಯನ ಈ ರೀತಿಯಾಗಿ ಉಲೂಪಿಯು ಹೇಳುತ್ತಿರಲು ಮಹಾತೇಜಸ್ವಿಯಾದ ಬಭ್ರುವಾಹನನು ತನ್ನ ತಂದೆಯ ವಕ್ಷಸ್ಸ್ಥಲದಲ್ಲಿ ಸಂಜೀವನ ಮಣಿಯನ್ನು ಸ್ನೇಹಪೂರ್ವಕವಾಗಿ ಇಟ್ಟನು. ಯಾವ ಅಪರಾಧವನ್ನೂ ಎಸಗದೆ ಸ್ನೇಹದಿಂದ ಆ ಮಣಿಯನ್ನು ಸ್ಪರ್ಶಿಸಿದನು.
ತಸ್ಮಿನ್ ನ್ಯಸ್ತೇ ಮಣೌ ವೀರ ಜಿಷ್ಣುರುಜ್ಜೀವಿತಃ ಪ್ರಭುಃ |
ಸುಪ್ತೋತ್ಥಿತ ಇವೋತ್ತಸ್ಥೌ ಸ್ಪಷ್ಟರೋಹಿತಲೋಚನಃ ॥13॥
ಆ ಮಣಿಯು ಇಡಲ್ಪಡುತ್ತಿರಲು ಜಯಶೀಲನಾದ, ಸಮರ್ಥನಾದ ಅರ್ಜುನನು ಮಲಗಿದವನು ಎದ್ದುಕುಳಿತುಕೊಳ್ಳುವಂತೆ ತನ್ನ ಕಣ್ಣುಗಳನ್ನು ಚೆನ್ನಾಗಿ ಅರಳಿಸಿ ಎದ್ದು ಕುಳಿತನು.
ತಮುತ್ಥಿತಂ ಮಹಾತ್ಮಾನಂ ಲಬ್ಧಸಂಜ್ಞಂ ಮನಸ್ವಿನಮ್ |
ಸಮೀಕ್ಷ್ಯ ಪಿತರಂ ಸ್ವಸ್ಥಂ ವವಂದೇ ಬಭ್ರುವಾಹನಃ ॥14॥
ಎದ್ದುಕುಳಿತಿರುವ, ಚೆನ್ನಾಗಿ ಎಚ್ಚರಗೊಂಡಿರುವ ಮಹಾತ್ಮನಾದ, ಮನನಶೀಲನಾದ ತಂದೆಯನ್ನು ನೋಡಿ ಬಭ್ರುವಾಹನನು ಅಭಿವಾದನ ಪೂರ್ವಕವಾಗಿ ನಮಸ್ಕರಿಸಿದನು.
ಉತ್ಥಿತೇ ಪುರುಷವ್ಯಾಘ್ರೇ ಪುನಲಕ್ಷ್ಮೀ ರ್ಮೇಪತಿಃ ಪ್ರಭೋ |
ದಿವ್ಯಾಃ ಸುಮನಸಃ ಪುಣ್ಯಾ ವವರ್ಷ ಬಲಸೂದನಃ ॥15॥
ಪುರುಷವ್ಯಾಘ್ರನಾದ ಅರ್ಜುನನು ಮೇಲೆದ್ದು ಕುಳಿತುಕೊಳ್ಳಲು, ಸ್ವರ್ಗೈಶ್ವರ್ಯಾಧಿಪತಿಯಾದ ಅರ್ಜುನನು ಮೇಲೆದ್ದನೆಂದು ಸಂತುಷ್ಟರಾದ ದೇವತೆಗಳೆಲ್ಲರೂ ಸಂಭ್ರಮದಿಂದ ಅವನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು.
ಅನಾಹತಾ ದುಂದುಭಯೋ ಪ್ರಣೇದುರ್ಮೇಘನಿಃಸ್ವನಾಃ |
ಸಾಧು ಸಾಧ್ವಿತಿ ಚಾಕಾಶೇ ಬಭೂವ ಸುಮಹಾನ್ ಸ್ವನಃ ॥16॥
ಯಾರೂ ಬಾರಿಸದೆಯೇ ಇದ್ದರೂ ದೇವದುಂದುಭಿಗಳು ತಮ್ಮಷ್ಟಕ್ಕೆ ತಾವೇ ಮೊಳಗಿದವು. ಮೇಘದ ಗರ್ಜನೆಗೆ ಸಮಾನವಾಗಿ ಶಬ್ದ ಮಾಡಿದವು. ಆಕಾಶದಲ್ಲಿ ಸ್ಪಷ್ಟವಾಗಿ ಕೇಳಿಸುವಂತೆ `ಸಾಧು-ಸಾಧು' ಎಂಬ ಶಬ್ದವು ಕೇಳಿಬರುತ್ತಿತ್ತು.
ಉತ್ಥಾಯ ತು ಮಹಾಬಾಹುಃ ಪರ್ಯಾಶ್ವಸ್ತೋ ಧನಂಜಯಃ |
ಬಭ್ರುವಾಹನಮಾಲಿಂಗ್ಯ ಸಮಾಜಿಘ್ರತ ಮೂರ್ಧನಿ ॥17॥
ಮಹಾಬಾಹುವಾದ ಧನಂಜಯನು ಮೇಲೆದ್ದ ಬಳಿಕ ರಥದಲ್ಲಿರುವ ಬಭ್ರುವಾಹನನನ್ನು ಆಲಿಂಗಿಸಿಕೊಂಡು ಅವನ ತಲೆಯನ್ನು ಆಘ್ರಾಣಿಸಿದನು.
ದದರ್ಶ ಚಾವಿದೂರೇಽಸ್ಯ ಮಾತರಂ ಶೋಕಕರ್ಶಿತಾಮ್ |
ಉಲೂಪ್ಯಾ ಸಹ ತಿಷ್ಠಂತೀಂ ತತೋಽಪೃಚ್ಛದ್ ಧನಂಜಯಃ ॥18॥

ಹತ್ತಿರದಲ್ಲಿಯೇ ಶೋಕಕರ್ಶಿತಳಾಗಿರುವ ತಾಯಿಯಾದ ಚಿತ್ರಾಂಗದೆಯನ್ನು ಉಲೂಪಿಯಿಂದ ಸಹಿತಳಾಗಿ ನಿಂತಿರುವುದನ್ನು ನೋಡಿದನು. ಅವರೀರ್ವರನ್ನು ನೋಡಿ ಪ್ರಶ್ನಿಸಿದನು.
ಅರ್ಜುನಃ
ಕಿಮಿದಂ ಲಕ್ಷ್ಯತೇ ಸರ್ವಂ ಶೋಕವಿಸ್ಮಯಹರ್ಷವತ್ |
ರಣಾಜಿರಮಮಿತ್ರಘ್ನ ಯದಿ ಜಾನಾಸಿ ಶಂಸ ಮೇ ॥19॥
ಅರ್ಜುನ ಶತ್ರುಹಂತಕನೇ, ಈ ರಣಾಂಗಣವು ಶೋಕ-ವಿಸ್ಮಯ-ಹರ್ಷಗಳಿಂದ ತುಂಬಿರುವಂತೆ ಕಾಣಿಸುತ್ತಿದೆ. ಇದಕ್ಕೆ ಕಾರಣವೇನಾದರೂ ನಿನಗೆ ತಿಳಿದಿದ್ದಲ್ಲಿ ಹೇಳು.
ಜನನೀ ಚ ಕಿಮರ್ಥಂ ತೇ ರಣಭೂಮಿಮುಪಾಗತಾ |
ನಾಗೇಂದ್ರದುಹಿತಾ ಚೇಯಮುಲೂಪೀ ಕಿಮಿಹಾಗತಾ ॥20॥
ನಿನ್ನ ತಾಯಿಯು ಯುದ್ಧಭೂಮಿಗೆ ಏಕೆ ಆಗಮಿಸಿದಳು? ನಾಗಕನ್ಯೆಯಾದ ಉಲೂಪಿಯಾದರೂ ಇಲ್ಲಿಗೆ ಬಂದ ಕಾರಣವೇನು?
ಜಾನಾಮ್ಯಹಮಿದಂ ಯುದ್ಧಂ ತ್ವಯಾ ಮದ್ವಚನಾತ್ ಕೃತಮ್ |
ಸ್ತ್ರೀಣಾಮತ್ರಾಗಮೇ ಹೇತುಮಹಮಿಚ್ಛಾಮಿ ವೇದಿತುಮ್ ॥21॥
ನನ್ನ ಮಾತಿನಿಂದಲೇ ರಣಾಂಗಣದಲ್ಲಿ ನಮ್ಮಿಬ್ಬರಿಗೂ ಪರಸ್ಪರವಾಗಿ ಯುದ್ದ ನಡೆಯಿತು. ಈ ಸ್ತ್ರೀಯರೇಕೆ ಆಗಮಿಸಿದರೆಂಬುದನ್ನು ಅರ್ಥಮಾಡಿಕೊಳ್ಳಲಾಗುತ್ತಿಲ್ಲ. ಇದರ ಕಾರಣವನ್ನು ತಿಳಿಯಬಯಸುತ್ತೇನೆ.
ವೈಶಂಪಾಯನಃ
ತಮುವಾಚ ತತಃ ಪೃಷ್ಟೋ ಮಣಲೂರಪತಿಸ್ತದಾ |
ಪ್ರಸಾದ್ಯ ಶಿರಸಾ ವಿದ್ವಾನ್ ಉಲೂಪೀ ಪೃಚ್ಛ್ಯತಾಮಿತಿ ॥22॥
ವೈಶಂಪಾಯನ ಜನಮೇಜಯನೆ, ಅರ್ಜುನನು ಹೀಗೆ ಪ್ರಶ್ನಿಸಿದಾಗ ಮಣಲೂರ ಪತಿಯಾದ ಬಭ್ರುವಾಹನನು ತಂದೆಯನ್ನು ಪ್ರಸನ್ನಗೊಳಿಸಿ, ರಣಾಂಗಣಕ್ಕೆ ಸ್ತ್ರೀಯರು ಬಂದ ಕಾರಣವೇನೆಂದು ಉಲೂಪಿಯನ್ನು ಕೇಳಿ ತಿಳಿದುಕೊ ಎಂದು ಪ್ರಾರ್ಥಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಮ್ಮರಣೇ ಅರ್ಜುನಸಂಜೀವನಪ್ರಕಾರಕಥನಂ ನಾಮ ದ್ವ್ಯಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ಮೂರನೆಯ ಅಧ್ಯಾಯ
ಉಲೂಪಿಯು ಅರ್ಜುನನನ್ನು ಕುರಿತು ಚಿತ್ರಾಂಗದೆ-ಉಲೂಪಿ ಇವರು ಯುದ್ಧಭೂಮಿಗೆ ಆಗಮಿಸಲು ಕಾರಣವೇನೆಂಬುದನ್ನು ಹೇಳಿದುದು. ಬಭ್ರುವಾಹನನಿಂದ ಅರ್ಜುನನು ಪರಾಜಯ ಹೊಂದಲು ಕಾರಣವೇನೆಂಬುದನ್ನು ವಿವರಿಸಿದುದು.
ಅರ್ಜುನಃ
ಕಿಮಾಗಮನಕೃತ್ಯಂ ತೇ ಕೌರವ್ಯಕುಲನಂದಿನಿ |
ಮಣಲೂರಪತೇರ್ಮಾತುಸ್ತಥೈವ ಚ ರಣಾಜಿರೇ ॥1॥
ಅರ್ಜುನ ಸರ್ಪರಾಜನಾದ ಕೌರವ್ಯನ ಕುಲಕ್ಕೆ ಆನಂದವನ್ನು ನೀಡುವವಳೇ, ನಾಗಕನ್ಯೆಯೇ, ರಣಭೂಮಿಗೆ ನೀನು ಬರಲು ಕಾರಣವೇನು? ಈ ರಣಭೂಮಿಗೆ ಮಣಲೂರ ಪತಿಯಾದ ಬಭ್ರುವಾಹನನ ತಾಯಿಯಾದ ಚಿತ್ರಾಂಗದೆಯು ಬಂದಳೇಕೆ?
ಕಚ್ಚಿತ್ ಕುಶಲಕಾಮಾಽಸಿ ರಾಜ್ಞೋಽಸ್ಯ ಭುಜಗಾತ್ಮಜೇ |
ಮಮ ವಾ ಚಂಚಲಾಪಾಂಗೇ ಕಚ್ಚಿತ್ ತ್ವಂ ಸುಖಮಿಚ್ಛಸಿ ॥2॥
ನಾಗಕುವರಿಯೇ, ಚಂಚಲನೇತ್ರವುಳ್ಳವಳೇ, ಉಲೂಪಿಯೇ, ಈ ಮಣಲೂರಿನ ರಾಜನಿಗೆ ಹಿತವನ್ನುಂಟು ಮಾಡಬೇಕೆಂಬ ಅಭಿಲಾಷೆಯುಳ್ಳವಳು ಆಗಿರುವೆಯಲ್ಲವೇ? ನನ್ನ ಹಿತವನ್ನು ಬಯಸುವೆಯಲ್ಲವೇ?
ಕಚ್ಚಿತ್ ತೇ ಪೃಥುಶ್ರೋಣಿ ನಾಪ್ರಿಯಂ ಶುಭದರ್ಶನೇ |
ಅಕಾರ್ಷಮಹಮಜ್ಞಾನಾದ್ ಅಯಂ ವಾ ಬಭ್ರುವಾಹನಃ ॥3॥
ಸ್ಥೂಲವಾದ ನಿತಂಬದಿಂದ ಕೂಡಿರುವವಳೇ, ನಾನಾಗಲೀ, ನನ್ನ ಮಗನಾಗಲೀ, ತಿಳಿಯದೆ ಯಾವುದಾದರೂ ಅಪ್ರಿಯವಾದ ಕಾರ್ಯವನ್ನು ನಿನಗೆ ಮಾಡಿಲ್ಲವಷ್ಟೆ?
ಕಚ್ಚಿಚ್ಚ ರಾಜಪುತ್ರೀ ತೇ ಸಪತ್ನೀ ಚೈತ್ರವಾಹನೀ |
ಚಿತ್ರಾಂಗದಾ ವರಾರೋಹಾ ನಾಪರಾಧ್ಯತಿ ಕಿಂಚನ ॥4॥
ರಾಜಪುತ್ರಿಯಾದ, ನಿನಗೆ ಸವತಿಯಾದ, ಚಿತ್ರವಾಹನನ ಪುತ್ರಿಯಾದ, ಸುಂದರ ಕಟಿಪ್ರದೇಶವಿರುವ ಚಿತ್ರಾಂಗದೆಯು ನಿನಗೆ ಯಾವುದೇ ಅತ್ಯಲ್ಪ ಅಪರಾಧವನ್ನು ಮಾಡಿಲ್ಲವಷ್ಟೆ?
ವೈಶಂಪಾಯನಃ
ತಮುವಾಚೋರಗಪತೇರ್ದುಹಿತಾ ಪ್ರಹಸಂತ್ಯಥ ॥5॥
ವೈಶಂಪಾಯನ ಅರ್ಜುನನ ಈ ಮಾತುಗಳಿಗೆ ನಗುತ್ತಲೇ ಉಲೂಪಿಯು ಉತ್ತರಿಸಿದಳು.
ಉಲೂಪೀ
ನ ಮೇ ತ್ವಮಪರಾದ್ಧೋಽಸಿ ನ ನೃಪೋ ಬಭ್ರುವಾಹನಃ |
ನ ಜನಿತ್ರೀ ತಥಾಽಸ್ಯೇಯಂ ಮಮ ಯಾ ಪ್ರೇಷ್ಯವತ್ ಸ್ಥಿತಾ ॥6॥
ಉಲೂಪೀ ಪ್ರಾಣಕಾಂತನೇ, ನೀನಾಗಲೀ, ಬಭ್ರುವಾಹನನಾಗಲೀ ನನಗೆ ಅಪರಾಧವನ್ನು ಮಾಡಿಲ್ಲ. ಬಭ್ರುವಾಹನನ ತಾಯಿಯಾದ

ಚಿತ್ರಾಂಗದೆಯೂ ಯಾವ ಅಪರಾಧವನ್ನು ಮಾಡಿಲ್ಲ. ಇಷ್ಟಾಗಿ ಯಾವಾಗಲೂ ಈಕೆಯು ನನ್ನ ಸೇವಕಿಯಂತೆಯೇ ಇರುತ್ತಾಳೆ.
ಶ್ರೂಯತಾಂ ಯದ್ ಯಥಾ ಚೇದಂ ಮಯಾ ಸರ್ವಂ ವಿಚೇಷ್ಟಿತಮ್|
ನ ಮೇ ಕೋಪಸ್ತ್ವಯಾ ಕಾರ್ಯಃ ಶಿರಸಾ ತ್ವಾಂ ಪ್ರಸಾದಯೇ ॥7॥
ನಾನು ಇಲ್ಲಿ ಬಂದು ಯಾವ ರೀತಿಯಾದ ಕಾರ್ಯಗಳನ್ನು ಮಾಡಿದೆ ಅವೆಲ್ಲವನ್ನೂ ಹೇಳಿದೆ. ಆದರೆ ಯಾವುದೇ ಕಾರಣದಿಂದಲೂ ನನ್ನ ವಿಷಯದಲ್ಲಿ ನೀನು ಕೋಪಿಸಿಕೊಳ್ಳಬಾರದು. ನಿನ್ನ ಅನುಗ್ರಹವನ್ನು ನಮಿಸಿ ಬೇಡಿಕೊಳ್ಳುತ್ತೇನೆ.
ತ್ವತ್ಪ್ರೀತ್ಯರ್ಥಂ ಹಿ ಕೌರವ್ಯ ಕೃತಮೇತನ್ಮಯಾಽನಘ |
ಯತ್ ತಚ್ಛೃಣು ಮಹಾಬಾಹೋ ನಿಖಿಲೇನ ಧನಂಜಯ ॥8॥
ಅರ್ಜುನನೇ, ನಾನು ಇಲ್ಲಿಯತನಕ ಈ ರಣರಂಗದಲ್ಲಿ ಏನೆಲ್ಲ ಕರ್ಮಗಳನ್ನು ಮಾಡಿದ್ದೆನೋ ಅವೆಲ್ಲವೂ ನಿನಗೆ ಪ್ರಿಯವಾದ ಕರ್ಮಗಳೆಂದೇ ಮಾಡಿರುತ್ತೇನೆ. ವಿಸ್ತಾರವಾಗಿ ಅದನ್ನು ವಿವರಿಸುತ್ತೇನೆ, ಧನಂಜಯನೇ ಕೇಳಿಸಿಕೊ.
ಮಹಾಭಾರತಯುದ್ಧೇ ಯತ್ ತ್ವಯಾ ಶಾಂತನವೋ ನೃಪಃ |
ಅಧರ್ಮೇಣ ಹತಃ ಪಾರ್ಥ ತಸ್ಯೈಷಾ ನಿಷ್ಕೃತಿಃ ಕೃತಾ ॥9॥
ಮಹಾಭಾರತ ಯುದ್ಧದಲ್ಲಿ ಭೀಷ್ಮಾಚಾರ್ಯರನ್ನು ನೀನು ಅಧರ್ಮದಿಂದ ಸಂಹರಿಸಿರುವೆ. ಆ ಪಾಪಕ್ಕೆ ಪ್ರಾಯಶ್ಚಿತ್ತರೂಪವಾಗಿ ನಾನು ಈ ಕಾರ್ಯವನ್ನು ಮಾಡಿರುತ್ತೇನೆ.
ನ ಹಿ ಭೀಷ್ಮಸ್ತ್ವಯಾ ವೀರ ಯುಧ್ಯಮಾನೋ ನಿಪಾತಿತಃ |
ಶಿಖಂಡಿನಾ ತು ಸಂಸಕ್ತಸ್ತಮಾಶ್ರಿತ್ಯ ಹತಸ್ತ್ವಯಾ ॥10॥
ವೀರನೇ, ಭೀಷ್ಮರು ನಿನ್ನೊಡನೆ ನೇರವಾಗಿ ಯುದ್ಧ ಮಾಡುವಾಗ ಅವರನ್ನು ನೀನು ಸಂಹರಿಸಲಿಲ್ಲ. ಶಿಖಂಡಿಯನ್ನು ಮುಂದಿಟ್ಟುಕೊಂಡು ಭೀಷ್ಮರನ್ನು ಹೊಡೆದಿರುವೆ.
ತಸ್ಯ ಶಾಂತಿಮಕೃತ್ವಾ ತು ತ್ಯಜೇಸ್ತ್ವಂ ಯದಿ ಜೀವಿತಮ್ |
ಕರ್ಮಣಾ ತೇನ ಪಾಪೇನ ಪತೇಥಾ ನಿರಯೇ ಧ್ರುವಮ್ ॥11॥
ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ನೀನು ಮರಣ ಹೊಂದಿದಲ್ಲಿ, ಆ ಪಾಪದ ಫಲವಾಗಿ ನಿಶ್ಚಿತವಾಗಿಯೂ ನರಕದಲ್ಲಿ ಬೀಳುವೆ.
ಏಷಾಽತ್ರ ವಿಹಿತಾ ಶಾಂತಿಃ ಪುತ್ರಾತ್ ತ್ವಂ ಪ್ರಾಪ್ತವಾನಸಿ ॥12॥
ಆದ್ದರಿಂದ ಆ ಪಾಪಕರ್ಮಕ್ಕೆ ಶಾಂತಿಯನ್ನು ಮಾಡುವ ದೃಷ್ಟಿಯಿಂದ ನಿನ್ನ ಮಗನಿಂದಲೇ ಇಂತಹ ಶಿಕ್ಷೆಯನ್ನು ಅನುಭವಿಸಿದವನಾಗಿರುತ್ತಿ.
ವಸುಭಿರ್ವಸುಧಾಪಾಲ ಗಂಗಯಾ ಚ ಮಹಾಮತೇ |
ಪುರಾ ಹಿ ಶ್ರುತಮೇತದ್ ವೈ ವಸುಭಿಃ ಕಥಿತಂ ಮಮ ॥13॥
ಮಹಾಮತಿಯೇ, ಹಿಂದೆ ನೀನು ಮಾಡಿದ ಅಪರಾಧಕ್ಕೆ ವಸುದೇವತೆಗಳು, ಭೀಷ್ಮನ ತಾಯಿಯಾದ ಗಂಗಾದೇವಿಯು ನಿನಗೆ ಮಗನಿಂದಲೇ ಪರಾಜಯ ಹೊಂದುವ ಪ್ರಾಯಶ್ಚಿತ್ತವನ್ನು ವಿಧಿಸಿದ್ದರು. ನಾನೊಮ್ಮೆ ಗಂಗಾನದಿಯ ತೀರದಲ್ಲಿದ್ದಾಗ ವಸುಗಳು ಹೇಳಿದ ಆ ಮಾತನ್ನು ಕೇಳಿಸಿಕೊಂಡಿದ್ದೆನು.
ಗಂಗಾಯಾಸ್ತೀರಮಾಗಮ್ಯ ಹತೇ ಶಾಂತನವೇ ನೃಪ |
ಆಪ್ಲುತ್ಯ ದೇವಾ ವಸವಃ ಸಮಾಪ್ಲುತ್ಯ ಮಹಾನದೀಮ್ ॥14॥
ಇದಮೂಚುರ್ವಚೋ ಘೋರಂ ಭಾಗೀರಥ್ಯಾ ಮತೇ ತದಾ ॥15॥
ಗಂಗಾ ತೀರದಲ್ಲಿ ಇದ್ದಾಗ ವಸುಗಳೆಲ್ಲರೂ ಒಟ್ಟಾಗಿ ಸೇರಿ, ಮಹಾನದಿಯಾದ ಗಂಗೆಯಲ್ಲಿ ಸ್ನಾನ ಮಾಡಿ, ಭಾಗೀರಥಿಯ ಸಮ್ಮತಿಯನ್ನು ಪಡೆದುಕೊಂಡು ಈ ಘೋರವಾದ ಮಾತನ್ನು ಹೇಳಿದರು.
ಏಷ ಶಾಂತನವೋ ಭೀಷ್ಮೋ ನಿಹತಃ ಸವ್ಯಸಾಚಿನಾ |
ಅಯುಧ್ಯಮಾನಃ ಸಂಗ್ರಾಮೇ ಸಂಸಕ್ತೋಽನ್ಯೇನ ಭಾಮಿನಿ ॥16॥
ಭಾಮಿನಿಯೇ, ಶಂತನು ಮತ್ತು ನಿನ್ನ ಮಗನಾದ ಭೀಷ್ಮನು ಬೇರೆಯವರೊಡನೆ ಯುದ್ಧವನ್ನು ಮಾಡುತ್ತಿದ್ದನು. ಅರ್ಜುನನೊಡನೆ ಯುದ್ಧ ಮಾಡುತ್ತಿರಲಿಲ್ಲ. ಆ ಸಮಯದಲ್ಲಿ ಅರ್ಜುನನು ಭೀಷ್ಮರನ್ನು ಸಂಗ್ರಾಮದಲ್ಲಿ ಸಂಹರಿಸಿದನು.
ತದನೇನಾಭಿಷಂಗೇಣ ವಯಮಪ್ಯರ್ಜುನಂ ಶುಭೇ |
ಶಾಪೇನ ಯೋಜಯಾಮೇತಿ ತಥಾಽಸ್ತ್ವಿತಿ ಚ ಸಾಽಬ್ರವೀತ್ ॥17॥
ಇಂತಹ ಪಾಪದ ಅಪರಾಧಕ್ಕಾಗಿ ನಾವೆಲ್ಲರೂ ಅವನಿಗೆ ಶಾಪ ಕೊಡುತ್ತೇವೆ. ಪತಿದೇವನೇ, ವಸುಗಳ ಈ ಮಾತನ್ನು ಕೇಳಿ ಗಂಗಾದೇವಿಯು `ತಥಾಽಸ್ತು' `ಹಾಗೆಯೇ ಆಗಲಿ' ಎಂದು ಆ ಶಾಪವನ್ನು ಅನುಮೋದಿಸಿದಳು.
ತದಹಂ ಪಿತುರಾವೇದ್ಯ ಭೃಶಂ ಪ್ರವ್ಯಥಿತೇಂದ್ರಿಯಾ |
ಅಭವಂ ಸ ಚ ತಚ್ಛ್ರುತ್ವಾ ವಿಷಾದಮಗಮತ್ ಪರಮ್ ॥18॥
ಪಿತಾ ತು ಮೇ ವಸೂನ್ ಗತ್ವಾ ತ್ವದರ್ಥಂ ಸಮಯಾಚತ |
ಪುನಃ ಪುನಃ ಪ್ರಸಾದ್ಯೈನಾನ್ ತ ಏನಮಿದಮಬ್ರುವನ್ ॥19॥
ಗಂಗೆಯ ಆ ಮಾತನ್ನು ಕೇಳಿಸಿಕೊಂಡ ನಾನು ಬಹಳ ದುಃಖಿತಳಾದೆನು. ಆ ವಾರ್ತೆಯನ್ನು ಕೇಳಿದ ನನ್ನ ತಂದೆಯೂ ದುಃಖಿತನಾಗಿ ವಸುಗಳ ಬಳಿ ನಿನ್ನ ಸಲುವಾಗಿ ಅವರನ್ನು ಬಹಳವಾಗಿ ಪ್ರಾರ್ಥಿಸಿಕೊಂಡನು. ಪುನಃ ಪುನಃ ಪ್ರಾರ್ಥಿಸಿಕೊಂಡಾಗ ಕೃಪಾಪೂರ್ಣರಾದ ವಸುಗಳು ನನ್ನ ತಂದೆಗೆ ಇಂತು ನುಡಿದರು.
ಪುತ್ರೋಽಸ್ಯ ತು ಮಹಾರಾಜೋ ಮಣಲೂರೇಶ್ವರೋ ಯುವಾ |

ಸ ಏನಂ ರಣಮಧ್ಯಸ್ಥಂ ಶರೈಃ ಪಾತಯಿತಾ ಭುವಿ ॥20॥
ಏವಂ ಕೃತೇ ಸ ನಾಗೇಂದ್ರ ಮುಕ್ತಶಾಪೋ ಭವಿಷ್ಯತಿ |
ಗಚ್ಛೇತಿ ವಸುಭಿಶ್ಚೋಕ್ತೋ ಮಮ ಚೇದಂ ಶಶಂಸ ಸಃ ॥21॥
ಮಹಾಭಾಗನೇ, ನಾಗೇಂದ್ರನೇ, ಮಣಲೂರಪುರಕ್ಕೆ ರಾಜನಾಗಿರುವ, ಯುವಕನಾದ ಬಭ್ರುವಾಹನನು ರಣಭೂಮಿಯಲ್ಲಿ ಬಾಣಗಳಿಂದ ಅರ್ಜುನನನ್ನು ಭೂಮಿಯಲ್ಲಿ ಕೆಡವಿದಾಗ ನಮ್ಮ ಶಾಪದಿಂದ ವಿಮುಕ್ತನಾಗುತ್ತಾನೆ. ನೀನು ಹೋಗಿ ಬಾ ಎಂದು ವಸುಗಳು ನನ್ನ ತಂದೆಗೆ ಹೇಳಿದರು. ತಂದೆಯು ನನಗೆ ಹೇಳಿದನು.
ತಚ್ಛ್ರುತ್ವಾ ತ್ವಂ ಮಯಾ ತಸ್ಮಾತ್ ಶಾಪಾದಸಿ ವಿಮೋಕ್ಷಿತಃ |
ನ ಹಿ ತ್ವಾಂ ದೇವರಾಜೋಽಪಿ ಸಮರೇಷು ಪರಾಜಯೇತ್ ॥22॥
ಆ ವಸುಗಳ ಮಾತಿನಂತೆ ಬಭ್ರುವಾಹನನಿಗೆ ನಿನ್ನ ಬಳಿ ಯುದ್ಧ ಮಾಡಲು ನಾನು ಪ್ರಚೋದಿಸಿದೆ. ಆದ್ದರಿಂದ ಇಂದು ನೀನು ವಸುಗಳ ಶಾಪದಿಂದ ವಿಮುಕ್ತನಾಗಿರುವಿ. ನಿನ್ನನ್ನು ದೇವರಾಜನೂ ಯುದ್ಧದಲ್ಲಿ ಪರಾಜಯಗೊಳಿಸಲಾರನು.
ಆತ್ಮಾ ಪುತ್ರಃ ಸ್ಮೃತಸ್ತಸ್ಮಾತ್ ತೇನೇಹಾಸಿ ಪರಾಜಿತಃ |
ನಾತ್ರ ದೋಷೋ ಮಮ ಮತಃ ಕಥಂ ವಾ ಮನ್ಯಸೇ ವಿಭೋ ॥23॥
ಮಗನಾದರೂ ನಿನ್ನ ಆತ್ಮನೇ ಆಗಿರುವುದರಿಂದ (ಆತ್ಮಾ ವೈ ಪುತ್ರನಾಮ ಎಂದು ವೇದಗಳು ಸಾರುವುದರಿಂದ) ಅವನಿಂದ ನೀನು ಪರಾಜಿತನಾಗಿರುವಿ. ಇದರಲ್ಲಿ ನನ್ನ ಯಾವ ದೋಷಗಳು ಇಲ್ಲ ಎಂದು ತಿಳಿದಿದ್ದೇನೆ. ಅರ್ಜುನನೇ, ನನ್ನ ಮಾತನ್ನು ಕೇಳಿ ಏನೆಂದು ಭಾವಿಸುವಿ?
ವೈಶಂಪಾಯನಃ
ಇತ್ಯೇವಮುಕ್ತೋ ವಿಜಯಃ ಪ್ರಸನ್ನಾತ್ಮಾಽಬ್ರವೀದಿದಮ್ ॥24॥
ವೈಶಂಪಾಯನ ಈ ರೀತಿಯಾಗಿ ಉಲೂಪಿಯು ಹೇಳುತ್ತಿರಲು ವಿಜಯನು ಪ್ರಸನ್ನಚಿತ್ತನಾಗಿ ಇಂತು ನುಡಿದನು.
ಅರ್ಜುನಃ
ಸರ್ವಂ ಮೇ ಸುಪ್ರಿಯಂ ದೇವಿ ಯದೇತತ್ ಕೃತವತ್ಯಸಿ ॥25॥
ಅರ್ಜುನ ಉಲೂಪಿಯೆ, ನನ್ನ ಪಾಪ ಪರಿಹಾರಕ್ಕಾಗಿ ನೀನು ಯಾವ ಕರ್ಮವನ್ನು ಮಾಡಿರುವೆಯೋ ಅವೆಲ್ಲವೂ ನನಗೆ ಪರಮಪ್ರಿಯವೇ ಆಗಿವೆ.
ವೈಶಂಪಾಯನಃ
ಇತ್ಯುಕ್ತ್ವಾ ಸೋಽಬ್ರವೀತ್ ಪುತ್ರಂ ಮಣಲೂರೇಶ್ವರಂ ಜಯಃ |
ಚಿತ್ರಾಂಗದಾಯಾಃ ಶೃಣ್ವನ್ತ್ಯಾಃ ಕೌರವ್ಯದುಹಿತುಸ್ತಥಾ ॥26॥
ವೈಶಂಪಾಯನ ಅರ್ಜುನನು ಉಲೂಪಿಗೆ ಹೀಗೆ ಹೇಳಿ, ಚಿತ್ರಾಂಗದೆಗೂ ಉಲೂಪಿಗೂ ಕೇಳಿಸುವಂತೆ ಮಣಲೂರ ಅಧಿಪತಿಯಾದ ಬಭ್ರುವಾಹನನನ್ನು ಕುರಿತು ಇಂತು ನುಡಿದನು.
ಅರ್ಜುನಃ
ಯುಧಿಷ್ಠಿರಸ್ಯಾಶ್ವಮೇಧಃ ಪರಶ್ಚೈತ್ರ್ಯಾಂ ಭವಿಷ್ಯತಿ |
ತತ್ರಾಗಚ್ಛೇಃ ಸಹಾಮಾತ್ಯೋ ಮಾತೃಭ್ಯಾಂ ಸಹಿತೋ ನೃಪ ॥27॥
ಅರ್ಜುನ ನರೇಶ್ವರನೇ, ಚೈತ್ರಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿನದಂದು ಯುಧಿಷ್ಠಿರನ ಅಶ್ವಮೇಧ ಯಾಗವು ಆರಂಭವಾಗುತ್ತದೆ. ಅಲ್ಲಿಗೆ ನೀನು ನಿನ್ನ ತಾಯಂದಿರನ್ನೂ, ಅಮಾತ್ಯರನ್ನೂ ಕರೆದುಕೊಂಡು ಆಗಮಿಸು.
ವೈಶಂಪಾಯನಃ
ಇತ್ಯೇವಮುಕ್ತಃ ಪಾರ್ಥೇನ ಸ ರಾಜಾ ಬಭ್ರುವಾಹನಃ |
ಉವಾಚ ಪಿತರಂ ಧೀಮಾನ್ ಇದಮಸ್ರಾವಿಲೇಕ್ಷಣಃ ॥28॥
ವೈಶಂಪಾಯನ ಜನಮೇಜಯನೇ, ಅರ್ಜುನನು ಹೀಗೆ ಹೇಳುತ್ತಿರಲು ಧೀಮಂತನಾದ ಬಭ್ರುವಾಹನ ರಾಜನು ಸಂತೋಷದಿಂದ ತುಂಬಿದ ಕಣ್ಣೀರಿನಿಂದ ಕೂಡಿದವನಾಗಿ ತಂದೆಯನ್ನು ಕುರಿತು ಹೀಗೆ ಹೇಳಿದನು.
ಬಭ್ರುವಾಹನಃ
ಉಪಯಾಸ್ಯಾಮಿ ಧರ್ಮಜ್ಞ ಭವತಃ ಶಾಸನಾದಹಮ್ |
ಅಶ್ವಮೇಧಮಹಾಯಜ್ಞೇ ದ್ವಿಜಾತಿಪರಿವೇಷಕಃ ॥29॥
ಬಭ್ರುವಾಹನ ಧರ್ಮಜ್ಞನಾದ ತಂದೆಯೇ, ನಿನ್ನ ಆಜ್ಞಾನುಸಾರವಾಗಿ ಅಶ್ವಮೇಧ ಮಹಾಯಾಗಕ್ಕೆ ತಾಯಂದಿರನ್ನೂ, ಅಮಾತ್ಯರನ್ನೂ, ಬ್ರಾಹ್ಮಣರನ್ನೂ ಕರೆದುಕೊಂಡು ಬರುತ್ತೇನೆ. ಆ ಮಹಾಯಜ್ಞದಲ್ಲಿ ಬ್ರಾಹ್ಮಣರಿಗೆ ಊಟ ಬಡಿಸುವ ಸೇವೆಯನ್ನು ಮಾಡುತ್ತೇನೆ.
ಮಮ ತ್ವನುಗ್ರಹಾರ್ಥಂ ಹಿ ಪ್ರವಿಶಸ್ವ ಪುರಂ ಸ್ವಕಮ್ |
ಭಾರ್ಯಾಭ್ಯಾಂ ಸಹ ಶತ್ರುಘ್ನ ಮಾ ಭೂತ್ ತೇಽತ್ರ ವಿಚಾರಣಾ ॥
ನನ್ನ ಮೇಲಿನ ಅನುಗ್ರಹದಿಂದ ನೀನು ದಯವಿಟ್ಟು ನಿನ್ನ ಪತ್ನಿಯರೊಡನೆ ನಿನ್ನದ್ದೇ ಆಗಿರುವ ಮಣಲೂರನ್ನು ಪ್ರವೇಶಿಸು. ಈ ವಿಷಯದಲ್ಲಿ ವಿಚಾರ ಮಾಡಬೇಡ.
ಉಷಿತ್ವಾ ಚ ವಿಶಲ್ಯಸ್ತ್ವಂ ಸುಖಂ ವೇಶ್ಮನಿ ಚ ಪ್ರಭೋ |
ಪುನರಶ್ವಾನುಗಮನಂ ಕರ್ತಾಸಿ ಜಯತಾಂ ವರ ॥31॥
ನಿನ್ನದ್ದೇ ಆಗಿರುವ ಅರಮನೆಯಲ್ಲಿ ಒಂದು ರಾತ್ರಿ ಸುಖವಾಗಿ ತಂಗಿದ್ದು, ನಾಳೆಯೇ ನೀನು ಕುದುರೆಯ ಜೊತೆಯಲ್ಲಿ ಪ್ರಯಾಣ

ಮಾಡಬಹುದಾಗಿದೆ.
ವೈಶಂಪಾಯನಃ
ಇತ್ಯುಕ್ತಃ ಸ ತು ಪುತ್ರೇಣ ತದಾ ವಾನರಕೇತನಃ |
ಹಸನ್ ಪ್ರೋವಾಚ ಕೌಂತೇಯಸ್ತದಾ ಚಿತ್ರಾಂಗದಾಸುತಮ್ ॥32॥
ವೈಶಂಪಾಯನ ಜನಮೇಜಯನೇ, ಕಪಿಧ್ವಜನಾದ ಅರ್ಜುನನಿಗೆ ಬಭ್ರುವಾಹನನು ಹೀಗೆ ಹೇಳುತ್ತಿರಲು, ಕೌಂತೇಯನು ಮಂದಹಾಸ ಬೀರುತ್ತಾ ಚಿತ್ರಾಂಗದೆಯ ಮಗನಿಗೆ ಇಂತು ನುಡಿದನು.
ಅರ್ಜುನಃ
ವಿದಿತಂ ತೇ ಮಹಾಬಾಹೋ ಯಥಾ ದೀಕ್ಷಾಂ ಚರಾಮ್ಯಹಮ್ |
ನ ಹಿ ತಾವತ್ ಪ್ರವೇಕ್ಷ್ಯಾಮಿ ಪುರಂ ತೇ ಪೃಥುಲೋಚನ ॥33॥
ಅರ್ಜುನ ಮಹಾಬಾಹುವೇ, ನಾನು ಯಜ್ಞದೀಕ್ಷಿತನಾಗಿದ್ದೇನೆ. ಶಾಸ್ತ್ರೋಕ್ತ ನಿಯಮಗಳನ್ನು ಪಾಲಿಸುತ್ತಾ, ಯಜ್ಞಾಶ್ವದೊಡನೆ ಪ್ರತಿ ಊರುಗಳಿಗೆ ಸಾಗುತ್ತಿದ್ದೇನೆ ಎಂಬ ವಿಷಯವು ನಿನಗೆ ತಿಳಿದಿದೆ. ವಿಶಾಲಾಕ್ಷನೇ, ನನ್ನ ದೀಕ್ಷೆಯು ಪೂರ್ಣವಾಗುವ ತನಕ ನಿನ್ನ ಪಟ್ಟಣವನ್ನು ನಾನು ಪ್ರವೇಶಿಸುವುದಿಲ್ಲ.
ಯಥಾಕಾಮಂ ಪ್ರಯಾತ್ಯೇಷ ಯಾಜ್ಞಿಯಶ್ಚ ತುರಂಗಮಃ |
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ನ ಸ್ಥಾನಂ ವಿದ್ಯತೇ ಮಮ ॥34॥
ಈ ಯಜ್ಞದ ಕುದುರೆಯು ಸ್ವೇಚ್ಛೆಯಿಂದ ಸಾಗುತ್ತಿರುತ್ತದೆ. ಅದರ ಹಿಂದೆ ನಾನು ಹೋಗುತ್ತಿರಬೇಕೇ ವಿನಾ ಯಾವುದೇ ಕಾರಣದಿಂದಲೂ ಅದರ ಗಮನವನ್ನು ನಿರ್ಬಂಧಿಸುವಂತಿಲ್ಲ. ಆದ್ದರಿಂದ ನನಗೆ ನಿರ್ದಿಷ್ಟವಾದ ಸ್ಥಾನವಿಲ್ಲ. ನಿನಗೆ ಮಂಗಳವಾಗಲಿ. ಹೋಗಿ ಬರುತ್ತೇನೆ.
ವೈಶಂಪಾಯನಃ
ಸ ತತ್ರ ವಿಧಿವತ್ ತೇನ ಪೂಜಿತಃ ಪಾಕಶಾಸನಿಃ |
ಭಾರ್ಯಾಭ್ಯಾಮಭ್ಯನುಜ್ಞಾತಃ ಪ್ರಾಯಾದ್ ಭರತಸತ್ತಮಃ ॥35॥
ವೈಶಂಪಾಯನ ಜನಮೇಜಯನೇ, ಅರ್ಜುನನು ಹೀಗೆ ಹೇಳುತ್ತಿರಲು ಬಭ್ರುವಾಹನನು ತನ್ನ ತಂದೆಯನ್ನು ವಿಧಿವತ್ತಾಗಿ ಪೂಜಿಸಿದನು. ಬಳಿಕ ಅರ್ಜುನನ ಭಾರ್ಯೆಯರಾದ ಉಲೂಪಿ-ಚಿತ್ರಾಂಗದೆಯರ ಅನುಮತಿಯನ್ನು ಪಡೆದು ಅರ್ಜುನನು ಯಜ್ಞಾಶ್ವವನ್ನು ಅನುಸರಿಸಿ ಪ್ರಯಾಣ ಬೆಳೆಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಭರಣೇ ಅರ್ಜುನಸತ್ಕಾರೋ ನಾಮ ತ್ರ್ಯಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ನಾಲ್ಕನೆಯ ಅಧ್ಯಾಯ
ಅರ್ಜುನನು ಯಜ್ಞಾಶ್ವವನ್ನು ಅನುಸರಿಸಿಕೊಂಡು ಮಗಧದೇಶಕ್ಕೆ ಬಂದಿದುದು. ಜರಾಸಂಧನ ಮೊಮ್ಮಗನಾದ ಮೇಘಸಂಧಿಯನ್ನು ಪರಾಜಯಗೊಳಿಸಿ ಮ್ಲೇಚ್ಛರನ್ನೂ ಸೋಲಿಸಿದುದು.
ವೈಶಂಪಾಯನಃ
ಸ ತು ವಾಜೀ ಸಮುದ್ರಾಂತಾಮ್ ಅಭ್ಯೇತ್ಯ ಪೃಥಿವೀಮಿಮಾಮ್ |
ನಿವೃತ್ತೋಽಭಿಮುಖೋ ರಾಜನ್ ಯೇನ ನಾಗಾಹ್ವಯಂ ಪುರಮ್ ॥1॥
ವೈಶಂಪಾಯನ ಬಳಿಕ ಆ ಯಜ್ಞಾಶ್ವವು ಸಮುದ್ರಪುರಿಯಿಂದ ವ್ಯಾಪಿಸಿರುವ ಭೂಮಂಡಲದ ಎಲ್ಲ ಕಡೆಯೂ ಸಂಚರಿಸಿ ನಂತರ ಹಸ್ತಿನಾಪುರಕ್ಕೆ ಅಭಿಮುಖವಾಗಿ ಹೊರಟಿತು.
ಅನುಗಚ್ಛನ್ ಸ ತೇಜಸ್ವೀ ನಿವೃತ್ತೋಽಥ ಕಿರೀಟಧೃಕ್ |
ಯದೃಚ್ಛಯಾ ಸಮಾಪೇದೇ ಪುರಂ ರಾಜಗೃಹಂ ತದಾ ॥2॥
ಕಿರೀಟವನ್ನು ಧರಿಸಿದ ಅರ್ಜುನನು ಯಜ್ಞಾಶ್ವವನ್ನು ಅನುಸರಿಸಿಕೊಂಡು ಹರಿಸಂಕಲ್ಪದಂತೆ ಬರುತ್ತಿರುವಾಗ ಕುದುರೆಯು ರಾಜಗೃಹ ಎಂಬ ಪಟ್ಟಣವನ್ನು ಪ್ರವೇಶಿಸಿತು.
ತಮಭ್ಯಾಶಗತಂ ರಾಜಾ ಜರಾಸಂಧಾತ್ಮಜಾತ್ಮಜಃ |
ಕ್ಷತ್ರಧರ್ಮೇ ಸ್ಥಿತೋ ವೀರಃ ಸಮರಾಯಾಜುಹಾವ ಹ ॥3॥
ಕ್ಷತ್ರಧರ್ಮಪರಿಪಾಲಕನಾದ, ಸಹದೇವನ ಮಗನಾದ, ವೀರನಾದ ಮೇಘಸಂಧಿಯು ಯಜ್ಞಾಶ್ವವು ತನ್ನ ಪುರಕ್ಕೆ ಆಗಮಿಸಿದ್ದನ್ನು ಕಂಡು ಅರ್ಜುನನನ್ನು ಯುದ್ಧಕ್ಕೆ ಕರೆದನು.
ತತಃ ಪುರಾತ್ ಸ ನಿಷ್ಕ್ರಮ್ಯ ರಥೀ ಧನ್ವೀ ತಲೀ ಶರೀ |
ಮೇಘಸಂಧಿಃ ಪದಾತಿಂ ತಂ ಧನಂಜಯಮುಪಾದ್ರವತ್ ॥4॥
ಮೇಘಸಂಧಿಯು ಧನುರ್ಬಾಣಗಳನ್ನು, ಬತ್ತಳಿಕೆಯನ್ನು ತೆಗೆದುಕೊಂಡು, ರಥವನ್ನೇರಿ ಪಟ್ಟಣದಿಂದ ಹೊರಬಂದು, ಪದಾತಿಯಾಗಿದ್ದ ಅರ್ಜುನನನ್ನು ಆಕ್ರಮಿಸಿದನು.
ಆಸಾದ್ಯ ತು ಮಹಾತೇಜಾ ಮೇಘಸಂಧಿರ್ಧನಂಜಯಮ್ |
ಬಾಲಭಾವಾನ್ಮಹಾರಾಜ ಪ್ರೋವಾಚೇದಂ ನ ಕೌಶಲಾತ್ ॥5॥
ಮಹಾತೇಜಸ್ವಿಯಾದ ಮೇಘಸಂಧಿಯು ಚಾಪಲ್ಯದಿಂದ ಅರ್ಜುನನ ಹತ್ತಿರಕ್ಕೆ ಬಂದು ಇಂತು ನುಡಿದನು. ಆ ಮಾತುಗಳಲ್ಲಿ ಕುಶಲತೆ

ಇರಲಿಲ್ಲ.
ಮೇಘಸಂಧಿಃ
ಕಿಮಯಂ ಚಾರ್ಯತೇ ವಾಜೀ ಸ್ತ್ರೀಮಧ್ಯ ಇವ ಕೌರವ |
ಹಯಮೇನಂ ಹರಿಷ್ಯಾಮಿ ಪ್ರಯತಸ್ವ ವಿಮೋಕ್ಷಣೇ ॥6॥
ಮೇಘಸಂಧಿ ಭರತವಂಶಜನೇ, ಇಲ್ಲಿಯ ತನಕ ನೀನು ಕುದುರೆಯನ್ನು ಹೆಂಗಸರ ಊರುಗಳಲ್ಲಿ ನಡೆಸಿಕೊಂಡು ಬಂದಿದ್ದಿ ಎಂದು ಭಾವಿಸುತ್ತೇನೆ. ಪುರುಷ ಶ್ರೇಷ್ಠನಾದ ನಾನು ನಿನ್ನ ಕುದುರೆಯನ್ನು ಕಟ್ಟಿಹಾಕುತ್ತೇನೆ. ಸಾಮರ್ಥ್ಯವಿದ್ದರೆ ಪ್ರಯತ್ನ ಪೂರ್ವಕವಾಗಿ ಬಿಡಿಸಿಕೊ.
ಆತಿರ್ಥ್ಯ ನನು ಪುರಾ ಯುದ್ಧೇ ಯದಿ ತ್ವಂ ಭ್ರಾತೃಭಿಃ ಸಹ |
ಕರಿಷ್ಯಾಮಿ ತವಾತಿಥ್ಯಂ ಪ್ರಹರ ಪ್ರಹರಾಮಿ ಚ ॥7॥
ಹಿಂದೆ ನನ್ನ ತಂದೆಯೇ ಮೊದಲಾದ ಪೂರ್ವಜನರು ಯುದ್ಧದಲ್ಲಿ ನಿನಗೆ ಸ್ವಾಗತಾದಿಗಳನ್ನು ನೀಡಿರಬಹುದು. ಅವರು ನಿನ್ನಿಂದ ದುಃಖಿತರಾಗಿರಬಹುದು. ಆದರೆ ಇಂದು ನಾನು ಹಾಗಲ್ಲ. ನಿನ್ನನ್ನು ಬಾಣಗಳಿಂದಲೇ ಆತಿಥ್ಯವನ್ನು ಮಾಡಿ ಸತ್ಕರಿಸುತ್ತೇನೆ. ಸಾಮರ್ಥ್ಯವಿದ್ದರೆ ನನ್ನನ್ನು ಎದುರಿಸು.
ವೈಶಂಪಾಯನಃ
ಇತ್ಯುಕ್ತಃ ಪ್ರತ್ಯುವಾಚೇದಂ ಪಾಂಡವಃ ಪ್ರಹಸನ್ನಿವ ॥8॥
ವೈಶಂಪಾಯನ ಜನಮೇಜಯನೇ, ಮೇಘಸಂಧಿಯು ಉದ್ಧಟತನದಿಂದ ಇಂತು ನುಡಿಯಲು ಅರ್ಜುನನು ಮಂದಹಾಸ ಬೀರುತ್ತಾ ಇಂತು ನುಡಿದನು.
ಅರ್ಜುನಃ
ವಿಘ್ನಕರ್ತಾ ಮಯಾ ವಾರ್ಯ ಇತಿ ಮೇ ವ್ರತಮಾಹಿತಮ್ |
ಭ್ರಾತ್ರಾ ಜ್ಯೇಷ್ಠೇನ ನೃಪತೇ ತವಾಪಿ ವಿದಿತಂ ಧ್ರುವಮ್ ॥9॥
ಪ್ರಹರಸ್ವ ಯಥಾಶಕ್ತಿ ನ ಮನ್ಯುರ್ವಿದ್ಯತೇ ಮಮ ॥10॥
ಅರ್ಜುನ ನರೇಶ್ವರನೇ, ನನ್ನ ಜ್ಯೇಷ್ಠ ಸಹೋದರರನಾದ ಧರ್ಮರಾಜನು ಯಜ್ಞಾಶ್ವಕ್ಕೆ ವಿಘ್ನವನ್ನುಂಟು ಮಾಡಿದವರನ್ನು ನಿವಾರಿಸುವಂತೆ ದೀಕ್ಷೆಯನ್ನು ಕೊಟ್ಟಿರುತ್ತಾನೆ. ಈ ವಿಷಯವು ನಿನಗೆ ತಿಳಿದೇ ಇದೆ. ಆದ್ದರಿಂದ ನಿನ್ನಲ್ಲಿ ಶಕ್ತಿ ಇರುವಷ್ಟು ನನ್ನನ್ನು ಪ್ರಹರಿಸು. ನಿನ್ನ ಮೇಲೆ ಯಾವ ಸಿಟ್ಟೂ ನನಗೆ ಬರುವುದಿಲ್ಲ. ಇದಕ್ಕಾಗಿಯೇ ನನ್ನನ್ನು ಕಳುಹಿಸಿರುತ್ತಾನೆ.
ವೈಶಂಪಾಯನಃ
ಇತ್ಯುಕ್ತಃ ಪ್ರಾಹರತ್ ಪೂರ್ವಂ ಪಾಂಡವಂ ಮಗಧೇಶ್ವರಃ |
ಕಿರನ್ ಶರಸಹಸ್ರಾಣಿ ವರ್ಷಾಣೀವ ಸಹಸ್ರದೃಕ್ ॥11॥
ವೈಶಂಪಾಯನ ಜನಮೇಜಯನೇ, ಅರ್ಜುನನು ಹೀಗೆ ಹೇಳುತ್ತಿರುವಾಗಲೇ ಮಗಧೇಶ್ವರನಾದ ಮೇಘಸಂಧಿಯು ಇಂದ್ರನು ಮಳೆಗರೆಯುವಂತೆ ಸಾವಿರಾರು ಬಾಣಗಳನ್ನು ಅರ್ಜುನನ ಮೇಲೆ ಸುರಿಸಿದನು.
ತತೋ ಗಾಂಡೀವಭೃತ್ ಶೂರೋ ಗಾಂಡೀವಪ್ರೇರಿತೈಃ ಶರೈಃ |
ಚಕಾರ ಬಾಣಾಂಸ್ತಾನ್ ಮೋಘಾನ್ ಅಯತ್ನಾದ್ ಭರತರ್ಷಭ ॥12॥
ಪ್ರತಿಯಾಗಿ ಆ ಕ್ಷಣದಲ್ಲಿಯೇ ಶೂರನಾದ ಗಾಂಡೀವಿಯು ಮೇಘಸಂಧಿಯು ಪ್ರಯತ್ನಪೂರ್ವಕವಾಗಿ ಬಿಡುತ್ತಿದ್ದ ನೂರಾರು ಬಾಣಗಳನ್ನು ತನ್ನ ಗಾಂಡೀವ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ವ್ಯರ್ಥಗೊಳಿಸಿದನು.
ಸ ಮೋಘಂ ತಸ್ಯ ಬಾಣೌಘಂ ಕೃತ್ವಾ ವಾನರಕೇತನಃ |
ಶರಾನ್ ಮುಮೋಚ ಜ್ವಲಿತಾನ್ ದೀಪ್ತಾಸ್ಯಾನಿವ ಪನ್ನಗಾನ್ ॥13॥
ಮಗಧೇಶ್ವರನ ಬಾಣಗಳನ್ನು ಕಪಿಧ್ವಜನಾದ ಅರ್ಜುನನು ವ್ಯರ್ಥಗೊಳಿಸಿದ್ದು ಮಾತ್ರವಲ್ಲದೆ ಬೆಳಗುತ್ತಿರುವ ಮುಖಗಳುಳ್ಳ ಸರ್ಪಗಳಂತೆ ಶೋಭಿಸುತ್ತಿರುವ ಜಾಜ್ವಲ್ಯಮಾನವಾದ ಬಾಣಗಳನ್ನು ಮೇಘಸಂಧಿಯ ಮೇಲೆ ಪ್ರಯೋಗಿಸಿದನು.
ರಥೇ ಪತಾಕಾದಂಡೇ ಚ ರಥಯಂತ್ರಹಯೇಷು ಚ |
ಅನ್ಯೇಷು ಚ ಹಯಾಂಗೇಷು ನ ಶರೀರೇ ನ ಸಾರಥೌ ॥14॥
ಮೇಘಸಂಧಿಯ ಧ್ವಜ, ಪತಾಕೆ, ದಂಡ, ಯಂತ್ರ, ಕುದುರೆಗಳು, ರಥಾಂಗಗಳು ಎಲ್ಲದರ ಮೇಲೆಯೂ ಬಾಣಗಳನ್ನು ಪ್ರಯೋಗಿಸಿದನು. ಆದರೆ ಮೇಘಸಂಧಿಯ ಮೇಲಾಗಲಿ, ಅವನ ಸಾರಥಿಯ ಮೇಲಾಗಲಿ ಬಾಣಗಳನ್ನು ಪ್ರಯೋಗಿಸಲಿಲ್ಲ.
ಸಂರಕ್ಷ್ಯಮಾಣಃ ಪಾರ್ಥೇನ ಶರೀರೇ ಫಲ್ಗುನಸ್ಯ ಹ |
ಮನ್ಯಮಾನಃ ಸ್ವವೀರ್ಯಂ ತಂ ಮಾಗಧಃ ಪ್ರಾಹಿಣೋಚ್ಛರಾನ್ ॥15॥
ಅರ್ಜುನನು ಎದುರಾಳಿಯಾದ ಮೇಘಸಂಧಿಗೆ ಪೀಡೆಯಾಗದಂತೆ ಅಣ್ಣನ ಮಾತಿಗೆ ಬೆಲೆಕೊಟ್ಟು ಯುದ್ಧ ಮಾಡುತ್ತಿರುವಾಗ, ಮೇಘಸಂಧಿಯು ನನ್ನ ಪರಾಕ್ರಮಕ್ಕೆ ಅರ್ಜುನನು ಸೋತು ಹೀಗೆ ನಡೆದುಕೊಳ್ಳುತ್ತಿದ್ದಾನೆ ಎಂದು ಭಾವಿಸಿದನು. ತನ್ನ ಪರಾಕ್ರಮದಿಂದಲೇ ತನ್ನನ್ನು ರಕ್ಷಿಸಿಕೊಳ್ಳುತ್ತಿದ್ದೇನೆಂದು ತಪ್ಪಾಗಿ ಅರ್ಜುನನ ಪರಾಕ್ರಮವನ್ನು ತಿಳಿದನು.
ತತೋ ಗಾಂಡೀವಭೃಚ್ಛೂರೋ ಮಾಗಧೇನ ಭೃಶಾರ್ದಿತಃ |
ಬಭೌ ವಾಸಂತಿಕ ಇವ ಪಲಾಶಃ ಪುಷ್ಪಿತೋ ಮಹಾನ್ ॥16॥
ಬಳಿಕ ಅವ್ಯಾಹತವಾಗಿ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಮಾಗಧನ ಬಾಣಗಳಿಂದ ಬಹಳಷ್ಟು ಗಾಯಗೊಂಡು ರಕ್ತಸಿಕ್ತನಾದ ಅರ್ಜುನನು ವಸಂತ ಋತುವಿನಲ್ಲಿ ಹೂವನ್ನು ಬಿಡುವ ಮುತ್ತುಗದ ಮರದಂತೆ ಬೆಳಗುತ್ತಿದ್ದನು.
ಅವಧ್ಯಮಾನಃ ಸೋಽಭ್ಯಘ್ನನ್ ಮಾಗಧಃ ಪಾಂಡವರ್ಷಭಮ್ |

ತೇನ ತಸ್ಥೌ ಸ ಕೌರವ್ಯ ಲೋಕವೀರಸ್ಯ ದರ್ಶನೇ ॥17॥
ಅರ್ಜುನನು ಧರ್ಮರಾಜನು ಹೇಳಿದಂತೆ ಮೇಘಸಂಧಿಯನ್ನು ಬಾಣಗಳಿಂದ ಹೊಡೆಯಲಿಲ್ಲ. ಮೇಘಸಂಧಿಯು ಅರ್ಜುನನನ್ನು ಹರಿತವಾದ ಬಾಣಗಳಿಂದ ಹೊಡೆಯದೆ ಇರಲಿಲ್ಲ. ಆದ್ದರಿಂದಲೇ ಲೋಕವೀರನಾದ ಅರ್ಜುನನ ಮುಂದೆ ಮೇಘಸಂಧಿಯು ಅಷ್ಟು ಹೊತ್ತು ನಿಲ್ಲಲು ಸಾಧ್ಯವಾಯಿತು.
ಸವ್ಯಸಾಚೀ ತು ಸಂಕ್ರುದ್ಧೋ ವಿಕೃಷ್ಯ ಬಲವದ್ಧನುಃ |
ಹಯಾಂಶ್ಚಕಾರ ನಿರ್ದೇಹಾನ್ ಸಾರಥೇಶ್ಚ ಶಿರೋಽಹರತ್ ॥18॥
ಸವ್ಯಸಾಚಿಯಾದ ಅರ್ಜುನನು ಕಾಲಕ್ರಮದಲ್ಲಿ ಕುಪಿತನಾಗಿ ಧನುಸ್ಸನ್ನು ಬಲವಾಗಿ ಸೆಳೆದು, ಬಾಣಗಳನ್ನು ವೇಗವಾಗಿ ಬಿಡುತ್ತಾ, ಮೇಘಸಂಧಿಯ ಕುದುರೆಗಳನ್ನೂ, ಸಾರಥಿಯನ್ನೂ ಕ್ಷಣಮಾತ್ರದಲ್ಲಿ ಸಂಹರಿಸಿದನು.
ಧನುಶ್ಚಾಸ್ಯ ಮಹಚ್ಚಿತ್ರಂ ಕ್ಷುರೇಣ ವಿಚಕರ್ತ ಹ |
ಹಸ್ತಾವಾಪಂ ಪತಾಕಾಂ ಚ ಧ್ವಜಂ ಚಾಸ್ಯ ನ್ಯಪಾತಯತ್ ॥19॥
ಮತ್ತೊಮ್ಮೆ ಮೇಘಸಂಧಿಯ ವಿಚಿತ್ರವಾದ ದೊಡ್ಡ ಧನುಸ್ಸನ್ನು ಕ್ಷುರದಿಂದ ಕತ್ತರಿಸಿದನು. ಅವನ ಕೈಚೀಲ, ಪತಾಕೆ, ಧ್ವಜಗಳೆಲ್ಲವೂ ಅರ್ಜುನನ ಬಾಣ ಪ್ರಹಾರದಿಂದ ಧರೆಗುರುಳಿದವು.
ಸ ರಾಜಾ ವ್ಯಥಿತೋ ವ್ಯಶ್ವೋ ವಿಧನುಷ್ಕೋ ವಿಸಾರಥಿಃ |
ಗದಾಮಾದಾಯ ಕೌಂತೇಯಮಭಿದುದ್ರಾವ ವೇಗವಾನ್ ॥20॥
ಕುದುರೆ, ಸಾರಥಿ, ಧನುಸ್ಸಿನಿಂದ ವಿಹೀನನಾದ ಮೇಘಸಂಧಿಯು ದುಃಖಿತನಾದನು. ಆದರೂ ಕ್ಷತ್ರಧರ್ಮವನ್ನು ಪರಿಪಾಲಿಸುತ್ತಾ ಗದೆಯನ್ನೆತ್ತಿಕೊಂಡು ಧೈರ್ಯದಿಂದ ಅರ್ಜುನನ ಕಡೆ ಧಾವಿಸಿದನು.
ತಸ್ಯಾಪತತ ಏವಾಶು ಗದಾಂ ಹೇಮಪರಿಷ್ಕೃತಾಮ್ |
ಶರೈಶ್ಚಕರ್ತ ನಿಶಿತೈರ್ಬಹುಭಿರ್ಗೃಧ್ರವಾಜಿತೈಃ ॥21॥
ಮೇಘಸಂಧಿಯು ಎಷ್ಟು ವೇಗವಾಗಿ ಅರ್ಜುನನ ಬಳಿ ಧಾವಿಸಿ ಬಂದನೋ ಅಷ್ಟೇ ವೇಗವಾಗಿ ಅವನ ಕೈಯಲ್ಲಿದ್ದ ಗದೆಯು ಕೆಳಗೆ ಜಾರಿತು. ಅರ್ಜುನನು ರಣಹದ್ದಿನ ರೆಕ್ಕೆಗಳಿಂದ ಶೋಭಿಸುತ್ತಿರುವ, ಸುವರ್ಣಭೂಷಿತವಾದ ಗದೆಯನ್ನು ನುಚ್ಚುನೂರು ಮಾಡಿದನು.
ಸಾ ಗದಾ ಶಕಲೀಭೂತಾ ವಿಕೀರ್ಣಮಣಿಬಂಧನಾ |
ವ್ಯಾಲೀ ನಿರ್ಮುಚ್ಯಮಾನೇವ ಪಪಾತ ಧರಣೀಂ ಪ್ರತಿ ॥22॥
ಗದೆಯಲ್ಲಿದ್ದ ಮಣಿಕಟ್ಟು ಚೆಲ್ಲಾಪಿಲ್ಲಿಯಾಯಿತು. ಗದೆಯೂ ನುಚ್ಚುನೂರಾಯಿತು. ಮುಷ್ಟಿಯಿಂದ ಬಿಡಲ್ಪಟ್ಟ ಆ ಗದೆಯು ಸರ್ಪವು ಪೊರೆಯನ್ನು ಬಿಡುವಂತೆ ನೆಲದ ಮೇಲೆ ಬಿದ್ದುಹೋಯಿತು.
ವಿರಥಂ ತಂ ವಿಧನುಷಂ ಗದಯಾ ಪರಿವರ್ಜಿತಮ್ |
ನೈಚ್ಛತ್ ತಾಡಯಿತುಂ ಧೀಮಾನ್ ಅರ್ಜುನಃ ಸಮರಾಗ್ರಣೀಃ ॥23॥
ರಥ, ಧನುಸ್ಸು, ಗದೆಯಿಂದ ವಿಹೀನನಾದ ಮಾಗಧನನ್ನು ಬುದ್ಧಿವಂತನಾದ, ಸಮರಕುಶಲಿಯಾದ ಅರ್ಜುನನು ಹೊಡೆಯಲು ಬಯಸಲಿಲ್ಲ.
ತತ ಏನಂ ವಿಮನಸಂ ಕ್ಷತ್ರಧರ್ಮಂ ಸಮಾಸ್ಥಿತಮ್ |
ಸಾಂತ್ವಪೂರ್ವಮಿದಂ ವಾಕ್ಯಮಬ್ರವೀತ್ ಕಪಿಕೇತನಃ ॥24॥
ದುಃಖಿತವಾದ ಮನಸ್ಸಿನಿಂದ ಕೂಡಿರುವ, ಕ್ಷತ್ರಧರ್ಮವನ್ನು ರಕ್ಷಿಸಲಾರದೆ ದುಃಖಿಸುತ್ತಿರುವ ಮೇಘಸಂಧಿಯನ್ನು ಕುರಿತು ಕಪಿಧ್ವಜನಾದ ಅರ್ಜುನನು ಸಾಂತ್ವನದ ನುಡಿಗಳನ್ನು ಇಂತು ಹೇಳಿದನು.
ಅರ್ಜುನಃ
ಪರ್ಯಾಪ್ತಃ ಕ್ಷತ್ರಧರ್ಮೋಽಯಂ ದರ್ಶಿತಃ ಪುತ್ರ ಗಮ್ಯತಾಮ್ |
ಬಹ್ವೇತತ್ ಸಮರೇ ಕರ್ಮ ತವ ಬಾಲಸ್ಯ ಪಾರ್ಥಿವ ॥25॥
ಅರ್ಜುನ ಸಾಕಷ್ಟು ಕ್ಷತ್ರಧರ್ಮವನ್ನು ಅನುಸರಿಸಿರುತ್ತಿ. ಮಗನೇ ಇನ್ನು ನಿನ್ನ ಪಟ್ಟಣಕ್ಕೆ ಹಿಂತಿರುಗು. ನೀನಿನ್ನು ಬಾಲಕ. ಸಾಕಷ್ಟು ಸಮರಕರ್ಮಗಳಲ್ಲಿ ಬಳಲಿರುವಿ.
ಯುಧಿಷ್ಠಿರಸ್ಯ ಸಂದೇಶೋ ನ ಹಂತವ್ಯಾ ನೃಪಾ ಇತಿ |
ತೇನ ಜೀವಸಿ ರಾಜಂಸ್ತ್ವಮಪರಾದ್ಧೋಽಪಿ ಮೇ ರಣೇ ॥26॥
ಎದುರಿಗೆ ಬಂದಿರುವ ರಾಜರನ್ನು ಯಾವುದೇ ಕಾರಣದಿಂದ ಸಂಹರಿಸ- ಬಾರದೆಂದು ಯುಧಿಷ್ಠಿರನು ಆದೇಶ ನೀಡಿದ್ದಾನೆ. ಈ ಕಾರಣದಿಂದ ನೀನು ಅಪರಾಧ ಮಾಡಿದರೂ ಜೀವಿಸಲು ಸಾಧ್ಯವಾಗಿದೆ.
ವೈಶಂಪಾಯನಃ
ಇತಿ ಮತ್ವಾ ಸ ಚಾತ್ಮಾನಂ ಪ್ರತ್ಯಾದಿಷ್ಟಃ ಸ ಮಾಗಧಃ |
ತಥ್ಯಮಿತ್ಯಭಿಗಮ್ಯೈನಂ ಪ್ರಾಂಜಲಿಃ ಪ್ರತ್ಯಪೂಜಯತ್ ॥27॥
ವೈಶಂಪಾಯನ ಜನಮೇಜಯನೇ, ಅರ್ಜುನನ ಈ ಮಾತನ್ನು ಕೇಳಿಸಿಕೊಂಡ ಮೇಘಸಂಧಿಯು ಯುದ್ಧದಲ್ಲಿ ಅರ್ಜುನನಿಂದ ನಾನು ಸೋತಿದ್ದೇನೆಂದು ತಿಳಿದು, ಅವನ ಮಾತನ್ನು ಸತ್ಯವೆಂದು ಭಾವಿಸಿ, ಅರ್ಜುನನ ಬಳಿ ಕರಜೋಡಿಸಿ ಇಂತು ಪ್ರಾರ್ಥಿಸಿದನು.
ತಮರ್ಜುನಃ ಸಮಾಶ್ವಾಸ್ಯ ಪುನರೇವೇದಮಬ್ರವೀತ್ ॥28॥
ಅರ್ಜುನನೇ ನಿನಗೆ ಮಂಗಳವಾಗಲಿ. ನಿನ್ನಿಂದ ಸೋತಿದ್ದೇನೆ ಎಂದು ಹೇಳಿದಾಗ ಅರ್ಜುನನು ಅವನನ್ನು ಇಂತು ಸಂತೈಸಿದನು.
ಅರ್ಜುನಃ
ಆಗಂತವ್ಯಂ ಪರಾಂ ಚೈತ್ರೀಮಶ್ವಮೇಧೇ ನೃಪಸ್ಯ ನಃ ॥29॥

ಅರ್ಜುನ ನರೇಶ್ವರನೇ, ಮುಂದಿನ ಚೈತ್ರ ಹುಣ್ಣಿಮೆಯಿಂದ ಪ್ರಾರಂಭವಾಗುವ ನಮ್ಮ ಅಶ್ವಮೇಧ ಯಾಗಕ್ಕೆ ನೀನು ಆಗಮಿಸಬೇಕು.
ವೈಶಂಪಾಯನಃ
ಇತ್ಯುಕ್ತಃ ಸ ತಥೇತ್ಯುಕ್ತ್ವಾ ಪೂಜಯಾಮಾಸ ತಂ ಹಯಮ್ |
ಫಲ್ಗುನಂ ಚ ಯುಧಿ ಶ್ರೇಷ್ಠಂ ವಿಧಿವತ್ ಸಹದೇವಜಃ ॥30॥
ವೈಶಂಪಾಯನ ಅರ್ಜುನನು ಹೀಗೆ ಹೇಳಲು ಮೇಘಸಂಧಿಯು ಹಾಗೆಯೇ ಆಗಲೆಂದು ಹೇಳಿ, ಯುದ್ಧವೀರನಾದ ಅರ್ಜುನನನ್ನೂ, ಯಜ್ಞದ ಕುದುರೆಯನ್ನು ವಿಧಿವತ್ತಾಗಿ ಪೂಜಿಸಿದನು.
ತತೋ ಯಥೇಷ್ಟಮಗಮತ್ ಪುನರೇವ ಸ ಕೌರವಃ |
ತತಃ ಸಮುದ್ರತೀರೇಣ ವಂಗಾನ್ ಪುಂಡ್ರಾನ್ ಸಕೇರಲಾನ್ ॥31॥
ಅನಂತರ ಆ ಕುದುರೆಯು ಪುನಃ ಯಥೇಷ್ಟವಾಗಿ ಸಂಚರಿಸತೊಡಗಿತು. ಸಮುದ್ರ ತೀರದಲ್ಲಿ ಹೋಗುತ್ತಿದ್ದ ಆ ಕುದುರೆಯು ವಂಗ, ಪುಂಡ್ರ, ದೇಶಗಳನ್ನು, ಕೇರಳ ದೇಶಗಳೆಲ್ಲವನ್ನೂ ಕುರಿತು ಹೋಯಿತು.
ತತ್ರ ತತ್ರ ಚ ಭೂರೀಣಿ ಮ್ಲೇಚ್ಛಸೈನ್ಯಾನ್ಯನೇಕಶಃ |
ವಿಜಿಗ್ಯೇ ಧನುಷಾ ರಾಜನ್ ಗಾಂಡೀವೇನ ಧನಂಜಯಃ ॥32॥
ಆಯಾ ದೇಶಗಳಲ್ಲಿ ಅನೇಕ ಸಂಖ್ಯೆಯ ಮ್ಲೇಚ್ಛ ಸೈನ್ಯವು ತುಂಬಿದ್ದವು. ಅರ್ಜುನನು ಆ ಎಲ್ಲ ಮ್ಲೇಚ್ಛ ಸೈನಿಕರನ್ನು ತನ್ನ ಗಾಂಡೀವ ಧನುಸ್ಸಿನಿಂದ ಗೆದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಚರಣೇ ಮಾಗಧಯುದ್ಧಂ ನಾಮ ಚತುರಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೈದನೆಯ ಅಧ್ಯಾಯ
ಕುದುರೆಯು ದಕ್ಷಿಣ ಮತ್ತು ಪಶ್ಚಿಮ ಸಮುದ್ರಗಳ ತೀರದಲ್ಲಿ ಸಂಚರಿಸುತ್ತಾ ಚೇದಿ ದೇಶವನ್ನು ಪ್ರವೇಶಿಸಿದುದು. ಶಿಶುಪಾಲನ ಮಗನಿಂದ ಅರ್ಜುನನು ಪೂಜೆಯನ್ನು ಸ್ವೀಕರಿಸಿದುದು. ನಂತರ ಕಾಶೀ, ಕೋಸಲ ದೇಶಾಧಿಪತಿ ರಾಜರನ್ನು ಜಯಿಸಿ, ಗಾಂಧಾರದೇಶದ ಕಡೆ ನಡೆದುದು.
ವೈಶಂಪಾಯನಃ
ಮಾಗಧೇನಾರ್ಚಿತೋ ರಾಜನ್ ಪಾಂಡವಃ ಶ್ವೇತವಾಹನಃ |
ದಕ್ಷಿಣಾಂ ದಿಶಮಾಸ್ಥಾಯ ಚಾರಯಾಮಾಸ ತಂ ಹಯಮ್ ॥1॥
ವೈಶಂಪಾಯನ ಜನಮೇಜಯನೇ, ಮಗಧದೇಶದ ರಾಜನಾದ ಮೇಘಸಂಧಿಯಿಂದ ಸತ್ಕೃತನಾದ ಶ್ವೇತವಾಹನನಾದ ಅರ್ಜುನನು ದಕ್ಷಿಣ ದಿಕ್ಕಿನ ಕಡೆ ಕುದುರೆಯನ್ನು ನಡೆಸಿಕೊಂಡು ಹೊರಟನು.
ತತಃ ಸ ಪುನರಾವೃತ್ಯ ಹಯಃ ಕಾಮಚರೋ ಬಲೀ |
ಆಸಸಾದ ಪುರೀಂ ರಮ್ಯಾಂ ಚೇದೀನಾಂ ಶುಕ್ತಿಸಾಹ್ವಯಾಮ್ ॥2॥
ಸ್ವೇಚ್ಛೆಯಿಂದ ಸಂಚರಿಸುತ್ತಿದ್ದ ಬಲಿಷ್ಠವಾದ ಆ ಕುದುರೆಯು ಅಲ್ಲಿಂದ ಪುನಃ ಹಿಂದಿರುಗಿ ಚೇದಿ ದೇಶಿಯರ ಸುಂದರ ರಾಜಧಾನಿಯಾದ ಶುಕ್ತಿ ಎಂಬ ಹೆಸರಿನ (ಮಾಹೇಷ್ಮತಿ) ಪಟ್ಟಣವನ್ನು ಪ್ರವೇಶಿಸಿತು.
ಶರಭೇಣಾರ್ಚಿತಸ್ತತ್ರ ಶಿಶುಪಾಲಾತ್ಮಜೇನ ಸಃ |
ಯುದ್ಧಪೂರ್ವೇಣ ಮಾನೇನ ಪೂಜಯಾ ಚ ಮಹಾಬಲಃ ॥3॥
ಶಿಶುಪಾಲನ ಮಗನಾದ ಶರಭನು ಕ್ಷತ್ರಧರ್ಮಕ್ಕನುಗುಣವಾಗಿ ಯುದ್ಧ ಪೂರ್ವಕವಾಗಿಯೇ ಅರ್ಜುನನನ್ನು ಪೂಜಿಸಿದನು.
ತತೋಽರ್ಚಿತೋ ಯಯೌ ರಾಜನ್ ತದಾ ಸ ತುರಗೋತ್ತಮಃ |
ಕಾಶೀನ್ ಮದ್ರಾನ್ ಕೋಸಲಾಂಶ್ಚ ಕಿರಾತಾನಥ ತಂಕಣಾನ್ ॥4॥
ಜನಮೇಜಯನೇ, ಅವನಿಂದ ಅರ್ಚಿತವಾದ ಕುದುರೆಯು ಕಾಶೀ, ಕೋಸಲ, ಮದ್ರದೇಶ, ಕಿರಾತ, ತಂಕಣ ಮೊದಲಾದ ದೇಶಗಳನ್ನು ಕ್ರಮವಾಗಿ ಸಂಚರಿಸುತ್ತಾ ಹೋಯಿತು.
ತತ್ರ ಪೂಜಾಂ ಯಥಾನ್ಯಾಯಂ ಪ್ರತಿಗೃಹ್ಯ ಸ ಪಾಂಡವಃ |
ಪುನರಾಗತ್ಯ ಕೌಂತೇಯೋ ದಶಾರ್ಣಾನಚರತ್ ತದಾ ॥5॥
ಆ ಎಲ್ಲ ದೇಶಗಳಲ್ಲಿಯೂ ಪಾಂಡವನು ಯೋಗ್ಯವಾಗಿ ಸತ್ಕಾರವನ್ನು ಸ್ವೀಕರಿಸಿ ಪುನಃ ಹಿಂದಿರುಗಿ ಕುದುರೆಯನ್ನನುಸರಿಸಿಕೊಂಡು ದಾಶಾರ್ಣದೇಶಕ್ಕೆ ಆಗಮಿಸಿದನು.
ತತ್ರ ಚಿತ್ರಾಂಗದೋ ನಾಮ ಬಲವಾನ್ ವಸುಧಾಧಿಪಃ |
ತೇನ ಯುದ್ಧಮಭೂತ್ ತಸ್ಯ ವಿಜಯಸ್ಯಾತಿಭೈರವಮ್ ॥6॥
ಆ ದಾಶಾರ್ಣದೇಶದಲ್ಲಿ ಶತ್ರುಗಳನ್ನು ಸಂಹರಿಸಲು ಸಾಮರ್ಥ್ಯವನ್ನು ಹೊಂದಿರುವ ಚಿತ್ರಾಂಗದನೆಂಬ ರಾಜನಿದ್ದನು. ಅವನೊಡನೆ ಅರ್ಜುನನು ಭಯಂಕರವಾದ ಯುದ್ಧವನ್ನು ಮಾಡಿದನು.
ತಂ ಚಾಪಿ ವಶಮಾನೀಯ ಕಿರೀಟೀ ಪುರುಷರ್ಷಭಃ |
ನಿಷಾದರಾಜ್ಞೋ ವಿಷಯಮೇಕಲವ್ಯಸ್ಯ ಜಗ್ಮಿವಾನ್ ॥7॥
ಪುರುಷಶ್ರೇಷ್ಠನಾದ ಅರ್ಜುನನು ಚಿತ್ರಾಗಂದನನ್ನು ಜಯಿಸಿ, ಅವನನ್ನು ತನ್ನ ಸಾಮಂತನನ್ನಾಗಿ ಮಾಡಿಕೊಂಡು, ನಿಷಾದರಾಜನಾದ ಏಕಲವ್ಯನ ರಾಜ್ಯಕ್ಕೆ ಕುದುರೆಯನ್ನನುಸರಿಸಿ ಹೊರಟನು.

ಏಕಲವ್ಯಸುತಶ್ಚೈನಂ ಯುದ್ಧೇನ ಜಗೃಹೇ ತದಾ |
ತತ್ರ ಚಕ್ರೇ ನಿಷಾದೈಶ್ಚ ಸಂಗ್ರಾಮಂ ರೋಮಹರ್ಷಣಮ್ ॥8॥
ಏಕಲವ್ಯನ ಮಗನು ಅರ್ಜುನನನ್ನು ಯುದ್ಧದ ಮೂಲಕವಾಗಿಯೇ ಸ್ವಾಗತಿಸಿದನು. ನಿಷಾದರಿಗೂ ಅರ್ಜುನನಿಗೂ ರೋಮಾಂಚಕರವಾದ ಯುದ್ಧವು ಏರ್ಪಟ್ಟಿತು.
ತತಸ್ತಮಪಿ ಕೌಂತೇಯಃ ಸಮರೇಷ್ವಪರಾಜಿತಃ |
ಜಿಗಾಯ ಸಮರೇ ವೀರೋ ಯಜ್ಞವಿಘ್ನಾರ್ಥಮುದ್ಯತಮ್ ॥9॥
ಯುದ್ಧದಲ್ಲಿ ಎಂದೂ ಪರಾಜಿತನಾಗದಿರುವ, ಎದುರಿಸಲು ಅಸಾಧ್ಯನಾದ ಕೌಂತೇಯನು ಯಜ್ಞಕ್ಕೆ ವಿಘ್ನವನ್ನುಂಟು ಮಾಡುವ ಸಲುವಾಗಿ ಯುದ್ಧಕ್ಕೆ ಬಂದ ಏಕಲವ್ಯನ ಮಗನನ್ನು ಗೆದ್ದನು.
ಸ ತಂ ಜಿತ್ವಾ ಮಹಾರಾಜ ನೈಷಾದಿಂ ಪಾಕಶಾಸನಿಃ |
ಅರ್ಚಿತಃ ಪ್ರಯಯೌ ಭೂಯೋ ದಕ್ಷಿಣಂ ಸಲಿಲಾರ್ಣವಮ್ ॥10॥
ನಿಷಾದರಾಜನನ್ನು ಜಯಿಸಿದ ಬಳಿಕ ಇಂದ್ರನ ಮಗನಾದ ಅರ್ಜುನನು ಅವನಿಂದ ಸತ್ಕೃತನಾಗಿ ಕುದುರೆಯನ್ನನುಸರಿಸಿ ದಕ್ಷಿಣ ಸಮುದ್ರತೀರಪ್ರದೇಶಕ್ಕೆ ಹೊರಟನು.
ತತ್ರಾಪಿ ದ್ರವಿಳೈರಾಂಧ್ರೈ ರೌದ್ರೈರ್ಮಾಹಿಷಕೈರಪಿ |
ತಥಾ ಗೋಲ್ಲಗಿರೇಯೈಶ್ಚ ಯುದ್ಧಮಾಸೀತ್ ಕಿರೀಟಿನಃ ॥11॥
ಆ ದಕ್ಷಿಣ ದೇಶದಲ್ಲಿ ದ್ರಾವಿಡರು, ಆಂಧ್ರರು, ರೌದ್ರರು, ಮಾಹಿಷಕರು, ಗೊಲ್ಲಗಿರಿಯ ಪ್ರಾಂತದಲ್ಲಿರುವವರು ಅರ್ಜುನನೊಡನೆ ಯುದ್ಧ ಮಾಡಿದರು.
ತುರಗಸ್ಯ ವಶೇನಾಥ ಸುರಾಷ್ಟ್ರಾನಭಿತೋ ಯಯೌ ॥12॥
ಕುದುರೆಗೆ ಅಧೀನನಾಗಿದ್ದ ಅರ್ಜುನನು ಅದರ ಹಿಂದೆಯೇ ಸಾಗುತ್ತಾ ಸೌರಾಷ್ಟ್ರ ದೇಶಕ್ಕೆ ಹೊರಟನು.
ಗೋಕರ್ಣಮಥ ಚಾಸಾದ್ಯ ಪ್ರಭಾಸಮಪಿ ಜಗ್ಮಿವಾನ್ ॥13॥
ಅಲ್ಲಿಂದ ಮುಂದೆ ಗೋಕರ್ಣಕ್ಕೂ, ಪ್ರಭಾಸ ಕ್ಷೇತ್ರಕ್ಕೂ ಹೊರಟನು.
ತತೋ ದ್ವಾರವತೀಂ ರಮ್ಯಾಂ ವೃಷ್ಣಿವೀರಾಭಿರಕ್ಷಿತಾಮ್ |
ಆಸಸಾದ ಹಯಃ ಶ್ರೀಮಾನ್ ಕುರುರಾಜಸ್ಯ ಯಾಜ್ಞಿಯಃ ॥14॥
ಬಳಿಕ ಕುರುಶ್ರೇಷ್ಠನಾದ ಯುಧಿಷ್ಠಿರನ ಕಾಂತಿಯುಕ್ತವಾದ ಆ ಕುದುರೆಯು ವೃಷ್ಣಿವೀರರಿಂದ ಪರಿಪಾಲಿಸುತ್ತಿದ್ದ ರಮಣೀಯವಾದ ದ್ವಾರಕೆಗೆ ಹೊರಟಿತು.
ತಮುನ್ಮಥ್ಯ ಹಯಶ್ರೇಷ್ಠಂ ಯಾದವಾನಾಂ ಕುಮಾರಕಾಃ |
ಪ್ರಯಯುಸ್ತಾಂಸ್ತದಾ ರಾಜನ್ನುಗ್ರಸೇನೋ ನ್ಯವಾರಯತ್ ॥15॥
ಯಾದವಕುಮಾರರು ಆ ಶ್ರೇಷ್ಠವಾದ ಯಜ್ಞಾಶ್ವವನ್ನು ಬಲಾತ್ಕಾರವಾಗಿ ಬಂಧಿಸಿ ಅರ್ಜುನನ ಮೇಲೆ ಯುದ್ಧಕ್ಕೆ ಹೊರಟರು. ಆದರೆ ಉಗ್ರಸೇನನು ಯಾದವರಿಗೆ ಯುದ್ಧಕ್ಕೆ ಹೋಗದಿರುವಂತೆ ತಡೆದನು.
ತತಃ ಪುರಾದ್ ವಿನಿಷ್ಕ್ರಮ್ಯ ವೃಷ್ಣ್ಯಂಧಕಪತಿಸ್ತದಾ |
ಸಹಿತೋ ವಾಸುದೇವೇನ ಮಾತುಲೇನ ಕಿರೀಟಿನಾ ॥16॥
ನಂತರ ವೃಷ್ಣಿ ಮತ್ತು ಅಂಧಕರ ಪತಿಯಾದ ಉಗ್ರಸೇನನು ಅರ್ಜುನನ ಸೋದರ ಮಾವನಾದ ವಸುದೇವನನ್ನು ಜೊತೆಯಲ್ಲಿ ಕರೆದುಕೊಂಡು ಅರ್ಜುನನ ಬಳಿ ಬಂದನು.
ತೌ ಸಮೇತ್ಯ ನರಶ್ರೇಷ್ಠಂ ವಿಧಿವತ್ ಪ್ರೀತಿಪೂರ್ವಕಮ್ |
ಪರಯಾ ಭರತಶ್ರೇಷ್ಠ ಪೂಜಯಾ ಸಮವಸ್ಥಿತೌ ॥17॥
ತತಸ್ತಾಭ್ಯಾಮನುಜ್ಞಾತೋ ಯಯೌ ಯೇನ ಹಯೋ ಗತಃ ॥18॥
ವಸುದೇವ, ಉಗ್ರಸೇನರು ಅರ್ಜುನನನ್ನು ವಿಧಿವತ್ತಾಗಿ ಪೂಜಿಸಿ ಸತ್ಕರಿಸಿದರು. ಬಳಿಕ ಅರ್ಜುನನು ಉಗ್ರಸೇನ-ವಸುದೇವರ ಅನುಮತಿಯನ್ನು ಪಡೆದು ಕುದುರೆಯ ಮಾರ್ಗವನ್ನನುಸರಿಸಿ ಮುಂದೆ ಹೊರಟನು.
ತತಃ ಪಶ್ಚಿಮದೇಶೇನ ಸಮುದ್ರಾಂತಂ ತದಾ ಹಯಃ |
ಕ್ರಮೇಣ ವ್ಯಚರತ್ ಸ್ಫೀತಂ ತತಃ ಪಂಚನದಂ ಯಯೌ ॥19॥
ಕುದುರೆಯು ಸಮುದ್ರದ ಪಶ್ಚಿಮ ತೀರದಲ್ಲಿದ್ದ ಸಂಪದ್ಭರಿತವಾದ ದೇಶಗಳಲ್ಲಿ ಕ್ರಮವಾಗಿ ಸಂಚರಿಸುತ್ತಾ ಪಂಚನದ ಎಂಬ ಪ್ರದೇಶವನ್ನು ಪ್ರವೇಶಿಸಿತು.
ತಸ್ಮಾದಪಿ ಸ ಕೌರವ್ಯ ಗಾಂಧಾರವಿಷಯಂ ಹಯಃ |
ವಿಚಚಾರ ಯಥಾಕಾಮಂ ಕೌಂತೇಯಾನುಗತಸ್ತಥಾ ॥20॥
ಬಳಿಕ ಗಾಂಧಾರ ದೇಶವನ್ನು ಪ್ರವೇಶಿಸಿ ಸ್ವೇಚ್ಛೆಯಿಂದ ಸಂಚರಿಸತೊಡಗಿತು. ಅರ್ಜುನನು ಅದನ್ನೇ ಹಿಂಬಾಲಿಸುತ್ತಾ ಹೊರಟನು.
ತತ್ರ ಗಾಂಧಾರರಾಜೇನ ಯುದ್ಧಮಾಸೀನ್ಮಹಾತ್ಮನಃ |
ಘೋರಂ ಶಕುನಿಪುತ್ರೇಣ ಪೂರ್ವವೈರಾನುಕಾರಿಣಾ ॥21॥
ಗಾಂಧಾರ ದೇಶದ ರಾಜನಾದ ಶಕುನಿಯ ಮಗನು ಹಿಂದಿದ್ದ ವೈರವನ್ನೇ ಮುಂದುವರಿಸಿಕೊಂಡು ಅರ್ಜುನನ ಬಳಿ ಘೋರವಾದ ಯುದ್ಧವನ್ನು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಭರಣೇ ಗಾಂಧಾರದೇಶಪ್ರವೇಶೋ ನಾಮ ಪಂಚಾಶೀತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತಾರನೆಯ ಅಧ್ಯಾಯ
ಶಕುನಿಯ ಮಗನ ಪರಾಜಯ.
ವೈಶಂಪಾಯನಃ
ಶಕುನೇಸ್ತನಯೋ ವೀರೋ ಗಾಂಧಾರಾಣಾಂ ಮಹಾರಥಃ |
ಪ್ರತ್ಯುದ್ಯಯೌ ಗುಡಾಕೇಶಂ ಸೈನ್ಯೇನ ಮಹತಾ ವೃತಃ ||1||
ಹಸ್ತ್ಯಶ್ವರಥಪೂರ್ಣೇನ ಪತಾಕಾಧ್ವಜಮಾಲಿನಾ ||2||
ವೈಶಂಪಾಯನ ಜನಮೇಜಯನೇ, ಗಾಂಧಾರದೇಶದ ರಾಜನಾದ, ಮಹಾರಥನಾದ ಶಕುನಿಯ ಮಗನು ಆನೆ, ಕುದುರೆ, ರಥಗಳಿಂದ ಕೂಡಿದ ಪತಾಕೆ, ಧ್ವಜಗಳ ಮಾಲೆಯಿಂದ ಅಲಂಕೃತವಾದ ಮಹಾಸೈನ್ಯದಿಂದ ಕೂಡಿಕೊಂಡು ಅರ್ಜುನನನ್ನು ಎದುರಿಸಲು ಹೊರಟನು.
ಅಮೃಷ್ಯಮಾಣಾಸ್ತೇ ಯೋಧಾ ನೃಪತೇಃ ಶಕುನೇರ್ವಧಮ್ |
ಅಭ್ಯಯುಃ ಸಹಿತಾಃ ಪಾರ್ಥಂ ಪ್ರಗೃಹೀತಶರಾಸನಾಃ ||3||
ಮಹಾಭಾರತ ಯುದ್ಧದಲ್ಲಿ ಶಕುನಿಯ ವಧೆಯನ್ನು ಶಕುನಿಯ ಮಗನು ಸಹಿಸಿಕೊಂಡಿರಲಿಲ್ಲ. ಇದರಿಂದ ಗಾಂಧಾರಯೋಧರೆಲ್ಲರೂ ಧನುಷ್ಪಾಣಿಗಳಾಗಿ ಸಂಘಟಿತರಾಗಿ ಅರ್ಜುನನ ಮೇಲೆ ದಾಳಿ ಮಾಡಿದರು.
ತಾನುವಾಚ ಸ ಧರ್ಮಾತ್ಮಾ ಬೀಭತ್ಸುರಪರಾಜಿತಃ |
ಯುಧಿಷ್ಠಿರಸ್ಯ ವಚನಂ ನ ಚ ತೇ ಜಗೃಹುಸ್ತದಾ ||4||
ಯುದ್ಧ ಮಾಡಲು ಬಂದಿರುವ ಗಾಂಧಾರ ಪ್ರಮುಖರನ್ನುದ್ದೇಶಿಸಿ ಧರ್ಮಾತ್ಮನಾದ ಅರ್ಜುನನು, ಯುಧಿಷ್ಠಿರನು ಹೇಳಿ ಕಳುಹಿಸಿದ ಸಂದೇಶವನ್ನು ಹೇಳಿದನು. ಆದರೆ ಆ ಸಂದೇಶವನ್ನು ಈ ಗಾಂಧಾರರು ಗೌರವಿಸಲಿಲ್ಲ.
ವಾರ್ಯಮಾಣಾಸ್ತು ಪಾರ್ಥೇನ ಸಾಂತ್ವಪೂರ್ವಮಮರ್ಷಿತಾಃ |
ಪರಿವಾರ್ಯ ಹಯಂ ಜಹ್ರುಸ್ತತಶ್ಚುಕ್ರೋಧ ಪಾಂಡವಃ ||5||
ಅರ್ಜುನನು ಸಮಾಧಾನದ ಮಾತುಗಳಿಂದ ಅವರನ್ನು ಯುದ್ಧ ಮಾಡದಂತೆ ತಡೆಯುತ್ತಿದ್ದರೂ ಅಸಹನೆಯುಳ್ಳ ಅವರೆಲ್ಲರೂ ಸುತ್ತುವರಿದು, ಯಜ್ಞಾಶ್ವವನ್ನು ಬಂಧಿಸಲು ಹೊರಟರು. ಅದನ್ನು ಕಂಡು ಅರ್ಜುನನು ಕುಪಿತನಾದನು.
ತತಃ ಶಿರಾಂಸಿ ದೀಪ್ತಾಗ್ರೈಸ್ತೇಷಾಂ ಚಿಚ್ಛೇದ ಪಾಂಡವಃ |
ಶರೈರ್ಗಾಂಡೀವನಿರ್ಮುಕ್ತೈರ್ನಾತಿಯತ್ನಾದಿವಾರ್ಜುನಃ ||6||
ಬಳಿಕ ಗಾಂಡೀವ ಧನುಸ್ಸಿನಿಂದ ಪ್ರದೀಪ್ತವಾದ ತುದಿಭಾಗಗಳುಳ್ಳ ಕ್ಷುರಗಳಿಂದ ಅರ್ಜುನನು ಅನಾಯಾಸವಾಗಿ ಗಾಂಧಾರ ಯೋಧರ ತಲೆಗಳನ್ನು ತುಂಡರಿಸಿದನು.
ತೇ ವಧ್ಯಮಾನಾಃ ಪಾರ್ಥೇನ ಹಯಮುತ್ಸೃಜ್ಯ ಸಂಭ್ರಮಾತ್ |
ನ್ಯವರ್ತಂತ ಮಹಾರಾಜ ಶರವರ್ಷಾರ್ದಿತಾ ಭೃಶಮ್ ||7||
ಬಾಣಗಳ ಪ್ರಹಾರದಿಂದ ಪೀಡಿತರಾದ ಗಾಂಧಾರ ಯೋಧರು ಪಾರ್ಥನಿಂದ ಸೋತು, ಕುದುರೆಯನ್ನು ಬಿಟ್ಟು ಅತ್ಯಂತ ವೇಗವಾಗಿ ಪಲಾಯನಗೈದರು.
ವಿರುದ್ಧ್ಯಮಾನಸ್ತೈಶ್ಚಾಪಿ ಗಾಂಧಾರೈಃ ಪಾಂಡವರ್ಷಭಃ |
ಆದಿಶ್ಯಾದಿಶ್ಯ ತೇಜಸ್ವೀ ಪರಾನೇವ ನ್ಯಪಾತಯತ್ ||8||
ಗಾಂಧಾರ ಯೋಧರು ಅರ್ಜುನನನ್ನು ಹರಿತವಾದ ಬಾಣಗಳಿಂದ ಪೀಡಿಸುತ್ತಿದ್ದರೂ ಅರ್ಜುನನು ಅವರನ್ನು ಹೆಸರಿಸುತ್ತಾ ಶಿರಸ್ಸುಗಳನ್ನು ಕತ್ತರಿಸುತ್ತಿದ್ದನು.
ವಧ್ಯಮಾನೇಷು ತೇಷ್ವಾಜೌ ಗಾಂಧಾರೇಷು ಸಮಂತತಃ |
ಸ ರಾಜಾ ಶಕುನೇಃ ಪುತ್ರಃ ಪಾಂಡವಂ ಪ್ರತ್ಯವಾರಯತ್ ||9||
ಯುದ್ಧರಂಗದಲ್ಲಿ ಗಾಂಧಾರ ಸೈನಿಕರು ಸಾಯುತ್ತಿರುವಾಗ, ಗಾಂಧಾರರಾಜನಾದ ಶಕುನಿಯ ಮಗನು ಅರ್ಜುನನನ್ನು ತಡೆದನು.
ತಂ ಯುಧ್ಯಮಾನಂ ರಾಜಾನಂ ಕ್ಷತ್ರಧರ್ಮೇ ವ್ಯವಸ್ಥಿತಮ್ |
ಪಾರ್ಥೋಽಬ್ರವೀನ್ನ ಮೇ ವಧ್ಯಾ ರಾಜಾನೋ ರಾಜಶಾಸನಾತ್ ||10||
ಅಲಂ ಯುದ್ಧೇನ ತೇ ವೀರ ನ ತೇಽದ್ಯಾಸ್ತಿ ಪರಾಜಯಃ ||11||
ತನ್ನೊಡನೆ ಯುದ್ಧವನ್ನು ಮಾಡಲು ಬಂದಿರುವ ಶಕುನಿಯ ಮಗನನ್ನು ಉದ್ದೇಶಿಸಿ ಅರ್ಜುನನು ಮಹಾರಾಜನೇ, ಯುಧಿಷ್ಠಿರನ ಶಾಸನದಂತೆ ರಾಜನನ್ನು ನಾನು ಕೊಲ್ಲುವುದಿಲ್ಲ, ಯುದ್ಧ ನಿಲ್ಲಿಸು, ಪರಾಜಿತನಾಗಬೇಡ ಎಂದು ಬುದ್ಧಿವಾದವನ್ನು ಹೇಳಿದನು.
ಇತ್ಯುಕ್ತಸ್ತದನಾದೃತ್ಯ ವಾಕ್ಯಮಜ್ಞಾನಮೋಹಿತಃ |
ಸ ಶಕ್ರಸಮಕರ್ಮಾಣಮವಾಕಿರತ ಸಾಯಕೈಃ ||12||
ಜನಮೇಜಯನೇ, ಶಕುನಿಯ ಮಗನು ಅರ್ಜುನನ ಹಿತವಾದ ನುಡಿಗಳನ್ನೂ ಅನಾಧರಿಸಿ, ಅಜ್ಞಾನಮೋಹಿತನಾಗಿ, ಇಂದ್ರನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವುಳ್ಳ ಅರ್ಜುನನನ್ನು ಶೀಘ್ರವಾಗಿ ಸಾಗುವ ಬಾಣಗಳಿಂದ ಮುಚ್ಚಿದನು.
ತಸ್ಯ ಪಾರ್ಥಃ ಶಿರಸ್ತ್ರಾಣಮರ್ಧಚಂದ್ರೇಣ ಪತ್ರಿಣಾ |
ಅಪಾಹರದಮೇಯಾತ್ಮಾ ಜಯದ್ರಥಶಿರೋ ಯಥಾ ||13||
ಮಹಾತ್ಮನಾದ ಅರ್ಜುನನು ತತ್‌ಕ್ಷಣದಲ್ಲಿ ಶಕುನಿಯ ಮಗನ ಶಿರಸ್ತ್ರಾಣವನ್ನು ಅರ್ಧಚಂದ್ರದ ಬಾಣದಿಂದ ಜಯದ್ರಥನ

ತಲೆಯನ್ನು ಹಾರಿಸಿದಂತೆ ಹಾರಿಸಿದನು.
ತಂ ದೃಷ್ಟ್ವಾ ವಿಸ್ಮಯಂ ಜಗ್ಮುರ್ಗಾಂಧಾರಾಃ ಸರ್ವ ಏವ ತೇ |
ಇಚ್ಛತಾ ತೇನ ನ ಹತೋ ರಾಜೇತ್ಯಪಿ ಚ ತೇ ವಿದುಃ ॥14॥
ಅರ್ಜುನನ ಕೈಚಳಕವನ್ನು ನೋಡಿದ ಗಾಂಧಾರ ಯೋಧರು ಆಶ್ಚರ್ಯಚಕಿತ- ರಾದರು. ಅರ್ಜುನನು ತಮ್ಮ ರಾಜನನ್ನು ಉದ್ದೇಶದಿಂದಲೇ ಸಂಹರಿಸಲಿಲ್ಲ ಎಂದು ಅರ್ಥಮಾಡಿಕೊಂಡರು.
ಗಾಂಧಾರರಾಜಪುತ್ರಸ್ತು ಪಲಾಯನಕೃತಕ್ಷಣಃ |
ಬಭೌ ತೈರೇವ ಸಹಿತಸ್ತ್ರಸ್ತೈಃ ಕ್ಷುದ್ರಮೃಗೈರಿವ ॥15॥
ಆ ಸಮಯದಲ್ಲಿ ಶಕುನಿಯ ಮಗನು ಯುದ್ಧಭೂಮಿಯಿಂದ ಓಡಿಹೋಗಲು ಅವಕಾಶವನ್ನು ಕಾಯುತ್ತಿದ್ದನು. ಸಿಂಹವನ್ನು ಕಂಡ ಸಣ್ಣ ಸಣ್ಣ ಮೃಗಗಳು ಓಡಿ ಹೋಗುವಂತೆ ಅರ್ಜುನನ ಬಾಣಗಳಿಗೆ ಹೆದರಿ ಗಾಂಧಾರ ಯೋಧರೊಡನೆ ಶಕುನಿಯ ಮಗನು ಓಡಿಹೋದನು.
ತೇಷಾಂ ತು ತರಸಾ ಪಾರ್ಥಸ್ತತ್ರೈವ ಪರಿಧಾವತಾಮ್ |
ವಿಜಹಾರೋತ್ತಮಾಂಗಾನಿ ಭಲ್ಲೈಃ ಸನ್ನತಪರ್ವಭಿಃ ॥16॥
ಗಾಂಧಾರಯೋಧರ ಶಿರಸ್ಸುಗಳನ್ನು ಬಗ್ಗಿದ ಗಿಣ್ಣುಗಳಿಂದ, ಭಲ್ಲಗಳಿಂದ ಅರ್ಜುನನು ವೇಗವಾಗಿ ಕತ್ತರಿಸಿದನು.
ಉಚ್ಛ್ರಿತಾಂಶ್ಚ ಭುಜಾನ್ ಕೇಚಿನ್ನಾಬುಧ್ಯಂತ ಶರೈರ್ಹತಾನ್ |
ಶಿತೈರ್ಗಾಂಡೀವನಿರ್ಮುಕ್ತೈಃ ಪೃಥುಭಿಃ ಪಾರ್ಥಚೋದಿತೈಃ ॥17॥
ಗಾಂಧಾರಯೋಧರು ಅರ್ಜುನನ ಬಾಣಗಳಿಂದ ತಮ್ಮ ಭುಜಗಳನ್ನು ಕತ್ತರಿಸಿಕೊಂಡಿದ್ದರೂ ಸ್ವಲ್ಪ ಸಮಯ ಅವರಿಗೆ ತಿಳಿಯಲೇ ಇಲ್ಲ.
ಸಂಭ್ರಾಂತನರನಾಗಾಶ್ವಮಥ ತದ್ ವಿದ್ರುತಂ ಬಲಮ್ |
ಹತವಿಧ್ವಸ್ತಭೂಯಿಷ್ಠಮವರ್ತತ ಮುಹುರ್ಮುಹುಃ ॥18॥
ಗಾಂಧಾರ ಸೇನೆಯ ಆನೆಗಳು, ಕುದುರೆಗಳು ಅರ್ಜುನನ ಯುದ್ಧದಿಂದ ಹುಚ್ಚು ಹಿಡಿದಂತೆ ವರ್ತಿಸಿದವು. ಗಾಂಧಾರ ಸೇನೆಯು ಪಲಾಯನ ಮಾಡತೊಡಗಿತು. ಪುನಃ ಸಂಘಟಿತವಾಗಿ ಆಗಮಿಸಿದವು. ಹೀಗೆ ಅನೇಕ ಸಮಯ ಅರ್ಜುನನ ಜೊತೆ ಯುದ್ಧ ನಡೆಯುತ್ತಲೇ ಇತ್ತು.
ನ ಹ್ಯದೃಶ್ಯಂತ ವೀರಸ್ಯ ಕೇಚಿದಗ್ರೇऽಗ್ರ್ಯಕರ್ಮಣಃ |
ರಿಪವಃ ಪಾತ್ಯಮಾನಾ ವೈ ಯೇ ಸಹೇರನ್ ಮಹಾಶರಾನ್ ॥19॥
ಸ್ವಲ್ಪ ಹೊತ್ತಿನಲ್ಲಿಯೇ ಅವರೆಲ್ಲರನ್ನೂ ನಾಶಮಾಡಿದನು. ಉಳಿದವರು ಓಡಿ ಅರ್ಜುನನು ಹೋದರು. ವೀರನಾದ ಅರ್ಜುನನ ಮುಂದೆ ಯಾರೊಬ್ಬರೂ ಕಣ್ಣಿಗೆ ಕಾಣಿಸಲಿಲ್ಲ. ಅರ್ಜುನನ ಭಯಂಕರವಾದ ಬಾಣಗಳ ವೇಗವನ್ನು ಅವರ್ಯಾರಿಗೂ ಸಹಿಸಲಾಗಲಿಲ್ಲ.
ತತೋ ಗಾಂಧಾರರಾಜಸ್ಯ ಮಂತ್ರಿವೃದ್ಧಪುರಃಸರಾ |
ಜನನೀ ನಿರ್ಯಯೌ ಭೀತಾ ಪುರಸ್ಕೃತ್ಯಾರ್ಘ್ಯಮುತ್ತಮಮ್ ॥20॥
ಬಳಿಕ ಗಾಂಧಾರ ದೇಶದ ರಾಜನ ತಾಯಿಯು ಅರ್ಥಾತ್ ಶಕುನಿಯ ಪತ್ನಿಯು ವೃದ್ಧರಾದ ಮಂತ್ರಿಗಳನ್ನು ಮುಂದೆ ಮಾಡಿಕೊಂಡು, ಉತ್ತಮವಾದ ಅರ್ಘ್ಯ- ಪಾದ್ಯಾದಿಗಳನ್ನು ತೆಗೆದುಕೊಂಡು, ಪಟ್ಟಣದಿಂದ ಹೊರಟು ರಣಭೂಮಿಯ ಕಡೆ ಆಗಮಿಸಿದಳು.
ಸಾ ನ್ಯವಾರಯದವ್ಯಗ್ರಾ ತಂ ಪುತ್ರಂ ಯುದ್ಧದುರ್ಮದಮ್ |
ಪ್ರಸಾದಯಾಮಾಸ ಚ ತಂ ಜಿಷ್ಣುಮಕ್ಲಿಷ್ಟಕರ್ಮಿಣಮ್ ॥21॥
ಯುದ್ಧಮಾಡುವುದರಲ್ಲಿಯೇ ಏಕಾಗ್ರತೆಯನ್ನು ಹೊಂದಿರುವ, ಯುದ್ಧ ದುರ್ಮದನಾದ ಮಗನನ್ನು ಯುದ್ಧ ಮಾಡದಿರುವಂತೆ ಕೂಡಲೇ ತಡೆದಳು. ಕಷ್ಟಕರವಾದ ಕರ್ಮಗಳನ್ನು ಅನಾಯಾಸವಾಗಿ ಮಾಡುವ, ಜಯಶೀಲನಾದ ಅರ್ಜುನನನ್ನು ಪ್ರಿಯವಾದ ಮಾತುಗಳಿಂದ ಸಂತೈಸಿದಳು.
ತಾಂ ಪೂಜಯಿತ್ವಾ ಕೌಂತೇಯಃ ಪ್ರಸಾದಮಕರೋತ್ ತದಾ |
ಶಕುನೇಶ್ಚಾಪಿ ತನಯಂ ಸಾಂತ್ವಯನ್ನಿದಮಬ್ರವೀತ್ ॥22॥
ಅರ್ಜುನನು ಶಕುನಿಯ ಪತ್ನಿಯನ್ನು ಪ್ರತಿಯಾಗಿ ಪೂಜಿಸಿ, ಅವಳ ಮನಸ್ಸನ್ನು ಸಂತೋಷಪಡಿಸಿ, ಶಕುನಿಯ ಮಗನನ್ನು ಸಾಂತ್ವನ ಮಾಡಿ ಇಂತು ನುಡಿದನು.
ಅರ್ಜುನಃ
ನ ಮೇ ಪ್ರಿಯಂ ಮಹಾಬಾಹೋ ಯತ್ ತೇ ಬುದ್ಧಿರಿಯಂ ಕೃತಾ |
ಪ್ರತಿಯೋದ್ಧುಮಮಿತ್ರಘ್ನ ಭ್ರಾತೈವ ತ್ವಂ ಮಮಾನಘ ॥23॥
ಅರ್ಜುನ ಮಹಾಬಾಹುವೇ, ಶತ್ರುಹಂತಕನೇ, ನಿಷ್ಪಾಪನೇ, ನನ್ನೊಡನೆ ಯುದ್ಧ ಮಾಡಬೇಕೆಂದು ನಿಶ್ಚಯಿಸಿದ ನಿನ್ನ ಬುದ್ಧಿಯು ನನಗೆ ಪ್ರಿಯವಾಗಲಿಲ್ಲ. ಕಾರಣ ನೀನು ನನ್ನ ಸಹೋದರನೇ ಆಗಿರುವಿ.
ಗಾಂಧಾರೀಂ ಮಾತರಂ ಸ್ಮೃತ್ವಾ ಧೃತರಾಷ್ಟ್ರಕೃತೇನ ಚ |
ತೇನ ಜೀವಸಿ ರಾಜಂಸ್ತ್ವಂ ನಿಹತಾಸ್ತ್ವನುಗಾಸ್ತವ ॥24॥
ನನ್ನ ತಾಯಿಯೂ ನಿನ್ನ ಸೋದರತ್ತೆಯೂ ಆದ ಗಾಂಧಾರಿಯನ್ನು ಸ್ಮರಿಸಿ, ಧೃತರಾಷ್ಟ್ರನ ನಿಮಿತ್ತದಿಂದ ನಿನ್ನನ್ನು ಉಪೇಕ್ಷಿಸಿದ್ದೇನೆ. ಆದ್ದರಿಂದಲೇ ನೀನು ಬದುಕಿ ಉಳಿದಿರುವಿ. ನಿನ್ನ ಅನುಯಾಯಿಗಳನ್ನು ಈಗಾಗಲೇ ಸಂಹಾರ ಮಾಡಿರುತ್ತೇನೆ.
ಮೈವಂ ಭೂಃ ಶಾಮ್ಯತಾಂ ವೈರಂ ಮಾ ತೇ ಭೂದ್ ಬುದ್ಧಿರೀದೃಶೀ |

ಆಗಂತವ್ಯಂ ಪರಾಂ ಚೈತ್ರೀಮಶ್ವಮೇಧೇ ನೃಪಸ್ಯ ನಃ ॥25॥
ಈ ವೈರವನ್ನು ಮುಂದುವರಿಸಬೇಡ. ನಿನ್ನ ಬುದ್ಧಿಯು ಈ ತಪ್ಪಾದ ಮಾರ್ಗವನ್ನು ಅನುಸರಿಸುವುದು ಬೇಡ. ಮುಂದೆ ಬರುವ ಚೈತ್ರಮಾಸದ ಹುಣ್ಣಿಮೆಯಿಂದ ಆರಂಭವಾಗುವ ಯುಧಿಷ್ಠಿರನ ಅಶ್ವಮೇಧ ಯಾಗಕ್ಕೆ ನೀನು ಆಗಮಿಸಬೇಕು.
ವೈಶಂಪಾಯನಃ
ಇತ್ಯುಕ್ತಸ್ತ್ವಽನುಯಯೌ ಪಾರ್ಥೋಽ ಹಯಂ ತಂ ಕಾಮಚಾರಿಣಮ್ ।
ತೇ ನ್ಯವರ್ತಂತ ಗಾಂಧಾರಾ ಹತಾಶಿಷ್ಟಾಃ ಸ್ವಕಂ ಪುರಮ್ ॥26॥
ವೈಶಂಪಾಯನ ಈ ರೀತಿಯಾಗಿ ಅರ್ಜುನನು ಹೇಳಿ, ಕಾಮಚಾರಿಯಾದ ಆ ಕುದುರೆಯನ್ನು ಅನುಸರಿಸಿ ಹೊರಟನು. ಅಳಿದುಳಿದ ಗಾಂಧಾರ ವೀರರೆಲ್ಲರೂ ತಮ್ಮ ಪಟ್ಟಣಕ್ಕೆ  ಪ್ರವೇಶಿಸಿದರು.
ನ್ಯವರ್ತತ ತತೋ ವಾಜೀ ಯತ್ರ ನಾಗಾಹ್ವಯಂ ಪುರಮ್ ।
ತಂ ನಿವೃತ್ತಂ ತು ಶುಶ್ರಾವ ಚಾರೇಣೈವ ಯುಧಿಷ್ಠಿರಃ ॥27॥
ಯಜ್ಞಾಶ್ವವಾದರೂ ಹಸ್ತಿನಾವತಿಯ ಕಡೆಗೆ ಹಿಂದಿರುಗಿತು. ಒಬ್ಬ ಸೇವಕನ ಮೂಲಕ ಯಜ್ಞಾಶ್ವವು ತಿರುಗಿ ಬರುತ್ತಿರುವ ಸಮಾಚಾರವನ್ನು ಯುಧಿಷ್ಠಿರನು ಕೇಳಿಸಿಕೊಂಡನು.
ಶ್ರುತ್ವಾಽರ್ಜುನಂ ಕುಶಲಿನಂ ಸ ಚ ಹೃಷ್ಟಮನಾ ಹ್ಯಭೂತ್ ॥28॥
ಅರ್ಜುನನು ಕುಶಲಿಯಾಗಿ, ಸಂತೋಷಮನಸ್ಕನಾಗಿ ಆಗಮಿಸುತ್ತಿರುವ ವಾರ್ತೆಯನ್ನು ಕೇಳಿಸಿಕೊಂಡನು.
ವಿಜಯಸ್ಯ ಚ ತತ್ ಕರ್ಮ ಗಾಂಧಾರವಿಷಯೇ ತದಾ ।
ಶ್ರುತ್ವಾ ಚಾನ್ಯೇಷು ದೇಶೇಷು ಸ ಸುಪ್ರೀತೋಽಭವನ್ನೃಪಃ ॥29॥
ಅರ್ಜುನನು ಗಾಂಧಾರ ದೇಶದ ರಾಜರ ವಿಷಯದಲ್ಲಿ ನಡೆದುಕೊಂಡ ರೀತಿಯನ್ನೂ, ಬೇರೆ ದೇಶದ ರಾಜರ ವಿಷಯದಲ್ಲಿ ನಡೆದುಕೊಂಡ ಕ್ರಮವನ್ನು ಕೇಳಿಸಿಕೊಂಡು ಯುಧಿಷ್ಠಿರನು ಅತ್ಯಂತ ಸಂತುಷ್ಟನಾದನು.
ಏತಸ್ಮಿನ್ನೇವ ಕಾಲೇ ತು ದ್ವಾದಶೀಂ ಮಾಘಮಾಸಿಕೀಮ್ ।
ಇಷ್ಟಂ ಗೃಹೀತ್ವಾ ನಕ್ಷತ್ರಂ ಧರ್ಮರಾಜೋ ಯುಧಿಷ್ಠಿರಃ ॥30॥
ಸಮಾನಾಯ್ಯ ಮಹಾತೇಜಾಃ ಸರ್ವಾನ್ ಭ್ರಾತ್ರೂನ್ ಮಹಾಮನಾಃ ।
ಭೀಮಂ ಚ ನಕುಲಂ ಚೈವ ಸಹದೇವಂ ಚ ಕೌರವಮ್ ॥31॥
ಅರ್ಜುನನು ಆಗಮಿಸುವ ಅಂದು ಮಾಘಮಾಸದ ಶುದ್ಧ ದ್ವಾದಶೀ ಪುಷ್ಯಾ ನಕ್ಷತ್ರದಿಂದ ಕೂಡಿತ್ತು. ಈ ನಕ್ಷತ್ರದಲ್ಲಿಯೇ ಧರ್ಮರಾಜನಾದ ಯುಧಿಷ್ಠಿರನು ತನ್ನ ಸಹೋದರರಾದ ಭೀಮ-ನಕುಲ-ಸಹದೇವರನ್ನು ಕರೆಸಿಕೊಂಡನು.
ಪ್ರೋವಾಚೇದಂ ವಚಃ ಕಾಲೇ ತದಾ ಧರ್ಮಭೃತಾಂ ವರಃ ।
ಆಮಂತ್ರ್ಯ ವದತಾಂ ಶ್ರೇಷ್ಠೋ ಭೀಮಂ ಭೀಮಪರಾಕ್ರಮಮ್ ॥32॥
ತನ್ನ ಸಹೋದರರನ್ನು ಉದ್ದೇಶಿಸಿ ಧರ್ಮರಕ್ಷಕರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಹೇಳುವ ಮೊದಲು ಶ್ರೇಷ್ಠನಾದ, ಭೀಮಪರಾಕ್ರಮನಾದ ಭೀಮನನ್ನು ಕುರಿತು ಇಂತು ನುಡಿದನು.
ಯುಧಿಷ್ಠಿರಃ
ಆಯಾತಿ ಭೀಮಸೇನಾಸೌ ಸಹಾಶ್ವೇನ ತವಾನುಜಃ ।
ಯಥಾ ಮೇ ಪುರುಷಾಃ ಪ್ರಾಹುರ್ಯೇ ಧನಂಜಯಸಾರಿಣಃ ॥33॥
ಯುಧಿಷ್ಠಿರ ಭೀಮಸೇನನೇ, ನಿನ್ನ ತಮ್ಮನಾದ ಅರ್ಜುನನು ಯಜ್ಞಾಶ್ವದ ಜೊತೆಯಲ್ಲಿ ಬರುತ್ತಿದ್ದಾನೆಂದು ಅವನ ಜೊತೆಗೆ ಹೋದ ಪುರುಷರು ಮುಂದೆ ಬಂದು ತಿಳಿಸಿರುತ್ತಾರೆ.
ಉಪಸ್ಥಿತಶ್ಚ ಕಾಲೋಽಯಮಭಿತೋ ವರ್ತತೇ ಹಯಃ ।
ಮಾಘೀ ಚ ಪೌರ್ಣಮಾಸೀಯಂ ಮಾಸಃ ಶೇಷೋ ವೃಕೋದರ ॥34॥
ಯಜ್ಞವನ್ನು ಆರಂಭಿಸಬೇಕಾದ ಕಾಲವು ಸನ್ನಿಹಿತವಾಗಿದೆ. ಕುದುರೆಯು ವಿಶ್ವಪರ್ಯಟನೆಯನ್ನು ಮಾಡಿ ನನ್ನ ಸಮೀಪಕ್ಕೆ ಆಗಮಿಸುತ್ತಿದೆ. ಈಗ ಮಾಘಮಾಸದ ಹುಣ್ಣಿಮೆ. ಇನ್ನು ಕೇವಲ ಫಾಲ್ಗುನ ಮಾಸ ಮಾತ್ರವೇ ಉಳಿದುಕೊಂಡಿದೆ.
ಪ್ರಸ್ಥಾಪ್ಯಂತಾಂ ಹಿ ವಿದ್ವಾಂಸೋ ಬ್ರಾಹ್ಮಣಾ ವೇದಪಾರಗಾಃ ।
ವಾಜಿಮೇಧಾರ್ಥಸಿದ್ಧ್ಯರ್ಥಂ ದೇಶಂ ಪಶ್ಯಂತು ಯಾಜ್ಞಿಯಮ್ ॥35॥
ಅಶ್ವಮೇಧ ಯಜ್ಞದ ಸಿದ್ಧಿಗಾಗಿ ಪ್ರಶಸ್ತವಾದ ದೇಶ ಯಾವುದೆಂದು ತಿಳಿಯಲು ವೇದಪಾರಂಗತರಾದ, ವಿದ್ವಾಂಸರಾದ ಬ್ರಾಹ್ಮಣರ ಜೊತೆಗೆ ತೆರಳಿ ನಿಶ್ಚಯಿಸಿರಿ.
ವೈಶಂಪಾಯನಃ
ಇತ್ಯುಕ್ತಃ ಸ ತು ತಚ್ಚಕ್ರೇ ಭೀಮೋ ನೃಪತಿಶಾಸನಮ್ ।
ಹೃಷ್ಟಃ ಶ್ರುತ್ವಾ ನರವರ್ಯೈರಾಯಾಂತಂ ಸವ್ಯಸಾಚಿನಮ್ ॥36॥
ವೈಶಂಪಾಯನ ಯುಧಿಷ್ಠಿರನು ಹೀಗೆ ಹೇಳುತ್ತಿರುವುದನ್ನು ಕೇಳಿಸಿಕೊಂಡ ಭೀಮನು ಯಜ್ಞನಿವೇಶನ ಪರೀಕ್ಷೆಗಾಗಿ ಸಂತುಷ್ಟನಾಗಿ ಬ್ರಾಹ್ಮಣರನ್ನು ಕಳುಹಿಸಿಕೊಟ್ಟನು. ಪುರುಷಶ್ರೇಷ್ಠನಾದ ಅರ್ಜುನನು ಆಗಮಿಸುತ್ತಿರುವ ವಾರ್ತೆಯನ್ನು ಕೇಳಿ ಸಂತುಷ್ಟನಾದನು.
ತತೋ ಯಯೌ ಭೀಮಸೇನಃ ಪ್ರಾಜ್ಞೈಃ ಸ್ಥಪತಿಭಿಃ ಸಹ ।
ಬ್ರಾಹ್ಮಣಾನಗ್ರತಃ ಕೃತ್ವಾ ಕುಶಲಾನ್ ಯಜ್ಞಕರ್ಮಸು ॥37॥
ಬಳಿಕ ಭೀಮಸೇನನು ಬುದ್ಧಿವಂತರಾದ ಸ್ಥಪತಿಗಳಿಂದ ಸೇರಿಕೊಂಡು, ಯಜ್ಞಕರ್ಮದಲ್ಲಿ ಕುಶಲರಾದ ಬ್ರಾಹ್ಮಣರನ್ನೂ ಮುಂದೆ ಮಾಡಿಕೊಂಡು ಪಟ್ಟಣದಿಂದ ಹೊರಟನು.

ಯುತಂ ಸಾಲವನಗ್ರಾಮಂ ಸುಪ್ರತೋಲೀವಿಟಂಕಿನಮ್ |
ಮಾಪಯಾಮಾಸ ಕೌರವ್ಯೋ ಯಜ್ಞವಾಟಂ ಯಥಾವಿಧಿ ॥38॥
ಪ್ರಾಸಾದಶತಸಂಬಾಧಂ ಮಣಿಪ್ರವರಕುಟ್ಟಿಮಮ್ |
ಸದಃ ಸಪತ್ನೀಸದನಂ ಸಾಗ್ನೀಧ್ರಮಪಿ ಚೋತ್ತರಮ್ ॥39॥
ಕಾರಯಾಮಾಸ ವಿಧಿವನ್ಮಣಿಹೇಮವಿಭೂಷಿತಮ್ ॥40॥
ಭೀಮಸೇನನು ಸಾಲವೃಕ್ಷಗಳ ಸಮೂಹದಿಂದ ಕೂಡಿರುವ ಭೂಪ್ರದೇಶವನ್ನು ಅಳತೆ ಮಾಡಿಸಿದನು. ಅನಂತರ ರಾಜಮಾರ್ಗಗಳಿಂದ ಕೂಡಿ ಸಂಘಟಿತವಾಗಿದ್ದ ಯಜ್ಞಶಾಲೆಯನ್ನು ವಿಧಿಬದ್ಧವಾಗಿ ನಿರ್ಮಾಣ ಮಾಡಿಸಿದನು. ಯಜ್ಞಶಾಲೆಯ ಸುತ್ತಲೂ ನೂರಾರು ಸೌಧಗಳಿದ್ದವು. ನೆಲವು ಶ್ರೇಷ್ಠವಾದ ಮಣಿಗಳಿಂದಲೂ, ರತ್ನಗಳಿಂದಲೂ ಖಚಿತವಾಗಿತ್ತು. ಹೀಗೆ ಅಲಂಕೃತವಾದ ಯಜ್ಞಶಾಲೆಯನ್ನು ಭೀಮಸೇನನು ವಿಧಿಬದ್ಧವಾಗಿ ನಿರ್ಮಿಸಿಸಿದನು. ಅಂತಃಪುರದ ಸ್ತ್ರೀಯರಿಗೂ, ಹಲವು ದೇಶದಿಂದ ಅಗಮಿಸುವ ರಾಜರಿಗೂ, ಯಜ್ಞವನ್ನು ಮಾಡುವ ಬ್ರಾಹ್ಮಣರಿಗೂ ಯೋಗ್ಯವಾದ ಆಲಯಗಳನ್ನು ವಿಧಿವತ್ತಾಗಿ ನಿರ್ಮಿಸಿಸಿದನು. ಪ್ರತಿ ಭವನಗಳು ಶುದ್ಧವಾದ ಸುವರ್ಣದಿಂದ ನಿರ್ಮಿತವಾಗಿದ್ದವು.
ಸ್ತಂಭಾನ್ ಕನಕಚಿತ್ರಾಂಶ್ಚ ತೋರಣಾನಿ ಬೃಹಂತಿ ಚ |
ಯಜ್ಞಾಯತನದೇಶೇಷು ಸರ್ವೇಷ್ವೇವ ಚ ಕಾಂಚನಮ್ ॥41॥
ಯಜ್ಞಶಾಲೆಯಲ್ಲಿದ್ದ ಸ್ತಂಭಗಳೆಲ್ಲವೂ ಸುವರ್ಣಮಯವಾಗಿದ್ದವು. ಚಿತ್ತಾರದಿಂದ ಕೂಡಿದ್ದವು. ಎಲ್ಲೆಡೆಯೂ ದೊಡ್ಡ ದೊಡ್ಡ ತೋರಣಗಳಿದ್ದವು. ಹೀಗೆ ಯಜ್ಞಶಾಲೆಯು ಅತ್ಯಂತ ಸುಂದರವಾಗಿ ಅಲಂಕೃತವಾಗಿತ್ತು.
ಅಂತಃಪುರಾಣಿ ರಾಜ್ಞಾಂ ಚ ನಾನಾದೇಶನಿವಾಸಿನಾಮ್ |
ಕಾರಯಾಮಾಸ ಧರ್ಮಾತ್ಮಾ ತತ್ರ ತತ್ರ ಯಥಾವಿಧಿ ॥42॥
ನಾನಾ ದೇಶದ ರಾಜರಿಗೆ ಯೋಗ್ಯವಾದ ಅಂತಃಪುರಗಳನ್ನೂ ಧರ್ಮಾತ್ಮನಾದ ಭೀಮಸೇನನು ವಿಧಿಬದ್ಧವಾಗಿ ನಿರ್ಮಾಣ ಮಾಡಿಸಿದನು.
ಬ್ರಾಹ್ಮಣಾನಾಂ ತು ವೇಶ್ಮಾನಿ ನಾನಾದೇಶಸಮೇಯುಷಾಮ್ ॥43॥
ಬೇರೆ ಬೇರೆ ದೇಶಗಳಿಂದ ಆಗಮಿಸುವ ಬ್ರಾಹ್ಮಣರಿಗೂ ಮನೆಗಳನ್ನು ನಿರ್ಮಾಣ ಮಾಡಿಸಿದನು.
ತಥಾ ಸಂಪ್ರೇಷಯಾಮಾಸ ದೂತಾನ್ ನೃಪತಿಶಾಸನಾತ್ |
ಭೀಮಸೇನೋ ಮಹಾರಾಜ ರಾಜ್ಞಾಮಕ್ಲಿಷ್ಟಕರ್ಮಣಾಮ್ ॥44॥
ಭೀಮಸೇನನು ರಾಜನ ಆಜ್ಞಾನುಸಾರವಾಗಿ ಸುಲಭವಾಗಿ ಶ್ರೇಷ್ಠ ಕರ್ಮವನ್ನು ಮಾಡುವ ರಾಜರನ್ನು ಆಹ್ವಾನಿಸಲು ಎಲ್ಲ ದೇಶಗಳಿಗೂ ದೂತರನ್ನು ಕಳುಹಿಸಿಕೊಟ್ಟನು.
ತೇ ಪ್ರಿಯಾರ್ಥಂ ಕುರುಪತೇರಾಯಯುರ್ನೃಪಸತ್ತಮಾಃ |
ರತ್ನಾನ್ಯನೇಕಾನ್ಯಾದಾಯ ಸ್ತ್ರಿಯೋಽಶ್ವಾನಾಯುಧಾನಿ ಚ ॥45॥
ಯುಧಿಷ್ಠಿರನ ಆಹ್ವಾನವನ್ನು ಸ್ವೀಕರಿಸಿದ ರಾಜರು, ಕುರುಪತಿಯಾದ ಯುಧಿಷ್ಠಿರನಿಗೆ ಸಂತೋಷವನ್ನುಂಟು ಮಾಡಲು ಅನೇಕ ವಿಧವಾದ ರತ್ನಗಳನ್ನೂ, ಸ್ತ್ರೀಯರನ್ನೂ, ಕುದುರೆಗಳನ್ನೂ, ಆಯುಧಗಳನ್ನೂ ತೆಗೆದುಕೊಂಡು ಹಸ್ತಿನಾವತಿಗೆ ಆಗಮಿಸಿದರು.
ತೇಷಾಂ ನಿವಸತಾಂ ತೇಷು ಶಿಬಿರೇಷು ಸಹಸ್ರಶಃ |
ನದತಃ ಸಾಗರಸ್ಯೇವ ಶಬ್ದೋ ದಿವಮಿವಾಸ್ಪೃಶತ್ ॥46॥
ಆಗಮಿಸಿದ ರಾಜರು ತಮಗಾಗಿಯೇ ನಿರ್ಮಿತವಾಗಿದ್ದ ಶಿಬಿರಗಳನ್ನು ಪ್ರವೇಶಿಸಲು ಮಾಡುತ್ತಿದ್ದ ಕೋಲಾಹಲ ಶಬ್ದವು ಸಮುದ್ರದ ಗಂಭೀರ ಗರ್ಜನೆಯಂತೆ ಮುಗಿಲು ಮುಟ್ಟುತ್ತಿತ್ತು.
ಪ್ರತ್ಯುದ್ಗಮ್ಯ ನಮಸ್ಕೃತ್ಯ ಬ್ರಾಹ್ಮಣಾಂಶ್ಚ ನ್ಯವೇದಯತ್ ॥47॥
ತೇಷಾಮಭ್ಯಾಗತಾನಾಂ ಚ ನಾನಾದೇಶನಿವಾಸಿನಾಮ್ |
ವ್ಯಾದಿದೇಶಾನ್ನಪಾನಾನಿ ಶಯ್ಯಾಶ್ಚಾತೀವಮಾನುಷಾಃ ॥48॥
ಕುಲವರ್ಧನನಾದ ಯುಧಿಷ್ಠಿರನು ಯಜ್ಞನಿಮಿತ್ತದಿಂದ ಆಗಮಿಸಿದ ಅಭ್ಯಾಗತರಾದ ಬ್ರಾಹ್ಮಣರಿಗೆ ಎದ್ದು ನಮಸ್ಕರಿಸಿದನು. ನಾನಾ ದೇಶದಿಂದ ಅಗಮಿಸಿದ ರಾಜರನ್ನು ಅತಿಮಾನುಷವಾದ ಅನ್ನ, ಪಾನಾದಿಗಳಿಂದ ಮತ್ತು ಶಯನೀಯ ಹಾಸಿಗೆಗಳಿಂದ ಸತ್ಕರಿಸಿದನು.
ವಾಹನಾನಾಂ ಚ ವಿವಿಧಾಃ ಶಾಲಾಃ ಶಾಲೀಕ್ಷುಗೋರಸೈಃ |
ಉಪೇತಾಃ ಪುರುಷವ್ಯಾಘ್ರ ವ್ಯಾದಿದೇಶ ಸ ಧರ್ಮರಾಟ್ ॥49॥
ಭರತಶ್ರೇಷ್ಠನಾದ ಧರ್ಮಜನು ಎಲ್ಲ ರಾಜರ ಕುದುರೆ, ಆನೆಗಳಿಗೂ ಧಾನ್ಯದಿಂದ, ಕಬ್ಬಿನಿಂದ ಉಪಚರಿಸಲು ಆದೇಶಿಸಿದನು. ಅವುಗಳಿಗೆ ಸಮೃದ್ಧವಾಗಿ ಆಹಾರದಿಂದ ತುಂಬಿರುವ ಶಾಲೆಗಳನ್ನು ನಿರ್ಮಾಣ ಮಾಡಿಸಿಕೊಟ್ಟನು.
ವರ್ಣಾಃ ಪೃಥಕ್ಸನ್ನಿವಿಷ್ಟಾ ಹ್ಯುತ್ತರೋತ್ತರಪೂಜಕಾಃ |
ತಥಾ ತಸ್ಮಿನ್ ಮಹಾಯಜ್ಞೇ ಧರ್ಮರಾಜಸ್ಯ ಧೀಮತಃ ॥50॥
ಸಮಾಜಗ್ಮುರ್ಮುನಿಗಣಾ ಬಹವೋ ಬ್ರಹ್ಮವಾದಿನಃ ॥51॥
ಧರ್ಮರಾಜನ ಮಹಾಯಾಗಕ್ಕೆ ಬ್ರಹ್ಮವಾದಿಗಳಾದ ಮುನಿಗಳು ಆಗಮಿಸಿದ್ದರು. ಆರಾಧನೆಗೆ ಅರ್ಹರಾದ ಯೋಗ್ಯರಾಜರುಗಳು, ಇತರ ಜಾತಿಯ ವ್ಯಕ್ತಿಗಳು ಆ ಮಹಾಯಜ್ಞಕ್ಕೆ ಆಗಮಿಸಿದ್ದರು.
ಯೇ ಚ ದ್ವಿಜಾತಿಪ್ರವರಾಸ್ತತ್ರಾಸನ್ ಪೃಥಿವೀಪತೇ |
ಸಮಾಜಗ್ಮುಃ ಸಶಿಷ್ಯಾಸ್ತಾನ್ ಪ್ರತಿಜಗ್ರಾಹ ಕೌರವಃ ॥52॥
ಭೂಮಂಡಲದಲ್ಲಿ ಶ್ರೇಷ್ಠರಾದ ಬ್ರಾಹ್ಮಣರೆಲ್ಲರೂ ಆ ಯಜ್ಞಕ್ಕೆ ಆಗಮಿಸಿದ್ದರು. ಶಿಷ್ಯ ಪರಿವಾರ ಸಹಿತರಾಗಿ ಆಗಮಿಸಿರುವ

ಬ್ರಾಹ್ಮಣರನ್ನು ಕೌರವನು ಸ್ವಾಗತಿಸಿದನು.
ಸರ್ವಾಂಶ್ಚ ತಾನನುಯಯೌ ಯಾವದಾವಸಥಾಂತಿಕಮ್ |
ಸ್ವಯಮೇವ ಮಹಾತೇಜಾ ದಂಭಂ ತ್ಯಕ್ತ್ವಾ ಯುಧಿಷ್ಠಿರಃ ॥53॥
ಅವರೆಲ್ಲರೂ ಆಗಮಿಸಿದಾಗ ದಂಭವನ್ನು ಬಿಟ್ಟ ಧರ್ಮಜನು ತಾನೇ ಶಿಬಿರಗಳಿಗೆ ಹೋಗಿ ಸ್ವಾಗತಿಸಿದನು. ಶಿಬಿರಗಳಿಗೆ ಅವರನ್ನು ಅನುಸರಿಸಿ ಹೋಗುತ್ತಿದ್ದನು.
ತತಃ ಕೃತ್ವಾ ಸ್ಥಪತಯಃ ಶಿಲ್ಪಿನೋಽನ್ಯೇ ಚ ತೇ ತದಾ |
ಕೃತ್ಸ್ನಂ ಯಜ್ಞವಿಧಿಂ ರಾಜನ್ ಧರ್ಮರಾಜ್ಞೇ ನ್ಯವೇದಯನ್ ॥54॥
ಬಳಿಕ ಯಜ್ಞಮಂಟಪದ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಿದ, ಸ್ಥಪತಿಗಳು, ಇತರ ಶಿಲ್ಪಿಗಳು ಧರ್ಮರಾಜನಿಗೆ ಯಜ್ಞವಿಧಿಯನ್ನು ಕಲ್ಪಿಸುವಂತೆ ಪ್ರಾರ್ಥಿಸಿದರು.
ತಚ್ಛ್ರುತ್ವಾ ಧರ್ಮರಾಜಃ ಸ ಕೃತಂ ಸರ್ವಮನಿಂದಿತಮ್ |
ಹೃಷ್ಟರೂಪೋಽಭವದ್ ರಾಜಾ ಸಹ ಭ್ರಾತೃಭಿರಚ್ಯುತಃ ॥55॥
ಯಾವ ನ್ಯೂನತೆಯೂ ಇಲ್ಲದೆ ಯಜ್ಞಶಾಲೆಯು ನಿರ್ಮಿತವಾದುದನ್ನು ಕೇಳಿಸಿಕೊಂಡು, ಆಲಸ್ಯರಹಿತನಾದ ಯುಧಿಷ್ಠಿರನು ತನ್ನ ತಮ್ಮಂದಿರ ಜೊತೆಗೂಡಿ ಸಂತೋಷವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಶ್ವಸಂಭರಣೇ ಶಾಲಿನಿರ್ಮಾಣಕಥನಂ ನಾಮ ಷಡಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 30ನೇ ಅಧ್ಯಾಯ
ತತಃ ಸ ಯಜ್ಞೋ ಯದುವೀರರಕ್ಷಿತೋ
ವ್ಯಾಸೋಪದಿಷ್ಟೋ ಮುನಿಭಿಃ ಪ್ರವರ್ತಿತಃ |
ಅಶೋಭತಾಲಂ ಸಕಲೈರ್ನೃಪೈಶ್ಚ
ಸಮಾಗತೈರ್ವಿಪ್ರವರೈಶ್ಚ ಜುಷ್ಟಃ ॥
ಬಳಿಕ ಆ ಯಜ್ಞವು ಶ್ರೀಕೃಷ್ಣನ ರಕ್ಷಣೆಯಲ್ಲಿ ಮತ್ತು ಶ್ರೀವೇದವ್ಯಾಸರ ನೇತೃತ್ವದಲ್ಲಿ ಮುನಿಗಳಿಂದ ನಡೆಸಲ್ಪಟ್ಟಿತು. ರಾಜರೂ ಎಲ್ಲ ಮುನಿಗಳೂ ಬಂದು ಭಾಗವಹಿಸಿದ್ದರಿಂದ ಯಜ್ಞ ಬಹಳ ಶೋಭಿಸಿತು.
ಸ ಕೃಷ್ಣಯುಗ್ಮೇನ ಚ ಭಾರ್ಗವೇಣ
ತ್ರಿಧಾ ವಿಭಕ್ತೇನ ಪರೇಣ ಪುಂಸಾ |
ಅಧಿಷ್ಠಿತೋಽಶೋಭತ ವಿಶ್ವಮೇತದ್
ವಿಶ್ವಾದಿರೂಪೇಣ ಯಥೈವ ತೇನ ॥
ಎಲ್ಲ ತೈಜಸ, ಪ್ರಾಜ್ಞರೂಪನಾದ ಹರಿಯಿಂದ ಅಧಿಷ್ಠಿತವಾದ ಲೋಕದಂತೆ ವಾಸಿಷ್ಠ ಕೃಷ್ಣ, ಯಾದವಕೃಷ್ಣ ಎಂಬ ಇಬ್ಬರು ಕೃಷ್ಣರಿಂದ ಮತ್ತು ಪರಶುರಾಮನಿಂದ ಹೀಗೆ ಮೂರಾಗಿ ವಿಭಾಗಗೊಂಡ ಪರಮ ಪುರುಷನಿಂದ ಅಧಿಷ್ಠಿತವಾದ ಆ ಯಜ್ಞವು ಶೋಭಿಸಿತು.
ಯಥಾ ವಿರಿಂಚಸ್ಯ ಪುರಾಽಽಸ ಯಜ್ಞೋ
ಯಥೈವ ಶಕ್ರಸ್ಯ ಶತಕ್ರತುತ್ವೇ |
ತಥೈವ ಸೋಽಭೂದ್ ವಿಧಿಶರ್ವಶಕ್ರ-
ಪೂರ್ವೈಃ ಸುರೈರಾವಿರಲಂಕೃತೋಽಧಿಕಮ್ ॥
ಹಿಂದೆ ಬ್ರಹ್ಮನ ಯಜ್ಞ ಹೇಗೋ, ಇಂದ್ರ ಶತಕ್ರತುವೆನಿಸುವಾಗ ಅವನ ಯಜ್ಞವು ಹೇಗೋ ಹಾಗೇ ಪಾಂಡವರ ಯಜ್ಞವೂ ಕೂಡ ಬ್ರಹ್ಮ-ರುದ್ರ-ಇಂದ್ರ ಮುಂತಾದ ದೇವತೆಗಳಿಂದ ಪ್ರತ್ಯಕ್ಷವಾಗಿ ಚೆನ್ನಾಗಿ ಅಲಂಕೃತವಾಗಿತ್ತು.
ನ ದೇವಗಂಧರ್ವಮುನಿಸ್ವಧರ್ಮ
ಮರ್ತ್ಯಾದಿಕೇಷ್ವಾಸ ಸ ಯೋಽತ್ರ ನಾಽಸ |
ಸ್ವಲಂಕೃತೈರ್ನಾಕಿಜನೈಃ ಸಕಾಂತೈ-
ರರೂರುಚನ್ನಾಕವದೇವ ಲೋಕಃ ॥
ದೇವ, ಗಂಧರ್ವ, ಮುನಿ, ಸ್ವಧರ್ಮನಿಷ್ಠರಾದ ಮಾನವರು ಮುಂತಾದವರಲ್ಲಿ ಯಾರೂ ಈ ಯಜ್ಞದಲ್ಲಿ ಭಾಗವಹಿಸದಿದ್ದವನು ಇರಲಿಲ್ಲ. ಒಳ್ಳೆಯ ಅಲಂಕೃತರಾದ, ಪತ್ನೀ ಸಮೇತರಾದ ದೇವತೆಗಳಿಂದ ಈ ಲೋಕವೇ ದೇವಲೋಕದಂತೆ ಶೋಭಿಸಿತು.
ತತ್ರೈವ ತತ್ತತ್ತ್ವನಿ ಸಸಂಶಯಾನಿ
ನಿಸ್ಸಂಶಯಾನ್ಯಾಸುರಲಂ ವಿವಾದೇ |
ಪರಸ್ಪರೋತ್ಥೇ ಹರಿಣಾ ತ್ರಿರೂಪಿಣಾ
ಸಂಸ್ಥಾಪಿತಾನ್ಯಗ್ರ್ಯವಚೋಭಿರುಚ್ಚೈಃ ॥
ಆ ಯಾಗಶಾಲೆಯಲ್ಲಿ ಚೆನ್ನಾಗಿ ಪರಸ್ಪರ ತತ್ತ್ವವಿಚಾರ ಉಂಟಾದಾಗ ಮೂರು ರೂಪನಾದ ಹರಿ ಉತ್ತಮ ವಚನಗಳಿಂದ ಉತ್ಕೃಷ್ಟವಾಗಿ ತತ್ತ್ವಗಳನ್ನು ಸ್ಥಾಪಿಸಿದನು. ಆಗ ಸಂಶಯಾಸ್ಪದವಾಗಿದ್ದ ಪ್ರಮೇಯಗಳೆಲ್ಲವೂ ಸಂಶಯಮುಕ್ತವಾದವು.
ಪ್ರಗೀತಗಂಧರ್ವವರಃ ಪ್ರನೃತ್ತ-

ಸದಪ್ಸರಾಃ ಸಂತತವಾದಿವಿಪ್ರಃ |
ವಿವೇಚಯದ್ದೇವನೃಪೌಘ ಏಕೋ
ರರಾಜ ರಾಜಾSಖಿಲಸತ್ಕ್ರತೂನಾಮ್ ॥
ಶ್ರೇಷ್ಠ ಗಂಧರ್ವರು ಹಾಡಿದರು. ಉತ್ತಮ ಅಪ್ಸರೆಯರು ಕುಣಿದರು. ಮುನಿಗಳು ನಿರಂತರ ತತ್ತ್ವವಿಚಾರ ಮಾಡಿದರು. ದೇವತೆಗಳ ಮತ್ತು ರಾಜರ ಸಮೂಹಗಳು ತಮ್ಮ ತಮ್ಮ ವೈಶಿಷ್ಟ್ಯಗಳನ್ನು ಪ್ರತ್ಯೇಕವಾಗಿ ತೋರಿದುವು. ಹೀಗೆ ಉತ್ತಮ ಯಜ್ಞಗಳಲ್ಲೆಲ್ಲ ಅತ್ಯುತ್ತಮವಾದ ಈ ಯಜ್ಞವು ಶೋಭಿಸಿತು.
ಸಮಸ್ತದೇವ್ಯಃ ಸಹವಾಸುದೇವ್ಯಃ
ಸ್ವಲಂಕೃತಾಃ ಫುಲ್ಲಮುಖಾರವಿಂದಾಃ |
ವಿಚೇರುರತ್ರೈವ ಸಹಾಪ್ಸರೋಭಿ-
ರ್ನಿಷೇದುರಪ್ಯಚ್ಯುತಸತ್ಕಥಾರಮಾಃ ॥
ಅರಳಿದ ಮುಖಕಮಲವುಳ್ಳ, ಚೆನ್ನಾಗಿ ಅಲಂಕೃತರಾದ ಎಲ್ಲ ದೇವತಾ ಸ್ತ್ರೀಯರೂ ಕೃಷ್ಣಪತ್ನಿಯರೊಂದಿಗೆ ಮತ್ತು ಅಪ್ಸರೆಯರೊಂದಿಗೆ ಯಾಗಶಾಲೆಯಲ್ಲಿ ಸಂಚರಿಸಿದರು. ಹರಿಯ ಉತ್ತಮ ಕಥೆಗಳಲ್ಲಿ ಆಸಕ್ತರಾಗಿ ಕುಳಿತರು.
ನ ವೈ ಮುಮುಕ್ಷುರ್ನ ಬುಭೂಷುರತ್ರ
ನ ವೈ ಪ್ರಪಿತ್ಸುಶ್ಚ ಕುತೋ ಬುಭುಕ್ಷುಃ |
ನಾಸತ್ಯಕಾಮಾ ಅಭವನ್ ಕುತಶ್ಚಿತ್
ಪ್ರದಾತರಿ ಪ್ರಾಜ್ಞವರೇSನಿಲಾತ್ಮಜೇ ॥
ಪ್ರಾಜ್ಞರಲ್ಲಿ ಶ್ರೇಷ್ಠರಾದ ಭೀಮಸೇನನು ಎಲ್ಲವನ್ನೂ ಕೊಡುತ್ತಿದ್ದಾಗ ಮೋಕ್ಷಾರ್ಥಿಯ ಬಯಕೆಯಾಗಲಿ, ಐಶ್ವರ್ಯಾರ್ಥಿಯ ಬಯಕೆಯಾಗಲಿ, ಜ್ಞಾನಾರ್ಥಿಯ ಬಯಕೆಯಾಗಲಿ ಸುಳ್ಳಾದುದಿಲ್ಲ. ಅನ್ನಾರ್ಥಿಯ ಬಯಕೆ ಸುಳ್ಳಾಗುವುದೆಂತು? ಯಾರೊಬ್ಬನ ಬಯಕೆಯೂ ಸುಳ್ಳಾಗಲಿಲ್ಲ.
ದಿನೇ ದಿನೇ ತತ್ರ ಮಹಾನ್ನಪರ್ವತಾಃ
ಸಭಕ್ಷ್ಯಸಾರಾ ರಸವಂತ ಊರ್ಜಿತಾಃ |
ನದ್ಯಃ ಪಯಃ ಸರ್ಪಿರಜಸ್ರಪೂರ್ಣಾಃ
ಸಮಾಕ್ಷಿಕಾದ್ಯಾ ಅಪಿ ಪಾಯಸಹ್ರದಾಃ ॥
ಹ್ರದಾ ಮಹಾಂತಸ್ತ್ರಿದಶಾದಿಯೋಗ್ಯಾಃ
ಸುಯೋಗಯುಕ್ತಾ ಹರಿಚಂದನಾದೇಃ |
ತಥಾSಂಜನಾಲಕ್ತಕಮುಖ್ಯಮಂಡನ-
ದ್ರವ್ಯಾಗ್ರ್ಯವಾಪ್ಯೋ ಮಣಿಕಾಂಚನೋದ್ಭವಾಃ ॥
ಯಥೇಷ್ಟಪಾನಾಶನಭೋಗಶಿಷ್ಟಾಃ
ಸಹಸ್ರಶೋ ಮಾರುತಿನಾ ತು ಕಾರಿತಾಃ |
ಗಂಧಾ ರಸಾದ್ಯಾಶ್ಚ ಸಮಸ್ತಭೋಗಾ
ದಿವೀವ ತತ್ರಾSಸುರತೀವ ಹೃದ್ಯಾಃ ॥
ಪ್ರತಿದಿನವೂ ಅಲ್ಲಿ ರಸಭರಿತವಾದ ಉತ್ತಮ ಅನ್ನದ ದೊಡ್ಡ ಬೆಟ್ಟಗಳು, ಭಕ್ಷ್ಯ ವಿಶೇಷಗಳು, ಜೇನು ಹಾಲು ತುಪ್ಪ ಮುಂತಾದವುಗಳಿಂದ ತುಂಬಿ ಹರಿಯುವ ನದಿಗಳು, ಪಾಯಸದ ಮಡುಹುಗಳು, ಪರಿಮಳದ್ರವ್ಯಯುಕ್ತವಾದ ದೇವಾದಿಯೋಗ್ಯ ಶ್ರೀಗಂಧಾದಿಗಳು ನಿರ್ಮಿತವಾದ ದೊಡ್ಡ ಬಾವಿಗಳು, ಯಥೇಷ್ಟ ಪಾನ-ಭೋಜನ ಯೋಗ್ಯ ಭೋಗವಸ್ತುಗಳಿಂದ ಕೂಡಿದ ಉತ್ತಮವೆನಿಸಿದ ಗಂಧಗಳು, ರಸ ಮುಂತಾದ ಸಮಸ್ತ ಭೋಗಗಳು, ಇವೆಲ್ಲವನ್ನೂ ಸಹಸ್ರಾರು ಸಂಖ್ಯೆಯಲ್ಲಿ ಭೀಮಸೇನನು ಸಿದ್ಧಪಡಿಸಿದ್ದನು. ದೇವಲೋಕದಲ್ಲಿ ಹೇಗೋ ಹಾಗೆ ಆ ಯಾಗಶಾಲೆಯಲ್ಲಿ ಅವು ಮನೋಹರವಾಗಿ ಕಂಗೊಳಿಸಿದವು.
ನೈತಾದೃಶಃ ಕಶ್ಚನ ಭೂತಪೂರ್ವೋ
ಮಖೋ ವಿನಾ ರಾಮವಿರಿಂಚವಜ್ರಿಣಾಮ್ |
ಮಖಾನಿತಿ ಪ್ರೋಚುರಲೇಷಲೋಕಾ
ದೃಷ್ಟ್ವಾ ಮಖಂ ತಂ ಪುರುಷೋತ್ತಮೇರಿತಮ್ ॥
ಶ್ರೀಹರಿಯಿಂದ ನಡೆಸಲ್ಪಟ್ಟ ಆ ಯಜ್ಞವನ್ನು ಕಂಡು ಎಲ್ಲರೂ ಹೇಳಿಕೊಂಡರು. `ಶ್ರೀರಾಮನ, ಚತುರ್ಮುಖನ, ಇಂದ್ರನ ಯಜ್ಞಗಳ ಹೊರತು ಇಂಥ ಯಜ್ಞ ಬೇರೆ ಯಾವುದೂ ಹಿಂದೆ ನಡೆದಿರಲಿಲ್ಲ.
ಸ ಏವಮದ್ಧಾ ಹರಿದೈವತಃ ಕ್ರತುಃ
ಪಂಚಾಶ್ವಮೇಧಾತ್ಮಕ ಉಚ್ಚಕಲ್ಪಃ |
ದಿನೇ ದಿನೇ ಸ್ವರ್ಧಗುಣೋ ಬಭೂವ
ಮುದಾವಹೋ ವತ್ಸರಪಂಚಕತ್ರಯಮ್ ॥
ದಿನೇ ದಿನೇ ಹೆಚ್ಚು ಹೆಚ್ಚು ಗುಣಗಳಿಂದ ಕೂಡಿ, ಉತ್ತಮ ಕಲ್ಪದ ಐದು ಅಶ್ವಮೇಧ ರೂಪವಾಗಿ ಹದಿನೈದು ವರ್ಷಪರ್ಯಂತ ಆ ವಿಷ್ಣು ದೇವತಾಕವಾದ ಯಜ್ಞ ಚೆನ್ನಾಗಿ ಸಂತೋಷದಾಯಕವಾಗಿ ನಡೆಯಿತು.
ಯಜ್ಞಾವಸಾನೇ ನಿಖಿಲಾಶ್ಚ ಪಾಂಡವಾಃ
ಕೃಷ್ಣಾ ಚ ಪೃಥ್ವೀಮಖಿಲಾಂ ಸವಿತ್ತಾಮ್ |

ಮಾಂಗಲ್ಯಮಾತ್ರಂ ದಯಿತಾಶರೀರೇ
ನಿಧಾಯ ಸರ್ವಾಭರಣಾನಿ ಚೈವ ॥
ಸಮರ್ಪಯಾಮಾಸುರಜೇ ವರೇಣ್ಯೇ
ವ್ಯಾಸೇ ವಿಭಾಗಾಯ ಯಥೋಕ್ತಮೃತ್ವಿಜಾಮ್ |
ಪ್ರಿಯೋ ವಿಭಾಗೋ ಯದಮುಷ್ಯ ವಿಷ್ಣೋ-
ರತೋ ವಿಭಾಗಾರ್ಥಮಿವಾರ್ಪಯಂಸ್ತೇ ॥
ಹೃದಾ ಸಮಸ್ತಂ ಹರಯೇಽರ್ಪಿತಂ ತೈಃ
ಸ ಹಿ ದ್ವಿಜಸ್ಥೋಽಪಿ ಸಮಸ್ತಕರ್ತಾ |
ದೇಹೇಂದ್ರಿಯಪ್ರಾಣಮನಾಂಸಿ ಚೇತನೈಃ
ಸಹೈವ ತಸ್ಮಾ ಅತಿಸೃಜ್ಯ ನೇಮುಃ ॥
ತ್ವದೀಯಮೇತನ್ನಿಖಿಲಂ ವಯಂ ಚ
ನಾಸ್ತ್ಯಸ್ಮದೀಯಂ ಕ್ವ ಚ ಕಿಂಚಿನೇಶ |
ಸ್ವತಂತ್ರ ಏಕೋಽಸಿ ನ ಕಶ್ಚಿದನ್ಯಃ
ಸರ್ವತ್ರ ಪೂರ್ಣೋಽಸಿ ಸದೇತಿ ಹೃಷ್ಟಾಃ ॥
ಯಾಗದ ಕೊನೆಯಲ್ಲಿ ಎಲ್ಲ ಪಾಂಡವರೂ ದ್ರೌಪದಿಯೂ ಕೋಶ ಸಮೇತವಾಗಿ ಸಮಸ್ತ ಪೃಥಿವಿಯನ್ನೂ, ಪತ್ನಿಯರ ಮೈಯಲ್ಲಿ ಮಾಂಗಲ್ಯ ಒಂದನ್ನುಳಿದು ಎಲ್ಲ ಆಭರಣಗಳನ್ನೂ ಸರ್ವೋತ್ತಮರಾದ ವೇದವ್ಯಾಸರಲ್ಲಿ ಋತ್ವಿಜರಿಗೆ ವಿಧ್ಯುಕ್ತವಾಗಿ ವಿಭಾಗ ಮಾಡಿಕೊಡುವುದಕ್ಕಾಗಿ ಸಮರ್ಪಿಸಿದಂತೆ ತೋರಿಕೊಂಡರು. ಏಕೆಂದರೆ ಈ ವೇದವ್ಯಾಸರೂಪಿ ಹರಿಗೆ ವಿಭಾಗ ಮಾಡುವುದು ಇಷ್ಟತಾನೆ? ವಸ್ತುತಃ ಆ ಹರಿಯೇ ಎಲ್ಲ ಋತ್ವಿಜರಲ್ಲಿದ್ದು ಎಲ್ಲ ಋತ್ವಿಜರ ಕರ್ಮವನ್ನೂ ಮಾಡುವವನಾದ್ದರಿಂದ ಅವನಿಗೇ ಎಲ್ಲವನ್ನೂ ಮನಸ್ಸಿನಿಂದ ಅರ್ಪಿಸಿದರು. ಅವರು ಹೇಳಿದರು, `ಪ್ರಭುವೇ, ಇದೆಲ್ಲವೂ ನಿನ್ನದೇ. ನಾವೂ ನಿನ್ನವರೆ. ನಮ್ಮದು ಎಂದು ಏನೂ ಎಲ್ಲಿಯೂ ಇಲ್ಲ. ನೀನೊಬ್ಬನೇ ಸ್ವತಂತ್ರ. ಬೇರೆ ಯಾರೂ ಅಲ್ಲ. ನೀನೇ ಎಲ್ಲ ಕಡೆ ಯಾವಾಗಲೂ ಸಕಲ ಗುಣಪೂರ್ಣನಾಗಿರುವೆ' ಹೀಗೆ ಹೇಳುತ್ತ ಚೇತನಗಳೊಂದಿಗೆ ದೇಹ, ಇಂದ್ರಿಯ, ಪ್ರಾಣ, ಮನಸ್ಸುಗಳನ್ನೂ ಹರಿಗೆ ಅರ್ಪಿಸಿ ಸಂತುಷ್ಟರಾಗಿ ನಮಿಸಿದರು.
ತತೋ ವಿಭಕ್ತೇ ಮುನಯೋಽವದಂಸ್ತೇ
ಪ್ರತ್ಯರ್ಪಯಾಮೋ ವಯಮೇಷು ರಾಜ್ಯಮ್ |
ಪೂರ್ಣಾ ಹಿರಣ್ಯೇನ ವಯಂ ಧರಾಯಾಃ
ಪ್ರಪಾಲನೇ ಯೋಗ್ಯತಮಾ ಇಮೇ ಹಿ ॥
ಋತ್ವಿಜರಿಗೆ ದಕ್ಷಿಣೆಯನ್ನು ವಿಭಾಗ ಮಾಡಿದಾಗ ಅವರು ಹೇಳಿದರು: ನಾವು ರಾಜ್ಯವನ್ನು ಪಾಂಡವರಿಗೇ ಹಿಂತಿರುಗಿ ಕೊಡುತ್ತೇವೆ. ಏಕೆಂದರೆ ಭೂಮಿಯನ್ನು ಆಳುವುದಕ್ಕೆ ಅವರೇ ಯೋಗ್ಯರು. ನಾವು ಸುವರ್ಣದಿಂದಲೇ ತೃಪ್ತರಾಗಿದ್ದೇವೆ.
ಪಾರ್ಥಾಃ ಸಭಾರ್ಯಾಃ ದ್ವಿಜವಾಕ್ಯಮೇತ-
ನ್ನಿಶಮ್ಯ ಕೃಷ್ಣಾಯ ಪುನಃ ಪ್ರಣಮ್ಯ |
ಊಚುಸ್ತಪೋ ನೋಽಸ್ತು ವನೇಽರ್ಪಯಿತ್ವಾ
ರಾಜ್ಯಂ ಮಖಾಂತೇ ತ್ವಯಿ ಧರ್ಮಲಬ್ಧಮ್ ॥
ಸಪತ್ನೀಕರಾದ ಪಾಂಡವರು ಮುನಿಗಳ ಈ ಮಾತನ್ನು ಕೇಳಿ ವೇದವ್ಯಾಸರಿಗೆ ಪುನಃ ನಮಿಸಿ ಹೇಳಿದರು- ನಾವು ಧರ್ಮದಿಂದ ಗಳಿಸಿದ ಈ ರಾಜ್ಯವನ್ನು ಯಾಗದ ಕೊನೆಯಲ್ಲಿ ನಿಮಗೇ ಅರ್ಪಿಸಿ ಕಾಡಿಗೇ ಹೋಗುವೆವು. ನಮಗೆ ಆ ಕಾಡಿನಲ್ಲಿ ತಪಸ್ಸೇ ಇರಲಿ'.
ಇತೀರಿತಃ ಪ್ರಾಹ ಸ ಬಾದರಾಯಣೋ
ಮುನೀಶ್ವರೈರಪ್ಯನುಯಾಚಿತಃ ಪ್ರಭುಃ |
ಹಿರಣ್ಯಮೇವ ಸ್ವಮಿದಂ ಮುನೀನಾಂ
ಮದಾಜ್ಞಯಾ ಭುಙ್ಧ್ವಮಶೇಷರಾಜ್ಯಮ್ ॥
ಪಾಂಡವರು ಹೀಗೆ ಹೇಳಿದಾಗ ಪ್ರಭು ಬಾದರಾಯಣರು ಮುನೀಶ್ವರರಿಂದ ಪ್ರಾರ್ಥಿತರಾಗಿ ನುಡಿದರು: `ಮುನಿಗಳಿಗೆ ಈ ಸುವರ್ಣ ಸಂಪತ್ತೇ ಇರಲಿ. ನನ್ನಾಜ್ಞೆಯಿಂದ ನೀವೇ ಸಮಸ್ತ ರಾಜ್ಯವನ್ನು ಭೋಗಿಸಿರಿ'.
ಸಮರ್ಪಿತಂ ಮೇ ಫಲವಚ್ಚ ತತ್ ಸ್ಯಾತ್
ಪುನರ್ಗ್ರಹೋ ನೈವ ಚ ದೋಷಕಾರೀ |
ಪಿತಾಮಹೋಽಹಂ ಭವತಾಂ ವಿಶೇಷತೋ
ಗುರುಃ ಪತಿಶ್ಚೈವ ತತೋ ಮದರ್ಹಥ ॥
ಆಗ ನನಗೆ ನೀವು ಎಲ್ಲವನ್ನೂ ಸಮರ್ಪಿಸಿದುದು ಸಫಲವಾಗುವುದು. ಒಮ್ಮೆ ಸಮರ್ಪಿಸಿದ್ದನ್ನು ಪುನಃ ತಮಗಾಗಿ ಸ್ವೀಕರಿಸಿದರೂ ನಿಮಗೆ ಅದು ದತ್ತಾಪಹಾರ ದೋಷಕ್ಕೆ ಕಾರಣವಾಗದು. ಏಕೆಂದರೆ ನಾನು ನಿಮಗೆ ತಾತ. ವಿಶೇಷವಾಗಿ ಗುರು ಮತ್ತು ಸ್ವಾಮಿ. ಅದರಿಂದ ನೀವು ನನ್ನಿಂದ ರಾಜ್ಯವನ್ನು ಪಡೆಯಲು ಅರ್ಹರಾಗಿರುವಿರಿ.
ಇತೀರಿತಾಸ್ತೇ ಪ್ರತಿಪದ್ಯ ರಾಜ್ಯಂ
ದದುರ್ಹಿರಣ್ಯಂ ನಿಖಿಲಂ ಚ ತಸ್ಮೈ |
ವಿಭಜ್ಯ ವಿಪ್ರಾನ್ ಸ ನಿಜಂ ತು ಭಾಗ-

मदात् ಪೃಥಾಯೈ ನಿಖಿಲಂ ಪ್ರಸನ್ನಃ ॥
ವೇದವ್ಯಾಸರು ಹೀಗೆ ಹೇಳಿದಾಗ ಪಾಂಡವರು ರಾಜ್ಯವನ್ನು ಸ್ವೀಕರಿಸಿ ಎಲ್ಲ ಸುವರ್ಣವನ್ನು ಅವರಿಗೆ ನೀಡಿದರು. ಅವರು ಅದನ್ನು ಋತ್ವಿಜರಿಗೆ ಹಂಚಿದರು. ವೇದವ್ಯಾಸರು ತಮಗೆ ಸಂದ ಭಾಗವೆಲ್ಲವನ್ನೂ ಪ್ರಸನ್ನರಾಗಿ ಕುಂತಿಗೆ ಕೊಟ್ಟರು.
ಸಭಾರ್ಯಕಾಣಾಂ ವರರತ್ನಭೂಷಣಾ-
ನ್ಯಶೇಷತಃ ಪುತ್ರುಭುವಾಂ ಪ್ರದಾಯ |
ಪೃಥಕ್ಪೃಥಗ್ ಯೋಗ್ಯವರಾನಥೈಭ್ಯಃ
ಪ್ರಾದಾತ್ ಪ್ರಭುಸ್ತೇ ಮುದಿತಾಃ ಪ್ರಣೇಮುಃ ॥
ಪ್ರಭು ವೇದವ್ಯಾಸರು ಪಾಂಡವರಿಗೂ ಅವರ ಪತ್ನಿಯರಿಗೂ ಎಲ್ಲ ಉತ್ತಮ ರತ್ನಾಭರಣಗಳನ್ನು ಕೊಟ್ಟು, ಪ್ರತ್ಯೇಕ ಪ್ರತ್ಯೇಕವಾಗಿ ಅವರಿಗೆ ಯೋಗ್ಯವಾದ ವರಗಳನ್ನು ನೀಡಿದರು. ಸಂತುಷ್ಟರಾದ ಪಾಂಡವರು ವ್ಯಾಸರನ್ನು ನಮಿಸಿದರು.
ತದ್ಯಜ್ಞಪಂಚಕಮಜಸ್ರಿಗುಣಾಂ ಸ ಏಭ್ಯಃ
ಸದ್ದಕ್ಷಿಣಾಂ ಕ್ರತುಪತಿರ್ನಿಖಿಲಾಮವಾಪ್ಯ |
ಚಕ್ರೇऽಶ್ವಮೇಧತ್ರಯಮೇಕಮೇಕಂ
ತೇಷಾಂ ಹರಿರ್ಬಹುಸುವರ್ಣಕನಾಮಧೇಯಮ್ ॥
ಯಜ್ಞೇಶ್ವರರಾದ ವೇದವ್ಯಾಸರು `ಬಹುಸುವರ್ಣಕ' ನಾಮಕವಾದ ಐದು ಯಜ್ಞಗಳನ್ನೂ, ಅವುಗಳಿಂದ ಮೂರುಪಾಲು ಉತ್ತಮ ದಕ್ಷಿಣೆಯನ್ನೂ ಪಡೆದು, ಅವುಗಳನ್ನು ಒಂದೊಂದನ್ನೂ ಮೂರು ಅಶ್ವಮೇಧಗಳಾಗುವಂತೆ ಮಾಡಿದರು.
* * * * *
ಎಂಬತ್ತೇಳನೆಯ ಅಧ್ಯಾಯ
ಅಶ್ವಮೇಧ ಯಾಗದ ಸಂದಿಗ್ಧಿಯ ವರ್ಣನೆ.
ವೈಶಂಪಾಯನಃ
ತಸ್ಮಿನ್ ಯಜ್ಞೇ ಪ್ರವೃತ್ತೇ ತು ವಾಗ್ಮಿನೋ ಹೇತುವಾದಿನಃ |
ಹೇತುವಾದಾನ್ ಬಹೂನ್ ಪ್ರಾಹುಃ ಪರಸ್ಪರಜಿಗೀಷವಃ ॥1॥
ವೈಶಂಪಾಯನ ಯುಧಿಷ್ಠಿರನ ಮಹಾಯಜ್ಞವನ್ನು ಆರಂಭಿಸಲು ಬಂದಿರುವ ವಾಗ್ಮಿಗಳಾದ ಹೇತುವಾದಿಗಳು ಎದುರಾಳಿಗಳನ್ನು ಜಯಿಸುವ ದೃಷ್ಟಿಯಿಂದ ಅನೇಕ ರೀತಿಯಾದ ಯುಕ್ತಿಬದ್ಧವಾದ ವಾದಗಳನ್ನು ಹೇಳುತ್ತಿದ್ದರು.
ದದೃಶುಸ್ತಂ ನೃಪತಯೋ ಯಜ್ಞಸ್ಯ ವಿಧಿಮುತ್ತಮಮ್ |
ದೇವೇಂದ್ರಸ್ಯೇವ ವಿಹಿತಂ ಭೀಮೇನ ಕುರುನಂದನ ॥2॥
ಯಜ್ಞ ಸಮಾರಂಭದಲ್ಲಿ ಭಾಗವಹಿಸಲು ಆಗಮಿಸಿದ್ದ ರಾಜರೆಲ್ಲರೂ ಭೀಮಸೇನನಿಂದ ನಿರ್ಮಿತವಾಗಿದ್ದ ಯಜ್ಞಶಾಲೆಯ ಸೌಂದರ್ಯವನ್ನು ಇಂದ್ರನ ಯಜ್ಞಶಾಲೆಗೆ ಸದೃಶವನ್ನಾಗಿ ನೋಡಿದರು. ಉತ್ತಮವಾದ ವಿಧಿ-ವಿಧಾನಗಳಿಂದ ಆ ಯಜ್ಞವು ಕೂಡಿತ್ತು.
ದದೃಶುಸ್ತೋರಣಾನ್ಯತ್ರ ಶಾತಕುಂಭಮಯಾನಿ ತೇ |
ಶಯ್ಯಾಸನವಿಹಾರಾಂಶ್ಚ ಸುಬಹೂನ್ ರತ್ನಭೂಷಿತಾನ್ ॥3॥
ಆ ಯಜ್ಞಶಾಲೆಯ ಸುತ್ತಲೂ ಬಂಗಾರಮಯವಾದ ತೋರಣಗಳು ಹಾರಾಡುತ್ತಿದ್ದವು. ಹಂಸತೂಲಿಕಾತಲ್ಪಗಳನ್ನೂ, ರತ್ನಖಚಿತವಾದ ಸಿಂಹಾಸನಗಳನ್ನೂ, ರಮಣೀಯವಾದ ವಿಹಾರಸ್ಥಾನಗಳನ್ನೂ, ಅನೇಕ ರತ್ನರಾಶಿಗಳನ್ನೂ ಆಗಮಿಸಿರುವ ರಾಜರೆಲ್ಲರೂ ನೋಡುತ್ತಿದ್ದರು.
ಘಟಾನ್ ಪಾತ್ರೀಃ ಕಟಾಹಾನಿ ಕಲಶಾನ್ ವರ್ಧಮಾನಕಾನ್ |
ನ ತೇ ಕಿಂಚಿದಸೌವರ್ಣಮಪಶ್ಯಂಸ್ತತ್ರ ಪಾರ್ಥಿವಾಃ ॥4॥
ಕೊಡಗಳು, ಪಾತ್ರೆಗಳು, ಕಡಾಯಿಗಳು, ಕಲಶಗಳು, ಶರಾವಗಳು (ಮೊರಗಳು), ದೊಡ್ಡ ದೊಡ್ಡ ಆಕಾರದಿಂದ ಕೂಡಿದವಾಗಿದ್ದವು. ಈ ಯಾವ ಪದಾರ್ಥಗಳೂ ಚಿನ್ನ ಬಿಟ್ಟು ಬೇರೆ ಪದಾರ್ಥಗಳಿಂದ ರಚಿಸಿದವಾಗಿರಲಿಲ್ಲ. ಇಂತಹ ಪದಾರ್ಥಗಳನ್ನು ಕಂಡು ರಾಜರೆಲ್ಲರೂ ಆಶ್ಚರ್ಯಚಕಿತರಾದರು.
ಯೂಪಾಂಶ್ಚ ಶಾಸ್ತ್ರವಿಹಿತಾನ್ ತಾರವಾನ್ ಹೇಮಭೂಷಿತಾನ್ |
ಉಪಕ್ಲೃಪ್ತಾನ್ ಯಥಾಕಾಲಂ ವಿಧಿವದ್ ಭೂರಿವರ್ಚಸಃ ॥5॥
ಆ ಯಜ್ಞದ ಮಂಟಪದಲ್ಲಿ ಖದಿರ ಮೊದಲಾದ ಮರಗಳಿಂದ ಶಾಸ್ತ್ರಬದ್ಧವಾಗಿ ನಿರ್ಮಿತವಾದ ಬಂಗಾರದಿಂದ ಅಲಂಕೃತವಾದ ಯೂಪಗಳು ಇದ್ದವು. ಯಜ್ಞಕ್ಕೆ ಸಂಬಂಧಪಟ್ಟ ಯೂಪವೇ ಮೊದಲಾದ ಸಲಕರಣೆಗಳು ಯಾವ ಯಾವ ಮರಗಳಿಂದ, ಯಾವ ಯಾವ ಕಾಲದಲ್ಲಿ ವಿಧಿಬದ್ಧವಾಗಿ ನಿರ್ಮಿಸಬೇಕೋ ಆ ಕ್ರಮಕ್ಕನುಗುಣವಾಗಿ ನಿರ್ಮಿಸಲ್ಪಟ್ಟಿದ್ದವು. ಅಂತಹ ಯೂಪಸ್ತಂಭಗಳನ್ನು ಶ್ರೇಷ್ಠರಾದ ರಾಜರು ಕಂಡು ವಿಸ್ಮಿತರಾದರು.
ಸ್ಥಲಜಾ ಜಲಜಾ ಯೇ ಚ ಪಶವೋ ಯೇ ಚ ಸಂಭೃತಾಃ |
ಸರ್ವಾನೇವ ಸಮಾನೀತಾನ್ ತಾನಪಶ್ಯಂತ ಭೂಮಿಪಾಃ ॥6॥
ಭೂಮಿಯ ಮೇಲೆ ಸಂಚರಿಸುವ, ನೀರಿನಲ್ಲಿ ಸಂಚರಿಸುವ ಯಾವ ಯಾವ ಪ್ರಾಣಿಗಳಿವೆಯೋ ಆ ಎಲ್ಲ ಪ್ರಾಣಿಗಳನ್ನು ಅಲ್ಲಿಗೆ ಕರೆದು ತಂದಿದ್ದರು. ಅವುಗಳನ್ನು ಆಶ್ಚರ್ಯದಿಂದ ರಾಜರು ನೋಡಿದರು.
ಗಾಶ್ಚೈವ ಮಹಿಷೀಶ್ಚೈವ ತಥಾ ವೃದ್ಧಸ್ತ್ರಿಯೋऽಪಿ ಚ |
ಔದಕಾನಿ ಚ ಸತ್ವಾನಿ ಶ್ವಾಪದಾನಿ ವಯಾಂಸಿ ಚ ॥7॥

ಜರಾಯುಜಾನ್ಯಂಡಜಾನಿ ಸ್ವೇದಜಾನ್ಯುದ್ಭಿಜಾನಿ ಚ |
ಪರ್ವತಾನುಪವನ್ಯಾನಿ ಭೂತಾನಿ ದದೃಶುಶ್ಚ ತೇ ॥8॥
ಹಸುಗಳು, ಎಮ್ಮೆಗಳು, ವೃದ್ಧಸ್ತ್ರೀಯರು, ಜಲಚರ ಪ್ರಾಣಿಗಳು, ಮಾಂಸಾಹಾರಿ ಪ್ರಾಣಿಗಳು, ಪಕ್ಷಿಗಳು, ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ ಎಂಬ ನಾಲ್ಕು ಪ್ರಕಾರವಾದ ಪ್ರಾಣಿಗಳು, ಪರ್ವತಜೀವಿಗಳಾದ ಪ್ರಾಣಿಗಳು, ಸಮುದ್ರತೀರದಲ್ಲಿ ವಾಸಿಸುವ ಪ್ರಾಣಿಗಳು - ಈ ಎಲ್ಲ ಪ್ರಾಣಿಗಳನ್ನು ಯಜ್ಞವನ್ನು ವೀಕ್ಷಿಸುವ ದೃಷ್ಟಿಯಿಂದ ಆಗಮಿಸಿದ ರಾಜರು ಆ ಪರಿಸರದಲ್ಲಿ ಕಂಡರು.
ಸರ್ವೇ ರಾಜನ್ ಯಥಾನ್ಯಾಯಮಾನೀತಾ ನೃಪಶಾಸನಾತ್ ॥9॥
ಜನಮೇಜಯ ರಾಜನೇ, ಯುಧಿಷ್ಠಿರನ ಆದೇಶದಂತೆ ಎಲ್ಲ ರೀತಿಯಾದ ಜಗತ್ತಿನ ಪದಾರ್ಥಗಳು ಭೃತ್ಯರಿಂದ ಅಲ್ಲಿ ತರಲ್ಪಟ್ಟಿದ್ದವು.
ಏವಂ ಪ್ರಮುದಿತಂ ಸರ್ವಂ ಪಶುಗೋಧನಧಾನ್ಯತಃ |
ಯಜ್ಞವಾಟಂ ನೃಪಾ ದೃಷ್ಟ್ವಾ ಪರಂ ವಿಸ್ಮಯಮಾಗಮನ್ ॥10॥
ಈ ರೀತಿಯಾಗಿ ಪಶು, ಗೋವು, ಧನ, ಧಾನ್ಯಗಳಿಂದ ಯಜ್ಞಮಂಟಪವು ಸಮೃದ್ಧಿಯಿಂದ ತುಂಬಿತ್ತು. ಇಂತಹ ಎಲ್ಲಿಯೂ ಕಾಣದ, ಪರಮಾದ್ಭುತ ಪದಾರ್ಥಗಳಿಂದ ಕೂಡಿದ ಪರಿಸರವನ್ನು ಕಂಡು ಸಮಸ್ತರಾಜರು ಆಶ್ಚರ್ಯಚಕಿತರಾದರು.
ಅನಿಶಂ ದೀಯತೇ ಚ ಸ್ಮ ತತ್ರ ಭೋಜ್ಯಂ ಪೃಥಗ್ವಿಧಮ್ |
ಬ್ರಾಹ್ಮಣಾನಾಂ ವಿಶಾಂ ಚೈವ ಬಹುನಿಷ್ಪಾನ್ನಮೃದ್ಧಿಮತ್ ॥11॥
ಬಗೆ ಬಗೆಯಾದ ಭೋಜ್ಯಗಳಿಂದ ಕೂಡಿದ ಅನ್ನವನ್ನು ನಿರಂತರವೂ ಅಲ್ಲಿ ಬಂದವರಿಗೆಲ್ಲ ದಾನ ಮಾಡುತ್ತಿದ್ದರು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಹೀಗೆ ಎಲ್ಲರಿಗೂ ಮೃಷ್ಟಾನ್ನ ಭೋಜನದ ವ್ಯವಸ್ಥೆಯು ಸಮೃದ್ಧವಾಗಿತ್ತು. ಅನ್ನದ ಸುತ್ತಲೂ ತೊವ್ವೆ, ಬಗೆ ಬಗೆಯ ಶಾಕಪದಾರ್ಥಗಳಿಂದ ನಿರ್ಮಿತವಾದ ಪದಾರ್ಥಗಳು ಅತ್ಯಂತ ಶ್ರದ್ಧೆಯಿಂದ ರಚಿಸಲ್ಪಟ್ಟಿದ್ದವು.
ಪೂರ್ಣೇ ಶತಸಹಸ್ರೇ ತು ವಿಪ್ರಾಣಾಂ ತತ್ರ ಭುಂಜತಾಮ್ |
ದುಂದುಭಿರ್ಮೇಘನಿರ್ಘೋಷೋ ಮುಹುರ್ಮುಹುರತಾಡ್ಯತ ॥12॥
ಒಂದು ಬಾರಿಗೆ ಲಕ್ಷಜನ ಬ್ರಾಹ್ಮಣರ ಊಟವಾದ ಕೂಡಲೇ ಮೇಘಗರ್ಜನೆಗೆ ಸದೃಶವಾದ ಶಬ್ದವುಳ್ಳ ದುಂದುಭಿಗಳನ್ನು ಬಾರಿಸುತ್ತಿದ್ದರು.
ವಿನನಾದಾಸಕೃತ್ ಸೋಽಥ ದಿವಸೇ ದಿವಸೇ ತಥಾ |
ಏವಂ ಸ ವವೃತೇ ಯಜ್ಞೋ ಧರ್ಮರಾಜಸ್ಯ ಧೀಮತಃ ॥13॥
ದಿನಗಳು ಉರುಳಿದಂತೆ ಅಂತಹ ಲಕ್ಷ ಬ್ರಾಹ್ಮಣರ ಭೋಜನವನ್ನು ಸೂಚಿಸುವ ದುಂದುಭಿಶಬ್ದಗಳು ಹೆಜ್ಜೆ ಹೆಜ್ಜೆಗೂ ಕೇಳಿಸುತ್ತಲೇ ಇದ್ದವು. ಧರ್ಮರಾಜನ ಅಶ್ವಮೇಧಯಾಗವು ಪ್ರತಿದಿವಸವೂ ಇಂತಹ ಸಮೃದ್ಧಿಯಿಂದ ನಡೆಯುತ್ತಿತ್ತು.
ಅನ್ನಸ್ಯ ಸುಬಹೂನ್ ರಾಜನ್ನುತ್ಸರ್ಗಾನ್ ಪರ್ವತೋಪಮಾನ್ |
ದಧಿಕುಲ್ಯಾಶ್ಚ ದದೃಶುಃ ಸರ್ಪಿಷಶ್ಚ ಹ್ರದಾಂಜನಾಃ ॥14॥
ಪ್ರತಿದಿವಸವೂ ಪರ್ವತದಂತೆ ಅನೇಕ ಅನ್ನದ ರಾಶಿಗಳನ್ನು ಪೇರಿಸುತ್ತಿದ್ದರು. ಮೊಸರಿನ ಕಾಲುವೆಗಳನ್ನು, ತುಪ್ಪದ ಕೊಳಗಗಳನ್ನು ರಾಜರು ನೋಡಿದರು.
ಜಂಬೂದ್ವೀಪೋ ಹಿ ಸಕಲೋ ನಾನಾಜಾನಪದೋ ಜನಃ |
ರಾಜನ್ನದೃಶ್ಯತೈಕಸ್ಥೋ ರಾಜ್ಞಸ್ತಸ್ಯ ಮಹಾಕ್ರತೌ ॥15॥
ಧರ್ಮರಾಜನ ಯಜ್ಞದಲ್ಲಿ ನಾನಾ ದೇಶಗಳಿಂದ ಜನರು ಬರುವುದನ್ನು ನೋಡಿದರೆ ಜಂಬೂದ್ವೀಪವೆಲ್ಲವೂ ಒಂದೇ ಜಾಗದಲ್ಲಿ ಸೇರಿರುವಂತೆ ಕಾಣಿಸುತ್ತಿತ್ತು.
ತತ್ರ ಜಾತಿಸಹಸ್ರಾಣಿ ಪುರುಷಾಣಾಂ ತತಸ್ತತಃ |
ಗೃಹೀತ್ವಾ ಧನಮಾಜಗ್ಮುರ್ಬಹೂನಿ ಭರತರ್ಷಭ ॥16॥
ಆ ಯಜ್ಞದ ಪರಿಸರದಲ್ಲಿ ಸಾವಿರಾರು ಜಾತಿಯ ಪುರುಷರು ಸಮೃದ್ಧವಾದ ಐಶ್ವರ್ಯಗಳೊಡನೆ ಅಲ್ಲಿಗೆ ಆಗಮಿಸಿದ್ದರು.
ರಾಜಾನಃ ಸ್ರಗ್ವಿಣಶ್ಚಾಪಿ ಸುಮೃಷ್ಟಮಣಿಕುಂಡಲಾಃ |
ಪರ್ಯವೇಷತ್ ದ್ವಿಜಾಗ್ರ್ಯಾಂಸ್ತಾನ್ ಶತಶೋಽಥ ಸಹಸ್ರಶಃ ॥17॥
ಪ್ರತಿಯೊಬ್ಬ ರಾಜರೂ ಬಂಗಾರದಿಂದ ನಿರ್ಮಿತವಾದ, ಶ್ರೇಷ್ಠ ಮಣಿಗಳಿಂದ ವಿರಾಜಮಾನವಾದ ಹಾರಗಳನ್ನೂ, ಕುಂಡಲಗಳನ್ನೂ ಹಾಕಿಕೊಂಡು ಶೋಭಿಸುತ್ತಿದ್ದರು. ಆ ರಾಜರು ಅಲ್ಲಿರುವ ಸಾವಿರಾರು ವಿಪ್ರರಿಗೆ ಸ್ವಯಂ ತಾವೇ ಊಟವನ್ನು ಬಡಿಸುತ್ತಿದ್ದರು.
ವಿವಿಧಾನ್ಯನ್ನಪಾನಾನಿ ಪುರುಷಾ ಯೇಽನುಯಾಯಿನಃ |
ತೇಷಾಂ ನೃಪೋಪಭೋಗ್ಯಾನಿ ಬ್ರಾಹ್ಮಣಾನಾಂ ದದುಃ ಸ್ಮ ಹ ॥18॥
ಬಗೆಬಗೆಯಾದ ಅನ್ನ, ಪಾಯಸ, ಪಾನೀಯ ಮೊದಲಾದವುಗಳನ್ನು ಈ ರಾಜರ ಸೇವಕರು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದರು. ಶ್ರೇಷ್ಠ ರಾಜರು ಸ್ವೀಕರಿಸುವ ಆಹಾರಗಳೆಲ್ಲವೂ ಎಲ್ಲರಿಗೂ ದಾನ ಮಾಡಲ್ಪಟ್ಟವು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅನ್ನಾದಿಪರಿವೇಷಣಂ ನಾಮ ಸಪ್ತಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೆಂಟನೆಯ ಅಧ್ಯಾಯ
ಕೃಷ್ಣನು ಬಲರಾಮಾದಿಗಳಿಂದ ಸಹಿತನಾಗಿ ಯುಧಿಷ್ಠಿರನ ಅಶ್ವಮೇಧ ಯಾಗಕ್ಕಾಗಿ ಹಸ್ತಿನಾವತಿಯನ್ನು ಕುರಿತು ಆಗಮಿಸಿದುದು. ಯುಧಿಷ್ಠಿರನು ನಾನಾ ದೇಶಗಳಿಂದ ಬರುತ್ತಿರುವ ರಾಜರನ್ನು ಯಥೋಚಿತವಾಗಿ ಸತ್ಕರಿಸುವಂತೆ ಮಣಲೂರಿನಿಂದ ಬರುವ

ಬಭ್ರುವಾಹನನಿಗೆ, ಸನ್ಮಾನ ಮಾಡುವಂತೆ ಭೀಮಸೇನನಿಗೆ ಆದೇಶವನ್ನಿತ್ತುದು.
ವೈಶಂಪಾಯನಃ
ಸಮಾಗತಾನ್ ವೇದವಿದೋ ರಾಜ್ಞಶ್ಚ ಪೃಥಿವೀಶ್ವರಾನ್ |
ದೃಷ್ಟ್ವಾ ಯುಧಿಷ್ಠಿರೋ ರಾಜಾ ಭೀಮಸೇನಮಥಾಬ್ರವೀತ್ ॥1॥
ವೈಶಂಪಾಯನ ಆಗಮಿಸುತ್ತಿರುವ ಬ್ರಾಹ್ಮಣರನ್ನೂ, ಪೃಥಿವೀಶ್ವರರಾದ ರಾಜರನ್ನೂ ರಾಜನಾದ ಯುಧಿಷ್ಠಿರನು ನೋಡುತ್ತಾ ಭೀಮಸೇನನಿಗೆ ಇಂತು ನುಡಿದನು.
ಯುಧಿಷ್ಠಿರಃ
ಉಪಯಾತಾ ನರವ್ಯಾಘ್ರಾ ಯ ಇಮೇ ಜಗತೀಶ್ವರಾಃ |
ಏತೇಷಾಂ ಕ್ರಿಯತಾಂ ಪೂಜಾ ಪೂಜಾರ್ಹಾ ಹಿ ನರೇಶ್ವರಾಃ ॥2॥
ಯುಧಿಷ್ಠಿರ ಭೀಮಸೇನನೇ, ಪೂಜಿಸಲು ಯೋಗ್ಯರಾದ ಅನೇಕ ಭೂಪಾಲಕರು ಈ ಯಜ್ಞದ ಮಂಟಪಕ್ಕೆ ಆಗಮಿಸುತ್ತಿದ್ದಾರೆ. ಅವರನ್ನು ಯಥಾಯೋಗ್ಯವಾಗಿ ನೀನು ಸತ್ಕರಿಸು.
ವೈಶಂಪಾಯನಃ
ಇತ್ಯುಕ್ತಃ ಸ ತಥಾ ಚಕ್ರೇ ನರೇಂದ್ರೇಣ ಯಶಸ್ವಿನಾ |
ಭೀಮಸೇನೋ ಮಹಾರಾಜ ಯಮಾಭ್ಯಾಂ ಸಹ ಕೌರವ ॥3॥
ವೈಶಂಪಾಯನ ಮಹಾಯಶಸ್ಸಂಪನ್ನನಾದ ಧರ್ಮರಾಜನು ಭೀಮಸೇನನಿಗೆ ಹೀಗೆ ಆದೇಶಿಸುತ್ತಿರಲು ಜನಮೇಜಯನೇ, ಭೀಮಸೇನನು ನಕುಲ-ಸಹದೇವರಿಂದ ಕೂಡಿಕೊಂಡು ಯಥಾಯೋಗ್ಯವಾಗಿ ಆಗಮಿಸಿದವರನ್ನು ಸತ್ಕರಿಸುತ್ತಿದ್ದನು.
ಅಥಾಭ್ಯಗಚ್ಛದ್ ಗೋವಿಂದೋ ವೃಷ್ಣಿಭಿಃ ಸಹ ಧರ್ಮಜಮ್ |
ಬಲದೇವಂ ಪುರಸ್ಕೃತ್ಯ ಸರ್ವಪ್ರಾಣಭೃತಾಂ ವರಃ ॥4॥
ಯುಯುಧಾನೇನ ಸಹಿತಃ ಪ್ರದ್ಯುಮ್ನೇನ ಗದೇನ ಚ |
ನಿಶಠೇನಾಥ ಸಾಂಬೇನ ತಥೈವ ಕೃತವರ್ಮಣಾ ॥5॥
ಬಳಿಕ ಇದೇ ಪ್ರಸಂಗದಲ್ಲಿ ವೃಷ್ಣಿಕುಲದವರಿಂದ ಸಹಿತನಾದ ಗೋವಿಂದನು ಬಲರಾಮನಿಂದ ಕೂಡಿಕೊಂಡು ಧರ್ಮಜನ ಯಜ್ಞಮಂಟಪಕ್ಕೆ ಆಗಮಿಸಿದನು. ಸಮಸ್ತ ಜೀವಾಧಾರಕರಿಗೆ ನಿಯಾಮಕನಾದ ಗೋವಿಂದನು ಯುಯುಧಾನನಿಂದ ಸಹಿತನಾಗಿ, ಪ್ರದ್ಯುಮ್ನನೆಂಬ ಮಗನಿಂದ, ಗದನಿಂದ, ನಿಶಠನಿಂದ, ಸಾಂಬ, ಕೃತವರ್ಮರಿಂದ ಕೂಡಿಕೊಂಡು ಆಗಮಿಸಿದನು.
ತೇಷಾಮಪಿ ಪರಾಂ ಪೂಜಾಂ ಚಕ್ರೇ ಭೀಮೋ ಮಹಾಭುಜಃ |
ವಿವಿಶುಸ್ತೇ ಚ ವೇಶ್ಮಾನಿ ರತ್ನವಂತಿ ನರರ್ಷಭಾಃ ॥6॥
ಮಹಾಬಲಿಷ್ಠನಾದ ಭೀಮಸೇನನು ಆಗಮಿಸಿದ ಅವರೆಲ್ಲರನ್ನೂ ವಿಶೇಷವಾಗಿ ಸತ್ಕರಿಸಿದನು. ಆ ರಾಜಶ್ರೇಷ್ಠರೆಲ್ಲರೂ ರತ್ನಮಯವಾದ, ಅವರಿಗಾಗಿಯೇ ನಿರ್ಮಿಸಿದ ಅರಮನೆಗಳನ್ನು ಪ್ರವೇಶಿಸಿದರು.
ಯುಧಿಷ್ಠಿರಸಮೀಪೇ ತು ಕಥಾಂತೇ ಮಧುಸೂದನಃ |
ಅರ್ಜುನಂ ಕಥಯಾಮಾಸ ಬಹುಸಂಗ್ರಾಮಕರ್ಶಿತಮ್ ॥7॥
ಬಳಿಕ ವಿಶ್ರಾಂತಿಯನ್ನು ಪಡೆದು ಮಧುಸೂದನನು ಯುಧಿಷ್ಠಿರನ ಸಮೀಪದಲ್ಲಿ ಆಗಮಿಸಿ, ಅವನ ಕುಶಲಪ್ರಶ್ನೆಗಳನ್ನು ವಿಚಾರಿಸಿದನು. ನಂತರ ಅರ್ಜುನನು ಯಜ್ಞಾಶ್ವವನ್ನು ಹಿಂಬಾಲಿಸಿ ಆಗಮಿಸಿರುವ ವಿಚಾರವನ್ನೂ, ಅನೇಕ ಯುದ್ಧಗಳಿಂದ ಬಳಲಿದ್ದಾನೆ ಎಂಬ ವಾರ್ತೆಯನ್ನು ಶ್ರೀಕೃಷ್ಣನು ಕೇಳಿಸಿಕೊಂಡನು.
ಸ ತಂ ಪಪ್ರಚ್ಛ ಕೌಂತೇಯಃ ಪುನಃಪುನರರಿಂದಮಃ |
ಧರ್ಮರಾಟ್ ಭ್ರಾತರಂ ಜಿಷ್ಣುಂ ಸ ಚಾಚಷ್ಟ ಜಗತ್ಪತಿಃ ॥8॥
ಧರ್ಮರಾಜನು ಪುನಃ ಪುನಃ ಕೃಷ್ಣನ ಬಳಿ ಅರ್ಜುನನ ದಿಗ್ವಿಜಯದ ಬಗ್ಗೆ ಪ್ರಶ್ನೆಗಳನ್ನು ಕೇಳಿದನು. ಜಯಶೀಲನಾದ ಅರ್ಜುನನ ವೈಭವಗಳನ್ನು ಯುಧಿಷ್ಠಿರನಿಗೆ ಶ್ರೀಕೃಷ್ಣನು ಬೋಧಿಸಿದನು.
ಶ್ರೀಭಗವಾನ್
ಆಗಮದ್ ದ್ವಾರಕಾವಾಸೀ ಸಮಾಪ್ತಃ ಪುರುಷೋ ನೃಪ |
ಸೋಽದ್ರಾಕ್ಷೀತ್ ಪಾಂಡವಶ್ರೇಷ್ಠಂ ಬಹುಸಂಗ್ರಾಮಕರ್ಶಿತಮ್ ॥9॥
ಶ್ರೀಭಗವಾನ್ ಯುಧಿಷ್ಠಿರನೇ, ನನ್ನ ಬಳಿಗೆ ದ್ವಾರಕಾವಾಸಿಯೂ, ನನ್ನ ಆಪ್ತನೂ ಆಗಿರುವ ಪುರುಷನೊಬ್ಬನು ಆಗಮಿಸಿದನು. ಅವನು ಯುದ್ಧದಿಂದ ಬಳಲಿ ಬಹಳ ಕೃಶನಾಗಿದ್ದ ಪಾಂಡವಶ್ರೇಷ್ಠನಾದ ಅರ್ಜುನನನ್ನು ಚೆನ್ನಾಗಿ ನೋಡಿಕೊಂಡು ಬಂದಿದ್ದನು.
ಸಮೀಪೇ ಚ ಮಹಾಬಾಹುಮಾಚಷ್ಟ ಮಮ ಸ ಪ್ರಭೋ |
ಕುರು ಕಾರ್ಯಾಣಿ ಕೌಂತೇಯ ಹಯಮೇಧಾರ್ಥಸಿದ್ಧಯೇ ॥10॥
ಆ ಪುರುಷನು ನನ್ನ ಬಳಿ ಆಗಮಿಸಿ ಇಂತಹ ಮಾತುಗಳನ್ನು ಹೇಳಿದನು. ಮಹಾಬಾಹುವಾದ ಅರ್ಜುನನು ಈ ಪ್ರಸಂಗದಲ್ಲಿ ಹಸ್ತಿನಾವತಿಯ ಸಮೀಪದಲ್ಲೇ ಇದ್ದಾನೆ. ಅಶ್ವಮೇಧ ಯಜ್ಞದ ಸಿದ್ಧಿಗಾಗಿ ಮಾಡಬೇಕಾಗಿರುವ ಎಲ್ಲ ಕಾರ್ಯಗಳನ್ನು ಧರ್ಮರಾಜನು ಮಾಡಬಹುದು ಎಂದು.
ವೈಶಂಪಾಯನಃ
ಇತ್ಯುಕ್ತಃ ಪ್ರತ್ಯುವಾಚೈನಂ ಧರ್ಮರಾಜೋ ಯುಧಿಷ್ಠಿರಃ ॥11॥
ವೈಶಂಪಾಯನ ಕೃಷ್ಣನು ಹೀಗೆ ಉತ್ತರಿಸಲು ಯುಧಿಷ್ಠಿರನು ಹೇಳುತ್ತಾನೆ.
ಯುಧಿಷ್ಠಿರಃ

ದಿಷ್ಟ್ಯಾ ಸ ಕುಶಲೀ ಜಿಷ್ಣುರುಪಯಾತಃ ಸ ಮಾಧವ ॥12॥
ಯುಧಿಷ್ಠಿರ ಮಾಧವನೇ, ನನ್ನ ಅದೃಷ್ಟದ ದೆಸೆಯಿಂದ ಜಯಶೀಲನಾದ ಅರ್ಜುನನು ಪುನಃ ಯಜ್ಞಾಶ್ವವನ್ನು ಕರೆದುಕೊಂಡು ಇಲ್ಲಿಗೆ ಆಗಮಿಸಿದ್ದಾನೆ ಎಂದು ಭಾವಿಸುತ್ತೇನೆ.
ತವ ಯತ್ ಸಂದಿದೇಶಾಸೌ ಪಾಂಡವಾನಾಂ ಬಲಾಗ್ರಣೀಃ |
ತದಾಖ್ಯಾತುಮಿಹೇಚ್ಛಾಮಿ ಭವತಾ ಕುರುನಂದನ ॥13॥
ಪಾಂಡವಸೇನೆಗೆ ಪ್ರಮುಖನಾಗಿರುವ ಅರ್ಜುನನು ಯಜ್ಞಕ್ಕೆ ಸಂಬಂಧಿಸಿದ ಯಾವುದಾದರೂ ಸಂದೇಶವನ್ನು ನಿನ್ನ ಬಳಿ ಹೇಳಿ ಕಳುಹಿಸಿರುವನೆ? ಆ ಸಂದೇಶವನ್ನು ನಿನ್ನ ಮುಖದಿಂದಲೇ ತಿಳಿಯಬಯಸುತ್ತೇನೆ.
ವೈಶಂಪಾಯನಃ
ಇತ್ಯುಕ್ತೋ ರಾಜಶಾರ್ದೂಲ ವೃಷ್ಣ್ಯಂಧಕಪತಿಸ್ತದಾ |
ಪ್ರೋವಾಚೇದಂ ವಚೋ ವಾಗ್ಮೀ ಧರ್ಮಾತ್ಮಾನಂ ಯುಧಿಷ್ಠಿರಮ್ ॥
ವೈಶಂಪಾಯನ ಧರ್ಮಾತ್ಮನಾದ ಯುಧಿಷ್ಠಿರನು ಇಂತು ನುಡಿಯಲು ವೃಷ್ಣ್ಯಂಧಕ ನಾಯಕನಾದ ಕೃಷ್ಣನು ಹೀಗೆ ಹೇಳಿದನು.
ಶ್ರೀಭಗವಾನ್
ಇದಮಾಹ ಮಹಾರಾಜ ಪಾರ್ಥವಾಕ್ಯಂ ನರೇಶ್ವರ |
ಯದ್ವಾಚ್ಯಂ ಭವತಾ ಕಷ್ಣ ಕಾಲೇ ವಾಕ್ಯಮಿದಂ ಮಮ ॥15॥
ಶ್ರೀಭಗವಾನ್ ಯುಧಿಷ್ಠಿರನೇ, ಆ ನನ್ನ ಆಪ್ತಪುರುಷನು ಪಾರ್ಥನ ಮಾತನ್ನೇ ಸ್ಮರಿಸಿಕೊಳ್ಳುತ್ತಾ, ಸಕಾಲದಲ್ಲಿ ಈ ಮಾತನ್ನು ನಿನಗೆ ತಿಳಿಸಬೇಕು ಎಂದು ಹಿಂದೆ ಆ ಪುರುಷನನ್ನು ನನ್ನ ಬಳಿ ಅರ್ಜುನನು ಕಳುಹಿಸಿದ್ದನು. ಅಂತಹ ಅರ್ಜುನನು ಹೇಳಿದ ಸಂದೇಶವನ್ನು ಯಥಾವತ್ತಾಗಿ ನಿನಗೆ ಹೇಳುತ್ತೇನೆ.
ಆಗಮಿಷ್ಯಂತಿ ರಾಜಾನಃ ಸರ್ವತಃ ಕೌರವಾನ್ ಪ್ರತಿ |
ತೇಭ್ಯ ಏಕೈಕಶಃ ಪೂಜಾ ಕಾರ್ಯೇತ್ಯೇತತ್ ಕ್ಷಮಂ ಹಿತಮ್ ॥16॥
ಕೌರವಶ್ರೇಷ್ಠನೇ, ಧರ್ಮಜನೇ, ಭೂಮಂಡಲದ ಸಮಸ್ತ ರಾಜರು ಅಶ್ವಮೇಧ ಯಜ್ಞದಲ್ಲಿ ಭಾಗವಹಿಸಲು ಆಗಮಿಸುತ್ತಾರೆ. ಅಂತಹ ಸಮಸ್ತ ರಾಜರನ್ನು ಯಥಾ ಯೋಗ್ಯವಾಗಿ ಸತ್ಕರಿಸುವುದು ನಮಗೆ ಕರ್ತವ್ಯವೂ ಆಗಿದೆ, ಹಿತವೂ ಆಗಿದೆ.
ಇತ್ಯೇತದ್ ವಚನಾದ್ ರಾಜಾ ವಿಜ್ಞಾಪ್ಯೋ ಮಮ ಮಾನದ |
ನ ತದಾಪ್ಯಾಯಿಕಂ ನ ಸ್ಯಾದ್ ಯದರ್ಘ್ಯಾನಯನೇ ಭವೇತ್ ॥17॥
ಈ ರೀತಿಯಾಗಿ ಹೇಳಿದ ಅರ್ಜುನನು ಮತ್ತೂ ಮುಂದುವರಿದು ಹೇಳುತ್ತಾನೆ: ಮಾನದನೇ, ನನ್ನ ಪರವಾಗಿ ಯುಧಿಷ್ಠಿರನನ್ನು ಹೀಗೆ ವಿಜ್ಞಾಪಿಸಿಕೊ. ಧರ್ಮರಾಜನೇ, ರಾಜಸೂಯ ಯಾಗದ ಸಮಯದಲ್ಲಿ ನೀನೇ ಅರ್ಘ್ಯ-ಪಾದ್ಯಾದಿಗಳನ್ನು ನೀಡಬೇಕು. ಧರ್ಮರಾಜನು ಸ್ವತಃ ತಾನೇ ಅರ್ಘ್ಯ-ಪಾದ್ಯಾದಿಗಳನ್ನು ನೀಡಿದಾಗ ಸಮಸ್ತ ರಾಜರು ನಿಶ್ಚಿತವಾಗಿಯೂ ತೃಪ್ತಿ ಹೊಂದುತ್ತಾರೆ.
ಕರ್ತುಮರ್ಹತಿ ತದ್ ರಾಜಾ ಭವಾಂಶ್ಚಾಪ್ಯನುಮನ್ಯತಾಮ್ |
ರಾಜಾನೋ ನ ವಿನಶ್ಯೇಯುರ್ನೇಮಾ ರಾಜನ್ ಪ್ರಜಾಃ ಪುನಃ ॥18॥
ಹೀಗೆ ಆಪ್ತ ಪುರುಷನು ಅರ್ಜುನನ ಸಂದೇಶವನ್ನು ಹೇಳಿ ಪುನಃ ಇಂತು ನುಡಿದನು. ಕೃಷ್ಣನೇ, ಅರ್ಜುನನ ಆದೇಶದಂತೆ ಯುಧಿಷ್ಠಿರನು ನಡೆದುಕೊಳ್ಳುವುದು ಯುಕ್ತವಾಗಿದೆ. ನೀನು ಅವನನ್ನು ಹೀಗೆ ಪ್ರಚೋದಿಸು. ಯಾವ ರಾಜರೂ ದುಃಖಿತರಾಗದ ರೀತಿಯಲ್ಲಿ, ಪ್ರಜೆಗಳೂ ಅತೃಪ್ತಿ ಹೊಂದದ ರೀತಿಯಲ್ಲಿ ರಾಜಸೂಯ ಯಾಗದಲ್ಲಿ ಸತ್ಕಾರವನ್ನು ನೀಡಬೇಕು ಎಂದು ನುಡಿದನು.
ಇದಮನ್ಯಚ್ಚ ಕೌರವ್ಯ ವಚಃ ಸ ಪುರುಷೋಽಬ್ರವೀತ್ |
ಧನಂಜಯಸ್ಯ ನೃಪತೇ ತನ್ಮೇ ನಿಗದತಃ ಶೃಣು ॥19॥
ಕೌರವ್ಯನೇ, ಆ ಪುರುಷನು ಇಷ್ಟು ಅರ್ಜುನನ ಸಂದೇಶವನ್ನು ನನ್ನ ಬಳಿ ತಿಳಿಸಿ ಧನಂಜಯ ಮತ್ತೊಂದು ಮಾತನ್ನು ಹೇಳಿದ್ದಾನೆ. ಅದನ್ನೂ ಹೇಳುತ್ತೇನೆ, ಕೇಳಿಸಿಕೊ.
\`ಉಪಾಯಾಸ್ಯತಿ ಯಜ್ಞಂ ನೋ ಮಣಲೂರಪತಿರ್ನೃಪಃ |
ಪುತ್ರೋ ಮಮ ಮಹಾತೇಜಾ ದಯಿತೋ ಬಭ್ರುವಾಹನಃ ॥20॥
ತಂ ಭವಾನ್ ಮದಪೇಕ್ಷಾರ್ಥಂ ವಿಧಿವತ್ ಪ್ರತಿಪೂಜಯೇತ್ |
ಸ ಹಿ ಭಕ್ತೋಽನುರಕ್ತಶ್ಚ ಮಮ ನಿತ್ಯಮಿ'ತಿ ಪ್ರಭೋ ॥21॥
ಮಣಲೂರ ಪತಿಯಾಗಿರುವಂತಹ ಬಭ್ರುವಾಹನನು ನಮ್ಮ ಯಜ್ಞದ ವೈಭವಕ್ಕೆ ಆಗಮಿಸುತ್ತಿದ್ದಾನೆ. ನನ್ನ ಮಗನೇ ಆಗಿರುವ, ಮಹಾತೇಜಸ್ವಿಯಾಗಿರುವ ಬಭ್ರುವಾಹನನು ನಮ್ಮ ಯಜ್ಞಕ್ಕೆ ಆಗಮಿಸಿದಾಗ ನನ್ನ ಅಪೇಕ್ಷೆಯಂತೆ ವಿಧಿವತ್ತಾಗಿ ಅವನನ್ನು ಸತ್ಕರಿಸಬೇಕು. ಆ ಬಭ್ರುವಾಹನನು ನನ್ನ ಭಕ್ತನೂ ಆಗಿದ್ದಾನೆ. ನಿತ್ಯವೂ ನನ್ನಲ್ಲಿ ಅಸಾಧಾರಣವಾದ ಪಿತೃಭಕ್ತಿಯನ್ನು ಹೊಂದಿದ್ದಾನೆ.
ವೈಶಂಪಾಯನಃ
ಇತ್ಯೇತದ್ ವಚನಂ ಶ್ರುತ್ವಾ ಧರ್ಮರಾಜೋ ಯುಧಿಷ್ಠಿರಃ |
ಅಭಿನಂದ್ಯ ಸ ತದ್ವಾಕ್ಯಮಿದಂ ವಚನಮಬ್ರವೀತ್ ॥22॥
ವೈಶಂಪಾಯನ ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿಸಿಕೊಂಡ, ಯುದ್ಧದಲ್ಲಿ ಸ್ಥಿರವಾದ ಬುದ್ಧಿಯುಳ್ಳ ಧರ್ಮರಾಜನು ಕೃಷ್ಣನ ಮಾತುಗಳನ್ನು ಅಭಿನಂದಿಸಿ ಕೃಷ್ಣನನ್ನುದ್ದೇಶಿಸಿ ಇಂತು ನುಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅರ್ಜುನರಹಸ್ಯವಚನಕಥನಂ ನಾಮ

ಅಷ್ಟಾಶೀತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಎಂಬತ್ತೊಂಬತ್ತನೆಯ ಅಧ್ಯಾಯ
ಯುಧಿಷ್ಠಿರನು ಮೂರು ಮಂದಿ ಪಾಂಡವರಿಗೆ ಅರ್ಜುನನಿಗೆ ಉಂಟಾದ ಮಾರ್ಗಾಯಾಸವನ್ನು ಪರಿಹರಿಸಲು ಸೂಚಿಸಿದುದು. ಅರ್ಜುನನು ಈ ಕ್ರಮದಲ್ಲಿ ಆಯಾಸ ಪಡಲು ಕಾರಣವೇನೆಂಬುದನ್ನು ಕೃಷ್ಣನು ನಿರೂಪಿಸಿದುದು. ಅಶ್ವಮೇಧ ಕುದುರೆಯ ಜೊತೆಗೆ ಅರ್ಜುನನು ನಗರವನ್ನು ಪ್ರವೇಶಿಸಿದುದು. ಬಭ್ರುವಾಹನನು ಉಲೂಪಿ-ಚಿತ್ರಾಂಗದೆಯರ ಜೊತೆ ಯಾಗವನ್ನು ನೋಡಲು ಆಗಮಿಸಿದುದು.
ಯುಧಿಷ್ಠಿರಃ
ಶ್ರುತಂ ಪ್ರಿಯಮಿದಂ ಕೃಷ್ಣ ಯತ್ ತ್ವಯಾ ಮಮ ಭಾಷಿತಮ್ |
ತನ್ಮೇಽಮೃತರಸಪ್ರಖ್ಯಂ ಮನೋ ಹ್ಲಾದಯತೇ ವಿಭೋ ॥1॥
ಯುಧಿಷ್ಠಿರ ಪ್ರಭುವೇ, ಶ್ರೀಕೃಷ್ಣ, ನಿನ್ನಿಂದ ಇಲ್ಲಿಯ ತನಕ ಪರಮಪ್ರಿಯವಾದ ಅರ್ಜುನನ ಸಂದೇಶವನ್ನು ಕೇಳಿದೆನು. ಕರ್ಣಾನಂದಕರವಾದ ಇಂತಹ ಮಾತುಗಳನ್ನು ಹೇಳಲು ನೀನು ಮಾತ್ರ ಸಮರ್ಥನಾಗಿರುವೆ. ನಿನ್ನ ಮಾತುಗಳು ನನಗೆ ಅಮೃತದಂತೆ ಆಪ್ಯಾಯಮಾನವಾಗಿವೆ, ಪುಣ್ಯಪ್ರಾಪಕವಾಗಿವೆ. ಮನಸ್ಸು ಸಂತುಷ್ಟವಾಗಿದೆ.
ಬಹೂನಿ ಕಿಲ ಯುದ್ಧಾನಿ ವಿಜಯಸ್ಯ ನರಾಧಿಪೈಃ |
ಪುನರಾಸನ್ ಹೃಷೀಕೇಶ ತತ್ರ ತತ್ರ ಮಯಾ ಶ್ರುತಮ್ ॥2॥
ಹೃಷೀಕೇಶನೇ, ಅರ್ಜುನನು ಬೇರೆ ಬೇರೆ ದೇಶಗಳಲ್ಲಿ ಕುದುರೆಯನ್ನನುಸರಿಸಿ ಸಂಚರಿಸಿದ್ದಾನೆ. ಅಲ್ಲಿಯ ರಾಜರಿಗೂ ಅರ್ಜುನನಿಗೂ ಯುದ್ಧವಾಗಿದೆ ಎಂಬುದನ್ನು ನಾನು ಕೇಳಿದ್ದೇನೆ.
ಮನ್ನಿಮಿತ್ತಂ ಹಿ ಸ ತದಾ ಪಾರ್ಥಃ ಸುಖವಿವರ್ಜಿತಃ |
ಅತೀವ ವಿಜಯೋ ಧೀಮಾನ್ ಇತಿ ಮೇ ದೂಯತೇ ಮನಃ ॥3॥
ಧೀಮಂತನೇ, ಅರ್ಜುನನು ಎಂದಿಗೂ ಸುಖದಿಂದ ವಂಚಿತನೇ ಆಗಿದ್ದಾನೆ. ಯಾವಾಗಲೂ ಕಷ್ಟದಲ್ಲಿಯೇ ಇರುವ ಈ ಅರ್ಜುನನಿಗೆ ಯಾವ ಕರ್ಮವು ಕಾರಣವಾಗಿದೆ? ನನ್ನ ಮನಸ್ಸು ಅವನ ವಿಷಯದಲ್ಲಿ ಸಂಕಟಪಡುತ್ತಿರುತ್ತದೆ.
ಸಂಚಿಂತಯಾಮಿ ವಾರ್ಷ್ಣೇಯ ಸದಾ ಕುಂತೀಸುತಂ ರಹಃ ॥4॥
ವೃಷ್ಣಿಕುಲದೊರೆಯೇ, ಅರ್ಜುನನ ವಿಷಯದಲ್ಲಿಯೇ ಏಕಾಂತದಲ್ಲೂ ಚಿಂತಿಸುತ್ತಲೇ ಇರುತ್ತೇನೆ.
ಕಿಂ ನು ತಸ್ಯ ಶರೀರೇಽಸ್ತಿ ಸರ್ವಲಕ್ಷಣಪೂಜಿತೇ |
ಅನಿಷ್ಟಂ ಲಕ್ಷಣಂ ಕೃಷ್ಣ ಯೇನ ದುಃಖಾನ್ಯುಪಾಶ್ನುತೇ ॥5॥
ಸರ್ವಲಕ್ಷಣಗಳಿಂದ ಸಂಪನ್ನವಾಗಿರುವ ಅವನ ಶರೀರದಲ್ಲಿ ಯಾವ ಅನಿಷ್ಟ ಲಕ್ಷಣವು ಸೇರಿಕೊಂಡಿದೆ? ಯಾವ ಕಾರಣದಿಂದ ಅರ್ಜುನನು ನಿರಂತರ ಸಂಚಾರಶೀಲನಾಗಿ ನಿರಂತರ ದುಃಖವನ್ನು ಅನುಭವಿಸುತ್ತಿರುತ್ತಾನೆ?
ಅತೀವ ದುಃಖಭಾಗೀ ಸ ಸತತಂ ಕುಂತಿನಂದನಃ |
ನ ಚ ಪಶ್ಯಾಮಿ ಬೀಭತ್ಸೋರ್ನಿಂದ್ಯಂ ಗಾತ್ರೇಷು ಕಿಂಚನ ॥6॥
ಶ್ರೋತವ್ಯಂ ಚೇನ್ಮಯೈತದ್ ವೈ ತನ್ಮೇ ವ್ಯಾಖ್ಯಾತುಮರ್ಹಸಿ ॥7॥
ಕುಂತೀಸುತನಾದ ವಿಜಯನು ನಿರಂತರ ಬಹಳವಾದ ಕಷ್ಟಗಳನ್ನೇ ಅನುಭವಿಸುತ್ತಿದ್ದಾನೆ. ಅವನ ಅವಯವಗಳಲ್ಲಿ ಅಶುಭವಾದ ಒಂದು ಲಕ್ಷಣವನ್ನೂ ನಾನು ಕಾಣುತ್ತಿಲ್ಲ. ಹೀಗಿರುವಾಗ ಅವನೇಕೆ ಇಷ್ಟು ಸಂಚಾರದ ದುಃಖವನ್ನು ಅನುಭವಿಸುತ್ತಿದ್ದಾನೆ? ಅವನ ದೇಹದಲ್ಲಿರುವ ಅವಲಕ್ಷಣ ಯಾವುದು? ಇವೆಲ್ಲವನ್ನೂ ನಾನು ಕೇಳಿಸಿಕೊಳ್ಳಲು ಅರ್ಹನಾಗಿದ್ದಲ್ಲಿ ಯಥಾವತ್ತಾಗಿ ತಿಳಿಸಲು ಕೇಳಿಕೊಳ್ಳುತ್ತೇನೆ.
ವೈಶಂಪಾಯನಃ
ಇತ್ಯುಕ್ತಃ ಸ ಹೃಷೀಕೇಶೋ ಧ್ಯಾತ್ವಾ ಸುಮಹದಂತರಮ್ |
ರಾಜಾನಂ ಭೋಜರಾಜನ್ಯವರ್ಧನೋ ವಿಷ್ಣುರಬ್ರವೀತ್ ॥8॥
ವೈಶಂಪಾಯನ ಈ ರೀತಿಯಾಗಿ ಯುಧಿಷ್ಠಿರನು ಪ್ರಶ್ನಿಸಿದಾಗ ಭೋಜವಂಶದ ಕ್ಷತ್ರಿಯರನ್ನು ಅಭಿವೃದ್ಧಿಗೊಳಿಸುವ ಇಚ್ಛೆಯುಳ್ಳ ವಿಷ್ಣುವು ಸ್ವಲ್ಪ ಸಮಯ ಯೋಚಿಸಿದವನಂತೆ ಇದ್ದು ನಂತರ ಉತ್ತರಿಸಿದನು.
ಶ್ರೀಭಗವಾನ್
ನ ಹ್ಯಸ್ಯ ನೃಪತೇ ಕಿಂಚಿದ್ ಅನಿಷ್ಟಮುಪಲಕ್ಷಯೇ |
ಋತೇ ಪುರುಷಸಿಂಹಸ್ಯ ಪಿಂಡಿಕೇಽಸ್ಯಾಧಿಕೇ ಯತಃ ॥9॥
ಶ್ರೀಭಗವಾನ್ ನರೇಶ್ವರನೇ, ಅರ್ಜುನನ ಮೊಣಕಾಲುಗಳ ಹಿಂಭಾಗಗಳು ಯಾವ ಕ್ರಮದಲ್ಲಿ ಇರಬೇಕೋ ಅದಕ್ಕಿಂತಲೂ ಸ್ವಲ್ಪ ದಪ್ಪವಾಗಿರುವುದರಿಂದ ನಿರಂತರವೂ ಸಂಚಾರಶೀಲನಾಗಿದ್ದಾನೆ. ಇದು ಅವನ ದೇಹದಲ್ಲಿ ಸೇರಿದ ಅನಿಷ್ಟ ಲಕ್ಷಣವೆಂದು ಭಾವಿಸುತ್ತೇನೆ. ಈ ಅವಲಕ್ಷಣವನ್ನು ಬಿಟ್ಟು ಇನ್ನು ಯಾವ ಅವಲಕ್ಷಣವನ್ನೂ ನಾನು ಕಾಣುತ್ತಿಲ್ಲ.
ವ್ಯಾಖ್ಯಾನ ವಿಶೇಷ ಕೃಷ್ಣನು ಹೀಗೆ ಹೇಳುತ್ತಿರುವಾಗ ದ್ರೌಪದಿಯು ಕಣ್‌ಸನ್ನೆಯಿಂದ ಕೃಷ್ಣನನ್ನು ತಡೆಯುತ್ತಾಳೆ. ಎಲ್ಲ ಲಕ್ಷಣಗಳನ್ನೂ ಕೃಷ್ಣ, ಸತ್ಯಭಾಮೆ, ಭೀಮಸೇನ, ದ್ರೌಪದಿಯರು ತಿಳಿದಿದ್ದಾರೆ. ಐದನೆಯ ವ್ಯಕ್ತಿಗೆ ತಿಳಿದಿರುವುದಿಲ್ಲ. ವಿದ್ಯಾಶೀಲನಾದ ಯುಧಿಷ್ಠಿರನು ಅದನ್ನು ತಿಳಿಯಲು ಬಯಸಿದನು. ಅರ್ಹತೆಯಿಲ್ಲದೆ ತಿಳಿಯಬಾರದು ಎಂದು ದ್ರೌಪದಿಯು ಕಣ್‌ಸನ್ನೆಯನ್ನು ಮಾಡಿದಳು. ವಾಸ್ತವಿಕವಾಗಿ ಅರ್ಜುನನ ಉದರವೂ ಸ್ವಲ್ಪ ಅಧಿಕವಾಗಿತ್ತು. ವೃಷಣವೂ ಅಧಿಕವಾಗಿತ್ತು. ಎಡಗೈ ಸ್ವಲ್ಪ

ಅಧಿಕವಾಗಿತ್ತು. ಅರ್ಜುನನಲ್ಲಿ ಅನೇಕ ದೋಷಗಳಿದ್ದರೂ ಕೃಷ್ಣನು ಅವುಗಳನ್ನು ಹೇಳಲಿಲ್ಲ. ಈ ರೀತಿಯಾದ ದೇಹದ ದೋಷಗಳು ಜ್ಞಾನ-ಆನಂದಗಳಿಗೆ ಕೊರತೆಯನ್ನುಂಟು ಮಾಡುತ್ತವೆ. ಇಂತಹ ದುರ್ಲಕ್ಷಣಗಳು ಇರುವವರು ದ್ರೌಪದಿ-ಭೀಮಸೇನ ಇಬ್ಬರೇ. ರುಗ್ಮಿಣಿ-ಸತ್ಯಭಾಮೆಯರು ಸಾಕ್ಷಾತ್ ಜಗನ್ಮಾತೆಯರಾಗಿರುವುದರಿಂದ ಅವರಿಗೆ ಯಾವ ವಿಧವಾದ ಕೊರತೆಗಳೂ ಇರುವುದಿಲ್ಲ ಎಂದು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ತಿಳಿಸಿರುತ್ತಾರೆ.

ತಾಭ್ಯಾಂ ಸ ಪುರುಷವ್ಯಾಘ್ರೋ ನಿತ್ಯಮಧ್ವಸು ಯುಜ್ಯತೇ |
ನ ಹ್ಯನ್ಯಮನುಪಶ್ಯಾಮಿ ಯೇನಾಸೌ ದುಃಖಭಾಗ್ ಜಯಃ ॥10॥

ಅಂಥ ಕಾಲುಗಳಿಂದ ನಿತ್ಯ ದಾರಿಯನ್ನು ಕ್ರಮಿಸುವುದರಿಂದ ಪುರುಷ ಶ್ರೇಷ್ಠನಾದ ಅರ್ಜುನನು ದುಃಖ ಅನುಭವಿಸುತ್ತಿದ್ದಾನೆ. ಅದನ್ನು ಬಿಟ್ಟು ಬೇರೆ ಯಾವುದೇ ಕಾರಣವನ್ನು ತಿಳಿಯುತ್ತಿಲ್ಲ.

ವೈಶಂಪಾಯನಃ
ಇತ್ಯುಕ್ತಃ ಸ ಕುರುಶ್ರೇಷ್ಠಃ ಸತ್ಯಂ ಕೃಷ್ಣೇನ ಧೀಮತಾ |
ಪ್ರೋವಾಚ ವೃಷ್ಣಿಶಾರ್ದೂಲಮೇವಮೇತದಿತಿ ಪ್ರಭುಃ ॥11॥

ವೈಶಂಪಾಯನ ಜ್ಞಾನಿಯಾದ ಕೃಷ್ಣನು ಇಂತು ನುಡಿಯಲಾಗಿ, ಪುರುಷಶ್ರೇಷ್ಠನಾದ ಧರ್ಮಜನು ವೃಷ್ಣಿವೀರನಾದ ಕೃಷ್ಣನನ್ನುದ್ದೇಶಿಸಿ ಪ್ರಭುವೇ, ನೀನು ಹೇಳಿದಂತೆಯೇ ಸರಿ ಎಂದು ಹೇಳಿದನು.

ಕೃಷ್ಣಾ ತು ದ್ರೌಪದೀ ಕೃಷ್ಣಂ ತಿರ್ಯಕ್ ಸಾಸೂಯಮೈಕ್ಷತ |
ಪ್ರತಿಜಗ್ರಾಹ ತಸ್ಯಾಸ್ತಂ ಪ್ರಣಯಂ ಚಾಪಿ ಕೇಶಿಹಾ ॥12॥

ಈ ಸಮಯದಲ್ಲಿ ದ್ರೌಪದಿಯು ಕೃಷ್ಣನನ್ನು ನೋಡುತ್ತಾ ಅಸೂಯಾ ಸೂಚಕವಾದ ಕಣ್ನೋಟವನ್ನು ಬೀರಿದಳು. ಕೇಶಿಹಂತಕನಾದ ಕೃಷ್ಣನು ದ್ರೌಪದಿಯ ಸೂಚನೆಯನ್ನು ಆನಂದದಿಂದಲೇ ನೋಡಿದನು.

ಸಖ್ಯುಃ ಸಖಾ ಹೃಷೀಕೇಶಃ ಸಾಕ್ಷಾದಿವ ಧನಂಜಯಃ ॥13॥

ಅರ್ಜುನನ ಮಿತ್ರನಾದ ಹೃಷೀಕೇಶನು ಅರ್ಜುನನಿಗೆ ಆತ್ಮೀಯ ಮಿತ್ರನಾಗಿದ್ದನು.

ತತ್ರ ಭೀಮಾದಯಸ್ತೇ ತು ಕುರವೋ ಯಾದವಾಸ್ತದಾ |
ವಿಚಿತ್ರಾ ರೇಮಿರೇ ಶ್ರುತ್ವಾ ಧನಂಜಯಕಥಾಂ ವಿಭೋ ॥14॥

ಧನಂಜಯನ ಈ ದೇಹಲಕ್ಷಣವು ಕೃಷ್ಣನಿಂದ ಹೇಳಲ್ಪಡುತ್ತಿರಲು ಭೀಮಸೇನನೇ ಮೊದಲಾದ ಕೌರವರು, ಯಾದವರು ಧನಂಜಯನ ಕಥೆಯನ್ನು ಕೇಳಿ ಆಶ್ಚರ್ಯಚಕಿತರಾದರು.

ತಥಾ ಕಥಯತಾಮೇವ ತೇಷಾಮರ್ಜುನಸಂಕಥಾಃ |
ಉಪಾಯಾದ್ ವಚನಾನ್ಮರ್ತ್ಯೋ ವಿಜಯಸ್ಯ ಮಹಾತ್ಮನಃ ॥15॥
ಸೋಽಭಿಗಮ್ಯ ಕುರುಶ್ರೇಷ್ಠಂ ನಮಸ್ಕೃತ್ಯ ಚ ಬುದ್ಧಿಮಾನ್ |
ಉಪಾಯಾತಂ ನರವ್ಯಾಘ್ರಮರ್ಜುನಂ ಪ್ರತ್ಯವೇದಯತ್ ॥16॥
ತಚ್ಛ್ರುತ್ವಾ ನೃಪತಿಸ್ತಸ್ಮೈ ಹರ್ಷಬಾಷ್ಪಾಕುಲೇಕ್ಷಣಃ |
ಪ್ರಿಯಾಖ್ಯಾನನಿಮಿತ್ತಂ ವೈ ದದೌ ಬಹುಧನಂ ತದಾ ॥17॥

ಹೀಗೆ ಮಹಾತ್ಮನಾದ ಅರ್ಜುನನಿಗೆ ಸಂಬಂಧಿಸಿದಂತೆ ಅವರೆಲ್ಲರೂ ಮಾತನಾಡುತ್ತಿರುವಾಗಲೇ ಬುದ್ಧಿವಂತನಾದ ದೂತನು ಕುರುಶ್ರೇಷ್ಠನಾದ ಯುಧಿಷ್ಠಿರನ ಬಳಿ ಬಂದು ನಮಸ್ಕರಿಸಿ, ಅರ್ಜುನನು ನಗರದ ಸಮೀಪಕ್ಕೆ ಬಂದಿರುವ ವಾರ್ತೆಯನ್ನು ಅರುಹಿದನು. ಕೂಡಲೇ ಧರ್ಮಜನು ಆನಂದಬಾಷ್ಪಗಳಿಂದ ಕೂಡಿದ ಕಣ್ಣುಗಳಿಂದ ಸಂತುಷ್ಟನಾಗಿ ದೂತನಿಗೆ ಅಪಾರವಾದ ಧನವನ್ನು ನೀಡಿದನು.

ತತೋ ದ್ವಿತೀಯೇ ದಿವಸೇ ಮಹಾನ್ ಶಬ್ದೋಽಭ್ಯವರ್ತತ |
ಆಯಾತಿ ಪುರುಷವ್ಯಾಘ್ರೇ ಪಾಂಡವಾನಾಂ ಧುರಂಧರೇ ॥18॥

ಬಳಿಕ ಎರಡನೆಯ ದಿವಸ ಕೌರವಶ್ರೇಷ್ಠನಾದ ಅರ್ಜುನನು ಹಸ್ತಿನಾವತಿಗೆ ಅಭಿಮುಖವಾಗಿ ಆಗಮಿಸುತ್ತಿರಲು, ಕುತೂಹಲದಿಂದ, ಸೇರಿದ ನೂರಾರು ಜನರ ಸಂಮರ್ದದಿಂದ ಕೋಲಾಹಲವು ಉಂಟಾಯಿತು.

ತತೋ ರೇಣುಃ ಸಮುದ್ಭೂತೋ ವಿಬಭೌ ತಸ್ಯ ವಾಜಿನಃ |
ಅಭಿತೋ ವರ್ತಮಾನಸ್ಯ ಯಥೋಚ್ಚೈಃಶ್ರವಸಸ್ತಥಾ ॥19॥

ಇಂದ್ರನ ಉಚ್ಚೈಃಶ್ರವಸ್ ಎಂಬ ಕುದುರೆಯ ಸಮಾನವಾದ ವೇಗವುಳ್ಳ, ಹತ್ತಿರಕ್ಕೆ ಆಗಮಿಸುತ್ತಿದ್ದ ಯಜ್ಞಾಶ್ವದ ಗೊರಸಿನಿಂದ ಉಂಟಾದ ಧೂಳು ಆಕಾಶದಲ್ಲಿ ಅದ್ಭುತವಾಗಿ ಶೋಭಿಸುತ್ತಿತ್ತು.

ತತ್ರ ಹರ್ಷಕಲಾ ವಾಚೋ ನರಾಣಾಂ ಶುಶ್ರುವೇಽರ್ಜುನಃ |
ದಿಷ್ಟ್ಯಾ ಹಿ ಪಾರ್ಥಃ ಕುಶಲೀ ಧನ್ಯೋ ರಾಜಾ ಯುಧಿಷ್ಠಿರಃ ॥20॥

ಅರ್ಜುನನು ಮಾರ್ಗದಲ್ಲಿ ಆಗಮಿಸುತ್ತಾ, ಜನರು ಪರಸ್ಪರ ಹೇಳುತ್ತಿದ್ದ ಹರ್ಷದಾಯಕವಾದ ಮಾತುಗಳನ್ನು ಕೇಳಿಸಿಕೊಂಡನು. ಪಾರ್ಥನೇ, ಸೌಭಾಗ್ಯದಿಂದ ನೀನು ಕುಶಲಿಯಾಗಿರುವೆ. ನಿನ್ನ ಆಗಮನವನ್ನು ಕಾಣುತ್ತಿರುವ ಯುಧಿಷ್ಠಿರನು ಧನ್ಯನು.

ಕೋಽನ್ಯೋ ಹಿ ಪೃಥಿವೀಂ ಕೃತ್ಸ್ನಾಂ ಅಭಿಜಿತ್ಯ ಸಪಾರ್ಥಿವಾಮ್ |
ಚಾರಯಿತ್ವಾ ಹಯಶ್ರೇಷ್ಠಮುಪೇಯಾದರ್ಜುನಾದೃತೇ ॥21॥

ಅರ್ಜುನನನ್ನು ಬಿಟ್ಟು ಸಮಸ್ತ ರಾಜರನ್ನು ಜಯಿಸಿ, ಈ ಸಮಗ್ರ ಭೂಮಂಡಲದಲ್ಲಿ ಯಜ್ಞಾಶ್ವವನ್ನು ಸಂಚರಿಸಿಕೊಂಡು ಬರುವ ವ್ಯಕ್ತಿ ಬೇರೆ ಯಾರಿದ್ದಾರೆ?

ಯೇ ವ್ಯತೀತಾ ಮಹಾತ್ಮಾನೋ ರಾಜಾನಃ ಸಗರಾದಯಃ |

ತೇಷಾಮಪೀದೃಶಂ ಕರ್ಮ ನ ಕಿಂಚಿದಪಿ ಶುಶ್ರುಮಃ ॥22॥
ಹಿಂದಿನ ಕಾಲದಲ್ಲಿ ಯಾವ ಸಗರನೇ ಮೊದಲಾದ ಚಕ್ರವರ್ತಿಗಳು ಆಗಿಹೋದರೋ ಅಂತಹವರೂ ಇಂತಹ ಅದ್ಭುತವಾದ ಕರ್ಮವನ್ನು ಮಾಡಿದ್ದಾರೆಂದು ನಾವು ಕೇಳಿಸಿಕೊಂಡಿಲ್ಲ.
ನೈತದನ್ಯೇ ಕರಿಷ್ಯಂತಿ ಭವಿಷ್ಯಂತೋ ನರಾಧಿಪಾಃ।
ಯತ್ ತ್ವಂ ಕುರುಕುಲಶ್ರೇಷ್ಠ ದುಷ್ಕರಂ ಕೃತವಾನಿಹ ॥23॥
ಕುಲಶ್ರೇಷ್ಠನೇ, ಮುಂದಿನ ರಾಜರೂ ಕೂಡ ನೀನು ಇಂದು ಆಚರಿಸುವ ದುಷ್ಕರವಾದ ಕರ್ಮವನ್ನು ಆಚರಿಸಲು ಸಮರ್ಥರಾಗಲಾರರು.
ಇತ್ಯೇವಂ ವದತಾಂ ನೄಣಾಂ ತೇಷಾಂ ಶ್ರುತಿಸುಖಾವಹಾಃ।
ಶೃಣ್ವನ್ ವಿವೇಶ ಧರ್ಮಾತ್ಮಾ ಫಲ್ಗುನೋ ಯಜ್ಞಸಂಸ್ತರಮ್ ॥24॥
ಇವೇ ಮೊದಲಾದ ಮಾತುಗಳನ್ನು ಕರ್ಣಾನಂದಕರವಾಗಿ ಜನರೆಲ್ಲರೂ ಹೇಳುತ್ತಿರಲು, ಧರ್ಮಾತ್ಮನಾದ ಫಲ್ಗುನನು ಆ ಮಾತುಗಳನ್ನು ಕೇಳಿಸಿಕೊಳ್ಳುತ್ತಲೇ ಯಜ್ಞಮಂಟಪವನ್ನು ಪ್ರವೇಶಿಸಿದನು.
ತತೋ ರಾಜಾ ಸಹಾಮಾತ್ಯಃ ಕೃಷ್ಣಶ್ಚ ಯದುನಂದನಃ।
ಧೃತರಾಷ್ಟ್ರಂ ಪುರಸ್ಕೃತ್ಯ ತೇ ತಂ ಪ್ರತ್ಯುದ್ಯಯುಸ್ತದಾ ॥25॥
ಆ ಸಮಯದಲ್ಲಿ ಮಂತ್ರಿಗಳಿಂದ ಸಹಿತನಾದ ಯುಧಿಷ್ಠಿರನು, ಯದುನಂದನನಾದ ಕೃಷ್ಣನು, ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು ಅರ್ಜುನನನ್ನು ಎದುರುಗೊಂಡರು.
ಸೋಽಭಿವಾದ್ಯ ಪಿತುಃ ಪಾದೌ ಧರ್ಮರಾಜಸ್ಯ ಧೀಮತಃ।
ಭೀಮಾದೀಂಶ್ಚಾಪಿ ಸಂಪೂಜ್ಯ ಪರ್ಯಷ್ವಜತ ಕೇಶವಮ್ ॥26॥
ಅರ್ಜುನನಾದರೂ ಧೃತರಾಷ್ಟ್ರನ ಪಾದಗಳಿಗೆ ವಂದಿಸಿ, ಧೀಮಂತನಾದ ಧರ್ಮರಾಜನ ಪಾದಗಳಿಗೂ ವಂದಿಸಿ, ಭೀಮಾದಿಗಳನ್ನು ಪೂಜಿಸಿ, ಕೇಶವನನ್ನು ಆಲಿಂಗಿಸಿಕೊಂಡನು.
ತೈಃ ಸಮೇತ್ಯಾರ್ಚಿತಸ್ತಾನ್ ಸ ಪ್ರತ್ಯರ್ಚ್ಯಾಥ ಯಥಾವಿಧಿ।
ವಿಶಶ್ರಾಮ ಸ ಧರ್ಮಾತ್ಮಾ ತೀರಂ ಲಬ್ಧ್ವೇವ ಪಾರಗಃ ॥27॥
ಕೃಷ್ಣನೇ ಮೊದಲಾದವರಿಂದ ಕೂಡಿಕೊಂಡು ಯುಧಿಷ್ಠಿರನು ಅರ್ಜುನನನ್ನು ಸ್ವಾಗತಿಸಿ, ಸತ್ಕರಿಸಿದನು. ಪ್ರತಿಯಾಗಿ ಅರ್ಜುನನೂ ಸತ್ಕರಿಸಿದನು. ಸಮುದ್ರದ ತೀರವನ್ನು ಸೇರಬಯಸಿ ಈಜಿಕೊಂಡು ಆಗಮಿಸಿದ ವ್ಯಕ್ತಿಯು ವಿಶ್ರಾಂತಿಯನ್ನು ಬಯಸುವಂತೆ ಮಹಾಬಾಹುವಾದ ಅರ್ಜುನನು ದುಸ್ತರವಾದ ಕಾರ್ಯವನ್ನು ಮುಗಿಸಿ ವಿಶ್ರಾಂತಿಯನ್ನು ಹೊಂದಿದನು.
ಏತಸ್ಮಿನ್ನೇವ ಕಾಲೇ ತು ಸ ರಾಜಾ ಬಭ್ರುವಾಹನಃ।
ಮಾತೃಭ್ಯಾಂ ಸಹಿತೋ ಧೀಮಾನ್ ಕುರೂನಭ್ಯಾಜಗಾಮ ಹ ॥28॥
ಇದೇ ಸಮಯದಲ್ಲಿ ಬಭ್ರುವಾಹನನು ತನ್ನ ತಾಯಂದಿರಿಂದ ಕೂಡಿಕೊಂಡು ಹಸ್ತಿನಾವತಿಗೆ ಆಗಮಿಸಿದನು.
ಸ ಸಮೇತ್ಯ ಕುರೂನ್ ಸರ್ವಾನ್ ಸರ್ವೈಸ್ತೈರಭಿನಂದಿತಃ।
ಪ್ರವಿವೇಶ ಪಿತಾಮಹ್ಯಾಃ ಕುಂತ್ಯಾ ಭವನಮುತ್ತಮಮ್ ॥29॥
ಅರ್ಜುನನ ಸುತನು ಹಸ್ತಿನಾವತಿಗೆ ಆಗಮಿಸಿದೊಡನೆ ಕುರುವೃದ್ಧರನ್ನೂ, ರಾಜರನ್ನೂ ನಮಸ್ಕರಿಸಿದನು. ಅವರೂ ಯಥೋಚಿತವಾಗಿ ಸತ್ಕರಿಸಲು, ಪಿತಾಮಹಿಯಾದ ಕುಂತಿಯ ಶ್ರೇಷ್ಠವಾದ ಅರಮನೆಗೆ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅರ್ಜುನಾಗಮನಂ ನಾಮ ಏಕೋನನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತನೆಯ ಅಧ್ಯಾಯ
ಯುಧಿಷ್ಠಿರನ ಅಶ್ವಮೇಧಯಾಗಕ್ಕೆ ಆಗಮಿಸಿದ ವೇದವ್ಯಾಸರು
ಋತ್ವಿಜರಿಂದ ಸೇರಿಕೊಂಡು ಅಶ್ವಮೇಧಯಾಗವನ್ನು ಆರಂಭಿಸಿದುದು.
ವೈಶಂಪಾಯನಃ
ಸ ಪ್ರವಿಶ್ಯ ಯಥಾನ್ಯಾಯಂ ಪಾಂಡವಾನಾಂ ನಿವೇಶನಮ್।
ಪಿತಾಮಹೀಮಭ್ಯವದತ್ ಸಾಮ್ನಾ ಪರಮವಲ್ಗುನಾ ॥1॥
ವೈಶಂಪಾಯನ ಜನಮೇಜಯನೇ, ಮಹಾಬಾಹುವಾದ ಬಭ್ರುವಾಹನನು ಪಾಂಡವರ ಅರಮನೆಯನ್ನು ಪ್ರವೇಶಿಸಿ, ವಿನಯದಿಂದ ಕೂಡಿದ ಮಧುರವಾದ ಮಾತುಗಳನ್ನು ಕೇಳುತ್ತಾ ಪಿತಾಮಹಿಯಾದ ಕುಂತಿಗೆ ನಮಸ್ಕರಿಸಿದನು.
ತಥಾ ಚಿತ್ರಾಂಗದಾ ದೇವೀ ಕೌರವಸ್ಯಾತ್ಮಜಾಽಪಿ ಚ।
ಪೃಥಾಂ ಕೃಷ್ಣಾಂ ಚ ಸಹಿತೇ ವಿನಯೇನಾಭಿಜಗ್ಮತುಃ ॥2॥
ನಂತರ ಚಿತ್ರಾಂಗದೆಯು, ಕೌರವ್ಯ ಎಂಬ ನಾಗನ ಮಗಳಾದ ಉಲೂಪಿಯೂ ವಿನೀತರಾಗಿ ಕುಂತಿ ಮತ್ತು ದ್ರೌಪದಿಯರ ಬಳಿಗೆ ಹೋದರು.
ಸುಭದ್ರಾಂ ಚ ಯಥಾನ್ಯಾಯಂ ಯಾಶ್ಚಾನ್ಯಾಃ ಕುರುಯೋಷಿತಃ ॥3॥
ಉಲೂಪಿ, ಚಿತ್ರಾಂಗದೆಯರು ಸುಭದ್ರೆಯನ್ನೂ, ಇತರ ಕುರುಕುಲ ಸ್ತ್ರೀಯರನ್ನು ಕಂಡು ಮಾತನಾಡಿಸಿದರು.
ದದೌ ಕುಂತೀ ತತಸ್ತಾಭ್ಯಾಂ ರತ್ನಾನಿ ವಿವಿಧಾನಿ ಚ।

ದ್ರೌಪದೀ ಚ ಸುಭದ್ರಾ ಚ ಯಾಶ್ಚಾಪ್ಯನ್ಯಾಃ ಕುರುಸ್ತ್ರಿಯಃ ॥4॥
ಬಳಿಕ ಕುಂತಿಯು ಇವರೀರ್ವರಿಗೂ ಬಗೆ ಬಗೆಯಾದ ರತ್ನಗಳನ್ನು ದಾನವಾಗಿ ಕೊಟ್ಟಳು. ದ್ರೌಪದಿ-ಸುಭದ್ರೆ, ಇತರ ಕುಲಸ್ತ್ರೀಯರು ಇವರೀರ್ವರಿಗೆ ಅನೇಕ ಪಾರಿತೋಷಕಗಳನ್ನು ನೀಡಿದರು.
ಊಷತುಸ್ತತ್ರ ತೇ ದೇವ್ಯೌ ಮಹಾರ್ಹಶಯನಾಸನೇ |
ಸುಪೂಜಿತೇ ಸ್ವಯಂ ಕುಂತ್ಯಾ ಪಾರ್ಥಸ್ಯ ಪ್ರಿಯಕಾಮ್ಯಯಾ ॥5॥
ಬಳಿಕ ಅವರೀರ್ವರೂ ಬಹುಮೌಲ್ಯಭರಿತವಾದ ಹಾಸಿಗೆಗಳಿಂದ, ಆಸನಗಳಿಂದ ಅಲಂಕೃತವಾದ ಭವನಗಳಲ್ಲಿ ತಂಗಿದರು. ಅರ್ಜುನನಿಗೆ ಹಿತವನ್ನು ಉಂಟುಮಾಡುವ ದೃಷ್ಟಿಯಿಂದ ಇವರೀರ್ವರನ್ನು ಕುಂತಿಯೇ ಉಪಚರಿಸಿದಳು.
ಸ ಚ ರಾಜಾ ಮಹಾವೀರ್ಯಃ ಪೂಜಿತೋ ಬಭ್ರುವಾಹನಃ |
ಧೃತರಾಷ್ಟ್ರಂ ಮಹೀಪಾಲಮುಪತಸ್ಥೇ ಯಥಾವಿಧಿ ॥6॥
ಆ ಕುಂತೀದೇವಿಯಿಂದಲೇ ಮಹಾತೇಜಸ್ವಿಯಾದ ಬಭ್ರುವಾಹನನು ಸತ್ಕೃತನಾದನು. ಬಭ್ರುವಾಹನನೂ ಕೂಡ ಯಥೋಚಿತವಾಗಿ ಧೃತರಾಷ್ಟ್ರನನ್ನು ಸೇವಿಸಿದನು.
ಯುಧಿಷ್ಠಿರಂ ಚ ರಾಜಾನಂ ಭೀಮಾದೀಂಶ್ಚಾಪಿ ಪಾಂಡವಾನ್ |
ಉಪಗಮ್ಯ ಮಹಾತೇಜಾ ವಿನಯೇನಾಭ್ಯವಾದಯತ್ ॥7॥
ಮಹಾತೇಜಸ್ವಿಯಾದ ಬಭ್ರುವಾಹನನು ರಾಜನಾದ ಯುಧಿಷ್ಠಿರನನ್ನೂ, ಭೀಮನೇ ಮೊದಲಾದ ಪಾಂಡವರನ್ನೂ ಸಂಪರ್ಕಿಸಿ ವಿನಯಪೂರ್ವಕವಾಗಿ ನಮಸ್ಕರಿಸಿದನು.
ಸ ತೈಃ ಪ್ರೇಮ್ಣಾ ಪರಿಷ್ವಕ್ತಃ ಪೂಜಿತಶ್ಚ ಯಥಾವಿಧಿ |
ಧನಂ ಚಾಸ್ಮೈ ದದುರ್ಭೂರಿ ಪ್ರೀಯಮಾಣಾ ಮಹಾರಥಾಃ ॥8॥
ಅರ್ಜುನನ ಪ್ರೀತಿಯ ಪುತ್ರನಾದ ಮಣಲೂರಿನ ರಾಜನಾದ ಬಭ್ರುವಾಹನನನ್ನು ಯುಧಿಷ್ಠಿರಾದಿಗಳು ಗಾಢವಾಗಿ ಆಲಿಂಗಿಸಿಕೊಂಡು ಸತ್ಕರಿಸಿದರು. ಅವನಿಗೆ ಅಪಾರವಾದ ಪಾರಿತೋಷಕಗಳನ್ನು ನೀಡಿದರು.
ತಥೈವ ಸ ಮಹೀಪಾಲಃ ಕೃಷ್ಣಂ ಚಕ್ರಗದಾಧರಮ್ |
ಪ್ರದ್ಯುಮ್ನವದ್ ಹೃಷೀಕೇಶಂ ವಿನಯೇನೋಪಜಗ್ಮಿವಾನ್ ॥9॥
ಈ ಕ್ರಮದಲ್ಲಿಯೇ ಬಭ್ರುವಾಹನು ಚಕ್ರಗದಾಧರನಾದ ಕೃಷ್ಣನನ್ನು ಪ್ರದ್ಯುಮ್ನನು ವಂದಿಸುವಂತೆ ವಿನಯಪೂರ್ವಕವಾಗಿ ನಮಸ್ಕರಿಸಿದನು.
ತಸ್ಮೈ ಕೃಷ್ಣೋ ದದೌ ರಾಜ್ಞೇ ರಾಜಾರ್ಹಮಭಿಪೂಜಿತಮ್ |
ರಥಂ ಹೇಮಪರಿಷ್ಕಾರಂ ದಿವ್ಯಾಶ್ವಯುಜಮುತ್ತಮಮ್ ॥10॥
ಆ ಬಭ್ರುವಾಹನನಿಗೆ ಕೃಷ್ಣನೂ ಬಹುಮೌಲ್ಯಯುತವಾದ, ಎಲ್ಲರ ಪ್ರಶಂಸೆಗೆ ಪಾತ್ರವಾದ, ಸುವರ್ಣಾಭರಣಗಳಿಂದ ಅಲಂಕೃತವಾದ, ದಿವ್ಯವಾದ ಕುದುರೆಗಳಿಂದ ಸಹಿತವಾದ ರಥವನ್ನು ಪಾರಿತೋಷಕವಾಗಿ ಕೊಟ್ಟನು.
ಧರ್ಮರಾಜಶ್ಚ ಭೀಮಶ್ಚ ಯಮಜೌ ಫಲ್ಗುನಸ್ತಥಾ |
ಪೃಥಕ್ ಪೃಥಗಥೈವೈನಂ ಮಹಾರ್ಥೈರಭ್ಯಪೂಜಯನ್ ॥11॥
ಬಳಿಕ ಧರ್ಮರಾಜ, ಭೀಮಸೇನ, ಅರ್ಜುನ, ನಕುಲ-ಸಹದೇವರು ಪ್ರತ್ಯೇಕ ಪ್ರತ್ಯೇಕವಾಗಿ ಬಭ್ರುವಾಹನನನ್ನು ಸತ್ಕರಿಸಿ, ಐಶ್ವರ್ಯಗಳನ್ನು ನೀಡಿದರು.
ತತಸ್ತೃತೀಯೇ ದಿವಸೇ ಸತ್ಯವತ್ಯಾಃ ಸುತೋ ಮುನಿಃ |
ಯುಧಿಷ್ಠಿರಂ ಸಮಾನೀಯ ವಾಗ್ಮೀ ವಚನಮಬ್ರವೀತ್ ॥12॥
ಅಂದಿನಿಂದ ಮೂರನೆಯ ದಿವಸದಲ್ಲಿ ಸತ್ಯವತಿಯ ಮಗನೆನಿಸಿದ ವ್ಯಾಸ ಮುನಿಗಳು ಯುಧಿಷ್ಠಿರನ ಬಳಿ ಆಗಮಿಸಿ ಇಂತು ನುಡಿದರು.

ವ್ಯಾಸಃ
ಅದ್ಯಪ್ರಭೃತಿ ಕೌಂತೇಯ ಯಜ್ಞಸ್ಯ ಸಮಯೋ ಹಿ ತೇ |
ಮುಹೂರ್ತೋ ಯಾಜ್ಞಿಯಃ ಪ್ರಾಪ್ತಃ ಚೋದಯಂತ್ಯೇವ ಯಾಜಕಾಃ ॥
ವ್ಯಾಸರು ಕೌಂತೇಯನೆ, ಇಂದಿನಿಂದ ನೀನು ಯಜ್ಞವನ್ನು ಆರಂಭಿಸು. ಯಜ್ಞವನ್ನು ಪ್ರಾರಂಭಿಸಲು ಇಂದು ಉತ್ತಮವಾದ ಮುಹೂರ್ತವು ಲಭಿಸಿದೆ. ಯಜ್ಞದ ಮುಹೂರ್ತವು ಉಪಸ್ಥಿತವಾಗಿದೆ. ಯಾಜ್ಞಕರು ಯಜ್ಞವನ್ನು ಮಾಡುವಂತೆ ಪ್ರೇರಿಸುತ್ತಿದ್ದಾರೆ.
ಅಹೀನೋ ನಾಮ ರಾಜೇಂದ್ರ ಕ್ರತುಸ್ತೇಯಂ ವಿಕಲ್ಪವಾನ್ |
ಬಹುತ್ವಾತ್ ಕಾಂಚನಸ್ಯಾಸ್ಯ ಖ್ಯಾತೋ ಬಹುಸುವರ್ಣಕಃ ॥14॥
ರಾಜೇಂದ್ರನೇ, ಯಜ್ಞದಲ್ಲಿ ಯಾವುದಕ್ಕೂ ಕೊರತೆ ಇರುವುದಿಲ್ಲ. ಅನೇಕ ವಿಧವಾದ ಪರಿಕರಗಳೆಲ್ಲವೂ ಸಿದ್ಧಗೊಂಡಿವೆ. ಬಹುಸಂಖ್ಯೆಯಲ್ಲಿ ಸುವರ್ಣವು ಉಪಯೋಗಿಸಲ್ಪಡುವ ಯಜ್ಞವು ಇದಾಗಿರುವುದರಿಂದ ಬಹುಸುವರ್ಣಕ ಯಜ್ಞವೆಂದೇ ಈ ಯಜ್ಞವು ಖ್ಯಾತಿ ಹೊಂದುತ್ತದೆ.
ಏವಮೇವ ಮಹಾರಾಜ ದಕ್ಷಿಣಾಂ ತ್ರಿಗುಣಾಂ ಕುರು |
ತ್ರಿತ್ವಂ ವ್ರಜತು ತೇ ರಾಜನ್ ಬ್ರಾಹ್ಮಣಾ ಹ್ಯತ್ರ ಕಾರಣಮ್ ॥15॥
ಆದ್ದರಿಂದ ಈ ಯಜ್ಞಕ್ಕೆ ಆಗಮಿಸಿದ ಋತ್ವಿಜರಿಗೆ ಮೂರುಪಟ್ಟು ಅಧಿಕವಾದ ದಕ್ಷಿಣೆಯನ್ನು ನೀನು ನೀಡು. ಹೀಗೆ ಮಾಡುವುದರಿಂದ ಒಂದೇ ಯಜ್ಞವಾದರೂ ಮೂರು ಯಜ್ಞಗಳನ್ನು ಮಾಡಿದ ಫಲವು ಲಭಿಸುತ್ತದೆ. ಯಜ್ಞಕ್ಕೆ ಪ್ರಧಾನಕಾರಣರು ಬ್ರಾಹ್ಮಣರೇ ಆಗಿರುತ್ತಾರೆ.

ತ್ರೀನಶ್ವಮೇಧಾನತ್ರ ತ್ವಂ ಸಂಪ್ರಾಪ್ಯ ಬಹುದಕ್ಷಿಣಾನ್ |
ಜ್ಞಾತಿಹತ್ಯಾಕೃತಂ ಪಾಪಂ ಪ್ರಹಾಸ್ಯಸಿ ನರಾಧಿಪ ॥16॥
ಬಹುದಕ್ಷಿಣಾಯುಕ್ತವಾದ ಮೂರು ಅಶ್ವಮೇಧಯಾಗಗಳ ಫಲವನ್ನು ಪಡೆದು ನೀನು, ಜ್ಞಾತಿಗಳ ವಧೆಯಿಂದ ಉಂಟಾದ ಪಾಪವನ್ನು ಕಳೆದುಕೊಳ್ಳುತ್ತೀ.
ಪವಿತ್ರಂ ಪರಮಂ ಹ್ಯೇತತ್ ಪಾವನಾನಾಂ ಚ ಪಾವನಮ್ |
ಯದಶ್ವಮೇಧಾವಭೃಥಂ ಪ್ರಾಪ್ಸ್ಯಸೇ ಕುರುನಂದನ ॥17॥
ನಿನಗೆ ಅಶ್ವಮೇಧ ಯಜ್ಞದಲ್ಲಿ ಲಭಿಸುವ ಅವಭೃಥಸ್ನಾನವು ಪವಿತ್ರವೆನಿಸಿದೆ. ಅಂತಹ ಶ್ರೇಷ್ಠವಾದ, ಉತ್ತಮವಾದ ಅವಭೃಥ ಸ್ನಾನವನ್ನು ನೀನು ಹೊಂದುವಿ.
ವೈಶಂಪಾಯನಃ
ಇತ್ಯುಕ್ತಃ ಸ ತು ತೇಜಸ್ವೀ ವ್ಯಾಸೇನಾಮಿತಬುದ್ಧಿನಾ |
ದೀಕ್ಷಾಂ ವಿವೇಶ ಧರ್ಮಾತ್ಮಾ ವಾಜಿಮೇಧಾಪ್ತಯೇ ತದಾ ॥18॥
ವೈಶಂಪಾಯನ ಜನಮೇಜಯನೇ, ಮಹಾಜ್ಞಾನಿಗಳಾದ ವ್ಯಾಸರು ಹೀಗೆ ನುಡಿಯಲು ಧರ್ಮಾತ್ಮನಾದ, ತೇಜಸ್ವಿಯಾದ ಯುಧಿಷ್ಠಿರನು ಅಶ್ವಮೇಧ ಯಜ್ಞದ ಸಿದ್ಧಿಗಾಗಿ ದೀಕ್ಷೆಯನ್ನು ಸ್ವೀಕರಿಸಿದನು.
ನರಾಧಿಪಃ ಪ್ರಾಯಜತ ವಾಜಿಮೇಧಂ ಮಹಾಕ್ರತುಮ್ |
ವಿಧಿವದ್ ದಕ್ಷಿಣಂ ರಾಜಾ ಸರ್ವಯಜ್ಞಗುಣಾನ್ವಿತಮ್ ॥19॥
ಮಹಾಬಾಹುವಾದ ಯುಧಿಷ್ಠಿರನು ಅನೇಕ ಪ್ರಕಾರಗಳಿಂದ ಮಹಾ ಅಶ್ವಮೇಧ ಯಾಗವನ್ನು ಸಮಸ್ತ ಗುಣಸಂಪನ್ನವಾಗಿ ಮಾಡಲಾರಂಭಿಸಿದನು. ವಿಧಿವತ್ತಾಗಿ ದಕ್ಷಿಣೆಗಳನ್ನೂ ನೀಡಿದನು.
ತತ್ರ ವೇದವಿದೋ ರಾಜನ್ ಚಕ್ರುಃ ಕರ್ಮಾಣಿ ಯಾಜಕಾಃ |
ಪರಿಕ್ರಾಮಂತಿ ಶಾಸ್ತ್ರಜ್ಞಾ ಯಥಾವದ್ ದ್ವಿಜಸತ್ತಮಾಃ ॥20॥
ಆ ಅಶ್ವಮೇಧ ಯಜ್ಞಮಂಟಪದಲ್ಲಿ ವೇದಜ್ಞರಾದ ಯಾಜಕರು ಉತ್ತಮ ರೀತಿಯಲ್ಲಿ ಕರ್ಮಗಳನ್ನು ಆಚರಿಸಿದರು. ಶ್ರೇಷ್ಠರಾದ, ಶಾಸ್ತ್ರಜ್ಞರಾದ ಬ್ರಾಹ್ಮಣರು ಆ ಯಜ್ಞದ ಪರಿಕರಗಳನ್ನು ನೀಡಲು ಸುತ್ತ ಸಂಚರಿಸುತ್ತಿದ್ದರು.
ನ ತೇಷಾಂ ಸ್ಖಲಿತಂ ತತ್ರ ನಾಸೀದಪಹುತಂ ತದಾ |
ಕ್ರಮಯುಕ್ತಂ ಚ ಯುಕ್ತಂ ಚ ಚಕ್ರುಸ್ತತ್ರ ದ್ವಿಜರ್ಷಭಾಃ ॥21॥
ಆ ಯಾಜಕರು ಮಾಡುತ್ತಿದ್ದ ಕರ್ಮದಲ್ಲಿ ಸ್ಖಾಲಿತ್ಯವಿರಲಿಲ್ಲ. ಯಾವ ಕರ್ಮಗಳಲ್ಲೂ ಲೋಪವಿರಲಿಲ್ಲ. ಶ್ರೇಷ್ಠರಾದ ಬ್ರಾಹ್ಮಣರು ಕ್ರಮಬದ್ಧವಾಗಿ, ವಿಧಿಬದ್ಧವಾಗಿ ಯಜ್ಞವನ್ನು ಆಚರಿಸುತ್ತಿದ್ದರು.
ಕೃತ್ವಾ ಪ್ರವರ್ಗ್ಯಂ ಧರ್ಮಜ್ಞಾ ಯಥಾವದ್ ದ್ವಿಜಸತ್ತಮಾಃ |
ಚಕ್ರುಸ್ತೇ ವಿಧಿವದ್ ರಾಜನ್ ತಥೈವಾಭಿಷವಂ ದ್ವಿಜಾಃ ॥22॥
ಆ ಯಾಜ್ಞಕರು ಧರ್ಮಜ್ಞರಾಗಿದ್ದರು. ವಿಧಿಬದ್ಧವಾಗಿ ಪ್ರವರ್ಗ ಎಂಬ ಕರ್ಮವನ್ನು ಮಾಡುತ್ತಾ, ಸೋಮಲತೆಯನ್ನು ಕುಟ್ಟಿ ರಸವನ್ನು ತೆಗೆಯುವ ಅಭಿಷವ ಕರ್ಮವನ್ನು ವಿಧಿವತ್ತಾಗಿ ಆಚರಿಸಿದರು.
ಅಭಿಷೂಯ ತತೋ ರಾಜನ್ ಸೋಮಂ ಸೋಮಪಸತ್ತಮಾಃ |
ಸವನಾನ್ಯಾನುಪೂರ್ವ್ಯೇಣ ಚಕ್ರುಃ ಶಾಸ್ತ್ರಾನುಸಾರಿಣಃ ॥23॥
ಸೋಮಪಾನ ಮಾಡುವುದರಲ್ಲಿ ಶ್ರೇಷ್ಠರಾದ ವಿದ್ವಾಂಸರು ಸೋಮಲತೆಯಿಂದ ರಸವನ್ನು ತೆಗೆದು, ಯಜ್ಞದಲ್ಲಿ ನೀಡಿ ಪ್ರಾತಃಸವನವೇ ಮೊದಲಾದ ಮೂರು ಸವನಗಳನ್ನು ಶಾಸ್ತ್ರಾನುಸಾರವಾಗಿ ಆಚರಿಸಿದರು.
ನ ತತ್ರ ಕೃಪಣಃ ಕಶ್ಚಿನ್ನ ದರಿದ್ರೋ ಬಭೂವ ಹ |
ಕ್ಷುಧಿತೋ ದುಃಖಿತೋ ವಾಽಪಿ ಪ್ರಾಕೃತೋ ವಾಽಪಿ ಮಾನವಃ ॥24॥
ಆ ಯಜ್ಞಕ್ಕೆ ಆಗಮಿಸಿದ ವ್ಯಕ್ತಿಗಳಲ್ಲಿ ಜಿಪುಣರೂ, ದರಿದ್ರರೂ, ಹಸಿದವರೂ, ದುಃಖಿತರೂ, ಅಸಂಸ್ಕೃತರೂ ಎಂಬ ಒಬ್ಬ ಮನುಷ್ಯನೂ ಇರಲಿಲ್ಲ.
ಭೋಜನಂ ಭೋಜನಾರ್ಥಿಭ್ಯೋ ದಾಪಯಾಮಾಸ ಸರ್ವದಾ |
ಭೀಮಸೇನೋ ಮಹಾತೇಜಾಃ ಸತತಂ ರಾಜಶಾಸನಾತ್ ॥25॥
ಮಹಾತೇಜಸ್ವಿಯಾದ ಭೀಮಸೇನನು ನಿರಂತರವೂ ಯುಧಿಷ್ಠಿರನ ಆದೇಶದಂತೆ ಭೋಜನಾರ್ಥಿಗಳಿಗೆ ಭೋಜನವನ್ನು ಮಾಡಿಸುತ್ತಿದ್ದನು.
ಸಂಸ್ತರೇ ಕುಶಲಾಶ್ಚಾಪಿ ಸರ್ವಕರ್ಮಾಣಿ ಯಾಜಕಾಃ |
ದಿವಸೇ ದಿವಸೇ ಚಕ್ರುರ್ಯಥಾಶಾಸ್ತ್ರಾರ್ಥಚಕ್ಷುಷಃ ॥26॥
ಯಜ್ಞವೇದಿಯನ್ನು ನಿರ್ಮಾಣ ಮಾಡುವುದರಲ್ಲಿ ನಿಷ್ಣಾತರಾದ ಯಾಜಕರು ವಿಧಿಬದ್ಧವಾಗಿ ಸಮಸ್ತ ಕಾರ್ಯಗಳನ್ನೂ ಆಚರಿಸುತ್ತಿದ್ದರು. ಶಾಸ್ತ್ರವನ್ನು ಚೆನ್ನಾಗಿ ಅರಿತು ಪ್ರತಿದಿವಸದಲ್ಲಿಯೂ ಯೋಗ್ಯವಾದ ಕರ್ಮಗಳನ್ನು, ದರ್ಭೆಗಳನ್ನು ಹಾಸುವುದನ್ನು ಕುಶಲಿಗಳಾದ ಬ್ರಾಹ್ಮಣರು ಆಚರಿಸುತ್ತಿದ್ದರು.
ನಾಷಡಂಗವಿದತ್ರಾಸೀತ್ ಸದಸ್ಯೋ ನಾಬಹುಶ್ರುತಃ |
ನಾವ್ರತೋ ನಾನುಪಾಧ್ಯಾಯೋ ನ ಚ ವಾದಾಕ್ಷಮೋ ದ್ವಿಜಃ ॥27॥
ಷಡಂಗ ಅಧ್ಯಯನ, ವೇದವನ್ನು ಅಧ್ಯಯನ ಮಾಡದವರು ಅಲ್ಲಿ ಯಾರೂ ಇರಲಿಲ್ಲ. ವ್ರತಾನುಷ್ಠಾನ ಮಾಡದ, ಅಧ್ಯಾಪನ ಕರ್ಮದಲ್ಲಿ ಕುಶಲನಲ್ಲದ, ವಾದದಲ್ಲಿ ದಕ್ಷತೆಯಿಲ್ಲದ ಒಬ್ಬ ದ್ವಿಜನೂ ಆ ಯಜ್ಞದಲ್ಲಿ ಕಾಣಿಸಲಿಲ್ಲ.

ಯೂಪೋಚ್ಛ್ರಯೇ ತತಃ ಪ್ರಾಪ್ತೇ ಷಟ್ ಬೈಲ್ವಾನ್ ಭರತರ್ಷಭ |
ಖಾದಿರಾನ್ ಬಿಲ್ವಸಹಿತಾನ್ ತಾವತಃ ಸರ್ವವರ್ಣಿನಃ ||28||
ದೇವದಾರುಮಯೌ ದ್ವೌ ತು ಯೂಪೌ ಕುರುಪತೇಃ ಕೃತೌ |
ಶ್ಲೇಷ್ಮಾತ್ಮಕಮಯಂ ಚೈಕಂ ಯಾಜಕಾಃ ಸಮಕಾರಯನ್ ||29||
ಯಜ್ಞಕ್ಕೆ ಸಂಬಂಧಪಟ್ಟಂಥ ಯೂಪಸ್ಥಾಪನೆಯ ಸಮಯವು ಸನ್ನಿಹಿತವಾದಾಗ ಯಾಜಕರು ಯಜ್ಞಭೂಮಿಯಲ್ಲಿ ಬಿಲ್ವಮರದಿಂದ ನಿರ್ಮಿಸಲ್ಪಟ್ಟ ಆರು, ಹಗ್ಗಗಳಿಂದ ನಿರ್ಮಿಸಲ್ಪಟ್ಟ ಆರು, ಹೊಲಾಸದಿಂದ ನಿರ್ಮಿಸಲ್ಪಟ್ಟ ಆರು, ದೇವದಾರು ವೃಕ್ಷದಿಂದ ನಿರ್ಮಿಸಲ್ಪಟ್ಟ ಎರಡು, ಚಳ್ಳೆ ಮರದಿಂದ ನಿರ್ಮಿಸಲ್ಪಟ್ಟ ಒಂದು ಯೂಪಗಳನ್ನು ಸ್ಥಾಪಿಸಿದರು (ಒಟ್ಟು ಇಪ್ಪತ್ತೊಂದು ಯೂಪಗಳು).
ಸರ್ವಾನೇತಾನ್ ಯಥಾಶಾಸ್ತ್ರಂ ಯಾಜಕಾಃ ಸಮಯೋಜಯನ್ ||30||
ಕ್ರಮಬದ್ಧವಾಗಿ ಮಾಡಿದ ಈ ಎಲ್ಲ ಮರಗಳ ಯೂಪಗಳನ್ನು ಯಾಜಕರು ಶಾಸ್ತ್ರದ ವಿಧಿಗೆ ಅನುಸಾರವಾಗಿ ಯಜ್ಞಪ್ರಕ್ರಿಯೆಯಲ್ಲಿ ಬಳಸಿಕೊಂಡರು.
ಶೋಭಾರ್ಥಂ ಚಾಪರಾನ್ ಯೂಪಾನ್ ಕಾಂಚನಾನ್ ಭರತರ್ಷಭ |
ಸ ಭೀಮಃ ಕಾರಯಾಮಾಸ ಧರ್ಮರಾಜಸ್ಯ ಶಾಸನಾತ್ ||31||
ಯಜ್ಞಮಂಟಪದ ಅಲಂಕಾರಕ್ಕಾಗಿ ಭೀಮಸೇನನು ಧರ್ಮರಾಜನ ಆದೇಶದಂತೆ ಸುವರ್ಣಮಯವಾದ ಬೇರೆ ಅನೇಕ ಯೂಪಗಳನ್ನು ಮಾಡಿಸಿದನು.
ತೇ ವ್ಯರಾಜಂತ ರಾಜರ್ಷೇರ್ವಾಸೋಭಿರುಪಶೋಭಿತಾಃ |
ನರೇಂದ್ರಾಭಿಗತಾ ದೇವೈರ್ಯಥಾ ಸಪ್ತರ್ಷಯೋ ದಿವಿ ||32||
ಅನೇಕ ಬಣ್ಣಗಳಿಂದ, ವಸ್ತ್ರಗಳಿಂದ ಅಲಂಕೃತವಾದ ಯುಧಿಷ್ಠಿರನ ಯಜ್ಞ ಸಂಬಂಧವಾದ ಯೂಪಗಳು ಆಕಾಶದಲ್ಲಿ ಮಹೇಂದ್ರನನ್ನು ಅನುಸರಿಸುವ ಸ್ವಭಾವವುಳ್ಳ ಸಪ್ತರ್ಷಿಗಳಿಂದ ಸಹಿತರಾದ ದೇವತೆಗಳಂತೆ ಬೆಳಗಿದವು.
ಇಷ್ಟಕಾಃ ಕಾಂಚನಾಶ್ಚಾತ್ರ ಚಯನಾರ್ಥಂ ಕೃತಾ ಭವನ್ |
ಶುಶುಭೇ ಚಯನಂ ತಸ್ಯ ದಕ್ಷಸ್ಯೇವ ಪ್ರಜಾಪತೇಃ ||33||
ಆ ಯಜ್ಞಕ್ಕೆ ಸಂಬಂಧಿಸಿದ ಅಗ್ನಿಯನ್ನು ಭರಿಸಲು ಬಂಗಾರಮಯವಾದ ಇಟ್ಟಿಗೆಗಳು ತರಲ್ಪಟ್ಟಿದ್ದವು. ಧರ್ಮರಾಜನ ಯಜ್ಞಕುಂಡವು ದಕ್ಷಪ್ರಜಾಪತಿಯ ಅಗ್ನಿಕುಂಡದಂತೆ ಪ್ರಕಾಶಿಸುತ್ತಿತ್ತು.
ಚತುಶ್ಚೈತ್ಯಃ ಸ ತಸ್ಯಾಸೀದಷ್ಟಾದಶಕರಾತ್ಮಕಃ |
ಸ ರುಗ್ಮಪಕ್ಷೋ ನಿಚಿತಸ್ತ್ರಿಗುಣೋ ಗರುಡಾಕೃತಿಃ ||34||
ಆ ಯಜ್ಞವೇದಿಕೆಯ ಒಂದೊಂದು ದಿಕ್ಕುಗಳಲ್ಲಿಯೂ ನಾಲ್ಕು-ನಾಲ್ಕು ಬಂಗಾರದ ಇಟ್ಟಿಗೆಯು ಇಡಲ್ಪಟ್ಟಿದ್ದವು. ಪ್ರತಿಯೊಂದು ಇಟ್ಟಿಗೆಗಳು ಹದಿನೆಂಟು ಗೇಣುಗಳ ಉದ್ದಳತೆಯನ್ನು ಹೊಂದಿದ್ದವು. ಬಂಗಾರದ ರೆಕ್ಕೆಗಳನ್ನು ಹೊಂದಿದ್ದ ಪ್ರಧಾನವಾದ ಇಟ್ಟಿಗೆಯು ಗರುಡನ ಆಕಾರದಲ್ಲಿ ತ್ರಿಕೋಣಾಕಾರದಲ್ಲಿ ಕೂಡಿತ್ತು.
ತತೋ ನಿಯುಕ್ತಾಃ ಪಶವೋ ಯಥಾಶಾಸ್ತ್ರಂ ಮನೀಷಿಭಿಃ |
ತಂ ತಂ ದೇವಂ ಸಮುದ್ದಿಶ್ಯ ಪಕ್ಷಿಣಃ ಪಶವಶ್ಚ ಯೇ ||35||
ಋಷಭಾಃ ಶಾಸ್ತ್ರಪಠಿತಾಸ್ತಥಾ ಜಲಚರಾಶ್ಚ ಯೇ |
ಸರ್ವಾಂಸ್ತಾನಭ್ಯಯುಂಜಂಸ್ತೇ ತತ್ರಾಗ್ನಿಚಯಕರ್ಮಣಿ ||36||
ಬಳಿಕ ವಿದ್ವಾಂಸರು ಶಾಸ್ತ್ರವಿಧಿಗೆ ಅನುಸಾರವಾಗಿ ಪಶುಗಳನ್ನು ನಿಯೋಗಿಸಿದರು. ಭಿನ್ನಭಿನ್ನ ದೇವತೆಗಳನ್ನು ಉದ್ದೇಶಿಸಿ ಯಾಜಕರು ಅಗ್ನಿಚಯನಕರ್ಮಗಳಲ್ಲಿ ಪಕ್ಷಿಗಳನ್ನು, ಪಶುಗಳನ್ನು, ಲಕ್ಷಣಭರಿತವಾದ ವೃಷಭಗಳನ್ನು, ಜಲಚರಪ್ರಾಣಿಗಳನ್ನು ಒಟ್ಟಾಗಿ ಸೇರಿಸಿದರು.
ಯೂಪೇಷು ನಿಯತಂ ಚಾಸೀತ್ ಪಶೂನಾಂ ತ್ರಿಶತಂ ತಥಾ |
ಅಶ್ವರತ್ನೋತ್ತಮಂ ರಾಜ್ಞಃ ಕೌಂತೇಯಸ್ಯ ಮಹಾತ್ಮನಃ ||37||
ಆ ಯಜ್ಞಯೂಪದಲ್ಲಿ ಮುನ್ನೂರು ಪಶುಗಳು ಬಂಧಿಸಲ್ಪಟ್ಟಿದ್ದವು. ಅವುಗಳಲ್ಲಿ ಶ್ರೇಷ್ಠವಾದ ಅರ್ಜುನನ ಯಜ್ಞಾಶ್ವವು ಉತ್ತಮವಾಗಿ ಶೋಭಿಸುತ್ತಿತ್ತು.
ಸ ಯಜ್ಞಃ ಶುಶುಭೇ ತಸ್ಯ ಸಾಕ್ಷಾದ್ ದೇವರ್ಷಿಸಂಕುಲಃ |
ಗಂಧರ್ವಗಣಸಂಕೀರ್ಣಃ ಶೋಭಿತೋಽಪ್ಸರಸಾಂ ಗಣೈಃ ||38||
ಸಾಕ್ಷಾತ್ ದೇವತೆಗಳಿಂದ, ಋಷಿಗಳಿಂದ ತುಂಬಿರುವ ಆ ಯುಧಿಷ್ಠಿರನ ಯಜ್ಞವು ಶೋಭಾಯಮಾನವಾಗಿ ಕಾಣಿಸುತ್ತಿತ್ತು. ಗಂಧರ್ವರ ಸಮುದಾಯದಿಂದ, ಅಪ್ಸರಾ ಸ್ತ್ರೀಯರ ಸಮುದಾಯದಿಂದಲೂ ಶೋಭೆಯನ್ನು ಹೆಚ್ಚಿಸಿತು.
ಸ ಕಿಂಪುರುಷಗೀತೈಶ್ಚ ಕಿನ್ನರೈರುಪಶೋಭಿತಃ |
ಸಿದ್ಧವಿಪ್ರನಿವಾಸೈಶ್ಚ ಸಮಂತಾದಭಿಶೋಭಿತಃ ||39||
ಆ ಯಜ್ಞಮಂಟಪವು ಕಿಂಪುರುಷರ ಗೀತೆಗಳಿಂದ, ಕಿನ್ನರರಿಂದಲೂ, ಸಿದ್ಧ ಪುರುಷರಿಂದ, ಬ್ರಾಹ್ಮಣರ ಸನ್ನಿಧಾನದಿಂದ ಎಲ್ಲ ವಿಧದಲ್ಲಿಯೂ ಶೋಭಿಸಿತು.
ತಸ್ಮಿನ್ ಸದಸಿ ನಿತ್ಯಾಸ್ತು ವ್ಯಾಸಶಿಷ್ಯಾ ದ್ವಿಜೋತ್ತಮಾಃ |
ಸರ್ವಶಾಸ್ತ್ರಪ್ರಣೇತಾರಃ ಕುಶಲಾ ಯಜ್ಞಕರ್ಮಣಿ ||40||
ದ್ವಿಜಶ್ರೇಷ್ಠರಾದ, ವೇದವ್ಯಾಸದೇವರ ಶಿಷ್ಯರಾದ, ಸರ್ವಶಾಸ್ತ್ರಗಳ ಪ್ರಣೇತೃಗಳಾದ, ಕುಶಲರಾದ ಯಾಜ್ಞಕರು ಯಾವಾಗಲೂ

ಯಜ್ಞಸಭೆಯಲ್ಲಿ ಇರುತ್ತಿದ್ದರು.
ನಾರದಶ್ಚ ಬಭೂವಾತ್ರ ತುಂಬುರುಶ್ಚ ಮಹಾದ್ಯುತಿಃ।
ವಿಶ್ವಾವಸುಶ್ಚಿತ್ರಸೇನಸ್ತಥಾಽನ್ಯೇ ಗೀತಕೋವಿದಾಃ ॥41॥
ನಾರದರು, ತುಂಬುರರು, ವಿಶ್ವಾವಸುಗಳು, ಚಿತ್ರಸೇನ, ಇನ್ನೂ ಮೊದಲಾದ ಗಾನಕೋವಿದರೆಲ್ಲರೂ ಅಲ್ಲಿ ನೆರೆದಿದ್ದರು.
ಗಂಧರ್ವಾ ಗೀತಕುಶಲಾ ನೃತ್ತೇಷು ಚ ವಿಶಾರದಾಃ।
ರಮಯಂತಿ ಸ್ಮ ತಾನ್ ವಿಪ್ರಾನ್ ಯಜ್ಞಕರ್ಮಾಂತರೇಷ್ವಥ ॥42॥
ಹಾಡು ಹೇಳುವುದರಲ್ಲಿ ಕುಶಲರಾದ ಗಂಧರ್ವರು, ನರ್ತನ ಮಾಡುವುದರಲ್ಲಿ ವಿಶಾರದರಾದ ಗಂಧರ್ವರು ಆ ಯಜ್ಞಮಂಟಪದಲ್ಲಿದ್ದರು. ಯಜ್ಞದ ಕರ್ಮದ ಮಧ್ಯದಲ್ಲಿ ಆಲಸ್ಯ ಉಂಟಾಗದಂತೆ ಬ್ರಾಹ್ಮಣರನ್ನು ಇವರೆಲ್ಲರೂ ಸಂತೋಷಪಡಿಸುತ್ತಿದ್ದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಯೂಪಸ್ತಂಭಸ್ಥಾಪನಂ ನಾಮ ನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂದನೆಯ ಅಧ್ಯಾಯ
ಯುಧಿಷ್ಠಿರನು ಅಶ್ವಮೇಧ ಯಜ್ಞ ಮುಗಿದ ಬಳಿಕ ಯಥಾಯೋಗ್ಯವಾಗಿ ಬ್ರಾಹ್ಮಣರನ್ನು ದಕ್ಷಿಣೆ ಮೊದಲಾದವುಗಳಿಂದ ಸಂತೋಷಪಡಿಸಿದುದು. ರಾಜರನ್ನು ಪಾರಿತೋಷಕಗಳಿಂದ ಸಂತೋಷಪಡಿಸಿದುದು. ರಾಜರೆಲ್ಲರೂ ತಮ್ಮ ನಗರಗಳನ್ನು ಕುರಿತು ಪ್ರಯಾಣ ಬೆಳೆಸಿದುದು.
ವೈಶಂಪಾಯನಃ
ಶ್ರಪಯಿತ್ವಾ ಪಶೂನನ್ಯಾನ್ ವಿಧಿವದ್ ದ್ವಿಜಸತ್ತಮಾಃ।
ತುರಗಂ ತಂ ಯಥಾಶಾಸ್ತ್ರಮಾಲಭಂತ ದ್ವಿಜಾತಯಃ ॥1॥
ವೈಶಂಪಾಯನ ಜನಮೇಜಯನೇ, ಬ್ರಾಹ್ಮಣಶ್ರೇಷ್ಠರು ವಿಧಿವತ್ತಾಗಿ ಪಶುಗಳನ್ನು ಯಜ್ಞದಲ್ಲಿ ಹೋಮಿಸಿ, ಬಳಿಕ ವಿಧಿವತ್ತಾಗಿ ಯಜ್ಞಾಶ್ವವನ್ನು ಆಲಂಬನ (ವಿಷಸನ) ಮಾಡಿದರು.
ತತಃ ಸಂಜ್ಞಪ್ಯ ತುರಗಂ ವಿಧಿವದ್ಯಾಜಕರ್ಷಭಾಃ।
ಉಪಸಂವೇಶಯಾಂಚಕ್ರುಸ್ತತಸ್ತಾಂ ದ್ವಿಜಸತ್ತಮಾಃ ॥2॥
ಕಾಲಭಿಸ್ತಿಸೃಭೀ ರಾಜನ್ ಯಥಾವಿಧಿ ಸಮನ್ವಿತಾಮ್ ॥3॥
ವಿಧಿವತ್ತಾಗಿ ಯಜ್ಞ ಮಾಡುವುದರಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಯಜ್ಞದ ಕುದುರೆಯನ್ನು ವಿಧಿವತ್ತಾಗಿ ಬೇಯಿಸಿ, ಹಿಂಸೆಗೊಳಿಸಿ ಯಜ್ಞದ ಆಹುತಿಗಾಗಿ ಸಿದ್ಧಪಡಿಸಿಕೊಂಡರು. ಆ ಸಭೆಯು ಇಂದ್ರ-ಅಗ್ನಿ-ಸೂರ್ಯ ಎಂಬ ಮೂರು ದೇವತಾ ಕಲೆಗಳಿಂದ ಸನ್ನಿಧಾನವನ್ನು ಹೊಂದಿತ್ತು. ಶಾಸೊತ್ರೀಕ್ತವಾದ ವಿಧಿಗಳಿಂದ ಆ ಸಭೆಯು ವಿರಾಜಮಾನವಾಗಿತ್ತು.
ಉದ್ಧೃತ್ಯ ತು ವಪಾಂ ತತ್ರ ಯಥಾಶಾಸ್ತ್ರಂ ದ್ವಿಜರ್ಷಭಾಃ।
ಶ್ರಪಯಾಮಾಸುರಪರಾಃ ಶಾಸ್ತ್ರವದ್ ಭರತರ್ಷಭ ॥4॥
ಶಾಸ್ತ್ರಕ್ಕನುಸಾರವಾಗಿ ಬ್ರಾಹ್ಮಣಶ್ರೇಷ್ಠರು ಆ ವಪೆಯನ್ನು ಉದ್ಧರಿಸಿ ಶಾಸ್ತ್ರಬದ್ಧವಾಗಿಯೇ ಇತರ ಬ್ರಾಹ್ಮಣರಿಂದ ಸಹಿತರಾಗಿ ಆಹುತಿಯನ್ನು ನೀಡಿದರು.
ತಂ ವಪಾಧೂಮಗಂಧಂ ತು ಧರ್ಮರಾಜಃ ಸಹಾನುಜಃ।
ಉಪಾಜಿಘ್ರದ್ ಯಥಾನ್ಯಾಯಂ ಸರ್ವಪಾಪಾಪಹಂ ತದಾ ॥5॥
ಆ ವಪೆಯಿಂದ ಹೊರಟ ಹೊಗೆಯ ವಾಸನೆಯನ್ನು ಧರ್ಮರಾಜನು ತನ್ನ ಸಹೋದರರ ಜೊತೆಗೆ ಶಾಸ್ತ್ರವಿಧಿಗನುಗುಣವಾಗಿ ಆಘ್ರಾಣಿಸಿದನು. ಈ ಧೂಮವು ಸಮಸ್ತ ಪಾಪಪರಿಹಾರಕವಾಗಿತ್ತು.
ಶಿಷ್ಟಾನ್ಯಂಗಾನಿ ಯಾನ್ಯಾಸನ್ ತಸ್ಯಾಶ್ವಸ್ಯ ನರಾಧಿಪ।
ತಾನ್ಯಗ್ನೌ ಜುಹುವುರ್ಧೀರಾಃ ಸಮಸ್ತಾಃ ಷೋಡಶರ್ತ್ವಿಜಃ ॥6॥
ಕುದುರೆಯ ಉಳಿದ ಅಂಗಗಳನ್ನು ಹದಿನಾರು ಮಂದಿ ಋತ್ವಿಜರು ತುಂಡರಿಸಿ ಅಗ್ನಿಯಲ್ಲಿ ಹೋಮ ಮಾಡಿದರು.
ಸಂಸ್ಥಾಪ್ಯೈವಂ ತಸ್ಯ ರಾಜ್ಞಸ್ತಂ ಕ್ರತುಂ ಶಕ್ರತೇಜಸಃ।
ಯಥಾಶಾಸ್ತ್ರಂ ಮಹಾರಾಜ ಋಷಯಃ ಶಕ್ರತೇಜಸಃ ॥7॥
ಈ ಕ್ರಮದಲ್ಲಿ ಯುಧಿಷ್ಠಿರನು ಅಶ್ವಮೇಧ ಯಾಗವನ್ನು ಸಮಾಪನಗೊಳಿಸಿ ಇಂದ್ರನಿಗೆ ಸಮಾನವಾದ ತೇಜಸ್ಸನ್ನು ಹೊಂದಿದನು. ವಿಧಿಬದ್ಧವಾಗಿ ಯಜ್ಞವನ್ನು ಅನುಷ್ಠಾನ ಮಾಡಿದ ಋಷಿಗಳು ಇಂದ್ರನ ತೇಜಸ್ಸಿನಂತೆಯೇ ಬೆಳಗಿದರು.
ವ್ಯಾಸಃ ಸಶಿಷ್ಯೋ ಭಗವಾನ್ ವರ್ಧಯಾಮಾಸ ತಂ ನೃಪಮ್ ॥8॥
ವೇದವ್ಯಾಸದೇವರು ತಮ್ಮ ಶಿಷ್ಯರಿಂದ ಸಹಿತರಾಗಿ ಆ ಯುಧಿಷ್ಠಿರ ರಾಜನನ್ನು ಅಭ್ಯುದಯ ಹೊಂದುವಂತೆ ಆಶೀರ್ವದಿಸಿದರು.
ತತೋ ಯುಧಿಷ್ಠಿರಃ ಪ್ರಾದಾತ್ ಸದಸ್ಯೇಭ್ಯೋ ಯಥಾವಿಧಿ।
ಕೋಟೀಃ ಸಹಸ್ರಂ ನಿಷ್ಕಾಣಾಂ ವ್ಯಾಸಾಯ ತು ವಸುಂಧರಾಮ್ ॥9॥
ಬಳಿಕ ಯುಧಿಷ್ಠಿರನು ಸಮಸ್ತ ಬ್ರಾಹ್ಮಣರಿಗೂ ಒಂದುಸಾವಿರ ಕೋಟಿ ಸುವರ್ಣ ನಾಣ್ಯಗಳನ್ನು ಕೊಟ್ಟು ವೇದವ್ಯಾಸರಿಗೆ ಸಮಸ್ತ ಭೂಮಂಡಲವನ್ನೇ ದಾನವಾಗಿ ಕೊಟ್ಟನು.
ಪ್ರತಿಗೃಹ್ಯ ಧರಾಂ ರಾಜನ್ ವ್ಯಾಸಃ ಸತ್ಯವತೀಸುತಃ।

ಅಬ್ರುವೀದ್ ಭರತಶ್ರೇಷ್ಠಂ ಧರ್ಮಾತ್ಮಾನಂ ಯುಧಿಷ್ಠಿರಮ್ | |10॥
ಸತ್ಯವತೀಸುತರಾದ ವ್ಯಾಸರು ಸಮಗ್ರ ಭೂಮಂಡಲವನ್ನು ದಾನವನ್ನಾಗಿ ಪಡೆದು ಧರ್ಮಜನನ್ನು ಕುರಿತು ಹೀಗೆ ಹೇಳಿದರು.
ವ್ಯಾಸಃ
ಪೃಥಿವೀ ಭವತಸ್ತ್ವೇಷಾ ಸನ್ನ್ಯಸ್ತಾ ರಾಜಸತ್ತಮ |
ನಿಷ್ಕ್ರಯೋ ದೀಯತಾಂ ಮಹ್ಯಂ ಬ್ರಾಹ್ಮಣಾ ಹಿ ಧನಾರ್ಥಿನಃ ॥11॥
ವ್ಯಾಸರು ರಾಜಶ್ರೇಷ್ಠನೇ, ಇಲ್ಲಿಯ ತನಕ ನಿನ್ನ ಆಧಿಪತ್ಯಕ್ಕೆ ಒಳಪಟ್ಟಿರುವ ಈ ಭೂಮಂಡಲವನ್ನು ಪುನಃ ನಿನ್ನ ಅಧಿಕಾರಕ್ಕೆ ಸಮರ್ಪಿಸುತ್ತೇನೆ. ಯುಧಿಷ್ಠಿರನೇ, ಬ್ರಾಹ್ಮಣರು ರಾಜ್ಯಾರ್ಥಿಗಳಲ್ಲ, ಧನಾರ್ಥಿಗಳಾಗಿದ್ದಾರೆ. ಆದ್ದರಿಂದ ಈ ಪೃಥಿವಿಯನ್ನು ನಿನಗೇ ನೀಡುತ್ತೇನೆ. ನನಗೆ ಧನವನ್ನು ನೀಡು.
ವೈಶಂಪಾಯನಃ
ಯುಧಿಷ್ಠಿರಸ್ತು ತಾನ್ ವಿಪ್ರಾನ್ ಪ್ರತ್ಯುವಾಚ ಮಹಾಮನಾಃ |
ಭ್ರಾತೃಭಿಃ ಸಹಿತೋ ಧೀಮಾನ್ ಮಧ್ಯೇ ರಾಜ್ಞಾಂ ಮಹಾತ್ಮನಾಮ್ ॥
ವೈಶಂಪಾಯನ ವ್ಯಾಸರು ಹೀಗೆ ಹೇಳಲು ಸಹೋದರರ ಜೊತೆಯಲ್ಲಿರುವ ಮಹಾತ್ಮನಾದ ಯುಧಿಷ್ಠಿರನು ಅಲ್ಲಿ ನೆರೆದಿರುವ ರಾಜರ ಮಧ್ಯದಲ್ಲಿ ಬ್ರಾಹ್ಮಣರನ್ನು ಕುರಿತು ಹೀಗೆ ಹೇಳಿದನು.
ಯುಧಿಷ್ಠಿರಃ
ಅಶ್ವಮೇಧೇ ಮಹಾಯಜ್ಞೇ ಪೃಥಿವೀ ದಕ್ಷಿಣಾ ಸ್ಮೃತಾ |
ಅರ್ಜುನೇನ ಜಿತಾ ಸೇಯಮೃತ್ವಿಗ್ಭ್ಯಃ ಪ್ರಾಪಿತಾ ಮಯಾ ॥13॥
ಯುಧಿಷ್ಠಿರ ವಿಪ್ರಶ್ರೇಷ್ಠರೇ, ಅಶ್ವಮೇಧ ಮಹಾಯಜ್ಞದಲ್ಲಿ ಸಮಗ್ರ ಭೂಮಂಡಲವನ್ನೇ ದಕ್ಷಿಣೆಯನ್ನಾಗಿ ನೀಡಬೇಕೆಂಬ ವಿಧಿ ಇದೆ. ಈ ಭೂಮಂಡಲವು ಅರ್ಜುನನಿಂದ ಜಯಿಸಲ್ಪಟ್ಟಿದೆ. ಇದನ್ನೇ ಋತ್ವಿಜರಿಗೆ ದಕ್ಷಿಣಾರೂಪದಲ್ಲಿ ನಾನು ದಾನ ಮಾಡಿದ್ದೇನೆ.
ವನಂ ಯಾಸ್ಯಾಮಿ ವಿಪ್ರೇಂದ್ರಾ ವಿಭಜ್ಯಧ್ವಂ ಮಹೀಮಿಮಾಮ್ |
ಚತುರ್ಧಾ ಪೃಥಿವೀಂ ಕೃತ್ವಾ ಚಾತುರ್ಹೋತ್ರಪ್ರಮಾಣತಃ ॥14॥
ಬ್ರಾಹ್ಮಣರೇ, ನಾನು ದಾನ ಮಾಡಿದ ಭೂಮಿಯನ್ನು ನೀವೇ ಹಂಚಿಕೊಳ್ಳಿರಿ. ನಾನು ಅರಣ್ಯಕ್ಕೆ ಹೋಗುತ್ತೇನೆ. ನೀವು ಅಧ್ವರ್ಯು, ಉದ್ಗಾತೃ, ಹೋತೃ, ಬ್ರಹ್ಮ ಎಂಬ ವಿಭಾಗದಿಂದ ನಿಂತು ಈ ಯಾಗವನ್ನು ನಡೆಸಿರುತ್ತೀರಿ. ಚಾತುರ್ಹೋತ್ರ ಯಜ್ಞದಲ್ಲಿ ನಿರತರಾದವರು ಯಾವ ಕ್ರಮದಲ್ಲಿ ಭೂಮಿಯನ್ನು ವಿಂಗಡಿಸಿಕೊಳ್ಳಬೇಕೋ ಅದರಂತೆ ನಾಲ್ಕು ಭಾಗಗಳನ್ನಾಗಿ ಹಂಚಿಕೊಳ್ಳಿರಿ.
ನಾಹಮಾದಾತುಮಿಚ್ಛಾಮಿ ಬ್ರಹ್ಮಸ್ವಂ ಮುನಿಸತ್ತಮಾಃ |
ಇದಂ ಮತಂ ಹಿ ಮೇ ನಿತ್ಯಂ ಭ್ರಾತೄಣಾಂ ಚ ಮಮಾನಘಾಃ ॥15॥
ಬ್ರಾಹ್ಮಣರ ಈ ಸ್ವತ್ತನ್ನು ನಾನು ಸ್ವೀಕರಿಸಲು ಇಚ್ಛಿಸುವುದಿಲ್ಲ. ನನ್ನಂತೆ ನನ್ನ ಸಹೋದರರ ಅಭಿಪ್ರಾಯವೂ ದೃಢವಾಗಿಯೇ ಇದೆ.
ವೈಶಂಪಾಯನಃ
ಇತ್ಯುಕ್ತವತಿ ತಸ್ಮಿಂಸ್ತೇ ಭ್ರಾತರೋ ದ್ರೌಪದೀ ಚ ಸಾ |
ಏವಮೇತದಿತಿ ಪ್ರಾಹುಸ್ತದಭೂದ್ ರೋಮಹರ್ಷಣಮ್ ॥16॥
ವೈಶಂಪಾಯನ ಜನಮೇಜಯನೇ, ಯುಧಿಷ್ಠಿರನು ಹೀಗೆ ಹೇಳುತ್ತಿರಲು ಭೀಮಸೇನನೇ ಮೊದಲಾದ ಸಹೋದರರು, ದ್ರೌಪದಿಯು ಹೀಗೆಯೇ ಆಗಲಿ. ಮಹಾರಾಜನು ಹೇಳಿದುದು ನಮಗೂ ಸಮ್ಮತವೇ ಎಂದು ಹೇಳಿದಾಗ ಇವರ ಅಭಿಪ್ರಾಯವನ್ನು ಕೇಳಿಸಿಕೊಂಡ ಸಮಸ್ತ ಜನರೂ ಆಶ್ಚರ್ಯದಿಂದ ರೋಮಾಂಚಿತರಾದರು.
ತತೋಽಂತರಿಕ್ಷೇ ವಾಗಾಸೀತ್ ಸಾಧು ಸಾಧ್ವಿತಿ ಭಾರತ |
ತಥೈವ ದ್ವಿಜಸಂಘಾನಾಂ ಶಂಸತಾಂ ವಿಬಭೌ ಸ್ವನಃ ॥17॥
ಈ ಸಂದರ್ಭದಲ್ಲಿ ಆಕಾಶದಲ್ಲಿ `ಸಾಧು-ಸಾಧು' ಎಂಬ ಶಬ್ದವು ಕೇಳಿಬಂದಿತು. ಪಾಂಡವರ ಈ ಶುದ್ಧಭಾವವನ್ನು ಪ್ರಶಂಸೆ ಮಾಡುತ್ತಾ ಬ್ರಾಹ್ಮಣರು ಹೀಗೆ ಹೇಳುತ್ತಿರುವ ಶಬ್ದವು ಕೇಳಿಸುತ್ತಿತ್ತು.
ದ್ವೈಪಾಯನಸ್ತಥೋಕ್ತಸ್ತು ಪುನರೇವ ಯುಧಿಷ್ಠಿರಮ್ |
ಉವಾಚ ಮಧ್ಯೇ ವಿಪ್ರಾಣಾಮಿದಂ ಸಂಪೂಜಯನ್ ಮುನಿಃ ॥18॥
ಪಾಂಡವರ ಮಾತನ್ನು ಪ್ರಶಂಸಿಸುತ್ತಾ ಮುನಿಶ್ರೇಷ್ಠರಾದ ಕೃಷ್ಣದ್ವೈಪಾಯನರು ಬ್ರಾಹ್ಮಣರ ಮಧ್ಯದಲ್ಲಿ ಯುಧಿಷ್ಠಿರನನ್ನು ಪ್ರಶಂಸಿಸುತ್ತಾ ಹೀಗೆ ಹೇಳಿದರು.
ವ್ಯಾಸಃ
ದತ್ತೈಷಾ ಭವತಾ ಮಹ್ಯಂ ತಾಂ ತೇ ಪ್ರತಿದದಾಮ್ಯಹಮ್ |
ಹಿರಣ್ಯಂ ದೀಯತಾಮೇಭ್ಯೋ ದ್ವಿಜಾತಿಭ್ಯೋ ಧರಾಸ್ತು ತೇ ॥19॥
ವ್ಯಾಸರು ಯುಧಿಷ್ಠಿರನೇ, ನೀನು ಸಮಗ್ರ ಭೂಮಂಡಲವನ್ನು ನನಗೆ ದಾನ ಮಾಡಿರುವಿ. ಇದರ ಹೊಣೆಗಾರಿಕೆಯನ್ನು ನಿನಗೆ ವಹಿಸುತ್ತೇನೆ. ನೀನು ಭೂಮಿಯನ್ನು ಸ್ವೀಕರಿಸಿ, ಇದರ ಬದಲು ಸುವರ್ಣವನ್ನು ಬ್ರಾಹ್ಮಣರಿಗೆ ನೀಡು. ಭೂಮಿಯು ನಿನ್ನ ಅಧಿಕಾರದಲ್ಲೇ ಇರಲಿ.
ವೈಶಂಪಾಯನಃ
ತತೋಽಬ್ರುವೀದ್ ವಾಸುದೇವೋ ಧರ್ಮರಾಜಂ ಯುಧಿಷ್ಠಿರಮ್ ॥
ವೈಶಂಪಾಯನ ಬಳಿಕ ಕೃಷ್ಣನು ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು.
ಶ್ರೀಭಗವಾನ್

ಯಥಾऽऽಹ ಭಗವಾನ್ ವ್ಯಾಸಸ್ತಥಾ ತ್ವಂ ಕರ್ತುಮರ್ಹಸಿ ॥21॥
ಶ್ರೀಭಗವಾನ್ ಧರ್ಮರಾಜನೇ, ವೇದವ್ಯಾಸರು ಹೇಗೆ ಹೇಳುತ್ತಾರೋ ಅದರಂತೆ ಮಾಡಲು ಅರ್ಹನಾಗಿರುವಿ.
ವೈಶಂಪಾಯನಃ
ಇತ್ಯುಕ್ತಃ ಸ ಕುರುಶ್ರೇಷ್ಠಃ ಪ್ರೀತಾತ್ಮಾ ಭ್ರಾತೃಭಿಃ ಸಹ |
ಕೋಟಿಂ ಕೋಟಿಂ ಗವಾಂ ಪ್ರಾದಾದ್ ದಕ್ಷಿಣಾಂ ತ್ರಿಗುಣಾಂ ಕ್ರತೌ ॥
ವೈಶಂಪಾಯನ ಜನಮೇಜಯನೇ, ವಾಸುದೇವನು ಹೀಗೆ ಹೇಳಲು ಸಂತುಷ್ಟನಾದ ಯುಧಿಷ್ಠಿರನು ಸಹೋದರರ ಜೊತೆಗೂಡಿ ಕೋಟಿ, ಕೋಟಿ ಹಸುಗಳನ್ನು ಮೂರುಪಟ್ಟು ಅಧಿಕವಾದ ದಕ್ಷಿಣೆಗಳಿಂದ ಸಹಿತವಾಗಿ ಬ್ರಾಹ್ಮಣರಿಗೆ ನೀಡಿದನು.
ನ ಕರಿಷ್ಯತಿ ತಲ್ಲೋಕೇ ಕಶ್ಚಿದನ್ಯೋ ನರಾಧಿಪ |
ಯತ್ಕೃತಂ ಕುರುಸಿಂಹೇನ ಮರುತ್ತಮನುಕುರ್ವತಾ ॥23॥
ದಕ್ಷಿಣೆಯನ್ನು ಕೊಡುವುದರಲ್ಲಿ ಮರುತ್ತರಾಜನ ಮಾರ್ಗವನ್ನೇ ಅನುಸರಿಸಿದ ಯುಧಿಷ್ಠಿರನು ಅದ್ಭುತವಾದ ಅಶ್ವಮೇಧಯಾಗವನ್ನು ಮಾಡಿದನು. ಯುಧಿಷ್ಠಿರನು ಮಾಡಿದಂತಹ ಅಶ್ವಮೇಧ ಯಾಗವನ್ನು ಲೋಕದಲ್ಲಿ ಬೇರೆ ಯಾವ ರಾಜರೂ ಮಾಡಲಾರರು.
ಪ್ರತಿಗೃಹ್ಯ ತು ತದ್ರತ್ನಂ ಕೃಷ್ಣದ್ವೈಪಾಯನಃ ಪ್ರಭುಃ |
ಋತ್ವಿಗ್ಭ್ಯಃ ಪ್ರದದೌ ವಿದ್ವಾನ್ ಚತುರ್ಧಾ ವ್ಯಭಜಂಶ್ಚ ತೇ ॥24॥
ಕೃಷ್ಣದ್ವೈಪಾಯನರು ರಾಶಿರಾಶಿಯಾಗಿರುವ ಸುವರ್ಣವನ್ನು ದಾನವನ್ನಾಗಿ ಸ್ವೀಕರಿಸಿ ಅವೆಲ್ಲವನ್ನೂ ನಾಲ್ಕುಭಾಗವನ್ನಾಗಿ ವಿಂಗಡಿಸಿ ಬ್ರಾಹ್ಮಣರಿಗೆ ಹಂಚಿಬಿಟ್ಟರು.
ಪೃಥಿವ್ಯಾ ನಿಷ್ಕ್ರಯಂ ದತ್ತತತ್ವ ತದ್ಧಿರಣ್ಯಂ ಯುಧಿಷ್ಠಿರಃ |
ಧೂತಪಾಪ್ಮಾ ಜಿತಸ್ವರ್ಗೋ ಮುಮುದೇ ಭ್ರಾತೃಭಿಃ ಸಹ ॥25॥
ಯುಧಿಷ್ಠಿರನು ಭೂಮಿಯ ಮೌಲ್ಯವನ್ನು ಬಂಗಾರದ ರೂಪದಲ್ಲಿ ಕೊಟ್ಟು ಪಾಪಗಳನ್ನೆಲ್ಲ ಪರಿಹರಿಸಿಕೊಂಡು ಸ್ವರ್ಗವನ್ನು ಜಯಿಸಿ ತನ್ನ ಸಹೋದರರೊಡನೆ ಸಂತೋಷಪಟ್ಟನು.
ಋತ್ವಿಜಸ್ತಮಪರ್ಯಂತಂ ಸುವರ್ಣನಿಚಯಂ ತದಾ |
ವ್ಯಭಜಂತ ದ್ವಿಜಾತಿಭ್ಯೋ ಯಥೋತ್ಸಾಹಂ ಯಥಾವಿಧಿ ॥26॥
ಋತ್ವಿಜರಾದರೂ ಅನಂತವಾದ ಸುವರ್ಣರಾಶಿಯನ್ನು ಪಡೆದುಕೊಂಡು ಅತ್ಯಂತ ಉತ್ಸಾಹ ಮತ್ತು ಆನಂದದಿಂದ ತಾವು ಪಡೆದುದ್ದರಲ್ಲಿ ಇತರ ಬ್ರಾಹ್ಮಣರಿಗೂ ಹಂಚಿದರು.
ಯಜ್ಞವಾಟೇ ತು ಯತ್ ಕಿಂಚಿದ್ಧಿರಣ್ಯಮಪಿ ಭೂಷಣಮ್ |
ತೋರಣಾನಿ ಚ ಯೂಪಾಂಶ್ಚ ಘಟಾನ್ ಪಾತ್ರೀಸ್ತಥೇಷ್ಟಕಾಃ ॥27॥
ಯುಧಿಷ್ಠಿರಾಭ್ಯನುಜ್ಞಾತಾಸ್ತತ್ ಸರ್ವಂ ವ್ಯಭಜನ್ ದ್ವಿಜಾಃ ॥28॥
ಯಜ್ಞಮಂಟಪದಲ್ಲಿ ಅಲಂಕಾರಕ್ಕೋಸ್ಕರ ಯಾವ ಸುವರ್ಣಾಭರಣಗಳಿದ್ದವೋ, ಬಂಗಾರದ ತೋರಣಗಳಿದ್ದವೋ, ಯೂಪಗಳಿದ್ದವೋ, ಬಿಂದಿಗೆಗಳಿದ್ದವೋ ಅಂತಹ ಪಾತ್ರೆ, ಇಟ್ಟಿಗೆ, ಸಮಗ್ರ ವಸ್ತುಗಳೆಲ್ಲವನ್ನೂ ಯುಧಿಷ್ಠಿರನ ಆದೇಶದಂತೆ ಪರಸ್ಪರವಾಗಿ ಹಂಚಿಕೊಂಡರು.
ಅನಂತರಂ ಬ್ರಾಹ್ಮಣೇಭ್ಯಃ ಕ್ಷತ್ರಿಯಾ ಜಹ್ರಿರೇ ವಸು ॥29॥
ತಥಾ ಶೂದ್ರಸಂಘಾಶ್ಚ ತಥಾऽನ್ಯೇ ಮ್ಲೇಚ್ಛಜಾತಯಃ |
ಕಾಲೇನ ಮಹತಾ ಜಹ್ರುಸ್ತತ್ ಸುವರ್ಣಂ ತತಸ್ತತಃ ॥30॥
ಅನಂತರ ಆ ಯಜ್ಞಕರ್ಮದಲ್ಲಿ ಭಾಗವಹಿಸಿದ ಬ್ರಾಹ್ಮಣರಿಗೆ ಇತರ ಕ್ಷತ್ರಿಯರು, ಶೂದ್ರರು, ವೈಶ್ಯರು, ಮ್ಲೇಚ್ಛ ಜಾತಿಯವರು ಯಥಾಶಕ್ತಿ ಬಂಗಾರವನ್ನು ದಾನ ಮಾಡಿದರು.
ತತಸ್ತೇ ಬ್ರಾಹ್ಮಣಾಃ ಸರ್ವೇ ಮುದಿತಾ ಜಗ್ಮುರಾಲಯಾನ್ |
ತರ್ಪಿತಾ ವಸುನಾ ಚೈವ ಧರ್ಮರಾಜ್ಞಾ ಮಹಾತ್ಮನಾ ॥31॥
ಇದರಿಂದ ಅತ್ಯಂತ ಸಂತುಷ್ಟರಾದ ಬ್ರಾಹ್ಮಣರೆಲ್ಲರೂ ಆನಂದದಿಂದ ಕೂಡಿದವರಾಗಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಹೀಗೆ ಮಹಾತ್ಮನಾದ ಧರ್ಮರಾಜನು ಸಂಪತ್ತಿನಿಂದ ಎಲ್ಲರನ್ನೂ ಸಂತೋಷಗೊಳಿಸಿದನು.
ಸ್ವಮಂಶಂ ಭಗವಾನ್ ವ್ಯಾಸಃ ಕುಂತ್ಯೈ ಪಾದಾಭಿವಾದಿತಃ |
ಪ್ರದದೌ ತಸ್ಯ ಮಹತೋ ಹಿರಣ್ಯಸ್ಯ ಮಹಾದ್ಯುತಿಃ ॥32॥
ಮಹಾಕಾಂತಿಯಿಂದ ಕೂಡಿದ ವೇದವ್ಯಾಸದೇವರು ತಮಗೆ ವಿಭಾಗದಲ್ಲಿ ಸಿಕ್ಕ ಸಂಪತ್ತೆಲ್ಲವನ್ನೂ ಕುಂತೀದೇವಿಗೆ ನಮಸ್ಕಾರಪೂರ್ವಕವಾಗಿ ಕೊಟ್ಟರು.
ಶ್ವಶುರಾತ್ ಪ್ರೀತಿದಾನಂ ತತ್ ಪ್ರಾಪ್ಯ ಸಾ ಪ್ರೀತಮಾನಸಾ |
ಚಕಾರ ಪುಣ್ಯಂ ಕಾಲೇನ ಸುಮಹದ್ದಿ ಪೃಥಾ ತಥಾ ॥33॥
ವೇದವ್ಯಾಸರು ಪ್ರೀತಿಯಿಂದ ಕೊಟ್ಟ ಮಹಾಧನವನ್ನು ಸ್ವೀಕರಿಸಿದ ಕುಂತಿಯು ಪ್ರಸನ್ನಚಿತ್ತಳಾಗಿ ಆ ವೇದವ್ಯಾಸರು ಕೊಟ್ಟ ಐಶ್ವರ್ಯದಿಂದ ತನಗೆ ಬೇಕಾದಂತಹ ಪುಣ್ಯಕರ್ಮಗಳನ್ನು ಕಾಲಕ್ರಮದಲ್ಲಿ ಮಾಡಿದಳು.
ಗತ್ವಾ ತ್ವವಭೃಥಂ ರಾಜಾ ವಿಪಾಪ್ಮಾ ಭ್ರಾತೃಭಿಃ ಸಹ |
ಸಭಾಜ್ಯಮಾನಃ ಶುಶುಭೇ ಮಹೇಂದ್ರೋ ದೈವತೈರಿವ ॥34॥
ಯುಧಿಷ್ಠಿರನು ಯಜ್ಞದ ಕೊನೆಯಲ್ಲಿ ಅವಭೃಥಸ್ನಾನವನ್ನು ಮಾಡಿ ಪಾಪರಹಿತನಾದನು. ಮಹೇಂದ್ರನು ದೇವತೆಗಳ ಜೊತೆ ಪ್ರಕಾಶಿಸುವಂತೆ ತನ್ನ ಅನುಜರೊಂದಿಗೆ ಯುಧಿಷ್ಠಿರನು ಶೋಭಿಸಿದನು.

ಪಾಂಡವಾಶ್ಚ ಮಹೀಪಾಲೈಃ ಸಮೇತೈಃ ಸಂವೃತಾಸ್ತದಾ |
ಅಶೋಭಂತ ಮಹಾರಾಜ ಗ್ರಹಾಸ್ತಾರಾಗಣೈರ್ಯಥಾ ||35||
ಯಜ್ಞದಲ್ಲಿ ಭಾಗವಹಿಸುವ ದೃಷ್ಟಿಯಿಂದ ಆಗಮಿಸಿದ ರಾಜರೆಲ್ಲರೂ ಈ ಪಾಂಡವರನ್ನು ಸುತ್ತುವರಿದಿದ್ದರು. ಈ ದೃಶ್ಯವು ನಕ್ಷತ್ರಗಳ ಸಮುದಾಯದಿಂದ ಆವೃತವಾದ ಗ್ರಹಗಳು ಹೇಗೆ ಶೋಭಿಸುತ್ತವೋ ಅದರಂತೆ ಕಾಣಿಸುತ್ತಿತ್ತು.
ರಾಜಭ್ಯೋಽಪಿ ತತಃ ಪ್ರಾದಾದ್ ರತ್ನಾನಿ ವಿವಿಧಾನಿ ಚ |
ಗಜಾನಶ್ವಾನಲಂಕಾರಾನ್ ಸ್ತ್ರೀಶ್ಚ ರತ್ನಾನಿ ಕಾಂಚನಮ್ ||36||
ನಂತರ ಧರ್ಮರಾಜನು ಯಜ್ಞಕ್ಕೆ ಆಗಮಿಸಿದ ರಾಜರೆಲ್ಲರಿಗೂ ನಾನಾ ವಿಧವಾದ ರತ್ನಗಳನ್ನೂ, ಆನೆಗಳನ್ನೂ, ಕುದುರೆಗಳನ್ನೂ, ಸ್ತ್ರೀಯರನ್ನೂ, ವಸ್ತ್ರಗಳನ್ನೂ, ಬಂಗಾರವನ್ನೂ ಪಾರಿತೋಷಕವಾಗಿ ನೀಡಿದನು.
ತದ್ಧನೌಘಮಪರ್ಯಂತಂ ಪಾರ್ಥಃ ಪಾರ್ಥಿವಮಂಡಲೇ |
ವಿಸೃಜನ್ ಶುಶುಭೇ ರಾಜನ್ ಯಥಾ ವೈಶ್ರವಣಸ್ತಥಾ ||37||
ಲೆಕ್ಕ ಮಾಡಲಾಗದಷ್ಟು ರಾಜರ ಸಮುದಾಯವು ಅಲ್ಲಿ ಸೇರಿತ್ತು. ಅವರೆಲ್ಲರಿಗೂ ಐಶ್ವರ್ಯವನ್ನು ಹಂಚಿ ಕುಂತೀಸುತನಾದ ಧರ್ಮರಾಜನು ಕುಬೇರನನ್ನೂ ಕರೆಯಿಸಿ ವಿಪುಲವಾದ ಐಶ್ವರ್ಯವನ್ನು ಅವನಿಗೂ ಕೊಟ್ಟು ಕಳುಹಿಸಿದನು.
ಆನೀಯ ಚ ತಥಾ ವೀರಂ ರಾಜಾನಂ ಬಭ್ರುವಾಹನಮ್ |
ಪ್ರದಾಯ ಬಹುಲಂ ವಿತ್ತಂ ಗೃಹಾನ್ ಪ್ರಾಸ್ಥಾಪಯತ್ ತದಾ ||38||
ಬಳಿಕ ಧೀಮಂತನಾದ ಧರ್ಮರಾಜನು ಬಭ್ರುವಾಹನನನ್ನು ಕರೆಯಿಸಿ ಅವನಿಗೆ ವಿಪುಲವಾದ ಐಶ್ವರ್ಯವನ್ನು ಕೊಟ್ಟು ಮನೆಗೆ ಕಳುಹಿಸಿಕೊಟ್ಟನು.
ದುಃಶಲಾಯಾಶ್ಚ ತಂ ಪೌತ್ರಂ ಬಾಲಕಂ ಭರತರ್ಷಭ |
ಸ್ವರಾಜ್ಯೇ ಪಿತೃಭಿರ್ಜುಕ್ತೇ ಪ್ರೀತ್ಯಾ ಸಮಭಿಷೇಚಯತ್ ||39||
ಧೀಮಂತನಾದ ಧರ್ಮರಾಜನು ದುಶ್ಶಲೆಯ ಮೊಮ್ಮಗನಾದ, ಇನ್ನೂ ಬಾಲಕನಾಗಿದ್ದ ರಾಜಕುಮಾರನನ್ನು ತಂಗಿಯ ಮೇಲಿನ ಪ್ರೀತಿಯಿಂದ ಅವನ ತಂದೆಯ ರಾಜ್ಯಕ್ಕೆ ರಾಜನನ್ನಾಗಿ ಮಾಡಿದನು.
ರಾಜ್ಞಶ್ಚೈವಾಪಿ ತಾನ್ ಸರ್ವಾನ್ ಸುವಿಭಕ್ತಾನ್ ಸುಪೂಜಿತಾನ್ |
ಪ್ರಸ್ಥಾಪಯಾಮಾಸ ವಶೀ ಕುರುರಾಜೋ ಯುಧಿಷ್ಠಿರಃ ||40||
ಜಿತೇಂದ್ರಿಯನಾದ ರಾಜನು ಉಳಿದೆಲ್ಲ ರಾಜರಿಗೂ ಅಪಾರವಾದ ಸಂಪತ್ತನ್ನು ಯೋಗ್ಯವಾಗಿ ದಾನ ಮಾಡಿ ಅವರವರ ದೇಶಗಳಿಗೆ ಕಳುಹಿಸಿಕೊಟ್ಟನು.
ಏವಂ ಬಭೂವ ಯಜ್ಞಃ ಸ ಧರ್ಮರಾಜಸ್ಯ ಧೀಮತಃ |
ಬಹ್ವನ್ನಧನರತ್ನೌಘಃ ಸುರಾಮೈರೇಯಸಾಗರಃ ||41||
ಮಹಾನುಭಾವನಾದ ಯುಧಿಷ್ಠಿರನ ಅಶ್ವಮೇಧ ಯಾಗವು ಅನ್ನ, ಧನ, ರತ್ನ ಇವುಗಳ ರಾಶಿಗಳಿಂದಲೇ ತುಂಬಿಹೋಗಿತ್ತು. ಸುರೆ, ಮೈರೇಯಗಳ ಸಮುದ್ರವೇ ಅಲ್ಲಿ ಹರಿಯುತ್ತಿತ್ತು.
ಸರ್ಪಿಷಶ್ಚ ಹ್ರದಾ ಯತ್ರ ಬಹವಶ್ಚಾನ್ನಪರ್ವತಾಃ |
ರಸಾಲಕರ್ದಮಾಃ ಕುಲ್ಯಾ ಬಭೂವುರ್ಭರತರ್ಷಭ ||42||
ತುಪ್ಪವನ್ನೇ ಕೆಸರಿನಂತೆ ಹೊಂದಿರುವ ಅನೇಕ ಸರೋವರಗಳು ಅಲ್ಲಿ ತುಂಬಿದ್ದವು. ಅನ್ನದ ಪರ್ವತಗಳು, ರಸದಿಂದ ತುಂಬಿದ ಕೆಸರಿಲ್ಲದ ನದಿಗಳಂತೆ ಭೋಗ್ಯ ನದಿಗಳಾಗಿ ಹರಿಯುತ್ತಿದ್ದವು.
ಭಕ್ಷ್ಯಃ ಷಡವರಾಂಗಾನಾಂ ಕ್ರಿಯತಾಂ ಭುಜ್ಯತಾಮಿತಿ |
ಪಶೂನಾಂ ವಧ್ಯಮಾನಾನಾಂ ನಾಂತಂ ದದೃಶಿರೇ ಜನಾಃ ||43||
ಅಲ್ಲಿ ಸೇರಿರುವ ಕುರುಡರು, ಕುಂಟರು ಮೊದಲಾದವರಿಗೆ ಚೋಷ್ಯ, ಪೇಯ, ಭೋಜ್ಯ, ಭಕ್ಷ್ಯ, ಲೇಹ್ಯ ಮೊದಲಾದ ಆರು ಆರು ದ್ರವ್ಯಗಳನ್ನು ತಿನ್ನಿರಿ, ತಿನ್ನಿರಿ ಎಂದು ನೀಡುತ್ತಲೇ ಇದ್ದರು. ಅಲ್ಲಿ ವಧ್ಯವಾದ ಪಶುಗಳ ಸಂಖ್ಯೆಗೆ ಕೊನೆಯೇ ಇಲ್ಲವೆಂದು ಜನರು ನೋಡಿದರು.
ಮತ್ತೋನ್ಮತ್ತಪ್ರಮುದಿತಂ ಪ್ರಗೀತವನಿತಾಜನಮ್ |
ಮೃದಂಗಶಂಖನಾದೈಶ್ಚ ಮನೋರಮಮಭೂತ್ ತದಾ ||44||
ನಿರಂತರವೂ ಯಜ್ಞಮಂಟಪವು ತಿಂದು, ಕುಡಿದು ಅಮಲೇರಿದ್ದ, ಆನಂದಮತ್ತರಾಗಿದ್ದ ಪುರುಷರ ಸಮುದಾಯದಿಂದಲೂ, ಹಾಡುಗಳನ್ನು ಹೇಳುವ ಯುವತಿಯರಿಂದಲೂ ಮೃದಂಗ-ಶಂಖ ನಿನಾದಗಳಿಂದಲೂ ಮನೋಹರವಾಗಿ ಕಾಣಿಸುತ್ತಿತ್ತು.
ದೀಯತಾಂ ಭುಜ್ಯತಾಂ ಚೇತಿ ತತ್ರ ಶಬ್ದೋ ಮಹಾನಭೂತ್ |
ಪೀಯತಾಂ ದೀಯತಾಂ ಚೇತಿ ದಿವಾರಾತ್ರಮವಾರಿತಾಃ ||45||
ಎಲ್ಲ ಕಡೆಯೂ ಇಂತಹ ಪದಾರ್ಥಗಳನ್ನು ಕುಡಿಯಿರಿ, ಈ ಪದಾರ್ಥಗಳನ್ನು ಸವಿಯಿರಿ, ಈ ದ್ರವಪದಾರ್ಥವನ್ನು ಕುಡಿಯಿರಿ, ಅವರಿಗೆ ಕೊಡಿರಿ ಎಂಬ ಶಬ್ದ ಸಮುದಾಯಗಳು ಹಗಲೂ, ರಾತ್ರಿ ತಡೆಯಿಲ್ಲದಂತೆ ಆ ಯಜ್ಞವೇದಿಕೆಯ ಸುತ್ತಲೂ ಹೊರಹೊಮ್ಮಿದವು.
ವ್ಯಾಖ್ಯಾನ ವಿಶೇಷ ಅಶ್ವಮೇಧಯಾಗಕ್ಕೂ, ರಾಜಾಶ್ವಮೇಧಯಾಗಕ್ಕೂ ವ್ಯತ್ಯಾಸವಿದೆ. ಧರ್ಮರಾಜನು ಮಾಡಿದ ಯಾಗವು ರಾಜಾಶ್ವಮೇಧ ಎನಿಸಿದೆ. ಕುದುರೆಗಳನ್ನು ರಾಜರ ಮುಂದೆ ಕರೆದುಕೊಂಡು ಹೋಗಿ ಆ ಕುದುರೆಯನ್ನು ತಡೆಯುವವರನ್ನು ಜಯಿಸಿಕೊಂಡು ಬಂದು ಯಾಗವನ್ನು ಮಾಡಿದರೆ ಅದನ್ನು ಅಶ್ವಮೇಧ ಯಾಗವೆಂದು ಕರೆಯುತ್ತಾರೆ. ಈ ಅಶ್ವಮೇಧ ಯಾಗಕ್ಕೆ ರಾಜನೇ ಹೋಗಬೇಕೆಂಬ ನಿಯಮವಿರುವುದಿಲ್ಲ. ತನ್ನ ಪರಿವಾರದವರನ್ನು ಕಳುಹಿಸಿ ರಾಜನನ್ನು ಗೆದ್ದು ಬಂದರೆ ಈ ಯಾಗವನ್ನು

ಆಚರಿಸಬಹುದು. ಆದರೆ ಯಜ್ಞಮಾಡುವ ರಾಜನೇ ನಾಲ್ಕು ದಿಕ್ಕುಗಳಲ್ಲಿ ಸಂಚರಿಸಿ ರಾಜರನ್ನೆಲ್ಲ ಗೆದ್ದು ಅಶ್ವಮೇಧಯಾಗ ಮಾಡುವುದು ರಾಜಾಶ್ವಮೇಧ ಯಾಗ ಎನಿಸಿದೆ. ಅಶ್ವಪ್ರಧಾನವಾದ ಯಾಗ ಅಶ್ವಮೇಧಯಾಗ. ರಾಜನೇ ಪ್ರಧಾನವಾದ ಯಾಗ ರಾಜಾಶ್ವಮೇಧ ಎಂದು ಕರೆಸಿದೆ. ಯುಧಿಷ್ಠಿರನು ಮಾಡುವ ಯಾಗದಲ್ಲಿ ಸಹೋದರನಾದ ಅರ್ಜುನನೇ ನಾಲ್ಕು ದಿಕ್ಕುಗಳಲ್ಲಿ ದಿಗ್ವಿಜಯವನ್ನು ಸಾಧಿಸಿಕೊಂಡು ಬಂದಿದುದರಿಂದ ಈ ಯಾಗಕ್ಕೆ ರಾಜಸೂಯ ಎಂದು ಹೆಸರು ಬಂದಿದೆ ಎಂದು ಲಕ್ಷಾಲಂಕಾರದಲ್ಲಿ ಶ್ರೀವಾದಿರಾಜ ಗುರುಸಾರ್ವಭೌಮರು ವಿವರಿಸಿದ್ದಾರೆ.

ತಂ ಮಹೋತ್ಸವಸಂಕಾಶಮತಿಹೃಷ್ಟಜನಾಕುಲಮ್ |
ಕಥಯಂತಿ ಸ್ಮ ಪುರುಷಾ ನಾನಾದೇಶನಿವಾಸಿನಃ ||46||

ಮಹೋತ್ಸವಕ್ಕೆ ಸದೃಶವಾದ ಧರ್ಮರಾಜನ ಮಹಾಯಜ್ಞವನ್ನು ಕುರಿತು ಅನೇಕ ಪ್ರದೇಶಗಳಲ್ಲಿ ವಾಸಿಸುವ ಪ್ರಜೆಗಳು ಬಹಳ ದಿವಸಗಳ ತನಕ ಈ ಯಜ್ಞದ ಬಗ್ಗೆಯೇ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು.

ವರ್ಷಿತ್ವಾ ಧನಧಾರಾಭಿಃ ಕಾಮೈ ರತ್ನೈರ್ಧನೈಸ್ತಥಾ |
ವಿಪಾಪ್ಮಾ ಭರತಶ್ರೇಷ್ಠಃ ಕೃತಾರ್ಥಂ ಪ್ರಾವಿಶತ್ ಪುರೀಮ್ ||47||

ಯುಧಿಷ್ಠಿರನು ಆ ಮಹಾಯಜ್ಞದಲ್ಲಿ ಸಂಪತ್ತಿನ ಸಮಸ್ತ ಕಾಮನಾ ಪದಾರ್ಥಗಳ, ರತ್ನರಸಗಳ ಮಹಾಮಳೆಯನ್ನೇ ಸುರಿಸಿದನು. ಸಮಸ್ತ ಪಾಪಗಳಿಂದ ವಿಮುಕ್ತನಾಗಿ, ಕೃತಕೃತ್ಯನಾಗಿ ಹಸ್ತಿನಾವತಿಯನ್ನು ಪ್ರವೇಶಿಸಿದನು.

|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಪಾಂಡವಾನಾಂ ಪುರಪ್ರವೇಶೋ ನಾಮ ಏಕನವತಿತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಎಂಬತ್ತೊಂದನೆಯ ಅಧ್ಯಾಯ ಮುಗಿಯಿತು.

* * * * *

## ತೊಂಬತ್ತೆರಡನೆಯ ಅಧ್ಯಾಯ

ವೈಶಂಪಾಯನರು ಜನಮೇಜಯರಾಜನಿಗೆ ಮುಂಗುಸಿಯ ಕಥೆಯನ್ನು ಹೇಳಲು ಆರಂಭಿಸಿದುದು. ಅಶ್ವಮೇಧಯಾಗವು ಮುಗಿಯುತ್ತಿರಲು ಒಂದು ಬಿಲದಿಂದ ಹೊರಗೆ ಬಂದಿರುವ ಒಂದು ಬದಿಯಲ್ಲಿ ಬಂಗಾರದ ಬಣ್ಣವುಳ್ಳ ಯಾವುದೋ ಮುಂಗುಸಿಯು ಸಭೆಯಲ್ಲಿ ಕುಳಿತಿರುವ ವ್ಯಕ್ತಿಗಳನ್ನು ಕುರಿತು ಉಂಛವೃತ್ತಿಯ ಬ್ರಾಹ್ಮಣನೊಬ್ಬನು ಹಿಟ್ಟನ್ನು ನೀಡಿದ ಪ್ರಸಂಗವನ್ನು ಪ್ರಶಂಸಿಸುತ್ತಾ ಯುಧಿಷ್ಠಿರನ ಅಶ್ವಮೇಧ ಯಾಗವನ್ನು ನಿಂದಿಸಿದುದು. ಸಭಾಸದರ ಪ್ರೇರಣೆಯಂತೆ ಕಥೆಯನ್ನು ವಿಸ್ತಾರವಾಗಿ ಹೇಳಿದುದು.

ಜನಮೇಜಯಃ

ಪಿತಾಮಹಸ್ಯ ಮೇ ಯಜ್ಞೇ ಧರ್ಮಪುತ್ರಸ್ಯ ಧೀಮತಃ |
ಯದಾಶ್ಚರ್ಯಮಭೂತ್ ಕಿಂಚಿದ್ ತದ್ಭವಾನ್ ವಕ್ತುಮರ್ಹತಿ ||1||

ಜನಮೇಜಯ ವೈಶಂಪಾಯನರೇ, ನನ್ನ ಪಿತಾಮಹನಾದ, ಜ್ಞಾನಿಯಾದ ಧರ್ಮರಾಜನ ಅಶ್ವಮೇಧಯಾಗದ ಸಮಯದಲ್ಲಿ ಯಾವುದಾದರೂ ಆಶ್ಚರ್ಯಕರವಾದ ಘಟನೆಯು ನಡೆಯಿತೆ? ಹಾಗೇನಾದರೂ ನಡೆದಿದ್ದಲ್ಲಿ ಅದನ್ನು ಹೇಳುವ ಕೃಪೆ ತೋರಿರಿ.

ವೈಶಂಪಾಯನಃ

ಶ್ರೂಯತಾಂ ರಾಜಶಾರ್ದೂಲ ಮಹದಾಶ್ಚರ್ಯಮುತ್ತಮಮ್ |
ಅಶ್ವಮೇಧೇ ಮಹಾಯಜ್ಞೇ ನಿವೃತ್ತೇ ಯದಭೂದ್ ವಿಭೋ ||2||

ವೈಶಂಪಾಯನ ರಾಜಸಿಂಹನೇ, ಅಶ್ವಮೇಧ ಮಹಾಯಾಗವು ಮುಗಿದ ಬಳಿಕ ಅತ್ಯಂತ ಆಶ್ಚರ್ಯಕರವಾದ ಘಟನೆಯೊಂದು ನಡೆಯಿತು. ಅದೇನೆಂದು ಹೇಳುತ್ತೇನೆ, ಕೇಳು.

ತರ್ಪಿತೇಷು ದ್ವಿಜಾಗ್ರ್ಯೇಷು ಜ್ಞಾತಿಸಂಬಂಧಿಬಂಧುಷು |
ದೀನಾಂಧಕೃಪಣೇ ಚಾಽಪಿ ತದಾ ಭರತಸತ್ತಮ ||3||
ಘುಷ್ಯಮಾಣೇ ಮಹಾನಾದೇ ದಿಕ್ಷು ಸರ್ವಾಸು ಭಾರತ |
ಪತತ್ಸು ಪುಷ್ಪವರ್ಷೇಷು ಧರ್ಮರಾಜಸ್ಯ ಮೂರ್ಧನಿ ||4||

ಭರತಶ್ರೇಷ್ಠನೇ, ಯುಧಿಷ್ಠಿರನ ಮಹಾಯಜ್ಞದಲ್ಲಿ ಬ್ರಾಹ್ಮಣಶ್ರೇಷ್ಠರು, ಬಂಧುಗಳು, ಜ್ಞಾನಿಗಳು, ದೀನರು, ಅಂಧರು, ಕೃಪಣರು, ತೃಪ್ತರಾದ ಅನಂತರ ಅವರು ಮಾಡಿದ ದಾನವು ಸಮಸ್ತ ದಿಕ್ಕುಗಳಲ್ಲೂ ಕೀರ್ತಿಯಿಂದ ವ್ಯಾಪ್ತವಾಯಿತು. ಧರ್ಮರಾಜನ ತಲೆಯ ಮೇಲೆ ಪುಷ್ಪವೃಷ್ಟಿಯು ಸುರಿಯಿತು.

ಬಿಲಾನ್ನಿಸೃತ್ಯ ನಕುಲೋ ರುಗ್ಮಪಾರ್ಶ್ವಸ್ತದಾ ನೃಪ |
ವಜ್ರಾಶನಿಸಮಂ ನಾದಮಮುಂಚತ ವಿಶಾಂಪತೇ ||5||

ಅದೇ ಸಮಯದಲ್ಲಿ ಒಂದು ಮುಂಗುಸಿಯು ಆ ಅಶ್ವಮೇಧ ಯಜ್ಞದ ವೇದಿಕೆಯ ಬಳಿ ಆಗಮಿಸಿತು. ಅದರ ಒಂದು ಭಾಗವು ಸುವರ್ಣಮಯವಾಗಿತ್ತು. ಬಂದೊಡನೆ ಸಿಡಿಲಿನಂತೆ ಭಯಂಕರವಾಗಿ ಗರ್ಜಿಸಿತು.

ಸಕೃದುತ್ಸೃಜ್ಯ ತಂ ನಾದಂ ತ್ರಾಸಯಾನೋ ಮೃಗದ್ವಿಜಾನ್ |
ಮಾನುಷಂ ವಚನಂ ಪ್ರಾಹ ಧೃಷ್ಟೋ ಬಿಲಶಯೋ ಮಹಾನ್ ||6||

ಬಿಲದಲ್ಲಿ ವಾಸ ಮಾಡುವ ಧೈರ್ಯಶಾಲಿಯಾದ ಆ ದೊಡ್ಡ ಮುಂಗುಸಿಯು ಒಮ್ಮೆ ಘೋರವಾದ ಗರ್ಜನೆಯನ್ನು ಮಾಡಿ ಮೃಗ-ಪಕ್ಷಿಗಳನ್ನು ಭಯಗೊಳಿಸುತ್ತಾ ಮನುಷ್ಯರಂತೆಯೇ ಮಾತನಾಡುತ್ತಾ ಹೀಗೆ ಹೇಳಿತು.

ನಕುಲಃ

ಸಕ್ತುಪ್ರಸ್ಥೇನ ವೋ ನಾಯಂ ಯಜ್ಞಸ್ತುಲ್ಯೋ ನರಾಧಿಪಾಃ |
ಉಂಛವೃತ್ತೇರ್ವದಾನ್ಯಸ್ಯ ಕುರುಕ್ಷೇತ್ರನಿವಾಸಿನಃ ||7||

ಮುಂಗುಸಿ ನರಾಧಿಪನೇ, ನಿಮ್ಮ ಈ ಯಜ್ಞದಲ್ಲಿ ಮಾಡಲ್ಪಟ್ಟ ದಾನವು ಕುರುಕ್ಷೇತ್ರದಲ್ಲಿ ವಾಸಮಾಡುತ್ತಿರುವ, ಉಂಛವೃತ್ತಿಯಿಂದ ಜೀವಿಸುವ ಉದಾರಿಯಾದ ಬ್ರಾಹ್ಮಣನು ಒಂದು ಸೇರು ಹಿಟ್ಟನ್ನು ದಾನಮಾಡಿದ್ದಕ್ಕೂ ಸಮಾನವಾಗಲಿಲ್ಲ.
ವೈಶಂಪಾಯನಃ
ತಸ್ಯ ತದ್ ವಚನಂ ಶ್ರುತ್ವಾ ನಕುಲಸ್ಯ ವಿಶಾಂಪತೇ |
ವಿಸ್ಮಯಂ ಪರಮಂ ಜಗ್ಮುಃ ಸರ್ವೇ ತೇ ಬ್ರಾಹ್ಮಣರ್ಷಭಾಃ ॥8॥
ತತಃ ಸಮೇತ್ಯ ನಕುಲಂ ಪರ್ಯಪೃಚ್ಛತ ತೇ ದ್ವಿಜಾಃ ॥9॥
ವೈಶಂಪಾಯನ ಮುಂಗುಸಿಯ ಆ ಮಾತನ್ನು ಕೇಳಿ ಬ್ರಾಹ್ಮಣರೆಲ್ಲರೂ ಆಶ್ಚರ್ಯಚಕಿತರಾದರು. ಅವರೆಲ್ಲರೂ ಒಟ್ಟಾಗಿ ಸೇರಿ ಮುಂಗುಸಿಯನ್ನು ಪ್ರಶ್ನಿಸಿದರು.
ದ್ವಿಜಾಃ
ಕುತಸ್ತ್ವಂ ಸಮನುಪ್ರಾಪ್ತೋ ಯಜ್ಞಂ ಸಾಧುಸಮಾಗಮಮ್ |
ಕಿಂ ಬಲಂ ಪರಮಂ ತೇ ಹ ಕಿಂ ಶ್ರುತಂ ಕಿಂ ಪರಾಯಣಮ್ ॥10॥
ಬ್ರಾಹ್ಮಣರು ಮುಂಗುಸಿಯೇ, ಯುಧಿಷ್ಠಿರನು ಮಾಡಿದ ಯಜ್ಞಕ್ಕೆ ಅನೇಕ ಸತ್ಪುರುಷರು ಆಗಮಿಸಿದ್ದಾರೆ. ಆದರೆ ನೀನು ಎಲ್ಲಿಂದ ಬಂದಿರುವಿ? ಆ ಶ್ರೇಷ್ಠವಾದ ಬಲ ಯಾವುದು? ನಿನಗೆ ಶಾಸ್ತ್ರಜ್ಞಾನವೇನಿದೆ? ಯಾರನ್ನು ಆಶ್ರಯಿಸಿರುವಿ?
ಕಥಂ ಭವಂತಂ ವಿದ್ಯಾಮ ಯೋ ನೋ ಯಜ್ಞಂ ವಿಗರ್ಹತೇ ॥11॥
ನಮ್ಮ ಯಜ್ಞವನ್ನು ನಿಂದಿಸುತ್ತಿರುವ ನಿನ್ನನ್ನು ಯಾರೆಂದು ತಿಳಿಯಬೇಕು?
ಅವಿಲುಪ್ಯಾಗಮಂ ಕೃತ್ಸ್ನಂ ವಿವಿಧೈರ್ಯಾಜಕೈರ್ಹುತಮ್ |
ಯಥಾಗಮಂ ಯಥಾನ್ಯಾಯಂ ಕರ್ತವ್ಯಂ ಚ ತಥಾ ಕೃತಮ್ ॥12॥
ನಾವೆಲ್ಲರೂ ನಾನಾ ವಿಧವಾದ ಯಜ್ಞಸಾಮಗ್ರಿಗಳನ್ನು ಒಂದೆಡೆ ಸಂಗ್ರಹಿಸಿ ಯಜ್ಞವನ್ನು ಆಚರಿಸಿರುತ್ತೇವೆ. ಶಾಸ್ತ್ರದಲ್ಲಿ ತಿಳಿಸಿದಂತೆ ಯೋಗ್ಯ ರೀತಿಯಲ್ಲಿ ಮಾಡಬೇಕಾದ ಕರ್ತವ್ಯವನ್ನು ನಿರ್ವಹಿಸಿದ್ದೇವೆ.
ಪೂಜಾರ್ಹಾಃ ಪೂಜಿತಾಶ್ಚಾತ್ರ ವಿಧಿವಜ್ಜ್ಞಾನಚಕ್ಷುಷಃ |
ಮಂತ್ರಪೂತಂ ಹುತಶ್ಚಾಗ್ನಿರ್ದತ್ತಂ ದೇಯಮಮತ್ಸರಮ್ ॥13॥
ಪೂಜೆಗೆ ಅರ್ಹರಾದವರನ್ನು ಶಾಸ್ತ್ರವಿಧಿಗೆ ಅನುಗುಣವಾಗಿ ಆರಾಧಿಸಿದ್ದೇವೆ. ಮಂತ್ರಪೂರ್ವಕವಾಗಿ ಅಗ್ನಿಯು ಆಹುತಿಗಳಿಂದ ಆರಾಧಿಸಲ್ಪಟ್ಟಿದೆ. ಯಾವ ವಿಧವಾದ ಮಾತ್ಸರ್ಯವೂ ಇಲ್ಲದೆ ಕೊಡಬೇಕಾದ ಪದಾರ್ಥಗಳನ್ನೆಲ್ಲ ದಾನ ಮಾಡಿದ್ದೇವೆ.
ತುಷ್ಟಾ ದ್ವಿಜರ್ಷಭಾಶ್ಚಾತ್ರ ದಾನೈರ್ಬಹುವಿಧೈರಪಿ |
ಕ್ಷತ್ರಿಯಾಶ್ಚ ಸುಯುದ್ಧೇನ ಶ್ರಾದ್ಧೈರಪಿ ಪಿತಾಮಹಾಃ ॥14॥
ಪಾಲನೇನ ವಿಶಸ್ತುಷ್ಟಾಃ ಕಾಮೈಸ್ತುಷ್ಟಾ ವರಸ್ತ್ರಿಯಃ |
ಅನುಕ್ರೋಶೈಸ್ತಥಾ ಶೂದ್ರಾ ದಾನೈಃ ಶೇಷಾ ಪೃಥಗ್ ಜನಾಃ ॥15॥
ಬಹುವಿಧವಾದ ದಾನಗಳಿಂದ ಬ್ರಾಹ್ಮಣರು ತೃಪ್ತರಾಗಿದ್ದಾರೆ. ಅಶ್ವಮೇಧ ಯಾಗಕ್ಕೆ ಮೊದಲು ಮಾಡಿದ ಧರ್ಮಯುದ್ಧದಿಂದ ಕ್ಷತ್ರಿಯರೂ ತೃಪ್ತರಾಗಿದ್ದಾರೆ. ನಾಂದೀ ಶ್ರಾದ್ಧಗಳ ಮೂಲಕ ಪಿತಾಮಹ, ಪ್ರಪಿತಾಮಹರು ತೃಪ್ತರಾಗಿದ್ದಾರೆ. ಪಾಲನೆಯಿಂದ ವೈಶ್ಯರು ತೃಪ್ತರಾಗಿದ್ದಾರೆ. ಕಾಮನಾಪೂರ್ತಿಗಳಿಂದ ಸ್ತ್ರೀಯರು ಸಂತುಷ್ಟರಾಗಿದ್ದಾರೆ. ದಯಾಪೂರ್ಣವಾಗಿ ನೋಡಿಕೊಳ್ಳುವುದರಿಂದ ಶೂದ್ರರೂ ತೃಪ್ತರಾಗಿದ್ದಾರೆ. ದಾನ ಕೊಟ್ಟು ಉಳಿದ ಪದಾರ್ಥಗಳನ್ನು ಬೇರೆ ಜಾತಿಯವರಿಗೆ ನೀಡಿ ಅವರನ್ನೂ ತೃಪ್ತಿಪಡಿಸಿದ್ದೇವೆ.
ಜ್ಞಾತಿಸಂಬಂಧಿನಸ್ತುಷ್ಟಾಃ ಶೌಚೇನ ಚ ನೃಪಸ್ಯ ನಃ |
ದೇವಾ ಹವಿರ್ಭಿಃ ಪುಣ್ಯೈಶ್ಚ ರಕ್ಷಣೈಃ ಶರಣಾಗತಾಃ ॥16॥
ಜ್ಞಾನಿಗಳು, ಸಂಬಂಧಿಗಳು ನಮ್ಮ ರಾಜನ ಶುದ್ಧವಾದ ವ್ಯವಹಾರದಿಂದ ತೃಪ್ತರಾಗಿದ್ದಾರೆ. ಹವಿಸ್ಸಿನಿಂದ ದೇವತೆಗಳೆಲ್ಲರೂ ತೃಪ್ತರಾಗಿದ್ದಾರೆ. ಶರಣಾಗತರಾಗಿ ಬಂದವರು ರಕ್ಷಣೆಯಿಂದ ತೃಪ್ತರಾಗಿದ್ದಾರೆ.
ಯದತ್ರ ತಥ್ಯಂ ತದ್ ಬ್ರೂಹಿ ಸತ್ಯಸಂಧ ದ್ವಿಜಾತಿಷು |
ಯಥಾಶ್ರುತಂ ಯಥಾದೃಷ್ಟಂ ಪೃಷ್ಟೋ ಬ್ರಾಹ್ಮಣಕಾಮ್ಯಯಾ ॥17॥
ಹೀಗೆ ಎಲ್ಲರಿಗೂ ಯಥಾರ್ಥವಾಗಿ ತೃಪ್ತಿಯಾಗಿರುವಾಗ ಈ ಯಜ್ಞದಲ್ಲಿ ಯಾವ ನ್ಯೂನತೆಯನ್ನು ಕಂಡು ಈ ಯಜ್ಞವನ್ನು ಧಿಕ್ಕರಿಸುತ್ತಿರುವಿ?
ಶ್ರದ್ಧೇಯವಾಕ್ಯಃ ಪ್ರಾಜ್ಞಸ್ತ್ವಂ ದಿವ್ಯರೂಪಂ ಬಿಭರ್ಷಿ ಚ |
ಸಮಾಗತಶ್ಚ ವಿಪ್ರೈಸ್ತ್ವಂ ತತ್ತ್ವತೋ ವಕ್ತುಮರ್ಹಸಿ ॥18॥
ಸತ್ಯಸಂಧನೇ, ಬ್ರಾಹ್ಮಣರ ಅಪೇಕ್ಷೆಯಂತೆ ನೀನು ಸತ್ಯವನ್ನು ಹೇಳು. ನಿನ್ನ ಮಾತು ನಮಗೆ ವಿಶ್ವಾಸಕ್ಕೆ ಯೋಗ್ಯವಾಗಿದೆ. ನೀನು ಜಾಣನಾಗಿರುವಿ. ದಿವ್ಯರೂಪವನ್ನು ಹೊಂದಿರುವಿ. ಬ್ರಾಹ್ಮಣರ ಹತ್ತಿರ ಆಗಮಿಸಿರುವಿ. ಆದ್ದರಿಂದ ಯೋಗ್ಯವಾದ ಉತ್ತರವನ್ನು ನೀಡಲು ಅರ್ಹನಾಗಿರುವಿ.
ವೈಶಂಪಾಯನಃ
ಏವಂ ಪೃಷ್ಟೋ ದ್ವಿಜೈಸ್ತೈಃ ಸ ಪ್ರಹಸ್ಯ ನಕುಲೋಽಬ್ರವೀತ್ ॥19॥
ವೈಶಂಪಾಯನ ಬ್ರಾಹ್ಮಣರು ಹೀಗೆ ಪ್ರಶ್ನಿಸಲಾಗಿ ಮುಂಗುಸಿಯು ಮಂದಹಾಸಯುಕ್ತವಾಗಿ ಇಂತು ನುಡಿಯಿತು.
ನಕುಲಃ
ನೈಷಾ ಮೃಷಾ ಮಯಾ ವಾಣೀ ಪ್ರೋಕ್ತಾ ದರ್ಪೇಣ ವಾ ದ್ವಿಜಾಃ |
ಯನ್ಮಯೋಕ್ತಮಿದಂ ಕಿಂಚಿದ್ ಯುಷ್ಮಾಭಿಶ್ಚಾಪ್ಯುಪಶ್ರುತಮ್ ॥20॥

ಮುಂಗುಸಿ ಬ್ರಾಹ್ಮಣರೇ, ನಾನು ಎಂದಿಗೂ ಸುಳ್ಳನ್ನು ಹೇಳುವುದಿಲ್ಲ. ದರ್ಪದಿಂದಲೂ ಈ ಮಾತನ್ನು ಹೇಳುತ್ತಿಲ್ಲ. ನಾನು ಹೇಳಿದ ಈ ಮಾತು ನೀವೂ ಸಹ ಕೇಳಿರುವಿರಿ.
ಸಕ್ತುಪ್ರಸ್ಥೇನ ವೋ ನಾಯಂ ಯಜ್ಞಸ್ತುಲ್ಯೋ ದ್ವಿಜರ್ಷಭಾಃ |
ಉಂಛವೃತ್ತೇರ್ವದಾನ್ಯಸ್ಯ ಕುರುಕ್ಷೇತ್ರನಿವಾಸಿನಃ ॥21॥
ಯದ್ಯವಶ್ಯಂ ಮಯ್ಯೈವೈತದ್ ವಕ್ತವ್ಯಂ ದ್ವಿಜಪುಂಗವಾಃ |
ಶ್ರುಣುತಾವ್ಯಗ್ರಮನಸಸ್ತನ್ಮೇ ಸರ್ವಂ ದ್ವಿಜರ್ಷಭಾಃ ॥22॥
ದ್ವಿಜಸತ್ತಮರೇ, ಯಥಾವತ್ತಾಗಿ ಈ ವಿಷಯವನ್ನು ಹೇಳುತ್ತೇನೆ. ಕುರುಕ್ಷೇತ್ರದಲ್ಲಿ ಉಂಛವೃತ್ತಿಯನ್ನು ಮಾಡಿಕೊಂಡು ವಾಸಮಾಡುತ್ತಿರುವ ಉದಾರಿಯಾದ ಬ್ರಾಹ್ಮಣನು ಅದ್ಭುತವೂ, ಉತ್ತಮವೂ ಆದ ದಾನವನ್ನು ಮಾಡಿದ್ದನ್ನು ನಾನು ನೋಡಿದ್ದೇನೆ. ಅದರ ಫಲವನ್ನೂ ಅನುಭವಿಸಿದ್ದೇನೆ. ಈ ಕಥೆಯನ್ನು ಯಥಾರ್ಥವಾಗಿ ಅವ್ಯಗ್ರಮನಸ್ಸಿನಿಂದ ಕೇಳಿರಿ.
ಅನುಭೂತಂ ಚ ದೃಷ್ಟಂ ಚ ಯನ್ಮಯಾಽದ್ಭುತಮುತ್ತಮಮ್ |
ಉಂಛವೃತ್ತೇರ್ಯಥಾ ವೃತ್ತಂ ದಾನಧರ್ಮಂ ಚ ಯಾದೃಶಮ್ ॥23॥
ಉಂಛವೃತ್ತಿಯಲ್ಲಿರುವ ಬ್ರಾಹ್ಮಣನು ಆಚರಿಸಿದ ಧರ್ಮ, ಮಾಡಿದ ದಾನ ಇವೆಲ್ಲವೂ ಅದ್ಭುತ ಮತ್ತು ಉತ್ತಮವಾಗಿದ್ದು, ನಾನು ನೋಡಿದ್ದೇನೆ ಮತ್ತು ಅನುಭವಿಸಿದ್ದೇನೆ.
ಸ್ವರ್ಗಂ ಸ್ಥಾನಂ ಚ ಸಂಪ್ರಾಪ್ತಃ ಸಭಾರ್ಯಃ ಸಸುತಸ್ನುಷಃ |
ಯಥಾ ಚಾರ್ಧಂ ಶರೀರಸ್ಯ ಮಮೇದಂ ಕಾಂಚನೀಕೃತಮ್ ॥24॥
ಆ ಬ್ರಾಹ್ಮಣನು ಒಂದು ಸೇರು ಹಿಟ್ಟಿನ ಪ್ರಭಾವದಿಂದ ಹೆಂಡತಿ, ಮಗ, ಸೊಸೆಯರಿಂದ ಕೂಡಿಕೊಂಡು ಸ್ವರ್ಗವನ್ನು ಹೊಂದಿದನು. ನನ್ನ ಈ ಶರೀರದ ಅರ್ಧಭಾಗವು ಸುವರ್ಣಮಯವಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ನಕುಲಶರೀರದರ್ಶನಂ ನಾಮ ದ್ವಿನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 30ನೇ ಅಧ್ಯಾಯ
ಸಕೃಷ್ಣೇಷ್ವಥ ಪಾರ್ಥೇಷು ಸುಸ್ನಾತಾವಭೃಥೇಷ್ವಲಮ್ |
ಪಂಚೇಂದ್ರವದ್ ವಿರಾಜತ್ಸು ಸ್ತೂಯಮಾನೇಷ್ವಪೀಶ್ವರೈಃ ॥
ಸ್ತೂಯಮಾನೇ ಚ ತದ್ಯಜ್ಞೇ ಕ್ರೋಧೋ ನಕುಲತಾಂ ಗತಃ |
ಕೃತ್ವೋಗ್ರಗರ್ಜನಂ ಯಜ್ಞಂ ತಾಂಶ್ಚ ಯಜ್ಞಕೃತೋಽಖಿಲಾನ್ ॥
ಗರ್ಹಯನ್ನೂಚಿವಾನಿತ್ಥಂ ಭಾರ್ಯಾಪುತ್ರಸ್ನುಷಾಯುತಃ |
ಸಕ್ತುಪ್ರಸ್ಥಮದಾದ್ ವಿಪ್ರ ಉಂಛವೃತ್ತಿಃ ಸುಭಕ್ತಿತಃ ॥
ಧರ್ಮಾಯಾತಿಥಯೇ ತಸ್ಯ ಕಲಾಂ ನಾರ್ಹತಿ ಷೋಡಶೀಮ್ |
ಯಜ್ಞೋಽಯಮಿತಿ ಹೇತುಂ ಚ ವಿಪ್ರೈಃ ಪೃಷ್ಟೋಽಭ್ಯಭಾಷತ ॥
ಪಾಂಡವರು ದ್ರೌಪದಿಯೊಂದಿಗೆ ಅವಭೃಥ ಸ್ನಾನಮಾಡಿ, ಐವರೂ ಇಂದ್ರರಂತೆ ಶೋಭಿಸುತ್ತಿದ್ದಾಗ ರಾಜರು ಅವರನ್ನು ಕೊಂಡಾಡಿದರು. ಯಜ್ಞವನ್ನೂ ಕೊಂಡಾಡಿದರು. ಆಗ ಕ್ರೋಧಾಭಿಮಾನಿ ಅಸುರನು ಮುಂಗುಸಿಯಾಗಿ ಭಯಂಕರ ಗರ್ಜನೆ ಮಾಡಿ, ಯಜ್ಞವನ್ನೂ ಯಜ್ಞ ಮಾಡಿದ ಎಲ್ಲ ಪಾಂಡವರನ್ನೂ ನಿಂದಿಸುತ್ತ ಹೇಳಿದ- `ಉಂಛ ವೃತ್ತಿಯಿಂದ ಜೀವಿಸುತ್ತಿದ್ದ ಒಬ್ಬ ಬ್ರಾಹ್ಮಣ, ಹೆಂಡತಿ ಮಗ ಸೊಸೆಯರಿಂದೊಡಗೂಡಿ ಬಹಳ ಭಕ್ತಿಯಿಂದ ಹಿಟ್ಟಿನ ರಾಶಿಯನ್ನು ಅತಿಥಿಯಾಗಿ ಬಂದ ಯಮನಿಗೆ ದಾನ ಮಾಡಿದ. ಅದರ ಹದಿನಾರನೆಯ ಒಂದಂಶಕ್ಕೂ ಈ ಯಜ್ಞ ಸಮವಾಗದು' ಎಂದು. ಮುನಿಗಳು ಇದಕ್ಕೆ ಕಾರಣವನ್ನು ಕೇಳಲು ಅಸುರ ಹೇಳಿದ
ಅತಿಥೇಸ್ತಸ್ಯ ಪಾದೋದಕ್ಲಿನ್ನಃ ಪಾರ್ಶ್ವೋ ಹಿರಣ್ಮಯಃ |
ಏಕೋ ಮಮಾಭೂದಪರಃ ಸರ್ವತೀರ್ಥಾದಿಕೇಷ್ವಪಿ ॥
ಮಜ್ಜತೋಽವಭೃಥೇಷ್ವದ್ಧಾ ಯಜ್ವಾನಾಮತ್ರ ಚಾಽದರಾತ್ |
ನಾಭೂದಿತ್ಯಥ ತತ್ತತ್ತ್ವವೇದಿಭಿರ್ಮುನಿಪುಂಗವೈಃ ॥
ಕೃಷ್ಣೇನ ಚ ತಮೋಽಂಧಂ ತಂ ಪ್ರಾಪಯದ್ಭಿಃ ಸ್ಮಿತೇ ಕೃತೇ |
ಅದರ್ಶನಂ ಜಗಾಮಾಽಶು ತಮಃ ಪ್ರಾಪ ಚ ಕಾಲತಃ ॥
`ಆ ಅತಿಥಿಯ ಪಾದೋದಕದಿಂದ ಒದ್ದೆಯಾದ ನನ್ನ ಮೈಯ ಒಂದು ಪಾರ್ಶ್ವ ಸುವರ್ಣವಾಯಿತು. ಬಳಿಕ ಎಲ್ಲ ಪವಿತ್ರ ಜಲಗಳಲ್ಲಿಯೂ ಇಲ್ಲಿನ ಯಜ್ಞದ ಅವಭೃಥ ಜಲಗಳಲ್ಲಿಯೂ ಆದರದಿಂದ ನಾನು ಚೆನ್ನಾಗಿ ಮುಳುಗಿದರೂ ಇನ್ನೊಂದು ಪಾರ್ಶ್ವ ಸುವರ್ಣಮಯವಾಗಲೇ ಇಲ್ಲ'. ಪಾಂಡವರ ಯಜ್ಞದ ನಿಜವಾದ ಮಹತ್ವವನ್ನು ಅರಿತಿದ್ದ ಮುನಿಪುಂಗವರೂ ಕೃಷ್ಣನೂ ಕ್ರೋಧಾಸುರನನ್ನು ಅಂಧಂತಮಸ್ಸಿಗೆ ಕಳಿಸಲು ಬಯಸಿ, ಮುಗುಳು ನಕ್ಕಾಗ ಅಸುರನು ಅದೃಶ್ಯನಾದ. ಸ್ವಲ್ಪ ಕಾಲವಾದ ಬಳಿಕ ತಮಸ್ಸನ್ನು ಹೊಂದಿದ.
ತದರ್ಥಮೇವ ಹೈರಣ್ಯಃ ಪಾರ್ಶ್ವಸ್ತಸ್ಯಾಭವತ್ಪುರಾ |
ಕೃಷ್ಣಸ್ಯ ಪಾಂಡವಾನಾಂ ಚ ಮಖಾದೇಶ್ಚ ಗುಣಾನ್ ಬಹೂನ್ |
ವದಂತೋ ಭರ್ತ್ಸಯಾಂಚಕ್ರುಸ್ತನ್ಮತಜ್ಞಾ ಮಧುದ್ವಿಷಃ ॥
ಅದಕ್ಕಾಗಿಯೇ ಅವನ ಒಂದು ಪಾರ್ಶ್ವ ಹಿಂದೆ ಬಂಗಾರವಾಗಿತ್ತು. ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದಿದ್ದ ಮುನಿಗಳು ಶ್ರೀಕೃಷ್ಣನ,

ಪಾಂಡವರ ಮತ್ತು ಯಜ್ಞಾದಿಗಳ ಬಹಳ ಗುಣಗಳನ್ನು ಹೇಳುತ್ತ ಅಸುರನನ್ನು ನಿಂದಿಸಿದರು.
ಶ್ರಾದ್ಧಾರ್ಥಂ ಹಿ ಪಯಃ ಪೂರ್ವಂ ಜಮದಗ್ನೇರದೂಷಯತ್ |
ನಾಕುಲೇನೈವ ರೂಪೇಣ ಕ್ರೋಧಸ್ತಂ ಪಿತರೋಽಶಪನ್ ॥
ಭವ ತ್ವಂ ನಕುಲಸ್ತಾವದ್ ಯಾವದ್ಧರ್ಮಾದಿಕಾನ್ ಸುರಾನ್ |
ಕ್ಷೇಪ್ಸ್ಯಸೀತಿ ತಮೋ ಘೋರಂ ಭೂಯಃ ಪಾಪೇನ ಯಾತ್ವಯಮ್ |
ಇತ್ಯಭಿಪ್ರೇತ್ಯ ತೈಃ ಶಪ್ತಸ್ತಥಾ ಕೃತ್ವಾ ತಮೋಽಭ್ಯಯಾತ್ ॥
ಶ್ರಾದ್ಧಕ್ಕಾಗಿ ಇಟ್ಟಿದ್ದ ಜಮದಗ್ನಿಯ ಹಾಲನ್ನು ಹಿಂದೆ ಈ ಕ್ರೋಧಾಸುರ ಮುಂಗುಸಿಯ ರೂಪದಿಂದಲೇ ಎಂಜಲು ಮಾಡಿದ್ದ. ಅವನನ್ನು ಪಿತೃಗಳು ಶಪಿಸಿದರು. `ಧರ್ಮರಾಜಾದಿ ದೇವತೆಗಳನ್ನು ನಿಂದಿಸುವವರೆಗೂ ನೀನು ಮುಂಗುಸಿಯಾಗಿರು' ಎಂದು ಮಹಾಪಾಪದಿಂದ ಈತ ಘೋರವಾದ ಅಂಧಂತಮಸ್ಸನ್ನು ಹೊಂದಲಿ ಎಂದು ಬಯಸಿಯೆ ಅವರು ಹಾಗೆ ಮಾಡಿದ್ದರು. ಕ್ರೋಧಾಸುರ ಹಾಗೇ ಮಾಡಿ ತಮಸ್ಸನ್ನು ಹೊಂದಿದ.
ಯದ್ಯಪ್ಯಲ್ಪಧನತ್ಯಕ್ತಂ ವಿತ್ತಂ ಬಹುಫಲಂ ಭವೇತ್ |
ತಥಾಽಪ್ಯನಂತಫಲದಾಃ ಕರ್ತುರೇವ ಮಹಾಗುಣಾಃ ॥
ಸತಾಂ ಪ್ರೀತಿಶ್ಚ ತತ್ರಾಪಿ ಸದ್ವರೋ ಹರಿರೇವ ಹಿ |
ಪಾರ್ಥೇಭ್ಯೋಽಭ್ಯಧಿಕಃ ಕರ್ತಾ ಸಮೋ ವಾ ಕೋ ಗುಣೈರ್ಭವೇತ್ ॥
ಅಲ್ಪಧನ ಉಳ್ಳವನು ಕೊಟ್ಟ ಧನ ಅಧಿಕಫಲವನ್ನು ಕೊಟ್ಟೀತು. ಆದರೂ ಕರ್ತನ ಜ್ಞಾನ-ಭಕ್ತ್ಯಾದಿ ಮಹಾಗುಣಗಳು ಮತ್ತು ಅವುಗಳಿಂದ ಉಂಟಾಗುವ ಸಜ್ಜನರ ಸಂತೋಷಗಳೇ ಅನಂತಫಲದಾಯಕಗಳು. ಸಜ್ಜನರಲ್ಲಿ ಉತ್ತಮನು ಶ್ರೀಹರಿಯೇ. ಭಕ್ತ್ಯಾದಿಗುಣಗಳಲ್ಲಿ ಪಾಂಡವರಿಗಿಂತಲೂ ಶ್ರೇಷ್ಠನಾದ ಅಥವಾ ಅವರಿಗೆ ಸಮನಾದ ಕರ್ತನು ಯಾರು ಇರಬಲ್ಲರು?
ಸತಾಂ ಚ ಪ್ರವರೋ ವಿಷ್ಣುಃ ಸದ್ಭಿರ್ಮುನಿಸುರೈರ್ಯುತಃ |
ಪ್ರತ್ಯಕ್ಷತಃ ಕಾರಯತಿ ಪಾರ್ಥೈಃ ಪ್ರಿಯತಮೈಶ್ಚ ತೈಃ ॥
ಯಂ ಮಖಪ್ರವರಂ ತಸ್ಯ ಸಮಂ ಕಿಂ ಶುಭಸಾಧನಮ್ |
ಪಠಂತಿ ಪೈಂಗಿನಶ್ಚೈತಾನ್ ಮಂತ್ರಾನನ್ವರ್ಥಕಾನಿಹ ॥
ಸಜ್ಜನರಲ್ಲಿ ಶ್ರೇಷ್ಠನಾದ ವಿಷ್ಣು ಸಜ್ಜನರಾದ ಮುನಿವರರಿಂದ ಯುಕ್ತನಾಗಿ, ಅತ್ಯಂತ ಪ್ರಿಯರಾದ ಪಾಂಡವರ ಮೂಲಕ ಶುಭಸಾಧನಗಳಿಂದ ಪ್ರತ್ಯಕ್ಷವಾಗಿ ಯಾವ ಯಜ್ಞವನ್ನು ಮಾಡಿಸುತ್ತಿರುವನೋ ಆ ಯಜ್ಞಕ್ಕೆ ಸಮಾನವಾಗಿ ಪುಣ್ಯಕರವಾದ ಇನ್ನೊಂದು ಕರ್ಮ ಯಾವುದು? ಏಕೆಂದರೆ ಪೈಂಗಿ ಶಾಖೆಯವರು ಅರ್ಥ ಗರ್ಭಿತವಾದ ಮುಂದೆ ಹೇಳುವ ಮಂತ್ರಗಳನ್ನು ಪಠಿಸುತ್ತಾರೆ.
`ಅವೈಷ್ಣವಕೃತಂ ಕರ್ಮ ಸರ್ವಮಂತವದುಚ್ಯತೇ |
ಅನಂತಂ ವೈಷ್ಣವಕೃತಂ ತತ್ರ ವರ್ಣಕ್ರಮಾತ್ಪರಮ್ ॥
ವೈಷ್ಣವೈರಪಿ ಮರ್ತ್ಯೈ ರ್ ್ಯರ್ಯತ್ಕೃತಂ ಶತಗುಣಂ ತತಃ |
ಗಾಂಧರ್ವಂ ಕರ್ಮ ತಸ್ಮಾಚ್ಚ ಪಿತೃಭಿರ್ಮುನಿಭಿಸ್ತತಃ ॥
ದೇವಶಕ್ರಶಿವಬ್ರಹ್ಮಕೃತಂ ತಸ್ಮಾತ್ಕ್ರಮೇಣ ಚ |
ಶತೋತ್ತರಮಿತಿ ಜ್ಞೇಯಂ ನಾನ್ಯದ್ ಬ್ರಹ್ಮಕೃತೋಪಮಮ್ ॥
`ವಿಷ್ಣುಭಕ್ತರಲ್ಲದವರು ಮಾಡಿದ ಎಲ್ಲ ಕರ್ಮವೂ ಅಲ್ಪಫಲ ಉಳ್ಳದ್ದೆನಿಸುತ್ತದೆ. ವಿಷ್ಣುಭಕ್ತರು ಮಾಡಿದ್ದು ಅನಂತಫಲ ಉಳ್ಳದ್ದು. ಅದರಲ್ಲಿಯೂ ವರ್ಣಕ್ರಮದಿಂದ ಮೇಲು ಮೇಲಿನವರ ಕರ್ಮ ಹೆಚ್ಚು ಫಲ ಉಳ್ಳದ್ದು. ವೈಷ್ಣವರಲ್ಲಿಯೂ ಮಾನವರು ಮಾಡಿದ್ದಕ್ಕಿಂತ ನೂರು ಪಾಲು ಗಂಧರ್ವರು ಮಾಡಿದ್ದು ಶ್ರೇಷ್ಠ. ಅದಕ್ಕಿಂತ ಪಿತೃಗಳು ಮಾಡಿದ್ದು ನೂರುಪಾಲು ಶ್ರೇಷ್ಠ. ಅದಕ್ಕಿಂತಲೂ ಮುನಿಗಳು ಮಾಡಿದ್ದು ನೂರು ಪಾಲು ಶ್ರೇಷ್ಠ. ಅದಕ್ಕಿಂತ ದೇವತೆಗಳು, ಇಂದ್ರ, ರುದ್ರ, ಬ್ರಹ್ಮರು ಮಾಡಿದ್ದು ಕ್ರಮವಾಗಿ ನೂರು ನೂರು ಪಟ್ಟು ಹೆಚ್ಚು ಶ್ರೇಷ್ಠವೆಂದು ತಿಳಿಯಬೇಕು. ಬ್ರಹ್ಮ ಮಾಡಿದ್ದಕ್ಕೆ ಸಮಾನವಾದದ್ದು ಇನ್ನೊಂದಿಲ್ಲ.
`ವೈಷ್ಣವತ್ವಂ ಕ್ರಮಾದ್ ವೃದ್ಧಂ ಬ್ರಹ್ಮಾಂತಂ ಜೀವರಾಶಿಷು |
ಫಲಾಧಿಕ್ಯಂ ಕರ್ಮಣಾಂ ಹಿ ವಿಷ್ಣೋಃ ಪ್ರೀತ್ಯೈವ ನಾನ್ಯಥಾ ॥'
ವಿಷ್ಣುಭಕ್ತಿ ಜೀವರಾಶಿಗಳಲ್ಲಿ ಕ್ರಮಕ್ರಮವಾಗಿ ಬ್ರಹ್ಮನವರೆಗೆ ಹೆಚ್ಚು ಹೆಚ್ಚಾಗಿರುತ್ತದೆ. ಕರ್ಮಗಳಿಗೆ ಅಧಿಕ ಫಲ ಸಿಗುವುದು ಶ್ರೀಹರಿಗೆ ಆಗುವ ತೃಪ್ತಿಯಿಂದಲೇ ಹೊರತು ಬೇರಾವುದರಿಂದಲೂ ಅಲ್ಲ.
ಇತಿ ತೇನ ನ ಪಾರ್ಥಾನಾಂ ಕರ್ಮಣಾಽನ್ಯತ್ಸಮಂ ಕ್ವಚಿತ್ |
ಗುಣೈರ್ಜ್ಞಾನಾದಿಭಿರ್ವಾಽಪಿ ತಸ್ಮಾತ್ ಕ್ರೋಧಃ ಸ ತಾಮಸಃ |
ವಿನಿಂದ್ಯ ತಾನ್ ಸುಸತ್ತ್ವಸ್ಥಾಂಸ್ತಮೋಽಂಧಮುಪಜಗ್ಮಿವಾನ್ ॥
ಹೀಗೆ ಪೈಂಗಿಶಾಖೆಯ ಮಂತ್ರಗಳಿರುವುದರಿಂದ ಪಾಂಡವರ ಯಜ್ಞಕ್ಕೆ ಸಮಾನ ಇನ್ನೊಂದು ಎಲ್ಲಿಯೂ ಇಲ್ಲ. ಅವರ ಜ್ಞಾನಾದಿ ಗುಣಗಳಿಗೂ ಸಮಾನವಾದ ಗುಣ ಇನ್ನೊಂದು ಎಲ್ಲಿಯೂ ಇಲ್ಲ. ಅದರಿಂದ ತಾಮಸನಾದ ಆ ಕ್ರೋಧಾಸುರ ಮಹಾ ಸಾತ್ವಿಕರಾದ ಆ ಪಾಂಡವರನ್ನು ನಿಂದಿಸಿ ಅಂಧಂತಮಸ್ಸನ್ನು ಹೊಂದಿದ.
ಅಥ ಪೃಷ್ಟೋ ವಾಸುದೇವಃ ಸುರವಿಪ್ರಾದಿಸಂಸದಿ |
ಯುಧಿಷ್ಠಿರೇಣ ಸಂಹೃಷ್ಟೋ ಜಗಾದಾಶೇಷತಃ ಪ್ರಭುಃ |
ಬಳಿಕ ದೇವತೆಗಳು, ಮುನಿಗಳು ಮುಂತಾದವರ ಸಭೆಯಲ್ಲಿ ಧರ್ಮರಾಜ ಪ್ರಶ್ನೆಗಳನ್ನು ಕೇಳಿದಾಗ ಶ್ರೀಕೃಷ್ಣನು ಎಲ್ಲ ವೈಷ್ಣವ ಧರ್ಮಗಳನ್ನೂ ಉಪದೇಶಿಸಿದನು.

* * * * *

## ತೊಂಬತ್ತೊರನೆಯ ಅಧ್ಯಾಯ

ಮುಂಗುಸಿಯು ಧರ್ಮರಾಜಾದಿಗಳಿಗೆ ಉಂಛವೃತ್ತಿ ಬ್ರಾಹ್ಮಣನ ಸಕ್ತುದಾನದ ಮಹಿಮೆಯನ್ನು ವರ್ಣನೆ ಮಾಡಿ ಅಂತರ್ಧಾನ ಹೊಂದಿದುದು.

ನಕುಲಃ

ಅತ್ರ ವೋ ವರ್ತಯಿಷ್ಯಾಮಿ ದಾನಸ್ಯ ಫಲಮುತ್ತಮಮ್ |
ನ್ಯಾಯಲಬ್ಧಸ್ಯ ಸೂಕ್ಷ್ಮಸ್ಯ ವಿಪ್ರೇ ದತ್ತಸ್ಯ ವೈ ದ್ವಿಜಾಃ ||1||
ಮುಂಗುಸಿ ಬ್ರಾಹ್ಮಣನು ಸ್ವಲ್ಪವೇ ಆಗಿದ್ದರೂ ನ್ಯಾಯವಾದ ರೀತಿಯಲ್ಲಿ ಸಂಪಾದಿಸಿದ ದಾನದ ಮಹತ್ವವನ್ನು, ಅದರ ಫಲವನ್ನು ಹೇಳುತ್ತೇನೆ, ಎಲ್ಲ ಬ್ರಾಹ್ಮಣರೇ ಕೇಳಿಸಿಕೊಳ್ಳಿರಿ.
ಧರ್ಮಕ್ಷೇತ್ರೇ ಕುರುಕ್ಷೇತ್ರೇ ಧರ್ಮಜ್ಞೈರ್ಬಹುಭಿರ್ವೃತೇ |
ಉಂಛವೃತ್ತಿರ್ದ್ವಿಜಃ ಕಶ್ಚಿತ್ ಕಾಪೋತಿರಭವತ್ ತದಾ(ಪುರಾ) ||2||
ಧರ್ಮಜ್ಞ ಪುರುಷರಿಂದ ಸುತ್ತುವರಿದ, ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರದಲ್ಲಿ ಉಂಛವೃತ್ತಿಯಿಂದ ಜೀವನವನ್ನು ನಿರ್ವಹಿಸುತ್ತಿದ್ದ ಬ್ರಾಹ್ಮಣನು ಕಪೋತದಂತೆ (ಪಾರಿವಾಳ) ಯದೃಚ್ಛಾಲಾಭನಾಗಿ ಜೀವನವನ್ನು ನಿರ್ವಹಿಸುತ್ತಿದ್ದನು.
ಸಭಾರ್ಯಃ ಸಹ ಪುತ್ರೇಣ ಸಸ್ನುಷಸ್ತಪಸಿ ಸ್ಥಿತಃ ||3||
ತನ್ನ ಹೆಂಡತಿ, ಮಕ್ಕಳು, ಸೊಸೆಯಂದಿರೊಡನೆ ಯಾವಾಗಲೂ ತಪಸ್ಸಿನಲ್ಲೇ ನಿರತನಾಗಿದ್ದನು.
ವಧೂಚತುರ್ಥೋ ವೃದ್ಧಃ ಸ ಧರ್ಮಾತ್ಮಾ ನಿಯತೇಂದ್ರಿಯಃ |
ಷಷ್ಠೇ ಕಾಲೇ ಸದಾ ವಿಪ್ರೋ ಭುಂಕ್ತೇ ತೈಃ ಸಹ ಸುವ್ರತಃ ||4||
ಪ್ರತಿದಿವಸವೂ ಆರನೆಯ ಕಾಲದಲ್ಲಿ ಹೆಂಡತಿ, ಸೊಸೆ, ಮಗ, ಮಗಳು ಎಂಬ ನಾಲ್ಕು ಜನರಿಂದ ಕೂಡಿಕೊಂಡಿರುವ ಧರ್ಮಾತ್ಮನಾದ, ಜಿತೇಂದ್ರಿಯನಾದ ವೃದ್ಧ ಬ್ರಾಹ್ಮಣನು ವ್ರತನಿಷ್ಠನಾಗಿ ಊಟಮಾಡುತ್ತಿದ್ದನು.
ಷಷ್ಠೇ ಕಾಲೇ ಕದಾಚಿತ್ತು ತಸ್ಯಾಹಾರೋ ನ ವಿದ್ಯತೇ |
ಭುಂಕ್ತೇಽನ್ಯಸ್ಮಿನ್ ಕದಾಚಿತ್ ಸ ಷಷ್ಠೇ ಕಾಲೇ ದ್ವಿಜೋತ್ತಮಃ ||5||
ಒಂದುವೇಳೆ ಆರನೆಯ ಕಾಲದಲ್ಲಿ ಆಹಾರವು ಲಭಿಸದಿದ್ದಲ್ಲಿ ಮರುದಿವಸದ ಆರನೆಯ ಕಾಲ ಬರುವ ತನಕ ಉಪವಾಸವಿದ್ದು ಮರುದಿವಸವೇ ಊಟ ಮಾಡುತ್ತಿದ್ದನು.
ಕಾಪೋತಧರ್ಮಿಣಸ್ತಸ್ಯ ದುರ್ಭಿಕ್ಷೇ ಸತಿ ದಾರುಣೇ |
ನಾವಿದ್ಯತ ತದಾ ವಿಪ್ರಾಃ ಸಂಚಯಸ್ತನ್ನಿಬೋಧತ ||6||
ಹೀಗೆ ಹೊಲ-ಗದ್ದೆಗಳಲ್ಲಿ ಬಿದ್ದಿರುವ ಕಾಳುಗಳನ್ನು ಹೆಕ್ಕಿತಿನ್ನುವ ಕಪೋತದಂತೆ ವ್ರತಾನುಷ್ಠಾನ ನಿರತನಾಗಿ ಬ್ರಾಹ್ಮಣನು ಇರುತ್ತಿರಲು ಒಮ್ಮೆ ಭೀಕರವಾದ ಕ್ಷಾಮವು ಒದಗಿಬಂದಿತು. ಆ ದಿನಗಳಲ್ಲಿ ಬ್ರಾಹ್ಮಣನಿಂದ ಕಾಳುಗಳನ್ನು ಸಂಗ್ರಹಿಸಲಾಗುತ್ತಿರಲಿಲ್ಲ.
ಕ್ಷೀಣೌಷಧಿಸಮಾವಾಪೋ ದ್ರವ್ಯಹೀನೋಽಭವತ್ ತದಾ |
ಕ್ಷೀಣೇ ಕಾಲೇಽಸ್ಯ ಸಂಪ್ರಾಪ್ತೇ ನೈವಾವಿದ್ಯತ ಭೋಜನಮ್ ||7||
ಭೂಮಿಯೆಲ್ಲವೂ ಗಿಡ-ಮರಗಳಿಂದ, ಸಸ್ಯರಾಶಿಗಳಿಂದ ದ್ರವ್ಯಹೀನವಾಗಿ ಬಂಜರಾಗಿದ್ದಿತು. ಇಂತಹ ದುರ್ಭಿಕ್ಷೆಯ ಸಮಯದಲ್ಲಿ ಅವನಿಗೆ ಆಹಾರವೇ ದೊರೆಯುತ್ತಿರಲಿಲ್ಲ.
ಕ್ಷುಧಾಪರಿಗತಾಃ ಸರ್ವೇ ಪ್ರಾತಿಷ್ಠಂತ ತದಾ ತು ತೇ |
ಉಂಛಂ ತದಾ ಶುಕ್ಲಪಕ್ಷೇ ಮಧ್ಯಂ ತಪತಿ ಭಾಸ್ಕರೇ ||8||
ಮನೆಯ ಎಲ್ಲ ಸದ್ಯಸರು ಆಹಾರ ಇಲ್ಲದೆ ಹಸಿವೆಯಿಂದ ಒಂದು ದಿನ ಕಂಗೆಟ್ಟರು. ಶುಕ್ಲಪಕ್ಷದ ಒಂದು ದಿವಸದ ಮಧ್ಯಾಹ್ನದ ವೇಳೆಯಲ್ಲಿ ಅವರೆಲ್ಲರೂ ಆಹಾರಕ್ಕಾಗಿ ಪರಿಭ್ರಮಣ ಮಾಡುತ್ತಿದ್ದರು.
ಉಷ್ಣಾರ್ತಶ್ಚ ಕ್ಷುಧಾರ್ತಶ್ಚ ವಿಪ್ರಸ್ತಪಸಿ ನಿಷ್ಠಿತಃ |
ಉಂಛಮಪ್ರಾಪ್ತವಾನೇವ ಸಾರ್ಧಂ ಪರಿಜನೇನ ಹ ||9||
ನಡುಮಧ್ಯಾಹ್ನದ ವೇಳೆ ಸೂರ್ಯನು ಪ್ರಖರವಾಗಿ ತಾಪವನ್ನುಂಟು ಮಾಡುತ್ತಿದ್ದ. ಉದರದಲ್ಲಿ ಹಸಿವೆಯಿಂದ ಅಗ್ನಿಜ್ವಾಲೆಯು ದಹಿಸುತ್ತಿತ್ತು. ತಪೋನಿರತನಾದ ಬ್ರಾಹ್ಮಣನು ಹಸಿವೆಯಿಂದ, ಸೂರ್ಯನ ತಾಪದಿಂದ ಪೀಡಿತನಾಗಿದ್ದನು. ಎಲ್ಲಿಯೂ ಅವನಿಗೆ ಕಾಳುಗಳು ಸಿಕ್ಕಲಿಲ್ಲ. ಬಂಧುಜನರಿಂದ ಕೂಡಿಕೊಂಡು ಹಸಿವೆಯಿಂದಲೇ ದುಃಖದಿಂದ ಕಾಲಕಳೆಯುತ್ತಿದ್ದನು.
ಸ ತಥೈವ ಕ್ಷುಧಾವಿಷ್ಟಃ ಸ್ಪೃಷ್ಟ್ವಾ ತೋಯಂ ಯಥಾವಿಧಿ |
ಕ್ಷಪಯಾಮಾಸ ತಂ ಕಾಲಂ ಸಾರ್ಧಂ ಪರಿಜನೇನ ಹ ||10||
ಪ್ರಾಣವನ್ನು ಉಳಿಸಿಕೊಳ್ಳುವುದು ಅವನಿಗೆ ಕಷ್ಟಸಾಧ್ಯವಾಗಿತ್ತು. ಮತ್ತೊಮ್ಮೆ ಆರನೆಯ ಕಾಲವು ಪ್ರಾಪ್ತವಾಗಲು ಬ್ರಾಹ್ಮಣನು ಮತ್ತು ಅವನ ಕುಟುಂಬದವರು ಒಟ್ಟಾಗಿ ಕಷ್ಟದಿಂದ ಸಿಕ್ಕಿದ ಸ್ವಲ್ಪ ನೀರನ್ನೇ ಕುಡಿದುಕೊಂಡು ಎಲ್ಲರೂ ಕಾಲಕಳೆದರು.
ಅಥ ಷಷ್ಠೇ ಗತೇ ಕಾಲೇ ತೇ ಯವಪ್ರಸ್ಥಮಾರ್ಜಯನ್ |
ಯವಪ್ರಸ್ಥಂ ಚ ತತ್ ಸಕ್ತೂನ್ ಅಕುರ್ವಂತ ತಪಸ್ವಿನಃ ||11||
ಬಳಿಕ ದಿನದ ಆರನೆಯ ಕಾಲವು ಬರುತ್ತಿರಲು ಮರುದಿವಸ ಕಷ್ಟದಿಂದ ಸ್ವಲ್ಪವೇ ಯವಧಾನ್ಯವನ್ನು ಸಂಗ್ರಹಿಸಿಕೊಂಡರು. ಅವರೆಲ್ಲರೂ ತಪಸ್ವಿಗಳಾಗಿದ್ದು ಆ ಯವಧಾನ್ಯವನ್ನು ಉಪಭುಂಜಿಸಲು ಹಿಟ್ಟನ್ನಾಗಿ ಮಾಡಿಕೊಂಡರು.
ಕೃತಜಪ್ಯಾಹ್ನಿಕಾಸ್ತೇ ತು ಹುತ್ವಾ ವಹ್ನಿಂ ಯಥಾವಿಧಿ |
ಕುಡುಪಂ ಕುಡುಪಂ ಸರ್ವೇ ವ್ಯಭಜಂತ ತಪಸ್ವಿನಃ ||12||

ಬಳಿಕ ಎಲ್ಲರೂ ಸ್ನಾನ, ಆಹ್ನಿಕಾದಿ ಸತ್ಕರ್ಮಗಳನ್ನು ಪೂರೈಸಿ ಅಗ್ನಿಯಲ್ಲಿ ವಿಧಿವತ್ತಾಗಿ ಹೋಮಮಾಡುತ್ತಾ ಒಂದೊಂದು ಕುಡತೆಯಷ್ಟು ಹಿಟ್ಟನ್ನು ಉಪಭುಂಜಿಸಲು ವಿಭಾಗ ಮಾಡಿಕೊಂಡರು.
ಅಥಾಗಮದ್ ದ್ವಿಜಃ ಕಶ್ಚಿದ್ ಅತಿಥಿರ್ಭುಂಜತಾಂ ತದಾ |
ತೇ ತಂ ದೃಷ್ಟ್ವಾಽತಿಥಿಂ ತತ್ರ ಪ್ರಹೃಷ್ಟಮನಸೋಽಭವನ್ ॥13॥
ತೇಽಭಿವಾದ್ಯ ಸುಖಪ್ರಶ್ನಂ ಪೃಷ್ಟ್ವಾ ತಮತಿಥಿಂ ತದಾ |
ವಿಶುದ್ಧಮನಸೋ ದಾಂತಾಃ ಶ್ರದ್ಧಾದಮಸಮನ್ವಿತಾಃ ॥14॥
ಅನಸೂಯಾ ಗತಕ್ರೋಧಾಃ ಸಾಧವೋ ಗತಮತ್ಸರಾಃ |
ತ್ಯಕ್ತಾತ್ಮಾನೋ ಜಿತಕ್ರೋಧಾ ಧರ್ಮಜ್ಞಾ ದ್ವಿಜಸತ್ತಮಾಃ ॥15॥
ಸಬ್ರಹ್ಮಚರ್ಯಂ ತೇ ಗೋತ್ರಮಾಖ್ಯಾಯಾಥ ಪರಸ್ಪರಮ್ |
ಕುಟೀಂ ಪ್ರವೇಶಯಾಮಾಸುಃ ಕ್ಷುಧಾರ್ತಮತಿಥಿಂ ತದಾ ॥16॥
ಇನ್ನೇನು ಆ ಹಿಟ್ಟನ್ನು ತಿನ್ನಬೇಕೆನ್ನುವ ಸಮಯಕ್ಕೆ ಸರಿಯಾಗಿ ಬ್ರಾಹ್ಮಣನೊಬ್ಬ ಅತ್ಯಂತ ಹಸಿವೆಯಿಂದ ಬಳಲಿ ಅತಿಥಿಯಾಗಿ ಬಂದನು. ಆ ಅತಿಥಿಯನ್ನು ಕಂಡು ಅವರೆಲ್ಲರೂ ತುಂಬಾ ಸಂತೋಷದಿಂದ ಅವನನ್ನು ನಮಸ್ಕರಿಸಿ ಕುಶಲಪ್ರಶ್ನೆಯನ್ನು ಮಾಡಿದರು. ಶುದ್ಧವಾದ ಮನಸ್ಸಿನಿಂದ ಜಿತೇಂದ್ರಿಯರಾಗಿ, ಭಗವದ್ಭಕ್ತಿಯುಳ್ಳವರಾಗಿ, ಮನಸ್ಸನ್ನು ನಿಗ್ರಹಿಸಿಕೊಂಡು ದೋಷದೃಷ್ಟಿಯಿಲ್ಲದೆ, ಕ್ರೋಧರಹಿತರಾಗಿ ಸತ್ಪುರುಷರಾದ, ಮಾತ್ಸರ್ಯವಿಲ್ಲದ, ಮಾನ-ಮದ-ಕ್ರೋಧಗಳನ್ನು ಜಯಿಸಿಕೊಂಡಿರುವ, ಧರ್ಮಜ್ಞರಾದ ಆ ಎಲ್ಲ ದ್ವಿಜಶ್ರೇಷ್ಠರೂ ತಮ್ಮ ಗೋತ್ರಗಳನ್ನು ಆ ಅತಿಥಿಯ ಮುಂದೆ ಹೇಳಿಕೊಂಡು ನಮಸ್ಕರಿಸಿ ಹಸಿವೆಯಿಂದ ಕಂಗಾಲಾದ ಅತಿಥಿಯನ್ನು ತಮ್ಮ ಮನೆಯ ಒಳಗಡೆ ಕರೆದುಕೊಂಡು ಹೋದರು.
ಇದಮರ್ಘ್ಯಂ ಚ ಪಾದ್ಯಂ ಚ ಬೃಸೀ ಚೇಯಂ ತವಾನಘ |
ಶುಚಯಃ ಸಕ್ತವಶ್ಚೇಮೇ ನಿಯಮೋಪಾರ್ಜಿತಾಃ ಪ್ರಭೋ ॥17॥
ಪ್ರತಿಗೃಹ್ಣೀಷ್ವ ಭದ್ರಂ ತೇ ಮಯಾ ದತ್ತಾನ್ ದ್ವಿಜೋತಮ ॥18॥
ನಂತರ ಅತಿಥಿಗೆ ಬೇಕಾದ ಅರ್ಘ್ಯವನ್ನು, ಆಸನವನ್ನು, ಪಾದ್ಯವನ್ನು ಸ್ವೀಕರಿಸುವಂತೆ ಹೇಳುತ್ತಾ ನಿಯಮಬದ್ಧವಾಗಿ ಉಪಚರಿಸುತ್ತಾ ಶುದ್ಧವಾದ ಹಿಟ್ಟಿನ ಉಂಡೆಗಳನ್ನು ಧರ್ಮದಿಂದ ಸಂಪಾದಿಸಿದ್ದೇವೆಂದು ಹೇಳುತ್ತಾ, ಪೂಜ್ಯರೇ, ನಿಮಗೆ ಮಂಗಳವಾಗಲಿ. ನಾವು ಕೊಡುತ್ತಿರುವ ಈ ಹಿಟ್ಟಿನ ಉಂಡೆಗಳನ್ನು ಸ್ವೀಕರಿಸಿ ಎಂದು ಹೇಳಿದರು.
ಇತ್ಯುಕ್ತಃ ಪ್ರತಿಗೃಹ್ಯಾದ್ಯ ಸಕ್ತೂನಾಂ ಕುಡುಪಂ ದ್ವಿಜಃ |
ಭಕ್ಷಯಾಮಾಸ ರಾಜೇಂದ್ರ ನ ಚ ತುಷ್ಟಿಂ ಜಗಾಮ ಸಃ ॥19॥
ಈ ರೀತಿಯಾಗಿ ಬ್ರಾಹ್ಮಣನನ್ನು ಪ್ರಾರ್ಥಿಸುತ್ತಾ ಒಂದು ಕುಡತೆ ಪ್ರಮಾಣದ ಹಿಟ್ಟಿನ ಉಂಡೆಯನ್ನು ಸ್ವೀಕರಿಸಲು ಕೊಟ್ಟರು. ಅಂತೆಯೇ ಅತಿಥಿಯು ಆ ಹಿಟ್ಟನ್ನು ಸ್ವೀಕರಿಸಿದನು. ಆದರೆ ಅಷ್ಟರಿಂದ ಆತನು ತೃಪ್ತನಾಗಲಿಲ್ಲ.
ಸ ಉಂಛವೃತ್ತಿಸ್ತಂ ಪ್ರೇಕ್ಷ್ಯ ಕ್ಷುಧಾಪರಿಗತಂ ದ್ವಿಜಮ್ |
ಆಹಾರಂ ಚಿಂತಯಾಮಾಸ ಕಥಂ ತುಷ್ಟೋ ಭವೇದಿತಿ ॥20॥
ಉಂಛವೃತ್ತಿಯ ಬ್ರಾಹ್ಮಣನು ಆಗಮಿಸಿರುವ ಅತಿಥಿಯು ಹಸಿವೆಯಿಂದ ಮತ್ತೂ ಬಳಲುತ್ತಿರುವುದನ್ನು ಕಂಡು ಅವನನ್ನು ಆಹಾರದಿಂದ ತೃಪ್ತಿಪಡಿಸುವುದು ಹೇಗೆ ಎಂದು ಚಿಂತಿಸತೊಡಗಿದನು.
ತಸ್ಯ ಭಾರ್ಯಾಽಬ್ರವೀದ್ ರಾಜನ್ ಮದ್ಭಾಗೋ ದೀಯತಾಮಯಮ್ |
ಗಚ್ಛತ್ವೇಷ ಯಥಾಕಾಮಂ ಸಂತುಷ್ಟೋ ದ್ವಿಜಸತ್ತಮಃ ॥21॥
ಅದೇ ಸಮಯದಲ್ಲಿ ಉಂಛವೃತ್ತಿ ಬ್ರಾಹ್ಮಣನ ಪತ್ನಿಯು ಗಂಡನನ್ನು ಕುರಿತು ಹೇಳಿದಳು- `ಪತಿದೇವನೇ, ನನ್ನ ಭಾಗದ ಹಿಟ್ಟನ್ನೂ ಈ ಅತಿಥಿಗೆ ನೀಡು. ಇದನ್ನು ಸ್ವೀಕರಿಸಿದ ಬಳಿಕವಾದರೂ ಅತಿಥಿಯು ಸಂತುಷ್ಟನಾಗಿ ಅವನ ಪ್ರಯಾಣವನ್ನು ಮುಂದುವರಿಸಲಿ' ಎಂದು ಹೇಳಿದನು.
ಇತಿ ಬ್ರುವಂತೀಂ ತಾಂ ಸಾಧ್ವೀಂ ಧರ್ಮಾತ್ಮಾ ಸ ದ್ವಿಜರ್ಷಭಃ |
ಕ್ಷುಧಾಪರಿಗತಾಂ ಜ್ಞಾತ್ವಾ ಸಕ್ತೂಂಸ್ತಾನ್ ನಾಭ್ಯನಂದತ ॥22॥
ಸಾಧ್ವಿ ಪತಿವ್ರತೆಯು ಹೀಗೆ ಹೇಳುತ್ತಿರಲು ಧರ್ಮಾತ್ಮನಾದ ಉಂಛವೃತ್ತಿ ಬ್ರಾಹ್ಮಣನು ತನ್ನ ಪತ್ನಿಯು ಹಸಿವೆಯಿಂದ ಕಂಗಾಲಾಗಿದ್ದಾಳೆಂದು ತಿಳಿದು ಅವಳ ಭಾಗವನ್ನು ಸ್ವೀಕರಿಸಲು ಇಷ್ಟಪಡಲಿಲ್ಲ.
ಜಾನನ್ ವೃದ್ಧಾಂ ಕ್ಷುಧಾರ್ತಾಂ ಚ ಶ್ರಾಂತಾಂ ಗ್ಲಾನಾಂ ತಪಸ್ವಿನೀಮ್ |
ತ್ವಗಸ್ಥಿಭೂತಾಂ ಧ್ಯಾಯಂತೀಂ ತತೋ ಭಾರ್ಯಾಮುವಾಚ ತಾಮ್ ॥
ವಿದ್ವಾಂಸನಾದ ವಿಪ್ರಶ್ರೇಷ್ಠನು ತನ್ನ ಮನಸ್ಸಿನಲ್ಲಿಯೇ ಅವಳು ಹಸಿವೆಯಿಂದ ಪೀಡಿತಳು ಎಂದು ಚೆನ್ನಾಗಿ ಅರ್ಥೈಸಿಕೊಂಡು, ಅತ್ಯಂತ ಬಳಲಿರುವ, ಬಾಡಿದ ಮುಖವುಳ್ಳ, ಚರ್ಮ-ಮೂಳೆಗಳನ್ನು ಮಾತ್ರ ಹೊಂದಿರುವ ಹೀಗಿದ್ದರೂ ಭಗವಂತನ ಧ್ಯಾನದಲ್ಲಿ ರತಳಾಗಿರುವ ಪತ್ನಿಯನ್ನುದ್ದೇಶಿಸಿ ಹೇಳಿದನು.
ಬ್ರಾಹ್ಮಣಃ
ಅಪಿ ಕೀಟಪತಂಗಾನಾಂ ಮೃಗಾಣಾಂ ಚೈವ ಶೋಭನೇ |
ಸ್ತ್ರಿಯೋ ರಕ್ಷ್ಯಾಶ್ಚ ಪೋಷ್ಯಾಶ್ಚ ನೈವಂ ತ್ವಂ ವಕ್ತುಮರ್ಹಸಿ ॥24॥
ಬ್ರಾಹ್ಮಣ ಕೀಟಗಳು, ಚಿಟ್ಟೆಗಳು, ಮೃಗಗಳೂ ಕೂಡ ಹೆಣ್ಣುಕೀಟ, ಹೆಣ್ಣು ಚಿಟ್ಟೆ, ಹೆಣ್ಣು ಮೃಗಗಳನ್ನು ಪೋಷಿಸುವುದು ಕರ್ತವ್ಯವಾಗಿದೆ. ಹೀಗಿರುವಾಗ ನಿನ್ನ ಪೋಷಣೆಗೆ ನಾನು ನೀಡಿರುವುದು ಉಚಿತವಲ್ಲವೆಂದು ಭಾವಿಸುತ್ತೇನೆ.
ಅನುಕಂಪ್ಯೋ ನರಃ ಪತ್ನ್ಯಾ ಪುಷ್ಟೋ ರಕ್ಷಿತ ಏವ ಚ |

ಪ್ರಪತೇನ್ನಿರಯಂ ದೀಪ್ತಂ ನ ಚ ಲೋಕಾನವಾಪ್ನುಯಾತ್ ॥25॥
ಯಾವ ಪುರುಷನು ಹೆಂಡತಿಯ ಕೃಪೆಗೆ ಪಾತ್ರನಾಗಿ ಅವನಿಂದಲೇ ಜೀವನವನ್ನು ನಿರ್ವಹಿಸುತ್ತಾನೋ, ಅವಳಿಂದ ರಕ್ಷಣೆಯನ್ನು ಹೊಂದುತ್ತಾನೋ ಅಂತಹ ಪುರುಷನು ಉಜ್ವಲವಾದ ಕೀರ್ತಿಯಿಂದ ಭ್ರಷ್ಟನಾಗುತ್ತಾನೆ. ಉತ್ತಮ ಲೋಕಗಳು ಅವನ ಪಾಲಿಗೆ ದೊರಕವು.
ಇತ್ಯುಕ್ತಃ ಸ ತಥಾ ಪ್ರಾಹ ಧರ್ಮಾರ್ಥೌ ತೌ ಸಮೌ ಮುನೇ ॥26॥
ಸಕ್ತುಪ್ರಸ್ಥ ಚತುರ್ಭಾಗಂ ಗೃಹಾಣ ತ್ವಂ ಪ್ರಸೀದ ಮೇ ॥27॥
ಈ ರೀತಿಯಾಗಿ ಬ್ರಾಹ್ಮಣನು ಹೇಳಲು ದ್ವಿಜಪತ್ನಿಯು ಹೇಳುತ್ತಾಳೆ- ಬ್ರಾಹ್ಮಣನೇ, ಧರ್ಮಾರ್ಥಗಳು ನಮ್ಮಿಬ್ಬರಿಗೂ ಸಮಾನವಲ್ಲವೆ? ಆದ್ದರಿಂದ ನಾಲ್ಕು ಭಾಗದಲ್ಲಿ ಒಂದು ಭಾಗದ ಹಿಟ್ಟನ್ನು ನನ್ನಿಂದ ಸ್ವೀಕರಿಸು. ನೀನು ಈ ಆತಿಥ್ಯದಿಂದ ಸಂತುಷ್ಟನಾಗು.
ಸತ್ಯಂ ರತಿಶ್ಚ ಧರ್ಮಶ್ಚ ಸ್ವರ್ಗಶ್ಚ ಗುಣನಿರ್ಜಿತಃ |
ಸ್ತ್ರೀಣಾಂ ಪತಿಸಮಾಧಾನಂ ತಪಶ್ಚೇದಂ ದ್ವಿಜೋತ್ತಮ ॥28॥
ದ್ವಿಜಶ್ರೇಷ್ಠನೇ, ಸ್ತ್ರೀಯರು ಹೇಳುವ ಸತ್ಯಮಾತುಗಳು, ರತಿ, ಧರ್ಮ, ಸ್ವರ್ಗ, ತನ್ನ ಗುಣದಿಂದ ಜಯಿಸಲ್ಪಟ್ಟ ಎಲ್ಲ ಸುಖಗಳು ಗಂಡನ ಮನಸ್ಸಿಗೆ ಸುಖವನ್ನು ನೀಡುವಂತೆ ಇರಬೇಕು. ಆಚರಿಸುವ ತಪಸ್ಸು ಗಂಡನಿಗೆ ಸಂತೋಷವಾಗುವಂತೆ ಇರಬೇಕು.
ಭ್ರಾತುರ್ಮಾತುಃ ಪಿತುರ್ಬೀಜಂ ದೈವತಂ ಪರಮಂ ಪತಿಃ |
ಭರ್ತುಃ ಪ್ರಸಾದಾತ್ ಸ್ತ್ರೀಣಾಂ ವೈ ರತಿಪುತ್ರಫಲಂ ತಥಾ ॥29॥
ದ್ವಿಜಶ್ರೇಷ್ಠನೇ, ತಾಯಿಯ ರಜಸ್ಸು, ತಂದೆಯ ರೇತಸ್ಸು ಇವೆರಡರ ಸಮಾಗಮದಿಂದ ವಂಶದ ಅಭಿವೃದ್ಧಿಯು ಉಂಟಾಗುತ್ತದೆ. ಪತಿಯೇ ಸ್ತ್ರೀಗೆ ಶ್ರೇಷ್ಠನಾದ ದೇವತೆ. ಬೀಜಸ್ಥಾನೀಯನಾಗಿ ಈರ್ವರಲ್ಲಿ ಪುರುಷನೇ ಇದ್ದಾನೆ. ಪತಿಯ ಪ್ರಸನ್ನತೆಯಿಂದ ಸ್ತ್ರೀಯರಿಗೆ ರತಿಸುಖವೂ, ಪುತ್ರನೆಂಬ ಫಲವು ಪ್ರಾಪ್ತವಾಗುತ್ತದೆ.
ಪಾಲನಾದ್ಧಿ ಪತಿಸ್ತ್ವಂ ಮೇ ಭರ್ತಾಽಸಿ ಭರಣಾನ್ವಿತಃ |
ಪುತ್ರಪ್ರದಾನಾದ್ ವರದಃ ತಸ್ಮಾತ್ ಸಕ್ತೂನ್ ಗೃಹಾಣ ಮೇ ॥30॥
ನನ್ನನ್ನು ಪಾಲಿಸಿರುವುದರಿಂದಲೇ ಪತಿ ಎಂಬ ಹೆಸರನ್ನು ಹೊಂದಿರುವಿ. ಭರಣ ಮಾಡಿರುವುದರಿಂದ ಭರ್ತೃ ಎನಿಸಿರುವಿ. ಸಂತಾನವನ್ನು ದಾನ ಮಾಡಿರುವುದರಿಂದ ವರಪ್ರದನೂ ಆಗಿರುವಿ. ಆದ್ದರಿಂದ ನನ್ನಲ್ಲಿರುವ ಹಿಟ್ಟನ್ನು ಸ್ವೀಕರಿಸಿ ಅತಿಥಿಗೆ ನೀಡು.
ಜರಾಪರಿಗತೋ ವೃದ್ಧಃ ಕ್ಷುಧಾರ್ತೋ ದುಬಲೋಽದೃಢಃ |
ಉಪವಾಸಪರಿಶ್ರಾಂತೋ ಯದಾ ತ್ವಮಪಿ ಕರ್ಶಿತಃ ॥31॥
ನಿನ್ನ ದೇಹವು ಮುಪ್ಪಿನಿಂದ ಶಿಥಿಲವಾಗಿದೆ. ವೃದ್ಧನಾಗಿರುವ ನೀನು ಹಸಿವೆಯಿಂದ ಬಳಲುತ್ತಿರುವಿ. ಅತಿದುರ್ಬಲನಾಗಿರುವಿ. ಉಪವಾಸ ಮಾಡಿ ಶ್ರಾಂತನಾಗಿರುವಿ. ಕ್ಷೀಣಕಾಯನಾಗಿರುವಿ. ಹೀಗಿರಲು ನನ್ನ ವಿಷಯದಲ್ಲಿ ಮಾತ್ರ ದುಃಖಿಸುವುದೇನಿದೆ?
ವೈಶಂಪಾಯನಃ
ಇತ್ಯುಕ್ತಃ ಸ ತಯಾ ಸಕ್ತೂನ್ ಪ್ರಗೃಹ್ಯೇದಂ ವಚೋಽಬ್ರವೀತ್ ॥32॥
ವೈಶಂಪಾಯನ ಪತ್ನಿಯು ಹೀಗೆ ಹೇಳಲು ಉಂಛವೃತ್ತಿಯ ಬ್ರಾಹ್ಮಣನು ಅವಳ ಮಾತನ್ನು ಒಪ್ಪಿ ಅವಳಿಂದ ಹಿಟ್ಟನ್ನು ಸ್ವೀಕರಿಸಿ ಅತಿಥಿಯನ್ನುದ್ದೇಶಿಸಿ ಹೇಳುತ್ತಾನೆ.
ಭರ್ತಾ
ದ್ವಿಜ ಸಕ್ತೂನಿಮಾನ್ ಭೂಯಃ ಪ್ರತಿಗೃಹ್ಣೀಷ್ವ ಸತ್ತಮ ॥33॥
ಬ್ರಾಹ್ಮಣ ಬ್ರಾಹ್ಮಣಶ್ರೇಷ್ಠರೇ, ಈ ಹಿಟ್ಟನ್ನು ನಿಮ್ಮ ಭೋಜನಕ್ಕಾಗಿ ಸ್ವೀಕರಿಸಿ.
ವೈಶಂಪಾಯನಃ
ಸ ತಾನ್ ಪ್ರಗೃಹ್ಯ ಭುಕತ್ವಾ ಚ ನ ತುಷ್ಟಿಮಗಮನ್ಮುನಿಃ |
ತಮುಂಛವೃತ್ತಿರಾಲಕ್ಷ್ಯ ತತಶ್ಚಿಂತಾಪರೋಽಭವತ್ ॥34॥
ವೈಶಂಪಾಯನ ಅತಿಥಿಯು ಆ ಹಿಟ್ಟನ್ನು ಸ್ವೀಕರಿಸಿ ಭಕ್ಷಿಸಿದನು. ಆದರೆ ಅದರಿಂದಲೂ ಅವನು ತೃಪ್ತಿಯನ್ನು ಹೊಂದಲಿಲ್ಲ. ಉಂಛವೃತ್ತಿಯ ಬ್ರಾಹ್ಮಣನು ಅತೃಪ್ತನಾದ ಅತಿಥಿಯನ್ನು ಕಂಡು ಪುನಃ ಚಿಂತಾಕ್ರಾಂತನಾದನು.
ಪುತ್ರಃ
ಸಕ್ತೂನಿಮಾನ್ ಪ್ರಗೃಹ್ಯ ತ್ವಂ ದೇಹಿ ವಿಪ್ರಾಯ ಸತ್ತಮ |
ಇತ್ಯೇವ ಸುಕೃತಂ ಮನ್ಯೇ ತಸ್ಮಾದೇತತ್ ಕರೋಮ್ಯಹಮ್ ॥35॥
ಪುತ್ರ ತಂದೆಯೇ, ನನ್ನ ಬಳಿ ಇರುವ ಹಿಟ್ಟನ್ನು ಸ್ವೀಕರಿಸಿ ಅತಿಥಿಯನ್ನು ತೃಪ್ತಿಪಡಿಸು. ಹೀಗೆ ಮಾಡುವುದೇ ಪುಣ್ಯಕರ್ಮವೆಂದು ಭಾವಿಸುತ್ತೇನೆ. ನಾನು ಹಿಟ್ಟನ್ನು ಅತಿಥಿಗೋಸ್ಕರ ನೀಡುತ್ತಿದ್ದೇನೆ.
ಭವಾನ್ ಹಿ ಪರಿಪಾಲ್ಯೋ ಮೇ ಸರ್ವಯತ್ನೈರ್ದ್ವಿಜೋತ್ತಮ |
ಸಾಧೂನಾಂ ಕಾಂಕ್ಷಿತಂ ಹ್ಯೇತತ್ ಪಿತುರ್ವೃದ್ಧಸ್ಯ ಪೋಷಣಮ್ ॥36॥
ನಾನು ನಿಮ್ಮನ್ನು ಪ್ರಯತ್ನಪೂರ್ವಕವಾಗಿ ನಿರಂತರ ರಕ್ಷಿಸಬೇಕು. ವೃದ್ಧರಾದ ತಂದೆ- ತಾಯಂದಿರನ್ನು ರಕ್ಷಿಸಬೇಕೆಂಬುದು ಸಜ್ಜನರ ನಿಯಮವಾಗಿದೆ.
ಪುತ್ರಾರ್ಥೋ ವಿಹಿತೋ ಹ್ಯೇಷ ಸ್ಥಾವಿರ್ಯೇ ಪರಿಪಾಲನಮ್ |
ಶ್ರುತಿರೇಷಾ ಹಿ ವಿಪ್ರರ್ಷೇ ತ್ರಿಷು ಲೋಕೇಷು ಶಾಶ್ವತೀ ॥37॥
ವೃದ್ಧರಾದ ತಂದೆಯ ಪರಿಪಾಲನೆ ಪುತ್ರನ ವಿಹಿತಧರ್ಮವೆನಿಸಿದೆ. ಬ್ರಹ್ಮರ್ಷಿಯೇ, ಮೂರುಲೋಕದಲ್ಲಿಯೂ ಇದಕ್ಕೆ ಪೂರಕವಾದ ಸನಾತನ ಶ್ರುತಿಯು ಪ್ರಸಿದ್ಧವಾಗಿದೆ.

ಪ್ರಾಣಧಾರಣಮಾತ್ರೇಣ ಶಕ್ಯಂ ಕರ್ತುಂ ತಪಸ್ತ್ವಯಾ |
ಪ್ರಾಣಾ ಹಿ ಪರಮೋ ಧರ್ಮಃ ಸ್ಥಿತಾ ದೇಹೇಷು ದೇಹಿನಾಮ್ ॥38॥
ಪ್ರಾಣಗಳನ್ನು ಧರಿಸಿದ ಬಳಿಕವೇ ನಿನ್ನಿಂದ ತಪಸ್ಸು ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ದೇಹಧಾರಿಗಳಿಗೆ ಶರೀರಗತ ಪ್ರಾಣರಕ್ಷಣೆಯು ಪರಮಧರ್ಮ ಎನಿಸಿದೆ.
ಪಿತಾ
ಅಪಿ ವರ್ಷಸಹಸ್ರಂ ಬಾಲ ಏವ ಮತೋ ಮಮ |
ಉತ್ಪಾದ್ಯ ಪುತ್ರಂ ಹಿ ಪಿತಾ ಕೃತಕೃತ್ಯೋ ಭವತ್ಯುತ ॥39॥
ತಂದೆ ಮಗುವೇ, ನಿನಗೆ ಸಾವಿರವರ್ಷಗಳಾದರೂ ನನ್ನ ದೃಷ್ಟಿಯಿಂದ ನೀನು ನನ್ನ ಮಗನೇ ಆಗಿರುತ್ತಿ. ಮಗನನ್ನು ಪಡೆದ ಬಳಿಕ ತಂದೆಯು ಕೃತಕೃತ್ಯನೆಂದು ತನ್ನನ್ನು ಭಾವಿಸುತ್ತಾನೆ.
ಬಾಲಾನಾಂ ಕ್ಷುದ್ಬಲವತೀ ಜಾನಾಮ್ಯೇತದಹಂ ತವ |
ವೃದ್ಧೋಽಹಂ ಧಾರಯಿಷ್ಯಾಮಿ ತ್ವಂ ಬಲೀ ಭವ ಪುತ್ರಕ ॥40॥
ಮಗುವೇ, ಬಾಲಕರಾದ ನಿಮಗೆ ನಮಗಿಂತ ಅಧಿಕವಾದ ಹಸಿವು ಉಂಟಾಗುತ್ತದೆ ಎಂದು ತಿಳಿದಿರುತ್ತೇನೆ. ಮಂದ ಜಠರಾಗ್ನಿವುಳ್ಳವನಾದ ವೃದ್ಧನಾದ ನಾನು ಹಸಿವನ್ನು ಸಹಿಸಿಕೊಂಡು ಪ್ರಾಣಧಾರಣೆ ಮಾಡಿಕೊಳ್ಳಬಲ್ಲೆ. ಆದ್ದರಿಂದ ನಿನ್ನ ಭಾಗಕ್ಕೆ ಬಂದಿರುವ ಹಿಟ್ಟನ್ನು ತಿಂದು ಬಲಿಷ್ಠನಾಗು.
ಜೀರ್ಣೇನ ವಯಸಾ ಪುತ್ರ ನ ಮಾಂ ಕ್ಷುದ್ಬಾಧತೇಽಪಿ ಚ |
ದೀರ್ಘಕಾಲಂ ತಪಸ್ತಪ್ತಂ ನ ಮೇ ಮರಣತೋ ಭಯಮ್ ॥41॥
ಮಗನೇ, ವೃದ್ಧನಾಗಿ ಜೀರ್ಣಶರೀರವನ್ನು ಹೊಂದಿರುವ ನನ್ನನ್ನು ಹಸಿವು ಅತಿಯಾಗಿ ಸಂಕಟಪಡಿಸುವುದಿಲ್ಲ. ಇಷ್ಟಾಗಿ ನಾನು ತಪೋನಿರತನಾಗಿ ಜೀವನ ಕಳೆದಿದ್ದೇನೆ. ಆದ್ದರಿಂದ ನನಗೆ ಮರಣದ ಭೀತಿಯೂ ಇಲ್ಲ.
ಪುತ್ರಃ
ಅಪತ್ಯಮಸ್ಮಿ ತೇ ಪುತ್ರಃ ತ್ರಾಣಾತ್ ಪುತ್ರೋ ಹಿ ವಿಶ್ರುತಃ |
ಆತ್ಮಾ ಪುತ್ರಃ ಸ್ಮೃತಸ್ತಸ್ಮಾತ್ ತ್ರಾಹ್ಯಾತ್ಮಾನಮಿಹಾತ್ಮನಾ ॥42॥
ಪುತ್ರ ತಂದೆಯೇ, ನಾನು ನಿನ್ನ ಮಗನಾಗಿದ್ದೇನೆ. ತಂದೆಯನ್ನು ಸರಿಯಾಗಿ ರಕ್ಷಣೆ ಮಾಡುವ ಕಾರಣದಿಂದಲೇ ಅವನಲ್ಲಿ ಪುತ್ರತ್ವವು ಉಳಿಯುತ್ತದೆ. ಮಗನೇ ತಂದೆಯ ಆತ್ಮವೆಂದು ಶ್ರುತಿಯು ಹೇಳಿದೆ. ಆದ್ದರಿಂದ ಆತ್ಮಭೂತನಾದ ಮಗನ ಮೂಲಕವಾಗಿ ನಿನ್ನ ರಕ್ಷಣೆಯು ನನ್ನ ಕರ್ತವ್ಯ ಎಂದು ಭಾವಿಸುತ್ತೇನೆ.
ಪಿತಾ
ರೂಪೇಣ ಸದೃಶಸ್ತ್ವಂ ಮೇ ಶೀಲೇನ ಚ ಬಲೇನ ಚ |
ಪರೀಕ್ಷಿತಸ್ಯ ಬಹುಧಾ ಸಕ್ತೂನಾದದ್ಮಿ ತೇ ಸುತ ॥43॥
ತಂದೆ ಮಗುವೇ, ನೀನು ಸಚ್ಚಾರಿತ್ರ್ಯ, ಇಂದ್ರಿಯನಿಗ್ರಹ, ಬಲ ಇವುಗಳಿಂದ ನನಗೆ ಸದೃಶನೇ ಆಗಿರುವಿ. ಈ ಗುಣಗಳು ನಿನ್ನಲ್ಲಿ ಇವೆಯೆಂಬುದನ್ನು ಹತ್ತಾರು ಬಾರಿ ಪರೀಕ್ಷಿಸಿಕೊಂಡು ನಿಶ್ಚಯಿಸಿಕೊಂಡಿದ್ದೇನೆ. ಆದ್ದರಿಂದ ನಿನ್ನ ಆಶಯದಂತೆ ನಿನ್ನ ಬಳಿ ಇರುವ ಹಿಟ್ಟಿನ ಉಂಡೆಗಳನ್ನು ಅತಿಥಿಗೋಸ್ಕರ ಸ್ವೀಕರಿಸುತ್ತೇನೆ.
ವೈಶಂಪಾಯನಃ
ಇತ್ಯುಕ್ತ್ವಾಽಽದಾಯ ತಾನ್ ಸಕ್ತೂನ್ ಪ್ರೀತಾತ್ಮಾ ದ್ವಿಜಸತ್ತಮಃ |
ಪ್ರಹಸನ್ನಿವ ವಿಪ್ರಾಯ ಸ ತಸ್ಮೈ ಪ್ರದದೌ ತದಾ ॥44॥
ವೈಶಂಪಾಯನ ಬ್ರಾಹ್ಮಣಶ್ರೇಷ್ಠರೇ, ತಂದೆಯು ಹೀಗೆ ಹೇಳಿ ಸಂತುಷ್ಟನಾದ ಮಗನ ಮೂಲಕ ಅವನ ಪಾಲಿನ ಹಿಟ್ಟಿನ ಉಂಡೆಯನ್ನು ಸ್ವೀಕರಿಸಿ, ಸಂತೋಷದಿಂದಲೇ ಅತಿಥಿಗೆ ನೀಡಿದನು.
ಭುಕ್ತ್ವಾ ತಾನಪಿ ಸಕ್ತೂನ್ ಸ ನೈವ ತುಷ್ಟೋ ಬಭೂವ ಹ |
ಉಂಛವೃತ್ತಿಸ್ತು ಸವ್ರೀಡೋ ಬಭೂವ ದ್ವಿಜಸತ್ತಮಃ ॥45॥
ಆ ಹಿಟ್ಟಿನ ಭಾಗಗಳನ್ನು ಅತಿಥಿಯು ಸ್ವೀಕರಿಸಿದರೂ ಸಂತುಷ್ಟನಾಗಲಿಲ್ಲ. ಉಂಛವೃತ್ತಿಯ ಬ್ರಾಹ್ಮಣನು ಅತಿಥಿಯ ಅವಸ್ಥೆಯಿಂದ ನಾಚಿಕೆಯನ್ನು ಹೊಂದಿದನು.
ತದಾ ವಧೂಃ ಸ್ಥಿತಾ ಸಾಧ್ವೀ ಬ್ರಾಹ್ಮಣಪ್ರಿಯಕಾಮ್ಯಯಾ |
ಸಕ್ತೂನಾದಾಯ ಸಂಹೃಷ್ಟಾ ಗುರುಂ ತಂ ವಾಕ್ಯಮಬ್ರವೀತ್ ॥46॥
ಬ್ರಾಹ್ಮಣೋತ್ತಮರೇ, ಹಿಂದೆಯೇ ಹೇಳಿದಂತೆ ಉಂಛಬ್ರಾಹ್ಮಣಿಗೆ ಸದ್ಗುಣಶೀಲ ಸಂಪನ್ನಳಾದ ಸೊಸೆಯೊಬ್ಬಳು ಇದ್ದಳು. ಬ್ರಾಹ್ಮಣನಿಗೆ ಹಿತವನ್ನುಂಟು ಮಾಡಬೇಕೆಂಬ ಆಸೆಯಿಂದ ತನ್ನ ಪಾಲಿಗೆ ಬಂದಿರುವ ಹಿಟ್ಟಿನ ಉಂಡೆಯನ್ನು ಮಾವನ ಮುಂದಿಟ್ಟು ಹೀಗೆ ಹೇಳಿದಳು.
ವಧೂಃ
ಸಂತಾನಾತ್ ತವ ಸಂತಾನಂ ಮಮಾಪಿ ಪ್ರಭವಿಷ್ಯತಿ |
ಸಕ್ತೂನಿಮಾನತಿಥಯೇ ಗೃಹೀತ್ವಾ ತ್ವಂ ಪ್ರಯಚ್ಛ ಮೇ ॥47॥
ಸೊಸೆ ಪೂಜ್ಯರೇ, ನಿಮ್ಮ ಸಂತಾನವೆನಿಸಿದ ಮಗನಿಂದಲೇ ನನಗೆ ಸಂತಾನ ಆಗುತ್ತದೆ. ನನ್ನ ವಿಷಯದಲ್ಲಿ ನೀವು ಪೂಜ್ಯರಾಗಿರುತ್ತೀರಿ. ಆದ್ದರಿಂದ ಈ ಹಿಟ್ಟಿನ ಉಂಡೆಗಳನ್ನು ಅತಿಥಿಗೆ ನೀವು ದಾನ ಮಾಡಿರಿ.
ತವ ಪ್ರಸವನಿರ್ವೃತ್ತಾ ಮಮ ಲೋಕಾಃ ಕಿಲಾಕ್ಷಯಾಃ |

ಪೌತ್ರೇಣ ತಾನವಾಪ್ನೋತಿ ಯತ್ರ ಗತ್ವಾ ನ ಶೋಚತಿ ॥48॥
ನಿಮ್ಮ ಕುಲಕ್ಕೆ ಯೋಗ್ಯವಾದ ಸಂತಾನವನ್ನು ನೀಡಿದ ಬಳಿಕ ನನಗೆ ಅಕ್ಷಯವಾದ ಲೋಕಗಳು ಸಿದ್ಧವಾಗುತ್ತವೆ. ಅಂತಹ ಶುಭಲೋಕಗಳನ್ನು ಮೊಮ್ಮಗನ ಮೂಲಕ ಪಡೆದುಕೊಳ್ಳಬಹುದು. ಪುಣ್ಯಲೋಕಗಳಿಗೆ ಹೋದ ಬಳಿಕ ದುಃಖದ ಪ್ರಸಂಗವು ಒದಗುವುದಿಲ್ಲ.
ಧರ್ಮಂ ಯಾತಿ ತಥಾ ತ್ರೇತಾ ವಹ್ನಿಸ್ತ್ರೇತಾ ತಥೈವ ಚ |
ತಥೈವ ಪುತ್ರಪೌತ್ರಾಣಾಂ ಸ್ವರ್ಗೇ ತ್ರೇತಾಃ ಕಿಲಾಕ್ಷಯಾಃ ॥49॥
ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳಂತೆ ತಂದೆ, ತಾತ, ಮುತ್ತಾತಂದಿರು ಇರುತ್ತಾರೆ.
ಪುತ್ರ-ಪೌತ್ರ-ಪ್ರಪೌತ್ರರ ಮೂಲಕ ಈ ಮೂವರು ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾರೆ.
ಪಿತೄಣಾಂ ತಾರಣಾತ್ ತಸ್ಮಾತ್ ಪುತ್ರ ಇತ್ಯನುಶುಶ್ರುಮಃ |
ಪುತ್ರಪೌತ್ರೈಶ್ಚ ನಿಯತಃ ಸಾಧುಲೋಕಾನುಪಾಶ್ನುತೇ ॥50॥
ಪುತ್ರನು ತಂದೆಯನ್ನು ಪಿತೃಋಣದಿಂದ ಮುಕ್ತನನ್ನಾಗಿಸುತ್ತಾನೆ ಎಂಬುದನ್ನು ನಾವು ಕೇಳಿದ್ದೇವೆ. ಪುತ್ರ-ಪೌತ್ರರ ಮೂಲಕ ನಿಶ್ಚಿತವಾದ ಲೋಕಗಳನ್ನು ಪಡೆದು ಸುಖವನ್ನು ಅನುಭವಿಸುತ್ತಾನೆ.
ಶ್ವಶುರಃ
ವಾತಾತಪವಿಶೀರ್ಣಾಂಗೀಂ ತ್ವಾಂ ವಿಶೀರ್ಣಾಂ ನಿರೀಕ್ಷ್ಯ ವೈ |
ಕರ್ಶಿತಾಂ ಸುವ್ರತಾಚಾರ್ಯೈಃ ಕ್ಷುಧಾವಿಹ್ವಲಚೇತಸಮ್ ॥51॥
ಕಥಂ ಸಕ್ತೂನ್ ಗ್ರಹೀಷ್ಯಾಮಿ ಭೂತ್ವಾ ಧರ್ಮೋಪಘಾತಕಃ |
ಕಲ್ಯಾಣವೃತ್ತೇ ಕಲ್ಯಾಣಿ ನೈವಂ ತ್ವಂ ವಕ್ತುಮರ್ಹಸಿ ॥52॥
ಮಾವ ಉತ್ತಮ ಚಾರಿತ್ರ್ಯಸಂಪನ್ನಳೇ, ನಿನ್ನ ಶರೀರವೆಲ್ಲವೂ ಗಾಳಿ, ಬಿಸಿಲುಗಳ ಹೊಡೆತಕ್ಕೆ ಸಿಲುಕಿ ಜರ್ಝರಿತವಾಗಿದೆ. ಕಾಂತಿಯಿಂದ ಹೀನಳಾಗಿರುವ, ಕೃಶಕಾಯಳಾಗಿರುವ, ಹಸಿವೆಯಿಂದ ದುಃಖಿತಳಾಗಿರುವ ನಿನ್ನನ್ನು ನೋಡಿಯೂ ಕರುಣೆಯಿಲ್ಲದೆ ನಿನ್ನ ಕೈಯಿಂದ ಆ ಹುರಿದ ಹಿಟ್ಟಿನ ಉಂಡೆಗಳನ್ನು ಹೇಗೆ ಸ್ವೀಕರಿಸಲಿ? ಮಂಗಳವಾದ ವ್ಯವಹಾರವುಳ್ಳ ಕಲ್ಯಾಣಿಯೇ, ಈ ಹಿಟ್ಟುಗಳನ್ನು ನೀನು ಕೊಡುತ್ತೇನೆಂದು ಹೇಳುವುದು ನನಗೆ ಉಚಿತವೆನಿಸುವುದಿಲ್ಲ.
ಷಷ್ಠೇ ಕಾಲೇ ವ್ರತವತೀಂ ಶೀಲಶೌಚತಪೋನ್ವಿತಾಮ್ |
ಕೃಚ್ಛ್ರವೃತ್ತಿಂ ನಿರಾಹಾರಾಂ ದ್ರಕ್ಷ್ಯಾಮಿ ತ್ವಾಂ ಕಥಂ ನ್ವಹಮ್ ॥53॥
ನೀನು ಪ್ರತಿದಿವಸವೂ ಶೌಚ, ಸದಾಚಾರ, ತಪಸ್ಸುಗಳಲ್ಲಿ ಆಸಕ್ತಳಾಗಿದ್ದು, ಆರನೆಯ ಕಾಲದಲ್ಲಿ ಊಟ ಮಾಡುವ ವ್ರತವನ್ನು ಸ್ವೀಕರಿಸಿರುತ್ತಿ. ಇಂತಹ ಕಷ್ಟದ ಜೀವಿಕೆಯನ್ನು ನಡೆಸುತ್ತಿರುವ ನಿನ್ನ ಬಳಿ ಆ ಹಿಟ್ಟನ್ನು ಸ್ವೀಕರಿಸಿ ನಿನ್ನ ಉಪವಾಸವನ್ನು ನಾನು ಹೇಗೆ ನೋಡಲಿ?
ಬಾಲಾ ಕ್ಷುಧಾರ್ತಾ ನಾರೀ ಚ ರಕ್ಷ್ಯಾ ತ್ವಂ ಸತತಂ ಮಯಾ |
ಉಪವಾಸಪರಿಶ್ರಾಂತಾ ತ್ವಂ ಹಿ ಬಾಂಧವನಂದಿನೀ ॥54॥
ಬಾಲಕಿಯಾಗಿರುವ, ಹಸಿವೆಯಿಂದ ಪೀಡಿತಳಾಗಿರುವ, ಅಬಲೆಯಾಗಿರುವ, ಉಪವಾಸದಿಂದ ಈಗಾಗಲೇ ಬಳಲಿರುವ, ಬಂಧುಪ್ರೀತಿಗೆ ಪಾತ್ರಳಾಗಿರುವ ನಿನ್ನನ್ನು ಎಲ್ಲ ಪ್ರಕಾರದಿಂದಲೂ ರಕ್ಷಿಸುವುದು ನಮ್ಮ ಕರ್ತವ್ಯವಾಗಿದೆಯಷ್ಟೆ!
ಸ್ನುಷಾ
ಗುರೋರ್ಮಮ ಗುರುಸ್ತ್ವಂ ಹಿ ಯತೋ ದೈವತದೈವತಮ್ |
ದೇವಾತಿದೇವಸ್ತಸ್ಮಾತ್ ತ್ವಂ ಸಕ್ತೂನಾದತ್ಸ್ವ ಮೇ ವಿಭೋ ॥55॥
ಸೊಸೆ ಪೂಜ್ಯರೇ, ನೀವೇ ನನ್ನ ಗುರುವು. ನೀವೇ ನನ್ನ ಪತಿದೇವನಿಗೂ ದೇವತೆಯಾಗಿರುವಿರಿ. ಆದ್ದರಿಂದ ಅತಿಥಿ-ಅಭ್ಯಾಗತರಲ್ಲಿ ಆದರವುಳ್ಳ ನೀವು ಈ ಹಿಟ್ಟಿನ ಉಂಡೆಗಳನ್ನು ಅತಿಥಿಯ ಹಸಿವೆಯನ್ನು ನೀಗಿಸುವುದಕ್ಕಾಗಿ ಸ್ವೀಕರಿಸಿರಿ.
ದೇಹಃ ಪ್ರಾಣಾಶ್ಚ ಧರ್ಮಶ್ಚ ಶುಶ್ರೂಷಾರ್ಥಮಿದಂ ಗುರೋಃ |
ತವ ವಿಪ್ರ ಪ್ರಸಾದೇನ ಲೋಕಾನ್ ಪ್ರಾಪ್ಸ್ಯಾಮ್ಯಭೀಪ್ಸಿತಾನ್ ॥56॥
ಈ ನನ್ನ ಶರೀರ, ಪ್ರಾಣ, ಧರ್ಮ ಎಲ್ಲವೂ ನಿಮ್ಮ ಸೇವೆಗಾಗಿಯೇ ಮೀಸಲಾಗಿದೆ. ವಿಪ್ರಶ್ರೇಷ್ಠರೇ, ನಿಮ್ಮ ಅನುಗ್ರಹದಿಂದಲೇ ನಾನು ಬಯಸಿದ ಲೋಕಗಳನ್ನು ಮುಂದೆ ಪಡೆಯುತ್ತೇನೆ.
ಅವೇಕ್ಷ್ಯಾ ಹೀತಿ ಕೃತ್ವಾ ತ್ವಂ ದೃಢಭಕ್ತೇತಿ ಮಾಂ ದ್ವಿಜ |
ಚಿಂತ್ಯಾ ಮಮೇಯಮಿತಿ ವಾ ಸಕ್ತೂನಾದಾತುಮರ್ಹಸಿ ॥57॥
`ಸೊಸೆಯನ್ನು ಚೆನ್ನಾಗಿ ನೋಡಿಕೊಳ್ಳಬೇಕು', `ಈಕೆಯು ನನ್ನಲ್ಲಿ ದೃಢವಾದ ಭಕ್ತಿಯುಳ್ಳವಳಾಗಿದ್ದಾಳೆ', `ಇವಳ ಮಾತುಗಳನ್ನು ನಾನು ಆಲೋಚಿಸಬೇಕು' ಈ ರೀತಿಯಾದ ಪ್ರಕಾರಗಳಿಂದ ನಿಮ್ಮ ಮನಸ್ಸು ಕೂಡಿದ್ದರೂ ಈ ಹಿಟ್ಟಿನ ಉಂಡೆಗಳನ್ನು ಸ್ವೀಕರಿಸಲು ನೀವು ಅರ್ಹರಾಗಿರುವಿರಿ.
ಶ್ವಶುರಃ
ಅನೇನ ನಿತ್ಯಂ ಸಾಧ್ವಿ ತ್ವಂ ಶೀಲವೃತ್ತೇನ ಶೋಭಸೇ |
ಯತ್ ತ್ವಂ ಧರ್ಮಪಥೋಪೇತಾ ಗುರುವೃತ್ತಿಮವೇಕ್ಷಸೇ ॥58॥
ತಸ್ಮಾತ್ ಸಕ್ತೂನ್ ಗ್ರಹೀಷ್ಯಾಮಿ ವಧೂರ್ನಾರ್ಹಸಿ ವಂಚನಾಮ್ |
ಗಣಯಿತ್ವಾ ಮಹಾಭಾಗೇ ತ್ವಂ ಹಿ ಧರ್ಮಭೃತಾಂ ವರೇ ॥59॥
ಮಾವ ಮಗಳೇ, ಅತಿಥಿಸತ್ಕಾರವೆಂಬ ಧರ್ಮದ ಪರಿಪಾಲನೆಗಾಗಿ ನಿನ್ನ ಪ್ರಾಣರಕ್ಷಣೆಗೆ ಆಧಾರವಾದ ಹಿಟ್ಟನ್ನು ಕೊಡಲು

ಸಿದ್ಧಳಾಗಿರುವಿ. ಆದ್ದರಿಂದ ನಿನ್ನ ಸೌಶೀಲ್ಯ, ಸದಾಚಾರದಿಂದ ಸಾಧ್ವಿಶಿರೋಮಣಿ ಎನಿಸಿರುವಿ. ಧರ್ಮದ ಮಾರ್ಗದಲ್ಲಿಯೇ ಸಂಚರಿಸುತ್ತಿರುವ ನೀನು ಗುರುಜನರ ಸೇವೆಯಲ್ಲಿ ಆಸಕ್ತಳಾಗಿರುವಿ. ಆದ್ದರಿಂದ ಅತಿಥಿಸತ್ಕಾರದಿಂದ ಲಭಿಸುವ ಪುಣ್ಯವು ನಿನಗೆ ತಪ್ಪಬಾರದು. ಧರ್ಮಾತ್ಮರಲ್ಲಿ ಉತ್ತಮಳೇ, ಪುಣ್ಯಾತ್ಮರಲ್ಲಿ ಒಬ್ಬಳಾಗಿರುವ ನಿನ್ನಿಂದ ಆ ಹಿಟ್ಟಿನ ಉಂಡೆಗಳನ್ನು ಅತಿಥಿಗೋಸ್ಕರವಾಗಿ ಸ್ವೀಕರಿಸುತ್ತೇನೆ.
ವೈಶಂಪಾಯನಃ
ಇತ್ಯುಕತ್ತ್ವ ತಾನುಪಾದಾಯ ಸಕ್ತೂನ್ ಪ್ರಾದಾದ್ ದ್ವಿಜಾತಯೇ |
ತತಸ್ತುಷ್ಟೋಽಭವದ್ ವಿಪ್ರಸ್ತಸ್ಯ ಸಾಧೋರ್ಮಹಾತ್ಮನಃ ॥60॥
ವೈಶಂಪಾಯನ ಬ್ರಾಹ್ಮಣರೇ, ಹೀಗೆ ಉಂಛವೃತ್ತಿಯ ಬ್ರಾಹ್ಮಣನು ಸೊಸೆಯಿಂದ ಹಿಟ್ಟಿನ ಉಂಡೆಗಳನ್ನು ಸ್ವೀಕರಿಸಿ ಅತಿಥಿಗೆ ಭುಂಜಿಸಲು ಕೊಟ್ಟನು. ಅದನ್ನು ಭುಂಜಿಸಿದ ಬಳಿಕ ಮಹಾತ್ಮನಾದ ಬ್ರಾಹ್ಮಣನ ವಿಷಯದಲ್ಲಿ ಅತಿಥಿಯು ಸಂತುಷ್ಟನಾದನು.
ಪ್ರೀತಾತ್ಮಾ ಸ ತು ತಂ ವಾಕ್ಯಮಿದಮಾಹ ದ್ವಿಜರ್ಷಭಮ್ |
ವಾಗ್ಮೀ ತದಾ ದ್ವಿಜಶ್ರೇಷ್ಠೋ ಧರ್ಮಃ ಪುರುಷವಿಗ್ರಹಃ ॥61॥
ಸಂತುಷ್ಟನಾದ ಆ ದ್ವಿಜವರ್ಯನು ವಾಗ್ಮಿಯಾಗಿದ್ದನು, ಬ್ರಾಹ್ಮಣಶ್ರೇಷ್ಠನಾಗಿದ್ದನು. ಪುರುಷವೇಷವನ್ನು ಧರಿಸಿದ ಧರ್ಮಸ್ವರೂಪಿಯಾಗಿದ್ದನು. ಅಂತಹ ಪ್ರೀತನಾದ ಅತಿಥಿಯು ಬ್ರಾಹ್ಮಣನ್ನು ಉದ್ದೇಶಿಸಿ ಹೀಗೆ ಹೇಳಿದನು.
ಬ್ರಾಹ್ಮಣಃ
ಅನೇನ ಸಕ್ತುದಾನೇನ ನ್ಯಾಯೋಪೇತೇನ ತತ್ತ್ವತಃ |
ಯಥಾಶಕ್ತಿ ವಿಮುಕ್ತೇನ ಪ್ರೀತೋಽಸ್ಮಿ ತವ ಸತ್ತಮ ॥62॥
ಬ್ರಾಹ್ಮಣ ದ್ವಿಜಶ್ರೇಷ್ಠನೇ, ನ್ಯಾಯವಾದ ರೀತಿಯಿಂದ ಗಳಿಸಿದ ಹಿಟ್ಟಿನ ಉಂಡೆಗಳನ್ನು ಯಥಾರ್ಥವಾಗಿ ಯಥಾಶಕ್ತಿ ನನ್ನ ಪಾಲಿಗೆ ನೀಡಿರುತ್ತಿ. ಪೂಜ್ಯನೇ, ಇದರಿಂದ ನಾನು ಸಂಪ್ರೀತನಾಗಿರುತ್ತೇನೆ.
ಅಹೋ ದಾನಂ ವಿಘುಷ್ಟಂ ತೇ ಸ್ವರ್ಗೇ ಸ್ವರ್ಗನಿವಾಸಿಭಿಃ |
ಗಗನಾತ್ ಪುಷ್ಪವರ್ಷಂ ಚ ಪಶ್ಯ ತ್ವಂ ಪತಿತಂ ಭುವಿ ॥63॥
ಸ್ವರ್ಗವಾಸಿಗಳಾದ ದೇವತೆಗಳೂ ಕೂಡ ನೀನು ಮಾಡಿರುವ ಈ ಶುದ್ಧವಾದ ದಾನವನ್ನು ಮಹತ್ವಪೂರ್ಣವಾಗಿದೆ ಎಂದೇ ಹೇಳುತ್ತಾರೆ. ಬ್ರಾಹ್ಮಣನೇ ಅತ್ತ ನೋಡು. ಆಕಾಶದಿಂದ ಭೂಮಿಯಲ್ಲಿ ಪುಷ್ಪವೃಷ್ಟಿಯು ಆಗುತ್ತಿದೆ.
ಸುರಾ ದೇವರ್ಷಿಗಂಧರ್ವಾ ಯೇ ಚ ದೇವಪುರಃಸರಾಃ |
ಸ್ತುವಂತೋ ದೇವದೂತಾಶ್ಚ ಸಿದ್ಧಾಶ್ಚಾಪಿ ಸುವಿಸ್ಮಿತಾಃ ॥64॥
ದೇವತೆಗಳು ಋಷಿಗಳು, ಗಂಧರ್ವರು ಎಲ್ಲರೂ ಇಂದ್ರನನ್ನು ಮುಂದಿಟ್ಟುಕೊಂಡು ನಿನ್ನ ಔದಾರ್ಯವನ್ನು ಆಶ್ಚರ್ಯಚಕಿತರಾಗಿ ಸಿದ್ದರು, ದೇವದೂತರಿಂದ ಸಹಿತರಾಗಿ ಪ್ರಶಂಸಿಸುತ್ತಿದ್ದಾರೆ.
ಬ್ರಹ್ಮರ್ಷಯೋ ವಿಮಾನಸ್ಥಾ ಬ್ರಹ್ಮಲೋಕಗತಾಶ್ಚ ಯೇ |
ಕಾಕ್ಷಂತೇ ದರ್ಶನಂ ತ್ವದ್ಯ ದಿವಂ ಗಚ್ಛ ದ್ವಿಜರ್ಷಭ ॥65॥
ಬ್ರಹ್ಮಲೋಕದಲ್ಲಿ ಸಂಚರಿಸುವ ಬ್ರಹ್ಮರ್ಷಿಗಳೂ ವಿಮಾನವನ್ನು ಏರಿಕೊಂಡು ನಿನ್ನ ದರ್ಶನವನ್ನು ಬಯಸುತ್ತಿದ್ದಾರೆ. ಬ್ರಾಹ್ಮಣಶ್ರೇಷ್ಠನೇ, ಆ ಪುಣ್ಯದಿಂದ ಈಗಲೇ ಸ್ವರ್ಗಲೋಕಕ್ಕೆ ನೀನು ಹೋಗು.
ಪಿತೃಲೋಕಗತಾಃ ಸರ್ವೇ ತಾರಿತಾಃ ಪಿತರಸ್ತ್ವಯಾ |
ಅನಾಗತಾಶ್ಚ ಬಹವಃ ಸುಬಹೂನಿ ಯುಗಾನಿ ಚ ॥66॥
ಈ ಪುಣ್ಯದಿಂದ ಪಿತೃಲೋಕಕ್ಕೆ ಹೋಗಿರುವ ನೀನು ನಿನ್ನ ಪಿತೃಗಳನ್ನು ಉದ್ಧರಿಸಿರುತ್ತಿ. ಮುಂದೆ ಅನೇಕ ಯುಗಗಳ ತನಕ ನಿನ್ನ ವಂಶದಲ್ಲಿ ಉತ್ಪನ್ನರಾಗುವವರೆಲ್ಲರೂ ನಿನ್ನ ಪ್ರಭಾವದಿಂದ ಉದ್ಧಾರ ಹೊಂದುತ್ತಾರೆ.
ಬ್ರಹ್ಮಚರ್ಯೇಣ ಯಜ್ಞೇನ ದಾನೇನ ತಪಸಾಽಥವಾ |
ಅಗಹ್ವರೇಣ ಧರ್ಮೇಣ ತಸ್ಮಾದ್ ಗಚ್ಛ ದಿವಂ ದ್ವಿಜ ॥67॥
ಬ್ರಾಹ್ಮಣನೇ, ದಾನದಿಂದಲೂ, ಬ್ರಹ್ಮಚರ್ಯದಿಂದಲೂ, ಯಜ್ಞದಿಂದಲೂ ಅಥವಾ ತಪಸ್ಸಿನಿಂದಲೂ, ನಿಂದಿತವಲ್ಲದ ಧರ್ಮದಿಂದಲೂ ನೀನು ಸ್ವರ್ಗಲೋಕಕ್ಕೆ ಹೋಗಲು ಯೋಗ್ಯನಾಗಿರುತ್ತಿ.
ಶ್ರದ್ಧಯಾ ಪರಯಾ ಯತ್ ತ್ವಂ ತಪಶ್ಚರಸಿ ಸುವ್ರತ |
ತಸ್ಮಾದ್ ದೇವಾಸ್ತವಾನೇನ ಪ್ರೀತಾ ದ್ವಿಜವರೋತ್ತಮ ॥68॥
ಉತ್ತಮವ್ರತನಿಷ್ಠನಾದ ಬ್ರಾಹ್ಮಣನೇ, ನೀನು ಶ್ರದ್ಧೆಯಿಂದ ತಪಸ್ಸನ್ನು ಗೈದಿರುವಿ. ಆದ್ದರಿಂದ ಶ್ರದ್ಧಾಪೂರ್ಣವಾದ ನಿನ್ನ ದಾನದಿಂದ ದೇವತೆಗಳು ಪ್ರೀತರಾಗಿದ್ದಾರೆ.
ಸರ್ವಸ್ವಮೇತದ್ ಯಸ್ಮಾತ್ ತೇ ತ್ಯಕ್ತಂ ಶುದ್ಧೇನ ಚೇತಸಾ |
ಕೃಚ್ಛ್ರಕಾಲೇ ತತಃ ಸ್ವರ್ಗೋ ಜಿತೋಽಯಂ ತವ ಕರ್ಮಣಾ ॥69॥
ಇಂತಹ ಕಷ್ಟದ ಸಮಯದಲ್ಲಿಯೂ ನಿನ್ನ ಸರ್ವಸ್ವವನ್ನು ಶುದ್ಧವಾದ ಮನಸ್ಸಿನಿಂದಲೇ ದಾನ ಮಾಡಿರುತ್ತಿ. ಈ ಪುಣ್ಯದ ಪ್ರಭಾವದಿಂದ ಸ್ವರ್ಗಲೋಕವು ನಿನ್ನಿಂದ ಜಿತವಾಗಿದೆ.
ಕ್ಷುಧಾ ನಿರ್ಣುದತಿ ಪ್ರಜ್ಞಾಂ ಧರ್ಮ್ಯಾಂ ಬುದ್ಧಿಂ ವ್ಯಪೋಹತಿ |
ಕ್ಷುಧಾಪರಿಗತಜ್ಞಾನೋ ಧೃತಿಂ ತ್ಯಜತಿ ಚೈವ ಹಿ ॥70॥
ಹಸಿವು ಪ್ರಜ್ಞೆಯನ್ನು ಕೊಲ್ಲುತ್ತದೆ, ಧರ್ಮಬುದ್ಧಿಯನ್ನು ನಾಶಮಾಡುತ್ತದೆ. ಹಸಿವೆಯಿಂದ ಜ್ಞಾನಹೀನನಾದ ಮನುಷ್ಯನು ಧೈರ್ಯವನ್ನೇ ಕಳೆದುಕೊಳ್ಳುತ್ತಾನೆ.

ಬುಭುಕ್ಷಾಂ ಜಯತೇ ಯಸ್ತು ಸ ಸ್ವರ್ಗಂ ಜಯತೇ ಧ್ರುವಮ್ |
ಯದಾ ದಾನರುಚೇರ್ಭಾವಸ್ತದಾ ಧರ್ಮೋ ನು ಸಿದ್ಧ್ಯತಿ ॥71॥
ಯಾವನು ಹಸಿವೆಯನ್ನು ಗೆಲ್ಲುತ್ತಾನೋ ಅವನು ಸ್ವರ್ಗವನ್ನೇ ಗೆದ್ದಂತೆ. ಹಸಿವೆಯಲ್ಲಿಯೂ ದಾನ ಮಾಡುವ ಬುದ್ಧಿಯುಳ್ಳವನಿಗೆ ಧರ್ಮವು ಸಿದ್ಧಿಸುತ್ತದೆ.
ಅನವೇಕ್ಷ್ಯ ಸುತಸ್ನೇಹಂ ಕಲತ್ರಸ್ನೇಹಮೇವ ಚ |
ಧರ್ಮಮೇವ ಗುರುಂ ಜ್ಞಾತ್ವಾ ತೃಷ್ಣಾ ನ ಗಣಿತಾ ತ್ವಯಾ ॥72॥
ನೀನು ನಿನ್ನ ಮಗನ ಸ್ನೇಹವನ್ನು, ಹೆಂಡತಿಯ ಸ್ನೇಹವನ್ನು, ಸೊಸೆಯ ಸ್ನೇಹವನ್ನು ಪರಿಗಣಿಸದೆ ಧರ್ಮವೇ ಗುರುವೆಂದು ನಂಬಿ ಹಸಿವೆ-ಬಾಯಾರಿಕೆಗಳನ್ನು ಗಣನೆಗೆ ತಂದುಕೊಳ್ಳದೆ ಧರ್ಮದಿಂದ ಮೆರೆದಿರುವಿ.
ದ್ರವ್ಯಾಗಮೋ ನೃಣಾಂ ಸೂಕ್ಷ್ಮಃ ಪಾತ್ರೇ ದಾನಂ ತತಃ ಪರಮ್ |
ಕಾಲಃ ಪರತರೋ ದಾನಾತ್ ಶ್ರದ್ಧಾ ಚಾಪಿ ತತಃ ಪರಾ ॥73॥
ಮನುಷ್ಯನಿಗೆ ಹಣವನ್ನು ಗಳಿಸುವ ಉಪಾಯವು ಅತ್ಯಂತ ಸೂಕ್ಷ್ಮವಾದುದು. ಪ್ರಾಮಾಣಿಕವಾಗಿ ಗಳಿಸಿದ ದಾನವನ್ನು ಸತ್ಪಾತ್ರರಿಗೆ ಮಾಡಬೇಕೆಂಬುದು ಅತ್ಯಂತ ಸೂಕ್ಷ್ಮವಾದುದು. ಪ್ರಾಮಾಣಿಕ ಧನಕ್ಕಿಂತ, ಪ್ರಾಮಾಣಿಕ ವ್ಯಕ್ತಿಗೆ ದಾನ ಶ್ರೇಷ್ಠ. ಅದಕ್ಕಿಂತಲೂ ಕಾಲವನ್ನರಿತು ದಾನವನ್ನು ಮಾಡುವುದು, ಅದಕ್ಕಿಂತಲೂ ಶ್ರದ್ಧೆಯಿಂದ ಮಾಡುವ ದಾನವೇ ಶ್ರೇಷ್ಠವೆಂಬುದು ಬಲ್ಲವರ ಭಾವ.
ಸ್ವರ್ಗದ್ವಾರಂ ಸುಸೂಕ್ಷ್ಮಂ ಹಿ ನರೈರ್ಮೋಹಾನ್ನ ದೃಶ್ಯತೇ |
ಸಂಗಾರ್ಗಲಂ ಲೋಭಕೀಲಂ ರಾಗಗುಪ್ತಂ ದುರಾಸದಮ್ ॥74॥
ಸ್ವರ್ಗದ ದ್ವಾರವು ಅತ್ಯಂತ ಸೂಕ್ಷ್ಮವಾದುದು. ಮೋಹದಿಂದ ಕೂಡಿರುವ ಮನುಷ್ಯರಿಂದ ಈ ಸ್ವರ್ಗದ ದ್ವಾರವು ನೋಡಲಾಗದು. ಸ್ವರ್ಗದ ಬಾಗಿಲಿಗೆ ಲೋಭವೆಂಬ ಬೀಜವು ತಡೆಯಾಗಿದೆ. ಅಂತಹ ಲೋಭದಿಂದ ಸ್ವರ್ಗವನ್ನು ಪ್ರವೇಶಿಸುವುದು ಸಾಧ್ಯವಾಗುವುದಿಲ್ಲ.

ತಂ ತು ಪಶ್ಯಂತಿ ಪುರುಷಾ ಜಿತಕ್ರೋಧಾ ಜಿತೇಂದ್ರಿಯಾಃ |
ಬ್ರಾಹ್ಮಣಾಸ್ತಪಸಾ ಯುಕ್ತಾ ಯಥಾಶ್ರದ್ಧಾಪ್ರದಾಯಿನಃ ॥75॥
ಕೋಪವನ್ನು ಜಯಿಸಿದ, ಜಿತೇಂದ್ರಿಯರಾದ, ತಪೋನಿಷ್ಠರಾದ, ದಾನಾಸಕ್ತರಾದ ಬ್ರಾಹ್ಮಣರು ಲೋಭ, ಮೋಹಗಳನ್ನು ತ್ಯಜಿಸಿ ಸ್ವರ್ಗವನ್ನು ಹೊಂದುತ್ತಾರೆ.
ಸಹಸ್ರಶಕ್ತಿಶ್ಚ ಶತಂ ಶತಶಕ್ತಿರ್ದಶಾಪಿ ಚ |
ದದ್ಯಾದಪಶ್ಚ ಯಃ ಶಕ್ತ್ಯಾ ಸರ್ವೇ ತುಲ್ಯಫಲಾಃ ಸ್ಮೃತಾಃ ॥76॥
ದಾನ ಮಾಡುವ ವ್ಯಕ್ತಿಗೆ ಸಾವಿರ ವಸ್ತುಗಳನ್ನು ದಾನ ಮಾಡಲು ಸಾಮರ್ಥ್ಯವಿದ್ದಾಗ ಶ್ರದ್ಧೆಯಿಂದ ನೂರುವಸ್ತುಗಳನ್ನಾದರೂ ದಾನ ಮಾಡಬೇಕು. ಇಷ್ಟು ಮಾಡಿದಾಗಲೂ ಸಾವಿರ ವಸ್ತುಗಳನ್ನು ದಾನ ಮಾಡಿದ ಪುಣ್ಯವೇ ಲಭಿಸುತ್ತದೆ. ತನ್ನ ಯೋಗ್ಯತೆಗೆ ಅನುಗುಣವಾಗಿ ಪ್ರಾಮಾಣಿಕವಾಗಿ ನೀರನ್ನು ದಾನ ಮಾಡಿದರೂ ಅನ್ನದಾನ ಮಾಡಿದ ಫಲವೇ ಲಭಿಸುತ್ತದೆ.
ರಂತಿದೇವೋಽಪಿ ನೃಪತಿರಾಪಃ ಪ್ರಾದಾದಕಿಂಚನಃ |
ಶುದ್ಧೇನ ಮನಸಾ ವಿಪ್ರ ನಾಕಪೃಷ್ಠಂ ತತೋ ಗತಃ ॥77॥
ವಿಪ್ರಶ್ರೇಷ್ಠನೇ, ರಂತಿದೇವನು ದರಿದ್ರನಾದ ಸಮಯದಲ್ಲಿ ಅತಿಥಿಗೆ ತನ್ನ ಬಳಿ ಇರುವ ನೀರನ್ನು ಶುದ್ಧವಾದ ಮನಸ್ಸಿನಿಂದಲೇ ದಾನ ಮಾಡಿದನು. ಆ ಪುಣ್ಯದಿಂದ ಸ್ವರ್ಗದ ಬೆನ್ನನ್ನೇರಿದನು.
ನ ಧರ್ಮಃ ಪ್ರೀಯತೇ ತಾತ ದಾನೈರ್ದತ್ತೈರ್ಮಹಾಫಲೈಃ |
ನ್ಯಾಯಲಬ್ಧೈರ್ಯಥಾ ಸೂಕ್ಷ್ಮೈಃ ಶ್ರದ್ಧಾಪೂತೈಃ ಸ ತುಷ್ಯತಿ ॥78॥
ನ್ಯಾಯವಲ್ಲದ ರೀತಿಯಲ್ಲಿ ಗಳಿಸಿದ ಹಣದಿಂದ ಮಹಾಫಲವನ್ನು ಕೊಡುವ ದೊಡ್ಡ ದೊಡ್ಡ ದಾನಗಳನ್ನು ಮಾಡುವುದು ಧರ್ಮಕ್ಕೆ ಸಂತೋಷವನ್ನು ನೀಡುವುದಿಲ್ಲ. ಅತಿಸಣ್ಣದೇ ಆಗಿದ್ದರೂ ಶ್ರದ್ಧೆಯಿಂದ ಆ ದಾನವು ಪವಿತ್ರವಾಗಿದ್ದರೆ ಭಗವಂತನು ಅದರಿಂದಲೇ ಸಂತುಷ್ಟನಾಗುತ್ತಾನೆ.
ಗೋಪ್ರದಾನಸಹಸ್ರಾಣಿ ದ್ವಿಜಾತಿಭ್ಯೋ ನೃಗೋ ನೃಪಃ |
ಏಕಂ ದತ್ವಾ ಪರಸ್ವಂ ತು ನರಕಂ ಸಮವಾಪ್ತವಾನ್ ॥79॥
ನೃಗರಾಜನು ಸಾವಿರಾರು ಹಸುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದ್ದನು. ಅವುಗಳಲ್ಲಿ ದಾನ ಮಾಡಿದ ಒಂದು ಹಸುವನ್ನು ಪುನಃ ಸ್ವೀಕರಿಸಿ ನರಕವನ್ನೇ ಹೊಂದಿರುತ್ತಾನೆ.
ಆತ್ಮಮಾಂಸಪ್ರದಾನೇನ ಶಿಬಿರೌಶೀನರೋ ನೃಪಃ |
ಪ್ರಾಪ್ಯ ಪುಣ್ಯಕೃತಾನ್ ಲೋಕಾನ್ ಮೋದತೇ ದಿವಿ ಸುವ್ರತಃ ॥80॥
ಔಶೀನರನ ಮಗನಾದ, ವ್ರತಶೀಲನಾದ ಶಿಬಿಚಕ್ರವರ್ತಿಯು ತನ್ನ ಶರೀರದ ಮಾಂಸವನ್ನೇ ದಾನವನ್ನಾಗಿ ಕೊಟ್ಟು ಪುಣ್ಯಾತ್ಮರು ಹೊಂದುವ ಲೋಕವನ್ನು ಹೊಂದಿ ಇಂದಿಗೂ ಸಂತುಷ್ಟನಾಗಿರುತ್ತಾನೆ.
ವಿಭವೇನ ನೃಣಾಂ ಪುಣ್ಯಂ ಸ್ವಶಕ್ತ್ಯಾ ಸ್ವಾರ್ಜಿತಂ ನೃಣಾಮ್ |
ನ ಯಜ್ಞೈರ್ವಿವಿಧೈರ್ವಿಪ್ರ ಯಥಾ ನ್ಯಾಯೇನ ಸಂಚಿತೈಃ ॥81॥
ವೈಭವೀಕರಿಸುವುದರಿಂದ ಮನುಷ್ಯರು ಪುಣ್ಯವನ್ನು ಹೊಂದುವುದಿಲ್ಲ. ತನ್ನ ಯೋಗ್ಯತೆಗನುಗುಣವಾಗಿ ಪ್ರಾಮಾಣಿಕವಾಗಿ ಗಳಿಸಿದ ಹಣವನ್ನು ದಾನ ಮಾಡುವುದರಿಂದಲೇ ಪುಣ್ಯವನ್ನು ಹೊಂದುತ್ತಾನೆ. ನ್ಯಾಯದಿಂದ ಆರ್ಜಿತವಾದ ದ್ರವ್ಯವನ್ನು ದಾನ ಮಾಡುವುದರಿಂದ ಯಾವ ಫಲವನ್ನು ಹೊಂದುತ್ತಾನೋ ಅಂತಹ ಫಲವನ್ನು ಅನ್ಯಾಯದಿಂದ ಆರ್ಜಿತವಾದ ನೂರಾರು ಯಜ್ಞಗಳನ್ನು ಆಚರಿಸಿಯೂ ಹೊಂದಲಾರ.

ಕ್ರೋಧೋ ದಾನಫಲಂ ಹಂತಿ ಲೋಭಾತ್ ಸ್ವರ್ಗಂ ನ ಗಚ್ಛತಿ |
ನ್ಯಾಯವೃತ್ತಿರ್ಹಿ ತಪಸಾ ದಾನವಿತ್ ಸ್ವರ್ಗಮಶ್ನುತೇ ॥82॥
ದಾನ ಮಾಡುವಾಗ ಕೋಪದಿಂದ ಮಾಡಿದರೆ ದಾನದ ಫಲವು ನಾಶವಾಗುತ್ತದೆ. ಲೋಭದಿಂದ ದಾನ ಮಾಡಿದರೆ ಸ್ವರ್ಗವು ಲಭಿಸುವುದಿಲ್ಲ. ತಪಸ್ಸಿನಿಂದ ಕೂಡಿ ಪ್ರಾಮಾಣಿಕವಾದ ಜೀವನವನ್ನು ಮಾಡುತ್ತಿರುವ ವ್ಯಕ್ತಿಯು ದಾನದ ಮಹಿಮೆಯನ್ನು ಸರಿಯಾಗಿ ತಿಳಿದು ದಾನ ಮಾಡಿದಲ್ಲಿ ಸ್ವರ್ಗವನ್ನು ಸೇರುತ್ತಾನೆ.
ನ ರಾಜಸೂಯೈರ್ಬಹುಭಿರಿಷ್ಟ್ವಾ ವಿಪುಲದಕ್ಷಿಣೈಃ |
ನ ಚಾಶ್ವಮೇಧೈರ್ಬಹುಭಿಃ ಫಲಂ ಸಮಮಿದಂ ತವ ॥83॥
ಬ್ರಾಹ್ಮಣನೇ, ಇಂದು ನೀನು ಮಾಡಿರುವ ಈ ಹುರಿಹಿಟ್ಟಿನ ದಾನದ ಫಲವನ್ನು ಅನೇಕ ರಾಜಸೂಯಯಾಗಗಳನ್ನು ಮಾಡಿ, ಬಹುದಕ್ಷಿಣೆಯನ್ನು ಕೊಟ್ಟು, ಹತ್ತಾರು ಅಶ್ವಮೇಧ ಯಾಗಗಳನ್ನು ಮಾಡಿದರೂ ನಿನ್ನ ದಾನಕ್ಕೆ ಸಮಾನವಾದ ಫಲವನ್ನು ಹೊಂದಲಾಗುವುದಿಲ್ಲ.
ಸಕ್ತುಪ್ರಸ್ಥೇನ ಹಿ ಜಿತೋ ಬ್ರಹ್ಮಲೋಕಸ್ತ್ವಯಾಽನಘ |
ವಿರಜೋ ಬ್ರಹ್ಮಸದನಂ ಗಚ್ಛ ವಿಪ್ರ ಯಥೇಪ್ಸಿತಮ್ ॥84॥
ನಿರ್ದುಷ್ಟನಾದ ಬ್ರಾಹ್ಮಣನೇ, ಈ ಹಿಟ್ಟಿನ ಉಂಡೆಗಳನ್ನು ಕೊಡುವ ಮೂಲಕ ಬ್ರಹ್ಮಲೋಕವನ್ನೇ ನೀನು ಗೆದ್ದಿರುವಿ. ದೋಷಗಳನ್ನು ಇದರ ಮೂಲಕ ಪರಿಹರಿಸಿಕೊಂಡಿರುವ ನೀನು ನಿನಗೆ ಇಷ್ಟವಾದ ಬ್ರಹ್ಮನ ಲೋಕವನ್ನು ಕುರಿತು ಪ್ರಯಾಣ ಬೆಳೆಸು.
ಸರ್ವೇಷಾಂ ವೋ ದ್ವಿಜಶ್ರೇಷ್ಠ ದಿವ್ಯಂ ಯಾನಮುಪಸ್ಥಿತಮ್ |
ಆರೋಹತ ಯಥಾಕಾಮಂ ಧರ್ಮೋಽಸ್ಮಿ ದ್ವಿಜಸತ್ತಮ ॥85॥
ಬ್ರಾಹ್ಮಣಶ್ರೇಷ್ಠನೇ, ನಾನು ಧರ್ಮದೇವತೆಯಾಗಿದ್ದೇನೆ. ನಿಮ್ಮೆಲ್ಲರಿಗೂ ಸ್ವರ್ಗಲೋಕದಿಂದ ವಿಮಾನವು ಬಂದಿರುತ್ತದೆ. ಸಂತುಷ್ಟರಾಗಿ ಈ ವಿಮಾನವನ್ನು ಏರಿರಿ.
ಪಾವಿತೋ ಹಿ ತ್ವಯಾ ದೇಹೋ ಲೋಕೇ ಕೀರ್ತಿಃ ಸ್ಥಿರಾ ಚ ತೇ |
ಸಭಾರ್ಯಃ ಸಹಪುತ್ರಶ್ಚ ಸಸ್ನುಷಶ್ಚ ದಿವಂ ವ್ರಜ ॥86॥
ನಿನ್ನ ಈ ಸತ್ಕರ್ಮಾನುಷ್ಠಾನದಿಂದ ನಿನ್ನ ದೇಹವನ್ನು ಪವಿತ್ರೀಕರಿಸಿಕೊಂಡಿರುವಿ. ಸ್ಥಿರವಾದ ಕೀರ್ತಿಯನ್ನು ಹೊಂದಿರುವಿ. ಈ ಪುಣ್ಯದಿಂದ ನಿನ್ನ ಹೆಂಡತಿ, ಮಗ, ಸೊಸೆಯ ಜೊತೆಗೆ ಸ್ವರ್ಗಲೋಕಕ್ಕೆ ತೆರಳು.
ನಕುಲಃ
ಇತ್ಯುಕ್ತವಾಕ್ಯೋ ಧರ್ಮೇಣ ಯಾನಮಾರುಹ್ಯ ಸ ದ್ವಿಜಃ |
ಸಭಾರ್ಯಃ ಸಸ್ನುಷಶ್ಚಾಪಿ ಸಸುತಶ್ಚ ದಿವಂ ಯಯೌ ॥87॥
ಮುಂಗುಸಿ ಈ ರೀತಿಯಾಗಿ ಧರ್ಮಪುರುಷನು ನುಡಿಯುತ್ತಿರಲು ಬ್ರಾಹ್ಮಣನು ಆ ವಿಮಾನವನ್ನು ಹೆಂಡತಿ, ಸೊಸೆ, ಮಗನ ಜೊತೆ ಏರಿ ಸ್ವರ್ಗಕ್ಕೆ ಹೋದನು.
ತಸ್ಮಿನ್ ವಿಪ್ರೇ ಗತೇ ಸ್ವರ್ಗಂ ಸಪುತ್ರೇ ಸಸ್ನುಷೇ ತದಾ |
ಭಾರ್ಯಾಚತುರ್ಥೇ ಧರ್ಮಜ್ಞೇ ತತೋಽಹಂ ನಿಃಸೃತೋ ಬಿಲಾತ್ ॥
ಆ ಬ್ರಾಹ್ಮಣನು ತನ್ನ ಮಗ, ಹೆಂಡತಿ, ಸೊಸೆಯ ಜೊತೆಗೆ ಸ್ವರ್ಗವನ್ನು ಏರಲು, ನಾನು ಆ ದಾನ ನಡೆದ ಜಾಗದಲ್ಲೇ ಒಂದು ಬಿಲದಲ್ಲಿ ವಾಸ ಮಾಡಿದ್ದೆನು. ಅವರು ಅತ್ತ ತೆರಳಿದ ಮೇಲೆ ಆ ಬಿಲದಿಂದ ಹೊರಬಂದೆನು.
ತತಸ್ತು ಸಕ್ತುಗಂಧೇನ ಕ್ಲೇದೇನ ಸಲಿಲಸ್ಯ ಚ |
ದಿವ್ಯಪುಷ್ಪಾವಮರ್ದಾಚ್ಚ ಸಾಧೋರ್ದಾನಲವೈಶ್ಚ ತೈಃ ॥89॥
ಆ ದಾನ ಮಾಡಿದ ಸ್ಥಳದಲ್ಲಿ ಹರಡಿದ್ದ ಹಿಟ್ಟಿನ ವಾಸನೆಯನ್ನು ಆಘ್ರಾಣಿಸಿದೆ. ದಾನದ ನೀರಿನಲ್ಲಿ ಹೊರಳಾಡಿದೆ. ಅಲ್ಲಿ ಉದುರಿದ ದಿವ್ಯಪುಷ್ಪಗಳ ಮೇಲೆ ಓಡಾಡಿದೆ. ಆ ಉಂಛವೃತ್ತಿ ಬ್ರಾಹ್ಮಣನು ದಾನ ಮಾಡಿದ ಹಿಟ್ಟಿನ ಕಣಗಳ ಸಂಪರ್ಕವು ನನ್ನ ಶರೀರಕ್ಕುಂಟಾಯಿತು.
ವಿಪ್ರಸ್ಯ ತಪಸಾ ತಸ್ಯ ಶಿರೋ ಮೇ ಕಾಂಚನೀಕೃತಮ್ ॥90॥
ಆ ಬ್ರಾಹ್ಮಣನ ತಪಸ್ಸಿನ ಪ್ರಭಾವದಿಂದಲೇ ನನ್ನ ತಲೆಯು ಸುವರ್ಣಮಯ- ವಾಯಿತು.
ತಸ್ಯ ಸತ್ಯಾಭಿಸಂಧಸ್ಯ ಸೂಕ್ಷ್ಮಮದಾನೇನ ಚೈವ ಹ |
ಶರೀರಾರ್ಧಂ ಚ ಮೇ ವಿಪ್ರಾಃ ಶಾತಕುಂಭಮಯಂ ಕೃತಮ್ ॥91॥
ವಿಪ್ರಶ್ರೇಷ್ಠರೇ, ಸತ್ಯನಿಷ್ಠನಾದ ಆ ಉಂಛವೃತ್ತಿ ಬ್ರಾಹ್ಮಣನು ಹಿಟ್ಟನ್ನು ಪ್ರಾಮಾಣಿಕವಾಗಿ ದಾನ ಮಾಡಿದ ಪದಾರ್ಥಗಳಲ್ಲಿ ಸಂಚರಿಸಿದ ಪ್ರಭಾವದಿಂದ ನನ್ನ ಅರ್ಧಶರೀರವೇ ಸುವರ್ಣಮಯವಾಯಿತು.
ಪಶ್ಯತೇದಂ ಸುವಿಪುಲಂ ತಪಸಾ ತಸ್ಯ ಧೀಮತಃ |
ಕಥಮೇವಂವಿಧಂ ಮೇ ಸ್ಯಾತ್ ಅನ್ಯತ್ ಪಾರ್ಶ್ವಮಿತಿ ದ್ವಿಜಾಃ ॥92॥
ಧೀಮಂತನಾದ ಆ ಬ್ರಾಹ್ಮಣನ ತಪಸ್ಸಿನ ಪ್ರಭಾವದಿಂದ ನನ್ನ ಶರೀರವು ಸುವರ್ಣಮಯವಾಗಿರುವುದನ್ನು ನೀವೇ ನೋಡಿರಿ. ಅಂದಿನಿಂದ ನನ್ನ ದೇಹದ ಮತ್ತೊಂದು ಭಾಗವನ್ನೂ ಹೇಗೆ ಸುವರ್ಣಮಯವಾಗಿಸಬೇಕೆಂದು ಚಿಂತಿಸುತ್ತಲೇ ಇದ್ದೇನೆ.
ತಪೋವನಾನಿ ಯಜ್ಞಾಂಶ್ಚ ಹೃಷ್ಟೋಽಭ್ಯೇಮಿ ಪುನಃ ಪುನಃ ॥93॥
ಈ ದೃಷ್ಟಿಯಿಂದ ನಾನು ತಪೋವನಗಳಿಗೂ ಯಜ್ಞನಡೆಯುವ ಸ್ಥಳಗಳಿಗೂ ಪುನಃ ಪುನಃ ಹೋಗುತ್ತಲೇ ಇದ್ದೇನೆ.
ಯಜ್ಞಂ ತ್ವಹಮಿಮಂ ಶ್ರುತ್ವಾ ಕುರುರಾಜಸ್ಯ ಧೀಮತಃ |
ಆಶಯಾ ಪರಯಾ ಪ್ರಾಪ್ತೋ ನ ಚಾಹಂ ಕಾಂಚನಃ ಕೃತಃ ॥94॥

ಧೀಮಂತನಾದ ಕುರುರಾಜನ ಯಜ್ಞವು ನಡೆಯುತ್ತಿರುವುದೆಂದು ತಿಳಿದು ಅತ್ಯಂತ ಆಸೆಯಿಂದ ಇಲ್ಲಿಗೆ ಆಗಮಿಸಿದ್ದೇನೆ. ಆದರೆ ಈ ಯಜ್ಞಮಂಟಪದಲ್ಲಿ ಆಘ್ರಾಣಿಸಿಕೊಂಡು ಓಡಾಡಿದ ನನ್ನ ದೇಹವು ಹಿಂದಿನಂತೆ ಸುವರ್ಣಮಯವಾಗಲಿಲ್ಲ.
ತತೋ ಮಯೋಕ್ತಂ ತತ್ಪುಣ್ಯಂ ಪ್ರಶಸ್ಯ ದ್ವಿಜಸತ್ತಮಾಃ |
ಸಕ್ತುಪ್ರಸ್ಥೇನ ಯಜ್ಞೋಽಯಂ ಸಮ್ಮಿತೋ ನೇತಿ ಸರ್ವಥಾ ॥95॥
ಬ್ರಾಹ್ಮಣರೇ, ಈ ಕಾರಣದಿಂದ ನಾನು ಉಂಛವೃತ್ತಿಯ ಬ್ರಾಹ್ಮಣನ ಒಂದು ಸೇರುಹಿಟ್ಟಿನ ದಾನಕ್ಕೆ ಈ ಯಜ್ಞವು ಸಮಾನವಾಗಿರುವುದಿಲ್ಲ ಎಂದು ಹೇಳಿದೆನು.
ಸಕ್ತುಪ್ರಸ್ಥಲವೈಸ್ತೈರ್ಹಿ ತದಾಽಹಂ ಕಾಂಚನೀಕೃತಃ |
ನ ಹಿ ಯಜ್ಞೋ ಮಹಾನೇಷ ಸದೃಶಸ್ತೈರ್ಮತೋ ಮಮ ॥96॥
ಹಿಟ್ಟಿನ ಕಣಗಳ ಸ್ಪರ್ಶದಿಂದ ನನ್ನ ದೇಹದ ಒಂದು ಭಾಗವು ಸುವರ್ಣಮಯ- ವಾಯಿತು. ಆದರೆ ನಿಮ್ಮ ಯಜ್ಞದಲ್ಲಿ ಹೀಗಾಗಲಿಲ್ಲ. ಆದ್ದರಿಂದ ನಿಮ್ಮ ಯಜ್ಞವು ಆ ಉಂಛವೃತ್ತಿಯ ಬ್ರಾಹ್ಮಣನ ಹಿಟ್ಟಿನ ದಾನಕ್ಕೆ ಸಮಾನವಾದ ಫಲವನ್ನು ಕೊಡಲು ಸಮರ್ಥವಾಗಿಲ್ಲ ಎಂದು ನನ್ನ ಅಭಿಪ್ರಾಯ.
ವೈಶಂಪಾಯನಃ
ಇತ್ಯುಕ್ತ್ವಾ ನಕುಲಃ ಸರ್ವಾನ್ ಯಜ್ಞೇ ದ್ವಿಜವರಾಂಸ್ತದಾ |
ಜಗಾಮಾದರ್ಶನಂ ರಾಜನ್ ತೇ ಚ ವಿಪ್ರಾ ಯಯುರ್ಗೃಹಾನ್ ॥97॥
ವೈಶಂಪಾಯನ ಜನಮೇಜಯನೇ, ಮುಂಗುಸಿಯು ಈ ಕ್ರಮದಲ್ಲಿ ಧರ್ಮರಾಜನ ಯಜ್ಞದಲ್ಲಿ ಪಾತ್ರವಹಿಸಿದ ಬ್ರಾಹ್ಮಣರ ಬಳಿ ಹೇಳಿ ಅಲ್ಲಿಂದ ಮಾಯವಾಯಿತು. ಆ ಬ್ರಾಹ್ಮಣರೆಲ್ಲ ತಮ್ಮ ತಮ್ಮ ಮನೆಗಳಿಗೆ ತೆರಳಿದರು.
ಏತತ್ ತೇ ಸರ್ವಮಾಖ್ಯಾತಂ ಮಯಾ ಪರಪುರಂಜಯ |
ಯದಾಶ್ಚರ್ಯಮಭೂತ್ ತಸ್ಮಿನ್ನಶ್ವಮೇಧೇ ಮಹಾಕ್ರತೌ ॥98॥
ಮಹಾರಾಜನೇ, ಅಶ್ವಮೇಧ ಯಜ್ಞವು ನಡೆಯುತ್ತಿರುವಲ್ಲಿ ನಡೆದ ಆಶ್ಚರ್ಯಕರವಾದ ಘಟನೆಯನ್ನು ನಿನಗೆ ಸಮಗ್ರವಾಗಿ ಹೇಳಿದ್ದೇನೆ. ಈ ಯಜ್ಞದ ಸಂಬಂಧದಲ್ಲಿ ಜರುಗಿದ ಇಂತಹ ಆಶ್ಚರ್ಯಕರ ಘಟನೆಯನ್ನು ಕೇಳಿ ನೀನು ಆಶ್ಚರ್ಯಪಡಬೇಕಾಗಿಲ್ಲ.
ನ ವಿಸ್ಮಯಸ್ತೇ ನೃಪತೇ ಯಜ್ಞೇ ಕಾರ್ಯಃ ಕಥಂಚನ |
ಋಷಿಕೋಟಿಸಹಸ್ರಾಣಿ ತಪೋಭಿರ್ಯೇ ದಿವಂ ಗತಾಃ ॥99॥
ನಕುಲ (ಮುಂಗುಸಿ)ನ ವಾಕ್ಯವನ್ನು ಕೇಳಿಕೊಂಡು ನಿನ್ನನ್ನು ಅದು ಗೇಲಿ ಮಾಡಿತು ಎಂದು ಎಂದಿಗೂ ದುಃಖಿಸಬೇಡ. ನಕುಲನು ಸಾವಿರಾರು ಕೋಟಿ ಮಂದಿ ಋಷಿಗಳು ಯಜ್ಞವನ್ನು ಮಾಡದೆ ತಪಸ್ಸಿನ ಪ್ರಭಾವದಿಂದಲೇ ಸ್ವರ್ಗಕ್ಕೆ ಹೋಯಿತು ಎಂದು ಏನು ಹೇಳಿತೋ ಇಂತಹ ಅಪಹಾಸ್ಯದ ಮಾತನ್ನು ಕೇಳಿಸಿಕೊಂಡು ನೀನು ಆಶ್ಚರ್ಯವನ್ನು ಪಡಬೇಡ. ಯಾರಿಗೆ ಧನವೇ ಇಲ್ಲವೋ ಅವರು ತಪಸ್ಸಿನಿಂದ ಲೋಕವನ್ನು ಹೊಂದುತ್ತಾರೆ. ರಾಜರಾದವರಿಗೆ ಯಜ್ಞವೇ ಶ್ರೇಯಸ್ಕರ. ಆ ಮುಂಗುಸಿಯ ವಂಚನೆಯ ಮಾತುಗಳಿಂದ ನೀನು ಮೋಹಿತನಾಗಬೇಡ.
ವ್ಯಾಖ್ಯಾನ ವಿಶೇಷ ಧರ್ಮರಾಜನು ಮಾಡಿದ ಯಜ್ಞದಲ್ಲಿ ಲಭಿಸಿದ ಪುಣ್ಯದ ಫಲಕ್ಕೆ ಬ್ರಾಹ್ಮಣನು ಮಾಡಿದ ಹಿಟ್ಟಿನ ಉಂಡೆಯ ದಾನವು ಒಂದು ಕಲೆಯನ್ನೂ ಹೊಂದುವುದಿಲ್ಲ. ಯುಧಿಷ್ಠಿರನ ಅಶ್ವಮೇಧ ಯಜ್ಞಕ್ಕೆ ಬ್ರಾಹ್ಮಣನ ದಾನವು ತಿಲಮಾತ್ರವೂ ಸದೃಶವಾಗುವುದಿಲ್ಲ. ಹೀಗೆ ಭಾರತದ ಶ್ಲೋಕಕ್ಕೆ ವ್ಯಾಖ್ಯಾನಿಸಬೇಕು. ಇಲ್ಲವಾದಲ್ಲಿ ಯುಧಿಷ್ಠಿರನ ಅಶ್ವಮೇಧ ಯಜ್ಞವನ್ನು ಮುಂದೆ ವ್ಯಾಸರು ವಿಸ್ತಾರವಾಗಿ ಪ್ರಶಂಸಿರುವುದರ ವಿರೋಧವು ಬರುತ್ತದೆ. ಆದ್ದರಿಂದ ಮುಂಗುಸಿಯು ಧರ್ಮರಾಜನನ್ನು ಮೋಹಗೊಳಿಸಲು ಬಂದ ದೈತ್ಯನೆಂದೇ ತಿಳಿಯಬೇಕು.
ಅದ್ರೋಹಃ ಸರ್ವಭೂತೇಷು ಸಂತೋಷಃ ಶೀಲಮಾರ್ಜವಮ್ |
ತಪೋ ದಮಶ್ಚ ಸತ್ಯಂ ಚ ಪ್ರದಾನಂ ಚೇತಿ ಸಮ್ಮಿತಮ್ ॥100॥
ಯಾವ ಪ್ರಾಣಿಗಾದರೂ ದ್ರೋಹವನ್ನು ಮಾಡಬಾರದು. ಎಲ್ಲರ ವಿಷಯದಲ್ಲಿಯೂ ಸಂತುಷ್ಟರಾಗಿರಬೇಕು. ಸಚ್ಚಾರಿತ್ರ್ಯ, ಸಹನೆ, ತಪಸ್ಸಿನ ಆಚರಣೆ, ಜಿತೇಂದ್ರಿಯತ್ವ, ಸತ್ಯನಿಷ್ಠೆ, ನ್ಯಾಯಾರ್ಜಿತ ಪದಾರ್ಥವನ್ನು ಶ್ರದ್ಧೆಯಿಂದ ದಾನ ಮಾಡುವುದು - ಇವೆಲ್ಲವೂ ಶ್ರೇಷ್ಠವಾದ ಫಲವನ್ನೇ ಕೊಡುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಸಕ್ತುಪ್ರಸ್ಥಯಜ್ಞಪ್ರಶಂಸನಂ ನಾಮ ತ್ರಿನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತೂರನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ನಾಲ್ಕನೆಯ ಅಧ್ಯಾಯ
ಜನಮೇಜಯನು ಮುಂಗುಸಿಯು ಯಜ್ಞವನ್ನು ನಿಂದಿಸಲು ಕಾರಣವೇನೆಂದು ಕೇಳಿದುದು. ವೈಶಂಪಾಯನರು ಸತ್ಯ-ದಾನ-ತಪಸ್ಸಿನಿಂದಲೇ ಸ್ವರ್ಗವು ಲಭಿಸುತ್ತಿರಲು ಪಶುಹಿಂಸಾ ರೂಪವಾದ ಯಜ್ಞವು ಪ್ರಶಸ್ತವಾದುದಲ್ಲ ಎಂದು ಮುಂಗುಸಿಯ ಅಭಿಪ್ರಾಯವನ್ನು ವರ್ಣಿಸಿದುದು.
ಜನಮೇಜಯಃ
ಯಜ್ಞೇ ಸಕ್ತಾ ನೃಪತಯಸ್ತಪಃ ಸಕ್ತಾ ಮಹರ್ಷಯಃ |
ಶಾಂತಿವ್ಯವಸಿತಾ ವಿಪ್ರಾಃ ಶಮೋ ದಮ ಇತಿ ಪ್ರಭೋ ॥1॥
ಜನಮೇಜಯ ವೈಶಂಪಾಯನರೇ, ರಾಜರೆಲ್ಲರೂ ಯಜ್ಞ ಮಾಡುವುದರಲ್ಲಿ ಆಸಕ್ತರಾಗಿರುತ್ತಾರೆ. ಮಹರ್ಷಿಗಳು ತಪಸ್ಸಿನಲ್ಲಿ, ಬ್ರಾಹ್ಮಣರು ಭಗವಂತನಲ್ಲಿ, ಶಮ-ದಮಗಳಲ್ಲಿ ಆಸಕ್ತರಾಗಿರುತ್ತಾರೆ.

ತಸ್ಮಾದ್ ಯಜ್ಞಫಲೈಸ್ತುಲ್ಯಂ ನ ಕಿಂಚಿದಿಹ ವಿದ್ಯತೇ |
ಇತಿ ಮೇ ವರ್ತತೇ ಬುದ್ಧಿಸ್ತಥಾ ಚೈತನ್ನ ಸಂಶಯಃ ॥2॥
ಆದರೆ ಯಜ್ಞಗಳನ್ನು ಮಾಡುವುದರಿಂದ ಲಭಿಸುವ ಫಲವು ಬೇರೆ ಯಾವುದೇ ಕರ್ಮಗಳಿಂದ ಲಭಿಸುವುದಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಇದರಲ್ಲಿ ಯಾವ ಸಂಶಯವೂ ನನಗೆ ಇರುವುದಿಲ್ಲ.
ಯಜ್ಞೈರಿಷ್ಟ್ವಾ ಚ ಬಹವೋ ರಾಜಾನೋ ದ್ವಿಜಸತ್ತಮಾಃ |
ಇಹ ಕೀರ್ತಿಂ ಪರಾಂ ಪ್ರಾಪ್ಯ ಪ್ರೇತ್ಯ ಸ್ವರ್ಗಮಿತೋ ಗತಾಃ ॥3॥
ಅನೇಕ ರಾಜರು, ಬ್ರಾಹ್ಮಣರು ಯಜ್ಞಗಳಿಂದ ದೇವತೆಗಳನ್ನು ಆರಾಧಿಸಿ, ಅವಸಾನವಾದಾಗ ಸತ್ಕೀರ್ತಿಸಂಪನ್ನರಾಗಿ ಸ್ವರ್ಗವನ್ನು ಸೇರಿರುತ್ತಾರೆ.
ದೇವರಾಜಃ ಸಹಸ್ರಾಕ್ಷಃ ಕ್ರತುಭಿರ್ಭೂರಿದಕ್ಷಿಣೈಃ |
ದೇವರಾಜ್ಯಂ ಮಹಾತೇಜಾಃ ಪ್ರಾಪ್ತವಾನಖಿಲಂ ವಿಭುಃ ॥4॥
ಸಹಸ್ರಾಕ್ಷನಾದ ದೇವೇಂದ್ರನು ಅಪಾರವಾದ ದಕ್ಷಿಣೆಗಳಿಂದ ಕೂಡಿರುವ ಯಜ್ಞಗಳನ್ನಾಚರಿಸಿ ಸಮಸ್ತ ದೇವರಾಜ್ಯಕ್ಕೆ ಅಧಿಪತಿಯಾಗಿದ್ದಾನೆ.
ಅತೋ ಯುಧಿಷ್ಠಿರೋ ರಾಜಾ ಭೀಮಾರ್ಜುನಪುರಃಸರಃ |
ಸದೃಶೋ ದೇವರಾಜೇನ ಸಮೃದ್ಧ್ಯಾ ವಿಕ್ರಮೇಣ ಚ ॥5॥
ಆದ್ದರಿಂದಲೇ ಧರ್ಮರಾಜನು ಭೀಮಾರ್ಜುನರನ್ನು ಮುಂದಿಟ್ಟುಕೊಂಡು ಸಮೃದ್ಧಿಯಿಂದ, ಪರಾಕ್ರಮದಿಂದ ದೇವರಾಜನಿಗೆ ಸದೃಶನಾಗಿದ್ದಾನೆ.
ಅಥ ಕಸ್ಮಾತ್ ಸ ನಕುಲೋ ಗರ್ಹಯಾಮಾಸ ತಂ ನೃಪಮ್ |
ಅಶ್ವಮೇಧಂ ಮಹಾಯಜ್ಞಂ ರಾಜ್ಞಸ್ತಸ್ಯ ಮಹಾತ್ಮನಃ ॥6॥
ಹೀಗಿದ್ದರೂ ಆ ಮುಂಗುಸಿಯು ಬಂದು, ಈ ಧರ್ಮರಾಜನನು ನಿಂದಿಸಿದುದು ಏಕೆ? ಮಹಾನುಭಾವನಾದ ಧರ್ಮರಾಜನ ಮಹಾ ಅಶ್ವಮೇಧಯಾಗವನ್ನು ನಿಂದಿಸಿದುದರ ಕಾರಣವನ್ನು ತಿಳಿಸಿ.
ವೈಶಂಪಾಯನಃ
ಯಜ್ಞಸ್ಯ ವಿಧಿಮಗ್ರ್ಯಂ ವೈ ಫಲಂ ಚೈವ ನರರ್ಷಭ |
ಗದತಃ ಶೃಣು ಮೇ ರಾಜನ್ ಯಥಾವದಿಹ ಭಾರತ ॥7॥
ವೈಶಂಪಾಯನ ಜನಮೇಜಯನೇ, ನಾನು ನಿನಗೆ ಯಜ್ಞದ ಶ್ರೇಷ್ಠವಾದ ವಿಧಿಗಳನ್ನು ಮತ್ತು ಅದರ ಫಲಗಳನ್ನು ಯಥಾವತ್ತಾಗಿ ಹೇಳುತ್ತೇನೆ, ಕೇಳಿಸಿಕೊ.
ಪುರಾ ಶಕ್ರಸ್ಯ ಯಜತಃ ಸರ್ವ ಊಚುರ್ಮಹರ್ಷಯಃ |
ಋತ್ವಿಕ್ಷು ಕರ್ಮ ಕುರ್ವತ್ಸು ವಿತತೇ ಯಜ್ಞಕರ್ಮಣಿ ॥8॥
ಹಿಂದೆ ಇಂದ್ರನು ಯಜ್ಞವನ್ನು ಮಾಡುತ್ತಿದ್ದನು. ಋಷಿಗಳೆಲ್ಲರೂ ಮಂತ್ರವನ್ನು ಉಚ್ಚರಿಸುತ್ತಿದ್ದರು. ಬ್ರಾಹ್ಮಣರೆಲ್ಲರೂ ತಮ್ಮ ಮಂತ್ರಪಠಣ ಕರ್ಮಗಳಲ್ಲಿ ಏಕಾಗ್ರತೆಯನ್ನು ಹೊಂದಿದ್ದರು.
ಹೂಯಮಾನೇ ತಥಾ ವಹ್ನೌ ಹೋತ್ರೇ ಗುಣಸಮನ್ವಿತೇ |
ದೇವೇಷ್ವಾಹೂಯಮಾನೇಷು ಸ್ಥಿತೇಷು ಪರಮರ್ಷಿಷು ॥9॥
ವಿಧ್ಯುಕ್ತವಾದ ರೀತಿಯಲ್ಲಿ ಯಜ್ಞವು ನಡೆಯುತ್ತಿತ್ತು. ಉತ್ತಮ ಗುಣಯುಕ್ತವಾದ ಆಹುತಿಗಳನ್ನು ನೀಡುತ್ತಾ ಋಷಿಗಳು ಕ್ರಮವಾಗಿ ದೇವತೆಗಳನ್ನು ಮಂತ್ರಪೂರ್ವಕವಾಗಿ ಕರೆಯುತ್ತಿದ್ದರು.
ಸುವೃತೈಸ್ತೈಸ್ತದಾ ವಿಪ್ರೈಃ ಸ್ವಾಗಮೈಃ ಸುಸ್ವರೈರ್ನೃಪ |
ಅಶ್ರಾಂತೈಶ್ಚಾಪಿ ಲಘುಭಿರಧ್ವರ್ಯುರ್ವೃಷಭೈಸ್ತಥಾ ॥10॥
ಆ ಶ್ರೇಷ್ಠವಾದ ಯಜ್ಞದಲ್ಲಿ ಬ್ರಾಹ್ಮಣರೆಲ್ಲರೂ ವ್ರತನಿಷ್ಠರಾಗಿ, ನಿರಂತರವೂ ಚತುರ್ವೇದಗಳನ್ನು ಸುಸ್ವರವಾಗಿ ಪಠಿಸುತ್ತಿರುವಾಗ ಪಶುಗಳ ಆಲಂಭನದ (ವಧೆಯ) ಸಮಯವು ಸನ್ನಿಹಿತವಾಯಿತು.
ಆಲಂಭಸಮಯೇ ತಸ್ಮಿನ್ ಗೃಹೀತೇಷು ಪಶುಷ್ವಥ |
ಮಹರ್ಷಯೋ ಮಹಾರಾಜ ಸಂಬಭೂವುಃ ಕೃಪಾನ್ವಿತಾಃ ॥11॥
ಆ ಪಶುವಿನ ಆಲಂಭನದ ಸಮಯದಲ್ಲಿ ಹಿಡಿದುಕೊಂಡು ಬಂದಿರುವ ಪಶುಗಳನ್ನು ನೋಡಿ ಮಹರ್ಷಿಗಳು ಜನಮೇಜಯನೇ, ಆ ಪಶುಗಳ ಮೇಲೆ ಅತ್ಯಂತ ಕರುಣೆಯನ್ನು ಹೊಂದಿದರು.
ತತೋ ದೀನಾನ್ ಪಶೂನ್ ದೃಷ್ಟ್ವಾ ಋಷಯಸ್ತೇ ತಪೋಧನಾಃ |
ಊಚುಃ ಶಕ್ರಂ ಸಮಾಗಮ್ಯ ನಾಯಂ ಯಜ್ಞವಿಧಿಃ ಶುಭಃ ॥12॥
ತಪೋಧನರಾದ ಮಹರ್ಷಿಗಳು ದುಃಖಿತವಾಗಿರುವ ಪಶುಗಳನ್ನು ನೋಡಿ ಇಂದ್ರನನ್ನು ಸಂಪರ್ಕಿಸಿ ಪಶುಬಲಿಯಿಂದ ಕೂಡಿರುವ ಯಜ್ಞವು ಶುಭವಲ್ಲವೆಂದು ಹೇಳಿದರು.
ಅಪರಿಜ್ಞಾನಮೇತತ್ ತೇ ಮಹಾಂತಂ ಧರ್ಮಮಿಚ್ಛತಃ |
ನ ಹಿ ಯಜ್ಞೇ ಪಶುವಧೋ ವಿಧಿದೃಷ್ಟಃ ಪುರಂದರ ॥13॥
ಇಂದ್ರನೇ, ನೀನು ಯಜ್ಞದ ಮೂಲಕ ಮಹಾಪುಣ್ಯ ಸಂಪಾದಿಸಬೇಕೆಂದು ಬಯಸಿರುವಿ. ಆದರೆ ಅಜ್ಞಾನದಿಂದ ಪಶುಬಲಿಯಿಂದ ಉದ್ಯುಕ್ತನಾಗಿರುವಿ. ಯಜ್ಞದಲ್ಲಿ ಪಶುಗಳನ್ನು ಬಲಿ ಕೊಡುವುದು ಶಾಸ್ತ್ರಸಮ್ಮತವಲ್ಲ.
ಧರ್ಮೋಪಘಾತಕಸ್ತ್ವೇಷ ಸಮಾರಂಭಸ್ತವ ಪ್ರಭೋ |

ನಾಯಂ ಧರ್ಮಕೃತೇ ಯಜ್ಞೋ ನ ಹಿಂಸಾ ಧರ್ಮ ಉಚ್ಯತೇ ॥14॥
ಪಶುಗಳ ಆಲಂಭನದಿಂದ ಕೂಡಿರುವ ಈ ಯಜ್ಞವು ಧರ್ಮಕ್ಕೆ ಅನ್ಯಾಯವನ್ನೇ ಉಂಟು ಮಾಡುತ್ತದೆ. ಹಿಂಸೆಯಿಂದ ಕೂಡಿರುವ ಯಜ್ಞವು ಎಂದಿಗೂ ಧರ್ಮದಿಂದ ಕೂಡಿರುವುದಿಲ್ಲ.
ಆಗಮೇನೈವ ತೇ ಯಜ್ಞಂ ಕುರ್ವಂತು ಯದಿಹೇಚ್ಛಸಿ |
ವಿಧಿದೃಷ್ಟೇನ ಯಜ್ಞೇನ ಧರ್ಮಸ್ತೇ ಸುಮಹಾನ್ ಭವೇತ್ ॥15॥
ನಿನ್ನ ಇಚ್ಛೆಯಂತೆ ಬ್ರಾಹ್ಮಣರು ಶಾಸ್ತ್ರವಿಧಿಗೆ ಅನುಸಾರವಾಗಿ ಯಜ್ಞವನ್ನು ಆಚರಿಸಲಿ. ಶಾಸ್ತ್ರಬದ್ಧವಾಗಿ ಮಾಡುವ ಯಜ್ಞದಿಂದ ಮಹತ್ತರವಾದ ಪುಣ್ಯ ಲಾಭವಾಗುತ್ತದೆ.
ಯಜ ಬೀಜೈಃ ಸಹಸ್ರಾಕ್ಷ ತ್ರಿವರ್ಷಪರಮೋಷಿತೈಃ |
ಏಷ ಧರ್ಮೋ ಮಹಾನ್ ಶಕ್ರ ಮಹಾಗುಣಫಲೋದಯಃ ॥16॥
ಸಹಸ್ರಾಕ್ಷನೇ, ಮೂರು ವರ್ಷ ಹಳೆಯದಾದ ಗೋಧಿ ಮೊದಲಾದ ಧಾನ್ಯಗಳಿಂದ ಯಜ್ಞವನ್ನು ಆಚರಿಸು. ಅದು ಯಜ್ಞವೆನಿಸುತ್ತದೆ. ಇಂದ್ರನೇ, ಈ ರೀತಿಯಾದ ಯಜ್ಞವು ನಿನಗೆ ಮಹಾಫಲವನ್ನು ನೀಡುತ್ತದೆ.
ಶತಕ್ರತುಸ್ತು ತದ್ ವಾಕ್ಯಮೃಷಿಭಿಸ್ತತ್ತ್ವದರ್ಶಿಭಿಃ |
ಉಕ್ತಂ ನ ಪ್ರತಿಜಗ್ರಾಹ ಮಾನಮೋಹವಶಾನುಗಃ ॥17॥
ತತ್ತ್ವದರ್ಶಿಗಳಾದ ಋಷಿಗಳು ಹೇಳಿದ ಮಾತನ್ನು ಇಂದ್ರನು ಸ್ವೀಕರಿಸಲಿಲ್ಲ. ಕಾರಣ, ಯಜ್ಞವನ್ನು ವಿಧಾನ ಮಾಡುವ ವೇದಗಳು ಪ್ರಾಮಾಣಿಕವಾಗಿರುತ್ತವೆ. ಈ ವಿಷಯವನ್ನರಿಯದ ಋಷಿಗಳು ಈ ಕಾಲದಲ್ಲಿ ಮಿಥ್ಯಾಜ್ಞಾನ ವಶರಾಗಿದ್ದಾರೆ. ಆದ್ದರಿಂದ ಅವರ ಮಾತನ್ನು ಅನುಸರಿಸುವುದು ಉಚಿತವಲ್ಲ ಎಂದು ಇಂದ್ರದೇವನು ಋಷಿಗಳ ಮಾತನ್ನು ಸ್ವೀಕರಿಸಲಿಲ್ಲ. ಋಷಿಗಳ ಮಾತೆಲ್ಲವೂ ಅವೈದಿಕವಾದ ಪಾಷಂಡ ಮತ ಎಂದು ಉಪೇಕ್ಷಿಸಿದನು ಎಂದು ಭಾವ.
ತೇಷಾಂ ವಿವಾದಃ ಸುಮಹಾನ್ ಜಜ್ಞೇ ಶಕ್ರಮಹರ್ಷಿಣಾಮ್ |
ಜಂಗಮೈಃ ಸ್ಥಾವರೈಶ್ಚಾಪಿ ಯಷ್ಟವ್ಯಮಿತಿ ಭಾರತ ॥18॥
ಇಂದ್ರನ ಯಜ್ಞದ ಸಮಯದಲ್ಲಿ ತಪಸ್ವಿಗಳಲ್ಲಿ ಪರಸ್ಪರ ವಿವಾದವೇ ಉಂಟಾಯಿತು. ಜಂಗಮ ಪ್ರಾಣಿಗಳೆನಿಸಿದ ಆಡು-ಕುದುರೆಗಳ ಮೂಲಕ ಯಜ್ಞ ಮಾಡಬೇಕೆಂದು ಕೆಲವರು ಗೋಧಿ ಮೊದಲಾದ ಧಾನ್ಯಗಳಿಂದ ಯಜ್ಞ ಮಾಡಬೇಕೆಂದು ಕೆಲವರು- ಹೀಗೆ ವಿವಾದವು ಆರಂಭವಾಯಿತು.
ತೇ ತು ಖಿನ್ನಾ ವಿವಾದೇನ ಋಷಯಸ್ತತ್ತ್ವದರ್ಶಿನಃ |
ಅಭಿಸಂಧಾಯ ಶಕ್ರೇಣ ಪಪ್ರಚ್ಛುರ್ನೃಪತಿಂ ವಸುಮ್ ॥19॥
ತತ್ತ್ವದರ್ಶಿಗಳಾದ ಋಷಿಗಳು ಈ ಚರ್ಚೆಯಿಂದ ಬಹಳ ದುಃಖಿತರಾದರು. ಆ ಸಂದರ್ಭದಲ್ಲಿ ಅವರೆಲ್ಲರೂ ಇಂದ್ರನ ಬಳಿ ಸಮಾಲೋಚಿಸಿ ಉಪರಿಚರ ವಸುವಿನ ಬಳಿ ಹೋಗಿ ಈ ವಿಷಯದಲ್ಲಿ ಪ್ರಶ್ನಿಸಿದರು.
ಋಷಯಃ
ಮಹಾಪ್ರಾಜ್ಞ ಕಥಂ ಯಜ್ಞೇಷ್ವಾಗಮೋ ನೃಪತೇ ಸ್ಮೃತಃ |
ಯಷ್ಟವ್ಯಂ ಪಶುಭಿರ್ಮೇಧ್ಯೈರಥೋ ಬೀಜೈರಜೈರಿತಿ ॥20॥
ಋಷಿಗಳು ಮಹೀಪತಿಯೇ, ಧರ್ಮದ ವಿಷಯದಲ್ಲಿ ನಾವೆಲ್ಲರೂ ಸಂದೇಹಗ್ರಸ್ಥರಾಗಿದ್ದೇವೆ. ನೀನೇ ಸತ್ಯ ಹೇಳು. ಆಡು-ಕುದುರೆ ಮುಂತಾದವುಗಳಿಂದ ಯಜ್ಞವನ್ನು ಆಚರಿಸಬೇಕೋ ಅಥವಾ ಫಲವನ್ನು ನೀಡದಿರುವ ಗೋಧಿ ಮೊದಲಾದ ಬೀಜಗಳಿಂದ ಯಜ್ಞವನ್ನು ಆಚರಿಸಬೇಕೋ? ನೀನೇ ತಿಳಿಸು.
ವೈಶಂಪಾಯನಃ
ತಚ್ಛ್ರುತ್ವಾ ತು ವಸುಸ್ತೇಷಾಮವಿಚಾರ್ಯ ಬಲಾಬಲಮ್ |
ಯಥೋಪನೀತೈರ್ಯಷ್ಟವ್ಯಮಿತಿ ಪ್ರೋವಾಚ ಪಾರ್ಥಿವಃ ॥21॥
ವೈಶಂಪಾಯನ ಜನಮೇಜಯನೇ, ಉಪರಿಚರ ವಸುವು ಅವರ ಮಾತುಗಳನ್ನು ಕೇಳಿಸಿಕೊಂಡು, ಪಕ್ಷ-ಪ್ರತಿಪಕ್ಷಗಳ ಸಾರಾಸಾರವನ್ನು ವಿಚಾರ ಮಾಡದೆ ಸಾಮಾನ್ಯವಾಗಿ ಹೀಗೆ ಉತ್ತರಿಸಿದನು: ಋಷಿಗಳೇ, ಪಶುಗಳು ಲಭಿಸಿದಾಗ ಪಶುಗಳಿಂದ ಯಜ್ಞವನ್ನು ಮಾಡಬೇಕು. ಧಾನ್ಯಗಳು ಲಭಿಸಿದಾಗ ಧಾನ್ಯದಿಂದಲೂ ಯಜ್ಞವನ್ನು ಮಾಡಬೇಕು ಎಂದು ಸಾಮಾನ್ಯವಾಗಿ ಉತ್ತರಿಸಿದನು. ವೈದಿಕ ಯಜ್ಞವನ್ನೇ ಮಾಡಬೇಕು ಎಂದು ಹೇಳಲಿಲ್ಲ.
ಧರ್ಮಸಂಶಯಮಾಪನ್ನಾನ್ ಸತ್ಯಂ ಬ್ರೂಹಿ ಮಹಾಮತೇ |
ಮಹಾಭಾಗ ಕಥಂ ಯಜ್ಞೇಷ್ವಾಗಮೇ ನೃಪತಿಸ್ಥಿತೇ ॥22॥
ಉಪರಿಚರ ವಸುವು ಹೀಗೆ ಪ್ರಾಮಾಣಿಕವಾದ ಆಡು ಮೊದಲಾದವಿಂದ ಯಜ್ಞ ಮಾಡುವಿಕೆಯು ಕ್ಷತ್ರಿಯರಿಗೆ ಯೋಗ್ಯವಾಗಿದೆ ಎಂಬ ವೇದಗಳಿದ್ದರೂ ಅವುಗಳನ್ನು ಉದಾಹರಿಸದೆ ಸಾಮಾನ್ಯವಾಗಿ ಮಾತನಾಡಿದಾಗ ಸಂಶಯಗ್ರಸ್ಥರಾದ ಅವರೆಲ್ಲರೂ ಸತ್ಯವನ್ನು ತಿಳಿಯಲು ಪುನಃ ಪ್ರಶ್ನಿಸಿದರು.
ಏವಮುಕ್ತೇ ಸ ನೃಪತಿಃ ಪ್ರವಿವೇಶ ರಸಾತಲಮ್ |
ಉಕ್ತ್ವೇಹ ವಿತಥಂ ರಾಜನ್ ಚೇದೀನಾಮೀಶ್ವರಃ ಪ್ರಭುಃ ॥23॥
ಮಹರ್ಷಿಗಳ ಪ್ರಶ್ನೆಗೆ ಉಪರಿಚರ ವಸುವು ಪುನಃ ಹಾಗೆಯೇ ಉತ್ತರಿಸಿದನು. ಸರಿಯಾದ ನಿರ್ಣಯವನ್ನು ನೀಡದ ಕಾರಣದಿಂದ, ಚೇದಿದೇಶರಾಜನಾದ ಉಪರಿಚರ ವಸುವು ರಸಾತಲ ಲೋಕಕ್ಕೆ ಹೊರಟು ಹೋದನು.
ಅನ್ಯಾಯೋಪಗತಂ ದ್ರವ್ಯಂ ಸತತಂ ಯೋಽಹ್ಯಪಂಡಿತಃ |
ಧರ್ಮಾಭಿಕಾಂಕ್ಷೀ ತ್ಯಜತಿ ನ ಧರ್ಮಫಲಮಶ್ನುತೇ ॥24॥

ಅನ್ಯಾಯದಿಂದ ಆರ್ಜಿತವಾದ ದ್ರವ್ಯವನ್ನು ಭಂಡನಾದವನು ಧರ್ಮದ ಬುದ್ಧಿಯಿಂದ ದಾನ ಮಾಡಿದಲ್ಲಿ ಆತನು ಧರ್ಮದ ಫಲವನ್ನು ಹೊಂದುವುದಿಲ್ಲ.
ಧರ್ಮವೈತಂಸಿಕೋ ಹ್ಯೇಷ ಪಾಪಾತ್ಮಾ ಪುರುಷಾಧಮಃ।
ದದಾತಿ ದಾನಂ ವಿಪ್ರೇಭ್ಯೋ ಲೋಕೇ ವಿಶ್ವಾಸಕಾರಕಮ್ ॥25॥
ಯಾವನು ಅಧರ್ಮಾರ್ಜಿತವಾದ ಪದಾರ್ಥಗಳನ್ನು ಧರ್ಮದ ಹೆಸರಿನಲ್ಲಿ ದಾನ ಮಾಡುತ್ತಾನೋ ಅವನು ಧರ್ಮಕ್ಕೇ ಅನ್ಯಾಯ ಮಾಡಿದವನು: ಪುರುಷಾಧಮ ಎನಿಸುತ್ತಾನೆ. ಧರ್ಮವನ್ನು ಮಾಡಿದವನಂತೆ ಬ್ರಾಹ್ಮಣರಿಗೆ ವಿಶ್ವಾಸ ಹುಟ್ಟಿಸಿ ಆತನು ದಾನ ಮಾಡಿರುತ್ತಾನೆ.
ಪಾಪೇನ ಕರ್ಮಣಾ ವಿಪ್ರೋ ಧನಂ ಲಬ್ಧ್ವಾ ನಿರಂಕುಶಃ।
ರಾಗಮೋಹಾನ್ವಿತಃ ಸೋಽಂತೇ ಕುಲಷಾಂ ಗತಿಮಶ್ನುತೇ ॥26॥
ಈ ಪಾಪಕರ್ಮದಿಂದಾಗಿ ರಾಗ-ಮೋಹಗಳಿಂದ ಧರ್ಮದ ಬುದ್ಧಿಯಿಲ್ಲದೆ ಹಣವನ್ನೂ ಸಂಗ್ರಹಿಸಿ ದಾನ ಮಾಡಿದರೂ ಕೊನೆಗೆ ಅವನು ನರಕಕ್ಕೇ ಹೋಗುತ್ತಾನೆ.
ತೇನ ದಾನಾನಿ ದತ್ತಾನಿ ಪಾಪೇನ ಹತಬುದ್ಧಿನಾ।
ತಾನಿ ಸತ್ವಮನಾಸಾದ್ಯ ನಶ್ಯಂತಿ ವಿಪುಲಾನ್ಯಪಿ ॥27॥
ಅಶುದ್ಧ ಬುದ್ಧಿಯವನಾದ ವ್ಯಕ್ತಿಯಿಂದ ಮಾಡಲ್ಪಟ್ಟ ದಾನವು ಎಷ್ಟೇ ಅಧಿಕವಾಗಿದ್ದರೂ ಅದು ಸಾತ್ವಿಕವೆನಿಸದೆ ಸತ್ಫಲವನ್ನು ನಾಶಮಾಡುತ್ತದೆ. ಇದರಿಂದ ಹಾನಿಗೀಡಾಗುತ್ತಾನೆ.
ತಸ್ಯಾಧರ್ಮೆ ಪ್ರವೃತ್ತಸ್ಯ ಹಿಂಸಕಸ್ಯ ದುರಾತ್ಮನಃ।
ಏತೇನಾಕೀರ್ತಿರ್ಭವತಿ ಪ್ರೇತ್ಯ ಚೇಹ ಚ ದುರ್ಮತೇಃ ॥28॥
ಅಧರ್ಮಪ್ರವೃತ್ತನಾದ ಹಿಂಸಾಕಾರ್ಯಗಳನ್ನು ಮಾಡುತ್ತಿರುವ ವ್ಯಕ್ತಿಗೆ ಇದರಿಂದ ಅಕೀರ್ತಿಯೇ ಉಂಟಾಗುತ್ತದೆ. ಪರಲೋಕವು ಲಭಿಸುವುದಿಲ್ಲ.
ಅಪಿ ಸಂಶಯಬುದ್ಧಿರ್ಹಿ ಲೋಭಮೋಹವಶಾನುಗಃ।
ಯಜ್ಞಂ ಕರೋತಿ ಭೂತಾನಿ ಹಿಂಸಯನ್ ಪಾಪಚೇತನಃ ॥29॥
ಲೋಭ, ಮೋಹಗಳಿಗೆ ವಶನಾಗಿ, ಸಂಶಯ ಬುದ್ಧಿಯನ್ನು ಹೊಂದಿದವನಾಗಿ ಯಾವನು ಪಶುಹಿಂಸಾ ರೂಪವಾದ ಯಜ್ಞವನ್ನು ಮಾಡುತ್ತಾನೋ ಅವನು ಪಾಪಚೇತನನೇ ಎನಿಸುತ್ತಾನೆ.
ಏವಂ ಲಬ್ಧ್ವಾ ಧನಂ ಮೋಹಾದ್ ಯಜತೇ ಯೋ ದದಾತಿ ಚ।
ಸ ಕೃತ್ವಾ ಕರ್ಮಣಾ ತೇನ ನ ಸಿದ್ಧ್ಯತಿ ದುರಾಗಮಾತ್ ॥30॥
ಯಾವನು ಅನ್ಯಾಯದಿಂದ, ಮೋಹದಿಂದ ಧನವನ್ನು ಸಂಗ್ರಹಿಸಿ, ಧರ್ಮದ ಹೆಸರಿನಲ್ಲಿ ಯಜ್ಞವನ್ನು ಆಚರಿಸುತ್ತಾನೋ ಅವನು ಆ ಕರ್ಮದಿಂದ ಉತ್ತಮವಾದ ಸಿದ್ಧಿಯನ್ನು ಹೊಂದುವುದಿಲ್ಲ. ಅನ್ಯಾಯದಿಂದ ಉಪಾರ್ಜಿತವಾದ ಧನವು ಯಜ್ಞಕ್ಕೆ ಯೋಗ್ಯ ಎಂದು ಭಾವಿಸುವುದು ದುರಾಗಮದ ಕಲ್ಪನೆಯಾಗಿದೆ.
ಇಚ್ಛನ್ ಮೂಲಂ ಫಲಂ ಶಾಕಮುದಪಾನಂ ತಪೋವನಮ್।
ದಾನಂ ವಿಭವತೋ ದತ್ತ್ವಾ ತತಃ ಸ್ವರ್ಯಾತಿ ಧಾರ್ಮಿಕಃ ॥31॥
ಯಾವನು ಪುಣ್ಯವನ್ನು ನೀಡುವ ಗೆಡ್ಡೆ-ಗೆಣಸುಗಳನ್ನು, ಹಣ್ಣುಗಳನ್ನು, ತರಕಾರಿಗಳನ್ನು, ನೀರನ್ನು ದಾನ ಮಾಡಲು ಬಯಸುತ್ತಾನೋ ಅಂತಹ ದಾನಗಳನ್ನು ಅಥವಾ ಪ್ರಾಮಾಣಿಕವಾದ ಸಂಪತ್ತಿನ ದಾನಗಳನ್ನು ಮಾಡಿದ ಬಳಿಕ ಧಾರ್ಮಿಕನಾದ ಅವನು ಸ್ವರ್ಗಲೋಕವನ್ನು ಹೊಂದುತ್ತಾನೆ.
ಏಷ ಧರ್ಮೋ ಮಹಾಪುಣ್ಯೋ ದಾನಂ ಭೂತದಯಾ ತಥಾ।
ಬ್ರಹ್ಮಚರ್ಯಂ ತಥಾ ಸತ್ಯಮನುಕ್ರೋಶೋ ಧೃತಿಃ ಕ್ಷಮಾ ॥32॥
ಸನಾತನಸ್ಯ ಧರ್ಮಸ್ಯ ಫಲಮೇತತ್ ಸನಾತನಮ್ ॥33॥
ಇದೇ ಧರ್ಮವು, ಮಹಾಪುಣ್ಯಕರವಾದುದು. ದಾನ, ಪ್ರಾಣಿದಯೆ, ಬ್ರಹ್ಮಚರ್ಯ, ಸತ್ಯನಿಷ್ಠೆ, ಕಾರುಣ್ಯ, ಧೈರ್ಯ, ಕ್ಷಮೆ ಇವುಗಳು ಸನಾತನ ಧರ್ಮದ ಬೇರುಗಳೆನಿಸಿವೆ.
ಶ್ರೂಯಂತೇ ಹಿ ಪುರಾ ವಿಪ್ರಾ ವಿಶ್ವಾಮಿತ್ರಾದಯೋ ನೃಪಾಃ ॥34॥
ವಿಶ್ವಾಮಿತ್ರರೇ ಮೊದಲಾದ ರಾಜರು ಇದರಿಂದಲೇ ಸಿದ್ಧಿಪಡೆದಿದ್ದಾರೆಂಬುದನ್ನು ನಾವು ಕೇಳಿದ್ದೇವೆ.
ವಿಶ್ವಾಮಿತ್ರೋಽಸಿತಶ್ಚೈವ ಜನಕಶ್ಚ ಮಹೀಪತಿಃ।
ಕಕ್ಷಸೇನಾರ್ಷ್ಟಿಷೇಣೌ ಚ ಸಿಂಧುರ್ದ್ವಿಪಶ್ಚ ಪಾರ್ಥಿವಃ ॥35॥
ಏತೇ ಚಾನ್ಯೇ ಚ ಬಹವಃ ಸಿದ್ಧಿಂ ಪರಮಿಕಾಂ ಗತಾಃ।
ನೃಪಾಃ ಸತ್ಯೈಶ್ಚ ದಾನೈಶ್ಚ ನ್ಯಾಯಲಬ್ಧೈಸ್ತಪೋಧನಾಃ ॥36॥
ವಿಶ್ವಾಮಿತ್ರ, ಅಸಿತ, ಜನಕ, ಕಕ್ಷಸೇನ, ಆರ್ಷ್ಟಿಷೇಣ, ಸಿಂಧುರ್ದ್ವಿಪ ಇವರೇ ಮೊದಲಾದ ಅನೇಕ ರಾಜರು ಪ್ರಾಮಾಣಿಕವಾದ ಯಜ್ಞಗಳನ್ನಾಚರಿಸಿ, ನ್ಯಾಯಲಬ್ಧವಾದ ಸಂಪತ್ತುಗಳನ್ನು ದಾನ ಮಾಡಿದ ವ್ಯಕ್ತಿಗಳು, ಸತ್ಯವಾದ ಧರ್ಮಾಚರಣೆಯ ಫಲದಿಂದ ಸಿದ್ಧಿಯನ್ನು ಪಡೆದಿರುತ್ತಾರೆ.
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಯೇ ಚಾಶ್ರಿತಾಸ್ತಪಃ।
ದಾನಧರ್ಮಾಶ್ರಿತಾಃ ಶುದ್ಧಾಸ್ತೇ ಸ್ವರ್ಗಂ ಯಾಂತಿ ಭಾರತ ॥37॥
ಎಲೈ ಭಾರತನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರಲ್ಲಿ ಯಾರೇ ಆಗಲಿ, ತಪಸ್ಸನ್ನು ಆಚರಿಸಿ ದಾನ, ಧರ್ಮ ಎಂಬ ಅಗ್ನಿಯಿಂದ

ಪರಿಶುದ್ಧರಾಗುತ್ತಾರೋ ಅವರು ಸ್ವರ್ಗಕ್ಕೆ ಹೋಗುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ
ದಾನಧರ್ಮತಪಃಪ್ರಶಂಸನಂ ನಾಮ
ಚತುರ್ನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೈದನೆಯ ಅಧ್ಯಾಯ
ವೈಶಂಪಾಯನರು ಜನಮೇಜಯರಾಜನಿಗೆ ಧ್ಯಾನ-ದಾನಾದಿಗಳು
ಸಿದ್ಧಿಗೆ ಕಾರಣವಾಗುತ್ತವೆ ಎಂದು ತಿಳಿಸಲು ಅಗಸ್ತ್ಯಮಹರ್ಷಿಗಳ ಯಜ್ಞದ
ಕಥೆಯನ್ನು ಹೇಳಿದುದು.
ಜನಮೇಜಯಃ
ಧರ್ಮಾಗತೇನ ತ್ಯಾಗೇನ ಭಗವಾನ್ ಸರ್ವಮಸ್ತಿ ಚೇತ್ |
ಏತನ್ಮೇ ಸರ್ವಮಾಚಕ್ಷ್ವ ಕುಶಲೋ ಹ್ಯಸಿ ಭಾಷಿತುಮ್ ॥1॥
ಜನಮೇಜಯ ಪೂಜ್ಯರೇ, ಧರ್ಮದಿಂದ ಹಣವನ್ನು ಸಂಪಾದಿಸಿ ಅದನ್ನು ತ್ಯಾಗ ಮಾಡಿದರೆ ಸ್ವರ್ಗಲೋಕವು ಪ್ರಾಪ್ತವಾಗುತ್ತದೆ ಎಂದು ಹೇಳಿದಿರಿ. ನೀವು ಪ್ರವಚನ ಮಾಡುವುದರಲ್ಲಿ ಮೇಧಾವಿಗಳಾಗಿದ್ದೀರಿ. ಇದೇ ವಿಷಯದ ಬಗ್ಗೆ ನನಗೆ ವಿಸ್ತಾರವಾಗಿ ತಿಳಿಸಿರಿ.
ತಸ್ಯೋಂಛವೃತ್ತೇರ್ಯದ್ ವೃತ್ತಂ ಸಕ್ತುದಾನಂ ಮಹಾಫಲಮ್ |
ಕಥಿತಂ ಮೇ ಮಹದ್ ಬ್ರಹ್ಮನ್ ತಥ್ಯಮೇತದಸಂಶಯಮ್ ॥2॥
ಉಂಛವೃತ್ತಿಯನ್ನು ಮಾಡುವ ಬ್ರಾಹ್ಮಣನು ನ್ಯಾಯಮಾರ್ಗದಲ್ಲಿ ಸಂಪಾದಿಸಿದ ಹಿಟ್ಟನ್ನು ದಾನ ಮಾಡಿ ಎಂತಹ ಫಲವನ್ನು ಹೊಂದಿದನು ಎಂಬುದನ್ನು ತಿಳಿಸಿದ್ದೀರಿ. ನೀವು ಹೇಳಿದ ವಿಷಯವೆಲ್ಲ ಯಥಾರ್ಥವಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಕಥಂ ಹಿ ಸರ್ವಯಜ್ಞೇಷು ನಿಶ್ಚಯಃ ಪರಮೋ ಭವೇತ್ |
ಏತದರ್ಹಸಿ ಮೇ ವಕ್ತುಂ ನಿಖಿಲೇನ ದ್ವಿಜರ್ಷಭ ॥3॥
ಆದರೆ ಎಲ್ಲ ಯಜ್ಞಗಳ ವಿಷಯದಲ್ಲಿಯೂ ಹೀಗೆ ನಿರ್ಣಯವನ್ನು ಮಾಡಬಹುದೇ? ಯಜ್ಞಕ್ಕೆ ಮಹತ್ವವೇ ಇರುವುದಿಲ್ಲವೇ? ಇದರ ಬಗ್ಗೆ ಸಮಗ್ರವಾದ ಮಾಹಿತಿಯನ್ನು ನೀಡಿರಿ.
ವೈಶಂಪಾಯನಃ
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಅಗಸ್ತ್ಯಸ್ಯ ಮಹಾಯಜ್ಞೇ ಪುರಾ ವೃತ್ತಮರಿಂದಮ ॥4॥
ವೈಶಂಪಾಯನ ಜನಮೇಜಯನೇ, ಈ ವಿಷಯದಲ್ಲಿ ಹಿಂದೆ ಅಗಸ್ತ್ಯರು ಮಹಾಯಾಗವನ್ನು ಮಾಡುತ್ತಿದ್ದಾಗ ನಡೆದ ಪುರಾತನವಾದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ.
ಪುರಾಽಗಸ್ತ್ಯೋ ಮಹಾತೇಜಾ ದೀಕ್ಷಾಂ ದ್ವಾದಶವಾರ್ಷಿಕೀಮ್ |
ಪ್ರವಿವೇಶ ಮಹಾರಾಜ ಸರ್ವಭೂತಹಿತೇ ರತಃ ॥5॥
ಹಿಂದೆ ಎಲ್ಲ ಪ್ರಾಣಿಗಳ ಹಿತವನ್ನು ಬಯಸುವ, ಮಹಾತೇಜಸ್ವಿಗಳಾದ ಅಗಸ್ತ್ಯರು ಹನ್ನೆರಡು ವರ್ಷಗಳಲ್ಲಿ ಮುಗಿಯುವ ಮಹಾಯಜ್ಞವೊಂದರಲ್ಲಿ ದೀಕ್ಷಿತರಾದರು.
ತತ್ರಾಗ್ನಿಕಲ್ಪಾ ಹೋತಾರಶ್ಚಾಸನ್ ಸರ್ವೇ ಮಹಾತ್ಮನಃ |
ಮೂಲಹಾರಾ ನಿರಾಹಾರಾಶ್ಚಾಶ್ಮಕುಟ್ಟಾ ಮರೀಚಿಪಾಃ ॥6॥
ಆ ಮಹಾಯಜ್ಞದಲ್ಲಿ ಯಜ್ಞೇಶ್ವರನಿಗೆ ಸಮಾನರಾದ, ತೇಜಸ್ವಿಗಳಾದ ಹೋತೃಗಳಿದ್ದರು. ಅವರು ಫಲ-ಮೂಲಗಳನ್ನೇ ಆಹಾರವನ್ನಾಗಿ ಮಾಡಿಕೊಂಡಿದ್ದರು. ತಿನ್ನುವ ಪದಾರ್ಥಗಳನ್ನು ಕಲ್ಲಿನಲ್ಲಿ ಜಜ್ಜಿ ತಿನ್ನುತ್ತಿದ್ದರು. ಸೂರ್ಯನ ಕಿರಣಗಳನ್ನೇ ಪಾನ ಮಾಡುತ್ತಿದ್ದರು.
ಪರಿಪುಷ್ಟಿಕಾ ವೈಘಸಿಕಾಃ ಪ್ರಸಂಖ್ಯಾನಾಸ್ತಥೈವ ಚ |
ಯತಯೋ ಭಿಕ್ಷವಶ್ಚಾತ್ರ ಬಭೂವುಃ ಪರ್ಯವಸ್ಥಿತಾಃ ॥7॥
ಇನ್ನೊಬ್ಬರು ಕೊಟ್ಟ ಆಹಾರವನ್ನು ಮಾತ್ರ ಸೇವಿಸುತ್ತಿದ್ದ ಪರಿಪುಷ್ಟಿಕರು, ಯಜ್ಞವಾದ ಬಳಿಕವೇ ಊಟ ಮಾಡುವ ವೈಘಸಿಕರು, ಸದಾ ಕಾಲವೂ ಭಗವಂತನ ಬಗ್ಗೆಯೇ ಚಿಂತೆ ಮಾಡುತ್ತಿದ್ದ ಪ್ರಸಂಖ್ಯಾನರು, ಯತಿಗಳು, ಭಿಕ್ಷುಗಳು ಅರ್ಥಾತ್ ಬ್ರಹ್ಮಚಾರಿಗಳು ಆ ಯಜ್ಞದಲ್ಲಿ ಭಾಗವಹಿಸಿದ್ದರು.
ಸರ್ವೇ ಪ್ರತ್ಯಕ್ಷಧರ್ಮಾಣೋ ಜಿತಕ್ರೋಧಾ ಜಿತೇಂದ್ರಿಯಾಃ |
ದಮೇ ಸ್ಥಿತಾಶ್ಚ ಸರ್ವೇ ತೇ ದಂಭಮೋಹವಿವರ್ಜಿತಾಃ ॥8॥
ಎಲ್ಲರೂ ಧರ್ಮದ ಬಗ್ಗೆ ಎಚ್ಚರವನ್ನು ವಹಿಸಿ, ಕಾಮ-ಕ್ರೋಧಗಳನ್ನು ಗೆದ್ದು, ಜಿತೇಂದ್ರಿಯರಾಗಿ, ಇಂದ್ರಿಯ ನಿಗ್ರಹದಲ್ಲಿ ಆಸಕ್ತರಾಗಿ, ದಂಭ-ಮೋಹಗಳಿಂದ ರಹಿತರಾಗಿ ಇದ್ದರು.
ವೃದ್ಧೈಃ ಶುದ್ಧೈಸ್ತಥಾ ನಿತ್ಯಮಿಂದ್ರಿಯೈಶ್ಚಾಪ್ಯವಾಹಿತಾಃ |
ಉಪಾಸತೇ ಸ್ಮ ತಂ ಯಜ್ಞಂ ಭುಂಜಾನಾಸ್ತೇ ಮಹರ್ಷಯಃ ॥9॥
ವೃದ್ಧರೂ, ಶುದ್ಧರೂ, ನಿತ್ಯವೂ ಇಂದ್ರಿಯಜಯಶೀಲರೂ ಆದ ಮಹರ್ಷಿಗಳು ಆ ಅಗಸ್ತ್ಯರ ಮಹಾಯಜ್ಞದಲ್ಲಿ ಭಾಗವಹಿಸಿದ್ದರು.
ಯಥಾಶಕ್ತ್ಯಾ ಭಗವತಾ ತದನ್ನಂ ಸಮುಪಾರ್ಜಿತಮ್ |

ತಸ್ಮಿನ್ ಸತ್ರೇ ತು ಯತ್ ಕಿಂಚಿತ್ ಅಯೋಗ್ಯಂ ತತ್ರ ನಾಭವತ್ ॥10॥
ಪೂಜ್ಯರಾದ ಅಗಸ್ತ್ಯರು ಆ ಯಜ್ಞಕ್ಕಾಗಿ ತಮ್ಮ ಶಕ್ತಿಗೆ ಅನುಗುಣವಾಗಿ ಶುದ್ಧವಾದ ಅನ್ನವನ್ನೇ ನ್ಯಾಯರೀತಿಯಲ್ಲಿ ಸಂಗ್ರಹಿಸಿದ್ದರು. ಆ ಯಜ್ಞದಲ್ಲಿ ಅಯೋಗ್ಯವಾದ ಯಾವ ವಸ್ತುಗಳೂ ಇರಲಿಲ್ಲ.
ಯಥಾ ಹ್ಯನೇಕೈರ್ಮುನಿಭಿರ್ಬಹವಃ ಕ್ರತವಃ ಕೃತಾಃ ॥11॥
ಅದರಂತೆ ಅಲ್ಲಿ ಸೇರಿದ್ದ ಮುನಿಗಳು ಶುದ್ಧರಾಗಿದ್ದರು. ಅವರೆಲ್ಲರೂ ಮಹಾ ಮಹಾ ಯಜ್ಞಗಳನ್ನು ಮಾಡುತ್ತಿದ್ದರು.
ಏವಂವಿಧೇ ತ್ವಗಸ್ತ್ಯಸ್ಯ ವರ್ತಮಾನೇ ಮಹಾಧ್ವರೇ |
ನ ವವರ್ಷ ಸಹಸ್ರಾಕ್ಷಃ ತದಾ ಭರತಸತ್ತಮ ॥12॥
ಹೀಗೆ ಅಗಸ್ತ್ಯರ ದ್ವಾದಶವಾರ್ಷಿಕ ಮಹಾಯಜ್ಞವು ನಡೆಯುತ್ತಿರಲು ಇಂದ್ರನು ಮಳೆಯನ್ನು ಸುರಿಸುವುದನ್ನೇ ನಿಲ್ಲಿಸಿದನು.
ತತಃ ಕರ್ಮಾಂತರೇ ರಾಜನ್ನಗಸ್ತ್ಯಸ್ಯ ಮಹಾತ್ಮನಃ |
ಕಥೇಯಮಭಿನಿರ್ವೃತ್ತಾ ಮುನೀನಾಂ ಭಾವಿತಾತ್ಮನಾಮ್ ॥13॥
ಮಹಾತ್ಮರಾದ ಅಗಸ್ತ್ಯರು ಯಜ್ಞಕರ್ಮದ ಮಧ್ಯದಲ್ಲಿ ಅವಕಾಶವು ಸಿಕ್ಕಾಗ ಪರಸ್ಪರ ಶುದ್ಧ ಅಂತಃಕರಣದಿಂದ ಕೂಡಿದ ಮುನಿಗಳೊಡನೆ ಸೇರಿ ಧಾರ್ಮಿಕವಾದ ವಿಷಯದಲ್ಲಿ ಚರ್ಚಿಸುತ್ತಿದ್ದರು.
ಮುನಯಃ
ಅಗಸ್ತ್ಯೋ ಯಜಮಾನೋಽಯಂ ದದಾತ್ಯನ್ನಂ ವಿಮತ್ಸರಃ |
ನ ಚ ವರ್ಷತಿ ಪರ್ಜನ್ಯಃ ಕಥಮನ್ನಂ ಭವಿಷ್ಯತಿ ॥14॥
ಮುನಿಗಳು ಈ ಯಜಮಾನರಾದ ಅಗಸ್ತ್ಯರು ಮಾತ್ಸರ್ಯರಹಿತರಾಗಿ ನಮ್ಮೆಲ್ಲರಿಗೂ ಅನ್ನವನ್ನು ನೀಡುತ್ತಿದ್ದಾರೆ. ನಮಗೆ ಮಳೆಯಿಲ್ಲದಿದ್ದರೂ ಈ ರೀತಿಯಾಗಿ ಅನ್ನವನ್ನು ಹೇಗೆ ನೀಡುತ್ತಿದ್ದಾರೆ?
ಸತ್ರಂ ಚೇದಂ ಮಹದ್ವಿಪ್ರಾ ಮುನೇರ್ದ್ವಾದಶವಾರ್ಷಿಕಮ್ |
ನ ಹಿ ವರ್ಷತಿ ದೇವಶ್ಚ ವರ್ಷಾಣ್ಯೇತಾನಿ ದ್ವಾದಶ ॥15॥
ಮಳೆಯೇ ಸುರಿಯದೆ ಮುಂದೆ ಅನ್ನವು ದೊರಕುವುದಾದರೂ ಹೇಗೆ? ಈ ದೊಡ್ಡ ದ್ವಾದಶವಾರ್ಷಿಕ ಮಹಾಸತ್ರವು ಹನ್ನೆರಡು ವರ್ಷಗಳ ತನಕ ಮಳೆಗರೆಯದೆ ಇದ್ದಲ್ಲಿ ನಡೆಯುವುದು ಹೇಗೆ?
ಏತದ್ ಭವಂತಃ ಸಂಚಿಂತ್ಯ ಮಹರ್ಷೇರತ್ರ ಧೀಮತಃ |
ಅಗಸ್ತ್ಯಸ್ಯಾತಿತಪಸಃ ಕರ್ತುಮರ್ಹಂತ್ಯನುಗ್ರಹಮ್ ॥16॥
ಈ ವಿಷಯವನ್ನು ನೀವೆಲ್ಲರೂ ಪರಸ್ಪರ ಸಮಾಲೋಚಿಸಿ, ಮಹಾತಪಸ್ವಿಗಳಾದ, ಬುದ್ಧಿಶಾಲಿಗಳಾದ ಅಗಸ್ತ್ಯಋಷಿಗಳು ಆರಂಭಿಸಿದ ಯಜ್ಞವು ನಿರ್ವಿಘ್ನವಾಗಿ ನಡೆಯುವಂತೆ ಅನುಗ್ರಹಿಸಬೇಕು.
ವೈಶಂಪಾಯನಃ
ಇತ್ಯೇವಮುಕ್ತೇ ವಚನೇ ತತೋಽಗಸ್ತ್ಯಃ ಪ್ರತಾಪವಾನ್ |
ಪ್ರೋವಾಚೇದಂ ವಚೋ ವಾಗ್ಮೀ ಪ್ರಸಾದ್ಯ ಶಿರಸಾ ಮುನೀನ್ ॥17॥
ವೈಶಂಪಾಯನ ಯಜ್ಞದಲ್ಲಿ ಭಾಗವಹಿಸಿದ ಒಬ್ಬ ಮಹರ್ಷಿಯು ಇತರ ಋಷಿಗಳನ್ನು ಕುರಿತು ಹೀಗೆ ಹೇಳಿದಾಗ, ಪ್ರತಾಪಶಾಲಿಗಳಾದ ಅಗಸ್ತ್ಯರು ಮುನಿಗಳೆಲ್ಲರಿಗೂ ನಮಸ್ಕರಿಸುತ್ತಾ ಇಂತು ನುಡಿದರು.
ಅಗಸ್ತ್ಯಃ
ಯದಿ ದ್ವಾದಶ ವರ್ಷಾಣಿ ನ ವರ್ಷಿಷ್ಯತಿ ವಾಸವಃ |
ಚಿಂತಾಯಜ್ಞಂ ಕರಿಷ್ಯಾಮಿ ವಿಧಿರೇಷ ಸನಾತನಃ ॥18॥
ಅಗಸ್ತ್ಯ ಪೂಜ್ಯರೇ, ಒಂದುವೇಳೆ ಹನ್ನೆರಡು ವರ್ಷಗಳ ಕಾಲ ಇಂದ್ರನು ಮಳೆಯನ್ನು ಸುರಿಸದಿದ್ದಲ್ಲಿ ನಾನು ಮಾನಸಿಕ ಯಜ್ಞವನ್ನೇ ಮಾಡುತ್ತೇನೆ. ಈ ವಿಧಿಯು ಹಿಂದಿನಿಂದಲೂ ನಡೆದು ಬಂದಿದೆ.
ಯದಿ ದ್ವಾದಶ ವರ್ಷಾಣಿ ನ ಚ ವರ್ಷತಿ ವಾಸವಃ |
ಸ್ಪರ್ಶಯಜ್ಞಂ ಕರಿಷ್ಯಾಮಿ ವಿಧಿರೇಷ ಸನಾತನಃ ॥19॥
ಒಂದು ವೇಳೆ ಹನ್ನೆರಡು ವರ್ಷಗಳ ಕಾಲ ಇಂದ್ರನು ಮಳೆಯನ್ನು ಸುರಿಸದಿದ್ದರೆ ಶಾಲಗ್ರಾಮಾದಿಗಳನ್ನು ಮುಟ್ಟಿ ಮಾಡುವ ದೇವಪೂಜಾದಿ ಯಜ್ಞವನ್ನೇ ನಾನು ಮಾಡುತ್ತೇನೆ. ಇದು ಹಿಂದಿನಿಂದ ನಡೆದು ಬಂದ ಪದ್ಧತಿಯಾಗಿದೆ.
ಯದಿ ದ್ವಾದಶ ವರ್ಷಾಣಿ ನ ಚ ವರ್ಷತಿ ವಾಸವಃ |
ವ್ಯಾಯಾಮೇನಾಹರಿಷ್ಯಾಮಿ ಯಜ್ಞಾನೇತಾನ್ ಯತವ್ರತಃ ॥20॥
ಒಂದು ವೇಳೆ ಹನ್ನೆರಡು ವರ್ಷಗಳ ಕಾಲ ಇಂದ್ರನು ಮಳೆಯನ್ನು ಸುರಿಸದಿದ್ದರೆ ವ್ರತ-ನಿಯಮಗಳನ್ನು ಪರಿಪಾಲಿಸುತ್ತಾ, ತೀರ್ಥಯಾತ್ರೆಗಳನ್ನು ಮಾಡುತ್ತಾ ಇಂತಹ ಸತ್ಕರ್ಮರೂಪವಾದ ಯಜ್ಞವನ್ನೇ ಅನುಷ್ಠಾನ ಮಾಡುತ್ತೇನೆ.
ಬೀಜಯಜ್ಞೋ ಮಯಾಽಯಂ ಭೋ ಬಹುವರ್ಷಸಮಾಚಿತಃ |
ಬೀಜೈಃ ಕೃತೈಃ ಕರಿಷ್ಯೇ ಚ ನಾತ್ರ ವಿಘ್ನೋ ಭವಿಷ್ಯತಿ ॥21॥
ನಾನು ಬೀಜಯಜ್ಞವನ್ನು ಮಾಡಲೆಂದೇ ಅನೇಕ ವರ್ಷಗಳಿಂದ ಬೀಜವನ್ನು ಸಂಗ್ರಹಿಸಿದ್ದೇನೆ. ಈ ಬೀಜಗಳಿಂದಲೇ ನಾನು ಯಜ್ಞ ಮಾಡುತ್ತೇನೆ. ನನಗೆ ಈ ವಿಷಯದಲ್ಲಿ ಯಾವ ವಿಘ್ನವೂ ಇರುವುದಿಲ್ಲ.
ನೇದಂ ಶಕ್ಯಂ ವೃಥಾ ಕರ್ತುಂ ಮಮ ಸತ್ರಂ ಕಥಂಚನ |
ನ ವರ್ಷಿಷ್ಯತಿ ವಾ ದೇವೋ ನ ವಾ ದೇವೋ ಭವಿಷ್ಯತಿ ॥22॥
ಇಂದ್ರನು ಇಲ್ಲಿ ಮಳೆ ಸುರಿಸಲಿ ಬಿಡಲಿ, ನಾನು ಆರಂಭಿಸಿರುವ ಯಾಗವನ್ನು ಮಾತ್ರ ಯಾವುದೇ ಕಾರಣದಿಂದಲೂ ವ್ಯರ್ಥವಾಗಲು

ಬಿಡುವುದಿಲ್ಲ.
ಅಥವಾಽಭ್ಯರ್ಥನಾಮಿಂದ್ರಃ ಕುರ್ಯಾನ್ನ ತ್ವಿಹ ಕಾಮತಃ |
ಸ್ವಯಮಿಂದ್ರೋ ಭವಿಷ್ಯಾಮಿ ಜೀವಯಿಷ್ಯಾಮಿ ಚ ಪ್ರಜಾಃ ॥23॥
ಅಥವಾ ನಾನು ಇಂದ್ರನ ಬಳಿ ಮಳೆಯನ್ನು ಸುರಿಸೆಂದು ಪ್ರಾರ್ಥಿಸುತ್ತೇನೆ. ನನ್ನ ಪ್ರಾರ್ಥನೆಯನ್ನು ಇಂದ್ರನು ನಿರಾಕರಿಸಿದಲ್ಲಿ ನಾನೇ ಇಂದ್ರನಾಗುತ್ತೇನೆ. ಸಮಸ್ತ ಪ್ರಜೆಗಳನ್ನು ನಾನೇ ರಕ್ಷಿಸುತ್ತೇನೆ.
ಯೋ ಯದಾಹಾರದಾನಶ್ಚ ಸ ತಥೈವ ಭವಿಷ್ಯತಿ |
ವಿಶೇಷಂ ಚೈವ ಕರ್ತಾಸ್ಮಿ ಪುನಃ ಪುನರತೀವ ಹಿ ॥24॥
ಯಾರು ಯಾವ ಆಹಾರದಿಂದ ಹುಟ್ಟುತ್ತಾರೋ ಅವರು ಅದೇ ಆಹಾರವನ್ನು ಅವಲಂಬಿಸಬೇಕಾಗುತ್ತದೆ. ಅದಕ್ಕಾಗಿ ಪುನಃ ಪುನಃ ವಿಶೇಷವಾದ ಆಹಾರವನ್ನು ಆಯಾ ಜೀವರಿಗೆ ವ್ಯವಸ್ಥೆ ಮಾಡುತ್ತೇನೆ.
ಅದ್ಯೇಹ ಸ್ವರ್ಣಮಭ್ಯೇತು ಯಚ್ಚಾನ್ಯದ್ ವಸು ದುಲರ್ಭಮ್ |
ತ್ರಿಷು ಲೋಕೇಷು ಯಚ್ಚಾಸ್ತಿ ತದಿಹಾಗಚ್ಛತು ಸ್ವಯಮ್ ॥25॥
ಮೂರುಲೋಕಗಳಲ್ಲಿ ಎಷ್ಟು ಸುವರ್ಣವಿದೆಯೋ, ಐಶ್ವರ್ಯವಿದೆಯೋ ಅವೆಲ್ಲವೂ ಇಲ್ಲಿ ತಾವಾಗಿಯೇ ಆಗಮಿಸಲಿ.
ದಿವಿ ಚಾಪ್ಸರಸಾಂ ಸಂಘಾಃ ಸಗಂಧರ್ವಾಃ ಸಕಿನ್ನರಾಃ |
ವಿಶ್ವಾವಸುಶ್ಚ ಯೇ ಚಾನ್ಯೇ ತೇ ಚ ಯುಷ್ಮಾನುಪಾಸತಾಮ್ ॥26॥
ದೇವಲೋಕದ ಅಪ್ಸರೆಯರ ಸಂಘಗಳು, ವಿಶ್ವಾವಸು ಮೊದಲಾದ ಗಂಧರ್ವರು, ಕಿನ್ನರರು, ಮುಂತಾದವರು ಇಲ್ಲಿಗೆ ಆಗಮಿಸಿ ಈ ಯಜ್ಞವನ್ನು ಉಪಾಸಿಸಲಿ.
ಉತ್ತರೇಭ್ಯಃ ಕುರುಭ್ಯಶ್ಚ ಯತ್ ಕಿಂಚಿದ್ ವಸು ವಿದ್ಯತೇ |
ಸರ್ವಂ ತದಿಹ ಯಜ್ಞೇ ಮೇ ಸ್ವಯಮೇವೋಪತಿಷ್ಠತಾಮ್ ॥27॥
ಸ್ವರ್ಗಃ ಸ್ವರ್ಗಸದಶ್ಚೈವ ಧರ್ಮಶ್ಚ ಸ್ವಯಮೇವ ಮೇ ॥28॥
ಉತ್ತರ ಕುರುಗಳಲ್ಲಿ ಯಾವ ಐಶ್ವರ್ಯವಿದೆಯೋ ಅವೆಲ್ಲವೂ ಈ ಯಜ್ಞಕ್ಕೆ ಆಗಮಿಸಲಿ. ಸ್ವರ್ಗವಾಸಿಗಳಾದ ದೇವತೆಗಳು, ಸ್ವರ್ಗ, ಧರ್ಮ, ಎಲ್ಲವೂ ತಾವಾಗಿಯೇ ಈ ಯಜ್ಞಕ್ಕೆ ಆಗಮಿಸಲಿ.
ವೈಶಂಪಾಯನಃ
ಇತ್ಯುಕ್ತೇ ಸರ್ವಮೇವೈತದ್ ಅಭವತ್ ತಸ್ಯ ಧೀಮತಃ |
ತಸ್ಯ ದೀಪ್ತಾಗ್ನಿಮಹಸಃ ತ್ವಗಸ್ತ್ಯಸ್ಯಾತಿತೇಜಸಾ ॥29॥
ವೈಶಂಪಾಯನ ಅಮಿತವಾದ ತೇಜಸ್ಸುಳ್ಳ, ಪ್ರಜ್ವಲಿಸುವ ಅಗ್ನಿಯಂತೆ ಬೆಳಗುತ್ತಿರುವ ಅಗಸ್ತ್ಯರು ಹೀಗೆ ಹೇಳಿದ ಕೂಡಲೇ ಮುನಿಗಳ ತಪಸ್ಸಿನ ಪ್ರಭಾವದಿಂದ ಸಮಸ್ತ ಐಶ್ವರ್ಯಗಳೂ ಅಲ್ಲಿಗೆ ಆಗಮಿಸಿದವು.
ತತಸ್ತೇ ಮುನಯೋ ದೃಷ್ಟ್ವಾ ಮುನೇಸ್ತಸ್ಯ ತಪೋ ಬಲಮ್ |
ವಿಸ್ಮಿತಾ ವಚನಂ ಪ್ರಾಹುರಿದಂ ಸರ್ವೇ ಮಹಾರ್ಥವತ್ ॥30॥
ಬಳಿಕ ಅವರ ತಪಸ್ಸಿನಿಂದ ಪ್ರಭಾವವನ್ನು ಕಂಡ ಸದಸ್ಯರಾದ ಋಷಿಗಳೆಲ್ಲರೂ ಅಗಸ್ತ್ಯರ ಶಕ್ತಿಯನ್ನು ಕಂಡು ಹೃಷ್ಟರಾದರು, ವಿಸ್ಮಿತರಾದರು. ಅರ್ಥವತ್ತಾದ ಮಾತುಗಳನ್ನು ಹೇಳಿದರು.
ಋಷಯಃ
ಪ್ರೀತಾಃ ಸ್ಮ ತವ ವಾಕ್ಯೇನ ನ ತ್ವಿಚ್ಛಾಮಸ್ತಪೋಧನ |
ಸ್ವೈರೇವ ಯಜ್ಞೈಸ್ತುಷ್ಟಾಃ ಸ್ಮ ನ್ಯಾಯೇನೇಚ್ಛಾಮಹೇ ವಯಮ್ ॥31॥
ಋಷಿಗಳು ಮಹರ್ಷಿಗಳೇ, ನಿಮ್ಮ ಮಾತಿನಿಂದ ನಾವು ಸಂತುಷ್ಟರಾಗಿದ್ದೇವೆ. ಆದರೆ ನಿಮ್ಮ ತಪಸ್ಸನ್ನು ವ್ಯರ್ಥಗೊಳಿಸಲು ಬಯಸುವುದಿಲ್ಲ. ನೀವು ಮಾಡುತ್ತಿರುವ ಯಜ್ಞದಿಂದಲೇ ನಾವು ಸಂತುಷ್ಟರಾಗಿದ್ದೇವೆ. ನ್ಯಾಯದಿಂದ ಅನ್ನವನ್ನು ನಾವು ಬಯಸುತ್ತೇವೆ.
ಯಜ್ಞದೀಕ್ಷಾಸ್ತಥಾ ಹೋಮಾನ್ ಯಚ್ಚಾನ್ಯನ್ಮಗಯಾಮಹೇ |
ತನ್ನೋಽಸ್ತು ಸ್ವರ್ಗದೈರ್ಯಜ್ಞೈರ್ನಾನ್ಯತೋ ಮೃಗಯಾಮಹೇ ॥32॥
ನ್ಯಾಯೇನೋಪಾರ್ಜಿತಾಹಾರಾಃ ಸ್ವಕರ್ಮನಿರತಾ ವಯಮ್ |
ದೇವಾಂಶ್ಚ ಬ್ರಹ್ಮಚರ್ಯೇಣ ನ್ಯಾಯೇನ ಪ್ರಾರ್ಥಯಾಮಹೇ ॥33॥
ಯಜ್ಞದೀಕ್ಷೆ, ಹೋಮ, ನಾವು ಅಪೇಕ್ಷಿಸಿದ ಯಾವುದೇ ವಸ್ತುಗಳು ಇಲ್ಲಿ ನಮಗೆ ದೊರೆಯುತ್ತಿವೆ. ನ್ಯಾಯದಿಂದ ಸಂಪಾದಿಸಿದ ಆಹಾರವನ್ನೇ ಸ್ವೀಕರಿಸುತ್ತಾ ನಮ್ಮ ಕರ್ಮಗಳಲ್ಲಿ ನಾವು ಆಸಕ್ತರಾಗಿದ್ದೇವೆ. ಈ ಪದಾರ್ಥಗಳು ನಮಗೆ ಸ್ವರ್ಗದ ಸುಖವನ್ನೇ ನೀಡುತ್ತಿವೆ. ನಾವು ಬ್ರಹ್ಮಚರ್ಯವನ್ನು ಪಾಲಿಸುತ್ತಾ, ನ್ಯಾಯರೀತಿಯಲ್ಲಿಯೇ ವೇದಗಳನ್ನು ಪಠಿಸುತ್ತಾ ದೇವತೆಗಳನ್ನು ಪ್ರಾರ್ಥಿಸುತ್ತಿದ್ದೇವೆ.
ನ್ಯಾಯೇನ ರಂಜಿತಾಃ ಕಾಲೇ ಗೃಹೇಭ್ಯೋ ನಿಃಸೃತಾ ವಯಮ್ |
ದೃಷ್ಟೈಶ್ಚ ವಿಧಿವದ್ ದ್ವಾರೈಸ್ತಪಸ್ತಪ್ಸ್ಯಾಮಹೇ ವಯಮ್ ॥34॥
ಭವತಃ ಸಮ್ಯಗೇಷಾ ಹಿ ಬುದ್ಧಿರ್ಹಿಂಸಾವಿವರ್ಜಿತಾ |
ಏತಾಮಹಿಂಸಾಂ ಯಜ್ಞೇಷು ಬ್ರೂಯಾಸ್ತ್ವಂ ಸತತಂ ವಿಭೋ ॥35॥
ನಾವು ಪ್ರಕೃತ ಮನೆಯನ್ನು ತೊರೆದು ವಾನಪ್ರಸ್ಥಾಶ್ರಮಿಗಳಾಗಿದ್ದೇವೆ. ಧರ್ಮಾನುಸಾರವಾಗಿ ತಪಸ್ಸನ್ನು ಆಚರಿಸಿದೆವು. ಹಿಂಸೆಯನ್ನು ತ್ಯಾಗ ಮಾಡಿ ಸತ್ಕರ್ಮಾನುಷ್ಠಾನ ಮಾಡುವ ನಿಮ್ಮ ಆಚಾರವು ನಮಗೆ ಇಷ್ಟವಾಗಿದೆ. ನೀವು ಯಜ್ಞದಲ್ಲಿ ಹಿಂಸೆಯನ್ನು

ಮಾಡಬಾರದೆಂದೇ ಯಾವಾಗಲೂ ಹೇಳುತ್ತಿರುತ್ತೀರಿ. ಈ ವಿಷಯವು ನಮ್ಮೆಲ್ಲರಿಗೂ ಸಂತೋಷವನ್ನುಂಟು ಮಾಡಿದೆ.
ಪ್ರೀತಾಸ್ತತೋ ಭವಿಷ್ಯಾಮೋ ವಯಂ ದ್ವಿಜವರೋತ್ತಮ |
ವಿಸರ್ಜಿತಾಃ ಸಮಾಪ್ತೌ ಚ ಸತ್ರಾದಸ್ಮಾದ್ ವ್ರಜೇಮಹಿ ॥36॥
ಯಜ್ಞವು ಸಮಾಪ್ತವಾದ ಬಳಿಕ ನಿಮ್ಮಿಂದ ಬೀಳ್ಕೊಡಲ್ಪಟ್ಟ ನಾವು ನಮ್ಮ ನಮ್ಮ ಆಶ್ರಮಗಳಿಗೆ ಸಂತುಷ್ಟರಾಗಿ ನಿರ್ಗಮಿಸುತ್ತೇವೆ.
ವೈಶಂಪಾಯನಃ
ತಥಾ ಕಥಯತಾಮೇವಂ ದೇವರಾಜಃ ಪುರಂದರಃ |
ವವರ್ಷ ಸುಮಹಾತೇಜಾ ದೃಷ್ಟ್ವಾ ತಸ್ಯ ತಪೋಬಲಮ್ ॥37॥
ವೈಶಂಪಾಯನ ಮಹರ್ಷಿಗಳೆಲ್ಲರೂ ಹೀಗೆ ಹೇಳುತ್ತಿರುವಾಗಲೇ ತೇಜಸ್ವಿಯಾದ ಇಂದ್ರನು ಅಗಸ್ತ್ಯರ ತಪೋಬಲವನ್ನು ನೋಡಿ ಯಥೇಷ್ಟವಾಗಿ ಮಳೆ ಸುರಿಸಿದನು.
ಅಸಮಾಪ್ತೌ ಚ ಯಜ್ಞಸ್ಯ ತಸ್ಯಾಮಿತಪರಾಕ್ರಮಃ |
ನಿಕಾಮವರ್ಷೀ ದೇವೇಂದ್ರೋ ಬಭೂವ ಜನಮೇಜಯ ॥38॥
ಜನಮೇಜಯನೇ, ಅಮಿತಪರಾಕ್ರಮಿಯಾದ ಇಂದ್ರನು ಅಗಸ್ತ್ಯರ ಯಜ್ಞವು ಮುಗಿಯುವ ತನಕ ಕೇಳಿದಷ್ಟು ಮಳೆಯನ್ನು ಸುರಿಸುತ್ತಿದ್ದನು.
ಪ್ರಸಾದಯಾಮಾಸ ಚ ತಮಗಸ್ತ್ಯಂ ತ್ರಿದಶೇಶ್ವರಃ |
ಸ್ವಯಮಭ್ಯೇತ್ಯ ರಾಜರ್ಷೇ ಪುರಸ್ಕೃತ್ಯ ಬೃಹಸ್ಪತಿಮ್ ॥39॥
ಇಂದ್ರದೇವನು ಬೃಹಸ್ಪತಿಯನ್ನು ಮುಂದೆ ಮಾಡಿಕೊಂಡು ಅಗಸ್ತ್ಯರ ಯಜ್ಞಭೂಮಿಗೆ ಆಗಮಿಸಿ ಅವರನ್ನು ಸಂತೋಷಗೊಳಿಸಿದನು.
ತತೋ ಯಜ್ಞಸಮಾಪ್ತೌ ತಾನ್ ವಿಸಸರ್ಜ ಮಹಾಮುನೀನ್ |
ಅಗಸ್ತ್ಯಃ ಪರಮಪ್ರೀತಃ ಪೂಜಯಿತ್ವಾ ಯಥಾವಿಧಿ ॥40॥
ಇದರಿಂದ ಪ್ರೀತರಾದ ಅಗಸ್ತ್ಯರು ಹನ್ನೆರಡು ವರ್ಷಗಳ ಯಜ್ಞವನ್ನು ನಿರಾತಂಕವಾಗಿ ಪರಿಸಮಾಪ್ತಿಗೊಳಿಸಿದರು. ಆ ಯಜ್ಞದಲ್ಲಿ ಋತ್ವಿಕ್ಕುಗಳಾಗಿ ಭಾಗವಹಿಸಿದ ಮುನಿಗಳೆಲ್ಲರನ್ನೂ ವಿಧಿಗನುಗುಣವಾಗಿ ಸತ್ಕರಿಸಿ, ಅವರವರ ಆಶ್ರಮಗಳಿಗೆ ಕಳುಹಿಸಿಕೊಟ್ಟರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಅಗಸ್ತ್ಯಯಜ್ಞಪ್ರಶಂಸನಂ ನಾಮ ಪಂಚನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತಾರನೆಯ ಅಧ್ಯಾಯ
ವೈಶಂಪಾಯನರು ಜನಮೇಜಯನಿಗೆ ಆ ಮುಂಗುಸಿಯ ನಿಜಸ್ವರೂಪವನ್ನು ನಿರೂಪಿಸಿದುದು.
ಜನಮೇಜಯಃ
ಕೋಽಸೌ ನಕುಲರೂಪೇಣ ಶಿರಸಾ ಕಾಂಚನೇನ ಹ |
ಪ್ರಾಹ ಮಾನುಷಯಾ ವಾಚಾ ಹ್ಯೇತತ್ ಪೃಷ್ಟೋ ವದಸ್ವ ಮೇ ॥1॥
ಜನಮೇಜಯ ಮಹರ್ಷಿಗಳೇ, ಬಂಗಾರದ ತಲೆಯಿಂದ ಕೂಡಿದ್ದ ಮುಂಗುಸಿಯ ರೂಪದಿಂದ ಧರ್ಮಜನ ಯಜ್ಞಮಂಟಪಕ್ಕೆ ಆಗಮಿಸಿದ ವ್ಯಕ್ತಿಯು ಯಾರು? ಮನುಷ್ಯನಂತೆ ಮಾತನಾಡಿದ ಆ ಮುಂಗುಸಿಯನ್ನು ನೋಡಿದರೆ ನನಗೆ ಈ ಪ್ರಶ್ನೆ ಹುಟ್ಟುತ್ತಿದೆ. ದಯಮಾಡಿ ಉತ್ತರಿಸಿ.
ವೈಶಂಪಾಯನಃ
ಏತತ್ಪೂರ್ವಂ ನ ಪೃಷ್ಟೋಽಹಂ ನ ಚಾಸ್ಮಾಭಿಃ ಪ್ರಭಾಷಿತಮ್ |
ಶ್ರೂಯತಾಂ ನಕುಲೋ ಯೋಽಸೌ ಯಥಾ ವಾಕ್ ಚಾಸ್ಯ ಮಾನುಷೀ ॥
ವೈಶಂಪಾಯನ ಜನಮೇಜಯನೇ, ಈ ವಿಷಯವನ್ನು ಹಿಂದೆ ನೀನು ಪ್ರಶ್ನಿಸಲಿಲ್ಲ. ಆದ್ದರಿಂದ ನಾನು ಹೇಳಲಿಲ್ಲ. ಆ ಮುಂಗುಸಿ ಯಾರೆಂಬುದನ್ನು, ಅದಕ್ಕೆ ಮನುಷ್ಯರಂತೆ ಮಾತನಾಡಲು ಹೇಗೆ ಸಾಧ್ಯವಾಯಿತೆಂಬುದನ್ನು ಹೇಳುತ್ತೇನೆ, ಕೇಳಿಸಿಕೊ.
ಶ್ರಾದ್ಧಂ ಸಂಕಲ್ಪಯಾಮಾಸ ಜಮದಗ್ನಿಃ ಪುರಾ ಕಿಲ |
ಹೋಮಧೇನುಸ್ತಮಾಗಚ್ಛತ್ ಸ್ವಯಂ ಚಾಪಿ ದುದೋಹ ತಾಮ್ ॥3॥
ಹಿಂದೊಮ್ಮೆ ಜಮದಗ್ನಿ ಋಷಿಯು ಶ್ರಾದ್ಧ ಮಾಡಲು ಸಂಕಲ್ಪಿಸಿದ್ದನು. ಅದಕ್ಕೆ ಸರಿಯಾಗಿ ಹೋಮಧೇನುವು ಜಗದಗ್ನಿಯ ಸಮೀಪ ಆಗಮಿಸಿತು. ಅದರ ಹಾಲನ್ನು ಜಮದಗ್ನಿಯು ಸ್ವಯಂ ತಾವೇ ಕರೆದರು.
ತತ್ ಕ್ಷೀರಂ ಸ್ಥಾಪಯಾಮಾಸ ಹೇಮಭಾಂಡೇ ಶುಭೇ ಶುಚೌ |
ತಚ್ಚ ಕ್ರೋಧಃ ಸ್ವರೂಪೇಣ ಪಿಠರಂ ಪರ್ಯಧರ್ಷಯತ್ ॥4॥
ಆ ಹಾಲನ್ನು ನೂತನವಾದ, ದೃಢವಾದ, ಪವಿತ್ರವಾದ ಪಾತ್ರೆಯಲ್ಲಿ ಜಮದಗ್ನಿಯು ಇಟ್ಟರು. ಆ ಪಾತ್ರೆಯಲ್ಲಿ ಕ್ರೋಧಾಭಿಮಾನಿಯಾದ ದೈತ್ಯನು ಪ್ರವೇಶಿಸಿದನು.
ಜಿಜ್ಞಾಸುಸ್ತಮೃಷಿಶ್ರೇಷ್ಠಂ ಕಿಂ ಕುರ್ಯಾದ್ ವಿಪ್ರಿಯೇ ಕೃತೇ |
ಇತಿ ಸಂಚಿಂತ್ಯ ದುರ್ಮೇಧಾ ಧರ್ಷಯಾಮಾಸ ತತ್ ಪಯಃ ॥5॥
ಜಮದಗ್ನಿಗಳಿಗೆ ಅಹಿತವಾದ ಕಾರ್ಯವನ್ನು ಮಾಡಿದರೆ ಅವರು ಏನು ಮಾಡುತ್ತಾರೆ ಎಂಬ ಆಶಯದಿಂದ ಕ್ರೋಧಾಭಿಮಾನಿ

ದೈತ್ಯನು ಆ ಹಾಲನ್ನು ಹಾಳು ಮಾಡಿದನು.
ತಮಾಜ್ಞಾಯ ಮುನಿಃ ಕ್ರೋಧಂ ನೈವಾಸ್ಯ ಚುಕುಪೇ ತತಃ |
ಸ ತು ಕ್ರೋಧಸ್ತಮಾಸಾದ್ಯ ಪ್ರಾಂಜಲಿರ್ಮೂರ್ತಿಮಾನ್ ಸ್ಥಿತಃ ॥6॥
ದೈತ್ಯನು ಹಾಲನ್ನು ಕೆಡಿಸಿದ ವಿಷಯವನ್ನು ತಿಳಿದ ಋಷಿಗಳು ಅವನ ಮೇಲೆ ಸಿಟ್ಟಾಗಲಿಲ್ಲ. ಮರುಕ್ಷಣದಲ್ಲಿಯೇ ಕ್ರೋಧಾಭಿಮಾನಿ ದೈತ್ಯನು ಪ್ರತ್ಯಕ್ಷನಾಗಿ ನಿಂತು ಕೈಮುಗಿದು ಹೀಗೆ ಹೇಳಿದನು.
ಜಿತೋಽಸ್ಮೀತಿ ಭೃಗುಶ್ರೇಷ್ಠಂ ಭೃಗವೋ ಹ್ಯತಿರೋಷಣಾಃ |
ಲೋಕೇ ಮಿಥ್ಯಾಪ್ರವಾದೋಽಯಂ ಯತ್ ತ್ವಯಾಽಸ್ಮಿ ಪರಾಜಿತಃ ॥7॥
ಮುನಿಶ್ರೇಷ್ಠನೇ, ಭೃಗುಶ್ರೇಷ್ಠನೇ, ಭೃಗುವಂಶದವರು ಮಹಾಕೋಪಿಷ್ಠರು ಎಂದು ಲೋಕದಲ್ಲಿ ಪ್ರವಾದವಿತ್ತು. ಅದನ್ನು ನೀನು ಸುಳ್ಳಾಗಿಸಿರುವಿ. ನಿನಗೆ ನಾನು ಅಧೀನನಾಗಿದ್ದೇನೆ.
ಸೋಽಯಂ ತ್ವಯಿ ಸ್ಥಿತೋ ಹ್ಯದ್ಯ ಕ್ಷಮಾವತಿ ಮಹಾತ್ಮನಿ |
ಬಿಭೇಮಿ ತಪಸಃ ಸಾಧೋ ಪ್ರಸಾದಂ ಕುರು ಮೇ ಪ್ರಭೋ ॥8॥
ನಾನು ಅಪರಾಧವನ್ನು ಮಾಡಿದ್ದರೂ ಕ್ಷಮಾಶೀಲನಾಗಿರುವ ನಿನ್ನಂತಹ ಮಹಾತ್ಮರಿಗೆ ನಾನು ಹೆದರುತ್ತಿದ್ದೇನೆ. ತಪಸ್ವಿಯಾದ ಸಜ್ಜನನೇ ನನ್ನಲ್ಲಿ ಕರುಣೆ ತೋರು.
ಜಮದಗ್ನಿಃ
ಸಮ್ಯಗ್ ದೃಷ್ಟೋಽಸಿ ಮೇ ಕ್ರೋಧ ಗಚ್ಛ ತ್ವಂ ವಿಗತಜ್ವರಃ |
ನ ಮಮಾಪಕೃತಂ ತೇಽದ್ಯ ನ ಮನ್ಯುರ್ವಿದ್ಯತೇ ತ್ವಯಿ ॥9॥
ಜಮದಗ್ನಿ ಕ್ರೋಧನೇ, ನಿನ್ನನ್ನು ನಾನು ಚೆನ್ನಾಗಿ ನೋಡಿದ್ದೇನೆ. ನಿನ್ನನ್ನು ನಾನು ಶಪಿಸುವುದಿಲ್ಲ. ನೀನು ನನಗೆ ಅಪರಾಧವನ್ನು ಎಸಗಿಲ್ಲವಾದ್ದರಿಂದ ನಿನ್ನ ವಿಷಯದಲ್ಲಿ ನಾನು ಸಿಟ್ಟಾಗಲಿಲ್ಲ.
ಯಾನುದ್ದಿಶ್ಯ ತು ಸಂಕಲ್ಪಃ ಪಯಸೋಽದ್ಯ ಕೃತೋ ಮಯಾ |
ಪಿತರಸ್ತೇ ಮಹಾಭಾಗಾಸ್ತೇಭ್ಯೋ ಬುದ್ಧ್ಯಸ್ವ ಗಮ್ಯತಾಮ್ ॥10॥
ಆದರೆ ನಾನು ಯಾವ ಪಿತೃಗಳ ಶ್ರಾದ್ಧವನ್ನು ಸಂಕಲ್ಪಿಸಿ ಅವರಿಗಾಗಿ ಹಾಲನ್ನು ಇಟ್ಟಿದ್ದೆನೋ ಆ ಭಾಗ್ಯಶಾಲಿಗಳಾದ ಪಿತೃಗಳು ನಾನಿಟ್ಟಿರುವ ಹಾಲಿಗೆ ಅಧಿಪತಿಗಳಾಗಿದ್ದರು. ಆದ್ದರಿಂದ ನೀನು ಅವರ ಬಳಿಯೇ ಹೋಗಿ ನೀನು ಮಾಡಿದ ಅಪರಾಧವನ್ನು ತಿಳಿಸು.
ವೈಶಂಪಾಯನಃ
ಇತ್ಯುಕ್ತೋ ಜಾತಸನಾತ್ರಸಸ್ತತ್ರೈವಾಂತರಧೀಯತ |
ಪಿತೄಣಾಮಭಿಷಂಗಾತ್ ತು ನಕುಲತ್ವಮುಪಾಗತಃ ॥11॥
ಜಮದಗ್ನಿಗಳು ಹೀಗೆ ಹೇಳಿದ ಕೂಡಲೇ ಶಾಪದ ಭಯದಿಂದ ಕ್ರೋಧನಾಮಕ ದೈತ್ಯನು ಅಲ್ಲಿಂದ ಕಣ್ಮರೆಯಾದನು. ಮುಂದೆ ಆ ಪಿತೃಗಳ ಶಾಪದಿಂದ ಮುಂಗುಸಿಯಾಗಿ ಹುಟ್ಟಿದನು.
ಸ ತಾನ್ ಪ್ರಸಾದಯಾಮಾಸ ಶಾಪಸ್ಯಾಂತೋ ಭವೇದಿತಿ |
ತೈಶ್ಚಾಪ್ಯುಕ್ತೋ ಯದಾ ಧರ್ಮಂ ಕ್ಷೇಪ್ಸ್ಯಸೇ ಮೋಕ್ಷ್ಯಸೇ ತದಾ ॥12॥
ಪಿತೃದೇವತೆಗಳು ನನ್ನನ್ನು ಶಪಿಸುತ್ತಾರೆಂದು ಭಾವಿಸಿದ ಕ್ರೋಧ ದೈತ್ಯನು ಪಿತೃದೇವತೆಗಳನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದನು. ಅದಕ್ಕೆ ಪ್ರತಿಯಾಗಿ ಪಿತೃಗಳು ನೀನು ಧರ್ಮರಾಜನನ್ನು ನಿಂದಿಸಿದಾಗ ಶಾಪದ ವಿಮೋಚನೆಯಾಗುತ್ತದೆ ಎಂದು ಹೇಳಿದರು.
ಇತ್ಯುಕ್ತೋ ಯಜ್ಞಿಯಾನ್ ದೇಶಾನ್ ಧರ್ಮಾರಣ್ಯಾನಿ ಚೈವ ಹ |
ಜುಗುಪ್ಸನ್ ಪರಿಧಾವನ್ ಸ ತಂ ಯಜ್ಞಂ ಸಮುಪಾಸದತ್ ॥13॥
ಹೀಗೆ ಹೇಳಿದ ಬಳಿಕ ಮುಂಗುಸಿಯಾದ ಕ್ರೋಧನು ಜುಗುಪ್ಸಿತನಾಗಿ, ದೇಶ ದೇಶಗಳಲ್ಲಿದ್ದ ಯಜ್ಞಮಂಟಪಗಳನ್ನೂ, ಧರ್ಮಾರಣ್ಯಗಳನ್ನು ಸುತ್ತುತ್ತಾ ಕೊನೆಗೆ ಧರ್ಮರಾಜನ ಯಜ್ಞಮಂಟಪಕ್ಕೆ ಆಗಮಿಸಿದನು.
ಧರ್ಮಪುತ್ರಮಥಾಕ್ಷಿಪ್ಯ ಸಕ್ತುಪ್ರಸ್ಥೇನ ತೇನ ಸಃ |
ಮುಕ್ತಶಾಪಸ್ತತಃ ಕ್ರೋಧೋ ಧರ್ಮೋ ಹ್ಯಾಸೀದ್ ಯುಧಿಷ್ಠಿರಃ ॥14॥
ಮುಂಗುಸಿಯ ರೂಪದಲ್ಲಿರುವ ಕ್ರೋಧನಾಮಕ ದೈತ್ಯನು ಒಂದು ಸೇರು ಹಿಟ್ಟಿನ ದಾನದ ಮಹಿಮೆಯನ್ನು ಹೇಳಿ, ಧರ್ಮರಾಜನ ಯಜ್ಞವನ್ನು ನಿಂದಿಸಿ, ಶಾಪದಿಂದ ಮುಕ್ತನಾಗಿ ಅಂಧಂತಮಸ್ಸನ್ನೇ ಪಡೆದನು. ಆದ್ದರಿಂದ ಯುಧಿಷ್ಠಿರನು ಮಾಡಿದ ಸತ್ಕರ್ಮವು ಧರ್ಮಯುತವೇ ಆಗಿತ್ತು.
ಏವಮೇತದ್ ಯಥಾ ವೃತ್ತಂ ತಸ್ಯ ಯಜ್ಞೇ ಮಹಾತ್ಮನಃ |
ಪಶ್ಯತಾಂ ಚಾಪಿ ನಸ್ತತ್ರ ನಕುಲೋಽಂತರ್ಹಿತಸ್ತದಾ ॥15॥
ಮಹಾತ್ಮನಾದ ಯುಧಿಷ್ಠಿರನ ಯಾಗವು ಪರಿಸಮಾಪ್ತಿ ಹೊಂದಿದ ಬಳಿಕ ಈ ಘಟನೆಯು ನಡೆಯಿತು. ನಾವೆಲ್ಲರೂ ನೋಡುತ್ತಿದ್ದಂತೆ ಆ ಮುಂಗುಸಿಯು ಅಲ್ಲಿಂದ ಕಣ್ಮರೆಯಾಯಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ನಕುಲಸ್ವರೂಪಕಥನಂ ನಾಮ ಷಣ್ಣವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿಯಿತು.
* * * * *

ತೊಂಬತ್ತೇಳನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನಿಗೆ ವೈಷ್ಣವಧರ್ಮವನ್ನು ಉಪದೇಶಿಸಲು ಪ್ರಾರಂಭಿಸಿದುದು.
ಜನಮೇಜಯಃ
ಅಶ್ವಮೇಧೇ ಪುರಾ ವೃತ್ತೇ ಕೇಶವಂ ಕೇಶಿಸೂದನಮ್ |
ಧರ್ಮಸಂಶಯಮುದ್ದಿಶ್ಯ ಕಿಮಪೃಚ್ಛತ್ ಪಿತಾಮಹಃ ॥1॥
ಜನಮೇಜಯ ಪೂಜ್ಯರೇ, ಅಶ್ವಮೇಧಯಜ್ಞವು ಪರಿಸಮಾಪ್ತಿ ಹೊಂದಿದ ಬಳಿಕ ನನ್ನ ಅಜ್ಜನಾದ ಯುಧಿಷ್ಠಿರನು ಧರ್ಮಸಂಶಯದ ನಿವಾರಣೆಗಾಗಿ ಕೇಶಿನಾಮಕ ದೈತ್ಯನನ್ನು ಕೊಂದಿರುವ ಕೃಷ್ಣನ ಬಳಿ ಏನೆಂದು ಪ್ರಶ್ನಿಸಿದನು?
ವೈಶಂಪಾಯನಃ
ಪಶ್ಚಿಮೇನಾಶ್ವಮೇಧೇನ ಯದಾ ಸ್ನಾತೋ ಯುಧಿಷ್ಠಿರಃ |
ತದಾ ರಾಜಾ ನಮಸ್ಕೃತ್ಯ ಕೇಶವಂ ವಾಕ್ಯಮಬ್ರವೀತ್ ॥2॥
ವೈಶಂಪಾಯನ ಜನಮೇಜಯನೇ, ಸಮಸ್ತ ಅಶ್ವಮೇಧಯಾಗದ ಪರಿಸಮಾಪ್ತಿಯ ಬಳಿಕ ಅವಭೃಥಸ್ನಾನವನ್ನು ಮಾಡಿದ ಯುಧಿಷ್ಠಿರನು ಕೇಶವನನ್ನು ನಮಸ್ಕರಿಸಿ ಹೀಗೆ ಹೇಳಿದನು.
ಯುಧಿಷ್ಠಿರಃ
ಭಗವನ್ ವೈಷ್ಣವಾ ಧರ್ಮಾಃ ಕಿಂಫಲಾಃ ಕಿಂಪರಾಯಣಾಃ |
ಕಿಂ ಧರ್ಮಮಧಿಕೃತ್ಯಾಥ ಭವತೋತ್ಪಾದಿತಾಃ ಪುರಾ ॥3॥
ಯುಧಿಷ್ಠಿರ ಶ್ರೀಕೃಷ್ಣನೇ, ವೈಷ್ಣವಧರ್ಮಗಳಿಗೆ ಏನು ಫಲವಿದೆ? ಯಾರು ಈ ಧರ್ಮಗಳನ್ನು ಆಶ್ರಯಿಸಿರುತ್ತಾರೆ? ಈ ಧರ್ಮಗಳನ್ನು ಯಾರನ್ನು ಉದ್ದೇಶಿಸಿಕೊಂಡು ನೀನು ಸ್ಥಾಪಿಸಿರುವಿ?
ಯದಿ ತೇಽಹಮನುಗ್ರಾಹ್ಯಃ ಪ್ರಿಯೋ ವಾ ಮಧುಸೂದನ |
ಶ್ರೋತವ್ಯಾ ಯದಿ ವಾ ಕೃಷ್ಣ ತಾನ್ ಮೇ ಕಥಯ ಸುವ್ರತ ॥4॥
ಈ ವೈಷ್ಣವ ಧರ್ಮಗಳನ್ನು ನನಗೆ ಉಪದೇಶಿಸಬೇಕೆಂದು ಪ್ರೀತಿಯುಳ್ಳವನಾಗಿದ್ದಲ್ಲಿ, ನಾನು ಕೇಳಲು ಅರ್ಹನಾಗಿದ್ದಲ್ಲಿ ಮಧುಸೂದನನೇ, ಆ ವೈಷ್ಣವಧರ್ಮಗಳನ್ನು ನನಗೆ ಬೋಧಿಸು.
ಪವಿತ್ರಾಃ ಕಿಲ ತೇ ಧರ್ಮಾಃ ಸರ್ವೇ ಪಾಪಪ್ರಣಾಶನಾಃ |
ಸರ್ವಧರ್ಮೋತ್ತಮಾಃ ಪುಣ್ಯಾ ಭಗವಂಸ್ತ್ವನ್ಮುಖೋದ್ಗತಾಃ ॥5॥
ಆ ವೈಷ್ಣವಧರ್ಮಗಳು ಪವಿತ್ರವಾದವುಗಳು. ಕೇಳುವುದರಿಂದಲೇ ಪಾಪಗಳನ್ನು ಪರಿಹರಿಸುವ ಸಾಮರ್ಥ್ಯವುಳ್ಳವುಗಳು. ನಿನ್ನ ಮುಖದಿಂದ ಹೊರಹೊಮ್ಮಿದ ಪುಣ್ಯತಮವಾದ ಧರ್ಮಗಳು ಎಲ್ಲ ಧರ್ಮಗಳಿಗಿಂತಲೂ ಉತ್ತಮ ಎಂದು ಕರೆಸಿ ಕೊಂಡಿವೆ.
ಯಚ್ಛ್ರುತ್ವಾ ಬ್ರಹ್ಮಹಾ ಗೋಘ್ನೋ ಮಾತೃಹಾ ಗುರುತಲ್ಪಗಃ |
ಪಾಕಭೇದೀ ಕೃತಘ್ನಶ್ಚ ಸುರಾಪೋ ಬ್ರಹ್ಮವಿಕ್ರಯೀ ॥6॥
ಯಾವ ವೈಷ್ಣವಧರ್ಮಗಳನ್ನು ಕೇಳಿದ ಬಳಿಕ ಬ್ರಹ್ಮಹತ್ಯೆಯನ್ನು ಮಾಡಿದವನು, ಗೋಹತ್ಯೆಯನ್ನು ಮಾಡಿದವನು, ಪಿತೃಹತ್ಯೆಯನ್ನು ಮಾಡಿದವನು, ಮಾತೃಹತ್ಯೆಯನ್ನು ಎಸಗಿದವನು, ಗುರುತಲ್ಪಗಾಮಿಯಾದವನು, ಸ್ವಾರ್ಥಿಯಾಗಿ ಉಂಡವನು, ಕೃತಘ್ನನು, ಸುರಾಪಾನ ಮಾಡಿದವನು, ವೇದಗಳನ್ನು ಮಾರಾಟ ಮಾಡಿದವನು;
ಮಿತ್ರವಿಶ್ವಾಸಘಾತೀ ಚ ಭ್ರೂಣಹಾ ವೀರಹಾ ತಥಾ |
ತಪೋವಿಕ್ರಯಿಣಶ್ಚೈವ ದಾನವಿಕ್ರಯಿಣಸ್ತಥಾ ॥7॥
ಮಿತ್ರರಲ್ಲಿ ವಿಶ್ವಾಸಘಾತ ಮಾಡಿದವನು, ಭ್ರೂಣಹತ್ಯೆಯನ್ನು ಮಾಡಿದವನು, ವೀರರನ್ನು ಕೊಂದವನು, ತಪಸ್ಸನ್ನು ಮಾರಾಟ ಮಾಡಿದವನು, ದಾನವನ್ನು ಮಾರಾಟ ಮಾಡಿದವನು;
ಆತ್ಮವಿಕ್ರಯಿಣೋ ಮೂಢಾ ಜೀವೇದ್ಯಶ್ಚ ವಿಕರ್ಮಭಿಃ |
ಪಾಪಾಚಾರಾ ನೈಕೃತಿಕಾ ಡಾಂಭಿಕಾ ದೂಷಕಾಸ್ತಥಾ ॥8॥
ತನ್ನನ್ನೇ ಮಾರಿಕೊಂಡವನು, ಮೂರ್ಖನು, ದುಷ್ಕರ್ಮಗಳಲ್ಲಿ ರತನಾದವನು, ಪಾಪಾಚಾರಿಯು, ಡಾಂಭಿಕನು, ದೂಷಕನು, ಕರ್ಮಭ್ರಷ್ಟನು;
ರಸಭೇದಕರಾ ಯೇ ಚ ಯೇ ಚ ಸ್ಯುರ್ಬ್ರಹ್ಮದೂಷಕಾಃ |
ಶೂದ್ರಪ್ರೇಷ್ಯಕರಾಶ್ಚೋರಾ ವಿಪ್ರಾ ಯೇ ಚ ಪುರೋಹಿತಾಃ ॥9॥
ಆಹಾರಗಳಲ್ಲಿ ಅನ್ಯಾಯವನ್ನು ಎಸಗಿದವನು, ಬ್ರಾಹ್ಮಣರನ್ನು ದೂಷಿಸಿದವನು, ವೇದಗಳನ್ನು ದೂಷಿಸಿದವನು, ಶೂದ್ರರಿಂದ ಉಪಚರಿಸಿಕೊಂಡ ಕಳ್ಳರಾದ ಪುರೋಹಿತರು, ಬ್ರಾಹ್ಮಣರು;
ನಿಕ್ಷೇಪಹಾರಿಣಃ ಸ್ತ್ರೀಘ್ನಾಸ್ತಥಾ ಯೇ ಪಾರದಾರಿಕಾಃ |
ಏತೇ ಚಾನ್ಯೇ ಚ ಬಹವೋ ಮುಚ್ಯಂತೇ ತೇಪಿ ಕಿಲ್ಬಿಷಾತ್ ॥10॥
ಅಡವಿಟ್ಟ ವಸ್ತುವನ್ನು ಅಪಹರಿಸಿದವರು, ಸ್ತ್ರೀಹತ್ಯೆ ಮಾಡಿದವರು, ಮತ್ತೊಬ್ಬರ ಹೆಣ್ಣನ್ನು ಅಪೇಕ್ಷಿಸಿದವರು, ಇನ್ನೂ ತಿಳಿಯದೆ ಇರುವ ಅನೇಕ ಪಾಪಗಳನ್ನು ಮಾಡಿದವರು ಎಲ್ಲ ಪಾಪಗಳಿಂದಲೂ ಮುಕ್ತರಾಗುತ್ತರೆ.
ತಾನಾಚಕ್ಷ್ವ ಸುರಶ್ರೇಷ್ಠ ತ್ವದ್ಭಕ್ತಸ್ಯ ಮಮಾಚ್ಯುತ ॥11॥
ಅಂತಹ ವೈಷ್ಣವಧರ್ಮಗಳನ್ನು ನಿನ್ನ ಭಕ್ತನಾದ ನನಗೆ ಅಚ್ಯುತನೇ, ಸುರಶ್ರೇಷ್ಠನೇ ಉಪದೇಶಿಸು.
ವೈಶಂಪಾಯನಃ
ಇತ್ಯೇವಂ ಕಥಿತೇ ದೇವೇ ಧರ್ಮಪುತ್ರೇಣ ಸಂಸದಿ |

ವಸಿಷ್ಠಾದ್ಯಾಸ್ತಪೋಯುಕ್ತಾ ಮುನಯಸ್ತತ್ತ್ವದರ್ಶಿನಃ ॥12॥
ಧರ್ಮಪುತ್ರನಾದ ಯುಧಿಷ್ಠಿರನು ಸಭೆಯ ಮಧ್ಯದಲ್ಲಿ ಭಗವಂತನನ್ನು ಕುರಿತು ಹೀಗೆ ಹೇಳುತ್ತಿರಲು ತಪೋನಿರತರಾದ ತತ್ತ್ವದರ್ಶಿಗಳಾದ ವಸಿಷ್ಠಾದಿ ಋಷಿಗಳು, ಭಕ್ತವೃಂದವು ಅಲ್ಲಿ ಸೇರಿತ್ತು.
ಶ್ರೋತುಕಾಮಾಃ ಪರಂ ಗುಹ್ಯಂ ಭಕ್ತಿಮಂತೋ ನಿರತ್ಯಯಾಃ |
ತಥಾ ಭಾಗವತಾಶ್ಚೈವ ತತಸ್ತಂ ಪರ್ಯವಾರಯನ್ ॥13॥
ಪರಮಶ್ರೇಷ್ಠವಾದ, ಉತ್ತಮೋತ್ತಮವಾದ ವೈಷ್ಣವಧರ್ಮವನ್ನು ಕೇಳಬೇಕೆಂಬ ಬಯಕೆಯಿಂದ ಭಾಗವತೋತ್ತಮರೆಲ್ಲರೂ ಭಕ್ತಿಯಿಂದ ಕೃಷ್ಣನನ್ನು ಸುತ್ತುವರಿದರು.
ಯುಧಿಷ್ಠಿರಃ
ತತ್ತ್ವತಸ್ತವ ಭಾವೇನ ಪಾದಮೂಲಮುಪಾಗತಮ್ |
ಯದಿ ಜಾನಾಸಿ ಮಾಂ ಭಕ್ತಂ ಸ್ನಿಗ್ಧಂ ವಾ ಭಕ್ತವತ್ಸಲ ॥14॥
ಭಕ್ತವತ್ಸಲನೇ, ನಾನು ಶುದ್ಧವಾದ ಭಾವನೆಯಿಂದ ನಿನ್ನ ಪಾದಕಮಲಗಳನ್ನು ಆಶ್ರಯಿಸಿರುತ್ತೇನೆ. ನನ್ನನ್ನು ಪ್ರೀತಿಪಾತ್ರನೆಂದು, ಭಕ್ತನೆಂದು, ನಿನ್ನ ಅನುಗ್ರಹಕ್ಕೆ ಯೋಗ್ಯನೆಂದು ಭಾವಿಸಿದಲ್ಲಿ ವೈಷ್ಣವಧರ್ಮವನ್ನು ಉಪದೇಶಿಸು.
ಧರ್ಮಗುಹ್ಯಾನಿ ಸರ್ವಾಣಿ ವೇತ್ತುಮಿಚ್ಛಾಮಿ ತತ್ತ್ವತಃ |
ಧರ್ಮಾನ್ ಕಥಯ ದೇವೇಶ ಯದ್ಯನುಗ್ರಹಭಾಗಹಮ್ ॥15॥
ರಹಸ್ಯವಾದ ವೈಷ್ಣವಧರ್ಮಗಳನ್ನು ನಿನ್ನ ಮುಖದಿಂದ ಯಥಾರ್ಥವಾಗಿ ತಿಳಿಯಬೇಕೆಂದುಕೊಂಡಿರುವೆ. ನಾನು ನಿನ್ನ ಅನುಗ್ರಹಕ್ಕೆ ಪಾತ್ರನಾದವನು ಎಂದಿದ್ದಲ್ಲಿ ದೇವೇಶನೇ, ಆ ವೈಷ್ಣವಧರ್ಮಗಳನ್ನು ಉಪದೇಶಿಸು.
ಶ್ರುತಾ ಮೇ ಮಾನವಾ ಧರ್ಮಾ ವಾಸಿಷ್ಠಾಃ ಕಾಶ್ಯಪಾಸ್ತಥಾ |
ಗಾರ್ಗೀಯಾ ಗೌತಮೀಯಾಶ್ಚ ತಥಾ ಗೋಪಾಲಕಸ್ಯ ಚ ॥16॥
ಪರಾಶರಕೃತಾಃ ಪೂರ್ವಮಾತ್ರೇಯಸ್ಯ ಚ ಧೀಮತಃ |
ಔಮಾ ಮಾಹೇಶ್ವರಾಶ್ಚೈವ ನಂದಿಧರ್ಮಾಶ್ಚ ಪಾವನಾಃ ॥17॥
ನಾನು ಮಾನವ ಧರ್ಮಗಳನ್ನು ಕೇಳಿದ್ದೇನೆ. ವಸಿಷ್ಠ, ಕಶ್ಯಪ, ಗರ್ಗ, ಗೌತಮ, ಗೋಪಾಲಕ, ಪರಾಶರ, ಬುದ್ಧಿವಂತನಾದ ಅತ್ರಿ, ಉಮೆ, ಮಹೇಶ್ವರ, ನಂದಿ ಇವರೆಲ್ಲರಿಗೂ ಸಂಬಂಧಿಸಿದ ಪುಣ್ಯಪ್ರದವಾದ ಧರ್ಮಗಳನ್ನೂ ಕೇಳಿದ್ದೇನೆ.
ಬ್ರಹ್ಮಣಾ ಕಥಿತಾ ಯೇ ಚ ಕೌಮಾರಾಶ್ಚ ಶ್ರುತಾ ಮಯಾ |
ಧೂಮಾಯನಕೃತಾ ಧರ್ಮಾಃ ಕಾಂಡವೈಶ್ವಾನರಾ ಅಪಿ ॥18॥
ಭಾರ್ಗವಾ ಯಾಜ್ಞವಲ್ಕ್ಯಾಶ್ಚ ಮಾರ್ಕಂಡೇಯಕೃತಾಸ್ತಥಾ |
ಭಾರದ್ವಾಜಕೃತಾ ಯೇ ಚ ಬೃಹಸ್ಪತಿಕೃತಾಶ್ಚ ಯೇ ॥19॥
ಕುಣೇಶ್ಚ ಕುಣಿಬಾಹೋಶ್ಚ ವಿಶ್ವಾಮಿತ್ರಕೃತಾಶ್ಚ ಯೇ |
ಸುಮಂತುಜೈಮಿನಿಕೃತಾಃ ಶಾಕುನೇಯಾಸ್ತಥೈವ ಚ ॥20॥
ಪುಲಸ್ತ್ಯಪುಲಹೋದ್ಗೀತಾಃ ಪಾವಕೀಯಾಸ್ತಥೈವ ಚ |
ಅಗಸ್ತ್ಯಗೀತಾ ಮೌದ್ಗಲ್ಯಾಃ ಶಾಂಡಿಲ್ಯಾಃ ಶಲಭಾಯನಾಃ ॥21॥
ವಾಲಖಿಲ್ಯಕೃತಾ ಯೇ ಚ ಯೇ ಚ ಸಪ್ತರ್ಷಿಭಿಃ ಕೃತಾಃ |
ಆಪಸ್ತಂಬಕೃತಾ ಧರ್ಮಾಃ ಶಂಖಸ್ಯ ಲಿಖಿತಸ್ಯ ಚ ॥22॥
ಹಾಗೆಯೇ ಕಾರ್ತಿಕೇಯ, ಧೂಮಾಯನ, ಕಾಂಡ, ವೈಶ್ವಾನರ, ಭಾರ್ಗವ, ಯಾಜ್ಞವಲ್ಕ್ಯ, ಮಾರ್ಕಂಡೇಯ, ಭಾರದ್ವಾಜ, ಬೃಹಸ್ಪತಿ, ಕುಣಿ, ಕುಣಿಬಾಹು, ವಿಶ್ವಾಮಿತ್ರ, ಸುಮಂತು, ಜೈಮಿನಿ, ಶಕುನಿ, ಪುಲಸ್ತ್ಯ, ಪುಲಹ, ಅಗ್ನಿ, ಅಗಸ್ತ್ಯ, ಮುದ್ಗಲ, ಶಾಂಡಿಲ್ಯ, ಶಲಭ, ವಾಲಖಿಲ್ಯ, ಸಪ್ತರ್ಷಿಗಳು, ಆಪಸ್ತಂಭ, ಶಂಖ, ಲಿಖಿತ - ಇವರೆಲ್ಲರೂ ಹೇಳಿರುವ ಧರ್ಮಪ್ರವಚನಗಳನ್ನೂ ಕೇಳಿದ್ದೇನೆ.
ಪ್ರಾಜಾಪತ್ಯಾಸ್ತಥಾ ಯಾಮ್ಯಾ ಮಾಹೇಂದ್ರಾಶ್ಚ ಶ್ರುತಾ ಮಯಾ |
ವೈಯಾಘ್ರವ್ಯಾಸಗೀತಾಶ್ಚ ವಿಭಾಂಡಕಕೃತಾಶ್ಚ ಯೇ ॥23॥
ನಾರದೀಯಾಃ ಶ್ರುತಾ ಧರ್ಮಾಃ ಕಾಪೋತಾಶ್ಚ ಶ್ರುತಾ ಮಯಾ |
ತಥಾ ವಿದುರವಾಕ್ಯಾನಿ ಭೃಗೋರಂಗಿರಸಸ್ತಥಾ ॥24॥
ಕ್ರೌಂಚಿ ಮೃದಂಗಗೀತಾಶ್ಚ ಸೌರ್ಯಾ ಹಾರೀತಕಾಸ್ತಥಾ |
ಪಿಂಗವರ್ಮಕೃತಾಶ್ಚಾಪಿ ಕೌಂತಪಾಃ ಪಾಂಸುಬಾಲಿಕಾಃ ॥25॥
ಉದ್ದಾಲಕಕೃತಾ ಧರ್ಮಾ ಔಶನಸ್ಯಾಸ್ತಥೈವ ಚ |
ವೈಶಂಪಾಯನಗೀತಾಶ್ಚ ಯೇ ಚಾನ್ಯೇಪ್ಯೇಽವಮಾದಯಃ ॥26॥
ಪ್ರಜಾಪತಿ, ಯಮ, ಮಹೇಂದ್ರ, ವೈಯಾಘ್ರಪಾದ, ವ್ಯಾಸ, ವಿಭಾಂಡಕರು, ನಾರದರು, ಕಪೋತರು, ವಿದುರ, ಭೃಗು, ಅಂಗಿರಸರು, ಕ್ರೌಂಚರು, ಮೃದಂಗ, ಸೂರ್ಯ, ಹಾರೀತ, ಪಿಂಗವರ್ಮ, ಕುಂತಪ, ಪಾಂಸುಬಾಲ, ಉದ್ದಾಲಕ, ಶುಕ್ರ, ವೈಶಂಪಾಯನ ಮುಂತಾದ ಮಹಾನುಭಾವರು ಹೇಳಿದ ಧರ್ಮಪ್ರವಚನಗಳನ್ನು ಕೇಳಿದ್ದೇನೆ.
ಏತೇಭ್ಯಃ ಸರ್ವಧರ್ಮೇಭ್ಯೋ ದೇವ ತ್ವನ್ಮುಖನಿಃಸೃತಾಃ |
ಪಾವನತ್ವಾತ್ ಪವಿತ್ರತ್ವಾದ್ ವಿಶಿಷ್ಟಾ ಇತಿ ಮೇ ಮತಿಃ ॥27॥
ಇವರೇ ಮೊದಲಾದವರ ಧರ್ಮಪ್ರವಚನಗಳನ್ನು ಕೇಳಿದ್ದರೂ ನಿನ್ನ ಮುಖದಿಂದ ಹೊರಹೊಮ್ಮುವ ಧರ್ಮವಾಣಿಯು ಅತ್ಯಂತ ಪಾವನವೆಂದೂ, ಪವಿತ್ರವೆಂದೂ, ವಿಶಿಷ್ಟವಾದುದೆಂದು ನನ್ನ ಬುದ್ಧಿಯು.

ತಸ್ಮಾದ್ಧಿ ತ್ವಾಂ ಪ್ರಪನ್ನಸ್ಯ ತ್ವದ್ಭಕ್ತಸ್ಯ ಚ ಭಾವತಃ |
ಯುಷ್ಮದೀಯಾನ್ ಪರಾನ್ ಧರ್ಮಾನ್ ಪುಣ್ಯಾನ್ ಕಥಯ ಮೇಽಚ್ಯುತ ||
ಆದ್ದರಿಂದ ಕೇಶವನೇ, ಶರಣಾಗತನಾಗಿರುವ, ಭಕ್ತನಾಗಿರುವ ನನಗೆ ಪವಿತ್ರವೂ ಶ್ರೇಷ್ಠವೂ ಆಗಿರುವ ನಿನ್ನ ಧರ್ಮವನ್ನು ಅರ್ಥಾತ್ ವೈಷ್ಣವಧರ್ಮವನ್ನು ಬೋಧಿಸು.
ವೈಶಂಪಾಯನಃ
ಏವಮುಕ್ತಸ್ತು ಧರ್ಮಜ್ಞೋ ಧರ್ಮಪುತ್ರೇಣ ಮಾಧವಃ |
ಉವಾಚ ಧರ್ಮಾನ್ ಸೂಕ್ಷ್ಮಾರ್ಥಾನ್ ಧರ್ಮಪುತ್ರಸ್ಯ ಧೀಮತಃ ||29||
ವೈಶಂಪಾಯನ ಜನಮೇಜಯ, ಧರ್ಮಜನಾದ ಯುಧಿಷ್ಠಿರನು ಹೀಗೆ ಪ್ರಶ್ನಿಸುತ್ತಿರಲು ಮಾಧವನು ಅತ್ಯಂತ ಸಂತೋಷದಿಂದ, ಸೂಕ್ಷ್ಮವಾದ ಅರ್ಥಗಳಿಂದ ಕೂಡಿದ ಧರ್ಮಗಳನ್ನು ಹೇಳಲಾರಂಭಿಸಿದನು.
ಶ್ರೀಭಗವಾನ್
ಏವಂ ತೇ ಯಸ್ಯ ಕೌಂತೇಯ ಯತ್ನೋ ಧರ್ಮೇಷು ಸುವ್ರತ |
ತ್ವತ್ಸಮೋ ದುರ್ಲಭೋ ಲೋಕೇ ನ ಕಶ್ಚಿದಿಹ ವಿದ್ಯತೇ ||30||
ಶ್ರೀಭಗವಾನ್ ವ್ರತನಿಷ್ಠನೇ, ಕುಂತೀಸುತನೇ, ಧರ್ಮಗಳನ್ನು ತಿಳಿಯುವುದರಲ್ಲಿ, ಧರ್ಮಾನುಷ್ಠಾನ ಮಾಡುವುದರಲ್ಲಿ ಪ್ರಯತ್ನಶೀಲನಾಗಿರುವ ನಿನಗೆ ಈ ಲೋಕದಲ್ಲಿ ದುರ್ಲಭವಾದುದು ಯಾವುದೂ ಇರುವುದಿಲ್ಲ.
ಧರ್ಮಃಶ್ರುತೋ ವಾ ದೃಷ್ಟೋ ವಾ ಕಥಿತೋ ವಾ ಕೃತೋಽಪಿ ವಾ |
ಅನುಮೋದಿತೋ ವಾ ರಾಜೇಂದ್ರ ಪುನಾತೀಹ ಸದಾ ನರಮ್ ||31||
ಧರ್ಮದ ವಿಷಯವನ್ನು ಕೇಳಿದರೂ, ಧರ್ಮಕಾರ್ಯವನ್ನು ನೋಡಿದರೂ, ಧರ್ಮಪ್ರವಚನ ಮಾಡಿದರೂ, ಧರ್ಮಕಾರ್ಯಕ್ಕೆ ಅನುಮೋದನೆ ನೀಡಿದರೂ ಮನುಷ್ಯನು ಇಂದ್ರಪದವಿಯನ್ನು ಹೊಂದುತ್ತಾನೆ.
ಧರ್ಮಃ ಪಿತಾ ಚ ಮಾತಾ ಚ ಧರ್ಮೋಽಥ ಸುಹೃದಸ್ತಥಾ |
ಧರ್ಮೋ ಭ್ರಾತಾ ಸಖಾ ಚೈವ ಧರ್ಮಃ ಸ್ವಾಮೀ ಪರಂತಪ ||32||
ಪರಂತಪನೇ, ಧರ್ಮವೇ ತಂದೆ, ಧರ್ಮವೇ ತಾಯಿ, ಧರ್ಮವೇ ರಕ್ಷಕ, ಧರ್ಮವೇ ಸ್ನೇಹಿತ, ಧರ್ಮವೇ ಸಹೋದರ, ಧರ್ಮವೇ ಸ್ವಾಮಿ.
ಧರ್ಮಾದರ್ಥಶ್ಚ ಕಾಮಶ್ಚ ಧರ್ಮಾದ್ ಭೋಗಾಃ ಸುಖಾನಿ ಚ |
ಧರ್ಮಾದೈಶ್ವರ್ಯಮೇವಾಗ್ರ್ಯಂ ಧರ್ಮಾತ್ ಸ್ವರ್ಗಗತಿಃ ಪರಾ ||33||
ಧರ್ಮದಿಂದಲೇ ಅರ್ಥ-ಕಾಮ-ಭೋಗ-ಸುಖ-ಉತ್ತಮವಾದ ಐಶ್ವರ್ಯ, ಸರ್ವೋತ್ತಮವಾದ ಸ್ವರ್ಗ ಇವೆಲ್ಲವೂ ಲಭಿಸುತ್ತವೆ.
ಧರ್ಮೋಽಯಂ ಸೇವಿತಃ ಶುದ್ಧಸ್ತ್ರಾಯತೇ ಮಹತೋ ಭಯಾತ್ |
ದ್ವಿಜತ್ವಂ ದೇವತಾತ್ವಂ ಚ ಧರ್ಮಃ ಪ್ರಾಪಯತೇ ನರಮ್ ||34||
ಇಂತಹ ಶುದ್ಧವಾದ ಧರ್ಮವನ್ನು ಅನುಷ್ಠಾನ ಮಾಡಿದರೆ ಆ ಧರ್ಮವು ಅನುಷ್ಠಾನಶೀಲನನ್ನು ಮಹಾಭಯದಿಂದ ರಕ್ಷಿಸುತ್ತದೆ. ಧರ್ಮದಿಂದಲೇ ದ್ವಿಜತ್ವ, ದೇವತ್ವಗಳು ಲಭಿಸುತ್ತವೆ. ಮನುಷ್ಯನನ್ನು ಪಾವನಗೊಳಿಸುವುದೂ ಧರ್ಮವೇ ಆಗಿದೆ.
ಯದಾ ಚ ಕ್ಷೀಯತೇ ಪಾಪಂ ಕಾಲೇನ ಪುರುಷಸ್ಯ ತು |
ಸದಾ ಸಂಜ್ಞಾಯತೇ ಬುದ್ಧಿರ್ಧರ್ಮಂ ಕರ್ತುಂ ಯುಧಿಷ್ಠಿರ ||35||
ಕಾಲಕ್ರಮವಾಗಿ ಮನುಷ್ಯನ ಪಾಪವು ಯಾವಾಗ ನಾಶವಾಗುತ್ತದೋ ಆಗ ಮನುಷ್ಯನಿಗೆ ಧರ್ಮಕಾರ್ಯವನ್ನು ಮಾಡುವ ಬುದ್ಧಿಯು ಉಂಟಾಗುತ್ತದೆ.
ಜನ್ಮಾಂತರಸಹಸ್ರೈಸ್ತು ಮಾನುಷತ್ವಂ ಹಿ ದುಲರ್ಭಮ್ |
ತಲ್ಲಬ್ಧ್ವಾಽಪೀಹ ಯೋ ಧರ್ಮಂ ನ ಕರೋತಿ ಸ ವಂಚಿತಃ ||36||
ಮನುಷ್ಯರಿಗೆ ಮನುಷ್ಯತ್ವವು ತುಂಬಾ ದುರ್ಲಭವಾದುದು. ಸಾವಿರ ಯೋನಿಗಳಲ್ಲಿ ಹುಟ್ಟಿದರೂ ಮನುಷ್ಯಜನ್ಮ ಸಿಗುವುದು ಬಹಳ ಕಷ್ಟ. ಅಂತಹ ಮನುಷ್ಯತ್ವ ಪಡೆದ ಬಳಿಕವೂ ಧರ್ಮಾಚರಣೆಯನ್ನು ಮಾಡದಿದ್ದಲ್ಲಿ ಆತನು ಪುಣ್ಯದಿಂದ ವಂಚಿತನಾಗುತ್ತಾನೆ.
ಕುತ್ಸಿತಾಶ್ಚ ದರಿದ್ರಾಶ್ಚ ವಿರೂಪಾ ವ್ಯಾಧಿತಾಸ್ತಥಾ |
ಪರದ್ವೇಷ್ಯಾಶ್ಚ ಮೂರ್ಖಾಶ್ಚ ನ ತೈರ್ಧರ್ಮಃ ಕೃತಃ ಪುರಾ ||37||
ಈ ಲೋಕದಲ್ಲಿ ಯಾರು ನಿಂದನೆಗೆ ಗುರಿಯಾಗಿರುತ್ತಾರೋ, ದರಿದ್ರರೋ, ಕುರೂಪಿಗಳೋ, ದೀರ್ಘಕಾಲದ ರೋಗಗಳಿಂದ ಪೀಡಿತರೋ, ಕಾರಣವಿಲ್ಲದೆ ಮತ್ತೊಬ್ಬರನ್ನು ದ್ವೇಷಿಸುವವರೋ, ಮೂರ್ಖರೋ ಅವರೆಲ್ಲರೂ ಈ ಧರ್ಮವನ್ನು ಆಚರಿಸುವುದಿಲ್ಲ. ಆದ್ದರಿಂದ ಅವರ ದುಃಖವು ಪರಿಹಾರವಾಗುವುದಿಲ್ಲ.
ಯೇ ತು ದೀರ್ಘಾಯುಷಃ ಶೂರಾಃ ಪಂಡಿತಾ ಭೋಗಿನಸ್ತಥಾ |
ನೀರೋಗಾ ರೂಪಸಂಪನ್ನಾಸ್ತೈರ್ಧರ್ಮಾಃ ಸುಕೃತಾಃ ಪುರಾ ||38||
ಯಾರು ದೀರ್ಘಾಯುಷಿಗಳೋ, ಶೂರರೋ, ಪಂಡಿತರೋ, ಭೋಗಿಗಳೋ, ರೂಪಸಂಪನ್ನರೋ ಅವರು ಹಿಂದೆ ಧರ್ಮವನ್ನು ಆಚರಿಸಿದ್ದರೆಂದು, ಅದರ ಪರಿಣಾಮವಾಗಿ ಈ ಜನ್ಮದಲ್ಲಿಯೂ ಉತ್ತಮಸ್ಥಿತಿ ಪ್ರಾಪ್ತವಾಗಿರುವುದೆಂದು ತಿಳಿಯಬೇಕು.
ಏವಂ ಧರ್ಮಃ ಕೃತಃ ಸದ್ಯೋ ನಯತೇ ಗತಿಮುತ್ತಮಾಮ್ |
ಅಧರ್ಮಃ ಸೇವ್ಯಮಾನಸ್ತು ತಿರ್ಯಗ್ಯೋನಿಂ ನಯತ್ಯಮುಮ್ ||39||
ಹೀಗೆ ಶುದ್ಧಭಾವದಿಂದ ಯಾವ ಪುರುಷನು ಧರ್ಮವನ್ನು ಆಚರಿಸುತ್ತಾನೋ ಅವನು ಉತ್ತಮ ಗತಿಯನ್ನು ಹೊಂದುತ್ತಾನೆ. ಅಧರ್ಮಾಚರಣೆಯಲ್ಲಿ ಆಸಕ್ತನಾದವನು ಪಶು-ಪಕ್ಷ್ಯಾದಿ ಯೋನಿಗಳಲ್ಲಿ ಹುಟ್ಟುತ್ತಾನೆ.
ಇದಂ ರಹಸ್ಯಂ ಕೌಂತೇಯ ಶ್ರೂಯತಾಮಿದಮುತ್ತಮಮ್ |

ಕಥಯಿಷ್ಯೇ ಪರಂ ಗುಹ್ಯಂ ಮಮ ಭಕ್ತಸ್ಯ ಪಾಂಡವ ॥40॥
ಕೌಂತೇಯನೇ, ಪರಮಶ್ರೇಷ್ಠವಾದ ಧರ್ಮರಹಸ್ಯವನ್ನು ಕೇಳು. ಭಕ್ತನಾದ ನಿನಗೆ ಶ್ರೇಷ್ಠಧರ್ಮವನ್ನು ಬೋಧಿಸುತ್ತೇನೆ.
ಇಷ್ಟಸ್ತ್ವಮಸಿ ಮೇಽತ್ಯರ್ಥಂ ಪ್ರಪನ್ನಶ್ಚಾಸಿ ಮಾಂ ಸದಾ |
ಪರಮಾರ್ಥಮಪಿ ಬ್ರೂಯಾಂ ಕಿಂ ಪುನರ್ಧರ್ಮಸಂಹಿತಾಮ್ ॥41॥
ಧರ್ಮಜನೇ, ನೀನು ನನಗೆ ಇಷ್ಟನಾಗಿರುವಿ. ಶರಣಾಗತನಾಗಿರುವಿ. ಪರಮ ಶ್ರೇಷ್ಠವಾದ ಭಗವತತ್ತ್ವವನ್ನೇ ನಿನಗೆ ಹೇಳುತ್ತೇನೆ, ಹೀಗಿರುವಾಗ ಧರ್ಮದ ರಹಸ್ಯವನ್ನು ಹೇಳದಿರುತ್ತೇನೆಯೇ?
ಇದಂ ಮೇ ಮಾನುಷಂ ಜನ್ಮ ಕೃತಮಾತ್ಮನಿ ಮಾಯಯಾ |
ಧರ್ಮಸಂಸ್ಥಾಪನಾರ್ಥ್ಯೈವ ದುಷ್ಟಾನಾಂ ಶಾಸನಾಯ ಚ ॥42॥
ನಾನು ನನ್ನ ಸಂಕಲ್ಪಕ್ಕನುಗುಣವಾಗಿ ಮನುಷ್ಯಯೋನಿಯನ್ನು ಆಶ್ರಯಿಸಿ ಧರ್ಮಸ್ಥಾಪನೆ, ದುಷ್ಟರ ಶಾಸನ- ಇವೆರಡು ಕಾರಣದಿಂದ ಅವತಾರ ಮಾಡಿದ್ದೇನೆ.
ಮಾನುಷ್ಯಂ ಭಾವಮಾಪನ್ನಂ ಯೇ ಮಾಂ ಗೃಹ್ಣಂತ್ಯವಜ್ಞಯಾ |
ಸಂಸರಂತೀಹ ತೇ ಮೂಢಾಸ್ತಿರ್ಯಗ್ಯೋನಿಷ್ವನೇಕಶಃ ॥43॥
ಮನುಷ್ಯನ ಶರೀರವನ್ನು ಧಾರಣೆ ಮಾಡಿರುವ ನನ್ನನ್ನು ಯಾರು ಮನುಷ್ಯನೆಂದೇ ಭಾವಿಸಿ ತಿರಸ್ಕರಿಸುತ್ತಾರೋ ಅಂತಹ ಮೂಢರು ಸಂಸಾರಚಕ್ರದಲ್ಲಿ ಸಿಲುಕಿ ಪುನಃ ಪುನಃ ಪಶು-ಪಕ್ಷಿಗಳಾಗಿ ಹುಟ್ಟುತ್ತಾರೆ.
ಯೇ ಚ ಮಾಂ ಸರ್ವಭೂತಸ್ಥಂ ಪಶ್ಯಂತಿ ಜ್ಞಾನಚಕ್ಷುಷಃ |
ಮದ್ಭಕ್ತಾಂಸ್ತಾನ್ ಸದಾ ಯುಕ್ತಾನ್ ಮತ್ಸಮೀಪಂ ನಯಾಮ್ಯಹಮ್ ॥
ಎಲ್ಲರ ಪ್ರಾಣಿಗಳ ಹೃದಯಗುಹಾವಾಸಿಯಾಗಿ ಇರುವ ನನ್ನನ್ನು ಯಾರು ಜ್ಞಾನದ ದೃಷ್ಟಿಯಿಂದ ತಿಳಿಯುತ್ತಾರೋ, ನನ್ನಲ್ಲಿ ಆಸಕ್ತರಾಗುತ್ತಾರೋ ಅಂತಹ ಭಕ್ತರು ನನ್ನ ಮನೆಗೇ ಆಗಮಿಸುತ್ತಾರೆ. ಅವರನ್ನು ಮೃತ್ಯುಸಂಸಾರದಿಂದ ಪಾರು ಮಾಡುತ್ತೇನೆ.
ಮದ್ಭಕ್ತಾ ನ ವಿನಶ್ಯಂತಿ ಮದ್ಭಕ್ತಾ ವೀತಕಲ್ಮಷಾಃ |
ಮದ್ಭಕ್ತಾನಾಂ ತು ಮಾನುಷ್ಯೇ ಸಫಲಂ ಜನ್ಮ ಪಾಂಡವ ॥45॥
ನನ್ನ ಭಕ್ತರೆಂದಿಗೂ ನಾಶವನ್ನು ಹೊಂದುವುದಿಲ್ಲ. ಸಮಸ್ತ ಪಾಪಗಳಿಂದ ವಿಮುಕ್ತರಾಗಿರುತ್ತಾರೆ. ನನ್ನ ಭಕ್ತರಿಗೆ ನಾನು ನೀಡಿರುವ ಮನುಷ್ಯಜನ್ಮವು ಸಫಲವಾಗುತ್ತದೆ.
ಅಪಿ ಪಾಪೇಷ್ವಭಿರತಾ ಮದ್ಭಕ್ತಾಃ ಪಾಂಡುನಂದನ |
ಮುಚ್ಯಂತೇ ಪಾತಕೈಃ ಸರ್ವೈಃ ಪದ್ಮಪತ್ರಮಿವಾಂಭಸಾ ॥46॥
ನನ್ನ ಭಕ್ತರು ಒಂದುವೇಳೆ ಪಾಪಕರ್ಮದಲ್ಲಿ ಆಸಕ್ತರಾಗಿದ್ದರೂ ಕಮಲಪತ್ರದಂತೆ ನಿರ್ಲಿಪ್ತರಾಗಿ ಪಾಪದಿಂದ ಮುಕ್ತರಾಗುತ್ತಾರೆ.
ಜನ್ಮಾಂತರಸಹಸ್ರೇಷು ತಪಸಾ ಭಾವಿತಾತ್ಮನಾಮ್ |
ಮದ್ಭಕ್ತಿರ್ವಿದ್ಯತೇ ತಾತ ಮನುಷ್ಯಾಣಾಂ ನ ಸಂಶಯಃ ॥47॥
ಸಾವಿರಾರು ಜನ್ಮಗಳಲ್ಲಿ ಮಾಡಿದ ತಪಸ್ಸಿನ ಫಲದಿಂದ ಮನುಷ್ಯರ ಹೃದಯವು ಶುದ್ಧವಾಗುತ್ತದೆ. ಅಂತಹ ಶುದ್ಧಚೇತನರಲ್ಲಿ ಭಕ್ತಿಯು ಮೂಡುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯಚ್ಚ ರೂಪಂ ಪರಂ ಗುಹ್ಯಂ ಕೂಟಸ್ಥಮಚಲಂ ಧ್ರುವಮ್ |
ನ ದೃಶ್ಯತೇ ತಥಾ ದೇವೈರ್ಮದ್ಭಕ್ತೈರ್ದೃಶ್ಯತೇ ಯಥಾ ॥48॥
ಕೂಟಸ್ಥನಾದ, ಅಚಲವಾದ, ಶಾಶ್ವತವಾದ, ರಹಸ್ಯವಾದ ನನ್ನ ರೂಪವನ್ನು ನನ್ನ ಭಕ್ತರು ನೋಡುವಂತೆ ದೇವತೆಗಳೂ ನೋಡಲಾರರು.
ಅಪರಂ ಯಚ್ಚ ಮೇ ರೂಪಂ ಪ್ರಾದುರ್ಭಾವೇಷು ದೃಶ್ಯತೇ |
ತದರ್ಚಯಂತಿ ಸರ್ವಾರ್ಥೈಃ ಸರ್ವಭೂತಾನಿ ಪಾಂಡವ ॥49॥
ನನ್ನ ಅವತಾರದ ಪ್ರಸಂಗದಲ್ಲಿ ನನ್ನ ಬೇರೆ ಯಾವ ರೂಪವನ್ನು ನೋಡುತ್ತಾರೋ ಸಮಸ್ತ ಜೀವಿಗಳೂ ಅಂತಹ ಬೇರೆ ಬೇರೆ ರೂಪಗಳನ್ನು ಪುರುಷಾರ್ಥಗಳಿಂದ ಆರಾಧಿಸುತ್ತಾರೆ.
ಕಲ್ಪಕೋಟಿಸಹಸ್ರೇಷು ವ್ಯತೀತೇಷ್ವಾಗತೇಷು ಚ |
ದರ್ಶಯಾಮಿ ತು ಯದ್ರೂಪಂ ತತ್ ಪ್ರಪಶ್ಯಂತಿ ಮೇ ಸುರಾಃ ॥50॥
ಸಾವಿರಕೋಟಿ ಕಲ್ಪಗಳು ಕಳೆದ ಬಳಿಕ ದೇವತೆಗಳು ಕಾಣುವ ನನ್ನ ರೂಪವನ್ನು ಭಕ್ತರಿಗೆ ತೋರಿಸುತ್ತೇನೆ.
ಸ್ಥಿತ್ಯುತ್ಪತ್ತಿಪ್ಲವಕರಂ ಯೋ ಮಾಂ ಜ್ಞಾತ್ವಾ ಪ್ರಪದ್ಯತೇ |
ಅನುಗೃಹ್ಣಾಮ್ಯಹಂ ತಂ ವೈ ಸಂಸಾರಾನ್ಮೋಚಯಾಮಿ ಚ ॥51॥
ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ನಾನೇ ಕಾರಣನೆಂದು ಯಾವನು ತಿಳಿದು ಕೊಳ್ಳುತ್ತಾನೋ ಅವನನ್ನು ಅನುಗ್ರಹಿಸುತ್ತೇನೆ. ಸಂಸಾರಬಂಧನದಿಂದ ಬಿಡಿಸುತ್ತೇನೆ.
ಅಹಮಾದಿರ್ಹಿ ದೇವಾನಾಂ ಸೃಷ್ಟ್ವಾ ಬ್ರಹ್ಮಾದಯೋ ಮಯಾ |
ಪ್ರಕೃತಿಂ ಸ್ವಾಮವಷ್ಟಭ್ಯ ಜಗತ್ಸರ್ವಂ ಸೃಜಾಮ್ಯಹಮ್ ॥52॥
ದೇವತೆಗಳಿಗೆ ನಾನೇ ಮೂಲಕಾರಣ. ಬ್ರಹ್ಮನನ್ನು ಸೃಷ್ಟಿಸಿದವನು ನಾನೇ. ಇತರ ದೇವತೆಗಳಿಗೂ ನಾನೇ ಸ್ವಾಮಿ. ಪ್ರಕೃತಿಯನ್ನು ಉಪಯೋಗಿಸಿಕೊಂಡು ಸಮಗ್ರ ಜಗತ್ತನ್ನು ನಾನೇ ಸೃಷ್ಟಿಸುತ್ತೇನೆ.
ತಮೋಮೂಲೋಽಹಮವ್ಯಕ್ತೋ ರಜೋಮಧ್ಯೇ ಪ್ರತಿಷ್ಠಿತಃ |
ಊರ್ಧ್ವಂ ಸತ್ತ್ವವಿಶಾಲೋಽಹಂ ಬ್ರಹ್ಮಾದಿಸ್ತಂಭಸಂಹಿತಃ ॥53॥

ನಾನು ತಮೋಗುಣಕ್ಕೆ ಆಧಾರನಾಗಿದ್ದೇನೆ. ಅವ್ಯಕ್ತನಾಗಿ ರಜೋಗುಣದ ಮಧ್ಯದಲ್ಲಿಯೂ ಪ್ರತಿಷ್ಠಿತನಾಗಿದ್ದೇನೆ. ಉತ್ಕೃಷ್ಟವಾದ ಸತ್ತ್ವಗುಣದಲ್ಲಿಯೂ ವ್ಯಾಪಿಸಿದ್ದೇನೆ. ಬ್ರಹ್ಮಾದಿಸ್ತಂಭಪರ್ಯಂತವೂ ಸಮಸ್ತ ಜೀವರಲ್ಲಿಯೂ ಸನ್ನಿಹಿತನಾಗಿರುತ್ತೇನೆ.

ಮೂರ್ಧಾನಂ ಮೇ ದಿವಂ ವಿದ್ಧಿ ಚಂದ್ರಾದಿತ್ಯೌ ಚ ಲೋಚನೇ |
ಗಾವೋಽಗ್ನಿರ್ಬ್ರಾಹ್ಮಣೋ ವಕ್ತ್ರಂ ಮಾರುತಃ ಶ್ವಸನಂ ಚ ಮೇ ॥54॥

ಸ್ವರ್ಗವೇ ನನ್ನ ತಲೆ. ಸೂರ್ಯ-ಚಂದ್ರರು ನನ್ನ ಎರಡು ಕಣ್ಣುಗಳು. ಗೋವು, ಅಗ್ನಿ, ಬ್ರಾಹ್ಮಣರು ನನ್ನ ಮುಖಸ್ಥಾನೀಯರು. ವಾಯುವು ನನ್ನ ಶ್ವಾಸವಾಗಿದೆ.

ದಿಶೋ ಮೇ ಬಾಹವಶ್ಚಾಷ್ಟೌ ನಕ್ಷತ್ರಾಣಿ ವಿಭೂಷಣಮ್ |
ಅಂತರಿಕ್ಷಮುರೋ ವಿದ್ಧಿ ಸರ್ವಭೂತಪ್ರಕಾಶಕಮ್ ॥55॥

ಎಂಟುದಿಕ್ಕುಗಳು ನನ್ನ ಬಾಹುಗಳು. ನಕ್ಷತ್ರಗಳೇ ನನ್ನ ಆಭರಣ. ಸಮಸ್ತ ಚೇತನರಿಗೆ ಅವಕಾಶಪ್ರದವಾದ ಅಂತರಿಕ್ಷವೇ ನನ್ನ ಎದೆ ಎಂದು ತಿಳಿ.

ಮಾರ್ಗೋ ಮೇಘಾನಿಲಾಭ್ಯಾಂ ತು ಯನ್ಮಮೋದರಮವ್ಯಯಮ್ ॥

ಮೇಘ ಮತ್ತು ವಾಯುಗಳು ಸಂಚರಿಸುವ ಯಾವ ಸ್ಥಳವಿದೆಯೋ ಅದು ನನ್ನ ನಾಶರಹಿತವಾದ ಹೊಟ್ಟೆ ಎಂದು ತಿಳಿ.

ಪೃಥಿವೀಮಂಡಲಂ ಯದ್ವೈ ದ್ವೀಪಾರ್ಣವನಗೈರ್ಯುತಮ್ |
ಸರ್ವಸಂಧಾರಣೋಪೇತಂ ಪಾದೌ ಮಮ ಯುಧಿಷ್ಠಿರ ॥57॥

ಸಪ್ತದ್ವೀಪಗಳು, ಸಪ್ತಸಮುದ್ರಗಳು, ಅರಣ್ಯಗಳು, ಚರಾಚರ ವಸ್ತುಗಳು, ಇವುಗಳನ್ನು ಧರಿಸಿರುವ ಭೂದೇವಿಯೇ ನನ್ನ ಎರಡು ಪಾದಗಳಾಗಿವೆ.

ಸ್ಥಿತೋ ಹ್ಯೇಕಗುಣಃ ಖೇಽಹಂ ದ್ವಿಗುಣಶ್ಚಾಸ್ಮಿ ಮಾರುತೇ |
ತ್ರಿಗುಣೋಽಗ್ನೌ ಸ್ಥಿತೋಽಹಂ ವೈ ಸಲಿಲೇ ತು ಚತುರ್ಗುಣಃ ॥58॥

ಆಕಾಶದಲ್ಲಿ ಒಂದು ಗುಣವನ್ನೂ, ವಾಯುರೂಪದಲ್ಲಿ ಒಂದು ಗುಣವನ್ನೂ, ಅಗ್ನಿಯ ರೂಪದಲ್ಲಿ ಮೂರು ಗುಣಗಳನ್ನೂ, ನೀರಿನಲ್ಲಿ ನಾಲ್ಕು ಗುಣಗಳನ್ನೂ, ಭೂಮಿಯಲ್ಲಿ ಐದು ಗುಣಗಳನ್ನೂ ಇಟ್ಟಿರುತ್ತೇನೆ.

ಶಬ್ದಾದ್ಯಾ ಯೇ ಗುಣಾಃ ಪಂಚ ಮಹಾಭೂತೇಷು ಪಂಚಸು |
ತನ್ಮಾತ್ರಸಂಸ್ಥಿತಃ ಸೋಽಹಂ ಪೃಥಿವ್ಯಾಂ ಪಂಚಧಾ ಸ್ಥಿತಃ ॥59॥

ಶಬ್ದ-ಸ್ಪರ್ಶವೇ ಮೊದಲಾದ ಯಾವ ಐದು ಗುಣಗಳಿವೆಯೋ ಅವೆಲ್ಲವೂ ನನ್ನ ಸ್ವರೂಪವೇ ಆಗಿವೆ. ಪಂಚಮಹಾಭೂತಗಳಲ್ಲಿ ಆಯಾ ರೂಪಗಳಲ್ಲಿ ನಿಂತು ವ್ಯಾಪಾರವನ್ನು ಮಾಡುತ್ತೇನೆ.

ಅಹಂ ಸಹಸ್ರಶೀರ್ಷಸ್ತು ಸಹಸ್ರವದನೇಕ್ಷಣಃ |
ಸಹಸ್ರಬಾಹೂದರಭೃತ್ ಸಹಸ್ರಾಕ್ಷಃ ಸಹಸ್ರಪಾತ್ ॥60॥

ನಾನು ಅನಂತ ಬಾಹುಗಳುಳ್ಳವನು. ಅನಂತರ ಹೊಟ್ಟೆಗಳುಳ್ಳವನೂ, ಅನಂತ ಶಿರಗಳುಳ್ಳವನು. ಅನಂತ ಮುಖಗಳಿಂದ, ನೋಡುವವನೂ, ಅನಂತ ಕಣ್ಣುಗಳುಳ್ಳವನು. ಅನಂತ ಪಾದಗಳುಳ್ಳವನೂ ಆಗಿದ್ದೇನೆ.

ಧೃತ್ವೋರ್ವೀಂ ಸರ್ವತಃ ಸಮ್ಯಗತ್ಯತಿಷ್ಠದ್ ದಶಾಂಗುಲಮ್ |
ಸರ್ವಭೂತಾತ್ಮಭೂತಸ್ಥಃ ಸರ್ವವ್ಯಾಪೀ ನರೋ ಹ್ಯಹಮ್ ॥61॥

ಭೂಮಿಯನ್ನು ಸಮಸ್ತ ವಿಧದಿಂದ ಧರಿಸಿರುವ ನಾನು ಸಮಸ್ತ ಭೂಮಂಡಲವನ್ನು ದಾಟಿ ಹತ್ತಾರು ಪಟ್ಟು ಮೇಲೆ ನಿಂತಿದ್ದೇನೆ. ಸಮಸ್ತ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ವ್ಯಾಪಕನಾಗಿದ್ದೇನೆ.

ಅಚಿಂತ್ಯೋಽಹಮನಂತೋಽಹಮಜರೋಽಹಮಜೋ ಹ್ಯಹಮ್ |
ಅನಾದ್ಯೋಽಹಮವಧ್ಯೋಽಹಮ್ ಅಪ್ರಮೇಯೋಽಹಮವ್ಯಯಃ ॥

ನಾನು ಅಚಿಂತ್ಯಮಹಿಮನು, ಅನಂತನು, ಅವಧ್ಯನು, ಅಪ್ರಮೇಯನು, ಅಜರನು (ವಾರ್ಧಕ್ಯರಹಿತನು), ಅಜನು, ಅನಾದಿಯೂ, ಅವ್ಯಯನೂ ಆಗಿದ್ದೇನೆ.

ನಿರ್ಗುಣೋಽಹಂ ನಿಗೂಢಾತ್ಮಾ ನಿತ್ಯೋಽಹಂ ನಿರ್ಮಮೋಽಪಿ ಚ |
ನಿರ್ದ್ವಂದ್ವೋ ನಿರ್ವಿಕಾರೋಽಹಂ ನಿದಾನಂ ಚಾಮೃತಸ್ಯ ಹ ॥63॥

ನಾನು ಪ್ರಾಕೃತಗುಣರಹಿತನು. ಸಮಸ್ತ ಜೀವರಲ್ಲಿ ಕಣ್ಣಿಗೆ ಕಾಣದೆ ಇರುವ ಅಂತರ್ಯಾಮಿಯು. ನಿತ್ಯನೂ, ನಿರ್ಮಮನೂ, ದ್ವಂದ್ವಾತೀತನೂ, ನಿರ್ವಿಕಾರಿಯೂ, ಸಮಸ್ತರಿಗೂ ಕಾರಣನೂ, ಅಮೃತಪ್ರಾಪ್ತಿಗೆ ಹೇತುವೂ ಆಗಿದ್ದೇನೆ.

ಸ್ವಧಾ ಚಾಹಂ ಸುಧಾ ಚಾಹಂ ಸ್ವಾಹಾಕಾರೋ ನರಾಧಿಪ ॥64॥

ದೇವತೆಗಳಿಗಾಗಿ ನೀಡುವ ಹವಿಷ್ಯಪದಾರ್ಥಗಳಲ್ಲಿ `ಸ್ವಾಹಾ' ಎಂಬ ಆಕಾರವನ್ನು ಹೊಂದಿದ್ದೇನೆ. ಪಿತೃಗಳಲ್ಲಿ `ಸ್ವಧಾ' ಎಂದು, ಅಮೃತಪಾನಿಗಳಲ್ಲಿ `ಸುಧಾ' ಎಂದು ಕರೆಸಿಕೊಳ್ಳುತ್ತೇನೆ.

ತೇಜಸಾ ತಪಸಾ ಚಾಹಂ ಭೂತಗ್ರಾಮಂ ಚತುರ್ವಿಧಮ್ |
ಸ್ನೇಹಪಾಶಗುಣೈರ್ಬದ್ಧ್ವಾ ಧಾರಯಾಮ್ಯಾತ್ಮಮಾಯಯಾ ॥65॥

ನಾಲ್ಕುಪ್ರಕಾರವಾದ ಇಂದ್ರಿಯಗಳನ್ನು ತೇಜಸ್ಸಿನಿಂದಲೂ, ತಪಸ್ಸಿನಿಂದಲೂ, ಸ್ನೇಹಪಾಶಗಳಿಂದ ಕಟ್ಟಿ ನನ್ನ ಸಂಕಲ್ಪದಂತೆ ಮುನ್ನಡೆಸುತ್ತೇನೆ.

ಚಾತುರಾಶ್ರಮಧರ್ಮೋಽಹಂ ಚಾತುರ್ಹೋತ್ರಫಲಾಶನಃ |
ಚತುರ್ಮೂರ್ತಿಶ್ಚತುರ್ವ್ಯೂಹಃ ಚತುರಾಶ್ರಮಭಾಜನಮ್ ॥66॥

ನಾಲ್ಕು ಆಶ್ರಮಧರ್ಮಗಳನ್ನು ಅಭಿವ್ಯಕ್ತಿಗೊಳಿಸಿದವನು ನಾನು. ದ್ರವ್ಯಯಜ್ಞ, ತಪೋಯಜ್ಞ, ಜ್ಞಾನಯಜ್ಞ, ಸ್ವಾಧ್ಯಾಯ ಯಜ್ಞ

ಎಂಬ ನಾಲ್ಕು ಯಜ್ಞಗಳಿಗೂ ನಿಯಾಮಕನು ನಾನು. ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ಚತುರ್ಮೂರ್ತಿಯೂ ನಾನು. ನಾಲ್ಕು ಆಶ್ರಮಗಳಿಗೆ ನಿಯಾಮಕನೂ ನಾನು.
ಸಂಹೃತ್ಯಾಹಂ ಜಗತ್ಸರ್ವಂ ಕೃತ್ವಾ ವೈ ಗರ್ಭಮಾತ್ಮನಃ |
ಶಯಾಮಿ ದಿವ್ಯಯೋಗೇನ ಪ್ರಲಯೇಷು ಯುಧಿಷ್ಠಿರ ॥67॥
ಧರ್ಮಜನೇ, ಸಮಗ್ರ ಜಗತ್ತನ್ನು ಪ್ರಲಯಕಾಲದಲ್ಲಿ ಸಂಹರಿಸಿ, ಆ ಜೀವರನ್ನೆಲ್ಲ ಗರ್ಭದಲ್ಲಿ ಧರಿಸಿ, ದಿವ್ಯಯೋಗವನ್ನು ಆಶ್ರಯಿಸಿ ಪ್ರಲಯಕಾಲದಲ್ಲಿ ನಿದ್ರಿಸುತ್ತೇನೆ.
ಸಹಸ್ರಯುಗಪರ್ಯಂತಾಂ ಬ್ರಾಹ್ಮೀಂ ರಾತ್ರಿಂ ಮಹಾರ್ಣವೇ |
ಸ್ಥಿತ್ವಾ ಸೃಜಾಮಿ ಭೂತಾನಿ ಜಂಗಮಾನಿ ಸ್ಥಿರಾಣಿ ಚ ॥68॥
ಬ್ರಹ್ಮದೇವರ ಸಾವಿರ ಯುಗಗಳ ತನಕ ಪ್ರಲಯಸಮುದ್ರದಲ್ಲಿ ರಾತ್ರಿ ನಿದ್ರಿಸುತ್ತಾ, ಸ್ಥಾವರ-ಜಂಗಮರೂಪವಾದ ಸಮಸ್ತ ಪ್ರಾಣಿಗಳನ್ನು ನಾನೇ ಸೃಷ್ಟಿಸುತ್ತೇನೆ.
ಕಲ್ಪೇ ಕಲ್ಪೇ ಚ ಭೂತಾನಿ ಸಂಹರಾಮಿ ಸೃಜಾಮಿ ಚ |
ನ ಚ ಮಾಂ ತಾನಿ ಜಾನಂತಿ ಮಾಯಯಾ ಮೋಹಿತಾನಿ ಹ ॥69॥
ಪ್ರತಿಕಲ್ಪಗಳಲ್ಲಿಯೂ ಸಮಸ್ತ ಜೀವರಾಶಿಗಳನ್ನು ನಾನೇ ಸಂಹರಿಸುತ್ತೇನೆ, ಸೃಷ್ಟಿಸುತ್ತೇನೆ. ಆ ಪ್ರಕೃತಿಯ ಮಾಯೆಯು ಎಲ್ಲರನ್ನೂ ಆವರಿಸಿರುವುದರಿಂದ ಯಾರೂ ನನ್ನನ್ನು ಸೃಷ್ಟಿಕರ್ತನೆಂದು ಕರೆಯುವುದಿಲ್ಲ.
ಮಮ ಚೈವಾಂಧಕಾರಸ್ಯ ಮಾರ್ಗಿತವ್ಯಸ್ಯ ನಿತ್ಯಶಃ |
ನಿರ್ವಾಣಸ್ಯೇವ (ಪ್ರಶಾಂತಸ್ಯೇವ) ದೀಪಸ್ಯ ಗತಿರ್ನೈವೋಪಲಭ್ಯತೇ ॥
ಅಂಧಕಾರದಲ್ಲಿರುವ ಪದಾರ್ಥವನ್ನು ಶಾಂತವಾದ ದೀಪವು ಹೇಗೆ ತಿಳಿಯಲಾಗದೋ ಹಾಗೆ ಅಜ್ಞಾನ, ಅಂಧಕಾರದಿಂದ ಜೀವರು, ಉದ್ದೀಪನಗೊಳ್ಳದೆ ತತ್ತ್ವಜ್ಞಾನವುಳ್ಳವರಾಗದೆ ನನ್ನನ್ನು ಹೊಂದಲಾರರು.
ನ ತದಸ್ತಿ ಕ್ವಚಿದ್ ರಾಜನ್ ಯತ್ರಾಹಂ ನ ಪ್ರತಿಷ್ಠಿತಃ |
ನ ಚ ತದ್ ವಿದ್ಯತೇ ಭೂತಂ ಮಯಿ ಯನ್ನ ಪ್ರತಿಷ್ಠಿತಮ್ ॥71॥
ಧರ್ಮರಾಜನೇ, ನಾನು ಸನ್ನಿಹಿತನಾಗದಿರುವ ಯಾವ ಪದಾರ್ಥಗಳೂ ಇಲ್ಲ. ನನ್ನನ್ನು ಆಶ್ರಯಿಸದೇ ಇರುವ ಯಾವ ಪದಾರ್ಥಗಳೂ ಜಗತ್ತಿನಲ್ಲಿ ಇರುವುದಿಲ್ಲ.
ಯಾವನ್ಮಾತ್ರಂ ಭವೇದ್ ಭೂತಂ ಸ್ಥೂಲಸೂಕ್ಷ್ಮಮಿದಂ ಜಗತ್ |
ಜೀವಭೂತೋ ಹ್ಯಹಂ ತಸ್ಮಿಂಸ್ತಾವನ್ಮಾತ್ರಪ್ರತಿಷ್ಠಿತಃ ॥72॥
ಈ ಜಗತ್ತಿನಲ್ಲಿ ಸೂಕ್ಷ್ಮವಾದ, ಸ್ಥೂಲವಾದ ಯಾವ ಪದಾರ್ಥಗಳಿವೆಯೋ ಅವುಗಳಲ್ಲಿ ಸೂಕ್ಷ್ಮ, ಸ್ಥೂಲರೂಪದಲ್ಲಿ ನಾನೇ ಸನ್ನಿಹಿತನಾಗಿದ್ದೇನೆ.
ಕಿಂ ಚಿತ್ರಂ ಬಹುನೋಕ್ತೇನ ಸತ್ಯಮೇತದ್ ಬ್ರವೀಮಿ ತೇ |
ಯದ್ಭೂತಂ ಯದ್ಭವಿಷ್ಯದ್ವಾ ತತ್ಸರ್ವಮಹಮೇವ ತು ॥73॥
ಯುಧಿಷ್ಠಿರನೇ, ಹೆಚ್ಚೇನು ಹೇಳಲಿ? ಸತ್ಯವಾದ ಒಂದು ಮಾತಿನ ಮೂಲಕ ನಾನು ಯಾರು ಎಂಬುದನ್ನು ನಿನಗೆ ತಿಳಿಸುತ್ತೇನೆ. ಹಿಂದೆ ಯಾವ ಜಗತ್ತು ಇತ್ತೋ, ಮುಂದೆ ಯಾವ ಜಗತ್ತು ಹುಟ್ಟುತ್ತದೋ, ಈಗ ಕಾಣುವ ಜಗತ್ತು ಯಾವುದಿದೆಯೋ ಅದೆಲ್ಲದಕ್ಕೂ ನಾನೇ ಮುಖ್ಯಕಾರಣನು.
ಮಯಾ ಸೃಷ್ಟಾನಿ ಭೂತಾನಿ ಮನ್ಮಯಾನಿ ಚ ಪಾಂಡವ |
ಮಾಮೇವ ನ ವಿಜಾನಂತಿ ಮಾಯಯಾ ಮೋಹಿತಾನಿ ಮೇ ॥74॥
ಸಮಸ್ತ ಪ್ರಾಣಿಗಳು ನನ್ನಿಂದಲೇ ಜನ್ಮವನ್ನು ತಾಳಿವೆ. ಆದ್ದರಿಂದ ಎಲ್ಲ ಪ್ರಾಣಿಗಳಲ್ಲಿಯೂ ನಾನೇ ಅಂತರ್ಯಾಮಿಯಾಗಿದ್ದೇನೆ. ಆದರೆ ಅಜ್ಞಾನದಿಂದ ಈ ಜೀವರು ಅಂತರ್ಯಾಮಿಯಾದ ನನ್ನನ್ನು ಅರ್ಥೈಸಿಕೊಂಡಿರುವುದಿಲ್ಲ.
ಏವಂ ಸರ್ವಂ ಜಗದಿದಂ ಸದೇವಾಸುರಮಾನುಷಮ್ |
ಮತ್ತಃ ಪ್ರಭವತೇ ರಾಜನ್ ಮಯ್ಯೇವ ಪ್ರವಿಲೀಯತೇ ॥75॥
ದೇವತೆಗಳು, ಅಸುರರು, ಮನುಷ್ಯರಿಂದ ಕೂಡಿರುವ ಈ ಸಮಗ್ರ ಜಗತ್ತು ನನ್ನಿಂದಲೇ ಹುಟ್ಟುತ್ತದೆ. ನನ್ನಲ್ಲೇ ಲಯ ಹೊಂದುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ಶ್ರೀಕೃಷ್ಣಸ್ಯ ಜಗದ್ ವ್ಯಾಪಕತ್ವಕಥನಂ ನಾಮ ಸಪ್ತನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೆಂಟನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ನಾಲ್ಕು ಆಶ್ರಮಗಳ ಧರ್ಮವನ್ನು ನಿರೂಪಿಸಿದುದು.
ವೈಶಂಪಾಯನಃ
ಏವಮಾತ್ಮೋದ್ಭವಂ ಸರ್ವಂ ಜಗದುದ್ದಿಶ್ಯ ಕೇಶವಃ |
ಧರ್ಮಾನ್ ಧರ್ಮಾತ್ಮಜಸ್ಯೈವ ಪುಣ್ಯಾನಕಥಯತ್ ಪ್ರಭುಃ ॥1॥
ವೈಶಂಪಾಯನ ಜನಮೇಜಯನೇ, ಕೇಶವನು ತನ್ನಿಂದ ಉತ್ಪನ್ನವಾದ ಸಮಗ್ರ ಜಗತ್ತನ್ನು ಉದ್ದೇಶಿಸಿಕೊಂಡು, ಧರ್ಮಾತ್ಮಜನಾದ ಯುಧಿಷ್ಠಿರನನ್ನು ನೆಪಮಾಡಿಕೊಂಡು ಶ್ರೇಷ್ಠವಾದ ಪುಣ್ಯಕರವಾದ ಧರ್ಮಗಳನ್ನು ಬೋಧಿಸಿದನು.
ಶ್ರೀಭಗವಾನ್

ಶೃಣು ಪಾಂಡವ ತತ್ತ್ವೇನ ಪವಿತ್ರಂ ಪಾಪನಾಶನಮ್ |
ಕಥ್ಯಮಾನಂ ಮಯಾ ಪುಣ್ಯಂ ಧರ್ಮಶಾಸ್ತ್ರಫಲಂ ಮಹತ್ ॥2॥
ಶ್ರೀಭಗವಾನ್ ಪಾಂಡವನೇ, ನಾನು ಹೇಳುವ ಪವಿತ್ರವಾದ, ಪಾಪನಾಶಕವಾದ, ಪುಣ್ಯಪ್ರದವಾದ ಧರ್ಮಶಾಸ್ತ್ರ ಫಲವನ್ನು ಕೇಳಿಸಿಕೊ.
ಯಃ ಶೃಣೋತಿ ಶುಚಿರ್ಭೂತ್ವಾ ಏಕಚಿತ್ತಸ್ತಪೋಯುತಃ |
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಧರ್ಮಂ ಜ್ಞೇಯಂ ಯುಧಿಷ್ಠಿರ ॥3॥
ಶ್ರದ್ದಧಾನಸ್ಯ ತಸ್ಯೇಹ ಯತ್ ಪಾಪಂ ಪೂರ್ವಸಂಚಿತಮ್ |
ವಿನಶ್ಯತ್ಯಾಶು ತತ್ಸರ್ವಂ ಮದ್ಭಕ್ತಸ್ಯ ವಿಶೇಷತಃ ॥4॥
ಯೋಗ್ಯನಾದ ಯಾವ ವ್ಯಕ್ತಿಯು ನಿರ್ಮಲವಾದ ಮನಸ್ಸಿನಿಂದ ತಪೋನುಷ್ಠಾನ ನಿರತನಾಗಿ, ಶುಚಿಯಾಗಿ, ಸ್ವರ್ಗವನ್ನು ನೀಡುವ, ಕೀರ್ತಿಯನ್ನು ನೀಡುವ, ಆಯುಷ್ಯವನ್ನು ಅಭಿವೃದ್ಧಿಗೊಳಿಸುವ ಧರ್ಮವನ್ನು ಕೇಳುತ್ತಾನೋ ಅಂತಹ ಶ್ರದ್ಧಾಯುಕ್ತನಾಗಿ ಶ್ರವಣ ಮಾಡಿದ ವ್ಯಕ್ತಿಯ ಪೂರ್ವಸಂಚಿತವಾದ ಸಕಲ ಪಾಪಗಳೂ ನನ್ನ ಧರ್ಮೋಪದೇಶದಿಂದ ನಾಶ ಹೊಂದುತ್ತವೆ. ವಿಶೇಷವಾಗಿ ನನ್ನ ಭಕ್ತನಾದವನಿಗೆ ಸಮಸ್ತ ಪಾಪಗಳೂ ನಾಶ ಹೊಂದುತ್ತವೆ.
ವೈಶಂಪಾಯನಃ
ಏವಂ ಶ್ರುತ್ವಾ ವಚಃ ಪುಣ್ಯಂ ಸತ್ಯಂ ಕೇಶವಭಾಷಿತಮ್ |
ಪ್ರಹೃಷ್ಟಮನಸೋ ಭೂತ್ವಾ ಚಿಂತಯಂತೋಽದ್ಭುತಂ ಪರಮ್ ॥5॥
ವೈಶಂಪಾಯನ ಜನಮೇಜಯನೇ, ಪರಮಪವಿತ್ರವಾದ, ಸತ್ಯವಾದ ಶ್ರೀಕೃಷ್ಣನ ಇಂತಹ ಮಾತುಗಳನ್ನು ಸಂತುಷ್ಟವಾದ ಮನಸ್ಸಿನಿಂದ ಆಲೋಚಿಸುತ್ತಿದ್ದರು.
ದೇವಬ್ರಹ್ಮರ್ಷಯಃ ಸರ್ವೇ ಗಂಧರ್ವಾಪ್ಸರಸಸ್ತಥಾ |
ಭೂತಯಕ್ಷಗ್ರಹಗಣಾ ಗುಹ್ಯಕಾ ಭುಜಗಾಸ್ತಥಾ ॥6॥
ವಾಲಖಿಲ್ಯಾ ಮಹಾತ್ಮಾನೋ ಯೋಗಿನಸ್ತತ್ತ್ವದರ್ಶಿನಃ |
ತಥಾ ಭಾಗವತಾಶ್ಚಾಪಿ ಪಂಚಕಾಲಮುಪಾಸಕಾಃ ॥7॥
ಕೌತೂಹಲಸಮಾವಿಷ್ಟಾಃ ಪ್ರಹೃಷ್ಟಾಃ ಪರಮರ್ಷಯಃ |
ಶ್ರೋತುಕಾಮಾಃ ಪರಂ ಗುಹ್ಯಂ ವೈಷ್ಣವಂ ಧರ್ಮಶಾಸನಮ್ ॥8॥
ಹೃದಿ ಕರ್ತುಂ ಚ ತದ್ ವಾಕ್ಯಂ ಪ್ರಣೇಮುಃ ಶಿರಸಾ ತದಾ ॥9॥
ದೇವತೆಗಳು, ಬ್ರಹ್ಮರ್ಷಿಗಳು, ಗಂಧರ್ವರು, ಅಪ್ಸರೆಯರು, ಭೂತ-ಯಕ್ಷ-ಗ್ರಹ ಗಣಗಳು, ಗುಹ್ಯಕರು, ಸರ್ಪಗಳು, ಮಹಾತ್ಮರಾದ ಜ್ಞಾನಿಗಳಾದ ವಾಲಖಿಲ್ಯರು, ಯೋಗಿಗಳು, ತತ್ತ್ವದರ್ಶಿಗಳು, ಅದರಂತೆ ಭಗವಂತನನ್ನು ಐದು ಕಾಲದಲ್ಲಿ ಉಪಾಸನೆ ಮಾಡುವ ಪರಮಭಾಗವತೋತ್ತಮರು, ಕುತೂಹಲದಿಂದ ತುಂಬಿರುವ, ಸಂತುಷ್ಟವಾದ ಇಂದ್ರಿಯಗಳಿಂದ ಮತ್ತು ಮನಸ್ಸಿನಿಂದ ಕೂಡಿರುವ ಪರಮಶ್ರೇಷ್ಠವಾದ ಗುಹ್ಯವಾದ ವೈಷ್ಣವಧರ್ಮವನ್ನು ಕೇಳಲು, ಹೃದಯದಲ್ಲಿ ಅದನ್ನು ಧರಿಸಲು ಸರ್ವೋತ್ತಮನಾದ ಕೃಷ್ಣನನ್ನು ಶಿರಸಾ ನಮಸ್ಕರಿಸಿದರು.
ತತಸ್ತಾನ್ ವಾಸುದೇವೇನ ದೃಷ್ಟಾನ್ ಸೌಮ್ಯೇನ ಚಕ್ಷುಷಾ |
ವಿಮುಕ್ತಪಾಪಾನಾಲೋಕ್ಯ ಪ್ರಣಮ್ಯ ಶಿರಸಾ ಹರಿಮ್ ॥10॥
ಪಪ್ರಚ್ಛ ಕೇಶವಂ ಧರ್ಮಾನ್ ಧರ್ಮಪುತ್ರಃ ಪ್ರತಾಪವಾನ್ ॥11॥
ಭಗವಂತನ ದಿವ್ಯದೃಷ್ಟಿಯು ಅವರೆಲ್ಲರ ಮೇಲೆ ಬೀಳಲು ಅವರೆಲ್ಲರೂ ತಮ್ಮ ಪಾಪಗಳಿಂದ ಮುಕ್ತರಾದರು. ಪ್ರತಾಪಶಾಲಿಯಾದ, ಧರ್ಮಪುತ್ರನಾದ ಯುಧಿಷ್ಠಿರನು ಕೃಷ್ಣನನ್ನು ತಲೆಬಾಗಿ ನಮಸ್ಕರಿಸಿ, ಕೇಶವನನ್ನು ವಿಷ್ಣುಧರ್ಮಗಳನ್ನು ಬೋಧಿಸೆಂದು ಕೇಳಿಕೊಂಡನು.
ಯುಧಿಷ್ಠಿರಃ
ಕೀದೃಶೀ ಬ್ರಾಹ್ಮಣಸ್ಯಾಥ ಕೀದೃಶೀ ಕ್ಷತ್ರಿಯಸ್ಯ ವೈ |
ವೈಶ್ಯಸ್ಯ ಕೀದೃಶೀ ದೇವ ಗತಿಃ ಶೂದ್ರಸ್ಯ ಕೀದೃಶೀ ॥12॥
ಯುಧಿಷ್ಠಿರ ಶ್ರೀಕೃಷ್ಣನೇ, ಬ್ರಾಹ್ಮಣನಿಗೆ ಪ್ರತ್ಯೇಕವಾದ ಮಾರ್ಗವು ಯಾವುದು? ಕ್ಷತ್ರಿಯನಿಗೆ ಯಾವ ಮಾರ್ಗವು? ವೈಶ್ಯನಿಗೆ ಯಾವ ಮಾರ್ಗವು? ಶೂದ್ರನಿಗೆ ಯಾವ ಮಾರ್ಗವು?
ಕಥಂ ವಧ್ಯೇತ ಪಾಪೇನ ಬ್ರಾಹ್ಮಣಸ್ತು ಯಮಾಲಯೇ |
ಕ್ಷತ್ರಿಯೋ ವಾಽಥ ವೈಶ್ಯೋ ವಾ ಶೂದ್ರೋ ವಾ ಬಧ್ಯತೇ ಕಥಮ್ ॥
ಬ್ರಾಹ್ಮಣನು ಯಾವ ಪಾಪವನ್ನು ಮಾಡಿ ಯಮಪುರಿಯಲ್ಲಿ ಶಿಕ್ಷೆಗೆ ಗುರಿಯಾಗುತ್ತಾನೆ? ಕ್ಷತ್ರಿಯನಿಗೆ ನರಕವಾಗಲು ಯಾವ ಪಾಪವು ಕಾರಣ? ವೈಶ್ಯ- ಶೂದ್ರರಿಗೂ ನರಕಬಂಧನಕ್ಕೆ ಕಾರಣವಾದ ಪಾಪಗಳು ಯಾವುವು?
ಏತತ್ ಕಥಯ ದೇವೇಶ ಲೋಕನಾಥ ನಮೋಽಸ್ತು ತೇ ॥14॥
ಲೋಕನಾಥನೇ, ನಿನಗೆ ನಮಸ್ಕಾರ. ನನ್ನ ಈ ಪ್ರಶ್ನೆಗಳಿಗೆ ಉತ್ತರಿಸು.
ವೈಶಂಪಾಯನಃ
ಸ ಪೃಷ್ಟಃ ಕೇಶವೋಽಪ್ಯೇವಂ ಧರ್ಮಪುತ್ರೇಣ ಧೀಮತಾ |
ಉವಾಚ ಸಂಸಾರಗತಿಂ ಚಾತುರ್ವರ್ಣ್ಯಸ್ಯ ಕರ್ಮಜಾಮ್ ॥15॥
ವೈಶಂಪಾಯನ ಧರ್ಮಪುತ್ರನಾದ, ಜ್ಞಾನಿಯಾದ ಯುಧಿಷ್ಠಿರನು ಕೇಶವನನ್ನು ಕುರಿತು ಹೀಗೆ ಪ್ರಶ್ನಿಸಲು, ಕರ್ಮದಿಂದ ಉತ್ಪನ್ನವಾಗುವ ಚಾತುರ್ವರ್ಣ್ಯ ಗತಿಯನ್ನು, ಸಂಸಾರದ ಗತಿಯನ್ನು ಶ್ರೀಕೃಷ್ಣನು ಹೇಳಿದನು.

ಶ್ರೀಭಗವಾನ್
ಶೃಣು ವರ್ಣಕ್ರಮೇಣೈವ ಧರ್ಮಂ ಧರ್ಮಭೃತಾಂ ವರ |
ನಾಸ್ತಿ ಕಿಂಚಿನ್ನರಶ್ರೇಷ್ಠ ಬ್ರಾಹ್ಮಣಸ್ಯ ತು ದುಷ್ಕೃತಮ್ ॥16॥
ಶ್ರೀಭಗವಾನ್ ಧರ್ಮಧರಿಸಿದವರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ, ಬ್ರಾಹ್ಮಣಾದಿ ವರ್ಣಕ್ರಮದಿಂದಲೇ ಅವರ ಧರ್ಮಗಳನ್ನು ಹೇಳುತ್ತೇನೆ, ಕೇಳಿಸಿಕೊ. ಬ್ರಾಹ್ಮಣನಿಗೆ ದುಷ್ಕರವಾದುದು ಯಾವುದೂ ಇಲ್ಲ.
ಶಿಖಾಯಜ್ಞೋಪವೀತೀ ಸ್ಯಾತ್ ಸಂಧ್ಯಾಂ ಯೇ ಚಾಪ್ಯುಪಾಸತೇ |
ಯೈಶ್ಚ ಪೂರ್ಣಾಹುತಿಃ ಪ್ರಾಪ್ತಾ ವಿಧಿವಜ್ಜುಹ್ವತೇ ಚ ಯೇ ॥17॥
ಯಾವ ಬ್ರಾಹ್ಮಣನು ಶಿಖಾ-ಯಜ್ಞೋಪವೀತಗಳನ್ನು ಧರಿಸಿಕೊಂಡು ಸಂಧ್ಯೋಪಾಸನೆಯನ್ನು ಮಾಡುತ್ತಾನೋ, ಅಗ್ನಿಯಲ್ಲಿ ಪೂರ್ಣಾಹುತಿಗಳನ್ನು ನೀಡುತ್ತಾನೋ, ವಿಧಿವತ್ತಾಗಿ ಅಗ್ನಿಹೋತ್ರಗಳನ್ನು ಮಾಡುತ್ತಾನೋ;
ವೈಶ್ವದೇವಂ ಚ ಯೇ ಕುರ್ಯುಃ ಪೂಜಯಂತ್ಯತಿಥೀಂಶ್ಚ ಯೇ |
ನಿತ್ಯಂ ಸ್ವಾಧ್ಯಾಯಶೀಲಾಶ್ಚ ಜಪಯಜ್ಞಪರಾಸ್ತಥಾ ॥18॥
ವೈಶ್ವದೇವ, ಬಲಿಹರಣಗಳನ್ನು ಮಾಡುತ್ತಾನೋ, ಅತಿಥಿಗಳನ್ನು ಸತ್ಕರಿಸುತ್ತಾನೋ, ನಿತ್ಯವೂ ಸ್ವಾಧ್ಯಾಯಶೀಲನಾಗಿರುತ್ತಾನೋ, ಜಪ-ಯಜ್ಞಗಳಲ್ಲಿ ಆಸಕ್ತನಾಗಿರುತ್ತಾನೋ;
ಸಾಯಂಪ್ರಾತರ್ಹುತಾಶಾಶ್ಚ ಶೂದ್ರಭೋಜನವರ್ಜಿತಾಃ |
ಡಂಭಾನೃತವಿನಿರ್ಮುಕ್ತಾಃ ಸ್ವದಾರನಿರತಾಃ ಸದಾ ॥19॥
ಪ್ರಾತಃ-ಸಾಯಂಕಾಲಗಳಲ್ಲಿ ಹೋಮ ಮಾಡಿದ ನಂತರವೇ ಊಟ ಮಾಡುತ್ತಾನೋ, ಶೂದ್ರಾನ್ನವನ್ನು ತಿನ್ನುವುದಿಲ್ಲವೋ, ಡಂಭ, ಸುಳ್ಳುಗಳಿಂದ ದೂರನಾಗಿರುತ್ತಾನೋ, ತನ್ನ ಪತ್ನಿಯಲ್ಲೇ ಆಸಕ್ತನಾಗಿರುತ್ತಾನೋ;
ಪಂಚಯಜ್ಞಪರಾಶ್ಚೈವ ಯೇಽಗ್ನಿಹೋತ್ರಮುಪಾಸತೇ ॥20॥
ಪಂಚಮಹಾಯಜ್ಞಗಳನ್ನು ಮಾಡುತ್ತಿರುತ್ತಾನೋ, ಅಗ್ನಿಹೋತ್ರಗಳನ್ನು ಮಾಡುತ್ತಿರುತ್ತಾನೋ;
ದಹಂತಿ ದುಷ್ಕೃತಂ ಯೇಷಾಂ ಹೂಯಮಾನಾಸ್ತ್ರಯೋಽಗ್ನಯಃ |
ನಷ್ಟದುಷ್ಕೃತಕರ್ಮಾಣೋ ಬ್ರಹ್ಮಲೋಕಂ ವ್ರಜಂತಿ ತೇ ॥21॥
ಅಂತಹ ವ್ಯಕ್ತಿಯ ಪಾಪಗಳನ್ನು ಅವನು ಉಪಾಸನೆ ಮಾಡುವ ಮೂರು ಅಗ್ನಿಗಳೇ ನಾಶಮಾಡುತ್ತವೆ. ಹೀಗೆ ಅವರ ಸತ್ಕರ್ಮದ ಫಲವಾಗಿ ಬ್ರಹ್ಮಲೋಕವನ್ನು ಹೊಂದುತ್ತಾರೆ.
ಬ್ರಹ್ಮಲೋಕೇ ತತಃ ಕಾಮಂ ಗಂಧರ್ವೈರ್ಬ್ರಹ್ಮಗಾಯನೈಃ |
ಉಪಗೀಯಮಾನಾಃ ಪ್ರಯತೈಃ ಪೂಜ್ಯಮಾನಾಃ ಸ್ವಯಂಭುವಾ ॥22॥
ಅವರು ಬ್ರಹ್ಮಲೋಕದಲ್ಲಿ ಗಂಧರ್ವರಿಂದ, ಬ್ರಹ್ಮರ ಗಾಯನದಿಂದ ಚತುರ್ಮುಖಬ್ರಹ್ಮದೇವರಿಂದಲೂ ಸತ್ಕರಿಸಲ್ಪಟ್ಟವರಾಗಿ, ವಿಶೇಷವಾಗಿ ಜಿತೇಂದ್ರಿಯನರಾಗಿ ಭಗವಂತನನ್ನು ಸ್ತುತಿಸುತ್ತಾ, ಮನಸ್ಸಿನ ಕಾಮನೆಗಳನ್ನು ಪೂರ್ಣಗೊಳಿಸಿಕೊಳ್ಳುತ್ತಾರೆ.
ಬ್ರಹ್ಮಲೋಕೇ ಪ್ರಮೋದಂತೇ ಯಾವದಾಭೂತಸಂಪ್ಲವಮ್ ॥23॥
ಪ್ರಲಯ ಮುಗಿಯುವ ತನಕವೂ ಸತ್ಕರ್ಮಗಳ ಫಲವಾಗಿ ಬ್ರಹ್ಮಲೋಕದಲ್ಲಿ ಸಂತೋಷವನ್ನು ಹೊಂದುತ್ತಾರೆ.
ಕ್ಷತ್ರಿಯೋಽಪಿ ಸ್ಥಿತೋ ರಾಜ್ಯೇ ಸ್ವಧರ್ಮಂ ಪರಿಪಾಲಯನ್ |
ಸಮ್ಯಕ್ ಪ್ರಜಾಃ ಪಾಲಯಿತ್ವಾ ಸ್ವಧರ್ಮನಿರತಃ ಸದಾ ॥24॥
ಯಜ್ಞದಾನರತೋ ಧೀರಃ ಸ್ವದಾರನಿರತಃ ಶುಚಿಃ |
ಶಾಸ್ತ್ರಾನುಕಾರೀ ತತ್ತ್ವಜ್ಞಃ ಪ್ರಜಾಕಾರ್ಯಪರಾಯಣಃ ॥25॥
ಕ್ಷತ್ರಿಯನು ರಾಜ್ಯಸಿಂಹಾಸನದಲ್ಲಿ ಕುಳಿತು ಸ್ವಧರ್ಮನಿಷ್ಠನಾಗಿ ಪ್ರಜೆಗಳನ್ನು ರಕ್ಷಿಸುತ್ತಾ, ಯಜ್ಞ-ದಾನಗಳಲ್ಲಿ ಆಸಕ್ತನಾಗಿ, ತನ್ನ ಪತ್ನಿಯಲ್ಲಿಯೇ ನಿರತನಾಗಿ, ಶಾಸ್ತ್ರಕ್ಕೆ ಅನುಗುಣವಾಗಿ ಸತ್ಕರ್ಮಗಳನ್ನು ಆಚರಿಸುತ್ತಾ, ಪ್ರಜೆಗಳನ್ನು ರಕ್ಷಿಸುತ್ತಾ, ಭಗವತತ್ತ್ವಗಳನ್ನು ತಿಳಿದುಕೊಳ್ಳುತ್ತಾ;
ವಿಪ್ರೇಭ್ಯಃ ಕಾಮದೋ ನಿತ್ಯಂ ಭೃತ್ಯಾನಾಂ ಭರಣೇ ರತಃ |
ಸತ್ಯಸಂಧಃ ಶುಚಿರ್ನಿತ್ಯಂ ಲೋಭಡಂಭವಿವರ್ಜಿತಃ ॥26॥
ಕ್ಷತ್ರಿಯೋಽಪ್ಯುತ್ತಮಾಂ ಯಾತಿ ಗತಿಂ ದೇವನಿಷೇವಿತಾಮ್ ॥27॥
ಪ್ರತಿದಿನವೂ ಬ್ರಾಹ್ಮಣರಿಗೆ ಬಯಸಿದ್ದನ್ನು ನೀಡುತ್ತಾ, ಸೇವಕರನ್ನು ಚೆನ್ನಾಗಿ ರಕ್ಷಿಸುತ್ತಾ, ಸತ್ಯಸಂಧನಾಗಿ, ಶುಚಿಯಾಗಿ, ಲೋಭ-ಡಂಭಗಳಿಂದ ದೂರನಾಗಿ, ನಿತ್ಯವೂ ಧರ್ಮಶೀಲನಾಗಿರಲು ದೇವತೆಗಳಿಂದ ಸೇವಿಸಲ್ಪಡುವ ಉತ್ತಮವಾದ ಗತಿಯನ್ನೇ ಕ್ಷತ್ರಿಯನು ಹೊಂದುತ್ತಾನೆ.
ತತ್ರ ದಿವ್ಯಾಪ್ಸರೋಭಿಸ್ತು ಗಂಧರ್ವೈಶ್ಚ ಪ್ರಯತ್ನತಃ |
ಸೇವ್ಯಮಾನೋ ಮಹಾತೇಜಾಃ ಕ್ರೀಡತೇ ಶಕ್ರಪೂಜಿತಃ ॥28॥
ಆ ಸ್ವರ್ಗದಲ್ಲಿಯಾದರೂ ಶೋಭಿಸುವ ಅಪ್ಸರೆಯರಿಂದ, ಗಂಧರ್ವರಿಂದ ವಿಶೇಷವಾಗಿ ಸೇವ್ಯಮಾನನಾಗಿ, ಇಂದ್ರನಿಂದಲೂ ಸಮ್ಮಾನಿತನಾಗಿ, ಮಹಾತೇಜಸ್ವಿಯಾಗಿ ಸಂತೋಷದಿಂದ ಕ್ರೀಡಿಸುತ್ತಾನೆ.
ಚತುರ್ಯುಗಾನಿ ವೈ ತ್ರಿಂಶತ್ ಕ್ರೀಡಿತ್ವಾ ದಿವಿ ದೇವವತ್ |
ಇಹ ಮಾನುಷ್ಯಲೋಕೇ ತು ಚತುರ್ವೇದೀ ದ್ವಿಜೋ ಭವೇತ್ ॥29॥
ಮೂವತ್ತು ಚತುರ್ಯುಗಗಳನ್ನು ದೇವಲೋಕದಲ್ಲಿ ಸುಖವಾಗಿ ಕಳೆದು, ದೇವನಂತೆಯೇ ಮನುಷ್ಯಲೋಕದಲ್ಲಿ ನಾಲ್ಕುವೇದಗಳನ್ನು ಅರಿಯುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

ಕೃಷಿಗೋಪಾಲನಿರತಃ ಸ್ವಧರ್ಮಾನ್ವೇಷಣೇ ರತಃ |
ದಾನಧರ್ಮೇಽಪಿ ನಿರತೋ ವಿಪ್ರಶುಶ್ರೂಷಕಸ್ತಥಾ ॥30॥
ಕೃಷಿ, ಗೋವುಗಳ ರಕ್ಷಣೆಯಲ್ಲಿ ನಿರತನಾದ, ತನ್ನ ಧರ್ಮದಲ್ಲಿ ಆಸಕ್ತನಾಗಿರುವ, ದಾನ-ಧರ್ಮಗಳಲ್ಲಿ ನಿರತನಾಗಿರುವ, ಬ್ರಾಹ್ಮಣರ ಸೇವೆಯಲ್ಲಿ ಆಸಕ್ತನಾಗಿರುವ;
ಸತ್ಯಸಂಧಃ ಶುಚಿರ್ನಿತ್ಯಂ ಲೋಭಡಂಭವಿವರ್ಜಿತಃ |
ಋಜುಃ ಸ್ವದಾರನಿರತೋ ಹಿಂಸಾದ್ರೋಹವಿವರ್ಜಿತಃ ॥31॥
ಸತ್ಯಸಂಧನಾದ, ನಿತ್ಯವೂ ಶುಚಿಯಾದ, ಲೋಭ-ಡಂಭಗಳಿಂದ ದೂರನಾದ, ನೇರವಾಗಿ ವರ್ತಿಸುವ ಸ್ವಭಾವವುಳ್ಳ, ತನ್ನ ಪತ್ನಿಯಲ್ಲೇ ನಿರತನಾದ, ಹಿಂಸಾ-ದ್ರೋಹ- ಗಳಿಂದ ದೂರನಾದ;
ವಣಿಗ್ಧರ್ಮಾನಮುಂಚನ್ ವೈ ದೇವಬ್ರಾಹ್ಮಣಪೂಜಕಃ |
ವಣಿಕ್ ಚ ಸ್ವರ್ಗಮಾಪ್ನೋತಿ ಪೂಜ್ಯಮಾನೋಽಪ್ಸರೋಗಣೈಃ ॥32॥
ವಾಣಿಜ್ಯಧರ್ಮಗಳನ್ನು ಬಿಡದಿರುವ, ದೇವ-ಬ್ರಾಹ್ಮಣ ಪೂಜಕನಾದ ವೈಶ್ಯನು ಅಪ್ಸರೋಗಣದಿಂದ ಸೇವಿತವಾದ ಸ್ವರ್ಗವನ್ನು ಹೊಂದುತ್ತಾನೆ.
ಚತುರ್ಯುಗಾನಿ ವೈ ತ್ರಿಂಶತ್ ಕ್ರೀಡಿತ್ವಾ ದಶ ಪಂಚ ಚ |
ಇಹ ಮಾನುಷ್ಯಕೇ ಲೋಕೇ ರಾಜಾ ಭವತಿ ವೀರ್ಯವಾನ್ ॥33॥
ನಲವತ್ತೈದು ಚತುರ್ಯುಗಗಳ ಕಾಲ ಸ್ವರ್ಗದಲ್ಲಿ ಸುಖವನ್ನು ಅನುಭವಿಸಿ, ಮನುಷ್ಯಲೋಕದಲ್ಲಿ ವೀರ್ಯವಂತನಾದ ಕ್ಷತ್ರಿಯನಾಗಿ ಜನ್ಮವನ್ನು ತಾಳುತ್ತಾನೆ.
ತ್ರಯಾಣಾಮಪಿ ವರ್ಣಾನಾಂ ಶುಶ್ರೂಷಾನಿರತಃ ಸದಾ |
ವಿಶೇಷೇಣೈವ ವಿಪ್ರಾಣಾಂ ದಾಸವದ್ಯಸ್ತು ತಿಷ್ಠತಿ ॥34॥
ಅಯಾಚಿತಪ್ರದಾತಾ ಚ ಸತ್ಯಶೌಚಸಮನ್ವಿತಃ |
ಗುರುದೇವಾರ್ಚನರತಃ ಪರದಾರವಿವರ್ಜಿತಃ ॥35॥
ಮೂರು ವರ್ಣದವರನ್ನು ವಿಶೇಷವಾಗಿ ಸೇವಿಸುತ್ತಾ, ಅದರಲ್ಲಿಯೂ ಬ್ರಾಹ್ಮಣರಿಗೆ ದಾಸನಂತೆ ಇರುವಂತಹ, ಯಾರಲ್ಲಿಯೂ ಬೇಡದೆ ದಾನ ಮಾಡುವ ಸ್ವಭಾವದವನಾದ, ಸತ್ಯ-ಶೌಚದಲ್ಲಿ ನಿರತನಾದ, ಗುರು-ದೇವತೆಗಳ ಅರ್ಚನೆಯಲ್ಲಿ ಆಸಕ್ತನಾದ, ಮತ್ತೊಬ್ಬರ ಪತ್ನಿಯಲ್ಲಿ ಆಸಕ್ತಿಯನ್ನು ಹೊಂದದ;
ಪರಪೀಡಾಮಕೃತ್ವೈವ ಭೃತ್ಯವರ್ಗಂ ಬಿಭರ್ತಿ ಯಃ |
ಶೂದ್ರೋಽಪಿ ಸ್ವರ್ಗಮಾಪ್ನೋತಿ ಜೀವಾನಾಮಭಯಪ್ರದಃ ॥36॥
ಮತ್ತೊಬ್ಬರನ್ನು ಪೀಡಿಸದೆಯೇ ಹೆಂಡತಿ-ಮಕ್ಕಳನ್ನು ರಕ್ಷಿಸುವ ಯಾವ ಶೂದ್ರನಿದ್ದಾನೋ ಅವನು ಸಮಸ್ತ ಜೀವರಿಗೆ ಅಭಯವನ್ನುಂಟು ಮಾಡಿದ ಫಲದಿಂದ ಸ್ವರ್ಗಲೋಕವನ್ನು ಹೊಂದುತ್ತಾನೆ.
ಸ ಸ್ವರ್ಗಲೋಕೇ ಕ್ರೀಡಿತ್ವಾ ವರ್ಷಕೋಟಿಂ ಮಹಾತಪಾಃ |
ಇಹ ಮಾನುಷ್ಯಕೇ ಲೋಕೇ ವೈಶ್ಯೋ ಧನಪತಿರ್ಭವೇತ್ ॥37॥
ಕೋಟಿವರ್ಷಗಳ ಕಾಲ ಸತ್ಕರ್ಮಶೀಲನಾದ ಶೂದ್ರನು ಸ್ವರ್ಗಲೋಕದಲ್ಲಿ ವಿಹರಿಸಿ ಪುನಃ ಮನುಷ್ಯಲೋಕದಲ್ಲಿ ಧನಿಕನಾದ ವೈಶ್ಯಜನ್ಮವನ್ನು ಹೊಂದುತ್ತಾನೆ.
ಏವಂ ಧರ್ಮಾತ್ ಪರಂ ನಾಸ್ತಿ ಮಹತ್ ಸಂಸಾರಮೋಕ್ಷಣಮ್ |
ನ ಚ ಧರ್ಮಾತ್ ಪರಂ ಕಿಂಚಿತ್ ಪಾಪಕರ್ಮವ್ಯಪೋಹನಮ್ ॥
ಈ ರೀತಿಯಾಗಿ ಸಂಸಾರದಿಂದ ಬಿಡುಗಡೆಯನ್ನು ಹೊಂದಿಸುವ ಧರ್ಮಾಚರಣೆಗಿಂತ ಶ್ರೇಷ್ಠವಾದ, ಮಹತ್ವಪೂರ್ಣವಾದ ಕಾರ್ಯವು ಬೇರೆ ಯಾವುದೂ ಇರುವುದಿಲ್ಲ. ಪಾಪಕರ್ಮಗಳನ್ನು ದಾಟಲು ಸ್ವಧರ್ಮಾಚರಣೆಯೇ ಶ್ರೇಷ್ಠವಾದ ಉಪಾಯವೆನಿಸಿದೆ. ಇದನ್ನು ಬಿಟ್ಟು ಯಾವುದೇ ಉಪಾಯಗಳು ಇರುವುದಿಲ್ಲ.
ತಸ್ಮಾದ್ ಧರ್ಮಃ ಸದಾ ಕಾರ್ಯೋ ಮಾನುಷ್ಯಂ ಪ್ರಾಪ್ಯ ದುರ್ಲಭಮ್ |
ನ ಹಿ ಧರ್ಮಾನುರಕ್ತಾನಾಂ ಲೋಕೇ ಕಿಂಚನ ದುರ್ಲಭಮ್ ॥39॥
ಆದ್ದರಿಂದ ದುರ್ಲಭವಾದ ಮನುಷ್ಯಜನ್ಮವನ್ನು ಹೊಂದಿದ ಪ್ರತಿಯೊಬ್ಬರೂ ಅವರವರಿಗೆ ವಿಹಿತವಾದ ಧರ್ಮಾನುಷ್ಠಾನಗಳನ್ನು ಮಾಡಬೇಕು. ಧರ್ಮದಲ್ಲಿ ಅನುರಕ್ತರಾದ ಪುರುಷರಿಗೆ ಲೋಕದಲ್ಲಿ ಲಭಿಸದೆ ಇರುವ ಪದಾರ್ಥಗಳೇ ಇರುವುದಿಲ್ಲ.
ಸ್ವಯಂಭುವಿಹಿತೋ ಧರ್ಮೋ ಯೋ ಯಸ್ಯೇಹ ನರೇಶ್ವರ |
ಸ ತೇನ ಕ್ಷಪಯೇತ್ ಪಾಪಂ ಸಮ್ಯಗಾಚರಿತೇನ ಚ ॥40॥
ನರೇಶ್ವರನೇ, ಚತುರ್ಮುಖಬ್ರಹ್ಮದೇವರು ಯಾವ ಯಾವ ಜಾತಿಯವರಿಗೆ ಯಾವ ಯಾವ ಧರ್ಮಗಳನ್ನು ವಿಧಾನ ಮಾಡಿದ್ದಾರೋ, ಆಯಾ ಧರ್ಮಗಳನ್ನು ಆಚರಿಸುತ್ತಾ, ಶ್ರದ್ಧಾಪೂರ್ವಕವಾದ ಆಚರಣೆಗಳಿಂದಲೇ ಪಾಪವನ್ನು ಕಳೆದುಕೊಳ್ಳಬೇಕು.
ಸಹಜಂ ಯದ್ಭವೇತ್ ಕರ್ಮ ನ ತತ್ ತ್ಯಾಜ್ಯಂ ಹಿ ಕೇನಚಿತ್ |
ಸ ಏವ ತಸ್ಯ ಧರ್ಮೋ ಹಿ ತೇನ ಸಿದ್ಧಿಂ ಸ ಗಚ್ಛತಿ ॥41॥
ಭಗವಂತನು ಜನ್ಮದಿಂದಲೇ ಯಾವ ಧರ್ಮವನ್ನು ನೀಡಿದ್ದಾನೋ ಅಂತಹ ಜನ್ಮಕ್ಕೆ ಅನುಗುಣವಾದ ಧರ್ಮ-ಕರ್ಮಗಳನ್ನು ಎಂದಿಗೂ ಯಾರು ಬಿಡಬಾರದು. ಇದೇ ಅವನ ಧರ್ಮವಾಗಿದೆ, ಇದೇ ಅವನ ಸಿದ್ಧಿಗೆ ಹೇತುವಾಗಿದೆ. ಹೀಗೆ ವರ್ತಿಸಿದಲ್ಲಿ ಸಿದ್ಧಿಯನ್ನು ಹೊಂದುತ್ತಾನೆ.
ನಿರ್ಗುಣೋಽಪಿ ಸ್ವಧರ್ಮಸ್ತು ಪಾಪಕರ್ಮ ವ್ಯಪೋಹತಿ |

ಏವಮೇವ ತು ಧರ್ಮೋಽಪಿ ಕ್ಷೀಯತೇ ಪಾಪವರ್ಧನಾತ್ ॥42॥
ಸ್ವಧರ್ಮನಿರತನಾದ ವ್ಯಕ್ತಿಯಲ್ಲಿ ಗುಣಗಳು ಕಡಿಮೆಯಿದ್ದರೂ ಆ ಸ್ವಧರ್ಮಾಚರಣೆಯ ಪುಣ್ಯವು ಅವನ ಪಾಪಗಳನ್ನು ಕಳೆಯುತ್ತದೆ. ಇದರಂತೆ ಪಾಪಕರ್ಮಗಳನ್ನು ಚೆನ್ನಾಗಿ ಮಾಡುವುದರಿಂದ ಧರ್ಮವು ಕ್ಷೀಣಿಸುತ್ತದೆ.
ಯುಧಿಷ್ಠಿರಃ
ಭಗವನ್ ದೇವದೇವೇಶ ಶ್ರೋತುಂ ಕೌತೂಹಲಂ ಹಿ ಮೇ |
ಶುಭಸ್ಯಾಪ್ಯಶುಭಸ್ಯಾಪಿ ಕ್ಷಯವೃದ್ಧೀ ಯಥಾಕ್ರಮಮ್ ॥43॥
ಯುಧಿಷ್ಠಿರ ದೇವದೇವೇಶನೇ, ಷಡ್ಗುಣೈಶ್ವರ್ಯಸಂಪನ್ನನೇ, ಶುಭಕರ್ಮಗಳಿಗೆ ಅಶುಭಕರ್ಮಗಳಿಗೆ ಸಿಗುವ ವೃದ್ಧಿ-ಕ್ಷಯಗಳನ್ನು ಯಥಾಕ್ರಮದಲ್ಲಿ ಉಪದೇಶಿಸು. ಈ ವಿಷಯದಲ್ಲಿ ನನಗೆ ಅತಿಯಾದ ಕುತೂಹಲವಿದೆ.
ಶ್ರೀಭಗವಾನ್
ಶೃಣು ಪಾಂಡವ ತತ್ಸರ್ವಂ ಧರ್ಮಸೂಕ್ಷ್ಮಮಂ ಸನಾತನಮ್ |
ದುರ್ವಿಜ್ಞೇಯತಮಂ ನಿತ್ಯಂ ಮಮ ಭಕ್ತೈರ್ಮಹಾತ್ಮಭಿಃ ॥44॥
ಶ್ರೀಭಗವಾನ್ ಪಾಂಡವನೇ, ಸನಾತನವಾದ ಸಮಗ್ರ ಧರ್ಮಸೂಕ್ಷ್ಮವನ್ನು ಕೇಳಿಸಿಕೊ. ಮಹಾತ್ಮರಾದ ನನ್ನ ಭಕ್ತರಿಗೂ ನಾನು ನಿನಗೆ ಮಾಡುವ ಈ ಉಪದೇಶವು ಅತ್ಯಂತ ದುರ್ಲಭವಾದುದು ಎಂದು ತಿಳಿ.
ಯಥೈವ ಶೀತಮುದಕಮುಷ್ಣೇನ ಬಹುನಾ ವೃತಮ್ |
ಭವೇತ್ತು ತತ್ಕ್ಷಣಾದುಷ್ಣಂ ಶೀತತ್ವಂ ಚ ವಿನಶ್ಯತಿ ॥45॥
ಯಥೋಷ್ಣಂ ವಾ ಭವೇದಲ್ಪಂ ಶೀತೇನ ಬಹುನಾ ವೃತಮ್ |
ಶೀತಲಂ ತದ್ ಭವೇತ್ ಸರ್ವಮುಷ್ಣತ್ವಂ ಚ ವಿನಶ್ಯತಿ ॥46॥
ಏವಂ ತು ಯದ್ಭವೇದ್ ಭೂರಿ ಸುಕೃತಂ ವಾಽಥ ದುಷ್ಕೃತಮ್ |
ತದಲ್ಪಂ ಕ್ಷಪಯೇಚ್ಛೀಘ್ರಂ ನಾತ್ರ ಕಾರ್ಯಾ ವಿಚಾರಣಾ ॥47॥
ಯಾವ ರೀತಿಯಾಗಿ ತಣ್ಣಗಿರುವ ನೀರು ಅತಿಯಾದ ಬಿಸಿನೀರಿನಿಂದ ಮೇಲನ ಹೊಂದಿದಾಗ ತತ್ಕ್ಷಣದಲ್ಲಿಯೇ ಆ ತಣ್ಣೀರು ಬಿಸಿಯಾಗುತ್ತದೋ, ಅದರಲ್ಲಿರುವ ಶೈತ್ಯವು ನಾಶ ಹೊಂದುತ್ತದೋ ಅಥವಾ ತುಂಬಾ ತಣ್ಣಗಿರುವ ನೀರಿಗೆ ಸ್ವಲ್ಪ ಬಿಸಿನೀರಿನ ಮೇಲನವನ್ನು ಮಾಡಿದಾಗ ಬಿಸಿಯಾದ ನೀರು ತಣ್ಣಗಾಗುತ್ತದೋ, ತನ್ನಲ್ಲಿರುವ ಉಷ್ಣತ್ವವನ್ನು ಕಳೆದುಕೊಳ್ಳುತ್ತದೋ, ಇದೇ ರೀತಿಯಾಗಿ ಪುಣ್ಯಕರ್ಮವನ್ನಾಗಲಿ, ಪಾಪಕರ್ಮವನ್ನಾಗಲಿ ಅಲ್ಪಪ್ರಮಾಣದಲ್ಲಿ ಆಚರಿಸಿದಾಗ ಅದು ನಾಶವನ್ನೇ ಹೊಂದುತ್ತದೆ. ಅತಿಯಾದ ಪಾಪಕರ್ಮವನ್ನು ಮಾಡಿ ಸ್ವಲ್ಪ ಪುಣ್ಯಕರ್ಮವನ್ನು ಮಾಡಿದರೂ ಅವನು ಪಾಪಕರ್ಮಿ ಎಂದೇ ಕರೆಸಿಕೊಳ್ಳುತ್ತಾನೆ. ಅತಿಯಾದ ಪುಣ್ಯಕರ್ಮವನ್ನು ಮಾಡಿ ಸ್ವಲ್ಪ ಪಾಪಕರ್ಮವನ್ನು ಮಾಡಿದರೂ ಅವನು ಪುಣ್ಯಕರ್ಮಿ ಎಂದೇ ಕರೆಸಿಕೊಳ್ಳುತ್ತಾನೆ. ಇದರಲ್ಲಿ ವಿಚಾರ ಮಾಡುವ ಅಂಶವು ಇರುವುದಿಲ್ಲ.
ಸಮತ್ವೇ ಸತಿ ರಾಜೇಂದ್ರ ತಯೋಃ ಸುಕೃತಪಾಪಯೋಃ |
ಗೂಹಿತಸ್ಯ ಭವೇದ್ ವೃದ್ಧಿಃ ಕೀರ್ತಿತಸ್ಯ ಭವೇತ್ ಕ್ಷಯಃ ॥48॥
ಸುಕೃತ-ದುಷ್ಕೃತಗಳು ಎರಡೂ ಸಮವಾಗಿರುವುದಾದರೆ ತಾನು ಮಾಡಿದ ಸುಕೃತವನ್ನಾಗಲಿ, ದುಷ್ಕೃತವನ್ನಾಗಲಿ ಮನುಷ್ಯನು ಹೇಳಿಕೊಂಡರೆ ಅದು ಕ್ಷೀಣಿಸುತ್ತದೆ. ಮಾಡಿದ ಪಾಪವನ್ನು ಪಶ್ಚಾತ್ತಾಪದಿಂದ ಹೇಳಿಕೊಂಡರೆ ಆ ಪಾಪವು ನಾಶ ಹೊಂದುತ್ತದೆ. ಮಾಡಿದ ಪುಣ್ಯಕರ್ಮವನ್ನು ಹೇಳಿಕೊಂಡರೆ ಪುಣ್ಯವು ನಾಶ ಹೊಂದುತ್ತದೆ ಎಂದು ಅಭಿಪ್ರಾಯ. ಹೇಳಿಕೊಳ್ಳದೆ ರಹಸ್ಯವಾಗಿ ಇಟ್ಟುಕೊಂಡರೆ ಅಭಿವೃದ್ಧಿಯನ್ನು ಹೊಂದುತ್ತದೆ.
ಖ್ಯಾಪನೇನಾನುತಾಪೇನ ಪ್ರಾಯಃ ಪಾಪಂ ಪ್ರಣಶ್ಯತಿ |
ತಥಾಕೃತಶ್ಚ(ಸ್ತು) ರಾಜೇಂದ್ರ ಧರ್ಮೋ ನಶ್ಯತಿ ಭಾರತ ॥49॥
ಮಾಡಿದ ಪಾಪಗಳನ್ನು ಗುಟ್ಟಾಗಿ ಇಡಬಾರದು. ಅವುಗಳನ್ನು ಬಹಿರಂಗ ಪಡಿಸುವುದರಿಂದ ಪಾಪಕರ್ಮಗಳು ಸವಿಯುತ್ತವೆ. ಮಾಡಿದ ಒಳ್ಳೆಯ ಕಾರ್ಯಗಳನ್ನು ಹೇಳಿಕೊಳ್ಳಬಾರದು. ಹೇಳಿಕೊಂಡರೆ ಪುಣ್ಯಕರ್ಮವು ಸವೆದು ಹೋಗುತ್ತದೆ.
ತಾವುಭೌ ಗೂಹಿತೌ ಸಮ್ಯಗ್ ವೃದ್ಧಿಂ ಯಾತೌ ನ ಸಂಶಯಃ |
ತಸ್ಮಾತ್ ಸರ್ವಪ್ರಯತ್ನೇನ ನ ಪಾಪಂ ಗೂಹಯೇದ್ ಬುಧಃ ॥50॥
ಪಾಪಕರ್ಮವೇ ಆಗಲಿ, ಪುಣ್ಯಕರ್ಮವೇ ಆಗಲಿ ಮುಚ್ಚಿಟ್ಟಲಿ ಅವುಗಳು ವೃದ್ಧಿಯನ್ನು ಹೊಂದುತ್ತವೆ. ಆದ್ದರಿಂದ ಜ್ಞಾನಿಯಾದವನು ಸಮಸ್ತ ಪ್ರಯತ್ನದಿಂದಲೂ ಮಾಡಿದ ಪಾಪವನ್ನು ಮುಚ್ಚಿಡಬಾರದು.
ತಸ್ಮಾದೇತತ್ ಪ್ರಯತ್ನೇನ ಕೀರ್ತನಂ ಕ್ಷಯಕಾರಣಮ್ |
ತಸ್ಮಾತ್ ಸಂಕೀರ್ತಯೇತ್ ಪಾಪಂ ನಿತ್ಯಂ ಧರ್ಮಂ ಚ ಗೂಹಯೇತ್ ॥
ಪ್ರಯತ್ನಪೂರ್ವಕವಾಗಿ ಮಾಡಿದ ಪಾಪವನ್ನು ಹೇಳಿಕೊಳ್ಳುತ್ತಿದ್ದರೆ ಆ ಪಾಪಕರ್ಮದ ಫಲವು ನಾಶವಾಗುತ್ತದೆ. ಆದ್ದರಿಂದ ಮಾಡಿದ ಪಾಪಕರ್ಮಗಳನ್ನು ಹೇಳಿಕೊಳ್ಳುತ್ತಿರಬೇಕು. ನಿತ್ಯವೂ ತಾನು ಅನುಷ್ಠಾನ ಮಾಡಿದ ಧರ್ಮಗಳನ್ನು ಮುಚ್ಚಿಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಚಾತುರ್ವರ್ಣ್ಯಧರ್ಮಫಲಕಥನಂ ನಾಮ ಅಷ್ಟನವತಿತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ತೊಂಬತ್ತೊಂಬತ್ತನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಏನೂ ಪ್ರಯೋಜನ ಸಿಗದೆ ಇರುವ ಜನ್ಮ-ದಾನ-ಜೀವಗಳ ಬಗ್ಗೆ ವರ್ಣಿಸಿದುದು. ದಾನಗಳಲ್ಲಿ

ಸಾತ್ವಿಕ-ರಾಜಸ-ತಾಮಸ ಭೇದಗಳನ್ನೂ, ದಾನ ತೆಗೆದುಕೊಳ್ಳುವ ವ್ಯಕ್ತಿಯಲ್ಲಿರುವ ಅರ್ಹತೆಯನ್ನು ಹೇಳುವ ಮೂಲಕ ಬ್ರಾಹ್ಮಣನ ಮಹಿಮೆಯನ್ನು ವರ್ಣಿಸಿದುದು.
ವೈಶಂಪಾಯನಃ
ಏವಂ ಶ್ರುತ್ವಾ ವಚಸ್ತಥ್ಯಂ ಧರ್ಮಪುತ್ರೋಽಚ್ಯುತಸ್ಯ ತು |
ಪಪ್ರಚ್ಛ ಪುನರಪ್ಯನ್ಯಾನ್ ಧರ್ಮಾನ್ ಧರ್ಮಾತ್ಮಜೋ ನೃಪ ॥1॥
ವೈಶಂಪಾಯನ ಜನಮೇಜಯನೇ, ಧರ್ಮಜನು ಅಚ್ಯುತನು ಹೇಳಿದ ಮಾತುಗಳನ್ನು ಕೇಳಿಸಿಕೊಂಡು ಪುನಃ ಧರ್ಮದ ವಿಷಯವಾಗಿ ಕೃಷ್ಣನ ಬಳಿ ಪ್ರಶ್ನಿಸಿದನು.
ಯುಧಿಷ್ಠಿರಃ
ವೃಥಾ ಚ ಕತಿ ಜನ್ಮಾನಿ ವೃಥಾ ದಾನಾನಿ ವಾ ಕತಿ |
ವೃಥಾ ಚ ಜೀವನಂ ಯೇಷಾಂ ನರಾಣಾಂ ಪುರುಷೋತ್ತಮ ॥2॥
ಅಚ್ಯುತನೇ, ಯಾವ ಜನ್ಮವು ವ್ಯರ್ಥವೆಂದು ಶಾಸ್ತ್ರ ಹೇಳುತ್ತದೆ? ವ್ಯರ್ಥವಾದ ಫಲವನ್ನು ನೀಡದಿರುವ ದಾನವು ಯಾವುದು? ವ್ಯರ್ಥವಾದ ಜೀವನವು ಯಾವುದು?
ಕೀದೃಶಾಸು ಹ್ಯವಸ್ಥಾಸು ದಾನಂ ದತ್ತಂ ಜನಾರ್ದನ |
ಇಹ ಲೋಕೇ ಚ ಭಜತಿ ಪುರುಷಃ ಪುರುಷೋತ್ತಮ ॥3॥
ಪುರುಷೋತ್ತಮನೇ, ಯಾವ ಅವಸ್ಥೆಯಲ್ಲಿ ಮನುಷ್ಯನು ಮಾಡಿದ ದಾನದ ಫಲವನ್ನು ಈ ಲೋಕದಲ್ಲಿ ಅನುಭವಿಸುತ್ತಾನೆ?
ಗರ್ಭಸ್ಥೇ ಕರ್ಮ ಚಾಯಾತಿ ಕಿಂ ಬಾಲ್ಯೇ ವಾಪಿ ಶೈಶವೇ |
ಯೌವನೇ ಚಾಪಿ ಕಿಂ ಕೃಷ್ಣ ವೃದ್ಧತ್ವೇ ಚಾಪಿ ಕಿಂ ಭವೇತ್ ॥4॥
ಕೃಷ್ಣ, ಮಗು ಇದ್ದಾಗ ಅನುಭವಿಸುತ್ತಾನೆಯೋ, ಯುವಕನಾದಾಗ ಅನುಭವಿಸುತ್ತಾನೆಯೋ, ಮುದುಕನಾದಾಗ ದಾನದ ಫಲವನ್ನು ಅನುಭವಿಸುತ್ತಾನೆಯೋ?
ಸಾತ್ವಿಕಂ ಕೀದೃಶಂ ದಾನಂ ರಾಜಸಂ ಕೀದೃಶಂ ಭವೇತ್ |
ತಾಮಸಂ ಕೀದೃಶಂ ದೇವ ತರ್ಪಯಿಷ್ಯತಿ ಕಿಂ ಪ್ರಭೋ ॥5॥
ಸಾತ್ವಿಕ ದಾನವು ಯಾವುದು? ರಾಜಸ ದಾನವು ಯಾವುದು? ತಾಮಸ ದಾನವು ಯಾವುದು? ಎಂತಹ ದಾನದಿಂದ ದಾನ ತೆಗೆದುಕೊಳ್ಳುವವನು ಸಂತೋಷವನ್ನು ಹೊಂದುತ್ತಾನೆ?
ಉತ್ತಮಂ ಕೀದೃಶಂ ದಾನಂ ಮಧ್ಯಮಂ ಕೀದೃಶಂ ಭವೇತ್ |
ಅಧಮಂ ಕೀದೃಶಂ ದಾನಂ ತೇಷಾಂ ಯಾದವ ಕಿಂ ಫಲಮ್ ॥6॥
ಯಾದವನೇ, ಉತ್ತಮವಾದ ದಾನವು ಯಾವುದು? ಮಧ್ಯಮ ದಾನವು ಯಾವುದು? ಅಧಮ ದಾನವು ಯಾವುದು? ಆ ದಾನಗಳಿಗಿರುವ ಫಲವೇನು?
ಕಿಂ ದಾನಂ ನಯತಿ ಹ್ಯೂರ್ಧ್ವಂ ಕಿಂ ಗತಿಂ ಮಧ್ಯಮಾಂ ನಯೇತ್ |
ಗತಿಂ ಜಘನ್ಯಾಮಥವಾ ದೇವದೇವ ಬ್ರುವೀಹಿ ಮೇ ॥7॥
ಯಾವ ದಾನವು ಸ್ವರ್ಗಲೋಕಕ್ಕೆ ಒಯ್ಯುತ್ತದೆ? ಯಾವ ದಾನವು ಮನುಷ್ಯ ಲೋಕದಲ್ಲಿ ಇರುವಂತೆ ಮಾಡುತ್ತದೆ? ಯಾವ ದಾನವು ಅಧಮಲೋಕಕ್ಕೆ ಕೊಂಡೊಯ್ಯುತ್ತದೆ? ದೇವದೇವನೇ, ಇವೆಲ್ಲವನ್ನೂ ಹೇಳು.
ಏತದಿಚ್ಛಾಮಿ ವಿಜ್ಞಾತುಂ ಪರಂ ಕೌತೂಹಲಂ ಹಿ ಮೇ |
ತ್ವದೀಯಂ ವಚನಂ ಸತ್ಯಂ ಪುಣ್ಯಂ ಚ ಮಧುಸೂದನ ॥8॥
ಈ ದಾನದ ರಹಸ್ಯವನ್ನು ತಿಳಿಯಲು ಬಯಸಿದ್ದೇನೆ. ನನಗೆ ಅತಿಯಾದ ಕುತೂಹಲವಿದೆ. ಮಧುಸೂದನನೇ, ನಿನ್ನ ಮಾತು ಸತ್ಯವೂ, ಪುಣ್ಯಪ್ರದವೂ ಆಗಿದೆ.
ವೈಶಂಪಾಯನಃ
ಏವಂ ಧರ್ಮಂ ಪ್ರಯತ್ನೇನ ಪೃಷ್ಟಃ ಪಾಂಡುಸುತೇನ ವೈ |
ಉವಾಚ ವಾಸುದೇವೋಽಥ ಧರ್ಮಾನ್ ಧರ್ಮಾತ್ಮಜಸ್ಯ ಸಃ ॥9॥
ವೈಶಂಪಾಯನ ಈ ರೀತಿಯಾಗಿ ಪಾಂಡುಸುತನಾದ ಧರ್ಮಜನು ಕೃಷ್ಣನನ್ನು ಧರ್ಮದ ಬಗ್ಗೆ ಪ್ರಯತ್ನಪೂರ್ವಕವಾಗಿ ಕೇಳುತ್ತಿರಲು ಯುಧಿಷ್ಠಿರನಿಗೆ ಸಮಸ್ತ ಧರ್ಮಗಳನ್ನು ವಾಸುದೇವನು ವಿವರಿಸಿದನು.
ಶ್ರೀಭಗವಾನ್
ಶೃಣು ರಾಜನ್ ಯಥಾನ್ಯಾಯಂ ವಚನಂ ತಥ್ಯಮುತ್ತಮಮ್ |
ಕಥ್ಯಮಾನಂ ಮಯಾ ಪುಣ್ಯಂ ಸರ್ವಪಾಪವ್ಯಪೋಹನಮ್ ॥10॥
ಶ್ರೀಭಗವಾನ್ ಯುಧಿಷ್ಠಿರನೇ, ನಿನಗೆ ಯೋಗ್ಯವಾದ ಸಮಸ್ತ ಧರ್ಮದ ವಿಷಯಗಳನ್ನು ಯಥಾವತ್ತಾಗಿ ಬೋಧಿಸುತ್ತೇನೆ. ಏಕಾಗ್ರತೆಯಿಂದ ಕೇಳಿಸಿಕೊ. ಪುಣ್ಯಪ್ರದವಾದ ನನ್ನ ಪ್ರವಚನದಿಂದ ನಿನ್ನ ಸಮಸ್ತ ಪಾಪಗಳೂ ಪರಿಹಾರವಾಗಲಿ.
ವೃಥಾ ಚ ದಶ ಜನ್ಮಾನಿ ಚತ್ವಾರಿ ಚ ನರಾಧಿಪ |
ವೃಥಾ ದಾನಾನಿ ಪಂಚಾಶತ್ ಪಂಚ ಚೈವ ಯಥಾಕ್ರಮಮ್ ॥11॥
ವೃಥಾ ಚ ಜೀವಿತಂ ಯೇಷಾಂ ತೇ ಚ ಷಟ್ ಪರಿಕೀರ್ತಿತಾಃ |
ಅನುಕ್ರಮೇಣ ಸರ್ವಾಣಿ ತಾನಿ ವಕ್ಷ್ಯಾಮಿ ಪಾಂಡವ ॥12॥
ಹದಿನಾಲ್ಕು ಜನ್ಮಗಳು ವ್ಯರ್ಥವಾದವುಗಳು. ಐವತ್ತೈದು ದಾನಗಳು ವ್ಯರ್ಥವಾದವು. ಆರು ಪ್ರಕಾರವಾದ ಮನುಷ್ಯನ ಜೀವಿಕೆಗಳು

ವ್ಯರ್ಥವಾದವುಗಳು. ಅದೆಲ್ಲವನ್ನೂ ಕ್ರಮವಾಗಿ ಹೇಳುತ್ತೇನೆ.
ಧರ್ಮಘ್ನಾನಾಂ ತಥಾ ಜನ್ಮ ಲುಬ್ಧಾನಾಂ ಪಾಪಿನಾಂ ತಥಾ |
ವೃಥಾ ಪಾಕಂ ಚ ಯೇಽಶ್ನಂತಿ ಪರದಾರರತಾಶ್ಚ ಯೇ ॥13॥
ಪಾಕಭೇದಕರಾ ಯೇ ಚ ಯೇ ಚ ಸ್ಯುಃ ಸತ್ಯವರ್ಜಿತಾಃ ॥14॥
ಧರ್ಮವನ್ನು ನಾಶಮಾಡುವವರ, ಲೋಭಿಗಳ, ಪಾಪಿಜನರ, ಬಲಿಹರಣ- ವೈಶ್ವದೇವಾದಿಗಳನ್ನು ಮಾಡದೆ, ಅತಿಥಿಗಳನ್ನು ಸತ್ಕರಿಸದೆ, ಕೇವಲ ತಮಗೋಸ್ಕರ ಪದಾರ್ಥಗಳನ್ನು ಬೇಯಿಸಿ ತಿನ್ನುವವರ, ಪರಸ್ತ್ರೀಯರಲ್ಲಿ ಅನುರಕ್ತರಾಗಿರುವವರ, ಊಟದಲ್ಲಿ ಪಂಕ್ತಿಭೇದವನ್ನು ಮಾಡುವವರ, ಅಸತ್ಯವಾದಿಗಳ ಜನ್ಮವು ವ್ಯರ್ಥವಾಗಿದೆ.
ಮೃಷ್ಟಮಶ್ನಾತಿ ಯಶ್ಚೈಕೋ ದೃಶ್ಯಮಾನಸ್ತು ಬಾಂಧವೈಃ |
ಪಿತರಂ ಮಾತರಂ ಚೈವ ಉಪಾಧ್ಯಾಯಂ ಗುರುಂ ತಥಾ ॥15॥
ಯಾರು ಕಷ್ಟಪಡುತ್ತಿರುವ ಬಂಧುಗಳು ಜೊತೆಗಿದ್ದರೂ ಅವರ ಲೆಕ್ಕಿಸದೆ ಒಬ್ಬನೇ ಉತ್ತಮವಾದ ಅನ್ನವನ್ನು ಉಣ್ಣುತ್ತಾನೋ ಅಂತಹವನ ಜನ್ಮವು ವ್ಯರ್ಥವಾದುದು. ಯಾರು ತಂದೆ-ತಾಯಿಗಳನ್ನು, ಉಪಾಧ್ಯಾಯರನ್ನು, ಗುರುಗಳನ್ನು ಸೇವಿಸುವುದಿಲ್ಲವೋ ಅವನ ಜನ್ಮವು ವ್ಯರ್ಥವು.
ಮಾತುಲಂ ಮಾತುಲಾನೀಂ ಚ ಯೋ ವಿಹನ್ಯಾಚ್ಚಪೇತ ವಾ ॥16॥
ಸೋದರಮಾವನನ್ನು, ಅವನ ಪತ್ನಿಯನ್ನು ಹಿಂಸಿಸುತ್ತಾನೋ, ನಿಂದಿಸುತ್ತಾನೋ ಅವನ ಜನ್ಮವು ವ್ಯರ್ಥವು.
ಬ್ರಾಹ್ಮಣಾಶ್ಚೈವ ಯೇ ಭೂತಾಃ ಸಂಧ್ಯೋಪಾಸನವರ್ಜಿತಾಃ |
ನಿಃಸ್ವಾಹಾ ನಿಃಸ್ವಧಾಶ್ಚೈವ ಯಶ್ಚ ಶೂದ್ರಾನ್ನಭುಗ್ ದ್ವಿಜಃ ॥17॥
ಬ್ರಾಹ್ಮಣನಾಗಿದ್ದು ಸಂಧ್ಯಾವಂದನೆಯನ್ನು ಮಾಡದಿರುವ, ಅಗ್ನಿಹೋತ್ರಾದಿಗಳನ್ನು ಮಾಡದಿರುವ, ಪಿತೃಕರ್ಮಗಳನ್ನು ಮಾಡದಿರುವವನ ಜನ್ಮವು, ಶೂದ್ರಾದಿಗಳು ನೀಡುವ ಅನ್ನವನ್ನು ತಿನ್ನುವ ಬ್ರಾಹ್ಮಣನ ಜನ್ಮವು ವ್ಯರ್ಥವೇ ಸರಿ.
ಮಮ ವಾ ಶಂಕರಸ್ಯಾಪಿ ಬ್ರಹ್ಮಣೋ ವಾ ಯುಧಿಷ್ಠಿರ |
ಅಥವಾ ಬ್ರಾಹ್ಮಣಾನಾಂ ತು ಯೇ ನ ಭಕ್ತಾ ನರಾಧಿಪ ॥18॥
ವೃಥಾ ಜನ್ಮಾನ್ಯಥೈತೇಷಾಂ ಪಾಪಿನಾಂ ವಿದ್ಧಿ ಪಾಂಡವ ॥19॥
ಶ್ರೇಷ್ಠರಾಜನೇ, ನನಗಾಗಲೀ, ಶಂಕರನಿಗಾಗಲೀ, ಬ್ರಹ್ಮನಿಗಾಗಲೀ, ಬ್ರಾಹ್ಮಣರಿಗಾಗಲೀ ಭಕ್ತರಾಗದ ಮನುಷ್ಯರ ಜನ್ಮವು ವ್ಯರ್ಥವೇ ಸರಿ. ಪಾಂಡವನೇ, ಇಂತಹ ಪಾಪಿಷ್ಠರ ಜನ್ಮವು ವ್ಯರ್ಥವಾಗುತ್ತದೆ ಎಂದು ತಿಳಿ.
ಅಶ್ರದ್ದಯಾ ಚ ಯದ್ದತ್ತಮ್ ಅವಮಾನೇನ ವಾಽಪಿ ಯತ್ |
ಡಂಭಾರ್ಥಮಪಿ ಯದ್ದತ್ತಂ ಯತ್ ಪಾಷಂಡಿಹೃತಂ ನೃಪ ॥20॥
ಶೂದ್ರಾಚಾರಾಯ ಯದ್ದತ್ತಂ ಯದ್ದತ್ತಂ ಚಾನುಕೀರ್ತಿತಮ್ |
ರೋಷಯುಕ್ತಂ ಚ ಯದ್ದತ್ತಂ ಯದ್ದತ್ತಮನುಶೋಚಿತಮ್ ॥21॥
ಡಂಭಾರ್ಜಿತಂ ಚ ಯದ್ದತ್ತಂ ಯಚ್ಚ ವಾಽಪ್ಯನೃತಾರ್ಜಿತಮ್ |
ಬ್ರಾಹ್ಮಣಸ್ವಂ ಚ ಯದ್ದತ್ತಂ ಚೌರ್ಯೇಣಾಪ್ಯಾರ್ಜಿತಂ ಚ ಯತ್ ॥22॥
ಅಭಿಶಾಪಹೃತಂ ಯತ್ತು ಯದ್ದತ್ತಂ ಪತಿತೇ ದ್ವಿಜೇ |
ಯದ್ದತ್ತಂ ಸ್ವೈರಿಣೀಭರ್ತುರ್ಬಹುಕಾರ್ಯಾನುವರ್ತಿನೇ ॥23॥
ನಿರ್ಬ್ರಹ್ಮಾಭಿಹೃತಂ ಯತ್ತು ಯದ್ದತ್ತಂ ಸರ್ವಯಾಜಕೇ |
ವ್ರಾತ್ಯೇ ತು ಯತ್ಕೃತಂ ದತ್ತಮಾರೂಢಪತಿತೇ ಚ ಯತ್ ॥24॥
ಯದ್ ಗ್ರಾಮಯಾಜಕಹೃತಂ ಯತ್ ಕೃತಘ್ನಹೃತಂ ತಥಾ |
ಉಪಪಾತಕಿನೇ ದತ್ತಂ ವೇದವಿಕ್ರಯಿಣೇ ಚ ಯತ್ ॥25॥
ಸ್ತ್ರೀಜಿತಾಯ ಚ ಯದ್ದತ್ತಂ ಯದ್ದತ್ತಂ ರಾಜಸೇವಿನೇ |
ಗಣಕಾಯ ಚ ಯದ್ದತ್ತಂ ಯಚ್ಚ ಕಾರಣಿಕಾಯ ಚ ॥26॥
ವೃಷಲೀಪತಯೇ ದತ್ತಂ ಯದ್ದತ್ತಂ ಶಸ್ತ್ರಜೀವಿನೇ |
ಭೃತಕಾಯ ಚ ಯದ್ದತ್ತಂ ವ್ಯಾಲಗ್ರಾಹಿಹೃತಂ ಚ ಯತ್ ॥27॥
ದೇವದ್ರವ್ಯಾಶಿನೇ ದತ್ತಂ ಯದ್ದತ್ತಂ ಚಿತ್ರಕರ್ಮಿಣೇ ॥28॥
ರಂಗೋಪಜೀವಿನೇ ದತ್ತಂ ಯಚ್ಚ ಮಾಂಸೋಪಜೀವಿನೇ |
ಸೇವಕಾಯ ಚ ಯದ್ದತ್ತಂ ಯದ್ದತ್ತಂ ಬ್ರಾಹ್ಮಣಬ್ರುವೇ ॥29॥
ಅದೇಶಿನೇ ಚ ಯದ್ದತ್ತಂ ದತ್ತಂ ವಾರ್ಧುಷಿಕಾಯ ಯತ್ |
ಯದನಾಚಾರಿಣೇ ದತ್ತಂ ಯತ್ತು ದತ್ತಮನಗ್ನಯೇ ॥30॥
ಅಸಂಧ್ಯೋಪಾಸಿನೇ ದತ್ತಂ ಯಚ್ಛೂದ್ರಗ್ರಾಮವಾಸಿನೇ |
ಯನ್ಮಿಥ್ಯಾಲಿಂಗಿನೇ ದತ್ತಂ ದತ್ತಂ ಸರ್ವಾಶಿನೇ ಚ ಯತ್ ॥31॥
ನಾಸ್ತಿಕಾಯ ಚ ಯದ್ದತ್ತಂ ಧರ್ಮವಿಕ್ರಯಿಣೇ ಚ ಯತ್ |
ಚೋರಕಾಯ ಚ ಯದ್ದತ್ತಂ ಯದ್ದತ್ತಂ ಕೂಟಸಾಕ್ಷಿಣೇ ॥32॥
ಗ್ರಾಮಕೂಟಾಯ ಯದ್ದತ್ತಂ ದಾನಂ ಪಾರ್ಥಿವಪುಂಗವ |
ವೃಥಾ ಭವತಿ ತತ್ ಸರ್ವಂ ನಾತ್ರ ಕಾರ್ಯಾ ವಿಚಾರಣಾ ॥33॥

ಅಶ್ರದ್ಧೆಯಿಂದ ಮಾಡಿದ ದಾನ, ಅವಮಾನ ಮಾಡಿ ನೀಡಿದ ದಾನ, ಡಾಂಭಿಕವಾಗಿ ನೀಡಿದ ದಾನ, ವೈದಿಕ ಧರ್ಮವನ್ನು ದ್ವೇಷಿಸುವವನಿಗೆ ನೀಡಿದ ದಾನ, ಶೂದ್ರಾಚಾರ ಉಳ್ಳವನಿಗೆ ನೀಡಿದ ದಾನ, ಕೀರ್ತಿಗಾಗಿ ನೀಡಿದ ದಾನ, ಕೋಪದಿಂದ ಕೊಟ್ಟದ್ದು, ದಾನ ಕೊಟ್ಟ ಬಳಿಕ ಕೊಟ್ಟೆನೆಂದು ಸಂಕಟಪಟ್ಟದ್ದು, ಡಂಭದಿಂದ ಸಂಪಾದಿಸಿದ್ದನ್ನು ನೀಡುವುದು, ಸುಳ್ಳು ಹೇಳಿ ಸಂಪಾದಿಸಿದ್ದನ್ನು ನೀಡುವುದು, ಬ್ರಾಹ್ಮಣರ ಸ್ವತ್ತನ್ನು ಅಪಹರಿಸಿ ಅದನ್ನು ದಾನವಾಗಿ ನೀಡುವುದು, ಕಳ್ಳತನ ಮಾಡಿ ಸಂಪಾದಿಸಿದ್ದನ್ನು ದಾನವಾಗಿ ಕೊಡುವುದು, ಶಪಿಸಿಕೊಂಡು ನೀಡುವ ವ್ಯಕ್ತಿಯಿಂದ ಸ್ವೀಕರಿಸಿದ ದಾನವು, ಪತಿತನಾದ ಬ್ರಾಹ್ಮಣನಿಗೆ ಕೊಟ್ಟ ದಾನ, ವೇದವಿಹೀನರಾದವರಿಗೆ ಕೊಟ್ಟ ದಾನ, ಎಲ್ಲರ ಮನೆಯಲ್ಲಿಯೂ ಬೇಡಿ ತಂದ ಪದಾರ್ಥವನ್ನು ಮಾಡಿದ ದಾನ, ಸಂಸ್ಕಾರ ಹೀನರಾದ, ದಾನ ಮಾಡಲು ಅರ್ಹತೆಯಿಲ್ಲದ ವ್ರಾತ್ಯರಿಂದ ಸ್ವೀಕರಿಸಿದ ದಾನ, ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಬಳಿಕ ಪುನಃ ಗೃಹಸ್ಥಾಶ್ರಮವನ್ನು ಪ್ರವೇಶಿಸಿದಾಗ ಪತಿತನೆನಿಸಿಕೊಂಡ ವ್ಯಕ್ತಿಯು ತಂದುಕೊಟ್ಟಿರುವ ದಾನ, ಇಂದ್ರಿಯಲೋಲುಪನು ನೀಡಿರುವ ದಾನ, ಕೃತಘ್ನನು ಕೊಟ್ಟಿರುವ ದಾನ, ಉಪಪಾತಕಗಳನ್ನು ಮಾಡಿರುವ ವ್ಯಕ್ತಿಯಿಂದ ದಾನ, ವೇದವನ್ನು ಮಾರಿಕೊಳ್ಳುವ ವ್ಯಕ್ತಿಯಲ್ಲಿ ಮಾಡುವ ದಾನ, ಸ್ತ್ರೀಜಿತನಾದ ವ್ಯಕ್ತಿಯಿಂದ ಕೊಡಲ್ಪಟ್ಟ ದಾನ, ರಾಜಸೇವಕನು ನೀಡಿರುವ ದಾನ, ಗಣಿಕಾ ಸ್ತ್ರೀ ನೀಡುವ ದಾನ, ಶೂದ್ರಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದ ವ್ಯಕ್ತಿಯಿಂದ ಪಡೆದ ದಾನ, ವೃಷಲೀಪತಿಯಿಂದ ಪಡೆದ ದಾನ, ಶಸ್ತ್ರಜೀವಿಯಾದ ವ್ಯಕ್ತಿಯಿಂದ ಪಡೆದ ದಾನ, ಕೂಲಿ ತೆಗೆದುಕೊಂಡು ಜೀವಿಸುವವನಿಗೆ ಕೊಟ್ಟ ದಾನ, ಹಾವುಗಳನ್ನು ಹಿಡಿಯುವವನಿಗೆ ಕೊಟ್ಟ ದಾನ, ವ್ಯಾಪಾರದಿಂದ ಜೀವಿಸುವವನಿಗೆ ಕೊಟ್ಟ ದಾನ, ಕ್ಷುದ್ರವಾದ ಮಂತ್ರಗಳನ್ನು ಜಪಿಸಿಕೊಂಡು ಜೀವಿಕೆಯನ್ನು ನಡೆಸುವವನಿಗೆ ಕೊಟ್ಟ ದಾನ, ಶೂದ್ರನಂತೆ ಜೀವಿಸುವವನಿಗೆ ನೀಡಿದ ದಾನ, ವೇತನವನ್ನು ಪಡೆದು ದೇವಮಂದಿರದಲ್ಲಿ ಪೂಜೆ ಮಾಡುವವನಿಗೆ ಕೊಟ್ಟ ದಾನ, ದೇವರ ದ್ರವ್ಯವನ್ನು ಅಪಹರಿಸಿದವನಿಗೆ ನೀಡಿದ ದಾನ, ಚಿತ್ರಬರೆಯುವವನಿಗೆ ಕೊಟ್ಟ ದಾನ, ನಾಟಕ ವೃತ್ತಿಯಿಂದ ಜೀವಿಸುವವನಿಗೆ ಕೊಟ್ಟ ದಾನ, ಮಾಂಸವನ್ನು ಮಾರಿ ಜೀವನವನ್ನು ನಡೆಸುವವನಿಗೆ ಕೊಟ್ಟ ದಾನ, ಸೇವಕನಿಗೆ ಕೊಟ್ಟ ದಾನ, ಬ್ರಾಹ್ಮಣೋಚಿತವಾದ ಆಚಾರ-ವ್ಯವಹಾರವಿಲ್ಲದಿದ್ದರೂ ಬ್ರಾಹ್ಮಣನೆಂದು ಹೇಳಿಕೊಳ್ಳುವ ವ್ಯಕ್ತಿಗೆ ನೀಡಿದ ದಾನ, ಉಪದೇಶಿಸಲು ಶಕ್ತಿಯಿಲ್ಲದವನಿಗೆ ನೀಡಿದ ದಾನ, ಬಡ್ಡಿ ಹಣದಿಂದ ಜೀವನ ನಡೆಸುವವನಿಗೆ ನೀಡುವ ದಾನ, ಆಚಾರಹೀನನಿಗೆ ನೀಡಿದ ದಾನ, ಅಗ್ನಿಹೋತ್ರ ಮಾಡದವನಿಗೆ ನೀಡಿದ ದಾನ, ಸಂಧ್ಯಾವಂದನೆ ಮಾಡದವನಿಗೆ ನೀಡಿದ ದಾನ, ಶೂದ್ರಗ್ರಾಮದಲ್ಲಿ ವಾಸ ಮಾಡುವ ಬ್ರಾಹ್ಮಣನಿಗೆ ನೀಡಿದ ದಾನ, ಸುಳ್ಳು ವೇಷಗಳನ್ನು ಧರಿಸುವವನಿಗೆ ನೀಡಿದ ದಾನ, ಸಿಕ್ಕಿದ್ದನ್ನು ತಿಂದು ಬದುಕುವವನಿಗೆ ನೀಡಿದ ದಾನ, ನಾಸ್ತಿಕನಿಗೆ, ಧರ್ಮವಿಕ್ರಯ ಮಾಡುವವನಿಗೆ, ನೀಚವೃತ್ತಿಯವನಿಗೆ, ಕಳ್ಳನಿಗೆ, ಸುಳ್ಳು ಸಾಕ್ಷಿ ಹೇಳುವವನಿಗೆ, ಕೂಟನೀತಿಯನ್ನು ಆಶ್ರಯಿಸಿ ಜಗಳ ತಂದೊಡ್ಡುವ ಬ್ರಾಹ್ಮಣನಿಗೆ ನೀಡಿದ ದಾನ - ಇವೆಲ್ಲವೂ ವ್ಯರ್ಥವಾಗುತ್ತವೆ. ಇದರಲ್ಲಿ ಯಾವ ಸಂಶಯವೂ ಬೇಡ.

ವಿಪ್ರನಾಮಧರಾ ಹ್ಯೇತೇ ಲೋಲುಪಾ ಬ್ರಾಹ್ಮಣಾಧಮಾಃ |
ನಾತ್ಮಾನಂ ತಾರಯಂತ್ಯೇತೇ ನ ದಾತಾರಂ ಯುಧಿಷ್ಠಿರ ॥34॥

ಯುಧಿಷ್ಠಿರನೇ, ಹಿಂದೆ ಹೇಳಿದ ವ್ಯಕ್ತಿಗಳೆಲ್ಲರೂ ವಿಷಯಗಳಲ್ಲಿಯೇ ಆಸಕ್ತರು. ಹೆಸರಿಗೆ ಮಾತ್ರ ದಾನಪಾತ್ರರು ಎಂದು ಕರೆಸಿಕೊಳ್ಳುತ್ತಾರೆ. ಇವರು ತಮ್ಮನ್ನೂ ಉದ್ಧರಿಸಿಕೊಳ್ಳುವುದಿಲ್ಲ, ದಾನ ಕೊಟ್ಟವರನ್ನೂ ಉದ್ಧರಿಸುವುದಿಲ್ಲ. ಇವರು ಬ್ರಾಹ್ಮಣಾಧಮರು.

ಏತೇಭ್ಯೋ ದತ್ತಮಾತ್ರಾಣಿ ದಾನಾನಿ ಸುಬಹೂನ್ಯಪಿ |
ವೃಥಾ ಭವಂತಿ ರಾಜೇಂದ್ರ ಭಸ್ಮನ್ಯಾಜ್ಯಾಹುತಿರ್ಯಥಾ ॥35॥

ಎಲೈ ರಾಜೇಂದ್ರನೇ, ಇವರಿಗೆ ಕೊಡುವ ದಾನವು ಅಪರಿಮಿತವಾಗಿದ್ದರೂ ಬೂದಿಯಲ್ಲಿ ಹೋಮ ಮಾಡಿದಂತೆ ಎಲ್ಲವೂ ವ್ಯರ್ಥವಾಗುತ್ತದೆ.

ಏತೇಷು ಯತ್ ಫಲಂ ಕಿಂಚಿದ್ ಭವಿಷ್ಯತಿ ಕಥಂಚನ |
ರಾಕ್ಷಸಾಶ್ಚ ಪಿಶಾಚಾಶ್ಚ ತದ್ವಿಲ್ಲುಂಪಂತಿ ಹರ್ಷಿತಾಃ ॥36॥

ಒಂದು ವೇಳೆ ಇಂತಹವರಿಗೆ ಕೊಟ್ಟ ದಾನದಿಂದ ಅಲ್ಪಸ್ವಲ್ಪ ಫಲವು ದೊರಕಿದರೂ ರಾಕ್ಷಸರು, ಪಿಶಾಚಿಗಳು ಸಂತೋಷದಿಂದ ಆ ಫಲವನ್ನು ಅಪಹರಿಸಿಬಿಡುತ್ತಾರೆ.

ವೃಥಾ ಹ್ಯೇತಾನಿ ದಾನಾನಿ ಕಥಿತಾನಿ ಸಮಾಸತಃ ॥37॥

ಇಂತಹವರಿಗೆ ಕೊಡುವ ದಾನವು ವ್ಯರ್ಥವಾಗುವುದೆಂದು ಸಂಕ್ಷೇಪವಾಗಿ ಹೇಳಿದ್ದೇನೆ.

ಜೀವಿತಂ ಚ ವೃಥಾ ಯೇಷಾಂ ತಚ್ಛೃಣುಷ್ವ ಯುಧಿಷ್ಠಿರ ॥38॥

ಇನ್ನು ಮುಂದೆ ನಾನು ಯಾವ ಯಾವ ಮನುಷ್ಯರ ಜೀವನವು ವ್ಯರ್ಥ ಎಂಬುದನ್ನು ತಿಳಿಸುತ್ತೇನೆ, ತಿಳಿದುಕೊ.

ಯೇ ಚ ಮಾಂ ನ ಪ್ರಪದ್ಯಂತೇ ಶಂಕರಂ ವಾ ನರಾಧಮಾಃ |
ಬ್ರಾಹ್ಮಣಾನ್ ವಾ ಮಹಾದೇವಾನ್ ವೃಥಾ ಜೀವಂತಿ ತೇ ನರಾಃ ॥39॥

ಯಾವ ನರಾಧಮನು ನನ್ನನ್ನಾಗಲೀ, ಶಂಕರನನ್ನಾಗಲೀ, ಭೂದೇವತೆ ಎನಿಸಿದ ಬ್ರಾಹ್ಮಣರನ್ನಾಗಲೀ, ಶರಣು ಹೊಂದುವುದಿಲ್ಲವೋ ಅವರ ಜೀವನವು ವ್ಯರ್ಥ.

ಯೇ ಚ ನಿಂದಂತಿ ಮಾಂ ಮೂಢಾಃ ಶಂಕರಂ ವಾ ನರಾಧಮಾಃ |
ಬ್ರಾಹ್ಮಣಾನ್ ವಾ ದ್ವಿಜಾನ್ ವೇದಾನ್ ವೃಥಾ ಜೀವಂತಿ ತೇ ನರಾಃ ॥

ಯಾರು ನನ್ನನ್ನು ನಿಂದಿಸುತ್ತಾರೋ, ಮೂರ್ಖರಾದ ನರಾಧಮರು ರುದ್ರನನ್ನು ನಿಂದಿಸುತ್ತಾರೋ, ಬ್ರಾಹ್ಮಣರನ್ನು, ವೇದಗಳನ್ನು ವ್ಯರ್ಥವಾಗಿ ಜರೆಯುತ್ತಾರೋ ಅವರು ನರಾಧಮರು.

ಹೇತುಶಾಸ್ತ್ರೇಷು ಯೇ ಹೃಷ್ಟಾಃ ಕುದೃಷ್ಟಿಪಥಮಾಶ್ರಿತಾಃ |
ವೇದಾನ್ ನಿಂದಂತ್ಯನಾಚಾರಾ ವೃಥಾ ಜೀವಂತಿ ತೇ ನರಾಃ ॥41॥

ಯಾರು ತರ್ಕಶಾಸ್ತ್ರದಲ್ಲಿಯೇ ಆಸಕ್ತರಾಗಿರುತ್ತಾರೋ, ನಾಸ್ತಿಕರ ಮಾರ್ಗವನ್ನು ಅನುಸರಿಸುತ್ತಾರೋ, ದೇವನಿಂದಕರೂ,

ಸದಾಚಾರಹೀನರೋ ಅಂತಹವರ ಜೀವನವು ವ್ಯರ್ಥ.
ಕುಶಲ್ಯೈಃ ಕೃತಶಾಸ್ತ್ರಾಣಿ ಪಠಿತ್ವಾ ಯೇ ನರಾಧಮಾಃ |
ವಿಪ್ರಾನ್ ನಿಂದಂತಿ ಯಜ್ಞಾಂಶ್ಚ ವೃಥಾ ಜೀವಂತಿ ತೇ ನರಾಃ ॥42॥
ಯಾವ ನರಾಧಮರು ನಾಸ್ತಿಕನಿಷ್ಠರಾದ ವ್ಯಕ್ತಿಗಳಿಂದ ರಚಿತವಾದ ಶಾಸ್ತ್ರಗಳನ್ನು ಓದುತ್ತಾ ಬ್ರಾಹ್ಮಣರನ್ನು, ಯಜ್ಞಗಳನ್ನು ನಿಂದಿಸುತ್ತಾರೋ ಅಂತಹವರ ಜೀವನವು ವ್ಯರ್ಥ.
ಯೇ ಚ ದುರ್ಗಾಂ ಕುಮಾರಂ ವಾ ವಾಯುಮಗ್ನಿಂ ಜಲಂ ರವಿಮ್ |
ಪಿತರಂ ಮಾತರಂ ಚೈವ ಗುರುಂ ನಿತ್ಯಂ ನಿಶಾಕರಮ್ ॥43॥
ಮೂಢಾ ನಿಂದಂತ್ಯನಾಚಾರಾ ವೃಥಾ ಜೀವಂತಿ ತೇ ನರಾಃ ॥44॥
ಯಾರು ಆಚಾರಹೀನರಾಗಿ ದುರ್ಗೆಯನ್ನು, ಷಣ್ಮುಖನನ್ನು, ವಾಯುವನ್ನು, ಅಗ್ನಿಯನ್ನು, ಜಲವನ್ನು, ಸೂರ್ಯನನ್ನು, ತಂದೆ-ತಾಯಿಯರನ್ನು, ಗುರುವನ್ನು, ಇಂದ್ರನನ್ನು, ಚಂದ್ರನನ್ನು ನಿಂದಿಸುತ್ತಾರೋ ಅಂತಹವರ ಜೀವನವು ವ್ಯರ್ಥವೇ ಸರಿ.
ವಿದ್ಯಮಾನೇ ಧನೇ ಯಸ್ತು ದಾನಧರ್ಮವಿವರ್ಜಿತಃ |
ಮೃಷ್ಟಮಶ್ನಾತಿ ಯಶ್ಚೈಕೋ ವೃಥಾ ಜೀವತಿ ಸೋಽಪ್ಯುತ ॥45॥
ಯಾವನು ಧನವಂತನಾಗಿದ್ದರೂ ದಾನ-ಧರ್ಮಗಳನ್ನು ಮಾಡುವುದಿಲ್ಲವೋ, ಯಾರಿಗೂ ನೀಡದೆ ಮೃಷ್ಟಾನ್ನವನ್ನು ಸ್ವಯಂ ಭುಂಜಿಸುತ್ತಾನೋ ಅಂತಹವನ ಜೀವನವು ವ್ಯರ್ಥ.
ವೃಥಾ ಜೀವಿತಮಾಖ್ಯಾತಂ ದಾನಕಾಲಂ ಬ್ರವೀಮಿ ತೇ ॥46॥
ಯುಧಿಷ್ಠಿರನೇ, ವ್ಯರ್ಥವಾದ ಜೀವಿತವನ್ನು ಹೇಳಿದ್ದೇನೆ. ಮುಂದೆ ಯಾವ ಕಾಲದಲ್ಲಿ ದಾನವು ಶ್ರೇಷ್ಠ ಎಂಬುದನ್ನು ಹೇಳುತ್ತೇನೆ.
ತಮೋನಿವಿಷ್ಟಚಿತ್ತೇನ ದತ್ತಂ ದಾನಂ ತು ಯದ್ಭವೇತ್ |
ಸ ತಸ್ಯ ಫಲಮಶ್ನಾತಿ ನರೋ ಗರ್ಭಗತೋ ನೃಪ ॥47॥
ಮನಸ್ಸು ತಮೋಗುಣದಿಂದ ಕೂಡಿದಾಗ ದಾನ ಮಾಡಿದವನು ಅದರ ಫಲವನ್ನು ಗರ್ಭದಲ್ಲಿರುವಾಗ ಅನುಭವಿಸುತ್ತಾನೆ.
ಈರ್ಷ್ಯಾಮಾತ್ಸರ್ಯಸಂಯುಕ್ತೋ ಡಂಭಾರ್ಥಂ ಚಾರ್ಥಕಾರಣಾತ್ |
ದದಾತಿ ದಾನಂ ಯೋ ಮರ್ತ್ಯೋ ಬಾಲಭಾವೇ ತದಶ್ನುತೇ ॥48॥
ಡಾಂಭಿಕವಾಗಿ, ಈರ್ಷ್ಯೆ-ಮಾತ್ಸರ್ಯಗಳಿಂದ ಕೂಡಿದವನಾಗಿ, ಅರ್ಥದ ಕಾರಣದಿಂದ ದಾನ ಮಾಡುವವನು ಬಾಲಕನಾಗಿದ್ದಾಗಲೇ ಅದರ ಫಲವನ್ನು ಅನುಭವಿಸುತ್ತಾನೆ. ಹೊಟ್ಟೆಕಿಚ್ಚು ಮೊದಲಾದ ದೋಷಗಳಿಂದ ದೂಷಿತವಾದ ದಾನವನ್ನು ಮಾಡಿದ್ದರಿಂದ ದುಃಖದಿಂದ ಕೂಡಿದಾಗ ಸುಖವನ್ನು ಅನುಭವಿಸುತ್ತಾನೆ. ಅರ್ಥಾತ್ ಗರ್ಭ ದುಃಖವನ್ನು ಅನುಭವಿಸುತ್ತಲೇ ಆ ಸುಖವನ್ನು ಅನುಭವಿಸುತ್ತಾನೆ.
ಭೋಕ್ತು ಭೋಗಾನ(ಭೋಗಮ)ಶಕ್ತಸ್ತು ವ್ಯಾಧಿಭಿಃ ಪೀಡಿತೋ ಭೃಶಮ್ |
ದದಾತಿ ದಾನಂ ಯೋ ಮರ್ತ್ಯೋ ವೃದ್ಧಭಾವೇ ತದಶ್ನುತೇ ॥49॥
ಭೋಗಗಳನ್ನು ಅನುಭವಿಸಲು ಅಶಕ್ತನಾಗಿ, ವ್ಯಾಧಿಗಳಿಂದ ಪೀಡಿಸಲ್ಪಡುತ್ತಿದ್ದರೂ ಆ ಕಾಲದಲ್ಲಿ ದಾನವನ್ನು ಮಾಡಿದರೆ ಅದರ ಫಲವಾಗಿ ಅವನಿಗೆ ವೃದ್ಧಾಪ್ಯದಲ್ಲಿ ಆ ದಾನದ ಫಲವಾಗಿ ಸುಖವು ದೊರೆಯುತ್ತದೆ.
ಶ್ರದ್ಧಾಯುಕ್ತಃ ಶುಚಿಃ ಸ್ನಾತಃ ಪ್ರಸನ್ನೇಂದ್ರಿಯಮಾನಸಃ |
ದಾನಂ ದದಾತಿ ಯೋ ಮರ್ತ್ಯೋ ಯೌವನೇ ಸ ತದಶ್ನುತೇ ॥50॥
ಯಾರು ಸ್ನಾನ ಮಾಡಿ, ಶುಚಿಯಾಗಿ, ಶ್ರದ್ಧಾಯುಕ್ತನಾಗಿ, ನಿರ್ಮಲವಾದ ಇಂದ್ರಿಯಗಳಿಂದ, ಮನಸ್ಸಿನಿಂದ ಕೂಡಿದವನಾಗಿ ದಾನವನ್ನು ನೀಡುತ್ತಾನೋ ಅಂತಹ ಮನುಷ್ಯನು ತನ್ನ ಯೌವನಾವಸ್ಥೆಯಲ್ಲಿಯೇ ಆ ದಾನದ ಶ್ರೇಷ್ಠಫಲವನ್ನು ಹೊಂದುತ್ತಾನೆ.
ಸ್ವಯಂ ನೀತ್ವಾ ತು ಯದ್ದಾನಂ ಭಕ್ತ್ಯಾ ಪಾತ್ರೇ ಪ್ರದೀಯತೇ |
ತತ್ ಸಾರ್ವಕಾಲಿಕಂ ವಿದ್ಧಿ ದಾನಮಾಮರಣಾಂತಿಕಮ್ ॥51॥
ಯಾವ ವ್ಯಕ್ತಿಯು ದಾನ ಕೊಡಲು ಯೋಗ್ಯವಾದ ವಸ್ತುವನ್ನು ತಾನೇ ತೆಗೆದುಕೊಂಡು ಹೋಗಿ ಭಕ್ತಿಯಿಂದ ಸತ್ಪಾತ್ರರಿಗೆ ದಾನ ಮಾಡುತ್ತಾನೋ ಅವನು ಹುಟ್ಟಿನಿಂದ ಸಾಯುವ ತನಕ ಸಮೃದ್ಧವಾದ ದಾನದ ಫಲವನ್ನು ಅನುಭವಿಸುತ್ತಾನೆ.
ಸಾತ್ವಿಕಂ ರಾಜಸಂ ಚೈವ ತಾಮಸಂ ಚ ಯುಧಿಷ್ಠಿರ |
ದಾನಂ ದಾನಫಲಂ ಚೈವ ಗತಿಂ ಚ ತ್ರಿವಿಧಾಂ ಶೃಣು ॥52॥
ಯುಧಿಷ್ಠಿರನೇ, ಸಾತ್ವಿಕ, ರಾಜಸ, ತಾಮಸಗಳೆಂದು ಮೂರು ವಿಧವಾಗಿ ದಾನದ ಫಲವು ಇವೆ. ದಾನದ ಗತಿಯೂ ಮೂರು ಪ್ರಕಾರವಾಗಿದೆ. ಅದನ್ನು ಹೇಳುತ್ತೇನೆ, ಕೇಳು.
ದಾನಂ ದಾತವ್ಯಮಿತ್ಯೇವ ಮತಿಂ ಕೃತ್ವಾ ದ್ವಿಜಾಯ ವೈ |
ಉಪಕಾರವಿಯುಕ್ತಾಯ ಯದ್ದತ್ತಂ ತದ್ಧಿ ಸಾತ್ವಿಕಮ್ ॥53॥
ಯಾವ ವ್ಯಕ್ತಿಯು ದಾನ ಕೊಡುವುದು ನನ್ನ ಕರ್ತವ್ಯವಾಗಿದೆ ಎಂದು ಭಾವಿಸಿಕೊಂಡು ಯಾವ ಉಪಕಾರವನ್ನೂ ಮಾಡದಿರುವ ಬ್ರಾಹ್ಮಣನಿಗೆ ದಾನವನ್ನು ಮಾಡುತ್ತಾನೋ ಅದು ಸಾತ್ವಿಕ ಎನಿಸಿದೆ.
ಶ್ರೋತ್ರಿಯಾಯ ದರಿದ್ರಾಯ ಬಹುಪುತ್ರಾಯ ಪಾಂಡವ |
ದೀಯತೇ ಯತ್ ಪ್ರಹೃಷ್ಟೇನ ತತ್ ಸಾತ್ವಿಕಮುದಾಹೃತಮ್ ॥54॥
ಶ್ರೋತ್ರಿಯನಾದ, ದರಿದ್ರನಾದ, ಬಹುಕುಟುಂಬಿಯಾಗಿರುವ ಬ್ರಾಹ್ಮಣನಿಗೆ ಸಂತುಷ್ಟವಾದ ಮನಸ್ಸಿನಿಂದ ಕೊಡುವ ದಾನವು ಸಾತ್ವಿಕವಾದುದು.
ವೇದಾಕ್ಷರವಿಹೀನಾಯ ಯತ್ತು ಪೂರ್ವೋಪಕಾರಿಣೇ |

ಸಮೃದ್ಧಾಯ ಚ ಯದ್ದತ್ತಂ ತದ್ದಾನಂ ರಾಜಸಂ ಸ್ಮೃತಮ್ ॥55॥
ವೇದಾಕ್ಷರಗಳ ಗಂಧವೇ ಇಲ್ಲದ, ಹಿಂದೆ ಉಪಕರಿಸಿರುವ ಐಶ್ವರ್ಯವಂತನಾದ ವ್ಯಕ್ತಿಗೆ ಕೊಡುವ ದಾನವು ರಾಜಸವು.
ಸಂಬಂಧಿನೇ ಚ ಯದ್ದತ್ತಮ್ ಅವ್ರತಾಯ ಚ ಪಾಂಡವ |
ಲೋಭಾದಿತರ(ಭಿರ)ಪಾತ್ರಾಯ ತದ್ದಾನಂ ರಾಜಸಂ ಸ್ಮೃತಮ್ ॥56॥
ಸಂಬಂಧಿಗೆ, ಪ್ರಮತ್ತನಾದವನಿಗೆ, ಅಪಾತ್ರನಿಗೆ ಫಲದ ಅಭಿಲಾಷೆಯಿಂದ ನೀಡುವ ದಾನವು, ಅತಿಶಯವಾದ ಲೋಭವನ್ನು ಹೊಂದಿದ ವ್ಯಕ್ತಿಗೆ ನೀಡುವ ದಾನವು ರಾಜಸ ಎನಿಸಿದೆ.
ವೈಶ್ವದೇವವಿಹೀನಾಯ ದಾನಮಶ್ರೋತ್ರಿಯಾಯ ಯತ್ |
ದೀಯತೇ ತಸ್ಕರಾಯಾಪಿ ತದ್ದಾನಂ ತಾಮಸಂ ಸ್ಮೃತಮ್ ॥47॥
ಶ್ರೋತ್ರಿಯನೆನಿಸದ, ವೈಶ್ವದೇವವಿಹೀನನಾದ, ಕಳ್ಳನಂತಿರುವ ವ್ಯಕ್ತಿಗೆ ನೀಡುವ ದಾನವು ತಾಮಸ ಎನಿಸಿದೆ.
ಸರೋಷಮವಧೂತಂ ಚ ಕೋಪಯುಕ್ತಮವಜ್ಞಯಾ |
ಸೇವಕಾಯ ಚ ಯದ್ದತ್ತಂ ತದ್ದಾನಂ ತಾಮಸಂ ಸ್ಮೃತಮ್ ॥58॥
ಕೋಪದಿಂದ ಅವಹೇಳನಪೂರ್ವಕವಾಗಿ, ತಿರಸ್ಕಾರಪೂರ್ವಕವಾಗಿ ನೀಡುವ ದಾನವು, ಸೇವಕನಿಗೆ ಕೊಡುವ ದಾನವು ತಾಮಸ ಎನಿಸಿದೆ.
ದೇವಾಃ ಪಿತೃಗಣಾಶ್ಚೈವ ಪಿತರಶ್ಚಾಗ್ನಯಸ್ತಥಾ |
ಸಾತ್ವಿಕಂ ದಾನಮಶ್ನಂತಿ ತುಷ್ಯಂತಿ ಚ ನರೇಶ್ವರ ॥59॥
ದೇವತೆಗಳು, ಪಿತೃಗಳು, ಮುನಿಗಳು, ಅಗ್ನಿಗಳು ಸಾತ್ವಿಕವಾದ ದಾನಗಳನ್ನು ಸ್ವೀಕರಿಸಿ ನರೇಶ್ವರನೇ, ಅವರು ಸಂತುಷ್ಟರಾಗುತ್ತಾರೆ.
ದಾನವಾ ದೈತ್ಯಸಂಘಾಶ್ಚ ಗ್ರಹಾ ಯಕ್ಷಾಶ್ಚ ರಾಕ್ಷಸಾಃ |
ರಾಜಸಂ ದಾನಮಶ್ನಂತಿ ವರ್ಜಿತಂ ಪಿತೃದೈವತೈಃ ॥60॥
ದಾನವರು, ದೈತ್ಯರು, ಗ್ರಹಗಳು, ಯಕ್ಷರು, ರಾಕ್ಷಸರು ರಾಜಸ ದಾನವನ್ನು ಸ್ವೀಕರಿಸುತ್ತಾರೆ. ರಾಜಸ ದಾನವನ್ನು ದೇವ-ಪಿತೃಗಳು ಸ್ವೀಕರಿಸುವುದಿಲ್ಲ.
ಪಿಶಾಚಾಃ ಪ್ರೇತಸಂಘಾಶ್ಚ ಕಶ್ಮಲಾ ಯೇ ಮಲೀಮಸಾಃ |
ತಾಮಸಂ ದಾನಮಶ್ನಂತಿ ಗತಿಂ ಚ ತ್ರಿವಿಧಾಂ ಶೃಣು ॥61॥
ಪಿಶಾಚಗಳು, ಪ್ರೇತಗಳು, ಮಲಿನವಾದ ಕರ್ಮಗಳನ್ನು ಮಾಡುವ ವ್ಯಕ್ತಿಗಳು ತಾಮಸವಾದ ದಾನವನ್ನು ಸ್ವೀಕರಿಸುತ್ತಾರೆ.
ಸಾತ್ವಿಕ-ರಾಜಸ-ತಾಮಸ ಎಂಬ ಮೂರು ವಿಧವಾದ ದಾನದ ಗತಿಗಳನ್ನು ತಿಳಿದುಕೊ.
ಸಾತ್ವಿಕಾನಾಂ ತು ದಾನಾನಾಮುತ್ತಮಂ ಫಲಮಿಷ್ಯತೇ |
ಮಧ್ಯಮಂ ರಾಜಸಾನಾಂ ತು ತಾಮಸಾನಾಂ ತು ಪಶ್ಚಿಮಮ್ ॥62॥
ಸಾತ್ವಿಕರಲ್ಲಿ ಮಾಡುವ ದಾನದಿಂದ ಉತ್ತಮವಾದ ಫಲವನ್ನು ಹೊಂದುತ್ತಾನೆ. ರಾಜಸ ರೀತಿಯಲ್ಲಿ ಮಾಡುವ ದಾನದಿಂದ ಮಧ್ಯಮ ಫಲವನ್ನೂ, ತಾಮಸ ರೀತಿಯಲ್ಲಿ ಮಾಡುವ ದಾನದಿಂದ ಅಧಮ ಫಲವನ್ನು ಹೊಂದುತ್ತಾನೆ.
ಅಭಿಗಮ್ಯೋಪನೀತಾನಾಂ ದಾನಾನಾಮುತ್ತಮಂ ಫಲಮ್ |
ಮಧ್ಯಮಂ ತು ಸಮಾನೀಯ ಜಘನ್ಯಂ ಯಾಚತೇ ಫಲಮ್ ॥63॥
ಸತ್ಪಾತ್ರರನ್ನು ಹುಡುಕಿಕೊಂಡು ಹೋಗಿ ದಾನವನ್ನು ಕೊಡುವುದು ಉತ್ತಮವಾದ ಫಲ ನೀಡುತ್ತದೆ. ಸತ್ಪಾತ್ರರಿಗೆ ಮನೆಗೆ ಕರೆಸಿಕೊಂಡು ಮಾಡುವ ದಾನವು ಮಧ್ಯಮ ಫಲವನ್ನು ನೀಡುತ್ತದೆ.
ಅಯಾಚಿತಪ್ರದಾತಾ ವೈ ಸ ಯಾತಿ ಗತಿಮುತ್ತಮಾಮ್ |
ಸಮಾಹೂಯ ತು ವೈ ದದ್ಯಾನ್ಮಧ್ಯಮಾಂ ಸ ಗತಿಂ ವ್ರಜೇತ್ ॥64॥
ಯಾಚನೆ ಮಾಡದೆ ಇರುವ ಕಷ್ಟದಲ್ಲಿರುವ ವ್ಯಕ್ತಿಗೆ ನೀಡುವ ದಾನವು ಉತ್ತಮವಾದ ಗತಿಗೆ ಹೇತುವಾಗುತ್ತದೆ. ಅದೇ ವ್ಯಕ್ತಿಯನ್ನು ಮನೆಗೆ ಕರೆಸಿ ದಾನ ಮಾಡಿದಾಗ ಮಧ್ಯಮ ಫಲವನ್ನೇ ನೀಡುತ್ತದೆ.
ಯಾಚಿತೋ ಯಸ್ತು ವೈ ದದ್ಯಾತ್ ಜಘನ್ಯಾಂ ಸ ಗತಿಂ ವ್ರಜೇತ್ ॥65॥
ಉತ್ತಮವಾದ ವ್ಯಕ್ತಿಯು ಕೇಳುವಂತೆ ಮಾಡಿ ಅವನಿಗೆ ದಾನವನ್ನು ನೀಡಿದಾಗ ಅಧಮ ಫಲವನ್ನು ನೀಡುತ್ತದೆ.
ಉತ್ತಮಾ ದೈವಿಕೀ ಜ್ಞೇಯಾ ಮಧ್ಯಮಾ ಮಾನುಷೀ ಗತಿಃ |
ಜಘನ್ಯಾ ಚೈವ ತಿರ್ಯಕ್ಷು ಗತಿರೇಷಾ ತ್ರಿಧಾ ಮತಾ ॥66॥
ಇಲ್ಲಿ ಉತ್ತಮ ಫಲವೆಂದರೆ ದೈವೀಗತಿ ಎನಿಸಿದೆ. ಮಧ್ಯಮ ಫಲವು ಮಾನುಷೀ ಗತಿ ಎನಿಸಿದೆ. ಅಧಮ ಫಲವು ತಿರ್ಯಗ್‌ಜೀವಿಗಳಲ್ಲಿ ಜನಿಸುವುದು ಎನಿಸಿದೆ.
ಪಾತ್ರಭೂತೇಷು ವಿಪ್ರೇಷು ಸುಸ್ಥಿತೇಷ್ವಾಹಿತಾಗ್ನಿಷು |
ಯತ್ತು ಪ್ರಕ್ಷಿಪ್ಯತೇ ದಾನಮಕ್ಷಯ್ಯಂ ತತ್ ಪ್ರಕೀರ್ತ್ಯತೇ ॥67॥
ಸತ್ಪಾತ್ರರಾದ ಅಗ್ನಿಹೋತ್ರಗಳನ್ನು ಆಚರಿಸುವ ಆಹಿತಾಗ್ನಿಗಳು ದಾನಕ್ಕೆ ಯೋಗ್ಯ ಎನಿಸಿದ್ದಾರೆ. ಅಂತಹ ವಿಪ್ರರಿಗೆ ಕೊಡುವ ದಾನವು ಅಕ್ಷಯವಾದ ಫಲವನ್ನು ನೀಡುತ್ತದೆ ಎಂದು ಹೇಳಲ್ಪಟ್ಟಿದೆ.
ಶ್ರೋತ್ರಿಯಾಣಾಂ ದರಿದ್ರಾಣಾಂ ಭರಣಂ ಕುರು ಪಾಂಡವ |
ಸಮೃದ್ಧಾನಾಂ ದ್ವಿಜಾತೀನಾಂ ಕಾರ್ಯಂ ತೇ ಪರಿರಕ್ಷಣಮ್ ॥68॥
ಯುಧಿಷ್ಠಿರನೇ, ದರಿದ್ರರಾಗಿರುವ ಶ್ರೋತ್ರಿಯ ಬ್ರಾಹ್ಮಣರ ರಕ್ಷಣೆಯನ್ನು ಮಾಡು. ಐಶ್ವರ್ಯವಂತರಾದ ಬ್ರಾಹ್ಮಣರನ್ನೂ ರಕ್ಷಿಸು.
ದರಿದ್ರಾನ್ ವೃತ್ತಿಹೀನಾಂಶ್ಚ ಪ್ರದಾನೈಸ್ತು ಸುಪೂಜಯೇತ್ |

ಆತುರಸ್ಯೌಷಧೈಃ ಕಾರ್ಯಂ ನೀರುಜಸ್ಯ ಕಿಮೌಷಧೈಃ ॥69॥
ದರಿದ್ರರಾಗಿರುವ ವ್ಯಕ್ತಿಗಳನ್ನು, ನಿರುದ್ಯೋಗಿಗಳನ್ನು ದಾನಗಳ ಪ್ರದಾನದಿಂದ ಪೂಜಿಸು. ರೋಗಿಯಾದವನಿಗೆ ಔಷಧಿಗಳನ್ನು ಕೊಟ್ಟು ಉಪಚರಿಸಬೇಕು. ದೃಢಕಾಯನಿಗೆ ಔಷಧಿಯಿಂದ ಏನು ಪ್ರಯೋಜನ?
ಪಾಪಂ ಪ್ರತಿಗ್ರಹೀತಾರಂ ಪ್ರದಾತುರುಪಗಚ್ಛತಿ |
ಪ್ರತಿಗ್ರಹೀತುರ್ಯತ್ ಪುಣ್ಯಂ ಪ್ರದಾತಾರಮುಪೈತಿ ತತ್ ॥70॥
ತಸ್ಮಾದ್ ದಾನಂ ಸದಾ ಕಾರ್ಯಂ ಪರತ್ರ ಹಿತಮಿಚ್ಛತಾ ॥71॥
ದಾನಿಯ ಪಾಪವು ದಾನದೊಡನೆ ದಾನವನ್ನು ತೆಗೆದುಕೊಳ್ಳುವ ವ್ಯಕ್ತಿಗೆ ಹೋಗಿ ಸೇರುತ್ತದೆ. ಇಷ್ಟು ಮಾತ್ರವಲ್ಲದೆ ದಾನ ತೆಗೆದುಕೊಳ್ಳುವವನಲ್ಲಿರುವ ಪುಣ್ಯವು ದಾನಿಗೆ ಸೇರುತ್ತದೆ. ಆದ್ದರಿಂದ ಪರಲೋಕದ ಹಿತವನ್ನು ಬಯಸುವ ವ್ಯಕ್ತಿಯು ಯಾವಾಗಲೂ ದಾನವನ್ನು ಮಾಡುತ್ತಲೇ ಇರಬೇಕು.
ವೇದವಿದ್ಯಾವದಾತೇಷು ಸದಾ ಶೂದ್ರಾನ್ನವರ್ಜಿಷು |
ಪ್ರಯತ್ನೇನ ನಿಧಾತವ್ಯೋ ಮಹಾದಾನಮಯೋ ನಿಧಿಃ ॥72॥
ವೇದಾಧ್ಯಯನ ಮಾಡಿರುವ, ಶುದ್ಧವಾದ ಆಚಾರ ಸಂಪನ್ನನಾದ, ಶೂದ್ರಾನ್ನ ವರ್ಜಿಸಿರುವ ವಿದ್ವಾಂಸರಿಗೆ ಮಹಾದಾನವನ್ನು ವಿಧಿಬದ್ಧವಾಗಿ ನೀಡಬೇಕು.
ಯೇಷಾಂ ದಾತಾ ಪ್ರತೀಕ್ಷೇತ ಸಹಸ್ರಸ್ಯೇವ ಲಂಭನಮ್ |
ಭುಕ್ತಶೇಷಸ್ಯ ಭಕ್ತಸ್ಯ ತಾನ್ ನಿಮಂತ್ರಯ ಭಾರತ ॥73॥
ಪ್ರಾಮಾಣಿಕವಾದ, ಶುದ್ಧ ಆಚಾರಸಂಪನ್ನನಾದ, ಯೋಗ್ಯನಾದ ಒಬ್ಬ ಬ್ರಾಹ್ಮಣನಿಗೆ ಯಾವ ವ್ಯಕ್ತಿಯು ದಾನ ಮಾಡುತ್ತಾನೋ ಆ ವ್ಯಕ್ತಿಯು ಸಾವಿರ ಬ್ರಾಹ್ಮಣರನ್ನು ಉದ್ದೇಶಿಸಿ ದಾನ ಮಾಡಿದ್ದೇನೆ ಎಂದು ತಿಳಿಯಬಹುದು. ಯೋಗ್ಯನಾದ ಒಬ್ಬ ಬ್ರಾಹ್ಮಣನು ಆಗಮಿಸಿದರೆ ಸಾವಿರ ಬ್ರಾಹ್ಮಣರು ಆಗಮಿಸಿದ್ದಾರೆಂದು ಚಿಂತಿಸಬೇಕು ಎಂದು ಅಭಿಪ್ರಾಯ. ಬಡತನದಲ್ಲಿರುವ, ಸದಾಚಾರಸಂಪನ್ನರಾದ, ಜ್ಞಾನಿಗಳಾದ ಬ್ರಾಹ್ಮಣರನ್ನು ದಾನಸ್ವೀಕಾರಕ್ಕಾಗಿ ನಿಮಂತ್ರಿಸಬೇಕು.
ಆಮಂತ್ರ್ಯ ತು ನಿರಾಶಾನಿ ನ ಕರ್ತವ್ಯಾನಿ ಪಾಂಡವ |
ಕುಲಾನಿ ಸುದರಿದ್ರಾಣಿ ತೇಷಾಮಾಶಾ ಹತಾ ಭವೇತ್ ॥74॥
ದಾನಕ್ಕಾಗಿ ಆಮಂತ್ರಿಸಿದ ವ್ಯಕ್ತಿಯ ಆಸೆಯು ಸಂಪೂರ್ಣವಾಗಿ ಫಲ ಹೊಂದುವಂತೆ ಮತ್ತೆ ಅವನಿಗೆ ಆಸೆ ಹುಟ್ಟದಂತೆ ದಾನ ಮಾಡಬೇಕು. ಯೋಗ್ಯನಾದ ವ್ಯಕ್ತಿಯು ದಾನಕ್ಕಾಗಿ ಆಗಮಿಸಿ ಹತಾಶನಾದರೆ ಅವನ ಕುಲಕ್ಕೇ ದಾರಿದ್ರ್ಯವು ಉಂಟಾದೀತು.
ಮದ್ಭಕ್ತಾ ಯೇ ನರಶ್ರೇಷ್ಠ ಮದ್ಗತಾ ಮತ್ಪರಾಯಣಾಃ |
ಮದ್ ಯಾಜಿನೋ ಮನ್ನಿಯಮಾಸ್ತಾನ್ ಪ್ರಯತ್ನೇನ ಪೂಜಯೇತ್ ॥
ಯಾರು ನನ್ನ ಭಕ್ತರೋ, ನನ್ನಲ್ಲೇ ಮನಸ್ಸುಳ್ಳವರೋ, ನನ್ನನ್ನೇ ಏಕಾಶ್ರಯನನ್ನಾಗಿ ಹೊಂದಿರುವರೋ, ನನ್ನನ್ನೇ ಪೂಜಿಸುವರೋ, ನನ್ನ ನಿಯಮ-ವ್ರತಾನುಷ್ಠಾನಗಳಲ್ಲೇ ನಿರತರಾಗಿರುವರೋ ಅಂತಹವರನ್ನು ಪ್ರಯತ್ನಪೂರ್ವಕವಾಗಿ ಸತ್ಕರಿಸಬೇಕು.
ತೇಷಾಂ ತು ಪಾವನಾಯಾಹಂ ನಿತ್ಯಮೇವ ಯುಧಿಷ್ಠಿರ |
ಉಭೇ ಸಂಧ್ಯೇಽಪಿ ತಿಷ್ಠಾಮಿ ಹ್ಯಸ್ಕನ್ನಂ ತದ್ ವ್ರತಂ ಮಮ ॥76॥
ಅಂತಹ ಬ್ರಾಹ್ಮಣರು ಪಾವಿತ್ರ್ಯ ಹೊಂದಲೆಂದೇ ನಾನು ಎರಡು ಸಂಧ್ಯೆಗಳನ್ನು ಅನುಸರಿಸಿಕೊಂಡಿದ್ದೇನೆ. ಎರಡು ಸಂಧ್ಯೆಗಳಲ್ಲಿಯೂ ಯೋಗದಿಂದ ಇದ್ದೇನೆ. ಬ್ರಾಹ್ಮಣನು ಅಂತಹ ಸಂಧ್ಯಾಕರ್ಮಗಳು ನಾಶವಾಗದಂತೆ ನಡೆಸಬೇಕು. ನಾನು ಆ ಸಂಧ್ಯೆಯಲ್ಲಿ ನಿರಂತರವೂ ಇರುತ್ತೇನೆ.
ತಸ್ಮಾದಷ್ಟಾಕ್ಷರಂ ಮಂತ್ರಂ ಮದ್ಭಕ್ತೈರ್ವೀತಕಲ್ಮಷೈಃ |
ಸಂಧ್ಯಾಕಾಲೇಷು ಜಪ್ತವ್ಯಂ ಸತತಂ ಚಾತ್ಮಶುದ್ಧಯೇ ॥77॥
ಆದ್ದರಿಂದ ಪಾಪರಹಿತರಾದ ಭಕ್ತರು ಆತ್ಮಶುದ್ಧಿಗಾಗಿ ಎರಡು ಸಂಧ್ಯೆಗಳಲ್ಲಿಯೂ ಕಶ್ಮಲಗಳನ್ನು ತೊರೆದು ಅಷ್ಟಾಕ್ಷರ ಮಂತ್ರಗಳನ್ನು ಪ್ರಣವ ಸಹಿತವಾಗಿ ಜಪಿಸಬೇಕು.
ಅನ್ಯೇಷಾಮಪಿ ವಿಪ್ರಾಣಾಂ ಕಿಲ್ಬಿಷಂ ಹಿ ಪ್ರಣಶ್ಯತಿ |
ಉಭೇ ಸಂಧ್ಯೇಽಪ್ಯುಪಾಸೀತ ತಸ್ಮಾದ್ ವಿಪ್ರೋ ವಿಶುದ್ಧಯೇ ॥78॥
ಆದ್ದರಿಂದ ಬೇರೆ ಬ್ರಾಹ್ಮಣರ ಸಂಧ್ಯಾವಂದನೆಯಿಂದ ಪಾಪಗಳೆಲ್ಲವೂ ತೊಳೆದು ಹೋಗುತ್ತವೆಯೋ ಅಂತಹ ಎರಡು ಸಂಧ್ಯೆಗಳನ್ನು ಆತ್ಮಶುದ್ಧಿಗಾಗಿ ಅನುಷ್ಠಾನ ಮಾಡಬೇಕು.
ದೈವೇ ಶ್ರಾದ್ಧೇ ಚ ವಿಪ್ರಃ ಸ ನಿಯೋಕ್ತವ್ಯೋಽಜುಗುಪ್ಸಿತಃ |
ಜುಗುಪ್ಸಿತಸ್ತು ತಚ್ಛ್ರಾದ್ಧಂ ದಹತ್ಯಗ್ನಿರಿವೇಂಧನಮ್ ॥79॥
ಅಷ್ಟಾಕ್ಷರ ಮಂತ್ರಗಳನ್ನು ಜಪಿಸುವ ವ್ಯಕ್ತಿಯನ್ನು ದೇವ-ಪಿತೃಕಾರ್ಯಗಳಿಗೆ ಜುಗುಪ್ಸೆಯಿಲ್ಲದೆ ಆಹ್ವಾನಿಸಬೇಕು. ಅಂತಹ ಬ್ರಾಹ್ಮಣನು ನಿಂದಿತನಾದರೆ ಅಗ್ನಿಯು ಕಟ್ಟಿಗೆಯನ್ನು ದಹಿಸುವಂತೆ ಅವನು ಮಾಡುವ ಶ್ರಾದ್ಧಕರ್ಮವನ್ನೇ ಧ್ವಂಸ ಮಾಡುತ್ತದೆ.
ಪುರಾಣಂ ಮಾನವೋ ಧರ್ಮೋ ವೇದಾಃ ಸಾಂಗಾಶ್ಚಿಕಿತ್ಸಿತಮ್ |
ಆಜ್ಞಾಸಿದ್ಧಾನಿ ಚತ್ವಾರಿ ನ ಹಂತವ್ಯಾನಿ ಹೇತುಭಿಃ ॥80॥
ಪುರಾಣ, ಮನುಸ್ಮೃತಿ, ನಾಲ್ಕು ವೇದಗಳು, ಷಡಂಗಗಳು- ಇವುಗಳೆಲ್ಲವೂ ಭಗವಂತನ ಆಜ್ಞೆಯಿಂದ ಸಿದ್ಧವಾದವುಗಳು. ಕುತರ್ಕಗಳಿಂದ ನಾಲ್ಕು ವೇದಗಳನ್ನು ನಿಂದಿಸಬಾರದು.
ನ ಬ್ರಾಹ್ಮಣಾನ್ ಪರೀಕ್ಷೇತ ದೈವೇ ಕರ್ಮಣಿ ಧರ್ಮವಿತ್ |
ಮಹಾನ್ ಭವೇತ್ ಪರೀವಾದೋ ಬ್ರಾಹ್ಮಣಾನಾಂ ಪರೀಕ್ಷಣೇ ॥81॥

ಧರ್ಮಜ್ಞನಾದ ವ್ಯಕ್ತಿಯು ಪೂಜಾದಿ ಕರ್ಮಗಳಲ್ಲಿ ಬ್ರಾಹ್ಮಣರನ್ನು ಪರೀಕ್ಷಿಸಬಾರದು. ಬ್ರಾಹ್ಮಣರನ್ನು ಅವಮಾನಿಸುವಂತೆ ಪರೀಕ್ಷಿಸಲು ಹೋದರೆ ಮಹಾಪಾಪಕ್ಕೆ ತುತ್ತಾಗಬೇಕಾಗುತ್ತದೆ. ಅಂತಹ ವ್ಯಕ್ತಿಯು ಬಹಳ ನಿಂದಿತನಾಗುತ್ತಾನೆ.
ಬ್ರಾಹ್ಮಣಾನಾಂ ಪರೀವಾದಂ ಯಃ ಕುರ್ಯಾತ್ ಸ ನರಾಧಮಃ |
ಸಹಸ್ರೈವ ಶುನಾಂ ಯೋನಿಂ ಸ ಗಚ್ಛೇದ್ ಬ್ರಹ್ಮದೂಷಕಃ ||82||
ಯಾವ ಅಧಮ ಮಾನವನು ಬ್ರಾಹ್ಮಣರ ಮೇಲೆ ದೋಷಾರೋಪವನ್ನು ಮಾಡಲು ಪ್ರಯತ್ನಿಸುತ್ತಾನೋ ಅವನು ಬ್ರಹ್ಮದ್ವೇಷಿ ಎನಿಸಿ ಕೂಡಲೇ ನಾಯಿಯಾಗಿ ಹುಟ್ಟುತ್ತಾನೆ.
ಶ್ವತ್ವಂ ಪ್ರಾಪ್ನೋತಿ ನಿಂದಿತ್ವಾ ಪರೀವಾದಾತ್ ಖರೋ ಭವೇತ್ |
ಪರಿಭೂಯ ಕೃಮಿರ್ಭವತಿ ಕೀಟೋ ಭವತಿ ಮತ್ಸರೀ ||83||
ಬ್ರಾಹ್ಮಣರನ್ನು ವಿನಾ ಕಾರಣ ನಿಂದಿಸಿದ ವ್ಯಕ್ತಿಯು ನಾಯಿಯಾಗಿ ಹುಟ್ಟಿ ಅದೇ ಅಪವಾದದಿಂದಲೇ ಕತ್ತೆಯೂ ಆಗುತ್ತಾನೆ. ಅವಮಾನದಿಂದಾದ ಪರಿಣಾಮ ಕ್ರಿಮಿಯೂ ಆಗುತ್ತಾನೆ, ಕೀಟವೂ ಆಗುತ್ತಾನೆ, ಮತ್ಸರಿಯೂ ಆಗುತ್ತಾನೆ.
ದುರ್ವೃತ್ತಾ ವಾ ಸುವೃತ್ತಾ ವಾ ಪ್ರಾಕೃತಾ ವಾ ಸುಸಂಸ್ಕೃತಾಃ |
ಬ್ರಾಹ್ಮಣಾ ನಾವಮಂತವ್ಯಾ ಭಸ್ಮಚ್ಛನ್ನಾ ಇವಾಗ್ನಯಃ ||84||
ಬ್ರಾಹ್ಮಣರು ಒಳ್ಳೆಯ ನಡತೆಯವರೇ ಆಗಲಿ, ಕೆಟ್ಟ ನಡತೆಯವರೇ ಆಗಲಿ, ಪ್ರಾಕೃತವಾದ ಬುದ್ಧಿಯನ್ನು ಹೊಂದಿದವರೇ ಆಗಲಿ, ಸುಸಂಸ್ಕೃತರೇ ಆಗಿರಲಿ, ಅವರನ್ನು ಎಂದಿಗೂ ಅವಮಾನಿಸಬಾರದು. ಅವರು ಬೂದಿ ಮುಚ್ಚಿದ ಕೆಂಡದಂತೆ.
ಕ್ಷತ್ರಿಯಂ ಚೈವ ಸರ್ಪಂ ಚ ಬ್ರಾಹ್ಮಣಂ ಚ ಬಹುಶ್ರುತಮ್ |
ನಾವಮನ್ಯೇತ ಮೇಧಾವೀ ಕೃಶಾನಪಿ ಕದಾಚನ ||85||
ಕ್ಷತ್ರಿಯರನ್ನಾಗಲೀ, ಸರ್ಪಗಳನ್ನಾಗಲೀ, ಬಹುಶ್ರುತನಾದ ಬ್ರಾಹ್ಮಣನನ್ನಾಗಲೀ, ಕೃಶನನ್ನಾಗಲೀ ಮೇಧಾವಿಯಾದವನು ಎಂದೂ ಅವಮಾನಿಸಬಾರದು.
ಏತತ್ ತ್ರಯಂ ಹಿ ಪುರುಷಂ ನಿರ್ದಹೇದವಮಾನಿನಮ್ |
ತಸ್ಮಾದೇತತ್ ಪ್ರಯತ್ನೇನ ನಾವಮನ್ಯೇತ ಬುದ್ಧಿಮಾನ್ ||86||
ಈ ಮೂರು ವ್ಯಕ್ತಿಗಳ ಅವಮಾನಗಳು ಅವಮಾನ ಮಾಡಿದ ವ್ಯಕ್ತಿಯನ್ನು ಸುಟ್ಟು ಬಿಡುತ್ತವೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಈ ಮೂವರನ್ನು ಅವಮಾನಿಸಬಾರದು.
ಯಥಾ ಸರ್ವಾಸ್ವವಸ್ಥಾಸು ಪಾವಕೋ ದೈವತಂ ಮಹತ್ |
ತಥಾ ಸರ್ವಾಸ್ವವಸ್ಥಾಸು ಬ್ರಾಹ್ಮಣೋ ದೈವತಂ ಮಹತ್ ||87||
ಹೇಗೆ ಯಾವುದೇ ಅವಸ್ಥೆಯಲ್ಲಿದ್ದರೂ ಅಗ್ನಿದೇವನು ಪೂಜ್ಯನೇ ಎಂದು ಕರೆಸಿಕೊಳ್ಳುತ್ತಾನೋ, ಅದೇ ರೀತಿಯಲ್ಲಿ ಯಾವುದೇ ಸ್ಥಿತಿಯಲ್ಲಿದ್ದರೂ ಬ್ರಾಹ್ಮಣನು ಪರಮದೇವತೆಯೇ ಎಂದು ಕರೆಸಿಕೊಳ್ಳುತ್ತಾನೆ.
ವ್ಯಂಗಾಃ ಕುಬ್ಜಾಶ್ಚ ಕಾಣಾಶ್ಚ ವಾಮನಾಂಗಾಸ್ತಥೈವ ಚ |
ಸರ್ವೇ ದೈವೇ ನಿಯೋಕ್ತವ್ಯಾ ವ್ಯಾಮಿಶ್ರಾ ವೇದಪಾರಗೈಃ ||88||
ಅಂಗಹೀನರು, ಕುರುಡರು, ಕುರೂಪಿಗಳು, ಕುಳ್ಳರೂ ಆಗಿರುವ ಬ್ರಾಹ್ಮಣರನ್ನು ವೇದಪಾರಂಗತರಾದ ವಿದ್ವಾಂಸರ ಜೊತೆಯಲ್ಲಿ ದೇವಕಾರ್ಯದಲ್ಲಿ ನಿಯೋಜಿಸಬೇಕು.
ಮನ್ಯುಂ ನೋತ್ಪಾದಯೇತ್ ತೇಷಾಂ ನ ಚಾನಿಷ್ಟಂ ಸಮಾಚರೇತ್ |
ಮನ್ಯುಪ್ರಹರಣಾ ವಿಪ್ರಾ ನ ವಿಪ್ರಾಃ ಶಸ್ತ್ರಪಾಣಯಃ ||89||
ಅವರಿಗೆ ಕೋಪವುಂಟಾಗುವಂತೆ ವರ್ತಿಸಬಾರದು. ಅವರಿಗೆ ಕೇಡನ್ನು ಮಾಡಬಾರದು. ಕೋಪವೆಂಬ ಆಯುಧದಿಂದ ಹೊಡೆಯುವ ಸಾಮರ್ಥ್ಯ ಬ್ರಾಹ್ಮಣರಿಗಿದೆ. ಅವರು ಶಸ್ತ್ರಪಾಣಿಗಳಾಗಿ ಪ್ರಹರಿಸಬೇಕಾಗಿಲ್ಲ.
ಮನ್ಯುನಾ ಘ್ನಂತಿ ತೇ ಶತ್ರೂನ್ ವಜ್ರೇಣೇಂದ್ರ ಇವಾಸುರಾನ್ ||90||
ಬ್ರಾಹ್ಮಣರು ತಮ್ಮ ಕೋಪದಿಂದಲೇ ಇಂದ್ರನು ವಜ್ರಾಯುಧದಿಂದ ಅಸುರರನ್ನು ಬಡಿಯುವಂತೆ ಕೊಲ್ಲುತ್ತಾರೆ.
ಬ್ರಾಹ್ಮಣೋ ಹಿ ಮಹದ್ದೈವಂ ಜಾತಮಾತ್ರೇಣ ಜಾಯತೇ |
ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ ||91||
ಬ್ರಾಹ್ಮಣರು ಜಾತಿಮಾತ್ರದಿಂದಲೇ ಮಹತ್ತಾದ ದೇವತಾ ಸನ್ನಿಧಾನವನ್ನು ಹೊಂದಿರುತ್ತಾರೆ. ಸಕಲ ಪ್ರಾಣಿಗಳ ಧರ್ಮಬಂಡಾರವನ್ನು ರಕ್ಷಿಸಲು ಬ್ರಾಹ್ಮಣರ ಸೃಷ್ಟಿಯಾಗಿರುತ್ತದೆ.
ಕಿಂ ಪುನರ್ಯೇ ಚ ಕೌಂತೇಯ ಸಂಧ್ಯೇ ನಿತ್ಯಮುಪಾಸತೇ ||92||
ಹೀಗಿರಲು ಯುಧಿಷ್ಠಿರನೇ, ಯಾರು ನಿತ್ಯವೂ ಸಂಧ್ಯಾಕರ್ಮಗಳಲ್ಲಿ ನಿರತರಾಗಿರುತ್ತಾರೋ ಅವರನ್ನು ನಿಂದಿಸಬಾರದು.
ಯಸ್ಯಾಸ್ಯೇನ ಸಮಶ್ನಂತಿ ಹವ್ಯಾನಿ ತ್ರಿದಿವೌಕಸಃ |
ಕವ್ಯಾನಿ ಚೈವ ಪಿತರಃ ಕಿಂ ಭೂತಮಧಿಕಂ ತತಃ ||93||
ಶ್ರೇಷ್ಠರಾದ ಶ್ರೋತ್ರೀಯ ಬ್ರಾಹ್ಮಣರ ಮುಖದಿಂದಲೇ ದೇವತೆಗಳು ಹವಿಷ್ಯ ಪದಾರ್ಥಗಳನ್ನು ಸ್ವೀಕರಿಸುತ್ತಾರೆ. ಪಿತೃಗಳು ಕವ್ಯಪದಾರ್ಥಗಳನ್ನು ಸ್ವೀಕರಿಸುತ್ತಾರೆ. ಹೀಗಿರಲು ಬ್ರಾಹ್ಮಣರ ಮಹಿಮೆಯನ್ನು ಏನೆಂದು ಹೇಳಲಿ?
ಉತ್ಪತ್ತಿರೇವ ವಿಪ್ರಸ್ಯ ಮೂರ್ತಿರ್ಧರ್ಮಸ್ಯ ಶಾಶ್ವತೀ |
ಸ ಹಿ ಧರ್ಮಾರ್ಥಮುತ್ಪನ್ನೋ ಬ್ರಹ್ಮಭೂಯಾಯ ಕಲ್ಪತೇ ||94||
ಬ್ರಾಹ್ಮಣರ ಉತ್ಪತ್ತಿಯು ಧರ್ಮದ ಶಾಶ್ವತ ಉತ್ಪತ್ತಿ ಎನಿಸಿದೆ. ಧರ್ಮದ ರಕ್ಷಣೆಗೋಸ್ಕರವೇ ಉತ್ಪನ್ನನಾದವನು ಬ್ರಾಹ್ಮಣ. ಅವನು ಪರಬ್ರಹ್ಮನನ್ನು ಹೊಂದಲು ಅರ್ಹನಾಗಿರುತ್ತಾನೆ.

ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ |
ಆನೃಶಂಸ್ಯಾದ್ ಬ್ರಾಹ್ಮಣಸ್ಯ ಭುಂಜತೇ ಹೀತರೇ ಜನಾಃ ॥95॥
ಬ್ರಾಹ್ಮಣನು ತನ್ನದೇ ಆದ ಪದಾರ್ಥವನ್ನು ತಿನ್ನುತ್ತಾನೆ. ಬ್ರಾಹ್ಮಣನು ಬೇಡಿ ತಿನ್ನುವ ಅಗತ್ಯವಿಲ್ಲ ಎಂದು ಅಭಿಪ್ರಾಯ. ಬ್ರಾಹ್ಮಣನು ತನ್ನದೇ ಆದ ವಸ್ತುವನ್ನು ಕದಿಯುತ್ತಾನೆ. ತನ್ನದೇ ಆದ ವಸ್ತುಗಳನ್ನು ಇನ್ನೊಬ್ಬರಿಗೆ ನೀಡುತ್ತಾನೆ. ಬ್ರಾಹ್ಮಣನ ಸದ್ಗುಣದಿಂದಲೇ ಇತರ ಜನರು ಸುಖಗಳನ್ನು ಅನುಭವಿಸುತ್ತಿದ್ದಾರೆ. ದರ್ಪಶೀಲರಾದ ಜನರಿಗೆ ಕ್ಷೇಮವನ್ನು ಮಾಡುವ ಬ್ರಾಹ್ಮಣನಿಂದಲೇ ಜಗತ್ತಿನಲ್ಲಿ ಕ್ಷೇಮವುಂಟಾಗುತ್ತಿರುವುದರಿಂದ ಸಕಲ ಪದಾರ್ಥಗಳಿಗೂ ಬ್ರಾಹ್ಮಣನು ಸ್ವಾಮಿಯಾಗಿದ್ದಾನೆ. ಆದ್ದರಿಂದ ಅವನು ಎಂದೂ ಬೇಡುವ ವ್ಯಕ್ತಿಯಾಗಿರುವುದಿಲ್ಲ ಎಂದು ಅಭಿಪ್ರಾಯ.
ತಸ್ಮಾತ್ ತೇ ನಾವಮಂತವ್ಯಾ ಮದ್ಭಕ್ತಾ ಹಿ ದ್ವಿಜಾಃ ಸದಾ ॥96॥
ಬ್ರಾಹ್ಮಣರು ಎಂದಿಗೂ ನನ್ನ ಭಕ್ತರಾಗಿರುವುದರಿಂದ ಅವರನ್ನು ಎಂದಿಗೂ ಅವಮಾನಿಸಬಾರದು.
ಆರಣ್ಯಕೋಪನಿಷದಿ ಯೇ ತು ಪಶ್ಯಂತಿ ಮಾಂ ದ್ವಿಜಾಃ |
ನಿಗೂಢಂ ನಿಷ್ಕಲಾವಸ್ಥಂ ತಾನ್ ಪ್ರಯತ್ನೇನ ಪೂಜಯೇತ್ ॥97॥
ಯಾವ ದ್ವಿಜಶ್ರೇಷ್ಠರು ಆರಣ್ಯಕಗಳಲ್ಲಿ, ಉಪನಿಷತ್ತುಗಳಲ್ಲಿ ನನ್ನನ್ನೇ ತಿಳಿಯುತ್ತಿರುತ್ತಾರೋ, ಅಂತಹ ನಿಗೂಢರಾದ, ಪ್ರಾಕೃತಗುಣರಹಿತರಾದ, ನನ್ನನ್ನು ನಿರಂತರ ಧ್ಯಾನ ಮಾಡುವ ಬ್ರಾಹ್ಮಣರನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.
ಸ್ವಗೃಹೇ ವಾ ಪ್ರವಾಸೇ ವಾ ದಿವಾ ರಾತ್ರೌ ತಥೈವ ಚ |
ಶ್ರದ್ಧಯಾ ಬ್ರಾಹ್ಮಣಾಃ ಪೂಜ್ಯಾ ಮದ್ಭಕ್ತಾ ಯೇ ಚ ಪಾಂಡವ ॥98॥
ಯುಧಿಷ್ಠಿರನೇ, ಮನೆಯಲ್ಲಾಗಲಿ, ಪ್ರಯಾಣದ ಸಮಯದಲ್ಲಾಗಲಿ, ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ ನನ್ನ ಭಕ್ತರಾದ ಬ್ರಾಹ್ಮಣರನ್ನು ಶ್ರದ್ಧೆಯಿಂದ ಆರಾಧಿಸಬೇಕು.
ನಾಸ್ತಿ ವಿಪ್ರಸಮಂ ದೈವಂ ನಾಸ್ತಿ ವಿಪ್ರಸಮೋ ಗುರುಃ |
ನಾಸ್ತಿ ವಿಪ್ರಸಮೋ ಬಂಧುರ್ನಾಸ್ತಿ ವಿಪ್ರಸಮೋ ನಿಧಿಃ ॥99॥
ವಿಪ್ರನಿಗೆ ಸಮಾನವಾದ ದೇವತೆಯಿಲ್ಲ. ವಿಪ್ರನಿಗೆ ಸಮಾನವಾದ ಗುರುವಿಲ್ಲ. ವಿಪ್ರನಿಗೆ ಸಮಾನವಾದ ಬಂಧುವಿಲ್ಲ. ವಿಪ್ರನಿಗೆ ಸಮಾನವಾದ ನಿಧಿಯೂ ಇಲ್ಲ.
ನಾಸ್ತಿ ವಿಪ್ರಸಮಂ ತೀರ್ಥಂ ನ ಪುಣ್ಯಂ ಬ್ರಾಹ್ಮಣಾತ್ ಪರಮ್ |
ನ ಪವಿತ್ರಂ ಪರಂ ವಿಪ್ರಾನ್ನ ವಿಪ್ರಾತ್ ಪಾವನಂ ಪರಮ್ ॥100॥
ನಾಸ್ತಿ ವಿಪ್ರಾತ್ ಪರೋ ಧರ್ಮೋ ನಾಸ್ತಿ ವಿಪ್ರಾತ್ ಪರಾ ಗತಿಃ ॥
ವಿಪ್ರನಿಗೆ ಸಮಾನವಾದ ತೀರ್ಥವಿಲ್ಲ. ಬ್ರಾಹ್ಮಣನಿಗಿಂತ ಶ್ರೇಷ್ಠವಾದ ಪುಣ್ಯವಿಲ್ಲ. ಬ್ರಾಹ್ಮಣನಿಗಿಂತ ಪವಿತ್ರವಾದ ವಸ್ತುವಿಲ್ಲ. ಬ್ರಾಹ್ಮಣನಂತೆ ಪವಿತ್ರ ಮಾಡುವ ಪದಾರ್ಥಗಳು ಯಾವುದೂ ಇಲ್ಲ. ಬ್ರಾಹ್ಮಣನಿಗಿಂತ ಶ್ರೇಷ್ಠವಾದ ಧರ್ಮವೂ ಇಲ್ಲ. ಬ್ರಾಹ್ಮಣನಿಗಿಂತ ಶ್ರೇಷ್ಠವಾದ ಗತಿಯೂ ಇಲ್ಲ.
ಪಾಪಕರ್ಮಸಮಾಕ್ಷಿಪ್ತಂ ಪತಂತಂ ನರಕೇ ನರಮ್ |
ತ್ರಾಯತೇ ದಾನಮಪ್ಯೇಕಂ ಪಾತ್ರಭೂತೇ ದ್ವಿಜೇ ಕೃತಮ್ ॥102॥
ಯೋಗ್ಯನಾದ ಒಬ್ಬ ವ್ಯಕ್ತಿಗೆ ಕೊಡಲ್ಪಟ್ಟ ದಾನವು ಪಾಪಕರ್ಮಗಳಿಂದ ದೂಷಿತನಾಗಿ ನರಕದಲ್ಲಿ ಬಿದ್ದಿರುವ ವ್ಯಕ್ತಿಯನ್ನು ಉದ್ಧರಿಸಲು ಸಮರ್ಥವಾಗುತ್ತದೆ.
ಬಾಲಾಹಿತಾಗ್ನಯೋ ಯೇ ಚ ಶಾಂತಾಃ ಶೂದ್ರಾನ್ನವರ್ಜಿತಾಃ |
ಮಾಮರ್ಚಯಂತಿ ಮದ್ಭಕ್ತಾಸ್ತೇಭ್ಯೋ ದತ್ತಂ ತದಕ್ಷಯಮ್ ॥103॥
ಬಾಲ್ಯದಿಂದಲೂ ಆಹಿತಾಗ್ನಿಗಳಾಗಿರುವ, ಶಾಂತರಾಗಿರುವ, ಶೂದ್ರಾನ್ನವನ್ನು ತಿನ್ನದಿರುವ, ನನ್ನ ಪೂಜೆಯಲ್ಲಿಯೇ ಆಸಕ್ತರಾಗಿರುವ ನನ್ನ ಭಕ್ತರಾದ ಬ್ರಾಹ್ಮಣರಿಗೆ ಕೊಡುವ ದಾನವು ಅಕ್ಷಯಫಲವನ್ನು ನೀಡುತ್ತದೆ.
ಪ್ರದಾನೈಃ ಪೂಜಿತೋ ವಿಪ್ರೋ ವಂದಿತೋ ವಾಪಿ ಕೃತ್ಸ್ನಶಃ |
ಸಂಭಾವಿತೋ ವಾ ವಿಪ್ರೋ ವೈ ಮದ್ಭಕ್ತೋ ದಿವಮುನ್ನಯೇತ್ ॥104॥
ನನ್ನ ಭಕ್ತನಾದ ಬ್ರಾಹ್ಮಣನಿಗೆ ದಾನವನ್ನು ಕೊಡುವುದರಿಂದ, ನಮಸ್ಕರಿಸುವುದರಿಂದ ಸತ್ಕಾರ ಮಾಡುವುದರಿಂದ, ಗೌರವಿಸುವುದರಿಂದ, ಅವನನ್ನು ಸಂದರ್ಶಿಸುವುದರಿಂದ ಮಾನವನು ಸ್ವರ್ಗವನ್ನು ಹೊಂದುತ್ತಾನೆ.
ಯೇ ಪಠಂತಿ ನಮಸ್ಯಂತಿ ಧ್ಯಾಯಂತಿ ಪುರುಷಾಸ್ತು ಮಾಮ್ |
ತಾಂಶ್ಚ ಸ್ಪೃಷ್ಟ್ವಾಽಥವಾ ದೃಷ್ಟ್ವಾ ನರಃ ಪಾಪೈಃ ಪ್ರಮುಚ್ಯತೇ ॥105॥
ಯಾವನು ನನ್ನ ಭಕ್ತನಾದ ಬ್ರಾಹ್ಮಣನನ್ನು ನಮಸ್ಕರಿಸುತ್ತಾನೋ, ಧ್ಯಾನ ಮಾಡುತ್ತಾನೋ ಅಂತಹ ಪುರುಷನು ಅಂತಹ ಬ್ರಾಹ್ಮಣನನ್ನು ನೋಡಿದ ಅಥವಾ ಮುಟ್ಟಿದ ಪುಣ್ಯದಿಂದ ಸಮಸ್ತ ಪಾಪಗಳಿಂದಲೂ ಮುಕ್ತನಾಗುತ್ತಾನೆ.
ಮದ್ಭಕ್ತಾ ಮದ್ಗತಪ್ರಾಣಾ ಮದ್ಗತಾ ಮತ್ಪರಾಯಣಾಃ |
ಬೀಜಯೋನಿವಿಶುದ್ಧಾ ಯೇ ಶ್ರೋತ್ರಿಯಾಃ ಸಂಯತೇಂದ್ರಿಯಾಃ ॥
ಶೂದ್ರಾನ್ನವಿರತಾ ನಿತ್ಯಂ ತೇ ಪುನಂತೀಹ ದರ್ಶನಾತ್ ॥107॥
ನನ್ನ ಭಕ್ತರಾಗಿರುವ, ನನ್ನಲ್ಲೇ ಇಂದ್ರಿಯಗಳನ್ನು ಸಮರ್ಪಿಸುವ, ನನ್ನನ್ನೇ ಕೊಂಡಾಡುವ, ನನ್ನಲ್ಲೇ ಮನಸ್ಸನ್ನು ನೆಲೆಗೊಳಿಸುವ, ಯೋಗ್ಯರಾದ ತಂದೆ ತಾಯಿಗಳನ್ನು ಹೊಂದಿರುವ, ಜಿತೇಂದ್ರಿಯರಾಗಿರುವ, ಶೂದ್ರಾನ್ನವನ್ನು ಬಿಟ್ಟಿರುವ ಶ್ರೋತ್ರಿಯರು ದರ್ಶನ ಮಾತ್ರದಿಂದಲೇ ಜಗತ್ತನ್ನು ಪವಿತ್ರಗೊಳಿಸುತ್ತಾರೆ.
ಸ್ವಯಂ ನೀತ್ವಾ ವಿಶೇಷೇಣ ದಾನಂ ತೇಷಾಂ ಗೃಹೇಷ್ವಥ |

ನಿಧಾಪಯೇತ್ತು ಯದ್ಭಕ್ತ್ಯಾ ತದ್ದಾನಂ ಕೋಟಿಸಮ್ಮಿತಮ್ ॥108॥
ಇಂತಹ ಶ್ರೋತ್ರಿಯರ ಮನೆಗೆ ನೀನೇ ಹೋಗಿ ವಿಶೇಷವಾದ ಗೌರವದಿಂದ ಅವರಿಗೆ ದಾನವನ್ನು ಮಾಡು. ಹೀಗೆ ಭಕ್ತಿಪೂರ್ವಕವಾಗಿ ಕೊಡಲ್ಪಡುವ ದಾನವು ಇತರ ದಾನಗಳಿಗಿಂತ ಕೋಟಿಪಟ್ಟು ಅಧಿಕ ಫಲವನ್ನು ನೀಡುತ್ತದೆ.
ಜಾಗ್ರತಃ ಸ್ವಪತೋ ವಾಽಪಿ ಪ್ರವಾಸೇ ಸ್ವಗೃಹೇಽಥವಾ |
ಹೃದಯೇ ನ ಪ್ರಣಶ್ಯಾಮಿ ಯಸ್ಯ ವಿಪ್ರಸ್ಯ ಭಾರತ ॥109॥
ಬ್ರಾಹ್ಮಣನು ಎಚ್ಚರದಲ್ಲಿರಲಿ, ಮಲಗಿರಲಿ, ಪ್ರಯಾಣ ಮಾಡುತ್ತಿರಲಿ, ಮನೆಯಲ್ಲಿಯೇ ಇರಲಿ ಅವನು ನನಗೆ ಪರಮಭಕ್ತನಾದುದರಿಂದ ಅವನ ಹೃದಯ ಗುಹೆಯನ್ನು ಬಿಟ್ಟು ನಾನು ಎಂದೂ ಕದಲುವುದಿಲ್ಲ.
ಸ ಪೂಜಿತೋ ವಾ ದೃಷ್ಟೋ ವಾ ಸ್ಪೃಷ್ಟೋ ವಾಽಪಿ ದ್ವಿಜೋತ್ತಮಃ |
ಸಂಭಾಷಿತೋ ವಾ ರಾಜೇಂದ್ರ ಪುನಾತೀಹ ನರಂ ಸದಾ ॥110॥
ರಾಜೇಂದ್ರನೇ, ಅಂತಹ ಬ್ರಾಹ್ಮಣರನ್ನು ಪೂಜಿಸಿದರೂ, ನೋಡಿದರೂ, ಸ್ಪರ್ಶಿಸಿದರೂ, ಮಾತನಾಡಿದರೂ ಮನುಷ್ಯನು ಪೂತನಾಗುತ್ತಾನೆ.
ಏವಂ ಸರ್ವಾಸ್ವವಸ್ಥಾಸು ಸರ್ವದಾನಾನಿ ಪಾಂಡವ |
ಮದ್ಭಕ್ತೇಭ್ಯಃ ಪ್ರದತ್ತಾನಿ ಸ್ವರ್ಗಮಾರ್ಗಪ್ರದಾನಿ ವೈ ॥111॥
ಯುಧಿಷ್ಠಿರನೇ, ಹೀಗೆ ಎಲ್ಲ ಅವಸ್ಥೆಗಳಲ್ಲಿ ಎಲ್ಲ ವಿಧವಾದ ದಾನಗಳನ್ನು ನನ್ನ ಭಕ್ತನಾದ ವ್ಯಕ್ತಿಗೆ ಕೊಟ್ಟಾಗ ಆ ದಾನಗಳು ಸ್ವರ್ಗಮಾರ್ಗವನ್ನೇ ತೋರಿಸುತ್ತವೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ವಿಪ್ರಮಾಹಾತ್ಮ್ಯಂ ನಾಮ ಏಕೋನಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಬೀಜಯೋನಿಗಳ ಶುದ್ಧಿ-ಅಶುದ್ಧಿಯನ್ನು ನಿರೂಪಿಸಿದುದು. ಗಾಯತ್ರಿ ಮಹಿಮೆಯನ್ನು ವರ್ಣಿಸಿದುದು. ಬ್ರಾಹ್ಮಣನ ಮಹಿಮೆಯನ್ನು ಪ್ರಶಂಸಿದುದು. ಬ್ರಾಹ್ಮಣರನ್ನು ತಿರಸ್ಕರಿಸುವ ವ್ಯಕ್ತಿಗಳಿಗೆ ಉಂಟಾಗುವ ನರಕ ಯಾತನೆಗಳನ್ನು ವರ್ಣಿಸಿದುದು.
ವೈಶಂಪಾಯನಃ
ಶ್ರುತ್ವೈವಂ ಸಾತ್ವಿಕಂ ದಾನಂ ರಾಜಸಂ ತಾಮಸಂ ತಥಾ |
ಪೃಥಕ್ ಪೃಥಕ್ ಫಲಂ ಚೈವ ಗತಿಂ ಚಾಪಿ ಪೃಥಕ್ ಪೃಥಕ್ ॥1॥
ವೈಶಂಪಾಯನ ಜನಮೇಜಯನೇ, ಯುಧಿಷ್ಠಿರನು ಕೃಷ್ಣನ ಮುಖದಿಂದ ಸಾತ್ವಿಕ, ರಾಜಸ, ತಾಮಸ ದಾನಗಳ ಸ್ವರೂಪಗಳನ್ನೂ, ಅವುಗಳಿಂದ ಆಗುವ ಭಿನ್ನ ಭಿನ್ನ ಗತಿಗಳನ್ನೂ, ಪ್ರತ್ಯೇಕ ಪ್ರತ್ಯೇಕ ಫಲಗಳನ್ನೂ ಕೇಳಿಸಿಕೊಂಡನು.
ಅವಿತೃಪ್ತಃ ಪ್ರಹೃಷ್ಟಾತ್ಮಾ ಪುಣ್ಯಂ ಧರ್ಮಾಮೃತಂ ಪುನಃ |
ಯುಧಿಷ್ಠಿರೋ ಧರ್ಮನಿತ್ಯಃ ಕೇಶವಂ ಪುನರಬ್ರವೀತ್ ॥2॥
ಭಗವಂತನ ಉಪದೇಶಗಳಿಂದ ಸಂತುಷ್ಟನಾದ ಧರ್ಮರಾಜನಿಗೆ ಆ ಧರ್ಮಾಮೃತದ ಪಾನದಿಂದ ಪೂರ್ಣತೃಪ್ತಿಯಾಗಲಿಲ್ಲ. ಮತ್ತೂ ಕೇಳಬೇಕೆನಿಸಿತು. ಆದ್ದರಿಂದ ಧರ್ಮಜನು ಕೇಶವನ ಬಳಿ ಹೀಗೆ ಹೇಳಿದನು.
ಯುಧಿಷ್ಠಿರಃ
ಬೀಜಯೋನಿವಿಶುದ್ಧಾನಾಂ ಲಕ್ಷಣಾನಿ ವದಸ್ವ ಮೇ |
ಬೀಜದೋಷೇಣ ಲೋಕೇ ಚ ಜಾಯಂತೇ ಚ ಕಥಂ ನರಾಃ ॥3॥
ಯುಧಿಷ್ಠಿರ ಜಗದೊಡೆಯನೇ, ಬೀಜ ಮತ್ತು ಯೋನಿಗಳಿಂದ ಶುದ್ಧರಾಗಿರುವವರ ಲಕ್ಷಣಗಳನ್ನು ತಿಳಿಸು. ಬೀಜದೋಷಗಳಿಂದ ಹುಟ್ಟುವವರ ಲಕ್ಷಣಗಳನ್ನು ತಿಳಿಸು.
ಆಚಾರದೋಷಾನ್ ದೇವೇಶ ವಕ್ತುಮರ್ಹಸ್ಯಶೇಷತಃ |
ಬ್ರಾಹ್ಮಣಾನಾಂ ವಿಶೇಷಂ ಚ ಗುಣದೋಷೌ ಚ ಕೇಶವ ॥4॥
ಆಚಾರದೋಷಗಳನ್ನು, ಬ್ರಾಹ್ಮಣರ ಉತ್ತಮ-ಮಧ್ಯಮ ಭೇದಗಳನ್ನು, ಅವರಲ್ಲಿರುವ ಗುಣದೋಷಗಳನ್ನು ತಿಳಿಸು.
ಚಾತುರ್ವರ್ಣ್ಯಸ್ಯ ಕೃತ್ಸ್ನಸ್ಯ ವರ್ತಮಾನಾಃ ಪ್ರತಿಗ್ರಹೇ |
ಕೇನ ವಿಪ್ರಾ ವಿಶೇಷೇಣ ತರಂತೇ ತಾರಯಂತಿ ಚ ॥5॥
ಏತತ್ ಕಥಯ ದೇವೇಶ ತ್ವದ್ಭಕ್ತಸ್ಯ ನಮೋಽಸ್ತು ತೇ ॥6॥
ನಾಲ್ಕು ಆಶ್ರಮಧರ್ಮಗಳನ್ನು ಸಮಗ್ರವಾಗಿ ಆಚರಿಸುವ ಬ್ರಾಹ್ಮಣರು ಯಾವ ಆಶ್ರಮಧರ್ಮದಿಂದ ಸಂಸಾರದ ಕಷ್ಟದಿಂದ ಬಿಡುಗಡೆ ಹೊಂದುತ್ತಾರೆ? ಮತ್ತೊಬ್ಬರನ್ನೂ ಪಾರು ಮಾಡುತ್ತಾರೆ? ಇವೆಲ್ಲವನ್ನೂ ನಿನ್ನ ಭಕ್ತನಾದ ನನಗೆ ದೇವೇಶನೇ ತಿಳಿಸು. ನಿನಗೆ ನಮಸ್ಕಾರವು.
ಶ್ರೀಭಗವಾನ್
ಶೃಣು ರಾಜನ್ ಯಥಾತತ್ತ್ವಂ ಬೀಜಯೋನಿಶುಭಾಶುಭಮ್ |
ಯೇನ ತಿಷ್ಠತಿ ಲೋಕೋಽಯಂ ವಿನಶ್ಯತಿ ಚ ಪಾಂಡವ ॥7॥
ಶ್ರೀಭಗವಾನ್ ಯುಧಿಷ್ಠಿರನೇ, ಯಥಾವತ್ತಾದ ಬೀಜ-ಯೋನಿಗಳ ಶುಭಾಶುಭಗಳನ್ನು ನಿರೂಪಿಸುತ್ತೇನೆ, ಕೇಳು. ಬೀಜ-ಯೋನಿಗಳು

ಶುದ್ಧವಾಗಿದ್ದರೆ ಅದರಿಂದ ಸತ್ಸಂತಾನವು ಬೆಳೆದು ಲೋಕವು ಕ್ಷೇಮವಾಗಿರುತ್ತದೆ. ಬೀಜ-ಯೋನಿಗಳೇ ಅಶುದ್ಧವಾಗಿದ್ದರೆ ಲೋಕವೇ ವಿನಾಶ ಹೊಂದುತ್ತದೆ.
ಅವಿಪ್ಲುತಬ್ರಹ್ಮಚರ್ಯೋ ಯಸ್ತು ವಿಪ್ರೋ ಯಥಾವಿಧಿ |
ಸ ಬೀಜೀ ನಾಮ ವಿಜ್ಞೇಯಸ್ತಸ್ಯ ಬೀಜಂ ಶುಭಂ ಭವೇತ್ ॥8॥
ಎಂದೂ ನಾಶಹೊಂದದ ಬ್ರಹ್ಮಚರ್ಯವನ್ನು ಯಾವ ಬ್ರಾಹ್ಮಣನು ವಿಧಿವತ್ತಾಗಿ ಪರಿಪಾಲಿಸುತ್ತಾನೋ ಅಂತಹ ವಿಪ್ರನನ್ನೇ ಉತ್ತಮ ಬೀಜವೆನ್ನುತ್ತಾರೆ. ಅವನ ವೀರ್ಯದಿಂದ ಉತ್ತಮ ಸಂತಾನವಾಗುತ್ತದೆ.
ಕನ್ಯಾ ಚಾಕ್ಷತಯೋನಿರ್ವಾ ಕುಲೀನಾ ಪಿತೃಮಾತೃತಃ |
ಬ್ರಾಹ್ಮಾದಿಷು ವಿವಾಹೇಷು ಪರಿಣೀತಾ ಯಥಾವಿಧಿ ॥9॥
ಇದರಂತೆ ಕನ್ಯೆಯು ಉತ್ತಮ ಕುಲದ ತಂದೆ-ತಾಯಿಗಳಿಂದ ಉತ್ಪನ್ನಳಾಗಿರಬೇಕು. ಬ್ರಾಹ್ಮಣವೇ ಮೊದಲಾದ ಉತ್ತಮ ರೀತಿಯ ಪದ್ಧತಿಯಂತೆ ವಿಧಿಬದ್ಧವಾಗಿ ವಿವಾಹಿತಳಾಗಿರಬೇಕು.
ಸಾ ಪ್ರಶಸ್ತಾ ವರಾರೋಹಾ ಶುದ್ಧಯೋನಿಃ ಪ್ರಶಸ್ಯತೇ ॥10॥
ಅಂತಹ ಕನ್ಯೆಯು ಗರ್ಭಾಧಾರಕ್ಕೆ ಪ್ರಶಸ್ತಳಾದವಳೆಂದು ಕರೆಸಿಕೊಳ್ಳುತ್ತಾಳೆ.
ಮನಸಾ ಕರ್ಮಣಾ ವಾಚಾ ಯಾ ಗಚ್ಛೇತ್ ಪರಪೂರುಷಮ್ |
ಯೋನಿಸ್ತಸ್ಯಾ ನರಶ್ರೇಷ್ಠ ಗರ್ಭಾಧಾನಂ ನ ಚಾರ್ಹತಿ ॥11॥
ಮನಸ್ಸಿನಿಂದ, ಕರ್ಮದಿಂದ, ಮಾತಿನಿಂದ ಪರಪುರುಷನ ಸಮಾಗಮ ಮಾಡಿದ ಸ್ತ್ರೀಯು ಗರ್ಭಾಧಾರಕ್ಕೆ ಯೋಗ್ಯಳೆನಿಸುವುದಿಲ್ಲ.
ಸ್ವೈರಿಣ್ಯಾ ಯಸ್ತು ಪಾಪಾತ್ಮಾ ಸಂತಾನಾರ್ಥಮಿಹೇಚ್ಛತಿ |
ಸ ಕುಲಾನ್ ಪಾತಯತ್ಯಾಶು ದಶ ಪೂರ್ವಾನ್ ದಶಾಪರಾನ್ ॥12॥
ಸ್ವೈರಿಣಿ ಎನಿಸಿದ ಸ್ತ್ರೀಯಲ್ಲಿ ಹುಟ್ಟಿದ ಸಂತಾನವು ಅಯೋಗ್ಯವೆನಿಸಿ- ಕೊಳ್ಳುವುದರಿಂದ ಸ್ವೈರಿಣಿಯಿಂದ ಸಂತಾನವನ್ನು ಬಯಸುವವನು ಪಾಪಾತ್ಮ ಎನಿಸುತ್ತಾನೆ. ಅವನು ಕುಲಗಳನ್ನು ನಾಶಗೈಯ್ಯುತ್ತಾನೆ. ಹಿಂದಿನ ಹತ್ತು ತಲೆಗಳು, ಮುಂದಿನ ಹತ್ತು ತಲೆಗಳು ಸ್ವೈರಿಣಿಯಿಂದ ಸಂತಾನ ಪಡೆದಲ್ಲಿ ನಾಶಹೊಂದುತ್ತವೆ.
ದುಷ್ಟಯೋನೌ ತು ಯೋ ಮೋಹಾದ್ ರೇತಃ ಸಿಂಚತಿ ಮೂಢಧೀಃ |
ತದ್ ರೇತಸಾ ಸಮುತ್ಪನ್ನಃ ಷಡಂಗವಿದಪಿ ದ್ವಿಜಃ ॥13॥
ಸಾಧುಭಿಃ ಸ ಬಹಿಷ್ಕಾರ್ಯಃ ಶ್ವಪಾಕ ಇವ ಪಾರ್ಥಿವ ॥14॥
ಯಾವನು ಮೋಹದಿಂದ ಪ್ರಜ್ಞಾಹೀನನಾಗಿ ದುಷ್ಟಸ್ತ್ರೀಯಲ್ಲಿ ಗರ್ಭಾಧಾನವನ್ನು ಮಾಡುತ್ತಾನೋ ಅವನ ರೇತಸ್ಸಿನಿಂದ ಉತ್ಪನ್ನನಾದ ಬ್ರಾಹ್ಮಣನು ಆರು ವೇದಗಳನ್ನು ಅಧ್ಯಯನ ಮಾಡಿದರೂ ಸಜ್ಜನರಿಂದ ಶ್ವಪಾಕಿಯಂತೆ (ಚಾಂಡಾಲ) ಅವನು ಬಹಿಷ್ಕಾರಕ್ಕೆ ಅರ್ಹನಾಗಿದ್ದಾನೆ.
ಕರ್ಮಣಾ ಮನಸಾ ವಾಚಾ ಯಾ ಭವೇತ್ ಸ್ವೈರಚಾರಿಣೀ |
ಸಾ ಕುಲಘ್ನೀತಿ ವಿಜ್ಞೇಯಾ ತಸ್ಯಾಂ ಜಾತಃ ಶ್ವಪಾಚಕಃ ॥15॥
ಯಾವಳು ಕರ್ಮದಿಂದ, ಮನಸ್ಸಿನಿಂದ, ಮಾತಿನಿಂದ ಪರಪುರುಷನನ್ನು ಬಯಸಿರುತ್ತಾಳೋ ಅವಳು ಕುಲಕ್ಕೆ ಹಾನಿಯುಂಟು ಮಾಡುವವಳು ಎಂದು ತಿಳಿಯಬೇಕು. ಅವಳಿಂದ ಉತ್ಪನ್ನನಾದವನು ಶ್ವಪಾಚಕಿಯು ಎನಿಸುತ್ತಾನೆ.
ದೈವೇ ಪಿತ್ರ್ಯೇ ತಥಾ ದಾನೇ ಭೋಜನೇ ಸಹ ಭಾಷಣೇ |
ಶಯನೇ ಸಹ ಸಂಬಂಧೇ ನ ಯೋಗ್ಯಾ ದುಷ್ಟಯೋನಿಜಾಃ ॥16॥
ದುಷ್ಟಯೋನಿಯಲ್ಲಿ ಹುಟ್ಟಿದವರು ದೇವ-ಪಿತೃಕಾರ್ಯಗಳಲ್ಲಿ ಭಾಗವಹಿಸಲು, ದಾನ ತೆಗೆದುಕೊಳ್ಳಲು, ಒಟ್ಟಿಗೆ ಕುಳಿತು ಊಟ ಮಾಡಲು, ಮಾತಾಡಲು, ಮಲಗಲು, ಸಂಬಂಧ ಮಾಡಲು ಯೋಗ್ಯರಾಗಿರುವುದಿಲ್ಲ.
ನ ತಸ್ಮಾದ್ ದುಷ್ಟಯೋನ್ಯಾಂ ತು ಗರ್ಭಮುತ್ಪಾದಯೇದ್ ಬುಧಃ |
ಮೋಹೇನ ಕುರುತೇ ಯಸ್ತು ಕುಲಂ ಹಂತಿ ತ್ರಿಪೂರುಷಮ್ ॥17॥
ಆದ್ದರಿಂದ ಜ್ಞಾನಿಯಾದವನು ದುಷ್ಟಯೋನಿಯಲ್ಲಿ ಗರ್ಭಾಧಾನವನ್ನು ಮಾಡಬಾರದು. ಮೋಹದಿಂದ ಮಾಡಿದರೆ ಅವನು ಮೂರು ತಲೆಯ ಕುಲದವರನ್ನು ನಾಶಪಡಿಸಿದ ಪಾಪಕ್ಕೆ ಭಾಗಿಯಾಗುತ್ತಾನೆ.
ಕಾನೀನಶ್ಚ ಸಹೋಢಶ್ಚ ತಥೋಭೌ ಕುಂಡಗೋಲಕೌ |
ಆರೂಢಪತಿತಾಜ್ಜಾತಃ ಪತಿತಸ್ಯಾಪಿ ಯಃ ಸುತಃ ॥18॥
ಷಡೇತೇ ವಿಪ್ರಚಂಡಾಲಾ ನಿಷಿದ್ಧಾಃ ಶ್ವಪಚಾದಪಿ ॥19॥
ವಿವಾಹವಾಗದ ಕನ್ಯೆಯಲ್ಲಿ ಹುಟ್ಟಿದವನು, ಸಾಮೂಹಿಕ ವಿವಾಹದಲ್ಲಿ ಭಾಗವಹಿಸಿ ಅವಿವೇಕದಿಂದ ಹೆಂಡತಿಯು ವ್ಯತ್ಯಸ್ತಳಾದಾಗ ಹುಟ್ಟುವ ಮಗನು ಸಹೋಢ ಎನಿಸುತ್ತಾನೆ. ಪತಿಯು ಜೀವಿಸಿರುವಾಗಲೇ ಪತ್ನಿಯ ವ್ಯಭಿಚಾರದಿಂದ ಹುಟ್ಟಿದವನು, ಪತಿಯ ಮರಣಾನಂತರ ಅನ್ಯಪುರುಷರಿಂದ ಹುಟ್ಟಿದವನು, ಭ್ರಷ್ಟ ಸಂನ್ಯಾಸಿಯ ವೀರ್ಯದಿಂದ ಹುಟ್ಟಿದವನು, ಪತಿತನಾದ ಮನುಷ್ಯನಿಂದ ಹುಟ್ಟಿದವನು - ಈ ಆರು ಜನರು ವಿಪ್ರಚಂಡಾಲರು ಎಂದು ಕರೆಸಿಕೊಳ್ಳುತ್ತಾರೆ. ಇವರು ಚಂಡಾಲರಿಗಿಂತಲೂ ನಿಕೃಷ್ಟರಾದವರು.
ಯೋ ಯತ್ರ ತತ್ರ ವಾ ರೇತಃ ಸಿಕ್ತತ್ವ ಶೂದ್ರಾಸು ವಾ ಚರೇತ್ |
ಕಾಮಚಾರೀ ಸ ಪಾಪಾತ್ಮಾ ಬೀಜಂ ತಸ್ಯಾಶುಭಂ ಭವೇತ್ ॥20॥
ಯಾವ ಬ್ರಾಹ್ಮಣನು ಕಂಡ ಕಂಡಲ್ಲಿ ಯಾವ ಜಾತಿಭೇದಗಳನ್ನೂ ಪರಿಗಣಿಸದೆ ಶೂದ್ರ ಸ್ತ್ರೀಯರಲ್ಲಿಯೂ ರೇತಸ್ಸಿಂಚನದಿಂದ ಕಾಮುಕತನದಿಂದ ಮಾಡುತ್ತಾನೋ ಅವನು ಪಾಪಾತ್ಮ ಎನಿಸುತ್ತಾನೆ. ಅಂತಹವನು ಬೀಜವು ಶುದ್ಧವಲ್ಲ.
ಅಶುಭಂ ತದ್ ಭವೇದ್ ಬೀಜಂ ಶುದ್ರಾಂ ಯೋನಿಂ ಚ ನಾರ್ಹತಿ |

ಶುದ್ಧಾಂ ಹವಿರ್ಭುಜೋ ಜ್ವಾಲಾಂ ಶುನಾ ಲೀಢಂ ಹವಿರ್ಯಥಾ ॥21॥
ಸ್ತ್ರೀಯರು ಶುದ್ಧಳಾಗಿದ್ದರೂ ಅಯೋಗ್ಯ ಬ್ರಾಹ್ಮಣನ ರೇತಸ್ಸಿನ ಸಂಪರ್ಕದಿಂದ ನಾಯಿ ನೆಕ್ಕಿದ ಹವಿಸ್ಸಿನಂತೆ ಶುದ್ಧ ಯೋನಿಯೂ ಅಶುದ್ಧವಾಗುತ್ತದೆ.
ಶೂದ್ರಯೋನೌ ಪತೇದ್ ಬೀಜಂ ಹಾಹಾಶಬ್ದಂ ದ್ವಿಜನ್ಮನಃ |
ಕುರ್ಯಾತ್ ಪುರೀಷಮಾರ್ಗೇಷು ಪತಿತೋಽಸ್ಮೀತಿ ದುಃಖಿತಃ ॥22॥
ಶೂದ್ರಯೋನಿಯಲ್ಲಿ ಬ್ರಾಹ್ಮಣನು ರೇತಸ್ಸಿಂಚನವನ್ನು ಮಾಡಿದರೆ ಆ ವೀರ್ಯಾಭಿಮಾನಿ ದೇವತೆಯು ಹಾಹಾಶಬ್ದವನ್ನು ಮಾಡುತ್ತಾ, ಮಲದ ಮಾರ್ಗದಲ್ಲಿ ನಾನು ಬೀಳುತ್ತಿದ್ದೇನೆ ಎಂದು ದುಃಖವನ್ನು ಹೊಂದುತ್ತಾನೆ.
ಮಾಮಧಃ ಪಾತಯತ್ಯೇಷ ಪಾಪಾತ್ಮಾ ಕಾಮಮೋಹಿತಃ |
ಅಧೋಗತಿಂ ವ್ರಜೇತ್ ಕ್ಷಿಪ್ರಮಿತಿ ಶಪತ್ಯತ್ವ ಪತೇತ್ ತು ತತ್ ॥23॥
ನನ್ನನ್ನು ಈ ಮೂರ್ಖನು, ಪಾಪಿಷ್ಠನು ಕಾಮಮೋಹಿತನಾಗಿ ಕೆಳಗೆ ಬೀಳಿಸುತ್ತಿದ್ದಾನೆ ಅಧೋಗತಿಗೆ ನನ್ನನ್ನು ಕೆಡವುತ್ತಿದ್ದಾನೆ. ಇದರಿಂದ ಅವನೂ ಅಧೋಗತಿಯನ್ನು ಹೊಂದಲಿ ಎಂದು ಆ ರೇತೋಭಿಮಾನಿಯು ಶಪಿಸುತ್ತದೆ.
ಆತ್ಮಾ ಹಿ ಶುಕ್ಲಮುದ್ದಿಷ್ಟಂ ದೈವತಂ ಪರಮಂ ಮಹತ್ |
ತಸ್ಮಾತ್ ಸರ್ವಪ್ರಯತ್ನೇನ ನಿರುಂಧ್ಯಾಚ್ಛುಕ್ಲಮಾತ್ಮನಃ ॥24॥
ವೀರ್ಯವನ್ನು ಆತ್ಮ ಎನ್ನುತ್ತಾರೆ. ಆದ್ದರಿಂದ ಅದು ಶ್ರೇಷ್ಠವಾದ ದೇವತೆಯೇ ಆಗಿದೆ. ಬ್ರಾಹ್ಮಣನು ಇದನ್ನು ಅರಿತು ಸರ್ವಪ್ರಯತ್ನದಿಂದಲೂ ತನ್ನ ವೀರ್ಯವನ್ನು ಸರಿಯಾಗಿ ರಕ್ಷಿಸಿಕೊಳ್ಳಬೇಕು.
ಆಯುಸ್ತೇಜೋ ಬಲಂ ವೀರ್ಯಂ ಪ್ರಜ್ಞಾ ಶ್ರೀಶ್ಚ ಮಹಾಯಶಃ |
ಪುಣ್ಯಂ ಚ ಮತ್ಪ್ರಿಯತ್ವಂ ಚ ಲಭತೇ ಬ್ರಹ್ಮಚರ್ಯಯಾ ॥25॥
ಯಾವ ಮನುಷ್ಯನು ಅಸ್ಖಲಿತವಾದ ಬ್ರಹ್ಮಚರ್ಯವ್ರತವನ್ನು ಪರಿಪಾಲನೆ ಮಾಡುತ್ತಾನೋ ಅವನ ಆಯುಸ್ಸು, ತೇಜಸ್ಸು, ಬಲ, ವೀರ್ಯ, ಬುದ್ಧಿ, ಸಂಪತ್ತು, ಯಶಸ್ಸು, ಪುಣ್ಯ, ನನ್ನ ಪ್ರೀತಿ ಎಲ್ಲವನ್ನೂ ಪಡೆದುಕೊಳ್ಳುತ್ತಾನೆ.
ಅವಿಪ್ಲುತಬ್ರಹ್ಮಚರ್ಯೈರ್ಗೃಹಸ್ಥಾಶ್ರಮಮಾಶ್ರಿತೈಃ |
ಪಂಚಯಜ್ಞಪರೈರ್ಧರ್ಮಃ ಸ್ಥಾಪ್ಯತೇ ಪೃಥಿವೀತಳೇ ॥26॥
ಗೃಹಸ್ಥಾಶ್ರಮದಲ್ಲಿ ಇದ್ದುಕೊಂಡು ನಾಶವಾಗದ ಬ್ರಹ್ಮಚರ್ಯವನ್ನು ಪರಿಪಾಲಿಸುತ್ತಾ ಪಂಚಯಜ್ಞಗಳ ಅನುಷ್ಠಾನದಲ್ಲಿ ನಿರತರಾದ ಬ್ರಾಹ್ಮಣರು ಭೂಮಿಯಲ್ಲಿ ಧರ್ಮವನ್ನು ಸ್ಥಾಪಿಸಲು ಅರ್ಹರಾಗಿರುತ್ತಾರೆ.
ಸಾಯಂ ಪ್ರಾತಸ್ತು ಯೇ ಸಂಧ್ಯಾಂ ಸಮ್ಯಗ್ ನಿತ್ಯಮುಪಾಸತೇ |
ನಾವಂ ವೇದಮಯೀಂ ಕೃತ್ವಾ ತರಂತೇ ತಾರಯಂತಿ ಚ ॥27॥
ಯಾವ ಬ್ರಾಹ್ಮಣರು ಪ್ರಾತಃಕಾಲ, ಸಾಯಂಕಾಲಗಳಲ್ಲಿ ವಿಧಿಬದ್ಧವಾಗಿ ಸಂಧ್ಯೋಪಾಸನೆಯನ್ನು ಮಾಡುತ್ತಾರೋ ಅಂತಹ ಬ್ರಾಹ್ಮಣರು ವೇದಮಯವಾದ ದೋಣಿಯ ಮೂಲಕ ಸಂಸಾರವನ್ನು ದಾಟುತ್ತಾರೆ, ದಾಟಿಸುತ್ತಾರೆ.
ಯೋ ಜಪೇತ್ ಪಾವನೀಂ ದೇವೀಂ ಗಾಯತ್ರೀಂ ವೇದಮಾತರಮ್ |
ನ ಸೀದೇತ್ ಪ್ರತಿಗೃಹ್ಣಾನಃ ಪೃಥಿವೀಂ ಚ ಸಸಾಗರಾಮ್ ॥28॥
ಯಾವ ಬ್ರಾಹ್ಮಣನು ಜಗತ್ತನ್ನೇ ಪಾವನಗೊಳಿಸುವ ವೇದಮಾತೆಯಾದ ಗಾಯತ್ರಿ ಮಂತ್ರವನ್ನು ಜಪಿಸುತ್ತಾನೋ ಅಂತಹವನು ಸಮುದ್ರಪರ್ಯಂತವಾದ ಅಖಂಡ ಭೂಮಂಡಲವನ್ನೇ ದಾನವನ್ನಾಗಿ ಸ್ವೀಕರಿಸಿದರೂ ಪ್ರತಿಗ್ರಹದೋಷದಿಂದ ಲಿಪ್ತನಾಗುವುದಿಲ್ಲ.
ಯೇ ಚ ಸ್ಯುರ್ದುಃಸ್ಥಿತಾಃ ಕೇಚಿದ್ ಗ್ರಹಾಃ ಸೂರ್ಯಾದಯೋ ದಿವಿ |
ತೇ ಚಾಸ್ಯ ಸೌಮ್ಯಾ ಜಾಯಂತೇ ಶಿವಾಃ ಶುಭಕರಾಸ್ತಥಾ ॥29॥
ನಿರಂತರ ಜಪಿಸುವ ವ್ಯಕ್ತಿಯ ಜಾತಕದಲ್ಲಿ ಯಾವ ಗ್ರಹಗಳು ಅಶುಭ ಸ್ಥಾನದಲ್ಲಿ ಇರುತ್ತವೆಯೋ ಅಂತಹ ಸೂರ್ಯಾದಿ ಗ್ರಹಗಳು ಗಾಯತ್ರಿ ಜಪದ ಪ್ರಭಾವದಿಂದಾಗಿ ಶುಭಫಲವನ್ನೇ ನೀಡುತ್ತವೆ.
ಯತ್ರ ತತ್ರ ಸ್ಥಿತಾಶ್ಚೈವ ದಾರುಣಾಃ ಪಿಶಿತಾಶನಾಃ |
ಘೋರರೂಪಾ ಮಹಾಕಾಯಾ ಧರ್ಷಯಂತಿ ನ ತಂ ದ್ವಿಜಮ್ ॥30॥
ಯಾವ ಯಾವ ಪ್ರದೇಶಗಳಲ್ಲಿ, ಭಯಂಕರವಾದ ಮಾಂಸಾಹಾರಿಗಳಾದ, ಘೋರ ರೂಪವನ್ನು ಧರಿಸಿರುವ ಪಿಶಾಚಿಗಳು ಇದ್ದಾವೋ ಅವು ಗಾಯತ್ರಿಮಂತ್ರವನ್ನು ಸಂಧ್ಯಾಕಾಲದಲ್ಲಿ ಜಪಿಸುವ ಬ್ರಾಹ್ಮಣರನ್ನು ಭಯಪಡಿಸಲಾರವು.
ಪುನಂತೀಹ ಪೃಥಿವ್ಯಾಂ ಹಿ ಚೀರ್ಣವೇದವ್ರತಾ ನರಾಃ ॥31॥
ವೇದಾಧ್ಯಯನವನ್ನು ಮಾಡಿ ವೇದವ್ರತಗಳನ್ನು ಅನುಷ್ಠಾನ ಮಾಡುವ ಬ್ರಾಹ್ಮಣರು ಭೂಮಂಡಲವನ್ನೇ ಪವಿತ್ರಗೊಳಿಸುತ್ತಾರೆ.
ಅಚೀರ್ಣವ್ರತವೇದಾ ಯೇ ವಿಕರ್ಮಪಥಮಾಶ್ರಿತಾಃ |
ಬ್ರಾಹ್ಮಣಾ ನಾಮಮಾತ್ರೇಣ ತೇಽಪಿ ಪೂಜ್ಯಾ ನರಾಧಿಪ ॥32॥
ಯುಧಿಷ್ಠಿರನೇ, ನಾಲ್ಕು ವೇದಗಳಲ್ಲಿ ಇರುವ ಮಂತ್ರಗಳಲ್ಲಿ ಗಾಯತ್ರಿಮಂತ್ರವು ಶ್ರೇಷ್ಠವಾದುದು. ಯಾರು ವೇದಗಳನ್ನು ಅಧ್ಯಯನ ಮಾಡದೆ, ವೇದವ್ರತಗಳನ್ನೂ ಅನುಷ್ಠಾನ ಮಾಡದೆ ದುಷ್ಕರ್ಮಿಗಳಾಗಿದ್ದರೂ ಹೆಸರಿಗೆ ಮಾತ್ರ ಬ್ರಾಹ್ಮಣರಾದ ವ್ಯಕ್ತಿಗಳು ಗಾಯತ್ರಿ ಮಂತ್ರವನ್ನು ಜಪಿಸುತ್ತಿದ್ದರೆ ಅವರು ಪೂಜ್ಯರೇ ಎನಿಸುತ್ತಾರೆ.
ಕಿಂ ಪುನರ್ಯಸ್ತು ಸಂಧ್ಯೇ ದ್ವೇ ನಿತ್ಯಮೇವೋಪತಿಷ್ಠತೇ ॥33॥
ಹೀಗಿದ್ದಾಗ ಎರಡು ಸಂಧ್ಯಾಕಾಲಗಳನ್ನು ನಿಯಮಬದ್ಧರಾಗಿ ಅನುಷ್ಠಾನ ಮಾಡುತ್ತಾರೋ ಅವರ ವಿಷಯದಲ್ಲಿ ಹೇಳುವುದೇನಿದೆ?
ಶೀಲಮಧ್ಯಯನಂ ದಾನಂ ಶೌಚಂ ಮಾರ್ದವಮಾರ್ಜವಮ್ |
ತಸ್ಮಾದ್ ವೇದಾದ್ ವಿಶಿಷ್ಟಾನ್ ವೈ ಮನುರಾಹ ಪ್ರಜಾಪತಿಃ ॥34॥

ಶೀಲ, ಅಧ್ಯಯನ, ದಾನ, ಶೌಚ, ಮೃದುತ್ವ, ಋಜುತ್ವ - ಈ ಗುಣಗಳು ವೇದಕ್ಕಿಂತಲೂ ವಿಶಿಷ್ಟವಾದ ಗುಣಗಳೆಂದು ಮನುಪ್ರಜಾಪತಿಯು ಹೇಳಿರುತ್ತಾನೆ.
ಭೂರ್ಭುವಃಸ್ವರಿತಿ ಬ್ರಹ್ಮ ಯೋ ವೇದನಿರತೋ ದ್ವಿಜಃ |
ಸ್ವದಾರನಿರತೋ ದಾಂತಃ ಸ ವಿದ್ವಾನ್ ಸ ಚ ಭೂಸುರಃ ॥35॥
ಯಾವ ಬ್ರಾಹ್ಮಣನು `ಭೂರ್ಭುವಸ್ವಃ' ಎಂಬ ವ್ಯಾಹೃತಿಯ ಜೊತೆಗೆ ಗಾಯತ್ರಿ ಮಂತ್ರವನ್ನು ಜಪಿಸುತ್ತಾನೋ, ವೇದಗಳ ಅಧ್ಯಯನ, ಅಧ್ಯಾಪನಗಳಲ್ಲಿ ನಿರತನಾಗಿರುತ್ತಾನೋ, ತನ್ನ ಪತ್ನಿಯಲ್ಲಿ ಮಾತ್ರವೇ ಆಸಕ್ತನಾಗಿರುತ್ತಾನೋ ಅವನು ನಿಜವಾದ ವಿದ್ವಾಂಸನು. ಅವನೇ ನಿಜವಾದ ಬ್ರಾಹ್ಮಣನು.
ಸಂಧ್ಯಾಮುಪಾಸತೇ ವಿಪ್ರಾ ನಿಯಮೇನ ದ್ವಿಜೋತ್ತಮಾಃ |
ತೇ ಯಾಂತಿ ನರಶಾರ್ದೂಲ ಬ್ರಹ್ಮಲೋಕಂ ನ ಸಂಶಯಃ ॥36॥
ಯಾವ ಬ್ರಾಹ್ಮಣರು ನಿಯಮಬದ್ಧರಾಗಿ ಸಂಧ್ಯಾವಂದನೆಯನ್ನು ಮಾಡುತ್ತಾರೋ ಅವರು ನರಶಾರ್ದೂಲನೇ, ನಿಶ್ಚಿತವಾಗಿಯೂ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಸಾವಿತ್ರೀಮಾತ್ರಸಾರೋಽಪಿ ವರೋ ವಿಪ್ರಃ ಸುಯಂತ್ರಿತಃ |
ನಾಯಂತ್ರಿತಶ್ಚತುರ್ವೇದೀ ಸರ್ವಾಶೀ ಸರ್ವವಿಕ್ರಯೀ ॥37॥
ಅಧ್ಯಯನವಿಲ್ಲದಿದ್ದರೂ ವೇದಮಾತೆಯಾದ ಗಾಯತ್ರಿಮಂತ್ರವನ್ನು ನಿಯಮ ಬದ್ಧವಾಗಿ ಯಾವನು ಜಪಿಸುತ್ತಾನೋ, ನಾಲ್ಕು ವೇದಗಳನ್ನು ಓದದೆ, ನಿಯಮಾನುಷ್ಠಾನ- ವಿಲ್ಲದೆ ಕಂಡಲ್ಲಿ ತಿನ್ನುವ, ಸಮಸ್ತ ಪದಾರ್ಥಗಳನ್ನು ಮಾರಾಟ ಮಾಡುವ ವ್ಯಕ್ತಿಯು ಉತ್ತಮ ಬ್ರಾಹ್ಮಣ ಎನಿಸುವುದಿಲ್ಲ.
ಸಾವಿತ್ರೀಂ ಚೈವ ವೇದಾಂಶ್ಚ ತುಲಯಾಽತುಲಯನ್ ಪುರಾ |
ದೇವಾ ಋಷಿಗಣಾಶ್ಚೈವ ಸರ್ವೇ ಬ್ರಹ್ಮಪುರಃಸರಾಃ ॥38॥
ಹಿಂದೊಮ್ಮೆ ದೇವತೆಗಳು ಬ್ರಹ್ಮನನ್ನು ಮುಂದಿಟ್ಟುಕೊಂಡು, ಋಷಿಗಳನ್ನೂ ಮುಂದಿಟ್ಟುಕೊಂಡು ತಕ್ಕಡಿಯಲ್ಲಿ ಒಂದು ಭಾಗದಲ್ಲಿ ವೇದಗಳನ್ನು, ಮತ್ತೊಂದು ಭಾಗದಲ್ಲಿ ಗಾಯತ್ರಿಯನ್ನು ಇಟ್ಟು ತೂಗಿದರು.
ಚತುರ್ಣಾಮಪಿ ವೇದಾನಾಂ ಸಾ ಹಿ ರಾಜನ್ ಗರೀಯಸೀ ॥39॥
ಆಗ ನಾಲ್ಕು ವೇದಗಳಿಗಿಂತಲೂ ಗಾಯತ್ರಿಯೇ ಭಾರವಾಗಿದ್ದುದನ್ನು ಕಂಡು ಆಶ್ಚರ್ಯಪಟ್ಟರು.
ಯಥಾ ವಿಕಸಿತೇ ಪುಷ್ಪೇ ಮಧು ಗೃಹ್ಣಂತಿ ಷಟ್ಪದಾಃ |
ಸಮುತ್ಸೃಜ್ಯ ರಸಂ ಸರ್ವಂ ನಿರರ್ಥಕಮಸಾರವತ್ ॥40॥
ಹೇಗೆ ದುಂಬಿಗಳು ಅರಳಿದ ಹೂವುಗಳಲ್ಲಿ ತುಂಬಿದ ಮಕರಂದವನ್ನು ಸ್ವೀಕರಿಸುತ್ತವೆಯೋ ಅದರಂತೆ ವೇದಗಳೆಂಬ ಪುಷ್ಪಗಳಿಂದ ಸಂಗ್ರಹಿಸಿದ ಸಾರವೇ ಗಾಯತ್ರಿ ಎನಿಸಿದೆ.
ಏವಂ ಗೃಹೀತಾ ಸಾವಿತ್ರೀ ಸರ್ವವೇದೇ ಚ ಪಾಂಡವ ॥41॥
ಈ ರೀತಿಯಾಗಿ ಸಮಸ್ತ ವೇದಗಳಿಂದ ಸ್ವೀಕರಿಸಿದ ಸಾರ ಗಾಯತ್ರಿ ಎಂದು ತಿಳಿದುಕೊ.
ಏವಂ ಹಿ ಸರ್ವವೇದಾನಾಂ ಸಾವಿತ್ರೀ ಪ್ರಾಣ ಉಚ್ಯತೇ |
ನಿರ್ಜೀವಾ ಹೀತರೇ ವೇದಾ ವಿನಾ ಸಾವಿತ್ರಿಯಾ ನೃಪ ॥42॥
ಸಮಸ್ತ ವೇದಗಳಿಗೂ ಈ ಕಾರಣದಿಂದಲೇ ಗಾಯತ್ರಿಯು ಪ್ರಾಣ ಎಂದು ಕರೆಸಿಕೊಳ್ಳುತ್ತದೆ. ಗಾಯತ್ರಿ ಇಲ್ಲದಿರುವ ವೇದಗಳು ಮಕರಂದವಿಲ್ಲದ ಪುಷ್ಪಗಳಂತೆ ನಿರ್ಜೀವವೆನಿಸಿದೆ.
ಏವಂ ಹಿ ಯಶ್ಚತುರ್ವೇದೀ ಶೀಲಭ್ರಷ್ಟಃ ಸ ಕುತ್ಸಿತಃ |
ಶೀಲವೃತ್ತಸಮಾಯುಕ್ತಃ ಸಾವಿತ್ರೀಪಾಠಕೋ ವರಃ ॥43॥
ಆದ್ದರಿಂದ ನೀತಿ-ನಿಯಮಗಳಿಂದಲೂ, ಸದಾಚಾರಗಳಿಂದಲೂ ಭ್ರಷ್ಟನಾಗಿರುವ ಬ್ರಾಹ್ಮಣನು ಚತುರ್ವೇದಿಯಾಗಿದ್ದರೂ ನಿಂದ್ಯನಾಗಿದ್ದಾನೆ. ಶೀಲಸದಾಚಾರ ಸಂಪನ್ನನಾದ ಬ್ರಾಹ್ಮಣನು ಗಾಯತ್ರಿ ಮಾತ್ರ ಜಪಿಸುತ್ತಿದ್ದರೂ ಚತುರ್ವೇದಿಯಾದ ಬ್ರಾಹ್ಮಣನಿಗಿಂತಲೂ ಶ್ರೇಷ್ಠನಾಗಿದ್ದಾನೆ.
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ |
ಸಾವಿತ್ರೀಂ ಜಪ ಕೌಂತೇಯ ಸರ್ವಪಾಪಪ್ರಣಾಶಿನೀಮ್ ॥44॥
ಪ್ರತಿದಿನವೂ ಒಂದುಸಾವಿರ ಗಾಯತ್ರಿಯನ್ನು ಜಪಿಸುವುದು ಉತ್ತಮ. ನೂರು ಬಾರಿ ಜಪಿಸುವುದು ಮಧ್ಯಮ. ಹತ್ತು ಬಾರಿ ಜಪಿಸುವುದು ಅಧಮ ಎಂದು ಹೇಳುತ್ತಾರೆ. ಯುಧಿಷ್ಠಿರನೇ, ಆದ್ದರಿಂದ ಸಮಸ್ತ ಪಾಪಗಳನ್ನು ಜಪಿಸುವ ಗಾಯತ್ರಿ ಮಂತ್ರವನ್ನು ನೀನು ಜಪಿಸು.
ಯುಧಿಷ್ಠಿರಃ
ತ್ರೈಲೋಕ್ಯನಾಥ ಭೋ ಕೃಷ್ಣ ಸರ್ವಭೂತಾತ್ಮಕೋ ಹ್ಯಸಿ |
ನಾನಾಯೋಗಧರ ಶ್ರೇಷ್ಠ ತುಷ್ಯಸೇ ಕೇನ ಕರ್ಮಣಾ ॥45॥
ಯುಧಿಷ್ಠಿರ ತ್ರೈಲೋಕ್ಯನಾಥನೇ, ಕೃಷ್ಣನೇ, ಸಮಸ್ತ ಪ್ರಾಣಿಗಳಿಗೂ ನೀನು ಆತ್ಮಸ್ವರೂಪನಾಗಿರುವೆ. ನಾನಾವಿಧವಾದ ಯೋಗಗಳನ್ನು ಧರಿಸಿರುವೆ. ಅಂತಹ ನೀನು ಜೀವರು ಮಾಡುವ ಯಾವ ಕರ್ಮದಿಂದ ಸಂತುಷ್ಟನಾಗುತ್ತಿ? ತಿಳಿಸು.
ಶ್ರೀಭಗವಾನ್
ಯದಿ ಭಾರಸಹಸ್ರಂ ತು ಗುಗುಲ್ವಾದಿ ಪ್ರಧೂಪಯೇತ್ |
ಕರೋತಿ ಚೇನ್ನಮಸ್ಕಾರಮುಪಹಾರಂ ಚ ಕಾರಯೇತ್ ॥46॥

ಪೂಜಯೇತ್ ಸ್ತುತಿಭಿರ್ಮಾಂ ಚ ಋಗ್ಯಜುಃಸಾಮಭಿಃ ಸದಾ |
ನ ತೋಷಯತಿ ಚೇದ್ ವಿಪ್ರಾನ್ ನಾಹಂ ತುಷ್ಯಾಮಿ ಭಾರತ ॥47॥
ಶ್ರೀಭಗವಾನ್ ಯುಧಿಷ್ಠಿರನೇ, ಒಂದು ಸಾವಿರ ಭಾರದಷ್ಟು ಗುಗ್ಗುಲವೇ ಮೊದಲಾದ ಸುಗಂಧದ್ರವ್ಯಗಳನ್ನು ನನ್ನ ಮುಂದೆ ಹಚ್ಚಿಟ್ಟು, ನಮಸ್ಕಾರ ಮಾಡುತ್ತಾ, ಭಕ್ಷ್ಯಭೋಜ್ಯಗಳನ್ನು ಸಮರ್ಪಿಸಿದರೂ, ಋಗ್ವೇದ, ಯಜುರ್ವೇದ, ಸಾಮವೇದಗಳ ಮೂಲಕವಾಗಿ ನನ್ನನ್ನು ಸ್ತೋತ್ರ ಮಾಡುತ್ತಿದ್ದರೂ, ಬ್ರಾಹ್ಮಣರನ್ನು ಸಂತೋಷಗೊಳಿಸದಿದ್ದರೆ ನಾನು ಅವರ ವಿಷಯದಲ್ಲಿ ಸಂತುಷ್ಟನಾಗುವುದಿಲ್ಲ.
ಬ್ರಾಹ್ಮಣೇ ಪೂಜಿತೇ ನಿತ್ಯಂ ಪೂಜಿತೋಽಸ್ಮಿ ನ ಸಂಶಯಃ |
ಆಕ್ರುಷ್ಟೇ ಚಾಹಮಾಕ್ರುಷ್ಟೋ ಭವಾಮಿ ಭರತರ್ಷಭ ॥48॥
ಭರತಶ್ರೇಷ್ಠನೇ, ಬ್ರಾಹ್ಮಣನು ಪೂಜಿತನಾದರೆ ನಾನೇ ಪೂಜಿತನಾದಂತೆ. ಇದರಲ್ಲಿ ಸಂಶಯವಿಲ್ಲ. ಬ್ರಾಹ್ಮಣನನ್ನು ದೂಷಿಸಿದರೆ ನನ್ನನ್ನೇ ದೂಷಿಸಿದಂತೆ.
ಪರಾ ಮಯಿ ಗತಿಸ್ತೇಷಾಂ ಪೂಜಯಂತೀಹ ಮಾಂ ಹಿ ತೇ |
ಯದಹಂ ದ್ವಿಜರೂಪೇಣ ವಸಾಮಿ ವಸುಧಾತಲೇ ॥49॥
ಯಾವ ವ್ಯಕ್ತಿಗಳು ಬ್ರಾಹ್ಮಣರನ್ನು ಚೆನ್ನಾಗಿ ಪೂಜಿಸುತ್ತಾರೋ ಅವರಿಗೆ ಶ್ರೇಷ್ಠವಾದ ಗತಿಯು ದೊರೆಯುತ್ತದೆ. ಕಾರಣ ನಾನೇ ಬ್ರಾಹ್ಮಣರೂಪದಿಂದ ಭೂಮಂಡಲದಲ್ಲಿ ಸಂಚರಿಸುತ್ತೇನೆ.
ಯಸ್ತಾನ್ ಪೂಜಯತಿ ಪ್ರಾಜ್ಞೋ ಮದ್ಗತೇನಾಂತರಾತ್ಮನಾ |
ತಮಹಂ ಸ್ವೇನ ರೂಪೇಣ ಪಶ್ಯಾಮಿ ನರಪುಂಗವ ॥50॥
ಯಾವ ಪ್ರಾಜ್ಞನು ನನ್ನಲ್ಲಿಯೇ ಮನಸ್ಸು ಇರಿಸಿ ಬ್ರಾಹ್ಮಣನನ್ನು ಸತ್ಕರಿಸುತ್ತಾನೋ ಅವನನ್ನು ನಾನು ನನ್ನ ಸನ್ನಿಧಾನದಿಂದಲೇ ಕಾಣುತ್ತೇನೆ.
ಕಾಣಾಃ ಕುಬ್ಜಾ ವಾಮನಾಶ್ಚ ದರಿದ್ರಾ ವ್ಯಾಧಿತಾಸ್ತಥಾ |
ನಾವಮಾನ್ಯಾಃ ದ್ವಿಜಾಃ ಪ್ರಾಜ್ಞೈರ್ಮಮ ರೂಪಾ ಹಿ ತೇ ದ್ವಿಜಾಃ ॥51॥
ಬ್ರಾಹ್ಮಣರಾದವರು ಕುರೂಪಿಗಳೇ ಆಗಿರಲಿ, ಕುರುಡರು, ಕುಳ್ಳರು, ದರಿದ್ರರೇ ಆಗಿರಲಿ, ರೋಗಿಗಳೇ ಆಗಿರಲಿ ಅವರನ್ನು ತಿಳಿದವರು ತಿರಸ್ಕರಿಸಬಾರದು. ಏಕೆಂದರೆ ಬ್ರಾಹ್ಮಣರೇ ನನ್ನ ರೂಪರಾಗಿದ್ದಾರೆ.
ಯೇ ಕೇಚಿತ್ ಸಾಗರಾಂತಾಯಾಂ ಪೃಥಿವ್ಯಾಂ ದ್ವಿಜಸತ್ತಮಾಃ |
ಮಮ ರೂಪೇಷು ತೇಷ್ವೇವಮರ್ಚಿತೇಷ್ವರ್ಚಿತೋಽಸ್ಮ್ಯಹಮ್ ॥52॥
ಯಾವ ಬ್ರಾಹ್ಮಣರು ಸಮುದ್ರಪರ್ಯಂತವಾದ ಭೂಮಂಡಲದಲ್ಲಿ ಇರುವರೋ ಅವರೆಲ್ಲರಲ್ಲಿಯೂ ನಾನೇ ಅಂತರ್ಯಾಮಿಯಾಗಿ ಇರುತ್ತೇನೆ. ಆದ್ದರಿಂದ ಅವರು ಪೂಜಿತರಾದರೆ ನಾನೇ ಪೂಜಿತನಾದಂತೆ.
ಬಹವಸ್ತು ನ ಜಾನಂತಿ ನರಾ ಜ್ಞಾನಬಹಿಷ್ಕೃತಾಃ |
ಯಥಾ ಹಿ ದ್ವಿಜರೂಪೇಣ ವಸಾಮಿ ವಸುಧಾತಳೇ ॥53॥
ಅಜ್ಞಾನಿಗಳಾದ ಅನೇಕ ಜನರು ನಾನು ಬ್ರಾಹ್ಮಣರೂಪದಿಂದ ಭೂಮಂಡಲದಲ್ಲಿ ಇದ್ದೇನೆ ಎಂಬುದನ್ನು ತಿಳಿದಿರುವುದಿಲ್ಲ.
ಅವಮನ್ಯಂತಿ ಯೇ ವಿಪ್ರಾನ್ ಸ್ವಧರ್ಮಾತ್ ಪಾತಯಂತಿ ಚ |
ಪ್ರೇಷಯಂತೇ ಚ ಸತತಂ ಶುಶ್ರೂಷಾಂ ಕಾರಯಂತಿ ಚ ॥54॥
ಮೃತಾಂಸ್ತಾನ್ ಕ್ಷುರಪತ್ರೇಣ ಯಮದೂತಾ ಮಹಾಬಲಾಃ |
ನಿಕೃಂತಂತಿ ಯಥಾಕಾಮಂ ಸೂತ್ರಮಾರ್ಗೇಣ ಶಿಲ್ಪಿನಃ ॥55॥
ಯಾರು ಬ್ರಾಹ್ಮಣರನ್ನು ಅವಮಾನಿಸುತ್ತಾರೋ, ಅವರನ್ನು ಸ್ವಧರ್ಮದಿಂದ ವಂಚಿತರನ್ನಾಗಿ ಮಾಡುತ್ತಾರೋ, ಬ್ರಾಹ್ಮಣರನ್ನು ಕೆಲಸಕ್ಕೆ ನಿಯೋಗಿಸಿಕೊಂಡು ಅವರಿಂದ ಸೇವೆಯನ್ನು ಸ್ವೀಕರಿಸುತ್ತಾರೋ ಸತ್ತ ಬಳಿಕ ಅಂತಹ ವ್ಯಕ್ತಿಗಳನ್ನು ಯಮಕಿಂಕರರು ಮಹಾಬಲಿಷ್ಠರಾಗಿ ನರಕ ಲೋಕದಲ್ಲಿ ಗರಗಸಗಳಿಂದ ದೇಹವನ್ನು ಕುಯ್ಯುತ್ತಾರೆ. ಕೆಳಕ್ಕೆ ಕೆಡವಿ ಹಗ್ಗಗಳಿಂದ ಸೆಳೆಯುತ್ತಾರೆ.
ಆಕ್ರೋಶಪರಿವಾದಾಭ್ಯಾಂ ಯೇ ರಮಂತೇ ದ್ವಿಜಾತಿಷು |
ತಾನ್ ಮೃತಾನ್ ಯಮಲೋಕಸ್ಥಾನ್ ನಿಪಾತ್ಯ ಧರಣೀತಳೇ ॥56॥
ಯಾರು ಬ್ರಾಹ್ಮಣರ ವಿಷಯದಲ್ಲಿ ಸಿಟ್ಟಿನಿಂದ ಅಪವಾದಗಳನ್ನು ಮಾಡುತ್ತಾರೋ ಅಂತಹ ವ್ಯಕ್ತಿಗಳನ್ನು ಯಮಲೋಕದಲ್ಲಿ ಯಮಕಿಂಕರರು ಭೂಮಿಯ ಮೇಲೆ ಬೀಳಿಸಿ, ಅವರ ಎದೆಯ ಮೇಲೆ ಕುಳಿತು, ಕೆಂಪಾದ ಕಣ್ಣುಗಳಿಂದ ಕ್ರುದ್ಧರಾಗಿ ಕಾಲಿನಿಂದ ತುಳಿಯುತ್ತಾ, ಇಕ್ಕಳಗಳಿಂದ ಅವರ ನಾಲಿಗೆಗಳನ್ನು ಕಿತ್ತು ತೆಗೆಯುತ್ತಾರೆ.
ಆಕ್ರಮ್ಯೋರಸಿ ಪಾದೇನ ಕ್ರುದ್ಧಾಃ ಸಂರಕ್ತಲೋಚನಾಃ |
ಅಗ್ನಿವರ್ಣೈಸ್ತು ಸಂದಂಶೈರ್ಯಮೋ ಜಿಹ್ವಾಂ ಸಮುದ್ಧರೇತ್ ॥57॥
ಯೇ ಚ ವಿಪ್ರಾನ್ ನಿರೀಕ್ಷಂತೇ ಪಾಪಾಃ ಪಾಪೇನ ಚಕ್ಷುಷಾ |
ಅಬ್ರಹ್ಮಣ್ಯಾಃ ಶ್ರುತೇರ್ಬಾಹ್ಯಾ ನಿತ್ಯಂ ಬ್ರಹ್ಮದ್ವಿಷೋ ನರಾಃ ॥58॥
ತೇಷಾಂ ಘೋರಾ ಮಹಾಕಾಯಾ ವಕ್ರತುಂಡಾ ಮಹಾಬಲಾಃ |
ಉದ್ಧರಂತಿ ಮುಹೂರ್ತೇನ ಖಗಾಶ್ಚಕ್ಷುರ್ಯಮಾಜ್ಞಯಾ ॥59॥
ಯಾವ ವ್ಯಕ್ತಿಗಳು ಬ್ರಾಹ್ಮಣರನ್ನು ಕೆಟ್ಟ ಕಣ್ಣುಗಳಿಂದ ಸಿಟ್ಟಿನಿಂದ ನೋಡುತ್ತಾರೋ, ವೇದಗಳನ್ನು ದೂಷಿಸಿ, ಬ್ರಾಹ್ಮಣ್ಯವನ್ನು ತಿರಸ್ಕರಿಸಿ, ಬ್ರಹ್ಮದ್ವೇಷವನ್ನು ಮಾಡುವ ಆ ವ್ಯಕ್ತಿಗಳನ್ನು ಮಹಾಕಾಯವನ್ನು ಹೊಂದಿದ, ವಕ್ರವಾದ ಕೊಕ್ಕುಗಳನ್ನು ಹೊಂದಿರುವ ಬಲಿಷ್ಠವಾದ, ಘೋರವಾದ ಪಕ್ಷಿಗಳು ಅಂತಹ ವ್ಯಕ್ತಿಗಳ ಕಣ್ಣುಗಳನ್ನು ಯಮದೇವರ ಆಜ್ಞೆಯಿಂದ ಮುಹೂರ್ತದಲ್ಲಿ ಕೊಕ್ಕಿನಿಂದ ಕಿತ್ತು ತೆಗೆಯುತ್ತವೆ.

ಯಃ ಪ್ರಹಾರಂ ದ್ವಿಜೇಂದ್ರಾಯ ದದ್ಯಾತ್ ಕುರ್ಯಾಚ್ಚ ಶೋಣಿತಮ್ |
ಅಸ್ಥಿಭಂಗಂ ಚ ಯಃ ಕುರ್ಯಾತ್ ಪ್ರಾಣೈರ್ವಾ ವಿಪ್ರಯೋಜಯೇತ್ ||
ಸೋಽನುಪೂರ್ವ್ಯೇಣ ಯಾತೀಮಾನ್ ನರಕಾನೇಕವಿಂಶತಿಮ್ ||61||
ಯಾವ ಶ್ರೇಷ್ಠನಾದ ಬ್ರಾಹ್ಮಣನನ್ನು ರಕ್ತ ಬರುವವರೆಗೂ ಹೊಡೆಯುತ್ತಾನೋ ಅಂತಹ ವ್ಯಕ್ತಿಯು, ಬ್ರಾಹ್ಮಣನ ಮೂಳೆಯನ್ನು ಮುರಿಯುವ ವ್ಯಕ್ತಿಯು, ಬ್ರಾಹ್ಮಣನ ಪ್ರಾಣ ತೆಗೆಯುವ ವ್ಯಕ್ತಿಯು ಸತ್ತ ಬಳಿಕ ಕ್ರಮವಾಗಿ ಇಪ್ಪತ್ತೊಂದು ಭಯಂಕರವಾದ ನರಕಗಳನ್ನು ಹೊಂದುತ್ತಾನೆ.
ಶೂಲಮಾರೋಪಿತೋ ಗತ್ವಾ ಜ್ವಲನೇನಾಪಿ ದಹ್ಯತೇ ||62||
ಬಳಿಕ ಅವನನ್ನು ಯಮಭಟರು ಶೂಲಕ್ಕೆ ಏರಿಸಿ ಬೆಂಕಿಯಿಂದ ಬೇಯಿಸುತ್ತಾರೆ.
ಬಹುವರ್ಷಸಹಸ್ರಾಣಿ ಪಚ್ಯಮಾನಸ್ತ್ವವಾಕ್ಶಿರಾಃ |
ನಾವಮುಂಚತಿ ದುರ್ಮೇಧಾ ನ ತಸ್ಯ ಕ್ಷೀಯತೇ ಮತಿಃ ||63||
ಅನೇಕ ಸಾವಿರ ವರ್ಷಗಳ ತನಕ ಅವನನ್ನು ತಲೆಕೆಳಗಾಗಿ ನಿಲ್ಲಿಸಿ ಬೇಯಿಸುತ್ತಲೇ ಇರುತ್ತಾರೆ. ದುರ್ಬುದ್ಧಿಯಾದ ಆ ಮನುಷ್ಯನಿಗೆ ಈ ವಿಧವಾದ ನರಕ ಯಾತನೆಗಳು ಇಂತಹ ಪಾಪದಿಂದಲೇ ಉಂಟಾಗಿ ನನಗೆ ಇಂತಹ ದುರ್ಬುದ್ಧಿಯುಂಟಾಯಿತು ಎಂದು ಎಲ್ಲಿಯ ತನಕ ಅನ್ನಿಸುವುದಿಲ್ಲವೋ ಅಲ್ಲಿಯ ತನಕವೂ ಈ ಶಿಕ್ಷೆಯು ಮುಗಿಯುವುದಿಲ್ಲ.
ಬ್ರಾಹ್ಮಣಾಯವಗುರ್ಯೈವ ವ್ರಜಂತಿ ವಧಕಾಂಕ್ಷಯಾ |
ಶತವರ್ಷಸಹಸ್ರಾಣಿ ತಾಮಿಸ್ರೇ ಪರಿಪಚ್ಯತೇ ||64||
ಯಾವಾತನು ಬ್ರಾಹ್ಮಣರನ್ನು ಅವಮಾನಗೊಳಿಸಬೇಕೆಂದು ಅಥವಾ ಅವರನ್ನು ವಧಿಸಬೇಕೆಂದು ವಿಚಾರ ಮಾಡಿ ಹೋಗುತ್ತಾನೋ ಅವನು ಒಂದು ಲಕ್ಷ ವರ್ಷದ ತನಕ ತಾಮಿಸ್ರವೆಂಬ ನರಕದಲ್ಲಿ ಬೇಯಿಸಲ್ಪಡುತ್ತಾನೆ.
ಉತ್ಪಾದ್ಯ ಶೋಣಿತಂ ಗಾತ್ರಾತ್ ಸಂರಂಭಾನ್ಮತಿಪೂರ್ವಕಮ್ |
ಸ ಪರ್ಯಾಯೇಣ ಯಾತೀಮಾನ್ ನರಕಾನೇಕವಿಂಶತಿಮ್ ||65||
ಯಾವ ವ್ಯಕ್ತಿಯು ಉದ್ವೇಗದಿಂದ, ಬುದ್ಧಿಪೂರ್ವಕವಾಗಿ ಬ್ರಾಹ್ಮಣನ ದೇಹದಲ್ಲಿ ರಕ್ತವನ್ನು ಉಂಟುಮಾಡುತ್ತಾನೋ ಅವನು ಸತ್ತ ಬಳಿಕ ಕ್ರಮವಾಗಿ ಇಪ್ಪತ್ತೊಂದು ನರಕಗಳನ್ನು ಹೊಂದುತ್ತಾನೆ.
ತಸ್ಮಾನ್ನಾಕುಶಲಂ ಬ್ರೂಯಾತ್ ನ ಶುಷ್ಕಾಂ ಗಿರಮೀರಯೇತ್ |
ನ ಬ್ರೂಯಾತ್ ಪರುಷಾಂ ವಾಣೀಂ ನ ಚೈವೈತಾನತಿಕ್ರಮೇತ್ ||66||
ಆದ್ದರಿಂದ ಬ್ರಾಹ್ಮಣನನ್ನು ಕುರಿತು ಅಮಂಗಳವಾದ ಮಾತುಗಳನ್ನು ಹೇಳಬಾರದು. ಹಗುರವಾದ, ಕಠಿಣವಾದ ಮಾತುಗಳನ್ನೂ ಆಡಬಾರದು. ಯಾವಾಗಲೂ ಅವಮಾನಿಸಬಾರದು. ಬ್ರಾಹ್ಮಣನನ್ನು ಮೀರಿ ವರ್ತಿಸಬಾರದು. ದುಃಖವನ್ನುಂಟು ಮಾಡುವ ಮಾತುಗಳನ್ನು ಹೇಳಬಾರದು.
ಯೇ ವಿಪ್ರಾನ್ ಶ್ರದ್ಧಯಾ ವಾಚಾ ಪೂಜಯಂತಿ ನರೋತ್ತಮಾಃ |
ಅರ್ಚಿತಶ್ಚ ಸ್ತುತಶ್ಚೈವ ತೈರ್ಭವಾಮಿ ಯುಧಿಷ್ಠಿರ ||67||
ಧರ್ಮಜನೇ, ಯಾರು ಮಧುರವಾದ ಮಾತುಗಳಿಂದ ಶ್ರದ್ಧೆಯಿಂದ ಬ್ರಾಹ್ಮಣರನ್ನು ಪೂಜಿಸುತ್ತಾರೋ ಅಂತಹ ವ್ಯಕ್ತಿಗಳಿಂದ ನಾನೇ ಪೂಜಿತನಾಗುತ್ತೇನೆ. ನಾನೇ ಸ್ತುತಿಸಲ್ಪಡುತ್ತೇನೆ.
ತರ್ಜಯಂತಿ ಚ ಯೇ ವಿಪ್ರಾನ್ ಕ್ರೋಶಯಂತಿ ಚ ಭಾರತ |
ಆಕ್ರುಷ್ಟಸ್ತರ್ಜಿತಶ್ಚಾಹಂ ತೈರ್ಭವಾಮಿ ನ ಸಂಶಯಃ ||68||
ಯಾರು ಬ್ರಾಹ್ಮಣರನ್ನು ಹೆದರಿಸುತ್ತಾರೋ, ಅಳಿಸುತ್ತಾರೋ ಅಂತಹ ವ್ಯಕ್ತಿಗಳು ನನ್ನನ್ನೇ ಹೆದರಿಸಿದ, ಅಳಿಸಿದ ಪಾಪಕ್ಕೆ ಭಾಗಿಗಳಾಗುತ್ತಾರೆ.
ಯಶ್ಚಂದನೈಶ್ಚಾಗರುಧೂಪದೀಪೈಃ
ಅಭ್ಯರ್ಚಯೇತ್ ಕಾಷ್ಠಮಯೀಂ ಮಮಾರ್ಚಾಮ್ |
ತೇನಾರ್ಚಿತೋ ನೈವ ಭವಾಮಿ ಸಮ್ಯಗ್
ವಿಪ್ರಾರ್ಚನಾದರ್ಚಿತೋಽಹಂ ಭವಾಮಿ ||69||
ಯಾರು ನನ್ನನ್ನು ಚಂದನಗಳಿಂದ, ಅಗರು-ಧೂಪ-ದೀಪಗಳಿಂದ ಕಾಷ್ಠದಲ್ಲಿ ಸನ್ನಿಹಿತನಾಗಿದ್ದೇನೆಂದು ಪೂಜಿಸುತ್ತಾರೋ ಅವರಿಂದ ನಾನು ಸರಿಯಾಗಿ ಅರ್ಚಿತನಾಗಿರುವುದಿಲ್ಲ. ಭಕ್ತಿಯಿಂದ ಬ್ರಾಹ್ಮಣರನ್ನು ಅರ್ಚಿಸುವ ವ್ಯಕ್ತಿಗಳಿಂದ ನಾನು ಅರ್ಚಿತನಾಗಿರುತ್ತೇನೆ.
ವಿಪ್ರಪ್ರಸಾದಾದ್ ಧರಣೀಧರೋಽಹಂ
ವಿಪ್ರಪ್ರಸಾದಾದಸುರಾನ್ ಜಯಾಮಿ |
ವಿಪ್ರಪ್ರಸಾದಾಚ್ಚ ಸದಕ್ಷಿಣೋಽಹಂ
ವಿಪ್ರಪ್ರಸಾದಾದಜಿತೋಽಹಮಸ್ಮಿ ||70||
ಬ್ರಾಹ್ಮಣರ ಅನುಗ್ರಹದಿಂದಲೇ ನಾನು ಭೂಮಿಯನ್ನು ಎತ್ತಿರುತ್ತೇನೆ. ಬ್ರಾಹ್ಮಣರ ಪ್ರಸನ್ನತೆಯಿಂದಲೇ ಅಸುರರನ್ನು ಜಯಿಸಿರುತ್ತೇನೆ. ಬ್ರಾಹ್ಮಣರ ಪ್ರಸನ್ನತೆಯಿಂದಲೇ ನಾನು ಎಲ್ಲ ವಿಧವಾದ ವೈಭವಗಳನ್ನು ಹೊಂದಿರುತ್ತೇನೆ. ಬ್ರಾಹ್ಮಣರ ಪ್ರಸನ್ನತೆಯಿಂದಲೇ ನಿತ್ಯವೂ ಜಯಶೀಲನಾಗಿರುತ್ತೇನೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ
ವಿಪ್ರಪ್ರಸಾದಮಾಹಾತ್ಮ್ಯಂ ನಾಮ ಶತತಮೋಽಧ್ಯಾಯಃ ||

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂದನೆಯ ಅಧ್ಯಾಯ
ಯುಧಿಷ್ಠಿರನನ್ನು ಕುರಿತು ಕೃಷ್ಣನು ಸತ್ಕರ್ಮ-ದುಷ್ಕರ್ಮಗಳ ಫಲವಾಗಿ ನರಕಾದಿ ಲೋಕಗಳಿಗೆ ಹೋಗುವ ಪ್ರಕಾರವನ್ನು ವರ್ಣಿಸಿದುದು.
ಯುಧಿಷ್ಠಿರಃ
ದೇವದೇವೇಶ ದೈತ್ಯಘ್ನ ಪರಂ ಕೌತೂಹಲಂ ಹಿ ಮೇ |
ಏತತ್ ಕಥಯ ಸರ್ವಜ್ಞ ತ್ವದ್ಭಕ್ತಸ್ಯ ಜನಾರ್ದನ ॥1॥
ಮಾನುಷಸ್ಯ ಚ ಲೋಕಸ್ಯ ಯಮಲೋಕಸ್ಯ ಚಾಂತರಮ್ ॥2॥
ಯುಧಿಷ್ಠಿರ ದೈತ್ಯರನ್ನು ನಾಶಗೊಳಿಸುವ ದೇವದೇವೇಶ್ವರನೇ, ಸರ್ವಜ್ಞನೇ, ಜನಾರ್ದನನೇ, ಮನುಷ್ಯಲೋಕದ, ಯಮಲೋಕದ ಅಂತರವೇನು ಎಂಬುದನ್ನು ನನಗೆ ತಿಳಿಸು. ಈ ವಿಷಯದಲ್ಲಿ ನನಗೆ ತುಂಬಾ ಕುತೂಹಲವಿದೆ.
ಕೀದೃಶಂ ಕಿಂ ಪ್ರಮಾಣಂ ವಾ ಕಿಮಧಿಷ್ಠಾನಮೇವ ವಾ |
ತರಂತಿ ಮಾನವಾ ದೇವ ಕೇನೋಪಾಯೇನ ಮಾಧವ ॥3॥
ಭಗವಂತನೇ, ನರಕಲೋಕವು ಯಾವ ರೀತಿಯಲ್ಲಿದೆ? ಅದರ ಸುತ್ತಳತೆಯಷ್ಟು? ಅಲ್ಲಿರುವವರು ಹೇಗಿರುತ್ತಾರೆ? ಯಾವ ಉಪಾಯದಿಂದ ಈ ನರಕಲೋಕವನ್ನು ಮಾನವರು ದಾಟುತ್ತಾರೆ? ಇವೆಲ್ಲವನ್ನೂ ತಿಳಿಸು.
ತ್ವಗಸ್ಥಿಮಾಂಸನಿರ್ಮುಕ್ತೇ ಪಂಚಭೂತವಿವರ್ಜಿತೇ |
ಕಥಯಸ್ವ ಮಹಾದೇವ ಸುಖದುಃಖಮಶೇಷತಃ ॥4॥
ಯಾವ ಮನುಷ್ಯನು ಪಂಚಭೂತಾತ್ಮಕವಾದ ಶರೀರದಿಂದ ಬಿಟ್ಟು ತೆರಳುತ್ತಾನೋ, ಚರ್ಮ-ಮೂಳೆ-ಮಾಂಸದಿಂದ ರಹಿತನಾಗುತ್ತಾನೋ ಆಗ ಅವನು ಅನುಭವಿಸುವ ಸುಖ-ದುಃಖಗಳು ಏನೆಂಬುದನ್ನು ತಿಳಿಸು.
ಜೀವಸ್ಯ ಯಮಲೋಕೇ ತು ಕರ್ಮಭಿಸ್ತು ಶುಭಾಶುಭೈಃ |
ಅನುಬದ್ಧಸ್ಯ ತೈಃ ಪಾಶೈರ್ನೀಯಮಾನಸ್ಯ ದಾರುಣೈಃ ॥5॥
ಮನುಷ್ಯಲೋಕದಲ್ಲಿ ಜೀವನು ಬುದ್ಧಿಪೂರ್ವಕವಾಗಿ ಆಚರಿಸಿದ ಶುಭಾಶುಭ ಕರ್ಮಗಳಿಂದ ಬಂಧಿತನಾಗಿರುತ್ತಾನೆ. ಮರಣದ ಬಳಿಕ ಆತನು ಯಮಭಟರಿಂದ ಬಂಧಿತನಾಗಿ ಕರೆದೊಯ್ಯಲ್ಪಡುತ್ತಾನೆ.
ಮೃತ್ಯುದೂತೈರ್ದುರಾಧರ್ಷೈರ್ಘೋರೈರ್ಘೋರಪರಾಕ್ರಮೈಃ |
ಬದ್ಧಸ್ಯಾಕ್ಷಿಪ್ಯಮಾಣಸ್ಯ ವಿದ್ರುತಸ್ಯ ಯಮಾಜ್ಞಯಾ ॥6॥
ಎದುರಿಸಲು ಅಸಾಧ್ಯರಾದ, ಘೋರಪರಾಕ್ರಮಿಗಳಾದ ಯಮಕಿಂಕರರು ಯಮನ ಆಜ್ಞೆಯಿಂದ ಜೀವನನ್ನು ಕಠಿಣವಾದ ಪಾಶಗಳಿಂದ ಬಿಗಿದು ಸೆಳೆದುಕೊಂಡು ಹೋಗುತ್ತಾರೆ.
ಪುಣ್ಯಪಾಪಕೃತಸ್ತಿಷ್ಠೇತ್ ಸುಖದುಃಖಮಶೇಷತಃ ॥7॥
ಪುಣ್ಯ-ಪಾಪಗಳೆರಡನ್ನೂ ಮಾಡಿರುವ ಜೀವರು ಅಲ್ಲಿ ಸುಖದುಃಖಗಳೆರಡನ್ನೂ ಅನುಭವಿಸುತ್ತಾರೆ.
ಯಮದೂತೈರ್ದುರಾಧರ್ಷೈರ್ನೀಯತೇ ವಾ ಕಥಂ ಪುನಃ |
ಕಿಂ ವಾ ತತ್ರ ಮಹಾದೇವ ಕರ್ಮ ಕುರ್ವಂತಿ ಮಾನವಾಃ ॥8॥
ದುರ್ಧರ್ಷರಾದ ಯಮಕಿಂಕರರು ಜೀವರನ್ನು ಹೇಗೆ ಯಮಲೋಕಕ್ಕೆ ಸೆಳೆದೊಯ್ಯುತ್ತಾರೆ? ಯಮಲೋಕಕ್ಕೆ ಹೋಗುವ ಸಮಯದಲ್ಲಿ ಆ ಜೀವರು ಯಾವ ಕರ್ಮಗಳನ್ನು ಮಾಡುತ್ತಾರೆ?
ಕಥಂ ಧರ್ಮರತಾ ಯಾಂತಿ ದೇವತಾದ್ವಿಜಪೂಜಕಾಃ |
ಕಥಂ ವಾ ಪಾಪಕರ್ಮಾಣೋ ಯಾಂತಿ ಪ್ರೇತಪುರಂ ನರಾಃ ॥9॥
ದೇವತಾ, ಬ್ರಾಹ್ಮಣರನ್ನು ಪೂಜಿಸುವ ವ್ಯಕ್ತಿಗಳು ಯಾವ ಮಾರ್ಗವನ್ನು ಅನುಭವಿಸುತ್ತಾರೆ? ಪಾಪಕರ್ಮಗಳನ್ನೇ ಮಾಡಿದ ವ್ಯಕ್ತಿಗಳು ಯಮಪುರಿಗೆ ಹೇಗೆ ತೆರಳುತ್ತಾರೆ?
ಕಿಂ ರೂಪಂ ಕಿಂ ಪ್ರಮಾಣಂ ವಾ ವರ್ಣಃ ಕೋ ವಾಽಸ್ಯ ಕೇಶವ |
ಜೀವಸ್ಯ ಗಚ್ಛತೋ ನಿತ್ಯಂ ಯಮಲೋಕಂ ಬ್ರವೀಹಿ ಮೇ ॥10॥
ಯಮಲೋಕಕ್ಕೆ ಸಾಗುವ ಜೀವನಿಗೆ ಯಾವ ರೂಪವಿರುತ್ತದೆ? ಅವನ ಗಾತ್ರವೆಷ್ಟು? ಯಾವ ಬಣ್ಣದಲ್ಲಿರುತ್ತಾನೆ? ಕೇಶವನೇ, ಯಮಲೋಕಕ್ಕೆ ಸಾಗುವ ಜೀವನ ಸಮಗ್ರ ಅವಸ್ಥೆಗಳನ್ನು ನನಗೆ ತಿಳಿಸು.
ಶ್ರೀಭಗವಾನ್
ಶೃಣು ರಾಜನ್ ಯಥಾತತ್ತ್ವಂ ಯನ್ಮಾಂ ತ್ವಂ ಪರಿಪೃಚ್ಛಸಿ |
ತತ್ ತೇಽಹಂ ಕಥಯಿಷ್ಯಾಮಿ ಮದ್ಭಕ್ತಸ್ಯ ನರೇಶ್ವರ ॥11॥
ಶ್ರೀಭಗವಾನ್ ನರೇಶ್ವರನೇ, ನನ್ನ ಭಕ್ತನಾದ ನಿನಗೆ ನೀನು ಹೇಗೆ ಪ್ರಶ್ನಿಸಿರುವೆಯೋ ಅದರಂತೆ ಎಲ್ಲ ಪ್ರಶ್ನೆಗಳಿಗೂ ಉತ್ತರಿಸುತ್ತೇನೆ.
ಷಡಶೀತಿಸಹಸ್ರಾಣಿ ಯೋಜನಾನಾಂ ಶತಾನಿ ಚ |
ಮಾನುಷಸ್ಯ ಚ ಲೋಕಸ್ಯ ಯಮಲೋಕಸ್ಯ ಚಾಂತರಮ್ ॥12॥
ಮನುಷ್ಯಲೋಕಕ್ಕೂ ಯಮಲೋಕಕ್ಕೂ ಎಂಬತ್ತಾರು ಸಾವಿರ ಯೋಜನ ಅಂತರವಿದೆ.
ನ ತತ್ರ ವೃಕ್ಷಚ್ಛಾಯಾ ವಾ ನ ತಟಾಕಂ ಸರೋಽಪಿ ವಾ |
ನ ವಾಪ್ಯೋ ದೀರ್ಘಿಕಾ ವಾಽಪಿ ನ ಕೂಪಂ ವಾ ಯುಧಿಷ್ಠಿರ ॥13॥

ಆ ಯಮಮಾರ್ಗದಲ್ಲಿ ವೃಕ್ಷಗಳ ನೆರಳಾಗಲಿ, ಬಾವಿಗಳಾಗಲಿ, ಸರೋವರಗಳಾಗಲಿ, ತಟಾಕೆಗಳಾಗಲಿ, ಸಣ್ಣ ನದಿ, ಹಳ್ಳಗಳಾಗಲಿ ಇರುವುದಿಲ್ಲ.
ನ ಮಂಟಪಂ ಸಭಾ ವಾಽಪಿ ನ ಪ್ರಪಾ ನ ನಿವೇಶನಮ್ |
ನ ಪರ್ವತೋ ನದೀ ವಾಽಪಿ ನ ಭೂಮೇರ್ವಿವರಂ ಕ್ವಚಿತ್ ॥14॥
ಮಂಟಪಗಳಾಗಲಿ, ಸಭಾಮಂದಿರಗಳಾಗಲಿ, ಅರವಟ್ಟಿಗೆಗಳಾಗಲಿ, ಮನೆಗಳಾಗಲಿ, ಪರ್ವತ-ನದಿಗಳಾಗಲಿ, ಗುಹೆಗಳಾಗಲಿ ಇರುವುದಿಲ್ಲ.
ನ ಗ್ರಾಮೋ ನಾಶ್ರಮೋ ವಾಽಪಿ ನೋದ್ಯಾನಂ ಕಾನನಾನಿ ವಾ |
ನ ಕಿಂಚಿದ್ವಿಶ್ರಮಸ್ಥಾನಂ ಪಥಿ ತಸ್ಮಿನ್ ಯುಧಿಷ್ಠಿರ ॥15॥
ಗ್ರಾಮವಾಗಲಿ, ಆಶ್ರಮವಾಗಲಿ, ಉದ್ಯಾನವನವಾಗಲಿ, ಕಾಡುಗಳಾಗಲಿ, ಯಾವುದೇ ಆಶ್ರಯ ಸ್ಥಾನವಾಗಲಿ, ಯಮಲೋಕದ ಮಾರ್ಗದಲ್ಲಿ ಇರುವುದಿಲ್ಲ.
ಜಂತೋಃ ಸಂಪ್ರಾಪ್ತಕಾಲಸ್ಯ ವೇದನಾರ್ತಸ್ಯ ವೈ ಭೃಶಮ್ |
ಕರಣೈಸ್ತ್ಯಕ್ತದೇಹಸ್ಯ ಪ್ರಾಣೈಃ ಕಂಠಗತೈಃ ಪುನಃ ॥16॥
ಮರಣಕಾಲವು ಸನ್ನಿಹಿತವಾದಾಗ ಜೀವನು ಮರಣಸಂಕಟಕ್ಕೆ ತುತ್ತಾಗಿರುತ್ತಾನೆ. ಸ್ವಲ್ಪ ಹೊತ್ತು ಮರಣವೇದನೆಯನ್ನು ಅನುಭವಿಸಿದ ಬಳಿಕ ಪ್ರಾಣಗಳು ಕಂಠಕ್ಕೆ ಆಗಮಿಸಿ ಕ್ರಮವಾಗಿ ಸಣ್ಣ ನಿಮಿತ್ತದಿಂದ ಪ್ರಾಣವನ್ನು ತ್ಯಜಿಸುತ್ತಾನೆ.
ಶರೀರಾಚ್ಛೋದ್ಯತೇ ಜೀವೋ ಹ್ಯವಶೋ ಮಾತರಿಶ್ವನಾ ॥17॥
ಜೀವನು ಅಸ್ವತಂತ್ರನಾಗಿ ಶರೀರದಿಂದ ವಾಯುವಿನ ಜೊತೆಗೆ ದೇಹದಿಂದ ಹೊರಬರುತ್ತಾನೆ.
ನಿರ್ಗತೋ ವಾಯುಭೂತಸ್ತು ಷಟ್ಕೋಶಾತ್ ತು ಕಲೇಬರಾತ್ |
ಶರೀರಮನ್ಯತ್ ತದ್ರೂಪಂ ತದ್ವರ್ಣಂ ತತ್ಪ್ರಮಾಣಕಮ್ ॥18॥
ಸಪ್ತಧಾತುಗಳೆಂಬ ಕೋಶಗಳಿಂದ ಕೂಡಿರುವ ಶರೀರದಿಂದ ವಾಯುರೂಪನಾಗಿ ಹೊರಬಂದ ಜೀವನು ಬೇರೆಯಾದ ಮತ್ತೊಂದು ಶರೀರವನ್ನು ಅದೇ ವಾಯು ರೂಪದಿಂದ ಅದೇ ಪ್ರಮಾಣದಿಂದ ಪ್ರವೇಶಿಸುತ್ತಾನೆ.
ವ್ಯಾಖ್ಯಾನ ವಿಶೇಷ ಇಲ್ಲಿ ಷಟ್ಕೋಶಗಳೆಂದರೆ ಸಪ್ತಧಾತುಗಳು. ತ್ವಕ್, ಚರ್ಮಗಳನ್ನು ಒಂದು ಎಂದು ಇಟ್ಟುಕೊಂಡು ಷಟ್ಕೋಶ ಎಂದಿದ್ದಾರೆ.
ಅದೃಶ್ಯಂ ಸಂಪ್ರವಿಷ್ಟಸ್ತು ಸೋಽಪ್ಯದೃಷ್ಟೇನ ಕೇನಚಿತ್ ॥19॥
ಅದೃಶ್ಯವಾದ ಶರೀರವನ್ನು ಪ್ರವೇಶಿಸಿದ ಬಳಿಕ ಜೀವನು ಅದೃಶ್ಯನಾಗಿಯೇ ಇರುತ್ತಾನೆ.
ಸೋಽಂತರಾತ್ಮಾ ದೇಹವತಾಮಷ್ಟಾಂಗೋ ಯಸ್ತು ಸಂಚರೇತ್ |
ಛೇದನಾದ್ ದಾಹನಾದ್ ಭೇದಾತ್ ತಾಡನಾದ್ ವಾ ನ ನಶ್ಯತಿ ॥
ದೇಹಧಾರಿಗಳ ಅಂತರಾತ್ಮನೆನಿಸಿದ ಜೀವನು ಎಂಟು ಅಂಗಗಳಿಂದ ಕೂಡಿಕೊಂಡು, ಅಣಿಮಾದಿ ಐಶ್ವರ್ಯಶಕ್ತಿಗಳಿಂದ ಕೂಡಿಕೊಂಡು ಅಥವಾ ಪಾದಾದಿ ಅವಯವಗಳಿಂದ ಕೂಡಿಕೊಂಡು ಇರುತ್ತಾನೆ. ಈ ದೇಹ ತ್ಯಜಿಸಿದ ವ್ಯಕ್ತಿಯ ದೇಹದಲ್ಲಿ ಪರಮಾತ್ಮನೇ ಅಂತರ್ಯಾಮಿಯಾಗಿ ಸಂಚರಿಸುತ್ತಿರುತ್ತಾನೆ. ಆದ್ದರಿಂದ ಈ ಜೀವನ ದೇಹವನ್ನು ಕತ್ತರಿಸಲಾಗುವುದಿಲ್ಲ, ಒಡೆದು ಹಾಕಲಾಗುವುದಿಲ್ಲ, ಸುಟ್ಟು ಹಾಕಲಾಗುವುದಿಲ್ಲ, ಪ್ರಹರಿಸಿದರೂ ನಾಶವನ್ನು ಹೊಂದುವುದಿಲ್ಲ.
ನಾನಾರೂಪಧರೈರ್ಘೋರೈಃ ಪ್ರಚಂಡೈಶ್ಚಂಡವಿಕ್ರಮೈಃ |
ಹ್ರಿಯಮಾಣೋ ದುರಾಧರ್ಷೈರ್ಯಮದೂತೈರ್ಯಮಾಜ್ಞಯಾ ॥21॥
ಯಮದೇವನ ಆಜ್ಞಾನುಸಾರ ನಾನಾ ರೂಪಗಳನ್ನು ಧರಿಸಿರುವ ಭಯಂಕರ ಪ್ರಚಂಡರಾದ, ಎದುರಿಸಲು ಅಸಾಧ್ಯರಾದ, ಆಯುಧಧಾರಿಗಳಾದ ಯಮಕಿಂಕರರು ಅಷ್ಟಾಂಗಯುಕ್ತರಾದ ಜೀವನನ್ನು ಸೆಳೆದೊಯ್ಯುತ್ತಾರೆ.
ಪುತ್ರದಾರಮಯೈಃ ಪಾಶೈಃ ಸನ್ನಿರುದ್ಧೋಽವಶಾದ್ ಬಲಾತ್ |
ಸ್ವಕರ್ಮಭಿಶ್ಚಾನುಗತೈಃ ಕೃತೈಃ ಸುಕೃತದುಷ್ಕೃತೈಃ ॥22॥
ಆ ಸಮಯದಲ್ಲಿ ಜೀವನು ಪತ್ನಿ-ಪುತ್ರರೂಪವಾದ ಸ್ನೇಹಬಂಧದಿಂದ ಕಟ್ಟಲ್ಪಟ್ಟಿರುತ್ತಾನೆ. ಅಸ್ವತಂತ್ರನಾದ ಜೀವನು ಯಮಭಟರಿಂದ ಸೆಳೆಯುತ್ತಿರುವಾಗ ತನ್ನ ಪುಣ್ಯ-ಪಾಪಗಳನ್ನು ಅನುಸರಿಸಿ ಸಾಗುತ್ತಿರುತ್ತಾನೆ.
ಆಕ್ರಂದಮಾನಃ ಕರುಣಂ ಬಂಧುಭಿರ್ದುಃಖಪೀಡಿತೈಃ |
ತ್ಯಕತ್ವ ಬಂಧುಜನಂ ಸರ್ವಂ ನಿರಪೇಕ್ಷಸ್ತು ಗಚ್ಛತಿ ॥23॥
ಆ ಸಮಯದಲ್ಲಿ ದುಃಖಿತರಾದ ಆ ಜೀವನಿಗೆ ಸಂಬಂಧಿಸಿದ ಬಂಧುಜನರು ಕರುಣಾಜನಕವಾದ ಧ್ವನಿಯಲ್ಲಿ ರೋದಿಸುತ್ತಿರುತ್ತಾರೆ. ಆ ಎಲ್ಲ ಬಂಧುಜನರನ್ನು ಬಿಟ್ಟು, ಯಾವುದರಲ್ಲಿಯೂ ಆಸಕ್ತಿಯಿಲ್ಲದೆ ಯಮಭಟರ ಜೊತೆಗೆ ಸಾಗುತ್ತಾನೆ.
ಮಾತೃಭಿಃ ಪಿತೃಭಿಶ್ಚೈವ ಭ್ರಾತೃಭಿರ್ಮಾತುಲೈಸ್ತಥಾ |
ದಾರೈಃ ಪುತ್ರೈರ್ವಯಸ್ಯೈಶ್ಚ ರುದದ್ಭಿಸ್ತ್ಯಜ್ಯತೇ ನರಃ ॥24॥
ಅಳುತ್ತಿರುವ ತಾಯಿ, ತಂದೆ, ಸಹೋದರ, ಮಾವ, ಹೆಂಡತಿ, ಮಕ್ಕಳು, ಮಿತ್ರರು ಇವರೆಲ್ಲರೊಡನೆಯೂ ಆ ಜೀವನ ಸಂಬಂಧವು ಕಡೆದು ಹೋಗುತ್ತದೆ.
ಅದೃಶ್ಯಮಾನಸ್ತೈರ್ದೀನೈರಶ್ರುಪೂರ್ಣಮುಖೇಕ್ಷಣೈಃ |
ಸ್ವಶರೀರಂ ಪರಿತ್ಯಜ್ಯ ವಾಯುಭೂತಸ್ತು ಗಚ್ಛತಿ ॥25॥
ದೀನವಾದ, ಕಣ್ಣೀರಿನಿಂದ ತುಂಬಿದ ಮುಖಗಳಿಂದ, ಕಣ್ಣುಗಳಿಂದ ಕೂಡಿದ ಬಂಧುಗಳಿಗೆ ಕಾಣಿಸದಂತೆ ಪಂಚಭೂತಾತ್ಮಕವಾದ ಶರೀರವನ್ನು ತ್ಯಜಿಸಿ ವಾಯು ಶರೀರದಿಂದ ಯಮಲೋಕಕ್ಕೆ ಪ್ರಯಾಣ ಮಾಡುತ್ತಾನೆ.
ಅಂಧಕಾರಮಪಾರಂ ತಂ ಮಹಾಘೋರಂ ತಮೋವೃತಮ್ |

ದುಃಖಾಂತಂ ದುಷ್ಪ್ರತಾರಂ ಚ ದುಷ್ಪ್ರಕಾರಂ ಚ ದುರ್ಗಮಮ್ ॥26॥
ಆ ಯಮಪುರಿಯು ಪಾಪಿಷ್ಠ ಜೀವರಿಗೆ ಅಂಧಕಾರಮಯವಾಗಿರುತ್ತದೆ. ಎಷ್ಟು ನಡೆದರೂ ಮುಗಿಯುವುದೇ ಇಲ್ಲ. ಅಪಾರವೂ, ಮಹಾಘೋರವೂ, ಭಯಂಕರವೂ, ದುಸ್ತರವೂ, ದುರ್ಗಮವೂ ಆಗಿರುತ್ತದೆ.
ದುಃಸಹಂ ಯದ್ ದುರಂತಂ ಚ ದುರ್ನಿರೀಕ್ಷಂ ದುರಾಸದಮ್ |
ದುರಾಪಮತಿದುರ್ಗಂ ಚ ಪಾಪಿಷ್ಠಾನಾಂ ನರೋತ್ತಮ ॥27॥
ಸಹಿಸಲು ಅಸಾಧ್ಯವಾದ, ದುರಂತವಾದ, ನೋಡಲು ಅಸಹ್ಯವಾದ, ಹೊಂದಲು ಅಶಕ್ಯವಾದ, ಅತ್ಯಂತ ಕಠಿಣವಾದ ಮಾರ್ಗಗಳಲ್ಲಿ ಪಾಪಿಷ್ಠರು ಸಂಚರಿಸುತ್ತಾರೆ.
ಋಷಿಭಿಃ ಕಥ್ಯಮಾನಂ ತತ್ ಪಾರಂಪರ್ಯೇಣ ಪಾರ್ಥಿವ |
ತ್ರಾಸಂ ಜನಯತಿ ಪ್ರಾಯಃ ಶ್ರೂಯಮಾಣಃ ಕಥಾಸ್ವಪಿ ॥28॥
ಈ ನರಕದ ವರ್ಣನೆಯನ್ನು ಋಷಿಗಳು ತಿಳಿಸುವಾಗ ಯುಧಿಷ್ಠಿರನೇ, ಕಥೆಯನ್ನು ಕೇಳುತ್ತಿರುವ ವ್ಯಕ್ತಿಗಳಿಗೂ ತಡೆಯಲಾರದ ದುಃಖವು ಉಂಟಾಗುತ್ತದೆ.
ಅವಶ್ಯಂ ಚೈವ ಗಂತವ್ಯಸ್ತದಧ್ವಾ ತು ಯುಧಿಷ್ಠಿರ |
ಪ್ರಾಪ್ತಕಾಲೇನ ಸಂತ್ಯಜ್ಯ ಬಂಧೂನ್ ಭೋಗಾನ್ ಧನಾನಿ ಚ ॥29॥
ಯುಧಿಷ್ಠಿರನೇ, ಕಾಲವು ಸನ್ನಿಹಿತವಾದಾಗ ಬಂಧುಗಳನ್ನೂ, ಭೋಗಗಳನ್ನೂ, ಧನಗಳನ್ನೂ, ಎಲ್ಲವನ್ನೂ ನಿಶ್ಚಿತವಾಗಿ ತ್ಯಜಿಸಿ ಯಮಪುರಿಗೆ ಹೋಗಲೇಬೇಕಾಗಿರುತ್ತದೆ.
ಜರಾಯುಜೈರಂಡಜೈಶ್ಚ ಸ್ವೇದಜೈರುದ್ಭಿಜ್ಜೈಸ್ತಥಾ |
ಜಂಗಮೈಃ ಸ್ಥಿರಸಂಜ್ಞೈಶ್ಚ ಗಂತವ್ಯಂ ಹಿ ಯಮಾಲಯಮ್ ॥30॥
ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ, ಜಂಗಮ, ಸ್ಥಾವರ ಎಲ್ಲ ಪ್ರಾಣಿಗಳೂ ಈ ಯಮಪುರಿಗೆ ಹೋಗಲೇಬೇಕು.
ದೇವಾಸುರೈರ್ಮನುಷ್ಯಾದ್ಯೈರ್ವೈವಸ್ವತವಶಾನುಗೈಃ |
ಸ್ತ್ರೀಪುಂನಪುಂಸಕೈಶ್ಚಾಪಿ ಪೃಥಿವ್ಯಾಂ ಜೀವಸಂಜ್ಞಿತೈಃ ॥31॥
ಮಧ್ಯಮೈರ್ಯುವಭಿಶ್ಚಾಪಿ ಬಾಲೈರ್ವೃದ್ಧೈಸ್ತಥೈವ ಚ |
ಜಾತಮಾತ್ರೈಶ್ಚ ಗರ್ಭಸ್ಥೈರ್ಗಂತವ್ಯಃ ಸ ಮಹಾಪಥಃ ॥32॥
ಜೀವ ಎಂದು ಹೆಸರನ್ನು ಪಡೆದ ದೇವತೆಗಳೇ ಆಗಲಿ, ಅಸುರರೇ ಆಗಲಿ, ಮನುಷ್ಯರೇ ಆಗಲಿ, ಸ್ತ್ರೀ-ಪುರುಷ-ನಪುಂಸಕರೇ ಆಗಲಿ, ವೃದ್ಧರೇ ಆಗಲಿ, ತರುಣರೇ ಆಗಲಿ, ಹುಟ್ಟಿದ ಶಿಶುವೇ ಆಗಲಿ, ಗರ್ಭಸ್ಥ ಶಿಶುವೇ ಆಗಲಿ, ಜೀವಸಂಜ್ಞೆ ಹೊಂದಿರುವ ಎಲ್ಲರೂ ಈ ಯಮಪುರಿಗೆ ಒಂದು ದಿನ ಪ್ರಯಾಣ ಬೆಳೆಸಲೇಬೇಕು.
ಪೂರ್ವಾಹ್ಣೇ ವಾಽಪರಾಹ್ಣೇ ವಾ ಸಂಧ್ಯಾಕಾಲೇಽಥವಾ ಪುನಃ |
ಪ್ರದೋಷೇ ವಾಽರ್ಧರಾತ್ರೇ ವಾ ಪ್ರತ್ಯೂಷೇ ವಾಽಪ್ಯುಪಸ್ಥಿತೇ ॥33॥
ಪೂರ್ವಾಹ್ಣದಲ್ಲಿ, ಅಪರಾಹ್ಣದಲ್ಲಿ, ಸಂಧ್ಯಾಕಾಲಗಳಲ್ಲಿ, ಪ್ರದೋಷಕಾಲಗಳಲ್ಲಿ, ಅರ್ಧರಾತ್ರಿಯಲ್ಲಿ, ಮುಂಜಾನೆಯಲ್ಲಿ, ಸಮಸ್ತ ಸಮಯದಲ್ಲಿಯೂ ಯಮಪುರಿಗೆ ಹೋಗುವವರು ಇದ್ದೇ ಇರುತ್ತಾರೆ.
ಪ್ರವಾಸಸ್ಥೈರ್ವನಸ್ಥೈರ್ವಾ ಪರ್ವತಸ್ಥೈರ್ಜಲಸ್ಥಿತೈಃ |
ಕ್ಷೇತ್ರಸ್ಥೈರ್ವಾ ನಭಃಸ್ಥೈರ್ವಾ ಗೃಹಮಧ್ಯಗತೈರಪಿ ॥34॥
ಭುಂಜದ್ಭಿರ್ವಾ ಪಿಬದ್ಭಿರ್ವಾ ಖಾದದ್ಭಿರ್ವಾ ನರೋತ್ತಮ |
ಆಸೀನೈರ್ವಾ ಸ್ಥಿತೈರ್ವಾಽಪಿ ಶಯನೀಯಗತೈರಪಿ ॥35॥
ಜಾಗ್ರದ್ಭಿರ್ವಾ ಪ್ರಸುಪ್ತೈರ್ವಾ ಗಂತವ್ಯಃ ಸ ಮಹಾಪಥಃ ॥36॥
ಪ್ರಯಾಣ ಬೆಳೆಸುವವರು, ಕಾಡಿನಲ್ಲಿರುವವರು, ಪರ್ವತದಲ್ಲಿರುವವರು, ನೀರಿನ ಮಧ್ಯದಲ್ಲಿರುವವರು, ಕ್ಷೇತ್ರದಲ್ಲಿರುವವರು, ಅಂತರಿಕ್ಷದಲ್ಲಿರುವವರು, ಗೃಹದ ಮಧ್ಯದಲ್ಲಿರುವವರು, ಊಟಮಾಡುವವರು, ನೀರು ಕುಡಿಯುವವರು, ಭಕ್ಷ್ಯಗಳನ್ನು ತಿನ್ನುವವರು, ಕುಳಿತವರು, ನಿಂತವರು, ಮಲಗಿದವರು, ಎಚ್ಚರದಲ್ಲಿರುವವರು, ಗಾಢವಾಗಿ ನಿದ್ರಿಸುತ್ತಿರುವವರು ಎಲ್ಲರೂ ಆಯಾ ಕಾಲಗಳಲ್ಲಿ ಆಯಾ ಅವಸ್ಥೆಗಳಲ್ಲಿಯೇ ಈ ದೇಹವನ್ನು ತ್ಯಜಿಸಿ ಯಮಮಾರ್ಗದಲ್ಲಿ ಸಾಗುತ್ತಾರೆ.
ಮೃತ್ಯುದೂತೈರ್ದುರಾಧರ್ಷೈಃ ಪ್ರಚಂಡೈಶ್ಚಂಡವಿಕ್ರಮೈಃ |
ಆಕ್ಷಿಪ್ಯಮಾಣಾ ವಿವಶಂ ಯಾಂತಿ ಶೀಘ್ರಂ ಯಮಾಲಯಮ್ ॥37॥
ಸಹಿಸಲು ಅಸಾಧ್ಯವಾದ, ಪ್ರಚಂಡರಾದ ಚಂಡವಿಕ್ರಮರೆನಿಸಿದ ಮೃತ್ಯುದೂತರಿಂದ ಬಂಧಿತರಾದ ಜೀವರು ಅಸ್ವತಂತ್ರರಾಗಿ ಯಮಪುರಿಯನ್ನು ಕುರಿತು ಸಾಗುತ್ತಾರೆ.
ಕ್ವಚಿದ್ ಭೀತೈಃ ಕ್ವಚಿತ್ ತ್ರಸ್ತೈಃ ಪ್ರಸ್ಖಲದ್ಭಿಃ ಕ್ವಚಿತ್ ಕ್ವಚಿತ್ |
ಕ್ರಂದದ್ಭಿರ್ವೇದನಾರ್ತೈಸ್ತು ಗಂತವ್ಯಂ ಯಮಸಾದನಮ್ ॥38॥
ಕೆಲವರು ಹೆದರಿ ನಡುಗುತ್ತಿರುತ್ತಾರೆ. ಕೆಲವರು ಹೆದರಿಕೆಯಿಂದ ಎಡವಿ ಬೀಳುತ್ತಿರುತ್ತಾರೆ. ಕೆಲವರು ಕಿರುಚಿಕೊಳ್ಳುತ್ತಿರುತ್ತಾರೆ. ವೇದನೆಯಿಂದ ನಾನಾ ಅವಸ್ಥೆಗಳನ್ನು ಹೊಂದುತ್ತಾ ಇದ್ದರೂ ಈ ಯಮಪುರಿಗೆ ಸಾಗಲೇಬೇಕಾಗುತ್ತದೆ.
ನಿರ್ಭರ್ತ್ಸ್ಯಮಾನೈರುದ್ವಿಗ್ನೈರ್ವಿಧೃತೈರ್ಭಯವಿಹ್ವಲೈಃ |
ಕಲ್ಪ್ಯಮಾನಶರೀರೈಸ್ತು ಗಂತವ್ಯಂ ಸ್ತ್ರೀಜಿತೈಃ ಸದಾ ॥39॥
ಯಮಕಿಂಕರರಿಂದ ಹೆದರಿಸಲ್ಪಟ್ಟವರಾಗಿ, ಉದ್ವಿಗ್ನತೆಯನ್ನು ಹೊಂದಿದವರಾಗಿ, ಹೊಡೆಯಲ್ಪಟ್ಟವರಾಗಿ, ಭಯದಿಂದ ಸಂಕಟ ಹೊಂದಿದವರಾಗಿ, ಅನೇಕ ಶರೀರ ಬಂಧನಗಳನ್ನು ಹೊಂದಿದವರಾಗಿ ಯಮಪುರಿಗೆ ಹೋಗಲೇಬೇಕಾಗುತ್ತದೆ. ಸ್ತ್ರೀಜಿತರು ಇಂದಿಗೂ

ಈ ನರಕಕ್ಕೆ ನಿಶ್ಚಿತವಾಗಿಯೂ ತೆರಳುತ್ತಾರೆ.
ಕಂಟಕಾಕೀರ್ಣಮಾರ್ಗೇಣ ತಪ್ತವಾಲುಕಪಾಂಸುನಾ |
ದಹ್ಯಮಾನೈಸ್ತು ಗಂತವ್ಯೋ ನರೈರ್ದಾನವಿವರ್ಜಿತೈಃ ॥40॥
ಮುಳ್ಳುಗಳಿಂದ ತುಂಬಿದ ಮಾರ್ಗದಲ್ಲಿ, ಬಿಸಿಯಾದ ಮರಳುಗಳಿಂದ ತುಂಬಿದ ಮಾರ್ಗದಲ್ಲಿ, ಬಿಸಿಯಿಂದ ದಹಿಸಿಕೊಳ್ಳುತ್ತಾ ದಾನ-ಧರ್ಮಗಳನ್ನು ಮಾಡದೆ ಇರುವ ವ್ಯಕ್ತಿಗಳು ಸಾಗಲೇಬೇಕಾಗುತ್ತದೆ.
ಕಾಷ್ಠೋಪಲಶಿಲಾಘಾತೈರ್ದಂಡೋಲ್ಮುಕಕಶಾಂಕುಶೈಃ |
ಹನ್ಯಮಾನೈರ್ಯಮಪುರಂ ಗಂತವ್ಯಂ ಧರ್ಮವರ್ಜಿತೈಃ ॥41॥
ಧರ್ಮಹೀನರಾದ ಜೀವರು ಕಟ್ಟಿಗೆ, ಕಲ್ಲು, ದಂಡ, ಚಾವಟಿ, ಅಂಕುಶ ಮುಂತಾದವುಗಳಿಂದ ಯಮಕಿಂಕರರಿಂದ ಪೆಟ್ಟುತಿನ್ನುತ್ತಾ ಯಮನ ಪಟ್ಟಣಕ್ಕೆ ಪ್ರಯಾಣ ಬೆಳೆಸುತ್ತಾರೆ.
ಮೇದಃ ಶೋಣಿತಪೂಯಾದ್ಯೈರ್ವಕ್ತ್ರೈರ್ಗಾತ್ರೈಶ್ಚ ಸವ್ರಣೈಃ |
ದಗ್ಧಕ್ಷತವ್ರಣಾಕೀರ್ಣೈರ್ಗಂತವ್ಯಂ ಜೀವಘಾತಕೈಃ ॥42॥
ಜೀವಹತ್ಯೆ ಮಾಡಿದವರು ಮೇಧಸ್ಸು, ರಕ್ತ, ಮಲ ಇವುಗಳಿಂದ ತುಂಬಿದ ಮುಖವುಳ್ಳವರಾಗಿ, ಮೈತುಂಬ ಗಾಯಗಳಿಂದ ಕೂಡಿದವರಾಗಿ, ಸುಡಲ್ಪಟ್ಟ ದೇಹವುಳ್ಳವರಾಗಿ, ತುಂಡರಿಸಲ್ಪಟ್ಟ ಅವಯವವುಳ್ಳವರಾಗಿ ಮಾರಣಾಂತಿಕವಾದ ಗಾಯಗಳಿಂದ ಶಿಕ್ಷೆಯನ್ನು ಅನುಭವಿಸುತ್ತಾ ಯಮಪುರಿಗೆ ಸಾಗಲೇಬೇಕಾಗುತ್ತದೆ.
ಕ್ರಂದದ್ಭಿಶ್ಚ ರುದದ್ಭಿಶ್ಚ ಕ್ರೋಶದ್ಭಿಶ್ಚಾಪಿ ವಿಸ್ವರಮ್ |
ವೇದನಾರ್ತೈಃ ಪತದ್ಭಿಶ್ಚ ಗಂತವ್ಯಂ ಜೀವಘಾತಕೈಃ ॥43॥
ಜೀವಘಾತಕರು ಯಮಪುರಿಗೆ ಸಾಗುವಾಗ ಯಮಕಿಂಕರರ ಅಂಕುಶದ ಪ್ರಹಾರದಿಂದ ಕೆಲವರು ಕಿರುಚಿಕೊಳ್ಳುತ್ತಾರೆ, ವಿಕಾರದ ಧ್ವನಿಯಿಂದ ಅಳುತ್ತಾರೆ, ಜೋರಾಗಿ ಒದರುತ್ತಾರೆ. ವೇದನೆಯಿಂದ ಆರ್ತರಾಗಿ ಬೀಳುತ್ತಾ, ಏಳುತ್ತಾ ಯಮಲೋಕದ ಮಾರ್ಗದಲ್ಲಿ ಸಾಗಲೇಬೇಕಾಗುತ್ತದೆ.
ಭಗ್ನಪಾದೋರುಹಸ್ತಾಂಗೈರ್ಭಗ್ನದಂತಶಿರೋಧರೈಃ |
ಛಿನ್ನಕರ್ಣೋಷ್ಠನಾಸೈಶ್ಚ ಗಂತವ್ಯಂ ಜೀವಘಾತಕೈಃ ॥44॥
ಜೀವಘಾತಕರು ತುಂಡಾದ ಕೈ-ಕಾಲುಗಳಿಂದ, ತುಂಡಾದ ಹಲ್ಲು-ಕುತ್ತಿಗೆಗಳಿಂದ, ತುಂಡಾದ ಕಿವಿ- ತುಟಿ-ಮೂಗುಗಳಿಂದ ನರಕಲೋಕಕ್ಕೆ ಪ್ರಯಾಣ ಬೆಳೆಸುತ್ತಾರೆ.
ಶಕ್ತಿಭಿರ್ಭಿಂಡಿಪಾಲೈಶ್ಚ ಶಂಕುತೋಮರಸಾಯಕೈಃ |
ತುದ್ಯಮಾನೈಸ್ತು ಶೂಲಗ್ರೈರ್ಗಂತವ್ಯಂ ಜೀವಘಾತಕೈಃ ॥45॥
ಜೀವಘಾತಕರು ಹೋಗುತ್ತಿರುವಾಗ ಶಕ್ತಿ-ಭಿಂಡಿಪಾಲ-ಶಂಕು-ತೋಮರ- ಬಾಣ-ತ್ರಿಶೂಲಾಗ್ರ ಇವುಗಳಿಂದ ಪ್ರಹಾರವನ್ನು ತಿನ್ನುತ್ತಾ ಯಮಲೋಕಕ್ಕೆ ಸಾಗಬೇಕಾಗುತ್ತದೆ.
ಶ್ವಭಿರ್ವ್ಯಾಘ್ರೈರ್ವೃಕೈಃ ಕಂಕೈರ್ಭಕ್ಷ್ಯಮಾಣಾಃ ಸಮಂತತಃ |
ತುದ್ಯಮಾನಾಶ್ಚ ಗಚ್ಛಂತಿ ರಾಕ್ಷಸೈರ್ಮಾಂಸಖಾದಿಭಿಃ ॥46॥
ಇಷ್ಟು ಮಾತ್ರವಲ್ಲದೆ, ನಾಯಿಗಳು, ಹುಲಿಗಳು, ತೋಳಗಳು, ಕಾಗೆಗಳು ಎಲ್ಲ ಕಡೆಯಿಂದಲೂ ಆಗಮಿಸಿ ಸಾಗುವ ವ್ಯಕ್ತಿಯನ್ನು ಚುಚ್ಚಿ ತಿನ್ನುತ್ತಿರುತ್ತವೆ. ಮಾಂಸವನ್ನು ಕತ್ತರಿಸುವ ರಾಕ್ಷಸರು ಯಮಪುರಿಯ ಮಾರ್ಗದಲ್ಲಿ ಪೀಡಿಸುತ್ತಾರೆ.
ಮಹಿಷೈಶ್ಚ ಮೃಗೈಶ್ಚಾಪಿ ಸೂಕರೈರ್ಜಂಬುಕೈಸ್ತಥಾ |
ಭಕ್ಷ್ಯಮಾಣೈಸ್ತದಧ್ವಾನಂ ಗಂತವ್ಯಂ ಮಾಂಸಖಾದಿಭಿಃ ॥47॥
ಮಾಂಸಗಳನ್ನು ತಿನ್ನುತ್ತಿದ್ದ ಜೀವನನ್ನು ಯಮಮಾರ್ಗದಲ್ಲಿ ಎಮ್ಮೆಗಳು, ಮೃಗಗಳು, ಹಂದಿಗಳು, ನರಿಗಳು ಕಿತ್ತು ತಿನ್ನುತ್ತಿರುತ್ತವೆ. ಇಂತಹ ಯಮಮಾರ್ಗದಲ್ಲಿ ದಾರುಣವಾದ ವೇದನೆಯನ್ನು ಅನುಭವಿಸುತ್ತಾ ಸಾಗಬೇಕಾಗುತ್ತದೆ.
ಸೂಚೀಸುತೀಕ್ಷ ್ಣತುಂಡಾಭಿರ್ಮಕ್ಷಿಕಾಭಿಃ ಸಮಂತತಃ |
ತುದ್ಯಮಾನೈಶ್ಚ ಗಂತವ್ಯಂ ಪಾಪಿಷ್ಠೈರ್ಬಾಲಘಾತಕೈಃ ॥48॥
ಬಾಲಕರನ್ನು ಕೊಲೆ ಮಾಡಿದ ಪಾಪಿಷ್ಠರನ್ನು ಸೂಜಿಯಂತೆ ತೀಕ್ಷ್ಣವಾದ ಮುಖಾಗ್ರಗಳನ್ನು ಹೊಂದಿರುವ ನೊಣಗಳು ಎಲ್ಲ ಕಡೆಯಿಂದಲೂ ಮುತ್ತಿಕೊಂಡು ಪೀಡಿಸುತ್ತವೆ. ಅವುಗಳ ಪೀಡೆಯನ್ನು ಸಹಿಸಿಕೊಂಡು ಜೀವಿಯು ಸಾಗಬೇಕಾಗುತ್ತದೆ.
ವಿಶ್ವಸ್ತಂ ಸ್ವಾಮಿನಂ ವಿಪ್ರಂ ಸ್ತ್ರಿಯಂ ವಾ ಘ್ನಂತಿ ಯೇ ನರಾಃ |
ಶಸ್ತ್ರೈರ್ನಿರ್ಭಿದ್ಯಮಾನೈಸ್ತು ಗಂತವ್ಯಂ ತೈರ್ಯಮಕ್ಷಯಮ್ ॥49॥
ಬ್ರಾಹ್ಮಣನನ್ನು, ವಿಶ್ವಾಸವನ್ನಿಟ್ಟುಕೊಂಡಿರುವ ಸ್ವಾಮಿಯನ್ನು, (ಮಿತ್ರನನ್ನು), ಸ್ತ್ರೀಯನ್ನು ಯಾರು ಕೊಲೆ ಮಾಡಿರುತ್ತಾರೋ ಅಂತಹ ವ್ಯಕ್ತಿಗಳು ಯಮಕಿಂಕರರ ಶಸ್ತ್ರಗಳಿಂದ ಸೀಳಿಸಿಕೊಳ್ಳುತ್ತಾ ಯಮಲೋಕಕ್ಕೆ ಸಾಗಬೇಕಾಗುತ್ತದೆ.
ಘಾತಯಂತಿ ಚ ಯೇ ಜೀವಾನ್ ದುಃಖಮಾಪಾದಯಂತಿ ಚ |
ರಾಕ್ಷಸೈಶ್ಚ ಪಿಶಾಚೈಶ್ಚ ಭಕ್ಷ್ಯಮಾಣಾ ವ್ರಜಂತಿ ತೇ ॥50॥
ಯಾರು ಇತರ ಪ್ರಾಣಿಗಳನ್ನು ಮಾಂಸದಾಸೆಯಿಂದ ಕೊಲ್ಲುತ್ತಾರೋ, ಅವುಗಳಿಗೆ ದುಃಖವನ್ನುಂಟು ಮಾಡುತ್ತಾರೋ ಅವರನ್ನು ರಾಕ್ಷಸರು, ಪಿಶಾಚರು ಯಮ ಮಾರ್ಗದಲ್ಲಿ ಕಿತ್ತು ಕಿತ್ತು ತಿನ್ನುತ್ತಾರೆ. ಅವರಿಂದ ತಿನ್ನಿಸಿಕೊಂಡೇ ಮುಂದೆ ಸಾಗಬೇಕು.
ಯೇ ಹರಂತೀಹ ವಸಾತ್ರಣಿ ಶಯ್ಯಾಂ ಪ್ರಾವರಣಾನಿ ಚ |
ತೇ ಯಾಂತಿ ವಿದ್ರುತಾ ನಗ್ನಾಃ ಪಿಶಾಚಾ ಇವ ತತ್ಪಥಮ್ ॥51॥
ಯಾರು ಮತ್ತೊಬ್ಬರ ಬಟ್ಟೆಗಳನ್ನೂ, ಹಾಸಿಗೆ ಹೊದ್ದಿಗೆಗಳನ್ನು ಅಪಹರಿಸಿರುತ್ತಾರೋ ಅವರು ಪಿಶಾಚಿಗಳಂತೆ ನಗ್ನರಾಗಿ

ಯಮಲೋಕದ ಕಡೆ ಓಡಿಹೋಗುತ್ತಾರೆ.
ಗಾಶ್ಚ ಧಾನ್ಯಂ ಹಿರಣ್ಯಂ ವಾ ಬಲಾತ್ ಕ್ಷೇತ್ರಂ ಗೃಹಂ ತಥಾ |
ಯೇ ಹರಂತಿ ದುರಾತ್ಮಾನಃ ಪರಸ್ವಂ ಪಾಪಕಾರಿಣಃ ॥52॥
ಪಾಷಾಣೈರುಲ್ಮುಕೈರ್ದಂಡೈಃ ಕಾಷ್ಠಘಾತೈಶ್ಚ ಜರ್ಝರೈಃ |
ಹನ್ಯಮಾನೈಃ ಕ್ಷತಾಕೀರ್ಣೈರ್ಗಂತವ್ಯಂ ತೈರ್ಯಮಾಲಯಮ್ ॥53॥
ಯಾರು ಗೋವುಗಳು, ಧಾನ್ಯ, ಸುವರ್ಣ, ಕ್ಷೇತ್ರ, ಗೃಹ ಇವೇ ಮೊದಲಾದ ಬೇರೆಯವರ ಸಂಪತ್ತನ್ನು ಬಲಾತ್ಕಾರದಿಂದ ಅಪಹರಿಸಿರುತ್ತಾರೋ ಅಂತಹ ಪಾಪಿಷ್ಠರು ಯಮಕಿಂಕರರಿಂದ ಕಲ್ಲು-ಪಂಜು-ದಂಡ-ಕಟ್ಟಿಗೆ ಇವುಗಳಿಂದ ಹೊಡೆಯಲ್ಪಟ್ಟು ಗಾಯಗೊಂಡ ಶರೀರವುಳ್ಳವರಾಗಿ ಯಮಾಲಯಕ್ಕೆ ಸಾಗುತ್ತಾರೆ.
ಬ್ರಹ್ಮಸ್ವಂ ಯೇ ಹರಂತೀಹ ನರಾ ನರಕಪಾತಿನಃ |
ಆಕ್ರೋಶಂತೀಹ ಯೇ ನಿತ್ಯಂ ಪ್ರಹರಂತಿ ಚ ಯೇ ದ್ವಿಜಾನ್ ॥54॥
ಶುಷ್ಕಕಂಠಾ ನಿಬದ್ಧಾಸ್ತೇ ಛಿನ್ನಜಿಹ್ವಾಕ್ಷಿನಾಸಿಕಾಃ |
ಪೂಯಶೋಣಿತದುರ್ಗಂಧಾ ಭಕ್ಷ್ಯಮಾಣಾಶ್ಚ ಜಂಬುಕೈಃ ॥55॥
ಯಾರು ಬ್ರಾಹ್ಮಣರ ಸ್ವತ್ತನ್ನು ನರಕದ ಭಯವನ್ನು ಬಿಟ್ಟು ಅಪಹರಿಸಿರುತ್ತಾರೋ, ಬ್ರಾಹ್ಮಣರನ್ನು ನಿಂದಿಸಿರುತ್ತಾರೋ, ಹೊಡೆದಿರುತ್ತಾರೋ ಅಂತಹವರು ಯಮಲೋಕಕ್ಕೆ ಸಾಗುವಾಗ ಒಣಗಿದ ಕಂಠವುಳ್ಳವರಾಗಿ ಯಮಕಿಂಕರರಿಂದ ಬಂಧಿತರಾಗಿ, ನಾಲಿಗೆ- ಕಣ್ಣು-ಮೂಗುಗಳನ್ನು ತುಂಡರಿಸಿಕೊಂಡು ಸಾಗುತ್ತಾರೆ. ಅವರ ಶರೀರದಿಂದ ರಕ್ತ- ಕೀವು-ದುರ್ಗಂಧಗಳು ಹೊರಹೊಮ್ಮುತ್ತಿರುತ್ತವೆ. ಗುಳ್ಳೆನರಿಗಳು ಅವರನ್ನು ಕಿತ್ತು ತಿನ್ನುತ್ತಿರುತ್ತವೆ.
ಚಂಡಾಲೈರ್ನಿರ್ಘೃಣೈಶ್ಚಂಡೈಸ್ತುದ್ಯಮಾನಾಃ ಸಮಂತತಃ |
ಕ್ರೋಶಂತಃ ಕರುಣಂ ಘೋರಂ ಗಚ್ಛಂತಿ ಯಮಸಾದನಮ್ ॥56॥
ಕೋಪಿಷ್ಟರಾದ, ಭಯಂಕರರಾದ ಚಂಡಾಲರು ಎಲ್ಲ ಕಡೆಯಿಂದಲೂ ಅವರನ್ನು ಹಿಂಸಿಸುತ್ತಾರೆ. ಇದರಿಂದ ಕರುಣಾಜನಕವಾದ ಧ್ವನಿಯಲ್ಲಿ ಕಿರುಚುತ್ತಾ ಯಮಲೋಕಕ್ಕೆ ಸಾಗುತ್ತಾರೆ.
ತತ್ರೈವ ಪತಿತಾಃ ಪಾಪಾ ವಿಷ್ಠಾಕೂಪೇಷ್ವನೇಕಶಃ |
ಮಜ್ಜಂತೇ ವರ್ಷಕೋಟೀಸ್ತು ಕ್ಲಿಶ್ಯಂತೋ ವೇದನಾರ್ದಿತಾಃ ॥57॥
ಯಮಲೋಕದ ಪ್ರವೇಶದ ಬಳಿಕ ಆ ಪಾಪಿಷ್ಠರನ್ನು ಅನೇಕ ಮಲಗಳು ತುಂಬಿದ ಬಾವಿಗಳಿಗೆ ತಳ್ಳುತ್ತಾರೆ. ಅಲ್ಲಿ ಅವರು ನಾನಾ ವಿಧವಾದ ವೇದನೆಗಳನ್ನು ಕೋಟಿ ಕೋಟಿ ವರ್ಷಗಳ ತನಕ ಹೊಂದುತ್ತಾ ಜೀವಿಸಬೇಕಾಗುತ್ತದೆ.
ತತಶ್ಚ ಮುಕ್ತಾಃ ಕಾಲೇನ ಲೋಕೇ ಚಾಸ್ಮಿನ್ ನರಾಧಮಾಃ |
ವಿಷ್ಠಾಕ್ರಿಮಿತ್ವಂ ಗಚ್ಛಂತಿ ಜನ್ಮಕೋಟಿಶತಂ ನೃಪ ॥58॥
ಅನೇಕ ಕೋಟಿ ವರ್ಷಗಳ ಬಳಿಕ ನರಕದಿಂದ ಮುಕ್ತರಾದ ಪಾಪಿಷ್ಠರು ಲೋಕದಲ್ಲಿ ಮಲದಲ್ಲಿಯೇ ಕ್ರಿಮಿಯಾಗಿ ಹುಟ್ಟಿ, ನೂರು ಕೋಟಿ ವರ್ಷಗಳನ್ನು ಅದೇ ಅವಸ್ಥೆಯಲ್ಲಿಯೇ ಕಳೆಯಬೇಕಾಗುತ್ತದೆ.
ವಿದ್ಯಮಾನಧನೈರ್ಯೈಸ್ತು ಲೋಭಡಂಭಾನೃತಾನ್ವಿತೈಃ |
ಶ್ರೋತ್ರಿಯೇಭ್ಯೋ ನ ದತ್ತಾನಿ ದಾನಾನಿ ಬಹುಧಾ ನೃಪ ॥59॥
ಗ್ರೀವಾಪಾಶನಿಬದ್ಧಾಸ್ತೇ ಹನ್ಯಮಾನಾಶ್ಚ ರಾಕ್ಷಸೈಃ |
ಕ್ಷುತ್ಪಿಪಾಸಾಶ್ರಮಾರ್ತಾಸ್ತು ಯಾಂತಿ ಪ್ರೇತಪುರಂ ನರಾಃ ॥60॥
ಯಾರು ಈ ಜನ್ಮದಲ್ಲಿ ದಾನ ಮಾಡುವ ಅರ್ಹತೆಯಿದ್ದರೂ ದಾನ ಮಾಡುವುದಿಲ್ಲವೋ, ಲೋಭ, ಡಂಭ, ಸುಳ್ಳುಗಳಿಂದ ಶ್ರೋತ್ರಿಯರನ್ನು ವಂಚಿಸಿ ದಾನಗಳನ್ನು ನೀಡದೆ ಪಾಪಿಗಳಾಗಿ ಬದುಕುತ್ತಾರೋ ಅವರು ಕುತ್ತಿಗೆಯಲ್ಲಿ ಯಮಪಾಶಗಳಿಂದ ಕಟ್ಟಲ್ಪಟ್ಟವರಾಗಿ, ರಾಕ್ಷಸರಿಂದ ಕೊಲ್ಲಲ್ಪಟ್ಟವರಾಗಿ, ಹಸಿವು- ನೀರಡಿಕೆಯಿಂದ ಪೀಡಿತರಾಗಿ ಪ್ರೇತಪುರಿಗೆ ಸಾಗುತ್ತಾರೆ.
ಅದತ್ತದಾನಾ ಗಚ್ಛಂತಿ ಶುಷ್ಕಕಂಠಾಸ್ಯತಾಲುಕಾಃ |
ಅನ್ನಂ ಪಾನೀಯಸಹಿತಂ ಪ್ರಾರ್ಥಯಂತಃ ಪುನಃ ಪುನಃ ॥61॥
ದಾನ ಮಾಡದ ವ್ಯಕ್ತಿಗಳು ಯಮಲೋಕಕ್ಕೆ ಸಾಗುವಾಗ ಒಣಗಿದ ಕಂಠ, ಮುಖ, ದವಡೆಗಳುಳ್ಳವರಾಗಿ ತಮ್ಮ ಜೊತೆಗಿರುವ ಯಮಭಟರ ಬಳಿ ಪಾನೀಯವನ್ನೂ, ಅನ್ನವನ್ನೂ ಹೆಜ್ಜೆ ಹೆಜ್ಜೆಗೂ ಪ್ರಾರ್ಥಿಸುತ್ತಾರೆ.
ಸ್ವಾಮಿನ್ ಬುಭುಕ್ಷಾತೃಷ್ಣಾರ್ತಾ ಗಂತುಂ ನೈವಾದ್ಯ ಶಕ್ನುಮಃ |
ಮಮಾನ್ನಂ ದೀಯತಾಂ ಸ್ವಾದು ಪಾನೀಯಂ ದೀಯತಾಮಿತಿ ॥62॥
ಇತಿ ಬ್ರುವಾಣಾಂಸ್ತಾನ್ ದೂತಾಃ ಪ್ರಾಪಯಂತಿ ಯಮಾಲಯಮ್ ॥
ಪ್ರಭುಗಳೇ, ಹಸಿವೆ-ಬಾಯಾರಿಕೆಗಳಿಂದ ಪೀಡಿತರಾಗಿದ್ದೇವೆ. ಮುಂದೆ ಸಾಗಲು ನಮಗೆ ಶಕ್ತಿಯಿಲ್ಲ. ನಮಗೆ ಅನ್ನವನ್ನು ಕೊಡಿರಿ, ನೀರನ್ನು ಕೊಡಿರಿ - ಹೀಗೆ ಬೇಡುತ್ತಾ ದಾನ ಮಾಡದ ದುಃಖದಿಂದ ಯಮಾಲಯವನ್ನು ಸೇರುತ್ತಾರೆ. ಹೀಗೆ ದೈನ್ಯದಿಂದಲೇ ಬೇಡುತ್ತಿರುವವರನ್ನು ಯಮಕಿಂಕರರು ನರಕಲೋಕಕ್ಕೆ ಸೇರಿಸುತ್ತಾರೆ.
ವೈಶಂಪಾಯನಃ
ತಚ್ಛ್ರುತ್ವಾ ವಚನಂ ವಿಷ್ಣೋಃ ಪಪಾತ ಭುವಿ ಪಾಂಡವಃ |
ನಿಃಸಂಜ್ಞೋ ಭಯಸಂತ್ರಸ್ತೋ ನಿಶ್ಚೇಷ್ಟೋ ಭಯವಿಹ್ವಲಃ ॥64॥
ವೈಶಂಪಾಯನ ಕೃಷ್ಣನ ಈ ಮಾತುಗಳನ್ನು ಕೇಳುತ್ತಿರುವಾಗಲೇ ಧರ್ಮರಾಜನು ಭೂಮಿಯಲ್ಲಿ ಮೂರ್ಛಿತನಾಗಿ ಬಿದ್ದನು. ಪ್ರಜ್ಞಾಶೂನ್ಯನಾದ, ಭಯಗ್ರಸ್ತನಾದ ಯುಧಿಷ್ಠಿರನು ಚೇಷ್ಟಾರಹಿತನಾಗಿ ಭೂಮಿಯಲ್ಲಿ ಬಹಳ ಕಾಲ ಬಿದ್ದಿದ್ದನು.

ತತೋ ಲಬ್ಧ್ವಾ ಶನೈಃಸಂಜ್ಞಾಂ ಸಮಾಶ್ವಸ್ತೋಽಚ್ಯುತೇನ ಸಃ |
ನೇತ್ರೇ ಪ್ರಕ್ಷಾಲ್ಯ ತೋಯೇನ ಭೂಯಃ ಕೇಶವಮಬ್ರವೀತ್ ॥65॥
ಬಳಿಕ ಎಚ್ಚರಗೊಂಡಿರುವ ಯುಧಿಷ್ಠಿರನನ್ನು ಅಚ್ಯುತನು ಸಮಾಧಾನ ಪಡಿಸಿದನು. ಕಣ್ಣುಗಳನ್ನು ನೀರಿನಿಂದ ತೊಳೆದುಕೊಂಡ ಯುಧಿಷ್ಠಿರನು ಪುನಃ ಕೃಷ್ಣನ ಬಳಿ ಹೀಗೆ ನುಡಿದನು.
ಯುಧಿಷ್ಠಿರಃ
ಭೀತೋಽಸ್ಮ್ಯಹಂ ಮಹಾದೇವ ಶ್ರುತ್ವಾ ಮಾರ್ಗಸ್ಯ ವಿಸ್ತರಮ್ |
ಕೇನ ದಾನೇನ ತನ್ಮಾರ್ಗಂ ತರಂತಿ ಪುರುಷಾಃ ಸುಖಮ್ ॥66॥
ಯುಧಿಷ್ಠಿರ ಸರ್ವೋತ್ತಮನಾದ ಶ್ರೀಕೃಷ್ಣನೇ, ವಿಸ್ತಾರವಾಗಿ ನೀನು ಬಣ್ಣಿಸಿರುವ ಯಮಮಾರ್ಗದ ವರ್ಣನೆಯಿಂದ ನಾನು ಭೀತನಾಗಿದ್ದೇನೆ. ಯಾವ ದಾನಗಳಿಂದ ಈ ಘೋರವಾದ ಯಮಮಾರ್ಗವನ್ನು ಮನುಷ್ಯರು ದಾಟಲಾಗುತ್ತದೆ?
ಶ್ರೀಭಗವಾನ್
ಇಹ ಯೇ ಧಾರ್ಮಿಕಾ ಲೋಕೇ ಜೀವಘಾತವಿವರ್ಜಿತಾಃ |
ಗುರುಶುಶ್ರೂಷಣೇ ಯುಕ್ತಾ ದೇವಬ್ರಾಹ್ಮಣಪೂಜಕಾಃ ॥67॥
ಅಸ್ಮಾನ್ಮಾನುಷ್ಯಲೋಕಾತ್ ತೇ ಸಭಾರ್ಯಾಃ ಸಹಬಾಂಧವಾಃ |
ಯಮಧ್ವಾನಂ ತು ಗಚ್ಛಂತಿ ಯಥಾವತ್ ತಂ ನಿಬೋಧ ಮೇ ॥68॥
ಶ್ರೀಭಗವಾನ್ ಯಾರು ಈ ಲೋಕದಲ್ಲಿ ಮತ್ತೊಬ್ಬರನ್ನು ಹಿಂಸಿಸದೆ ಧಾರ್ಮಿಕರಾಗಿ ಗುರುಗಳ ಸೇವೆಯಲ್ಲಿಯೇ, ದೇವ-ಬ್ರಾಹ್ಮಣರ ಪೂಜೆಯಲ್ಲಿಯೇ ಆಸಕ್ತರಾಗಿರುತ್ತಾರೋ ಅವರು ಈ ಮನುಷ್ಯಲೋಕದಿಂದ ಬಂಧು-ಬಾಂಧವರು ಪತ್ನಿಯರಿಂದಲೂ ಸಹಿತರಾಗಿ ಯಾವ ಮಾರ್ಗದಲ್ಲಿ ಸಾಗುತ್ತಾರೆ ಎಂಬುದನ್ನು ಹೇಳುತ್ತೇನೆ, ಕ್ರಮವಾಗಿ ವರ್ಣಿಸುವ ನನ್ನ ಮಾತನ್ನು ಕೇಳಿಸಿಕೊ.
ಬ್ರಾಹ್ಮಣೇಭ್ಯಃ ಪ್ರದಾನಾನಿ ನಾನಾರೂಪಾಣಿ ಪಾರ್ಥಿವ |
ಯೇ ಪ್ರಯಚ್ಛಂತಿ ವಿಪ್ರೇಭ್ಯಸ್ತೇ ಸುಖಂ ಯಾಂತಿ ತತ್ಪಥಮ್ ॥69॥
ರಾಜನೇ, ಬ್ರಾಹ್ಮಣರಿಗೆ ಅನೇಕ ರೀತಿಯ ದಾನಗಳನ್ನು ಯಾರು ಮಾಡುತ್ತಾರೋ ಅವರು ಸುಖವಾದ ಮಾರ್ಗದಲ್ಲಿಯೇ ಸಾಗುತ್ತಾರೆ.
ಅನ್ನಂ ಚ ಯೇ ಪ್ರಯಚ್ಛಂತಿ ಬ್ರಾಹ್ಮಣೇಭ್ಯಃ ಸುಸಂಸ್ಕೃತಮ್ |
ಶ್ರೋತ್ರಿಯೇಭ್ಯೋ ವಿಶೇಷೇಣ ಭಕ್ತ್ಯಾ ಪರಮಯಾ ಯುತಾಃ ॥70॥
ತೇ ವಿಮಾನೈರ್ಮಹಾತ್ಮಾನೋ ಯಾಂತಿ ಚಿತ್ರೈರ್ಯಮಾಲಯಮ್ |
ಸೇವ್ಯಮಾನಾ ವರಸ್ತ್ರೀಭಿರಪ್ಸರೋಭಿರ್ಮಹಾಪಥಿ ॥71॥
ಯಾರು ಸುಸಂಸ್ಕೃತವಾದ ಅನ್ನವನ್ನು ಬ್ರಾಹ್ಮಣರಿಗೆ ನೀಡುತ್ತಾರೋ, ವಿಶೇಷವಾದ ಭಕ್ತಿಯಿಂದ ಶ್ರೋತ್ರಿಯರಿಗೆ ನೀಡಿದ ದಾನದ ಮಹಿಮೆಯಿಂದ ಆ ವ್ಯಕ್ತಿಗಳು ಮೃತರಾದ ಬಳಿಕ ಶ್ರೇಷ್ಠರಾದ ಉತ್ತಮ ಸ್ತ್ರೀಯರಿಂದ, ಅಪ್ಸರೆಯರಿಂದ ಸತ್ಕೃತರಾಗಿ ರಾಜಮಾರ್ಗದಲ್ಲಿ ಚಿತ್ರ-ವಿಚಿತ್ರವಾದ ವಿಮಾನಗಳನ್ನು ಏರಿಕೊಂಡು ಯಮ ಲೋಕಕ್ಕೆ ತೆರಳುತ್ತಾರೆ.
ಯೇ ಚ ನಿತ್ಯಂ ಪ್ರಭಾಷಂತೇ ಪ್ರಿಯಂ ನಿಷ್ಕಲ್ಮಷಂ ವಚಃ |
ತೇ ಚ ಯಾಂತ್ಯಮಲಾಭ್ರಾಭೈಃ ಉದ್ಯಾನೈಃ ವೃಷಯೋಜಿತೈಃ ॥72॥
ಯಾವ ವ್ಯಕ್ತಿಗಳು ದೋಷವಿಲ್ಲದೆ ಇರುವ ಪ್ರಿಯವಾದ ಮಾತುಗಳನ್ನೇ ಆಡಿರುತ್ತಾರೋ ಅಂತಹ ವ್ಯಕ್ತಿಗಳು ನಿರ್ಮಲವಾದ ಕಾಂತಿಯಿಂದ ಕೂಡಿದ, ನಿರ್ಮಲವಾದ ಎತ್ತುಗಳನ್ನು ಕಟ್ಟಿದ ರಥಗಳಲ್ಲಿ ಕುಳಿತುಕೊಂಡು ಸಂಚರಿಸುತ್ತಾರೆ.
ಕಪಿಲಾದೀನಿ ದಾನಾನಿ ಶ್ರದ್ಧಾಯುಕ್ತಾಶ್ಚ ಯೇ ನರಾಃ |
ಬ್ರಾಹ್ಮಣೇಭ್ಯಃ ಪ್ರಯಚ್ಛಂತಿ ಶ್ರೋತ್ರಿಯೇಭ್ಯೋ ವಿಶೇಷತಃ ॥73॥
ತೇ ಯಾಂತ್ಯಾದಿತ್ಯವರ್ಣಾಭೈರ್ವಿಮಾನೈರ್ಹೇಮಭೂಷಣೈಃ |
ವೈವಸ್ವತಪುರಂ ರಮ್ಯಮಪ್ಸರೋಭಿರ್ನಿಷೇವಿತಮ್ ॥74॥
ಯಾರು ಶ್ರೋತ್ರಿಯಬ್ರಾಹ್ಮಣರಿಗೆ ಶ್ರದ್ಧೆಯಿಂದ ಕಪಿಲಾ ಮೊದಲಾದ ಗೋವುಗಳನ್ನು ದಾನ ಮಾಡಿರುತ್ತಾರೋ ಅವರು ಸೂರ್ಯಸದೃಶವಾದ ಕಾಂತಿಯಿಂದ ಬೆಳಗುವ ವಿಮಾನಗಳಲ್ಲಿ ಬಂಗಾರಗಳಿಂದ ಅಲಂಕೃತರಾಗಿ, ಅಪ್ಸರಾಸ್ತ್ರೀಯರಿಂದ ಸೇವಿಸಲ್ಪಡುವ ರಮಣೀಯವಾದ ಯಮಪುರಿಗೆ ಸಾಗುತ್ತಾರೆ.
ಉಪಾನಹೌ ಚ ಛತ್ರಂ ಚ ಶಯನಾನ್ಯಾಸನಾನಿ ಚ |
ವಿಪ್ರೇಭ್ಯೋ ಯೇ ಪ್ರಯಚ್ಛಂತಿ ವಸ್ತ್ರಾಣ್ಯಾಭರಣಾನಿ ಚ ॥75॥
ತೇ ಯಾಂತ್ಯಶ್ವೈರ್ವೃಷೈರ್ವಾಽಪಿ ಕುಂಜರೈರಪ್ಯಲಂಕೃತಾಃ |
ಧನದಸ್ಯ ಪುರಂ ರಮ್ಯಂ ಸೌವರ್ಣಚ್ಛತ್ರಶೋಭಿತಾಃ ॥76॥
ಯಾರು ಶ್ರೇಷ್ಠರಾದ ಶ್ರೋತ್ರಿಯ ಬ್ರಾಹ್ಮಣರಿಗೆ ಪಾದುಕೆಗಳನ್ನು, ಛತ್ರಿಯನ್ನು, ಹಾಸಿಗೆ-ಆಸನಗಳನ್ನು, ವಸ್ತ್ರಾಭರಣಗಳನ್ನು ನೀಡಿರುತ್ತಾರೋ ಅವರು ಕುದುರೆಗಳಲ್ಲಿ, ಎತ್ತುಗಳಲ್ಲಿ, ಆನೆಗಳಲ್ಲಿ ಅಲಂಕೃತವಾದ ವಾಹನಗಳನ್ನು ಏರಿ, ಬಂಗಾರದ ಶ್ವೇತಚ್ಛತ್ರದಿಂದ ಶೋಭಿತರಾಗಿ ಕುಬೇರನ ಪಟ್ಟಣವನ್ನು ಕುರಿತು ಸಾಗುತ್ತಾರೆ.
ಯೇ ಚ ಭಕ್ಷ್ಯಾಣಿ ದಾಸ್ಯಂತಿ ಭೋಜ್ಯಂ ಪೇಯಂ ತಥೈವ ಚ |
ಸ್ನಿಗ್ಧಾನ್ನಂ ಚಾಪಿ ವಿಪ್ರೇಭ್ಯಃ ಶ್ರದ್ಧಯಾ ಪರಯಾ ಯುತಾಃ ॥77॥
ತೇ ಯಾಂತಿ ಕಾಂಚನೈರ್ಯಾನೈಃ ಸುಖಂ ವೈವಸ್ವತಾಲಯಮ್ |
ವರಸ್ತ್ರೀಭಿರ್ಯುವತಿಭಿಃ ಸೇವ್ಯಮಾನಾಃ ಸಮಂತತಃ ॥78॥
ಯಾರು ಶ್ರೇಷ್ಠರಾದ ಬ್ರಾಹ್ಮಣರಿಗೆ ಭಕ್ಷ್ಯಗಳನ್ನು, ತಿನ್ನುವ ಪದಾರ್ಥಗಳನ್ನು, ಕುಡಿಯುವ ಪದಾರ್ಥಗಳನ್ನು, ರಸಯುಕ್ತವಾದ

ತುಪ್ಪದ ಪದಾರ್ಥಗಳನ್ನು ಭಕ್ತಿ ಶ್ರದ್ಧೆಗಳಿಂದ ದಾನ ಮಾಡಿರುತ್ತಾರೋ ಅವರು ಶ್ರೇಷ್ಠರಾದ ಸ್ತ್ರೀಯರಿಂದ ಸೇವ್ಯಮಾನರಾಗಿ ಬಂಗಾರದ ವಾಹನಗಳನ್ನು ಏರಿಕೊಂಡು ಯಮಪುರಿಗೆ ಸಾಗುತ್ತಾರೆ.
ಯೇ ಚ ಕ್ಷೀರಂ ಪ್ರಯಚ್ಛಂತಿ ಘೃತಂ ದಧಿ ಗುಡಂ ಮಧು |
ಬ್ರಾಹ್ಮಣೇಭ್ಯಃ ಪ್ರಯತ್ನೇನ ಶ್ರದ್ದಧಾನಾಃ ಸುಸಂಸ್ಕೃತಾಃ ॥79॥
ಚಕ್ರವಾಕಪ್ರಯುಕ್ತೈಸ್ತು ಯಾನೈಃ ರುಗ್ಮಮಯೈಃ ಶುಭೈಃ |
ಯಾಂತಿ ಗಂಧರ್ವವಾದಿತ್ರೈಃ ಸೇವ್ಯಮಾನಾ ಯಮಾಲಯಮ್ ॥80॥
ಯಾರು ಬ್ರಾಹ್ಮಣರಿಗೆ ಪ್ರಯತ್ನಪೂರ್ವಕವಾಗಿ, ಶ್ರದ್ಧೆಯಿಂದ ಸಂಸ್ಕರಿಸಲ್ಪಟ್ಟ ಹಾಲನ್ನು, ತುಪ್ಪವನ್ನು, ಮೊಸರನ್ನು, ಬೆಲ್ಲವನ್ನು, ಜೇನುತುಪ್ಪವನ್ನು ನೀಡಿರುತ್ತಾರೋ ಅವರು ಚಕ್ರವಾಕ ಪಕ್ಷಿಗಳಿಂದ ಸೆಳೆಯಲ್ಪಡುವ ಬಂಗಾರಮಯವಾದ ವಾಹನಗಳನ್ನು ಏರಿಕೊಂಡು, ಗಂಧರ್ವರೇ ಮೊದಲಾದ ಉತ್ತಮ ಪುರುಷರಿಂದ ಸೇವಿಸಲ್ಪಡುತ್ತಾ ಯಮಪುರಿಗೆ ಸಾಗುತ್ತಾರೆ.
ಯೇ ಫಲಾನಿ ಪ್ರಯಚ್ಛಂತಿ ಪುಷ್ಪಾಣಿ ಸುರಭೀಣಿ ಚ |
ಹಂಸಯುಕ್ತೈರ್ವಿಮಾನೈಸ್ತು ಯಾಂತಿ ಧರ್ಮಪುರಂ ನರಾಃ ॥81॥
ಯಾರು ಶ್ರೇಷ್ಠರಾದ ಬ್ರಾಹ್ಮಣರಿಗೆ ಹಣ್ಣುಗಳನ್ನು, ಪುಷ್ಪಗಳನ್ನು, ಪರಿಮಳ ಭರಿತವಾದ ಫಲಗಳನ್ನು ನೀಡಿರುತ್ತಾರೋ ಅವರು ಹಂಸಯುಕ್ತವಾದ ವಿಮಾನಗಳಿಂದ ಯಮಪುರಿಗೆ ಸಾಗುತ್ತಾರೆ.
ಯೇ ಪ್ರಯಚ್ಛಂತಿ ವಿಪ್ರೇಭ್ಯೋ ವಿವಿಧಾನ್ನಂ ಘೃತಾಪ್ಲುತಮ್ |
ತೇ ವ್ರಜಂತ್ಯಮಲಾಭ್ರಾಭೈರ್ವಿಮಾನೈರ್ವಾಯುವೇಗಿಭಿಃ ॥82॥
ಯಾರು ಶ್ರೇಷ್ಠರಾದ ಬ್ರಾಹ್ಮಣರಿಗೆ ತುಪ್ಪದಿಂದ ಕೂಡಿದ ಬಗೆಬಗೆಯ ಅನ್ನಗಳನ್ನು ನೀಡಿರುತ್ತಾರೋ ಅವರು ವಾಯುವೇಗದಿಂದ ಸಂಚರಿಸುವ ವಿಮಾನವನ್ನು ಏರಿಕೊಂಡು ಯಮಾಲಯಕ್ಕೆ ಸಾಗುತ್ತಾರೆ.
ಪುರಂ ತತ್ ಪ್ರೇತನಾಥಸ್ಯ ನಾನಾಜನಸಮಾಕುಲಮ್ ॥83॥
ಆ ಪ್ರೇತನಾಥನ ಪುರವಾದರೂ ಅನೇಕ ಜನರಿಂದ ತುಂಬಿಹೋಗಿದೆ.
ಪಾನೀಯಂ ಯೇ ಪ್ರಯಚ್ಛಂತಿ ಸರ್ವಭೂತಪ್ರಜೀವನಮ್ |
ತೇ ಸುತೃಪ್ತಾಃ ಸುಖಂ ಯಾಂತಿ ವಿಮಾನೈರ್ಹಂಸಚೋದಿತೈಃ ॥84॥
ಯಾರು ಸಮಸ್ತ ಜೀವರಿಗೆ ಜೀವಪ್ರದವಾದ ನೀರನ್ನು ದಾನ ಮಾಡಿರುತ್ತಾರೋ ಅವರು ಸಂತೃಪ್ತರಾಗಿ ಹಂಸಗಳು ಸೆಳೆಯುವ ವಿಮಾನಗಳಲ್ಲಿ ಏರಿಕೊಂಡು ಸಾಗುತ್ತಾರೆ.
ಯೇ ತಿಲಾಂಸ್ತಿಲಧೇನುಂ ವಾ ಘೃತಧೇನುಮಥಾಪಿ ವಾ |
ಶ್ರೋತ್ರಿಯೇಭ್ಯಃ ಪ್ರಯಚ್ಛಂತಿ ಸೌಮ್ಯಭಾವಸಮನ್ವಿತಾಃ ॥85॥
ಸೋಮಮಂಡಲಸಂಕಾಶೈರ್ಯಾನೈಸ್ತೇ ಯಾಂತಿ ನಿರ್ಮಲೈಃ |
ಗೀಯಮಾನಾಸ್ತು ಗಂಧರ್ವೈರ್ವೈವಸ್ವತಪುರಂ ನರಾಃ ॥86॥
ಯಾರು ಸೌಮ್ಯಭಾವದಿಂದ ಶ್ರೋತ್ರಿಯ ಬ್ರಾಹ್ಮಣರಿಗೆ ವಿನೀತರಾಗಿ, ಭಕ್ತಿಯಿಂದ ಕೂಡಿದವರಾಗಿ ಎಳ್ಳನ್ನು, ತಿಲಧೇನುವನ್ನೂ, ಘೃತಧೇನುವನ್ನು ದಾನ ಮಾಡಿರುತ್ತಾರೋ ಅವರು ಚಂದ್ರಮಂಡಲದಂತೆ ಹೊಳೆಯುವ ನಿರ್ಮಲವಾದ ವಾಹನಗಳನ್ನು ಏರಿಕೊಂಡು, ಗಂಧರ್ವರಿಂದ ಹೊಗಳಿಸಿಕೊಳ್ಳುತ್ತಾ ಯಮಪುರಿಗೆ ಸಾಗುತ್ತಾರೆ.
ಯೇಷಾಂ ವಾಪ್ಯಶ್ಚ ಕೂಪಾಶ್ಚ ತಟಾಕಾನಿ ಸರಾಂಸಿ ಚ |
ದೀರ್ಘಿಕಾಃ ಪುಷ್ಕರಿಣ್ಯಶ್ಚ ಸಜಲಾಶ್ಚ ಜಲಾಶಯಾಃ ॥87॥
ಯಾನೈಸ್ತೇ ಯಾಂತಿ ಚಂದ್ರಾಭೈರ್ದಿವ್ಯಘಂಟಾನಿನಾದಿತೈಃ |
ಚಾಮರೈಸ್ತಾಲವೃಂತೈಶ್ಚ ವೀಜ್ಯಮಾನಾ ಮಹಾಪ್ರಭಾಃ ॥88॥
ನಿತ್ಯತೃಪ್ತಾ ಮಹಾತ್ಮಾನೋ ಗಚ್ಛಂತಿ ಯಮಸಾದನಮ್ ॥89॥
ಯಾರು ನಿರ್ಮಲವಾದ ವಾಪಿ (ಬಾವಿ), ಕೂಪ, ತಟಾಕ, ಸರೋವರ, ವಿಸ್ತಾರವಾದ ಪುಷ್ಕರಿಣಿ, ದೊಡ್ಡ ಜಲಾಶಯಗಳನ್ನು ನಿರ್ಮಿಸಿರುತ್ತಾರೋ ಅವರು ಅನೇಕ ಘಂಟೆಗಳಿಂದ ಅಲಂಕೃತವಾದ, ಚಂದ್ರನಂತೆ ಬೆಳಗುವ, ಮಹಾಪ್ರಭೆಗಳಿಂದ ಕೂಡಿದ ಚಾಮರಗಳನ್ನು ಬೀಸುವ ವ್ಯಕ್ತಿಗಳಿಂದ ಸೇವಿತರಾಗಿ, ಶ್ರೇಷ್ಠವಾದ ವಾಹನಗಳನ್ನು ಏರಿ, ಮಹಾತ್ಮರಾದ ಅವರು ಯಮಪುರಿಗೆ ನಿತ್ಯತೃಪ್ತರಾಗಿ ಸಾಗುತ್ತಾರೆ.
ಯೇಷಾಂ ದೇವಗೃಹಾಣೀಹ ಚಿತ್ರಾಣ್ಯಾಯತನಾನಿ ಚ |
ಮನೋಹರಾಣಿ ಕಾಂತಾನಿ ದರ್ಶನೀಯಾನಿ ಭಾಂತ್ಯುತ ॥90॥
ತೇ ವ್ರಜಂತ್ಯಮಲಾಭ್ರಾಭೈರ್ವಿಮಾನೈರ್ವಾಯುವೇಗಿಭಿಃ |
ಪುರಂ ತತ್ ಪ್ರೇತನಾಥಸ್ಯ ನಾನಾಜನಸಮಾಕುಲಮ್ ॥91॥
ಯಾರು ದೇವಮಂದಿರಗಳನ್ನು ಅಲಂಕರಿಸಿ, ವಿಶಾಲವಾಗಿ ರಚಿಸಿರುತ್ತಾರೋ, ಯಾವ ವ್ಯಕ್ತಿಯಿಂದ ನಿರ್ಮಿತ ದೇವಗೃಹಗಳು ನೋಡಲು ಸುಂದರವಾಗಿ ಕಾಣಿಸುತ್ತವೆಯೋ ಅವರು ನಿರ್ಮಲವಾದ, ವಾಯುವೇಗದಿಂದ ಕೂಡಿದ ವಿಮಾನಗಳನ್ನು ಏರಿ ನಾನಾ ಜನರಿಂದ ಅಲಂಕೃತನಾದ ಪ್ರೇತನಾಥನ ಪುರಿಗೆ ಸಾಗುತ್ತಾರೆ.
ವೈವಸ್ವತಂ ಚ ಪಶ್ಯಂತಿ ಸುಖಚಿತ್ತಂ ಸುಖಸ್ಥಿತಮ್ |
ಯಮೇನ ಪೂಜಿತಾ ಯಾಂತಿ ಯಮಸಾಲೋಕ್ಯತಾಂ ಗತಾಃ ॥92॥
ಅಂತಹ ದೇವತಾರಾಧಕರು ಸುಖದಿಂದ ಕೂಡಿರುವ, ಸುಖವಾಗಿ ಕುಳಿತಿರುವ ಯಮನನ್ನು ನೋಡುತ್ತಾರೆ. ಯಮನಿಂದ ಪೂಜಿತರಾಗುತ್ತಾರೆ. ಯಮನ ಮನೆಯಲ್ಲಿಯೇ ಸುಖ ಹೊಂದುತ್ತಾರೆ.

ಮೃತಾನುದ್ದಿಶ್ಯ ಲೋಕೇಷು ಪ್ರಪಾಸು ಕರಕೋದ್ಧೃತಮ್ |
ಶೀತಂ ಸಲಿಲಂ ರಮ್ಯಂ ತೃಷಿತೇಭ್ಯೋ ದಿಶಂತಿ ಯೇ ॥93॥
ತೇ ತು ತೃಪ್ತಿಂ ಪರಾಂ ಪ್ರಾಪ್ತಾಃ ಸುಖಂ ಯಾಂತಿ ಮಹಾಪಥಮ್ ॥
ಯಾರು ಗತಿಸಿದವರನ್ನು ಉದ್ದೇಶಿಸಿ ಬಾವಿಗಳಿಂದ ನೀರನ್ನು ಸೇದಿ ಶೀತಲವಾದ ನೀರನ್ನು ಭೂಮಿಯಲ್ಲಿ ಬಾಯಾರಿದವರಿಗೆ ನೀಡುತ್ತಾರೋ ಅವರು ಯಾರನ್ನು ಉದ್ದೇಶಿಸಿಕೊಂಡು ಬಾಯಾರಿದವರಿಗೆ ನೀರು ನೀಡಿದ್ದಾರೋ ಆ ಪುಣ್ಯದಿಂದ ಯಮಪುರಿಗೆ ಸಾಗುವ ವ್ಯಕ್ತಿಗಳು ತೃಪ್ತಿಯನ್ನು ಹೊಂದುತ್ತಾರೆ.
ಕಾಷ್ಠಪಾದುಕದಾ ಯಾಂತಿ ತದಧ್ವಾನಂ ಸುಖಂ ನರಾಃ |
ಸುವರ್ಣಮಣಿಪೀಠೇ ತು ಪಾದಂ ಕೃತ್ವಾ ರಥೋತ್ತಮೇ ॥95॥
ಯಾರು ಯಾರ ಹೆಸರಿನಲ್ಲಿ ಮರದಿಂದ ಮಾಡಿದ ಪಾದುಕೆಗಳನ್ನು ದಾನ ಮಾಡಿರುತ್ತಾರೋ, ಅವರು ಶ್ರೇಷ್ಠವಾದ ರಥದಲ್ಲಿ ಕುಳಿತು, ಸುವರ್ಣಪೀಠದಲ್ಲಿ ಪಾದಗಳನ್ನಿಟ್ಟುಕೊಂಡು ಯಮಲೋಕದ ಕಡೆ ಪ್ರಯಾಣ ಬೆಳೆಸುತ್ತಾರೆ.
ಆರಾಮಾನ್ ವೃಕ್ಷಷಂಡಾಂಶ್ಚ ರೋಪಯಂತಿ ಚ ಯೇ ನರಾಃ |
ಸಂವರ್ಧಯಂತಿ ಚಾವ್ಯಗ್ರಾ ಫಲಪುಷ್ಪೈಶ್ಚ ಶೋಭಿತಾಃ ॥96॥
ವೃಕ್ಷಚ್ಛಾಯಾಸು ರಮ್ಯಾಸು ಶೀತಾಸು ಸ್ವಲಂಕೃತಾಃ |
ಯಾಂತಿ ತೇ ವಾಹನೈರ್ದಿವ್ಯೈಃ ಪೂಜ್ಯಮಾನಾ ಮುಹುರ್ಮುಹುಃ ॥
ತೋಟಗಳನ್ನು, ವೃಕ್ಷಗಳ ಸಮುದಾಯವನ್ನು ಯಾರು ಬೆಳೆಸಿರುತ್ತಾರೋ, ಅವುಗಳಿಗೆ ಗೊಬ್ಬರ, ನೀರುಗಳನ್ನು ಉಣಿಸುತ್ತಾ, ಚೆನ್ನಾಗಿ ಫಲ-ಪುಷ್ಪಗಳಿಂದ ಶೋಭಾಯಮಾನ- ವಾಗುವಂತೆ ಬೆಳೆಸಿರುತ್ತಾರೋ ಅಂತಹವರು ಆ ೦ೂಷಣಗಳಿಂದ ಅಲಂಕೃತರಾಗಿ, ದಿವ್ಯವಾದ ವಾಹನಗಳಲ್ಲಿ ಕುಳಿತು ದಿವ್ಯಪುರುಷರಿಂದ ಪೂಜಿತರಾಗುತ್ತಾ ಶೀತಲವಾದ ವೃಕ್ಷಗಳ ನೆರಳಿನಲ್ಲಿ ಯಮಲೋಕಕ್ಕೆ ಪ್ರಯಾಣ ಬೆಳೆಸುತ್ತಾರೆ.
ಸುವರ್ಣಂ ರಜತಂ ವಾಽಪಿ ವಿದ್ರುಮಂ ಮೌಕ್ತಿಕಂ ತಥಾ |
ಯೇ ಪ್ರಯಚ್ಛಂತಿ ತೇ ಯಾಂತಿ ವಿಮಾನೈಃ ಕನಕೋಜ್ಜ್ವಲೈಃ ॥98॥
ಸೇವ್ಯಮಾನಾಃ ಸುರೂಪಾಭಿರಕೃಶಾಭಿಃ ಪ್ರಯತ್ನತಃ |
ಸ್ತ್ರೀಭಿಃ ಕನಕವರ್ಣಾಭಿರ್ಯಥಾಕಾಮಂ ಯಥಾಸುಖಮ್ ॥99॥
ಯಾರು ಬ್ರಾಹ್ಮಣರಿಗೆ ಬಂಗಾರವನ್ನು, ಬೆಳ್ಳಿಯನ್ನು, ಹವಳ ಮುತ್ತುಗಳನ್ನು ದಾನವಾಗಿ ನೀಡುತ್ತಾರೋ ಅವರು ಬಂಗಾರದಿಂದ ಅಲಂಕೃತವಾದ ವಿಮಾನಗಳಿಂದ, ಸುರೂಪಸ್ತ್ರೀಯರಿಂದ ಸೇವ್ಯಮಾನರಾಗಿ, ಬಂಗಾರದ ಬಣ್ಣದಿಂದ ಬೆಳಗುತ್ತಾ ಯಮಪುರಿಗೆ ಸುಖವಾಗಿ ಪ್ರಯಾಣ ಬೆಳೆಸುತ್ತಾರೆ.
ಅಶ್ವದಾನಂ ತು ಗೋದಾನಂ ಹಸ್ತಿದಾನಮಥಾಪಿ ವಾ |
ಯೇ ಪ್ರಯಚ್ಛಂತಿ ವಿಪ್ರೇಭ್ಯೋ ವಿಮಾನೈಃ ಕನಕೋಜ್ಜ್ವಲೈಃ ॥100॥
ತೇ ವ್ರಜಂತಿ ವರಸ್ತ್ರೀಭಿಸ್ಸೇವ್ಯಮಾನಾ ಯಥಾಸುಖಮ್ ॥101॥
ಯಾರು ಬ್ರಾಹ್ಮಣರಿಗೆ ಕುದುರೆ, ಹಸು, ಆನೆ ಮೊದಲಾದ ಪ್ರಯಾಣ ಯೋಗ್ಯವಾದ ವಾಹನಗಳನ್ನು ದಾನ ಮಾಡಿರುತ್ತಾರೋ ಅವರು ಸುವರ್ಣಸದೃಶವಾದ ವಿಮಾನದಲ್ಲಿ ಕುಳಿತು ಉತ್ತಮ ಸ್ತ್ರೀಯರಿಂದ ಸೇವ್ಯಮಾನರಾಗಿ ಸುಖವಾಗಿ ಯಮಪುರಿಗೆ ಸೇರುತ್ತಾರೆ.
ಭೂಮಿದಾ ಯಾಂತಿ ತಂ ಲೋಕಂ ಸರ್ವಕಾಮೈಃ ಸುತರ್ಪಿತಾಃ |
ಉದಿತಾದಿತ್ಯಸಂಕಾಶೈರ್ವಿಮಾನೈಸ್ತೇ ಯಮಾಲಯಮ್ ॥102॥
ಯಾರು ಭೂದಾನ ಮಾಡಿರುತ್ತಾರೋ ಅವರು ಸಕಲ ವಿಧವಾದ ಕಾಮನೆಗಳನ್ನೂ ಪಡೆದು, ಬಾಲಸೂರ್ಯಸದೃಶವಾದ ವಿಮಾನಗಳಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ಕನ್ಯಾಂ ಯೇ ಚ ಪ್ರಯಚ್ಛಂತಿ ವಿಪ್ರಾಯ ಶ್ರೋತ್ರಿಯಾಯ ಚ |
ದಿವ್ಯಕನ್ಯಾವೃತಾ ಯಾಂತಿ ವಿಮಾನೈಸ್ತೇ ಯಮಾಲಯಮ್ ॥103॥
ಯಾರು ಶ್ರೇಷ್ಠರಾದ ಬ್ರಾಹ್ಮಣರಿಗೆ ಕನ್ಯಾದಾನವನ್ನು ಮಾಡಿರುತ್ತಾರೋ ಅವರು ದಿವ್ಯಕನ್ಯೆಯರಿಂದ ಆವೃತರಾಗಿ ವಿಮಾನದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ಸುಗಂಧಾನ್ ಗಂಧಸಂಯೋಗಾನ್ ಪುಷ್ಪಾಣಿ ಸುರಭೀಣಿ ಚ |
ಪ್ರಯಚ್ಛಂತಿ ದ್ವಿಜಾಗ್ರೇಭ್ಯೋ ಭಕ್ತ್ಯಾ ಪರಮಯಾ ಯುತಾಃ ॥104॥
ತೇ ಸುಗಂಧಾಃ ಸುವೇಷಾಶ್ಚ ಸುಪ್ರಭಾಃ ಸ್ರಗ್ವಿಭೂಷಿತಾಃ |
ಯಾಂತಿ ಧರ್ಮಪುರಂ ಯಾನೈರ್ವಿಚಿತ್ರೈರಪ್ಯಲಂಕೃತಾಃ ॥105॥
ಯಾರು ಸುಗಂಧಯುಕ್ತವಾದ, ಘಮಘಮಿಸುವ ಪುಷ್ಪಗಳನ್ನು ದಾನವಾಗಿ ನೀಡಿರುತ್ತಾರೋ, ಅವರು ಸುಗಂಧಯುಕ್ತರಾಗಿ, ಸುಂದರವಾಗಿ ಅಲಂಕೃತರಾಗಿ ವಿಚಿತ್ರವಾದ ವಾಹನದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ದೀಪದಾ ಯಾಂತಿ ಯಾನೈಶ್ಚ ದೀಪಯಂತೋ ದಿಶೋ ದಶ |
ಆದಿತ್ಯಸದೃಶಾಕಾರೈರ್ದೀಪ್ಯಮಾನಾ ಯಥಾಽಗ್ನಯಃ ॥106॥
ದೀಪದಾನ ಮಾಡಿದ ಮನುಷ್ಯರು ಸೂರ್ಯನ ತೇಜಸ್ಸಿನಿಂದ ಬೆಳಗುವ ವಿಮಾನದಲ್ಲಿ ಕುಳಿತು ಪ್ರಜ್ವಲಿಸುವ ಪ್ರೇತಾಗ್ನಿಗಳಂತೆ ತಮ್ಮ ತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗುತ್ತಾ ಯಮಪುರಿಗೆ ಸಾಗುತ್ತಾರೆ.
ಗೃಹಾವಸಥದಾತಾರೋ ಗೃಹೈಃ ಕಾಂಚನವೇದಿಕೈಃ |
ವ್ರಜಂತಿ ಬಾಲಸೂರ್ಯಾಭೈರ್ಧರ್ಮರಾಜಪುರಂ ನರಾಃ ॥107॥

ಯಾರು ಮನೆಗಳನ್ನು, ಆಶ್ರಮಗಳನ್ನು ದಾನವಾಗಿ ನೀಡಿರುತ್ತಾರೋ ಅವರು ಸುವರ್ಣಮಯವಾದ ವೇದಿಕೆಗಳಿಂದ ಕೂಡಿದ, ಬಾಲಸೂರ್ಯಕಾಂತಿಗೆ ಸದೃಶವಾದ ವಿಮಾನದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ಜಲಭಾಜನದಾತಾರಃ ಕುಂಡಿಕಾಕರಕಪ್ರದಾಃ |
ಪೂಜ್ಯಮಾನಾ ವರಸ್ತ್ರೀಭಿರ್ಯಾಂತಿ ತೃಪ್ತಾ ಮಹಾಗಜೈಃ ॥108॥
ಯಾರು ಬ್ರಾಹ್ಮಣರಿಗೆ ನೀರು ತುಂಬುವ ಪಾತ್ರೆಗಳನ್ನು ದಾನ ಮಾಡಿರುತ್ತಾರೋ, ಬುಟ್ಟಿಗಳನ್ನು ದಾನ ಮಾಡಿರುತ್ತಾರೋ ಅವರು ವರಸ್ತ್ರೀಯರಿಂದ ಪೂಜಿತರಾಗಿ ಮಹಾಗಜಗಳನ್ನು ಏರಿಕೊಂಡು ತೃಪ್ತರಾಗಿ ಯಮಪುರಿಗೆ ಸೇರುತ್ತಾರೆ.
ಪಾದಾಭ್ಯಂಗಂ ಶಿರೋಭ್ಯಂಗಂ ಯಾನಂ ಪಾದೋದಕಂ ತಥಾ |
ಯೇ ಪ್ರಯಚ್ಛಂತಿ ವಿಪ್ರೇಭ್ಯಸ್ತೇ ಯಾಂತ್ಯಶ್ವೈರ್ಯಮಾಲಯಮ್ ॥
ಯಾರು ಬ್ರಾಹ್ಮಣರಿಗೆ ಕಾಲು ಮತ್ತು ತಲೆಗಳಿಗೆ ಲೇಪಿಸಲು ತೈಲವನ್ನು ನೀಡಿರುತ್ತಾರೋ, ಕಾಲು ತೊಳೆಯಲು ನೀರನ್ನು ನೀಡಿರುತ್ತಾರೋ, ಕುಡಿಯಲು ನೀರನ್ನು ನೀಡಿರುತ್ತಾರೋ ಅವರು ಕುದುರೆಗಳಲ್ಲಿ ಕುಳಿತು ಯಮಪುರಿಗೆ ಸೇರುತ್ತಾರೆ.
ವಿಶ್ರಾಮಯಂತಿ ಯೇ ವಿಪ್ರಾನ್ ಶ್ರಾಂತಾನಧ್ವನಿ ಕರ್ಶಿತಾನ್ |
ಚಕ್ರವಾಕಪ್ರಯುಕ್ತೇನ ಯಾಂತಿ ಯಾನೇನ ತೇಽಪಿ ಚ ॥110॥
ಬ್ರಾಹ್ಮಣರನ್ನು ಮನೆಗೆ ಕರೆದು ತಂದು, ಅವರನ್ನು ಉಪಚರಿಸಿ, ವಿಶ್ರಾಂತಿಯನ್ನು ಪಡೆಯುವಂತೆ ಮಾಡಿದವರು ಚಕ್ರವಾಕಪಕ್ಷಿಗಳಿಂದ ಕೂಡಿದ ವಿಮಾನದಲ್ಲಿ ಯಮಪುರಿಗೆ ಸಾಗುತ್ತಾರೆ.
ಸ್ವಾಗತೇನ ಚ ಯೋ ವಿಪ್ರಂ ಪೂಜಯೇದಾಸನೇನ ಚ |
ಸ ಗಚ್ಛತಿ ತಮಧ್ವಾನಂ ಸುಖಂ ಪರಮನಿರ್ವೃತಃ ॥111॥
ಯಾರು ಬ್ರಾಹ್ಮಣರನ್ನು ಮನೆಗೆ ಸ್ವಾಗತಿಸಿ, ಅರ್ಘ್ಯ-ಪಾದ್ಯಾದಿ ಆಸನಗಳಿಂದ ಸತ್ಕರಿಸಿರುತ್ತಾರೋ ಅವರು ಪರಮಾನಂದದಿಂದ ಕೂಡಿದ ಯಮಲೋಕದ ಮಾರ್ಗದಲ್ಲಿ ಪ್ರಯಾಣ ಬೆಳೆಸುತ್ತಾರೆ.
ನಮೋ ಬ್ರಹ್ಮಣ್ಯದೇವಾಯ ಯೋ ಮಾಂ ದೃಷ್ಟ್ವಾಽಭಿವಾದಯೇತ್ |
ವ್ರತವತ್ ಪ್ರಯತೋ ನಿತ್ಯಂ ಸ ಸುಖಂ ಯಾತಿ ತತ್ಪಥಮ್ ॥112॥
ಯಾರು ಬ್ರಾಹ್ಮಣರಲ್ಲಿ ನನ್ನನ್ನೇ ಅಂತರ್ಯಾಮಿಯಾಗಿ ಕಂಡು, ಕೂಡಲೇ ಅವರನ್ನು ನಮಸ್ಕರಿಸಿರುತ್ತಾರೋ, ಬ್ರಾಹ್ಮಣರನ್ನು ಸತ್ಕರಿಸುವ ವ್ರತನಿಷ್ಠರು ಸುಖವಾದ ಯಮ ಮಾರ್ಗದಲ್ಲಿ ಸಾಗುತ್ತಾರೆ.
ನಮಃ ಸರ್ವಸಹಾಭ್ಯಶ್ಚೇತ್ಯಭಿಧಾಯ ದಿನೇ ದಿನೇ |
ನಮಸ್ಕರೋತಿ ಗೋಭ್ಯೋ ಯಃ ಸ ಸುಖಂ ಯಾತಿ ತತ್ಪಥಮ್ ॥113॥
ಯಾರು ಗೋವುಗಳನ್ನು ಕುರಿತು, ಸಹನಶೀಲರಾದ ಗೋವುಗಳೇ ನಿಮಗೆ ನಮಸ್ಕಾರ ಎನ್ನುತ್ತಾ ಪ್ರತಿದಿನವೂ ಗೋವುಗಳನ್ನು ನಮಸ್ಕರಿಸಿರುತ್ತಾರೋ ಅವರು ಸುಖವಾಗಿ ಯಮಪುರಿಗೆ ಸಾಗುತ್ತಾರೆ.
ನಮೋಽಸ್ತು ಪ್ರಿಯದತ್ತಾಯೈತ್ಯೇವಂವಾದೀ ದಿನೇ ದಿನೇ |
ಭೂಮಿಮಾಕ್ರಮತೇ ಪ್ರಾತಃ ಶಯನಾದುತ್ಥಿತಸ್ತು ಯಃ ॥114॥
ಸ ಸರ್ವಕಾಮತೃಪ್ತಾತ್ಮಾ ಸರ್ವಭೂಷಣಭೂಷಿತಃ |
ಯಾತಿ ಯಾನೇನ ದಿವ್ಯೇನ ಸುಖಂ ವೈವಸ್ವತಾಲಯಮ್ ॥115॥
ಯಾರು ಧನ-ಧಾನ್ಯಾದಿಗಳನ್ನು ನೀಡುವ ಭೂಮಿಗೆ ಪ್ರತಿದಿನವೂ ನಮಸ್ಕರಿಸಿರುತ್ತಾರೋ, ಎದ್ದ ಕೂಡಲೇ ಭೂಮಿಯನ್ನು ನಮಸ್ಕರಿಸಿ ಸತ್ಕರ್ಮಗಳನ್ನು ಮಾಡಿರುತ್ತಾರೋ, ಎದ್ದ ಕೂಡಲೇ ಭೂಮಿಗೆ ನಮಸ್ಕರಿಸಿ ಹೆಜ್ಜೆಯನ್ನಿಡುವ ವ್ಯಕ್ತಿಗಳು ಇಹಲೋಕದಲ್ಲಿ ಸಮಸ್ತ ಕಾಮನೆಗಳನ್ನು ಪಡೆದು ತೃಪ್ತರಾಗಿ, ಅವಸಾನದ ಬಳಿಕ ಸರ್ವಾಲಂಕಾರದಿಂದ ಕೂಡಿದವರಾಗಿ, ದಿವ್ಯವಾದ ವಿಮಾನದಲ್ಲಿ ಕುಳಿತು ವೈವಸ್ವತನ ಪುರಿಗೆ ಸುಖವಾಗಿ ಪ್ರಯಾಣ ಬೆಳೆಸುತ್ತಾರೆ.
ಅನಂತರಾಶಿನೋ ಯೇ ತು ಡಂಭಾಹಂಕಾರವರ್ಜಿತಾಃ |
ತೇಽಪಿ ಸಾರಸಯುಕ್ತೇನ ಯಾಂತಿ ಯಾನೇನ ವೈ ಸುಖಮ್ ॥116॥
ಯಾರು ಮಧ್ಯಾಹ್ನ ಮತ್ತು ರಾತ್ರಿಗಳ ಊಟವನ್ನು ಬಿಟ್ಟು ಮಧ್ಯದಲ್ಲಿ ಯಾವ ಪದಾರ್ಥಗಳನ್ನೂ ತಿನ್ನುವುದಿಲ್ಲವೋ, ಡಂಭವನ್ನು, ಸುಳ್ಳನ್ನು ಬಿಟ್ಟಿರುತ್ತಾರೋ ಅಂತಹ ವ್ಯಕ್ತಿಗಳು ಸಾರಸಪಕ್ಷಿಗಳಿಂದ ಕೂಡಿದ ವಿಮಾನದಲ್ಲಿ ಸುಖವಾಗಿ ಯಮಪುರಿಗೆ ಸಾಗುತ್ತಾರೆ.
ಯೇ ಚಾಪ್ಯೇಕೇನ ಭುಕ್ತೇನ ವರ್ತಂತೇ ಡಂಭವರ್ಜಿತಾಃ |
ಹಂಸಯುಕ್ತೈರ್ವಿಮಾನೈಸ್ತು ಸುಖಂ ಯಾಂತಿ ಯಮಾಲಯಮ್ ॥
ಯಾರು ಪ್ರತಿದಿನವೂ ಡಂಭವರ್ಜಿತರಾಗಿ ಒಂದು ಹೊತ್ತು ಮಾತ್ರ ಊಟ ಮಾಡಿರುತ್ತಾರೋ, ಸತ್ಯವಾದಿಗಳಾದ ಆ ವ್ಯಕ್ತಿಗಳು ಹಂಸಗಳಿಂದ ಕೂಡಿದ ವಿಮಾನದಲ್ಲಿ ಕುಳಿತು ಯಮಪುರಿಗೆ ಸುಖವಾಗಿ ಸಾಗುತ್ತಾರೆ.
ಚತುರ್ಥೇನ ಹಿ ಭುಕ್ತೇನ ವರ್ತಂತೇ ಯೇ ಜಿತೇಂದ್ರಿಯಾಃ |
ಯಾಂತಿ ತೇ ಧರ್ಮನಗರಂ ಯಾನೈರ್ಬರ್ಹಿಣಯೋಜಿತೈಃ ॥118॥
ಯಾರು ನಾಲ್ಕನೆಯ ಯಾಮದಲ್ಲಿ ಊಟವನ್ನು ಸ್ವೀಕರಿಸಿ, ಜಿತೇಂದ್ರಿಯರಾಗಿ ಇರುತ್ತಾರೋ ಅವರು ಅನೇಕ ನವಿಲುಗಳಿಂದ ಕೂಡಿರುವ ವಿಮಾನದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ತೃತೀಯದಿವಸೇನೇಹ ಭುಂಜತೇ ಯೇ ಜಿತೇಂದ್ರಿಯಾಃ |
ತೇಽಪಿ ಹಸ್ತಿರಥೈರ್ಯಾಂತಿ ತತ್ಪಥಂ ಕನಕೋಜ್ಜ್ವಲೈಃ ॥119॥
ಯಾರು ಮೂರುದಿನಕ್ಕೊಮ್ಮೆ ಊಟಮಾಡುತ್ತಾ, ಜಿತೇಂದ್ರಿಯರಾಗಿರುತ್ತಾರೋ ಅವರು ಸುವರ್ಣದಂತೆ ಉಜ್ವಲವಾಗಿ ಪ್ರಕಾಶಿಸುವ ಆನೆಗಳಿಂದ ಕೂಡಿರುವ ರಥಗಳಲ್ಲಿ ಕುರಿತು ಯಮಪುರಿಗೆ ಸಾಗುತ್ತಾರೆ.

ವ್ಯಾಖ್ಯಾನ ವಿಶೇಷ ಇಲ್ಲಿ ಮೂರನೆಯ ದಿವಸ ಎಂದು ಇದೆ. ಇದಕ್ಕೆ ಮೂರನೆಯ ದಿವಸದ ಮೂರನೆಯ ಯಾಮದಲ್ಲಿ ಎಂದು ಅರ್ಥ.

ಷಷ್ಠಾನ್ನಕಾಲಿಕೋ ಯಸ್ತು ವರ್ಷಮೇಕಂ ತು ವರ್ತತೇ |
ಕಾಮಕ್ರೋಧವಿನಿರ್ಮುಕ್ತಃ ಶುಚಿರ್ನಿತ್ಯಂ ಜಿತೇಂದ್ರಿಯಃ ॥120॥
ಸ ಯಾತಿ ಕುಂಜರಸ್ಕಂಧೇನ ಜಯಶಬ್ದರವೈರ್ಯುತಃ ॥121॥
ಯಾರು ಆರು ದಿನಗಳಿಗೊಮ್ಮೆ ಊಟ ಮಾಡಿರುತ್ತಾರೋ, ಒಂದು ವರ್ಷದ ಕಾಲ ಆರು ದಿನಗಳಿಗೊಮ್ಮೆ ಊಟ ಮಾಡಿದ ವ್ಯಕ್ತಿಯು ಜಿತೇಂದ್ರಿಯನೂ, ಕಾಮ- ಕ್ರೋಧರಹಿತ ವ್ಯಕ್ತಿಯೂ, ಶುಚಿಯೂ ಆದ ಆತನು ಆನೆಯಿಂದ ಕೂಡಿದ ರಥದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾನೆ. ಆ ದಾರಿಯಲ್ಲಿ ಅವನನ್ನು ಜಯ ಶಬ್ದಗಳಿಂದ ಸ್ವಾಗತಿಸುತ್ತಾರೆ.
ಪಕ್ಷೋಪವಾಸಿನೋ ಯಾಂತಿ ಯಾನೈಃ ಶಾರ್ದೂಲಯೋಜಿತೈಃ |
ಧರ್ಮರಾಜಪುರಂ ರಮ್ಯಂ ದಿವ್ಯಸ್ತ್ರೀಗಣಸೇವಿತಮ್ ॥122॥
ಯಾರು ಒಂದು ವರ್ಷದ ತನಕ ಹದಿನೈದು ದಿವಸಗಳಿಗೊಮ್ಮೆ ಊಟ ಮಾಡಿರುತ್ತಾರೋ ಅವರು ಸಿಂಹಗಳಿಂದ ಕೂಡಿದ ವಿಮಾನದಲ್ಲಿ ಕುಳಿತು, ದಿವ್ಯಸ್ತ್ರೀಯರ ಸಮುದಾಯದಿಂದ ಸೇವಿಸಲ್ಪಡುತ್ತಿರುವ ರಮಣೀಯವಾದ ಧರ್ಮರಾಜನ ಪುರಿಗೆ ಸಾಗುತ್ತಾರೆ.
ಯೇ ಚ ಮಾಸೋಪವಾಸಂ ವೈ ಕುರ್ವತೇ ಸಂಯತೇಂದ್ರಿಯಾಃ |
ತೇಪಿ ಸೂರ್ಯೋದಯಪ್ರಖ್ಯೈರ್ಯಾಂತಿ ಯಾನೈರ್ಯಮಾಲಯಮ್॥
ಯಾರು ಒಂದುವರ್ಷದ ತನಕ ತಿಂಗಳಿಗೊಮ್ಮೆ ಊಟಮಾಡಿಕೊಂಡಿರುತ್ತಾರೋ ಅಂತಹ ಜಿತೇಂದ್ರಿಯರು ಸೂರ್ಯೋದಯದಂತಹ ಪ್ರಕಾಶಮಾನವಾದ ವಿಮಾನದಲ್ಲಿ ಕುಳಿತು ಯಮಸದನಕ್ಕೆ ಸಾಗುತ್ತಾರೆ.
ಅಗ್ನಿಪ್ರವೇಶಂ ಯಶ್ಚಾಪಿ ಕುರುತೇ ಮದ್ಗತಾತ್ಮನಾ |
ಸ ಯಾತ್ಯಗ್ನಿಪ್ರಕಾಶೇನ ವಿಮಾನೇನ ಯಮಾಲಯಮ್ ॥124॥
ಯಾರು ಅಂತ್ಯಕಾಲವು ಸನ್ನಿಹಿತವಾದಾಗ ನನ್ನನ್ನೇ ಧ್ಯಾನಿಸುತ್ತಾ ಅಗ್ನಿಪ್ರವೇಶವನ್ನು ಮಾಡುತ್ತಾರೋ ಅವರು ಅಗ್ನಿಯಂತೆ ಬೆಳಗುವ ವಿಮಾನದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ಪ್ರಾಣಾಂಸ್ತ್ಯಜತಿ ಯೋ ವಿಪ್ರೋ ಮಾಂ ಪ್ರಪನ್ನೋ ಹ್ಯನಾಶಕಃ |
ಸ ಬಾಲಾರ್ಕಪ್ರಕಾಶೇನ ವ್ರಜೇದ್ ಯಾನೇನ ತತ್ಪಥಮ್ ॥125॥
ಯಾರು ಊಟವನ್ನೇ ಮಾಡದೆ ನನ್ನನ್ನೇ ಧ್ಯಾನಿಸುತ್ತಾ, ಪ್ರಾಣಗಳನ್ನು ತ್ಯಾಗ ಮಾಡಿರುತ್ತಾರೋ ಅವರು ಬಾಲಸೂರ್ಯನಂತೆ ಬೆಳಗುವ ವಾಹನಗಳನ್ನು ಏರಿ ಯಮಸದನಕ್ಕೆ ಸಾಗುತ್ತಾರೆ.
ಪ್ರವಿಷ್ಟೋಂತರ್ಜಲೇ ಯಸ್ತು ಪ್ರಾಣಾಂಸ್ತ್ಯಜತಿ ಮಾನವಃ |
ಸೋಮಮಂಡಲಯಾನೇನ ಯಾತಿ ಯಾನೇನ ತತ್ಪಥಮ್ ॥126॥
ಯಾರು ನೀರಿನಲ್ಲಿ ಕುಳಿತು ನನ್ನನ್ನೇ ಧ್ಯಾನಿಸುತ್ತಾ ಪ್ರಾಣವನ್ನು ಬಿಟ್ಟಿರುತ್ತಾರೋ ಅವರು ಚಂದ್ರಮಂಡಲದ ವಾಹನದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ಸ್ವಶರೀರಂ ಹಿ ಗೃಧ್ರಾಣಾಂ ಮನ್ಮನಾ ಯಃ ಪ್ರಯಚ್ಛತಿ |
ಸ ಯಾತಿ ರಥಮುಖ್ಯೇನ ಕಾಂಚನೇನ ಯಮಾಲಯಮ್ ॥127॥
ಯಾರು ತಮ್ಮ ಶರೀರದಲ್ಲಿ ಮೋಹವನ್ನು ಬಿಟ್ಟು ನನ್ನನ್ನೇ ಮನಸ್ಸನ್ನಿಟ್ಟು ಪ್ರಾಣವನ್ನು ಬಿಟ್ಟಿರುತ್ತಾರೋ ಅವರು ಬಂಗಾರದ ರಥದಲ್ಲಿ ಕುಳಿತು ಯಮಪುರಿಗೆ ಸಾಗುತ್ತಾರೆ.
ಗೋಕೃತೇ ಸ್ತ್ರೀಕೃತೇ ಚೈವ ಹತಾ ವಿಪ್ರಕೃತೇಽಪಿ ಯೇ |
ತೇ ಯಾಂತ್ಯಮರಕನ್ಯಾಭಿಃ ಸೇವ್ಯಮಾನಾ ರವಿಪ್ರಭಾಃ ॥128॥
ಯಾರು ಗೋವಿಗಾಗಿ, ಸ್ತ್ರೀಯರಿಗಾಗಿ, ಬ್ರಾಹ್ಮಣರಿಗಾಗಿ ಪ್ರಾಣವನ್ನು ತ್ಯಾಗ ಮಾಡಿರುತ್ತಾರೋ ಅವರು ಅಮರಸ್ತ್ರೀಯರಿಂದ ಸೇವ್ಯಮಾನರಾಗಿ ಸೂರ್ಯ ಪ್ರಭೆಯಿಂದ ಬೆಳಗುವ ಯಮಪುರಿಗೆ ಸಾಗುತ್ತಾರೆ.
ಯೇ ಚ ಕುರ್ವಂತಿ ಮದ್ಭಕ್ತ್ಯಾ ತೀರ್ಥಯಾತ್ರಾಂ ಜಿತೇಂದ್ರಿಯಾಃ |
ತೇ ಪಂಥಾನಂ ಮಹಾತ್ಮಾನೋ ಯಾನೈರ್ಯಾಂತಿ ಸುಖಂ ನರಾಃ ॥
ಯಾವ ನನ್ನ ಭಕ್ತರು ಜಿತೇಂದ್ರಿಯರಾಗಿ ತೀರ್ಥಯಾತ್ರೆಯನ್ನು ಮಾಡಿರುತ್ತಾರೋ ಅಂತಹ ಮಹಾತ್ಮರು ಯಮಮಾರ್ಗವನ್ನು ವಾಹನಗಳನ್ನು ಏರಿಕೊಂಡು ಸುಖವಾಗಿ ದಾಟುತ್ತಾರೆ.
ಯೇ ಯಜಂತಿ ದ್ವಿಜಶ್ರೇಷ್ಠಾಃ ಕ್ರತುಭಿರ್ಭೂರಿದಕ್ಷಿಣೈಃ |
ಹಂಸಸಾರಸಯುಕ್ತೇನ ಯಾಂತಿ ಯಾನೇನ ತತ್ಪಥಮ್ ॥130॥
ಯಾವ ಬ್ರಾಹ್ಮಣರು ಬಹುದಕ್ಷಿಣೆಯಿಂದ ಕೂಡಿದ ಯಜ್ಞಗಳನ್ನು ಮಾಡಿರುತ್ತಾರೋ ಅಂತಹವರು ಹಂಸ-ಸಾರಸ ಪಕ್ಷಿಗಳಿಂದ ಕೂಡಿದ ರಥದಲ್ಲಿ ಕುಳಿತು ಯಮಪುರಿಯನ್ನು ಸೇರುತ್ತಾರೆ.
ಪರಪೀಡಾಮಕೃತ್ವೈವ ಭೃತ್ಯಾನ್ ಬಿಭ್ರತಿ ಯೇ ನರಾಃ |
ತತ್ಪಥಂ ತೇ ಸುಖಂ ಯಾಂತಿ ವಿಮಾನೈಃ ಕಾಂಚನೋಜ್ಜ್ವಲೈಃ ॥131॥
ಯಾರು ಪರಪೀಡೆಯನ್ನು ಮಾಡದೆ ತಮ್ಮ ಕುಟುಂಬವನ್ನು ಪಾಲನೆ ಮಾಡಿರುತ್ತಾರೋ ಅವರು ಸುವರ್ಣಮಯವಾದ ವಾಹನದಲ್ಲಿ ಕುಳಿತು ಸುಖವಾಗಿ ಯಮಮಾರ್ಗದಲ್ಲಿ ಪ್ರಯಾಣ ಮಾಡುತ್ತಾರೆ.
ಯೇ ಸಮಾಃ ಸರ್ವಭೂತೇಷು ಜೀವಾನಾಮಭಯಪ್ರದಾಃ |

ಕ್ರೋಧಲೋಭವಿನಿರ್ಮುಕ್ತಾ ನಿಗೃಹೀತೇಂದ್ರಿಯಾಸ್ತಥಾ ॥132॥
ಪೂರ್ಣಚಂದ್ರಪ್ರತೀಕಾಶೈರ್ವಿಮಾನೈಸ್ತೇ ಮಹಾಪ್ರಭಾಃ |
ಯಾಂತಿ ವೈವಸ್ವತಪುರಂ ದೇವಗಂಧರ್ವಸೇವಿತಾಃ ॥133॥
ಯಾರು ಸಮಸ್ತ ಪ್ರಾಣಿಗಳಲ್ಲಿಯೂ ಭಗವಂತನು ಅಂತರ್ಯಾಮಿಯಾಗಿದ್ದಾ- ನೆಂದು ಚಿಂತಿಸುತ್ತಾ, ಜೀವರಿಗೆ ಅಭಯದಾನ ಮಾಡುತ್ತಾ, ಕ್ರೋಧ-ಮೋಹಗಳಿಂದ ದೂರರಾಗಿ, ಜಿತೇಂದ್ರಿಯರಾಗಿ ಇರುತ್ತಾರೋ ಅವರು ಹುಣ್ಣಿಮೆಯ ಚಂದ್ರನಂತೆ ಮಹಾಪ್ರಭೆಯಿಂದ ಬೆಳಗುವ ವಿಮಾನಗಳಲ್ಲಿ ಕುಳಿತು ದೇವ-ಗಂಧರ್ವರಿಂದ ಸೇವಿತರಾಗಿ ವೈವಸ್ವತ ಪುರವನ್ನು ಸೇರುತ್ತಾರೆ.
ಯೇ ಮಾಮೇಕಾಂತಭಾವೇನ ಭಕ್ತ್ಯಾ ತ್ರ್ಯಂಬಕಮೇವ ವಾ |
ಪೂಜಯಂತಿ ನಮಸ್ಯಂತಿ ಸ್ತುವಂತಿ ಚ ದಿನೇ ದಿನೇ ॥134॥
ಧರ್ಮರಾಜಪುರಂ ಯಾಂತಿ ಯಾನೈಸ್ತೇಽರ್ಕಸಮಪ್ರಭೈಃ ॥135॥
ಯಾರು ನನ್ನನ್ನು ಭಕ್ತಿಯಿಂದ ಏಕಾಂತದಲ್ಲಿ ಭಜಿಸುತ್ತಾರೋ, ರುದ್ರಾಂತರ್ಯಾಮಿ ಯಾದ ನನ್ನನ್ನು ಪೂಜಿಸುತ್ತಾರೋ, ನಮಸ್ಕರಿಸುತ್ತಾರೋ, ಪ್ರತಿದಿನವು ಸ್ತೋತ್ರ ಮಾಡುತ್ತಾರೋ ಅವರು ಸೂರ್ಯಸದೃಶವಾದ ಪ್ರಭೆಯಿಂದ ಕೂಡಿದ ವಾಹನಗಳಲ್ಲಿ ಧರ್ಮರಾಜನ ಪಟ್ಟಣಕ್ಕೆ ಹೋಗುತ್ತಾರೆ.
ಪೂಜಿತಾಸ್ತತ್ರ ಧರ್ಮೇಣ ಸ್ವಯಂ ಮಾಲ್ಯಾದಿಭಿರ್ಗುಣೈಃ |
ಯಾಂತ್ಯೇವ ಮಮ ಲೋಕಂ ವಾ ರುದ್ರಲೋಕಮಥಾಪಿ ವಾ ॥136॥
ಅವರು ಆ ಯಮಪುರಿಯಲ್ಲಿ ಸಾಕ್ಷಾತ್ ಯಮಧರ್ಮನಿಂದಲೇ ಮಾಲ್ಯಾದಿ ಆಭರಣಗಳಿಂದ ಪೂಜಿತರಾಗಿ ನನ್ನ ಲೋಕವನ್ನು ಹೊಂದುತ್ತಾರೆ ಅಥವಾ ರುದ್ರಲೋಕವನ್ನು ಹೊಂದುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಏಕಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಒಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎರಡನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ನೀರು-ಅನ್ನದಾನಗಳ ಫಲವನ್ನು ಹೇಳಿದುದು. ನೀರು, ಅನ್ನಗಳನ್ನು ನೀಡದಿದ್ದವನಿಗೆ ಆಗುವ ನರಕವನ್ನು ವರ್ಣಿಸಿದುದು. ಅನೇಕ ದಾನಗಳ ಫಲವನ್ನು ಹೇಳಿದುದು. ಅತಿಥಿಯ ಪೂಜೆಯ ಮಹತ್ವವನ್ನು ಬಣ್ಣಿಸಿದುದು. ಅತಿಥಿಯನ್ನು ಪೂಜಿಸದಿದ್ದಲ್ಲಿ ಆಗುವ ದೋಷವನ್ನು ಹೇಳಿದುದು. ಭೂಮಿ, ಗೋವು, ಎಳ್ಳು, ಕನ್ಯಾದಾನಗಳ ಫಲವನ್ನು ಪ್ರತಿಪಾದಿಸಿದುದು.
ವೈಶಂಪಾಯನಃ
ಶ್ರುತ್ವಾ ಯಮಪುರಾಧ್ವಾನಂ ಜೀವಾನಾಂ ಗಮನಂ ತಥಾ |
ಧರ್ಮಪುತ್ರಃ ಪ್ರಹೃಷ್ಟಾತ್ಮಾ ಕೇಶವಂ ಪುನರಬ್ರವೀತ್ ॥1॥
ವೈಶಂಪಾಯನ ಜನಮೇಜಯನೇ, ಯಮನ ಪಟ್ಟಣಕ್ಕೆ ಹೋಗುವ ದಾರಿಯ ವಿಷಯದಲ್ಲಿ ಯುಧಿಷ್ಠಿರನು ಕೃಷ್ಣನಿಂದ ಅನೇಕ ರೀತಿಯ ವಿವರಣೆಗಳನ್ನು ಕೇಳಿ ಸಂತುಷ್ಟನಾಗಿ ಪುನಃ ಪ್ರಶ್ನಿಸಿದನು.
ಯುಧಿಷ್ಠಿರಃ
ದೇವದೇವೇಶ ದೈತ್ಯಘ್ನ ಸದಾ ದೇವೈರಭಿಷ್ಟುತ |
ಭವಾನ್ ಭವಕರಃ ಶ್ರೀಮಾನ್ ಸಹಸ್ರಾದಿತ್ಯಸಪ್ರಭ ॥2॥
ಯುಧಿಷ್ಠಿರ ದೇವದೇವೇಶನೇ, ದೈತ್ಯರ ಸಂಹಾರಕನೇ, ದೇವತೆಗಳಿಂದ ಸ್ತೋತ್ರ ಪಾತ್ರನೇ, ಶೋಭನಕರನಾದ ನೀನು ಕಾಂತಿಯುಕ್ತನಾಗಿರುವಿ, ಸಾಸಿರಸೂರ್ಯ ಸಮಪ್ರಭೆಯುಳ್ಳವನಾಗಿರುವಿ.
ಸರ್ವಸಂಭವ ಧರ್ಮಜ್ಞ ಸರ್ವಧರ್ಮಪ್ರವರ್ತಕ |
ಸರ್ವದಾನಫಲಂ ಸೌಮ್ಯ ಕಥಯಸ್ವ ಮಮಾಚ್ಯುತ ॥3॥
ಎಲ್ಲರ ಉತ್ಪತ್ತಿಗೂ ಪ್ರಭುವಾಗಿರುವಿ, ಎಲ್ಲರ ಧರ್ಮಪ್ರವರ್ತಕನಾಗಿರುವಿ. ಅಂತಹ ಅಚ್ಯುತನೇ, ನೀನು ಎಲ್ಲ ದಾನಗಳ ಫಲವನ್ನು ತಿಳಿಸು.
ದಾನಂ ಕೃತ್ವಾ ಕಥಂ ಕೃಷ್ಣ ಕೀದೃಶಸ್ಯ ದ್ವಿಜಾಯ ವೈ |
ಕೀದೃಶಂ ವಾ ತಪಃ ಕೃತ್ವಾ ತತ್ಫಲಂ ವಾಽಥ ಭುಜ್ಯತೇ ॥4॥
ಎಂತಹ ಬ್ರಾಹ್ಮಣನಿಗೆ ಯಾವ ದಾನವನ್ನು ಮಾಡಿ ಶ್ರೇಯಸ್ಸನ್ನು ಹೊಂದಬೇಕು? ಯಾವ ರೀತಿಯಾದ ತಪಸ್ಸನ್ನು ಆಚರಿಸಬೇಕು? ಅದೆಲ್ಲವನ್ನೂ ತಿಳಿಸು.
ವೈಶಂಪಾಯನಃ
ಏವಮುಕ್ತೋ ಹೃಷೀಕೇಶೋ ಧರ್ಮಪುತ್ರೇಣ ಧೀಮತಾ |
ಉವಾಚ ಧರ್ಮಪುತ್ರಾಯ ಧರ್ಮಾನ್ ಪುಣ್ಯಾನ್ ಮಹೋದಯಾನ್ ॥
ವೈಶಂಪಾಯನ ಜನಮೇಜಯನೇ, ಈ ರೀತಿಯಾಗಿ ಪ್ರಶ್ನಿಸಿದ ಧೀಮಂತನಾದ ಧರ್ಮಪುತ್ರನಿಗೆ ಹೃಷೀಕೇಶನು ಉನ್ನತಿಗೆ ಸಾಧಕವಾದ ಪುಣ್ಯವಾದ ಧರ್ಮಗಳನ್ನು ಬಣ್ಣಿಸತೊಡಗಿದನು.
ಶ್ರೀಭಗವಾನ್
ಶೃಣುಷ್ವಾವಹಿತೋ ರಾಜನ್ ಪೂತಂ ಪಾಪಘ್ನಮುತ್ತಮಮ್ |

ಸರ್ವದಾನಫಲಂ ಸೌಮ್ಯ ನ ಶ್ರಾವ್ಯಂ ಪಾಪಕರ್ಮಣಾಮ್ ॥6॥
ಶ್ರೀಭಗವಾನ್ ಯುಧಿಷ್ಠಿರನೇ, ಏಕಾಗ್ರತೆಯಿಂದ ಸಮಸ್ತ ಪಾಪಗಳನ್ನು ಪರಿಹರಿಸುವ, ಉತ್ತಮವಾದ ಸಮಸ್ತ ದಾನಗಳ ಫಲಗಳನ್ನು ನಿರೂಪಿಸುತ್ತೇನೆ. ನಾನು ಹೇಳುವ ಉಪದೇಶವು ಪಾಪಿಷ್ಠರಿಗೆ ಕೇಳಲು ಅರ್ಹವಾಗಿರುವುದಿಲ್ಲ.
ಯಚ್ಛ್ರುತ್ವಾ ಪುರುಷಃ ಸ್ತ್ರೀ ವಾ ನಷ್ಟಪಾಪಾಃ ಸಮಾಹಿತಾಃ |
ತತ್ಕ್ಷಣಾತ್ ಪೂತತಾಂ ಯಾಂತಿ ಪಾಪಕರ್ಮರತಾ ಅಪಿ ॥7॥
ನಾನು ಹೇಳುವ ಯಾವ ಧರ್ಮವಿಚಾರವನ್ನಾಗಲಿ ಸ್ತ್ರೀಯಾಗಲಿ, ಪುರುಷನಾಗಲಿ ಕೇಳಿಸಿಕೊಂಡಲ್ಲಿ ಕೂಡಲೇ ಅವರು ಪಾಪಗಳಿಂದ ವಿಮುಕ್ತರಾಗುತ್ತಾರೆ. ಕೇಳಿಸಿಕೊಂಡ ಕ್ಷಣದಲ್ಲಿಯೇ ಪಾವಿತ್ರ್ಯವನ್ನು ಹೊಂದುತ್ತಾರೆ. ಪಾಪಕರ್ಮಶೀಲರಾಗಿದ್ದರೂ ಶ್ರದ್ಧೆಯಿಂದ ಕೇಳಿದವರಿಗೆ ಪಾಪವನ್ನು ಪರಿಹರಿಸುವಂಥ ಉಪದೇಶಗಳು ನನ್ನವು.
ಏಕಾಹಮಪಿ ಕೌಂತೇಯ ಭೂಮಾವುತ್ಪಾದಿತಂ ಜಲಮ್ |
ಸಪ್ತ ತಾರಯತೇ ಪೂರ್ವಾನ್ ಪಿತೃಷ್ಣಾ ಯತ್ರ ಗೌರ್ಭವೇತ್ ॥8॥
ಯುಧಿಷ್ಠಿರನೇ, ಭೂಮಿಯಲ್ಲಿ ಉತ್ಪನ್ನವಾದ ನೀರನ್ನು ಒಂದು ಹಗಲಿನಲ್ಲಿ ಹಸಿದ ಗೋವಿಗೆ ಉಣಿಸಿದರೂ ಅದರ ಫಲದಿಂದಾಗಿ ಏಳು ತಲೆಗಳ ಪಾಪವು ಪರಿಹಾರವಾಗುತ್ತದೆ.
ಪಾನೀಯಂ ಪರಮಂ ಲೋಕೇ ಜೀವಾನಾಂ ಜೀವನಂ ಸ್ಮೃತಮ್ |
ಪಾನೀಯಸ್ಯ ಪ್ರದಾನೇನ ತೃಪ್ತಿರ್ಭವತಿ ಶಾಶ್ವತೀ ॥9॥
ಸಮಸ್ತ ಜೀವರಿಗೂ ನೀರು ಜೀವನ ಎನಿಸಿದೆ. ಲೋಕದಲ್ಲಿ ನೀರನ್ನು ಪ್ರಾಣಿಗಳ ಜೀವನಕ್ಕೆ ಆಧಾರವೆಂದಿದ್ದಾರೆ. ನೀರಡಿಕೆಯಾದವರಿಗೆ ನೀರನ್ನು ನೀಡುವುದರಿಂದ ತೃಪ್ತಿಯುಂಟಾಗುವುದರಿಂದ ಅದರ ಫಲವಾಗಿ ದಾನ ಮಾಡಿದವರಿಗೆ ಶಾಶ್ವತವಾದ ತೃಪ್ತಿಯುಂಟಾಗುತ್ತದೆ.
ಪಾನೀಯಸ್ಯ ಗುಣಾ ದಿವ್ಯಾಃ ಪರಲೋಕೇ ಸುಖಾವಹಾಃ ॥10॥
ನೀರಿನ ದಾನದಿಂದ ಉಂಟಾಗುವ ಗುಣಗಳು ಅತ್ಯಂತ ಶ್ರೇಷ್ಠವಾದವುಗಳು. ಪರಲೋಕದಲ್ಲಿಯೂ ಸುಖವನ್ನು ನೀಡುವ ಶಕ್ತಿಯು ಜಲದಾನಕ್ಕಿದೆ.
ತತ್ರ ಪುಷ್ಪೋದಕೀ ನಾಮ ನದೀ ಪರಮಪಾವನೀ |
ಕಾಮಂ ದದಾತಿ ರಾಜೇಂದ್ರ ತೋಯದಾನಾಂ ಯಮಾಲಯೇ ॥11॥
ಅದರಲ್ಲಿಯೂ ಯಮನ ಪಟ್ಟಣದಲ್ಲಿ ಪುಷ್ಪೋದಕಿ ಎಂಬ ಹೆಸರಿನ ಪರಮ ಪಾವನವಾದ ನದಿಯಿದೆ. ಈ ಭೂಲೋಕದಲ್ಲಿ ಪಾನೀಯವನ್ನು ದಾನ ಮಾಡಿದವರಿಗೆ ಯಮಲೋಕದಲ್ಲಿರುವ ಆ ನದಿಯು ಸಕಲ ಕಾಮನೆಗಳನ್ನು ನೀಡುತ್ತದೆ.
ಶೀತಲಂ ಸಲಿಲಂ ಯಸ್ಯಾಮಕ್ಷಯ್ಯಮಮೃತೋಪಮಮ್ |
ಕ್ಷೀರಂ ತೋಯಪ್ರದಾತ್ರೂಣಾಂ ಭವೇದ್ ದಿವ್ಯಂ ಸುಖಾವಹಮ್ ॥12॥
ಆ ನದಿಯ ನೀರು ಶೀತಲವಾಗಿಯೂ, ಅಕ್ಷಯವಾಗಿಯೂ, ಅಮೃತಕ್ಕೆ ಸಮಾನವಾಗಿಯೂ ಇದೆ. ಈ ಲೋಕದಲ್ಲಿ ಶೀತಲವಾದ ಪಾನೀಯವನ್ನು ದಾನ ಮಾಡಿದವರಿಗೆ ಆ ನದಿಯು ನಿತ್ಯವೂ ಸುಖವನ್ನು ನೀಡುತ್ತದೆ.
ಯೇ ಚಾಪ್ಯತೋಯದಾತಾರಃ ಪೂಯಂ ತೇಷಾಂ ವಿಧೀಯತೇ ॥13॥
ಯಾರು ಬಾಯಾರಿದವರಿಗೆ ನೀರನ್ನು ನೀಡುವುದಿಲ್ಲವೋ ಅವರು ಹೊಲಸನ್ನೇ ಸ್ವೀಕರಿಸುತ್ತಾರೆ.
ಪ್ರಶಾಮ್ಯತ್ಯಂಬುಪಾನೇನ ಬುಭುಕ್ಷಾ ಚ ಯುಧಿಷ್ಠಿರ |
ತೃಷಿತಸ್ಯ ನ ಚಾನ್ನೇನ ಪಿಪಾಸಾಽಪಿ ಪ್ರಣಶ್ಯತಿ ॥14॥
ಯುಧಿಷ್ಠಿರನೇ, ನೀರನ್ನು ಪಾನ ಮಾಡುವುದರಿಂದ ಬಾಯಾರಿಕೆಯು ಪರಿಹಾರವಾಗುತ್ತದೆ, ಹಸಿವೆಯೂ ಕೂಡ ಶಾಂತವಾಗುತ್ತದೆ. ಬಾಯಾರಿದವರಿಗೆ ಅನ್ನದಾನ ಮಾಡಿದಾಗ ಬಾಯಾರಿಕೆಯು ನೀಗುವುದಿಲ್ಲ.
ತಸ್ಮಾತ್ ತೋಯಂ ಸದಾ ದೇಯಂ ತೃಷಿತೇಭ್ಯೋ ವಿಜಾನತಾ ॥15॥
ಆದ್ದರಿಂದ ಬಾಯಾರಿದವರಿಗೆ ತಿಳಿದ ವ್ಯಕ್ತಿಯು ನೀರನ್ನೇ ದಾನ ಮಾಡಬೇಕೇ ವಿನಾ ಅನ್ನವನ್ನಲ್ಲ.
ಅಗ್ನೇರ್ಮೂರ್ತಿಃ ಕ್ಷಿತೇರ್ಯೋನಿರಮೃತಸ್ಯ ಚ ಸಂಭವಃ |
ತತ್ ತೋಯಂ ಸರ್ವಭೂತಾನಾಂ ಮೂಲಮಿತ್ಯುಚ್ಯತೇ ಬುಧೈಃ ॥16॥
ನೀರು ಅಗ್ನಿಮೂರ್ತಿ ಎನಿಸಿದೆ. ಅಮೃತಕ್ಕೂ ಉತ್ಪತ್ತಿ ಸ್ಥಾನವಾಗಿದೆ. ಆದ್ದರಿಂದ ನೀರು ಸಕಲ ಪ್ರಾಣಿಗಳಿಗೂ ಮೂಲಭೂತವಾದುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.
ಅದ್ಭಿಃ ಸರ್ವಾಣಿ ಭೂತಾನಿ ಜೀವಂತಿ ಪ್ರಭವಂತಿ ಚ |
ತಸ್ಮಾತ್ ಸರ್ವೇಷು ದಾನೇಷು ತೋಯದಾನಂ ವಿಶಿಷ್ಯತೇ ॥17॥
ಸಮಸ್ತ ಪ್ರಾಣಿಗಳು ನೀರನ್ನು ಆಶ್ರಯಿಸಿಕೊಂಡೇ ಉತ್ಪತ್ತಿಯನ್ನು ಹೊಂದುತ್ತವೆ, ಜೀವನವನ್ನು ಧರಿಸುತ್ತವೆ. ಆದ್ದರಿಂದ ಸಮಸ್ತ ದಾನಗಳಿಗಿಂತಲೂ ಜಲದಾನವು ವಿಶಿಷ್ಟವಾದುದು.
ಸರ್ವದಾನತಪೋಯಜ್ಞೈರ್ಯತ್ ಪ್ರಾಪ್ಯಂ ಫಲಮುತ್ತಮಮ್ |
ತತ್ ಸರ್ವಂ ತೋಯದಾನೇನ ಪ್ರಾಪ್ಯತೇ ನಾತ್ರ ಸಂಶಯಃ ॥18॥
ಯಾರು ಬ್ರಾಹ್ಮಣರಿಗೆ ನೀರನ್ನು ನೀಡುತ್ತಾರೋ ಅವರು ಸಮಸ್ತ ದಾನಗಳ, ತಪಸ್ಸುಗಳ, ಯಜ್ಞಗಳ ಉತ್ತಮವಾದ ಫಲವನ್ನು ಹೊಂದುತ್ತಾರೆ. ಆದ್ದರಿಂದ ಸಮಸ್ತ ದಾನಗಳ ಫಲವನ್ನು ಬಯಸುವವರು ನೀರನ್ನೇ ದಾನ ಮಾಡಬೇಕು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಯೇ ಪ್ರಯಚ್ಛಂತಿ ವಿಪ್ರೇಭ್ಯಸ್ತ್ವನ್ನದಾನಂ ಸುಸಂಸ್ಕೃತಮ್ |

ತೈಸ್ತು ದತ್ತಾಃ ಸ್ವಯಂ ಪ್ರಾಣಾ ಭವಂತಿ ಪುರುಷರ್ಷಭ ॥19॥
ಯಾವ ಬ್ರಾಹ್ಮಣರಿಗೆ ಸುಸಂಸ್ಕೃತವಾದ ಅನ್ನವನ್ನು ದಾನ ಮಾಡುತ್ತಾರೋ ಅವರು ಅನ್ನಗತಪ್ರಾಣರಾದುದರಿಂದ ಪ್ರಾಣವನ್ನೇ ದಾನ ಮಾಡಿದಂತಾಗುತ್ತದೆ.
ಅನ್ನಾದ್ ರಕ್ತಂ ಚ ಶುಕ್ಲಂ ಚ ಅನ್ನೇ ಜೀವಃ ಪ್ರತಿಷ್ಠಿತಃ |
ಇಂದ್ರಿಯಾಣಿ ಚ ಬುದ್ಧಿಶ್ಚ ಪುಷ್ಣಂತ್ಯನ್ನೇನ ನಿತ್ಯಶಃ ॥20॥
ಅನ್ನದಿಂದ ರಕ್ತ ಮತ್ತು ವೀರ್ಯಗಳು ಉತ್ಪನ್ನವಾಗುತ್ತವೆ. ಅನ್ನದಲ್ಲಿಯೇ ಪ್ರಾಣಿಗಳ ಜೀವನವು ಪ್ರತಿಷ್ಠಿತವಾಗಿದೆ. ಇಂದ್ರಿಯಗಳು, ಬುದ್ಧಿ ಅನ್ನದಿಂದಲೇ ಪುಷ್ಟವಾಗುತ್ತವೆ.
ಅನ್ನಹೀನಾನಿ ಸೀದಂತಿ ಸರ್ವಭೂತಾನಿ ಪಾಂಡವ ॥21॥
ಧರ್ಮರಾಜನೇ, ಸಮಸ್ತ ಪ್ರಾಣಿಗಳು ಅನ್ನವಿಲ್ಲದಿದ್ದರೆ ವಿನಾಶ ಹೊಂದುತ್ತವೆ.
ತೇಜೋ ಬಲಂ ಚ ರೂಪಂ ಚ ಸತ್ತ್ವಂ ವೀರ್ಯಂ ದ್ಯುತಿರ್ಧೃತಿಃ |
ಜ್ಞಾನಂ ಮೇಧಾ ತಥಾಽಽಯುಶ್ಚ ಸರ್ವಮನ್ನೇ ಪ್ರತಿಷ್ಠಿತಮ್ ॥22॥
ತೇಜಸ್ಸು, ಬಲ, ರೂಪ, ಸತ್ತ್ವ, ವೀರ್ಯ, ಕಾಂತಿ, ಧೈರ್ಯ, ಜ್ಞಾನ, ಮೇಧಾ, ಆಯುಷ್ಯ ಎಲ್ಲವೂ ಅನ್ನದಲ್ಲೇ ಪ್ರತಿಷ್ಠಿತವಾಗಿವೆ.
ದೇವದಾನವತಿರ್ಯಕ್ಷು ಸರ್ವಲೋಕೇಷು ಸರ್ವದಾ |
ಸರ್ವಕಾಲಂ ಹಿ ಸರ್ವೇಷಾಮನ್ನೇ ಪ್ರಾಣಾಃ ಪ್ರತಿಷ್ಠಿತಾಃ ॥23॥
ಸಮಸ್ತ ಲೋಕದಲ್ಲಿಯೂ, ಸಮಸ್ತ ಕಾಲಗಳಲ್ಲಿಯೂ ಇರುವ ದೇವತೆಗಳು, ಮನುಷ್ಯರು ಹಾಗೆ ತ್ರಿವಿಧಯೋನಿಗಳಲ್ಲಿ ಹುಟ್ಟಿದ ಪ್ರಾಣಿಗಳು ಇವರೆಲ್ಲರ ಪ್ರಾಣಗಳು ಅನ್ನದಲ್ಲಿಯೇ ಪ್ರತಿಷ್ಠಿತವಾಗಿವೆ.
ಅನ್ನಂ ಪ್ರಜಾಪತೇ ರೂಪಮನ್ನಂ ಪ್ರಜನನಂ ಸ್ಮೃತಮ್ |
ಸರ್ವಭೂತಮಯಂ ಚಾನ್ನಂ ಜೀವಶ್ಚಾನ್ನಮಯಃ ಸ್ಮೃತಃ ॥24॥
ಅನ್ನವು ಚತುರ್ಮುಖಬ್ರಹ್ಮನ ರೂಪವೆನಿಸಿದೆ. ಅನ್ನವೇ ಪ್ರಾಣಿಗಳ ಉತ್ಪತ್ತಿಗೆ ಕಾರಣವಾಗಿದೆ. ಆದ್ದರಿಂದ ಅನ್ನವು ಸರ್ವಭೂತಮಯವಾಗಿದೆ. ಸಮಸ್ತ ಜೀವರು ಅನ್ನಮಯರೆಂದೇ ಕರೆಸಿಕೊಳ್ಳುತ್ತಾರೆ.
ಅನ್ನೇನಾಧಿಷ್ಠಿತಃ ಪ್ರಾಣೋ ಹ್ಯಪಾನೋ ವ್ಯಾನ ಏವ ಚ |
ಉದಾನಶ್ಚ ಸಮಾನಶ್ಚ ಧಾರಯಂತಿ ಶರೀರಿಣಮ್ ॥25॥
ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನ ಎಂಬ ಐದು ಪ್ರಾಣರು ಅನ್ನವನ್ನೇ ಆಶ್ರಯಿಸಿಕೊಂಡು ಪ್ರಾಣಿಗಳನ್ನು ರಕ್ಷಿಸುತ್ತಾರೆ.
ಶಯನೋತ್ಥಾನಗಮನಗ್ರಹಣಾಕರ್ಷಣಾನಿ ಚ |
ಸರ್ವಸತ್ತ್ವಕೃತಂ ಕರ್ಮ ಚಾನ್ನಾದೇವ ಪ್ರವರ್ತತೇ ॥26॥
ಸಮಸ್ತ ಪ್ರಾಣಿಗಳು ಮಲಗುವುದು, ಎಚ್ಚರಗೊಳ್ಳುವುದು, ಓಡಾಡುವುದು, ಆಗಮಿಸುವುದು, ಸ್ವೀಕರಿಸುವುದು, ಹೊಂದುವುದು - ಸಮಸ್ತ ಈ ವಿಧವಾದ ಸಕಲ ಕರ್ಮಗಳೂ ನಾವು ಸ್ವೀಕರಿಸುವ ಅನ್ನದಿಂದಲೇ ನಡೆಯುತ್ತವೆ.
ಚತುರ್ವಿಧಾನಿ ಭೂತಾನಿ ಜಂಗಮಾನಿ ಸ್ಥಿರಾಣಿ ಚ |
ಅನ್ನಾದ್ ಭವಂತಿ ರಾಜೇಂದ್ರ ಸೃಷ್ಟಿರೇಷಾ ಸನಾತನೀ ॥27॥
ನಾಲ್ಕುವಿಧವಾದ ಚರಾಚರ ಪ್ರಾಣಿಗಳು ಅನ್ನದಿಂದಲೇ ಹುಟ್ಟುತ್ತವೆ. ಇದು ಪ್ರಜಾಪತಿಯ ಸನಾತನ ಸೃಷ್ಟಿಯಾಗಿದೆ.
ವಿದ್ಯಾಸ್ಥಾನಾನಿ ಸರ್ವಾಣಿ ಸರ್ವಯಜ್ಞಾಶ್ಚ ಪಾವನಾಃ |
ಅನ್ನಾದ್ ಯಸ್ಮಾತ್ ಪ್ರವರ್ತಂತೇ ತಸ್ಮಾದನ್ನಂ ಪರಂ ಸ್ಮೃತಮ್ ॥28॥
ಅನ್ನದಿಂದಲೇ ಸಮಸ್ತ ವಿದ್ಯಾಸ್ಥಾನಗಳು, ಪಾವನಗೊಳಿಸುವ ಎಲ್ಲ ಯಜ್ಞಗಳು ಪ್ರವೃತ್ತಿಯನ್ನು ಹೊಂದುತ್ತವೆ. ಆದ್ದರಿಂದ ಅನ್ನವೇ ಶ್ರೇಷ್ಠವಾದುದು ಎಂಬುದು ಜ್ಞಾನಿಗಳ ಅಭಿಪ್ರಾಯ.
ದೇವಾ ರುದ್ರಾದಯಃ ಸರ್ವೇ ಪಿತರೋಽಪ್ಯಗ್ನಯಸ್ತಥಾ |
ಯಸ್ಮಾದನ್ನೇನ ತುಷ್ಯಂತಿ ತಸ್ಮಾದನ್ನಂ ವಿಶಿಷ್ಯತೇ ॥29॥
ರುದ್ರಾದಿ ದೇವತೆಗಳು, ಸಮಸ್ತ ಪಿತೃಗಳು, ಅಗ್ನಿಗಳು ಯಾವ ಅನ್ನದಿಂದ ಸಂತೋಷ ಹೊಂದುತ್ತಾರೋ ಆದ್ದರಿಂದ ಅನ್ನವು ಶ್ರೇಷ್ಠವಾದುದು ಎಂದು ಹೇಳಲ್ಪಟ್ಟಿದೆ.
ಯಸ್ಮಾದನ್ನಾತ್ ಪ್ರಜಾಃ ಸರ್ವಾಃ ಕಲ್ಪೇ ಕಲ್ಪೇಽಸೃಜತ್ ಪ್ರಭುಃ |
ತಸ್ಮಾದನ್ನಾತ್ ಪರಂ ದಾನಂ ನ ಭೂತಂ ನ ಭವಿಷ್ಯತಿ ॥30॥
ಯಾವ ಕಾರಣದಿಂದ ಚತುರ್ಮುಖಬ್ರಹ್ಮನು ಕಲ್ಪ ಕಲ್ಪದಲ್ಲಿಯೂ ಅನ್ನದಿಂದಲೇ ಪ್ರಜೆಗಳನ್ನು ಸೃಷ್ಟಿಸಿದನೋ ಈ ಕಾರಣದಿಂದ ಅನ್ನದಾನಕ್ಕಿಂತ ಶ್ರೇಷ್ಠವಾದ ದಾನವು ಹಿಂದೆಯೂ ಇರಲಿಲ್ಲ, ಮುಂದೆಯೂ ಉಂಟಾಗುವುದಿಲ್ಲ.
ಯಸ್ಮಾದನ್ನಾತ್ ಪ್ರವರ್ತಂತೇ ಧರ್ಮಾರ್ಥೌ ಕಾಮ ಏವ ಚ |
ತಸ್ಮಾದನ್ನಾತ್ ಪರಂ ದಾನಂ ನಾಮುತ್ರೇಹ ಚ ಪಾಂಡವ ॥31॥
ಅನ್ನದಿಂದಲೆ ಧರ್ಮ, ಅರ್ಥ, ಕಾಮಗಳ ಪ್ರವೃತ್ತಿಯು ಉಂಟಾಗುವುದರಿಂದ ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಅನ್ನದಾನಕ್ಕಿಂತ ಶ್ರೇಷ್ಠವಾದ ದಾನವು ಬೇರೆ ಇರುವುದಿಲ್ಲ.
ಯಕ್ಷರಕ್ಷೋಗಣಾ ನಾಗಾ ಭೂತಾ ದೈತ್ಯಾಶ್ಚ ದಾನವಾಃ |
ತುಷ್ಯಂತ್ಯನ್ನೇನ ಯಸ್ಮಾತ್ತು ತಸ್ಮಾದನ್ನಂ ಪರಂ ಭವೇತ್ ॥32॥
ಯಕ್ಷರು, ರಾಕ್ಷಸರು, ಗ್ರಹಗಳು, ನಾಗಗಳು, ಭೂತಗಳು, ದೈತ್ಯರು, ದಾನವರು ಇವರೆಲ್ಲರೂ ಅನ್ನದಿಂದಲೇ ಸಂತುಷ್ಟರಾಗುತ್ತಾರೆ. ಆದ್ದರಿಂದ ಅನ್ನವು ಪರಮಶ್ರೇಷ್ಠವಾದುದು.

ಪರಾನ್ನಮುಪಭುಂಜಾನೋ ಯತ್ ಕರ್ಮ ಕುರುತೇ ಶುಭಮ್ |
ತಚ್ಛುಭಸ್ಯೈಕಭಾಗಸ್ತು ಕರ್ತುರ್ಭವತಿ ಭಾರತ ॥33॥
ಯಾರು ಪರಾನ್ನವನ್ನು ಊಟಮಾಡುತ್ತಾ ಸತ್ಕರ್ಮಗಳನ್ನು ಆಚರಿಸುತ್ತಾರೋ ಆ ಸತ್ಕರ್ಮದ ಒಂದು ಭಾಗವು ಊಟ ಹಾಕಿದವನಿಗೆ ದೊರೆಯುತ್ತದೆ.
ಅನ್ನದಸ್ಯ ತ್ರಯೋ ಭಾಗಾ ಭವಂತಿ ಪುರುಷರ್ಷಭ |
ತಸ್ಮಾದನ್ನಂ ಪ್ರದಾತವ್ಯಂ ಬ್ರಾಹ್ಮಣೇಭ್ಯೋ ವಿಶೇಷತಃ ॥34॥
ಅನ್ನದಾನ ಮಾಡಿದ ವ್ಯಕ್ತಿಗೆ ಅನ್ನದಲ್ಲಿ ಮೂರು ಭಾಗಗಳು ಉಂಟಾಗುತ್ತವೆ. ಒಂದು ಭಾಗವು ಭೋಕ್ತೃವಿಗೂ, ಮತ್ತೊಂದು ಭಾಗವು ಯಜಮಾನನಿಗೂ, ಮತ್ತೊಂದು ಭಾಗವು ದೇವತೆಗಳಿಗೂ ತಲುಪುತ್ತದೆ. ಆದ್ದರಿಂದ ಬ್ರಾಹ್ಮಣರಿಗೆ ವಿಶೇಷವಾಗಿ ಅನ್ನದಾನ ಮಾಡಬೇಕು.
ಬ್ರಾಹ್ಮಣಾಯ ದರಿದ್ರಾಯ ಯೋಽನ್ನಂ ಸಂವತ್ಸರಂ ನೃಪ |
ಶ್ರೋತ್ರಿಯಾಯ ಪ್ರಯಚ್ಛೇದ್ ವೈ ಪಾಕಭೇದವಿವರ್ಜಿತಃ ॥35॥
ದರಿದ್ರನಾದ ಬ್ರಾಹ್ಮಣನಿಗೆ ಯಾವ ಪುರುಷನು ಒಂದು ವರ್ಷಗಳ ಕಾಲ ಅನ್ನವನ್ನು ನೀಡುತ್ತಾನೋ, ಶ್ರೋತ್ರಿಯನಾದ ದರಿದ್ರನಾದ ಬ್ರಾಹ್ಮಣನಿಗೆ ಪಾಕಭೇದವನ್ನು ಮಾಡದೆ ಅನ್ನದಾನವನ್ನು ಮಾಡುತ್ತಾನೋ,
ಡಂಭಾನೃತವಿಮುಕ್ತಸ್ತು ಪರಾಂ ಭಕ್ತಿಮುಪಾಗತಃ |
ಸ್ವಧರ್ಮೇಣಾರ್ಜಿತಫಲಂ ತಸ್ಯ ಪುಣ್ಯಫಲಂ ಶೃಣು ॥36॥
ಜಂಭ, ಸುಳ್ಳು ಇವುಗಳಿಂದ ಮುಕ್ತನಾಗಿ, ಭಕ್ತಿಯಿಂದ ಕೂಡಿದವನಾಗಿ, ಸ್ವಧರ್ಮದಿಂದ ಆರ್ಜಿತವಾದ ಧನದಿಂದ ಅನ್ನದಾನ ಮಾಡುತ್ತಾನೋ ಅವನ ಪುಣ್ಯವನ್ನು ಹೇಳುತ್ತೇನೆ, ಕೇಳಿಸಿಕೊ.
ಶತವರ್ಷಸಹಸ್ರಾಣಿ ಕಾಮಗಃ ಕಾಮರೂಪಧೃತ್ |
ಮೋದತೇಽಮರಲೋಕಸ್ಥಃ ಪೂಜ್ಯಮಾನಃ ಸುರೋತ್ತಮೈಃ ॥37॥
ಲಕ್ಷವರ್ಷಗಳ ಕಾಲ ಇಚ್ಛಾರೂಪವನ್ನು ಧರಿಸಿ, ಮನಸ್ಸು ಬಂದಲ್ಲಿ ಸ್ವರ್ಗಲೋಕದಲ್ಲಿ ಸಮಸ್ತ ದೇವತೆಗಳಿಂದ ಆರಾಧಿಸಲ್ಪಡುತ್ತಾ ಸಂತೋಷವನ್ನು ಹೊಂದುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾನ್ನರಲೋಕೇ ದ್ವಿಜೋ ಭವೇತ್ ॥38॥
ಬಳಿಕ ಸ್ವರ್ಗಲೋಕದಿಂದ ಭೂಮಿಯಲ್ಲಿ ಚ್ಯುತನಾದರೂ ಆ ಅನ್ನದಾನ ಮಾಡಿದ ಪುರುಷನು ಮನುಷ್ಯಲೋಕದಲ್ಲಿ ಬ್ರಾಹ್ಮಣ ಯೋನಿಯಲ್ಲಿಯೇ ಹುಟ್ಟುತ್ತಾನೆ.
ಅಗ್ರಭಿಕ್ಷಾಂ ಚ ಯೋ ದದ್ಯಾದ್ ದರಿದ್ರಾಯ ದ್ವಿಜಾತಯೇ |
ಷಣ್ಮಾಸಾದ್ ವಾರ್ಷಿಕಂ ಶ್ರಾದ್ಧಂ ತಸ್ಯ ಪುಣ್ಯಫಲಂ ಶೃಣು ॥39॥
ಯಾರು ಆರು ತಿಂಗಳವರೆಗೆ ಪ್ರತಿನಿತ್ಯವೂ ದರಿದ್ರನಾದ ಬ್ರಾಹ್ಮಣನಿಗೆ ಮೊದಲು ಭಿಕ್ಷೆಯನ್ನು ನೀಡುತ್ತಾನೋ, ವರ್ಷಪರ್ಯಂತವೂ ಶ್ರಾದ್ಧ ಮಾಡಿ ಭೋಜನ ಮಾಡಿಸುತ್ತಾನೋ ಅಂತಹವನಿಗೆ ಲಭಿಸುವ ಪುಣ್ಯವೇನೆಂಬುದನ್ನು ಕೇಳು.
ಗೋಸಹಸ್ರಪ್ರದಾನೇನ ಯತ್ಪುಣ್ಯಂ ಸಮುದಾಹೃತಮ್ |
ತತ್ಪುಣ್ಯಫಲಮಾಪ್ನೋತಿ ನರೋ ವೈ ನಾತ್ರ ಸಂಶಯಃ ॥40॥
ಸಾವಿರ ಗೋವುಗಳನ್ನು ದಾನ ಮಾಡುವುದರಿಂದ ಎಷ್ಟು ಪುಣ್ಯವು ಲಭಿಸುತ್ತದೋ ಅಷ್ಟು ಪುಣ್ಯವು ಬ್ರಾಹ್ಮಣನಿಗೆ ಆರು ತಿಂಗಳುಗಳ ಕಾಲ ಮೊದಲು ಊಟ ಹಾಕುವುದರಿಂದ ಉಂಟಾಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಅಥ ಸಂವತ್ಸರಂ ದದ್ಯಾದಗ್ರಭಿಕ್ಷಾಮಯಾಚತೇ |
ಪ್ರಚ್ಛಾದ್ಯೈವ ಸ್ವಯಂ ನೀತ್ವಾ ತಸ್ಯ ಪುಣ್ಯಫಲಂ ಶೃಣು ॥41॥
ಧರ್ಮರಾಜನೇ, ಯಾರು ಒಂದು ವರ್ಷಗಳ ಕಾಲ ಬೇಡದಿರುವ ಬ್ರಾಹ್ಮಣನಿಗೆ ತಾನೇ ಪಾಕವನ್ನು ತಯಾರಿಸಿ, ಆ ಪಾಕವನ್ನು ಮುಚ್ಚಿಕೊಂಡು ಅವನ ಮನೆಗೆ ಹೋಗಿ ನೀಡುವುದರಿಂದ ಲಭಿಸುವ ಪುಣ್ಯದ ಫಲವೇನೆಂಬುದನ್ನು ತಿಳಿಸುತ್ತೇನೆ, ಕೇಳು.
ಕಪಿಲಾನಾಂ ಸಹಸ್ರೇ ತು ದತ್ತೇ ಯತ್ಪುಣ್ಯಮುಚ್ಯತೇ |
ತತ್ಪುಣ್ಯಮಖಿಲಂ ಪ್ರಾಪ್ಯ ಶಕ್ರಲೋಕೇ ಮಹೀಯತೇ ॥42॥
ಅನ್ನದಾನಿಯು, ಸಾವಿರ ಕಪಿಲಧೇನುಗಳನ್ನು ದಾನ ಮಾಡಿದಾಗ ಯಾವ ಪುಣ್ಯವನ್ನು ಹೊಂದುತ್ತಾನೋ ಆ ಸಮಸ್ತ ಪುಣ್ಯವನ್ನು ಪಡೆದವನಾಗಿ ಇಂದ್ರದೇವನ ಲೋಕದಲ್ಲಿ ಪೂಜ್ಯನಾಗುತ್ತಾನೆ.
ಸ ಶಕ್ರಭವನೇ ರಮ್ಯೇ ವರ್ಷಕೋಟಿಶತಂ ನೃಪ |
ಯಥಾಕಾಮಂ ಮಹಾತೇಜಾಃ ಕ್ರೀಡತ್ಯಪ್ಸರಸಾಂ ಗಣೈಃ ॥43॥
ಆ ಅನ್ನದಾನ ಮಾಡಿದ ವ್ಯಕ್ತಿಯು ರಮಣೀಯವಾದ ಇಂದ್ರನ ಭವನದಲ್ಲಿ ನೂರು ಕೋಟಿ ವರ್ಷಗಳ ಕಾಲ ಅಪ್ಸರಾಸ್ತ್ರೀಯರಿಂದ ಕೂಡಿದವನಾಗಿ ತೇಜಃಸಂಪನ್ನನಾಗಿ ಮನಬಂದಂತೆ ಸಂತೋಷ ಹೊಂದುತ್ತಾನೆ.
ಅಗ್ರಾನ್ನಂ ಯಸ್ತು ವೈ ದದ್ಯಾದ್ ದ್ವಿಜಾಯ ನಿಯತವ್ರತಃ |
ದಶ ವರ್ಷಾಣಿ ರಾಜೇಂದ್ರ ತಸ್ಯ ಪುಣ್ಯಫಲಂ ಶೃಣು ॥44॥
ಯಾವ ವ್ಯಕ್ತಿಯು ಜಿತೇಂದ್ರಿಯನಾದ ಬ್ರಾಹ್ಮಣನಿಗೆ ಮೊದಲು ಅನ್ನದಾನವನ್ನು ಹತ್ತು ವರ್ಷಗಳ ಕಾಲ ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳಿಸಿಕೊ.
ಕಪಿಲಾಶತಸಹಸ್ರಸ್ಯ ವಿಧಿದತ್ತಸ್ಯ ಯತ್ಫಲಮ್ |
ತತ್ಪುಣ್ಯಫಲಮಾಸಾದ್ಯ ಪುರಂದರಪುರಂ ವ್ರಜೇತ್ ॥45॥

ಯಾರು ಹತ್ತು ವರ್ಷಗಳ ಕಾಲ ಅನ್ನದಾನವನ್ನು ಮಾಡುತ್ತಾರೋ ಅವರು ಹತ್ತು ಲಕ್ಷ ಕಪಿಲಧೇನುವನ್ನು ವಿಧಿಬದ್ಧವಾಗಿ ದಾನ ಮಾಡಿದಾಗ ಎಷ್ಟು ಪುಣ್ಯವು ಲಭಿಸುತ್ತದೋ ಅಷ್ಟು ಪುಣ್ಯವನ್ನು ಹೊಂದಿ ಪುರಂದರನ ಪಟ್ಟಣಕ್ಕೆ ಹೋಗುತ್ತಾರೆ.
ಸ ಶಕ್ರಭವನೇ ರಮ್ಯೇ ಕಾಮರೂಪೀ ಯಥಾಸುಖಮ್ |
ದಶಕೋಟಿಸಮಾ ರಾಜನ್ ಕ್ರೀಡತೇ ಸುರಪೂಜಿತಃ ॥46॥
ಅವನು ರಮಣೀಯವಾದ ಇಂದ್ರನ ಭವನಕ್ಕೆ ತೆರಳಿ, ಕಾಮರೂಪಿಯಾಗಿ, ಸುಖವಾಗಿ ದೇವತೆಗಳಿಂದ ಪೂಜಿತನಾಗಿ ಹತ್ತು ಕೋಟಿ ವರ್ಷಗಳ ಕಾಲ ಸಂತೋಷವನ್ನು ಹೊಂದುತ್ತಾನೆ.
ಶಕ್ರಲೋಕಾವತೀರ್ಣಶ್ಚೇದ್ ಇಹ ಲೋಕೇ ಮಹಾದ್ಯುತಿಃ |
ಚತುರ್ವೇದೀ ದ್ವಿಜಃ ಶ್ರೀಮಾನ್ ಜಾಯತೇ ರಾಜಪೂಜಿತಃ ॥47॥
ಬಳಿಕ ಶಕ್ರಲೋಕದಿಂದ ಭೂಮಿಗೆ ಇಳಿದು ಬಂದ ಆತನು ಈ ಲೋಕದಲ್ಲಿ ಕಾಂತಿಸಂಪನ್ನನಾಗಿ, ನಾಲ್ಕು ವೇದಗಳನ್ನು ಅಧ್ಯಯನ ಮಾಡಿದ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ರಾಜರಿಂದ ಸಮ್ಮಾನಿತನಾಗುತ್ತಾನೆ.
ಅಧ್ವಶ್ರಾಂತಾಯ ವಿಪ್ರಾಯ ಕ್ಷುಧಿತಾಯಾನ್ನಕಾಂಕ್ಷಿಣೇ |
ದೇಶಕಾಲಾಭಿಯಾತಾಯ ದೀಯತೇ ಪಾಂಡುನಂದನ ॥48॥
ಪಾಂಡವನೇ, ದಾರಿಯಲ್ಲಿ ನಡೆದು ಆಯಾಸ ಹೊಂದಿರುವ, ಹಸಿವಿನಿಂದ ಬಳಲಿರುವ, ಅನ್ನವನ್ನು ಅಪೇಕ್ಷಿಸುವ ಬ್ರಾಹ್ಮಣನಿಗೆ ದೇಶ-ಕಾಲಾದಿಗಳನ್ನು ವಿಮರ್ಶಿಸದೆ ಅನ್ನವನ್ನು ನಿಶ್ಚಿತವಾಗಿ ದಾನ ಮಾಡಬೇಕು.
ಯಾಚಿತೋಽನ್ನಂ ನ ದದ್ಯಾದ್ ಯೋ ವಿದ್ಯಮಾನೇ ಧನಾಗಮೇ |
ಸ ಲಬ್ಧೋ ನರಕಂ ಯಾತಿ ಕೃಮೀಣಾಂ ಕಾಲಸೂತ್ರಕಮ್ ॥49॥
ತನ್ನ ಬಳಿ ಯಥೇಷ್ಟವಾದ ಧನವಿದ್ದಾಗಲೂ, ಅನ್ನವನ್ನು ಬೇಡುವ ವ್ಯಕ್ತಿಗಳು ಆಗಮಿಸಿದಾಗಲೂ ಯಾರು ಮೋಹದಿಂದ ಅನ್ನದಾನವನ್ನು ಮಾಡುವುದಿಲ್ಲವೋ ಅಂತಹ ಜಿಪುಣನು ಕ್ರಿಮಿಗಳಿಂದ ಕೂಡಿದ ಕಾಲಸೂತ್ರಕ ಎಂಬ ನರಕದಲ್ಲಿ ಬೀಳುತ್ತಾನೆ.
ಸ ತತ್ರ ನರಕೇ ಘೋರೇ ಲೋಭಮೋಹಿತಚೇತನಃ |
ದಶವರ್ಷಸಹಸ್ರಾಣಿ ಕ್ಲಿಶ್ಯತೇ ವೇದನಾರ್ದಿತಃ ॥50॥
ಆತನು ಕಾಲಸೂತ್ರ ನರಕದಲ್ಲಿ ಲೋಭದಿಂದ ಮೋಹಿತವಾದ ಮನಸ್ಸುಳ್ಳವನಾಗಿ ಹತ್ತು ಸಾವಿರ ವರ್ಷಗಳ ಕಾಲ ವೇದನೆಯಿಂದ ಸಂಕಟ ಪಡುತ್ತಾನೆ.
ತಸ್ಮಾಚ್ಚ ನರಕಾನ್ಮುಕ್ತಃ ಕಾಲೇನ ಮಹತಾ ಹಿ ಸಃ |
ದರಿದ್ರೋ ಮಾನುಷೇ ಲೋಕೇ ಚಂಡಾಲೇಷ್ವೇವ ಜಾಯತೇ ॥51॥
ಅವನು ಬಳಿಕ ಆ ನರಕದಿಂದ ಮುಕ್ತನಾದರೂ ತುಂಬಾ ಕಾಲ ಶಿಕ್ಷೆಯನ್ನು ಅನುಭವಿಸಿ ಈ ಭೂಲೋಕಕ್ಕೆ ಆಗಮಿಸಿ, ದರಿದ್ರನಾಗಿ ಚಂಡಾಲಯೋನಿಯಲ್ಲಿ ಹುಟ್ಟುತ್ತಾನೆ.
ಯಸ್ತು ಪಾಂಸುಲಪಾದಶ್ಚ ದೂರಾಧ್ವಶ್ರಮಕರ್ಶಿತಃ |
ಕ್ಷುತ್ಪಿಪಾಸಾಶ್ರಮಶ್ರಾಂತಃ ಶ್ರಮಖಿನ್ನಗತಿರ್ದ್ವಿಜಃ ॥52॥
ಪೃಚ್ಛನ್ ವೈ ಹ್ಯನ್ನದಾತಾರಂ ಗೃಹಮಭ್ಯೇತಿ ಚಾಶಯಾ |
ತಂ ಪೂಜಯೇತ ಯತ್ನೇನ ಸೋಽತಿಥಿಃ ಸ್ವರ್ಗಸಂಕ್ರಮಃ ॥53॥
ತಸ್ಮಿಂಸ್ತುಷ್ಟೇ ನರಶ್ರೇಷ್ಠ ತುಷ್ಟಾಃ ಸ್ಯುಃ ಸರ್ವದೇವತಾಃ ॥54॥
ಯಾವನು ಬಹಳ ದೂರ ನಡೆದು ಶ್ರಮದಿಂದ ದುಃಖಿತನಾಗಿರುವ, ಹಸಿವು ಬಾಯಾರಿಕೆಗಳ ಶ್ರಮದಿಂದ ಆಯಾಸಗೊಂಡಿರುವ, ಆರ್ತನಾದ, ಬಹಳ ಕಷ್ಟದಿಂದ ಹೆಜ್ಜೆಗಳನ್ನಿಡುತ್ತಿರುವ, ಧೂಳಿನಿಂದ ಮುಚ್ಚಿಹೋದ ಪಾದಗಳುಳ್ಳ ಬ್ರಾಹ್ಮಣನಿಗೆ, ಈ ಊರಿನಲ್ಲಿ ಅನ್ನದಾನವನ್ನು ಮಾಡುವವರು ಯಾರು ಎಂದು ಕೇಳುತ್ತಾ ಅನ್ನದಾನ ಮಾಡುವವನ ಮನೆಗೆ ಆಗಮಿಸಿ ಅನ್ನವನ್ನು ಬೇಡುತ್ತಾನೋ, ಆ ಸಮಯದಲ್ಲಿ ಗೃಹಸ್ಥನು ಪ್ರಯತ್ನಪೂರ್ವಕವಾಗಿ ಸತ್ಕರಿಸಬೇಕು. ಕಾರಣ, ಆ ಆಗಮಿಸಿದ ಅತಿಥಿಯೇ ಧಾತೃವಿನ ಸ್ವರ್ಗಕ್ಕೆ ಸೋಪಾನದಂತಿದ್ದಾನೆ. ಅಂತಹ ಬಳಲಿದ ಅತಿಥಿಯು ತುಷ್ಟನಾದರೆ ಸಮಸ್ತ ದೇವತೆಗಳು ತುಷ್ಟರಾಗುತ್ತಾರೆ.
ನ ತಥಾ ಹವಿಷಾ ಹೋಮೈರ್ನ ಪುಷ್ಪೈರ್ನಾನುಲೇಪನೈಃ |
ಅಗ್ನಯಃ ಪಾರ್ಥ ತುಷ್ಯಂತಿ ಯಥಾ ಹ್ಯತಿಥಿಪೂಜನಾತ್ ॥55॥
ಪಾರ್ಥನೇ, ಅತಿಥಿಸತ್ಕಾರದಿಂದ ಅಗ್ನಿಗಳು ತೃಪ್ತಿಪಡುವಂತೆ ಹವಿಸ್ಸಿನಿಂದಾಗಲಿ, ಹೋಮದಿಂದಾಗಲಿ, ಪುಷ್ಪಗಳಿಂದಾಗಲಿ, ಚಂದನಾದಿ ಲೇಪನಗಳಿಂದಾಗಲಿ ತೃಪ್ತಿಯನ್ನು ಹೊಂದುವುದಿಲ್ಲ.
ಕಪಿಲಾಯಾಂ ತು ದತ್ತಾಯಾಂ ವಿಧಿವಜ್ಜ್ಯೇಷ್ಠಪುಷ್ಕರೇ |
ನ ತತ್ಫಲಮವಾಪ್ನೋತಿ ಯತ್ಫಲಂ ವಿಪ್ರಭೋಜನಾತ್ ॥56॥
ಬ್ರಾಹ್ಮಣರನ್ನು ಭೋಜಿಸಿದಾಗ ಯಾವ ಫಲವು ಲಭಿಸುತ್ತದೋ, ಕಪಿಲಧೇನುವನ್ನು ವಿಧಿಬದ್ಧವಾಗಿ ಜ್ಯೇಷ್ಠಪುಷ್ಕರದಲ್ಲಿ ದಾನ ಮಾಡಿದಾಗಲೂ ಬ್ರಾಹ್ಮಣ ಭೋಜನದ ಫಲವು ಲಭಿಸುವುದಿಲ್ಲ.
ದ್ವಿಜಪಾದೋದಕಕ್ಲಿನ್ನಾ ಯಾವತ್ ತಿಷ್ಠತಿ ಮೇದಿನೀ |
ತಾವತ್ ಪುಷ್ಕರಪರ್ಣೇನ ಪಿಬಂತಿ ಪಿತರೋ ಜಲಮ್ ॥57॥
ಮನೆಗೆ ಬ್ರಾಹ್ಮಣನೊಬ್ಬನು ಬಂದಾಗ ಅವನ ಪಾದಕ್ಕೆ ನೀರನ್ನು ಹಾಕಬೇಕು. ಬ್ರಾಹ್ಮಣನ ಪಾದಕ್ಕೆ ಹಾಕಿದ ನೀರಿನಿಂದ ಭೂಮಿಯು ಎಷ್ಟು ಕಾಲ ಒದ್ದೆಯಾಗಿರುತ್ತದೋ ಅಷ್ಟು ಕಾಲದವರೆಗೆ ಗತಿಸಿದ ಪಿತೃಗಳು ಕಮಲದ ಎಲೆಯಲ್ಲಿ ನೀರನ್ನು ಕುಡಿದು ತೃಷೆಯನ್ನು ಪರಿಹರಿಸಿಕೊಳ್ಳುತ್ತಾರೆ.
ದೇವಮಾಲ್ಯೋಪನಯನಂ ದ್ವಿಜೋಚ್ಛಿಷ್ಟಾವಮಾರ್ಜನಮ್ |

ಶ್ರಾಂತಸಂವಾಹನಂ ಚೈವ ತಥಾ ಪಾದಾವಸೇಚನಮ್ ॥58॥
ಪ್ರತಿಶ್ರಯಪ್ರದಾನಂ ಚ ತಥಾ ಶಯ್ಯಾಸನಸ್ಯ ಚ |
ಏಕೈಕಂ ಪಾಂಡವಶ್ರೇಷ್ಠ ಗೋಪ್ರದಾನಾದ್ ವಿಶಿಷ್ಯತೇ ॥59॥
ಪಾಂಡವನೇ, ದೇವತಾವಿಗ್ರಹಗಳ ಮೇಲಿರುವ ನಿರ್ಮಾಲ್ಯವನ್ನು ಶುದ್ಧಿಗೊಳಿಸುವುದು, ಬ್ರಾಹ್ಮಣರು ಊಟ ಮಾಡಿದ ಬಳಿಕ ಅವರ ಎಲೆಗಳನ್ನು ತೆಗೆದು ಗೋಮಯದಿಂದ ಶುದ್ಧಿಗೊಳಿಸುವುದು, ದಾರಿಯಲ್ಲಿ ನಡೆದು ಬಳಲಿ ಬಂದ ಬ್ರಾಹ್ಮಣರ ಕಾಲುಗಳನ್ನು ಒತ್ತುವುದು, ಅವರ ಕಾಲುಗಳನ್ನು ತೊಳೆದು ಅವರಿಗೆ ವಿಶ್ರಾಂತಿಯನ್ನು ಕಲ್ಪಿಸುವುದು, ಮಲಗಲು ಹಾಸಿಗೆಯನ್ನು ನೀಡುವುದು, ಕುಳಿತುಕೊಳ್ಳಲು ಆಸನವನ್ನು ಕೊಡುವುದು - ಇವುಗಳಲ್ಲಿ ಒಂದೊಂದು ಕಾರ್ಯವೂ ಗೋದಾನಕ್ಕಿಂತಲೂ ಹೆಚ್ಚಿನ ಫಲವನ್ನು ಕೊಡುತ್ತದೆ.
ಪಾದೋದಕಂ ಪಾದಘೃತಂ ದೀಪಮನ್ನಂ ಪ್ರತಿಶ್ರಯಮ್ |
ಯೇ ಪ್ರಯಚ್ಛಂತಿ ವಿಪ್ರೇಭ್ಯೋ ನೋಪಸರ್ಪಂತಿ ತೇ ಯಮಮ್ ॥
ಕಾಲು ತೊಳೆಯಲು ನೀರು, ಕಾಲಿಗೆ ತಿಕ್ಕಿಕೊಳ್ಳಲು ತುಪ್ಪ, ದೀಪ, ಅನ್ನ, ವಾಸ ಮಾಡಲು ಮನೆ- ಇವುಗಳನ್ನು ಬ್ರಾಹ್ಮಣರಿಗೆ ದಾನ ಮಾಡುವವರು ಯಮಪುರಿಗೆ ಸಾಗುವುದಿಲ್ಲ.
ವಿಪ್ರಾತಿಥ್ಯೇ ಕೃತೇ ರಾಜನ್ ಭಕ್ತ್ಯಾ ಶುಶ್ರೂಷಿತೇಽಪಿ ಚ |
ದೇವಾಃ ಶುಶ್ರೂಷಿತಾಃ ಸರ್ವೇ ತ್ರಯಸ್ತ್ರಿಂಶದ್ ಭವಂತ್ಯುತ ॥61॥
ರಾಜನೇ, ಬ್ರಾಹ್ಮಣನ ಆತಿಥ್ಯವನ್ನು, ಭಕ್ತಿಪೂರ್ವಕವಾದ ಸೇವೆಯನ್ನು ಮಾಡಿದರೆ ಮೂವತ್ತಮೂರು (ಕೋಟಿ) ದೇವತೆಗಳನ್ನೂ ಸೇವಿಸಿದಂತಾಗುತ್ತದೆ.
ಅಭ್ಯಾಗತೋ ಜ್ಞಾತಪೂರ್ವೋ ಹ್ಯಜ್ಞಾತೋಽತಿಥಿರುಚ್ಯತೇ |
ತಯೋಃ ಪೂಜಾಂ ದ್ವಿಜಃ ಕುರ್ಯಾದ್ ಇತಿ ಪೌರಾಣಿಕೀ ಶ್ರುತಿಃ ॥62॥
ಹಿಂದೆ ಪರಿಚಯವಿದ್ದ ಮನುಷ್ಯನು ಮನೆಗೆ ಬಂದರೆ ಅವನನ್ನು ಅಭ್ಯಾಗತ ಎನ್ನುತ್ತಾರೆ. ಪರಿಚಯವೇ ಇಲ್ಲದ ವ್ಯಕ್ತಿಯು ಮನೆಗೆ ಬಂದರೆ ಅವನನ್ನು ಅತಿಥಿ ಎನ್ನುತ್ತಾರೆ. ಬ್ರಾಹ್ಮಣನು ಈ ಈರ್ವರನ್ನು ಆದರ ಪೂರ್ವಕವಾಗಿ ಸತ್ಕರಿಸಬೇಕೆಂದು ಪುರಾಣದ ಮಾತಿದೆ.

ಪಾದಾಭ್ಯಂಗಾನ್ನಪಾನೈಸ್ತು ಯೋಽತಿಥಿಂ ಪೂಜಯೇನ್ನರಃ |
ಪೂಜಿತಸ್ತೇನ ರಾಜೇಂದ್ರ ಭವಾಮ್ಯೇವ ನ ಸಂಶಯಃ ॥63॥
ರಾಜೇಂದ್ರನೇ, ಯಾವ ಮನುಷ್ಯನು ಮನೆಗೆ ಆಗಮಿಸಿದ ಅತಿಥಿಗೆ ಕಾಲಿಗೆ ತಿಕ್ಕಿಕೊಳ್ಳಲು ಎಣ್ಣೆಯನ್ನು ಕೊಟ್ಟು,
ಅನ್ನ-ಪಾನಾದಿಗಳಿಂದ ಸತ್ಕರಿಸುತ್ತಾನೋ ಅವನು ನನ್ನನ್ನೇ ಪೂಜಿಸಿದಂತಾಗುತ್ತದೆ. ಈ ಅತಿಥಿಸತ್ಕಾರದಿಂದ ನಾನೇ ತೃಪ್ತಿಯನ್ನು ಹೊಂದುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಶೀಘ್ರಂ ಪಾಪಾದ್ ವಿನಿರ್ಮುಕ್ತೋ ಮಯಾ ಚಾನುಗ್ರಹೀಕೃತಃ |
ವಿಮಾನೇನೇಂದುಕಲ್ಪೇನ ಮಮ ಲೋಕಂ ಸ ಗಚ್ಛತಿ ॥64॥
ಇಂತಹ ಅತಿಥಿಸತ್ಕಾರವನ್ನು ಮಾಡುವವನು ಶೀಘ್ರವಾಗಿ ಪಾಪದಿಂದ ಬಿಡುಗಡೆಯನ್ನು ಹೊಂದಿ, ನನ್ನ ಅನುಗ್ರಹಕ್ಕೆ ಪಾತ್ರನಾಗಿ, ಚಂದ್ರಸದೃಶವಾದ ವಿಮಾನದಲ್ಲಿ ಕುಳಿತು ನನ್ನ ಲೋಕವನ್ನೇ ಹೊಂದುತ್ತಾನೆ.
ಅಭ್ಯಾಗತಂ ಶ್ರಾಂತಮನುವ್ರಜಂತಿ
ದೇವಾಶ್ಚ ಸರ್ವೇ ಪಿತರೋಽಗ್ನಯಶ್ಚ |
ತಸ್ಮಿನ್ ದ್ವಿಜೇ ಪೂಜಿತೇ ಪೂಜಿತಾಃ ಸ್ಯುಃ
ಗತೇ ನಿರಾಶಾಃ ಪಿತರೋ ವ್ರಜಂತಿ ॥65॥
ಆಯಾಸಗೊಂಡಿರುವ ಅಭ್ಯಾಗತರನ್ನು ಎಲ್ಲ ದೇವತೆಗಳು, ಪಿತೃಗಳು, ಅಗ್ನಿಗಳು ಅನುಸರಿಸಿ ಬರುತ್ತಾರೆ. ಅಭ್ಯಾಗತ ಬ್ರಾಹ್ಮಣನು ಸತ್ಕೃತನಾದರೆ ದೇವತೆಗಳೇ ಮೊದಲಾದವರು ಪೂಜಿತರಾಗುತ್ತಾರೆ. ಅಭ್ಯಾಗತನೇನಾದರೂ ಸತ್ಕೃತನಾಗದಿದ್ದಲ್ಲಿ ಪಿತೃಗಳೂ ನಿರಾಶರಾಗಿ ಹಿಂದಿರುಗುತ್ತಾರೆ.
ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ |
ಪಿತರಸ್ತಸ್ಯ ನಾಶ್ನಂತಿ ದಶ ವರ್ಷಾಣಿ ಪಂಚ ಚ | |66॥
ಅತಿಥಿಯು ನಿರಾಶನಾಗಿ ಯಾವ ಗೃಹಸ್ಥನ ಮನೆಯಿಂದ ಹಿಂದಿರುಗುತ್ತಾನೋ ಆ ಗೃಹಸ್ಥನ ಪಿತೃಗಳು ಹದಿನೈದು ವರ್ಷಗಳ ತನಕ ಭೋಜನ ಮಾಡುವುದಿಲ್ಲ.
ವರ್ಜಿತಃ ಪಿತೃಭಿರ್ಲಬ್ಧಃ ಸ ದೇವೈರಗ್ನಿಭಿಃ ಸದಾ |
ನಿರಯಂ ರೌರವಂ ಗತ್ವಾ ದಶ ವರ್ಷಾಣಿ ಪಚ್ಯತೇ ॥67॥
ಜಿಪುಣತನದಿಂದ ಅತಿಥಿಯನ್ನು ಸತ್ಕರಿಸದೆ ಇದ್ದ ದೇವತೆಗಳನ್ನೂ, ಅಗ್ನಿಯನ್ನೂ, ಪಿತೃಗಳನ್ನು ಆರಾಧಿಸದೇ ಇರುವ ವ್ಯಕ್ತಿಯು ರೌರವ ನರಕಕ್ಕೆ ಬಿದ್ದು ಹತ್ತು ವರ್ಷಗಳ ಕಾಲ ದುಃಖವನ್ನು ಅನುಭವಿಸುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದಿಹ ಚೋಚ್ಛಿಷ್ಟಭುಗ್ ಭವೇತ್ ॥68॥
ಬಳಿಕ ಅಲ್ಲಿಂದ ಭೂಮಿಗೆ ಆಗಮಿಸಿದರೂ ಭೂಮಿಯಲ್ಲಿ ಮತ್ತೊಬ್ಬರ ಎಂಜಲನ್ನು ತಿಂದುಕೊಂಡೇ ಬದುಕುತ್ತಾನೆ.
ವೈಶ್ವದೇವಾಂತಿಕೇ ಪ್ರಾಪ್ತಮತಿಥಿಂ ಯೋ ನ ಪೂಜಯೇತ್ |
ಸ ಚಂಡಾಲತ್ವಮಾಪ್ನೋತಿ ಸದ್ಯ ಏವ ನ ಸಂಶಯಃ ॥69॥
ವೈಶ್ವದೇವವು ಮುಗಿದ ಬಳಿಕ ಆಗಮಿಸಿದ ಅತಿಥಿಯನ್ನು ಯಾವ ವ್ಯಕ್ತಿಯು ಪೂಜಿಸುವುದಿಲ್ಲವೋ ಅವನು ಚಂಡಾಲತ್ವವನ್ನು

ಹೊಂದಿ, ಕೂಡಲೇ ಪತಿತನಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ನಿರ್ವಾಸಯತಿ ಯೋ ವಿಪ್ರಂ ದೇಶಕಾಲೇಽತಿಥಿಂ ಗೃಹಾತ್ |
ಪತಿತಸ್ತತ್ಕ್ಷಣಾದೇವ ಜಾಯತೇ ನಾತ್ರ ಸಂಶಯಃ ॥70॥
ದೇಶ-ಕಾಲಗಳನ್ನನುಸರಿಸಿ ಮನೆಗೆ ಆಗಮಿಸಿರುವ ಅತಿಥಿರೂಪನಾದ ಬ್ರಾಹ್ಮಣನನ್ನು ಯಾವನು ಮನೆಯಿಂದ ಹೊರಗಟ್ಟುತ್ತಾನೋ ಅಂತಹ ಗೃಹಸ್ಥನು ಕೂಡಲೇ ಪತಿತನಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ನರಕೇ ರೌರವೇ ಘೋರೇ ವರ್ಷಕೋಟಿಂ ಸ ಪಚ್ಯತೇ ॥71॥
ಬಳಿಕ ಕೋಟಿ ವರ್ಷಗಳ ಕಾಲ ರೌರವ ನರಕದಲ್ಲಿ ದುಃಖಿತನಾಗುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ನರಾಧಮಃ |
ಶ್ವಾ ವೈ ದ್ವಾದಶ ಜನ್ಮಾನಿ ಜಾಯತೇ ಕ್ಷುತ್ಪಿಪಾಸಿತಃ ॥72॥
ಬಳಿಕ ರೌರವ ನರಕದಿಂದ ಕಾಲಾಂತರದಲ್ಲಿ ಭೂಮಿಗೆ ಆಗಮಿಸಿದ ಆ ನರಾಧಮನು ಹಸಿವು-ನೀರಡಿಕೆಗಳಿಂದ ಬಳಲುವ ನಾಯಿಯಾಗಿ ಹನ್ನೆರಡು ಜನ್ಮವನ್ನು ಕಳೆಯುತ್ತಾನೆ.
ಚಂಡಾಲೋಽಪ್ಯತಿಥಿಃ ಪ್ರಾಪ್ತೋ ದೇಶಕಾಲೇಽನ್ನಕಾಂಕ್ಷಯಾ |
ಅಭ್ಯುದ್ಗಮ್ಯೋ ಗೃಹಸ್ಥೇನ ಪೂಜನೀಯಃ ಸ ಸರ್ವದಾ ॥73॥
ದೇಶ-ಕಾಲಗಳನ್ನನುಸರಿಸಿ ಅನ್ನವನ್ನು ಬಯಸಿ ಚಂಡಾಲನೇ ಅತಿಥಿಯಾಗಿ ಬಂದರೂ ಗೃಹಸ್ಥನು ಮುಂದೆ ಹೋಗಿ ಅವನನ್ನು ಸ್ವಾಗತಿಸಿ ಸತ್ಕರಿಸಬೇಕು.
ಅನರ್ಚಯಿತ್ವಾ ಯೋಽಶ್ನಾತಿ ಲೋಭಮೋಹಿತಚೇತನಃ |
ಸ ಚಂಡಾಲತ್ವಮಾಪ್ನೋತಿ ದಶ ಜನ್ಮಾನಿ ಪಾಂಡವ ॥74॥
ಯಾವನು ಅತಿಥಿಯನ್ನು ಸತ್ಕರಿಸದೆ, ಮೋಹ-ಲೋಭಗಳಿಂದ ಕೂಡಿದ ಮನಸ್ಸುಳ್ಳವನಾಗಿ ಊಟವನ್ನು ಮಾಡುತ್ತಾನೋ ಅವನು ಚಂಡಾಲತ್ವವನ್ನು ಹೊಂದಿ ಹತ್ತು ಜನ್ಮಗಳನ್ನು ಕಳೆಯುತ್ತಾನೆ.
ನಿರಾಶಮತಿಥಿಂ ಕೃತ್ವಾ ಭುಂಜಾನೋ ಯಃ ಪ್ರಹೃಷ್ಟವಾನ್ |
ನ ಜಾನಾತ್ಯಾತ್ಮನಾಽಽತ್ಮಾನಂ ವಿಷ್ಠಾಕೂಪೇ ನಿಪಾತಿತಮ್ ॥75॥
ಯಾವಾತನು ಅತಿಥಿಯನ್ನು ಸತ್ಕರಿಸದೆ ಸಂತೋಷದಿಂದ ಬಾಗಿಲನ್ನು ಹಾಕಿಕೊಂಡು ಊಟ ಮಾಡುತ್ತಾನೋ ಅವನು ತನ್ನನ್ನು ಮಲ-ಮೂತ್ರಗಳ ಹೊಂಡದಲ್ಲಿ ಬಿದ್ದ ವ್ಯಕ್ತಿಯಾಗಿದ್ದೇನೆ ಎಂಬುದನ್ನು ತಿಳಿಯುವುದೇ ಇಲ್ಲ.
ಮೋಘಂ ಧ್ರುವಂ ಪ್ರೋರ್ಣಯತಿ ಮೋಘಮಸ್ಯ ತು ಪಚ್ಯತೇ |
ಮೋಘಮನ್ನಂ ಸದಾಽಶ್ನಾತಿ ಯೋಽತಿಥಿಂ ನ ಚ ಪೂಜಯೇತ್ ॥76॥
ಯಾವನು ಅತಿಥಿಯನ್ನು ಆರಾಧಿಸದೆ, ಸುಂದರವಾದ ಗೃಹವನ್ನು ನಿರ್ಮಾಣ ಮಾಡಿಕೊಂಡು ಇರುತ್ತಾನೋ ಅವನು, ಪ್ರಾಣಿಹಿಂಸೆಯನ್ನು ಮಾಡುವ ದೃಷ್ಟಿಯಿಂದ ಜೇಡವು ಬಲೆಯನ್ನು ನಿರ್ಮಾಣ ಮಾಡಿ ವಾಸಿಸುವಂತೆ ಹಿಂಸಕನಾಗಿಯೇ ಆ ಗೃಹದಲ್ಲಿ ವ್ಯರ್ಥವಾಗಿ ವಾಸಿಸುತ್ತಾನೆ. ಅತಿಥಿಗೆ ನೀಡದೇ ತಿನ್ನುವ ಅನ್ನವು ಅವನಿಗೆ ಅನರ್ಥವನ್ನು ಉಂಟುಮಾಡುತ್ತದೆ. ಮತ್ತೊಬ್ಬರಿಗೆ ಉಪದ್ರವವನ್ನು ಮಾಡಿ ಸ್ವಾರ್ಥಿಯಾಗಿ ಯಾವನು ಅನ್ನವನ್ನು ಉಣ್ಣುತ್ತಾನೋ ಅವನು ಮತ್ತೊಬ್ಬರಿಗೆ ಹಿಂಸೆಯನ್ನು ಮಾಡಿದಂತೆಯೇ ಸರಿ.
ಸಾಂಗೋಪಾಂಗಾಂಸ್ತು ಯೋ ವೇದಾನ್ ಪಠತೀಹ ದಿನೇ ದಿನೇ |
ನ ಚಾತಿಥಿಂ ಪೂಜಯತಿ ವೃಥಾ ಸ ಪಠತಿ ದ್ವಿಜಃ ॥77॥
ಯಾವ ಬ್ರಾಹ್ಮಣನು ಪ್ರತಿದಿನವೂ ಷಡಂಗಸಹಿತವಾಗಿ ವೇದಾಧ್ಯಯನವನ್ನು ಮಾಡುತ್ತಿದ್ದರೂ ಅತಿಥಿಯನ್ನು ಆರಾಧಿಸದಿದ್ದಲ್ಲಿ ಆ ಅಧ್ಯಯನವು ವ್ಯರ್ಥವಾದುದೇ ಸರಿ.
ಪಾಕಯಜ್ಞಮಹಾಯಜ್ಞೈಃ ಸೋಮಸಂಸ್ಥಾಭಿರೇವ ಚ |
ಯೇ ಯಜಂತಿ ನ ಚಾರ್ಚಂತಿ ಗೃಹೇಷ್ವತಿಥಿಮಾಗತಮ್ ॥78॥
ತೇಷಾಂ ಯಶೋಭಿಕಾಮಾನಾಂ ದತ್ತಮಿಷ್ಟಂ ಚ ಯದ್ಭವೇತ್ |
ವೃಥಾ ಭವತಿ ತತ್ಸರ್ವಮಾಶಯಾ ಹಿ ತಯಾ ಹತಮ್ ॥79॥
ಯಾವನು ಪಾಕಯಜ್ಞ, ಪಿಂಡಮಹಾಯಜ್ಞ, ಸೋಮಯಾಗ ಮೊದಲಾದವುಗಳ ಮೂಲಕ ದೇವತೆಗಳನ್ನು ಪೂಜಿಸುತ್ತಾರೋ ಆದರೆ ಆಗಮಿಸಿದ ಅತಿಥಿಯನ್ನು ಸತ್ಕರಿಸುವುದಿಲ್ಲವೋ ಅಂತಹವನ ಯಶಸ್ಸು, ಅವನು ಮಾಡಿದ ದಾನವು, ಯಜ್ಞವು ಎಲ್ಲವೂ ವ್ಯರ್ಥವಾಗುತ್ತದೆ. ನಿರಾಶನಾಗಿ ಅತಿಥಿಯು ಸಾಗಿದಾಗ ಸಮಸ್ತ ಶುಭಕರ್ಮಗಳು ನಾಶ ಹೊಂದುತ್ತವೆ.
ದೇಶಂ ಕಾಲಂ ಚ ಪಾತ್ರಂ ಚ ಸ್ವಶಕ್ತಿಂ ಚ ನಿರೀಕ್ಷ್ಯ ಚ |
ಅಲ್ಪಂ ಸಮಂ ಮಹದ್ವಾಽಪಿ ಕುರ್ಯಾದಾತಿಥ್ಯಮಾತ್ಮವಾನ್ ॥80॥
ಗೃಹಸ್ಥನು ಶ್ರದ್ಧೆಯಿಂದ ದೇಶ, ಕಾಲ, ಪಾತ್ರ, ತನ್ನ ಶಕ್ತಿ ಎಲ್ಲವನ್ನೂ ವಿಚಾರ ಮಾಡಿ ಅತ್ಯಲ್ಪವಾದರೂ, ಸಾಧಾರಣವಾಗಿಯಾದರೂ, ಮಹತ್ತರವಾಗಿಯಾದರೂ ಅತಿಥಿ ಸತ್ಕಾರವನ್ನು ಮಾಡಬೇಕು.
ಸುಮುಖಃ ಸುಪ್ರಸನ್ನಾತ್ಮಾ ಧೀಮಾನತಿಥಿಮಾಗತಮ್ |
ಸ್ವಾಗತೇನಾಸನೇನಾದ್ಭಿರನ್ನಾದ್ಯೇನ ಚ ಪೂಜಯೇತ್ ॥81॥
ಅತಿಥಿಯು ತನ್ನ ಮನೆಯ ಬಾಗಿಲಿಗೆ ಬಂದ ಕೂಡಲೇ ಧೀಮಂತನಾದ ಗೃಹಸ್ಥನು ಮುಖವನ್ನು ಪ್ರಸನ್ನತೆಯಿಂದ ಅರಳಿಸಿ ಸ್ವಾಗತಿಸಬೇಕು, ಆಸನವನ್ನು ನೀಡಬೇಕು, ಅರ್ಘ್ಯ-ಪಾದ್ಯಗಳಿಂದ ಸತ್ಕರಿಸಬೇಕು. ಅನ್ನ-ಪಾನಾದಿಗಳಿಂದಲೂ ಸತ್ಕರಿಸಬೇಕು.
ಪ್ರಿಯೋ ವಾ ಯದಿ ವಾ ದ್ವೇಷ್ಯೋ ಮೂರ್ಖಃ ಪಂಡಿತ ಏವ ವಾ |

ಪ್ರಾಪ್ತೋ ಯೋ ವೈಶ್ವದೇವಾಂತೇ ಸೋಽತಿಥಿಃ ಸ್ವರ್ಗಸಂಕ್ರಮಃ ॥82॥
ವೈಶ್ವದೇವ, ಬಲಿಹರಣಗಳನ್ನು ಮಾಡಿದ ಬಳಿಕ ಮನೆಗೆ ಆಗಮಿಸಿದ ವ್ಯಕ್ತಿಯು ಪ್ರಿಯನೇ ಆಗಲಿ, ಹಿತಕರನೇ ಆಗಲಿ, ದ್ವೇಷಿಯೇ ಆಗಲಿ, ಮೂರ್ಖನೇ ಆಗಲಿ, ಪಂಡಿತನೇ ಆಗಲಿ, ಅವನು ಯಜಮಾನನು ಸ್ವರ್ಗಕ್ಕೆ ಏರಲು ಸೋಪಾನದಂತೆ ಇರುತ್ತಾನೆ.
ಕ್ಷುತ್ಪಿಪಾಸಾಶ್ರಮಾರ್ತಾಯ ದೇಶಕಾಲಾಗತಾಯ ಚ |
ಸತ್ಕೃತ್ಯಾನ್ನಂ ಪ್ರದಾತವ್ಯಂ ಸ್ವರ್ಗಸ್ಯ ಫಲಮಿಚ್ಛತಾ ॥83॥
ಸ್ವರ್ಗದ ಫಲವನ್ನು ಬಯಸುವ ವ್ಯಕ್ತಿಯು ಹಸಿವು, ನೀರಡಿಕೆಗಳಿಂದ ಬಳಲಿದ, ಯೋಗ್ಯವಾದ ದೇಶ-ಕಾಲಗಳಲ್ಲಿ ಆಗಮಿಸಿದ ವ್ಯಕ್ತಿಗೆ ಸತ್ಕರಿಸಿ, ಅನ್ನವನ್ನು ದಾನ ಮಾಡಬೇಕು.
ಭೋಜಯೇದಾತ್ಮನಃ ಶ್ರೇಷ್ಠಾನ್ ವಿಧಿವದ್ಧವ್ಯಕವ್ಯಯೋಃ |
ಅನ್ನಂ ಪ್ರಾಣೋ ಮನುಷ್ಯಾಣಾಮನ್ನದಃ ಪ್ರಾಣದೋ ಭವೇತ್ ॥84॥
ಯಾವಾತನು ಹವ್ಯ-ಕವ್ಯಗಳಲ್ಲಿ ತನಗಿಂತಲೂ ಶ್ರೇಷ್ಠರಾದವರನ್ನು ಆಮಂತ್ರಿಸಿ, ವಿಧಿವತ್ತಾಗಿ ಭೋಜನ ಮಾಡಿಸುತ್ತಾನೋ ಅವನು ಅನ್ನವನ್ನು ನೀಡುವ ಮೂಲಕ ಪ್ರಾಣವನ್ನೇ ದಾನ ಮಾಡಿದ್ದಾನೆ ಎಂದು ಕರೆಸಿಕೊಳ್ಳುತ್ತಾನೆ.
ದೇವಾ ರುದ್ರಾದಯಃ ಸರ್ವೇ ಪಿತರೋ ಹ್ಯಗ್ನಯಸ್ತಥಾ |
ಯಸ್ಮಾದನ್ನೇನ ತುಷ್ಯಂತಿ ತಸ್ಮಾದನ್ನಂ ವಿಶಿಷ್ಯತೇ ॥85॥
ಯಾವ ಕಾರಣದಿಂದ ರುದ್ರಾದಿ ದೇವತೆಗಳು, ಪಿತೃಗಳು, ಅಗ್ನಿಗಳು ಯಾವ ಅನ್ನದಿಂದಲೇ ಸಂತುಷ್ಟರಾಗುತ್ತಾರೆಯಾದ್ದರಿಂದ ಅನ್ನವೇ ಶ್ರೇಷ್ಠವೆನಿಸುತ್ತದೆ.
ತಸ್ಮಾದನ್ನಪರಂ ದಾನಂ ನ ಭೂತಂ ನ ಭವಿಷ್ಯತಿ ॥86॥
ಆದ್ದರಿಂದ ಅನ್ನಕ್ಕಿಂತ ಶ್ರೇಷ್ಠವಾದ ಮತ್ತೊಂದು ದಾನವು ಹಿಂದೆಯೂ, ಮುಂದೆಯೂ, ಇಂದಿಗೂ ಇರುವುದಿಲ್ಲ.
ತಸ್ಮಾದನ್ನಂ ವಿಶೇಷೇಣ ದಾತವ್ಯಂ ಭೂತಿಮಿಚ್ಛತಾ ॥87॥
ಐಶ್ವರ್ಯವನ್ನು ಬಯಸುವ ವ್ಯಕ್ತಿಯು ವಿಶಿಷ್ಟವಾದ ಅನ್ನದಾನವನ್ನು ಈ ಕಾರಣದಿಂದ ಮಾಡಲೇಬೇಕು.
ಅನ್ನದಃ ಸರ್ವಕಾಮೈಸ್ತು ಸುತೃಪ್ತಸ್ಸ್ವಭ್ಯಲಂಕೃತಃ |
ಪೂರ್ಣಚಂದ್ರಪ್ರಕಾಶೇನ ವಿಮಾನೇನ ವಿರಾಜತಾ ॥88॥
ಸೇವ್ಯಮಾನೋ ವರಸ್ತ್ರೀಭಿರ್ದೇವಲೋಕಂ ಸ ಗಚ್ಛತಿ ॥89॥
ಯಾವ ವ್ಯಕ್ತಿಯು ಅನ್ನದಾನವನ್ನು ಮಾಡುತ್ತಾನೋ ಅವನು ಈ ಲೋಕದಲ್ಲಿ ಸಕಲ ವಿಧವಾದ ಕಾಮನೆಗಳನ್ನೂ ಪಡೆದು ಸಂತೃಪ್ತನಾಗಿ, ಗತಿಸಿದ ಬಳಿಕ ಚೆನ್ನಾಗಿ ಅಲಂಕೃತವಾದ, ಪೂರ್ಣಚಂದ್ರನಂತೆ ಬೆಳಗುವ ವಿಮಾನದಲ್ಲಿ ಕುಳಿತು, ಶ್ರೇಷ್ಠರಾದ ಸ್ತ್ರೀಯರಿಂದ ಸತ್ಕರಿಸಲ್ಪಡುತ್ತಾ ದೇವಲೋಕಕ್ಕೆ ಸಾಗುತ್ತಾನೆ.
ಕ್ರೀಡಿತ್ವಾ ತು ತತಸ್ತಸ್ಮಿನ್ ವರ್ಷಕೋಟಿಂ ಯಥಾಽಮರಃ |
ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ಮಹಾಯಶಾಃ ॥90॥
ವೇದಶಾಸ್ತ್ರಾರ್ಥತತ್ತ್ವಜ್ಞೋ ಭೋಗವಾನ್ ಬ್ರಾಹ್ಮಣೋ ಭವೇತ್ ॥91॥
ದೇವಲೋಕದಲ್ಲಿ ಕೋಟಿವರ್ಷಗಳ ತನಕ ವಿಹರಿಸಿ ಪುಣ್ಯವು ಕ್ಷೀಣಿಸಿದ ಬಳಿಕ ಸ್ವರ್ಗಲೋಕದಿಂದ ಭೂಮಿಗೆ ಬಂದರೂ ಅವನು ಇಲ್ಲಿ ಮಹಾಕೀರ್ತಿವಂತನಾಗಿ ಬ್ರಾಹ್ಮಣನಾಗಿ ಹುಟ್ಟಿ, ವೇದಶಾಸ್ತ್ರಾರ್ಥ ತತ್ತ್ವಜ್ಞನಾಗಿ ಭೋಗವಂತನೂ ಆಗುತ್ತಾನೆ.
ಯಥಾಶ್ರದ್ಧಂ ತು ಯಃ ಕುರ್ಯಾನ್ಮನುಷ್ಯೇಷು ಪ್ರಜಾಯತೇ |
ಮಹಾಧನಪತಿಃ ಶ್ರೀಮಾನ್ ವೇದವೇದಾಂಗಪಾರಗಃ ॥92॥
ಸರ್ವಶಾಸ್ತ್ರಾರ್ಥವಿದ್ ವಿದ್ವಾನ್ ಭೋಗವಾನ್ ಬ್ರಾಹ್ಮಣೋ ಭವೇತ್ ॥
ಯಾವಾತನು ಮನುಷ್ಯರಲ್ಲಿ ಹುಟ್ಟಿ, ಶ್ರದ್ಧೆಯಿಂದ ಅನ್ನದಾನವನ್ನು ಮಾಡಿರುವನೋ, ಅವನು ಮಹಾಶ್ರೀಮಂತ, ವೇದ-ವೇದಾಂಗಗಳಲ್ಲಿ ಜ್ಞಾನಿ, ಸರ್ವಶಾಸ್ತ್ರಾರ್ಥ ತಿಳಿದವನು, ಪಂಡಿತನು, ಸುಖಿಯು, ಬ್ರಾಹ್ಮಣೂ ಆಗಿ ಜನಿಸುತ್ತಾನೆ.
ಸರ್ವಾತಿಥ್ಯಂ ತು ಯಃ ಕುರ್ಯಾದ್ ವರ್ಷಮೇಕಮಕಲ್ಮಷಃ |
ಧರ್ಮಾರ್ಜಿತಧನೋ ಭೂತ್ವಾ ಪಾಕಭೇದವಿವರ್ಜಿತಃ ॥94॥
ದೇವಾನಿವ ಸ್ವಯಂ ವಿಪ್ರಾನರ್ಚಯಿತ್ವಾ ಪಿತೄನಪಿ |
ವಿಪ್ರಾನುಗ್ರಾಸಮಾಶೀ ಯಸ್ತಸ್ಯ ಪುಣ್ಯಫಲಂ ಶೃಣು ॥95॥
ಯಾವ ಮನುಷ್ಯನು ಶ್ರದ್ಧೆಯಿಂದ ಒಂದು ವರ್ಷದ ಕಾಲ ಮಾನಸಿಕವಾಗಿ ಯಾವ ಕಶ್ಮಲಗಳನ್ನು ಹೊಂದದೇ ಬಂದ ಅತಿಥಿಗಳನ್ನೆಲ್ಲ ಆರಾಧಿಸುತ್ತಾನೋ, ಪಂಕ್ತಿ ಭೇದವನ್ನು ಮಾಡದೆ ಅನ್ನದಾನವನ್ನು ಮಾಡಿದ್ದಾನೋ ಅವನು ಧರ್ಮದ ಫಲವನ್ನು ಸಂಪಾದಿಸಿಕೊಂಡು, ಸ್ವಯಂ ದೇವತೆಗಳಂತೆ ಬ್ರಾಹ್ಮಣರನ್ನು ಪೂಜಿಸಿ, ಪಿತೃಗಳನ್ನೂ ಪೂಜಿಸಿ, ಬ್ರಾಹ್ಮಣರು ಭೋಜನ ಮಾಡಿದ ಬಳಿಕ ತಾನು ಊಟ ಮಾಡಿದ ಪುಣ್ಯದಿಂದ ಯಾವ ಫಲವನ್ನು ಹೊಂದುತ್ತಾನೋ ಅದನ್ನು ವಿವರಿಸುತ್ತೇನೆ, ಕೇಳಿಸಿಕೊ.
ವರ್ಷೇಣೈಕೇನ ಯಾವಂತಿ ಪಿಂಡಾನ್ಯಶ್ನಂತಿ ಯೇ ದ್ವಿಜಾಃ |
ತಾವದ್ ವರ್ಷಸಹಸ್ರಾಣಿ ಮಮ ಲೋಕೇ ಮಹೀಯತೇ ॥96॥
ಒಂದು ವರ್ಷದಲ್ಲಿ ಮನೆಗೆ ಆಗಮಿಸಿದ ಅತಿಥಿಗಳು ಎಷ್ಟು ತುತ್ತುಗಳನ್ನು ಸ್ವೀಕರಿಸುತ್ತಾರೋ ಅಷ್ಟು ಸಾವಿರ ವರ್ಷಗಳ ಕಾಲ ನನ್ನ ಲೋಕದಲ್ಲಿ ಪೂಜ್ಯನಾಗುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ಮಹಾಯಶಾಃ |
ವೇದಶಾಸ್ತ್ರಾರ್ಥತತ್ತ್ವಜ್ಞೋ ಭೋಗವಾನ್ ಬ್ರಾಹ್ಮಣೋ ಭವೇತ್ ॥97॥
ಪುಣ್ಯವು ಕ್ಷೀಣಿಸಿದ ಬಳಿಕ ಕಾಲಾಂತರದಲ್ಲಿ ಮನುಷ್ಯಲೋಕಕ್ಕೆ ಆಗಮಿಸಿದ ಆತನು ಮಹಾಕೀರ್ತಿಸಂಪನ್ನನಾಗಿ, ವೇದಶಾಸ್ತ್ರಾರ್ಥ

ತತ್ತ್ವಜ್ಞನಾಗಿ, ಭೋಗವಂತನಾಗಿಯೂ, ಬ್ರಾಹ್ಮಣನಾಗಿಯೂ ಹುಟ್ಟುತ್ತಾನೆ.
ಸರ್ವಾತಿಥ್ಯಂ ತು ಯಃ ಕುರ್ಯಾದ್ ಯಥಾಶ್ರದ್ಧಂ ನರೇಶ್ವರ |
ಅಕಾಲನಿಯಮೇನಾಪಿ ಸತ್ಯವಾದೀ ಜಿತೇಂದ್ರಿಯಃ ॥98॥
ಸತ್ಯಸಂಧೋ ಜಿತಕ್ರೋಧಃ ಶಾಖಾಧರ್ಮವಿವರ್ಜಿತಃ |
ಅಧರ್ಮಭೀರುರ್ಧರ್ಮಿಷ್ಠೋ ಮಾಯಾಮಾತ್ಸರ್ಯವರ್ಜಿತಃ ॥99॥
ಧರ್ಮರಾಜನೇ, ಯಾವ ವ್ಯಕ್ತಿಯು ಶ್ರದ್ಧೆಯಿಂದ ಕೂಡಿದವನಾಗಿ ಆಗಮಿಸಿದವರನ್ನೆಲ್ಲ ಸತ್ಕರಿಸುತ್ತಾನೋ, ಕಾಲದ ನಿಯಮವಿಲ್ಲದೆ ಯಾವ ಸಮಯದಲ್ಲಿಯೂ ಅತಿಥಿಗಳಾಗಿ ಆಗಮಿಸಿದವರನ್ನು ಸತ್ಕರಿಸುತ್ತಾನೋ ಅಂತಹ ಸತ್ಯವಾದಿಯಾದ, ಜಿತೇಂದ್ರಿಯನಾದ, ಸತ್ಯಸಂಧನಾದ, ಕ್ರೋಧವನ್ನು ಗೆದ್ದಿರುವ, ಶಾಖಾಧರ್ಮವನ್ನು ಬಿಟ್ಟು ಅತಿಥಿಗಳನ್ನು ಪೂಜಿಸಿರುತ್ತಾನೋ, ಅಧರ್ಮ-ಭೀರುವಾಗಿದ್ದಾನೋ, ಧರ್ಮಿಷ್ಠನಾಗಿದ್ದಾನೋ, ವಂಚನೆ-ಮಾತ್ಸರ್ಯಗಳಿಂದ ವರ್ಜಿತನಾಗಿದ್ದಾನೋ;
ವ್ಯಾಖ್ಯಾನ ವಿಶೇಷ `ಶಾಖಾಧರ್ಮವಿವರ್ಜಿತಃ' ಎಂದರೆ ಒಂದು ಮರದ ಕೊಂಬೆಯು ಕೆಲವೊಮ್ಮೆ ಹೂವನ್ನು ಬಿಡುತ್ತದೆ, ಆದರೆ ಹಣ್ಣು ಕಚ್ಚುವುದಿಲ್ಲ. ಕೆಲವೊಮ್ಮೆ ಹಣ್ಣನ್ನೇ ಬಿಡುತ್ತದೆ, ಹೂವನ್ನು ನೀಡುವುದಿಲ್ಲ. ಹೀಗೆ ಆಗಮಿಸಿದ ಅತಿಥಿಯನ್ನು ಕುರಿತು ಕೆಲವೊಮ್ಮೆ ಪ್ರಿಯವಾದ ಮಾತುಗಳನ್ನೇ ಆಡುತ್ತಾನೆ, ಆದರೆ ಅನ್ನದಾನ ಮಾಡುವುದಿಲ್ಲ. ಕೇವಲ ಮಾತಿನಿಂದಲೇ ಅತಿಥಿಯನ್ನು ಸಾಗಿಸುತ್ತಾನೆ. ಕೆಲವೊಮ್ಮೆ ಅತಿಥಿಯನ್ನು ಸತ್ಕರಿಸುತ್ತಾನೆ, ಆದರೆ ಪ್ರಿಯವಾದ ಮಾತುಗಳನ್ನಾಡುವುದಿಲ್ಲ. ಕಠಿಣವಾದ ಮುಖಮುದ್ರೆಯಿಂದ ಅನ್ನದಾನವನ್ನು ಮಾಡುತ್ತಾನೆ. ಈ ರೀತಿಯಾದ ವ್ಯಕ್ತಿಯನ್ನು ಶಾಖಾಧರ್ಮಿ ಎಂದು ಮಹಾಭಾರತವು ಕರೆದಿದೆ. ಶಾಖಾಧರ್ಮಿಯಾಗಿ ಸತ್ಕರಿಸಬಾರದು. ಆಗಮಿಸಿದ ಅತಿಥಿಗೆ ಸಂತೋಷದ ಮುಖಮುದ್ರೆಯಿಂದ ಅನ್ನದಾನವನ್ನೂ ಮಾಡಬೇಕು ಎಂಬುದು ಗೃಹಸ್ಥನ ಧರ್ಮವಾಗಿದೆ. ಅಥವಾ ಶಾಖಾಧರ್ಮ ಎಂದರೆ ಮರದ ಕೊಂಬೆಯು ತನ್ನ ಬುಡದಲ್ಲಿ ಆಗಮಿಸಿದ ವ್ಯಕ್ತಿಗೆ ಮಾತ್ರ ನೆರಳನ್ನು ನೀಡುತ್ತದೆ. ದೂರದಲ್ಲಿರುವ ವ್ಯಕ್ತಿಗೆ ನೆರಳನ್ನು ನೀಡುವುದಿಲ್ಲ. ಹಾಗೆ ಗೃಹಸ್ಥನು ತನ್ನ ಮನೆಗೆ ಬಂದವರಿಗೆ ಮಾತ್ರ ಅನ್ನವನ್ನು ನೀಡುತ್ತಾನೆ, ಬೇರೆ ಕಡೆಗೆ ಹೋಗಿ ದಾನವನ್ನು ಮಾಡುವುದಿಲ್ಲ ಎಂದಾಗಬಾರದು. ಶಾಖಾ ಧರ್ಮವನ್ನು ಅನುಷ್ಠಾನ ಮಾಡಬಾರದು. ಹಸಿದ ವ್ಯಕ್ತಿಯು ದೂರದಲ್ಲಿದ್ದಾಗಲೂ ಅವನ ಹಸಿವನ್ನು ಅರಿತು ಯಾಚಿಸುವ ವ್ಯಕ್ತಿಗೆ ಅನ್ನದಾನವನ್ನು ಮಾಡುವುದು ಗೃಹಸ್ಥನ ಧರ್ಮವಾಗಿದೆ.
ಶ್ರದ್ದಧಾನಃ ಶುಚಿರ್ನಿತ್ಯಂ ಪಾಕಭೇದವಿವರ್ಜಿತಃ ॥100॥
ಸ ವಿಮಾನೇನ ದಿವ್ಯೇನ ದಿವ್ಯರೂಪೀ ಮಹಾಯಶಾಃ |
ಪುರಂದರಪುರಂ ಯಾತಿ ಗೀಯಮಾನೋಽಪ್ಸರೋಗಣೈಃ ॥101॥
ಪಂಕ್ತಿಭೇದವನ್ನು ಮಾಡದೆ, ಶುಚಿಯಾಗಿ ನಿತ್ಯವೂ ಶ್ರದ್ಧೆಯಿಂದ ಯಾವನು ಅನ್ನದಾನವನ್ನು ಮಾಡುತ್ತಾನೋ ಅವನು ದಿವ್ಯರೂಪವನ್ನು ಧರಿಸಿದವನಾಗಿ ಮಹಾಕೀರ್ತಿಸಂಪನ್ನನಾಗಿ, ಅಪ್ಸರಾಗಣದಿಂದ ಸೇವ್ಯಮಾನನಾಗಿ ಪುರಂದರನ (ಇಂದ್ರನ) ಲೋಕಕ್ಕೆ ದಿವ್ಯವಾದ ವಿಮಾನದಿಂದ ಹೋಗುತ್ತಾನೆ.
ಮನ್ವಂತರಂ ತು ತತ್ರೈಕಂ ಕ್ರೀಡಿತ್ವಾ ದೇವಪೂಜಿತಃ |
ಮನುಷ್ಯಲೋಕಮಾಗಮ್ಯ ಭೋಗವಾನ್ ಬ್ರಾಹ್ಮಣೋ ಭವೇತ್ ॥
ಒಂದು ಮನ್ವಂತರಗಳ ಕಾಲ ದೇವಪೂಜಿತನಾಗಿ, ಇಂದ್ರಲೋಕದಲ್ಲಿ ಸುಖವಾಗಿ ವಿಹರಿಸಿ, ಪುಣ್ಯ ಕ್ಷೀಣವಾದ ನಂತರ ಮನುಷ್ಯಲೋಕಕ್ಕೆ ಆಗಮಿಸಿ ಭೋಗವಂತನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ದಶ ಜನ್ಮನಿ ವಿಪ್ರತ್ವಂ ಪ್ರಾಪ್ನುಯಾದ್ ರಾಜಪೂಜಿತಃ |
ಜಾತಿಸ್ಮರಶ್ಚ ಭವತಿ ಯತ್ರ ಯತ್ರೈವ ಜಾಯತೇ ॥103॥
ಹತ್ತು ಜನ್ಮಗಳ ಕಾಲ ರಾಜಪೂಜಿತನಾಗಿ ಬ್ರಾಹ್ಮಣನಾಗಿಯೇ ಹುಟ್ಟುತ್ತಾನೆ. ಯಾವ ಯಾವ ಜನ್ಮದಲ್ಲಿ ಹುಟ್ಟನ್ನು ಪಡೆದರೂ ಹಿಂದಿನ ಜನ್ಮದ ಸ್ಮರಣೆಯನ್ನು ಹೊಂದಿದವನಾಗಿರುತ್ತಾನೆ.
ಅತಃ ಪರಂ ಪ್ರವಕ್ಷ್ಯಾಮಿ ಭೂಮಿದಾನಮನುತ್ತಮಮ್ ॥104॥
ಯುಧಿಷ್ಠಿರನೇ, ಇನ್ನು ಮುಂದೆ ಭೂಮಿದಾನಕ್ಕೆ ಲಭಿಸುವ ಶ್ರೇಷ್ಠವಾದ ಫಲವನ್ನು ವರ್ಣಿಸುತ್ತೇನೆ, ಕೇಳಿಸಿಕೊ.
ಯಃ ಪ್ರಯಚ್ಛತಿ ವಿಪ್ರಾಯ ಭೂಮಿಂ ರಮ್ಯಾಂ ಸದಕ್ಷಿಣಮ್ |
ಶ್ರೋತ್ರಿಯಾಯ ದರಿದ್ರಾಯ ಸಾಗ್ನಿಹೋತ್ರಾಯ ಪಾಂಡವ ॥105॥
ಸ ಸರ್ವಕಾಮತೃಪ್ತಾತ್ಮಾ ಸರ್ವರತ್ನವಿಭೂಷಿತಃ |
ಸರ್ವಪಾಪವಿನಿರ್ಮುಕ್ತೋ ದೀಪ್ಯಮಾನೋಽರ್ಕವತ್ ಸದಾ ॥106॥
ಯಾವನು ರಮಣೀಯವಾದ ಭೂಮಿಯನ್ನು ದಕ್ಷಿಣಾ ಸಹಿತವಾಗಿ ಶ್ರೋತ್ರಿಯನಾದ ದರಿದ್ರನಾದ, ಅಗ್ನಿಹೋತ್ರಸಂಪನ್ನನಾದ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನು ಸಮಸ್ತ ಕಾಮನೆಗಳಿಂದಲೂ ತೃಪ್ತನಾಗಿ, ಸಮಸ್ತ ರತ್ನಗಳಿಂದ ಅಲಂಕೃತನಾಗಿ, ಸಮಸ್ತ ಪಾಪಗಳಿಂದ ಮುಕ್ತನಾಗಿ ಸೂರ್ಯನಂತೆ ಯಾವಾಗಲೂ ಬೆಳಗುತ್ತಾನೆ.
ಬಾಲಸೂರ್ಯಪ್ರಕಾಶೇನ ವಿಚಿತ್ರಧ್ವಜಶೋಭಿನಾ |
ಯಾತಿ ಯಾನೇನ ದಿವ್ಯೇನ ಮಮ ಲೋಕಂ ಮಹಾಯಶಾಃ ॥107॥
ತತ್ರ ದಿವ್ಯಾಂಗನಾಭಿಸ್ತು ಸೇವ್ಯಮಾನೋ ಯಥಾಸುಖಮ್ |
ಕಾಮಗಃ ಕಾಮರೂಪೀ ಚ ಕ್ರೀಡತ್ಯಪ್ಸರಸಾಂ ಗಣೈಃ ॥108॥
ಅಂತಹ ವ್ಯಕ್ತಿಯು ಗತಿಸಿದ ಬಳಿಕ ವಿಚಿತ್ರವಾದ ಧ್ವಜಗಳಿಂದ ಶೋಭಿಸುವ, ಉದಿಸುವ ಸೂರ್ಯನಂತೆ ಪ್ರಕಾಶವುಳ್ಳ, ದಿವ್ಯವಾದ ವಿಮಾನವನ್ನು ಏರಿಕೊಂಡು, ಕೀರ್ತಿಸಂಪನ್ನನಾಗಿ, ದಿವ್ಯಾಂಗನೆಯರಿಂದ ಸೇವ್ಯಮಾನನಾಗಿ, ಇಚ್ಛಾರೂಪವನ್ನು ಪಡೆದು, ಅಪ್ಸರಾಗಣಗಳಿಂದ ಸಂತೋಷಪಡುತ್ತಾ ಸ್ವರ್ಗಲೋಕವನ್ನು ಹೊಂದುತ್ತಾನೆ.

ಯಾವದ್ ಬಿಭರ್ತಿ ಲೋಕಾನ್ ವೈ ಭೂಮಿಃ ಕುರುಕುಲೋದ್ವಹ |
ತಾವದ್ ಭೂಮಿಪ್ರದಃ ಕಾಮಂ ಮಮ ಲೋಕೇ ಮಹೀಯತೇ ||
ಎಲ್ಲಿಯ ತನಕವೂ ಈ ಭೂಮಿಯು ಲೋಕವನ್ನು ಧರಿಸಿಕೊಂಡಿರುತ್ತದೋ ಅಲ್ಲಿಯ ತನಕವೂ ಭೂಮಿಯನ್ನು ದಾನ ಮಾಡಿದ ವ್ಯಕ್ತಿಯು ನನ್ನ ಲೋಕದಲ್ಲಿ ಸುಖವಾಗಿ ಸತ್ಕೃತನಾಗುತ್ತಾನೆ.
ನ ಹಿ ಭೂಮಿಪ್ರದಾನಾದ್ ವೈ ದಾನಮನ್ಯದ್ ವಿಶಿಷ್ಯತೇ |
ನ ಚಾಪಿ ಭೂಮಿಹರಣಾತ್ ಪಾಪಮನ್ಯದ್ ವಿಶಿಷ್ಯತೇ ||110||
ಯುಧಿಷ್ಠಿರನೇ, ಭೂದಾನಕ್ಕಿಂತಲೂ ಶ್ರೇಷ್ಠವಾದ ಮತ್ತೊಂದು ದಾನವು ಇರುವುದಿಲ್ಲ. ಅದರಂತೆ ಭೂಮಿಯನ್ನು ಅಪಹರಿಸುವುದಕ್ಕಿಂತಲೂ ಬೇರೆಯಾದ ಪಾಪಕರ್ಮವು ಜಗತ್ತಿನಲ್ಲಿ ಇರುವುದಿಲ್ಲ.
ದಾನಾನ್ಯನ್ಯಾನಿ ಹೀಯಂತೇ ಕಾಲೇನ ಕುರುಪುಂಗವ |
ಭೂಮಿದಾನಸ್ಯ ಪುಣ್ಯಸ್ಯ ಕ್ಷಯೋ ನೈವೋಪಪದ್ಯತೇ ||111||
ಕುರುಶ್ರೇಷ್ಠನೇ, ಇತರ ದಾನಗಳೆಲ್ಲವೂ ಕಾಲಾಂತರದಲ್ಲಿ ದಾನದ ಫಲವನ್ನು ಕ್ಷಯಗೊಳಿಸಿಕೊಳ್ಳುತ್ತವೆ. ಆದರೆ ಭೂದಾನಕ್ಕೆ ಲಭಿಸುವ ಫಲವು ಎಂದಿಗೂ ಕ್ಷೀಣವಾಗುವುದೇ ಇಲ್ಲ.
ಬ್ರಾಹ್ಮಣಾಯ ದರಿದ್ರಾಯ ಭೂಮಿಂ ದತ್ತ್ವಾ ತು ಯೋ ನರಃ |
ನ ಹಿಂಸತಿ ನರವ್ಯಾಘ್ರ ತಸ್ಯ ಪುಣ್ಯಫಲಂ ಶೃಣು ||112||
ಯಾವ ವ್ಯಕ್ತಿಯು ದರಿದ್ರನಾದ ಬ್ರಾಹ್ಮಣನಿಗೆ ಭೂಮಿಯನ್ನು ದಾನ ಮಾಡಿ, ಯಾವ ವ್ಯಕ್ತಿಗಳನ್ನೂ ಹಿಂಸಿಸದೆ ಭೂಮಿಯಲ್ಲಿ ವಾಸ ಮಾಡುತ್ತಾನೋ ಅಂತಹ ವ್ಯಕ್ತಿಗೆ ಲಭಿಸುವ ಪುಣ್ಯವೇನೆಂಬುದನ್ನು ನರವ್ಯಾಘ್ರನೇ, ನಿನಗೆ ತಿಳಿಸುತ್ತೇನೆ, ಕೇಳಿಸಿಕೊ.
ಸಪ್ತದ್ವೀಪಸಮುದ್ರಾಂತಾ ರತ್ನಧಾನ್ಯಸಮಾಕುಲಾ |
ಸಶೈಲವನದುರ್ಗಾಢ್ಯಾ ತೇನ ದತ್ತಾ ಮಹೀ ಭವೇತ್ ||113||
ಸಮುದ್ರಾಂತವಾದ ಏಳು ದ್ವೀಪಗಳಲ್ಲಿ ರತ್ನ-ಧಾನ್ಯಗಳನ್ನು ತುಂಬಿ ಬೆಟ್ಟ, ವನ, ದುರ್ಗಗಳಿಂದ ಕೂಡಿದ ಸಪ್ತದ್ವೀಪಗಳ ದಾನವು ಯಾವ ಫಲವನ್ನು ಕೊಡುತ್ತದೋ ದರಿದ್ರ ಬ್ರಾಹ್ಮಣನಿಗೆ ಕೊಟ್ಟ ಭೂದಾನವು ಅಷ್ಟೇ ಫಲವನ್ನು ಹೊಂದುತ್ತದೆ.
ಭೂಮಿಂ ದೃಷ್ಟ್ವಾ ದೀಯಮಾನಾಂ ಶ್ರೋತ್ರಿಯಾಯಾಹಿತಾಗ್ನಯೇ |
ಸರ್ವಭೂತಾನಿ ಮನ್ಯಂತೇ ಮಾಂ ದದಾತೀತಿ ಹರ್ಷವತ್ ||114||
ಆಹಿತಾಗ್ನಿಯಾದ, ಶ್ರೋತ್ರಿಯನಾದ ಬ್ರಾಹ್ಮಣನಿಗೆ ಕೊಡುವ ಭೂದಾನವು ನನ್ನನ್ನೇ ದಾನ ಮಾಡಿದ ಫಲವನ್ನು ನೀಡುತ್ತದೆ.
ಸುವರ್ಣಮಣಿರತ್ನಾನಿ ಧನಧಾನ್ಯವಸೂನಿ ಚ |
ಸರ್ವದಾನಾನಿ ವೈ ರಾಜನ್ ದದಾತಿ ವಸುಧಾಂ ದದತ್ ||115||
ಭೂಮಿಯನ್ನು ದಾನ ಮಾಡಿದ ವ್ಯಕ್ತಿಯು ಸಮಸ್ತ ವಿಧವಾದ ಬಂಗಾರ, ಮಣಿರತ್ನಗಳನ್ನು, ಧನ-ಧಾನ್ಯಗಳನ್ನು, ಸಂಪತ್ತುಗಳನ್ನು, ಸಮಸ್ತ ವಿಧವಾದ ದಾನಗಳನ್ನು ಮಾಡಿದ ಫಲವನ್ನು ಹೊಂದುತ್ತಾನೆ.
ಸಾಗರಾನ್ ಸರಿತಃ ಶೈಲಾನ್ ಸಮಾನಿ ವಿಷಮಾಣಿ ಚ |
ಸರ್ವಗಂಧರಸಾಂಶ್ಚೈವ ದದಾತಿ ವಸುಧಾಂ ದದತ್ ||116||
ಭೂಮಿಯನ್ನು ದಾನಮಾಡಿದ ವ್ಯಕ್ತಿಯು ಸಮುದ್ರಗಳನ್ನೂ, ಸರೋವರಗಳನ್ನೂ, ಬೆಟ್ಟಗಳನ್ನೂ, ಸಮಸ್ತ ಗಂಧ-ರಸಗಳನ್ನೂ ದಾನ ಮಾಡಿದ ಫಲವನ್ನು ಹೊಂದುತ್ತಾನೆ.
ಓಷಧೀಃ ಫಲಸಂಪನ್ನಾ ನಾನಾಪುಷ್ಪಸಮನ್ವಿತಾಃ |
ಕಮಲೋತ್ಪಲಷಂಡಾಶ್ಚ ದದಾತಿ ವಸುಧಾಂ ದದತ್ ||117||
ಫಲ-ಪುಷ್ಪಗಳಿಂದ ಸಮೃದ್ಧವಾದ ಗಿಡ-ಮರಗಳನ್ನೂ, ನಾನಾ ಪುಷ್ಪಗಳಿಂದ ಕೂಡಿದ ಮರಗಳನ್ನೂ, ಕಮಲಪುಷ್ಪಗಳನ್ನೂ, ನೀಲಕಮಲಗಳನ್ನೂ, ಅನೇಕ ಮರಗಳನ್ನು ದಾನ ಮಾಡಿದ ಫಲವನ್ನು ಭೂದಾನ ಮಾಡಿದ ವ್ಯಕ್ತಿಯು ಹೊಂದುತ್ತಾನೆ.
ಧರ್ಮಂ ಕಾಮಂ ತಥಾ ಚಾರ್ಥಂ ವೇದಾನ್ ಯಜ್ಞಾಂಸ್ತಥೈವ ಚ |
ಸ್ವರ್ಗಮೋಕ್ಷಗತೀಶ್ಚೈವ ದದಾತಿ ವಸುಧಾಂ ದದತ್ ||118||
ಯಾವಾತನು ಭೂಮಿಯನ್ನು ದಾನ ಮಾಡುತ್ತಾನೋ ಧರ್ಮ-ಅರ್ಥ-ಕಾಮ, ಸಮಸ್ತ ಯಜ್ಞಗಳ ಫಲ, ಸ್ವರ್ಗ-ಮೋಕ್ಷಗಳ ಗತಿಯನ್ನು ಹೊಂದುವವನಾಗುತ್ತಾನೆ.
ಅಗ್ನಿಷ್ಟೋಮಾದಿಭಿರ್ಯಜ್ಞೈರ್ಯೇ ಯಜಂತಿ ಸದಕ್ಷಿಣೈಃ |
ನ ತತ್ಫಲಂ ಭವೇತ್ ತೇಷಾಂ ಭೂಮಿದಾನಸ್ಯ ಯತ್ಫಲಮ್ ||119||
ಯಾವಾತನು ಭೂದಾನದಿಂದ ಯಾವ ಫಲವನ್ನು ಹೊಂದುತ್ತಾನೋ ಆ ಫಲವನ್ನು ಅಗ್ನಿಷ್ಟೋಮ ಮೊದಲಾದ ಯಜ್ಞಗಳಿಂದಾಗಲಿ, ಭೂರಿದಕ್ಷಿಣೆಗಳಿಂದಾಗಲಿ ಹೊಂದಲಾಗದು.
ಶ್ರೋತ್ರಿಯಾಯ ಮಹೀಂ ದತ್ತ್ವಾ ಯೋ ನ ಹಿಂಸತಿ ಪಾಂಡವ ||
ತಂ ಜನಾಃ ಕಥಯಿಷ್ಯಂತಿ ಯಾವಲ್ಲೋಕಾಃ ಪ್ರತಿಷ್ಠಿತಾಃ |
ತಾವತ್ ಸ್ವರ್ಗೋಪಭೋಗಾನಾಂ ಭೋಕ್ತಾರಂ ಪಾಂಡುನಂದನ ||
ಯಾವ ವ್ಯಕ್ತಿಯು ಶ್ರೋತ್ರಿಯಬ್ರಾಹ್ಮಣನಿಗೆ ಭೂಮಿಯನ್ನು ದಾನ ಮಾಡಿ, ಹಿಂಸೆಯನ್ನು ತ್ಯಜಿಸಿರುತ್ತಾನೋ ಅಂತಹ ವ್ಯಕ್ತಿಯನ್ನು ದೇವತೆಗಳು ಸಮಸ್ತ ಲೋಕಗಳು ಇರುವ ತನಕವೂ ಸುಖ ಹೊಂದುವಂತೆ ಮಾಡುತ್ತಾರೆ. ಇಂಥವರು ಸಮಸ್ತ ಸ್ವರ್ಗಲೋಕದ ಸುಖಗಳಿಗೂ ಅರ್ಹರೆಂದು ಭಾವಿಸುತ್ತಾರೆ.
ಸಸ್ಯಪೂರ್ಣಾಂ ಮಹೀಂ ಯಸ್ತು ಶ್ರೋತ್ರಿಯಾಯ ಪ್ರಯಚ್ಛತಿ |

ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಮ್ ॥122॥
ಸಸ್ಯಗಳಿಂದ ತುಂಬಿರುವ ಭೂಮಿಯನ್ನು ಶ್ರೋತ್ರಿಯ ಬ್ರಾಹ್ಮಣರಿಗೆ ಯಾವನು ದಾನ ಮಾಡುತ್ತಾನೋ ಅಂತಹ ವ್ಯಕ್ತಿಯ ಪಿತೃಗಳು ಪ್ರಲಯವಾಗುವ ತನಕವೂ ತಮ್ಮ ಲೋಕದಲ್ಲಿ ಸುಖವನ್ನು ಹೊಂದುತ್ತಾರೆ.
ಮಮ ರುದ್ರಸ್ಯ ಸವಿತುಸ್ತ್ರಿದಶಾನಾಂ ತಥೈವ ಚ |
ಪ್ರೀತಯೇ ವಿದ್ಧಿ ರಾಜೇಂದ್ರ ಭೂಮಿರ್ದತ್ತಾ ದ್ವಿಜಾಯ ವೈ ॥123॥
ಯಾವ ವ್ಯಕ್ತಿಯು ಬ್ರಾಹ್ಮಣನಿಗೆ ಭೂಮಿಯನ್ನು ದಾನ ಮಾಡುತ್ತಾನೋ ಆ ದಾನದಿಂದ ನನಗೆ, ಮಹರುದ್ರನಿಗೆ, ಸೂರ್ಯನಿಗೆ, ಸಮಸ್ತ ದೇವತೆಗಳಿಗೆ ಸಂತೋಷ ಉಂಟಾಗುತ್ತದೆ ಎಂದು ತಿಳಿದುಕೊ.
ತೇನ ಪುಣ್ಯೇನ ಪೂತಾತ್ಮಾ ದಾತಾ ಭೂಮೇರ್ಯುಧಿಷ್ಠಿರ |
ಮಮ ಸಾಲೋಕ್ಯಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥124॥
ಯಾವನು ಭೂದಾನ ಮಾಡುತ್ತಾನೋ ಆ ವ್ಯಕ್ತಿಯು ಲಭಿಸಿದ ಪುಣ್ಯದಿಂದ ಪೂತಾತ್ಮನಾಗಿ ನನ್ನ ಲೋಕವನ್ನೇ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಯತ್ ಕಿಂಚಿತ್ ಕುರುತೇ ಪಾಪಂ ಪುರುಷೋ ವೃತ್ತಿಕರ್ಶಿತಃ |
ಸ ಚ ಗೋಕರ್ಣಮಾತ್ರೇಣ ಭೂಮಿದಾನೇನ ಶುದ್ಧ್ಯತಿ ॥125॥
ಯಾವ ವ್ಯಕ್ತಿಯು ವೃತ್ತಿಯನ್ನವಲಂಬಿಸಿ ಪಾಪಗಳನ್ನು ಎಸಗಿದ್ದಾನೋ ಅಂತಹ ವ್ಯಕ್ತಿಯು ಗೋಕರ್ಣಪರಿಮಾಣದ ಭೂಮಿಯನ್ನು ದಾನ ಮಾಡುವುದರಿಂದಲೂ ಶುದ್ಧಿಯನ್ನು ಹೊಂದುತ್ತಾನೆ.
ಮಾಸೋಪವಾಸೇ ಯತ್ಪುಣ್ಯಂ ಕೃಚ್ಛ್ರೇ ಚಾಂದ್ರಾಯಣೇಽಪಿ ಚ |
ಭೂಮಿಗೋಕರ್ಣಮಾತ್ರೇಣ ತತ್ಪುಣ್ಯಂ ತು ವಿಧೀಯತೇ ॥126॥
ಒಂದು ತಿಂಗಳು ಉಪವಾಸ ಮಾಡಿದಾಗ ಯಾವ ಪುಣ್ಯ ಲಭಿಸುತ್ತದೋ, ಕೃಚ್ಛ್ರ, ಚಾಂದ್ರಾಯಣಗಳನ್ನು ಆಚರಿಸಿದಾಗ ಯಾವ ಪುಣ್ಯವು ಲಭಿಸುತ್ತದೋ ಅಷ್ಟು ಪುಣ್ಯವು ಕೇವಲ ಗೋಕರ್ಣ ಪರಿಮಾಣದ ಭೂಮಿಯನ್ನು ದಾನ ಮಾಡುವುದರಿಂದ ಲಭಿಸುತ್ತದೆ.
ವೇದಾನಾಂ ಪಾರಣೇ ಯತ್ತು ಪರಂ ಪುಣ್ಯಮುದಾಹೃತಮ್ |
ಭೂಮಿಗೋಕರ್ಣಮಾತ್ರೇಣ ತತ್ಪುಣ್ಯಂ ತು ವಿಧೀಯತೇ ॥127॥
ವೇದಗಳನ್ನು ಪಾರಾಯಣ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೋ ಅಷ್ಟು ಪುಣ್ಯವು ಕೇವಲ ಗೋಕರ್ಣಪರಿಮಾಣದ ಭೂಮಿಯನ್ನು ದಾನ ಮಾಡಿದವನಿಗೆ ಲಭಿಸುತ್ತದೆ.
ಸರ್ವತೀರ್ಥಾಭಿಷೇಕೇ ಚ ಯತ್ಪುಣ್ಯಂ ಸಮುದಾಹೃತಮ್ |
ಭೂಮಿಗೋಕರ್ಣಮಾತ್ರೇಣ ತತ್ಪುಣ್ಯಂ ತು ವಿಧೀಯತೇ ॥128॥
ಸಮಸ್ತ ತೀರ್ಥಗಳನ್ನು ಸೇವಿಸಿದಾಗ, ಆಯಾ ತೀರ್ಥಗಳಿಂದ ಅಭಿಷೇಕ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೋ ಆ ಪುಣ್ಯವು ಕೇವಲ ಗೋಕರ್ಣ ಪರಿಮಾಣದ ಭೂಮಿಯನ್ನು ದಾನ ಮಾಡಿದಾಗ ಲಭಿಸುತ್ತದೆ.
ಯುಧಿಷ್ಠಿರಃ
ದೇವದೇವ ನಮಸ್ತೇಽಸ್ತು ವಾಸುದೇವ ಸುರೇಶ್ವರ |
ಗೋಕರ್ಣಸ್ಯ ಪ್ರಮಾಣಂ ವೈ ವಕ್ತುಮರ್ಹಸಿ ತತ್ತ್ವತಃ ॥129॥
ಯುಧಿಷ್ಠಿರ ದೇವದೇವನೇ, ವಾಸುದೇವನೇ, ದೇವತೆಗಳಿಗೆಲ್ಲ ಅಧೀಶನೇ, ನಿನಗೆ ನಮಸ್ಕಾರ. ಗೋಕರ್ಣ ಪರಿಮಾಣದ ಭೂಮಿ ಎಂದು ಹೇಳುತ್ತಿರುವಿ. ಗೋಕರ್ಣ ಪರಿಮಾಣವೆಂದರೆ ಎಷ್ಟು? ಇದನ್ನು ಯಥಾರ್ಥವಾಗಿ ತಿಳಿಸು.
ಶ್ರೀಭಗವಾನ್
ಶೃಣು ಗೋಕರ್ಣಮಾತ್ರಸ್ಯ ಪ್ರಮಾಣಂ ಪಾಂಡುನಂದನ ॥130॥
ಶ್ರೀಭಗವಾನ್ ಯುಧಿಷ್ಠಿರನೇ, ಗೋಕರ್ಣದ ಪ್ರಮಾಣವೆಷ್ಟೆವಂಬುದನ್ನು ಹೇಳುತ್ತೇನೆ, ಕೇಳಿಸಿಕೊ.
ತ್ರಿಂಶದ್ದಂಡಪ್ರಮಾಣೇನ ಪ್ರಮಿತಂ ಸರ್ವತೋದಿಶಮ್ |
ಪ್ರತ್ಯಕ್ ಪ್ರಾಗಪಿ ರಾಜೇಂದ್ರ ತತ್ ತಥಾ ದಕ್ಷಿಣೋತ್ತರಮ್ ॥131॥
ಗೋಕರ್ಣಂ ತದ್ವಿದಃ ಪ್ರಾಹುಃ ಪ್ರಮಾಣಂ ಧರಣೇರ್ನೃಪ ॥132॥
ಪೂರ್ವ-ಪಶ್ಚಿಮವಾಗಿ ಮತ್ತು ದಕ್ಷಿಣೋತ್ತರವಾಗಿ ಮೂವತ್ತು ದಂಡಗಳನ್ನು (ಒಂದು ಮಾರು= ಒಂದು ದಂಡ) ಮೂವತ್ತು ದಂಡಗಳನ್ನು ಅಳೆದರೆ ಎಷ್ಟು ವಿಸ್ತಾರವಿರುವುದೋ ಅದಕ್ಕೆ ಗೋಕರ್ಣವೆಂದು ಭೂಮಿಯ ಅಳತೆಯನ್ನು ತಿಳಿದವರು ಹೇಳುತ್ತಾರೆ.
ಸವೃಷಂ ಗೋಶತಂ ಯತ್ರ ಸುಖಂ ತಿಷ್ಠತ್ಯಯಂತ್ರಿತಮ್ |
ಸವತ್ಸಂ ಕುರುಶಾರ್ದೂಲ ತಚ್ಚ ಗೋಕರ್ಣಮುಚ್ಯತೇ ॥133॥
ಎಷ್ಟು ವಿಸ್ತಾರವಾದ ಪ್ರದೇಶದಲ್ಲಿ ಹೋರಿಗಳಿಂದಲೂ, ಕರುಗಳಿಂದಲೂ ಕೂಡಿರುವ ನೂರು ಗೋವುಗಳು ಸುಖವಾಗಿ, ಆರಾಮವಾಗಿ ಇಕ್ಕಟ್ಟಿಲ್ಲದೆ ಇರಲು ಅವಕಾಶ ಇರುತ್ತದೋ ಅಷ್ಟು ವಿಸ್ತಾರವಾದ ಪ್ರದೇಶಕ್ಕೆ ಗೋಕರ್ಣ ಎಂದು ಹೆಸರು.
ಕಿಂಕರಾ ಮೃತ್ಯುದಂಡಾಶ್ಚ ಕುಂಭೀಪಾಕಾಶ್ಚ ದಾರುಣಾಃ |
ಘೋರಾಶ್ಚ ವಾರುಣಾಃ ಪಾಶಾ ನೋಪಸರ್ಪಂತಿ ಭೂಮಿದಮ್ ॥
ಭೂದಾನವನ್ನು ಮಾಡಿದ ವ್ಯಕ್ತಿಯ ಸಮೀಪಕ್ಕೆ ಯಮಭಟರು ಸುಳಿಯುವುದಿಲ್ಲ. ಮೃತ್ಯುವಿನ ದಂಡಗಳು ಭೂದಾನಿಯನ್ನು ಪ್ರಹರಿಸುವುದಿಲ್ಲ. ಕುಂಭೀಪಾಕ ಮುಂತಾದ ದಾರುಣವಾದ ನರಕ ಶಿಕ್ಷೆಗಳು ಬಾಧಿಸವು. ಘೋರವಾದ ವರುಣನ ಪಾಶುಗಳು ಭೂದಾನಿಯನ್ನು ಬಂಧಿಸುವುದಿಲ್ಲ.
ನಿರಯಾ ರೌರವಾದ್ಯಾಶ್ಚ ತಥಾ ವೈತರಣೀ ನದೀ |

ತೀವ್ರಾಶ್ಚ ಯಾತನಾಃ ಕಷ್ಟಾ ನೋಪಸರ್ಪಂತಿ ಭೂಮಿದಮ್ ॥135॥
ದಾರುಣವಾದ ರೌರವ ನರಕಗಳನ್ನಾಗಲಿ, ವೈತರಣಿ ನದಿಯನ್ನಾಗಲಿ ನೋಡಬೇಕಾಗಿಲ್ಲ. ತೀವ್ರವಾದ ಯಮ ಯಾತನೆಗಳ ಕಷ್ಟಕ್ಕೆ ಭೂದಾನ ಮಾಡಿದವರು ಗುರಿಯಾಗುವುದಿಲ್ಲ.
ಚಿತ್ರಗುಪ್ತಃ ಕಲಿಃ ಕಾಲಃ ಕೃತಾಂತೋ ಮೃತ್ಯುರೇವ ಚ |
ಯಮಶ್ಚ ಭಗವಾನ್ ಸಾಕ್ಷಾತ್ ಪೂಜಯಂತಿ ಮಹೀಪ್ರದಮ್ ॥136॥
ಅದಕ್ಕೆ ಬದಲಾಗಿ ಚಿತ್ರಗುಪ್ತ, ಕಲಿ, ಕಾಲ, ಕೃತಾಂತ, ಮೃತ್ಯು, ಪೂಜ್ಯನಾದ ಯಮಧರ್ಮ- ಇವರೆಲ್ಲರೂ ಸಾಕ್ಷಾತ್ತಾಗಿಯೇ ಭೂದಾನ ಮಾಡಿದ ವ್ಯಕ್ತಿಯನ್ನು ಸತ್ಕರಿಸುತ್ತಾರೆ.
ರುದ್ರಃ ಪಶುಪತಿಃ ಶಕ್ರಃ ಸುರಾ ಋಷಿಗಣಾಸ್ತಥಾ |
ಅಹಂ ಚ ಪ್ರೀತಿಮಾನ್ ರಾಜನ್ ಪೂಜಯಾಮಿ ಮಹೀಪ್ರದಮ್ ॥
ಯುಧಿಷ್ಠಿರನೇ, ನಾನೂ ಕೂಡ ಭೂದಾನ ಮಾಡಿದ ವ್ಯಕ್ತಿಯನ್ನು ಪ್ರೀತಿಯಿಂದ ಸತ್ಕರಿಸುತ್ತೇನೆ. ರುದ್ರದೇವನು, ಚತುರ್ಮುಖ ಬ್ರಹ್ಮನು, ಇಂದ್ರನು, ದೇವತೆಗಳು, ಋಷಿಗಳು ಎಲ್ಲರೂ ಭೂದಾನ ಮಾಡಿದ ವ್ಯಕ್ತಿಯನ್ನು ಆದರದಿಂದ ಸತ್ಕರಿಸುತ್ತಾರೆ.
ಕೃಶವೃತ್ತಸ್ಯ ಕೃಶಗೋಃ ಕೃಶಾಶ್ವಸ್ಯ ಕೃಶಾತಿಥೇಃ |
ಭೂಮಿರ್ದೇಯಾ ನರಶ್ರೇಷ್ಠ ಸ ನಿಧಿಃ ಪಾರಲೌಕಿಕಃ ॥138॥
ಯಾವ ವ್ಯಕ್ತಿಯ ಕುಟುಂಬದ ಜನರು ಜೀವಿಕೆಗಾಗಿ ತೊಂದರೆಗೀಡಾಗಿ ಕೃಶರಾಗಿದ್ದಾರೋ, ಯಾವನ ಹಸುಗಳು, ಕುದುರೆಗಳು ದುರ್ಬಲವಾಗಿವೆಯೋ, ಯಾವನು ಯಾವಾಗಲೂ ಅತಿಥಿ ಸತ್ಕಾರದಲ್ಲೇ ನಿರತನಾಗಿದ್ದಾನೋ ಅಂತಹ ವ್ಯಕ್ತಿಗೆ ಭೂದಾನವನ್ನು ಮಾಡಬೇಕು. ಭೂದಾನದ ಫಲವು ಪರಲೋಕಕ್ಕೆ ಕಾರಣವಾಗುವ ನಿಧಿಯಂತೆ ಇದೆ.
ಸೀದಮಾನಕುಟುಂಬಾಯ ಶ್ರೋತ್ರಿಯಾಯಾಹಿತಾಗ್ನಯೇ |
ವ್ರತಸ್ಥಾಯ ದರಿದ್ರಾಯ ಭೂಮಿರ್ದೇಯಾ ನರಾಧಿಪ ॥139॥
ಯಾವನ ಕುಟುಂಬವು ಜೀವಿಕೆಗೆ ಅವಕಾಶವಿಲ್ಲದೆ ನಶಿಸಿ ಹೋಗುತ್ತಿರುತ್ತದೋ ಅಂತಹ ದರಿದ್ರನಾದ, ಶ್ರೋತ್ರಿಯನಾದ, ವ್ರತನಿಯಮಾದಿಗಳನ್ನು ಆಚರಿಸುವ ಅಗ್ನಿಹೋತ್ರಿಯಾದ ಬ್ರಾಹ್ಮಣನಿಗೆ ಭೂದಾನವನ್ನು ಮಾಡಬೇಕು.
ಯಥಾ ಜನಿತ್ರೀ ಕ್ಷೀರೇಣ ಪುತ್ರಂ ವರ್ಧಯತಿ ಧ್ರುವಮ್ |
ದಾತಾರಮನುಗೃಹ್ಣಾತಿ ದತ್ತಾ ಹ್ಯೇವಂ ವಸುಂಧರಾ ॥140॥
ಯಾವ ರೀತಿಯಲ್ಲಿ ತಾಯಿಯಾದವಳು ಹಾಲಿನಿಂದ ಮಗುವನ್ನು ಪೋಷಿಸಿ ಬೆಳೆಸುತ್ತಾಳೋ ಹಾಗೆ ಭೂಮಿಯನ್ನು ದಾನ ಮಾಡಿದ ವ್ಯಕ್ತಿಯನ್ನು ಭೂದೇವಿಯು ಎಲ್ಲ ಪ್ರಕಾರದಿಂದಲೂ ವೃದ್ಧಿ ಹೊಂದುವಂತೆ ಅನುಗ್ರಹಿಸುತ್ತಾಳೆ.
ಯಥಾ ಬಿಭರ್ತಿ ಗೌರ್ವತ್ಸಂ ಸೃಜಂತೀ ಕ್ಷೀರಮಾತ್ಮನಃ |
ತಥಾ ಸರ್ವಗುಣೋಪೇತಾ ಭೂಮಿರ್ವಹತಿ ಭೂಮಿದಮ್ ॥141॥
ಯಾವ ರೀತಿಯಲ್ಲಿ ಗೋವು ತನ್ನಲ್ಲಿಯೇ ಹಾಲನ್ನು ಸೃಷ್ಟಿಸಿ ತನ್ನ ಕರುವಿನ ಧಾರಣೆ, ಪೋಷಣೆಯನ್ನು ಮಾಡುವುದೋ ಅದೇ ರೀತಿಯಲ್ಲಿ ಸರ್ವಗುಣೋಪೇತಳಾದ ಭೂದೇವಿಯು ತನ್ನನ್ನು ಸತ್ಪಾತ್ರನಿಗೆ ದಾನ ಮಾಡಿದ ವ್ಯಕ್ತಿಯನ್ನು ಧರಿಸಿ, ಪೋಷಿಸುತ್ತಾಳೆ.
ಯಥಾ ಬೀಜಾನಿ ರೋಹಂತಿ ಜಲಸಿಕ್ತಾನಿ ಭೂತಲೇ |
ತಥಾ ಕಾಮಾಃ ಪ್ರರೋಹಂತಿ ಭೂಮಿದಸ್ಯ ದಿನೇ ದಿನೇ ॥142॥
ಯಾವ ರೀತಿಯಾಗಿ ನೀರಿನಿಂದ ನೆನೆದ ಬೀಜಗಳು ಮೊಳಕೆಯಾಗುತ್ತವೋ, ಅದೇ ರೀತಿ ಭೂದಾನ ಮಾಡಿದವನಿಗೆ ಪ್ರತಿದಿನವೂ ಅವನ ಮನಸ್ಸಿನಲ್ಲಿ ಸಂಕಲ್ಪಿಸುವ ಮನೋರಥಗಳು ಪೂರ್ಣವಾಗುತ್ತಲೇ ಇರುತ್ತವೆ.
ಯಥೋದಯಸ್ತು ಸೂರ್ಯಸ್ಯ ತಮಃ ಸರ್ವಂ ವ್ಯಪೋಹತಿ |
ತಥಾ ಪಾಪಂ ನರಸ್ಯೇಹ ಭೂಮಿದಾನಂ ವ್ಯಪೋಹತಿ ॥142॥
ಯಾವ ರೀತಿಯಾಗಿ ಸೂರ್ಯನ ತೇಜಸ್ಸು ಸಮಸ್ತ ತಮಸ್ಸನ್ನು ಪರಿಹರಿಸುತ್ತದೋ, ಅದೇ ರೀತಿ ಭೂದಾನವು ದಾನಿಯ ಸಮಸ್ತ ಪಾಪಗಳನ್ನು ಪರಿಹರಿಸುತ್ತದೆ.
ದಾತಾ ದಶಾನುಗೃಹ್ಣಾತಿ ಯೋ ಹರೇದ್ದಶ ಹಂತಿ ಚ |
ಅತೀತಾನ್ಯಾಗತಾನೀಹ ಕುಲಾನಿ ಕುರುಪುಂಗವ ॥144॥
ಆಶ್ರುತ್ಯ ಭೂಮಿದಾನಂ ತು ದತ್ತಂ ತ್ವ ಯೋ ವಾ ಹರೇತ್ ಪುನಃ |
ಸ ಬದ್ಧೋ ವಾರುಣೈಃ ಪಾಶೈಃ ಕ್ಷಿಪ್ಯತೇ ಪೂಯಶೋಣಿತೇ ॥145॥
ಯಾವ ವ್ಯಕ್ತಿಯು ಭೂಮಿಯನ್ನು ದಾನ ಮಾಡುತ್ತೇನೆಂದು ಹೇಳಿ, ದಾನವನ್ನು ಮಾಡುವುದಿಲ್ಲವೋ, ಕೊಟ್ಟದ್ದನ್ನು ಪುನಃ ಹಿಂತೆಗೆದುಕೊಳ್ಳುತ್ತಾನೋ ಅಂತಹ ವ್ಯಕ್ತಿಯು ವರುಣನ ಘೋರವಾದ ಪಾಶಗಳಿಂದ ಬಂಧಿತನಾಗಿ ಕೀವು, ರಕ್ತಗಳಿಂದ ತುಂಬಿದ ನರಕದಲ್ಲಿ ದೂಡಲ್ಪಡುತ್ತಾನೆ.
ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಮ್ |
ನ ತಸ್ಯ ನರಕಾದ್ ಘೋರಾದ್ ವಿದ್ಯತೇ ನಿಷ್ಕೃತಿಃ ಕ್ವಚಿತ್ ॥146॥
ಒಬ್ಬ ಸತ್ಪಾತ್ರನಿಗೆ ಭೂಮಿಯನ್ನು ಸ್ವಯಂ ತಾನೇ ದಾನವಾಗಿ ಕೊಟ್ಟಿರಲಿ, ಬೇರೆಯವರೇ ಕೊಟ್ಟಿರಲಿ, ಯಾವುದಾದರೂ ನೆಪದಿಂದ ಅಂತಹ ಕೊಟ್ಟ ಭೂಮಿಯನ್ನು ಅಪಹರಿಸುವ ವ್ಯಕ್ತಿಯು ಘೋರವಾದ ನರಕದಲ್ಲಿ ಬೀಳುವುದರ ಜೊತೆಗೆ ಪ್ರಾಯಶ್ಚಿತ್ತ ಇಲ್ಲದವನಾಗುತ್ತಾನೆ.
ಬ್ರಾಹ್ಮಣಸ್ಯ ಹೃತೇ ಕ್ಷೇತ್ರೇ ಹನ್ಯಾದ್ ದ್ವಾದಶ ಪೂರ್ವಜಾನ್ |
ಸ ಗಚ್ಛೇತ್ ಕೃಮಿಯೋನಿಂ ಚ ನ ಚ ಮುಚ್ಯೇತ ಜಾತು ಸಃ ॥147॥

ಯಾವನು ಬ್ರಾಹ್ಮಣಶ್ರೇಷ್ಠನಿಗೆ ಭೂಮಿಯನ್ನು ದಾನವಾಗಿ ಕೊಟ್ಟು ಅದರ ಪ್ರತಿಫಲವನ್ನು ತಾನೇ ಪಡೆಯುತ್ತಾನೋ ಅಂತಹ ದುಷ್ಟಾತ್ಮನಾದ ಮೂಢನು ಇಪ್ಪತ್ತೊಂದು ವಿಧವಾದ ನರಕದಲ್ಲಿ ಬೀಳುತ್ತಾನೆ. ತನ್ನ ಹನ್ನೆರಡು ತಲೆಯವರಿಗೆ ಕಂಟಕನಾಗುತ್ತಾನೆ. ಕ್ರಿಮಿಯೋನಿಯಲ್ಲಿ ಹುಟ್ಟುತ್ತಾನೆ. ಎಂದಿಗೂ ಬಂಧನದಿಂದ ಬಿಡುಗಡೆ ಹೊಂದುವುದಿಲ್ಲ.

ದತ್ತತ್ವ ಭೂಮಿಂ ದ್ವಿಜೇಂದ್ರಾಯ ಯಸ್ತಾಮೇವೋಪಜೀವತಿ |
ಗವಾಂ ಶತಸಹಸ್ರಸ್ಯ ಹಂತುಃ ಸ ಲಭತೇ ಫಲಮ್ ॥148॥

ಯಾವ ವ್ಯಕ್ತಿಯು ದ್ವಿಜಶ್ರೇಷ್ಠನಿಗೆ ಭೂಮಿಯನ್ನು ದಾನ ಮಾಡಿ ಆ ಭೂಮಿಯಲ್ಲಿ ತಾನೇ ಜೀವನವನ್ನು ಮಾಡುತ್ತಾನೋ ಅವನು ನೂರು ಸಾವಿರ ಹಸುಗಳನ್ನು ಕೊಂದ ಪಾಪಕ್ಕೆ ಭಾಗಿಯಾಗುತ್ತಾನೆ.

ಸೋಧಃಶಿರಾಸ್ತು ಪಾಪಾತ್ಮಾ ಕುಂಭೀಪಾಕೇಷು ಪಚ್ಯತೇ ॥149॥

ಅವನು ತಲೆಕೆಳಕಾಗಿ ಕುಂಭೀಪಾಕ ನರಕದಲ್ಲಿ ಬಿದ್ದು ದುಃಖಕ್ಕೀಡಾಗುತ್ತಾನೆ.

ದಿವ್ಯೈರ್ವರ್ಷಸಹಸ್ರೈಸ್ತು ಕುಂಭೀಪಾಕಾದ್ ವಿನಿಃಸೃತಃ |
ಇಹ ಲೋಕೇ ಭವೇತ್ ಸ ಶ್ವಾ ಶತಜನ್ಮಾನಿ ಪಾಂಡವ ॥150॥

ದೇವಮಾನದ ಸಾವಿರ ವರ್ಷಗಳ ಕಾಲ ಕುಂಭೀಪಾಕ ನರಕದಲ್ಲಿ ಶಿಕ್ಷೆಯನ್ನು ಅನುಭವಿಸಿದ ಆ ವ್ಯಕ್ತಿಯು ಪುನಃ ಭೂಮಿಗೆ ಬಂದು ನೂರು ಜನ್ಮಗಳಲ್ಲಿ ನಾಯಿಯಾಗಿ ಹುಟ್ಟುತ್ತಾನೆ.

ದತ್ತತ್ವ ಭೂಮಿಂ ದ್ವಿಜೇಂದ್ರಾಣಾಂ ಯಸ್ತಾಮೇವೋಪಜೀವತಿ |
ಸ ಮೂಢೋ ಯಾತಿ ದುಷ್ಟಾತ್ಮಾ ನರಕಾನೇಕವಿಂಶತಿಮ್ ॥151॥

ಯಾವ ವ್ಯಕ್ತಿಯು ಬ್ರಾಹ್ಮಣನಿಗೆ ಭೂದಾನವನ್ನು ಮಾಡಿ ಆ ಭೂಮಿಯಲ್ಲಿ ತಾನೇ ಜೀವನವನ್ನು ನಡೆಸುತ್ತಾನೋ ಅಂತಹ ಮೂರ್ಖನು ದುಷ್ಟಾತ್ಮನಾಗಿ ಇಪ್ಪತ್ತೊಂದು ನರಕದಲ್ಲಿ ದುಃಖವನ್ನು ಅನುಭವಿಸುತ್ತಾನೆ.

ನರಕೇಭ್ಯೋ ವಿನಿಮುಕ್ತಃ ಶುನಾಂ ಯೋನಿಂ ಸ ಗಚ್ಛತಿ ॥152॥

ಆ ವ್ಯಕ್ತಿಯು ನರಕವಾಸವನ್ನು ಅನುಭವಿಸಿ ಬಂದ ಬಳಿಕ ಭೂಮಿಯಲ್ಲಿ ನಾಯಿಯಾಗಿ ಹುಟ್ಟುತ್ತಾನೆ.

ಹಲಕೃಷ್ಟಾ ಮಹೀ ದೇಯಾ ಸಬೀಜಾ ಸಸ್ಯಶಾಲಿನೀ |
ಅಥವಾ ಸೋದಕಾ ದೇಯಾ ದರಿದ್ರಾಯ ದ್ವಿಜಾತಯೇ ॥153॥

ನೇಗಿಲಿನಿಂದ ಉತ್ತು ಬಿತ್ತಿರುವ ಭೂಮಿಯನ್ನಾಗಲಿ, ಪೈರಿನಿಂದ ತುಂಬಿರುವ ಭೂಮಿಯನ್ನಾಗಲಿ, ನೀರಿನ ಆಶ್ರಯವಿರುವ ಭೂಮಿಯನ್ನಾಗಲಿ, ದರಿದ್ರನಾದ ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು.

ಏವಂ ದತ್ತ್ವಾ ಮಹೀ ರಾಜನ್ ಪ್ರಹೃಷ್ಟೇನಾಂತರಾತ್ಮನಾ |
ಸರ್ವಾನ್ ಕಾಮಾನವಾಪ್ನೋತಿ ಮನಸಾ ಚಿಂತಿತಾನ್ಯಪಿ ॥154॥

ಸಂತುಷ್ಟವಾದ ಮನಸ್ಸಿನಿಂದ ಇಂತಹ ಭೂಮಿಯನ್ನು ದಾನವಾಗಿ ನೀಡಿದರೆ ಭೂದಾನ ಮಾಡಿದವನು ಮನಸ್ಸಿನಲ್ಲಿ ಚಿಂತಿಸಿದ ಸಮಸ್ತ ಕಾಮನೆಗಳನ್ನೂ ಹೊಂದುತ್ತಾನೆ.

ಬಹುಭಿರ್ವಸುಧಾ ದತ್ತಾ ದೀಯತೇ ಚ ನರಾಧಿಪೈಃ |
ಯಸ್ಯ ಯಸ್ಯ ಯದಾ ಭೂಮಿಃ ತಸ್ಯ ತಸ್ಯ ತದಾ ಫಲಮ್ ॥155॥

ಅನೇಕ ರಾಜರಿಂದ ಭೂಮಿಯು ದಾನ ಮಾಡಲ್ಪಟ್ಟಿದೆ. ದಾನ ಮಾಡಲ್ಪಡುತ್ತಲೂ ಇದೆ. ಭೂಮಿಯು ಯಾವಾಗ ಯಾವನ ಅಧಿಕಾರದಲ್ಲಿರುತ್ತದೋ ಅವನು ಆ ಭೂಮಿಯನ್ನು ದಾನ ಮಾಡಿದರೆ ಅದರ ಫಲವು ಅವನಿಗೆ ಲಭಿಸುತ್ತದೆ.

ಯಃ ಪ್ರಯಚ್ಛತಿ ಕನ್ಯಾಂ ವೈ ಸುರೂಪಾಂ ಶ್ರೋತ್ರಿಯಾಯ ವೈ |
ಸ ಬ್ರಹ್ಮದೇವೋ ರಾಜೇಂದ್ರ ತಸ್ಯ ಪುಣ್ಯಫಲಂ ಶೃಣು ॥156॥

ಯಾವ ವ್ಯಕ್ತಿಯು ಶ್ರೋತ್ರಿಯ ಬ್ರಾಹ್ಮಣರಿಗೆ ಸ್ವರೂಪಳಾದ ಕನ್ಯೆಯನ್ನು ದಾನ ಮಾಡುತ್ತಾನೋ ಅಂತಹ ವ್ಯಕ್ತಿಯು ಹೊಂದುವ ಪುಣ್ಯದ ಫಲವನ್ನು ಹೇಳುತ್ತೇನೆ, ರಾಜಶ್ರೇಷ್ಠನೇ ಕೇಳಿಸಿಕೊ.

ಬಲೀವರ್ದಸಹಸ್ರಾಣಾಂ ದತ್ತಾನಾಂ ಧುರ್ಯವಾಹಿನಾಮ್ |
ತತ್ಫಲಂ ಲಭತೇ ರಾಜನ್ ಕನ್ಯಾದಾನೇನ ಯತ್ಫಲಮ್ ॥157॥

ಗಾಡಿಯನ್ನು ಎಳೆಯುವ ಸಾವಿರ ಎತ್ತುಗಳನ್ನು ದಾನ ಮಾಡಿದಾಗ ಯಾವ ಫಲವು ಲಭಿಸುತ್ತದೋ ಶ್ರೋತ್ರಿಯ ಬ್ರಾಹ್ಮಣರಿಗೆ ಕನ್ಯಾದಾನ ಮಾಡಿದಾಗ ಅಷ್ಟು ಫಲವು ಲಭಿಸುತ್ತದೆ.

ಗವಾಂ ಶತಸಹಸ್ರಸ್ಯ ಸಮ್ಯಗ್ ದತ್ತಸ್ಯ ಯತ್ಫಲಮ್ |
ತತ್ಫಲಂ ಸಮವಾಪ್ನೋತಿ ಯಃ ಪ್ರಯಚ್ಛತಿ ಕನ್ಯಕಾಮ್ ॥158॥

ಒಂದು ಲಕ್ಷ ಗೋವುಗಳನ್ನು ದಾನ ಮಾಡಿದಾಗ ಯಾವ ಫಲವು ಲಭಿಸುತ್ತದೋ, ಶ್ರೋತ್ರಿಯನಾದ ಬ್ರಾಹ್ಮಣನಿಗೆ ಕನ್ಯಾದಾನ ಮಾಡಿದ ವ್ಯಕ್ತಿಗೆ ಅಷ್ಟು ಫಲವು ಲಭಿಸುತ್ತದೆ.

ಯಾವಂತಿ ಚೈವ ರೋಮಾಣಿ ಕನ್ಯಾಯಾಃ ಕುರುಪುಂಗವ |
ತಾವದ್ ವರ್ಷಸಹಸ್ರಾಣಿ ಮಮ ಲೋಕೇ ಮಹೀಯತೇ ॥159॥

ಕನ್ಯಾದಾನ ಮಾಡಿದ ಕನ್ಯೆಯಲ್ಲಿ ಎಷ್ಟು ರೋಮರಂಧ್ರಗಳಿವೆಯೋ ಅಷ್ಟು ವರ್ಷಗಳ ಕಾಲ ದಾನ ಮಾಡಿದ ವ್ಯಕ್ತಿಯು ನನ್ನ ಲೋಕದಲ್ಲಿ ಪೂಜಿತನಾಗುತ್ತಾನೆ.

ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ಸ ಜಾಯತೇ |
ಷಡಂಗವಿಚ್ಚತುರ್ವೇದೀ ಸರ್ವದೇವಾರ್ಚಿತೋ ದ್ವಿಜಃ ॥160॥

ಪುಣ್ಯಲೋಕದಿಂದ ಮರ್ತ್ಯಲೋಕಕ್ಕೆ ಆಗಮಿಸಿದ ಬಳಿಕ ಆ ವ್ಯಕ್ತಿಯು ಕನ್ಯಾದಾನದ ಫಲವಾಗಿ ಆರು ಅಂಗಗಳಿಂದ ಸಹಿತವಾದ

ನಾಲ್ಕು ವೇದಗಳನ್ನು ಅಧ್ಯಯನ ಮಾಡುವವನಾಗಿ, ಸಮಸ್ತ ದೇವತೆಗಳ ಅನುಗ್ರಹಕ್ಕೂ ಪಾತ್ರನಾಗಿ ಭೂಮಿಯಲ್ಲಿ ಹುಟ್ಟುತ್ತಾನೆ.
ಯಃ ಸುವರ್ಣಂ ದರಿದ್ರಾಯ ಬ್ರಾಹ್ಮಣಾಯ ಪ್ರಯಚ್ಛತಿ |
ಶ್ರೋತ್ರಿಯಾಯ ಸುವೃತ್ತಾಯ ಬಹುಪುತ್ರಾಯ ಪಾಂಡವ ॥161॥
ಸ ಮುಕ್ತಃ ಸರ್ವಪಾಪೇಭ್ಯೋ ಬಾಲಸೂರ್ಯಸಮಪ್ರಭಃ |
ವಿಮಾನಂ ದಿವ್ಯಮಾರೂಢಃ ಕಾಮಗಃ ಕಾಮಭೋಗವಾನ್ ॥162॥
ವರ್ಷಕೋಟಿಂ ಮಹಾತೇಜಾ ಮಮ ಲೋಕೇ ಪ್ರಮೋದತೇ ॥163॥
ಯಾವ ವ್ಯಕ್ತಿಯು ಸದಾಚಾರ ಸಂಪನ್ನನಾದ, ಅನೇಕ ಸಂತಾನಗಳನ್ನು ಹೊಂದಿರುವ ಶ್ರೋತ್ರಿಯನಾದ ಬ್ರಾಹ್ಮಣನಿಗೆ ಬಂಗಾರವನ್ನು ದಾನ ಮಾಡುತ್ತಾನೋ ಅವನು ಸಮಸ್ತ ಪಾಪಗಳಿಂದ ಮುಕ್ತನಾಗಿ, ಉದಿಸಿದ ಸೂರ್ಯನಂತೆ ಕಾಂತಿಯುಕ್ತನಾಗಿ, ಸಮಸ್ತ ಭೋಗಗಳನ್ನೂ ಪಡೆದವನಾಗಿ ದಿವ್ಯವಾದ ವಿಮಾನವನ್ನು ಏರಿ ಸ್ವರ್ಗಲೋಕಕ್ಕೆ ಸಾಗಿ ಕೋಟಿ ವರ್ಷಗಳ ಕಾಲ ತೇಜಸ್ವಿಯಾಗಿ ನನ್ನ ಲೋಕದಲ್ಲಿ ಸಂತೋಷ ಹೊಂದುತ್ತಾನೆ.
ತತಃ ಕಾಲಾವತೀರ್ಣಶ್ಚ ಸೋಽಸ್ಮಿನ್ ಲೋಕೇಽಭಿಜಾಯತೇ |
ವೇದವೇದಾಂಗವಿದ್ ವಿಪ್ರಃ ಕೋಟೀಧನಪತಿರ್ಮಹಾನ್ ॥164॥
ಕಾಲಾಂತರದಲ್ಲಿ ಭೂಮಿಗೆ ಆಗಮಿಸಿದ ಆತನು ಸಮಸ್ತ ವೇದ-ವೇದಾಂಗಗಳನ್ನು ಬಲ್ಲವನಾಗಿ ಕೋಟ್ಯಧೀಶನಾಗಿ ಹುಟ್ಟುತ್ತಾನೆ.
ಯಶ್ಚ ರೂಪ್ಯಂ ಪ್ರಯಚ್ಛೇದ್ ವೈ ದರಿದ್ರಾಯ ದ್ವಿಜಾತಯೇ |
ಕೃಶವೃತ್ತಯೇ ಕೃಶಗವೇ ಸ ಮುಕ್ತಃ ಸರ್ವಕಿಲ್ಬಿಷೈಃ ॥165॥
ಯಾವ ವ್ಯಕ್ತಿಯು ಗೋವುಗಳನ್ನು ಪರಿಪಾಲಿಸುತ್ತಾ, ಗೋವುಗಳನ್ನು ಸಾಕಲು ಅಶಕ್ತನಾಗಿರುತ್ತಾನೋ, ತನ್ನ ಬದುಕಿಗೆ ಆಹಾರದ ಕೊರತೆಯನ್ನು ಅನುಭವಿಸುತ್ತಿರುತ್ತಾನೋ ಅಂತಹ ದರಿದ್ರನಾದ ಬ್ರಾಹ್ಮಣನಿಗೆ ಬೆಳ್ಳಿಯನ್ನು ದಾನ ಮಾಡಿದ ವ್ಯಕ್ತಿಯು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.
ಪೂರ್ಣಚಂದ್ರಪ್ರಕಾಶೇನ ವಿಮಾನೇನ ವಿರಾಜತಾ |
ಕಾಮರೂಪೀ ಯಥಾಕಾಮಂ ಸ್ವರ್ಗಲೋಕೇ ಮಹೀಯತೇ ॥166॥
ಆತನು ಪೂರ್ಣಚಂದ್ರನಂತೆ ಪ್ರಕಾಶಿಸುವ ವಿಮಾನದಲ್ಲಿ ಏರಿಕೊಂಡು ಶೋಭಿಸುತ್ತಾ, ಸ್ವರ್ಗಲೋಕದಲ್ಲಿ ತನ್ನ ಮನಸ್ಸಿನ ಸಮಸ್ತ ಕಾಮನೆಗಳನ್ನು ಹೊಂದಿದವನಾಗಿ ಶೋಭಿಸುತ್ತಾನೆ.
ತತೋಽವತೀರ್ಣಃ ಕಾಲೇನ ಲೋಕೇ ಚಾಸ್ಮಿನ್ ಮಹಾಯಶಾಃ |
ಸರ್ವಲೋಕಾರ್ಚಿತಃ ಶ್ರೀಮಾನ್ ರಾಜಾ ಭವತಿ ವೀರ್ಯವಾನ್ ॥
ಕಾಲಾಂತರದಲ್ಲಿ ಭೂಮಿಗೆ ಆಗಮಿಸಿದ, ಕೀರ್ತಿಸಂಪನ್ನನಾದ ಆ ವ್ಯಕ್ತಿಯು ಸಮಸ್ತ ಜನರಿಂದಲೂ ಸತ್ಕೃತನಾಗಿ ಕಾಂತಿಯುಕ್ತನಾದ, ವೀರ್ಯವಂತನಾದ ರಾಜನಾಗುತ್ತಾನೆ.
ತಿಲಪರ್ವತಕಂ ಯಸ್ತು ಶ್ರೋತ್ರಿಯಾಯ ಪ್ರಯಚ್ಛತಿ |
ವಿಶೇಷೇಣ ದರಿದ್ರಾಯ ತಸ್ಯಾಪಿ ಶೃಣು ಯತ್ಫಲಮ್ ॥168॥
ಯಾವ ವ್ಯಕ್ತಿಯು ವಿಶೇಷವಾಗಿ ದರಿದ್ರನಾದ, ಶ್ರೋತ್ರಿಯ ಬ್ರಾಹ್ಮಣನಿಗೆ ಎಳ್ಳಿನ ಪರ್ವತವನ್ನು ದಾನ ಮಾಡುತ್ತಾನೋ ಅದರ ಫಲವನ್ನು ಹೇಳುತ್ತೇನೆ, ಕೇಳಿಸಿಕೊ.
ಪುಣ್ಯಂ ವೃಷಾಯುತೋತ್ಸರ್ಗೇ ಯತ್ಪ್ರೋಕ್ತಂ ಪಾಂಡುನಂದನ |
ತತ್ಪುಣ್ಯಂ ಸಮನುಪ್ರಾಪ್ತಃ ತತ್ಕ್ಷಣಾದ್ ವಿರಜಾ ಭವೇತ್ ॥169॥
ಹತ್ತುಸಾವಿರ ಗೂಳಿಗಳನ್ನು ಬಿಟ್ಟಾಗ ಯಾವ ಪುಣ್ಯವನ್ನು ಹೊಂದುತ್ತಾನೋ ಆ ಪುಣ್ಯವು ಎಳ್ಳಿನ ಪರ್ವತವನ್ನು ದಾನ ಮಾಡಿದ ವ್ಯಕ್ತಿಗೆ ಆ ಕ್ಷಣದಲ್ಲಿಯೇ ಲಭಿಸುತ್ತದೆ.
ಯಥಾ ತ್ವಚಂ ಭುಜಂಗೋ ವೈ ತ್ಯಕ್ತ್ವಾ ದಿವ್ಯತನುರ್ಭವೇತ್ |
ತಥಾ ತಿಲಪ್ರದಾನಾದ್ ವೈ ಪಾಪಂ ತ್ಯಕ್ತ್ವಾ ವಿಶುದ್ಧ್ಯತಿ ॥170॥
ಯಾವ ರೀತಿಯಾಗಿ ಸರ್ಪವು ತನ್ನ ಪೊರೆಯನ್ನು ಕಳಚಿ ಶ್ರೇಷ್ಠವಾದ ಶರೀರದಿಂದ ಬೆಳಗುತ್ತದೋ ಅದೇ ರೀತಿ ತಿಲದಾನವನ್ನು ಮಾಡಿದ ವ್ಯಕ್ತಿಯು ಪಾಪಗಳಿಂದ ಮುಕ್ತನಾಗಿ ಶುದ್ಧಾತ್ಮನಾಗಿ ಬೆಳಗುತ್ತಾನೆ.
ತಿಲಷಂಡಪ್ರಯುಕ್ತಂ ಚ ಜಾಂಬೂನದವಿಭೂಷಿತಮ್ |
ವಿಮಾನಂ ದಿವ್ಯಮಾರೂಢಃ ಪಿತೃಲೋಕೇ ಮಹೀಯತೇ ॥171॥
ಬಂಗಾರದಿಂದ ಅಲಂಕೃತವಾದ ಎಳ್ಳಿನ ರಾಶಿಯನ್ನು ಯಾವ ವ್ಯಕ್ತಿಯು ದಾನ ಮಾಡುತ್ತಾನೋ ಆ ವ್ಯಕ್ತಿಯು ದಿವ್ಯವಾದ ವಿಮಾನವನ್ನೇರಿಕೊಂಡು ಹೋಗಿ ಪಿತೃಲೋಕದಲ್ಲಿ ಪೂಜಿತನಾಗುತ್ತಾನೆ.
ಷಷ್ಟಿಂ ವರ್ಷಸಹಸ್ರಾಣಿ ಕಾಮರೂಪೀ ಮಹಾಯಶಾಃ |
ಕೀರ್ತಿಪ್ರದಾತಾ ರಮತೇ ಪಿತೃಲೋಕೇ ಯಥಾಸುಖಮ್ ॥172॥
ಪಿತೃಲೋಕದಲ್ಲಿ ಆ ವ್ಯಕ್ತಿಯು ಅರವತ್ತು ಸಾವಿರ ವರ್ಷಗಳ ಕಾಲ ಕೀರ್ತಿ ಸಂಪನ್ನನಾಗಿ, ತನ್ನ ಇಷ್ಟಾರ್ಥಗಳನ್ನೆಲ್ಲ ಹೊಂದಿದವನಾಗಿ ಪಿತೃಲೋಕದಲ್ಲಿ ವಿಹರಿಸುತ್ತಾನೆ.
ಯಃ ಪ್ರಯಚ್ಛತಿ ವಿಪ್ರಾಯ ತಿಲಧೇನುಂ ನರಾಧಿಪ |
ಶ್ರೋತ್ರಿಯಾಯ ದರಿದ್ರಾಯ ಶೃಣು ತಸ್ಯಾಪಿ ಯತ್ಫಲಮ್ ॥173॥
ಯಾವ ವ್ಯಕ್ತಿಯು ದರಿದ್ರನಾದ ಶ್ರೋತ್ರಿಯ ಬ್ರಾಹ್ಮಣನಿಗೆ ತಿಲಧೇನುವನ್ನು ದಾನ ಮಾಡುತ್ತಾನೋ ಅಂತಹವನಿಗೆ ಲಭಿಸುವ ಫಲವೇನೆಂದು ಹೇಳುತ್ತೇನೆ, ಕೇಳಿಸಿಕೊ.

ಗೋಸಹಸ್ರಪ್ರದಾನೇನ ಯತ್ಪುಣ್ಯಂ ಸಮುದಾಹೃತಮ್ |
ತತ್ಪುಣ್ಯಫಲಮಾಪ್ನೋತಿ ತಿಲಧೇನುಪ್ರದಾನತಃ ॥174॥
ಸಾವಿರ ಗೋವುಗಳನ್ನು ದಾನ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೋ ಆ ಪುಣ್ಯವು ತಿಲಧೇನುವನ್ನು ದಾನ ಮಾಡಿದ ವ್ಯಕ್ತಿಗೆ ಲಭಿಸುತ್ತದೆ.
ತಿಲಾನಾಂ ಕುಡುಪೈರ್ಯಸ್ತು ತಿಲಧೇನುಂ ಪ್ರಯಚ್ಛತಿ |
ತಾವತ್ ಕೋಟಿಸಮಾ ರಾಜನ್ ಸ್ವರ್ಗಲೋಕೇ ಮಹೀಯತೇ ॥175॥
ಯಾವ ವ್ಯಕ್ತಿಯು ಪಾತ್ರೆಗಳಲ್ಲಿ ತುಂಬಿದ ತಿಲಧೇನುವನ್ನು ದಾನ ಮಾಡುತ್ತಾನೋ ಆ ವ್ಯಕ್ತಿಯು ಕೋಟಿವರ್ಷಗಳ ಕಾಲ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.
ಅಷ್ಟಾಢಕೈಸ್ತಿಲೈಃ ಕೃತ್ವಾ ತಿಲಧೇನುಂ ನರಾಧಿಪ |
ದ್ವಾತ್ರಿಂಶನ್ನಿಷ್ಕಸಂಯುಕ್ತಂ ವಿಷುವೇ ಯಃ ಪ್ರಯಚ್ಛತಿ ॥176॥
ಮದ್ಭಕ್ತ್ಯಾ ಮದ್ಗತಾತ್ಮಾ ವೈ ತಸ್ಯ ಪುಣ್ಯಫಲಂ ಶೃಣು ॥177॥
ಯಾವ ವ್ಯಕ್ತಿಯು ಎಂಟು ದ್ರೋಣಪರಿಮಾಣದಲ್ಲಿ ತಿಲಗಳನ್ನು ತುಂಬಿ ತಿಲಧೇನುವನ್ನು ಮೇಷಸಂಕ್ರಮಣ, ತುಲಾಸಂಕ್ರಮಣಗಳಲ್ಲಿ ದಾನ ಮಾಡುತ್ತಾನೋ ಆ ವ್ಯಕ್ತಿಯು ನನ್ನ ಭಕ್ತನಾಗಿ, ನನ್ನ ಪ್ರೀತಿಯನ್ನೇ ಬಯಸಿದವನಾಗಿ, ಮಾಡಿದ ದಾನದ ಪುಣ್ಯದ ಫಲವನ್ನು ಎಷ್ಟು ಹೊಂದಿರುತ್ತಾನೆಂದು ಕೇಳಿಸಿಕೊ.
ಕನ್ಯಾದಾನಸಹಸ್ರಸ್ಯ ವಿಧಿದತ್ತಸ್ಯ ಯತ್ಫಲಮ್ |
ತತ್ಪುಣ್ಯಂ ಸಮನುಪ್ರಾಪ್ತೋ ಮಮ ಲೋಕೇ ಮಹೀಯತೇ ॥178॥
ಸಾವಿರ ಕನ್ಯಾದಾನಗಳನ್ನು ವಿಧಿವತ್ತಾಗಿ ಮಾಡಿದಾಗ ಯಾವ ಫಲವನ್ನು ಹೊಂದುತ್ತಾನೋ ಅಂತಹ ಫಲವನ್ನು ಹೊಂದಿದವನಾಗಿ ನನ್ನ ಲೋಕದಲ್ಲಿ ಪೂಜಿತನಾಗುತ್ತಾನೆ.
ಮಮ ಲೋಕಾವತೀರ್ಣಶ್ಚ ಸೋಽಸ್ಮಿನ್ ಲೋಕೇಽಭಿಜಾಯತೇ |
ಋಗ್ಯಜುಃ ಸಾಮವೇದಾನಾಂ ಪಾರಗೋ ಬ್ರಾಹ್ಮಣರ್ಷಭಃ ॥179॥
ನನ್ನ ಲೋಕದಿಂದ ಭೂಮಿಗೆ ಬಂದ ಬಳಿಕ ಋಗ್ವೇದ, ಯಜುರ್ವೇದ, ಸಾಮವೇದಗಳ ಅರ್ಥವನ್ನು ಮಾಡಿಕೊಂಡಿರುವ ಶ್ರೇಷ್ಠ ಬ್ರಹ್ಮಜ್ಞಾನಿಯಾಗಿ ಹುಟ್ಟುತ್ತಾನೆ.
ಗಾಂ ತು ಯಸ್ತು ದರಿದ್ರಾಯ ಬ್ರಾಹ್ಮಣಾಯ ಪ್ರಯಚ್ಛತಿ |
ಪ್ರಸನ್ನಾಂ ಕ್ಷೀರಿಣೀಂ ಪುಣ್ಯಾಂ ಸವತ್ಸಾಂ ಕಾಂಸ್ಯದೋಹನೀಮ್ ॥180॥
ಯತ್ ಕಿಂಚಿದ್ ದುಷ್ಕೃತಂ ಕರ್ಮ ತಸ್ಯ ಪೂರ್ವಕೃತಂ ನೃಪ |
ತತ್ಸರ್ವಂ ತತ್ಕ್ಷಣಾದೇವ ವಿನಶ್ಯತಿ ನ ಸಂಶಯಃ ॥181॥
ಯಾವ ವ್ಯಕ್ತಿಯು ಕಂಚಿನ ಪಾತ್ರೆಯಲ್ಲಿ ಹಾಲನ್ನು ಸುರಿಸುವ, ಕರುವಿನಿಂದ ಕೂಡಿರುವ, ಸಾಧುವಾದ, ಕ್ಷೀರಸಮೃದ್ಧಿಯಿಂದ ಪ್ರಸನ್ನವಾಗಿರುವ ಹಸುವನ್ನು ದರಿದ್ರನಾದ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಆ ವ್ಯಕ್ತಿಯು ಯಾವುದಾದರೂ ದುಷ್ಕರ್ಮಗಳನ್ನು ಈ ಜನ್ಮದಲ್ಲಿ, ಹಿಂದಿನ ಜನ್ಮದಲ್ಲಿ ಮಾಡಿದ್ದರೆ ಆ ಕ್ಷಣದಲ್ಲಿಯೇ ಅದೆಲ್ಲವೂ ನಾಶ ಹೊಂದುತ್ತದೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಯಾನಂ ಚ ವೃಷಸಂಯುಕ್ತಂ ದೀಪ್ಯಮಾನಮಲಂಕೃತಮ್ |
ಆರೂಢಃ ಕಾಮಗಂ ದಿವ್ಯಂ ಗೋಲೋಕಮಧಿಗಚ್ಛತಿ ॥182॥
ಇಂತಹ ಗೋದಾನವನ್ನು ಮಾಡಿದ ವ್ಯಕ್ತಿಯು ಎತ್ತುಗಳಿಂದ ಸಂಯೋಜಿತವಾದ, ಅಲಂಕೃತವಾದ, ಹೊಳೆಯುವ ವಾಹನವನ್ನು ಏರಿಕೊಂಡು ಸ್ವೇಚ್ಛಾರೂಪಿಯಾಗಿ ಗೋಲೋಕವನ್ನು ಹೊಂದುತ್ತಾನೆ.
ಯಾವಂತಿ ಚೈವ ರೋಮಾಣಿ ತಸ್ಯಾ ಗೋಸ್ತು ನರಾಧಿಪ |
ತಾವದ್ ವರ್ಷಸಹಸ್ರಾಣಿ ಗವಾಂ ಲೋಕೇ ಮಹೀಯತೇ ॥183॥
ಯಾವ ದಾನ ಮಾಡಿದ ಹಸುವಿಗೆ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಗಳ ಕಾಲ ಗೋಲೋಕದಲ್ಲಿ ಪೂಜಿತನಾಗಿರುತ್ತಾನೆ.
ಗೋಲೋಕಾದವತೀರ್ಣಸ್ತು ಲೋಕೇಽಸ್ಮಿನ್ ಬ್ರಾಹ್ಮಣೋ ಭವೇತ್ |
ಸತ್ರಯಾಜೀ ಶತಾಯುಶ್ಚ ಸರ್ವರಾಜಾಭಿರರ್ಚಿತಃ ॥184॥
ಗೋಲೋಕದಿಂದ ಭೂಮಿಗೆ ಬಂದ ಬಳಿಕ ಬ್ರಾಹ್ಮಣನಾಗಿ ನೂರು ವರ್ಷಗಳ ದೀರ್ಘ ಆಯುಷ್ಯವುಳ್ಳವನಾಗಿ, ಸತ್ರಯಾಗಗಳನ್ನು ಮಾಡುವವನಾಗಿ, ಸಮಸ್ತ ರಾಜರಿಂದ ಪೂಜಿತನಾಗಿಯೂ ಇರುತ್ತಾನೆ.
ತಿಲಂ ಗಾವಃ ಸುವರ್ಣಂ ಚಾಪ್ಯನ್ನಂ ಕನ್ಯಾ ವಸುಂಧರಾ |
ತಾರಯಂತೀಹ ದತ್ತಾನಿ ಬ್ರಾಹ್ಮಣೇಭ್ಯೋ ಮಹಾಭುಜ ॥185॥
ತಿಲ, ಗೋವು, ಸುವರ್ಣ, ಅನ್ನ, ಕನ್ಯಾ, ಭೂಮಿ ಇವುಗಳನ್ನು ಬ್ರಾಹ್ಮಣರಿಗೆ ದಾನ ಮಾಡುವುದರಿಂದ ಆ ಪುಣ್ಯವು ನಮ್ಮನ್ನು ಕಷ್ಟಗಳಿಂದ ಪಾರು ಮಾಡುತ್ತದೆ.
ಬ್ರಾಹ್ಮಣಂ ವೃತ್ತಸಂಪನ್ನಮಾಹಿತಾಗ್ನಿಮಲೋಲುಪಮ್ |
ತರ್ಪಯೇದ್ ವಿಧಿವದ್ ರಾಜನ್ ಸ ನಿಧಿಃ ಪಾರಲೌಕಿಕಃ ॥186॥
ಸಚ್ಚಾರಿತ್ರ್ಯಸಂಪನ್ನನಾದ, ಆಹಿತಾಗ್ನಿಯಾದ, ಉದಾರಿಯಾದ ಬ್ರಾಹ್ಮಣನನ್ನು ವಿಧಿವತ್ತಾಗಿ ಸಂತೋಷಪಡಿಸಬೇಕು. ಅಂತಹ ಬ್ರಾಹ್ಮಣನು ಪರಲೋಕದ ನಿಧಿ ಎನಿಸಿದ್ದಾನೆ.
ಆಹಿತಾಗ್ನಿಂ ದರಿದ್ರಂ ಚ ಶ್ರೋತ್ರಿಯಂ ಚ ಜಿತೇಂದ್ರಿಯಮ್ |

ಶೂದ್ರಾನ್ನವಿರತಂ ಚೈವ ದ್ವಿಜಂ ಯತ್ನೇನ ಪೂಜಯೇತ್ ॥187॥
ಆಹಿತಾಗ್ನಿಯಾದ, ದರಿದ್ರನಾದ, ಶ್ರೋತ್ರಿಯನಾದ, ಜಿತೇಂದ್ರಿಯನಾದ, ಶೂದ್ರಾನ್ನವನ್ನು ತ್ಯಾಗ ಮಾಡಿರುವ ಬ್ರಾಹ್ಮಣನನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

ಆಹಿತಾಗ್ನಿಃ ಸದಾ ಪಾತ್ರಂ ಸಾಗ್ನಿಹೋತ್ರಶ್ಚ ವೇದವಿತ್ |
ಪಾತ್ರಾಣಾಮಪಿ ತತ್ಪಾತ್ರಂ ಶೂದ್ರಾನ್ನಂ ಯಸ್ಯ ನೋದರೇ ॥188॥
ಯಾವ ವ್ಯಕ್ತಿಯ ಉದರದಲ್ಲಿ ಶೂದ್ರಾನ್ನವು ಸೇರಿಲ್ಲವೋ, ಆಹಿತಾಗ್ನಿಯಾಗಿದ್ದಾನೋ, ಅಗ್ನಿಹೋತ್ರವನ್ನು ವೇದಜ್ಞನಾಗಿ ಆಚರಿಸುತ್ತಾನೋ ಅವನು ಸತ್ಪಾತ್ರರಲ್ಲಿ ಪಾತ್ರನೆನಿಸಿದ್ದಾನೆ.

ಯಚ್ಚ ವೇದಮಯಂ ಪಾತ್ರಂ ಯಚ್ಚ ಪಾತ್ರಂ ತಪೋಮಯಮ್ |
ಅಸಂಕೀರ್ಣಂ ಚ ಯತ್ಪಾತ್ರಂ ತತ್ಪಾತ್ರಂ ತಾರಯಿಷ್ಯತಿ ॥189॥
ಯಾವ ಬ್ರಾಹ್ಮಣನು ವೇದಾಧ್ಯಯನವನ್ನು ಮಾಡಿರುತ್ತಾನೋ, ತಪೋಯುಕ್ತ- ನಾಗಿರುತ್ತಾನೋ, ಧರ್ಮದ ಸಾಂಕರ್ಯವನ್ನು ಹೊಂದಿರುವುದಿಲ್ಲವೋ ಅಂತಹ ಸತ್ಪಾತ್ರನು ಸಂಸಾರದಿಂದ ನಮ್ಮನ್ನು ದಾಟಿಸುತ್ತಾನೆ.

ನಿತ್ಯಸ್ವಾಧ್ಯಾಯನಿರತಾಃ ತ್ವಸಂಕೀರ್ಣೇಂದ್ರಿಯಾಶ್ಚ ಯೇ |
ಪಂಚಯಜ್ಞಪರಾ ನಿತ್ಯಂ ಪೂಜಿತಾಸ್ತಾರಯಂತಿ ತೇ ॥190॥
ಯಾವ ಸ್ವಾಧ್ಯಾಯನಿರತರಾದ ಬ್ರಾಹ್ಮಣರು ಇದ್ದಾರೋ, ಧರ್ಮದಲ್ಲಿ ಸಂಕೀರ್ಣತೆಯನ್ನು ಹೊಂದದೆ, ಇಂದ್ರಿಯಲೋಲುಪರಾಗದೆ, ಪಂಚಯಜ್ಞ ಪರಾಯಣರಾಗಿ ಇರುತ್ತಾರೋ ಅಂತಹ ಬ್ರಾಹ್ಮಣರನ್ನು ಪೂಜಿಸಿದಲ್ಲಿ ನಮ್ಮನ್ನು ಈ ಸಂಸಾರದಿಂದ ಪುಣ್ಯದ ಮೂಲಕ ದಾಟಿಸುತ್ತಾರೆ.

ಯೇ ಕ್ಷಾಂತಿದಾಂತಾಃ ಶ್ರುತಿಪೂರ್ಣಕರ್ಣಾ
ಜಿತೇಂದ್ರಿಯಾಃ ಪ್ರಾಣಿವಧೇ ನಿವೃತ್ತಾಃ |
ಪ್ರತಿಗ್ರಹೇ ಸಂಕುಚಿತಾ ಗೃಹಸ್ಥಾಃ
ತೇ ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ ॥191॥
ಯಾವ ಬ್ರಾಹ್ಮಣರು ಕ್ಷಮೆ ಎಂಬ ಆಭರಣವನ್ನು ಹೊಂದಿರುತ್ತಾರೋ, ಇಂದ್ರಿಯ ನಿಗ್ರಹಶೀಲರಾಗಿರುತ್ತಾರೋ, ವೇದೋಕ್ತವಾದ ವಿಚಾರಗಳನ್ನು ಕಿವಿಗಳಲ್ಲಿ ತುಂಬಿಸಿಕೊಂಡಿರುತ್ತಾರೋ, ಜಿತೇಂದ್ರಿಯರಾದ, ಪ್ರಾಣಿವಧೆಯಿಂದ ನಿವೃತ್ತರಾದ, ದಾನವನ್ನು ಸ್ವೀಕರಿಸುವುದರಲ್ಲಿ ದಾಕ್ಷಿಣ್ಯ ಹೊಂದಿದವರಾದ ಗೃಹಸ್ಥರಾದ ಬ್ರಾಹ್ಮಣರು ನಮ್ಮನ್ನು ದುಃಖದಿಂದ ದಾಟಿಸಲು ಸಮರ್ಥರಾಗಿರುತ್ತಾರೆ.

ನಿತ್ಯೋದಕೀ ನಿತ್ಯಯಜ್ಞೋಪವೀತೀ
ನಿತ್ಯಸ್ವಾಧ್ಯಾಯೀ ವೃಷಲಾನ್ನವರ್ಜೀ |
ಋತೌ ಗಚ್ಛನ್ ವಿಧಿವಚ್ಚಾಪಿ ಜುಹ್ವತ್
ಸ ಬ್ರಾಹ್ಮಣಸ್ತಾರಯಿತುಂ ಸಮರ್ಥಃ ॥192॥
ನಿತ್ಯವೂ ಸತ್ಕರ್ಮಗಳನ್ನಾಚರಿಸುವ, ಯಜ್ಞೋಪವೀತವನ್ನು ಧರಿಸಿರುವ, ನಿತ್ಯ ಸ್ವಾಧ್ಯಾಯಶೀಲನಾದ, ಶೂದ್ರಾನ್ನವನ್ನು ತ್ಯಾಗ ಮಾಡಿರುವ, ವಿಧಿಬದ್ಧವಾಗಿ ಪತ್ನಿಯನ್ನು ಋತುಕಾಲದಲ್ಲಿ ಮಾತ್ರ ಸಂಪರ್ಕಿಸುವ, ಅಗ್ನಿಹೋತ್ರಿಯಾದ ಬ್ರಾಹ್ಮಣನು ನಮ್ಮನ್ನು ಕಷ್ಟದಿಂದ ದಾಟಿಸಲು ಸಮರ್ಥನಾಗಿರುತ್ತಾನೆ.

ಬ್ರಾಹ್ಮಣೋ ಯಸ್ತು ಮದ್ಭಕ್ತೋ ಮದ್ಯಾಜೀ ಮತ್ಪರಾಯಣಃ |
ಮಯಿ ಸನ್ನ್ಯಸ್ತಕರ್ಮಾ ಚ ಸ ವಿಪ್ರಸ್ತಾರಯಿಷ್ಯತಿ ॥193॥
ಯಾವ ಬ್ರಾಹ್ಮಣನು ನನ್ನ ಭಕ್ತನಾಗಿ ಸಮಸ್ತ ಕರ್ಮಗಳನ್ನು ಭಗವತ್ಪೂಜಾ ರೂಪವಾಗಿ ಮಾಡುವವನಾಗಿ, ನನ್ನಲ್ಲೇ ಮನಸ್ಸುಳ್ಳವನಾಗಿ, ಸಮಸ್ತ ಕರ್ಮಗಳನ್ನೂ ಭಗವತ್ಪೂಜಾರೂಪವಾಗಿ ಸಮರ್ಪಿಸುವವನಾಗಿ ಇರುತ್ತಾನೋ ಅಂತಹ ವಿಪ್ರನು ಕಷ್ಟಗಳಿಂದ ನಮ್ಮನ್ನು ದಾಟಿಸುತ್ತಾನೆ.

ದ್ವಾದಶಾಕ್ಷರತತ್ತ್ವಜ್ಞಶ್ಚತುರ್ವ್ಯೂಹವಿಭಾಗವಿತ್ |
ಅಚ್ಛಿದ್ರ(ಃ)ಪಂಚಕಾಲಜ್ಞಃ ಸ ವಿಪ್ರಸ್ತಾರಯಿಷ್ಯತಿ ॥194॥
ಯಾವ ವ್ಯಕ್ತಿಯು ವಾಸುದೇವ ದ್ವಾದಶಾಕ್ಷರ ಮಂತ್ರಗಳನ್ನು ಜಪಿಸುತ್ತಾನೋ, ಭಗವಂತನ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ರೂಪಗಳನ್ನು ಅರಿತಿರುತ್ತಾನೋ, ದೋಷದಿಂದ ಮುಕ್ತನಾಗಿರುತ್ತಾನೋ, ಅಭಿಗಮನ, ಉಪಾದಾನ, ಇಜ್ಯಾ, ಜಪ, ಸ್ವಾಧ್ಯಾಯ ಎಂಬ ಐದು ಕಾಲಗಳಲ್ಲಿ ಆಚರಿಸಬೇಕಾದ ಸತ್ಕರ್ಮಗಳನ್ನು ಅರಿತಿರುತ್ತಾನೋ ಅಂತಹ ಬ್ರಾಹ್ಮಣನು ನಮ್ಮನ್ನು ದುಃಖದಿಂದ ಪಾರು ಮಾಡುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಸರ್ವಶಾಸ್ತ್ರಸಮುಚ್ಚಯೋ ನಾಮ
ದ್ವ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಎರಡನೆಯ ಅಧ್ಯಾಯ ಮುಗಿಯಿತು.

* * * * *

## ನೂರ ಮೂರನೆಯ ಅಧ್ಯಾಯ

ಕೃಷ್ಣನು ಯುಧಿಷ್ಠಿರನನ್ನು ಕುರಿತು ವೃಷಭ-ಗೃಹ-ಶಯ್ಯಾ ಮೊದಲಾದ ದಾನಗಳನ್ನು ಪ್ರಶಂಸಿದುದು. ಗೋ-ಬ್ರಾಹ್ಮಣರ ರಕ್ಷಣೆಯೇ ಮೊದಲಾದ ಅನೇಕ ಧರ್ಮಗಳನ್ನು ಹೇಳಿದುದು.

ವೈಶಂಪಾಯನಃ
ವಾಸುದೇವೇನ ದಾನೇಷು ಕಥಿತೇಷು ಯಥಾಕ್ರಮಮ್ |
ಅವಿತೃಪ್ತಸ್ತು ಧರ್ಮೇಷು ರಾಜಾ ಕೇಶವಮಬ್ರವೀತ್ ॥1॥
ವೈಶಂಪಾಯನ ಜನಮೇಜಯನೇ, ವಾಸುದೇವನು ಕ್ರಮವಾಗಿ ದಾನಗಳ ವಿಷಯಗಳನ್ನು ಹೇಳಿದ ಬಳಿಕ, ಶ್ರವಣದಲ್ಲಿ ಪೂರ್ಣತೃಪ್ತಿಯನ್ನು ಪಡೆಯದ ಯುಧಿಷ್ಠಿರನು ಪುನಃ ಕೇಶವನನ್ನು ಕುರಿತು ಹೀಗೆ ಹೇಳಿದನು.
ಯುಧಿಷ್ಠಿರಃ
ದೇವ ಧರ್ಮಾಮೃತಮಿದಂ ಶೃಣ್ವತೋಽಪಿ ಪರಂತಪ |
ನ ವಿದ್ಯತೇ ಸುರಶ್ರೇಷ್ಠ ಮಮ ತೃಪ್ತಿರ್ಹಿ ಮಾಧವ ॥2॥
ಯುಧಿಷ್ಠಿರ ಪರಂತಪನೇ, ದೇವದೇವನೇ, ಮಾಧವನೇ, ಅಮೃತಧಾರೆಗೆ ಸಮಾನವಾದ ನಿನ್ನ ಧರ್ಮಪ್ರವಚನವನ್ನು ಎಷ್ಟು ಕೇಳಿದರೂ ನನಗೆ ತೃಪ್ತಿ ಉಂಟಾಗುತ್ತಿಲ್ಲ. ಮತ್ತೂ ಕೇಳಬೇಕು ಎನಿಸುತ್ತಿದೆ.
ತತ್ಫಲಂ ಕಥಯಸ್ವೇಹ ತವ ಭಕ್ತಸ್ಯ ಮೇಽಚ್ಯುತ ॥3॥
ಶ್ರೀಕೃಷ್ಣನೇ ವೃಷಭವನ್ನು ದಾನ ಮಾಡಿದಾಗ ಯಾವ ಫಲವು ಉಂಟಾಗುತ್ತದೆ ಎಂಬುದನ್ನು ನಿನ್ನ ಭಕ್ತನಾದ ನನಗೆ ತಿಳಿಸು.
ಯಾನಿ ಚಾನ್ಯಾನಿ ದಾನಾನಿ ತ್ವಯಾ ನೋಕ್ತಾನಿ ಕಾನಿಚಿತ್ |
ತಾನ್ಯಾಚಕ್ಷ್ವ ಸುರಶ್ರೇಷ್ಠ ತೇಷಾಂ ಚಾನುಕ್ರಮಾತ್ ಫಲಮ್ ॥4॥
ಇಷ್ಟೇ ಅಲ್ಲದೆ ಬೇರೆ ಇನ್ನೂ ಯಾವ ದಾನಗಳ ಬಗ್ಗೆ ನೀನು ತಿಳಿಸಿಲ್ಲವೋ, ಆ ಎಲ್ಲ ದಾನಗಳ ಬಗ್ಗೆಯೂ ಕ್ರಮವಾಗಿ ತಿಳಿಸುತ್ತಾ, ಅವುಗಳಿಂದ ದೊರೆಯುವ ಫಲಗಳನ್ನೂ ತಿಳಿಸು.
ಶ್ರೀಭಗವಾನ್
ಶೃಣು ಧರ್ಮಾಮೃತಂ ಶ್ರೇಷ್ಠಂ ದತ್ತಸ್ಯಾನಡುಹಃ ಫಲಮ್ |
ಪವಿತ್ರತ್ವಾತ್ ಸುಪುಣ್ಯತ್ವಾತ್ ಪಾವನತ್ವಾತ್ ತಥೈವ ಚ ॥5॥
ಶ್ರೀಭಗವಾನ್ ಧರ್ಮರಾಜನೇ, ಶ್ರೇಷ್ಠವಾದ ನಿತ್ಯವಾದ ವೃಷಭದಾನದ ಫಲವನ್ನು ಕೇಳು. ಈ ದಾನದ ಫಲವನ್ನು ಕೇಳುವುದೇ ಪವಿತ್ರವಾಗಿದೆ, ಪುಣ್ಯಪ್ರದವಾಗಿದೆ, ಶ್ರೇಷ್ಠವಾಗಿದೆ.
ದಶಧೇನುಸಮೋಽನಡ್ವಾನ್ ಏಕೋಽಪಿ ಕುರುಪುಂಗವ |
ಮೇದೋಮಾಂಸವಿಪುಷ್ಟಾಂಗೋ ನೀರೋಗಃ ಕೋಪವರ್ಜಿತಃ ॥6॥
ಕುರುಶ್ರೇಷ್ಠನೇ, ಹತ್ತು ಹಸುಗಳಿಗೆ ಸಮಾನವಾದುದು ಒಂದು ವೃಷಭದ ದಾನ. ಕುರುಪುಂಗವನೇ, ಕೋಪವಿಲ್ಲದ, ರೋಗರಹಿತವಾದ, ಮೇದಸ್ಸು, ಮಾಂಸಗಳಿಂದ ಪುಷ್ಟವಾದ ಅವಯವವುಳ್ಳ ಒಂದು ವೃಷಭವನ್ನು ದಾನ ಮಾಡಿದರೂ ಹತ್ತು ಹಸುಗಳನ್ನು ದಾನ ಮಾಡಿದ ಫಲವು ಉಂಟಾಗುತ್ತದೆ.
ಯುವಾ ಭದ್ರಃ ಸುಶೀಲಶ್ಚ ಸರ್ವದೋಷವಿವರ್ಜಿತಃ |
ಧುರಂ ಧಾರಯತೇಽನಡ್ವಾನ್ ದತ್ತೋ ವಿಪ್ರಾಯ ಪಾಂಡವ ॥7॥
ಪಾಂಡವನೇ, ಯೌವನದಲ್ಲಿ ಕೂಡಿರುವ, ಮಂಗಳವಾದ, ಒಳ್ಳೆಯ ಸ್ವಭಾವದಿಂದ ಕೂಡಿದ, ದೋಷಗಳಿಂದ ದೂರವಾದ, ಭಾರವನ್ನು ಹೊರುವ ವೃಷಭವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.
ಸ ತೇನ ಪುಣ್ಯದಾನೇನ ವರ್ಷಕೋಟಿಂ ಯುಧಿಷ್ಠಿರ |
ಯಥಾಕಾಮಂ ಮಹಾತೇಜಾ ಗವಾಂ ಲೋಕೇ ಮಹೀಯತೇ ॥8॥
ಯುಧಿಷ್ಠಿರನೇ, ಪುಣ್ಯಪ್ರದಾನವಾದ ವೃಷಭವನ್ನು ದಾನ ಮಾಡುವುದರಿಂದ ಯುಧಿಷ್ಠಿರನೇ, ದಾನ ಮಾಡಿದ ವ್ಯಕ್ತಿಯು ಕೋಟಿ ವರ್ಷಗಳ ಕಾಲ ತನ್ನ ಸಮಸ್ತ ಇಷ್ಟಾರ್ಥಗಳನ್ನು ಪಡೆಯುತ್ತಾ ತೇಜಸ್ವಿಯಾಗಿ ಗೋಲೋಕದಲ್ಲಿ ಪೂಜಿತನಾಗುತ್ತಾನೆ.
ಯಶ್ಚ ದದ್ಯಾದನಡ್ವಾಹೌ ದ್ವೌ ಯುಕ್ತೌ ತು ಧುರಂಧರೌ |
ಸುವ್ರತಾಯ ದರಿದ್ರಾಯ ಶ್ರೋತ್ರಿಯಾಯ ವಿಶೇಷತಃ ॥9॥
ತಸ್ಯ ಯತ್ ಪುಣ್ಯಮಾಖ್ಯಾತಂ ತಚ್ಛೃಣುಷ್ವ ಯುಧಿಷ್ಠಿರ ॥10॥
ಭಾರವನ್ನು ಹೊರುವ ಸಾಮರ್ಥ್ಯವುಳ್ಳ ಎರಡು ಎತ್ತುಗಳನ್ನು ಯಾವನು ವ್ರತನಿಷ್ಠನಾದ, ದರಿದ್ರನಾದ ಶ್ರೋತ್ರಿಯ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯವೇನೆಂಬುದನ್ನು ತಿಳಿಸುತ್ತೇನೆ, ಯುಧಿಷ್ಠಿರನೇ ಕೇಳಿಸಿಕೊ.
ಸಹಸ್ರಗೋಪ್ರದಾನೇನ ಯತ್ಪ್ರೋಕ್ತಂ ಫಲಮುತ್ತಮಮ್ |
ತತ್ಪುಣ್ಯಫಲಮಾಪ್ನೋತಿ ಯಾತಿ ಲೋಕಾನ್ ಸನಾತನಾನ್ ॥11॥
ಸಾವಿರ ಗೋವುಗಳನ್ನು ದಾನ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೋ ಆ ಫಲವನ್ನು ಎರಡು ವೃಷಭಗಳನ್ನು ದಾನ ಮಾಡಿದ ವ್ಯಕ್ತಿಯು ಹೊಂದುತ್ತಾನೆ.
ಯಾವಂತಿ ಚೈವ ರೋಮಾಣಿ ತಯೋಶ್ಚಾನಡುಹೋರ್ನೃಪ |
ತಾವದ್ ವರ್ಷಸಹಸ್ರಾಣಿ ಮಮ ಲೋಕೇ ಮಹೀಯತೇ ॥12॥
ಆ ಎರಡು ಎತ್ತುಗಳ ದೇಹದಲ್ಲಿ ಎಷ್ಟು ರೋಮಗಳು ಇವೆಯೋ ಅಷ್ಟು ಸಾವಿರ ವರ್ಷಗಳ ಕಾಲ ನನ್ನ ಲೋಕದಲ್ಲಿ ಪೂಜಿತನಾಗುತ್ತಾನೆ.
ದರಿದ್ರಾಯೈವ ದಾತವ್ಯಂ ನ ಸಮೃದ್ಧಾಯ ಪಾಂಡವ |
ವರ್ಷಾಣಾಂ ಹಿ ತಟಾಕೇಷು ಫಲಂ ನೈವ ಪಯೋಧಿಷು ॥13॥
ಈ ಎತ್ತುಗಳನ್ನು ದರಿದ್ರನಾದ ಬ್ರಾಹ್ಮಣನಿಗೆ ನೀಡಬೇಕೇ ವಿನಾ ಸಮೃದ್ಧಿಯುಳ್ಳ ಬ್ರಾಹ್ಮಣನಿಗೆ ನೀಡಬಾರದು. ಕಾರಣ

ಮಳೆಗಾಲದಲ್ಲಿ ಸುರಿಯುವ ನೀರನ ಪ್ರಯೋಜನವು ಸರೋವರ, ಬಾವಿಗಳಲ್ಲದೆ ಸಮುದ್ರಕ್ಕೆ ಯಾವ ಪ್ರಯೋಜನವೂ ಉಂಟುಮಾಡುವುದಿಲ್ಲ. ಇದರಂತೆ ಸಮೃದ್ಧಿಯುಳ್ಳ ಬ್ರಾಹ್ಮಣನಿಗೆ ದಾನ ಮಾಡುವುದಕ್ಕಿಂತ ದರಿದ್ರನಿಗೆ ಮಾಡುವ ದಾನವು ಶ್ರೇಷ್ಠವೆನಿಸಿದೆ.
ಯಸ್ತು ದದ್ಯಾದನಡುಹಂ ದರಿದ್ರಾಯ ದ್ವಿಜಾತಯೇ |
ಸ ತೇನ ಪುಣ್ಯದಾನೇನ ಪೂತಾತ್ಮಾ ಕುರುಪುಂಗವ ॥14॥
ವಿಮಾನಂ ದಿವ್ಯಮಾರೂಢೋ ದಿವ್ಯರೂಪೀ ಯಥಾಸುಖಮ್ |
ಮಮ ಲೋಕೇಷು ರಮತೇ ಯಾವದಾಭೂತಸಂಪ್ಲವಮ್ ॥15॥
ಕುರುಶ್ರೇಷ್ಠನೇ, ಯಾವ ವ್ಯಕ್ತಿಯು ಎತ್ತುಗಳನ್ನು ದರಿದ್ರನಾದ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನು ಪವಿತ್ರಾತ್ಮನಾಗಿ, ಆ ಪುಣ್ಯಪ್ರದವಾದ ದಾನದಿಂದ ನಿರ್ಮಲವಾದ, ಶ್ರೇಷ್ಠವಾದ ದೇವವಿಮಾನವನ್ನು ಏರಿಕೊಂಡು ಪ್ರಳಯವಾಗುವ ತನಕವೂ ನನ್ನ ಲೋಕದಲ್ಲಿ ಇದ್ದು ಸಮಸ್ತ ಇಷ್ಟಾರ್ಥಗಳನ್ನು ಪಡೆದು ವಿಹರಿಸುತ್ತಾನೆ.
ಗೃಹಂ ದೀಪಪ್ರಭಾಯುಕ್ತಂ ಶಯ್ಯಾಸನವಿಭೂಷಿತಮ್ |
ಭಾಜನೋಪಸ್ಕರೈರ್ಯುಕ್ತಂ ಧಾನ್ಯಪೂರ್ಣಮಲಂಕೃತಮ್ ॥16॥
ದಾಸೀಗೋಭೂಮಿಸಂಯುಕ್ತಮನ್ಯೂನಂ ಸರ್ವಸಾಧನೈಃ ॥17॥
ಬ್ರಾಹ್ಮಣಾಯ ದರಿದ್ರಾಯ ಶ್ರೋತ್ರಿಯಾಯ ಯುಧಿಷ್ಠಿರ |
ದದ್ಯಾತ್ ಸದಕ್ಷಿಣಂ ಯಸ್ತು ತಸ್ಯ ಪುಣ್ಯಫಲಂ ಶೃಣು ॥18॥
ಯುಧಿಷ್ಠಿರನೇ, ಯಾವ ವ್ಯಕ್ತಿಯು ದೀಪದ ಬೆಳಕಿನಿಂದ ಕೂಡಿದ ಮನೆಯನ್ನು, ಹಾಸಿಗೆ, ಆಸನದಿಂದ ಅಲಂಕೃತವಾದ, ಪಾತ್ರೆಗಳಿಂದ ತುಂಬಿದ, ಧಾನ್ಯಪೂರ್ಣವಾದ, ಅಲಂಕೃತವಾದ ದಾಸಿಯರೂ, ಗೋ, ಭೂಮಿ ಮುಂತಾದ ನ್ಯೂನತೆಯಿಲ್ಲದ ಸಮಸ್ತ ಸಾಧನವುಳ್ಳ ಗೃಹವನ್ನು ಶ್ರೋತ್ರಿಯನಾದ, ದರಿದ್ರನಾದ ಬ್ರಾಹ್ಮಣನಿಗೆ ದಕ್ಷಿಣೆ ಸಹಿತವಾಗಿ ದಾನ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೆ ಎನ್ನುವುದನ್ನು ಹೇಳುತ್ತೇನೆ, ಕೇಳಿಸಿಕೊ.
ದೇವಾಃ ಪಿತೃಗಣಾಶ್ಚೈವ ಹ್ಯಗ್ನಯೋ ಋಷಯಸ್ತಥಾ |
ಪ್ರಯಚ್ಛಂತಿ ಪ್ರಹೃಷ್ಟಾ ವೈ ಯಾನಮಾದಿತ್ಯಸನ್ನಿಭಮ್ ॥19॥
ತೇನ ಗಚ್ಛೇಚ್ಛ್ರಿಯಾ ಯುಕ್ತೋ ಬ್ರಹ್ಮಲೋಕಮನುತ್ತಮಮ್ ॥20॥
ದೇವತೆಗಳು, ಪಿತೃಗಣದವರು, ಅಗ್ನಿಗಳು, ಋಷಿಗಳು ಇವನ ದಾನದಿಂದ ಸಂತುಷ್ಟರಾಗಿ ಸೂರ್ಯಪ್ರಭೆಯಿಂದ ಕಂಗೊಳಿಸುವ ವಾಹನವನ್ನು ಅವನ ಪಾಲಿಗೆ ಕಳುಹಿಸಿಕೊಡುತ್ತಾರೆ. ಯಾರಿಂದಲೂ ಹೊಂದಲಾಗದ ಕಾಂತಿಯಿಂದ ಕೂಡಿದ ಬ್ರಹ್ಮಲೋಕವನ್ನು ಅವನು ಹೊಂದುತ್ತಾನೆ.
ಸ್ತ್ರೀಸಹಸ್ರಾವೃತೇ ದಿವ್ಯೇ ಭವನೇ ತತ್ರ ಕಾಂಚನೇ |
ಮೋದತೇ ಬ್ರಹ್ಮಲೋಕಸ್ಥೋ ಯಾವದಾಭೂತಸಂಪ್ಲವಮ್ ॥21॥
ಬಂಗಾರಮಯವಾದ ಅರಮನೆಯಲ್ಲಿ ಸಾಸಿರ ಸ್ತ್ರೀಯರಿಂದ ಕೂಡಿಕೊಂಡು ಪ್ರಲಯವಾಗುವ ತನಕವೂ ಬ್ರಹ್ಮಲೋಕದಲ್ಲಿ ಸುಖ ಹೊಂದುತ್ತಾನೆ.
ಶಯ್ಯಾಂ ಪ್ರಸ್ತರಣೋಪೇತಾಂ ಯಃ ಪ್ರಯಚ್ಛತಿ ಪಾಂಡವ |
ಅರ್ಚಯಿತ್ವಾ ದ್ವಿಜಂ ಭಕ್ತ್ಯಾ ವಸ್ತ್ರಮಾಲ್ಯಾನುಲೇಪನೈಃ ॥22॥
ಭೋಜಯಿತ್ವಾ ವಿಚಿತ್ರಾನ್ನಂ ತಸ್ಯ ಪುಣ್ಯಫಲಂ ಶೃಣು ॥23॥
ಆಚ್ಛಾದನೆ(ಹೊದಿಕೆ)ಯಿಂದ ಕೂಡಿದ ಹಾಸಿಗೆಯನ್ನು ಯಾವನು ಬ್ರಾಹ್ಮಣನಿಗೆ ದಾನ ಮಾಡುತ್ತಾನೋ, ವಸ್ತ್ರ, ಮಾಲ್ಯ, ಅನುಲೇಪನಗಳಿಂದ ಅಲಂಕರಿಸಿ ಭಕ್ತಿಯಿಂದ ದಾನ ಮಾಡಿ, ಅನೇಕ ಬಗೆಯ ಅನ್ನದಿಂದ ಊಟವನ್ನು ಮಾಡಿಸಿದ ವ್ಯಕ್ತಿಗೆ ದೊರೆಯುವ ಫಲವೇನೆಂಬುದನ್ನು ಕೇಳು.
ಧೇನುದಾನಸ್ಯ ಯತ್ಪುಣ್ಯಂ ವಿಧಿದತ್ತಸ್ಯ ಪಾಂಡವ |
ತತ್ಪುಣ್ಯಂ ಸಮನುಪ್ರಾಪ್ಯ ಪಿತೃಲೋಕೇ ಮಹೀಯತೇ ॥24॥
ಒಂದು ಹಸುವನ್ನು ದಾನ ಮಾಡಿದಾಗ ಯಾವ ಪುಣ್ಯವನ್ನು ಹೊಂದುತ್ತಾನೋ, ವಿಧಿಬದ್ಧವಾಗಿ ಗೋದಾನ ಮಾಡಿದ ಪುಣ್ಯವನ್ನೇ ಈ ದಾನದಿಂದ ಹೊಂದಿ ಪಿತೃಲೋಕದಲ್ಲಿ ಪೂಜ್ಯನಾಗುತ್ತಾನೆ.
ಶಿಲ್ಪಮಧ್ಯಯನಂ ವಾಽಪಿ ವಿದ್ಯಾಮಂತ್ರೌಷಧಾನಿ ಚ |
ಯಃ ಪ್ರಯಚ್ಛತಿ ವಿಪ್ರಾಯ ತಸ್ಯ ಪುಣ್ಯಫಲಂ ಶೃಣು ॥25॥
ಶಿಲ್ಪ, ವೇದ, ಮಂತ್ರ, ಔಷಧಿಗಳ ವಿದ್ಯೆಗಳನ್ನು ಯಾವನು ದಾನ ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.
ಆಹಿತಾಗ್ನಿಸಹಸ್ರಸ್ಯ ತರ್ಪಿತಸ್ಯೇಹ ಯತ್ಫಲಮ್ |
ತತ್ಪುಣ್ಯಫಲಮಾಪ್ನೋತಿ ಯಸ್ತು ವಿದ್ಯಾಂ ಪ್ರಯಚ್ಛತಿ ॥26॥
ಸಾವಿರ ಆಹಿತಾಗ್ನಿಗಳನ್ನು ತೃಪ್ತಿಪಡಿಸಿದಾಗ ಯಾವ ಫಲವು ಬರುತ್ತದೋ ಆ ಪುಣ್ಯಫಲವನ್ನು ವಿದ್ಯಾದಾನ ಮಾಡಿದ ವ್ಯಕ್ತಿಯು ಹೊಂದುತ್ತಾನೆ.
ಛಂದೋಭಿಃ ಸಂಪ್ರಯುಕ್ತೇನ ವಿಮಾನೇನ ವಿರಾಜತಾ |
ಸಪ್ತರ್ಷಿಲೋಕಾನ್ ವ್ರಜತಿ ಪೂಜ್ಯತೇ ಬ್ರಹ್ಮವಾದಿಭಿಃ ॥27॥
ತನ್ನ ನಿಯಂತ್ರಣಕ್ಕೆ ಸಿಗುವ ಕುದುರೆಗಳಿಂದ ಕೂಡಿದ ವಿಮಾನದಲ್ಲಿ ಶೋಭಿಸುವವನಾಗಿ, ಬ್ರಹ್ಮವಾದಿಗಳಿಂದ ಪೂಜಿತನಾಗಿ ಸಪ್ತರ್ಷಿಗಳ ಲೋಕಕ್ಕೆ ಹೋಗುತ್ತಾನೆ.

ಚತುರ್ಯುಗಾನಿ ವೈ ತ್ರಿಂಶತ್ ಕ್ರೀಡಿತ್ವಾ ತತ್ರ ದೇವವತ್ |
ಇಹ ಮಾನುಷ್ಯಕೇ ಲೋಕೇ ವಿಪ್ರೋ ಭವತಿ ವೇದವಿತ್ ॥28॥
ಆ ಸಪ್ತರ್ಷಿಲೋಕದಲ್ಲಿಯಾದರೂ ಮೂವತ್ತು ಚತುರ್ಯುಗಗಳ ಕಾಲ ದೇವತೆಗಳಂತೆ ಸಂತೋಷದಂತೆ ವಿಹರಿಸಿ, ನಂತರ ಮನುಷ್ಯಲೋಕದಲ್ಲಿ ಬ್ರಾಹ್ಮಣನಾಗಿ, ವೇದಜ್ಞನಾಗಿ ಹುಟ್ಟುತ್ತಾನೆ.
ವಿಶ್ರಾಮಯತಿ ಯೋ ವಿಪ್ರಂ ಶ್ರಾಂತಮಧ್ವನಿ ಕರ್ಶಿತಮ್ |
ವಿನಶ್ಯತಿ ತದಾ ಪಾಪಂ ತಸ್ಯ ವರ್ಷಕೃತಂ ನೃಪ ॥29॥
ಯಾವನು ದಾರಿಯಲ್ಲಿ ಬಳಲಿದ ಒಬ್ಬ ಬ್ರಾಹ್ಮಣನನ್ನು ವಿಶ್ರಾಂತಿ ಕೊಡುವುದರ ಮೂಲಕ ಉಪಚರಿಸುತ್ತಾನೋ ಅವನ ಒಂದು ವರ್ಷಗಳ ಪಾಪವು ನಾಶವನ್ನು ಹೊಂದುತ್ತದೆ.
ಅಥ ಪ್ರಕ್ಷಾಲಯೇತ್ ಪಾದೌ ತಸ್ಯ ತೋಯೇನ ಭಕ್ತಿಮಾನ್ |
ದಶವರ್ಷಕೃತಂ ಪಾಪಂ ವ್ಯಪೋಹತಿ ನ ಸಂಶಯಃ ॥30॥
ಯಾರು ಪ್ರಯಾಣದಲ್ಲಿ ಸಾಗುತ್ತಿರುವ ಬ್ರಾಹ್ಮಣನ ಪಾದಗಳನ್ನು ಭಕ್ತಿಯಿಂದ ನೀರಿನಿಂದ ತೊಳೆಯುತ್ತಾನೋ ಅವನ ಹತ್ತುವರ್ಷಗಳ ಪಾಪಗಳು ಪರಿಹಾರವಾಗುತ್ತವೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಘೃತೇನ ವಾಽಥ ತೈಲೇನ ಪಾದೌ ತಸ್ಯ ತು ಪೂಜಯೇತ್ |
ಸ ದ್ವಾದಶಸಮಾರೂಢಂ ಪಾಪಮಾಶು ವ್ಯಪೋಹತಿ ॥31॥
ತೀರ್ಥಯಾತ್ರೆಯನ್ನು ಮಾಡುತ್ತಿರುವ ಬ್ರಾಹ್ಮಣನ ಪಾದಗಳನ್ನು ತುಪ್ಪದಿಂದಾಗಲಿ, ತೈಲದಿಂದಾಗಲಿ ಯಾವನು ಪೂಜಿಸುತ್ತಾನೋ ಅವನ ಹನ್ನೆರಡು ವರ್ಷಗಳಲ್ಲಿ ಸಂಪಾದಿಸಿದ ಪಾಪಗಳು ಪರಿಹಾರವಾಗುತ್ತವೆ.
ಧೇನುದಾನಸ್ಯ ದತ್ತಸ್ಯ ಯಚ್ಚ ಪುಣ್ಯಮುದಾಹೃತಮ್ |
ತತ್ಪುಣ್ಯಫಲಮಾಪ್ನೋತಿ ಯಸ್ತ್ವೇನಂ ವಿಪ್ರಮರ್ಚಯೇತ್ ॥32॥
ಒಂದು ಹಸುವನ್ನು ದಾನ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೆ ಎಂದು ಹೇಳಿದ್ದಾರೋ, ಬ್ರಾಹ್ಮಣನನ್ನು ಆರಾಧಿಸಿದ ವ್ಯಕ್ತಿಗೂ ಅಷ್ಟೇ ಪುಣ್ಯವು ಲಭಿಸುತ್ತದೆ.
ಸ್ವಾಗತೇನ ತು ಯೋ ವಿಪ್ರಂ ಪೂಜಯೇದಾಸನೇನ ಚ |
ಪ್ರತ್ಯುತ್ಥಾನೇನ ವಾ ರಾಜನ್ ಸ ದೇವಾನಾಂ ಪ್ರಿಯೋ ಭವೇತ್ ॥33॥
ಯಾವ ವ್ಯಕ್ತಿಯು ಬ್ರಾಹ್ಮಣನನ್ನು ಸ್ವಾಗತಿಸಿ ಆಸನಾದಿಗಳನ್ನು ಕೊಟ್ಟು ಎದ್ದು ನಿಂತು ಗೌರವಿಸುವ ಮೂಲಕ ಉಪಚರಿಸುತ್ತಾನೋ ಅವನು ದೇವತೆಗಳಿಗೆ ಇಷ್ಟನಾಗುತ್ತಾನೆ.
ಸ್ವಾಗತೇನಾಗ್ನಯೋ ರಾಜನ್ನಾಸನೇನ ಶತಕ್ರತುಃ |
ಪ್ರತ್ಯುತ್ಥಾನೇನ ಪಿತರಃ ಪ್ರೀತಿಂ ಯಾಂತ್ಯತಿಥಿಪ್ರಿಯಾಃ ॥34॥
ಬ್ರಾಹ್ಮಣನನ್ನು ಸ್ವಾಗತಿಸುವುದರಿಂದ ಅಗ್ನಿಗಳು, ಆಸನವನ್ನು ನೀಡುವುದರಿಂದ ಇಂದ್ರನು, ಎದ್ದು ನಿಂತು ಗೌರವಿಸುವುದರಿಂದ ಪಿತೃದೇವತೆಗಳು ಸಂತುಷ್ಟರಾಗುತ್ತಾರೆ. ಈ ಎಲ್ಲ ದೇವತೆಗಳು ಅತಿಥಿಯ ವಿಷಯದಲ್ಲಿ ಪ್ರೀತಿಯುಳ್ಳವರು.
ಅಗ್ನಿಶಕ್ರಪಿತೄಣಾಂ ಚ ತೇಷಾಂ ಪ್ರೀತ್ಯಾ ನರಾಧಿಪ |
ಸಂವತ್ಸರಕೃತಂ ಪಾಪಂ ತಸ್ಯ ಸದ್ಯೋ ವಿನಶ್ಯತಿ ॥35॥
ಆದ್ದರಿಂದ ಅಗ್ನಿ-ಇಂದ್ರ-ಪಿತೃಗಳನ್ನು ಸಂತೋಷಪಡಿಸಿದ ಫಲವಾಗಿ ನರಾಧಿಪನೇ, ಆ ವ್ಯಕ್ತಿಯ ಒಂದು ಸಂವತ್ಸರದಲ್ಲಿ ಮಾಡಿದ ಪಾಪಗಳು ಕೂಡಲೇ ನಾಶ ಹೊಂದುತ್ತವೆ.
ಯಃ ಪ್ರಯಚ್ಛತಿ ವಿಪ್ರಾಯ ಆಸನಂ ಮಾಲ್ಯಭೂಷಿತಮ್ |
ಸ ಯಾತಿ ಮಣಿಯುಕ್ತೇನ ರಥೇನ ಹರಿಕೇತನಮ್ ॥36॥
ಯಾವ ವ್ಯಕ್ತಿಯು ಬ್ರಾಹ್ಮಣನಿಗೆ ಆಸನವನ್ನು ನೀಡುತ್ತಾನೋ, ಮಾಲೆಗಳಿಂದ ಅಲಂಕರಿಸುತ್ತಾನೋ ಆ ವ್ಯಕ್ತಿಯು ಮಣಿಗಳಿಂದ ಅಲಂಕೃತವಾದ ರಥವನ್ನು ಏರಿಕೊಂಡು ಇಂದ್ರನ ಮಂದಿರಕ್ಕೆ ಸಾಗುತ್ತಾನೆ.
ಪುರಂದರಾಸನೇ ತತ್ರ ದಿವ್ಯನಾರೀವಿಭೂಷಿತಃ |
ಷಷ್ಟಿಂ ವರ್ಷಸಹಸ್ರಾಣಿ ಕ್ರೀಡತ್ಯಪ್ಸರಸಾಂ ಗಣೈಃ ॥37॥
ಇಂದ್ರನ ಮನೆಯಲ್ಲಿ ಅನೇಕ ನಾರಿಯರಿಂದ ವಿಭೂಷಿತನಾಗಿ ಅರವತ್ತು ಸಾವಿರ ವರ್ಷಗಳ ಕಾಲ ಅಪ್ಸರೆಯರ ಮಧ್ಯದಲ್ಲಿ ಕ್ರೀಡಿಸುತ್ತಾನೆ.
ಇಹ ಲೋಕೇ ತು ಧನವಾನ್ ಚತುರ್ವೇದೀ ದ್ವಿಜೋ ಭವೇತ್ ॥38॥
ಬಳಿಕ ಭೂಲೋಕಕ್ಕೆ ಆಗಮಿಸಿ ಧನವಂತನಾದ ಚತುರ್ವೇದ ಪಾರಂಗತನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ವಾಹನಂ ಯಃ ಪ್ರಯಚ್ಛೇತ ಬ್ರಾಹ್ಮಣಾಯ ಯುಧಿಷ್ಠಿರ |
ಸ ಯಾತಿ ರತ್ನಚಿತ್ರೇಣ ವಾಹನೇನ ಸುರಾಲಯಮ್ ॥39॥
ಯುಧಿಷ್ಠಿರನೇ, ಯಾವನು ಬ್ರಾಹ್ಮಣನಿಗೆ ವಾಹನವನ್ನು ನೀಡುತ್ತಾನೋ ಅವನು ರತ್ನದಿಂದ ಅಲಂಕೃತವಾದ ವಾಹನದಲ್ಲಿ ಸ್ವರ್ಗಲೋಕಕ್ಕೆ ಹೋಗುತ್ತಾನೆ.
ಸ ತತ್ರ ಕಾಮಂ ಕ್ರೀಡಿತ್ವಾ ಸೇವ್ಯಮಾನೋಽಪ್ಸರೋಗಣೈಃ |
ಇಹ ರಾಜಾ ಭವೇದ್ ರಾಜನ್ ನಾತ್ರ ಕಾರ್ಯಾ ವಿಚಾರಣಾ ॥40॥
ಸ್ವರ್ಗಲೋಕದಲ್ಲಿ ಯಥೇಷ್ಟವಾಗಿ ವಿಹರಿಸಿ, ಅಪ್ಸರಾಗಣದಿಂದ ಸೇವ್ಯಮಾನನಾಗಿ ಬಳಿಕ ಈ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

ಪಾದಪಂ ಪಲ್ಲವಾಕೀರ್ಣಂ ಪುಷ್ಪಿತಂ ಸಫಲಂ ತಥಾ |
ಗಂಧಮಾಲ್ಯಾರ್ಚಿತಂ ಕೃತ್ವಾ ವಸ್ತ್ರಭೂಷಣಭೂಷಿತಮ್ ॥41॥
ಯಃ ಪ್ರಯಚ್ಛತಿ ವಿಪ್ರಾಯ ಶ್ರೋತ್ರಿಯಾಯ ಸದಕ್ಷಿಣಮ್ |
ಭೋಜಯಿತ್ವಾ ಯಥಾಕಾಮಂ ತಸ್ಯ ಪುಣ್ಯಫಲಂ ಶೃಣು ॥42॥
ಯಾವ ವ್ಯಕ್ತಿಯು ಚಿಗುರಿನಿಂದ ತುಂಬಿದ, ಹೂ, ಹಣ್ಣುಗಳಿಂದ ಸಮೃದ್ಧವಾದ ಒಂದು ಮರವನ್ನು ಗಂಧ-ಮಾಲೆಗಳಿಂದ ಅಲಂಕರಿಸಿ ವಸ್ತ್ರ-ಭೂಷಣವನ್ನು ಬ್ರಾಹ್ಮಣನಿಗೆ ನೀಡುತ್ತಾನೋ, ಬಳಿಕ ಭೋಜನ ಮಾಡಿಸಿ, ದಕ್ಷಿಣೆ ಕೊಟ್ಟು ಸತ್ಕರಿಸುತ್ತಾನೋ ಅವನಿಗೆ ದೊರೆಯುವ ಪುಣ್ಯದ ಫಲವೇನೆಂದು ಹೇಳುತ್ತೇನೆ, ಕೇಳು.
ಜಾಂಬೂನದವಿಚಿತ್ರೇಣ ವಿಮಾನೇನ ವಿರಾಜತಾ |
ಪುರಂದರಪುರಂ ಯಾತಿ ಜಯಶಬ್ದರವೈರ್ಯುತಃ ॥43॥
ಬಂಗಾರದಿಂದ ಅಲಂಕೃತವಾದ ವಿಮಾನದಲ್ಲಿ ಶೋಭಿಸುವವನಾಗಿ, ಜಯಘೋಷಗಳಿಂದ ಕೂಡಿದವನಾಗಿ ಇಂದ್ರಲೋಕಕ್ಕೆ ತೆರಳುತ್ತಾನೆ.
ತತ್ರ ಶಕ್ರಪುರೇ ರಮ್ಯೇ ತಸ್ಯ ಕಲ್ಪಕಪಾದಪಃ |
ದದಾತಿ ಚೇಪ್ಸಿತಂ ಸರ್ವಂ ಮನಸಾ ಯದ್ಯದಿಚ್ಛತಿ ॥44॥
ಆ ಇಂದ್ರನ ರಮಣೀಯವಾದ ಪಟ್ಟಣದಲ್ಲಿಯಾದರೂ ಕಲ್ಪವೃಕ್ಷದ ಬುಡದಲ್ಲಿ ಕುಳಿತು ತನ್ನ ಮನಸ್ಸಿಗೆ ಬರುವ ಇಷ್ಟಾರ್ಥಗಳನ್ನೆಲ್ಲ ಯಥೇಷ್ಟವಾಗಿ ಹೊಂದುತ್ತಾನೆ.
ಯಾವಂತಿ ತಸ್ಯ ಪತ್ರಾಣಿ ಪುಷ್ಪಾಣಿ ಚ ಫಲಾನಿ ಚ |
ತಾವದ್ ವರ್ಷಸಹಸ್ರಾಣಿ ಶಕ್ರಲೋಕೇ ಮಹೀಯತೇ ॥45॥
ದಾನ ಮಾಡಿದ ಮರದಲ್ಲಿ ಎಷ್ಟು ಎಲೆ, ಪತ್ರ, ಪುಷ್ಪ, ಫಲಗಳಿವೆಯೋ ಅಷ್ಟು ವರ್ಷಗಳ ಕಾಲ ಪುರಂದರನ ಲೋಕದಲ್ಲಿ ಪೂಜಿತನಾಗುತ್ತಾನೆ.
ಶಕ್ರಲೋಕಾವತೀರ್ಣಶ್ಚ ಮಾನುಷ್ಯಂ ಲೋಕಮಾಗತಃ |
ರಥಾಶ್ವಗಜಸಂಪೂರ್ಣಂ ಪುರಂ ರಾಜ್ಯಂ ಚ ರಕ್ಷತಿ ॥46॥
ಪುರಂದರನ ಮನೆಯಿಂದ ಭೂಮಿಗೆ ಆಗಮಿಸಿದ ಆ ಮನುಷ್ಯನು ರಥ, ಕುದುರೆ, ಆನೆಗಳಿಂದ ತುಂಬಿದ ಪಟ್ಟಣವನ್ನು, ರಾಜ್ಯವನ್ನು ರಕ್ಷಿಸುತ್ತಾನೆ.
ಸ್ಥಾಪಯಿತ್ವಾ ತು ಮದ್ಭಕ್ತ್ಯಾ ಯೋ ಮತ್ಪ್ರತಿಕೃತಿಂ ನರಃ |
ಆಲಯಂ ವಿಧಿವತ್ ಕೃತ್ವಾ ಪೂಜಾಕರ್ಮಾಣಿ ಕಾರಯೇತ್ ॥47॥
ಸ್ವಯಂ ವಾ ಪೂಜಯೇದ್ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥48॥
ಯಾವ ವ್ಯಕ್ತಿಯು ಭಕ್ತಿಯಿಂದ ನನ್ನ ಪ್ರತಿಮೆಯನ್ನು ಮಾಡಿಸಿ, ವಿಧಿಬದ್ಧವಾಗಿ ಮಂದಿರವನ್ನು ಕಟ್ಟಿಸಿ, ಆ ಪ್ರತಿಮೆಯನ್ನು ಸ್ಥಾಪಿಸಿ, ಅಲ್ಲಿ ಪೂಜಾಕರ್ಮಗಳನ್ನು ಮಾಡಿಸುತ್ತಾನೋ, ಭಕ್ತಿಯಿಂದ ತಾನೇ ಪೂಜೆಯನ್ನು ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯವನ್ನು ಕೇಳು.
ಅಶ್ವಮೇಧಸಹಸ್ರಸ್ಯ ಯತ್ಫಲಂ ಸಮುದಾಹೃತಮ್ |
ತತ್ಫಲಂ ಸಮನುಪ್ರಾಪ್ನೋ ಮತ್ಸಾಲೋಕ್ಯಂ ಪ್ರಪದ್ಯತೇ ॥49॥
ನ ಜಾನೇ ನಿರ್ಗಮಂ ತಸ್ಯ ಮಮ ಲೋಕಾದ್ ಯುಧಿಷ್ಠಿರ ॥50॥
ಅವನು ಸಾವಿರ ಅಶ್ವಮೇಧಯಾಗಕ್ಕೆ ಯಾವ ಫಲವನ್ನು ಹೇಳಿದ್ದಾರೋ ಅಂತಹ ಫಲವನ್ನು ಹೊಂದುತ್ತಾನೆ. ನನ್ನ ಸಾಲೋಕ್ಯವನ್ನೇ ಹೊಂದುತ್ತಾನೆ. ಯುಧಿಷ್ಠಿರನೇ, ಇಂತಹ ವ್ಯಕ್ತಿಯು ನನ್ನ ಮನೆಯಿಂದ ಮತ್ತೆ ಭೂಮಿಗೆ ತೆರಳುವುದಿಲ್ಲ.
ದೇವಾಲಯೇ ವಿಪ್ರಗೃಹೇ ಗೋವಾಟೇ ಚತ್ವರೇಽಪಿ ವಾ |
ಪ್ರಜ್ವಾಲಯತಿ ಯೋ ದೀಪಂ ತಸ್ಯ ಪುಣ್ಯಫಲಂ ಶೃಣು ॥51॥
ದೇವಾಲಯದಲ್ಲಾಗಲಿ, ಬ್ರಾಹ್ಮಣನ ಮನೆಯಲ್ಲಾಗಲಿ, ಗೋಶಾಲೆಯಲ್ಲಾಗಲಿ, ಯಜ್ಞಮಂಟಪದಲ್ಲಾಗಲಿ ಯಾರು ದೀಪವನ್ನು ಬೆಳಗಿಸುತ್ತಾರೋ ಅವರಿಗೆ ದೊರಕುವ ಪುಣ್ಯದ ಫಲವನ್ನು ಕೇಳು.
ಆರುಹ್ಯ ಕಾಂಚನಂ ಯಾನಂ ದ್ಯೋತಯನ್ ಸರ್ವತೋ ದಿಶಮ್ |
ಗಚ್ಛೇದಾದಿತ್ಯಲೋಕಂ ಸ ಸೇವ್ಯಮಾನಃ ಸುರೋತ್ತಮೈಃ ॥52॥
ದೀಪವನ್ನು ಇಂತಹ ಸ್ಥಳಗಳಲ್ಲಿ ಬೆಳಗಿಸಿದ ವ್ಯಕ್ತಿಯು ಬಂಗಾರದ ವಾಹನವನ್ನು ಏರಿಕೊಂಡು ಹತ್ತುದಿಕ್ಕುಗಳಲ್ಲೂ ಶೋಭಿಸುತ್ತಾ ಸೂರ್ಯನ ಲೋಕಕ್ಕೆ ದೇವತೆಗಳಿಂದ ಸೇವ್ಯಮಾನನಾಗಿ ತೆರಳುತ್ತಾನೆ.
ತತ್ರ ಪ್ರಕಾಮಂ ಕ್ರೀಡಿತ್ವಾ ವರ್ಷಕೋಟಿಂ ಮಹಾಯಶಾಃ |
ಇಹ ಲೋಕೇ ಭವೇದ್ ವಿಪ್ರೋ ವೇದವೇದಾಂಗಪಾರಗಃ ॥53॥
ಯಥೇಷ್ಟವಾಗಿ ಪೂಜಿಸಿ ಕೋಟಿವರ್ಷಗಳ ಬಳಿಕ ಈ ಭೂಮಿಯಲ್ಲಿ ವೇದ ಪಾರಂಗತನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ದೇವಾಲಯೇಷು ವಾ ರಾಜನ್ ಬ್ರಾಹ್ಮಣಾವಸಥೇಷು ವಾ |
ಚತ್ವರೇ ವಾ ಚತುಷ್ಕೇ ವಾ ರಾತ್ರೌ ವಾ ಯದಿ ವಾ ದಿವಾ ॥54॥
ನಾನಾಗಂಧರ್ವವಾದ್ಯಾನಿ ಧರ್ಮಶ್ರಾವಣಿಕಾನಿ ಚ |
ಯಸ್ತು ಕಾರಯತೇ ಭಕ್ತ್ಯಾ ಮದ್ಗತೇನಾಂತರಾತ್ಮನಾ ॥55॥
ತಸ್ಯ ದೇವಾ ನರಶ್ರೇಷ್ಠ ಪಿತರಶ್ಚಾಪಿ ಹರ್ಷಿತಾಃ |

ಸುಪ್ರೀತಾಃ ಸಂಪ್ರಯಚ್ಛಂತಿ ವಿಮಾನಂ ಕಾಮಗಂ ಶುಭಮ್ ॥56॥
ಯಾವನು ನನ್ನ ಭಕ್ತನಾಗಿ ನನ್ನಲ್ಲೇ ಮನಸ್ಸನ್ನು ಇಟ್ಟವನಾಗಿ ದೇವಾಲಯದಲ್ಲಾಗಲಿ, ಬ್ರಾಹ್ಮಣರ ಮನೆಯಲ್ಲಾಗಲಿ, ಅಂಗಳದಲ್ಲಾಗಲಿ, ನಾಲ್ಕು ದಾರಿಗಳು ಸೇರುವ ಜಾಗದಲ್ಲಾಗಲಿ, ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ ಅನೇಕ ವಿಧವಾದ ಗಂಧರ್ವವಾದ್ಯಗಳನ್ನು ಮೊಳಗಿಸುತ್ತಾನೋ, ಧರ್ಮಪ್ರವಚನಗಳನ್ನು ಭಕ್ತಿಯಿಂದ ಮಾಡಿಸುತ್ತಾನೋ ಅವನ ವಿಷಯದಲ್ಲಿ ದೇವತೆಗಳು, ಪಿತೃಗಳು ಸಂತುಷ್ಟರಾಗಿ ಯಥೇಷ್ಟವಾಗಿ ಸಂಚರಿಸುವ ವಿಮಾನವನ್ನು ಆತನಿಗೆ ದಾನ ಮಾಡುತ್ತಾರೆ.
ಸ ಚ ತೇನ ವಿಮಾನೇನ ಯಾತಿ ದೇವಪುರಂ ನರಃ |
ತತ್ರ ದಿವ್ಯಾಪ್ಸರೋಭಿಸ್ತು ಸೇವ್ಯಮಾನಃ ಪ್ರಮೋದತೇ ॥57॥
ಬಳಿಕ ಆ ವಿಮಾನದಲ್ಲಿ ಏರಿದ ಆತನು ದೇವತೆಗಳ ಪಟ್ಟಣಕ್ಕೆ ಸಾಗುತ್ತಾನೆ. ಅಲ್ಲಿಯಾದರೂ ದಿವ್ಯ ಅಪ್ಸರಾಸ್ತ್ರೀಯರಿಂದ ಸೇವ್ಯಮಾನನಾಗಿ ಸಂತೋಷ ಹೊಂದುತ್ತಾನೆ.
ದೇವಲೋಕಾವತೀರ್ಣಸ್ತು ಸ ಲೋಕೇಽಸ್ಮಿನ್ ನರಾಧಿಪ |
ವೇದವೇದಾಂಗತತ್ವಜ್ಞೋ ಭೋಗವಾನ್ ಬ್ರಾಹ್ಮಣೋ ಭವೇತ್ ॥58॥
ರಾಜನೇ, ದೇವಲೋಕದಿಂದ ಭೂಮಿಗೆ ಬಂದ ಆತನು ವೇದವೇದಾಂಗ ತತ್ತ್ವಜ್ಞನಾಗಿ ಸುಖ ಹೊಂದಿರುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಚತ್ವರೇ ವಾ ಸಭಾಯಾಂ ವಾ ವಿಸ್ತೀರ್ಣೇ ವಾ ಸಭಾಂಗಣೇ |
ಕೃತ್ವಾಽಗ್ನಿಕುಂಡಲಂ ವಿಪುಲಂ ಸ್ಥಂಡಿಲಂ ವಾ ಯುಧಿಷ್ಠಿರ ॥59॥
ತತ್ರಾಗ್ನಿಂ ಚತುರೋ ಮಾಸಾನ್ ಜ್ವಾಲಯೇದ್ ಯಸ್ತು ಭಕ್ತಿಮಾನ್ |
ಸಮಾಪ್ತೇಷು ತು ಮಾಸೇಷು ಪೌಷ್ಯಾದಿಷು ತತೋ ದ್ವಿಜಾನ್ ॥60॥
ಭೋಜಯೇತ್ ಪಾಯಸಂ ಮೃಷ್ಟಂ ಮದ್ಗತೇನಾಂತರಾತ್ಮನಾ |
ದಕ್ಷಿಣಾಂ ಚ ಯಥಾಶಕ್ತಿ ಬ್ರಾಹ್ಮಣೇಭ್ಯೋ ನಿವೇದಯೇತ್ ॥61॥
ಏವಮಗ್ನಿಂ ತು ಯಃ ಕುರ್ಯಾನ್ನಿತ್ಯಮೇವಾರ್ಚಯಂಸ್ತು ಮಾಮ್ |
ತಸ್ಯ ಪುಣ್ಯಫಲಂ ಯದ್ವೈ ತನ್ನಿಬೋಧ ಯುಧಿಷ್ಠಿರ ॥62॥
ನಾಲ್ಕು ದಾರಿಗಳು ಸೇರುವ ಜಾಗದಲ್ಲಿಯಾಗಲಿ, ಸಭಾಮಂದಿರದಲ್ಲಾಗಲಿ, ವಿಸ್ತಾರವಾದ ಸಭಾಂಗಣದಲ್ಲಾಗಲಿ ಯಾವನು ಸ್ಥಂಡಿಲವನ್ನು ವಿಶಾಲವಾಗಿ ಬರೆದು ಅಗ್ನಿಕುಂಡವನ್ನು ಸ್ಥಾಪಿಸಿ, ಯಜ್ಞಕರ್ಮಗಳನ್ನು ಮಾಡುತ್ತಾನೋ, ನಾಲ್ಕು ಮಾಸಗಳ ಕಾಲ ಭಕ್ತಿಯಿಂದ ಯಜ್ಞಗಳನ್ನು ಆರಾಧಿಸುತ್ತಾನೋ, ಯಜ್ಞಗಳು ಮುಗಿದ ಬಳಿಕ ಪುಷ್ಯವೇ ಮೊದಲಾದ ಮಾಸಗಳಲ್ಲಿ ಬ್ರಾಹ್ಮಣರನ್ನು ಮೃಷ್ಟಾನ್ನ, ಪಾಯಸಗಳಿಂದ ನನ್ನಲ್ಲೇ ನೆಲೆಗೊಂಡ ಮನಸ್ಸುಳ್ಳವನಾಗಿ ಯಥಾಶಕ್ತಿ ದಕ್ಷಿಣಾದಿಗಳನ್ನು ಕೊಟ್ಟು ಊಟ ಮಾಡಿಸುತ್ತಾನೋ, ಬ್ರಾಹ್ಮಣರನ್ನು ಸತ್ಕರಿಸುತ್ತಾನೋ ಈ ಕ್ರಮದಲ್ಲಿ ಅಗ್ನಿಕಾರ್ಯವನ್ನು ಮಾಡಿ ಬ್ರಾಹ್ಮಣಾರಾಧನೆಯನ್ನು ಮಾಡಿದ ಆತನಿಗೆ ಫಲವೇನೆಂಬುದನ್ನು ತಿಳಿದುಕೊ.
ತೇನಾಹಂ ಶಂಕರಶ್ಚೈವ ಪಿತರೋ ಹ್ಯಗ್ನಯಸ್ತಥಾ |
ಯಾಸ್ಯಾಮಃ ಪರಮಾಂ ಪ್ರೀತಿಂ ನಾತ್ರ ಕಾರ್ಯಾ ವಿಚಾರಣಾ ॥63॥
ಅವನ ಈ ಸತ್ಕರ್ಮದಿಂದ ನಾನು, ಮಹರುದ್ರ, ಪಿತೃಗಳು, ಅಗ್ನಿಗಳು ಅತ್ಯಂತ ಸಂತೋಷವನ್ನು ಹೊಂದುತ್ತೇವೆ. ಇದರಲ್ಲಿ ವಿಚಾರ ಮಾಡಬೇಕಾದುದಿಲ್ಲ.
ಷಷ್ಟಿಂ ವರ್ಷಸಹಸ್ರಾಣಿ ಷಷ್ಟಿಂ ವರ್ಷಶತಾನಿ ಚ |
ಸೋಽಸ್ಮತ್ಪ್ರೀತಿಕರಃ ಶ್ರೀಮಾನ್ ಯಮಲೋಕೇ ಮಹೀಯತೇ ॥64॥
ಅವನು ಅರವತ್ತು ಸಾವಿರದ ಅರವತ್ತನೂರು ವರ್ಷಗಳ ಕಾಲ ನಮ್ಮನ್ನು ಸಂತೋಷ ಪಡಿಸಿದ ಪುಣ್ಯದಿಂದಾಗಿ ಯಮಲೋಕದಲ್ಲಿ ಪೂಜಿತನಾಗುತ್ತಾನೆ.
ಯಮಲೋಕಾವತೀರ್ಣಶ್ಚ ಸೋಽಸ್ಮಿನ್ ಲೋಕೇ ಮಹಾಯಶಾಃ |
ವೇದವೇದಾಂಗವಿದ್ ವಿಪ್ರೋ ಜಾಯತೇ ರಾಜಪೂಜಿತಃ ॥65॥
ಯಮಲೋಕದಿಂದ ಭೂಮಿಗೆ ಬಂದ ಮಹಾಕೀರ್ತಿಸಂಪನ್ನನಾದ ಆತನು ವೇದ-ವೇದಾಂಗವನ್ನು ತಿಳಿದ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ರಾಜನಿಂದ ಸಮ್ಮಾನಿತನಾಗುತ್ತಾನೆ.
ಯಃ ಕರೋತಿ ನರಶ್ರೇಷ್ಠ ಭರಣಂ ಬ್ರಾಹ್ಮಣಸ್ಯ ತು |
ಶ್ರೋತ್ರಿಯಸ್ಯಾಭಿಜಾತಸ್ಯ ದರಿದ್ರಸ್ಯ ವಿಶೇಷತಃ ॥66॥
ತಸ್ಯ ಪುಣ್ಯಫಲಂ ಯದ್ವೈ ತನ್ನಿಬೋಧ ಯುಧಿಷ್ಠಿರ ॥67॥
ಯುಧಿಷ್ಠಿರನೇ, ಯಾವ ವ್ಯಕ್ತಿಯು ಶ್ರೋತ್ರಿಯನಾಗಿ ಹುಟ್ಟಿದ, ದರಿದ್ರನಾದ ಬ್ರಾಹ್ಮಣನ ಜೀವನ ರಕ್ಷಣೆಯನ್ನು ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯವೇನೆಂಬುದನ್ನು ಹೇಳುತ್ತೇನೆ, ತಿಳಿದುಕೊ.
ಗವಾಂ ಕೋಟಿಪ್ರದಾನೇನ ಯತ್ಪುಣ್ಯಂ ಸಮುದಾಹೃತಮ್ |
ತತ್ಪುಣ್ಯಫಲಮಾಪ್ನೋತಿ ವರ್ಷೇಣೈಕೇನ ಪಾಂಡವ ॥68॥
ಕೋಟಿ ಹಸುಗಳನ್ನು ದಾನ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೆ ಎಂದು ಹೇಳಿದ್ದಾರೋ ಅಷ್ಟು ಪುಣ್ಯಗಳನ್ನು ಒಂದು ವರ್ಷದಲ್ಲಿಯೇ ಹೊಂದುತ್ತಾನೆ.
ಕಾಂಚನೇನ ವಿಚಿತ್ರೇಣ ಯಾನೇನಾಂಬರಶಾಲಿನಾ |
ಸ ಯಾತಿ ಯಾಮಕಂ ಲೋಕಂ ದಿವ್ಯಸ್ತ್ರೀಗಣಸೇವಿತಮ್ ॥69॥

ಬಂಗಾರದಿಂದ ತಯಾರಿಸಿದ ವಿಚಿತ್ರವಾದ, ಆಕಾಶಗಾಮಿಯಾದ ವಾಹನವನ್ನು ಏರಿಕೊಂಡು ದಿವ್ಯ ಸ್ತ್ರೀಗಣದಿಂದ ಸೇವಿತನಾಗಿ ಆ ವ್ಯಕ್ತಿಯು ಯಮಲೋಕಕ್ಕೆ ತೆರಳುತ್ತಾನೆ.
ಗೀಯಮಾನೋ ವರಸ್ತ್ರೀಭಿರ್ವರ್ಷಾಣಾಂ ಕೋಟಿವಿಂಶತಿಮ್ ॥70॥
ಕ್ರೀಡಿತ್ವಾ ಮಾಮಕೇ ಲೋಕೇ ತತ್ರ ದೇವೈರಭಿಷ್ಟುತಃ।
ಮಾನುಷ್ಯಮವತೀರ್ಣಸ್ತು ವೇದವಿದ್ ಬ್ರಾಹ್ಮಣೋ ಭವೇತ್ ॥71॥
ಉತ್ತಮರಾದ ಸ್ತ್ರೀಯರಿಂದ ಇಪ್ಪತ್ತು ಕೋಟಿ ವರ್ಷಗಳ ಕಾಲ ಸ್ತುತಿಸಲ್ಪಡುವವನಾಗಿ, ಸಮಸ್ತ ದೇವತೆಗಳಿಂದ ಸ್ತೋತ್ರಪಾತ್ರನಾಗಿ, ನನ್ನ ಲೋಕದಲ್ಲಿ ಯಥೇಷ್ಟವಾಗಿ ಸಂಚರಿಸಿ ಭೂಮಿಯಲ್ಲಿ ವೇದಜ್ಞನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಕರಕಂ ಕುಂಡಿಕಾಂ ವಾಽಪಿ ಮಹದ್ವಾ ಜಲಭಾಜನಮ್।
ಯಃ ಪ್ರಯಚ್ಛತಿ ವಿಪ್ರಾಯ ತಸ್ಯ ಪುಣ್ಯಫಲಂ ಶೃಣು ॥72॥
ಯುಧಿಷ್ಠಿರನೇ, ಕಮಂಡಲುವನ್ನಾಗಲಿ, ಗಿಂಡಿಯನ್ನಾಗಲಿ, ದೊಡ್ಡ ಜಲಪಾತ್ರೆಯನ್ನಾಗಲಿ ಬ್ರಾಹ್ಮಣನಿಗೆ ದಾನ ಮಾಡುವ ವ್ಯಕ್ತಿಗೆ ಲಭಿಸುವ ಪುಣ್ಯದ ಫಲವನ್ನು ಕೇಳು.
ಬ್ರಹ್ಮಕೂರ್ಚೇನ ಯತ್ಪೀತೇ ಫಲಂ ಪ್ರೋಕ್ತಂ ಯುಧಿಷ್ಠಿರ।
ತತ್ಪುಣ್ಯಫಲಮಾಪ್ನೋತಿ ಜಲಭಾಜನದಾನತಃ ॥73॥
ದರ್ಭೆಯನ್ನು ತಾಗಿಸಿದ ಪಂಚಗವ್ಯವನ್ನು ಪ್ರಾಶನ ಮಾಡಿದಾಗ ಯಾವ ಫಲವು ಲಭಿಸುತ್ತದೋ ಆ ಪುಣ್ಯವನ್ನು ಜಲಪಾತ್ರೆಯನ್ನು ದಾನ ಮಾಡಿದ ವ್ಯಕ್ತಿಯು ಹೊಂದುತ್ತಾನೆ.
ಸುತೃಪ್ತಃ ಸುಪ್ರಭಃ ಸೌಮ್ಯಃ ಪ್ರಹೃಷ್ಟೇಂದ್ರಿಯಮಾನಸಃ।
ಹಂಸಸಾರಸಯುಕ್ತೇನ ವಿಮಾನೇನ ವಿರಾಜತಾ ॥74॥
ಸ ಯಾತಿ ವಾರುಣಂ ಲೋಕಂ ದಿವ್ಯಗಂಧರ್ವಸೇವಿತಃ ॥75॥
ಜಲಪಾತ್ರೆಯನ್ನು ದಾನ ಮಾಡಿದ ವ್ಯಕ್ತಿಯು ತೃಪ್ತನಾಗಿ, ಕಾಂತಿಸಂಪನ್ನನಾಗಿ, ಸೌಮ್ಯನಾಗಿ, ಸಮಸ್ತ ಇಂದ್ರಿಯಗಳಲ್ಲಿಯೂ ಸಂತೋಷ ಹೊಂದಿದವನಾಗಿ, ಹಂಸ- ಸಾರಸಪಕ್ಷಿಗಳಿಂದ ಕೂಡಿದ ವಿಮಾನದಲ್ಲಿ ಶೋಭಿಸುವವನಾಗಿ, ದಿವ್ಯಗಂಧರ್ವರಿಂದ ಸೇವಿತನಾಗಿ ವರುಣಲೋಕವನ್ನು ಕುರಿತು ಸಾಗುತ್ತಾನೆ.
ಪಾನೀಯಂ ಯಃ ಪ್ರಯಚ್ಛೇದ್ ವೈ ಜೀವಾನಾಂ ಜೀವನಂ ಪರಮ್।
ಗ್ರೀಷ್ಮಕೇಷು ತು ಮಾಸೇಷು ತಸ್ಯ ಪುಣ್ಯಫಲಂ ಶೃಣು ॥76॥
ಯಾವಾತನು ಗ್ರೀಷ್ಮ ಋತುವಿಗೆ ಸಂಬಂಧಿಸಿದ ಮಾಸಗಳಲ್ಲಿ ಸಮಸ್ತ ಪ್ರಾಣಿಗಳಿಗೂ ಜೀವನಪ್ರದವಾದ ಪಾನೀಯವನ್ನು ದಾನ ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.
ಕಪಿಲಾಕೋಟಿದಾನಸ್ಯ ಯತ್ ಪುಣ್ಯಂ ತು ವಿಧೀಯತೇ।
ತತ್ಪುಣ್ಯಫಲಮಾಪ್ನೋತಿ ಪಾನೀಯಂ ಯಃ ಪ್ರಯಚ್ಛತಿ ॥77॥
ಕೋಟಿಸಂಖ್ಯೆಯಲ್ಲಿ ಕಪಿಲಧೇನುಗಳನ್ನು ದಾನ ಮಾಡಿದಾಗ ಯಾವ ಪುಣ್ಯವನ್ನು ವಿಧಿಸಿದ್ದಾರೋ ಆ ಪುಣ್ಯವನ್ನು ಜಲದಾನದಿಂದ ಹೊಂದುತ್ತಾನೆ.
ಪೂರ್ಣಚಂದ್ರಪ್ರಕಾಶೇನ ವಿಮಾನೇನ ವಿರಾಜತಾ।
ಸ ಗಚ್ಛೇಚ್ಚಂದ್ರಸದನಂ ಸೇವ್ಯಮಾನೋಽಪ್ಸರೋಗಣೈಃ ॥78॥
ಹುಣ್ಣಿಮೆಯ ಚಂದ್ರನಂತೆ ಬೆಳಗುವ ವಿಮಾನದಲ್ಲಿ ಶೋಭಿಸುವವನಾಗಿ, ಅಪ್ಸರೋಗಣಗಳಿಂದ ಸೇವ್ಯಮಾನನಾಗಿ ಚಂದ್ರನ ಲೋಕವನ್ನು ಕುರಿತು ಸಾಗುತ್ತಾನೆ.
ತ್ರಿಂಶತ್ಕೋಟಿಯುಗಂ ತತ್ರ ದಿವ್ಯಗಂಧರ್ವಸೇವಿತಃ।
ಕ್ರೀಡಿತ್ವಾ ಮಾನುಷೇ ಲೋಕೇ ಚತುರ್ವೇದೀ ದ್ವಿಜೋ ಭವೇತ್ ॥79॥
ಆ ಚಂದ್ರಲೋಕದಲ್ಲಿಯಾದರೂ ಮೂವತ್ತು ಕೋಟಿ ಯುಗಗಳ ಕಾಲ ದಿವ್ಯಗಂಧರ್ವರಿಂದ ಸೇವಿತನಾಗಿ, ಸುಖವಾಗಿ ವಿಹರಿಸಿ ಬಳಿಕ ಮನುಷ್ಯಲೋಕದಲ್ಲಿ ಚತುರ್ವೇದಗಳನ್ನರಿತ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಶಿರೋಭ್ಯಂಗಪ್ರದಾನೇನ ತೇಜಸ್ವೀ ಪ್ರಿಯದರ್ಶನಃ।
ಸುಭಗೋ ರೂಪವಾನ್ ಶೂರಃ ಪಂಡಿತಶ್ಚ ದ್ವಿಜೋ ಭವೇತ್ ॥80॥
ಯಾವನು ಬ್ರಾಹ್ಮಣನಿಗೆ ತಲೆಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾನೋ ಅವನು ತೇಜಸ್ವಿಯಾಗಿ, ಸ್ಫುರದ್ರೂಪಿಯಾಗಿ, ಐಶ್ವರ್ಯಸಂಪನ್ನನಾಗಿ, ನೋಡುವವರಿಗೆ ಸಂತೋಷವನ್ನುಂಟು ಮಾಡುವವನಾಗಿ, ಶೂರನಾಗಿ, ಪಂಡಿತನಾಗಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ವಸ್ತ್ರದಾಯೀ ತು ತೇಜಸ್ವೀ ಸರ್ವತ್ರ ಪ್ರಿಯದರ್ಶನಃ।
ಸುಭಗೋ ಭವತಿ ಶ್ರೀಮಾನ್ ಸ್ತ್ರೀಣಾಂ ನಿತ್ಯಂ ಮನೋರಮಃ ॥81॥
ಯಾವನು ಬ್ರಾಹ್ಮಣನಿಗೆ ವಸ್ತ್ರವನ್ನು ದಾನ ಮಾಡುತ್ತಾನೋ ಅವನು ಎಲ್ಲರಿಗೂ ಪ್ರೀತಿಪಾತ್ರನಾಗಿ, ತೇಜಸ್ವಿಯಾಗಿ, ಭಾಗ್ಯವಂತನಾಗಿ, ಶ್ರೀಮಂತನಾಗಿ, ಸ್ತ್ರೀಯರ ಪ್ರೀತಿಗೆ ಪಾತ್ರನಾಗುತ್ತಾನೆ.
ಉಪಾನಹೌ ಚ ಚ್ಛತ್ರಂ ಚ ಯೋ ದದಾತಿ ನರೋತ್ತಮಃ ॥82॥
ಸ ಯಾತಿ ರಥಮುಖ್ಯೇನ ಕಾಂಚನೇನ ವಿರಾಜತಾ।
ಶಕ್ರಲೋಕಂ ಮಹಾತೇಜಾಃ ಸೇವ್ಯಮಾನೋಽಪ್ಸರೋಗಣೈಃ ॥83॥
ಯಾವ ವ್ಯಕ್ತಿಯು ಪಾದುಕೆಗಳನ್ನು, ಛತ್ರಗಳನ್ನು ದಾನ ಮಾಡುತ್ತಾನೋ ಅವನು ಬಂಗಾರದ ರಥವನ್ನು ಏರಿಕೊಂಡು

ತೇಜಃಪುಂಜನಾಗಿ, ಅಪ್ಸರಾಗಣಗಳಿಂದ ಸೇವ್ಯಮಾನನಾಗಿ ಪುರಂದರನ ಲೋಕಕ್ಕೆ ಸಾಗುತ್ತಾನೆ.
ಕಾಷ್ಠಪಾದುಕದಾ ಯಾಂತಿ ವಿಮಾನೈರ್ವೃಕ್ಷನಿರ್ಮಿತೈಃ |
ಧರ್ಮರಾಜಪುರಂ ರಮ್ಯಂ ಸೇವ್ಯಮಾನಾಃ ಸುರೋತ್ತಮೈಃ ॥84॥
ಕಟ್ಟಿಗೆ ಪಾದುಕೆಗಳನ್ನು ದಾನ ಮಾಡಿದ ವ್ಯಕ್ತಿಯು ಮರಗಳಿಂದಲೇ ನಿರ್ಮಿತವಾದ ವಿಮಾನವನ್ನು ಏರಿಕೊಂಡು, ಧರ್ಮರಾಜನ ಪಟ್ಟಣಕ್ಕೆ ದೇವತೆಗಳಿಂದ ಸೇವ್ಯಮಾನನಾಗಿ ತೆರಳುತ್ತಾನೆ.
ದಂತಕಾಷ್ಠಪ್ರದಾನೇನ ಪ್ರಿಯವಾಕ್ಯೋ ಭವೇನ್ನರಃ |
ಸುಗಂಧವದನಃ ಶ್ರೀಮಾನ್ ಮೇಧಾಸೌಭಾಗ್ಯಸಂಯುತಃ ॥85॥
ಯಾವನು ಬ್ರಾಹ್ಮಣನಿಗೆ ದಂತಕಾಷ್ಠಗಳನ್ನು ದಾನ ಮಾಡುತ್ತಾನೋ ಅವನು ಪ್ರಿಯವಾದ ಮಾತುಗಳನ್ನು ಆಡುವ ಸಾಮರ್ಥ್ಯವನ್ನು ಹೊಂದುತ್ತಾನೆ. ಪರಿಮಳ ಭರಿತವಾದ ಬಾಯಿಯುಳ್ಳವನಾಗಿ, ಕಾಂತಿಯುಕ್ತನಾಗಿ, ಜ್ಞಾನಿಯಾಗಿ, ಸೌಭಾಗ್ಯವಂತನಾಗಿಯೂ ಇರುತ್ತಾನೆ.
ಕ್ಷೀರಂ ದಧಿ ಘೃತಂ ವಾಽಪಿ ಗುಡಂ ಮಧುರಸಂ ತಥಾ |
ಯೇ ಪ್ರಯಚ್ಛಂತಿ ವಿಪ್ರೇಭ್ಯಃ ಪರಾಂ ಭಕ್ತಿಂ ಗತಾ ನರಾಃ ॥86॥
ತೇ ವೃಷೈರಶ್ವಯಾನೈಶ್ಚ ಶ್ವೇತಸ್ರಗ್ದಾಮಭೂಷಿತಾಃ |
ಉಪಗೀಯಮಾನಾ ಗಂಧರ್ವೈರ್ಯಾಂತೀಶ್ವರಪುರಂ ನರಾಃ ॥87॥
ಯಾರು ಹಾಲನ್ನು, ಮೊಸರನ್ನು, ತುಪ್ಪವನ್ನು, ಬೆಲ್ಲವನ್ನು, ಜೇನುತುಪ್ಪವನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಾರೋ ಭಕ್ತಿಯಿಂದ ದಾನ ಮಾಡಿದ ಅವರು ಎತ್ತುಗಳ, ಕುದುರೆಗಳ ವಾಹನಗಳನ್ನು ಏರಿಕೊಂಡು, ಬಿಳಿಯಾದ ಮಾಲೆಗಳಿಂದ ಅಲಂಕೃತರಾಗಿ, ಗಂಧರ್ವರಿಂದ ಸ್ತೋತ್ರಪಾತ್ರರಾಗಿ ಮಹರುದ್ರನ ಪಟ್ಟಣಕ್ಕೆ ಸಾಗುತ್ತಾರೆ.
ತತ್ರ ದಿವ್ಯಾಪ್ಸರೋಭಿಸ್ತು ಸೇವ್ಯಮಾನಾ ಯಥಾಸುಖಮ್ |
ಷಷ್ಟಿವರ್ಷಸಹಸ್ರಾಣಿ ಮೋದಂತೇ ದೇವಸನ್ನಿಭಾಃ ॥88॥
ಆ ಮಹರುದ್ರದೇವರ ಲೋಕದಲ್ಲಿಯಾದರೂ ದಿವ್ಯ ಅಪ್ಸರಾಸ್ತ್ರೀಯರಿಂದ ಸುಖವಾಗಿ ಸೇವ್ಯಮಾನರಾಗಿ ದೇವತೆಗಳಂತೆ ಅರವತ್ತು ಸಾವಿರ ವರ್ಷಗಳ ಕಾಲ ಸುಖವನ್ನು ಅನುಭವಿಸುತ್ತಾರೆ.
ತತಃ ಕಾಲಾವತೀರ್ಣಾಶ್ಚ ಜಾಯಂತೇ ತ್ವಿಹ ಮಾನವಾಃ |
ಪ್ರಭೂತಧನಧಾನ್ಯಾಶ್ಚ ಭೋಗವಂತೋ ನರೋತ್ತಮಾಃ ॥89॥
ಬಳಿಕ ಕಾಲಾನುಸಾರವಾಗಿ ಈ ಭೂಮಿಯಲ್ಲಿ ಮಾನವರಾಗಿ ಹುಟ್ಟುತ್ತಾರೆ. ಧನ-ಧಾನ್ಯಗಳ ಸಮೃದ್ಧಿಯನ್ನು, ಸಮಸ್ತ ಭೋಗಗಳನ್ನು ಹೊಂದಿದವರಾಗುತ್ತಾರೆ.
ವೈಶಾಖೇ ಮಾಸಿ ವೈಶಾಖೇ ದಿವಸೇ ಪಾಂಡುನಂದನ |
ವೈವಸ್ವತಂ ಸಮುದ್ದಿಶ್ಯ ಪರಾಂ ಭಕ್ತಿಮುಪಾಗತಾಃ ॥90॥
ಅಭ್ಯರ್ಚ್ಯ ವಿಧಿವದ್ ವಿಪ್ರಾನ್ ತಿಲಾನ್ ಗುಡಸಮಾಯುತಾನ್ |
ಯೇ ಪ್ರಯಚ್ಛಂತಿ ವಿಪ್ರೇಭ್ಯಸ್ತೇಷಾಂ ಪುಣ್ಯಫಲಂ ಶೃಣು ॥91॥
ಪಾಂಡುಕುವರನೇ, ವಿಶಾಖಾನಕ್ಷತ್ರಕ್ಕೆ ಸಂಬಂಧಿಸಿದ ದಿವಸದಲ್ಲಿ ವೈಶಾಖಮಾಸದಲ್ಲಿ ಯಾರು ವೈವಸ್ವತ ಮನುವನ್ನು ಉದ್ದೇಶಿಸಿಕೊಂಡು ಭಕ್ತಿಯನ್ನು ಹೊಂದಿದವರಾಗಿ ಬ್ರಾಹ್ಮಣರನ್ನು ವಿಧಿಬದ್ಧವಾಗಿ ಎಳ್ಳು-ಬೆಲ್ಲಗಳನ್ನು ದಾನ ಮಾಡುವ ಮೂಲಕ ಆರಾಧಿಸುತ್ತಾರೋ ಅವರಿಗೆ ದೊರಕುವ ಫಲವೇನೆಂಬುದನ್ನು ಕೇಳು.
ಗೋಪ್ರದಾನೇನ ಯತ್ಪುಣ್ಯಂ ವಿಧಿವತ್ ಪಾಂಡುನಂದನ |
ತತ್ಪುಣ್ಯಂ ಸಮನುಪ್ರಾಪ್ಯೋ ಯಮಲೋಕೇ ಮಹೀಯತೇ ॥92॥
ಪಾಂಡವನೇ, ಇದರಿಂದ ವಿಧಿಬದ್ಧವಾಗಿ ಗೋದಾನ ಮಾಡಿದಾಗ ಯಾವ ಪುಣ್ಯವನ್ನು ಹೊಂದುತ್ತಾನೋ ಆ ಪುಣ್ಯವನ್ನು ಹೊಂದಿದವನಾಗಿ ಯಮಲೋಕದಲ್ಲಿ ಪೂಜಿತನಾಗುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದಿಹ ರಾಜಾ ಭವಿಷ್ಯತಿ ॥93॥
ಬಳಿಕ ಕಾಲಾಂತರದಲ್ಲಿ ಭೂಮಿಗೆ ಆಗಮಿಸಿದ ಆತನು ರಾಜನಾಗುತ್ತಾನೆ.
ತಸ್ಮಿನ್ನೇವ ದಿನೇ ವಿಪ್ರಾನ್ ಭೋಜಯಿತ್ವಾ ಸದಕ್ಷಿಣಮ್ |
ತೋಯಪೂರ್ಣಾನಿ ದಿವ್ಯಾನಿ ಭಾಜನಾನಿ ದಿಶಂತಿ ಯೇ ॥94॥
ತೇ ಯಾಂತ್ಯಾದಿತ್ಯವರ್ಣಾಭೈರ್ವಿಮಾನೈರ್ವರುಣಾಲಯಮ್ |
ತತ್ರ ದಿವ್ಯಾಂಗನಾಭಿಸ್ತು ರಮಂತೇ ಕಾಮಗಾಮಿನಃ ॥95॥
ವಿಶಾಖಾ ನಕ್ಷತ್ರಕ್ಕೆ ಸಂಬಂಧಿಸಿದ ದಿವಸದಲ್ಲಿ ಯಾರು ದಕ್ಷಿಣೆಯನ್ನು ಕೊಟ್ಟು ಬ್ರಾಹ್ಮಣರನ್ನು ಊಟ ಮಾಡಿಸುತ್ತಾರೋ, ನೀರು ತುಂಬಿದ ಶ್ರೇಷ್ಠವಾದ ಪಾತ್ರೆಗಳನ್ನು ದಾನ ಮಾಡುತ್ತಾರೋ ಅವರು ಸೂರ್ಯನಿಗೆ ಸದೃಶವಾದ ಕಾಂತಿಯುಳ್ಳ ವಿಮಾನದಿಂದ ಕೂಡಿಕೊಂಡು ವರುಣನ ಮನೆಗೆ ಹೋಗುತ್ತಾರೆ. ಅಲ್ಲಿ ಯಥೇಷ್ಟವಾಗಿ ವಿಹರಿಸುತ್ತಾ ದಿವ್ಯಾಂಗನೆಯರಿಂದ ಸೇವ್ಯಮಾನರಾಗಿರುತ್ತಾರೆ.
ತತೋಽವತೀರ್ಣಾಃ ಕಾಲೇನ ತೇ ಚಾಸ್ಮಿನ್ ಮಾನುಷೇ ಪುನಃ |
ಭೋಗವಂತೋ ದ್ವಿಜಶ್ರೇಷ್ಠಾ ಭವಿಷ್ಯಂತಿ ನ ಸಂಶಯಃ ॥96॥
ಕಾಲಾನುಸಾರವಾಗಿ ಅಲ್ಲಿಂದ ಈ ಮನುಷ್ಯಲೋಕಕ್ಕೆ ಆಗಮಿಸಿದ ಅವರು ಶ್ರೇಷ್ಠ ಬ್ರಾಹ್ಮಣರಾಗಿ ಭೋಗವುಳ್ಳವರಾಗಿಯೂ ಇರುತ್ತಾರೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಅನಂತರಾಶೀ ಯಶ್ಚಾಪಿ ವರ್ತತೇ ವ್ರತವತ್ ಸದಾ ॥97॥

ಸತ್ಯವಾಕ್ ಕ್ರೋಧರಹಿತಃ ಶುಚಿಃ ಸ್ನಾನರತಃ ಸದಾ |
ಸ ವಿಮಾನೇನ ದಿವ್ಯೇನ ಯಾತಿ ಶಕ್ರಪುರಂ ನರಃ ॥98॥
ಯಾವ ವ್ಯಕ್ತಿಯು ಬೆಳಿಗ್ಗೆಯಿಂದ ಮಧ್ಯಾಹ್ನದ ತನಕ, ಮಧ್ಯಾಹ್ನದಿಂದ ರಾತ್ರಿಯ ತನಕ ಮಧ್ಯಕಾಲದಲ್ಲಿ ಆಹಾರವನ್ನು ಸ್ವೀಕರಿಸದೆ ವ್ರತನಿಷ್ಠನಾಗಿ ಇರುತ್ತಾನೋ, ಸತ್ಯವಂತನಾಗಿ, ಕ್ರೋಧರಹಿತನಾಗಿ, ಶುಚಿಯಾಗಿ, ಸ್ನಾನರತನಾಗಿ ಯಾವಾಗಲೂ ಇರುತ್ತಾನೋ ಅವನು ದಿವ್ಯವಾದ ವಿಮಾನವನ್ನು ಏರಿ ಇಂದ್ರನ ಪುರಕ್ಕೆ ಸಾಗುತ್ತಾನೆ.
ತತ್ರ ದಿವ್ಯಾಪ್ಸರೋಭಿಸ್ತು ವರ್ಷಕೋಟಿಂ ಮಹಾತಪಾಃ |
ಕ್ರೀಡಿತ್ವಾ ಮಾನುಷೇ ಲೋಕೇ ಜಾಯತೇ ವೇದವಿದ್ ದ್ವಿಜಃ ॥99॥
ಆ ಇಂದ್ರಲೋಕದಲ್ಲಿಯಾದರೂ ಅಪ್ಸರೆಯರಿಂದ ಕೂಡಿ, ಮಹಾತಪಸ್ವಿಯಾಗಿ ಕೋಟಿವರ್ಷಗಳ ಕಾಲ ವಿಹರಿಸಿ, ಮನುಷ್ಯಲೋಕದಲ್ಲಿ ವೇದಜ್ಞನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಏಕಭುಕ್ತೇನ ಯಶ್ಚಾಪಿ ವರ್ಷಮೇಕಂ ತು ವರ್ತತೇ |
ಬ್ರಹ್ಮಚಾರೀ ಜಿತಕ್ರೋಧಃ ಸತ್ಯಶೌಚಸಮನ್ವಿತಃ ॥100॥
ಸ ವಿಮಾನೇನ ದಿವ್ಯೇನ ಯಾತಿ ಶಕ್ರಪುರಂ ಸುಖಮ್ ॥101॥
ಯಾವ ವ್ಯಕ್ತಿಯು ದಿನಕ್ಕೆ ಒಂದು ಕಾಲದಲ್ಲಿ ಮಾತ್ರ ಊಟವನ್ನು ಮಾಡಿ, ಒಂದು ವರ್ಷಗಳ ಕಾಲ ಇರುತ್ತಾನೋ ಅಂತಹ ಬ್ರಹ್ಮಚಾರಿಯಾದ, ಸಿಟ್ಟನ್ನು ಬಿಟ್ಟಿರುವ, ಸತ್ಯ-ಶೌಚದಿಂದ ಕೂಡಿರುವ ವ್ಯಕ್ತಿಯು ದಿವ್ಯವಾದ ವಿಮಾನವನ್ನು ಹೊಂದಿ ಇಂದ್ರಪುರಿಗೆ ಸುಖವಾಗಿ ಸಾಗುತ್ತಾನೆ.
ದಶಕೋಟಿಸಮಾಸ್ತತ್ರ ಕ್ರೀಡಿತ್ವಾಽಪ್ಸರಸಾಂ ಗಣೈಃ |
ಇಹ ಮಾನುಷಕೇ ಲೋಕೇ ಬ್ರಾಹ್ಮಣೋ ವೇದವಿದ್ ಭವೇತ್ ॥102॥
ಆ ಇಂದ್ರಲೋಕದಲ್ಲಿಯಾದರೂ ಹತ್ತುಕೋಟಿ ವರ್ಷಗಳ ಕಾಲ ಅಪ್ಸರಾಗಣದಿಂದ ಸೇರಿಕೊಂಡು ವಿಹರಿಸಿ, ಪುನಃ ಮನುಷ್ಯಲೋಕದಲ್ಲಿ ವೇದಜ್ಞನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಚತುರ್ಥಕಾಲೇ ಯೋ ಭುಂಕ್ತೇ ಬ್ರಹ್ಮಚಾರೀ ಜಿತೇಂದ್ರಿಯಃ |
ವರ್ತತೇ ವರ್ಷಮೇಕಂ ತು ತಸ್ಯ ಪುಣ್ಯಫಲಂ ಶೃಣು ॥103॥
ದಿನದ ನಾಲ್ಕನೆಯ ಕಾಲದಲ್ಲಿ ಜಿತೇಂದ್ರಿಯನಾದ ಬ್ರಹ್ಮಚಾರಿಯು ಊಟ ಮಾಡುತ್ತ ಒಂದು ವರ್ಷದ ಕಾಲ ಈ ಕ್ರಮದ ನಿಯಮವನ್ನು ಅನುಷ್ಠಾನ ಮಾಡಿದ ಬ್ರಹ್ಮಚಾರಿಗೆ ದೊರಕುವ ಫಲವನ್ನು ಕೇಳಿಸಿಕೊ.
ಚಿತ್ರಬರ್ಹಿಣಯುಕ್ತೇನ ವಿಚಿತ್ರಧ್ವಜಶೋಭಿನಾ |
ಯಾತಿ ಯಾನೇನ ದಿವ್ಯೇನ ಸ ಮಹೇಂದ್ರಪುರಂ ನರಃ ॥104॥
ಬಗೆಬಗೆಯ ಗರಿಗಳಿಂದ ಕೂಡಿದ, ವಿಚಿತ್ರವಾದ ಧ್ವಜದಿಂದ ಶೋಭಿಸುವ ವಿಮಾನವನ್ನು ಏರಿಕೊಂಡು ಇಂದ್ರನ ಪಟ್ಟಣಕ್ಕೆ ಸಾಗುತ್ತಾನೆ.
ಅಕೃಶಾಭಿರ್ವರಸ್ತ್ರೀಭಿಃ ಸೇವ್ಯಮಾನೋ ಯಥಾಸುಖಮ್ |
ತತ್ರ ದ್ವಾದಶಕೋಟಿಂ ಸ ಸಮಾಃ ಸಮ್ಯಕ್ ಪ್ರಮೋದತೇ ॥105॥
ಪುಷ್ಟರಾದ ವರಸ್ತ್ರೀಯರಿಂದ ಸುಖವಾಗಿ ಸೇವ್ಯಮಾನನಾದ ಆತನು ಹನ್ನೆರಡು ಕೋಟಿ ವರ್ಷಗಳ ಕಾಲ ಸುಖವನ್ನು ಅನುಭವಿಸುತ್ತಾನೆ.
ಶಕ್ರಲೋಕಾವತೀರ್ಣಸ್ತು ಲೋಕೇ ಚಾಸ್ಮಿನ್ ನರಾಧಿಪ |
ಭವೇದ್ ವೈ ಬ್ರಾಹ್ಮಣೋ ವಿದ್ವಾನ್ ಕ್ಷಮಾವಾನ್ ವೇದಪಾರಗಃ ॥
ಇಂದ್ರನ ಲೋಕದಿಂದ ಕೆಳಗೆ ಇಳಿದ ಆತನು ಬ್ರಾಹ್ಮಣನಾಗಿ ಹುಟ್ಟಿ, ಕ್ಷಮಾಶೀಲನಾದ, ವೇದಜ್ಞನಾದ ವ್ಯಕ್ತಿಯಾಗಿರುತ್ತಾನೆ.
ಷಷ್ಠಕಾಲಂ ತು ಯೋಽಶ್ನಾತಿ ವರ್ಷಮೇಕಮಕಲ್ಮಷಃ |
ಬ್ರಹ್ಮಚರ್ಯವ್ರತೈರ್ಯುಕ್ತಃ ಶುಚಿಃ ಕ್ರೋಧವಿವರ್ಜಿತಃ ॥107॥
ತಪೋಯುಕ್ತಸ್ಯ ತಸ್ಯಾಪಿ ಶೃಣುಷ್ವ ಫಲಮುತ್ತಮಮ್ ॥108॥
ಯಾವನು ದಿನದ ಆರನೆಯ ಕಾಲದಲ್ಲಿ ಒಂದು ವರ್ಷದ ಕಾಲ ಕಾಮ ಕ್ರೋಧದಿಂದ ರಹಿತನಾಗಿ, ಬ್ರಹ್ಮಚರ್ಯದಿಂದ ಕೂಡಿದವನಾಗಿ, ಶುಚಿಯಾಗಿ ಇದ್ದು ಊಟ ಮಾಡುತ್ತಾನೋ ಅಂತಹ ತಪೋಯುಕ್ತನಾದ ವ್ಯಕ್ತಿಗೆ ದೊರಕುವ ಫಲವೇನೆಂಬುದನ್ನು ಕೇಳು.
ಅತ್ಯಾದಿತ್ಯಪ್ರಕಾಶೇನ ವಿಮಾನೇನಾರ್ಕಸನ್ನಿಭಃ |
ಸ ಯಾತಿ ಮಮ ಲೋಕಾನ್ ವೈ ದಿವ್ಯನಾರೀನಿಷೇವಿತಃ ॥109॥
ಅತ್ಯಂತ ಶ್ರೇಷ್ಠನಾದ ಸೂರ್ಯನ ಬೆಳಕಿನಂತೆ ಬೆಳಗುವ ಸೂರ್ಯಸದೃಶವಾದ ವಿಮಾನದಲ್ಲಿ ಸಂಚರಿಸುತ್ತಾ, ದೇವಲೋಕದ ನಾರಿಯರಿಂದ ಸೇವ್ಯಮಾನನಾಗಿ ನನ್ನ ಲೋಕಕ್ಕೆ ಆಗಮಿಸುತ್ತಾನೆ.
ತತ್ರ ಸಾಧ್ಯೈರ್ಮರುದ್ಭಿಶ್ಚ ಪೂಜ್ಯಮಾನೋ ಯಥಾಸುಖಮ್ |
ಪಶ್ಯನ್ನೇವ ಸದಾ ಮಾಂ ತು ಕೀಡತ್ಯಪ್ಸರಸಾಂ ಗಣೈಃ ॥110॥
ಆ ಲೋಕದಲ್ಲಿಯಾದರೂ ಸಾಧ್ಯರು, ಮರುತ್ತುಗಳು ಇವರಿಂದ ಸುಖವಾಗಿ ಪೂಜ್ಯಮಾನನಾಗಿ, ಅಪ್ಸರಾಸ್ತ್ರೀಯರಿಂದ ಕೂಡಿದವನಾಗಿ ನನ್ನನ್ನು ನೋಡುತ್ತಾ ಸಂತೋಷ ಹೊಂದುತ್ತಾನೆ.
ಪಕ್ಷೋಪವಾಸಂ ಯಶ್ಚಾಪಿ ಕುರುತೇ ಮದ್ಗತಾತ್ಮನಾ |
ಸಮಾಪ್ತೇ ತು ವ್ರತೇ ತಸ್ಮಿನ್ ತರ್ಪಯೇತ್ ಶ್ರೋತ್ರಿಯಾನ್ ಶುಚೀನ್ ॥

ಸೋಽಪಿ ಗಚ್ಛತಿ ದಿವ್ಯೇನ ವಿಮಾನೇನ ಮಹಾತಪಾಃ |
ದ್ಯೋತಯನ್ ಪ್ರಭಯಾ ವ್ಯೋಮ ಮಮ ಲೋಕಂ ಪ್ರಪದ್ಯತೇ ॥112॥
ಸ ತತ್ರ ಮೋದತೇ ಕಾಮಂ ಕಾಮರೂಪೀ ಯಥಾಸುಖಮ್ ॥113॥
ಯಾವನು ನನ್ನಲ್ಲೇ ಮನಸ್ಸನ್ನಿಟ್ಟು ಹದಿನೈದು ದಿನಗಳ ಕಾಲ ಉಪವಾಸವನ್ನು ಮಾಡುತ್ತಾನೋ, ಉಪವಾಸ ಮುಗಿದ ಬಳಿಕ ಶ್ರೋತ್ರಿಯರಾದ, ಶೌಚಾಚಾರ ಸಂಪನ್ನರಾದ ಬ್ರಾಹ್ಮಣರನ್ನು ಭೋಜನ ಮಾಡಿಸುತ್ತಾನೋ ಅವನು ದಿವ್ಯವಾದ ವಿಮಾನವನ್ನು ಏರಿ, ತನ್ನ ಪ್ರಭೆಯಿಂದ ದಿಕ್ಕುಗಳನ್ನು ಬೆಳಗುತ್ತಾ, ನನ್ನ ಲೋಕವನ್ನು ಹೊಂದುತ್ತಾನೆ. ನನ್ನ ಲೋಕದಲ್ಲಿಯಾದರೂ ಕಾಮರೂಪಿಯಾಗಿ ಯಥೇಷ್ಟವಾಗಿ ಸುಖದಿಂದ ವಿಹರಿಸುತ್ತಾನೆ.
ತ್ರಿಂಶತ್ಕೋಟಿಸಮಾ ರಾಜನ್ ಕ್ರೀಡಿತ್ವಾ ತತ್ರ ದೇವವತ್ |
ಇಹ ಮಾನುಷ್ಯಕೇ ಲೋಕೇ ಪೂಜನೀಯೋ ದ್ವಿಜೋತ್ತಮಃ ॥114॥
ಆ ಲೋಕದಲ್ಲಿ ದೇವತೆಯಂತೆ ಮೂವತ್ತು ಕೋಟಿ ವರ್ಷಗಳ ಕಾಲ ವಿಹರಿಸಿ ಈ ಮನುಷ್ಯಲೋಕದಲ್ಲಿ ಪೂಜನೀಯನಾದ ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟುತ್ತಾನೆ.
ತ್ರಯಾಣಾಮಪಿ ವೇದಾನಾಂ ಸಾಂಗಾನಾಂ ಪಾರಗೋ ಭವೇತ್ ॥115॥
ಮೂರು ವೇದಗಳನ್ನು ಷಡಂಗಸಹಿತವಾಗಿ ಅಧ್ಯಯನ ಮಾಡುವವನಾಗುತ್ತಾನೆ.
ಯಶ್ಚ ಮಾಸೋಪವಾಸಂ ವೈ ಕುರುತೇ ಮದ್ಗತಾತ್ಮನಾ |
ಜಿತೇಂದ್ರಿಯೋ ಜಿತಕ್ರೋಧೋ ಜಿತಧೀಃ ಸ್ನಾನತತ್ಪರಃ ॥116॥
ಸಮಾಪ್ತೇ ನಿಯಮೇ ತತ್ರ ಭೋಜಯಿತ್ವಾ ದ್ವಿಜೋತ್ತಮಾನ್ |
ದಕ್ಷಿಣಾಂ ಚ ತತೋ ದದ್ಯಾತ್ ಪ್ರಹೃಷ್ಟೇನಾಂತರಾತ್ಮನಾ ॥117॥
ಸ ಗಚ್ಛತಿ ಮಹಾತೇಜಾ ಬ್ರಹ್ಮಲೋಕಮನುತ್ತಮಮ್ |
ಸಿಂಹಯುಕ್ತೇನ ಯಾನೇನ ದಿವ್ಯಸ್ತ್ರೀಗಣಸೇವಿತಃ ॥118॥
ಯಾವ ವ್ಯಕ್ತಿಯು ಒಂದು ತಿಂಗಳ ಕಾಲ ನನ್ನಲ್ಲೇ ಮನಸ್ಸನ್ನಿಟ್ಟವನಾಗಿ, ಜಿತೇಂದ್ರಿಯನಾಗಿ, ಜಿತಕ್ರೋಧನಾಗಿ, ಬುದ್ಧಿಯನ್ನು ನಿಗ್ರಹಿಸಿಕೊಂಡು, ಸ್ನಾನ-ಶೌಚ ತತ್ಪರನಾಗಿ ಉಪವಾಸವನ್ನು ಮಾಡುತ್ತಾನೋ, ಉಪವಾಸ ಮುಗಿದ ಬಳಿಕ ಬ್ರಾಹ್ಮಣ ಶ್ರೇಷ್ಠರನ್ನು ದಕ್ಷಿಣಾದಿಗಳಿಂದ ತೃಪ್ತಿಪಡಿಸಿ ಸಂತೋಷದಿಂದ ಊಟ ಮಾಡಿಸುತ್ತಾನೋ ಆ ವ್ಯಕ್ತಿಯು ಮಹಾತೇಜಸ್ವಿಯಾಗಿ ಶ್ರೇಷ್ಠವಾದ ಬ್ರಹ್ಮಲೋಕವನ್ನು ಕುರಿತು ಸಿಂಹಯುಕ್ತವಾದ ವಿಮಾನದಲ್ಲಿ ಸಾಗುತ್ತಾನೆ. ಅಲ್ಲಿ ದಿವ್ಯಸ್ತ್ರೀಯರಿಂದ ಸೇವಿತನಾಗಿರುತ್ತಾನೆ.
ಸ ತತ್ರ ಬ್ರಹ್ಮಣೋ ಲೋಕೇ ದೇವರ್ಷಿಗಣಸೇವಿತಃ |
ಶತಕೋಟಿಸಮಾ ರಾಜನ್ ಯಥಾಕಾಮಂ ಪ್ರಮೋದತೇ ॥119॥
ಆ ಬ್ರಾಹ್ಮಣನು ಬ್ರಹ್ಮಲೋಕದಲ್ಲಿ ದೇವತೆಗಳು, ಋಷಿಗಳಿಂದ ಸೇವ್ಯಮಾನನಾಗಿ ನೂರುಕೋಟಿ ವರ್ಷಗಳ ಕಾಲ ಮನಬಂದಂತೆ ಸಂತೋಷ ಪಡುತ್ತಾನೆ.
ತತಃ ಕಾಲಾವತೀರ್ಣಶ್ಚ ಸೋಽಸ್ಮಿನ್ ಲೋಕೇ ದ್ವಿಜೋ ಭವೇತ್ |
ಷಡಂಗವಿಚ್ಚತುರ್ವೇದೀ ತ್ರಿಂಶಜ್ಜನ್ಮಾನ್ಯರೋಗವಾನ್ ॥120॥
ಬಳಿಕ ಕಾಲಾಂತರದಲ್ಲಿ ಈ ಭೂಮಿಗೆ ಆಗಮಿಸಿದ ಬ್ರಾಹ್ಮಣನು ಆರು ಅಂಗಗಳಿಂದ ಸಹಿತವಾದ ನಾಲ್ಕು ವೇದಗಳನ್ನು ಅಧ್ಯಯನ ಮಾಡುತ್ತಾ ಮೂವತ್ತು ಜನ್ಮಗಳಲ್ಲಿ ರೋಗವಿಲ್ಲದವನಾಗಿ ಬದುಕುತ್ತಾನೆ.
ಯಸ್ತ್ಯಕ್ತ್ವಾ ಸರ್ವಕರ್ಮಾಣಿ ಶುಚಿಃ ಕ್ರೋಧವಿವರ್ಜಿತಃ |
ಮಹಾಪ್ರಸ್ಥಾನಮೇಕಾಗ್ರೋ ಯಾತಿ ಮದ್ಗತಮಾನಸಃ ॥121॥
ಯಾವ ವ್ಯಕ್ತಿಯು ಕ್ರೋಧವರ್ಜಿತನಾಗಿ, ಶುಚಿಯಾಗಿ ಸಮಸ್ತ ಕರ್ಮಗಳನ್ನು ನನ್ನಲ್ಲೇ ಸಮರ್ಪಿಸುತ್ತಾನೋ ನನ್ನ ಭಕ್ತನಾದ ಅವನು ಏಕಾಗ್ರತೆಯಿಂದ ಮಹಾಪ್ರಸ್ಥಾನವನ್ನು ಹೊಂದುತ್ತಾನೆ.
ಸ ಗಚ್ಛೇದಿಂದ್ರಸದನಂ ವಿಮಾನೇನ ಮಹಾತಪಾಃ |
ಮಹಾಮಣಿವಿಚಿತ್ರೇಣ ಸೌವರ್ಣೇನ ವಿರಾಜತಾ ॥122॥
ಆ ಮಹಾತಪಸ್ವಿಯು ವಿಮಾನದಿಂದ ಇಂದ್ರನ ಮನೆಗೆ ಸಾಗುತ್ತಾನೆ. ಆ ವಿಮಾನವಾದರೂ ಮಹಾಮಣಿಗಳಿಂದ ವಿಚಿತ್ರವಾಗಿ ಅಲಂಕೃತವಾಗಿರುತ್ತದೆ. ಬಂಗಾರದಿಂದ ಶೋಭಿಸುತ್ತಿರುತ್ತದೆ.
ಶತಕೋಟಿಸಮಾಸ್ತತ್ರ ಸುರಾಧಿಪತಿಪೂಜಿತಃ |
ನಾಕಪೃಷ್ಠೇ ನಿವಸತಿ ದಿವ್ಯಸ್ತ್ರೀಗಣಸೇವಿತಃ ॥123॥
ನೂರುಕೋಟಿ ವರ್ಷಗಳ ಕಾಲ ಇಂದ್ರದೇವನಿಂದ ಪೂಜಿತನಾದ ಅವನು ದಿವ್ಯ ಸ್ತ್ರೀಯರಿಂದ ಸೇವಿತನಾಗಿ ಸ್ವರ್ಗಲೋಕದಲ್ಲಿ ವಾಸ ಮಾಡುತ್ತಾನೆ.
ಶಕ್ರಲೋಕಾವತೀರ್ಣಶ್ಚ ಮಾನುಷೇಷೂಪಜಾಯತೇ |
ರಾಜ್ಞಾಂ ರಾಜಾ ಮಹಾತೇಜಾಃ ಸರ್ವಲೋಕಾರ್ಚಿತಃ ಪ್ರಭುಃ ॥124॥
ಇಂದ್ರಲೋಕದಿಂದ ಭೂಮಿಗೆ ಆಗಮಿಸಿದ ಅವನು ಮನುಷ್ಯಲೋಕದಲ್ಲಿ ಮಹಾತೇಜಸ್ವಿಯಾದ, ಸಮಸ್ತ ಜನರಿಂದ ಪೂಜಿತನಾದ ದೊಡ್ಡ ರಾಜನಾಗಿ ಶೋಭಿಸುತ್ತಾನೆ.
ಪ್ರಾಯೋಪ್ರವೇಶಂ ಯಃ ಕುರ್ಯಾನ್ಮದ್ಗತೇನಾಂತರಾತ್ಮನಾ ॥125॥
ನಮೋ ಬ್ರಹ್ಮಣ್ಯದೇವಾಯೇತ್ಯುಕ್ತ್ವಾ ಮಂತ್ರಂ ಸಮಾಹಿತಃ |
ಅಂತಃಸ್ವಸ್ಥೋ ಜಿತಕ್ರೋಧಸ್ತಸ್ಯ ಪುಣ್ಯಫಲಂ ಶೃಣು ॥126॥

ಯಾವ ವ್ಯಕ್ತಿಯು ನನ್ನಲ್ಲಿಯೇ ಮನಸ್ಸನ್ನಿಟ್ಟು ಪ್ರಾಯೋಪವೇಶವ್ರತವನ್ನು ಕೈಗೊಳ್ಳುತ್ತಾನೋ, ನಮೋ ಬ್ರಹ್ಮಣ್ಯದೇವಾಯ ಎಂಬ ಮಂತ್ರವನ್ನು ಏಕಾಗ್ರತೆಯಿಂದ ಪಠಿಸುತ್ತಾ, ನನ್ನನ್ನೇ ಧ್ಯಾನ ಮಾಡುತ್ತಾನೋ, ಕ್ರೋಧವನ್ನು ತ್ಯಜಿಸಿದ ಅವನಿಗೆ ಲಭಿಸುವ ಪುಣ್ಯವನ್ನು ಹೇಳುತ್ತೇನೆ, ಕೇಳು.
ಕಾಮಗಃ ಕಾಮರೂಪೀ ಚ ಬಾಲಸೂರ್ಯಸಮಪ್ರಭಃ |
ಸ ವಿಮಾನೇನ ದಿವ್ಯೇನ ಯಾತಿ ಲೋಕಾನನಾಮಯಾನ್ ॥127॥
ಆತನು ಮನಬಂದಂತೆ ಇಚ್ಛಾರೂಪಗಳನ್ನು ಸ್ವೀಕರಿಸಿ ಉದಿಸುವ, ಸೂರ್ಯನಿಗೆ ಸಮಾನವಾದ ಕಾಂತಿಯನ್ನು ಹೊಂದಿದವನಾಗಿ ದಿವ್ಯವಾದ ವಿಮಾನವನ್ನು ಏರಿಕೊಂಡು ದೋಷಗಳೇ ಇಲ್ಲದ ಲೋಕಗಳಲ್ಲಿ ಸಂಚರಿಸುತ್ತಾನೆ.
ಸ್ವರ್ಗಾತ್ ಸ್ವರ್ಗಂ ಮಹಾತೇಜಾ ಗತ್ವಾ ಗತ್ವಾ ಯಥಾಸುಖಮ್ |
ಮಮ ಲೋಕೇಷು ರಮತೇ ಯಾವದಾಭೂತಸಂಪ್ಲವಮ್ ॥128॥
ಒಂದು ಸುಖಲೋಕದಿಂದ ಮತ್ತೊಂದು ಸುಖಲೋಕಕ್ಕೆ ಯಥಾಸುಖವಾಗಿ ತೇಜಸ್ವಿಯಾದ ಆತನು ಸಂಚರಿಸುತ್ತಾ, ಪ್ರಲಯಕಾಲದ ತನಕ ನನ್ನ ಲೋಕದಲ್ಲಿ ಸುಖವನ್ನು ಹೊಂದುತ್ತಾನೆ.
ಅಗ್ನಿಪ್ರವೇಶಂ ಯಶ್ಚಾಪಿ ಕುರುತೇ ಮದ್ಗತಾತ್ಮನಾ |
ಸೋಽಪಿ ಯಾನೇನ ದಿವ್ಯೇನ ಮಮ ಲೋಕಂ ಪ್ರಪದ್ಯತೇ ॥129॥
ಯಾವ ವ್ಯಕ್ತಿಯು ನನ್ನಲ್ಲೇ ನೆಲೆಗೊಂಡ ಮನಸ್ಸಿನಿಂದ ಅಗ್ನಿಪ್ರವೇಶವನ್ನು ಮಾಡುತ್ತಾನೋ ಅವನು ದಿವ್ಯವಾದ ವಿಮಾನವನ್ನು ಏರಿಕೊಂಡು ನನ್ನ ಲೋಕವನ್ನು ಹೊಂದುತ್ತಾನೆ.
ತತ್ರ ಸರ್ವಗುಣೋಪೇತಃ ಪಶ್ಯನ್ನೇವ ಸ ಮಾಂ ಸದಾ |
ತ್ರಿಂಶತ್ಕೋಟಿಸಮಾ ರಾಜನ್ ಮೋದತೇ ಮಮ ಸನ್ನಿಧೌ ॥130॥
ಆತನು ಅಲ್ಲಿ ಸಮಸ್ತ ಗುಣಗಳಿಂದ ಕೂಡಿದ ನನ್ನನ್ನೇ ನೋಡುತ್ತಾ ಮೂವತ್ತು ಕೋಟಿ ವರ್ಷಗಳ ಕಾಲ ನನ್ನ ಸನ್ನಿಧಾನದಲ್ಲಿ ಸುಖ ಹೊಂದುತ್ತಾನೆ.
ತತೋಽವತೀರ್ಣಃ ಕಾಲೇನ ವೇದವಿದ್ ಬ್ರಾಹ್ಮಣೋ ಭವೇತ್ ॥
ಕಾಲಾಂತರದಲ್ಲಿ ಭೂಮಿಗೆ ಆಗಮಿಸಿದ ಆತನು ವೇದಜ್ಞನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಕಾರೀಷಂ ಸಾಧಯನ್ ಯಸ್ತು ಮಾಂ ಪ್ರಪನ್ನಃ ಶುಚಿವ್ರತಃ |
ನಮೋ ಬ್ರಹ್ಮಣ್ಯದೇವಾಯೇತ್ಯೇತನ್ಮಂತ್ರಮುದಾಹರನ್ ॥132॥
ಬಾಲಸೂರ್ಯಪ್ರಕಾಶೇನ ವಿಮಾನೇನ ವಿರಾಜತಾ |
ಯಮಲೋಕಂ ಸಮಾಸಾದ್ಯ ವರ್ಷಕೋಟಿಂ ಪ್ರಮೋದತೇ ॥133॥
ಯಾವ ವ್ಯಕ್ತಿಯು ಕಾರೀಷ ಎಂಬ ಅಗ್ನಿಯನ್ನು ಸ್ಥಾಪನೆ ಮಾಡುತ್ತಾನೋ, ಶೌಚಾಚಾರ ನಿರತನಾದ ಆ ವ್ಯಕ್ತಿಯು ನಮೋ ಬ್ರಹ್ಮಣ್ಯದೇವಾಯ ಎಂಬ ಮಂತ್ರವನ್ನು ಹೇಳುತ್ತಿರುತ್ತಾನೋ ಆತನು ಬಾಲಸೂರ್ಯಪ್ರಕಾಶವುಳ್ಳ ವಿಮಾನದಲ್ಲಿ ಏರಿಕೊಂಡು ಯಮಲೋಕಕ್ಕೆ ಹೋಗಿ ಕೋಟಿವರ್ಷಗಳ ಕಾಲ ಸುಖವನ್ನು ಅನುಭವಿಸುತ್ತಾನೆ.
ವ್ಯಾಖ್ಯಾನ ವಿಶೇಷ ಕಾರೀಷ ಎಂಬ ಅಗ್ನಿಯು ಯಮದೇವರಿಗೆ ಸಂಬಂಧಪಟ್ಟ ಅಗ್ನಿಯಾಗಿದೆ.
ಯಮಲೋಕಾವತೀರ್ಣಶ್ಚ ಲೋಕೇಽಸ್ಮಿನ್ ಕ್ಷತ್ರಿಯೋ ಭವೇತ್ ॥134॥
ಯಮಲೋಕದಿಂದ ಆಗಮಿಸಿದ ಆತನು ಈ ಭೂಮಿಯಲ್ಲಿ ಕ್ಷತ್ರಿಯನಾಗಿ ಹುಟ್ಟುತ್ತಾನೆ.
ನಿವೇಶಯತಿ ಮನ್ಮೂರ್ತ್ಯಾಮಾತ್ಮಾನಂ ಮದ್ಗತಃ ಶುಚಿಃ |
ರುದ್ರದಕ್ಷಿಣಮೂರ್ತ್ಯಾಂ ವಾ ಚತುರ್ದಶ್ಯಾಂ ವಿಶೇಷತಃ ॥135॥
ಸಿದ್ಧೈರ್ಬ್ರಹ್ಮರ್ಷಿಭಿಶ್ಚೈವ ದೇವಲೋಕೈಶ್ಚ ಪೂಜಿತಃ |
ಗಂಧರ್ವೈರ್ಭೂತಸಙ್ಘೈಶ್ಚ ಗೀಯಮಾನೋ ಮಹಾತಪಾಃ ॥136॥
ಪ್ರವಿಶೇತ್ ಸ ಮಹಾತೇಜಾ ಮಾಂ ವಾ ಶಂಕರಮೇವ ಚ |
ನ ಸ್ಯಾತ್ ಪುನರ್ಭವೋ ರಾಜನ್ ನಾತ್ರ ಕಾರ್ಯಾ ವಿಚಾರಣಾ ॥
ಯಾವ ವ್ಯಕ್ತಿಯು ನನ್ನಲ್ಲೇ ಮನಸ್ಸುಳ್ಳವನಾಗಿ ಚತುರ್ದಶಿ ತಿಥಿಯಂದು ನನ್ನ ರೂಪವನ್ನೇ ಧ್ಯಾನಿಸುತ್ತಾ ಪ್ರಾಣವನ್ನು ಸಮರ್ಪಿಸುತ್ತಾನೋ ಅಥವಾ ರುದ್ರದೇವನ ಕ್ಷೇಮಕರವಾದ ಮೂರ್ತಿಯಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸುತ್ತಾನೋ ಆತನು ಸಿದ್ಧರಿಂದ, ಬ್ರಹ್ಮರ್ಷಿಗಳಿಂದ, ದೇವತೆಗಳಿಂದಲೂ ಪೂಜಿತನಾಗಿ, ಗಂಧರ್ವರಿಂದ, ಸಮಸ್ತ ಪ್ರಾಣಿಗಳಿಂದ ಸ್ತೋತ್ರಪಾತ್ರನಾಗಿ ನನ್ನನಾಗಲಿ, ರುದ್ರನನ್ನಾಗಲಿ ಹೊಂದುತ್ತಾನೆ. ಅವನು ಪುನಃ ಇಲ್ಲಿ ಹುಟ್ಟನ್ನು ಪಡೆಯುವುದಿಲ್ಲ. ಇದಕ್ಕೆ ಸಂಶಯವಿಲ್ಲ.
ಗೋಕೃತೇ ಸ್ತ್ರೀಕೃತೇ ಚೈವ ಗುರುವಿಪ್ರಕೃತೇಽಪಿ ವಾ |
ಹನ್ಯಂತೇ ಯೇ ತು ರಾಜೇಂದ್ರ ಶಕ್ರಲೋಕಂ ವ್ರಜಂತಿ ತೇ ॥138॥
ಯಾರು ಗೋವುಗಳ ರಕ್ಷಣೆಗಾಗಿ, ಸ್ತ್ರೀಯರ ರಕ್ಷಣೆಗಾಗಿ, ಗುರುಗಳಿಗಾಗಿ, ಬ್ರಾಹ್ಮಣರ ರಕ್ಷಣೆಗಾಗಿ ತಮ್ಮ ಪ್ರಾಣವನ್ನೇ ಸಮರ್ಪಿಸುತ್ತಾರೋ ಅವರು ಇಂದ್ರಲೋಕಕ್ಕೆ ಸಾಗುತ್ತಾರೆ.
ತತ್ರ ಜಾಂಬೂನದಮಯೇ ವಿಮಾನೇ ಕಾಮಗಾಮಿನಿ |
ಮನ್ವಂತರಂ ಪ್ರಮೋದಂತೇ ದಿವ್ಯನಾರೀನಿಷೇವಿತಾಃ ॥139॥
ಅಲ್ಲಿಯಾದರೂ ಬಂಗಾರದಿಂದ ಕೂಡಿದ ವಿಮಾನದಲ್ಲಿ ಸ್ವಚ್ಛಂದವಾಗಿ ಸಂಚರಿಸುತ್ತಾ, ಒಂದು ಮನ್ವಂತರದ ಕಾಲ ದಿವ್ಯನಾರಿಯರಿಂದ ಸೇವ್ಯಮಾನರಾಗಿ ಸಂತೋಷವನ್ನು ಹೊಂದುತ್ತಾರೆ.
ಆಶ್ರುತಸ್ಯಾಪ್ರದಾನೇನ ದತ್ತಸ್ಯ ಹರಣೇನ ಚ |

ಜನ್ಮಪ್ರಭೃತಿ ಯದ್ವೃತ್ತಂ ಸರ್ವಂ ನಶ್ಯತಿ ಭಾರತ ॥140॥
ದಾನ ಕೊಡುತ್ತೇನೆಂದು ಕೊಡದೇ ಇದ್ದರೂ ಕೊಟ್ಟಿದ್ದನ್ನು ಅಪಹರಿಸಿದರೂ, ಹುಟ್ಟಿನಿಂದ ಮೊದಲುಗೊಂಡು ಮಾಡಿದ ಸಮಸ್ತ ದಾನಗಳ ಫಲವೆಲ್ಲವೂ ನಾಶವಾಗುತ್ತದೆ.
ನಾಗೋಪ್ರದಾಸ್ತತ್ರ ಪಯಃ ಪಿಬಂತಿ
ನಾಭೂಮಿದಾ ಭೂಮಿಮಥಾಶ್ನುವಂತಿ |
ಯಾನ್ ಯಾನ್ ಕಾಮಾನ್ ಬ್ರಾಹ್ಮಣೇಭ್ಯೋ ದದಾತಿ
ತಾಂಸ್ತಾನ್ ಕಾಮಾನ್ ಸ್ವರ್ಗಲೋಕೇ ಸ ಭುಂಕ್ತೇ ॥141॥
ಗೋವುಗಳನ್ನು ದಾನ ಮಾಡದವರಿಗೆ ಹಾಲನ್ನು ಸೇವಿಸುವ ಭಾಗ್ಯವು ಒದಗುವುದಿಲ್ಲ. ಭೂಮಿಯನ್ನು ದಾನ ಮಾಡದವನಿಗೆ ಭೂಮಿಯ ಸುಖವು ದೊರಕುವುದಿಲ್ಲ. ಯಾವ ಯಾವ ವಸ್ತುಗಳನ್ನು ಬಯಸಿದ ಬ್ರಾಹ್ಮಣರಿಗೆ ನೀಡುತ್ತಾರೋ ಅವರು ಆಯಾ ಕಾಮನೆಗಳನ್ನು ಸ್ವರ್ಗಲೋಕದಲ್ಲಿ ಅನುಭವಿಸುತ್ತಾರೆ.
ಯದ್ಯದಿಷ್ಟತಮಂ ದ್ರವ್ಯಂ ನ್ಯಾಯೇನೋಪಾರ್ಜಿತಂ ಚ ಯತ್ |
ತತ್ತದ್ ಗುಣವತೇ ದೇಯಂ ತದೇವಾಕ್ಷಯಮಿಚ್ಛತಾ ॥142॥
ನ್ಯಾಯದಿಂದ ಗಳಿಸಿದ, ತನಗೆ ಅತ್ಯಂತ ಇಷ್ಟವಾದ ಪದಾರ್ಥವು ಯಾವುದಿದೆಯೋ ಅಂತಹ ಪದಾರ್ಥವನ್ನು ಅಕ್ಷಯ ಫಲವನ್ನು ಬಯಸುವ ವ್ಯಕ್ತಿಯು ಗುಣವಂತನಾದ ಬ್ರಾಹ್ಮಣನಿಗೆ ದಾನ ಮಾಡಬೇಕು.
ಅನುಪೋಷ್ಯ ತ್ರಿರಾತ್ರಾಣಿ ತೀರ್ಥಾನ್ಯನಭಿಗಮ್ಯ ಚ |
ಅದತ್ತತ್ವ ಕಾಂಚನಂ ಗಾಂ ಚ ದರಿದ್ರೋ ನಾಮ ಜಾಯತೇ ॥143॥
ಯಾವ ವ್ಯಕ್ತಿಯು ದಶಮೀ, ಏಕಾದಶೀ, ದ್ವಾದಶಿಗಳನ್ನು ಅನುಷ್ಠಾನ ಮಾಡಿರುವುದಿಲ್ಲವೋ, ತೀರ್ಥವನ್ನು ಸೇವಿಸಿರುವುದಿಲ್ಲವೋ, ಬಂಗಾರವನ್ನು ದಾನ ಮಾಡಿರುವುದಿಲ್ಲವೋ, ಗೋದಾನವನ್ನು ಮಾಡಿರುವುದಿಲ್ಲವೋ ಅವನು ದರಿದ್ರನಾಗಿ ಹುಟ್ಟುತ್ತಾನೆ.
ದಾನಂ ಯತ್ ತತ್ಫಲಂ ನೈತಿ ಶ್ರೋತ್ರಿಯಾಯ ನ ದೀಯತೇ |
ಶ್ರೋತ್ರಿಯಾ ಯತ್ರ ನಾಶ್ನಂತಿ ನ ದೇವಾಸ್ತತ್ರ ಭುಂಜತೇ ॥144॥
ಯಾವ ವ್ಯಕ್ತಿಯು ಶ್ರೋತ್ರಿಯ ಬ್ರಾಹ್ಮಣನಿಗೆ ದಾನವನ್ನು ಮಾಡುವುದಿಲ್ಲವೋ, ಶ್ರೋತ್ರಿಯ ಬ್ರಾಹ್ಮಣರನ್ನು ಊಟ ಮಾಡಿಸುವುದಿಲ್ಲವೋ ಅವನು ದಾನದ ಫಲವನ್ನಾಗಲಿ, ದೇವತೆಗಳ ಅನುಗ್ರಹವನ್ನಾಗಲಿ ಹೊಂದುವುದಿಲ್ಲ.
ಶ್ರೋತ್ರಿಯೇಭ್ಯಃ ಪರಂ ನಾಸ್ತಿ ಪರಮಂ ದೈವತಂ ಮಹತ್ |
ನಿಧಾನಂ ಚಾಪಿ ರಾಜೇಂದ್ರ ನಾಸ್ಮಾಚ್ಛ್ರೋತ್ರಿಯಭೋಜನಾತ್ ॥145॥
ಶ್ರೋತ್ರಿಯರಿಗಿಂತ ಶ್ರೇಷ್ಠವಾದ ಪರಮದೈವತವು ಜಗತ್ತಿನಲ್ಲಿ ಇನ್ನೊಂದು ಇರುವುದಿಲ್ಲ. ಇಂತಹ ಮಹತ್ವವನ್ನು ಹೊಂದಿರುವ ಶ್ರೋತ್ರಿಯ ಬ್ರಾಹ್ಮಣರ ಭೋಜನಕ್ಕಿಂತ ಬೇರೆ ಫಲವನ್ನು ಹೊಂದಲು ಬೇರೆ ಉಪಾಯಗಳು ಯಾವವೂ ಇರುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ದಾನಕಥನಂ ನಾಮ
ತ್ರ್ಯಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನೂರ ನಾಲ್ಕನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನಿಗೆ ಪಂಚಮಹಾಯಜ್ಞಗಳ ಬಗ್ಗೆ ನಿರೂಪಿಸಿದುದು. ಸ್ನಾನವಿಧಿಗಳನ್ನು ನಿರೂಪಿಸಿದುದು. ವೈಷ್ಣವರ ಲಕ್ಷಣವನ್ನು ಹೇಳಿದುದು. ಭಗವಂತನ ಪೂಜೆಗೆ ಯೋಗ್ಯವಾದ ಪುಷ್ಪಗಳ್ಯಾವವು
ಎಂಬುದನ್ನು ತಿಳಿಸಿದುದು.
ಯುಧಿಷ್ಠಿರಃ
ವಿಪ್ರಯೋಗೇ ಶರೀರಸ್ಯ ಸೇಂದ್ರಿಯಸ್ಯ ವಿಶೇಷತಃ |
ಅಂತರಾ ವರ್ತಮಾನಸ್ಯ ಗತಿಃ ಪ್ರಾಣಸ್ಯ ಕೀದೃಶೀ ॥1॥
ಯುಧಿಷ್ಠಿರ ಇಂದ್ರಿಯಗಳಿಂದ ಸಹಿತನಾಗಿ ಜೀವನು ಶರೀರವನ್ನು ತ್ಯಜಿಸಿದಾಗ ದೇಹಬಿಟ್ಟು ಗತಿಸಿದ ಜೀವನ ಮಧ್ಯದ ಸ್ಥಿತಿಯು ಯಾವ ರೀತಿಯಾಗಿರುತ್ತದೆ?
ಶ್ರೀಭಗವಾನ್
ಶುಭಾಶುಭಕೃತಂ ಸರ್ವಂ ಪ್ರಾಪ್ನೋತೀಹ ಫಲಂ ನರಃ |
ನ ತು ಸರ್ವಸ್ಯ ಭೂತಸ್ಯ ಪಂಚತ್ವಂ ವಿದ್ಯತೇ ನೃಪ ॥2॥
ಶ್ರೀಭಗವಾನ್ ಜೀವನು ಈ ದೇಹದ ಸಂಬಂಧದಿಂದ ಇಷ್ಟಾನಿಷ್ಟ ಫಲಗಳನ್ನೆಲ್ಲ ಇಲ್ಲಿ ಹೊಂದುತ್ತಾನೆ. ಮರಣದ ಬಳಿಕ ಜೀವನ ದೇಹಕ್ಕೆ ಅಂಟಿಕೊಂಡ ಇಂದ್ರಿಯಗಳು ಸರ್ವಾತ್ಮನ ನಾಶವನ್ನು ಹೊಂದುವುದಿಲ್ಲ. ಜೀವನಿಗೆ ಮರಣವೇ ಇಲ್ಲ. ಇಂದ್ರಿಯಗಳು ಭಾಗಶಃ ನಾಶವನ್ನು ಹೊಂದುತ್ತವೆ.
ಪಂಚತ್ವಂ ಪಾಂಡವಶ್ರೇಷ್ಠ ಭೂರಿಭೂತಿಕರಂ ನೃಣಾಮ್ ॥3॥
ತೇಷಾಂ ಪಂಚ ಮಹಾಯಜ್ಞಾನ್ ಯೇ ಕುರ್ವಂತಿ ದ್ವಿಜೋತ್ತಮಃ |
ಪಂಚತ್ವಂ ಪಂಚಭಿರ್ಭೂತೈರ್ವಿಯೋಗಂ ಸಂಪ್ರಚಕ್ಷತೇ ॥4॥
ಯಾವ ಜೀವರು ಪಂಚಮಹಾಯಜ್ಞಗಳನ್ನು ಪ್ರತಿದಿನವು ಆಚರಿಸಿ ದೇಹಾವಸಾನವನ್ನು ಹೊಂದುತ್ತಾರೋ ಅವರು ಮರಣ

ಹೊಂದಿದ ಮೇಲೆ ವಿಶಿಷ್ಟವಾದ ಐಶ್ವರ್ಯವನ್ನೇ ಹೊಂದುತ್ತಾರೆ. ದೇಹಕ್ಕೆ ಮರಣವೇ ವಿನಾ ಜೀವರಿಗೆ ಎಂದೂ ಮರಣವಿಲ್ಲ. ದೇಹವಿಯೋಗವೆಂಬ ನಾಶವು ಪುಣ್ಯವನ್ನು ಮಾಡಿದ ಸಜ್ಜನರಿಗೆ ಸ್ವರ್ಗದಲ್ಲಿ ಐಶ್ವರ್ಯದಾಯಕವೇ ಆಗಿದೆ. ಆದ್ದರಿಂದ ಪಂಚಭೂತಗಳ ವಿಯೋಗವು ಸಜ್ಜನರ ಪಾಲಿಗೆ ಐಶ್ವರ್ಯದಾಯಕವೇ ಎಂದು ಸಜ್ಜನರ ಅಭಿಪ್ರಾಯ.

ನ ಜಾಯತೇ ನ ಮ್ರಿಯತೇ ಪುರುಷಃ ಶಾಶ್ವತಃ ಸದಾ ॥5॥
ಪ್ರಾಯೇಣ ಮರಣಂ ನಾಮ ಪಾಪಿನಾಮೇವ ಪಾಂಡವ |
ಯೇಷಾಂ ತು ನ ಗತಿಃ ಪುಣ್ಯಾ ತೇಷಾಂ ಮರಣಮುಚ್ಯತೇ ॥6॥

ಸಾತ್ವಿಕನಾದ ಪುರುಷನು ಎಂದಿಗೂ ಶಾಶ್ವತವಾದ ಮರಣವನ್ನು ಹೊಂದುವುದೇ ಇಲ್ಲ. ಪ್ರಾಯಃ ದೇಹವಿಯೋಗವೆಂಬ ಮರಣವು ಪಾಪಿಗಳ ಪಾಲಿಗೆ ಮಾತ್ರ ಭಯಂಕರವಾಗಿದೆ. ಯಾರಿಗೆ ಪುಣ್ಯಗತಿಯು ಲಭಿಸುವುದಿಲ್ಲವೋ ಅವರಿಗೆ ಮರಣ ಎನ್ನುವ ಶಬ್ದವನ್ನು ಹೇಳುತ್ತಾರೆ. ಸಾತ್ವಿಕರಾದ ಜನರಿಗೆ ಮರಣವು ಸುಖದಾಯಕವಾದ ಅವಭೃಥ ಎನಿಸಿದೆ.

ಪ್ರಾಯೇಣಾಕೃತಕೃತ್ಯಸ್ತು ಮೃತ್ಯೋರುದ್ವಿಜತೇ ಜನಃ |
ಕೃತಕೃತ್ಯಾಃ ಪ್ರತೀಕ್ಷಂತೇ ಮೃತ್ಯುಂ ಪ್ರಿಯಮಿವಾತಿಥಿಮ್ ॥7॥

ಪ್ರಾಯಃ ಮಾಡಬೇಕಾದ ಕರ್ತವ್ಯಗಳನ್ನು ಮಾಡದೆ ಇರುವ ಜನರು ಮರಣಕ್ಕೆ ಭಯಪಡುತ್ತಾರೆ. ಸತ್ಕರ್ಮಶೀಲರಾದ ಸಜ್ಜನರು ಇಷ್ಟನಾದ ಅತಿಥಿಯನ್ನು ನಿರೀಕ್ಷಿಸುವಂತೆ ಮೃತ್ಯುವನ್ನು ಅತಿಥಿಯಂತೆ ನಿರೀಕ್ಷಿಸುತ್ತಾರೆ.

ಯುಧಿಷ್ಠಿರಃ
ಪಂಚ ಯಜ್ಞಾಃ ಕಥಂ ದೇವ ಕ್ರಿಯಂತೇಽತ್ರ ದ್ವಿಜಾತಿಭಿಃ |
ತೇಷಾಂ ನಾಮ ಚ ದೇವೇಶ ಕರ್ತುಮರ್ಹಸ್ಯಶೇಷತಃ ॥8॥

ಯುಧಿಷ್ಠಿರ ದೇವೇಶನೇ, ಪಂಚಮಹಾಯಜ್ಞಗಳನ್ನು ಬ್ರಾಹ್ಮಣರು ಹೇಗೆ ಮಾಡುತ್ತಾರೆ? ಅವುಗಳ ನಾಮಧೇಯಗಳನ್ನು ಸಂಪೂರ್ಣವಾಗಿ ಹೇಳುವ ಕೃಪೆ ತೋರು.

ಶ್ರೀಭಗವಾನ್
ಶೃಣು ಪಂಚ ಮಹಾಯಜ್ಞಾನ್ ಕೀರ್ತ್ಯಮಾನಾನ್ ಯುಧಿಷ್ಠಿರ |
ಯೈರೇವ ಬ್ರಹ್ಮಸಾಲೋಕ್ಯಂ ಲಭಂತೇ ಗೃಹಮೇಧಿನಃ ॥9॥

ಶ್ರೀಭಗವಾನ್ ಯುಧಿಷ್ಠಿರನೇ, ನಾನು ಹೇಳಲಿರುವ ಪಂಚಮಹಾಯಜ್ಞಗಳ ಸ್ವರೂಪವನ್ನು ಕೇಳು. ಅವುಗಳನ್ನು ಅನುಷ್ಠಾನ ಮಾಡುವುದರಿಂದಲೇ ಗೃಹಸ್ಥನು ಬ್ರಹ್ಮಲೋಕವನ್ನು ಹೊಂದುತ್ತಾನೆ.

ಋಷಿಯಜ್ಞಂ ಬ್ರಹ್ಮಯಜ್ಞಂ ಭೂತಯಜ್ಞಂ ಚ ಪಾಂಡವ |
ನೃಯಜ್ಞಂ ಪಿತೃಯಜ್ಞಂ ಚ ಪಂಚ ಯಜ್ಞಾನ್ ಪ್ರಚಕ್ಷತೇ ॥10॥

ಋಷಿಯಜ್ಞ, ಬ್ರಹ್ಮಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ ಎಂಬ ಈ ಪಂಚಮಹಾಯಜ್ಞಗಳನ್ನು ಯಜ್ಞ ಎಂದು ಕರೆಯುತ್ತಾರೆ.

ತರ್ಪಣಂ ಋಷಿಯಜ್ಞಃ ಸ್ಯಾತ್ ಸ್ವಾಧ್ಯಾಯೋ ಬ್ರಹ್ಮಯಜ್ಞಕಮ್ ॥11॥

ತರ್ಪಣಕ್ಕೆ ಋಷಿಯಜ್ಞ ಎನ್ನುತ್ತಾರೆ. ಸ್ವಾಧ್ಯಾಯಕ್ಕೆ ಬ್ರಹ್ಮಯಜ್ಞ ಎನ್ನುತ್ತಾರೆ.

ಭೂತಯಜ್ಞೋ ಬಲಿರ್ಜ್ಞೇಯೋ ನೃಯಜ್ಞೋಽತಿಥಿಪೂಜನಮ್ |
ಪಿತೄನುದ್ದಿಶ್ಯ ಯತ್ಕರ್ಮ ಪಿತೃಯಜ್ಞಃ ಪ್ರಕೀರ್ತಿತಃ ॥12॥

ಸಮಸ್ತ ಪ್ರಾಣಿಗಳಿಗೂ ಬಲಿದಾನ ಮಾಡುವುದಕ್ಕೆ ಭೂತಯಜ್ಞ ಎನ್ನುತ್ತಾರೆ. ಅತಿಥಿ ಸತ್ಕಾರವು ಮನುಷ್ಯಯಜ್ಞ ಎನಿಸಿದೆ. ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಾದಿಗಳನ್ನು ಮಾಡುವುದಕ್ಕೆ ಪಿತೃಯಜ್ಞ ಎಂದು ಹೆಸರು.

ಹುತಂ ಚಾಪ್ಯಹುತಂ ಚೈವ ತಥಾ ಪ್ರಹುತಮೇವ ಚ |
ಪ್ರಾಶಿತಂ ಬಲಿದಾನಂ ಚ ಪಾಕಯಜ್ಞಾನ್ ಪ್ರಚಕ್ಷತೇ ॥13॥

ಹುತ, ಅಹುತ, ಪ್ರಹುತ, ಪ್ರಾಶಿತ, ಬಲಿದಾನ ಇವುಗಳನ್ನು ಪಾಕಯಜ್ಞಗಳೆಂದು ಕರೆಯುತ್ತಾರೆ.

ವೈಶ್ವದೇವಾದಯೋ ಹೋಮಾ ಹುತಮಿತ್ಯುಚ್ಯತೇ ಬುಧೈಃ |
ಅಹುತಂ ಚ ಭವೇದ್ದತ್ತಂ ಪ್ರಹುತಂ ಬ್ರಾಹ್ಮಣಾಶಿತಮ್ ॥14॥

ವೈಶ್ವದೇವಾದಿ ಕರ್ಮಗಳ ಮೂಲಕ ದೇವತೆಗಳನ್ನು ಉದ್ದೇಶಿಸಿ ಮಾಡುವ ಹೋಮವನ್ನು ವಿದ್ವಾಂಸರು ಹುತ ಎಂದು ಕರೆಯುತ್ತಾರೆ. ದಾನ ಕೊಡುವ ವಸ್ತುವಿಗೆ ಅಹುತ ಎಂದು ಹೆಸರು. ಬ್ರಾಹ್ಮಣ ಭೋಜನಕ್ಕೆ ಪ್ರಹುತ ಎಂದು ಹೆಸರು.

ಪ್ರಾಣಾಗ್ನಿಹೋತ್ರಹೋಮಂ ಚ ಪ್ರಾಶಿತಂ ವಿಧಿವದ್ ವಿದುಃ |
ಬಲಿಕರ್ಮ ಚ ರಾಜೇಂದ್ರ ಪಾಕಯಜ್ಞಾಃ ಪ್ರಕೀರ್ತಿತಾಃ ॥15॥

ಪ್ರಾಣಾಗ್ನಿಹೋತ್ರದ ವಿಧಿಯಿಂದ ಪ್ರಾಣಿಗಳಿಗೆ ಐದು ಗ್ರಾಸಗಳನ್ನು ಅರ್ಪಿಸುವುದಕ್ಕೆ ಪ್ರಾಶಿತ ಎಂದು ಹೆಸರು. ಪ್ರಾಣಿಗಳ ತೃಪ್ತಿಗಾಗಿ ಅನ್ನವನ್ನು ದಾನ ಮಾಡುವುದಕ್ಕೆ ಬಲಿದಾನ ಎಂದು ಹೆಸರು. ಈ ಐದು ಯಜ್ಞಗಳು ಪಂಚಪಾಕ ಯಜ್ಞಗಳೆಂದು ಕರೆಯಲ್ಪಟ್ಟಿವೆ.

ಕೇಚಿತ್ ಪಂಚ ಮಹಾಯಜ್ಞಾನ್ ಪಾಕಯಜ್ಞಾನ್ ಪ್ರಚಕ್ಷತೇ |
ಅಪರೇ ಬ್ರಹ್ಮಯಜ್ಞಾದೀನ್ ಮಹಾಯಜ್ಞವಿದೋ ವಿದುಃ ॥16॥

ಕೆಲವು ವಿದ್ವಾಂಸರು ಮಹಾಯಜ್ಞಾದಿಗಳನ್ನು ಪಾಕಯಜ್ಞ ಎಂದು ಕರೆಯುತ್ತಾರೆ. ಇನ್ನು ಕೆಲವು ವಿದ್ವಾಂಸರು ಬ್ರಹ್ಮಯಜ್ಞವೇ ಮೊದಲಾದವುಗಳಿಗೆ ಪಂಚಮಹಾ ಯಜ್ಞಗಳೆಂದು ಕರೆಯುತ್ತಾರೆ.

ಸರ್ವ ಏತೇ ಮಹಾಯಜ್ಞಾಃ ಸರ್ವಥಾ ಪರಿಕೀರ್ತಿತಾಃ |
ಬುಭುಕ್ಷಿತಾನ್ ಬ್ರಾಹ್ಮಣಾಂಸ್ತು ಯಥಾಶಕ್ತಿ ನ ಹಾಪಯೇತ್ ॥17॥

ಇದೆಲ್ಲವೂ ಎಲ್ಲ ರೀತಿಯಿಂದಲೂ ಮಹಾಯಜ್ಞಗಳೆಂದೇ ಕರೆಸಿಕೊಳ್ಳುತ್ತದೆ. ಹಸಿದು ಬಂದ ಬ್ರಾಹ್ಮಣರನ್ನು ಯಥಾಶಕ್ತಿ ತೃಪ್ತಿಪಡಿಸಬೇಕೇ ಹೊರತು ಎಂದಿಗೂ ನಿರಾಶರನ್ನಾಗಿ ಕಳುಹಿಸಬಾರದು.
ಅಹನ್ಯಹನಿ ಯೇ ತ್ವೇತಾನ್ ಅಕೃತ್ವಾ ಭುಂಜತೇ ಸ್ವಯಮ್ |
ಕೇವಲಂ ಮಲಮಶ್ನಂತಿ ತೇ ನರಾ ನ ಚ ಸಂಶಯಃ ॥18॥
ಆದ್ದರಿಂದ ವಿದ್ವಾಂಸನಾದ ಬ್ರಾಹ್ಮಣನು ಪ್ರತಿದಿನವೂ ಸ್ನಾನ ಮಾಡಿ ಪಂಚಮಹಾಯಜ್ಞಗಳನ್ನು ಅನುಷ್ಠಾನ ಮಾಡಬೇಕು. ಇವುಗಳನ್ನು ಆಚರಿಸದೆ ಊಟ ಮಾಡುವ ಬ್ರಾಹ್ಮಣನು ತಿನ್ನುವ ಅನ್ನವು ಮಲ ಸಮಾನವಾಗಿ ಮಲವನ್ನೇ ತಿಂದಂತಾಗುತ್ತದೆ.
ತಸ್ಮಾತ್ ಸ್ನಾತ್ವಾ ದ್ವಿಜೋ ವಿದ್ವಾನ್ ಕುರ್ಯಾದೇತಾನ್ ದಿನೇ ದಿನೇ |
ಅತೋಽನ್ಯಥಾ ತು ಭುಂಜನ್ ವೈ ಪ್ರಾಯಶ್ಚಿತ್ತೀ ಭವೇದ್ ದ್ವಿಜಃ ॥19॥
ಆದ್ದರಿಂದ ಸ್ನಾನವನ್ನು ಮಾಡಿ, ದೇವತೆಗಳನ್ನು ಆರಾಧಿಸಿ ಊಟ ಮಾಡಬೇಕು. ಈ ಪಂಚಮಹಾಯಜ್ಞಗಳನ್ನು ಆಚರಿಸದೆ ಊಟ ಮಾಡುವ ವ್ಯಕ್ತಿಯು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತದೆ.
ಯುಧಿಷ್ಠಿರಃ
ದೇವದೇವ ನಮಸ್ತೇಽಸ್ತು ತ್ವದ್ಭಕ್ತಸ್ಯ ಜನಾರ್ದನ |
ವಕ್ತುಮರ್ಹಸಿ ದೇವೇಶ ಸ್ನಾನಸ್ಯ ಚ ವಿಧಿಂ ಮಮ ॥20॥
ಯುಧಿಷ್ಠಿರ ದೇವದೇವೇಶನೇ, ದೈತ್ಯಹಂತಕನೇ, ನಿನ್ನ ಭಕ್ತನಾದ ನನಗೆ ಸ್ನಾನದ ವಿಧಿಯನ್ನು ಹೇಳುವ ಕೃಪೆ ತೋರು.
ಶ್ರೀಭಗವಾನ್
ಶೃಣು ಪಾಂಡವ ತತ್ಸರ್ವಂ ಪವಿತ್ರಂ ಪಾಪನಾಶನಮ್ |
ಸ್ನಾತ್ವಾ ಯೇನ ವಿಧಾನೇನ ಮುಚ್ಯಂತೇ ಕಿಲ್ಬಿಷಾದ್ ದ್ವಿಜಾಃ ॥21॥
ಶ್ರೀಭಗವಾನ್ ಯುಧಿಷ್ಠಿರನೇ, ಯಾವ ವಿಧಾನದಿಂದ ಬ್ರಾಹ್ಮಣನು ಸ್ನಾನ ಮಾಡಿದರೆ ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೋ ಅಂತಹ ಪವಿತ್ರವೂ, ಪಾಪ ನಾಶಕವೂ ಆದ ಸ್ನಾನದ ವಿಧಿಯನ್ನು ಯಥಾರ್ಥವಾಗಿ ಹೇಳುತ್ತೇನೆ, ಕೇಳು.
ಮೃದಂ ಚ ಗೋಮಯಂ ಚೈವ ತಿಲಾನ್ ದರ್ಭಾಂಸ್ತಥೈವ ಚ |
ಪುಷ್ಪಾಣ್ಯಪಿ ಯಥಾಲಾಭಮಾದಾಯ ತು ಜಲಂ ವ್ರಜೇತ್ ॥22॥
ಮೃತ್ತಿಕೆ, ಸೆಗಣಿ, ಎಳ್ಳು, ದರ್ಭೆ, ಪುಷ್ಪಗಳು ಇವೇ ಮೊದಲಾದ ವಸ್ತುಗಳನ್ನು ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ ಸ್ವೀಕರಿಸಿ ನೀರಿನ ಬಳಿ ಸಾಗಬೇಕು.
ನದ್ಯಾಂ ಸತ್ಯಾಂ ನ ಚ ಸ್ನಾಯಾದನ್ಯತ್ರ ದ್ವಿಜಸತ್ತಮಃ |
ಸತಿ ಪ್ರಭೂತೇ ಪಯಸಿ ನಾಲ್ಪೇ ಸ್ನಾಯಾತ್ ಕದಾಚನ ॥23॥
ಬ್ರಾಹ್ಮಣನು ನದಿಯಲ್ಲಿ ಸ್ನಾನ ಮಾಡಿದ ಬಳಿಕ ನಂತರ ಬೇರೆ ಎಲ್ಲಿಯೂ ಸ್ನಾನ ಮಾಡಬಾರದು. ಅಪಾರವಾದ ಜಲ ತುಂಬಿರುವ ಜಲಾಶಯವಿರುವಾಗ ಅಲ್ಪಜಲ ತುಂಬಿದ ಹಳ್ಳದಲ್ಲಿ ಸ್ನಾನ ಮಾಡಬಾರದು.
ಗತ್ವೋದಕಸಮೀಪಂ ತು ಶುಚೌ ದೇಶೇ ಮನೋರಮೇ |
ತತೋ ಮೃದ್ಗೋಮಯಾದೀನಿ ತತ್ರಾವೇಕ್ಷ್ಯ ವಿನಿಕ್ಷಿಪೇತ್ ॥24॥
ಬ್ರಾಹ್ಮಣನು ನದಿ ಅಥವಾ ಜಲಾಶಯದ ಬಳಿ ಹೋಗಿ ಶುದ್ಧವಾದ, ಮನೋಹರವಾದ ಸ್ಥಳಗಳಲ್ಲಿ ಮಣ್ಣು, ಸೆಗಣಿಗಳನ್ನು ಇಡಬೇಕು.

ಬಹಿಃ ಪ್ರಕ್ಷಾಲ್ಯ ಪಾದೌ ಚ ದ್ವಿರಾಚಮ್ಯ ಪ್ರಯತ್ನತಃ |
ಪ್ರಕ್ಷಿಣಂ ಸಮಾವೃತ್ಯ ನಮಸ್ಕುರ್ಯಾತ್ತು ತಜ್ಜಲಮ್ ॥25॥
ಪಾತ್ರೆಯನ್ನು ತುಂಬಿಕೊಂಡು ಹೋಗಿ ಜಲಾಶಯದ ಹೊರಗಡೆಯೇ ಎರಡು ಕಾಲುಗಳನ್ನು ತೊಳೆದುಕೊಂಡು, ಎರಡು ಬಾರಿ ಆಚಮನ ಮಾಡಿ ಜಲಾಶಯಕ್ಕೆ ಪ್ರದಕ್ಷಿಣೆ, ನಮಸ್ಕಾರವನ್ನು ಮಾಡಬೇಕು.
ನ ಚ ಪ್ರಕ್ಷಾಲಯೇತ್ ತೀರಮದ್ಭಿರ್ವಿದ್ವಾನ್ ಕದಾಚನ |
ನ ಚ ಪಾದೇನ ವಾ ಹನ್ಯಾದ್ದಸ್ತೇನಾನ್ಯೇನ ತಜ್ಜಲಮ್ ॥26॥
ಎಂದಿಗೂ ಮಣ್ಣಿನ ದಡವುಳ್ಳ ಸರೋವರದ ದಡವನ್ನು ನೀರಿನಿಂದ ತೊಳೆಯಬಾರದು, ಪಾದದಿಂದ ಕೆಡಿಸಬಾರದು, ಕೈಯಿಂದಲೂ ಆ ದಡವನ್ನು ತೊಳೆಯುವ ಮೂಲಕ ನೀರನ್ನು ಕದಡಬಾರದು.
ಸರ್ವದೇವಮಯಾ ಹ್ಯಾಪೋ ಮನ್ಮಯಾಃ ಪಾಂಡುನಂದನ |
ತಸ್ಮಾತ್ ತಾಸ್ತು ನ ಹಂತವ್ಯಾಸ್ತ್ವದ್ಭಿಃ ಪ್ರಕ್ಷಾಲಯೇತ್ ಸ್ಥಳಮ್ ॥27॥
ಪಾಂಡವನೇ, ನೀರು ಸಮಸ್ತ ದೇವತೆಗಳ ಸ್ವರೂಪವೆನಿಸಿದೆ. ಭಗವಂತನ ಸ್ವರೂಪವೂ ಎನಿಸಿದೆ. ಆದ್ದರಿಂದ ಕೈಯಿಂದ ನೀರನ್ನು ಬಡಿಯಬಾರದು. ತೀರ ಪ್ರದೇಶದ ದೂರದ ಸ್ಥಳವನ್ನು ಆರಿಸಿಕೊಂಡು ಜಲಾಶಯದ ನೀರನ್ನು ಆ ಸ್ಥಳದಿಂದ ಶುದ್ಧೀಕರಿಸಬೇಕು.
ಕೇವಲಂ ಪ್ರಥಮಂ ಮಜ್ಜೇನ್ನಾಂಗಾನಿ ವಿಮೃಜೇದ್ ಬುಧಃ |
ತತ್ ತೀರ್ಥಂ ಸ ಸಮಾಸಾದ್ಯ ಕುರ್ಯಾದಾಚಮನಂ ಪುನಃ ॥28॥
ವಿದ್ವಾಂಸನಾದವನು ಮೊದಲು ನೀರಿನಲ್ಲಿ ಮುಳುಗಬೇಕು. ಮೈ-ಕೈಗಳನ್ನು ಉಜ್ಜಿಕೊಳ್ಳಬೇಕು. ಬಳಿಕ ಪುನಃ ಆ ತೀರ್ಥದಲ್ಲಿ ಮುಳುಗಿ ಆಚಮನವನ್ನು ಮಾಡಬೇಕು.
ಗೋಕರ್ಣಾಕೃತಿವತ್ ಕೃತ್ವಾ ಕರಂ ತ್ರಿಃ ಪ್ರಪಿಬೇಜ್ಜಲಮ್ ॥29॥
ದ್ವಿಸ್ತತ್ ಪರಿಮೃಜೇದ್ ವಕ್ತ್ರಂ ಪಾದಾವಭ್ಯುಕ್ಷ್ಯ ಚಾತ್ಮನಃ |
ಶೀರ್ಷಣ್ಯಾಂಸ್ತು ತತಃ ಪ್ರಾಣಾನ್ ಸಕೃದೇವ ತು ಸಂಸ್ಪೃಶೇತ್ ॥30॥

ವಿದ್ವಾಂಸನು ತನ್ನ ಹಸ್ತವನ್ನು ಹಸುವಿನ ಕಿವಿಯ ರೂಪದಲ್ಲಿಟ್ಟುಕೊಂಡು ಅದರಿಂದ ಮೂರು ಬಾರಿ ಪ್ರಾಶನ ಮಾಡಬೇಕು. ಅನಂತರ ನೀರಿನಿಂದ ಕೂಡಿದ ಕೈಯಿಂದ ಮುಖವನ್ನು ಎರಡು ಬಾರಿ ಸ್ಪರ್ಶಿಸಬೇಕು. ಎರಡು ಪಾದಗಳ ಮೇಲೂ ಸ್ವಲ್ಪ ನೀರನ್ನು ಹಾಕಿಕೊಳ್ಳಬೇಕು.
ಬಾಹೂ ದ್ವೌ ಚ ತತಃ ಸ್ಪೃಷ್ಟ್ವಾ ಹೃದಯಂ ನಾಭಿಮೇವ ಚ |
ಪ್ರತ್ಯಂಗಮುದಕಂ ಸ್ಪೃಷ್ಟ್ವಾ ಮೂರ್ಧಾನಂ ತು ತತಃ ಸ್ಪೃಶೇತ್ ॥31॥
ಬಳಿಕ ಎರಡು ಬಾಹುಗಳನ್ನು ಮುಟ್ಟಿಕೊಳ್ಳಬೇಕು. ಕ್ರಮವಾಗಿ ಹೃದಯ, ನಾಭಿ, ಇತರ ಸ್ಥಾನಗಳನ್ನು ಸ್ಪರ್ಶಿಸಿ ಕೊನೆಗೆ ತಲೆಯನ್ನು ಮುಟ್ಟಬೇಕು.
ಆಪಃ ಪುನಂತ್ವಿತ್ಯುಕತ್ವ ಚ ಪುನರಾಚಮನಂ ಚರೇತ್ |
ಸೋಂಕಾರವ್ಯಾಹೃತೀರ್ವಾಽಪಿ ಸದಸಸ್ಪತಿಮಿತ್ಯೃಚಮ್ ॥32॥
`ಆಪಃ ಪುನಂತು' ಎಂಬ ಮಂತ್ರವನ್ನು ಓಂಕಾರ ಸಹಿತವಾದ ವ್ಯಾಹೃತಿಗಳ ಮೂಲಕ ಹೇಳಬೇಕು ಅಥವಾ `ಸದಸಸ್ಪತಿಮದ್ಭುತಂ' ಎಂಬ ಮಂತ್ರವನ್ನಾಗಲಿ ಹೇಳಿ ಆಚಮನ ಮಾಡಬೇಕು.
ಆಚಮ್ಯ ಮೃತ್ತಿಕಾಃ ಪ್ರಶ್ಚಾತ್ ತ್ರಿಧಾಕೃತ್ಯ ಸಮಾಲಭೇತ್ ॥33॥
ಆಚಮನ ಮಾಡಿದ ಬಳಿಕ ಮೃತ್ತಿಕೆಯನ್ನು ತೆಗೆದುಕೊಂಡು ಮೂರು ಭಾಗ ಮಾಡಿ ಮೈಗೆ ಹಚ್ಚಿಕೊಳ್ಳಬೇಕು.
ಋಚೇದಂ ವಿಷ್ಣುರಿತ್ಯಂಗಮುತ್ತಮಾಧಮಮಧ್ಯಮಮ್ |
ಆಲಭ್ಯ ವಾರುಣ್ಯೈಃ ಸೂಕ್ತೈರ್ನಮಸ್ಕೃತ್ಯ ಜಲಂ ತತಃ ॥34॥
`ಇದಂ ವಿಷ್ಣು ರ್ವಿಚಕ್ರಮೇ ತ್ರೇದಾ ನಿದಧೇ ಪದಂ' ಎಂಬ ಮಂತ್ರವನ್ನು ಹೇಳುತ್ತಾ ಮೃತ್ತಿಕೆಯ ಮೊದಲನೆಯ ಭಾಗವನ್ನು ಶರೀರದ ಮೇಲ್ಭಾಗಕ್ಕೂ, ಎರಡನೆಯ ಭಾಗವನ್ನು ಮಧ್ಯಭಾಗಕ್ಕೂ, ಮೂರನೆಯ ಭಾಗವನ್ನು ಕೆಳಭಾಗಕ್ಕೂ ಹಚ್ಚಿಕೊಂಡು ವರುಣಸೂಕ್ತವನ್ನು ಹೇಳುತ್ತಾ ನೀರಿಗೆ ನಮಸ್ಕರಿಸಿ ನೀರಿಗೆ ಇಳಿಯಬೇಕು.
ಸ್ರವಂತ್ಯಾಂ ಚೇತ್ ಪ್ರತಿಸ್ರೋತಃ ಪ್ರತ್ಯರ್ಕಂ ಚಾನ್ಯವಾರಿಷು |
ಮಜ್ಜೇದೋಮಿತ್ಯುದಾಹೃತ್ಯ ನ ಚ ವಿಕ್ಷೋಭಯೇಜ್ಜಲಮ್ ॥35॥
ನದಿಯಲ್ಲಿಯಾದರೆ ಪ್ರವಾಹಕ್ಕೆ ಎದುರು ನಿಂತು ಮುಳುಗಬೇಕು. ನಿಂತಿರುವ ನೀರಾಗಿದ್ದರೆ ಸೂರ್ಯನಿಗೆ ಅಭಿಮುಖವಾಗಿ ನಿಂತು ಮುಳುಗಬೇಕು. `ಓಂ' ಎಂದು ಪ್ರಣವೋಚ್ಚಾರಣೆ ಮಾಡುತ್ತಾ ಮುಳುಗಬೇಕು. ನೀರನ್ನು ಕದಡಬಾರದು.
ಗೋಮಯಂ ಚ ತ್ರಿಧಾ ಕೃತ್ವಾ ಜಲೇ ಪೂರ್ವಂ ಸಮಾಲಭೇತ್ |
ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಚ ಪುನರ್ಜಪೇತ್ ॥36॥
ಬಳಿಕ ಗೋಮಯವನ್ನು ಕೈಯಲ್ಲಿಟ್ಟುಕೊಂಡು, ಮೊದಲು ನೀರಿನಲ್ಲಿ ತೊಳೆದು ಮೂರು ವಿಭಾಗ ಮಾಡಿ, ಮೃತ್ತಿಕೆಯಂತೆ ಒಂದು ಭಾಗವನ್ನು ಊರ್ಧ್ವಾಂಗಕ್ಕೂ, ಎರಡನೆಯ ಭಾಗವನ್ನು ಮಧ್ಯಾಂಗಕ್ಕೂ, ಮೂರನೆಯ ಭಾಗವನ್ನು ಸೊಂಟದಿಂದ ಕೆಳಭಾಗಕ್ಕೂ ಲೇಪಿಸಿಕೊಳ್ಳಬೇಕು. ಹೀಗೆ ಲೇಪಿಸುವಾಗ ಓಂಕಾರ ವ್ಯಾಹೃತಿ ಸಹಿತವಾದ ಗಾಯತ್ರಿಯನ್ನು ಜಪಿಸುತ್ತಿರಬೇಕು.
ಪುನರಾಚಮನಂ ಕೃತ್ವಾ ಮದ್ಗತೇನಾಂತರಾತ್ಮನಾ |
ಆಪೋಹಿಷ್ಠೇತಿ ತಿಸೃಭಿರ್ದರ್ಭಪೂತೇನ ವಾರಿಣಾ ॥37॥
ತಥಾ ತರತ್ಸಮಂದೀಭಿಃ ಸಿಂಚೀಚ್ಚತಸೃಭಿಃ ಕ್ರಮಾತ್ ॥38॥
ಪುನಃ ಆಚಮನ ಮಾಡಿ, ನನ್ನಲ್ಲಿಯೇ ಮನಸ್ಸನ್ನು ದೃಢಗೊಳಿಸಿ `ಆಪೋಹಿಷ್ಠಾ ಮಯೋ ಭುವಃ' ಮುಂತಾದ ಮೂರು ಋಕ್ಕುಗಳಿಂದ ದರ್ಭೆಯಿಂದ ಪವಿತ್ರವಾದ ನೀರಿನಿಂದ ಅದೇ ರೀತಿ ` ತರತ್ಸಮಂದೀ ಧಾವತಿ' ಎಂಬ ನಾಲ್ಕು ಋಕ್ಕುಗಳಿಂದ ಕೂಡಿದ ಮಂತ್ರದಿಂದ ಕ್ರಮವಾಗಿ ಸ್ನಾನ ಮಾಡಬೇಕು.
ಗೋಸೂಕ್ತೇನಾಶ್ವಸೂಕ್ತೇನ ಶುದ್ಧವರ್ಣೇ(ರ್ಗೇ)ನ ಚಾಪ್ಯಥ |
ವೈಷ್ಣವೈರ್ವಾರುಣೈಃ ಸೂಕ್ತೈಃ ಸಾವಿತ್ರೈರಿಂದ್ರದೇವತ್ಯೈಃ ॥39॥
ಗೋಸೂಕ್ತ, ಅಶ್ವಸೂಕ್ತ, ಶುದ್ಧವರ್ಣ ಎನಿಸಿದ ಅಜಾದಿ ಐವತ್ತೊಂದು ಅಕ್ಷರಗಳು, ವೈಷ್ಣವಸೂಕ್ತ, ವಾರುಣಸೂಕ್ತ, ಸಾವಿತ್ರ ಸೂಕ್ತ, ಐಂದ್ರ ಸೂಕ್ತ ಇವುಗಳನ್ನು ಕ್ರಮವಾಗಿ ಪಠಿಸುತ್ತಾ ಸ್ನಾನ ಮಾಡಬೇಕು.
ವಾಮದೈವ್ಯೇನ ಚಾತ್ಮಾನಮನ್ಯೈರ್ಮನ್ಮಯಸಾಮಭಿಃ |
ಸ್ಥಿತ್ವಾಽಂತಃಸಲಿಲೇ ಸೂಕ್ತಂ ಜಪೇದ್ವಾಚಾಽಘಮರ್ಷಣಮ್ ॥40॥
ವಾಮದೈವ ಸೂಕ್ತದಿಂದ, ನನಗೆ ಸಂಬಂಧಿಸಿದ ಸಾಮಗಾನಗಳಿಂದ ನೀರಿನ ಒಳಗೆ ನಿಂತು ಮಾರ್ಜನ ಮಾಡಿಕೊಳ್ಳುತ್ತಾ, ನೀರಿನಲ್ಲಿಯೇ ಮುಳುಗಿ ಅಘಮರ್ಷಣ ಸೂಕ್ತವನ್ನು ಜಪಿಸಬೇಕು.
ಸವ್ಯಾಹೃತೀಕಾಂ ಸಪ್ರಣವಾಂ ಗಾಯತ್ರೀಂ ವಾ ತತೋ ಜಪೇತ್ |
ಆಶ್ವಾಸಮುಕ್ತಾನ್ ಪ್ರಣವಂ ಜಪೇದ್ ವಾ ಮಾಮನುಸ್ಮರನ್ ॥41॥
ಪ್ರಣವ, ವ್ಯಾಹೃತಿಗಳಿಂದ ಗಾಯತ್ರಿಯನ್ನು ಜಪಿಸಬೇಕು. ಎಷ್ಟು ಹೊತ್ತು ಉಸಿರುಕಟ್ಟಿಕೊಂಡು ಇರಲು ಸಾಧ್ಯವೋ ಅಷ್ಟು ಹೊತ್ತಿನವರೆಗೆ ನೀರಿನಲ್ಲಿ ಮುಳುಗಿ ಕುಳಿತು, ನನ್ನನ್ನೇ ಸ್ಮರಿಸುತ್ತಾ ಸೂಕ್ತಗಳನ್ನಾಗಲಿ, ಪ್ರಣವ ಮಂತ್ರವನ್ನಾಗಲಿ ಜಪಿಸುತ್ತಿರಬೇಕು.
ಉತ್ಪ್ಲುತ್ಯ ತೀರಮಾಸಾದ್ಯ ಧೌತೇ ಶುಕ್ಲೇ ಚ ವಾಸಸೀ |
ಶುದ್ಧೇ ಚಾಚ್ಛಾದಯೇತ್ ಕಕ್ಷ್ಯೇಽನುಕುರ್ಯಾತ್ ಪರಿಪಾಶಕಮ್ ॥42॥
ಪುನಃ ಮುಳುಗಿ ಸ್ನಾನ ಮಾಡಿ, ತೀರಕ್ಕೆ ಬಂದು ಶುದ್ಧವಾಗಿರುವ ವಸ್ತ್ರವನ್ನು ಉಟ್ಟುಕೊಂಡು, ಮತ್ತೊಂದು ವಸ್ತ್ರವನ್ನು ಹೊದ್ದುಕೊಳ್ಳಬೇಕು. ಉಡುವ ವಸ್ತ್ರಕ್ಕೆ ಅನುಕೂಲವಾಗುವಂತೆ ಸುತ್ತ ಕಟಿಸೂತ್ರವನ್ನು ಧಾರಣೆ ಮಾಡಬೇಕು.
ಪಾಶೇನ ಬದ್ಧ್ವಾ ಕಕ್ಷೇ ಯತ್ ಕುರುತೇ ಕರ್ಮ ವೈದಿಕಮ್ |

ರಾಕ್ಷಸಾ ದಾನವಾ ದೈತ್ಯಾಸ್ತದ್ ವಿಲುಂಪಂತಿ ಹರ್ಷಿತಾಃ ॥43॥
ತಸ್ಮಾತ್ ಸರ್ವಪ್ರಯತ್ನೇನ ಕಕ್ಷಪಾಶೇ ನ ಧಾರಯೇತ್ ॥44॥
ತೋಳುಗಳ ಕೆಳಭಾಗದಲ್ಲಿ ಹಗ್ಗವನ್ನು ಬಿಗಿಯುವಂತೆ ಹೊದಿಯುವ ವಸ್ತ್ರವನ್ನು ಹೊದ್ದುಕೊಂಡು ಮಾಡುವ ವೈದಿಕಕರ್ಮಗಳ ಫಲವನ್ನು ರಾಕ್ಷಸರು, ದಾನವರು, ದೈತ್ಯರು ಸಂತೋಷದಿಂದ ಅಪಹರಿಸುತ್ತಾರೆ. ಆದ್ದರಿಂದ ಯಾವುದೇ ಕಾರಣದಿಂದಲೂ ಹೊದೆಯುವ ವಸ್ತ್ರವನ್ನು ಕಂಕಳುಗಳ ಕೆಳಭಾಗದಲ್ಲಿ ಹಗ್ಗದಂತೆ ಬಿಗಿದುಕೊಳ್ಳಬಾರದು.
ತತಃ ಪ್ರಕ್ಷಾಲ್ಯ ಪಾದೌ ದ್ವೌ ಹಸ್ತೌ ಚೈವ ಮೃದಾ ಶನೈಃ |
ಆಚಮ್ಯ ಪುನರಾಚಾಮೇತ್ ತತಃ ಸಾವಿತ್ರಿಯಾ ದ್ವಿಜಃ ॥45॥
ಬ್ರಾಹ್ಮಣನು ವಸ್ತ್ರಗಳನ್ನು ಧರಿಸಿದ ಬಳಿಕ ಆಚಮನವನ್ನು ಮಾಡಿ, ಕೈ-ಕಾಲುಗಳನ್ನು ಮೃತ್ತಿಕೆಯಿಂದ ತೊಳೆದುಕೊಂಡು, ಪುನಃ ಗಾಯತ್ರಿಯನ್ನು ಜಪಿಸುತ್ತಾ ಆಚಮನ ಮಾಡಬೇಕು.
ಪ್ರಾಙ್ಮುಖೋದಙ್ಮುಖೋ ವಾಽಪಿ ಧ್ಯಾಯನ್ ವೇದಾನ್ ಸಮಾಹಿತಃ ॥
ಪೂರ್ವಾಭಿಮುಖವಾಗಿಯಾಗಲಿ, ಉತ್ತರಾಭಿಮುಖವಾಗಿಯಾಗಲಿ ಕುಳಿತು ಏಕಾಗ್ರಚಿತ್ತದಿಂದ ಧ್ಯಾನ ಮಾಡಬೇಕು.
ಜಲೇ ಜಲಗತಃ ಶುದ್ಧಃ ಸ್ಥಲ ಏವ ಸ್ಥಲೇ ಸ್ಥಿತಃ |
ಉಭಯತ್ರ ಸ್ಥಿತಸ್ತಸ್ಮಾದ್ ಆಚಾಮೇದಾತ್ಮಶುದ್ಧಯೇ ॥47॥
ನೀರಿನಲ್ಲಿ ನಿಂತಿರುವ ಮನುಷ್ಯನು ಅಲ್ಲಿಯೇ ಆಚಮನ ಮಾಡಿದರೂ ಶುದ್ಧನಾಗುತ್ತಾನೆ. ದಂಡೆಯ ಮೇಲೆ ಕುಳಿತ ಮನುಷ್ಯನು ಅಲ್ಲಿಯೇ ಆಚಮನ ಮಾಡಿದರೂ ಶುದ್ಧನಾಗುತ್ತಾನೆ. ಒಟ್ಟಿನಲ್ಲಿ ಶುದ್ಧಿಗಾಗಿ ಆಚಮನವನ್ನು ಮಾಡಬೇಕು.
ದರ್ಭೇಷು ದರ್ಭಪಾಣಿಃ ಸನ್ ಪ್ರಾಙ್ಮುಖಃ ಸುಸಮಾಹಿತಃ |
ಪ್ರಾಣಾಯಾಮಾಂಸ್ತತಃ ಕುರ್ಯಾತ್ ಮದ್ಗತೇನಾಂತರಾತ್ಮನಾ ॥48॥
ದರ್ಭೆಯನ್ನು ಕೈಯಲ್ಲಿ ಧರಿಸಿ, ದರ್ಭಾಸನದಲ್ಲಿ ಪೂರ್ವಾಭಿಮುಖವಾಗಿ ಏಕಾಗ್ರಚಿತ್ತದಿಂದ ಕುಳಿತು ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ, ಪ್ರಾಣಾಯಾಮವನ್ನು ಮಾಡಬೇಕು.
ಸಹಸ್ರಕೃತ್ವಃ ಸಾವಿತ್ರೀಂ ಶತಕೃತ್ವಸ್ತು ವಾ ಜಪೇತ್ ॥49॥
ಗಾಯತ್ರಿ ಮಂತ್ರವನ್ನು ಒಂದು ಸಾವಿರ ಬಾರಿ ಅಥವಾ ನೂರು ಬಾರಿ ಜಪಿಸಬೇಕು.
ಸಮಾಪ್ತೇ ತು ಜಪೇ ತಸ್ಮಿನ್ ಸಾವಿತ್ರ್ಯಾ ಚಾಭಿಮಂತ್ರ್ಯ ಚ |
ಮಂದೇಹಾನಾಂ ವಿನಾಶಾಯ ರಕ್ಷಸಾಂ ವಿಕ್ಷಿಪೇಜ್ಜಲಮ್ ॥50॥
ಮಂದೇಹವೆಂಬ ರಾಕ್ಷಸರನ್ನು ನಾಶಮಾಡುವ ದೃಷ್ಟಿಯಿಂದ ಗಾಯತ್ರಿ ಮಂತ್ರದಿಂದ ಅಭಿಮಂತ್ರಿತವಾದ ನೀರನ್ನು ಸೂರ್ಯನಿಗೆ ಅರ್ಘ್ಯ ನೀಡಬೇಕು. ಮಂದ ಎಂಬ ದ್ವೀಪದಲ್ಲಿ ಯಥೇಷ್ಟವಾಗಿ ಸಂಚರಿಸುವ ರಾಕ್ಷಸರನ್ನು ನಾಶಮಾಡುವ ದೃಷ್ಟಿಯಿಂದ ನೀರನ್ನು ವಜ್ರಾಯುಧ ಎಂದು ಭಾವಿಸಿ ಅರ್ಘ್ಯಕೊಡಬೇಕು.
ಉದ್ವರ್ಗೋಽಸೀತ್ಯಥಾಚಾಂತಃ ಪ್ರಾಯಶ್ಚಿತ್ತಜಲಂ ಕ್ಷಿಪೇತ್ ॥51॥
ಅನಂತರ ಆಚಮನವನ್ನು ಮಾಡಿ ರಾಕ್ಷಸ ವರ್ಗವು ಸಂವೃತವಾಗಿದೆ ಎಂಬ `ಉದ್ವರ್ಗೋಽಸಿ' ಎಂಬ ಮಂತ್ರವನ್ನು ಪಠಿಸುತ್ತಾ ಪ್ರಾಯಶ್ಚಿತ್ತಾರ್ಘ್ಯವನ್ನು ನೀಡಬೇಕು.
ಅಥಾದಾಯ ಸುಪುಷ್ಪಾಣಿ ತೋಯಾನ್ಯಂಜಲಿನಾ ದ್ವಿಜಃ |
ಪ್ರಕ್ಷಿಪ್ಯ ಪ್ರತಿಸೂರ್ಯಂ ಚ ವ್ಯೋಮಮುದ್ರಾಂ ಪ್ರಕಲ್ಪಯೇತ್ ॥52॥
ಬಳಿಕ ಬ್ರಾಹ್ಮಣನು ಬೊಗಸೆಯಲ್ಲಿ ನೀರನ್ನು, ಸುಗಂಧಮಯವಾದ ಹೂವನ್ನು ಇಟ್ಟುಕೊಂಡು ಸೂರ್ಯನ ಕಡೆ ಎರಚಬೇಕು. ವ್ಯೋಮಮುದ್ರೆಯನ್ನು ಸೂರ್ಯನಿಗೆ ತೋರಿಸಬೇಕು.
ತತೋ ದ್ವಾದಶಕೃತ್ವಸ್ತು ಸೂರ್ಯಸ್ಯೈಕಾಕ್ಷರಂ ಜಪೇತ್ |
ತತಃ ಷಡಕ್ಷರಾದೀನಿ ತ್ರಿಃ ಕೃತ್ವಃ ಪರಿವರ್ತಯೇತ್ ॥53॥
ಬಳಿಕ ಸೂರ್ಯನ ಏಕಾಕ್ಷರ ಮಂತ್ರವನ್ನು ಹನ್ನೆರಡು ಬಾರಿ ಜಪಿಸಬೇಕು. ಷಡಕ್ಷರ ಮಂತ್ರಗಳನ್ನು ಆರು ಬಾರಿ ಜಪಿಸಬೇಕು. ವ್ಯಾಖ್ಯಾನ ವಿಶೇಷ ಸೂರ್ಯನ ಏಕಾಕ್ಷರ ಮಂತ್ರವೆಂದರೆ `ಓಂ'ಕಾರವೇ ಆಗಿದೆ. `ಬ್ರಹ್ಮಭೂರ್ಭುವಃ ಸ್ವರೋಂ' ಎಂಬುದು ಷಡಕ್ಷರ ಮಂತ್ರವೆಂದು ಕರೆಸಿಕೊಂಡಿದೆ. `ಓಂ ಆಪೋಜ್ಯೋತಿರಸೋ' `ಅಮೃತಂ ಆಸಾವಾದಿತ್ಯೋ ಬ್ರಹ್ಮ' `ಬ್ರಹ್ಮ ಭೂರ್ಭುವಃ ಸ್ವರೋಂ' ಎಂಬ ಮೂರು ಮಂತ್ರಗಳನ್ನು ಜಪಿಸುತ್ತಾ ಪ್ರದಕ್ಷಿಣೆಯನ್ನು ಮಾಡಬೇಕು.
ಪ್ರದಕ್ಷಿಣಂ ಪರಾಮೃಜ್ಯ ಮುದ್ರಯಾ ಸ್ವಮುಖಂ ತಯಾ |
ಊರ್ಧ್ವಬಾಹುಸ್ತತೋ ಭೂತ್ವಾ ಸೂರ್ಯಮೀಕ್ಷೇತ್ ಸಮಾಹಿತಃ ॥54॥
ತನ್ಮಂಡಲಸ್ಥಂ ಮಾಂ ಧ್ಯಾಯೇತ್ ತೇಜೋಮೂರ್ತಿಂ ಚತುರ್ಭುಜಮ್ |
ಉದುತ್ಯಂ ಚ ಜಪೇನ್ಮಂತ್ರಂ ಚಿತ್ರಂ ತಚ್ಚಕ್ಷುರಿತ್ಯಪಿ ॥55॥
ಯೋಮಮುದ್ರೆಯನ್ನು ತೋರಿಸುತ್ತಾ ಪ್ರದಕ್ಷಿಣವಾಗಿ ತಿರುಗಿ ತನ್ನ ಮುಖವನ್ನು ಮುದ್ರೆಯಿಂದ ಮುಚ್ಚಿಕೊಳ್ಳಬೇಕು. ಬಳಿಕ ಎರಡು ಭುಜಗಳನ್ನು ಮೇಲಕ್ಕೆತ್ತಿಕೊಂಡು ಏಕಾಗ್ರಚಿತ್ತನಾಗಿ ಸೂರ್ಯನ ಕಡೆ ನೋಡುತ್ತಾ ಸೂರ್ಯಮಂಡಲದ ಮಧ್ಯದಲ್ಲಿರುವ ಭಗವಂತನ ನಾಲ್ಕು ಭುಜಗಳಿಂದ ಕೂಡಿದ ತೇಜೋರೂಪವಾಗಿರುವ ನಾರಾಯಣ ರೂಪವನ್ನು ಧ್ಯಾನಿಸಬೇಕು. `ಉದುತ್ಯಂ ಚಿತ್ರಂದೇವಾನಾಂ ತಚ್ಚಕ್ಷುಃ' ಎಂಬ ಮಂತ್ರವನ್ನು ಜಪಿಸಬೇಕು.
ಸಾವಿತ್ರೀಂ ಚ ಯಥಾಶಕ್ತಿ ಜಪಿತ್ವಾ ಸೂಕ್ತಂ ಚ ಮಾಮಕಮ್ |
ಮನ್ಮಯಾನಿ ಚ ಸಾಮಾನಿ ಪುರುಷವ್ರತಮೇವ ಚ ॥56॥
ಯಥಾಶಕ್ತಿ ಗಾಯತ್ರಿಮಂತ್ರವನ್ನು, ನನಗೆ ಸಂಬಂಧಿಸಿದ ವಿಷ್ಣು ಸೂಕ್ತಗಳನ್ನು, ಸಾಮಗಳನ್ನು, ಪುರುಷಸೂಕ್ತಗಳನ್ನು ಜಪಿಸಬೇಕು.

ತತಶ್ಚಾಲೋಕಯೇದರ್ಕಂ ಹಂಸಃಶುಚಿಷದಿತ್ಯೃಚಾ ॥57॥
ಬಳಿಕ `ಹಂಸಃ ಶುಚಿಷತ್' ಎಂಬ ಮಂತ್ರವನ್ನು ಹೇಳಿಕೊಂಡು ಸೂರ್ಯನ ಕಡೆ ನೋಡಬೇಕು.
ಪ್ರದಕ್ಷಿಣಂ ಸಮಾವೃತ್ಯ ನಮಸ್ಕೃತ್ಯ ದಿವಾಕರಮ್ |
ತತಸ್ತು ತರ್ಪಯೇದದ್ಭಿರ್ಮಾಂ ಬ್ರಹ್ಮಾಣಂ ಚ ಶಂಕರಮ್ ॥58॥
ಪ್ರದಕ್ಷಿಣಾಪೂರ್ವಕವಾಗಿ ನಮಸ್ಕರಿಸುತ್ತಾ, ಸೂರ್ಯನನ್ನು ನೀರಿನ ಮೂಲಕ ತೃಪ್ತಿಪಡಿಸಬೇಕು. ಅಂತರ್ಯಾಮಿಯಾದ ಚತುರ್ಮುಖ ಬ್ರಹ್ಮನನ್ನು, ಶಂಕರನನ್ನು ಸಂತೋಷಪಡಿಸಬೇಕು.
ಪ್ರಜಾಪತಿಂ ಚ ದೇವಾಂಶ್ಚ ತಥಾ ದೇವಮುನೀನಪಿ |
ಸಾಂಗಾನಪಿ ತಥಾ ವೇದಾನಿತಿಹಾಸಾನ್ ಕ್ರತೂಂಸ್ತಥಾ ॥59॥
ಪುರಾಣಾನಿ ಚ ದಿವ್ಯಾನಿ ಕುಲಾನ್ಯಪ್ಸರಸಾಂ ತಥಾ |
ಋತೂನ್ ಸಂವತ್ಸರಾಂಶ್ಚೈವ ಕಲಾನ್ ಕಾಲಾತ್ಮಕಂ ತಥಾ ॥60॥
ಭೂತಗ್ರಾಮಾಂಶ್ಚ ಭೂತಾನಿ ಸರಿತಃ ಸಾಗರಾಂಸ್ತಥಾ |
ಶೈಲಾನ್ ಶೈಲಸ್ಥಿತಾನ್ ದೇವಾನ್ ಓಷಧೀಃ ಸವನಸ್ಪತೀಃ ॥61॥
ತರ್ಪಯೇದುಪವೀತೀ ತು ಪ್ರತ್ಯೇಕಂ ತೃಪ್ಯತಾಮಿತಿ ॥62॥
ಬ್ರಹ್ಮನಿಗೂ, ದೇವತೆಗಳಿಗೂ, ದೇವಮುನಿಗಳಿಗೂ, ಸಾಂಗವಾದ ವೇದಗಳಿಗೂ, ಇತಿಹಾಸಗಳಿಗೂ, ಕ್ರತುಗಳಿಗೂ, ಪುರಾಣಗಳಿಗೂ, ಅಪ್ಸರೆಯರಿಗೂ, ಋತುಗಳಿಗೂ, ಕಲಾ ಕಾಲಾತ್ಮಕವಾದ ಸಂವತ್ಸರಗಳಿಗೂ, ಭೂತಗಳಿಗೂ, ನದಿಗಳಿಗೂ, ಸಾಗರಗಳಿಗೂ, ಪರ್ವತಗಳಿಗೂ, ಪರ್ವತದಲ್ಲಿರುವ ದೇವತೆಗಳಿಗೂ, ಓಷಧಿ ವನಸ್ಪತಿಗಳಿಗೂ ಉಪವೀತವಾಗಿ ತರ್ಪಣವನ್ನು ನೀಡಬೇಕು. ಬಲಗೈಯಲ್ಲಿ ಯಜ್ಞೋಪವೀತವನ್ನು ಹಿಡಿದುಕೊಂಡು `ತೃಪ್ಯತಾಂ' ಎಂದು ಹೇಳುತ್ತಾ ಅರ್ಘ್ಯಕೊಡಬೇಕು.
ಅನ್ವಾರಭ್ಯ ಚ ಸವ್ಯೇನ ಪಾಣಿನಾ ದಕ್ಷಿಣೇನ ತು |
ನಿವೀತೀ ತರ್ಪಯೇತ್ ಪಶ್ಚಾದ್ ಋಷೀನ್ ಮಂತ್ರಕೃತಸ್ತಥಾ ॥63॥
ಎಡಗೈಯಿಂದ ಯಜ್ಞೋಪವೀತವನ್ನು ಮಾಲಾಕಾರವಾಗಿ ಮಾಡಿಕೊಂಡು ಬಲಗೈಯಿಂದ ಮಂತ್ರದ್ರಷ್ಟಾರರಾದ ಮರೀಚಿಗಳೇ ಮೊದಲಾದ ಋಷಿಗಳಿಗೂ ವಿದ್ವಾಂಸನಾದವನು ತರ್ಪಣವನ್ನು ನೀಡಬೇಕು.
ಮರೀಚ್ಯಾದಿಮುನೀಂಶ್ಚೈವ ನಾರದಾಂತಾನ್ ಸಮಾಹಿತಃ |
ಪ್ರಾಚೀನಾವೀತ್ಯಥೈತಾಂಸ್ತು ತರ್ಪಯೇದ್ ದೇವತಾಃ ಪಿತೄನ್ ॥64॥
ಮರೀಚಿಯೇ ಮೊದಲಾದ ನಾರದರ ತನಕ ಋಷಿಗಳಿಗೆ ತರ್ಪಣವನ್ನು ನೀಡಿದ ಬಳಿಕ ಎಡಭಾಗದಲ್ಲಿ ಯಜ್ಞೋಪವೀತವನ್ನು ಮಾಡಿಕೊಂಡು ದೇವತೆಗಳಿಗೂ, ಪಿತೃಗಳಿಗೂ ಸಂಬಂಧಿಸಿದಂತೆ ತರ್ಪಣವನ್ನು ನೀಡಬೇಕು.
ತತಸ್ತು ಕವ್ಯವಾಡಗ್ನಿಂ ಸೋಮಂ ವೈವಸ್ವತಂ ತಥಾ |
ತತಶ್ಚಾರ್ಯಮಣಂ ಚಾಪಿ ಅಗ್ನಿಷ್ವಾತ್ತಾಂಸ್ತಥೈವ ಚ ॥65॥
ಸೋಮಪಾಂಶ್ಚೈವ ದರ್ಭೇಷು ಸತಿಲೈರೇವ ವಾರಿಭಿಃ |
ತೃಪ್ಯತಾಮಿತಿ ಪಶ್ಚಾತ್ತು ಸ್ವಪಿತೄಂಸ್ತರ್ಪಯೇತ್ ಪುನಃ ॥66॥
ಬಳಿಕ ಕವ್ಯವಾಹನನಾದ ಅಗ್ನಿಗೆ, ಸೋಮನಿಗೆ, ವೈವಸ್ವತನಿಗೆ, ಅರ್ಯಮ, ಅಗ್ನಿಷ್ವಾತ್ತ, ಸೋಮಪ, ಮುಂತಾದವರಿಗೆ ನೀರಿನಿಂದ ದರ್ಭೆಯ ಸಹಿತವಾಗಿ ತೃಪ್ಯತಾಂ ಎಂದು ತರ್ಪಣವನ್ನು ನೀಡಬೇಕು. ಬಳಿಕ ಪಿತೃಗಳನ್ನು ನೀರು- ದರ್ಭೆಗಳಿಂದ ತೃಪ್ತಿಪಡಿಸಬೇಕು.
ಪಿತೄನ್ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾನ್ |
ಪಿತಾಮಹೀಃ ತಥಾ ಚಾಪಿ ತಥೈವ ಪ್ರಪಿತಾಮಹೀಃ ॥67॥
ತಥಾ ಪಿತೃಷ್ವಸ್ರೂಶ್ಚೈವ ಮಾತೃಷ್ವಸ್ರೂಸ್ತಥೈವ ಚ ॥68॥
ಮಾತರಂ ಚಾತ್ಮನಶ್ಚೈವ ತಥಾ ಮಾತಾಮಹೀಮಪಿ |
ಮಾತುರ್ಮಾತಾಮಹೀಂ ಚೈವ ಗುರುಮಾಚಾರ್ಯಮೇವ ಚ ॥69॥
ಪಿತೃಗಳಿಗೆ ಕ್ರಮದಲ್ಲಿ ತರ್ಪಣವನ್ನು ಕೊಡಬೇಕು. ತಂದೆ-ಅಜ್ಜ-ಮುತ್ತಜ್ಜ, ತಾಯಿ-ತಂದೆಯ ತಾಯಿ-ತಂದೆಯ ತಾಯಿಯ ತಾಯಿ, ತಂದೆಯ ತಂಗಿ ಅಥವಾ ಅಕ್ಕ, ತಾಯಿಯ ತಂಗಿ ಅಥವಾ ಅಕ್ಕ, ತನ್ನ ತಾಯಿ, ತಾಯಿಯ ತಾಯಿ, ತಾಯಿಯ ತಾಯಿಯ ತಾಯಿ, ಇವರಿಗೆ ಗುರುಗಳಿಗೆ, ಆಚಾರ್ಯರಿಗೆ;
ಉಪಾಧ್ಯಾಯಾನ್ ಸಖೀನ್ ಬಂಧೂನ್ ಶಿಷ್ಯರ್ತ್ವಿಗ್ಜ್ಞಾತಿಪುತ್ರಕಾನ್ |
ಪ್ರಮೀತಾನಾನೃಶಂಸ್ಯಾರ್ಥಂ ತರ್ಪಯೇತ್ ತಾನಮತ್ಸರಃ ॥70॥
ಉಪಾಧ್ಯಾಯರು, ಮಿತ್ರರು, ಬಂಧುಗಳು, ಶಿಷ್ಯರು, ಋತ್ವಿಜರು, ಜ್ಞಾನಿಗಳು, ಇವರಲ್ಲಿ ಯಾರು ಮರಣವನ್ನು ಹೊಂದಿರುವರೋ ಅಂತಹವರಿಗೆ ಕರುಣೆಯಿಂದ ಈರ್ಷ್ಯಾದಿಗಳನ್ನು ಬಿಟ್ಟು ತರ್ಪಣವನ್ನು ನೀಡಬೇಕು.
ತರ್ಪಯಿತ್ವಾ ತಥಾಽಽಚಮ್ಯ ಸ್ನಾನವಸ್ತ್ರಂ ಪ್ರಪೀಡಯೇತ್ |
ವೃದ್ಧಿಂ ಭೃತ್ಯಜನಸ್ಯಾಹುಃ ಸ್ನಾನಂ ಪಾನಂ ಚ ತದ್ವಿದಃ ॥71॥
ತರ್ಪಣ ನೀಡಿದ ಬಳಿಕ ಆಚಮನ ಮಾಡಿ ಸ್ನಾನದ ಸಮಯದಲ್ಲಿ ಉಟ್ಟ ವಸ್ತ್ರವನ್ನು ಹಿಂಡಬೇಕು. ಆ ವಸ್ತ್ರದ ಜಲವು ಮೃತರಾದ ಭೃತ್ಯಜನರ ಭಾಗವಾಗಿರುತ್ತದೆ. ಅದು ಅವರ ಸ್ನಾನ ಮತ್ತು ಪಾನಗಳಿಗೆ ಸಂಬಂಧಿಸಿದ ನೀರಾಗಿರುತ್ತದೆ. ಆದ್ದರಿಂದ ಸ್ನಾನ ವಸ್ತ್ರವನ್ನು ಹಿಂಡುವುದರಿಂದ ಗತಿಸಿದವರಿಗೆ ತರ್ಪಣ ವಿಧಿಯಾಗುತ್ತದೆ.
ಅತರ್ಪಯಿತ್ವಾ ತಾನ್ ಪೂರ್ವಂ ಸ್ನಾನವಸ್ತ್ರಂ ನ ಪೀಡಯೇತ್ ॥72॥
ಹಿಂದೆ ಹೇಳಿದ ದೇವ, ಋಷಿ, ಪಿತೃಗಳ ತರ್ಪಣವನ್ನು ನೀಡದೆ ಸ್ನಾನವಸ್ತ್ರವನ್ನು ಮೊದಲೇ ಹಿಂಡಬಾರದು.

ಪೀಡಯೇಚ್ಚೇತ್ ಪುರಾ ಮೋಹಾದ್ ದೇವಾಃ ಸರ್ಷಿಗಣಾಸ್ತಥಾ |
ಪಿತರಶ್ಚ ನಿರಾಶಾಸ್ತೇ ಶಪಿತ್ವಾ ಯಾಂತಿ ಯಥಾಗತಮ್ ॥73॥
ಯಾವನು ಮೋಹದಿಂದ ದೇವ-ಋಷಿ-ಪಿತೃ ತರ್ಪಣಕ್ಕಿಂತ ಮೊದಲೇ ಸ್ನಾನವಸ್ತ್ರವನ್ನು ಹಿಂಡುತ್ತಾರೋ ಅವನ ಈ ಕ್ರಿಯೆಯಿಂದ ದೇವ-ಋಷಿ-ಪಿತೃಗಳು ನಿರಾಶರಾಗಿ ಅವನಿಗೆ ಶಾಪವನ್ನು ಕೊಟ್ಟು ಹಿಂದಿರುಗುತ್ತಾರೆ.
ಪ್ರಕ್ಷಾಲ್ಯ ಚ ಮೃದಾ ಪಾದಾವಾಚಮ್ಯ ಪ್ರಯತಃ ಪುನಃ |
ದರ್ಭೇಷು ದರ್ಭಪಾಣಿಃ ಸನ್ ಸ್ವಾಧ್ಯಾಯಂ ತು ಸಮಾರಭೇತ್ ॥74॥
ಬ್ರಾಹ್ಮಣನು ಕಾಲುಗಳನ್ನು ಮಣ್ಣಿನಿಂದ ತೊಳೆದುಕೊಂಡು, ದರ್ಭಾಸನದಲ್ಲಿ ಕುಳಿತು ದರ್ಭಪಾಣಿಯಾಗಿ ವೇದಪಠನವನ್ನು ಪ್ರಾರಂಭಿಸಬೇಕು.
ವೇದಮಾದೌ ಸಮಾರಭ್ಯ ತತೋಪರ್ಯುಪರಿ ಕ್ರಮಾತ್ |
ಯದಧೀತೇ ಸ್ವಯಂ ಶಕ್ತ್ಯಾ ತತ್ ಸ್ವಾಧ್ಯಾಯಂ ಪ್ರಚಕ್ಷತೇ ॥75॥
ಋಚಂ ವಾಥ ಯಜುರ್ವಾಽಪಿ ಸಾಮಗಾಥಾಮಥಾಪಿ ಚ |
ಇತಿಹಾಸಪುರಾಣಾನಿ ಯಥಾಶಕ್ತಿ ನ ಹಾಪಯೇತ್ ॥76॥
ಋಗ್ವೇದವನ್ನಾಗಲಿ, ಯಜುರ್ವೇದವನ್ನಾಗಲಿ, ಸಾಮವೇದವನ್ನಾಗಲಿ ಪಠನ ಮಾಡಬೇಕು. ಇತಿಹಾಸ-ಪುರಾಣವನ್ನು ಯಥಾಶಕ್ತಿ ಪಾರಾಯಣ ಮಾಡಬೇಕು. ಇವುಗಳ ಅಧ್ಯಯನವನ್ನು ಬಿಡಬಾರದು.
ಉತ್ಥಾಯ ತು ನಮಸ್ಕೃತ್ಯ ದಿಶೋ ದಿಗ್ದೇವತಾ ಅಪಿ |
ಬ್ರಹ್ಮಾಣಂ ಚ ತತಶ್ಚಾಗ್ನಿಂ ಪೃಥಿವೀಮೋಷಧೀಸ್ತಥಾ ॥77॥
ವಾಚಂ ವಾಚಸ್ಪತಿಂ ಚೈವ ಮಾಂ ಚೈವ ಸರಿತ(ಸಮಿಧ)ಸ್ತಥಾ |
ನಮಸ್ಕೃತ್ವಾ ತಥಾಽದ್ಭಿಸ್ತು ಪ್ರಣವಾದಿ ಚ ಪೂಜಯೇತ್ ॥78॥
ವೇದಪಠನವನ್ನು ಪೂರ್ಣಗೊಳಿಸಿ ನಿಂತುಕೊಂಡು ದಿಕ್ಕುಗಳಿಗೂ, ದಿಗ್ದೇವತೆಗಳಿಗೂ, ಬ್ರಹ್ಮನಿಗೂ, ಅಗ್ನಿಗೂ, ಪೃಥಿವಿಗೂ, ಓಷಧಿಗಳಿಗೂ, ವಾಕ್‌ಗೂ, ವಾಚಸ್ಪತಿಗೂ, ಸಮಿತ್ತುಗಳಿಗೂ, ನನಗೂ ನಮಸ್ಕರಿಸಬೇಕು. ಬಳಿಕ ನೀರಿಗೆ ಸಾಗಿ ಪ್ರಣವಾದಿ ಮಂತ್ರಗಳಿಂದ ಜಲಾಶಯವನ್ನು ಪೂಜಿಸಬೇಕು.
ತತೋ ನಮೋಽದ್ಭ್ಯ ಇತ್ಯುಕ್ತ್ವಾ ನಮಸ್ಕುರ್ಯಾತ್ತು ತಜ್ಜಲಮ್ ॥79॥
`ನಮೋ ಅದ್ಭ್ಯಃ' ಎಂದು ಹೇಳುತ್ತಾ ಆ ಜಲಾಶಯವನ್ನು ನಮಸ್ಕರಿಸಬೇಕು.
ಘೃಣಿಃ ಸೂರ್ಯಸ್ತಥಾಽಽದಿತ್ಯಸ್ತೈಃ ಸ್ವಮೂರ್ಧ್ನಿ ತತೋ ಜಲೈಃ |
ಸಿಕ್ತ್ವಾಽವಲೋಕಯೇದರ್ಕಂ ಪ್ರಣವೇನ ಸಮಾಹಿತಃ ॥80॥
ಅನಂತರ ಘೃಣಿ, ಸೂರ್ಯ, ಆದಿತ್ಯ ಎಂಬ ಸೂರ್ಯಾಷ್ಟಾಕ್ಷರಿಮಂತ್ರವನ್ನು ಜಪಿಸುತ್ತಾ, ತನ್ನ ತಲೆಯ ಮೇಲೆ ಎರಡು ಕೈಗಳನ್ನು ಜೋಡಿಸಿಕೊಂಡು ಪ್ರಣವ ಮಂತ್ರದ ಮೂಲಕ ಏಕಾಗ್ರಚಿತ್ತದಿಂದ ಸೂರ್ಯನನ್ನು ಅವಲೋಕಿಸಬೇಕು.
ತತೋ ಮಾಮರ್ಚಯೇತ್ ಪುಷ್ಪೈರ್ಮತ್ಪ್ರಿಯೈರೇವ ನಿತ್ಯಶಃ ॥81॥
ಬಳಿಕ ನನಗೆ ಅತ್ಯಂತ ಪ್ರಿಯವಾದ ಪುಷ್ಪಗಳಿಂದ ನಿತ್ಯವೂ ಆರಾಧಿಸಬೇಕು.
ಯುಧಿಷ್ಠಿರಃ
ತ್ವತ್ಪ್ರಿಯಾಣಿ ಪ್ರಸೂನಾನಿ ತ್ವದನಿಷ್ಟಾನಿ ಮಾಧವ |
ಸರ್ವಾಣ್ಯಾಚಕ್ಷ್ವ ದೇವೇಶ ತ್ವದ್ಭಕ್ತಸ್ಯ ಮಮಾಚ್ಯುತ ॥82॥
ಯುಧಿಷ್ಠಿರ ಮಾಧವನೇ, ಅಚ್ಯುತನೇ, ಯಾವ ಪುಷ್ಪಗಳು ನಿನಗೆ ಅತ್ಯಂತ ಪ್ರಿಯವಾದವು? ಯಾವ ಪುಷ್ಪಗಳಲ್ಲಿ ನಿನ್ನ ಸನ್ನಿಧಾನವಿದೆ. ಅನಿಷ್ಟ ಪುಷ್ಪಗಳು ಯಾವುವು? ಇವೆಲ್ಲವನ್ನೂ ನನಗೆ ಬಿಡಿಸಿ ಹೇಳು.
ಶ್ರೀಭಗವಾನ್
ಶೃಣುಷ್ವಾವಹಿತೋ ರಾಜನ್ ಪುಷ್ಪಾಣಿ ಪ್ರಿಯಕೃಂತಿ ಮೇ ॥83॥
ಶ್ರೀಭಗವಾನ್ ರಾಜನೇ, ನನಗೆ ಪ್ರಿಯವಾದ ಪುಷ್ಪಗಳನ್ನು ತಿಳಿಸುತ್ತೇನೆ. ಅವ್ಯಗ್ರಚಿತ್ತನಾಗಿ ಕೇಳು.
ಕುಮುದಂ ಕರವೀರಂ ಚ ಚಣಕಂ ಚಂಪಕಂ ತಥಾ |
ಮಲ್ಲಿಕಾ ಜಾತಿಪುಷ್ಪಂ ಚ ನಂದ್ಯಾವರ್ತಂ ಚ ನಂದಿಕಮ್ ॥84॥
ಪಲಾಶಪುಷ್ಪಪತ್ರಾಣಿ ದೂರ್ವಾ ಭೃಂಗಕಮೇವ ಚ |
ವನಮಾಲಾ ಚ ರಾಜೇಂದ್ರ ಮತ್ಪ್ರಿಯಾಣಿ ವಿಶೇಷತಃ ॥85॥
ಕುಮುದ, ಕರವೀರ, ಚಣಕ, ಚಂಪಕ, ಮಲ್ಲಿಕಾ, ಜಾಜಿ, ನಂದ್ಯಾವರ್ತ, ನಂದಿಕ, ಮುತ್ತುಗದ ಹೂವು ಮತ್ತು ಅದರ ಎಲೆ, ದೂರ್ವಾ, ಭೃಂಗರಾಜ, ವನಮಾಲೆ - ಇವೆಲ್ಲವೂ ವಿಶೇಷವಾಗಿ ನನಗೆ ಪ್ರಿಯವಾದವುಗಳು.
ಸರ್ವೇಷಾಮಪಿ ಪುಷ್ಪಾಣಾಂ ಸಹಸ್ರಗುಣಮುತ್ಪಲಮ್ |
ತಸ್ಮಾತ್ ಪದ್ಮಂ ತಥಾ ರಾಜನ್ ಪದ್ಮಾತ್ತು ಶತಪತ್ರಕಮ್ ॥86॥
ಸಮಸ್ತ ಪುಷ್ಪಗಳಲ್ಲಿಯೂ ನೈದಿಲೆಯು ಸಾವಿರ ಪಾಲು ಹೆಚ್ಚು ಗುಣವುಳ್ಳದ್ದು. ಅದಕ್ಕಿಂತಲೂ ಪದ್ಮವು ಶ್ರೇಷ್ಠವಾದುದು. ಪದ್ಮಕ್ಕಿಂತಲೂ ಶತಪತ್ರಕಮಲವು ಶ್ರೇಷ್ಠವಾದುದು.
ತಸ್ಮಾತ್ ಸಹಸ್ರಪತ್ರಂ ತು ಪುಂಡರೀಕಂ ತತಃ ಪರಮ್ |
ಪುಂಡರೀಕಸಹಸ್ರಾತ್ತು ತುಲಸೀ ಗುಣತೋಽಧಿಕಾ ॥87॥
ಶತಪತ್ರಕಮಲಕ್ಕಿಂತಲೂ ಸಹಸ್ರಪತ್ರಕಮಲವು ಶ್ರೇಷ್ಠವಾದುದು. ಸಹಸ್ರಪತ್ರ ಕಮಲಕ್ಕಿಂತಲೂ ಶ್ವೇತಕಮಲ (ಪುಂಡರೀಕ) ಪುಷ್ಪವು

ಶ್ರೇಷ್ಠವಾದುದು. ಆದರೆ ಸಾವಿರ ಪುಂಡರೀಕಗಳಿಗಿಂತಲೂ ಗುಣದ ದೃಷ್ಟಿಯಿಂದ ತುಲಸಿಯೇ ಶ್ರೇಷ್ಠವಾದುದು.
ಬಕಪುಷ್ಪಂ ತತಃ ತಸ್ಮಾತ್ ಸೌವರ್ಣಂ ತು ತತೋಽಧಿಕಮ್ |
ಸೌವರ್ಣಾತ್ತು ಪ್ರಸೂನಾಚ್ಚ ಮತ್ಪ್ರಿಯಂ ನಾಸ್ತಿ ಪಾಂಡವ ॥88॥
ತುಲಸಿಗಿಂತಲೂ ಪಾದರೀ ಹೂವು, ಬಕುಲಪುಷ್ಪವು ಶ್ರೇಷ್ಠವಾದುದು. ಬಕುಲ ಪುಷ್ಪಕ್ಕಿಂತಲೂ ಸೌವರ್ಣಪುಷ್ಪವು ಶ್ರೇಷ್ಠವಾದುದು. ಸೌವರ್ಣಪುಷ್ಪಕ್ಕಿಂತಲೂ ಹೆಚ್ಚು ಪ್ರಿಯವಾಗಿರುವ ಯಾವ ಪುಷ್ಪವೂ ಇರುವುದಿಲ್ಲ.
ಪುಷ್ಪಾಲಾಭೇ ತುಲಸ್ಯಾಸ್ತು ಪತ್ರೈರ್ಮಾಮರ್ಚಯೇದ್ ಬುಧಃ |
ಪತ್ರಾಲಾಭೇ ತು ಶಾಖಾಭಿಃ ಶಾಖಾಲಾಭೇ ಶಿಫಾಫಲೈಃ ॥89॥
ಹೂವು ಸಿಕ್ಕದಿದ್ದಲ್ಲಿ ನನ್ನ ಭಕ್ತನಾದವನು ನನ್ನನ್ನು ತುಳಸಿ ಪತ್ರದಿಂದಲೇ ಪೂಜಿಸಬೇಕು. ತುಳಸಿ ಪತ್ರವು ಸಿಕ್ಕದಿದ್ದಲ್ಲಿ ತುಳಸಿಯ ಕಡ್ಡಿಯಿಂದ ಪೂಜಿಸಬೇಕು. ತುಳಸಿ ಕಡ್ಡಿಯೂ ಸಿಕ್ಕದಿದ್ದಲ್ಲಿ ತುಳಸಿಯ ಬೇರಿನ ತುಂಡುಗಳಿಂದ ಪೂಜಿಸಬೇಕು.
ಶಿಫಾಲಾಭೇ ಮೃದಾ ತತ್ರ ಭಕ್ತಿಮಾನರ್ಚಯೇತ ಮಾಮ್ ॥90॥
ತುಳಸಿಯ ಬೇರು ಸಿಕ್ಕದಿದ್ದಲ್ಲಿ ತುಳಸಿ ಗಿಡದ ಸ್ಥಳದಲ್ಲಿರುವ ಮಣ್ಣಿನಿಂದಾದರೂ ನನ್ನನ್ನು ಪೂಜಿಸಬೇಕು.
(ಯೇನ ಕೇನ ಪ್ರಕಾರೇಣ ತುಲಸೀದಲಪೂರ್ವಕೈಃ |
ಪುಷ್ಪೈಃ ಫಲೈರ್ವಾಽಪ್ಯನ್ನಾದ್ಯೈರ್ಮದಾರಾಧನಮುತ್ತಮಮ್ ॥91॥)
ಯಾವ ರೀತಿಯಿಂದಲಾದರೂ ತುಳಸೀದಳಗಳಿಂದ, ಪುಷ್ಪಗಳಿಂದ, ಫಲಗಳಿಂದ, ಅನ್ನಾದಿಗಳಿಂದ ನನ್ನ ಆರಾಧನೆಯು ಶ್ರೇಷ್ಠವೇ ಎನಿಸಿದೆ.
ವರ್ಜನೀಯಾನಿ ಪುಷ್ಪಾಣಿ ಶೃಣು ರಾಜನ್ ಸಮಾಹಿತಃ ॥92॥
ಇನ್ನು ಮುಂದೆ ನನ್ನ ಪೂಜೆಗೆ ಯೋಗ್ಯವಲ್ಲದ ಪುಷ್ಪಗಳನ್ನು ಹೇಳುತ್ತೇನೆ, ಕೇಳಿಸಿಕೊ.
ಕಿಂಕಿಣೀ ಮುನಿಪುಷ್ಪಂ ಚ ದುತ್ತೂರಂ ಪಾಟಲಂ ತಥಾ |
ತಥಾಽತಿಮುಕ್ತಕಂ ಚೈವ ಪುನ್ನಾಗಂ ನಕ್ತಮಾಲಿಕಾಮ್ ॥93॥
ಕಿಂಕಿಣೀ (ಗೆಜ್ಜೆ ಹೂವು), ಮುನಿಪುಷ್ಪ, ದುರ್ದೂರ (ದತ್ತೂರ- ಹೆಮ್ಮರದ ಹೂವು), ಪಾಟಲ (ಪಾದರಿ), ಅತಿಮುಕ್ತಕ (ತಾಳೆ), ಪುನ್ನಾಗ (ಸುರಗಿ ಹೂವು), ನಕ್ತಮಾಲಿಕ (ಹೊಂಗೆ ಹೂವು);
ಯೌಥಿಕಂ ಕ್ಷೀರಿಕಾಪುಷ್ಪಂ ನಿರ್ಗುಂಡೀ ಲಾಂಗುಲೀ ಜಪಾ |
ಕರ್ಣಿಕಾರಂ ತಥಾಽಶೋಕಂ ಶಾಲ್ಮಲೀಪುಷ್ಪಮೇವ ಚ ॥94॥
ಕಕುಭಾಃ ಕೋವಿದಾರಶ್ಚ ವೈಭೀತಕಮಥಾಪಿ ಚ |
ಕುರಂಟಕಪ್ರಸೂನಂ ಚ ಕಲ್ಪಕಂ ಲಾಂಗಲೀ ತಥಾ ॥95॥
ಅಂಕೋಲಂ ಗಿರಿಕರ್ಣೀ ಚ ನೀಲಾನ್ಯೇವ ಚ ಸರ್ವಶಃ |
ಏಕವರ್ಣಾನಿ ಚಾನ್ಯಾನಿ ಸರ್ವಾಣ್ಯೇವ ವಿವರ್ಜಯೇತ್ ॥96॥
ಯೌಥಿಕ, ಕ್ಷೀರಿಕ (ಹಾಲೆ ಹೂವು), ನಿರ್ಗುಂಡೀ (ಲಕ್ಕಿ ಹೂವು), ಲಾಂಗುಲೀ (ಕೋಳಿಕುಟುಕನ ಹೂವು), ಜಪ (ದಾಸವಾಳದ ಹೂವು), ಕರ್ಣಿಕಾರ, ಅಶೋಕ, ಸೇವಲಕ, ಶಾಲ್ಮಲೀ, ಕಕುಭಾ (ಕೆಂಪು ಮತ್ತೀ ಹೂವು), ಕೋವಿದಾರ (ಕೆಂಗಾಂಚಾಳ ಹೂವು), ವೈಭೀತಕ (ತಾರೆ ಹೂವು), ಕುರಂಟಕ, ಕಲ್ಪಕ (ಖರ್ಜೂರದ ಹೂವು), ಲಾಂಗಲಿ, ಅಂಕೋಲ, ಗಿರಿಕರ್ಣಿ (ಕಪ್ಪು ಚುಕ್ಕೆ ಇರುವ ಹೂವು), ನೀಲಿ ಬಣ್ಣದ ಪುಷ್ಪಗಳು, ಒಂದೇ ವರ್ಣದಲ್ಲಿ ಇರುವ ಒಂದೆಲೆಯ ಹೂವು - ಈ ಎಲ್ಲ ಪುಷ್ಪಗಳನ್ನು ನಿರಾಕರಿಸಬೇಕು.
ಅರ್ಕಪುಷ್ಪಾಣಿ ವರ್ಜ್ಯಾನಿ ಚಾರ್ಕಪತ್ರಸ್ಥಿತಾನಿ ಚ |
ವ್ಯಾಘಾತಪಿಚುಮಂದಾನಿ ಸರ್ವಾಣ್ಯೇವ ವಿವರ್ಜಯೇತ್ ॥97॥
ಎಕ್ಕದ ಹೂವುಗಳಿಂದ ನನ್ನನ್ನು ಪೂಜಿಸಬಾರದು. ಎಕ್ಕದ ಎಲೆಯ ಮೇಲಿಟ್ಟ ಹೂವುಗಳಿಂದಲೂ ನನ್ನನ್ನು ಪೂಜಿಸಬಾರದು. ಹಾಗೆಯೇ ಬೇವಿನ ಹೂವುಗಳಿಂದಲೂ ಪೂಜಿಸುವುದು ಯೋಗ್ಯವಲ್ಲ.
ಅನ್ಯೈಸ್ತು ಶುಕ್ಲಪತ್ರೈಶ್ಚ ಗಂಧವದ್ಭಿರ್ನರಾಧಿಪ |
ಅವರ್ಜ್ಯೈ ರ್ೃಸ್ತೈರ್ಯಥಾಲಾಭಂ ಮದ್ಭಕ್ತೋ ಮಾಂ ಸಮರ್ಚಯೇತ್ ॥
ಹೀಗೆ ನಿಷೇಧಿಸಲ್ಪಟ್ಟಿರುವ ಪುಷ್ಪಗಳನ್ನು ಬಿಟ್ಟು ಬಿಳಿಯ ಯಸಳುಗಳಿರುವ ಸುಗಂಧಮಯ ಹೂವುಗಳಿಂದ ನನ್ನನ್ನು ಭಕ್ತರು ಆರಾಧಿಸಬೇಕು.
ಯುಧಿಷ್ಠಿರಃ
ಕಥಂ ತ್ವಮರ್ಚನೀಯೋಽಸಿ ಮೂರ್ತಯಃ ಕೀದೃಶಾಸ್ತು ತೇ |
ವೈಖಾನಸಾಃ ಕಥಂ ಬ್ರೂಯುಃ ಕಥಂ ವಾ ಪಾಂಚರಾತ್ರಿಕಾಃ ॥99॥
ಯುಧಿಷ್ಠಿರ ಮಾಧವನೇ, ನಿನ್ನನ್ನು ಹೇಗೆ ಪೂಜಿಸಬೇಕು? ನಿನ್ನ ಮೂರ್ತಿಗಳು ಯಾವುವು? ಈ ವಿಷಯದಲ್ಲಿ ವೈಖಾನಸ ಆಗಮಕ್ಕೆ ಸಂಬಂಧಿಸಿದವರು ಏನು ಹೇಳುತ್ತಾರೆ? ಪಾಂಚರಾತ್ರಾಗಮಕ್ಕೆ ಸಂಬಂಧಿಸಿದ ಜ್ಞಾನಿಗಳು ಏನು ಹೇಳುತ್ತಾರೆ?
ಶ್ರೀಭಗವಾನ್
ಶೃಣು ಪಾಂಡವ ತತ್ಸರ್ವಮರ್ಚನಾಕ್ರಮಮಾತ್ಮನಃ |
ಸ್ಥಂಡಿಲೇ ಪದ್ಮಕಂ ಕೃತ್ವಾ ಚಾಷ್ಟಪತ್ರಂ ಸಕರ್ಣಿಕಮ್ ॥100॥
ಶ್ರೀಭಗವಾನ್ ಪಾಂಡವನೇ, ನನ್ನ ಅರ್ಚಾಕ್ರಮವನ್ನು ಸಮಗ್ರವಾಗಿ ಹೇಳುತ್ತೇನೆ, ಕೇಳಿಸಿಕೊ. ಸಮವಾಗಿರುವ ವೇದಿಕೆಯಲ್ಲಿ ಕರ್ಣಿಕೆಗಳಿಂದ ಯುಕ್ತವಾದ ಅಷ್ಟದಳ ಪದ್ಮವನ್ನು ರಚಿಸಬೇಕು.
ಅಷ್ಟಾಕ್ಷರವಿಧಾನೇನ ಹ್ಯಥವಾ ದ್ವಾದಶಾಕ್ಷರೈಃ |

ವೈದಿಕೈರಥವಾ ಮಂತ್ರೈರ್ಮಮ ಸೂಕ್ತೇನ ವಾ ಪುನಃ ॥101॥
ಅಷ್ಟಾಕ್ಷರ ಮಂತ್ರದಿಂದಾಗಲಿ, ದ್ವಾದಶಾಕ್ಷರ ಮಂತ್ರದಿಂದಾಗಲಿ, ವೈದಿಕ ಮಂತ್ರದಿಂದಾಗಲಿ, ಪುರುಷಸೂಕ್ತದಿಂದಾಗಲಿ ನನ್ನನ್ನು ಆವಾಹಿಸಬೇಕು.
ಸ್ಥಾಪಿತಂ ಮಾಂ ತತಸ್ತಸ್ಮಿನ್ನರ್ಚಯಿತ್ವಾ ವಿಚಕ್ಷಣಃ |
ಪುರುಷಂ ಚ ತತಃ ಸತ್ಯಮಚ್ಯುತಂ ಚ ಯುಧಿಷ್ಠಿರ ॥102॥
ಅನಿರುದ್ಧಂ ಚ ಮಾಂ ಪ್ರಾಹುರ್ವೈಖಾನಸವಿದೋ ಜನಾಃ |
ಅನ್ಯೇ ತ್ವೇವಂ ವಿಜಾನಂತಿ ಮಾಂ ರಾಜನ್ ಪಾಂಚರಾತ್ರಿಕಾಃ ॥103॥
ವಾಸುದೇವಂ ಚ ರಾಜೇಂದ್ರ ಸಂಕರ್ಷಣಮಥಾಪಿ ವಾ |
ಪ್ರದ್ಯುಮ್ನಮನಿರುದ್ಧಂ ಚ ಚತುರ್ಮೂರ್ತಿಂ ಪ್ರಚಕ್ಷತೇ ॥104॥
ರಾಜೇಂದ್ರನೇ, ವೈಖಾನಸಾಗಮವನ್ನು ತಿಳಿದವರು ನನ್ನನ್ನು ಪುರುಷ, ಸತ್ಯ, ಅಚ್ಯುತ, ಅನಿರುದ್ಧ ಎಂಬ ಹೆಸರುಗಳಿಂದ ಆರಾಧಿಸುತ್ತಾರೆ. ಪಾಂಚರಾತ್ರಾಗಮವನ್ನು ತಿಳಿದವರು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಚತುರ್ವಿಧ ರೂಪಗಳನ್ನು ಆರಾಧಿಸುತ್ತಾರೆ.
ಏತಾಶ್ಚಾನ್ಯಾಶ್ಚ ರಾಜೇಂದ್ರ ಸಂಜ್ಞಾಭೇದೇನ ಮೂರ್ತಯಃ |
ವಿದ್ಧ್ಯನರ್ಥಾಂತರಾ ಏವಂ ಮಾಮೇವಂ ಚಾರ್ಚಯೇದ್ ಬುಧಃ ॥
ಅತ್ಯಂತಭೇದರಹಿತಂ ಗುಣಪೂರ್ಣಂ ಸದೈವ ಹಿ ॥106॥
ಇವುಗಳಲ್ಲದೇ ಸಂಜ್ಞಾಭೇದದಿಂದ ನನ್ನ ಇನ್ನೂ ಅನೇಕ ಮೂರ್ತಿಗಳಿವೆ. ಹೆಸರುಗಳು ಬೇರೆಯಾದರೂ ಆರಾಧನೆಯನ್ನು ಹೊಂದುವವನು ನಾನೇ ಆಗಿದ್ದೇನೆ. ಎಲ್ಲ ರೂಪಗಳಿಂದಲೂ ಭೇದರಹಿತನಾಗಿ, ಗುಣಪೂರ್ಣನಾಗಿ ಯಾವಾಗಲೂ ನಾನೇ ಆರಾಧ್ಯನಾಗಿದ್ದೇನೆ.
ಯುಧಿಷ್ಠಿರಃ
ತ್ವದ್ಭಕ್ತಾಃ ಕೀದೃಶಾ ದೇವ ಕಾನಿ ತೇಷಾಂ ವ್ರತಾನಿ ಚ |
ಏತತ್ ಕಥಯ ದೇವೇಶ ತ್ವದ್ಭಕ್ತಸ್ಯ ಮಮಾಚ್ಯುತ ॥107॥
ಯುಧಿಷ್ಠಿರ ಅಚ್ಯುತನೇ, ನಿನ್ನ ಭಕ್ತರು ಎಂತಹವರು? ಅವರ ವ್ರತನಿಯಮಗಳು ಯಾವುವು? ಭಕ್ತನಾದ ನನಗೆ ಈ ವಿಷಯವನ್ನು ಕೃಪೆ ಮಾಡಿ ಹೇಳು.
ಶ್ರೀಭಗವಾನ್
ಅನನ್ಯದೇವತಾಭಕ್ತಾ ಯೇ ಮದ್ಭಕ್ತಜನಪ್ರಿಯಾಃ |
ಮಾಮೇವ ಶರಣಂ ಪ್ರಾಪ್ತಾಸ್ತೇ ಮದ್ಭಕ್ತಾಃ ಪ್ರಕೀರ್ತಿತಾಃ ॥108॥
ಶ್ರೀಭಗವಾನ್ ಯಾರು ಇತರ ದೇವತೆಗಳಿಗೆ ಭಕ್ತರಾಗಿರದೆ ಅನನ್ಯವಾದ ಭಕ್ತಿಯಿಂದ ನನ್ನನ್ನೇ ಶರಣು ಹೊಂದಿ ನನ್ನ ಭಕ್ತರೇ ಆಗಿರುತ್ತಾರೋ, ನನ್ನ ಭಕ್ತರಿಗೆ ಪ್ರೀತಿಪಾತ್ರರಾಗಿರುತ್ತಾರೋ ಅವರೇ ನನ್ನ ಭಕ್ತರೆಂದು ತಿಳಿ.
ಸ್ವರ್ಗ್ಯಾಣ್ಯಪಿ ಯಶಸ್ಯಾನಿ ಮತ್ಪ್ರಿಯಾಣಿ ವಿಶೇಷತಃ |
ಮದ್ಭಕ್ತಃ ಪಾಂಡವಶ್ರೇಷ್ಠ ವ್ರತಾನೀಮಾನಿ ಧಾರಯೇತ್ ॥109॥
ಸ್ವರ್ಗವನ್ನು ನೀಡುವ, ಕೀರ್ತಿಯನ್ನು ಕೊಡುವ, ವಿಶೇಷವಾಗಿ ನನಗೆ ಅತ್ಯಂತ ಪ್ರಿಯವಾದ ವ್ರತವನ್ನು ನನ್ನ ಭಕ್ತರು ಅನುಷ್ಠಾನ ಮಾಡಬೇಕು.
ನಾನ್ಯದಾಚ್ಛಾದಯೇದ್ ವಸ್ತ್ರಂ ಮದ್ಭಕ್ತೋ ಜಲತಾರಣೇ |
ಸ್ವಸ್ಥಸ್ತು ನ ದಿವಾ ಸ್ವಪ್ಯೇನ್ಮಧುಮಾಂಸಾನಿ ವರ್ಜಯೇತ್ ॥110॥
ನನ್ನ ಭಕ್ತರು ನೀರನ್ನು ದಾಟುವಾಗ ಒಂದೇ ವಸ್ತ್ರವನ್ನು ಧರಿಸಬೇಕೇ ಹೊರತು ಎರಡನೆಯ ವಸ್ತ್ರವನ್ನು ಧರಿಸಬಾರದು. ಹಗಲಿನಲ್ಲಿ ನಿದ್ರಿಸಬಾರದು. ಮಧು ಮಾಂಸಗಳನ್ನು ವರ್ಜಿಸಬೇಕು.
ಪ್ರದಕ್ಷಿಣಂ ವ್ರಜೇದ್ ವಿಪ್ರಾನ್ ಗಾಮಶ್ವತ್ಥಂ ಹುತಾಶನಮ್ |
ನ ಧಾವೇತ್ ಪತಿತೇ ವರ್ಷೇ ನಾಗ್ರಭಿಕ್ಷಾಂ ಚ ಲೋಪಯೇತ್ ॥111॥
ದಾರಿಯಲ್ಲಿ ಪ್ರಯಾಣ ಮಾಡುವಾಗ ದಾರಿಯಲ್ಲಿ ಸಿಗುವ ಬ್ರಾಹ್ಮಣ, ಗೋವು, ಅಶ್ವತ್ಥ ವೃಕ್ಷ, ಅಗ್ನಿ ಇವುಗಳನ್ನು ಬಲಕ್ಕೆ ಇಟ್ಟುಕೊಂಡು ಪ್ರಯಾಣ ಮಾಡಬೇಕು. ಮಳೆ ಬರುತ್ತಿರುವಾಗ ಓಡಿ ಹೋಗಬಾರದು. ಭಿಕ್ಷುಗಳು ಆಗಮಿಸಿದಾಗ ಅವರಿಗೆ ಮೊದಲು ಭಿಕ್ಷೆಯನ್ನು ನೀಡಿ ನಂತರ ಊಟ ಮಾಡಬೇಕು.
ಪ್ರತ್ಯಕ್ಷಲವಣಂ ನಾದ್ಯಾತ್ ಶೋಭಾಂಜನಕರಂಜನೌ |
ಗ್ರಾಸಮುಷ್ಟಿಂ ಗವೇ ದದ್ಯಾದ್ ಧಾನ್ಯಾಮ್ಲಂ ಚೈವ ವರ್ಜಯೇತ್ ॥
ಭೋಜನ ಪಾತ್ರೆಗೆ ನೇರವಾಗಿ ಉಪ್ಪನ್ನು ಹಾಕಿಕೊಂಡು ಊಟ ಮಾಡಬಾರದು. ನುಗ್ಗೆಕಾಯಿಯನ್ನು ತಿನ್ನಬಾರದು.
ಹುಳಿಗಂಜಿಯನ್ನು ಕುಡಿಯಬಾರದು. ಹಸುವಿಗೆ ಪ್ರತಿದಿನವೂ ಮುಷ್ಟಿಯಷ್ಟು ಆಹಾರವನ್ನು ತಿನ್ನಿಸಬೇಕು.
ತಥಾ ಪರ್ಯುಷಿತಂ ಚಾಪಿ ಪಕ್ವಂ ಪರಗೃಹಾಗತಮ್ |
ನಿವೇದಿತಂ ಚ ಯದ್ ದ್ರವ್ಯಂ ತತ್ ಪ್ರಯತ್ನೇನ ವರ್ಜಯೇತ್ ॥
ಇತರ ಮನೆಗಳಿಂದ ತಂದ ಪಕ್ವಾನ್ನವನ್ನಾಗಲಿ, ಹಳಸಿದ ಅನ್ನವನ್ನಾಗಲಿ, ಇನ್ನೊಬ್ಬರಿಗೆ ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ ಅನ್ನವನ್ನಾಗಲಿ ಪ್ರಯತ್ನ ಪೂರ್ವಕವಾಗಿ ನಿರಾಕರಿಸಬೇಕು.
ವಿಭೀತಕಕರಂಜಾನಾಂ ಛಾಯಾಂ ದೂರಾತ್ ತು ವರ್ಜಯೇತ್ |

ವಿಪ್ರದೇವಪರೀವಾದಂ ನ ವದೇತ್ ಪೀಡಿತೋऽಪಿ ಸನ್ ॥114॥
ತಾಳೆಗಿಡದ ನೆರಳಿನಲ್ಲಾಗಲಿ, ಹೊಂಗೆ ಮರದ ನೆರಳಿನಲ್ಲಾಗಲಿ ಕುಳಿತು ಕೊಳ್ಳಬಾರದು. ಎಷ್ಟೇ ಕಷ್ಟವಿದ್ದರೂ ಬ್ರಾಹ್ಮಣರನ್ನಾಗಲಿ, ದೇವತೆಗಳನ್ನಾಗಲಿ ನಿಂದಿಸಬಾರದು. ಅವರಿಗೆ ಪೀಡೆಯನ್ನು ನೀಡಬಾರದು.
ಸಾತ್ವಿಕಾ ರಾಜಸಾಶ್ಚಾಪಿ ತಾಮಸಾಶ್ಚಾಪಿ ಪಾಂಡವ |
ಮಾಮರ್ಚಯಂತಿ ಮದ್ಭಕ್ತಾಸ್ತೇಷಾಮೀದೃಗ್ವಿಧಾ ಗತಿಃ ॥115॥
ಸಾತ್ವಿಕರು, ರಾಜಸರು, ತಾಮಸರು ಎಂದು ಮೂರುವಿಧವಾದ ಭಕ್ತರೂ ಇದ್ದಾರೆ. ಅವರು ನನ್ನನ್ನು ಆರಾಧಿಸಿ ಹೊಂದುವ ಗತಿಗಳನ್ನು ಕೇಳಿಸಿಕೊ. ವಿಷಯಪದಾರ್ಥಗಳ ಅಭಿಲಾಷೆಯನ್ನು ಹೊಂದಿದ ವ್ಯಕ್ತಿಗಳು ರಾಜಸರು ಎನಿಸಿಕೊಳ್ಳುತ್ತಾರೆ. ಕ್ರೋಧ, ಹೊಟ್ಟೆಕಿಚ್ಚು ಮೊದಲಾದ ದೋಷವುಳ್ಳವರು ತಾಮಸರು ಎಂದು ಕರೆಸಿಕೊಳ್ಳುತ್ತಾರೆ.
ತಾಮಸಾಸ್ತಿಮಿರಂ ಯಾಂತಿ ರಾಜಸಾ ರಜ ಏವ ತತ್ |
ಸಾತ್ವಿಕಾಃ ಸತ್ವಸಂಪನ್ನಾಃ ಸತ್ವಮೇವ ಪ್ರಯಾಂತಿ ತೇ ॥116॥
ತಾಮಸರು ನರಕಕ್ಕೆ ಹೋಗುತ್ತಾರೆ. ರಾಜಸರು ರಜೋಗುಣವನ್ನೇ ಹೊಂದುತ್ತಾರೆ. ಸಾತ್ವಿಕರು ಸತ್ವಗುಣಸಂಪನ್ನರಾಗಿ ಸತ್ವಗುಣವನ್ನೇ ಹೊಂದುತ್ತಾರೆ.
ಯೇ ಸಿದ್ಧಾಃ ಸಂತಿ ಸಾಂಖ್ಯೇನ ಯೋಗಸತ್ವಬಲೇನ ಚ |
ನಭಸ್ಯಾದಿತ್ಯಚಂದ್ರಾಭ್ಯಾಂ ಪಶ್ಯಂತಿ ಪದವಿಸ್ತರಮ್ ॥117॥
ಸಿದ್ಧರು ಯಥಾರ್ಥಜ್ಞಾನವನ್ನು ಹೊಂದಿ ಯೋಗಸತ್ವಬಲದಿಂದ ಕೂಡಿದವರು. ಆಕಾಶದಲ್ಲಿ ಸೂರ್ಯ-ಚಂದ್ರರನ್ನು, ಭಗವಂತನ ವ್ಯಾಪ್ತಿಯನ್ನು ನೋಡುವ ವ್ಯಕ್ತಿಗಳು ಸಾತ್ವಿಕರೆನಿಸುತ್ತಾರೆ.
ಏಕಸ್ತಂಭೇ ನವದ್ವಾರೇ ತ್ರಿಸ್ಥೂಣೇ ಪಂಚಧಾತುಕೇ |
ಏತಸ್ಮಿನ್ ದೇಹನಗರೇ ರಾಜಸಸ್ತು ಸದಾ ಭವೇತ್ ॥118॥
ಪ್ರಕೃತಿ ಎಂಬ ಮೂಲಸ್ತಂಭದಿಂದ ಕೂಡಿದ, ನವದ್ವಾರಗಳು ಇರುವ, ಸತ್ವ-ರಜಸ್-ತಮೋಗುಣಗಳೆಂಬ ಸ್ಥೂಣಗಳಿಂದ ಕೂಡಿರುವ, ಪಂಚಧಾತುಗಳಿಂದ ಕೂಡಿರುವ ಈ ದೇಹವೆಂಬ ನಗರದಲ್ಲಿ ರಾಜಸರು ಯಾವಾಗಲೂ ಉತ್ಪನ್ನರಾಗಿರುತ್ತಾರೆ.
ಉದಿತೇ ಸವಿತರ್ಯಾಪ್ಯಕ್ರಿಯಾಯುಕ್ತಸ್ಯ ಧೀಮತಃ |
ಚತುರ್ವೇದವಿದಶ್ಚಾಪಿ ದೇಹೇ ಷಟ್ ವೃಷಲಾಃ ಸ್ಮೃತಾಃ ॥119॥
ಸೂರ್ಯೋದಯದಿಂದ ಆರಂಭಿಸಿ ನಿತ್ಯವೂ ಕ್ರಿಯಾಶೀಲರಾಗಿರುವ, ಧೀಮಂತರಾದ, ಚತುರ್ವೇದಪಾರಂಗತನಾದ ಬ್ರಾಹ್ಮಣನ ಶರೀರದಲ್ಲಿ ಆರು ಮಂದಿ ವೃಷಲರೂ (ಶೂದ್ರರು) ಇದ್ದಾರೆ ಎಂದು ತಿಳಿಯಬೇಕು.
ಕ್ಷತ್ರಿಯಾಃ ಸಪ್ತ ವಿಜ್ಞೇಯಾ ವೈಶ್ಯಾಸ್ತ್ವಷ್ಟೌ ಪ್ರಕೀರ್ತಿತಾಃ |
ನಿಯತಾಃ ಪಾಂಡವಶ್ರೇಷ್ಠ ಶೂದ್ರಾಣಾಮೇಕವಿಂಶತಿಃ ॥120॥
ಹಾಗೆಯೇ ಈ ಶರೀರದಲ್ಲಿ ಏಳು ಮಂದಿ ಕ್ಷತ್ರಿಯರು, ಎಂಟು ಮಂದಿ ವೈಶ್ಯರು, ಇಪ್ಪತ್ತೊಂದು ಮಂದಿ ಶೂದ್ರರು ನಿಯಮೇನ ಇರುತ್ತಾರೆಂದು ತಿಳಿಯಬೇಕು.
ಕಾಮಃ ಕ್ರೋಧಶ್ಚ ಲೋಭಶ್ಚ ಮೋಹಶ್ಚ ಮದ ಏವ ಚ |
ಮಹಾಮೋಹಶ್ಚ ಇತ್ಯೇತೇ ದೇಹೇ ಷಟ್ ವೃಷಲಾಃ ಸ್ಮೃತಾಃ ॥121॥
ಕಾಮ, ಕ್ರೋಧ, ಲೋಭ, ಮೋಹ, ಮದ, ಮಹಾಮೋಹ ಎಂಬ ಈ ಆರನ್ನು ಶರೀರದಲ್ಲಿರುವ ವೃಷಲರು ಎಂದು ತಿಳಿಯಬೇಕು.
ಗರ್ವಃ ಸ್ತಂಭೋ ಹ್ಯಹಂಕಾರ ಈರ್ಷ್ಯಾ ಚ ದ್ರೋಹ ಏವ ಚ |
ಪಾರುಷ್ಯಂ ಕ್ರೂರತಾ ಚೇತಿ ಸಪ್ತೈತೇ ಕ್ಷತ್ರಿಯಾಃ ಸ್ಮೃತಾಃ ॥122॥
ಗರ್ವ, ಸ್ತಂಭ, ಅಹಂಕಾರ, ಈರ್ಷ್ಯೆ, ದ್ರೋಹ, ಪಾರುಷ್ಯ, ಕ್ರೌರ್ಯ - ಈ ಏಳನ್ನು ಶರೀರದಲ್ಲಿರುವ ಕ್ಷತ್ರಿಯರೆಂದು ತಿಳಿಯಬೇಕು.
ತೀಕ್ಷ್ಣತಾ ನಿಕೃತಿರ್ಮಾಯಾ ಶಾಠ್ಯಂ ಡಂಭೋ ಹ್ಯನಾರ್ಜವಮ್ |
ಪೈಶುನ್ಯಮನೃತಂ ಚೈವ ವೈಶ್ಯಾಸ್ತ್ವಷ್ಟೌ ಪ್ರಕೀರ್ತಿತಾಃ ॥123॥
ತೀಕ್ಷ್ಣತೆ, ಕಪಟ, ಮಾಯೆ, ಶಠತ್ವ, ಡಂಭ, ಕುಟಿಲತೆ, ಚಾಡಿಕೋರತನ, ಅಸತ್ಯ ಭಾಷಣ - ಈ ಎಂಟನ್ನು ಶರೀರದಲ್ಲಿರುವ ವೈಶ್ಯರೆಂದು ತಿಳಿಯಬೇಕು.
ತೃಷ್ಣಾ ಬುಭುಕ್ಷಾ ನಿದ್ರಾ ಚ ಹ್ಯಾಲಸ್ಯಂ ಚಾಘೃಣಾऽದಯಾ |
ಆಧಿಶ್ಚಾಪಿ ವಿಷಾದಶ್ಚ ಪ್ರಮಾದೋ ಹೀನಸತ್ವತಾ ॥124॥
ಭಯಂ ವಿಕ್ಲವತಾ ಜಾಡ್ಯಂ ಪಾಪಕಂ ಮನ್ಯುರೇವ ಚ |
ಆಶಾ ಚಾಶ್ರದ್ದಧಾನತ್ವಮನವಸ್ಥಾಪ್ಯಮಂತ್ರಣಮ್ ॥125॥
ಅಶೌಚಂ ಮಲಿನತ್ವಂ ಚ ಶೂದ್ರಾ ಹ್ಯೇತೇ ಪ್ರಕೀರ್ತಿತಾಃ ॥126॥
ತೃಷ್ಣೆ (ದಾಹ), ಯಾವಾಗಲೂ ತಿನ್ನುವ ಆಸೆ, ನಿದ್ರೆ, ಆಲಸ್ಯ, ನಿರ್ದಯತೆ, ಕ್ರೌರ್ಯ, ಮಾನಸಿಕ ಚಿಂತೆ, ವಿಷಾದ, ಪ್ರಮಾದ, ಸತ್ವಹೀನತೆ, ಭಯ, ಗಾಬರಿಗೊಳ್ಳುವಿಕೆ, ಜಡತ್ವ, ಪಾಪಕರ್ಮಾನುಷ್ಠಾನ, ನಿತ್ಯವೂ ಕ್ರೋಧ, ಮಿತಿಮೀರಿದ ಆಸೆ, ಅಶ್ರದ್ಧೆ, ಅವ್ಯವಸ್ಥೆ, ಅಜಿತೇಂದ್ರಿಯತ್ವ, ಅಪಾವಿತ್ರ್ಯ, ಮಾಲಿನ್ಯ - ಈ ಇಪ್ಪತ್ತೊಂದನ್ನು ಶರೀರದಲ್ಲಿರುವ ಶೂದ್ರರೆಂದು ಭಾವಿಸಬೇಕು.
ಯಸ್ಮಿನ್ನೇತೇ ನ ದೃಶ್ಯಂತೇ ಸ ವೈ ಬ್ರಾಹ್ಮಣ ಉಚ್ಯತೇ ॥127॥
ಯಾವ ವ್ಯಕ್ತಿಯಲ್ಲಿ ಇವುಗಳಿರುವುದಿಲ್ಲವೋ ಅವನೇ ಬ್ರಾಹ್ಮಣ ಎಂದು ಕರೆಸಿಕೊಳ್ಳುತ್ತಾನೆ.
ಯೇಷು ಯೇಷು ಹಿ ಭಾವೇಷು ಯತ್ಕಾಲಂ ವರ್ತತೇ ದ್ವಿಜಃ |
ತತ್ತತ್ಕಾಲಂ ಸ ವಿಜ್ಞೇಯೋ ಬ್ರಾಹ್ಮಣೋ ಜ್ಞಾನದುರ್ಬಲಃ ॥128॥

ಆದುದರಿಂದ ಕಾಮ-ಕ್ರೋಧಾದಿ ವೃಷಲಭಾವಗಳು ಎಲ್ಲಿಯ ತನಕ ಬ್ರಾಹ್ಮಣನಲ್ಲಿರುತ್ತವೋ ಅಲ್ಲಿಯ ತನಕ ಬ್ರಾಹ್ಮಣನು ಶೂದ್ರನೇ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ಕ್ಷತ್ರಿಯರಲ್ಲಿರುವ ಆಯಾ ದುರ್ಗುಣಗಳು ನಾಶವಾದಾಗ, ಕ್ಷತ್ರಿಯೋಚಿತವಾದ ಗುಣಗಳು ಬಂದಾಗ ಮಾತ್ರ ಕ್ಷತ್ರಿಯರು ಎಂದು ಕರೆಸಿಕೊಳ್ಳುತ್ತಾರೆ.

ಪ್ರಾಣಾನಾಯಮ್ಯ ಯತ್ಕಾಲೇ ಯೋ ಮಾಂ ಚಾಪಿ ವಿಚಿಂತಯೇತ್ |
ತತ್ಕಾಲೇ ವೈ ದ್ವಿಜೋ ಜ್ಞೇಯಃ ಶೇಷಕಾಲೇ ಹ್ಯಥೇತರಃ ॥129॥

ಯಾರು ಪ್ರಾಣಾಯಾಮಗಳನ್ನು ಆಚರಿಸಿ, ನನ್ನನ್ನು ಯಾವ ಕಾಲದಲ್ಲಿ ಧ್ಯಾನಿಸುತ್ತಾರೋ ಅದೇ ಕಾಲವು ಬ್ರಾಹ್ಮಣನಿಗೆ ದ್ವಿಜ ಎಂದು ಹೇಳಿಸಿಕೊಳ್ಳುವ ಕಾಲ. ನನ್ನನ್ನು ಧ್ಯಾನಿಸದೆ ಇರುವ ಕಾಲ ಅವನು ಬ್ರಾಹ್ಮಣನಾಗದಿರುವ ಕಾಲ ಎಂದು ತಿಳಿಯಬೇಕು.

ತಸ್ಮಾತ್ತು ಸಾತ್ವಿಕೋ ಭೂತ್ವಾ ಶುಚಿಃ ಕ್ರೋಧವಿವರ್ಜಿತಃ |
ಮಾಮರ್ಚಯೇತ್ತು ಸತತಂ ಮತ್ಪ್ರಿಯತ್ವಂ ಯದೀಚ್ಛತಿ ॥130॥

ಆದ್ದರಿಂದ ಸಾತ್ವಿಕನಾಗಿ, ಶುಚಿಯಾಗಿ, ಕ್ರೋಧವನ್ನು ಬಿಟ್ಟು, ನನ್ನ ಪ್ರೀತಿಯನ್ನು ಬಯಸುವ ವ್ಯಕ್ತಿಯು ಯಾವಾಗಲೂ ನನ್ನ ಆರಾಧನೆಯಲ್ಲಿಯೇ ತತ್ಪರನಾಗಿರಬೇಕು.

ಅಲೋಲಜಿಹ್ವಃ ಸಮುಪಸ್ಥಿತೋ ಧೃತಿಂ
ನಿಧಾಯ ಚಕ್ಷುರ್ಯುಗಮಾತ್ರಮೇವ ಚ |
ಮನಶ್ಚ ವಾಚಂ ಚ ನಿಗೃಹ್ಯ ಚಂಚಲಂ
ಭಯಾನ್ನಿವೃತ್ತೋ ಮಮ ಭಕ್ತ ಉಚ್ಯತೇ ॥131॥

ಯಾರಿಗೆ ನಾಲಿಗೆಯ ಚಾಪಲ್ಯವಿಲ್ಲವೋ, ಯಾವನು ಮಹಾಧೈರ್ಯಶಾಲಿಯೋ, ಯಾವನು ಚಂಚಲವಾದ ಮನಸ್ಸನ್ನು, ವಾಣಿಯನ್ನು ನಿಗ್ರಹಿಸಿಕೊಂಡಿದ್ದಾನೋ, ಎರಡು ಕಣ್ಣುಗಳ ದೃಷ್ಟಿಯನ್ನೂ ಜೊತೆಗೂಡಿಸಿ ನನ್ನನ್ನೇ ಧ್ಯಾನ ಮಾಡುತ್ತಾನೋ, ನಿರ್ಭೀತನಾಗಿರುತ್ತಾನೋ ಅವನೇ ನನ್ನ ಭಕ್ತ.

ಈದೃಶಾ ಧ್ಯಾನಿನೋ ಯೇ ತು ಬ್ರಾಹ್ಮಣಾ ನಿಯತೇಂದ್ರಿಯಾಃ |
ತೇಷಾಂ ಶ್ರಾದ್ಧೇಷು ತೃಪ್ಯಂತಿ ತೇನ ತೃಪ್ತಾಃ ಪಿತಾಮಹಾಃ ॥132॥

ಇಂತಹ ಅಧ್ಯಾತ್ಮಜ್ಞಾನದಿಂದ ಕೂಡಿದ, ಜಿತೇಂದ್ರಿಯರಾದ ಬ್ರಾಹ್ಮಣರು ಶ್ರಾದ್ಧಗಳಲ್ಲಿ ಭೋಜನ ಮಾಡಿ ತೃಪ್ತರಾದರೆ ಕರ್ತೃವಿನ ಪಿತೃ-ಪಿತಾಮಹರು ತೃಪ್ತರಾಗುತ್ತಾರೆ.

ಧರ್ಮೋ ಜಯತಿ ನಾಧರ್ಮಃ ಸತ್ಯಂ ಜಯತಿ ನಾನೃತಮ್ |
ಕ್ಷಮಾ ಜಯತಿ ನ ಕ್ರೋಧಃ ಕ್ಷಮಾವಾನ್ ಬ್ರಾಹ್ಮಣೋ ಭವೇತ್ ॥

ಧರ್ಮವೇ ಜಯಿಸುತ್ತದೆ, ಅಧರ್ಮಕ್ಕೆ ಎಂದಿಗೂ ಜಯವಿಲ್ಲ. ಸತ್ಯವೇ ಜಯಿಸುತ್ತದೆ, ಅಸತ್ಯಕ್ಕೆ ಜಯವಿಲ್ಲ. ಕ್ಷಮೆಯೇ ಜಯಿಸುತ್ತದೆ, ಕ್ರೋಧಕ್ಕೆ ಜಯವಿಲ್ಲ. ಆದ್ದರಿಂದ ಬ್ರಾಹ್ಮಣನು ಯಾವಾಗಲೂ ಕ್ಷಮಾವಂತನಾಗಿರಬೇಕು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಭಕ್ತಲಕ್ಷಣಕಥನಂ ನಾಮ
ಚತುರಧಿಕಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *

## ನೂರ ಐದನೆಯ ಅಧ್ಯಾಯ

ಕೃಷ್ಣನು ಯುಧಿಷ್ಠಿರನನ್ನು ಕುರಿತು ಹತ್ತು ಪ್ರಕಾರವಾದ ಕಪಿಲಗೋವುಗಳ ವಿಭಾಗವನ್ನು ಹೇಳುವ ಮೂಲಕ ಅದರ ದಾನದ ಮಹತ್ವವನ್ನು ಬಣ್ಣಿಸಿದುದು.

ವೈಶಂಪಾಯನಃ

ದಾನಪುಣ್ಯಫಲಂ ಶ್ರುತ್ವಾ ತಪಃ ಪುಣ್ಯಫಲಾನಿ ಚ |
ಧರ್ಮಪುತ್ರಃ ಪ್ರಹೃಷ್ಟಾತ್ಮಾ ಕೇಶವಂ ಪುನರಬ್ರವೀತ್ ॥1॥

ವೈಶಂಪಾಯನ ಜನಮೇಜಯನೇ, ದಾನಗಳ ಮತ್ತು ತಪಸ್ಸಿನ ಪುಣ್ಯದ ಫಲವನ್ನು ಕೃಷ್ಣನ ಮುಖದಿಂದ ಕೇಳಿಸಿಕೊಂಡು ಸಂತುಷ್ಟನಾದ ಧರ್ಮರಾಜನು ಕೇಶವನನ್ನು ಕುರಿತು ಪುನಃ ಹೀಗೆ ಹೇಳಿದನು.

ಯುಧಿಷ್ಠಿರಃ

ಯಾ ಚೈಷಾ ಕಪಿಲಾ ದೇವ ಪೂರ್ವಮುತ್ಪಾದಿತಾ ವಿಭೋ |
ಹೋಮಧೇನುಃ ಸದಾ ಪುಣ್ಯಾ ಚತುರ್ವಕ್ತ್ರೇಣ ಮಾಧವ ॥2॥

ಯುಧಿಷ್ಠಿರ ಮಾಧವನೇ, ಅಗ್ನಿಹೋತ್ರದ ಸಿದ್ಧಿಗಾಗಿ ಚತುರ್ಮುಖ ಬ್ರಹ್ಮನು ಕಪಿಲಾ ಎಂಬ ಪುಣ್ಯಸ್ವರೂಪಳಾದ ಹೋಮಧೇನುವನ್ನು ಹಿಂದೆ ಸೃಷ್ಟಿಸಿದನು.

ಸಾ ಕಥಂ ಬ್ರಾಹ್ಮಣೇಭ್ಯೋ ಹಿ ದೇಯಾ ಕಸ್ಮಿನ್ ದಿನೇಽಪಿ ವಾ |
ಕೀದೃಶಾಯ ಚ ವಿಪ್ರಾಯ ದಾತವ್ಯಾ ಪುಣ್ಯಲಕ್ಷಣಾ ॥3॥

ಅಂತಹ ಕಪಿಲ ಧೇನುವನ್ನು ಬ್ರಾಹ್ಮಣರಿಗೆ ಹೇಗೆ ದಾನ ಮಾಡಬೇಕು? ಯಾವ ದಿವಸದಲ್ಲಿ ನೀಡಬೇಕು? ಪುಣ್ಯಲಕ್ಷಣಗಳುಳ್ಳ ಆ ಧೇನುವನ್ನು ಎಂತಹ ಬ್ರಾಹ್ಮಣನಿಗೆ ದಾನ ಮಾಡಬೇಕು?

ಕತಿ ವಾ ಕಪಿಲಾಃ ಪ್ರೋಕ್ತಾಃ ಸ್ವಯಮೇವ ಸ್ವಯಂಭುವಾ |
ಕೈರ್ವಾ ದೇಯಾಶ್ಚ ತಾ ದೇವ ಶ್ರೋತುಮಿಚ್ಛಾಮಿ ತತ್ತ್ವತಃ ॥4॥

ಕಪಿಲಧೇನುಗಳಲ್ಲಿ ಎಷ್ಟು ಪ್ರಭೇದಗಳಿವೆ ಎಂದು ಚತುರ್ಮುಖ ಬ್ರಹ್ಮನು ತಿಳಿಸಿದ್ದಾನೆ? ಕಪಿಲಧೇನುವನ್ನು ದಾನ ಮಾಡುವವನು ಹೇಗಿರಬೇಕು? ಇದನ್ನು ಯಥಾವತ್ತಾಗಿ ನಿನ್ನಿಂದ ತಿಳಿಯಬಯಸುವೆ.
ವೈಶಂಪಾಯನಃ
ಏವಮುಕ್ತೋ ಹೃಷೀಕೇಶೋ ಧರ್ಮಪುತ್ರೇಣ ಸಂಸದಿ |
ಅಬ್ರುವೀತ್ ಕಪಿಲಾಸಂಖ್ಯಾಂ ತಾಸಾಂ ಮಾಹಾತ್ಮ್ಯಮೇವ ಚ ॥5॥
ವೈಶಂಪಾಯನ ಜನಮೇಜಯನೇ, ರಾಜಸಭೆಯಲ್ಲಿ ಧರ್ಮಪುತ್ರನಾದ ಹೃಷೀಕೇಶನನ್ನು ಹೀಗೆ ಪ್ರಶ್ನಿಸಲು, ಕಪಿಲಾಧೇನುಗಳ ಸಂಖ್ಯೆಯನ್ನು, ಅವುಗಳ ಮಹಿಮೆಯನ್ನು ಹೇಳಿದನು.
ಶ್ರೀಭಗವಾನ್
ಶೃಣು ಪಾಂಡವ ತತ್ತ್ವೇನ ಪವಿತ್ರಂ ಪಾವನಂ ಪರಮ್ |
ಯಚ್ಛ್ರುತ್ವಾ ಪಾಪಕರ್ಮಾऽಪಿ ನರಃ ಪಾಪೈಃ ಪ್ರಮುಚ್ಯತೇ ॥6॥
ಶ್ರೀಭಗವಾನ್ ಪಾಂಡವನೇ, ಪವಿತ್ರವೂ, ಪಾವನವೂ ಶ್ರೇಷ್ಠವೂ ಆದ ಕಪಿಲಧೇನುವಿನ ಇತಿಹಾಸವನ್ನು ಹೇಳುತ್ತೇನೆ. ಇದರ ಮಹತ್ವವನ್ನು ಕೇಳುವುದರಿಂದ ಪಾಪಕರ್ಮ ಮಾಡಿದ ಮನುಷ್ಯನು ಸಕಲ ಪಾಪಕರ್ಮಗಳಿಂದ ಮುಕ್ತನಾಗುತ್ತಾನೆ.
ಅಗ್ನಿಮಧ್ಯೋದ್ಭವಾಂ ದಿವ್ಯಾಮಗ್ನಿಜ್ವಾಲಾಸಮಪ್ರಭಾಮ್ |
ಅಗ್ನಿಜ್ವಾಲೋಜ್ಜ್ವಲಚ್ಛೃಂಗೀಂ ಪ್ರದೀಪ್ತಾಂಗಾರಲೋಚನಾಮ್ ॥7॥
ಪೂರ್ವಕಾಲದಲ್ಲಿ ಚತುರ್ಮುಖಬ್ರಹ್ಮನು ಅಗ್ನಿಹೋತ್ರದ ನಿಮಿತ್ತದಿಂದ ಸಮಸ್ತವಾದ ತೇಜಸ್ಸುಗಳನ್ನು ಒಂದು ಕಡೆ ಸಂಗ್ರಹಿಸಿ ಅಗ್ನಿಯಂತೆ ಜ್ವಲಿಸುವ, ಬೆಳಗುವ, ಬೆಂಕಿಯಂತೆ ಕಣ್ಣುಗಳುಳ್ಳ, ಅಗ್ನಿಜ್ವಾಲೆಯಂತೆ ಶೃಂಗಗಳಿಂದ ಶೋಭಿಸುವ,
ಅಗ್ನಿಪುಚ್ಛಾಮಗ್ನಿಖುರಾಮ್ ಅಗ್ನಿರೋಮಪ್ರಭಾನ್ವಿತಾಮ್ |
ತಾಮಾಗ್ನೇಯೀಮಗ್ನಿಜಿಹ್ವಾಮಗ್ನಿಗ್ರೀವಾಂ ಜ್ವಲತ್ಪ್ರಭಾಮ್ ॥8॥
ಅಗ್ನಿಯಂತೆ ಬೆಳಗುವ ಪುಚ್ಛವುಳ್ಳ, ಅಗ್ನಿಯಂತೆ ಬೆಳಗುವ ಗೊರಸುಗಳುಳ್ಳ, ಅಗ್ನಿಯಂತೆ ರೋಮಗಳ ಪ್ರಭೆಯಿಂದ ಕೂಡಿದ, ಅಗ್ನಿಯಂತೆ ನಾಲಿಗೆಯುಳ್ಳ, ಅಗ್ನಿಯಂತೆ ಕುತ್ತಿಗೆಯುಳ್ಳ, ಅಗ್ನಿಯಂತೆ ಜ್ವಲಿಸುವ ಕಾಂತಿಯಿಂದ ಕೂಡಿದ ಗೋವನ್ನು ನಿರ್ಮಿಸಿದನು.

ಭುಂಜತೇ ಕಪಿಲಾಂ ಯೇ ತು ಶೂದ್ರಾ ಲೋಭೇನ ಮೋಹಿತಾಃ |
ಪತಿತಾಂಸ್ತಾನ್ ವಿಜಾನೀಯಾತ್ ಚಂಡಾಲಸದೃಶಾ ಹಿ ತೇ ॥9॥
ಇಂತಹ ಕಪಿಲಗೋವನ್ನು ಲೋಭದಿಂದ ಮೋಹಿತರಾಗಿ ಯಾವ ಶೂದ್ರರು ವಧೆ ಮಾಡಿ ತಿನ್ನುತ್ತಾರೋ ಅವರನ್ನು ಪತಿತರನ್ನಾಗಿಯೂ, ಚಂಡಾಲ ಸದೃಶರನ್ನಾಗಿ ತಿಳಿಯಬೇಕು.
ನ ತೇಷಾಂ ಬ್ರಾಹ್ಮಣಃ ಕಶ್ಚಿದ್ ಗೃಹೇ ಕುರ್ಯಾತ್ ಪ್ರತಿಗ್ರಹಮ್ |
ದೂರಾಚ್ಚ ಪರಿಹರ್ತವ್ಯಾ ಮಹಾಪಾತಕಿನೋ ಹಿ ತೇ ॥10॥
ಬ್ರಾಹ್ಮಣನು ಇಂತಹ ಗೋವನ್ನು ವಧೆ ಮಾಡಿದ ವ್ಯಕ್ತಿಗಳ ಮನೆಯಲ್ಲಿ ದಾನವನ್ನು ಸ್ವೀಕರಿಸಬಾರದು. ಅವರನ್ನು ದೂರದಲ್ಲೇ ನಿರಾಕರಿಸಬೇಕು. ಗೋಹತ್ಯೆ ಮಾಡಿದವರು ಮಹಾಪಾತಕಿಗಳು ಎಂದು ಕರೆಸಿಕೊಳ್ಳುತ್ತಾರೆ.
ಸರ್ವಕಾಲಂ ಹಿ ತೇ ಸರ್ವೈರ್ವರ್ಜಿತಾಃ ಪಿತೃದೈವತೈಃ |
ತೇ ಸದಾ ಹ್ಯಪ್ರತಿಗ್ರಾಹ್ಯಾ ಹ್ಯಸಂಭಾಷ್ಯಾಶ್ಚ ಪಾಪಿನಃ ॥11॥
ಎಲ್ಲ ಕಾಲಗಳಲ್ಲಿಯೂ ಗೋಪಾತಕಿಗಳು ಎಲ್ಲ ಪಿತೃದೇವತೆಗಳಿಂದ ವರ್ಜಿತರಾಗಿದ್ದಾರೆ. ಅವರ ಬಳಿ ದಾನವನ್ನು ಸ್ವೀಕರಿಸಬಾರದು, ಅವರ ಬಳಿ ಮಾತುಗಳನ್ನೂ ಆಡಬಾರದು.
ಪಿಬಂತಿ ಕಪಿಲಾಂ ಯಾವತ್ ತಾವತ್ ತೇಷಾಂ ಪಿತಾಮಹಾಃ |
ಅಮೇಧ್ಯಮುಪಭುಂಜಂತಿ ಭೂಮ್ಯಾಂ ವೈ ಶ್ವಸೃಗಾಲವತ್ ॥12॥
ಯಾವ ಶೂದ್ರರು ಕಪಿಲಧೇನುವಿನ ಹಾಲನ್ನು ಪಾನ ಮಾಡುತ್ತಾರೋ ಅವರ ಪಿತೃಗಳು ನಾಯಿ, ನರಿಗಳಂತೆ ಭೂಮಿಯಲ್ಲಿ ಅಮೇಧ್ಯವನ್ನೇ ತಿನ್ನುವವರಾಗುತ್ತಾರೆ.
ಕಪಿಲಾಯಾ ಘೃತಂ ಕ್ಷೀರಂ ದಧಿ ತಕ್ರಮಥಾಪಿ ವಾ |
ಯೇ ಶೂದ್ರಾ ಉಪಭುಂಜಂತಿ ತೇಷಾಂ ಗತಿಮಿಮಾಂ ಶೃಣು ॥13॥
ಯಾವ ಶೂದ್ರರು ಕಪಿಲಧೇನುವಿನ ತುಪ್ಪವನ್ನಾಗಲಿ, ಹಾಲನ್ನಾಗಲಿ, ಮೊಸರನ್ನಾಗಲಿ, ಮಜ್ಜಿಗೆಯನ್ನಾಗಲಿ ಸ್ವೀಕರಿಸುತ್ತಾರೋ ಅವರಿಗೆ ದೊರಕುವ ಗತಿಗಳ ಬಗ್ಗೆ ಕೇಳಿಸಿಕೊ.
ಕಪಿಲೋಪಜೀವೀ ಶೂದ್ರಸ್ತು ಮೃತೋ ಗಚ್ಛತಿ ರೌರವಮ್ |
ಕ್ಲಿಶ್ಯತೇ ರೌರವೇ ಘೋರೇ ವರ್ಷಕೋಟಿಶತಂ ವಸನ್ ॥14॥
ಕಪಿಲಧೇನುವಿನಿಂದ ಜೀವಿಕೆಯನ್ನು ನಡೆಸುವ ಶೂದ್ರನು ಸತ್ತ ಬಳಿಕ ರೌರವ ನರಕಕ್ಕೆ ಸೇರುತ್ತಾನೆ. ಕೋಟಿ ವರ್ಷಗಳ ಕಾಲ ರೌರವ ನರಕದಲ್ಲಿ ದುಃಖಕ್ಕೀಡಾಗುತ್ತಾನೆ.
ರೌರವಾಚ್ಚ ಪರಿಭ್ರಷ್ಟೋ ವಿಷ್ಠಾಯಾಂ ಜಾಯತೇ ಕ್ರಿಮಿಃ ॥15॥
ಬಳಿಕ ರೌರವ ನರಕದಿಂದ ಹೊರಬಂದವನಾಗಿ ಅಮೇಧ್ಯದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ.
ವಿಷ್ಠಾಗರ್ತೇಷು ಸಂವಿಷ್ಟೋ ದುರ್ಗಂಧೇಷು ಸಹಸ್ರಶಃ |
ತತ್ರ ತತ್ರೋಪಜಾಯೇತ ನೋತ್ತಾರಂ ತತ್ರ ವಿಂದತಿ ॥16॥
ಅಮೇಧ್ಯದ ಹೊಂಡಗಳಲ್ಲಿ ದೂಡಲ್ಪಟ್ಟವನಾಗಿ, ಸಾವಿರಾರು ದುರ್ಗಂಧಗಳಿಂದ ಅಭಿಭೂತನಾಗಿ, ಅಲ್ಲಿಯೇ

ಹೊರಳಾಡುತ್ತಿರುತ್ತಾನೆ. ಅಲ್ಲಿಂದ ಉದ್ಧಾರವನ್ನು ಹೊಂದುವುದೇ ಇಲ್ಲ.
ಬ್ರಾಹ್ಮಣಶ್ಚೈವ ಯಸ್ತೇಷಾಂ ಗೃಹೇ ಕುರ್ಯಾತ್ ಪ್ರತಿಗ್ರಹಮ್ |
ತತಃ ಪ್ರಭೃತಿ ತಸ್ಯಾಪಿ ಪಿತರಃ ಸ್ಯುರಮೇಧ್ಯಪಾಃ ॥17॥
ಯಾವ ಬ್ರಾಹ್ಮಣನು ಕಪಿಲಗೋವನ್ನು ಜೀವಿಸಿಕೊಂಡು ಬದುಕುವ ಶೂದ್ರನ ಮನೆಯಲ್ಲಿ ದಾನವನ್ನು ಸ್ವೀಕರಿಸುತ್ತಾನೋ ಅಂದಿನಿಂದ ಆ ಬ್ರಾಹ್ಮಣರ ಪಿತೃಗಳು ಅಮೇಧ್ಯವನ್ನು ಉಣ್ಣಲು ಆರಂಭಿಸುತ್ತಾರೆ.
ನ ತೇನ ಸಾರ್ಧಂ ಸಂಭಾಷ್ಯೇನ್ನ ಚಾಪ್ಯೇಕಾಸನಂ ವ್ರಜೇತ್ |
ಸ ನಿತ್ಯಂ ವರ್ಜನೀಯೋ ಹಿ ದೂರಾತ್ತು ಬ್ರಾಹ್ಮಣಾಧಮಃ ॥18॥
ಅಂತಹ ಬ್ರಾಹ್ಮಣನ ಜೊತೆಗೆ ಪಿತೃಗಳು ಮಾತುಗಳನ್ನಾಡುವುದಿಲ್ಲ. ಅವನ ಆಸನವನ್ನು ಸ್ವೀಕರಿಸುವುದಿಲ್ಲ. ಆ ಬ್ರಾಹ್ಮಣನು ನಿತ್ಯವೂ ಉತ್ತಮರಿಂದ ತ್ಯಜಿಸಲ್ಪಡುವವನಾಗುತ್ತಾನೆ.
ಯಸ್ತೇನ ಸಹ ಸಂಭಾಷೇದ್ ಏಕಶಯ್ಯಾಂ ವ್ರಜೇತ ವಾ |
ಪ್ರಾಜಾಪತ್ಯಂ ಚರೇತ್ ಕೃಚ್ಛ್ರಂ ಸ ಚ ತೇನ ವಿಶುದ್ಧ್ಯತಿ ॥19॥
ಯಾವ ವ್ಯಕ್ತಿಯು ಕಪಿಲಧೇನುವಿನ ಜೀವಿಕೆಯನ್ನು ನಡೆಸುವ ಶೂದ್ರನ ಮನೆಯಲ್ಲಿ ಪ್ರತಿಗ್ರಹವನ್ನು ಮಾಡಿದ್ದಾನೋ ಅವನ ಜೊತೆಗೆ ಮಾತನಾಡಬಾರದು. ಅವನ ಹಾಸಿಗೆಯಲ್ಲಿ ಮಲಗಬಾರದು. ಒಂದು ವೇಳೆ ತಿಳಿಯದೆ ಮಾಡಿದಲ್ಲಿ ಪ್ರಾಜಾಪತ್ಯ ವ್ರತವನ್ನು, ಕೃಚ್ಛ್ರವ್ರತವನ್ನು ಆಚರಿಸಬೇಕು. ಇದರಿಂದ ಶುದ್ಧಿಯನ್ನು ಹೊಂದುತ್ತಾನೆ.
ಕಪಿಲೋಪಜೀವಿನಃ ಶೂದ್ರಾದ್ ಯಃ ಕರೋತಿ ಪ್ರತಿಗ್ರಹಮ್ |
ಪ್ರಾಯಶ್ಚಿತ್ತಂ ಭವೇತ್ ತಸ್ಯ ವಿಪ್ರಸ್ಯೈತನ್ನ ಸಂಶಯಃ ॥20॥
ಯಾವ ವ್ಯಕ್ತಿಯು ಕಪಿಲಧೇನುವನ್ನು ಅವಲಂಬಿಸಿಕೊಂಡು ಜೀವಿಕೆಯನ್ನು ನಡೆಸುವ ಶೂದ್ರನಿಂದ ಪ್ರತಿಗ್ರಹವನ್ನು ಮಾಡುತ್ತಾನೋ ಅವನಿಗೆ ಇದೇ ಪ್ರಾಯಶ್ಚಿತ್ತವು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಬ್ರಹ್ಮಕೂರ್ಚಂ ಪ್ರಕುರ್ವೀತ ಚಾಂದ್ರಾಯಣಮಥಾಪಿ ವಾ |
ಮುಚ್ಯತೇ ಕಿಲ್ಬಿಷಾತ್ ತಸ್ಮಾದ್ ಏತೇನ ಬ್ರಾಹ್ಮಣೋ ಹಿ ಸಃ ॥21॥
ಬ್ರಹ್ಮಕೂರ್ಚ ಎಂಬ ವ್ರತವನ್ನು ಮಾಡಬೇಕು. ಅರ್ಥಾತ್ ಪ್ರಾಜಾಪತ್ಯ ವ್ರತವನ್ನು ಮಾಡಬೇಕು. ಚಾಂದ್ರಾಯಣ ವ್ರತವನ್ನು ಮಾಡಬೇಕು. ಇದರಿಂದ ಬ್ರಾಹ್ಮಣನು ಆ ಪಾಪದಿಂದ ಮುಕ್ತನಾಗುತ್ತಾನೆ.
ಕಪಿಲಾ ಹ್ಯಗ್ನಿಹೋತ್ರಾರ್ಥಂ ಯಜ್ಞಾರ್ಥೇ ಚ ಸ್ವಯಂಭುವಾ |
ಸರ್ವತಸ್ತೇಜ ಉದ್ಧೃತ್ಯ ಬ್ರಹ್ಮಣಾ ನಿರ್ಮಿತಾ ಪುರಾ ॥22॥
ಕಪಿಲಧೇನುವು ಅಗ್ನಿಹೋತ್ರದ ಸಲುವಾಗಿ ಯಜ್ಞದಲ್ಲಿ ಚತುರ್ಮುಖ ಬ್ರಹ್ಮನಿಂದ ಸೃಷ್ಟವಾಗಿದೆ. ಚತುರ್ಮುಖ ಬ್ರಹ್ಮನು ಎಲ್ಲ ಕಡೆಯ ತೇಜಸ್ಸನ್ನು ಸಂಗ್ರಹಿಸಿ ಕಪಿಲ ಧೇನುವನ್ನು ಹಿಂದೆ ನಿರ್ಮಿಸಿರುತ್ತಾನೆ.
ಪವಿತ್ರಂ ಚ ಪವಿತ್ರಾಣಾಂ ಮಂಗಲಾನಾಂ ಚ ಮಂಗಲಮ್ |
ಪುಣ್ಯಾನಾಂ ಪರಮಂ ಪುಣ್ಯಂ ಕಪಿಲಾ ಪಾಂಡುನಂದನ ॥23॥
ಕಪಿಲಧೇನುವು ಪವಿತ್ರ ವಸ್ತುಗಳಿಗೂ ಪರಮಪವಿತ್ರವಾದುದು. ಮಂಗಳ ವಸ್ತುಗಳಲ್ಲಿಯೂ ಮಂಗಳಕರವಾದುದು. ಪುಣ್ಯಗಳೆಲ್ಲದಕ್ಕೂ ಪರಮ ಪುಣ್ಯಸ್ವರೂಪವು.
ತಪಸಾಂ ತಪ ಏವಾಗ್ರ್ಯಂ ವ್ರತಾನಾಂ ವ್ರತಮುತ್ತಮಮ್ |
ದಾನಾನಾಂ ಪರಮಂ ದಾನಂ ನಿಧಾನಂ ಹ್ಯೇತದಕ್ಷಯಮ್ ॥24॥
ತಪಸ್ಸುಗಳಲ್ಲಿ ಶ್ರೇಷ್ಠವಾದ ತಪಸ್ಸು, ವ್ರತಗಳಲ್ಲಿ ಉತ್ತಮವಾದ ವ್ರತ, ದಾನಗಳಲ್ಲಿ ಉತ್ತಮವಾದ ದಾನ ಎಲ್ಲದರ ಅಕ್ಷಯಕ್ಕೂ ಈ ಕಪಿಲಧೇನುವೇ ಕಾರಣವಾಗಿದೆ.
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ |
ಪವಿತ್ರಾಣಿ ಚ ರಮ್ಯಾಣಿ ಸರ್ವಲೋಕೇಷು ಪಾಂಡವ ॥25॥
ತೇಭ್ಯಸ್ತೇಜಃ ಸಮುದ್ಧೃತ್ಯ ಬ್ರಹ್ಮಣಾ ಲೋಕಕರ್ತೃಣಾ |
ಲೋಕನಿಸ್ತರಣಾಯ್ಯೆವ ನಿರ್ಮಿತಾ ಕಪಿಲಾ ಸ್ವಯಮ್ ॥26॥
ಭೂಮಂಡಲದಲ್ಲಿ ಯಾವ ತೀರ್ಥಗಳಿವೆಯೋ, ಪುಣ್ಯಕ್ಷೇತ್ರಗಳಿವೆಯೋ, ಪವಿತ್ರವಾದ ಯಾವ ವಸ್ತುಗಳಿವೆಯೋ ಆ ಎಲ್ಲ ವಸ್ತುಗಳ ತೇಜಸ್ಸುಗಳನ್ನುದ್ಧರಿಸಿ ಚತುರ್ಮುಖ ಬ್ರಹ್ಮನು ಸಮಸ್ತ ಜಗತ್ತಿನ ದುಃಖಪರಿಹಾರಕ್ಕಾಗಿ ಕಪಿಲಧೇನುವನ್ನು ನಿರ್ಮಿಸಿರುತ್ತಾನೆ.
ಸರ್ವತೇಜೋಮಯೀ ಹ್ಯೇವಂ ಕಪಿಲಾ ಪಾಂಡುನಂದನ |
ಸದಾಽಮೃತವಹಾ ಮೇಧ್ಯಾ ಶುಚಿಃ ಪಾವನಮುತ್ತಮಮ್ ॥27॥
ಪಾಂಡುತನಯನೇ, ಸಮಸ್ತ ತೇಜಸ್ಸುಗಳಿಂದ ತುಂಬಿದ ಕಪಿಲಧೇನುವು ನಿತ್ಯವೂ ಅಮೃತವನ್ನು ಕೊಡುವಂತಹ ಧೇನುವಾಗಿದೆ. ಅದರ ಕ್ಷೀರವು ಸ್ವೀಕಾರಾರ್ಹವಾದ, ಉತ್ತಮವಾದ, ಶುಚಿಯಾದ ಪದಾರ್ಥವಾಗಿದೆ.
ಕ್ಷೀರೇಣ ಕಪಿಲಾಯಾಸ್ತು ದಧ್ನಾ ಚ ಸಘೃತೇನ ವಾ |
ಹೋತವ್ಯಾನ್ಯಗ್ನಿಹೋತ್ರಾಣಿ ಸಾಯಂ ಪ್ರಾತರ್ದ್ವಿಜಾತಿಭಿಃ ॥28॥
ಕಪಿಲಾಯಾ ಘೃತೇನಾಪಿ ದಧ್ನಾ ಕ್ಷೀರೇಣ ವಾ ಪುನಃ |
ಜುಹ್ವತೇ ಯೇಽಗ್ನಿಹೋತ್ರಾಣಿ ಬ್ರಾಹ್ಮಣಾ ವಿಧಿವತ್ ಪ್ರಭೋ ॥29॥
ಕಪಿಲಧೇನುವಿನ ಹಾಲಿನಿಂದಾಗಲಿ, ಮೊಸರಿನಿಂದಾಗಲಿ, ತುಪ್ಪದಿಂದಾಗಲಿ, ಸಾಯಂಕಾಲ, ಪ್ರಾತಃಕಾಲಗಳಲ್ಲಿ ವಿಧಿಬದ್ಧವಾಗಿ ಬ್ರಾಹ್ಮಣರು ಅಗ್ನಿಹೋತ್ರವನ್ನು ಆಚರಿಸಬೇಕು.

ಪೂಜಯಂತ್ಯತಿಥೀಂಶ್ಚೈವ ಪರಾಂ ಭಕ್ತಿಮುಪಾಗತಾಃ |
ಶೂದ್ರಾನ್ನವಿರತಾ ನಿತ್ಯಂ ಡಂಭಾನೃತವಿವರ್ಜಿತಾಃ ॥30॥
ಕಪಿಲಧೇನುವಿನ ಹಾಲಿನ ಪದಾರ್ಥಗಳಿಂದ ಅತಿಥಿ-ಅಭ್ಯಾಗತರನ್ನು ಭಕ್ತಿಯಿಂದ ಸತ್ಕರಿಸಬೇಕು. ಕಪಿಲಧೇನುವನ್ನು ಪೋಷಿಸುವವರು ಶೂದ್ರಾನ್ನವನ್ನು ಬಿಟ್ಟಿರಬೇಕು. ಜಂಬ, ಸುಳ್ಳುಗಳಿಗೆ ಎಂದೂ ತುತ್ತಾಗಬಾರದು.
ಯೇ ಯಾಂತ್ಯಾದಿತ್ಯಸಂಕಾಶೈರ್ವಿಮಾನೈರ್ದ್ವಿಜಸತ್ತಮಾಃ |
ಸೂರ್ಯಮಂಡಲಮಧ್ಯೇನ ಬ್ರಹ್ಮಲೋಕಮನುತ್ತಮಮ್ ॥31॥
ಇಂತಹ ಬ್ರಾಹ್ಮಣರು ಆದಿತ್ಯಸದೃಶವಾದ ವಿಮಾನದಲ್ಲಿ ಕುಳಿತು, ಸೂರ್ಯ ಮಂಡಲದ ಮಧ್ಯದಿಂದ ಶ್ರೇಷ್ಠವಾದ ಬ್ರಹ್ಮಲೋಕಕ್ಕೆ ಹೋಗುತ್ತಾರೆ.
ಬ್ರಹ್ಮಣೋ ಭವನೇ ದಿವ್ಯೇ ಕಾಮಗಾಃ ಕಾಮರೂಪಿಣಃ |
ಬ್ರಹ್ಮಣಾ ಪೂಜ್ಯಮಾನಾಸ್ತು ಮೋದಂತೇ ಕಲ್ಪಮಕ್ಷಯಮ್ ॥32॥
ಬ್ರಹ್ಮನ ಆಜ್ಞೆಯಂತೆ, ಬ್ರಹ್ಮನ ಭವನದಲ್ಲಿ ಇಚ್ಛಾರೂಪವಾಗಿ ಸಂಚರಿಸುತ್ತಾ ಚತುರ್ಮುಖ ಬ್ರಹ್ಮನಿಂದ ಪೂಜಿಸಲ್ಪಡುತ್ತಾ, ಒಂದು ಕಲ್ಪಗಳ ಕಾಲ ಸುಖವಾಗಿ ವಿಹರಿಸುತ್ತಾರೆ.
ಏವಂ ಹಿ ಕಪಿಲಾ ರಾಜನ್ ಪುಣ್ಯಾ ಮಂತ್ರಾಮೃತಾರಣಿಃ |
ಆದಾವೇವಾಗ್ನಿಮಧ್ಯಾತ್ತು ಮೈತ್ರೇಯೀ ಬ್ರಹ್ಮನಿರ್ಮಿತಾ ॥33॥
ಈ ರೀತಿಯಾಗಿ ಕಪಿಲಧೇನುವು ಬಹಳ ಪುಣ್ಯಪ್ರದವಾದುದು. ಚತುರ್ಮುಖ ಬ್ರಹ್ಮನಿಂದ ಸೃಷ್ಟಿಯ ಆರಂಭದಲ್ಲಿ ಅಗ್ನಿಯ ಮಧ್ಯದಿಂದ ನಿರ್ಮಿತವಾದುದು.
ಶೃಂಗಾಗ್ರೇ ಕಪಿಲಾಯಾಸ್ತು ಸರ್ವತೀರ್ಥಾನಿ ಪಾಂಡವ |
ಬ್ರಹ್ಮಣೋ ಹಿ ನಿಯೋಗೇನ ನಿವಸಂತಿ ದಿನೇ ದಿನೇ ॥34॥
ಕಪಿಲಧೇನುವಿನ ಕೊಂಬುಗಳ ತುದಿಯಲ್ಲಿ ಸಕಲ ತೀರ್ಥಗಳು ಯಾವಾಗಲೂ ಸನ್ನಿಹಿತವಾಗಿರುತ್ತವೆ. ಚತುರ್ಮುಖ ಬ್ರಹ್ಮನ ಆದೇಶದಂತೆ ಪ್ರತಿದಿನವೂ ಸಮಸ್ತ ತೀರ್ಥಗಳು ಕೊಂಬಿನ ತುದಿಯಲ್ಲಿ ವಾಸಿಸುತ್ತಿರುತ್ತವೆ.
ಪ್ರಾತರುತ್ಥಾಯ ಯೋ ಮರ್ತ್ಯಃ ಕಪಿಲಾಶೃಂಗಮಸ್ತಕಾತ್ |
ಚ್ಯುತಾ ಆಪಸ್ತು ಶೀರ್ಷೇಣ ಧಾರಯೇತ್ ಪ್ರಯತಃ ಶುಚಿಃ ॥35॥
ಸ ತೇನ ಪುಣ್ಯತೀರ್ಥೇನ ಸಹಸಾ ದಗ್ಧಕಿಲ್ಬಿಷಃ |
ವರ್ಷತ್ರಯಕೃತಂ ಪಾಪಂ ಪ್ರದಹತ್ಯಗ್ನಿವತ್ ತೃಣಮ್ ॥36॥
ಪ್ರಾತಃಕಾಲದಲ್ಲಿ ಎದ್ದು ಯಾವ ಮನುಷ್ಯನು ಕಪಿಲಾಧೇನುವಿನ ಕೊಂಬಿನ ತುದಿಯಿಂದ ಹರಿದುಬರುವ ನೀರನ್ನು ತನ್ನ ತಲೆಯಲ್ಲಿ ಧರಿಸುತ್ತಾನೋ, ಶುಚಿಯಾಗಿ ಧರಿಸಿದ ಆ ಪುಣ್ಯತೀರ್ಥದಿಂದ ಸಮಸ್ತ ಪಾಪಗಳನ್ನು ಕೂಡಲೇ ಕಳೆದುಕೊಳ್ಳುತ್ತಾನೆ. ಬೆಂಕಿಯು ಹುಲ್ಲನ್ನು ಸುಡುವಂತೆ ಮೂರು ವರ್ಷಗಳ ಪಾಪವು ಕಪಿಲಾಧೇನುವಿನ ಕೊಂಬಿನಿಂದ ಬಂದ ನೀರು ಪರಿಹರಿಸುತ್ತದೆ.
ಮೂತ್ರೇಣ ಕಪಿಲಾಯಾಸ್ತು ಯಸ್ತು ಪ್ರಾತರುಪಸ್ಪೃಶೇತ್ |
ಸ್ನಾನೇನ ತೇನ ಪುಣ್ಯೇನ ನಷ್ಟಪಾಪಃ ಸ ಮಾನವಃ ॥37॥
ಕಪಿಲಾಧೇನುವಿನ ಮೂತ್ರದಿಂದ ಯಾವನು ಪ್ರಾತಃಕಾಲದಲ್ಲಿ ಸ್ನಾನವನ್ನು ಆಚರಿಸುತ್ತಾನೋ ಆ ಸ್ನಾನದಿಂದ ಲಭಿಸುವ ಪುಣ್ಯದಿಂದ ಮಾನವನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.
ತ್ರಿಂಶದ್ವರ್ಷಕೃತಾತ್ ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥38॥
ಮೂವತ್ತು ವರ್ಷಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಪ್ರಾತರುತ್ಥಾಯ ಯೋ ಭಕ್ತ್ಯಾ ಪ್ರಯಚ್ಛೇತ್ ತೃಣಮುಷ್ಟಿಕಮ್ |
ತಸ್ಯ ನಶ್ಯತಿ ತತ್ ಪಾಪಂ ತ್ರಿಂಶದ್ರಾತ್ರಕೃತಂ ನೃಪ ॥39॥
ರಾಜನೇ, ಪ್ರಾತಃಕಾಲದಲ್ಲಿ ಯಾವನು ಭಕ್ತಿಯಿಂದ ಎದ್ದು ಒಂದು ಮುಷ್ಟಿ ಹುಲ್ಲನ್ನು ಕಪಿಲಾ ಧೇನುವಿಗೆ ನೀಡುತ್ತಾನೋ ಅವನು ಮೂವತ್ತು ರಾತ್ರಿಗಳಲ್ಲಿ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುತ್ತಾನೆ.
ಪ್ರಾತರುತ್ಥಾಯ ಮದ್ಭಕ್ತ್ಯಾ ಕುರ್ಯಾದ್ ಯಸ್ತಾಂ ಪ್ರದಕ್ಷಿಣಮ್ |
ಪ್ರದಕ್ಷಿಣೀಕೃತಾ ತೇನ ಪೃಥಿವೀ ನಾತ್ರ ಸಂಶಯಃ ॥40॥
ಪ್ರಾತಃಕಾಲದಲ್ಲಿ ಎದ್ದು ಭಗವದ್ಭಕ್ತಿಯಿಂದ ಯಾವಾತನು ಕಪಿಲಾಧೇನುವಿಗೆ ಪ್ರದಕ್ಷಿಣೆ ಮಾಡುತ್ತಾನೋ ಅವನು ಭೂಮಂಡಲವನ್ನೇ ಪ್ರದಕ್ಷಿಣೆ ಮಾಡಿದಂತೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಪ್ರದಕ್ಷಿಣೇನ ಚೈಕೇನ ಶ್ರದ್ಧಾಯುಕ್ತಸ್ಯ ಪಾಂಡವ |
ದಶರಾತ್ರಕೃತಂ ಪಾಪಂ ತಸ್ಯ ತನ್ನಶ್ಯತಿ ಧ್ರುವಮ್ ॥41॥
ಕಪಿಲಾಧೇನುವಿಗೆ ಶ್ರದ್ಧೆಯಿಂದ ಮಾಡಿದ ಒಂದು ಪ್ರದಕ್ಷಿಣೆ, ನಮಸ್ಕಾರವು ನಿಶ್ಚಯವಾಗಿಯೂ ಹತ್ತು ರಾತ್ರಿಗಳಲ್ಲಿ ಮಾಡಿದ ಪಾಪವನ್ನು ನಾಶಮಾಡುತ್ತದೆ.
ಕಪಿಲಾಪಂಚಗವ್ಯೇನ ಯಃ ಸ್ನಾಯಾತ್ತು ಶುಚಿರ್ನರಃ |
ಸ ಗಂಗಾದ್ಯೇಷು ತೀರ್ಥೇಷು ಸ್ನಾತೋ ಭವತಿ ಪಾಂಡವ ॥42॥
ಕಪಿಲಾಧೇನುವಿನಿಂದ ಮಾಡಿದ ಪಂಚಗವ್ಯದಿಂದ ಸ್ನಾನ ಮಾಡುವವನು ಪವಿತ್ರನಾಗುತ್ತಾನೆ. ಗಂಗಾದಿ ಸರ್ವತೀರ್ಥಗಳಲ್ಲಿಯೂ ಸ್ನಾನ ಮಾಡಿದಂತಾಗುತ್ತದೆ.
ತೇನ ಸ್ನಾನೇನ ತಸ್ಯಾಪಿ ಶ್ರದ್ಧಾಯುಕ್ತಸ್ಯ ಪಾಂಡವ |

ದಶರಾತ್ರಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥43॥
ಆ ಕಪಿಲಾಧೇನುವಿನ ಪಂಚಗವ್ಯದಿಂದ ಶ್ರದ್ಧೆಯಿಂದ ಸ್ನಾನ ಮಾಡಿದವನು ಹತ್ತು ರಾತ್ರಿಯಲ್ಲಿ ಮಾಡಿದ ಪಾಪವನ್ನು ಆ ಕ್ಷಣದಲ್ಲಿಯೇ ಪರಿಹರಿಸಿಕೊಳ್ಳುತ್ತಾನೆ.
ದೃಷ್ಟ್ವಾ ತು ಕಪಿಲಾಂ ಭಕ್ತ್ಯಾ ಶ್ರುತ್ವಾ ಹುಂಕಾರನಿಃಸ್ವನಮ್ |
ವ್ಯಪೋಹತಿ ನರಃ ಪಾಪಮಹೋರಾತ್ರಕೃತಂ ನೃಪ ॥44॥
ರಾಜನೇ, ಕಪಿಲಾಧೇನುವನ್ನು ನೋಡಿ, ಅದರ ಅಂಬಾ ಎಂಬ ಧ್ವನಿಯನ್ನು ಕೇಳಿದರೆ ಒಂದು ದಿನದ ಪಾಪವು ಪರಿಹಾರವಾಗುತ್ತದೆ.
ಯತ್ರ ವಾ ತತ್ರ ವಾ ಚಾಂಗೇ ಕಪಿಲಾಂ ಯಃ ಸ್ಪೃಶೇತ್ ಶುಚಿಃ |
ಸಂವತ್ಸರಕೃತಂ ಪಾಪಂ ವಿನಾಶಯತಿ ಪಾಂಡವ ॥45॥
ಎಲ್ಲಿಯೇ ಆಗಲಿ, ಕಪಿಲಾ ಗೋವನ್ನು ಕಂಡು ಶುಚಿಯಾಗಿ ಅದರ ದೇಹವನ್ನು ಸವರುತ್ತಾನೋ ಅವನು ಒಂದು ಸಂವತ್ಸರದಲ್ಲಿ ಮಾಡಿದ ಪಾಪವನ್ನು ಪರಿಹರಿಸಿಕೊಳ್ಳುತ್ತಾನೆ.
ಗೋಸಹಸ್ರಂ ಚ ಯೋ ದದ್ಯಾದ್ ಏಕಾಂ ಚ ಕಪಿಲಾಂ ನರಃ |
ಸಮಂ ತಸ್ಯ ಫಲಂ ಪ್ರಾಹ ಬ್ರಹ್ಮಲೋಕೇ ಪಿತಾಮಹಃ ॥46॥
ಒಂದು ಸಾವಿರ ಗೋವುಗಳನ್ನು ದಾನ ಮಾಡಿದವನಿಗೆ ಲಭಿಸುವ ಫಲವು, ಒಂದು ಕಪಿಲಾಧೇನುವನ್ನು ದಾನ ಮಾಡಿದವನಿಗೆ ಲಭಿಸುವ ಫಲವು ಒಂದೇ ಎಂದು ಲೋಕ ಪಿತಾಮಹನಾದ ಬ್ರಹ್ಮದೇವನು ಹೇಳಿದ್ದಾನೆ.
ಯಸ್ತ್ವೇಕಾಂ ಕಪಿಲಾಂ ಹನ್ಯಾನ್ನರಃ ಕಶ್ಚಿತ್ ಪ್ರಮಾದತಃ |
ಗೋಸಹಸ್ರಂ ಹತಂ ತೇನ ಭವೇನ್ನಾತ್ರ ವಿಚಾರಣಾ ॥47॥
ಯಾವ ವ್ಯಕ್ತಿಯು ಪ್ರಮಾದದಿಂದ ಕಪಿಲಾಧೇನುವನ್ನು ಕೊಂದರೆ ಅವನಿಗೆ ಒಂದು ಸಾವಿರ ಗೋವುಗಳನ್ನು ಕೊಂದ ಪಾಪವು ಉಂಟಾಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯಸ್ತ್ವೇಕಾಂ ಕಪಿಲಾಂ ದದ್ಯಾತ್ ಶ್ರೋತ್ರಿಯಾಯಾಹಿತಾಗ್ನಯೇ |
ಗವಾಂ ಶತಸಹಸ್ರಂ ತು ದತ್ತಂ ಭವತಿ ಪಾಂಡವ ॥48॥
ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಯಾವನು ಒಂದು ಕಪಿಲಾಧೇನುವನ್ನು ದಾನ ಮಾಡುತ್ತಾನೋ ಅವನು ಸಾವಿರ ಗೋವುಗಳನ್ನು ದಾನ ಮಾಡಿದ ಫಲವನ್ನು ಹೊಂದುತ್ತಾನೆ.
ದಶೇಹ ಕಪಿಲಾಃ ಪ್ರೋಕ್ತಾಃ ಸ್ವಯಮೇವ ಸ್ವಯಂಭುವಾ |
ಯೋ ದದ್ಯಾಚ್ಛ್ರೋತ್ರಿಯೇಭ್ಯೋ ವೈ ಸ್ವರ್ಗಂ ಗಚ್ಛತಿ ತಚ್ಛೃಣು ॥49॥
ಸ್ವಯಂ ಚತುರ್ಮುಖ ಬ್ರಹ್ಮನೇ ಕಪಿಲಾಧೇನುಗಳಲ್ಲಿ ಹತ್ತು ಭೇದಗಳನ್ನು ಹೇಳಿದ್ದಾನೆ. ಅವುಗಳನ್ನು ಬ್ರಾಹ್ಮಣರಿಗೆ ನೀಡಿದಾಗ ಉತ್ತಮ ಸದ್ಗತಿ ಹೊಂದುವಿಕೆಯ ಬಗ್ಗೆ ಹೇಳುತ್ತೇನೆ, ಕೇಳಿಸಿಕೊ.
ಪ್ರಥಮಾ ಸ್ವರ್ಣಕಪಿಲಾ ದ್ವಿತೀಯಾ ಗೌರಪಿಂಗಲಾ |
ತೃತೀಯಾ ರಕ್ತಪಿಂಗಾಕ್ಷೀ ಚತುರ್ಥೀ ಗಲಪಿಂಗಲಾ ॥50॥
ಹೊಂಬಣ್ಣದಿಂದ ಕೂಡಿದ ಕಪಿಲಾ ಮೊದಲನೆಯದ್ದು. ಎರಡನೆಯದ್ದು ಗೌರಪಿಂಗಲಾ (ಬಿಳಿ-ಹಳದಿ), ಮೂರನೆಯದ್ದು ರಕ್ತಪಿಂಗಾಕ್ಷಿ (ಹಳದಿ ಬಣ್ಣದ ಕಣ್ಣುಗಳುಳ್ಳದ್ದು), ನಾಲ್ಕನೆಯದ್ದು ಗಲಪಿಂಗಲಾ (ಕುತ್ತಿಗೆಯಲ್ಲಿ ಕಂದು-ಹಳದಿ ಬಣ್ಣ ಮಿಶ್ರಿತವಾದುದು).
ಪಂಚಮೀ ಬಭ್ರುವರ್ಣಾಭಾ ಷಷ್ಠೀ ಚ ಶ್ವೇತಪಿಂಗಲಾ |
ಸಪ್ತಮೀ ರಂಗಪಿಂಗಾಕ್ಷೀ ತ್ವಷ್ಟಮೀ ಖುರಪಿಂಗಲಾ ॥51॥
ಐದನೆಯದ್ದು ಕೆಂಪು ಮಿಶ್ರಿತ ಕಂದುಬಣ್ಣವುಳ್ಳದ್ದು, ಆರನೆಯದ್ದು ಬಿಳಿಯ ಮತ್ತು ಕಂದು ಹಳದಿ ಬಣ್ಣದ್ದು, ಏಳನೆಯದ್ದು ಕೆಂಪು ಮತ್ತು ಕೆಂದು ಹಳದಿ ಬಣ್ಣದ ಕಣ್ಣುಗಳುಳ್ಳದ್ದು, ಎಂಟನೆಯದ್ದು ಗೊರಸುಗಳಲ್ಲಿ ಮಾತ್ರ ಕಂದು ಹಳದಿ ಬಣ್ಣವುಳ್ಳದ್ದು.
ನವಮೀ ಪಾಟಲಾ ಜ್ಞೇಯಾ ದಶಮೀ ಪುಚ್ಛಪಿಂಗಲಾ |
ದಶೈತಾಃ ಕಪಿಲಾಃ ಪ್ರೋಕ್ತಾಃ ತಾರಯಂತಿ ನರಾನ್ ಸದಾ ॥52॥
ಒಂಬತ್ತನೆಯದ್ದು ಬಿಳಿ ಮತ್ತು ಕೆಂಪು ಮಿಶ್ರಿತ ಬಣ್ಣವುಳ್ಳದ್ದು. ಹತ್ತನೆಯದ್ದು ಬಾಲದಲ್ಲಿ ಮಾತ್ರ ಕಂದು ಹಳದಿ ಬಣ್ಣವುಳ್ಳದ್ದು. ಈ ಹತ್ತುವಿಧವಾದ ಕಪಿಲಾ ಧೇನುಗಳು ಮನುಷ್ಯರನ್ನು ಪಾಪದಿಂದ ದಾಟಿಸುತ್ತವೆ.
ಮಂಗಲ್ಯಾಶ್ಚ ಪವಿತ್ರಾಶ್ಚ ಸರ್ವಪಾಪಪ್ರಣಾಶನಾಃ |
ಏವಮೇವ ಹ್ಯನಾಹೋ ದಶ ಪ್ರೋಕ್ತಾ ನರೇಶ್ವರ ॥53॥
ಇವು ಮಂಗಳಮಯವಾದವುಗಳು, ಪವಿತ್ರವಾದವುಗಳು, ಸರ್ವವಿಧವಾದ ಪಾಪಗಳನ್ನು ಪರಿಹರಿಸಬಲ್ಲವುಗಳು. ಹೀಗೆಯೇ ಎತ್ತುಗಳು ಹತ್ತು ಪ್ರಕಾರವಾಗಿವೆ.
ಬ್ರಾಹ್ಮಣೋ ವಾಹಯೇತ್ ತಾಂಸ್ತು ನಾನ್ಯೋ ವರ್ಣಃ ಕಥಂಚನ |
ನ ವಾಹಯೇಚ್ಚ ಕಪಿಲಾಂ ಕ್ಷೇತ್ರೇ ವಾಽಧ್ವನಿ ವಾ ದ್ವಿಜಃ ॥54॥
ಪ್ರಯಾಣಕ್ಕೆ ಕಪಿಲಾ ಜಾತಿಯ ಎತ್ತುಗಳನ್ನು ಬ್ರಾಹ್ಮಣನು ಮಾತ್ರವೇ ಗಾಡಿಗೆ ಹೂಡಲು ಉಪಯೋಗಿಸಿಕೊಳ್ಳಬಹುದು. ಇತರ ವರ್ಣದವರು ಯಾವುದೇ ಕಾರಣದಿಂದಲೂ ಇದನ್ನು ಸವಾರಿಗೆ ಉಪಯೋಗಿಸಬಾರದು. ಬ್ರಾಹ್ಮಣನು ಉಳುವುದಕ್ಕಾಗಲಿ, ಬೇರೆಯವರ ಸಂಚಾರಕ್ಕಾಗಲಿ ಗಾಡಿಯನ್ನು ಎಳೆಯುವುದಕ್ಕಾಗಲಿ ಉಪಯೋಗಿಸಬಾರದು.
ವಾಹಯೇದ್ ಹುಂಕೃತೇನೈವ ಶಾಖಯಾ ವಾ ಸಪತ್ರಯಾ |
ನ ದಂಡೇನ ನ ಯಷ್ಟ್ಯಾ ವಾ ನ ಪಾಶೇನ ಚ ವಾ ಪುನಃ ॥55॥

ಕಪಿಲಾ ವೃಷಭವು ಪ್ರಯಾಣ ಮಾಡುವಾಗ, ಗಾಡಿಗೆ ಕಟ್ಟಿದಾಗಲು ಹೂಂಕಾರದ ಧ್ವನಿಯಿಂದ ಅಥವಾ ಎಲೆಗಳ ಕೋಲಿನಿಂದ ಮೃದುವಾಗಿ ಪ್ರಹರಿಸಿ, ಎತ್ತುಗಳನ್ನು ಮುಂದುವರೆಯುವಂತೆ ಮಾಡಬೇಕು. ದಂಡದಿಂದಾಗಲಿ, ಕೋಲಿನಿಂದಾಗಲಿ, ಹಗ್ಗದಿಂದಾಗಲಿ ಅವುಗಳನ್ನು ಹೊಡೆಯಬಾರದು.
ನ ಕ್ಷುತ್ತೃಷ್ಣಾಶ್ರಮಶ್ರಾಂತಾನ್ ವಾಹಯೇದ್ ವಿಕಲೇಂದ್ರಿಯಾನ್ |
ಸುತೃಪ್ತೇಷು ತು ಭುಂಜೀಯಾತ್ ಪಿಬೇತ್ ಪೀತೇಷು ಚೋದಕಮ್ ॥
ಎತ್ತುಗಳು ಹಸಿದಾಗ, ಬಾಯಾರಿದಾಗ, ನಡೆದು ಬಳಲಿದಾಗ ಅವುಗಳನ್ನು ಗಾಡಿಗೆ ಕಟ್ಟಬಾರದು. ಇಂದ್ರಿಯಗಳು ಶಿಥಿಲವಾಗಿದ್ದಾಗಲೂ ಗಾಡಿಗೆ ಕಟ್ಟಬಾರದು. ಅವುಗಳು ಯಥೇಷ್ಟವಾಗಿ ಹುಲ್ಲುತಿಂದು ತೃಪ್ತವಾಗುವ ತನಕ, ನೀರನ್ನು ಕುಡಿಯುವ ತನಕ ಸೇವೆಗೆ ಬಳಸಿಕೊಳ್ಳಬಾರದು. ಕಪಿಲಾ ವೃಷಭಗಳು ಹುಲ್ಲು ತಿಂದು ತೃಪ್ತವಾಗುವ ತನಕ ಬ್ರಾಹ್ಮಣನು ಊಟ ಮಾಡಬಾರದು. ಅವುಗಳು ನೀರು ಕುಡಿದ ಬಳಿಕವೇ ನೀರು ಕುಡಿಯಬೇಕು.
ಶುಶ್ರೂಷೋರ್ಮಾತರಶ್ಚೈತಾಃ ಪಿತರಸ್ತೇ ಪ್ರಕೀರ್ತಿತಾಃ |
ಅಹ್ನಾಂ ಪೂರ್ವಂ ತ್ರಿಭಾಗೇ ತು ಧುರ್ಯಾಣಾಂ ವಾಹನಂ ಸ್ಮೃತಮ್॥
ಶುಶ್ರೂಷೆ ಮಾಡಲು ಬಯಸುವ ಪುರುಷನಿಗೆ ಕಪಿಲಾಧೇನುವು ತಾಯಿಯಾದರೆ, ಕಪಿಲಾ ವೃಷಭವು ತಂದೆಯಾಗಿರುತ್ತದೆ. ವೃಷಭಗಳನ್ನು ಪ್ರಾತಃಕಾಲದಲ್ಲಿ ಮಾತ್ರ ವಾಹನಕ್ಕೆ ಕಟ್ಟುವುದು ಯೋಗ್ಯವಾಗಿದೆ.
ವಿಶ್ರಾಮೇನ್ಮಧ್ಯಮೇ ಭಾಗೇ ಭಾಗೇ ಚಾಂತೇ ಯಥಾಸುಖಮ್ ॥58॥
ದಿನದ ಮಧ್ಯಭಾಗದಲ್ಲಿ ವಿಶ್ರಮಿಸಿಕೊಳ್ಳಲು ಅವುಗಳನ್ನು ಬಿಟ್ಟು ಬಿಡಬೇಕು. ದಿನದ ಮೂರನೆಯ ಭಾಗದಲ್ಲಿ ಅವಶ್ಯಕತೆ ಇದ್ದರೆ ಗಾಡಿಗೆ ಕಟ್ಟಬಹುದು.
ಯತ್ರ ವಾ ತ್ವರಯಾ ಕೃತ್ಯಂ ಸಂಶಯೋ ಯತ್ರ ಚಾಧ್ವನಿ |
ವಾಹಯೇತ್ ತತ್ರ ಧುರ್ಯಾಂಸ್ತು ನ ಸ ಪಾಪೇನ ಲಿಪ್ಯತೇ ॥59॥
ಎಲ್ಲಿಯಾದರೂ ಅವಸರದ ಕಾರ್ಯವಿರುವ ಸಂದರ್ಭದಲ್ಲಿ, ಮಾರ್ಗದಲ್ಲಿ ಕಳ್ಳ-ಕಾಕರ ಭೀತಿಯ ಸಂಶಯ ಇದ್ದಾಗ ಮಧ್ಯಾಹ್ನದ ವೇಳೆಯೂ ಗಾಡಿಗೆ ಕಟ್ಟಬಹುದು. ಅನಿವಾರ್ಯವಾಗಿ ಕಟ್ಟಿದಾಗ ಪಾಪವು ಬರುವುದಿಲ್ಲ.
ಅನ್ಯಥಾ ವಾಹಯನ್ ರಾಜನ್ ನಿರಯಂ ಯಾತಿ ರೌರವಮ್ ॥60॥
ಅನಿವಾರ್ಯವಿಲ್ಲದೆ ಮಧ್ಯಾಹ್ನ ಕಾಲದಲ್ಲಿ ಕಪಿಲವೃಷಭಗಳನ್ನು ಗಾಡಿಗೆ ಕಟ್ಟಿದರೆ ರೌರವ ನರಕಕ್ಕೆ ಹೋಗುತ್ತಾನೆ. ಸಂಶಯವಿಲ್ಲ.
ರುಧಿರಂ ವಾಹಯೇತ್ ತೇಷಾಂ ಯಸ್ತು ಮೋಹಾನ್ನರಾಧಿಪ |
ಭ್ರೂಣಹತ್ಯಾಸಮಂ ಪಾಪಂ ತಸ್ಯ ಸ್ಯಾತ್ ಪಾಂಡುನಂದನ ॥61॥
ಯಾವನು ಮೋಹವಶನಾಗಿ ಎತ್ತುಗಳ ಶರೀರದಲ್ಲಿ ರಕ್ತಬರುವಂತೆ ಭಾರವನ್ನು ತುಂಬಿ ಎಳೆಸುತ್ತಾನೊ ಅವನಿಗೆ ಭ್ರೂಣಹತ್ಯೆಗೆ ಸಮಾನವಾದ ಪಾಪವು ಉಂಟಾಗುತ್ತದೆ.
ತೇನ ಪಾಪೇನ ಪಾಪಾತ್ಮಾ ನರಕಂ ಯಾತ್ಯಸಂಶಯಮ್ ॥62॥
ಈ ಪಾಪದಿಂದ ಅವನು ನಿಶ್ಚಿತವಾಗಿ ನರಕಕ್ಕೆ ಹೋಗುತ್ತಾನೆ, ಸಂಶಯವಿಲ್ಲ.
ನರಕೇಷು ಚ ಸರ್ವೇಷು ಸಮಾಃ ಸ್ಥಿತ್ವಾ ಶತಂ ಶತಮ್ |
ಇಹ ಮಾನುಷ್ಯಕೇ ಲೋಕೇ ಬಲೀವರ್ದೋ ಭವಿಷ್ಯತಿ ॥63॥
ಅವನು ಆ ಪಾಪದಿಂದ ನರಕದಲ್ಲಿ ನೂರು ನೂರು ವರ್ಷಗಳ ಕಾಲ ವಾಸ ಮಾಡಿ, ಪುನಃ ಮನುಷ್ಯಲೋಕದಲ್ಲಿಯೇ ಎತ್ತಾಗಿ ಹುಟ್ಟುತ್ತಾನೆ.
ತಸ್ಮಾತ್ತು ಮುಕ್ತಿಮನ್ವಿಚ್ಛನ್ ದದ್ಯಾತ್ತು ಕಪಿಲಾಂ ನರಃ ॥64॥
ಆದ್ದರಿಂದ ಸಂಸಾರದಿಂದ ಮುಕ್ತಿಯನ್ನು ಬಯಸುವ ಮನುಷ್ಯನು ಕಪಿಲಾ ಧೇನುವನ್ನು ದಾನವಾಗಿ ಕೊಡಬೇಕು.
ಕಪಿಲಾಂ ವಾಹಯೇದ್ ಯಸ್ತು ವೃಷಲೋ ಲೋಭಮೋಹಿತಃ |
ತೇನ ದೇವಾಸ್ತ್ರಯಸ್ತ್ರಿಂಶತ್ ಪಿತರಶ್ಚಾಪಿ ವಾಹಿತಾಃ ॥65॥
ಕಪಿಲಾಧೇನುವನ್ನು ಲೋಭ-ಮೋಹಗಳಿಗೆ ತುತ್ತಾಗಿ ಯಾವ ವೃಷಲನು ಗಾಡಿಗೆ ಕಟ್ಟುತ್ತಾನೋ ಅವನಿಂದ ಮೂವತ್ಮೂರು ಕೋಟಿ ದೇವತೆಗಳು, ಪಿತೃಗಳು ಗಾಡಿಯನ್ನು ಎಳೆದವರಂತೆ ದುಃಖಿತರಾಗುತ್ತಾರೆ.
ಸ ದೇವೈಃ ಪಿತೃಭಿರ್ನಿತ್ಯಂ ವಧ್ಯಮಾನಃ ಸುದುರ್ಮತಿಃ |
ನರಕಾನ್ನರಕಂ ಘೋರಂ ಗಚ್ಛೇದಾಪ್ರಲಯಂ ನೃಪ ॥66॥
ಅಂತಹ ವೃಷಲನು ದೇವತೆಗಳಿಂದ, ಪಿತೃಗಳಿಂದ ನಿತ್ಯವೂ ದುರ್ಮತಿಯೆಂದು ಘಾಸಿಗೆ ತುತ್ತಾದವನಾಗಿ, ನರಕವನ್ನು ಕುರಿತು ಹೋಗಿ, ಪ್ರಲಯವಾಗುವ ತನಕವೂ ಸಂಚರಿಸುತ್ತಿರುತ್ತಾನೆ.
ಬ್ರಹ್ಮಾ ರುದ್ರಸ್ತಥಾಗ್ನಿಶ್ಚ ಕಪಿಲಾನಾಂ ಗತಿಂ ಗತಾಃ |
ತಸ್ಮಾತ್ ತೇ ತು ನ ಹಂತವ್ಯಾಃ ಪೂಜ್ಯಾಸ್ತೇ ತು ವಿಶೇಷತಃ ॥67॥
ಚತುರ್ಮುಖ ಬ್ರಹ್ಮನು, ಮಹರುದ್ರನು, ಅಗ್ನಿದೇವನು ಕಪಿಲಾಧೇನುವಿನ ಗತಿಯನ್ನು ಹೊಂದಿರುತ್ತಾರೆ. ಅದರ ನಡೆಯನ್ನು ಅನುಸರಿಸುತ್ತಾರೆ. ಆದ್ದರಿಂದ ಕಪಿಲಾ ಧೇನುವನ್ನು ಕೊಲ್ಲಬಾರದು. ವಿಶೇಷವಾಗಿ ಪೂಜ್ಯವಾದವುಗಳು ಕಪಿಲಾ ಧೇನುಗಳು.
ನಿಃಶ್ವಸಂತಿ ಯದಾ ಶ್ರಾಂತಾಸ್ತದಾ ಹನ್ಯುಶ್ಚ ತತ್ಕುಲಮ್ ॥68॥
ಕಪಿಲಾಧೇನುವು ಯಾವಾಗ ಬಳಲಿ ಉಸಿರನ್ನು ಬಿಡುತ್ತದೋ ಅದರ ಬಳಲುವಿಕೆಯು ಅವನ ಕುಲವನ್ನೇ ನಾಶಮಾಡುತ್ತದೆ.
ಯಾವಂತಿ ತೇಷಾಂ ರೋಮಾಣಿ ತಾವದ್ ವರ್ಷಶತಂ ನೃಪ |
ನರಕೇ ಪರಿಪಚ್ಯಂತೇ ತತ್ರ ತದ್ವಾಹಕಾ ನರಾಃ ॥69॥

ಯಾವ ವ್ಯಕ್ತಿಯು ಕಪಿಲಾ ಗೋವನ್ನು ಹಿಂಸಿಸುತ್ತಾನೋ ಅವನು ಆ ಧೇನುವಿನ ದೇಹದಲ್ಲಿರುವ ರೋಮಗಳಷ್ಟು ಕಾಲ ಗಾಡಿಗೆ, ಪೀಡೆ ಮಾಡಿ ಕಟ್ಟಿದ ಪಾಪದಿಂದಾಗಿ ನರಕಲೋಕದಲ್ಲಿ ದುಃಖಕ್ಕೆ ಈಡಾಗುತ್ತಾನೆ.
ಕಪಿಲಾ ಸರ್ವಯಜ್ಞೇಷು ದಕ್ಷಿಣಾರ್ಥಂ ವಿಧೀಯತೇ |
ತಸ್ಮಾತ್ ತದ್ದಕ್ಷಿಣಾ ದೇಯಾ ಯಜ್ಞೇಷ್ವೇವ ದ್ವಿಜಾತಿಭಿಃ ॥70॥
ಎಲ್ಲ ಯಜ್ಞಗಳಲ್ಲಿಯೂ ಕಪಿಲಾಧೇನುವನ್ನೇ ದಕ್ಷಿಣೆಯನ್ನಾಗಿ ಕೊಡಬೇಕೆಂದು ಶಾಸ್ತ್ರವಚನವಿದೆ. ಆದ್ದರಿಂದ ಬ್ರಾಹ್ಮಣರಿಗೆ ಯಜ್ಞದಲ್ಲಿ ಕಪಿಲಾಧೇನುವನ್ನೇ ದಕ್ಷಿಣೆಯನ್ನಾಗಿ ನೀಡಬೇಕು.
ಹೋಮಾರ್ಥಂ ಚಾಗ್ನಿಹೋತ್ರಸ್ಯ ಯಾಂ ಪ್ರಯಚ್ಛೇತ್ ಪ್ರಯತ್ನತಃ |
ಶ್ರೋತ್ರಿಯಾಯ ದರಿದ್ರಾಯ ಶ್ರಾಂತಾಯ ಚ ಯತಾತ್ಮನೇ ॥71॥
ಅಗ್ನಿಹೋತ್ರದ ಹೋಮಕ್ಕಾಗಿ ಕಪಿಲಾಧೇನುವನ್ನು ಶ್ರೋತ್ರಿಯನಾದ, ದರಿದ್ರನಾದ, ಬಳಲಿರುವ, ಜಿತೇಂದ್ರಿಯನಾದ ಬ್ರಾಹ್ಮಣನಿಗೆ ಪ್ರಯತ್ನಪೂರ್ವಕವಾಗಿ ದಾನ ಮಾಡಬೇಕು.
ತೇನ ದಾನೇನ ಪೂತಾತ್ಮಾ ಸೋಽಗ್ನಿಲೋಕೇ ಮಹೀಯತೇ ॥72॥
ಆ ದಾನದಿಂದ ಪೂತಾತ್ಮನಾದ ವ್ಯಕ್ತಿಯು ಅಗ್ನಿಲೋಕದಲ್ಲಿ ಪೂಜಿತನಾಗುತ್ತಾನೆ.
ಯಾವಂತಿ ಚೈವ ರೋಮಾಣಿ ಕಪಿಲಾಯಾಂ ನರೇಶ್ವರ |
ತಾವದ್ ವರ್ಷಸಹಸ್ರಾಣಿ ನರಃ ಸ್ವರ್ಗೇ ಮಹೀಯತೇ ॥73॥
ಕಪಿಲಾಧೇನುವಿನ ದೇಹದಲ್ಲಿ ಎಷ್ಟು ರೋಮಗಳು ಇವೆಯೋ ಅಷ್ಟು ವರ್ಷಗಳ ಕಾಲ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.
ಸುವರ್ಣಖುರಶೃಂಗೀಂ ಚ ಕಪಿಲಾಂ ಯಃ ಪ್ರಯಚ್ಛತಿ |
ವಿಷುವೇ ಚಾಯನೇ ಚಾಪಿ ಸೋಽಶ್ವಮೇಧಫಲಂ ಲಭೇತ್ ॥74॥
ಸುವರ್ಣದಿಂದ ಅಲಂಕರಿಸಲ್ಪಟ್ಟ ಕೊಂಬುಗಳಿಂದ ಕೂಡಿದ ಮತ್ತು ಗೊರಸುಗಳಿಂದ ಕೂಡಿದ ಕಪಿಲಾಧೇನುವನ್ನು ವಿಷುವ ಯೋಗದಲ್ಲಿ, ದಕ್ಷಿಣಾಯನ, ಉತ್ತರಾಯಣ ಸಂಕ್ರಮಣಗಳಲ್ಲಿ ಯಾವನು ದಾನ ಮಾಡುತ್ತಾನೋ ಅವನು ಅಶ್ವಮೇಧ ಯಾಗದ ಫಲವನ್ನು ಹೊಂದುತ್ತಾನೆ.
ತೇನಾಶ್ವಮೇಧತುಲ್ಯೇನ ಮಮ ಲೋಕಂ ಸ ಗಚ್ಛತಿ ॥75॥
ಅಂತಹ ಅಶ್ವಮೇಧ ಯಾಗದ ಸಮಾನವಾದ ಪುಣ್ಯದಿಂದ ನನ್ನ ಲೋಕವನ್ನು ಹೊಂದುತ್ತಾನೆ.
ಸ್ವರ್ಣಶೃಂಗೀಂ ರೂಪ್ಯಖುರಾಂ ಸವತ್ಸಾಂ ಕಾಂಸ್ಯದೋಹನಾಮ್ |
ವಸ್ತ್ರೈರಲಂಕೃತಾಂ ಪುಷ್ಟಾಂ ಗಂಧೈರ್ಮಾಲ್ಯೈಶ್ಚ ಶೋಭಿತಾಮ್ ॥76॥
ಬಂಗಾರದಿಂದ ಅಲಂಕೃತವಾದ ಕೊಂಬುಗಳುಳ್ಳ, ಬೆಳ್ಳಿಯಿಂದ ಅಲಂಕಾರ ಮಾಡಿದ ಗೊರಸುಗಳುಳ್ಳ, ಕರುವಿನಿಂದ ಕೂಡಿದ, ಕಂಚಿನ ಹಾಲುಕರೆಯುವ ಪಾತ್ರೆ ಸಹಿತವಾದ ಹಸುವನ್ನು ವಸ್ತ್ರಗಳಿಂದ ಅಲಂಕಾರ ಮಾಡಿ, ಆಹಾರವನ್ನು ನೀಡಿ, ಗಂಧ-ಮಾಲ್ಯಗಳಿಂದ ಅಲಂಕರಿಸಿ ಯಾವಾತನು ದಾನ ಮಾಡುತ್ತಾನೋ ಅವನು ಅಕ್ಷಯವಾದ ಫಲವನ್ನು ಹೊಂದುತ್ತಾನೆ.
ಪವಿತ್ರಂ ಹಿ ಪವಿತ್ರಾಣಾಂ ಸುವರ್ಣಮಿತಿ ಮೇ ಮತಿಃ |
ತಸ್ಮಾತ್ ಸುವರ್ಣಾಭರಣಾ ದಾತವ್ಯಾ ಚಾಗ್ನಿಹೋತ್ರಿಣೇ ॥77॥
ಪವಿತ್ರಗಳಲ್ಲಿ ಪವಿತ್ರವಾದದ್ದು ಸುವರ್ಣ ಎಂದು ನನ್ನ ಬುದ್ಧಿಯು. ಆದ್ದರಿಂದ ಸುವರ್ಣಾಭರಣಗಳಿಂದ ಅಲಂಕೃತವಾದ ಕಪಿಲಧೇನುವನ್ನು ಅಗ್ನಿಹೋತ್ರನಿರತನಾದ ಬ್ರಾಹ್ಮಣನಿಗೆ ದಾನ ಮಾಡಬೇಕು.
ಏವಂ ದತ್ತ್ವಾ ತು ರಾಜೇಂದ್ರ ಸಪ್ತ ಪೂರ್ವಾನ್ ಪರಾನಪಿ |
ತಾರಯಿಷ್ಯತಿ ರಾಜೇಂದ್ರ ನಾತ್ರ ಕಾರ್ಯಾ ವಿಚಾರಣಾ ॥78॥
ಈ ಕ್ರಮದಲ್ಲಿ ದಾನ ಮಾಡಿದ ವ್ಯಕ್ತಿಯು ಹಿಂದಿನ ಏಳು ತಲೆಗಳನ್ನು, ಮುಂದಿನ ಏಳು ತಲೆಗಳನ್ನು ನರಕದಿಂದ ಉದ್ಧರಿಸುತ್ತಾನೆ. ಇದರಲ್ಲಿ ವಿಚಾರ ಮಾಡಬೇಕಾಗಿಲ್ಲ.
ಅಗ್ನಿಷ್ಟೋಮಸಹಸ್ರಸ್ಯ ವಾಜಪೇಯಂ ಚ ತತ್ಸಮಮ್ |
ವಾಜಪೇಯಸಹಸ್ರಸ್ಯ ಅಶ್ವಮೇಧಂ ಚ ತತ್ಸಮಮ್ ॥79॥
ಅಶ್ವಮೇಧಸಹಸ್ರಸ್ಯ ರಾಜಸೂಯಂ ಚ ತತ್ಸಮಮ್ ॥80॥
ಕಪಿಲಾನಾಂ ಸಹಸ್ರೇಣ ವಿಧಿದತ್ತೇನ ಪಾಂಡವ |
ರಾಜಸೂಯಫಲಂ ಪ್ರಾಪ್ಯ ಮಮ ಲೋಕೇ ಮಹೀಯತೇ ॥81॥
ಸಾವಿರ ಅಗ್ನಿಷ್ಟೋಮ ಯಾಗಗಳು ಒಂದು ವಾಜಪೇಯಕ್ಕೆ ಸಮಾನವಾದುದು. ಸಾವಿರ ವಾಜಪೇಯಗಳು ಒಂದು ಅಶ್ವಮೇಧಕ್ಕೆ ಸಮಾನವಾದುದು. ಸಾವಿರ ಅಶ್ವಮೇಧಗಳು ಒಂದು ರಾಜಸೂಯಕ್ಕೆ ಸಮವಾದುದು. ವಿಧಿವತ್ತಾಗಿ ಸಾವಿರ ಕಪಿಲಧೇನುಗಳನ್ನು ದಾನ ಮಾಡುವುದರಿಂದ ರಾಜಸೂಯ ಯಾಗವನ್ನು ಮಾಡಿದ ಫಲವನ್ನು ಮನುಷ್ಯನು ಹೊಂದುತ್ತಾನೆ. ನನ್ನ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.
ನ ತಸ್ಯ ಪುನರಾವೃತ್ತಿರ್ವಿದ್ಯತೇ ಕುರುಪುಂಗವ ॥82॥
ಇಂತಹ ದಾನವನ್ನು ಮಾಡಿದ ವ್ಯಕ್ತಿಯು ನನ್ನ ಲೋಕದಿಂದ ಹಿಂದಿರುಗುವುದಿಲ್ಲ.
ಪ್ರಯಚ್ಛತೇ ಯಃ ಕಪಿಲಾಂ ಸಚೇಲಾಂ
ಸಕಾಂಸ್ಯದೋಹಾಂ ಕನಕಾಗ್ರ್ಯಶೃಂಗೀಮ್ |
ತೈಸ್ತೈರ್ಗುಣೈಃ ಕಾಮದುಘಾ ಹಿ ಭೂತ್ವಾ
ನರಂ ಪ್ರದಾತಾರಮುಪೈತಿ ಸಾ ಗೌಃ ॥83॥

ಯಾವ ವ್ಯಕ್ತಿಯು ಕಪಿಲಾಧೇನುವು ಬಟ್ಟೆಯಿಂದ, ಕಾಂಸ್ಯ(ಕಂಚು)ಪಾತ್ರೆಯಿಂದ, ಬಂಗಾರದಿಂದ ಅಲಂಕೃತವಾಗಿ ದಾನ ಮಾಡಲ್ಪಡುತ್ತದೋ ಆಯಾ ಗುಣಗಳಿಂದ ಇಷ್ಟಾರ್ಥಗಳನ್ನು ಸುರಿಸುತ್ತಾ ದಾನ ಮಾಡಿದ ವ್ಯಕ್ತಿಯನ್ನು ಅದೇ ಹಸುವು ರಕ್ಷಿಸುತ್ತದೆ.

ಸ್ವಕರ್ಮಭಿಶ್ಚಾಪ್ಯನುಬಧ್ಯಮಾನಂ
ತೀವ್ರಾಂಧಕಾರೇ ನರಕೇ ಪತಂತಮ್ |
ಮಹಾರ್ಣವೇ ನೌರಿವ ವಾಯುನೀತಾ
ದತ್ತಾ ಹಿ ಗೌಸ್ತಾರಯತೇ ಮನುಷ್ಯಮ್ ॥84॥

ಮಹಾವಾಯುವಿನಿಂದ ಒಯ್ಯಲ್ಪಡುವ ದೋಣಿಯು ತೀರಕ್ಕೆ ತಲುಪಿಸುವಂತೆ ದಾನ ಮಾಡಿದ ಹಸುವು ತನ್ನ ಕರ್ಮಗಳಿಂದ ಬಂಧಿತನಾದ, ಘೋರವಾದ ಅಂಧಕಾರದಿಂದ ಕೂಡಿದ ನರಕದಲ್ಲಿ ಬಿದ್ದಿರುವ ಮನುಷ್ಯನನ್ನು ಉದ್ಧರಿಸುತ್ತದೆ.

ಪುತ್ರಾಂಶ್ಚ ಪೌತ್ರಾಂಶ್ಚ ಕುಲಂ ಚ ಸರ್ವಮ್
ಆಸಪ್ತಮಂ ತಾರಯತೇ ಪರತ್ರ |
ಯಾವನ್ಮನುಷ್ಯಾನ್ ಪೃಥಿವೀ ಬಿಭರ್ತಿ |
ತಾವತ್ ಪ್ರದಾತಾರಮಿತೋಽಪರತ್ರ ॥85॥

ಮಕ್ಕಳನ್ನು, ಮೊಮ್ಮಕ್ಕಳನ್ನು, ಸಮಸ್ತ ಕುಲವನ್ನು ಏಳು ತಲೆಮಾರುಗಳ ತನಕ ಉದ್ಧರಿಸುತ್ತದೆ. ಸಮಸ್ತ ಮನುಷ್ಯರನ್ನು ಭೂಮಿಯು ಎಲ್ಲಿಯ ತನಕ ಧರಿಸಿರುತ್ತದೋ ಅಲ್ಲಿಯ ತನಕವೂ ಗೋದಾನ ಮಾಡಿದವನು ಇಹ, ಪರಲೋಕಗಳಲ್ಲಿ ಸುಖವನ್ನು ಅನುಭವಿಸುತ್ತಾನೆ.

ಯಥೌಷಧಂ ಮಂತ್ರಕೃತಂ ನರಸ್ಯ
ಪ್ರಯುಕ್ತಮಾತ್ರಂ ವಿನಿಹಂತಿ ರೋಗಾನ್ |
ತಥೈವ ದತ್ತಾ ಕಪಿಲಾ ಸುಪಾತ್ರೇ
ಪಾಪಂ ನರಸ್ಯಾಶು ನಿಹಂತಿ ಸರ್ವಮ್ ॥86॥

ಮಂತ್ರದಿಂದ ಅಭಿಮಂತ್ರಿಸಿಕೊಟ್ಟ ಔಷಧವು ಮನುಷ್ಯನ ರೋಗಗಳನ್ನು ಪರಿಹರಿಸುವಂತೆ ಸತ್ಪಾತ್ರನಿಗೆ ನೀಡಿದ ಕಪಿಲಾಧೇನುವು ಮನುಷ್ಯನ ಸಕಲ ಪಾಪಗಳನ್ನು ಕ್ಷಣಮಾತ್ರದಲ್ಲಿ ನಾಶಗೊಳಿಸುತ್ತದೆ.

ಯಥೈವ ದೃಷ್ಟ್ವಾ ಭುಜಗಾಃ ಸುಪರ್ಣಂ
ನಶ್ಯಂತಿ ದೂರಾದ್ ವಿವಶಾ ಭಯಾರ್ತಾಃ |
ತಥೈವ ದೃಷ್ಟ್ವಾ ಕಪಿಲಾಪ್ರದಾನಂ
ನಶ್ಯಂತಿ ಪಾಪಾನಿ ನರಸ್ಯ ಶೀಘ್ರಮ್ ॥87॥

ಯಾವ ರೀತಿಯಲ್ಲಿ ಗರುಡನನ್ನು ದೂರದಿಂದಲೇ ನೋಡಿದ ಹಾವುಗಳು ವಿವಶವಾಗಿ ಮತ್ತು ಭಯಪೀಡಿತವಾಗಿ ನಾಶವಾಗುವವೋ, ಹಾಗೆಯೇ ಕಪಿಲಾ ಧೇನುವಿನ ದಾನವನ್ನು ಮಾಡಿದ ಮನುಷ್ಯನ ಪಾಪಗಳು ಬೇಗನೇ ನಾಶವಾಗುತ್ತದೆ.

ಯಥಾ ತ್ವಚಂ ಸ್ವಾಂ ಭುಜಗೋ ವಿಹಾಯ
ಪುನರ್ನವಂ ರೂಪಮುಪೈತಿ ಪುಣ್ಯಮ್ |
ತಥೈವ ಮುಕ್ತಃ ಪುರುಷಃ ಸ್ವಪಾಪೈಃ
ವಿರಾಜತೇ ವೈ ಕಪಿಲಾಪ್ರದಾನಾತ್ ॥88॥

ಯಾವ ರೀತಿಯಾಗಿ ಸರ್ಪವು ಪೊರೆಯನ್ನು ಬಿಟ್ಟು ನೂತನವಾದ ಸುಂದರವಾದ ರೂಪವನ್ನು ಹೊಂದುತ್ತದೋ, ಅದೇ ರೀತಿಯಲ್ಲಿ ಕಪಿಲಾಧೇನುವನ್ನು ದಾನ ಮಾಡಿದವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದಿ ಶೋಭಿಸುತ್ತಾನೆ.

ಯಥಾಽಂಧಕಾರಂ ನಯನೇಷು ಲಗ್ನಂ
ದೀಪ್ತೋ ಹಿ ನಿರ್ಯಾತಯತಿ ಪ್ರದೀಪಃ |
ತಥಾ ನರೇ ಪಾಪಮತಿಪ್ರಲೀನಂ
ನಿರ್ಯಾತಯೇದ್ ವೈ ಕಪಿಲಾಪ್ರದಾನಮ್ ॥89॥

ಪ್ರಜ್ವಲಿಸುವ ದೀಪವು ಮನೆಯಲ್ಲಿ ತುಂಬಿರುವ ಕತ್ತಲೆಯನ್ನು ತೊಡೆಯುವಂತೆ ಕಪಿಲಾಧೇನುವನ್ನು ದಾನ ಮಾಡಿದ ಮನುಷ್ಯನು ತನ್ನಲ್ಲಿ ತುಂಬಿರುವ ಪಾಪವನ್ನು ಹೊಡೆದಟ್ಟುತ್ತಾನೆ.

ಯಾವಂತಿ ರೋಮಾಣಿ ಭವಂತಿ ತಸ್ಯಾ
ವತ್ಸಾನ್ವಿತಾಯಾಶ್ಚ ಶರೀರಜಾನಿ |
ತಾವತ್ ಪ್ರದಾತಾ ಯುಗವರ್ಷಕೋಟಿಂ
ಸ ಬ್ರಹ್ಮಲೋಕೇ ರಮತೇ ಮನುಷ್ಯಃ ॥90॥

ಕರುವಿನಿಂದ ಕೂಡಿದ ಕಪಿಲಾಧೇನುವಿನ ದೇಹದಲ್ಲಿ ಉತ್ಪನ್ನವಾದ ರೋಮಗಳು ಎಷ್ಟು ಇವೆಯೋ ಅಷ್ಟು ಸಂಖ್ಯೆಯ ಕೋಟಿ ಯುಗವರ್ಷಗಳ ಕಾಲ ಗೋದಾನಿಯು ಬ್ರಹ್ಮಲೋಕದಲ್ಲಿ ಸಂತೋಷವನ್ನು ಹೊಂದುತ್ತಾನೆ.

ಯಸ್ಯಾಹಿತಾಗ್ನೇರತಿಥಿಪ್ರಿಯಸ್ಯ
ಶೂದ್ರಾನ್ನದೂರಸ್ಯ ಜಿತೇಂದ್ರಿಯಸ್ಯ |
ಸತ್ಯವ್ರತಸ್ಯಾಧ್ಯಯನಾನ್ವಿತಸ್ಯ
ದತ್ತಾ ಹಿ ಗೌಸ್ತಾರಯತೇ ಪರತ್ರ ॥91॥

ಯಾವನು ಅನುದಿನವೂ ಅಗ್ನಿಹೋತ್ರವನ್ನು ಮಾಡುತ್ತಾನೋ, ಅತಿಥಿ ಪ್ರಿಯನಾಗಿರುತ್ತಾನೋ, ಶೂದ್ರಾನ್ನದಿಂದ

ದೂರವಿರುತ್ತಾನೋ, ಜಿತೇಂದ್ರಿಯನೂ, ಸತ್ಯವ್ರತನೂ, ಸ್ವಾಧ್ಯಾಯ ಪರಾಯಣನೂ ಆಗಿರುತ್ತಾನೋ ಅಂತಹವನಿಗೆ ಕೊಡಲ್ಪಟ್ಟ ಕಪಿಲಾಧೇನುವು ದಾನಿಯನ್ನು ಪರಲೋಕದಲ್ಲಿಯೂ ಉದ್ಧರಿಸುತ್ತದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಕಪಿಲಾಮಾಹಾತ್ಮ್ಯಕಥನಂ ನಾಮ
ಪಂಚಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಐದನೆಯ ಅಧ್ಯಾಯ ಮುಗಿಯಿತು.
* * * * *

ನೂರ ಆರನೆಯ ಅಧ್ಯಾಯ

ಕೃಷ್ಣನು ಯುಧಿಷ್ಠಿರನನ್ನು ಕುರಿತು ಕಪಿಲಾಧೇನುವಿನ ದಾನದ ಪ್ರಶಂಸೆಯನ್ನು ಮಾಡಿದುದು. ಚತುರ್ಮುಖ ಬ್ರಹ್ಮನಿಂದ ಅಗ್ನಿಕುಂಡದ ಮಧ್ಯದಲ್ಲಿ ಕಪಿಲಾಧೇನುವು ಸೃಷ್ಟವಾದುದು. ಆ ಪ್ರಸಂಗದಲ್ಲಿ ರುದ್ರಾದಿ ದೇವತೆಗಳು ಕಪಿಲಾಧೇನುವಿಗೆ ಎಲ್ಲ ಧೇನುಗಳಿಗಿಂತ ಅಧಿಕವಾದ ಪೂಜ್ಯತ್ವ ವರವನ್ನು ನೀಡಿದುದು. ದೇವತೆ-ಋಷಿ ಮುಂತಾದವರು ತಮ್ಮ ಆಶ್ರಯಕ್ಕಾಗಿ ಕಪಿಲಾಧೇನುವನ್ನು ಆಶ್ರಯಿಸಿದುದು. ಕೃಷ್ಣನು ಹವ್ಯ-ಕವ್ಯ ದಾನಗಳ ಕಾಲವನ್ನು ನಿರೂಪಿಸಿದುದು. ಶ್ರಾದ್ಧಭೋಜನಕ್ಕೆ ಅರ್ಹರಾದ ಬ್ರಾಹ್ಮಣರು, ಅನರ್ಹರಾದ ಬ್ರಾಹ್ಮಣರು ಯಾರೆಂದು ನಿರೂಪಿಸಿದುದು. ಸ್ವರ್ಗಪ್ರಾಪಕ ಸುಕೃತ-ದುಷ್ಕೃತಗಳನ್ನು ನಿರೂಪಿಸಿದುದು.
ವೈಶಂಪಾಯನಃ
ಏವಂ ಶ್ರುತ್ವಾ ಪರಂ ಪುಣ್ಯಂ ಕಪಿಲಾದಾನಮುತ್ತಮಮ್ |
ಧರ್ಮಪುತ್ರಃ ಪ್ರಹೃಷ್ಟಾತ್ಮಾ ಕೇಶವಂ ಪುನರಬ್ರವೀತ್ ॥1॥
ವೈಶಂಪಾಯನ ಜನಮೇಜಯನೇ, ಯುಧಿಷ್ಠಿರನು ಶ್ರೇಷ್ಠವೂ, ಪುಣ್ಯಪ್ರದವೂ ಆದ ಕಪಿಲಾಧೇನುವಿನ ದಾನದ ವಿಧಿ-ನಿಯಮವನ್ನು ಕೇಳಿ ಸಂತುಷ್ಟನಾಗಿ ಕೇಶವನನ್ನು ಕುರಿತು ಹೇಳಿದನು.
ಯುಧಿಷ್ಠಿರಃ
ದೇವದೇವೇಶ ಕಪಿಲಾ ಯದಾ ವಿಪ್ರಾಯ ದೀಯತೇ |
ಕಥಂ ಸರ್ವೇಷು ಚಾಂಗೇಷು ತಸ್ಯಾಸ್ತಿಷ್ಠಂತಿ ದೇವತಾಃ ॥2॥
ಯುಧಿಷ್ಠಿರ ದೇವದೇವೇಶನೇ, ಕಪಿಲಾಧೇನುವನ್ನು ಬ್ರಾಹ್ಮಣನಿಗೆ ದಾನ ಮಾಡುವಾಗ ಅದರ ಶರೀರದಲ್ಲಿ ದೇವತೆಗಳು ಹೇಗೆ ವಾಸ ಮಾಡುತ್ತಾರೆ?
ಯಾಶ್ಚೈತಾಃ ಕಪಿಲಾಃ ಪ್ರೋಕ್ತಾ ದಶ ಚೈವ ತ್ವಯಾ ಮಮ |
ತಾಸಾಂ ಕತಿ ಸುರಶ್ರೇಷ್ಠ ಕಪಿಲಾಃ ಪುಣ್ಯಲಕ್ಷಣಾಃ ॥3॥
ದೇವಶ್ರೇಷ್ಠನೇ, ನನಗೆ ನೀನು ಹೇಳಿದ ಹತ್ತು ಬಗೆಯ ಕಪಿಲಾ ಗೋವುಗಳಲ್ಲಿ ಪುಣ್ಯಲಕ್ಷಣವುಳ್ಳ ಗೋವುಗಳು ಯಾವುವು?
ಕಥಂ ವಾಽನುಗೃಹೀತಾಸ್ತಾಃ ಸುರೈಃ ಪಿತೃಗಣೈರಪಿ |
ಕೇನ ಯುಕ್ತಾಶ್ಚ ವರ್ಣೇನ ಶ್ರೋತುಂ ಕೌತೂಹಲಂ ಹಿ ಮೇ ॥4॥
ಕಪಿಲಾ ಗೋವುಗಳು ದೇವತೆಗಳಿಂದ, ಪಿತೃಗಣಗಳಿಂದ ಹೇಗೆ ಪೂಜ್ಯವಾಗಿವೆ? ಯಾವ ಬಣ್ಣಗಳಿಂದ ಕೂಡಿದವು? ಇವುಗಳ ಬಗ್ಗೆ ಕೇಳುವ ಕುತೂಹಲವು ನನಗೆ ಉಂಟಾಗಿದೆ.
ವೈಶಂಪಾಯನಃ
ಯುಧಿಷ್ಠಿರೇಣೈವಮುಕ್ತಃ ಕೇಶವಃ ಸತ್ಯವಾಕ್ ತದಾ |
ಗುಹ್ಯಾನಾಂ ಪರಮಂ ಗುಹ್ಯಂ ವಕ್ತುಮೇವೋಪಚಕ್ರಮೇ ॥5॥
ವೈಶಂಪಾಯನ ಈ ರೀತಿಯಾಗಿ ಯುಧಿಷ್ಠಿರನು ಪ್ರಶ್ನಿಸಲು, ಸತ್ಯವಾದಿಯಾದ ಕೇಶವನು ಗೋವುಗಳ ವಿಷಯದಲ್ಲಿ ಅತ್ಯಂತ ಗುಹ್ಯವಾದ ವಿಷಯವನ್ನು ಹೇಳಲು ಪ್ರಾರಂಭಿಸಿದನು.
ಶ್ರೀಭಗವಾನ್
ಶೃಣು ರಾಜನ್ ಪವಿತ್ರಂ ವೈ ರಹಸ್ಯಂ ಧರ್ಮಮುತ್ತಮಮ್ |
ಗ್ರಹಣೀಯಂ ಸತ್ಯಮಿದಂ ನ ಶ್ರಾವ್ಯಂ ಹೇತುವಾದಿನಾ ॥6॥
ಶ್ರೀಭಗವಾನ್ ಯುಧಿಷ್ಠಿರನೇ, ಧರ್ಮವೂ, ರಹಸ್ಯವೂ ಆಗಿರುವ ಶ್ರೇಷ್ಠವಾದ ಈ ವಿಷಯವನ್ನು ಕೇಳಿಸಿಕೊ. ಈ ವಿಷಯವು ಕೇವಲ ಕುತರ್ಕ ಮಾಡುವವರಿಂದ ಕೇಳಲ್ಪಡಲು ಯೋಗ್ಯವಾಗಿರುವುದಿಲ್ಲ.
ಯದಾ ವತ್ಸಸ್ಯ ಪಾದೌ ದ್ವೌ ಪ್ರಸವೇ ಶಿರಸಾ ಸಹ |
ದೃಶ್ಯೇತೇ ದಾನಕಾಲಂ ತಮಾಹುಃ ಕಾಲವಿದೋ ಜನಾಃ ॥7॥
ಯಾವಾಗ ಕಪಿಲಾಧೇನುವಿನ ಉದರದಿಂದ ಅದರ ಕರುವಿನ ಎರಡು ಪಾದಗಳು ಪ್ರಸವವನ್ನು ತಲೆಯಿಂದ ಸಹಿತವಾಗಿ ಹೊಂದುತ್ತಿರುತ್ತವೋ ಆ ಕಾಲವು ಕಪಿಲಾ ಧೇನುವಿನ ದಾನ ಕಾಲವು ಎಂದು ಜ್ಞಾನಿಗಳಿಂದ ಕರೆಯಸಲ್ಪಟ್ಟಿದೆ.
ಅಂತರಿಕ್ಷಗತೋ ವತ್ಸೋ ಯಾವದ್ಭೂಮಿಂ ನ ಯಾಸ್ಯತಿ |
ಗೌಸ್ತಾವತ್ ಪೃಥಿವೀ ಜ್ಞೇಯಾ ತಸ್ಮಾದ್ ದೇಯಾ ತು ತಾದೃಶೀ ॥8॥
ಕಪಿಲಾಗೋವಿನ ಉದರದಿಂದ ಪ್ರಸವವನ್ನು ಹೊಂದುತ್ತಿರುವ ಕರುವು ಎಲ್ಲಿಯ ತನಕವು ಭೂಮಿಯನ್ನು ಮುಟ್ಟಿಲ್ಲವೋ ಅಲ್ಲಿಯ ತನಕ ಆ ಕಪಿಲಾ ಗೋವು ಸಮಗ್ರ ಭೂಮಂಡಲಕ್ಕೆ ಸಮಾನವಾಗಿದೆ. ಆದ್ದರಿಂದ ಅಂತಹ ಗೋವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.
ಯಾವಂತಿ ಧೇನೋ ರೋಮಾಣಿ ಸವತ್ಸಾಯಾ ಯುಧಿಷ್ಠಿರ |

ತಾವಂತ್ಯಃ ಸಿಕತಾಶ್ಚಾಪಿ ಗರ್ಭೋದಕಪರಿಪ್ಲುತಾಃ ॥9॥
ತಾವದ್ ವರ್ಷಸಹಸ್ರಾಣಿ ದಾತಾ ಸ್ವರ್ಗೇ ಮಹೀಯತೇ ॥10॥
ಯುಧಿಷ್ಠಿರನೇ, ಆ ಕರುವಿನಿಂದ ಸಹಿತವಾದ ಧೇನುವಿನಲ್ಲಿ ಎಷ್ಟು ರೋಮಗಳಿವೆಯೋ, ಗರ್ಭೋದಕದಿಂದ ತೊಯ್ಯಲ್ಪಟ್ಟ ಎಷ್ಟು ಕಣಗಳಿವೆಯೋ ಅಷ್ಟು ಸಾವಿರ ವರ್ಷಗಳ ಕಾಲ ದಾನ ಮಾಡಿದ ವ್ಯಕ್ತಿಯು ಸ್ವರ್ಗಲೋಕದಲ್ಲಿ ಪೂಜ್ಯನಾಗುತ್ತಾನೆ.
ಸುವರ್ಣಾಭರಣಾಂ ಕೃತ್ವಾ ಸವತ್ಸಾಂ ಕಪಿಲಾಂ ತಿಲೈಃ |
ಪ್ರಚ್ಛಾದ್ಯ ತಾಂ ತು ದದ್ಯಾದ್ ವೈ ಸರ್ವರತ್ನೈರಲಂಕೃತಾಮ್ ॥11॥
ಸಸಮುದ್ರನದೀ ತೇನ ಸಶೈಲವನಕಾನನಾ |
ಚತುರಂತಾ ಭವೇದ್ ದತ್ತಾ ನಾತ್ರ ಕಾರ್ಯಾ ವಿಚಾರಣಾ ॥12॥
ಕಪಿಲಾ ಧೇನುವನ್ನು ಕರುವಿನ ಜೊತೆಗೆ ಬಂಗಾರದಿಂದ ಅಲಂಕರಿಸಿ, ತಿಲದ ರಾಶಿಯ ಜೊತೆಗೆ ಸಮಸ್ತ ರತ್ನಗಳಿಂದ ಅಲಂಕರಿಸಿ ಯಾವಾತನು ದಾನ ಮಾಡುತ್ತಾನೋ ಆ ವ್ಯಕ್ತಿಯು ಸಮುದ್ರ, ನದಿ, ಪರ್ವತ, ಕಾಡು ಮೊದಲಾದ ವಸ್ತುಗಳಿಂದ ತುಂಬಿದ ಭೂಮಂಡಲವನ್ನು ದಾನ ಮಾಡಿದ ಫಲವನ್ನು ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಪೃಥಿವೀದಾನತುಲ್ಯೇನ ತೇನ ದಾನೇನ ಮಾನವಃ |
ಸಂಸಾರಸಾಗರಾತ್ ತೀರ್ಣೋ ಯಾತಿ ಲೋಕಂ ಪ್ರಜಾಪತೇಃ ॥13॥
ಭೂಮಿಯನ್ನು ದಾನ ಮಾಡಿದ ಸಮಾನವಾದ ಫಲವನ್ನು ಇಂತಹ ಗೋವನ್ನು ದಾನ ಮಾಡಿದ ಮನುಷ್ಯನು ಹೊಂದುತ್ತಾನೆ. ಸಂಸಾರ ಸಮುದ್ರದಿಂದ ಬಿಡುಗಡೆಯನ್ನು ಹೊಂದಿದವನಾಗಿ ಚತುರ್ಮುಖ ಬ್ರಹ್ಮನ ಲೋಕವನ್ನು ಹೊಂದುತ್ತಾನೆ.
ಬ್ರಹ್ಮಹಾ ಯದಿ ವಾ ಗೋಘ್ನೋ ಭ್ರೂಣಹಾ ಗುರುತಲ್ಪಗಃ |
ಮಹಾಪಾತಕಯುಕ್ತೋಽಪಿ ದಾನೇನಾನೇನ ಶುದ್ಧ್ಯತಿ ॥14॥
ಬ್ರಹ್ಮಹತ್ಯೆಯನ್ನು ಮಾಡಿರಲಿ, ಗೋಹತ್ಯೆಯನ್ನು ಮಾಡಿರಲಿ, ಭ್ರೂಣಹತ್ಯೆಯನ್ನು ಎಸಗಿರಲಿ, ಗುರುತಲ್ಪವನ್ನು ಏರಿರಲಿ, ಮಹಾಪಾತಕವನ್ನೇ ಮಾಡಿರಲಿ, ಇಂತಹ ಗೋದಾನದಿಂದ ಶುದ್ಧಿಯನ್ನು ಹೊಂದುತ್ತಾನೆ.
ಇದಂ ಪಠತಿ ಯಃ ಪುಣ್ಯಂ ಕಪಿಲಾದಾನಮುತ್ತಮಮ್ |
ಪ್ರಾತರುತ್ಥಾಯ ಮದ್ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥15॥
ಯಾವನು ಇಂತಹ ಕಪಿಲಾಧೇನುವಿನ ದಾನವನ್ನು ಪ್ರತಿದಿನವೂ ಪುಣ್ಯತರವೆಂದು ಪಠಿಸುತ್ತಾನೋ, ಪ್ರಾತಃಕಾಲದಲ್ಲಿ ಭಕ್ತಿಯಿಂದ ಪಠಿಸುವವನಿಗೆ ಫಲವೇನೆಂದು ಹೇಳುತ್ತೇನೆ, ಕೇಳಿಸಿಕೊ.
ಮನಸಾ ಕರ್ಮಣಾ ವಾಚಾ ಮತಿಪೂರ್ವಂ ಯುಧಿಷ್ಠಿರ |
ಪಾಪಂ ರಾತ್ರಿಕೃತಂ ಹನ್ಯಾದ್ ಅಸ್ಯಾಧ್ಯಾಯಸ್ಯ ಪಾಠಕಃ ॥16॥
ಮನಸ್ಸಿನಿಂದ, ಕರ್ಮದಿಂದ, ಮಾತಿನಿಂದ, ಮತಿಪೂರ್ವಕವಾಗಿ ಏನೆಲ್ಲ ಪಾಪಕರ್ಮಗಳನ್ನು ಮಾಡಿರುತ್ತಾನೋ ಅಂಥವನು ಈ ಅಧ್ಯಾಯವನ್ನು ಪ್ರತಿದಿನವು ಪಾಠ ಮಾಡುವದರಿಂದ ರಾತ್ರಿ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುತ್ತಾನೆ.
ಇದಮಾವರ್ತಮಾನಸ್ತು ಶ್ರಾದ್ಧೇ ಯಸ್ತರ್ಪಯೇದ್ ದ್ವಿಜಾನ್ |
ತಸ್ಯಾಪ್ಯಮೃತಮಶ್ನಂತಿ ಪಿತರೋಽತ್ಯಂತಹರ್ಷಿತಾಃ ॥17॥
ಯಾವಾತನು ಶ್ರಾದ್ಧಕಾಲದಲ್ಲಿ ಈ ಅಧ್ಯಾಯದ ಪಾರಾಯಣವನ್ನು ಮಾಡುತ್ತಾ, ಬ್ರಾಹ್ಮಣರನ್ನು ಭೋಜನಾದಿಗಳಿಂದ ತೃಪ್ತಿಪಡಿಸುತ್ತಾನೋ ಅಂತಹವನ ಪಿತೃಗಳು ಅತ್ಯಂತ ಹರ್ಷಿತರಾಗಿ ಅಮೃತವನ್ನೇ ಭೋಜನ ಮಾಡುತ್ತಾರೆ.
ಯಶ್ಚೇದಂ ಶೃಣುಯಾದ್ ಭಕ್ತ್ಯಾ ಮದ್ಗತೇನಾಂತರಾತ್ಮನಾ |
ತಸ್ಯ ರಾತ್ರಿಕೃತಂ ಸರ್ವಂ ಪಾಪಮಾಶು ಪ್ರಣಶ್ಯತಿ ॥18॥
ಯಾವಾತನು ನನ್ನಲ್ಲೇ ಮನಸ್ಸುಳ್ಳವರಾಗಿ ಈ ಅಧ್ಯಾಯವನ್ನು ಭಕ್ತಿಯಿಂದ ಶ್ರವಣ ಮಾಡುತ್ತಾನೋ ಅವನು ರಾತ್ರಿ ಮಾಡಿದ ಸಮಸ್ತ ಪಾಪಗಳನ್ನು ಕೂಡಲೇ ನಾಶ ಪಡಿಸಿಕೊಳ್ಳುತ್ತಾನೆ.
ಅತಃ ಪರಂ ವಿಶೇಷಂ ತು ಕಪಿಲಾನಾಂ ಬ್ರವೀಮಿ ತೇ ॥19॥
ಇನ್ನು ಮುಂದೆ ಇದಕ್ಕಿಂತ ವಿಶೇಷವಾದ ಕಪಿಲಾಧೇನುಗಳ ಮಹತ್ವವನ್ನು ತಿಳಿಸುತ್ತೇನೆ.
ಯಾಶ್ಚೈತಾಃ ಕಪಿಲಾಃ ಪ್ರೋಕ್ತಾ ದಶ ರಾಜನ್ ಮಯಾ ತವ |
ತಾಸಾಂ ಚತಸ್ರಃ ಪ್ರವರಾಃ ಪುಣ್ಯಾಃ ಪಾಪಪ್ರಣಾಶನಾಃ ॥20॥
ನಾನು ಹತ್ತು ಬಗೆಯ ಕಪಿಲಾಧೇನುಗಳನ್ನು ಹಿಂದೆ ತಿಳಿಸಿದ್ದೇನೆ. ಆ ಹತ್ತರಲ್ಲಿ ಪಾಪವನ್ನು ನಾಶಮಾಡುವ ನಾಲ್ಕು ಬಗೆಯ ಧೇನುಗಳು ಪುಣ್ಯಪ್ರದವಾದವುಗಳು, ಶ್ರೇಷ್ಠವಾದವುಗಳು ಎಂದು ಹೇಳುತ್ತಾರೆ.
ಸುವರ್ಣಕಪಿಲಾ ಪುಣ್ಯಾ ತಥಾ ರಕ್ತಾಕ್ಷಿಪಿಂಗಲಾ |
ಪಿಂಗಲಾಕ್ಷೀ ಚ ಯಾ ಗೌಶ್ಚ ಯಾ ಸ್ಯಾತ್ ಪಿಂಗಲಪಿಂಗಲಾ ॥21॥
ಮೊದಲನೆಯದ್ದು ಸುವರ್ಣಕಪಿಲಾ, ಎರಡನೆಯದು ಗೌರಪಿಂಗಲ, ಮೂರನೆಯದು ರಕ್ತಪಿಂಗಾಕ್ಷೀ, ನಾಲ್ಕನೆಯದ್ದು ಗಲಪಿಂಗಾಕ್ಷೀ, ಐದನೆಯದ್ದು ಬಭ್ರುವರ್ಣ, ಆರನೆಯದು ಶ್ವೇತಪಿಂಗಲಾ, ಏಳನೆಯದ್ದು ವಕ್ರಪಿಂಗಾಕ್ಷೀ, ಎಂಟನೆಯದ್ದು ಚರಪಿಂಗಲಾ, ಒಂಬತ್ತನೆಯದ್ದು ಪಾಟಲ, ಹತ್ತುನೆಯದ್ದು ಪುಚ್ಛ ಪಿಂಗಲಾ. ಇವುಗಳಲ್ಲಿ ಸುವರ್ಣಕಪಿಲಾ, ರಕ್ತಾಕ್ಷಿಪಿಂಗಲಾ, ಪಿಂಗಲಾಕ್ಷೀ, ಪಿಂಗಲ ಪಿಂಗಲಾ.
ಏತಾಶ್ಚತಸ್ರಃ ಪ್ರವರಾಃ ಪವಿತ್ರಾಃ ಪಾಪನಾಶನಾಃ |
ನಮಸ್ಕೃತಾ ವಾ ಸ್ಪೃಷ್ಟಾ ವಾ ಘ್ನಂತಿ ಪಾಪಂ ನರಸ್ಯ ತು ॥22॥
ಈ ನಾಲ್ಕು ಬಗೆಯ ಕಾಮಧೇನುಗಳು ಶ್ರೇಷ್ಠವೂ, ಪವಿತ್ರವೂ, ಪಾಪಹರವೂ ಆಗಿವೆ. ಇವುಗಳ ಸ್ಪರ್ಶನ ಮತ್ತು ನಮಸ್ಕಾರಗಳಿಂದಲೇ

ಮನುಷ್ಯನ ಪಾಪವು ದೂರವಾಗುತ್ತದೆ.
ಯಸ್ಯೈತಾಃ ಕಪಿಲಾಃ ಸಂತಿ ಗೃಹೇ ಪಾಪಪ್ರಣಾಶನಾಃ |
ತತ್ರ ಶ್ರೀರ್ವಿಜಯಃ ಕೀರ್ತಿಃ ಸ್ಥಿರಾ ನಿತ್ಯಂ ಯುಧಿಷ್ಠಿರ ॥23॥
ಪಾಪನಾಶಕಗಳಾದ ಕಪಿಲಾಧೇನುಗಳು ಯಾರ ಮನೆಯಲ್ಲಿ ಇವೆಯೋ ಅವನಲ್ಲಿ ಸಂಪತ್ತು, ವಿಜಯ, ಕೀರ್ತಿ, ಸಮೃದ್ಧಿ ಇವುಗಳು ನಿತ್ಯವಾಸವಾಗಿರುತ್ತವೆ.
ಏತಾಸಾಂ ಪ್ರೀತಿಮಾಯಾತಿ ಕ್ಷೀರೇಣ ತು ವೃಷಧ್ವಜಃ |
ದಧ್ನಾ ಚ ತ್ರಿದಶಾಃ ಸರ್ವೇ ಘೃತೇನ ಚ ಹುತಾಶನಃ ॥24॥
ಈ ಹಸುಗಳ ಹಾಲಿನಿಂದ ಭಗವಾನ್ ಶಂಕರನು ಸುಪ್ರೀತನಾಗುತ್ತಾನೆ. ಇವುಗಳ ಮೊಸರಿನಿಂದ ದೇವತೆಗಳು, ತುಪ್ಪದಿಂದ ಯಜ್ಞೇಶ್ವರನು ತೃಪ್ತರಾಗುತ್ತಾರೆ.
ಪಿತಾ ಪಿತಾಮಹಾಶ್ಚೈವ ತಥೈವ ಪ್ರಪಿತಾಮಹಾಃ |
ಸಕೃದ್ದತ್ತೇನ ತುಷ್ಯಂತಿ ವರ್ಷಕೋಟಿಂ ಯುಧಿಷ್ಠಿರ ॥25॥
ಕಪಿಲಾಧೇನುವಿನ ತುಪ್ಪ, ಹಾಲು, ಮೊಸರುಗಳನ್ನು ಶ್ರೋತ್ರಿಯ ಬ್ರಾಹ್ಮಣರಿಗೆ ಒಮ್ಮೆ ದಾನ ಮಾಡಿದರೂ ತಂದೆ, ಅಜ್ಜ, ಮುತ್ತಜ್ಜ ಇವರೆಲ್ಲರೂ ಕೋಟಿ ವರ್ಷಗಳ ಕಾಲ ಸಂತೋಷವನ್ನು ಹೊಂದುತ್ತಾರೆ.
ಕಪಿಲಾನಾಂ ಘೃತಂ ಕ್ಷೀರಂ ದಧಿ ಪಾಯಸಮೇವ ವಾ |
ಶ್ರೋತ್ರಿಯೇಭ್ಯಃ ಸಕೃದ್ದತ್ವಾ ನರಃ ಪಾಪೈಃ ಪ್ರಮುಚ್ಯತೇ ॥26॥
ಕಪಿಲಾಧೇನುವಿನ ತುಪ್ಪ-ಹಾಲು-ಮೊಸರು-ಪಾಯಸಗಳನ್ನು ಶ್ರೋತ್ರಿಯ ಬ್ರಾಹ್ಮಣನಿಗೆ ಒಂದು ಬಾರಿ ದಾನ ಮಾಡಿದರೂ ಮನುಷ್ಯನು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.
ಉಪವಾಸಂ ತು ಯಃ ಕೃತ್ವಾಪ್ಯಹೋರಾತ್ರಂ ಜಿತೇಂದ್ರಿಯಃ |
ಕಪಿಲಾಪಂಚಗವ್ಯಂ ತು ಪೀತ್ವಾ ಚಾಂದ್ರಾಯಣಾತ್ ಪರಮ್ ॥27॥
ಯಾವನು ಹಗಲು-ರಾತ್ರಿ ಜಿತೇಂದ್ರಿಯನಾಗಿ ಉಪವಾಸದಲ್ಲಿದ್ದು ಕಪಿಲಾಧೇನುವಿನ ಪಂಚಗವ್ಯವನ್ನು ಪಾನ ಮಾಡುತ್ತಾನೋ ಅವನು ಚಾಂದ್ರಾಯಣ ಫಲಕ್ಕಿಂತ ಅಧಿಕವಾದ ಫಲವನ್ನು ಹೊಂದುತ್ತಾನೆ.
ಸೌಮ್ಯೇ ಮುಹೂರ್ತೇ ತತ್ ಪ್ರಾಶ್ಯ ಶುದ್ಧಾತ್ಮಾ ಶುದ್ಧಮಾನಸಃ |
ಕ್ರೋಧಾನೃತವಿನಿರ್ಮುಕ್ತೋ ಮದ್ಗತೇನಾಂತರಾತ್ಮನಾ ॥28॥
ಯಾವನು ಕೋಪ, ಅಸತ್ಯಗಳನ್ನು ಬಿಟ್ಟು ಭಗವಂತನಲ್ಲಿಯೇ ನೆಲೆಗೊಂಡ ಮನಸ್ಸುಳ್ಳವನಾಗಿ, ಶುಭವಾದ ಮುಹೂರ್ತದಲ್ಲಿ ಕಪಿಲಾಧೇನುವಿನ ಪಂಚಗವ್ಯವನ್ನು ಪ್ರಾಶನ ಮಾಡುತ್ತಾನೋ ಅವನು ಶುದ್ಧಾತ್ಮನೂ, ಶುದ್ಧ ಅಂತಕರಣವುಳ್ಳವನೂ ಆಗುತ್ತಾನೆ.
ಕಪಿಲಾಪಂಚಗವ್ಯೇನ ಸಮಂತ್ರೇಣ ಪೃಥಕ್ ಪೃಥಕ್ |
ಯೋ ಮತ್ಪ್ರತಿಕೃತಿಂ ವಾಽಪಿ ಶಂಕರಾಕೃತಿಮೇವ ವಾ ॥29॥
ಸ್ನಾಪಯೇದ್ ವಿಷುವೇ ಯಸ್ತು ಸೋಽಶ್ವಮೇಧಫಲಂ ಲಭೇತ್ ॥30॥
ಯಾರು ವಿಷುವತ್ ಪುಣ್ಯಕಾಲದಲ್ಲಿ ಪ್ರತ್ಯೇಕವಾಗಿ ಮಂತ್ರಗಳನ್ನು ಪಠಿಸುತ್ತಾ, ಕಪಿಲಾಧೇನುವಿನ ಪಂಚಗವ್ಯದಿಂದ ನನ್ನ ಪ್ರತಿಮೆಗಾಗಲಿ, ರುದ್ರನ ಪ್ರತಿಮೆಗಾಗಲಿ ಅಭಿಷೇಕವನ್ನು ಮಾಡಿದರೆ ಅವನು ಅಶ್ವಮೇಧ ಮಾಡಿದ ಫಲವನ್ನು ಹೊಂದುತ್ತಾನೆ.
ಸ ಮುಕ್ತಪಾಪಃ ಪೂತಾತ್ಮಾ ಯಾನೇನಾಂಬರಶೋಭಿನಾ |
ಮಮ ಲೋಕಂ ವ್ರಜೇನ್ಮುಕ್ತೋ ರುದ್ರೋಕ್ತಮಥಾಪಿ ವಾ ॥31॥
ಆ ವ್ಯಕ್ತಿಯು ಸಮಸ್ತ ಪಾಪಗಳಿಂದ ಬಿಡುಗಡೆಯನ್ನು ಹೊಂದಿದವನಾಗಿ ಶುದ್ಧಾಂತಃಕರಣದವನಾಗಿ ಆಕಾಶದಲ್ಲಿ ಬೆಳಗುವ ವಿಮಾನದಲ್ಲಿ ಕುಳಿತು ನನ್ನ ಲೋಕಕ್ಕಾಗಲಿ, ರುದ್ರನ ಲೋಕಕ್ಕಾಗಲಿ ಹೋಗುತ್ತಾನೆ.
ಬ್ರಹ್ಮಣಾ ತು ಪುರಾ ಸೃಷ್ಟಾ ಕಪಿಲಾ ಕಾಂಚನಪ್ರಭಾ |
ಅಗ್ನಿಕುಂಡಾತ್ ಪರೈರ್ಮಂತ್ರೈರ್ಹೋಮಧೇನುರ್ಮಹಾಪ್ರಭಾ ॥32॥
ಬಂಗಾರದ ಬಣ್ಣದಿಂದ ಬೆಳಗುವ ಕಪಿಲಾಧೇನುವು ಹಿಂದೆ ಚತುರ್ಮುಖ ಬ್ರಹ್ಮನಿಂದ ಶ್ರೇಷ್ಠವಾದ ಮಂತ್ರಗಳ ಮೂಲಕ ಅಗ್ನಿಕುಂಡದಿಂದ ಸೃಷ್ಟಿಸಲ್ಪಟ್ಟಿದೆ. ಮಹಾಕಾಂತಿಸಂಪನ್ನವಾದ ಈ ಕಪಿಲಾಧೇನುವನ್ನೇ ಹೋಮಧೇನು ಎನ್ನುತ್ತಾರೆ.
ಸೃಷ್ಟಮಾತ್ರಾಂ ತು ತಾಂ ದೃಷ್ಟ್ವಾ ದೇವಾ ರುದ್ರಾದಯೋ ದಿವಿ |
ಸಿದ್ಧಾ ಬ್ರಹ್ಮರ್ಷಯಶ್ಚೈವ ವೇದಾಃ ಸಾಂಗಾಃ ಸಹಾಧ್ವರಾಃ ॥33॥
ಸಾಗರಾಃ ಸರಿತಶ್ಚೈವ ಪರ್ವತಾಃ ಸಬಲಾಹಕಾಃ |
ಗಂಧರ್ವಾಪ್ಸರಸೋ ಯಕ್ಷಾಃ ಪನ್ನಗಾಶ್ಚಾಪ್ಯುಪಸ್ಥಿತಾಃ ॥34॥
ಅಗ್ನಿಕುಂಡದಿಂದ ಬ್ರಹ್ಮದೇವರ ಮೂಲಕ ಸೃಷ್ಟವಾದ ಕಪಿಲಾಧೇನುವನ್ನು ನೋಡಿದ ಕೂಡಲೇ ರುದ್ರಾದಿ ದೇವತೆಗಳು, ಸಿದ್ಧರು, ಬ್ರಹ್ಮರ್ಷಿಗಳು, ವೇದಗಳು, ಷಡಂಗಗಳು, ಸಮಸ್ತ ಯಜ್ಞಗಳು, ಸಮುದ್ರಗಳು, ನದಿ-ಸರೋವರಗಳು, ಪರ್ವತಗಳು, ಸಮಸ್ತ ಮೇಘಗಳು, ಗಂಧರ್ವರು, ಅಪ್ಸರೆಯರು, ಯಕ್ಷರು, ಪನ್ನಗಗಳು (ಸರ್ಪಗಳು) ಎಲ್ಲರೂ ಅಲ್ಲಿ ಸನ್ನಿಹಿತರಾದರು.
ಸರ್ವೇ ವಿಸ್ಮಯಮಾಪನ್ನಾಃ ಶಿಖಿಮಧ್ಯೇ ಮಹಾಪ್ರಭಾಮ್ |
ಮಂತ್ರೈಶ್ಚ ವಿವಿಧೈಃ ಸರ್ವಾಸ್ತುಷ್ಟುವುಸ್ತಾಮನೇಕಶಃ ॥35॥
ಎಲ್ಲರೂ ಪರಮ ಆಶ್ಚರ್ಯವನ್ನು ಹೊಂದಿದವರಾಗಿ, ಅಗ್ನಿಯ ಮಧ್ಯದಲ್ಲಿ ಮಹಾತೇಜಸ್ಸಿನಿಂದ ಕಂಗೊಳಿಸುವ ಕಪಿಲಾಧೇನುವನ್ನು ಬಗೆ ಬಗೆಯ ಮಂತ್ರಗಳಿಂದ ಅನೇಕ ವಿಧವಾಗಿ ಸ್ತೋತ್ರ ಮಾಡಿದರು.
ಕೃತಾಂಜಲಿಪುಟಾಃ ಸರ್ವೇ ತಾಮೃಶೃಂಗೀಂ ತ್ರಿಲೋಚನಾಮ್ |

ಶಿರೋಭಿಃ ಪತಿತಾ ಭೂಮೌ ಸವತ್ಸಾಮಮೃತಾರಣಿಮ್ ॥36॥
ಊಚುಃ ಪ್ರಾಂಜಲಯಃ ಸರ್ವೇ ಚತುರ್ವಕ್ತ್ರಂ ಪಿತಾಮಹಮ್ ॥37॥
ಸಮಸ್ತ ದೇವತೆಗಳು ಕೈಮುಗಿದುಕೊಂಡು, ಕರುವಿನಿಂದ ಸಹಿತವಾದ, ಮುಕ್ತಿಯನ್ನೇ ನೀಡಲು ಸಮರ್ಥವಾದ, ಕೆಂಪಾದ ಶೃಂಗದಿಂದ ಕೂಡಿರುವ, ರುದ್ರನಂತೆ ಬೆಳಗುವ ಕಪಿಲಧೇನುವನ್ನು ಕಂಡು ಸಾಷ್ಟಾಂಗ ನಮಸ್ಕರಿಸಿ, ಎಲ್ಲರೂ ಕೈಮುಗಿದು ಪಿತಾಮಹನಾದ ಚತುರ್ಮುಖ ಬ್ರಹ್ಮನನ್ನು ಕುರಿತು ಹೇಳಿದರು.
ದೇವತಾಃ
ಆಜ್ಞಾಪಯ ಮಹಾದೇವ ಕಿಂ ತೇ ಕರ್ಮ ಪ್ರಿಯಂ ವಿಭೋ ॥38॥
ದೇವತೆಗಳು ನಾವು ಯಾವ ಕರ್ಮವನ್ನು ಮಾಡಬೇಕು ಎಂಬುದನ್ನು ನಮ್ಮ ಪಾಲಿಗೆ ತಿಳಿಸು.
ಶ್ರೀಭಗವಾನ್
ಏವಮುಕ್ತಃ ಸುರೈಃ ಸರ್ವೈರ್ಬ್ರಹ್ಮಾ ವಚನಮಬ್ರವೀತ್ ॥39॥
ಶ್ರೀಭಗವಾನ್ ಈ ರೀತಿಯಾಗಿ ದೇವತೆಗಳು ಚತುರ್ಮುಖ ಬ್ರಹ್ಮನ ಬಳಿ ಹೇಳಿದಾಗ ಬ್ರಹ್ಮನು ಹೀಗೆ ಹೇಳುತ್ತಾನೆ.
ಬ್ರಹ್ಮಾ
ಭವಂತೋಽಪ್ಯನುಗೃಹ್ಣಂತು ದೋಗ್ಧ್ರೀಮೇನಾಂ ಪಯಸ್ವಿನೀಮ್ ॥40॥
ಬ್ರಹ್ಮಾ ಸಮಸ್ತ ದೇವತೆಗಳೇ, ಹಾಲನ್ನು ನೀಡುವ ಈ ಹಸುವನ್ನು ನೀವೆಲ್ಲರೂ ಅನುಗ್ರಹಿಸಿರಿ.
ಹೋಮಧೇನುರಿಯಂ ಯಜ್ಞೇ ಹ್ಯಗ್ನೀನ್ ಸಂತರ್ಪಯಿಷ್ಯತಿ |
ಅತೋಽಗ್ನಿಸ್ತರ್ಪಿತಃ ಸರ್ವಾನ್ ಭವತಸ್ತರ್ಪಯಿಷ್ಯತಿ ॥41॥
ಹೋಮಧೇನುವೆನಿಸಿದ ಈ ಕಾಮಧೇನುವು ಸಮಸ್ತ ಅಗ್ನಿಗಳನ್ನು ಸಂತೋಷ ಪಡಿಸುತ್ತದೆ. ಅದರಿಂದ ಸಂತುಷ್ಟನಾದ ಅಗ್ನಿಯು ನಿಮ್ಮೆಲ್ಲರನ್ನೂ ಸಂತೋಷ ಪಡಿಸುತ್ತಾನೆ.
ಪ್ರೀತಾಃ ಕ್ಷೀರಾಮೃತೇನಾಸ್ಯಾ ಜಾತವೀರ್ಯಪರಾಕ್ರಮಾಃ |
ಜಯಿಷ್ಯಥ ಯಥಾಕಾಮಂ ದಾನವಾನ್ ಸರ್ವ ಏವ ತು ॥42॥
ಈ ಹಸುವಿನ ಅಮೃತಮಯವಾದ ಹಾಲಿನಿಂದ ಪ್ರೀತರಾದ ನೀವೆಲ್ಲರೂ ಶ್ರೇಷ್ಠವಾದ ಬಲವನ್ನು ಹೊಂದಿದವರಾಗಿ ಇಚ್ಛೆ ಬಂದಂತೆ ದಾನವರನ್ನು ಜಯಿಸಿರಿ.
ಜಾತವೀರ್ಯಬಲೈಶ್ವರ್ಯಾಃ ಸತ್ತ್ವವಂತೋ ಜಿತಾರಯಃ |
ಸದೇವಮಾತೃಕಾಃ ಸರ್ವಾಃ ಪಾಲಯಿಷ್ಯಥ ವೈ ಪ್ರಜಾಃ ॥43॥
ಸಮಸ್ತ ಬಲ-ಐಶ್ವರ್ಯಗಳಿಂದ ತುಂಬಿದವರಾಗಿ, ಸತ್ವವಂತರಾಗಿ, ಶತ್ರುಗಳನ್ನು ಗೆದ್ದವರಾಗಿ, ಮಳೆಯಿಂದ ಸಸ್ಯಭರಿತವಾದ ದೇಶವನ್ನು ಹೊಂದಿದವರಾಗಿ ಸಮಸ್ತ ಪ್ರಜೆಗಳನ್ನು ರಕ್ಷಿಸಿರಿ.
ಪಾಲಿತಾಶ್ಚ ಪ್ರಜಾಃ ಸರ್ವಾ ಭವದ್ಭಿರಿಹ ಧರ್ಮತಃ |
ಪೂಜಯಿಷ್ಯಂತಿ ವೋ ನಿತ್ಯಂ ಯಜ್ಞೈರ್ವಿವಿಧದಕ್ಷಿಣೈಃ ॥44॥
ಸಮಸ್ತ ಪ್ರಜೆಗಳನ್ನು ನೀವು ರಕ್ಷಿಸಿದಲ್ಲಿ ಆ ಪ್ರಜೆಗಳು ನಿಮ್ಮನ್ನು ಯಜ್ಞದ ಮೂಲಕ ವಿವಿಧ ದಕ್ಷಿಣೆಗಳಿಂದ ಪೂಜಿಸುತ್ತಾರೆ.
ಶ್ರೀಭಗವಾನ್
ಏವಮುಕ್ತಾಃ ಸುರಾಃ ಸರ್ವೇ ಬ್ರಹ್ಮಣಾ ಪರಮೇಷ್ಠಿನಾ |
ತತಃ ಸಂಹೃಷ್ಟಮನಸಃ ಕಪಿಲಾಯೈ ವರಂ ದದುಃ ॥45॥
ಶ್ರೀಭಗವಾನ್ ಹೀಗೆ ಚತುರ್ಮುಖ ಬ್ರಹ್ಮನು ದೇವತೆಗಳನ್ನು ಕುರಿತು ಹೇಳಿದ ಬಳಿಕ ಆ ದೇವತೆಗಳೆಲ್ಲರೂ ಸಂತುಷ್ಟರಾಗಿ ಕಪಿಲಧೇನುವಿಗೆ ವರವನ್ನು ನೀಡಿದರು.
ದೇವತಾಃ
ಯಸ್ಮಾಲ್ಲೋಕಹಿತಾಯಾದ್ಯ ಬ್ರಹ್ಮಣಾ ತ್ವಂ ವಿನಿರ್ಮಿತಾ |
ತಸ್ಮಾತ್ ಪೂತಾ ಪವಿತ್ರಾ ಚ ಭವ ಪಾಪವ್ಯಪೋಹನೀ ॥46॥
ದೇವತೆಗಳು ಕಪಿಲಧೇನುವೇ, ಚತುರ್ಮುಖ ಬ್ರಹ್ಮನ ಮೂಲಕ ಲೋಕದ ಹಿತಕ್ಕೋಸ್ಕರ ನೀನು ನಿರ್ಮಿಸಲ್ಪಟ್ಟಿರುವೆಯೋ ಆದ್ದರಿಂದ ನೀನು ಪವಿತ್ರಳಾಗಿ ಸಮಸ್ತ ಜೀವರ ಪಾಪಗಳನ್ನು ಕಳೆಯುವವಳಾಗಿ ಇರು.
ಯೇ ತ್ವಾಂ ದೃಷ್ಟ್ವಾ ನಮಸ್ಯಂತಿ ಸ್ಪೃಶಂತಿ ಚ ಕರೈರ್ನರಾಃ |
ತೇಷಾಂ ವರ್ಷಕೃತಂ ಪಾಪಂ ತ್ವದ್ಭಕ್ತಾನಾಂ ಪ್ರಣಶ್ಯತಿ ॥47॥
ಕಪಿಲಧೇನುವೇ, ನಿನ್ನನ್ನು ನೋಡಿ ಯಾರು ನಮಸ್ಕರಿಸುತ್ತಾರೋ ಕೈಗಳಿಂದ ಮುಟ್ಟುತ್ತಾರೋ ಅಂತಹ ನಿನ್ನ ಭಕ್ತರಿಗೆ ಒಂದು ವರ್ಷಗಳಲ್ಲಿ ಆಚರಿಸಿದ ಪಾಪವು ನಾಶವಾಗುತ್ತದೆ.
ಅಕಾಮಕೃತಮಜ್ಞಾತಮದೃಷ್ಟಂ ಯತ್ತು ಪಾತಕಮ್ |
ತ್ವಾಂ ದೃಷ್ಟ್ವಾ ಯೇ ನಮಸ್ಯಂತಿ ನರಾಃ ಸರ್ವಂಸಹೇತಿ ಚ ॥48॥
ಸಂಕಲ್ಪಿಸದೆ ಮಾಡಿದ, ತಿಳಿಯದೆ ಮಾಡಿದ, ಕಾಣದೆ ಮಾಡಿದ ಪಾಪಗಳೆಲ್ಲವೂ ನಿನ್ನನ್ನು ನೋಡಿದ ಕೂಡಲೇ ಯಾರು ನಮಸ್ಕರಿಸುತ್ತಾರೋ ಅವರ ಪಾಲಿಗೆ ಪರಿಹಾರವಾಗಲಿ. ನೀನು `ಸರ್ವಂಸಹ' ಎಂಬ ಬಿರುದಿನಿಂದ ಭೂಷಿತಳಾಗು.
ತೇಷಾಂ ತದ್ವಿಲಯಂ ಯಾತಿ ತಮಃ ಸೂರ್ಯೋದಯೇ ಯಥಾ ॥49॥
ನಿನ್ನನ್ನು ನಮಸ್ಕರಿಸಿದ ವ್ಯಕ್ತಿಗಳ ಪಾಪಗಳೆಲ್ಲವೂ ಸೂರ್ಯೋದಯವಾದಾಗ ಕತ್ತಲು ಪರಿಹಾರವಾದಂತೆ ನಾಶವಾಗುತ್ತದೆ.
ಶ್ರೀಭಗವಾನ್

ಇತ್ಯುಕ್ತಾಸ್ತ್ವಸ್ಯೈ ವರಂ ದತ್ತಾತ್ವ ಪ್ರಯಯುಸ್ತೇ ಯಥಾಗತಮ್ |
ಲೋಕನಿಸ್ತರಣಾರ್ಥಾಯ ಸಾ ಚ ಲೋಕಾಂಶ್ಚಚಾರ ಹ ॥50॥
ಶ್ರೀಭಗವಾನ್ ಈ ರೀತಿಯಾಗಿ ದೇವತೆಗಳು ಕಪಿಲಧೇನುವಿಗೆ ವರವನ್ನು ನೀಡಿ ತಾವು ತಮ್ಮ ಮನೆಗಳಿಗೆ ತೆರಳಿದರು.
ಕಪಿಲಧೇನುವಾದರೂ ಸಮಸ್ತ ಜೀವರ ಪಾಪವನ್ನು ಪರಿಹರಿಸುವ ದೃಷ್ಟಿಯಿಂದ ಸಮಸ್ತ ಲೋಕಗಳಲ್ಲಿಯೂ ಸಂಚರಿಸಿದಳು.
ತಸ್ಯಾಮೇವ ಸಮುದ್ಭೂತಾಃ ಶೇಷಾಶ್ಚ ಕಪಿಲಾ ನವ |
ವಿಚರಂತಿ ಮಹೀಮೇನಾಂ ಲೋಕಾನುಗ್ರಹಕಾರಣಾತ್ ॥51॥
ಅಂತಹ ಕಪಿಲಧೇನುವಿನಿಂದ ಉತ್ಪನ್ನವಾದ ಉಳಿದ ಕಪಿಲಗೋವುಗಳೇ ಲೋಕಾನುಗ್ರಹ ಕಾರಣದಿಂದ ಸಂಚರಿಸುತ್ತಿವೆ.
ತಸ್ಮಾತ್ತು ಕಪಿಲಾ ದೇಯಾ ಪರತ್ರ ಹಿತಮಿಚ್ಛತಾ ॥52॥
ಆದ್ದರಿಂದ ಪರಲೋಕದ ಹಿತವನ್ನು ಬಯಸುವ ವ್ಯಕ್ತಿಗಳು ಕಪಿಲಾಧೇನುವನ್ನು ದಾನ ಮಾಡಬೇಕು.
ಯದಾ ಚ ದೀಯತೇ ರಾಜನ್ ಕಪಿಲಾ ಹ್ಯಗ್ನಿಹೋತ್ರಿಣೇ |
ತದಾಽಗ್ರಶೃಂಗಯೋಸ್ತಸ್ಯಾ ವಿಷ್ಣುರಿಂದ್ರಶ್ಚ ತಿಷ್ಠತಃ ॥53॥
ರಾಜನೇ, ಅಗ್ನಿಹೋತ್ರನಿರತನಾದ ವ್ಯಕ್ತಿಗೆ ಕಪಿಲಾಧೇನುವನ್ನು ದಾನ ಮಾಡಿದಾಗ ಆ ಕಪಿಲಾಧೇನುವಿನ ಕೊಂಬಿನ ಅಗ್ರಭಾಗದಲ್ಲಿ ವಿಷ್ಣು-ಇಂದ್ರರು ಸನ್ನಿಹಿತರಾಗಿರುತ್ತಾರೆ.
ಚಂದ್ರುವಜ್ರಧರೌ ಚಾಪಿ ತಿಷ್ಠತಃ ಶೃಂಗಮೂಲಯೋಃ |
ಶೃಂಗಮಧ್ಯೇ ತಥಾ ಬ್ರಹ್ಮಾ ಲಲಾಟೇ ಗೋವೃಷಧ್ವಜಃ ॥54॥
ಕೊಂಬುಗಳ ಬುಡದಲ್ಲಿ ಚಂದ್ರನು, ವಜ್ರಧರನಾದ ಇಂದ್ರನು ಇರುತ್ತಾರೆ. ಕೊಂಬುಗಳ ಮಧ್ಯದಲ್ಲಿ ಚತುರ್ಮುಖ ಬ್ರಹ್ಮನೂ, ಹಣೆಯಲ್ಲಿ ಪರಶಿವನು ಇರುತ್ತಾರೆ.
ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿಭಾಸ್ಕರೌ |
ದಂತೇಷು ಮರುತೋ ದೇವಾ ಜಿಹ್ವಾಯಾಂ ಚ ಸರಸ್ವತೀ ॥55॥
ರೋಮಾಂತೇ ಮುನಯಃ ಸರ್ವೇ ಚರ್ಮಣ್ಯೇವ ಪ್ರಜಾಪತಿಃ |
ನಿಃಶ್ವಾಸೇಷು ಸ್ಥಿತಾ ವೇದಾಃ ಸಷಡಂಗಪದಕ್ರಮಾಃ ॥56॥
ಕಪಿಲಾಧೇನುವಿನ ಕಿವಿಯಲ್ಲಿ ಅಶ್ವಿನೀದೇವತೆಗಳೂ, ಕಣ್ಣುಗಳಲ್ಲಿ ಸೂರ್ಯ- ಚಂದ್ರರು, ಹಲ್ಲುಗಳಲ್ಲಿ ಮರುದ್ದೇವತೆಗಳು, ನಾಲಿಗೆಯಲ್ಲಿ ಸರಸ್ವತಿಯೂ, ರೋಮಕೂಪಗಳಲ್ಲಿ ಎಲ್ಲ ಮುನಿಗಳು, ಚರ್ಮದಲ್ಲಿ ಪ್ರಜಾಪತಿಯೂ, ಅದರ ನಿಃಶ್ವಾಸದಲ್ಲಿ ಷಡಂಗಗಳಿಂದ ಮತ್ತು ಪದಕ್ರಮಗಳಿಂದ ಸಹಿತವಾದ ವೇದಗಳು ಇರುತ್ತವೆ.
ನಾಸಾಪುಟೇ ಸ್ಥಿತಾ ಗಂಧಾಃ ಪುಷ್ಪಾಣಿ ಸುರಭೀಣಿ ಚ |
ಅಧರೇ ವಸವಃ ಸರ್ವೇ ಮುಖೇ ಚಾಗ್ನಿಃ ಪ್ರತಿಷ್ಠಿತಃ ॥57॥
ಮೂಗಿನ ಹೊಳ್ಳೆಗಳಲ್ಲಿ ಗಂಧ, ಸುಗಂಧಯುಕ್ತವಾದ ಪುಷ್ಪಗಳು ಇರುತ್ತವೆ. ಕೆಳತುಟಿಯಲ್ಲಿ ವಸುಗಳು, ಮುಖದಲ್ಲಿ ಅಗ್ನಿಯು ಇರುತ್ತಾನೆ.
ಸಾಧ್ಯಾ ದೇವಾಃ ಸ್ಥಿತಾಃ ಕಕ್ಷೇ ಗ್ರೀವಾಯಾಂ ಪಾರ್ವತೀ ಸ್ಥಿತಾ |
ಪೃಷ್ಠೇ ಚ ನಕ್ಷತ್ರಗಣಾಃ ಕಕುದ್ದೇಶೇ ನಭಃ ಸ್ಥಿತಮ್ ॥58॥
ಅಪಾನೇ ಸರ್ವತೀರ್ಥಾನಿ ಗೋಮೂತ್ರೇ ಜಾಹ್ನವೀ ಸ್ವಯಮ್ |
ಅಷ್ಟೈಶ್ವರ್ಯಮಯೀ ಲಕ್ಷ್ಮೀರ್ಗೋಮಯೇ ವಸತೇ ತದಾ ॥59॥
ಕಂಕಳುಗಳಲ್ಲಿ ಸಾಧ್ಯದೇವತೆಗಳು, ಕುತ್ತಿಗೆಯಲ್ಲಿ ಪಾರ್ವತಿಯು, ಪೃಷ್ಠಭಾಗದಲ್ಲಿ ನಕ್ಷತ್ರಗಳು, ಕಕುದ್ದೇಶದಲ್ಲಿ ಆಕಾಶವು, ಅಪಾನ ಸ್ಥಾನದಲ್ಲಿ ಸರ್ವತೀರ್ಥಗಳು, ಗೋಮೂತ್ರದಲ್ಲಿ ಸ್ವತಃ ಜಾಹ್ನವಿಯು, ಗೋಮಯದಲ್ಲಿ ಅಷ್ಟೈಶ್ವರ್ಯದಿಂದ ಯುಕ್ತಳಾದ ಮಹಾಲಕ್ಷ್ಮಿಯು ಸನ್ನಿಹಿತಳಾಗಿರುತ್ತಾಳೆ.
ನಾಸಿಕಾಯಾಂ ಸದಾ ದೇವೀ ಜ್ಯೇಷ್ಠಾ ವಸತಿ ಭಾಮಿನೀ |
ಶ್ರೋಣೀತಟಸ್ಥಾಃ ಪಿತರೋ ರಮಾ ಲಾಂಗಲಮಾಶ್ರಿತಾಃ ॥60॥
ಮೂಗಿನಲ್ಲಿ ಸುಂದರಿಯಾದ ಜ್ಯೇಷ್ಠಾದೇವಿಯೂ, ನಿತಂಬದಲ್ಲಿ ಪಿತೃದೇವತೆಗಳೂ, ಬಾಲದಲ್ಲಿ ಲಕ್ಷ್ಮೀದೇವಿಯು ವಾಸವಾಗಿರುತ್ತಾಳೆ.
ಪಾರ್ಶ್ವಯೋರುಭಯೋಃ ಸರ್ವೇ ವಿಶ್ವೇ ದೇವಾಃ ಪ್ರತಿಷ್ಠಿತಾಃ |
ತಿಷ್ಠತ್ಯುರಸಿ ತಾಸಾಂ ತು ಪ್ರೀತಃ ಶಕ್ತಿಧರೋ ಗುಹಃ ॥61॥
ಜಾನುಜಂಘೋರುದೇಶೇಷು ಪಂಚ ತಿಷ್ಠಂತಿ ವಾಯವಃ |
ಖುರಮಧ್ಯೇಷು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ ॥62॥
ಎರಡು ಪಾರ್ಶ್ವಗಳಲ್ಲಿ ವಿಶ್ವೇದೇವತೆಗಳು, ಎದೆಯಲ್ಲಿ ಶಕ್ತ್ಯಾಯುಧವನ್ನು ಧರಿಸಿದ ಸ್ಕಂಧನು, ಜಾನು-ಜಂಘ ಪ್ರದೇಶಗಳಲ್ಲಿ (ತೊಡೆಗಳಲ್ಲಿ) ಪಂಚಪ್ರಾಣರು, ಗೊರಸುಗಳಲ್ಲಿ ಗಂಧರ್ವರು, ಗೊರಸುಗಳ ಅಗ್ರಭಾಗದಲ್ಲಿ ಸರ್ಪದೇವತೆಗಳು ಇರುತ್ತಾರೆ.
ಚತ್ವಾರಃ ಸಾಗರಾಃ ಪೂರ್ಣಾಸ್ತಸ್ಯಾ ಏವ ಪಯೋಧರಾಃ |
ರತಿರ್ಮೇಧಾ ಕ್ಷಮಾ ಸ್ವಾಹಾ ಶ್ರದ್ಧಾ ಶಾಂತಿರ್ಧೃತಿಃ ಸ್ಮೃತಿಃ ॥63॥
ಕೀರ್ತಿರ್ದೀಪ್ತಿಃ ಕ್ರಿಯಾ ಕಾಂತಿಸ್ತುಷ್ಟಿಃ ಪುಷ್ಟಿಶ್ಚ ಸಂತತಿಃ |
ದಿಶಶ್ಚ ವಿದಿಶಶ್ಚೈವ ಸೇವಂತೇ ಕಪಿಲಾಂ ಸದಾ ॥64॥
ಕಪಿಲಾಧೇನುವಿನ ಕೆಚ್ಚಲಿನಲ್ಲಿ ನಾಲ್ಕು ಸಮುದ್ರಗಳು, ರತಿ-ಮೇಧಾ-ಕ್ಷಮಾ-
ಸ್ವಾಹಾ-ಶ್ರದ್ಧಾ-ಶಾಂತಿ-ಧೃತಿ-ಸ್ಮೃತಿ-ಕೀರ್ತಿ-ದೀಪ್ತಿ-ಕ್ರಿಯಾ-ಕಾಂತಿ-ಸ್ತುಷ್ಟಿ-ಪುಷ್ಟಿ- ಸಂತತಿ-ದಿಕ್ಕುಗಳು-ಉಪದಿಕ್ಕುಗಳು ಎಲ್ಲವೂ

ಅಧಿದೇವತೆಗಳಾಗಿ ಕೆಚ್ಚಲಿನಲ್ಲಿ ಸೇವಿಸುತ್ತಾ ವಾಸಿಸುತ್ತಿವೆ.
ದೇವಾಃ ಪಿತೃಗಣಾಶ್ಚಾಪಿ ಗಂಧರ್ವಾಪ್ಸರಸಾಂ ಗಣಾಃ |
ಲೋಕಾ ದ್ವೀಪಾರ್ಣವಾಶ್ಚೈವ ಗಂಗಾದ್ಯಾಃ ಸರಿತಸ್ತಥಾ ॥65॥
ಗ್ರಹಾಃ ಪಿತೃಗಣಾಶ್ಚಾಪಿ ವೇದಾಃ ಸಾಂಗಾಃ ಸಹಾಧ್ವರೈಃ |
ವೇದೋಕ್ತೈರ್ವಿವಿಧೈರ್ಮಂತ್ರೈಃ ಸ್ತುವಂತಿ ಹೃಷಿತಾಸ್ತಥಾ ॥66॥
ದೇವತೆಗಳು, ಪಿತೃಗಳು, ಗಂಧರ್ವರು, ಅಪ್ಸರೆಯರು, ಲೋಕಗಳು, ದ್ವೀಪಗಳು, ಸಮುದ್ರಗಳು, ಗಂಗೆಯೇ ಮೊದಲಾದ ನದಿಗಳು, ಗ್ರಹಗಳು, ಪಿತೃಗಣಗಳು, ಯಜ್ಞಗಳಿಂದ ಸಹಿತವಾದ ಸಾಂಗವಾದ ವೇದಗಳು, ಸಂತುಷ್ಟರಾದ ಸಮಸ್ತ ದೇವತೆಗಳು ವೇದೋಕ್ತವಾದ ವಿವಿಧ ಮಂತ್ರಗಳಿಂದ ಕಪಿಲಾಧೇನುವನ್ನು ಸ್ತುತಿಸುತ್ತಾರೆ.
ವಿದ್ಯಾಧರಾಶ್ಚ ಯೇ ಸಿದ್ಧಾ ಭೂತಾಸ್ತಾರಾಗಣಾಸ್ತಥಾ |
ಪುಷ್ಪವೃಷ್ಟಿಂ ಚ ವರ್ಷಂತಿ ಪ್ರನೃತ್ಯಂತಿ ಚ ಹರ್ಷಿತಾಃ ॥67॥
ವಿದ್ಯಾಧರರು, ಸಿದ್ಧರು, ಭೂತಗಣಗಳು, ತಾರಾಗಣಗಳು ಕಪಿಲಾಧೇನುವಿನ ವಿಷಯದಲ್ಲಿ ಸಂತುಷ್ಟರಾಗಿ ನರ್ತನ ಮಾಡುತ್ತಾರೆ, ಪುಷ್ಪವೃಷ್ಟಿಯನ್ನು ಗೈಯ್ಯುತ್ತಾರೆ.
ದೇವಾಃ
ಬ್ರಹ್ಮಣೋತ್ಪಾದಿತಾ ದೇವೀ ವಹ್ನಿಕುಂಡಾತ್ ಮಹಾಪ್ರಭಾ ॥68॥
ದೇವತೆಗಳು ದೇವಿಯೇ, ಮಹಾಪ್ರಭೆಯಿಂದ ಕೂಡಿರುವ ನಿನ್ನನ್ನು ಚತುರ್ಮುಖ ಬ್ರಹ್ಮನು ಅಗ್ನಿಕುಂಡದಿಂದ ಸೃಷ್ಟಿಸಿದ್ದಾನೆ.
ನಮಸ್ತೇ ಕಪಿಲೇ ಪುಣ್ಯೇ ಸರ್ವದೇವೈರ್ನಮಸ್ಕೃತೇ |
ಕಪಿಲೇಽಥ ಮಹಾಸತ್ವೇ ಸರ್ವತೀರ್ಥಮಯೇ ಶುಭೇ ॥69॥
ಕಪಿಲೆಯೇ, ಪುಣ್ಯಸ್ವರೂಪಿಣಿಯೇ, ಸಕಲದೇವತೆಗಳಿಂದ ನಮಸ್ಕೃತಳೇ, ಮಹಾಸತ್ವಳೇ, ಸರ್ವತೀರ್ಥಮಯಳೇ, ಶುದ್ಧಸ್ವರೂಪಳೇ;
ದಾತಾರಂ ಸ್ವಜನೋಪೇತಂ ಬ್ರಹ್ಮಲೋಕಂ ನಯ ಸ್ವಯಮ್ |
ಅಹೋ ರತ್ನಮಿದಂ ಪುಣ್ಯಂ ಸರ್ವದುಃಖಘ್ನಮುತ್ತಮಮ್ ॥70॥
ಕಪಿಲಗೋರೂಪವಾದ ಈ ರತ್ನವು ಎಷ್ಟು ಪವಿತ್ರವಾಗಿದೆ! ಎಷ್ಟು ಉತ್ತಮವಾಗಿದೆ! ಇದು ಸಮಸ್ತ ದುಃಖಗಳನ್ನು ಪರಿಹರಿಸಲು ಸಮರ್ಥವಾಗಿದೆ. ದಾನ ಮಾಡಿದ ವ್ಯಕ್ತಿಯನ್ನು ಬಂಧು-ಬಾಂಧವರಿಂದ ಬ್ರಹ್ಮಲೋಕಕ್ಕೆ ಹೊತ್ತೊಯ್ಯುವ ಸಾಮರ್ಥ್ಯ ಉಳ್ಳವಳಾಗಿರುವಿ.
ಅಹೋ ಧರ್ಮಾರ್ಜಿತಂ ಶುದ್ಧಮಿದಮಗ್ರ್ಯಂ ಮಹದ್ಧನಮ್ ॥71॥
ಧರ್ಮದಿಂದ ಸಂಪಾದಿಸಲ್ಪಟ್ಟ ಶುದ್ಧವಾದ ಶ್ರೇಷ್ಠವಾದ ಮಹಾಧನವಾಗಿರುವಿ.
ಶ್ರೀಭಗವಾನ್
ಇತ್ಯಾಕಾಶಸ್ಥಿತಾಸ್ತೇ ತು ಜಲ್ಪಂತಿ ಚ ರಮಂತಿ ಚ ॥72॥
ಶ್ರೀಭಗವಾನ್ ದೇವತೆಗಳು ಕಪಿಲಧೇನುವಿನ ಮಂತ್ರವನ್ನು ಆಕಾಶದಲ್ಲಿ ಹೀಗೆ ನಿಂತು ಜಪಿಸುತ್ತಾರೆ, ಸಂತೋಷ ಹೊಂದುತ್ತಾರೆ.
ತಸ್ಯಾಃ ಪ್ರತಿಗ್ರಹೀತಾ ಚ ಭುಂಕ್ತೇ ಯಾವದ್ ದ್ವಿಜೋತ್ತಮಃ |
ತಾವದ್ ದೇವಗಣಾಃ ಸರ್ವೇ ಕಪಿಲಾಮರ್ಚಯಂತಿ ವೈ ॥73॥
ಕಪಿಲಧೇನುವನ್ನು ದಾನವನ್ನಾಗಿ ಸ್ವೀಕರಿಸಿದವ ಎಷ್ಟು ಕಾಲ ಅದರ ಹಾಲನ್ನು ಸ್ವೀಕರಿಸುತ್ತಾನೋ ಅಷ್ಟು ಕಾಲ ದೇವತಾಗಣಗಳು ಕಪಿಲಾಧೇನುವನ್ನು ಪೂಜಿಸುತ್ತಿರುತ್ತಾರೆ.
ಸ್ವರ್ಣಶೃಂಗೀಂ ರೂಪ್ಯಖುರಾಂ ಗಂಧೈಃ ಪುಷ್ಪೈಃ ಸುಪೂಜಿತಾಮ್ ॥74॥
ಬಂಗಾರದ ಕೊಂಬಿನಿಂದ ಅಲಂಕೃತವಾದ, ಬೆಳ್ಳಿಯಿಂದ ಅಲಂಕೃತವಾದ ಗೊರಸುಳ್ಳ, ಗಂಧ-ಪುಷ್ಪಗಳಿಂದ ಪೂಜಿತವಾದ;
ವಸತ್ರಭ್ಯಾಮಹತಾಭ್ಯಾಂ ತು ಯಾವತ್ ತಿಷ್ಠತ್ಯಲಂಕೃತಾ |
ತಾವದ್ ಯದಿಚ್ಛೇತ್ ಕಪಿಲಾ ಮಂತ್ರಪೂತಾ ಸುಸಂಸ್ಕೃತಾ ॥75॥
ತುಂಡುಮಾಡದ ವಸ್ತ್ರಗಳಿಂದ ಅಲಂಕೃತವಾದ ಕಪಿಲಧೇನುವು ಎಷ್ಟು ಕಾಲ ಅಲಂಕೃತವಾಗಿರುತ್ತದೋ ಅಷ್ಟು ಕಾಲ ಸುಸಂಸ್ಕೃತವಾದ, ಮಂತ್ರಪೂತವಾದ ಕಪಿಲಾ ಧೇನುವು ಇಷ್ಟಾರ್ಥಗಳನ್ನು ನೀಡುತ್ತದೆ.
ಭೂಲೋಕವಾಸಿನಃ ಸರ್ವಾನ್ ಬ್ರಹ್ಮಲೋಕಂ ನಯೇತ್ ಸ್ವಯಮ್ ॥
ಭೂಲೋಕವಾಸಿಗಳಾದ ವ್ಯಕ್ತಿಗಳನ್ನು ಬ್ರಹ್ಮನ ಲೋಕಕ್ಕೆ ಸ್ವಯಂ ಕೊಂಡೊಯ್ಯಬಲ್ಲ ಸಾಮರ್ಥ್ಯವು ಕಪಿಲಾಧೇನುವಿಗಿದೆ.
ಭೂರಶ್ವಃ ಕನಕಂ ಗಾವೋ ರೂಪ್ಯಮನ್ನಂ ತಿಲಾ ಯವಾಃ |
ದೀಯಮಾನಾನಿ ವಿಪ್ರಾಯ ಪ್ರಹೃಷ್ಯಂತಿ ದಿನೇ ದಿನೇ ॥77॥
ಭೂಮಿ, ಕುದುರೆ, ಬಂಗಾರ, ಹಸುಗಳು, ಬೆಳ್ಳಿ, ಅನ್ನ, ಎಳ್ಳು, ಗೋಧಿ- ಇವುಗಳನ್ನು ಪ್ರತಿದಿನವೂ ಬ್ರಾಹ್ಮಣರಿಗೆ ದಾನ ಮಾಡಿದಾಗ ದೇವತೆಗಳು ಸಂತುಷ್ಟರಾಗುತ್ತಾರೆ.
ಅಥ ತ್ವಶ್ರೋತ್ರಿಯೇಭ್ಯೋ ವೈ ತಾನಿ ದತ್ತಾನಿ ಪಾಂಡವ |
ತಥಾ ನಿಂದಂತ್ಯಥಾತ್ಮಾನಮಶುಭಂ ಕಿಂ ನು ನಃ ಕೃತಮ್ ॥78॥
ಆದರೆ ಇವುಗಳನ್ನೇ ಶ್ರೋತ್ರಿಯರಲ್ಲದ ಬ್ರಾಹ್ಮಣರಿಗೆ ದಾನ ಮಾಡಿದಲ್ಲಿ ದೇವತೆಗಳೇ ತಮ್ಮನ್ನು, ನಾವೇನು ಅಶುಭಕರ್ಮಗಳನ್ನು ಮಾಡಿದ್ದೇವೆ ಎಂದು ನಿಂದಿಸಿಕೊಳ್ಳುತ್ತಾರೆ.
ಅಹೋ ರಕ್ಷಃ ಪಿಶಾಚೈಶ್ಚ ಲುಪ್ಯಮಾನಾಃ ಸಮಂತತಃ |
ಯಾಸ್ಯಾಮೋ ನಿರಯಂ ಶೀಘ್ರಮಿತಿ ಶೋಚಂತಿ ತಾನಿ ವೈ ॥79॥

ಅಶ್ರೋತ್ರಿಯರಿಗೆ ದಾನ ಮಾಡಿದಾಗ ರಾಕ್ಷಸರು, ಪಿಶಾಚಿಗಳು ಆ ದಾನದ ಪುಣ್ಯವನ್ನು ಅಪಹರಿಸುತ್ತಾರೆ. ಇದರಿಂದ ಪಿತೃದೇವತೆಗಳು ಅಯ್ಯೋ! ನಾವು ನರಕಕ್ಕೆ ಹೋಗುತ್ತೇವಲ್ಲ ಎಂದು ದುಃಖಿತರಾಗುತ್ತಾರೆ.

ಏತಾನ್ಯಪಿ ದ್ವಿಜೇಭ್ಯೋ ವೈ ಶ್ರೋತ್ರಿಯೇಭ್ಯೋ ವಿಶೇಷತಃ |
ದೀಯಮಾನಾನಿ ಹೃಷ್ಯಂತಿ ದಾತಾರಂ ತಾರಯಂತಿ ಚ ||80||

ಭೂಮಿ, ಅಶ್ವ, ಕನಕ ಮೊದಲಾದ ದ್ರವ್ಯಗಳನ್ನು ಶ್ರೋತ್ರಿಯ ಬ್ರಾಹ್ಮಣರಿಗೆ ವಿಶೇಷವಾಗಿ ದಾನ ಮಾಡಿದಾಗ, ಇದರಿಂದ ಸಂತುಷ್ಟರಾದ ದೇವತೆಗಳು ದಾನ ಮಾಡಿದ ವ್ಯಕ್ತಿಯನ್ನು ಪಾಪಗಳಿಂದ ಬಿಡುಗಡೆ ಮಾಡುತ್ತಾರೆ.

ಯುಧಿಷ್ಠಿರಃ

ದೇವದೇವೇಶ ದೈತ್ಯಘ್ನ ಕಾಲಃ ಕೋ ಹವ್ಯಕವ್ಯಯೋಃ |
ಕೇ ತತ್ರ ಪೂಜಾಮರ್ಹಂತಿ ವರ್ಜನೀಯಾಶ್ಚ ಕೇ ದ್ವಿಜಾಃ ||81||

ಯುಧಿಷ್ಠಿರ ದೇವದೇವೇಶನೇ, ದೈತ್ಯಹಂತಕನೇ, ಹವ್ಯ-ಕವ್ಯಗಳಿಗೆ ಸರಿಯಾದ ಕಾಲ ಯಾವುದು? ಯಜ್ಞ ಮತ್ತು ಶ್ರಾದ್ಧ ಕರ್ಮಗಳಲ್ಲಿ ಎಂತಹ ಬ್ರಾಹ್ಮಣರು ಪೂಜೆಗೆ ಅರ್ಹರಾಗಿರುತ್ತಾರೆ? ಎಂತಹ ಬ್ರಾಹ್ಮಣರನ್ನು ಹವ್ಯ-ಕವ್ಯಗಳಿಗೆ ಆಹ್ವಾನ ಮಾಡಬಾರದು?ಇದೆಲ್ಲವನ್ನೂ ಕೃಪೆ ಮಾಡಿ ತಿಳಿಸು.

ಶ್ರೀಭಗವಾನ್

ದೈವಂ ಪೂರ್ವಾಹ್ಣಿಕಂ ಜ್ಞೇಯಂ ಪೈತಕಂ ಚಾಪರಾಹ್ಣಿಕಮ್ |
ಕಾಲಹೀನಂ ಚ ಯದ್ದಾನಂ ತದ್ದಾನಂ ರಾಜಸಂ ವಿದುಃ ||82||

ಶ್ರೀಭಗವಾನ್ ಧರ್ಮಜನೇ, ದೇವತೆಗಳಿಗೆ ಸಂಬಂಧಿಸಿದ ಹವ್ಯಕರ್ಮಗಳನ್ನು ಪೂರ್ವಾಹ್ಣದಲ್ಲಿ ಮಾಡುವುದು ಯೋಗ್ಯವಾಗಿದೆ. ಪಿತೃಗಳಿಗೆ ಸಂಬಂಧಿಸಿದ ಕವ್ಯ ಕರ್ಮಗಳನ್ನು ಅಪರಾಹ್ಣದಲ್ಲಿ ಮಾಡುವುದು ಯೋಗ್ಯವಾಗಿದೆ. ಅಕಾಲದಲ್ಲಿ ಮಾಡಿದ ದಾನವು ರಾಜಸ ಎನಿಸುತ್ತದೆ.

ಖಾದಿತಂ ಚ ಅವೀಡಂ ಚ ಕಾಲಾತ್ಪೂರ್ವಂ ಚ ಯತ್ಕೃತಮ್ |
ರಜಸ್ವಲಾಭಿಮೃಷ್ಟಂ ಚ ತದ್ಭಾಗಂ ರಾಕ್ಷಸಂ ವಿದುಃ ||83||

ತಿಂದು ಉಳಿದ ಪದಾರ್ಥಗಳು, ಎಂಜಲು ಮಾಡಿದ ಪದಾರ್ಥಗಳು, ಕಾಲಕ್ಕಿಂತ ಮೊದಲು ಮಾಡಿದ ಕರ್ಮಗಳು, ರಜಸ್ವಲೆಯರಿಂದ ಮುಟ್ಟಲ್ಪಟ್ಟ ಪದಾರ್ಥಗಳನ್ನು ರಾಕ್ಷಸರಿಗೆ ಸಂಬಂಧಿಸಿದ್ದು ಎಂದು ಹೇಳಿದ್ದಾರೆ.

ಅವಶಿಷ್ಟೇನ ಯದ್ಭುಕ್ತಂ ಅವ್ರತೇನ ಚ ಭಾರತ |
ಪರಾಮೃಷ್ಟಂ ಶುನಾ ವಾಽಪಿ ತದ್ಭಾಗಂ ರಾಕ್ಷಸಂ ವಿದುಃ ||84||

ತಿಂದು ಉಳಿದ ಪದಾರ್ಥವು ಯಾವುದಿದೆಯೋ, ಅಶುಚಿಯಾದ ಪದಾರ್ಥವು ಯಾವುದಿದೆಯೋ, ನಾಯಿ ಮುಟ್ಟಿದ ಅನ್ನವು ಯಾವುದಿದೆಯೋ ಅವು ರಾಕ್ಷಸರಿಗೆ ಸಂಬಂಧಿಸಿದವು ಎಂದು ವಿದ್ವಾಂಸರು ತಿಳಿದಿದ್ದಾರೆ.

ಯಾವಂತಃ ಪತಿತಾ ವಿಪ್ರಾ ಜಡೋನ್ಮತ್ತಾದಯೋಽಪಿ ಚ |
ದೈವೇ ಚ ಪಿತ್ರ್ಯೇ ತೇ ವಿಪ್ರಾ ರಾಜನ್ ನಾರ್ಹಂತಿ ಸತ್ಕ್ರಿಯಾಮ್ ||

ಪತಿತರಾದ, ಉನ್ಮತ್ತರಾದ, ಜಡರಾದ ಬ್ರಾಹ್ಮಣರು ದೇವ-ಪಿತೃ ಸಂಬಂಧವಾದ ಹವ್ಯ-ಕವ್ಯಗಳಲ್ಲಿ ಸತ್ಕಾರ ಹೊಂದಲು ಯೋಗ್ಯರಾಗಿರುವುದಿಲ್ಲ.

ಕ್ಲೀಬಃ ಪ್ಲೀಹೀ ಚ ಕುಷ್ಠೀ ಚ ರಾಜಯಕ್ಷ್ಮಾನ್ವಿತಶ್ಚ ಯಃ |
ಅಪಸ್ಮಾರೀ ಚ ಯಶ್ಚಾಪಿ ಪಿತ್ರ್ಯೇ ನಾರ್ಹತಿ ಸತ್ಕ್ರಿಯಾಮ್ ||86||

ನಪುಂಸಕನು, ಉದರದಲ್ಲಿ ಗುಲ್ಮ ವ್ಯಾಧಿಯನ್ನು ಹೊಂದಿರುವವನು, ಕುಷ್ಠ ರೋಗಿಯು, ಕ್ಷಯರೋಗಿಯು, ಮೂರ್ಛಾರೋಗಿಯು ಇವರೆಲ್ಲರೂ ಪಿತೃ ಕಾರ್ಯದಲ್ಲಿ ಸತ್ಕಾರ ಹೊಂದಲು ಯೋಗ್ಯರಾಗುವುದಿಲ್ಲ.

ಚಿಕಿತ್ಸಕಾ ದೇವಲಕಾ ವೃಥಾ ನಿಯಮಧಾರಿಣಃ |
ಸೋಮವಿಕ್ರಯಿಣಶ್ಚಾಪಿ ಶ್ರಾದ್ಧೇ ನಾರ್ಹಂತಿ ಸತ್ಕೃತಿಮ್ ||87||

ಜೀವಿಕೆಗಾಗಿ ವೈದ್ಯವೃತ್ತಿಯನ್ನು ಮಾಡುವವರು, ಜೀವಿಕೆಗಾಗಿ ದೇವರ ಪೂಜೆಯನ್ನು ಮಾಡುವವರು, ಡಾಂಭಿಕವಾಗಿ ನಿಯಮಾನುಷ್ಠಾನವನ್ನು ಮಾಡುವವರು, ಸೋಮ ಲತೆಯನ್ನು ಮಾರುವವರು ಇವರೆಲ್ಲರೂ ಶ್ರಾದ್ಧದಲ್ಲಿ ಸತ್ಕಾರ ಹೊಂದಲು ಯೋಗ್ಯರಾಗಿರುವುದಿಲ್ಲ.

ಏಕೋದ್ದಿಷ್ಟೇ ಚ ಯೇ ಚಾನ್ನಂ ಭುಂಜತೇ ವಿಧಿವದ್ ದ್ವಿಜಾಃ |
ಚಾಂದ್ರಾಯಣಮಕೃತ್ವಾ ತೇ ಪುನರ್ನಾರ್ಹಂತಿ ಸತ್ಕೃತಿಮ್ ||88||

ಏಕೋದ್ದಿಷ್ಟ ಶ್ರಾದ್ಧದಲ್ಲಿ ವಿಧಿವತ್ತಾಗಿ ಯಾವ ಬ್ರಾಹ್ಮಣನು ಊಟ ಮಾಡುತ್ತಾನೋ ಅವನು ಚಾಂದ್ರಾಯಣ ವ್ರತವನ್ನು ಮಾಡದೆ ಮತ್ತೊಂದು ದಾನಕ್ಕೆ ಅರ್ಹನಾಗುವುದಿಲ್ಲ.

ಗಾಯಕಾ ನರ್ತಕಾಶ್ಚೈವ ಪ್ಲವಕಾ ವಾದಕಾಸ್ತಥಾ |
ಕಥಕಾ ಯೌಧಿಕಾಶ್ಚೈವ ಶ್ರಾದ್ಧೇ ನಾರ್ಹಂತಿ ಸತ್ಕ್ರಿಯಾಮ್ ||89||

ಗಾಯಕರು, ನರ್ತಕರು, ಕತ್ತಿಯ ಅಲುಗಿನ ಮೇಲೆ ನರ್ತನ ಮಾಡುವವರು, ವಾದ್ಯಗಳನ್ನು ನುಡಿಸುವವರು, ಕಥೆಯನ್ನು ಹೇಳಿ ಜೀವಿಸುವವರು, ಯೋಧರು ಇವರು ಶ್ರಾದ್ಧದಲ್ಲಿ ಸತ್ಕಾರ ಹೊಂದಲು ಯೋಗ್ಯರಾಗುವುದಿಲ್ಲ.

ಅನಗ್ನಯಶ್ಚ ಯೇ ವಿಪ್ರಾಃ ಪ್ರೇತನಿರ್ಯಾತಕಾಶ್ಚ ಯೇ |
ಸ್ತೇನಾಶ್ಚಾಪಿ ವಿಕರ್ಮಸ್ಥಾ ರಾಜನ್ ನಾರ್ಹಂತಿ ಸತ್ಕೃತಿಮ್ ||90||

ರಾಜನೇ, ಅಗ್ನಿಹೋತ್ರವನ್ನು ಮಾಡದಿರುವವರು, ಜೀವಿಕೆಗಾಗಿ ಹೆಣ ಹೊರುವವರು, ಕಳ್ಳತನ ಮಾಡುವವರು, ವರ್ಣಾಶ್ರಮಧರ್ಮಕ್ಕೆ

ವಿರುದ್ಧವಾದ ಕರ್ಮಗಳಲ್ಲಿ ತೊಡಗಿಸಿ- ಕೊಂಡಿರುವವರು ಶ್ರಾದ್ಧಕ್ಕೆ ಅರ್ಹರಾಗಿರುವುದಿಲ್ಲ.
ಅಪರಿಜ್ಞಾತಪೂರ್ವಾಶ್ಚ ಗಣಪುತ್ರಶ್ಚ ಯೋ ದ್ವಿಜಃ |
ಪುತ್ರಿಕಾಪುತ್ರಕಾಶ್ಚಾಪಿ ಶ್ರಾದ್ಧೇ ನಾರ್ಹಂತಿ ಸತ್ಕ್ರಿಯಾಮ್ ॥91॥
ಅಪರಿಚಿತರಾದ ಬ್ರಾಹ್ಮಣರು, ತಂದೆ ಯಾರೆಂದು ತಿಳಿಯದೆ ಸಾಮೂಹಿಕವಾಗಿ ಬ್ರಾಹ್ಮಣಪುತ್ರರೆಂದು ಹೇಳಿಸಿಕೊಳ್ಳುವವರು, ಪುತ್ರಿಯನ್ನು ಶಾಸ್ತ್ರೀಯವಾಗಿ ದಾನ ಮಾಡಿ, ಅವಳಲ್ಲಿ ಹುಟ್ಟುವ ಮಗುವನ್ನು ಮಗನನ್ನಾಗಿ ಮಾಡಿಕೊಂಡ ಬಳಿಕ ಆ ಮಗನು ಶ್ರಾದ್ಧದಲ್ಲಿ ಸತ್ಕಾರ ಹೊಂದಲು ಯೋಗ್ಯನಾಗುವುದಿಲ್ಲ.
ರಣಕರ್ತಾ ಚ ಯೋ ವಿಪ್ರೋ ಯಶ್ಚ ವಾಣಿಜ್ಯಕೋ ದ್ವಿಜಃ |
ಪ್ರಾಣಿವಿಕ್ರಯವೃತ್ತಿಶ್ಚ ಶ್ರಾದ್ಧೇ ನಾರ್ಹಂತಿ ಸತ್ಕೃತಿಮ್ ॥92॥
ಯುದ್ಧದಲ್ಲಿ ಹೋರಾಡುವ, ವ್ಯಾಪಾರ ಮಾಡುವ, ಪಶು-ಪಕ್ಷಿಗಳನ್ನು ಮಾರಾಟ ಮಾಡುವ ಬ್ರಾಹ್ಮಣರು ಶ್ರಾದ್ಧದಲ್ಲಿ ಸತ್ಕಾರ ಹೊಂದಲು ಯೋಗ್ಯನಾಗುವುದಿಲ್ಲ.
ಚೀರ್ಣವ್ರತಗುಣೈರ್ಯುಕ್ತಾ ನಿತ್ಯಂ ಸ್ವಾಧ್ಯಾಯತತ್ಪರಾಃ |
ಸಾವಿತ್ರೀಜ್ಞಾಃ ಕ್ರಿಯಾವಂತಸ್ತೇ ಶ್ರಾದ್ಧೇ ಸತ್ಕೃತಿಕ್ಷಮಾಃ ॥93॥
ವ್ರತಾನುಷ್ಠಾನಗಳನ್ನು ಮಾಡುವ, ಗುಣವಂತರಾದ, ಸದಾ ಸ್ವಾಧ್ಯಾಯಶೀಲರಾದ, ಗಾಯತ್ರೀಮಂತ್ರವನ್ನು ಚೆನ್ನಾಗಿ ತಿಳಿದಿರುವ, ಕ್ರಿಯಾನಿಷ್ಠರಾದ ಬ್ರಾಹ್ಮಣರು ಶ್ರಾದ್ಧದಲ್ಲಿ ಸತ್ಕಾರಕ್ಕೆ ಅರ್ಹರಾಗಿರುತ್ತಾರೆ.
ಶ್ರಾದ್ಧಸ್ಯ ಬ್ರಾಹ್ಮಣಃ ಕಾಲಪ್ರಾಪ್ತೋ ದಧಿ ಘೃತಂ ತಥಾ |
ದರ್ಭಾಃ ಸುಮನಸಃ ಕ್ಷೇತ್ರಂ ತತ್ಕಾಲೇ ಶ್ರಾದ್ಧದೋ ಭವೇತ್ ॥94॥
ಸತ್ಪಾತ್ರನಾದ ಬ್ರಾಹ್ಮಣನ ಆಗಮನ ಕಾಲವೇ ಶ್ರಾದ್ಧಕಾಲಕ್ಕೆ ಉತ್ತಮ ಕಾಲ ಎನಿಸಿದೆ. ಯಾವ ಸಮಯದಲ್ಲಿ ಬ್ರಾಹ್ಮಣನು ಆಗಮಿಸುತ್ತಾನೋ, ಮೊಸರು, ತುಪ್ಪ, ದರ್ಭೆ, ಹೂವು, ಪವಿತ್ರವಾದ ಕ್ಷೇತ್ರ ಇವುಗಳು ಪ್ರಾಪ್ತವಾಗುತ್ತವೆಯೋ ಆ ಸಮಯದಲ್ಲಿ ಶ್ರಾದ್ಧವನ್ನು ಮಾಡಬೇಕು.
ಚಾರಿತ್ರನಿಯತಾ ರಾಜನ್ ಕೃಶಾ ಯೇ ಕೃಶವೃತ್ತಯಃ |
ಅರ್ಥಿನಶ್ಚೋಪಗಚ್ಛಂತಿ ತೇಭ್ಯೋ ದತ್ತಂ ಮಹತ್ ಫಲಮ್ ॥95॥
ತಪಸ್ವಿನಶ್ಚ ಯೇ ವಿಪ್ರಾಸ್ತಥಾ ಭೈಕ್ಷಚರಾಶ್ಚ ಯೇ |
ಅರ್ಥಿನಃ ಕೇಚಿದಿಚ್ಛಂತಿ ತೇಷಾಂ ದತ್ತಂ ಮಹತ್ಫಲಮ್ ॥96॥
ರಾಜನೇ, ಸದಾಚಾರನಿರತರಾದ, ದುರ್ಬಲರಾದ, ವೃತ್ತಿಹೀನರಾದ, ಭಿಕ್ಷಾವೃತ್ತಿಯಿಂದ ಜೀವಿಸುವ, ತಪಸ್ವಿಗಳಾದ ಬ್ರಾಹ್ಮಣರು ಏನನ್ನಾದರೂ ಬೇಡಲು ಬಂದರೆ ಅವರಿಗೆ ಅದನ್ನು ದಾನ ಮಾಡಬೇಕು. ಅದಕ್ಕೆ ಮಹತ್ತರವಾದ ಫಲವಿದೆ.
ಏವಂ ಧರ್ಮವಿದಾಂ ಶ್ರೇಷ್ಠ ಜ್ಞಾತ್ವಾ ಸರ್ವಾತ್ಮನಾ ಸದಾ |
ಶ್ರೋತ್ರಿಯಾಯ ದರಿದ್ರಾಯ ಪ್ರಯಚ್ಛಾನುಪಕಾರಿಣೇ | |97॥
ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ, ಈ ಎಲ್ಲ ವಿಷಯಗಳನ್ನು ಚೆನ್ನಾಗಿ ತಿಳಿದುಕೊಂಡು, ಯಾವ ಉಪಕಾರವನ್ನೂ ಮಾಡದಿರುವ ಶ್ರೋತ್ರಿಯನಾದ ಬ್ರಾಹ್ಮಣನಿಗೆ ದಾನ ಮಾಡು.
ದಾನಂ ಯತ್ ತೇ ಪ್ರಿಯಂ ಕಿಂಚಿಚ್ಛ್ರೋತ್ರಿಯಾಣಾಂ ಚ ಯತ್ ಪ್ರಿಯಮ್|
ತತ್ ಪ್ರಯಚ್ಛಸ್ವ ಧರ್ಮಜ್ಞ ಯದೀಚ್ಛಸಿ ತದಕ್ಷಯಮ್ ॥98॥
ಧರ್ಮಜ್ಞನೇ, ನೀನು ದಾನದ ಅಕ್ಷಯಫಲವನ್ನು ಹೊಂದಲು ಬಯಸುತ್ತಿಯಾದರೆ ನಿನಗೆ ಯಾವುದು ಅತ್ಯಂತ ಇಷ್ಟವಾದ ವಸ್ತುವಾಗಿದೆಯೋ ಅದರಂತೆ ಶ್ರೋತ್ರಿಯರಿಗೆ ಯಾವ ವಸ್ತುವು ಪ್ರಿಯವಾಗಿದೆಯೋ ಅದನ್ನು ದಾನ ಮಾಡು.
ನಿರಯಂ ಯೇ ಚ ಗಚ್ಛಂತಿ ತಚ್ಛೃಣುಷ್ವ ಯುಧಿಷ್ಠಿರ ॥99॥
ಇನ್ನು ಮುಂದೆ ನರಕಕ್ಕೆ ಯಾರು ಹೋಗುತ್ತಾರೆಂದು ಹೇಳುತ್ತೇನೆ, ಕೇಳು.
ಗುರ್ವರ್ಥಂ ವಾ ಗವಾರ್ಥಂ ವಾ ನೋ ಚೇದನ್ಯತ್ರ ಪಾಂಡವ |
ವದಂತಿ ಯೇಽನೃತಂ ವಿಪ್ರಾಸ್ತೇ ವೈ ನಿರಯಗಾಮಿನಃ ॥100॥
ಪಾಂಡವನೇ, ಯಾರು ಗುರುವಿಗಾಗಿ, ಹಸುವಿಗಾಗಿ ಅಲ್ಲದೆ ಬೇರೆ ಕಡೆ ಸುಳ್ಳನ್ನು ಮಾತನಾಡುತ್ತಾರೋ ಅಂತಹ ಬ್ರಾಹ್ಮಣರು ನರಕಕ್ಕೆ ಹೋಗುತ್ತಾರೆ.
ಪರದಾರಾಪಹರ್ತಾರಃ ಪರದಾರಾಭಿಮರ್ಶಕಾಃ |
ಪರದಾರಪ್ರಯೋಕ್ತಾರಸ್ತೇ ವೈ ನಿರಯಗಾಮಿನಃ ॥101॥
ಪರಪತ್ನಿಯರನ್ನು ಅಪಹರಿಸುವವರು, ಪರಪತ್ನಿಯರ ಸ್ಪರ್ಶ ಮಾಡುವವರು, ಪರಪತ್ನಿಯರೊಡನೆ ಸಂಬಂಧವನ್ನು ಮಾಡುವವರು ನರಕಕ್ಕೆ ಹೋಗುತ್ತಾರೆ.
ಸೂಚಕಾಃ ಸಂಧಿಭೇತ್ತಾರಃ ಪರದ್ರವ್ಯೋಪಜೀವಿನಃ |
ಅಕೃತಜ್ಞಾಶ್ಚ ವಿಪ್ರಾಣಾಂ ತೇ ವೈ ನಿರಯಗಾಮಿನಃ ॥102॥
ಚಾಡಿಕೋರರು, ಮಾಡಿಕೊಂಡಿದ್ದ ಸಂಧಾನವನ್ನು ಮುರಿಯುವವರು, ಇತರರ ದ್ರವ್ಯದಿಂದ ಜೀವನವನ್ನು ನಡೆಸುವವರು, ಮಾಡಿದ ಉಪಕಾರವನ್ನು ಮರೆಯುವವರು ನರಕಕ್ಕೆ ಹೋಗುತ್ತಾರೆ.
ವರ್ಣಾಶ್ರಮಾಣಾಂ ಯೇ ಬಾಹ್ಯಾಃ ಪಾಷಂಡಸ್ಥಾಶ್ಚ ಪಾಂಡವ |
ಉಪಾಸತೇ ಚ ತಾನೇವ ತೇ ಸರ್ವೇ ನಿರಯಾಲಯಾಃ ॥103॥
ವರ್ಣದಿಂದಲೂ ಆಶ್ರಮದಿಂದಲೂ ಭ್ರಷ್ಟರಾದವರು, ವೇದಗಳನ್ನು ನಿಂದಿಸುವವರು, ನಾಸ್ತಿಕರು, ಇವರನ್ನು ಆಶ್ರಯಿಸಿಕೊಂಡು

ಜೀವನವನ್ನು ನಡೆಸುವವರು ಇವರೆಲ್ಲರೂ ನರಕಕ್ಕೆ ಹೋಗುತ್ತಾರೆ.
ವೇದವಿಕ್ರಯಿಣಶ್ಚೈವ ವೇದಾನಾಂ ಚೈವ ದೂಷಕಾಃ |
ವೇದಾನಾಂ ಲೇಖಕಾಶ್ಚೈವ ತೇ ವೈ ನಿರಯಗಾಮಿನಃ ||104||
ವೇದವನ್ನು ಮಾರಿಕೊಂಡು ಬದುಕುವವರು, ವೇದವನ್ನು ನಿಂದಿಸುವವರು, ವೇದಗಳನ್ನು ಬರೆದು ಮಾರಾಟ ಮಾಡುವವರು ನರಕಗಳಿಗೆ ಹೋಗುತ್ತಾರೆ.
ರಸವಿಕ್ರಯಿಣೋ ರಾಜನ್ ವಿಷವಿಕ್ರಯಿಣಶ್ಚ ಯೇ |
ಕ್ಷೀರವಿಕ್ರಯಿಣಶ್ಚಾಪಿ ತೇ ವೈ ನಿರಯಗಾಮಿನಃ ||105||
ರಾಜನೇ, ಪಾಕವನ್ನು ಮಾರಾಟ ಮಾಡುವವರು, ವಿಷವನ್ನು ಮಾರಾಟ ಮಾಡುವವರು ಮತ್ತು ಹಾಲನ್ನು ಮಾರಾಟ ಮಾಡುವ ಬ್ರಾಹ್ಮಣರು ನರಕಕ್ಕೆ ಹೋಗುತ್ತಾರೆ.
ಚಂಡಾಲೇಭ್ಯಶ್ಚ ಯೇ ಕ್ಷೀರಂ ಪ್ರಯಚ್ಛಂತಿ ನರಾಧಮಾಃ |
ಅರ್ಥಾರ್ಥಮಥವಾ ಸ್ನೇಹಾತ್ ತೇ ವೈ ನಿರಯಗಾಮಿನಃ || 106||
ಯಾವ ಬ್ರಾಹ್ಮಣರು ಚಂಡಾಲರಿಗೆ ಹಾಲನ್ನು ದಾನ ಮಾಡುತ್ತಾರೋ ಅಂತಹ ನರಾಧಮರು, ಬಡ್ಡಿಗಾಗಿ ಚಂಡಾಲರಿಗೆ ಹಣವನ್ನು ಕೊಡುವವರು ಅಥವಾ ಸ್ನೇಹದಿಂದ ಹಣವನ್ನು ಕೊಡುವವರು ನರಕಕ್ಕೆ ಹೋಗುತ್ತಾರೆ.
ಪಶೂನಾಂ ದಮಕಾಶ್ಚೈವ ತಥಾ ನಾಸಾನುವೇಧಕಾಃ |
ಪುಂಸ್ತ್ವಹಿಂಸಾಕರಾಶ್ಚೈವ ತೇ ವೈ ನಿರಯಗಾಮಿನಃ ||107||
ಪಶುಗಳನ್ನು ಹಿಂಸಿಸುವವರು, ಪಶುಗಳ ಮೂಗನ್ನು ಚುಚ್ಚಿ ಹಿಂಸಿಸುವವರು, ವೃಷಭಗಳ ಬೀಜವನ್ನು ಒಡೆದು ಪುಂಸ್ತ್ವವನ್ನು ನಾಶ ಮಾಡುವವರು ನರಕಕ್ಕೆ ಹೋಗುತ್ತಾರೆ.
ಅದಾತಾರಃ ಸಮರ್ಥಾ ಯೇ ದ್ರವ್ಯಾಣಾಂ ಲೋಭಕಾರಣಾತ್ |
ದೀನಾನಂಧಾನ್ ನ ಪಶ್ಯಂತಿ ತೇ ವೈ ನಿರಯಗಾಮಿನಃ ||108||
ದಾನ ಕೊಡಲು ಸಾಮರ್ಥ್ಯವಿದ್ದರೂ ಲೋಭದಿಂದ ದ್ರವ್ಯಗಳನ್ನು ದಾನ ಮಾಡದೆ ಇದ್ದವರೂ, ದುಃಖಿತರನ್ನು, ಕುರುಡರನ್ನು ನೋಡದೆ ಉನ್ಮತ್ತರಾಗಿ ನಡೆಯುವವರು ನರಕಗಳಿಗೆ ಹೋಗುತ್ತಾರೆ.
ಕ್ಷಾಂತಾನ್ ದಾಂತಾನ್ ಕೃಶಾನ್ ಪ್ರಾಜ್ಞಾನ್ ದೀರ್ಘಕಾಲಸಹೋಷಿತಾನ್ |
ತ್ಯಜಂತಿ ಕೃತಕೃತ್ಯಾ ಯೇ ತೇ ವೈ ನಿರಯಗಾಮಿನಃ ||109||
ತಮ್ಮ ಜೊತೆಯಲ್ಲಿಯೇ ಬಹಳ ಕಾಲದಿಂದ ವಾಸವಾಗಿದ್ದ, ಸಹನಶೀಲರಾದ, ಜಿತೇಂದ್ರಿಯರಾದ, ದುರ್ಬಲರಾದ, ಬುದ್ಧಿವಂತರಾದ ಮನುಷ್ಯರನ್ನು ತಮ್ಮ ಕಾರ್ಯವು ಮುಗಿದಕೂಡಲೇ ಬಿಟ್ಟುಬಿಡುವವರು ಅರ್ಥಾತ್ ಕೃತಘ್ನರಾದವರು ನರಕಕ್ಕೆ ಹೋಗುತ್ತಾರೆ.
ಬಾಲಾನಾಮಪಿ ವೃದ್ಧಾನಾಂ ಶ್ರಾಂತಾನಾಂ ಚಾಪಿ ಯೇ ನರಾಃ |
ಅದತ್ತತ್ವಾಽಶ್ನಂತಿ ಯೇ ಮೃಷ್ಟಂ ತೇ ವೈ ನಿರಯಗಾಮಿನಃ ||110||
ಯಾರು ಬಾಲಕರಿಗೂ, ವೃದ್ಧರಿಗೂ, ಬಳಲಿರುವ ವ್ಯಕ್ತಿಗಳಿಗೂ ಆಹಾರವನ್ನು ಕೊಡದೆ ತಾವು ಮೃಷ್ಟಾನ್ನವನ್ನು ಉಣ್ಣುತ್ತಾರೋ ಅವರೂ ನರಕಕ್ಕೆ ಹೋಗುತ್ತಾರೆ.
ಏತೇ ಪೂರ್ವರ್ಷಿಭಿಃ ಪ್ರೋಕ್ತಾ ನರಾ ನಿರಯಗಾಮಿನಃ ||111||
ಈ ಎಲ್ಲ ವ್ಯಕ್ತಿಗಳು ನರಕಕ್ಕೆ ಹೋಗುವವರೆಂದು ಋಷಿಗಳೇ ಹೇಳಿರುತ್ತಾರೆ.
ಯೇ ಸ್ವರ್ಗಂ ಸಮನುಪ್ರಾಪ್ತಾಸ್ತಾನ್ ಶೃಣುಷ್ವ ಯುಧಿಷ್ಠಿರ ||112||
ಯಾರು ಸ್ವರ್ಗಕ್ಕೆ ಹೋಗುತ್ತಾರೆ ಅಂತಹ ವ್ಯಕ್ತಿಗಳನ್ನು ಹೇಳುವೆ, ತಿಳಿದುಕೊ.
ದಾನೇನ ತಪಸಾ ಚೈವ ಸತ್ಯೇನ ಚ ದಮೇನ ಚ |
ಯೇ ಧರ್ಮಮನುವರ್ತಂತೇ ತೇ ನರಾಃ ಸ್ವರ್ಗಗಾಮಿನಃ ||113||
ಯುಧಿಷ್ಠಿರನೇ, ದಾನದಿಂದ, ತಪಸ್ಸಿನಿಂದ, ಸತ್ಯದಿಂದ, ಇಂದ್ರಿಯನಿಗ್ರಹದಿಂದ, ಯಾರು ಧರ್ಮಾನುಷ್ಠಾನವನ್ನು ಮಾಡುತ್ತಾರೋ ಆ ಮನುಷ್ಯರು ಸ್ವರ್ಗಕ್ಕೆ ಹೋಗುತ್ತಾರೆ.
ಶುಶ್ರೂಷಯಾಽಪ್ಯುಪಾಧ್ಯಾಯಾತ್ ಶ್ರುತಮಾದಾಯ ಪಾಂಡವ |
ಯೇ ಪ್ರತಿಗ್ರಹನಿಃಸ್ನೇಹಾಃ ತೇ ನರಾಃ ಸ್ವರ್ಗಗಾಮಿನಃ ||114||
ಪಾಂಡವನೇ, ಯಾರು ಗುರುಗಳಿಗೆ ಸೇವೆ ಮಾಡುತ್ತಾ, ಸಾಂಗವೇದಗಳನ್ನು ಹೃದ್ಗತ ಮಾಡಿಕೊಳ್ಳುತ್ತಾರೋ, ಪ್ರತಿಗ್ರಹದಲ್ಲಿ ನಿರಾಸಕ್ತರಾಗಿರುತ್ತಾರೋ ಅಂತಹವರು ಸ್ವರ್ಗಕ್ಕೆ ಹೋಗುತ್ತಾರೆ.
ಮಧುಮಾಂಸಾಸವೇಭ್ಯಸ್ತು ನಿವೃತ್ತಾ ವೃತ್ತವತ್ತು ಯೇ |
ಪರದಾರನಿವೃತ್ತಾಶ್ಚ ತೇ ನರಾಃ ಸ್ವರ್ಗಗಾಮಿನಃ ||115||
ಯಾರು ಮಧು-ಮಾಂಸ ಮತ್ತು ಆಸವಗಳನ್ನು ಬಿಟ್ಟು ಉತ್ತಮ ವ್ರತಾನುಷ್ಠಾನಗಳಲ್ಲಿ ನಿರತರಾಗಿರುತ್ತಾರೋ ಪರಸ್ತ್ರೀ ಸಹವಾಸವನ್ನು ಮಾಡುವುದಿಲ್ಲವೋ ಅವರು ಸ್ವರ್ಗಕ್ಕೆ ಹೋಗುತ್ತಾರೆ.
ಮಾತರಂ ಪಿತರಂ ಚೈವ ಶುಶ್ರೂಷಂತಿ ಚ ಯೇ ನರಾಃ |
ಭ್ರಾತೄಣಾಮಪಿ ಸಸ್ನೇಹಾಸ್ತೇ ನರಾಃ ಸ್ವರ್ಗಗಾಮಿನಃ ||116||
ತಾಯಿಯನ್ನು, ತಂದೆಯನ್ನು ಸೇವಿಸುವ, ಸಹೋದರರೊಡನೆ ಪ್ರೀತಿಯಿಂದ ಇರುವ ಮನುಷ್ಯರು ಸ್ವರ್ಗಕ್ಕೆ ಹೋಗುತ್ತಾರೆ.
ಯೇ ಚ ಭೋಜನಕಾಲೇ ತು ನಿರ್ಯಾತಾಶ್ಚಾತಿಥಿಪ್ರಿಯಾಃ |
ದ್ವಾರರೋಧಂ ನ ಕುರ್ವಂತಿ ತೇ ನರಾಃ ಸ್ವರ್ಗಗಾಮಿನಃ ||117||

ಯಾರು ಭೋಜನಕಾಲದಲ್ಲಿ ಮನೆಯಿಂದ ಹೊರಗೆ ಹೋಗಿ ಅತಿಥಿಗಳನ್ನು ಸ್ವಾಗತಿಸಿ ಸತ್ಕರಿಸುತ್ತಾರೋ, ಅತಿಥಿಗಳಿಗಾಗಿ ಯಾವಾಗಲೂ ಬಾಗಿಲನ್ನು ತೆರದೇ ಇರುತ್ತಾರೋ ಅಂತಹ ಅತಿಥಿಪ್ರಿಯರಾದ ಮನುಷ್ಯರು ಸ್ವರ್ಗಕ್ಕೆ ಹೋಗುತ್ತಾರೆ.
ವೈವಾಹಿಕಂ ತು ಕನ್ಯಾನಾಂ ದರಿದ್ರಾಣಾಂ ಚ ಯೇ ನರಾಃ |
ಕಾರಯಂತಿ ಚ ಕುರ್ವಂತಿ ತೇ ನರಾಃ ಸ್ವರ್ಗಗಾಮಿನಃ ॥118॥
ಯಾರು ಬಡಹೆಣ್ಣುಮಕ್ಕಳಿಗೆ ಅಥವಾ ಬಡ ಗಂಡುಮಕ್ಕಳಿಗೆ ಮದುವೆ ಮಾಡಿಸುತ್ತಾರೋ, ಮದುವೆ ಮಾಡುವವರೂ ಕೂಡ ಸ್ವರ್ಗಕ್ಕೆ ಹೋಗುತ್ತಾರೆ.
ರಸಾನಾಮಥ ಬೀಜಾನಾಮೋಷಧೀನಾಂ ತಥೈವ ಚ |
ದಾತಾರಃ ಶ್ರದ್ಧಯೋಪೇತಾಸ್ತೇ ನರಾಃ ಸ್ವರ್ಗಗಾಮಿನಃ ॥119॥
ಯಾರು ಶ್ರದ್ಧಾಪೂರ್ವಕವಾಗಿ ರಸಗಳನ್ನು, ಬೀಜಗಳನ್ನು, ಓಷಧಿಗಳನ್ನು ಶ್ರದ್ಧೆಯಿಂದ ದಾನ ಮಾಡುತ್ತಾರೋ ಅವರು ಸ್ವರ್ಗಕ್ಕೆ ಹೋಗುತ್ತಾರೆ.
ಕ್ಷೇಮಾಕ್ಷೇಮಂ ಚ ಮಾರ್ಗೇಷು ಸಮಾನಿ ವಿಷಮಾನಿ ಚ |
ಅರ್ಥಿನಾಂ ಯೇ ಚ ವಕ್ಷ್ಯಂತಿ ತೇ ನರಾಃ ಸ್ವರ್ಗಗಾಮಿನಃ ॥120॥
ಯಾರು ಮಾರ್ಗದಲ್ಲಿ ಸಂಚರಿಸುವ ವ್ಯಕ್ತಿಗಳ ಹಿತ-ಅಹಿತಗಳನ್ನು, ಸುಖ- ದುಃಖಗಳನ್ನು ಅರ್ಥ ಮಾಡಿಕೊಂಡು, ದುಃಖಿತರಾದವರನ್ನು ಉಪಚರಿಸುತ್ತಾರೊ ಅವರು ಸ್ವರ್ಗಕ್ಕೆ ಹೋಗುತ್ತಾರೆ.
ಪರ್ವದ್ವಯೇ ಚತುರ್ದಶ್ಯಾಮಷ್ಟಮ್ಯಾಂ ಸಂಧ್ಯಯೋರ್ದ್ವಯೋಃ |
ಆರ್ದ್ರಾಯಾಂ ಜನ್ಮನಕ್ಷತ್ರೇ ವಿಷುವೇ ಶ್ರವಣೇಽಥವಾ ॥121॥
ಯೇ ಗ್ರಾಮ್ಯಧರ್ಮವಿರತಾಸ್ತೇ ನರಾಃ ಸ್ವರ್ಗಗಾಮಿನಃ ॥122॥
ಯಾರು ಅಮಾವಾಸ್ಯೆ ಮತ್ತು ಹುಣ್ಣಿಮೆಗಳಲ್ಲಿ, ಚತುರ್ದಶಿ ಮತ್ತು ಅಷ್ಟಮಿ ತಿಥಿಗಳಲ್ಲಿ, ಎರಡು ಸಂಧಿಗಳಲ್ಲಿ, ಆರ್ದ್ರಾ ಮತ್ತು ಜನ್ಮ ನಕ್ಷತ್ರಗಳಲ್ಲಿ, ವಿಷುವ ಕಾಲ ಎನಿಸುವ ಮೇಷ ಮತ್ತು ತುಲಾ ಸಂಕ್ರಮಣ ಕಾಲದಲ್ಲಿ, ಶ್ರವಣಾ ನಕ್ಷತ್ರದಲ್ಲಿ ಸ್ತ್ರೀ ಸಮಾಗಮವನ್ನು ಮಾಡುವುದಿಲ್ಲವೋ ಅಂತಹವರು ಸ್ವರ್ಗಕ್ಕೆ ಹೋಗುತ್ತಾರೆ.
ಹವ್ಯಕವ್ಯವಿಧಾನಂ ಚ ನರಕಸ್ವರ್ಗಗಾಮಿನೌ |
ಧರ್ಮಾಧರ್ಮೌ ಚ ಕಥಿತೌ ಕಿಂ ಭೂಯಃ ಶ್ರೋತುಮಿಚ್ಛಸಿ ॥123॥
ಯುಧಿಷ್ಠಿರನೇ, ನಾನು ನಿನಗೆ ಹವ್ಯ-ಕವ್ಯ ವಿಧಾನಗಳನ್ನು, ನರಕ ಮತ್ತು ಸ್ವರ್ಗಕ್ಕೆ ಹೋಗುವವರನ್ನು, ಧರ್ಮಾಧರ್ಮಗಳ ವಿಷಯಗಳನ್ನು ನಿರೂಪಿಸಿದ್ದೇನೆ. ನೀನು ಇನ್ನೂ ಯಾವ ವಿಷಯವನ್ನು ಕೇಳಲು ಬಯಸುತ್ತೀಯಾ?
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಸ್ವರ್ಗನರಕಗಮನಕಥನಂ ನಾಮ
ಷಡಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಆರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಏಳನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಸಾಕ್ಷಾತ್ ಬ್ರಹ್ಮಹತ್ಯೆಯನ್ನು ಮಾಡದಿದ್ದರೂ ಬ್ರಹ್ಮಹತ್ಯೆಗೆ ಸಮಾನವಾದ ದುಷ್ಕರ್ಮ ಯಾವುದು ಎಂದು ಹೇಳಿದುದು. ಅದರಂತೆ ಅಭೋಜ್ಯವೆನಿಸಿದ ಅನ್ನಗಳ ಬಗ್ಗೆ,
ಪಾಪಿಗಳ ಲಕ್ಷಣದ ಬಗ್ಗೆ ನಿರೂಪಿಸಿದುದು.
ಯುಧಿಷ್ಠಿರಃ
ಇದಂ ಮೇ ತತ್ತ್ವತೋ ದೇವ ವಕ್ತುಮರ್ಹಸ್ಯಶೇಷತಃ |
ಹಿಂಸಾಮಕೃತ್ವಾ ಯೋ ಮರ್ತ್ಯೋ ಬ್ರಹ್ಮಹತ್ಯಾಮವಾಪ್ನುಯಾತ್ ॥1॥
ಯುಧಿಷ್ಠಿರ ದೇವೇಶನೇ, ಹಿಂಸೆಯನ್ನೇ ಮಾಡದಿದ್ದರೂ ಯಾವನು ಬ್ರಹ್ಮಹತ್ಯೆಯ ಪಾಪಕ್ಕೆ ಸಮಾನವಾದ ಪಾಪವನ್ನು ಹೊಂದುತ್ತಾನೆ? ಈ ವಿಷಯವಾಗಿ ಯಥಾರ್ಥವಾಗಿ, ಸಮಗ್ರವಾಗಿ ತಿಳಿಸು.
ಶ್ರೀಭಗವಾನ್
ಬ್ರಾಹ್ಮಣಂ ಸ್ವಯಮಾಹೂಯ ಭಿಕ್ಷಾರ್ಥಂ ಕೃಶವೃತ್ತಿನಮ್ |
ಬ್ರೂಯಾನ್ನಾಸ್ತೀತಿ ಯಃ ಪಶ್ಚಾತ್ ತಮಾಹುರ್ಬ್ರಹ್ಮಘಾತಕಮ್ ॥2॥
ಶ್ರೀಭಗವಾನ್ ಬದುಕಿಗೆ ಮಾರ್ಗವೇ ಇಲ್ಲದ ಬ್ರಾಹ್ಮಣನನ್ನು ಭಿಕ್ಷೆಯನ್ನು ನೀಡುತ್ತೇನೆ ಎಂದು ಸ್ವಯಂ ತಾನೇ ಆಹ್ವಾನಿಸಿ, ಅವನು ಮನೆಗೆ ಬಂದ ಬಳಿಕ ಏನೂ ಇಲ್ಲ, ಹೊರಟು ಹೋಗು ಎಂದು ಯಾವನು ಹೇಳುತ್ತಾನೋ ಅವನನ್ನು ಬ್ರಹ್ಮಘಾತಕನೆಂದು ಹೇಳುತ್ತಾರೆ.
ಮಧ್ಯಸ್ಥಸ್ಯೇಹ ವಿಪ್ರಸ್ಯ ಯೋಽನೂಚಾನಸ್ಯ ಭಾರತ |
ವೃತ್ತಿಂ ಹರತಿ ದುರ್ಬುದ್ಧಿಸ್ತಮಾಹುರ್ಬ್ರಹ್ಮಘಾತಕಮ್ ॥3॥
ದುಷ್ಟಬುದ್ಧಿಯುಳ್ಳ ಮನುಷ್ಯನು ಸುಮ್ಮನಿರುವ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನ ಜೀವಿಕೆಯನ್ನೇ ಅಪಹರಿಸುತ್ತಾನೋ ಅವನನ್ನೂ ಬ್ರಹ್ಮಘಾತಕನೆಂದು ಹೇಳುತ್ತಾರೆ.
ಗೋಕುಲಸ್ಯ ತೃಷಾರ್ತಸ್ಯ ಜಲಾಂತೇ ವಸುಧಾಧಿಪ |
ಉತ್ಪಾದಯತಿ ಯೋ ವಿಘ್ನಂ ತಮಾಹುರ್ಬ್ರಹ್ಮಘಾತಕಮ್ ॥4॥

ಗೋವುಗಳಿಗೆ ಬಾಯಾರಿಕೆ ಉಂಟಾಗಲು ಬಾಯಾರಿಕೆಯನ್ನು ಪರಿಹರಿಸಲು ಇರುವ ಸರೋವರವನ್ನು ಯಾವನು ನಾಶಗೈಯ್ಯುತ್ತಾನೋ ಅವನನ್ನು ಬ್ರಹ್ಮಘಾತಕನೆಂದು ಹೇಳುತ್ತಾರೆ.
ಯಃ ಪ್ರವೃತ್ತಾಂ ಶ್ರುತಿಂ ಸಮ್ಯಕ್ ಶಾಸ್ತ್ರಂ ವಾ ಮುನಿಭಿಃ ಕೃತಮ್ |
ದೂಷಯತ್ಯನಭಿಜ್ಞಾಯ ತಮಾಹುರ್ಬ್ರಹ್ಮಘಾತಕಮ್ ॥5॥
ಯಾರು ಅನಾದಿಕಾಲದಿಂದ ಕಿವಿಯಿಂದ ಕಿವಿಗೆ ಹರಿದುಬಂದಿರುವ ವೇದಮಾತುಗಳನ್ನೂ, ಶಾಸ್ತ್ರಗಳನ್ನೂ ಋಷಿ-ಮುನಿಗಳಿದ ರಚಿತವಾದ ಶಾಸ್ತ್ರಗಳನ್ನು ಏನೂ ತಿಳಿಯದೇ ದೂಷಣೆ ಮಾಡುತ್ತಾರೋ ಅವರನ್ನು ಬ್ರಹ್ಮಘಾತಕರೆಂದು ಹೇಳುತ್ತಾರೆ.
ಆಶ್ರಮೇ ವಾ ವನೇ ವಾಽಪಿ ಗ್ರಾಮೇ ವಾ ನಗರೇಽಪಿ ವಾ |
ಅಗ್ನಿಂ ಯಃ ಪ್ರಕ್ಷಿಪೇತ್ ಕ್ರುದ್ಧಃ ತಮಾಹುರ್ಬ್ರಹ್ಮಘಾತಕಮ್ ॥6॥
ಆಶ್ರಮದಲ್ಲಿಯೇ ಆಗಲಿ, ಮನೆಯಲ್ಲಿಯೇ ಆಗಲಿ, ಗ್ರಾಮದಲ್ಲಿಯೇ ಆಗಲಿ, ಪಟ್ಟಣದಲ್ಲಿಯೇ ಆಗಲಿ, ಯಾರು ಕ್ರುದ್ಧರಾಗಿ ಅವುಗಳಿಗೆ ಬೆಂಕಿಯನ್ನು ನೀಡುತ್ತಾರೋ ಅವನನ್ನು ಬ್ರಹ್ಮಘಾತಕನೆಂದು ಹೇಳುತ್ತಾರೆ.
ಚಕ್ಷುಷಾ ವಾ ವಿಹೀನಸ್ಯ ಪಂಗೋರ್ವಾಽಪಿ ಜಡಸ್ಯ ವಾ |
ಹರೇದ್ವೈ ಯಸ್ತು ಸರ್ವಸ್ವಂ ತಮಾಹುರ್ಬ್ರಹ್ಮಘಾತಕಮ್ ॥7॥
ಕಣ್ಣಿಲ್ಲದವನ, ಕಾಲಿಲ್ಲದವನ, ಬುದ್ಧಿಯಿಲ್ಲದವನ ಸರ್ವಸ್ವವನ್ನು ಯಾವನು ಅಪಹರಿಸುತ್ತಾನೋ ಅವನನ್ನು ಬ್ರಹ್ಮಘಾತಕನೆಂದು ಹೇಳುತ್ತಾರೆ.
ಯಾವತ್ಸಾರೋ ಭವೇದ್ ದೀನಸ್ತನ್ನಾಶೇ ಯಸ್ಯ ದುಃಸ್ಥಿತಿಃ |
ತತ್ಸರ್ವಸ್ವಂ ಹರೇದ್ ಯೋ ವೈ ತಮಾಹುರ್ಬ್ರಹ್ಮಘಾತಕಮ್ ॥8॥
ಯಾವ ಒಬ್ಬ ದೀನನಾದ ಮನುಷ್ಯನು ತನ್ನಲ್ಲಿರುವ ಅಲ್ಪಸ್ವಲ್ಪ ವಸ್ತುವನ್ನೇ ಸಾರಸರ್ವಸ್ವವೆಂದು ಭಾವಿಸಿಕೊಂಡಿರುತ್ತಾನೋ, ಅವುಗಳ ನಾಶದಿಂದ ದುಃಖ ಹೊಂದುತ್ತಾನೋ ಅಂತಹವನ ಸಮೀಪದಲ್ಲಿರುವ ಅಲ್ಪ ವಸ್ತುಗಳನ್ನು ಅಪಹರಿಸುವವನಿಗೆ ಬ್ರಹ್ಮಘಾತಕನೆಂದು ಹೇಳುತ್ತಾರೆ.
ಕ್ರೋಧಾದ್ವಾ ಯದಿ ವಾ ದ್ವೇಷಾದಾಕ್ರುಷ್ಟಸ್ತರ್ಜಿತೋಽಪಿ ವಾ |
ಋತೌ ಸ್ತ್ರಿಯಂ ವಾ ನೋಪೇಯಾತ್ ತಮಾಹುರ್ಬ್ರಹ್ಮಘಾತಕಮ್ ॥9॥
ಕ್ರೋಧದಿಂದಾಗಲಿ, ದ್ವೇಷದಿಂದಾಗಲಿ, ಕಿರುಚುತ್ತಾ, ಹೆದರಿಸುತ್ತಾ ತನ್ನ ಪತ್ನಿಯನ್ನು ತರ್ಜಿಸುತ್ತಲಾಗಲಿ, ಋತುಕಾಲದಲ್ಲಿ ತನ್ನ ಪತ್ನಿಯನ್ನು ಸೇರುವುದಿಲ್ಲವೋ ಅವನನ್ನು ಬ್ರಹ್ಮಘಾತಕನೆಂದು ಹೇಳುತ್ತಾರೆ.
ಯುಧಿಷ್ಠಿರಃ
ಸರ್ವೇಷಾಮಪಿ ದಾನಾನಾಂ ಯತ್ತು ದಾನಂ ವಿಶಿಷ್ಯತೇ |
ಅಭೋಜ್ಯಾನ್ನಾಶ್ಚ ಯೇ ವಿಪ್ರಾಸ್ತಾನ್ ಬ್ರವೀಹಿ ಸುರೋತ್ತಮ ॥10॥
ಯುಧಿಷ್ಠಿರ ಸಮಸ್ತ ದಾನಗಳಿಗಿಂತಲೂ ಯಾವ ದಾನವು ವಿಶಿಷ್ಟವಾದುದು? ಯಾವ ಬ್ರಾಹ್ಮಣರ ಅನ್ನವು ತಿನ್ನಲು ಯೋಗ್ಯವಲ್ಲ? ಇದನ್ನು ವಿಷದವಾಗಿ ತಿಳಿಸು.
ಶ್ರೀಭಗವಾನ್
ಅನ್ನಮೇವ ಪ್ರಶಂಸಂತಿ ದೇವಾ ಬ್ರಹ್ಮಪುರಃಸರಾಃ |
ಅನ್ನೇನ ಸದೃಶಂ ದಾನಂ ನ ಭೂತಂ ನ ಭವಿಷ್ಯತಿ ॥11॥
ಶ್ರೀಭಗವಾನ್ ಯುಧಿಷ್ಠಿರನೇ, ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳೂ ಅನ್ನವನ್ನೇ ಪ್ರಶಂಸೆ ಮಾಡುತ್ತಾರೆ. ಆದ್ದರಿಂದ ಅನ್ನದಾನಕ್ಕಿಂತ ಪ್ರಶಂಸನೀಯವಾದ ದಾನವು ಹಿಂದೆಯೂ ಇರಲಿಲ್ಲ, ಮುಂದೆಯೂ ಇರಲಾರದು.
ಅನ್ನಮೂರ್ಜಸ್ಕರಂ ಲೋಕೇ ಅನ್ನಾತ್ ಪ್ರಾಣಾಃ ಪ್ರತಿಷ್ಠಿತಾಃ |
ಅಭೋಜ್ಯಾನ್ನಾನ್ ಮಯಾ ರಾಜನ್ ವಕ್ಷ್ಯಮಾಣಾನ್ ನಿಬೋಧ ಮೇ ॥
ಈ ಲೋಕದಲ್ಲಿ ಅನ್ನವೇ ಪ್ರಾಣಿಗಳ ಬಲವನ್ನು ಹೆಚ್ಚಿಸುತ್ತದೆ. ಅನ್ನವನ್ನು ಅವಲಂಬಿಸಿಕೊಂಡು ಪ್ರಾಣಿಗಳು ಬದುಕಿವೆ. ಇನ್ನು ಮುಂದೆ ನಾನು ಯಾರ ಅನ್ನವನ್ನು ಉಣ್ಣಬಾರದೆಂದು ಉತ್ತರಿಸುತ್ತೇನೆ. ಏಕಾಗ್ರತೆಯಿಂದ ಕೇಳು.
ದೀಕ್ಷಿತಸ್ಯ ಕದರ್ಯಸ್ಯ ಬದ್ಧಸ್ಯ ನಿಗಲೇನ ತು |
ಅಭಿಶಸ್ತಸ್ಯ ಷಂಡಸ್ಯ ಪಾಕಭೇದಕರಸ್ಯ ಚ ॥13॥
ಯಜ್ಞದಲ್ಲಿ ದೀಕ್ಷಿತನಾಗಿರುವವನ, ಜಿಪುಣನ, ಕೋಪಿಷ್ಟನ, ಶಠನ, ಶಾಪಗ್ರಸ್ಥನ, ನಪುಂಸಕನ, ಪಂಕ್ತಿಭೇದ ಮಾಡುವವನ ಅನ್ನವನ್ನು ಉಣ್ಣಬಾರದು.
ಚಿಕಿತ್ಸಕಸ್ಯ ದೂತಸ್ಯ ತಥಾ ಚೋಚ್ಛಿಷ್ಟಭೋಜಿನಃ ॥14॥
ಚಿಕಿತ್ಸೆಯನ್ನು ನೀಡುವ ವೈದ್ಯನ, ದೂತನ, ಉಚ್ಛಿಷ್ಟಾನ್ನವನ್ನು ತಿನ್ನುವವನ ಮನೆಯಲ್ಲಿ ಅನ್ನವನ್ನು ಉಣ್ಣಬಾರದು.
ಉಗ್ರಾನ್ನಂ ಸೂತಕಾನ್ನಂ ಚ ಶೂದ್ರೋಚ್ಛೇಷಣಮೇವ ಚ |
ದ್ವಿಷದನ್ನಂ ನ ಭೋಕ್ತವ್ಯಂ ಪತಿತಾನ್ನಂ ಚ ಯಚ್ಚ್ಯುತಮ್ ॥15॥
ಉಗ್ರನ, ಅಶೌಚದಲ್ಲಿರುವವನ, ವೃಷಲನು ಊಟ ಮಾಡಿದ ಬಳಿಕ ಉಳಿದ ಅನ್ನವನ್ನು, ದ್ವೇಷ ಮಾಡುವವನ ಅನ್ನವನ್ನು, ಪತಿತನ ಮನೆಯ ಅನ್ನವನ್ನು ಉಣ್ಣಬಾರದು.
ತಥಾ ಚ ಪಿಶುನಸ್ಯಾನ್ನಂ ಯಜ್ಞವಿಕ್ರಯಿಣಸ್ತಥಾ ॥16॥
ಚಾಡಿಹೇಳುವವನ ಮನೆಯ ಅನ್ನವನ್ನು, ಯಜ್ಞದ ಫಲವನ್ನು ಮಾರುವವನ ಅನ್ನವನ್ನು ಉಣ್ಣಬಾರದು.
ಶೈಲೂಷೀತಂತುವಾಯಾನ್ನಂ ಕೃತಘ್ನಸ್ಯಾನ್ನಮೇವ ಚ |

ಅಂಬಷ್ಠಸ್ಯ ನಿಷಾದಸ್ಯ ರಂಗಾವತರಕಸ್ಯ ಚ ॥17॥
ವೇದೋಕ್ತವಾದ ಮರ್ಯಾದೆಯನ್ನು ನಾಶಪಡಿಸಿದ, ತಲೆಯಲ್ಲಿ ನಾಯಿ ಚಿಹ್ನೆ ಮೊದಲಾದ ರೀತಿಯಲ್ಲಿ ವಿರೂಪವಾಗಿ ಕೇಶದಲ್ಲಿ ಅಲಂಕೃತನಾದ ವ್ಯಕ್ತಿಯನ್ನು ಶೈಲೂಷಿ ಎಂದು ಕರೆದಿದ್ದಾರೆ. ಅಂತಹ ವ್ಯಕ್ತಿಯ ಮನೆಯ ಅನ್ನವನ್ನು, ಬಟ್ಟೆಯನ್ನು ಹೊಲಿದು ಜೀವನ ಮಾಡುವ ವ್ಯಕ್ತಿಯ ಮನೆಯ ಅನ್ನವನ್ನು, ಕೃತಘ್ನನ ಮನೆಯ ಅನ್ನವನ್ನು, ವೇಶ್ಯಾಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನ ಮನೆಯ ಅನ್ನವನ್ನು, ಬೇಡನ ಮನೆಯ ಅನ್ನವನ್ನು, ರಂಗಭೂಮಿಯಲ್ಲಿ ನಾಟಕವನ್ನು ಮಾಡುವವನ ಮನೆಯ ಅನ್ನವನ್ನು ಉಣ್ಣಬಾರದು.
ಸುವರ್ಣಕರ್ತುರ್ವೈಣಸ್ಯ ಶಸ್ತ್ರವಿಕ್ರಯಿಣಸ್ತಥಾ |
ಸೂತಾನಾಂ ಶೌಂಡಿಕಾನಾಂ ಚ ವೈದ್ಯಸ್ಯ ರಜಕಸ್ಯ ಚ ॥18॥
ಅಕ್ಕಸಾಲಿಗನ ಮನೆಯ ಅನ್ನವನ್ನು, ವೀಣೆಯನ್ನು ನುಡಿಸಿಕೊಂಡು ಜೀವಿಸುವವನ ಮನೆಯ ಅನ್ನವನ್ನು, ಆಯುಧಗಳನ್ನು ಮಾರುವವನ ಅನ್ನವನ್ನು, ಸೂತನ ಮನೆಯ ಅನ್ನವನ್ನು, ಹೆಂಡವನ್ನು ಮಾರುವವನ ಮನೆಯ ಅನ್ನವನ್ನು, ವೈದ್ಯನ ಮನೆಯ ಅನ್ನವನ್ನು, ರಜಕನ (ಅಗಸನ) ಮನೆಯ ಅನ್ನವನ್ನುಉಣ್ಣಬಾರದು.
ಸ್ತ್ರೀಜಿತಸ್ಯ ನೃಶಂಸಸ್ಯ ತಥಾ ಮಾಹಿಷಕಸ್ಯ ಚ |
ಅನಿರ್ದಶಾನಾಂ ಪ್ರೇತಾನಾಂ ಗಣಿಕಾನಾಂ ತಥೈವ ಚ ॥19॥
ಹೆಂಗಸಿನ ಅಡಿಯಾಳಾಗಿ ಬದುಕುವವನ ಮನೆಯ ಅನ್ನವನ್ನು, ಕ್ರೂರಿಯ ಮನೆಯ ಅನ್ನವನ್ನು, ವೈಶ್ಯಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನ ಮನೆಯ ಅನ್ನವನ್ನು, ಸತ್ತವರ ಮನೆಯಲ್ಲಿ ಹತ್ತುದಿನಗಳ ಒಳಗೆ ಇರುವವರ ಮನೆಯ ಅನ್ನವನ್ನು, ವೇಶ್ಯೆಯ ಅನ್ನವನ್ನು ಉಣ್ಣಬಾರದು.
ಬಂದಿನೋ ದ್ಯೂತಕರ್ತುಶ್ಚ ತಥಾ ದ್ಯೂತವಿದಾಮಪಿ |
ಪರಿವಿತ್ತೇಶ್ಚ(ಸ್ಯ) ಯಚ್ಚಾನ್ನಂ ಪರಿವೇತ್ತುಸ್ತಥೈವ ಚ ॥20॥
ಹೊಗಳುಭಟ್ಟರ ಮನೆಯ ಅನ್ನವನ್ನು, ದ್ಯೂತಕ್ರೀಡೆಯನ್ನು ಆಡುವವರ ಮನೆಯ ಅನ್ನವನ್ನು, ದ್ಯೂತದ ವಿಷಯದಲ್ಲಿ ನಿಷ್ಣಾತರಾದವರ ಮನೆಯ ಅನ್ನವನ್ನು, ಹಿರಿಯಣ್ಣನು ಮದುವೆಯಾಗದಿದ್ದಾಗ ತಾನೆ ಮೊದಲು ಮದುವೆಯಾದ ತಮ್ಮನ ಮನೆಯ ಅನ್ನವನ್ನು, ಅಣ್ಣನು ಮರಣ ಹೊಂದಿದ ನಂತರ ತಮ್ಮನು ಪರಿವೇತ್ತೃವಾಗಿ ಬಡಿಸುವ ಅನ್ನವನ್ನು ಸ್ವೀಕರಿಸಬಾರದು.
ಯಶ್ಚಾಗ್ರೇ ದಿಧಿಷುರ್ವಿಪ್ರೋ ದಿಧಿಷೂಪಪತಿಸ್ತಥಾ |
ತಯೋರಪ್ಯುಭಯೋರನ್ನಂ ರಾಜ್ಞಾಂ ಚಾಪಿ ವಿವರ್ಜಯೇತ್ ॥21॥
ಯಾವ ನಾರಿಯು ಎರಡು ವಿವಾಹವನ್ನು ಮಾಡಿಕೊಂಡಿರುತ್ತಾಳೋ ಅವಳು ದಿಧಿಷು ಎಂದು ಕರೆಸಿಕೊಳ್ಳುತ್ತಾಳೆ. ಅವಳ ಗಂಡ ಕ್ಷತ್ರಿಯನಾಗಿದ್ದಲ್ಲಿ ದಿಧಿಷು ಎಂದು ಕರೆಸಿಕೊಳ್ಳುತ್ತಾನೆ. ಬ್ರಾಹ್ಮಣನಾಗಿದ್ದಲ್ಲಿ ಅಗ್ರೇ ದಿಧಿಷು ಎಂದು ಕರೆಸಿಕೊಳ್ಳುತ್ತಾನೆ. ಇಂತಹ ನಾರಿಯನ್ನು ವಿವಾಹ ಮಾಡಿಕೊಂಡ ಕ್ಷತ್ರಿಯನ ಮನೆಯಲ್ಲಾಗಲಿ, ಬ್ರಾಹ್ಮಣನ ಮನೆಯಲ್ಲಾಗಲಿ ಊಟವನ್ನು ಮಾಡಿದರೆ ಬ್ರಹ್ಮಘಾತಕನೆನಿಸುತ್ತಾನೆ. ಮೊದಲು ಒಬ್ಬ ಸ್ತ್ರೀಯನ್ನು ಮದುವೆಯಾಗಿ, ನಂತರ ಊಢಳಾದ ಸ್ತ್ರೀಯನ್ನು ಮದುವೆ ಮಾಡಿಕೊಂಡ ಈ ಬ್ರಾಹ್ಮಣ-ಕ್ಷತ್ರಿಯರು ಪತಿತರಾಗಿರುವುದರಿಂದ ಇವರೀರ್ವರೂ ಜಾರ ಎಂದೇ ಕರೆಸಿಕೊಳ್ಳುತ್ತಾರೆ.
ರಾಜಾನ್ನಂ ತೇಜ ಆದತ್ತೇ ಶೂದ್ರಾನ್ನಂ ಬ್ರಹ್ಮವರ್ಚಸಮ್ |
ಆಯುಃ ಸುವರ್ಣಕಾರಾನ್ನಂ ಯಶಶ್ಚರ್ಮಾವಕೃಂತಿನಃ ॥22॥
ರಾಜನ ಅನ್ನವು ತೇಜಸ್ಸನ್ನೂ, ಶೂದ್ರನ ಮನೆಯ ಅನ್ನವು ಬ್ರಹ್ಮವರ್ಚಸ್ಸನ್ನೂ, ಅಕ್ಕಸಾಲಿಗನ ಮನೆಯ ಅನ್ನವು ಆಯುಸ್ಸನ್ನೂ, ಚಮ್ಮಾರನ ಮನೆಯ ಅನ್ನವು ಯಶಸ್ಸನ್ನು ಹಾಳುಮಾಡುತ್ತದೆ.
ಗಣಾನ್ನಂ ಗಣಿಕಾನ್ನಂ ಚ ಲೋಕೇಭ್ಯಃ ಪರಿಕೃಂತತಿ |
ಪೂಯಂ ಚಿಕಿತ್ಸಕಸ್ಯಾನ್ನಂ ಶುಕ್ಲಂ ತು ವೃಷಲೀಪತೇಃ ॥23॥
ಜನಸಮೂಹದ ಅನ್ನವು, ವೇಶ್ಯಾಸ್ತ್ರೀಯ ಅನ್ನವು ಲೋಕದಲ್ಲಿ ನಿಂದಿತವಾದವು. ವೈದ್ಯನ ಅನ್ನವು ಕೀವಿಗೆ ಸಮಾನವಾದುದು. ಶೂದ್ರಸ್ತ್ರೀಪತಿಯಾದ ಬ್ರಾಹ್ಮಣನ ಅನ್ನವು ವೀರ್ಯಕ್ಕೆ ಸಮಾನವಾದುದು.
ವಿಷ್ಠಾ ವಾರ್ಧುಷಿಕಸ್ಯಾನ್ನಂ ತಸ್ಮಾತ್ ತತ್ ಪರಿವರ್ಜಯೇತ್ ॥24॥
ಬಡ್ಡಿಯಿಂದ ಜೀವಿಸುವವನ ಅನ್ನವು ಅಮೇಧ್ಯಕ್ಕೆ ಸಮಾನವಾದುದು. ಆದ್ದರಿಂದ ಇವೆಲ್ಲವನ್ನೂ ತ್ಯಜಿಸಬೇಕು.
ತೇಷಾಂ ತ್ವಗಸ್ಥಿರೋಮಾಣಿ ಭುಂಕ್ತೇ ಯೋಽನ್ನಂ ತು ಭಕ್ಷಯೇತ್ ॥25॥
ಯಾವನು ಮೋಹದಿಂದ ಇಂಥವರು ಮಾಡಿದ ಅನ್ನವನ್ನು ಉಣ್ಣುತ್ತಾನೋ ಅವನು ಅವರ ಚರ್ಮ, ಅಸ್ಥಿ, ರೋಮಗಳನ್ನೇ ತಿನ್ನುವವನು ಎನಿಸಿಕೊಳ್ಳುತ್ತಾನೆ.
ಅಮಾತ್ಯಾನ್ನಮಥೈತೇಷಾಂ ಭುಕತ್ವ ತು ತ್ರ್ಯಕ್ಷರಂ ಜಪೇತ್ |
ಮತ್ಯಾ ಭುಕತ್ವ ಸಕೃದ್ ವಾಽಪಿ ಪ್ರಾಜಾಪತ್ಯಂ ಚರೇದ್ ದ್ವಿಜಃ ॥26॥
ಒಂದು ವೇಳೆ ಬ್ರಾಹ್ಮಣನು ತಿಳಿಯದೆ ಇಂತಹವರ ಅನ್ನವನ್ನು ಉಂಡರೆ ಓಂಕಾರ ಜಪವನ್ನು ಮಾಡಬೇಕು. ಮತಿಪೂರ್ವಕವಾಗಿ ತಿಂದರೆ ಆ ಪಾಪ ಪರಿಹಾರಕ್ಕಾಗಿ ಪ್ರಾಜಾಪತ್ಯ ವ್ರತವನ್ನು ಆಚರಿಸಬೇಕು.
ದಾನಾನಾಂ ಚ ಫಲಂ ಯದ್ವೈ ಶೃಣು ಪಾಂಡವ ತತ್ತ್ವತಃ ॥27॥
ಯುಧಿಷ್ಠಿರನೇ, ದಾನಗಳ ಫಲವೇನೆಂಬುದನ್ನು ಯಥಾವತ್ತಾಗಿ ತಿಳಿಸುತ್ತೇನೆ, ಕೇಳು.
ಜಲದಸ್ತೃಪ್ತಿಮಾಪ್ನೋತಿ ಸುಖಮಕ್ಷಯಮನ್ನದಃ ॥28॥
ಜಲವನ್ನು ದಾನ ಮಾಡಿದವನು ತೃಪ್ತಿಯನ್ನು ಹೊಂದುತ್ತಾನೆ. ಅನ್ನದಾನವನ್ನು ಮಾಡಿದವನು ಅಕ್ಷಯವಾದ ಸುಖವನ್ನು ಹೊಂದುತ್ತಾನೆ.

ತಿಲದಸ್ತು ಪ್ರಜಾಮಿಷ್ಟಾಂ ದೀಪದಶ್ಚಕ್ಷುರುತ್ತಮಮ್ |
ಭೂಮಿದೋ ಭೂಮಿಮಾಪ್ನೋತಿ ದೀರ್ಘಮಾಯುರ್ಹಿರಣ್ಯದಃ ॥29॥
ಎಳ್ಳನ್ನು ದಾನ ಮಾಡಿದವನು ಇಷ್ಟವಾದ ಸಂತಾನವನ್ನು ಹೊಂದುತ್ತಾನೆ. ದೀಪದಾನ ಮಾಡಿದವನು ಹೊಳೆಯುವ ಕಣ್ಣುಗಳುಳ್ಳವನಾಗುತ್ತಾನೆ. ಭೂದಾನ ಮಾಡಿದವನು ಭೂಮಿಯನ್ನೂ, ಸುವರ್ಣದಾನ ಮಾಡಿದವನು ದೀರ್ಘಾಯುಷ್ಯವನ್ನೂ ಹೊಂದುತ್ತಾನೆ.
ಗೃಹದೋಽಗ್ರ್ಯಾಣಿ ವೇಶ್ಮಾನಿ ರೂಪ್ಯದೋ ರೂಪಮುತ್ತಮಮ್ |
ವಾಸೋದಶ್ಚಂದ್ರಸಾಲೋಕ್ಯಮಶ್ವಿಸಾಲೋಕ್ಯಮಶ್ವದಃ ॥30॥
ಗೃಹದಾನ ಮಾಡಿದವನು ಶ್ರೇಷ್ಠವಾದ ಮನೆಗಳನ್ನೂ, ಬೆಳ್ಳಿಯನ್ನು ದಾನ ಮಾಡಿದವನು ಒಳ್ಳೆಯ ರೂಪವಂತನೂ, ವಸ್ತ್ರವನ್ನು ದಾನ ಮಾಡಿದವನು ಚಂದ್ರಲೋಕಕ್ಕೂ, ಕುದುರೆಯನ್ನು ದಾನ ಮಾಡಿದವನು ಅಶ್ವಿನೀದೇವತೆಗಳ ಲೋಕಕ್ಕೂ ಹೋಗುತ್ತಾನೆ.
ಅನಡುದ್ವಃ ಶ್ರಿಯಂ ಜುಷ್ಟಾಂ ಗೋದೋ ಗೋಲೋಕಮಶ್ನುತೇ |
ಯಾನಶಯ್ಯಾಪ್ರದೋ ಭಾರ್ಯಾಮೈಶ್ವರ್ಯಮಭಯಪ್ರದಃ ॥31॥
ಎತ್ತನ್ನು ದಾನ ಮಾಡಿದವನು ಅಪೇಕ್ಷಿಸಿದ ಸಂಪತ್ತನ್ನು, ಗೋವನ್ನು ದಾನ ಮಾಡಿದವನು ಗೋಲೋಕಕ್ಕೆ ಹೋಗಿ ಸುಖವನ್ನು ಪಡೆಯುತ್ತಾನೆ. ವಾಹನವನ್ನು, ಹಾಸಿಗೆಯನ್ನು ದಾನ ಮಾಡಿದವನು ಸುಂದರಳಾದ ಹೆಂಡತಿಯನ್ನು ಹೊಂದುತ್ತಾನೆ. ಪ್ರಾಣಿಗಳಿಗೆ ಅಭಯವನ್ನು ನೀಡುವವನು ಐಶ್ವರ್ಯ ಸಂಪನ್ನನು ಆಗುತ್ತಾನೆ.
ಧಾನ್ಯದಃ ಶಾಶ್ವತಂ ಸೌಖ್ಯಂ ಬ್ರಹ್ಮದೋ ಬ್ರಹ್ಮಸಾಮ್ಯತಾಮ್ |
ಸರ್ವೇಷಾಮೇವ ದಾನಾನಾಂ ಬ್ರಹ್ಮದಾನಂ ವಿಶಿಷ್ಯತೇ ॥32॥
ಧಾನ್ಯಗಳನ್ನು ದಾನ ಮಾಡಿದವನು ಶಾಶ್ವತವಾದ ಸುಖವನ್ನು ಹೊಂದುತ್ತಾನೆ. ವೇದವಿದ್ಯೆಯನ್ನು ದಾನ ಮಾಡಿದವನು ಪರಬ್ರಹ್ಮನ ಸಾದೃಶ್ಯವನ್ನು ಹೊಂದುತ್ತಾನೆ. ಸಮಸ್ತ ದಾನಗಳಿಗಿಂತಲೂ ವೇದವಿದ್ಯೆಯನ್ನು ದಾನ ಮಾಡುವುದೇ ಪ್ರಶಸ್ತವಾದುದು.
ಹಿರಣ್ಯಭೂಗವಾಶ್ವಾಜವಸ್ತ್ರಶಯ್ಯಾಸನಾದಿಷು |
ಯೋಽರ್ಚಿತಂ ಪ್ರತಿಗೃಹ್ಣಾತಿ ದದಾತ್ಯರ್ಚಿತಮೇವ ಚ ॥33॥
ತಾವುಭೌ ಗಚ್ಛತಃ ಸ್ವರ್ಗಂ ನರಕಂ ತು ವಿಪರ್ಯಯೇ ॥34॥
ಸುವರ್ಣ, ಭೂಮಿ, ಗೋವು, ಕುದುರೆ, ಆಡು, ವಸ್ತ್ರ, ಹಾಸಿಗೆ, ಆಸನ - ಇವೇ ಮೊದಲಾದ ವಸ್ತುಗಳನ್ನು ಯಾವನು ಆದರಪೂರ್ವಕವಾಗಿ ಸತ್ಪಾತ್ರರಿಗೆ ಕೃಷ್ಣಾರ್ಪಣ ಬುದ್ಧಿಯಿಂದ ನೀಡುತ್ತಾನೋ, ಯಾರು ಕೃಷ್ಣಾರ್ಪಣ ಬುದ್ಧಿಯಿಂದ ಸ್ವೀಕರಿಸುತ್ತಾನೋ ಅವರಿಬ್ಬರೂ ಸ್ವರ್ಗಕ್ಕೆ ಹೋಗುತ್ತಾರೆ. ಒಂದು ವೇಳೆ ಇದಕ್ಕೆ ವಿಪರೀತವಾಗಿ ಔದಾಸೀನ್ಯದಿಂದ, ಅಶ್ರದ್ಧೆಯಿಂದ, ಕೃಷ್ಣಾರ್ಪಣಬುದ್ಧಿಯಿಲ್ಲದೆ ದಾನ ಮಾಡಿದರೆ ನರಕಕ್ಕೆ ಹೋಗುತ್ತಾರೆ.
ಅನೃತಂ ನ ವದೇದ್ ವಿದ್ವಾಂಸ್ತಪಸ್ತಪ್ತ್ವಾ ನ ವಿಸ್ಮಯೇತ್ |
ನಾರ್ತೋಽಪ್ಯಪವದೇದ್ ವಿಪ್ರಾನ್ ನ ದತ್ವಾ ಪರಿಕೀರ್ತಯೇತ್ ॥
ವಿದ್ವಾಂಸನು ಸುಳ್ಳನ್ನು ಹೇಳಬಾರದು, ತಪಸ್ಸನ್ನು ಮಾಡಿ ಗರ್ವವನ್ನು ಹೊಂದಬಾರದು, ಕಷ್ಟದಲ್ಲಿದ್ದರೂ ಬ್ರಾಹ್ಮಣರನ್ನು ಅವಮಾನ ಮಾಡಬಾರದು. ದಾನ ಕೊಟ್ಟಿದ್ದನ್ನುಹೇಳಿಕೊಳ್ಳಬಾರದು.
ಯಜ್ಞೋಽನೃತೇನ ಕ್ಷರತಿ ತಪಃ ಕ್ಷರತಿ ವಿಸ್ಮಯಾತ್ |
ಆಯುರ್ವಿಪ್ರಾಪವಾದೇನ ದಾನಂ ತು ಪರಿಕೀರ್ತನಾತ್ ॥36॥
ಸುಳ್ಳು ಹೇಳುವುದರಿಂದ ಯಜ್ಞದ ಫಲವು ನಾಶವಾಗುತ್ತದೆ. ಅಹಂಕಾರದಿಂದ ತಪಸ್ಸು ನಾಶವಾಗುತ್ತದೆ. ಬ್ರಾಹ್ಮಣರನ್ನು ಅವಮಾನಗೊಳಿಸುವುದರಿಂದ ಆಯುಷ್ಯವು ನಾಶವಾಗುತ್ತದೆ. ದಾನ ಕೊಟ್ಟು ಹೇಳಿಕೊಳ್ಳುವುದರಿಂದ ದಾನದ ಫಲವು ನಾಶವಾಗುತ್ತದೆ.
ಏಕಃ ಪ್ರಜಾಯತೇ ಜಂತುರೇಕ ಏವ ಪ್ರಮೀಯತೇ |
ಏಕೋನುಭುಂಕ್ತೇ ಸುಕೃತಮೇಕಶ್ಚಾಪ್ನೋತಿ ದುಷ್ಕೃತಮ್ ॥37॥
ಜೀವನು ಏಕಾಕಿಯಾಗಿ ಹುಟ್ಟುತ್ತಾನೆ, ಏಕಾಕಿಯಾಗಿ ಸಾಯುತ್ತಾನೆ, ಏಕಾಕಿಯಾಗಿಯೇ ತಾನು ಮಾಡಿದ ಸುಕೃತ-ದುಷ್ಕೃತಗಳ ಫಲವನ್ನು ಅನುಭವಿಸುತ್ತಾನೆ.
ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಹಸಮಂ ಕ್ಷಿತೌ |
ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥38॥
ಮನುಷ್ಯನು ಮರಣ ಹೊಂದಿದ ಬಳಿಕ ಅವನ ಬಂಧುಗಳೇ ಮೃತಶರೀರಕ್ಕೆ ಕಟ್ಟಿಗೆಯನ್ನಿಟ್ಟು ವಿಮುಖರಾಗಿ ಹೊರಟು ಹೋಗುತ್ತಾರೆ. ಅಥವಾ ಮಣ್ಣಿನ ಹೆಂಟೆಗಳನ್ನು ಅವನ ಮೇಲೆ ಹಾಕಿ ಹೊರಟು ಹೋಗುತ್ತಾರೆ. ಆ ಸಮಯದಲ್ಲಿ ಧರ್ಮ ಒಂದೇ ಶರೀರವನ್ನು ತ್ಯಜಿಸಿದ ಜೀವನ ಹಿಂದೆ ಹೋಗುತ್ತದೆ.
ಅನಾಗತಾನಿ ಕಾರ್ಯಾಣಿ ಕರ್ತುಂ ಗಣಯತೇ ಮನಃ |
ಶರೀರಕಂ ಸಮುದ್ವೀಕ್ಷ್ಯ ಸ್ಮಯತೇ ನೂನಮಂತಕಃ ॥39॥
ಮುಂದಿನ ಸತ್ಕರ್ಮಗಳನ್ನು ಮಾಡಲು ಮನುಷ್ಯನು ಲೆಕ್ಕ ಹಾಕುತ್ತಾನೆ. ಆದರೆ ಶರೀರದ ಅಸ್ಥಿರತೆಯನ್ನು ನೋಡುತ್ತಿರುವ ಯಮದೇವನು ಅವನನ್ನು ಕಂಡು ನಗುತ್ತಿರುತ್ತಾನೆ.
ತಸ್ಮಾದ್ ಧರ್ಮಸಹಾಯಸ್ತು ಧರ್ಮಂ ಸಂಚಿನುಯಾತ್ ಸದಾ |
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಮ್ ॥40॥
ಆದ್ದರಿಂದ ಮನುಷ್ಯನು ಆಪತ್ಕಾಲದಲ್ಲಿ ಧರ್ಮ ಒಂದೇ ಸಹಾಯಕವಾಗಿದೆ ಎಂದು ನಿಶ್ಚಯಿಸಿಕೊಂಡು, ಪುಣ್ಯಸಂಚಯದಲ್ಲಿ

ತತ್ಪರನಾಗಿರಬೇಕು. ಮನುಷ್ಯನು ಧರ್ಮದ ಸಹಾಯದಿಂದ ದಾಟಲು ಅಸಾಧ್ಯವಾದ, ಅಂಧಕಾರದಿಂದ ಕೂಡಿದ ನರಕವನ್ನು ದಾಟುತ್ತಾನೆ.
ಯೇಷಾಂ ತಟಾಕಾನಿ ಬಹೂದಕಾನಿ
ಸಭಾಶ್ಚ ಕೂಪಾಶ್ಚ ಪ್ರತಿಶ್ರಯಾಶ್ಚ |
ಅನ್ನಪ್ರದಾನಂ ಮಧುರಾ ಚ ವಾಣೀ
ಯಮಸ್ಯ ತೇ ನಿರ್ವಿಷಯಾ ಭವಂತಿ ॥41॥
ಯಾವಾತನು ಬಹಳ ನೀರಿನಿಂದ ತುಂಬಿರುವ ಸರೋವರಗಳನ್ನೂ, ಧರ್ಮಶಾಲೆಗಳನ್ನೂ, ಬಾವಿಗಳನ್ನೂ, ಚೆನ್ನಾಗಿರುವ ಅರವಟ್ಟಿಗೆಗಳನ್ನು ನಿರ್ಮಿಸುತ್ತಾನೋ, ಅನ್ನದಾನ ಮಾಡುತ್ತಾನೋ, ಇತರರೊಡನೆ ಪ್ರಿಯವಾದ ಮಧುರವಾದ ಮಾತುಗಳನ್ನಾಡುತ್ತಾನೋ ಅವನು ಯಮನಿಗೆ ವಿಷಯನಾಗುವುದಿಲ್ಲ. ಯಮಬಾಧೆಗೆ ತುತ್ತಾಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಭೋಜ್ಯಾಭೋಜ್ಯಾದಿಸರ್ವದಾನಕಥನಂ ನಾಮ ಸಪ್ತಾಧಿಕಶತತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಏಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಎಂಟನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಯತಿ-ಅಗ್ನಿಗಳ ಮಹಿಮೆಯನ್ನು ವರ್ಣಿಸಿದುದು. ದಾನಪಾತ್ರನಾದ ಬ್ರಾಹ್ಮಣನ ಲಕ್ಷಣವನ್ನು ಹೇಳಿದುದು. ಅದರಂತೆ ಅನ್ನದಾನದ ಮಹಿಮೆಯನ್ನು ನಿರೂಪಿಸಿದುದು.
ಯುಧಿಷ್ಠಿರಃ
ಅನೇಕಾಂತಂ ಬಹುದ್ವಾರಂ ಧರ್ಮಮಾಹುರ್ಮನೀಷಿಣಃ |
ಕಿಂಲಕ್ಷಣೋಽಸೌ ಭವತಿ ತನ್ಮೇ ಬ್ರೂಹಿ ಜನಾರ್ದನ ॥1॥
ಯುಧಿಷ್ಠಿರ ಜನಾರ್ದನನೇ, ಧರ್ಮವು ಅನೇಕ ಪ್ರಕಾರವುಳ್ಳದ್ದು, ಅನೇಕ ದ್ವಾರವುಳ್ಳದ್ದು ಎಂದು ವಿದ್ವಾಂಸರು ಹೇಳುತ್ತಾರೆ. ಧರ್ಮದ ನಿಶ್ಚಿತವಾದ ಲಕ್ಷಣವೇನು? ಈ ವಿಷಯವನ್ನು ಹೇಳು.
ಶ್ರೀಭಗವಾನ್
ಶೃಣು ರಾಜನ್ ಸಮಾಸೇನ ಧರ್ಮಶೌಚವಿಧಿಕ್ರಮಮ್ ॥2॥
ಶ್ರೀಭಗವಾನ್ ಯುಧಿಷ್ಠಿರನೇ, ಸಂಕ್ಷೇಪವಾಗಿ ಧರ್ಮದ ಮತ್ತು ಶೌಚದ ವಿಧಿಯನ್ನು, ಅದರ ಕ್ರಮವನ್ನು ಹೇಳುತ್ತೇನೆ, ಕೇಳು.
ಅಹಿಂಸಾ ಸತ್ಯಮಸ್ತೇಯಮಾನೃಶಂಸ್ಯಂ ದಮಃ ಶಮಃ |
ಆರ್ಜವಂ ಚೈವ ರಾಜೇಂದ್ರ ನಿಶ್ಚಿತಂ ಧರ್ಮಲಕ್ಷಣಮ್ ॥3॥
ರಾಜೇಂದ್ರನೇ, ಸತ್ಯ, ಅಚೌರ್ಯ, ಅಹಿಂಸೆ, ಅಕ್ರೌರ್ಯ, ದಮ,ಶಮ, ಸರಳತೆ - ಇವು ಧರ್ಮದ ನಿಶ್ಚಿತ ಲಕ್ಷಣಗಳು.
ಬ್ರಹ್ಮಚರ್ಯಂ ತಪಃ ಕ್ಷಾಂತಿರ್ಮಧುಮಾಂಸಸ್ಯ ವರ್ಜನಮ್ |
ಮರ್ಯಾದಾಯಾಂ ಸ್ಥಿತಿಶ್ಚೈವ ಶಮಃ ಶೌಚಸ್ಯ ಲಕ್ಷಣಮ್ ॥4॥
ಬ್ರಹ್ಮಚರ್ಯ, ತಪಸ್ಸು, ಕ್ಷಮೆ, ಮಧು-ಮಾಂಸಗಳ ತ್ಯಾಗ, ಧರ್ಮ ಮರ್ಯಾದೆಯನ್ನು ಮೀರದಿರುವುದು, ಶಮ ಇವುಗಳು ಶೌಚದ ಲಕ್ಷಣಗಳಾಗಿವೆ.
ಬಾಲ್ಯೇ ವಿದ್ಯಾಂ ನಿಷೇವೇತ ಯೌವನೇ ದಾರಸಂಗ್ರಹಮ್ |
ವಾರ್ಧಕೇ ಮೌನಮಾತಿಷ್ಠೇತ್ ಸರ್ವದಾ ಧರ್ಮಮಾಚರೇತ್ ॥5॥
ಮನುಷ್ಯನು ಬಾಲ್ಯದಲ್ಲಿ ವಿದ್ಯೆಯನ್ನು ಕಲಿಯಬೇಕು. ಯೌವನದಲ್ಲಿ ವಿವಾಹವನ್ನು ಮಾಡಿಕೊಂಡು ಗೃಹಸ್ಥನಾಗಬೇಕು. ವಾರ್ಧಕ್ಯದಲ್ಲಿ ಮುನಿವೃತ್ತಿಯನ್ನು ಆಶ್ರಯಿಸಬೇಕು. ಹೀಗೆ ಎಲ್ಲ ಅವಸ್ಥೆಗಳಲ್ಲಿಯೂ ಧರ್ಮಾಚರಣೆಯನ್ನು ಮಾಡಬೇಕು.
ಬ್ರಾಹ್ಮಣಾನ್ ನಾವಮನ್ಯೇತ ಗುರೂನ್ ಪರಿವದೇನ್ನ ಚ |
ಯತೀನಾಮನುಕೂಲಃ ಸ್ಯಾದ್ ಏಷ ಧರ್ಮಃ ಸನಾತನಃ ॥6॥
ಬ್ರಾಹ್ಮಣರನ್ನು ಅವಮಾನಗೊಳಿಸಬಾರದು. ಗುರುಗಳನ್ನು ನಿಂದಿಸಬಾರದು. ಯತಿಗಳಿಗೆ ಅನುಕೂಲವಾಗಿ ವರ್ತಿಸಬೇಕು. ಇದು ಸನಾತನ ಧರ್ಮವು.
ಯತಿರ್ಗುರುರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ |
ಪತಿರೇವ ಗುರುಃ ಸ್ತ್ರೀಣಾಂ ಸರ್ವೇಷಾಂ ಪಾರ್ಥಿವೋ ಗುರುಃ ॥7॥
ಬ್ರಾಹ್ಮಣರಿಗೆ ಸಂನ್ಯಾಸಿಯೇ ಗುರುವು. ನಾಲ್ಕು ವರ್ಣದವರಿಗೆ ಬ್ರಾಹ್ಮಣರೇ ಗುರುವು. ಹೆಂಗಸರಿಗೆ ಪತಿಯೇ ಗುರುವು. ಎಲ್ಲರಿಗೆ ರಾಜನೇ ಗುರುವು.
ಯದ್ ಗೃಹಸ್ಥಾರ್ಜಿತಂ ಪಾಪಂ ಜ್ಞಾನತೋಽಜ್ಞಾನತೋಽಪಿ ವಾ |
ನಿರ್ದಹಿಷ್ಯತಿ ತತ್ಸರ್ವಮೇಕರಾತ್ರೋಷಿತೋ ಯತಿಃ ॥8॥
ಯಾವ ಗೃಹಸ್ಥನಿಂದ ಸಂಪಾದಿಸಲ್ಪಟ್ಟ ಪಾಪವಿದೆಯೋ, ಗೃಹಸ್ಥನು ಜ್ಞಾನದಿಂದಲೋ, ಅಜ್ಞಾನದಿಂದಲೋ ಮಾಡಿದ ಪಾಪವನ್ನು ಒಂದು ರಾತ್ರಿ ಆ ಗೃಹಸ್ಥನ ಮನೆಯಲ್ಲಿ ವಾಸ ಮಾಡಿದ ಸಂನ್ಯಾಸಿಯು ಅವನ ಪಾಪಗಳನ್ನು ಸುಡುತ್ತಾನೆ.
ದುರ್ವೃತ್ತಾ ವಾ ಸುವೃತ್ತಾ ವಾ ಜ್ಞಾನಿನೋಽಜ್ಞಾನಿನೋಽಪಿ ವಾ |
ಗೃಹಸ್ಥೈರ್ಯತಯಃ ಪೂಜ್ಯಾ ಪರತ್ರ ಹಿತಕಾಂಕ್ಷಿಭಿಃ ॥9॥
ಪರಲೋಕದ ಹಿತವನ್ನು ಬಯಸುವ ಗೃಹಸ್ಥರು ಸದಾಚಾರಿಯೇ ಆಗಲಿ, ದುರಾಚಾರಿಯೇ ಆಗಲಿ, ಜ್ಞಾನಿಯೇ ಆಗಲಿ, ಅಜ್ಞಾನಿಯೇ

ಆಗಲಿ, ಅಂತಹ ಯತಿಯನ್ನು ಪೂಜಿಸಬೇಕು.
ಏಕದಂಡೀ ತ್ರಿದಂಡೀ ವಾ ಶಿಖಿತೋ ಮುಂಡಿತೋಽಪಿ ವಾ |
ಕಾಷಾಯದಂಡಸಾರೋಽಪಿ ಯತಿಃ ಪೂಜ್ಯೋ ಯುಧಿಷ್ಠಿರ ॥10॥
ಯುಧಿಷ್ಠಿರನೇ, ಸಂನ್ಯಾಸಿಯು ಏಕದಂಡಿಯೇ ಆಗಿರಲಿ, ತ್ರಿದಂಡಿಯೇ ಆಗಿರಲಿ, ಶಿಖಾಸಹಿತನೇ ಆಗಿರಲಿ, ಮುಂಡನ ಮಾಡಿಸಿಕೊಂಡಿರಲಿ, ಕಾಷಾಯ ವಸ್ತ್ರವನ್ನು ಉಟ್ಟಿಕೊಂಡಿರಲಿ, ದಂಡ ಧರಿಸಿಕೊಂಡಿರಲಿ, ಅಂಥ ಯತಿಯು ಪೂಜ್ಯನಾಗಿದ್ದಾನೆ.
ಅಪೂಜಿತೋ ಗೃಹಸ್ಥೈರ್ವಾ ತಥಾ ಚಾಪ್ಯವಮಾನಿತಃ |
ಯತಿರ್ವಾಽಪ್ಯತಿಥಿರ್ವಾಽಪಿ ನರಕೇ ಪಾತಯಿಷ್ಯತಃ ॥11॥
ಯಾವ ಯತಿಯನ್ನು ಗೃಹಸ್ಥನು ಪೂಜಿಸುವುದಿಲ್ಲವೋ, ಅವಮಾನ ಮಾಡುತ್ತಾನೋ, ಯಾವ ಅತಿಥಿಯನ್ನು ಗೃಹಸ್ಥನು ಪೂಜಿಸದೇ ಅವಮಾನ ಮಾಡುತ್ತಾನೋ ಅಂತಹ ಗೃಹಸ್ಥನನ್ನು ಯತಿಯು, ಅತಿಥಿಯು ನರಕದಲ್ಲಿ ಬೀಳಿಸುತ್ತಾರೆ.
ತಸ್ಮಾತ್ ತು ಯತಯಃ ಪೂಜ್ಯಾ ಮದ್ಭಕ್ತಾ ಮತ್ಪರಾಯಣಾಃ |
ಮಯಿ ಸನ್ನ್ಯಸ್ತಕರ್ಮಾಣಃ ಪರತ್ರ ಹಿತಕಾಂಕ್ಷಿಭಿಃ ॥12॥
ಆದ್ದರಿಂದ ನನ್ನ ಭಕ್ತರಾದ, ನನ್ನನ್ನೇ ನಂಬಿರುವ ಯತಿಗಳನ್ನು ಪೂಜಿಸಬೇಕು. ನನ್ನಲ್ಲಿಯೇ ಸಮಸ್ತ ಕರ್ಮಗಳನ್ನು ಸಮರ್ಪಿಸುವ ಯತಿಗಳ ಆರಾಧನೆಯು ಪರಲೋಕದಲ್ಲಿ ಹಿತವನ್ನುಂಟು ಮಾಡುತ್ತದೆ.
ಪ್ರಹರೇನ್ನ ದ್ವಿಜಾನ್ ವಿಪ್ರೋ ಗಾಂ ನ ಹನ್ಯಾತ್ ಕದಾಚನ |
ಭ್ರೂಣಹತ್ಯಾಸಮಂ ಚೈವ ಉಭಯಂ ಯೋ ನಿಷೇವತೇ ॥13॥
ಬ್ರಾಹ್ಮಣನಾದವನು ಬ್ರಾಹ್ಮಣರಿಗೆ ಹೊಡೆಯಬಾರದು. ಯಾವುದೇ ಕಾರಣದಿಂದ ಗೋವನ್ನು ಹಿಂಸಿಸಬಾರದು. ಯಾವನು ಬ್ರಾಹ್ಮಣರನ್ನು, ಗೋವನ್ನು ಹಿಂಸಿಸುತ್ತಾನೋ, ಹೊಡೆಯುತ್ತಾನೋ ಅವನಿಗೆ ಭ್ರೂಣಹತ್ಯೆಗೆ ಸಮಾನವಾದ ಪಾಪವು ಬರುತ್ತದೆ.
ನಾಗ್ನಿಂ ಮುಖೇನೋಪಧಮೇತ್ ನ ಚ ಪಾದೌ ಪ್ರತಾಪಯೇತ್ |
ನಾಧಃ ಕುರ್ಯಾತ್ ಕದಾಚಿತ್ತು ನ ಪೃಷ್ಠಂ ಪರಿತಾಪಯೇತ್ ॥14॥
ಅಗ್ನಿಯನ್ನು ಬಾಯಿಯಿಂದ ಊದಬಾರದು. ಬೆಂಕಿಯಲ್ಲಿ ಕಾಲುಗಳನ್ನು ಕಾಯಿಸಿಕೊಳ್ಳಬಾರದು. ಬೆಂಕಿಯನ್ನು ಕಾಲಿನಿಂದ ತಳ್ಳಬಾರದು. ಬೆಂಕಿಯಿಂದ ಪೃಷ್ಠಭಾಗವನ್ನು ಕಾಯಿಸಿಕೊಳ್ಳಬಾರದು.
ನಾಂತರಾ ಗಮನಂ ಕುರ್ಯಾನ್ನ ಚಾಮೇಧ್ಯಂ ವಿನಿಕ್ಷಿಪೇತ್ |
ಉಚ್ಛಿಷ್ಟೋ ನ ಸ್ಪೃಶೇದಗ್ನಿಮಶೌಚಸ್ಥೋ ನ ಜಾತುಚಿತ್ ॥15॥
ಅಗ್ನಿಗಳ ಮಧ್ಯದಲ್ಲಿ ಸಂಚರಿಸಬಾರದು. ನಿಷಿದ್ಧ ಪದಾರ್ಥಗಳನ್ನು ಅಗ್ನಿಗೆ ಹಾಕಬಾರದು. ತಿಂದು ಉಳಿದ ಪದಾರ್ಥಗಳನ್ನು ಅಗ್ನಿಗೆ ಹಾಕಬಾರದು. ಅಶೌಚದಿಂದ ಅಗ್ನಿಯನ್ನು ಎಂದಿಗೂ ಮುಟ್ಟಬಾರದು.
ಶ್ವಚಂಡಾಲಾದಿಭಿಃ ಸ್ಪೃಷ್ಟೋ ನಾಂಗಮಗ್ನೌ ಪ್ರತಾಪಯೇತ್ |
ಸರ್ವದೇವಮಯೋ ವಹ್ನಿಸ್ತಸ್ಮಾಚ್ಛುದ್ಧಃ ಸದಾ ಸ್ಪೃಶೇತ್ ॥16॥
ನಾಯಿಯನ್ನಾಗಲಿ, ಚಂಡಾಲನನ್ನಾಗಿ ಮುಟ್ಟಿಸಿಕೊಂಡು ಶರೀರವನ್ನು ಅಗ್ನಿಯಲ್ಲಿ ಕಾಯಿಸಿಕೊಳ್ಳಬಾರದು. ಅಗ್ನಿಯು ಸರ್ವದೇವತಾ ಸ್ವರೂಪವು. ಆದ್ದರಿಂದ ಅಗ್ನಿಯನ್ನು ಶುದ್ಧನಾಗಿಯೇ ಮುಟ್ಟಬೇಕು.
ಪ್ರಾಪ್ತಮೂತ್ರಪುರೀಷಸ್ತು ನ ಸ್ಪೃಶೇದ್ ವಹ್ನಿಮಾತ್ಮವಾನ್ |
ಯಾವತ್ತು ಧಾರಯೇದ್ ವೇಗಂ ತಾವದಪ್ರಯತೋ ಭವೇತ್ ॥17॥
ಬುದ್ಧಿವಂತನಾದವನು ಮಲ-ಮೂತ್ರಗಳ ಅವಸರವು ಉಂಟಾದಾಗ ಅಗ್ನಿಯನ್ನು ಮುಟ್ಟಬಾರದು. ಮಲ-ಮೂತ್ರಗಳ ವೇಗವನ್ನು ತಡೆದಿರುವಷ್ಟು ಕಾಲ ಅವನು ಅಶುದ್ಧನಾಗಿಯೇ ಇರುತ್ತಾನೆ.
ಪಚನಾಗ್ನಿಂ ನ ಗೃಹ್ಣೀಯಾತ್ ಪರವೇಶ್ಮನಿ ಜಾತುಚಿತ್ ॥18॥
ಎಂದಿಗೂ ಇನ್ನೊಬ್ಬರ ಮನೆಯಲ್ಲಿ ಪಾಕ ಮಾಡುವ ಅಗ್ನಿಯನ್ನು ತಾನು ಉಪಯೋಗಿಸಿಕೊಳ್ಳಬಾರದು.
ತೇನ ಪಕ್ವೇನ ಚಾನ್ನೇನ ಯತ್ಕರ್ಮ ಕುರುತೇ ಶುಭಮ್ |
ತಚ್ಛುಭಸ್ಯ ಫಲಂ ಚಾರ್ಧಮಗ್ನಿದತ್ತಸ್ಯ ಭವೇನ್ನೃಪ ॥19॥
ಯಾರು ಪಾಕವಾದ ಅನ್ನದಿಂದ ಶುಭಕರ್ಮವನ್ನು ಮಾಡುತ್ತಾನೋ ಆ ಶುಭಫಲದ ಅರ್ಧವು ಅಗ್ನಿಯನ್ನು ಕೊಟ್ಟವನಿಗೆ ಉಂಟಾಗುತ್ತದೆ. ಅರ್ಥಾತ್ ವೈಶ್ವದೇವಾದಿ ಕ್ರಿಯೆಗಳನ್ನು ಮತ್ತೊಬ್ಬರ ಮನೆಯ ಅನ್ನದಿಂದ ಮಾಡಿದಾಗ ಅದರ ಫಲವು ಆ ಯಜಮಾನನಿಗೆ ತಲುಪುತ್ತದೆ.
ತಸ್ಮಾತ್ ಶುಭತರಂ ಕರ್ಮ ಪ್ರಕುರ್ಯಾದವಿನಾಶಿತಮ್ ॥20॥
ಆದ್ದರಿಂದ ಎಂದೂ ನಾಶವಾಗದೆ ಇರುವ ಶ್ರೇಷ್ಠವಾದ ಶುಭಕರ್ಮಗಳನ್ನೇ ಮಾಡಬೇಕು.
ಪ್ರಮಾದಾದ್ ಯದಿ ವಾಽಜ್ಞಾನಾತ್ ತಸ್ಯ ನಾಶೋ ಭವಿಷ್ಯತಿ |
ಗೃಹ್ಣೀಯಾತ್ ತು ಮಥಿತ್ವಾ ವಾ ಶ್ರೋತ್ರಿಯಾಗಾರತೋಽಪಿ ವಾ ॥21॥
ಪ್ರಮಾದದಿಂದಾಗಲಿ, ಅಜ್ಞಾನದಿಂದಾಗಲಿ, ಯಾರು ಶ್ರೋತ್ರಿಯನ ಮನೆಯಿಂದ ಅಗ್ನಿಯನ್ನು ಮಥಿಸಿ ತನ್ನ ಮನೆಯ ಪಾಕಕ್ಕೆ ತರುತ್ತಾನೋ ಅವನು ನಾಶಹೊಂದುತ್ತಾನೆ.
ಯುಧಿಷ್ಠಿರಃ
ಕೀದೃಶಾಃ ಸಾಧವೋ ವಿಪ್ರಾಸ್ತೇಭ್ಯೋ ದತ್ತಂ ಮಹಾಫಲಮ್ |
ಕೀದೃಶೇಭ್ಯೋ ಹಿ ದಾತವ್ಯಂ ತನ್ಮೇ ಬ್ರೂಹಿ ಜನಾರ್ದನ ॥22॥
ಯುಧಿಷ್ಠಿರ ಜನಾರ್ದನನೇ, ಯಾರಿಗೆ ದಾನವನ್ನು ಕೊಟ್ಟರೆ ಮಹಾಫಲವು ಲಭಿಸುತ್ತದೆ? ಅಂತಹ ಬ್ರಾಹ್ಮಣರು ಹೇಗಿರುತ್ತಾರೆ?

ಎಂತಹವರಿಗೆ ದಾನವನ್ನು ಮಾಡಬೇಕು? ಈ ವಿಷಯವನ್ನು ಕೃಪೆ ಮಾಡಿ ಹೇಳು.
ಶ್ರೀಭಗವಾನ್
ಅಕ್ರೋಧನಾಃ ಸತ್ಯಪರಾ ಧರ್ಮನಿತ್ಯಾ ಜಿತೇಂದ್ರಿಯಾಃ |
ತಾದೃಶಾಃ ಸಾಧವೋ ವಿಪ್ರಾಸ್ತೇಭ್ಯೋ ದತ್ತಂ ಮಹತ್ಫಲಮ್ ॥23॥
ಶ್ರೀಭಗವಾನ್ ಕೋಪವಿಲ್ಲದಿರುವ, ಸತ್ಯನಿಷ್ಠರಾದ, ಪ್ರತಿದಿನವು ಧರ್ಮಕಾರ್ಯಗಳನ್ನು ಮಾಡುವ, ಜಿತೇಂದ್ರಿಯರಾದ ಬ್ರಾಹ್ಮಣರೇ ಶ್ರೇಷ್ಠರು. ಅವರಿಗೆ ಮಾಡುವ ದಾನವು ಮಹಾಫಲದಾಯಕ.
ಅಮಾನಿನಃ ಸರ್ವಸಹಾ ದೃಷ್ಟಾರ್ಥಾ ವಿಜಿತೇಂದ್ರಿಯಾಃ |
ಸರ್ವಭೂತಹಿತಾ ಮೈತ್ರಾಸ್ತೇಭ್ಯೋ ದತ್ತಂ ಮಹತ್ಫಲಮ್ ॥24॥
ಅಭಿಮಾನಶೂನ್ಯರಾದ, ಎಲ್ಲವನ್ನೂ ಸಹಿಸಿಕೊಳ್ಳುವ, ಶಾಸ್ತ್ರಾರ್ಥಗಳನ್ನು ತಿಳಿದಿರುವ, ಇಂದ್ರಿಯಗಳನ್ನು ಜಯಿಸಿರುವ, ಸರ್ವಪ್ರಾಣಿಗಳಿಗೂ ಹಿತವನ್ನುಂಟು ಮಾಡುವ, ಎಲ್ಲರೊಡನೆ ಮೈತ್ರಿಭಾವದಿಂದಿರುವ ವಿಪ್ರರೇ ಶ್ರೇಷ್ಠರಾದವರು. ಅವರಿಗೆ ಮಾಡುವ ದಾನವು ಮಹಾಫಲದಾಯಕ.
ಅಲುಬ್ಧಾಃ ಶುಚಯೋ ವೈದ್ಯಾ ಹ್ರೀಮಂತಃ ಸತ್ಯವಾದಿನಃ |
ಸ್ವಧರ್ಮನಿರತಾ ಯೇ ತು ತೇಭ್ಯೋ ದತ್ತಂ ಮಹತ್ಫಲಮ್ ॥25॥
ಲೋಭರಹಿತರಾದ, ಶುದ್ಧರಾದ, ವಿದ್ವಾಂಸರಾದ, ಲಜ್ಜಾಯುಕ್ತರಾದ, ಸತ್ಯವಾದಿಗಳಾದ, ಸ್ವಧರ್ಮನಿಷ್ಠರಾದ ಬ್ರಾಹ್ಮಣರೇ ಶ್ರೇಷ್ಠರು. ಅವರಿಗೆ ನೀಡುವ ದಾನವು ಮಹಾಫಲದಾಯಕ.
ಸಾಂಗಾಂಶ್ಚ ಚತುರೋ ವೇದಾನ್ ಯೋಽಧೀಯೇತ ದಿನೇ ದಿನೇ |
ಶೂದ್ರಾನ್ನಂ ಯಸ್ಯ ದೇಹೇ ನ ತತ್ ಪಾತ್ರಮೃಷಯೋ ವಿದುಃ ॥26॥
ಯಾವ ಬ್ರಾಹ್ಮಣನು ಆರು ಅಂಗಗಳಿಂದ ಕೂಡಿರುವ ನಾಲ್ಕು ವೇದಗಳನ್ನು ಅನುದಿನವೂ ಪಾರಾಯಣ ಮಾಡುತ್ತಾನೋ, ಯಾವನ ದೇಹದಲ್ಲಿ ಶೂದ್ರಾನ್ನವು ಇರುವುದಿಲ್ಲವೋ ಅವನು ಸತ್ಪಾತ್ರನು ಎಂದು ಮುನಿಗಳು ಹೇಳುತ್ತಾರೆ.
ಪ್ರಜ್ಞಾಶ್ರುತಾಭ್ಯಾಂ ವೃತ್ತೇನ ಶೀಲೇನ ಚ ಸಮನ್ವಿತಃ |
ತಾರಯೇತ್ ತತ್ಕುಲಂ ಸರ್ವಮೇಕೋಽಪೀಹ ಯುಧಿಷ್ಠಿರ ॥27॥
ದಾನವನ್ನು ಸ್ವೀಕರಿಸುವ ವ್ಯಕ್ತಿಯು ಒಳ್ಳೆಯ ಬುದ್ಧಿಯಿಂದಲೂ, ಶಾಸ್ತ್ರಜ್ಞಾನದಿಂದಲೂ, ತನ್ನ ಸದಾಚಾರದಿಂದಲೂ, ಉತ್ತಮವಾದ ಶೀಲದಿಂದಲೂ ಯುಕ್ತನಾಗಿದ್ದರೆ ಅಂತಹ ಒಬ್ಬನೇ ವ್ಯಕ್ತಿಯು ದಾನಿಯ ಕುಲವನ್ನು ಉದ್ಧರಿಸಬಲ್ಲನು.
ಗಾಮಶ್ವಮನ್ನಂ ವಿತ್ತಂ ವಾ ತದ್ವಿಧೇ ಪ್ರತಿಪಾದಯೇತ್ ॥28॥
ಅಂತಹ ಬ್ರಾಹ್ಮಣನಿಗೆ ಗೋವನ್ನು, ಕುದುರೆಯನ್ನು, ಅನ್ನವನ್ನು, ಐಶ್ವರ್ಯವನ್ನು ದಾನ ಮಾಡಬೇಕು.
ನಿಶಮ್ಯ ಚ ಗುಣೋಪೇತಂ ಬ್ರಾಹ್ಮಣಂ ಸಾಧುಸಮ್ಮತಮ್ |
ದೂರಾದಾಹೂಯ ಸತ್ಕೃತ್ಯ ತಂ ಪ್ರಯತ್ನೇನ ಪೂಜಯೇತ್ ॥29॥
ಸಾಧು ಸಮ್ಮತನಾದ, ಸಕಲ ಗುಣಗಳಿಂದ ಕೂಡಿದ ಬ್ರಾಹ್ಮಣನು ಇದ್ದಾನೆ ಎಂದು ತಿಳಿದರೆ ಅವನು ಎಷ್ಟೇ ದೂರದಲ್ಲಿದ್ದರೂ ಅವನನ್ನು ಪ್ರಯತ್ನಪೂರ್ವಕವಾಗಿ ಕರೆದುತಂದು ಆದರಿಸಬೇಕು.
ಯುಧಿಷ್ಠಿರಃ
ಧರ್ಮಾಧರ್ಮವಿಧಿರ್ದೇವ ಮಮ ಭೀಷ್ಮೇಣ ಭಾಷಿತಃ |
ಭೀಷ್ಮವಾಕ್ಯಾತ್ ಸಾರಭೂತಂ ವದ ಧರ್ಮಂ ಸುರೇಶ್ವರ ॥30॥
ಯುಧಿಷ್ಠಿರ ಕೃಷ್ಣನೇ, ಧರ್ಮಾಧರ್ಮಗಳ ಲಕ್ಷಣಗಳನ್ನು ಭೀಷ್ಮನು ವಿಸ್ತಾರವಾಗಿ ಹಿಂದೆ ಉಪದೇಶಿಸಿದ್ದಾನೆ. ಅವುಗಳ ಸಾರವನ್ನು ನೀನು ಉಪದೇಶಿಸು.
ಶ್ರೀಭಗವಾನ್
ಅನ್ನೇನ ಧಾರ್ಯತೇ ಸರ್ವಂ ಜಗದೇತಚ್ಚರಾಚರಮ್ |
ಅನ್ನಾತ್ ಪ್ರಭವತಿ ಪ್ರಾಣಃ ಪ್ರತ್ಯಕ್ಷಂ ನಾಸ್ತಿ ಸಂಶಯಃ ॥31॥
ಶ್ರೀಭಗವಾನ್ ಚರಾಚರಾತ್ಮಕವಾದ ಜಗತ್ತು ಅನ್ನದಿಂದಲೇ ಧರಿಸಲ್ಪಟ್ಟಿದೆ. ಜಗತ್ತಿಗೆ ಅನ್ನವೇ ಆಧಾರ. ಅನ್ನದಿಂದಲೇ ಇಂದ್ರಿಯಗಳ ಉತ್ಪತ್ತಿ. ಇದು ಪ್ರತ್ಯಕ್ಷದಲ್ಲಿ ಕಾಣುವ ವಿಷಯವಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಕಲತ್ರಂ ಪೀಡಯಿತ್ವಾ ತು ದೇಶಕಾಲೇ ಚ ಶಕ್ತಿತಃ |
ದಾತವ್ಯಂ ಭಿಕ್ಷವೇ ಚಾನ್ನಮಾತ್ಮನೋ ಭೂತಿಮಿಚ್ಛತಾ ॥32॥
ತನಗೆ ಹಿತವನ್ನು ಬಯಸುವ ಮನುಷ್ಯನು ತನ್ನ ಪತ್ನಿಗೆ ಸ್ವಲ್ಪ ಕಷ್ಟವಾದರೂ ದೇಶ-ಕಾಲಗಳನ್ನು ಆಲೋಚಿಸಿ, ತನ್ನ ಶಕ್ತಿಗೆ ಅನುಸಾರವಾಗಿ ಸಂನ್ಯಾಸಿಯಾದವನಿಗೆ ಭಿಕ್ಷೆಯನ್ನು ನೀಡಬೇಕು. ಪತ್ನಿಗೆ ಕಷ್ಟವಾಗುತ್ತದೆ ಎಂಬ ಕಾರಣದಿಂದ ಸಂನ್ಯಾಸಿಯನ್ನು ನಿರಾಕರಿಸಬಾರದು.
ವಿಪ್ರಮಧ್ವಪರಿಶ್ರಾಂತಂ ಬಾಲಂ ವೃದ್ಧಮಥಾಪಿ ವಾ |
ಅರ್ಚಯೇದ್ ಗುರುವತ್ ಪ್ರೀತೋ ಗೃಹಸ್ಥೋ ಗೃಹಮಾಗತಮ್ ॥33॥
ತೀರ್ಥಯಾತ್ರೆಯಲ್ಲಿ ಬಳಲುತ್ತಾ ಸಾಗುತ್ತಿರುವ ಬ್ರಾಹ್ಮಣನು ಬಾಲಕನೇ ಆಗಿರಲಿ, ವೃದ್ಧನೇ ಆಗಿರಲಿ, ತನ್ನ ಗುರುವನ್ನು ಸ್ವಾಗತಿಸುವಂತೆ ಗೃಹಸ್ಥನು ತನ್ನ ಮನೆಗೆ ಕರೆಸಿ ಅವರನ್ನು ಪೂಜಿಸಬೇಕು.
ಕ್ರೋಧಮುತ್ಪತಿತಂ ಹಿತ್ವಾ ಸುಶೀಲೋ ವೀತಮತ್ಸರಃ |
ಅರ್ಚಯೇದತಿಥಿಂ ಪ್ರೀತಃ ಪರತ್ರ ಹಿತಭೂತಯೇ ॥34॥

ಪರಲೋಕದ ಹಿತವನ್ನು ಬಯಸುವ ವ್ಯಕ್ತಿಯು ಉತ್ಪನ್ನವಾಗುವ ಕ್ರೋಧವನ್ನು ತ್ಯಜಿಸಿ, ಸಚ್ಚಾರಿತ್ರ್ಯಸಂಪನ್ನನಾಗಿ, ಮಾತ್ಸರ್ಯರಹಿತನಾಗಿ, ಸಂತೋಷದಿಂದ ಅತಿಥಿಯನ್ನು ಆರಾಧಿಸಬೇಕು.

ಅತಿಥಿಂ ನಾವಮನ್ಯೇತ ನಾನೃತಾಂ ಗಿರಮೀರಯೇತ್ |
ನ ಪೃಚ್ಛೇದ್ಗೋತ್ರಚರಣಂ ನಾಧೀತಂ ವಾ ಕದಾಚನ ॥35॥

ಅತಿಥಿಯನ್ನು ಎಂದಿಗೂ ಅವಮಾನಿಸಬಾರದು. ಸುಳ್ಳಾದ ಮಾತುಗಳನ್ನು ಅತಿಥಿಯ ಮುಂದೆ ಆಡಬಾರದು. ಅತಿಥಿಯು ಮನೆಗೆ ಆಗಮಿಸಿದಾಗ ಅವನ ಗೋತ್ರವನ್ನು ಕೇಳಬಾರದು, ಅವನ ಅಧ್ಯಯನವನ್ನು ವಿಚಾರಿಸಬಾರದು.

ಚಂಡಾಲೋ ವಾ ಶ್ವಪಾಕೋ ವಾ ಕಾಲೇ ಯಃ ಕಶ್ಚಿದಾಗತಃ |
ಅನ್ನೇನ ಪೂಜನೀಯಃ ಸ್ಯಾತ್ ಪರತ್ರ ಹಿತಮಿಚ್ಛತಾ ॥36॥

ಚಂಡಾಲನೇ ಆಗಿರಲಿ, ಶ್ವಪಾಕಿಯೇ ಆಗಿರಲಿ, ಊಟದ ಸಮಯದಲ್ಲಿ ಯಾವ ಅತಿಥಿಯು ಆಗಮಿಸುತ್ತಾನೋ ಅವನನ್ನು ಪರಲೋಕದಲ್ಲಿ ಹಿತವನ್ನು ಬಯಸುವ ವ್ಯಕ್ತಿಯು ಅನ್ನದಿಂದ ಪೂಜಿಸಬೇಕು.

ಪಿಧಾಯ ತು ಗೃಹದ್ವಾರಂ ಭುಂಕ್ತೇ ಯೋಽನ್ನಂ ಪ್ರಹೃಷ್ಟವಾನ್ |
ಸ್ವರ್ಗದ್ವಾರಪಿಧಾನಂ ವೈ ಕೃತಂ ತೇನ ಯುಧಿಷ್ಠಿರ ॥37॥

ಯುಧಿಷ್ಠಿರನೇ, ಯಾರು ಅತಿಥಿಯನ್ನು ಸ್ವಾಗತಿಸುವ ಸಮಯದಲ್ಲಿ ಮನೆಯ ಬಾಗಿಲನ್ನು ಮುಚ್ಚಿ, ಸಂತೋಷದಿಂದ ಅನ್ನವನ್ನು ಉಣ್ಣುತ್ತಾನೋ ಅವನು ಸ್ವರ್ಗದ ಬಾಗಿಲನ್ನೇ ಮುಚ್ಚಿ ಪಾಪವನ್ನು ತಿನ್ನುತ್ತಾನೆ.

ಪಿತೄನ್ ದೇವಾನ್ ಋಷೀನ್ ವಿಪ್ರಾನ್ ಅತಿಥೀಂಶ್ಚ ನಿರಾಶ್ರಯಾನ್ |
ಯೋ ನರಃ ಪ್ರೀಣಯತ್ಯನ್ನೈಸ್ತಸ್ಯ ಪುಣ್ಯಫಲಂ ಮಹತ್ ॥38॥

ಪಿತೃಗಳನ್ನು, ದೇವತೆಗಳನ್ನು, ಋಷಿಗಳನ್ನು, ಬ್ರಾಹ್ಮಣರನ್ನು, ಅತಿಥಿಗಳನ್ನು, ಆಶ್ರಯರಹಿತರನ್ನು ಯಾವ ಮನುಷ್ಯನು ಸಂತೋಷಪಡಿಸುವನೋ ಅವನಿಗೆ ಲಭಿಸುವ ಪುಣ್ಯವು ಮಹತ್ತರದುದೆಂದು ತಿಳಿದುಕೊ.

ಕೃತ್ವಾಽಪಿ ಪಾಪಂ ಬಹುಶೋ ಯೋ ದದಾತ್ಯನ್ನಮರ್ಥಿನೇ |
ಬ್ರಾಹ್ಮಣಾಯ ವಿಶೇಷೇಣ ಸರ್ವಪಾಪೈಃ ಪ್ರಮುಚ್ಯತೇ ॥39॥

ಅನೇಕ ಪಾಪಗಳನ್ನು ಆಚರಿಸಿದ ವ್ಯಕ್ತಿಯು ಅನ್ನವನ್ನು ಬೇಡುವ ವ್ಯಕ್ತಿಗೆ ಅನ್ನವನ್ನು ನೀಡಿದಾಗ, ವಿಶೇಷವಾಗಿ ಬ್ರಾಹ್ಮಣನಿಗೆ ಅನ್ನವನ್ನು ನೀಡಿದಾಗ ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.

ಅನ್ನದಃ ಪ್ರಾಣದೋ ಲೋಕೇ ಪ್ರಾಣದಃ ಸರ್ವದೋ ಭವೇತ್ |
ತಸ್ಮಾದನ್ನಂ ಪ್ರಯತ್ನೇನ ದಾತವ್ಯಂ ಭೂತಿಮಿಚ್ಛತಾ ॥40॥

ಯಾವನು ಜಗತ್ತಿನಲ್ಲಿ ಅನ್ನವನ್ನು ದಾನ ಮಾಡುತ್ತಾನೋ ಅವನು ಪ್ರಾಣವನ್ನೇ ದಾನ ಮಾಡಿದ ಪುಣ್ಯಭಾಗಿಯು. ಪ್ರಾಣವನ್ನು ದಾನ ಮಾಡಿದವನಿಗೆ ಎಲ್ಲವನ್ನೂ ದಾನ ಮಾಡಿದ ಪುಣ್ಯವುಂಟಾಗುತ್ತದೆ. ಆದ್ದರಿಂದ ಐಶ್ವರ್ಯವನ್ನು ಬಯಸಿದ ವ್ಯಕ್ತಿಯು ಪ್ರಯತ್ನಪೂರ್ವಕವಾಗಿ ಅನ್ನವನ್ನು ದಾನ ಮಾಡಬೇಕು.

ಅನ್ನಂ ಹ್ಯಮೃತಮಿತ್ಯಾಹುರನ್ನಂ ಪ್ರಜನನಂ ಸ್ಮೃತಮ್ |
ಅನ್ನಪ್ರಣಾಶೇ ಸೀದಂತಿ ಶರೀರೇ ಪಂಚ ಧಾತವಃ ॥41॥

ಅನ್ನವನ್ನು ಅಮೃತ ಎಂದು ಜ್ಞಾನಿಗಳು ಹೇಳುತ್ತಾರೆ. ಅನ್ನವೇ ಪ್ರಜಾಸರ್ಗಕ್ಕೆ ಹೇತುವಾಗಿದೆ. ಅನ್ನವು ಇಲ್ಲದಿದ್ದರೆ ಶರೀರದಲ್ಲಿರುವ ಐದು ಧಾತುಗಳೂ ಕೂಡ ನಾಶ ಹೊಂದುತ್ತವೆ.

ಬಲಂ ಬಲವತೋ ನಶ್ಯೇದ್ ಅನ್ನಹೀನಸ್ಯ ದೇಹಿನಃ |
ತಸ್ಮಾದನ್ನಂ ಪ್ರದಾತವ್ಯಂ ಶ್ರದ್ಧಯಾಽಶ್ರದ್ಧಯಾಽಪಿ ವಾ ॥42॥

ಎಷ್ಟೇ ಬಲಿಷ್ಠನಾಗಿದ್ದರೂ ಅನ್ನಹೀನನಾದರೆ ಜೀವನು ನಾಶವನ್ನು ಹೊಂದುತ್ತಾನೆ. ಆದ್ದರಿಂದ ಆಸ್ತಿಕ್ಯ ಬುದ್ಧಿ (ಶ್ರದ್ಧೆ)ಇರಲಿ, ಇಲ್ಲದಿರಲಿ ಅನ್ನವನ್ನು ದಾನ ಮಾಡಲೇಬೇಕು.

ಆದತ್ತೇ ಹಿ ರಸಂ ಸರ್ವಮಾದಿತ್ಯಃ ಸ್ವಗಭಸ್ತಿಭಿಃ |
ವಾಯುಸ್ತಸ್ಮಾತ್ ಸಮಾದಾಯ ರಸಂ ಮೇಘೇಷು ಧಾರಯೇತ್ ॥43॥

ಸೂರ್ಯದೇವನು ಸಮಸ್ತ ಪದಾರ್ಥಗಳ ರಸವನ್ನು ತನ್ನ ಕಿರಣಗಳಲ್ಲಿ ನಿಂತು ಸ್ವೀಕರಿಸುತ್ತಾನೆ. ವಾಯುದೇವನು ಆ ಕಿರಣಗಳಲ್ಲಿರುವ ರಸವನ್ನು ಮೇಘಗಳಲ್ಲಿ ತುಂಬುತ್ತಾನೆ.

ತತ್ತು ಮೇಘಗತಂ ಭೂಮೌ ಶಕ್ರೋ ವರ್ಷತಿ ತದ್ರಸಮ್ |
ತೇನ ದಿಗ್ಧಾ ಭವೇದ್ ದೇವೀ ಮಹೀ ಪ್ರೀತಾ ಚ ಪಾಂಡವ ॥44॥

ಆ ಮೇಘದಲ್ಲಿರುವ ರಸವನ್ನು ಇಂದ್ರದೇವನು ಭೂಮಿಯಲ್ಲಿ ಮಳೆಯ ಮೂಲಕ ಸುರಿಸುತ್ತಾನೆ. ಆ ರಸದಿಂದಲೇ ಧಾನ್ಯಗಳು ರಸಭರಿತವಾಗುತ್ತವೆ. ಭೂದೇವಿಯು ಆ ರಸದಿಂದ ಪ್ರೀತಳಾಗುತ್ತಾಳೆ.

ತಸ್ಯಾಂ ಸಸ್ಯಾನಿ ರೋಹಂತಿ ಯೈರ್ಜೀವಂತ್ಯಖಿಲಾಃ ಪ್ರಜಾಃ |
ಮಾಂಸಮೇದೋಸ್ಥಿಮಜ್ಜಾನಾಂ ಸಂಭವಸ್ತೇಭ್ಯಃ ಏವ ಹಿ ॥45॥

ಆ ಭೂದೇವಿಯಿಂದ ಸಸ್ಯಗಳು ಅಭಿವೃದ್ಧಿಯನ್ನು ಹೊಂದುತ್ತವೆ. ಆ ಸಸ್ಯಗಳಿಂದಲೇ ಸಮಸ್ತ ಜೀವರಾಶಿಗಳು, ಪ್ರಜೆಗಳು ಪ್ರೀತರಾಗುತ್ತಾರೆ. ಆ ರಸದಿಂದಲೇ ಮಾಂಸ, ಮೇದ, ಅಸ್ಥಿ, ಮಜ್ಜೆಗಳು ಜೀವರಾಶಿಗಳಿಗೆ ಉತ್ಪನ್ನವಾಗುತ್ತವೆ.

ಏವಂ ಸೂರ್ಯಶ್ಚ ಪವನೋ ಮೇಘಃ ಶಕ್ರಸ್ತಥೈವ ಚ |
ಏಕ ಏವ ಸ್ಮೃತೋ ರಾಶಿರ್ಯತೋ ಭೂತಾನಿ ಜಜ್ಞಿರೇ ॥46॥

ಈ ರೀತಿಯಾಗಿ ಸೂರ್ಯದೇವ, ವಾಯುದೇವ, ಮೇಘ, ಇಂದ್ರ - ಇವರೇ ಈ ಭೂಮಿಯಲ್ಲಿ ನಿಂತು ಸಮಸ್ತ ಜೀವರ ಉತ್ಪತ್ತಿಗೆ

ಕಾರಣರಾಗಿದ್ದಾರೆ.
ಭವನಾನಿ ಚ ದಿವ್ಯಾನಿ ದಿವಿ ತೇಷಾಂ ಮಹಾತ್ಮನಾಮ್ |
ನಾನಾಸಂಸ್ಥಾನರೂಪಾಣಿ ನಾನಾಭೂತಯುತಾನಿ ಚ ॥47॥
ಯಾರು ಅನ್ನದಾನವನ್ನು ಮಾಡುತ್ತಾರೋ ಅಂತಹ ಮಹಾತ್ಮರಿಗೆ ಸ್ವರ್ಗಲೋಕದಲ್ಲಿ ದಿವ್ಯವಾದ ಭವನಗಳು ದೊರೆಯುತ್ತವೆ.
ಚಂದ್ರಮಂಡಲಶುಭ್ರಾಣಿ ಕಿಂಕಿಣೀಜಾಲವಂತಿ ಚ |
ತರುಣಾದಿತ್ಯವರ್ಣಾನಿ ಸ್ಥಾವರಾಣಿ ಚರಾಣಿ ಚ ॥48॥
ಅನೇಕ ಮಹಡಿಗಳಿಂದ ಕೂಡಿದ, ಅನೇಕ ಪ್ರಾಣಿಗಳಿಂದ ತುಂಬಿರುವ, ಚಂದ್ರಮಂಡಲಗಳಂತೆ ಶುಭ್ರವಾದ, ಗೆಜ್ಜೆಗಳಿಂದ ಕೂಡಿದ ಬೀಳಲುಗಳಿಂದ ತುಂಬಿರುವ, ಉದಿಸುವ ಸೂರ್ಯನಂತೆ ಪ್ರಕಾಶಮಾನವಾದ, ಸ್ಥಾವರ- ಜಂಗಮಗಳಿಂದ ಕೂಡಿರುವ;
ಅನೇಕಶತಸಂಖ್ಯಾನಿ ಸಾಂತರ್ಜಲವನಾನಿ ಚ |
ತತ್ರ ಪುಷ್ಪಫಲೋಪೇತಾಃ ಕಾಮದಾಃ ಸುರಪಾದಪಾಃ ॥49॥
ನೂರಾರು ಸಂಖ್ಯೆಗಳಿಂದ ತುಂಬಿರುವ, ನೀರಿನಿಂದ ತುಂಬಿರುವ ಮೇಘಗಳಿಂದ, ವನಗಳಿಂದ, ಪುಷ್ಪ-ಫಲ, ರಸಗಳಿಂದ ಕೂಡಿರುವ, ಇಷ್ಟಾರ್ಥಗಳನ್ನು ಕೊಡುವ, ದೇವತರುಗಳಿಂದ;
ವಾಪ್ಯೋ ದಿವ್ಯಾಃ ಸರಃ ಕೂಪಾಃ ದೀರ್ಘಿಕಾಶ್ಚ ಸಹಸ್ರಶಃ |
ಭಕ್ಷ್ಯಭೋಜ್ಯಮಯಾಃ ಶೈಲಾ ವಾಸಾಂಸ್ಯಾಭರಣಾನಿ ಚ ॥50॥
ಬಾವಿಗಳು, ದಿವ್ಯವಾದ ಸರೋವರಗಳು, ಕೂಪಗಳು, ವಿಸ್ತಾರವಾದ ನೀರಿನ ಆಶ್ರಯಗಳು, ಭಕ್ಷ್ಯ-ಭೋಜ್ಯಗಳು, ಪರ್ವತಗಳು, ಬಟ್ಟೆಗಳು, ಆಭರಣಗಳು;
ಕ್ಷೀರಸ್ರುವಂತ್ಯಃ ಸರಿತಸ್ತಥಾ ಚೈವಾನ್ನಪರ್ವತಾಃ |
ಘೋಷವಂತಿ ಚ ಯಾನಾನಿ ಯುಕ್ತಾನ್ಯಥ ಸಹಸ್ರಶಃ ॥51॥
ಹಾಲನ್ನು ಸುರಿಸುವ ಸರೋವರಗಳು, ಅನ್ನಪರ್ವತಗಳು, ವೇದಘೋಷದಿಂದ ತುಂಬಿದ ವಾಹನಗಳ, ಸಾವಿರಾರು ಸಂಖ್ಯೆಯಲ್ಲಿ ತುಂಬಿರುತ್ತವೆ.
ಪ್ರಾಸಾದಾಃ ಪಾಂಡರಾಃ ಶುಭ್ರಾಃ ಶಯ್ಯಾಶ್ಚ ಕನಕೋಜ್ಜ್ವಲಾಃ |
ಅನ್ನದಾಸ್ತತ್ರ ತಿಷ್ಠಂತಿ ತಸ್ಮಾದನ್ನಪ್ರದೋ ಭವೇತ್ ॥52॥
ಶುಭ್ರಬಣ್ಣದ ಬಿಳಿಯಾದ ಮಹಡಿಗಳು, ಬಂಗಾರದಿಂದ ಅಲಂಕೃತವಾದ ಆಸನಗಳು ಬಂಗಾರದಂತೆ ಉಜ್ವಲವಾದ ಹಾಸಿಗೆಗಳಿಂದ ಕೂಡಿದ ಮಂದಿರ, ದಿವ್ಯೋದ್ಯಾನಗಳಲ್ಲಿ ಅನ್ನದಾನ ಮಾಡಿದವರು ವಿಹರಿಸುತ್ತಾರೆ. ಆದ್ದರಿಂದ ಅನ್ನದಾನವನ್ನು ಮಾಡಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಸ್ವರ್ಗನರಕಗಮನಕಥನಂ ನಾಮ
ಅಷ್ಟಾಧಿಕಶತತಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ನೂರ ಒಂಬತ್ತನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಭೋಜನದ ವಿಧಿಯನ್ನು ನಿರೂಪಿಸಿದುದು. ಗೋಗ್ರಾಸವನ್ನು ಕೊಡುವ ಪ್ರಕಾರವನ್ನು ಹೇಳಿದುದು. ತಿಲದಾನದ ಪ್ರಶಂಸೆಯನ್ನು ಮಾಡುತ್ತಾ ಕಬ್ಬನ್ನು ಬ್ರಾಹ್ಮಣನು ತಾನೇ ಯಂತ್ರದಲ್ಲಿ ಹಾಕಬಾರದೆಂದು ನಿರಾಕರಿಸಿದುದು.
ಯುಧಿಷ್ಠಿರಃ
ಅನ್ನದಾನಫಲಂ ಶ್ರುತ್ವಾ ಪ್ರೀತೋಽಸ್ಮಿ ಮಧುಸೂದನ |
ಭೋಜನಸ್ಯ ವಿಧಿಂ ವಕ್ತುಂ ದೇವದೇವ ತ್ವಮರ್ಹಸಿ ॥1॥
ಯುಧಿಷ್ಠಿರ ಶ್ರೀಕೃಷ್ಣನೇ, ಮಧುಸೂದನನೇ, ಅನ್ನದಾನದ ಫಲವನ್ನು ಕೇಳಿ ಸಂತೋಷವಾಗಿದೆ. ಇನ್ನು ಮುಂದೆ ಭೋಜನದ ವಿಧಿಯನ್ನು ಹೇಳುವ ಕೃಪೆ ಮಾಡು.
ಶ್ರೀಭಗವಾನ್
ಭೋಜನಸ್ಯ ದ್ವಿಜಾತೀನಾಂ ವಿಧಾನಂ ಶೃಣು ಪಾಂಡವ |
ಸ್ನಾತಃ ಶುಚಿಃ ಶುಚೌ ದೇಶೇ ನಿರ್ಜನೇ ಹುತಪಾವಕಃ ॥2॥
ಶ್ರೀಭಗವಾನ್ ಯುಧಿಷ್ಠಿರನೇ, ಬ್ರಾಹ್ಮಣರ ಭೋಜನದ ವಿಧಾನವನ್ನು ಹೇಳುತ್ತೇನೆ, ಕೇಳು. ದ್ವಿಜಶ್ರೇಷ್ಠನು ಸ್ನಾನ ಮಾಡಿ ಪರಿಶುದ್ಧನಾಗಿ ಸಂಧ್ಯಾವಂದನೆ, ಅಗ್ನಿಹೋತ್ರಾದಿಗಳನ್ನು ಮುಗಿಸಬೇಕು.
ಮಂಡಲಂ ಕಾರಯಿತ್ವಾ ತು ಚತುರಶ್ರಂ ದ್ವಿಜೋತ್ತಮಃ |
ಕ್ಷತ್ರಿಯಶ್ಚೇತ್ ತತೋ ವೃತ್ತಂ ವೈಶ್ಯೋಽರ್ಧೇಂದುಸಮಾಕೃತಿಮ್ ॥3॥
ಬಳಿಕ ಏಕಾಂತವಾದ ಪ್ರದೇಶದಲ್ಲಿ ನಾಲ್ಕುಮೂಲೆಗಳುಳ್ಳ ಮಂಡಲವನ್ನು ರಚಿಸಬೇಕು. ಕ್ಷತ್ರಿಯನಾದರೆ ದುಂಡಾದ ಮಂಡಲವನ್ನು, ವೈಶ್ಯನಾದರೆ ಅರ್ಧಚಂದ್ರಾಕೃತಿಯ ಮಂಡಲವನ್ನು ರಚಿಸಬೇಕು.
ಆರ್ದ್ರಪಾದಸ್ತು ಭುಂಜೀಯಾತ್ ಪ್ರಾಙ್ಮುಖಶ್ಚಾಸನೇ ಶುಚೌ |
ಪಾದಾಭ್ಯಾಂ ಧರಣೀಂ ಸ್ಪೃಷ್ಟ್ವಾ ಪಾದೇನೈಕೇನ ವಾ ಪುನಃ ॥4॥
ಮಂಡಲದ ಮೇಲೆ ಎಲೆಯನ್ನು ಹಾಕಿ ಕಾಲ್ಗಳನ್ನು ತೊಳೆದುಕೊಂಡು ಪವಿತ್ರವಾದ ಆಸನದಲ್ಲಿ ಪೂರ್ವಾಭಿಮುಖವಾಗಿ

ಕುಳಿತುಕೊಳ್ಳಬೇಕು. ಎರಡು ಕಾಲುಗಳನ್ನು ಅಥವಾ ಒಂದು ಕಾಲನ್ನಾದರೂ ಭೂಮಿಗೆ ತಗುಲಿಸಿಕೊಂಡೇ ಕುಳಿತಿರಬೇಕು (ಸಮಗ್ರವಾಗಿ ದೇಹವನ್ನು ಮಣೆಯ ಮೇಲೆ ಕೂಡಿಸಿ ಊಟ ಮಾಡಬಾರದು. ಪೃಷ್ಠಭಾಗದಲ್ಲಿ ಆಸನವಿರಬೇಕು. ಕಾಲಿನ ಮುಂಭಾಗವು ನೆಲದಲ್ಲಿರಬೇಕು ಎಂದು ಅಭಿಪ್ರಾಯ).

ನೈಕವಾಸಾಸ್ತು ಭುಂಜೀಯಾನ್ನ ಚಾಂತರ್ಧಾಯ ವಾ ಪುನಃ |
ನ ಭಿನ್ನಭಾಂಡೇ ಭುಂಜೀತ ಪರ್ಣಪೃಷ್ಠೇ ತಥೈವ ಚ ॥5॥

ಒಂದೇ ವಸ್ತ್ರವನ್ನು ಉಟ್ಟುಕೊಂಡು ಉತ್ತರೀಯವಿಲ್ಲದೆ ಬ್ರಾಹ್ಮಣನು ಊಟ ಮಾಡಬಾರದು. ಶರೀರವನ್ನು ಬಟ್ಟೆಯಿಂದ ಸಮಗ್ರವಾಗಿ ಮುಚ್ಚಿಕೊಂಡು ಊಟ ಮಾಡಬಾರದು. ಒಡೆದ ತಟ್ಟೆಯಲ್ಲಾಗಲಿ, ಎಲೆಯ ಹಿಂಭಾಗದಲ್ಲಾಗಲಿ ಊಟ ಮಾಡಬಾರದು.

ಅನ್ನಂ ಪೂರ್ವಂ ನಮಸ್ಕುರ್ಯಾತ್ ಪ್ರಹೃಷ್ಟೇನಾಂತರಾತ್ಮನಾ |
ನಾನ್ಯದಾಲೋಕಯೇದನ್ನಾನ್ನ ಜುಗುಪ್ಸೇತ ತತ್ಪರಃ ॥6॥

ಸಂತುಷ್ಟವಾದ ಮನಸ್ಸಿನಿಂದ ಊಟಕ್ಕೆ ಕುಳಿತುಕೊಂಡು ಆರಂಭದಲ್ಲಿ ಅನ್ನಕ್ಕೆ ನಮಸ್ಕಾರ ಮಾಡಬೇಕು. ಊಟ ಮಾಡುವ ಸಮಯದಲ್ಲಿ ಅನ್ನವನ್ನು ಬಿಟ್ಟು ಬೇರೆ ಯಾವುದನ್ನೂ ನೋಡಬಾರದು. ಬಡಿಸಿರುವ ಅನ್ನದಲ್ಲಿ ಜುಗುಪ್ಸೆಯನ್ನು ಹೊಂದಬಾರದು.

ಜುಗುಪ್ಸಿತಂ ಚ ಯಚ್ಚಾನ್ನಂ ರಾಕ್ಷಸಾ ಏವ ಭುಂಜತೇ ॥7॥

ಜುಗುಪ್ಸೆಯಿಂದ ಅನ್ನವನ್ನು ನೋಡಿದರೆ ಆ ಅನ್ನವನ್ನು ರಾಕ್ಷಸರೆ ಸ್ವೀಕರಿಸುತ್ತಾರೆ.

ಪಾಣಿನಾ ಜಲಮುದ್ಧೃತ್ಯ ಕುರ್ಯಾದನ್ನಂ ಪ್ರದಕ್ಷಿಣಮ್ |
ಅಪೇಯಂ ತದ್ವಿಜಾನೀಯಾತ್ ಪೀತ್ವಾ ಚಾಂದ್ರಾಯಣಂ ಚರೇತ್ ॥8॥

ಊಟವನ್ನು ಮಾಡುವಾಗ ಕೈಯಲ್ಲಿ ನೀರನ್ನು ಹಾಕಿಕೊಂಡು ಊಟಮಾಡುವ ಎಲೆಯ ಸುತ್ತಲೂ ಪ್ರದಕ್ಷಿಣಾಕಾರವಾಗಿ ಪರಿಷೇಚನವನ್ನು ಮಾಡಬೇಕು. ಪರಿಷೇಚನ ಮಾಡಿದ ನೀರನ್ನು ಉಳಿಸಿಕೊಂಡು ಅದನ್ನೇ ಕುಡಿಯಬಾರದು. ಹೀಗೆ ಕುಡಿದಲ್ಲಿ ಚಾಂದ್ರಾಯಣ ವ್ರತವನ್ನು ಆಚರಿಸಬೇಕಾಗುತ್ತದೆ.

ಪರಿವೇಷಜಲಾದನ್ಯತ್ ಪೇಯಮೇವ ತು ಮಂತ್ರವತ್ |
ಪಂಚ ಪ್ರಾಣಾಹುತೀಃ ಕುರ್ಯಾತ್ ಸಮಂತ್ರಂ ತು ಪೃಥಕ್ ಪೃಥಕ್ ॥

ಪರಿಷೇಚನ ಮಾಡಿದ ಬಳಿಕ ಬೇರೆ ನೀರನ್ನು ಕೈಗೆ ಹಾಕಿಕೊಂಡು ಮಂತ್ರಪೂರ್ವಕವಾಗಿ ಆ ನೀರನ್ನು ಪಾನ ಮಾಡಿ, ಪಂಚಪ್ರಾಣಾಹುತಿಗಳನ್ನು ಮಂತ್ರಪೂರ್ವಕವಾಗಿಯೇ ಪ್ರತ್ಯೇಕ ಪ್ರತ್ಯೇಕವಾಗಿ ಸ್ವೀಕರಿಸಬೇಕು.

ಯಥಾ ರಸಂ ನ ಜಾನಾತಿ ಜಿಹ್ವಾ ಪ್ರಾಣಾಹುತೌ ನೃಪ |
ತಥಾ ಸಮಾಹಿತಃ ಕುರ್ಯಾತ್ ಪ್ರಾಣಾಹುತಿಮತಂದ್ರಿತಃ ॥10॥

ಪ್ರಾಣಾಹುತಿಯನ್ನು ಸ್ವೀಕರಿಸುವ ಸಮಯದಲ್ಲಿ ಅಲಸನಾಗಿರಬಾರದು. ಸ್ಥಿರಚಿತ್ತನಾಗಿ ಪ್ರಾಣಗಳಿಗೆ ಅನ್ನ ರೂಪವಾದ ಆಹುತಿಯನ್ನು ತಲುಪಿಸಬೇಕೇ ಹೊರತು ಅನ್ನದ ರಸವನ್ನು ನಾಲಿಗೆಯಿಂದ ಸವಿಯಬಾರದು. ಹೀಗೆ ಏಕಾಗ್ರತೆಯಿಂದ ಪ್ರಾಣಾಹುತಿಗಳನ್ನು ನೀಡಬೇಕು.

ವಂದಿತ್ವಾಽನ್ನಮಥಾನ್ನಾದಂ ಪಂಚ ಪ್ರಾಣಾಂಶ್ಚ ಪಾಂಡವ |
ಯಃ ಕುರ್ಯಾದಾಹುತೀಃ ಪಂಚ ತೇನೇಷ್ಟಾಃ ಪಂಚ ವಾಯವಃ ॥11॥

ಪಂಚಪ್ರಾಣರನ್ನು ವಂದಿಸಿ ಅನ್ನವನ್ನು ತಿನ್ನುವ ಪಂಚಪ್ರಾಣನ ತತ್ತ್ವವನ್ನು ತಿಳಿದುಕೊಂಡು ಯಾರು ಪ್ರಾಣಾದಿ ಹೋತೃವನ್ನು ಮಾಡುತ್ತಾನೋ ಅವನು ಪಂಚವಾಯುಗಳಿಗೆ ಸಂಬಂಧಿಸಿದ ಯಜ್ಞವನ್ನೇ ಮಾಡಿದಂತಾಗುತ್ತದೆ.

ಅತೋಽನ್ಯಥಾ ತು ಭುಂಜಾನೋ ಬ್ರಾಹ್ಮಣೋ ಜ್ಞಾನದುರ್ಬಲಃ |
ತೇನಾನ್ನೇನಾಸುರಾನ್ ಪ್ರೇತಾನ್ ರಾಕ್ಷಸಾಂಸ್ತರ್ಪಯಿಷ್ಯತಿ ॥12॥

ಹೀಗೆ ಪ್ರಾಣಾದಿ ಹೋತೃವನ್ನು ಮಾಡದೆ ವ್ಯರ್ಥವಾಗಿ ಕಬಳಿಸುವ ಮೂರ್ಖನಾದ ಬ್ರಾಹ್ಮಣನು ತಾನು ತಿನ್ನುವ ಅನ್ನದ ಮೂಲಕ ಅಸುರರನ್ನು, ಪ್ರೇತರನ್ನು, ರಾಕ್ಷಸರನ್ನು ತೃಪ್ತಿಪಡಿಸುತ್ತಾನೆ.

ವಕ್ತ್ರಪ್ರಮಾಣಾನ್ ಪಿಂಡಾಂಶ್ಚ ಗ್ರಸೇದೇಕೈಕಶಃ ಪುನಃ |
ವಕ್ಷತ್ರಧಿಕಂ ತು ಯತ್ ಪಿಂಡಮಾತ್ಮೋಚ್ಛಿಷ್ಟಂ ತದುಚ್ಯತೇ ॥13॥

ಬಾಯಿಗೆ ಹಿಡಿಸುವಷ್ಟು ತುತ್ತುಗಳನ್ನು ಮಾಡಿಕೊಂಡು, ಒಂದು ಬಾರಿಗೆ ಒಂದು ತುತ್ತಿನಂತೆ ಅನ್ನವನ್ನು ಉಣ್ಣಬೇಕು. ಅಧಿಕವಾದ ತುತ್ತನ್ನು ತಿನ್ನಲು ಹೋಗಿ ಅದರಲ್ಲಿ ಉಳಿಯುವ ಅನ್ನವನ್ನು ಮತ್ತೆ ಎಲೆಗೆ ಹಾಕಿಕೊಂಡು ತಿಂದರೆ ಆತ್ಮೋಚ್ಛಿಷ್ಟ ಎನ್ನುತ್ತಾರೆ. ಹಾಗೆ ತಿಂದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು.

ಪಿಂಡಾವಶಿಷ್ಟಮನ್ಯಚ್ಚ ವಕ್ತ್ರನಿಃಸೃತಮೇವ ಚ |
ಅಭೋಜ್ಯಂ ತದ್ವಿಜಾನೀಯಾದ್ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥

ಯಾವನು ತನ್ನ ಮುಖದಿಂದ ಕೆಳಗೆ ಬಿದ್ದ ಉಚ್ಛಿಷ್ಟಾನ್ನವನ್ನು ಉಣ್ಣುತ್ತಾನೋ ಅವನು ಪಾಪ ಪರಿಹಾರಕ್ಕಾಗಿ ಚಾಂದ್ರಾಯಣವ್ರತವನ್ನು ಮಾಡಬೇಕು.

ಸ್ವಮುಚ್ಛಿಷ್ಟಂ ತು ಯೋ ಭುಂಕ್ತೇ ಯೋ ಭುಂಕ್ತೇ ಮುಕ್ತಮೋದನಮ್ |
ಚಾಂದ್ರಾಯಣಂ ಚರೇತ್ ಕೃಚ್ಛ್ರಂ ಪ್ರಾಜಾಪತ್ಯಮಥಾಪಿ ವಾ ॥15॥

ಯಾವ ಬ್ರಾಹ್ಮಣನು ತನ್ನ ಉಚ್ಛಿಷ್ಟವನ್ನು (ಎಂಜಲು) ಉಣ್ಣುತ್ತಾನೋ, ಮುಕ್ತವಾಗಿ ಉಣ್ಣುವನೋ ಅಂಥವನು ಚಾಂದ್ರಾಯಣ ವ್ರತ ಅಥವಾ ಕೃಚ್ಛ್ರವ್ರತ ಅಥವಾ ಪ್ರಾಜಾಪತ್ಯ ವ್ರತವನ್ನಾಗಲಿ ಮಾಡಬೇಕು.

ಪಿಬತಃ ಪತಿತೇ ತೋಯೇ ಭೋಜನೇ ಮುಖನಿಃಸೃತೇ |

ಅಭೋಜ್ಯಂ ತದ್ ವಿಜಾನೀಯಾದ್ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥
ನೀರು ಕುಡಿಯುತ್ತಿರುವಾಗ ಬಾಯಿಂದ ನೀರು ಕೆಳಗೆ ಬಿದ್ದರೆ, ತುತ್ತು ಉಣ್ಣುವಾಗ ತುತ್ತು ಬಾಯಿಂದ ಎಲೆಗೆ ಬಿದ್ದರೆ ಆ ಉಚ್ಚಿಷ್ಟ ಬಿದ್ದ ಅಭೋಜ್ಯವೆನಿಸಿದೆ. ಅದನ್ನು ಪುನಃ ತಿಂದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು.
ಪೀತಶೇಷಂ ತು ತನ್ನಾಮ ನ ಪೇಯಂ ಪಾಂಡುನಂದನ |
ಪಿಬೇದ್ ಯದಿ ಹಿ ತನ್ಮೋಹಾದ್ ದ್ವಿಜಶ್ಚಾಂದ್ರಾಯಣಂ ಚರೇತ್ ॥
ಸ್ವಲ್ಪ ಕುಡಿದು ಉಳಿದ ನೀರು ಪೀತ ಶೇಷವೆನಿಸುತ್ತದೆ. ಆ ನೀರನ್ನು ಕುಡಿಯಬೇಕು. ಒಂದು ವೇಳೆ ಕುಡಿದು ಉಳಿದ ನೀರನ್ನು ಪುನಃ ಕುಡಿದರೆ ಆ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ಪಾನೀಯಾನಿ ಪಿಬೇದ್ ಯೇನ ಪಾತ್ರೇಣ ದ್ವಿಜಸತ್ತಮಃ |
ಅನುಚ್ಛಿಷ್ಟಂ ಭವೇತ್ ಯಾವದ್ ಯಾವದ್ಭೂಮೌ ನ ನಿಕ್ಷಿಪೇತ್ ॥18॥
ಯಾವ ಬ್ರಾಹ್ಮಣನು ನೀರನ್ನು ಉಚ್ಚಿಷ್ಟವಾಗದೆ ಇರುವಂತೆ ಪಾನ ಮಾಡುತ್ತಾನೋ, ಎಲ್ಲಿಯ ತನಕ ಭೂಮಿಯಲ್ಲಿ ಆ ನೀರಿನ ಪಾತ್ರೆ ಇಟ್ಟಿರುವುದಿಲ್ಲವೋ ಅಲ್ಲಿಯ ತನಕವೂ ಆ ಪಾನೀಯವು ಅನುಚ್ಛಿಷ್ಟ ಎಂದೇ ಕರೆಸಿಕೊಳ್ಳುತ್ತದೆ. (ಲೋಟದಲ್ಲಿ ಹಾಕಿಕೊಂಡು ನೀರನ್ನು ಕುಡಿಯುವಾಗ ಅರ್ಧ ನೀರನ್ನು ಕುಡಿದು ಆ ಲೋಟವನ್ನು ಕೆಳಗೆ ಇಟ್ಟರೆ ಉಳಿದ ನೀರು ಉಚ್ಚಿಷ್ಟವಾಗುತ್ತದೆ). ಹಾಗೆ ಮಾಡಿದರೆ ಚಾಂದ್ರಾಯಣ ವ್ರತ ಮಾಡಬೇಕು.
ಮೌನೀ ವಾಽಪ್ಯಥವಾ ಭೂಮೌ ಪ್ರಹೃಷ್ಟಃ ಸಂಯತೇಂದ್ರಿಯಃ |
ಭುಂಜೀತ ವಿಧಿವದ್ ವಿಪ್ರೋ ನ ಚೋಚ್ಛಿಷ್ಟಾನಿ ಚಾವಪೇತ್ ॥19॥
ಬ್ರಾಹ್ಮಣನು ಮೌನಿಯಾಗಿ ಭೂಮಿಯನ್ನಾಗಲಿ, ದಿಕ್ಕುಗಳನ್ನಾಗಲಿ ನೋಡದೆ ಅನ್ನವನ್ನು ವಿಧಿವತ್ತಾಗಿ ಸಂತೋಷದಿಂದ ಊಟಮಾಡಬೇಕು. ತನ್ನ ಉಚ್ಛಿಷ್ಟ ಮತ್ತೊಬ್ಬರಿಗೆ ಬೀಳದೆ ಇರುವಂತೆ ಜಾಗೃತೆ ವಹಿಸಬೇಕು (ಮಾವಿನ ಹಣ್ಣಿನ ಗೆರಟೆಯನ್ನು ಚೀಪುವಾಗ ಎಚ್ಚರಿಕೆ ವಹಿಸಬೇಕು).
ಸದಾ ಚಾತ್ಯಶನಂ ನಾದ್ಯಾನ್ನಾತಿಹೀನಂ ಚ ಕರ್ಹಿಚಿತ್ |
ಯಥಾನ್ನೇನ ವ್ಯಥಾ ನ ಸ್ಯಾತ್ ತಥಾ ಭುಂಜೀತ ನಿತ್ಯಶಃ ॥20॥
ಯಾವಾಗಲೂ ಅನ್ನವನ್ನು ಅಧಿಕವಾಗಿ ಉಣ್ಣಬಾರದು. ಕಡಿಮೆಯಾಗಿಯೂ ಉಣ್ಣಬಾರದು. ಎಷ್ಟು ಅನ್ನದಿಂದ ಶರೀರ, ಮನಸ್ಸುಗಳು ಹಿತವನ್ನು ಹೊಂದುತ್ತವೋ ಅಷ್ಟು ಅನ್ನವನ್ನು ಮಾತ್ರ ಪ್ರತಿದಿನವು ಉಣ್ಣಬೇಕು.
ಉದಕ್ಯಾಮಪಿ ಚಂಡಾಲಂ ಶ್ವಾನಂ ವಾ ಶೂದ್ರಮೇವ ವಾ |
ಭುಂಜಾನೋ ಯದಿ ವಾ ಪಶ್ಯೇತ್ ತದನ್ನಂ ತು ಪರಿತ್ಯಜೇತ್ ॥21॥
ರಜಸ್ವಲೆಯನ್ನಾಗಲೀ, ಚಂಡಾಲನನ್ನಾಗಲೀ, ನಾಯಿಯನ್ನಾಗಲೀ, ಶೂದ್ರನನ್ನಾಗಲೀ ಊಟ ಮಾಡುವಾಗ ನೋಡಿದಲ್ಲಿ ಆ ಅನ್ನವನ್ನು ತ್ಯಜಿಸಬೇಕು.
ಭುಂಜಾನೋ ಹ್ಯತ್ಯಜನ್ ಮೋಹಾದ್ ದ್ವಿಜಶ್ಚಾಂದ್ರಾಯಣಂ ಚರೇತ್ ॥
ಅವರನ್ನು ನೋಡಿಯೂ ಅನ್ನವನ್ನು ತ್ಯಾಗ ಮಾಡದೆ ಮೋಹದಿಂದ ಉಂಡಲ್ಲಿ ಆ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ಕೇಶಕೀಟಾವಪನ್ನಂ ಚ ಮುಖಮಾರುತವೀಜಿತಮ್ |
ಅಭೋಜ್ಯಂ ತದ್ವಿಜಾನೀಯಾದ್ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥
ಕೂದಲು ಬಿದ್ದ ಅನ್ನ, ಹುಳ ಬಿದ್ದ ಅನ್ನ, ಬಾಯಿಂದ ಆರಿಸಿದ ಅನ್ನ - ಇವುಗಳು ಅಭೋಜ್ಯಗಳೆನಿಸುತ್ತವೆ. ಪ್ರಮಾದದಿಂದ ಈ ಅನ್ನವನ್ನು ತಿಂದಲ್ಲಿ ಚಾಂದ್ರಾಯನವನ್ನು ಆಚರಿಸಿ ಶುದ್ಧಿ ಮಾಡಿಕೊಳ್ಳಬೇಕು.
ಉತ್ಥಾಯ ಚ ಪುನಃ ಸ್ಪೃಷ್ಟಂ ಪಾದಸ್ಪೃಷ್ಟಂ ಚ ಲಂಘಿತಮ್ |
ಅನ್ನಂ ತದ್ರಾಕ್ಷಸಂ ವಿದ್ಯಾತ್ ತಸ್ಮಾತ್ ತತ್ ಪರಿವರ್ಜಯೇತ್ ॥24॥
ಊಟ ಮಾಡುವಾಗ ಎದ್ದು ಹೋಗಿ ಪುನಃ ಬಂದು ಮುಟ್ಟಿದ ಅನ್ನ, ಕಾಲಿಗೆ ತಗುಲಿದ ಅನ್ನ, ಕಾಲಿನಿಂದ ದಾಟಿದ ಅನ್ನ - ಇವುಗಳು ರಾಕ್ಷಸರಿಂದ ತಿನ್ನಲು ಯೋಗ್ಯವಾಗಿವೆ. ಇಂತಹ ಅನ್ನವನ್ನು ವರ್ಜಿಸಬೇಕು.
ರಾಕ್ಷಸೋಚ್ಛಿಷ್ಟಭುಗ್ ವಿಪ್ರಃ ಸಪ್ತ ಪೂರ್ವಾನ್ ಪರಾನಪಿ |
ತಸ್ಯ ನಶ್ಯತಿ ತತ್ ಸರ್ವಂ ದುಃಸ್ವಪ್ನಂ ಚ ವಿನಶ್ಯತಿ ॥25॥
ರಾಕ್ಷಸರ ಉಚ್ಛಿಷ್ಟವನ್ನು ತಿಂದ ಬ್ರಾಹ್ಮಣನು ಹಿಂದಿನ ಏಳು ತಲೆಗಳನ್ನು, ಮುಂದಿನ ಏಳು ತಲೆಗಳನ್ನು ನಾಶ ಮಾಡುತ್ತಾನೆ. ಇಂತಹ ಅನ್ನವನ್ನು ತಿಂದವರಿಗೆ ಕೆಟ್ಟ ಕನಸುಗಳೂ, ನಾಶವೂ ಉಂಟಾಗುತ್ತದೆ.
ತಿಲಾಃ ಪವಿತ್ರಾಃ ಪಾಪಘ್ನಾ ನಾರಾಯಣಸಮುದ್ಭವಾಃ |
ತಿಲಾನ್ ಶ್ರಾದ್ಧೇ ಪ್ರಶಂಸಂತಿ ದಾನಮೇತದನುತ್ತಮಮ್ ॥26॥
ಎಳ್ಳುಗಳು ಪವಿತ್ರವಾದವುಗಳು. ಪಾಪವನ್ನು ನಾಶಮಾಡುವುಗಳು. ನಾರಾಯಣನಿಂದ ಉತ್ಪನ್ನವಾದವುಗಳು. ಆದ್ದರಿಂದ ಶ್ರಾದ್ಧದಲ್ಲಿ ತಿಲದಾನವನ್ನು ಅತಿಶ್ರೇಷ್ಠ ದಾನವೆನ್ನುತ್ತಾರೆ.
ತಿಲಾನ್ ದದ್ಯಾತ್ ತಿಲಾನ್ ಭಕ್ಷ್ಯಾತ್ ತಿಲಾನ್ ಪ್ರಾತರುಪಸ್ಪೃಶೇತ್ |
ತಿಲಂ ತಿಲಮಿತಿ ಬ್ರೂಯಾತ್ ತಿಲಾಃ ಪಾಪಹರಾ ಹಿ ತೇ ॥27॥
ಎಳ್ಳುಗಳನ್ನು ದಾನ ಮಾಡಬೇಕು. ಎಳ್ಳಿನ ಭಕ್ಷ್ಯವನ್ನು ತಿನ್ನಬೇಕು. ಬೆಳಿಗ್ಗೆ ಸಮಯದಲ್ಲಿ ಎಳ್ಳನ್ನು ಮುಟ್ಟಬೇಕು. ಯಾವಾಗಲೂ ತಿಲ, ತಿಲ ಎನ್ನಬೇಕು. ಕಾರಣವೇನೆಂದರೆ ಸಮಸ್ತ ಪಾಪಗಳನ್ನು ತಿಲಗಳು ಪರಿಹರಿಸುತ್ತವೆ.
ಕ್ರೀತಾಃ ಪ್ರತಿಗೃಹೀತಾ ವಾ ನ ವಿಕ್ರೇಯಾ ದ್ವಿಜಾತಿಭಿಃ ॥28॥

ಬ್ರಾಹ್ಮಣರು ಎಳ್ಳನ್ನು ಕೊಂಡುಕೊಳ್ಳಬಹುದು, ದಾನವನ್ನು ಸ್ವೀಕರಿಸಬಹುದು, ಆದರೆ ಎಂದೂ ಮಾರಾಟ ಮಾಡಬಾರದು.
(ಭೋಜನಾಭ್ಯಂಜನಾದ್ ದಾನಾದ್ ಯೋನ್ಯತ್ತು ಕುರುತೇ ತಿಲೈಃ |
ಕ್ರಿಮಿರ್ಭೂತ್ವಾ ಶ್ವವಿಷ್ಠಾಯಾಂ ಪಿತೃಭಿಃ ಸಹ ಮಜ್ಜತಿ ॥29॥
ತಿಲಗಳನ್ನು ಊಟಕ್ಕೆ, ಅಭ್ಯಂಜನಕ್ಕೆ, ದಾನಕ್ಕೆ ಉಪಯೋಗಿಸಿಕೊಳ್ಳಬೇಕು. ಬೇರೆ ಕರ್ಮಗಳಿಗೆ ಉಪಯೋಗಿಸಿಕೊಂಡರೆ ನಾಯಿಯ ಮಲದಲ್ಲಿ ಕ್ರಿಮಿಯಾಗಿ, ಪಿತೃಗಳಿಂದ ಸಹಿತನಾಗಿ ಮುಳುಗಿಹೋಗುತ್ತಾನೆ.
ತಿಲಾನ್ ನ ಪೀಡಯೇದ್ ವಿಪ್ರೋ ಯಂತ್ರಚಕ್ರೇ ಸ್ವಯಂ ನೃಪ |
ಪೀಡಯನ್ ಹಿ ದ್ವಿಜೋ ಮೋಹಾನ್ನರಕಂ ಯಾತಿ ರೌರವಮ್ ॥30॥
ಬ್ರಾಹ್ಮಣನು ಎಳ್ಳನ್ನು ಗಾಣಕ್ಕೆ ಹಾಕಿ ತಾನೇ ಅರಿಯಬಾರದು. ಮೋಹದಿಂದ ಬ್ರಾಹ್ಮಣನು ಎಳ್ಳನ್ನು ಅರೆದರೆ ರೌರವ ನರಕಕ್ಕೆ ಹೋಗುತ್ತಾನೆ.
ಇಕ್ಷುವಂಶೋದ್ಭವಃ ಸೋಮಃ ಸೋಮವಂಶೋದ್ಭವೋ ದ್ವಿಜಃ |
ಇಕ್ಷೂನ್ ನ ಘಾತಯೇತ್ ತಸ್ಮಾದ್ ಇಕ್ಷುಘಾತ್ಯಾತ್ಮಘಾತಕಃ ॥31॥
ಸೋಮನು (ಚಂದ್ರ) ಕಬ್ಬಿನ ಜಲ್ಲೆಯಲ್ಲಿ ಹುಟ್ಟಿದವನು. ಬ್ರಾಹ್ಮಣರು ಸೋಮನ ವಂಶದವರು. ಆದ್ದರಿಂದ ಬ್ರಾಹ್ಮಣನು ಕಬ್ಬನ್ನು ಗಾಣದಲ್ಲಿ ಅರೆಯಬಾರದು. ಕಬ್ಬನ್ನು ಗಾಣದಲ್ಲಿ ಅರೆದರೆ ಆತ್ಮಘಾತುಕನೆನಿಸುತ್ತಾನೆ.
ಇಕ್ಷುದಂಡಸಹಸ್ರಾಣಾಮೇಕೈಕೇನ ಯುಧಿಷ್ಠಿರ |
ಬ್ರಹ್ಮಹತ್ಯಾಮವಾಪ್ನೋತಿ ಬ್ರಾಹ್ಮಣೋ ಯಂತ್ರಪೀಡಕಃ ॥32॥)
ಒಂದೊಂದು ಕಬ್ಬಿನ ಜಲ್ಲೆಗಳನ್ನು ಗಾಣದಲ್ಲಿ ಅರೆದಾಗಲೂ ಯಂತ್ರದಿಂದ ಕಬ್ಬನ್ನು ಅರೆದ ಬ್ರಾಹ್ಮಣನು ಸಾವಿರ ಬ್ರಹ್ಮಹತ್ಯೆಯ ಪಾಪವನ್ನು ಹೊಂದುತ್ತಾನೆ.
ತಸ್ಮಾನ್ನ ಪೀಡಯೇದಿಕ್ಷೂನ್ ಯಂತ್ರಚಕ್ರೇ ದ್ವಿಜೋತ್ತಮಃ ॥33॥
ಆದ್ದರಿಂದ ಕಬ್ಬಿನ ಜಲ್ಲೆಗಳನ್ನು ಬ್ರಾಹ್ಮಣನು ಎಂದಿಗೂ ಅರೆಯಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ತೃಣಮುಷ್ಟಿತಿಲೇಕ್ಷುದಂಡದಾನಕಥನಂ ನಾಮ ನವಾಧಿಕಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹತ್ತನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನಿಗೆ ಆಪದ್ಧರ್ಮಗಳನ್ನು ಹೇಳಿದುದು. ಪ್ರಶಸ್ತ-ಅಪ್ರಶಸ್ತ ಬ್ರಾಹ್ಮಣರ ಲಕ್ಷಣಗಳನ್ನು ಹೇಳಿದುದು.
ಸಾಮಾನ್ಯವಾಗಿ ನಾನಾ ಧರ್ಮಗಳನ್ನು ಹೇಳುವ ಮೂಲಕ ಬ್ರಾಹ್ಮಣ್ಯ ಸಿದ್ಧಿಯ ಪ್ರಕಾರವನ್ನು ನಿರೂಪಿಸಿದುದು.
ಗುರು-ಆಚಾರ್ಯ-ಉಪಾಧ್ಯಾಯರ ಲಕ್ಷಣಗಳನ್ನು ಹೇಳಿದುದು.
ಯುಧಿಷ್ಠಿರಃ
ಸಮುಚ್ಚಯಂ ತು ಧರ್ಮಾಣಾಂ ಭೋಜ್ಯಾಭೋಜ್ಯಂ ಚ ಕೇಶವ |
ಶ್ರುತಂ ಮಯಾ ತ್ವತ್ಪ್ರಸಾದಾದ್ ಆಪದ್ಧರ್ಮಂ ಬ್ರವೀಹಿ ಮೇ ॥1॥
ಯುಧಿಷ್ಠಿರ ಮಾಧವನೇ, ನಿನ್ನಿಂದ ಧರ್ಮಗಳ ವಿಷಯವನ್ನು ಸಂಗ್ರಹವಾಗಿ ಕೇಳಿದ್ದೇನೆ. ಭೋಜನಕ್ಕೆ ಯೋಗ್ಯವಾದ, ಅಯೋಗ್ಯವಾದ ಅನ್ನದ ವಿಷಯವನ್ನೂ ತಿಳಿದುಕೊಂಡಿದ್ದೇನೆ. ಇನ್ನು ಮುಂದೆ ನನಗೆ ಆಪದ್ಧರ್ಮದ ವಿಷಯವನ್ನು ವಿಷದವಾಗಿ ತಿಳಿಸಿಕೊಡು.
ಶ್ರೀಭಗವಾನ್
ದುರ್ಭಿಕ್ಷೇ ರಾಷ್ಟ್ರಸಮ್ಬಾಧೇ ತ್ವಾಶೌಚೇ ಮೃತಸೂತಕೇ |
ಘರ್ಮಕಾಲೇಽಧ್ವನಿ ತಥಾ ನಿಯಮೋ ಯೇನ ಲುಪ್ಯತೇ ॥2॥
ಶ್ರೀಭಗವಾನ್ ಧರ್ಮಜನೇ, ದುರ್ಭಿಕ್ಷೆಯಲ್ಲಿ, ದೇಶಕ್ಕೆ ಯಾವುದಾದರೂ ವಿಪತ್ತು ಒದಗಿಬಂದಾಗ, ಜಾತಾಶೌಚ, ಮೃತಾಶೌಚಗಳಲ್ಲಿ, ಬೇಸಿಗೆಯಲ್ಲಿ, ದಾರಿಯಲ್ಲಿ ಪ್ರಯಾಣ ಮಾಡಬೇಕಾದ ಸಂದರ್ಭವು ಒದಗಿ ಬಂದಾಗ ಬ್ರಾಹ್ಮಣನ ನಿಯಮಗಳು ಸಹಜವಾಗಿ ಲೋಪವಾಗುತ್ತವೆ.
ದೂರಾಧ್ವಗಮನಾದ್ ಖಿನ್ನೋ ದ್ವಿಜಾಲಾಭೇಽಥ ಶೂದ್ರತಃ |
ಅಕೃತಾನ್ನಂ ತು ಯತ್ ಕಿಂಚಿದ್ ಗೃಹ್ಣೀಯಾದಾತ್ಮವೃತ್ತಯೇ ॥3॥
ಬಹಳ ದೂರ ಪ್ರಯಾಣ ಮಾಡಿ ಆಯಾಸಗೊಂಡಾಗ ಬ್ರಾಹ್ಮಣನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಸಿಕ್ಕದಿದ್ದಾಗ ಶೂದ್ರನಿಂದಲಾದರೂ ಬೇಯಿಸದೆ ಇರುವ ಆಹಾರವನ್ನು ಜೀವಿಕೆಗಾಗಿ ಸ್ವಲ್ಪ ಪ್ರಮಾಣದಲ್ಲಿ ಸ್ವೀಕರಿಸಬಹುದು.
ಆತುರೋ ದುಃಖಿತೋ ವಾಽಪಿ ಭಯಾರ್ತೋ ವಾ ಬುಭುಕ್ಷಿತಃ |
ಭುಂಜನ್ನವಿಧಿನಾ ವಿಪ್ರಃ ಪ್ರಾಯಶ್ಚಿತ್ತೀಯತೇ ನ ಚ ॥4॥
ರೋಗಿಯಾದ, ದುಃಖಿತನಾಗಿರುವ, ಆರ್ತನಾದ, ಹಸಿದಿರುವ ಬ್ರಾಹ್ಮಣನು ವಿಧಿನಿಯಮಗಳನ್ನು ಉಲ್ಲಂಘಿಸಿ ಊಟ ಮಾಡಿದಲ್ಲಿ ಆಪತ್ಕಾಲದಲ್ಲಿ ಪ್ರಾಯಶ್ಚಿತ್ತದ ಅವಶ್ಯಕತೆಯು ಇರುವುದಿಲ್ಲ.
ನಿಮಂತ್ರಿತಸ್ತು ಯೋ ವಿಪ್ರೋ ವಿಧಿವದ್ಧವ್ಯಕವ್ಯಯೋಃ |
ಮಾಂಸಾದೀನ್ಯಪಿ ಭುಂಜಾನಃ ಪ್ರಾಯಶ್ಚಿತ್ತೀಯತೇ ನ ಚ ॥5॥
ಯಾವ ಬ್ರಾಹ್ಮಣನು ವಿಧಿವತ್ತಾಗಿ ಹವ್ಯ-ಕವ್ಯಗಳಿಗೆ ನಿಮಂತ್ರಿತನಾಗಿರುತ್ತಾನೋ ಅವನು ವಿಧಿವತ್ತಾಗಿ ಸಮರ್ಪಿಸಿದ ಮಾಂಸವನ್ನು

ಭುಂಜಿಸಿದರೂ ಪ್ರಾಯಶ್ಚಿತ್ತವು ಬೇಕಾಗುವುದಿಲ್ಲ.
ವ್ಯಾಖ್ಯಾನ ವಿಶೇಷ ಯುಗಧರ್ಮಾನುಸಾರವಾಗಿ ಬ್ರಾಹ್ಮಣರು ಶ್ರಾದ್ಧಾದಿಗಳಲ್ಲಿ ವಿಹಿತವಾದ ಮಾಂಸಭೋಜನವನ್ನು ಮಾಡುತ್ತಿದ್ದರು. ಕಲಿಯುಗದಲ್ಲಿದು  ನಿಷಿದ್ಧವಾಗಿದೆ.
ಅಷ್ಟೌ ತಾನ್ಯವ್ರತಘ್ನಾನಿ ಆಪೋ ಮೂಲಂ ಘೃತಂ ಪಯಃ |
ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷಧಮ್        ॥6॥
ಎಂಟು ಪದಾರ್ಥಗಳು ವ್ರತಕ್ಕೆ ವಿಘ್ನವುಂಟು ಮಾಡುವುದಿಲ್ಲ ಎನ್ನುತ್ತಾರೆ. ನೀರು, ಗೆಡ್ಡೆಗೆಣಸು, ತುಪ್ಪ, ಹಾಲು, ಹವಿಸ್ಸು ಬ್ರಾಹ್ಮಣನ ಇಚ್ಛೆಯನ್ನು ಪೂರ್ಣಗೊಳಿಸುವುದು, ಗುರುವಿನ ಆಜ್ಞಾಪರಿಪಾಲನೆ, ಔಷಧಿಸೇವನೆ- ಇವುಗಳು ವ್ರತವಿಘ್ನಕಾರಿಗಳಲ್ಲ.
ಅಶಕ್ತೋ ವಿಧಿವತ್ ಕರ್ತುಂ ಪ್ರಾಯಶ್ಚಿತ್ತಾನಿ ಯೋ ನರಃ |
ವಿದುಷಾಂ ವಚನೇನಾಪಿ ದಾನೇನಾಪಿ ವಿಶುದ್ಧ್ಯತಿ  ॥7॥
ವಿಧಿವತ್ತಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಶಕ್ತಿ ಇಲ್ಲದ ವ್ಯಕ್ತಿಯು ವಿದ್ವಾಂಸರ ಮಾತಿನಂತೆ, ಅವರು ಹೇಳಿದಂತೆ ನಡೆಯುವುದು, ಅವರಿಗೆ ದಾನ ಮಾಡುವುದರಿಂದಲೂ ಶುದ್ಧನಾಗುತ್ತಾನೆ.
ಅನೃತಾವೃತುಕಾಲೇ ವಾ ದಿವಾ ರಾತ್ರೌ ತಥಾಽಪಿ ವಾ |
ಪ್ರೋಷಿತಸ್ತು ಸ್ತ್ರಿಯಂ ಗಚ್ಛೇತ್ ಪ್ರಾಯಶ್ಚಿತ್ತೀಯತೇ ನ ಚ        ॥8॥
ಬೇರೆ ಪ್ರದೇಶದಲ್ಲಿ ಪತಿಯು ಸಂಚರಿಸುತ್ತಾ, ತನ್ನ ಮನೆಗೆ ಆಗಮಿಸಿದಾಗ ಆ ಪತಿಯು ಬೇರೆ ಸಮಯದಲ್ಲಾಗಲಿ, ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ ಭಾರ್ಯೆಯೊಡನೆ ಸಮಾಗಮವನ್ನು ಮಾಡಬಹುದು. ಅದಕ್ಕೆ ಪ್ರಾಯಶ್ಚಿತ್ತವು ಬೇಕಾಗಿಲ್ಲ.
ಯುಧಿಷ್ಠಿರಃ
ಪ್ರಶಸ್ಯಾಃ ಕೀದೃಶಾ ವಿಪ್ರಾ ನಿಂದ್ಯಾಶ್ಚಾಪಿ ಸುರೇಶ್ವರ |
ಅಷ್ಟಕಾಯಾಶ್ಚ ಕಃ ಕಾಲಸ್ತನ್ಮೇ ಕಥಯ ಸುವ್ರತ    ॥9॥
ಯುಧಿಷ್ಠಿರ ಮಾಧವನೇ, ಯಾವ ಬ್ರಾಹ್ಮಣರು ಪ್ರಶಂಸೆಗೆ ಅರ್ಹರು? ನಿಂದ್ಯರು ಯಾರು? ಮಹಾಲಯ ಶ್ರಾದ್ಧಕ್ಕೆ ಸರಿಯಾದ ಕಾಲವು ಯಾವುದು? ಇವುಗಳನ್ನು ಹೇಳುವ ಕೃಪೆದೋರು.
ಶ್ರೀಭಗವಾನ್
ಸತ್ಯಸಂಧಂ ದ್ವಿಜಂ ದೃಷ್ಟ್ವಾ ಸ್ಥಾನಾದ್ವೇಪತಿ ಭಾಸ್ಕರಃ |
ಏಷ ಮೇ ಮಂಡಲಂ ಭಿತ್ತ್ವಾ ಯಾತಿ ಬ್ರಹ್ಮ ಸನಾತನಮ್       ॥10॥
ಶ್ರೀಭಗವಾನ್ ಸತ್ಯಸಂಧನಾದ ಬ್ರಾಹ್ಮಣನನ್ನು ಕಂಡ ಸೂರ್ಯನು, ತನ್ನ ಸ್ಥಾನದಿಂದ ಭಯಪಡುತ್ತಾನೆ. ಈ ಬ್ರಾಹ್ಮಣನು ಸೂರ್ಯಮಂಡಲವನ್ನೂ ಭೇದಿಸಿಕೊಂಡು ಪರಬ್ರಹ್ಮನನ್ನು ಸೇರುವ ಅರ್ಹತೆಯುಳ್ಳವನು ಎಂದು ಗೌರವಿಸುತ್ತಾನೆ.
ಕುಲೀನಃ ಕರ್ಮಕೃದ್ ವೈದ್ಯಸ್ತಥಾ ಚಾಪ್ಯಾನೃಶಂಸ್ಯವಾನ್ |
ಹ್ರೀಮಾನ್ ಋಜುಃಸತ್ಯವಾದೀ ಪಾತ್ರಂ ಸರ್ವ ಇಮೇ ದ್ವಿಜಾಃ     ॥11॥
ಉತ್ತಮ ಕುಲದಲ್ಲಿ ಹುಟ್ಟಿದವನು, ಶಾಸ್ತ್ರೋಕ್ತ ಕರ್ಮಗಳನ್ನು ಅನುಸರಿಸುವವನು, ವಿದ್ವಾಂಸನು, ದಯಾಳುವು, ತೇಜಸ್ವಿಯು, ಋಜುಸ್ವಭಾವದವನು, ಸತ್ಯವಾದಿಯು - ಇವರೆಲ್ಲರೂ ಪಾತ್ರರಾದ ಬ್ರಾಹ್ಮಣರು ಎನಿಸುತ್ತಾರೆ.
ಏತೇ ಚಾಗ್ರಾಸನಸ್ಥಾಸ್ತೇ ಭುಂಜಾನಾಃ ಪ್ರಥಮಂ ದ್ವಿಜಾಃ |
ತಸ್ಯಾಂ ಪಂಕ್ತ್ಯಾಂ ಚ ಯೇ ಚಾನ್ಯೇ ತಾನ್ ಪುನನ್ತ್ಯೇವ ದರ್ಶನಾತ್ ॥
ಇಂತಹ ಬ್ರಾಹ್ಮಣರು ಪಂಕ್ತಿಯ ಮೊದಲಲ್ಲಿ ಕುಳಿತು ಎಲ್ಲರಿಗಿಂತಲೂ ಮೊದಲು ಊಟಮಾಡಲು ಅರ್ಹರಾಗಿರುತ್ತಾರೆ. ಇವರು ತಮ್ಮ ಸಾಲಿನಲ್ಲಿ ಕುಳಿತಿರುವ ಎಲ್ಲ ಪಂಕ್ತಿಗಳನ್ನು ದೃಷ್ಟಿಯಿಂದಲೇ ಪವಿತ್ರಗೊಳಿಸುತ್ತಾರೆ.
ಮದ್ಭಕ್ತಾ ಯೇ ದ್ವಿಜಶ್ರೇಷ್ಠಾ ಮದ್ಗತಾ ಮತ್ಪರಾಯಣಾಃ |
ತಾನ್ ಪಂಕ್ತಿಪಾವನಾನ್ ವಿದ್ಧಿ ಪೂಜ್ಯಾಂಶ್ಚೈವ ವಿಶೇಷತಃ        ॥13॥
ಯಾವ ಬ್ರಾಹ್ಮಣಶ್ರೇಷ್ಠರು ಮನಸ್ಸನ್ನು ನನ್ನಲ್ಲೇ ನೆಲೆಗೊಳಿಸಿ, ನನ್ನನ್ನೇ ಆಶ್ರಯವನ್ನಾಗಿ ತಿಳಿದು ನನ್ನ ಭಕ್ತರಾಗಿರುತ್ತಾರೋ ಅವರು ಪಂಕ್ತಿಪಾವನರು. ಅಂತಹವರು ವಿಶೇಷವಾಗಿ ಪೂಜಾ, ಸತ್ಕಾರಗಳಿಗೆ ಅರ್ಹರಾಗಿರುತ್ತಾರೆ.
ನಿಂದ್ಯಾನ್ ಶೃಣು ದ್ವಿಜಾನ್ ರಾಜನ್ನಪಿ ವಾ ವೇದಪಾರಗಾನ್ |
ಬ್ರಾಹ್ಮಣಚ್ಛದ್ಮನಾ ಲೋಕೇ ಚರತಃ ಪಾಪಕಾರಿಣಃ ॥14॥
ಯುಧಿಷ್ಠಿರನೇ, ಇನ್ನು ಮುಂದೆ ನಿಂದ್ಯರಾದ ಬ್ರಾಹ್ಮಣರು ಯಾರೆಂದು ಹೇಳುತ್ತೇನೆ. ಯಾರು ಈ ಲೋಕದಲ್ಲಿ ಇತರರನ್ನು ವಂಚಿಸುತ್ತಾ ಕಾಲ ಕಳೆಯುತ್ತಾರೋ ಅವರು ವೇದಪಾರಂಗತರಾಗಿದ್ದರೂ ಪಾಪಿಷ್ಠರೇ ಸರಿ.
ಅನಗ್ನಿರನಧೀಯಾನಃ ಪ್ರತಿಗ್ರಹರುಚಿಸ್ತು ಯಃ |
ಯತ್ರ ಕುತ್ರ ತು ಭುಂಜಾನಸ್ತಂ ವಿದ್ಯಾತ್ ಪಂಕ್ತಿದೂಷಕಮ್       ॥15॥
ಅಗ್ನಿಹೋತ್ರವನ್ನು ಮಾಡದವನು, ಅಧ್ಯಯನ ಮಾಡದವನು, ದಾನ ತೆಗೆದುಕೊಳ್ಳುವುದರಲ್ಲೇ ಆಸಕ್ತನಾದವನು, ಸಿಕ್ಕಿದ ಕಡೆ ತಿನ್ನುವವನು- ಇಂತಹವನನ್ನು ದೂಷ್ಯನಾದ ಬ್ರಾಹ್ಮಣನೆಂದು ತಿಳಿ.
ಮೃತಸೂತಕಪುಷ್ಟಾಂಗೋ ಯಶ್ಚ ಶೂದ್ರಾನ್ನಭುಗ್ ದ್ವಿಜಃ        ॥16॥
ಯಾವನ ಶರೀರವು ಜಾತಾಶೌಚ, ಮೃತಾಶೌಚ ಅನ್ನವನ್ನು ಊಟಮಾಡಿ ಪುಷ್ಟವಾಗಿರುವುದೋ, ಶೂದ್ರಾನ್ನವನ್ನು ತಿನ್ನುತ್ತಾನೋ, (ಅಸೂಯಾಲುರ್ದಂಭಪರೋ ಮಹಾನಹಮಿತಿ ಬ್ರುವನ್ |)
ಅಹಂ ಚಾಪಿ ನ ಜಾನಾಮಿ ಗತಿಂ ತಸ್ಯ ನರಾಧಿಪ    ॥17॥
ಹೊಟ್ಟೆಕಿಚ್ಚಿನ ಭಾವನೆಯುಳ್ಳವನೋ, ತಾನೇ ಶ್ರೇಷ್ಠನೆಂದು ಭಾವಿಸಿದ್ದಾನೋ, ಅಂತಹ ವ್ಯಕ್ತಿಗೆ ಎಂತಹ ಗತಿಯು ಲಭಿಸುತ್ತದೆ

ಎಂದು ನನಗೂ ತಿಳಿಯದು.
ಶೂದ್ರಾನ್ನರಸಪುಷ್ಟಾಂಗೋಽಪ್ಯಧೀಯಾನೋ ಹಿ ನಿತ್ಯಶಃ |
ಜಪತೋ ಜುಹ್ವತಶ್ಚಾಪಿ ಗತಿರೂರ್ಧ್ವಾ ನ ವಿದ್ಯತೇ ॥18॥
ಶೂದ್ರಾನ್ನ ರಸದಿಂದ ಕೊಬ್ಬಿದ ದೇಹವುಳ್ಳ ಬ್ರಾಹ್ಮಣನು ನಿತ್ಯವೂ ಅಧ್ಯಯನ ಶೀಲನಾಗಿದ್ದರೂ, ಜಪಶೀಲನಾಗಿದ್ದರೂ, ಯಜ್ಞ-ಯಾಗಗಳನ್ನು ನಡೆಸುತ್ತಿದ್ದರೂ ಅವನಿಗೆ ಊರ್ಧ್ವಗತಿಯು ಲಭಿಸುವುದಿಲ್ಲ.
ಆಹಿತಾಗ್ನಿಶ್ಚ ಯೋ ವಿಪ್ರಃ ಶೂದ್ರಾನ್ನಾನ್ನ ನಿವರ್ತತೇ |
ಪಂಚ ತಸ್ಯ ಪ್ರಣಶ್ಯಂತಿ ಆತ್ಮಾ ಬ್ರಹ್ಮ ತ್ರಯೋಽಗ್ನಯಃ ॥19॥
ಬ್ರಾಹ್ಮಣನು ನಿತ್ಯಾಗ್ನಿಹೋತ್ರಿಯಾಗಿದ್ದರೂ, ಶೂದ್ರಾನ್ನವನ್ನು ನಿರಂತರ ಭೋಜನ ಮಾಡುತ್ತಿದ್ದರೆ, ಅಂತಹವನ ಆತ್ಮಜ್ಞಾನವು, ವೇದಾಧ್ಯಯನದ ಫಲವು ಮತ್ತು ಮೂರು ಅಗ್ನಿಗಳು ನಾಶ ಹೊಂದುತ್ತವೆ.
ಶೂದ್ರಪ್ರೇಷಣಕರ್ತುಶ್ಚ ಬ್ರಾಹ್ಮಣಸ್ಯ ವಿಶೇಷತಃ |
ಭೂಮ್ಯಾಮನ್ನಂ ಪ್ರದಾತವ್ಯಂ ಶ್ವಸೃಗಾಲಸಮೋ ಹಿ ಸಃ ॥20॥
ಶೂದ್ರನ ಸೇವೆಯನ್ನು ಮಾಡುವ ಬ್ರಾಹ್ಮಣನಿಗೆ ನೆಲದ ಮೇಲೆ ಅನ್ನವನ್ನು ಬಡಿಸಬೇಕು. ಕಾರಣ ಅವನು ನಾಯಿ, ನರಿಗಳಿಗೆ ಸಮಾನನಾದವನು.
ಪ್ರೇತಭೂತಂ ತು ಯಃ ಶೂದ್ರಂ ಬ್ರಾಹ್ಮಣೋ ಜ್ಞಾನದುರ್ಬಲಃ |
ಅನುಗಚ್ಛೇನ್ನೀಯಮಾನಂ ತ್ರಿರಾತ್ರಮಶುಚಿರ್ಭವೇತ್ ॥21॥
ಅಜ್ಞಾನಿಯಾದ ಬ್ರಾಹ್ಮಣನು, ಮರಣ ಹೊಂದಿದ ಶೂದ್ರನನ್ನು ಸ್ಮಶಾನಕ್ಕೆ ಒಯ್ಯುವಾಗ ಅವನನ್ನು ಅನುಸರಿಸಿ ಹೋದರೆ ಮೂರು ರಾತ್ರಿಗಳು ಅಶೌಚವಿರಬೇಕು.
ತ್ರಿರಾತ್ರೇ ತು ತತಃ ಪೂರ್ಣೇ ನದೀಂ ಗತ್ವಾ ಸಮುದ್ರಗಾಮ್ |
ಪ್ರಾಣಾಯಾಮಶತಂ ಕೃತ್ವಾ ಘೃತಂ ಪ್ರಾಶ್ಯ ವಿಶುದ್ಧ್ಯತಿ ॥22॥
ಮೂರುರಾತ್ರಿಗಳು ಕಳೆದ ಬಳಿಕ ಸಮುದ್ರಗಳನ್ನು ಸೇರುವ ನದಿಯಲ್ಲಿ ಸ್ನಾನ ಮಾಡಿ, ನೂರು ಪ್ರಾಣಾಯಾಮಗಳನ್ನು ಮಾಡಿ ತುಪ್ಪ ಕುಡಿಯುವುದರಿಂದ ಶುದ್ಧನಾಗುತ್ತಾನೆ.
ಅನಾಥಂ ಬ್ರಾಹ್ಮಣಂ ಪ್ರೇತಂ ಯೇ ವಹಂತಿ ದ್ವಿಜೋತ್ತಮಾಃ |
ಪದೇ ಪದೇಽಶ್ವಮೇಧಸ್ಯ ಫಲಂ ತೇ ಪ್ರಾಪ್ನುವಂತಿ ಹಿ ॥23॥
ಯಾವ ಶ್ರೇಷ್ಠರಾದ ಬ್ರಾಹ್ಮಣರು ಅನಾಥ ಬ್ರಾಹ್ಮಣನ ಶವವನ್ನು ಸ್ಮಶಾನ ಭೂಮಿಗೆ ಹೊತ್ತುಯ್ಯುವರೋ ಅವರು ಇಡುವ ಪ್ರತಿ ಹೆಜ್ಜೆಯು ಅಶ್ವಮೇಧದ ಫಲವನ್ನು ನೀಡುತ್ತದೆ.
ನ ತೇಷಾಮಶುಭಂ ಕಿಂಚಿತ್ ಪಾಪಂ ವಾ ಶುಭಕರ್ಮಣಾಮ್ |
ಜಲಾವಗಾಹನಾದೇವ ಸದ್ಯಃ ಶೌಚಂ ವಿಧೀಯತೇ ॥24॥
ಅನಾಥ ಬ್ರಾಹ್ಮಣನ ಶವ ಹೊತ್ತು ಒಯ್ದ ಅವರಿಗೆ ಶುಭಕರ್ಮಿಗಳೆಂದು ಶಾಸ್ತ್ರವು ಕರೆದಿದೆ. ಆ ಬ್ರಾಹ್ಮಣರಿಗೆ ಅಶುಭವಾಗಲಿ, ಪಾಪವಾಗಲಿ ಉಂಟಾಗುವುದಿಲ್ಲ. ಸ್ನಾನ ಮಾಡಿದ ಕೂಡಲೇ ಶುದ್ಧಿಯನ್ನು ಹೊಂದುತ್ತಾರೆ.
ಶೂದ್ರವೇಶ್ಮನಿ ವಿಪ್ರೇಣ ಕ್ಷೀರಂ ವಾ ಯದಿ ವಾ ದಧಿ |
ನಿವೃತ್ತೇನ ನ ಭೋಕ್ತವ್ಯಂ ವಿದ್ಧಿ ಶೂದ್ರಾನ್ನಮೇವ ತತ್ ॥25॥
ನಿವೃತ್ತಿಮಾರ್ಗದಲ್ಲಿ ನಿರತನಾದ ಸಂನ್ಯಾಸಿಯು ಶೂದ್ರನ ಮನೆಯಲ್ಲಿ ಹಾಲನ್ನಾಗಲಿ, ಮೊಸರನ್ನಾಗಲಿ ಸೇವಿಸಬಾರದು. ಅವುಗಳು ಶೂದ್ರಾನ್ನವೆಂದೇ ತಿಳಿಯಬೇಕು.
ವಿಪ್ರಾಣಾಂ ಭೋಕ್ತುಕಾಮಾನಾಮತ್ಯಂತಂ ಚಾನ್ನಕಾಂಕ್ಷಯಾ |
ಯೋ ವಿಘ್ನಂ ಕುರುತೇ ಮರ್ತ್ಯಸ್ತತೋ ನಾನ್ಯೋಽಸ್ತಿ ಪಾಪಕೃತ್ ॥26॥
ಬಹಳ ಹಸಿದಿರುವ, ಅನ್ನದ ಆಕಾಂಕ್ಷೆಯುಳ್ಳ ಬ್ರಾಹ್ಮಣನ ಭೋಜನಕ್ಕೆ ಯಾವನು ವಿಘ್ನವನ್ನುಂಟು ಮಾಡುತ್ತಾನೋ ಅವರಿಗಿಂತ ಪಾಪಿಷ್ಠನು ಜಗತ್ತಿನಲ್ಲಿ ಬೇರೆ ಯಾರೂ ಇರುವುದಿಲ್ಲ.
ಸರ್ವೇ ಚ ವೇದಾಃ ಸಹ ಷಡ್‌ಭಿರಂಗೈಃ
ಸಾಂಖ್ಯಂ ಪುರಾಣಂ ಚ ಕುಲೇ ಚ ಜನ್ಮ |
ನೈತಾನಿ ಸರ್ವಾಣಿ ಗತಿರ್ಭವಂತಿ
ಶೀಲವ್ಯಪೇತಸ್ಯ ನೃಪ ದ್ವಿಜಸ್ಯ ॥27॥
ರಾಜನೇ, ಷಡಂಗಗಳಿಂದ ಯುಕ್ತವಾದ ವೇದಗಳು, ಸಾಂಖ್ಯಶಾಸ್ತ್ರ, ಪುರಾಣ, ಸತ್ಕುಲದಲ್ಲಿ ಜನ್ಮ - ಇವೆಲ್ಲವೂ ಒಟ್ಟಾಗಿ ಸೇರಿದರೂ ಶೀಲ-ಸದಾಚಾರಗಳಿಂದ ಬ್ರಾಹ್ಮಣನು ಕೂಡಿರದಿದ್ದರೆ ಅವನಿಗೆ ಇವುಗಳು ಸದ್ಗತಿಯನ್ನು ನೀಡಲಾರವು.
ಗ್ರಹೋಪರಾಗೇ ವಿಷುವೇಽಯನಾಂತೇ
ಪಿತ್ರ್ಯೇ ಮಘಾಸು ಸ್ವಸುತೇ ಚ ಜಾತೇ |
ಗಯೇಷು ಸರ್ವೇಷು ಚ ಪಾಂಡುಪುತ್ರ
ದತ್ತಂ ಭವೇನ್ನಿಷ್ಕಸಹಸ್ರತುಲ್ಯಮ್ ॥28॥
ಪಾಂಡುಪುತ್ರನೇ, ಗ್ರಹಣ ಸಮಯದಲ್ಲಿ, ವಿಶುವಯೋಗದಲ್ಲಿ, ದಕ್ಷಿಣಾಯನ, ಉತ್ತರಾಯಣ ಪುಣ್ಯಕಾಲಗಳಲ್ಲಿ, ಪಿತೃಕಾರ್ಯಗಳಲ್ಲಿ, ಮಘಾ ನಕ್ಷತ್ರದಲ್ಲಿ, ಮಗನು ಹುಟ್ಟಿದ ಸಮಯದಲ್ಲಿ , ಗಯಾ ಶ್ರಾದ್ಧಾದಿ ಪಿತೃಕರ್ಮವನ್ನು ಮಾಡುವ ಸಮಯದಲ್ಲಿ ಸ್ವಲ್ಪ ದಾನವನ್ನು ಮಾಡಿದರೂ ಒಂದು ಸಾವಿರ ಸುವರ್ಣನಾಣ್ಯಗಳನ್ನು ದಾನ ಮಾಡಿದ್ದಕ್ಕೆ ಸಮಾನವಾಗುತ್ತದೆ.

ವೈಶಾಖಮಾಸಸ್ಯ ಚ ಯಾ ತೃತೀಯಾಽ
ನವದ್ಯಾಽಸೌ ಕಾರ್ತಿಕಶುಕ್ಲಪಕ್ಷೇ |
ನಭಸ್ಯಮಾಸಸ್ಯ ಚ ಕೃಷ್ಣಪಕ್ಷೇ
ತ್ರಯೋದಶೀ ಪಂಚದಶೀ ಚ ಮಾಘೇ ||29||
ಉಪಪ್ಲವೇ ಚಂದ್ರಮಸೋ ರವೇಶ್ಚ
ಶ್ರಾದ್ಧಸ್ಯ ಕಾಲೋ ಹ್ಯಯನದ್ವಯೇ ಚ |
ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ
ದದ್ಯಾತ್ ಪಿತೃಭ್ಯಃ ಪ್ರಯತೋ ಮನುಷ್ಯಃ ||30||
ವೈಶಾಖ ಮಾಸದ ಶುಕ್ಲ ಪಕ್ಷದ ತೃತೀಯಾ, ಕಾರ್ತೀಕ ಮಾಸದ ಶುದ್ಧ ತೃತೀಯಾ, ಭಾದ್ರಪದ ಮಾಸದ ಕೃಷ್ಣಪಕ್ಷದ ತ್ರಯೋದಶಿ, ಮಾಘ ಮಾಸದ ಅಮಾವಾಸ್ಯೆ, ಚಂದ್ರ ಸೂರ್ಯರ ಗ್ರಹಣದ ದಿವಸಗಳು, ಉತ್ತರಾಯಣ, ದಕ್ಷಿಣಾಯನ ಪುಣ್ಯಕಾಲಗಳು ಶ್ರಾದ್ಧ ಮಾಡಲು ಶ್ರೇಷ್ಠವಾದ ಕಾಲವಾಗಿವೆ. ಈ ದಿವಸಗಳಲ್ಲಿ ಪಿತೃಗಳನ್ನುದ್ದೇಶಿಸಿ ತಿಲ ಮಿಶ್ರಿತವಾದ ಜಲತರ್ಪಣ ಮಾಡಿದರೂ ಸಹಸ್ರ ವರ್ಷ ಶ್ರಾದ್ಧ ಮಾಡಿದ ಫಲವು ಲಭಿಸುತ್ತದೆ.
ಯಸ್ತ್ವೇಕಪಂಕ್ತ್ಯಾಂ ವಿಷಮಂ ದದಾತಿ
ಸ್ನೇಹಾದ್ ಭಯಾದ್ವಾ ಯದಿ ವಾಽರ್ಥಹೇತೋಃ |
ಕ್ರೂರಂ ದುರಾಚಾರಮನಾತ್ಮವಂತಂ
ಬ್ರಹ್ಮಘ್ನಮೇನಂ ಮುನಯೋ ವದಂತಿ ||31||
ಯಾವ ಮನುಷ್ಯನು ಸ್ನೇಹಭಾವದಿಂದ ಅಥವಾ ಭಯದಿಂದ, ಧನದ ಆಕಾಂಕ್ಷೆಯಿಂದ ಒಂದೇ ಸ್ಥಳದಲ್ಲಿ ಕುಳಿತಿರುವ ಜನರಿಗೆ ಬಡಿಸುತ್ತಾ ಪಂಕ್ತಿಭೇದ ಮಾಡುತ್ತಾನೋ ಅಂತಹ ಕ್ರೂರನಾದ, ದುರಾಚಾರಿಯಾದ, ಅಜಿತೇಂದ್ರಿಯನಾದ ಮನುಷ್ಯನನ್ನು ಬ್ರಹ್ಮಹತ್ಯೆ ಮಾಡಿದವನೆಂದು ವಿದ್ವಾಂಸರು ಹೇಳುತ್ತಾರೆ.
ಇಹ ಚೈಕಸ್ಯ ನಾಮುತ್ರ ಅಮುತ್ರೈಕಸ್ಯ ನೋ ಇಹ |
ಇಹ ಚಾಮುತ್ರ ಚೈಕಸ್ಯ ನಾಮುತ್ರೈಕಸ್ಯ ನೋ ಇಹ ||32||
ಕೇವಲ ಹೊಟ್ಟೆ ಹೊರೆಯಲು ಬಯಸುವ ವ್ಯಕ್ತಿ ಇಹಲೋಕದಲ್ಲಿ ಸುಖವನ್ನು ಹೊಂದುತ್ತಾನೆ. ಪರಲೋಕದ ಸುಖವನ್ನು ಹೊಂದುವುದಿಲ್ಲ. ಯಾವನು ಪರಲೋಕದ ಸುಖವನ್ನು ಬಯಸುತ್ತಾನೋ ಅವನು ಈ ಲೋಕದಲ್ಲಿ ವಿಧಿ-ನಿಷೇಧಗಳನ್ನು ಅನುಸರಿಸಬೇಕು. ಯಾವನು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವನ್ನು ಅನುಭವಿಸಲು ಬಯಸುತ್ತಾನೋ ಅವನು ವಿಧಿ-ನಿಷೇಧಗಳ ಜೊತೆ ತ್ಯಾಗಿಯಾಗಿ, ಉದಾರಿಯಾಗಿ ಬದುಕಬೇಕು. ಯಾವನು ಈ ಲೋಕದ ವಿಧಿ-ನಿಷೇಧಗಳನ್ನೂ ಉಲ್ಲಂಘಿಸುತ್ತಾನೋ, ಪರಲೋಕದ ಚಿಂತೆಯೂ ಇರುವುದಿಲ್ಲವೋ ಅವನು ಉಭಯತ್ರ ದುಃಖಭಾಗಿಯಾಗುತ್ತಾನೆ.
ಧನಾನಿ ಯೇಷಾಂ ವಿಪುಲಾನಿ ಸಂತಿ
ನಿತ್ಯಂ ರಮಂತೇ ಪರಲೋಕಮೂಢಾಃ |
ತೇಷಾಮಯಂ ಶತ್ರುವರಘ್ನಲೋಕೋ
ನಾನ್ಯತ್ ಸುಖಂ ದೇಹಸುಖೇ ರತಾನಾಮ್ ||33||
ಯುಧಿಷ್ಠಿರನೇ, ಯಾರು ವಿಪುಲವಾದ ಹಣವನ್ನು ಹೊಂದಿ ಪರಲೋಕದ ವಿಷಯದಲ್ಲಿ ಮೂರ್ಖರಾಗಿ ಸದಾ ಇಹಲೋಕದ ಸುಖದಲ್ಲೇ ಆಸಕ್ತರಾಗಿರುತ್ತಾರೋ ಅಂತಹ ದೈಹಿಕ ಸುಖದಲ್ಲಿಯೇ ಆಸಕ್ತರಾಗಿರುವವರಿಗೆ ಇಹಲೋಕದ ಸುಖವು ದೊರೆಯಬಹುದು, ಆದರೆ ಪರಲೋಕದ ಸುಖವು ದುರ್ಲಭವಾಗುತ್ತದೆ.
ಯೇ ಯೋಗಯುಕ್ತಾಸ್ತಪಸಿ ಪ್ರಯುಕ್ತಾಃ
ಸ್ವಾಧ್ಯಾಯಶೀಲಾ ಜರಯಂತಿ ದೇಹಮ್ |
ಜಿತೇಂದ್ರಿಯಾ ಭೂತಹಿತೇ ನಿವಿಷ್ಟಾಃ
ತೇಷಾಮಸೌ ನಾಮ ರಿಪುಘ್ನಲೋಕಃ ||34||
ಯಾರು ಯೋಗನಿಷ್ಠರಾಗಿ, ತಪಸ್ಸಿನಲ್ಲಿ ನಿರತರಾಗಿರುತ್ತಾರೋ, ಅಧ್ಯಯನಶೀಲರಾಗಿ ದೇಹವನ್ನು ತೇಯ್ಯುತ್ತಾರೋ, ಜಿತೇಂದ್ರಿಯರಾಗಿರುತ್ತಾರೋ, ಪ್ರಾಣಿಗಳ ಹಿತದಲ್ಲಿ ಆಸಕ್ತರಾಗಿರುತ್ತಾರೋ ಅಂತಹವರು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾರೆ.
ಯೇ ಧರ್ಮಮೇವ ಪ್ರಥಮಂ ಚರಂತಿ
ಧರ್ಮೇಣ ಲಬ್ಧ್ವಾಽಪಿ ಧನಾನಿ ಲೋಕೇ |
ದಾರಾನವಾಪ್ಯ ಕ್ರತುಭಿರ್ಯಜಂತೇ
ತೇಷಾಮಯಂ ಚೈವ ಪರಶ್ಚ ಲೋಕಃ ||35||
ಯಾರು ಧರ್ಮದಿಂದ ಹಣವನ್ನು ಸಂಪಾದಿಸಿ, ಮೊದಲು ಧರ್ಮವನ್ನೇ ಆಚರಿಸುತ್ತಾರೋ, ವಿವಾಹಿತರಾಗಿ ಯಜ್ಞಗಳ ಮೂಲಕ ಭಗವಂತನನ್ನು ಆರಾಧಿಸುತ್ತಾರೋ ಅವರಿಗೆ ಇಹ-ಪರಲೋಕದಲ್ಲಿ ಸುಖವಿದೆ.
ಯೇ ನೈವ ವಿದ್ಯಾಂ ನ ತಪೋ ನ ದಾನಂ
ನ ಚಾಪಿ ಮೂಢಾಃ ಪ್ರಜನೇ ಯತಂತೇ |
ನ ಚಾಪಿ ಗಚ್ಛಂತಿ ಸುಖಾನಿ ಭೋಗಾಃ
ತೇಷಾಮಯಂ ಚೈವ ಪರಶ್ಚ ನಾಸ್ತಿ ||36||

ಯಾವ ಮೂರ್ಖರು ವಿದ್ಯೆಯಿಲ್ಲದೆ, ತಪಸ್ಸಿಲ್ಲದೆ, ದಾನವಿಲ್ಲದೆ, ಶಾಸ್ತ್ರೀಯ ಪದ್ಧತಿಯಲ್ಲಿ ಸಂತಾನ ಪಡೆಯದೆ, ಬೇರೆ ಸುಖೋಪಭೋಗಗಳನ್ನು ಅನುಭವಿಸುವುದಿಲ್ಲವೋ ಅವರಿಗೆ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವು ದೊರೆಯುವುದಿಲ್ಲ.
ಯುಧಿಷ್ಠಿರಃ
ನಾರಾಯಣ ಪುರಾಣೇಶ ಲೋಕಾವಾಸ ನಮೋಽಸ್ತು ತೇ |
ಶ್ರೋತುಮಿಚ್ಛಾಮಿ ಕಾರ್ತ್ಸ್ನ್ಯೇನ ಧರ್ಮಸಾರಸಮುಚ್ಚಯಮ್ ॥37॥
ಯುಧಿಷ್ಠಿರ ನಾರಾಯಣನೇ, ಪುರಾಣಪುರುಷೋತ್ತಮನೇ, ಜಗದಂತರ್ಯಾಮಿಯೇ, ಶ್ರೀಕೃಷ್ಣನೇ ನಿನಗೆ ನಮಸ್ಕಾರ. ಸಮಸ್ತ ಧರ್ಮಗಳ ಸಾರವನ್ನು ಸಮಗ್ರವಾಗಿ ಕೇಳಲು ಬಯಸುತ್ತೇನೆ.
ಶ್ರೀಭಗವಾನ್
ಧರ್ಮಸಾರಂ ಮಹಾಪ್ರಾಜ್ಞ ಮನುನಾ ಪ್ರೋಕ್ತಮಾದಿತಃ |
ಪ್ರವಕ್ಷ್ಯಾಮಿ ಮನುಪ್ರೋಕ್ತಂ ಪೌರಾಣಂ ಶ್ರುತಿಸಂಹಿತಮ್ ॥38॥
ಶ್ರೀಭಗವಾನ್ ಮಹಾಪ್ರಾಜ್ಞನೇ, ಮನುವು ಸೃಷ್ಟಿಯ ಪ್ರಾರಂಭದಲ್ಲಿ ಹೇಳಿದ ಧರ್ಮಸಾರವನ್ನು ಮೊದಲಿನಿಂದಲೂ ಹೇಳುತ್ತೇನೆ. ಇದು ತುಂಬಾ ಪ್ರಾಚೀನವಾದುದು, ವೇದಸಮ್ಮತವಾದುದು.
ಅಗ್ನಿಚಿತ್ ಕಪಿಲಾ ಸತ್ರೀ ರಾಜಾ ಭಿಕ್ಷುರ್ಮಹೋದಧಿಃ |
ದೃಷ್ಟಮಾತ್ರಾಃ ಪುನಂತ್ಯೇತೇ ತಸ್ಮಾತ್ ಪಶ್ಯೇತ ತಾನ್ ಸದಾ ॥39॥
ಅಗ್ನಿಹೋತ್ರವನ್ನು ಮಾಡುವ ಬ್ರಾಹ್ಮಣನು, ಕಪಿಲಾಧೇನು, ಸತ್ರಯಜ್ಞ ಮಾಡುವವನು, ರಾಜನು, ಸಂನ್ಯಾಸಿ, ಮಹಾಸಾಗರ- ಇವು ದರ್ಶನ ಮಾಡುವುದರಿಂದಲೇ ನಮ್ಮನ್ನು ಪವಿತ್ರಗೊಳಿಸುತ್ತವೆ. ಆದ್ದರಿಂದ ಇವುಗಳ ದರ್ಶನ ಮಾಡುತ್ತಿರಬೇಕು.
ಗೌರೇಕಸ್ಯೈವ ದಾತವ್ಯಾ ನ ಬಹೂನಾಂ ಯುಧಿಷ್ಠಿರ |
ಸಾ ಗೌರ್ವಿಕ್ರಯಮಾಪನ್ನಾ ದಹತ್ಯಾಸಪ್ತಮಂ ಕುಲಮ್ ॥40॥
ಒಂದು ಹಸುವನ್ನು ಒಬ್ಬನಿಗೇ ದಾನ ಮಾಡಬೇಕು. ಒಂದೇ ಹಸುವನ್ನು ಹತ್ತು ಜನರಿಗೆ ದಾನ ಮಾಡಬಾರದು. ದಾನ ಮಾಡಿದ ಹಸುವನ್ನೇ ಹಣ ಕೊಟ್ಟುಕೊಂಡಲ್ಲಿ ಅವನ ಏಳು ತಲೆಯು ಭಸ್ಮವಾಗುತ್ತದೆ.
ಬಹೂನಾಂ ನ ಪ್ರದಾತವ್ಯಾ ಗೌರ್ವಸ್ತ್ರಂ ಶಯನಂ ಸ್ತ್ರಿಯಃ |
ತಾದೃಗ್ಭೂತಂ ತು ತದ್ದಾನಂ ದಾತಾರಂ ನೋಪತಿಷ್ಠತಿ ॥41॥
ಗೋವನ್ನು, ವಸ್ತ್ರವನ್ನು, ಹಾಸಿಗೆಯನ್ನು, ಸ್ತ್ರೀಯರನ್ನು ಬಹುಮಂದಿಗೆ ದಾನ ಮಾಡಬಾರದು. ಹೀಗೆ ಮಾಡಿದರೆ ದಾನದ ಫಲವು ದಾತೃವಿಗೆ ಲಭಿಸುವುದಿಲ್ಲ.
ಆಕ್ರಮ್ಯ ಬ್ರಾಹ್ಮಣೈರ್ಭುಕ್ತಮ್ ಅನಾರ್ಯಾಣಾಂ ತು ವೇಶ್ಮನಿ |
ಗೋಭಿಶ್ಚ ಪುಣ್ಯಂ ತತ್ ತೇಷಾಂ ರಾಜಸೂಯಾದ್ ವಿಶಿಷ್ಯತೇ ॥42॥
ಯಾವ ರಾಜನು ನೀಚರ, ಕಳ್ಳರ ಮನೆಯಲ್ಲಿ ಇರುವ ಅಮೂಲ್ಯವಾದ ವಸ್ತುವನ್ನು ರಾಜಶಾಸನದ ಮೂಲಕ ತೆಗೆದುಕೊಂಡು ಬಂದು, ಅಂತಹ ವಸ್ತುವನ್ನು ಬ್ರಾಹ್ಮಣರಿಗಾಗಲೀ, ಗೋನಿಮಿತ್ತವಾಗಲೀ ದಾನ ಮಾಡಿದಾಗ ಆ ರಾಜನಿಗೆ ರಾಜಸೂಯ ಯಾಗಕ್ಕಿಂತಲೂ ಅಧಿಕ ಫಲವು ಲಭಿಸುತ್ತದೆ. ದುಷ್ಟರನ್ನು ನಿಗ್ರಹಿಸಿ ತಂದಿರುವ ಧನವು ಅಗ್ನಿಮುಖದಲ್ಲಿ ಹೋಮಿಸಿದಾಗ ಫಲ ಕೊಡುವಂತೆ ಗೋಬ್ರಾಹ್ಮಣರ ಮುಖದಲ್ಲಿ ನೀಡಿರುವುದರಿಂದ ರಾಜಸೂಯಕ್ಕಿಂತ ಶ್ರೇಷ್ಠವಾಗುತ್ತದೆ ಎಂದು ಅಭಿಪ್ರಾಯ.
ಮಾ ದದಾತ್ವಿತಿ ಯೋ ಬ್ರೂಯಾದ್ ಗೋಷು ಚ ಬ್ರಾಹ್ಮಣೇಷು ಚ |
ತಿರ್ಯಗ್ಯೋನಿಶತಂ ಗತ್ವಾ ಚಾಂಡಾಲೇಷೂಪಜಾಯತೇ ॥43॥
ಬ್ರಾಹ್ಮಣನಿಗಾಗಲಿ, ಗೋವಿಗಾಗಲಿ ಆಹಾರವನ್ನು ಕೊಡುವಾಗ ಮಾ ದದಾತು (ಕೊಡಕೂಡದು) ಎಂದು ಯಾವನು ತಡೆ ಮಾಡುತ್ತಾನೋ ಅವನು ನೂರು ಬಾರಿ ಪಶು-ಪಕ್ಷಿಗಳ ಯೋನಿಗಳಲ್ಲಿ ಹುಟ್ಟಿ, ಅನಂತರ ಮನುಷ್ಯಲೋಕದಲ್ಲಿ ಚಂಡಾಲನಾಗಿ ಜನ್ಮ ತಾಳುತ್ತಾನೆ.
ಬ್ರಾಹ್ಮಣಸ್ವಂ ತು ದೇವಸ್ವಂ ದರಿದ್ರಸ್ಯ ಚ ಯದ್ಧನಮ್ |
ಗುರೋಶ್ಚಾಪಿ ಹೃತಂ ರಾಜನ್ ಸ್ವರ್ಗಸ್ಥಮಪಿ ಪಾತಯೇತ್ ॥44॥
ಬ್ರಾಹ್ಮಣರ, ದೇವರ, ದರಿದ್ರನ, ಗುರುವಿನ ಧನವನ್ನು ಅಪಹರಿಸಿದರೆ ಅವರು ಸ್ವರ್ಗವನ್ನು ಪಡೆಯಲು ಸಾಧಕವಾದ ಇತರ ಕರ್ಮಗಳನ್ನು ಮಾಡಿದರೂ ದೇವತೆಗಳೇ ಆಗಿದ್ದರೂ ಅಧಃಪತನವನ್ನು ಹೊಂದುತ್ತಾರೆ.
ಧರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ |
ದ್ವಿತೀಯಂ ಧರ್ಮಶಾಸ್ತ್ರಾಣಿ ತೃತೀಯಂ ಲೋಕಸಂಗ್ರಹಃ ॥45॥
ಧರ್ಮತತ್ವವನ್ನು ತಿಳಿಯಬಯಸುವವರಿಗೆ ವೇದವೇ ಮುಖ್ಯವಾದ ಶ್ರೇಷ್ಠವಾದ ಪ್ರಮಾಣವು. ಧರ್ಮಶಾಸ್ತ್ರಗಳು ಎರಡನೆಯ ಪ್ರಮಾಣ. ಲೋಕಾಚಾರವು ಮೂರನೆಯ ಪ್ರಮಾಣ.
ಆಸಮುದ್ರಾಚ್ಚ ಯತ್ಪೂರ್ವಾದ್ ಆಸಮುದ್ರಾಚ್ಚ ಪಶ್ಚಿಮಾತ್ |
ಹಿಮವದ್ ವಿಂಧ್ಯಯೋರ್ಮಧ್ಯಮಾರ್ಯಾವರ್ತಂ ಪ್ರಚಕ್ಷತೇ ॥46॥
ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದ ತನಕ ಮಧ್ಯ ಇರುವ, ಹಿಮಾಲಯದಿಂದ ವಿಂಧ್ಯಪರ್ವತದವರೆಗೆ ಇರುವ ಭೂಭಾಗವನ್ನು ಆರ್ಯಾವರ್ತ ಎನ್ನುತ್ತಾರೆ.
ಸರಸ್ವತೀದೃಷದ್ವತ್ಯೋಃ ದೇವನದ್ಯೋರ್ಯದಂತರಮ್ |
ತದ್ದೇವನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥47॥

ದೇವನದಿ ಎನಿಸಿದ ಸರಸ್ವತಿ ಮತ್ತು ದೃಷದ್ವತಿ ನದಿಗಳಿಗೆ ಮಧ್ಯದಲ್ಲಿರುವ, ದೇವತೆಗಳಿಂದ ನಿರ್ಮಿತವಾಗಿರುವ ದೇಶವನ್ನು ಬ್ರಹ್ಮಾವರ್ತ ಎಂದು ಕರೆಯುತ್ತಾರೆ.
ಯಸ್ಮಿನ್ ದೇಶೇ ಯ ಆಚಾರಃ ಪಾರಂಪರ್ಯಕ್ರಮಾಗತಃ |
ವರ್ಣಾನಾಂ ಸಾಂತರಾಲಾನಾಂ ಸ ಸದಾಚಾರ ಉಚ್ಯತೇ ॥48॥
ಯಾವ ದೇಶದಲ್ಲಿ ನಾಲ್ಕು ವರ್ಣಗಳ ಮತ್ತು ಅವುಗಳಲ್ಲಿರುವ ಅವಾಂತರ ಭೇದಗಳ ಆಚಾರ, ವ್ಯವಹಾರಗಳು ಪರಂಪರೆಯಿಂದ ನಡೆದುಕೊಂಡು ಬಂದಿವೆಯೋ ಅವೇ ಆಚಾರವನ್ನು ಸದಾಚಾರವೆನ್ನುತ್ತಾರೆ.
ಕುರುಕ್ಷೇತ್ರಂ ಚ ಮತ್ಸ್ಯಾಶ್ಚ ಪಾಂಚಾಲಾಃ ಶೂರಸೇನಯಃ |
ಏತೇ ಬ್ರಹ್ಮರ್ಷಿದೇಶಾಸ್ತು ಬ್ರಹ್ಮಾವರ್ತಾದನಂತರಾಃ ॥49॥
ಕುರುಕ್ಷೇತ್ರ, ಮತ್ಸ್ಯದೇಶ, ಪಾಂಚಾಲ ದೇಶ, ಶೂರಸೇನ ದೇಶ- ಇವುಗಳು ಬ್ರಹ್ಮರ್ಷಿಗಳ ದೇಶವಾಗಿದ್ದು ಬ್ರಹ್ಮಾವರ್ತದ ಸಮೀಪದಲ್ಲಿರುತ್ತವೆ.
ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ |
ಸ್ವಂ ಚಾರಿತ್ರಂ ಚ ಗೃಹ್ಣೀಯುಃ ಪೃಥಿವ್ಯಾಂ ಸರ್ವಮಾನವಾಃ ॥50॥
ಈ ಪ್ರದೇಶದಲ್ಲಿ ಇರುವ ಬ್ರಾಹ್ಮಣರ ಬಳಿಗೆ ಭೂಮಂಡಲದಲ್ಲಿರುವ ಸಮಸ್ತ ಮಾನವರು ಹೋಗಿ, ತಮ್ಮ ತಮ್ಮ ಆಚಾರ-ವಿಚಾರಗಳ ಬಗ್ಗೆ ಉಪದೇಶವನ್ನು ಪಡೆದುಕೊಳ್ಳಬೇಕು.
ಹಿಮವದ್ ವಿಂಧ್ಯಯೋರ್ಮಧ್ಯಂ ಯತ್ ಪ್ರಾಗ್ ವಿನಶನಾದಪಿ |
ಪ್ರತ್ಯಗೇವ ಪ್ರಯಾಗಾತ್ ತು ಮಧ್ಯದೇಶಃ ಪ್ರಕೀರ್ತಿತಃ ॥51॥
ಹಿಮವದ್ ಪರ್ವತಕ್ಕೂ, ವಿಂಧ್ಯಪರ್ವತಕ್ಕೂ ಮಧ್ಯದಲ್ಲಿ, ಕುರುಕ್ಷೇತ್ರದಿಂದ ಪೂರ್ವಕ್ಕೂ ಪ್ರಯಾಗದಿಂದ ಪಶ್ಚಿಮಕ್ಕೂ ಇರುವ ಭೂಭಾಗವನ್ನು ಮಧ್ಯದೇಶವೆಂದು ಕರೆಯುತ್ತಾರೆ.
ಕೃಷ್ಣಸಾರಸ್ತು ಚರತಿ ಮೃಗೋ ಯತ್ರ ಸ್ವಭಾವತಃ |
ಸ ಜ್ಞೇಯೋ ಯಾಜ್ಞಯೋ ದೇಶೋ ಮ್ಲೇಚ್ಛದೇಶಸ್ತತಃ ಪರಃ ॥52॥
ಯಾವ ಪ್ರದೇಶದಲ್ಲಿ ಕೃಷ್ಣಸಾರವೆಂಬ ಜಿಂಕೆಯು ಸಹಜವಾಗಿ ಸಂಚರಿಸುತ್ತದೆಯೋ ಆ ಪ್ರದೇಶವು ಯಜ್ಞ ಮಾಡುವವರಿಗೆ ಯೋಗ್ಯಪ್ರದೇಶ ಎನಿಸುತ್ತದೆ. ಈ ಪ್ರದೇಶದಿಂದ ಮುಂದಿನ ಪ್ರದೇಶವು ಮ್ಲೇಚ್ಛದೇಶವೆನಿಸಿದೆ.
ಏತಾನ್ ವಿಜ್ಞಾಯ ದೇಶಾಂಸ್ತು ಸಂಶ್ರಯೇಯುರ್ದ್ವಿಜಾತಯಃ |
ಶೂದ್ರಸ್ತು ಯಸ್ಮಿನ್ ಕಸ್ಮಿನ್ ವಾ ನಿವಸೇದ್ ವೃತ್ತಿಕರ್ಶಿತಃ ॥53॥
ಭೂಮಂಡದಲ್ಲಿ ಇರುವ ಈ ದೇಶಗಳನ್ನು ಸರಿಯಾಗಿ ಅರ್ಥೈಸಿಕೊಂಡು ಬ್ರಾಹ್ಮಣರು ವಾಸ ಮಾಡಬೇಕು. ವೃತ್ತಿಯನ್ನು ಅವಲಂಬಿಸಿಕೊಂಡು ಬದುಕುವ ಶೂದ್ರನು ಯಾವ ದೇಶದಲ್ಲಿಯಾದರೂ ವಾಸ ಮಾಡಬಹುದು.
ಆಚಾರಃ ಪ್ರಥಮೋ ಧರ್ಮೋ ಹ್ಯಹಿಂಸಾ ಸತ್ಯಮೇವ ಚ |
ದಾನಂ ಚೈವ ಯಥಾಶಕ್ತಿ ಯಮಾಶ್ಚ ನಿಯಮೈಃ ಸಹ ॥54॥
ಸದಾಚಾರವು ಮೊದಲನೆಯ ಧರ್ಮವೆನಿಸಿದೆ. ಅಹಿಂಸಾ, ಸತ್ಯ, ಯಥಾಶಕ್ತಿ ದಾನ, ನಿಯಮಗಳು ಮುಖ್ಯಧರ್ಮಗಳಾಗಿವೆ.
ವೈದಿಕೈಃ ಕರ್ಮಭಿಃ ಪುಣ್ಯೈರ್ನಿಷೇಕಾದಿರ್ದ್ವಿಜನ್ಮನಾಮ್ |
ಕಾರ್ಯಃ ಶರೀರಸಂಸ್ಕಾರಃ ಪಾವನಃ ಪ್ರೇತ್ಯ ಚೇಹ ಚ ॥55॥
ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಗರ್ಭಾದಾನದಿಂದ ಹಿಡಿದು ಅಂತ್ಯೇಷ್ಟಿಯ ತನಕ ಸಮಸ್ತ ಸಂಸ್ಕಾರಗಳನ್ನು ವೇದವಿಧಿಗಳಿಂದ ಅನುಷ್ಠಾನ ಮಾಡಬೇಕು. ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ವೇದವಿಹಿತ ಶಾರೀರಿಕ ಸಂಸ್ಕಾರವು ಮನುಷ್ಯನನ್ನು ಪಾವನಗೊಳಿಸುತ್ತದೆ.
ಗರ್ಭಹೋಮೈರ್ಜಾತಕರ್ಮನಾಮಚೌಲೋಪನಾಯನೈಃ |
ಸ್ವಾಧ್ಯಾಯೈಸ್ತದ್ ವ್ರತೈಶ್ಚೈವ ವಿವಾಹಸ್ನಾತಕವ್ರತೈಃ ॥56॥
ಗರ್ಭದಲ್ಲಿರುವಾಗ ಮಾಡುವ ಪುಂಸವನ, ಸೀಮಂತ ಹೋಮಗಳು, ಜಾತಕರ್ಮ, ನಾಮಕರಣ, ಚೂಡಾಕರ್ಮ, ಉಪನಯನ, ವೇದಾಧ್ಯಯನ, ವೇದಮಂತ್ರಗಳು, ಸ್ನಾತಕ ವ್ರತ, ವಿವಾಹ.
ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ ॥57॥
ಪಂಚಮಹಾಯಜ್ಞಗಳ ಅನುಷ್ಠಾನ ಮತ್ತು ಇತರ ಯಜ್ಞಗಳ ಅನುಷ್ಠಾನ. ಈ ಸಂಸ್ಕಾರಗಳಿಂದ ಶರೀರವು ಪರಬ್ರಹ್ಮನನ್ನು ಹೊಂದಲು ಅರ್ಹತೆಯನ್ನು ಪಡೆಯುತ್ತದೆ.
ಧರ್ಮಾರ್ಥೌ ಯದಿ ನ ಸ್ಯಾತಾಂ ಶುಶ್ರೂಷಾ ವಾಽಪಿ ತದ್ವಿಧಾ |
ವಿದ್ಯಾ ತಸ್ಮಿನ್ ನ ವಪ್ತವ್ಯಾ ಶುಭಂ ಬೀಜಮಿವೋಷರೇ ॥58॥
ಯಾವ ವ್ಯಕ್ತಿಯು ಧರ್ಮಾರ್ಥಗಳನ್ನು ಸಾಧಿಸಿಕೊಡುವ ಕರ್ಮಗಳನ್ನು ಆಚರಿಸುವುದಿಲ್ಲವೋ, ವಿದ್ಯೆಯನ್ನು ಹೊಂದಲು ಗುರುಶುಶ್ರೂಷೆಯನ್ನು ಮಾಡುವುದಿಲ್ಲವೋ ಅಂತಹ ವ್ಯಕ್ತಿಗೆ ವಿದ್ಯೆಯನ್ನು ನೀಡಬಾರದು. ಒಂದು ವೇಳೆ ನೀಡಿದರೆ ಬೀಜವನ್ನು ಬಂಜರು ಭೂಮಿಯಲ್ಲಿ ಬಿತ್ತಿದಂತಾಗುತ್ತದೆ.
ಲೌಕಿಕಂ ವೈದಿಕಂ ವಾಽಪಿ ತಥಾಽಽಧ್ಯಾತ್ಮಿಕಮೇವ ವಾ |
ಯಸ್ಮಾಜ್ಜ್ಞಾನಮಿದಂ ಪ್ರಾಪ್ತಂ ತಂ ಪೂರ್ವಮಭಿವಾದಯೇತ್ ॥59॥
ಲೌಕಿಕವಿದ್ಯೆಯೇ ಆಗಿರಲಿ, ಅಲೌಕಿಕ ವಿದ್ಯೆಯೇ ಆಗಿರಲಿ, ಆಧ್ಯಾತ್ಮಿಕ ವಿದ್ಯೆಯೇ ಆಗಿರಲಿ, ಆ ವಿದ್ಯೆಯು ಯಾವ ಗುರುವಿನಿಂದ ಪ್ರಾಪ್ತವಾಯಿತೋ ಆ ಗುರುವನ್ನು ಮೊದಲು ನಮಸ್ಕರಿಸಬೇಕು.

ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ತು ದಕ್ಷಿಣಃ |
ನ ಕುರ್ಯಾದೇಕಹಸ್ತೇನ ಗುರೋಃ ಪಾದಾಭಿವಾದನಮ್ ॥60॥
ತನ್ನ ಎಡಗೈಯಿಂದ ಗುರುವಿನ ಎಡಗಾಲನ್ನು, ತನ್ನ ಬಲಗೈಯಿಂದ ಗುರುವಿನ ಬಲಗಾಲನ್ನು ಮುಟ್ಟಿ, ಗುರುವಿನ ಪಾದಗಳಿಗೆ ಅಭಿವಾದನ ಮಾಡಬೇಕು. ಒಂದೇ ಕೈಯಿಂದ ನಮಸ್ಕರಿಸಬಾರದು.
ನಿಷೇಕಾದೀನಿ ಕರ್ಮಾಣಿ ಯಃ ಕರೋತಿ ಯಥಾವಿಧಿ |
ಅಧ್ಯಾಪಯತಿ ಚೈವೈನಂ ಸ ವಿಪ್ರೋ ಗುರುರುಚ್ಯತೇ ॥61॥
ಗರ್ಭಾಧಾರಣೆ ಮೊದಲಾದ ಸಂಸ್ಕಾರಗಳನ್ನು ವಿಧಿವತ್ತಾಗಿ ಅನುಷ್ಠಾನ ಮಾಡಿಸಿದ ವ್ಯಕ್ತಿಯು, ವೇದವನ್ನು ಪಾಠ ಮಾಡುವ ವ್ಯಕ್ತಿಯು, ಬ್ರಾಹ್ಮಣನು ಗುರುವೆಂದು ಹೇಳಲ್ಪಡುತ್ತಾನೆ.
ಕೃತ್ವೋಪನಯನಂ ವೇದಾನ್ ಯೋಽಧ್ಯಾಪಯತಿ ನಿತ್ಯಶಃ |
ಸಕಲ್ಪಾನ್ ಸರಹಸ್ಯಾಂಶ್ಚ ಸ ಚೋಪಾಧ್ಯಾಯ ಉಚ್ಯತೇ ॥62॥
ಉಪನಯನ ಸಂಸ್ಕಾರವನ್ನು ಮಾಡಿಸಿ ಪ್ರತಿದಿನವು ಕಲ್ಪ, ರಹಸ್ಯ ಇವುಗಳಿಂದ ಸಹಿತವಾದ ವೇದವನ್ನು ಯಾರು ಹೇಳಿಕೊಡುತ್ತಾರೋ ಅವನನ್ನು ಉಪಾಧ್ಯಾಯ ಎನ್ನುತ್ತಾರೆ.
ಸಾಂಗಾಂಶ್ಚ ವೇದಾನಧ್ಯಾಪ್ಯ ಶಿಕ್ಷಯಿತ್ವಾ ವ್ರತಾನಿ ಚ |
ವಿವೃಣೋತಿ ಚ ಮಂತ್ರಾರ್ಥಾನ್ ಆಚಾರ್ಯಃ ಸೋಽಭಿಧೀಯತೇ ॥
ಶಿಕ್ಷಾದಿ ಷಡಂಗಸಹಿತವಾದ ವೇದಗಳನ್ನು ಅಧ್ಯಯನ ಮಾಡಿಸಿ, ವೇದವ್ರತಗಳನ್ನೂ ಮಾಡಿಸಿ, ಮಂತ್ರಾರ್ಥಗಳನ್ನು ವಿವರಿಸಿ ಹೇಳುವ ವ್ಯಕ್ತಿಯನ್ನು ಆಚಾರ್ಯ ಎನ್ನುತ್ತಾರೆ.
ಉಪಾಧ್ಯಾಯಾದ್ ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ |
ಪಿತುಃ ಶತಗುಣಂ ಮಾತಾ ಗೌರವೇಣಾತಿರಿಚ್ಯತೇ ॥64॥
ಗೌರವದಲ್ಲಿ ಆಚಾರ್ಯನು ಉಪಾಧ್ಯಾಯನಿಗಿಂತಲೂ ಹತ್ತುಪಟ್ಟು ಶ್ರೇಷ್ಠನು. ತಂದೆಯು ಆಚಾರ್ಯನಿಗಿಂತಲೂ ನೂರು ಪಟ್ಟು ಶ್ರೇಷ್ಠನು. ತಾಯಿಯು ತಂದೆಗಿಂತಲೂ ನೂರು ಪಟ್ಟು ಅಧಿಕಳು.
ತಸ್ಮಾತ್ ತೇಷಾಂ ವಶೇ ತಿಷ್ಠೇತ್ ಶುಶ್ರೂಷಾಪರಮೋ ಭವೇತ್ |
ಅವಮಾನಾದ್ಧಿ ತೇಷಾಂ ತು ನರಕಂ ಸ್ಯಾನ್ನ ಸಂಶಯಃ ॥65॥
ಆದ್ದರಿಂದ ಯಾವಾಗಲೂ ಮನುಷ್ಯನು ಪೂಜ್ಯರಾದ ಗುರುಗಳ ಅಧೀನದಲ್ಲಿರಬೇಕು. ಅವರ ಶುಶ್ರೂಷೆಯಲ್ಲಿ ಆಸಕ್ತನಾಗಿರಬೇಕು. ಅಂತಹ ಗುರುಗಳನ್ನು ಸ್ವಲ್ಪವೇ ಅವಮಾನಿಸಿದರೂ ನರಕವುಂಟಾಗುತ್ತದೆ, ಸಂಶಯವಿಲ್ಲ.
ಹೀನಾಂಗಾನತಿರಿಕ್ತಾಂಗಾನ್ ವಿದ್ಯಾಹೀನಾನ್ ವಯೋಧಿಕಾನ್ |
ರೂಪದ್ರವಿಣಹೀನಾಂಶ್ಚ ನ ವಾಚಾಽಧಿಕ್ಷಿಪೇದ್ ಬುಧಃ ॥66॥
ಅಂಗಹೀನರನ್ನು, ಅಧಿಕಾಂಗರನ್ನು, ಅವಿದ್ಯಾವಂತರನ್ನು, ವಯೋಜ್ಯೇಷ್ಠರನ್ನು, ರೂಪ ಧನಹೀನರನ್ನು, ಜಾತಿ-ಧನಹೀನರನ್ನು ನಿಂದಿಸಬಾರದು.
ಶಪತಾ ಯತ್ಕೃತಂ ಪುಣ್ಯಂ ಶಪ್ಯಮಾನಂ ತು ಗಚ್ಛತಿ |
ಶಪ್ಯಮಾನಸ್ಯ ಯತ್ಪಾಪಂ ಶಪಂತಮನುಗಚ್ಛತಿ ॥67॥
ನಿಂದಿಸುವ ವ್ಯಕ್ತಿಯಲ್ಲಿರುವ ಪುಣ್ಯವು ಯಾರನ್ನು ನಿಂದಿಸುತ್ತೇವೋ ಅವನಿಗೆ ಸೇರುತ್ತದೆ. ನಿಂದಿಸಲ್ಪಡುವವನಲ್ಲಿರುವ ಪಾಪವು ನಿಂದಿಸಲ್ಪಡುವವನಿಗೆ ಸೇರುತ್ತದೆ. ಆದ್ದರಿಂದ ಯಾರನ್ನೂ ನಿಂದಿಸಬಾರದು.
ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಮ್ |
ದ್ವೇಷಂ ಡಂಭಂ ಚ ಮಾನಂ ಚ ಕ್ರೋಧಂ ತೈಕ್ಷ್ಣ್ಯಂ ಚ ವರ್ಜಯೇತ್॥
ನಾಸ್ತಿಕತೆ, ವೇದಗಳ ನಿಂದನೆ, ದೇವತೆಗಳ ದೂಷಣೆ, ದ್ವೇಷ, ಡಂಭ, ದುರಭಿಮಾನ, ಕ್ರೋಧ, ಕಾಠಿಣ್ಯ ಇವುಗಳನ್ನು ಯಾವಾಗಲೂ ತ್ಯಜಿಸಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೊಂದನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನಿಗೆ ಅಗ್ನಿಸೃಷ್ಟಿಯ ಪ್ರಕಾರವನ್ನು ಹೇಳಿದುದು. ಆಹವನೀಯಾದಿ ಅಗ್ನಿಗಳ ವಿಭಾಗವನ್ನು ಹೇಳುವ ಮೂಲಕ ಅವುಗಳ ನಾಮವನ್ನು ಉಚ್ಚಾರಿಸಿದುದು. ಅದರಂತೆ ಯಜ್ಞ-ಅಗ್ನಿಹೋತ್ರಗಳ ಪ್ರಶಂಸೆಯನ್ನು ಮಾಡಿದುದು.
ಯುಧಿಷ್ಠಿರಃ
ಭಗವಂಸ್ತವ ಭಕ್ತಸ್ಯ ಧರ್ಮಾಧರ್ಮಮಜಾನತಃ |
ಧರ್ಮಂ ಪುಣ್ಯತಮಂ ದೇವ ಪೃಚ್ಛತಃ ಕಥಯಸ್ವ ಮೇ ॥1॥
ಯುಧಿಷ್ಠಿರ ದೇವೇಶನೇ, ಧರ್ಮಾಧರ್ಮಗಳನ್ನು ತಿಳಿಯದಿರುವ, ನಿನ್ನ ಭಕ್ತನಾದ ನನಗೆ ಪುಣ್ಯತಮವಾದ ಧರ್ಮ ಯಾವುದೆಂದು ತಿಳಿಸಿಕೊಡು.
ಶ್ರೀಭಗವಾನ್
ಯದೇತದಗ್ನಿಹೋತ್ರಂ ವೈ ಸೃಷ್ಟಂ ವರ್ಣತ್ರಯಸ್ಯ ತು |

ಮಂತ್ರವದ್ ಯದ್ಹುತಂ ಸಮ್ಯಗ್ ವಿಧಿನಾ ಚಾಪ್ಯುಪಾಸಿತಮ್ ॥2॥
ಆಹಿತಾಗ್ನಿಂ ನಯತ್ಯೂರ್ಧ್ವಂ ಸಪತ್ನೀಕಂ ಸಬಾಂಧವಮ್ ॥3॥
ಶ್ರೀಭಗವಾನ್ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಯವರಿಗೆ ಅಗ್ನಿಹೋತ್ರವು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದೆ. ಚೆನ್ನಾಗಿ ಅಗ್ನಿಯನ್ನು ಉಪಾಸನೆ ಮಾಡುತ್ತಾ, ಮಂತ್ರ ಪೂರ್ವಕವಾಗಿ ಹೋಮಿಸಿದರೆ ಅಂತಹ ಪತ್ನಿ-ಬಂಧು ಸಹಿತನಾದ ಆಹಿತಾಗ್ನಿಯನ್ನು ಆ ಯಜ್ಞದ ಫಲವು ಊರ್ಧ್ವಲೋಕಕ್ಕೆ ಕೊಂಡೊಯ್ಯುತ್ತದೆ.
ಯುಧಿಷ್ಠಿರಃ
ಕಥಂ ತದ್ ಬ್ರಾಹ್ಮಣೈರ್ದೇವ ಹೋತವ್ಯಂ ಕ್ಷತ್ರಿಯೈಃ ಕಥಮ್ |
ವೈಶ್ಯೈರ್ವಾ ದೇವದೇವೇಶ ಕಥಂ ವಾ ಸುಹುತಂ ಭವೇತ್ ॥4॥
ಯುಧಿಷ್ಠಿರ ದೇವೇಶನೇ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಜಾತಿಯವರು ಹೇಗೆ ಹೋಮ ಮಾಡಬೇಕು? ಹೇಗೆ ಹೋಮವನ್ನು ಮಾಡಿದರೆ ಶಾಸ್ತ್ರೀಯವಾಗುತ್ತದೆ?
ಕಸ್ಮಿನ್ ಕಾಲೇಽಥವಾ ಕಸ್ಮಿನ್ನಾಧೇಯೋಽಗ್ನಿಃ ಸುರೋತ್ತಮ |
ಆಹಿತಸ್ಯ ಕಥಂ ವಾಽಪಿ ಸಮ್ಯಗಾಚರಣಂ ಭವೇತ್ ॥5॥
ಅಗ್ನಿಯಲ್ಲಿ ಎಷ್ಟು ಪ್ರಭೇದಗಳಿವೆ? ಯಾವ ಕಾಲದಲ್ಲಿ ಯಾವ ಅಗ್ನಿಯನ್ನು ಉಪಾಸನೆ ಮಾಡಬೇಕು? ಆಹಿತಾಗ್ನಿಯ ಸದಾಚಾರವು ಹೇಗಿರಬೇಕು?
ಕತ್ಯಗ್ನಯಃ ಕಿಮಾತ್ಮಾನಃ ಸ್ಥಾನಂ ಕಿಂ ಕಸ್ಯ ವಾ ವಿಭೋ |
ಕತರಸ್ಮಿನ್ ಹುತೇ ಸ್ಥಾನೇ ಕಂ ವ್ರಜೇದಾಗ್ನಿಹೋತ್ರಿಕಃ ॥6॥
ಅಗ್ನಿಯ ಪ್ರಭೇದಗಳೆಷ್ಟು? ಅವುಗಳ ಸ್ವರೂಪವೇನು? ಸ್ಥಾನವೇನು? ಯಾವ ಅಗ್ನಿಯಲ್ಲಿ ಹೋಮಿಸಿದರೆ ಯಾವ ಲೋಕಕ್ಕೆ ಹೋಗುತ್ತಾನೆ?
ಅಗ್ನಿಹೋತ್ರನಿಮಿತ್ತಂ ಚ ಕಿಮುತ್ಪನ್ನಂ ಪುರಾಽನಘ |
ಕಥಮೇವಾಥ ಹೂಯಂತೇ ಪ್ರೀಯಂತೇ ಚ ಸುರಾಃ ಕಥಮ್ ॥7॥
ಹಿಂದೆ ಯಾವ ನಿಮಿತ್ತದಿಂದ ಅಗ್ನಿಹೋತ್ರವು ಪ್ರಾರಂಭವಾಯಿತು? ದೇವತೆಗಳನ್ನು ತೃಪ್ತಿಗೊಳಿಸಲು ಹೇಗೆ ಹೋಮ ಮಾಡಬೇಕು? ಹೇಗೆ ಹೋಮ ಮಾಡಿದಲ್ಲಿ ದೇವತೆಗಳು ತೃಪ್ತರಾಗುತ್ತಾರೆ?
ವಿಧಿವನ್ಮಂತ್ರವದ್ಭಕ್ತ್ಯಾ ಪೂಜಿತಾಸ್ತ್ವಗ್ನಯಃ ಕಥಮ್ |
ಕಾಂ ಗತಿಂ ವದತಾಂಶ್ರೇಷ್ಠ ನಯಂತಿ ಹ್ಯಗ್ನಿಹೋತ್ರಿಣಃ ॥8॥
ಅಗ್ನಿಗಳನ್ನು ವಿಧಿವತ್ತಾಗಿ ಮಂತ್ರಪೂರ್ವಕವಾಗಿ ಪೂಜಿಸಿದರೆ ಆ ಅಗ್ನಿಗಳು ಹೋಮಿಸಿದ ವ್ಯಕ್ತಿಗಳಿಗೆ ಎಂತಹ ಸದ್ಗತಿಯನ್ನು ನೀಡುತ್ತಾರೆ?
ದುರ್ಹುತಾಶ್ಚಾಪಿ ಭಗವನ್ನವಿಜ್ಞಾತಾಸ್ತ್ರಯೋಽಗ್ನಯಃ |
ಕಿಮಾಹಿತಾಗ್ನೇಃ ಕುರ್ವಂತಿ ದುಶ್ಚೀರ್ಣಾ ವಾಽಪಿ ಕೇಶವ ॥9॥
ಮೂರು ಅಗ್ನಿಗಳ ಸ್ವರೂಪವನ್ನು ತಿಳಿಯದೆ, ಆ ಅಗ್ನಿಗಳಲ್ಲಿ ವಿಧಿಯನ್ನು ಅನುಸರಿಸದೆ ಹೋಮಿಸಿದರೆ, ಉಪಾಸಿಸಿದರೆ, ತಪ್ಪಾಗಿ ಮಾಡಿದರೆ ಅವರು ಹೊಂದುವ ಕೆಟ್ಟ ಫಲಗಳಾದರೂ ಏನು?
ಉತ್ಸನ್ನಾಗ್ನಿಸ್ತು ಪಾಪಾತ್ಮಾ ಕಾಂ ಯೋನಿಂ ದೇವ ಗಚ್ಛತಿ ॥10॥
ಅಗ್ನಿಯನ್ನು ಪರಿತ್ಯಾಗ ಮಾಡಿರುವ ಪಾಪಾತ್ಮನು ಮುಂದೆ ಯಾವ ಯೋನಿಗಳಲ್ಲಿ ಜನ್ಮ ತಾಳುತ್ತಾನೆ?
ಏತತ್ಸರ್ವಂ ಸಮಾಸೇನ ಭಕ್ತ್ಯಾ ಹ್ಯುಪಗತಸ್ಯ ಮೇ |
ವಕ್ತುಮರ್ಹಸಿ ಸರ್ವಜ್ಞ ಸರ್ವಾತ್ಮಕ ನಮೋಽಸ್ತು ತೇ ॥11॥
ಸರ್ವಾಂತರ್ಯಾಮಿಯೇ, ಸರ್ವಜ್ಞನೇ, ನಿನಗೆ ನಮಸ್ಕಾರ. ಭಕ್ತಿ-ಭಾವದಿಂದ ನಿನ್ನ ಬಳಿ ಬಂದು ಪ್ರಶ್ನಿಸುತ್ತಿರುವ ನನಗೆ ಈ ಎಲ್ಲ ವಿಷಯಗಳನ್ನು ಸಂಕ್ಷಿಪ್ತವಾಗಿ ಹೇಳು.
ಶ್ರೀಭಗವಾನ್
ಶೃಣು ರಾಜನ್ ಮಹಾಪುಣ್ಯಮಿದಂ ಧರ್ಮಾಮೃತಂ ಪರಮ್ |
ಯತ್ತು ತಾರಯತೇ ಯುಕ್ತಾನ್ ಬ್ರಾಹ್ಮಣಾನಗ್ನಿಹೋತ್ರಿಣಃ ॥12॥
ಶ್ರೀಭಗವಾನ್ ಮಹಾರಾಜನೇ, ಮಹಾಪುಣ್ಯಪ್ರದವಾದ ಧರ್ಮಾಮೃತವನ್ನು ಕೇಳಿಸಿಕೊ. ಅಗ್ನಿಹೋತ್ರವು ಧರ್ಮಪರಾಯಣರಾದ ಅಗ್ನಿಹೋತ್ರಿಗಳಾದ ಬ್ರಾಹ್ಮಣರನ್ನು ಕಷ್ಟದಿಂದ ಪಾರು ಮಾಡುತ್ತದೆ.
ಬ್ರಹ್ಮತ್ವೇನಾಸೃಜಂ ಲೋಕಾನ್ ಅಹಮಾದೌ ಮಹಾದ್ಯುತೇ |
ಸೃಷ್ಟ್ವೋಽಗ್ನಿರ್ಮುಖತಃ ಪೂರ್ವಂ ಲೋಕಾನಾಂ ಹಿತಕಾಮ್ಯಯಾ ॥13॥
ಮಹಾದ್ಯುತಿಮಂತನೇ, ಸೃಷ್ಟಿಯ ಆರಂಭದಲ್ಲಿ ನಾನೇ ಪರಬ್ರಹ್ಮವೆಂಬ ಮೂಲರೂಪದಿಂದ ಸಮಸ್ತ ಲೋಕಗಳನ್ನು ಸೃಷ್ಟಿಸಿದ್ದೇನೆ. ಲೋಕದ ಜನರಿಗೆ ಹಿತವನ್ನು ಮಾಡುವ ದೃಷ್ಟಿಯಿಂದ ಎಲ್ಲ ಸೃಷ್ಟಿಗಳಿಗಿಂತಲೂ ಮೊದಲೂ ಅಗ್ನಿಯನ್ನೇ ನನ್ನ ಮುಖದಿಂದ ಸೃಷ್ಟಿಸಿದೆನು.
ಯಸ್ಮಾದಗ್ರೇ ಸ ಭೂತಾನಾಂ ಸರ್ವೇಷಾಂ ನಿರ್ಮಿತೋ ಮಯಾ |
ತಸ್ಮಾದಗ್ನಿರಿತ್ಯಭಿಹಿತಃ ಪುರಾಣಜ್ಞೈರ್ಮಹರ್ಷಿಭಿಃ ॥14॥
ಯಾವ ಕಾರಣದಿಂದ ಸಮಸ್ತ ಪ್ರಾಣಿಗಳಿಗೂ ಉಪಕಾರವನ್ನು ಮಾಡುವ ಅಗ್ನಿಯನ್ನು ಆರಂಭದಲ್ಲೇ ಸೃಷ್ಟಿ ಮಾಡಿದೆನೋ ಆದ್ದರಿಂದ ಪುರಾಣವನ್ನು ತಿಳಿದ ವಿದ್ವಾಂಸರು ಅಗ್ನಿ ಎಂದು ಕರೆದರು.

ಯಸ್ಮಾತ್ತು ಸರ್ವಕೃತ್ಯೇಷು ಪೂರ್ವಮಸ್ಮೈ ಪ್ರದೀಯತೇ |
ಆಹುತಿರ್ದೀಪ್ಯಮಾನಾಯ ತಸ್ಮಾದಗ್ನೀತಿ ಕಥ್ಯತೇ ||15||
ಸಮಸ್ತ ಕರ್ಮಗಳಲ್ಲಿಯೂ ಎಲ್ಲರಿಗಿಂತ ಮೊದಲು ಪ್ರಜ್ವಲಿತವಾದ ಅಗ್ನಿಯಲ್ಲಿಯೇ ಆಹುತಿಯನ್ನು ನೀಡಬೇಕು. ಎಲ್ಲರಿಗಿಂತ ಮೊದಲು ಆಹುತಿಯನ್ನು ಸ್ವೀಕರಿಸುವುದರಿಂದ ಅವನನ್ನು ಅಗ್ನಿ ಎಂದು ಕರೆಯುತ್ತಾರೆ.
ಯಸ್ಮಾಚ್ಚ ನಯತಿ ಹ್ಯಗ್ರ್ಯಾಂ ಗತಿಂ ವಿಪ್ರಾನ್ ಸುಪೂಜಿತಃ |
ಯಸ್ಮಾಚ್ಚ ನಯನಾದ್ ರಾಜನ್ ದೇವೇಷ್ವಗ್ನೀತಿ ಕೀರ್ತ್ಯತೇ ||16||
ಸರಿಯಾಗಿ ಪೂಜಿಸಿದರೆ ಬ್ರಾಹ್ಮಣರನ್ನು ಅಗ್ರಗತಿಗೆ, ಪರಮಪದವಿಗೆ ಕೊಂಡೊಯ್ಯುತ್ತಾನಾದ್ದರಿಂದ ದೇವತೆಗಳು ಅವನನ್ನು ಅಗ್ನಿ ಎನ್ನುತ್ತಾರೆ.
ಯಸ್ಮಾಚ್ಚ ದುರ್ಹುತಃ ಸೋಽಯಮಲಂ ಭಕ್ಷಯಿತುಂ ಕ್ಷಣಾತ್ |
ಯಜಮಾನಂ ನರಶ್ರೇಷ್ಠ ಕ್ರವ್ಯಾದೋಽಗ್ನಿಸ್ತತಃ ಸ್ಮೃತಃ ||17||
ವಿಧಿಯನ್ನು ಉಲ್ಲಂಘಿಸಿ ಹೋಮ ಮಾಡುವ ಯಜಮಾನನನ್ನು ಕ್ಷಣಮಾತ್ರದಲ್ಲಿ ಭಕ್ಷಿಸಲು ಸಮರ್ಥನಾಗಿರುವುದರಿಂದ ಅವನನ್ನು ಕ್ರವ್ಯಾದ ಎಂದು ಕರೆಯುತ್ತಾರೆ.
ಸರ್ವಭೂತಾತ್ಮಕೋ ರಾಜನ್ ದೇವಾನಾಮೇಷ ವೈ ಮುಖಮ್ |
ಪ್ರಥಮಂ ಮನ್ಮುಖಾತ್ ಸೃಷ್ಟೋ ಲೋಕಾರ್ಥೇ ಪಚನಪ್ರಭುಃ ||18||
ಸಮಸ್ತ ಪ್ರಾಣಿಗಳ ಆತ್ಮಸ್ವರೂಪನಾಗಿರುವ ಅಗ್ನಿಯು ದೇವತೆಗಳಿಗೆ ಮುಖಸ್ಥಾನೀಯನಾಗಿದ್ದಾನೆ. ಮೊದಲು ನನ್ನ ಮುಖದಿಂದ ಸೃಷ್ಟನಾದ ಈ ಅಗ್ನಿದೇವನೇ ಸಮಸ್ತ ಜೀವರ ಪಚನ ಶಕ್ತಿಗೆ ನಿಯಾಮಕನಾಗಿದ್ದಾನೆ.
ಸೃಷ್ಟಮಾತ್ರೋ ಜಗತ್ಸರ್ವಮತ್ತುಮೈಚ್ಛತ್ ಪುರಾ ಖಲು |
ತತಃ ಪ್ರಶಮಿತಃ ಸೋಽಗ್ನಿರುಪಾಸೀನೋ ಮಯಾ ಪುರಾ ||19||
ಸೃಷ್ಟಿ ಮಾಡಿದ ಕೂಡಲೇ ಅಗ್ನಿದೇವನು ಸಮಸ್ತ ಜಗತ್ತನ್ನೇ ಕಬಳಿಸಲು ಇಚ್ಛಿಸಿದನು. ಅಂತಹ ಅಗ್ನಿಯನ್ನು ನಾನು ಹಿಂದೆ ಸಮಾಧಾನ ಪಡಿಸಿ ಶಾಂತಗೊಳಿಸಿದೆನು.
ಸತತೋಪಾಸನಾತ್ ಸೋಽಯಮೌಪಾಸನ ಇತಿ ಸ್ಮೃತಃ ||20||
ಯಾವಾಗಲೂ ನನ್ನಿಂದ ಸನ್ನಿಹಿತನಾಗಿರುವ ಈ ಅಗ್ನಿದೇವನನ್ನು ಔಪಾಸನ ಎಂದು ಕರೆಯುತ್ತಾರೆ.
ಆಹುತಿಃ ಸರ್ವಮಾಖ್ಯಾತಾ ತಸ್ಮಿನ್ ವಸತಿ ಸೋಽನಲಃ |
ಆವಸಥ್ಯ ಇತಿ ಖ್ಯಾತಸ್ತೇನಾಸೌ ಬ್ರಹ್ಮವಾದಿಭಿಃ ||21||
ಆಹುತಿ ಎಂಬುದು ಸರ್ವ ಎಂಬ ಅರ್ಥವನ್ನು ಹೇಳುತ್ತದೆ. ಹವ್ಯವನ್ನೇ ಹವನವೆನ್ನುತ್ತಾರೆ. ಅಗ್ನಿಯು ಸಮಸ್ತ ಹವ್ಯಗಳನ್ನು ಒಯ್ಯುವವನಾದ್ದರಿಂದ ಇವನಿಗೆ ಆಹವನೀಯ ಎಂದು ಹೆಸರು.
ತಸ್ಮಿನ್ ಪಂಚ ಮಹಾಯಜ್ಞಾ ವರ್ತಂತೇ ಯಸ್ಯ ಧರ್ಮತಃ |
ಸೋಮಮಂಡಲಮಧ್ಯೇನ ಗತಿಸ್ತಸ್ಯ ದ್ವಿಜನ್ಮನಃ ||22||
ಆ ಅಗ್ನಿದೇವನಲ್ಲಿ ಪಂಚಮಹಾಯಜ್ಞಗಳು ಧರ್ಮದಿಂದ ಪ್ರವೃತ್ತಿಯನ್ನು ಹೊಂದುತ್ತವೆ. ಪಂಚಮಹಾಯಜ್ಞಗಳನ್ನು ಮಾಡಿದ ಬ್ರಾಹ್ಮಣನು ಸೋಮ ಮಂಡಲದ ಮಧ್ಯದಿಂದ ಸದ್ಗತಿಯನ್ನು ಹೊಂದುತ್ತಾನೆ.
ತೇನ ಸಪ್ತರ್ಷಯಃ ಸಿದ್ಧಾಃ ಸಂಯತೇಂದ್ರಿಯಬುದ್ಧಯಃ |
ಗತಾ ಹ್ಯಮರಸಾಯುಜ್ಯಮೇಕಾಗ್ನ್ಯರ್ಚನತತ್ಪರಾಃ ||23||
ಇಂದ್ರಿಯಗಳನ್ನು, ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಂಡಿರುವ, ಸಿದ್ಧರಾದ ಸಪ್ತರ್ಷಿಗಳು ಅಗ್ನಿಯ ಆರಾಧನೆಯಲ್ಲಿಯೇ ನಿರತರಾದ ಕಾರಣ ದೇವತೆಗಳೆಂದೇ ಕರೆಸಿಕೊಳ್ಳುತ್ತಾರೆ.
ಅಪರೇ ಚಾವಸಥ್ಯಂ ಚ ಪಚನಾಗ್ನಿಂ ಪ್ರಚಕ್ಷತೇ |
ತಸ್ಮಿನ್ ಪಂಚ ಮಹಾಯಜ್ಞಾ ವೈಶ್ವದೇವಶ್ಚ ವರ್ತತೇ ||24||
ಇನ್ನು ಕೆಲವರು ಆಹವನೀಯ, ಪಚನಾಗ್ನಿ ಎಂದು ಎರಡು ಅಗ್ನಿಗಳನ್ನು ಹೇಳುತ್ತಾರೆ. ಆ ಅಗ್ನಿಯಲ್ಲಿಯೇ ಪಂಚಮಹಾಯಜ್ಞಗಳು, ವೈಶ್ವದೇವವು ಮಾಡಲ್ಪಡುತ್ತದೆ.
ಸ್ಥಾಲೀಪಾಕಂ ಚ ಗಾರ್ಹ್ಯಂ ಚ ಸರ್ವೇ ಚಾಸ್ಮಿನ್ ಪ್ರತಿಷ್ಠಿತಾಃ |
ಗೃಹಕರ್ಮವಹೋ ಯಸ್ಮಾತ್ ತಸ್ಮಾದ್ ಗೃಹಪತಿಸ್ತು ಸಃ ||25||
ಸ್ಥಾಲೀಪಾಕವು, ಗೃಹಸ್ಥರಿಗೆ ಸಂಬಂಧಪಟ್ಟ ಯಜ್ಞವು ಎಲ್ಲವೂ ಈ ಅಗ್ನಿಯಲ್ಲಿಯೇ ಪ್ರತಿಷ್ಠಿತವಾಗಿವೆ. ಗೃಹಸ್ಥರ ಕರ್ಮಗಳನ್ನು ಹೊತ್ತುಯ್ಯುವ ಕಾರಣದಿಂದ ಈ ಅಗ್ನಿಗೆ ಗೃಹಪತಿ ಎಂದು ಕರೆಯುತ್ತಾರೆ.
ಔಪಾಸನಂ ಚಾವಸಥ್ಯಂ ಸಭ್ಯಂ ಪಚನಪಾವಕಮ್ |
ಆಹುರ್ಬ್ರಹ್ಮವಿದಃ ಕೇಚಿನ್ಮತಮೇತನ್ಮಮಾಪಿ ಚ ||26||
ಕೆಲವು ಬ್ರಹ್ಮಜ್ಞಾನಿಗಳು ಔಪಾಸನ, ಆವಸಥ್ಯ, ಪಚನಪಾವಕ ಎಂಬುದಾಗಿ ಅಗ್ನಿಯ ಮೂರು ಪ್ರಕಾರಗಳನ್ನು ಹೇಳುತ್ತಾರೆ. ಇದು ನನಗೂ ಸಮ್ಮತವಾಗಿದೆ.
ಅಗ್ನಿಹೋತ್ರಪ್ರಕಾರಂ ತು ಶೃಣು ರಾಜನ್ ಸಮಾಹಿತಃ |
ತ್ರಯಾಣಾಂ ಗುಣನಾಮಾನಿ ವಹ್ನೀನಾಮುಚ್ಯತೇ ಮಯಾ ||27||
ಯುಧಿಷ್ಠಿರನೇ, ನಾನೀಗ ಹೇಳಲಿರುವ ಅಗ್ನಿಹೋತ್ರದ ಪ್ರಕಾರವನ್ನು ಕೇಳು. ಮೂರು ಅಗ್ನಿಯ ಗುಣಗಳಿಗೆ ಅನುಗುಣವಾದ ಹೆಸರುಗಳನ್ನು ತಿಳಿದುಕೊ.

ಗೃಹಾಣಾಂ ಹಿ ಪತಿತ್ವಂ ಹಿ ಗೃಹಪತ್ಯಮಿತಿ ಸ್ಮೃತಮ್ |
ಗೃಹಪತ್ಯಂ ತು ಯಸ್ಯಾಸೀತ್ ತತ್ ತಸ್ಮಾದ್ ಗಾರ್ಹಪತ್ಯತಾ ॥28॥
ಗೃಹಗಳ ಒಡೆತನವನ್ನು ಹೊಂದಿರುವುದು ಗೃಹಪತಿತ್ವವು. ಯಾವ ಅಗ್ನಿಯಲ್ಲಿ ಗೃಹಪತಿತ್ವವು ನೆಲೆಗೊಂಡಿದೆಯೋ ಆ ಅಗ್ನಿಯು ಗಾರ್ಹಪತ್ಯ ಎಂದು ಕರೆಸಿಕೊಳ್ಳಲ್ಪಡುತ್ತದೆ.
ಯಜಮಾನಂ ತು ಯಸ್ಮಾತ್ತು ದಕ್ಷಿಣಾಂ ತು ಗತಿಂ ನಯೇತ್ |
ದಕ್ಷಿಣಾಗ್ನಿಂ ತಮಾಹುಸ್ತೇ ದಕ್ಷಿಣಾಯತನಂ ದ್ವಿಜಾಃ ॥29॥
ಯಾವ ಅಗ್ನಿಯು ಯಜಮಾನನನ್ನು ದಕ್ಷಿಣಾಯನದ ಮಾರ್ಗದ ಮೂಲಕ ಸ್ವರ್ಗಕ್ಕೆ ಕೊಂಡೊಯ್ಯುವುದೋ ದಕ್ಷಿಣದಲ್ಲಿರುವುದೋ ಆ ಅಗ್ನಿಯನ್ನು ಬ್ರಾಹ್ಮಣರು ದಕ್ಷಿಣಾಗ್ನಿ ಎಂದು ಕರೆಯುತ್ತಾರೆ.
ಆಹುತಿಂ ಸಮ್ಯಗಾಖ್ಯಾತಾಂ ವಹಂತಂ ಹವ್ಯವಾಹನಮ್ |
ಸರ್ವಹವ್ಯವಹೋ ವಹ್ನಿರ್ಗತಶ್ಚಾಹವನೀಯತಾಮ್ ॥30॥
ಆಹುತಿ ಎಂಬುದು ಸರ್ವ ಎಂಬ ಅರ್ಥವನ್ನು ಹೇಳುತ್ತದೆ. ಹವ್ಯವನ್ನೇ ಹವನ ಎನ್ನುತ್ತಾರೆ. ಸಮಸ್ತ ಹವ್ಯಗಳನ್ನು ಯಾವ ಕಾರಣದಿಂದ ಅಗ್ನಿಯು ಒಯ್ಯುತ್ತಾನೋ ಆ ಕಾರಣದಿಂದ ಆಹವನೀಯ ಎಂಬ ಹೆಸರನ್ನು ಪಡೆದಿದ್ದಾನೆ.
ಯಸಞತ್ವವಸಥ್ಯಂ ಜುಹುಯಾನ್ಮೂಲಾಗ್ನಿಂ ವಿಧಿವದ್ ದ್ವಿಜಃ |
ಆವಸಥ್ಯಂ ತು ತಂ ಚಾಗ್ನಿಂ ಪಚನಾಗ್ನಿಂ ಪ್ರಚಕ್ಷತೇ ॥31॥
ಯಾರು ಮೂಲಾಗ್ನಿಯನ್ನು ಆವಸಥ್ಯ ಎಂಬ ಹೆಸರಿನಿಂದ ವಿಧಿಬದ್ಧವಾಗಿ ಹೋಮಿಸುತ್ತಾರೋ ಅಂತಹ ಆವಸಥ್ಯ ಎಂಬ ಅಗ್ನಿಯನ್ನು ಪಚನಾಗ್ನಿ ಎಂದು ಕರೆಯುತ್ತಾರೆ.
ತೇಷಾಂ ಸಭಾಗತೋ ವಹ್ನಿಃ ಸಭ್ಯ ಇತ್ಯಭಿಧೀಯತೇ |
ಆವಸಥ್ಯಸ್ತು ಯೋ ವಹ್ನಿಃ ಪ್ರಥಮಃ ಸ ಪ್ರಜಾಪತಿಃ ॥32॥
ದೊಡ್ಡ ಯಜ್ಞಸಭೆಯಲ್ಲಿ ಸ್ಥಾಪಿಸುವ ವಹ್ನಿಯನ್ನು ಸಭ್ಯ ಎಂದು ಕರೆಯುತ್ತಾರೆ. ಆವಸಥ್ಯವಹ್ನಿಯು ಮೊದಲನೆಯ ವಹ್ನಿಯಾಗಿದ್ದು, ಪ್ರಜಾಪತಿಯು ಅದಕ್ಕೆ ಅಭಿಮಾನಿಯಾಗಿದ್ದಾನೆ.
ಬ್ರಹ್ಮಾ ಚ ಗಾರ್ಹಪತ್ಯೋಽಗ್ನಿಃ ತಸ್ಮಾದೇವ ತು ಸೋಽಭವತ್ |
ದಕ್ಷಿಣಾಗ್ನಿಸ್ತ್ವಯಂ ರುದ್ರಃ ಕ್ರೋಧಾತ್ಮಾ ಚಂಡ ಏವ ಸಃ ॥33॥
ಬ್ರಹ್ಮನೇ ಗಾರ್ಹಪತ್ಯಾಗ್ನಿಯು. ಕಾರಣ ಅವನು ಹುಟ್ಟಿರುವುದು ಗಾರ್ಹಪತ್ಯಾಗ್ನಿಯಲ್ಲಿ. ಕ್ರೋಧಾತ್ಮನಾದ, ಪ್ರಚಂಡನಾದ ರುದ್ರನೇ ದಕ್ಷಿಣಾಗ್ನಿ ಸ್ವರೂಪನಾಗಿದ್ದಾನೆ.
ಅಹಮಾಹವನೀಯೋಽಗ್ನಿರಾಹೋಮಾದ್ಯಸ್ಯ ವೈ ಮುಖೇ |
ಸಭ್ಯೋಽಗ್ನಿಃ ಪಂಚಮೋ ಯಸ್ತು ಸ್ಕಂದ ಏವ ನರಾಧಿಪ ॥34॥
ಹೋಮದ ಆರಂಭದಿಂದ ಕೊನೆಯ ತನಕ ಯಾವ ಅಗ್ನಿಯ ಮೂಲಕ ನನಗೆ ಆಹುತಿಯನ್ನು ನೀಡುತ್ತಾರೋ ಅಂತಹ ಆಹವನೀಯ ಅಗ್ನಿಯು ನಾನೇ ಆಗಿದ್ದೇನೆ. ಐದನೆಯ ಸಭ್ಯ ಎಂಬ ಅಗ್ನಿಗೆ ಷಣ್ಮುಖನು ಅಭಿಮಾನಿಯಾಗಿದ್ದಾನೆ.
ಪೃಥಿವೀ ಗಾರ್ಹಪತ್ಯೋಽಗ್ನಿರಂತರಿಕ್ಷಂ ಚ ದಕ್ಷಿಣಃ |
ಸ್ವರ್ಗಮಾಹವನೀಯೋಽಗ್ನಿರೇವಮಗ್ನಿತ್ರಯಂ ಸ್ಮೃತಮ್ ॥35॥
ಗಾರ್ಹಪತ್ಯಾಗ್ನಿಯನ್ನು ಸೇವಿಸಿದವನೂ, ದಕ್ಷಿಣಾಗ್ನಿಯನ್ನು ಸೇವಿಸಿದವನು ಅಂತರಿಕ್ಷಲೋಕವನ್ನೂ, ಆಹವನೀಯಾಗ್ನಿಯನ್ನು ಸೇವಿಸಿದವನು ಸ್ವರ್ಗಲೋಕವನ್ನು ಹೊಂದುತ್ತಾನೆ. ಹೀಗೆ ಮೂರು ಅಗ್ನಿಗಳು ಇವೆ.
ವೃತ್ತಶ್ಚ ಗಾರ್ಹಪತ್ಯೋಽಗ್ನಿರ್ಯಸ್ಮಾದ್ ವೃತ್ತಾ ಚ ಮೇದಿನೀ |
ಅರ್ಧಚಂದ್ರಾಕೃತಿಃ ಖಂ ವೈ ದಕ್ಷಿಣಾಗ್ನಿಸ್ತಥಾ ಭವೇತ್ ॥36॥
ಗಾರ್ಹಪತ್ಯಾಗ್ನಿಯ ಆಕಾರವು ವರ್ತುಲಾಕಾರವು. ಕಾರಣ ಪೃಥಿವಿಯ ಆಕಾರವು ವರ್ತುಲಾಕಾರವಾದುದರಿಂದ, ಇದಕ್ಕೆ ಸಂಬಂಧಿಸಿದ ಅಗ್ನಿಯ ಆಕಾರವೂ ವರ್ತುಲಾಕಾರವಾಗಿಯೇ ಇದೆ. ದಕ್ಷಿಣಾಗ್ನಿಯ ಆಕಾರವು ಅಂತರಿಕ್ಷ ಲೋಕದ ಆಕಾರವು. ಅಂತರಿಕ್ಷಲೋಕದ ಆಕಾರವು ಅರ್ಧಚಂದ್ರಾಕೃತಿಯ ಆಕಾರವು. ಅದರಂತೆ ದಕ್ಷಿಣಾಗ್ನಿಯ ಆಕಾರವೂ ಇದೆ.
ಚತುರಶ್ರಂ ತತಃ ಸ್ವರ್ಗಂ ನಿರ್ಮಲಂ ತು ನಿರಾಮಯಮ್ |
ತಸ್ಮಾದಾಹವನೀಯೋಽಗ್ನಿಶ್ಚತುರಶ್ರೋ ಭವೇನ್ನೃಪ ॥37॥
ಚತುಷ್ಕೋಣದ ಆಕಾರವು ಆಹವನೀಯ ಅಗ್ನಿಯ ಆಕಾರವು. ಸ್ವರ್ಗಲೋಕವು ಚತುಃಕೋಣದಿಂದ ಕೂಡಿದೆ. ಆ ಕಾರಣದಿಂದ ಅದಕ್ಕೆ ಸಂಬಂಧಿಸಿದ ಅಗ್ನಿಯ ಆಕಾರವು ಚತುರಶ್ರದಿಂದಲೇ ಕೂಡಿದೆ.
ಜುಹುಯಾದ್ ಗಾರ್ಹಪತ್ಯಂ ಯೋ ಭುವಂ ಜಯತಿ ಸ ದ್ವಿಜಃ |
ಜುಹೋತಿ ದಕ್ಷಿಣಾಗ್ನಿಂ ಯಃ ಸ ಜಯತ್ಯಂತರಿಕ್ಷಕಮ್ ॥38॥
ಯಾವ ಬ್ರಾಹ್ಮಣನು ಗಾರ್ಹಪತ್ಯ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾನೋ ಅವನು ಭೂಮಿಯನ್ನು ಜಯಿಸುತ್ತಾನೆ. ದಕ್ಷಿಣಾಗ್ನಿಯಲ್ಲಿ ಹೋಮವನ್ನು ಮಾಡಿದವನು ಅಂತರಿಕ್ಷವನ್ನು ಜಯಿಸುತ್ತಾನೆ.
ಪೃಥಿವೀಮಂತರಿಕ್ಷಂ ಚ ದಿವಂ ಚರ್ಷಿಗಣೈಃ ಸಹ |
ಜಯತ್ಯಾಹವನೀಯಂ ಯೋ ಜುಹುಯಾದ್ ಭಕ್ತಿಮಾನ್ ದ್ವಿಜಃ॥39॥
ಆಹವನಾಗ್ನಿಯಲ್ಲಿ ಹೋಮಮಾಡಿದವನು ಭಕ್ತಿಯಿಂದ ಹೋಮ ಮಾಡಿದಾಗ ಪೃಥಿವಿ, ಅಂತರಿಕ್ಷ, ಋಷಿಗಣಗಳಿಂದ ತುಂಬಿದ ದೇವಲೋಕ- ಎಲ್ಲವನ್ನೂ ಜಯಿಸುತ್ತಾನೆ.
ಆಭಿಮುಖ್ಯೇನ ಹೋಮಸ್ತು ಯಸ್ಯ ಯಜ್ಞೇಷು ವರ್ತತೇ |

ತೇನಾಪ್ಯಾಹವನೀಯತ್ವಂ ಗತೋ ವಹ್ನಿರ್ಮಹಾದ್ಯುತಿಃ ॥40॥
ಯಜ್ಞಗಳಲ್ಲಿ ಅಗ್ನಿಯು ಅಭಿಮುಖವಾಗಿರುವ ಎಲ್ಲ ಆಹುತಿಗಳು ಹೋಮ ಮಾಡಲ್ಪಡುವುದರಿಂದ ಅಥವಾ ಎಲ್ಲ ಅಗ್ನಿಗಳಿಗಿಂತ ಶ್ರೇಷ್ಠವಾಗಿರುವುದರಿಂದ ಈ ಅಗ್ನಿಗೆ ಆಹವನೀಯತ್ವ ಎಂಬ ಪದವಿಯು ಲಭಿಸಿದೆ. ಈ ಆಹವನೀಯಾಗ್ನಿಯು ಮಹಾಕಾಂತಿಯುಳ್ಳದ್ದು.
ಆಹೋಮಾದಗ್ನಿಹೋತ್ರೇಷು ಯಜ್ಞೇಷ್ವರ್ವಾ ಯತ್ರ ಸರ್ವಶಃ |
ಯಸ್ಮಾದಸ್ಮಿನ್ ಪ್ರವರ್ತಂತೇ ತತೋ ಹ್ಯಾಹವನೀಯತಾ ॥41॥
ಅಗ್ನಿಹೋತ್ರಗಳಲ್ಲಿ, ಇತರ ಯಜ್ಞಗಳಲ್ಲಿ ಆರಂಭದಿಂದ ಎಲ್ಲ ಕಡೆಯಿಂದಲೂ ಎಲ್ಲ ಆಹುತಿಗಳನ್ನೂ ಈ ಆಹವನೀಯಾಗ್ನಿಯಲ್ಲಿಯೇ ಹಾಕುವುದರಿಂದ ಈ ಅಗ್ನಿಗೆ ಆಹವನೀಯ ಎಂದು ಹೆಸರು.
ಯಸತ್ತ್ವವಸಥ್ಯಂ ಜುಹುಯಾನ್ಮೂಲಾಗ್ನಿಂ ವಿಧಿವದ್ ದ್ವಿಜಃ |
ಸ ತು ಸಪ್ತರ್ಷಿಲೋಕೇಷು ಸಪತ್ನೀಕಃ ಪ್ರಮೋದತೇ ॥42॥
ಯಾವ ಬ್ರಾಹ್ಮಣನು ವಿಧಿಬದ್ಧವಾಗಿ ಮೂಲಾಗ್ನಿ ಎನಿಸಿದ ಆಹವನೀಯಾಗ್ನಿಯ ಮೂಲಕ ಹೋಮವನ್ನು ಮಾಡುತ್ತಾನೋ ಅವನು ಸಪತ್ನೀಕವಾಗಿ ಸಪ್ತರ್ಷಿಗಳ ಲೋಕದಲ್ಲಿ ಸಂತೋಷವನ್ನು ಹೊಂದುತ್ತಾನೆ.
ಯಶ್ಚಾಪ್ಯುಪಾಸನಃ(ಸತೇ) ಸಭ್ಯಂ ವಿಧಿವತ್ ಪ್ರಯತಾತ್ಮವಾನ್ |
ಸ ಜಯೇದ್ ವಾಙ್ಮಯಂ ಸರ್ವಂ ತಥಾತ್ವೃಷಿಸಭಾಮಪಿ ॥43॥
ಯಾವನು ಜಿತೇಂದ್ರಿಯಾಗ್ನಿಯಾಗಿ, ವಿಧಿಬದ್ಧವಾಗಿ ಸಭ್ಯ ಎಂಬ ಅಗ್ನಿಯನ್ನು ಉಪಾಸನೆ ಮಾಡುತ್ತಾನೋ ಅವನು ವಾಙ್ಮಯವಾದ ವೇದಪ್ರಪಂಚವನ್ನೂ ಜಯಿಸುತ್ತಾನೆ. ಋಷಿ ಸಭೆಯನ್ನೂ ಗೆಲ್ಲುತ್ತಾನೆ.
ಅಗ್ನೀನಾಮಥವಾಽಗ್ನೇಽಸ್ತು ಯಸ್ಯ ಹೋಮಃ ಪ್ರದೀಯತೇ |
ಇಷ್ಟೋ ಭವತಿ ಸರ್ವಾಗ್ನಿರಗ್ನಿಹೋತ್ರಂ ಚ ಯದ್ಭವೇತ್ ॥44॥
ಅಗ್ನಿಗಳಲ್ಲಿ ಅಥವಾ ಅಗ್ನಿಯಲ್ಲಿ ಯಾವನು ಹೋಮವನ್ನು ದಾನ ಮಾಡುತ್ತಾನೋ ಅಂಥ ಅಗ್ನಿಹೋತ್ರ ಮಾಡಿದವನಿಗೆ ಅಗ್ನಿದೇವನು ಪ್ರಸನ್ನನಾಗುತ್ತಾನೆ.
ತ್ರಾಣಾಯ ಯಜಮಾನಸ್ಯ ಚಾಗ್ನಿಹೋತ್ರಮಿತಿ ಸ್ಮೃತಮ್ ॥45॥
ಯಜಮಾನನನ್ನು ರಕ್ಷಿಸುವ ದೃಷ್ಟಿಯಿಂದಲೇ ಅಗ್ನಿಹೋತ್ರ ಎಂಬ ಶಬ್ದವು ಪ್ರವೃತ್ತವಾಗಿದೆ.
ಹೋ ಇತ್ಯೇಷ ವಿಷಾದೋ ವೈ ವಿಷಾದೋ ದುಃಖಮುಚ್ಯತೇ |
ದುಃಖಂ ತಾಪತ್ರಯಂ ಪ್ರೋಕ್ತಂ ಪಾಪಂ ಹಿ ನರಕಂ ವಿದುಃ ॥46॥
`ಹೋ' ಎಂದರೆ ವಿಷಾದ ಎಂದು ಅರ್ಥ. ವಿಷಾದ ಎಂದರೆ ದುಃಖ ಎಂದರ್ಥ. ದುಃಖ ಎಂದರೆ ತಾಪತ್ರಯ ಎಂದರ್ಥ. ಪಾಪ ಎಂದರೆ ನರಕ ಎಂದರ್ಥ.
ತಸ್ಮಾದ್ ವೈ ತ್ರಾಯತೇ ದುಃಖಾದ್ ಯಜಮಾನಂ ಹುತೋಽನಲಃ |
ತಸ್ಮಾತ್ತು ವಿಧಿವತ್ ಪ್ರೋಕ್ತಮಗ್ನಿಹೋತ್ರಮಿತಿ ಶ್ರುತೌ ॥47॥
ಅಗ್ನಿಯನ್ನು ಉಪಾಸನೆ ಮಾಡುವ ವ್ಯಕ್ತಿಯನ್ನು `ಹೋಮ' ಎಂಬ ದುಃಖದಿಂದ ರಕ್ಷಿಸುವುದರಿಂದ ಅಗ್ನಿಹೋತ್ರ ಎಂದು ಕರೆದಿದ್ದಾರೆ.

ತದಗ್ನಿಹೋತ್ರಂ ಸೃಷ್ಟಂ ವೈ ಬ್ರಹ್ಮಣಾ ಲೋಕಕರ್ತೃಣಾ |
ವೇದಾಶ್ಚಾಪ್ಯಗ್ನಿಹೋತ್ರಾರ್ಥಂ ಜಜ್ಞಿರೇ ಸ್ವಯಮೇವ ತು ॥48॥
ಈ ಅಗ್ನಿಹೋತ್ರವನ್ನು ಚತುರ್ಮುಖ ಬ್ರಹ್ಮನು ಜೀವರನ್ನು ಸೃಷ್ಟಿಸುವ ಸಂದರ್ಭದಲ್ಲಿ ಸೃಷ್ಟಿಸಿದ್ದಾನೆ. ಸಮಸ್ತ ವೇದಗಳು ಅಗ್ನಿಹೋತ್ರ ನಿಮಿತ್ತದಿಂದಲೇ ಸ್ವಯಂ ಪ್ರಾದುರ್ಭೂತಗಳಾಗಿವೆ.
ಅಗ್ನಿಹೋತ್ರಫಲಾ ವೇದಾಃ ಶೀಲವೃತ್ತಫಲಂ ಶ್ರುತಮ್ |
ರತಿಪುತ್ರಫಲಾ ನಾರೀ ದತ್ತಭೋಗಫಲಂ ಧನಮ್ ॥49॥
ವೇದಾಧ್ಯಯನಕ್ಕೆ ಫಲವು ಅಗ್ನಿಹೋತ್ರವೇ ಆಗಿದೆ. ಶೀಲ-ಸದಾಚಾರಗಳೇ ಶಾಸ್ತ್ರಜ್ಞಾನಕ್ಕೆ ಫಲವಾಗಿವೆ. ಸ್ತ್ರೀಯನ್ನು ವಿವಾಹ ಮಾಡಿಕೊಂಡ ಪ್ರಯೋಜನ ರತಿಸುಖ ಮತ್ತು ಸತ್ಸಂತಾನವಾಗಿದೆ. ದಾನ, ಭೋಗಗಳೆಂಬ ಫಲಗಳೇ ಧನದ ಸುಖವಾಗಿವೆ.
ತ್ರಿವೇದಮಂತ್ರಸಂಯೋಗಾದಗ್ನಿಹೋತ್ರಂ ಪ್ರವರ್ತತೇ |
ಋಗ್ಯಜುಃ ಸಾಮಭಿಃ ಪುಣ್ಯೈಃ ಸ್ಥಾಪ್ಯತೇ ಸೂತ್ರಸಂಯುತೈಃ ॥50॥
ಮೂರು ವೇದಗಳ ಮಂತ್ರಗಳ ಸಂಯೋಗದಿಂದ ಅಗ್ನಿಹೋತ್ರವು ಪ್ರವೃತ್ತವಾಗಿದೆ. ಋಗ್ಯಜುಸ್ಸಾಮಗಳ ಪವಿತ್ರ ಮಂತ್ರಗಳಿಂದಲೂ, ಮೀಮಾಂಸಾ ಸೂತ್ರಗಳಿಂದಲೂ ಅಗ್ನಿಹೋತ್ರದ ಪ್ರಯೋಗ ವಿಧಾನಗಳು ಪ್ರತಿಪಾದಿಸಲ್ಪಟ್ಟಿವೆ.
ವಸಂತೋ ಬ್ರಾಹ್ಮಣಸ್ಯ ಸ್ಯಾದ್ ಆಧೇಯೋಽಗ್ನಿರ್ನರಾಧಿಪ |
ವಸಂತೋ ಬ್ರಾಹ್ಮಣಃ ಪ್ರೋಕ್ತೋ ವೇದಯೋನಿಃ ಸ ಉಚ್ಯತೇ ॥51॥
ವಸಂತ ಕಾಲಾಭಿಮಾನಿಯು ಬ್ರಾಹ್ಮಣನಿಗೆ ನಿಯಾಮಕನಾಗಿದ್ದಾನೆ. ಆ ಋತುವನ್ನು ವೇದಗಳ ಯೋನಿ ಎನ್ನುತ್ತಾರೆ. ಆದ್ದರಿಂದ ವಸಂತ ಕಾಲದಲ್ಲಿ ಬ್ರಾಹ್ಮಣನು ಅಗ್ನಿಯನ್ನು ಪ್ರತಿಷ್ಠಾಪಿಸಬೇಕು.
ಅಗ್ನ್ಯಾಧೇಯಂ ತು ಯೇನಾಥ ವಸಂತೇ ಕ್ರಿಯತೇ ನೃಪ |
ತಸ್ಯ ಶ್ರೀರ್ಬ್ರಹ್ಮವೃದ್ಧಿಶ್ಚ ಬ್ರಾಹ್ಮಣಸ್ಯ ವಿವರ್ಧತೇ ॥52॥
ವಸಂತ ಋತುವಿನಲ್ಲಿ ಅಗ್ನಿಯನ್ನು ಸಂಸ್ಕಾರಪೂರ್ವಕವಾಗಿ ಪ್ರತಿಷ್ಠಾಪಿಸಿದ ಬ್ರಾಹ್ಮಣನಿಗೆ ಸಂಪತ್ತಿನ ಸಮೃದ್ಧಿಯೂ, ವೈದಿಕ ಜ್ಞಾನವೂ ಲಾಭವಾಗುತ್ತದೆ.

ಕ್ಷತ್ರಿಯಸ್ಯಾಗ್ನಿರಾಧೇಯೋ ಗ್ರೀಷ್ಮೇ ಶ್ರೇಷ್ಠಃ ಸ ವೈ ನೃಪ ॥53॥
ಕ್ಷತ್ರಿಯನು ಗ್ರೀಷ್ಮಋತುವಿನಲ್ಲಿ ಅಗ್ನ್ಯಾಧಾನವನ್ನು ಮಾಡುವುದು ಶ್ರೇಷ್ಠ ಎನ್ನುತ್ತಾರೆ.
ಯೇನಾಧಾನಂ ತು ವೈ ಗ್ರೀಷ್ಮೇ ಕ್ರಿಯತೇ ತಸ್ಯ ವರ್ಧತೇ |
ಶ್ರೀಃ ಪ್ರಜಾಃ ಪಶವಶ್ಚೈವ ವಿತ್ತಂ ತೇಜೋ ಬಲಂ ಯಶಃ ॥54॥
ಗ್ರೀಷ್ಮ ಋತುವಿನಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿದ ಕ್ಷತ್ರಿಯನಿಗೆ ಸಂಪತ್ತು, ಸಂತಾನ, ಪಶು, ಧನ, ತೇಜಸ್ಸು, ಬಲ, ಯಶಸ್ಸುಗಳು ಅಭಿವೃದ್ಧಿಯನ್ನು ಹೊಂದುತ್ತವೆ.
ಶರದ್ ರಾತ್ರೇಽಥ ವೈಶ್ಯಸ್ಯ ಹ್ಯಾಧಾನೀಯೋ ಹುತಾಶನಃ |
ಶರದ್ ರಾತ್ರಂ ಸ್ವಯಂ ವೈಶ್ಯೋ ವೈಶ್ಯಯೋನಿಃ ಸ ಉಚ್ಯತೇ ॥55॥
ಶರತ್ಕಾಲದ ರಾತ್ರಿಯು ವೈಶ್ಯನ ಸ್ವರೂಪವೇ ಆಗಿದೆ. ಶರದೃತುವಿನ ರಾತ್ರಿಯನ್ನು ವೈಶ್ಯಯೋನಿ ಎಂದಿದ್ದಾರೆ.  ವೈಶ್ಯನು ಶರದೃತುವಿನಲ್ಲಿ ಅಕ್ಕಿ ಸ್ಥಾಪಿಸಬೇಕು.
ಶರದ್ಯಾಧಾನಮೇವಂ ವೈ ಕ್ರಿಯತೇ ಯೇನ ಪಾಂಡವ |
ತಸ್ಯಾಪಿ ಶ್ರೀಃ ಪ್ರಜಾಽಽಯುಶ್ಚ ಪಶವೋಽರ್ಥಶ್ಚ ವರ್ಧತೇ ॥56॥
ಪಾಂಡವನೇ, ಆದ್ದರಿಂದ ವೈಶ್ಯನು ಶರದೃತುವಿನಲ್ಲಿ ಅಗ್ನಿಯನ್ನು ಆಧಾನ ಮಾಡಬೇಕು. ಹೀಗೆ ಮಾಡಿದ ವೈಶ್ಯನಿಗೆ ಸಂಪತ್ತು, ಸಂತಾನ, ಆಯುಸ್ಸು, ಪಶು, ಐಶ್ವರ್ಯಗಳು ವೃದ್ಧಿಯಾಗುತ್ತವೆ.
ಪಶವಃ ಸರ್ವ ಏವೈತೇ ತ್ರಿಭಿರ್ವೈದೈರಲಂಕೃತಾಃ |
ಅಗ್ನಿಹೋತ್ರಾತ್ ಪ್ರವರ್ಧಂತೇ ತೈರೇವ ಧ್ರಿಯತೇ ಜಗತ್ ॥57॥
ಸಂಪತ್ತು, ಪಶುಗಳು- ಈ ಎಲ್ಲ ಸುಖಸಾಧನಗಳು ವೇದಗಳಿಂದಲೇ ಅಲಂಕೃತವಾಗಿವೆ. ಯಾರು ವೇದಗಳ ಮೂಲಕ ಅಗ್ನಿಹೋತ್ರವನ್ನು ಮಾಡುತ್ತಾರೋ ಅವರ ಪಾಲಿಗೆ ಈ ಸಂಪತ್ತುಗಳು ಅಭಿವೃದ್ಧಿಯನ್ನು ಹೊಂದುತ್ತವೆ. ಅಗ್ನಿಹೋತ್ರದಿಂದಲೇ ಜಗತ್ತು ಧರಿಸಲ್ಪಟ್ಟಿದೆ.
ಗ್ರಾಮ್ಯಾರಣ್ಯಾಶ್ಚ ಪಶವಸ್ತಥಾ ವೃಕ್ಷಾಸ್ತೃಣಾನಿ ಚ |
ಫಲಾನ್ಯೋಷಧಯಶ್ಚಾಪಿ ಅಗ್ನಿಹೋತ್ರಕೃತೇ ಹಿ ತಾಃ ॥58॥
ಗ್ರಾಮ್ಯ ಪದಾರ್ಥಗಳು, ಅರಣ್ಯಪದಾರ್ಥಗಳು, ಪಶುಗಳು, ವೃಕ್ಷಗಳು, ತೃಣಗಳು, ಫಲಗಳು, ಓಷಧಿಗಳು ಎಲ್ಲವೂ ಅಗ್ನಿಹೋತ್ರಕ್ಕಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿವೆ.
ರಸಾಃ ಸ್ನೇಹಾಸ್ತಥಾ ಗಂಧಾ ರತ್ನಾನಿ ಮಣಯಸ್ತಥಾ |
ಕಾಂಚನಾನಿ ಚ ಲೋಹಾನಿ ಹ್ಯಗ್ನಿಹೋತ್ರಕೃತೇಽಭವನ್ ॥59॥
ರಸಗಳು, ತುಪ್ಪ ಮೊದಲಾದ ಜಿಡ್ಡಿನ ಪದಾರ್ಥಗಳು, ಸುಗಂಧ ದ್ರವ್ಯಗಳು, ರತ್ನಗಳು, ಮಣಿಗಳು, ಸುವರ್ಣ ಮತ್ತು ಇನ್ನಿತರ ಲೋಹಗಳು ಎಲ್ಲವೂ ಅಗ್ನಿಹೋತ್ರ ನಿಮಿತ್ತವಾಗಿಯೇ ಉತ್ಪನ್ನವಾಗಿವೆ.
ಆಯುರ್ವೇದೋ ಧನುರ್ವೇದೋ ಮೀಮಾಂಸಾ ನ್ಯಾಯವಿಸ್ತರಃ |
ಧರ್ಮಶಾಸ್ತ್ರಂ ಚ ತತ್ಸರ್ವಮಗ್ನಿಹೋತ್ರಕೃತೇ ಕೃತಮ್ ॥60॥
ಆಯುರ್ವೇದ, ಧನುರ್ವೇದ, ಮೀಮಾಂಸಾ, ನ್ಯಾಯಶಾಸ್ತ್ರ, ಧರ್ಮಶಾಸ್ತ್ರ ಎಲ್ಲವೂ ಅಗ್ನಿಹೋತ್ರಕ್ಕಾಗಿಯೇ ಪ್ರತಿಪಾದಿಸಲ್ಪಟ್ಟಿವೆ.
ಛಂದಃ ಶಿಕ್ಷಾ ಚ ಕಲ್ಪಾಶ್ಚ ತಥಾ ವ್ಯಾಕರಣಂ ನೃಪ |
ಜ್ಯೋತಿಃಶಾಸ್ತ್ರಂ ನಿರುಕ್ತಂ ಚಾಪ್ಯಗ್ನಿಹೋತ್ರಕೃತೇ ಕೃತಮ್ ॥61॥
ಛಂದಸ್ಸು, ಶಿಕ್ಷಾ, ಕಲ್ಪ, ವ್ಯಾಕರಣ, ಜ್ಯೋತಿಃಶಾಸ್ತ್ರ, ನಿರುಕ್ತ ಎಲ್ಲವೂ ಅಗ್ನಿಹೋತ್ರಕ್ಕಾಗಿಯೇ ಸೃಷ್ಟಿಸಲ್ಪಟ್ಟಿವೆ.
ಇತಿಹಾಸಪುರಾಣಾಶ್ಚ ಗಾಥಾಶ್ಚೋಪನಿಷತ್ ತಥಾ |
ಆಥರ್ವಣಾನಿ ಕರ್ಮಾಣಿ ಚಾಗ್ನಿಹೋತ್ರಕೃತೇ ಕೃತಮ್ ॥62॥
ಇತಿಹಾಸ-ಪುರಾಣಗಳು, ಗಾಥೆಗಳು, ಉಪನಿಷತ್ತುಗಳು, ಅಥರ್ವ ಪ್ರಕ್ರಿಯೆಗಳು ಇವೆಲ್ಲವೂ ಅಗ್ನಿಹೋತ್ರಕ್ಕಾಗಿಯೇ ಸೃಷ್ಟಿಸಲ್ಪಟ್ಟಿವೆ.
ಯಚ್ಚೈತಸ್ಯಾಂ ಪೃಥಿವ್ಯಾಂ ಹಿ ಕಿಂಚಿದಸ್ತಿ ಚರಾಚರಮ್ |
ತತ್ಸರ್ವಮಗ್ನಿಹೋತ್ರಸ್ಯ ಕೃತೇ ಸೃಷ್ಟಂ ಸ್ವಯಂಭುವಾ ॥63॥
ಈ ಜಗತ್ತಿನಲ್ಲಿ ಚರಾಚರ ಎಂದು ಏನು ತೋರುತ್ತದೋ ಅದೆಲ್ಲವೂ ಅಗ್ನಿಹೋತ್ರಕ್ಕಾಗಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿವೆ.
ಅಗ್ನಿಹೋತ್ರಸ್ಯ ದರ್ಶಸ್ಯ ಪೂರ್ಣಮಾಸಸ್ಯ ಚಾಪ್ಯಥ |
ಯೂಪೇಷ್ಟಿಪಶುಬಂಧಾನಾಂ ಸೋಮಪಾನಕ್ರಿಯಾವತಾಮ್ ॥64॥
ತಿಥಿನಕ್ಷತ್ರಯೋಗಾನಾಂ ಮುಹೂರ್ತಕರಣಾತ್ಮನಾಮ್ |
ಕಾಲಸ್ಯ ವೇದನಾರ್ಥಂ ತು ಜ್ಯೋತಿರ್ಜ್ಞಾನಂ ಕೃತಂ ಪುರಾ ॥65॥
ಅಗ್ನಿಹೋತ್ರ, ದರ್ಶಪೂರ್ಣ ಮಾಸ ಯಾಗಗಳು, ಯೂಪ, ಇಷ್ಟಿ, ಪಶುಬಂಧ, ಸೋಮಪಾನ ಕ್ರಿಯೆಗಳು, ತಿಥಿ, ನಕ್ಷತ್ರ, ಯೋಗ, ಮುಹೂರ್ತ, ಕರಣ ಇವುಗಳ ಕಾಲಜ್ಞಾನವನ್ನು ತಿಳಿಯಲು ಜ್ಯೋತಿಶ್ಶಾಸ್ತ್ರವನ್ನು ಹಿಂದೆ ರಚಿಸಿದ್ದಾರೆ.
ಋಗ್ಯಜುಃಸಾಮಮಂತ್ರಾಣಾಂ ಶ್ಲೋಕತತ್ತ್ವಾರ್ಥಚಿಂತನಾತ್ |
ಪ್ರತ್ಯಾಪತ್ತಿವಿಕಲ್ಪಾನಾಂ ಛಂದೋಜ್ಞಾನಂ ಪ್ರಕಲ್ಪಿತಮ್ ॥66॥
ಋಗ್ವೇದ, ಯಜುರ್ವೇದ, ಸಾಮವೇದ ಮಂತ್ರಗಳ ಛಂದಸ್ಸುಗಳನ್ನು ತಿಳಿಯುವ ದೃಷ್ಟಿಯಿಂದ, ಸಂಶಯ-ವಿಕಲ್ಪಗಳನ್ನು ಪರಿಹರಿಸುವ ದೃಷ್ಟಿಯಿಂದ ಛಂದಶ್ಶಾಸ್ತ್ರವು ರಚಿತವಾಗಿದೆ.
ವರ್ಣಾಕ್ಷರಪದಾರ್ಥಾನಾಂ ಸಂಧಿಲಿಂಗವಿವಕ್ಷಿತಮ್ |

ನಾಮಧಾತುವಿವೇಕಾರ್ಥಂ ಪುರಾ ವ್ಯಾಕರಣಂ ಕೃತಮ್ ॥67॥
ವರ್ಣ, ಅಕ್ಷರ, ಪದಗಳ ಅರ್ಥ, ಸಂಧಿ, ಲಿಂಗ, ನಾಮ, ಧಾತು ಇವುಗಳ ವಿವೇಚನೆಗಾಗಿ ವ್ಯಾಕರಣಶಾಸ್ತ್ರವು ರಚಿಸಲ್ಪಟ್ಟಿದೆ.
ಯೂಪವೇದ್ಯಧ್ವರಾರ್ಥಂ ತು ಪ್ರೋಕ್ಷಣಶ್ರಪಣಾಯ ತು |
ಯಜ್ಞದೈವತಯೋಗಾರ್ಥಂ ಶಿಕ್ಷಾಜ್ಞಾನಂ ಪ್ರಕಲ್ಪಿತಮ್ ॥68॥
ಯೂಪ, ವೇದಿ, ಯಜ್ಞಗಳ ಸ್ವರೂಪವನ್ನು ತಿಳಿಯಲು, ಪ್ರೋಕ್ಷಣ, ಶ್ರಪಣ (ಚರುವನ್ನು ಬೇಯಿಸುವುದು) ಮುಂತಾದವುಗಳನ್ನು ಸರಿಯಾಗಿ ತಿಳಿಯಲು, ಯಜ್ಞ ಮತ್ತು ದೇವತೆಗಳಿರುವ ಸಂಬಂಧವನ್ನು ತಿಳಿಯಲು ಶಿಕ್ಷಾ ಎಂಬ ವೇದಾಂಗದ ರಚನೆಯಾಗಿದೆ.
ಯಜ್ಞಪಾತ್ರಪವಿತ್ರಾರ್ಥಂ ದ್ರವ್ಯಸಂಭರಣಾಯ ಚ |
ಸರ್ವಯಜ್ಞವಿಕಲ್ಪಾಯ ಪುರಾ ಕಲ್ಪಂ ಪ್ರಕಲ್ಪಿತಮ್ ॥69॥)
ಯಜ್ಞಪಾತ್ರೆಗಳ ಶುದ್ಧಿ, ಯಜ್ಞಸಂಬಂಧವಾದ ಸಾಮಗ್ರಿಗಳ ಸಂಗ್ರಹ, ಸರ್ವಯಜ್ಞಗಳ ವೈಕಲ್ಪಿಕ ವಿಧಾನಗಳ ಜ್ಞಾನ-ಇವುಗಳನ್ನು ತಿಳಿಯುವ ದೃಷ್ಟಿಯಿಂದ ಕಲ್ಪಶಾಸ್ತ್ರವು ರಚಿತವಾಗಿದೆ.
ನಾಮಧಾತುವಿಭಕ್ತೀನಾಂ ತತಶ್ತ್ವರ್ಥನಿಯಮಾಯ ಚ |
ಸರ್ವವೇದನಿರುಕ್ತಾನಾಂ ನಿರುಕ್ತಮೃಷಿಭಿಃ ಕೃತಮ್ ॥70॥
ಸಮಗ್ರ ವೇದದಲ್ಲಿ ಪ್ರಯೋಗಿಸಿರುವ ನಾಮ, ಧಾತು, ವಿಭಕ್ತಿಗಳ ತಾತ್ವಿಕಾರ್ಥವನ್ನು ನಿಶ್ಚಯಿಸುವ ದೃಷ್ಟಿಯಿಂದ ಋಷಿಗಳು ನಿರುಕ್ತ ಎಂಬ ಶಾಸ್ತ್ರವನ್ನು ರಚಿಸಿದ್ದಾರೆ.
ವೇದ್ಯರ್ಥಂ ಪೃಥಿವೀ ಸೃಷ್ಟಾ ಸಂಭಾರಾರ್ಥಂ ತಥೈವ ಚ |
ಇಧ್ಮಾರ್ಥಮಥ ಯೂಪಾರ್ಥಂ ಬ್ರಹ್ಮಾ ಚಕ್ರೇ ವನಸ್ಪತಿಮ್ ॥71॥
ಯಜ್ಞದ ವೇದಿಗಳನ್ನು ನಿರ್ಮಿಸುವ ದೃಷ್ಟಿಯಿಂದ, ಯಜ್ಞಕ್ಕೆ ಬೇಕಾಗಿರುವ ಪದಾರ್ಥಗಳನ್ನು ಇಡುವ ದೃಷ್ಟಿಯಿಂದ ಬ್ರಹ್ಮನು ಪೃಥಿವಿಯನ್ನು ನೇಮಿಸಿದ್ದಾನೆ. ಯಜ್ಞಕ್ಕೆ ಬೇಕಾಗುವ ಸಮಿತ್ತುಗಳ ಸಲುವಾಗಿ, ಯೂಪಗಳ (ಬಲಿಗಂಬ) ಸಲುವಾಗಿ ಬ್ರಹ್ಮನು ವನಸ್ಪತಿಗಳನ್ನು ಸೃಷ್ಟಿಸಿದ್ದಾನೆ.
ಗ್ರಾಮ್ಯಾರಣ್ಯಾಶ್ಚ ಪಶವೋ ಜಾಯಂತೇ ಯಜ್ಞಕಾರಣಾತ್ |
ಮಂತ್ರಾಣಾಂ ವಿನಿಯೋಗಂ ಚ ಪ್ರೋಕ್ಷಣಶ್ರಪಣಂ ತಥಾ ॥72॥
ಗ್ರಾಮ್ಯಪದಾರ್ಥಗಳು, ಅರಣ್ಯಪದಾರ್ಥಗಳು, ಪಶುಗಳು ಯಜ್ಞ ಕಾರಣದಿಂದಲೇ ಸೃಷ್ಟವಾಗಿವೆ. ಮಂತ್ರಗಳ ವಿನಿಯೋಗಕ್ಕೆ ಪ್ರೋಕ್ಷಣ, ಶ್ರಪಣಗಳು (ಚರುವನ್ನು ಬೇಯಿಸುವುದು) ನಿರ್ಮಾಣವಾಗಿವೆ .
ಅನುಯಾಜಪ್ರಯಾಜಾಶ್ಚ ಮರುತಾಂ ಶಂಸಿನಸ್ತಥಾ |
ಔದ್ಗಾತ್ರಂ ಚೈವ ಸಾಮ್ನಾಂ ವೈ ಪ್ರತಿಪ್ರಸ್ಥಾನಮೇವ ಚ ॥73॥
ವಿಷ್ಣುಕ್ರಮೋಽನುತ್ಕ್ರಮಣಂ ದಕ್ಷಿಣಾವಭೃಥಂ ತಥಾ |
ತ್ರಿಕಾಲಮರ್ಚನಂ ಚೈವ ಸ್ಥಾನೇಷೂಪಹೃತಂ ತಥಾ ॥74॥
ದೇವತಾಗ್ರಹಣಂ ಮೋಕ್ಷಂ ಹವಿಷಾಂ ಶ್ರಪಣಂ ತಥಾ |
ನಾವಬುದ್ಧ್ಯಂತಿ ಯೇ ವಿಪ್ರಾ ನಿಂದಂತಿ ಚ ಪಶೋರ್ವಧಮ್ ॥75॥
ತೇ ಯಾಂತಿ ನರಕಂ ಘೋರಂ ರೌರವಂ ತಮಸಾಽಽವೃತಮ್ ॥76॥
ಅನುಯಾಜ-ಪ್ರಯಾಜಗಳು, ಮರುದ್ದೇವತೆಗಳ ಪ್ರಶಂಸೆಗಳು, ಉದ್ಗಾತ್ರ, ಸಾಮ, ಪ್ರತಿಪ್ರಸ್ಥಾನ, ದೀಕ್ಷಾಹೋಮ, ಬಳಿಕ ನಡೆಯುವ ಕರ್ಮಗಳು, ದಕ್ಷಿಣಾವಭೃಥ, ತ್ರಿಕಾಲಪೂಜೆ, ಸ್ಥಾನಗಳಲ್ಲಿ ತಂದ ಪದಾರ್ಥಗಳು, ದೇವತಾಗ್ರಹಣ, ಮೋಕ್ಷ, ಹವಿಸ್ಸುಗಳ ಶ್ರಪಣ (ಬೇಯಿಸುವಿಕೆ)- ಇವುಗಳನ್ನು ಯಾವ ಬ್ರಾಹ್ಮಣರು ಅರಿಯದೆ ವ್ಯರ್ಥವಾಗಿ ಪಶುವಧೆಯನ್ನು ನಿಂದಿಸುತ್ತಾರೋ ಅವರು ಕತ್ತಲೆಯಿಂದ ಕೂಡಿದ ಘೋರವಾದ ರೌರವ ನರಕಕ್ಕೆ ಸಾಗುತ್ತಾರೆ.
ಶತವರ್ಷಸಹಸ್ರಾಣಿ ತತ್ರ ಸ್ಥಿತ್ವಾ ನರಾಧಮಾಃ |
ಕ್ರಿಮಿಭಿರ್ಭಕ್ಷ್ಯಮಾಣಾಶ್ಚ ತಿಷ್ಠೇಯುಃ ಪೂಯಶೋಣಿತೇ ॥77॥
ಅಂತಹ ನರಾಧಮರು ಲಕ್ಷ ವರ್ಷಗಳ ಕಾಲ ರೌರವನರಕದಲ್ಲಿದ್ದು, ಮಲ, ರಕ್ತಗಳಿಂದ ತುಂಬಿದ ಬಾವಿಗಳಲ್ಲಿ ಕ್ರಿಮಿಗಳಿಂದ ತಿನ್ನಲ್ಪಡುವವರಾಗಿ ವಾಸ ಮಾಡುತ್ತಾರೆ.
ಯೂಪಾಸ್ತು ಮಂತ್ರಸಂಸ್ಕಾರೈರೇಷಾಂ ವೈ ಪಶವಸ್ತಥಾ |
ಯಜಮಾನೇನ ಸಹಿತಾಃ ಸ್ವರ್ಗಂ ಯಾಂತಿ ನರೇಶ್ವರ ॥78॥
ಯಜ್ಞದ ಪ್ರಕ್ರಿಯೆಯಲ್ಲಿ ಮಂತ್ರಸಂಸ್ಕೃತವಾದ ಯೂಪವಾಗಿ (ಬಲಿಗಂಬ) ನಿಂತಿರುವ ಸ್ಥಾವರ ಜೀವರು, ಪಶುಗಳು ಯಜಮಾನನಿಂದ ಸಹಿತವಾಗಿ ನರೇಶ್ವರನೇ, ಸ್ವರ್ಗಕ್ಕೆ ಹೋಗುತ್ತಾರೆ.
ಯಾವತ್ಕಾಲಂ ಹಿ ಯಜ್ವಾ ವೈ ಸ್ವರ್ಗಲೋಕೇ ಮಹೀಯತೇ |
ತಾವತ್ಕಾಲಂ ಪ್ರಮೋದಂತೇ ಪಶವೋ ಹ್ಯಧ್ವರೇ ಹತಾಃ ॥79॥
ಎಷ್ಟು ಕಾಲ ಯಜ್ಞದಲ್ಲಿ ಇವುಗಳ ಬಳಕೆಯಾಗಿದೆಯೋ ಅಷ್ಟು ಕಾಲ ಅಧ್ವರ (ಯಾಗ)ದಲ್ಲಿ ಹತವಾದ ಪಶುಗಳು ಸ್ವರ್ಗಲೋಕದಲ್ಲಿ ಸುಖದಿಂದ ಕಾಲ ಕಳೆಯುತ್ತವೆ.
ವೃಕ್ಷಾ ಯೂಪತ್ವಮಿಚ್ಛಂತಿ ಪಶುತ್ವಂ ಪಶವಸ್ತಥಾ |
ತೃಣಾನೀಚ್ಛಂತಿ ಬರ್ಹಿಷ್ಟ್ವಂ ಓಷಧ್ಯಶ್ಚ ಹವಿಷ್ಯತಾಮ್ ॥80॥
ಮರ-ಗಿಡಗಳೆಲ್ಲವೂ ಯಜ್ಞದ ಯೂಪವಾಗಬೇಕು ಎಂದು ಬಯಸುತ್ತವೆ. ಪಶುಗಳೆಲ್ಲವೂ ಯಜ್ಞದ ಬಲಿಪಶುವಾಗಬೇಕೆಂದು ಬಯಸುತ್ತವೆ. ತೃಣ-ದರ್ಭೆಗಳು ಇಧ್ಮಬರ್ಹಿಗಳಾಗಬೇಕೆಂದು ಬಯಸುತ್ತವೆ. ಓಷಧಿಸಸ್ಯಗಳು ಯಜ್ಞದಲ್ಲಿ ಹವಿಸ್ಸಾಗಬೇಕೆಂದು

ಬಯಸುತ್ತವೆ.
ಸೋಮತ್ವಂ ಚಲ ತಾಃ ಸರ್ವಾ ವೇದಿತ್ವಂ ಚ ವಸುಂಧರಾ ॥81॥
ಲತೆಗಳೆಲ್ಲವೂ ಯಜ್ಞದಲ್ಲಿ ಸೋಮತ್ವವನ್ನು ಹೊಂದಬೇಕೆಂದು ಬಯಸುತ್ತವೆ. ಭೂದೇವಿಯು ಯಜ್ಞವೇದಿಕೆಯಾಗಬೇಕೆಂದು ಬಯಸುತ್ತಾಳೆ.
ಯಸ್ಮಾತ್ ಪಶುತ್ವಮಿಚ್ಛಂತಿ ಪಶವಃ ಸ್ವರ್ಗಲಿಪ್ಸಯಾ |
ತಸ್ಮಾತ್ ಪಶುವಧೇ ಹಿಂಸಾ ನಾಸ್ತಿ ಯಜ್ಞೇಷು ಪಾಂಡವ ॥82॥
ಯಾವ ಕಾರಣದಿಂದ ಸ್ವರ್ಗವನ್ನು ಹೊಂದುವ ಬಯಕೆಯಿಂದ ಪಶುಗಳು ಯಜ್ಞದ ಬಲಿಪಶುವಾಗಬೇಕೆಂದು ಬಯಸುತ್ತವೆಯೋ ಆ ಕಾರಣದಿಂದ ಯಜ್ಞದಲ್ಲಿ ಪಶುವಧೆಯು ಹಿಂಸೆ ಎನಿಸುವುದಿಲ್ಲ.
ಅಹಿಂಸಾ ವೈದಿಕಂ ಕರ್ಮ ಬ್ರಹ್ಮಕರ್ಮೇತಿ ತತ್ಕೃತಮ್ ॥83॥
ವೈದಿಕವಾದ ಕರ್ಮಗಳನ್ನು ಅಹಿಂಸಾ ಕರ್ಮ ಎನ್ನುತ್ತಾರೆ. ಬ್ರಹ್ಮಕರ್ಮ ಎಂದೂ ಹೇಳುತ್ತಾರೆ.
ವೇದೋಕ್ತಂ ಯೇ ನ ಕುರ್ವಂತಿ ಹಿಂಸಾಬುದ್ಧ್ಯಾ ಕೃತೂನ್ ದ್ವಿಜಾಃ |
ಸದ್ಯಃ ಶೂದ್ರುತ್ವಮಾಯಾಂತಿ ಪ್ರೇತ್ಯ ಚಂಡಾಲತಾಮಪಿ ॥84॥
ವೇದೋಕ್ತವಾದ ಯಜ್ಞಗಳನ್ನು ಯಾವ ಬ್ರಾಹ್ಮಣರು ಹಿಂಸೆ ಎನ್ನುವ ಬುದ್ಧಿಯಿಂದ ಆಚರಿಸುವುದಿಲ್ಲವೋ ಅವರು ಕೂಡಲೇ ಶೂದ್ರುತ್ವವನ್ನು ಹೊಂದುತ್ತಾರೆ. ಸತ್ತ ಬಳಿಕ ಚಂಡಾಲರಾಗುತ್ತಾರೆ.
ಗಾವೋ ಯಜ್ಞಾರ್ಥಮುತ್ಪನ್ನಾ ದಕ್ಷಿಣಾರ್ಥಂ ತಥೈವ ಚ |
ಸುವರ್ಣಂ ರಜತಂ ಚೈವ ಪಾತ್ರಕುಂಭಾರ್ಥಮೇವ ಚ ॥85॥
ಹಸುಗಳು ಯಜ್ಞಕ್ಕಾಗಿಯೇ ಸೃಷ್ಟಿಸಲ್ಪಟ್ಟಿವೆ. ಅದೇ ರೀತಿ ಯಜ್ಞದ ದಕ್ಷಿಣೆಗಾಗಿಯೂ ಸೃಷ್ಟಿಸಲ್ಪಟ್ಟಿವೆ. ಚಿನ್ನ ಮತ್ತು ಬೆಳ್ಳಿಗಳು ಯಜ್ಞದಲ್ಲಿ ಬೇಕಾಗುವ ಪಾತ್ರೆಗಳ ನಿಮಿತ್ತದಿಂದ, ಕಲಶಗಳ ದೃಷ್ಟಿಯಿಂದ ಸೃಷ್ಟಿಸಲ್ಪಟ್ಟಿವೆ.
ದರ್ಭಾಃ ಸಂಸ್ತರಣಾರ್ಥಂ ತು ರಕ್ಷಸಾಂ ರಕ್ಷಣಾಯ ಚ |
ಯಜನಾರ್ಥಂ ದ್ವಿಜಾಃ ಸೃಷ್ಟಾಸ್ತಾರಕಾ ದಿವಿ ದೇವತಾಃ ॥86॥
ದರ್ಭೆಗಳು ಯಜ್ಞವೇದಿಕೆಯ ಸುತ್ತಲೂ ಹರಡುವ ದೃಷ್ಟಿಯಿಂದ, ರಾಕ್ಷಸರ ದೆಸೆಯಿಂದ ಯಜ್ಞವನ್ನು ರಕ್ಷಿಸುವ ದೃಷ್ಟಿಯಿಂದಲೂ ಸೃಷ್ಟಿಸಲ್ಪಟ್ಟಿವೆ. ಬ್ರಾಹ್ಮಣರು ಯಾಗ ಮಾಡಿಸಲು, ನಕ್ಷತ್ರಗಳ, ದೇವತೆಗಳ ಸೃಷ್ಟಿಯು ಆಗಿದೆ.
ಕ್ಷತ್ರಿಯಾ ರಕ್ಷಣಾರ್ಥಂ ತು ವೈಶ್ಯಾ ವಾರ್ತಾನಿಮಿತ್ತತಃ |
ಶುಶ್ರೂಷಾರ್ಥಂ ತ್ರಯಾಣಾಂ ತು ಶೂದ್ರಾಃ ಸೃಷ್ಟಾಃ ಸ್ವಯಂಭುವಾ ॥
ಬ್ರಹ್ಮಜಾತಿಯನ್ನು ರಕ್ಷಿಸುವ ಸಲುವಾಗಿ ಕ್ಷತ್ರಿಯರ ಸೃಷ್ಟಿಯಾಗಿದೆ. ಕೃಷಿ-ಗೋರಕ್ಷ- ವಾಣಿಜ್ಯಗಳ ದೃಷ್ಟಿಯಿಂದ ವೈಶ್ಯರನ್ನು ಬ್ರಹ್ಮನು ಸೃಷ್ಟಿಸಿದ್ದಾನೆ. ಮೂರು ವರ್ಣದವರನ್ನು ಸೇವಿಸುವ ದೃಷ್ಟಿಯಿಂದ ಬ್ರಹ್ಮನು ಶೂದ್ರರನ್ನು ಸೃಷ್ಟಿಸಿದ್ದಾನೆ.
ಏವಮೇತಜ್ಜಗತ್ ಸರ್ವಮಗ್ನಿಹೋತ್ರಕೃತೇ ಕೃತಮ್ ॥88॥
ಈ ರೀತಿಯಾಗಿ ಸಮಗ್ರ ಜಗತ್ತು ಅಗ್ನಿಹೋತ್ರ ದೃಷ್ಟಿಯಿಂದಲೇ ಸೃಷ್ಟಿಸಲ್ಪಟ್ಟಿದೆ.
ನಾವಬುದ್ಧ್ಯಂತಿ ಯೇ ಚೈವಂ ನರಾಸ್ತು ತಮಸಾ ವೃತಾಃ |
ತೇ ಯಾಂತಿ ನರಕಂ ಘೋರಂ ರೌರವಂ ನಾಮ ವಿಶ್ರುತಮ್ ॥89॥
ಯಾರು ಈ ಉದ್ದೇಶಗಳನ್ನು ಅಜ್ಞಾನದಿಂದ ಆವೃತರಾಗಿ ಅರ್ಥ ಮಾಡಿಕೊಳ್ಳುವುದಿಲ್ಲವೋ ಅವರು ಪ್ರಸಿದ್ಧವಾದ ರೌರವವೆಂಬ ನರಕಕ್ಕೆ ಹೋಗುತ್ತಾರೆ.
ರೌರವಾದ್ ವಿಪ್ರಯುಕ್ತಾಸ್ತು ಕ್ರಿಮಿಯೋನಿಂ ವ್ರಜಂತಿ ತೇ ॥90॥
ರೌರವ ನರಕದಿಂದ ಬಿಡುಗಡೆ ಹೊಂದಿದರೂ ಕ್ರಿಮಿಯೋನಿಯಲ್ಲಿಯೇ ಹುಟ್ಟುತ್ತಾರೆ.
ಯಥೋಕ್ತಮಗ್ನಿಹೋತ್ರಾಣಾಂ ಶುಶ್ರೂಷಂತಿ ಚ ಯೇ ದ್ವಿಜಾಃ |
ತೈಸ್ತು ದತ್ತಂ ಹುತಂ ಚೇಷ್ಟಂ ದತ್ತಮಧ್ಯಾಪಿತಂ ಭವೇತ್ ॥91॥
ಯಾವ ಬ್ರಾಹ್ಮಣರು ಶ್ರದ್ಧೆಯಿಂದ ಅಗ್ನಿಹೋತ್ರವನ್ನು ಮಾಡುತ್ತಾರೋ ಅವರು ಮಾಡಿದ ದಾನ, ಮಾಡಿದ ಯಜ್ಞ, ಹೋಮ, ಅಧ್ಯಯನ ಇವುಗಳ ಫಲವನ್ನು ಹೊಂದುತ್ತಾರೆ.
ಏವಮಿಷ್ಟಂ ಚ ಪೂರ್ತಂ ಚ ಯದ್ ವಿಪ್ರೈಃ ಕ್ರಿಯತೇ ನೃಪ |
ತತ್ಸರ್ವಂ ಸಮ್ಯಗಾಹೃತ್ಯ ಚಾದಿತ್ಯೇ ಸ್ಥಾಪಯಾಮ್ಯಹಮ್ ॥92॥
ಯಾವ ಬ್ರಾಹ್ಮಣರು ಯಜ್ಞಗಳನ್ನು ಮಾಡುತ್ತಾರೋ, ಲೋಕೋಪಕಾರಗಳನ್ನು ಮಾಡುತ್ತಾರೋ, ಅದೆಲ್ಲವನ್ನೂ ಭಗವಂತನಾದ ನಾನು ಸ್ವೀಕರಿಸಿ, ಸೂರ್ಯಮಂಡಲದಲ್ಲಿ ಆ ಪುಣ್ಯವನ್ನು ಸ್ಥಾಪಿಸುತ್ತೇನೆ.
ಮಯಾ ಸ್ಥಾಪಿತಮಾದಿತ್ಯೇ ಲೋಕಸ್ಯ ಸುಕೃತಂ ಹಿ ಯತ್ |
ಧಾರಯೇತ್ ತತ್ ಸಹಸ್ರಾಂಶುಃ ಸುಕೃತಂ ಹ್ಯಗ್ನಿಹೋತ್ರಿಣಾಮ್ ॥93॥
ಹೀಗೆ ಸೂರ್ಯನು ಅಗ್ನಿಹೋತ್ರಗಳ ಸುಕೃತವನ್ನು ನನ್ನ ಮೂಲಕ ಧರಿಸುತ್ತಾನೆ. ಆದ್ದರಿಂದ ಆದಿತ್ಯನಲ್ಲಿ ಸ್ಥಾಪಿಸಿದ ಲೋಕದ ಸುಕೃತವೇ ಆದಿತ್ಯರೂಪದಲ್ಲಿ ಕಾಣುತ್ತಿದೆ. ಅಗ್ನಿಹೋತ್ರಿಗಳ ಸುಕೃತವನ್ನು ಆದಿತ್ಯನು ಧರಿಸಿರುತ್ತಾನೆ.
ಯಾವತ್ಕಾಲಂ ತು ತಿಷ್ಠಂತಿ ಲೋಕೇ ಚಾಪ್ಯಗ್ನಿಹೋತ್ರಿಣಃ |
ತಾವದೇವ ಹಿ ಪುಣ್ಯೇನ ದೀಪ್ಯತೇ ರವಿಣಾಽಂಬರೇ ॥94॥
ಎಷ್ಟು ಕಾಲ ಈ ಲೋಕದಲ್ಲಿ ಬ್ರಾಹ್ಮಣರು ಅಗ್ನಿಹೋತ್ರಿಗಳಾಗಿ ಸತ್ಕರ್ಮಗಳನ್ನು ಮಾಡುತ್ತಿರುತ್ತಾರೋ ಆ ಪುಣ್ಯದಿಂದ ಅಷ್ಟು ಕಾಲ ಅಂತರಿಕ್ಷ ಲೋಕದಲ್ಲಿ ಸೂರ್ಯನ ಜೊತೆಗೆ ಬೆಳಗುತ್ತಾರೆ.

ಸ್ವರ್ಗೇ ಸ್ವರ್ಗಂ ಗತಾನಾಂ ತು ವೀರ್ಯಾದ್ ಭವತಿ ವೀರ್ಯವಾನ್ |
ತತ್ರ ತೇ ಹ್ಯುಪಭುಂಜಂತಿ ಹ್ಯಗ್ನಿಹೋತ್ರಸ್ಯ ತತ್ಫಲಮ್ ॥95॥
ಸ್ವರ್ಗಕ್ಕೆ ಹೋದವರು ಸ್ವರ್ಗಸುಖವನ್ನು ಅನುಭವಿಸುತ್ತಾರೆ. ಆ ತಪಸ್ಸಿನ ಬಲದಿಂದ ವೀರ್ಯವಂತರಾಗುತ್ತಾರೆ. ಅಗ್ನಿಹೋತ್ರದ ಫಲವನ್ನು ಸ್ವರ್ಗಲೋಕದಲ್ಲಿ ಚೆನ್ನಾಗಿ ಅನುಭವಿಸುತ್ತಾರೆ.
ಬಾಲಾಹಿತಾಗ್ನಯೋ ಯೇ ಚ ಶೂದ್ರಾನ್ನಾದ್ ವಿರತಾಃ ಸದಾ |
ಕ್ರೋಧಲೋಭವಿನಿರ್ಮುಕ್ತಾಃ ಪ್ರಾತಃ ಸ್ನಾನಪರಾಯಣಾಃ ॥96॥
ಯಥೋಕ್ತಮಗ್ನಿಹೋತ್ರಂ ವೈ ಜುಹ್ವತೇ ವಿಜಿತೇಂದ್ರಿಯಾಃ ॥97॥
ಆತಿಥೇಯಾಃ ಸದಾ ಸೌಮ್ಯಾ ದ್ವಿಕಾಲಂ ಮತ್ಪರಾಯಣಾಃ |
ತೇ ಯಾಂತ್ಯಪುನರಾವೃತ್ತಿಂ ಭಿತ್ತ್ವಾ ಚಾದಿತ್ಯಮಂಡಲಮ್ ॥98॥
ಯಾರು ಬಾಲ್ಯದಿಂದಲೂ ಅಗ್ನಿಹೋತ್ರವನ್ನು ಮಾಡುತ್ತಿದ್ದಾರೋ, ಶೂದ್ರಾನ್ನವನ್ನು ತ್ಯಜಿಸಿದ್ದಾರೋ, ಕ್ರೋಧ-ಲೋಭಗಳಿಂದ ಮುಕ್ತರಾಗಿದ್ದಾರೋ, ಪ್ರತಿದಿನವೂ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡುತ್ತಾರೋ, ವಿಧಿವತ್ತಾಗಿ ಜಿತೇಂದ್ರಿಯರಾಗಿದ್ದು ಅಗ್ನಿಹೋತ್ರವನ್ನು ಅನುಷ್ಠಾನ ಮಾಡುತ್ತಾರೋ, ಸದಾ ಅತಿಥಿ ಸತ್ಕಾರದಲ್ಲಿ ಆಸಕ್ತರಾಗಿರುತ್ತಾರೋ, ಶಾಂತಭಾವದಲ್ಲಿ ಇರುತ್ತಾರೋ, ಎರಡು ಕಾಲಗಳಲ್ಲಿಯೂ ಸಂಧ್ಯಾವಂದನೆಗಳನ್ನು ಸರಿಯಾಗಿ ಮಾಡುತ್ತಾರೋ ಅವರು ಸೂರ್ಯಮಂಡಲವನ್ನು ಭೇದಿಸಿಕೊಂಡು ಪುನರಾವೃತ್ತಿಯಿಲ್ಲದ ಲೋಕಕ್ಕೆ ಹೊಗುತ್ತಾರೆ.
ಮಮ ಲೋಕಂ ಸಪತ್ನೀಕಾ ಯಾನ್ಯೈಃ ಸೂರ್ಯೋದಯಪ್ರಭೈಃ |
ತತ್ರ ಬಾಲಾರ್ಕಸಂಕಾಶಾಃ ಕಾಮಗಾಃ ಕಾಮರೂಪಿಣಃ ॥99॥
ಬಳಿಕ ನನ್ನ ಲೋಕದಲ್ಲಿ ಉದಿಸುವ ಸೂರ್ಯನಂತೆ ಪ್ರಭೆಯುಳ್ಳ ವಿಮಾನದಲ್ಲಿ ಸಪತ್ನೀಕರಾಗಿ ಕುಳಿತು, ಉದಿಸುವ ಸೂರ್ಯನಂತೆ ಬೆಳಗುತ್ತಾ, ಕಾಮರೂಪಿಗಳಾಗಿ ಇಷ್ಟಾರ್ಥಗಳನ್ನು ಪಡೆಯುತ್ತಾ ಸಂಚರಿಸುತ್ತಾರೆ.
ಐಶ್ವರ್ಯಗುಣಸಂಪನ್ನಾಃ ಕ್ರೀಡಂತಿ ಚ ಯಥಾಸುಖಮ್ |
ಇತ್ಯೇಷಾ ಹ್ಯಾಹಿತಾಗ್ನೀನಾಂ ವಿಭೂತಿಃ ಪಾಂಡುನಂದನ ॥100॥
ಪಾಂಡುನಂದನನೇ, ಐಶ್ವರ್ಯಗುಣಸಂಪನ್ನರಾದ ಅವರು ಯಥೇಷ್ಟವಾಗಿ ಕ್ರೀಡಿಸುತ್ತಾರೆ. ಸುಖವನ್ನು ಹೊಂದುತ್ತಾರೆ. ಈ ರೀತಿಯಾಗಿ ಆಹಿತಾಗ್ನಿಗಳಿಗೆ ಸಿಗುವ ಫಲವನ್ನು, ಅವರ ಐಶ್ವರ್ಯಗಳನ್ನು ನಿರೂಪಿಸಿದ್ದೇನೆ.
ಯೇ ಚ ವೇದಶ್ರುತಿಂ ಕೇಚಿನ್ನಿಂದಮಾನಾ ಹ್ಯಬುದ್ಧಯಃ |
ಪ್ರಮಾಣಂ ನ ಚ ಕುರ್ವಂತಿ ತೇ ಯಾಂತಿ ಹ್ಯಕ್ಷಯಂ ತಮಃ ॥101॥
ಯಾರು ಈ ಲೋಕದಲ್ಲಿ ಮೂರ್ಖರಾಗಿ ವೇದಗಳನ್ನು ನಿಂದಿಸುತ್ತಾ, ದಡ್ಡತನದಿಂದ ಶ್ರುತಿಪ್ರಮಾಣವನ್ನು ಗೌರವಿಸುವುದಿಲ್ಲವೋ ಅವರು ಅಕ್ಷಯವಾದ ಅಂಧಂತಮಸ್ಸನ್ನು ಹೊಂದುತ್ತಾರೆ.
ಪ್ರಮಾಣಮಿತಿಹಾಸಂ ಚ ವೇದಾನ್ ಕುರ್ವಂತಿ ಯೇ ದ್ವಿಜಾಃ |
ತೇ ಯಾಂತ್ಯಮರಸಾಯುಜ್ಯಂ ನಿತ್ಯಮಾಸ್ತಿಕ್ಯಬುದ್ಧಯಃ ॥102॥
ಯಾವ ಆಸ್ತಿಕ್ಯಬುದ್ಧಿಯುಳ್ಳ ಬ್ರಾಹ್ಮಣರು ವೇದಗಳನ್ನು, ಇತಿಹಾಸವನ್ನು ಪ್ರಮಾಣವೆಂದು ಭಾವಿಸುತ್ತಾರೋ ಅವರು ದೇವತೆಗಳ ಸಾಯುಜ್ಯವನ್ನು ಹೊಂದುತ್ತಾರೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಏಕಾದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹನ್ನೆರಡನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಚಾಂದ್ರಾಯಣವ್ರತದ
ವಿಧಿಗಳನ್ನು ನಿರೂಪಿಸಿದುದು. ಚಾಂದ್ರಾಯಣವ್ರತದ ಆಚರಣಶೀಲರಿಗೆ ದೊರೆಯುವ ಫಲವನ್ನು ಹೇಳಿದುದು.
ಯುಧಿಷ್ಠಿರಃ
ಚಕ್ರಾಯುಧ ನಮಸ್ತೇಽಸ್ತು ದೇವೇಶ ಗರುಡಧ್ವಜ |
ಚಾಂದ್ರಾಯಣವಿಧಿಂ ಪುಣ್ಯಮಾಖ್ಯಾಹಿ ಭಗವನ್ ಮಮ ॥1॥
ಯುಧಿಷ್ಠಿರ ಚಕ್ರಾಯುಧನೇ, ಗರುಡಧ್ವಜನೇ, ದೇವೇಶನೇ, ಪೂಜ್ಯನೇ, ನಿನಗೆ ನಮಸ್ಕಾರ. ನನ್ನಲ್ಲಿ ಕರುಣೆಯಿಂದ ಚಾಂದ್ರಾಯಣ ವ್ರತದ ವಿಧಿಯನ್ನು, ಅದರಿಂದ ದೊರೆಯುವ ಪುಣ್ಯವನ್ನು ತಿಳಿಸುವ ಕೃಪೆತೋರು.
ಶ್ರೀಭಗವಾನ್
ಶೃಣು ಪಾಂಡವ ತತ್ತ್ವೇನ ಸರ್ವಪಾಪಪ್ರಣಾಶನಮ್ |
ಪಾಪಿನೋ ಯೇನ ಶುದ್ಧ್ಯಂತಿ ತತ್ ತೇ ವಕ್ಷ್ಯಾಮಿ ಸರ್ವಶಃ ॥2॥
ಶ್ರೀಭಗವಾನ್ ಪಾಂಡವನೇ, ಸಮಸ್ತ ಪಾಪಗಳನ್ನು ನಾಶಮಾಡುವ ಪಾಪಿಗಳು ಯಾವ ವ್ರತಾಚಾರಣೆಯಿಂದ ಶುದ್ಧಿಯನ್ನು ಹೊಂದುತ್ತಾರೋ ಅಂತಹ ಚಾಂದ್ರಾಯಣದ ಬಗ್ಗೆ ವಿಧಿ-ನಿಯಮಗಳನ್ನು ತಿಳಿಸುತ್ತೇನೆ.
ಬ್ರಾಹ್ಮಣಃ ಕ್ಷತ್ರಿಯೋ ವಾಽಪಿ ವೈಶ್ಯೋ ವಾ ಚರಿತವ್ರತಃ |
ಯಥಾವತ್ ಕರ್ತುಕಾಮೋ ಯಃ ತಸ್ಯೇಯಂ ಪ್ರಥಮಾ ಕ್ರಿಯಾ ॥3॥
ಬ್ರಾಹ್ಮಣನಾಗಲೀ, ಕ್ಷತ್ರಿಯನಾಗಲೀ, ವೈಶ್ಯನಾಗಲೀ ಯಥಾವತ್ತಾಗಿ ಚಾಂದ್ರಾಯಣ ವ್ರತವನ್ನು ಮಾಡಲು ಬಯಸುವವನು ಮೊಟ್ಟ

ಮೊದಲು ಈ ಕರ್ಮವನ್ನು ಮಾಡಬೇಕು.
ಶೋಧಯೇತ್ತು ಶರೀರಂ ಸ್ವಂ ಪಂಚಗವ್ಯೇನ ಯಂತ್ರಿತಮ್ |
ಸಶಿರಃ ಕೃಷ್ಣಪಕ್ಷೇ ತು ತತಃ ಕುರ್ವೀತ ವಾಪನಮ್ ॥4॥
ನಿಯಮದಲ್ಲಿದ್ದುಕೊಂಡು ಪಂಚಗವ್ಯ ಪ್ರಾಶನವನ್ನು ಮಾಡಿ ಶರೀರವನ್ನು ಶುದ್ಧೀಕರಿಸಿಕೊಂಡು ಕೃಷ್ಣ ಪಕ್ಷದ ಅಮಾವಾಸ್ಯೆಯ ದಿವಸ ಕ್ಷೌರ ಮಾಡಿಸಿಕೊಳ್ಳಬೇಕು.
ಶುದ್ಧವಾಸಾಃ ಶುಚಿರ್ಭೂತ್ವಾ ಮೌಂಜೀಂ ಬಧ್ನೀತ ಮೇಖಲಾಮ್ |
ಪಾಲಾಶದಂಡಮಾದಾಯ ಬ್ರಹ್ಮಚಾರಿವ್ರತೇ ಸ್ಥಿತಃ ॥5॥
ಬಳಿಕ ಶುದ್ಧವಾದ ವಸ್ತ್ರವನ್ನು ಧರಿಸಿ, ಮುಂಜಹುಲ್ಲಿನಿಂದ ಮಾಡಿದ ಉಡಿದಾರವನ್ನು ಕಟ್ಟಿಕೊಂಡು, ಮುತ್ತುಗದ ದಂಡವನ್ನು ಹಿಡಿದು ಬ್ರಹ್ಮಚರ್ಯವ್ರತದಲ್ಲಿರಬೇಕು.
ಕೃತೋಪವಾಸಃ ಪೂರ್ವಂ ತು ಶುಕ್ಲಪ್ರತಿಪದಿ ದ್ವಿಜಃ |
ನದೀಸಂಗಮತೀರ್ಥೇಷು ಶುಚೌ ದೇಶೇ ಗೃಹೇಽಪಿ ವಾ ॥6॥
ದ್ವಿಜನು ಅಮಾವಾಸ್ಯೆಯ ದಿವಸ ಉಪವಾಸ ಮಾಡಿ, ಶುಕ್ಲ ಪಕ್ಷದ ಪ್ರತಿಪತ್ ದಿನದಲ್ಲಿ ನದಿಗಳ ಸಂಗಮದಲ್ಲಿ ಅಥವಾ ಪವಿತ್ರವಾದ ಸ್ಥಳದಲ್ಲಿ ಮನೆಯಲ್ಲಾಗಲಿ, ಈ ವ್ರತವನ್ನು ಆರಂಭಿಸಬೇಕು.
ಗೋಮಯೇನೋಪಲಿಪ್ತೇಽಥ ಸ್ಥಂಡಿಲೇಽಗ್ನಿಂ ನಿಧಾಪಯೇತ್ ॥7॥
ಗೋಮಯದಿಂದ ಲಿಪ್ತವಾದ ಸ್ಥಂಡಿಲದಲ್ಲಿ ಅಗ್ನಿಯನ್ನು ಸ್ಥಾಪಿಸಬೇಕು.
ಆಘಾರಾವಾಜ್ಯಭಾಗೌ ಚ ಪ್ರಣವಂ ವ್ಯಾಹೃತಿಂ ತಥಾ |
ವಾರುಣಂ ಚಾಪಿ ಪಂಚೈವ ಹುತ್ವಾ ಸರ್ವಾನ್ ಯಥಾಕ್ರಮಮ್ ॥8॥
ಮೊದಲು ನಿತ್ಯಕರ್ಮಗಳನ್ನು ಮುಗಿಸಿ, ಒಂದು ವೇದಿಕೆಯ ಮೇಲೆ ಅಗ್ನಿಯನ್ನು ಸ್ಥಾಪಿಸಿ, ಅದರಲ್ಲಿ ಅನುಕ್ರಮವಾಗಿ ಆಘಾರ, ಆಜ್ಯಭಾಗ, ಪ್ರಣವ, ವ್ಯಾಹೃತಿವಾರುಣ ಹೋಮಗಳನ್ನು ಕ್ರಮವಾಗಿ ಮಾಡಬೇಕು.
ಸತ್ಯಾಯ ವಿಷ್ಣವೇ ಚಾಪಿ ಬ್ರಹ್ಮರ್ಷಿಭ್ಯೋಽಥ ಬ್ರಹ್ಮಣೇ |
ವಿಶ್ವೇಭ್ಯಶ್ಚೈವ ದೇವೇಭ್ಯಃ ಸಪ್ರಜಾಪತಯೇ ತಥಾ ॥9॥
ಷಟ್ಕೃತ್ವೋ ಜುಹುಯಾತ್ ಪಶ್ಚಾತ್ ಪ್ರಾಯಶ್ಚಿತ್ತಾಹುತೀರ್ದ್ವಿಜಃ |
ತತಃ ಸಮಾಪಯೇದಗ್ನಿಂ ಶಾಂತಿಂ ಕೃತ್ವಾಽಥ ಪೌಷ್ಟಿಕಮ್ ॥10॥
ಸತ್ಯಸ್ವರೂಪಿಯಾದ ವಿಷ್ಣುವಿಗೆ, ಬ್ರಹ್ಮರ್ಷಿಗಳಿಂದ ಸಹಿತನಾದ ಚತುರ್ಮುಖ ಬ್ರಹ್ಮನಿಗೆ, ವಿಶ್ವೇದೇವತೆಗಳಿಂದ ಕೂಡಿದ ದೇವತೆಗಳಿಗೆ, ಪ್ರಜಾಪತಿಗಳಿಗೆ ಆರು ಹೋಮಗಳನ್ನು ಮಾಡಿ ಪ್ರಾಯಶ್ಚಿತ್ತ ಆಹುತಿಯನ್ನು ದಾನ ಮಾಡಬೇಕು. ಬಳಿಕ ಶಾಂತಿ ಮತ್ತು ಪೌಷ್ಟಿಕ ಕರ್ಮಗಳನ್ನು ಮಾಡಿ ಅಗ್ನಿಕಾರ್ಯವನ್ನು ಸಮಾಪ್ತಿಗೊಳಿಸಬೇಕು.
ಪ್ರಣಮ್ಯ ಚಾಗ್ನಿಂ ಸೋಮಂ ಚ ಭಸ್ಮ ಧೃತ್ವಾ ತಥಾತ್ಮನಿ ॥11॥
ಸೋಮನಿಗೂ ಅಗ್ನಿಗೂ ನಮಸ್ಕರಿಸಿ ಹುತಭಸ್ಮವನ್ನು ವಿಧಿಬದ್ಧವಾಗಿ ಧರಿಸಬೇಕು.
ನದೀಂ ಗತ್ವಾ ವಿಮುಕ್ತಾಯ ಸೋಮಾಯ ವರುಣಾಯ ಚ |
ಆದಿತ್ಯಾಯ ನಮಸ್ಕೃತ್ವಾ ತತಃ ಸ್ನಾಯಾತ್ ಸಮಾಹಿತಃ ॥12॥
ನದಿಯ ಬಳಿ ಹೋಗಿ ಶುದ್ಧಾಂತಃಕರಣನಾಗಿ ನಾರಾಯಣನಿಗೆ, ಸೋಮನಿಗೆ, ವರುಣನಿಗೆ, ಸೂರ್ಯನಿಗೆ ಏಕಾಗ್ರತೆಯಿಂದ ನಮಸ್ಕರಿಸಿ ಸ್ನಾನ ಮಾಡಬೇಕು.
ಉತ್ತೀರ್ಯೋದಕಮಾಚಮ್ಯ ತ್ವಾಸೀನಃ ಪೂರ್ವತೋಮುಖಃ |
ಪ್ರಾಣಾಯಾಮಂ ತತಃ ಕೃತ್ವಾ ಪವಿತ್ರೈರಭಿಷೇಚನಮ್ ॥13॥
ಸ್ನಾನ ಮಾಡಿದ ಬಳಿಕ ನದಿಯಿಂದ ಮೇಲೆ ಬಂದು ಪೂರ್ವಾಭಿಮುಖವಾಗಿ ಕುಳಿತು, ಆಚಮನ ಮಾಡಿ ಪ್ರಾಣಾಯಾಮ ಮಾಡಬೇಕು. ಬಳಿಕ ದರ್ಭೆಯಿಂದ ಪ್ರೋಕ್ಷಿಸಿಕೊಳ್ಳಬೇಕು.
ಆಚಾಂತಸ್ತ್ವಭಿವೀಕ್ಷೇತ ಚೋರ್ಧ್ವಬಾಹುರ್ದಿವಾಕರಮ್ |
ಕೃತಾಂಜಲಿಪುಟಃ ಪಶ್ಚಾತ್ ಕುರ್ಯಾಚ್ಚೈವ ಪ್ರದಕ್ಷಿಣಮ್ ॥14॥
ಪುನಃ ಆಚಮನ ಮಾಡಿ, ತೋಳುಗಳನ್ನು ಮೇಲಕ್ಕೆತ್ತಿಕೊಂಡು ಸೂರ್ಯನನ್ನು ನೋಡಬೇಕು. ಬಳಿಕ ಎರಡು ಕೈಗಳನ್ನು ಜೋಡಿಸಿಕೊಂಡು ಸೂರ್ಯನಿಗೆ ಪ್ರದಕ್ಷಿಣೆ, ನಮಸ್ಕಾರವನ್ನು ಮಾಡಬೇಕು.
ನಾರಾಯಣಂ ವಾ ರುದ್ರಂ ವಾ ಬ್ರಹ್ಮಾಣಮಥವಾಽಪಿ ವಾ |
ಆರಣ್ಯಂ ಮಮ ಸೂಕ್ತಂ ವಾ ಪ್ರಾಗ್ಭೋಜನಮಥಾಪಿ ವಾ ॥15॥
ಭೋಜನಕ್ಕಿಂತ ಮೊದಲು ನಾರಾಯಣನನ್ನು, ರುದ್ರನನ್ನು, ಚತುರ್ಮುಖ ಬ್ರಹ್ಮನನ್ನು ಉಪನಿಷತ್ತುಗಳಿಂದ, ವಿಷ್ಣುಸೂಕ್ತಗಳಿಂದ, ಶಾಂತಿಸೂಕ್ತಗಳಿಂದ ಸ್ತೋತ್ರ ಮಾಡಬೇಕು.
ವೀರಘ್ನಮೃಷಭಂ ವಾಽಪಿ ತಥಾ ಚಾಪ್ಯಘಮರ್ಷಣಮ್ |
ಗಾಯತ್ರೀಂ ಮಮ ದೇವೀಂ ವಾ ಸಾವಿತ್ರೀಂ ವಾ ಜಪೇತ್ ತತಃ ॥
ಶತಂ ವಾಽಷ್ಟಶತಂ ವಾಽಪಿ ಸಹಸ್ರಮಥವಾ ಪರಮ್ ॥17॥
ರಕ್ಷೋಘ್ನಸೂಕ್ತವಾಗಲಿ, ವೃಷಭಸೂಕ್ತವಾಗಲಿ, ಲಕ್ಷ್ಮೀಸೂಕ್ತವಾಗಲಿ, ಸಾವಿತ್ರೀ ಸೂಕ್ತವಾಗಲಿ ನೂರು ಬಾರಿ ಅಥವಾ ನೂರ ಎಂಟು ಬಾರಿ ಜಪಿಸಬೇಕು. ಅವಕಾಶವಿದ್ದಲ್ಲಿ ಸಾವಿರ ಬಾರಿಯೂ ಜಪಿಸಬೇಕು.
ತತೋ ಮಧ್ಯಾಹ್ನಕಾಲೇ ವೈ ಪಾಯಸಂ ಪಾವಕಂ ಹಿ ವಾ |

ವಾಚಯಿತ್ವಾ ಪ್ರಯತ್ನೇನ ಪ್ರಯತಃ ಸುಸಮಾಹಿತಃ ॥18॥
ಬಳಿಕ ಮಧ್ಯಾಹ್ನ ಕಾಲದಲ್ಲಿ ಪಯಃಸಂಬಂಧಿಯಾದ ಆಪ್ಯಸೂಕ್ತವನ್ನೂ, ಅಗ್ನಿಸಂಬಂಧಿಯಾದ ಅಗ್ನಿಸೂಕ್ತವನ್ನು ಪವಿತ್ರನಾಗಿ, ಏಕಾಗ್ರಚಿತ್ತನಾಗಿ ಪ್ರಯತ್ನಪೂರ್ವಕವಾಗಿ ಪಠಿಸಬೇಕು.
ಪಾತ್ರಂ ತತಃ ಸಮಾದಾಯ ಸೌವರ್ಣಂ ರಾಜತಂ ತು ವಾ |
ತಾಮ್ರಂ ವಾ ಮೃಣ್ಮಯಂ ವಾಽಪಿ ಔದುಂಬರಮಥಾಪಿ ವಾ ॥19॥
ವೃಕ್ಷಾಣಾಂ ಯಾಜ್ಞಿಯಾನಾಂ ತು ಪರ್ಣೈರಾರ್ದ್ರೈರಕುತ್ಸಿತೈಃ |
ಪುಟಕೇನ ತು ಗುಪ್ತೇನ ಚರೇದ್ ಭೈಕ್ಷಂ ಸಮಾಹಿತಃ ॥20॥
ಬಳಿಕ ಚಿನ್ನದ ಪಾತ್ರೆಯನ್ನಾಗಲಿ, ಬೆಳ್ಳಿಯ ಪಾತ್ರೆಯನ್ನಾಗಲಿ, ತಾಮ್ರದ ಪಾತ್ರೆಯನ್ನಾಗಲಿ, ಮಣ್ಣಿನ ಪಾತ್ರೆಯನ್ನಾಗಲಿ, ಅತ್ತಿ ಮರದಿಂದ ಮಾಡಿದ ಪಾತ್ರೆಯನ್ನಾಗಲಿ, ಯಜ್ಞಕ್ಕೆ ಸಂಬಂಧಿಸಿದ ಹಸಿರು ಎಲೆಗಳಿಂದ ಮಾಡಿದ ದೊನ್ನೆಯನ್ನಾಗಲಿ ತೆಗೆದುಕೊಂಡು, ಆ ದೊನ್ನೆಯ ಮೇಲ್ಭಾಗವನ್ನು ಮುಚ್ಚಿ ಏಕಾಗ್ರಚಿತ್ತನಾಗಿ ಭಿಕ್ಷೆಯನ್ನು ಬೇಡಬೇಕು.
ಬ್ರಾಹ್ಮಣಾನಾಂ ಗೃಹಾಣಾಂ ತು ಸಪ್ತಾನಾಂ ನಾಪರಂ ವ್ರಜೇತ್ |
ಗೋದೋಹಮಾತ್ರಂ ತಿಷ್ಠೇತ್ ತು ವಾಗ್ಯತಃ ಸಂಯತೇಂದ್ರಿಯಃ ॥21॥
ಏಳು ಬ್ರಾಹ್ಮಣರ ಮನೆಗೆ ಹೋಗಿ ಭಿಕ್ಷೆಯನ್ನು ಬೇಡಬೇಕು. ಎಂಟನೆಯ ಮನೆಗೆ ಹೋಗಬಾರದು. ಜಿತೇಂದ್ರಿಯನಾಗಿ, ಮೌನಿಯಾಗಿ ಬ್ರಾಹ್ಮಣರ ಮನೆಯ ಮುಂದೆ ಒಂದು ಹಸುವನ್ನು ಕರೆಯುವಷ್ಟು ಕಾಲ ಮಾತ್ರ ನಿಲ್ಲಬೇಕು.
ನ ಹಸೇಚ್ಚ ನ ವೀಕ್ಷೇಚ್ಚ ನಾಭಿಭಾಷೇತ ವಾ ಸ್ತ್ರಿಯಾ |
ದೃಷ್ಟ್ವಾ ಮೂತ್ರಪುರೀಷಂ ವಾ ಚಂಡಾಲಂ ವಾ ರಜಸ್ವಲಾಮ್ ॥22॥
ಪತಿತಂ ಚ ಯಥಾ ಶ್ವಾನಮಾದಿತ್ಯಮವಲೋಕಯೇತ್ ॥23॥
ಭಿಕ್ಷೆಗೆ ಹೋದ ವ್ಯಕ್ತಿಯು ನಗಬಾರದು. ಆಚೆ-ಈಚೆ ನೋಡಬಾರದು. ಯಾವ ಸ್ತ್ರೀ ಬಳಿಯೂ ಮಾತನಾಡಬಾರದು. ಮೂತ್ರವನ್ನಾಗಲಿ, ಮಲವನ್ನಾಗಲಿ, ಚಂಡಾಲನನ್ನಾಗಿ, ರಜಸ್ವಲೆಯನ್ನಾಗಲಿ, ಪತಿತನನ್ನಾಗಲಿ, ನಾಯಿಯನ್ನಾಗಲಿ ನೋಡಿದಲ್ಲಿ ಕೂಡಲೇ ಪಾಪಪರಿಹಾರಕ್ಕೆ ಸೂರ್ಯನನ್ನು ನೋಡಬೇಕು.
ಯೋ ಹಿ ಪಾದುಕಾಮಾರುಹ್ಯ ಸರ್ವದಾ ಪ್ರಚರೇದ್ ದ್ವಿಜಃ |
ತಂ ದೃಷ್ಟ್ವಾ ಪಾಪಕರ್ಮಾಣಮಾದಿತ್ಯಮವಲೋಕಯೇತ್ ॥24॥
ಯಾವ ಬ್ರಾಹ್ಮಣನು ಯಾವಾಗಲು ಪಾದರಕ್ಷೆಯನ್ನು ಹಾಕಿಕೊಂಡು ಸಂಚರಿಸುತ್ತಾನೋ ಅಂತಹ ಪಾಪಕರ್ಮಿಯಾದ ಬ್ರಾಹ್ಮಣನನ್ನು ನೋಡಿ ಸೂರ್ಯನನ್ನು ನೋಡಬೇಕು.
ತತಸ್ತತ್ವಸಥಂ ಪ್ರಾಪ್ತೋ ಭಿಕ್ಷಾಂ ನಿಕ್ಷಿಪ್ಯ ಭೂತಳೇ |
ಪ್ರಕ್ಷಾಲ್ಯ ಪಾದಾವಾಜಾನು ಹಸ್ತಾವಾಕೂರ್ಪರಂ ಪುನಃ ॥25॥
ಆಚಮ್ಯ ವಾರಿಣಾ ತೇನ ವಹ್ನಿಂ ವಿಪ್ರಾಂಶ್ಚ ಪೂಜಯೇತ್ ॥26॥
ಹೀಗೆ ಏಳು ಮನೆಗಳಲ್ಲಿ ಭಿಕ್ಷಾಟನೆ ಮಾಡಿಕೊಂಡು ಮನೆಗೆ ಹೋಗಿ ಭೂಮಿಯ ಮೇಲೆ ಭಿಕ್ಷೆಯನ್ನಿಟ್ಟು ಮೊಳಕಾಲಿನವರೆಗೂ ಕಾಲುಗಳನ್ನೂ, ಮೊಣಕೈವರೆಗೂ ಕೈಗಳನ್ನು ತೊಳೆದುಕೊಂಡು, ಪುನಃ ಆಚಮನ ಮಾಡಿ, ಆ ತಂದ ಭಿಕ್ಷಾನ್ನದಿಂದ ಅಗ್ನಿಯನ್ನು ಬ್ರಾಹ್ಮಣರನ್ನು ಪೂಜಿಸಬೇಕು.
ಪಂಚ ಸಪ್ತಾಥವಾ ಕುರ್ಯಾದ್ ಭಾಗಾನ್ ಭೈಕ್ಷಸ್ಯ ತಸ್ಯ ವೈ |
ತೇಷಾಮನ್ಯತಮಂ ಪಿಂಡಮಾದಿತ್ಯಾಯ ನಿವೇದಯೇತ್ ॥27॥
ತಂದ ಆ ಭಿಕ್ಷೆಯನ್ನು ಐದು ಅಥವಾ ಏಳು ಭಾಗಗಳನ್ನಾಗಿ ಮಾಡಿ, ಅವುಗಳಲ್ಲಿ ಒಂದು ಭಾಗವನ್ನು ಸೂರ್ಯನಿಗೆ ನಿವೇದಿಸಬೇಕು.
ಬ್ರಹ್ಮಣೇ ಚಾಗ್ನಯೇ ಚೈವ ಸೋಮಾಯ ವರುಣಾಯ ಚ |
ವಿಶ್ವೇಭ್ಯಶ್ಚೈವ ದೇವೇಭ್ಯೋ ದದ್ಯಾದನ್ನಂ ಯಥಾಕ್ರಮಮ್ ॥28॥
ಕ್ರಮವಾಗಿ ಬ್ರಹ್ಮ-ಅಗ್ನಿ-ಸೋಮ-ವರುಣ-ವಿಶ್ವೇದೇವತೆಗಳಿಗೆ ಒಂದೊಂದು ಭಾಗವನ್ನು ನೀಡಬೇಕು.
ಅವಶಿಷ್ಟಮಥೈಕಂ ತು ವಕ್ತ್ರಮಾತ್ರಂ ಪ್ರಕಲ್ಪಯೇತ್ ॥29॥
ಉಳಿದ ಕಡೆಯ ಗ್ರಾಸವು (ತುತ್ತು) ಬಾಯೊಳಗೆ ಸುಲಭವಾಗಿ ಹೋಗುವಷ್ಟು ಗಾತ್ರದಲ್ಲಿರಬೇಕು.
ಅಂಗುಲ್ಯಗ್ರೇ ಸ್ಥಿತಂ ಪಿಂಡಂ ಗಾಯತ್ರ್ಯಾ ಚಾಭಿಮಂತ್ರಯೇತ್ |
ಅಂಗುಲೀಭಿಸ್ತ್ರಿಭಿಃ ಪಿಂಡಂ ಪ್ರಾಶ್ನೀಯಾತ್ ಪ್ರಾಙ್ಮುಖಃ ಶುಚಿಃ ॥30॥
ಪವಿತ್ರವಾದ ಭಾವದಿಂದ ಪೂರ್ವಾಭಿಮುಖವಾಗಿ ಕುಳಿತು ಮೂರು ಬೆರಳುಗಳ ಅಗ್ರಭಾಗದಲ್ಲಿ ಒಂದು ತುತ್ತನ್ನು ಇಟ್ಟುಕೊಂಡು ಗಾಯತ್ರಿಯಿಂದ ಆ ತುತ್ತನ್ನು ಅಭಿಮಂತ್ರಿಸಬೇಕು. ಅನಂತರ ಅಂಗುಷ್ಟ-ಮಧ್ಯದ ಎರಡು ಬೆರಳುಗಳ ಮೂಲಕ ಆ ತುತ್ತನ್ನು ಭುಂಜಿಸಬೇಕು.
ಯಥಾ ಚ ವರ್ಧತೇ ಸೋಮೋ ಹ್ರಸತೇ ಚ ಯಥಾ ಪುನಃ |
ತಥಾ ಪಿಂಡಾಶ್ಚ ವರ್ಧಂತೇ ಹ್ರಸಂತೇ ಚ ದಿನೇ ದಿನೇ ॥31॥
ತುತ್ತುಗಳನ್ನು ಚಂದ್ರನು ಶುಕ್ಲಪಕ್ಷಗಳಲ್ಲಿ ವರ್ಧಿಸುವಂತೆ ಹೆಚ್ಚಿಸುತ್ತಾ ಹೋಗಬೇಕು. ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷೀಣಿಸುವಂತೆ ಕಡಿಮೆ ಮಾಡುತ್ತಾ ಹೋಗಬೇಕು.
ತ್ರಿಕಾಲಂ ಸ್ನಾನಮಸ್ಯೋಕ್ತಂ ದ್ವಿಕಾಲಮಥವಾ ಸಕೃತ್ |
ಬ್ರಹ್ಮಚಾರೀ ಸದಾ ವಾಽಪಿ ನ ಚ ವಸ್ತ್ರಂ ಪ್ರಪೀಡಯೇತ್ ॥32॥
ಚಾಂದ್ರಾಯಣ ವ್ರತವನ್ನು ಆಚರಿಸುವಾಗ ಮೂರು ಕಾಲಗಳಲ್ಲಿಯೂ ಸ್ನಾನ ಮಾಡಬೇಕು. ಸಾಧ್ಯವಾಗದಿದ್ದಲ್ಲಿ ಎರಡು ಹೊತ್ತು

ಮಾಡಬೇಕು. ಅದೂ ಸಾಧ್ಯವಾಗದಿದ್ದಲ್ಲಿ ಒಂದು ಹೊತ್ತು ಮಾಡಬಹುದು. ವ್ರತವು ಸಮಾಪ್ತಿಯಾಗುವ ತನಕ ಬ್ರಹ್ಮಚರ್ಯವ್ರತದಲ್ಲಿರಬೇಕು. ವಸ್ತ್ರವನ್ನು ಹಿಂಡಬಾರದು.

ಸ್ಥಾನೇ ನ ದಿವಸಂ ತಿಷ್ಠೇದ್ ರಾತ್ರೌ ವೀರಾಸನಂ ವ್ರಜೇತ್ |
ಭವೇತ್ ಸ್ಥಂಡಿಲಶಾಯೀ ವಾऽಪ್ಯಥವಾ ವೃಕ್ಷಮೂಲಕಃ ॥33॥

ಹಗಲಿನಲ್ಲಿ ಒಂದೇ ಸ್ಥಳದಲ್ಲಿರಬಾರದು. ರಾತ್ರಿಯಲ್ಲಿ ವೀರಾಸನದಲ್ಲಿ ಕುಳಿತುಕೊಳ್ಳಬೇಕು. ಕೇವಲ ನೆಲದಲ್ಲಿ ಸ್ಥಂಡಿಲದಲ್ಲಿ (ದರ್ಭೆ) ಮಲಗಬೇಕು ಅಥವಾ ವೃಕ್ಷವನ್ನಾಶ್ರಯಿಸಿಯೂ ಮಲಗಬಹುದು.

ವಲ್ಕಲಂ ಯದಿ ವಾ ಕ್ಷೌಮಂ ಶಾಣಂ ಕಾರ್ಪಾಸಕಂ ತಥಾ |
ಆಚ್ಛಾದನಂ ಭವೇತ್ ತಸ್ಯ ವಸ್ತ್ರಾರ್ಥಂ ಪಾಂಡುನಂದನ ॥34॥

ಪಾಂಡುಪುತ್ರನೇ, ಆ ವ್ರತದ ಸಮಯದಲ್ಲಿ ನಾರುಮಡಿ, ರೇಷ್ಮೆ, ಸೆಣಬು, ಹತ್ತಿ ಇವುಗಳಿಂದ ಮಾಡಿದ ವಸ್ತ್ರವನ್ನು ಧರಿಸಬಹುದು.

ಏವಂ ಚಾಂದ್ರಾಯಣೇ ಪೂರ್ಣೇ ಮಾಸಸ್ಯಾಂತೇ ಪ್ರಯತ್ನವಾನ್ |
ಬ್ರಾಹ್ಮಣಾನ್ ಭೋಜಯೇದ್ ಭಕ್ತ್ಯಾ ದದ್ಯಾಚ್ಚೈವ ತು ದಕ್ಷಿಣಾಮ್ ॥

ಹೀಗೆ ಮಾಸದ ಕಡೆಯಲ್ಲಿ ಚಾಂದ್ರಾಯಣ ವ್ರತವು ಪೂರ್ಣವಾದ ಬಳಿಕ ಬ್ರಾಹ್ಮಣರಿಗೆ ಭಕ್ತಿಪೂರ್ವಕವಾಗಿ ಭೋಜನ ಮಾಡಿಸಬೇಕು. ದಕ್ಷಿಣೆಯನ್ನೂ ನೀಡಬೇಕು.

ಚಾಂದ್ರಾಯಣೇನ ಚೀರ್ಣೇನ ಯತ್ ಕೃತಂ ತೇನ ದುಷ್ಕೃತಮ್ |
ತತ್ಸರ್ವಂ ತತ್ಕ್ಷಣಾದೇವ ಭಸ್ಮೀಭವತಿ ಕಾಷ್ಠವತ್ ॥36॥

ಚಾಂದ್ರಾಯಣ ವ್ರತಾಚರಣೆಯಿಂದ ಮನುಷ್ಯನು ಮಾಡಿದ ಪಾಪಗಳೆಲ್ಲವೂ ಒಣಗಿದ ಕಟ್ಟಿಗೆಯು ಕ್ಷಣ ಮಾತ್ರದಲ್ಲಿ ಅಗ್ನಿಯಿಂದ ಭಸ್ಮವಾಗುವಂತೆ ಈ ವ್ರತವು ಆ ಕ್ಷಣದಲ್ಲಿಯೇ ಪಾಪವನ್ನು ಭಸ್ಮ ಮಾಡುತ್ತದೆ.

ಬ್ರಹ್ಮಹತ್ಯಾ ಚ ಗೋಹತ್ಯಾ ಸುವರ್ಣಸ್ತೈನ್ಯಮೇವ ಚ |
ಭ್ರೂಣಹತ್ಯಾ ಸುರಾಪಾನಂ ಗುರೋರ್ದಾರವ್ಯತಿಕ್ರಮಃ ॥37॥
ಏವಮನ್ಯಾನಿ ಪಾಪಾನಿ ಪಾತಕೀಯಾನಿ ಯಾನಿ ಚ |
ಚಾಂದ್ರಾಯಣೇನ ನಶ್ಯಂತಿ ವಾಯುನಾ ಪಾಂಸವೋ ಯಥಾ ॥38॥

ಬ್ರಹ್ಮಹತ್ಯೆ, ಗೋಹತ್ಯೆ, ಬಂಗಾರಕಳ್ಳತನ, ಭ್ರೂಣಹತ್ಯೆ, ಸುರಾಪಾನ, ಗುರುತಲ್ಪಗಮನ, ಇನ್ನೂ ಅನೇಕ ಮಹಾ ಪಾತಕಗಳು ಹನ್ನೆರಡು ವರ್ಷಗಳ ಕಾಲ ಚಾಂದ್ರಾಯಣ ವ್ರತ ಮಾಡುವುದರಿಂದ ವಾಯುವಿನ ವೇಗದಿಂದ ಧೂಳು ಹಾರಿ ಹೋಗುವಂತೆ ಅವರವರ ಯೋಗ್ಯತೆಗೆ ತಕ್ಕಂತೆ ಪಾಪಗಳು ಪರಿಹಾರವಾಗುತ್ತವೆ.

ಅನಿರ್ದಶಾಯಾ ಗೋಃ ಕ್ಷೀರಮೌಷ್ಟ್ರಮಾವಿಕಮೇವ ಚ |
ಮೃತಸೂತಕಯೋಶ್ಚಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥39॥

ಯಾವ ಹಸುವು ಕರುವನ್ನು ಹಾಕಿ ಹತ್ತು ದಿವಸಗಳು ಆಗಿಲ್ಲವೋ ಅಂತಹ ಹಸುವಿನ, ಒಂಟೆಯ, ಕುರಿಯ ಹಾಲನ್ನು ಕುಡಿದವನು, ಮರಣಾಶೌಚ, ಜಾತಾಶೌಚಗಳ ಮನೆಯಲ್ಲಿ ಊಟ ಮಾಡಿದವನು ಪಾಪ ಪರಿಹಾರಕ್ಕಾಗಿ ಚಾಂದ್ರಾಯಣ ವ್ರತವನ್ನು ಮಾಡಬೇಕು.

ಉಪಪಾತಕಿನಶ್ಚಾನ್ನಂ ಪತಿತಾನ್ನಂ ತಥೈವ ಚ |
ಶೂದ್ರಸ್ಯೋಚ್ಛೇಷಣಂ ಚೈವ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥40॥

ಉಪಪಾತಕಗಳನ್ನು ಮಾಡಿದವನ ಅನ್ನವನ್ನು, ಪತಿತನ ಅನ್ನವನ್ನು, ಶೂದ್ರನ ಉಚ್ಚಿಷ್ಟವನ್ನು ಉಂಡವನು ಚಾಂದ್ರಾಯಣ ವ್ರತವನ್ನು ಆಚರಿಸಬೇಕು.

ಆಕಾಶಸ್ಥಂ ತು ಹಸ್ತಸ್ಥಮಧಃ ಸ್ರಸ್ತಂ ತಥೈವ ಚ |
ಪರಹಸ್ತಸ್ಥಿತಂ ಚೈವ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥41॥

ಆಕಾಶದಲ್ಲಿರುವ (ತುತ್ತನ್ನು ಹಾರಿಸಿ ತಿನ್ನುವ), ಎಡಗೈಯಲ್ಲಿ ಇಟ್ಟುಕೊಂಡು ತಿನ್ನುವ, ಕೈಯಿಂದ ಜಾರಿ ಬಿದ್ದ ಅನ್ನವನ್ನು ಉಣ್ಣುವ, ಇತರ ರೀತಿಯಲ್ಲಿ ತಿಂದುಳಿದ ಪದಾರ್ಥವನ್ನು ಸ್ವೀಕರಿಸಿ ತಿನ್ನುವ ವ್ಯಕ್ತಿಯು ಚಾಂದ್ರಾಯಣ ವ್ರತವನ್ನು ಆಚರಿಸಬೇಕು.

ಅಥಾಗ್ರೇ ದಿಧಿಷೋರನ್ನಂ ದಿಧಿಷೂಪಪತೇಸ್ತಥಾ |
ಪರಿವೇತ್ತುಸ್ತಥಾ ಚಾನ್ನಂ ಪರಿವಿತ್ತಾನ್ನಮೇವ ಚ ॥42॥
ಕುಂಡಾನ್ನಂ ಗೋಲಕಾನ್ನಂ ಚ ದೇವಲಾನ್ನಂ ತಥೈವ ಚ |
ತಥಾ ಪುರೋಹಿತಸ್ಯಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥43॥

ನಂತರ ಮೊದಲನೆಯ ಪತಿಗೆ ವಿಚ್ಛೇದನ ಮಾಡಿಕೊಂಡು ಎರಡನೆಯ ಪತಿಯನ್ನು ಸ್ವೀಕರಿಸಿದವಳ ಅನ್ನವನ್ನೂ, ಅಂತಹ ಪತ್ನಿಯನ್ನು ವಿವಾಹ ಮಾಡಿಕೊಂಡವನ ಮನೆಯ ಅನ್ನವನ್ನೂ, ಅಣ್ಣನಿಗಿಂತ ಮೊದಲೇ ವಿವಾಹ ಮಾಡಿಕೊಂಡ ವ್ಯಕ್ತಿಯ ಅನ್ನವನ್ನೂ, ಅಕ್ಕನಿಗಿಂತ ಮೊದಲೇ ಮದುವೆಯಾದವಳ ಅನ್ನವನ್ನೂ, ಪತಿಯು ಜೀವಿಸಿರುವಾಗ ಪರಪುರುಷನಿಂದ ಹುಟ್ಟಿದವನ ಮನೆಯ ಅನ್ನವನ್ನೂ, ವಿಧವೆಯಲ್ಲಿ ಜಾರ ಪುರುಷನಿಂದ ಹುಟ್ಟಿದವನ ಮನೆಯ ಅನ್ನವನ್ನೂ, ವೇತನಕ್ಕಾಗಿ ದೇವರ ಪೂಜೆಯನ್ನು ಮಾಡುವ ಪುರೋಹಿತನ ಮನೆಯ ಅನ್ನವನ್ನು ಊಟಮಾಡಿದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು.

ಸುರಾಸವಂ ವಿಷಂ ಸರ್ಪಿರ್ಲಾಕ್ಷಾ ಲವಣಮೇವ ಚ |
ತೈಲಂ ಚಾಪಿ ಚ ವಿಕ್ರೀಣನ್ ದ್ವಿಜಶ್ಚಾಂದ್ರಾಯಣಂ ಚರೇತ್ ॥44॥

ಮದಿರೆ, ಆಸವ, ವಿಷ, ತುಪ್ಪ, ಅಗರು, ಎಣ್ಣೆ ಇವುಗಳನ್ನು ಮಾರಾಟ ಮಾಡುವ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಆಚರಿಸಬೇಕು.

ಏಕೋದ್ದಿಷ್ಟಂ ತು ಯೋ ಭುಂಕ್ತೇ ಜನಮಧ್ಯಗತೋऽಪಿ ಯಃ |

ಭಿನ್ನಭಾಂಡೇಷು ಯೋ ಭುಂಕ್ತೇ ದ್ವಿಜಶ್ಚಾಂದ್ರಾಯಣಂ ಚರೇತ್ ॥45॥
ಮಹಾಲಯ ಶ್ರಾದ್ಧದಲ್ಲಿ ಊಟ ಮಾಡಿದ, ಜನಸಮೂಹದ ಮಧ್ಯದಲ್ಲಿ ಊಟ ಮಾಡಿದ, ಒಡೆದ ಪಾತ್ರೆಯಲ್ಲಿ ಊಟ ಮಾಡಿದ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ಯೋ ಭುಂಕ್ತೇನುಪನೀತೇನ ಯೋ ಭುಂಕ್ತೇ ಚ ಸ್ತ್ರಿಯಾ ಸಹ |
ಯೋ ಭುಂಕ್ತೇ ಕನ್ಯಯಾ ಸಾರ್ಧಂ ದ್ವಿಜಶ್ಚಾಂದ್ರಾಯಣಂ ಚರೇತ್ ॥
ಉಪನಯನವಾಗದವನ ಜೊತೆಯಲ್ಲಿ, ತಂದೆ ಮತ್ತು ಹೆಂಗಸಿನ ಜೊತೆಗೆ ಊಟ ಮಾಡಿದ ಬ್ರಾಹ್ಮಣನು, ಕನ್ಯೆಯ ಜೊತೆಗೆ ಉಂಡಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ಉಚ್ಛಿಷ್ಟಂ ಸ್ಥಾಪಯೇದ್ ವಿಪ್ರೋ ಯೋ ಮೋಹಾದ್ ಭೋಜನಾಂತರೇ |
ದದ್ಯಾದ್ ವಾ ಯದಿ ಸಮ್ಮೋಹಾದ್ ದ್ವಿಜಶ್ಚಾಂದ್ರಾಯಣಂ ಚರೇತ್ ॥47॥
ಯಾವನು ಮೋಹವಶನಾಗಿ ಊಟ ಮಾಡಿದ ಬಳಿಕ ಉಳಿದ ಅನ್ನವನ್ನು ಬೇರೆಯವರ ತಟ್ಟೆಗೆ ಹಾಕುತ್ತಾನೋ ಅಥವಾ ಬೇರೆಯವರಿಗೆ ತಿನ್ನಲು ಕೊಡುತ್ತಾನೋ ಅಂತಹ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ತುಂಬೀಂ ಕೋಶಾತಕೀಂ ಚೈವ ಪಲಾಂಡುಂ ಗೃಂಜನಂ ತಥಾ |
ಛತ್ರಾಕಂ ಲಶುನಂ ಚೈವ ಭುಕತ್ವ ಚಾಂದ್ರಾಯಣಂ ಚರೇತ್ ॥48॥
ಯಾರು ಸೋರೆಕಾಯಿಯನ್ನು, ಪಡವಲಕಾಯಿಯನ್ನು, ಈರುಳ್ಳಿಯನ್ನು, ಗಜ್ಜರಿಯನ್ನು, ಅಣಬೆಯನ್ನು, ಬೆಳ್ಳುಳ್ಳಿಯನ್ನು ತಿನ್ನುತ್ತಾನೋ ಅವನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ದ್ವಿಜಃ ಪರ್ಯುಷಿತಂ ಚಾನ್ನಂ ಪಕ್ವಂ ಪರಗೃಹಾಗತಮ್ |
ವಿಪಕ್ವಂ ಚ ತಥಾ ಮಾಂಸಂ ಭುಕತ್ವ ಚಾಂದ್ರಾಯಣಂ ಚರೇತ್ ॥49॥
ಹಳಿಸಿದ ಅನ್ನವನ್ನು, ಮತ್ತೊಬ್ಬರ ಮನೆಯಿಂದ ತಂದ ಅನ್ನವನ್ನು, ಸರಿಯಾಗಿ ಬೇಯದಿರುವ ಅನ್ನವನ್ನು, ಮಾಂಸವನ್ನು ತಿಂದವನು ಚಾಂದ್ರಾಯಣ ವ್ರತವನ್ನು ಮಾಡಬೇಕು.
ಉದಕ್ಯಯಾ ಶುನಾ ವಾಽಪಿ ಚಂಡಾಲೈರ್ವಾ ದ್ವಿಜೋತ್ತಮಃ |
ದೃಷ್ಟಮನ್ನಂ ತು ಭುಂಜಾನೋ ದ್ವಿಜಶ್ಚಾಂದ್ರಾಯಣಂ ಚರೇತ್ ॥50॥
ರಜಸ್ವಲೆ, ನಾಯಿ, ಚಂಡಾಲ ಇವರು ನೋಡಿದ ಅನ್ನವನ್ನು ತಿಂದ ಬ್ರಾಹ್ಮಣ ವ್ಯಕ್ತಿಯು ಚಾಂದ್ರಾಯಣ ವ್ರತವನ್ನು ಮಾಡಬೇಕು.
ಏತತ್ಪುರಾ ವಿಶುದ್ಧ್ಯರ್ಥಮೃಷಿಭಿಶ್ಚರಿತವ್ರತಮ್ |
ಪಾವನಂ ಸರ್ವಭೂತಾನಾಂ ಪುಣ್ಯಂ ಪಾಂಡವ ಚೋದಿತಮ್ ॥51॥
ಯುಧಿಷ್ಠಿರನೇ, ಋಷಿಗಳು ಇಂತಹ ದೋಷಗಳ ವಿಶುದ್ಧಿಗಾಗಿ ಈ ಚಾಂದ್ರಾಯಣ ವ್ರತವನ್ನು ಆಚರಿಸಿದ್ದಾರೆ. ಸಮಸ್ತ ಪ್ರಾಣಿಗಳಿಗೂ ಪವಿತ್ರವಾದ ಪುಣ್ಯಪ್ರದವಾದ ವ್ರತವು ಚಾಂದ್ರಾಯಣ ವ್ರತವು ಎಂದು ಹೇಳಲ್ಪಟ್ಟಿದೆ.
ಏತೇನ ವಸವೋ ರುದ್ರಾಶ್ಚಾದಿತ್ಯಾಶ್ಚ ದಿವಂ ಗತಾಃ |
ಏತದದ್ಯ ಪರಂ ಗುಹ್ಯಂ ಪವಿತ್ರಂ ಪಾಪನಾಶನಮ್ ॥52॥
ಯಥೋಕ್ತಮೇತದ್ ಯಃ ಕುರ್ಯಾದ್ ದ್ವಿಜಃ ಪಾಪಪ್ರಣಾಶನಮ್ |
ಸ ದಿವಂ ಯಾತಿ ಪೂತಾತ್ಮಾ ನಿರ್ಮಲಾದಿತ್ಯಸನ್ನಿಭಃ ॥53॥
ಈ ಚಾಂದ್ರಾಯಣ ವ್ರತದಿಂದ ವಸುಗಳು, ರುದ್ರರು, ಆದಿತ್ಯರು ಸ್ವರ್ಗದಲ್ಲಿ ಸುಖವಾಗಿ ಇದ್ದಾರೆ. ಇಂತಹ ಪವಿತ್ರವಾದ, ಗುಹ್ಯವಾದ, ಪಾಪನಾಶಕವಾದ ವ್ರತವನ್ನು ಯಥಾವತ್ತಾಗಿ ನಿನಗೆ ನಿರೂಪಿಸಿದ್ದೇನೆ. ನಾನು ಹೇಳಿದಂತೆ ಯಾವ ಬ್ರಾಹ್ಮಣರು ಈ ವ್ರತವನ್ನು ಆಚರಿಸುತ್ತಾರೋ ಅವರ ಸಮಸ್ತ ವಿಧವಾದ ಪಾಪಗಳು ನಾಶವಾಗುತ್ತವೆ. ಬಳಿಕ ನಿರ್ಮಲನಾದ ಸೂರ್ಯನಂತೆ ಪ್ರಕಾಶಿಸುವ ಪೂತಾತ್ಮನಾದ ಆ ವ್ಯಕ್ತಿಯು ಸ್ವರ್ಗಕ್ಕೆ ಹೋಗುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಚಾಂದ್ರಾಯಣವಿಧಿರ್ನಾಮ ದ್ವಾದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿಮೂರನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಕಾರ್ತಿಕವೇ ಮೊದಲಾದ ಹನ್ನೆರಡು
ಮಾಸಗಳಲ್ಲಿ ಏಕಭುಕ್ತ ವ್ರತವನ್ನು ಆಚರಿಸುವ ಪ್ರಕಾರವನ್ನು ನಿರೂಪಿಸುವ ಮೂಲಕ
ಆ ವ್ರತಕ್ಕೆ ಲಭಿಸುವ ಫಲವನ್ನು ಹೇಳಿದುದು.
ವೈಶಂಪಾಯನಃ
ಕೇಶವೇನೈವಮುಕ್ತೇ ತು ಚಾಂದ್ರಾಯಣವಿಧಿಕ್ರಮೇ |
ಅಪೃಚ್ಛತ್ ಪುನರನ್ಯಾಂಶ್ಚ ಧರ್ಮಾನ್ ಧರ್ಮಾತ್ಮಜೋ ನೃಪಃ ॥1॥
ವೈಶಂಪಾಯನ ಕೇಶವನು ಚಾಂದ್ರಾಯಣವ್ರತದ ವಿಧಿಗಳನ್ನು, ಕ್ರಮಗಳನ್ನು ನಿರೂಪಿಸಿದ ಬಳಿಕ ಧರ್ಮಜನಾದ ಯುಧಿಷ್ಠಿರನು ಪುನಃ ಬೇರೆ ಧರ್ಮಗಳ ಬಗ್ಗೆ ಪ್ರಶ್ನಿಸಿದನು.
ಯುಧಿಷ್ಠಿರಃ
ಸರ್ವಭೂತಪತೇ ಶ್ರೀಮನ್ ಸರ್ವಭೂತನಮಸ್ಕೃತ |
ಸರ್ವಭೂತಹಿತಂ ಧರ್ಮಂ ಸರ್ವಜ್ಞ ಕಥಯಸ್ವ ಮೇ ॥2॥

ಯುಧಿಷ್ಠಿರ ಸರ್ವಭೂತಪತಿಯೇ, ಸರ್ವಪ್ರಾಣಿಗಳಿಂದಲೂ ನಮಸ್ಕೃತನಾದ ಶ್ರೀಮಂತನೇ ಸರ್ವಪ್ರಾಣಿಗಳಿಗೂ ಹಿತಕರವಾದ ಧರ್ಮವನ್ನು ಸರ್ವಜ್ಞನಾದ ನೀನು ನನಗೆ ಹೇಳು.
ಶ್ರೀಭಗವಾನ್
ಯದ್ ದರಿದ್ರುಜನಸ್ಯಾಪಿ ಸ್ವರ್ಗ್ಯಂ ಸುಖಕರಂ ಭವೇತ್ |
ಸರ್ವಪಾಪಪ್ರಶಮನಂ ತಚ್ಛೃಣುಷ್ವ ಯುಧಿಷ್ಠಿರ ॥3॥
ಶ್ರೀಭಗವಾನ್ ಯುಧಿಷ್ಠಿರನೇ, ಯಾವ ಧರ್ಮವು ದರಿದ್ರುಜನರಿಗೂ ಸ್ವರ್ಗವನ್ನು ನೀಡುತ್ತದೋ, ಸುಖಕರವಾಗಿದೆಯೋ, ಸಮಸ್ತ ಪಾಪಗಳನ್ನು ನಾಶಗೊಳಿಸುತ್ತದೋ ಅಂತಹ ಧರ್ಮವನ್ನು ಹೇಳುತ್ತೇನೆ, ಕೇಳಿಸಿಕೊ.
ಕಾರ್ತಿಕಾದ್ಯಾಸ್ತು ಯೇ ಮಾಸಾ ದ್ವಾದಶೈವ ಪ್ರಕೀರ್ತಿತಾಃ |
ತೇಷ್ವೇಕಭುಕ್ತನಿಯಮಃ ಸರ್ವೇಷಾಮುಚ್ಯತೇ ಮಯಾ ॥4॥
ಕಾರ್ತಿಕವೇ ಮೊದಲಾದ ಹನ್ನೆರಡು ಮಾಸಗಳು ಹೇಳಲ್ಪಟ್ಟಿವೆ. ಆ ಮಾಸಗಳಲ್ಲಿ ಏಕಭುಕ್ತ ನಿಯಮವು ಎಲ್ಲರಿಗೂ ನನ್ನಿಂದ ಹೇಳಲ್ಪಡುತ್ತದೆ.
ಕಾರ್ತಿಕೇ ಯಸ್ತು ವೈ ಮಾಸೇ ನಂದಾಯಾಂ ಸಂಯತೇಂದ್ರಿಯಃ |
ಏಕಭುಕ್ತೇನ ಮದ್ಭಕ್ತೋ ಮಾಸಮೇಕಂ ತು ವರ್ತತೇ ॥5॥
ಜಲಂ ವಾ ನ ಪಿಬೇನ್ಮಾಸೇ ನಾಂತರಾ ಭೋಜನಾತ್ ಪರಮ್ |
ಆದಿತ್ಯರೂಪಂ ಮಾಂ ನಿತ್ಯಮರ್ಚಯನ್ ಸುಸಮಾಹಿತಃ ॥6॥
ವ್ರತಾಂತೇ ಭೋಜಯೇದ್ ವಿಪ್ರಾನ್ ದಕ್ಷಿಣಾಂ ಚ ದದೌ ಪುನಃ |
ಕ್ರೋಧಲೋಭವಿನಿರ್ಮುಕ್ತಸ್ತಸ್ಯ ಪುಣ್ಯಫಲಂ ಶೃಣು ॥7॥
ಯಾವನು ಕಾರ್ತೀಕ ಮಾಸದಲ್ಲಿ ಶುಕ್ಲಪಕ್ಷ ಪ್ರತಿಪದೆಯಂದು ಜಿತೇಂದ್ರಿಯನಾಗಿ ಏಕಭುಕ್ತಿಯನ್ನು ಆರಂಭಿಸಿ, ಒಂದು ಮಾಸದ ಪರ್ಯಂತ ನನ್ನ ಭಕ್ತನಾಗಿ ಅನುಷ್ಠಾನ ಮಾಡುತ್ತಾನೋ, ಒಂದು ಮಾಸದ ತನಕ ಭೋಜನದ ಬಳಿಕ ನೀರನ್ನೂ ಪಾನ ಮಾಡುವುದಿಲ್ಲವೋ, ಆದಿತ್ಯರೂಪಿಯಾದ ನನ್ನನ್ನು ನಿತ್ಯವೂ ಏಕಾಗ್ರಬುದ್ಧಿಯಿಂದ ಆರಾಧಿಸುತ್ತಾನೋ, ವ್ರತ ಮುಗಿದ ಬಳಿಕ ಬ್ರಾಹ್ಮಣರಿಗೆ ಊಟ ಮಾಡಿಸುತ್ತಾನೋ ಪುನಃ ಅವರಿಗೆ ದಕ್ಷಿಣೆ ನೀಡುತ್ತಾನೋ, ಕ್ರೋಧ-ಲೋಭ ನಿರ್ಮುಕ್ತನಾಗಿ ಈ ಕ್ರಮದಲ್ಲಿ ವ್ರತವನ್ನು ಮಾಡಿದ ಅವನಿಗೆ ಲಭಿಸುವ ಪುಣ್ಯವೇನೆಂಬುದನ್ನು ತಿಳಿದುಕೊ.
ವಿಧಿವತ್ ಕಪಿಲಾದಾನೇ ಯತ್ಪುಣ್ಯಂ ಸಮುದಾಹೃತಮ್ |
ತತ್ಪುಣ್ಯಂ ಸಮನುಪ್ರಾಪ್ಯ ಸೂರ್ಯಲೋಕೇ ಮಹೀಯತೇ ॥8॥
ತತಶ್ಚಾಪಿ ಚ್ಯುತಃ ಕಾಲಾತ್ ಪುರುಷೇಷೂಪಜಾಯತೇ ॥9॥
ವಿಧಿಬದ್ಧವಾಗಿ ಕಪಿಲಧೇನುವಿನ ದಾನ ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೆ ಎಂದು ಹೇಳಿದ್ದಾರೋ ಅಂತಹ ಪುಣ್ಯವನ್ನು ಒಂದು ಕಾರ್ತಿಕ ಮಾಸದಲ್ಲಿ ಮಾಡಿದ ಏಕಭುಕ್ತವ್ರತದಿಂದ ಹೊಂದುತ್ತಾನೆ. ಸೂರ್ಯಲೋಕದಲ್ಲಿ ಪೂಜ್ಯನಾಗುತ್ತಾನೆ. ಬಳಿಕ ಕಾಲಾನುಸಾರವಾಗಿ ಆ ಲೋಕದಿಂದ ಕೆಳಗೆ ಬಂದ ಆ ವ್ಯಕ್ತಿಯು ಕಿಂಪುರುಷರ ಖಂಡದಲ್ಲಿ ಜನ್ಮವನ್ನು ತಾಳುತ್ತಾನೆ.
ಮಾರ್ಗಶೀರ್ಷಂ ತು ಯೋ ಮಾಸಮೇಕಭುಕ್ತೇನ ವರ್ತತೇ |
ಕಾಮಂ ಕ್ರೋಧಂ ಚ ಲೋಭಂ ಚ ಪರಿತ್ಯಜ್ಯ ಯಥಾವಿಧಿ ॥10॥
ಸ್ನಾತ್ವಾ ಚಾದಿತ್ಯರೂಪಂ ಮಾಮರ್ಚಯೇನ್ನಿಯತೇಂದ್ರಿಯಃ |
ಜಪನ್ನೇವ ತು ಗಾಯತ್ರೀಂ ಮಾಮಿಕಾಂ ವಾಗ್ಯತಃ ಶುಚಿಃ ॥11॥
ಮಾಸೇ ಪರಿಸಮಾಪ್ತೇ ತು ಭೋಜಯಿತ್ವಾ ದ್ವಿಜಾನ್ ಶುಚಿಃ |
ತಾನರ್ಚಯತಿ ಮದ್ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥12॥
ಯಾವನು ಮಾರ್ಗಶಿರ ಮಾಸದಲ್ಲಿ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಕಾಮ-ಕ್ರೋಧ-ಲೋಭಗಳನ್ನು ತ್ಯಜಿಸಿ, ವಿಧಿಬದ್ಧವಾಗಿ ಏಕಭುಕ್ತವ್ರತವನ್ನು ಆರಂಭಿಸುತ್ತಾನೋ, ಸ್ನಾನ ಮಾಡಿ, ಜಿತೇಂದ್ರಿಯನಾಗಿ, ಆದಿತ್ಯಾಂತರ್ಯಾಮಿಯಾದ ನನ್ನನ್ನು ಆರಾಧಿಸಿ, ಮೌನಿಯಾಗಿದ್ದು, ಶುಚಿಯಾಗಿ ಗಾಯತ್ರಿಮಂತ್ರ ಜಪಮಾಡಿ, ಮಾರ್ಗಶಿರ ಮಾಸವು ಪರಿಸಮಾಪ್ತಿ ಹೊಂದಿದ ಬಳಿಕ ಸದಾಚಾರ ಸಂಪನ್ನನಾಗಿದ್ದು ಬ್ರಾಹ್ಮಣರನ್ನು ಊಟ ಮಾಡಿಸಬೇಕು. ನನ್ನ ಭಕ್ತನಾಗಿದ್ದು ಆ ಬ್ರಾಹ್ಮಣರನ್ನು ಆರಾಧಿಸಿದವನಿಗೆ ದೊರೆಯುವ ಪುಣ್ಯಫಲವೇನೆಂಬುದನ್ನು ಕೇಳಿಸಿಕೊ.
ಅಗ್ನಿಹೋತ್ರೇ ಕೃತೇ ಪುಣ್ಯಮಾಹಿತಾಗ್ನೇಶ್ಚ ಯದ್ಭವೇತ್ |
ತತ್ಪುಣ್ಯಫಲಮಾಸಾದ್ಯ ಯಾನೇನಾಂಬರಶೋಭಿನಾ ॥13॥
ಸಪ್ತರ್ಷಿಲೋಕೇ ಚರತಿ ಯಥಾಕಾಲಂ ಯಥಾಸುಖಮ್ ॥14॥
ಆಹಿತಾಗ್ನಿಗೆ ಅಗ್ನಿಹೋತ್ರುವನ್ನು ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೋ ಅಂತಹ ಪುಣ್ಯವನ್ನು ಈ ವ್ರತದಿಂದ ಹೊಂದಿ ಆಕಾಶದಲ್ಲಿ ಶೋಭಿಸುವ ಯಾನದಲ್ಲಿ ಕುಳಿತು ಸಪ್ತರ್ಷಿಗಳ ಲೋಕದಲ್ಲಿ ಸುಖವಾಗಿ ಬಹಳ ಕಾಲ ಸಂಚರಿಸುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದ್ ಹರಿವರ್ಷೇಷು ಜಾಯತೇ |
ತತ್ರ ಪ್ರಕಾಶಂ ಕ್ರೀಡಿತ್ವಾ ರಾಜಾ ಪಶ್ಚಾದ್ ಭವಿಷ್ಯತಿ ॥15॥
ಕಾಲಿಕವಾಗಿ ಆ ಲೋಕದಿಂದ ಆಗಮಿಸಿದ ಆ ವ್ಯಕ್ತಿಯು ಹರಿವರ್ಷ ಖಂಡದಲ್ಲಿ ಉತ್ಪತ್ತಿಯನ್ನು ಹೊಂದುತ್ತಾನೆ. ಅಲ್ಲಿ ಅನೇಕ ವರ್ಷಗಳ ಕಾಲ ಸುಖವಾಗಿ ವಿಹರಿಸಿ ಬಳಿಕ ರಾಜನಾಗಿ ಹುಟ್ಟುತ್ತಾನೆ.
ಪೌಷಮಾಸಂ ಕ್ಷಿಪೇದೇವಮೇಕಭುಕ್ತೇನ ಯೋ ನರಃ |
ಅರ್ಚಯನ್ನೇವ ಮಾಂ ನಿತ್ಯಂ ಮದ್ಗತೇನಾಂತರಾತ್ಮನಾ ॥16॥

ಅಹಿಂಸಾ ಸತ್ಯನಿರತಃ ಕ್ರೋಧಹರ್ಷವಿವರ್ಜಿತಃ |
ಏವಂ ಯುಕ್ತಸ್ಯ ರಾಜೇಂದ್ರ ಶೃಣು ಯತ್ಫಲಮುತ್ತಮಮ್ ॥17॥
ಇದರಂತೆ ಪೌಷಮಾಸದಲ್ಲಿ ಯಾವ ಮನುಷ್ಯನು ಹೃದಯದಲ್ಲಿ ಭಗವಂತನನ್ನು ಧ್ಯಾನಿಸುತ್ತಾ ಪೂಜಿಸುತ್ತಾ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಹಿಂಸೆ ಮಾಡದೆ, ಸತ್ಯನಿಷ್ಠನಾಗಿ, ಕ್ರೋಧ-ಹರ್ಷಗಳ ಉದ್ವೇಗವನ್ನು ತ್ಯಜಿಸಿ ಈ ವ್ರತವನ್ನು ಆಚರಿಸಿದ ವ್ಯಕ್ತಿಗೆ ಯಾವ ಉತ್ತಮವಾದ ಫಲವು ಲಭಿಸುತ್ತದೆ ಎಂಬುದನ್ನು ರಾಜೇಂದ್ರನೇ ತಿಳಿಸುತ್ತೇನೆ, ಕೇಳು.
ವಿಪ್ರಾತಿಥ್ಯಸಹಸ್ರೇಷು ಯತ್ಪುಣ್ಯಂ ಸಮುದಾಹೃತಮ್ |
ತತ್ಪುಣ್ಯಂ ಸಮನುಪ್ರಾಪ್ಯ ಶಕ್ರಲೋಕೇ ಮಹೀಯತೇ ॥18॥
ಸಾವಿರ ಬ್ರಾಹ್ಮಣರನ್ನು ಅನ್ನದಿಂದ ಆರಾಧಿಸಿದಾಗ ಯಾವ ಪುಣ್ಯವು ದೊರೆಯುತ್ತದೋ ಅಷ್ಟು ಫಲವನ್ನು ಹೊಂದಿದವನಾಗಿ ಇಂದ್ರಲೋಕದಲ್ಲಿ ಪೂಜಿತನಾಗುತ್ತಾನೆ.
ಅವತೀರ್ಣಸ್ತತಃ ಕಾಲಾದ್ ಇಲವರ್ಷೇ ತು ಜಾಯತೇ |
ತತ್ರ ಸ್ಥಿತ್ವಾ ಚಿರಂ ಕಾಲಮಸ್ಮಿನ್ ವಿಪ್ರೋ ಭವಿಷ್ಯತಿ ॥19॥
ಬಳಿಕ ಇಂದ್ರಲೋಕದಿಂದ ಆಗಮಿಸಿದ ಅವನು ಇಲಾವೃತವರ್ಷದಲ್ಲಿ ಜನ್ಮ ತಾಳುತ್ತಾನೆ. ಅಲ್ಲಿ ಬಹಳ ಕಾಲ ವಾಸ ಮಾಡಿ ನಂತರ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಮಾಘಮಾಸಂ ತಥಾ ಯಸ್ತು ವರ್ತತೇ ಚೈಕಭುಕ್ತತಃ |
ಮದರ್ಚನಪರೋ ಭೂತ್ವಾ ಡಂಭಕ್ರೋಧವಿವರ್ಜಿತಃ ॥20॥
ಮಾಮಿಕಾಮಪಿ ಸಾವಿತ್ರೀಂ ಸಂಧ್ಯಾಯಾಂ ತು ಜಪೇದ್ ಬುಧಃ ॥21॥
ದತ್ತ್ವಾ ತು ದಕ್ಷಿಣಾಮಂತೇ ಭೋಜಯಿತ್ವಾ ದ್ವಿಜಾನಪಿ |
ನಮಸ್ಕರೋತಿ ತಾನ್ ಭಕ್ತ್ಯಾ ಮದ್ಗತೇನಾಂತರಾತ್ಮನಾ ॥22॥
ತ್ರಿಕಾಲಂ ಸ್ನಾನಯುಕ್ತಸ್ಯ ತಸ್ಯ ಪುಣ್ಯಫಲಂ ಶೃಣು ॥23॥
ಯಾವನು ಮಾಘಮಾಸದಲ್ಲಿ ಡಂಭ, ಕ್ರೋಧಗಳನ್ನು ತ್ಯಜಿಸಿ ನನ್ನ ಆರಾಧಕನಾಗಿದ್ದು ಏಕಭುಕ್ತವ್ರತವನ್ನು ಆಚರಿಸುತ್ತಾನೋ, ನನಗೆ ಸಂಬಂಧಿಸಿದ ಗಾಯತ್ರಿಯನ್ನು ಸಂಧ್ಯಾಕಾಲದಲ್ಲಿ ಜ್ಞಾನಿಯಾಗಿ ಜಪಿಸುತ್ತಾನೋ, ವ್ರತ ಮುಗಿದ ಬಳಿಕ ಬ್ರಾಹ್ಮಣರನ್ನು ಊಟ ಮಾಡಿಸಿ ದಕ್ಷಿಣೆ ಕೊಟ್ಟು ಅಂತರ್ಯಾಮಿಯಾದ ನನ್ನನ್ನೇ ನೆನೆಯುತ್ತಾ ಬ್ರಾಹ್ಮಣರಿಗೆ ನಮಸ್ಕರಿಸುತ್ತಾನೋ, ಮೂರು ಕಾಲ ಸ್ನಾನ ಮಾಡಿ ವ್ರತವನ್ನು ಆಚರಿಸುವ ಆ ವ್ಯಕ್ತಿಗೆ ಲಭಿಸುವ ಪುಣ್ಯವೇನೆಂಬುದನ್ನು ಕೇಳು.
ನೀಲಕಂಠಪ್ರಯುಕ್ತೇನ ಯಾನೇನಾಂಬರಶೋಭಿನಾ |
ಪಿತೃಲೋಕಂ ವ್ರಜೇಚ್ಛ್ರೀಮಾನ್ ಸೇವ್ಯಮಾನೋಽಪ್ಸರೋಗಣೈಃ ॥24॥
ಮಹರುದ್ರದೇವನು ಕಳುಹಿಸಲ್ಪಟ್ಟ ರಥವನ್ನು ಏರಿಕೊಂಡು ಆಕಾಶದಲ್ಲಿ ಸಂಚರಿಸುತ್ತಾ ಕಾಂತಿಯುಕ್ತನಾಗಿ ಅಪ್ಸರಾಗಣದಿಂದ ಸೇವ್ಯಮಾನನಾಗಿ ಪಿತೃ ಲೋಕವನ್ನು ಕುರಿತು ಹೋಗುತ್ತಾನೆ.
ತತ್ರ ಪ್ರಕಾಮಂ ಕ್ರೀಡಿತ್ವಾ ಭದ್ರಾಶ್ವೇಷೂಪಜಾಯತೇ |
ತತಶ್ಚ್ಯುತಶ್ಚತುರ್ವೇದೀ ವಿಪ್ರೋ ಭವತಿ ಭೂತಳೇ ॥25॥
ಅಲ್ಲಿ ಯಥೇಷ್ಟವಾಗಿ ಸಂತೋಷದಿಂದ ವಿಹರಿಸಿ ಬಳಿಕ ಭದ್ರಾಶ್ವಖಂಡದಲ್ಲಿ ಹುಟ್ಟುತ್ತಾನೆ. ಅಲ್ಲಿಯೂ ಹೆಚ್ಚು ಕಾಲ ಸಂತೋಷದಿಂದ ವಿಹರಿಸಿ ನಂತರ ಚತುರ್ವೇದಜ್ಞನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಯಃ ಕ್ಷಿಪೇತ್ ಫಾಲ್ಗುನಂ ಮಾಸಮೇಕಭುಕ್ತೋ ಜಿತೇಂದ್ರಿಯಃ |
ನಮೋ ಬ್ರಹ್ಮಣ್ಯದೇವಾಯೇತ್ಯೇತನ್ಮಂತ್ರಂ ಜಪೇತ್ ಸದಾ ॥26॥
ಪಾಯಸಂ ಭೋಜಯೇದ್ ವಿಪ್ರಾನ್ ವ್ರತಾಂತೇ ಸಂಯತೇಂದ್ರಿಯಃ |
ಮದರ್ಚನಪರೋಽಕ್ರೋಧಸ್ತಸ್ಯ ಪುಣ್ಯಫಲಂ ಶೃಣು ॥27॥
ಯಾವ ವ್ಯಕ್ತಿಯು ಜಿತೇಂದ್ರಿಯನಾಗಿ ಫಾಲ್ಗುಣ ಮಾಸದಲ್ಲಿ `ನಮೋ ಬ್ರಹ್ಮಣ್ಯದೇವಾಯ' ಎಂಬ ಮಂತ್ರವನ್ನು ಪಠಿಸುತ್ತಾ ಒಂದು ತಿಂಗಳ ಕಾಲ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಸಿಟ್ಟನ್ನು ಬಿಟ್ಟು ನನ್ನನ್ನು ಆರಾಧಿಸುತ್ತಾ ಜಿತೇಂದ್ರಿಯನಾಗಿ ವ್ರತ ಮುಗಿದ ಬಳಿಕ ಪಾಯಸದ ಭೋಜನವನ್ನು ಬ್ರಾಹ್ಮಣರಿಗೆ ಹಾಕುತ್ತಾನೋ ಅವನಿಗೆ ದೊರಕುವ ಫಲವೇನೆಂಬುದನ್ನು ಕೇಳಿಸಿಕೊ.
ವಿಮಾನಂ ಸಾರಸೈರ್ಯುಕ್ತಮಾರೂಢಃ ಕಾಮಗಾಮಿ ಚ |
ನಕ್ಷತಲೋಕೇ ರಮತೇ ನಕ್ಷತ್ರಸದೃಶಾಕೃತಿಃ ॥28॥
ಸಾರಸಪಕ್ಷಿಗಳಿಂದ ಕೂಡಿದ ಕಾಮಚಾರಿಯಾದ ವಿಮಾನವನ್ನು ಏರಿಕೊಂಡು ನಕ್ಷತ್ರಸದೃಶವಾದ ಆಕಾರವನ್ನು ಪಡೆದ ಆತನು ನಕ್ಷತ್ರಲೋಕದಲ್ಲಿಯೇ ವಿಹರಿಸುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾತ್ ಕೇತುಮಾಲೇಷು ಜಾಯತೇ |
ತತ್ರ ಪ್ರಕಾಮಂ ಕ್ರೀಡಿತ್ವಾ ಮಾನುಷೇಷು ಮುನಿರ್ಭವೇತ್ ॥29॥
ಬಳಿಕ ಅಲ್ಲಿಂದ ಕಾಲಿಕವಾಗಿ ಚ್ಯುತನಾದ ಅವನು ಕೇತುಮಾಲ ವರ್ಷದಲ್ಲಿ ಉತ್ಪತ್ತಿಯನ್ನು ಪಡೆದು ಅಲ್ಲಿಯೂ ಯಥೇಷ್ಟವಾಗಿ ವಿಹರಿಸಿ ಮನುಷ್ಯಲೋಕದಲ್ಲಿ ಮುನಿಯಾಗಿ ಹುಟ್ಟುತ್ತಾನೆ.
ಚೈತ್ರಮಾಸಂ ತು ಯೋ ರಾಜನ್ನೇಕಭುಕ್ತೇನ ವರ್ತತೇ |
ಬ್ರಹ್ಮಚಾರೀ ತು ಮದ್ಭಕ್ತಸ್ತಸ್ಯ ಪುಣ್ಯಫಲಂ ಶೃಣು ॥30॥
ಯಾವ ವ್ಯಕ್ತಿಯು ಚೈತ್ರಮಾಸದಲ್ಲಿ ನನ್ನ ಭಕ್ತನಾಗಿ ಬ್ರಹ್ಮಚರ್ಯದಲ್ಲಿದ್ದು ಏಕಭುಕ್ತ ವ್ರತವನ್ನು ಆಚರಿಸುತ್ತಾನೋ ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.

ಯದಗ್ನಿಹೋತ್ರಿಣಃ ಪುಣ್ಯಂ ಯಥೋಕ್ತವ್ರತಚಾರಿಣಃ |
ತತ್ಪುಣ್ಯಫಲಮಾಸಾದ್ಯ ಚಂದ್ರಲೋಕೇ ಮಹೀಯತೇ ॥31॥
ಅಗ್ನಿಹೋತ್ರಗಳಿಗೆ ಯಾವ ಪುಣ್ಯವು ಲಭಿಸುತ್ತದೋ ವಿಧಿಬದ್ಧವಾಗಿ ವ್ರತಾಚರಣೆ ಮಾಡಿದ ವ್ಯಕ್ತಿಗಳಿಗೆ ಲಭಿಸುವ ಪುಣ್ಯಫಲವನ್ನು ಹೊಂದಿದ ಈತನು ಚಂದ್ರಲೋಕದಲ್ಲಿ ಪೂಜ್ಯನಾಗುತ್ತಾನೆ.
ತತೋಽವತೀರ್ಣೋ ಜಾಯೇತ ವರ್ಷೇ ರಮಣಕೇ ಪುನಃ |
ಭುಕತತ್ವ ಕಾಮಾಂಸ್ತತಸ್ತಸ್ಮಿನ್ನಿಹ ರಾಜಾ ಭವಿಷ್ಯತಿ ॥32॥
ಬಳಿಕ ರಮಣಕ ವರ್ಷದಲ್ಲಿ ಉತ್ಪತ್ತಿಯನ್ನು ಹೊಂದಿ ಅಲ್ಲಿ ಯಥೇಷ್ಟವಾದ ಕಾಮನೆಗಳನ್ನು ಪಡೆದು ಈ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ.
ವೈಶಾಖೇ ಯಸ್ತು ವೈ ಮಾಸೇ ಏಕಭುಕ್ತೇನ ವರ್ತತೇ |
ದ್ವಿಜಮಗ್ರಾಸನೇ ಕೃತ್ವಾ ಭುಂಜನ್ ಭೂಮೌ ಚ ವಾಗ್ಯತಃ ॥33॥
ನಮೋ ಬ್ರಹ್ಮಣ್ಯದೇವಾಯೇತ್ಯರ್ಚಯಿತ್ವಾ ದಿವಾಕರಮ್ |
ವ್ರತಾಂತೇ ಭೋಜಯೇದ್ ವಿಪ್ರಾನ್ ತಸ್ಯ ಪುಣ್ಯಫಲಂ ಶೃಣು ॥34॥
ಯಾವನು ವೈಶಾಖ ಮಾಸದಲ್ಲಿ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಬ್ರಾಹ್ಮಣರನ್ನು ಉತ್ತಮವಾದ ಆಸನದಲ್ಲಿ ಕೂಡಿಸಿ ತಾನು ಮೌನವಾಗಿ ಭೂಮಿಯಲ್ಲಿ ಕುಳಿತು ಊಟ ಮಾಡುತ್ತಾನೋ, `ನಮೊ ಬ್ರಹ್ಮಣ್ಯದೇವಾಯ' ಎಂಬ ಮಂತ್ರದಿಂದ ಸೂರ್ಯಾಂತರ್ಯಾಮಿಯಾದ ನನ್ನನ್ನು ಆರಾಧಿಸುತ್ತಾನೋ, ವ್ರತ ಮುಗಿದ ಬಳಿಕ ಬ್ರಾಹ್ಮಣರನ್ನು ಭೋಜನದಿಂದ ಸತ್ಕರಿಸುತ್ತಾನೋ ಅವನಿಗೆ ದೊರಕುವ ಫಲವನ್ನು ಕೇಳಿಸಿಕೊ.
ಫಲಂ ಯದ್ವಿಧಿವತ್ ಪ್ರೋಕ್ತಮಗ್ನಿಷ್ಟೋಮಾತಿರಾತ್ರಯೋಃ |
ತತ್ಪುಣ್ಯಫಲಮಾಸಾದ್ಯ ದೇವಲೋಕೇ ಮಹೀಯತೇ ॥35॥
ಅಗ್ನಿಷ್ಟೋಮಗಳನ್ನು ವಿಧಿವತ್ತಾಗಿ ಆಚರಿಸಿದಾಗ ಯಾವ ಪುಣ್ಯಫಲವನ್ನು ಹೊಂದುತ್ತಾನೋ ಅದೇ ಪುಣ್ಯವನ್ನು ಹೊಂದಿ ದೇವಲೋಕದಲ್ಲಿ ಪೂಜಿತನಾಗುತ್ತಾನೆ.
ತತೋ ಹೈಮವತೇ ವರ್ಷೇ ಜಾಯತೇ ಕಾಲಪರ್ಯಯಾತ್ |
ತತ್ರ ಪ್ರಕಾಮಂ ಕೀಡಿತ್ವಾ ವಿಪ್ರಃ ಪಶ್ಚಾದ್ ಭವಿಷ್ಯತಿ ॥36॥
ಪುಣ್ಯಫಲವು ತೀರಿದ ಬಳಿಕ ಹಿಮವದ್ ವರ್ಷದಲ್ಲಿ ಕಾಲಿಕವಾಗಿ ಉತ್ಪತ್ತಿಯನ್ನು ಹೊಂದುತ್ತಾನೆ. ಅಲ್ಲಿ ಯಥೇಷ್ಟವಾಗಿ ವಿಹರಿಸಿ ಬಳಿಕ ಬ್ರಾಹ್ಮಣನಾಗಿ ಭೂಮಿಯಲ್ಲಿ ಹುಟ್ಟುತ್ತಾನೆ.
ಜ್ಯೇಷ್ಠಮಾಸಂ ತು ಯೋ ರಾಜನ್ನೇಕಭುಕ್ತೇನ ವರ್ತತೇ |
ವಿಪ್ರಮಗ್ರಾಸನೇ ಕೃತ್ವಾ ಭೂಮೌ ಭುಂಜನ್ ಯಥಾವಿಧಿ ॥37॥
ನಮೋ ಬ್ರಹ್ಮಣ್ಯದೇವಾಯೇತ್ಯರ್ಚಯನ್ ಮಾಂ ಯಥಾವಿಧಿ |
ಡಂಭಾನೃತವಿನಿರ್ಮುಕ್ತಸ್ತಸ್ಯ ಪುಣ್ಯಫಲಂ ಶೃಣು ॥38॥
ಯಾರು ಜ್ಯೇಷ್ಠಮಾಸದಲ್ಲಿ ಬ್ರಾಹ್ಮಣರನ್ನು ಉಚ್ಚಾಸನದಲ್ಲಿ ಕೂಡಿಸಿ ತಾನು ಭೂಮಿಯಲ್ಲಿ ಕುಳಿತು ವಿಧಿಬದ್ಧವಾಗಿ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಜಂಬ, ಸುಳ್ಳುಗಳನ್ನು ತ್ಯಜಿಸಿ `ನಮೋ ಬ್ರಹ್ಮಣ್ಯದೇವಾಯ' ಎಂಬ ಮಂತ್ರದಿಂದ ವಿಧಿಬದ್ಧವಾಗಿ ನನ್ನನ್ನು ಅರ್ಚಿಸುತ್ತಾನೋ ಅವನಿಗೆ ದೊರಕುವ ಫಲವನ್ನು ಕೇಳಿಸಿಕೊ.
ಚೀರ್ಣೇ ಚಾಂದ್ರಾಯಣೇ ಸಮ್ಯಗ್ ಯತ್ಪುಣ್ಯಂ ಸಮುದಾಹೃತಮ್ |
ತತ್ಪುಣ್ಯಫಲಮಾಸಾದ್ಯ ದೇವಲೋಕೇ ಮಹೀಯತೇ ॥39॥
ಚೆನ್ನಾಗಿ ಚಾಂದ್ರಾಯಣವ್ರತವು ಮಾಡಿದಾಗ ಯಾವ ಪುಣ್ಯವು ಲಭಿಸುತ್ತದೋ ಆ ಪುಣ್ಯವನ್ನು ಪಡೆದು ದೇವಲೋಕದಲ್ಲಿ ಪೂಜಿತನಾಗುತ್ತಾನೆ.
ಅಥೋತ್ತರಕುರುಷ್ವೇವ ಜಾಯತೇ ನಿರ್ಗತಸ್ತತಃ |
ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ದ್ವಿಜೋ ಭವೇತ್ ॥40॥
ಬಳಿಕ ಪುಣ್ಯದಿಂದ ಚ್ಯುತನಾದ ಆತನು ಉತ್ತರಕುರು ವರ್ಷದಲ್ಲಿ ಉತ್ಪತ್ತಿಯನ್ನು ಹೊಂದುತ್ತಾನೆ. ಬಳಿಕ ಯಥೇಷ್ಟವಾಗಿ ಅಲ್ಲಿ ವಿಹರಿಸಿ ಕಾಲಿಕವಾಗಿ ಬ್ರಾಹ್ಮಣನಾಗಿ ಭೂಮಿಯಲ್ಲಿ ಹುಟ್ಟುತ್ತಾನೆ.
ಆಷಾಢಮಾಸಂ ಯೋ ರಾಜನ್ನೇಕಭುಕ್ತೇನ ವರ್ತತೇ |
ಬ್ರಹ್ಮಚಾರೀ ಜಿತಕ್ರೋಧೋ ಮದರ್ಚನಪರಾಯಣಃ ॥41॥
ವಿಪ್ರಮಗ್ರಾಸನೇ ಕೃತ್ವಾ ಭೂಮೌ ಭುಂಜನ್ ಜಿತೇಂದ್ರಿಯಃ |
ಕೃತ್ವಾ ತ್ರಿಷವಣಸ್ನಾನಮಷ್ಟಾಕ್ಷರವಿಧಾನತಃ ॥42॥
ವ್ರತಾಂತೇ ಭೋಜಯೇದ್ ವಿಪ್ರಾನ್ ಪಾಯಸೇನ ಯುಧಿಷ್ಠಿರ |
ಗುಡೋದನೇನ ರಾಜೇಂದ್ರ ತಸ್ಯ ಪುಣ್ಯಫಲಂ ಶೃಣು ॥43॥
ಯಾವನು ಆಷಾಢಮಾಸದಲ್ಲಿ ಬ್ರಹ್ಮಚಾರಿಯಾಗಿದ್ದು ನನ್ನನ್ನೇ ಆರಾಧಿಸುತ್ತಾ ಕ್ರೋಧವನ್ನು ಗೆದ್ದು ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಅಷ್ಟಾಕ್ಷರ ವಿಧಾನದಿಂದ ಮೂರು ಬಾರಿ ಸ್ನಾನವನ್ನಾಚರಿಸುತ್ತಾ ಬ್ರಾಹ್ಮಣರನ್ನು ಉಚ್ಚಾಸನದಲ್ಲಿ ಕೂಡಿಸಿ, ಜಿತೇಂದ್ರಿಯನಾಗಿ ಊಟ ಮಾಡುತ್ತಾ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಪಾಯಸದಿಂದ ಗುಡದಾನದಿಂದ ಬ್ರಾಹ್ಮಣರನ್ನು ವ್ರತ ಮುಗಿದ ಬಳಿಕ ಆರಾಧಿಸುತ್ತಾನೋ ರಾಜೇಂದ್ರನೇ, ಅವನಿಗೆ ದೊರಕುವ ಫಲವೇನೆಂಬುದನ್ನು ಹೇಳುತ್ತೇನೆ, ಕೇಳಿಸಿಕೊ.
ಕಪಿಲಾಶತದಾನಸ್ಯ ಯತ್ಪುಣ್ಯಂ ಪಾಂಡುನಂದನ |

ತತ್ಪುಣ್ಯಫಲಮಾಸಾದ್ಯ ದೇವಲೋಕೇ ಮಹೀಯತೇ ॥44॥
ಪಾಂಡುನಂದನನೇ, ನೂರು ಕಪಿಲಾಧೇನುಗಳನ್ನು ದಾನ ಮಾಡಿದಾಗ ಯಾವ ಪುಣ್ಯವು ದೊರೆಯುತ್ತದೋ ಆ ಪುಣ್ಯವನ್ನು ಹೊಂದಿ ದೇವಲೋಕದಲ್ಲಿ ಪೂಜಿತನಾಗುತ್ತಾನೆ.
ತತೋಽವತೀರ್ಣಃ ಕಾಲೇನ ಶಾಕರ್ದಿಪೇ ಪ್ರಜಾಯತೇ |
ತತಶ್ಚಾಪಿ ಚ್ಯುತಃ ಕಾಲಾದಿಹ ವಿಪ್ರೋ ಭವಿಷ್ಯತಿ ॥45॥
ಬಳಿಕ ಆ ಪುಣ್ಯದಿಂದ ಭೂಮಿಗೆ ಆಗಮಿಸಿದ ಆತನು ಶಾಕರ್ದಿಪದಲ್ಲಿ ಉತ್ಪತ್ತಿಯನ್ನು ಹೊಂದುತ್ತಾನೆ. ಕಾಲಿಕವಾಗಿ ಅಲ್ಲಿಂದ ಚ್ಯುತನಾಗಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಶ್ರಾವಣಂ ಯಃ ಕ್ಷಿಪೇನ್ಮಾಸಮೇಕಭುಕ್ತೇನ ಸಂಯತಃ |
ನಮೋ ಬ್ರಹ್ಮಣ್ಯದೇವಾಯೇತ್ಯುಕ್ತ್ವಾ ಮಾಮರ್ಚಯೇತ್ ಸದಾ ॥46॥
ವಿಪ್ರಮಗ್ರಾಸನೇ ಕೃತ್ವಾ ಭೂಮೌ ಭುಂಜನ್ ಯಥಾವಿಧಿ ॥47॥
ಪಾಯಸೇನಾರ್ಚಯನ್ ವಿಪ್ರಾನ್ ಜಿತಕ್ರೋಧೋ ಜಿತೇಂದ್ರಿಯಃ |
ಲೋಭಮೋಹವಿನಿರ್ಮುಕ್ತಸ್ತಸ್ಯ ಪುಣ್ಯಫಲಂ ಶೃಣು ॥48॥
ಯಾವನು ಶ್ರಾವಣಮಾಸದಲ್ಲಿ ಏಕಭುಕ್ತವ್ರತವನ್ನು ಜಿತೇಂದ್ರಿಯನಾಗಿ ಆಚರಿಸುತ್ತಾನೋ, ಯಾವಾಗಲೂ `ನಮೋ ಬ್ರಹ್ಮಣ್ಯದೇವಾಯ' ಎಂಬ ಮಂತ್ರದಿಂದ ನನ್ನನ್ನು ಅರ್ಚಿಸುತ್ತಾನೋ, ಬ್ರಾಹ್ಮಣನನ್ನು ಉಚ್ಚಾಸನದಲ್ಲಿ ಕೂಡಿಸಿ ಆರಾಧಿಸಿ ತಾನು ವಿಧಿಬದ್ಧವಾಗಿ ಭೂಮಿಯಲ್ಲಿ ಕುಳಿತು ಊಟ ಮಾಡುತ್ತಾನೋ, ಜಿತೇಂದ್ರಿಯನಾಗಿ, ಕ್ರೋಧವನ್ನು ಗೆದ್ದು, ಲೋಭ-ಮೋಹಗಳಿಂದ ಮುಕ್ತನಾಗಿ ಬ್ರಾಹ್ಮಣರನ್ನು ಪಾಯಸಗಳ ಮೂಲಕ ಆರಾಧಿಸುತ್ತಾನೋ ಅವನಿಗೆ ದೊರಕುವ ಫಲವನ್ನು ಕೇಳು.
ಕಪಿಲಾದಸ್ಯ ಯತ್ಪುಣ್ಯಂ ವಿಧಿವತ್ ತಸ್ಯ ಪಾಂಡವ |
ತತ್ಪುಣ್ಯಂ ಸಮನುಪ್ರಾಪ್ಯ ಶಕ್ರಲೋಕೇ ಮಹೀಯತೇ ॥49॥
ಕಪಿಲಧೇನುವನ್ನು ವಿಧಿಬದ್ಧವಾಗಿ ದಾನ ಮಾಡಿದಾಗ ಯಾವ ಪುಣ್ಯವನ್ನು ಹೊಂದುತ್ತಾನೋ ಆ ಪುಣ್ಯವನ್ನು ಸಂಪಾದಿಸಿಕೊಂಡು ಇಂದ್ರಲೋಕದಲ್ಲಿ ಪೂಜಿತನಾಗುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾತ್ ಕುಶದಿರ್ಯಿಪೇ ಪ್ರಜಾಯತೇ |
ತತ್ರ ಪ್ರಕಾಮಂ ಕ್ರೀಡಿತ್ವಾ ವಿಪ್ರೋ ಭವತಿ ಮಾನುಷೇ ॥50॥
ಅಲ್ಲಿಂದಲೂ ಚ್ಯುತನಾದ ಅವನು ಕಾಲಿಕನಾಗಿ ಕುಶರ್ದಿಪದಲ್ಲಿ ಹುಟ್ಟುತ್ತಾನೆ. ಅಲ್ಲಿ ಸ್ವೇಚ್ಛೆಯಿಂದ ಕ್ರೀಡಿಸಿ ಬಳಿಕ ಮನುಷ್ಯಲೋಕದಲ್ಲಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ.
ಯಸ್ತು ಭಾದ್ರಪದಂ ಮಾಸಮೇಕಭುಕ್ತೇನ ವರ್ತತೇ |
ಬ್ರಹ್ಮಚಾರೀ ಜಿತಕ್ರೋಧಃ ಸತ್ಯಸಂಧೋ ಜಿತೇಂದ್ರಿಯಃ ॥51॥
ವಿಪ್ರಮಗ್ರಾಸನೇ ಕೃತ್ವಾ ಪಾಕಭೇದವಿವರ್ಜಿತಃ |
ನಮೋ ಬ್ರಹ್ಮಣ್ಯದೇವಾಯೇತ್ಯುಕ್ತ್ವಾಽಸ್ಯ ಚರಣೌ ಸ್ಪೃಶೇತ್ ॥52॥
ತಿಲಾನ್ ವಾಽಪಿ ಘೃತಾನ್ ವಾಽಪಿ ವ್ರತಾಂತೇ ದಕ್ಷಿಣಾಂ ದದತ್ |
ಮದ್ಭಕ್ತಸ್ಯ ನರಶ್ರೇಷ್ಠ ತಸ್ಯ ಪುಣ್ಯಫಲಂ ಶೃಣು ॥53॥
ಜಿತೇಂದ್ರಿಯನಾದ, ಸತ್ಯಸಂಧನಾದ, ಜಿತಕ್ರೋಧನಾದ, ಬ್ರಹ್ಮಚಾರಿಯಾದ, ಯಾವನು ಭಾದ್ರಪದ ಮಾಸದಲ್ಲಿ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ಬ್ರಾಹ್ಮಣನನ್ನು ಪಾಕಭೇದ ಮಾಡದೆ ಉಚ್ಚಾಸನದಲ್ಲಿ ಕೂರಿಸಿ `ನಮೋ ಬ್ರಹ್ಮಣ್ಯ ದೇವಾಯ' ಎಂಬ ಮಂತ್ರವನ್ನು ಉಚ್ಚರಿಸುತ್ತಾ ಬ್ರಾಹ್ಮಣನ ಪಾದಗಳನ್ನು ಮುಟ್ಟುತ್ತಾ ಎಳ್ಳು, ತುಪ್ಪ, ದಕ್ಷಿಣೆ ಇವುಗಳನ್ನು ವ್ರತ ಮುಗಿದ ಬಳಿಕ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅಂತಹ ನನ್ನ ಭಕ್ತನಾದವನಿಗೆ ದೊರೆಯುವ ಪುಣ್ಯದ ಫಲವೇನೆಂಬುದನ್ನು ನರಶ್ರೇಷ್ಠನೇ ಕೇಳು.
ಯತ್ಫಲಂ ವಿಧಿವತ್ಪ್ರೋಕ್ತಂ ರಾಜಸೂಯಾಶ್ವಮೇಧಯೋಃ |
ತತ್ಪುಣ್ಯಫಲಮಾಸಾದ್ಯ ಶಕ್ರಲೋಕೇ ಮಹೀಯತೇ ॥54॥
ವಿಧಿವತ್ತಾಗಿ ರಾಜಸೂಯ, ಅಶ್ವಮೇಧ ಯಾಗಗಳನ್ನು ಮಾಡಿದಾಗ ಯಾವ ಪುಣ್ಯವನ್ನು ಹೊಂದುತ್ತಾನೋ ಅದೇ ಫಲವನ್ನು ಹೊಂದಿದ ವ್ಯಕ್ತಿಯು ಇಂದ್ರ ಲೋಕದಲ್ಲಿ ಪೂಜಿತನಾಗುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾತ್ ಜಾಯತೇ ಧನದಾಲಯೇ |
ತತ್ರ ಪ್ರಕಾಮಂ ಕ್ರೀಡಿತ್ವಾ ರಾಜಾ ಭವತಿ ಮಾನುಷೇ ॥55॥
ಬಳಿಕ ಕಾಲಿಕವಾಗಿ ಅಲ್ಲಿಂದ ಚ್ಯುತನಾದ ಆತನು ಕುಬೇರನ ಮನೆಯಲ್ಲಿ ಉತ್ಪತ್ತಿಯನ್ನು ಹೊಂದುತ್ತಾನೆ. ಅಲ್ಲಿ ಯಥೇಷ್ಟವಾಗಿ ಸಂತೋಷದಿಂದ ವಿಹರಿಸಿ ಬಳಿಕ ಮನುಷ್ಯಲೋಕದಲ್ಲಿ ರಾಜನಾಗಿ ಹುಟ್ಟುತ್ತಾನೆ.
ಯಶ್ಚಾಪ್ಯಾಶ್ವಯುಜೇ ಮಾಸಮೇಕಭುಕ್ತೇನ ವರ್ತತೇ ॥56॥
ಮದ್ಗಾಯತ್ರೀಂ ಜಪೇದ್ಭಕ್ತ್ಯಾ ಮದ್ಗತೇನಾಂತರಾತ್ಮನಾ |
ದ್ವಿಸಂಧ್ಯಂ ವಾ ತ್ರಿಸಂಧ್ಯಂ ವಾ ಶತಮಷ್ಟೋತ್ತರಂ ತು ವಾ ॥57॥
ಯಾವ ವ್ಯಕ್ತಿಯು ಆಶ್ವಯುಜ ಮಾಸದಲ್ಲಿ ಏಕಭುಕ್ತವ್ರತವನ್ನು ಆಚರಿಸುತ್ತಾನೋ, ನನ್ನಲ್ಲೇ ನೆಲೆಗೊಂಡ ಮನಸ್ಸುಳ್ಳವನಾಗಿ ಗಾಯತ್ರಿ ಜಪವನ್ನು ಮಾಡುತ್ತಾನೋ, ಎರಡು ಅಥವಾ ಮೂರು ಸಂಧ್ಯಾಕಾಲದಲ್ಲಿ ನೂರು ಅಥವಾ ನೂರ ಎಂಟು ಗಾಯತ್ರಿಯನ್ನು ಜಪಿಸುತ್ತಾನೋ,
ನಮೋ ಬ್ರಹ್ಮಣ್ಯದೇವಾಯೇತ್ಯಸಕೃನ್ಮಾಂ ಪ್ರಣಮ್ಯ ಚ |

ವಿಪ್ರಮಗ್ರಾಸನೇ ಕೃತ್ವಾ ಸಂಯತೇಂದ್ರಿಯಮಾನಸಃ ॥58॥
ವ್ರತಾಂತೇ ಭೋಜಯೇದ್ ವಿಪ್ರಾನ್ ತಸ್ಯ ಪುಣ್ಯಫಲಂ ಶೃಣು ॥59॥
`ನಮೋ ಬ್ರಹ್ಮಣ್ಯದೇವಾಯ' ಎಂದು ಅನೇಕ ಬಾರಿ ಸ್ತುತಿಸುತ್ತಾ ನನ್ನನ್ನು ನಮಸ್ಕರಿಸುತ್ತಾನೋ, ಜಿತೇಂದ್ರಿಯನಾಗಿ ಬ್ರಾಹ್ಮಣನನ್ನು ಉಚ್ಚಾಸನದಲ್ಲಿ ಕೂರಿಸುತ್ತಾನೋ, ವ್ರತ ಮುಗಿದ ಬಳಿಕ ಬ್ರಾಹ್ಮಣರನ್ನು ಊಟ ಮಾಡಿಸುತ್ತಾನೋ ಅವನಿಗೆ ದೊರಕುವ ಪುಣ್ಯಫಲವನ್ನು ಕೇಳು.
ಅಶ್ವಮೇಧಸ್ಯ ಯತ್ಪುಣ್ಯಂ ವಿಧಿವತ್ ಪಾಂಡುನಂದನ |
ತತ್ಪುಣ್ಯಫಲಮಾಸಾದ್ಯ ಮಮ ಲೋಕೇ ಮಹೀಯತೇ ॥60॥
ಅಶ್ವಮೇಧಯಜ್ಞವನ್ನು ವಿಧಿವತ್ತಾಗಿ ಆಚರಿಸಿದಾಗ ಯಾವ ಪುಣ್ಯವು ಲಭಿಸುತ್ತದೋ, ಪಾಂಡುನಂದನನೇ ಅದೇ ಪುಣ್ಯವನ್ನು ಹೊಂದಿದ ಈ ವ್ಯಕ್ತಿಯು ನನ್ನ ಲೋಕದಲ್ಲಿ ಪೂಜಿತನಾಗುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾತ್ ಶ್ವೇತರ್ದಿಪೇ ಪ್ರಜಾಯತೇ |
ತತ್ರ ಭುಕತ್ವ ಮಹಾಭೋಗಾನತ್ರ ವಿಪ್ರವರೋ ಭವೇತ್ ॥61॥
ಬಳಿಕ ಕಾಲಿಕವಾಗಿ ಚ್ಯುತನಾದ ಈತನು ನನ್ನ ಲೋಕವಾದ ಶ್ವೇತರ್ದಿಪದಲ್ಲಿ ಜನ್ಮವನ್ನು ತಾಳಿ ಅಲ್ಲಿ ಅನೇಕ ಭೋಗವನ್ನು ಅನುಭವಿಸಿ, ಈ ಭೂಮಿಯಲ್ಲಿ ಬ್ರಾಹ್ಮಣ ಶ್ರೇಷ್ಠನಾಗಿ ಹುಟ್ಟುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಏಕಭಕ್ತವಿಧಿರ್ನಾಮ ತ್ರಯೋದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಹದಿಮೂರನೆಯ ಅಧ್ಯಾಯ ಮುಗಿಯಿತು.
ನೂರ ಹದಿನಾಲ್ಕನೆಯ ಅಧ್ಯಾಯ
ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಒಂದು ಸಂವತ್ಸರದ ಕಾಲ ಏಕಭುಕ್ತವ್ರತವನ್ನು ಮಾಡಿದಾಗ ಉಂಟಾಗುವ ಫಲವೇನೆಂಬುದನ್ನು ಹೇಳಿದುದು. ಕೃಷ್ಣನು ಯುಧಿಷ್ಠಿರನನ್ನು ಕುರಿತು ಕೇಶವಾದಿ ಭಗವನ್ಮೂರ್ತಿ ಉಪಾಸನೆ ಮಾಡುವ ಮೂಲಕ ಮಾರ್ಗಶೀರ್ಷಾದಿ ದ್ವಾದಶೀವ್ರತಾಚರಣೆಯ
ಫಲವನ್ನು ಹೇಳಿದುದು. ಯುಧಿಷ್ಠಿರನು ವಿಸ್ತಾರವಾಗಿ ಕೃಷ್ಣನನ್ನು ಸ್ತುತಿಸಿದುದು. ಪುನಃ ಕೃಷ್ಣನು ಯುಧಿಷ್ಠಿರನಿಗೆ ಏಕಾದಶಿ ಉಪವಾಸ ಪೂರ್ವಕ ದ್ವಾದಶಿಯಂದು ಭಗವತ್ಪೂಜೆಯನ್ನು ಮಾಡಿದರೆ ಉಂಟಾಗುವ ಫಲವೇನೆಂಬುದನ್ನು ನಿರೂಪಿಸಿದುದು.
ಯುಧಿಷ್ಠಿರಃ
ಏವಂ ಸಂವತ್ಸರಂ ಪೂರ್ಣಮೇಕಭ(ಭು)ಕ್ತೇನ ಯಃ ಕ್ಷಿಪೇತ್ |
ತಸ್ಯ ಪುಣ್ಯಫಲಂ ಯದ್ವೈ ತನ್ಮಮಾಚಕ್ಷ್ವ ಕೇಶವ ॥1॥
ಯುಧಿಷ್ಠಿರ ಈ ರೀತಿಯಾಗಿ ಒಂದು ಸಂವತ್ಸರದ ಕಾಲ ಯಾರು ಏಕಭುಕ್ತ ಎಂಬ ವ್ರತವನ್ನು ಮಾಡುತ್ತಾನೋ ಅವನಿಗೆ ಲಭಿಸುವ ಪುಣ್ಯವೇನೆಂಬುದನ್ನು ಕೇಶವನೇ ನನಗೆ ತಿಳಿಸು.
ಶ್ರೀಭಗವಾನ್
ಶೃಣು ಪಾಂಡವ ಸತ್ಯಂ ಮೇ ವಚನಂ ಪುಣ್ಯಮುತ್ತಮಮ್ |
ಯದಕೃತ್ವಾಽಥವಾ ಕೃತ್ವಾ ನರಃ ಪಾಪೈಃ ಪ್ರಮುಚ್ಯತೇ ॥2॥
ಶ್ರೀಭಗವಾನ್ ಪಾಂಡವನೇ, ನನ್ನ ಉತ್ತಮವಾದ ಪುಣ್ಯವಚನವನ್ನು ಕೇಳಿಸಿಕೊ. ಯಾರಿಗೆ ಏಕಭುಕ್ತವ್ರತವನ್ನು ಮಾಡಲು ಸಾಧ್ಯವಿಲ್ಲವೋ ಅವರು ಈ ವ್ರತದ ಬಗ್ಗೆ ಕೇಳಿಸಿಕೊಂಡರೂ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾರೆ. ಅಥವಾ ಯಾರು ಪಾಪಕರ್ಮವನ್ನು ಮಾಡಿ ನಾನು ಹೇಳುವ ವ್ರತವನ್ನು ಮಾಡುತ್ತಾರೊ ಅವರೂ ಪಾಪದಿಂದ ಮುಕ್ತರಾಗುತ್ತಾರೆ. ಅಥವಾ ಪಾಪವನ್ನು ಮಾಡದೆ ಯಾರು ಈ ವ್ರತವನ್ನು ಅನುಷ್ಠಾನ ಮಾಡುತ್ತಾರೋ ಅವರು ಸಂಸಾರಬಂಧನದಿಂದಲೇ ಬಿಡುಗಡೆಯನ್ನು ಹೊಂದುತ್ತಾರೆ.
ಏಕಭ(ಭು)ಕ್ತೇನ ವರ್ತೇತ ನರಃ ಸಂವತ್ಸರಂ ತು ಯಃ |
ಬ್ರಹ್ಮಚಾರೀ ಹ್ಯಧಃಶಾಯೀ ಜಿತಕ್ರೋಧೋ ಜಿತೇಂದ್ರಿಯಃ ॥3॥
ಶುಚಿಃ ಸ್ನಾನರತೋಽವ್ಯಗ್ರಃ ಸತ್ಯವಾಗನಸೂಯಕಃ |
ಅರ್ಚಯನ್ನೇವ ಮಾಂ ನಿತ್ಯಂ ಮದ್ಗತೇನಾಂತರಾತ್ಮನಾ ॥4॥
ಯಾರು ಏಕಭುಕ್ತ ಎನ್ನುವ ವ್ರತವನ್ನು ಒಂದು ಸಂವತ್ಸರದ ಕಾಲ ಜಿತೇಂದ್ರಿಯನಾಗಿ, ಜಿತಕ್ರೋಧನಾಗಿ, ಬ್ರಹ್ಮಚಾರಿಯಾಗಿ, ನೆಲದಲ್ಲೇ ಮಲಗುವವನಾಗಿ, ಶುಚಿಯಾಗಿ, ಸ್ನಾನರತನಾಗಿ, ಅವ್ಯಗ್ರನಾಗಿ, ಸತ್ಯವಚನ ಉಳ್ಳವನಾಗಿ, ಅಸೂಯೆ ಇಲ್ಲದವನಾಗಿ, ನನ್ನಲ್ಲೇ ಮನಸ್ಸುಳ್ಳವನಾಗಿ ನಿತ್ಯವೂ ನನ್ನನ್ನು ಆರಾಧಿಸುತ್ತಾ ಅನುಷ್ಠಾನ ಮಾಡುತ್ತಾನೋ;
ಸಂಧ್ಯಯೋಸ್ತು ಜಪೇನ್ನಿತ್ಯಂ ಮದ್ಗಾಯತ್ರೀಂ ಸಮಾಹಿತಃ |
ನಮೋ ಬ್ರಹ್ಮಣ್ಯದೇವಾಯೇತ್ಯಸಕೃನ್ಮಾಂ ಪ್ರಣಮ್ಯ ಚ ॥5॥
ಎರಡು ಸಂಧ್ಯಾಕಾಲಗಳಲ್ಲಿ ಗಾಯತ್ರಿಯಿಂದ ನನ್ನನ್ನು ಜಪಿಸುತ್ತಾನೋ, ನಮೋ ಬ್ರಹ್ಮಣ್ಯದೇವಾಯ ಎಂಬ ಮಂತ್ರವನ್ನು ಅನೇಕ ಬಾರಿ ಪಠಿಸುತ್ತಾ ನನ್ನನ್ನು ನಮಿಸುತ್ತಾನೋ,
ವಿಪ್ರಮಗ್ರಾಸನೇ ಕೃತ್ವಾ ಯಾವಕಂ ಭೈಕ್ಷಮೇವ ವಾ |
ಭುಕತ್ವ ತು ವಾಗ್ಯತೋ ಭೂಮಾವಾಚಾಂತಸ್ಯ ದ್ವಿಜನ್ಮನಃ ॥6॥
ಬ್ರಾಹ್ಮಣನನ್ನು ಉನ್ನತ ಆಸನದಲ್ಲಿ ಕೂರಿಸಿ, ಗೋಧಿಯಿಂದ ತಯಾರಿಸಿದ ಭಿಕ್ಷಾನ್ನವನ್ನು ಬ್ರಾಹ್ಮಣನಿಗೆ ನೀಡಿ ಮೌನಿಯಾಗಿ ಭೂಮಿಯಲ್ಲಿ ಕುಳಿತು ಸ್ವೀಕರಿಸುತ್ತಾನೋ,

ನಮೋಽಸ್ತು ವಾಸುದೇವಾಯೇತ್ಯುಕ್ತ್ವಾ ತು ಚರಣೌ ಸ್ಪೃಶೇತ್ ॥7॥
ಬಳಿಕ `ವಾಸುದೇವಾಯ ನಮಃ' ಎನ್ನುತ್ತಾ ಬ್ರಾಹ್ಮಣನ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡುತ್ತಾನೋ,
ಮಾಸೇ ಮಾಸೇ ಸಮಾಪ್ತೇ ತು ಭೋಜಯಿತ್ವಾ ದ್ವಿಜಾನ್ ಶುಚೀನ್ |
ಸಂವತ್ಸರೇ ತತಃ ಪೂರ್ಣೇ ದದ್ಯಾತ್ತು ವ್ರತದಕ್ಷಿಣಮ್ ॥8॥
ಪ್ರತಿ ಮಾಸಗಳು ಪೂರ್ಣವಾದಾಗ, ಸದಾಚಾರ ಸಂಪನ್ನರಾದ ಬ್ರಾಹ್ಮಣರನ್ನು ಭೋಜನ ಮಾಡಿಸುತ್ತಾನೋ ಅವನು ಸಂವತ್ಸರವು ಪೂರ್ಣವಾದ ಬಳಿಕ ಸಮಗ್ರ ವ್ರತ ಪರಿಸಮಾಪ್ತಿಗಾಗಿ ಪೂರ್ಣತೆಗಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ನೀಡಬೇಕು.
ನವಜಾತಮಯೀಂ ಗಾಂ ವಾ ತಿಲಧೇನುಮಥಾಪಿ ವಾ |
ವಿಪ್ರಹಸ್ತಚ್ಯುತೈಸ್ತೋಯೈಃ ಸಹಿರಣ್ಯೈಃ ಸಮುಕ್ಷಿತಃ ॥9॥
ತಸ್ಯ ಪುಣ್ಯಫಲಂ ರಾಜನ್ ಕಥ್ಯಮಾನಂ ಮಯಾ ಶೃಣು ॥10॥
ಹೊಸದಾಗಿ ಪ್ರಸವವನ್ನು ಹೊಂದಿದ ಹಸುವನ್ನು ಅಥವಾ ತಿಲಧೇನುವನ್ನು, ಬ್ರಾಹ್ಮಣನ ಕೈಯಲ್ಲಿ ಹಿರಣ್ಯಸಹಿತವಾಗಿ ದಾನವಾಗಿ ಕೊಟ್ಟು ಆ ನೀರು ಭೂಮಿಗೆ ಸುರಿದರೆ ಅದರ ಪುಣ್ಯಫಲವೇನೆಂಬುದನ್ನು ನಾನು ಮುಂದೆ ತಿಳಿಸುತ್ತೇನೆ, ಕೇಳಿಸಿಕೊ.
ದಶಜನ್ಮಕೃತಂ ಪಾಪಂ ಜ್ಞಾನತೋಽಜ್ಞಾನತೋಽಪಿ ವಾ |
ತದ್ ವಿನಶ್ಯತಿ ತಸ್ಯಾಶು ನಾತ್ರ ಕಾರ್ಯಾ ವಿಚಾರಣಾ ॥11॥
ಹತ್ತು ಜನ್ಮಗಳಲ್ಲಿ ತಿಳಿದೋ, ತಿಳಿಯದೆಯೋ ಮಾಡಿದ ಸಮಗ್ರ ಪಾಪಗಳು ತಕ್ಷಣದಲ್ಲಿಯೇ ನಾಶವಾಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯುಧಿಷ್ಠಿರಃ
ಸರ್ವೇಷಾಮುಪವಾಸಾನಾಂ ಯಚ್ಛ್ರೇಯಃ ಸುಮಹತ್ಫಲಮ್ |
ಯಚ್ಚ ನಿಃಶ್ರೇಯಸಂ ಲೋಕೇ ತದ್ಭವಾನ್ ವಕ್ತುಮರ್ಹತಿ ॥12॥
ಯುಧಿಷ್ಠಿರ ಸಮಸ್ತ ಉಪವಾಸಗಳಲ್ಲಿ ಯಾವ ಮಹತ್ತರವಾದ ಫಲವು ಉಂಟಾಗುತ್ತದೋ, ಶ್ರೇಯಸ್ಸು ಉಂಟಾಗುತ್ತದೋ ಲೋಕದಲ್ಲಿ ಅಂತಹ ಶ್ರೇಯಸ್ಸನ್ನುಂಟು ಮಾಡುವ ಕರ್ತವ್ಯವನ್ನು ನನಗೆ ತಿಳಿಸು.
ಶ್ರೀಭಗವಾನ್
ಶೃಣು ರಾಜನ್ ಮಯಾ ಪೂರ್ವಂ ಯಥಾ ಗೀತಂ ತು ನಾರದೇ |
ತಥಾ ತೇ ಕಥಯಿಷ್ಯಾಮಿ ಮದ್ಭಕ್ತಾಯ ಯುಧಿಷ್ಠಿರ ॥13॥
ಶ್ರೀಭಗವಾನ್ ರಾಜನೇ, ಹಿಂದೆ ನಾನು ಇದೇ ಪ್ರಶ್ನೆಗೆ ನಾರದರಿಗೆ ಉತ್ತರಿಸಿದ್ದೆನು. ನನ್ನ ಭಕ್ತನಾದ ನಿನಗೂ ಅದನ್ನೇ ಹೇಳುತ್ತೇನೆ.
ಯಸ್ತು ಭಕ್ತ್ಯಾ ಶುಚಿರ್ಭೂತ್ವಾ ಪಂಚಮ್ಯಾಂ ಮೇ ನರಾಧಿಪ |
ಉಪವಾಸವ್ರತಂ ಕುರ್ಯಾತ್ ತ್ರಿಕಾಲಂ ಚಾರ್ಚಯಂಸ್ತು ಮಾಮ್ ॥
ಸರ್ವಕ್ರತುಫಲಂ ಲಬ್ಧ್ವಾ ಮಮ ಲೋಕೇ ಮಹೀಯತೇ ॥15॥
ಯಾವನು ಮೂರು ಕಾಲಗಳಲ್ಲಿಯೂ ಸ್ನಾನ ಮಾಡಿ ನನ್ನನ್ನು ಪೂಜಿಸುತ್ತಾ ಭಕ್ತಿಯಿಂದ ಶುಚಿಯಾಗಿ ಪಂಚಮೀ ತಿಥಿಯಲ್ಲಿ ಉಪವಾಸ ವ್ರತವನ್ನು ಮಾಡುತ್ತಾನೋ ಅವನು ಸಮಸ್ತ ಯಜ್ಞಗಳ ಫಲವನ್ನು ಪಡೆದು ನನ್ನ ಲೋಕದಲ್ಲಿ ಪೂಜಿತನಾಗುತ್ತಾನೆ.
ಯುಧಿಷ್ಠಿರಃ
ಭಗವನ್ ದೇವದೇವೇಶ ಪಂಚಮೀ ನಾಮ ಕಾ ತವ |
ತಾಮಹಂ ಶ್ರೋತುಮಿಚ್ಛಾಮಿ ಕಥಯಸ್ವ ಮಮಾಚ್ಯುತ ॥16॥
ಯುಧಿಷ್ಠಿರ ಪೂಜ್ಯನೇ, ದೇವದೇವೇಶನೇ, ಪಂಚಮಿ ಎಂದರೆ ಯಾವ ಪಂಚಮಿ? ಅದರ ಬಗ್ಗೆ ಕೇಳಲು ಉತ್ಸುಕನಾಗಿದ್ದೇನೆ. ಅಚ್ಯುತನೇ, ನನಗೆ ತಿಳಿಸು.
ಶ್ರೀಭಗವಾನ್
ಪರ್ವದ್ವಯಂ ಚ ದ್ವಾದಶ್ಯೌ ಶ್ರವಣಂ ಚ ನರಾಧಿಪ |
ತತ್ಪಂಚಮೀತಿ ವಿಖ್ಯಾತಂ ಮತ್ಪ್ರಿಯಾ ಚ ವಿಶೇಷತಃ ॥17॥
ಶ್ರೀಭಗವಾನ್ ಅಮಾವಾಸ್ಯೆ-ಹುಣ್ಣಿಮೆಗಳು, ಕೃಷ್ಣ-ಶುಕ್ಲಪಕ್ಷಗಳ ಎರಡು ಏಕಾದಶಿಗಳು, ಶ್ರವಣಾ ನಕ್ಷತ್ರ - ಈ ಐದು ಸೇರಿ ಪಂಚಮಿ ಎಂದು ಕರೆಯಲ್ಪಟ್ಟಿದೆ. ಇದು ನನಗೆ ಅತ್ಯಂತ ಪ್ರಿಯವಾದ ವ್ರತವೆನಿಸಿದೆ.
ತಸ್ಮಾತ್ತು ಬ್ರಾಹ್ಮಣಶ್ರೇಷ್ಠೈರ್ಮನ್ನಿವೇಶಿತಬುದ್ಧಿಭಿಃ |
ಉಪವಾಸಸ್ತು ಕರ್ತವ್ಯೋ ಮತ್ಪ್ರಿಯಾರ್ಥಂ ಯುಧಿಷ್ಠಿರ ॥18॥
ನನ್ನಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳ ಬ್ರಾಹ್ಮಣಶ್ರೇಷ್ಠರು ನನ್ನ ಸಂತೋಷಕ್ಕೋಸ್ಕರ ಈ ಐದು ದಿನಗಳಲ್ಲಿ ಉಪವಾಸವನ್ನು ಮಾಡಬೇಕು.
ದ್ವಾದಶ್ಯಾಮೇವ ವಾ ಕುರ್ಯಾದ್ ಉಪವಾಸಮಶಕ್ನುವನ್ |
ತೇನಾಹಂ ಪರಮಾಂ ಪ್ರೀತಿಂ ಯಾಸ್ಯಾಮಿ ನರಪುಂಗವ ॥19॥
ಯಾರು ಈ ಉಪವಾಸವನ್ನು ಐದು ದಿನವೂ ಮಾಡಲಾಗದಿದ್ದಲ್ಲಿ ಶುದ್ಧ ಏಕಾದಶಿಯಲ್ಲಿಯಾದರೂ ಉಪವಾಸ ಮಾಡಬೇಕು. ಅದರಿಂದ ನಾನು ಅತ್ಯಂತ ಪ್ರೀತಿಯನ್ನು ಹೊಂದುತ್ತೇನೆ.
ಅಹೋರಾತ್ರೇಣ ದ್ವಾದಶ್ಯಾಂ ಮಾರ್ಗಶೀರ್ಷೇಣ ಕೇಶವಮ್ |
ಉಪೋಷ್ಯ ಪೂಜಯೇದ್ ಯೋ ಮಾಂ ಸೋಽಶ್ವಮೇಧಫಲಂ ಲಭೇತ್ ॥
ಯಾರು ಮಾರ್ಗಶಿರ ಮಾಸದ ಏಕಾದಶಿಯಂದು ಸಮಗ್ರವಾಗಿ ಉಪವಾಸ ವ್ರತವನ್ನು ಮಾಡಿ ದ್ವಾದಶಿ ಪಾರಣೆಯನ್ನು

ಮಾಡುತ್ತಾರೋ ಅವರು ನನ್ನ ಪ್ರೀತಿಗೋಸ್ಕರ ಈ ಸತ್ಕರ್ಮವನ್ನು ಮಾಡಿದ ಪುಣ್ಯದ ಫಲವಾಗಿ ಅಶ್ವಮೇಧ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಪುಷ್ಯಮಾಸೇ ತು ನಾಮ್ನಾ ನಾರಾಯಣಂ ತು ಮಾಮ್ |
ಉಪೋಷ್ಯ ಪೂಜಯೇದ್ ಯೋ ಮಾಂ ವಾಜಪೇಯಫಲಂ ಲಭೇತ್ ॥
ಯಾರು ಪುಷ್ಯಮಾಸದ ಏಕಾದಶಿಯಂದು ನಾರಾಯಣನನ್ನು ಧ್ಯಾನಿಸುತ್ತಾ ಉಪವಾಸವನ್ನು ಮಾಡಿ ದ್ವಾದಶಿ ಪಾರಣೆಯನ್ನು ಮಾಡುತ್ತಾರೋ ಅವರು ವಾಜಪೇಯ ಯಜ್ಞದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಫಾಲ್ಗುನೇ ಮಾಸಿ ಗೋವಿಂದಾಖ್ಯಮುಪೋಷ್ಯ ಮಾಮ್ |
ಅರ್ಚಯೇದ್ ಯಃ ಸಮಾಪ್ನೋತಿ ಹ್ಯತಿರಾತ್ರಫಲಂ ನೃಪ ॥22॥
ಯಾರು ಫಾಲ್ಗುಣ ಮಾಸದ ದ್ವಾದಶಿಯಂದು ಗೋವಿಂದನನ್ನು ಧ್ಯಾನಿಸುತ್ತಾ ಉಪವಾಸ ವ್ರತವನ್ನು ಮಾಡುತ್ತಾರೋ ಅವರು ಅತಿರಾತ್ರ ಎಂಬ ಸತ್ಕರ್ಮಾನುಷ್ಠಾನ ಮಾಡಿದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಮಾಘಮಾಸೇ ತು ಮಾಮುಪೋಷ್ಯ ತು ಮಾಧವಮ್ |
ಪೂಜಯೇದ್ ಯಃ ಸಮಾಪ್ನೋತಿ ರಾಜಸೂಯಫಲಂ ನೃಪ ॥23॥
ಯಾರು ಮಾಘಮಾಸದ ಏಕಾದಶಿಯಂದು ಉಪವಾಸ ವ್ರತವನ್ನು ಕೈಗೊಂಡು ದ್ವಾದಶಿಯಂದು ಪಾರಣೆ ಮಾಡಿ ಮಾಧವನಾದ ನನ್ನನ್ನು ಆರಾಧಿಸುತ್ತಾರೋ ಅವರು ರಾಜಸೂಯ ಯಾಗ ಮಾಡಿದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಮಾಸಿ ಚೈತ್ರೇ ತು ಮಾಂ ವಿಷ್ಣುಂ ಸಮುಪೋಷ್ಯ ಯಃ |
ಪೂಜಯನ್ ಫಲಮಾಪ್ನೋತಿ ಪೌಂಡರೀಕಸ್ಯ ಯತ್ಫಲಮ್ ॥24॥
ಯಾರು ಚೈತ್ರಮಾಸದ ಶುದ್ಧ ಏಕಾದಶಿಯಂದು ಉಪವಾಸ ಮಾಡಿ ವಿಷ್ಣು ಎಂಬ ನನ್ನ ರೂಪವನ್ನು ಧ್ಯಾನಿಸುತ್ತಾ ದ್ವಾದಶಿ ಪಾರಣೆ ಮಾಡುತ್ತಾರೋ ಅವರು ಪುಂಡರೀಕ ಯಾಗದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಮಾಸಿ ವೈಶಾಖೇ ಮಧುಸೂದನಸಂಜ್ಞಿತಮ್ |
ಉಪೋಷ್ಯ ಪೂಜಯೇದ್ ಯೋ ಮಾಂ ಸೋಽಗ್ನಿಷ್ಟೋಮಸ್ಯ ಪಾಂಡವ ॥
ಯಾರು ಮಧುಸೂದನ ಎಂಬ ಹೆಸರುಳ್ಳ ವೈಶಾಖ ಮಾಸದ ಶುದ್ಧ ಏಕಾದಶಿಯಂದು ಉಪವಾಸ ಮಾಡಿ ದ್ವಾದಶಿಯಂದು ಪಾರಣೆ ಮಾಡುತ್ತಾರೋ ಅವರು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಜ್ಯೇಷ್ಠಮಾಸೇ ತು ಮಾಮುಪೋಷ್ಯ ತ್ರಿವಿಕ್ರಮಮ್ |
ಅರ್ಚಯೇದ್ ಯಃ ಸಮಾಪ್ನೋತಿ ಗವಾಂ ಮೇಧಫಲಂ ನೃಪ ॥26॥
ಯಾರು ಜ್ಯೇಷ್ಠ ಮಾಸದ ಶುದ್ಧ ಏಕಾದಶಿಯಂದು ನನ್ನ ತ್ರಿವಿಕ್ರಮ ರೂಪವನ್ನು ಪೂಜಿಸುತ್ತಾ ಉಪವಾಸ ಮಾಡಿ ದ್ವಾದಶಿಯಂದು ಪಾರಣೆ ಮಾಡುತ್ತಾರೋ ಅವರು ಗೋಮೇಧ ಯಾಗದ ಫಲವನ್ನು ಹೊಂದುತ್ತಾರೆ.
ಆಷಾಢೇ ವಾಮನಾಖ್ಯಂ ಮಾಂ ದ್ವಾದಶ್ಯಾಂ ಸಮುಪೋಷ್ಯ ಯಃ |
ನರಮೇಧಸ್ಯ ಸ ಫಲಂ ಪ್ರಾಪ್ನುಯಾನ್ನರಸತ್ತಮಃ ॥27॥
ಯಾರು ಆಷಾಢ ಮಾಸದ ಶುದ್ಧ ಏಕಾದಶಿಯಂದು ವಾಮನ ರೂಪಿಯಾದ ನನ್ನನ್ನು ಧ್ಯಾನಿಸುತ್ತಾ ಉಪವಾಸ ಮಾಡಿ, ದ್ವಾದಶಿ ಪಾರಣೆ ಮಾಡುತ್ತಾರೋ ಅವರು ನರಮೇಧ ಯಜ್ಞದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಶ್ರಾವಣೇ ಮಾಸಿ ಶ್ರೀಧರಾಖ್ಯಮುಪೋಷ್ಯ ಮಾಮ್ |
ಪೂಜಯೇದ್ ಯಃ ಸಮಾಪ್ನೋತಿ ಪಂಚಯಜ್ಞಫಲಂ ನೃಪ ॥28॥
ಯಾರು ಶ್ರಾವಣ ಮಾಸದಲ್ಲಿ ಶ್ರೀಧರ ಎಂಬ ನನ್ನ ರೂಪವನ್ನು ಧ್ಯಾನಿಸುತ್ತಾ, ಏಕಾದಶಿ ಉಪವಾಸ ಮಾಡಿ ದ್ವಾದಶಿ ಪಾರಣೆ ಮಾಡುತ್ತಾರೋ ಅವರು ಪಂಚ ಯಜ್ಞ ಫಲಗಳನ್ನು ಹೊಂದುತ್ತಾರೆ.
ಮಾಸಿ ಭಾದ್ರಪದೇ ಯೋ ಮಾಂ ಹೃಷೀಕೇಶಾಖ್ಯಮರ್ಚಯೇತ್ |
ಉಪೋಷ್ಯ ಸ ಸಮಾಪ್ನೋತಿ ಸೌತ್ರಾಮಣಿಫಲಂ ನೃಪ ॥29॥
ಯಾರು ಭಾದ್ರಪದ ಮಾಸದಲ್ಲಿ ಹೃಷೀಕೇಶ ಎಂಬ ನನ್ನ ರೂಪವನ್ನು ಸ್ಮರಿಸುತ್ತಾ ಏಕಾದಶಿಯಂದು ಉಪವಾಸ ಮಾಡಿ, ದ್ವಾದಶಿಯಂದು ಪಾರಣೆ ಮಾಡುತ್ತಾರೋ ಅವರು ಸೌತ್ರಾಮಣಿ ಎಂಬ ಯಜ್ಞದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಮಾಶ್ವಯುಮಾಸೇ ಪದ್ಮನಾಭಮುಪೋಷ್ಯ ಮಾಮ್ |
ಅರ್ಚಯೇದ್ ಯಃ ಸಮಾಪ್ನೋತಿ ಗೋಸಹಸ್ರಫಲಂ ನೃಪ ॥30॥
ಯಾರು ಅಶ್ವಯುಜ ಮಾಸದಲ್ಲಿ ಪದ್ಮನಾಭರೂಪವನ್ನು ಧ್ಯಾನಿಸುತ್ತಾ ಏಕಾದಶಿಯಂದು ಉಪವಾಸ ಮಾಡಿ, ದ್ವಾದಶಿಯಂದು ಪಾರಣೆ ಮಾಡುತ್ತಾರೋ ಅವರು ಸಾವಿರ ಗೋದಾನ ಮಾಡಿದ ಫಲವನ್ನು ಹೊಂದುತ್ತಾರೆ.
ದ್ವಾದಶ್ಯಾಂ ಕಾರ್ತಿಕೇ ಮಾಸಿ ಮಾಂ ದಾಮೋದರಸಂಜ್ಞಿತಮ್ |
ಉಪೋಷ್ಯ ಪೂಜಯೇದ್ ಯಸ್ತು ಸರ್ವಕ್ರತುಫಲಂ ಲಭೇತ್ ॥31॥
ಯಾರು ಕಾರ್ತಿಕ ಮಾಸದಲ್ಲಿ ದಾಮೋದರ ರೂಪವನ್ನು ಆರಾಧಿಸುತ್ತಾ ಏಕಾದಶಿಯಂದು ಉಪವಾಸ ಮಾಡಿ, ದ್ವಾದಶಿಯಂದು ಪಾರಣೆ ಮಾಡುತ್ತಾರೋ ಅವರು ಸಕಲ ಯಜ್ಞಗಳ ಫಲವನ್ನು ಹೊಂದುತ್ತಾರೆ.
ಕೇವಲೇನೋಪವಾಸೇನ ದ್ವಾದಶ್ಯಾಂ ಪಾಂಡುನಂದನ |
ಯತ್ಫಲಂ ಪೂರ್ವಮುದ್ದಿಷ್ಟಂ ತಸ್ಯಾರ್ಧಂ ಲಭತೇ ಫಲಮ್ ॥32॥
ಪಾಂಡುನಂದನನೇ, ಕೇವಲ ಏಕಾದಶಿಯಂದು ಉಪವಾಸ ಮಾಡಿ ದ್ವಾದಶಿ ಪಾರಣೆ ಮಾಡಿದವರಿಗೆ ಸಮಗ್ರ ಪಂಚಮೀ ವ್ರತದಲ್ಲಿ ದೊರೆಯುವ ಫಲದ ಅರ್ಧಭಾಗದಷ್ಟು ಫಲವು ನಿಶ್ಚಿತವಾಗಿಯೂ ದೊರೆಯುತ್ತದೆ.

ಶ್ರಾವಣೇऽಪ್ಯೇವಮೇವಂ ಮಾಂ ಯೋऽರ್ಚಯೇದ್ ಭಕ್ತಿಮಾನ್ ನರಃ |
ಮಮ ಸಾಲೋಕ್ಯಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥33॥
ಯಾರು ಭಕ್ತಿಯುತನಾಗಿ ಶ್ರವಣಾ ನಕ್ಷತ್ರದಂದು ಉಪವಾಸವನ್ನು ಮಾಡಿ ನನ್ನನ್ನು ಆರಾಧಿಸುತ್ತಾನೋ ಅವನು ನನ್ನ ಲೋಕವನ್ನೇ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಮಾಸೇ ಮಾಸೇ ಸಮಭ್ಯರ್ಚ್ಯ ಕ್ರಮಶೋ ಮಾಮತಂದ್ರಿತಃ |
ಪೂರ್ಣೇ ಸಂವತ್ಸರೇ ಕುರ್ಯಾತ್ ಪುನಃ ಸಂವತ್ಸರಾರ್ಚನಮ್ ॥34॥
ಪ್ರತಿ ಮಾಸಗಳಲ್ಲಿಯೂ ಕ್ರಮವಾಗಿ ಆಲಸ್ಯವಿಲ್ಲದೆ ನನ್ನನ್ನು ಆರಾಧಿಸುತ್ತಾ ಒಂದು ಸಂವತ್ಸರಗಳ ಕಾಲ ನನ್ನ ಆರಾಧನೆಯನ್ನು ಮಾಡಬೇಕು.
ಏವಂ ದ್ವಾದಶವರ್ಷಂ ಯೋ ಮದ್ಭಕ್ತೋ ಮತ್ಪರಾಯಣಃ |
ಅವಿಘ್ನಮರ್ಚಯಾನಸ್ತು ಮಮ ಸಾಲೋಕ್ಯಮಾಪ್ನುಯಾತ್ ॥35॥
ಈ ರೀತಿಯಾಗಿ ಹನ್ನೆರಡು ವರ್ಷಗಳ ಕಾಲ ನನ್ನಲ್ಲೇ ನಿಷ್ಠನಾಗಿ ಯಾವ ಭಕ್ತನು ತಡೆಯಿಲ್ಲದೆ ಆರಾಧನೆಯನ್ನು ಮಾಡುತ್ತಾನೋ ಅವನು ನನ್ನ ಲೋಕವನ್ನೇ ಹೊಂದುತ್ತಾನೆ.
ಅರ್ಚಯೇತ್ ಪ್ರೀತಿಮಾನ್ ಯೋ ಮಾಂ ದ್ವಾದಶ್ಯಾಂ ವೇದಸಂಹಿತಾಮ್ |
ಸ ಪೂರ್ವೋಕ್ತಫಲಂ ರಾಜನ್ ಲಭತೇ ನಾತ್ರ ಸಂಶಯಃ ॥36॥
ಯಾವನು ಭಕ್ತಿಯಿಂದ ಕೂಡಿದವನಾಗಿ ಏಕಾದಶೀ ತಿಥಿಯಂದು ವೇದಗಳನ್ನು ಪಠನ ಮಾಡುತ್ತಾನೋ, ಭಗವಂತನನ್ನು ಆರಾಧಿಸುತ್ತಾನೋ ಅವನು ಹಿಂದೆ ಹೇಳಿದಂತೆ ಉತ್ತಮ ಫಲಗಳನ್ನು ಹೊಂದುತ್ತಾನೆ, ಯಾವ ಸಂಶಯವೂ ಇಲ್ಲ.
ಗಂಧಂ ಪುಷ್ಪಂ ಫಲಂ ತೋಯಂ ಪತ್ರಂ ವಾ ಮೂಲಮೇವ ವಾ |
ದ್ವಾದಶ್ಯಾಂ ಮಮ ಯೋ ದದ್ಯಾತ್ ತತೋ ನಾನ್ಯೋऽಸ್ತಿ ಮತ್ಪ್ರಿಯಃ ॥37॥
ಯಾವ ವ್ಯಕ್ತಿಯು ದ್ವಾದಶೀ ತಿಥಿಯಂದು ಗಂಧವನ್ನಾಗಲಿ, ಪುಷ್ಪ, ಫಲ, ತೋಯ, ಪತ್ರ, ಗೆಡ್ಡೆ-ಗೆಣಸುಗಳನ್ನಾಗಲಿ ನನಗೆ ಭಕ್ತಿಯಿಂದ ಸಮರ್ಪಿಸುತ್ತಾನೋ ಅವನು ನನಗೆ ಪ್ರೀತಿಪಾತ್ರನಾಗುತ್ತಾನೆ.
ಏತೇನ ವಿಧಿನಾ ಸರ್ವೇ ದೇವಾಃ ಶಕ್ರಪುರೋಗಮಾಃ |
ಮದ್ಭಕ್ತ್ಯಾ ನರಶಾರ್ದೂಲ ಸ್ವರ್ಗಭೋಗಾಂಸ್ತು ಭುಂಜತೇ ॥38॥
ಈ ರೀತಿಯಾದ ವಿಧಿಯಿಂದ ಇಂದ್ರನೇ ಮೊದಲಾದ ದೇವತೆಗಳು ನನ್ನನ್ನು ಆರಾಧಿಸಿ ಸಮಸ್ತ ಭೋಗಗಳನ್ನು ಅನುಭವಿಸುತ್ತಿದ್ದಾರೆ.
ವೈಶಂಪಾಯನಃ
ಏವಂ ವದತಿ ದೇವೇಶೇ ಕೇಶವೇ ಪಾಂಡುನಂದನಃ |
ಕೃತಾಂಜಲಿಪುಟಃ ಸ್ತೋತ್ರಮಿದಂ ಭಕ್ತ್ಯಾऽಭ್ಯುವಾಚ ಹ ॥39॥
ವೈಶಂಪಾಯನ ಈ ರೀತಿಯಾಗಿ ಕೃಷ್ಣಪರಮಾತ್ಮನು ಹೇಳುತ್ತಿರಲು, ಧರ್ಮರಾಜನು ಕೈಮುಗಿದುಕೊಂಡು ಭಕ್ತಿಯಿಂದ ಕೃಷ್ಣನನ್ನು ಸ್ತುತಿಸಲಾರಂಭಿಸಿದನು.
ಯುಧಿಷ್ಠಿರಃ
ಸರ್ವಲೋಕೇಶ ದೇವೇಶ ಹೃಷೀಕೇಶ ನಮೋऽಸ್ತು ತೇ |
ಸಹಸ್ರಶಿರಸೇ ತುಭ್ಯಂ ಸಹಸ್ರಾಕ್ಷ ನಮೋऽಸ್ತು ತೇ ॥40॥
ಯುಧಿಷ್ಠಿರ ಸಮಸ್ತಲೋಕಗಳಿಗೆ ಒಡೆಯನಾದವನೇ, ದೇವತೆಗಳಿಗೆಲ್ಲ ಪ್ರಭುವೇ, ಇಂದ್ರಿಯಗಳಿಗೆಲ್ಲ ಸ್ವಾಮಿಯಾದ ಹೃಷೀಕೇಶನೇ, ನಿನಗೆ ನಮಸ್ಕಾರ. ಅನಂತ ಶಿರಸ್ಸುಳ್ಳವನೇ, ಅನಂತಾಕ್ಷನೇ, ನಿನಗೆ ನಮಸ್ಕಾರವಿರಲಿ.
ತ್ರಯೀಮಯ ತ್ರಯೀನಾಥ ತ್ರಯೀಸ್ತುತ ನಮೋ ನಮಃ |
ಯಜ್ಞಾತ್ಮನ್ ಯಜ್ಞಸಂಭೂತ ಯಜ್ಞನಾಥ ನಮೋ ನಮಃ ॥41॥
ಮೂರು ವೇದಗಳಲ್ಲಿ ಪ್ರತಿಪಾದ್ಯನಾದವನೇ, ಮೂರು ವೇದಗಳಿಗೆ ಸ್ವಾಮಿಯಾದವನೇ, ಮೂರು ವೇದಗಳಿಂದ ಸ್ತುತ್ಯನಾದವನೇ ನಿನಗೆ ನಮಸ್ಕಾರ. ಯಜ್ಞಸ್ವರೂಪಿಯೇ, ಯಜ್ಞಸಂಭೂತನೇ, ಯಜ್ಞನಾಥನೇ, ನಿನಗೆ ನಿನಗೆ ನಮಸ್ಕಾರ.
ಚತುರ್ಮೂರ್ತೇ ಚತುರ್ಬಾಹೋ ಚತುರ್ವ್ಯೂಹ ನಮೋ ನಮಃ |
ಲೋಕಾತ್ಮನ್ ಲೋಕಕೃನ್ನಾಥ ಲೋಕಾವಾಸ ನಮೋ ನಮಃ ॥42॥
ವಿಶ್ವ-ತೈಜಸ-ಪ್ರಾಜ್ಞ-ತುರ್ಯ ಎಂಬ ನಾಲ್ಕು ಮೂರ್ತಿಯುಳ್ಳವನೇ, ನಾಲ್ಕು ತೋಳುಗಳುಳ್ಳವನೇ,
ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧನೆಂಬ ಚತುರ್ವ್ಯೂಹ ಸ್ವರೂಪನೇ, ನಿನಗೆ ನಮಸ್ಕಾರವು, ನಮಸ್ಕಾರವು. ಲೋಕಕ್ಕೆಲ್ಲ ಅಂತರ್ಯಾಮಿಯಾದವನೇ, ಲೋಕವನ್ನು ಸೃಷ್ಟಿಸುವವನೇ, ಲೋಕದಲ್ಲಿ ವಾಸ ಮಾಡುವವನೇ, ನಿನಗೆ ನಮಸ್ಕಾರವು, ನಮಸ್ಕಾರವು.
ಸೃಷ್ಟಿಸಂಹಾರಕರ್ತ್ರೇ ತೇ ನರಸಿಂಹ ನಮೋ ನಮಃ |
ಭಕ್ತಪ್ರಿಯ ನಮಸ್ತೇऽಸ್ತು ಭಕ್ತವತ್ಸಲ ತೇ ನಮಃ ॥43॥
ಸೃಷ್ಟಿ-ಸಂಹಾರಗಳನ್ನು ಮಾಡುವವನೇ, ನರಸಿಂಹನೇ, ನಿನಗೆ ನಮಸ್ಕಾರವು, ನಮಸ್ಕಾರವು. ಭಕ್ತಪ್ರಿಯನೇ, ಭಕ್ತವತ್ಸಲನೇ, ನಿನಗೆ ನಮಸ್ಕಾರ.
ಬ್ರಹ್ಮಾವಾಸ ನಮಸ್ತೇऽಸ್ತು ಬ್ರಹ್ಮನಾಥ ನಮೋ ನಮಃ ॥44॥
ಚತುರ್ಮುಖ ಬ್ರಹ್ಮನಲ್ಲಿ ಅಂತರ್ಯಾಮಿಯಾದವನೇ, ವೇದಗಳಿಗೆಲ್ಲ ಸ್ವಾಮಿಯಾದವನೇ, ನಿನಗೆ ನಮಸ್ಕಾರವು, ನಮಸ್ಕಾರವು.
ರುದ್ರರೂಪ ನಮಸ್ತೇऽಸ್ತು ರುದ್ರಕರ್ಮರತಾಯ ತೇ |

ಪಂಚಯಜ್ಞ ನಮಸ್ತೇಽಸ್ತು ಸರ್ವಯಜ್ಞ ನಮೋ ನಮಃ ॥45॥
ರುದ್ರನಲ್ಲಿ ಅಂತರ್ಯಾಮಿಯಾದವನೇ, ರುದ್ರರೂಪಿಯೇ, ಭಯಂಕರವಾದ ಕರ್ಮರತನಾದವನೇ, ಪಂಚಯಜ್ಞಾತ್ಮಕನೇ, ಸರ್ವಯಜ್ಞಸ್ವರೂಪಿಯೇ, ನಿನಗೆ ನಮಸ್ಕಾರವು, ನಮಸ್ಕಾರವು.
ಸೃಷ್ಟಿಸಂಹಾರಕರ್ತ್ರೇ ತೇ ರುದ್ರಪ್ರಿಯ ನಮೋಽಸ್ತು ತೇ |
ಕೃಷ್ಣ ಪ್ರಿಯ ನಮಸ್ತೇಽಸ್ತು ಕೃಷ್ಣ ನಾಥ ನಮೋ ನಮಃ ॥46॥
ಸೃಷ್ಟಿ-ಸಂಹಾರವನ್ನು ಮಾಡುವವನೇ, ರುದ್ರನಿಗೆ ಪ್ರೀತಿಪಾತ್ರನಾದವನೇ, ನಿನಗೆ ನಮಸ್ಕಾರವು, ನಮಸ್ಕಾರವು. ಪಾರ್ಥನಿಗೆ ಪ್ರಿಯನಾದವನೇ, ನಾಥನಾದ ಕೃಷ್ಣನೇ,ನಿನಗೆ ನಮಸ್ಕಾರವು ನಮಸ್ಕಾರವು.
ಯೋಗಾವಾಸ ನಮಸ್ತೇಽಸ್ತು ಯೋಗಿನಾಥ ನಮೋ ನಮಃ ॥47॥
ಯೋಗಿಗಳಿಗೆ ಪ್ರಿಯನೇ, ಯೋಗಿನಾಥನೇ, ನಿನಗೆ ನಮಸ್ಕಾರವು, ನಮಸ್ಕಾರವು.
ಹಯವಕ್ತ್ರ ನಮಸ್ತೇಽಸ್ತು ಚಕ್ರಪಾಣೇ ನಮೋ ನಮಃ |
ಪಂಚಭೂತ ನಮಸ್ತೇಽಸ್ತು ಪಂಚಾಯುಧ ನಮೋ ನಮಃ ॥48॥
ಹಯಗ್ರೀವನೇ, ಚಕ್ರಪಾಣಿಯೇ, ನಿನಗೆ ನಮಸ್ಕಾರವು, ನಮಸ್ಕಾರವು. ಪಂಚಭೂತ ಸ್ವರೂಪನೇ, ಪಂಚಾಯುಧನೇ, ನಿನಗೆ ನಮಸ್ಕಾರವು, ನಮಸ್ಕಾರವು.
ವೈಶಂಪಾಯನಃ
ಭಕ್ತಿಗದ್ಗದಯಾ ವಾಚಾ ಸ್ತುವತ್ಯೇವಂ ಯುಧಿಷ್ಠಿರೇ |
ಗೃಹೀತ್ವಾ ಕೇಶವೋ ಹಸ್ತೇ ಪ್ರೀತಾತ್ಮಾ ತಂ ನ್ಯವಾರಯತ್ ॥49॥
ವೈಶಂಪಾಯನ ಜನಮೇಜಯನೇ, ಯುಧಿಷ್ಠಿರನು ಪರಮಭಕ್ತಿಯಿಂದ ಉಂಟಾದ ಗದ್ಗದ ಧ್ವನಿಯಿಂದ ಹೀಗೆ ಸ್ತೋತ್ರ ಮಾಡುತ್ತಿರಲಾಗಿ, ಪ್ರೀತಾತ್ಮನಾದ ಕೃಷ್ಣನು ಧರ್ಮರಾಜನ ಕೈಹಿಡಿದು ಅವನು ಸ್ತೋತ್ರವನ್ನು ಮುಂದುವರೆಸದಂತೆ ತಡೆ ಹಿಡಿದನು.
ನಿವಾರ್ಯ ಚ ಪುನರ್ವಾಚಾ ಭಕ್ತಿನಮ್ರಂ ಯುಧಿಷ್ಠಿರಮ್ |
ವಕ್ತುಮೇವ ನರಶ್ರೇಷ್ಠ ಧರ್ಮಪುತ್ರಂ ಪ್ರಚಕ್ರಮೇ ॥50॥
ಮಾತಿನಿಂದ ತಡೆದು, ಭಕ್ತಿನಮ್ರನಾದ ನರಶ್ರೇಷ್ಠನಾದ, ಧರ್ಮಪುತ್ರನಾದ ಯುಧಿಷ್ಠಿರನಿಗೆ ಹೀಗೆ ಹೇಳಿದನು.
ಶ್ರೀಭಗವಾನ್
ಅನ್ಯವತ್ ಕಿಮಿದಂ ರಾಜನ್ ಮಾಂ ಸ್ತೌಷಿ ನರಪುಂಗವ |
ತಿಷ್ಠ ಪೃಚ್ಛ ಯಥಾಪೂರ್ವಂ ಧರ್ಮಾನೇವ ಯುಧಿಷ್ಠಿರ ॥51॥
ಶ್ರೀಭಗವಾನ್ ಯುಧಿಷ್ಠಿರನೇ, ಬೇರೆಯವರು ಸ್ತೋತ್ರ ಮಾಡುವಂತೆ ನೀನು ನನ್ನನ್ನು ಯಾಕೆ ಸ್ತೋತ್ರ ಮಾಡುತ್ತಿರುವಿ? ಸ್ತೋತ್ರವನ್ನು ನಿಲ್ಲಿಸು. ಧರ್ಮಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳು.
ಯುಧಿಷ್ಠಿರಃ
ಭಗವಂಸ್ತ್ವತ್ಪ್ರಸಾದಂ ತು ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ |
ನ ಶಾಂತಿರಸ್ತಿ ದೇವೇಶ ನೃತ್ಯತೀವ ಚ ಮೇ ಮನಃ ॥52॥
ಯುಧಿಷ್ಠಿರ ಷಡ್ಗುಣ್ಯೈಶ್ವರ್ಯಸಂಪನ್ನನೇ, ನೀನು ನನಗೆ ಮಾಡಿದ ಅನುಗ್ರಹವನ್ನು ಮತ್ತೆ ಮತ್ತೆ ಸ್ಮರಿಸಿಕೊಂಡು ಪುನಃ ಪುನಃ ನನ್ನ ಮನಸ್ಸಿನಲ್ಲಿ ಸಂತೋಷ ಉಂಟಾಗುತ್ತಿದೆ. ನನ್ನ ಮನಸ್ಸು ಆನಂದದಿಂದ ಕುಣಿಯುತ್ತಿರುವಂತಾಗುತ್ತಿದೆ. ನಿನ್ನನ್ನು ಸ್ತುತಿಸದೆ ನನಗೆ ಶಾಂತಿಯು ಸಿಗುತ್ತಿಲ್ಲ.
ಇದಂ ಚ ಮಮ ಸಂಪ್ರಶ್ನಂ ವಕ್ತುಮರ್ಹಸಿ ಮಾಧವ |
ಕೃಷ್ಣಪಕ್ಷೇ ತು ದ್ವಾದಶ್ಯಾಮರ್ಚನೀಯಃ ಕಥಂ ಭವಾನ್ ॥53॥
ಮಾಧವನೇ, ನನ್ನ ಈ ಪ್ರಶ್ನೆಗೆ ಉತ್ತರಿಸಲು ಅರ್ಹನಾಗಿದ್ದಿ. ಕೃಷ್ಣಪಕ್ಷದ ದ್ವಾದಶಿಯಲ್ಲಿ ನಿನ್ನ ಪೂಜೆಯನ್ನು ಹೇಗೆ ಮಾಡಬೇಕು? ಧರ್ಮಯುಕ್ತವಾದ ಈ ವಿಷಯವನ್ನು ತಿಳಿಸು.
ಶ್ರೀಭಗವಾನ್
ಶೃಣು ರಾಜನ್ ಯಥಾತತ್ತ್ವಂ ತತ್ಪೂರ್ವಂ ಕಥಯಾಮಿ ತೇ |
ಪರಮಂ ಕೃಷ್ಣದ್ವಾದಶ್ಯಾಮರ್ಚನಾಯಾಂ ಫಲಂ ಮಮ ॥54॥
ಶ್ರೀಭಗವಾನ್ ಯುಧಿಷ್ಠಿರನೇ ಕೇಳು. ಹಿಂದಿನಂತೆ ನಾನು ನಿನ್ನ ಎಲ್ಲ ಪ್ರಶ್ನೆಗಳಿಗೂ ಯಥಾರ್ಥವಾದ ಉತ್ತರವನ್ನು ಹೇಳುತ್ತೇನೆ.
ಏಕಾದಶ್ಯಾಮುಪೋಷ್ಯಾಥ ದ್ವಾದಶ್ಯಾಮರ್ಚಯೇತ್ ತು ಮಾಮ್ |
ವಿಪ್ರಾನಪಿ ಯಥಾಲಾಭಂ ಭೋಜಯೇದ್ ಭಕ್ತಿಮಾನ್ ನರಃ ॥55॥
ಕೃಷ್ಣಪಕ್ಷದ ಏಕಾದಶಿಯಂದು ಉಪವಾಸವನ್ನು ಮಾಡಿ, ದ್ವಾದಶಿಯಂದು ನನ್ನನ್ನು ಅರ್ಚಿಸಿ, ಯಥಾಶಕ್ತಿ ಬ್ರಾಹ್ಮಣರಿಗೂ ಭೋಜನ ಮಾಡಿಸಿ, ಭಕ್ತಿವಂತನಾಗಿ ತಾನು ಪಾರಣೆಯನ್ನು ಮಾಡಬೇಕು.
ಸ ಗಚ್ಛೇದ್ ದಕ್ಷಿಣಾಮೂರ್ತಿಂ ಮಾಂ ವಾ ನಾತ್ರ ವಿಚಾರಣಾ |
ಚಂದ್ರಸಾಲೋಕ್ಯಮಥವಾ ಗ್ರಹನಕ್ಷತ್ರಪೂಜಿತಃ ॥56॥
ಯಾವ ಮನುಷ್ಯನು ದಕ್ಷಿಣಾಮೂರ್ತಿಯಾದ ನನ್ನನ್ನು ಚೆನ್ನಾಗಿ ಆರಾಧಿಸುತ್ತಾನೋ ಅವನು ಗ್ರಹ-ನಕ್ಷತ್ರಗಳಿಂದ ಪೂಜಿಸಲ್ಪಟ್ಟವನಾಗಿ ಚಂದ್ರಸಾಲೋಕ್ಯವನ್ನೇ ಹೊಂದುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಏಕಾದಶೀವ್ರತಮಾಹಾತ್ಮ್ಯವರ್ಣನಂ ನಾಮ ಚತುರ್ದಶೋತ್ತರಶತತಮೋಽಧ್ಯಾಯಃ

॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೈದನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ವಿಷುವ ಎಂಬ ಪುಣ್ಯಕಾಲದ ಮಹಿಮೆಯನ್ನು ವರ್ಣಿಸುವ ಮೂಲಕ ಅಲ್ಲಿ ಮಾಡಬೇಕಾದ ದಾನಾದಿಗಳನ್ನು ಪ್ರಶಂಸಿದುದು. ಇದರಂತೆ ಗಾಯತ್ರೀಜಪದ ಮಾಹಾತ್ಮ್ಯವನ್ನು ಹೇಳಿದುದು. ಅಶ್ವತ್ಥಮಾಹಾತ್ಮ್ಯವನ್ನು ಹೇಳಿದುದು. ಅದೇ ರೀತಿ ನಾನಾ ಧರ್ಮಗಳನ್ನು ಹೇಳುವ ಮೂಲಕ ಶಿಂಶುಮಾರ ಎಂಬ ರೂಪದ ಬಗ್ಗೆ ನಿರೂಪಿಸಿದುದು. ಪಂಚಗವ್ಯವಿಧಾನವನ್ನು ಹೇಳಿದುದು.
ವೈಶಂಪಾಯನಃ
ಕೇಶವೇನೈವಮಾಖ್ಯಾತೇ ಧರ್ಮಪುತ್ರಃ ಪುನಃ ಪ್ರಭುಮ್ |
ಪಪ್ರಚ್ಛ ದಾನಕಾಲಸ್ಯ ವಿಶೇಷಂ ಚ ವಿಧಿಂ ನೃಪ ॥1॥
ವೈಶಂಪಾಯನ ಕೇಶವನು ಧರ್ಮಪುತ್ರನನ್ನು ಕುರಿತು ಇಷ್ಟು ವಿಸ್ತಾರವಾಗಿ ಉಪದೇಶವನ್ನು ಮಾಡುತ್ತಿರಲು ಪುನಃ ದಾನಕಾಲದ ವಿಶೇಷ ವಿಧಿಗಳ ಬಗ್ಗೆ ಧರ್ಮರಾಜನು ಪ್ರಶ್ನಿಸಿದನು.
ಯುಧಿಷ್ಠಿರಃ
ದೇವ ಕಿಂ ಫಲಮಾಖ್ಯಾತಂ ದಾನಸ್ಯ ವಿಷುವೇಷು ಚ |
ಸೂರ್ಯೇಂದೂಪಪ್ಲವೇ ಚೈವ ದತ್ತೇ ದಾನೇ ಚ ಯತ್ ಫಲಮ್ ॥2॥
ಯುಧಿಷ್ಠಿರ ವಿಷುವಯೋಗದಲ್ಲಿ, ಚಂದ್ರ-ಸೂರ್ಯರ ಗ್ರಹಣ ಕಾಲದಲ್ಲಿ ದಾನ ಮಾಡುವುದರಿಂದ ಯಾವ ಫಲವು ಉಂಟಾಗುತ್ತದೆ? ದೇವೇಶ್ವರನೇ ಉತ್ತರಿಸು.
ಶ್ರೀಭಗವಾನ್
ಶೃಣುಷ್ವ ರಾಜನ್ ವಿಷುವೇ ಸೋಮಾರ್ಕಗ್ರಹಣೇಷು ಚ |
ವ್ಯತೀಪಾತೇಽಯನೇ ಚೈವ ದಾನಂ ಸ್ಯಾದಕ್ಷಯಂ ನೃಪ ॥3॥
ಶ್ರೀಭಗವಾನ್ ಯುಧಿಷ್ಠಿರನೇ, ವಿಷುವ ಯೋಗದಲ್ಲಿ, ಚಂದ್ರ-ಸೂರ್ಯರ ಗ್ರಹಣದಲ್ಲಿ, ವ್ಯತೀಪಾತ ಯೋಗದಲ್ಲಿ, ದಕ್ಷಿಣಾಯನ-ಉತ್ತರಾಯಣಗಳಲ್ಲಿ ಮಾಡುವ ದಾನವು ಅಕ್ಷಯವಾದ ಫಲವನ್ನು ನೀಡುತ್ತದೆ.
ರಾಜನ್ ಅಯನಯೋರ್ಮಧ್ಯಂ ವಿಷುವಂ ಸಂಪ್ರಚಕ್ಷತೇ |
ಸಮೇ ರಾತ್ರಿದಿನೇ ತತ್ರ ಸಂಧ್ಯಾಯಾಂ ವಿಷುವೇ ನೃಪ ॥4॥
ರಾಜನೇ, ದಕ್ಷಿಣಾಯನ-ಉತ್ತರಾಯಣ ಪುಣ್ಯಕಾಲಗಳ ಮಧ್ಯದಲ್ಲಿ ಯಾವ ದಿನ, ರಾತ್ರಿ ಮತ್ತು ಹಗಲುಗಳು ಒಂದೇ ಪ್ರಮಾಣದಲ್ಲಿ ಇರುತ್ತವೋ ಅದಕ್ಕೆ ವಿಷುವ ಯೋಗ ಎಂದು ಹೆಸರು.
ವ್ಯಾಖ್ಯಾನ ವಿಶೇಷ ಇಲ್ಲಿ ದಕ್ಷಿಣಾಯನಕ್ಕೆ ತುಲಾಸಂಕ್ರಮಣವು ಮಧ್ಯ ಎನಿಸಿದೆ. ಉತ್ತರಾಯಣಕ್ಕೆ ಮೇಷ ಸಂಕ್ರಮಣವು ಮಧ್ಯ ಎನಿಸಿದೆ. ಇಲ್ಲದಿದ್ದಲ್ಲಿ `ಸಮರಾತ್ರಿಂದಿವೇ ಕಾಲೇ ವಿಷುವದ್ ವಿಷುವಂ ಚ ತತ್' ಹಗಲು-ರಾತ್ರಿಗಳು ಸಮಪ್ರಮಾಣದಲ್ಲಿ ಇರುವ ಯೋಗವು ವಿಷುವ ಯೋಗ ಎಂದು ಹೇಳಿದ್ದಾರೆ. ಈ ಎರಡು ಸಂಕ್ರಮಣಗಳು ಮಧ್ಯ ಎಂದು ಗ್ರಹಿಸದಿದ್ದರೆ ಸಾಮ್ಯವು ಉಂಟಾಗುವುದಿಲ್ಲ.
ಬ್ರಹ್ಮಾಽಹಂ ಶಂಕರಶ್ಚಾಪಿ ತಿಷ್ಠಾಮಃ ಸಹಿತಾಃ ಸಕೃತ್ |
ಕ್ರಿಯಾಕಾರಣಕಾರ್ಯಾಣಾಮೇಕೀಭಾವತ್ವಕಾರಣಾತ್ ॥5॥
ವಿಷುವ ಯೋಗವಿರುವ ದಿನ ಸಂಧ್ಯಾಸಮಯದಲ್ಲಿ ಚತುರ್ಮುಖ ಬ್ರಹ್ಮನು, ನಾನು, ಶಂಕರನು ಕ್ರಿಯಾ-ಕಾರಣ-ಕಾರ್ಯ ಎಂಬ ಮೂರು ವ್ಯಾಪಾರಗಳನ್ನು ಒಟ್ಟುಗೂಡಿಸಲು ಒಂದೆಡೆ ಸೇರುತ್ತೇವೆ.
ಅಸ್ಮಾಕಮೇಕೀಭೂತಾನಾಂ ನಿಷ್ಕಲಂ ತತ್ಪದಂ ಪರಮ್ |
ತನ್ಮುಹೂರ್ತಂ ಪರಂ ಪುಣ್ಯಂ ರಾಜನ್ ವಿಷುವಸಂಜ್ಞಿತಮ್ ॥6॥
ಒಂದೆಡೆ ಯಾವ ಮುಹೂರ್ತದಲ್ಲಿ ತ್ರಿಮೂರ್ತಿಗಳು ಒಟ್ಟಾಗಿ ಸೇರುತ್ತೇವೊ ಅದೇ ಕಲಾರಹಿತವಾದ ಪರಮಪದವೆನಿಸಿಕೊಳ್ಳುತ್ತದೆ. ವಿಷುವ ಎಂಬ ಆ ಮುಹೂರ್ತವು ಪರಮಪವಿತ್ರವಾದುದು.
ತದೇವಾದ್ಯಕ್ಷರಂ ಬ್ರಹ್ಮ ಪರಂ ಬ್ರಹ್ಮೇತಿ ಕೀರ್ತಿತಮ್ ॥7॥
ಅದನ್ನೇ ಅಕ್ಷರವೆಂದೂ, ಬ್ರಹ್ಮವೆಂದೂ, ಪರಬ್ರಹ್ಮವೆಂದೂ ಕರೆಯುತ್ತಾರೆ.
ತಸ್ಮಿನ್ ಮುಹೂರ್ತೇ ಸರ್ವೇಽಪಿ ಚಿಂತಯಂತಃ ಪರಂ ಪದಮ್ ॥8॥
ಪರಮಪವಿತ್ರವಾದ ವಿಷುವ ಮುಹೂರ್ತದಲ್ಲಿ ಎಲ್ಲರೂ ಪರಮಪದವನ್ನು ಕುರಿತು ಚಿಂತಿಸುತ್ತಾರೆ.
ದೇವಾಶ್ಚ ಪಿತರೋ ರುದ್ರಾಃ ವಸವಶ್ಚಾಶ್ವಿನೌ ತಥಾ |
ಸಾಧ್ಯಾಶ್ಚ ವಿಶ್ವೇ ಗಂಧರ್ವಾಃ ಸಿದ್ಧಾ ಬ್ರಹ್ಮರ್ಷಯಸ್ತಥಾ ॥9॥
ಸೋಮಾದಯೋ ಗ್ರಹಾಶ್ಚೈವ ಸರಿತಃ ಸಾಗರಾಸ್ತಥಾ |
ಮರುತೋಽಪ್ಸರಸೋ ನಾಗಾ ಯಕ್ಷರಾಕ್ಷಸಗುಹ್ಯಕಾಃ ॥10॥
ಏತೇ ಚಾನ್ಯೇ ಚ ರಾಜೇಂದ್ರ ವಿಷುವೇ ಸಂಯತೇಂದ್ರಿಯಾಃ |
ಸೋಪವಾಸಾಃ ಪ್ರಯತ್ನೇನ ಭವಂತಿ ಧ್ಯಾನತತ್ಪರಾಃ ॥11॥
ದೇವತೆಗಳು, ಪಿತೃಗಳು, ರುದ್ರರು, ವಸುಗಳು, ಅಶ್ವಿನೀದೇವತೆಗಳು, ಸಾಧ್ಯರು, ವಿಶ್ವೇದೇವತೆಗಳು, ಗಂಧರ್ವರು, ಸಿದ್ಧರು, ಬ್ರಹ್ಮರ್ಷಿಗಳು,

ಸೋಮನೇ ಮೊದಲಾದ ಗ್ರಹಗಳು, ನದಿಗಳು, ಸಮುದ್ರಗಳು, ಮರುತ್ತುಗಳು, ಅಪ್ಸರೆಯರು, ನಾಗರು, ಯಕ್ಷರು, ರಾಕ್ಷಸರು, ಗುಹ್ಯಕರು, ಇವರೇ ಅಲ್ಲದೆ ಇನ್ನೂ ಇತರ ದೇವತೆಗಳು ವಿಷುವ ಮುಹೂರ್ತದಲ್ಲಿ ಜಿತೇಂದ್ರಿಯರಾಗಿ ಉಪವಾಸದಿಂದಿದ್ದು ಪ್ರಯತ್ನ ಪೂರ್ವಕವಾಗಿ ಪರಮಾತ್ಮನ ಧ್ಯಾನದಲ್ಲಿ ತತ್ಪರರಾಗಿರುತ್ತಾರೆ.
ಅನ್ನಂ ಗಾವಸ್ತಿಲಾನ್ ಭೂಮಿಂ ಕನ್ಯಾದಾನಂ ತಥೈವ ಚ |
ಗೃಹಮಾಯತನಂ ಧಾನ್ಯಂ ವಾಹನಂ ಶಯನಂ ತಥಾ ॥12॥
ಯಚ್ಚಾನ್ಯಚ್ಚ ಮಯಾ ಪ್ರೋಕ್ತಂ ತತ್ಪ್ರಯಚ್ಛ ಯುಧಿಷ್ಠಿರ ॥13॥
ಆದ್ದರಿಂದ ಯುಧಿಷ್ಠಿರನೇ, ನೀನು ಈ ಪುಣ್ಯಮುಹೂರ್ತದಲ್ಲಿ ಅನ್ನ, ಗೋವುಗಳು, ಎಳ್ಳು, ಭೂಮಿ, ಕನ್ಯೆಯರು, ಮನೆ, ವಿಶ್ರಾಮಧಾಮಗಳು, ಧಾನ್ಯಗಳು, ವಾಹನಗಳು, ಹಾಸಿಗೆಗಳು, ಅಲ್ಲದೆ ನಾನು ಹೇಳಿರುವ ಇನ್ನೂ ಅನೇಕ ವಸ್ತುಗಳನ್ನು ದಾನ ಮಾಡು.
ದೀಯತೇ ವಿಷುವೇಷ್ವೇವಂ ಶ್ರೋತ್ರಿಯೇಭ್ಯೋ ವಿಶೇಷತಃ |
ತಸ್ಯ ದಾನಸ್ಯ ಕೌಂತೇಯ ಕ್ಷಯೋ ನೈವೋಪಪದ್ಯತೇ ॥14॥
ವಿಷುವ ಮುಹೂರ್ತದಲ್ಲಿ ಇವುಗಳನ್ನು ದಾನ ಮಾಡಿದರೆ ಅದರಲ್ಲಿಯೂ ವಿಶೇಷವಾಗಿ ಶ್ರೋತ್ರಿಯರಿಗೆ ದಾನ ಮಾಡಿದರೆ ಆ ದಾನದ ಫಲವು ಎಂದಿಗೂ ನಾಶ ಹೊಂದುವುದೇ ಇಲ್ಲ.
ವರ್ಧತೇಽಹರಹಃ ಪುಣ್ಯಂ ತದ್ದಾನಂ ಕೋಟಿಸಮ್ಮಿತಮ್ ॥15॥
ಆ ದಾನದ ಪುಣ್ಯವು ಪ್ರತಿದಿನವೂ ಕೋಟಿ ಕೋಟಿಪಟ್ಟು ಹೆಚ್ಚಾಗುತ್ತಲೇ ಇರುತ್ತದೆ.
ವಿಷುವೇ ಸ್ನಪನಂ ಯಸ್ತು ಮಮ ಕುರ್ಯಾದ್ಧರಸ್ಯ ವಾ |
ಅರ್ಚನಾಂ ಚ ಯಥಾನ್ಯಾಯಂ ತಸ್ಯ ಪುಣ್ಯಫಲಂ ಶೃಣು ॥16॥
ವಿಷುವ ಕಾಲದಲ್ಲಿ ಐಹಿಕ ಫಲಗಳ ಕಾಮನೆಯು ಉಂಟಾದಲ್ಲಿ ರುದ್ರದೇವನನ್ನು ಆರಾಧಿಸಬೇಕು. ಶಂಕರನಿಂದ ಮೋಕ್ಷೋಪಯೋಗಿ ಜ್ಞಾನವನ್ನು ಪಡೆಯುವ ಬಯಕೆ ಇದ್ದರೆ ರುದ್ರನನ್ನು ಪೂಜಿಸಬೇಕು. ಈಗಾಗಲೇ ಜ್ಞಾನವನ್ನು ಹೊಂದಿದವನಾಗಿದ್ದರೆ, ಮೋಕ್ಷವನ್ನು ಬಯಸುವವನು ನನ್ನನ್ನೇ ಆರಾಧಿಸಬೇಕು. ಹೀಗೆ ಆರಾಧಿಸುವವರಿಗೆ ಸಿಗುವ ಪುಣ್ಯದ ಫಲವನ್ನು ತಿಳಿದುಕೊ.
ದಶಜನ್ಮಕೃತಂ ಪಾಪಂ ತಸ್ಯ ಸದ್ಯೋ ವಿನಶ್ಯತಿ |
ದಶಾನಾಮಶ್ವಮೇಧಾನಾಮಿಷ್ಟಾನಾಂ ಲಭತೇ ಫಲಮ್ ॥17॥
ಹತ್ತು ಜನ್ಮಗಳಲ್ಲಿ ಆರ್ಜಿತವಾದ ಪಾಪವು ಈ ಕಾಲದಲ್ಲಿ ಮಾಡುವ ಆರಾಧನೆಯಿಂದ ತಕ್ಷಣ ನಾಶ ಹೊಂದುತ್ತದೆ. ಹತ್ತು ಅಶ್ವಮೇಧ ಯಜ್ಞಗಳನ್ನು ಮಾಡಿದ ಫಲವನ್ನು ಹೊಂದುತ್ತಾನೆ.
ವಿಮಾನಂ ದಿವ್ಯಮಾರೂಢಃ ಕಾಮರೂಪೀ ಯಥಾಸುಖಮ್ |
ಸ ಯಾತಿ ಮಾಮಕಂ ಲೋಕಂ ರುದ್ರಲೋಕಮಥಾಪಿ ವಾ ॥18॥
ಕಾಮರೂಪಿಯಾಗಿ, ದಿವ್ಯವಾದ ವಿಮಾನವನ್ನು ಏರಿದವನಾಗಿ ಅವನು ಆರಾಧನೆಯ ಫಲವಾಗಿ ನನ್ನ ಲೋಕವನ್ನಾಗಲಿ, ರುದ್ರಲೋಕವನ್ನಾಗಲಿ ಹೊಂದುತ್ತಾನೆ.
ತತ್ರಸ್ಥೈರ್ದೇವಗಂಧರ್ವೈರ್ಗೀಯಮಾನೋ ಯಥಾಸುಖಮ್ |
ದಿವ್ಯವರ್ಷಸಹಸ್ರಾಣಿ ಕೋಟಿಮೇಕಂ ತು ಮೋದತೇ ॥19॥
ಆ ಲೋಕದಲ್ಲಿರುವ ಗಂಧರ್ವರಿಂದ ಸ್ತುತಿಸಲ್ಪಡುವವನಾಗಿ ಸುಖವಾಗಿ ದೇವಮಾನದ ಸಾವಿರ ಕೋಟಿ ವರ್ಷಗಳ ಕಾಲ ಸುಖವನ್ನು ಅನುಭವಿಸುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ದ್ವಿಜೋತ್ತಮಃ |
ಚತುರ್ಣಾಮಪಿ ವೇದಾನಾಂ ಪಾರಗೋ ಬ್ರಹ್ಮವಿದ್ ಭವೇತ್ ॥20॥
ಬಳಿಕ ಅಲ್ಲಿಂದ ಕಾಲಿಕವಾಗಿ ಚ್ಯುತನಾದ ಅವನು ಸಮಸ್ತ ನಾಲ್ಕು ವೇದಗಳ ಅರ್ಥವನ್ನು ತಿಳಿದ ಬ್ರಹ್ಮಜ್ಞಾನಿಯಾಗಿ ಭೂಮಿಯಲ್ಲಿ ಹುಟ್ಟುತ್ತಾನೆ.
ಚಂದ್ರಸೂರ್ಯಗ್ರಹೇ ವಾಽಪಿ ಮಮ ವಾ ಶಂಕರಸ್ಯ ವಾ |
ಗಾಯತ್ರೀಂ ಮಾಮಿಕಾಂ ವಾಽಪಿ ಜಪೇದ್ ಯಃ ಶಂಕರಸ್ಯ ವಾ ॥21॥
ಸೂರ್ಯ-ಚಂದ್ರಗ್ರಹಣದ ಸಮಯದಲ್ಲಿ ಯಾವನು ನನ್ನನ್ನಾಗಲಿ, ಶಂಕರನನ್ನಾಗಲಿ ಸ್ತುತಿಸುತ್ತಾನೋ, ನನಗೆ ಸಂಬಂಧಿಸಿದ ಗಾಯತ್ರಿಯನ್ನು ಜಪಿಸುತ್ತಾನೋ,
ಶಂಖತೂರ್ಯನಿನಾದೈಶ್ಚ ಕಾಂಸ್ಯಘಂಟಾಸ್ವನೈರಪಿ |
ಕಾರಯೇತ್ತು ಧ್ವನಿಂ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥22॥
ಅವನು ಶಂಖ-ತೂರ್ಯಗಳಿಂದಲೂ, ತಾಳ-ಗಂಟೆಗಳಿಂದಲೂ ಭಕ್ತಿಪೂರ್ವಕವಾಗಿ ಪೂಜಿಸುತ್ತಾ ಗಟ್ಟಿಯಾಗಿ ಶಬ್ದವನ್ನು ಮಾಡಬೇಕು. ಹಾಗೆ ಮಾಡಿದರೆ ಅದರಿಂದ ಪ್ರಾಪ್ತವಾಗುವ ಫಲವನ್ನು ಹೇಳುತ್ತೇನೆ.
ಗಾಂಧರ್ವೈರ್ಹೋಮಜಪ್ಯೈಶ್ಚ ಶಬ್ದೈರುತ್ಕೃಷ್ಟನಾದಿಭಿಃ |
ದುರ್ಬಲೋಽಪಿ ಭವೇದ್ರಾಹುಃ ಸೋಮಶ್ಚ ಬಲವಾನ್ ಭವೇತ್ ॥23॥
ಗೀತೆಗಳಿಂದ, ಹೋಮ-ಜಪಗಳಿಂದ, ಉತ್ಕೃಷ್ಟವಾದ ನಾದಗಳಿಂದ, ಶಬ್ದಗಳಿಂದ ಸೋಮನು ಉತ್ಕೃಷ್ಟವಾದ ಬಲವನ್ನು ಹೊಂದುತ್ತಾನೆ. ರಾಹುವು ದುರ್ಬಲನಾಗುತ್ತಾನೆ.
ಸೂರ್ಯೇಂದೂಪಪ್ಲವೇ ಚೈವ ಶ್ರೋತ್ರಿಯೇಭ್ಯಃ ಪ್ರದೀಯತೇ |
ತತ್ ಸಹಸ್ರಸಮಂ ಭೂತ್ವಾ ದಾತಾರಮುಪತಿಷ್ಠತಿ ॥24॥

ಯಾವನು ಸೂರ್ಯ-ಚಂದ್ರರ ಗ್ರಹಣ ಕಾಲದಲ್ಲಿ ಶ್ರೋತ್ರಿಯರಿಗೆ ದಾನವನ್ನು ಮಾಡುತ್ತಾನೋ ಆ ದಾನವು ಸಾಮಾನ್ಯ ದಿನದಲ್ಲಿ ಮಾಡುವ ದಾನಕ್ಕಿಂತಲೂ ಸಾವಿರ ಪಟ್ಟು ಹೆಚ್ಚು ಫಲವನ್ನು ದಾನ ಮಾಡಿದವನಿಗೆ ಉಂಟುಮಾಡುತ್ತದೆ.
ಮಹಾಪಾತಕಯುಕ್ತೋಽಪಿ ಯದ್ಯಪಿ ಸ್ಯಾನ್ನರೋ ನೃಪ |
ನಿರ್ಲೇಪಸ್ತತ್ಕ್ಷಣಾದೇವ ತೇನ ದಾನೇನ ಜಾಯತೇ ॥25॥
ಒಬ್ಬ ಮನುಷ್ಯನು ಮಹಾಪಾಪದಿಂದ ಕೂಡಿದ್ದರೂ ಗ್ರಹಣ ಕಾಲದಲ್ಲಿ ಮಾಡುವ ದಾನದಿಂದ ಆ ಕ್ಷಣದಲ್ಲಿಯೇ ಪಾಪದಿಂದ ಬಿಡುಗಡೆಯನ್ನು ಹೊಂದಿ ಶ್ರೇಷ್ಠ ಪುರುಷನಾಗುತ್ತಾನೆ.
ಚಂದ್ರಸೂರ್ಯಪ್ರಕಾಶೇನ ವಿಮಾನೇನ ವಿರಾಜತಾ |
ಯಾತಿ ಸೋಮಪುರಂ ರಮ್ಯಂ ಸೇವ್ಯಮಾನೋಽಪ್ಸರೋಗಣೈಃ ॥26॥
ಅವನು ಮೃತನಾದ ಬಳಿಕ ಚಂದ್ರನ ಮತ್ತು ಸೂರ್ಯನ ಪ್ರಕಾಶದಿಂದ ಕೂಡಿರುವ ಸುಂದರವಾದ ವಿಮಾನದಲ್ಲಿ ಕುಳಿತು, ಅಪ್ಸರಾಗಣದಿಂದ ಸೇವಿಸಲ್ಪಡುತ್ತಾ ರಮಣೀಯವಾದ ಚಂದ್ರಲೋಕಕ್ಕೆ ಹೋಗುತ್ತಾನೆ.
ಯಾವದೃಕ್ಷಾಣಿ ತಿಷ್ಠಂತಿ ಗಗನೇ ಶಶಿನಾ ಸಹ |
ತಾವತ್ಕಾಲಂ ಸ ರಾಜೇಂದ್ರ ಸೋಮಲೋಕೇ ಮಹೀಯತೇ ॥27॥
ಆಕಾಶದಲ್ಲಿ ಎಲ್ಲಿಯತನಕ ನಕ್ಷತ್ರವಿರುತ್ತವೆಯೋ ಅಲ್ಲಿಯತನಕವೂ ಅವನು ಚಂದ್ರಲೋಕದಲ್ಲಿ ಸಮ್ಮಾನಿಸಲ್ಪಡುತ್ತಾನೆ.
ತತಶ್ಚಾಪಿ ಚ್ಯುತಃ ಕಾಲಾದಿಹ ಲೋಕೇ ಯುಧಿಷ್ಠಿರ |
ವೇದವೇದಾಂಗವಿದ್ ವಿಪ್ರಃ ಕೋಟೀಧನಪತಿರ್ಭವೇತ್ ॥28॥
ಕಾಲಾಂತರದಲ್ಲಿ ಸ್ವರ್ಗದಿಂದ ಜಾರಿದರೂ ವೇದ-ವೇದಾಂಗ ಪಾರಂಗತನಾದ ಬ್ರಾಹ್ಮಣನಾಗಿ ಹುಟ್ಟಿ ಕೋಟ್ಯಧಿಪತಿಯಾಗುತ್ತಾನೆ.
ಯುಧಿಷ್ಠಿರಃ
ಭಗವಂಸ್ತವ ಗಾಯತ್ರೀ ಜಪ್ಯತೇ ಚ ಕಥಂ ನೃಭಿಃ |
ಕಿಂ ವಾ ತಸ್ಯ ಫಲಂ ದೇವ ಮಮಾಚಕ್ಷ್ವ ಸುರೇಶ್ವರ ॥29॥
ಯುಧಿಷ್ಠಿರ ವಿಭುವೇ, ನಿನ್ನ ಗಾಯತ್ರಿಯನ್ನು ಹೇಗೆ ಜಪಿಸುವುದು? ಸುರೇಶ್ವರನೇ, ಅದರಿಂದ ಯಾವ ಫಲವು ಸಿಗುತ್ತದೆ? ಈ ವಿಷಯವನ್ನು ಕೃಪೆ ಮಾಡಿ ಹೇಳು.
ಶ್ರೀಭಗವಾನ್
ದ್ವಾದಶ್ಯಾಂ ವಿಷುವೇ ಚೈವ ಚಂದ್ರಸೂರ್ಯಗ್ರಹೇ ತಥಾ |
ಅಯನೇ ಶ್ರವಣೇ ಚೈವ ವ್ಯತೀಪಾತೇ ತಥೈವ ಚ ॥30॥
ಶ್ರೀಭಗವಾನ್ ಯುಧಿಷ್ಠಿರನೇ, ದ್ವಾದಶಿಯಲ್ಲಿಯೂ, ವಿಷುವ ಯೋಗದಲ್ಲಿಯೂ, ಸೂರ್ಯ-ಚಂದ್ರರ ಗ್ರಹಣ ಕಾಲದಲ್ಲಿಯೂ, ದಕ್ಷಿಣಾಯನ - ಉತ್ತರಾಯಣಗಳ ಸಂಕ್ರಮಣ ಕಾಲದಲ್ಲಿಯೂ, ಶ್ರವಣಾ ನಕ್ಷತ್ರವಿರುವ ದಿನದಲ್ಲಿಯೂ, ವ್ಯತೀಪಾತ ಯೋಗವಿರುವ ಕಾಲದಲ್ಲಿಯೂ,
ಅಶ್ವತ್ಥದರ್ಶನೇ ಚೈವ ತಥಾ ಮದ್ದರ್ಶನೇಽಪಿ ಚ |
ಜಪಿತ್ವಾ ತು ಮಮ ಗಾಯತ್ರೀಮಥವಾಽಷ್ಟಾಕ್ಷರಂ ನೃಪ ॥31॥
ಆರ್ಜಿತಂ ದುಷ್ಕೃತಂ ತಸ್ಯ ನಾಶಯೇನ್ನಾತ್ರ ಸಂಶಯಃ ॥32॥
ಅಶ್ವತ್ಥವೃಕ್ಷವನ್ನು ಅಥವಾ ನನ್ನನ್ನು ನೋಡಿದಲ್ಲಿ, ನನ್ನ ಸಂಬಂಧವಾದ ಗಾಯತ್ರಿಯನ್ನಾಗಲಿ, ಪ್ರಣವಸಹಿತವಾದ `ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಜಪವನ್ನಾಗಲಿ ಮಾಡುವುದರಿಂದ ಹಿಂದಿನ ಜನ್ಮದಲ್ಲಿ ಮಾಡಿದ ಎಲ್ಲ ಪಾಪಗಳೂ ಕೂಡ ನಾಶ ಹೊಂದುತ್ತವೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯುಧಿಷ್ಠಿರಃ
ಅಶ್ವತ್ಥದರ್ಶನಂ ಚೈವ ಕಿಂ ತ್ವದ್ದರ್ಶನಸಮ್ಮಿತಮ್ |
ಏತತ್ ಕಥಯ ದೇವೇಶ ಪರಂ ಕೌತೂಹಲಂ ಹಿ ಮೇ ॥33॥
ಯುಧಿಷ್ಠಿರ ದೇವೇಶನೇ, ಅಶ್ವತ್ಥವೃಕ್ಷದ ದರ್ಶನವು ನಿನ್ನ ದರ್ಶನಕ್ಕೆ ಸಮಾನ ಎಂದು ಹೇಳಿದಿ. ಇದು ಹೇಗೆ? ಈ ವಿಷಯದ ಬಗ್ಗೆ ನನಗೆ ಕುತೂಹಲವಿದೆ, ತಿಳಿಸು.
ಶ್ರೀಭಗವಾನ್
ಅಹಮಶ್ವತ್ಥರೂಪೇಣ ಪಾಲಯಾಮಿ ಜಗತ್ತ್ರಯಮ್ |
ಅಶ್ವತ್ಥೋ ನ ಸ್ಥಿತೋ ಯತ್ರ ನಾಹಂ ತತ್ರ ಪ್ರತಿಷ್ಠಿತಃ ॥34॥
ಶ್ರೀಭಗವಾನ್ ಯುಧಿಷ್ಠಿರನೇ, ನಾನು ಜಗತ್ತನ್ನು ಅಶ್ವತ್ಥ ವೃಕ್ಷದ ರೂಪದಲ್ಲಿ ನಿಂತು ರಕ್ಷಿಸುತ್ತಿದ್ದೇನೆ. ಯಾವ ಜಾಗದಲ್ಲಿ ಅಶ್ವತ್ಥ ವೃಕ್ಷವು ಇರುವುದಿಲ್ಲವೋ ಆ ಸ್ಥಳದಲ್ಲಿ ನಾನು ಇರುವುದಿಲ್ಲ.
ಯತ್ರಾಹಂ ಸಂಸ್ಥಿತೋ ರಾಜನ್ನಶ್ವತ್ಥಶ್ಚಾಪಿ ತತ್ರ ವೈ |
ಯಸ್ತ್ವೇನಮರ್ಚಯೇದ್ ಭಕ್ತ್ಯಾ ಸ ಮಾಂ ಸಾಕ್ಷಾತ್ ಸಮರ್ಚತಿ ॥
ನಾನು ಎಲ್ಲಿರುತ್ತೇನೋ ಅಲ್ಲಿ ಅಶ್ವತ್ಥವು ಇರುತ್ತದೆ. ಯಾವ ಮನುಷ್ಯನು ಅಶ್ವತ್ಥ ವೃಕ್ಷವನ್ನು ಪೂಜಿಸುತ್ತಾನೋ ಅವನು ನನ್ನನ್ನೇ ಸಾಕ್ಷಾತ್ತಾಗಿ ಪೂಜಿಸಿದಂತಾಗುತ್ತದೆ.
ಯಸ್ತ್ವೇನಂ ಪ್ರಹರೇತ್ ಕೋಪಾನ್ಮಾಮೇವ ಪ್ರಹರೇತ್ತು ಸಃ |
ತಸ್ಮಾತ್ ಪ್ರದಕ್ಷಿಣಂ ಕುರ್ಯಾನ್ನ ಚ್ಛಿಂದ್ಯಾದೇನಮನ್ವಹಮ್ ॥36॥
ಯಾವ ವ್ಯಕ್ತಿಯು ಕೋಪದಿಂದ ಅಶ್ವತ್ಥವೃಕ್ಷವನ್ನು ಕಡಿಯಲು ಹೋಗುತ್ತಾನೋ ಅವನು ನನ್ನನ್ನೇ ಪ್ರಹರಿಸಿದಂತಾಗುತ್ತದೆ.

ಆದ್ದರಿಂದ ಅಶ್ವತ್ಥ ವೃಕ್ಷಕ್ಕೆ ಪ್ರತಿದಿನವೂ ಪ್ರದಕ್ಷಿಣೆ ಮಾಡಬೇಕು. ಯಾವ ಕಾರಣದಿಂದಲೂ ಅಶ್ವತ್ಥ ವೃಕ್ಷವನ್ನು ನಾಶ ಮಾಡಬಾರದು.
ವ್ರತಸ್ಯ ಪಾರಣಂ ತೀರ್ಥಂ ಸರ್ವತೀರ್ಥೇಷು ಪಾಂಡವ |
ದೇವಶುಶ್ರೂಷಣಂ ತೀರ್ಥಂ ಗುರುಶುಶ್ರೂಷಣಂ ತಥಾ ॥37॥
ಪಾಂಡವನೇ, ಸಮಸ್ತ ತೀರ್ಥಗಳನ್ನು ಸೇವಿಸುವುದಕ್ಕಿಂತಲೂ ಆರಂಭಿಸಿದ ವ್ರತವನ್ನು ಸಂಪೂರ್ಣಗೊಳಿಸುವುದು ಶ್ರೇಷ್ಠವಾದ ತೀರ್ಥವೆನಿಸಿದೆ. ದೇವರ ಸೇವೆಯು ನಿಜವಾದ ಸೇವೆ ಎನಿಸಿದೆ. ಅದರಂತೆ ಗುರುಶುಶ್ರೂಷೆಯು ತೀರ್ಥಸೇವನೆಗೆ ಸಮಾನವಾಗಿದೆ.
ಪುತ್ರಸ್ಯ ಪಾರಣಂ ತೀರ್ಥಮಾರ್ಜವಂ ತೀರ್ಥಮುಚ್ಯತೇ ॥38॥
ದೇವಶುಶ್ರೂಷಣಂ ತೀರ್ಥಮರ್ಥಂ ಜ್ಞಾನಸ್ಯ ಪಾರಣಮ್ |
ನರಾಣಾಂ ತೋಷಣಂ ತೀರ್ಥಂ ಗಾರ್ಹಸ್ಥ್ಯಂ ತೀರ್ಥಮುಚ್ಯತೇ ॥39॥
ಮಕ್ಕಳನ್ನು ರಕ್ಷಿಸುವುದು, ಮಾತು-ಮನಸ್ಸು-ಕೃತಿಗಳಲ್ಲಿ ಏಕಾಭಿಪ್ರಾಯವನ್ನು ಹೊಂದುವುದು, ದೇವತೆಗಳನ್ನು ಸೇವಿಸುವುದು, ಜ್ಞಾನ ಹೊಂದುವುದು, ಮನುಷ್ಯರನ್ನು ಸಂತೋಷ ಪಡಿಸುವುದು- ಇವೆಲ್ಲವೂ ಗೃಹಸ್ಥನಿಗೆ ತೀರ್ಥವೆಂದು ಹೇಳಲ್ಪಟ್ಟಿವೆ.
ಆತಿಥೇಯಂ ಪರಂ ತೀರ್ಥಮತಿಥಿಸ್ತೀರ್ಥಮುಚ್ಯತೇ ॥40॥
ಅತಿಥಿಸೇವೆಯಲ್ಲಿ ತೊಡಗಿಸಿಕೊಳ್ಳುವುದು ಶ್ರೇಷ್ಠವಾದ ತೀರ್ಥ ಎಂದು ಹೇಳಿದ್ದಾರೆ. ಅತಿಥಿಯೂ ತೀರ್ಥವೆಂದು ಹೇಳಲ್ಪಟ್ಟಿದ್ದಾನೆ.
ಬ್ರಹ್ಮಚರ್ಯಂ ಪರಂ ತೀರ್ಥಂ ತ್ರೇತಾಗ್ನಿಸ್ತೀರ್ಥಮುಚ್ಯತೇ ॥41॥
ಬ್ರಹ್ಮಚರ್ಯ ವ್ರತವನ್ನು ಪಾಲಿಸುವುದು ಶ್ರೇಷ್ಠವಾದ ತೀರ್ಥವಾಗಿದ್ದು ತ್ರೇತಾಗ್ನಿಯೂ ತೀರ್ಥ ಎನಿಸಿದೆ.
ಮೂಲಧರ್ಮಂ ತು ವಿಜ್ಞಾಯ ಮನಸ್ತತ್ರಾವಧಾರ್ಯತಾಮ್ |
ಗಚ್ಛ ತೀರ್ಥಾನಿ ಕೌಂತೇಯ ಧರ್ಮೋ ಧರ್ಮೇಣ ವರ್ಧತೇ ॥42॥
ಕೌಂತೇಯನೇ, ಮೂಲಧರ್ಮವನ್ನು ಚೆನ್ನಾಗಿ ತಿಳಿದು, ಮನಸ್ಸಿನ ಏಕಾಗ್ರತೆಯನ್ನು ಈ ಮೂಲ ಧರ್ಮದ ಅನುಷ್ಠಾನದಲ್ಲಿಯೇ ನೆಲೆಗೊಳಿಸಬೇಕು. ಇವುಗಳನ್ನು ಅರಿತು ತೀರ್ಥಯಾತ್ರೆಯನ್ನು ಮಾಡು. ಧರ್ಮಕಾರ್ಯವನ್ನು ಮಾಡುವುದರಿಂದಲೇ ಧರ್ಮವು ವೃದ್ಧಿಯನ್ನು ಹೊಂದುತ್ತದೆ.
ದ್ವಿವಿಧಂ ತೀರ್ಥಮಿತ್ಯಾಹುಃ ಸ್ಥಾವರಂ ಜಂಗಮಂ ತಥಾ |
ಸ್ಥಾವರಾಜ್ಜಂಗಮಂ ಶ್ರೇಷ್ಠಂ ತತೋ ಜ್ಞಾನಪರಿಗ್ರಹಃ ॥43॥
ಸ್ಥಾವರ-ಜಂಗಮಗಳೆಂಬ ಎರಡು ವಿಧವಾದ ತೀರ್ಥಗಳಿವೆ. ಸ್ಥಾವರ ತೀರ್ಥಕ್ಕಿಂತ ಜಂಗಮ ತೀರ್ಥವು ಶ್ರೇಷ್ಠವಾದದ್ದು. ಏಕೆಂದರೆ ಜಂಗಮ ತೀರ್ಥದಿಂದ ಜ್ಞಾನಲಾಭವಾಗುತ್ತದೆ.
ಕರ್ಮಣಾ ಹಿ ವಿಶುದ್ಧಸ್ಯ ಪುರುಷಸ್ಯೇಹ ಭಾರತ |
ಹೃದಯೇ ಸರ್ವತೀರ್ಥಾನಿ ತೀರ್ಥಭೂತಃ ಸ ಉಚ್ಯತೇ ॥44॥
ಪಾಂಡವನೇ, ಸತ್ಕರ್ಮದಿಂದ ಪರಿಶುದ್ಧನಾಗಿರುವ ಪುರುಷನ ಹೃದಯದಲ್ಲಿಯೇ ಸಮಸ್ತ ತೀರ್ಥಗಳು ಇರುತ್ತವೆ. ಅವನೇ ತೀರ್ಥರೂಪನೆಂದು ಹೇಳುತ್ತಾರೆ.
ಗುರುತೀರ್ಥಂ ಪರಂ ಜ್ಞಾನಮತಸ್ತೀರ್ಥಂ ನ ವಿದ್ಯತೇ |
ಜ್ಞಾನಂ ತೀರ್ಥಂ ತಪಸ್ತೀರ್ಥಂ ಬ್ರಹ್ಮ ತೀರ್ಥಂ ಸನಾತನಮ್ ॥45॥
ಗುರುರೂಪದ ತೀರ್ಥದ ಸೇವೆಯಿಂದ ಪರಮಾತ್ಮನ ಜ್ಞಾನವು ಉತ್ಪನ್ನವಾಗುತ್ತದೆ. ಆದ್ದರಿಂದ ಗುರುತೀರ್ಥಕ್ಕಿಂತಲೂ ಶ್ರೇಷ್ಠವಾದ, ಸನಾತನವಾದ ತೀರ್ಥವು ಮತ್ತೊಂದು ಇರುವುದಿಲ್ಲ.
ಕ್ಷಮಾ ತು ಪರಮಂ ತೀರ್ಥಂ ಸರ್ವತೀರ್ಥೇಷು ಪಾಂಡವ |
ಕ್ಷಮಾವತಾಮಯಂ ಲೋಕಃ ಪರಶ್ಚೈವ ಕ್ಷಮಾವತಾಮ್ ॥46॥
ಪಾಂಡವನೇ, ಸಮಸ್ತ ತೀರ್ಥಗಳಿಗಿಂತ ಕ್ಷಮಾತೀರ್ಥವೇ ಶ್ರೇಷ್ಠವಾದುದು. ಕ್ಷಮಾವಂತರಿಗೆ ಪರಲೋಕಗಳ ಪ್ರಾಪ್ತಿಯು, ಇಹಲೋಕದಲ್ಲಿ ಸ್ಥಿತಿಯು.
ಮಾನಿತೋಽಮಾನಿತೋ ವಾಽಪಿ ಪೂಜಿತೋಽಪೂಜಿತೋಪಿ ವಾ |
ಆಕ್ರುಷ್ಟಸ್ತರ್ಜಿತೋ ವಾಽಪಿ ಕ್ಷಮಾವಾಂಸ್ತೀರ್ಥಮುಚ್ಯತೇ ॥47॥
ಸನ್ಮಾನವನ್ನು ಮಾಡಲಿ, ಅವಮಾನವನ್ನು ಮಾಡಲಿ, ಪೂಜಿಸಲಿ, ಅವಮಾನಿಸಲಿ, ಹೆದರಿಸಲಿ, ಸಮಾಧಾನ ಪಡಿಸಲಿ, ಎಲ್ಲ ಸ್ಥಿತಿಗಳಲ್ಲಿಯೂ ಕ್ಷಮಾವಂತನಾಗಿರುವುದೇ ತೀರ್ಥ ಎನಿಸಿದೆ.
ಕ್ಷಮಾ ಯಶಃ ಕ್ಷಮಾ ದಾನಂ ಕ್ಷಮಾ ಸತ್ಯಂ ಕ್ಷಮಾ ತಪಃ |
ಕ್ಷಮಾಽಹಿಂಸಾ ಕ್ಷಮಾ ಧರ್ಮಃ ಕ್ಷಮಾ ಚೇಂದ್ರಿಯನಿಗ್ರಹಃ ॥48॥
ಕ್ಷಮೆಯೇ ಕೀರ್ತಿ, ಕ್ಷಮೆಯೇ ದಾನ, ಕ್ಷಮೆಯೇ ಸತ್ಯ, ಕ್ಷಮೆಯೇ ತಪಸ್ಸು, ಕ್ಷಮೆಯೇ ಅಹಿಂಸೆ, ಕ್ಷಮೆಯೇ ಧರ್ಮ, ಕ್ಷಮೆಯೇ ಇಂದ್ರಿಯನಿಗ್ರಹ.
ಕ್ಷಮಾ ದಯಾ ಕ್ಷಮಾ ಯಜ್ಞಃ ಕ್ಷಮಯೈವ ಧೃತಂ ಜಗತ್ |
ಕ್ಷಮಾವಾನ್ ಬ್ರಾಹ್ಮಣೋ ದೇವಃ ಕ್ಷಮಾವಾನ್ ಬ್ರಾಹ್ಮಣೋ ವರಃ ॥
ಕ್ಷಮೆಯೇ ದಯೆ, ಕ್ಷಮೆಯೇ ಯಜ್ಞ, ಕ್ಷಮೆಯೇ ಧೈರ್ಯ, ಕ್ಷಮೆಯಿಂದಲೇ ಜಗತ್ತು ಧರಿಸಲ್ಪಟ್ಟಿದೆ. ಕ್ಷಮಾವಂತನಾದ ಬ್ರಾಹ್ಮಣನು ದೇವತೆ ಎನಿಸಿದ್ದಾನೆ. ಕ್ಷಮಾವಂತನಾದ ಬ್ರಾಹ್ಮಣನು ಶ್ರೇಷ್ಠ ಎನಿಸಿದ್ದಾನೆ.
ಕ್ಷಮಾವಾನ್ ಪ್ರಾಪ್ನುಯಾತ್ ಸ್ವರ್ಗಂ ಕ್ಷಮಾವಾನ್ ಪ್ರಾಪ್ನುಯಾದ್ ಯಶಃ |
ಕ್ಷಮಾವಾನ್ ಪ್ರಾಪ್ನುಯಾನ್ಮೋಕ್ಷಂ ತಸ್ಮಾತ್ ತೀರ್ಥಂ ಸ ಉಚ್ಯತೇ ॥50॥

ಕ್ಷಮಾವಂತನು ಸ್ವರ್ಗವನ್ನು ಹೊಂದುತ್ತಾನೆ. ಕ್ಷಮಾವಂತನು ಕೀರ್ತಿಯನ್ನು ಹೊಂದುತ್ತಾನೆ. ಕ್ಷಮಾವಂತನು ಮೋಕ್ಷವನ್ನು ಹೊಂದುತ್ತಾನೆ. ಆದ್ದರಿಂದ ಕ್ಷಮೆಯೇ ತೀರ್ಥ ಎನಿಸುತ್ತದೆ.
ಆತ್ಮಾ ನದೀ ಭಾರತಪುಣ್ಯತೀರ್ಥಮ್
ಆತ್ಮಾ ತೀರ್ಥಂ ಸರ್ವತೀರ್ಥಪ್ರಧಾನಮ್ |
ಆತ್ಮಾ ಯಜ್ಞಃ ಸರ್ವಮಾತ್ಮನ್ಯಥೋ ವೈ
ಸ್ವರ್ಗೋ ಮೋಕ್ಷಃ ಸರ್ವಮಾತ್ಮನ್ಯಧೀನಮ್ ॥51॥
ಪರಮಾತ್ಮನ ಜ್ಞಾನವೇ ಭಾರತದೇಶದ ಪುಣ್ಯತೀರ್ಥ, ನದಿ ಎನಿಸಿದೆ. ಪರಮಾತ್ಮನೇ ಸಮಸ್ತ ತೀರ್ಥಗಳಿಗೂ ಪ್ರಧಾನ ತೀರ್ಥ ಎನಿಸಿದ್ದಾನೆ. ಪರಮಾತ್ಮನನ್ನೇ ಯಜ್ಞಸ್ವರೂಪನೆಂದು ಯೋಗಿಗಳು ತಿಳಿಯುತ್ತಾರೆ. ಸ್ವರ್ಗ-ಮೋಕ್ಷಗಳೆಲ್ಲವೂ ಪರಮಾತ್ಮನ ಅಧೀನವಾಗಿವೆ.
ಆಚಾರವಸಾತತ್ರಂತರಕ್ಷಾಲಿತೇನ
ಸತ್ಯಪ್ರಸನ್ನಕ್ಷಮಶೀತಲೇನ |
ಜ್ಞಾನಾಂಬುನಾ ಸ್ನಾತಿ ಹಿ ಯೋ ಹಿ ನಿತ್ಯಂ
ಕಿಂ ತಸ್ಯ ಭೂಯಃ ಸಲಿಲೇನ ಕೃತ್ಯಮ್ ॥52॥
ಯಾವ ವ್ಯಕ್ತಿಯು ಸದಾಚಾರ ಪಾಲನೆಯಿಂದ ಅತ್ಯಂತ ನಿರ್ಮಲನಾಗಿರುತ್ತಾನೋ ಸತ್ಯ ಮತ್ತು ಕ್ಷಮೆಗಳೆಂಬ ಅಪಾರವಾದ ಶೈತ್ಯವುಳ್ಳ ಜ್ಞಾನವೆಂಬ ನೀರಿನಲ್ಲಿ ನಿತ್ಯ ಸ್ನಾನ ಮಾಡುತ್ತಾನೋ, ಅಂತಹವನಿಗೆ ಜಲರೂಪವಾದ ತೀರ್ಥದಲ್ಲಿ ಸ್ನಾನ ಮಾಡುವ ಅಗತ್ಯವೇನಿದೆ?
ಯುಧಿಷ್ಠಿರಃ
ಭಗವನ್ ಸರ್ವಪಾಪಘ್ನಂ ಪ್ರಾಯಶ್ಚಿತ್ತಮದುಷ್ಕರಮ್ |
ತ್ವದ್ಭಕ್ತಸ್ಯ ಸುರಶ್ರೇಷ್ಠ ಮಮ ವಕ್ತುಂ ತ್ವಮರ್ಹಸಿ ॥53॥
ಯುಧಿಷ್ಠಿರ ಪೂಜ್ಯನೇ, ಸುರಶ್ರೇಷ್ಠನೇ, ನಿನ್ನ ಭಕ್ತನಾದ ನನಗೆ ಸಮಸ್ತ ಪಾಪಗಳನ್ನು ಪರಿಹರಿಸಿಕೊಳ್ಳುವ ಸುಲಭವಾಗಿ ಮಾಡಿಕೊಳ್ಳಬಹುದಾದ ಪ್ರಾಯಶ್ಚಿತ್ತವು ಯಾವುದೆಂದು ತಿಳಿಸು.
ಶ್ರೀಭಗವಾನ್
ರಹಸ್ಯಮಿದಮತ್ಯರ್ಥಮಶ್ರಾವ್ಯಂ ಪಾಪಕರ್ಮಣಾಮ್ |
ಅಧಾರ್ಮಿಕಾಣಾಮಶ್ರಾವ್ಯಂ ಪ್ರಾಯಶ್ಚಿತ್ತಂ ಬ್ರವೀಮಿ ತೇ ॥54॥
ಶ್ರೀಭಗವಾನ್ ಯುಧಿಷ್ಠಿರನೇ, ನಾನು ನಿನಗೆ ಅತ್ಯಂತ ರಹಸ್ಯವಾದ, ಯಾರಿಂದಲೂ ಸುಲಭವಾಗಿ ಕೇಳಲು ಸಾಧ್ಯವಿಲ್ಲದ, ಗೋಪ್ಯವಾದ, ಸುಲಭವಾದ, ಅಧಾರ್ಮಿಕರಿಗೆ ಹೇಳಬಾರದ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ.
ಪಾವನಂ ಬ್ರಾಹ್ಮಣಂ ದೃಷ್ಟ್ವಾ ಮದ್ಗತೇನಾಂತರಾತ್ಮನಾ |
ನಮೋ ಬ್ರಹ್ಮಣ್ಯದೇವಾಯೇತ್ಯಭಿವಾದನಮಾಚರೇತ್ ॥55॥
ಪವಿತ್ರನಾದ ಬ್ರಾಹ್ಮಣನನ್ನು ನೋಡಿದ ಕೂಡಲೇ ನನ್ನನ್ನು ಸ್ಮರಿಸಿಕೊಂಡು `ನಮೋ ಬ್ರಹ್ಮಣ್ಯದೇವಾಯ' ಎಂಬ ಮಂತ್ರವನ್ನು ಪಠಿಸುತ್ತಾ ಭಗವದ್ಬುದ್ಧಿಯಿಂದ ಬ್ರಾಹ್ಮಣನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಬೇಕು.
ಪ್ರದಕ್ಷಿಣಂ ಚ ಯಃ ಕುರ್ಯಾತ್ ಪುನರಷ್ಟಾಕ್ಷರೇಣ ತು |
ತೇನ ತುಷ್ಟೋ ನರಶ್ರೇಷ್ಠ ತತ್ ಪಾಪಂ ಕ್ಷಪಯಾಮ್ಯಹಮ್ ॥56॥
ಪುನಃ `ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಮಂತ್ರದಿಂದ ಪ್ರದಕ್ಷಿಣೆಯನ್ನು ಮಾಡುತ್ತಾ ಬ್ರಾಹ್ಮಣನನ್ನು ನಮಸ್ಕರಿಸಿದಲ್ಲಿ ಬ್ರಾಹ್ಮಣನು ಸಂತುಷ್ಟನಾಗುತ್ತಾನೆ. ಅಂತಹ ಸಂತುಷ್ಟನಾದ ಬ್ರಾಹ್ಮಣನ ಅಂತರ್ಯಾಮಿಯಾಗಿರುವ ನಾನು ಅವನ ಪಾಪಗಳನ್ನು ನಾಶ ಮಾಡುತ್ತೇನೆ.
ಯತ್ರ ಕೃಷ್ಟಾಂ ವರಾಹಸ್ಯ ಮೃತ್ತಿಕಾಂ ಶಿರಸಾ ವಹನ್ |
ಪ್ರಾಣಾಯಾಮಶತಂ ಕೃತ್ವಾ ನರಃ ಪಾಪೈಃ ಪ್ರಮುಚ್ಯತೇ ॥57॥
ಯಾವ ವ್ಯಕ್ತಿಯು ವರಾಹನ ಕೋರೆಯಿಂದ ಸೀಳಿದ ಭೂಮಿಯ ಮಣ್ಣನ್ನು ತಲೆಯಲ್ಲಿ ಹಚ್ಚಿಕೊಂಡು ನೂರು ಪ್ರಾಣಾಯಾಮವನ್ನು ಮಾಡುತ್ತಾನೋ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.
ದಕ್ಷಿಣಾವರ್ತಶಂಖಾದ್ವಾ ಕಪಿಲಾಶೃಂಗತೋಽಪಿ ವಾ |
ಪ್ರಾಕ್ಸ್ರೋತಸಂ ನದೀಂ ಗತ್ವಾ ಮಮಾಯತನಸನ್ನಿಧೌ ॥58॥
ಸಲಿಲೇನ ಚ ವಿಗ್ರಹೇ (ತು ಯಃ) ಸ್ನಾಯಾತ್ ಸಕೃದೇವ ರವಿಗ್ರಹೇ |
ತಸ್ಯ ಯತ್ ಸಂಚಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥59॥
ಸೂರ್ಯಗ್ರಹಣದ ಸಮಯದಲ್ಲಿ ಪೂರ್ವಕ್ಕೆ ಹರಿಯುವ ನದಿಯ ಬಳಿ ಹೋಗಿ ನನ್ನ ಮಂದಿರದ ಬಳಿಯಲ್ಲಿ ಬಲಮುರಿ ಶಂಖದಲ್ಲಾಗಲಿ, ಕಪಿಲಾಧೇನುವಿನ ಕೊಂಬಿನಲ್ಲಿ ತುಂಬಿದ ನೀರಿನಿಂದಾಗಲಿ, ನದಿಯ ನೀರನ್ನು ತುಂಬಿಕೊಂಡು ಒಮ್ಮೆ ಸ್ನಾನ ಮಾಡಿದರೂ ಅವನ ದೇಹದಲ್ಲಿ ಸಂಚಿತವಾದ ಸಮಸ್ತ ಪಾಪಗಳು ಆ ಕ್ಷಣದಲ್ಲಿಯೇ ನಾಶ ಹೊಂದುತ್ತವೆ.
ಮಸ್ತಕಾನ್ನಿಃಸೃತೈಸ್ತೋಯೈಃ ಕಪಿಲಾಯಾ ಯುಧಿಷ್ಠಿರ |
ಗೋಮೂತ್ರೇಣಾಪಿ ಯಃ ಸ್ನಾಯಾದ್ ರೋಹಿಣ್ಯಾಂ ಮಮ ವಾ ದಿನೇ ॥
ವಿಪ್ರಪಾದಚ್ಯುತೈರ್ವಾಽಪಿ ತೋಯೈಃ ಪಾಪಂ ಪ್ರಣಶ್ಯತಿ ॥61॥
ಕಪಿಲಾಧೇನುವಿನ ತಲೆಯಿಂದ ಸುರಿಯಲ್ಪಟ್ಟ ನೀರನ್ನು ಅಥವಾ ಕಪಿಲಾ ಗೋವಿನ ಮೂತ್ರದಿಂದಾಗಲಿ ರೋಹಿಣಿ ನಕ್ಷತ್ರದಲ್ಲಿ

ಅಥವಾ ಏಕಾದಶಿ ದಿವಸದಲ್ಲಿ ಯಾವನು ಸ್ನಾನ ಮಾಡುತ್ತಾನೋ ಅಥವಾ ಬ್ರಾಹ್ಮಣರ ಪಾದದಿಂದ ಸುರಿದ ನೀರಿನಿಂದ ಯಾವನು ಸ್ನಾನ ಮಾಡುತ್ತಾನೋ ಅವನ ಎಲ್ಲ ಪಾಪಗಳು ನಾಶ ಹೊಂದುತ್ತವೆ.
ನಮಸ್ಯೇದ್ಯಸ್ತು ಮದ್ಭಕ್ತ್ಯಾ ಶಿಂಶುಮಾರಂ ಪ್ರಜಾಪತಿಮ್ |
ಚತುರ್ದಶಾಂಗಸಂಯುಕ್ತಂ ತಸ್ಯ ಪಾಪಂ ಪ್ರಣಶ್ಯತಿ ॥62॥
ಯಾವ ವ್ಯಕ್ತಿಯು ಭಕ್ತಿಯಿಂದ ಶಿಂಶುಮಾರ ಎಂಬ ಪ್ರಜಾಪತಿಯನ್ನು ಅರ್ಥಾತ್ ಜ್ಯೋತಿಶ್ಚಕ್ರದಲ್ಲಿರುವಂತಹ ಶಿಂಶುಮಾರ ರೂಪವನ್ನು, ಸೂರ್ಯ-ಚಂದ್ರಾದಿ ದೇವತಾ ವೃಂದವನ್ನು ಪರಿಪಾಲಿಸುವ ನನ್ನ ಅವತಾರವೆಂದು ತಿಳಿದು ನಮಸ್ಕರಿಸುತ್ತಾನೋ ಹದಿನಾಲ್ಕು ಅಂಗಗಳಿಂದ ಕೂಡಿರುವ ಆ ಶಿಂಶುಮಾರ ರೂಪವನ್ನು ಪ್ರತಿದಿನವು ನೋಡಿದ ಕೂಡಲೇ ಅವನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.
ತತಶ್ಚತುರ್ದಶಾಂಗಾನಿ ಶೃಣು ತಸ್ಯ ನರಾಧಿಪ |
ಶಿರೋ ಧರ್ಮೋ ಹನುರ್ಬ್ರಹ್ಮಾ ಪುಚ್ಛಾವುತ್ತರದಕ್ಷಿಣೌ ॥63॥
ಹೃದಯಂ ತು ಭವೇದ್ ವಿಷ್ಣುರ್ಹಸ್ತೌ ಸ್ಯಾತಾಂ ತಥಾಽಶ್ವಿನೌ |
ಅತ್ರಿರ್ಮಧ್ಯಂ ಭವೇದ್ ರಾಜನ್ ಲಿಂಗಂ ಸಂವತ್ಸರಂ ಭವೇತ್ ॥64॥
ನರಾಧಿಪನೇ, ಆ ಶಿಂಶುಮಾರರೂಪದ ಹದಿನಾಲ್ಕು ಅಂಗಗಳನ್ನು ತಿಳಿದುಕೊ. ಶಿಂಶುಮಾರನ ತಲೆಯು ಧರ್ಮವೆನಿಸಿದೆ. ಹನುವು (ಗಲ್ಲ) ಬ್ರಹ್ಮ ಎನಿಸಿದೆ. ಪುಚ್ಛವು ಉತ್ತರ-ದಕ್ಷಿಣವೆನಿಸಿದೆ. ಹೃದಯವು ವಿಷ್ಣು ಎನಿಸಿದೆ, ಹಸ್ತವು ಅಶ್ವಿನಿದೇವತೆಗಳೆನಿಸಿದ್ದಾರೆ. ಮಧ್ಯಭಾಗವು ಅತ್ರಿಋಷಿಗಳೆನಿಸಿದ್ದಾರೆ, ಲಿಂಗಭಾಗವು ಸಂವತ್ಸರವೆನಿಸಿದೆ.
ಮಿತ್ರಾವರುಣಕೌ ಪಾದೌ ಪುಚ್ಛಮೂಲಂ ಹುತಾಶನಃ |
ತತಃ ಪಶ್ಚಾದ್ ಭವೇದಿಂದ್ರಸ್ತತಃ ಪಶ್ಚಾತ್ ಪ್ರಜಾಪತಿಃ ॥65॥
ಎರಡು ಪಾದಗಳು ಮಿತ್ರಾ-ವರುಣರು ಎನಿಸಿದ್ದಾರೆ, ಪುಚ್ಛಮೂಲವು ಅಗ್ನಿ ದೇವ ಎನಿಸಿದ್ದಾನೆ. ಪುಚ್ಛದ ಮೇಲ್ಭಾಗಕ್ಕೆ ಇಂದ್ರನು ಅಭಿಮಾನಿಯಾಗಿದ್ದಾನೆ. ಅದರ ನಂತರ ಭಾಗಕ್ಕೆ ಚತುರ್ಮುಖನು ಅಭಿಮಾನಿಯಾಗಿದ್ದಾನೆ.
ಅಭಯಂ ಚ ತತಃ ಪಶ್ಚಾತ್ ಸ ಏಷ ಧ್ರುವಸಂಜ್ಞಿತಃ |
ಏತಾನ್ಯಂಗಾನಿ ಸರ್ವಾಣಿ ಶಿಂಶುಮಾರಪ್ರಜಾಪತೇಃ ॥66॥
ಶಿಂಶುಮಾರದೇವನ ಮೇಲ್ಭಾಗದಲ್ಲಿರುವ ಸ್ಥಳಗಳು ಮೃತ್ಯುಭಯದಿಂದ ರಹಿತವಾದ ಸ್ಥಳ ಎನಿಸಿವೆ. ಅದನ್ನೇ ಧ್ರುವ ಮಂಡಲ ಎಂದು ಕರೆಯುತ್ತಾರೆ. ಇವೆಲ್ಲವೂ ಶಿಂಶುಮಾರಪ್ರಜಾಪತಿಯ ಅಂಗಗಳೆನಿಸಿವೆ.
ಪಿಬೇತ್ತು ಪಂಚಗವ್ಯಂ ಯಃ ಪೌರ್ಣಮಾಸ್ಯಾಮುಪೋಷ್ಯ ತು |
ತಸ್ಯ ನಶ್ಯತಿ ಯತ್ಪಾಪಂ ತತ್ಪಾಪಂ ಪೂರ್ವಸಂಚಿತಮ್ ॥67॥
ಯಾವನು ಹುಣ್ಣಿಮೆ ದಿವಸ ಉಪವಾಸವಿದ್ದು ಪಂಚಗವ್ಯವನ್ನು ಪ್ರಾಶನ ಮಾಡುತ್ತಾನೋ ಅವನ ಪೂರ್ವಸಂಚಿತಪಾಪಗಳೆಲ್ಲವೂ ನಾಶವಾಗುತ್ತವೆ.
ತಥೈವ ಬ್ರಹ್ಮಕೂರ್ಚಂ ತು ಸಮಂತ್ರಂ ತು ಪೃಥಕ್ ಪೃಥಕ್ |
ಮಾಸಿ ಮಾಸಿ ಪಿಬೇದ್ಯಸ್ತು ತಸ್ಯ ಪಾಪಂ ಪ್ರಣಶ್ಯತಿ ॥68॥
ಅದೇ ರೀತಿ ಯಾವನು ಪ್ರತಿ ಮಾಸವು ಪ್ರತ್ಯೇಕ ಪ್ರತ್ಯೇಕವಾಗಿ ಮಂತ್ರವನ್ನು ಜಪಮಾಡುತ್ತಾ, ಪಂಚಗವ್ಯವನ್ನು ಪ್ರಾಶನ ಮಾಡುತ್ತಾನೋ ಅವನ ಪಾಪಗಳು ನಾಶ ಹೊಂದುತ್ತವೆ.
ಪಾತ್ರಂ ಚ ಬ್ರಹ್ಮಕೂರ್ಚಂ ಚ ಶೃಣು ಮಂತ್ರಂ ಚ ಭಾರತ |
ಪಾಲಾಶಂ ಪದ್ಮಪತ್ರಂ ಚ ತಾಮ್ರಂ ವಾಽಥ ಹಿರಣ್ಮಯಮ್ ॥69॥
ಸಾದಯಿತ್ವಾ ತು ಗೃಹ್ಣೀಯಾತ್ ತತ್ತು ಪಾತ್ರಮುದಾಹೃತಮ್ ॥70॥
ಪಂಚಗವ್ಯಕ್ಕೆ ಯೋಗ್ಯವಾದ ಪಾತ್ರೆಯಾವುದು? ಬ್ರಹ್ಮಕೂರ್ಚ ಎಂದರೇನು? ಮಂತ್ರವೇನು? ಅದರ ಬಗ್ಗೆ ಹೇಳುತ್ತೇನೆ, ಕೇಳು. ಮುತ್ತುಗದ ಎಲೆ ಅಥವಾ ಕಮಲದ ಎಲೆ ಅಥವಾ ತಾಮ್ರದ ಪಾತ್ರೆ ಅಥವಾ ಹಿರಣ್ಯಪಾತ್ರೆಯನ್ನು ಕಲ್ಪಿಸಿಕೊಂಡು ಪಂಚಗವ್ಯವನ್ನು ಪ್ರಾಶನ ಮಾಡಬೇಕು.
ಗಾಯತ್ರ್ಯಾ ಗೃಹ್ಯ ಗೋಮೂತ್ರಂ ಗಂಧದ್ವಾರೇತಿ ಗೋಮಯಮ್ |
ಆಪ್ಯಾಯಸ್ವೇತಿ ಚ ಕ್ಷೀರಂ ದಧಿಕ್ರಾವ್ಣೇತಿ ವೈ ದಧಿ ॥71॥
ಪಂಚಗವ್ಯವನ್ನು ಸಿದ್ಧಪಡಿಸುವ ವಿಧಿಯು ಹೀಗಿದೆ: ಗಾಯತ್ರಿ ಮಂತ್ರವನ್ನು ಹೇಳಿಕೊಂಡು ಗೋಮೂತ್ರವನ್ನು ತೆಗೆದುಕೊಳ್ಳಬೇಕು. `ಗಂಧದ್ವಾರಾಂ' ಎಂಬ ಮಂತ್ರವನ್ನು ಹೇಳಿಕೊಂಡು ಗೋವಿನ ಸೆಗಣಿಯನ್ನು ತೆಗೆದುಕೊಳ್ಳಬೇಕು. `ಆಪ್ಯಾಯಸ್ವ' ಎಂಬ ಮಂತ್ರವನ್ನು ಹೇಳಿಕೊಂಡು ಹಸುವಿನ ಹಾಲನ್ನು ತೆಗೆದುಕೊಳ್ಳಬೇಕು. `ದದಿಕ್ರಾವ್ಣೋ ಅಕಾರಿಶಂ' ಎಂಬ ಮಂತ್ರವನ್ನು ಹೇಳಿಕೊಂಡು ಮೊಸರನ್ನು ತೆಗೆದುಕೊಳ್ಳಬೇಕು.
ತೇಜೋಽಸಿ ಶುಕ್ರಮಿತ್ಯಾಜ್ಯಂ ದೇವಸ್ಯ ತ್ವೇತಿ ಕುಶೋದಕಮ್ |
ಆಪೋಹಿಷ್ಠೇತಿ ಸಂಗೃಹ್ಯ ಯವಪೂರ್ವಂ ಯಥಾವಿಧಿ ॥72॥
`ತೇಜೋಽಸಿ ಶುಕ್ರಂ` ಎಂಬ ಮಂತ್ರವನ್ನು ಹೇಳಿಕೊಂಡು ಹಸುವಿನ ತುಪ್ಪವನ್ನು ತೆಗೆದುಕೊಳ್ಳಬೇಕು. `ದೇವಸ್ಯ ತ್ವೇತಿ' ಎಂಬ ಮಂತ್ರವನ್ನು ಹೇಳಿಕೊಂಡು ಕುಶೋದಕವನ್ನು ತೆಗೆದುಕೊಳ್ಳಬೇಕು. `ಅಪೋಹಿಷ್ಠ' ಎಂಬ ಮಂತ್ರವನ್ನು ಹೇಳಿಕೊಂಡು ಗೋಧಿಯನ್ನು ತೆಗೆದುಕೊಳ್ಳಬೇಕು.
ಬ್ರಹ್ಮಣೇ ಚ ಯಥಾ ಹುತ್ವಾ ಸಮಿದ್ಧೇ ಚ ಹುತಾಶನೇ |
ಆಲೋಡ್ಯ ಪ್ರಣವೇನೈವ ನಿರ್ಮಥ್ಯ ಪ್ರಣವೇನ ತು ॥73॥

ನಂತರ ಎಲ್ಲವನ್ನೂ ಒಟ್ಟಿಗೆ ಸೇರಿಸಿ, ಅಗ್ನಿಯನ್ನು ಪ್ರತಿಷ್ಠಾಪಿಸಿ, ಪ್ರಜ್ವಲಿಸುವ ಅಗ್ನಿಯಲ್ಲಿ ಬ್ರಹ್ಮನಿಗೆ ಆಹುತಿಯನ್ನು ಕೊಡಬೇಕು. ಪ್ರಣವಮಂತ್ರವನ್ನು ಹೇಳಿಕೊಂಡು ಎಲ್ಲವನ್ನೂ ಕಲಕಬೇಕು. ಪ್ರಣವದಿಂದಲೇ ಮಥನ ಮಾಡಬೇಕು.

ಉದ್ಧೃತ್ಯ ಪ್ರಣವೇನೈವ ಪಿಬೇತ್ತು ಪ್ರಣವೇನ ತು |
ಮಹತಾಽಪಿ ಸ ಪಾಪೇನ ತ್ವಚೇವಾಹಿರ್ವಿಮುಚ್ಯತೇ ॥74॥

ಪ್ರಣವ ಮಂತ್ರವನ್ನು ಹೇಳಿಕೊಂಡು ಪಂಚಗವ್ಯ ಇರುವ ಪಾತ್ರೆಯನ್ನು ಮೇಲಕ್ಕೆ ಎತ್ತಬೇಕು. ಪ್ರಣವೋಚ್ಚಾರಣ ಪೂರ್ವಕವಾಗಿಯೇ ಪ್ರಾಶನ ಮಾಡಬೇಕು. ಹೀಗೆ ಮಾಡುವುದರಿಂದ ಮಹತ್ತರವಾದ ಪಾಪಗಳನ್ನು ಮಾಡಿದ್ದರೂ ಸರ್ಪವು ಪೊರೆಯಿಂದ ಮುಕ್ತವಾಗುವಂತೆ ಪಾಪದಿಂದ ಮುಕ್ತನಾಗುತ್ತಾನೆ.

ಭದ್ರಂ ತ ಇತಿ ಯಃ ಪಾದಂ ಪಠೇದೃಕ್ಸಂಹಿತಾಂ ತದಾ |
ಅಂತರ್ಜಲೇ ವಾಽಭ್ಯಾದಿತ್ಯೇ ತಸ್ಯ ಪಾಪಂ ಪ್ರಣಶ್ಯತಿ ॥75॥

ಯಾವ ಮನುಷ್ಯನು ನೀರಿನಲ್ಲಿ ಕುಳಿತು ಅಥವಾ ಸೂರ್ಯನಿಗೆ ಅಭಿಮುಖವಾಗಿ `ಭದ್ರಂ ನಃ' ಎಂಬ ಒಂದು ಪಾದವನ್ನಾಗಲಿ ಅಥವಾ ಋಕ್‌ಸಂಹಿತೆಯನ್ನು ಜಪಿಸುತ್ತಾನೋ ಅವನ ಪಾಪವು ನಾಶ ಹೊಂದುತ್ತದೆ.

ಮಮ ಸೂಕ್ತಂ ಜಪೇದ್ಯಸ್ತು ನಿತ್ಯಂ ಮದ್ಗತಮಾನಸಃ |
ನ ಸ ಪಾಪೇನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥76॥

ಯಾವನು ನನ್ನಲ್ಲೇ ಮನಸ್ಸುಳ್ಳವನಾಗಿ ನಿತ್ಯವೂ ಪುರುಷಸೂಕ್ತವನ್ನು ಪಠಿಸುತ್ತಾನೋ ಅವನು ತಾವರೆಯ ಎಲೆಯು ನೀರಿನಿಂದ ಲಿಪ್ತವಾಗದಂತೆ ಪಾಪದಿಂದ ಲೇಪವನ್ನು ಹೊಂದುವುದಿಲ್ಲ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಬಹುಧರ್ಮಕಥನಂ ನಾಮ ಪಂಚದಶೋತ್ತರಶತತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಹದಿನೈದನೆಯ ಅಧ್ಯಾಯ ಮುಗಿಯಿತು.

* * * * *

## ನೂರ ಹದಿನಾರನೆಯ ಅಧ್ಯಾಯ

ಕೃಷ್ಣನು ಯುಧಿಷ್ಠಿರನನ್ನು ಕುರಿತು, ಯಾವ ಮನುಷ್ಯನಲ್ಲಿ ಭಗವದ್ಭಕ್ತಿ, ಸಚ್ಚಾರಿತ್ರ್ಯ ಮೊದಲಾದ ಗುಣಗಳು ಇಲ್ಲದಿದ್ದಲ್ಲಿ ಬ್ರಾಹ್ಮಣನಾಗಿದ್ದರೂ ಅಗ್ನಿಹೋತ್ರ ಪರಾಯಣನಾಗಿದ್ದರೂ, ಸ್ವಾಧ್ಯಾಯ-ಅಧ್ಯಯನಾದಿ ಸತ್ಕರ್ಮವುಳ್ಳವನಾಗಿದ್ದರೂ ಅವನು ಸಾಫಲ್ಯವನ್ನು ಹೊಂದಲಾರ. ಶೂದ್ರನಾದವನು ಸ್ವಾಧ್ಯಾಯಾದಿ ಲಕ್ಷಣಗಳಿದ್ದರೂ ಭಕ್ತಿಯುಳ್ಳವನಾಗಿದ್ದಲ್ಲಿ, ತನ್ನ ಜಾತಿಗೆ ಸಂಬಂಧಿಸಿದ ಸ್ವಲ್ಪ ಸತ್ಕರ್ಮವನ್ನು ಮಾಡಿದರೂ
ಸಫಲತೆಯನ್ನು ಹೊಂದುತ್ತಾನೆ ಎಂದು ಹೇಳಿದುದು.

ಯುಧಿಷ್ಠಿರಃ

ಕೀದೃಶಾ ಬ್ರಾಹ್ಮಣಾ ಪುಣ್ಯಾ ಭಾವಶುದ್ಧಾಃ ಸುರೇಶ್ವರ |
ತತ್ಕರ್ಮ ಸಫಲಂ ನೇತಿ ಕಥಯಸ್ವ ಮಮಾನಘ ॥1॥

ಯುಧಿಷ್ಠಿರ ಅನಘನೇ, ಸುರೇಶ್ವರನೇ, ಭಾವದಿಂದ ಶುದ್ಧರಾದ, ಪುಣ್ಯಾತ್ಮರಾದ ಬ್ರಾಹ್ಮಣರು ಹೇಗಿರುತ್ತಾರೆ? ಅವರು ಮಾಡಿದ ಕರ್ಮವು ಕೆಲವು ಸಮಯದಲ್ಲಿ ಸಫಲವಾಗದಿರಲು ಕಾರಣವೇನು? ನನಗೆ ಕೃಪೆ ಮಾಡಿ ಹೇಳು.

ಶ್ರೀಭಗವಾನ್

ಶೃಣು ಪಾಂಡವ ತತ್ಸರ್ವಂ ಬ್ರಾಹ್ಮಣಾನಾಂ ಯಥಾಕ್ರಮಮ್ |
ಸಫಲಂ ನಿಷ್ಫಲಂ ಚೇತಿ ತೇಷಾಂ ಕರ್ಮ ಬ್ರವೀಮಿ ತೇ ॥2॥

ಶ್ರೀಭಗವಾನ್ ಯುಧಿಷ್ಠಿರನೇ, ಬ್ರಾಹ್ಮಣರು ಮಾಡುವ ಕಾರ್ಯವು ಸಫಲವಾಗುವುದಕ್ಕೂ, ನಿಷ್ಫಲವಾಗುವುದಕ್ಕೂ ಕಾರಣವೇನೆಂದು ಕ್ರಮವಾಗಿ ಹೇಳುತ್ತೇನೆ, ಕೇಳಿಸಿಕೊ.

ತ್ರಿದಂಡಧಾರಣಂ ಮೌನಂ ಜಟಾಧಾರಣಮುಂಡನಮ್ |
ವಲ್ಕಲಾಜಿನಸಂವಾಸೋ ವ್ರತಚರ್ಯಾಽಭಿಷೇಚನಮ್ ॥3॥
ಅಗ್ನಿಹೋತ್ರಂ ವನೇ ವಾಸಃ ಸ್ವಾಧ್ಯಾಯೋ ದಾನಸತ್ಕ್ರಿಯಾ |
ಸರ್ವಾಣ್ಯೇತಾನಿ ವೈ ಮಿಥ್ಯಾ ಯದಿ ಭಾವೋ ನ ನಿರ್ಮಲಃ ॥4॥

ಮನಸ್ಸಿನ ಭಾವನೆಯು ಶುದ್ಧವಾಗಿ ಇರದಿದ್ದಲ್ಲಿ ತ್ರಿದಂಡಧಾರಣೆ, ಮೌನವ್ರತ, ಜಟಾಧಾರಣೆ, ಶಿರೋಮುಂಡನ, ನಾರುಮಡಿ ಧರಿಸಿರುವಿಕೆ, ಕೃಷ್ಣಾಜಿನ ಧಾರಣೆ, ಬ್ರಹ್ಮಚರ್ಯ, ಸ್ನಾನ, ವ್ರತ, ಅಗ್ನಿಹೋತ್ರ, ಗೃಹಸ್ಥಧರ್ಮ ಪಾಲನೆ, ವೇದಾಧ್ಯಯನ, ಶೀಲ, ದಾನ ಮಾಡಿರುವಿಕೆ- ಇವುಗಳೆಲ್ಲವೂ ವ್ಯರ್ಥವಾಗುತ್ತವೆ.

ಅಗ್ನಿಹೋತ್ರಂ ವೃಥಾ ರಾಜನ್ ವೃಥಾ ವೇದಾಸ್ತಥೈವ ಚ |
ಶೀಲೇನ ದೇವಾಸ್ತುಷ್ಯಂತಿ ಶ್ರುತಯಸ್ತತ್ರ ಕಾರಣಮ್ ॥5॥

ರಾಜನೇ, ಯಾವ ಮನುಷ್ಯನ ಶೀಲವು ಸರಿಯಾಗಿರುವುದಿಲ್ಲವೋ ಅವನು ಮಾಡಿದ ಅಗ್ನಿಹೋತ್ರವು ವ್ಯರ್ಥವಾಗುತ್ತದೆ. ವೇದಾಧ್ಯಯನವೂ ವ್ಯರ್ಥವಾಗುತ್ತದೆ. ಶೀಲದಿಂದಲೇ ದೇವತೆಗಳು ಸಂತುಷ್ಟರಾಗುತ್ತಾರೆ. ಇದಕ್ಕೆ ಶ್ರುತಿಗಳೇ ಪ್ರಮಾಣವು.

ಕ್ಷಾಂತಂ ದಾಂತಂ ಜಿತಕ್ರೋಧಂ ಜಿತಾತ್ಮಾನಂ ಜಿತೇಂದ್ರಿಯಮ್ |
ತಮಗ್ರ್ಯಂ ಬ್ರಾಹ್ಮಣಂ ಮನ್ಯೇ ಶೇಷಾಃ ಶೂದ್ರಾ ಇತಿ ಸ್ಮೃತಾಃ ॥6॥

ಯಾವನು ಕ್ಷಮಾಸಮುದ್ರನೋ, ಇಂದ್ರಿಯನಿಗ್ರಹವುಳ್ಳವನೋ, ಕ್ರೋಧವನ್ನು ಗೆದ್ದವನೋ, ಮನಸ್ಸಿನ ನಿಗ್ರಹವುಳ್ಳವನೋ, ಜಿತೇಂದ್ರಿಯನೋ ಅವನನ್ನು ಶ್ರೇಷ್ಠನಾದ ಬ್ರಾಹ್ಮಣ ಎಂದು ತಿಳಿಯುತ್ತೇನೆ. ಉಳಿದವರು ಶೂದ್ರರು ಎಂದು ಕರೆಸಿಕೊಳ್ಳುತ್ತಾರೆ.

ಅಗ್ನಿಹೋತ್ರವ್ರತಪರಾನ್ ಸ್ವಾಧ್ಯಾಯನಿರತಾನ್ ಶುಚೀನ್ |
ಉಪವಾಸರತಾನ್ ದಾಂತಾನ್ ತಾನ್ ದೇವಾ ಬ್ರಾಹ್ಮಣಾನ್ ವಿದುಃ ||
ಅಗ್ನಿಹೋತ್ರ ವ್ರತನಿಷ್ಠರಾದ, ಸ್ವಾಧ್ಯಾಯ ನಿರತರಾದ, ಶೌಚಾಚಾರದಿಂದ ಕೂಡಿರುವ, ಉಪವಾಸನಿರತರಾದ, ಇಂದ್ರಿಯನಿಗ್ರಹ ಶೀಲರಾದ ಬ್ರಾಹ್ಮಣರನ್ನು ದೇವತೆಗಳು ಬ್ರಾಹ್ಮಣರೆಂದು ಕರೆಯುತ್ತಾರೆ.
ನ ಜಾತಿಃ ಪೂಜ್ಯತೇ ರಾಜನ್ ಗುಣಾಃ ಕಲ್ಯಾಣಕಾರಣಾಃ |
ಚಂಡಾಲಮಪಿ ವೃತ್ತಸ್ಥಂ ತಂ ದೇವಾ ಬ್ರಾಹ್ಮಣಂ ವಿದುಃ ||8||
ರಾಜನೇ, ಪೂಜೆಗೆ ಅರ್ಹವಾದವು ಕಲ್ಯಾಣಕರ ಗುಣಗಳೇ ವಿನಾ ಜಾತಿಯಲ್ಲ. ಚಂಡಾಲನಾದರೂ ಸಚ್ಚಾರಿತ್ರ್ಯಸಂಪನ್ನನಾದ ವ್ಯಕ್ತಿಯನ್ನು ದೇವತೆಗಳು ಬ್ರಾಹ್ಮಣ ಎಂದೇ ತಿಳಿದಿದ್ದಾರೆ.
ಮನಃಶೌಚಂ ಕರ್ಮಶೌಚಂ ಕುಲಶೌಚಂ ಚ ಭಾರತ |
ಶರೀರಶೌಚಂ ವಾಕ್ಶೌಚಂ ಶೌಚಂ ಪಂಚವಿಧಂ ಸ್ಮೃತಮ್ ||9||
ಮನಃಶೌಚ, ಕರ್ಮಶೌಚ, ಕುಲಶೌಚ, ಶರೀರ ಶೌಚ ಮತ್ತು ವಾಕ್‌ಶೌಚ ಎಂಬುದಾಗಿ ಐದು ವಿಧವಾಗಿ ಶೌಚವು ಇದೆ.
ಪಂಚಸ್ವೇತೇಷು ಶೌಚೇಷು ಹೃದಿ ಶೌಚಂ ವಿಶಿಷ್ಯತೇ |
ಹೃದಯಸ್ಯ ಚ ಶೌಚೇನ ಸ್ವರ್ಗಂ ಗಚ್ಛಂತಿ ಮಾನವಾಃ ||10||
ಈ ಐದು ವಿಧವಾದ ಶೌಚಗಳಲ್ಲಿಯೂ ಹೃದಯದ ಶುಚಿತ್ವವು ಶ್ರೇಷ್ಠವಾದುದು. ಹೃದಯದ ನೈರ್ಮಲ್ಯದಿಂದ ಮನುಷ್ಯರು ಸ್ವರ್ಗಕ್ಕೆ ಹೋಗುತ್ತಾರೆ.
ಅಗ್ನಿಹೋತ್ರಪರಿಭ್ರಷ್ಟಃ ಪ್ರಸಕ್ತಃ ಕ್ರಯವಿಕ್ರಯೇ |
ವರ್ಣಸಂಕರಕರ್ತಾ ಚ ಬ್ರಾಹ್ಮಣೋ ವೃಷಲೈಃ ಸಮಃ ||11||
ಯಾವ ಬ್ರಾಹ್ಮಣನು ಅಗ್ನಿಹೋತ್ರವನ್ನು ಆಚರಿಸುವುದಿಲ್ಲವೋ (ವೈಶ್ವದೇವವನ್ನು ಮಾಡುವುದಿಲ್ಲವೋ) ಕ್ರಯವಿಕ್ರಯಗಳನ್ನು ಮಾಡುತ್ತಾನೋ, ವರ್ಣಸಾಂಕರ್ಯವನ್ನು ಉಂಟುಮಾಡುತ್ತಾನೋ ಅವನು ವೃಷಲನಿಗೆ ಸಮಾನನಾಗಿದ್ದಾನೆ.
ಯಸ್ಯ ವೇದಶ್ರುತಿರ್ನಷ್ಟಾ ಕರ್ಷಕಶ್ಚಾಪಿ ಯೋ ದ್ವಿಜಃ |
ವಿಕರ್ಮಸೇವೀ ಕೌಂತೇಯ ಸ ವೈ ವೃಷಲ ಉಚ್ಯತೇ ||12||
ಯಾವ ಬ್ರಾಹ್ಮಣನು ವೇದಾಧ್ಯಯನವನ್ನು ಮಾಡುವುದಿಲ್ಲವೋ, ನೇಗಿಲನ್ನು ಉಪಯೋಗಿಸಿ ಕೃಷಿಯನ್ನು ಮಾಡುತ್ತಾನೋ, ತನ್ನ ವೃತ್ತಿಗೆ ವಿರುದ್ಧವಾದ ಕರ್ಮವನ್ನು ಮಾಡುತ್ತಾನೋ ಅವನು ವೃಷಲ ಎಂದು ಕರೆಸಿಕೊಳ್ಳುತ್ತಾನೆ.
ವೃಷೋ ಹಿ ಧರ್ಮೋ ವಿಜ್ಞೇಯಸ್ತಸ್ಯ ಯಃ ಕುರುತೇ ಲಯಮ್ |
ವೃಷಲಂ ತಂ ವಿದುರ್ದೇವಾ ನಿಕೃಷ್ಟಂ ಶ್ವಪಚಾದಪಿ ||13||
ವೃಷ ಎಂದರೆ ಧರ್ಮ. ಅದನ್ನು ನಾಶ ಮಾಡುವವನಿಗೆ ವೃಷಲ ಎಂದು ದೇವತೆಗಳು ಹೇಳುತ್ತಾರೆ. ಈ ವೃಷಲನು ಚಂಡಾಲಿನಿಗಿಂತಲೂ ನಿಕೃಷ್ಟನಾಗಿದ್ದಾನೆ.
ಸ್ತುತಿಭಿರ್ಬ್ರಹ್ಮಪೂರ್ವಾಭಿರ್ಯಃ ಶೂದ್ರಂ ಸ್ತೌತಿ ಮಾನವಃ |
ನ ತು ಮಾಂ ಸ್ತೌತಿ ಪಾಪಾತ್ಮಾ ಸ ತು ಚಂಡಾಲ ಏವ ಚ ||14||
ಯಾವ ಮಾನವನು ಭಗವಂತನನ್ನು ಕೊಂಡಾಡುವ ಮಂತ್ರಗಳಂತೆ ಶೂದ್ರರನ್ನು ಸ್ತುತಿಸುತ್ತಾನೋ ಅವನು ಪಾಪಾತ್ಮ, ಚಂಡಾಲ ಎನಿಸುತ್ತಾನೆ. ನನ್ನನ್ನು ಎಂದೂ ಸಮೀಪಿಸುವುದಿಲ್ಲ.
ಶ್ವದೃತೌ ತು ಯಥಾ ಕ್ಷೀರಂ ಬ್ರಹ್ಮ ವೈ ವೃಷಲೇ ತಥಾ |
ದುಷ್ಟತಾಮೇತಿ ತತ್ಸರ್ವಂ ಶುನಾ ಲೀಢಂ ಹವಿರ್ಯಥಾ ||15||
ನಾಯಿ ಮುಟ್ಟಿದ ಕ್ಷೀರವು ಹೇಗೋ ಹಾಗೆ ಯಾವ ವೃಷಲನು ವೇದಗಳನ್ನು ಅಧ್ಯಯನ ಮಾಡುತ್ತಾನೋ ಅಂತಹ ವೇದವು ಸತ್ತ ನಾಯಿಯ ಶಿರದಲ್ಲಿ ಧರಿಸಿದ ಕ್ಷೀರದಂತೆ ದುಷ್ಟತ್ವವನ್ನು ಹೊಂದುತ್ತದೆ. ನಾಯಿ ನೆಕ್ಕಿದ ಹವಿಸ್ಸನ್ನು ತ್ಯಜಿಸುವಂತೆ ಅವನಿಂದ ವೇದವು ತ್ಯಜಿಸಲ್ಪಡುತ್ತದೆ.
ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ |
ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾ ಹ್ಯೇತಾಶ್ಚತುರ್ದಶ ||16||
ಷಡಂಗಗಳು, ನಾಲ್ಕು ವೇದಗಳು, ಬ್ರಹ್ಮಮೀಮಾಂಸಾ ಶಾಸ್ತ್ರವು, ನ್ಯಾಯಶಾಸ್ತ್ರವು ಧರ್ಮಶಾಸ್ತ್ರವು, ಪುರಾಣವು ಇವುಗಳೆಲ್ಲ ಹದಿನಾಲ್ಕು ವಿದ್ಯೆಗಳೆನಿಸುತ್ತವೆ.
ಯಾನ್ಯುಕ್ತಾನಿ ಮಯಾ ಸಮ್ಯಗ್ ವಿದ್ಯಾಸ್ಥಾನಾನಿ ಭಾರತ |
ಉತ್ಪನ್ನಾನಿ ಪವಿತ್ರಾಣಿ ಪಾವನಾರ್ಥಂ ತಥೈವ ಚ ||17||
ಯಾವ ವಿದ್ಯಾಸ್ಥಾನಗಳನ್ನು ನಾನು ಹಿಂದೆ ತಿಳಿಸಿದ್ದೇನೋ ಆ ಹದಿನಾಲ್ಕು ವಿದ್ಯೆಗಳು ಲೋಕಕಲ್ಯಾಣಕ್ಕಾಗಿ ಪ್ರಕಟವಾದವುಗಳು. ಪವಿತ್ರವಾದವುಗಳು.
ತಸ್ಮಾತ್ ತಾನಿ ನ ಶೂದ್ರಸ್ಯ ಸ್ಪ್ರಷ್ಟವ್ಯಾನಿ ಯುಧಿಷ್ಠಿರ |
ಸರ್ವಂ ಚ ಶೂದ್ರಸಂಸ್ಪೃಷ್ಟಮಪವಿತ್ರಂ ನ ಸಂಶಯಃ ||18||
ಆದ್ದರಿಂದ ವೃಷಲನಾದವನು ಇವುಗಳನ್ನು ಸ್ಪರ್ಶಿಸಬಾರದು. ಈ ವಿದ್ಯೆಗಳು ವೃಷಲನ ಸ್ಪರ್ಶದಿಂದ ಅಪವಿತ್ರಗಳಾಗುತ್ತವೆ ಎಂಬುದರಲ್ಲಿ ಸಂಶಯವಿಲ್ಲ.
ಲೋಕೇ ತ್ರೀಣ್ಯಪವಿತ್ರಾಣಿ ಪಂಚಾಮೇಧ್ಯಾನಿ ಭಾರತ |
ಶ್ವಾ ಚ ಶೂದ್ರಃ ಶ್ವಪಾಕಶ್ಚ ಅಪವಿತ್ರಾಣಿ ಭಾರತ ||19||

ದೇವಃ ಕುಕ್ಕುಟೋ ಯೂಪೋ ಹ್ಯುದಕ್ಯಾ ವೃಷಲೀಪತಿಃ |
ಪಂಚೈತೇ ಸ್ಯುರಮೇಧ್ಯಾಶ್ಚ ಸ್ಪೃಷ್ಟವ್ಯಾ ನ ಕದಾಚನ ॥20॥
ಸ್ಪೃಷ್ಟ್ವೈತಾನಷ್ಟ ವೈ ವಿಪ್ರಃ ಸಚೇಲೋ ಜಲಮಾವಿಶೇತ್ ॥21॥
ಲೋಕದಲ್ಲಿ ಮೂರು ಅಪವಿತ್ರವಾದವುಗಳು, ಐದು ಅಶುದ್ಧವಾದವುಗಳು ಇವೆ. ನಾಯಿ, ವೃಷಲ, ಚಾಂಡಾಲ- ಈ ಮೂರು ಅಪವಿತ್ರರು. ಅಶ್ಲೀಲವಾಗಿ ಮಾತನಾಡುವವನು, ಕೋಳಿ, ಕಡಿಯಲಿಕ್ಕಾಗಿ ಪಶುಗಳನ್ನು ಕಟ್ಟಿರುವ ಸ್ತಂಭ, ರಜಸ್ವಲೆಯಾದ ಸ್ತ್ರೀ, ವೃಷಲ ಸ್ತ್ರೀಯನ್ನು ಮದುವೆ ಮಾಡಿಕೊಂಡ ಬ್ರಾಹ್ಮಣ - ಈ ಐದು ಅಶುದ್ಧವಾದವುಗಳು. ಒಟ್ಟು ಈ ಎಂಟರಲ್ಲಿ ಯಾವುದನ್ನು, ಯಾರನ್ನು ಮುಟ್ಟಿದರೂ ಬ್ರಾಹ್ಮಣನು ಉಟ್ಟಿರುವ ಬಟ್ಟೆಯಲ್ಲಿಯೇ ನೀರಿನಲ್ಲಿಳಿದು ಸ್ನಾನ ಮಾಡಬೇಕು.
ಮದ್ಭಕ್ತಾನ್ ಶೂದ್ರಸಾಮಾನ್ಯಾದ್ ಅವಮನ್ಯಂತಿ ಯೇ ನರಾಃ |
ನರಕೇಷ್ವೇವ ತಿಷ್ಠಂತಿ ವರ್ಷಕೋಟಿಂ ನರಾಧಮಾಃ ॥22॥
ನನ್ನ ಭಕ್ತರು ಶೂದ್ರತ್ವ ಜಾತಿಯುಳ್ಳವರು ಎಂಬ ಕಾರಣದಿಂದ ಯಾರಾದರೂ ಅವರನ್ನು ಅವಮಾನಗೊಳಿಸಿದರೆ ಅಂತಹವರು ನರಾಧಮರಾಗುತ್ತಾರೆ. ಕೋಟಿ ವರ್ಷಗಳ ತನಕ ನರಕದಲ್ಲಿ ಬೀಳುತ್ತಾರೆ.
ಚಂಡಾಲಮಪಿ ಮದ್ಭಕ್ತಂ ನಾವಮನ್ಯೇತ ಬುದ್ಧಿಮಾನ್ |
ಅವಮತ್ಯ ಪತಂತ್ಯೇವ ನರಕೇ ರೌರವೇ ನರಾಃ ॥23॥
ನನ್ನ ಭಕ್ತನ ಭಕ್ತನಾದವನು ಚಂಡಾಲನೇ ಆಗಿದ್ದರೂ ಅವನನ್ನು ಬುದ್ಧಿವಂತನಾದ ಮನುಷ್ಯನು ಅವಮಾನಿಸಬಾರದು. ಅವನನ್ನು ಅವಮಾನಿಸಿದಲ್ಲಿ ರೌರವ ಎಂಬ ನರಕದಲ್ಲಿ ಬೀಳುತ್ತಾರೆ.
ಮಮ ಮದ್ಭಕ್ತಭಕ್ತೇಷು ಪ್ರೀತಿರಭ್ಯಧಿಕಾ ನೃಪ |
ತಸ್ಮಾನ್ಮದ್ಭಕ್ತಭಕ್ತಾಶ್ಚ ಪೂಜನೀಯಾ ವಿಶೇಷತಃ ॥24॥
ನನ್ನ ಭಕ್ತರಿಗೆ ಯಾರು ಭಕ್ತರೋ ಅವರಲ್ಲಿ ನನಗೆ ಅಧಿಕವಾದ ಪ್ರೀತಿ ಇರುತ್ತದೆ. ಆದ್ದರಿಂದ ನನ್ನ ಭಕ್ತರ ಭಕ್ತರನ್ನು ವಿಶೇಷವಾಗಿ ಸತ್ಕರಿಸಬೇಕು.
ಕೀಟಪಕ್ಷಿಮೃಗಾಣಾಂ ಚ ಮಯಿ ಸನ್ನ್ಯಸ್ತಚೇತಸಾಮ್ |
ಊರ್ಧ್ವಾಮೇವ ಗತಿಂ ವಿದ್ಧಿ ಕಿಂ ಪುನರ್ಜ್ಞಾನಿನಾಂ ನೃಣಾಮ್ ॥24॥
ನನ್ನಲ್ಲಿಯೇ ಮನಸ್ಸನ್ನಿಟ್ಟು ಧ್ಯಾನ ಮಾಡುವ ಕೀಟ, ಪಕ್ಷಿ, ಮೃಗಗಳಿಗೂ ಊರ್ಧ್ವಗತಿಯು ಉಂಟಾಗುತ್ತದೆ. ಹೀಗಿರುವಾಗ ಜ್ಞಾನಿ ಮನುಜರಿಗೆ ಊರ್ಧ್ವಗತಿಯುಂಟಾಗುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕೆ?
ಪತ್ರಂ ವಾಽಪ್ಯಥವಾ ಪುಷ್ಪಂ ಫಲಂ ವಾಽಪ್ಯಪ ಏವ ವಾ |
ದದಾತಿ ಮಮ ಶೂದ್ರೋಽಪಿ ಶಿರಸಾ ಧಾರಯಾಮಿ ತತ್ ॥26॥
ಯಾರು ತುಳಸೀಪತ್ರವನ್ನಾಗಲಿ, ಪುಷ್ಪ, ಫಲ, ಜಲ ಇವುಗಳಲ್ಲಿ ಯಾವುದನ್ನೇ ಆಗಲಿ, ಭಕ್ತಿಯಿಂದ ಶೂದ್ರನು ಸಮರ್ಪಿಸಿದರೂ ಅದನ್ನು ಶಿರಸಾ ಧರಿಸುತ್ತೇನೆ.
ವಿಪ್ರಾನೇವಾರ್ಚಯೇದ್ ಭಕ್ತ್ಯಾ ಶೂದ್ರಪ್ರಾಯಾಂಶ್ಚ ಮತ್ಪ್ರಿಯಾನ್ |
ತೇಷಾಂ ತೇನೈವ ರೂಪೇಣ ಪೂಜಾಂ ಗೃಹ್ಣಾಮಿ ಭಾರತ ॥27॥
ಶೂದ್ರ ಪ್ರಾಯರಾದ ನನ್ನ ಭಕ್ತರಾಗಿರುವ ಬ್ರಾಹ್ಮಣರನ್ನು ಭಕ್ತಿಯಿಂದ ಆರಾಧಿಸಬೇಕು. ನಾನು ಅವರಲ್ಲಿ ಅವರ ರೂಪದಿಂದಲೇ ಇದ್ದು ಪೂಜೆಯನ್ನು ಸ್ವೀಕರಿಸುತ್ತೇನೆ.
ವೇದೋಕ್ತೇನೈವ ಮಾರ್ಗೇಣ ಸರ್ವಭೂತಹೃದಿ ಸ್ಥಿತಮ್ |
ಮಾಮರ್ಚಯಂತಿ ಯೇ ವಿಪ್ರಾ ಮತ್ಸಾಯುಜ್ಯಂ ವ್ರಜಂತಿ ತೇ ॥28॥
ವೇದೋಕ್ತವಾದ ಮಾರ್ಗದಿಂದ ಸಮಸ್ತ ಜೀವರಲ್ಲಿ ಅಂತರ್ಯಾಮಿಯಾಗಿರುವ ನನ್ನನ್ನು ಯಾವ ಬ್ರಾಹ್ಮಣರು ಆರಾಧಿಸುತ್ತಾರೋ ಅವರು ನನ್ನ ಸಾಯುಜ್ಯವನ್ನು ಹೊಂದುತ್ತಾರೆ.
ಬ್ರಾಹ್ಮಣಾನಾಂ ಹಿತಾರ್ಥ್ಯೈವ ಪ್ರಾದುರ್ಭಾವಃ ಕೃತೋ ಮಯಾ |
ಪ್ರಾದುರ್ಭಾವಾಕೃತಿಃ ಕಾಚಿದ್ ಅರ್ಚನೀಯಾ ಯುಧಿಷ್ಠಿರ ॥29॥
ಯುಧಿಷ್ಠಿರನೇ, ಬ್ರಾಹ್ಮಣರಿಗೆ ಹಿತವನ್ನು ಬಯಸುವ ದೃಷ್ಟಿಯಿಂದಲೇ ಅನೇಕ ಅವತಾರಗಳನ್ನು ತಾಳಿರುತ್ತೇನೆ. ಆ ಅವತಾರಗಳನ್ನು ಚಿಂತಿಸಿ ಪೂಜಿಸಬೇಕು.
ಆಸಾಮಾನ್ಯತಮಾಂ ಮೂರ್ತಿಂ ಯೋ ಮದ್ಭಕ್ತ್ಯಾ ಸಮರ್ಚತಿ |
ತೇನೈವ ಪರಿತುಷ್ಟೋಽಹಂ ಭವಿಷ್ಯಾಮಿ ನ ಸಂಶಯಃ ॥30॥
ನನ್ನ ಅವತಾರಗಳಲ್ಲಿ ಯಾವುದಾದರೂ ಒಂದು ಮೂರ್ತಿಯನ್ನು ಯಾವ ವ್ಯಕ್ತಿಯು ಭಕ್ತಿಯಿಂದ ಆರಾಧಿಸುತ್ತಾನೋ ಅವನ ಆರಾಧನೆಯಿಂದ ಖಂಡಿತವಾಗಿಯೂ ಸಂತುಷ್ಟನಾಗುತ್ತೇನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.
ಮೃದಾ ಚ ಮಣಿರತ್ನೈಶ್ಚ ತಾಮ್ರೇಣ ರಜತೇನ ವಾ |
ಕೃತ್ವಾ ಪ್ರತಿಕೃತಿಂ ಕುರ್ಯಾದರ್ಚನಾಂ ಕಾಂಚನೇನ ವಾ ॥31॥
ಮಣ್ಣಿನಿಂದಾಗಲಿ, ಮಣಿಗಳಿಂದಾಗಲಿ, ರತ್ನದಿಂದಾಗಲಿ, ತಾಮ್ರದಿಂದಾಗಲಿ, ಬೆಳ್ಳಿಯಿಂದಾಗಲಿ, ಬಂಗಾರದಿಂದಾಗಲಿ ನನ್ನ ಪ್ರತಿಮೆಯನ್ನು ಮಾಡಿಸಿಕೊಂಡು ನನ್ನ ಆರಾಧನೆಯನ್ನು ಮಾಡಬೇಕು.
ಪುಣ್ಯಂ ದಶಗುಣಂ ವಿದ್ಯಾದೇತೇಷಾಮುತ್ತರೋತ್ತರಮ್ ॥32॥
ಆಯಾ ಲೋಹಗಳಿಗೆ ಅನುಗುಣವಾಗಿ ಕ್ರಮವಾಗಿ ಹತ್ತು ಪಟ್ಟು ಅಧಿಕವಾದ ಪುಣ್ಯವನ್ನು ಆಯಾ ಪ್ರತೀಕದಲ್ಲಿ ಹೊಂದುತ್ತಾರೆ ಎಂದು ತಿಳಿ.

ಜಯಕಾಮೋಽರ್ಚಯೇದ್ ರಾಜಾ ವಿದ್ಯಾಕಾಮೋ ದ್ವಿಜೋತ್ತಮಃ |
ವೈಶ್ಯೋ ವಾ ಧನಕಾಮೋ ಹಿ ಶೂದ್ರಃ ಪುಣ್ಯಂ ಫಲಂ ಸ್ತ್ರಿಯಃ ॥33॥
ಜಯಾಕಾಂಕ್ಷಿಯಾದ ರಾಜನು ನನ್ನನ್ನು ಆರಾಧಿಸಬೇಕು. ಬ್ರಾಹ್ಮಣನು ವಿದ್ಯಾಕಾಮನೆಯಿಂದ ನನ್ನನ್ನು ಆರಾಧಿಸಬೇಕು. ವೈಶ್ಯನು ಧನಕಾಮನೆಯಿಂದ ಆರಾಧಿಸಬೇಕು. ಶೂದ್ರನು ಪುಣ್ಯವೇ ಫಲವನ್ನಾಗಿ ಚಿಂತಿಸಿ ಆರಾಧಿಸಬೇಕು. ಸ್ತ್ರೀಯರು ಪುಣ್ಯವನ್ನೇ ಫಲವನ್ನಾಗಿಸಿಕೊಂಡು ಆರಾಧಿಸಬೇಕು.
ಸರ್ವಕಾಮಾಃ ಸ್ತ್ರಿಯೋ ವಾಽಪಿ ಸರ್ವಾನ್ ಕಾಮಾನವಾಪ್ನುಯುಃ ॥34॥
ಅಥವಾ ಸ್ತ್ರೀಯರು ಸಮಸ್ತ ಕಾಮನೆಗಳಿಗಾಗಿ ನನ್ನನ್ನು ಆರಾಧಿಸಿದರೆ ಅವರ ಸಮಸ್ತ ಕಾಮನೆಗಳು ಪೂರ್ಣವಾಗುತ್ತವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ವಿಷ್ಣುಭಕ್ತ್ಯಾದಿಮಹಿಮಾವರ್ಣನಂ ನಾಮ ಷೋಡಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೇಳನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಅಶ್ವತ್ಥ, ಗೋ, ಬ್ರಾಹ್ಮಣ- ಇವರ ಮಹತ್ವವನ್ನು ಹೇಳುವ ಮೂಲಕ ಬ್ರಾಹ್ಮಣ್ಯನಾಶಕವಾದ ದುಷ್ಕರ್ಮಗಳ್ಯಾವುವೆಂದು ನಿರೂಪಿಸಿದುದು.
ಯುಧಿಷ್ಠಿರಃ
ಕೀದೃಶಾನಾಂ ತು ಶೂದ್ರಾಣಾಂ ನಾನುಗೃಹ್ಣಾಸಿ ಚಾರ್ಚನಮ್ |
ಉದ್ವೇಗಸ್ತವ ಕಸ್ಮಾದ್ಧಿ ತನ್ಮೇ ಬ್ರೂಹಿ ಸುರೇಶ್ವರ ॥1॥
ಯುಧಿಷ್ಠಿರ ಎಂತಹ ಶೂದ್ರರ ಪೂಜೆಯನ್ನು ನೀನು ಸ್ವೀಕರಿಸುವುದಿಲ್ಲ? ಯಾವ ಕಾರ್ಯವು ನಿನಗೆ ಉದ್ವೇಗವನ್ನುಂಟು ಮಾಡುತ್ತದೆ? ಈ ವಿಷಯವನ್ನು ಹೇಳು.
ಶ್ರೀಭಗವಾನ್
ಅವ್ರತೇನಾಪ್ಯಭಕ್ತೇನ ಸ್ಪೃಷ್ಟಾಂ ಶೂದ್ರೇಣ ಚಾರ್ಚನಾಮ್ |
ತಾಂ ವರ್ಜಯಾಮಿ ರಾಜೇಂದ್ರ ಶ್ವಪಾಕವಿಹಿತಾಮಿವ ॥2॥
ಶ್ರೀಭಗವಾನ್ ರಾಜೇಂದ್ರನೇ, ವ್ರತಗಳನ್ನು ಪರಿಪಾಲಿಸದೆ ನನ್ನ ಭಕ್ತನಲ್ಲದ ಶೂದ್ರನು ಮಾಡಿದ ಪೂಜೆಯನ್ನು ಚಂಡಾಲನು ಮಾಡಿದ ಪೂಜೆಯಂತೆ ತಿರಸ್ಕರಿಸುತ್ತೇನೆ.
ಅಹಂ ಚ ಶಂಕರಶ್ಚಾಪಿ ಗಾವೋ ವಿಪ್ರಾಸ್ತಥೈವ ಚ |
ಅಶ್ವತ್ಥೋಽಮರರೂಪಂ ಚ ತ್ರಯಮೇತದ್ ಯುಧಿಷ್ಠಿರ ॥3॥
ಎಲ್ಲರ ಹೃದಯದಲ್ಲಿ ಅಹೇಯ ನಾಮಕನಾಗಿ ಇರುವ ನಾನು ಎಲ್ಲರಿಗೂ ಸುಖಕರನಾಗಿರುವುದರಿಂದ ಶಂಕರ ಎಂದು ಕರೆಸಿಕೊಳ್ಳುತ್ತೇನೆ. ಅಂತಹ ನಾನು ನನ್ನ ಅಧಿಷ್ಠಾನವೆನಿಸಿದ ಗೋವುಗಳು, ಬ್ರಾಹ್ಮಣ, ಅಶ್ವತ್ಥವೃಕ್ಷ ಇವುಗಳನ್ನು ಮೂರು ದೇವತಾ ಸ್ವರೂಪವೆಂದೇ ತಿಳಿದುಕೊ.
ಏತತ್ ತ್ರಯಂ ಹಿ ಮದ್ಭಕ್ತೋ ನಾವಮನ್ಯೇತ ಕರ್ಹಿಚಿತ್ |
ಅವಮಾನಿತಮೇತತ್ತು ದಹತ್ಯಾಸಪ್ತಮಂ ಕುಲಮ್ ॥4॥
ಗೋವುಗಳನ್ನು, ಬ್ರಾಹ್ಮಣರನ್ನು, ಅಶ್ವತ್ಥ ವೃಕ್ಷವನ್ನು ನನ್ನ ಭಕ್ತರಾದವರು ಎಂದಿಗೂ ಯಾವ ಕಾರಣದಿಂದಲೂ ಅವಮಾನ ಮಾಡಬಾರದು. ಯಾರು ಅವಮಾನ ಪಡಿಸುತ್ತಾರೋ ಅವರ ಏಳು ಕುಲಗಳು ಭಸ್ಮವಾಗುತ್ತವೆ.
ಅಶ್ವತ್ಥೋ ಬ್ರಾಹ್ಮಣಾ ಗಾವೋ ಮನ್ಮಯಾಸ್ತಾರಯಂತಿ ಹಿ |
ತಸ್ಮಾದೇತತ್ ಪ್ರಯತ್ನೇನ ತ್ರಯಂ ಪೂಜಯ ಪಾಂಡವ ॥5॥
ಅಶ್ವತ್ಥ, ಬ್ರಾಹ್ಮಣ, ಗೋವುಗಳಲ್ಲಿ ನಾನೇ ಅಂತರ್ಯಾಮಿಯಾಗಿದ್ದು ಅವುಗಳನ್ನು ಸೇವಿಸುವವರನ್ನು ಕಷ್ಟದಿಂದ ದಾಟಿಸುತ್ತೇನೆ. ಆದ್ದರಿಂದ ಈ ಮೂರನ್ನು ಪ್ರಯತ್ನ ಪೂರ್ವಕವಾಗಿ ನೀನು ಪೂಜಿಸು.
ಯುಧಿಷ್ಠಿರಃ
ಬ್ರಾಹ್ಮಣೇನೈವ ದೇಹೇನ ಶೂದ್ರತ್ವಂ ಕಥಮಾಪ್ನುಯಾತ್ |
ಬ್ರಹ್ಮ ವಾ ನಶ್ಯತಿ ಕಥಂ ವಕ್ತುಂ ದೇವ ತ್ವಮರ್ಹಸಿ ॥6॥
ಯುಧಿಷ್ಠಿರ ಬ್ರಾಹ್ಮಣನ ಶರೀರದಲ್ಲಿಯೇ ಇದ್ದುಕೊಂಡು ಬ್ರಾಹ್ಮಣನು ಶೂದ್ರತ್ವವನ್ನು ಹೇಗೆ ಹೊಂದುತ್ತಾನೆ? ಬ್ರಾಹ್ಮಣ್ಯವು ಹೇಗೆ ನಾಶವಾಗುತ್ತದೆ? ಇದನ್ನು ನನಗೆ ತಿಳಿಸು.
ಶ್ರೀಭಗವಾನ್
ಕೂಪಸ್ನಾನಂ ತು ಯೋ ವಿಪ್ರಃ ಕುರ್ಯಾದ್ ದ್ವಾದಶವಾರ್ಷಿಕಮ್ |
ಸ ತೇನೈವ ಶರೀರೇಣ ಶೂದ್ರತ್ವಂ ಯಾತ್ಯಸಂಶಯಃ ॥7॥
ಶ್ರೀಭಗವಾನ್ ಯಾವ ಬ್ರಾಹ್ಮಣನು ಹನ್ನೆರಡು ವರ್ಷಗಳ ಕಾಲ ಬಾವಿಯಲ್ಲಿಯೇ ಸ್ನಾನವನ್ನು ಮಾಡುತ್ತಾನೋ ಅವನು ಶಾರೀರಕವಾಗಿ ಶೂದ್ರತ್ವವನ್ನು ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯಸ್ತು ರಾಜಾಶ್ರಯೇಣೈವ ಜೀವೇದ್ ದ್ವಾದಶವಾರ್ಷಿಕಮ್ |
ಸ ಶೂದ್ರತ್ವಂ ವ್ರಜೇದ್ ವಿಪ್ರೋ ವೇದಾನಾಂ ಪಾರಗೋಽಪಿ ಸನ್ ॥
ಯಾವ ಬ್ರಾಹ್ಮಣನು ಹನ್ನೆರಡು ವರ್ಷಗಳ ಕಾಲ ರಾಜಾಶ್ರಯದಲ್ಲಿಯೇ ಜೀವನವನ್ನು ಕಳೆಯುತ್ತಾನೋ ಅವನು ವೇದ-ವೇದಾಂಗ

ಪಾರಂಗತನಾಗಿದ್ದರೂ ಶೂದ್ರತ್ವವನ್ನು ಹೊಂದುತ್ತಾನೆ.
ಪತ್ತನೇ ನಗರೇ ವಾऽಪಿ ಯೋ ದ್ವಾದಶ ಸಮಾ ವಸೇತ್ |
ಸ ಶೂದ್ರತ್ವಂ ವ್ರಜೇದ್ ವಿಪ್ರೋ ನಾತ್ರ ಕಾರ್ಯಾ ವಿಚಾರಣಾ ॥9॥
ಯಾವ ಬ್ರಾಹ್ಮಣನು ಪಟ್ಟಣದಲ್ಲೇ ಆಗಲಿ, ನಗರದಲ್ಲೇ ಆಗಲಿ, ಹನ್ನೆರಡು ವರ್ಷಗಳ ಕಾಲ ವಾಸ ಮಾಡುತ್ತಾನೋ ಅವನು ಶೂದ್ರತ್ವವನ್ನು ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಉತ್ಪಾದಯತಿ ಯಃ ಪುತ್ರಂ ಶೂದ್ರಾಯಾಂ ಕಾಮತೋ ದ್ವಿಜಃ |
ತಸ್ಯ ಕಾಯಗತಂ ಬ್ರಹ್ಮ ಸದ್ಯ ಏವ ವಿನಶ್ಯತಿ ॥10॥
ಯಾವ ಬ್ರಾಹ್ಮಣನು ಕಾಮುಕನಾಗಿ ಶೂದ್ರಸ್ತ್ರೀಯಲ್ಲಿ ಸಂತಾನವನ್ನು ಹೊಂದುತ್ತಾನೋ ಅವನ ದೇಹದಲ್ಲಿರುವ ಬ್ರಾಹ್ಮಣ್ಯವು ಕೂಡಲೇ ನಾಶವನ್ನು ಹೊಂದುತ್ತದೆ.
ಮದ್ಯಪಸ್ತ್ರೀಮುಖಂ ಮೋಹಾದ್ ಆಸ್ವಾದಯತಿ ಯೋ ದ್ವಿಜಃ |
ತಸ್ಯ ಕಾಯಗತಂ ಬ್ರಹ್ಮ ಸದ್ಯ ಏವ ವಿನಶ್ಯತಿ ॥11॥
ಯಾವ ಬ್ರಾಹ್ಮಣನು ಮದ್ಯಪಾನವನ್ನು ಮಾಡುವ ಸ್ತ್ರೀಯ ಮುಖವನ್ನು ಚುಂಬಿಸುತ್ತಾನೋ ಅವನ ದೇಹದಲ್ಲಿರುವ ಬ್ರಾಹ್ಮಣ್ಯವು ಸದ್ಯದಲ್ಲಿಯೇ ನಾಶ ಹೊಂದುತ್ತದೆ.
ಯಃ ಸೋಮತಿಲಕಾಂ ವಿಪ್ರಃ ಕೇವಲಂ ಭಕ್ಷಯೇದ್ ವೃಥಾ |
ತಸ್ಯ ಕಾಯಗತಂ ಬ್ರಹ್ಮ ಸದ್ಯ ಏವ ವಿನಶ್ಯತಿ ॥12॥
ಯಾವ ಬ್ರಾಹ್ಮಣನು ಸಂತೋಷಕ್ಕಾಗಿ ಸೋಮಲತೆಯ ರಸವನ್ನು ಭಕ್ಷಿಸುತ್ತಾನೋ ಅವನ ದೇಹದಲ್ಲಿರುವ ಬ್ರಾಹ್ಮಣ್ಯವು ಸದ್ಯದಲ್ಲೇ ನಾಶವನ್ನು ಹೊಂದುತ್ತದೆ.
ಮೈಥುನಂ ಕುರುತೇ ಯಸ್ತು ಜಿಹ್ವಾಯಾಂ ಬ್ರಾಹ್ಮಣೋ ನೃಪ |
ತಸ್ಯ ಕಾಯಗತಂ ಬ್ರಹ್ಮ ಸದ್ಯ ಏವ ವಿನಶ್ಯತಿ ॥13॥
ಯಾವ ಬ್ರಾಹ್ಮಣನು ಕಾಮುಕನಾಗಿ ನಾಲಿಗೆಯಿಂದ ಮೈಥುನವನ್ನು ಮಾಡುತ್ತಾನೋ ಅವನ ದೇಹದಲ್ಲಿರುವ ಬ್ರಾಹ್ಮಣ್ಯವು ಕೂಡಲೇ ನಾಶವನ್ನು ಹೊಂದುತ್ತದೆ.
ವಿಪ್ರತ್ವಂ ದುರ್ಲಭಂ ಪ್ರಾಪ್ಯ ದುರ್ಮಾರ್ಗೈರೇವಮಾದಿಭಿಃ |
ವಿನಾಶಯಂತಿ ಯೇ ತತ್ತು ತಾನ್ ಶೋಚಾಮಿ ಯುಧಿಷ್ಠಿರ ॥14॥
ಯಾವ ಬ್ರಾಹ್ಮಣನು ದುರ್ಲಭವಾದ ಬ್ರಾಹ್ಮಣ್ಯವನ್ನು ಹೊಂದಿ ದುರಾಚಾರಿಯಾಗಿ, ದುಷ್ಟಮಾರ್ಗದಲ್ಲಿಯೇ ಸಂಚರಿಸುತ್ತಾ ಬ್ರಾಹ್ಮಣ್ಯವನ್ನು ನಾಶಪಡಿಸಿಕೊಳ್ಳುತ್ತಾನೋ ಅವನ ವಿಷಯದಲ್ಲಿ ನಾನು ಅನುಕಂಪ ಪಡುತ್ತೇನೆ.
ತಸ್ಮಾತ್ ಸರ್ವಪ್ರಯತ್ನೇನ ಮತ್ಪ್ರಿಯೋ ಯೋ ಯುಧಿಷ್ಠಿರ |
ಜಾತಿಭ್ರಂಶಕರಂ ಕರ್ಮ ನ ಕುರ್ಯಾದೀದೃಶಂ ದ್ವಿಜಃ ॥15॥
ಆದ್ದರಿಂದ ಸರ್ವಪ್ರಯತ್ನದಿಂದಲೂ ನನ್ನ ಪ್ರೀತಿಪಾತ್ರನಾದ ಬ್ರಾಹ್ಮಣನು ಜಾತಿಯನ್ನು ನಾಶಪಡಿಸುವಂತಹ ದುಷ್ಕರ್ಮಗಳನ್ನು ಎಂದಿಗೂ ಮಾಡಬಾರದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಬ್ರಾಹ್ಮಣಜನ್ಮನಿ ಶೂದ್ರತ್ವಪ್ರಾಪ್ತಿಕಥನಂ ನಾಮ ಸಪ್ತದಶೋತ್ತರಶತತಮೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ನೂರ ಹದಿನೆಂಟನೆಯ ಅಧ್ಯಾಯ
ಕೃಷ್ಣನು ಯುಧಿಷ್ಠಿರನನ್ನು ಕುರಿತು ಪಾಲಾಶವಿಧಿಯ ಪ್ರಕಾರವನ್ನು ಹೇಳಿದುದು. ತೀರ್ಥಯಾತ್ರೆಯನ್ನು ಮಾಡಲು ಸಾಮರ್ಥ್ಯವಿಲ್ಲದವರಿಗೆ ತೀರ್ಥಯಾತ್ರೆಗೆ ಪ್ರತಿನಿಧಿಯಾದ ಕರ್ಮಗಳನ್ನು ವರ್ಣಿಸಿದುದು. ಭಗವದ್ಭಕ್ತನ ಲಕ್ಷಣವನ್ನು ಹೇಳುವ ಮೂಲಕ ಅವನನ್ನು ಪ್ರಶಂಸಿದುದು. ಸ್ವಯಂ ತನ್ನ ಸರ್ವೋತ್ತಮತ್ವವನ್ನು ಹೇಳುವ ಮೂಲಕ ತಾನು ಹೇಳಿದ ಧರ್ಮಗಳನ್ನು ಕೇಳಿದವರಿಗೆ ಫಲವನ್ನು ನಿರೂಪಿಸಿದುದು. ಬಳಿಕ
ಯುಧಿಷ್ಠಿರಾದಿಗಳ ಆಮಂತ್ರಣದಿಂದ ದಾರುಕನಿಂದ ತರಲ್ಪಟ್ಟ ರಥವನ್ನು ಏರಿಕೊಂಡು ದ್ವಾರಕೆಯನ್ನು ಕುರಿತು ಹೊರಟಿದುದು.
ಯುಧಿಷ್ಠಿರಃ
ದೇಶಾಂತರಗತೇ ವಿಪ್ರೇ ಸಂಯುಕ್ತೇ ಕಾಲಧರ್ಮಣಾ |
ಶರೀರನಾಶೇ ಸಂಪ್ರಾಪ್ತೇ ಕಥಂ ಪ್ರೇತವಿಕಲ್ಪನಾ ॥1॥
ಯುಧಿಷ್ಠಿರ ಕೃಷ್ಣನೇ, ಪರದೇಶಕ್ಕೆ ಹೋಗಿರುವ ಬ್ರಾಹ್ಮಣನು ಕಾಲಧರ್ಮ ಸಂಯೋಗದಿಂದ ಅಲ್ಲಿಯೇ ಮೃತನಾದರೆ ಅವನಿಗೆ ಪ್ರೇತಸಂಸ್ಕಾರಗಳನ್ನು ಹೇಗೆ ಮಾಡಬೇಕು?
ಶ್ರೀಭಗವಾನ್
ಶ್ರೂಯತಾಮಾಹಿತಾಗ್ನೇಷು ತಥಾಭೂತಸ್ಯ ಸಂಸ್ಕ್ರಿಯಾ |
ಪಾಲಾಶವೃನ್ತೈಃ ಪ್ರತಿಮಾ ಕರ್ತವ್ಯಾ ಕಲ್ಪಚೋದಿತಾ ॥2॥
ಶ್ರೀಭಗವಾನ್ ಯುಧಿಷ್ಠಿರನೇ, ಅಗ್ನಿಹೋತ್ರಿಯಾದ ಬ್ರಾಹ್ಮಣನು ದೇಶಾಂತರದಲ್ಲಿ ಮರಣ ಹೊಂದಿದರೆ, ಅವನ ದೇಹವು ಅಲ್ಲಿಯೇ ನಷ್ಟವಾಗಿ ಹೋದರೆ ಪ್ರೇತ ಸಂಸ್ಕಾರ ಕಲ್ಪದ ಅನುಸಾರವಾಗಿ ಮುತ್ತುಗದ ಕಡ್ಡಿಗಳಿಂದ ಅವನ ಪ್ರತಿಕೃತಿಯನ್ನು ನಿರ್ಮಿಸಬೇಕು.

ತ್ರೀಣಿ ಷಷ್ಟಿಶತಾನ್ಯಾಹುರಸ್ಥೀನ್ಯಸ್ಯ ನರಾಧಿಪ |
ತೇಷಾಂ ವಿಕಲ್ಪನಾ ಕಾರ್ಯಾ ಯಥಾಶಾಸ್ತ್ರವಿನಿಶ್ಚಯಮ್ ॥3॥
ಮನುಷ್ಯನ ಶರೀರದಲ್ಲಿ ಮುನ್ನೂರ ಅರವತ್ತು ಮೂಳೆಗಳಿವೆ ಎಂದು ವಿದ್ವಾಂಸರು ಹೇಳುತ್ತಾರೆ. ಈ ಎಲ್ಲವನ್ನೂ ಶಾಸ್ತ್ರೋಕ್ತ ರೀತಿಯಲ್ಲಿ ಕಲ್ಪಿಸಿಕೊಂಡು ಮುತ್ತುಗದ ಕಡ್ಡಿಗಳಿಂದ ಕಲ್ಪಿತವಾದ ಬ್ರಾಹ್ಮಣನ ಪ್ರತಿಕೃತಿಯನ್ನು ದಹಿಸಬೇಕು.
ಅಶೀತ್ಯರ್ಧಂ ಶಿರಸಿ ಚ ಗ್ರೀವಾಯಾಂ ದಶ ಏವ ಚ |
ಬಾಹ್ವೋಶ್ಚಾಪಿ ಶತಂ ದದ್ಯಾತ್ ಅಂಗುಲೀಷು ಪುನರ್ದಶ ॥4॥
ತಲೆಯಲ್ಲಿ ನಲವತ್ತು ಅಸ್ಥಿಗಳನ್ನೂ, ಕುತ್ತಿಗೆಯಲ್ಲಿ ಹತ್ತು ಮೂಳೆಗಳನ್ನೂ, ಎರಡು ಬಾಹುಗಳಲ್ಲಿ ನೂರು, ನೂರು ಮೂಳೆಗಳನ್ನೂ, ಅಂಗುಲಿಗಳಲ್ಲಿ ಹತ್ತು ಮೂಳೆಗಳನ್ನೂ,
ಉರಸಿ ತ್ರಿಂಶತಂ ದದ್ಯಾಜ್ಜಠರೇ ಚಾಪಿ ವಿಂಶತಿಃ |
ವೃಷಣೇ ದ್ವಾದಶಾರ್ಧಂ ತು ಶಿಶ್ನೇ ಚಾಷ್ಟಾರ್ಧಮೇವ ಚ ॥5॥
ಎದೆಯಲ್ಲಿ ಮೂವತ್ತು ಮೂಳೆಗಳನ್ನೂ, ಜಠರದಲ್ಲಿ ಇಪ್ಪತ್ತು ಮೂಳೆಗಳನ್ನೂ, ವೃಷಣದಲ್ಲಿ ಹನ್ನೆರಡು ಮೂಳೆಗಳನ್ನೂ, ಶಿಶ್ನದಲ್ಲಿ ನಾಲ್ಕು ಮೂಳೆಗಳನ್ನೂ;
ದದ್ಯಾತ್ತು ಶತಮೂರ್ವೋಸ್ತು ಷಷ್ಟ್ಯರ್ಧಂ ಜಾನುಜಂಘಯೋಃ |
ದಶ ದದ್ಯಾಚ್ಚರಣಯೋರೇಷಾ ಪ್ರೇತಸ್ಯ ನಿಷ್ಕೃತಿಃ ॥6॥
ತೊಡೆಗಳಲ್ಲಿ ನೂರು ಮೂಳೆಗಳನ್ನೂ, ಜಾನುಜಂಘಗಳಲ್ಲಿ ಮೂವತ್ತು ಮೂವತ್ತು ಮೂಳೆಗಳನ್ನೂ, ಚರಣಗಳಲ್ಲಿ ಹತ್ತು-ಹತ್ತು ಮೂಳೆಗಳನ್ನು ಚಿಂತಿಸಿ, ಅದರ ಸ್ಥಾನಗಳಲ್ಲಿ ಮುತ್ತುಗದ ಕಡ್ಡಿಗಳನ್ನು ಇಟ್ಟು, ಗತಿಸಿದ ವ್ಯಕ್ತಿಯ ಸಂಸ್ಕಾರವನ್ನು ಮಾಡಬೇಕು.
ಯುಧಿಷ್ಠಿರಃ
ವಿಶೇಷತೀರ್ಥಂ ಸರ್ವೇಷಾಮಶಕ್ತಾನಾಮನುಗ್ರಹಾತ್ |
ಭಕ್ತಾನಾಂ ತಾರಣಾರ್ಥಂ ವೈ ವಕ್ತುಮರ್ಹಸಿ ಧರ್ಮತಃ ॥7॥
ಯುಧಿಷ್ಠಿರ ಶ್ರೀಕೃಷ್ಣನೇ, ತೀರ್ಥಯಾತ್ರೆಯನ್ನು ಮಾಡಲು ಅಶಕ್ತರಾದ ಭಕ್ತರನ್ನು ಉದ್ಧರಿಸುವ ಸಲುವಾಗಿ ಧರ್ಮಾನುಸಾರವಾಗಿ ವಿಶೇಷವಾದ ತೀರ್ಥಗಳನ್ನು ವಿವರಿಸಿ ಹೇಳು.
ಶ್ರೀಭಗವಾನ್
ಪ್ರವರಂ ಸರ್ವತೀರ್ಥಾನಾಂ ಸತ್ಯಂ ಗಾಯಂತಿ ಸಾಮಗಾಃ |
ಸತ್ಯಸ್ಯ ವಚನಂ ತೀರ್ಥಮಹಿಂಸಾ ತೀರ್ಥಮುಚ್ಯತೇ ॥8॥
ಶ್ರೀಭಗವಾನ್ ಸಮಸ್ತ ತೀರ್ಥಗಳಲ್ಲಿ ಸತ್ಯವೇ ಶ್ರೇಷ್ಠವಾದ ತೀರ್ಥವೆಂದು ಹೇಳುತ್ತಾರೆ. ಸಾಮವೇದಜ್ಞರ ಅಭಿಪ್ರಾಯವು ಹೀಗಿದೆ. ಸತ್ಯವಚನವೂ ತೀರ್ಥ, ಅಹಿಂಸೆಯೂ ತೀರ್ಥವೆನಿಸಿದೆ.
ತಪಸ್ತೀರ್ಥಂ ದಯಾ ತೀರ್ಥಂ ಶೀಲಂ ತೀರ್ಥಂ ಯುಧಿಷ್ಠಿರ |
(ಅಲ್ಪಸಂತೋಷಣಂ ತೀರ್ಥಂ ನಾರೀ ತೀರ್ಥಂ ಪತಿವ್ರತಾ ॥9॥
ಯುಧಿಷ್ಠಿರನೇ, ತಪಸ್ಸೂ ತೀರ್ಥ, ದಯೆಯೂ ತೀರ್ಥ, ಶೀಲವೂ ತೀರ್ಥ, ಅಲ್ಪಸಂತೋಷದಿಂದ ಬದುಕುವುದೂ ತೀರ್ಥ. ಪ್ರಾಮಾಣಿಕವಾಗಿ ಪತಿವ್ರತೆಯಾದ ಸ್ತ್ರೀಯನ್ನು ರಕ್ಷಿಸುವುದೂ ತೀರ್ಥ ಎನಿಸಿದೆ.
ಸಂತುಷ್ಟೋ ಬ್ರಾಹ್ಮಣಸ್ತೀರ್ಥಂ ಜ್ಞಾನಂ ವಾ ತೀರ್ಥಮುಚ್ಯತೇ |
ಮದ್ಭಕ್ತಃ ಸತತಂ ತೀರ್ಥಂ ಶಂಕರಸ್ಯ ವಿಶೇಷತಃ ॥10॥
ಸಂತುಷ್ಟನಾದ ಬ್ರಾಹ್ಮಣನು ತೀರ್ಥಸ್ವರೂಪನು. ಜ್ಞಾನವನ್ನು ತೀರ್ಥವೆನ್ನುತ್ತಾರೆ. ನನ್ನ ಭಕ್ತರೆಲ್ಲರೂ ತೀರ್ಥರೂಪರೇ. ಅದರಲ್ಲಿಯೂ ವಿಶೇಷವಾಗಿ ಶಂಕರನ ಭಕ್ತರು ತೀರ್ಥರಾಗಿದ್ದಾರೆ.
ವ್ಯಾಖ್ಯಾನ ವಿಶೇಷ ಶಂಕರ ಎಂದರೆ ಹಿಂದೆ ಲಕ್ಷಾಲಂಕಾರದಲ್ಲಿ ತಿಳಿಸಿದಂತೆ ಸಮಸ್ತ ಜೀವರ ಅಂತರ್ಯಾಮಿಯಾಗಿದ್ದು ಎಲ್ಲರಿಗೂ ಸಂತೋಷವನ್ನುಂಟು ಮಾಡುವ ಪರಬ್ರಹ್ಮ ಎಂದು ಅರ್ಥ.
ಯತಯಸ್ತೀರ್ಥಮಿತ್ಯೇವಂ ವಿದ್ವಾಂಸಸ್ತೀರ್ಥಮುಚ್ಯತೇ |
ಶರಣ್ಯಪುರುಷಸ್ತೀರ್ಥಮಭಯಂ ತೀರ್ಥಮುಚ್ಯತೇ ॥11॥
ಸಂನ್ಯಾಸಿಗಳು, ವಿದ್ವಾಂಸರು ತೀರ್ಥರೆನಿಸಿದ್ದಾರೆ. ಇತರರಿಗೆ ಆಶ್ರಯವನ್ನು ಕೊಡುವವರು ತೀರ್ಥರು. ಜೀವಕ್ಕೆ ಅಭಯದಾನವನ್ನು ಮಾಡುವವರು ತೀರ್ಥರೆನಿಸಿದ್ದಾರೆ.
ವಿದ್ಯಾವಿನೀತಕಸ್ತೀರ್ಥಂ ಧರ್ಮವಕ್ತಾ ವಿಶೇಷತಃ ॥12॥
ವಿದ್ಯೆಯನ್ನು ಪಡೆದು ವಿನೀತನಾಗಿ ಅದನ್ನು ಬೋಧಿಸುವವನು ತೀರ್ಥನೆನಿಸಿದ್ದಾನೆ. ಧರ್ಮವನ್ನು ಬೋಧಿಸುವವನೂ ತೀರ್ಥ ಎಂದೇ ಕರೆಯಲ್ಪಟ್ಟಿದ್ದಾನೆ.
ತ್ರೈಲೋಕ್ಯೇಽಸ್ಮಿನ್ ನಿರುದ್ವಿಗ್ನೋ ನ ಬಿಭೇಮಿ ಕುತಶ್ಚನ |
ನ ದಿವಾ ಯದಿ ವಾ ರಾತ್ರಾವುದ್ವೇಗಃ ಶೂದ್ರಲಂಘನಾತ್ ॥13॥
ಮೂರು ಲೋಕಗಳಲ್ಲಿಯೂ ನಾನು ನಿರುದ್ವಿಗ್ನನಾಗಿಯೇ ಇದ್ದೇನೆ. ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ ನನಗೆ ಯಾರಿಂದಲೂ ಭಯವಿಲ್ಲ. ಆದರೆ ಶೂದ್ರನು ಮರ್ಯಾದೆಯನ್ನು ಮೀರಿ ನಡೆದುಕೊಂಡಾಗ ಮಾತ್ರ ನಾನು ಉದ್ವಿಗ್ನನಾಗುತ್ತೇನೆ.
ನ ಭಯಂ ದೇವದೈತೇಭ್ಯೋ ರಕ್ಷೋಭ್ಯಶ್ಚೈವ ಮೇ ನೃಪ |
ಶೂದ್ರವಕ್ತತ್ರಚ್ಯುತಾದ್ ಬ್ರಾಹ್ಮಾದ್ಭಯಂ ತು ಮಮ ಸರ್ವದಾ ॥14॥
ಯುಧಿಷ್ಠಿರನೇ, ನನಗೆ ದೇವತೆಗಳಿಂದಾಗಲಿ, ರಾಕ್ಷಸರಿಂದಾಗಲಿ, ದೈತ್ಯರಿಂದಾಗಲಿ ಭಯ ಇರುವುದಿಲ್ಲ. ಆದರೆ ಶೂದ್ರರ ಬಾಯಿಂದ

ವೈದಿಕ ಮಂತ್ರಗಳ ಉಚ್ಚಾರಣೆಯನ್ನು ಕೇಳಿಸಿಕೊಂಡರೆ ಮಹಾಭಯವನ್ನು ಹೊಂದುತ್ತೇನೆ.
ತಸ್ಮಾತ್ ಸಪ್ರಣವಂ ಶೂದ್ರೋ ಮನ್ನಾಮಾಪಿ ನ ಕೀರ್ತಯೇತ್ |
ಪ್ರಣವಂ ಹಿ ಪರಂ ಲೋಕೇ ಬ್ರಹ್ಮ ಬ್ರಹ್ಮವಿದೋ ವಿದುಃ ॥15॥
ಆದ್ದರಿಂದ ಶೂದ್ರನು ನನ್ನ ನಾಮವನ್ನು ಪ್ರಣವಮಂತ್ರದ ಜೊತೆಗೆ ಉಚ್ಚರಿಸಬಾರದು. ವೇದಜ್ಞರಾದ ವಿದ್ವಾಂಸರು ಪ್ರಣವವನ್ನೇ ಶ್ರೇಷ್ಠವಾದ ವೇದಮಂತ್ರವೆಂದು ಕರೆದಿದ್ದಾರೆ.
ದ್ವಿಜಶುಶ್ರೂಷಣಂ ಧರ್ಮಃ ಶೂದ್ರಾಣಾಂ ಭಕ್ತಿತೋ ಮಯಿ |
ತೇನ ಗಚ್ಛಂತಿ ತೇ ಸ್ವರ್ಗಂ ಚಿಂತಯಂತೋ ಹಿ ಮಾಂ ಸದಾ ॥16॥
ಶೂದ್ರರಿಗೆ ನನ್ನಲ್ಲಿ ಭಕ್ತಿ ಇರುವುದಕ್ಕಿಂತಲೂ ಹೆಚ್ಚಾಗಿ ಬ್ರಾಹ್ಮಣರ ಸೇವೆಯೇ ಮುಖ್ಯಧರ್ಮವಾಗಿದೆ. ಇದರಿಂದಲೇ ಅವರು ಸ್ವರ್ಗಕ್ಕೆ ಹೋಗುತ್ತಾರೆ. ಬ್ರಾಹ್ಮಣರ ಅಂತರ್ಯಾಮಿಯಾದ ನನ್ನನ್ನು ಚಿಂತಿಸುವುದೇ ಅವರಿಗೆ ಸುಖಸಾಧನವಾಗಿದೆ.
ದ್ವಿಜಶುಶ್ರೂಷಯಾ ಶೂದ್ರಃ ಪರಂ ಶ್ರೇಯೋಽಧಿಗಚ್ಛತಿ |
ದ್ವಿಜಶುಶ್ರೂಷಣಾದನ್ಯನ್ನಾಸ್ತಿ ಶೂದ್ರಸ್ಯ ನಿಷ್ಕೃತಿಃ ॥17॥
ದ್ವಿಜರ ಸೇವೆಯಿಂದಲೇ ಶೂದ್ರನು ಶ್ರೇಯಸ್ಸನ್ನು ಹೊಂದುತ್ತಾನೆ, ಹೊರತಾಗಿ ಅವನ ಉದ್ಧಾರಕ್ಕೆ ಬೇರೆ ಇನ್ನು ಯಾವ ಮಾರ್ಗವೂ ಇರುವುದಿಲ್ಲ.
ರಾಗೋ ದ್ವೇಷಶ್ಚ ಮೋಹಶ್ಚ ಪಾರುಷ್ಯಂ ಚಾನೃಶಂಸತಾ |
ಶಾಠ್ಯಂ ಚ ದೀರ್ಘವೈರಿತ್ವಮತಿಮಾನಮನಾರ್ಜವಮ್ ॥18॥
ರಾಗ, ದ್ವೇಷ, ಮೋಹ, ಕಾಠಿಣ್ಯ, ಸುಳ್ಳು ಹೇಳುವಿಕೆ, ಶಾಠ್ಯ, ದೀರ್ಘ ವೈರತ್ವ, ಅತಿಯಾದ ಜಂಭ, ವಂಚಕತನ;
ಅನೃತಂ ಚಾಪವಾದಶ್ಚ ಪೈಶುನ್ಯಮತಿಲೋಭತಾ |
ಹಿಂಸಾ ಸ್ತೇಯೋ ಮೃಷಾವಾದೋ ವಂಚನಾ ದ್ವೇಷಲೋಭತಾ ॥19॥
ಸುಳ್ಳುಹೇಳುವಿಕೆ, ಅಪವಾದ, ಚಾಡಿ ಹೇಳುವ ಬುದ್ಧಿ, ಅತಿಲೋಭತ್ವ, ಹಿಂಸೆ, ಕಳ್ಳತನ, ಕೆಟ್ಟವಾದಗಳನ್ನು ಮಂಡಿಸುವುದು, ವಂಚನೆ, ದ್ವೇಷ, ಲೋಭ;
ಅಬುದ್ಧಿತಾ ಚ ನಾಸ್ತಿಕ್ಯಂ ಭಯಮಾಲಸ್ಯಮೇವ ಚ |
ಅಶೌಚಂ ಚಾಕೃತಜ್ಞತ್ವಂ ಡಂಭತಾ ಸ್ತಂಭ ಏವ ಚ ॥20॥
ದಡ್ಡತನ, ನಾಸ್ತಿಕ್ಯ, ಭಯ, ಆಲಸ್ಯ, ಅಶೌಚ, ಕೃತಘ್ನತೆ, ಜಂಭ, ಸ್ತಂಭ;
ನಿಕೃತಿಶ್ಚಾಪ್ಯವಿಜ್ಞಾನಂ ಜಾತಕೇ ಶೂದ್ರಮಾವಿಶೇತ್ ॥21॥
ಕೆಟ್ಟತನ ಮಾಡಿಯೂ ಅದನ್ನು ತಿಳಿಯದಿರುವಿಕೆ ಈ ಎಲ್ಲ ದೋಷಗಳು ಶೂದ್ರನಲ್ಲಿ ಆವಿಷ್ಟವಾಗಿರುತ್ತವೆ.
ದೃಷ್ಟ್ವಾ ಪಿತಾಮಹಃ ಶೂದ್ರಮಭಿಭೂತಂ ತು ತಾಮಸೈಃ |
ದ್ವಿಜಶುಶ್ರೂಷಣಂ ಧರ್ಮಂ ಶೂದ್ರಾಣಾಂ ತು ಪ್ರಯುಕ್ತವಾನ್ ॥22॥
ಪಿತಾಮಹನೆನಿಸಿದ ಚತುರ್ಮುಖ ಬ್ರಹ್ಮನು ಇಷ್ಟೆಲ್ಲಾ ತಾಮಸಗುಣಗಳು ಶೂದ್ರನಲ್ಲಿ ಇವೆಯೆಂದು ತಿಳಿದು, ಶೂದ್ರರಿಗೆ ಬ್ರಾಹ್ಮಣರ ಸೇವೆಯೇ ಧರ್ಮವೆಂದು ವಿಧಾನ ಮಾಡಿದ್ದಾನೆ.
ನಶ್ಯಂತಿ ತಾಮಸಾ ಭಾವಾಃ ಶೂದ್ರಸ್ಯ ದ್ವಿಜಭಕ್ತಿತಃ ॥23॥
ಬ್ರಾಹ್ಮಣರನ್ನು ಸೇವಿಸುವುದರಿಂದ ಶೂದ್ರರಲ್ಲಿರುವ ತಾಮಸಗುಣಗಳು ನಾಶ ಹೊಂದುತ್ತವೆ.
ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ |
ತದಹಂ ಭಕ್ತ್ಯುಪಹೃತಂ ಮೂರ್ಧ್ನಾ ಗೃಹ್ಣಾಮಿ ಶೂದ್ರತಃ ॥24॥
ಶೂದ್ರನಾದರೂ ಭಕ್ತಿಯಿಂದ ಕೂಡಿದವನಾಗಿ ನನಗೆ ಪತ್ರ, ಪುಷ್ಪ, ಫಲ, ನೀರು ಇವುಗಳನ್ನು ತಂದು ಸಮರ್ಪಿಸಿದರೆ ಅದನ್ನು ಶಿರಸಾ ಧಾರಣೆ ಮಾಡುತ್ತೇನೆ.
ಅಂತ್ಯಜೋ ವಾಽಪಿ ಯಃ ಕಶ್ಚಿತ್ ಸರ್ವಪಾಪಸಮನ್ವಿತಃ |
ಯದಿ ಮಾಂ ಸತತಂ ಧ್ಯಾಯೇತ್ ಸರ್ವಪಾಪೈಃ ಪ್ರಮುಚ್ಯತೇ ॥25॥
ಯಾವ ಅಂತ್ಯಜನಾದ ವ್ಯಕ್ತಿಯು ಸಮಸ್ತ ಪಾಪಗಳಿಂದ ಕೂಡಿಕೊಂಡಿದ್ದರೂ ನನ್ನನ್ನು ನಿರಂತರ ಧ್ಯಾನಿಸಿದ್ದಲ್ಲಿ ಅವನು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.
ವಿದ್ಯಾವಿನಯಸಂಪನ್ನಾ ಬ್ರಾಹ್ಮಣಾ ವೇದಪಾರಗಾಃ |
ಮಯಿ ಭಕ್ತಿಂ ನ ಕುರ್ವಂತಿ ಚಂಡಾಲಸದೃಶಾ ಹಿ ತೇ ॥26॥
ವಿದ್ಯಾವಿನಯ ಸಂಪನ್ನರಾಗಿದ್ದರೂ, ವೇದವೇದಾಂಗ ಪಾರಂಗತರಾಗಿದ್ದರೂ ಬ್ರಾಹ್ಮಣರು ನನ್ನಲ್ಲಿ ಭಕ್ತಿಯಿಲ್ಲದವರಾಗಿದ್ದರೆ ಚಂಡಾಲರಿಗೆ ಸದೃಶರಾಗಿದ್ದಾರೆ.
ವೃಥಾ ದತ್ತಂ ವೃಥಾ ಜಪ್ತಂ ವೃಥಾ ಚೇಷ್ಟಂ ವೃಥಾ ಹುತಮ್ |
ವೃಥಾಽಽತಿಥ್ಯಂ ಚ ತತ್ ತಸ್ಯ ಯೋ ನ ಭಕ್ತೋ ಮಮ ದ್ವಿಜಃ ॥27॥
ದ್ವಿಜನು ನನ್ನ ಭಕ್ತನಾಗಿರದಿದ್ದರೆ ಅವನು ಮಾಡುವ ದಾನ, ತಪಸ್ಸು, ಯಜ್ಞ, ಹೋಮ, ಅತಿಥಿ ಸತ್ಕಾರ ಇವೆಲ್ಲವೂ ವ್ಯರ್ಥವಾಗುತ್ತವೆ.

ಯತ್ ಕೃತಂ ಚ ಹುತಂ ಚಾಪಿ ಯದಿಷ್ಟಂ ದತ್ತಮೇವ ಚ |
ಅಭಕ್ತಿಮತ್ಕೃತಂ ಸರ್ವಂ ರಾಕ್ಷಸಾ ಏವ ಭುಂಜತೇ ॥28॥
ಮಾಡಿದ ಸತ್ಕರ್ಮಗಳು, ಹೋಮ, ಪೂಜೆ, ದಾನ, ಇವೆಲ್ಲವನ್ನು ಭಕ್ತಿಹೀನನಾಗಿ ಮಾಡಿದರೆ ಅವುಗಳ ಫಲವನ್ನು ರಾಕ್ಷಸರೇ

ಅನುಭವಿಸುತ್ತಾರೆ.
ಸ್ಥಾವರೇ ಜಂಗಮೇ ವಾಽಪಿ ಸರ್ವಭೂತೇಷು ಪಾಂಡವ |
ಸಮತ್ವೇನ ಯದಾ ಕುರ್ಯಾನ್ಮದ್ಭಕ್ತೋ ಮಿತ್ರಶತ್ರುಷು ॥29॥
ಮನುಷ್ಯನು ಸಮಸ್ತ ಸ್ಥಾವರ-ಜಂಗಮಾತ್ಮಕವಾದ ಎಲ್ಲ ಪ್ರಾಣಿಗಳನ್ನು, ಮಿತ್ರರನ್ನು, ಶತ್ರುಗಳನ್ನು ಸಮಾನವಾಗಿ ಯಾವಾಗ ಕಾಣುತ್ತಾನೋ ಆಗಲೇ ಅವನು ನನ್ನ ನಿಜವಾದ ಭಕ್ತನಾಗುತ್ತಾನೆ.
ಆನೃಶಂಸ್ಯಮಹಿಂಸಾ ಚ ದಮಃ ಸತ್ಯಂ ತಥಾಽಽರ್ಜವಮ್ |
ಅದ್ರೋಹಶ್ಚೈವ ಭೂತಾನಾಂ ಮದ್ವ್ರತಾನಾಂ ವ್ರತಂ ನೃಪ ॥30॥
ಕರುಣೆ, ಅಹಿಂಸೆ, ಸತ್ಯ, ಅದ್ರೋಹ, ಇಂದ್ರಿಯನಿಗ್ರಹ, ಆರ್ಜವ ಇವೆಲ್ಲವೂ ನನ್ನ ಭಕ್ತರು ಪರಿಪಾಲಿಸುವ ವ್ರತಗಳೆನಿಸಿವೆ.
ನಮ ಇತ್ಯೇವ ಯೋ ಬ್ರೂಯಾನ್ಮದ್ಭಕ್ತಂ ಶ್ರದ್ಧಯಾಽನ್ವಿತಃ |
ತಸ್ಯಾಕ್ಷಯೋ ಭವೇಲ್ಲೋಕಃ ಶ್ವಪಾಕಸ್ಯಾಪಿ ಪಾಂಡವ ॥31॥
ಯಾವ ಮನುಷ್ಯನು ನನ್ನ ಭಕ್ತನಿಗೆ ಶ್ರದ್ಧೆಯಿಂದ ನಮಃ ಎಂದು ಹೇಳುತ್ತಾನೋ ಹಾಗೆ ಹೇಳಿದವನು ಚಂಡಾಲನೇ ಆಗಿದ್ದರೂ ಅವನಿಗೆ ಅಕ್ಷಯವಾದ ಪುಣ್ಯ ಲೋಕಗಳು ಲಭಿಸುತ್ತದೆ.
ಕಿಂ ಪುನರ್ಯೇ ಯಜಂತೇ ಮಾಂ ಯಾಜಕಾ ವಿಧಿಪೂರ್ವಕಮ್ |
ಮದ್ಭಕ್ತಾ ಮದ್ಗತಪ್ರಾಣಾಃ ಕಥಯಂತಶ್ಚ ಮಾಂ ಸದಾ ॥32॥
ಹೀಗಿರುವಾಗ ನನ್ನ ಭಕ್ತನೇ ಆಗಿರುವವನಿಗೆ, ನನ್ನಲ್ಲೇ ಪ್ರಾಣವನ್ನು ಇಟ್ಟುಕೊಂಡಿರುವವನಿಗೆ, ನನ್ನ ನಾಮ-ಗುಣಗಳ ಸಂಕೀರ್ತನೆ ಮಾಡುವವನಿಗೆ, ಲಕ್ಷ್ಮೀಸಹಿತನಾಗಿ ಇರುವ ನನ್ನನ್ನೇ ಪೂಜಿಸುವವನಿಗೆ ಮಹಾಪುಣ್ಯಪ್ರದವಾದ ಲೋಕಗಳು ಸಿದ್ಧಿಸುತ್ತವೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.
ಬಹುವರ್ಷಸಹಸ್ರಾಣಿ ತಪಸ್ತಪ್ಯತಿ ಯೋ ನರಃ |
ನಾಸೌ ಪದಮವಾಪ್ನೋತಿ ಮದ್ಭಕ್ತೈರ್ಯದವಾಪ್ಯತೇ ॥33॥
ಅನೇಕ ಸಾವಿರ ವರ್ಷಗಳು ತಪಸ್ಸು ಮಾಡಿದವನೂ ಕೂಡ ನನ್ನ ಭಕ್ತರು ಹೊಂದುವ ಪುಣ್ಯಲೋಕಗಳನ್ನು ಹೊಂದನು.
ಮಾಮೇವ ತಸ್ಮಾದ್ ರಾಜೇಂದ್ರ ಧ್ಯಾಹಿ ನಿತ್ಯಮತಂದ್ರಿತಃ |
ಅವಾಪ್ಸ್ಯಸಿ ತತಃ ಸಿದ್ಧಿಂ ದ್ರಕ್ಷ್ಯಸೇ ಚ ಪರಂ ಪದಮ್ ॥34॥
ಯುಧಿಷ್ಠಿರನೇ, ಆದ್ದರಿಂದ ಜಾಗ್ರತೆಯಿಂದ ನನ್ನನ್ನೇ ಧ್ಯಾನ ಮಾಡು. ಸಿದ್ಧಿಯನ್ನು ಹೊಂದುತ್ತಿ. ನಿನಗೆ ನನ್ನ ಸಾಕ್ಷಾತ್ಕಾರವು ಆಗುತ್ತದೆ.
ಅಪಾರ್ಥಕಂ ಪ್ರಭಾಷಂತೇ ಶೂದ್ರಾ ಭಾಗವತಾ ಇತಿ ॥35॥
ನ ಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾಃ ಸ್ಮೃತಾಃ |
ಸರ್ವವರ್ಣೇಷು ತೇ ಶೂದ್ರಾ ಯೇ ಹ್ಯಭಕ್ತಾ ಜನಾರ್ದನೇ ॥36॥
ಕೆಲವರು ಶೂದ್ರರು ಭಾಗವತರೆಂದು ತಪ್ಪಾಗಿ ಹೇಳುತ್ತಾರೆ.. ಶೂದ್ರರು ಭಗವದ್ಭಕ್ತರಲ್ಲ, ವಿಪ್ರರೇ ಭಗವದ್ಭಕ್ತರು. ಸಮಸ್ತ ವರ್ಣಗಳಲ್ಲಿಯೂ ಯಾರು ಜನಾರ್ದನನಲ್ಲಿ ಭಕ್ತಿಹೀನರಾಗಿದ್ದರೋ ಅವರೇ ಶೂದ್ರರು.
ದ್ವಾದಶಾಕ್ಷರತತ್ತ್ವಜ್ಞಃ ಚತುರ್ವ್ಯೂಹವಿಭಾಗವಿತ್ |
ಅಚ್ಛಿದ್ರಪಂಚಕಾಲಜ್ಞಃ ಸ ವೈ ಭಾಗವತಃ ಸ್ಮೃತಃ ॥37॥
ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಚೆನ್ನಾಗಿ ಅರಿತಿರುವವನು, ಚತುರ್ವ್ಯೂಹಗಳನ್ನು ವಿಭಾಗ ಮಾಡಲು ತಿಳಿದಿರುವವನು, ದೋಷವಿಲ್ಲದೆ ಇರುವಂತೆ ಪಂಚಕಾಲಗಳನ್ನು ಅರಿಯಬಲ್ಲವನು ಭಾಗವತ ಎಂದು ಕರೆಸಿಕೊಳ್ಳುತ್ತಾನೆ.
ವ್ಯಾಖ್ಯಾನ ವಿಶೇಷ `ಚತುರ್ವ್ಯೂಹವಿಭಾಗವಿತ್' ಎನ್ನುವುದು ಲಕ್ಷಾಲಂಕಾರ ಪಾಠ. ಚತುರ್ವ್ಯೂಹ ಎಂದರೆ ಕ್ರುದ್ದೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ ಎನ್ನುವ ಭಗವಂತನ ರೂಪಗಳು. ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎನ್ನುವ ರೂಪಗಳು. ಕೇಶವಾದಿ ಚತುರ್ವಿಂಶತಿ ರೂಪಗಳು. ಮತ್ಸ್ಯಾದಿ ದಶಾವತಾರಗಳು- ಹೀಗೆ ಗುಂಪು ಗುಂಪಾದ ಭಗವದ್ರೂಪಗಳ ನಾಲ್ಕು ವ್ಯೂಹಗಳನ್ನು ಚತುರ್ವ್ಯೂಹ ಎಂದು ಕರೆದಿದ್ದಾರೆ. ಈ ಚತುರ್ವ್ಯೂಹವನ್ನು ಚೆನ್ನಾಗಿ ಅರಿತವನು ಭಾಗವತ ಎಂದು ಕರೆಸಿಕೊಳ್ಳುತ್ತಾನೆ.
ಋಗ್ವೇದೇನೈವ ಹೋತಾ ಚ ಯಜುಷಾಽಧ್ವರ್ಯುರೇವ ಚ |
ಸಾಮವೇದೇನ ಚೋದ್ಗಾತಾ ಪುಣ್ಯೇನಾಭಿಷ್ಟುವಂತಿ ಮಾಮ್ ॥38॥
ಅಥರ್ವಶಿರಸಾ ಚೈವ ನಿತ್ಯಮಾಥರ್ವಣಾ ದ್ವಿಜಾಃ |
ಸ್ತುವಂತಿ ಸತತಂ ಯೇ ಮಾಂ ತೇ ವೈ ಭಾಗವತಾಃ ಸ್ಮೃತಾಃ ॥39॥
ಯಾರು ಯಜ್ಞದಲ್ಲಿ ಹೋತೃಗಳಾಗಿ ಋಗ್ವೇದದ ಮೂಲಕ ನನ್ನನ್ನು ಸ್ತುತಿಸುತ್ತಾರೋ, ಅಧ್ವರ್ಯುಗಳಾಗಿ ಯಜುರ್ವೇದದ ಮೂಲಕ ಸ್ತೋತ್ರ ಮಾಡುತ್ತಾರೋ, ಉದ್ಗಾತೃಗಳಾಗಿ ಸಾಮವೇದದ ಮೂಲಕ ನನ್ನನ್ನು ಸ್ತುತಿಸುತ್ತಾರೋ, ಅಥರ್ವ ಶಿರಸ್ಸಿನ ಮೂಲಕ ಅಥರ್ವ ಶಾಖೆಯ ಬ್ರಾಹ್ಮಣರು ಸ್ತೋತ್ರ ಮಾಡುತ್ತಾರೋ ಅವರೆಲ್ಲರೂ ಭಾಗವತರೆಂದೇ ಕರೆಯಲ್ಪಡುತ್ತಾರೆ.
ವೇದಾಧೀನಾಃ ಸದಾ ಯಜ್ಞಾ ಯಜ್ಞಾಧೀನಾಸ್ತು ದೇವತಾಃ |
ದೇವತಾ ಬ್ರಾಹ್ಮಣಾಧೀನಾಸ್ತಸ್ಮಾದ್ ವಿಪ್ರಾಸ್ತು ದೇವತಾಃ ॥40॥
ಯಜ್ಞಗಳೆಲ್ಲವೂ ವೇದದ ಅಧೀನವಾದವು. ದೇವತೆಗಳು ಯಜ್ಞಗಳಿಗೆ ಅಧೀನರು. ಯಜ್ಞವನ್ನು ನಡೆಸುವ ಬ್ರಾಹ್ಮಣರಿಗೆ ದೇವತೆಗಳು ಅಧೀನರು. ಆದ್ದರಿಂದ ಬ್ರಾಹ್ಮಣರೇ ದೇವತೆಗಳಾಗಿದ್ದಾರೆ.
ಅನಾಶ್ರಿತ್ಯೋಚ್ಛ್ರಯಂ ನಾಸ್ತಿ ಮುಖ್ಯಮಾಶ್ರಯಮಾಶ್ರಯೇತ್ ॥41॥

ಯಾರನ್ನೂ ಆಶ್ರಯಿಸದಿದ್ದರೆ ಉನ್ನತ ಸ್ಥಿತಿಯು ಬರುವುದಿಲ್ಲ. ಆದ್ದರಿಂದ ಪ್ರಧಾನನೊಬ್ಬನನ್ನು ಆಶ್ರಯನನ್ನಾಗಿ ಪಡೆದುಕೊಳ್ಳಬೇಕು.
ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ |
ಬ್ರಹ್ಮಾ ಮಾಮಾಶ್ರಿತೋ ರಾಜನ್ ನಾಹಂ ಕಂಚಿದುಪಾಶ್ರಿತಃ ॥42॥
ದೇವತೆಗಳೆಲ್ಲರೂ ರುದ್ರನನ್ನು ಆಶ್ರಯಿಸಿದ್ದಾರೆ. ರುದ್ರನು ಬ್ರಹ್ಮನನ್ನು ಆಶ್ರಯಿಸಿದ್ದಾನೆ. ಚತುರ್ಮುಖ ಬ್ರಹ್ಮನು ನನ್ನನ್ನು ಆಶ್ರಯಿಸಿದ್ದಾನೆ. ನಾನಾದರೂ ಯಾರನ್ನೂ ಆಶ್ರಯಿಸಿರುವುದಿಲ್ಲ.
ಮಮಾಶ್ರಯೋ ನ ಕಶ್ಚಿತ್ತು ಸರ್ವೇಷಾಮಾಶ್ರಯೋ ಹ್ಯಹಮ್ ॥43॥
ನನಗೆ ಆಶ್ರಯವನ್ನು ನೀಡುವವರು ಯಾರೂ ಇಲ್ಲ. ಆದರೆ ಎಲ್ಲರಿಗೂ ನಾನೇ ಆಶ್ರಯದಾತೃವಾಗಿದ್ದೇನೆ.
ವ್ಯಾಖ್ಯಾನ ವಿಶೇಷ ಸರ್ವೋತ್ತಮನಾಗಿರುವ, ನನಗಿಂತ ಅತಿರಿಕ್ತರಾದ ಜೀವರು ಜಗತ್ತಿನಲ್ಲಿ ಯಾರೂ ಇರುವುದಿಲ್ಲ. ಆದ್ದರಿಂದ ನನ್ನನ್ನು ಆಶ್ರಯಿಸದೆ ಯಾರಿಗೂ ಉನ್ನತಿಯ ಸ್ಥಿತಿಯು ಲಭಿಸುವುದಿಲ್ಲ. ಆದ್ದರಿಂದ ಇನ್ನೊಬ್ಬರ ಅಧೀನನಾಗಿರುವ ವ್ಯಕ್ತಿಯು ಮತ್ತೊಬ್ಬರಿಗೆ ಉಚ್ಚ ಸ್ಥಾನವನ್ನು ಕೊಡಲು ಸಾಧ್ಯವಿಲ್ಲವಾದ್ದರಿಂದ ಮುಖ್ಯನಾದ ನನ್ನನ್ನೇ ಆಶ್ರಯಿಸಬೇಕು. ಮುಖ್ಯನಾದ ಆಶ್ರಯನು ನಾನೇ ಆಗಿದ್ದೇನೆ. ಬ್ರಹ್ಮಾದಿ ದೇವತೆಗಳು, ಏಕಾದಶ ರುದ್ರರು, ದ್ವಾದಶ ಆದಿತ್ಯರು, ನಲವತ್ತೊಂಬತ್ತು ಮಂದಿ ಮರುದ್ಗಣಗಳು, ಎಲ್ಲರೂ ಜ್ಞಾನ, ಬಲ, ವೀರ್ಯ, ಶೌರ್ಯಾದಿ ಸರ್ವಗುಣಗಳಿಂದಲೂ ವೃದ್ಧಿಯನ್ನು ಹೊಂದಿರುವ, ಗುಣಪರಿಪೂರ್ಣನಾದ ನನ್ನನ್ನೇ ಆಶ್ರಯಿಸಿದ್ದಾರೆ. ನನ್ನನ್ನು ನೇರವಾಗಿ ಆಶ್ರಯಿಸಲಾರದೆ ಪರಂಪರೆಯಿಂದ ಆಶ್ರಯಿಸಿದ್ದಾರೆ. ದೇವತೆಗಳಿಗೆ ರುದ್ರನು ಹೇಗೆ ಆಶ್ರಯನೋ, ರುದ್ರನಿಗೆ ಚತುರ್ಮುಖ ಬ್ರಹ್ಮನು ಹೇಗೆ ಆಶ್ರಯನೋ, ಹಾಗೆಯೇ ನನಗೆ ಯಾರೂ ಆಶ್ರಯವಾಗಿ ಇರುವುದಿಲ್ಲ. ಎಲ್ಲರಿಗೂ ನಾನೇ ಆಶ್ರಯದಾತನಾಗಿದ್ದೇನೆ. `ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ', `ತದಂತರೇಣ ಸರ್ವಾ ಅನ್ಯಾ ದೇವತಾ' ಮೊದಲಾದ ಶ್ರುತಿ ಪ್ರಸಿದ್ಧಿಯನ್ನು ಕೃಷ್ಣನು `ಸರ್ವೇಷಾಂ ಆಶ್ರಯೋ ಹ್ಯಹಮ್' ಎಂಬಲ್ಲಿ ಈ ಶಬ್ದದಿಂದ ಸೂಚಿಸಿದ್ದಾನೆ. `ದೇವಾಸುರಾಣಾಂ ಮಘವಾನ್ ಪ್ರಧಾನೋ ದಕ್ಷಾದಯೋ ಬ್ರಹ್ಮಸುತಾಶ್ಚ ತೇಷಾಮ್ | ಭವಃ ಪರಃ ಸೋಥ ವಿರಿಂಚವೀರ್ಯಃ ಸ ಮತ್ಪರೋಹಂ ದ್ವಿಜದೇವದೇವಃ | ಮತ್ತೋಪ್ಯನಂತಾತ್ಪರತಃ ಪರಸ್ಮಾತ್ ಸ್ವರ್ಗಾಪವರ್ಗಾಧಿಪತೇಃ ನ ಕಿಂಚಿತ್ ॥' ಎಂಬ ಭಾಗವತ ಶ್ಲೋಕವನ್ನು ಇಲ್ಲಿ ಸೂಚಿಸಿದ್ದಾರೆ.
ಏವಮೇತನ್ಮಯಾ ಪ್ರೋಕ್ತಂ ರಹಸ್ಯಮಿದಮುತ್ತಮಮ್ |
ಧರ್ಮಪ್ರಿಯಸ್ಯ ತೇ ರಾಜನ್ ನಿತ್ಯಮೇವಂ ಸಮಾಚರ ॥44॥
ಈ ರೀತಿಯಾಗಿ ರಹಸ್ಯವಾದ ಉತ್ತಮವಾದ ಪ್ರಮೇಯವನ್ನು ಇಲ್ಲಿ ನಾನು ನಿನಗೆ ತಿಳಿಸಿದ್ದೇನೆ. ಹಿಂದಿನ ಪರ್ವಗಳಲ್ಲಿ ಲೋಕವಿಡಂಬನೆಗೋಸ್ಕರ ಕೆಲವೊಂದು ಕಡೆ ಭಗವಂತನ ಸರ್ವೋತ್ತಮತ್ವಕ್ಕೆ ವಿರುದ್ಧವಾಗುವಂತೆ ರುದ್ರದೇವರಿಗೆ ಆಧಿಕ್ಯವನ್ನು ಹೇಳಿದ್ದೇನೆ. ಕೃಷ್ಣನು ಕೈಲಾಸಯಾತ್ರೆಯನ್ನು ಮಾಡಿದ ಎಂಬ ವಿಡಂಬನೆಗಳ ಮಾತುಗಳನ್ನು ಆಡಿದ್ದೇನೆ. ಆದರೆ ಧರ್ಮಪ್ರಿಯನಾದ ನಿನಗೆ ಇಲ್ಲಿ ಏನು ಹೇಳಿದ್ದೇನೋ ಇದನ್ನೇ ನಿಜವಾದ ರಹಸ್ಯವೆಂದು ತಿಳಿದು ನಾನು ಹೇಳಿದಂತೆ ಆಚರಿಸು.
ಇದಂ ಪವಿತ್ರಮಾಖ್ಯಾನಂ ಪುಣ್ಯಂ ವೇದೈಶ್ಚ ಸಮ್ಮಿತಮ್ |
ಯಃ ಪಠೇನ್ಮಾಮಕಂ ಧರ್ಮಮಹನ್ಯಹನಿ ಪಾಂಡವ ॥45॥
ಇದು ಪವಿತ್ರವಾದ ಆಖ್ಯಾನವಾಗಿದೆ. ವೇದಕ್ಕೆ ಸಮಾನವಾಗಿದೆ. ನನಗೆ ಸಂಬಂಧಿಸಿದ ವೈಷ್ಣವಧರ್ಮವನ್ನು ಅನುದಿನವೂ ಯಾವನು ಪಠಿಸುತ್ತಾನೋ ಅವನ ಧರ್ಮವು ವರ್ಧಿಸುತ್ತದೆ.
ಧರ್ಮೋ ವಿವರ್ಧತೇ ತಸ್ಯ ಬುದ್ಧಿಶ್ಚಾಪಿ ಪ್ರಸೀದತಿ |
ಪಾಪಕ್ಷಯಮುಪೇತ್ಯೈವಂ ಕಲ್ಯಾಣಂ ಚ ವಿವರ್ಧತೇ ॥46॥
ಧರ್ಮದ ಅಭಿವೃದ್ಧಿಯ ಜೊತೆಗೆ ಬುದ್ಧಿಯೂ ಪ್ರಸನ್ನವಾಗುತ್ತದೆ. ಪಾಪಗಳೆಲ್ಲವೂ ನಶಿಸುತ್ತವೆ. ಕಲ್ಯಾಣವೂ ವರ್ಧಿಸುತ್ತದೆ.
ಏತತ್ಪುಣ್ಯಂ ಪವಿತ್ರಂ ಚ ಪಾಪನಾಶನಮುತ್ತಮಮ್ |
ಶ್ರೋತವ್ಯಂ ಶ್ರದ್ಧಯಾ ಯುಕ್ತೈಃ ಶ್ರೋತ್ರಿಯೈಶ್ಚ ವಿಶೇಷತಃ ॥47॥
ಪುಣ್ಯವೂ, ಪವಿತ್ರವೂ, ಪಾಪನಾಶಕವೂ, ಉತ್ಕೃಷ್ಟವೂ ಆದ ಈ ವಿಷ್ಣುಧರ್ಮವನ್ನು ಎಲ್ಲರೂ ಕೇಳಬೇಕು. ಅದರಲ್ಲಿಯೂ ಶ್ರದ್ಧಾಯುಕ್ತರಾದ ಶ್ರೋತ್ರಿಯರು ಕೇಳಲೇಬೇಕು.
ಶ್ರಾವಯೇದ್ ಯಸಿತ್ವದಂ ಭಕ್ತ್ಯಾ ಪ್ರಯತೋಽಥ ಶೃಣೋತಿ ವಾ |
ಸ ಗಚ್ಛೇನ್ಮಮ ಸಾಯುಜ್ಯಂ ನಾತ್ರ ಕಾರ್ಯಾ ವಿಚಾರಣಾ ॥48॥
ಯಾವ ಮನುಷ್ಯನು ಭಕ್ತಿಪೂರ್ವಕವಾಗಿ ಮತ್ತೊಬ್ಬರಿಗೆ ಹೇಳುತ್ತಾನೋ, ಪವಿತ್ರ ಚಿತ್ತನಾಗಿ ಮತ್ತೊಬ್ಬರಿಂದ ಕೇಳುತ್ತಾನೋ ಅವನು ನನ್ನ ಸಾಯುಜ್ಯವನ್ನೇ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಯಶ್ಚೇದಂ ಶ್ರಾವಯೇಚ್ಛ್ರಾದ್ಧೇ ಮದ್ಭಕ್ತೋ ಮತ್ಪರಾಯಣಃ |
ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಮ್ ॥49॥
ಯಾವ ಬ್ರಾಹ್ಮಣನು ಈ ಆಖ್ಯಾನವನ್ನು ಶ್ರಾದ್ಧಕಾಲಗಳಲ್ಲಿ ನನ್ನಲ್ಲೇ ಭಕ್ತಿಯುಳ್ಳವನಾಗಿ ಶ್ರವಣ ಮಾಡಿಸುತ್ತಾನೋ ಅವನ ಪಿತೃಗಳು ಪ್ರಳಯ ಕಾಲದವರೆಗೂ ತೃಪ್ತರಾಗಿರುತ್ತಾರೆ.
ವೈಶಂಪಾಯನಃ
ಶ್ರುತ್ವಾ ಭಾಗವತಾನ್ ಧರ್ಮಾನ್ ಸಾಕ್ಷಾದ್ ವಿಷ್ಣೋರ್ಜಗದ್ಗುರೋಃ |
ಪ್ರಹೃಷ್ಟಮನಸೋ ಭೂತ್ವಾ ಚಿಂತಯಂತೋಽದ್ಭುತಾಃ ಕಥಾಃ ॥50॥
ಋಷಯಃ ಪಾಂಡವಾಶ್ಚೈವ ಪ್ರಣೇಮುಸ್ತಂ ಜನಾರ್ದನಮ್ ॥51॥
ವೈಶಂಪಾಯನ ಜನಮೇಜಯನೇ, ಸಾಕ್ಷಾತ್ ವಿಷ್ಣುವೇ ಆದ ಜಗದ್ಗುರುವಾದ ಶ್ರೀಕೃಷ್ಣನಿಂದ ಭಾಗವತ ಧರ್ಮಗಳನ್ನು ಕೇಳಿದ

ಋಷಿಗಳು, ಪಾಂಡವರು ಪ್ರಹೃಷ್ಟವಾದ ಮನಸ್ಸಿನಿಂದ ಕೂಡಿದವರಾಗಿ ಅದ್ಭುತವಾದ ಕಥಾ ಪ್ರಸಂಗಗಳನ್ನು ಪುನಃ ಪುನಃ ಸ್ಮರಿಸುತ್ತಾ ಜನಾರ್ದನನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದರು.
ಪೂಜಯಾಮಾಸ ಗೋವಿಂದಂ ಧರ್ಮಪುತ್ರಃ ಪುನಃ ಪುನಃ ॥52॥
ಧರ್ಮಪುತ್ರನಾದ ಯುಧಿಷ್ಠಿರನು ಪುನಃ ಪುನಃ ಗೋವಿಂದನನ್ನು ಪೂಜಿಸಿದನು.
ದೇವಾ ಬ್ರಹ್ಮರ್ಷಯಃ ಸಿದ್ಧಾ ಗಂಧರ್ವಾಪ್ಸರಸಸ್ತಥಾ |
ಭೂತಾ ಯಕ್ಷಾ ಗ್ರಹಾಶ್ಚೈವ ಗುಹ್ಯಕಾ ಭುಜಗಾಸ್ತಥಾ ॥53॥
ವಾಲಖಿಲ್ಯಾ ಮಹಾತ್ಮಾನೋ ಯೋಗಿನಸ್ತತ್ತ್ವದರ್ಶಿನಃ |
ತಥಾ ಭಾಗವತಾಶ್ಚಾಪಿ ಪಂಚಕಾಲಮುಪಾಸಕಾಃ ॥54॥
ಕೌತೂಹಲಸಮಾಯುಕ್ತಾ ಭಗವದ್ಭಕ್ತಿಮಾಗತಾಃ ॥55॥
ದೇವತೆಗಳು, ಬ್ರಹ್ಮರ್ಷಿಗಳು, ಸಿದ್ಧರು, ಗಂಧರ್ವರು, ಅಪ್ಸರೆಯರು, ಭೂತಗಳು, ಗ್ರಹಗಳು, ಯಕ್ಷರು, ಮಹಾತ್ಮರಾದ ಋಷಿಗಳು, ಗುಹ್ಯಕರು, ಸರ್ಪಗಳು, ಮಹಾತ್ಮರಾದ ವಾಲಖಿಲ್ಯರು, ತತ್ತ್ವದರ್ಶಿಗಳಾದ ಯೋಗಿಗಳು, ಐದು ಕಾಲಗಳಲ್ಲಿ ಉಪಾಸನೆ ಮಾಡುವ ಭಾಗವತರು, ಇವರೆಲ್ಲರೂ ಕುತೂಹಲಾವಿಷ್ಟರಾಗಿ ಅಲ್ಲಿಗೆ ಆಗಮಿಸಿದರು.
ಶ್ರುತ್ವಾ ತು ಪರಮಂ ಪುಣ್ಯಂ ವೈಷ್ಣವಂ ಧರ್ಮಶಾಸನಮ್ |
ವಿಮುಕ್ತಪಾಪಾಃ ಪೂತಾಸ್ತೇ ಸಂವೃತ್ತಾಸ್ತತ್ಕ್ಷಣೇನ ತು ॥56॥
ಅವರೆಲ್ಲರೂ ಶ್ರೀಕೃಷ್ಣನೇ ಸಾಕ್ಷಾತ್ತಾಗಿ ಹೇಳಿದ ಪರಮಪುಣ್ಯಪ್ರದವಾದ, ವೈಷ್ಣವ ಧರ್ಮವನ್ನು ಭಗವದ್ಭಕ್ತಿಯಿಂದ ಕೂಡಿದ, ಧರ್ಮಶಾಸನರೂಪವಾಗಿರುವ ಧರ್ಮಗಳನ್ನು ಕೇಳಿ ಆ ಕ್ಷಣದಲ್ಲಿಯೇ ಪಾಪಮುಕ್ತರಾಗಿ ಪವಿತ್ರಾತ್ಮರಾದರು.
ಪ್ರಣಮ್ಯ ಶಿರಸಾ ವಿಷ್ಣುಂ ಪ್ರತಿನಂದ್ಯ ಚ ತಾಃ ಕಥಾಃ |
ದ್ರಷ್ಟಾರೋ ದ್ವಾರಕಾಯಾಂ ವೈ ವಯಂ ಸರ್ವೇ ಜಗದ್ಗುರುಮ್ ॥57॥
ಇತಿ ಪ್ರಹೃಷ್ಟಮನಸೋ ಯಯುರ್ದೇವಗಣೈಃ ಸಹ |
ಸರ್ವೇ ಋಷಿಗಣಾ ರಾಜನ್ ಯಯುಃ ಸ್ವಂ ಸ್ವಂ ನಿವೇಶನಮ್ ॥58॥
ಅವರೆಲ್ಲರೂ ಕೃಷ್ಣನಿಗೆ ತಲೆಬಾಗಿ ನಮಸ್ಕರಿಸಿ, ಅವನು ಹೇಳಿದ ವೈಷ್ಣವಧರ್ಮವನ್ನು ಬಹಳವಾಗಿ ಪ್ರಶಂಸಿಸಿದರು. ನಾವು ಮುಂದೆ ಜಗದ್ಗುರುವಾದ ಶ್ರೀಕೃಷ್ಣನನ್ನು ದ್ವಾರಕೆಯಲ್ಲಿ ಸಂದರ್ಶಿಸೋಣ ಎಂದು ಹೇಳುತ್ತಾ ಮಹರ್ಷಿಗಳು ಪ್ರಸನ್ನಚಿತ್ತರಾಗಿ ದೇವತೆಗಳ ಜೊತೆಗೆ ತಮ್ಮ ತಮ್ಮ ವಾಸಸ್ಥಾನಕ್ಕೆ ತೆರಳಿದರು.
ಗತೇಷು ತೇಷು ಸರ್ವೇಷು ಕೇಶವಃ ಕೇಶಿಹಾ ತದಾ |
ಸಸ್ಮಾರ ದಾರುಕಂ ರಾಜನ್ ಸ ಚ ಸಾತ್ಯಕಿನಾ ಸಹ ॥59॥
ಅವರೆಲ್ಲರೂ ಹೊರಟ ಬಳಿಕ ಕೇಶಿಹಂತಕನಾದ ಶ್ರೀಹರಿಯು ಸಾರಥಿಯಾದ ದಾರುಕನನ್ನು ಸ್ಮರಿಸಿಕೊಂಡನು. ದಾರುಕನು ಸಾತ್ಯಕಿಯ ಜೊತೆಗೆ ಕೃಷ್ಣನ ಬಳಿಗೆ ಬಂದನು.
ಸಮೀಪಸ್ಥೋಽಭವತ್ತೂತೋ ಯಾಹಿ ದೇವೇತಿ ಚಾಬ್ರವೀತ್ ॥60॥
ಹತ್ತಿರಕ್ಕೆ ಆಗಮಿಸಿದ ದಾರುಕನು ದೇವನೇ ಹೋಗೋಣ ಎಂದು ಹೇಳಿದನು.
ತತೋ ವಿಷಣ್ಣವದನಾಃ ಪಾಂಡವಾಃ ಪುರುಷೋತ್ತಮಮ್ |
ಅಂಜಲಿಂ ಮೂರ್ಧ್ನಿ ಸಂಧಾಯ ನೇತ್ರೈರಶ್ರುಪರಿಪ್ಲುತೈಃ ॥61॥
ಪಿಬಂತಃ ಸತತಂ ಕೃಷ್ಣಂ ನೋಚುರಾರ್ತತರಾಸ್ತದಾ ॥62॥
ಬಳಿಕ ಶ್ರೀಕೃಷ್ಣನು ದ್ವಾರಕೆಗೆ ಪ್ರಯಾಣ ಹೊರಟಿರುವನೆಂಬ ವಾರ್ತೆಯನ್ನು ಕೇಳಿದ ಪಾಂಡವರೆಲ್ಲರೂ ಬಾಡಿದ ಮುಖವುಳ್ಳವರಾದರು. ಎರಡು ಕೈಗಳನ್ನು ಜೋಡಿಸಿ ತಲೆ ಮೇಲೆ ಕೈಯನ್ನಿಟ್ಟುಕೊಂಡು ನೀರು ತುಂಬಿದ ಕಣ್ಣುಗಳಿಂದ ಶ್ರೀಕೃಷ್ಣನನ್ನು ಕುಡಿದು ಬಿಡುತ್ತಾರೋ ಎಂಬಂತೆ ಎವೆಯಿಕ್ಕದೆ ನೋಡುತ್ತಿದ್ದರು.
ಕೃಷ್ಣೋಽಪಿ ಭಗವಾನ್ ದೇವಃ ಪೃಥಾಮಾಮಂತ್ರ್ಯ ಚಾರ್ತವತ್ |
ಧೃತರಾಷ್ಟ್ರಂ ಚ ಗಾಂಧಾರೀಂ ವಿದುರಂ ದ್ರೌಪದೀಂ ತಥಾ ॥63॥
ಕೃಷ್ಣದ್ವೈಪಾಯನಂ ವ್ಯಾಸಮೃಷೀನನ್ಯಾಂಶ್ಚ ಮಂತ್ರಿಣಃ |
ಸುಭದ್ರಾಮಾತ್ಮಜಯುತಾಮುತ್ತರಾಂ ಸ್ಪೃಶ್ಯ ಪಾಣಿನಾ ॥64॥
ನಿರ್ಗತ್ಯ ವೇಶ್ಮನಸ್ತಸ್ಮಾದಾರುರೋಹ ಮಹಾರಥಮ್ ॥65॥
ಆದರೆ ದುಃಖಪೀಡಿತರಾದ ಅವರನ್ನು ಕುರಿತು ಕೃಷ್ಣನು ಯಾವ ಮಾತನ್ನೂ ಹೇಳಲಿಲ್ಲ. ಕೃಷ್ಣನೂ ಅವರ ಸ್ಥಿತಿಯನ್ನು ಕಂಡು ಆರ್ತನಂತೆ ದುಃಖಿತನಾದನು. ಪ್ರಯಾಣವು ಅನಿವಾರ್ಯವಾಗಿತ್ತು. ಕುಂತೀ, ಧೃತರಾಷ್ಟ್ರ, ಗಾಂಧಾರಿ, ವಿದುರ, ದ್ರೌಪದಿ, ವೇದವ್ಯಾಸರು, ಋಷಿಗಳು, ಅಮಾತ್ಯರು ಇವರೆಲ್ಲರ ಅನುಮತಿಯನ್ನು ಪಡೆದು ಸುಭದ್ರೆಯನ್ನೂ, ಮಗನ ಜೊತೆಗಿದ್ದ ಉತ್ತರೆಯನ್ನು ಕೈಯಿಂದ ಮುಟ್ಟಿ ಆಶೀರ್ವದಿಸಿ, ರಾಜಭವನದಿಂದ ಹೊರ ಹೊರಟು, ದಾರುಕನು ನಿಲ್ಲಿಸಿದ್ದ ರಥದಲ್ಲಿ ಕುಳಿತುಕೊಂಡನು.
ವಾಜಿಭಿಃ ಶೈಬ್ಯಸುಗ್ರೀವಮೇಘಪುಷ್ಪವ(ಬ)ಲಾಹಕೈಃ |
ಯುಕ್ತಂ ತು ಧ್ವಜಭೂತೇನ ಪತಗೇಂದ್ರೇಣ ಧೀಮತಾ ॥66॥
ರಥವು ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ ಎಂಬ ಕುದುರೆಗಳಿಂದ ಕೂಡಿತ್ತು. ಧೀಮಂತನಾದ ಗರುಡನು ಆ ರಥದ ಧ್ವಜದಲ್ಲಿ ಶೋಭಿಸುತ್ತಿದ್ದನು.
ಅನ್ವಾರುರೋಹ ಚಾಪ್ಯೇನಂ ಪ್ರೇಮ್ಣಾ ರಾಜಾ ಯುಧಿಷ್ಠಿರಃ |
ಅಪಾಸ್ಯ ಚಾಶು ಯಂತಾರಂ ದಾರುಕಂ ಸೂತಸತ್ತಮಮ್ ॥67॥

ಅಭೀಶೂನ್ ಪ್ರತಿಜಗ್ರಾಹ ಸ್ವಯಂ ಕುರುಪತಿಸ್ತದಾ ॥68॥
ಆ ಸಮಯದಲ್ಲಿ ಕುರುಪತಿಯಾದ ಯುಧಿಷ್ಠಿರನು ಪ್ರೀತಿಯಿಂದ ಕೃಷ್ಣನನ್ನು ಅನುಸರಿಸಿ ತಾನೂ ರಥವನ್ನೇರಿದನು. ಧರ್ಮರಾಜನು ಸೂತಶ್ರೇಷ್ಠನಾದ ದಾರುಕನಿಂದ ಕುದುರೆಗಳ ಕಡಿವಾಣವನ್ನು ತನ್ನ ಕಡೆಗೆ ತೆಗೆದುಕೊಂಡನು.
ಉಪಾರುಹ್ಯಾರ್ಜುನಶ್ಚಾಪಿ ಚಾಮರವ್ಯಜನಂ ಶುಭಮ್ ।
ರುಗ್ಮದಂಡಂ ಬೃಹನ್ಮೂರ್ಧ್ನಿ ದುಧಾವಾಶು ಪ್ರದಕ್ಷಿಣಮ್ ॥69॥
ಅರ್ಜುನನೂ ರಥವನ್ನೇರಿ ಸುವರ್ಣದ ಹಿಡಿಯಿಂದ ಕೂಡಿದ ಚಾಮರದ ವ್ಯಜನ(ಬೀಸಣಿಗೆ)ಯನ್ನು ಕೈಯಲ್ಲಿ ಹಿಡಿದುಕೊಂಡು ಬಲಬದಿಯಿಂದ ಕೃಷ್ಣನ ತಲೆಯ ಮೇಲೆ ಗಾಳಿ ಬೀಸಲು ಆರಂಭಿಸಿದನು.
ಛತ್ರಂ ಶತಶಲಾಕಂ ಚ ದಿವ್ಯಮಾಲ್ಯೋಪಶೋಭಿತಮ್ ।
ವೈಡೂರ್ಯಮಣಿದಂಡಂ ಚ ಚಾಮೀಕರವಿಭೂಷಿತಮ್ ॥70॥
ದಧಾರ ತರಸಾ ಭೀಮಶ್ಛತ್ರಂ ತಚ್ಛಾರ್ಙ್ಗಧನ್ವನಃ ॥71॥
ಅದೇ ರೀತಿ ವೀರನಾದ ಭೀಮಸೇನನು ರಥವನ್ನು ಏರಿ, ದಿವ್ಯಮಾಲೆಯಿಂದ ಶೋಭಿತವಾಗಿದ್ದ, ನೂರು ಕಡ್ಡಿಗಳಿಂದ ಕೂಡಿದ ಬಂಗಾರದ ಶ್ವೇತಚ್ಛತ್ರವನ್ನು ಶ್ರೀಕೃಷ್ಣನ ತಲೆಯ ಮೇಲೆ ಹಿಡಿದನು. ಆ ಶ್ವೇತಚ್ಛತ್ರವು ವೈಡೂರ್ಯಮಣಿಗಳಿಂದ ನಿರ್ಮಿತವಾಗಿತ್ತು. ಅದರ ಬಟ್ಟೆಯು ಸುವರ್ಣದ ತಂತುಗಳಿಂದ ಅಲಂಕೃತವಾಗಿತ್ತು. ಶಾಙ್ಗಧನುರ್ಧರನಾದ ಶ್ರೀಕೃಷ್ಣನ ಅಂತಹ ಸುಂದರವಾದ ಛತ್ರವನ್ನು ಭೀಮಸೇನನು ಹಿಡಿದು ನಿಂತನು.
ಭೀಮಸೇನೋಽರ್ಜುನಶ್ಚೈವ ಯಮಾವಪ್ಯರಿಸೂದನೌ ।
ಮಾದ್ರೀಪುತ್ರೌ ತದಾ ರಾಜನ್ ಕೃಷ್ಣಸ್ಯಾಪ್ಯರಿಸೂದನೌ ॥72॥
ಭೀಮಸೇನನನ್ನು ಅನುಸರಿಸಿ ನಕುಲ-ಸಹದೇವರೂ ರಥವನ್ನೇರಿ ಬಿಳಿ ಚಾಮರ ವ್ಯಜನಗಳಿಂದ ಕೃಷ್ಣನಿಗೆ ಗಾಳಿ ಬೀಸಿದರು.
ಪೃಷ್ಠತೋಽನುಯಯುಃ ಕೃಷ್ಣಂ ಮಾ ಶಬ್ದ ಇತಿ ಹರ್ಷಿತೌ ॥73॥
ಈ ಪ್ರಕಾರ ಪಂಚಪಾಂಡವರು ಕೃಷ್ಣನನ್ನನುಸರಿಸಿ ಹೋದರು. ಕೃಷ್ಣನನ್ನು ಕುರಿತು ಪ್ರಯಾಣ ಮಾಡಬೇಡ ಎಂದು ಹೇಳತೊಡಗಿದರು.
ತ್ರಿಯೋಜನೇ ವ್ಯತೀತೇ ತು ಪರಿಷ್ವಜ್ಯ ಚ ಪಾಂಡವಾನ್ ।
ವಿಸೃಜ್ಯ ಕೃಷ್ಣಸ್ತಾನ್ ಸರ್ವಾನ್ ಪ್ರಣತಾನ್ ದ್ವಾರಕಾಂ ಯಯೌ ॥74॥
ಮೂರು ಯೋಜನಗಳಷ್ಟು ದೂರ ರಥವು ಹೋದಬಳಿಕ ತನಗೆ ನಮಸ್ಕರಿಸಿದ ಪಾಂಡವರನ್ನು ಒಬ್ಬೊಬ್ಬರನ್ನಾಗಿ ಆಲಿಂಗಿಸಿಕೊಂಡು ಸಮಾಧಾನಪಡಿಸಿ ಅವರೆಲ್ಲರನ್ನೂ ಹಿಂದಕ್ಕೆ ಕಳುಹಿಸಿ ದ್ವಾರಕೆಯತ್ತ ನಡೆದನು.
ತದಾ ಪ್ರಣಮ್ಯ ಗೋವಿಂದಂ ತದಾಪ್ರಭೃತಿ ಪಾಂಡವಾಃ ।
ಕಪಿಲಾದ್ಯಾನಿ ದಾನಾನಿ ದದುರ್ಧರ್ಮಪರಾಯಣಾಃ ॥75॥
ಪಾಂಡವರಾದರೂ ಕೃಷ್ಣನಿಗೆ ನಮಸ್ಕರಿಸಿ ಹಸ್ತಿನಾಪುರಕ್ಕೆ ಹಿಂದಿರುಗಿ ಬಂದು ಕೃಷ್ಣನ ಉಪದೇಶದಂತೆ ಕಪಿಲಾದಾನಗಳನ್ನು ಧರ್ಮಪರಾಯಣರಾಗಿ ಬ್ರಾಹ್ಮಣರಿಗೆ ಮಾಡಿದರು.
ಮಧುಸೂದನವಾಕ್ಯಾನಿ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ।
ಮನಸಾ ಪೂಜಯಾಮಾಸುರ್ಹೃದಯಸ್ಥಾನಿ ಪಾಂಡವಾಃ ॥76॥
ಮಧುಸೂದನನ ಮಾತುಗಳನ್ನು ಪುನಃ ಪುನಃ ಸ್ಮರಿಸುತ್ತಾ ಅವನನ್ನು ಹೃದಯದಲ್ಲಿ ತುಂಬಿಕೊಂಡು, ಮನಃಪೂರ್ವಕವಾಗಿ ಅವನ ವಾಕ್ಯಗಳನ್ನೇ ಸ್ತುತಿಸುತ್ತಿದ್ದರು.
ಯುಧಿಷ್ಠಿರಸ್ತು ಧರ್ಮಾತ್ಮಾ ಹೃದಿ ಕೃತ್ವಾ ಜನಾರ್ದನಮ್ ।
ತದ್ಭಕ್ತಸ್ತನ್ಮನಾ ಯುಕ್ತಸ್ತದ್ಯಾಜೀ ತತ್ಪರೋಽಭವತ್ ॥77॥
ಯುಧಿಷ್ಠಿರನಾದರೂ ಧರ್ಮಾತ್ಮನಾದ ಜನಾರ್ದನನನ್ನು ಹೃದಯದಲ್ಲಿ ತುಂಬಿಕೊಂಡು ಅವನಲ್ಲಿಯೇ ಭಕ್ತಿಯುಳ್ಳವನಾಗಿ, ಅವನಲ್ಲಿಯೇ ಮನಸ್ಸುಳ್ಳವನಾಗಿ, ಅವನಿಗಾಗಿಯೇ ಸಮಸ್ತ ಕರ್ಮಗಳನ್ನು ಕೃಷ್ಣಾರ್ಪಣ ಬುದ್ಧಿಯಿಂದ ಮಾಡಿದನು.
ಏವಮೇತತ್ ಪುರಾವೃತ್ತಂ ವೈಷ್ಣವಂ ಧರ್ಮಶಾಸನಮ್ ।
ಮಯಾ ತೇ ಕಥಿತಂ ರಾಜನ್ ಪವಿತ್ರಂ ಪಾಪನಾಶನಮ್ ॥78॥
ಈ ರೀತಿಯಾಗಿ ಪ್ರಾಚೀನವಾದ ವೈಷ್ಣವಧರ್ಮಶಾಸನವು ಪಾಪನಾಶಕವಾಗಿದೆ, ಪವಿತ್ರವಾಗಿದೆ. ಜನಮೇಜಯರಾಜನೇ, ಅದನ್ನು ನಿನಗೆ ಹೇಳಿರುತ್ತೇನೆ.
ತಚ್ಛೃಣುಷ್ವ ಮಹಾರಾಜ ವಿಷ್ಣುಪ್ರೋಕ್ತಂ ಕುರೂದ್ವಹ ।
ತೇನ ಗಚ್ಛಸಿ ನಾನ್ಯೇನ ತದ್ ವಿಷ್ಣೋಃ ಪರಮಂ ಪದಮ್ ॥79॥
ವಿಷ್ಣುವಿನಿಂದಲೇ ಹೇಳಲ್ಪಟ್ಟ ವೈಷ್ಣವಧರ್ಮವನ್ನು ಕುರುಕುಲಶ್ರೇಷ್ಠನೇ ಕೇಳಿಸಿಕೊ. ಈ ಧರ್ಮದಿಂದಲೇ ವಿಷ್ಣುವಿನ ಪರಮಪದವೆನಿಸಿದ ವೈಕುಂಠವನ್ನು ಸೇರುತ್ತಿ. ಬೇರೆ ಯಾವ ಧರ್ಮದಿಂದಲೂ ವಿಷ್ಣುವಿನ ಪದವನ್ನು ಹೊಂದಲಾಗದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ವಮೇಧಿಕಪರ್ವಣಿ ವೈಷ್ಣವಧರ್ಮಶಾಸ್ತ್ರೇ ಸರ್ವಧರ್ಮಕಥನಾನಂತರಂ ಶ್ರೀಕೃಷ್ಣಸ್ಯ ದ್ವಾರಾವತೀಪ್ರವೇಶವರ್ಣನಂ ನಾಮ ಅಷ್ಟಾದಶೋತ್ತರಶತತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ನೂರಹದಿನೆಂಟನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಮ್ ಆಶ್ವಮೇಧಿಕಪರ್ವ ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥
* * * * *
॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಆಶ್ರಮವಾಸಿಕಪರ್ವ
ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯಃ
ಯಜ್ಞೇಶ್ವರೇಣಾಭಿಯುತೇಷು ಭಕ್ತ್ಯಾ
ಮಹೀಂ ಪ್ರಶಾಸತ್ಸು ಪೃಥಾಸುತೇಷು |
ಯಿಯಕ್ಷುರಾಗಾನ್ನಿಶಿ ವಿಪ್ರವರ್ಯೋ
ಯುಧಿಷ್ಠಿರಂ ವಿತ್ತಮಭೀಪ್ಸಮಾನಃ ॥
ಯಜ್ಞೇಶ್ವರನಾದ ಶ್ರೀಕೃಷ್ಣನಿಂದ ಯುಕ್ತರಾದ ಪಾಂಡವರು ಹರಿಭಕ್ತಿಯುಕ್ತರಾಗಿ ಭೂಮಿಯನ್ನು ಆಳುತ್ತಿದ್ದಾಗ ಯಾಗಮಾಡುವ ಬಯಕೆಯಿಂದ ಬ್ರಾಹ್ಮಣೋತ್ತಮನೊಬ್ಬ ಹಣವನ್ನು ಬಯಸಿ ರಾತ್ರಿಯಲ್ಲಿ ಧರ್ಮರಾಜನ ಬಳಿಗೆ ಬಂದನು.
ಪ್ರಾತರ್ದದಾನೀತಿ ನೃಪಸ್ಯ ವಾಕ್ಯಂ
ನಿಶಮ್ಯ ವಿಪ್ರಸ್ತ್ವರಿತೋ ಮಖಾರ್ಥೇ |
ಭೀಮಂ ಯಯಾಚೇ ಸ ನೃಪೋಕ್ತಮಾಶು
ನಿಶಮ್ಯ ಚಾದಾನ್ನಿಜಹಸ್ತಭೂಷಣಮ್ ॥
ಬೆಳಿಗ್ಗೆ ಕೊಡುವೆನೆಂದು ಯುಧಿಷ್ಠಿರನು ಹೇಳಿದಾಗ, ಅದನ್ನು ಕೇಳಿದ ಬ್ರಾಹ್ಮಣ ತ್ವರೆಯಿಂದ ಭೀಮನ ಹತ್ತಿರ ಯಾಗಕ್ಕೆ ಹಣವನ್ನು ಕೇಳಿದ. ಭೀಮನು ಯುಧಿಷ್ಠಿರನು ಹೇಳಿದ್ದನ್ನು ಕೇಳಿ ತಾನೇ ಬೇಗನೆ ತನ್ನ ಕೈಯ ಆಭರಣವನ್ನಿತ್ತನು.
ಅನರ್ಘ್ಯಮಗ್ನಿಪ್ರತಿಮಂ ವಿಚಿತ್ರಂ
ರತ್ನಾಂಚಿತಂ ವಿಪ್ರವರಸ್ತದಾಪ್ಯ |
ಯಯೌ ಕೃತಾರ್ಥೋಽಥ ಚ ನಂದಿಘೋಷ-
ಮಕಾರಯದ್ ವಾಯುಸೂನುಸ್ತದೈವ ॥
ಭೀಮನ ಕೈಯ ಆಭರಣ ಅಮೂಲ್ಯ ವಿಚಿತ್ರ ರತ್ನಖಚಿತ. ಬೆಂಕಿಯಂತೆ ಹೊಳೆಯುತ್ತಿತ್ತು. ಬ್ರಾಹ್ಮಣೋತ್ತಮ ಅದನ್ನು ಪಡೆದು ಕೃತಾರ್ಥನಾಗಿ ಹೊರಟು ಹೋದನು. ಭೀಮನು ಆಗಲೇ ಆನಂದದ ಭೇರೀನಾದವನ್ನು ಮಾಡಿದನು.
ಅಕಾಲಜಂ ತಂ ತು ನಿಶಮ್ಯ ರಾಜಾ
ಪಪ್ರಚ್ಛ ದೂತೈಸ್ತಮುವಾಚ ಭೀಮಃ |
ಯನ್ಮರ್ತ್ಯದೇಹೋಽಪಿ ವಿನಿಶ್ಚಿತಾಯು-
ರಭೂನ್ನೃಪಸ್ತೇನ ಮಮಾಽಸ ಹರ್ಷಃ ॥
ಅಕಾಲದಲ್ಲಿ ಉಂಟಾದ ಆ ಭೇರಿನಾದವನ್ನು ಕೇಳಿ ರಾಜಾ ಯುಧಿಷ್ಠಿರ ದೂತರ ಮೇಲೆ ದೂತರನ್ನು ಕಳಿಸಿ ಭೀಮನಲ್ಲಿ ವಿಚಾರಿಸಿದನು. ಭೀಮನೆಂದ, ಮಾನವ ದೇಹದವನಾಗಿದ್ದೂ ಯುಧಿಷ್ಠಿರ ತನ್ನಾಯುಷ್ಯದ ಬಗ್ಗೆ ನಿಶ್ಚಯ ಜ್ಞಾನವನ್ನು ಹೊಂದಿದ್ದಾನೆ. ಅದರಿಂದ ನನಗೆ ಆನಂದವಾಯಿತು.
ಇತೀರಿತೋಽಸೌ ನೃಪತಿಸ್ತ್ವರೇತ
ಧರ್ಮಾರ್ಥಮಿತ್ಯಸ್ಯ ಮತಂ ಪ್ರಪೂಜಯನ್ |
ಜಗಾದ ಸಾಧ್ವಿತ್ಯಥ ಭೂಯ ಏವ
ಧರ್ಮೇ ತ್ವರಾವಾನಪಿ ಸಂಬಭೂವ ॥
ಭೀಮನು ಹೀಗೆ ಹೇಳಿದಾಗ ಯುಧಿಷ್ಠಿರ `ಧರ್ಮಾಚರಣೆಯಲ್ಲಿ ತ್ವರೆ ಮಾಡಬೇಕು' ಎಂಬ ಭೀಮನ ಅಭಿಪ್ರಾಯವನ್ನು ತಿಳಿದು ಹೊಗಳುತ್ತ `ಭೀಮನು ಮಾಡಿದ್ದು ಯುಕ್ತ' ಎಂದನು. ಬಳಿಕ ಧರ್ಮಾಚರಣೆಯಲ್ಲಿ ಇನ್ನೂ ಹೆಚ್ಚು ತ್ವರೆ ಮಾಡಿದನು.
ಒಂದನೆಯ ಅಧ್ಯಾಯ
ಯುಧಿಷ್ಠಿರನ ರಾಜ್ಯಭಾರ. ಕುಂತಿ ಮತ್ತು ದ್ರೌಪದಿಯೇ ಮೊದಲಾದವರಿಂದ ಗಾಂಧಾರಿಯ ವಿಷಯದಲ್ಲಿ ಅತ್ತೆಯಂತೆ ಗೌರವಪೂರ್ವಕವಾದ ನಡವಳಿಕೆ. ಭೀಮನನ್ನು ಬಿಟ್ಟು ಅರ್ಜುನನೇ ಮೊದಲಾದ ಎಲ್ಲರಿಂದಲೂ ಯುಧಿಷ್ಠಿರನ ಅಪ್ಪಣೆಯಂತೆ ವಿಶೇಷವಾಗಿ ಧೃತರಾಷ್ಟ್ರನ ಅನುಸರಣೆ.
ಜನಮೇಜಯಃ
ರಾಜ್ಯಂ ಪ್ರಾಪ್ಯ ನರವ್ಯಾಘ್ರಾಃ ಪಿತೃಪೈತಾಮಹಂ ಮಹತ್ |
ಕಥಮಾಸನ್ ಮಹಾರಾಜೇ ಧೃತರಾಷ್ಟ್ರೇ ಮಹಾತ್ಮನಿ ॥1॥
ಸ ಹಿ ರಾಜಾ ಹತಾಮಾತ್ಯೋ ಹತಪುತ್ರೋ ನಿರಾಶ್ರಯಃ |
ಕಥಮಾಸೀದ್ ಗತೈಶ್ವರ್ಯೋ ಗಾಂಧಾರೀ ಚ ಯಶಸ್ವಿನೀ ॥2॥
ಕಿಯಂತಂ ಚೈವ ಕಾಲಂ ತೇ ಪಿತರೋ ಮಮ ಪೂರ್ವಕಾಃ |
ಸ್ಥಿತಾ ರಾಜ್ಯೇ ಮಹಾತ್ಮಾನಃ ತನ್ಮೇ ವ್ಯಾಖ್ಯಾತುಮರ್ಹಸಿ ॥3॥
ಜನಮೇಜಯ ಮನುಜಶ್ರೇಷ್ಠರಾದ ಪಾಂಡವರು ತಮ್ಮ ತಂದೆ ಹಾಗೂ ಅಜ್ಜಂದಿರು ಆಳಿದ ವಿಶಾಲವಾದ ರಾಜ್ಯವನ್ನು ಪಡೆದ

ನಂತರ ಮಹಾತ್ಮನಾದ ಮಹಾರಾಜ (ಧರ್ಮರಾಜನು) ಧೃತರಾಷ್ಟ್ರನ ವಿಷಯದಲ್ಲಿ ಹೇಗೆ ವರ್ತಿಸಿದರು? ಆ ಧೃತರಾಷ್ಟ್ರ ರಾಜನು ಆಪ್ತಮಂತ್ರಿಗಳನ್ನು ಕಳೆದುಕೊಂಡು, ತನ್ನ ಮಕ್ಕಳನ್ನೂ ಕಳೆದುಕೊಂಡು, ಆಶ್ರಯ ಹೀನನಾಗಿ, ಐಶ್ವರ್ಯ ಹೀನನಾಗಿ ಹೇಗೆ ಜೀವಿಸುತ್ತಿದ್ದನು? ಜೊತೆಗೆ ಕೀರ್ತಿಯುಕ್ತಳಾದ ಗಾಂಧಾರಿಯು ಹೇಗಿದ್ದಳು? ಮಹಾತ್ಮರಾದ ನನ್ನ ಅಜ್ಜಂದಿರಾದ ಆ ಪಾಂಡವರು ತಮ್ಮ ರಾಜ್ಯದಲ್ಲಿ ಎಷ್ಟು ಕಾಲ ಆಡಳಿತ ನಡೆಸಿದರು? ಇದನ್ನೂ ಕೂಡ ನನಗೆ ತಿಳಿಸುವವರಾಗಿ.
ವೈಶಂಪಾಯನಃ
ಪ್ರಾಪ್ಯ ರಾಜ್ಯಂ ಮಹಾತ್ಮಾನಃ ಪಾಂಡವಾ ಹತಶತ್ರವಃ |
ಧೃತರಾಷ್ಟ್ರಂ ಪುರಸ್ಕೃತ್ಯ ಪೃಥಿವೀಂ ಪರ್ಯಪಾಲಯನ್ ॥4॥
ವೈಶಂಪಾಯನ ಶತ್ರುಗಳನ್ನು ಜಯಿಸಿದ ಮಹಾತ್ಮರಾದ ಪಾಂಡವರು ರಾಜ್ಯವನ್ನು ಪಡೆದ ನಂತರ ಧೃತರಾಷ್ಟ್ರನನ್ನು ಮುಂದಿರಿಸಿಕೊಂಡು ಭೂಮಿಯನ್ನು ಆಳಿದರು.
ಧೃತರಾಷ್ಟ್ರಮುಪಾತಿಷ್ಠದ್ ವಿದುರಃ ಸಂಜಯಸ್ತಥಾ |
ಯುಯುತ್ಸುಶ್ಚೈವ ಮೇಧಾವೀ ವೇಶ್ಯಾಪುತ್ರಃ ಸ ಕೌರವಃ ॥5॥
ವಿದುರ, ಸಂಜಯ ಹಾಗೂ ಧೃತರಾಷ್ಟ್ರನಿಂದ ವೈಶ್ಯಸ್ತ್ರೀಯಲ್ಲಿ ಜನಿಸಿದ ಮೇಧಾವಿಯಾದ ಯುಯುತ್ಸು ಇವರೆಲ್ಲರು ಧೃತರಾಷ್ಟ್ರನ ಜೊತೆಗಿದ್ದು ಅವನನ್ನು ಸೇವಿಸಿದರು.
ಪಾಂಡವಾಃ ಸರ್ವಕಾರ್ಯೇಷು ಪೃಚ್ಛಂತಿ ಸ್ಮ ಚ ತಂ ನೃಪಮ್ |
ಚಕ್ರುಸ್ತೇನಾಭ್ಯನುಜ್ಞಾತಾ ವರ್ಷಾಣಿ ದಶ ಪಂಚ ಚ ॥6॥
ಪಾಂಡವರಾದರೂ ಎಲ್ಲ ಕೆಲಸಕಾರ್ಯಗಳನ್ನು ನಡೆಸುವ ಮೊದಲು ಧೃತರಾಷ್ಟ್ರನ ಸಲಹೆಯನ್ನು ಕೇಳುತ್ತಿದ್ದರು. ಅವನಿಂದ ಒಪ್ಪಿಗೆ ಪಡೆದೇ ಕೆಲಸಕಾರ್ಯಗಳನ್ನು ನಡೆಸುತ್ತಾ ಹದಿನೈದು ವರ್ಷಗಳ ಕಾಲ ರಾಜ್ಯಭಾರ ಮಾಡಿದರು.
ಸದಾಽಭಿಗಮ್ಯ ತೇ ವೀರಾಃ ಪರ್ಯುಪಾಸತ ತಂ ನೃಪಮ್ |
ಪಾದಾಭಿವಂದನಂ ಕೃತ್ವಾ ಯುಧಿಷ್ಠಿರಮತೇ ಸ್ಥಿತಾಃ ॥7॥
ಯುಧಿಷ್ಠಿರನ ಅಭಿಪ್ರಾಯಕ್ಕೆ ಅನುಕೂಲರಾಗಿರುವ ಆ ಪಾಂಡವವೀರರು ರಾಜನಾದ ಧೃತರಾಷ್ಟ್ರನ ಸಮೀಪಕ್ಕೆ ಪ್ರತಿನಿತ್ಯವೂ ಬಂದು ಪಾದಗಳಿಗೆ ನಮಸ್ಕರಿಸಿ ಅವನನ್ನು ಸೇವಿಸುತ್ತಿದ್ದರು.
ತೇನ ತೇ ಮೂರ್ಧ್ನಿ ಚಾಘ್ರಾತಾಃ ಸರ್ವಕಾರ್ಯಾಣಿ ಚಕ್ರಿರೇ ॥8॥
ಧೃತರಾಷ್ಟ್ರನಾದರೂ ಅವರ ಶಿರಸ್ಸನ್ನು ಆಘ್ರಾಣಿಸಿ ಸಂತೈಸುತ್ತಿದ್ದನು. ಹೀಗೆ ಅವನಿಂದ ಒಪ್ಪಿಗೆಯನ್ನು ಪಡೆದು ಎಲ್ಲ ಕಾರ್ಯಗಳನ್ನೂ ಪಾಂಡವರು ನೆರವೇರಿಸುತ್ತಿದ್ದರು.
ಕುಂತೀ ಭೋಜಸುತಾ ಚೈವ ಗಾಂಧಾರೀಮನ್ವವರ್ತತ |
ದ್ರೌಪದೀ ಚ ಸುಭದ್ರಾ ಚ ಯಾಶ್ಚಾನ್ಯಾಃ ಪಾಂಡವಸ್ತ್ರಿಯಃ ॥9॥
ಸಮಾಂ ವೃತ್ತಿಮವರ್ತಂತ ತಯೋಃ ಶ್ವಶ್ರ್ವೋರ್ಯಥಾವಿಧಿ ॥10॥
ಭೋಜಸುತೆಯಾದ ಕುಂತಿಯೂ ಕೂಡ ಗಾಂಧಾರಿದೇವಿಯನ್ನು ಅನುಸರಿಸಿಕೊಂಡೇ ನಡೆಯುತ್ತಿದ್ದಳು. ದ್ರೌಪದೀ ಹಾಗೂ ಸುಭದ್ರೆಯರು ಸೇರಿದಂತೆ ಎಲ್ಲ ಪಾಂಡವಪತ್ನಿಯರು ಅತ್ತೆಯರಾದ ಗಾಂಧಾರಿ ಹಾಗೂ ಕುಂತಿಯರಿಬ್ಬರಲ್ಲೂ ಯಥಾಯೋಗ್ಯವಾದ ಸಮಾನವಾದ ಗೌರವವನ್ನು ಸೂಚಿಸಿ ಅವರನ್ನು ಅನುಸರಿಸಿದರು.
ಶಯನಾನಿ ಮಹಾರ್ಹಾಣಿ ವಾಸಾಂಸ್ಯಾಭರಣಾನಿ ಚ |
ಸರ್ವಾಣಿ ಭಕ್ಷ್ಯಭೋಜ್ಯಾನಿ ವಿವಿಧಾನಿ ಚ ಸರ್ವಶಃ ॥11॥
ಯುಧಿಷ್ಠಿರೋ ಮಹಾರಾಜೋ ಧೃತರಾಷ್ಟ್ರೇ ಹ್ಯುಪಾನಯತ್ |
ತಥೈವ ಕುಂತೀ ಗಾಂಧಾರ್ಯಾಂ ಗುರುವೃತ್ತಿಮವರ್ತತ ॥12॥
ಮಹಾರಾಜನಾದ ಯುಧಿಷ್ಠಿರನು ಧೃತರಾಷ್ಟ್ರನಿಗೆ ಉತ್ತಮವಾದ ಹಾಸಿಗೆಗಳನ್ನೂ, ಬೆಲೆಬಾಳುವ ವಸ್ತ್ರಾಭರಣಗಳನ್ನೂ, ನಾನಾ ವಿಧವಾದ ಎಲ್ಲ ರೀತಿಯ ಭಕ್ಷ್ಯಭೋಜ್ಯಗಳನ್ನೂ ಎಲ್ಲ ರೀತಿಯಿಂದಲೂ ಸಮರ್ಪಿಸುತ್ತಿದ್ದನು. ಅದೇ ರೀತಿ ಕುಂತಿಯೂ ಕೂಡ ಗಾಂಧಾರಿದೇವಿಯ ವಿಷಯದಲ್ಲಿ ಗುರು-ಹಿರಿಯರಂತೆಯೇ ನಡೆದುಕೊಂಡಳು.
ವಿದುರಃ ಸಂಜಯಶ್ಚೈವ ಯುಯುತ್ಸುಶ್ಚೈವ ಕೌರವ |
ಉಪಾಸಂತಿ ಸ್ಮ ತಂ ವೃದ್ಧಂ ಹತಪುತ್ರಂ ನರಾಧಿಪಮ್ ॥13॥
ಹೇ ಜನಮೇಜಯನೇ! ವಿದುರ, ಸಂಜಯ ಹಾಗು ಯುಯುತ್ಸು ಇವರು ಮಕ್ಕಳನ್ನು ಕಳೆದುಕೊಂಡ ವಯಸ್ಸಾದ ಧೃತರಾಷ್ಟ್ರ ರಾಜನನ್ನು ಸೇವೆಗೈಯ್ಯುತ್ತಿದ್ದರು.
ಸ್ಯಾಲೋ ದ್ರೋಣಸ್ಯ ಯಶ್ಚೈಕೋ ದಯಿತೋ ಬ್ರಾಹ್ಮಣೋ ಮಹಾನ್ |
ಸ ಚ ತಸ್ಮಿನ್ ಮಹೇಷ್ವಾಸಃ ಕೃಪಃ ಸಮಭವತ್ ತದಾ ॥14॥
ಅದೇ ಸಮಯದಲ್ಲಿ ದ್ರೋಣನ ಒಬ್ಬ ಭಾವನಾದ ಮತ್ತು ದ್ರೋಣನಿಗೆ ಪ್ರೀತಿಪಾತ್ರನಾದ, ಉತ್ತಮಬ್ರಾಹ್ಮಣನಾದ, ಧನುರ್ವಿದ್ಯೆಯನ್ನು ಚೆನ್ನಾಗಿ ತಿಳಿದ ಕೃಪನು ಧೃತರಾಷ್ಟ್ರನ ಜೊತೆಗೇ ಇರುತ್ತಿದ್ದನು.
ವ್ಯಾಸಶ್ಚ ಭಗವಾನ್ ನಿತ್ಯಂ ವಾಸಂ ಚಕ್ರೇ ನೃಪೇಣ ಹ |
ಕಥಾಂ ಕುರ್ವನ್ ಪುರಾಣರ್ಷಿರ್ದೇವರ್ಷಿರ್ನೃಪರಕ್ಷಸಾಮ್ ॥15॥
ಪುರಾಣಗಳನ್ನು ಜಗತ್ತಿಗೆ ನೀಡಿದ ದೇವರ್ಷಿಯಾದ ಭಗವಾನ್ ವ್ಯಾಸಮಹರ್ಷಿಗಳು ರಾಜರ ಹಾಗೂ ರಾಕ್ಷಸರ ಕಥೆಗಳನ್ನು ಹೇಳುತ್ತಾ ರಾಜನಾದ ಧೃತರಾಷ್ಟ್ರನೊಂದಿಗೆ ನಿತ್ಯವೂ ವಾಸವಾಗಿದ್ದರು.
ಧರ್ಮಯುಕ್ತಾನಿ ಕಾರ್ಯಾಣಿ ವ್ಯವಹಾರಾನ್ವಿತಾನಿ ಚ |

ಧೃತರಾಷ್ಟ್ರಾಭ್ಯನುಜ್ಞಾತೋ ವಿದುರಸ್ತಾನ್ಯಕಾರಯತ್ ॥16॥
ಧೃತರಾಷ್ಟ್ರನಿಂದ ಅನುಜ್ಞೆಯನ್ನು ಪಡೆದುಕೊಂಡ ವಿದುರನು ಧಾರ್ಮಿಕವಾದ ಕಾರ್ಯಗಳನ್ನೂ, ವ್ಯಾವಹಾರಿಕವಾದ ನ್ಯಾಯತೀರ್ಮಾನಗಳನ್ನೂ ನಡೆಸುತ್ತಿದ್ದನು.
ಕಾಮತೋ ಹಿ ಪ್ರಿಯಾಣ್ಯಸ್ಯ ಕಾರ್ಯಾಣಿ ಸುಗುರೂಣ್ಯಪಿ |
ಪ್ರಾಪ್ಯಂತೇಽರ್ಥೈಃ ಸುಲಘುಭಿಃ ಪ್ರಭಾವಾದ್ ವಿದುರಸ್ಯ ವೈ ॥17॥
ಜೊತೆಗಿರುವ ವಿದುರನ ಪ್ರಭಾವದಿಂದ ಈ ಧೃತರಾಷ್ಟ್ರನಿಗೆ ಪ್ರಿಯವಾದ ಕಾರ್ಯಗಳು ಬಹಳವಾಗಿದ್ದರೂ ಕಡಿಮೆ ವೆಚ್ಚದಲ್ಲಿಯೇ ಶ್ರೇಷ್ಠವಾಗಿ ನಡೆಯುತ್ತಿದ್ದವು.
ಅಕರೋದ್ ಬಂಧಮೋಕ್ಷಾಂಶ್ಚ ವಧ್ಯಾನಾಂ ಮೋಕ್ಷಣಂ ತಥಾ ॥18॥
ನ ಚ ಧರ್ಮಾತ್ಮಜೋ ರಾಜಾ ಕದಾಚಿತ್ ಕಿಂಚಿದಬ್ರವೀತ್ ॥19॥
ಮಹಾತ್ಮನಾದ ವಿದುರನು ಖೈದಿಗಳಿಗೆ ಬಂಧನದಿಂದ ಬಿಡುಗಡೆಯನ್ನೂ, ಮರಣದಂಡನೆಗೊಳಗಾದವರಿಗೂ ಬಿಡುಗಡೆಯನ್ನೂ ಮಾಡುತ್ತಿದ್ದನು. ರಾಜನಾದ ಧರ್ಮಾತ್ಮನಾದ ಯುಧಿಷ್ಠಿರನು ಯಾವಾಗಲೂ ಏನನ್ನೂ ಈ ವಿಷಯದಲ್ಲಿ ಹೇಳುತ್ತಿರಲಿಲ್ಲ.
ವಿಹಾರಯಾತ್ರಾಸು ಪುನಃ ಕುರುರಾಜೋ ಯುಧಿಷ್ಠಿರಃ |
ಸರ್ವಾನ್ ಕಾಮಾನುಪಸ್ಥಾಪ್ಯ ಧೃತರಾಷ್ಟ್ರೇ ನ್ಯವೇದಯತ್ ॥20॥
ಕುರುರಾಜನಾದ ಯುಧಿಷ್ಠಿರನು ವಿಹಾರ ಹಾಗೂ ಯಾತ್ರೆಗಳ ಸಂದರ್ಭದಲ್ಲೂ ಅಗತ್ಯವಿದ್ದ ಎಲ್ಲ ಅಭೀಷ್ಟವಸ್ತುಗಳನ್ನೂ ಜೊತೆಗೂಡಿಸಿ ಧೃತರಾಷ್ಟ್ರನಿಗೆ ಒಪ್ಪಿಸುತ್ತಿದ್ದನು.
ಆರಾಲಿಕಾಃ ಸೂಪಕಾರಾ ರಾಗಷಾಡವಿಕಾಸ್ತಥಾ |
ಉಪಾತಿಷ್ಠಂತ ರಾಜಾನಂ ಧೃತರಾಷ್ಟ್ರಂ ಯಥಾಪುರಮ್ ॥21॥
ಅನ್ನವನ್ನು ಮಾಡುವ ಆರಾಲಿಕರು, ವ್ಯಂಜನ ಪದಾರ್ಥವನ್ನು ಮಾಡುವ ಸೂಪಕಾರರು, ಚಿತ್ರವಿಚಿತ್ರವಾದ ಭಕ್ಷ್ಯಲೇಹ್ಯಾದಿಗಳನ್ನು ಮಾಡುವ ರಾಗಷಾಡವಿಕರು ಮೊದಲಿನಂತೆಯೇ ರಾಜನಾದ ಧೃತರಾಷ್ಟ್ರನನ್ನು ಸೇವಿಸುತ್ತಿದ್ದರು.
ವಾಸಾಂಸಿ ಸುಮಹಾರ್ಹಾಣಿ ಮಾಲ್ಯಾನಿ ವಿವಿಧಾನಿ ಚ |
ಉಪಜಹ್ರುರ್ಯಥಾಕಾಲಂ ಧೃತರಾಷ್ಟ್ರಸ್ಯ ಪಾಂಡವಾಃ ॥22॥
ಪಾಂಡವರು ಬೆಲೆಬಾಳುವ ವಸ್ತ್ರಗಳನ್ನು, ನಾನಾ ರೀತಿಯ ಮಾಲೆಗಳನ್ನು ಕಾಲಕ್ಕೆ ಸರಿಯಾಗಿ ಧೃತರಾಷ್ಟ್ರನಿಗೆ ಒಪ್ಪಿಸುತ್ತಿದ್ದರು.
ಮೈರೇಯಕಾಣಿ ಮಾಂಸಾನಿ ಪಾನಕಾನಿ ಲಘೂನಿ ಚ |
ಚಿತ್ರಾನ್ ಭಕ್ಷ್ಯವಿಕಾರಾಂಶ್ಚ ಚಕ್ರುರಸ್ಯ ಯಥಾಪುರಮ್ ॥23॥
ಈ ಹಿಂದಿನಂತೆಯೇ ನಾನಾ ರೀತಿಯ ಮದ್ಯಗಳನ್ನೂ, ಮಾಂಸಪದಾರ್ಥಗಳನ್ನೂ ಸಿಹಿಪಾನಕ ಮೊದಲಾದ ಸಣ್ಣ ಸಣ್ಣ ವಸ್ತುಗಳನ್ನೂ, ಚಿತ್ರವಿಚಿತ್ರವಾದ ಭಕ್ಷ್ಯ ವಸ್ತುಗಳನ್ನೂ ಧೃತರಾಷ್ಟ್ರನಿಗಾಗಿ ತಯಾರಿಸುತ್ತಿದ್ದರು.
ಯೇ ಚಾಪಿ ಪೃಥಿವೀಪಾಲಾಃ ಸಮಾಜಗ್ಮುಃ ಸಮಂತತಃ |
ಉಪಾತಿಷ್ಠಂತ ತೇ ಸರ್ವೇ ಕೌರವೇಂದ್ರಂ ಯಥಾಪುರಮ್ ॥24॥
ರಾಜದರ್ಶನಕ್ಕಾಗಿ ಯಾರೆಲ್ಲ ಸಾಮಂತರಾಜರು ಬರುತ್ತಿದ್ದರೋ ಅವರೆಲ್ಲರೂ ಧೃತರಾಷ್ಟ್ರನನ್ನು ಮೊದಲಿನಂತೆಯೇ ಗೌರವಿಸುತ್ತಿದ್ದರು.
ಕುಂತೀ ಚ ದ್ರೌಪದೀ ಚೈವ ಸಾತ್ವತೀ ಚೈವ ಭಾಮಿನೀ |
ಉಲೂಪೀ ನಾಗಕನ್ಯಾ ಚ ದೇವೀ ಚಿತ್ರಾಂಗದಾ ತಥಾ ॥25॥
ಧೃಷ್ಟಕೇತೋಶ್ಚ ಭಗಿನೀ ಜರಾಸಂಧಸ್ಯ ಚಾತ್ಮಜಾ |
ಏತಾಶ್ಚಾನ್ಯಾಶ್ಚ ಬಹ್ವ್ಯೋ ವೈ ಯೋಷಿತಃ ಪುರುಷರ್ಷಭ ॥26॥
ಕಿಂಕರಾಃ ಸ್ಮೋಪತಿಷ್ಠಂತಿ ಸರ್ವಾಃ ತಾಃ ಸುಬಲಾತ್ಮಜಾಮ್ ॥27॥
ಕುಂತೀದೇವಿ, ದ್ರೌಪದೀದೇವಿ, ಸಾತ್ವತ ವಂಶದ ಸ್ತ್ರೀಯಾದ ಸುಭದ್ರೆ, ನಾಗಕನ್ಯೆಯಾದ ಉಲೂಪೀ, ಚಿತ್ರಾಂಗದಾ ದೇವಿ ಹಾಗೆಯೇ ನಕುಲನ ಮಡದಿಯಾದ ಧೃಷ್ಟಕೇತುವಿನ ತಂಗಿಯಾದ ರೇಣುಮತಿ, ಸಹದೇವನ ಪತ್ನಿಯಾದ ಜರಾಸಂಧನ ಮಗಳು, ಜೊತೆಗೆ ಅಂತಃಪುರದಲ್ಲಿಯ ಎಲ್ಲ ಸ್ತ್ರೀಯರೂ ಕೂಡ ಸುಬಲಾತ್ಮಜೆಯಾದ ಗಾಂಧಾರಿಯನ್ನು ಸೇವಕಿಯರಂತೆ ಸೇವಿಸುತ್ತಿದ್ದರು.
ಯಥಾ ಪುತ್ರವಿಯುಕ್ತೋಽಯಂ ನ ಕಿಂಚಿದ್ದುಃಖಮಾಪ್ನುಯಾತ್ |
ಇತಿ ರಾಜಾಽನ್ವಶಾಸದ್ ಭ್ರಾತೄನ್ ನಿತ್ಯಮೇವ ಯುಧಿಷ್ಠಿರಃ ॥28॥
ರಾಜನಾದ ಯುಧಿಷ್ಠಿರನು ಈ ಧೃತರಾಷ್ಟ್ರನು ಮಕ್ಕಳಿಂದ ವಿಯುಕ್ತನಾಗಿ ಸ್ವಲ್ಪ ಕೂಡ ದುಃಖವನ್ನು ಹೇಗೆ ಹೊಂದಲಾರನೋ ಆ ರೀತಿ ಅವನಲ್ಲಿ ನಡೆದು- ಕೊಳ್ಳಬೇಕೆಂದು ಸಹೋದರರಿಗೆ ಆಜ್ಞಾಪಿಸಿದ್ದನು.
ಏತತ್ ತೇ ಧರ್ಮರಾಜಸ್ಯ ಶ್ರುತ್ವಾ ವಚನಮರ್ಥವತ್ |
ಸವಿಶೇಷಮವರ್ತಂತ ಭೀಮಮೇಕಂ ವಿನಾ ತದಾ ॥29॥
ಧರ್ಮರಾಜನು ಹೇಳಿದ ಅರ್ಥವತ್ತಾದ ಈ ಆಜ್ಞೆಯನ್ನು ಕೇಳಿ ಭೀಮನೊಬ್ಬನನ್ನು ಬಿಟ್ಟು ಉಳಿದೆಲ್ಲರೂ ಅದೇ ರೀತಿಯಾಗಿ ನಡೆದುಕೊಳ್ಳುತ್ತಿದ್ದರು.
ನ ಹಿ ತತ್ ತಸ್ಯ ವೀರಸ್ಯ ಹೃದಯಾದಪಗಚ್ಛತಿ |
ಧೃತರಾಷ್ಟ್ರಸ್ಯ ಯದ್ ವೃತ್ತಂ ದುರ್ಬುದ್ಧೇರ್ದ್ಯೂತಮಂಡಲೇ ॥30॥
ಆದರೆ ವೀರನಾದ ಭೀಮನಿಗೆ ದ್ಯೂತಪ್ರಸಂಗದಲ್ಲಿ ದುರ್ಬುದ್ಧಿಯುಳ್ಳ ಧೃತರಾಷ್ಟ್ರನ ಯಾವ ವರ್ತನೆಯಿದೆಯೋ ಅದು ಮನಸ್ಸಿನಿಂದ ಮರೆಯಾಗಿರಲಿಲ್ಲ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ
ಧೃತರಾಷ್ಟ್ರಶುಶ್ರೂಷಣಂ ನಾಮ ಪ್ರಥಮೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.
* * * * *

ಎರಡನೆಯ ಅಧ್ಯಾಯ

ನಗರವಾಸಿಗಳೆಲ್ಲರೂ ಧೃತರಾಷ್ಟ್ರನನ್ನು ಅನುಸರಿಸಲೇಬೇಕೆಂದು ಯುಧಿಷ್ಠಿರನಿಂದ ಕಟ್ಟಪ್ಪಣೆ ಜೊತೆಗೆ ಸಹೋದರರೊಂದಿಗೆ ಯಾವುದೇ ಪ್ರಮಾದ ಬರದಂತೆ ಧೃತರಾಷ್ಟ್ರನನ್ನು ಅನುಸರಿಸುವ ಮೂಲಕ ಧೃತರಾಷ್ಟ್ರನಿಗೆ ಆನಂದ.

ವೈಶಂಪಾಯನಃ
ಏವಂ ಸಂಪೂಜಿತೋ ರಾಜಾ ಪಾಂಡವೈರಂಬಿಕಾಸುತಃ |
ವಿಜಹಾರ ಯಥಾಪೂರ್ವಮೃಷಿಭಿಃ ಪರ್ಯುಪಸ್ಥಿತಃ ॥1॥
ವೈಶಂಪಾಯನ ಹೀಗೆ ಪಾಂಡವರಿಂದ ಗೌರವಿಸಲ್ಪಟ್ಟ ಅಂಬಿಕೆಯ ಮಗನಾದ ಧೃತರಾಷ್ಟ್ರ ರಾಜನು ಹಿಂದಿನಂತೆಯೇ ಋಷಿಗಳಿಂದ ಸುತ್ತುವರಿಯಲ್ಪಟ್ಟು ಸಂತೋಷದಿಂದಿದ್ದನು.

ಬ್ರಹ್ಮದೇಯಾಗ್ರಹಾರಾಂಶ್ಚ ಪ್ರದದೌ ಕುರುಸತ್ತಮಃ |
ತಚ್ಚ ಕುಂತೀಸುತೋ ರಾಜಾ ಸರ್ವಮೇವಾನ್ವಮೋದತ ॥2॥
ಕುರುಶ್ರೇಷ್ಠನಾದ ಧೃತರಾಷ್ಟ್ರನು ಬ್ರಾಹ್ಮಣರಿಗೆ ಕೊಡಲು ಯೋಗ್ಯವಾದ ಅಗ್ರಹಾರಗಳನ್ನು ಅವರಿಗೆ ದಾನ ಮಾಡಿದನು. ಆ ಎಲ್ಲವನ್ನೂ ಕುಂತೀಸುತನಾದ ಧರ್ಮರಾಜನು ಅನುಮೋದಿಸಿದನು.

ಆನೃಶಂಸ್ಯಪರೋ ಧೀಮಾನ್ ಪ್ರೀಯಮಾಣೋ ಯುಧಿಷ್ಠಿರಃ |
ಉವಾಚ ಚ ಸ ತಾನ್ ಭ್ರಾತೄನ್ ಅಮಾತ್ಯಾಂಶ್ಚ ಮಹೀಪತಿಃ ॥3॥
ಪರಮದಯಾಳುವಾದ ಯುಧಿಷ್ಠಿರನು ದೊಡ್ಡಪ್ಪನ ವಿಷಯದಲ್ಲಿ ಬಹಳ ಪ್ರೀತಿಯುಳ್ಳವನಾಗಿದ್ದನು. ಬುದ್ಧಿವಂತನಾದ ಅವನು ತನ್ನ ಸಹೋದರರನ್ನು ಹಾಗೂ ಅಮಾತ್ಯರನ್ನು ಕರೆಸಿಕೊಂಡು ಮುಂದೆ ಹೇಳುವಂತೆ ವಿಚಾರವನ್ನು ಮಂಡಿಸಿದನು.

ಯುಧಿಷ್ಠಿರಃ
ಮಯಾ ಚೈವ ಭವದ್ಭಿಶ್ಚ ಮಾನ್ಯ ಏವ ನರಾಧಿಪಃ ॥4॥
ನಿದೇಶೇ ಧೃತರಾಷ್ಟ್ರಸ್ಯ ಯಃ ಸ್ಥಾಸ್ಯತಿ ಸ ಮೇ ಸುಹೃತ್ |
ವಿಪರೀತಶ್ಚ ಮೇ ಶತ್ರುರ್ನಿರಸ್ಯಶ್ಚ ಭವೇನ್ನರಃ ॥5॥
ಯುಧಿಷ್ಠಿರ ನಾನು ಹಾಗು ನೀವೆಲ್ಲರೂ ರಾಜನಾದ ಧೃತರಾಷ್ಟ್ರನನ್ನು ಗೌರವಿಸಲೇಬೇಕು. ಯಾರು ಧೃತರಾಷ್ಟ್ರನ ಆಜ್ಞೆಯಂತೆ ಇರುವರೋ ಅವರು ನನಗೆ ಮಿತ್ರರಾಗಿದ್ದಾರೆ. ಯಾರು ಇದಕ್ಕೆ ವಿಪರೀತವಾಗಿ ನಡೆಯುವರೋ ಅವರು ನನ್ನ ಶತ್ರುಗಳಾಗಿದ್ದು ಹೊರನಡೆಯಬೇಕಾದ ಪರಿಸ್ಥಿತಿ ಬರಬಹುದು.

ಪರಿವೃತ್ತೇಷು ಚಾಹಸ್ಸು ಪುತ್ರಾಣಾಂ ಶ್ರಾದ್ಧಕರ್ಮಣಿ |
ದದಾತು ರಾಜಾ ವಿತ್ತಾನಿ ಯಾವದಸ್ಯ ಚಿಕೀರ್ಷಿತಮ್ ॥6॥
ಮುಂದಿನ ದಿನಗಳಲ್ಲಿ ತನ್ನ ಮಕ್ಕಳ ಶ್ರಾದ್ಧ ಮಾಡುವ ಸಂದರ್ಭ ಬಂದಾಗ ರಾಜನಾದ ಧೃತರಾಷ್ಟ್ರನು ಎಷ್ಟು ದಾನ ಮಾಡಬೇಕೆಂದು ಬಯಸುವನೋ ಅಷ್ಟು ಹಣವನ್ನೂ ಅವನಿಗೆ ಒದಗಿಸಬೇಕು.

ವೈಶಂಪಾಯನಃ
ತತಃ ಸ ರಾಜಾ ಕೌರವ್ಯೋ ಧೃತರಾಷ್ಟ್ರೋ ಮಹಾಮನಾಃ |
ಬ್ರಾಹ್ಮಣೇಭ್ಯೋ ಯಥಾರ್ಹೇಭ್ಯೋ ದದೌ ವಿತ್ತಮನೇಕಶಃ ॥7॥
ವೈಶಂಪಾಯನ ಅನಂತರ ಕುರುವಂಶದಲ್ಲಿ ಬಂದ ರಾಜನಾದ ಆ ಧೃತರಾಷ್ಟ್ರನು ವಿಶಾಲ ಮನಸ್ಸುಳ್ಳವನಾಗಿ ಬ್ರಾಹ್ಮಣರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಅನೇಕ ರೀತಿಯಿಂದ ಹಣವನ್ನು ನೀಡಿದನು ಅರ್ಥಾತ್ ದಾನ ಮಾಡಿದನು.

ಧರ್ಮರಾಜಶ್ಚ ಭೀಮಶ್ಚ ಸವ್ಯಸಾಚೀ ಯಮಾವಪಿ |
ತತ್ಸರ್ವಮನ್ವವರ್ತಂತ ಧೃತರಾಷ್ಟ್ರವ್ಯಪೇಕ್ಷಯಾ ॥8॥
ಧರ್ಮರಾಜ, ಭೀಮ, ಸವ್ಯಸಾಚಿಯಾದ ಅರ್ಜುನ, ಅವಳಿ ಮಕ್ಕಳಾದ ನಕುಲ ಸಹದೇವ- ಇವರೆಲ್ಲರೂ ಕೂಡ ಧೃತರಾಷ್ಟ್ರನ ಮೇಲಿನ ಆದರದಿಂದ ಅವನು ಮಾಡಿದ ಎಲ್ಲವನ್ನೂ ಒಪ್ಪಿ ಅನುಸರಿಸಿದರು.

ಕಥಂ ನು ರಾಜಾ ವೃದ್ಧಃ ಸನ್ ಪುತ್ರಶೋಕಸಮಾಹತಃ |
ಶೋಕಮಸ್ಮತ್ಕೃತಂ ಪ್ರಾಪ್ಯ ನ ಮ್ರಿಯೇತೇತಿ ಚಿಂತ್ಯ ವೈ ॥9॥
ವೃದ್ಧನಾದ, ಪುತ್ರರ ಶೋಕದಿಂದ ಈಗಾಗಲೇ ಪೆಟ್ಟುತಿಂದಿರುವ ರಾಜನಾದ ಧೃತರಾಷ್ಟ್ರನು ನಾವು ಮಾಡಿದ ಕಾರ್ಯಗಳಿಂದ ದುಃಖವನ್ನು ಹೊಂದಿದವನಾಗಿ ಸಾಯಬಾರದು ಎಂದು ಚಿಂತಿಸಿ ಅವನ ಕರ್ಮಗಳನ್ನು ಒಪ್ಪಿಕೊಂಡರು.

ಯಾವದ್ಧಿ ಕುರುಮುಖ್ಯಸ್ಯ ಜೀವಪುತ್ರಸ್ಯ ವೈ ಸುಖಮ್ |
ತಾವತ್ ಸುಖಮವಾಪ್ನೋತು ಭೋಗಾಂಶ್ಚೇತಿ ವ್ಯವಸ್ಥಿತಾಃ ॥10॥
ಕುರುಮುಖ್ಯನಾದ ಧೃತರಾಷ್ಟ್ರನಿಗೆ ಮಕ್ಕಳು ಬದುಕಿದ್ದರೆ ಯಾವೆಲ್ಲ ಸುಖವಿರುವುದೋ ಆ ಎಲ್ಲ ಸುಖಗಳನ್ನೂ ಹಾಗು ವಿಷಯಭೋಗಗಳನ್ನು ಅವನು ಹೊಂದಲಿ ಎಂದು ಪಾಂಡವರೆಲ್ಲರೂ ನಿಶ್ಚಯಿಸಿದ್ದರು.

ತತಸ್ತೇ ಸಹಿತಾಃ ಸರ್ವೇ ಭ್ರಾತರಃ ಪಂಚ ಪಾಂಡವಾಃ |

ದಾನಶೀಲಾಸ್ತಥಾ ತಸ್ಥುರ್ಧೃತರಾಷ್ಟ್ರಸ್ಯ ಶಾಸನೇ ॥11॥
ಆದ್ದರಿಂದಲೇ ಐದು ಮಂದಿ ಅಣ್ಣ-ತಮ್ಮಂದಿರಾದ ಪಾಂಡವರು ಒಗ್ಗಟ್ಟಾಗಿ ದಾನಶೀಲರಾಗಿದ್ದರು. ಹಾಗೆಯೇ ಧೃತರಾಷ್ಟ್ರನ ಆಜ್ಞೆಯಂತೆ ನಡೆದುಕೊಂಡರು.
ಧೃತರಾಷ್ಟ್ರಸ್ತು ತಾನ್ ವೀರಾನ್ ವಿನೀತಾನ್ ವಿನಯೇ ಸ್ಥಿತಾನ್ |
ಶಿಷ್ಯವೃತ್ತೌ ಸ್ಥಿತಾನ್ ನಿತ್ಯಂ ಗುರುವತ್ ತಾನಪಶ್ಯತ ॥12॥
ಧೃತರಾಷ್ಟ್ರನಾದರೂ ವಿನೀತರಾದ, ವಿಶಿಷ್ಟವಾದ ನೀತಿಯಲ್ಲಿ ಇರುವ, ವೀರರಾದ, ತನಗೆ ಶಿಷ್ಯರಂತೆ ವರ್ತಿಸುತ್ತಿರುವ ಆ ಪಾಂಡವರನ್ನು ನೋಡಿ ಅವರನ್ನು ಗುರು- ಹಿರಿಯರು ನೋಡುವಂತೆಯೇ ನೋಡತೊಡಗಿದನು.
ಗಾಂಧಾರೀ ಚಾಪಿ ಪುತ್ರಾಣಾಂ ವಿವಿಧೈಃ ಶ್ರಾದ್ಧಕರ್ಮಭಿಃ |
ಆನೃಣ್ಯಮಗಮತ್ ಕಾಮಂ ವಿಪ್ರೇಭ್ಯಃ ಪ್ರತಿಪಾದ್ಯ ವೈ ॥13॥
ಗಾಂಧಾರೀ ದೇವಿಯೂ ಕೂಡ ತನ್ನ ಪುತ್ರರಿಗಾಗಿ ನಾನಾ ರೀತಿಯ ಶ್ರಾದ್ಧ ಕರ್ಮಗಳನ್ನು ಅನುಷ್ಠಾನ ಮಾಡುತ್ತಾ, ಬ್ರಾಹ್ಮಣರಿಗೆ ಯಥೇಷ್ಟವಾಗಿ ದಾನವನ್ನೂ ಮಾಡುತ್ತಾ ಪುತ್ರಋಣದಿಂದ ಮುಕ್ತಿಯನ್ನು ಪಡೆದಳು.
ಏವಂ ಧರ್ಮಭೃತಾಂ ಶ್ರೇಷ್ಠೋ ಧರ್ಮರಾಜೋ ಯುಧಿಷ್ಠಿರಃ |
ಭ್ರಾತೃಭಿಃ ಸಹಿತೋ ಧೀಮಾನ್ ಪೂಜಯಾಮಾಸ ತಂ ನೃಪಮ್ ॥14॥
ಈ ರೀತಿಯಾಗಿ ಧಾರ್ಮಿಕರಲ್ಲಿ ಶ್ರೇಷ್ಠನಾಗಿ ಧರ್ಮರಾಜನನೆನಿಸಿದ ಬುದ್ಧಿವಂತನಾದ ಯುಧಿಷ್ಠಿರರಾಜನು ಸಹೋದರರ ಜೊತೆಗೆ ಕೂಡಿಕೊಂಡು ರಾಜನಾದ ಆ ಧೃತರಾಷ್ಟ್ರನನ್ನು ಗೌರವಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ದ್ವಿತೀಯೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ಧೃತರಾಷ್ಟ್ರ ಗಾಂಧಾರಿಯರು ಪಾಂಡವರ ಜೊತೆ ಸುಖದಿಂದಿರುವುದು. ಧೃತರಾಷ್ಟ್ರನಲ್ಲಿ ಧರ್ಮಜನ ಅನನ್ಯ ಪ್ರೀತಿ. ಭೀಮಸೇನನ ಅಸಮಾಧಾನ.
ವೈಶಂಪಾಯನಃ
ಸ ರಾಜಾ ಸುಮಹಾತೇಜಾ ವೃದ್ಧಃ ಕುರುಕುಲೋದ್ವಹಃ |
ನಾಪಶ್ಯತ ತದಾ ಕಿಂಚಿದ್ ಅಪ್ರಿಯಂ ಕುರುನಂದನಾತ್ ॥1॥
ವೈಶಂಪಾಯನ ಮಹಾತೇಜಸ್ವಿಯಾದ, ಕುರುಕುಲದಲ್ಲಿ ಜನಿಸಿದ, ವೃದ್ಧನಾದ ಆ ಧೃತರಾಷ್ಟ್ರರಾಜನು ಕುರುನಂದನನಾದ ಯುಧಿಷ್ಠಿರನಿಂದ ಸ್ವಲ್ಪವೂ ಕೂಡ ಅಹಿತಕರವಾದ ನಡವಳಿಕೆಯನ್ನು ನೋಡಲಿಲ್ಲ.
ವರ್ತಮಾನೇಷು ಸದ್ವೃತ್ತಿಂ ಪಾಂಡವೇಷು ಮಹಾತ್ಮಸು |
ಪ್ರೀತಿಮಾನಭವದ್ ರಾಜಾ ಧೃತರಾಷ್ಟ್ರೋಽಂಬಿಕಾಸುತಃ ॥2॥
ಮಹಾತ್ಮರಾದ ಪಾಂಡವರು ಸನ್ನಡತೆಯಲ್ಲಿ ಇರುವುದನ್ನು ಕಂಡು ಅಂಬಿಕೆಯ ಮಗನಾದ ಧೃತರಾಷ್ಟ್ರರಾಜನು ಅವರಲ್ಲಿ ಅತಿಶಯವಾದ ಪ್ರೀತಿಯುಳ್ಳವನಾದನು.
ಸೌಬಲೇಯೀ ಚ ಗಾಂಧಾರೀ ಪುತ್ರಶೋಕಮಪಾಸ್ಯ ತಮ್ |
ಸದೈವ ಪ್ರೀತಿಮತ್ಯಾಸೀತ್ ಪಾಂಡವೇಷು ನಿಜೇಷ್ವಿವ ॥3॥
ಸುಬಲಾತ್ಮಜೆಯಾದ ಗಾಂಧಾರಿಯೂ ಕೂಡ ತನ್ನ ಪುತ್ರಶೋಕವನ್ನು ಕಳೆದುಕೊಂಡು ತನ್ನ ಮಕ್ಕಳಲ್ಲಿ ಮಾಡುವಂತೆಯೇ ಪಾಂಡವರಲ್ಲಿ ಯಾವಾಗಲೂ ಪ್ರೀತಿಯುಳ್ಳವಳಾದಳು.
ಪ್ರಿಯಾಣ್ಯೇವ ತು ಕೌರವ್ಯೋ ನಾಪ್ರಿಯಾಣಿ ಕುರೂದ್ವಹಃ |
ವೈಚಿತ್ರವೀರ್ಯೇ ನೃಪತೌ ಸಮಾಚರತ ಸರ್ವದಾ ॥4॥
ಕುರುವಂಶದಲ್ಲಿ ಜನಿಸಿದ ಯುಧಿಷ್ಠಿರನು ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರರಾಜನಲ್ಲಿ ಅವನಿಗೆ ಪ್ರಿಯವಾದುದನ್ನೇ ಸದಾಕಾಲ ಮಾಡುತ್ತಿದ್ದನು. ಕುರೂದ್ವಹನಾದ ಆ ಯುಧಿಷ್ಠಿರನು ಅಪ್ರಿಯವಾದ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ.
ಯದ್ಯದ್ ಬ್ರೂತೇ ಚ ಕಿಂಚಿತ್ ಸ ಧೃತರಾಷ್ಟ್ರೋ ನರಾಧಿಪಃ |
ಗುರು ವಾ ಲಘು ವಾ ಕಾರ್ಯಂ ಗಾಂಧಾರೀ ವಾ ಯಶಸ್ವಿನೀ ॥5॥
ತತ್ ಸ ರಾಜಾ ನರವ್ಯಾಘ್ರಃ ಪಾಂಡವಾನಾಂ ಧುರಂಧರಃ |
ಪೂಜಯಿತ್ವಾ ವಚಸ್ತತ್ತದ್ ಅಕಾರ್ಷೀತ್ ಪರವೀರಹಾ ॥6॥
ನರಶ್ರೇಷ್ಠನಾದ ಪಾಂಡವರಲ್ಲಿ ಅಗ್ರಗಣ್ಯನಾದ ಆ ಧರ್ಮರಾಜನು ನರಾಧಿಪನಾದ ಧೃತರಾಷ್ಟ್ರನು ಯಾವೆಲ್ಲವನ್ನು ಹೇಳುತ್ತಿದ್ದನೋ ಅಥವಾ ಯಶಸ್ವಿನಿಯಾದ ಗಾಂಧಾರಿ ದೇವಿಯು ಯಾವೆಲ್ಲವನ್ನು ಹೇಳುತ್ತಿದ್ದಳೋ ಅಂತಹ ಕಾರ್ಯವು ಬಹಳ ದೊಡ್ಡದಾಗಿದ್ದರೂ ಅಥವಾ ಚಿಕ್ಕದಾಗಿದ್ದರೂ ಅವರ ಮಾತನ್ನು ಗೌರವಿಸಿ ಅವೆಲ್ಲವನ್ನೂ ನಡೆಸಿಕೊಡುತ್ತಿದ್ದನು.
ತೇನ ತಸ್ಯಾಭವತ್ ಪ್ರೀತೋ ವೃತ್ತೇನ ಸ ನರಾಧಿಪಃ ॥7॥
ಅನ್ವತಪ್ಯತ ಸಂಸ್ಮೃತ್ಯ ಪುತ್ರಂ ಮಂದಮಚೇತಸಮ್ ॥8॥
ನರಾಧಿಪನಾದ ಆ ಧೃತರಾಷ್ಟ್ರನು ಯುಧಿಷ್ಠಿರನ ಈ ಹಿಂದೆ ಹೇಳಿದ ನಡತೆಯಿಂದ ಬಹಳ ಸಂತೋಷವನ್ನು ಹೊಂದಿದನು. ಅದೇ

ಸಮಯದಲ್ಲಿ ಬುದ್ಧಿಯಿಲ್ಲದ, ದಡ್ಡನಾದ ತನ್ನ ಮಗನನ್ನು ನೆನಪಿಸಿಕೊಂಡು ದುಃಖಪಟ್ಟನು.
ಸದಾ ಚ ಪ್ರಾತರುತ್ಥಾಯ ಕೃತಜಪ್ಯಃ ಶುಚಿರ್ನೃಪಃ |
ಆಶಾಸ್ತೇ ಪಾಂಡುಪುತ್ರಾಣಾಂ ಸಮರೇಷ್ವಪರಾಜಯಮ್ ॥9॥
ರಾಜನಾದ ಧೃತರಾಷ್ಟ್ರನು ಯಾವಾಗಲೂ ಕೂಡ ಬೆಳಿಗ್ಗೆ ಎದ್ದು ನಿತ್ಯಾಹ್ನಿಕಗಳನ್ನು ಮುಗಿಸಿ ಪಾಂಡುಪುತ್ರರಿಗೆ ಯುದ್ಧದಲ್ಲಿ ಯಾವಾಗಲೂ ಸೋಲಾಗದಂತೆ ಆಶೀರ್ವದಿಸುತ್ತಿದ್ದನು.
ಬ್ರಾಹ್ಮಣಾನ್ ಯಾಚಯಿತ್ವಾ ಚ ಹುತ್ವಾ ಚೈವ ಹುತಾಶನಮ್ |
ಆಯೂಂಷಿ ಪಾಂಡುಪುತ್ರಾಣಾಮನುಶಾಸ್ತೇ ಸ ಕೌರವಃ ॥10॥
ಕುರುವಂಶದಲ್ಲಿ ಜನಿಸಿದ ಆ ಧೃತರಾಷ್ಟ್ರನು ಬ್ರಾಹ್ಮಣರಲ್ಲಿ ಕೇಳಿಕೊಂಡು ಯಜ್ಞ ಯಾಗಾದಿಗಳನ್ನು ನಡೆಸಿ ಪಾಂಡುಪುತ್ರರಿಗೆ ಆಯುಷ್ಯವೃದ್ಧಿಯಾಗುವಂತೆ ಪ್ರಾರ್ಥಿಸುತ್ತಿದ್ದನು.
ಸ ತಾಂ ಪ್ರೀತಿಂ ಪರಾಮಾಪ ಸ್ವಪ್ನೇಭ್ಯಃ ಸ ಮಹೀಪತಿಃ |
ಯಾಂ ಪ್ರೀತಿಂ ಪಾಂಡುಪುತ್ರೇಭ್ಯಃ ಸಮವಾಪ ಮಹೀಪತಿಃ ॥11॥
ಮಹೀಪತಿಯಾದ ಧೃತರಾಷ್ಟ್ರನು ಪಾಂಡುಪುತ್ರರಿಂದ ಯಾವ ರೀತಿ ಸಂತೋಷ ಹೊಂದಿದನೆಂದರೆ ನಿದ್ರೆಯಿಂದ ಮಾತ್ರ ಹೊಂದಬಹುದಾದ ಉತ್ತಮವಾದ ಆ ಸ್ವರೂಪ ಸುಖವನ್ನೇ ಅನುಭವಿಸಿದನು.
ಬ್ರಾಹ್ಮಣಾನಾಂ ಚ ವೃದ್ಧಾನಾಂ ಕ್ಷತ್ರಿಯಾಣಾಂ ಚ ಭಾರತ |
ತಥಾ ವಿಟ್ಶೂದ್ರಸಂಘಾನಾಮಭವತ್ ಪಾಂಡವಃ ಪ್ರಿಯಃ ॥12॥
ಪಾಂಡುನಂದನನಾದ ಧರ್ಮರಾಜನು ಬ್ರಾಹ್ಮಣರಿಗೆ, ವೃದ್ಧರಿಗೆ, ಕ್ಷತ್ರಿಯರಿಗೆ ಹೇಗೆ ಪ್ರಿಯನಾಗಿದ್ದನೋ ಅದೇ ರೀತಿ ವೈಶ್ಯರಿಗೂ, ಶೂದ್ರಸಮೂಹದವರಿಗೂ ಅತ್ಯಂತ ಪ್ರೀತಿಪಾತ್ರನಾಗಿದ್ದನು.
ಯಚ್ಚ ಕಿಂಚಿತ್ ಪುರಾ ಪಾಪಂ ಧೃತರಾಷ್ಟ್ರಸುತೈಃ ಕೃತಮ್ |
ಅಕೃತ್ವಾ ಹೃದಿ ತದ್ ರಾಜಾ ತಂ ನೃಪಂ ಸೋಽನ್ವವರ್ತತ ॥13॥
ಈ ಹಿಂದೆ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನನಿಂದ ಏನೆಲ್ಲ ಪಾಪಕೃತ್ಯಗಳು ತಮ್ಮ ವಿಷಯದಲ್ಲಿ ನಡೆಸಲ್ಪಟ್ಟಿವೆಯೋ ಆ ಎಲ್ಲವನ್ನೂ ರಾಜನಾದ ಯುಧಿಷ್ಠಿರನು ಮನಸ್ಸಿನಲ್ಲಿ ಇರಿಸಿಕೊಳ್ಳದೆ ಧೃತರಾಷ್ಟ್ರನನ್ನು ಅನುಸರಿಸಿದನು.
ಯಶ್ಚ ಕಶ್ಚ ನರಃ ಕಿಂಚಿದಪ್ರಿಯಂ ಹ್ಯಂಬಿಕಾಸುತೇ |
ಕುರುತೇ ದ್ವೇಷ್ಯತಾಮೇತಿ ಸ ಕೌಂತೇಯಸ್ಯ ಧೀಮತಃ ॥14॥
ಯಾವುದೇ ಒಬ್ಬ ಮನುಷ್ಯನು ಅಂಬಿಕಾಸುತನಾದ ಧೃತರಾಷ್ಟ್ರನಲ್ಲಿ ಸ್ವಲ್ಪ ಅಪ್ರಿಯವಾದುದನ್ನು ಮಾಡುತ್ತಾನೋ ಅವನು ಧೀಮಂತನಾದ, ಕುಂತೀಪುತ್ರನಾದ ಯುಧಿಷ್ಠಿರನಿಗೆ ದ್ವೇಷಿಯಾಗುತ್ತಾನೆ.
ನ ರಾಜ್ಞೋ ಧೃತರಾಷ್ಟ್ರಸ್ಯ ನ ಚ ದುರ್ಯೋಧನಸ್ಯ ಚ |
ಅರೋಚದ್ ದುಷ್ಕೃತಂ ಕಿಂಚಿದ್ ಯುಧಿಷ್ಠಿರಭಯಾನ್ನರಃ ॥15॥
ಯುಧಿಷ್ಠಿರನ ಮೇಲಿನ ಭಯದಿಂದ ಯಾವುದೇ ಮನುಷ್ಯನೂ ಕೂಡ ರಾಜನಾದ ಧೃತರಾಷ್ಟ್ರನ ಅಥವಾ ಹಿಂದಿನ ರಾಜನಾದ ದುರ್ಯೋಧನನ ಕೆಟ್ಟ ಕೆಲಸವನ್ನು ಸ್ವಲ್ಪವೂ ಪ್ರಕಟಪಡಿಸಲಿಲ್ಲ.
ತುಷ್ಟೋಽಭೂದ್ ಧೃತರಾಷ್ಟ್ರಶ್ಚ ಗಾಂಧಾರೀ ಚ ಮಹಾಯಶಾಃ |
ಅಜಾತಶತ್ರೋರ್ವೃತ್ತೇನ ನ ತು ಭೀಮಸ್ಯ ಪಾರ್ಥಿವಃ ॥16॥
ಮಹಾಯಶಸ್ವಿಯಾದ ಧೃತರಾಷ್ಟ್ರನು ಮತ್ತು ಗಾಂಧಾರಿ ದೇವಿಯೂ ಕೂಡ ಅಜಾತಶತ್ರುವಾದ ಯುಧಿಷ್ಠಿರನ ಈ ನಡವಳಿಕೆಯಿಂದ ತೃಪ್ತರಾದರು. ಆದರೆ ರಾಜನಾದ ಧೃತರಾಷ್ಟ್ರನು ಭೀಮನ ನಡವಳಿಕೆಯಿಂದ ಸಂತೋಷಪಡಲಿಲ್ಲ.
ಅನ್ವವರ್ತಂತ ಭೀಮೋಽಪಿ ತಿಷ್ಠಂತಂ ಧರ್ಮಜಂ ನೃಪಮ್ |
ಧೃತರಾಷ್ಟ್ರಂ ಸ ಸಂಪ್ರೇಕ್ಷ್ಯ ಸದಾ ಭವತಿ ದುರ್ಮನಾಃ ॥17॥
ಭೀಮನಾದರೂ ರಾಜನಾದ ಧೃತರಾಷ್ಟ್ರನಿಗೆ ಅನುಕೂಲವಾಗಿ ನಡೆಯುವ ಧರ್ಮರಾಜನನ್ನು ಅನುಸರಿಸಿದರೂ ಧೃತರಾಷ್ಟ್ರನನ್ನು ನೋಡುವ ಎಲ್ಲ ಸಂದರ್ಭಗಳಲ್ಲೂ ಉದ್ವೇಗಗೊಳ್ಳುತ್ತಿದ್ದನು.
ರಾಜಾನಮನುಗಚ್ಛಂಸ್ತು ಧರ್ಮಪುತ್ರಂ ಮಹಾಮತಿಮ್ |
ಅನ್ವವರ್ತತ ಸಕ್ರೋಧೋ ಹೃದಯೇನ ಪರಾಙ್ಮುಖಃ ॥18॥
ಮಹಾಬುದ್ಧಿಶಾಲಿಯಾದ ಧರ್ಮಪುತ್ರನಾದ ರಾಜಾ ಯುಧಿಷ್ಠಿರನನ್ನು ಅನುಸರಿಸುವವನಾದರೂ ಧೃತರಾಷ್ಟ್ರನ ವಿಷಯದಲ್ಲಿ ಕ್ರೋಧದಿಂದ ಕೂಡಿದವನಾಗಿ ಮನಸ್ಸಿಲ್ಲದೆ ಅವನನ್ನು ಅನುಸರಿಸುತ್ತಿದ್ದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ತೃತೀಯೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ಅಥಾಽಂಬಿಕೇಯಂ ವಿಷಯೇಷು ಸಕ್ತಂ
ದುಸ್ಸಂಗದುಷ್ಟಂ ಕೃತಭೂರಿದೋಷಮ್ |
ಸಮಸ್ತರಾಜಾಪ್ಯಯಹೇತುಭೂತಂ

        ವಿಚಾರ್ಯ ತಂ ಮಾರುತಿರನ್ವಕಂಪತ ॥
ಬಳಿಕ ಧೃತರಾಷ್ಟ್ರನು ದುರ್ಜನಸಂಗದೋಷದಿಂದ ಸಮಸ್ತ ರಾಜರ ನಾಶಕ್ಕೆ ಕಾರಣನಾಗಿ ಮಹಾಪಾಪ ಮಾಡಿದ್ದರೂ ವಿಷಯಭೋಗದಲ್ಲಿ ಆಸಕ್ತನಾಗಿದ್ದುದನ್ನು ಕಂಡು ಭೀಮನು ಅವನಲ್ಲಿ ಅನುಕಂಪ ತೋರಿದ.
ಅಕುರ್ವತಸ್ತೀಕ್ಷ್ಣತಪಃ ಕುತಶ್ಚಿ-
        ನ್ನೈವಾಸ್ಯ ಲೋಕಾಪ್ತಿರಮುಷ್ಯ ಭೂಯಾತ್ ।
ರಾಗಾಧಿಕೋಽಯಂ ನ ತಪಶ್ಚ ಕುರ್ಯಾ-
        ದಿತ್ಯಸ್ಯ ವೈರಾಗ್ಯಕರಾಣಿ ಚಕ್ರೇ ॥
ಧೃತರಾಷ್ಟ್ರನಿಗೆ ತೀವ್ರ ತಪಸ್ಸು ಮಾಡದೆ ತನ್ನ ಗಂಧರ್ವಲೋಕ ಪ್ರಾಪ್ತಿ ಯಾವ ಕಾರಣದಿಂದಲೂ ಆಗದು. ವಿಷಯಾಸಕ್ತಿ ಬಹಳ ಇರುವುದರಿಂದ ತಪಸ್ಸನ್ನು ಮಾಡಲಾರ ಎಂದು ಅವನಿಗೆ ವೈರಾಗ್ಯ ಉಂಟು ಮಾಡಲು ಉಪಾಯಗಳನ್ನು ಕೈಗೊಂಡನು.
ಆಜ್ಞಾಂ ಪರ್ಯೈರಸ್ಯ ನಿಹಂತಿ ಸೋದರ್ಯೈ-
        ರ್ವಧೂಜನ್ಯೈರಪ್ಯತಿಪೂಜಿತೇಽಸ್ಮಿನ್ ।
ಸ ನಿಷ್ಟುನತ್ಯೇವಮಪೀತರೈಃ ಸ
        ಸುಪೂಜಿತೋ ನಾಽಸ ತದಾ ವಿರಾಗಃ ॥
ಸೋದರರೂ ಸ್ತ್ರೀಯರೂ ಧೃತರಾಷ್ಟ್ರನನ್ನು ಅತಿಯಾಗಿ ಸತ್ಕರಿಸುತ್ತಿದ್ದರೂ ಭೀಮನು ಇತರ ಜನರಿಂದ ಅವನ ಆಜ್ಞೆಯ ಉಲ್ಲಂಘನೆ ಮಾಡಿಸಿದನು. ತಾನೂ ನಿಷ್ಠುರವಾಗಿ ಮಾತನಾಡಿ ನಿರಾಕರಿಸಿದನು. ಹೀಗಿದ್ದರೂ ಇತರರು ಚೆನ್ನಾಗಿಯೇ ಸತ್ಕರಿಸುತ್ತಿದ್ದುದರಿಂದ ಧೃತರಾಷ್ಟ್ರನಿಗೆ ವೈರಾಗ್ಯ ಬರಲಿಲ್ಲ.
ಸರ್ವೇ ಹಿ ಪಾರ್ಥಾಸ್ತಮೃತೇ ಸಭಾರ್ಯಾ
        ವೈಚಿತ್ರವೀರ್ಯಂ ಪರಮಾದರೇಣ ।
ಪರ್ಯೇವ ಚಕ್ರುಃ ಸತತಂ ಸಭಾರ್ಯಂ
        ಕೃಷ್ಣಾ ಚ ನ ಸ್ಯಾತ್ ತನಯಾರ್ತಿಮಾನಿತಿ ॥
ಭೀಮನೊಬ್ಬನನ್ನು ಹೊರತು ಎಲ್ಲ ಪಾಂಡವರೂ ಪತ್ನೀ ಸಮೇತರಾಗಿ ಸತತವಾಗಿ ಪರಮಾದರದಿಂದ ಪತ್ನೀ ಸಹಿತನಾದ ಧೃತರಾಷ್ಟ್ರನನ್ನು ಉಪಚರಿಸಿದರು. ಅವನು ಪುತ್ರಶೋಕದಿಂದ ಪೀಡಿತನಾಗದಿರಲೆಂದು ದ್ರೌಪದಿಯೂ ಉಪಚರಿಸಿದಳು.
ಸ ಪ್ರೀಯಮಾಣೋ ನಿತರಾಂ ಚ ತೇಷು
        ನೈವಾಧಿಕಂ ಪ್ರೀಯತೇ ಭೀಮಸೇನೇ ।
ಸ್ಮರನ್ ಸುತಾಂಸ್ತೇನ ಹತಾನ್ ಸಮಸ್ತಾ-
        ನಪಿ ಪ್ರಭಾವಂ ಪರಮಸ್ಯ ಜಾನನ್ ॥
ಧೃತರಾಷ್ಟ್ರ ಭೀಮನ ಮಹಾಬಲವನ್ನು ಅರಿತವನಾಗಿದ್ದರೂ ಬೇರೆ ಪಾಂಡವರಲ್ಲಿ ಬಹಳ ಪ್ರೀತಿ ಮಾಡುವಾಗಲೂ ಭೀಮಸೇನನನ್ನು ಹೆಚ್ಚು ಪ್ರೀತಿ ಮಾಡಲಿಲ್ಲ. ಅವನು ತನ್ನೆಲ್ಲ ಮಕ್ಕಳನ್ನು ಕೊಂದುದನ್ನೇ ನೆನೆಯುತ್ತಿದ್ದನು.
ತಸ್ಯಾಪನೇತುಂ ವಿಷಯೇಷು ಸಕ್ತಿಂ
        ದ್ವೇಷಂ ತಥೈವಾಽತ್ಮನಿ ಭೀಮಸೇನಃ ।
ಜಗಾದ ಮಾದ್ರೀಸುತಯೋಃ ಸಮಕ್ಷ-
        ಮಾಸ್ಫೋಟ್ಯ ಸಂಶೃಣ್ವತ ಏವ ತಸ್ಯ ॥
ಭೀಮಸೇನ ಧೃತರಾಷ್ಟ್ರನಿಗೆ ವಿಷಯ ಭೋಗದಲ್ಲಿ ಆಸಕ್ತಿಯನ್ನೂ ತನ್ನಲ್ಲಿ ದ್ವೇಷವನ್ನು ಕಳೆಯುವುದಕ್ಕಾಗಿ ನಕುಲ-ಸಹದೇವರ ಸಮಕ್ಷಮದಲ್ಲಿ ಧೃತರಾಷ್ಟ್ರ ಕೇಳುವಂತೆ ಭುಜ ತಟ್ಟಿಕೊಂಡು ಹೇಳಿದ.
ತಾವಿಮೌ ಮೇ ಭುಜೌ ವೃತ್ತೌ ಪೀನೌ ಚಂದನರೂಷಿತೌ ।
ಯಯೋರಂತರಮಾಸಾದ್ಯ ಜರಠಸ್ಯ ಸುತಾ ಹತಾಃ ॥
`ದುಂಡಾಗಿ ಪುಷ್ಟವಾಗಿ ಶ್ರೀಗಂಧಲೇಪನಯುಕ್ತವಾದ ಈ ನನ್ನ ಭುಜಗಳ ನಡುವೆ ಸಿಲುಕಿಯೇ ಈ ಮುದುಕನ ಮಕ್ಕಳೆಲ್ಲ ಹತರಾದರು' ಎಂದು.
ಯಮೌ ತದನ್ವಮೋದೇತಾಂ ತತ್ಸ್ನೇಹಾದ್ ಗೌರವಾದಪಿ ।
ನೈವ ತತ್ಕೃಷ್ಣಯಾ ಜ್ಞಾತಂ ಪೃಥಯಾ ಚ ಸಪುತ್ರಯಾ ॥
ತಚ್ಛ್ರುತ್ವೋತ್ಪನ್ನನಿರ್ವೇದಂ ಕ್ಷತ್ತಾ ಜ್ಯೇಷ್ಠಸ್ಯ ವರ್ಧಯನ್ ।
ಉವಾಚ ಜೀವಿತಾಶಾ ತೇ ನನು ರಾಜನ್ ಗರೀಯಸೀ ॥
ನಕುಲ-ಸಹದೇವರು ಭೀಮನ ಮಾತನ್ನು ಒಪ್ಪಿದರು. ಆದರೆ ಧೃತರಾಷ್ಟ್ರನ ಮೇಲಿನ ಪ್ರೀತಿಯಿಂದಲೂ, ಗೌರವದಿಂದಲೂ ಏನೂ ಹೇಳಲಿಲ್ಲ. ಈ ಸಂಗತಿ ದ್ರೌಪದಿಗಾಗಲಿ, ಕುಂತಿಗಾಗಲಿ, ಧರ್ಮರಾಜನಿಗಾಗಲಿ, ಅರ್ಜುನನಿಗಾಗಲಿ ತಿಳಿಯಲಿಲ್ಲ. ಭೀಮನ ಈ ಮಾತನ್ನು ಕೇಳಿ ಧೃತರಾಷ್ಟ್ರನಿಗೆ ವೈರಾಗ್ಯ ಮೂಡಿತು. ಆ ವೈರಾಗ್ಯವನ್ನು ಹೆಚ್ಚಿಸಲು ವಿದುರ ಅವನಿಗೆ ಹೇಳಿದ: `ರಾಜನೇ, ನಿನಗೆ ಬದುಕುವಾಸೆ ಅತಿಯಾಗಿದೆ.
ಅಹೋ ಗರೀಯಸೀ ಜಂತೋರ್ಜೀವಿತಾಶಾ ಯಯಾ ಭವಾನ್ ।
ಭೀಮಾಪವರ್ಜಿತಂ ಪಿಂಡಮಾದತ್ತೇ ಗೃಹಪಾಲವತ್ ॥
`ಆಶ್ಚರ್ಯ! ಜಂತುವಿಗೆ ಬದುಕುವಾಸೆ ದೊಡ್ಡದು. ಅದರಿಂದಲೇ ನೀನು ಭೀಮನೆಸೆವ ಅನ್ನದ ಪಿಂಡವನ್ನು ಮನೆ ಕಾಯುವ ನಾಯಿಯಂತೆ ಉಣ್ಣುತ್ತಿ!'

ನ ಚಾಪರಾಧೋ ಭೀಮಸ್ಯ ಬ್ರುವತಸ್ತತ್ತ್ವಮಿದಂ ವಚಃ |
ಅಗ್ನಿರ್ನಿಸೃಷ್ಟೋ ದತ್ತಶ್ಚ ಗರೋ ದಾರಾಶ್ಚ ದೂಷಿತಾಃ' ॥
ಹೃತಂ ಕ್ಷೇತ್ರಂ ಧನಂ ಯಸ್ಯ ಕಿಂ ಭೀಮೇನ ಕೃತಂ ತ್ವಯಿ |
ಅಲಮಾಸಕ್ತಸ್ಯ ತೇಽದ್ಯ ನಿರ್ವೇದಕರಮೀರಿತಮ್ ॥
ಉಪಕಾರಾಯ ಭೀಮೇನ ತವ ದ್ವೇಷಂ ತ್ಯಜಾತ್ರ ತತ್ |
ವಿಮುಚ್ಯ ದ್ವೇಷಕಾಮೌ ತ್ವಂ ವನೇ ತೀರ್ಥನಿಷೇವಕಃ ॥
ತಪಸಾಽಽರಾಧಯ ಹರಿಂ ತತಃ ಪೂತೋ ಭವಿಷ್ಯಸಿ |
ಇತ್ಯುಕ್ತೋ ದ್ವೇಷಮುತ್ಸೃಜ್ಯ ಭೀಮೇ ನಿರ್ವೇದಮಾಗತಃ ॥
ಭೀಮ ನಿನಗೆ ಈ ಮಾತನ್ನು ಹೇಳಿದರೂ ಅವನದೇನೂ ತಪ್ಪಿಲ್ಲ. ನಿನ್ನ ಮಕ್ಕಳು ಅವನಿಗೆ ಬೆಂಕಿ ಹಚ್ಚಿದ್ದಾರೆ. ವಿಷವಿಕ್ಕಿದ್ದಾರೆ. ಹೆಂಡತಿಯನ್ನು ಅವಮಾನಿಸಿದ್ದಾರೆ. ಭೂಮಿ ಧನಗಳನ್ನು ಅಪಹರಿಸಿದ್ದಾರೆ. ಇದನ್ನೆಲ್ಲ ಮಾಡಿಸಿದ ನಿನಗೆ ಪ್ರತಿಯಾಗಿ ಭೀಮ ಏನು ಅಪಕಾರ ಮಾಡಿದ್ದಾನೆ? ಅತಿಯಾಗಿ ವಿಷಯಾಸಕ್ತನಾದ ನಿನಗೆ ಇಂದು ಉಪಕಾರಕ್ಕಾಗಿ ವೈರಾಗ್ಯ ಉಂಟು ಮಾಡುವ ಮಾತನ್ನಾಡಿದ್ದಾನೆ. ಅದರಿಂದ ನೀನು ಭೀಮನಲ್ಲಿ ದ್ವೇಷಭಾವನೆಯನ್ನು ಬಿಟ್ಟುಬಿಡು. ರಾಗ-ದ್ವೇಷಗಳನ್ನು ತ್ಯಜಿಸಿ ಅರಣ್ಯದಲ್ಲಿ ತೀರ್ಥಗಳನ್ನು ಸೇವಿಸುತ್ತ ತಪಸ್ಸಿನಿಂದ ಹರಿಯನ್ನು ಆರಾಧಿಸು. ಆಗ ನೀನು ಪಾಪಮುಕ್ತನಾಗುವಿ. ಹೀಗೆ ವಿದುರ ಹೇಳಿದಾಗ ಧೃತರಾಷ್ಟ್ರನು ಭೀಮನಲ್ಲಿ ದ್ವೇಷವನ್ನು ಬಿಟ್ಟು ವೈರಾಗ್ಯ ಹೊಂದಿದನು.
ಅನುಜ್ಞಾಂ ತಪಸೇ ಪ್ರಾಪ್ತುಮುಪವಾಸಪರೋಽಭವತ್ |
ಅನಶ್ನಂತಂ ಚತುರ್ಥೇಽಹ್ನಿ ಧೃತರಾಷ್ಟ್ರಂ ಯುಧಿಷ್ಠಿರಃ ॥
ಜ್ಞಾತ್ವಾ ಸಂಪ್ರಾರ್ಥಯಾಮಾಸ ಭೋಜನಾರ್ಥಂ ಪುನಃ ಪುನಃ |
ಅನುಜ್ಞಾಂ ವನವಾಸಾಯ ತ್ವತ್ತಃ ಪ್ರಾಪ್ಯೈವ ಸರ್ವಥಾ ॥
ಭೋಕ್ಷ್ಯೇಽನ್ಯಥಾ ನೇತಿ ವದನ್ ಧೃತರಾಷ್ಟ್ರಃ ಶ್ರಮಾನ್ವಿತಃ |
ಉಪವಾಸಕೃಶೋ ಭಾರ್ಯಾಂ ಶಿಶ್ರಿಯೇ ಮೂರ್ಛಿತಃ ಕ್ಷಣಾತ್ |
ಧೃತರಾಷ್ಟ್ರ ತಪಸ್ಸಿಗೆ ಧರ್ಮರಾಜನಿಂದ ಅನುಜ್ಞೆ ಪಡೆಯಲು ಉಪವಾಸ ಮಾಡತೊಡಗಿದ. ನಾಲ್ಕನೆ ದಿನ ಧೃತರಾಷ್ಟ್ರ ಉಣದಿದ್ದುದನ್ನು ತಿಳಿದು ಯುಧಿಷ್ಠಿರ ಭೋಜನಕ್ಕಾಗಿ ಪುನಃ ಪುನಃ ಪ್ರಾರ್ಥಿಸಿದನು. ವನವಾಸಕ್ಕೆ ಒಪ್ಪಿಗೆಯನ್ನು ನಿನ್ನಿಂದ ಪಡೆದೇ ನಾನು ಉಣ್ಣುವೆನು, ಇಲ್ಲದಿದ್ದರೆ ಸರ್ವಥಾ ಇಲ್ಲ ಎನ್ನುತ್ತ, ಉಪವಾಸದಿಂದ ಸೊರಗಿ ಆಯಾಸಗೊಂಡಿದ್ದ ಧೃತರಾಷ್ಟ್ರನು ಗಾಂಧಾರಿಯನ್ನು ಆಶ್ರಯಿಸಿದ. ಕ್ಷಣದಲ್ಲಿ ಮೂರ್ಛಿತನಾದ.
ಶಂತಮೇನ ಕರೇಣಾಥ ಧರ್ಮಜಸ್ತಂ ಮೃದು ಸ್ಪೃಶನ್ |
ಶನೈಃ ಸಂಜ್ಞಾಮಗಮಯದಬ್ರವೀಚ್ಚ ಸುದುಃಖಿತಃ ॥
ಧರ್ಮರಾಜನು ಅತ್ಯಂತ ಸುಖಕರವಾದ ಕೈಯಿಂದ ಧೃತರಾಷ್ಟ್ರನನ್ನು ಮೃದುವಾಗಿ ಸ್ಪರ್ಶಿಸಿ ಮೆಲ್ಲನೆ ಎಚ್ಚರಗೊಳಿಸಿದನು. ಬಹಳ ದುಃಖಿತನಾಗಿ ನುಡಿದನು.
ಪುರಸ್ಕೃತ್ಯ ಯುಯುತ್ಸುಂ ತ್ವಂ ಕುರು ರಾಜ್ಯಮಕಂಟಕಮ್ |
ವಯಮೇವ ತ್ವದರ್ಥಾಯ ಕುರ್ಮಃ ಸರ್ವೇ ತಪೋವನೇ ॥
`ಯುಯುತ್ಸುವನ್ನು ಮುಂದೆ ಮಾಡಿಕೊಂಡು ನೀನು ನಿಷ್ಕಂಟಕವಾಗಿ ರಾಜ್ಯವಾಳು. ನಾವೆ ಎಲ್ಲರೂ ನಿನಗಾಗಿ ಕಾಡಿನಲ್ಲಿ ತಪಸ್ಸು ಮಾಡುವೆವು'.
ನೇತ್ಯಾಹ ಧೃತರಾಷ್ಟ್ರಸ್ತಂ ಕುಲಧರ್ಮೋ ಹಿ ನೋ ವನೇ |
ಅಂತೇ ದೇಹಪರಿತ್ಯಾಗಸ್ತನ್ಮಾಽನುಜ್ಞಾತುಮರ್ಹಸಿ ॥
`ಬೇಡ' ಎಂದ ಧೃತರಾಷ್ಟ್ರ. `ಅಂತ್ಯಕಾಲದಲ್ಲಿ ಕಾಡಿನಲ್ಲಿ ದೇಹಪರಿತ್ಯಾಗ ಮಾಡುವುದು ನಮಗೆ ಕುಲಧರ್ಮ. ಅದಕ್ಕೆ ನನಗೆ ನೀನು ಒಪ್ಪಿಗೆ ನೀಡು' ಎಂದ.
ತಯೋರ್ವಿವದತೋರೇವಂ ಕೃಷ್ಣದ್ವೈಪಾಯನಃ ಪ್ರಭುಃ |
ಸರ್ವಜ್ಞಃ ಸರ್ವಕರ್ತೇಶ ಆವಿರ್ಭೂತೋಽಬ್ರವೀನ್ನೃಪಮ್ ॥
ಹೀಗೆ ಧೃತರಾಷ್ಟ್ರ-ಧರ್ಮರಾಜರು ವಿವಾದ ಮಾಡುತ್ತಿದ್ದಾಗ ಸರ್ವಜ್ಞ, ಸರ್ವಕರ್ತ, ಸರ್ವಸ್ವಾಮಿ, ಪ್ರಭು ಶ್ರೀವೇದವ್ಯಾಸರು ಆವಿರ್ಭವಿಸಿ ಧರ್ಮರಾಜನಿಗೆ ಹೇಳಿದರು.
ತಪಸಾಽಶೇಷದೋಷಾಣಾಂ ಕ್ಷಯಕಾಮಮಿಮಂ ನೃಪಮ್ |
ಅನುಜಾನೀಹಿ ನೈವಾಸ್ಯ ಧರ್ಮವಿಘ್ನಕರೋ ಭವ ॥
ತಪಸ್ಸಿನಿಂದ ಎಲ್ಲ ಪಾಪ ಪರಿಹರಿಸಿಕೊಳ್ಳಲು ಬಯಸುತ್ತಿರುವ ಧೃತರಾಷ್ಟ್ರನಿಗೆ ನೀನು ಒಪ್ಪಿಗೆ ನೀಡು. ಅವನ ಧರ್ಮಸಾಧನೆಗೆ ನೀನು ಅಡ್ಡ ಬರಬೇಡ.
ಕಾಲೇ ನಿರ್ವೇದಮಾಪನ್ನಸ್ತಪಸಾ ದಗ್ಧಕಿಲ್ಬಿಷಃ |
ಶುಭಾಂ ಗತಿಮಯಂ ಯಾಯಾದನ್ಯಥಾ ನ ಕಥಂಚನ ॥
ಯೋಗ್ಯಕಾಲದಲ್ಲಿ ವೈರಾಗ್ಯ ಹೊಂದಿ ತಪಸ್ಸಿನಿಂದ ಪಾಪಗಳನ್ನು ಸುಟ್ಟುಕೊಂಡರೆ ಮಾತ್ರ ಈತ ಸದ್ಗತಿಯನ್ನು ಪಡೆಯುತ್ತಾನೆ. ಇಲ್ಲದಿದ್ದರೆ ಸರ್ವಥಾ ಇಲ್ಲ.
* * * * *
ನಾಲ್ಕನೆಯ ಅಧ್ಯಾಯ

ಭೀಮಸೇನನ ಕಠೋರ ಮಾತುಗಳ ಶ್ರವಣದಿಂದ ವೈರಾಗ್ಯ ಹೊಂದಿದ ಧೃತರಾಷ್ಟ್ರನಿಂದ ಗಾಂಧಾರಿಯ ಜೊತೆಗೆ ವನಕ್ಕೆ ತೆರಳಬೇಕೆಂಬ ನಿಶ್ಚಯ.

ವೈಶಂಪಾಯನಃ

ಯುಧಿಷ್ಠಿರಸ್ಯ ನೃಪತೇರ್ದುರ್ಯೋಧನಪಿತುಸ್ತದಾ |
ನಾಂತರಂ ದದೃಶೂ ರಾಜನ್ ಪುರುಷಾಃ ಪ್ರಣಯಂ ಪ್ರತಿ ॥1॥

ವೈಶಂಪಾಯನ ಹೇ ರಾಜನೇ! ಆ ಸಮಯದಲ್ಲಿ ರಾಜ್ಯದಲ್ಲಿರುವ ಎಲ್ಲ ಪುರುಷರು ರಾಜನಾದ ಯುಧಿಷ್ಠಿರನಿಗೂ ದುರ್ಯೋಧನನ ತಂದೆಯಾದ ಧೃತರಾಷ್ಟ್ರನಿಗೂ ಪ್ರೀತಿಯ ವಿಷಯದಲ್ಲಿ ಯಾವುದೇ ವ್ಯತ್ಯಾಸವಿಲ್ಲವೆಂದು ಕಂಡುಕೊಂಡರು.

ಯದಾ ತು ಕೌರವ್ಯೋ ರಾಜಾ ಪುತ್ರಂ ಸಸ್ಮಾರ ಬಾಲಿಶಮ್ |
ತದಾ ಭೀಮಮಪಧ್ಯಾತಿ ಹೃದಯೇನಾಂಬಿಕಾಸುತಃ ॥2॥

ಯಾವಾಗ ಕುರುವಂಶದಲ್ಲಿ ಬಂದ ಅಂಬಿಕೆಯ ಮಗನಾದ ಧೃತರಾಷ್ಟ್ರ ರಾಜನು ಮಂದಬುದ್ಧಿಯುಳ್ಳ ಮಗನನ್ನು ಸ್ಮರಿಸಿಕೊಳ್ಳುವನೋ ಆಗ ಮನಸ್ಸಿನಲ್ಲಿ ಭೀಮನನ್ನು ಬೈದುಕೊಳ್ಳುವನು.

ಕೌರವಶ್ಚೈವ ಭೀಮಶ್ಚ ಹೃದಾಽನ್ಯೋನ್ಯಮದೂಷ್ಯತಾಮ್ |
ಧ್ಯಾಯಂತೌ ಶ್ಲಕ್ಷ್ಣಯಾ ವಾಚಾ ಅನ್ಯೋನ್ಯಮಭಿತಿಷ್ಠತಾಮ್ ॥3॥

ಧೃತರಾಷ್ಟ್ರಮತ್ತು ಭೀಮ ಇವರಿಬ್ಬರೂ ಪರಸ್ಪರವಾಗಿ ಮನಸ್ಸಿನಲ್ಲಿ ಚಿಂತಿಸುತ್ತಾ ಬೈದುಕೊಳ್ಳುವರು. ಹಾಗೆಯೇ ಮಧುರವಾದ ಮಾತಿನಿಂದ ಪರಸ್ಪರ ಎದುರುಗೊಳ್ಳುವರು.

ಅಪ್ರಕಾಶಂ ವ್ಯಲೀಕಾನಿ ಕುರುತೇಽಸ್ಯ ವೃಕೋದರಃ |
ಆಜ್ಞಾಂ ಪ್ರತ್ಯಹನಚ್ಚೈವ ಕೃತಜ್ಞೈಃ ಪುರುಷೈಃ ಸದಾ ॥4॥

ಭೀಮನು ಈ ಧೃತರಾಷ್ಟ್ರನಿಗೆ ಗೊತ್ತಾಗದಂತೆ ಅಪ್ರಿಯವನ್ನೇ ಮಾಡುತ್ತಾನೆ. ಅಲ್ಲದೆ ಕೃತ್ರಿಮರಾದ ಪುರುಷರಿಂದ ಅವನ ಆಜ್ಞೆಯನ್ನು ತಿರಸ್ಕರಿಸುತ್ತಾನೆ.

ಅಸಕೃಚ್ಚಾಪ್ಯುವಾಚೇದಂ ಹತಾಸ್ತೇ ಮಂದಚೇತಸಃ ॥5॥

ಅಷ್ಟೇ ಅಲ್ಲದೆ ಬಹಳ ಬಾರಿ ಆ ಕೆಟ್ಟಬುದ್ಧಿಯುಳ್ಳವರು ಹತರಾದರು ಎಂದು ಹೇಳುತ್ತಿರುತ್ತಾನೆ.

ಅಥ ಭೀಮಃ ಸುಹೃನ್ಮಧ್ಯೇ ಬಾಹುಶಬ್ದಮಥಾಽಕರೋತ್ |
ಸಂಶ್ರುವೇ ಧೃತರಾಷ್ಟ್ರಸ್ಯ ಯುದ್ಧಂ ಸಂವರ್ಣಯನ್ನಿವ ॥6॥
ಸ್ಮೃತ್ವಾ ದುರ್ಯೋಧನಂ ಶತ್ರುಂ ಕರ್ಣದುಃಶಾಸನಾವಪಿ |
ಪ್ರೋವಾಚೇದಂ ಸುಸಂರಬ್ಧೋ ಭೀಮಃ ಸ ಪರುಷಂ ವಚಃ ॥7॥

ಒಂದು ಬಾರಿ ಭೀಮಸೇನನು ತನ್ನ ಸ್ನೇಹಿತರ ಮಧ್ಯದಲ್ಲಿ ಧೃತರಾಷ್ಟ್ರನಿಗೆ ಚೆನ್ನಾಗಿ ಕೇಳಿಸುವಂತೆ ಯುದ್ಧವನ್ನು ವರ್ಣನೆ ಮಾಡುವ ನೆಪದಲ್ಲಿ ಬಾಹುಗಳನ್ನು ತಟ್ಟಿ ಶಬ್ದ ಮಾಡಿದನು. ಅದೇ ಸಮಯದಲ್ಲಿ ಶತ್ರುವಾದ ದುರ್ಯೋಧನನನ್ನು, ಕರ್ಣ, ದುಶ್ಶಾಸನನನ್ನು ಸ್ಮರಿಸುತ್ತಾ ಬಹಳ ಕೋಪಾವಿಷ್ಟನಾಗಿ ಭಯಂಕರನಾಗಿ ಮುಂದೆ ಹೇಳುವ ಕಠೋರವಾದ ಈ ಮಾತುಗಳನ್ನು ನುಡಿದನು.

ಭೀಮಃ

ಅಂಧಸ್ಯ ನೃಪತೇಃ ಪುತ್ರಾ ಮಯಾ ಪರಿಘಬಾಹುನಾ |
ನೀತಾ ಲೋಕಮಮುಂ ಸರ್ವೇ ನಾನಾಶಸತ್ರಸ್ತ್ರಯೋಧಿನಃ ॥8॥

ಭೀಮ ಅಂಧನಾದ ಈ ಧೃತರಾಷ್ಟ್ರರಾಜನ ಎಲ್ಲ ಮಕ್ಕಳು ಅನೇಕ ವಿಧವಾದ ಶಸತ್ರಸ್ತ್ರಗಳಿಂದ ಯುದ್ಧ ಮಾಡುತ್ತಿದ್ದರೂ ಉಕ್ಕಿನ ದಂಡಕ್ಕೆ ಸದೃಶವಾದ ಬಾಹುವುಳ್ಳ ನನ್ನಿಂದ ಪರಲೋಕಕ್ಕೆ ಒಯ್ಯಲ್ಪಟ್ಟಿದ್ದಾರೆ.

ಇಮೌ ತೌ ಪರಿಘಪ್ರಖ್ಯೌ ಭುಜೌ ಮಮ ದುರಾಸದೌ |
ಯಯೋರಂತರಮಾಪನ್ನಾಃ ಧೃತರಾಷ್ಟ್ರಾಃ ಕ್ಷಯಂ ಗತಾಃ ॥9॥

ಉಕ್ಕಿನ ದಂಡಕ್ಕೆ ಸದೃಶವಾದ ನನ್ನ ಈ ಎರಡು ಕೈಗಳು ಸಾಮಾನ್ಯರಿಂದ ಮುಟ್ಟಲೂ ಅಶಕ್ಯವಾದವು. ಈ ಎರಡು ಕೈಗಳ ಮಧ್ಯದಲ್ಲಿ ಸಿಕ್ಕಿಬಿದ್ದು ಧೃತರಾಷ್ಟ್ರನ ಮಕ್ಕಳು ನಾಶವಾಗಿ ಹೋದರು.

ಇಮೌ ಪೀನೌ ಸುವೃತ್ತೌ ಮೇ ನಾಗರಾಜಕರೋಪಮೌ |
ಯಾವಾಸಾದ್ಯ ರಣೇ ಮೂಢಾ ಧಾರ್ತರಾಷ್ಟ್ರಾಃ ಕ್ಷಯಂ ಗತಾಃ ॥10॥

ಗಜರಾಜನ ಸೊಂಡಿಲಿಗೆ ಸದೃಶವಾದ, ದಷ್ಟಪುಷ್ಟವಾಗಿ ಹೆಚ್ಚಾಗಿ ವೃತ್ತವಾಗಿರುವ ಈ ನನ್ನ ಎರಡು ಕೈಗಳನ್ನು ನೋಡಿರಿ. ಈ ಯಾವ ಎರಡು ಕೈಗಳನ್ನು ಹೊಂದಿ ಮೂಢರಾದ ಧೃತರಾಷ್ಟ್ರನ ಮಕ್ಕಳು ಯುದ್ಧದಲ್ಲಿ ನಾಶವಾದರು.

ತಾವಿಮೌ ಚಂದನೇನಾಕ್ತೌ ವಂದನೀಯೌ ಚ ಮೇ ಭುಜೌ |
ಯಾಭ್ಯಾಂ ದುರ್ಯೋಧನೋ ನೀತ್ಯೇ ಕ್ಷಯಂ ಸಸುತಬಾಂಧವಃ ॥11॥

ಯಾವೆರಡು ಕೈಗಳಿಂದ ಮಕ್ಕಳು ಹಾಗು ಬಾಂಧವರಿಂದ ಸಹಿತನಾದ ದುರ್ಯೋಧನನು ಹತನಾದನೋ ಅಂತಹ ಗಂಧದಿಂದ ಲೇಪಿಸಲ್ಪಟ್ಟ ಅದೇ ಈ ನನ್ನ ಎರಡು ಕೈಗಳು ಎಲ್ಲರೂ ನಮಸ್ಕರಿಸಲು ಯೋಗ್ಯವಾಗಿವೆ.

ವೈಶಂಪಾಯನಃ

ಏತಾಶ್ಚಾನ್ಯಾಶ್ಚ ವಿವಿಧಾಃ ಶಲ್ಯಭೂತಾ ಜನಾಧಿಪಃ |
ಶ್ರುತ್ವಾ ನಿರ್ವೇದಮಾಪೇದೇ ಭೀಮವಾಗ್ಬಾಣಚೋದಿತಃ ॥12॥

ವೈಶಂಪಾಯನ ಜನಾಧಿಪನಾದ ಧೃತರಾಷ್ಟ್ರನು ಈ ಎಲ್ಲ ಮಾತುಗಳೊಡನೆ ಈಟಿಯಂತೆ ಇರಿಯುವ ಬೇರೆ ಬೇರೆ ಮಾತುಗಳನ್ನು ಕೇಳಿ ಈ ರೀತಿಯ ಭೀಮನ ವಾಗ್ಬಾಣಗಳಿಂದ ಪ್ರೇರಿತನಾಗಿ ವೈರಾಗ್ಯವನ್ನು ಹೊಂದಿದನು.

ಸಾ ಚ ಬುದ್ಧಿಮತೀ ದೇವೀ ಕಾಲಪರ್ಯಾಯವೇದಿನೀ |
ಗಾಂಧಾರೀ ಸರ್ವಧರ್ಮಜ್ಞಾ ತಾನ್ಯಲೀಕಾನಿ ಶುಶ್ರುವೇ ॥13॥
ಕುಂತ್ಯಾಂ ಸಪರ್ಯಾಂ ಸಾ ವೀಕ್ಷ್ಯ ಶಾಪೇ ನಾಸ್ಯಾಕರೋನ್ಮತಿಮ್ ॥14|
ಬುದ್ಧಿವಂತಳಾದ, ಕಾಲದ ಕ್ರಮವನ್ನು ಚೆನ್ನಾಗಿ ತಿಳಿದಿರುವ, ಸರ್ವಧರ್ಮ- ಗಳನ್ನೂ ಅರಿತ ಆ ಗಾಂಧಾರೀ ದೇವಿಯು ಭೀಮನ ವತಿಯಿಂದ ಉಂಟಾಗುವ ಅಪ್ರಿಯಕರ್ಮಗಳನ್ನು ಮತ್ತು ಅಪ್ರಿಯವಾಕ್ಯಗಳನ್ನು ಕೇಳಿದಳು. ಆದರೆ ಕುಂತಿಯ ಸೇವೆಯನ್ನು ನೋಡುತ್ತಾ ಭೀಮನಿಗೆ ಶಾಪ ನೀಡಲು ಬಯಸಲಿಲ್ಲ.
ತತಃ ಪಂಚದಶೇ ವರ್ಷೇ ಸಮತೀತೇ ನರಾಧಿಪಃ |
ರಾಜಾ ನಿರ್ವೇದಮಾಪೇದೇ ಭೀಮವಾಗ್ಬಾಣಪೀಡಿತಃ ॥15॥
ಹದಿನೈದು ವರ್ಷಗಳು ಕಳೆದ ನಂತರ ನರಾಧಿಪತಿಯಾದ ಧೃತರಾಷ್ಟ್ರ ರಾಜನು ಭೀಮನ ವಾಗ್ಬಾಣಗಳಿಂದ ಪೀಡಿತನಾಗಿ ವೈರಾಗ್ಯವನ್ನು ಹೊಂದಿದನು.
ಸುಖಾಸಕ್ತಂ ಕೃಚ್ಛ್ರಪರಂ ಜ್ಞಾತ್ವಾ ಚೈವ ಯುಧಿಷ್ಠಿರಮ್ |
ತಪೋಯೋಗಾತ್ ತಪಸ್ತಪ್ತುಂ ಮನಶ್ಚಕ್ರೇ ಮಹಾಮತಿಃ ॥16॥
ಅಲ್ಲದೆ ಯುಧಿಷ್ಠಿರನನ್ನು ನೋಡುತ್ತಾ ಅವನೂ ಸುಖದಲ್ಲಿ ಆಸಕ್ತನಾಗದೇ, ಕೃಚ್ಛ್ರಾದಿ ವ್ರತಗಳನ್ನು ನಡೆಸುವುದನ್ನು ತಿಳಿದು ಮಹಾಮತಿಯಾದ ಧೃತರಾಷ್ಟ್ರನು ತಪೋಯೋಗದಿಂದ ತಾನೂ ತಪಗೈಯ್ಯಬೇಕೆಂದು ಮನಸ್ಸು ಮಾಡಿದನು.
ನಾನ್ವಬುಧ್ಯತ ತದ್ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ಶ್ವೇತಾಶ್ವೋ ವಾಽಥ ಕುಂತೀ ವಾ ದ್ರೌಪದೀ ವಾ ಯಶಸ್ವಿನೀ ॥17॥
ಧೃತರಾಷ್ಟ್ರನ ಈ ಸಂಕಲ್ಪವನ್ನು ರಾಜನಾದ ಕುಂತೀಪುತ್ರ ಯುಧಿಷ್ಠಿರನು, ಶ್ವೇತಾಶ್ವವುಳ್ಳ ಅರ್ಜುನನು, ಕುಂತಿಯು ಮತ್ತು ಯಶಸ್ವಿನಿಯಾದ ದ್ರೌಪದಿಯರು ಅನುಮೋದಿಸಲಿಲ್ಲ.
ಮಾದ್ರೀಪುತ್ರೌ ಚ ಭೀಮಸ್ಯ ಚಿತ್ತಜ್ಞಾವನ್ವಮೋದತಾಮ್ |
ರಾಜ್ಞಸ್ತು ಚಿತ್ತಂ ರಕ್ಷಂತೌ ನೋಚತುಃ ಸ್ವಯಮಪ್ರಿಯಮ್ ॥18॥
ಮಾದ್ರೀಪುತ್ರರಾದ ನಕುಲ-ಸಹದೇವರಾದರೂ ಭೀಮನ ಮನಸ್ಸನ್ನು ತಿಳಿದವರಾದ್ದರಿಂದ ಇದನ್ನು ಅನುಮೋದಿಸಿದರೂ ರಾಜನಾದ ಯುಧಿಷ್ಠಿರನ ಇಂಗಿತವನ್ನು ರಕ್ಷಿಸುವುದಕ್ಕಾಗಿ ರಾಜನಿಗೆ ಅಪ್ರಿಯವಾದ ಈ ವಿಷಯವನ್ನು ಹೇಳಲಿಲ್ಲ.
ತತಃ ಸಮಾನಯತ್ ಸರ್ವಂ ಧೃತರಾಷ್ಟ್ರಃ ಸುಹೃಜ್ಜನಮ್ |
ಬಾಷ್ಪಸಂದಿಗ್ಧಮತ್ಯರ್ಥಮ್ ಇದಮಾಹ ವಚೋ ಭೃಶಮ್ ॥19॥
ಇಷ್ಟಾದ ನಂತರ ಧೃತರಾಷ್ಟ್ರನು ತನ್ನ ಎಲ್ಲ ಸ್ನೇಹಿತರನ್ನು ಕರೆಸಿದನು. ಅವರೆದುರು ಮತ್ತೆ ಮತ್ತೆ ಬಹಳವಾಗಿ ಕಣ್ಣೀರಿನಿಂದ ಗದ್ಗದಿತನಾಗಿ ಮುಂದೆ ಹೇಳುವ ಈ ಮಾತುಗಳನ್ನು ಆಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಭೀಮಸೇನವಚನಂ ನಾಮ ಚತುರ್ಥೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಐದನೆಯ ಅಧ್ಯಾಯ
ಎಲ್ಲ ಪೌರಜನರನ್ನೂ ಕರೆಸಿ ಧೃತರಾಷ್ಟ್ರನು ತಾನು ವನಕ್ಕೆ ಹೋಗಬೇಕೆಂದು ನಿಶ್ಚಯಿಸಿರುವುದನ್ನು ನಿವೇದಿಸುವುದು.
ಯುಧಿಷ್ಠಿರನಲ್ಲಿ ವನಗಮನವನ್ನು ಕುರಿತು ಒಪ್ಪಿಗೆ ನೀಡಬೇಕೆಂದು ಪ್ರಾರ್ಥಿಸುವುದು.
ಧೃತರಾಷ್ಟ್ರಃ
ವಿದಿತಂ ಭವತಾಮೇತದ್ ಯಥಾ ವೃತ್ತಂ ಕುರುಕ್ಷಯಮ್ |
ಮಮಾಪರಾಧಾತ್ ತತ್ ಸರ್ವಮಿತಿ ಜ್ಞೇಯಂ ತು ಕೌರವಾಃ ॥1॥
ಧೃತರಾಷ್ಟ್ರ ಹೇ ಕುರುದೇಶಜರೇ, ಕುರುಕುಲದ ಕ್ಷಯವು ಹೇಗಾಯಿತೆಂದು ನಿಮಗೆಲ್ಲರಿಗೂ ತಿಳಿದೇ ಇದೆ. ಆ ಎಲ್ಲವೂ ನನ್ನ ಅಪರಾಧದಿಂದಲೇ ಆಯಿತೆಂದು ತಿಳಿಯಿರಿ.
ಯೋಽಹಂ ದುಷ್ಟಮತಿಂ ಮೂರ್ಖಂ ಜ್ಞಾತೀನಾಂ ಭಯವರ್ಧನಮ್ |
ದುರ್ಯೋಧನಂ ಕೌರವಾಣಾಮಾಧಿಪತ್ಯೇಽಭ್ಯಷೇಚಯಮ್ ॥2॥
ಏಕೆಂದರೆ ದುಷ್ಟಮತಿಯಾದ, ಮೂರ್ಖನಾದ, ಬಂಧುಗಳ ಭಯವನ್ನು ಹೆಚ್ಚಿಸುವ ದುರ್ಯೋಧನನನ್ನು ಕೌರವರ ಅಧಿಪತಿಯನ್ನಾಗಿ ನಾನೇ ಅಭಿಷೇಕ ಮಾಡಿದ್ದೇನೆ.
ಯಚ್ಚಾಹಂ ವಾಸುದೇವಸ್ಯ ವಾಕ್ಯಂ ನಾಶ್ರೌಷಮರ್ಥವತ್ |
ಬಧ್ಯತಾಂ ಸಾಧ್ವಯಂ ಪಾಪಃ ಸಾಮಾತ್ಯ ಇತಿ ದುರ್ಮತಿಃ ॥3॥
ಪುತ್ರಸ್ನೇಹಾಭಿಭೂತಶ್ಚ ಹಿತಮುಕ್ತೋ ಹಿತೈಷಿಣಾ ॥4॥
ವಿದುರೇಣಾಥ ಭೀಷ್ಮೇಣ ದ್ರೋಣೇನ ಚ ಕೃಪೇಣ ಚ |
ಪದೇ ಪದೇ ಭಗವತಾ ವ್ಯಾಸೇನ ಚ ಮಹಾತ್ಮನಾ ॥5॥
ಸಂಜಯೇನಾಥ ಗಾಂಧಾರ್ಯಾ ತದಿದಂ ತಪ್ಯತೇ ಮಯಾ ॥6॥
ಅಷ್ಟೇ ಅಲ್ಲದೆ ನಾನು ಅರ್ಥವತ್ತಾದ ಶ್ರೀಕೃಷ್ಣನ ವಾಕ್ಯವನ್ನು ಕೇಳಲಿಲ್ಲ. ಹಿತೈಷಿಯಾದ ವಿದುರನು `ಮಂತ್ರಿಗಳೊಡನೆ ಸಹಿತನಾದ

ದುರ್ಮತಿಯಾದ, ಪಾಪಿಷ್ಠನಾದ ಈ ದುರ್ಯೋಧನನು ಬಂಧಿಸಲ್ಪಡಲಿ' ಎಂದು ಹಿತವನ್ನು ಹೇಳಿದ್ದರೂ ಪುತ್ರಸ್ನೇಹದಿಂದ ಮೋಹಿತನಾಗಿ ಅದನ್ನೂ ನಾನು ಕೇಳಲಿಲ್ಲ. ಅಲ್ಲದೆ ಭೀಷ್ಮರಿಂದ, ದ್ರೋಣರಿಂದ, ಕೃಪರಿಂದ, ಮಹಾತ್ಮನಾದ ಭಗವಾನ್ ವ್ಯಾಸದೇವನಿಂದ, ಅಲ್ಲದೆ ಸಂಜಯನಿಂದ, ಅಷ್ಟೇ ಅಲ್ಲದೆ ಗಾಂಧಾರೀ ದೇವಿಯಿಂದ ಹೆಜ್ಜೆ ಹೆಜ್ಜೆಗೂ ಹೇಳಲ್ಪಟ್ಟ ವಿಷಯವನ್ನು ನಾನು ಕೇಳಲಿಲ್ಲ. ಅದು ಈಗ ನನ್ನನ್ನು ಪರಿತಪಿಸುವಂತೆ ಮಾಡಿದೆ.

ಯಚ್ಚಾಹಂ ಪಾಂಡುಪುತ್ರೇಷು ಗುಣವತ್ಸು ಮಹಾತ್ಮಸು |
ನ ನ್ಯಸ್ತವಾನ್ ಶ್ರಿಯಂ ದೀಪ್ತಾಂ ಪಿತೃಪೈತಾಮಹೀಮಿಮಾಮ್ ॥7॥

ಅಷ್ಟೇ ಅಲ್ಲದೆ ಮಹಾತ್ಮರಾದ ಗುಣವಂತರಾದ ಪಾಂಡುಪುತ್ರರಲ್ಲಿ ಪಿತೃಪಿತಾಮಹಾದಿಗಳಿಂದ ಬಂದಿರುವ ಈ ತೇಜೋಮಯವಾದ ಸಂಪತ್ತಿನಿಂದ ಕೂಡಿದ ಭೂಮಿಯನ್ನು ನಾನು ಇರಿಸಲಿಲ್ಲ.

ಪಶ್ಯನ್ನಪಿ ವಿನಾಶಂ ಹಿ ಸರ್ವರಾಜ್ಞಾಂ ಗದಾಗ್ರಜಃ |
ಏತಚ್ಛ್ರೇಯಃ ಸ ಪರಮಮ್ ಅಮನ್ಯತ ಜನಾರ್ದನಃ ॥8॥

ಎಲ್ಲ ರಾಜರ ವಿನಾಶವನ್ನು ನೋಡುತ್ತಿದ್ದರೂ ಗದಾಗ್ರಜನಾದ, ಜನಾರ್ದನನೆಂಬ ಹೆಸರುಳ್ಳ ಆ ಶ್ರೀಕೃಷ್ಣನು `ಪಾಂಡವರಿಗೆ ಸಂಪತ್ತು ನೀಡುವುದು ಬಹಳ ಶ್ರೇಯಸ್ಕರ' ಎಂದು ತಿಳಿಸಿದರೂ ನಾನು ಆ ರೀತಿ ಮಾಡಲಿಲ್ಲ.

ಸೋಽಹಮೇತಾನ್ಯತೀತಾನಿ ದುರ್ವೃತ್ತಾನ್ಯಾತ್ಮನಃ ಸದಾ |
ಹೃದಯೇ ಶಲ್ಯಭೂತಾನಿ ಧಾರಯಾಮಿ ಸಹಸ್ರಶಃ ॥9॥

ಅಂತಹ ನಾನು ಯಾವಾಗಲೂ ಹೃದಯದಲ್ಲಿ ಈಟಿಯಂತೆ ಚುಚ್ಚುತ್ತಿರುವ ನಾನೇ ಮಾಡಿದ, ಹಿಂದೆ ನಡೆದು ಹೋದ ಸಾವಿರಾರು ದುರ್ನಡತೆಗಳನ್ನು ಮನಸ್ಸಿನಲ್ಲಿ ಧರಿಸಿದ್ದೇನೆ.

ವಿಶೇಷತಸ್ತು ದಹ್ಯಾಮಿ ವರ್ಷೇ ಪಂಚದಶೇ ಹಿ ವೈ |
ಅಸ್ಯ ಪಾಪಸ್ಯ ಶುದ್ಧ್ಯರ್ಥೇ ನಿಯತೋಽಸ್ಮಿ ಸುದುರ್ಮತಿಃ ॥10॥

ಬಹಳ ಕೆಟ್ಟ ಬುದ್ಧಿಯುಳ್ಳ ನಾನು ವಿಶೇಷವಾಗಿ ಈ ಹದಿನೈದನೆಯ ವರ್ಷದಲ್ಲಿ ಹಿಂದಿನ ಪಾಪಗಳನ್ನು ನೆನೆಸಿಕೊಂಡು ಸುಟ್ಟುಹೋಗುತ್ತಿದ್ದೇನೆ. ಈ ಪಾಪದ ಶುದ್ಧಿಗಾಗಿ ನಿಯಮಪಾಲನೆಯನ್ನು ನಡೆಸುತ್ತಿದ್ದೇನೆ.

ಚತುರ್ಥೇ ನಿಯತೇ ಕಾಲೇ ಕದಾಚಿದಪಿ ಚಾಷ್ಟಮೇ |
ತೃಷ್ಣಾವಿನಯನಂ ಭುಂಜೇ ಗಾಂಧಾರೀ ವೇದ ತನ್ಮಮ ॥11॥

ಅದಕ್ಕಾಗಿ ನಾಲ್ಕು ಹೊತ್ತಿಗೊಮ್ಮೆ, ಕೆಲವು ಬಾರಿ ಎಂಟು ಹೊತ್ತಿಗೊಮ್ಮೆ ಕೇವಲ ಬಾಯಾರಿಕೆಯನ್ನು ಹೋಗಲಾಡಿಸುವಷ್ಟೇ ಆಹಾರವನ್ನು ಸೇವಿಸುತ್ತಿದ್ದೇನೆ. ಈ ನನ್ನ ನಿಯಮಪಾಲನೆಯನ್ನು ಗಾಂಧಾರೀದೇವಿಯು ತಿಳಿದಿದ್ದಾಳೆ.

ಕರೋತ್ಯಾಹಾರಮಿತಿ ಚ ಸರ್ವಃ ಪರಿಜನಃ ಸದಾ |
ಯುಧಿಷ್ಠಿರಭಯಾದ್ವೇತ್ತಿ ಭೃಶಂ ತಪ್ಯೇತ ಪಾಂಡವಃ ॥12॥

ನಾನು ಈ ರೀತಿಯ ನಿಯಮದಿಂದಿದ್ದೇನೆಂದು ತಿಳಿದರೆ ಯುಧಿಷ್ಠಿರನು ಬಹಳ ತಾಪಗೊಳ್ಳುವನು. ಅದಕ್ಕೋಸ್ಕರ ಯುಧಿಷ್ಠಿರನಿಗೆ ತಾಪವಾಗುವ ಭಯದಿಂದ ನನ್ನ ಎಲ್ಲ ಪರಿಜನರು ನಾನು ಹೊತ್ತು ಹೊತ್ತಿಗೆ ಆಹಾರವನ್ನು ಸ್ವೀಕರಿಸುವೆನೆಂದೇ ತಿಳಿದಿದ್ದಾರೆ (ನಾನೇ ಈ ವಿಷಯವನ್ನು ಗುಟ್ಟಾಗಿ ಇಟ್ಟಿದ್ದೇನೆ).

ಭೂಮೌ ಶಯೇ ಜಪ್ಯಪರೋ ದರ್ಭೇಷ್ವಜಿನಸಂವೃತಃ |
ನಿಯಮವ್ಯಪದೇಶೇನ ಗಾಂಧಾರೀ ಚ ಯಶಸ್ವಿನೀ ॥13॥

ನಿಯಮಪಾಲನೆಗೆ ಮುಖ್ಯವಾದುದರಿಂದ ನಾನು ಮತ್ತು ಯಶಸ್ವಿನಿಯಾದ ಗಾಂಧಾರೀ ದೇವಿಯು ಜಪದಲ್ಲೇ ಮನಸ್ಸನ್ನು ಇಟ್ಟು ಮೃಗಾಜಿನವನ್ನು ಉಟ್ಟುಕೊಂಡು ಭೂಮಿಯಲ್ಲಿ ದರ್ಭೆಯ ಮೇಲೆ ಮಲಗುತ್ತಿದ್ದೇವೆ.

ಹತಂ ಪುತ್ರಶತಂ ವೀರಂ ಸಂಗ್ರಾಮೇಷ್ವಪಲಾಯಿನಮ್ |
ನಾನುತಪ್ಯೇ ಹ್ಯಹಂ ತಚ್ಚ ಕ್ಷತ್ರಧರ್ಮಂ ಹಿ ತಂ ವಿದುಃ ॥14॥

ಯುದ್ಧದಲ್ಲಿ ಪಲಾಯನ ಮಾಡದೆ ವೀರಮರಣವನ್ನು ಹೊಂದಿದ ನೂರು ಮಂದಿ ಮಕ್ಕಳ ಬಗ್ಗೆ ನಾನು ಪರಿತಪಿಸುತ್ತಿಲ್ಲ. ಏಕೆಂದರೆ ಅದು ಕ್ಷತ್ರಿಯಧರ್ಮವೆಂದು ಜ್ಞಾನಿಗಳೆಲ್ಲರೂ ತಿಳಿದಿದ್ದಾರೆ.

ವೈಶಂಪಾಯನಃ
ಇತ್ಯುಕ್ತ್ವಾ ಧರ್ಮರಾಜಂ ಸೋಽಥಾಭ್ಯಭಾಷತ ವೀರ್ಯವಾನ್ ॥15॥

ವೈಶಂಪಾಯನ ಇಷ್ಟು ಹೇಳಿದ ನಂತರ ವೀರ್ಯವಂತನಾದ ಆ ಧೃತರಾಷ್ಟ್ರನು ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು.

ಧೃತರಾಷ್ಟ್ರಃ
ಭದ್ರಂ ತೇ ಯಾದವೀಮಾತಃ ವಾಕ್ಯಂ ಚೇದಂ ನಿಬೋಧ ಮೇ ॥16॥

ಧೃತರಾಷ್ಟ್ರ ಕುಂತಿಯೇ ತಾಯಿಯಾಗಿ ಉಳ್ಳ ಹೇ ಧರ್ಮರಾಜನೇ ನಿನಗೆ ಮಂಗಳವಾಗಲಿ. ನನ್ನ ಈ ವಾಕ್ಯವನ್ನು ಸರಿಯಾಗಿ ಗಮನಿಸು.

ಸುಖಮಸ್ಮ್ಯುಷಿತಃ ಪುತ್ರ ತ್ವಯಾ ಸುಪರಿಪಾಲಿತಃ |
ಮಯಾ ದಾನಾನಿ ದತ್ತಾನಿ ಶ್ರಾದ್ಧಾನಿ ಚ ಪುನಃ ಪುನಃ ॥17॥
ಪ್ರಕೃಷ್ಟಂ ಮೇ ವಯಃ ಪುತ್ರ ಪುಣ್ಯಂ ಪ್ರಾಪ್ತಂ ಯಥಾಬಲಮ್ |
ಗಾಂಧಾರೀ ಹತಪುತ್ರೇಯಂ ಧೈರ್ಯೇಣಾವೇಕ್ಷತೇ ಚ ಮಾಮ್ ॥18॥

ಹೇ ಮಗನೇ! ನಿನ್ನಿಂದ ಒಳ್ಳೆಯ ರೀತಿಯ ಪಾಲನೆಗೆ ಒಳಪಟ್ಟು ನಾನು ಸುಖವಾಗಿ ವಾಸವಾಗಿದ್ದೇನೆ. ನನ್ನಿಂದ ಮತ್ತೆ ಮತ್ತೆ ಅನೇಕ ದಾನಗಳು ಮಾಡಲ್ಪಟ್ಟಿವೆ ಹಾಗೂ ಅನೇಕ ಶ್ರಾದ್ಧಕರ್ಮಗಳನ್ನು ಆಚರಿಸಿದ್ದೇನೆ. ಹೇ ಮಗನೇ! ನನ್ನ ಈ ವಯಸ್ಸು ಉತ್ಕೃಷ್ಟವಾಗಿದ್ದು

ನನ್ನ ಬಲಕ್ಕೆ ತಕ್ಕಂತೆ ಪುಣ್ಯವನ್ನೂ ಸಂಪಾದಿಸಿದ್ದೇನೆ. ಈ ಮಕ್ಕಳನ್ನು ಕಳೆದುಕೊಂಡ ಗಾಂಧಾರೀ ದೇವಿಯು ಧೈರ್ಯದಿಂದ ನನ್ನನ್ನು ನೋಡಿಕೊಳ್ಳುತ್ತಿದ್ದಾಳೆ.
ದ್ರೌಪದ್ಯಶುಭಕರ್ತಾರಸ್ತವ ಚೈಶ್ವರ್ಯಹಾರಿಣಃ |
ಸಮತೀತಾ ನೃಶಂಸಾಸ್ತೇ ಧರ್ಮೇಣ ನಿಹತಾ ಯುಧಿ ॥19॥
ದ್ರೌಪದಿಗೆ ಅಶುಭವನ್ನುಂಟು ಮಾಡಿದ ಅಲ್ಲದೆ ನಿನ್ನ ಐಶ್ವರ್ಯವನ್ನೂ ಅಪಹರಿಸಿದ ಹಿಂದೆ ಇದ್ದ ಕ್ರೂರಜನರು ನಿನ್ನ ಧರ್ಮದಿಂದಲೇ ಯುದ್ಧದಲ್ಲಿ ಹತರಾಗಿದ್ದಾರೆ.
ನ ತೇಷು ಪ್ರತಿಕರ್ತವ್ಯಂ ಪಶ್ಯಾಮಿ ಕುರುನಂದನ |
ಸರ್ವೇ ಶಸ್ತ್ರಜಿತಾನ್ ಲೋಕಾನ್ ಗತಾ ಹ್ಯಭಿಮುಖಾ ಹತಾಃ ॥20॥
ಅವರ ವಿಷಯದಲ್ಲಿ ಮಾಡಬೇಕಾದ ಯಾವುದನ್ನೂ ನಾನು ಕಾಣಲಾರೆ. ಹೇ ಕುರುನಂದನನೇ! ಅವರೆಲ್ಲರೂ ಯುದ್ಧದಲ್ಲಿ ಅಭಿಮುಖರಾಗಿ ಮರಣ ಹೊಂದಿ ಶಸ್ತ್ರದಿಂದ ಗೆಲ್ಲಲ್ಪಡುವ ಉತ್ತಮ ಲೋಕಗಳನ್ನು ಹೊಂದಿದ್ದಾರೆ.
ಆತ್ಮನಸ್ತು ಸತಾಂ ಮುಖ್ಯ ಪ್ರತಿಕರ್ತವ್ಯಮದ್ಯ ಮೇ |
ಗಾಂಧಾರ್ಯಾಶ್ಚೈವ ರಾಜೇಂದ್ರ ತದನುಜ್ಞಾತುಮರ್ಹಸಿ ॥21॥
ಹೇ ಸಜ್ಜನಮುಖ್ಯನೇ! ಇಂದು ನನಗೆ ನನಗಾಗಿ ಮಾಡಿಕೊಳ್ಳಬೇಕಾದ ಕರ್ತವ್ಯಗಳಿವೆ. ಹಾಗೆಯೇ ಗಾಂಧಾರಿಗೂ ಆತ್ಮೋದ್ಧಾರಕ್ಕಾಗಿ ನಡೆಸಬೇಕಾದ ಕರ್ತವ್ಯವಿದೆ. ಹೇ ರಾಜೇಂದ್ರನೇ! ಅದಕ್ಕಾಗಿ ನೀನು ಅನುಜ್ಞೆಯನ್ನು ಕೊಡುವವನಾಗು.
ತ್ವಂ ಹಿ ಧರ್ಮಭೃತಾಂ ಶ್ರೇಷ್ಠಃ ಸತತಂ ಧರ್ಮವತ್ಸಲಃ |
ರಾಜಾ ಗುರುಃ ಪ್ರಾಣಭೃತಾಂ ತಸ್ಮಾದೇತದ್ ಬ್ರವೀಮ್ಯಹಮ್ ॥22॥
ನೀನು ಧರ್ಮಾಚರಣೆಯನ್ನು ಮಾಡುವವರಲ್ಲಿ ಶ್ರೇಷ್ಠನಾಗಿದ್ದಿ. ಅಲ್ಲದೆ ಯಾವಾಗಲೂ ಧರ್ಮದ ಬಗ್ಗೆ ವಾತ್ಸಲ್ಯವನ್ನು ಹೊಂದಿರುವಿ. ಅಲ್ಲದೆ ರಾಜನಾದವನು ಪ್ರಾಣಧರಿಸಿದ ಎಲ್ಲರಿಗೂ ಗುರುಸ್ಥಾನದಲ್ಲಿದ್ದಾನೆ. ಅದಕ್ಕಾಗಿ ನಿನ್ನಲ್ಲಿ ನಾನು ಕೇಳಿಕೊಳ್ಳುತ್ತಿದ್ದೇನೆ.
ಅನುಜ್ಞಾತಸ್ತ್ವಯಾ ವೀರ ಸಂಶ್ರಯೇಯಂ ವನಾನ್ಯಹಮ್ |
ಚೀರವಲ್ಕಲಭೃದ್ ರಾಜನ್ ಗಾಂಧಾರ್ಯಾ ಸಹಿತೋಽನಘ ॥23॥
ಹೇ ವೀರರಾಜನೇ! ನಿನ್ನಿಂದ ಅನುಜ್ಞೆಯನ್ನು ಪಡೆದ ನಾನು ನಾರುಮಡಿಗಳನ್ನು ಧರಿಸಿ ಗಾಂಧಾರೀದೇವಿಯಿಂದ ಸಹಿತನಾಗಿ ಕಾಡನ್ನು ಆಶ್ರಯಿಸುತ್ತೇನೆ.
ತವಾಶಿಷಃ ಪ್ರಯುಂಜಾನೋ ಭವಿಷ್ಯಾಮಿ ವನೇಚರಃ |
ಉಚಿತಂ ನಃ ಕುಲೇ ತಾತ ಸರ್ವೇಷಾಂ ಭರತರ್ಷಭ ॥24॥
ಪುತ್ರೇಷ್ವೈಶ್ವರ್ಯಮಾಧಾಯ ವಯಸೋಽಂತೇ ವನಂ ನೃಪ ॥25॥
ಹೇ ಶುದ್ಧನಾದ ಭರತರ್ಷಭನೇ! ನಾನು ನಿನಗೆ ಆಶೀರ್ವಾದವನ್ನು ಮಾಡುತ್ತಾ ಕಾಡಿನಲ್ಲಿ ಸಂಚರಿಸುವವನಾಗುತ್ತೇನೆ. ಮಗನೇ! ನಮ್ಮ ಕುಲದಲ್ಲಿ ಪುತ್ರರಲ್ಲಿ ಐಶ್ವರ್ಯವನ್ನರ್ಪಿಸಿ ಅಂತ್ಯವಯಸ್ಸಿನಲ್ಲಿ ವನವನ್ನು ಆಶ್ರಯಿಸುವುದು ಎಲ್ಲರಿಗೂ ಉಚಿತವೇ ತಾನೆ!
ತತ್ರಾಹಂ ವಾಯುಭಕ್ಷೋ ವಾ ನಿರಾಹಾರೋಽಪಿ ವಾ ವಸನ್ |
ಪತ್ನ್ಯಾ ಸಹಾನಯಾ ವೀರ ಸಂಶ್ರಯೇಯಂ ವನಾನ್ಯಹಮ್ |
ಪತ್ನ್ಯಾ ಸಹಾನಯಾ ವೀರ ಚರಿಷ್ಯಾಮಿ ತಪಃ ಪರಮ್ ॥26॥
ಹೇ ರಾಜನೇ! ಆ ಕಾಡಿನಲ್ಲಿ ನಾನು ಕೇವಲ ವಾಯುವನ್ನೇ ಸ್ವೀಕರಿಸುತ್ತಾ ಅಥವಾ ನಿರಾಹಾರನಾಗಿ ವಾಸಮಾಡುತ್ತಾ ಈ ನನ್ನ ಪತ್ನಿಯೊಂದಿಗೆ ವನವನ್ನೇ ಆಶ್ರಯಿಸುತ್ತೇನೆ. ಹೇ ವೀರನೇ! ಈ ನನ್ನ ಪತ್ನಿಯೊಂದಿಗೆ ಅಲ್ಲಿ ಉತ್ತಮವಾದ ತಪಶ್ಚರ್ಯೆಯನ್ನು ನಡೆಸುತ್ತೇನೆ.
ತ್ವಂ ಚಾಪಿ ಫಲಭುಕ್ ತಾತ ತಪಸಾ ಪಾರ್ಥಿವೋ ಹ್ಯಸಿ |
ಫಲಭಾಜೋ ಹಿ ರಾಜಾನಃ ಕಲ್ಯಾಣಸ್ಯೇತರಸ್ಯ ವಾ ॥27॥
ಹೇ ಮಗನೇ! ಈ ನನ್ನ ತಪಸ್ಸಿನಿಂದ ನೀವೂ ಕೂಡ ಉತ್ತಮ ಫಲವನ್ನು ಪಡೆಯುವಿರಿ. ಏಕೆಂದರೆ ನೀನು ರಾಜನಾಗಿದ್ದಿ. ರಾಜ್ಯದಲ್ಲಿ ನಡೆಯುವ ಮಂಗಳ ಕಾರ್ಯಕ್ಕಾಗಲಿ ಅಥವಾ ಅಮಂಗಳಕಾರ್ಯಕ್ಕಾಗಲಿ ಫಲವನ್ನು ಪಡೆಯುವುದು ರಾಜರೇ ತಾನೆ!
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ವನವಾಸಪ್ರಾರ್ಥನಂ ನಾಮ ಪಂಚಮೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ಧೃತರಾಷ್ಟ್ರನ ವನಗಮನ ನಿರ್ಧಾರದಿಂದ ದುಃಖಿತನಾದ ಯುಧಿಷ್ಠಿರನು
ಅದನ್ನು ತಡೆಯಲು ಪ್ರಯತ್ನ.
ಯುಧಿಷ್ಠಿರಃ
ನ ಮಾಂ ಪ್ರೀಣಯತೇ ರಾಜ್ಯಂ ತ್ವಯ್ಯೇವಂ ದುಃಖಿತೇ ನೃಪ |
ಧಿಙ್ಮಾಮಸ್ತು ಸುದುರ್ಬುದ್ಧಿಂ ರಾಜ್ಯಲುಬ್ಧಂ ಪ್ರಮಾದಿನಮ್ ॥1॥
ಯುಧಿಷ್ಠಿರ ಹೇ ರಾಜನೇ! ನೀನು ಈ ರೀತಿಯಾಗಿ ದುಃಖಿತನಾಗಿದ್ದರೆ ಈ ರಾಜ್ಯವು ನನ್ನನ್ನು ಸಂತೋಷಗೊಳಿಸುವುದಿಲ್ಲ.

ದುರ್ಬುದ್ಧಿಯುಳ್ಳ, ರಾಜ್ಯದಲ್ಲೇ ಆಸೆಯುಳ್ಳ, ಪ್ರಮಾದವನ್ನು ನಡೆಸುತ್ತಿರುವ ನನಗೆ ಧಿಕ್ಕಾರವಿರಲಿ.
ವನೇ ಭವಂತಂ ದುಃಖಾರ್ತಮುಪವಾಸಕೃಶಂ ನೃಪ |
ಯತಾಹಾರಂ ಭೂಮಿಶಯಂ ನಾವಿಂದಂ ಭ್ರಾತೃಭಿಃ ಸಹ ॥2॥
ಹೇ ರಾಜನೇ! ನಿವಾಸದಲ್ಲಿ ವಾಸವಾಗಿದ್ದರೂ ದುಃಖದಿಂದ ಕಷ್ಟಪಡುತ್ತಿರುವ, ಉಪವಾಸದಿಂದ ಕೃಶನಾಗಿರುವ, ಆಹಾರದಲ್ಲಿ ನಿಯಮವುಳ್ಳ, ನೆಲದ ಮೇಲೆ ಮಲಗುತ್ತಿರುವ ನಿನ್ನನ್ನು ಸಹೋದರರೂ ಕೂಡಿದಂತೆ ನಾನು ಗಮನಿಸಲಿಲ್ಲ.
ಅಹೋಽಸ್ಮಿ ವಂಚಿತೋ ಮೂಢೋ ಭವತಾ ಗೂಢಬುದ್ಧಿನಾ |
ವಿಶ್ವಾಸಯಿತ್ವಾ ಪೂರ್ವಂ ಮಾಂ ಯದಿ ತ್ವಮಿದಮುಕ್ತವಾನ್ ॥3॥
ಗೂಢಬುದ್ಧಿಯುಳ್ಳ ನಿನ್ನಿಂದ ಮೂಢನಾದ ನಾನು ವಂಚಿತನಾಗಿದ್ದೇನೆ. ಹಾ ಕಷ್ಟವೇ! ಮೊದಲು ನಾನು ವಿಶ್ವಾಸಗೊಳ್ಳುವಂತೆ ಮಾಡಿ ಈಗ ನೀನೇನು ಹೇಳುತ್ತಿರುವೆಯೋ ಇದು ವಂಚನೆಯೇ ಸರಿ.
ಕಿಂ ಮೇ ರಾಜ್ಯೇನ ಭೋಗೈರ್ವಾ ಕಿಂ ಯಜ್ಞೈಃ ಕಿಂ ಫಲೇನ ವಾ |
ಯಸ್ಯ ಮೇ ತ್ವಂ ಮಹೀಪಾಲ ದುಃಖಾನ್ಯೇವಮವಾಪ್ತವಾನ್ ॥4॥
ಹೇ ಮಹೀಪಾಲನೇ! ಯಾವ ಈ ನನ್ನ ರಾಜ್ಯದಲ್ಲಿ ನೀನು ಈ ರೀತಿ ದುಃಖಗೊಂಡಿರುವೆಯೋ ಅಂತಹ ರಾಜ್ಯದಿಂದಾಗಲಿ, ಭೋಗಗಳಿಂದಾಗಲಿ ಏನು ಉಪಯೋಗ? ಅಥವಾ ನಾನು ಮಾಡುವ ಯಜ್ಞದಿಂದಾಗಲಿ, ಆ ಯಜ್ಞದಿಂದ ಸಿಗುವ ಫಲದಿಂದಾಗಲಿ ಏನು ಉಪಯೋಗ?
ಪೀಡಿತಂ ಚಾಪಿ ಜಾನಾಮಿ ರಾಜ್ಯಮಾತ್ಮಾನಮೇವ ಚ |
ಅನೇನ ವಚಸಾ ತೇಽದ್ಯ ದುಃಖಿತೋಽಸ್ಮಿ ಜನೇಶ್ವರ ॥5॥
ಹೇ ಜನಾಧಿಪತಿಯೇ, ನಿನ್ನ ಈ ಮಾತಿನಿಂದ ಇಂದು ನಾನು ಬಹಳ ದುಃಖಿತನಾಗಿದ್ದೇನೆ. ಜೊತೆಗೆ ರಾಜ್ಯವನ್ನು, ನನ್ನನ್ನೂ ಪೀಡೆಗೊಳಗಾದಂತೆ ತಿಳಿಯುತ್ತಿದ್ದೇನೆ.
ಭವಾನ್ ಪಿತಾ ಭವಾನ್ ಮಾತಾ ಭವಾನ್ ನಃ ಪರಮೋ ಗುರುಃ |
ಭವತಾ ವಿಪ್ರಹೀಣಾ ಹಿ ಕ್ವ ನು ತಿಷ್ಠಾಮಹೇ ವಯಮ್ ॥6॥
ನಮಗೆ ನೀನೇ ತಂದೆ, ನೀನೇ ತಾಯಿ, ನೀನೇ ಪರಮಗುರುವೂ ಆಗಿರುವೆ. ನೀನೇ ಈ ರಾಜ್ಯದಲ್ಲಿ ಇಲ್ಲವಾದರೆ ನಾವು ಹೇಗೆ ಇರಬಲ್ಲೆವು?
ಔರಸೋ ಭವತಃ ಪುತ್ರೋ ಯುಯುತ್ಸುಸ್ತರುಣೋಽಪಿ ಸನ್ |
ಅಸ್ತು ರಾಜಾ ಮಹಾರಾಜ ಯಂ ಚಾನ್ಯಂ ಮನ್ಯತೇ ಭವಾನ್ ॥7॥
ನಿನ್ನ ಸ್ವಂತ ಮಗನಾದ, ಯುವಕನೂ ಆಗಿರುವ ಯುಯುತ್ಸುವು ರಾಜನಾಗಲಿ. ಹೇ ಮಹಾರಾಜನೇ! ಅಥವಾ ಬೇರೆ ಯಾವಾತನನ್ನು ನೀನು ಒಪ್ಪಿಕೊಳ್ಳುವೆಯೋ ಅವನೇ ರಾಜನಾಗಲಿ.
ಅಹಂ ವನಂ ಗಮಿಷ್ಯಾಮಿ ಭವಾನ್ ರಾಜ್ಯಂ ಪ್ರಶಾಸಿತ್ವದಮ್ |
ನ ಮಾಮಯಶಸಾ ದಗ್ಧಂ ಭೂಯಸ್ತ್ವಂ ದಗ್ಧುಮರ್ಹಸಿ ॥8॥
ನಾನು ಕಾಡಿಗೆ ಹೋಗುತ್ತೇನೆ. ಈ ರಾಜ್ಯವನ್ನು ನೀನೇ ನಿರ್ದೇಶಿಸು. ಮೊದಲೇ ಅಪಕೀರ್ತಿಯಿಂದ ದಗ್ಧನಾದ ನನ್ನನ್ನು ಮತ್ತೆ ನೀನು ಸುಡುವುದು ಯೋಗ್ಯವಲ್ಲ.
ನಾಹಂ ರಾಜಾ ಭವಾನ್ ರಾಜಾ ಭವತಾ ಪರವಾನಹಮ್ |
ಕಥಂ ಗುರುಂ ಮಹಾರಾಜಮ್ ಅನುಜ್ಞಾತುಮಿಹೋತ್ಸಹೇ ॥9॥
ಈ ರಾಜ್ಯಕ್ಕೆ ನಾನು ರಾಜನಲ್ಲ. ನೀನೇ ರಾಜ. ನಾನು ನಿನ್ನ ಸೇವಕನಂತೆ ಇರುವೆ. ಧರ್ಮಬೋಧಕನಾದ ಗುರುವಿನಂತೆ ಇರುವ ಮಹಾರಾಜನಾದ ನಿನಗೆ ಕಾಡಿಗೆ ಹೊರಡಲು ಒಪ್ಪಿಗೆ ಕೊಡುವುದರಲ್ಲಿ ನನಗೆ ಹೇಗೆ ಉತ್ಸಾಹ ಬಂದೀತು?
ನ ಮನ್ಯುರಿಹ ನಃ ಕಶ್ಚಿತ್ ಸುಯೋಧನಕೃತೇ ನೃಪ |
ಭವಿತವ್ಯಂ ತಥಾ ತದ್ಧಿ ವಯಂ ತೇ ಚೈವ ಮೋಹಿತಾಃ ॥10॥
ಹೇ ನೃಪನೇ! ಸುಯೋಧನನ ವಿಷಯದಲ್ಲಿ ನಮಗೆ ಯಾವ ಕೋಪವೂ ಇಲ್ಲ. ಅದು ಹಾಗೆಯೇ ಆಗಬೇಕಿತ್ತು. ನಾವು ಹಾಗೂ ಅವರು ಎರಡು ಪಕ್ಷದವರೂ ಮೋಹಕ್ಕೊಳಗಾಗಿದ್ದೆವು.
ವಯಂ ಹಿ ಪುತ್ರಾ ಭವತೋ ಯಥಾ ದುರ್ಯೋಧನಾದಯಃ |
ಗಾಂಧಾರೀ ಚೈವ ಕುಂತೀ ಚ ನಿರ್ವಿಶೇಷೇ ಮತೇ ಮಮ ॥11॥
ಹೇಗೆ ದುರ್ಯೋಧನಾದಿಗಳು ನಿನಗೆ ಮಕ್ಕಳೋ, ಹಾಗೆ ನಾವೂ ನಿನಗೆ ಮಕ್ಕಳೇ ತಾನೆ. ಗಾಂಧಾರೀ ದೇವಿಯಾಗಲಿ, ಕುಂತಿಯಾಗಲಿ ನನಗೆ ಇಬ್ಬರೂ ಯಾವುದೇ ವ್ಯತ್ಯಾಸವಿಲ್ಲದೆ ತಾಯಂದಿರೇ ಆಗಿದ್ದಾರೆ.
ಯದ್ಯೇವಮಪಿ ಮಾಂ ರಾಜನ್ ಪರಿತ್ಯಜ್ಯ ಗಮಿಷ್ಯಸಿ |
ಪೃಷ್ಠತಸ್ತ್ವನುಯಾಸ್ಯಾಮಿ ಸತ್ಯೇನಾತ್ಮಾನಮಾಲಭೇ ॥12॥
ಹೇ ರಾಜನೇ! ಹೀಗಿದ್ದರೂ ನನ್ನನ್ನು ಬಿಟ್ಟು ನೀನು ಕಾಡಿಗೆ ಹೋಗುವುದಾದರೆ ನಿನ್ನ ಹಿಂದೆ ನಾನೂ ಅನುಸರಿಸಿಕೊಂಡು ಬರುತ್ತೇನೆ. ಹೀಗೆ ಮಾಡುವ ಮೂಲಕ ನನ್ನ ಸತ್ಯವನ್ನು ಉಳಿಸಿಕೊಳ್ಳುತ್ತೇನೆ.
ಇಯಂ ಹಿ ವಸುಸಂಪೂರ್ಣಾ ಮಹೀ ಸಾಗರಮೇಖಲಾ |
ಭವತಾ ವಿಪ್ರಹೀಣಸ್ಯ ನ ಮೇ ಪ್ರೀತಿಕರೀ ಭವೇತ್ ॥13॥
ಸಂಪತ್ತಿನಿಂದ ಪೂರ್ಣವಾದ ಸಾಗರವೇ ಗಡಿಯಾಗಿ ಉಳ್ಳ ಈ ಭೂಮಿಯು ನಿನ್ನಿಂದ ಹೀನವಾಗಿದ್ದರೆ ನನಗೆ ಸಂತೋಷವನ್ನು ಉಂಟುಮಾಡಲಾರದು.
ಭವದೀಯಮಿದಂ ಸರ್ವಂ ಶಿರಸಾ ತ್ವಾಂ ಪ್ರಸಾದಯೇ |

ತ್ವದಧೀನಾಃ ಸ್ಮ ರಾಜೇಂದ್ರ ವ್ಯೇತು ತೇ ಮಾನಸೋ ಜ್ವರಃ ॥14॥
ಹೇ ರಾಜೇಂದ್ರನೇ! ಈ ಎಲ್ಲವೂ ನಿನ್ನದೆ. ತಲೆಬಾಗಿ ನಿನ್ನನ್ನು ಕೇಳಿಕೊಳ್ಳುತ್ತಿದ್ದೇನೆ. ನಾವೆಲ್ಲರೂ ನಿನ್ನ ಅಧೀನರಾಗಿದ್ದೇವೆ. ನಿನ್ನ ಈ ಮನಸ್ಸಿನ ಜ್ವರವು ಕಳೆದು ಹೋಗಲಿ.
ಭವಿತವ್ಯಮನುಪ್ರಾಪ್ತಂ ಮನ್ಯೇ ತ್ವೇತಜ್ಜನಾಧಿಪ |
ದಿಷ್ಟ್ಯಾ ಶುಶ್ರೂಷಮಾಣಸ್ತ್ವಾಂ ಮೋಕ್ಷ್ಯಾಮಿ ಮನಸೋ ಜ್ವರಮ್ ॥
ಹೇ ಜನಾಧಿಪನೇ! ಈ ಪ್ರಸಂಗದ ಮೂಲಕ ಮುಂದೆ ನಡೆಯಬೇಕಾದ ವಿಷಯವು ನನಗೆ ತಿಳಿಯಿತೆಂದು ಭಾವಿಸುತ್ತೇನೆ. ಸಂತೋಷದಿಂದ ನಿನ್ನ ಸೇವೆಗೈಯ್ಯುತ್ತಾ ನಿನ್ನ ಮನಸ್ಸಿನ ವೇದನೆಯನ್ನು ಹೋಗಲಾಡಿಸುತ್ತೇನೆ.
ಧೃತರಾಷ್ಟ್ರಃ
ತಾಪಸ್ಯೇ ಮೇ ಮನಸ್ತಾತ ವರ್ತತೇ ಕುರುನಂದನ |
ಉಚಿತಂ ಹಿ ಕುಲೇಽಸ್ಮಾಕಮ್ ಅರಣ್ಯಗಮನಂ ಪ್ರಭೋ ॥16॥
ಧೃತರಾಷ್ಟ್ರ ಹೇ ಮಗು, ಕುರುನಂದನನೇ! ನನ್ನ ಮನಸ್ಸು ತಪಸ್ಸಿನಿಂದ ಲಭಿಸುವ ಪುಣ್ಯದಲ್ಲಿ ಮಗ್ನವಾಗಿದೆ. ನಮ್ಮ ಕುಲದಲ್ಲಿ ವಯಸ್ಸಾದ ನಂತರ ಅರಣ್ಯಗಮನವು ಉಚಿತವೇ ತಾನೆ.
ಚಿರಮಸ್ಮ್ಯುಷಿತಃ ಪುತ್ರ ಚಿರಂ ಶುಶ್ರೂಷಿತಸ್ತ್ವಯಾ |
ವೃದ್ಧಂ ಮಾಮಭ್ಯನುಜ್ಞಾತುಂ ರಾಜನ್ನರ್ಹಸಿ ಮಾ ಚಿರಮ್ ॥17॥
ಹೇ ಮಗನೇ! ಬಹಳ ಕಾಲದಿಂದ ಇಲ್ಲೇ ವಾಸವಾಗಿದ್ದೇನೆ. ಅಲ್ಲದೆ ನಿನ್ನಿಂದ ಸೇವೆಗೈಯ್ಯಲ್ಪಟ್ಟಿದ್ದೇನೆ. ಹೇ ರಾಜನೇ! ತಡಮಾಡದೆ ವೃದ್ಧನಾದ ನನಗೆ ಕಾಡಿಗೆ ಹೊರಡಲು ಅನುಜ್ಞೆ ಕೊಡು.
ವೈಶಂಪಾಯನಃ
ಏವಮುಕತ್ವ ವೇಪಮಾನಂ ಪಾಂಡುಪುತ್ರಂ ಕೃತಾಂಜಲಿಮ್ |
ಉವಾಚ ವಿದುರಂ ರಾಜಾ ಧೃತರಾಷ್ಟ್ರೋಽಂಬಿಕಾಸುತಃ ॥18॥
ವೈಶಂಪಾಯನ ಕೈಮುಗಿದು ನಿಂತಿರುವ, ನಡುಗುತ್ತಿರುವ ಪಾಂಡುಪುತ್ರನಾದ ಯುಧಿಷ್ಠಿರನನ್ನು ಕುರಿತು ಇಷ್ಟನ್ನು ಹೇಳಿ ಅಂಬಿಕೆಯ ಮಗನಾದ ಧೃತರಾಷ್ಟ್ರ ರಾಜನು ವಿದುರನನ್ನು ನೋಡುತ್ತಾ ಮುಂದೆ ಹೇಳುವಂತೆ ಮಾತನಾಡಿದನು.
ಧೃತರಾಷ್ಟ್ರಃ
ಸಂಜಯಂ ಚ ಮಹಾಮಾತ್ಯಂ ಕೃಪಂ ಚಾಪಿ ಮಹಾರಥಮ್ |
ಅನುನೇತುಮಿಹೇಚ್ಛಾಮಿ ಭವದ್ಭಿಃ ಪೃಥಿವೀಪತಿಮ್ ॥19॥
ಧೃತರಾಷ್ಟ್ರ ಮಂತ್ರಿಪ್ರಧಾನನಾದ ಸಂಜಯನನ್ನು, ಜೊತೆಗೆ ಮಹಾರಥಿಯಾದ ಕೃಪನನ್ನೂ ಕೂಡಿಕೊಂಡು ನೀವೆಲ್ಲರೂ ಪೃಥಿವೀಪತಿಯಾದ ಯುಧಿಷ್ಠಿರನನ್ನು ಈ ವಿಷಯದಲ್ಲಿ ಒಪ್ಪಿಸಬೇಕೆಂದು ಬಯಸುತ್ತಿದ್ದೇನೆ.
ಮ್ಲಾಯತೇ ಹಿ ಮನಸ್ತಾತ ಮುಖಂ ಚ ಪರಿಶುಷ್ಯತಿ |
ವಯಸಾ ಚ ಪ್ರಕೃಷ್ಟೇನ ವ್ಯಾಯಾಮೇನಾಪ್ಯನೇನ ಚ ॥20॥
ಮಗು ಯುಧಿಷ್ಠಿರನೇ! ವೃದ್ಧಾಪ್ಯದ ಈ ವಯಸ್ಸಿನಿಂದ ಹಾಗೂ ಈ ನನ್ನ ಉಪವಾಸಾದಿ ಶ್ರಮದಿಂದ ಮನಸ್ಸು ಬಾಡಿ ಹೋಗಿದೆ, ಬಾಯಿ ಒಣಗುತ್ತಿದೆ.
ವೈಶಂಪಾಯನಃ
ಇತ್ಯುಕತ್ವ ಸ ತು ಧರ್ಮಾತ್ಮಾ ವೃದ್ಧೋ ರಾಜಾ ಕುರೂದ್ವಹಃ |
ಗಾಂಧಾರೀಂ ಶಿಶ್ರಿಯೇ ಧೀಮಾನ್ ಸಹಸೈವ ಗತಾಸುವತ್ ॥21॥
ವೈಶಂಪಾಯನ ಇಷ್ಟು ಹೇಳುತ್ತಾ ಧರ್ಮಾತ್ಮನಾದ, ಕುರುವಂಶಜನಾದ, ವೃದ್ಧನಾದ ಆ ರಾಜನು ಕೂಡಲೇ ಧೀಮಂತನಾಗಿದ್ದರೂ ಪ್ರಾಣಹೋದವರಂತೆ ಗಾಂಧಾರೀ ದೇವಿಯನ್ನು ಆಧರಿಸಿ ನಿಂತನು.
ತಂ ತು ದೃಷ್ಟ್ವಾ ತಥಾऽऽಸೀನಂ ನಿಶ್ಚೇಷ್ಟಂ ಕುರುಪಾರ್ಥಿವಮ್ |
ಆರ್ತಿಂ ರಾಜಾ ಯಯೌ ತೂರ್ಣಂ ಕೌಂತೇಯಃ ಪರವೀರಹಾ ॥22॥
ಹಾಗೆ ನಿಶ್ಚೇಷ್ಟನಾಗಿ ಇದ್ದ ಕುರುರಾಜನನ್ನು ನೋಡಿ ಶತ್ರುಸಂಹಾರಕನಾದ, ಕುಂತೀಪುತ್ರನಾದ ಯುಧಿಷ್ಠಿರ ರಾಜನು ಬಹಳ ದುಃಖಗೊಂಡನು.
ಯುಧಿಷ್ಠಿರಃ
ಯಸ್ಯ ನಾಗಸಹಸ್ರೇಣ ದಶಸಂಖ್ಯೇನ ವೈ ಬಲಮ್ |
ಸೋಽಯಂ ನಾರೀಂ ಸಮಾಶ್ರಿತ್ಯ ಶೇತೇ ರಾಜಾ ಗತಾಸುವತ್ ॥23॥
ಯುಧಿಷ್ಠಿರ ಯಾವನಿಗೆ ಹತ್ತುಸಾವಿರ ಆನೆಗಳಷ್ಟು ಬಲವಿದೆಯೋ ಅಂತಹ ಈ ರಾಜನು ಪ್ರಾಣವಿಲ್ಲದವನಂತೆ ಸ್ತ್ರೀಯನ್ನು ಆಧರಿಸಿಕೊಂಡು ಮಲಗಿದ್ದಾನೆ.
ಆಯಸೀ ಪ್ರತಿಮಾ ಯೇನ ಭೀಮಸೇನಸ್ಯ ವೈ ಪುರಾ |
ಚೂರ್ಣೀಕೃತಾ ಬಲವತಾ ಸ ಬಲಾರ್ಥೇಽಶ್ರಯತ್ ಸ್ತ್ರಿಯಮ್ ॥24॥
ಈ ಹಿಂದೆ ಬಲಿಷ್ಠನಾದ ಯಾವನಿಂದ ಭೀಮಸೇನನ ಕಬ್ಬಿಣದ ಪ್ರತಿಮೆಯು ಪುಡಿಪುಡಿಯಾಗಿದೆಯೋ ಅಂತಹ ಧೃತರಾಷ್ಟ್ರನು ಬಲಕ್ಕೋಸ್ಕರ ಸ್ತ್ರೀಯನ್ನು ಆಶ್ರಯಿಸಿದ್ದಾನೆ.
ಧಿಗಸ್ತು ಮಾಮಧರ್ಮಜ್ಞಂ ಧಿಗ್ ಬುದ್ಧಿಂ ಧಿಗ್ ಬಹುಶ್ರುತಮ್ |
ಯತ್ಕೃತೇ ಪೃಥಿವೀಪಾಲಃ ಶೇತೇಽಯಮತಥೋಚಿತಃ ॥25॥

ಯಾವನಿಂದಾಗಿ ರಾಜನಾದ ಈ ಧೃತರಾಷ್ಟ್ರನು ಈ ರೀತಿ ಕುಸಿದು ಬೀಳುವುದು ಉಚಿತವಲ್ಲದಿದ್ದರೂ ಮಲಗಿದ್ದಾನೋ ಅಂತಹ ಧರ್ಮವನ್ನು ತಿಳಿಯದ ನನಗೆ ಧಿಕ್ಕಾರವಿರಲಿ! ನನ್ನ ಬುದ್ಧಿಗೂ ಧಿಕ್ಕಾರವಿರಲಿ! ನಾನು ಕೇಳಿಸಿಕೊಂಡ ವಿದ್ಯೆಗೂ ಧಿಕ್ಕಾರವಿರಲಿ!
ಅಹಮಪ್ಯುಪವತ್ಸ್ಯಾಮಿ ಯಥೈವಾಯಂ ಗುರುರ್ಮಮ |
ಯದಿ ರಾಜಾ ನ ಭುಂಕ್ತೇಯಂ ಗಾಂಧಾರೀ ಚ ಯಶಸ್ವಿನೀ ॥26॥
ಒಂದು ವೇಳೆ ಈ ರಾಜನಾದ ಧೃತರಾಷ್ಟ್ರನು, ಯಶಸ್ವಿನಿಯಾದ ಗಾಂಧಾರೀ ದೇವಿಯು ಉಣ್ಣುವುದಿಲ್ಲವಾದರೆ ನನಗೆ ಗುರುವಾದ ಇವನು ಹೇಗಿರುವನೋ ಹಾಗೆಯೇ ನಾನು ಉಪವಾಸ ಮಾಡುವೆ.
ವೈಶಂಪಾಯನಃ
ತತೋಽಸ್ಯ ಪಾಣಿನಾ ರಾಜಾ ಜಲಶೀತೇನ ಪಾಂಡವಃ |
ಉರೋ ಮುಖಂ ಚೈವ ಶನೈಃ ಪರ್ಯಮಾರ್ಜತ ಧರ್ಮವಿತ್ ॥27॥
ವೈಶಂಪಾಯನ ಅನಂತರ ಧರ್ಮಜ್ಞನಾದ ರಾಜನಾದ ಪಾಂಡವನು ನೀರಿನಂತೆ ತಂಪಾದ ತನ್ನ ಕೈಯಿಂದ ಈ ಧೃತರಾಷ್ಟ್ರನ ಎದೆ ಹಾಗೂ ಮುಖಗಳನ್ನು ನಿಧಾನವಾಗಿ ನೇವರಿಸಿದನು.
ತೇನ ರತ್ನೌಷಧಿಮತಾ ಪುಣ್ಯೇನ ಸುಖಗಂಧಿನಾ |
ಪಾಣಿಸ್ಪರ್ಶೇನ ರಾಜ್ಞಸ್ತು ತಥಾ ಸುಖಮವಾಪ ಹ ॥28॥
ರತ್ನ ಹಾಗೂ ಔಷಧಿಗಳಿಂದ ಕೂಡಿದ, ಪುಣ್ಯಮಯವಾದ, ಮಧುರವಾದ ಸುವಾಸನೆಯುಳ್ಳ ರಾಜನ ಆ ಕೈಸ್ಪರ್ಶದಿಂದ ಧೃತರಾಷ್ಟ್ರನು ಹಾಗೆಯೇ ಸುಖವನ್ನು ಹೊಂದಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಯುಧಿಷ್ಠಿರಧೃತರಾಷ್ಟ್ರಸಂವಾದೋ ನಾಮ ಷಷ್ಠೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ
ಧರ್ಮಜನು ಧೃತರಾಷ್ಟ್ರನನ್ನು ಆಲಂಗಿಸಿ ಸಮಾಧಾನಪಡಿಸಿದುದು.
ಧೃತರಾಷ್ಟ್ರನ ವನಗಮನದ ನಿರ್ಧಾರವನ್ನು ಧರ್ಮಜನು ತಡೆಯಲು ಯತ್ನಿಸಿದಾಗ ವೇದವ್ಯಾಸರ ಆಗಮನ.
ಧೃತರಾಷ್ಟ್ರಃ
ಸ್ಪೃಶ ಮಾಂ ಪಾಣಿನಾ ಭೂಯಃ ಪರಿಷ್ವಜ ಚ ಪಾಂಡವ |
ಜೀವಾಮೀವ ಹಿ ಸಂಸ್ಪರ್ಶಾತ್ ತವ ರಾಜೀವಲೋಚನ ॥1॥
ಧೃತರಾಷ್ಟ್ರ ಹೇ ಕಮಲದಂತೆ ಕಣ್ಣುಳ್ಳ ಪಾಂಡವನೇ, ಹಾಗೆಯೇ ನನ್ನನ್ನು ನೇವರಿಸು. ಜೊತೆಗೆ ಮತ್ತೆ ಮತ್ತೆ ನನ್ನನ್ನು ಆಲಿಂಗಿಸು. ನಿನ್ನ ಈ ಸ್ಪರ್ಶದಿಂದ ನಾನು ಬದುಕುವವನಂತೆ ಕಾಣುತ್ತಿದ್ದೇನೆ.
ಮೂರ್ಧಾನಂ ಚ ತವಾಘ್ರಾತುಮಿಚ್ಛಾಮಿ ಮನುಜಾಧಿಪ |
ಪಾಣಿಭ್ಯಾಂ ಚ ಪರಿಸ್ಪ್ರಷ್ಟುಂ ಪ್ರಾಣೇನ ಮಮ ಚಾತ್ಮನಿ ॥2॥
ಹೇ ಮನುಜಾಧಿಪನೇ, ನಿನ್ನ ನೆತ್ತಿಯನ್ನು ಆಘ್ರಾಣಿಸಲು ಹಾಗೂ ನಿನ್ನನ್ನು ಕೈಯಿಂದ ಮುಟ್ಟಲು ಬಯಸುತ್ತೇನೆ. ಇದರಿಂದ ನನ್ನಲ್ಲಿ ಪ್ರಾಣವನ್ನು ಉಳಿಸಿಕೊಳ್ಳುತ್ತೇನೆ.
ಅಷ್ಟಮೋ ಹ್ಯದ್ಯ ಕಾಲೋಽಯಮಾಹಾರಸ್ಯ ಕೃತಸ್ಯ ಮೇ |
ಯೇನಾಹಂ ಕುರುಶಾರ್ದೂಲ ನ ಶಕ್ನೋಮಿ ವಿಚೇಷ್ಟಿತುಮ್ ॥3॥
ಹೇ ಕುರುಶಾರ್ದೂಲನೇ, ನಾನು ಆಹಾರವನ್ನು ಸ್ವೀಕರಿಸಿ ಎಂಟು ಹೊತ್ತು ಕಳೆಯಿತು. ಹಾಗಾಗಿ ಅಲುಗಾಡಲೂ ಶಕ್ತಿಯಿಲ್ಲದವನಾಗಿದ್ದೇನೆ.
ವ್ಯಾಯಾಮಶ್ಚಾಯಮತ್ಯಂತಂ ಕೃತಸ್ತ್ವಮಭಿಯಾಚತಾ |
ತತೋ ಗ್ಲಾನಮನಾ ರಾಜನ್ ನಷ್ಟಸಂಜ್ಞ ಇವಾಭವಮ್ ॥4॥
ನಿನ್ನ ಅನುಜ್ಞೆಯನ್ನು ಯಾಚಿಸುವ ಈ ಕ್ರಿಯೆಯು ಅತ್ಯಂತ ಶ್ರಮದಾಯಕವಾಗಿದೆ. ಅಲ್ಲದೆ ನೀನು ಒಪ್ಪುತ್ತಿಲ್ಲವೆಂಬ ಮನೋವೇದನೆಯಿಂದ ಮೂರ್ಛಿತನಾದೇನು!
ತವಾಮೃತಸುಖಸ್ಪರ್ಶಂ ಹಸ್ತಸ್ಪರ್ಶಮಿಮಂ ಪ್ರಭೋ |
ಲಬ್ಧ್ವಾ ಸಂಜೀವಿತೋಽಸ್ಮೀತಿ ಮನ್ಯೇ ಕುರುಕುಲೋದ್ವಹ ॥5॥
ಹೇ ಪ್ರಭುವೇ, ಕುರುಕುಲೋದ್ವಹನೇ, ಅಮೃತದಂತೆ ಸುಖಮಯವಾದ ಸ್ಪರ್ಶವನ್ನು ನೀಡುವ ಈ ನಿನ್ನ ಹಸ್ತಸ್ಪರ್ಶವನ್ನು ಪಡೆದು ನಾನು ಬದುಕಿಸಲ್ಪಟ್ಟೆನೆಂದು ತಿಳಿಯುತ್ತಿದ್ದೇನೆ.
ವೈಶಂಪಾಯನಃ
ಏವಮುಕ್ತಸ್ತು ಕೌಂತೇಯಃ ಪಿತ್ರಾ ಜ್ಯೇಷ್ಠೇನ ಭಾರತ |
ಪಸ್ಪರ್ಶ ಸರ್ವಗಾತ್ರೇಷು ಸ್ನೇಹಾದ್ರ್ಯಂ ತಂ ಶನೈಸ್ತಥಾ ॥6॥
ವೈಶಂಪಾಯನ ಹೇ ಭರತವಂಶದಲ್ಲಿ ಬಂದ ಜನಮೇಜಯನೇ, ದೊಡ್ಡಪ್ಪನಿಂದ ಈ ರೀತಿ ಹೇಳಲ್ಪಟ್ಟ ಯುಧಿಷ್ಠಿರನು ಆ ಧೃತರಾಷ್ಟ್ರನನ್ನು ನಿಧಾನವಾಗಿ ಸ್ನೇಹಪೂರಿತನಾಗಿ ಸರ್ವಾಂಗಗಳಲ್ಲಿಯೂ ಸ್ಪರ್ಶಿಸಿದನು.

ಉಪಲಭ್ಯ ತತಃ ಪ್ರಾಣಾನ್ ಧೃತರಾಷ್ಟ್ರೋ ಮಹೀಪತಿಃ |
ಬಾಹುಭ್ಯಾಂ ಸಂಪರಿಷ್ವಜ್ಯ ಮೂರ್ಧ್ನಿ ಚಾಘ್ರಾಯ ಪಾಂಡವಮ್ ॥7॥
ಅನಂತರ ರಾಜನಾದ ಧೃತರಾಷ್ಟ್ರನು ಬಲವನ್ನು ಒಗ್ಗೂಡಿಸಿಕೊಂಡು ಯುಧಿಷ್ಠಿರನನ್ನು ಬಾಹುಗಳಿಂದ ಆಲಿಂಗಿಸಿ ಶಿರಸ್ಸನ್ನು ಆಘ್ರಾಣಿಸಿದನು.
ವಿದುರಾದಯಶ್ಚ ತೇ ಸರ್ವೇ ರುರುದುರ್ದುಃಖಿತಾ ಭೃಶಮ್ |
ಅತಿದುಃಖಾತ್ತು ರಾಜಾನಂ ನೋಚುಃ ಕಿಂಚನ ಪಾಂಡವಾಃ ॥8॥
ವಿದುರನೇ ಮೊದಲಾದ ಅಲ್ಲಿರುವ ಎಲ್ಲರೂ ಬಹಳ ದುಃಖಗೊಂಡವರಾಗಿ ಅಳುತ್ತಾ ನಿಂತರು. ಪಾಂಡವರಾದರೂ ಬಹಳವಾದ ದುಃಖದಿಂದ ರಾಜನನ್ನು ಕುರಿತು ಯಾವ ಮಾತನ್ನೂ ಆಡಲಿಲ್ಲ.
ಗಾಂಧಾರೀ ತ್ವೇವ ಧರ್ಮಜ್ಞಾ ಮನಸೋದ್ವಹತೀ ತದಾ |
ದುಃಖಾನ್ಯವಾರಯದ್ ರಾಜನ್ ಮೈವಮಿತ್ಯೇವ ಚಾಬ್ರವೀತ್ ॥9॥
ಹೇ ರಾಜನೇ! ಆಗ ಧರ್ಮಜ್ಞಳಾದ ಗಾಂಧಾರೀ ದೇವಿಯಾದರೂ ಮನಸ್ಸಿನಲ್ಲಿ ದುಃಖವುಳ್ಳವಳಾದರೂ ಆ ದುಃಖವನ್ನು ಕಳೆದುಕೊಂಡು `ಈ ರೀತಿ ಮಾಡದಿರಿ' ಎಂದಷ್ಟೇ ಹೇಳಿದಳು.
ಇತರಾಸ್ತು ಸ್ತ್ರಿಯಃ ಸರ್ವಾಃ ಕುಂತ್ಯಾ ಸಹ ಸುದುಃಖಿತಾಃ |
ನೇತ್ರೈಃಸ್ತಾಃ ಸಾಸ್ರುವಿಕ್ಲೇದೈಃ ಪರಿವಾರ್ಯ ಸ್ಥಿತಾ ಭವನ್ ॥10॥
ಕುಂತಿಯೊಂದಿಗೆ ಅಲ್ಲಿರುವ ಬೇರೆ ಎಲ್ಲ ಸ್ತ್ರೀಯರೂ ಕಣ್ಣೀರಿನಿಂದ ಒದ್ದೆಯಾದ ಕಣ್ಣುಗಳಿಂದ ಕೂಡಿಕೊಂಡು ತುಂಬಾ ದುಃಖಗೊಂಡವರಾಗಿ ಮುಖವನ್ನು ಮುಚ್ಚಿಕೊಂಡು ನಿಂತರು.
ತದಾಽಬ್ರವೀತ್ ಪುನರ್ವಾಕ್ಯಂ ಧೃತರಾಷ್ಟ್ರೋ ಯುಧಿಷ್ಠಿರಮ್ ॥11॥
ಆಗ ಧೃತರಾಷ್ಟ್ರನು ಯುಧಿಷ್ಠಿರನನ್ನು ಕುರಿತು ಮತ್ತೆ ಈ ಮಾತನ್ನು ಹೇಳಿದನು.
ಧೃತರಾಷ್ಟ್ರಃ
ಅನುಜಾನೀಹಿ ಮಾಂ ರಾಜನ್ ತಪಸೇ ಭರತರ್ಷಭ ॥12॥
ಗ್ಲಾಯತೇ ಮೇ ಮನಸ್ತಾತ ಭೂಯೋ ಭೂಯಃ ಪ್ರಜಲ್ಪತಃ |
ನ ಮಾಮಿತಃ ಪರಂ ಪುತ್ರ ಪರಿಕ್ಲೇಷ್ಟುಮಿಹಾರ್ಹಸಿ ॥13॥
ಧೃತರಾಷ್ಟ್ರ ಹೇ ಭರತರ್ಷಭನೇ, ರಾಜನೇ, ನನಗೆ ತಪಸ್ಸಿಗೆ ಒಪ್ಪಿಗೆ ಕೊಡು. ಮಗು, ಮತ್ತೆ ಮತ್ತೆ ಮಾತನಾಡುವುದರಿಂದ ನನ್ನ ಮನಸ್ಸು ಮತ್ತೂ ನೋಯುತ್ತದೆ. ಪುತ್ರನೇ, ಈಗಾಗಲೇ ದುಃಖಗೊಂಡ ನನ್ನನ್ನು ಮತ್ತೂ ದುಃಖಗೊಳಿಸುವುದು ನಿನಗೆ ತರವಲ್ಲ.
ವೈಶಂಪಾಯನಃ
ತಸ್ಮಿಂಸ್ತು ಕೌರವಶ್ರೇಷ್ಠೇ ತಥಾ ಬ್ರುವತಿ ಪಾಂಡವಮ್ |
ಸರ್ವೇಷಾಮವರೋಧಾನಾಮ್ ಆರ್ತನಾದೋ ಮಹಾನಭೂತ್ ॥
ವೈಶಂಪಾಯನ ಕೌರವಶ್ರೇಷ್ಠನಾದ ಆ ಧೃತರಾಷ್ಟ್ರನು ಪಾಂಡವನನ್ನು ಕುರಿತು ಹೀಗೆ ಹೇಳುತ್ತಿರಲು ಎಲ್ಲ ಅಂತಃಪುರ ಸ್ತ್ರೀಯರೂ ಬಹುವಾಗಿ ಆರ್ತನಾದಗೈದರು.
ದೃಷ್ಟ್ವಾ ಕೃಶಂ ವಿವರ್ಣಂ ಚ ರಾಜಾನಮತಥೋಚಿತಮ್ |
ಸರ್ವೇಷಾಮವರೋಧಾನಾಮ್ ಆರ್ತನಾದೋ ಮಹಾನಭೂತ್ ॥
ಕೃಶನಾಗಿ ಬಿಳಿಚಿಕೊಂಡಿರುವ, ಆ ರೀತಿಯಿರಲು ಯೋಗ್ಯನಲ್ಲದ ರಾಜನನ್ನು ನೋಡಿ ಎಲ್ಲ ಅಂತಃಪುರ ಸ್ತ್ರೀಯರ ಬಹುವಾದ ಆರ್ತನಾದವು ಕೇಳಿಬಂತು.
ಉಪವಾಸಪರಿಶ್ರಾಂತಂ ತ್ವಗಸ್ಥಿಪರಿವಾರಿತಮ್ ॥16॥
ಧರ್ಮಪುತ್ರಃ ಸ್ವಪಿತರಂ ಪರಿಷ್ವಜ್ಯ ಮಹಾಭುಜಃ |
ಶೋಕಜಂ ಬಾಷ್ಪಮುತ್ಸೃಜ್ಯ ಪುನರ್ವಚನಮಬ್ರವೀತ್ ॥17॥
ಧರ್ಮಪುತ್ರನಾದ ಯುಧಿಷ್ಠಿರನು ಉಪವಾಸದಿಂದ ಆಯಾಸಗೊಂಡಿರುವ ಕೇವಲ ಚರ್ಮಮೂಳೆಗಳಿಂದ ಕೂಡಿರುವ ತನ್ನ ತಂದೆಯನ್ನು ಚೆನ್ನಾಗಿ ಆಲಿಂಗಿಸಿ ದುಃಖದಿಂದ ಉಂಟಾದ ಕಣ್ಣೀರನ್ನು ಒರೆಸಿಕೊಂಡು ಮತ್ತೆ ಈ ಮಾತನ್ನು ಹೇಳಿದನು.
ಯುಧಿಷ್ಠಿರಃ
ನ ಕಾಮಯೇ ನರಶ್ರೇಷ್ಠ ಜೀವಿತಂ ಪೃಥಿವೀಂ ತಥಾ |
ಯಥಾ ತವ ಪ್ರಿಯಂ ರಾಜನ್ ಚಿಕೀರ್ಷಾಮಿ ಪ್ರಯತ್ನತಃ ॥18॥
ಯುಧಿಷ್ಠಿರ ಹೇ ರಾಜನೇ! ಪ್ರಯತ್ನಪೂರ್ವಕವಾಗಿ ನಿನಗೆ ಪ್ರಿಯವಾದುದನ್ನು ಹೇಗೆ ಮಾಡಲಿಚ್ಛಿಸುವೆನೋ ಹಾಗೆ ಬದುಕನ್ನಾಗಲಿ, ಭೂಮಿಯನ್ನಾಗಲಿ ನಾನು ಬಯಸುವುದಿಲ್ಲ.
ಯದಿ ತ್ವಹಮನುಗ್ರಾಹ್ಯೋ ಭವತೋ ದಯಿತೋಽಪಿ ವಾ |
ಕ್ರಿಯತಾಂ ತಾವದಾಹಾರಸ್ತತೋ ವೇತ್ಸ್ಯಾಮಹೇ ಪರಮ್ ॥19॥
ಒಂದು ವೇಳೆ ನಾನು ನಿನಗೆ ಅನುಗ್ರಹಯೋಗ್ಯನಾಗಿದ್ದರೆ ಅಥವಾ ನಿನಗೆ ಪ್ರೀತಿಪಾತ್ರನಾಗಿದ್ದರೆ ಮೊದಲು ಆಹಾರವನ್ನು ಸ್ವೀಕರಿಸು. ಉಳಿದದ್ದನ್ನು ನಂತರ ನೋಡೋಣ.
ವೈಶಂಪಾಯನಃ
ತತೋಽಬ್ರವೀನ್ಮಹಾರಾಜೋ ಧರ್ಮರಾಜಂ ಸ ಕೌರವಃ ॥20॥
ವೈಶಂಪಾಯನ ಅನಂತರ ಕೌರವ ಮಹಾರಾಜನು ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು.

ಧೃತರಾಷ್ಟ್ರಃ
ಅನುಜ್ಞಾತಸ್ತ್ವಯಾ ಪುತ್ರ ಭುಂಜೀಯೇತಿ ಮತಿರ್ಮಮ ॥21॥
ಧೃತರಾಷ್ಟ್ರ ಮಗನೇ, ನಿನ್ನ ಒಪ್ಪಿಗೆಯನ್ನು ಪಡೆದೇ ಆಹಾರವನ್ನು ಸ್ವೀಕರಿಸುವೆನೆಂದು ನಾನು ನಿಶ್ಚಯಿಸಿದ್ದೇನೆ.
ವೈಶಂಪಾಯನಃ
ಇತಿ ಬ್ರುವತಿ ರಾಜೇಂದ್ರೇ ಧೃತರಾಷ್ಟ್ರೇ ಯುಧಿಷ್ಠಿರಮ್ |
ಋಷಿಃ ಸತ್ಯವತೀಪುತ್ರೋ ವ್ಯಾಸೋಽಭ್ಯೇತ್ಯ ವಚೋಽಬ್ರವೀತ್ ॥22॥
ವೈಶಂಪಾಯನ ಹೀಗೆ ಧೃತರಾಷ್ಟ್ರನು ಯುಧಿಷ್ಠಿರನಿಗೆ ಹೇಳುತ್ತಿರುವಾಗಲೇ ಸತ್ಯವತೀಸುತರಾದ ವೇದವ್ಯಾಸಋಷಿಗಳು ಅಲ್ಲಿಗೆ ಬಂದು, ಮುಂದೆ ಹೇಳುವ ಮಾತುಗಳನ್ನು ಆಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ವ್ಯಾಸಾಗಮನಂ ನಾಮ ಸಪ್ತಮೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ವೇದವ್ಯಾಸರು ಯುಧಿಷ್ಠಿರನನ್ನು ಕುರಿತು ಸಕಾರಣವಾಗಿ ಕಾಡಿಗೆ ಹೋಗಲು ಧೃತರಾಷ್ಟ್ರನಿಗೆ ಒಪ್ಪಿಗೆ ನೀಡಬೇಕೆಂದು ವಿವರಿಸಿ ಆಶ್ರಮಕ್ಕೆ ಹಿಂದಿರುಗುವುದು. ಯುಧಿಷ್ಠಿರನು ಕಷ್ಟದಿಂದ ಧೃತರಾಷ್ಟ್ರನಿಗೆ ಒಪ್ಪಿಗೆ ನೀಡುವುದು.
ವ್ಯಾಸಃ
ಯುಧಿಷ್ಠಿರ ಮಹಾಬಾಹೋ ಯಥಾಽಽಹ ಕುರುನಂದನಃ |
ಧೃತರಾಷ್ಟ್ರೋ ಮಹಾತ್ಮಾ ತ್ವಂ ತತ್ ಕುರುಷ್ವಾವಿಚಾರಯನ್ ॥1॥
ವ್ಯಾಸರು ಹೇ ಮಹಾಬಾಹುವಾದ ಯುಧಿಷ್ಠಿರನೇ, ಕುರುನಂದನನಾದ, ಮಹಾತ್ಮನಾದ ಧೃತರಾಷ್ಟ್ರನು ಹೇಗೆ ಹೇಳುತ್ತಾನೋ ಹಾಗೆ ನೀನು ವಿಚಾರಿಸದೆ ಅದನ್ನು ಪೂರೈಸುವವನಾಗು.
ಅಯಂ ಹಿ ವೃದ್ಧೋ ನೃಪತಿರ್ಹತಪುತ್ರೋ ವಿಶೇಷತಃ |
ನೇದಂ ಕೃಚ್ಛ್ರಂ ಚಿರಗತಃ ಸಹೇದಿತಿ ಮತಿರ್ಮಮ ॥2॥
ಈ ರಾಜನು ಈಗಾಗಲೇ ವೃದ್ಧನಾಗಿದ್ದಾನೆ. ಅಲ್ಲದೆ ವಿಶೇಷವಾಗಿ ಮಕ್ಕಳನ್ನೂ ಕಳೆದುಕೊಂಡಿದ್ದಾನೆ. ಅವನು ಬಹಳ ಕಾಲ ಇಲ್ಲೇ ಇದ್ದರೆ ಈ ಕಷ್ಟವನ್ನು ಸಹಿಸಿಕೊಳ್ಳಲಾರನೆಂದು ನನಗೆ ಅನಿಸುತ್ತದೆ.
ಗಾಂಧಾರೀ ಸಾ ಮಹಾಭಾಗಾ ಪ್ರಾಜ್ಞಾ ಕರುಣವೇದಿನೀ |
ಪುತ್ರಶೋಕಂ ಮಹಾರಾಜ ಧೈರ್ಯೇಣೋದ್ವಹತೇ ಭೃಶಮ್ ॥3॥
ಹೇ ಮಹಾರಾಜನೇ! ಮಹಾತ್ಮಳಾದ ಆ ಗಾಂಧಾರಿಯೂ ಕೂಡ ಬುದ್ಧಿವಂತಳಾಗಿದ್ದು, ದಯನೀಯ ಪರಿಸ್ಥಿತಿಯನ್ನು ಹೊಂದಿದ್ದರೂ ಬಹಳ ಧೈರ್ಯದಿಂದ ಪುತ್ರಶೋಕವನ್ನು ಸಹಿಸಿಕೊಂಡಿದ್ದಾಳೆ.
ಅಹಮಪ್ಯೇತದೇವ ತ್ವಾಂ ಬ್ರವೀಮಿ ಕುರು ಮೇ ವಚಃ |
ಅನುಜ್ಞಾಂ ಲಭತಾಂ ರಾಜಾ ಮಾ ವೃಥೇಹ ಮರಿಷ್ಯತಿ ॥4॥
ನಾನೂ ಕೂಡ ನಿನ್ನಲ್ಲಿ ಇದನ್ನೇ ಹೇಳುತ್ತಿದ್ದೇನೆ. ನನ್ನ ಮಾತನ್ನು ನಡೆಸಿಕೊಡು. ರಾಜನಾದ ಧೃತರಾಷ್ಟ್ರನು ವ್ಯರ್ಥವಾಗಿ ಇಲ್ಲೇ ಸಾಯದೆ ಕಾಡಿಗೆ ಹೋಗಲು ಅನುಜ್ಞೆಯನ್ನು ಪಡೆಯಲಿ.
ಸ್ವಸ್ಥೋ ಭವತ್ಯಯಂ ಧೀಮಾನ್ ವನೇಷು ಮಧುಗಂಧಿಷು |
ರಾಜರ್ಷೀಣಾಂ ಪುರಾಣಾನಾಮನುಯಾತು ಗತಿಂ ನೃಪಃ ॥5॥
ಬುದ್ಧಿವಂತನಾದ ಇವನು ಮಧುರವಾದ ಸುವಾಸನೆಯುಳ್ಳ ಕಾಡುಗಳಲ್ಲಿ ಚೆನ್ನಾಗಿ ಇರಬಲ್ಲ. ಈ ರಾಜನು ಹಿಂದಿನ ರಾಜರ್ಷಿಗಳು ನಡೆದ ದಾರಿಯನ್ನು ಅನುಸರಿಸಲಿ.
ರಾಜರ್ಷೀಣಾಂ ಹಿ ಸರ್ವೇಷಾಮಂತೇ ವನಮುಪಾಶ್ರಯಃ ॥6॥
ಎಲ್ಲ ರಾಜರ್ಷಿಗಳಿಗೂ ಕೂಡ ಕೊನೆಗೆ ಕಾಡೇ ಆಶ್ರಯ ತಾನೆ?
ವೈಶಂಪಾಯನಃ
ಇತ್ಯುಕ್ತಃ ಸ ತತೋ ರಾಜಾ ವ್ಯಾಸೇನಾದ್ಭುತಕರ್ಮಣಾ |
ಪ್ರತ್ಯುವಾಚ ಮಹಾತೇಜಾ ಧರ್ಮರಾಜೋ ಮಹಾಮುನಿಮ್ ॥7॥
ವೈಶಂಪಾಯನ ಅದ್ಭುತವಾದ ಕರ್ಮಗಳನ್ನು ನಡೆಸಿದ ವೇದವ್ಯಾಸರಿಂದ ಈ ರೀತಿ ಹೇಳಲ್ಪಟ್ಟ, ಆ ಮಹಾತೇಜಸ್ವಿಯಾದ ಮಹಾರಾಜನಾದ ಧರ್ಮರಾಜನು ಮಹಾಮುನಿಯನ್ನು ಕುರಿತು ಈ ರೀತಿ ಉತ್ತರಿಸಿದನು.
ಯುಧಿಷ್ಠಿರಃ
ಭಗವಾನೇವ ನೋ ಮಾನ್ಯೋ ಭಗವಾನೇವ ನೋ ಗುರುಃ |
ಭಗವಾನಸ್ಯ ರಾಜ್ಯಸ್ಯ ಕುಲಸ್ಯ ಚ ಪರಾಯಣಮ್ ॥8॥
ಅಹಂ ತು ಪುತ್ರೋ ಭಗವನ್ ಪಿತಾ ರಾಜಾ ಗುರುಶ್ಚ ಮೇ |
ನಿದೇಶವರ್ತೀ ಚ ಪಿತುಃ ಪುತ್ರೋ ಭವತಿ ಧರ್ಮತಃ ॥9॥
ಯುಧಿಷ್ಠಿರ ಹೇ ಭಗವನ್ ವೇದವ್ಯಾಸರೇ, ನೀವೇ ನಮಗೆ ಮಾನ್ಯರಾಗಿರುವಿರಿ. ನೀವೇ ನಮ್ಮ ಗುರುಗಳು. ಈ ರಾಜ್ಯ ಹಾಗೂ ಕುಲಕ್ಕೆ

ನೀವೇ ಆಶ್ರಯದಾತರು. ನಾನು ಮಗನಾಗಿದ್ದೇನೆ. ರಾಜನಾದ ಧೃತರಾಷ್ಟ್ರನು ನನಗೆ ತಂದೆಯೂ, ಗುರುವೂ ಆಗಿದ್ದಾನೆ. ಧರ್ಮದೃಷ್ಟಿಯಿಂದ ನೋಡುವಾಗ ಮಗನು ತಂದೆಯ ಆಜ್ಞೆಗೆ ವಶನಾಗಿರಬೇಕು (ಹಾಗಾಗಿ ನಾನು ಹೇಗೆ ಅನುಜ್ಞೆ ಕೊಡಲಿ?)
ವೈಶಂಪಾಯನಃ
ಇತ್ಯುಕ್ತಃ ಸ ತು ತಂ ಪ್ರಾಹ ವ್ಯಾಸೋ ಧರ್ಮಭೃತಾಂ ವರಃ |
ಯುಧಿಷ್ಠಿರಂ ಮಹಾತೇಜಾಃ ಪುನರೇವ ವಿಶಾಂಪತೇ ॥10॥
ವೈಶಂಪಾಯನ ಹೇ-ವಿಶಾಂಪತಿಯೇ! ಧಾರ್ಮಿಕರಲ್ಲಿ ಶ್ರೇಷ್ಠರಾದ ಮಹಾತೇಜಸ್ವಿಯಾದ ಆ ವೇದವ್ಯಾಸರು ಯುಧಿಷ್ಠಿರನಿಂದ ಈ ರೀತಿ ಹೇಳಲ್ಪಟ್ಟಾಗ ಆ ಯುಧಿಷ್ಠಿರನನ್ನು ಕುರಿತು ಮತ್ತೆ ಹೀಗೆ ಹೇಳಿದರು.
ವ್ಯಾಸಃ
ಏವಮೇತನ್ಮಹಾಬಾಹೋ ಯಥಾ ವದಸಿ ಕೌರವ |
ರಾಜಾಽಯಂ ವೃದ್ಧತಾಂ ಪ್ರಾಪ್ತಃ ಪ್ರಮಾಣೇ ಪರಮೇ ಸ್ಥಿತಃ ॥11॥
ವ್ಯಾಸರು ಹೇ ಕೌರವನೇ, ನೀನೇನು ಹೇಳುತ್ತಿರುವಿಯೋ ಅದು ಹಾಗೆಯೇ (ಸರಿಯಾಗಿದೆ). ಈ ರಾಜನು ವೃದ್ಧಾಪ್ಯವನ್ನು ಪಡೆದು ಉತ್ತಮವಾದ ಅಧ್ಯಾತ್ಮ ಚಿಂತನೆಯ ಮಾರ್ಗದಲ್ಲಿ ನಿಂತಿದ್ದಾನೆ.
ಸೋಽಯಂ ಮಯಾಽಭ್ಯನುಜ್ಞಾತಸ್ತ್ವಯಾ ಚ ಪೃಥಿವೀಪತಿಃ |
ಕರೋತು ಸ್ವಮಭಿಪ್ರಾಯಂ ಮಾಽಸ್ಯ ವಿಘ್ನಕರೋ ಭವ ॥12॥
ಅಂತಹ ಈ ಪೃಥಿವೀಪತಿಯು ನನ್ನಿಂದ ಅನುಜ್ಞೆಯನ್ನು ಪಡೆದು, ಹಾಗೆಯೇ ನಿನ್ನಿಂದಲೂ ಒಪ್ಪಿಗೆಯನ್ನು ಪಡೆದು ತನ್ನ ಆಶಯದಂತೆ ನಡೆಯಲಿ. ಇವನಿಗೆ ವಿಘ್ನವನ್ನುಂಟು ಮಾಡಬೇಡ.
ಏಷ ಏವ ಪರೋ ಧರ್ಮೋ ರಾಜರ್ಷೀಣಾಂ ಯುಧಿಷ್ಠಿರ |
ಸಮರೇ ವಾ ಭವೇನ್ಮೃತ್ಯುರ್ವನೇ ವಾ ವಿಧಿಪೂರ್ವಕಮ್ ॥13॥
ಹೇ ಯುಧಿಷ್ಠಿರನೇ, ರಾಜಶ್ರೇಷ್ಠರಿಗೆ ಯುದ್ಧದಲ್ಲಾಗಲಿ, ವಿಧಿಯುಕ್ತವಾದ ಆಚರಣೆಯಿಂದ ಕಾಡಿನಲ್ಲಾಗಲಿ ಮರಣವು ಒದಗಬೇಕು. ಇದೇ ಶ್ರೇಷ್ಠವಾದ ಧರ್ಮವಾಗಿದೆ.
ಪಿತ್ರಾಽಪಿ ತವ ರಾಜೇಂದ್ರ ಪಾಂಡುನಾ ಪೃಥಿವೀಕ್ಷಿತಾ |
ಶಿಷ್ಯಭೂತೇನ ರಾಜಾಽಯಂ ಗುರುವತ್ ಪರ್ಯುಪಾಸಿತಃ ॥14॥
ಹೇ ರಾಜೇಂದ್ರನೇ, ಈ ರಾಜನು, ಶಿಷ್ಯನಂತಿರುವ ನಿನ್ನ ತಂದೆಯಾದ ಪೃಥಿವೀಪತಿಯಾದ ಪಾಂಡುವಿನಿಂದಲೂ ಗುರುವಿನಂತೆ ಸೇವಿಸಲ್ಪಟ್ಟಿದ್ದಾನೆ.
ಕ್ರತುಭಿರ್ದಕ್ಷಿಣಾಭಿಶ್ಚ ರತ್ನಪರ್ವತಶೋಭಿತೈಃ |
ಮಹದ್ಭಿರಿಷ್ಟಂ ಭೋಗಾಶ್ಚ ಭುಕ್ತಾಃ ಪುತ್ರಾಶ್ಚ ಲಾಲಿತಾಃ ॥15॥
ಇವನಿಂದ ದೊಡ್ಡ ದೊಡ್ಡ ಯಜ್ಞಗಳು ನಡೆಸಲ್ಪಟ್ಟಿವೆ. ರತ್ನದ ರಾಶಿಗಳಿಂದ ಅಲಂಕೃತವಾದ ದಕ್ಷಿಣೆಗಳು ಕೊಡಲ್ಪಟ್ಟಿವೆ. ನಾನಾ ರೀತಿಯ ಭೋಗಗಳು ಅನುಭವಿಸಲ್ಪಟ್ಟಿವೆ. ಮಕ್ಕಳೂ ಲಾಲಿಸಲ್ಪಟ್ಟಿದ್ದಾರೆ.
ಅತ್ರ ಸಂಸ್ಥಂ ಚ ವಿಪುಲಂ ರಾಜ್ಯಂ ವಿಪ್ರೋಷಿತೇ ತ್ವಯಿ |
ತ್ರಯೋದಶ ಸಮಾ ಭುಂಕ್ತ ದತ್ತಂ ಚ ವಿಪುಲಂ ವಸು ॥16॥
ಹದಿಮೂರು ವರ್ಷಗಳ ಕಾಲ ನೀನು ವನವಾಸದಲ್ಲಿದ್ದಾಗ ಇಲ್ಲಿರುವ ಸಮೃದ್ಧವಾದ ರಾಜ್ಯವನ್ನು ಇವನು ಅನುಭವಿಸಿದ್ದಾನೆ. ವಿಪುಲವಾದ ಸಂಪತ್ತನ್ನೂ ದಾನ ಮಾಡಿದ್ದಾನೆ.
ತ್ವಯಾ ಚ ಪುರುಷವ್ಯಾಘ್ರ ಗುರುಶುಶ್ರೂಷಯಾ ನೃಪ |
ಆರಾಧಿತಃ ಸಭೃತ್ಯೇನ ಗಾಂಧಾರೀ ಚ ಯಶಸ್ವಿನೀ ॥17॥
ಹೇ ಪುರುಷವ್ಯಾಘ್ರನೇ, ಭೃತ್ಯರಿಂದೊಡಗೂಡಿದ ನಿನ್ನಿಂದಲೂ ನಡೆಸಲ್ಪಟ್ಟ ಗುರುಸೇವೆಯಿಂದ ಧೃತರಾಷ್ಟ್ರನು ಆರಾಧಿಸಲ್ಪಟ್ಟಿದ್ದಾನೆ. ಹೇ ನೃಪನೇ, ಯಶಸ್ವಿನಿಯಾದ ಗಾಂಧಾರಿಯೂ ನಿನ್ನಿಂದ ಆರಾಧಿತಳಾಗಿದ್ದಾಳೆ.
ಅನುಜಾನೀಹಿ ಪಿತರಂ ಸಮಯೋಽಸ್ಯ ತಪೋವಿಧೌ |
ನ ಮನ್ಯುರ್ವಿದ್ಯತೇ ಚಾಸ್ಯ ಸುಸೂಕ್ಷ್ಮೋಽಪಿ ಯುಧಿಷ್ಠಿರ ॥18॥
ಹೇ ಯುಧಿಷ್ಠಿರನೇ, ನಿನ್ನ ತಂದೆಗೆ ಅನುಜ್ಞೆ ನೀಡು. ತಪಸ್ಸನ್ನು ನಡೆಸಲು ಇದು ಯೋಗ್ಯವಾದ ಸಮಯವಾಗಿದೆ. ಇವನಿಗೆ ನಿನ್ನಲ್ಲಿ ಅತೀ ಸಣ್ಣಕೋಪವೂ ಇಲ್ಲ.
ವೈಶಂಪಾಯನಃ
ಏತಾವದುಕತತ್ವ ವಚನಮ್ ಅನುಜ್ಞಾಪ್ಯ ಚ ಪಾರ್ಥಿವಮ್ |
ತಥಾಽಸಿತ್ವತಿ ಚ ತೇನೋಕ್ತಃ ಕೌಂತೇಯೇನ ಯಯೌ ವನಮ್ ॥19॥
ವೈಶಂಪಾಯನ ಇಷ್ಟು ಮಾತನ್ನು ಹೇಳಿದ ವ್ಯಾಸರು ರಾಜನಿಗೆ ಕಾಡಿಗೆ ಹೋಗಲು ಅನುಜ್ಞೆ ನೀಡಿ, ಯುಧಿಷ್ಠಿರನಿಂದ `ಹಾಗೆಯೇ ಆಗಲಿ' ಎಂದು ಹೇಳಿಸಿಕೊಂಡು ಕಾಡಿಗೆ ಹೊರಟರು.
ಗತೇ ಭಗವತಿ ವ್ಯಾಸೇ ರಾಜಾ ಪಾಂಡುಸುತಸ್ತತಃ |
ಪ್ರೋವಾಚ ಪಿತರಂ ವೃದ್ಧಂ ಮಂದಂ ಮಂದಮಿವಾನತಃ ॥20॥
ಭಗವಾನ್ ವ್ಯಾಸರು ಹೋದ ನಂತರ ರಾಜನಾದ ಪಾಂಡುಸುತನು ವೃದ್ಧನಾದ ತಂದೆಯನ್ನು ಕುರಿತು ತಲೆ ತಗ್ಗಿಸಿದವನಾಗಿ ಮೆಲ್ಲ ಮೆಲ್ಲನೆ ಹೀಗೆ ಹೇಳಿದನು.
ಯುಧಿಷ್ಠಿರಃ

ಯಥಾಽಽಹ ಭಗವಾನ್ ವ್ಯಾಸೋ ಯಚ್ಚಾಪಿ ಭವತೋ ಮತಮ್ |
ಯಥಾಽಽಹ ಚ ಮಹೇಷ್ವಾಸಃ ಕೃಪೋ ವಿದುರ ಏವ ಚ ||21||
ಯುಯುತ್ಸುಃ ಸಂಜಯಶ್ಚೈವ ತತ್ ಕರ್ತಾಸ್ಮ್ಯಹಮಂಜಸಾ ||22||
ಸರ್ವೇ ತೇ ಹ್ಯನುಮಾನ್ಯಾ ಮೇ ಕುಲಸ್ಯಾಸ್ಯ ಹಿತೈಷಿಣಃ ||23||
ಯುಧಿಷ್ಠಿರ ಭಗವಾನ್ ವ್ಯಾಸರು ಹೇಗೆ ಹೇಳುವರೋ, ತಮಗೆ ಯಾವುದು ಒಪ್ಪಿಗೆಯೋ, ಮಹಾಧನುರ್ಧಾರಿಯಾದ ಕೃಪರೂ ಹಾಗೆಯೇ ವಿದುರನೂ, ಯುಯುತ್ಸುವೂ, ಸಂಜಯನೂ ಇವರೆಲ್ಲ ಏನು ಹೇಳುತ್ತಾರೋ ನಾನು ಅದನ್ನು ನಡೆಸಿಯೇ ತೀರುವೆನು. ಏಕೆಂದರೆ ಅವರೆಲ್ಲರೂ ನನಗೆ ಆದರಣೀಯರೇ ಆಗಿದ್ದಾರೆ. ಅಲ್ಲದೆ ನಮ್ಮ ಕುಲಕ್ಕೆ ಹಿತವನ್ನು ಬಯಸುವವರೂ ಆಗಿದ್ದಾರೆ.
ಇದಂ ತು ಯಾಚೇ ನೃಪತೇ ತ್ವಾಮಹಂ ಶಿರಸಾ ನತಃ |
ಕ್ರಿಯತಾಂ ತಾವದಾಹಾರಸ್ತತೋ ಗಚ್ಛಾಶ್ರಮಂ ಪ್ರತಿ ||24||
ಹೇ ನೃಪತಿಯೇ, ನಾನು ನಿನ್ನನ್ನು ತಲೆಬಾಗಿ ನಮಿಸಿ ಇಷ್ಟು ಮಾತ್ರ ಕೇಳಿಕೊಳ್ಳುವೆನು. ಮೊದಲು ಆಹಾರವನ್ನು ಸ್ವೀಕರಿಸು. ನಂತರ ಆಶ್ರಮಕ್ಕೆ ಹೊರಡಬಹುದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರಸ್ಯ ಆಶ್ರಮವಾಸನಿಶ್ಚಯೋ ನಾಮ
ಅಷ್ಟಮೋಽಧ್ಯಾಯಃ ||
|| ಆಶ್ರಮವಾಸಪರ್ವಣಿ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *
ಒಂಬತ್ತನೆಯ ಅಧ್ಯಾಯ
ಕಾಡಿಗೆ ಹೊರಟುನಿಂತ ಧೃತರಾಷ್ಟ್ರನು ಯುಧಿಷ್ಠಿರನಿಗೆ
ರಾಜನೀತಿಯನ್ನು ನಿರೂಪಿಸುವುದು.
ವೈಶಂಪಾಯನಃ
ತತೋ ರಾಜ್ಞಾಽಭ್ಯನುಜ್ಞಾತೋ ಧೃತರಾಷ್ಟ್ರೋ ಮಹಾಮನಾಃ |
ಯಯೌ ಸ್ವಭವನಂ ರಾಜಾ ಗಾಂಧಾರ್ಯಾಽನುಗತಸ್ತದಾ ||1||
ವೈಶಂಪಾಯನ ರಾಜನಾದ ಯುಧಿಷ್ಠಿರನಿಂದ ಒಪ್ಪಿಗೆಯನ್ನು ಪಡೆದ ನಂತರ ಮಹಾಮನಸ್ವಿಯಾದ ಧೃತರಾಷ್ಟ್ರರಾಜನು ಗಾಂಧಾರಿಯಿಂದ ಅನುಸರಿಸಲ್ಪಟ್ಟವನಾಗಿ ತನ್ನ ಭವನಕ್ಕೆ ತೆರಳಿದನು.
ಮಂದಪ್ರಾಣಗತಿರ್ಧೀಮಾನ್ ಕೃಚ್ಛ್ರಾದಿವ ಸಮುದ್ಧರನ್ |
ಪದಾತಿಃ ಸ ಮಹೀಪಾಲೋ ಜೀರ್ಣೋ ಗಜಪತಿರ್ಯಥಾ ||2||
ಬುದ್ಧಿವಂತನಾದ ಆ ರಾಜನು ಬಲಹೀನತೆಯಿಂದ ನಿಧಾನವಾಗಿ ನಡೆಯುತ್ತಾ, ಕಷ್ಟದಿಂದ ಕಾಲನ್ನು ಎತ್ತುತ್ತಾ, ವಯಸ್ಸಾದ ಮದ್ದಾನೆಯು ಹೇಗೆ ನಡೆಯುವುದೋ ಹಾಗೆ ನಡೆದನು.
ತಮನ್ವಗಚ್ಛದ್ ವಿದುರೋ ವಿದ್ವಾನ್ ಸೂತಶ್ಚ ಸಂಜಯಃ |
ಸ ಚೈವ ಪರಮೇಷ್ವಾಸಃ ಕೃಪಃ ಶಾರದ್ವತಸ್ತದಾ ||3||
ಹೀಗೆ ಹೋಗುತ್ತಿರುವ ಆ ಧೃತರಾಷ್ಟ್ರನನ್ನು ವಿದ್ವಾಂಸನಾದ ವಿದುರನೂ, ಸಾರಥಿಯಾದ ಸಂಜಯನೂ, ಮಹಾಧನುರ್ಧಾರಿಯಾದ ಶಾರದ್ವತರಾದ ಕೃಪರೂ ಅನುಸರಿಸಿದರು.
ಪ್ರವಿಶ್ಯ ಚ ಗೃಹಂ ರಾಜಾ ಕೃತಪೂರ್ವಾಹ್ಣಿಕಕ್ರಿಯಃ |
ತರ್ಪಯಿತ್ವಾ ದ್ವಿಜಶ್ರೇಷ್ಠಾನ್ ಆಹಾರಮಕರೋತ್ ತದಾ ||4||
ರಾಜನು ತನ್ನ ಮನೆಯನ್ನು ಪ್ರವೇಶಿಸಿ, ಪ್ರಾತಃಕಾಲದ ನಿತ್ಯಕ್ರಿಯೆಗಳನ್ನು ನಡೆಸಿ, ಬ್ರಾಹ್ಮಣಶ್ರೇಷ್ಠರನ್ನು ಸಂತೋಷಗೊಳಿಸಿ ಆಹಾರವನ್ನು ಸ್ವೀಕರಿಸಿದನು.
ಗಾಂಧಾರೀ ಚೈವ ಧರ್ಮಜ್ಞಾ ಕುಂತ್ಯಾ ಸಹ ಮನಸ್ವಿನೀ |
ವಧೂಭಿರುಪಚಾರೇಣ ಪೂಜಿತಾಽಭುಂಕ್ತ ಭಾರತ ||5||
ಹೇ ಭಾರತನೇ, ಧರ್ಮಜ್ಞಳಾದ, ಮನಸ್ಥೈರ್ಯವುಳ್ಳ ಗಾಂಧಾರಿಯೂ ಕೂಡ ಕುಂತೀ ಹಾಗು ಅವಳ ಜೊತೆಗಿರುವ ಸೊಸೆಯರಿಂದ ನಾನಾ ರೀತಿಯ ಉಪಚಾರಗಳಿಂದ ಸೇವಿಸಲ್ಪಟ್ಟವಳಾಗಿ ಆಹಾರವನ್ನು ಸ್ವೀಕರಿಸಿದಳು.
ಕೃತಾಹಾರಂ ಕೃತಾಹಾರಾಃ ಸರ್ವೇ ತೇ ವಿದುರಾದಯಃ |
ಪಾಂಡವಾಶ್ಚ ಕುರುಶ್ರೇಷ್ಠಮುಪಾತಿಷ್ಠಂತ ಭಾರತ ||6||
ಹೇ ಭಾರತನೇ, ವಿದುರನೇ ಮೊದಲಾದ ಅಲ್ಲಿರುವ ಎಲ್ಲರೂ ಜೊತೆಗೆ ಪಾಂಡವರೂ ಕೂಡ ತಾವೂ ಆಹಾರವನ್ನು ಸ್ವೀಕರಿಸಿ, ಈ ಮೊದಲೇ ಉಂಡಿರುವ ಕುರುಶ್ರೇಷ್ಠನ ಸೇವೆಗಾಗಿ ನಿಂತರು.
ತತೋಽಬ್ರವೀನ್ಮಹಾರಾಜಃ ಕುಂತೀಪುತ್ರಮುಪಹ್ವರೇ |
ನಿಷಣ್ಣಂ ಪಾಣಿನಾ ಪೃಷ್ಠೇ ಸಂಸ್ಪೃಶನ್ನಂಬಿಕಾಸುತಃ ||7||
ಅನಂತರ ಅಂಬಿಕಾಸುತನಾದ ಮಹಾರಾಜನು ತನ್ನ ಸಮೀಪದಲ್ಲಿ ಕುಳಿತಿರುವ ಕುಂತೀಪುತ್ರನಾದ ಯುಧಿಷ್ಠಿರನನ್ನು ತನ್ನ ಕೈಯಿಂದ ಅವನ ಬೆನ್ನನ್ನು ನೇವರಿಸುತ್ತಾ ಹೀಗೆ ಹೇಳಿದನು.
ಧೃತರಾಷ್ಟ್ರಃ

ಅಪ್ರಮಾದಸ್ತ್ವಯಾ ಕಾರ್ಯಃ ಸರ್ವಥಾ ಕುರುನಂದನ |
ಅಷ್ಟಾಂಗೇ ರಾಜಶಾರ್ದೂಲ ರಾಜ್ಯೇ ಧರ್ಮಪುರಸ್ಕೃತೇ ॥8॥
ಧೃತರಾಷ್ಟ್ರ, ಹೇ ರಾಜಶಾರ್ದೂಲನಾದ ಕುರುನಂದನನೇ, ಧರ್ಮಪುರಸ್ಕೃತವಾದ ಅಷ್ಟಾಂಗಯುಕ್ತವಾದ ರಾಜ್ಯದಲ್ಲಿ ಯಾವುದೇ ಕಾರ್ಯದಲ್ಲೂ ನಿನ್ನಿಂದ ಪ್ರಮಾದವು ನಡೆಯಬಾರದು.
ವ್ಯಾಖ್ಯಾನ ವಿಶೇಷ ರಾಜ್ಯದ ಅಷ್ಟಾಂಗಗಳು ಎಂದರೆ=ಸ್ವಾಮಿ ಅಂದರೆ ರಾಜ, ಅಮಾತ್ಯ ಎಂದರೆ ಮಂತ್ರಿ, ಸುಹೃತ್ ಎಂದರೆ ಭೃತ್ಯರು, ಕೋಶ ಎಂದರೆ ಧನ ಸಂಗ್ರಹ, ರಾಷ್ಟ್ರ ಎಂದರೆ ಭೂಪ್ರದೇಶ, ದುರ್ಗ ಎಂದರೆ ಕೋಟೆ, ಬಲಾನಿ ಎಂದರೆ ಸೈನ್ಯ - ಇವುಗಳು ಪ್ರಕೃತಿಭೂತವಾದ ರಾಜ್ಯದ ಏಳು ಅಂಗಗಳು. ಜೊತೆಗೆ ಪೌರಶ್ರೇಣಿ ಎಂದರೆ ರಾಜ್ಯದಲ್ಲಿ ವಾಸಿಸುವ ಜನರು. ಒಟ್ಟು ಎಂಟು ಅಂಗಗಳು ರಾಜನೀತಿಯಲ್ಲಿ ಸೇರಿವೆ.
ನನು ಶಕ್ಯಂ ಯಥಾ ತಾತ ರಕ್ಷಿತುಂ ಪಾಂಡುನಂದನ |
ರಾಜ್ಯಂ ಧರ್ಮಂ ಚ ಕೌಂತೇಯ ವಿದ್ವಾನಸಿ ನಿಬೋಧ ತತ್ ॥9॥
ಮಗು ಪಾಂಡುನಂದನನಾದ ಕೌಂತೇಯನೇ, ರಾಜ್ಯವನ್ನೂ, ಧರ್ಮವನ್ನೂ ನೀನು ಚೆನ್ನಾಗಿ ತಿಳಿದಿರುವಿ. ಹಾಗಿದ್ದರೂ ಹೇಗೆ ರಾಜ್ಯ ಹಾಗು ಧರ್ಮಗಳನ್ನು ರಕ್ಷಿಸುವುದು ಸುಲಭವಾಗುತ್ತದೋ ಅದನ್ನು ಹೇಳುತ್ತೇನೆ. ಸರಿಯಾಗಿ ಗಮನಿಸು.
ವಿದ್ಯಾವೃದ್ಧಾನ್ ಸದೈವ ತ್ವಮುಪಾಸೀಥಾ ಯುಧಿಷ್ಠಿರ |
ಶೃಣುಯಾಸ್ತೇ ಹಿ ಯದ್ ಬ್ರೂಯುಃ ಕುರ್ಯಾಶ್ಚೈವಾವಿಚಾರಯನ್ ॥
ಹೇ ಯುಧಿಷ್ಠಿರನೇ, ಯಾವಾಗಲೂ ವಿದ್ಯಾವಂತರನ್ನು ಚೆನ್ನಾಗಿ ಸೇವೆ ಮಾಡು. ಅವರು ಏನನ್ನು ಹೇಳುತ್ತಾರೋ ಅದನ್ನು ಸರಿಯಾಗಿ ಕೇಳಿಸಿಕೊ ಮತ್ತು ವಿಚಾರ ಮಾಡದೆ ಅದನ್ನು ನಡೆಸು.
ಪ್ರಾತರುತ್ಥಾಯ ತಾನ್ ರಾಜನ್ ಪೂಜಯಿತ್ವಾ ಯಥಾವಿಧಿ |
ಕೃಚ್ಛ್ರಕಾಲೇ ಸಮುತ್ಪನ್ನೇ ಪೃಚ್ಛೇಥಾಃ ಕಾರ್ಯಮಾತ್ಮನಃ ॥11॥
ಹೇ ರಾಜನೇ, ಬೆಳಿಗ್ಗೆ ಎದ್ದು ಅವರನ್ನು ವಿಧಿಪ್ರಕಾರ ಗೌರವಿಸಿ, ಕಷ್ಟಕಾಲವು ಸಮೀಪಿಸಿದಾಗ ನಾನೇನು ಮಾಡಬೇಕು ಎಂದು ಅವರಲ್ಲಿ ಕೇಳು.
ತೇ ಸುಸಮ್ಮಾನಿತಾ ರಾಜನ್ ತ್ವಯಾ ರಾಜ್ಯೇ ಹಿತಾರ್ಥಿನಾ |
ಪ್ರವಕ್ಷ್ಯಂತಿ ಹಿತಂ ತಾತ ಸರ್ವಂ ಕೌರವನಂದನ ॥12॥
ಮಗು ಕೌರವನನಂದನನಾದ ರಾಜನೇ, ರಾಜ್ಯದ ಹಿತವನ್ನು ಬಯಸುವ ನಿನ್ನಿಂದ ಚೆನ್ನಾಗಿ ಗೌರವಿಸಲ್ಪಟ್ಟ ಅವರು ಎಲ್ಲ ರೀತಿಯ ಹಿತವಾದ ಮಾರ್ಗಗಳನ್ನು ಹೇಳುತ್ತಾರೆ.
ಇಂದ್ರಿಯಾಣಿ ಚ ಸರ್ವಾಣಿ ರಾಜ್ಯವತ್ ಪರಿಪಾಲಯ |
ಹಿತಾಯ ವೈ ಭವಿಷ್ಯಂತಿ ರಕ್ಷಿತಂ ದ್ರವಿಣಂ ಯಥಾ ॥13॥
ನಿನ್ನ ಎಲ್ಲ ಇಂದ್ರಿಯಗಳನ್ನು ರಾಜ್ಯವನ್ನು ಪರಿಪಾಲಿಸುವಂತೆಯೇ ಪಾಲಿಸು. ಆ ಇಂದ್ರಿಯಗಳು ಕೂಡಿಟ್ಟ ಸಂಪತ್ತಿನಂತೆ ಮುಂದೆ ಹಿತವನ್ನುಂಟು ಮಾಡುತ್ತವೆ.
ಅಮಾತ್ಯಾನುಪಧಾತೀತಾನ್ ಪಿತೃಪೈತಾಮಹಾನ್ ಶುಚೀನ್ |
ದಾಂತಾನ್ ಕರ್ಮಸು ಸರ್ವೇಷು ಮುಖ್ಯಾನ್ ಮುಖ್ಯೇಷು ಯೋಜಯ ॥
ವಂಶಪಾರಂಪರ್ಯವಾಗಿ ಬಂದ, ಮೋಸ-ವಂಚನೆಗಳಿಲ್ಲದ, ಬಾಹ್ಯ ಆಭ್ಯಂತರಗಳಲ್ಲಿ ಶುದ್ಧರಾದ, ಇಂದ್ರಿಯನಿಗ್ರಹವುಳ್ಳ ಮುಖ್ಯರಾದ ಅಮಾತ್ಯರನ್ನು ಎಲ್ಲ ಮುಖ್ಯಕಾರ್ಯಗಳಲ್ಲಿಯೂ ಯೋಜಿಸಿಕೊ.
ಸಾಧಯೇಥಾಶ್ಚ ಸತತಂ ಚಾರೈರವಿದಿತೈಃ ಪರಾನ್ |
ಪರೀಕ್ಷಿತೈರ್ಬಹುವಿಧೈಃ ಸ್ವರಾಷ್ಟ್ರೇಷು ಪರೇಷು ಚ ॥15॥
ಬಹುವಿಧವಾಗಿ ಪರೀಕ್ಷೆಗೆ ಒಳಪಟ್ಟ, ತನ್ನ ರಾಷ್ಟ್ರದಲ್ಲೂ ಪರರಾಷ್ಟ್ರದಲ್ಲೂ ರಾಜನಿಗೋಸ್ಕರ ಕೆಲಸ ಮಾಡುವ ವ್ಯಕ್ತಿಗಳೆಂದು ಗುರುತಿಸಿಕೊಳ್ಳದ-ಚಾರರಿಂದ ಉತ್ಕೃಷ್ಟವಾದ ರಾಜಕರ್ಮಗಳನ್ನು ಯಾವಾಗಲೂ ಸಾಧಿಸಿಕೊ.
ಪುರಂ ಚ ತೇ ಸುಗುಪ್ತಂ ಸ್ಯಾದ್ ದೃಢಪ್ರಾಕಾರತೋರಣಮ್ |
ಅಟ್ಟಾಟ್ಟಾಲಕಸಂಬಾಧಂ ಷಟ್‌ಪದಂ ಸರ್ವತೋ ದಿಶಮ್ ॥16॥
ನಿನ್ನ ಪಟ್ಟಣವಾದರೂ ದೃಢವಾದ ಗೋಡೆ ಹಾಗೂ ಗೋಪುರಗಳಿಂದ ಕೂಡಿದ್ದು, ಎತ್ತರವಾದ ಗೋಡೆಯ ಮೇಲಿನ ಯುದ್ಧಗೃಹಗಳಿಂದ ಕೂಡಿದ್ದು, ಎಲ್ಲ ದಿಕ್ಕುಗಳಲ್ಲಿ ಆರು ಬಗೆಯ ದುರ್ಗಗಳಿಂದ ಕೂಡಿದ್ದರೆ ಒಳ್ಳೆಯ ರೀತಿಯಲ್ಲಿ ರಕ್ಷಿತವಾಗುತ್ತದೆ.
ತಸ್ಯ ದ್ವಾರಾಣಿ ಕಾರ್ಯಾಣಿ ಪರ್ಯಾಪ್ತಾನಿ ಬೃಹಂತಿ ಚ |
ಸರ್ವತಃ ಸುವಿಭಕ್ತಾನಿ ಯಂತ್ರೈರಾರಕ್ಷಿತಾನಿ ಚ ॥17॥
ಆ ಪಟ್ಟಣಕ್ಕೆ ಅವಶ್ಯಕತೆಗೆ ತಕ್ಕಂತೆ ದೊಡ್ಡ ದ್ವಾರಗಳನ್ನು ಮಾಡಬೇಕು. ಆ ದ್ವಾರಗಳು ಅನುಕೂಲತೆಗೆ ತಕ್ಕಂತೆ ವಿಭಾಗವುಳ್ಳವುಗಳಾಗಿದ್ದು ಎಲ್ಲ ಕಡೆ ರಕ್ಷಣಾಯಂತ್ರಗಳಿಂದ ರಕ್ಷಿತವಾಗಿಯೂ ಇರಬೇಕು.
ಪುರುಷೈರರ್ಥತತ್ತ್ವಜ್ಞೈರ್ವಿದಿತೈಃ ಕುಲಶೀಲತಃ |
ಆತ್ಮಾ ಚ ರಕ್ಷ್ಯಃ ಸತತಂ ಭೋಜನಾದಿಷು ಭಾರತ ॥18॥
ಹೇ ಭಾರತನೇ, ಅರ್ಥತತ್ತ್ವವನ್ನು ಬಲ್ಲ, ಕುಲ ಹಾಗೂ ನಡತೆಗಳಿಂದ ತನಗೆ ಚೆನ್ನಾಗಿ ತಿಳಿದಿರುವ ಪುರುಷರ ಸಹಾಯದಿಂದ ಆಹಾರ-ವಿಹಾರಾದಿಗಳಲ್ಲಿ ಯಾವಾಗಲೂ ತನ್ನನ್ನು ಚೆನ್ನಾಗಿ ರಕ್ಷಿಸಿಕೊಳ್ಳಬೇಕು.
ವಿಹಾರಾದಿಷು ಸರ್ವೇಷು ಮಾಲ್ಯಶಯ್ಯಾಸನೇಷು ಚ ॥19॥
ಸ್ತ್ರಿಯಶ್ಚ ತೇ ಸುಗುಪ್ತಾಃ ಸ್ಯುರ್ವೃದ್ಧೈರಾಪ್ತೈರಧಿಷ್ಠಿತಾಃ |

ಶೀಲವದ್ಭಿಃ ಕುಲೀನೈಶ್ಚ ವಿದ್ವದ್ಭಿಶ್ಚ ಯುಧಿಷ್ಠಿರ ॥20॥
ಎಲ್ಲ ರೀತಿಯ ವಿಹಾರಗಳಲ್ಲಿ ಅಲ್ಲದೆ ಅಲಂಕಾರ, ಶಯ್ಯೆ, ಆಸನಾದಿಗಳಲ್ಲಿ ನಿನ್ನ ಅಂತಃಪುರದ ಸ್ತ್ರೀಯರು ಶೀಲಯುಕ್ತರಾದ, ಉತ್ತಮ ಕುಲದಲ್ಲಿ ಬಂದಿರುವ, ವಿದ್ವಾಂಸರಾದ, ನಿನಗೆ ಆಪ್ತರಾದ ವೃದ್ಧರಿಂದ ಮೇಲ್ವಿಚಾರಿಕೆಗೆ ಒಳಪಟ್ಟಿದ್ದರೆ ಒಳ್ಳೆಯ ರೀತಿ ರಕ್ಷಿತರಾಗಿರುತ್ತಾರೆ.
ಮಂತ್ರಿಣಶ್ಚೈವ ಕುರ್ವೀಥಾ ದ್ವಿಜಾನ್ ವಿದ್ಯಾವಿಶಾರದಾನ್ |
ವಿನೀತಾಂಶ್ಚ ಕುಲೀನಾಂಶ್ಚ ಧರ್ಮಾರ್ಥಕುಶಲಾನೃಜೂನ್ ॥21॥
ಎಲ್ಲ ವಿದ್ಯೆಗಳಲ್ಲಿ ಪಾರಂಗತರಾದ, ವಿನಯಶೀಲರಾದ, ಒಳ್ಳೆಯ ಕುಲದಲ್ಲಿ ಜನಿಸಿರುವ, ಧರ್ಮ-ಅರ್ಥಗಳಲ್ಲಿ ಪ್ರವೀಣರಾದ, ನೇರವಾದ ನಡತೆಯುಳ್ಳ ಬ್ರಾಹ್ಮಣರನ್ನು ನಿನ್ನ ಮಂತ್ರಿಗಳನ್ನಾಗಿ ಮಾಡಿಕೊ.
ತೈಃ ಸಾರ್ಧಂ ಮಂತ್ರಯೇಥಾಸ್ತ್ವಂ ನಾತ್ಯರ್ಥಂ ಬಹುಭಿಃ ಸಹ |
ಸಮಸ್ತೈರಪಿ ಚ ವ್ಯಸ್ತೈರ್ವ್ಯಪದೇಶೇನ ಕೇನಚಿತ್ ॥22॥
ಸುಸಂವೃತಂ ಮಂತ್ರಗೃಹಂ ಸೌಧಂ ಚಾರುಹ್ಯ ಮಂತ್ರಯೇತ್ |
ಅರಣ್ಯೇ ನಿಃಶಲಾಕೇ ವಾ ನ ಚ ರಾತ್ರೌ ಕದಾಚನ ॥23॥
ಅಂತಹ ಮಂತ್ರಿಗಳೊಂದಿಗೆ ನೀನು ಮಂತ್ರಾಲೋಚನೆ ಮಾಡುವ ಸಂದರ್ಭದಲ್ಲಿ ತುಂಬಾ ಜನರೊಂದಿಗೆ ಬಹಳ ಕಾಲ ಮಂತ್ರಾಲೋಚನೆ ಮಾಡದಿರು. ಯಾವುದಾದರೂ ಮುಖ್ಯಕಾರ್ಯವಿದ್ದಾಗ ಎಲ್ಲ ಮಂತ್ರಿಗಳೊಂದಿಗೆ ಅಥವಾ ಕೆಲವೇ ಜನರೊಂದಿಗೆ ಮಂತ್ರಾಲೋಚನೆ ಮಾಡುವ ಸಂದರ್ಭದಲ್ಲಿ ಎಲ್ಲ ಕಡೆಯೂ ಚೆನ್ನಾಗಿ ಮರೆಮಾಡಲ್ಪಟ್ಟ ಎತ್ತರವಾದ ಪ್ರದೇಶದಲ್ಲಿ ನಿರ್ಮಿಸಿದ ಮಂತ್ರಗೃಹವನ್ನು ಪ್ರವೇಶಿಸಿಯೇ ಮಂತ್ರಾಲೋಚನೆ ಮಾಡಬೇಕು. ಯಾವುದೇ ಸಂದರ್ಭದಲ್ಲಿ ಕಾಡಿನಲ್ಲಾಗಲಿ, ಅಡೆತಡೆಗಳಿಲ್ಲದ ಬಯಲಿನಲ್ಲಾಗಲಿ, ರಾತ್ರಿಕಾಲದಲ್ಲಾಗಲಿ ಮಂತ್ರಾಲೋಚನೆ ಮಾಡಬಾರದು. ಅಥವಾ ದಟ್ಟವಾದ ಅರಣ್ಯದಲ್ಲಿ ಅಥವಾ ಹುಲ್ಲುಕಡ್ಡಿಗಳಿಲ್ಲದ ಬಯಲು ಪ್ರದೇಶದಲ್ಲಿ ಮಂತ್ರಾಲೋಚನೆ ಮಾಡಬೇಕು. ಯಾವುದೇ ಸಂದರ್ಭದಲ್ಲಿ ರಾತ್ರಿಯಲ್ಲಿ ಮಂತ್ರಾಲೋಚನೆ ಕೂಡದು.
ವಾನರಾಃ ಪಕ್ಷಿಣಶ್ಚೈವ ಯೇ ಮನುಷ್ಯಾನುಕಾರಿಣಃ |
ಸರ್ವೇ ಮಂತ್ರಗೃಹೇ ವರ್ಜ್ಯಾ ಯೇ ಚಾಪಿ ಜಡಪಂಗವಃ ॥24॥
ನಡೆನುಡಿಗಳಿಂದ ಮನುಷ್ಯರನ್ನು ಅನುಕರಣೆ ಮಾಡುವ ಯಾವುದೇ ರೀತಿಯ ಮಂಗಗಳು, ಪಕ್ಷಿಗಳು ಮೊದಲಾದ ಪ್ರಾಣಿಗಳು, ಅಲ್ಲದೇ ಬಾಯಿಬಾರದ, ಕಾಲಿಲ್ಲದ, ಅಂಗಹೀನ ವ್ಯಕ್ತಿಗಳು ಇಂತಹ ಯಾರೂ ಕೂಡ ಮಂತ್ರಗೃಹದಲ್ಲಿ ಇರಬಾರದು.
ಮಂತ್ರಭೇದೇ ಚ ಯೇ ದೋಷಾ ಭವಂತಿ ಪೃಥಿವೀಕ್ಷಿತಾಮ್ |
ನ ತೇ ಶಕ್ಯಾಃ ಸಮಾಧಾತುಂ ಕಥಂಚಿದಿತಿ ಮೇ ಮತಿಃ ॥25॥
ಏಕೆಂದರೆ ರಾಜರ ಮಂತ್ರಾಲೋಚನೆಯ ವಿಷಯವು ಬಹಿರಂಗವಾಗುವುದರಿಂದ ಏನು ಅನರ್ಥಗಳು ಉಂಟಾಗುವವೋ ಅವುಗಳನ್ನು ಯಾವುದೇ ರೀತಿಯಿಂದ ಸರಿಪಡಿಸಲು ಸಾಧ್ಯವಿಲ್ಲ ಎಂದು ನನ್ನ ಅನಿಸಿಕೆ.
ದೋಷಾಂಶ್ಚ ಮಂತ್ರಭೇದೇಷು ಬ್ರೂಯಾಸ್ತ್ವಂ ಮಂತ್ರಿಮಂಡಲೇ |
ಅಭೇದೇ ಚ ಗುಣಾನ್ ರಾಜನ್ ಪುನಃ ಪುನರರಿಂದಮ ॥26॥
ಪೌರಜಾನಪದಾನಾಂ ಚ ಶೌಚಾಶೌಚೇ ಯುಧಿಷ್ಠಿರ ॥27॥
ಹೇ ಶತ್ರುಸಂಹಾರಕನಾದ ಯುಧಿಷ್ಠಿರನೇ, ನೀನು ಮಂತ್ರಿಗಳ ಸಮೂಹದಲ್ಲಿ ಮಂತ್ರಾಲೋಚನೆಯು ಬಹಿರಂಗವಾಗುವುದರಿಂದ ಉಂಟಾಗುವ ದೋಷಗಳನ್ನೂ, ಅವು ಗೌಪ್ಯವಾಗಿರುವುದರಿಂದ ಉಂಟಾಗುವ ಗುಣಗಳನ್ನೂ, ಅಲ್ಲದೆ ಪಟ್ಟಣಿಗರ ಮತ್ತು ಗ್ರಾಮಜನರ ಒಳ್ಳೆಯ ಹಾಗು ಕೆಟ್ಟ ನಡತೆಗಳನ್ನು ಆಗಾಗ್ಗೆ ಹೇಳುತ್ತಿರಬೇಕು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ರಾಜ್ಯರಕ್ಷಣೋಪಾಯಕಥನಂ ನಾಮ ನವಮೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಹತ್ತನೆಯ ಅಧ್ಯಾಯ
ಧೃತರಾಷ್ಟ್ರನಿಂದ ಯುಧಿಷ್ಠಿರನಿಗೆ ರಾಜನೀತಿಯ ಉಪದೇಶ.
ವ್ಯವಹಾರಾಶ್ಚ ತೇ ತಾತ ನಿತ್ಯಮಂತ್ರೈರನುಷ್ಠಿತಾಃ |
ಯೋಜ್ಯಸ್ತುಷ್ಟೈರ್ಭೃತ್ಯೈ ರಾಜನ್ ನಿತ್ಯಂ ಚಾರೈರನುಷ್ಠಿತೈಃ ॥1॥
ಮಗೂ, ಹೇ ರಾಜನೇ, ನಿನ್ನ ಆಸ್ಥಾನದ ನ್ಯಾಯವ್ಯವಹಾರಗಳು ಯಾವಾಗಲೂ -ನಿನಗೆ ಆಪ್ತರಾದ, ಯೋಗ್ಯವಾದ ಸಂಭಾವನೆಯಿಂದ ಸಂತುಷ್ಟರಾದ, ನಿತ್ಯವೂ ಗೂಢಚಾರರಿಂದ ಪರಿಶೀಲಿತರಾದ- ನಿನ್ನ ಆಳುಗಳಿಂದ ಅನುಷ್ಠಾನಗೊಳ್ಳುವಂತೆ ನೋಡಿಕೊಳ್ಳಬೇಕು.
ಪರಿಮಾಣಂ ವಿದಿತ್ವಾ ಚ ದಂಡ ದಂಡ್ಯೇಷ್ಟು ಭಾರತ |
ಪ್ರಾಣಯೇಯುರ್ಯತಾನ್ಯಾಯಂ ಪುರೂಷಾಸ್ತೇ ಯುಧಿಷ್ಠಿರೇ ॥2॥
ಹೇ ಭಾರತ! ಯುಧಿಷ್ಠಿರನೇ! ಅಂಥ ಪುರುಷರು, ನಿನ್ನ ಆಸ್ಥಾನದಲ್ಲಿ ದಂಡನೆಗೊಳಗಾಗುವ ವ್ಯಕ್ತಿಗಳಲ್ಲಿ, ದಂಡನ ಪರಿಮಾಣವನ್ನು ಸರಿಯಾಗಿ ತಿಳಿದು, ಶಾಸ್ತ್ರನೀತಿಯನ್ನು ಮೀರದೇ (ಕಾರ್ಯವನ್ನು) ನಡೆಸುತ್ತಾರೆ.
ಆದಾನರುಚಯಶ್ಚೈವ ಚರಾ ಯೇ ಭೀಮದರ್ಶನಾಃ |
ಉಗ್ರದಂಡಪ್ರಧಾನಾಶ್ಚ ಮಿಥ್ಯಾವ್ಯಾಹಾರಿಣಾಸ್ತಥಾ ॥3॥

ಕ್ರೋಧಾರಶ್ಚೈವ ಲುಬ್ಧಾಶ್ಚ ಹಂತಾರಃ ಸಾಹಸಪ್ರಿಯಾಃ |
ಹಿಂಸಾವಿಹಾರಭೋಕ್ತಾರೋ ವರ್ಣಾನಾಂ ಚ ಪ್ರದೂಷಕಾಃ ||4||
ಹಿರಣ್ಯದಂಡ್ಯಾ ವಧ್ಯಾ ವಾ ಕರ್ತವ್ಯಾ ದೇಶಕಾಲತಃ ||5||
ಯಾವ ವ್ಯಕ್ತಿಗಳು-ಲಂಚದಲ್ಲಿ ಆಸಕ್ತರಾಗಿರುವರೋ, ನೋಡುಗರನ್ನು ಭಯಪಡಿಸುವರೋ, ಉಗ್ರವಾದ ದಂಡನೆಯನ್ನೇ ಮುಖ್ಯವಾಗಿ ನೀಡುವರೋ, ಸುಳ್ಳು ಸುಳ್ಳಾದ ಮಾತುಗಳನ್ನು ಆಡುವರೋ, ಅನಗತ್ಯವಾಗಿ ಕಿರುಚುವರೋ, ಅತಿಯಾಗಿ ಆಸೆಬುರುಕರಾಗಿರುವರೋ, ಜನರನ್ನು ಹಿಂಸಿಸುವರೋ, ಅತಿಯಾಗಿ ಸಾಹಸವನ್ನು ಮೆಚ್ಚುವರೋ, ಹಿಂಸೆಯನ್ನು ವಿಹಾರದ ರೀತಿಯಲ್ಲಿ ಅನುಭವಿಸುವರೋ, ವರ್ಣ ವ್ಯವಸ್ಥೆಯನ್ನು ಹಾಳುಗೆಡುವುವರೋ, ಅವರು ದೇಶ ಹಾಗೂ ಕಾಲವ್ಯವಸ್ಥೆಗೆ ಅನುಗುಣವಾಗಿ ಸಂಪತ್ತಿನಿಂದಾಗಲೀ, ವಧೆಯಿಂದಾಗಲೀ ದಂಡಿಸಲ್ಪಡಬೇಕು.
ಅವರೋಧಭೂಮೌ ಭೃತ್ಯೈಶ್ಚ ಪಾನಂ ಸಹ ವಿವರ್ಜಯೇತ್ |
ಆಕ್ರೋಶಂತ್ಯನುಮತ್ತಾಸ್ತೇ ಕಲತ್ರಂ ವಾಽಪಿ ಗೃಹ್ಣತೇ ||6||
ಅಂತಃಪುರ ಪ್ರದೇಶದಲ್ಲಿ ಭೃತ್ಯರೊಂದಿಗೆ ಜೊತೆಗೂಡಿ ಮದ್ಯಪಾನವನ್ನು ನಡೆಸಬಾರದು. ಏಕೆಂದರೆ ಪಾನದಿಂದ ಮತ್ತರಾದ ಅವರು ಗಟ್ಟಿಯಾಗಿ ಕಿರುಚಾಡುವರು ಅಥವಾ ನಿನ್ನ ಪತ್ನಿಯರನ್ನು ಸ್ವೀಕರಿಸುವರು.
ಜಿಘಾಂಸಂತ್ಯಪಿ ಶಸ್ತ್ರೇಣ ನಷ್ಟಾಃ ಕ್ರೀಡಂತಿ ಚೋತ್ಕಟಾಃ |
ನಾನಾಕ್ಷೇಪಾ ವ್ಯಾಹರಂತಿ ಗಮ್ಯಾಗಮ್ಯಂ ನ ಜಾನತೇ ||7||
ಅಥವಾ ಬುದ್ಧಿಸ್ಥಿಮಿತವನ್ನು ಕಳೆದುಕೊಂಡು ಶಸ್ತ್ರದಿಂದ ನಿನ್ನನ್ನು ಕೊಲ್ಲಬಯಸುವರು ಅಥವಾ ಪಾನದಿಂದ ಉತ್ಕಟಾವಸ್ಥೆಯನ್ನು ತಲುಪಿ ನಿನ್ನ ಜೊತೆಗೆ ಆಡುವರು ಅಥವಾ ನಿನ್ನ ಕುರಿತು ನಾನಾ ರೀತಿಯ ಆಕ್ಷೇಪಗಳನ್ನು ಆಡಿಕೊಳ್ಳುವರು. ಅಲ್ಲದೇ ತಾವು ಹೋಗಬಹುದಾದ ಅಥವಾ ಹೋಗಬಾರದಾದ ಪ್ರದೇಶವನ್ನು ತಿಳಿಯುವುದಿಲ್ಲ.
ಅತಿಪಾನೇನ ರಾಜಾಽಪಿ ಸರ್ವಂ ಕೋಶಂ ವಿನಾಶಯೇತ್ |
ವಿತರೇದ್ ಗಾಯಕೇಭ್ಯಶ್ಚ ಪ್ರಧಾನದ್ರವ್ಯಸಂಚಯಮ್ ||8||
ರಾಜನೂ ಕೂಡ ಅತಿಯಾಗಿ ಮದ್ಯಪಾನ ಮಾಡುವುದರಿಂದ ತನ್ನ ಎಲ್ಲ ಕೋಶವನ್ನೂ ನಾಶಮಾಡಿಯಾನು. ಆದ್ದರಿಂದ ಆಸ್ಥಾನದಲ್ಲಿ ಮನಸ್ಸಂತೋಷಕ್ಕಾಗಿ ಹಾಡುವ ಗಾಯನಗಳಿಗೂ ಮಂತ್ರಿಗಳು ಸಂಗ್ರಹಿಸಿದ ದ್ರವ್ಯವನ್ನೇ ನೀಡಬೇಕೇ ಹೊರತು ಕೋಶದಲ್ಲಿ ಸಂಗ್ರಹಿಸಿದ ದ್ರವ್ಯವನ್ನು ನೀಡಬಾರದು.
ಶಬ್ದಮಾತ್ಮನಿ ದೋಷಾಂಶ್ಚ ಪಿಬೇದೇಕಃ ಸ್ವಜಾಯಯಾ |
ಯುಕ್ತ್ಯಾ ಪ್ರಕಾಶಮಯತಿ ಸುವೀರ್ಯಸ್ಯ ವಿವೃದ್ಧಯೇ ||9||
ದೇಹಬಲದ ವೃದ್ಧಿಗೋಸ್ಕರ ತನ್ನ ಪತ್ನಿಯೊಂದಿಗೆ ಒಬ್ಬನೇ ಪಾನ ಮಾಡುವ ಸಂದರ್ಭದಲ್ಲೂ ಶಬ್ದ ಸಹಿತವಾಗಿ ಪಾನ ಮಾಡಿದರೆ, ಯುಕ್ತಿಯಿಂದ ತನ್ನಲ್ಲಿ ದೋಷಗಳನ್ನು ಸೂಚಿಸುತ್ತದೆ.
ವ್ಯಾಖ್ಯಾನ ವಿಶೇಷ `ಶಬ್ದೇನಾಪಃ ಪಯಃ ಪೀತ್ವಾ ಶಬ್ದೇನ ಘೃತಪಾಯಸಮ್ | ಶಬ್ದೇನಾಪೋಶನಂ ಪೀತ್ವಾ ಸುರಾಪಾನಸಮಂ ಭವೇತ್ ||' ಎಂಬ ವಚನದಂತೆ ನೀರನ್ನಾಗಲಿ, ಹಾಲನ್ನಾಗಲಿ ಶಬ್ದ ಸಹಿತವಾಗಿ ಕುಡಿದರೆ ಅಥವಾ ತುಪ್ಪ-ಪಾಯಸವನ್ನಾಗಲಿ ಅಥವಾ ಆಪೋಷಣವನ್ನಾಗಲಿ ಶಬ್ದ ಸಹಿತವಾಗಿ ಸ್ವೀಕರಿಸಿದರೆ ಅದು ಸುರಾಪಾನ ಸದೃಶವಾಗುತ್ತದೆ. ಈ ರೀತಿ ಧರ್ಮಶಾಸ್ತ್ರ ವಚನವಿರುವುದರಿಂದ ಮದ್ಯ, ಕ್ಷೀರ ಮೊದಲಾದವುಗಳ ಪಾನ ಮಾಡುವ ಸಂದರ್ಭದಲ್ಲಿ ಶಬ್ದ ಸಹಿತವಾಗಿ ಕುಡಿಯುವುದು ತನ್ನ ದೋಷಗಳು ಎಂದು ತಿಳಿದು ಶಬ್ದ ಮಾಡದೆಯೇ ಕುಡಿಯಬೇಕು.
ಪ್ರಾತರನ್ಯಾಂಶ್ಚ ಪಶ್ಯೇಥಾ ಯೇ ಕುರ್ಯುಃ ಪ್ರಿಯಕರ್ಮ ತೇ |
ಅಲಂಕಾರಮಥೋ ಭೋಜ್ಯಮತ ಊರ್ಧ್ವಂ ಸಮಾಚರ ||10||
ಬೆಳಗಿನ ಕಾಲದಲ್ಲಿ ಯಾರು ನಿನಗೆ ಅತಿಪ್ರಿಯವಾದ ಕರ್ಮಗಳನ್ನು ಮಾಡುವರೋ ಅಂತಹ ಬೇರೆ ಜನರನ್ನೂ ನೋಡಬೇಕು. ಆನಂತರ ದೇಹಾಲಂಕಾರವನ್ನು, ಆಹಾರವನ್ನು ಸ್ವೀಕರಿಸಬೇಕು.
ಪಶ್ಯೇಥಾಶ್ಚ ತತೋ ಯೋಧಾನ್ ಸತತಂ ಪರಿಹರ್ಷಯನ್ |
ದೂತಾನಾಂ ಚ ಚರಾಣಾಂ ಚ ಪ್ರದೋಷಸ್ತೇ ಸದಾ ಭವೇತ್ ||11||
ಅನಂತರ ಸೈನಿಕರನ್ನು ನೋಡಬೇಕು. ಸೈನಿಕರನ್ನು ನೋಡುವಾಗ ಅವರನ್ನು ಯಾವಾಗಲೂ ಸಂತೋಷಪಡಿಸುತ್ತಿರಬೇಕು. ದೂತರು ಹಾಗೂ ಗುಪ್ತಚರರ ವಿಚಾರಣೆಗೆ ಸೂರ್ಯಾಸ್ತಕಾಲವು ಯಾವಾಗಲೂ ಪ್ರಶಸ್ತವಾಗಿದೆ.
ಸದಾ ಚಾಪರರಾತ್ರಾಂತೇ ಭವೇತ್ ಕಾರ್ಯವಿನಿರ್ಣಯಃ |
ಮಧ್ಯರಾತ್ರೇ ವಿಹಾರಸ್ತೇ ಮಧ್ಯಾಹ್ನೇ ಚ ಸದಾ ಭವೇತ್ ||12||
ಪ್ರತಿನಿತ್ಯವೂ ನಡೆಸುವ ಕಾರ್ಯಗಳ ನಿರ್ಣಯವು ಯಾವಾಗಲೂ ಅಪರರಾತ್ರಿಯ ಕೊನೆಯ ಭಾಗದಲ್ಲಿ ಅಂದರೆ ಬ್ರಾಹ್ಮೀ ಮುಹೂರ್ತದಲ್ಲಿ ನಡೆಯುವುದು ಉತ್ತಮವಾಗಿದೆ. ನಿನಗೆ ಸಂಬಂಧಿಸಿದ ವಿಹಾರವು ಮಧ್ಯಾಹ್ನದಲ್ಲೂ, ಮಧ್ಯರಾತ್ರಿಯಲ್ಲೂ ಉತ್ತಮವಾಗಿದೆ.
ಸರ್ವೇ ತ್ವಾತ್ಯಾಯಿಕೇ ಕಾಲೇ ಕಾರ್ಯಾಣಾಂ ಭರತರ್ಷಭ |
ತಥೈವ ಚಾಚರನ್ ಕಾಲೇ ತಿಷ್ಠೇಥಾ ಭೂರಿದಕ್ಷಿಣಃ ||13||
ಹೇ ಭರತರ್ಷಭನೇ, ಕಾರ್ಯಗಳು ನಾಶವಾಗುವ ಸಂದರ್ಭ ಒದಗಿದಾಗ ಎಲ್ಲ ಕಾಲದಲ್ಲೂ, ಎಲ್ಲರನ್ನೂ ನೋಡಬಹುದಾಗಿದೆ. ಹೀಗೆ ಎಲ್ಲವನ್ನೂ ಯೋಗ್ಯ ಕಾಲದಲ್ಲಿ ಆಚರಿಸುತ್ತಾ ಬಹಳ ಸರಳನಾಗಿ ವರ್ತಿಸಬೇಕು.
ಚಕ್ರವತ್ ಕರ್ಮಣಾಂ ತಾತ ಪರ್ಯಾಯೋ ಹ್ಯೇಷ ನಿತ್ಯಶಃ ||14||
ಹೇ ಮಗನೇ, ನಿತ್ಯವೂ ಈಗ ಹೇಳಿದ ಕರ್ಮವು ಕ್ರಮಬದ್ಧವಾಗಿ ಸುತ್ತುವ ಚಕ್ರದಂತೆ ನಿನ್ನ ಕರ್ಮಗಳಿಗೆ ಇರಲಿ.

ಕೋಶಸ್ಯ ಸಂಚಯೇ ಯತ್ನಂ ಕುರ್ವೀಥಾ ನ್ಯಾಯತಃ ಸದಾ |
ದ್ವಿವಿಧಸ್ಯ ಮಹಾರಾಜ ವಿಪರೀತಂ ವಿವರ್ಜಯೇಃ ॥15॥
ಹೇ ಮಹಾರಾಜನೇ, ಕೋಶದ ಅಭಿವೃದ್ಧಿಯನ್ನು ಅಗತ್ಯವಾಗಿ ಮಾಡಬೇಕು. ಆ ಸಮಯದಲ್ಲಿ ಯತ್ನಪೂರ್ವಕವಾಗಿ ಕೋಶಾಭಿವೃದ್ಧಿ ಹಾಗೂ ನ್ಯಾಯಮಾರ್ಗ ಇವೆರಡನ್ನೂ ಉಳಿಸಿಕೊಳ್ಳಬೇಕು. ಇದಕ್ಕೆ ವಿಪರೀತವಾದುದನ್ನು ವಿವರ್ಜಿಸಬೇಕು.
ಚಾರೈರ್ವಿದಿತ್ವಾ ಶತ್ರೂಂಶ್ಚ ಯೇ ತೇ ರಾಜ್ಯಾಂತರಾಯಿಣಃ |
ತಾನಾಪ್ತೈಃ ಪುರುಷೈರ್ದೂರಾದ್ ಘಾತಯೇಥಾಃ ಪರಸ್ಪರಮ್ ॥16॥
ಗೂಢಚಾರರಿಂದ ಯಾರು ಶತ್ರುಗಳು, ಯಾರು ರಾಜ್ಯಕ್ಕೆ ತೊಂದರೆಯನ್ನು ಕೊಡುವವರು ಎಂದು ಚೆನ್ನಾಗಿ ತಿಳಿದು, ಅಂತಹ ವ್ಯಕ್ತಿಗಳನ್ನು ಆಪ್ತರಾದ ಪುರುಷರಿಂದ ಅವರು ದೂರದಲ್ಲಿರುವಾಗಲೇ ಪರಸ್ಪರವಾಗಿ ಹೊಡೆದಾಡಿಕೊಳ್ಳುವಂತೆ ಮಾಡು.
ಕರ್ಮ ದೃಷ್ಟ್ವಾ ತತೋಽಮಾತ್ಯಾನ್ ಸಂಗೃಹ್ಣೀಯಾಃ ಕುರೂದ್ವಹ |
ಕಾರಯೇಥಾಶ್ಚ ಕರ್ಮಾಣಿ ಯುಕ್ತಾಯುಕ್ತೈರನುಷ್ಠಿತೈಃ ॥17॥
ಹೇ ಕುರೂದ್ವಹನೇ, ಮಂತ್ರಿಗಳನ್ನು ಸ್ವೀಕರಿಸುವ ಮೊದಲು ಅವರು ಮಾಡುವ ಕೆಲಸಗಳನ್ನು ನೋಡಿ ನಂತರ ಮಂತ್ರಿಗಳನ್ನಾಗಿ ಸ್ವೀಕರಿಸು. ನಂತರವೂ ಕೂಡ ಗೂಢಚರ್ಯೆಯಿಂದ ಅವರ ಯುಕ್ತಾಯುಕ್ತ ಕರ್ಮಗಳನ್ನು ತಿಳಿದು ನಂತರ ರಾಜಕಾರ್ಯಗಳನ್ನು ಅವರಿಂದ ಮಾಡಿಸು.
ಸೇನಾಪ್ರಣೇತಾ ಚ ಭವೇತ್ ತವ ತಾತ ದೃಢವ್ರತಃ |
ಶೂರಃ ಕ್ಲೇಶಸಹಶ್ಚೈವ ಪ್ರಿಯಶ್ಚ ತವ ಮಾನವಃ ॥18॥
ಹೇ ತಾತನೇ, ನಿನ್ನ ಸೇನಾಧಿಪತಿಯೂ ಕೂಡ ದೃಢವಾದ ನಿಶ್ಚಯವುಳ್ಳ ಶೂರನಾದ ಕಷ್ಟಗಳನ್ನು ಸಹಿಸುವ ಸ್ವಭಾವವುಳ್ಳ, ನಿನಗೆ ಪ್ರಿಯನಾದ ಮನುಷ್ಯನೇ ಆಗಿರಲಿ.
ಸರ್ವೇ ಜನಪದಾಶ್ಚೈವ ತವ ಕರ್ಮಾಣಿ ಪಾಂಡವ |
ಪೌರೋಗವಾಶ್ಚ ಸಭ್ಯಾಶ್ಚ ಕುರ್ಯುರ್ಯಾನವಿಹಾರಿಣಃ ॥19॥
ಹೇ ಪಾಂಡವನೇ, ಜೈತ್ರಯಾತ್ರೆ ರೂಪವಾದ, ವಿಹಾರವನ್ನು ಕೈಗೊಂಡ ನಿನಗೆ ಗ್ರಾಮೀಣ ಜನರು, ಅಡುಗೆಯವರು, ಸಭಾಸದರು ಇವರೆಲ್ಲರೂ ಅಗತ್ಯವಾದ ಕರ್ಮಗಳನ್ನು ಮಾಡುವಂತಿರಬೇಕು.
ಸ್ವರಂಧ್ರಂ ಪರರಂಧ್ರಂ ಚ ಸ್ವೇಷು ಚೈವ ಪರೇಷು ಚ |
ಉಪಲಕ್ಷಯಿತವ್ಯಂ ತೇ ನಿತ್ಯಮೇವ ಯುಧಿಷ್ಠಿರ ॥20॥
ಹೇ ಯುಧಿಷ್ಠಿರನೇ, ನಿನ್ನ ಬಲಹೀನತೆಯನ್ನು ನಿನ್ನಲ್ಲೂ, ಪರರ ಬಲಹೀನತೆಯನ್ನು ಪರರಲ್ಲೂ ನಿತ್ಯವೂ ಸರಿಯಾಗಿ ಗಮನಿಸುತ್ತಿರಬೇಕು.
ದೇಶಾಂತರಸ್ಥಾಶ್ಚ ನರಾ ವಿಕ್ರಾಂತಾಃ ಸರ್ವಕರ್ಮಸು |
ಮಾತ್ರಾಭಿರನುರೂಪಾಭಿರನುಗ್ರಾಹ್ಯಾ ಹಿತಾಸ್ತ್ವಯಾ ॥21॥
ಎಲ್ಲ ರೀತಿಯ ಕರ್ಮಗಳಲ್ಲಿ ವಿಶೇಷ ಪರಿಶ್ರಮವುಳ್ಳ ಮನುಷ್ಯರು ಬೇರೆ ದೇಶದಲ್ಲಿದ್ದರೂ ಅಥವಾ ದೇಶದೊಳಗಿದ್ದರೂ ನಿನ್ನಿಂದ ಅವರು ಪಟ್ಟಣದಲ್ಲಿ ಇರಿಸಲ್ಪಟ್ಟು, ಅವರ ಯೋಗ್ಯತೆಗೆ ಅನುಸಾರಿಯಾದ ಪ್ರಮಾಣದಲ್ಲಿ ಸಂಪತ್ತು ಮೊದಲಾದ ಅನುಕೂಲತೆಗಳನ್ನು ಮಾಡಿಕೊಡುವ ಮೂಲಕ ಅನುಗ್ರಹಿಸಬೇಕು.
ಗುಣಾನುಸಮ್ಮತಂ ಕಾರ್ಯಂ ವಿದುಷಾಂ ರಾಜಸತ್ತಮ |
ಅವಿಚಾಲ್ಯಶ್ಚ ದೇಶಃ ಸ್ಯಾದ್ ಯಥಾ ಮೇರುರ್ಮಹಾಗಿರಿಃ ॥22॥
ಹೇ ರಾಜಶ್ರೇಷ್ಠನೇ, ವಿದ್ವಾಂಸರಿಗೆ ಅವರ ಗುಣಕ್ಕೆ ಅನುಸಾರವಾಗಿ ಅವರಿಗೆ ಇಷ್ಟವಾದುದನ್ನೇ ಮಾಡಬೇಕು. ಹೀಗೆ ಮಾಡುವುದರಿಂದ ಮಹಾಗಿರಿಯಾದ ಮೇರುಪರ್ವತವು ಹೇಗೋ ಹಾಗೆಯೇ ಈ ದೇಶವನ್ನು ಯಾರಿಂದಲೂ ಅಲುಗಾಡಿಸಲೂ ಆಗುವುದಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ರಾಜವೃತ್ತೋಪದೇಶೋ ನಾಮ ದಶಮೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ದಶಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹತ್ತನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೊಂದನೆಯ ಅಧ್ಯಾಯ
ಧೃತರಾಷ್ಟ್ರನಿಂದ ಯುಧಿಷ್ಠಿರನಿಗೆ ರಾಜನೀತಿಯ ಉಪದೇಶ.
ಧೃತರಾಷ್ಟ್ರಃ
ಮಂಡಲಾನಿ ಚ ಬುದ್ಧ್ಯೇಥಾಃ ಪರೇಷಾಮಾತ್ಮನಸ್ತಥಾ |
ಉದಾಸೀನಗುಣಾನಾಂ ಚ ಮಧ್ಯಮಾನಾಂ ತಥೈವ ಚ ॥1॥
ಚತುರ್ಣಾಂ ಶತ್ರುಜಾತಾನಾಂ ಸರ್ವೇಷಾಮಾತತಾಯಿನಾಮ್ |
ಮಿತ್ರಂ ಚಾಮಿತ್ರಮಿತ್ರಂ ಚ ಬೋದ್ಧವ್ಯಂ ಶತ್ರುಕರ್ಶನ ॥2॥
ಧೃತರಾಷ್ಟ್ರ ಹೇ ಶತ್ರುಕರ್ಶನನೇ, ನೀನು ಶತ್ರುಗಳ ಮತ್ತು ನಿನ್ನ ಪಕ್ಷದ ಹಾಗೆಯೇ ಉದಾಸೀನಗುಣವುಳ್ಳವರ ಪಕ್ಷದ ಮತ್ತು ಮಧ್ಯಮರ, ರಾಜಕೀಯಕ್ಕೆ ಸಂಬಂಧಿಸಿದ ಮಂಡಲಗಳನ್ನು ತಿಳಿಯಬೇಕು. ಅಲ್ಲದೇ ನಾಲ್ಕು ರೀತಿಯ ಶತ್ರುಗಳ ಎಲ್ಲ ರೀತಿಯ ಆತತಾಯಿಗಳ ವಿಷಯವನ್ನೂ, ಮಿತ್ರರನ್ನೂ, ಹಾಗೆಯೇ ನಿನ್ನ ಶತ್ರುಗಳಿಗೆ ಮಿತ್ರರಾದವರನ್ನೂ ತಿಳಿದುಕೊಳ್ಳತಕ್ಕದ್ದು.
ವ್ಯಾಖ್ಯಾನ ವಿಶೇಷ ಶತ್ರು, ಶತ್ರುವಿನ ಮಿತ್ರ, ಇಬ್ಬರನ್ನೂ ಜಯಿಸ ಬಯಸುವವ, ನಮ್ಮನ್ನು ಮಾತ್ರ ಸೋಲಿಸ ಬಯಸುವವ ಹೀಗೆ

ನಾಲ್ಕು ಮಂದಿ ಶತ್ರುಗಳು.
ತಥಾऽಮಾತ್ಯಾ ಜನಪದಾ ದುರ್ಗಾಣಿ ವಿವಿಧಾನಿ ಚ |
ಕುರುಶ್ರೇಷ್ಠ ಭವಂತ್ಯೇಷಾಂ ಯಥಾದೇಶಂ ಯಥಾಸ್ವಕಮ್ ॥3॥
ಪಂಚ ದ್ವಾದಶ ಕೌಂತೇಯ ರಾಜಾನೋ ವಿವಿಧಾತ್ಮಕಾಃ |
ಮಂತ್ರಿಪ್ರಧಾನಾಶ್ಚ ಗುಣಾಃ ಷಟ್ ಚ ದ್ವಾದಶ ಚ ಸ್ಮೃತಾಃ ॥4॥
ಏತನ್ಮಂಡಲಮಿತ್ಯಾಹುರಾಚಾರ್ಯಾ ನೀತಿಕೋವಿದಾಃ |
ಅತ್ರ ಷಾಡ್ಗುಣ್ಯಮಾಯತ್ತಂ ಯುಧಿಷ್ಠಿರ ನಿಬೋಧ ತತ್ ॥5॥
ಹೇ ಕುರುಶ್ರೇಷ್ಠನೇ, ಅದೇ ರೀತಿ ಮಂತ್ರಿಗಳು, ಬೇರೆ ಬೇರೆ ರೀತಿ ಪ್ರದೇಶದ ಜನರ ವಿಷಯಗಳು, ನಾನಾ ರೀತಿಯ ದುರ್ಗಗಳು ಇವೆಲ್ಲವೂ ಆಯಾಯಾ ಪ್ರದೇಶಕ್ಕೆ ಅನುಗುಣವಾಗಿ, ರಾಜರ ಇಚ್ಛೆಗೆ ಅನುಸಾರವಾಗಿ ಇರುತ್ತವೆ. ಅವನ್ನೂ ತಿಳಿದುಕೊಳ್ಳಬೇಕು. ಹೇ ಕೌಂತೇಯನೇ, ರಾಜರುಗಳು ವಿವಿಧ ಗುಣಗಳಿಂದ ಕೂಡಿರುತ್ತಾರೆ. ಪ್ರಧಾನವಾಗಿ ಐದು ಹಾಗೂ ಹನ್ನೆರಡು ಗುಣಗಳಿಂದ ಕೂಡಿರುವವರು. ಅದೇ ರೀತಿ ಮಂತ್ರಿಗಳಲ್ಲಿ ಆರು ಹಾಗೂ ಹನ್ನೆರಡು ಪ್ರಧಾನ ಗುಣಗಳಿರಬೇಕು. ರಾಜನೀತಿಯನ್ನು ಬಲ್ಲ ಆಚಾರ್ಯರು ಇವೆಲ್ಲವನ್ನೂ ಸೇರಿಸಿ ಮಂಡಲ ಎಂಬ ಶಬ್ದದಿಂದ ಕರೆದಿದ್ದಾರೆ. ಹೇ ಯುಧಿಷ್ಠಿರನೇ, ಈ ರಾಜನ ಹದಿನೇಳು ಗುಣಗಳು ಹಾಗೂ ಮಂತ್ರಿಗಳ ಹದಿನೆಂಟು ಗುಣಗಳಲ್ಲೇ ಷಾಡ್ಗುಣ್ಯವು ನಿಂತಿದೆ.
ವ್ಯಾಖ್ಯಾನ ವಿಶೇಷ ಸಹಾಯಭೂತರಾದ ಮಂತ್ರಿಗಳು, ಸಾಧನಕ್ಕೆ ಉಪಾಯ ಭೂತವಾದ ತರ್ಕಗಳು, ದೇಶವಿಭಾಗ, ಕಾಲವಿಭಾಗ, ಆಪತ್ತಿನ ಪ್ರತೀಕಾರ - ಈ ಐದು ಕಾರ್ಯಸಿದ್ಧಿಯ ಐದು ಅಂಗಗಳು.
ಅಧ್ಯಯನ, ಯಜನ, ದಾನ, ಶಸತತ್ರಸ್ತ್ರಕೌಶಲ, ಯುದ್ಧದಲ್ಲಿ ಪಲಾಯನ ಮಾಡದಿರುವುದು, ಬಾಹ್ಯ ಹಾಗೂ ಆಂತರ ಶತ್ರುಗಳ ಜಯ, ಕ್ಷಮಾಶೀಲತೆ, ದಯಾಗುಣ, ಗಾಂಭೀರ್ಯ, ಸ್ಥಿರತೆ, ಶೌರ್ಯ, ಅಹಂಕಾರ ಇಲ್ಲದಿರುವುದು - ಈ ಹನ್ನೆರಡು, ಹಿಂದಿನ ಐದು ಅಂಗಗಳು ಸೇರಿ ಒಟ್ಟು ಹದಿನೇಳು ರಾಜಗುಣಗಳು. `ಷಟ್ ಚ ದ್ವಾದಶ ಚ' ಎಂಬಲ್ಲಿ ಷಟ್ ಚ - ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ. ಸಂಧಿ ಎಂದರೆ ಕೇಳಿದ ವಸ್ತುವನ್ನು ಅಥವಾ ಧನವನ್ನು ಕೊಟ್ಟು ಸಂಧಾನ ಮಾಡಿಕೊಳ್ಳುವುದು. ವಿಗ್ರಹ ಎಂದರೆ ತಾನು ಇದ್ದಲ್ಲೇ ಇದ್ದು ಶತ್ರುಪಕ್ಷದಲ್ಲಿ ದಾಹ, ಶೌರ್ಯಾದಿಗಳನ್ನು ನಡೆಸುವುದು. ಅಂದರೆ ಅವರ ಬಲವನ್ನು ಅಪಹರಿಸುವುದು. ಯಾನ ಅಂದರೆ ಯುದ್ಧಕ್ಕಾಗಿಯೇ ಹೊರಡುವುದು. ಆಸನ ಅಂದರೆ ಪರರು ಅತಿಬಲಗಳೆಂದು ತಿಳಿದು ಯುದ್ಧಕ್ಕೆ ಹೋಗದೆ ಸುಮ್ಮನಿರುವುದು. ದ್ವೈಧ ಎಂದರೆ ಎರಡೂ ಕಡೆಯಿಂದ ಶತ್ರುಗಳ ಬರುವ ಸಂದರ್ಭವಿದ್ದರೆ ಒಬ್ಬರ ಜೊತೆಗೆ ಸಂಧಿ ಮಾಡಿ ಇನ್ನೊಬ್ಬರೊಡನೆ ಯುದ್ಧ ಮಾಡುವುದು. ಆಶ್ರಯ ಎಂದರೆ ಬಲಿಷ್ಠರಾದ ಧರ್ಮನಿಷ್ಠರಾದ ರಾಜರನ್ನು ಆಶ್ರಯಿಸುವುದು. ಈ ಆರು ಮಂತ್ರಿಗುಣಗಳು. ದ್ವಾದಶ ಎಂಬಲ್ಲಿ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಎಂಬ ಶಕ್ತಿತ್ರಯ; ಶತ್ರುಜಯಸಿದ್ಧಿ, ಸ್ಥಾನಸಿದ್ಧಿ, ಕೋಶವೃದ್ಧಿ ಎಂಬ ಸಿದ್ಧಿತ್ರಯ; ಧರ್ಮೋದಯ, ಕೀರ್ತ್ಯುದಯ, ಜಯೋದಯ ಎಂಬ ಉದಯತ್ರಯಗಳು; ಚಾರಸಂಚಾರಣ, ಚೋರನಿವಾರಣ, ನ್ಯಾಯಾನ್ಯಾಯ ವಿಚಾರಣ ಎಂಬ ನೀತಿತ್ರಯಗಳು. ಹೀಗೆ ಹನ್ನೆರಡು ಮಂತ್ರಿಗುಣಗಳು. ಹಿಂದಿನ ಆರು ಗುಣಗಳು ಸೇರಿ ಒಟ್ಟು ಹದಿನೆಂಟು ಮಂತ್ರಿ ಗುಣಗಳು.
ಷಾಡ್ಗುಣ್ಯಂ ಸ್ವರಕ್ಷಣೆ, ತನ್ನ ದೇಶದ ರಕ್ಷಣೆ, ತನ್ನ ಮಿತ್ರರ ರಕ್ಷಣೆ, ಶತ್ರುಸಂಹಾರ, ಶತ್ರು ದೇಶದ ಅಪಹಾರ, ಶತ್ರುಗಳಿಗೆ ಮಿತ್ರರಾದವರ ಅಪಹಾರ - ಇವು ರಾಜ್ಯದ ಷಾಡ್ಗುಣ್ಯಗಳು.
ವೃದ್ಧಿಕ್ಷಯೌ ಚ ವಿಜ್ಞೇಯೌ ಸ್ಥಾನಂ ಚ ಕುರುನಂದನ |
ದ್ವಿಸಪ್ತತ್ಯಾಂ ಮಹಾಬಾಹೋ ತತಃ ಷಾಡ್ಗುಣ್ಯಚಾರಣಾ ॥6॥
ಹೇ ಕುರುನಂದನನೇ, ಮಹಾಬಾಹುವೇ, ತನ್ನ ವೃದ್ಧಿ ಹಾಗೂ ಶತ್ರುಗಳ ಕ್ಷಯವು, ಅಲ್ಲದೇ ಸ್ವರಾಜ್ಯದ ಸ್ಥಿತಿಯು ಈ ಮೂರು ಎಪ್ಪತ್ತೆರಡು ಕಾರಣಗಳಿಂದ ಉಂಟಾಗುತ್ತದೆ. ಇವೆಲ್ಲವೂ ಸರಿಯಾಗಿದ್ದರೆ ಅದರಿಂದಲೇ ಹಿಂದೆ ಹೇಳಿದ ಷಾಡ್ಗುಣ್ಯವು ಸರಿಯಾಗಿರುತ್ತದೆ.
ವ್ಯಾಖ್ಯಾನ ವಿಶೇಷ ದ್ವಿಸಪ್ತತ್ಯಾಂ ಅರವತ್ನಾಲ್ಕು ಕಲೆಗಳು, ನಾಲ್ಕು ಉಪಾಯಗಳು, ನಾಲ್ಕು ರೀತಿಯ ಸೇನಾಂಗಗಳು - ಇವು ಸೇರಿ ಎಪ್ಪತ್ತೆರಡು ರಾಜ್ಯವೃದ್ಧಿಕರ ಕಾರಣಗಳು.
ಯಥಾ ಸ್ವಪಕ್ಷೋ ಬಲವಾನ್ ಪರಪಕ್ಷಸ್ತಥಾऽವರಃ |
ವಿಗೃಹ್ಯ ಶತ್ರೂನ್ ಕೌಂತೇಯ ಯಾಯಾತ್ ಕ್ಷಿತಿಪತಿಸ್ತದಾ ॥7॥
ಹೇ ಕೌಂತೇಯನೇ, ಯಾವೆಲ್ಲ ರೀತಿಯಿಂದ ಸ್ವಪಕ್ಷವು ಬಲಿಷ್ಠವಾಗಿದ್ದು ಅದೇ ರೀತಿಯಲ್ಲಿ ಶತ್ರುಪಕ್ಷವು ನಿಕೃಷ್ಟವಾಗಿದ್ದರೆ ಆಗ ಶತ್ರುಗಳೊಡನೆ ಯುದ್ಧ ಮಾಡಿ ರಾಜನು ದಂಡಯಾತ್ರೆಯನ್ನು ಕೈಗೊಳ್ಳಬೇಕು.
ಯದಾ ಸ್ವಪಕ್ಷಸ್ತ್ವವರಃ ತದಾ ಸಂಧಿಂ ಸಮಾಶ್ರಯೇಃ |
ದ್ರವ್ಯಾಣಾಂ ಸಂಚಯೇ ಚೈವ ಯತ್ನಃ ಕಾರ್ಯಸ್ತದಾ ಭವೇತ್ ॥8॥
ಯಾವಾಗ ತನ್ನ ಪಕ್ಷವು ಶತ್ರುಪಕ್ಷಕ್ಕಿಂತ ಕಡಿಮೆ ಎನಿಸುವುದೋ, ಆಗ ಸಂಧಿಯನ್ನೇ ಆಶ್ರಯಿಸು. ಆ ಸಂದರ್ಭದಲ್ಲಿ ಅಗತ್ಯವಾದ ಮೂಲಭೂತ ದ್ರವ್ಯಗಳ ಸಂಗ್ರಹದಲ್ಲೂ ಪ್ರಯತ್ನವನ್ನು ಮಾಡುತ್ತಿರಬೇಕು.
ಯದಾ ಸಮರ್ಥೋ ಯಾನಾಯ ನಚಿರೇಣ ಚ ಭಾರತ |
ತದಾ ಸರ್ವಂ ವಿಧಾತವ್ಯಂ ಸ್ಥಾನೇ ಚೈವ ವಿಧಾಯಕಃ ॥9॥
ಹೇ ಭಾರತನೇ, ಯಾವಾಗ ಯುದ್ಧಕ್ಕೆ ಹೊರಡಲು ಸಮರ್ಥನಾಗುವೆಯೋ ಆಗ ಕೂಡಲೇ ಅಂದರೆ ವಿಳಂಬಿಸದೆ ಯೋಗ್ಯಸ್ಥಾನದಲ್ಲಿ ಯೋಗ್ಯವ್ಯಕ್ತಿಗಳನ್ನು ಇರಿಸಿ ಎಲ್ಲವನ್ನೂ ವ್ಯವಸ್ಥಿತವಾಗಿ ನಡೆಸಬೇಕು.
ಭೂಮಿರಲ್ಪಫಲಾ ದೇಯಾ ವಿಪರೀತಸ್ಯ ಭಾರತ ॥10॥
ಹಿರಣ್ಯರೂಪ್ಯಭೂಯಿಷ್ಠಮಮಿತ್ರಂ ಕ್ಷೀಣಕೋಶವತ್ |

ವಿಪರೀತಂ ನ ಗೃಹ್ಣೀಯಾತ್ ಸ್ವಯಂ ಸಂಧಿವಿಶಾರದಃ ॥11॥
ಹೇ ಭಾರತನೇ, ಸಂಧಿ ಮಾಡುವ ಸಂದರ್ಭ ಒದಗಿದರೆ ಪರಪಕ್ಷದವನಿಗೆ ಬಹಳ ಫಲವತ್ತಾಗಿರದ ಭೂಮಿಯನ್ನೇ ಕೊಡಬೇಕು. ಇದಕ್ಕೆ ವಿಪರೀತವಾಗಿ ತಾನು ತೆಗೆದುಕೊಳ್ಳುವ ಸಂದರ್ಭ ಒದಗಿದರೆ ಸಂಧಿಯ ವಿಷಯದಲ್ಲಿ ಬುದ್ಧಿವಂತಿಕೆ ಉಳ್ಳವನಾಗಿ ಚಿನ್ನ ಹಾಗೂ ಬೆಳ್ಳಿಯಿಂದ ಸಮೃದ್ಧವಾದ ಸಂಪತ್ತನ್ನೇ ಸ್ವೀಕರಿಸಬೇಕು. ಕೋಶಬಲವಿಲ್ಲದ ಶತ್ರುವನ್ನು ಸಂಧಿಗಾಗಿ ಸ್ವೀಕರಿಸಬಾರದು.
ಸಖ್ಯಾರ್ಥಂ ರಾಜಪುತ್ರಂ ವಾ ಲಿಪ್ಸೇಥಾ ಭರತರ್ಷಭ |
ವಿಪರೀತೇ ಕೃತೇ ದೇಯಃ ಪುತ್ರಃ ಕಸ್ಯಾಂಚಿದಾಪದಿ ॥12॥
ಹೇ ಭರತರ್ಷಭನೇ, ಅಂತಹ ಸಂದರ್ಭದಲ್ಲೂ ಮೈತ್ರಿಯನ್ನು ಬಯಸಿ ಬಂದರೆ ರಾಜಪುತ್ರನನ್ನು ಹಿರಣ್ಯಕ್ಕೆ ಬದಲಾಗಿ ಕೇಳಬೇಕು. ವಿಪರೀತವಾಗಿ ಯಾವುದಾದರೂ ಆಪತ್ತಿನ ಸಂದರ್ಭದಲ್ಲಿ ತಾನೇ ಸಖ್ಯವನ್ನು ಬಯಸಿ ಹೋಗುವುದಿದ್ದರೆ ಮಗನನ್ನು ಕೊಡಬಹುದಾಗಿದೆ.
ತಸ್ಯ ಪ್ರಮೋಕ್ಷೇ ಯತ್ನಂ ಚ ಕುರ್ಯಾಃ ಸೋಪಾಯಮಾತ್ಮವತ್ |
ಪ್ರಕೃತೀನಾಂ ಚ ಕೌಂತೇಯ ರಾಜಾ ದೀನಾನ್ ವಿಭಾವಯೇತ್ ॥13॥
ಹೇ ಕೌಂತೇಯನೇ, ಮಗನನ್ನು ಸಂಧಿಗಾಗಿ ಕೊಟ್ಟಿದ್ದರೆ ಅವನನ್ನು ಬಿಡಿಸುವುದಕ್ಕಾಗಿ ಉತ್ತಮವಾದ ಸತ್ವವುಳ್ಳ, ಒಳ್ಳೆಯ ಉಪಾಯಗಳಿಂದ ಕೂಡಿರುವ ಪ್ರಯತ್ನವನ್ನೂ ಮಾಡಬೇಕು. ಪ್ರಕೃತಿಭೂತರಾದ ಪ್ರಜೆಗಳ ಮಧ್ಯದಲ್ಲಿ ದೀನ, ದಲಿತ, ದರಿದ್ರರನ್ನೂ ರಾಜನು ಆದರಿಸಬೇಕು.
ಕ್ರಮೇಣ ಯುಗಪದ್ ವೃದ್ಧಂ ವ್ಯಸನಾನಾಂ ಬಲಾಬಲಮ್ |
ಪೀಡನಂ ಸ್ತಂಭನಂ ಚೈವ ಕೋಶಭಂಗಸ್ತಥೈವ ಚ ॥14॥
ಕಾರ್ಯಂ ಯತ್ನೇನ ಶತ್ರೂಣಾಂ ಸ್ವರಾಷ್ಟ್ರಂ ರಕ್ಷತಾ ಸ್ವಯಮ್ ॥15॥
ತನ್ನ ರಾಷ್ಟ್ರವನ್ನು ರಕ್ಷಿಸುವ ಹೊಣೆಯುಳ್ಳ ರಾಜನು ತಾನೇ ಸ್ವತಃ ಶತ್ರುಗಳಿಂದಾಗುವ ವಿಪತ್ತುಗಳ ಬಲಾಬಲವನ್ನು ತಿಳಿದು, ಅವರ ದಮನಕ್ಕೋಸ್ಕರ ಕ್ರಮವಾಗಿ ಅಥವಾ ಜೊತೆಯಾಗಿ ಬಹಳವಾದ ಪೀಡೆಯನ್ನಾಗಲಿ, ಬಲಸ್ತಂಭನವನ್ನಾಗಲಿ, ಕೋಶ ಭಂಗವನ್ನಾಗಲಿ ಪ್ರಯತ್ನಪೂರ್ವಕವಾಗಿ ಮಾಡಬೇಕು.
ನ ಚ ಹಿಂಸ್ಯೋಽಭ್ಯುಪಗತಃ ಸಾಮಂತೋ ವೃದ್ಧಿಮಿಚ್ಛತಾ |
ಕೌಂತೇಯ ತದ್ಧಿತಂ ತೇ ಸ್ಯಾತ್ ಪೃಥಿವೀಂ ವಿಜಿಗೀಷತಃ ॥16॥
ಹೇ ಕೌಂತೇಯನೇ, ವೃದ್ಧಿಯನ್ನು ಬಯಸುವ ನಿನ್ನಿಂದ ಸಾಮಂತರಾಜನು ಹಿಂಸೆಗೊಳಗಾಗುವುದು ಒಪ್ಪಿಗೆಯಾಗತಕ್ಕದ್ದಲ್ಲ. ಏಕೆಂದರೆ ಸಾಮಂತನಿಗೆ ಹಿತವಾಗುವುದರಿಂದ ಪೃಥಿವಿಯನ್ನು ಗೆಲ್ಲ ಬಯಸುವ ನಿನಗೂ ಹಿತವಾಗುವುದು.
ಗುಣಾಭೇದೇನ ವೈ ಯೋಗಂ ಗಚ್ಛೇಥಾಃ ಸಹ ಮಂತ್ರಿಭಿಃ |
ಆತ್ಮಸಾತ್ಕರಣೇ ನಿತ್ಯಂ ಪಾಲನಾನಿ ಗೃಹೇ ತಥಾ ॥17॥
ಮಂತ್ರಿಗಳ ಜೊತೆಗೆ ವ್ಯವಹರಿಸುವಾಗ ನಿತ್ಯವೂ ಅವರನ್ನು ಪೂರ್ತಿಯಾಗಿ ನಿನ್ನ ಅಧೀನದಲ್ಲಿ ಇರಿಸಿಕೊಳ್ಳುವುದಕ್ಕಾಗಿ ಅವರಲ್ಲಿರುವ ಗುಣಗಳಿಗೆ ಸರಿಯಾದ ಗುಣಗಳನ್ನು ರೂಢಿಸಿಕೊಂಡು ಅವರ ಜೊತೆ ನೀನು ಮುಂದುವರೆಯಬೇಕು. ಮನೆಯ ಜನರನ್ನು ಪಾಲಿಸುವಾಗಲೂ ಇದೇ ರೀತಿ ನಡೆದುಕೊಳ್ಳಬೇಕು.
ದುಬರ್ಲಾಶ್ಚೈವ ಸತತಂ ನಾವಷ್ಟಭ್ಯಾ ಬಲೀಯಸಾ |
ತಿಷ್ಠೇಥಾ ರಾಜಶಾರ್ದೂಲ ವೈತಸೀಂ ವೃತ್ತಿಮಾಶ್ರಿತಃ ॥18॥
ಹೇ ರಾಜಶಾರ್ದೂಲನೇ, ನೀನು ದುರ್ಬಲನಾಗಿದ್ದಾಗ ಬಲಿಷ್ಠರ ಜೊತೆಗೆ ವಿರೋಧದಿಂದ ಕೂಡಿಕೊಂಡು ಯಾವತ್ತೂ ಇರಬಾರದು. ವೈತಸದಂತೆ ನಡತೆಯನ್ನು ರೂಢಿಸಿಕೊಂಡು ಇರಬೇಕು.
ವ್ಯಾಖ್ಯಾನ ವಿಶೇಷ ವೈತಸ ಎಂದರೆ ಹಬ್ಬೆಗಿಡ. ನದಿಯ ಪ್ರವಾಹ ಜೋರಾಗಿ ಬಂದಾಗ ಹಬ್ಬೇ ಗಿಡವು ತಾನು ವಿನಮ್ರವಾಗಿ ತನ್ನನ್ನು ಉಳಿಸಿಕೊಳ್ಳುತ್ತದೆ. ಪ್ರವಾಹದಲ್ಲಿ ಕೊಚ್ಚಿ ಹೋಗುವುದಿಲ್ಲ. ಹಾಗೆಯೇ ಬಲಿಷ್ಠರೊಂದಿಗೆ ವಿನಮ್ರನಾಗಿದ್ದು, ಅವರಿಂದ ರಕ್ಷಣೆಯನ್ನು ಪಡೆಯಬೇಕು ಎಂದು ಭಾವ.
ಯದ್ಯೇವಮಭಿಯಾಯಾಸತ್ತ್ವಂ ಬಲವಾನ್ ದುರ್ಬಲಂ ನೃಪ |
ಸಾಮಾದಿಭಿರುಪಾಯೈಸ್ತಂ ಕ್ರಮೇಣ ವಿನಿವರ್ತಯ ॥19॥
ಹೇ ರಾಜನೇ, ನೀನು ವಿನಮ್ರನಾಗಿದ್ದಾಗಲೂ ದುರ್ಬಲನಾದ ನಿನ್ನನ್ನು ಬಲಿಷ್ಠನಾದ ರಾಜ ಯುದ್ಧದಲ್ಲಿ ಸೋಲಿಸಲಿಕ್ಕಾಗಿ ಬಂದರೆ ಕ್ರಮವಾಗಿ ಸಾಮವೇ ಮೊದಲಾದ ಉಪಾಯಗಳಿಂದ ಅವನನ್ನು ಹಿಂದಿರುಗಿಸು.
ಅಶಕ್ನುವಂಸ್ತು ಯುದ್ಧಾಯ ನಿಷ್ಪತೇಃ ಸಹ ಮಂತ್ರಿಭಿಃ |
ಕೋಶೇನ ಪೌರೈರ್ದಂಡೇನ ಯೇ ಚಾನ್ಯೇ ಪ್ರಿಯಕಾರಿಣಃ ॥20॥
ಯುದ್ಧಕ್ಕೆ ನೀನು ಶಕ್ತನಾಗಿಲ್ಲದಿದ್ದರೆ ಮಂತ್ರಿಗಳ ಜೊತೆಗೂಡಿ ವಿಮರ್ಶಿಸಿ ಕೋಶದಿಂದಾಗಲಿ, ಪೌರರಿಂದಾಗಲಿ, ಸೈನ್ಯದಿಂದಾಗಲಿ ಅಥವಾ ಪರರಾಜನಿಗೆ ಪ್ರಿಯವಾದ ಬೇರೆ ಯಾವ ವಸ್ತುಗಳಿವೆಯೋ ಅವುಗಳನ್ನು ನೀಡುವ ಮೂಲಕವಾಗಲಿ ಸಂಧಾನದ ಮೂಲಕ ಈ ಸಂಕಟದಿಂದ ಹೊರಗೆ ಬಾ.
ಅಸಂಭವೇ ತು ಸರ್ವಸ್ಯ ಯಥಾ ಮುಖ್ಯೇನ ನಿಷ್ಪತೇತ್ |
ಕ್ರಮೇಣಾನೇನ ಮೋಕ್ಷಃ ಸ್ಯಾಚ್ಛರೀರಮಪಿ ಕೇವಲಮ್ ॥21॥
ಯಾವುದೇ ರೀತಿಯ ಸಂಧಾನಯತ್ನವು ಅಸಂಭವವಾದಾಗ, ರಾಜ್ಯದಲ್ಲಿ ಸಾಮಾದಿಗಳಲ್ಲಿ ಮುಖ್ಯವಾದ ದಂಡದಿಂದಲೇ ಶರಣು ಹೊಂದಬೇಕು. ಅಂದರೆ ಯುದ್ಧವನ್ನೇ ಮಾಡಬೇಕು. ಈ ಕ್ರಮದಿಂದ ಮೋಕ್ಷವೇ ಆಗುವುದು. ಈ ಶರೀರವಾದರೂ ನಶ್ವರವಾಗಿದೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್

ಆಶ್ರಮವಾಸಿಕಪರ್ವಣಿ ರಾಜನೀತೌ ಏಕಾದಶೋऽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಏಕಾದಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿಯಿತು.
* * * * *
ಹನ್ನೆರಡನೆಯ ಅಧ್ಯಾಯ
ಧೃತರಾಷ್ಟ್ರನಿಂದ ಯುಧಿಷ್ಠಿರನಿಗೆ ರಾಜನೀತಿಯ ಉಪದೇಶ.
ಧೃತರಾಷ್ಟ್ರಃ
ಸಂಧಿವಿಗ್ರಹಮಪ್ಯತ್ರ ಪಶ್ಯೇಥಾ ರಾಜಸತ್ತಮ |
ದ್ವಿಯೋನಿಂ ತ್ರಿವಿಧೋಪಾಯಂ ಬಹುಕಲ್ಪಂ ಯುಧಿಷ್ಠಿರ ॥1॥
ಧೃತರಾಷ್ಟ್ರ ಹೇ ರಾಜಸತ್ತಮನಾದ ಯುಧಿಷ್ಠಿರನೇ, ಈ ರಾಜಧರ್ಮದಲ್ಲಿ ಸಂಧಿ ಹಾಗೂ ವಿರೋಧ ಈ ಎರಡೂ ಕೂಡ ಎರಡು ರೀತಿಯ ಕಾರಣಗಳಿಂದ ಉಂಟಾಗುತ್ತದೆ ಹಾಗೂ ಮೂರು ರೀತಿಯ ಉಪಾಯಗಳಿಂದ ಕೂಡಿರುತ್ತದೆ. ಅಲ್ಲದೇ ನಾನಾ ರೀತಿಯ ಪ್ರಕಾರಗಳನ್ನು ಒಳಗೊಂಡಿರುತ್ತದೆ. ಇವೆಲ್ಲವನ್ನೂ ನೀನು ತಿಳಿದುಕೊಳ್ಳಬೇಕು.
ವ್ಯಾಖ್ಯಾನ ವಿಶೇಷ ದ್ವಿಯೋನಿ - ಎರಡು ರೀತಿಯಾದ ಕಾರಣವುಳ್ಳದ್ದು. ಸಂಧಿಗೆ ಕಾರಣ ತಾನು ದುರ್ಬಲನಾಗಿರುವುದು, ಶತ್ರುವು ಪ್ರಬಲನಾಗಿರುವುದು ಇವೆರಡು. ಯುದ್ಧಕ್ಕೆ ಕಾರಣ ತಾನು ಪ್ರಬಲನಾಗಿದ್ದು, ಶತ್ರುವು ದುರ್ಬಲನಾಗಿರುವುದು ಇವೆರಡು. ತ್ರಿವಿಧೋಪಾಯಂ ಎಂದರೆ ಮೂರು ರೀತಿಯ ಉಪಾಯಗಳಿಂದ ಕೂಡಿದ್ದು. ಸಂಧಿಯಾಗಬೇಕಾದರೆ ಸಾಮವಚನ, ಕೇಳಿದ ದ್ರವ್ಯವನ್ನು ಕೊಡುವುದು ಹಾಗೂ ಸಂಬಂಧವನ್ನು ಉಂಟುಮಾಡಿಕೊಳ್ಳುವುದು. ಯುದ್ಧಕ್ಕೆ ಮೂರು ರೀತಿಯ ಉಪಾಯ- ಯುದ್ಧಕ್ಕೆ ಹೊರಡುವುದು, ಕಾಲದ ಪ್ರತೀಕ್ಷೆ ಮಾಡಿಕೊಂಡು ಇದ್ದಲ್ಲೇ ಇರುವುದು, ಅಸ್ತ್ರ-ಶಸತ್ರದಿಗಳಿಂದ ದಂಡನೆ ನೀಡುವುದು ಹೀಗೆ ಮೂರು ಉಪಾಯಗಳು.
ರಾಜೇಂದ್ರ ಪರ್ಯುಪಾಸೀಥಾ ನೀತ್ವಾ ದ್ವಿವಿಧಮಾತ್ಮನಾ |
ತುಷ್ಟಪುಷ್ಟಬಲಂ ಶತ್ರುಮ್ ಅರ್ಥವಾನಿತಿ ಚ ಸ್ಮರೇತ್ ॥2॥
ಪರ್ಯುಪಾಸನಕಾಲೇ ತು ವಿಪರೀತಂ ವಿಧೀಯತೇ |
ಆಮರ್ದಕಾಲೇ ರಾಜೇಂದ್ರ ವ್ಯವಸಾಯಸ್ತತೋऽಪರಃ ॥3॥
ಹೇ ರಾಜೇಂದ್ರನೇ, ತನ್ನಿಂದ ನಡೆಸಲ್ಪಡಬೇಕಾದ ಎರಡಂಶವನ್ನೂ ಚೆನ್ನಾಗಿ ತಿಳಿದು ಪರರಾಜನೊಂದಿಗೆ ವ್ಯವಹರಿಸಬೇಕು. ಪರರು ತನ್ನೊಡನೆ ಶತ್ರುವಾಗಿಯೇ ಇರಲು ಬಯಸುವವನಾದರೆ ಅವನು ಪರಿಪುಷ್ಟವಾದ, ಸಂತುಷ್ಟವಾದ ಸೈನ್ಯಬಲವುಳ್ಳವನೆಂದೂ, ಹಾಗೆಯೇ ಬೇಕಾದಷ್ಟು ಸಂಪತ್ತುಳ್ಳವನೆಂದೂ ಚಿಂತಿಸಬೇಕು. ಪರರಾಜನನ್ನೇ ಸಂಧ್ಯಾದಿಗಳಿಂದ ಅನುಸರಿಸಿಕೊಂಡು ಹೋಗುವ ಸಂದರ್ಭ ಬಂದಾಗ ಅವನನ್ನು ಅನುಸರಿಸುವ ಕಾಲದಲ್ಲೇ ಅವನ ತುಷ್ಟಪುಷ್ಟವಾದ ಬಲವನ್ನೂ, ಅವನ ಸಂಪತ್ತನ್ನೂ ಕಡಿಮೆಗೊಳಿಸಲು ಪ್ರಯತ್ನಿಸಬೇಕು. ಹೀಗೆ ಅವನು ಬಲವನ್ನೂ, ಸಂಪತ್ತನ್ನೂ ಕಳೆದುಕೊಂಡ ಸಂದರ್ಭದಲ್ಲಿ ಅವನನ್ನು ಮರ್ದಿಸುವ ಕಾಲ ಬಂದಾಗ ಹೇ ರಾಜೇಂದ್ರನೇ, ಬೇರೆ ರೀತಿಯ ಪ್ರಯತ್ನವನ್ನೂ ಮಾಡಬೇಕು.
ವಮನಂ ಭೇದನಂ ಚೈವ ಶತ್ರೂಣಾಂ ಕಾರಯೇತ್ ತತಃ |
ಕರ್ಷಣಂ ಭೀಷಣಂ ಚೈವ ಯುದ್ಧೇ ಚೈವ ಬಹುಕ್ಷಯಮ್ ॥4॥
ಅನಂತರ ಶತ್ರುಗಳಿಗೆ ಪೀಡನೆಯನ್ನೂ, ಅವರ ಮತ್ತು ಅವರ ಮಿತ್ರರ ಜೊತೆಗಿರುವ ಸ್ನೇಹದ ಭೇದನವನ್ನೂ, ಅವರಲ್ಲಿರುವ ಸಂಪತ್ತುಗಳ ಅಪಹಾರವನ್ನೂ ಹಾಗೆಯೇ ನಮ್ಮ ಕುರಿತು ಅವರಲ್ಲಿ ಭಯಹುಟ್ಟಿಸುವಿಕೆಯನ್ನೂ ಅಲ್ಲದೇ ಯುದ್ಧದ ಮೂಲಕ ಅವರಿಗೆ ಬಹುವಾದ ನಷ್ಟವನ್ನೂ ಮಾಡಬೇಕು.
ಪ್ರಯಾಸ್ಯಮಾನಸ್ತು ನೃಪಃ ತ್ರಿವಿಧಂ ಪರಿಚಿಂತಯೇತ್ |
ಆತ್ಮನಶ್ಚೈವ ಶತ್ರೋಶ್ಚ ಶಕ್ತಿಂ ಶಾಸ್ತ್ರವಿಶಾರದಃ ॥5॥
ಶಾಸ್ತ್ರವಿಶಾರದನಾದ ರಾಜನು ಯುದ್ಧಕ್ಕಾಗಿ ಹೊರಡುವುದಿದ್ದರೆ ತನ್ನ ಮತ್ತು ಶತ್ರುವಿನ ಮೂರು ರೀತಿಯ ಶಕ್ತಿಗಳನ್ನು ಸರಿಯಾಗಿ ಪರಿಶೀಲಿಸಬೇಕು.
ಉತ್ಸಾಹಪ್ರಭುಶಕ್ತಿಭ್ಯಾಂ ಮಂತ್ರಶಕ್ತ್ಯಾ ಚ ಭಾರತ |
ಉಪಪನ್ನೋ ನೃಪೋ ಯಾಯಾದ್ ವಿಪರೀತಮತೋऽನ್ಯಥಾ ॥6॥
ಹೇ ಭಾರತನೇ, ಉತ್ಸಾಹಶಕ್ತಿ, ಪ್ರಭುಶಕ್ತಿ ಹಾಗೂ ಮಂತ್ರಶಕ್ತಿ - ಈ ಮೂರು ಶಕ್ತಿಗಳಿಂದ ಕೂಡಿಕೊಂಡ ರಾಜನೇ ಯುದ್ಧಕ್ಕೆ ಹೊರಡಬೇಕು. ಇವುಗಳಿಲ್ಲವಾದರೆ ಯುದ್ಧಕ್ಕೆ ಹೊರಡಲೇ ಬಾರದು.
ಆದದೀತ ಬಲಂ ರಾಜಾ ಮೌಲಂ ಮಿತ್ರಬಲಂ ತಥಾ |
ಅಟವೀಬಲಂ ಭೃತಂ ಚೈವ ತಥಾ ಶ್ರೇಣೀಬಲಂ ಚ ಯತ್ ॥7॥
ರಾಜನಾದವನು ಮೂಲಧನವಾದ ಧನಬಲವನ್ನೂ, ಮಿತ್ರರ ಬಲವನ್ನೂ, ಅರಣ್ಯದ ಬಲವನ್ನೂ, ವೇತನ ನೀಡುವುದರ ಮೂಲಕ ರಕ್ಷಿತವಾದ ಸೈನ್ಯ ಬಲವನ್ನೂ ಹಾಗೆಯೇ ಬೇರೆ ಬೇರೆ ಗ್ರಾಮಗಳಲ್ಲಿರುವ ಅವಾಂತರಸೈನ್ಯಬಲವನ್ನೂ ಸಂಗ್ರಹಿಸಿಕೊಳ್ಳಬೇಕು.
ಮಿತ್ರಾಮಿತ್ರಬಲಂ ರಾಜನ್ ಯಾಯಾದ್ ವೃದ್ಧ್ಯುದಯೇ ಧೃತಃ |
ತತ್ರ ಮಿತ್ರಬಲಂ ರಾಜನ್ ಮೌಲೇನ ಚ ವಿಶಿಷ್ಯತೇ |
ಶ್ರೇಣೀಬಲಂ ಭೃತಂ ಚೈವ ತುಲ್ಯ ಏವೇತಿ ಮೇ ಮತಿಃ ॥8॥
ಹೇ ರಾಜನೇ, ಸಂಪತ್ತಿನ ವೃದ್ಧಿಯು ಪ್ರಾಪ್ತವಾದಾಗ ನಿಶ್ಚಯವಾಗಿಯೂ ತನಗೆ ಈಗಾಗಲೇ ಮಿತ್ರರಾಗಿರುವ ರಾಜರ ಮಿತ್ರರ ಸೈನ್ಯವನ್ನೂ ಹೊಂದಬೇಕು. ಈ ಹಿಂದೆ ಹೇಳಿದ ಬಲಗಳಲ್ಲಿ ಮಿತ್ರಬಲವು ಧನಬಲಕ್ಕಿಂತಲೂ ವಿಶಿಷ್ಟವಾಗಿದೆ. ಹೇ ರಾಜನೇ, ಅದೇ

ರೀತಿ ಗ್ರಾಮೀಣ ಸೈನ್ಯಗಳ ಬಲವೂ, ವೇತನದಿಂದ ರಕ್ಷಿತವಾದ ಸೈನ್ಯಬಲವೂ ಸಮಾನವಾಗಿವೆ ಎಂದು ನನ್ನ ಅಭಿಪ್ರಾಯ.
ಚೋರಾಟವಿಬಲಂ ಚೈವ ಪರಸ್ಪರಬಲಂ ನೃಪ |
ವಿಜ್ಞೇಯಂ ಬಲಕಾಲೇಷು ರಾಜ್ಞಾ ಕಾಲ ಉಪಸ್ಥಿತೇ ॥9॥
ಚೋರಬಲ ಹಾಗೂ ಅರಣ್ಯಬಲಗಳು ಪರಸ್ಪರ ಬಲವನ್ನು ಪಡೆದುಕೊಂಡಿವೆ. ಹೇ ರಾಜನೇ, ಯುದ್ಧಕಾಲವು ಸಮೀಪಿಸಿದಾಗ ಬಲವನ್ನು ಒಗ್ಗೂಡಿಸುವ ಸಂದರ್ಭದಲ್ಲಿ ಇವೆಲ್ಲವನ್ನೂ ರಾಜನು ತಿಳಿದುಕೊಳ್ಳಬೇಕು.
ಆಪದಶ್ಚೈವ ಬೋದ್ಧವ್ಯಾ ಬಹುರೂಪಾ ನರಾಧಿಪ |
ಭವಂತಿ ರಾಜನ್ ಕೌರವ್ಯ ಯಾಸ್ತಾಃ ಪ್ರಥಮತಃ ಶೃಣು ॥10॥
ಹೇ ನರಾಧಿಪನಾದ ಕೌರವ್ಯನೇ, ರಾಜನೇ, ಆಪತ್ತುಗಳು ಬಹುರೂಪವಾಗಿವೆ. ಯಾವೆಲ್ಲ ಆಪತ್ತುಗಳು ಬರಬಹುದೋ ಅವೆಲ್ಲವನ್ನೂ ಮೊದಲಾಗಿ ಕೇಳಿ ತಿಳಿದುಕೊಳ್ಳಬೇಕು.
ವಿಕಲ್ಪಾ ಬಹವೋ ರಾಜನ್ನಾಪದಾಂ ಪಾಂಡುನಂದನ |
ಸಾಮಾದಿಭಿರುಪನ್ಯಸ್ಯ ಗಮಯೇತ್ ತಾನ್ ನೃಪಃ ಸದಾ ॥11॥
ಹೇ ಪಾಂಡುನಂದನನಾದ ರಾಜನೇ, ಆಪತ್ತುಗಳಿಗೆ ನಾನಾ ರೀತಿಯ ಪರಿಹಾರೋಪಾಯಗಳಿವೆ. ಅವೆಲ್ಲವನ್ನೂ ರಾಜನಾದವನು ಯಾವಾಗಲೂ ಸಾಮವೇ ಮೊದಲಾದ ಉಪಾಯಗಳಿಂದ ಹೋಗಲಾಡಿಸಬೇಕು.
ಯಾತ್ರಾಂ ಯಾಯಾದ್ ಬಲೈರ್ಯುಕ್ತೋ ರಾಜಾ ಷಡ್ಭಿಃ ಪರಂತಪ |
ಸಂಯುಕ್ತೋ ದೇಶಕಾಲಾಭ್ಯಾಂ ಬಲೈರಾತ್ಮಗುಣೈಸ್ತಥಾ ॥12॥
ಹೇ ಪರಂತಪನೇ, ರಾಜನಾದವನು ಆರು ರೀತಿಯ ಬಲಗಳಿಂದ ಕೂಡಿಕೊಂಡು ಸರಿಯಾದ ದೇಶ ಹಾಗೂ ಕಾಲಗಳಿಂದ ಕೂಡಿಕೊಂಡವನಾಗಿ, ತನ್ನಂತೆಯೇ ಹೋರಾಡುವ ಗುಣವುಳ್ಳ ಸೈನಿಕರಿಂದಲೂ ಕೂಡಿಕೊಂಡು ಯುದ್ಧಕ್ಕಾಗಿ ಹೊರಡಬೇಕು.
ವ್ಯಾಖ್ಯಾನ ವಿಶೇಷ ಆರು ರೀತಿಯ ಬಲಗಳು ಎಂದರೆ ಹಸ್ತಿಬಲ, ಅಶ್ವಬಲ, ರಥಬಲ, ಪದಾತಿ ಬಲ, ಧನಬಲ ಹಾಗೂ ಬುದ್ಧಿ ಬಲ.
ತುಷ್ಟಪುಷ್ಟಬಲೋ ರಾಜಾ ಯಾಯಾದ್ ವೃದ್ಧ್ಯುದಯೇ ಧೃತಃ |
ಆಹೂತಶ್ಚಾಪ್ಯಥೋ ಯಾಯಾದ್ ಅಮೃತಾದಪಿ ಪಾರ್ಥಿವ ॥13॥
ಹೇ ಪಾರ್ಥಿವನೇ, ರಾಜನಾದವನು ಬಹುಮಾನಾದಿಗಳಿಂದ ತುಷ್ಟರಾದ, ದೈಹಿಕವಾಗಿ ಪುಷ್ಟರಾದ ಸೈನ್ಯವುಳ್ಳವನಾಗಿದ್ದು, ಅಗತ್ಯವಾದ ಎಲ್ಲ ಸಂಪತ್ತುಗಳೂ ಬಹಳವಾಗಿ ಪ್ರಾಪ್ತಿಯಾಗಿದ್ದಾಗ ಯುದ್ಧವನ್ನು ನಿಶ್ಚಯಿಸಿ ಹೊರಡಬೇಕು. ಆದರೆ ಶತ್ರುರಾಜರು ಯುದ್ಧಕ್ಕೋಸ್ಕರ ಆಹ್ವಾನಿಸಿದ್ದರೆ ಯಾವ ವಿಷಯವನ್ನೂ ಗಮನಿಸದೆ ಅಮೃತಸದೃಶವಾದ ಭೋಜನವನ್ನು ಬಿಟ್ಟಾದರೂ ಯುದ್ಧಕ್ಕೆ ಹೊರಡಬೇಕು.
ಸುಬಂಧಿನೀಂ ವಾಜಿರಥಪ್ರಧಾನೋ
ಮಹಾವೃಕ್ಷಾಂ ಸಂವೃತಃ ಕೂಲರೋಧಾಮ್ |
ಪದಾತಿನಾಗೈರ್ಬಹುಕರ್ದಮಾಂ ಚ
ಸ್ಥೂಲಶ್ಮಕಾಂ ತೋಯವತೀಂ ಚ ಯಾಯಾತ್ ॥14॥
ಮಾರ್ಗಮಧ್ಯದಲ್ಲಿ ದೊಡ್ಡ ದೊಡ್ಡ ವೃಕ್ಷಗಳಿಂದ ಕೂಡಿದ ತೀರಗಳುಳ್ಳ, ಬಹಳ ಕೆಸರಿನಿಂದ ಕೂಡಿದ ಅಥವಾ ದೊಡ್ಡ ದೊಡ್ಡ ಕಲ್ಲುಗಳಿಂದ ಕೂಡಿದ ನದಿಯು ಸಿಕ್ಕರೆ ಆ ನದಿಯನ್ನು ತಾತ್ಕಾಲಿಕವಾಗಿ ಉತ್ತಮವಾದ ಸೇತುವೆಯನ್ನು ನಿರ್ಮಿಸಿಯಾಗಲಿ, ವಾಯುವೇಗದಿಂದ ಹೋಗುವ ಕುದುರೆಯನ್ನು ಕಟ್ಟಿದ ರಥದಲ್ಲಾಗಲಿ, ಕಾಲಾಳುಗಳು, ಆನೆಗಳು, ಅಶ್ವಗಳು ಇವುಗಳಿಂದ ಕೂಡಿಯಾಗಲಿ, ಸಂದರ್ಭಾನುಸಾರವಾಗಿ ಗಮನಿಸಿಕೊಂಡು ದಾಟಿ ಮುಂದೆ ಹೋಗಬೇಕು.
ಯಥೋಪಪತ್ತ್ಯಾ ಶಕಟಂ ವಜ್ರಂ ಚಕ್ರಂ ಚ ಭಾರತ |
ಉಶನಾ ವೇದ ಯಚ್ಛಾಸ್ತ್ರಂ ತತ್ರೈತದ್ವಿಹಿತಂ ವಿಭೋ ॥15॥
ಹೇ ಭಾರತನೇ, ವಿಭುವೇ, ಅವಶ್ಯಕತೆಗೆ ಅನುಸಾರವಾಗಿ ಶಕಟವ್ಯೂಹವನ್ನಾಗಲಿ, ವಜ್ರವ್ಯೂಹವನ್ನಾಗಲಿ, ಚಕ್ರವ್ಯೂಹವನ್ನಾಗಲಿ ರಚಿಸಿ ಯುದ್ಧ ಮಾಡಬೇಕು. ಯಾವ ಯುದ್ಧ ನೀತಿಯನ್ನು ಶುಕ್ರನು ತಿಳಿಸಿಕೊಟ್ಟಿದ್ದಾನೋ ಆ ಶುಕ್ರನೀತಿ ಶಾಸ್ತ್ರದಲ್ಲಿ ಇದನ್ನು ಸರಿಯಾಗಿ ವಿವರಿಸಿದ್ದಾರೆ.
ಸಾಧಯಿತ್ವಾ ಪರಬಲಂ ಕೃತ್ವಾ ಚ ಬಲಕರ್ಷಣಮ್ |
ಸ್ವಭೂಮೌ ಯೋಜಯೇದ್ ಯುದ್ಧಂ ಪರಭೂಮೌ ತಥೈವ ಚ ॥16॥
ತನ್ನ ಸೈನ್ಯವನ್ನು ಉತ್ಕೃಷ್ಟವಾದ ರೀತಿಯಲ್ಲಿ ಸಿದ್ಧಪಡಿಸಿಕೊಂಡು ಹಣ ಮೊದಲಾದ ಆಮಿಷಗಳಿಂದ ಶತ್ರುಸೈನಿಕರನ್ನು ಆಕರ್ಷಿಸುವ ಮೂಲಕ ಅವರ ಬಲವನ್ನು ಕ್ಷಯಿಸುವಂತೆ ಮಾಡಿ ತನ್ನ ಭೂಮಿಯಲ್ಲಾಗಲಿ, ಪರರ ಭೂಮಿಯಲ್ಲಾಗಲಿ ಯುದ್ಧವನ್ನು ಆಯೋಜಿಸಬೇಕು.
ಬಲಂ ಪ್ರಶಮಯೇದ್ ರಾಜಾ ನಿಕ್ಷಿಪೇದ್ ಧನಿನೋ ನರಾನ್ |
ಜ್ಞಾತ್ವಾ ಸುವಿಷಯಂ ತಂ ಚ ಸಾಮಾದಿಭಿರುಪಕ್ರಮೇತ್ ॥17॥
ಯುದ್ಧಕ್ಕೆ ನಿಂತಿರುವ ಸಂದರ್ಭದಲ್ಲೂ ರಾಜನು ಪರರ ಬಲವನ್ನು ಹಣ ಮೊದಲಾದವುಗಳನ್ನು ನೀಡುವ ಮೂಲಕ ಕೋಪಬಾರದಂತೆ ಸಮಾಧಾನ ಪಡಿಸಬೇಕು. ಅದಕ್ಕೋಸ್ಕರವೇ ಸಿರಿವಂತರಾದ ಮನುಷ್ಯರನ್ನು ಅಲ್ಲಿ ಇರಿಸಿಕೊಳ್ಳಬೇಕು. ಹೀಗೆ ಪರಬಲವು ಭೋಗಾದಿಗಳಿಂದ ಪ್ರಸನ್ನತೆಯನ್ನು ಪಡೆದಿದ್ದನ್ನು ತಿಳಿದು ಸಾಮ ಮೊದಲಾದ ಉಪಾಯಗಳಿಂದ ಅವರ ಜೊತೆ ವ್ಯವಹರಿಸಬೇಕು.
ಸರ್ವಮೇತನ್ಮಹಾರಾಜ ಶರೀರಂ ಧಾರಯೇದಿಹ |
ಪ್ರೇತ್ಯೈವ ಚೇಹ ಕರ್ತವ್ಯಮಾತ್ಮನಿಃಶ್ರೇಯಸಂ ಪರಮ್ ॥18॥

ಹೇ ಮಹಾರಾಜನೇ, ಈ ಸಂಧಾನಾದಿ ಎಲ್ಲವೂ ಕೂಡ ಈ ಲೋಕದಲ್ಲಿ ಶರೀರವನ್ನು ಸರಿಯಾಗಿ ಧಾರಣೆ ಮಾಡುವುದಕ್ಕಾಗಿಯೇ ಇದೆ. ಏಕೆಂದರೆ ಪರಲೋಕದಲ್ಲೂ, ಇಲ್ಲೂ ಆತ್ಮನಿಗೆ ಮಂಗಳವಾಗಬೇಕಾದರೆ ಉತ್ತಮವಾದುದನ್ನು ಇಲ್ಲೇ ಮಾಡಬೇಕು.
ಏವಂ ಕುರ್ವನ್ ಶುಭಾಚಾರೋ ಲೋಕೇಽಸ್ಮಿನ್ ಶೃಣುತೇ ನೃಪ |
ಪ್ರೇತ್ಯ ಸ್ವರ್ಗಂ ತಥಾಽಽಪ್ನೋತಿ ಪ್ರಜಾ ಧರ್ಮೇಣ ಪಾಲಯನ್ ॥19॥
ಹೇ ನೃಪನೇ, ಈ ರೀತಿ ವ್ಯವಹಾರಗಳನ್ನು ನಡೆಸುತ್ತಾ ಉತ್ತಮವಾದ ಆಚಾರವುಳ್ಳವನಾಗಿ ಪ್ರಜೆಗಳನ್ನು ಧರ್ಮದಿಂದ ರಕ್ಷಿಸುತ್ತಿದ್ದರೆ ಈ ಲೋಕದಲ್ಲಿ ಒಳ್ಳೆಯದನ್ನೇ ಕೇಳುತ್ತಾನೆ. ಹಾಗೆಯೇ ಪರಲೋಕದಲ್ಲಿ ಸ್ವರ್ಗವನ್ನೂ ರಾಜನು ಪಡೆಯುತ್ತಾನೆ.
ಏವಂ ತ್ವಯಾ ಕುರುಶ್ರೇಷ್ಠ ವರ್ತಿತವ್ಯಂ ಪ್ರಜಾಸು ವೈ |
ಉಭಯೋರ್ಲೋಕಯೋಸ್ತಾತ ಪ್ರಾಪ್ತಯೇ ನಿತ್ಯಮೇವ ಚ ॥20॥
ಮಗು ಕುರುಶ್ರೇಷ್ಠನೇ, ಉಭಯ ಲೋಕಗಳ ಪ್ರಾಪ್ತಿಗಾಗಿ ನೀನು ನಿತ್ಯವೂ ಇದೇ ರೀತಿಯಾಗಿ ಪ್ರಜೆಗಳ ವಿಷಯದಲ್ಲಿ ವರ್ತಿಸಬೇಕು.
ಭೀಷ್ಮೇಣ ಪೂರ್ವಮುಕ್ತೋಽಸಿ ಕೃಷ್ಣೇನ ವಿದುರೇಣ ಚ |
ಮಯಾಽಪ್ಯವಶ್ಯಂ ವಕ್ತವ್ಯಂ ಪ್ರೀತ್ಯಾ ಸ್ನೇಹೇನ ಚಾಭಿಭೋ ॥21॥
ಹೇ ಶತ್ರುಗಳನ್ನು ಸೋಲಿಸುವವನೇ, ಈ ಮೊದಲೇ ಭೀಷ್ಮರಿಂದ ನೀನು ಉಪದಿಷ್ಟನಾಗಿರುವೆ. ಹಾಗೆಯೇ ಕೃಷ್ಣನಿಂದಲೂ, ವಿದುರನಿಂದಲೂ ನೀತಿಯ ಉಪದೇಶಗಳನ್ನು ಪಡೆದಿರುವೆ. ಹೀಗಿದ್ದರೂ ನಿನ್ನ ಮೇಲಿನ ಪ್ರೀತಿಯಿಂದ ಹಾಗೂ ಸ್ನೇಹದಿಂದ ನನ್ನಿಂದ ಹೇಳಲೇಬೇಕಾದ ವಿಷಯಗಳು ಹೇಳಲ್ಪಟ್ಟಿವೆ.
ಏತತ್ಸರ್ವಂ ಯಥಾನ್ಯಾಯಂ ಕುರ್ವೀಥಾ ಭೂರಿದಕ್ಷಿಣಃ |
ಪ್ರಿಯಂ ಪ್ರಜಾನಾಂ ಧರ್ಮಜ್ಞ ಸ್ವರ್ಗಂ ಸುಖಮವಾಪ್ಸ್ಯಸಿ ॥22॥
ಹೇ ಧರ್ಮಜ್ಞನೇ, ಇಲ್ಲಿ ಹೇಳಿದ ಎಲ್ಲವನ್ನೂ ನ್ಯಾಯಕ್ಕೆ ಅನುಸಾರವಾಗಿ ಬಹಳವಾದ ಸರಳತೆಯುಳ್ಳವನಾಗಿ ತಿಳಿದುಕೊಂಡು ಪ್ರಜೆಗಳಿಗೆ ಪ್ರಿಯವನ್ನು ಉಂಟು ಮಾಡು. ಇದರಿಂದ ಪರಲೋಕದಲ್ಲಿ ಸ್ವರ್ಗವನ್ನೂ, ಇಲ್ಲಿ ಸುಖವನ್ನೂ ಪಡೆಯುವೆ.
ಅಶ್ವಮೇಧಸಹಸ್ರೇಣ ಯೋ ಯಜೇತ್ ಪೃಥಿವೀಪತಿಃ |
ಪಾಲಯೇದ್ವಾಽಪಿ ಧರ್ಮೇಣ ಪ್ರಜಾಸ್ತುಲ್ಯಂ ಫಲಂ ಭವೇತ್ ॥23॥
ಯಾವ ರಾಜನು ಸಾವಿರ ಬಾರಿ ಅಶ್ವಮೇಧಯಾಗವನ್ನು ನಡೆಸುವನೋ ಅಥವಾ ಧರ್ಮಮಾರ್ಗದಲ್ಲಿ ಪ್ರಜೆಗಳನ್ನು ಪಾಲಿಸುವನೋ ಇವೆರಡಕ್ಕೂ ಸಮಾನವಾದ ಫಲವು ಲಭಿಸುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರವಚನಂ ನಾಮ ದ್ವಾದಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ದ್ವಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿಯಿತು.
* * * * *
ಹದಿಮೂರನೆಯ ಅಧ್ಯಾಯ
ಧೃತರಾಷ್ಟ್ರನು ಯುಧಿಷ್ಠಿರನ ಮೂಲಕ ಎಲ್ಲ ಜನರನ್ನೂ ಕರೆಯಿಸಿ, ತಾನು ಕಾಡಿಗೆ ತೆರಳುವುದಾಗಿ ನಿವೇದಿಸುತ್ತಾ ಅವರಲ್ಲಿ ಒಪ್ಪಿಗೆಯನ್ನು ಯಾಚಿಸುವುದು.
ಯುಧಿಷ್ಠಿರಃ
ಏವಮೇತತ್ ಕರಿಷ್ಯಾಮಿ ಯಥಾಽಽತ್ಥ ಪೃಥಿವೀಪತೇ |
ಭೂಯಶ್ಚೈವಾನುಶಾಸ್ಯೋಽಹಂ ಭವತಾ ಪಾರ್ಥಿವರ್ಷಭ ॥1॥
ಯುಧಿಷ್ಠಿರ ಹೇ ಪೃಥಿವೀಪತಿಯೇ, ನೀನು ಹೇಗೆ ಹೇಳುವೆಯೋ ಅದೇ ರೀತಿ ಎಲ್ಲವನ್ನೂ ನಡೆಸುವೆ. ಹೇ ಪಾರ್ಥಿವಶ್ರೇಷ್ಠನೇ, ನಾನು ನಿನ್ನಿಂದ ಮತ್ತೂ ಕೂಡ ಉಪದೇಶವನ್ನು ಪಡೆಯಲು ಯೋಗ್ಯನಾಗಿದ್ದೇನೆ.
ಭೀಷ್ಮೇ ಸ್ವರ್ಗಮನುಪ್ರಾಪ್ತೇ ಗತೇ ಚ ಮಧುಸೂದನೇ |
ವಿದುರೇ ಸಂಜಯೇ ಚೈವ ಕೋಽನ್ಯೋ ಮಾಂ ವಕ್ತುಮರ್ಹತಿ ॥2॥
ಯಸ್ತು ಮಾಮನುಶಾಸ್ತ್ಯೇವಂ ಭವಾನದ್ಯ ಹಿತೇ ಸ್ಥಿತಃ |
ಕರ್ತಾಸ್ಮಿ ತನ್ಮಹೀಪಾಲ ನಿರ್ವೃತೋ ಭವ ಭಾರತ ॥3॥
ಹೇ ಭಾರತನೇ, ಮಹೀಪಾಲನೇ, ಭೀಷ್ಮರು ಸ್ವರ್ಗಕ್ಕೆ ತೆರಳಿದ ನಂತರ, ಶ್ರೀಕೃಷ್ಣನು ದ್ವಾರಕೆಗೆ ಹೋದಮೇಲೆ, ವಿದುರ ಹಾಗೂ ಸಂಜಯರು ನಿನ್ನ ಜೊತೆಗೇ ಸದಾ ಇರುವಾಗ ಬೇರೆ ಯಾರು ತಾನೇ ನನಗೆ ಹೇಳಿಯಾರು? ಯಾರು ನನಗೆ ಉಪದೇಶವನ್ನು ನೀಡುತ್ತಿರುವಿರೋ ಅಂತಹ ನೀವೂ ಕೂಡ ನನ್ನ ಹಿತಕ್ಕಾಗಿಯೇ ಉಪದೇಶ ನೀಡುತ್ತಿರುವಿರಿ. ಆದ್ದರಿಂದ ಅವೆಲ್ಲವನ್ನೂ ನಾನು ನಡೆಸುತ್ತೇನೆ. ನೀನು ಸಂತೋಷವಾಗಿರು.
ವೈಶಂಪಾಯನಃ
ಏವಮುಕ್ತಃ ಸ ರಾಜರ್ಷಿರ್ಧರ್ಮರಾಜೇನ ಭಾರತ |
ಕೌಂತೇಯಂ ಸಮನುಜ್ಞಾತುಮಿಯೇಷ ಭರತರ್ಷಭ ॥4॥
ವೈಶಂಪಾಯನ ಹೇ ಭರತಶ್ರೇಷ್ಠನಾದ ಭಾರತನೇ, ಧರ್ಮರಾಜನಿಂದ ಈ ರೀತಿ ಹೇಳಲ್ಪಟ್ಟ ಆ ರಾಜರ್ಷಿಯಾದ ಧೃತರಾಷ್ಟ್ರನು ಕೌಂತೇಯನನ್ನು ಮನೆಗೆ ತೆರಳಲು ಅಪ್ಪಣೆ ಕೊಡಲು ಬಯಸಿದನು.
ಧೃತರಾಷ್ಟ್ರಃ
ಪುತ್ರ ವಿಶ್ರಮ್ಯತಾಂ ತಾವನ್ಮಮಾಪಿ ಬಲವಾನ್ ಶ್ರಮಃ ॥5॥

ಧೃತರಾಷ್ಟ್ರ ಮಗನೇ, ಮನೆಗೆ ತೆರಳಿ ವಿಶ್ರಾಂತಿ ತೆಗೆದುಕೊ. ನನಗೂ ಬಹಳವಾಗಿ ಆಯಾಸವಾಗಿದೆ.
ವೈಶಂಪಾಯನಃ
ಇತ್ಯುಕತ್ತ್ವ ಪ್ರಾವಿಶದ್ ರಾಜಾ ಗಾಂಧಾರ್ಯಾ ಭವನಂ ತದಾ ॥6॥
ವೈಶಂಪಾಯನ ಇಷ್ಟು ಹೇಳಿ ರಾಜನಾದ ಧೃತರಾಷ್ಟ್ರನು ಆಗ ಗಾಂಧಾರಿಯ ಭವನವನ್ನು ಪ್ರವೇಶಿಸಿದನು.
ತಮಾಸನಗತಂ ದೇವೀ ಗಾಂಧಾರೀ ಧರ್ಮಚಾರಿಣೀ |
ಉವಾಚ ಕಾಲೇ ಕಾಲಜ್ಞಾ ಪ್ರಜಾಪತಿಸಮಂ ಪತಿಮ್ ॥7॥
ಸದಾ ಧರ್ಮನಿಷ್ಠಳಾಗಿರುವ, ಯಾವ ಕಾಲದಲ್ಲಿ ಏನು ಮಾಡಬೇಕೆಂದು ಸರಿಯಾಗಿ ತಿಳಿದಿರುವ ಗಾಂಧಾರೀ ದೇವಿಯು ಆಸನದಲ್ಲಿ ಕುಳಿತಿರುವ ಪ್ರಜಾಪತಿಗೆ ಸದೃಶನಾದ ತನ್ನ ಪತಿಯನ್ನು ಕುರಿತು ಯೋಗ್ಯವಾದ ಕಾಲದಲ್ಲಿ ಹೀಗೆ ಹೇಳಿದಳು.
ಗಾಂಧಾರೀ
ಅನುಜ್ಞಾತಃ ಸ್ವಯಂ ತೇನ ವ್ಯಾಸೇನಾಪಿ ಮಹರ್ಷಿಣಾ |
ಯುಧಿಷ್ಠಿರಸ್ಯಾನುಮತೇ ಕದಾಽರಣ್ಯಂ ಗಮಿಷ್ಯಸಿ ॥8॥
ಗಾಂಧಾರೀ ಪ್ರಸಿದ್ಧರಾದ ಆ ವ್ಯಾಸ ಮಹರ್ಷಿಗಳಿಂದಲೇ ಸ್ವತಃ ಅನುಜ್ಞೆಯನ್ನು ಪಡೆದು ಯುಧಿಷ್ಠಿರನ ಅನುಮತಿಯಂತೆ ಯಾವಾಗ ಕಾಡಿಗೆ ಹೊರಡುವಿ?
ಧೃತರಾಷ್ಟ್ರಃ
ಗಾಂಧಾರ್ಯಹಮನುಜ್ಞಾತಃ ಸ್ವಯಂ ಪಿತ್ರಾ ಮಹಾತ್ಮನಾ |
ಯುಧಿಷ್ಠಿರಸ್ಯಾನುಮತೇರ್ಗಂತಾಸ್ಮಿ ನಚಿರಾದಿವ ॥9॥
ಧೃತರಾಷ್ಟ್ರ ಗಾಂಧಾರಿಯೇ, ಸ್ವತಃ ಮಹಾತ್ಮನಾದ ತಂದೆಯಿಂದಲೇ ಅನುಜ್ಞೆಯನ್ನು ಪಡೆದ ನಾನು ಯುಧಿಷ್ಠಿರನ ಅನುಮತಿಯಂತೆ ತಡಮಾಡದೆ ಹೊರಡಲಿರುವೆ.
ಅಹಂ ತು ತವ ಪುತ್ರಾಣಾಂ ತೇಷಾಂ ದುರ್ದ್ಯೂತದೇವಿನಾಮ್ |
ಸರ್ವೇಷಾಂ ದಾತುಮಿಚ್ಛಾಮಿ ಪ್ರೇತ್ಯಭಾವಾನುಗಂ ವಸು ॥10॥
ಸರ್ವಪ್ರಕೃತಿಸಾನ್ನಿಧ್ಯಂ ಕಾರಯಿತ್ವಾ ಸ್ವವೇಶ್ಮನಿ ॥11॥
ನಾನಾದರೂ ನಿನ್ನ ಪುತ್ರರಾದ, ಆ ಕೆಟ್ಟ ದ್ಯೂತವನ್ನು ಆಡಿರುವ ಎಲ್ಲರಿಗೂ ಪರಲೋಕದಲ್ಲಿ ಸುಖಪ್ರಾಪ್ತಿಗಾಗಿ ನಮ್ಮ ಮನೆಯಲ್ಲಿ ಎಲ್ಲ ಪ್ರಜೆಗಳನ್ನು ಒಟ್ಟು ಸೇರಿಸಿ ಹಣವನ್ನು ದಾನ ಮಾಡಲು ಬಯಸುತ್ತೇನೆ.
ವೈಶಂಪಾಯನಃ
ಇತ್ಯುಕತ್ತ್ವ ಪ್ರೇಷಯಾಮಾಸ ಧರ್ಮರಾಜಾಯ ಪಾರ್ಥಿವ |
ಸ ಚ ತದ್ವಚನಾತ್ ಸರ್ವಂ ಸಮಾನಿನ್ಯೇ ಮಹೀಪತಿಃ ॥12॥
ವೈಶಂಪಾಯನ ಹೇ ಪಾರ್ಥಿವನೇ, ಹೀಗೆ ಹೇಳಿ ಧರ್ಮರಾಜನ ಅವಗಾಹನೆಗಾಗಿ ಜನರನ್ನು ಕಳುಹಿಸಿದನು. ಆ ಮಹೀಪತಿಯಾದ ಧರ್ಮರಾಜನು ಧೃತರಾಷ್ಟ್ರನ ಮಾತಿನಂತೆ ಎಲ್ಲರನ್ನೂ ಒಟ್ಟು ಸೇರಿಸಿದನು.
ತತೋ ನಿಷ್ಕ್ರಮ್ಯ ನೃಪತಿಸ್ತಸ್ಮಾದಂತಃಪುರಾತ್ ತದಾ |
ಸರ್ವಂ ಸುಹೃಜ್ಜನಂ ಚೈವ ಸರ್ವಾಃ ಪ್ರಕೃತಯಸ್ತಥಾ ॥13॥
ಸಮವೇತಾಂಶ್ಚ ತಾನ್ ಸರ್ವಾನ್ ಪೌರಜಾನಪದಾನಥ |
ಬ್ರಾಹ್ಮಣಾಂಶ್ಚ ಮಹೀಪಾಲಾನ್ ನಾನಾದೇಶಸಮಾಗತಾನ್ ॥14॥
ತತಃ ಪ್ರಾಹ ಮಹಾತೇಜಾ ಧೃತರಾಷ್ಟ್ರೋ ಮಹೀಪತಿಃ ॥15॥
ಅನಂತರ ರಾಜನು ಆ ಅಂತಃಪುರದಿಂದ ಹೊರಬಂದು ಅಲ್ಲಿ ನೆರೆದಿರುವ ಎಲ್ಲ ಸ್ನೇಹಿತರನ್ನೂ, ಹಾಗೆಯೇ ಎಲ್ಲಾ ಪ್ರಜೆಗಳನ್ನೂ ಎಲ್ಲ ಪಟ್ಟಣಿಗರನ್ನೂ, ಎಲ್ಲ ಗ್ರಾಮೀಣ ಜನರನ್ನೂ, ಬ್ರಾಹ್ಮಣರನ್ನೂ, ಬೇರೆ ಬೇರೆ ದೇಶಗಳಿಂದ ಬಂದಿರುವ ಬ್ರಾಹ್ಮಣರನ್ನೂ ನೋಡಿದನು. ಅನಂತರ ಮಹಾತೇಜಸ್ವಿಯಾದ ಧೃತರಾಷ್ಟ್ರರಾಜನು ಹೀಗೆ ಹೇಳಿದನು.
ಧೃತರಾಷ್ಟ್ರಃ
ಶೃಣ್ವಂತ್ವೇಕಾಗ್ರಮನಸೋ ಬ್ರಾಹ್ಮಣಾಃ ಕುರುಜಾಂಗಲಾಃ |
ಕ್ಷತ್ರಿಯಾಶ್ಚೈವ ವೈಶ್ಯಾಶ್ಚ ಶೂದ್ರಾಶ್ಚೈವ ಸಮಾಗತಾಃ ॥16॥
ಧೃತರಾಷ್ಟ್ರ ಹೇ ಕುರುಜಾಂಗಲಪ್ರದೇಶದ ಬ್ರಾಹ್ಮಣರೇ, ಕ್ಷತ್ರಿಯರೇ, ವೈಶ್ಯರೇ, ಬಂದಿರುವ ಎಲ್ಲ ಶೂದ್ರರೇ, ಏಕಾಗ್ರಚಿತ್ತರಾಗಿ ಕೇಳಿರಿ.
ಭವಂತಃ ಕುರವಶ್ಚೈವ ಬಹುಕಾಲಂ ಸಹೋಷಿತಾಃ |
ಪರಸ್ಪರಸ್ಯ ಸುಹೃದಃ ಪರಸ್ಪರಹಿತೇ ರತಾಃ ॥17॥
ನೀವು ಹಾಗೂ ಕುರುವಂಶದ ರಾಜರು ಬಹಳ ಕಾಲದಿಂದ ಜೊತೆಯಾಗಿ ವಾಸವಾಗಿರುವಿರಿ ಹಾಗೂ ಪರಸ್ಪರ ಸ್ನೇಹಿತರಾಗಿದ್ದು, ಪರಸ್ಪರ ಹಿತಕ್ಕೆ ಆಸಕ್ತರಾಗಿರುವಿರಿ.
ಯದಿದಾನೀಮಹಂ ಬ್ರೂಯಾಮಸ್ಮಿನ್ ಕಾಲ ಉಪಸ್ಥಿತೇ |
ತಥಾ ಭವದ್ಭಿಃ ಕರ್ತವ್ಯಮವಿಚಾರ್ಯ ವಚೋ ಮಮ ॥18॥
ಉಪಸ್ಥಿತವಾದ ಈ ಕಾಲದಲ್ಲಿ ನಾನು ಏನನ್ನು ಹೇಳುವೆನೋ ಅದನ್ನು ಹೆಚ್ಚಾಗಿ ವಿಮರ್ಶಿಸದೇ ನೀವು ನನ್ನ ಮಾತನ್ನು ನಡೆಸಿಕೊಡಬೇಕು.
ಅರಣ್ಯಗಮನೇ ಬುದ್ಧಿಂ ಗಾಂಧಾರೀಸಹಿತಸ್ಯ ಮೇ |
ವ್ಯಾಸಸ್ಯಾನುಮತೇ ರಾಜ್ಞಸ್ತಥಾ ಕುಂತೀಸುತಸ್ಯ ಚ ॥19॥

ಭವಂತೋಽಪ್ಯನುಜಾನಂತು ಮಾ ವೋ ಭೂಯಾದ್ ವಿಚಾರಣಾ ॥
ಗಾಂಧಾರೀ ದೇವಿಯಿಂದ ಸಹಿತನಾದ ನನಗೆ ವೇದವ್ಯಾಸರ ಅನುಮತಿಯಂತೆ ಹಾಗೂ ರಾಜನಾದ ಕುಂತೀಸುತನ ಅನುಮತಿಯಂತೆ ಅರಣ್ಯಗಮನದಲ್ಲಿ ಬುದ್ಧಿ ಉಂಟಾಗಿದೆ. ಆ ಬುದ್ಧಿಯನ್ನು ನೀವೆಲ್ಲರೂ ಒಪ್ಪಿಕೊಂಡು ನನಗೆ ಅನುಮತಿ ನೀಡಿರಿ. ಈ ವಿಷಯದಲ್ಲಿ ಹೆಚ್ಚು ವಿಚಾರಿಸದಿರಿ.
ಅಸ್ಮಾಕಂ ಭವತಾಂ ಚೈವ ಯೇಯಂ ಪ್ರೀತಿರ್ಹಿ ಶಾಶ್ವತೀ |
ನ ಚಾನ್ಯೇಷ್ವಪಿ ದೇಶೇಷು ರಾಜ್ಞಾಮಿತಿ ಮತಿರ್ಮಮ ॥21॥
ರಾಜರಾದ ನಮಗೂ, ಪ್ರಜೆಗಳಾದ ನಿಮಗೂ ಮಧ್ಯದಲ್ಲಿ ಯಾವ ಶಾಶ್ವತವಾದ ಪ್ರೀತಿ ಇದೆಯೋ ಇಂತಹ ಪ್ರೀತಿಯು ಬೇರೆ ದೇಶಗಳಲ್ಲೂ ರಾಜ ಹಾಗೂ ಪ್ರಜೆಗಳ ಮಧ್ಯದಲ್ಲಿ ಇಲ್ಲ ಎಂದು ನನ್ನ ಅನಿಸಿಕೆ.
ಶ್ರಾಂತೋಽಸ್ಮಿ ವಯಸಾಽನೇನ ತಥಾ ಪುತ್ರೈರ್ವಿನಾಕೃತಃ |
ಉಪವಾಸಕೃಶಶ್ಚಾಸ್ಮಿ ಗಾಂಧಾರೀಸಹಿತೋಽನಘಃ ॥22॥
ನಾನು ಈ ವೃದ್ಧಾಪ್ಯದಿಂದ ಆಯಾಸಗೊಂಡಿರುವೆ. ಹಾಗೆಯೇ ಮಕ್ಕಳನ್ನು ಕಳೆದುಕೊಂಡಿರುವೆ. ಜೊತೆಗೆ ಉಪವಾಸದಿಂದ ಕೃಶನೂ ಆಗಿ ಗಾಂಧಾರೀ ಸಹಿತನಾಗಿ ಶುದ್ಧನಾಗಿರುವೆ.
ಯುಧಿಷ್ಠಿರಗತೇ ರಾಜ್ಯೇ ಪ್ರಾಪ್ತಶ್ಚಾಸ್ಮಿ ಫಲಂ ಮಹತ್ |
ಮನ್ಯೇ ದುರ್ಯೋಧನೈಶ್ವರ್ಯಾದ್ ವಿಶಿಷ್ಟಂ ಬಹುಭಿರ್ಗುಣೈಃ ॥23॥
ರಾಜ್ಯವು ಯುಧಿಷ್ಠಿರನಿಗೆ ಸೇರಿದಾಗಲೂ ನಾನು ಮಹತ್ತಾದ ಫಲವನ್ನು ಪಡೆದುಕೊಂಡಿರುವೆ. ದುರ್ಯೋಧನನ ಕೈಯಲ್ಲಿ ಐಶ್ವರ್ಯವಿದ್ದಾಗ ಏನೆಲ್ಲ ಪಡೆದಿರುವೆನೋ ಬಹುಗುಣಗಳಿಂದ ಅದಕ್ಕಿಂತಲೂ ವಿಶಿಷ್ಟವಾದ ಫಲ ನನಗೆ ಸಿಕ್ಕಿದೆ ಎಂದು ಹೇಳಬಯಸುತ್ತೇನೆ.
ಮಮ ತ್ವಂಧಸ್ಯ ವೃದ್ಧಸ್ಯ ಹತಪುತ್ರಸ್ಯ ಕಾ ಗತಿಃ |
ಋತೇ ವನಂ ಮಹಾಭಾಗಾಃ ತದನುಜ್ಞಾತುಮರ್ಹಥ ॥24॥
ಕುರುಡನಾದ, ಮುದಿ ವಯಸ್ಸಿನಲ್ಲಿರುವ, ಮಕ್ಕಳನ್ನು ಕಳೆದುಕೊಂಡಿರುವ ನನಗೆ ಕಾಡನ್ನು ಬಿಟ್ಟು ಬೇರೆ ಯಾವ ಗತಿಯಿದೆ? ಆದ್ದರಿಂದ ಹೇ ಮಹಾಭಾಗರೇ, ಕಾಡಿಗೆ ಹೋಗಲು ನೀವು ಅನುಜ್ಞೆ ನೀಡಬೇಕು.
ವೈಶಂಪಾಯನಃ
ತಸ್ಯ ತದ್ವಚನಂ ಶ್ರುತ್ವಾ ಸರ್ವೇ ತೇ ಕುರುಜಾಂಗಲಾಃ |
ಬಾಷ್ಪಸಂದಿಗ್ಧವಚನಾ ರುರುದುರ್ಭರತರ್ಷಭ ॥25॥
ವೈಶಂಪಾಯನ ಹೇ ಭರತರ್ಷಭನೇ, ಧೃತರಾಷ್ಟ್ರನ ಆ ಮಾತನ್ನು ಕೇಳಿ ಕುರುಜಾಂಗಲ ಪ್ರದೇಶದ ಅಲ್ಲಿ ಸೇರಿದವರೆಲ್ಲರೂ ಕಣ್ಣೀರಿನಿಂದ ಮಾತೇ ಹೊರಡದೇ ಜೋರಾಗಿ ಅತ್ತರು.
ತಾಂಸ್ತು ವಿಬ್ರುವತಃ ಕಿಂಚಿತ್ ದುಃಖಶೋಕಪರಾಯಣಾನ್ |
ಪುನರೇವ ಮಹಾರಾಜೋ ಧೃತರಾಷ್ಟ್ರೋಽಬ್ರವೀದಿದಮ್ ॥26॥
ದುಃಖ ಹಾಗೂ ಶೋಕದಿಂದ ತುಂಬಿಕೊಂಡು ಏನನ್ನೂ ಹೇಳದಿರುವ ಅವರನ್ನು ಕುರಿತು ಮಹಾರಾಜನಾದ ಧೃತರಾಷ್ಟ್ರನು ಮತ್ತೆ ಈ ಮಾತುಗಳನ್ನು ಹೇಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ತ್ರಯೋದಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ತ್ರಯೋದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹದಿಮೂರನೆಯ ಅಧ್ಯಾಯ ಮುಗಿಯಿತು.
* * * * *
ಹದಿನಾಲ್ಕನೆಯ ಅಧ್ಯಾಯ
ಧೃತರಾಷ್ಟ್ರನು ಜನರಲ್ಲಿ, ತಾನು ದುರ್ಯೋಧನನ ಪಕ್ಷಪಾತದಿಂದ ಮಾಡಿದ ಅನ್ಯಾಯಗಳ ಬಗ್ಗೆ ಕ್ಷಮೆಯಾಚನೆ ಮಾಡುವುದು ಹಾಗೂ ಯುಧಿಷ್ಠಿರನನ್ನು ಅವರಲ್ಲಿ ನ್ಯಾಸರೂಪವಾಗಿ ಸಮರ್ಪಿಸಿ, ಅವರಿಂದ ತನ್ನ ವನಗಮನದ ಕುರಿತು ಒಪ್ಪಿಗೆಯನ್ನು ಯಾಚಿಸುವುದು.
ಧೃತರಾಷ್ಟ್ರಃ
ಶಂತನುಃ ಪಾಲಯಾಮಾಸ ಯಥಾವದ್ ವಸುಧಾಮಿಮಾಮ್ |
ತಥಾ ವಿಚಿತ್ರವೀರ್ಯಶ್ಚ ಭೀಷ್ಮೇಣ ಪರಿಪಾಲಿತಃ ॥1॥
ಪಾಲಯಾಮಾಸ ನಸ್ತಾತೋ ವಿದಿತಂ ವೋ ನ ಸಂಶಯಃ ॥2॥
ಧೃತರಾಷ್ಟ್ರ ಹೇ ಪ್ರಜೆಗಳೇ, ಶಂತನುರಾಜನು ಈ ಭೂಮಿಯನ್ನು ಯಥಾ ಯೋಗ್ಯವಾಗಿ ಪಾಲಿಸಿದನು. ಹಾಗೆಯೇ ಭೀಷ್ಮರಿಂದ ರಕ್ಷಿಸಲ್ಪಟ್ಟ ನನ್ನ ತಂದೆಯಾದ ವಿಚಿತ್ರವೀರ್ಯರಾಜನೂ ಈ ಭೂಮಿಯನ್ನು ಪಾಲಿಸಿದನು. ನಿಮಗೆ ಇದೆಲ್ಲ ತಿಳಿದಿದೆ. ಇದರಲ್ಲಿ ಯಾವುದೇ ಸಂಶಯವಿಲ್ಲ.
ಯಥಾ ಚ ಪಾಂಡುರ್ಭ್ರಾತಾ ಮೇ ದಯಿತೋ ಭವತಾಮಭೂತ್ |
ಸ ಚಾಪಿ ಪಾಲಯಾಮಾಸ ಯಥಾವತ್ತಚ್ಚ ವೇತ್ಥ ಹ ॥3॥
ಹಾಗೆಯೇ ನನ್ನ ಸಹೋದರನಾದ ನಿಮ್ಮೆಲ್ಲರಿಗೂ ಅತ್ಯಂತ ಪ್ರೀತಿಪಾತ್ರನಾದ ಪಾಂಡುವೂ ಕೂಡ ಈ ಭೂಮಿಯನ್ನು ಯಥಾವತ್ತಾಗಿ ಪಾಲಿಸಿದ್ದಾನೆ. ಅದನ್ನೂ ನೀವು ತಿಳಿದಿದ್ದೀರಿ.

ಅನಂತರಂ ಹಿ ಪಿತರೌ ಅನುಜ್ಞಾತೋ ಯುಧಿಷ್ಠಿರಃ |
ನಾತ್ರ ಕಿಂಚಿನ್ಮೃಷಾ ಜಾತು ಭವಿತೇತಿ ಮತಿರ್ಮಮ ||4||
ಅನಂತರ ತಂದೆ-ತಾಯಿಯರಾದ ಗಾಂಧಾರಿ ಮತ್ತು ನನ್ನಿಂದ ಅನುಜ್ಞಾತನಾದ ಯುಧಿಷ್ಠಿರನು ರಾಜ್ಯವಾಳುತ್ತಿದ್ದಾನೆ. ಇದರಲ್ಲಿ ಯಾವುದೇ ಸುಳ್ಳಿರಲಾರದು ಎಂದು ನನ್ನ ಅನಿಸಿಕೆ.
ಮಯಾ ಚ ಭವತಾಂ ಸಮ್ಯಕ್ ಶುಶ್ರೂಷಾ ಯಾ ಕೃತಾಽನಘಾಃ |
ಅಸಮ್ಯಗ್ ವಾ ಮಹಾಭಾಗಾಸ್ತತ್ ಕ್ಷಂತವ್ಯಮತಂದ್ರಿತೈಃ ||5||
ಹೇ ಸಜ್ಜನರೇ, ನನ್ನಿಂದಲೂ ನಿಮ್ಮ ಸೇವೆಯೂ ಚೆನ್ನಾಗಿ ಮಾಡಲ್ಪಟ್ಟಿದೆ ಅಥವಾ ನಾನು ಮಾಡಿದ ಸೇವೆಯು ಸರಿಯಾಗಿಲ್ಲದಿದ್ದರೆ ಮಹಾತ್ಮರಾದ ತಾವೆಲ್ಲರೂ ಯಾವುದೇ ಬೇಸರವಿಲ್ಲದೇ ಕ್ಷಮಿಸಬೇಕು.
ಯದಾ ದುರ್ಯೋಧನೇನೇದಂ ಭುಕ್ತಂ ರಾಜ್ಯಮಕಂಟಕಮ್ |
ಅಪಿ ತತ್ರ ನ ವೋ ಮಂದೋ ದುರ್ಬುದ್ಧಿರಪರಾದ್ಧವಾನ್ ||6||
ಯಾವಾಗ ದುರ್ಯೋಧನನಿಂದ ಕಂಟಕರಹಿತವಾದ ಈ ರಾಜ್ಯವು ಅನುಭವಿಸಲ್ಪಟ್ಟಿತೋ ಆಗ ಮಂದನಾದ ದುರ್ಬುದ್ಧಿಯಾದ ಅವನು ನಿಮಗೆ ಅಪರಾಧ ಮಾಡಿರಲಾರನೇ? (ಅವನು ಅಪರಾಧವನ್ನು ಮಾಡಿಯೇ ಇದ್ದಾನೆ).
ತಸ್ಯಾಪರಾಧಾದ್ ದುರ್ಬುದ್ಧೇರಭಿಮಾನಾನ್ಮಹೀಕ್ಷಿತಾಮ್ |
ವಿಮರ್ದಃ ಸುಮಹಾನಾಸೀದನಯಾತ್ ಸ್ವಕೃತಾದಥ ||7||
ಆ ದುರ್ಯೋಧನನ ಅಪರಾಧದಿಂದ, ಅವನ ದುರ್ಬುದ್ಧಿಯಿಂದ, ಅವನ ಆತ್ಮಾಭಿಮಾನದಿಂದ ಮತ್ತು ಸ್ವಯಂಕೃತವಾದ ಅನೀತಿಯಿಂದ ಅನೇಕ ರಾಜರ ಮಹಾನಾಶವು ಸಂಭವಿಸಿತು.
ಘಾತಿತಾಃ ಕೌರವೇಯಾಶ್ಚ ಪೃಥಿವೀ ಚ ವಿನಾಶಿತಾ ||8||
ಅದೇ ಸಂದರ್ಭದಲ್ಲಿ ಕೌರವವಂಶಜರೂ ಘಾಸಿಗೊಂಡರು. ಪೃಥಿವಿಯೂ ಕೂಡ ವಿನಾಶಗೊಂಡಿತು.
ತನ್ಮಯಾ ಸಾಧು ವಾಽಪೀದಂ ಯದಿ ವಾಽಸಾಧು ವೈ ಕೃತಮ್ |
ತದ್ವೋ ಹೃದಿ ನ ಕರ್ತವ್ಯಂ ಮಯಾ ಬದ್ಧೋಽಯಮಂಜಲಿಃ ||9||
ಆ ಸಮಯದಲ್ಲಿ ನಾನು ಸರಿಯಾಗಿದ್ದೆನೋ ಅಥವಾ ಅನ್ಯಾಯವೆಸಗಿದೆನೋ ತಿಳಿಯದಾಗಿದೆ. ಅವೆಲ್ಲವನ್ನೂ ನೀವು ಹೃದಯದಲ್ಲಿ ಇರಿಸಿಕೊಳ್ಳಬೇಡಿ. ಅದಕ್ಕಾಗಿ ಕೈಮುಗಿದು ನಿಮ್ಮಲ್ಲಿ ಪ್ರಾರ್ಥಿಸುತ್ತಿದ್ದೇನೆ.
ವೃದ್ಧೋಽಯಂ ಹತಪುತ್ರೋಽಯಂ ದುಃಖಿತೋಽಯಂ ನರಾಧಿಪಃ |
ಪೂರ್ವರಾಜ್ಞಾಂ ಚ ಪುತ್ರೋಽಯಮಿತಿ ಕೃತ್ವಾಽನುಜಾನಥ ||10||
ಈ ನರಾಧಿಪತಿಯು ವೃದ್ಧನಾಗಿದ್ದಾನೆ, ಮಕ್ಕಳನ್ನು ಕಳೆದುಕೊಂಡಿದ್ದಾನೆ ಹಾಗೂ ದುಃಖಿತನಾಗಿದ್ದಾನೆ. ಅಲ್ಲದೇ ಹಿಂದೆ ಬಂದ ರಾಜರ ಮಗನಾಗಿದ್ದಾನೆ ಎಂದು ಮನಸ್ಸಿನಲ್ಲಿರಿಸಿಕೊಂಡು ನನಗೆ ಅನುಜ್ಞೆ ನೀಡಿ.
ಇಯಂ ಚ ಕೃಪಣಾ ವೃದ್ಧಾ ಹತಪುತ್ರಾ ತಪಸ್ವಿನೀ |
ಗಾಂಧಾರೀ ಪುತ್ರಶೋಕಾರ್ತಾ ತುಲ್ಯಂ ಯಾಚತಿ ವೋ ಮಯಾ ||11||
ಈ ಗಾಂಧಾರೀ ದೇವಿಯೂ ಕೂಡ ದೀನಳಾಗಿ, ವೃದ್ಧಳಾಗಿ, ತಪಸ್ಸಿನಿಂದ ಕೂಡಿಕೊಂಡು, ಪುತ್ರರನ್ನು ಕಳೆದುಕೊಂಡು ಪುತ್ರಶೋಕದಿಂದ ಕಂಗೆಟ್ಟವಳಾಗಿ ನಾನು ಪ್ರಾರ್ಥಿಸಿದಂತೆಯೇ ನಿಮ್ಮಲ್ಲಿ ಯಾಚಿಸುತ್ತಿದ್ದಾಳೆ.
ಹತಪುತ್ರಾವಿಮೌ ವೃದ್ಧೌ ವಿದಿತ್ವಾ ದುಃಖಿತೌ ತಥಾ |
ಅನುಜಾನೀತ ಭದ್ರಂ ವೋ ವ್ರಜಾವ ಶರಣಂ ಚ ವಃ ||12||
ಈ ವೃದ್ಧ ದಂಪತಿಗಳು ಪುತ್ರರನ್ನು ಕಳೆದುಕೊಂಡು ದುಃಖಿತರಾಗಿದ್ದಾರೆ. ಹಾಗಾಗಿ ನಮಗೆ ಕಾಡಿಗೆ ಹೋಗಲು ಅನುಜ್ಞೆ ನೀಡಿರಿ. ನಾವು ನಿಮಗೆ ಶರಣು ಹೊಂದಿದ್ದೇವೆ. ನಿಮಗೆ ಮಂಗಳವಾಗಲಿ.
ಅಯಂ ಚ ಕೌರವೋ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ಸರ್ವೈರ್ಭವದ್ಭಿರ್ದ್ರಷ್ಟವ್ಯಃ ಸಮೇಷು ವಿಷಮೇಷು ಚ ||13||
ಈ ಕೌರವವಂಶದಲ್ಲಿ ಬಂದ ಕುಂತೀಪುತ್ರನಾದ ಯುಧಿಷ್ಠಿರರಾಜನು ನಿಮ್ಮೆಲ್ಲರಿಂದಲೂ ಶುಭಸಂದರ್ಭದಲ್ಲೂ, ಕಷ್ಟ ಸಂದರ್ಭದಲ್ಲೂ ಕಾಣಲ್ಪಡಬೇಕು.
ನ ಜಾತು ವಿಷಮಂ ಚೈವ ಗಮಿಷ್ಯತಿ ಕದಾಚನ ||14||
ಇವನು ಯಾವುದೇ ಸಂದರ್ಭದಲ್ಲಿ ನಿಮ್ಮಲ್ಲಿ ವಿಷಮವಾಗಿ ನಡೆದುಕೊಳ್ಳಲಾರನು.
ಚತ್ವಾರಃ ಸಚಿವಾ ಯಸ್ಯ ಭ್ರಾತರೋ ವಿಪುಲೌಜಸಃ |
ಲೋಕಪಾಲಸಮಾ ಹ್ಯೇತೇ ಸರ್ವಧರ್ಮಾರ್ಥದರ್ಶಿನಃ ||15||
ಚತುರ್ಣಾಂ ಲೋಕಪಾಲಾನಾಂ ಮಧ್ಯೇ ವಿಪರಿವರ್ತತೇ |
ಬ್ರಹ್ಮೇವ ಭಗವಾನೇಷ ಸರ್ವಭೂತಜಗತ್ಪತಿಃ ||16||
ಯಾವ ಯುಧಿಷ್ಠಿರನ ಅಣ್ಣ-ತಮ್ಮಂದಿರು ನಾಲ್ಕು ಮಂದಿ ಸಚಿವರಾಗಿರುವರೋ ಅವರು ವಿಪುಲವಾದ ತೇಜಸ್ಸಿನಿಂದ ಕೂಡಿ, ಸರ್ವಧರ್ಮಗಳ ಅರ್ಥವನ್ನು ತಿಳಿದುಕೊಂಡವರಾಗಿ ಲೋಕಪಾಲರಿಗೆ ಸದೃಶರಾಗಿದ್ದಾರೆ. ಹಾಗಾಗಿ ಈ ಯುಧಿಷ್ಠಿರನು ನಾಲ್ಕು ಲೋಕಪಾಲರ ಮಧ್ಯದಲ್ಲಿ ಸಂಚರಿಸುವ ಎಲ್ಲ ಪ್ರಾಣಿಜಗತ್ತಿಗೆ ಪತಿಯಾದ ಭಗವಾನ್ ಬ್ರಹ್ಮನಂತೆ ಕಾಣುತ್ತಿದ್ದಾನೆ.
ಏವಮೇವ ಮಹಾಬಾಹುರ್ಭೀಮಾರ್ಜುನಯಮೈರ್ವೃತಃ |
ಯುಧಿಷ್ಠಿರೋ ಮಹಾತೇಜಾ ಭವತಃ ಪಾಲಯಿಷ್ಯತಿ ||17||
ಮಹಾತೇಜಸ್ವಿಯಾದ, ಮಹಾಪರಾಕ್ರಮಿಯಾದ ಈ ಯುಧಿಷ್ಠಿರನು ಭೀಮಾರ್ಜುನರೊಂದಿಗೆ, ನಕುಲ-ಸಹದೇವರೊಂದಿಗೆ

ಕೂಡಿಕೊಂಡು ನಿಮ್ಮನ್ನು ಪಾಲಿಸುತ್ತಾನೆ.
ಅವಶ್ಯಮೇವ ವಕ್ತವ್ಯಮಿತಿ ಕೃತ್ವಾ ಬ್ರವೀಮಿ ವಃ |
ಏಷ ನ್ಯಾಸೋ ಮಯಾ ದತ್ತಃ ಸರ್ವೇಷಾಂ ವೋ ಯುಧಿಷ್ಠಿರಃ ॥18॥
ಅವಶ್ಯವಾಗಿ ಹೇಳಲೇಬೇಕಾಗಿದೆ ಎಂದು ಅನಿಸಿ ನಿಮ್ಮಲ್ಲಿ ಹೇಳುತ್ತಿದ್ದೇನೆ. ಈ ಯುಧಿಷ್ಠಿರನು ನಿಮ್ಮೆಲ್ಲರ ಮಧ್ಯದಲ್ಲಿ ನ್ಯಾಸರೂಪವಾಗಿ ಅಂದರೆ ಆಪತ್ಕಾಲದಲ್ಲಿ ಅನುಕೂಲಕ್ಕಾಗಿ ಹಣವನ್ನು ಎತ್ತಿಡುವಂತೆ ನನ್ನಿಂದ ಇಡಲ್ಪಟ್ಟಿದ್ದಾನೆ.
ಭವಂತೋ ಹ್ಯಸ್ಯ ಧೀರಸ್ಯ ನ್ಯಾಸಭೂತಾಃ ಮಯಾ ಕೃತಾಃ ॥19॥
ಹಾಗೆಯೇ ನೀವೆಲ್ಲರೂ ಧೀರನಾದ ಈ ಯುಧಿಷ್ಠಿರನಿಗೆ ನ್ಯಾಸರೂಪರಾಗಿ ನನ್ನಿಂದ ಇರಿಸಲ್ಪಡುತ್ತಿದ್ದೀರಿ.
ಯದ್ಯೇವಂ ತೈಃ ಕೃತಂ ಕಿಂಚಿದ್ ವ್ಯಲೀಕಂ ವಾ ಸುತೈರ್ಮಮ |
ಯದ್ಯನ್ಯೇನ ಮದೀಯೇನ ತದನುಜ್ಞಾತುಮರ್ಹಥ ॥20॥
ಹೀಗಿರುವಾಗ ನನ್ನ ಮಕ್ಕಳಾದ ಅವರಿಂದ ಏನಾದರೂ ಅಪ್ರಿಯವಾದುದು ನಡೆದರೆ ಅಥವಾ ನನಗೆ ಸಂಬಂಧಿಸಿದ ಬೇರೆ ಯಾರಿಂದಲಾದರೂ ಅಪ್ರಿಯವಾದುದು ನಡೆದರೆ ಅದೆಲ್ಲವನ್ನೂ ಕ್ಷಮಿಸಲು ಅರ್ಹರಾಗಿರುವಿರಿ.
ಭವದ್ಭಿರ್ಹಿ ನ ಮೇ ಮನ್ಯುಃ ಕೃತಪೂರ್ವಃ ಕಥಂಚನ |
ಅತ್ಯಂತಗುರುಭಕ್ತಾನಾಮೇಷೋಽಂಜಲಿರಿದಂ ನಮಃ ॥21॥
ನಿಮ್ಮಿಂದ ಯಾವುದೇ ರೀತಿಯಾಗಿ ನನ್ನ ವಿಷಯದಲ್ಲಿ ಕೋಪವು ಈ ಮೊದಲು ತೋರಿಸಲ್ಪಟ್ಟಿಲ್ಲ. ಹೀಗೆ ಅತ್ಯಂತವಾಗಿ ರಾಜಭಕ್ತರಾದ ನಿಮಗೆ ಇದೋ ನಮಸ್ಕರಿಸುತ್ತಿದ್ದೇನೆ.
ತೇಷಾಮಪಿ ವಿಬುದ್ಧೀನಾಂ ಲುಬ್ಧಾನಾಂ ಕಾಮಚಾರಿಣಾಮ್ |
ಕೃತೇ ಯಾಚಾಮಿ ವಃ ಸರ್ವಾನ್ ಗಾಂಧಾರೀಸಹಿತೋ ದ್ವಿಜಾಃ ॥22॥
ಹೇ ಬ್ರಾಹ್ಮಣರೇ, ಗಾಂಧಾರೀಸಹಿತನಾದ ನಾನು ನಿಮ್ಮ ವಿಷಯದಲ್ಲಿ ತಪ್ಪೆಸಗಿದ, ಬುದ್ಧಿಯಿಲ್ಲದ, ಜಿಪುಣರಾದ, ಮನಸ್ಸಿಗೆ ಬಂದಂತೆ ವರ್ತಿಸುವ ಆ ವ್ಯಕ್ತಿಗಳ ವಿಷಯದಲ್ಲೂ ನಿಮ್ಮಲ್ಲಿ ಕ್ಷಮೆಯಾಚಿಸುತ್ತಿದ್ದೇನೆ.
ವೈಶಂಪಾಯನಃ
ಇತ್ಯುಕ್ತಾಸ್ತೇನ ತೇ ಸರ್ವೇ ಪೌರಜಾನಪದಾ ಜನಾಃ |
ನೋಚುರ್ಬಾಷ್ಪಕಲಾಃ ಕಿಂಚಿದ್ ವೀಕ್ಷಾಂಚಕ್ರುಃ ಪರಸ್ಪರಮ್ ॥23॥
ವೈಶಂಪಾಯನ ಹೀಗೆ ಧೃತರಾಷ್ಟ್ರನಿಂದ ಹೇಳಲ್ಪಟ್ಟ ಆ ಎಲ್ಲ ಪಟ್ಟಣಿಗರು ಹಾಗೂ ಗ್ರಾಮವಾಸಿಗಳಾದ ಜನರು ಕಣ್ಣೀರನ್ನು ತುಂಬಿಕೊಂಡವರಾಗಿ ಏನನ್ನೂ ಹೇಳದೆ ಪರಸ್ಪರ ಮುಖ ಮುಖ ನೋಡಿಕೊಂಡರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಚತುರ್ದಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಚತುರ್ದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಹದಿನೈದನೆಯ ಅಧ್ಯಾಯ
ಪೌರಜನರು ಬ್ರಾಹ್ಮಣನನ್ನು ಮುಂದೆ ಮಾಡಿಕೊಂಡು ಧೃತರಾಷ್ಟ್ರನಿಗೆ
ಸಮಾಧಾನ ಪಡಿಸಿ ಕಷ್ಟದಿಂದ ಅವನಿಗೆ ಒಪ್ಪಿಗೆ ನೀಡುವುದು.
ವೈಶಂಪಾಯನಃ
ಏವಮುಕ್ತಾಸ್ತು ತೇ ತೇನ ಪೌರಜಾನಪದಾ ಜನಾಃ |
ವೃದ್ಧೇನ ರಾಜ್ಞಾ ಕೌರವ್ಯ ನಷ್ಟಸಂಜ್ಞಾ ಇವಾಭವನ್ ॥1॥
ವೈಶಂಪಾಯನ ಹೇ ಕೌರವ್ಯನೇ, ವೃದ್ಧನಾದ ಧೃತರಾಷ್ಟ್ರ ರಾಜನಿಂದ ಈ ರೀತಿ ಹೇಳಲ್ಪಟ್ಟ ಪಟ್ಟಣ ಹಾಗೂ ಗ್ರಾಮೀಣ ಪ್ರದೇಶ ಪ್ರಜೆಗಳು ಗರಬಡಿದವರಂತೆ ಆದರು.
ತೂಷ್ಣೀಂಭೂತಾನ್ ತತಸ್ತಾಂಸ್ತು ಬಾಷ್ಪಕಂಠಾನ್ ಮಹೀಪತಿಃ |
ಧೃತರಾಷ್ಟ್ರೋ ಮಹೀಪಾಲಃ ಪುನರೇವಾಭ್ಯಭಾಷತ ॥2॥
ಕಣ್ಣೀರಿನಿಂದ ಗಂಟಲು ತುಂಬಿ ಬಂದು ಮೌನರಾಗಿದ್ದ ಅವರನ್ನು ಕುರಿತು ಮಹೀಪತಿಯಾದ ಧೃತರಾಷ್ಟ್ರ ರಾಜನು ಮತ್ತೆ ತಾನೇ ಮಾತನಾಡಿದನು.
ಧೃತರಾಷ್ಟ್ರಃ
ವೃದ್ಧಯಾ ಹತಪುತ್ರಾ ಚ ಧರ್ಮಪತ್ನ್ಯಾ ಸಹಾನಯಾ |
ವಿಲಪಂತಂ ಬಹುವಿಧಂ ಕೃಪಣಂ ಚೈವ ಸತ್ತಮಾಃ ॥3॥
ಪಿತ್ರಾ ಚೈವಾಭ್ಯನುಜ್ಞಾತಂ ಕೃಷ್ಣದ್ವೈಪಾಯನೇನ ವೈ |
ವನವಾಸಾಯ ಧರ್ಮಜ್ಞಾ ಧರ್ಮಜ್ಞೇನ ನೃಪೇಣ ಚ ॥4॥
ಸೋಽಹಂ ಪುನಃ ಪುನರ್ಯಾಚೇ ಶಿರಸಾ ಚ ನತೋಽನಘಾಃ |
ಗಾಂಧಾರೀಸಹಿತಂ ತಸ್ಮಾತ್ ಸಮನುಜ್ಞಾತುಮರ್ಹಥ ॥5॥
ಧೃತರಾಷ್ಟ್ರ ಹೇ ಸಜ್ಜನರೇ, ವೃದ್ಧಳಾದ, ಮಕ್ಕಳನ್ನು ಕಳೆದುಕೊಂಡಿರುವ ಈ ನನ್ನ ಧರ್ಮಪತ್ನಿಯ ಜೊತೆಗೆ ಬಹುವಾಗಿ ದೀನತೆಯಿಂದ ಅಳುತ್ತಿರುವ, ತಂದೆಯಾದ ಕೃಷ್ಣದ್ವೈಪಾಯನರಿಂದ ವನವಾಸಕ್ಕೆ ಒಪ್ಪಿಗೆಯನ್ನು ಪಡೆದಿರುವ, ಹಾಗೆಯೇ ರಾಜನಾದ

ಧರ್ಮಜನಿಂದಲೂ ಅನುಜ್ಞಾತನಾದ ನಾನು ತಲೆ ಬಗ್ಗಿಸಿ ಮತ್ತೆ ಮತ್ತೆ ನಿಮ್ಮಲ್ಲಿ ಪ್ರಾರ್ಥಿಸುತ್ತಿದ್ದೇನೆ. ಹೇ ಧರ್ಮಜ್ಞರೇ, ಶುದ್ಧ ವ್ಯಕ್ತಿತ್ವವುಳ್ಳವರೇ, ಗಾಂಧಾರೀ ಸಹಿತನಾದ ನನಗೆ ಕಾಡಿಗೆ ಹೋಗಲು ಅನುಜ್ಞೆ ನೀಡಬೇಕಾಗಿ ಕೇಳಿಕೊಳ್ಳುತ್ತೇನೆ.
ವೈಶಂಪಾಯನಃ
ಶ್ರುತ್ವಾ ತು ಕುರುರಾಜಸ್ಯ ವಾಕ್ಯಾನಿ ಕರುಣಾನಿ ತೇ |
ರುರುದುಃ ಸರ್ವತೋ ರಾಜನ್ ಸಮೇತಾಃ ಕುರುಜಾಂಗಲಾಃ ॥6॥
ವೈಶಂಪಾಯನ ಕುರುರಾಜನ ಕರುಣಾಜನಕವಾದ ಈ ಮಾತುಗಳನ್ನು ಕೇಳಿ ಹೇ ಜನಮೇಜಯ ರಾಜನೇ, ಕುರುಜಾಂಗಲ ಪ್ರದೇಶದಿಂದ ಒಟ್ಟು ಸೇರಿರುವ ಎಲ್ಲ ಪ್ರಜೆಗಳು ಸಂಪೂರ್ಣವಾಗಿ ಅತ್ತೇಬಿಟ್ಟರು.
ಉತ್ತರೀಯೈಃ ಕರೈಶ್ಚಾಪಿ ಸಂಛಾದ್ಯ ವದನಾನಿ ತೇ |
ಕುರವಃ ಶೋಕಸಂತಪ್ತಾ ಮುಹೂರ್ತಂ ಪಿತೃಮಾತೃವತ್ ॥7॥
ಕುರುಪ್ರದೇಶದ ಆ ಎಲ್ಲ ಜನರು ಉತ್ತರೀಯಗಳಿಂದಲೂ, ಕೈಗಳಿಂದಲೂ ತಮ್ಮ ಮುಖಗಳನ್ನು ಮುಚ್ಚಿಕೊಂಡು, ಒಂದು ಕ್ಷಣ ತಂದೆ-ತಾಯಿಗಳ ವಿಯೋಗದಿಂದ ಅಳುವಂತೆ ಶೋಕಸಂತಪ್ತರಾಗಿ ಅತ್ತರು.
ಹೃದಯೈಃ ಶೂನ್ಯಭೂತೈಸ್ತೇ ಧೃತರಾಷ್ಟ್ರಪ್ರವಾಸಜಮ್ |
ದುಃಖಂ ಸಂಧಾರಯಂತಿ ಸ್ಮ ನಷ್ಟಸಂಜ್ಞಾಃ ಸಮಾಹಿತಾಃ ॥8॥
ಶೂನ್ಯವಾದ ಹೃದಯಗಳಿಂದ ಕೂಡಿದ ಅವರು ಪ್ರಜ್ಞಾಹೀನರಾದ ಸ್ಥಿತಿಗೆ ಬಂದಿದ್ದರೂ ಧೃತರಾಷ್ಟ್ರನ ವನವಾಸದಿಂದ ಉಂಟಾಗುವ ದುಃಖವನ್ನು ಕಷ್ಟದಿಂದ ಸಹಿಸಿಕೊಳ್ಳುತ್ತಿದ್ದರು.
ತೇ ವಿನೀಯ ತಮಾಯಾಸಂ ಕುರುರಾಜವಿಯೋಗಜಮ್ |
ಶನೈಃ ಶನೈಸ್ತದಾಽನ್ಯೋನ್ಯಮಬ್ರುವನ್ ಸ್ವಮತಾನ್ಯುತ ॥9॥
ಅನಂತರ ಅವರು ಕುರುರಾಜನ ವಿಯೋಗದಿಂದ ಉಂಟಾದ ಆ ಆಯಾಸವನ್ನು ನಿಧಾನವಾಗಿ ಕಡಿಮೆ ಮಾಡಿಕೊಂಡು ತಮ್ಮ ಅಭಿಪ್ರಾಯಗಳನ್ನು ಪರಸ್ಪರ ಹೇಳಿಕೊಂಡರು.
ತತಃ ಸಂಚಿಂತ್ಯ ತೇ ಸರ್ವೇ ವಾಕ್ಯಾನ್ಯಥ ಸಮಾಸತಃ |
ಏಕಸ್ಮಿನ್ ಬ್ರಾಹ್ಮಣೇ ಕಾರ್ಯಮಾವೇಶ್ಯೋಚುರ್ನರಾಧಿಪಮ್ ॥10॥
ಅನಂತರ ಅವರೆಲ್ಲರೂ ಸೇರಿಕೊಂಡು ಒಟ್ಟಾಗಿ ಎಲ್ಲರ ಮಾತುಗಳನ್ನೂ ಆಲೋಚಿಸಿ ಒಬ್ಬ ಬ್ರಾಹ್ಮಣನಲ್ಲಿ ಮಾಡಬೇಕಾದ ಎಲ್ಲವನ್ನೂ ತಿಳಿಸಿ, ಅವನ ಮೂಲಕ ರಾಜನಿಗೆ ಹೇಳಿದರು.
ತತ್ರ ಸ್ವೇ ಚರಣೇ ವೃದ್ಧಃ ಸಮ್ಮತೋಽರ್ಥವಿಶಾರದಃ |
ಶಾಕಲ್ಯೋ ಬಹ್ವೃಚೋ ರಾಜನ್ ವಕ್ತುಂ ಸಮುಪಚಕ್ರಮೇ ॥11॥
ಹೇ ರಾಜನೇ, ಅನಂತರ ಅಲ್ಲಿ ಇರುವವರಲ್ಲಿ ಜ್ಞಾನವೃದ್ಧನಾದ, ತನ್ನ ಆಚಾರಗಳಿಂದ ಮತ್ತು ವಿಚಾರಗಳಿಂದ ಎಲ್ಲರಿಗೂ ಸಮ್ಮತನಾದ, ಅರ್ಥಗಳಲ್ಲಿ ವಿಶಾರದನಾದ ಶಾಕಲ್ಯನೆಂಬ ಋಗ್ವೇದಿಯಾದ ಬ್ರಾಹ್ಮಣನು ರಾಜನನ್ನು ಕುರಿತು ಹೇಳಲು ಆರಂಭಿಸಿದನು.
ಅನುಮಾನ್ಯ ಮಹಾರಾಜಂ ಸದಃ ಸಮನುಭಾಷ್ಯ ಚ |
ವಿಪ್ರಃ ಪ್ರಗಲ್ಭೋ ಮೇಧಾವೀ ಸ ರಾಜಾನಮುವಾಚ ಹ ॥12॥
ಪ್ರೌಢನೂ, ಮೇಧಾವಿಯೂ ಆದ ಆ ಬ್ರಾಹ್ಮಣನು ಮಹಾರಾಜನನ್ನು ಯೋಗ್ಯತೆಗೆ ತಕ್ಕಂತೆ ಗೌರವಿಸಿ, ಸಭಾಸದರನ್ನೂ ಸಂಬೋಧಿಸಿ, ರಾಜನನ್ನು ಕುರಿತು ಈ ರೀತಿ ಹೇಳಿದನು.
ಶಾಕಲ್ಯಃ
ರಾಜನ್ ವಾಕ್ಯಂ ಜನಸ್ಯಾಸ್ಯ ಮಯಿ ಸರ್ವಂ ಸಮರ್ಪಿತಮ್ |
ವಕ್ಷ್ಯಾಮಿ ತದಹಂ ವೀರ ತಜ್ಜುಷಸ್ವ ನರಾಧಿಪ ॥13॥
ಶಾಕಲ್ಯ ಹೇ ನರಾಧಿಪತಿಯಾದ ವೀರರಾಜನೇ, ಈ ಎಲ್ಲ ಜನರ ಮಾತುಗಳೂ ನನ್ನಲ್ಲಿ ಸಮರ್ಪಿತವಾಗಿವೆ. ಅದನ್ನು ನಾನು ಹೇಳುತ್ತಿದ್ದೇನೆ. ನೀನು ಆಲಿಸುವವನಾಗು.
ಯಥಾ ವದಸಿ ರಾಜೇಂದ್ರ ಸರ್ವಮೇತತ್ ತಥಾ ವಿಭೋ |
ನಾತ್ರ ಮಿಥ್ಯಾ ವಚಃ ಕಿಂಚಿತ್ ಸುಹೃತ್ತ್ವಂ ನಃ ಪರಸ್ಪರಮ್ ॥14॥
ಹೇ ರಾಜಶ್ರೇಷ್ಠನಾದ ಸ್ವಾಮಿಯೇ, ಈವರೆಗೆ ನೀನು ಏನೆಲ್ಲ ಹೇಳಿದೆಯೋ ಅದೆಲ್ಲವೂ ಸರಿಯಾಗಿಯೇ ಇದೆ. ಇಲ್ಲಿ ಸುಳ್ಳು ಮಾತು ಯಾವುದೂ ಇಲ್ಲ. ನಮ್ಮೆಲ್ಲರಿಗೂ ಪರಸ್ಪರವಾಗಿ ಮಿತ್ರಭಾವವು ಇದ್ದೇ ಇದೆ.
ನ ಜಾತ್ವಸ್ಯ ತು ವಂಶಸ್ಯ ರಾಜ್ಞಾಂ ಕಿಂಚಿತ್ ಕದಾಚನ |
ರಾಜಾಽಽಸೀದ್ ಯಃ ಪ್ರಜಾಪಾಲಃ ಪ್ರಜಾನಾಂ ನ ಪ್ರಿಯೋಽಭವತ್ ॥
ಪಿತೃವನ್ಮಾತೃವಚ್ಚೈವ ಭವಂತಃ ಪಾಲಯಂತಿ ನಃ |
ನ ಚ ದುರ್ಯೋಧನಃ ಕಿಂಚಿದಯುಕ್ತಂ ಕೃತವಾನ್ ನೃಪ ॥16॥
ಈ ವಂಶದ ರಾಜರ ಸಣ್ಣ ಮಾತೂ ಕೂಡ ಯಾವತ್ತೂ ಸುಳ್ಳಾದುದಿಲ್ಲ. ಅಲ್ಲದೇ, ಯಾವುದೇ ರಾಜನು ಪ್ರಜೆಗಳಿಗೆ ಇಷ್ಟವಾಗದಂತೆ ಪ್ರಜಾಪಾಲನೆಯನ್ನೂ ಮಾಡಿಲ್ಲ. ಅಲ್ಲದೇ, ಎಂತಹ ರಾಜನು ಪ್ರಜೆಗಳಿಗೆ ಇಷ್ಟವಾಗಲಾರನೋ ಅಂತಹ ಯಾವ ರಾಜನೂ ಈ ವಂಶದಲ್ಲಿ ಬಂದಿಲ್ಲ. ನೀವೆಲ್ಲರೂ ನಮ್ಮನ್ನು ತಂದೆ- ತಾಯಿಗಳಂತೆ ಸಾಕುತ್ತಿದ್ದೀರಿ. ಹೇ ರಾಜನೇ, ದುರ್ಯೋಧನನೂ ಕೂಡ ಸ್ವಲ್ಪವೂ ಅಯೋಗ್ಯವಾದುದನ್ನು ನಮ್ಮ ವಿಷಯದಲ್ಲಿ ನಡೆಸಲಿಲ್ಲ.
ಪ್ರಿಯಾಣಿ ಕುರ್ವನ್ ಸರ್ವೇಷಾಮನುವೃತ್ತ್ಯರ್ಥಮುದ್ಯತಃ |

ಯಥಾಽಬ್ರವೀತ್ತು ಧರ್ಮಜ್ಞೋ ಮುನಿಃ ಸತ್ಯವತೀಸುತಃ ॥17॥
ತಥಾ ಕುರು ಮಹಾರಾಜ ಸ ಹಿ ನಃ ಪರಮೋ ಗುರುಃ॥18॥
ಅವನು ಎಲ್ಲರಿಗೂ ಪ್ರಿಯವಾದುದನ್ನೇ ಮಾಡುತ್ತಾ ನಮ್ಮೆಲ್ಲರ ಸೇವೆಗಾಗಿ ಪ್ರಯತ್ನ ಪಡುತ್ತಿದ್ದನು. ಹಾಗಾಗಿ ಧರ್ಮಜ್ಞರಾದ, ಸತ್ಯವತೀಸುತನಾದ ವೇದವ್ಯಾಸ ಮುನಿಯು ಹೇಗೆ ಹೇಳಿರುವರೋ ಅದೇ ರೀತಿ ಮಾಡು. ಹೇ ಮಹಾರಾಜನೇ, ಆ ಮುನಿಯು ನಮ್ಮೆಲ್ಲರಿಗೂ ಉತ್ಕೃಷ್ಟವಾದ ಗುರುವಾಗಿದ್ದಾರೆ.
ತ್ಯಕ್ತಾ ವಯಂ ತು ಭವತಾ ದುಃಖಶೋಕಪರಾಯಣಾಃ।
ಭವಿಷ್ಯಾಮಶ್ಚಿರಂ ರಾಜನ್ ಭವದ್ಗುಣಶತೈರ್ಹೃತಾಃ ॥19॥
ಹೇ ರಾಜನೇ, ನಿನ್ನ ನೂರಾರು ಸದ್ಗುಣಗಳಿಂದ ಅಪಹೃತರಾದ ನಾವೆಲ್ಲರೂ ನಿನ್ನಿಂದ ಪರಿತ್ಯಕ್ತರಾಗಿ ಬಹುಕಾಲ ದುಃಖ ಹಾಗೂ ಶೋಕಗಳಲ್ಲಿ ಮುಳುಗಿರುವವರಾಗುತ್ತೇವೆ.
ಯಥಾ ಶಂತನುನಾ ಗುಪ್ತಾ ರಾಜ್ಞಾ ಚಿತ್ರಾಂಗದೇನ ಚ।
ಭೀಷ್ಮವೀರ್ಯೋಪಗೂಢೇನ ಪಿತ್ರಾ ಚ ತವ ಪಾರ್ಥಿವ ॥20॥
ಭವದ್ಬುದ್ಧಿಯುಜಾ ಚೈವ ಪಾಂಡುನಾ ಪೃಥಿವೀಕ್ಷಿತಾ।
ತಥಾ ದುರ್ಯೋಧನೇನಾಪಿ ರಾಜ್ಞಾ ಸ್ಮ ಪರಿಪಾಲಿತಾಃ ॥21॥
ನ ನಃ ಸೋಽಣ್ವಪಿ ಪುತ್ರಸ್ತೇ ವ್ಯಲೀಕಂ ಕೃತವಾನ್ ನೃಪ ॥22॥
ಹೇ ಪಾರ್ಥಿವನೇ, ನಾವೆಲ್ಲರೂ ರಾಜನಾದ ಶಂತನುವಿನಿಂದ ರಕ್ಷಿತರಾಗಿದ್ದೆವೋ, ಹೇಗೆ ನಿನ್ನ ತಂದೆಯಾದ ಮತ್ತು ಭೀಷ್ಮರ ಬಲದಿಂದಲೂ ಆಲಿಂಗಿತನಾದ ಚಿತ್ರಾಂಗದನಿಂದ ಹೇಗೆ ರಕ್ಷಿತರಾಗಿದ್ದೆವೋ, ಹೇಗೆ ನಿನ್ನ ಬುದ್ಧಿಯನ್ನು ಸೇರಿಸಿಕೊಂಡ ರಾಜನಾದ ಪಾಂಡುವಿನಿಂದ ರಕ್ಷಿತರಾಗಿದ್ದೆವೋ, ಹಾಗೆಯೇ ರಾಜನಾದ ದುರ್ಯೋಧನನಿಂದಲೂ ಪರಿಪಾಲಿತರಾಗಿದ್ದೇವೆ. ಆ ನಿನ್ನ ಮಗನು ನಮಗೆ ಸ್ವಲ್ಪವೂ ಅಪ್ರಿಯವಾದುದನ್ನು ಮಾಡಲಿಲ್ಲ.
ಪಿತರೀವ ಸುವಿಶ್ವಸ್ತಾಸ್ತಸ್ಮಿನ್ನಪಿ ನರಾಧಿಪೇ।
ವಯಮಾಸ್ಮ ಯಥಾ ಸಮ್ಯಗ್ಭವತೋ ವಿದಿತಂ ತಥಾ ॥23॥
ರಾಜನಾದ ದುರ್ಯೋಧನನಲ್ಲೂ ಹೇಗೆ ನಾವು ತಂದೆಯಂತೆ ವಿಶ್ವಾಸವನ್ನಿಟ್ಟವರಾಗಿದ್ದೆವೋ ಅದು ನಿಮಗೂ ಚೆನ್ನಾಗಿ ತಿಳಿದಿದೆ.
ತಥಾ ವರ್ಷಸಹಸ್ರಾಣಿ ಕುಂತೀಪುತ್ರೇಣ ಧೀಮತಾ।
ಪಾಲ್ಯಮಾನಾ ಧೃತಿಮತಾ ಸುಖಂ ವಿಂದಾಮಹೇ ನೃಪ ॥24॥
ಸಹಸ್ರಾರು ವರ್ಷಗಳಿಂದ ನಿನ್ನ ಪೂರ್ವಜರು ಹೇಗೆ ರಾಜ್ಯವಾಳಿರುವರೋ ಅಂತೆಯೇ ಬುದ್ಧಿವಂತನಾದ, ಧೈರ್ಯಶಾಲಿಯಾದ ಕುಂತೀಪುತ್ರನಿಂದಲೂ ರಕ್ಷಿಸಲ್ಪಡುವ ನಾವು ಸುಖವನ್ನೇ ಪಡೆಯುತ್ತೇವೆ.
ರಾಜರ್ಷೀಣಾಂ ಪುರಾಣಾನಾಂ ಭವತಾಂ ಪುಣ್ಯಕರ್ಮಣಾಮ್।
ಕುರುಸಂವರಣಾದೀನಾಂ ಭರತಸ್ಯ ಚ ಧೀಮತಃ ॥25॥
ವೃತ್ತಂ ಸಮನುಯಾತ್ಯೇಷ ಧರ್ಮಾತ್ಮಾ ಭೂರಿದಕ್ಷಿಣಃ ॥26॥
ಬಹಳ ಸರಳನಾಗಿದ್ದು ಧರ್ಮಾತ್ಮನಾದ ಇವನು ಪುಣ್ಯಕರ್ಮಗಳನ್ನು ಮಾಡಿರುವ ನಿಮ್ಮ ಪೂರ್ವಜರಾದ ಕುರು-ಸಂವರಣನೇ ಮೊದಲಾದ, ಹಾಗೆಯೇ ಧೀಮಂತನಾದ ಭರತನೇ ಮೊದಲಾದ ರಾಜರ್ಷಿಗಳ ನಡತೆಯನ್ನು ಅನುಸರಿಸುತ್ತಿದ್ದಾನೆ.
ನಾತ್ರ ವಾಚ್ಯಂ ಮಹಾರಾಜ ಸುಸೂಕ್ಷ್ಮಮಪಿ ವಿದ್ಯತೇ ॥27॥
ಹೇ ಮಹಾರಾಜನೇ, ಈ ವಿಷಯದಲ್ಲಿ ನಿಂದಾರೂಪವಾಗಿ ಆಡಿಕೊಳ್ಳಬೇಕಾದ ಸಣ್ಣ ಅಂಶವೂ ಇರುವುದಿಲ್ಲ.
ಉಷಿತಾಃ ಸ್ಮ ಸುಖಂ ನಿತ್ಯಂ ಭವತಾ ಪರಿಪಾಲಿತಾಃ।
ಸುಸೂಕ್ಷ್ಮಮಂ ಚ ವ್ಯಲೀಕಂ ತೇ ಸಪುತ್ರಸ್ಯ ನ ವಿದ್ಯತೇ ॥28॥
ನಿನ್ನಿಂದ ಪಾಲಿಸಲ್ಪಡುತ್ತಿರುವಾಗಲೂ ನಾವು ನಿತ್ಯವೂ ಸುಖವಾಗಿಯೇ ವಾಸವಾಗಿದ್ದೆವು. ಪುತ್ರಸಹಿತನಾದ ನಿನ್ನ ಆಳ್ವಿಕೆಯಲ್ಲೂ ಅತೀ ಸಣ್ಣ ಅಪರಾಧವೂ ಇಲ್ಲ.
ಯತ್ತು ಜ್ಞಾತಿವಿಮರ್ದೇಽಸ್ಮಿನ್ನಾತ್ಥ ದುರ್ಯೋಧನಂ ಪ್ರತಿ।
ಭವಂತಮನುನೇಷ್ಯಾಮಿ ತತ್ರಾಪಿ ಕುರುನಂದನ ॥29॥
ಹೇ ಕುರುನಂದನನೇ, ದುರ್ಯೋಧನನ ಕುರಿತು ಬಂಧುಗಳ ಕಲಹ ನಿಮಿತ್ತವಾದ ಯುದ್ಧದ ವಿಷಯದಲ್ಲಿ ನೀನೇನು ಹೇಳಿರುವೆಯೋ ಆ ವಿಷಯದಲ್ಲೂ ನಿನಗೆ ಸಮಾಧಾನವನ್ನು ಹೇಳುತ್ತೇನೆ.
ನ ತದ್ ದುರ್ಯೋಧನಕೃತಂ ನ ಚ ತದ್ಭವತಾ ಕೃತಮ್।
ನ ಕರ್ಣಸೌಬಲಾಭ್ಯಾಂ ಚ ಕುರವೋ ಯತ್ ಕ್ಷಯಂ ಗತಾಃ ॥30॥
ಯುದ್ಧದಲ್ಲಿ ಕುರುವಂಶಜರೆಲ್ಲರೂ ಏನು ನಾಶವಾಗಿದ್ದಾರೋ ಆ ನಾಶವು ದುರ್ಯೋಧನನಿಂದ ಕೃತವಾದದ್ದೂ ಅಲ್ಲ, ನಿನ್ನಿಂದಲೂ ಮಾಡಲ್ಪಟ್ಟಿಲ್ಲ, ಅಥವಾ ಕರ್ಣ-ಶಕುನಿಗಳೂ ಅದನ್ನು ಮಾಡಿಲ್ಲ.
ದೈವಂ ತತ್ತು ವಿಜಾನೀಮೋ ಯನ್ನ ಶಕ್ಯಂ ಪ್ರಬಾಧಿತುಮ್।
ದೈವಂ ಪುರುಷಕಾರೇಣ ನ ಶಕ್ಯಮಪಿ ಬಾಧಿತುಮ್ ॥31॥
ಅದೆಲ್ಲದಕ್ಕೂ ತಡೆಯಲು ಸಾಧ್ಯವಿಲ್ಲದ ಭಗವತ್ಸಂಕಲ್ಪವೇನಿದೆಯೋ ಅದೇ ಕಾರಣವೆಂದು ತಿಳಿದಿದ್ದೇವೆ. ಏಕೆಂದರೆ ಭಗವತ್ಸಂಕಲ್ಪವು ಮನುಷ್ಯರ ಯಾವ ಪ್ರಯತ್ನದಿಂದಲೂ ತಡೆಯಲ್ಪಡುವುದಿಲ್ಲ.
ಅಕ್ಷೌಹಿಣ್ಯೋ ಮಹಾರಾಜ ದಶಾಷ್ಟೌ ಚ ಸಮಾಗತಾಃ।
ಅಷ್ಟಾದಶಾಹೇನ ಹತಾ ದಶಭಿರ್ಯೋಧಪುಂಗವೈಃ॥32॥

ಹೇ ಮಹಾರಾಜನೇ, ಯುದ್ಧಕ್ಕಾಗಿ ಬಂದಿರುವ ಹದಿನೆಂಟು ಅಕ್ಷೋಹಿಣಿ ಸೇನೆಯವರು ಹದಿನೆಂಟು ದಿನಗಳಲ್ಲಿ ಕೇವಲ ಹತ್ತೇ ಯೋಧಶ್ರೇಷ್ಠರಿಂದ ಹತರಾಗಿದ್ದಾರೆ.
ಭೀಷ್ಮದ್ರೋಣಕೃಪೈ ರಾಜನ್ ಕರ್ಣೇನ ಚ ಮಹಾತ್ಮನಾ |
ಯುಯುಧಾನೇನ ವೀರೇಣ ಧೃಷ್ಟದ್ಯುಮ್ನೇನ ಚಾಹವೇ ॥33॥
ಚತುರ್ಭಿಃ ಪಾಂಡುಪುತ್ರೈಶ್ಚ ಭೀಮಾರ್ಜುನಯಮೈರ್ನೃಪ |
ಜನಕ್ಷಯೋಽಯಂ ನೃಪತೇ ಕೃತೋ ದೈವಬಲಾತ್ ಕೃತೈಃ ॥34॥
ಭೀಷ್ಮ, ದ್ರೋಣಾಚಾರ್ಯರು, ಕೃಪಾಚಾರ್ಯರು, ಮಹಾತ್ಮನಾದ ಕರ್ಣ, ಸಾತ್ಯಕಿ, ವೀರನಾದ ಧೃಷ್ಟದ್ಯುಮ್ನ, ಭೀಮ, ಅರ್ಜುನ, ನಕುಲ-ಸಹದೇವರೆಂಬ ನಾಲ್ಕು ಮಂದಿ ಪಾಂಡುಪುತ್ರರು - ಈ ಹತ್ತೇ ಜನರಿಂದ ಭಗವತ್ಸಂಕಲ್ಪದ ಬಲದಿಂದ ಇಷ್ಟೊಂದು ಜನರ ನಾಶವು ನಡೆದಿದೆ.
ಅವಶ್ಯಮೇವ ಸಂಗ್ರಾಮೇ ಕ್ಷತ್ರಿಯೇಣ ವಿಶೇಷತಃ |
ಕರ್ತವ್ಯಂ ನಿಧನಂ ಲೋಕೇ ಕ್ಷತ್ರೇಣ ಹತಬಂಧುನಾ ॥35॥
ಲೋಕದಲ್ಲಿ ಕ್ಷತ್ರಿಯನಿಂದ ವಿಶೇಷವಾಗಿ ಮಾಡಬೇಕಾದ ಅವಶ್ಯ ಕರ್ತವ್ಯ ಯಾವುದೆಂದರೆ ಯುದ್ಧದಲ್ಲಿ ಬಂಧುಗಳನ್ನು ಕಳೆದುಕೊಂಡ ಕ್ಷತ್ರಿಯನಿಂದ ಮರಣ ಹೊಂದುವುದಾಗಿದೆ.
ಯೈರಿಯಂ ಪುರುಷವ್ಯಾಘ್ರೈರ್ವಿದ್ಯಾಬಾಹುಬಲಾನ್ವಿತೈಃ |
ಪೃಥಿವೀ ನಿಹತಾ ಸರ್ವಾ ಸರಥಾ ಸಹಯದ್ವಿಪಾ ॥36॥
ನ ಚ ರಾಜಾಽಪರಾಧ್ನೋತಿ ಪುತ್ರಸ್ತವ ಮಹಾಮನಾಃ |
ನ ಭವಾನ್ ನ ಚ ತೇ ಭೃತ್ಯಾ ನ ಕರ್ಣೋ ನ ಚ ಸೌಬಲಃ ॥37॥
ವಿದ್ಯಾಬಲ ಹಾಗೂ ಬಾಹುಬಲದಿಂದ ಕೂಡಿದ ಪುರುಷಶ್ರೇಷ್ಠರಾದ ಯಾವ ರಾಜರಿಂದ ರಥ-ಕುದುರೆ-ಆನೆಗಳು ಇವುಗಳಿಂದ ಕೂಡಿದ ಈ ಎಲ್ಲ ಪೃಥಿವಿಯೂ ನಾಶವಾಯಿತೋ ಆ ವಿಷಯದಲ್ಲಿ ಮಹಾಮನಸ್ವಿಯಾದ ರಾಜನಾದ ನಿನ್ನ ಮಗನು ಅಪರಾಧಿಯಲ್ಲ. ಅಂತೆಯೇ ನೀನಾಗಲೀ, ನಿನ್ನ ಸೇವಕರಾಗಲೀ, ಕರ್ಣನಾಗಲೀ, ಶಕುನಿಯಾಗಲೀ ಯಾರೂ ಅಪರಾಧಿಗಳಲ್ಲ.
ಯದ್ವಿನಷ್ಟಾಃ ಕುರುಕ್ಷೇತ್ರೇ ರಾಜಾನಶ್ಚ ಸಹಸ್ರಶಃ |
ಸರ್ವೇ ದೈವಕೃತೇ ಯದ್ವೈ ಕೋಽತ್ರ ಕಿಂ ವಕ್ತುಮರ್ಹತಿ ॥38॥
ಕುರುಕ್ಷೇತ್ರದಲ್ಲಿ ಸಾವಿರಾರು ಮಂದಿ ರಾಜರೆಲ್ಲರೂ ಏನು ನಾಶವಾಗಿದ್ದಾರೋ, ಯಾವ ಈ ನಾಶವು ಭಗವತ್ಸಂಕಲ್ಪದಿಂದಲೇ ನಡೆದಿದೆಯೋ ಈ ವಿಷಯದಲ್ಲಿ ಯಾರೇನು ಹೇಳಲು ಸಾಧ್ಯ?
ಗುರುರ್ಮತೋ ಭವಾನಸ್ಯ ಕೃತ್ಸ್ನಸ್ಯ ಜಗತಃ ಪ್ರಭುಃ |
ಧರ್ಮಾತ್ಮಾನಮತಸ್ತುಭ್ಯಮನುಜಾನೀಮಹೇ ಸುತಮ್ ॥39॥
ನೀನು ನಮಗೆಲ್ಲರಿಗೂ ಪೂಜನೀಯನಾಗಿರುವಿ. ಈ ಇಡೀ ಜಗತ್ತಿಗೆ ಪ್ರಭುವಾಗಿರುವಿ. ಆದ್ದರಿಂದ ನಿನ್ನ ಮಗನನ್ನು ಕುರಿತು ಈ ಸಮಾಧಾನದ ಮಾತುಗಳನ್ನು ಹೇಳುತ್ತಿದ್ದೇವೆ.
ಲಭತಾಂ ವೀರಲೋಕಂ ಸ ಸಸಹಾಯೋ ನರಾಧಿಪಃ |
ದ್ವಿಜಾಗ್ರ್ಯೈ ಸಮನುಜ್ಞಾತಃ ತ್ರಿದಿವೇ ಮೋದತಾಂ ಸುಖಮ್ ॥40॥
ಸಹಾಯಕರಿಂದ ಸಹಿತರಾದ ರಾಜನಾದ ಆ ದುರ್ಯೋಧನನು ವೀರಲೋಕವನ್ನು ಪಡೆಯಲಿ. ದ್ವಿಜಶ್ರೇಷ್ಠರಿಂದ ಆಶೀರ್ವದಿಸಲ್ಪಟ್ಟ ಅವನು ಸ್ವರ್ಗದಲ್ಲಿ ಸುಖವನ್ನು ಅನುಭವಿಸಲಿ.
ಪ್ರಾಪ್ಸ್ಯತೇ ಚ ಭವಾನ್ ಪುಣ್ಯಂ ಧರ್ಮೇಣ ಸತತಂ ಸ್ಥಿತಃ |
ವೇದ ಧರ್ಮಂ ಮಹಾಬಾಹೋ ಲೌಕ್ಯಂ ವೈದಿಕಮೇವ ಚ ॥41॥
ಹೇ ಮಹಾಬಾಹುವೇ, ಲೌಕಿಕ ಧರ್ಮವನ್ನೂ ಹಾಗೂ ವೈದಿಕ ಧರ್ಮವನ್ನೂ ತಿಳಿದಿರುವ, ಸತತವೂ ಧರ್ಮಮಾರ್ಗದಲ್ಲೇ ಇರುವ ನೀನೂ ಕೂಡ ಪುಣ್ಯಲೋಕವನ್ನೇ ಪಡೆಯುವೆ.
ದೃಷ್ಟಾಪದಾನಾಶ್ಚಾಸ್ಮಾಭಿಃ ಪಾಂಡವಾಃ ಪುರುಷರ್ಷಭಾಃ |
ಸಮರ್ಥಾಸ್ತ್ರಿದಿವಸ್ಯಾಪಿ ಪಾಲನೇ ಕಿಂ ಪುನಃ ಕ್ಷಿತೇಃ ॥42॥
ಪುರುಷಶ್ರೇಷ್ಠರಾದ ಪಾಂಡವರು ಪರಿಶುದ್ಧವಾದ ನಡತೆಯುಳ್ಳವರು ಎಂಬುದನ್ನು ನಾವು ಈಗಾಗಲೇ ನೋಡಿರುವೆವು. ಅವರು ಮೂರುಲೋಕಗಳನ್ನೂ ಪಾಲಿಸಲು ಸಮರ್ಥರಾಗಿದ್ದಾರೆ. ಮತ್ತೆ ಭೂಮಿಯ ವಿಷಯದಲ್ಲಿ ಹೇಳಬೇಕಾಗಿದ್ದೇನಿದೆ?
ಅನುವತ್ಸ್ಯಂತಿ ಕೌರವ್ಯಾಃ ಸಮೇಷು ವಿಷಮೇಷು ಚ |
ಪ್ರಜಾಃ ಕುರುಕುಲಶ್ರೇಷ್ಠ ಪಾಂಡವಾನ್ ಶೀಲಭೂಷಣಾನ್ ॥43॥
ಹೇ ಕುರುಕುಲಶ್ರೇಷ್ಠನೇ, ಕುರುದೇಶದ ಪ್ರಜೆಗಳು ಸಮ ಹಾಗೂ ವಿಷಮ ಪರಿಸ್ಥಿತಿಗಳೆರಡರಲ್ಲೂ ಶೀಲಭೂಷಣರಾದ ಪಾಂಡವರನ್ನು ಅನುಸರಿಸಿಕೊಂಡು ನಡೆಯುತ್ತಾರೆ.
ಬ್ರಹ್ಮದೇಯಾಗ್ರಹಾರಾಂಶ್ಚ ಪರಿಹಾರಾಂಶ್ಚ ಪಾರ್ಥಿವಃ |
ಪೂರ್ವರಾಜನಿಸರ್ಗಾಂಶ್ಚ ಪಾಲಯತ್ಯೇವ ಪಾಂಡವಃ ॥44॥
ರಾಜನಾದ ಪಾಂಡವನು ಬ್ರಾಹ್ಮಣರಿಗೆ ಕೊಡಬೇಕಾದ ಅಗ್ರಹಾರಗಳನ್ನೂ, ಕಷ್ಟ ಕಾಲದಲ್ಲಿ ನೀಡುವ ಪರಿಹಾರಗಳನ್ನೂ, ಹಿಂದಿನ ರಾಜರು ನೀಡಿದ ದಾನಗಳನ್ನೂ ನಿಶ್ಚಯವಾಗಿಯೂ ಪಾಲಿಸುತ್ತಾನೆ.
ದೀರ್ಘದರ್ಶೀ ಕೃತಪ್ರಜ್ಞಃ ಸದಾ ವೈಶ್ರವಣೋ ಯಥಾ |
ಅಕ್ಷುದ್ರಸಚಿವಶ್ಚಾಯಂ ಕುಂತೀಪುತ್ರೋ ಮಹಾಮನಾಃ ॥45॥

ಮಹಾಮನಸ್ವಿಯಾದ ಕುಂತೀಪುತ್ರನು ಕುಬೇರನಂತೆ ಯಾವಾಗಲೂ ದೂರದೃಷ್ಟಿಯುಳ್ಳವನೂ, ಪ್ರತಿಭಾಶಾಲಿಯೂ ಆಗಿದ್ದಾನೆ. ಅಲ್ಲದೇ ಉತ್ತಮರಾದ ಸಚಿವರಿಂದಲೂ ಇವನು ಕೂಡಿದ್ದಾನೆ.
ಅಪ್ಯಮಿತ್ರೇ ದಯಾವಾಂಶ್ಚ ಶುಚಿಶ್ಚ ಭರತರ್ಷಭ |
ಋಜುಃ ಪಶ್ಯತಿ ಮೇಧಾವೀ ಪುತ್ರವತ್ ಪಾತಿ ನಃ ಸದಾ ॥46॥
ಹೇ ಭರತರ್ಷಭನೇ, ಇವನು ಶತ್ರುಗಳಲ್ಲೂ ದಯೆಯನ್ನು ತೋರಿಸುವವನು. ಒಳಗೂ ಹೊರಗೂ ಶುಚಿಯಾಗಿರುವ ಇವನು ಮೇಧಾವಿಯಾಗಿದ್ದು ಎಲ್ಲರನ್ನೂ ಸರಳವಾಗಿ ನೋಡುವವನು. ಆದ್ದರಿಂದ ನಮ್ಮನ್ನು ಯಾವಾಗಲೂ ತನ್ನ ಮಕ್ಕಳಂತೆ ರಕ್ಷಿಸುತ್ತಾನೆ.
ವಿಪ್ರಿಯಂ ಚ ಜನಸ್ಯಾಸ್ಯ ಸಂಸರ್ಗಾದ್ ಧರ್ಮಜಸ್ಯ ವೈ |
ನ ಕರಿಷ್ಯತಿ ರಾಜರ್ಷೇ ತಥಾ ಭೀಮಾರ್ಜುನಾದಯಃ ॥47॥
ಹೇ ರಾಜರ್ಷಿಯೇ, ಈತನು ಜನರಿಗೆ ಅಪ್ರಿಯವಾದುದನ್ನು ಎಂದೂ ಮಾಡಲಾರ. ಈ ಧರ್ಮಜನ ಸಂಸರ್ಗದಿಂದ ಭೀಮಾರ್ಜುನಾದಿಗಳೂ ಹಾಗೆಯೇ ನಡೆದುಕೊಳ್ಳುವರು.
ಮಂದಾ ಮೃದುಷು ಕೌರವ್ಯಾಸ್ತೀಕ್ಷ್ಣೇಷ್ವಾಶೀವಿಷೋಪಮಾಃ |
ವೀರ್ಯವಂತೋ ಮಹಾತ್ಮಾನಃ ಪೌರಾಣಾಂ ಚ ಹಿತೇ ರತಾಃ ॥48॥
ಮೃದುಸ್ವಭಾವದ ವ್ಯಕ್ತಿಗಳಲ್ಲಿ ಸಮಾಧಾನವಾಗಿದ್ದು, ತೀಕ್ಷ್ಣವ್ಯಕ್ತಿಗಳಲ್ಲಿ ಹಾವಿನಂತೆ ಇರುವ, ಪರಾಕ್ರಮಿಗಳಾದ, ಮಹಾತ್ಮರಾದ, ಕುರುವಂಶದಲ್ಲಿ ಬಂದಿರುವ ಇವರೆಲ್ಲರೂ ಪೌರ ಜನರ ಹಿತದಲ್ಲಿ ಸದಾ ಆಸಕ್ತರಾಗಿರುವರು.
ನ ಕುಂತೀ ನ ಚ ಪಾಂಚಾಲೀ ನ ಚೋಲೂಪೀ ನ ಸಾತ್ವತೀ |
ಅಸ್ಮಿನ್ ಜನೇ ಕರಿಷ್ಯಂತಿ ಪ್ರತಿಕೂಲಾನಿ ಕರ್ಹಿಚಿತ್॥49॥
ಕುಂತಿಯಾಗಲೀ, ದ್ರೌಪದಿಯಾಗಲೀ, ಉಲೂಪಿಯಾಗಲೀ, ಸುಭದ್ರೆಯಾಗಲೀ ಯಾವತ್ತೂ ಈ ಜನರಿಗೆ ಪ್ರತಿಕೂಲವಾದುದನ್ನು ಮಾಡಲಾರರು.
ಭವತ್ಕೃತಮಿದಂ ಸ್ನೇಹಂ ಯುಧಿಷ್ಠಿರವಿವರ್ಧಿತಮ್ |
ನ ಪೃಷ್ಠತಃ ಕರಿಷ್ಯಂತಿ ಪೌರಜಾನಪದಾ ಜನಾಃ ॥50॥
ನೀನು ನಮ್ಮ ಮೇಲೆ ಮಾಡಿದ ಈ ಸ್ನೇಹವನ್ನು ಯುಧಿಷ್ಠಿರನು ಮತ್ತೂ ಬೆಳೆಸಿದ್ದಾನೆ. ಇದನ್ನು ನಗರದ, ಗ್ರಾಮೀಣಪ್ರದೇಶದ ಜನರು ನಿಶ್ಚಯವಾಗಿಯೂ ಅಡಿಗೆ ಹಾಕಲಾರರು (ಮರೆಯಲಾರರು).
ಅಧರ್ಮಿಷ್ಠಾನಪಿ ಸತಃ ಕುಂತೀಪುತ್ರಾ ಮಹಾರಥಾಃ |
ಮಾನವಾನ್ ಪಾಲಯಿಷ್ಯಂತಿ ಭೂತ್ವಾ ಧರ್ಮಪರಾಯಣಾಃ ॥51॥
ಅಧರ್ಮಿಷ್ಠರಾಗಿರುವ ಮಾನವರನ್ನೂ ಮಹಾರಥರಾದ ಕುಂತೀಪುತ್ರರು ಧರ್ಮಪರಾಯಣರಾಗಿ ಪಾಲಿಸುತ್ತಾರೆ.
ಸ ರಾಜನ್ ಮಾನಸಂ ದುಃಖಮಪನೀಯ ಯುಧಿಷ್ಠಿರಾತ್ |
ಕುರು ಕಾರ್ಯಾಣಿ ಧರ್ಮಾಣಿ ನಮಸ್ತೇ ಭರತರ್ಷಭ ॥52॥
ಹೇ ಭರತರ್ಷಭ ರಾಜನೇ, ಯುಧಿಷ್ಠಿರನ ಬಗ್ಗೆ ನಿನಗಿರುವ ಮಾನಸ ದುಃಖವನ್ನು ಬದಿಗಿರಿಸಿ ಧಾರ್ಮಿಕ ಕಾರ್ಯಗಳನ್ನು ಮಾಡು. ನಿನಗೆ ನಮಸ್ಕಾರವು.
ವೈಶಂಪಾಯನಃ
ತಸ್ಯ ತದ್ವಚನಂ ಧರ್ಮ್ಯಮನುಮಾನ್ಯ ಗುಣೋತ್ತರಮ್ |
ಸಾಧು ಸಾಧ್ವಿತಿ ಸರ್ವಃ ಸ ಜನಃ ಪ್ರತಿಗೃಹೀತವಾನ್ ॥53॥
ವೈಶಂಪಾಯನ ಆ ಶಾಕಲ್ಯನ ಧರ್ಮಾನುಸಾರಿಯಾದ, ಉತ್ಕೃಷ್ಟವಾದ ಗುಣಗಳಿಂದ ಕೂಡಿದ ಆ ಮಾತನ್ನು ಅನುಮೋದಿಸುತ್ತಾ ಎಲ್ಲ ಜನರು ಸಾಧು- ಸಾಧು ಎನ್ನುತ್ತಾ ಇದು ತಮ್ಮದೇ ಮಾತು ಎಂಬಂತೆ ಸ್ವೀಕರಿಸಿದರು.
ಧೃತರಾಷ್ಟ್ರಸ್ತು ತದ್ವಾಕ್ಯಮಭಿಪೂಜ್ಯ ಪುನಃ ಪುನಃ |
ವಿಸರ್ಜಯಾಮಾಸ ತದಾ ಸರ್ವಾಸ್ತು ಪ್ರಕೃತೀಃ ಶನೈಃ ॥54॥
ಧೃತರಾಷ್ಟ್ರನು ಆ ಮಾತನ್ನು ಮತ್ತೆ ಮತ್ತೆ ಗೌರವಿಸಿ ಎಲ್ಲ ಪ್ರಜೆಗಳನ್ನು ನಿಧಾನವಾಗಿ ಬೀಳ್ಕೊಟ್ಟನು.
ಸ ತೈಃ ಸಂಪೂಜಿತೋ ರಾಜಾ ಶಿವೇನಾವೇಕ್ಷಿತಸ್ತದಾ |
ಪ್ರಾಂಜಲಿಃ ಪೂಜಯಾಮಾಸ ತಂ ಜನಂ ಭರತರ್ಷಭ ॥55॥
ಹೇಗೆ ಭರತಶ್ರೇಷ್ಠನೇ, ಆ ಧೃತರಾಷ್ಟ್ರರಾಜನು ಜನರಿಂದ ಪೂಜಿಸಲ್ಪಟ್ಟು, ಮಂಗಳಮಯವಾದ ದೃಷ್ಟಿಯಿಂದ ನೋಡಲ್ಪಟ್ಟವನಾಗಿ ಕೈಮುಗಿದು ಎಲ್ಲರನ್ನೂ ಗೌರವಿಸಿದನು.
ತತೋ ವಿವೇಶ ಭವನಂ ಗಾಂಧಾರೀಸಹಿತೋ ನೃಪಃ |
ಆಗತಾಯಾಂ ಚ ಶರ್ವರ್ಯಾಂ ಸುಖಂ ಶೇತೇ ನರಾಧಿಪಃ ॥56॥
ಅನಂತರ ಗಾಂಧಾರೀ ಸಹಿತನಾಗಿ ರಾಜನು ಅರಮನೆಯನ್ನು ಪ್ರವೇಶಿಸಿದನು. ರಾತ್ರಿಯಾಗುತ್ತಿರಲು ನರಾಧಿಪತಿಯು ಸುಖವಾಗಿ ನಿದ್ರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರತಪೋವಾಸಾಭ್ಯನುಜ್ಞಾ ನಾಮ
ಪಂಚದಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಪಂಚದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹದಿನೈದನೆಯ ಅಧ್ಯಾಯ ಮುಗಿಯಿತು.

* * * * *

ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ಇತ್ಯುಕ್ತೋ ಧರ್ಮರಾಜಸ್ತಮನುಜಜ್ಞೇ ಸ ಚಾಶಿತಃ |
ಶಿಕ್ಷಯಾಮಾಸ ಸದ್ಧರ್ಮಾನ್ ನೀತಿಂ ಚ ವಿದುಷೇಽಪ್ಯಲಮ್ ॥
ಕೇವಲಸ್ನೇಹತೋ ರಾಜ್ಞೋ ಶುಶ್ರಾವ ವಿನಯಾಯ ಸಃ |
ಅನುಜ್ಞಾಯ ಗೃಹಂ ಪ್ರಾಪ್ತೇ ಧರ್ಮಜೇ ವಿದುರಂ ಪುನಃ ॥
ಶ್ರಾದ್ಧಾಯ ವಿತ್ತಮಾಕಾಂಕ್ಷನ್ ಪ್ರೇಷಯಾಮಾಸ ತದ್ವಚಃ |
ಶ್ರುತ್ವಾ ಯುಧಿಷ್ಠಿರೋ ಭೀಮಮಾಹ ದಾತವ್ಯಮದ್ಯ ನಃ ॥
ಪುತ್ರಪೌತ್ರಾಪ್ತಬಂಧೂನಾಂ ಶ್ರಾದ್ಧೇಚ್ಛೋರ್ವಿತ್ತಮಂಜಸಾ |
ತಮಾಹ ಭೀಮಃ ಪಾಪಾನಾಂ ವಿಮುಖಾನಾಂ ಮಧುದ್ವಿಷಃ |
ಪಾರಲೌಕಿಕಸಾಹಾಯ್ಯಂ ನ ಕಾರ್ಯಮಿತರಾರ್ಥತಃ ॥
ದತ್ತೇನಾಪಿ ಹಿ ವಿತ್ತೇನ ಪುತ್ರಶ್ರಾದ್ಧಂ ಕರಿಷ್ಯತಿ |
ತಜ್ಜ್ಞಾತ್ವಾ ದದತಾಂ ದೋಷೋ ಭವೇದಿತಿ ವಿಚಿಂತಯನ್ ॥
ಶ್ರೀವೇದವ್ಯಾಸರು ಹೀಗೆ ಹೇಳಿದಾಗ ಧರ್ಮರಾಜ ಧೃತರಾಷ್ಟ್ರನಿಗೆ ವನವಾಸಕ್ಕೆ ಒಪ್ಪಿಗೆಯಿತ್ತನು. ಧೃತರಾಷ್ಟ್ರನು ಭೋಜನ ಮಾಡಿದನು. ಧರ್ಮರಾಜನು ತಿಳಿದವನೇ ಆದರೂ ಕೇವಲ ಪ್ರೀತಿಯಿಂದ ರಾಜಾ ಧೃತರಾಷ್ಟ್ರ ಅವನಿಗೆ ಸದ್ಧರ್ಮಗಳನ್ನೂ, ನೀತಿಯನ್ನೂ ಉಪದೇಶಿಸಿದನು. ಅವನೂ ವಿನಯದಿಂದ ಅದನ್ನು ಕೇಳಿದನು. ಬಳಿಕ ವನವಾಸಕ್ಕೆ ಒಪ್ಪಿಗೆ ಕೊಟ್ಟು ಧರ್ಮರಾಜನು ತನ್ನ ಅರಮನೆಗೆ ಹಿಂತಿರುಗಿದಾಗ ಧೃತರಾಷ್ಟ್ರನು ಮಕ್ಕಳಿಗೆ ಶ್ರಾದ್ಧ ಮಾಡುವುದಕ್ಕಾಗಿ ಹಣವನ್ನು ಬಯಸಿ ವಿದುರನನ್ನು ಕಳಿಸಿಕೊಟ್ಟನು. ಧರ್ಮರಾಜನು ಅವನ ಮಾತನ್ನು ಕೇಳಿ ಭೀಮನಿಗೆ ಹೇಳಿದನು: `ಪುತ್ರ ಪೌತ್ರರಿಗೂ, ಆಪ್ತರಿಗೂ, ಬಂಧುಗಳಿಗೂ ಶ್ರಾದ್ಧ ಮಾಡ ಬಯಸುವ ಧೃತರಾಷ್ಟ್ರನಿಗೆ ನಾವು ಇಂದು ಹಣಕೊಡಬೇಕು'. ಭೀಮನು ಆಲೋಚಿಸಿದನು: `ಪಾಪಿಷ್ಠರೂ ಕೃಷ್ಣ ದ್ವೇಷಿಗಳೂ ಆದ ಕೌರವರಿಗೆ ಪಾರಲೌಕಿಕ ಸಹಾಯವನ್ನು ಮಾಡಕೂಡದು. ಭೀಷ್ಮಾದಿ ಬೇರೆ ಬಂಧುಗಳಿಗಾಗಿ ಧೃತರಾಷ್ಟ್ರನಿಗೆ ಹಣಕೊಟ್ಟರೂ ಅದರಿಂದ ಅವನು ಮಕ್ಕಳಿಗೆ ಶ್ರಾದ್ಧ ಮಾಡುವನು. ಅದನ್ನು ತಿಳಿದೂ ನಾವು ಹಣಕೊಟ್ಟರೆ ನಮಗೇ ಪಾಪ ಬರುತ್ತದೆ'. ಹೀಗೆ ಆಲೋಚಿಸಿ ಭೀಮನು ನುಡಿದನು.
ಕಷ್ಟಾತ್ ಕಷ್ಟತರಂ ಯಾಂತು ಸರ್ವೇ ದುರ್ಯೋಧನಾದಯಃ |
ಭೀಷ್ಮಾದೀನಾಂ ವಯಂ ಶ್ರಾದ್ಧಕರ್ತಾರಸ್ತೇನ ಕಿಂ ತತಃ ॥
`ದುರ್ಯೋಧನ ಮುಂತಾದವರು ಎಲ್ಲರೂ ಕಷ್ಟಕ್ಕಿಂತ ಅಧಿಕ ಕಷ್ಟಕರವಾದ ದುರ್ಗತಿಯನ್ನೇ ಹೊಂದಲಿ. ಭೀಷ್ಮ ಮುಂತಾದವರಿಗೆ ನಾವು ಶ್ರಾದ್ಧ ಮಾಡುವೆವು. ಅದಕ್ಕಾಗಿ ನಾವು ಧೃತರಾಷ್ಟ್ರನಿಗೆ ಹಣ ಕೊಟ್ಟು ಏನು ಪ್ರಯೋಜನ?'
ಕಾನೀನತ್ವಾತ್ತು ಕರ್ಣಸ್ಯ ಸಹಾಸ್ಮಾಭಿಃ ಪೃಥೈವ ಹಿ |
ಶ್ರಾದ್ಧಕರ್ಮಣ್ಯಧಿಕೃತಾ ಕಿಂ ತಸ್ಮೈ ದೀಯತೇ ಧನಮ್ ॥
ಕರ್ಣ ಕನ್ಯಾಪುತ್ರನಾದ್ದರಿಂದ ಅವನಿಗೆ ನಮ್ಮೊಂದಿಗೆ ಕುಂತಿಯೇ ಶ್ರಾದ್ಧ ಮಾಡುವಲ್ಲಿ ಅಧಿಕಾರ ಹೊಂದಿರುತ್ತಾಳೆ. ಅವನಿಗೆ ಶ್ರಾದ್ಧ ಮಾಡಲು ಧೃತರಾಷ್ಟ್ರನಿಗೆ ಏಕೆ ಹಣ ನೀಡಬೇಕು?
ಇತ್ಯುಕ್ತವಂತಂ ನೃಪತಿರರ್ಜುನಶ್ಚೋಚತುಃ ಪುನಃ |
ಯಿಯಾಸೋರ್ಯಾಚಮಾನಾಯ ನಿಜಬಾಹುಬಲಾರ್ಜಿತಮ್ ॥
ದೇಹಿ ವಿತ್ತಂ ಪರಮತಃ ಕಿಂ ತ್ವಾಮೇಷೋಽಭಿಯಾಚತೇ |
ಇತ್ಯುಕ್ತಮಪಿ ನೇತ್ಯೇವ ಬ್ರುವಾಣಂ ಶುದ್ಧಧಾರ್ಮಿಕಮ್ ॥
ಅಪ್ರೀತ್ಯಾ ಜೋಷಮಾಸ್ಸ್ವೇತಿ ಪ್ರೋಚ್ಯೋವಾಚ ಯುಧಿಷ್ಠಿರಃ |
ಕೋಶತೋ ಯದ್ ಬಹಿರ್ವಿತ್ತಂ ದಾನಭೋಗಾದಿಕಾರಣಮ್ ॥
ಮಮ ಸನ್ನಿಹಿತಂ ಸರ್ವಂ ತತ್ಪಿತ್ರೇಽದ್ಯಾರ್ಪಿತಂ ಮಯಾ |
ಏವಮೇವಾರ್ಜುನೋಽಪ್ಯಾಹ ವಿದುರಂ ಪುನರೂಚತುಃ ॥
ಮುಖ್ಯಧರ್ಮರತೇ ಭೀಮೇ ನ ಪಿತಾ ಕ್ರೋದ್ಧುಮರ್ಹತಿ ॥
ಭೀಮನು ಹೀಗೆ ಹೇಳಿದಾಗ ಧರ್ಮರಾಜನೂ ಅರ್ಜುನನೂ ಪುನಃ ಹೇಳಿದರು: `ಧೃತರಾಷ್ಟ್ರ ವನವಾಸಕ್ಕೆ ಹೋಗಲು ಬಯಸಿ ಶ್ರಾದ್ಧಕ್ಕೆ ಹಣವನ್ನು ಕೇಳುತ್ತಿರುವಾಗ ಅವನ ಬಾಹುಬಲದಿಂದ ಆರ್ಜಿತವಾದ ಹಣವನ್ನೇ ಅವನಿಗೆ ಕೊಡು. ಇನ್ನು ಮುಂದೆ ಅವನು ನಿನ್ನನ್ನು ಕೇಳುವನೆ?' ಹೀಗೆ ಹೇಳಿದರೂ ಶುದ್ಧ ಧಾರ್ಮಿಕನಾದ ಭೀಮನು `ಕೊಡಲಾರೆ' ಎಂದಾಗ ಧರ್ಮರಾಜನು ಅಸಮಾಧಾನದಿಂದ `ಹಾಗಾದರೆ ಸುಮ್ಮನಿರು' ಎಂದು ಹೇಳಿ ಪುನಃ ಹೇಳಿದನು: `ಕೋಶಕ್ಕೆ ಸೇರದೆ ಹೊರಗಿರುವ, ನನ್ನ ದಾನ ಭೋಗಾದಿಗಳಿಗೆ ಉಪಯುಕ್ತವಾದ, ನನ್ನ ಬಳಿ ಇರುವ ಎಲ್ಲ ಹಣವನ್ನೂ ನಾನು ತಂದೆಯಾದ ಧೃತರಾಷ್ಟ್ರನಿಗೆ ಕೊಡುತ್ತೇನೆ'. ಇದೇ ರೀತಿ ಅರ್ಜುನನೂ ಹೇಳಿದನು. ಬಳಿಕ ಇಬ್ಬರೂ ವಿದುರನಿಗೆ ಹೇಳಿದರು- `ಮುಖ್ಯಧರ್ಮದಲ್ಲಿ ನಿರತನಾದ ಭೀಮನಲ್ಲಿ ತಂದೆ ಕೋಪಗೊಳ್ಳಬಾರದು'.

* * * * *

ಹದಿನಾರನೆಯ ಅಧ್ಯಾಯ
ಧೃತರಾಷ್ಟ್ರನು ಭೀಷ್ಮ-ದುರ್ಯೋಧನಾದಿಗಳಿಗೆ ಶ್ರಾದ್ಧ ಮಾಡಲು ಬಯಸಿ, ವಿದುರನ ಮುಖಾಂತರ ಯುಧಿಷ್ಠಿರನಲ್ಲಿ ಸಂಪತ್ತನ್ನು ಯಾಚಿಸುವುದು. ಇದನ್ನು ಕೇಳಿ ವಿಮನಸ್ಕನಾದ ಭೀಮನಲ್ಲಿ ಅವನ ಅಭಿಪ್ರಾಯವನ್ನು ಬಲ್ಲ ಅರ್ಜುನನು ದ್ರವ್ಯವನ್ನು

ಯಾಚಿಸಿದಾಗ, ಭೀಮನು ಧೃತರಾಷ್ಟ್ರನ ಅನ್ಯಾಯಗಳನ್ನು ಸ್ಮರಿಸುತ್ತಾ, ಹಣವನ್ನು ನೀಡುವ ಬಗ್ಗೆ ತನ್ನ ಸಮ್ಮತಿ ಇಲ್ಲವೆನ್ನುವುದು.
ವೈಶಂಪಾಯನಃ
ವ್ಯುಷಿತಾಯಾಂ ರಜನ್ಯಾಂ ತು ಧೃತರಾಷ್ಟ್ರೋಽಂಬಿಕಾಸುತಃ |
ವಿದುರಂ ಪ್ರೇಷಯಾಮಾಸ ಯುಧಿಷ್ಠಿರನಿವೇಶನಮ್ ||1||
ವೈಶಂಪಾಯನ ರಾತ್ರಿ ಕಳೆದ ನಂತರ ಅಂಬಿಕಾಸುತನಾದ ಧೃತರಾಷ್ಟ್ರನು ಯುಧಿಷ್ಠಿರನ ಮಂದಿರಕ್ಕೆ ವಿದುರನನ್ನು ಕಳುಹಿಸಿದನು.
ಸ ಗತ್ವಾ ರಾಜವಚನಾದ್ ಉವಾಚಾಚ್ಯುತಮೀಶ್ವರಮ್ |
ಯುಧಿಷ್ಠಿರಂ ಮಹಾತೇಜಾಃ ಸರ್ವಬುದ್ಧಿಮತಾಂ ವರಃ ||2||
ಮಹಾತೇಜಸ್ವಿಯಾದ, ಬುದ್ಧಿವಂತರಾದ ಎಲ್ಲರಲ್ಲೂ ಶ್ರೇಷ್ಠನಾದ ಆ ವಿದುರನು ರಾಜನ ಮಾತಿನಂತೆ ಅಲ್ಲಿಗೆ ಹೋಗಿ ಸ್ಥಿರಬುದ್ಧಿಯುಳ್ಳ ರಾಜನಾದ ಯುಧಿಷ್ಠಿರನನ್ನು ಕುರಿತು ಹೀಗೆ ಹೇಳಿದನು.
ವಿದುರಃ
ಧೃತರಾಷ್ಟ್ರೋ ಮಹಾತೇಜಾ ವನವಾಸಾಯ ದೀಕ್ಷಿತಃ |
ಗಮಿಷ್ಯತಿ ವನಂ ರಾಜಾ ಕಾರ್ತಿಕೀಮಾಗತಾಮಿಮಾಮ್ ||3||
ವಿದುರ ಮಹಾತೇಜಸ್ವಿಯಾದ ಧೃತರಾಷ್ಟ್ರ ರಾಜನು ವನವಾಸಕ್ಕೆ ಹೊರಡಲು ದೀಕ್ಷಾಬದ್ಧನಾಗಿದ್ದಾನೆ. ಇದೇ ಬರುವ ಕಾರ್ತಿಕ ಹುಣ್ಣಿಮೆಯಂದು ಕಾಡಿಗೆ ಹೊರಡಲಿದ್ದಾನೆ.
ಸ ತ್ವಾಂ ಕುರುಕುಲಶ್ರೇಷ್ಠ ಕಿಂಚಿದರ್ಥಮಭೀಪ್ಸತಿ |
ಶ್ರಾದ್ಧಮಿಚ್ಛತಿ ದಾತುಂ ಸ ಗಾಂಗೇಯಸ್ಯ ಮಹಾತ್ಮನಃ ||4||
ದ್ರೋಣಸ್ಯ ಸೋಮದತ್ತಸ್ಯ ಬಾಹ್ಲೀಕಸ್ಯ ಚ ಧೀಮತಃ |
ಪುತ್ರಾಣಾಂ ಚೈವ ಸರ್ವೇಷಾಂ ಯೇ ಚಾನ್ಯೇ ಸುಹೃದೋ ಹತಾಃ ||5||
ಯದಿ ವಾಽಪ್ಯನುಜಾನೀಷೇ ಸೈಂಧವಾಪಸದಸ್ಯ ಚ ||6||
ಹೇ ಕುರುಕುಲಶ್ರೇಷ್ಠನೇ, ಆ ಧೃತರಾಷ್ಟ್ರನು ನಿನ್ನಲ್ಲಿ ಸ್ವಲ್ಪ ಸಂಪತ್ತನ್ನು ಇಚ್ಛೆ ಪಡುತ್ತಿದ್ದಾನೆ. ಏಕೆಂದರೆ ಅವನು ಮಹಾತ್ಮನಾದ ಗಂಗಾಪುತ್ರ ಭೀಷ್ಮನಿಗೂ, ದ್ರೋಣನಿಗೂ, ಸೋಮದತ್ತನಿಗೂ, ಬುದ್ಧಿಶಾಲಿಯಾದ ಬಾಹ್ಲೀಕ ರಾಜನಿಗೂ, ಅಲ್ಲದೆ ತನ್ನ ಎಲ್ಲ ಪುತ್ರರಿಗೂ, ಅಲ್ಲದೆ ಯುದ್ಧದಲ್ಲಿ ಮಡಿದ ಎಲ್ಲ ಮಿತ್ರರಿಗೂ, ಅಷ್ಟಲ್ಲದೆ ನೀನು ಒಪ್ಪುವಿಯಾದರೆ ನೀಚನಾದ ಆ ಸೈಂಧವನಿಗೂ ಶ್ರಾದ್ಧವನ್ನು ಮಾಡಲು ಬಯಸುತ್ತಿದ್ದಾನೆ.
ವೈಶಂಪಾಯನಃ
ಏತಚ್ಛ್ರುತ್ವಾ ತು ವಚನಂ ವಿದುರಸ್ಯ ಯುಧಿಷ್ಠಿರಃ |
ಹೃಷ್ಟಃ ಸಂಪೂಜಯಾಮಾಸ ಗುಡಾಕೇಶಶ್ಚ ಪಾಂಡವಃ ||7||
ವೈಶಂಪಾಯನ ವಿದುರನ ಈ ಮಾತನ್ನು ಕೇಳಿ ಯುಧಿಷ್ಠಿರನೂ, ಪಾಂಡುಪುತ್ರನಾದ ಗುಡಾಕೇಶನಾದ ಅರ್ಜುನನೂ ಸಂತೋಷಪಟ್ಟು ಗೌರವಿಸಿದರು.
ನ ತು ಭೀಮೋ ದೃಢಕ್ರೋಧಃ ತದ್ವಚೋ ಜಗೃಹೇ ತದಾ |
ವಿದುರಸ್ಯ ಮಹಾತೇಜಾ ದುರ್ಯೋಧನಕೃತಂ ಸ್ಮರನ್ ||8||
ಆದರೆ ಇನ್ನೂ ಆರದ ಕೋಪವುಳ್ಳ, ಮಹಾತೇಜಸ್ವಿಯಾದ ಭೀಮನು ದುರ್ಯೋಧನನು ಮಾಡಿಕೊಂಡಿದ್ದನ್ನು ಸ್ಮರಿಸಿಕೊಳ್ಳುತ್ತಾ ವಿದುರನ ಆ ಮಾತನ್ನು ಆಗ ಸ್ವೀಕರಿಸಲಿಲ್ಲ.
ಅಭಿಪ್ರಾಯಂ ವಿದಿತ್ವಾ ತು ಭೀಮಸೇನಸ್ಯ ಫಲ್ಗುನಃ |
ಕಿರೀಟೀ ಕಿಂಚಿದಾನಮ್ಯ ಭೀಮಂ ವಚನಮಬ್ರವೀತ್ ||9||
ಭೀಮಸೇನನ ಆ ಅಭಿಪ್ರಾಯವನ್ನು ತಿಳಿದ ಕಿರೀಟಿಯಾದ ಅರ್ಜುನನು ತಲೆಯನ್ನು ಸ್ವಲ್ಪ ಬಗ್ಗಿಸಿ ಭೀಮನನ್ನು ಕುರಿತು ಈ ಮಾತನ್ನು ಹೇಳಿದನು.
ಅರ್ಜುನಃ
ಭೀಮ ರಾಜಾ ಪಿತಾ ವೃದ್ಧೋ ವನವಾಸಾಯ ದೀಕ್ಷಿತಃ |
ದಾತುಮಿಚ್ಛತಿ ಸರ್ವೇಷಾಂ ಸುಹೃದಾಮೌರ್ಧ್ವದೈಹಿಕಮ್ ||10||
ಅರ್ಜುನ ಹೇ ಭೀಮನೇ, ವೃದ್ಧನಾದ, ನಮ್ಮ ತಂದೆಯಾದ ರಾಜನು ವನವಾಸಕ್ಕೋಸ್ಕರ ದೀಕ್ಷಿತನಾಗಿದ್ದಾನೆ. ಅವನು ತನ್ನೆಲ್ಲ ಸ್ನೇಹಿತರಿಗೂ ಪರಲೋಕದಲ್ಲಿ ಸುಖಪ್ರಾಪ್ತಿಗಾಗಿ ದಾನವನ್ನು ನೀಡಲು ಬಯಸುತ್ತಿದ್ದಾನೆ.
ಭವತಾ ನಿರ್ಜಿತಂ ವಿತ್ತಂ ದಾತುಮಿಚ್ಛತಿ ಕೌರವಃ |
ಭೀಷ್ಮಾದೀನಾಂ ಮಹಾಬಾಹೋ ತದನುಜ್ಞಾತುಮರ್ಹಸಿ ||11||
ನೀನು ಗೆದ್ದಿರುವ ಸಂಪತ್ತನ್ನು ಭೀಷ್ಮಾದಿಗಳಿಗೋಸ್ಕರ ಕೌರವನು ನೀಡಲು ಬಯಸುತ್ತಿದ್ದಾನೆ. ಹೇ ಮಹಾಬಾಹುವೇ, ಅದನ್ನು ನೀನು ಅನುಮತಿಸಬೇಕಾಗಿದೆ.
ದಿಷ್ಟ್ಯಾ ತ್ವದ್ಯ ಮಹಾಬಾಹೋ ಧೃತರಾಷ್ಟ್ರಃ ಪ್ರಯಾಚತಿ |
ಯಾಚಿತೋಽಯಂ ಪುರಾಽಸ್ಮಾಭಿಃ ಪಶ್ಯ ಕಾಲಸ್ಯ ಪರ್ಯಯಮ್ ||
ಹೇ ಮಹಾಬಾಹುವೇ, ಕಾಲದ ವೈಪರೀತ್ಯವನ್ನು ನೋಡು. ಹಿಂದೆ ನಮ್ಮಿಂದ ಯಾಚಿತನಾದ ಈ ಧೃತರಾಷ್ಟ್ರನು ಭಾಗ್ಯವಶಾತ್ ಇಂದು ನಮ್ಮನ್ನು ಯಾಚಿಸುತ್ತಿದ್ದಾನೆ.
ಯೋಽಸೌ ಪೃಥಿವ್ಯಾಃ ಕೃತ್ಸ್ನಾಯಾ ಭರ್ತಾ ಭೂತ್ವಾ ನರಾಧಿಪಃ |

ಪರ್ಯೈರ್ವಿನಿಹತಾಮಾತ್ಯೋ ವನಂ ಗಂತುಮಭೀಪ್ಸತಿ ॥13॥
ಯಾವನು ಇಡೀ ಭೂಮಿಯ ಸಂರಕ್ಷಕನಾಗಿ ರಾಜನಾಗಿದ್ದನೋ ಅಂತಹ ಇವನು ಶತ್ರುಗಳಿಂದ ತನ್ನೆಲ್ಲ ಒಡನಾಡಿಗಳನ್ನು ಕಳೆದುಕೊಂಡು ಕಾಡಿಗೆ ಹೋಗಲು ಬಯಸುತ್ತಿದ್ದಾನೆ.
ಮಾ ತೇಽನ್ಯತ್ ಪುರುಷವ್ಯಾಘ್ರ ದಾನಾದ್ ಭವತು ದರ್ಶನಮ್ ।
ಅಯಶಸ್ಯಮತೋಽನ್ಯತ್ ಸ್ಯಾದ್ ಅಧರ್ಮಶ್ಚ ಮಹಾಭುಜ ॥14॥
ಹೇ ಪುರುಷವ್ಯಾಘ್ರನೇ, ದಾನವನ್ನು ನೀಡುವುದಕ್ಕಿಂತ ಬೇರೆಯಾದುದು ನಿನ್ನ ಸಿದ್ಧಾಂತ ಆಗದಿರಲಿ. ಏಕೆಂದರೆ ಅದಕ್ಕಿಂತ ಬೇರೆಯಾದುದು ನಮಗೆ ಅಪಕೀರ್ತಿಯನ್ನು ಉಂಟು ಮಾಡುವುದು. ಹೇ ಮಹಾಭುಜನೇ, ಅದರಿಂದ ಅಧರ್ಮವೂ ಉಂಟಾದೀತು.
ರಾಜಾನಮುಪತಿಷ್ಠಸ್ವ ಜ್ಯೇಷ್ಠಂ ಭ್ರಾತರಮೀಶ್ವರಮ್ ।
ಅರ್ಹಸ್ತ್ವಮಸಿ ದಾತುಂ ವೈ ನಾದಾತುಂ ಭರತರ್ಷಭ ॥15॥
ಹೇ ಭರತರ್ಷಭನೇ, ಸಮರ್ಥನಾದ ನಿನ್ನ ಹಿರಿಯಣ್ಣನಾದ ರಾಜನನ್ನು ಒಮ್ಮನಸ್ಸಿನಿಂದ ಕೂಡಿಕೊ. ನೀನು ಕೊಡಲು ಯೋಗ್ಯನಾದವನೇ ಹೊರತು ಕೊಡದಿರಲು ಅಲ್ಲ.
ವೈಶಂಪಾಯನಃ
ಏವಂ ಬ್ರುವಾಣಂ ಕೌಂತೇಯಂ ಧರ್ಮರಾಜೋಭ್ಯಪೂಜಯತ್ ।
ಭೀಮಸೇನಸ್ತು ಸಕ್ರೋಧಮುವಾಚ ವಿಜಯಂ ತದಾ ॥16॥
ವೈಶಂಪಾಯನ ಹೀಗೆ ಹೇಳುತ್ತಿರುವ ಕೌಂತೇಯನಾದ ಅರ್ಜುನನನ್ನು ಧರ್ಮರಾಜನು ಅಭಿನಂದಿಸಿದನು. ಆಗ ಭೀಮಸೇನನು ಅರ್ಜುನನನ್ನು ಕುರಿತು ಕೋಪಾವಿಷ್ಟನಾಗಿ ಹೀಗೆ ಹೇಳಿದನು.
ಭೀಮಃ
ವಯಂ ಭೀಷ್ಮಸ್ಯ ಕುರ್ಮೋ ಹಿ ಪ್ರೇತಕಾರ್ಯಾಣಿ ಫಲ್ಗುನ ।
ಸೋಮದತ್ತಸ್ಯ ನೃಪತೇರ್ಭೂರಿಶ್ರವಸ ಏವ ಚ ॥17॥
ಬಾಹ್ಲಿಕಸ್ಯ ಚ ರಾಜರ್ಷೇರ್ದ್ರೋಣಸ್ಯ ಚ ಮಹಾತ್ಮನಃ ।
ಅನ್ಯೇಷಾಂ ಚೈವ ಸುಹೃದಾಂ ಕುಂತೀ ಕರ್ಣಾಯ ದಾಸ್ಯತಿ ॥18॥
ಭೀಮ ಹೇ ಫಲ್ಗುನನೇ, ಭೀಷ್ಮನಿಗೆ, ರಾಜನಾದ ಸೋಮದತ್ತನಿಗೆ, ಅಲ್ಲದೇ ಭೂರಿಶ್ರವನಿಗೆ, ರಾಜರ್ಷಿಯಾದ ಬಾಹ್ಲೀಕನಿಗೆ, ಮಹಾತ್ಮನಾದ ದ್ರೋಣನಿಗೆ ಮತ್ತು ಬೇರೆಲ್ಲ ಸ್ನೇಹಿತರಿಗೆ ಪ್ರೇತಕಾರ್ಯಗಳನ್ನು ನಾವೇ ಮಾಡೋಣ. ಕರ್ಣನಿಗೆ ಕುಂತಿಯು ಶ್ರಾದ್ಧ-ದಾನಗಳನ್ನು ಮಾಡುತ್ತಾಳೆ.
ಶ್ರಾದ್ಧಾನಿ ಪುರುಷವ್ಯಾಘ್ರ ಮಾ ದಾತ್ ಕೌರವಕೋ ನೃಪಃ ।
ಏವಂ ತೇ ವರ್ತತಾಂ ಬುದ್ಧಿರ್ಮಾ ವೋ ನಂದಂತು ಶತ್ರವಃ ॥19॥
ಹೇ ಪುರುಷವ್ಯಾಘ್ರನೇ, ಇವರಿಗೆ ಶ್ರಾದ್ಧ ಮತ್ತು ದಾನಗಳನ್ನು ಈ ಕೆಟ್ಟ ಕೌರವ ರಾಜನು ನೀಡದಿರಲಿ. ಹೀಗೆ ನಿನ್ನ ಬುದ್ಧಿ ಇರಬೇಕೇ ಹೊರತು ನಿಮಗೆ ಶತ್ರುಗಳಾದ ದುರ್ಯೋಧನಾದಿಗಳು ಆನಂದ ಪಡಲಿ ಎಂದು ಇರಬಾರದು.
ಕಷ್ಟಾತ್ ಕಷ್ಟತರಂ ಯಾಂತು ಸರ್ವೇ ದುರ್ಯೋಧನಾದಯಃ ।
ಯೈರಿಯಂ ಪೃಥಿವೀ ಸರ್ವಾ ಘಾತಿತಾ ಕುಲಪಾಂಸನೈಃ ॥20॥
ಯಾವ ಕುಲಧ್ವಂಸಕರಿಂದ ಈ ಇಡೀ ಭೂಮಿಯು ಹಿಂಸಿಸಲ್ಪಟ್ಟಿತೋ ಅಂತಹ ದುರ್ಯೋಧನನೇ ಮೊದಲಾದ ಎಲ್ಲರೂ ಕಷ್ಟಕ್ಕಿಂತಲೂ ಕಷ್ಟಕರವಾದ ನರಕಗಳನ್ನು ಹೊಂದಲಿ.
ಕುತಸ್ತ್ವಮದ್ಯ ವಿಸ್ಮೃತ್ಯ ವೈರಂ ದ್ವಾದಶವಾರ್ಷಿಕಮ್ ।
ಅಜ್ಞಾತವಾಸಗಮನಂ ದ್ರೌಪದೀಶೋಕವರ್ಧನಮ್ ॥21॥
ನೀನು ಹನ್ನೆರಡು ವರ್ಷಗಳ ವೈರವನ್ನು ಮರೆತು ಹೇಗಿರುವಿ? ಅಲ್ಲದೇ ದ್ರೌಪದಿಯ ಶೋಕವನ್ನು ಹೆಚ್ಚಿಸುವ ಅಜ್ಞಾತವಾಸಗಮನವನ್ನು ಹೇಗೆ ಮರೆಯುವಿ?
ಕ್ವ ತದಾ ಧೃತರಾಷ್ಟ್ರಸ್ಯ ಸ್ನೇಹೋಽಸ್ಮಾಸ್ವಭವತ್ ತಥಾ ।
ಕೃಷ್ಣಾಜಿನೋಪಸಂವೀತೋ ಹೃತಾಭರಣಭೂಷಣಃ ॥22॥
ಸಾರ್ಧಂ ಪಾಂಚಾಲಪುತ್ರ್ಯಾ ತ್ವಂ ರಾಜಾನಮುಪಜಗ್ಮಿವಾನ್ ॥23॥
ಕ್ವ ತದಾ ದ್ರೋಣಭೀಷ್ಮೌ ತೌ ಸೋಮದತ್ತೋಽಪಿ ವಾಽಭವತ್ ।
ಯತ್ರ ದ್ವಾದಶ ವರ್ಷಾಣಿ ವನೇ ವನ್ಯೇನ ಜೀವಸಿ ॥24॥
ನ ತದಾ ತ್ವಪಿತಾ ಜ್ಯೇಷ್ಠಃ ಪಿತೃತ್ವೇನಾಭಿವೀಕ್ಷತಿ ॥25॥
ಆ ಸಂದರ್ಭದಲ್ಲಿ ನಮ್ಮ ಮೇಲೆ ಧೃತರಾಷ್ಟ್ರನಿಗೆ ಸ್ನೇಹವುಂಟಾಗಿತ್ತೇನು? ಹಾಗೆಯೇ ಆಭರಣ ಹಾಗೂ ಅಲಂಕಾರಗಳನ್ನು ಕಳೆದುಕೊಂಡು ಕೃಷ್ಣಾಜಿನವನ್ನು ಉಟ್ಟುಕೊಂಡು ಪಾಂಚಾಲ ಪುತ್ರಿಯಾದ ದ್ರೌಪದಿಯೊಂದಿಗೆ ನೀನು ರಾಜನನ್ನು ಅನುಸರಿಸಿಕೊಂಡು ನಡೆದೆ. ಆಗ ದ್ರೋಣ-ಭೀಷ್ಮರು ಎಲ್ಲಿದ್ದರು? ಅಥವಾ ಸೋಮದತ್ತನು ಇದ್ದನೇನು? ಯಾವ ಕಾಡಿನಲ್ಲಿ ಹನ್ನೆರಡು ವರ್ಷಗಳ ಕಾಲ ಕಾಡಿನ ಉತ್ಪನ್ನಗಳಿಂದ ಪ್ರಾಣಗಳನ್ನು ಧರಿಸಿರುವೆಯೋ ಆಗ ನಿನ್ನ ದೊಡ್ಡಪ್ಪನು ತಂದೆಯಂತೆ ನಮ್ಮನ್ನು ನೋಡಲಿಲ್ಲ.
ಕಿಂ ನು ತದ್ವಿಸ್ಮೃತಂ ತೇಽದ್ಯ ಯದೇಷ ಕುಲಪಾಂಸನಃ ।
ದುರ್ವೃತ್ತೋ ವಿದುರಂ ಪ್ರಾಹ ದ್ಯೂತೇ ಕಿಂ ಜಿತಮಿತ್ಯುತ ॥26॥
ಕುಲದೂಷಕನಾದ, ಕೆಟ್ಟ ನಡತೆಯ ಇವನು ದ್ಯೂತದ ಸಮಯದಲ್ಲಿ ವಿದುರನೊಂದಿಗೆ ಏನನ್ನು ಗೆದ್ದರು? ಏನನ್ನು ಗೆದ್ದರು?

ಎಂದೇನು ಹೇಳಿದನೋ ಅದು ಈಗ ನಿನಗೆ ಮರೆತಿದೆಯೇನು?
ವೈಶಂಪಾಯನಃ
ತಮೇವಂವಾದಿನಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ಉವಾಚ ಭ್ರಾತರಂ ಧೀಮಾನ್ ಜೋಷಮಾಸ್ಸ್ವೇತಿ ಭರ್ತ್ಸಯನ್ ॥27॥
ವೈಶಂಪಾಯನ ಹೀಗೆ ಮಾತನಾಡುತ್ತಿರುವ ಆ ಭೀಮನನ್ನು ಕುರಿತು ಧೀಮಂತನಾದ ಕುಂತೀಪುತ್ರನಾದ ಯುಧಿಷ್ಠಿರ ರಾಜನು ಗದರಿಸಿವವನಂತೆ `ಸುಮ್ಮನಿರು' ಎಂದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಭೀಮವಾಕ್ಯಂ ನಾಮ ಷೋಡಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಷೋಡಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹದಿನಾರನೆಯ ಅಧ್ಯಾಯ ಮುಗಿಯಿತು.
* * * * *
ಹದಿನೇಳನೆಯ ಅಧ್ಯಾಯ
ಭೀಮನು ದುರ್ಯೋಧನಾದಿಗಳ ಉದ್ದೇಶದಿಂದ ಶ್ರಾದ್ಧ ಮಾಡಲು ಸಂಪತ್ತನ್ನು ನೀಡಬಾರದೆಂದು ಅಭಿಪ್ರಾಯ ಪಟ್ಟಾಗ, ಯುಧಿಷ್ಠಿರನು ವಿದುರನಲ್ಲಿ ತನ್ನ ವೈಯಕ್ತಿಕ ಭಂಡಾರದಿಂದ ಹಣವನ್ನು ನೀಡುವೆನೆಂದು ತಿಳಿಸುವುದು.
ಅರ್ಜುನಃ
ಭೀಮ ಜ್ಯೇಷ್ಠೋ ಗುರುರ್ಮೇ ತ್ವಂ ನಾತೋಽನ್ಯದ್ ವಕ್ತುಮುತ್ಸಹೇ |
ಧೃತರಾಷ್ಟ್ರೋಽಪಿ ರಾಜರ್ಷಿಃ ಸರ್ವಥಾ ಮಾನಮರ್ಹತಿ ॥1॥
ಅರ್ಜುನ ಹೇ ಭೀಮನೇ, ನೀನು ನನಗೆ ಹಿರಿಯನಾಗಿದ್ದು ಗುರುವೂ ಆಗಿರುವಿ. ಆದ್ದರಿಂದ ನಾನು ಬೇರೇನನ್ನೂ ಹೇಳಲು ಬಯಸುವುದಿಲ್ಲ. ಹಾಗಿದ್ದರೂ ರಾಜಶ್ರೇಷ್ಠನಾದ ಧೃತರಾಷ್ಟ್ರನು ಎಲ್ಲ ವಿಷಯದಲ್ಲೂ ಗೌರವಾರ್ಹನಾಗಿರುವನು.
ನ ಸ್ಮರಂತ್ಯಪರಾದ್ಧಾನಿ ಸ್ಮರಂತಿ ಸುಕೃತಾನಿ ಚ |
ಅಸಂಭಿನ್ನಾರ್ಥಮರ್ಯಾದಾಃ ಸಾಧವಃ ಪುರುಷೋತ್ತಮಾಃ ॥2॥
ವಸ್ತು ಮರ್ಯಾದೆಗಳನ್ನು ಮೀರದಿರುವ ಪುರುಷಶ್ರೇಷ್ಠನಾದ ಸಜ್ಜನರು ಅಪರಾಧಗಳನ್ನು ಎಂದೂ ನೆನಪಿಸಿಕೊಳ್ಳುವುದಿಲ್ಲ. ಸುಕೃತಗಳನ್ನು ಮಾತ್ರ ಸ್ಮರಿಸುವರು.
ಯುಧಿಷ್ಠಿರಃ
ಇದಂ ಮದ್ವಚನಾತ್ ಕ್ಷತ್ತಃ ಕೌರವಂ ಬ್ರೂಹಿ ಪಾರ್ಥಿವಮ್ |
ಯಾವದಿಚ್ಛತಿ ಪುತ್ರಾಣಾಂ ದಾತುಂ ತಾವದ್ ದದಾಮ್ಯಹಮ್ ॥3॥
ಯುಧಿಷ್ಠಿರ ಹೇ ವಿದುರನೇ, ಕೌರವ ರಾಜನನ್ನು ಕುರಿತು ನಾನು ಮಾತು ಕೊಟ್ಟಂತೆ ಹೀಗೆ ಹೇಳು. ಅವನು ಮಕ್ಕಳ ಶ್ರಾದ್ಧಕ್ಕಾಗಿ ಎಷ್ಟು ಸಂಪತ್ತನ್ನು ಬಯಸುವನೋ ಅಷ್ಟನ್ನು ನಾನು ಕೊಡುತ್ತೇನೆ.
ಭೀಷ್ಮಾದೀನಾಂ ತು ಸರ್ವೇಷಾಂ ಸುಹೃದಾಮುಪಕಾರಿಣಾಮ್ |
ಮಮ ಕೋಶಾದಿವಿಭವೇ ಮಾಭೂದ್ ಭೀಮಃ ಸುದುರ್ಮನಾಃ ॥4॥
ಭೀಷ್ಮನೇ ಮೊದಲಾದ ಎಲ್ಲ ಮಿತ್ರರಿಗೂ, ಉಪಕಾರಿಗಳಿಗೂ ನನ್ನ ಸ್ವಯಾರ್ಜಿತ ಸಂಪತ್ತಿನಲ್ಲೇ ಶ್ರಾದ್ಧವಾಗಲಿ, ಭೀಮನಿಗೆ ಬೇಸರವಾಗುವುದು ಬೇಡ.
ವೈಶಂಪಾಯನಃ
ಇತ್ಯುಕ್ತಸ್ತ್ವ ಧರ್ಮರಾಜಸ್ತಮರ್ಜುನಂ ಪ್ರತ್ಯಪೂಜಯತ್ |
ಭೀಮಸೇನಃ ಕಟಾಕ್ಷೇಣ ವೀಕ್ಷಾಂಚಕ್ರೇ ಧನಂಜಯಮ್ ॥5॥
ತತಃ ಸ ವಿದುರಂ ಧೀಮಾನ್ ವಾಕ್ಯಮಾಹ ಯುಧಿಷ್ಠಿರಃ ॥6॥
ವೈಶಂಪಾಯನ ಹೀಗೆ ಹೇಳಿ ಧರ್ಮರಾಜನು ಆ ಅರ್ಜುನನನ್ನು ಅಭಿನಂದಿಸಿದನು. ಭೀಮಸೇನನು ಅರ್ಜುನನನ್ನು ತನ್ನ ಕಡೆಗಣ್ಣಿನಿಂದ ನೋಡಿದನು. ಅನಂತರ ಬುದ್ಧಿಶಾಲಿಯಾದ ಯುಧಿಷ್ಠಿರನು ವಿದುರನನ್ನು ಕುರಿತು ಈ ಮಾತನ್ನು ಹೇಳಿದನು.
ಯುಧಿಷ್ಠಿರಃ
ನ ಭೀಮಸೇನೇ ಕೋಪಂ ಸ ನೃಪತಿಃ ಕರ್ತುಮರ್ಹತಿ ॥7॥
ಪರಿಕ್ಲಿಷ್ಟೋ ಹಿ ಭೀಮಸ್ತು ಹಿಮವಾತಾತಪಾದಿಭಿಃ |
ದುಃಖೈರ್ಬಹುವಿಧೈರ್ಧೀಮಾನ್ ಅರಣ್ಯೇ ವಿದಿತಂ ತವ ॥8॥
ಯುಧಿಷ್ಠಿರ ಆ ಧೃತರಾಷ್ಟ್ರರಾಜನು ಭೀಮಸೇನನ ವಿಷಯದಲ್ಲಿ ಸಿಟ್ಟನ್ನು ತಾಳುವುದು ಯೋಗ್ಯವಲ್ಲ. ಏಕೆಂದರೆ ಭೀಮನು ಅರಣ್ಯದಲ್ಲಿ ಚಳಿ, ಗಾಳಿ, ಬಿಸಿಲು ಇವುಗಳೇ ಮೊದಲಾದ ನಾನಾ ರೀತಿಯ ದುಃಖಗಳಿಂದ ಜರ್ಝರಿತನಾಗಿದ್ದಾನೆ. ಇದು ನಿನಗೆ ಗೊತ್ತೇ ಇದೆ.
ಕಿಂ ತು ಮದ್ವಚನಾದ್ ಬ್ರೂಹಿ ರಾಜಾನಂ ಭರತರ್ಷಭಮ್ |
ಯದ್ಯದಿಚ್ಛತಿ ಯಾವಚ್ಚ ಗೃಹ್ಯತಾಂ ಮೇ ಗೃಹಾದಿತಿ ॥9॥
ಭರತಶ್ರೇಷ್ಠನಾದ ರಾಜನನ್ನು ಕುರಿತು ಈ ನನ್ನ ಮಾತನ್ನು ಹೇಳು. ಅವನು ಯಾವುದನ್ನೆಲ್ಲ ಎಷ್ಟು ಪ್ರಮಾಣದಲ್ಲಿ ಬಯಸುವನೋ ಅವೆಲ್ಲವನ್ನೂ ನನ್ನ ಮನೆಯಿಂದ ಸ್ವೀಕರಿಸಲಿ.
ಯನ್ಮಾತ್ಸರ್ಯಮಯಂ ಭೀಮಃ ಕರೋತಿ ಭೃಶದುಃಖಿತಃ |

ನ ತನ್ಮನಸಿ ಕರ್ತವ್ಯಮಿತಿ ವಾಚ್ಯಃ ಸ ಪಾರ್ಥಿವಃ ॥10॥
ಹಿಂದೆ ಬಹಳ ಕಷ್ಟಪಟ್ಟ ಈ ಭೀಮನು ಏನು ಮಾತ್ಸರ್ಯವನ್ನು ತೋರಿಸುತ್ತಿದ್ದಾನೋ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದೆಂದು ರಾಜನಿಗೆ ಹೇಳಬೇಕು.
ಯನ್ಮಮಾಸ್ತಿ ಧನಂ ಕಿಂಚಿದ್ ಅರ್ಜುನಸ್ಯ ಚ ವೇಶ್ಮನಿ |
ತಸ್ಯ ಸ್ವಾಮೀ ಮಹಾರಾಜ ಇತಿ ವಾಚ್ಯಶ್ಚ ಪಾರ್ಥಿವಃ ॥11॥
ನನ್ನ ಹಾಗೂ ಅರ್ಜುನನ ಮನೆಯಲ್ಲಿ ಏನೆಲ್ಲ ಸಂಪತ್ತಿದೆಯೋ ಅವೆಲ್ಲಕ್ಕೂ ಧೃತರಾಷ್ಟ್ರನೇ ಒಡೆಯ ಎಂದು ರಾಜನಿಗೆ ಹೇಳಬೇಕು.
ದದಾತು ರಾಜಾ ವಿಪ್ರೇಭ್ಯೋ ಯಥೇಷ್ಟಂ ಕ್ರಿಯತಾಮಿತಿ |
ಪುತ್ರಾಣಾಂ ಸುತರಾಂ ಚೈವ ಗಚ್ಛತ್ವಾನೃಣ್ಯಮದ್ಯ ಸಃ ॥12॥
ರಾಜನು ಬ್ರಾಹ್ಮಣರಿಗೆ ಇಷ್ಟ ಬಂದಷ್ಟು ದಾನ ಮಾಡಲಿ. ತನ್ನ ಇಷ್ಟದಂತೆ ಶ್ರಾದ್ಧಾದಿಗಳನ್ನೂ ನಡೆಸಲಿ. ನಿಶ್ಚಯವಾಗಿಯೂ ಮಕ್ಕಳ ಋಣದಿಂದ ಇಂದು ಅವನು ಮುಕ್ತಿ ಹೊಂದಲಿ.
ಇದಂ ಚಾಪಿ ಶರೀರಂ ಮೇ ತತ್ರಾಯತ್ತಂ ಜನಾಧಿಪ |
ಧನಾನಿ ಚೇತಿ ವಿದ್ಧಿ ತ್ವಂ ಕ್ಷತ್ತರ್ನಾಸ್ತ್ಯತ್ರ ಸಂಶಯಃ ॥13॥
ಹೇ ಜನಾದಿಪತಿಯಾದ ವಿದುರನೇ, ಈ ನನ್ನ ಶರೀರವು ಹಾಗೂ ನನ್ನ ಎಲ್ಲ ಸಂಪತ್ತು ಅವರ ಅಧೀನವಾಗಿದೆ ಎಂದು ನೀನು ತಿಳಿಯಬೇಕು. ಇದರಲ್ಲಿ ಯಾವುದೇ ಸಂಶಯಬೇಡ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಯುಧಿಷ್ಠಿರವಚನಂ ನಾಮ ಸಪ್ತದಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಸಪ್ತದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹದಿನೇಳನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ಇತ್ಯುಕ್ತೋ ವಿತ್ತಮಾದಾಯ ಗತ್ವಾ ಕ್ಷತ್ತಾಽಗ್ರಜೇಽಬ್ರವೀತ್ |
ಯುಧಿಷ್ಠಿರಾರ್ಜುನೌ ಭಕ್ತಿಂ ನಿತರಾಂ ತ್ವಯಿ ಚಕ್ರತುಃ ॥
ಯುಧಿಷ್ಠಿರ, ಅರ್ಜುನರು ಹೀಗೆ ಹೇಳಿದಾಗ ವಿದುರ ಹಣವನ್ನು ತೆಗೆದುಕೊಂಡು ಹೋಗಿ ಧೃತರಾಷ್ಟ್ರನ ಬಳಿಯಲ್ಲಿ ಹೇಳಿದ-
`ಯುಧಿಷ್ಠಿರ, ಅರ್ಜುನರು ನಿನ್ನಲ್ಲಿ ಬಹಳ ಭಕ್ತಿ ತೋರಿದರು.
ನಾತಿಹೃಷ್ಟಸ್ತ್ವದಾಜ್ಞಾಯಾಂ ಭೀಮಸ್ತನ್ಮಾ ಕ್ರುಧೋಽತ್ರ ಚ |
ಶುದ್ಧೇ ಕ್ಷತ್ರಿಯಧರ್ಮೇ ಹಿ ನಿರತೋಽಯಂ ವೃಕೋದರಃ ॥
ನಿನ್ನಾಜ್ಞೆ ಪಾಲಿಸುವುದರಲ್ಲಿ ಭೀಮ ಹೆಚ್ಚು ಉತ್ಸಾಹ ತೋರುವುದಿಲ್ಲ. ಅವನು ಶುದ್ಧ ಕ್ಷತ್ರಿಯಧರ್ಮದಲ್ಲಿ ನಿರತನಾಗಿದ್ದಾನೆ. ಅದರಿಂದ ಅವನಲ್ಲಿ ಕೋಪ ಮಾಡಬೇಡ.
ನೃಪಾರ್ಜುನೌ ಧರ್ಮರತಾವಪಿ ಲೋಕಕೃಪಾಪರೌ |
ಅಜಾತಕೋಪಸ್ತಚ್ಛ್ರುತ್ವಾ ಧೃತರಾಷ್ಟ್ರಃ ಪ್ರಶಾಂತಧೀಃ ॥
`ಯುಧಿಷ್ಠಿರ- ಅರ್ಜುನರೂ ಕ್ಷತ್ರಿಯಧರ್ಮದಲ್ಲಿ ನಿರತರೇ, ಆದರೆ ಅವರು ಲೋಕದ ಮೇಲೆ ಕೃಪೆ ಮಾಡುವರು'. ವಿದುರ ಹೀಗೆ ಹೇಳಿದ್ದನ್ನು ಕೇಳಿ ಧೃತರಾಷ್ಟ್ರನು ಶಾಂತಬುದ್ಧಿಯವನಾದ. ಅವನಲ್ಲಿ ಭೀಮನ ಬಗ್ಗೆ ಕೋಪ ಉಂಟಾಗಲಿಲ್ಲ.
ಕೃತ್ವಾ ಶ್ರಾದ್ಧಾನಿ ಸರ್ವೇಷಾಂ ಮಹಾದಾನಾನ್ಯನಾರತಮ್ |
ದಶರಾತ್ರಂ ದದೌ ಶುದ್ಧಮನಸಾ ನಿರ್ಋಣತ್ವಧೀಃ ॥
ಪುತ್ರರ ಋಣ ಪರಿಹಾರವಾಗಲಿ ಎಂಬ ಅಭಿಪ್ರಾಯ ಉಳ್ಳ ಧೃತರಾಷ್ಟ್ರನು ಶುದ್ಧ ಮನಸ್ಸಿನಿಂದ ಎಲ್ಲರಿಗೂ ಶ್ರಾದ್ಧ ಮಾಡಿ, ಹತ್ತು ದಿನಗಳ ಕಾಲ ನಿರಂತರವಾಗಿ ಮಹಾದಾನಗಳನ್ನು ಮಾಡಿದನು.
* * * * *
ಹದಿನೆಂಟನೆಯ ಅಧ್ಯಾಯ
ವಿದುರನು ಧೃತರಾಷ್ಟ್ರನಲ್ಲಿ ಭೀಷ್ಮಾದಿಗಳಿಗೆ ಶ್ರಾದ್ಧ ಮಾಡಲು ಯುಧಿಷ್ಠಿರನು ಹಣವನ್ನು ನೀಡಲು ಒಪ್ಪಿದ್ದಾನೆ ಎಂದು ನಿವೇದಿಸುವುದು.
ವೈಶಂಪಾಯನಃ
ಏವಮುಕ್ತಸ್ತು ರಾಜ್ಞಾ ಸ ವಿದುರೋ ಬುದ್ಧಿಸತ್ತಮಃ |
ಧೃತರಾಷ್ಟ್ರಮುಪೇತ್ಯೈವಂ ವಾಕ್ಯಮಾಹ ಯಥಾರ್ಥವತ್ ॥1॥
ವೈಶಂಪಾಯನ ರಾಜನಾದ ಯುಧಿಷ್ಠಿರನಿಂದ ಈ ರೀತಿಯಾಗಿ ಹೇಳಲ್ಪಟ್ಟ ಬುದ್ಧಿವಂತರಲ್ಲಿ ಶ್ರೇಷ್ಠನಾದ ಆ ವಿದುರನು ಧೃತರಾಷ್ಟ್ರನ ಬಳಿ ಸಾಗಿ ಈ ರೀತಿಯಾಗಿ ಯಥಾರ್ಥವಾದ ಮಾತುಗಳನ್ನು ಆಡಿದನು.
ವಿದುರಃ
ಉಕ್ತೋ ಯುಧಿಷ್ಠಿರೋ ರಾಜಾ ಭವದ್ವಚನಮಾದಿತಃ |
ಸ ಚ ಸಂಶ್ರುತ್ಯ ವಾಕ್ಯಂ ತೇ ಪ್ರಶಶಂಸ ಮಹೀಪತಿಃ ॥2॥
ವಿದುರ ರಾಜನಾದ ಯುಧಿಷ್ಠಿರನಿಗೆ ಮೊದಲಿನಿಂದ ಆರಂಭಿಸಿ ನಿನ್ನ ಎಲ್ಲ ಮಾತುಗಳನ್ನು ಹೇಳಿದೆನು. ಮಹೀಪತಿಯಾದ ಅವನು ನಿನ್ನ ಮಾತುಗಳನ್ನು ಕೇಳಿ ಬಹುವಾಗಿ ಪ್ರಶಂಸಿಸಿದನು.

ಬೀಭತ್ಸುಶ್ಚ ಮಹಾತೇಜಾ ನಿವೇದಯತಿ ತೇ ಗೃಹಾನ್ |
ವಸು ತಚ್ಚ ಗೃಹೇ ಯಚ್ಚ ಪ್ರಾಣಾನಪಿ ಚ ಕೇವಲಾನ್ ॥3॥
ಮಹಾತೇಜಸ್ವಿಯಾದ ಬೀಭತ್ಸುವಾದ ಅರ್ಜುನನೂ ಕೂಡ ನಿನಗೆ ಮನೆಯನ್ನೂ, ಮನೆಯಲ್ಲಿ ಏನೆಲ್ಲ ಸಂಪತ್ತಿದೆಯೋ ಅದೆಲ್ಲ ಸಂಪತ್ತನ್ನೂ ಮತ್ತು ತನ್ನ ಪ್ರಾಣಗಳನ್ನೂ ಅರ್ಪಿಸುತ್ತಾನೆ.
ಧರ್ಮರಾಜಸ್ತು ಪುತ್ರಸ್ತೇ ರಾಜ್ಯಂ ಪ್ರಾಣಾನ್ ಧನಾನಿ ಚ |
ಅನುಜಾನಾತಿ ರಾಜರ್ಷೇ ಯಚ್ಚಾನ್ಯದಪಿ ಕಿಂಚನ ॥4॥
ಹೇ ರಾಜರ್ಷಿಯೇ, ನಿನ್ನ ಪುತ್ರನಾದ ಧರ್ಮರಾಜನೂ ಕೂಡ ರಾಜ್ಯವನ್ನೂ, ತನ್ನ ಪ್ರಾಣವನ್ನೂ, ಸಂಪತ್ತುಗಳನ್ನೂ ಅವನ ಬಳಿ ಇನ್ನೂ ಏನೇನಿದೆಯೋ ಅವೆಲ್ಲವನ್ನೂ ನಿನಗೆ ನೀಡಲು ಒಪ್ಪಿರುವನು.
ಭೀಮಸ್ತು ಸರ್ವದುಃಖಾನಿ ಸಂಸ್ಮೃತ್ಯ ಬಹುಲಾನ್ಯುತ |
ಕೃಚ್ಛ್ರಾದಿವ ಮಹಾಬಾಹುರನುಜಜ್ಞೇ ವಿನಿಃಶ್ವಸನ್ ॥5॥
ಆದರೆ ಮಹಾಬಲಶಾಲಿಯಾದ ಭೀಮನು ಹಿಂದೆ ಅನುಭವಿಸಿದ ಬಹುಪ್ರಕಾರವಾದ ಎಲ್ಲ ರೀತಿಯ ದುಃಖಗಳನ್ನೂ ಸ್ಮರಿಸಿಕೊಂಡು ನಿಟ್ಟುಸಿರು ಬಿಡುತ್ತಾ ಬಹಳ ಕಷ್ಟದಿಂದ ಎಂಬಂತೆ ಒಪ್ಪಿದನು.
ಸ ರಾಜ್ಞಾ ಧರ್ಮಶೀಲೇನ ಭ್ರಾತ್ರಾ ಬೀಭತ್ಸುನಾ ತಥಾ |
ಅನುನೀತೋ ಮಹಾಬಾಹುಃ ಸೌಹೃದೇ ಸ್ಥಾಪಿತೋಽಪಿ ಚ ॥6॥
ನಂತರ ಮಹಾಬಾಹುವಾದ ಅವನು ಧರ್ಮಶೀಲನಾದ ರಾಜನಿಂದಲೂ, ಸಹೋದರನಾದ ಅರ್ಜುನನಿಂದಲೂ ಸಮಾಧಾನಗೊಂಡವನಾಗಿ ಸೌಹಾರ್ದದಿಂದಲೇ ಇದ್ದಾನೆ.
ನ ಚ ಮನ್ಯುಸ್ತ್ವಯಾ ಕಾರ್ಯ ಇತಿ ತ್ವಾಂ ಪ್ರಾಹ ಧರ್ಮರಾಟ್ |
ಸಂಸ್ಮೃತ್ಯ ಭೀಮಸ್ತದ್ವೈರಂ ಯದನ್ಯಾಯವದಾಚರೇತ್ ॥7॥
ಭೀಮನು ಆ ಹಿಂದಿನ ವೈರವನ್ನು ಸ್ಮರಿಸಿಕೊಂಡು ಅನ್ಯಾಯವೆಸಗುವಂತೆ ಏನು ವರ್ತಿಸಿರುವನೋ ಆ ವಿಷಯದಲ್ಲಿ ನೀನು ಕೋಪಗೊಳ್ಳಬಾರದು ಎಂದು ಧರ್ಮರಾಜನು ಹೇಳಿ ಕಳುಹಿಸಿದ್ದಾನೆ.
ಏವಂಪ್ರಾಯೋ ಹಿ ಧರ್ಮೋಽಯಂ ಕ್ಷತ್ರಿಯಾಣಾಂ ನರಾಧಿಪ |
ಶುದ್ಧೇನ ಕ್ಷತ್ರಧರ್ಮೇಣ ನಿರತೋಽಯಂ ವೃಕೋದರಃ ॥8॥
ಏಕೆಂದರೆ ಹೆಚ್ಚಾಗಿ ಕ್ಷತ್ರಿಯರ ಮನೋಧರ್ಮವೇ ಹೀಗಿದೆ. ಹೇ ನರಾಧಿಪನೇ, ಈ ವೃಕೋದರನು ಶುದ್ಧವಾದ ಕ್ಷತ್ರಧರ್ಮವನ್ನು ಆಸಕ್ತಿಯಿಂದ ನಡೆಸುವವನು.
ವೃಕೋದರಕೃತೇ ಚಾಹಮರ್ಜುನಶ್ಚ ಪುನಃ ಪುನಃ |
ಪ್ರಸಾದಯಾವ ನೃಪತೇ ಭವಾನ್ ಪ್ರಭುರಿಹಾಸ್ತಿ ಯಃ ॥9॥
ವೃಕೋದರನು ಮಾಡಿದ ಆ ಕೆಲಸಕ್ಕಾಗಿ ನಾನು ಮತ್ತು ಅರ್ಜುನನು ಮತ್ತೆ ಮತ್ತೆ ನಿನ್ನಲ್ಲಿ ಕ್ಷಮೆ ಯಾಚಿಸುತ್ತಿದ್ದೇವೆ. ಹೇ ರಾಜನೇ, ಇಲ್ಲಿ ಯಾರೆಲ್ಲ ಇರುವರೋ ಅವರೆಲ್ಲರಿಗೂ ನೀನು ಪ್ರಭುವಾಗಿರುವಿ.
ಪ್ರದದಾತು ಭವಾನ್ ವಿತ್ತಂ ಯಾವದಿಚ್ಛತಿ ಪಾರ್ಥಿವ |
ತ್ವಮೀಶ್ವರೋ ನೋ ರಾಜ್ಯಸ್ಯ ಪ್ರಾಣಾನಾಂ ಚೈವ ಭಾರತ ॥10॥
ಹೇ ಪಾರ್ಥಿವನೇ, ನೀನು ಎಷ್ಟು ಕೊಡಬೇಕೆಂದು ಬಯಸಿರುವೆಯೋ ಅಷ್ಟೂ ಸಂಪತ್ತನ್ನು ದಾನ ಮಾಡು. ಹೇ ಭಾರತನೇ, ನಮ್ಮ ಪ್ರಾಣಕ್ಕೂ, ರಾಜ್ಯಕ್ಕೂ ನೀನೇ ಈಶ್ವರನಾಗಿರುವಿ.
ಬ್ರಹ್ಮದೇಯಾಗ್ರಹಾರಾಂಶ್ಚ ಪುತ್ರಾಣಾಂ ಚೌರ್ಧ್ವದೇಹಿಕೇ |
ಇತೋ ರತ್ನಾನಿ ಗಾಶ್ಚೈವ ದಾಸೀದಾಸಮಜಾವಿಕಮ್ ॥11॥
ಅರ್ಚಯಿತ್ವಾ ಕುರುಶ್ರೇಷ್ಠೋ ಬ್ರಾಹ್ಮಣೇಭ್ಯಃ ಪ್ರಯಚ್ಛತು |
ದೀನಾಂಧಕೃಪಣೇಭ್ಯಶ್ಚ ತತ್ರ ತತ್ರ ನೃಪಾಜ್ಞಯಾ ॥12॥
ಬಹ್ವನ್ನರಸಪಾನಾಢ್ಯಂ ಸರ್ವಂ ವಿದುರ ಕಾರಯ |
ಗವಾಂ ನಿಪಾನಾನ್ಯನ್ಯಚ್ಚ ವಿವಿಧಂ ಪುಣ್ಯಕರ್ಮ ಯತ್ ॥13॥
ಇತಿ ಮಾಮಬ್ರವೀದ್ ರಾಜಾ ಪಾರ್ಥಶ್ಚೈವ ಧನಂಜಯಃ |
ಯದತ್ರಾನಂತರಂ ಕಾರ್ಯಂ ತದ್ ಭವಾನ್ ವಕ್ತುಮರ್ಹತಿ ॥14॥
ತನ್ನ ಮಕ್ಕಳ ಔರ್ಧ್ವದೈಹಿಕ ಕ್ರಿಯೆಯಲ್ಲಿ ಬ್ರಾಹ್ಮಣರಿಗೆ ಕೊಡಬೇಕಾದ ಅಗ್ರಹಾರಗಳನ್ನೂ ಮತ್ತು ಇಲ್ಲಿಂದ ರತ್ನಗಳನ್ನೂ, ಗೋವುಗಳನ್ನೂ, ದಾಸಿಯರನ್ನೂ, ದಾಸರನ್ನೂ, ಆಡು-ಕುರಿಗಳನ್ನೂ ಕುರುಶ್ರೇಷ್ಠನು ಬ್ರಾಹ್ಮಣರನ್ನು ಪೂಜಿಸಿ ಅವರಿಗೆ ಕೊಡಲಿ. ಹಾಗೆಯೇ ರಾಜನ ಆಜ್ಞೆಯಂತೆ ಅಲ್ಲಲ್ಲಿ ದೀನ-ಅಂಧ-ಕೃಪಣರಿಗೂ ಕೂಡ ಬಹಳವಾದ ರಸಭರಿತವಾದ ಅನ್ನ-ಪಾನಗಳಿಂದ ಕೂಡಿದ ಎಲ್ಲ ರೀತಿಯ ಅನ್ನಗಳನ್ನೂ ನೀಡಲಿ. ಅಲ್ಲದೇ ಹೇ ವಿದುರನೇ, ಹಸುಗಳಿಗೆ ಅನುಕೂಲಕರವಾದ ನೀರಿನ ತೊಟ್ಟಿಗಳನ್ನೂ, ಇನ್ನು ಬೇರೇನು ಪುಣ್ಯಕರ್ಮಗಳಿವೆಯೋ ಆ ಎಲ್ಲ ಪುಣ್ಯಕರ್ಮಗಳನ್ನೂ ನೀನು ಮಾಡಿಸು. ಹೀಗೆ ರಾಜನಾದ ಯುಧಿಷ್ಠಿರನು, ಪಾರ್ಥನಾದ ಧನಂಜಯನೂ ನನಗೆ ತಿಳಿಸಿದ್ದಾರೆ. ಇಷ್ಟಾದ ನಂತರ ಏನು ಮಾಡಬೇಕಾಗಿದೆಯೋ ಅದನ್ನು ನೀನು ತಿಳಿಸುವವನಾಗು.
ವೈಶಂಪಾಯನಃ
ಇತ್ಯುಕ್ತೋ ವಿದುರೇಣಾಥ ಧೃತರಾಷ್ಟ್ರೋಽಭಿನಂದ್ಯ ತಮ್ |
ಮನಶ್ಚಕ್ರೇ ಮಹಾದಾನೇ ಕಾರ್ತಿಕ್ಯಾಂ ಜನಮೇಜಯ ॥15॥
ವೈಶಂಪಾಯನ ಹೇ ಜನಮೇಜಯನೇ, ವಿದುರನು ಹೀಗೆ ಹೇಳಿದಾಗ ಧೃತರಾಷ್ಟ್ರನು ವಿದುರನನ್ನು ಅಭಿನಂದಿಸಿ ಕಾರ್ತಿಕ

ಪೂರ್ಣಿಮೆಯಂದು ಮಹಾದಾನಗಳನ್ನು ನಡೆಸಬೇಕೆಂದು ಮನಸ್ಸು ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ವಿದುರವಾಕ್ಯಂ ನಾಮ ಅಷ್ಟಾದಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಅಷ್ಟಾದಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿಯಿತು.
* * * * *
ಹತ್ತೊಂಬತ್ತನೆಯ ಅಧ್ಯಾಯ
ಧೃತರಾಷ್ಟ್ರನು ಭೀಷ್ಮ-ದುರ್ಯೋಧನಾದಿಗಳ ಉದ್ದೇಶದಿಂದ ಶ್ರಾದ್ಧ
ಮಾಡುತ್ತಾ, ಹಣ-ವಸ್ತ್ರ ಹಾಗೂ ಅನ್ನಾದಿಗಳನ್ನು ನೀಡುವ
ಮೂಲಕ ಬ್ರಾಹ್ಮಣರನ್ನು ಸಂತೋಷಪಡಿಸುವುದು.
ವೈಶಂಪಾಯನಃ
ವಿದುರೇಣೈವಮುಕ್ತಸ್ತು ಧೃತರಾಷ್ಟ್ರೋ ಜನಾಧಿಪಃ ।
ಪ್ರೀತಿಮಾನಭವದ್ ರಾಜಾ ರಾಜ್ಞೋ ಜಿಷ್ಣೋಶ್ಚ ಕರ್ಮಣಾ ॥1॥
ವೈಶಂಪಾಯನ ಜನಾಧಿಪತಿಯಾದ ಧೃತರಾಷ್ಟ್ರನಿಗೆ ವಿದುರನು ಹೀಗೆ ಹೇಳಿದಾಗ ರಾಜನು ರಾಜರಾದ ಯುಧಿಷ್ಠಿರ ಮತ್ತು ಅರ್ಜುನರ ಈ ಕೆಲಸದಿಂದ ಸಂತೋಷಗೊಂಡನು.
ತತೋಽಭಿರೂಪಾನ್ ಭೀಷ್ಮಾಯ ಬ್ರಾಹ್ಮಣಾನೃಷಿಸತ್ತಮಾನ್ ।
ಪುತ್ರಾರ್ಥೇ ಸುಹೃದಾಂ ಚೈವ ಸ ಸಮೀಕ್ಷ್ಯ ಸಹಸ್ರಶಃ ॥2॥
ಕಾರಯಿತ್ವಾಽನ್ನಪಾನಾನಿ ಯಾನಾನ್ಯಾಚ್ಛಾದನಾನಿ ಚ ।
ಸುವರ್ಣಮಣಿರತ್ನಾನಿ ದಾಸೀದಾಸಪರಿಚ್ಛದಾನ್ ॥3॥
ಕಂಬಲಾನಿ ಚ ರತ್ನಾನಿ ಗ್ರಾಮಾನ್ ಕ್ಷೇತ್ರಾಣ್ಯಜಾವಿಕಾನ್ ।
ಅಲಂಕಾರಾನಥಾಶ್ವಾಂಶ್ಚ ಕಾಮ್ಯಾಶ್ಚೈವ ವರಸ್ತ್ರಿಯಃ ॥4॥
ಆದಿಶ್ಯಾದಿಶ್ಯ ವಿಪ್ರೇಭ್ಯೋ ಸ ದದೌ ನೃಪಸತ್ತಮಃ ॥5॥
ಅನಂತರ ರಾಜಶ್ರೇಷ್ಠನಾದ ಆ ಧೃತರಾಷ್ಟ್ರನು ಭೀಷ್ಮರಿಗಾಗಿ, ತನ್ನ ಮಕ್ಕಳಿಗಾಗಿ ಹಾಗೆ ತನ್ನೆಲ್ಲ ಮಿತ್ರರಿಗಾಗಿ ಶ್ರಾದ್ಧ ಮಾಡುವುದಕ್ಕಾಗಿ ಪಂಡಿತರಾದ ಬ್ರಾಹ್ಮಣರನ್ನೂ, ಶ್ರೇಷ್ಠ ಋಷಿಗಳನ್ನೂ ಚೆನ್ನಾಗಿ ಪರೀಕ್ಷಿಸಿ ಸಾವಿರಾರು ಸಂಖ್ಯೆಯಲ್ಲಿ ಕರೆಸಿದನು.
ಅನ್ನ-ಪಾನಾದಿಗಳನ್ನು ಸಿದ್ಧಪಡಿಸಿ ಅವುಗಳನ್ನು, ವಾಹನಗಳನ್ನು, ಮನೆಗಳನ್ನು, ಬಂಗಾರ ಹಾಗೂ ಮಣಿ-ರತ್ನಗಳನ್ನು, ದಾಸಿಯರನ್ನು, ದಾಸರನ್ನು, ಹಾಸುವ ವಸ್ತ್ರಗಳನ್ನು, ಕಂಬಳಿಗಳನ್ನು, ನಾನಾ ರೀತಿಯ ರತ್ನಗಳನ್ನು, ಗ್ರಾಮಗಳನ್ನು, ತೋಟ-ಗದ್ದೆಗಳನ್ನು, ಆಡು-ಕುರಿಗಳನ್ನು, ಅಲಂಕಾರ ಸಾಮಗ್ರಿಗಳನ್ನು, ಕುದುರೆಗಳನ್ನು, ಸುಂದರಿಯರಾದ ಶ್ರೇಷ್ಠ ಸ್ತ್ರೀಯರನ್ನೂ ಕರೆದು ಕರೆದು ಬ್ರಾಹ್ಮಣರಿಗೆ ನೀಡಿದನು.
ದ್ರೋಣಂ ಸಂಕೀರ್ತ್ಯ ಭೀಷ್ಮಂ ಚ ಸೋಮದತ್ತಂ ಚ ಬಾಹ್ಲಿಕಮ್ ।
ದುರ್ಯೋಧನಂ ಚ ರಾಜಾನಂ ಪುತ್ರಾಂಶ್ಚೈವ ಪೃಥಕ್ ಪೃಥಕ್ ॥6॥
ಜಯದ್ರಥಪುರೋಗಾಣಾಂ ಸುಹೃದಾಂ ಚೈವ ಸರ್ವಶಃ ।
ಸ ಶ್ರಾದ್ಧಯಜ್ಞೋ ವವೃತೇ ಬಹುಗೋಪಶುದಕ್ಷಿಣಃ ॥7॥
ದ್ರೋಣರನ್ನೂ, ಭೀಷ್ಮರನ್ನೂ, ಸೋಮದತ್ತನನ್ನೂ, ಬಾಹ್ಲೀಕರಾಜನನ್ನೂ, ರಾಜನಾದ ದುರ್ಯೋಧನನನ್ನೂ, ಅವನ ಉಳಿದ ಮಕ್ಕಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಅವರ ಹೆಸರು, ಗೋತ್ರಗಳನ್ನು ಹೇಳಿ, ಅದೇ ರೀತಿ ಜಯದ್ರಥನೇ ಮೊದಲಾದ ಸ್ನೇಹಿತರಿಗೂ ಕೂಡ ಎಲ್ಲ ರೀತಿಯಿಂದ ಯೋಗ್ಯವಾಗಿ ನಡೆಸಲ್ಪಟ್ಟ ಆ ಶ್ರಾದ್ಧಯಜ್ಞವು ಅನೇಕ ರೀತಿಯ ಗೋವುಗಳು, ಪಶುಗಳೇ ದಕ್ಷಿಣೆಯಾಗಿ ಉಳ್ಳದ್ದಾಗಿ ಶೋಭಿಸಿತು.
ಅನೇಕಧನರತ್ನೌಘೋ ಯುಧಿಷ್ಠಿರಮತೇ ತದಾ ॥8॥
ಅನಿಶಂ ಯತ್ರ ಪುರುಷಾ ಗಣಕಾ ಲೇಖಕಾಸ್ತಥಾ ।
ಯುಧಿಷ್ಠಿರಸ್ಯ ವಚನಾದಾಪೃಚ್ಛಂತಿ ಸ್ಮ ತಂ ನೃಪಮ್ ॥9॥
ಆ ಸಮಯದಲ್ಲಿ ಯುಧಿಷ್ಠಿರನ ಅಭಿಪ್ರಾಯದಂತೆ ನಾನಾ ರೀತಿಯ ಹಣ ಹಾಗೂ ರತ್ನಗಳ ರಾಶಿಯೇ ಅಲ್ಲಿತ್ತು. ಯುಧಿಷ್ಠಿರನ ಆಜ್ಞೆಯಂತೆ ಅಲ್ಲಿ ಲೆಕ್ಕಿಗರು ಮತ್ತು ಬರವಣಿಗೆಯ ವ್ಯಕ್ತಿಗಳು ನಿರಂತರವಾಗಿ ರಾಜನನ್ನು ಈ ರೀತಿ ಕೇಳುತ್ತಿದ್ದರು.
ಆಜ್ಞಾಪಯ ತ್ವಮೇತೇಭ್ಯಃ ಪ್ರದೇಯಂ ದೀಯತಾಮಿತಿ ॥10॥
ತದುಪಸ್ಥಿತಮೇವಾತ್ರ ವಚನಾಂತೇ ಪ್ರದೃಶ್ಯತೇ ॥11॥
`ಈಗ ಬಂದ ವ್ಯಕ್ತಿಗಳಿಗೆ ಏನನ್ನು ಕೊಡಲಿ? ನೀನು ಹೇಳಬಹುದಾದ ಎಲ್ಲವೂ ಇಲ್ಲಿ ಸಿದ್ಧವಾಗಿದೆ. ನೀನು ಹೇಳಿದೊಡನೆ ಅದನ್ನು ಮುಂದೆ ತರಲಾಗುತ್ತದೆ. ಹಾಗಾಗಿ ಆಜ್ಞಾಪಿಸು' ಎನ್ನುತ್ತಿದ್ದರು.
ಶತೇ ದೇಯೇ ದಶಶತಂ ಸಹಸ್ರೇ ಚಾಯುತಂ ತಥಾ ।
ದೀಯತೇ ವಚನಾದ್ ರಾಜ್ಞಃ ಕುಂತೀಪುತ್ರಸ್ಯ ಧೀಮತಃ ॥12॥
ಏವಂ ಸ ವಸುಧಾರಾಭಿರ್ವರ್ಷಮಾಣೋ ನೃಪಾಂಬುದಃ ।
ತರ್ಪಯಾಮಾಸ ವಿಪ್ರಾಂಸ್ತಾನ್ ವರ್ಷಾದ್ ಭೂಮಿಮಿವಾಂಬುದಃ ॥
ಧೀಮಂತನಾದ ರಾಜನಾದ ಕುಂತೀಪುತ್ರನ ಆಜ್ಞೆಯಂತೆ ನೂರು ಕೊಡಬೇಕಾಗಿದ್ದಲ್ಲಿ ಸಾವಿರವನ್ನು, ಸಾವಿರ ಕೊಡಬೇಕಾಗಿದ್ದಲ್ಲಿ

ಹತ್ತು ಸಾವಿರವನ್ನು ಆ ಜನರು ದಾನ ಮಾಡುತ್ತಿದ್ದರು. ಹೀಗೆ ಧಾರಾಕಾರವಾಗಿ ಸಂಪತ್ತನ್ನು ಸುರಿಯುತ್ತಿರುವ ಆ ರಾಜನೆಂಬ ಮೋಡವು ನೀರ್ದುಂಬಿದ ಮೋಡವು ಮಳೆಯಿಂದ ಭೂಮಿಯನ್ನು ಹೇಗೋ ಹಾಗೆ ಆ ಬ್ರಾಹ್ಮಣರನ್ನು ಸಂತೃಪ್ತಿಪಡಿಸಿತು.
ತತೋಽನಂತರಮೇವಾತ್ರ ಸರ್ವವರ್ಣಾನ್ ಮಹಾಮತಿಃ |
ಅನ್ನಪಾನರಸೌಘೇಣ ಪ್ಲಾವಯಾಮಾಸ ಪಾರ್ಥಿವಃ ॥14॥
ಹೀಗೆ ದಾನ ಮಾಡಿದ ಸ್ವಲ್ಪ ಹೊತ್ತಿನಲ್ಲೇ ಮಹಾಮತಿಯಾದ ಆ ರಾಜನು ಎಲ್ಲ ವರ್ಣದವರನ್ನೂ ಅನ್ನ-ಪಾನರಸಗಳ ಪ್ರವಾಹದಿಂದ ಮೀಯಿಸಿಬಿಟ್ಟನು.
ಸವಸೌತ್ರಫೇನ ರತ್ನೌಘೋ ಮೃದಂಗನಿನದಧ್ವನಿಃ |
ಗವಾಶ್ವಮಹಿಷಾವರ್ತೋ ನಾನಾರತ್ನಮಹಾಕರಃ ॥15॥
ಗ್ರಾಮಾಗ್ರಹಾರಕುಲ್ಯಾಢ್ಯೋ ಮಣಿಹೇಮಜಲಾರ್ಣವಃ |
ಜಗತ್ ಸಂಪ್ಲಾವಯಾಮಾಸ ಧೃತರಾಷ್ಟ್ರೋಡುಪೋ ಧ್ರುವಮ್ ॥16॥
ವಸ್ತ್ರಗಳ ಸಮೂಹದಿಂದ ಕೂಡಿದ, ರತ್ನಗಳೇ ಪ್ರವಾಹವಾಗಿ ಉಳ್ಳ, ಮೃದಂಗ ಮೊದಲಾದ ಮಂಗಳವಾದ್ಯಗಳ ಧ್ವನಿಯೇ ಭೋರ್ಗರೆತವಾಗಿ ಉಳ್ಳ, ಗೋವು ಅಶ್ವಗಳು, ಕೋಣಗಳು ಇವುಗಳೇ ಸುಳಿಗಳಾಗಿ ಉಳ್ಳ, ನಾನಾ ರೀತಿಯ ರತ್ನಗಳಿಗೆ ಬಹುದೊಡ್ಡ ಉತ್ಪತ್ತಿ ಸ್ಥಾನವಾದ, ಗ್ರಾಮ-ಅಗ್ರಹಾರಗಳೆಂಬ ನದಿಗಳಿಂದ ಕೂಡಿದ, ಮಣಿ ಹಾಗೂ ಚಿನ್ನಗಳೇ ನೀರಾಗಿ ಉಳ್ಳ ಸಮುದ್ರವನ್ನು ಬಳಸಿಕೊಂಡು ಧೃತರಾಷ್ಟ್ರನೆಂಬ ಚಂದ್ರನು ನಿಶ್ಚಯವಾಗಿಯೂ ಇಡೀ ಜಗತ್ತನ್ನು ತೋಯಿಸಿಬಿಟ್ಟನು.
ಏವಂ ಸ ಪುತ್ರಪೌತ್ರಾಣಾಂ ಪಿತೄಣಾಮಾತ್ಮನಸ್ತದಾ |
ಗಾಂಧಾರ್ಯಾಪಿ ಮಹಾರಾಜ ಪ್ರದದೌ ಚೌರ್ಧ್ವದೇಹಿಕಮ್ ॥17॥
ಹೇ ಮಹಾರಾಜ ಜನಮೇಜಯನೇ, ಈ ರೀತಿ ಧೃತರಾಷ್ಟ್ರನು ಪುತ್ರ-ಪೌತ್ರರಿಗೂ, ಪಿತೃಗಳಿಗೂ ಶ್ರಾದ್ಧ ಮಾಡುವ ಸಂದರ್ಭದಲ್ಲೇ ಗಾಂಧಾರಿಯು ತನ್ನ ಪಿತೃಗಳಿಗೂ, ಪುತ್ರಪೌತ್ರರಿಗೂ ಪರಲೋಕದಲ್ಲಿ ತೃಪ್ತಿಯನ್ನು ನೀಡುವ ದಾನಾದಿಗಳನ್ನು ಮಾಡಿದಳು.
ಪರಿಶ್ರಾಂತೋ ಯದಾಸೀತ್ ಸ ದದದ್ದಾನಾನ್ಯನೇಕಶಃ |
ತತೋ ನಿವರ್ತಯಾಮಾಸ ದಾನಯಜ್ಞಂ ಕುರೂದ್ವಹಃ ॥18॥
ಹೀಗೆ ಕುರುವಂಶಜನಾದ ಆ ಧೃತರಾಷ್ಟ್ರನು ಅನೇಕ ರೀತಿಯಲ್ಲಿ ದಾನಗಳನ್ನು ಮಾಡುತ್ತಾ ಯಾವಾಗ ಆಯಾಸಗೊಂಡನೋ ಆಗ ಆ ದಾನಯಜ್ಞವನ್ನು ಸಮಾಪ್ತಿಗೊಳಿಸಿದನು.
ಏವಂ ಸ ರಾಜಾ ಕೌರವ್ಯಶ್ಚಕ್ರೇ ದಾನಮಹೋತ್ಸವಮ್ |
ನಟನರ್ತಪ್ರಗೀತಾಢ್ಯಂ ಬಹ್ವನ್ನರಸದಕ್ಷಿಣಮ್ ॥19॥
ಹೀಗೆ ಕುರುವಂಶಜನಾದ ಆ ಧೃತರಾಷ್ಟ್ರ ರಾಜನು ನಾಟಕ, ನರ್ತನ, ಸಂಗೀತಗಳ ವೈಭವದಿಂದ ಕೂಡಿದ, ಬಹಳವಾದ ಅನ್ನದಾನ ಮತ್ತು ದಕ್ಷಿಣೆಗಳಿಂದ ಕೂಡಿದ ದಾನ ಮಹೋತ್ಸವವನ್ನು ನಡೆಸಿದನು.
ದಶಾಹಮೇವಂ ದಾನಾನಿ ದತ್ತ್ವಾ ರಾಜಾಽಂಬಿಕಾಸುತಃ |
ಬಭೂವ ಪುತ್ರಪೌತ್ರಾಣಾಮಾನೃಣೋ ಭರತರ್ಷಭ ॥20॥
ಹೇ ಭರತರ್ಷಭ ಜನಮೇಜಯನೇ, ಅಂಬಿಕಾಸುತನಾದ ಧೃತರಾಷ್ಟ್ರ ರಾಜನು ಹೀಗೆ ಹತ್ತು ದಿನಗಳ ಕಾಲ ದಾನಗಳನ್ನು ಮಾಡಿ ತನ್ನ ಪುತ್ರ ಹಾಗೂ ಪೌತ್ರರ ಋಣದಿಂದ ಮುಕ್ತನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರೇಣ ಭೀಷ್ಮಾದೀನಾಂ ಶ್ರಾದ್ಧದಾನಕಥನಂ ನಾಮ ಏಕೋನವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಏಕೋನವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ಸರ್ವಂ ಸಮರ್ಪ್ಯ ಗೋವಿಂದೇ ಪಾರ್ಥೇಭ್ಯೋಽನ್ಯೇಭ್ಯ ಏವ ಚ |
ಸ್ವಜನೇಭ್ಯಃ ಸಮಾದಾಯ ಸ್ರವನ್ನೇತ್ರೇಭ್ಯ ಉಚ್ಚಧೀಃ ॥
ಅನುಜ್ಞಾಂ ನಿರ್ಗತಃ ಪ್ರಾಹ ಪೌರಜಾನಪದಾನ್ ನೃಪಃ |
ಧರ್ಮತೋ ರಕ್ಷಿತಾ ಯೂಯಮಸ್ಮತ್ಪೂರ್ವೈರ್ಮಹಾತ್ಮಭಿಃ ॥
ನ ಚಾಹಂ ಪರಮಸ್ನೇಹಾದ್ ಯುಷ್ಮಾಭಿಃ ಸುಕೃಪಾಲುಭಿಃ |
ಅರಕ್ಷಿತೇತಿ ಕಥಿತಃ ಪ್ರಮಾದಾದಪಿ ಸಜ್ಜನಾಃ ॥
ಉತ್ತಮ ಬುದ್ಧಿಯುಳ್ಳ ಧೃತರಾಷ್ಟ್ರ ಎಲ್ಲ ಕರ್ಮವನ್ನೂ ಶ್ರೀಹರಿಗೆ ಸಮರ್ಪಿಸಿ, ಕಣ್ಣೀರು ಸುರಿಸಿದ ಪಾಂಡವರಿಂದಲೂ ಬೇರೆ ಬಂಧುಗಳಿಂದಲೂ ಒಪ್ಪಿಗೆ ಪಡೆದು ಕಾಡಿಗೆ ಹೊರಟು ಪೌರರಿಗೂ ಗ್ರಾಮೀಣ ಜನರಿಗೂ ಹೇಳಿದ: `ಸಜ್ಜನರೇ! ಮಹಾತ್ಮರಾದ ನಮ್ಮ ಪೂರ್ವಿಕರು ನಿಮ್ಮನ್ನು ಧರ್ಮದಿಂದ ಕಾಪಾಡಿದರು. ನಾನು ಹಾಗೆ ಮಾಡಲಿಲ್ಲ. ಆದರೂ ಬಹಳ ಕೃಪಾಳುಗಳಾದ ನೀವು ಬಹಳ ಪ್ರೀತಿ ಇದ್ದ ಕಾರಣ, ತಪ್ಪಿಯೂ ಕೂಡ ನನ್ನನ್ನು ನಿಮ್ಮ ರಕ್ಷಕನಲ್ಲವೆಂದು ಹೇಳಲಿಲ್ಲ.
ಇಷ್ಟಂ ಚ ಯಜ್ಞೈಃ ಪೂರ್ತೈಶ್ಚ ಚರಿತಂ ಯುಷ್ಮದಾಶ್ರಯಾತ್ |
ಪುತ್ರಸ್ತು ಮಮ ಪಾಪಾತ್ಮಾ ಸರ್ವಕ್ಷತ್ರವಿನಾಶಕಃ ॥
ಸರ್ವಾತಿಶಂಕೀ ಮೂಢಶ್ಚ ವೃದ್ಧಾನಾಂ ಶಾಸನಾತಿಗಃ |
ಸೌಭ್ರಾತ್ರಂ ಯೇನ ಸಂತ್ಯಜ್ಯ ಪಾಂಡವೇಷು ಮಹಾತ್ಮಸು |

ಕೃತಂ ವಿರೂಪಂ ಸುಮಹತ್ ಕುರ್ಯಾದ್ ಯನ್ನಾಪರಃ ಕ್ವಚಿತ್ ॥
ನಿಮ್ಮ ಆಶ್ರಯದಿಂದ ನಾನು ಯಾಗಗಳನ್ನು ನಡೆಸಿದೆ. ಜಲಾಶಯಾದಿಗಳನ್ನು ನಿರ್ಮಿಸಿದೆ. ನನ್ನ ಮಗನು ಮಾತ್ರ ಪಾಪಾತ್ಮ, ಸಕಲ ಕ್ಷತ್ರಿಯರ ನಾಶಕ್ಕೆ ಕಾರಣನಾದ. ಎಲ್ಲರಲ್ಲಿಯೂ ಸಂದೇಹಪಡುವವನು, ಮೂಢ, ಹಿರಿಯರ ಮಾತನ್ನು ಉಲ್ಲಂಘಿಸುವವನು, ಅವನು ಮಹಾತ್ಮರಾದ ಪಾಂಡವರಲ್ಲಿ ಪ್ರೀತಿ ಮಾಡದೆ ಇನ್ನಾರೂ ಎಲ್ಲಿಯೂ ಮಾಡದಿದ್ದಂಥ ಮಹಾದ್ವೇಷವನ್ನೇ ಮಾಡಿದನು.
ಅಪ್ರಿಯಾಣಿ ಚ ಕೃಷ್ಣಸ್ಯ ಸುಬಹೂನ್ಯಾಚರತ್ ಕುಧೀಃ |
ಪ್ರಾಯಸ್ತೇನಾಪಿ ಮಂದೇನ ನ ಯುಷ್ಮಾಸ್ವಶಿವಂ ಕೃತಮ್ ॥
ಭ್ರಾತರೋಽಸ್ಯ ಚ ಸರ್ವೇಽಪಿ ತಚ್ಛೀಲಮನುವರ್ತಿನಃ |
ಹತಾಶ್ಚ ಸ್ವೇನ ಪಾಪೇನ ಸಸುತಾಮಾತ್ಯಬಾಂಧವಾಃ ॥
ದುರ್ಬುದ್ಧಿಯಾದ ನನ್ನ ಮಗ, ಕೃಷ್ಣನಿಗೆ ಅಪ್ರಿಯವಾದ ಬಹಳ ದುಷ್ಕರ್ಮಗಳನ್ನು ನಡೆಸಿದ. ಮೂರ್ಖನಾದ ಅವನು ನಿಮ್ಮಲ್ಲಿಯೂ ಬಹಳ ಕೆಟ್ಟದ್ದನ್ನು ಮಾಡಿರುತ್ತಾನೆ. ಅವನ ಸೋದರರು ಎಲ್ಲರೂ ಅವನ ಶೀಲವನ್ನೇ ಅನುಸರಿಸಿದವರು. ತಮ್ಮ ಪಾಪದಿಂದ ಮಕ್ಕಳು ಮಿತ್ರರು ಬಾಂಧವರೊಂದಿಗೆ ಹತರಾದರು.
ಸೋಽಹಂ ವಯೋಗತಶ್ಚೈವ ಪುತ್ರಾದಿಭಿರಭಿಪ್ಲುತಃ ॥
ತತ್ಸಂಬಂಧಕೃತಂ ಪಾಪಂ ಸ್ವಕೃತಂ ಚಾಪ್ಯಪೇಶಲಮ್ |
ಪಾಂಡವೇಷು ಸಕೃಷ್ಣೇಷು ತಪಸಾ ಮಾಷ್ರ್ಟುಮುದ್ಯತಃ ॥
ನಾನು ವೃದ್ಧನಾಗಿದ್ದೇನೆ. ಪುತ್ರರು ಉಂಟು ಮಾಡಿದ ಮನೋವ್ಯಥೆಗಳಿಂದ ಪೀಡೆಗೊಳಗಾಗಿದ್ದೇನೆ. ಅವರ ಸಂಸರ್ಗದಿಂದ ನಾನು ಪಾಂಡವರಲ್ಲಿಯೂ ಕೃಷ್ಣನಲ್ಲಿಯೂ ಮಾಡಿದ ಪಾಪಕರ್ಮ ಕ್ರೂರವಾದುದು. ತಪಸ್ಸಿನಿಂದ ಆ ಪಾಪಕರ್ಮವನ್ನು ತೊಳೆದುಕೊಳ್ಳುವುದಕ್ಕೆ ಸಿದ್ಧನಾಗಿದ್ದೇನೆ.
ತತ್ರ ಮಾಮನುಜಾನೀಧ್ವಂ ಕೃಪಯಾ ಮಿತ್ರವತ್ಸಲಾಃ |
ಮತ್ಪ್ರಿಯಾರ್ಥಮಪಿ ಸ್ನೇಹಃ ಪಾಂಡವೇಷು ಮಹಾತ್ಮಸು |
ಕ್ರಿಯಮಾಣೋಽಪಿ ಕರ್ತವ್ಯೋ ಭೂಯ ಏವ ಸದಾಽಚಲಃ ॥
ಮಿತ್ರರಲ್ಲಿ ಪ್ರೀತಿಯುಳ್ಳ ನೀವು ಕೃಪೆಯಿಂದ ನನಗೆ ಅನುಮತಿ ನೀಡಿರಿ. ನೀವು ಮಹಾತ್ಮರಾದ ಪಾಂಡವರಲ್ಲಿ ಪ್ರೀತಿ ಮಾಡುತ್ತಲೇ ಇರುವಿರಿ. ನನ್ನ ಸಂತೋಷಕ್ಕಾಗಿ ಅದನ್ನು ಇನ್ನೂ ಹೆಚ್ಚಾಗಿ ಸದಾ ಅಚಲವಾಗಿ ಮಾಡುತ್ತಿರಬೇಕು.
ತೇ ಹಿ ಮೇ ಪುತ್ರಕಾಃ ಸಂತ ಇಹಾಮುತ್ರ ಚ ಸೌಖ್ಯದಾಃ |
ಇತ್ಯುಕ್ತೇ ಸ್ವಗುಣಾನುಚ್ಚೈಃ ಕೀರ್ತಯದ್ಭಿಃ ಸುದುಃಖಿತೈಃ ॥
ಪರ್ಯಶ್ರುನಯನೈಃ ಕೃಚ್ಛ್ರಾತ್ ಪೌರಜಾನಪದೈಶ್ಚಿರಾತ್ |
ಅನುಜ್ಞಾತೋ ಯಯೌ ಪಾರ್ಥೈರನುಯಾತಃ ಸುದೂರತಃ ॥
`ಏಕೆಂದರೆ ಅವರು ನನ್ನ ಒಳ್ಳೆಯ ಮಕ್ಕಳು. ಇಹದಲ್ಲಿಯೂ ಪರದಲ್ಲಿಯೂ ಸೌಖ್ಯ ನೀಡುವವರು'. ಧೃತರಾಷ್ಟ್ರ ಹೀಗೆ ಹೇಳಿದಾಗ ಪೌರರೂ ಗ್ರಾಮಸ್ಥರೂ ಕಣ್ಣೀರು ಸುರಿಸಿದರು. ಬಹಳ ದುಃಖಿಸಿದರು. ಧೃತರಾಷ್ಟ್ರನ ಗುಣಗಳನ್ನು ಗಟ್ಟಿಯಾಗಿ ಪ್ರಶಂಸೆ ಮಾಡಿದರು. ಬಹು ಹೊತ್ತಾದ ಬಳಿಕ ಕಷ್ಟದಿಂದ ವನಕ್ಕೆ ಹೋಗಲು ಅವರು ಅನುಮತಿ ನೀಡಿದಾಗ ಧೃತರಾಷ್ಟ್ರ ನಡೆದನು. ಬಲು ದೂರದವರೆಗೆ ಪಾಂಡವರು ಹಿಂಬಾಲಿಸಿದರು.
ಸಂಜಯೋ ವಿದುರಶ್ಚೈನಂ ಸಭಾರ್ಯಮನುಜಗ್ಮತುಃ |
ಅನುವವ್ರಾಜ ತಂ ಕುಂತೀ ವನಾಯ ಕೃತನಿಶ್ಚಯಾ ॥
ಸಂಜಯನೂ, ವಿದುರನೂ, ಗಾಂಧಾರೀಸಮೇತನಾದ ಧೃತರಾಷ್ಟ್ರನನ್ನು ಹಿಂಬಾಲಿಸಿದರು. ಕುಂತಿಯೂ ವನವಾಸಕ್ಕೆ ನಿಶ್ಚಯ ಮಾಡಿ, ಧೃತರಾಷ್ಟ್ರನನ್ನು ಹಿಂಬಾಲಿಸಿದಳು.
ವಾರ್ಯಮಾಣಾಽಪಿ ತನಯೈಃ ಸಭಾರ್ಯೈರ್ಭೃಶದುಃಖಿತೈಃ |
ಸಂಸ್ಥಾಪ್ಯ ತಾನ್ ಸುಕೃಚ್ಛ್ರೇಣ ಯಯೌ ಸಾಽನ್ವೇವ ತಂ ನೃಪಮ್ ॥
ಮಕ್ಕಳು ಪತ್ನೀಸಮೇತರಾಗಿ ಬಹಳ ದುಃಖಿತರಾಗಿ ಕುಂತಿಯನ್ನು ತಡೆದರೂ ಅವಳು ಅವರನ್ನು ಬಹಳ ಕಷ್ಟದಿಂದ ಹಿಂದೆ ನಿಲ್ಲಿಸಿ ಧೃತರಾಷ್ಟ್ರನನ್ನು ಹಿಂಬಾಲಿಸಿಯೇ ಹೋದಳು.
ಸಂದರ್ಶಿತಪಥೋ ರಾಜಾ ಕುಂತೀವಿದುರಸಂಜಯೈಃ |
ಗಾಂಧಾರೀಸಹಿತಃ ಪ್ರಾಪ ಕುರುಕ್ಷೇತ್ರೇ ಜಗದ್ಗುರೋಃ |
ಕ್ರಮೇಣೈವಾಶ್ರಮಂ ವ್ಯಾಸದೇವಸ್ಯ ಸುರಪೂಜಿತಮ್ ॥
ಗಾಂಧಾರೀಸಹಿತನಾದ ಧೃತರಾಷ್ಟ್ರನಿಗೆ ಕುಂತಿ ವಿದುರ ಸಂಜಯರು ದಾರಿ ತೋರಿದರು. ಅವನು ಕ್ರಮವಾಗಿ ಕುರುಕ್ಷೇತ್ರವನ್ನು ಸೇರಿದನು. ಜಗದ್ಗುರು ವೇದವ್ಯಾಸರ, ದೇವಪೂಜಿತವಾದ ಆಶ್ರಮವನ್ನು ಸೇರಿದರು.
* * * * *
ಇಪ್ಪತ್ತನೆಯ ಅಧ್ಯಾಯ
ಕುಂತಿಯ ಹೆಗಲ ಮೇಲೆ ಕೈಯನ್ನಿರಿಸಿದ ಗಾಂಧಾರೀ ದೇವಿಯ ಹೆಗಲನ್ನು ಆಧರಿಸಿರುವ ಧೃತರಾಷ್ಟ್ರನು ಶೋಕಾವಿಷ್ಟರಾದ ಪೌರರು ಹಾಗೂ
ಯುಧಿಷ್ಠಿರಾದಿಗಳ ಜೊತೆಗೆ ಕಾಡಿಗೆ ಹೊರಡುವುದು.
ವೈಶಂಪಾಯನಃ
ತತಃ ಪ್ರಭಾತೇ ರಾಜಾ ಸ ಧೃತರಾಷ್ಟ್ರೋಽಂಬಿಕಾಸುತಃ |

ಆದಾಯ ಪಾಂಡವಾನ್ ವೀರಾನ್ ವನವಾಸೇ ಕೃತಕ್ಷಣಃ ॥1॥
ಗಾಂಧಾರೀಸಹಿತೋ ಧೀಮಾನ್ ಅಭಿನಂದ್ಯ ಯಥಾವಿಧಿ |
ಕಾರ್ತಿಕ್ಯಾಂ ಕಾರಯಿತ್ವೇಷ್ಟಿಂ ಬ್ರಾಹ್ಮಣೈರ್ವೇದಪಾರಗೈಃ ॥2॥
ಅಗ್ನಿಹೋತ್ರಂ ಪುರಸ್ಕೃತ್ಯ ವಲ್ಕಲಾಜಿನಸಂವೃತಃ |
ವಧೂಪರಿವೃತೋ ರಾಜಾ ನಿರ್ಯಯೌ ಭವನಾತ್ ತತಃ ॥3॥
ವೈಶಂಪಾಯನ ಅನಂತರ ಹನ್ನೊಂದನೆಯ ದಿನ ಪ್ರಾತಃಕಾಲದಲ್ಲಿ ಅಂಬಿಕಾ ಸುತನಾದ ಆ ಧೃತರಾಷ್ಟ್ರ ರಾಜನು ವನವಾಸಕ್ಕೆ ಸಿದ್ಧನಾಗಿ ವೀರರಾದ ಪಾಂಡವರನ್ನು ಕರೆಸಿ, ಗಾಂಧಾರಿಸಹಿತನಾಗಿ ಅವರನ್ನು ಯಥಾಯೋಗ್ಯವಾಗಿ ಅಭಿನಂದಿಸಿದನು. ಧೀಮಂತನಾದ ಅವನು ಕಾರ್ತೀಕ ಹುಣ್ಣಿಮೆಯಾದ ಅಂದು ವೇದಪಾರಗರಾದ ಬ್ರಾಹ್ಮಣರಿಂದ ಆ ಪ್ರಯಾಣಕಾಲಕ್ಕೆ ಯೋಗ್ಯವಾದ ಇಷ್ಟಿಯನ್ನು ಮಾಡಿಸಿ ಅಗ್ನಿಹೋತ್ರವನ್ನು ಮುಂದೆ ಮಾಡಿಕೊಂಡು ನಾರು ಮಡಿ ಹಾಗೂ ಕೃಷ್ಣಾಜಿನಗಳನ್ನು ತೊಟ್ಟು, ತನ್ನ ಸೊಸೆಯರಿಂದ ಕೂಡಿಕೊಂಡು ಆ ರಾಜಭವನದಿಂದ ಹೊರಟನು.

ತತಃ ಸ್ತ್ರಿಯಃ ಕೌರವಪಾಂಡವಾನಾಂ
ಯಾಶ್ಚಾಪ್ಯನ್ಯಾಃ ಕೌರವರಾಜವಂಶ್ಯಾಃ |
ತಾಸಾಂ ನಾದಃ ಪ್ರಾದುರಾಸೀತ್ ತದಾನೀಂ
ವೈಚಿತ್ರವೀರ್ಯೇ ನೃಪತೌ ಪ್ರಯಾತೇ ॥4॥
ಅನಂತರ ಕೌರವ ಹಾಗೂ ಪಾಂಡವರ ಸ್ತ್ರೀಯರು, ಅಲ್ಲದೇ ಕೌರವ ರಾಜವಂಶದಲ್ಲಿ ಬಂದ ಬೇರೆ ಯಾರೆಲ್ಲ ಸ್ತ್ರೀಯರಿರುವರೋ ಅವರೆಲ್ಲ ಅಲ್ಲಿ ನೆರೆದರು. ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರರಾಜನು ಹೊರಡುವ ಆ ಕಾಲದಲ್ಲಿ ಆ ಸ್ತ್ರೀಯರ ಆರ್ತನಾದವು ಕೇಳಿಬರತೊಡಗಿತು.

ತತೋ ಲಾಜೈಃ ಸುಮನೋಭಿಶ್ಚ ರಾಜಾ
ವಿಚಿತ್ರಾಭಿಸ್ತದ್ ಗೃಹಂ ಪೂಜಯಿತ್ವಾ |
ಸಂಯೋಜ್ಯಾರ್ಥೈರ್ಭೃತ್ಯಜನಂ ಚ ಸರ್ವಂ
ಸಮುತ್ಸೃಜ್ಯ ಪ್ರಯಯೌ ಕೌರವೇಯಃ ॥5॥
ಅನಂತರ ಕುರುವಂಶಜನಾದ ರಾಜನು ಅರಳು ಹಾಗೂ ವಿಚಿತ್ರವಾದ ಪುಷ್ಪಗಳಿಂದ ಆ ಮನೆಯನ್ನು ಪೂಜಿಸಿ, ಜೊತೆಗೆ ಪರಿಚಾರಕ ಜನರನ್ನು ಬಹುಮಾನದಿಂದ ಸಂತೋಷಪಡಿಸಿ ನಂತರ ಎಲ್ಲವನ್ನೂ ಬಿಟ್ಟು ಅಲ್ಲಿಂದ ನಡೆದನು.

ತತೋ ರಾಜಾ ಪ್ರಾಂಜಲಿರ್ವೇಪಮಾನೋ
ಯುಧಿಷ್ಠಿರಃ ಸಂಸ್ಮರನ್ ಬಾಷ್ಪಕಂಠಃ |
ವಿನದ್ಯೋಚ್ಚೈರ್ಹಾ ಮಹಾರಾಜ ಸಾಧೋ
ಕ್ವ ಗಂತಾಸೀತ್ಯಪತತ್ ತತ್ರ ಭೂಮೌ ॥6॥
ಆಗ ರಾಜನಾದ ಯುಧಿಷ್ಠಿರನು ಕೈಮುಗಿದುಕೊಂಡು, ನಡುಗುವ ಶರೀರವುಳ್ಳವನಾಗಿ, ಗಂಟಲು ತುಂಬಿ ಬಂದವನಾಗಿ, ರಾಜನ ಅಗಲಿಕೆಯನ್ನು ಸ್ಮರಿಸಿಕೊಳ್ಳುತ್ತಾ, `ಮಹಾರಾಜನೇ, ಸತ್ಪುರುಷನೇ, ಹಾ! ಎಲ್ಲಿಗೆ ಹೋಗುತ್ತಿರುವಿ?' ಹೀಗೆ ಗಟ್ಟಿಯಾಗಿ ಹೇಳುತ್ತಾ ಭೂಮಿಯಲ್ಲಿ ಬಿದ್ದನು.

ತತೋಽರ್ಜುನಸ್ತೀವ್ರದುಃಖಾಭಿತಪ್ತೋ
ಮುಹುರ್ಮುಹುರ್ನಿಃಶ್ವಸನ್ ಭಾರತಾಗ್ರ್ಯಃ |
ಯುಧಿಷ್ಠಿರಂ ಮೈವಮಿತ್ಯೇವಮುಕ್ತ್ವಾ
ಪ್ರಗೃಹ್ಯಾಥೋ ದೀನತರೋ ಬಭೂವ ॥7॥
ಅನಂತರ ಭಾರತಶ್ರೇಷ್ಠನಾದ ಅರ್ಜುನನು ತೀವ್ರವಾದ ದುಃಖದಿಂದ ಬೆಂದವನಾಗಿ, ಮತ್ತೆ ಮತ್ತೆ ನಿಟ್ಟುಸಿರು ಬಿಡುತ್ತಾ, ಯುಧಿಷ್ಠಿರನಿಗೆ ಹೀಗೆ ಬೀಳಬೇಡ ಎಂದೆನ್ನುತ್ತಾ ಅವನನ್ನು ಹಿಡಿದು ದೈನ್ಯತೆಯನ್ನು ಅನುಭವಿಸಿದನು.

ವೃಕೋದರಃ ಫಲ್ಗುನಶ್ಚೈವ ವೀರೌ
ಮಾದ್ರೀಪುತ್ರೌ ವಿದುರಃ ಸಂಜಯಶ್ಚ |
ವೈಶ್ಯಾಪುತ್ರಃ ಸಹಿತೋ ಗೌತಮೇನ
ಧೌಮ್ಯೋ ವಿಪ್ರಾಶ್ಚಾನ್ವಯುರ್ಬಾಷ್ಪಕಂಠಾಃ ॥8॥
ಭೀಮ, ಅರ್ಜುನ, ಅಲ್ಲದೇ ವೀರರಾದ ಮಾದ್ರೀಪುತ್ರರು, ವಿದುರ, ಸಂಜಯ, ವೈಶ್ಯಾಪುತ್ರನಾದ ಯುಯುತ್ಸು, ಗೌತಮರಿಂದ ಸಹಿತನಾದ ಧೌಮ್ಯ ಹಾಗೂ ಅನೇಕ ಬ್ರಾಹ್ಮಣರು ಬಾಷ್ಪಗದ್ಗದವಾದ ಕಂಠದಿಂದ ಕೂಡಿದವರಾಗಿ ಧೃತರಾಷ್ಟ್ರನನ್ನು ಹಿಂಬಾಲಿಸಿದರು.

ಕುಂತೀ ಗಾಂಧಾರೀಮನುಭರ್ತೃ ವ್ರಜಂತೀಂ
ಸ್ಕಂಧಾಸಕ್ತಂ ಹಸ್ತಮಥೋದ್ವಹಂತೀ |
ರಾಜಾ ಗಾಂಧಾರೀಸ್ಕಂಧದೇಶೇಽವಸಜ್ಯ
ಪಾಣಿಂ ಯಯೌ ಧೃತರಾಷ್ಟ್ರಃ ಪ್ರತೀತಃ ॥9॥
ಕುಂತಿಯು ಭರ್ತೃವಿನ ಜೊತೆಗೆ ನಡೆದು ಹೋಗುತ್ತಿರುವ ತನ್ನ ಹೆಗಲ ಮೇಲೆ ಕೈಯನ್ನಿಟ್ಟಿರುವ ಗಾಂಧಾರೀ ದೇವಿಯನ್ನು ಅನುಸರಿಸಿ, ಅವಳ ಕೈಯನ್ನು ಹೊತ್ತು ನಡೆದಳು. ರಾಜನಾದ ಧೃತರಾಷ್ಟ್ರನು ಆದರಪೂರ್ವಕವಾಗಿ ತನ್ನ ಕೈಯನ್ನು ಗಾಂಧಾರೀ ದೇವಿಯ ಹೆಗಲಿನಲ್ಲಿ ಆಧರಿಸಿ ನಡೆದನು.

ತಥಾ ಕೃಷ್ಣಾ ದ್ರೌಪದೀ ಯಾದವೀ ಚ
ಬಾಲಾಪತ್ಯಾ ಚೋತ್ತರಾ ಕೌರವೀ ಚ |
ಚಿತ್ರಾಂಗದಾ ಯಾಶ್ಚ ಕಾಶ್ಚಿತ್ ಕುರೂಣಾಂ
ಸಾರ್ಧಂ ರಾಜ್ಞಾ ಪ್ರಸ್ಥಿತಾಸ್ತಾ ವಧೂಭಿಃ ॥10॥
ಹಾಗೆಯೇ ಕೃಷ್ಣಾ ಎನಿಸಿದ ದ್ರೌಪದೀ ದೇವಿಯೂ, ಯಾದವಿಯಾದ ಸುಭದ್ರೆಯೂ, ಸಣ್ಣ ಮಗುವನ್ನೆತ್ತಿಕೊಂಡ ಕೌರವಿಯಾದ ಉತ್ತರೆಯೂ, ಚಿತ್ರಾಂಗದೆಯೂ ಮತ್ತು ಕುರುವಂಶಜರ ಯಾರೆಲ್ಲ ಸ್ತ್ರೀಯರಿದ್ದರೋ ಅವರೆಲ್ಲರೂ ರಾಜನೊಂದಿಗೆ ತಮ್ಮ ಸೊಸೆಯಂದಿರನ್ನು ಕೂಡಿಕೊಂಡು ಹಿಂಬಾಲಿಸಿ ಹೊರಟರು.
ತಾಸಾಂ ನಾದೋ ರುದತೀನಾಂ ತದಾಽಽಸೀದ್
ರಾಜನ್ ದುಃಖಾತ್ ಕುರರೀಣಾಮಿವೋಚ್ಚೈಃ |
ತತೋ ನಿಷ್ಪೇತುರ್ಬ್ರಾಹ್ಮಣಕ್ಷತ್ರಿಯಾಣಾಂ
ವಿಟ್ಶೂದ್ರಾಣಾಂ ಚೈವ ನಾರ್ಯಃ ಸಮಂತಾತ್ ॥11॥
ಹೇ ರಾಜನೇ, ಆ ಕಾಲದಲ್ಲಿ ಗಟ್ಟಿಯಾಗಿ ಅಳುತ್ತಿರುವ ಅವರ ಸ್ವರವು ದುಃಖದಿಂದ ಬೊಬ್ಬಿಡುವ ಹೆಣ್ಣುಜಿಂಕೆಗಳ ಸ್ವರದಂತೆ ಕೇಳಿಬರುತ್ತಿತ್ತು. ಆ ಸ್ವರವನ್ನು ಕೇಳಿ ಸುತ್ತಮುತ್ತಲೂ ಎಲ್ಲ ಕಡೆಯಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಯ ಅನೇಕ ಸ್ತ್ರೀಯರು ಅಲ್ಲಿ ನೆರೆದರು.
ತನ್ನಿರ್ಯಾಣೇ ದುಃಖಿತಃ ಪೌರವರ್ಗೋ
ಗಜಾಹ್ವಯೇಽತೀವ ಬಭೂವ ರಾಜನ್ |
ಯಥಾಪೂರ್ವಂ ಗಚ್ಛತಾಂ ಪಾಂಡವಾನಾಂ
ದ್ಯೂತೇ ರಾಜನ್ ಕೌರವಾಣಾಂ ಸಭಾಯಾಮ್ ॥12॥
ಹೇ ರಾಜನೇ, ಧೃತರಾಷ್ಟ್ರನು ಹೊರಡುವ ಸಮಯದಲ್ಲಿ ಹಸ್ತಿನಾಪುರದಲ್ಲಿದ್ದ ಪೌರವರ್ಗವು ಹಿಂದೆ ಪಾಂಡವರು ದ್ಯೂತದಲ್ಲಿ ಸೋತು, ಕೌರವರ ಸಭೆಯಿಂದ ಕಾಡಿಗೆ ಹೊರಡುವಾಗ ಹೇಗೋ ಹಾಗೆ ಬಹಳ ದುಃಖಿತವಾಯಿತು.
ಯಾ ನಾಪಶ್ಯಚ್ಚಂದ್ರಮಾ ನೈವ ಸೂರ್ಯೋ
ರಾಮಾಃ ಕಾಶ್ಚಿತ್ ತಾಸು ತಸ್ಮಿನ್ ನರೇಂದ್ರೇ |
ಮಹಾವನಂ ಗಚ್ಛತಿ ಕೌರವೇಂದ್ರೇ
ಶೋಕೇನಾರ್ತಾ ರಾಜಮಾರ್ಗಂ ಪ್ರಪೇದುಃ ॥13॥
ಯಾವ ಸ್ತ್ರೀಯರನ್ನು ಚಂದ್ರನಾಗಲೀ, ಸೂರ್ಯನಾಗಲೀ ಈ ಹಿಂದೆ ನೋಡಿರಲಿಲ್ಲವೋ ಅಂತಹ ಸ್ತ್ರೀಯರೂ ಕೂಡ ಕೌರವೇಂದ್ರನಾದ ಆ ರಾಜ ಧೃತರಾಷ್ಟ್ರನು ಮಹಾವನಕ್ಕೆ ಹೊರಟು ನಿಂತಾಗ ಶೋಕಾರ್ತರಾಗಿ ರಾಜಬೀದಿಯಲ್ಲಿ ಸೇರಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರವನಪ್ರಸ್ಥಾನಂ ನಾಮ ವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂದನೆಯ ಅಧ್ಯಾಯ
ಧೃತರಾಷ್ಟ್ರನು ಕಾಡಿಗೆ ಹೊರಟು ನಿಂತಾಗ ವಿದುರ ಹಾಗೂ ಸಂಜಯರೂ ವನವಾಸಕ್ಕಾಗಿ ಅವನೊಂದಿಗೆ ಹೊರಡುವುದು. ಹಾಗೆಯೇ ಯುಧಿಷ್ಠಿರಾದಿಗಳು ಬಹುರೀತಿಯಿಂದ ಪ್ರಾರ್ಥಿಸಿ ತಡೆಯುತ್ತಿದ್ದರೂ ಅವರನ್ನು ಸಮಾಧಾನಗೊಳಿಸಿ ಕುಂತಿಯೂ ಗಾಂಧಾರಿಯೊಂದಿಗೆ ಕಾಡಿಗೆ ಹೊರಡುವುದು.
ವೈಶಂಪಾಯನಃ
ತತಃ ಪ್ರಾಸಾದಹರ್ಮ್ಯೇಷು ವಸುಧಾಯಾಂ ಚ ಪಾರ್ಥಿವ |
ಸ್ತ್ರೀಣಾಂ ಚ ಪುರುಷಾಣಾಂ ಚ ಸುಮಹಾನ್ ನಿಃಸ್ವನೋಽಭವತ್ ॥1॥
ವೈಶಂಪಾಯನ ಹೇ ಪಾರ್ಥಿವನೇ, ಅನಂತರ ಅರಮನೆ ಮತ್ತು ಧನಿಕರ ಮನೆಗಳ ಉಪ್ಪರಿಗೆಗಳಲ್ಲಿ ಹಾಗೂ ನೆಲದ ಮೇಲೂ ಸೇರಿದ ಅನೇಕ ಮಂದಿ ಸ್ತ್ರೀಯರ ಹಾಗೂ ಪುರುಷರ ಬಹಳವಾದ ರೋದನದ ಶಬ್ದವು ಕೇಳತೊಡಗಿತು.
ಸ ರಾಜಾ ರಾಜಮಾರ್ಗೇಣ ನೃನಾರೀಸಂಕುಲೇನ ಚ |
ಕಥಂಚಿನ್ನಿರ್ಯಯೌ ಧೀಮಾನ್ ವೇಪಮಾನಃ ಕೃತಾಂಜಲಿಃ ॥2॥
ಧೀಮಂತನಾದ ಆ ರಾಜನು ಪುರುಷರು ಹಾಗೂ ಸ್ತ್ರೀಯರಿಂದ ನಿಬಿಡವಾಗಿದ್ದ ರಾಜಮಾರ್ಗದಲ್ಲಿ ಕೈಮುಗಿದುಕೊಂಡು ನಡುಗುತ್ತಾ ಕಷ್ಟದಿಂದ ಮುಂದೆ ಸಾಗಿದನು.
ಸ ವರ್ಧಮಾನದ್ವಾರೇಣ ನಿರ್ಯಯೌ ಗಜಸಾಹ್ವಯಾತ್ |
ವಿಸರ್ಜಯಾಮಾಸ ತದಾ ತಂ ಜನೌಘಂ ಮುಹುರ್ಮುಹುಃ ॥3॥
ಅವನು `ವರ್ಧಮಾನ' ಎಂಬ ಹೆಸರುಳ್ಳ ಮುಖ್ಯದ್ವಾರದಿಂದ ಹಸ್ತಿನಪುರದಿಂದ ಹೊರ ಹೊರಟನು. ಆಗ ತನ್ನ ಹಿಂದೆ ಬರುತ್ತಿದ್ದ ಆ ಜನರ ಸಮೂಹವನ್ನು ಮತ್ತೆ ಮತ್ತೆ ಹಿಂದೆ ಕಳುಹಿಸಿದನು.
ರಾಜ್ಞಾ ಸಹ ವನಂ ಗಂತುಂ ವಿದುರೋ ಧೃತನಿಶ್ಚಯಃ |
ಸಂಜಯಶ್ಚ ಮಹಾಮಾತ್ಯಃ ಸೂತೋ ಗಾವಲ್ಗಣಿಸ್ತಥಾ ॥4॥

ರಾಜನ ಜೊತೆಗೆ ಕಾಡಿಗೆ ಹೋಗಲು ವಿದುರನು ದೃಢವಾಗಿ ನಿಶ್ಚಯಿಸಿದ್ದನು. ಹಾಗೆಯೇ ಗಾವಲ್ಗಣನ ಮಗನಾದ, ಮಹಾಮಂತ್ರಿಯೂ, ಶೂರನೂ ಆಗಿದ್ದ ಸಂಜಯನೂ ಕೂಡ ನಿಶ್ಚಯಿಸಿದ್ದನು.
ಕೃಪಂ ನಿವರ್ತಯಾಮಾಸ ಯುಯುತ್ಸುಂ ಚ ಮಹಾರಥಮ್ |
ಧೃತರಾಷ್ಟ್ರೋ ಮಹಾರಾಜ ಕುಂತೀಪುತ್ರಂ ಯುಧಿಷ್ಠಿರಮ್ ॥5॥
ಹೇ ಮಹಾರಾಜನೇ, ಧೃತರಾಷ್ಟ್ರನು ಕೃಪನನ್ನೂ, ಮಹಾರಥನಾದ ಯುಯುತ್ಸುವನ್ನೂ, ಕುಂತೀಪುತ್ರನಾದ ಯುಧಿಷ್ಠಿರನನ್ನೂ ಮುಂದಕ್ಕೆ ಬರದಂತೆ ತಡೆದು ಹಿಂದೆ ಕಳುಹಿಸಿದನು.
ನಿವೃತ್ತೇ ಪೌರವರ್ಗೇ ತು ರಾಜಾ ಸಾಂತಃಪುರಸ್ತದಾ |
ಧೃತರಾಷ್ಟ್ರಾಭ್ಯನುಜ್ಞಾತೋ ನಿವರ್ತಿತುಮಿಯೇಷ ಸಃ ॥6॥
ಸೋಽಬ್ರವೀನ್ಮಾತರಂ ಕುಂತೀಮುಪೇತ್ಯ ಭರತರ್ಷಭ ॥7॥
ಹೇ ಭರತರ್ಷಭನೇ, ಪೌರವರ್ಗವು ಹಿಂದಿರುಗಿದ ನಂತರ ಅಂತಃಪುರದ ಜನರೊಂದಿಗೆ ಕೂಡಿಕೊಂಡು ರಾಜನಾದ ಯುಧಿಷ್ಠಿರನು ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದುಕೊಂಡು ಹಿಂದಿರುಗಬಯಸಿದನು. ಅನಂತರ ತನ್ನ ತಾಯಿಯಾದ ಕುಂತಿಯ ಬಳಿ ಸಾಗಿ ಹೀಗೆ ಹೇಳಿದನು.
ಯುಧಿಷ್ಠಿರಃ
ಅಹಂ ರಾಜಾನಮನ್ವಿಷ್ಯೇ ಭವತೀ ವಿನಿವರ್ತತಾಮ್ |
ವಧೂಪರಿವೃತಾ ರಾಜ್ಞಿ ನಗರಂ ಗಂತುಮರ್ಹಸಿ ॥8॥
ರಾಜಾ ಯಾತ್ವೇಷ ಧರ್ಮಾತ್ಮಾ ತಪಸೇ ಧೃತನಿಶ್ಚಯಃ ॥9॥
ಯುಧಿಷ್ಠಿರ ಹೇ ರಾಜಮಾತೆಯೇ, ನಾನು ರಾಜನನ್ನು ಇನ್ನೂ ಸ್ವಲ್ಪ ದೂರ ಅನುಸರಿಸಿ ಹೋಗುತ್ತೇನೆ. ನೀನು ಸೊಸೆಯರೊಂದಿಗೆ ಕೂಡಿಕೊಂಡು ಹಿಂದಿರುಗಿ ನಗರಕ್ಕೆ ಹೋಗುವುದೇ ಉಚಿತವಾಗಿದೆ. ಧರ್ಮಾತ್ಮನಾದ ತಪಸ್ವಿಗಾಗಿ ದೃಢನಿಶ್ಚಯವನ್ನು ಕೈಗೊಂಡ ಈ ರಾಜನು ಮುಂದುವರೆಯಲಿ.
ವೈಶಂಪಾಯನಃ
ಇತ್ಯುಕ್ತಾ ಧರ್ಮರಾಜೇನ ಬಾಷ್ಪವ್ಯಾಕುಲಲೋಚನಾ |
ಜಗಾದೈವಂ ತದಾ ಕುಂತೀ ಗಾಂಧಾರೀಂ ಪರಿಗೃಹ್ಯ ಹ ॥10॥
ವೈಶಂಪಾಯನ ಹೀಗೆ ಧರ್ಮರಾಜನು ಹೇಳಿದಾಗ, ಕಣ್ಣೀರಿನಿಂದ ತೊಯ್ದ ಕಣ್ಣುಗಳುಳ್ಳ ಕುಂತಿಯು ಗಾಂಧಾರಿಯನ್ನು ಹಿಡಿದುಕೊಂಡು ಈ ರೀತಿಯಾಗಿ ಹೇಳಿದಳು.
ಕುಂತೀ
ಸಹದೇವೇ ಮಹಾರಾಜ ಮಾ ಪ್ರಮಾದಂ ಕೃಥಾಃ ಕ್ವಚಿತ್ |
ಏಷ ಮಾಮನುರಕ್ತೋ ಹಿ ರಾಜಂಸ್ತ್ವಂ ಚೈವ ಸರ್ವದಾ ॥11॥
ಕುಂತೀ ಹೇ ಮಹಾರಾಜನೇ, ಸಹದೇವನ ವಿಷಯದಲ್ಲಿ ಯಾವತ್ತೂ ಪ್ರಮಾದವೆಸಗಬೇಡ. ಈತನು ಸದಾ ನನ್ನ ಬಗ್ಗೆ ಪ್ರೀತಿಯುಳ್ಳವನಾಗಿದ್ದಾನೆ ಹಾಗೂ ಸದಾ ನಿನ್ನನ್ನೂ ಪ್ರೀತಿಸುವವನಾಗಿದ್ದಾನೆ.
ಕರ್ಣಂ ಸ್ಮರೇಥಾಃ ಸತತಂ ಸಂಗ್ರಾಮೇಷ್ವಪಲಾಯಿನಮ್ |
ಅವಕೀರ್ಣೋ ಹಿ ಸ ಮಯಾ ವೀರೋ ದುಷ್ಪ್ರಜ್ಞಯಾ ತದಾ ॥12॥
ಯಾವಾಗಲೂ ಯುದ್ಧದಲ್ಲಿ ಓಡಿ ಹೋಗದೆ ಹೋರಾಡಿದ ಕರ್ಣನನ್ನು ಸ್ಮರಿಸುತ್ತಿರು. ಆ ವೀರನಾದ ಕರ್ಣನು ಪ್ರಸವಕಾಲದಲ್ಲಿ ಕೆಟ್ಟ ಬುದ್ಧಿಯುಳ್ಳ ನನ್ನಿಂದ ಪರಿತ್ಯಕ್ತನಾಗಿದ್ದಾನೆ.
ಆಯಸಂ ಹೃದಯಂ ನೂನಂ ಮಂದಾಯಾ ಮಮ ಪುತ್ರಕ |
ಯತ್ ಸೂರ್ಯಜಮಪಶ್ಯಂತ್ಯಾಃ ಶತಶೋ ಯನ್ನ ದೀರ್ಯತೇ ॥13॥
ಹೇ ಮಗು, ಸೂರ್ಯಜನಾದ ಕರ್ಣನನ್ನು ನೋಡದೆಯೂ (ಅವನು ಯುದ್ಧದಲ್ಲಿ ಮಡಿದಿರುವನೆಂದು ತಿಳಿದೂ ಕೂಡ) ಹತಭಾಗ್ಯಳಾದ ನನ್ನ ಹೃದಯವು ನೂರಾಗಿ ಸೀಳುವುದಿಲ್ಲವಾದರೆ ಅದು ನಿಜಕ್ಕೂ ಉಕ್ಕಿನದೇ ಇರಬೇಕು.
ಏವಂ ಕೃತೇ ತು ಕಿಂ ಶಕ್ಯಂ ಮಯಾ ಕರ್ತುಮರಿಂದಮ |
ಮಮ ದೋಷೋಽಯಮತ್ಯರ್ಥಂ ಖ್ಯಾಪಿತೋ ಯನ್ನ ಸೂರ್ಯಜಃ ॥
ಹೇ ಶತ್ರುನಾಶಕನೇ, ಹೀಗೆ ಎಲ್ಲ ಮುಗಿದ ಮೇಲೆ ನಾನೇನು ಮಾಡಲು ಸಾಧ್ಯ? ಮೊದಲೇ ಸೂರ್ಯಜನಾದ ಕರ್ಣನನ್ನು ನಿಮಗೆ ಅಣ್ಣನನ್ನಾಗಿ ತಿಳಿಸದಿರುವುದು ನನ್ನದೇ ದೊಡ್ಡ ದೋಷವಾಗಿದೆ.
ತನ್ನಿಮಿತ್ತಂ ಮಹಾಬಾಹೋ ದಾನಂ ದದ್ಯಾಸ್ತ್ವಮುತ್ತಮಮ್ |
ಸದೈವ ಭ್ರಾತೃಭಿಃ ಸಾರ್ಧಮಗ್ರಜಸ್ಯಾರಿಮರ್ದನ ॥15॥
ಹೇ ಮಹಾಬಾಹುವೇ, ಅರಿಮರ್ದನನೇ, ನೀನು ಯಾವಾಗಲೂ ಸಹೋದರರೊಂದಿಗೆ ಸೇರಿಕೊಂಡು ಹಿರಿಯಣ್ಣನಾದ ಅವನನ್ನು ನಿಮಿತ್ತ ಮಾಡಿಕೊಂಡು ಉತ್ತಮವಾದ ದಾನಗಳನ್ನು ಮಾಡಬೇಕು.
ದ್ರೌಪದ್ಯಾಶ್ಚ ಪ್ರಿಯೇ ನಿತ್ಯಂ ಸ್ಥಾತವ್ಯಮರಿಕರ್ಶನ ॥16॥
ಹೇ ಶತ್ರುಕರ್ಶನನೇ, ಯಾವಾಗಲೂ ದ್ರೌಪದಿಗೆ ಪ್ರಿಯವಾಗುವಂತೆಯೇ ನೀನು ಇರಬೇಕು.
ಭೀಮಸೇನಾರ್ಜುನೌ ಚೈವ ನಕುಲಶ್ಚ ಕುರೂದ್ವಹ |
ಸಮಾಧೇಯಾಸ್ತ್ವಯಾ ಧೀಮನ್ ತ್ವಂ ಹ್ಯೇವ ಕುಲಧೂರ್ಗತಃ ॥17॥
ಹೇ ಕುರೂದ್ವಹನೇ, ಧೀಮಂತನೇ, ಭೀಮಸೇನ ಮತ್ತು ಅರ್ಜುನರು, ಜೊತೆಗೆ ನಕುಲನು ಇವರೆಲ್ಲರೂ ನಿನ್ನಿಂದಲೇ

ಪಾಲಿಸಲ್ಪಡಬೇಕು. ಏಕೆಂದರೆ ನೀನೇ ಕುಲಕ್ಕೆ ಅಗ್ರಗಣ್ಯನಾಗಿರುವಿ.
ಶ್ವಶ್ರೂಶ್ವಶುರಯೋಃ ಪಾದೌ ಶುಶ್ರೂಷಂತೀ ವನೇ ತ್ವಹಮ್ |
ಗಾಂಧಾರೀಸಹಿತಾ ವತ್ಸ್ಯೇ ತಾಪಸೀ ಮಲಪಂಕಿನೀ ||18||
ನಾನಾದರೂ ಅತ್ತೆ-ಮಾವಂದಿರ ಸ್ಥಾನದಲ್ಲಿರುವ ಗಾಂಧಾರಿ ಹಾಗೂ ಧೃತರಾಷ್ಟ್ರರ ಪಾದಗಳನ್ನು ಸೇವಿಸುತ್ತಾ, ಕಾಡಿನಲ್ಲಿ ಕೊಳಕು ಬಟ್ಟೆಗಳನ್ನುಟ್ಟ ತಾಪಸಿಯಂತೆ ಗಾಂಧಾರಿಯ ಜೊತೆಗೆ ವಾಸ ಮಾಡುವೆನು.
ವೈಶಂಪಾಯನಃ
ಏವಮುಕ್ತಃ ಸ ಧರ್ಮಾತ್ಮಾ ಭ್ರಾತೃಭಿಃ ಸಹಿತೋ ವಶೀ |
ವಿಷಾದಮಗಮತ್ ತೀವ್ರಂ ನ ಚ ಕಿಂಚಿದುವಾಚ ತಾಮ್ ||19||
ವೈಶಂಪಾಯನ ಹೀಗೆ ಕುಂತಿಯು ಹೇಳಿದಾಗ ಸಹೋದರರರೊಂದಿಗೆ ಕೂಡಿದ, ಇಂದ್ರಿಯನಿಗ್ರಹವುಳ್ಳ, ಧರ್ಮಾತ್ಮನಾದ ಆ ಯುಧಿಷ್ಠಿರನು ತೀವ್ರವಾದ ವಿಷಾದವನ್ನು ಹೊಂದಿದನು ಹಾಗೂ ಕುಂತಿಗೆ ಏನನ್ನೂ ಹೇಳದೆ ಹಾಗೇ ನಿಂತನು.
ಸ ಮುಹೂರ್ತಮಿವ ಧ್ಯಾತ್ವಾ ಧರ್ಮರಾಜೋ ಯುಧಿಷ್ಠಿರಃ |
ಉವಾಚ ಮಾತರಂ ದೀನಶ್ಚಿಂತಾಶೋಕಪರಾಯಣಃ ||20||
ಧರ್ಮರಾಜನಾದ ಆ ಯುಧಿಷ್ಠಿರನು ಸ್ವಲ್ಪ ಹೊತ್ತು ಹಾಗೆ ಆಲೋಚಿಸಿ, ದೀನನಾಗಿ ಚಿಂತೆ ಹಾಗೂ ಶೋಕಗಳಿಂದ ಜರ್ಝರಿತನಾಗಿ, ತಾಯಿಯನ್ನು ಕುರಿತು ಹೀಗೆ ಹೇಳಿದನು.
ಯುಧಿಷ್ಠಿರಃ
ಕಿಮಿದಂ ತೇ ವ್ಯವಸಿತಂ ನೈವ ತ್ವಂ ವಕ್ತುಮರ್ಹಸಿ |
ನ ತ್ವಾಮಭ್ಯನುಜಾನಾಮಿ ಪ್ರಸಾದಂ ಕರ್ತುಮರ್ಹಸಿ ||21||
ಯುಧಿಷ್ಠಿರ ಇದೇನು ನಿನ್ನ ನಿಶ್ಚಯ? ನೀನೇನೂ ಮಾತನಾಡಬೇಡ. ನಾನು ನಿನ್ನನ್ನು ಅನುಮತಿಸುವುದಿಲ್ಲ. ನಮ್ಮ ಬಗ್ಗೆ ನೀನು ಪ್ರಸನ್ನಳಾಗು.
ವ್ಯರೋಚಯಃ ಪುರಾಽಸ್ಮಾಕಮುತ್ಸಾಹಂ ಶುಭದರ್ಶನೇ |
ವಿದುಲಾಯಾ ವಚೋಭಿಸ್ತ್ವಂ ನಾಸ್ಮಾನ್ ಸಂತ್ಯಕ್ತುಮರ್ಹಸಿ ||22||
ಹೇ ಶುಭದರ್ಶನಳೇ, ಹಿಂದೆ ನೀನು ವಿದುಲೆಯ ಮಾತುಗಳನ್ನು ಉದಾಹರಿಸುವ ಮೂಲಕ ನಮ್ಮ ಉತ್ಸಾಹವನ್ನು ಉದ್ದೀಪನಗೊಳಿಸಿರುವಿ. ಅಂತಹ ನೀನು ನಮ್ಮನ್ನು ಬಿಟ್ಟು ಹೊರಡುವುದು ಸರಿಯಲ್ಲ.
ನಿಹತ್ಯ ಪೃಥಿವೀಪಾಲಾನ್ ರಾಜ್ಯಂ ಪ್ರಾಪ್ತಮಿದಂ ಮಯಾ |
ತವ ಪ್ರಜ್ಞಾಮುಪಶ್ರುತ್ಯ ವಾಸುದೇವಾನ್ನರರ್ಷಭಾತ್ ||23||
ನರಶ್ರೇಷ್ಠನಾದ ವಾಸುದೇವ ಕೃಷ್ಣನ ಮುಖಾಂತರ ನಿನ್ನ ಬುದ್ಧಿಮಾತುಗಳನ್ನು ಕೇಳಿ ರಾಜರನ್ನು ಯುದ್ಧದಲ್ಲಿ ಸಂಹರಿಸಿ ಈ ರಾಜ್ಯವು ನನ್ನಿಂದ ಪಡೆಯಲ್ಪಟ್ಟಿದೆ.
ಕ್ವ ಸಾ ಬುದ್ಧಿರಿಯಂ ಚಾದ್ಯ ಭವತ್ಯಾ ಯಾ ಶ್ರುತಾ ಮಯಾ |
ಕ್ಷತ್ರಧರ್ಮೇ ಸ್ಥಿತಂ ತ್ಯಕ್ತ್ವಾ ನ ಪ್ರಯಾತುಮಿಹಾರ್ಹಸಿ ||24||
ಅಂದು ನಮಗೆ ಕೃಷ್ಣನಿಂದ ತಿಳಿಹೇಳಿಸಿದ ನಿನ್ನ ಆ ಬುದ್ಧಿಯು ಇಂದು ಎಲ್ಲಿ ಹೋಯಿತು? ನೀನು ತಿಳಿಯಪಡಿಸಿದಂತೆ ಕ್ಷತ್ರಧರ್ಮದಲ್ಲಿ ನಿಂತಿರುವ ನನ್ನನ್ನು ಬಿಟ್ಟು ನೀನು ಹೊರಟು ಹೋಗುವುದು ಉಚಿತವಲ್ಲ.
ಅಸ್ಮಾನುತ್ಸೃಜ್ಯ ರಾಜ್ಯಂ ಚ ಸ್ನುಷಾಂ ಚೇಮಾಂ ಯಶಸ್ವಿನೀಮ್ |
ಕಥಂ ವತ್ಸ್ಯಸಿ ಶೂನ್ಯೇಷು ವನೇಷ್ವಂಬ ಪ್ರಸೀದ ಮೇ ||25||
ನಮ್ಮನ್ನು ಬಿಟ್ಟು, ರಾಜ್ಯವನ್ನೂ ಬಿಟ್ಟು, ಈ ನಿನ್ನ ಯಶಸ್ವಿನಿಯಾದ ಸೊಸೆಯನ್ನೂ ಬಿಟ್ಟು, ನಾವಾರೂ ಇಲ್ಲದ ಕಾಡಿನಲ್ಲಿ ಹೇಗೆ ವಾಸ ಮಾಡುವಿ? ಅಮ್ಮಾ! ಪ್ರಸನ್ನಳಾಗು.
ವೈಶಂಪಾಯನಃ
ಇತಿ ಬಾಷ್ಪಕಲಾ ವಾಚಃ ಕುಂತೀ ಪುತ್ರಸ್ಯ ಶೃಣ್ವತೀ |
ಜಗಾಮೈವಾಶ್ರುಪೂರ್ಣಾಕ್ಷೀ ಭೀಮಸ್ತಾಮಿದಮಬ್ರವೀತ್ ||26||
ವೈಶಂಪಾಯನ ಹೀಗೆ ಮಗನ ಕಣ್ಣೀರಿನಿಂದ ತುಂಬಿದ ಮಾತುಗಳನ್ನು ಕೇಳುತ್ತಿದ್ದರೂ ಕುಂತೀದೇವಿಯು ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಹೊರಟೇ ಬಿಟ್ಟಳು. ಆಗ ಭೀಮನು ಈ ಮಾತುಗಳನ್ನು ಹೇಳಿದನು.
ಭೀಮಃ
ಯದಾ ರಾಜ್ಯಮಿದಂ ಕುಂತೀ ಭೋಕ್ತವ್ಯಂ ಪುತ್ರಸಾದ್ಗತಮ್ |
ಪ್ರಾಪ್ತವ್ಯಾ ದಾನಧರ್ಮಾಶ್ಚ ಯಥೇಯಂ ತೇ ಕುತೋ ಮತಿಃ ||27||
ಭೀಮ ಯಾವಾಗ ಕುಂತೀದೇವಿಯು ಮಕ್ಕಳ ಅಧೀನವಾಗಿರುವ ಈ ರಾಜ್ಯವನ್ನು ಅನುಭವಿಸಬೇಕೋ ಹಾಗೂ ದಾನ-ಧರ್ಮಗಳನ್ನು ಯಥೇಷ್ಟವಾಗಿ ನಡೆಸಬೇಕೋ, ಆ ಕಾಲಕ್ಕೆ ನಿನಗೆ ಈ ರೀತಿಯ ಬುದ್ಧಿಯು ಹೇಗೆ ಬಂದಿತು?
ಕಿಂ ವಯಂ ಕಾರಿತಾಃ ಪೂರ್ವಂ ಭವತ್ಯಾ ಪೃಥಿವೀಕ್ಷಯಮ್ |
ಕಸ್ಯ ಹೇತೋಃ ಪರಿತ್ಯಜ್ಯ ರಾಜ್ಯಂ ಗಂತುಮಿಹಾರ್ಹಸಿ ||28||
ಈ ಹಿಂದೆ ನಿನ್ನಿಂದಲೇ ನಾವು ಈ ಪೃಥಿವಿಯ ನಾಶವನ್ನು ಏತಕ್ಕಾಗಿ ನಡೆಸಿದೆವು? ಯಾವ ಕಾರಣಕ್ಕಾಗಿ ರಾಜ್ಯವನ್ನು ಬಿಟ್ಟು ನೀನು ಹೊರಡ ಬಯಸಿರುವಿ?
ವನಾತ್ ತಸ್ಮಾತ್ ಕಿಮಾನೀತಾ ಭವತ್ಯಾ ಬಾಲಕಾ ವಯಮ್ |

ದುಃಖಶೋಕಸಮಾವಿಷ್ಟೌ ಮಾದ್ರೀಪುತ್ರಾವಿಮೌ ತದಾ ॥29॥
ಬಾಲಕರಾದ ನಾವು ಕಾಡಿನಲ್ಲೇ ಬೆಳೆಯುತ್ತಿದ್ದೆವು. ನಮ್ಮನ್ನು ನೀನು ಕಾಡಿನಿಂದ ಏಕೆ ಕರೆದುಕೊಂಡು ಬಂದಿ? ಅಲ್ಲದೇ ದುಃಖ ಹಾಗೂ ಶೋಕಗಳಿಂದ ಕೂಡಿದ ಈ ಮಾದ್ರೀಪುತ್ರರನ್ನು ಏಕೆ ಕರೆತಂದಿ?
ಪ್ರಸೀದ ಮಾತರ್ಮಾ ಗಾಸ್ತ್ವಂ ವನಮದ್ಯ ಯಶಸ್ವಿನಿ |
ಶ್ರಿಯಂ ಯೌಧಿಷ್ಠಿರೀಂ ತಾವದ್ ಭುಂಕ್ಷ್ವ ಪಾರ್ಥಬಲಾರ್ಜಿತಾಮ್ ॥
ಯಶಸ್ವಿನಿಯಾದ ಹೇ ಅಮ್ಮಾ! ನೀನು ನಮ್ಮನ್ನು ಬಿಟ್ಟು ಇಂದು ಕಾಡಿಗೆ ಹೊರಡದಿರು. ನಮ್ಮಲ್ಲಿ ಪ್ರಸನ್ನಳಾಗು. ನಿನ್ನ ಮಕ್ಕಳ ಬಲದಿಂದಲೇ ಸಂಪಾದಿಸಲ್ಪಟ್ಟ ಈ ಯುಧಿಷ್ಠಿರನ ರಾಜ್ಯದ ಸಂಪತ್ತನ್ನು ಪೂರ್ಣವಾಗಿ ಅನುಭವಿಸು.
ವೈಶಂಪಾಯನಃ
ಇತಿ ಸಾ ನಿಶ್ಚಿತೈವಾಥ ವನವಾಸಕೃತಕ್ಷಣಾ |
ಲಾಲಪ್ಯತಾಂ ಬಹುವಿಧಂ ಪುತ್ರಾಣಾಂ ನಾಕರೋದ್ ವಚಃ ॥31॥
ವೈಶಂಪಾಯನ ವನವಾಸವನ್ನು ನಡೆಸಲೇಬೇಕೆಂದು ನಿಶ್ಚಯಿಸಿರುವ ಆ ಕುಂತಿಯು ಹೀಗೆ ನಾನಾ ರೀತಿಯಿಂದ ಕೇಳಿಕೊಳ್ಳುತ್ತಿರುವ ಮಕ್ಕಳಿಗೆ ಯಾವುದೇ ಮಾತನ್ನೂ ಆಡಲಿಲ್ಲ.
ದ್ರೌಪದೀ ಚಾನ್ವಯಾಚ್ಚ್ವಶ್ರೂಂ ವಿಷಣ್ಣವದನಾ ತದಾ |
ವನವಾಸಾಯ ಗಚ್ಛಂತೀಂ ರುದಂತೀ ಭದ್ರಯಾ ಸಹ ॥32॥
ಆಗ ದ್ರೌಪದೀ ದೇವಿಯು ಸುಭದ್ರೆಯ ಜೊತೆಗೆ ವಿಷಣ್ಣ ವದನಳಾಗಿ ಅಳುತ್ತಾ ವನವಾಸಕ್ಕಾಗಿ ಹೋಗುತ್ತಿರುವ ಅತ್ತೆಯನ್ನು ಹಿಂಬಾಲಿಸಿದಳು.
ಸಾ ಪುತ್ರಾನ್ ರುದತಃ ಸರ್ವಾನ್ ಮುಹುರ್ಮುಹುರುದೀಕ್ಷತೀ |
ಜಗಾಮೈವ ಮಹಾಭಾಗಾ ವನಾಯ ಧೃತನಿಶ್ಚಯಾ ॥33॥
ಮಹಾತ್ಮಳಾದ ಆ ಕುಂತಿಯು ಅಳುತ್ತಿರುವ ಎಲ್ಲ ಮಕ್ಕಳನ್ನೂ ಮತ್ತೆ ಮತ್ತೆ ದಿಟ್ಟಿಸಿ ನೋಡುತ್ತಾ, ವನವಾಸ ಮಾಡಲೇಬೇಕೆಂಬ ದೃಢವಾದ ನಿಶ್ಚಯದಿಂದ ಹೊರಟೇಬಿಟ್ಟಳು.
ಅನ್ವಯುಃ ಪಾಂಡವಾಸ್ತತ್ರ ಸಭೃತ್ಯಾಂತಃಪುರಾಸ್ತದಾ |
ತತಃ ಪ್ರಮೃಜ್ಯ ಸಾಽಶ್ರೂಣಿ ಪುತ್ರಾನ್ ವಚನಮಬ್ರವೀತ್ ॥34॥
ಆಗ ಭೃತ್ಯರೂ ಹಾಗೂ ಅಂತಃಪುರದ ಸ್ತ್ರೀಯರಿಂದ ಕೂಡಿದ ಪಾಂಡವರೂ ಅವಳ ಹಿಂದೆಯೇ ಹೊರಟರು. ಅನಂತರ ಕುಂತಿಯು ಮಕ್ಕಳ ಕಣ್ಣೀರನ್ನು ಒರೆಸಿ, ಮಕ್ಕಳನ್ನು ಕುರಿತು ಈ ಮಾತುಗಳನ್ನು ಹೇಳಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಕುಂತೀವನಪ್ರಸ್ಥಾನಂ ನಾಮ ಏಕವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಏಕವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆರಡನೆಯ ಅಧ್ಯಾಯ
ತನ್ನ ವನವಾಸನಿಶ್ಚಯದಿಂದ ದಿಗ್ಭ್ರಾಂತರಾದ ಯುಧಿಷ್ಠಿರಾದಿಗಳನ್ನು
ಕುಂತಿಯು ಸಕಾರಣವಾಗಿ ಸಮಾಧಾನಗೊಳಿಸುವುದು.
ಕುಂತೀ
ಏವಮೇತನ್ಮಹಾಬಾಹೋ ಯಥಾ ವದಸಿ ಪಾಂಡವ |
ಕೃತಮುದ್ಧರ್ಷಣಂ ಪೂರ್ವಂ ಮಯಾ ವಃ ಸೀದತಾಂ ನೃಪ ॥1॥
ಕುಂತೀ ಹೇ ಮಹಾಬಾಹುವೇ, ಪಾಂಡವನೇ, ರಾಜನೇ, ನೀನು ಹೇಗೆ ಹೇಳುತ್ತಿರುವೆಯೋ ಅದು ಸರಿಯಾಗಿಯೇ ಇದೆ. ಈ ಹಿಂದೆ ನೀವು ಪತನವನ್ನು ಹೊಂದುತ್ತಿದ್ದಾಗ ನಾನು ನಿಮ್ಮಲ್ಲಿ ಉತ್ಸಾಹವನ್ನು ಉಂಟು ಮಾಡಿದೆನು.
ದ್ಯೂತಾಪಹೃತರಾಜ್ಯಾನಾಂ ಪತಿತಾನಾಂ ಸುಖಾದಪಿ |
ಜ್ಞಾತಿಭಿಃ ಪರಿಭೂತಾನಾಂ ಕೃತಮುದ್ಧರಣಂ ಮಯಾ ॥2॥
ರಾಜ್ಯವನ್ನು ದ್ಯೂತದಲ್ಲಿ ಕಳೆದುಕೊಂಡು, ಸುಖದಿಂದಲೂ ಹೀನರಾಗಿ, ದಾಯಾದಿಗಳೆದುರು ಸೋತು ನಿಂತಾಗ ನಾನು ನಿಮ್ಮನ್ನು ಉದ್ಧರಿಸಿದೆನು.
ಕಥಂ ಪಾಂಡೋರ್ನ ನಶ್ಯೇದ್ಧಿ ಸಂತತಿಃ ಪುರುಷರ್ಷಭ |
ಯಶಶ್ಚ ವೋ ನ ನಶ್ಯೇದ್ಧಿ ಇತಿ ಚೋದ್ಧರಣಂ ಕೃತಮ್ ॥3॥
ಹೇ ಪುರುಷರ್ಷಭನೇ, ಪಾಂಡುವಿನ ಸಂತತಿಯು ಹೇಗೆ ನಾಶವಾಗುವುದಿಲ್ಲವೋ ಹೇಗೆ ನಿಮ್ಮ ಯಶಸ್ಸು ನಾಶವಾಗುವುದಿಲ್ಲವೋ ಆ ರೀತಿಯಾಗಿ ನನ್ನಿಂದ ನಿಮ್ಮ ಉದ್ಧಾರವು ನಡೆಸಲ್ಪಟ್ಟಿದೆ.
ಯೂಯಮಿಂದ್ರಸಮಾಃ ಸರ್ವೇ ದೇವತುಲ್ಯಪರಾಕ್ರಮಾಃ |
ಮಾ ಪರೇಷಾಂ ಮುಖಪ್ರೇಕ್ಷಾಃ ಸ್ಯುರಿತ್ಯೇವಂ ಕೃತಂ ಮಯಾ ॥4॥
ನೀವೆಲ್ಲರೂ ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವರಾಗಿದ್ದು ಇಂದ್ರರಿಗೆ ಸದೃಶರಾಗಿರುವಿರಿ. ಅಂತಹ ನೀವು ಜೀವನವೃತ್ತಿಗಾಗಿ ಇನ್ನೊಬ್ಬರ ಮುಖವನ್ನು ಎದುರು ನೋಡಬಾರದು. ಇದಕ್ಕಾಗಿ ನಾನು ನಿಮ್ಮನ್ನು ಉದ್ಧರಿಸಿದೆ.
ಕಥಂ ಧರ್ಮಭೃತಾಂ ಶ್ರೇಷ್ಠೋ ರಾಜಾ ತ್ವಂ ವಾಸವೋಪಮಃ |

ಪುನರ್ವನಂ ನ ಗಚ್ಛೇಥಾ ಇತಿ ಚೋದ್ಧರಣಂ ಕೃತಮ್ ॥5॥
ಧಾರ್ಮಿಕರಲ್ಲಿ ಶ್ರೇಷ್ಠರಾದ ಇಂದ್ರನಿಗೆ ಸದೃಶನಾದ ರಾಜನಾದ ನೀನು ಮತ್ತೆ ಹೇಗೆ ಕಾಡಿಗೆ ಹೋಗಲಾರೆಯೋ ಆ ರೀತಿ ನಾನು ಉದ್ಧಾರ ಮಾಡಬೇಕಾಯಿತು.
ನಾಗಾಯುತಸಮಪ್ರಾಣಃ ಖ್ಯಾತವಿಕ್ರಮಪೌರುಷಃ |
ನಾಯಂ ಭೀಮೋಽತ್ಯಯಂ ಗಚ್ಛೇದ್ ಇತಿ ಚೋದ್ಧರಣಂ ಕೃತಮ್ ॥6॥
ಹತ್ತು ಸಾವಿರ ಆನೆಗಳಿಗೆ ಸಮಾನವಾದ ಬಲವುಳ್ಳ, ವಿಕ್ರಮ ಹಾಗೂ ಪೌರುಷಗಳಿಂದ ಪ್ರಸಿದ್ಧನಾದ ಈ ಭೀಮನು ಸಂಕಟವನ್ನು ಹೊಂದಬಾರದು ಎಂಬುದಕ್ಕಾಗಿ ನಾನು ನಿಮ್ಮನ್ನು ಉದ್ಧರಿಸಿದೆ.
ಭೀಮಸೇನಾದವರಜಸ್ತಥಾಽಯಂ ವಾಸವೋಪಮಃ |
ವಿಜಯೋ ನಾವಸೀದೇತ ಇತಿ ಚೋದ್ಧರಣಂ ಕೃತಮ್ ॥7॥
ಭೀಮಸೇನನ ನಂತರ ಜನಿಸಿದ, ಇಂದ್ರನಿಗೆ ಸದೃಶನಾದ ಈ ವಿಜಯನು ವಿಷಾದ ಪಡದಿರಲಿ ಎಂದು ನಾನು ಉದ್ಧರಿಸಬೇಕಾಯಿತು.
ನಕುಲಃ ಸಹದೇವಶ್ಚ ತಥೇಮೌ ಗುರುವರ್ತಿನೌ |
ಕ್ಷುಧಾ ಕಥಂ ನ ಸೀದೇತಾಮಿತಿ ಚೋದ್ಧರಣಂ ಕೃತಮ್ ॥8॥
ಹಿರಿಯರನ್ನು ಅನುಸರಿಸಿಕೊಂಡು ನಡೆಯುವ ಈ ನಕುಲ-ಸಹದೇವರು ಹಸಿವಿನಿಂದ ಕಂಗೆಡಬಾರದು ಎಂಬುದಕ್ಕಾಗಿ ನಾನು ಉದ್ಧರಿಸಬೇಕಾಯಿತು.
ಇಯಂ ಚ ಬೃಹತೀ ಶ್ಯಾಮಾ ಶ್ರೀಮತ್ಯಾಯತಲೋಚನಾ |
ತಥಾ ಸಭಾತಳೇ ಕ್ಲಿಷ್ಟಾ ಮಾ ಭೂದಿತಿ ಚ ತತ್ಕೃತಮ್ ॥9॥
ಗುಣಸಂಪನ್ನಳಾದ, ಅಗಲವಾದ ಕಣ್ಣುಗಳುಳ್ಳ ಈ ಹಿರಿ ಸೊಸೆಯಾದ ಕೃಷ್ಣೆಯು ಅಂದಿನಂತೆ ಸಭೆಯ ಮಧ್ಯದಲ್ಲಿ ಕಷ್ಟಪಡದಿರಲಿ ಎಂಬುದಕ್ಕಾಗಿ ಹಾಗೆ ಮಾಡಿದೆ.
ಪಶ್ಯಂತ್ಯಾ ಮೇ ತಥಾ ಹೀಮಾಂ ವೇಪಂತೀಂ ಕದಳೀಮಿವ |
ಸ್ತ್ರೀಧರ್ಮಿಣೀಮನಿಂದ್ಯಾಂಗೀಂ ತಥಾ ದ್ಯೂತಪರಾಜಿತಾಮ್ ॥10॥
ದುಃಶಾಸನಸ್ತಾಂ ಮೌರ್ಖ್ಯಾತ್ತು ದಾಸೀವತ್ ಪರ್ಯಕರ್ಷತ |
ತದೈವ ವಿದಿತಂ ಮಹ್ಯಂ ಪರಿಭೂತಮಿದಂ ಕುಲಮ್ ॥11॥
ಹಾಗೆಯೇ ನಾನು ನೋಡುತ್ತಿರುವಂತೆಯೇ ಬಾಳೆಯ ಸಸಿಯಂತೆ ನಡುಗುತ್ತಿರುವ, ಸ್ತ್ರೀಧರ್ಮವನ್ನು ನಡೆಸುತ್ತಿರುವ, ಸುಲಕ್ಷಣವಾದ ಅಂಗಗಳನ್ನು ಹೊಂದಿರುವ, ದ್ಯೂತದಲ್ಲಿ ಪರಾಜಿತಳಾಗಿರುವ, ಈ ಯಾವ ದ್ರೌಪದಿಯನ್ನು ದುಶ್ಶಾಸನನು ಮೂರ್ಖತನದಿಂದ ದಾಸಿಯಂತೆ ಎಳೆದುಕೊಂಡು ಬಂದನೋ ಆಗಲೇ ಈ ಕುಲವು ತಿರಸ್ಕೃತವಾಯಿತೆಂದು ನನಗೆ ತಿಳಿಯಿತು.
ವಿಷಣ್ಣಾಃ ಕುರವಶ್ಚೈವ ತದಾ ಮೇ ಶ್ವಶುರಾದಯಃ |
ಯಧೈಷಾ ನಾಥಮಿಚ್ಛಂತೀ ಪ್ರಾಲಪತ್ ಕುರರೀ ಯಥಾ ॥12॥
ಕೇಶಪಕ್ಷೇ ಪರಾಮೃಷ್ಟಾ ಪಾಪೇನ ಹತಬುದ್ಧಿನಾ |
ಯದಾ ದುಃಶಾಸನೇನೈಷಾ ತದಾ ಮುಹ್ಯಾಮ್ಯಹಂ ನೃಪ ॥13॥
ಇವಳು ರಕ್ಷಕರನ್ನು ಬಯಸುತ್ತಾ ಹೆಣ್ಣು ಜಿಂಕೆಯಂತೆ ಯಾವ ರೀತಿಯಾಗಿ ಅತ್ತಳೋ ಆಗಲೇ ನನ್ನ ಮಾವನೇ ಮೊದಲಾಗಿ ಎಲ್ಲ ಕುರುವಂಶಜರು ವಿಷಣ್ಣರಾದರು. ಪಾಪಿಯಾದ, ಬುದ್ಧಿಶೂನ್ಯನಾದ ದುಶ್ಶಾಸನನನಿಂದ ಯಾವಾಗ ಇವಳು ತಲೆಗೂದಲಿನಲ್ಲಿ ಹಿಡಿಯಲ್ಪಟ್ಟಳೋ ಹೇ ರಾಜನೇ, ಆಗಲೇ ನಾನು ಮೂರ್ಛೆಗೊಂಡೆ.
ಯುಷ್ಮತ್ತೇಜೋವಿವೃದ್ಧ್ಯರ್ಥಂ ಮಯಾ ಹ್ಯುದ್ಧರಣಂ ಕೃತಮ್ |
ತದಾನೀಂ ವಿದುಲಾವಾಕ್ಯೈರಿತಿ ತದ್ವಿತ್ತ ಪುತ್ರಕಾಃ ॥14॥
ಹೇ ಮಕ್ಕಳೇ! ನಿಮ್ಮ ತೇಜಸ್ಸಿನ ಅಭಿವೃದ್ಧಿಗಾಗಿ ಆಗ ನಾನು ವಿದುಲೆಯ ವಾಕ್ಯಗಳನ್ನು ಉದಾಹರಿಸಿ ನಿಮ್ಮನ್ನು ಉದ್ಧರಿಸಿದೆ. ಅದನ್ನು ಇಂದು ತಿಳಿಯಿರಿ.
ಕಥಂ ನ ರಾಜವಂಶೋಽಯಂ ನಶ್ಯೇತ್ ಪ್ರಾಪ್ಯ ಸುತಾನ್ ಮಮ |
ಪಾಂಡೋರಿತಿ ಮಯಾ ಪುತ್ರಾಸ್ತಸ್ಮಾದುದ್ಧರಣಂ ಕೃತಮ್ ॥15॥
ಹೇ ಮಕ್ಕಳೇ! ನನ್ನಿಂದ ಮಕ್ಕಳನ್ನು ಪಡೆದ ಪಾಂಡುವಿನ ಈ ರಾಜವಂಶವು ಯಾವುದೇ ರೀತಿಯಲ್ಲಿ ನಾಶವಾಗಬಾರದು. ಅದಕ್ಕಾಗಿ ನನ್ನಿಂದ ನಿಮ್ಮೆಲ್ಲರ ಉದ್ಧಾರವು ನಡೆಸಲ್ಪಟ್ಟಿತು.
ನ ತಸ್ಯ ಪುತ್ರಾಃ ಪೌತ್ರಾ ವಾ ಕುತ ಏವ ಸ ಪಾರ್ಥಿವಃ |
ಲಭತೇ ಸುಕೃತಾನ್ ಲೋಕಾನ್ ಯಸ್ಮಾದ್ವಂಶಃ ಪ್ರಣಶ್ಯತಿ ॥16॥
ಒಂದು ವೇಳೆ ಈ ವಂಶವು ನಾಶವಾದರೆ ಆ ಪಾಂಡುರಾಜನಾಗಲೀ, ಅವನ ಮಕ್ಕಳು, ಮೊಮ್ಮಕ್ಕಳಾಗಲೀ ಪುಣ್ಯಲೋಕಗಳನ್ನು ಪಡೆಯಲಾರರು.
ಭುಕ್ತಂ ರಾಜ್ಯಫಲಂ ತಾತ ಭರ್ತುರ್ಮೇ ವಿಪುಲಂ ಪುರಾ |
ಮಹಾದಾನಾನಿ ದತ್ತಾನಿ ಪೀತಾಃ ಸೋಮಾ ಯಥಾವಿಧಿ ॥17॥
ಹಿಂದೆ ನನ್ನ ಗಂಡನಿರುವಾಗಲೇ ರಾಜ್ಯದಲ್ಲಿ ಸಿಗಬೇಕಾದ ಫಲಗಳನ್ನು ನಾನು ಅನುಭವಿಸಿರುವೆನು. ಹೇ ಮಗನೇ! ಅದೇ ಕಾಲದಲ್ಲಿ ಮಹಾದಾನಗಳೂ ಮಾಡಲ್ಪಟ್ಟಿವೆ. ವಿಧಿಪ್ರಕಾರವಾಗಿ ಸೋಮಪಾನವನ್ನೂ ಮಾಡಿರುವೆನು.
ಸಾಽಹಂ ನಾತ್ಮಫಲಾರ್ಥಂ ವೈ ವಾಸುದೇವಮಚೂಚುದಮ್ |
ವಿದುಲಾಯಾಃ ಪ್ರಲಾಪೈಸ್ತೈಃ ಪ್ಲಾವನಾರ್ಥಂ ತು ತತ್ಕೃತಮ್ ॥18॥

ಅಂತಹ ನಾನು ನನ್ನ ಸ್ವಾರ್ಥಕ್ಕೋಸ್ಕರ ಕೃಷ್ಣನನ್ನು ಕಳುಹಿಸಿ, ವಿದುಲೆಯ ಆ ಮಾತುಗಳಿಂದ ನಿಮ್ಮನ್ನು ಪ್ರೇರಿಸಲಿಲ್ಲ. ಕುಲವು ಮುಳುಗದಿರುವಂತೆ ಅದನ್ನು ನಡೆಸಬೇಕಾಯಿತು.
ನಾಹಂ ರಾಜ್ಯಫಲಂ ಪುತ್ರಾಃ ಕಾಮಯೇ ಭರ್ತೃವರ್ಜಿತಮ್ |
ಪತಿಲೋಕಾನಹಂ ಪುಣ್ಯಾನ್ ಕಾಮಯೇ ತಪಸಾ ವಿಭೋ ॥19॥
ಹೇ ಮಕ್ಕಳೇ! ಗಂಡನಿಲ್ಲದ ರಾಜ್ಯಸುಖವನ್ನು ನಾನು ಬಯಸುವುದಿಲ್ಲ. ತಪಸ್ಸಿನಿಂದ ಗಂಡನು ಸೇರಿದ ಪುಣ್ಯಲೋಕಗಳನ್ನು ಪಡೆಯಲು ಬಯಸುತ್ತಿರುವೆ.
ಶ್ವಶ್ರೂಶ್ವಶುರಯೋಃ ಕೃತ್ವಾ ಶುಶ್ರೂಷಾಂ ವನವಾಸಿನೋಃ |
ತಪಸಾ ಶೋಷಯಿಷ್ಯಾಮಿ ಯುಧಿಷ್ಠಿರ ಕಲೇಬರಮ್ ॥20॥
ಹೇ ಯುಧಿಷ್ಠಿರನೇ, ವನವಾಸವನ್ನು ಬಯಸುತ್ತಿರುವ ಅತ್ತೆ- ಮಾವಂದಿರ ಸೇವೆಯನ್ನು ನಡೆಸುತ್ತಾ ಈ ಶರೀರವನ್ನು ತಪಸ್ಸಿನಿಂದ ಒಣಗಿಸುವೆ.
ನಿವರ್ತಸ್ವ ಕುರುಶ್ರೇಷ್ಠ ಭೀಮಸೇನಾದಿಭಿಃ ಸಹ |
ಧರ್ಮೇ ತೇ ಧೀಯತಾಂ ಬುದ್ಧಿರ್ಮನಸೋ ಮಹದಸ್ತು ತೇ ॥21॥
ಆದ್ದರಿಂದ ಹೇ ಕುರುಶ್ರೇಷ್ಠನೇ, ಭೀಮಸೇನನೇ ಮೊದಲಾದವರನ್ನು ಕೂಡಿಕೊಂಡು ಹಿಂದಿರುಗು. ನಿನ್ನ ಬುದ್ಧಿಯು ಧರ್ಮದಲ್ಲೇ ಇರಲಿ. ನಿನ್ನ ಮನಸ್ಸಿಗೆ ಸಮಾಧಾನ ಸಿಗಲಿ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಕುಂತೀವಚನಂ ನಾಮ ದ್ವಾವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ದ್ವಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೂರನೆಯ ಅಧ್ಯಾಯ
ಕುಂತಿಯು ಬಹುಪ್ರಯತ್ನಪೂರ್ವಕವಾಗಿ ಯುಧಿಷ್ಠಿರಾದಿಗಳನ್ನು ಹಿಂದಿರುಗುವಂತೆ ಸೂಚಿಸಿದಾಗ, ಅವರು ಕಷ್ಟದಿಂದಲೇ ನಗರಕ್ಕೆ ಹಿಂದಿರುಗುವುದು. ಧೃತರಾಷ್ಟ್ರಾದಿಗಳು ವಿದುರನ ಜೊತೆ ಕಾಡನ್ನು ಪ್ರವೇಶಿಸಿ ಗಂಗಾತೀರದಲ್ಲಿ ಸಂಧ್ಯಾದಿಗಳನ್ನು ಪೂರೈಸಿ ರಾತ್ರಿಯನ್ನು ಕಳೆಯುವುದು.
ವೈಶಂಪಾಯನಃ
ಕುಂತ್ಯಾಸ್ತು ವಚನಂ ಶ್ರುತ್ವಾ ಪಾಂಡವಾ ರಾಜಸತ್ತಮ |
ವ್ರೀಡಿತಾಃ ಸನ್ನ್ಯವರ್ತಂತ ಪಾಂಚಾಲ್ಯಾ ಸಹ ಭಾರತ ॥1॥
ವೈಶಂಪಾಯನ ಹೇ ಭಾರತನೇ, ರಾಜಶ್ರೇಷ್ಠನೇ, ಕುಂತಿಯ ವಚನವನ್ನು ಕೇಳಿ ಪಾಂಡವರು ದ್ರೌಪದಿಯೊಂದಿಗೆ ನಾಚಿಕೆಗೊಂಡು ಹಿಂದಿರುಗಿದರು.
ತತಃ ಶಬ್ದೋ ಮಹಾನಾಸೀತ್ ಸರ್ವೇಷಾಮೇವ ಭಾರತ |
ಅಂತಃಪುರಾಣಾಂ ರುದತಾಂ ದೃಷ್ಟ್ವಾ ಕುಂತೀಂ ತಥಾ ಗತಾಮ್ ॥2॥
ಹೇ ಭಾರತನೇ, ಹಾಗೆ ಹೊರಟಿರುವ ಕುಂತಿಯನ್ನು ನೋಡಿ ಅಂತಃಪುರದಲ್ಲಿರುವ ಎಲ್ಲ ಸ್ತ್ರೀಯರ ಅಳುವ ಶಬ್ದವು ಜೋರಾಗಿ ಕೇಳಿಸುತ್ತಿತ್ತು.
ಪ್ರದಕ್ಷಿಣಮುಪಾವೃತ್ಯ ರಾಜಾನಂ ಪಾಂಡವಾಸ್ತದಾ |
ಅಭಿವಾದ್ಯ ನಿವರ್ತಂತ ಪೃಥಾಂ ತಾಮನಿವರ್ತ್ಯ ತೇ ॥3॥
ಆಗ ಪಾಂಡವರೆಲ್ಲರೂ ರಾಜನಾದ ಧೃತರಾಷ್ಟ್ರನನ್ನು ಪ್ರದಕ್ಷಿಣೆ ಬಂದು ನಮಸ್ಕರಿಸಿ ಕುಂತಿಯನ್ನು ಹಿಂದಿರುಗಿಸಲಾರದೆ ತಾವು ಹಿಂದಿರುಗಿದರು.
ತಾಮಬ್ರವೀನ್ಮಹಾರಾಜೋ ಧೃತರಾಷ್ಟ್ರೋಽಂಬಿಕಾಸುತಃ |
ಗಾಂಧಾರೀಂ ವಿದುರಂ ಚೈವ ಸಮಾಭಾಷ್ಯ ನಿಗೃಹ್ಯ ಚ ॥4॥
ಆಗ ಅಂಬಿಕಾಸುತನಾದ ಧೃತರಾಷ್ಟ್ರ ಮಹಾರಾಜನು ಗಾಂಧಾರಿಯನ್ನೂ ಮತ್ತು ವಿದುರನನ್ನೂ ಸೇರಿಸಿಕೊಂಡು, ಅವರ ಜೊತೆ ಮಾತುಕತೆ ನಡೆಸಿ, ಸ್ವಯಂ ಪರಾಮರ್ಶಿಸಿ ಕುಂತಿಯನ್ನು ಕುರಿತು ಹೀಗೆ ಹೇಳಿದನು.
ಧೃತರಾಷ್ಟ್ರಃ
ಯುಧಿಷ್ಠಿರಸ್ಯ ಜನನೀ ದೇವೀ ಸಾಽಪಿ ನಿವರ್ತ್ಯತಾಮ್ |
ತಥಾ ಯುಧಿಷ್ಠಿರಃ ಪ್ರಾಹ ತತ್ಸರ್ವಂ ಸತ್ಯಮೇವ ಹಿ ॥5॥
ಧೃತರಾಷ್ಟ್ರ ಯುಧಿಷ್ಠಿರನ ತಾಯಿಯಾದ ಕುಂತೀ ದೇವಿಯು ಹಿಂದಿರುಗಲಿ. ಯುಧಿಷ್ಠಿರನೂ ಅದನ್ನೇ ಆಡಿದ್ದಾನೆ. ಅವನು ಹೇಳಿದುದೆಲ್ಲವೂ ಸತ್ಯವಾಗಿಯೇ ಇದೆ.
ಪುತ್ರೈಶ್ವರ್ಯಂ ಮಹದಿದಮಪಹಾಯ ಮಹಾಫಲಮ್ |
ಕಾ ಗಚ್ಛೇತ ವನಂ ದುರ್ಗಂ ಪುತ್ರಾನುತ್ಸೃಜ್ಯ ಮೂಢವತ್ ॥6॥
ಮಹತ್ತಾದ ಫಲವನ್ನು ಕೊಡುವ ಮಕ್ಕಳ ಈ ಮಹಾ ಐಶ್ವರ್ಯವನ್ನು ಬಿಟ್ಟು, ಮೂಢಳಂತೆ ಮಕ್ಕಳನ್ನೂ ಬಿಟ್ಟು ದುರ್ಗಮವಾದ ಕಾಡಿಗೆ ಯಾವಳು ತಾನೇ ಹೋದಾಳು!
ರಾಜ್ಯಸ್ಥಯಾ ತಪಶ್ಚರ್ತುಂ ನಾನಾವ್ರತಕೃತಂ ಮಹತ್ |

ಅನಯಾ ಶಕ್ಯಮದ್ಯೇಹ ಶ್ರೂಯತಾಂ ಚ ವಚೋ ಮಮ ॥7॥
ಇವಳು ರಾಜ್ಯದಲ್ಲಿದ್ದುಕೊಂಡೆ ನಾನಾ ವ್ರತಗಳನ್ನು ನಡೆಸುತ್ತಾ ತಪಸ್ಸನ್ನು ಆಚರಿಸಲು ಯೋಗ್ಯಳಾಗಿದ್ದಾಳೆ. ಇಂದು ನನ್ನ ಮಾತನ್ನು ಇವಳು ಕೇಳಬೇಕು.
ಗಾಂಧಾರಿ ಪರಿತುಷ್ಟೋಽಸ್ಮಿ ವಧ್ವಾಃ ಶುಶ್ರೂಷಣೇನ ವೈ |
ತಸ್ಮಾತ್ ತ್ವಮೇನಾಂ ಧರ್ಮಜ್ಞೇ ಸಮನುಜ್ಞಾತುಮರ್ಹಸಿ ॥8॥
ಧರ್ಮಜ್ಞಳಾದ ಹೇ ಗಾಂಧಾರಿಯೇ, ಸೊಸೆಯಂತೆ ಇವಳು ಮಾಡಿದ ಸೇವೆಯಿಂದ ನಾನು ಸಂತುಷ್ಟನಾಗಿದ್ದೇನೆ. ಆದ್ದರಿಂದ ಹಿಂದಿರುಗಲು ಇವಳಿಗೆ ನೀನು ಅನುಜ್ಞೆ ನೀಡಬೇಕು.
ವೈಶಂಪಾಯನಃ
ಇತ್ಯುಕ್ತಾ ಸೌಬಲೇಯೀ ತು ರಾಜ್ಞಾ ಕುಂತೀಮುವಾಚ ಹ |
ತತ್ಸರ್ವಂ ರಾಜವಚನಂ ಸ್ವಂ ಚ ವಾಕ್ಯಂ ವಿಶೇಷವತ್ ॥9॥
ವೈಶಂಪಾಯನ ಹೀಗೆ ಧೃತರಾಷ್ಟ್ರನು ಗಾಂಧಾರಿಯೊಂದಿಗೆ ಹೇಳಿದಾಗ, ಆ ಗಾಂಧಾರಿಯು ರಾಜನು ಹೇಳಿದ ಆ ಎಲ್ಲ ಮಾತುಗಳನ್ನೂ ಜೊತೆಗೆ ವಿಶೇಷವಾಗಿ ತನ್ನ ಮಾತುಗಳನ್ನೂ ಸೇರಿಸಿಕೊಂಡು ಕುಂತಿಗೆ ತಿಳಿ ಹೇಳಲು ಪ್ರಯತ್ನಿಸಿದಳು.
ನ ಚ ಸಾ ವನವಾಸಾಯ ದೇವೀ ಕೃತಮತಿಸ್ತದಾ |
ಶಕ್ತಾ ಹ್ಯುಪಾವರ್ತಯಿತುಂ ಕುಂತೀ ಧರ್ಮಪರಾ ಸತೀ ॥10॥
ಆದರೆ ವನವಾಸದಲ್ಲಿ ಮನಸ್ಸನ್ನು ಇರಿಸಿದ, ಧರ್ಮಪರಳಾದ ಸಾಧ್ವಿಯಾದ ಆ ಕುಂತೀದೇವಿಯನ್ನು ಹಿಂದಿರುಗಿಸಲು ಶಕ್ತಳಾಗಲಿಲ್ಲ.
ತಸ್ಯಾಸ್ತು ತಂ ಸ್ಥಿರಂ ಜ್ಞಾತ್ವಾ ವ್ಯವಸಾಯಂ ಕುರುಸ್ತ್ರಿಯಃ |
ನಿವೃತ್ತಾಶ್ಚ ಕುರುಶ್ರೇಷ್ಠ ದೃಷ್ಟ್ವಾ ಪುರುರುದುಸ್ತದಾ ॥11॥
ಹೇ ಕುರುಶ್ರೇಷ್ಠನೇ, ಅವಳ ಆ ಸ್ಥಿರಬುದ್ಧಿಯನ್ನು ತಿಳಿದು ಕುರುಸ್ತ್ರೀಯರು ಹಿಂದಕ್ಕೆ ಹೊರಟವರಾಗಿದ್ದರೂ ಅವಳನ್ನು ನೋಡಿ ಮತ್ತೆ ಅತ್ತರು.
ಉಪಾವೃತ್ತೇಷು ಪಾರ್ಥೇಷು ಸರ್ವೇಷ್ವಂತಃಪುರೇಷು ಚ |
ಯಯೌ ರಾಜಾ ಮಹಾಪ್ರಾಜ್ಞೋ ಧೃತರಾಷ್ಟ್ರೋ ವನಂ ತದಾ ॥12॥
ಪಾಂಡವರೂ ಹಾಗೂ ಎಲ್ಲ ಅಂತಃಪುರದ ಜನರು ಹಿಂದಿರುಗಿದಾಗ ಮಹಾಪ್ರಾಜ್ಞನಾದ ಧೃತರಾಷ್ಟ್ರನು ನೇರವಾಗಿ ಕಾಡಿಗೆ ಹೋದನು.
ಪಾಂಡವಾ ಅಪಿ ದೀನಾಸ್ತೇ ದುಃಖಶೋಕಪರಾಯಣಾಃ |
ಯಾನೈಃ ಸ್ತ್ರೀಸಹಿತಾಃ ಸರ್ವೇ ಪುರಂ ಪ್ರವಿವಿಶುಸ್ತದಾ ॥13॥
ಪಾಂಡವರಾದರೂ ದೀನರಾಗಿ, ದುಃಖ ಹಾಗೂ ಶೋಕಗಳಿಂದ ತುಂಬಿದವರಾಗಿ ಸ್ತ್ರೀಯರೊಂದಿಗೆ ತಮ್ಮ ವಾಹನಗಳಿಂದ ಪುರವನ್ನು ಪ್ರವೇಶಿಸಿದರು.
ತದಹೃಷ್ಟಮಿವಾಕೂಜಂ ಗತೋತ್ಸವಮಿವಾಭವತ್ |
ನಗರಂ ಹಸ್ತಿನಪುರಂ ಸಸ್ತ್ರೀವೃದ್ಧಕುಮಾರಕಮ್ ॥14॥
ಆಗ ಸ್ತ್ರೀಯರೂ, ವೃದ್ಧರೂ, ಮಕ್ಕಳೂ ಸೇರಿದಂತೆ ಇಡೀ ಹಸ್ತಿನಾಪುರ ನಗರವು ಉತ್ಸವವು ನಿಂತುಹೋಗಿ, ಸಂತೋಷವಿಲ್ಲದೆ ಸಣ್ಣ ಧ್ವನಿಯಲ್ಲಿ ಅಳುವಂತೆ ಭಾಸವಾಯಿತು.
ಸರ್ವೇ ಚಾಸನ್ ನಿರುತ್ಸಾಹಾಃ ಪಾಂಡವಾ ಜಾತಮನ್ಯವಃ |
ಕುಂತ್ಯಾ ಹೀನಾಃ ಸುದುಃಖಾರ್ತಾ ವತ್ಸಾ ಇವ ನಿವಾರಿತಾಃ ॥15॥
ಎಲ್ಲ ಪಾಂಡವರೂ ಶೋಕಗೊಂಡವರಾಗಿ ಉತ್ಸಾಹವಿಲ್ಲದವರಾದರು. ಕುಂತಿ ಇಲ್ಲದ ದುಃಖದಿಂದ ವ್ಯಥೆಗೊಂಡವರಾಗಿ ತಾಯಿಯಿಂದ ದೂರದಬ್ಬಲ್ಪಟ್ಟ ಮಕ್ಕಳಂತೆ ಭಾಸವಾದರು.
ಧೃತರಾಷ್ಟ್ರಸ್ತು ತೇನಾಹ್ನಾ ಗತ್ವಾ ಸುಮಹದಂತರಮ್ |
ತತೋ ಭಾಗೀರಥೀತೀರೇ ನಿವಾಸಮಕರೋತ್ ಪ್ರಭುಃ ॥16॥
ಧೃತರಾಷ್ಟ್ರನಾದರೂ ಆ ದಿನ ಬಹಳ ದೂರದವರೆಗೆ ಹೋಗಿ, ಅನಂತರ ಭಾಗೀರಥಿಯ ತೀರದಲ್ಲಿ ವಾಸಸ್ಥಾನವನ್ನು ಅಣಿಗೊಳಿಸಿದನು.
ಪ್ರಾದುಷ್ಕೃತಾ ಯಥಾನ್ಯಾಯಮಗ್ನಯೋ ವೇದಪಾರಗೈಃ |
ವ್ಯರಾಜಂತ ದ್ವಿಜಶ್ರೇಷ್ಠೈಸ್ತತ್ರ ತತ್ರ ತಪೋಧನೈಃ ॥17॥
ಪ್ರಾದುಷ್ಕೃತಾಗ್ನಿರಭವತ್ಸ ಚ ವೃದ್ಧೋ ನರಾಧಿಪಃ ॥18॥
ವೇದಪಾರಂಗತರಾದ ಬ್ರಾಹ್ಮಣರಿಂದ ಶಾಸ್ತ್ರನೀತಿಗೆ ಅನುಸಾರವಾಗಿ ಮೂರು ರೀತಿಯ ಅಗ್ನಿಗಳು ಪ್ರಾದುರ್ಭಾವ ಮಾಡಲ್ಪಟ್ಟವು. ಆ ಸಮಯದಲ್ಲಿ ಅಲ್ಲಲ್ಲಿ ತಪೋಧನರಾದ ಬ್ರಾಹ್ಮಣರು ವಿರಾಜಿಸಿದರು. ಹೀಗೆ ವೃದ್ಧನಾದ ಆ ರಾಜನು ವಾನಪ್ರಸ್ಥಾಶ್ರಮಕ್ಕೆ ಬೇಕಾದ ಅಗ್ನಿಯ ಪ್ರಾದುರ್ಭಾವವುಳ್ಳವನಾದನು.
ಸ ರಾಜಾಽಗ್ನೀನ್ ಪರ್ಯುಪಾಸ್ಯ ಹುತ್ವಾ ಚ ವಿಧಿವತ್ ತದಾ |
ಸಂಧ್ಯಾಗತಸಹಸ್ರಾಂಶುಮುಪಾತಿಷ್ಠತ ಭಾರತ ॥19॥
ಹೇ ಭಾರತನೇ, ಆಗ ಆ ರಾಜನು ಅಗ್ನಿಗಳ ಉಪಾಸನೆಯನ್ನು ಮಾಡಿ, ವಿಧಿವತ್ತಾಗಿ ಅವುಗಳಲ್ಲಿ ಹೋಮಿಸಿ, ಸಾಯಂಸಂಧ್ಯಾಗತನಾದ ಸೂರ್ಯನ ಉಪಾಸನೆಯನ್ನೂ ಮಾಡಿದನು.
ವಿದುರಃ ಸಂಜಯಶ್ಚೈವ ರಾಜ್ಞಃ ಶಯ್ಯಾಂ ಕುಶೈಸ್ತತಃ |

ಚಕ್ರತುಃ ಕುರುವೀರಸ್ಯ ಗಾಂಧಾರ್ಯಾಶ್ಚಾವಿದೂರತಃ ॥20॥
ರಾಜನ ಸಂಧ್ಯಾವಂದನೆಯು ಮುಗಿದ ನಂತರ ವಿದುರ ಮತ್ತು ಸಂಜಯರು ಸೇರಿಕೊಂಡು ಕುರುವೀರನಾದ ರಾಜನಿಗೆ ದರ್ಭೆಗಳಿಂದ ಹಾಸಿಗೆಯನ್ನು ತಯಾರಿಸಿದರು. ಸ್ವಲ್ಪವೇ ದೂರದಲ್ಲಿ ಗಾಂಧಾರಿಗೂ ಹಾಸಿಗೆಯನ್ನು ತಯಾರಿಸಿದರು.
ಗಾಂಧಾರ್ಯಾಃ ಸನ್ನಿಕರ್ಷೇ ತು ನಿಷಸಾದ ಕುಶೇಷ್ವಥ |
ಯುಧಿಷ್ಠಿರಸ್ಯ ಜನನೀ ಕುಂತೀ ಸಾಧುವ್ರತೇ ಸ್ಥಿತಾ ॥21॥
ಯುಧಿಷ್ಠಿರನ ತಾಯಿಯಾದ ಕುಂತೀದೇವಿಯು ಯೋಗ್ಯವಾದ ಅನುಷ್ಠಾನದಲ್ಲಿ ಇರುವವಳಾಗಿ ಗಾಂಧಾರಿಯ ಸಮೀಪದಲ್ಲೇ ದರ್ಭೆಗಳ ಮೇಲೆ ಕುಳಿತಳು.
ತೇಷಾಂ ಸಂಶ್ರಯಣೇ ಚಾಪಿ ನಿಷೇದುರ್ವಿದುರಾದಯಃ |
ಯಾಜಕಾಶ್ಚ ಯಥೋದ್ದೇಶಂ ದ್ವಿಜಾ ಯೇ ಚಾನುಯಾಯಿನಃ ॥22॥
ಅವರ ಸಮೀಪದಲ್ಲಿ ವಿದುರಾದಿಗಳೂ ವಾನಪ್ರಸ್ಥಾಶ್ರಮವನ್ನು ನೀಡುವ ಉದ್ದೇಶದಿಂದಲೇ ಬಂದ ಯಾಜಕರು ಮತ್ತು ಅವರ ಅನುಯಾಯಿಗಳಾದ ಬ್ರಾಹ್ಮಣರೂ ವಿಶ್ರಾಂತಿ ಪಡೆದರು.
ಪ್ರಧೀತದ್ವಿಜಮುಖ್ಯಾ ಸಾ ಸಂಪ್ರಜ್ವಲಿತಪಾವಕಾ |
ಬಭೂವ ತೇಷಾಂ ರಜನೀ ಬ್ರಾಹ್ಮೀವ ಪ್ರೀತಿವರ್ಧನೀ ॥23॥
ಚೆನ್ನಾಗಿ ಅಧ್ಯಯನ ಮಾಡಿದ ಬ್ರಾಹ್ಮಣರಿಗೆ ಪ್ರಾಧಾನ್ಯವನ್ನು ನೀಡಿದ, ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯುಳ್ಳ ಅವರ ಆ ರಾತ್ರಿಯು ಬ್ರಾಹ್ಮೀ ರಾತ್ರಿಯಂತೆ ಪ್ರೀತಿಯನ್ನು ಹೆಚ್ಚಿಸುವಂಥದ್ದಾಯಿತು.
ತತೋ ರಾತ್ರ್ಯಾಂ ವ್ಯತೀತಾಯಾಂ ಕೃತಪೂರ್ವಾಹ್ಣಿಕಕ್ರಿಯಾಃ |
ಹುತ್ವಾಽಗ್ನಿಂ ವಿಧಿವತ್ ಸರ್ವೇ ಪ್ರಯಯುಸ್ತೇ ಯಥಾಕ್ರಮಮ್ ॥24॥
ಉದಙ್ಮುಖಾ ನಿರೀಕ್ಷಂತ ಉಪವಾಸಪರಾಯಣಾಃ ॥25॥
ಅನಂತರ ರಾತ್ರಿ ಕಳೆದು ಬೆಳಗಾಗುತ್ತಿರಲು ಎಲ್ಲರೂ ತಮ್ಮ ಪ್ರಾತಃಕಾಲೀನ ಕ್ರಿಯೆಗಳನ್ನು ನಡೆಸಿ, ವಿಧಿವತ್ತಾಗಿ ಅಗ್ನಿಯಲ್ಲಿ ಹೋಮಗಳನ್ನು ನಡೆಸಿ, ಉಪವಾಸಾದಿ ವ್ರತನಿಷ್ಠರಾಗಿ ಕ್ರಮವಾಗಿ ಉತ್ತರ ದಿಕ್ಕಿನಲ್ಲಿ ಯೋಗ್ಯ ಸ್ಥಳವನ್ನು ಅರಸುತ್ತಾ ಹೊರಟರು.
ಸ ತೇಷಾಮತಿದುಃಖೋಽಭೂನ್ನಿವಾಸಃ ಪ್ರಥಮೇಽಹನಿ |
ಶೋಚತಾಂ ವದತಾಂ ಚಾಪಿ ಪೌರಜಾನಪದಾನಪಿ ॥26॥
ಆ ಮೊದಲ ದಿನದಲ್ಲಿ ಕಾಡಿನಲ್ಲಿ ಅವರ ವಾಸವು - ಪಟ್ಟಣಿಗರ ಹಾಗೂ ಗ್ರಾಮೀಣ ಜನರ ಶೋಕವನ್ನು ಆಡಿಕೊಳ್ಳುತ್ತಾ, ಅತಿಯಾದ ದುಃಖವನ್ನು ಉಂಟು ಮಾಡಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರಸ್ಯ ಆಶ್ರಮವಾಸೋ ನಾಮ ತ್ರಯೋವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ತ್ರಯೋವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ಮೂರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ನಾಲ್ಕನೆಯ ಅಧ್ಯಾಯ
ಧೃತರಾಷ್ಟ್ರನು ವಿದುರಾದಿಗಳ ಜೊತೆಗೆ ಗಂಗಾತೀರದಿಂದ ಕುರುಕ್ಷೇತ್ರಕ್ಕೆ ತೆರಳಿ, ಅಲ್ಲಿ ಶತಯೂಪರ ಆಶ್ರಮದಲ್ಲಿ ವೇದವ್ಯಾಸರ ಆಜ್ಞೆಯಂತೆ ಅವರು ಉಪದೇಶಿಸಿದ ಕ್ರಮದಂತೆ ತಪಸ್ಸನ್ನು ಆಚರಿಸುವುದು.
ವೈಶಂಪಾಯನಃ
ತತೋ ಭಾಗೀರಥೀತೀರೇ ಮಧ್ಯೇ ಪುಣ್ಯಜನೋಚಿತೇ |
ನಿವಾಸಮಕರೋದ್ ರಾಜಾ ವಿದುರಸ್ಯ ಮತೇ ಸ್ಥಿತಃ ॥1॥
ವೈಶಂಪಾಯನ ಅನಂತರ ರಾಜನಾದ ಧೃತರಾಷ್ಟ್ರನು ಪುಣ್ಯಾತ್ಮರಿಗೆ ಯೋಗ್ಯವಾದ ಭಾಗೀರಥಿಯ ತೀರದ ಮಧ್ಯದಲ್ಲಿ ವಿದುರನ ಅಭಿಪ್ರಾಯಕ್ಕೆ ಅನುಗುಣವಾಗಿ ವಾಸಸ್ಥಾನವನ್ನು ಏರ್ಪಡಿಸಿದನು.
ತತ್ರೈನಂ ಪರ್ಯುಪಾತಿಷ್ಠನ್ ಬ್ರಾಹ್ಮಣಾ ರಾಷ್ಟ್ರವಾಸಿನಃ |
ಕ್ಷತ್ರವಿಟ್-ಶೂದ್ರಸಂಘಾಶ್ಚ ಬಹವೋ ಭರತರ್ಷಭ ॥2॥
ಹೇ ಭರತರ್ಷಭನೇ, ಆ ವಾಸಸ್ಥಾನದಲ್ಲಿ ಈ ರಾಜನನ್ನು ರಾಷ್ಟ್ರವಾಸಿಗಳಾದ ಅನೇಕ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರ ಸಮೂಹದವರೂ ಸೇರಿದರು.
ಸ ತೈಃ ಪರಿವೃತೋ ರಾಜಾ ಕಥಾಭಿರಭಿನಂದ್ಯ ತಾನ್ |
ಅನುಜಜ್ಞೇ ಸಶಿಷ್ಯಾನ್ ವೈ ವಿಧಿವತ್ ಪ್ರತಿಪೂಜ್ಯ ಚ ॥3॥
ರಾಷ್ಟ್ರವಾಸಿಗಳಿಂದ ಸುತ್ತುವರಿಯಲ್ಪಟ್ಟ ಆ ರಾಜನು ತಮ್ಮ ಶಿಷ್ಯರೊಂದಿಗೆ ಬಂದ ಅವರೆಲ್ಲರನ್ನೂ ಮಾತನಾಡಿಸಿ, ಅಭಿನಂದಿಸಿ, ವಿಧಿವತ್ತಾಗಿ ಅವರನ್ನು ಗೌರವಿಸಿ ತನ್ನೊಂದಿಗೆ ಇರಲು ಅನುಮತಿಸಿದನು.
ಸಾಯಾಹ್ನೇ ಸ ಮಹೀಪಾಲಸ್ತತೋ ಗಂಗಾಮುಪೇತ್ಯ ಚ |
ಚಕಾರ ವಿಧಿವಚ್ಛೌಚಂ ಗಾಂಧಾರೀ ಚ ಯಶಸ್ವಿನೀ ॥4॥
ಸಾಯಂಕಾಲದ ಹೊತ್ತಿನಲ್ಲಿ ಆ ರಾಜನು ಗಂಗೆಯನ್ನು ಸಮೀಪಿಸಿ ವಿಧಿವತ್ತಾಗಿ ಶೌಚವನ್ನು ಆಚರಿಸಿದನು. ಯಶಸ್ವಿನಿಯಾದ ಗಾಂಧಾರಿಯೂ ಕೂಡ ಶೌಚವನ್ನು ನಡೆಸಿದಳು.
ತಥೈವಾನ್ಯೇ ಪೃಥಕ್ ಸರ್ವೇ ತೀರ್ಥೇಷ್ವಾಪ್ಲುತ್ಯ ಭಾರತ |

ಚಕ್ರುಃ ಸರ್ವಾಃ ಕ್ರಿಯಾಸ್ತತ್ರ ಪುರುಷಾ ವಿದುರಾದಯಃ ॥5॥
ಹೇ ಭಾರತನೇ, ಅದೇ ರೀತಿಯಾಗಿ ವಿದುರನೇ ಮೊದಲಾದ ಎಲ್ಲ ಪುರುಷರೂ ತೀರ್ಥದಲ್ಲಿ ಮುಳುಗಿ ಪ್ರತ್ಯೇಕವಾಗಿ ಶುದ್ಧೀಕರಣಕ್ಕೆ ಸಂಬಂಧಿಸಿದ ಎಲ್ಲ ಕ್ರಿಯೆಗಳನ್ನೂ ನಡೆಸಿದರು.
ಕೃತಶೌಚಂ ತತೋ ವೃದ್ಧಂ ಶ್ವಶುರಂ ಕುಂತಿಭೋಜಜಾ |
ಗಾಂಧಾರೀಂ ಚ ಪೃಥಾ ರಾಜನ್ ಗಂಗಾತೀರಮುಪಾನಯತ್ ॥6॥
ಹೇ ರಾಜನೇ, ಸ್ನಾನಾದಿ ಶೌಚ ಕ್ರಿಯೆಗಳನ್ನು ಮುಗಿಸಿದ ವೃದ್ಧನಾದ ಮಾವನನ್ನು ಮತ್ತು ಗಾಂಧಾರಿಯನ್ನೂ ಕುಂತೀಭೋಜನ ಮಗಳಾದ ಪೃಥೆಯು ಗಂಗಾತೀರಕ್ಕೆ ಕರೆತಂದಳು.
ರಾಜ್ಞಸ್ತು ಯಾಜಕೈಸ್ತತ್ರ ಕೃತೋ ವೇದೀಪರಿಸ್ತರಃ |
ಜುಹಾವ ತತ್ರ ವಹ್ನೀನ್ ಸ ನೃಪತಿಃ ಸತ್ಯಸಂಗರಃ ॥7॥
ಆ ಗಂಗಾತೀರದಲ್ಲಿ ಯಜ್ಞಕ್ರಿಯೆಗಳನ್ನು ಬಲ್ಲವರು ರಾಜನಿಗಾಗಿ ಯಜ್ಞವೇದಿಯನ್ನು ನಿರ್ಮಾಣ ಮಾಡಿ, ಸಕಲ ಸಾಮಗ್ರಿಗಳನ್ನೂ ಒಗ್ಗೂಡಿಸಿದರು. ಸತ್ಯಪ್ರತಿಜ್ಞೆಯುಳ್ಳ ಆ ರಾಜನು ಅಲ್ಲಿ ವಹ್ನಿಗಳನ್ನು ಪ್ರತಿಷ್ಠಾಪನೆ ಮಾಡಿ ಹೋಮಿಸಿದನು.
ತತೋ ಭಾಗೀರಥೀತೀರಾತ್ ಕುರುಕ್ಷೇತ್ರಂ ಜಗಾಮ ಸಃ |
ಸಾನುಗೋ ನೃಪತಿರ್ವಿದ್ವಾನ್ ನಿಯತಃ ಸಂಯತೇಂದ್ರಿಯಃ ॥8॥
ಅನಂತರ ಪರಿವಾರದಿಂದ ಸಹಿತನಾದ, ವಿದ್ವಾಂಸನಾದ, ನಿಯಮಗಳನ್ನು ಮೈಗೂಡಿಸಿಕೊಂಡು ಇಂದ್ರಿಯನಿಗ್ರಹವನ್ನು ಸಂಪಾದಿಸಿದ ಆ ರಾಜನು ಭಾಗೀರಥೀ ತೀರದಿಂದ ಕುರುಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದನು.
ತತ್ರಾಶ್ರಮಪದಂ ಶ್ರೀಮಾನ್ ಅಭಿಗಮ್ಯ ಸ ಪಾರ್ಥಿವಃ |
ಆಸಸಾದಾಥ ರಾಜರ್ಷಿಂ ಶತಯೂಪಂ ಮನೀಷಿಣಮ್ ॥9॥
ಶ್ರೀಮಂತನಾದ ಆ ರಾಜನು ಕುರುಕ್ಷೇತ್ರದಲ್ಲಿರುವ ಒಂದು ಆಶ್ರಮವನ್ನು ಪ್ರವೇಶಿಸಿ ಬುದ್ಧಿಶಾಲಿಯಾದ ಶತಯೂಪನೆಂಬ ರಾಜರ್ಷಿಯನ್ನು ಸೇರಿಕೊಂಡನು.
ಸ ಹಿ ರಾಜಾ ಮಹಾನಾಸೀತ್ ಕೇಕಯೇಷು ಪರಂತಪಃ |
ಸ್ವಪುತ್ರಂ ಮನುಜೈಶ್ವರ್ಯೇ ನಿವೇಶ್ಯ ವನಮಾವಿಶತ್ ॥10॥
ಆ ಶತಯೂಪರಾಜನು ಕೇಕಯದೇಶದಲ್ಲಿ ಪರಾಕ್ರಮಶಾಲಿಯಾದ ದೊಡ್ಡ ರಾಜನಾಗಿದ್ದನು. ಅವನು ಲೌಕಿಕವಾದ ಐಶ್ವರ್ಯದಲ್ಲಿ ತನ್ನ ಮಗನನ್ನು ಇರಿಸಿ ತಾನೂ ಕಾಡಿಗೆ ಪ್ರವೇಶಿಸಿದ್ದನು.
ತೇನಾಸೌ ಸಹಿತೋ ರಾಜಾ ಯಯೌ ವ್ಯಾಸಾಶ್ರಮಂ ತದಾ |
ತತ್ರೈವ ವಿಧಿವದ್ ರಾಜನ್ ಪ್ರತ್ಯಗೃಹ್ಣಾತ್ ಕುರೂದ್ವಹಮ್ ॥11॥
ಹೇ ರಾಜನೇ, ಅಂತಹ ಈ ಶತಯೂಪ ರಾಜನು ಧೃತರಾಷ್ಟ್ರನಿಂದ ಸಹಿತನಾಗಿ ವೇದವ್ಯಾಸ ದೇವರ ಆಶ್ರಮಕ್ಕೆ ಹೋಗಿ, ಅಲ್ಲಿಯೇ ವಿಧಿವತ್ತಾಗಿ ಕುರುವಂಶದಲ್ಲಿ ಜನಿಸಿದ ಧೃತರಾಷ್ಟ್ರನನ್ನು ದೀಕ್ಷೆಗಾಗಿ ಒಪ್ಪಿಸಿದನು.
ಸ ದೀಕ್ಷಾಂ ತತ್ರ ಸಂಪ್ರಾಪ್ಯ ರಾಜಾ ಕೌರವನಂದನಃ |
ಶತಯೂಪಾಶ್ರಮೇ ತಸ್ಮಿನ್ ನಿವಾಸಮಕರೋತ್ ತದಾ ॥12॥
ಕೌರವರಿಗೆ ಸಂತೋಷವನ್ನುಂಟು ಮಾಡಿದ ಆ ರಾಜನು ಅಲ್ಲಿ ದೀಕ್ಷೆಯನ್ನು ಪಡೆದು ಶತಯೂಪ ರಾಜರ್ಷಿಯ ಆಶ್ರಮದಲ್ಲಿ ಸ್ವಲ್ಪ ಕಾಲ ವಾಸ ಮಾಡಿದನು.
ತಸ್ಮೈ ಸರ್ವಂ ವಿಧಿಂ ರಾಜನ್ನಾಚಖ್ಯೌ ಸ ನೃಪಸ್ತದಾ |
ಆರಣ್ಯಕಂ ಮಹಾರಾಜ ವ್ಯಾಸಸ್ಯಾನುಮತೇ ತದಾ ॥13॥
ಹೇ ರಾಜನೇ, ಆ ಸಮಯದಲ್ಲೇ ಆ ಶತಯೂಪರಾಜನು ವೇದವ್ಯಾಸರ ಅನುಮತಿಯಂತೆ ವಾನಪ್ರಸ್ಥಾಶ್ರಮಕ್ಕೆ ಸಂಬಂಧಿಸಿದ ಎಲ್ಲ ನಿಯಮಗಳನ್ನೂ ತಿಳಿಸಿದನು.
ಏವಂ ಸ ತಪಸಾ ರಾಜಾ ಧೃತರಾಷ್ಟ್ರೋ ಮಹಾಮನಾಃ |
ಯೋಜಯಾಮಾಸ ಚಾತ್ಮಾನಂ ತಾಂಶ್ಚಾಪ್ಯನುಚರಾಂಸ್ತದಾ ॥14॥
ಹೀಗೆ ಮಹಾಮನಸ್ವಿಯಾದ ಧೃತರಾಷ್ಟ್ರರಾಜನು ತನ್ನನ್ನು ತಪಸ್ಸಿನಲ್ಲಿ ತೊಡಗಿಸಿಕೊಂಡು ತನ್ನ ಅನುಚರರನ್ನೂ ಕೂಡ ತಪಸ್ಸಿನಲ್ಲಿ ತೊಡಗುವಂತೆ ಮಾಡಿದನು.
ತಥೈವ ದೇವೀ ಗಾಂಧಾರೀ ವಲ್ಕಲಾಜಿನವಾಸಿನೀ |
ಕುಂತ್ಯಾ ಸಹ ಮಹಾರಾಜ ಸಮಾನವ್ರತಚಾರಿಣೀ ॥15॥
ಹೇ ಮಹಾರಾಜನೇ, ಆ ರಾಜನಂತೆಯೇ ಗಾಂಧಾರೀದೇವಿಯೂ ಕೂಡ ನಾರುಮಡಿಗಳನ್ನು ತೊಟ್ಟುಕೊಂಡು ಕುಂತಿಯೊಂದಿಗೆ ಸಮಾನವಾದ ವ್ರತವನ್ನು ನಡೆಸಿದಳು.
ಕರ್ಮಣಾ ಮನಸಾ ವಾಚಾ ಚಕ್ಷುಷಾ ಚಾಪಿ ತೇ ನೃಪ |
ಸನ್ನಿಯಮ್ಯೇಂದ್ರಿಯಗ್ರಾಮಮಾಸ್ಥಿತಾಃ ಪರಮಂ ತಪಃ ॥16॥
ಧೃತರಾಷ್ಟ್ರನನ್ನೂ ಕೂಡಿಕೊಂಡು ಆ ಎಲ್ಲರೂ ಕೂಡ ತಾವು ಮಾಡುವ ಕೆಲಸಗಳಿಂದ, ಮನಸ್ಸಿನಿಂದ, ಮಾತಿನಿಂದ, ಕಣ್ಣುಗಳಿಂದ ಸರ್ವ ಇಂದ್ರಿಯಗಳನ್ನು ಹತೋಟಿಯಲ್ಲಿರಿಸಿಕೊಂಡು ಉತ್ತಮವಾದ ತಪಸ್ಸನ್ನು ಆಚರಿಸಿದರು.
ತ್ವಗಸ್ಥಿಶೇಷಃ ಪರಿಶುಷ್ಕಮಾಂಸೋ
ಜಟಾಜಿನೀ ವಲ್ಕಲಸಂವೃತಾಂಗಃ |
ಸ ಪಾರ್ಥಿವಸ್ತತ್ರ ತಪಶ್ಚಚಾರ

ರಾಜರ್ಷಿವತ್ ತೀವ್ರಮಪೇತಮೋಹಃ ॥17॥
ಮೋಹವನ್ನು ಬಿಟ್ಟ ಆ ಧೃತರಾಷ್ಟ್ರ ರಾಜನು ಶತಯೂಪನ ಆಶ್ರಮದಲ್ಲಿ ಜಟೆಯನ್ನು ಬಿಟ್ಟು, ಅಜಿನ-ವಲ್ಕಲಗಳನ್ನು ಧರಿಸಿ, ಶರೀರದ ಮಾಂಸವೆಲ್ಲ ಒಣಗಿ ಕೇವಲ ಚರ್ಮ, ಮೂಳೆಗಳನ್ನು ಮಾತ್ರ ಇರಿಸಿಕೊಂಡು, ಶತಯೂಪರಾಜನಂತೆಯೇ ತೀವ್ರವಾದ ತಪಸ್ಸನ್ನು ಆಚರಿಸಿದನು.
ಕ್ಷತ್ತಾ ಚ ಧರ್ಮಾರ್ಥವಿದಗ್ರ್ಯಬುದ್ಧಿಃ
ಸಸಂಜಯಸ್ತಂ ನೃಪತಿಂ ಸದಾರಮ್ |
ಉಪಾಚರದ್ ಘೋರತಪಾ ಮಹಾತ್ಮಾ
ತದಾ ಕೃಶೋ ವಲ್ಕಲಚೀರವಾಸಾಃ ॥18॥
ಧರ್ಮ-ಅರ್ಥಗಳನ್ನು ಚೆನ್ನಾಗಿ ತಿಳಿದ ಶ್ರೇಷ್ಠವಾದ ಬುದ್ಧಿಯುಳ್ಳ ವಿದುರನೂ ಕೂಡ ಸಂಜಯನೊಂದಿಗೆ ನಾರುಮಡಿಗಳನ್ನುಟ್ಟುಕೊಂಡು ಘೋರವಾದ ತಪಸ್ಸಿನಿಂದ ಕೃಶನಾಗಿ ಆ ಧೃತರಾಷ್ಟ್ರ ರಾಜನನ್ನು ಆದರಪೂರ್ವಕವಾಗಿ ಉಪಚರಿಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರತಪಶ್ಚರ್ಯೋ ನಾಮ ಚತುರ್ವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಚತುರ್ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೈದನೆಯ ಅಧ್ಯಾಯ
ಶತಯೂಪರ ಆಶ್ರಮಕ್ಕೆ ಧೃತರಾಷ್ಟ್ರನನ್ನು ನೋಡಬಯಸಿದ ನಾರದ- ಪರ್ವತಾದಿಗಳ ಆಗಮನ. ನಾರದರು ಧೃತರಾಷ್ಟ್ರನಿಗೆ `ಆ ತಪೋವನವು ಸಹಸ್ರ ಚಿತ್ಯನೇ ಮೊದಲಾದ ರಾಜರ್ಷಿಗಳಿಗೆ ಸ್ವರ್ಗವನ್ನು ತಂದುಕೊಟ್ಟಿದೆ' ಎಂಬ ಮಹಿಮೆಯನ್ನು ವಿವರಿಸಿ, ವಿದುರಾದಿಗಳ ಜೊತೆ ಅವನಿಗೂ ಅಲ್ಲಿ
ಉತ್ತಮ ಸಿದ್ಧಿಯಾಗುವುದೆಂದು ತಿಳಿಸುವುದು.
ವೈಶಂಪಾಯನಃ
ತತಸ್ತಸ್ಮಿನ್ ಮುನಿಶ್ರೇಷ್ಠಾ ರಾಜಾನಂ ದ್ರಷ್ಟುಮಭ್ಯಯುಃ |
ನಾರದಃ ಪರ್ವತಶ್ಚೈವ ದೇವಲಶ್ಚ ಮಹಾತಪಾಃ ॥1॥
ದ್ವೈಪಾಯನಃ ಸಶಿಷ್ಯಶ್ಚ ಸಿದ್ಧಾಶ್ಚಾನ್ಯೇ ಮಹರ್ಷಯಃ |
ಶತಯೂಪಶ್ಚ ರಾಜರ್ಷಿರ್ವೃದ್ಧಃ ಪರಮಧಾರ್ಮಿಕಃ ॥2॥
ವೈಶಂಪಾಯನ ಅನಂತರ ಆ ಧೃತರಾಷ್ಟ್ರನ ಆಶ್ರಮಕ್ಕೆ ಮುನಿಶ್ರೇಷ್ಠರಾದ ನಾರದರು, ಪರ್ವತನು, ಮಹಾತಪಸ್ವಿಯಾದ ದೇವಲನು, ಶಿಷ್ಯರೊಂದಿಗೆ ಕೂಡಿದ ದ್ವೈಪಾಯನರು, ಬೇರೆ ಸಿದ್ಧರಾದ ಮಹರ್ಷಿಗಳೂ ಸೇರಿದಂತೆ ಮುನಿಶ್ರೇಷ್ಠರೂ ಜೊತೆಗೆ ಪರಮಧಾರ್ಮಿಕನಾದ ವೃದ್ಧನಾದ ರಾಜರ್ಷಿಯಾದ ಶತಯೂಪನೂ ರಾಜನನ್ನು ನೋಡಲು ಆಗಮಿಸಿದರು.
ತೇಷಾಂ ಕುಂತೀ ಮಹಾರಾಜ ಪೂಜಾಂ ಚಕ್ರೇ ಯಥಾವಿಧಿ |
ತಸ್ಯಾಸ್ತೇ ತುಷ್ಟುವುಃ ಸರ್ವೇ ತಾಪಸಾಃ ಪರಿಚರ್ಯಯಾ ॥3॥
ಹೇ ಮಹಾರಾಜನೇ, ಅವರೆಲ್ಲರಿಗೂ ಕುಂತಿಯು ಶಾಸೊತ್ರೀಕ್ತವಾಗಿ ಪೂಜೆಯನ್ನು ನೆರವೇರಿಸಿದಳು. ಅವಳ ಆ ಸೇವೆಯಿಂದ ಎಲ್ಲ ಮುನಿಗಳು ಸಂತೋಷಪಟ್ಟರು.
ತತ್ರ ಧರ್ಮ್ಯಾಃ ಕಥಾಸ್ತಾತ ಚಕ್ರುಸ್ತೇ ಪರಮರ್ಷಯಃ |
ರಮಯಂತೋ ಮಹಾತ್ಮಾನಂ ಧೃತರಾಷ್ಟ್ರಂ ಜನಾಧಿಪಮ್ ॥4॥
ಹೇ ರಾಜನೇ, ಅಲ್ಲಿ ಆ ಮುನಿಶ್ರೇಷ್ಠರು ಧಾರ್ಮಿಕವಾದ ಮಾತುಕತೆಗಳನ್ನು, ಜನಾಧಿಪತಿಯಾದ ಮಹಾತ್ಮನಾದ ಧೃತರಾಷ್ಟ್ರನನ್ನು ಸಂತೋಷಗೊಳಿಸುತ್ತಾ ನಡೆಸಿದರು.
ಕಥಾಂತರೇ ತು ಕಸ್ಮಿಂಶ್ಚಿದ್ ದೇವರ್ಷಿರ್ನಾರದಸ್ತದಾ |
ಕಥಾಮಿಮಾಮಕಥಯತ್ ಸರ್ವಪ್ರತ್ಯಕ್ಷದರ್ಶಿವಾನ್ ॥5॥
ಯಾವುದೋ ಒಂದು ಮಾತುಕತೆಯ ಮಧ್ಯದಲ್ಲಿ, ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡಬಲ್ಲ ದೇವರ್ಷಿಯಾದ ನಾರದನು ಈ ಕಥೆಯನ್ನು ಹೇಳಿದನು.
ನಾರದಃ
ಪುರಾ ಪ್ರಜಾಪತಿಸಮೋ ರಾಜಾಽಽಸೀದಕುತೋಭಯಃ |
ಸಹಸ್ರಚಿತ್ಯ ಇತ್ಯುಕ್ತಃ ಶತಯೂಪಪಿತಾಮಹಃ ॥6॥
ನಾರದರು ಹಿಂದೆ ಪ್ರಜಾಪತಿಗೆ ಸದೃಶನಾದ, ಯಾವುದೇ ರೀತಿಯ ಭಯವಿಲ್ಲದ ಈ ಶತಯೂಪನ ಅಜ್ಜನಾದ ಸಹಸ್ರಚಿತ್ಯ ಎಂಬ ಹೆಸರುಳ್ಳ ರಾಜನಿದ್ದನು.
ಸ ಪುತ್ರೇ ರಾಜ್ಯಮಾಸಜ್ಜ್ಯ ಜ್ಯೇಷ್ಠೇ ಪರಮಧಾರ್ಮಿಕೇ |
ವನಂ ವಿವೇಶ ಧರ್ಮಾತ್ಮಾ ಶತಚಿತ್ಯೋ ಮಹೀಪತಿಃ ॥7॥
ಆ ಧರ್ಮಾತ್ಮನಾದ ಶತಚಿತ್ಯ ಎಂಬ ರಾಜನು ಪರಮಧಾರ್ಮಿಕನಾದ ಹಿರಿಯ ಮಗನಲ್ಲಿ ರಾಜ್ಯವನ್ನು ಒಪ್ಪಿಸಿ ವನವನ್ನು ಪ್ರವೇಶಿಸಿದನು.

ಸ ಗತ್ವಾ ತಪಸಃ ಪಾರಂ ದೀಪ್ತಃ ಸ ಪೃಥಿವೀಪತಿಃ |
ಪುರಂದರಸ್ಯ ಸಂಸ್ಥಾನಂ ಪ್ರತಿಪೇದೇ ಮಹಾಮನಾಃ ॥8॥
ಮಹಾಮನಸ್ವಿಯಾದ ಆ ಮಹಾರಾಜನು ತಪಸ್ಸಿನ ಅಂತಿಮ ಘಟ್ಟವನ್ನು ತಲುಪಿ ದೇದೀಪ್ಯಮಾನನಾಗಿ ಇಂದ್ರಪದವಿಯನ್ನು ಪಡೆದನು.
ದೃಷ್ಟಪೂರ್ವಃ ಸ ಬಹುಶೋ ರಾಜಾ ಸಂಪತತಾ ಮಯಾ |
ಮಹೇಂದ್ರಸದನೇ ರಾಜಾ ತಪಸಾ ದಗ್ಧಕಿಲ್ಬಿಷಃ ॥9॥
ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡ ಆ ರಾಜನನ್ನು ಅನೇಕ ಬಾರಿ ಸ್ವರ್ಗಕ್ಕೆ ಹೋದಾಗ ಇಂದ್ರನ ಅರಮನೆಯಲ್ಲಿ ನಾನು ಕಂಡಿರುವೆನು.
ತಥಾ ಶೈಲಾಲಯೋ ರಾಜಾ ಭಗದತ್ತಪಿತಾಮಹಃ |
ತಪೋಬಲೇನೈವ ನೃಪೋ ಮಹೇಂದ್ರಸದನಂ ಗತಃ ॥10॥
ಹಾಗೆಯೇ ಭಗದತ್ತನ ಅಜ್ಜನಾದ ಶೈಲಾಲಯನೆಂಬ ರಾಜನೂ ತಪಸ್ಸಿನ ಬಲದಿಂದಲೇ ಇಂದ್ರನ ಅರಮನೆಯನ್ನು ಸೇರಿಕೊಂಡಿದ್ದಾನೆ.

ತಥಾ ಪೃಷಧ್ರೋ ನಾಮಾಸೀದ್ ರಾಜಾ ವಜ್ರಧರೋಪಮಃ |
ಸ ಚಾಪಿ ತಪಸಾ ಲೇಭೇ ನಾಕಪೃಷ್ಠಮಿತೋ ಗತಃ ॥11॥
ಅದೇ ರೀತಿಯಾಗಿ ಇಂದ್ರನಿಗೆ ಸದೃಶನಾದ ಪೃಷಧ್ರನೆಂಬ ರಾಜನಿದ್ದನು. ಅವನೂ ಕೂಡ ಇಲ್ಲಿಂದ ಹೋಗಿ ತಪಸ್ಸಿನಿಂದಲೇ ಸ್ವರ್ಗವನ್ನು ಪಡೆದಿದ್ದಾನೆ.
ಅಸ್ಮಿನ್ನರಣ್ಯೇ ನೃಪತಿಃ ಮಾಂಧಾತುರನಘಾತ್ಮಜಃ |
ಪುರುಕುತ್ಸಸ್ತಪಃ ಸಿದ್ಧಿಂ ಮಹತೀಂ ಸಮವಾಪ್ತವಾನ್ ॥12॥
ಹಾಗೆಯೇ ಇದೇ ಅರಣ್ಯದಲ್ಲಿಯೇ ಮಾಂಧಾತೃರಾಜನ ಮಗನಾದ, ಪರಿಶುದ್ಧನಾದ ಪುರುಕುತ್ಸ ರಾಜನು ಹೆಚ್ಚಿನ ತಪಸ್ಸಿದ್ಧಿಯನ್ನು ಪಡೆದಿರುವನು.
ಭಾರ್ಯಾ ಸಮಭವದ್ಯಸ್ಯ ನರ್ಮದಾ ಸರಿತಾಂ ವರಾ |
ಸೋಽಸ್ಮಿನ್ನರಣ್ಯೇ ನೃಪತಿಸ್ತಪಸ್ತಪ್ತ್ವಾ ದಿವಂ ಗತಃ ॥13॥
ನದಿಗಳಲ್ಲಿ ಶ್ರೇಷ್ಠಳಾದ ನರ್ಮದೆಯು ಯಾವನ ಪತ್ನಿಯಾಗಿದ್ದಳೋ ಅಂತಹ ಇಕ್ಷ್ವಾಕು ವಂಶಜನಾದ ದುರ್ಯೋಧನನೆಂಬ ರಾಜನೂ ಕೂಡ ಇದೇ ಅರಣ್ಯದಲ್ಲಿ ತಪಸ್ಸನ್ನು ನಡೆಸಿ ಸ್ವರ್ಗವನ್ನು ಪಡೆದಿದ್ದಾನೆ.
ಶಶಲೋಮಾ ಚ ರಾಜಾಽಽಸೀದ್ ರಾಜನ್ ಪರಮಧಾರ್ಮಿಕಃ |
ಸ ಚಾಪ್ಯಸ್ಮಿನ್ ವನೇ ತಪ್ತ್ವಾ ತತೋ ದಿವಮವಾಪ್ತವಾನ್ ॥14॥
ಹೇ ರಾಜನೇ, ಪರಮಧಾರ್ಮಿಕನಾದ ಶತಲೋಮ ಎಂಬ ರಾಜನೂ ಹಿಂದೆ ಇದ್ದನು. ಅವನೂ ಕೂಡ ಇದೇ ಕಾಡಿನಲ್ಲಿ ತಪಸ್ಸನ್ನು ಆಚರಿಸಿ ಸ್ವರ್ಗವನ್ನು ಪಡೆದಿದ್ದಾನೆ.
ದ್ವೈಪಾಯನಪ್ರಸಾದಾಚ್ಚ ತ್ವಮಪೀದಂ ತಪೋವನಮ್ |
ರಾಜನ್ನವಾಪ್ಯ ದುಷ್ಪ್ರಾಪಾಂ ಸಿದ್ಧಿಮಗ್ರ್ಯಾಂ ಗಮಿಷ್ಯಸಿ ॥15॥
ಹೇ ರಾಜನೇ, ನೀನೂ ಕೂಡ ಈ ತಪೋವನವನ್ನು ಆಶ್ರಯಿಸಿ, ವೇದವ್ಯಾಸ ದೇವರ ಅನುಗ್ರಹದಿಂದ ಸಾಮಾನ್ಯ ಜನರು ಗಳಿಸಲು ಅಶಕ್ಯವಾದ ಉತ್ತಮವಾದ ಸಿದ್ಧಿಯನ್ನು ಹೊಂದುವಿ.
ತ್ವಂ ಚಾಪಿ ರಾಜೇಂದ್ರ ತಥಾ ತಪಸೋಽಂತೇ ಶ್ರಿಯಾ ವೃತಃ |
ಗಾಂಧಾರೀಸಹಿತೋ ಗಂತಾ ಗತಿಂ ತೇಷಾಂ ಮಹಾತ್ಮನಾಮ್ ॥16॥
ಹೇ ರಾಜೇಂದ್ರನೇ, ನೀನೂ ಕೂಡ ಅವರಂತೆಯೇ ತಪಸ್ಸಿನ ಕೊನೆಯಲ್ಲಿ ಪುಣ್ಯಮಯವಾದ ಸಂಪತ್ತಿನಿಂದ ಕೂಡಿಕೊಂಡು ಆ ಮಹಾತ್ಮರು ಪಡೆದ ಗತಿಯನ್ನೇ ಗಾಂಧಾರೀಸಹಿತನಾಗಿ ಹೊಂದುವಿ.
ಪಾಂಡುಃ ಸ್ಮರತಿ ನಿತ್ಯಂ ಚ ಬಲಹಂತುಃ ಸಮೀಪತಃ |
ತ್ವಾಂ ಸದೈವ ಮಹೀಪಾಲಃ ಸ ತ್ವಾ ಶ್ರೇಯಸಿ ಯೋಕ್ಷ್ಯತೇ ॥17॥
ನಿನ್ನ ತಮ್ಮನಾದ ಪಾಂಡುವೂ ಕೂಡ ಇಂದ್ರನ ಸಮೀಪದಲ್ಲಿದ್ದುಕೊಂಡು ನಿತ್ಯವೂ ನಿನ್ನನ್ನು ಸ್ಮರಿಸುತ್ತಿದ್ದಾನೆ. ರಾಜನಾದ ಅವನು, ನೀನು ಪುಣ್ಯಮಯ ಲೋಕಗಳನ್ನು ಪಡೆದಾಗ ಸದಾ ನಿನ್ನೊಂದಿಗಿರುವನು.
ತವ ಶುಶ್ರೂಷಯಾ ಚೈವ ಗಾಂಧಾರ್ಯಾಶ್ಚ ಯಶಸ್ವಿನೀ |
ಭರ್ತುಃ ಸಲೋಕತಾಂ ಕುಂತೀ ಗಮಿಷ್ಯತಿ ವಧೂಸ್ತವ ॥18॥
ಯುಧಿಷ್ಠಿರಸ್ಯ ಜನನೀ ಸ ಹಿ ಧರ್ಮಃ ಸನಾತನಃ ॥19॥
ವಯಮೇವಂ ಪ್ರಪಶ್ಯಾಮೋ ನೃಪತೇ ದಿವ್ಯಚಕ್ಷುಷಾ ॥20॥
ಯುಧಿಷ್ಠಿರನ ಜನನಿಯಾದ, ನಿನ್ನ ಸೊಸೆಯಾದ ಕುಂತಿಯೂ ಕೂಡ ನಿನ್ನ ಹಾಗೂ ಗಾಂಧಾರಿಯ ಸೇವೆ ಮಾಡುವುದರಿಂದಲೇ ಯಶಸ್ಸನ್ನು ಪಡೆದು ಪತಿಯ ಲೋಕವನ್ನೇ ಪಡೆಯುತ್ತಾಳೆ. ಇದೇ ಸನಾತನವಾದ ಧರ್ಮವಾಗಿದೆ. ಹೇ ರಾಜನೇ, ನಾವು ದಿವ್ಯವಾದ ಚಕ್ಷುಸ್ಸಿನಿಂದ ಇವೆಲ್ಲವನ್ನೂ ನೋಡಬಲ್ಲೆವು.
ಪ್ರವೇಕ್ಷ್ಯತಿ ಸ್ವಮಾತ್ಮಾನಂ ವಿದುರಸ್ತು ಯುಧಿಷ್ಠಿರಮ್ |
ಸಂಜಯಸ್ತದನುಧ್ಯಾನಾತ್ ಪೂತಃ ಸ್ವರ್ಗಮವಾಪ್ಸ್ಯತಿ ॥21॥
ವಿದುರನಾದರೂ ತನ್ನ ಸ್ವರೂಪನಾದ ಯುಧಿಷ್ಠಿರನನ್ನು ಪ್ರವೇಶಿಸಲಿದ್ದಾನೆ. ಅನಂತರ ಸಂಜಯನೂ ಧ್ಯಾನದಿಂದ ಪವಿತ್ರನಾಗಿ

ಸ್ವರ್ಗವನ್ನು ಪಡೆಯಲಿರುವನು.
ವೈಶಂಪಾಯನಃ
ಏತಚ್ಚ್ರುತ್ವಾ ಕೌರವೇಂದ್ರೋ ಮಹಾತ್ಮಾ
ಸಹೈವ ಪತ್ನ್ಯಾ ಪ್ರೀತಿಮಾನ್ ಪ್ರತ್ಯಗೃಹ್ಣಾತ್ |
ವಿದ್ವಾನ್ ವಾಕ್ಯಂ ನಾರದಸ್ಯ ಪ್ರಶಸ್ಯ
ಚಕ್ರೇ ಪೂಜಾಂ ಚಾತುಲಾಂ ನಾರದಾಯ ||22||
ವೈಶಂಪಾಯನ ಇದನ್ನು ಕೇಳಿ ಮಹಾತ್ಮನಾದ ಕೌರವೇಂದ್ರನು ಪತ್ನಿಯ ಜೊತೆಗೆ ನಾರದರ ವಾಕ್ಯವನ್ನು ಪ್ರೀತಿಯಿಂದ ಗೌರವಪೂರ್ವಕವಾಗಿ ಸ್ವೀಕರಿಸಿದನು. ಆ ವಾಕ್ಯದ ಭಾವವನ್ನು ತಿಳಿದು ನಾರದರಿಗೆ ಎಣೆಯಿಲ್ಲದ ರೀತಿಯಲ್ಲಿ ಗೌರವವನ್ನು ಸಲ್ಲಿಸಿದನು.
ತದಾ ಸರ್ವೇ ನಾರದಂ ವಿಪ್ರಸಂಘಾಃ
ಸಂಪೂಜಯಾಮಾಸುರತೀವ ರಾಜನ್ |
ರಾಜ್ಞಃ ಪ್ರೀತಾ ಧೃತರಾಷ್ಟ್ರಸ್ಯ ತೇ ವೈ
ಪುನಃ ಪುನಃ ಸಂಪ್ರಹೃಷ್ಟಾಸ್ತದಾನೀಮ್ ||23||
ಆಗ ಅಲ್ಲಿ ಸೇರಿದ ಎಲ್ಲ ಬ್ರಾಹ್ಮಣರ ಸಮೂಹದವರು ನಾರದರನ್ನು ಅತಿಯಾಗಿ ಪೂಜಿಸಿದರು. ಹೇ ರಾಜನೇ, ಧೃತರಾಷ್ಟ್ರ ರಾಜನ ಬಗ್ಗೆ ಪ್ರೀತಿಯುಳ್ಳ ಅವರೆಲ್ಲರೂ ಮತ್ತೆ ಮತ್ತೆ ಸಂತೋಷಗೊಂಡರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಆಶ್ರಮವಾಸಿಕಪರ್ವಣಿ ನಾರದವಚನಂ ನಾಮ ಪಂಚವಿಂಶೋಽಧ್ಯಾಯಃ ||
|| ಆಶ್ರಮವಾಸಪರ್ವಣಿ ಪಂಚವಿಂಶೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತಾರನೆಯ ಅಧ್ಯಾಯ
ಶತಯೂಪನ ಪ್ರಶ್ನೆಗೆ ಉತ್ತರಿಸುತ್ತಾ ನಾರದರು ಧೃತರಾಷ್ಟ್ರನಿಗೆ
ಮೂರು ವರ್ಷದ ನಂತರ ಗಾಂಧಾರಿಯೊಂದಿಗೆ ಕುಬೇರ ಲೋಕಪ್ರಾಪ್ತಿಯಾಗುವುದೆಂದು ತಿಳಿಸುವುದು.
ವೈಶಂಪಾಯನಃ
ನಾರದಸ್ಯ ತು ತದ್ವಾಕ್ಯಂ ಪ್ರಶಶಂಸುರ್ದ್ವಿಜೋತ್ತಮಾಃ |
ಶತಯೂಪಸ್ತು ರಾಜರ್ಷಿರ್ನಾರದಂ ವಾಕ್ಯಮಬ್ರವೀತ್ ||1||
ವೈಶಂಪಾಯನ ನಾರದರ ಆ ವಾಕ್ಯವನ್ನು ದ್ವಿಜಶ್ರೇಷ್ಠರೆಲ್ಲರೂ ಪ್ರಶಂಸೆ ಮಾಡಿದರು. ರಾಜರ್ಷಿಯಾದ ಶತಯೂಪನು ನಾರದರನ್ನು ಕುರಿತು ಮುಂದೆ ಹೇಳುವ ಮಾತುಗಳನ್ನು ಹೇಳಿದನು.
ಶತಯೂಪಃ
ಅಹೋ ಭಗವತಾ ರಾಜ್ಞಃ ಪ್ರೀತಿರಸ್ಯ ವಿವರ್ಧಿತಾ |
ಸರ್ವಸ್ಯ ಚ ಜನಸ್ಯಾಸ್ಯ ಮಮ ಚೈವ ಮಹಾದ್ಯುತೇ ||2||
ಶತಯೂಪ ಆಹಾ ಮಹಾಕಾಂತಿಮಯರಾದ ನಾರದರೇ, ಸಂಪನ್ನರಾದ ತಮ್ಮಿಂದ ಈ ರಾಜನ ಬಗ್ಗೆ ಈ ಎಲ್ಲ ಜನರಿಗೂ, ನನಗೂ ಪ್ರೀತಿಯು ಅಧಿಕವಾಗಿದೆ.
ಅಸ್ತಿ ಕಾಚಿದ್ವಿವಕ್ಷಾ ತು ಮಮ ತಾಂ ಗದತಃ ಶೃಣು |
ಧೃತರಾಷ್ಟ್ರಂ ಪ್ರತಿ ನೃಪಂ ದೇವರ್ಷೇ ಲೋಕಪೂಜಿತಮ್ ||3||
ಹೇ ದೇವರ್ಷಿಯೇ, ಲೋಕಪೂಜಿತನಾದ ರಾಜನಾದ ಧೃತರಾಷ್ಟ್ರನನ್ನು ಕುರಿತು ನನಗೆ ತಿಳಿದುಕೊಳ್ಳಬೇಕಾಗಿರುವುದು ಏನೋ ಇದೆ. ನಾನು ಹೇಳುವುದನ್ನು ಕೇಳಿರಿ.
ಲೋಕವೃತ್ತಾಂತತತ್ತ್ವಜ್ಞೋ ಭವಾನ್ ದಿವ್ಯೇನ ಚಕ್ಷುಷಾ |
ಯುಕ್ತಃ ಪಶ್ಯತು ದೇವರ್ಷೇ ಗತಯೋ ವಿವಿಧಾ ನೃಣಾಮ್ ||4||
ಹೇ ದೇವರ್ಷಿಯೇ, ತಾವು ದಿವ್ಯವಾದ ಚಕ್ಷುಸ್ಸಿನಿಂದ ಕೂಡಿದವರಾಗಿ, ಲೋಕ ವೃತ್ತಾಂತದ ತತ್ತ್ವಗಳನ್ನು ತಿಳಿದವರಾಗಿ ಮನುಷ್ಯರ ನಾನಾ ರೀತಿಯ ಗತಿಗಳನ್ನು ನೋಡಬಲ್ಲಿರಿ.
ಉಕ್ತವಾನ್ ನೃಪತೀಶಾನ್ ತ್ವಂ ಮಹೇಂದ್ರಸಮಲೋಕಗಾನ್ |
ನ ತ್ವಸ್ಯ ನೃಪತೇರ್ಲೋಕಾಃ ಕಥಿತಾಸ್ತೇ ಮಹಾಮುನೇ ||5||
ಮಹಾಮುನಿಗಳೇ, ಇಂದ್ರಲೋಕಕ್ಕೆ ಸದೃಶವಾದ ಲೋಕಗಳನ್ನು ಪಡೆದಿರುವ ರಾಜಶ್ರೇಷ್ಠರ ಬಗ್ಗೆ ನೀವು ಹೇಳಿದಿರಿ. ಆದರೆ ಈ ಧೃತರಾಷ್ಟ್ರರಾಜನಿಗೆ ಯಾವ ಲೋಕಗಳು ಸಿಗುವುದೆಂದು ಹೇಳಲಿಲ್ಲ.
ಸ್ಥಾನಮಸ್ಯ ಕ್ಷಿತಿಪತೇಃ ಶ್ರೋತುಮಿಚ್ಛಾಮ್ಯಹಂ ವಿಭೋ |
ತ್ವತ್ತಃ ಕೀದೃಕ್ ಕದಾ ಚೇತಿ ತನ್ಮಮಾಚಕ್ಷ್ವ ಪೃಚ್ಛತಃ ||6||
ಹೇ ವಿಭೋ, ನಿಮ್ಮಿಂದ ಈ ಧೃತರಾಷ್ಟ್ರ ರಾಜನಿಗೆ ಎಂತಹ ಸ್ಥಾನವು ಸಿಗುವುದು? ಮತ್ತು ಯಾವಾಗ ಸಿಗುವುದು? ಎಂಬುದನ್ನು ಕೇಳಬಯಸುತ್ತೇನೆ. ಆ ಬಗ್ಗೆ ನಮಗೆ ತಿಳಿಸಿರಿ.
ವೈಶಂಪಾಯನಃ

ಇತ್ಯುಕ್ತೋ ನಾರದಸ್ತೇನ ವಾಕ್ಯಂ ಸರ್ವಮನೋನುಗಮ್ |
ವ್ಯಾಜಹಾರ ಸತಾಂ ಮಧ್ಯೇ ದಿವ್ಯದರ್ಶೀ ಮಹಾತಪಾಃ ॥7॥
ವೈಶಂಪಾಯನ ಈ ರೀತಿ ಎಲ್ಲರ ಮನಸ್ಸಿನಲ್ಲಿರುವ ಮಾತನ್ನು ಶತಯೂಪನು ಕೇಳಿದಾಗ ಮಹಾತಪಸ್ವಿಯಾದ, ದಿವ್ಯದೃಷ್ಟಿಯುಳ್ಳ ನಾರದರು ಈ ಬಗ್ಗೆ ತಿಳಿಸಿದರು.
ನಾರದಃ
ಯದೃಚ್ಛಯಾ ಶಕ್ರಸದೋ ಗತ್ವಾ ಶಕ್ರಂ ಶಚೀಪತಿಮ್ |
ದೃಷ್ಟವಾನಸ್ಮಿ ರಾಜೇಂದ್ರ ತತ್ರ ಪಾಂಡುಂ ನೃಪಂ ತದಾ ॥8॥
ನಾರದರು ಹೇ ರಾಜೇಂದ್ರನೇ, ಸ್ವಚ್ಛಂದವಾಗಿ ಸಂಚರಿಸುವ ನಾನೊಮ್ಮೆ ಇಂದ್ರಸಭೆಗೆ ಹೋಗಿ, ಅಲ್ಲಿ ಶಚೀಪತಿಯಾದ ಇಂದ್ರನನ್ನೂ, ಅದೇ ಸಮಯದಲ್ಲಿ ರಾಜನಾದ ಪಾಂಡುವನ್ನೂ ನೋಡಿರುವೆನು.
ತತ್ರೇಯಂ ಧೃತರಾಷ್ಟ್ರಸ್ಯ ಕಥಾ ಸಮಭವನ್ನೃಪ |
ತಪಸೋ ದುಶ್ಚರಸ್ಯಾಸ್ಯ ಯದಯಂ ತಪ್ಸ್ಯತೇ ನೃಪಃ ॥9॥
ಹೇ ನೃಪನೇ, ಅಲ್ಲಿ ಧೃತರಾಷ್ಟ್ರನ ಬಗ್ಗೆ ಮತ್ತು ಈ ರಾಜನು ಮಾಡಲಿರುವ ಕಷ್ಟಕರವಾದ ಈ ತಪಸ್ಸಿನ ಬಗ್ಗೆ ಮಾತುಕತೆ ನಡೆದಿತ್ತು.
ತತ್ರಾಹಮಿದಮಶ್ರೌಷಂ ಶಕ್ರಸ್ಯ ವದತೋ ದಿವಿ |
ವರ್ಷಾಣಿ ತ್ರೀಣಿ ಶಿಷ್ಟಾನಿ ರಾಜ್ಞೋಽಸ್ಯ ಪರಮಾಯುಷಃ ॥10॥
ಆ ದೇವಲೋಕದಲ್ಲಿ ಇಂದ್ರನು ಹೇಳುವ ಇದನ್ನು ನಾನು ಕೇಳಿರುವೆನು. ಈ ರಾಜನ ಪೂರ್ಣಾಯುಷ್ಯದಲ್ಲಿ ಮೂರು ವರ್ಷಗಳು ಉಳಿದಿವೆ.
ತತಃ ಕುಬೇರಭವನಂ ಗಾಂಧಾರೀಸಹಿತೋ ನೃಪಃ |
ವಿಹರ್ತಾ ಧೃತರಾಷ್ಟ್ರೋಽಯಂ ರಾಜರಾಜಾಭಿಪೂಜಿತಃ ॥11॥
ಅನಂತರ ಗಾಂಧಾರೀಸಹಿತನಾದ ಈ ಧೃತರಾಷ್ಟ್ರರಾಜನು ಕುಬೇರನಿಂದ ಗೌರವಿಸಲ್ಪಟ್ಟವನಾಗಿ ಕುಬೇರನ ಅರಮನೆಯಲ್ಲಿ ವಿಹರಿಸುತ್ತಾನೆ.
ಕಾಮಗೇನ ವಿಮಾನೇನ ದಿವ್ಯಾಭರಣಭೂಷಿತಃ |
ಋಷಿಪುತ್ರೋ ಮಹಾಭಾಗಸ್ತಪಸಾ ದಗ್ಧಕಿಲ್ಬಿಷಃ ॥12॥
ಸಂಚರಿಷ್ಯತಿ ಲೋಕಾಂಶ್ಚ ದೇವಗಂಧರ್ವರಕ್ಷಸಾಮ್ |
ಸ್ವಚ್ಛಂದೇನೇತಿ ಧರ್ಮಾತ್ಮಾ ವ್ಯಾಸಸ್ಯ ತು ತಪೋಬಲಾತ್ ॥13॥
ಮಹಾತ್ಮನಾದ ವೇದವ್ಯಾಸ ಋಷಿಗಳ ಮಗನಾದ, ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡ ಧರ್ಮಾತ್ಮನಾದ ಇವನು ದಿವ್ಯಾಭರಣಗಳಿಂದ ಭೂಷಿತನಾಗಿ ವೇದವ್ಯಾಸರ ತಪೋಬಲದಿಂದ ಬಯಸಿದಲ್ಲಿ ಕೊಂಡೊಯ್ಯುವ ವಿಮಾನದಿಂದ ದೇವ-ಗಂಧರ್ವ-ರಾಕ್ಷಸರ ಲೋಕಗಳನ್ನೂ ಸ್ವಚ್ಛಂದವಾಗಿ ಸಂಚರಿಸುತ್ತಾನೆ.
ದೇವಗುಹ್ಯಮಿದಂ ಪ್ರೀತ್ಯಾ ಮಯಾ ವಃ ಕಥಿತಂ ಮಹತ್ |
ಭವಂತೋ ಹಿ ಶ್ರುತಧನಾಸ್ತಪಸಾ ದಗ್ಧಕಿಲ್ಬಿಷಾಃ ॥14॥
ನೀವು ವೇದವಿದ್ಯೆಯನ್ನು ಚೆನ್ನಾಗಿ ಅಧ್ಯಯನ ಮಾಡಿ, ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡಿರುವಿರಿ. ಹಾಗಾಗಿ ನಿಮ್ಮ ಮೇಲಿನ ಪ್ರೀತಿಯಿಂದ ಈ ಮಹತ್ತಾದ ವೇದಗುಹ್ಯವನ್ನು ನಾನು ಹೇಳಿದ್ದೇನೆ.
ವೈಶಂಪಾಯನಃ
ಇತಿ ತೇ ತಸ್ಯ ತಚ್ಛ್ರುತ್ವಾ ದೇವರ್ಷೇರ್ಮಧುರಂ ವಚಃ |
ಸರ್ವೇ ಸುಮನಸಃ ಪ್ರೀತಾ ಬಭೂವುಃ ಸ ಚ ಪಾರ್ಥಿವಃ ॥15॥
ವೈಶಂಪಾಯನ ಹೀಗೆ ದೇವರ್ಷಿಯಾದ ನಾರದರು ಹೇಳಿದ ಈ ಮಧುರವಾದ ಮಾತುಗಳನ್ನು ಕೇಳಿ, ಅಲ್ಲಿರುವ ಎಲ್ಲರೂ ಸಮಾಧಾನ ಮತ್ತು ಸಂತೋಷದಿಂದ ಕೂಡಿದರು. ಆ ರಾಜನೂ ಕೂಡ ಸಂತೋಷಪಟ್ಟನು.
ಏವಂ ಕಥಾಭಿರನ್ವಾಸ್ಯ ಧೃತರಾಷ್ಟ್ರಂ ಮನೀಷಿಣಮ್ |
ವಿಪ್ರಜಗ್ಮುರ್ಯಥಾಕಾಮಂ ತೇ ಸಿದ್ಧಗತಿಮಾಸ್ಥಿತಾಃ ॥16॥
ಹೀಗೆ ಅಲ್ಲಿ ಸೇರಿದ ಎಲ್ಲರೂ ಮಾತುಕತೆಗಳಿಂದ ಬುದ್ಧಿವಂತನಾದ ಧೃತರಾಷ್ಟ್ರನನ್ನು ಸಂತೋಷಗೊಳಿಸಿ, ಸಿದ್ಧ-ಚಾರಣರ ಗತಿಯನ್ನು ಅನುಸರಿಸುವವರಾಗಿ ತಾವು ಇಚ್ಛೆಪಟ್ಟಲ್ಲಿಗೆ ಹಿಂದಿರುಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ನಾರದವಚನಂ ನಾಮ ಷಟ್‌ವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಷಟ್‌ವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೇಳನೆಯ ಅಧ್ಯಾಯ
ಕುಂತಿ ಹಾಗೂ ಧೃತರಾಷ್ಟ್ರಾದಿಗಳ ವನಗಮನದಿಂದ ಕಂಗೆಟ್ಟ
ಯುಧಿಷ್ಠಿರಾದಿಗಳು ಅದರ ಜೊತೆಗೆ ಅಭಿಮನ್ಯುವೇ ಮೊದಲಾದ ಬಂಧುಜನರನ್ನು ಸ್ಮರಿಸಿ, ಶೋಕಾವಿಷ್ಟರಾಗಿ ತಮ್ಮ ತಮ್ಮ ನಿತ್ಯಕರ್ಮಗಳಲ್ಲೂ ಅನಾಸಕ್ತಿಯನ್ನು ತೋರುವುದು.
ವೈಶಂಪಾಯನಃ

ಏವಂ ಗತೇ ಕೌರವೇಂದ್ರೇ ದುಃಖಶೋಕಸಮಾಹತಾಃ |
ಬಭೂವುಃ ಪಾಂಡವಾ ರಾಜನ್ ಮಾತೃಶೋಕೇನ ಚಾರ್ದಿತಾಃ ॥1॥
ತಥಾ ಪೌರಜನಾಃ ಸರ್ವೇ ಶೋಚಂತಸ್ತಂ ನರಾಧಿಪಮ್ ॥2॥
ವೈಶಂಪಾಯನ ಹೀಗೆ ಕೌರವೇಂದ್ರನಾದ ಧೃತರಾಷ್ಟ್ರನು ಕಾಡಿಗೆ ಹೋದ ನಂತರ ಪಾಂಡವರು ದುಃಖ ಹಾಗೂ ಶೋಕಗಳಿಂದ ಕಂಗೆಟ್ಟರು. ಜೊತೆಗೆ ತಾಯಿಯನ್ನು ಕಳೆದುಕೊಂಡ ಶೋಕದಿಂದಲೂ ತತ್ತರಿಸಿದವರಾದರು. ಅಂತೆಯೇ ಎಲ್ಲ ಪುರಜನರೂ ಆ ರಾಜನ ವಿಷಯವಾಗಿ ಚಿಂತೆಗೀಡಾದರು.
ತತ್ರ ತತ್ರ ಕಥಾ ಹ್ಯಾಸನ್ ದ್ವಿಜಾನಾಂ ಕೌರವಾನ್ ಪ್ರತಿ ॥3॥
ಹಾಗೆಯೇ ಅಲ್ಲಲ್ಲಿ ಬ್ರಾಹ್ಮಣರು ಕೌರವರ ಕುರಿತಾಗಿ ಮಾತುಕತೆಗಳನ್ನು ಆಡಿಕೊಂಡರು.
ದ್ವಿಜಾಃ
ಕಥಂ ನು ರಾಜಾ ವೃದ್ಧಃ ಸ ವನೇ ವಸತಿ ನಿರ್ಜನೇ |
ಗಾಂಧಾರೀ ಚ ಮಹಾಭಾಗಾ ಸಾ ಚ ಕುಂತೀ ಪೃಥಾ ಕಥಮ್ ॥4॥
ಬ್ರಾಹ್ಮಣರು ವೃದ್ಧನಾದ ಧೃತರಾಷ್ಟ್ರರಾಜನು ನಿರ್ಜನವಾದ ಕಾಡಿನಲ್ಲಿ ಹೇಗೆ ತಾನೇ ವಾಸಮಾಡಬಲ್ಲ? ಹಾಗೆಯೇ ಮಹಾತ್ಮಳಾದ ಗಾಂಧಾರಿಯೂ, ಪೃಥೆ ಎನಿಸಿದ ಕುಂತೀದೇವಿಯೂ ಹೇಗೆ ತಾನೇ ಇರಬಲ್ಲರು?
ಸುಖಾರ್ಹಃ ಸ ಹಿ ರಾಜರ್ಷಿಃ ಅಸುಖೀ ತನ್ಮಹಾವನಮ್ |
ಕಿಮವಸ್ಥಃ ಸಮಾಸಾದ್ಯ ಪ್ರಜ್ಞಾಚಕ್ಷುರ್ಮಹಾಮನಾಃ ॥5॥
ಸುಖಪಡಲು ಯೋಗ್ಯನಾದ ಆ ರಾಜರ್ಷಿಯು ಸುಖವನ್ನು ಬಿಟ್ಟು ಕೇವಲ ಪ್ರಜ್ಞೆಯೇ ಕಣ್ಣುಗಳುಳ್ಳವನಾಗಿ,
ಮನೋನಿಗ್ರಹವುಳ್ಳವನಾಗಿ ಆ ದೊಡ್ಡ ಕಾಡನ್ನು ಹೊಂದಿ ಯಾವ ಅವಸ್ಥೆಯಲ್ಲಿರುವನು?
ಸುದುಷ್ಕರಂ ಕೃತವತೀ ಕುಂತೀ ಪುತ್ರಾನಪಾಸ್ಯ ಸಾ |
ರಾಜ್ಯಶ್ರಿಯಂ ಚ ಸಂತ್ಯಜ್ಯ ವನವಾಸಮರೋಚಯತ್ ॥6॥
ಆ ಕುಂತಿಯಾದರೂ ಮಕ್ಕಳನ್ನು ಬಿಟ್ಟು ಬಹಳ ಕಷ್ಟಕರವಾದ ನಿರ್ಧಾರವನ್ನು ಮಾಡಿರುವಳು. ಏಕೆಂದರೆ ರಾಜ್ಯದ ಸಂಪತ್ತನ್ನು ಬಿಟ್ಟು ವನವಾಸವನ್ನು ಅವಳು ಇಚ್ಛೆ ಪಟ್ಟಿರುವಳು.
ವಿದುರಃ ಕಿಮವಸ್ಥಶ್ಚ ಭ್ರಾತುಃ ಶುಶ್ರೂಷುರಾತ್ಮವಾನ್ |
ಸ ವೈ ಗಾವಲ್ಗಣಿರ್ಧೀಮಾನ್ ಭರ್ತೃಪಿಂಡಾನುಪಾಲಕಃ ॥7॥
ಸಹೋದರನನ್ನು ಸೇವೆಗೈಯ್ಯುವ ಆತ್ಮವಂತನಾದ ಆ ವಿದುರನು ಈಗ ಯಾವ ಅವಸ್ಥೆಯಲ್ಲಿರುವನು? ಅಲ್ಲದೇ ಧೀಮಂತನಾದ, ಯಜಮಾನನ ಆಜ್ಞೆಯನ್ನು ಚಾಚೂ ತಪ್ಪದೇ ಪಾಲಿಸುವ, ಗಾವಲ್ಗಣಿಯಾದ ಆ ಸಂಜಯನಾದರೂ ಹೇಗಿರುವನು?
ವೈಶಂಪಾಯನಃ
ಆಕುಮಾರಂ ಚ ಪೌರಾಸ್ತೇ ಚಿಂತಾಶೋಕಪರಾಯಣಾಃ |
ತತ್ರ ತತ್ರ ಕಥಾಂಚಕ್ರುಃ ಸಮಾಸಾದ್ಯ ಪರಸ್ಪರಮ್ ॥8॥
ವೈಶಂಪಾಯನ ಮಕ್ಕಳಾದಿಯಾಗಿ ಆ ಎಲ್ಲ ಪುರಜನರು ಚಿಂತೆ ಮತ್ತು ಶೋಕದಲ್ಲಿ ಮುಳುಗಿದವರಾಗಿ ಪರಸ್ಪರವಾಗಿ ಇದೇ ವಿಷಯವನ್ನೇ ಆಡುತ್ತಿದ್ದರು.
ಪಾಂಡವಾಶ್ಚಾಪಿ ತೇ ಸರ್ವೇ ಭೃಶಂ ಶೋಕಪರಾಯಣಾಃ |
ಶೋಚಂತೋ ಮಾತರಂ ವೃದ್ಧಾಮೂಷುರ್ನಾತಿಚಿರಂ ಪುರೇ ॥9॥
ಆ ಎಲ್ಲ ಪಾಂಡವರಾದರೂ ಅತಿಯಾದ ಶೋಕದಿಂದ ತತ್ತರಿಸಿದವರಾಗಿ ವಯಸ್ಸಾದ ತಾಯಿಯ ಕುರಿತು ದುಃಖಪಡುತ್ತಾ ಬಹಳ ಕಾಲ ಪಟ್ಟಣದಲ್ಲಿ ವಾಸ ಮಾಡಲು ಶಕ್ತರಾಗಲಿಲ್ಲ.
ತಥೈವ ವೃದ್ಧಂ ಪಿತರಂ ಹತಪುತ್ರಂ ಜನೇಶ್ವರಮ್ |
ಗಾಂಧಾರೀಂ ಚ ಮಹಾಭಾಗಾಂ ವಿದುರಂ ಚ ಮಹಾಮತಿಮ್ ॥10॥
ಹಾಗೆಯೇ ಮಕ್ಕಳನ್ನು ಕಳೆದುಕೊಂಡ ವೃದ್ಧನಾದ ರಾಜನಾಗಿದ್ದ ತಂದೆಯನ್ನೂ, ಮಹಾತ್ಮಳಾದ ಗಾಂಧಾರಿಯನ್ನೂ,
ಬಹುಬುದ್ಧಿಶಾಲಿಯಾದ ವಿದುರನನ್ನೂ ನೆನಪಿಸಿಕೊಂಡು ಕಷ್ಟಪಟ್ಟರು.
ತೇಷಾಂ ಭೋಗೇಷ್ವಭೂತ್ ಪ್ರೀತಿರ್ನ ತಾಂಶ್ಚಿಂತಯತಾಂ ತದಾ |
ನ ರಾಜ್ಯೇ ನ ಚ ನಾರೀಷು ನ ವೇದಾಧ್ಯಯನೇ ತಥಾ ॥11॥
ಹೀಗೆ ವನವಾಸಕ್ಕೆ ತೆರಳಿದವರ ಬಗ್ಗೆಯೇ ಚಿಂತಿಸುತ್ತಿರುವ ಅವರಿಗೆ ಆ ಸಮಯದಲ್ಲಿ ಭೋಗಗಳ ಮೇಲಾಗಲೀ, ರಾಜ್ಯದಲ್ಲಾಗಲೀ, ಸ್ತ್ರೀಯರಲ್ಲಾಗಲೀ ಹಾಗೆಯೇ ವೇದಾಧ್ಯಯನದಲ್ಲಾಗಲೀ ಆಸಕ್ತಿಯೇ ಉಳಿಯಲಿಲ್ಲ.
ಪರಂ ನಿರ್ವೇದಮಗಮನ್ ಚಿಂತಯಂತೋ ನರಾಧಿಪಮ್ |
ತಂ ಚ ಜ್ಞಾತಿವಧಂ ಘೋರಂ ಸಂಸ್ಮರಂತಃ ಪುನಃ ಪುನಃ ॥12॥
ಅಭಿಮನ್ಯೋಶ್ಚ ಬಾಲಸ್ಯ ವಿನಾಶಂ ರಣಮೂರ್ಧನಿ |
ಕರ್ಣಸ್ಯ ಚ ಮಹಾಬಾಹೋಃ ಸಂಗ್ರಾಮೇಷ್ವಪಲಾಯಿನಃ ॥13॥
ರಾಜನ ಬಗ್ಗೆಯೇ ಚಿಂತಿಸುತ್ತಾ ಮತ್ತು ಘೋರವಾದ ಬಂಧುಗಳ ಮರಣವನ್ನೂ ಚಿಂತಿಸುತ್ತಾ, ಮತ್ತೆ ಮತ್ತೆ ರಣಾಂಗಣದಲ್ಲಿ ಬಾಲನಾದ ಅಭಿಮನ್ಯುವಿನ ಮರಣವನ್ನೂ ಚಿಂತಿಸುತ್ತಾ, ಅಲ್ಲದೇ ಯುದ್ಧದಲ್ಲಿ ಪಲಾಯನಗೈಯ್ಯದ ಮಹಾಬಾಹುವಾದ ಕರ್ಣನ ಬಗ್ಗೆ ಚಿಂತಿಸುತ್ತಾ ಬಹುವಾದ ವೈರಾಗ್ಯವನ್ನು ತಾಳಿದರು.
ತಥೈವ ದ್ರೌಪದೇಯಾನಾಮನ್ಯೇಷಾಂ ಸುಹೃದಾಮಪಿ |

ವಧಂ ಸಂಸ್ಮೃತ್ಯ ತೇ ವೀರಾ ನಾತಿಪ್ರಮನಸೋಽಭವನ್ ॥14॥
ಹಾಗೆಯೇ ದ್ರೌಪದಿಯ ಮಕ್ಕಳ ಹಾಗೂ ಬೇರೆ ಸ್ನೇಹಿತರ ಮರಣವನ್ನು ಸ್ಮರಿಸಿಕೊಂಡ ಆ ವೀರರು ಮನಶ್ಯಾಂತಿಯನ್ನೇ ಕಳೆದುಕೊಂಡರು.
ಹತಪ್ರವೀರಾಂ ಪೃಥಿವೀಂ ಹೃತರತ್ನಾಂ ಚ ಭಾರತ |
ಸದೈವ ಚಿಂತಯಂತಸ್ತೇ ನ ನಿದ್ರಾಮುಪಲೇಭಿರೇ ॥15॥
ಹೇ ಭಾರತನೇ, ಉತ್ತಮ ವೀರರನ್ನು ಕಳೆದುಕೊಂಡ, ರತ್ನಗಳನ್ನು ಕಳೆದುಕೊಂಡ ಈ ಪೃಥಿವಿಯನ್ನು ಸದಾ ಚಿಂತಿಸುತ್ತಾ ಅವರು ಸರಿಯಾಗಿ ನಿದ್ರೆಯನ್ನೂ ಮಾಡಲಿಲ್ಲ.
ದ್ರೌಪದೀ ಹತಪುತ್ರಾ ಚ ಸುಭದ್ರಾ ಚೈವ ಭಾಮಿನೀ |
ನಾತಿಪ್ರೀತಿಯುತೇ ದೇವ್ಯೌ ತದಾಽಽಸ್ತಾಮಪ್ರಹೃಷ್ಟವತ್ ॥16॥
ಮಕ್ಕಳನ್ನು ಕಳೆದುಕೊಂಡ ದ್ರೌಪದಿಯೂ ಹಾಗೂ ಮಗನನ್ನು ಕಳೆದುಕೊಂಡ ಭಾಮಿನಿಯಾದ ಸುಭದ್ರೆಯೂ ಸಂಸಾರದಲ್ಲಿ ಪ್ರೀತಿಯನ್ನು ಕಳೆದುಕೊಂಡು ಆಗ ದುಃಖಿತರಾಗಿಯೇ ಇದ್ದರು.
ವೈರಾಟ್ಯಾಸ್ತು ಸುತಂ ದೃಷ್ಟ್ವಾ ಪಿತರಂ ತೇ ಪರೀಕ್ಷಿತಮ್ |
ಧಾರಯಂತಿ ಸ್ಮ ತೇ ಪ್ರಾಣಾಂಸ್ತವ ಪೂರ್ವಪಿತಾಮಹಾಃ ॥17॥
ಆ ನಿನ್ನ ಅಜ್ಜಂದಿರು ನಿನ್ನ ತಂದೆಯಾದ- ವಿರಾಟರಾಜನ ಮಗಳಾದ ಉತ್ತರೆಯ ಮಗನಾದ ಪರೀಕ್ಷಿತನನ್ನು ನೋಡುತ್ತಾ ತಮ್ಮ ಪ್ರಾಣಗಳನ್ನು ಧರಿಸುವವರಾದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಪಾಂಡವಶೋಕೋ ನಾಮ ಸಪ್ತವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಸಪ್ತವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೆಂಟನೆಯ ಅಧ್ಯಾಯ
ಕಾಡಿನಲ್ಲಿರುವ ಕುಂತೀ-ಧೃತರಾಷ್ಟ್ರಾದಿಗಳನ್ನು ನೋಡಬೇಕೆಂಬ ಬಯಕೆಯಿಂದ ಯುಧಿಷ್ಠಿರನು ದ್ರೌಪದಿಯೇ ಮೊದಲಾದವರೊಂದಿಗೆ ಹಾಗೂ ಪೌರರು ಮತ್ತು ಸಹೋದರರೊಂದಿಗೆ ಕಾಡಿಗೆ ಹೊರಡುವುದು.
ವೈಶಂಪಾಯನಃ
ಏವಂ ತೇ ಪುರುಷವ್ಯಾಘ್ರಾಃ ಪಾಂಡವಾ ಮಾತೃನಂದನಾಃ |
ಸ್ಮರಂತೋ ಮಾತರಂ ವೀರಾ ಬಭೂವುರ್ಭೃಶದುಃಖಿತಾಃ ॥1॥
ವೈಶಂಪಾಯನ ಹೀಗೆ ಪುರುಷಶ್ರೇಷ್ಠರಾದ, ವೀರರಾದ, ತಾಯಿಯ ಬಗ್ಗೆ ಬಹಳ ಪ್ರೀತಿಯುಳ್ಳ ಆ ಪಾಂಡವರು ತಾಯಿಯನ್ನು ಸ್ಮರಿಸುತ್ತಾ ಬಹಳ ದುಃಖಿತರಾಗಿದ್ದರು.
ಯೇ ರಾಜಕಾರ್ಯೇಷು ಪುರಾ ನಾಮಾದ್ಯಂತ ಕ್ವಚಿನ್ನೃಪ |
ತೇ ರಾಜಕಾರ್ಯಾಣಿ ತದಾ ನಾಕಾರ್ಷುರ್ಮನಸಾ ಪುರೇ ॥2॥
ಹೇ ನೃಪನೇ, ಯಾವ ಪಾಂಡವರು ಹಿಂದೆ ರಾಜಕಾರ್ಯಗಳಲ್ಲಿ ಯಾವುದೇ ಕಾರಣಕ್ಕೂ ಪ್ರಮಾದವನ್ನೆಸಗುತ್ತಿರಲಿಲ್ಲವೋ, ಅವರು ತಾಯಿಯ ದುಃಖವುಳ್ಳವರಾಗಿ ಪಟ್ಟಣದಲ್ಲಿ ರಾಜಕಾರ್ಯಗಳನ್ನೂ ಮನಸ್ಸಿಟ್ಟು ಮಾಡಲಿಲ್ಲ.
ಆವಿಷ್ಟಾ ಇವ ಶೋಕೇನ ನಾಭ್ಯನಂದಂತ ಕಿಂಚನ |
ಸಂಭಾಷ್ಯಮಾಣಾ ಅಪಿ ತೇ ನ ಕಿಂಚಿತ್ ಪ್ರತ್ಯಪೂಜಯನ್ ॥3॥
ಅವರು ಶೋಕದಿಂದ ಕೂಡಿದವರಾಗಿ ಏನನ್ನೂ ಅಭಿನಂದಿಸಲಿಲ್ಲ. ಯಾರೇ ಬಂದು ಮಾತನಾಡಿಸಿದರೂ ಪ್ರತ್ಯುತ್ತರವನ್ನೂ ನೀಡಲಿಲ್ಲ.
ತೇ ಸ್ಮ ವೀರಾ ದುರಾಧರ್ಷಾ ಗಾಂಭೀರ್ಯೇ ಸಾಗರೋಪಮಾಃ |
ಶೋಕೋಪಹತವಿಜ್ಞಾನಾ ನಷ್ಟಸಂಜ್ಞಾ ಇವಾಭವನ್ ॥4॥
ಅನುಸ್ಮರಂತೋ ಜನನೀಂ ತತಸ್ತೇ ಕುರುನಂದನಾಃ ॥5॥
ವೀರರಾದ ಅವರು ಸಾಗರದಂತೆ ಗಾಂಭೀರ್ಯವುಳ್ಳವರಾಗಿ ಯಾರೂ ತೆಗಳಲು ಸಾಧ್ಯವಾಗದಂತೆ ನಡೆಯುತ್ತಿದ್ದರು. ಅಂತಹ ಕುರುಶ್ರೇಷ್ಠರಾದ ಅವರು ತಾಯಿಯನ್ನು ಮತ್ತೆ ಮತ್ತೆ ಸ್ಮರಿಸುತ್ತಾ ಶೋಕದಿಂದ ವಿವೇಕವನ್ನು ಕಳೆದುಕೊಂಡವರಾಗಿ ಬುದ್ದಿಯಿಲ್ಲದವರಂತೆ ಆದರು.
ಪಾಂಡವಾಃ
ಕಥಂ ನು ವೃದ್ಧಮಿಥುನಂ ವಹತ್ಯದ್ಯ ಪೃಥಾ ಕೃಶಾ ॥6॥
ಪಾಂಡವರು ಉಪವಾಸಾದಿಗಳಿಂದ ಕೃಶಳಾದ ನಮ್ಮ ತಾಯಿಯಾದ ಪೃಥೆಯು ಆ ವೃದ್ದ ಜೋಡಿಯನ್ನು ಹೇಗೆ ತಾನೇ ಇಂದು ಸಂಭಾಳಿಸಿಯಾಳು?
ಕಥಂ ಚ ಸ ಮಹೀಪಾಲೋ ಹತಪುತ್ರೋ ನಿರಾಶ್ರಯಃ |
ಪತ್ನ್ಯಾ ಸಹ ವಸತ್ಯೇಕೋ ವನೇ ಶ್ವಾಪದಸೇವಿತೇ ॥7॥
ಮಕ್ಕಳನ್ನು ಕಳೆದುಕೊಂಡು ಆಶ್ರಯವಿಲ್ಲದಂತಿರುವ ಆ ಧೃತರಾಷ್ಟ್ರನು ಹಿಂಸ್ರಪ್ರಾಣಿಗಳಿಂದ ಕೂಡಿದ ಕಾಡಿನಲ್ಲಿ ಪತ್ನಿಯ ಜೊತೆಯಲ್ಲಿ ಒಬ್ಬನೇ ಹೇಗೆ ವಾಸ ಮಾಡಿಯಾನು?

ಸಾ ಚ ದೇವೀ ಮಹಾಭಾಗಾ ಗಾಂಧಾರೀ ಹತಬಾಂಧವಾ |
ಪತಿಮಂಧಂ ಕಥಂ ವೃದ್ಧಮನ್ವೇತಿ ವಿಜನೇ ವನೇ ॥8॥
ಬಾಂಧವರನ್ನು ಕಳೆದುಕೊಂಡ ಮಹಾತ್ಮಳಾದ ಆ ಗಾಂಧಾರೀ ದೇವಿಯು ನಿರ್ಜನವಾದ ಕಾಡಿನಲ್ಲಿ ಕಣ್ಣು ಕಾಣದ ವೃದ್ಧನಾದ ತನ್ನ ಪತಿಯನ್ನು ಹೇಗೆ ತಾನೇ ಅನುಸರಿಸುವಳು?
ವೈಶಂಪಾಯನಃ
ಏವಂ ತೇಷಾಂ ಕಥಯತಾಮೌತ್ಸುಕ್ಯಮಭವತ್ ತದಾ |
ಗಮನೇ ಚಾಭವದ್ ಬುದ್ಧಿರ್ಧೃತರಾಷ್ಟ್ರದಿದೃಕ್ಷಯಾ ॥9॥
ವೈಶಂಪಾಯನ ಹೀಗೆ ಪರಸ್ಪರ ಮಾತನಾಡಿಕೊಳ್ಳುತ್ತಾ ಆ ಪಾಂಡವರಿಗೆ ಧೃತರಾಷ್ಟ್ರಾದಿಗಳನ್ನು ನೋಡಲು ಉತ್ಸುಕತೆಯುಂಟಾಯಿತು ಮತ್ತು ನೋಡಲು ಹೋಗಬೇಕೆಂಬ ಮನಸ್ಸೂ ಉಂಟಾಯಿತು.
ಸಹದೇವಸ್ತು ರಾಜಾನಂ ಪ್ರಣಿಪತ್ಯೇದಮಬ್ರವೀತ್ ॥10॥
ಅದೇ ಸಂದರ್ಭದಲ್ಲಿ ಸಹದೇವನು ರಾಜನಾದ ಯುಧಿಷ್ಠಿರನನ್ನು ನಮಸ್ಕರಿಸಿ ಹೀಗೆ ಹೇಳಿದನು.
ಸಹದೇವಃ
ಅಹೋ ನು ಭವತೋ ದೃಷ್ಟಂ ಹೃದಯಂ ಗಮನಂ ಪ್ರತಿ ॥11॥
ನ ಹಿ ತ್ವಾ ಗೌರವೇಣಾಹಮ್ ಅಶಕಂ ವಕ್ತುಮಾತ್ಮನಾ |
ಗಮನಂ ಪ್ರತಿ ರಾಜೇಂದ್ರ ತದಿದಂ ಪ್ರತ್ಯುಪಸ್ಥಿತಮ್ ॥12॥
ಸಹದೇವ ಆಹಾ! ಧೃತರಾಷ್ಟ್ರಾದಿಗಳನ್ನು ನೋಡಲು ಹೋಗಬೇಕೆಂಬ ವಿಷಯದಲ್ಲಿ ನಿಮಗೂ ಮನಸ್ಸಿದೆ ಎಂದು ತಿಳಿಯಿತು. ನನಗೆ ಹೋಗಲು ಮನಸ್ಸಿದ್ದರೂ ನಿಮ್ಮ ಮೇಲಿನ ಗೌರವದಿಂದ ನಾನು ಅದನ್ನು ಹೇಳಲು ಅಸಮರ್ಥನಾಗಿದ್ದೆನು. ಹೇ ರಾಜೇಂದ್ರನೇ, ಈಗ ತಮಗೂ ಮನಸ್ಸಿರುವುದನ್ನು ಕಂಡು ನನಗೂ ಹೋಗಬೇಕೆಂಬ ಆಸೆಯುಂಟಾಗಿದೆ.
ದಿಷ್ಟ್ಯಾ ದ್ರಕ್ಷ್ಯಾಮಿ ತಾಂ ಕುಂತೀಂ ವರ್ತಮಾನಾಂ ತಪಸ್ವಿನೀಮ್ |
ಜಟಿಲಾಂ ತಾಪಸೀಂ ವೃದ್ಧಾಂ ಕುಶಕಾಶಪರಿಕ್ಷತಾಮ್ ॥13॥
ಜಟೆಯನ್ನು ಧರಿಸಿ ತಾಪಸಿಯ ವೇಷದಲ್ಲಿರುವ, ವೃದ್ಧಳಾದ, ದರ್ಭೆ ಮೊದಲಾದ ಹುಲ್ಲುಗಳಿಂದ ಗಾಯಗೊಂಡಿರುವ, ತಪಸ್ಸನ್ನೂ ನಡೆಸುತ್ತಿರುವ ಆ ನನ್ನ ತಾಯಿಯಾದ ಕುಂತಿಯನ್ನು ಅದೃಷ್ಟವಶಾತ್ ನಾನು ನೋಡಲಿದ್ದೇನೆ.
ಪ್ರಾಸಾದಹರ್ಮ್ಯಸಂವೃದ್ಧಾಮತ್ಯಂತಸುಖಭಾಗಿನೀಮ್ |
ಕದಾ ನು ಜನನೀಂ ಶ್ರಾಂತಾಂ ದ್ರಕ್ಷ್ಯಾಮಿ ಭೃಶದುಃಖಿತಾಮ್ ॥14॥
ಒಂದು ಕಾಲದಲ್ಲಿ ಸುಖದ ಸುಪ್ಪತ್ತಿಗೆಯನ್ನು ಅನುಭವಿಸಿ, ಅರಮನೆಯ ಉಪ್ಪರಿಗೆಯಲ್ಲಿ ಬೆಳೆದ, ಈಗ ತಪಸ್ಸಿನಿಂದ ಆಯಾಸಗೊಂಡ, ತುಂಬಾ ದುಃಖಿತಳಾದ ನನ್ನ ತಾಯಿಯನ್ನು ಯಾವಾಗ ನೋಡಿಯೇನು?
ಅನಿತ್ಯಾಃ ಖಲು ಮರ್ತ್ಯಾನಾಂ ಗತಯೋ ಭರತರ್ಷಭ |
ಕುಂತೀ ರಾಜಸುತಾ ಯತ್ರ ವಸತ್ಯಸುಖಿನೀ ವನೇ ॥15॥
ಹೇ ಭರತಶ್ರೇಷ್ಠನೇ, ಮನುಷ್ಯರ ಸ್ಥಿತಿ-ಗತಿಗಳು ಅನಿತ್ಯ ತಾನೆ? ಏಕೆಂದರೆ ಯಾವಾಗ ಮಕ್ಕಳು ರಾಜರಾಗಿರುವರೋ ಆಗ ಕುಂತಿಯು ದುಃಖಪಡುತ್ತಾ ಕಾಡಿನಲ್ಲಿ ವಾಸವಾಗಿದ್ದಾಳೆ.
ವೈಶಂಪಾಯನಃ
ಸಹದೇವವಚಃ ಶ್ರುತ್ವಾ ದ್ರೌಪದೀ ಯೋಷಿತಾಂ ವರಾ |
ಉವಾಚ ದೇವೀ ರಾಜಾನಮಭಿಪೂಜ್ಯಾಭಿನಂದ್ಯ ಚ ॥16॥
ವೈಶಂಪಾಯನ ಸಹದೇವನ ಮಾತುಗಳನ್ನು ಕೇಳಿ ಸ್ತ್ರೀಯರಲ್ಲಿ ಶ್ರೇಷ್ಠಳಾದ ದ್ರೌಪದೀದೇವಿಯು ರಾಜನನ್ನು ಗೌರವಪೂರ್ವಕವಾಗಿ ಅಭಿನಂದಿಸಿ, ಹೀಗೆ ಹೇಳಿದಳು.
ದ್ರೌಪದೀ
ದ್ರಕ್ಷ್ಯಾಮಿ ತಾಂ ಕದಾ ದೇವೀಂ ಯದಿ ಜೀವತಿ ಸಾ ಪೃಥಾ |
ಜೀವಂತ್ಯಾ ಹ್ಯದ್ಯ ನಃ ಪ್ರೀತಿರ್ಭವಿಷ್ಯತಿ ನರಾಧಿಪ ॥17॥
ದ್ರೌಪದೀ ಹೇ ನರಾಧಿಪನೇ, ದೇವಿಯಾದ ಆ ಕುಂತಿಯನ್ನು ಯಾವಾಗ ನೋಡಬಲ್ಲೆನು? ಆ ಪೃಥೆಯು ಈಗ ಬದುಕಿರುವಳು ತಾನೇ? ಅವಳು ಬದುಕಿದ್ದರೆ ನಮಗೆ ಬಹಳ ಸಂತೋಷವಾಗುವುದು.
ಏಷಾ ತೇಽಸ್ತು ಮತಿರ್ನಿತ್ಯಂ ಧರ್ಮೇ ತೇ ರಮತಾಂ ಮನಃ |
ಯೋಽದ್ಯ ತ್ವಮಸ್ಮಾನ್ ರಾಜೇಂದ್ರ ಶ್ರೇಯಸಾ ಯೋಜಯಿಷ್ಯಸಿ ॥18॥
ಹೇ ರಾಜೇಂದ್ರನೇ, ನಿನ್ನ ಮನಸ್ಸು ಸದಾ ಧರ್ಮದಲ್ಲೇ ಸಂತೋಷಪಡಲಿ. ಇಂದು ನೀನು ನಮಗೆ ಹಿರಿಯರನ್ನು ನೋಡುವ ಮಂಗಳಮಯವಾದ ಸನ್ನಿವೇಶವನ್ನು ಒದಗಿಸುವೆ ಎಂದಾದರೆ ಈ ಬುದ್ಧಿ ನಿನಗೆ ಯಾವಾಗಲೂ ಇರಲಿ.
ಅಗ್ರಪಾದಸ್ಥಿತಮಿದಂ ವಿದ್ಧಿ ರಾಜನ್ ವಧೂಜನಮ್ |
ಕಾಂಕ್ಷಿತಂ ದರ್ಶನಂ ಕುಂತ್ಯಾ ಗಾಂಧಾರ್ಯಾಃ ಶ್ವಶುರಸ್ಯ ಚ ॥19॥
ಹೇ ರಾಜನೇ, ಅಂತಃಪುರದ ಎಲ್ಲ ಸ್ತ್ರೀ ಸಮೂಹವು ಕುಂತಿಯ, ಗಾಂಧಾರಿಯ ಹಾಗೂ ಮಾವನ ದರ್ಶನವನ್ನು ಅಪೇಕ್ಷಿಸುತ್ತಾ ತುದಿಗಾಲಿನಲ್ಲಿ ನಿಂತಿದೆ.
ವೈಶಂಪಾಯನಃ
ಇತ್ಯುಕ್ತಃ ಸ ನೃಪೋ ದೇವ್ಯಾ ಪಾಂಚಾಲ್ಯಾ ಭರತರ್ಷಭ |

ಸೇನಾಧ್ಯಕ್ಷಾನ್ ಸಮಾನಾಯ್ಯ ಸರ್ವಾನಿದಮಥಾಬ್ರವೀತ್ ॥20॥
ವೈಶಂಪಾಯನ ಭರತರ್ಷಭನೇ, ಹೀಗೆ ದೇವಿಯಾದ ಪಾಂಚಾಲಿಯೂ ಹೇಳಿದಾಗ ಆ ಯುಧಿಷ್ಠಿರ ರಾಜನು ಎಲ್ಲ ಸೇನಾಧ್ಯಕ್ಷರನ್ನೂ ಕರೆಸಿ ಹೀಗೆ ಹೇಳಿದನು.
ಯುಧಿಷ್ಠಿರಃ
ನಿರ್ಯಾಪಯತ ಸೇನಾಂ ಮೇ ಪ್ರಭೂತರಥಕುಂಜರಾಮ್ |
ದ್ರಕ್ಷ್ಯಾಮೋ ವನವಾಸಸ್ಥಂ ಧೃತರಾಷ್ಟ್ರಂ ಮಹೀಪತಿಮ್ ॥21॥
ಯುಧಿಷ್ಠಿರ ಹೇ ಸೇನಾಧ್ಯಕ್ಷರೇ, ಅನೇಕ ರಥ ಮತ್ತು ಆನೆಗಳಿಂದ ಕೂಡಿದ ನನ್ನ ಸೇನೆಯನ್ನು ಅಣಿಗೊಳಿಸಿರಿ. ವನವಾಸದಲ್ಲಿ ರಾಜನಾದ ಧೃತರಾಷ್ಟ್ರನನ್ನು ನಾವೆಲ್ಲರೂ ನೋಡೋಣ.
ವೈಶಂಪಾಯನಃ
ಅಧ್ಯಕ್ಷಾಂಶ್ಚಾಬ್ರವೀದ್ ರಾಜಾ ಯಾನಾನಿ ವಿವಿಧಾನಿ ಮೇ |
ಸಜ್ಜೀಕ್ರಿಯಂತಾಂ ಸರ್ವಾಣಿ ಶಿಬಿಕಾಶ್ಚ ಸಹಸ್ರಶಃ ॥22॥
ವೈಶಂಪಾಯನ ರಾಜನು ಎಲ್ಲ ಮೇಲ್ವಿಚಾರಕರನ್ನೂ ಕರೆದು, ನನ್ನ ನಾನಾ ರೀತಿಯ ವಾಹನಗಳನ್ನು, ಎಲ್ಲ ಸಾವಿರಾರು ಪಲ್ಲಕ್ಕಿಗಳನ್ನೂ ಸಜ್ಜುಗೊಳಿಸಿರಿ ಎಂದು ಹೇಳಿದನು.
ಶಕಟಾಪಣವೇಶಾಶ್ಚ ಕೋಶಾಃ ಶಿಲ್ಪಿನ ಏವ ಚ |
ನಿರ್ಯಾಂತು ಕೋಶಪಾಲಾಶ್ಚ ಕುರುಕ್ಷೇತ್ರಾಶ್ರಮಂ ಪ್ರತಿ ॥23॥
ಗಾಡಿಹೊಡೆಯುವವರು, ಅಂಗಡಿ ಮತ್ತು ವಸ್ತ್ರಗೃಹಗಳಲ್ಲಿ ಕೆಲಸ ಮಾಡುವವರು, ಕೋಶಗಳಲ್ಲಿ ಕೆಲಸ ಮಾಡುವವರು, ಶಿಲ್ಪಿಗಳು, ಕೋಶರಕ್ಷಕರು ಇವರೆಲ್ಲರೂ ಕುರುಕ್ಷೇತ್ರದಲ್ಲಿರುವ ಆಶ್ರಮಕ್ಕೆ ಹೊರಡಲಿ.
ಯಶ್ಚ ಪೌರಜನಃ ಕಶ್ಚಿದ್ ದ್ರಷ್ಟುಮಿಚ್ಛತಿ ಪಾರ್ಥಿವಮ್ |
ಅನಾವೃತಃ ಸುವಿಹಿತಃ ಸ ಚ ಯಾತು ಸುರಕ್ಷಿತಃ ॥24॥
ಮನೆ ಇರದ, ಒಳ್ಳೆಯ ಮನೆಗಳುಳ್ಳ ಯಾವುದೇ ಪುರಜನರಾಗಲೀ ಯಾರು ರಾಜನಾದ ಧೃತರಾಷ್ಟ್ರನನ್ನು ನೋಡಬಯಸುವರೋ ಅಂತಹ ಎಲ್ಲರೂ ಸುರಕ್ಷಿತರಾಗಿ ಹೊರಡಲಿ.
ಸೂದಾಃ ಪೌರೋಗವಾಶ್ಚೈವ ಸರ್ವಂ ಚೈವ ಮಹಾನಸಮ್ |
ವಿವಿಧಂ ಭಕ್ಷ್ಯಭೋಜ್ಯಂ ಚ ಶಕಟೈರುಹ್ಯತಾಂ ಮಮ ॥25॥
ಅನ್ನಕಾರರು, ದಧಿ ಮೊದಲಾದ ರಸ ಪದಾರ್ಥಗಳನ್ನು ನೋಡಿಕೊಳ್ಳುವವರು ಹೀಗೆ ಇಡೀ ಅಡುಗೆ ಮನೆಯೇ ಹಾಗೂ ನಾನಾ ರೀತಿಯ ಭಕ್ಷ್ಯ ಭೋಜ್ಯಗಳೂ ನನ್ನ ಜೊತೆಗೆ ಗಾಡಿಗಳೊಂದಿಗೆ ಹೊರಡಲಿ.
ಪ್ರಯಾಣಂ ಘುಷ್ಯತಾಮದ್ಯ ಶ್ವೋಭೂತ ಇತಿ ಮಾ ಚಿರಮ್ |
ಕ್ರಿಯತಾಂ ಪಥಿ ಚಾಪ್ಯತ್ರ ವೇಶ್ಮಾನಿ ವಿವಿಧಾನಿ ಚ ॥26॥
ನಾಳೆಯೇ ಪ್ರಯಾಣ ಎಂಬುದಾಗಿ ಇಂದೇ ಘೋಷಣೆಯಾಗಲಿ. ತಡ ಮಾಡದಿರಿ. ಮಾರ್ಗಮಧ್ಯದಲ್ಲಿ ನಾನಾ ರೀತಿಯ ವಿಶ್ರಾಂತಿಮನೆಗಳನ್ನೂ ಸಜ್ಜುಗೊಳಿಸಿರಿ.
ಏವಮಾಜ್ಞಾಪ್ಯ ರಾಜಾ ಸ ಭ್ರಾತೃಭಿಃ ಸಹ ಪಾಂಡವಃ |
ಶ್ವೋಭೂತೇ ನಿರ್ಯಯೌ ರಾಜಾ ಸಸ್ತ್ರೀಬಾಲಪುರಸ್ಕೃತಃ ॥27॥
ಹೀಗೆ ರಾಜನಾದ ಯುಧಿಷ್ಠಿರನು ಆಜ್ಞಾಪಿಸಿ ತನ್ನ ಸಹೋದರರೊಂದಿಗೆ ಕೂಡಿಕೊಂಡು (ಪಾಂಡುನಂದನನಾದ) ಸ್ತ್ರೀಯರನ್ನೂ, ಮಕ್ಕಳನ್ನೂ ಮುಂದೆ ಮಾಡಿಕೊಂಡು ಮಾರನೆಯ ದಿನವೇ ಹೊರಟನು.
ಸ ಬಹಿರ್ದಿವಸಾನೇವ ಜನೌಘಂ ಪರಿಪಾಲಯನ್ |
ನ್ಯವಸನ್ನೃಪತಿಃ ಪಂಚ ತತೋಽಗಚ್ಛದ್ವನಂ ಪ್ರತಿ ॥28॥
ಹೀಗೆ ಅವನು ಪಟ್ಟಣದ ಹೊರಭಾಗದಲ್ಲಿ ಎಲ್ಲರೂ ಬಂದು ಸೇರುವುದಕ್ಕಾಗಿ ಸೇರಿದ ಜನರನ್ನು ಪರಿರಕ್ಷಿಸುತ್ತಾ ಐದು ದಿನಗಳ ಕಾಲ ವಾಸ ಮಾಡಿದನು. ಅನಂತರ ಎಲ್ಲರನ್ನೂ ಕೂಡಿಸಿಕೊಂಡು ಕಾಡಿಗೆ ಪ್ರಯಾಣ ಬೆಳೆಸಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಯುಧಿಷ್ಠಿರವನಪ್ರವೇಶೋ ನಾಮ ಅಷ್ಟಾವಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಅಷ್ಟಾವಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಇಪ್ಪತ್ತೊಂಬತ್ತನೆಯ ಅಧ್ಯಾಯ
ನಾನಾ ವಿಧವಾದ ವಾಹನಗಳಲ್ಲಿ ಬಂದಿರುವ ಪೌರರು ಹಾಗೂ ಸಹೋದರರೊಂದಿಗೆ ಯುಧಿಷ್ಠಿರನು ಧೃತರಾಷ್ಟ್ರಾದಿಗಳನ್ನು ನೋಡಲು ಶತಯೂಪರ ಆಶ್ರಮವನ್ನು ಪ್ರವೇಶಿಸುವುದು.
ವೈಶಂಪಾಯನಃ
ತತ ಆಜ್ಞಾಪಯಾಮಾಸ ಸೇನಾಂ ಭರತಸತ್ತಮಃ |
ಅರ್ಜುನಪ್ರಮುಖೈರ್ಗುಪ್ತಾಂ ಲೋಕಪಾಲೋಪಮೈರ್ನರೈಃ ॥1॥
ವೈಶಂಪಾಯನ ಅನಂತರ ಭರತಶ್ರೇಷ್ಠನಾದ ಯುಧಿಷ್ಠಿರನು ಅರ್ಜುನನೇ ಪ್ರಮುಖನಾಗಿ ಉಳ್ಳ, ಲೋಕಪಾಲಕರಿಗೆ ಸದೃಶರಾದ ಮನುಷ್ಯರಿಂದ ರಕ್ಷಿಸಲ್ಪಟ್ಟ ಸೇನೆಯನ್ನು ಕುರಿತು ಹೊರಡಲು ಆಜ್ಞಾಪಿಸಿದನು.

ಯೋಗೋ ಯೋಗ ಇತಿ ಪ್ರೀತ್ಯಾ ತತಃ ಶಬ್ದೋ ಮಹಾನಭೂತ್ |
ಕ್ರೋಶತಾಂ ಸಾದಿನಾಂ ತತ್ರ ಯುಜ್ಯತಾಂ ಯುಜ್ಯತಾಮಿತಿ ॥2॥
ಅನಂತರ ``ಒಟ್ಟಾಗಿರಿ, ಒಟ್ಟಾಗಿರಿ'' ಎಂಬ ಪ್ರೀತಿಯಿಂದ ಕೂಡಿದ ದೊಡ್ಡದಾದ ಶಬ್ದವು ಕೇಳಿ ಬರತೊಡಗಿತು. ಜೊತೆಗೆ ರಥ-ಅಶ್ವಾದಿಗಳನ್ನು ನಡೆಸುವವರ ``ಸಿದ್ದರಾಗಿ ಸಿದ್ದರಾಗಿ'' ಎಂಬ ಶಬ್ದವು ಕೇಳಿಬರತೊಡಗಿತು.
ಕೇಚಿದ್ಯಾನೈರ್ಜನಾ ಜಗ್ಮುಃ ಕೇಚಿದಶ್ವೈರ್ಮನೋಜವೈಃ |
ರಥೈಶ್ಚ ನಗರಾಕಾರೈಃ ಪ್ರದೀಪ್ತಜ್ವಲನೋಪಮೈಃ ॥3॥
ಕೆಲವು ಜನರು ಪಲ್ಲಕ್ಕಿಗಳಲ್ಲಿ ಹೊರಟರು. ಮತ್ತೆ ಕೆಲವರು ಮನೋವೇಗವುಳ್ಳ ಕುದುರೆಗಳಲ್ಲಿ ಕುಳಿತು ಹೊರಟರು. ಮತ್ತೆ ಕೆಲವರು ದೊಡ್ಡ ಪಟ್ಟಣಗಳಂತಿರುವ ಜ್ವಲಿಸುವ ಬೆಂಕಿಯಂತೆ ಪ್ರಜ್ವಲಿಸುತ್ತಿರುವ ರಥಗಳಲ್ಲಿ ಕುಳಿತು ಹೊರಟರು.
ಗಜೇಂದ್ರೈರ್ಗರ್ಜಿತೈಃ ಕೇಚಿದ್ ಕೇಚಿದುಷ್ಟ್ರೈರ್ನರಾಧಿಪ |
ಪದಾತಯಶ್ಚ ಪುರುಷಾಃ ನಖರಪ್ರಾಸಯೋಧಿನಃ ॥4॥
ಕೆಲವರು ಮದೋನ್ಮತ್ತವಾದ ಶ್ರೇಷ್ಠ ಆನೆಗಳಲ್ಲಿ ಹೊರಟರೆ ಮತ್ತೆ ಕೆಲವರು ಒಂಟೆಗಳಿಂದ ಕೂಡಿಕೊಂಡು ಹೊರಟರು. ಹೇ ರಾಜಶ್ರೇಷ್ಠನೇ, ಉಗುರು ಮತ್ತು ಪ್ರಾಸಗಳಿಂದ ಯುದ್ಧ ಮಾಡುವ ಮನುಷ್ಯರು ನಡಿಗೆಗಳಿಂದಲೇ ಹೊರಟರು.
ಪೌರಜಾನಪದಾಶ್ಚೈವ ಯಾನೈರ್ಬಹುವಿಧೈಸ್ತಥಾ |
ಅನ್ವಯುಃ ಕುರುರಾಜಾನಂ ಧೃತರಾಷ್ಟ್ರದಿದೃಕ್ಷಯಾ ॥5॥
ಹಾಗೆಯೇ ಪಟ್ಟಣಿಗರು ಹಾಗೂ ಗ್ರಾಮ್ಯಜನರು ನಾನಾ ರೀತಿಯ ವಾಹನಗಳಿಂದ ಪ್ರಯಾಣ ಬೆಳೆಸಿದರು. ಹೀಗೆ ಧೃತರಾಷ್ಟ್ರನನ್ನು ನೋಡುವ ಬಯಕೆಯಿಂದ ಕುರುರಾಜನಾದ ಯುಧಿಷ್ಠಿರನನ್ನು ಜನರು ಹಿಂಬಾಲಿಸಿದರು.
ಸ ಚಾಪಿ ರಾಜವಚನಾದ್ ಆಚಾರ್ಯೋ ಗೌತಮಃ ಕೃಪಃ |
ಸೇನಾಮಾದಾಯ ಸೇನಾನೀಃ ಪ್ರಯಯಾವಾಶ್ರಮಂ ಪ್ರತಿ ॥6॥
ರಾಜನಾದ ಯುಧಿಷ್ಠಿರನ ಮಾತಿನಂತೆ ಆಚಾರ್ಯನಾದ ಗೌತಮ ವಂಶದಲ್ಲಿ ಬಂದ ಕೃಪನೂ ಕೂಡ ಸೇನೆಯನ್ನು ಮುನ್ನಡೆಸುವವನಾಗಿ ಸೇನೆಯ ಜೊತೆಗೆ ಆಶ್ರಮಕ್ಕೆ ಹೊರಟನು.
ತತೋ ದ್ವಿಜೈರ್ವೃತಃ ಶ್ರೀಮಾನ್ ಕುರುರಾಜೋ ಯುಧಿಷ್ಠಿರಃ |
ಸಂಸ್ತೂಯಮಾನೋ ಮುನಿಭಿಃ ಸೂತಮಾಗಧವಂದಿಭಿಃ ॥7॥
ಅನಂತರ ಬ್ರಾಹ್ಮಣರಿಂದ ಕೂಡಿಕೊಂಡ ಶ್ರೀಮಂತನಾದ ಕುರುರಾಜನಾದ ಯುಧಿಷ್ಠಿರನು ಸೂತ, ಮಾಗಧ ಮೊದಲಾದ ಹೊಗಳುಭಟರಿಂದಲೂ, ಮುನಿಗಳಿಂದಲೂ ಹೊಗಳಿಸಿಕೊಳ್ಳುತ್ತಾ ಹೊರಟನು.
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ |
ರಥಾನೀಕೇನ ಮಹತಾ ನಿರ್ಯಯೌ ಕುರುನಂದನಃ ॥8॥
ಕುರುನಂದನನಾದ ಯುಧಿಷ್ಠಿರನು ನೆತ್ತಿಯ ಮೇಲೆ ಬಿಳಿಯಾದ ಛತ್ರದಿಂದ ಶೋಭಿಸುತ್ತಾ ಬಹಳವಾದ ರಥಸಮೂಹದೊಂದಿಗೆ ಕಾಡಿಗೆ ಹೊರಟು ನಿಂತನು.
ಗಜೈಶ್ಚಾಚಲಸಂಕಾಶೈರ್ಭೀಮಕರ್ಮಾ ಮಹಾಭುಜಃ |
ಸಜ್ಜಯಂತ್ರಾಯುಧೋಪೇತೈಃ ಪ್ರಯಯೌ ಮಾರುತಾತ್ಮಜಃ ॥9॥
ಅದ್ಭುತವಾದ ಕರ್ಮಗಳನ್ನು ನಡೆಸಿರುವ ಮಹಾಪರಾಕ್ರಮಶಾಲಿಯಾದ ವಾಯುಪುತ್ರನಾದ ಭೀಮನು ಆಪತ್ತನ್ನು ಎದುರಿಸಲು ಸನ್ನದ್ದವಾದ ಯಂತ್ರಾಯುಧದಿಂದ ಕೂಡಿದ ಬೆಟ್ಟದಂತಿರುವ ಆನೆಗಳ ಜೊತೆಗೆ ಹೊರಟನು.
ಮಾದ್ರೀಪುತ್ರಾವಪಿ ತಥಾ ಹಯಾರೋಹೌ ಸುಸಂವೃತೌ |
ಜಗ್ಮತುಃ ಶೀಘ್ರಗಮನೌ ಸನ್ನದ್ಧಕವಚಧ್ವಜೌ ॥10॥
ಮಾದ್ರೀಪುತ್ರರಾದ ನಕುಲ-ಸಹದೇವರೂ ಕೂಡ ಕವಚ ಹಾಗೂ ಧ್ವಜಗಳನ್ನು ಧರಿಸಿಕೊಂಡು ಉತ್ತಮವಾದ ವೇಷ-ಭೂಷಣಗಳುಳ್ಳವರಾಗಿ ಕುದುರೆಯ ಮೇಲೇರಿ ಶೀಘ್ರವಾಗಿ ಮುಂದುವರೆಯುವುದಕ್ಕಾಗಿ ಹೊರಟರು.
ಅರ್ಜುನಶ್ಚ ಮಹಾತೇಜಾ ರಥೇನಾದಿತ್ಯವರ್ಚಸಾ |
ವಶೀ ಶ್ವೇತೈರ್ಹಯೈರ್ದಿವ್ಯೈರ್ಯುಕ್ತೇನಾನ್ವಗಮನ್ನೃಪಮ್ ॥11॥
ಮಹಾತೇಜಸ್ವಿಯಾದ ಇಂದ್ರಿಯನಿಗ್ರಹವುಳ್ಳ ಅರ್ಜುನನೂ ಕೂಡ ಬಿಳಿಯಾದ ದಿವ್ಯವಾದ ಕುದುರೆಗಳಿಂದ ಕೂಡಿದ ಸೂರ್ಯನಂತೆ ಶೋಭಿಸುವ ರಥದಿಂದ ರಾಜನಾದ ಯುಧಿಷ್ಠಿರನನ್ನು ಹಿಂಬಾಲಿಸಿದನು.
ದ್ರೌಪದೀಪ್ರಮುಖಾಶ್ಚಾಪಿ ಸ್ತ್ರೀಸಂಘಾಃ ಶಿಬಿಕಾಗತಾಃ |
ಸ್ತ್ರ್ಯಧ್ಯಕ್ಷಗುಪ್ತಾಃ ಪ್ರಯಯುರ್ವಿಸೃಜಂತೋಽಮಿತಂ ವಸು ॥12॥
ದ್ರೌಪದಿಯೇ ಮೊದಲಾದ ಸ್ತ್ರೀಯರ ಸಮೂಹಗಳೂ ಕೂಡ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಸ್ತ್ರೀಯರನ್ನು ರಕ್ಷಿಸುವ ಭಟರ ರಕ್ಷಣೆಯೊಂದಿಗೆ ಅತಿಶಯವಾದ ಸಂಪತ್ತನ್ನು ದಾನ ಮಾಡುತ್ತಾ ಹೊರಟರು.
ಸಮೃದ್ಧರಥನಾಗಾಶ್ವಂ ವೇಣುವೀಣಾನುನಾದಿತಮ್ |
ಶುಶುಭೇ ಪಾಂಡವಂ ಸೈನ್ಯಂ ತತ್ ತದಾ ಭರತರ್ಷಭ ॥13॥
ಹೇ ಭರತರ್ಷಭನೇ, ಆ ಸಮಯದಲ್ಲಿ ಆ ಪಾಂಡವರ ಸೈನ್ಯವು ರಥ-ಆನೆ- ಕುದುರೆಗಳಿಂದ ಸಮೃದ್ಧವಾಗಿ ಕೊಳಲು, ವೀಣೆ ಮೊದಲಾದ ಮಂಗಳ ಧ್ವನಿಯಿಂದ ಕೂಡಿದ್ದಾಗಿ ಚೆನ್ನಾಗಿ ಶೋಭಿಸಿತು.
ನದೀತೀರೇಷು ರಮ್ಯೇಷು ಸರಸ್ಸು ಚ ವಿಶಾಂಪತೇ |
ವಾಸಂ ಕೃತ್ವಾ ಕ್ರಮೇಣಾಥ ಜಗ್ಮುಸ್ತೇ ಕುರುಪುಂಗವಾಃ ॥14॥

ಹೇ ರಾಜನೇ, ಆ ಕುರುಶ್ರೇಷ್ಠರು ನದಿಯ ತೀರಗಳಲ್ಲಿ ರಮ್ಯವಾದ ಸರೋವರಗಳ ಸಮೀಪದಲ್ಲಿ ಮಧ್ಯೆ-ಮಧ್ಯೆ ವಾಸವನ್ನು ಮಾಡುತ್ತಾ ಕ್ರಮವಾಗಿ ಮುಂದೆ ಸಾಗಿದರು.
ಯುಯುತ್ಸುಶ್ಚ ಮಹಾತೇಜಾ ಧೌಮ್ಯಶ್ಚೈವ ಪುರೋಹಿತಃ |
ಯುಧಿಷ್ಠಿರಸ್ಯ ವಚನಾತ್ ಪುರಗುಪ್ತಿಂ ಪ್ರಚಕ್ರತುಃ ॥15॥
ಮಹಾತೇಜಸ್ವಿಯಾದ ಯುಯುತ್ಸುವೂ, ಪುರೋಹಿತರಾದ ಧೌಮ್ಯರೂ ಯುಧಿಷ್ಠಿರನ ಅಪ್ಪಣೆಯಂತೆ ಪುರದ ರಕ್ಷಣೆಯನ್ನು ವಹಿಸಿಕೊಂಡರು.
ತತೋ ಯುಧಿಷ್ಠಿರೋ ರಾಜಾ ಕುರುಕ್ಷೇತ್ರಮವಾತರತ್ |
ಕ್ರಮೇಣೋತ್ತೀರ್ಯ ಯಮುನಾಂ ನದೀಂ ಪರಮಪಾವನೀಮ್ ॥16॥
ಅನಂತರ ರಾಜನಾದ ಯುಧಿಷ್ಠಿರನು ಪರಮ ಪಾವನವಾದ ಯಮುನಾ ನದಿಯನ್ನು ಪ್ರಯಾಣಕ್ರಮದಿಂದ ದಾಟಿ ಕುರುಕ್ಷೇತ್ರಕ್ಕೆ ಬಂದಿಳಿದನು.
ಸ ದದರ್ಶಾಶ್ರಮಂ ದೂರಾದ್ ರಾಜರ್ಷೇಸ್ತಸ್ಯ ಧೀಮತಃ |
ಶತಯೂಪಸ್ಯ ಕೌರವ್ಯ ಧೃತರಾಷ್ಟ್ರಸ್ಯ ಚೈವ ಹಿ ॥17॥
ಹೇ ಕುರುವಂಶಜನೇ, ಆ ಯುಧಿಷ್ಠಿರನು ಧೀಮಂತನಾದ ಆ ಶತಯೂಪನೆಂಬ ರಾಜರ್ಷಿಯ ಆಶ್ರಮವನ್ನು ಮತ್ತು ಧೃತರಾಷ್ಟ್ರನ ಆಶ್ರಮವನ್ನು ದೂರದಿಂದಲೇ ನೋಡಿ ಗುರುತಿಸಿದನು.
ತತಃ ಪ್ರಮುದಿತಃ ಸರ್ವೋ ಜನಸ್ತದ್ವನಮಂಜಸಾ |
ವಿವೇಶ ಸುಮಹಾನಾದೈರಾಪೂರ್ಯ ಭರತರ್ಷಭ ॥18॥
ಹೇ ಭರತರ್ಷಭನೇ, ಅನಂತರ ಎಲ್ಲ ಜನರೂ ಬಹಳ ಸಂತೋಷಗೊಂಡವರಾಗಿ ಗಟ್ಟಿಯಾದ ಉತ್ಸಾಹ ಕೇಕೆಗಳಿಂದ ಕಾಡನ್ನು ತುಂಬಿಸುತ್ತಾ ಒಳ್ಳೆಯ ರೀತಿಯಿಂದ ಕಾಡಿಗೆ ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಪಾಂಡವೈಃ ತಪೋವನಪ್ರವೇಶೋ ನಾಮ ಏಕೋನತ್ರಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಏಕೋನತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತನೆಯ ಅಧ್ಯಾಯ
ಯುಧಿಷ್ಠಿರಾದಿಗಳು ಶತಯೂಪಾಶ್ರಮದಲ್ಲಿ ಧೃತರಾಷ್ಟ್ರನನ್ನು ಸಮೀಪಿಸಿ, ತಮ್ಮ ತಮ್ಮ ಹೆಸರನ್ನು ಹೇಳುತ್ತಾ ಅವನಿಗೆ ವಂದಿಸುವುದು. ಧೃತರಾಷ್ಟ್ರನು ತನ್ನ ಅವಸ್ಥೆಯನ್ನು ನೋಡಿ ದುಃಖಿಸುವ ಅವರನ್ನು ಸಮಾಧಾನ ಪಡಿಸುವುದು.
ವೈಶಂಪಾಯನಃ
ತತಸ್ತೇ ಪಾಂಡವಾ ದೂರಾದ್ ಅವತೀರ್ಯ ಪದಾತಯಃ |
ಅಭಿಜಗ್ಮುರ್ನರಪತೇರಾಶ್ರಮಂ ವಿನಯಾನ್ವಿತಾಃ ॥1॥
ವೈಶಂಪಾಯನ ಅನಂತರ ಪಾಂಡವರು ದೂರದಲ್ಲಿಯೇ ವಾಹನಗಳಿಂದ ಕೆಳಗಿಳಿದು ವಿನಯಪೂರ್ವಕವಾಗಿ ಕಾಲುನಡಿಗೆಯಿಂದಲೇ ರಾಜನ ಆಶ್ರಮವನ್ನು ಪ್ರವೇಶಿಸಿದರು.
ಸ ಚ ಸೇನಾಜನಃ ಸರ್ವೋ ಯೇ ಚ ರಾಷ್ಟ್ರನಿವಾಸಿನಃ |
ಸ್ತ್ರಿಯಶ್ಚ ಕುರುಮುಖ್ಯಾನಾಂ ಪದ್ಭಿರೇವಾನ್ವಯುಸ್ತದಾ ॥2॥
ಆಗ ಎಲ್ಲ ಸೈನಿಕರೂ ಮತ್ತು ಬಂದಿರುವ ಎಲ್ಲ ರಾಷ್ಟ್ರನಿವಾಸಿಗಳು ಜೊತೆಗೆ ಕುರುಶ್ರೇಷ್ಠರ ಪತ್ನಿಯರೂ ಕಾಲುನಡಿಗೆಯಿಂದಲೇ ಪಾಂಡವರನ್ನು ಹಿಂಬಾಲಿಸಿದರು.
ತತ್ರಾಶ್ರಮಮುಪಾಜಗ್ಮುರ್ಧೃತರಾಷ್ಟ್ರಸ್ಯ ಪಾಂಡವಾಃ |
ಶೂನ್ಯಂ ಮೃಗಗಣಾಕೀರ್ಣಂ ಕದಳೀವನಶೋಭಿತಮ್ ॥3॥
ಅನಂತರ ಪಾಂಡವರು ಜಿಂಕೆಗಳ ಸಮೂಹದಿಂದ ತುಂಬಿರುವ, ಬಾಳೆಗಿಡಗಳ ಕಾಡಿನಿಂದ ಶೋಭಿಸುತ್ತಿರುವ ಧೃತರಾಷ್ಟ್ರನ ಆ ಆಶ್ರಮವನ್ನು ಪ್ರವೇಶಿಸಿದರು. ಆದರೆ ಪ್ರವೇಶಕಾಲದಲ್ಲಿ ಆಶ್ರಮವು ಶೂನ್ಯವಾಗಿದ್ದಿತು.
ತತಸ್ತತ್ರ ಸಮಾಜಗ್ಮುಸ್ತಾಪಸಾ ವಿವಿಧವ್ರತಾಃ |
ಪಾಂಡವಾನಾಗತಾನ್ ದ್ರಷ್ಟುಂ ಕೌತೂಹಲಸಮನ್ವಿತಾಃ ॥4॥
ಆಗ ಅಲ್ಲಿಗೆ ಬಂದಿರುವ ಪಾಂಡವರನ್ನು ನೋಡಬೇಕೆಂಬ ಕುತೂಹಲದಿಂದ ಕೂಡಿದ, ನಾನಾ ರೀತಿಯ ವ್ರತಗಳಲ್ಲಿ ನಿರತರಾದ ತಾಪಸ ಜನರು ಆಗಮಿಸಿದರು.
ತಾನಪೃಚ್ಛತ್ ತತೋ ರಾಜಾ ಕ್ವಾಸೌ ಕೌರವವಂಶಭೃತ್ |
ಪಿತಾ ಜ್ಯೇಷ್ಠೋ ಗತೋಽಸ್ಮಾಕಮಿತಿ ಬಾಷ್ಪಪರಿಪ್ಲುತಃ ॥5॥
ಆಗ ಕೌರವವಂಶವನ್ನು ಬೆಳೆಸುವ ರಾಜನಾದ ಯುಧಿಷ್ಠಿರನು, ನಮ್ಮ ಹಿರಿಯ ತಂದೆಯು ಇಲ್ಲಿ ಕಾಣುತ್ತಿಲ್ಲ. ಅವನು ಎಲ್ಲಿ ಹೋದನು? ಎಂದು ಕಣ್ಣೀರಿನಿಂದ ಕೂಡಿದವನಾಗಿ ಆ ತಾಪಸರನ್ನು ಕೇಳಿದರು.
ತಮೂಚುಸ್ತೇ ತತೋ ವಾಕ್ಯಂ ಯಮುನಾಮವಗಾಹಿತುಮ್ |
ಪುಷ್ಪಾಣಾಮುದಕುಂಭಸ್ಯ ಚಾರ್ಥೇ ಗತ ಇತಿ ಪ್ರಭೋ ॥6॥
ಆಗ ಅವರು ಹೇ ಪ್ರಭುವೇ, ಯಮುನೆಯಲ್ಲಿ ಮುಳುಗಿ ಸ್ನಾನ ಮಾಡಿ, ಹೂವುಗಳನ್ನು, ನೀರನ್ನು ತರಲೋಸುಗ ರಾಜನು

ಹೋಗಿರುವನು ಎಂದು ತಿಳಿಸಿದರು.
ತೈರಾಖ್ಯಾತೇನ ಮಾರ್ಗೇಣ ತತಸ್ತೇ ಪ್ರಯಯುಸ್ತದಾ |
ದದೃಶುಶ್ಚಾವಿದೂರೇ ತಾನ್ ಸರ್ವಾನಥ ಪದಾತಯಃ ॥7॥
ಆಗ ಅವರೆಲ್ಲರೂ ಕಾಲ್ನಡಿಗೆಯಿಂದಲೇ ತಾಪಸರು ಸೂಚಿಸಿದ ಮಾರ್ಗದಿಂದ ಮುಂದೆ ನಡೆದು ಸ್ವಲ್ಪ ದೂರದಲ್ಲೇ ಆ ಎಲ್ಲರನ್ನೂ ಕಂಡರು.
ತತಸ್ತೇ ಸತ್ವರಾ ಜಗ್ಮುಃ ಪಿತುರ್ದರ್ಶನಕಾಂಕ್ಷಿಣಃ |
ಸಹದೇವಸ್ತು ವೇಗೇನ ಪ್ರಾಧಾವದ್ಯತ್ರ ಸಾ ಪೃಥಾ ॥8॥
ಅನಂತರ ಅವರೆಲ್ಲರೂ ಹಿರಿಯರನ್ನು ನೋಡುವ ಕುತೂಹಲದಿಂದ ಬೇಗ ಬೇಗನೆ ನಡೆದರು. ಸಹದೇವನಾದರೂ ಎಲ್ಲಿ ಕುಂತಿ ಇರುವಳೋ ಅಲ್ಲಿ ವೇಗವಾಗಿ ಓಡಿಬಂದನು.
ಸಸ್ವರಂ ಪ್ರಾರುದದ್ ಧೀಮಾನ್ ಮಾತುಃ ಪಾದಾವುಪಸ್ಪೃಶನ್ |
ಸಾ ತು ಬಾಷ್ಪಾಕುಲಮುಖೀ ತಂ ದದರ್ಶ ಪ್ರಿಯಂ ಸುತಮ್ ॥9॥
ಧೀಮಂತನಾದ ಆ ಸಹದೇವನು ತಾಯಿಯ ಪಾದಗಳನ್ನು ನಮಸ್ಕರಿಸುತ್ತಾ ಸ್ವರ ಸಹಿತವಾಗಿ ಅತ್ತನು. ಆ ಕುಂತಿಯಾದರೂ ಕಣ್ಣೀರನ್ನು ತುಂಬಿಕೊಂಡವಳಾಗಿ ಪ್ರಿಯನಾದ ಸುತನನ್ನು ನೋಡಿದಳು.
ಬಾಹುಭ್ಯಾಂ ಸಂಪರಿಷ್ವಜ್ಯ ಸಮುನ್ನಾಮ್ಯ ಚ ಭಾರತ |
ಗಾಂಧಾರ್ಯಾಃ ಕಥಯಾಮಾಸ ಸಹದೇವಮುಪಸ್ಥಿತಮ್ ॥10॥
ಹೇ ಭಾರತನೇ, ಅವನನ್ನು ಮೇಲಕ್ಕೆತ್ತಿ, ಬಾಹುಗಳಿಂದ ಆಲಿಂಗಿಸಿಕೊಂಡು ಸಹದೇವನು ಬಂದಿರುವನೆಂದು ಗಾಂಧಾರಿಗೆ ತಿಳಿಸಿದಳು.
ಅನಂತರಂ ಚ ರಾಜಾನಂ ಭೀಮಸೇನಮಥಾರ್ಜುನಮ್ |
ನಕುಲಂ ಚ ಪೃಥಾ ದೃಷ್ಟ್ವಾ ತ್ವರಮಾಣೋಪಚಕ್ರಮೇ ॥11॥
ಅನಂತರ ಕುಂತಿಯು ರಾಜನಾದ ಯುಧಿಷ್ಠಿರನನ್ನೂ, ಭೀಮಸೇನನನ್ನೂ, ಅರ್ಜುನನನ್ನೂ ಅಂತೆಯೇ ನಕುಲನನ್ನೂ ನೋಡಿ ಸಂಭ್ರಮದಿಂದ ಮುಂದೆ ಬಂದಳು.
ಸಾ ಹ್ಯಗ್ರೇ ಗಚ್ಛತಿ ತಯೋರ್ದಂಪತ್ಯೋರ್ಹತಪುತ್ರಯೋಃ |
ಕರ್ಷಂತೀ ತೌ ತತಸ್ತೇ ತಾಂ ದೃಷ್ಟ್ವೈವ ನ್ಯಪತನ್ ಭುವಿ ॥12॥
ತಯೋಸ್ತು ಪಾದಯೋ ರಾಜನ್ ನ್ಯಪತನ್ ಹತಪುತ್ರಯೋಃ ॥13॥
ಹೇ ರಾಜನೇ, ಆ ಕುಂತಿಯು ಮಕ್ಕಳನ್ನು ಕಳೆದುಕೊಂಡ ಆ ದಂಪತಿಗಳ ಮುಂಭಾಗದಲ್ಲಿ ನಡೆಯುತ್ತಾ ಅವರನ್ನು ಎಳೆದುಕೊಂಡು ಮುಂದೆ ಮುಂದೆ ಬಂದಳು. ಅಂತಹ ಕುಂತಿಯನ್ನು ನೋಡಿ ಅವರೆಲ್ಲರೂ ಭೂಮಿಯಲ್ಲಿ ಬಿದ್ದರು ಹಾಗೂ ಮಕ್ಕಳನ್ನು ಕಳೆದುಕೊಂಡ ಅವರಿಬ್ಬರ ಪಾದಗಳಿಗೆ ನಮಸ್ಕರಿಸಿದರು.
ತಾನ್ ರಾಜಾ ಸ್ವರಯೋಗೇನ ಸ್ಪರ್ಶೇನ ಚ ಮಹಾಮನಾಃ |
ಪ್ರತ್ಯಭಿಜ್ಞಾಯ ಮೇಧಾವೀ ಸಮಾಶ್ವಾಸಯತ ಪ್ರಭುಃ ॥14॥
ರಾಜನಾದ, ಮನಸ್ವಿಯಾದ, ಮೇಧಾವಿಯಾದ ಧೃತರಾಷ್ಟ್ರನು ಸ್ವರದಿಂದ ಹಾಗೂ ಸ್ಪರ್ಶದಿಂದ ಅವರನ್ನು ಪಾಂಡವರೆಂದು ತಿಳಿದುಕೊಂಡು ಸಮಾಧಾನಗೊಳಿಸಿದನು.
ತತಸ್ತೇ ಬಾಷ್ಪಮುತ್ಸೃಜ್ಯ ಗಾಂಧಾರೀಸಹಿತಂ ನೃಪಮ್ |
ಉಪತಸ್ಥುರ್ಮಹಾತ್ಮಾನೋ ಮಾತರಂ ಚ ಯಥಾವಿಧಿ ॥15॥
ಅನಂತರ ಮಹಾತ್ಮರಾದ ಆ ಪಾಂಡವರು ಕಣ್ಣೀರು ಸುರಿಸುತ್ತಾ, ಗಾಂಧಾರಿಯೊಂದಿಗೆ ಕೂಡಿಕೊಂಡ ರಾಜನನ್ನು ಮತ್ತು ತಾಯಿಯನ್ನು ವಿಧಿ ಪ್ರಕಾರವಾಗಿ ನಮಸ್ಕರಿಸಿದರು.
ಸರ್ವೇಷಾಂ ತೋಯಕಲಶಾನ್ ಜಗೃಹುಸ್ತೇ ಸ್ವಯಂ ತಥಾ |
ಪಾಂಡವಾ ಲಬ್ಧಸಂಜ್ಞಾಸ್ತೇ ಮಾತ್ರಾ ಚಾಶ್ವಾಸಿತಾ ಭೃಶಮ್ ॥16॥
ತಾಯಿಯಿಂದ ಚೆನ್ನಾಗಿ ಸಮಾಧಾನಗೊಂಡ ಆ ಪಾಂಡವರು ಎಚ್ಚರಗೊಂಡು ಎಲ್ಲರ ನೀರಿನ ಬಿಂದಿಗೆಗಳನ್ನು ತಾವೇ ಸ್ವೀಕರಿಸಿದರು.
ತತೋ ನಾರ್ಯೋ ನೃಸಿಂಹಾನಾಂ ಸ ಚ ಯೋಧಜನಸ್ತಥಾ |
ಪೌರಜಾನಪದಾಶ್ಚೈವ ದದೃಶುಸ್ತಂ ನರಾಧಿಪಮ್ ॥17॥
ಅನಂತರ ಪುರುಷಶ್ರೇಷ್ಠರಾದ ಪಾಂಡವರ ಪತ್ನಿಯರೂ ಹಾಗೆಯೇ ಸೈನಿಕ ಜನರು ಮತ್ತು ಪಟ್ಟಣಿಗರು ಮತ್ತು ಗ್ರಾಮೀಣ ಜನರು ಆ ಧೃತರಾಷ್ಟ್ರ ರಾಜನನ್ನು ನೋಡಿದರು.
ನಿವೇದಯಾಮಾಸ ತತೋ ಜನಂ ತಂ ಗೋತ್ರನಾಮತಃ |
ಯುಧಿಷ್ಠಿರೋ ನರಪತಿಃ ಸ ಚೈನಾನ್ ಪ್ರತ್ಯಪೂಜಯತ್ ॥18॥
ಅನಂತರ ರಾಜನಾದ ಯುಧಿಷ್ಠಿರನು ಆ ಎಲ್ಲರನ್ನೂ ಪ್ರತ್ಯೇಕವಾಗಿ ಹೆಸರು ಮತ್ತು ಗೋತ್ರಗಳನ್ನು ಹೇಳುವ ಮೂಲಕ ಪರಿಚಯಿಸಿದನು. ಧೃತರಾಷ್ಟ್ರನು ಆ ಎಲ್ಲರನ್ನೂ ಅಭಿನಂದಿಸಿದನು.
ಸ ತೈಃ ಪರಿವೃತೋ ಮೇನೇ ಹರ್ಷಬಾಷ್ಪಾವಿಲೇಕ್ಷಣಃ |
ರಾಜಾऽऽತ್ಮಾನಂ ಗೃಹಗತಂ ಪುರೇವ ಗಜಸಾಹ್ವಯೇ ॥19॥
ಆ ಎಲ್ಲ ಜನರಿಂದ ಸುತ್ತುವರಿಯಲ್ಪಟ್ಟ ರಾಜನು ಸಂತೋಷ ಹಾಗೂ ಕಣ್ಣೀರಿನಿಂದ ಕೂಡಿದ ಕಣ್ಣುಳ್ಳವನಾಗಿ, ತನ್ನನ್ನು ಹಸ್ತಿನಾಪುರದಲ್ಲಿ ಮನೆಯಲ್ಲಿ ಇರುವವನನ್ನಾಗಿ ಭಾವಿಸಿದನು.

ಅಭಿವಾದಿತೋ ವಧೂಭಿಶ್ಚ ಕೃಷ್ಣಾದ್ಯಾಭಿಃ ಸ ಪಾರ್ಥಿವಃ |
ಗಾಂಧಾರೀಸಹಿತೋ ಧೀಮಾನ್ ಕುಂತ್ಯಾ ಚ ಪ್ರತ್ಯನಂದತ ॥20॥
ದ್ರೌಪದಿಯೇ ಮೊದಲಾದ ಎಲ್ಲ ಸೊಸೆಯಂದಿರೂ ನಮಸ್ಕರಿಸಿದಾಗ ಧೀಮಂತನಾದ ಆ ರಾಜನು ಗಾಂಧಾರಿ ಮತ್ತು ಕುಂತಿಯರೊಂದಿಗೆ ಕೂಡಿಕೊಂಡು ಅವರೆಲ್ಲರನ್ನೂ ಅಭಿನಂದಿಸಿದನು.
ತತಸ್ತತ್ವಶ್ರಮಮಾಗಚ್ಛತ್ ಸಿದ್ಧಚಾರಣಸೇವಿತಮ್ |
ದಿದೃಕ್ಷುಭಿಃ ಸಮಾಕೀರ್ಣಂ ನಭಸ್ತಾರಾಗಣೈರಿವ ॥21॥
ಇಷ್ಟಾದ ನಂತರ ಅವರೆಲ್ಲರೂ ಸೇರಿಕೊಂಡು ಸಿದ್ಧ-ಚಾರಣರಿಂದ ಸೇವಿತವಾದ ಅಶ್ರಮವನ್ನು ನಕ್ಷತ್ರಸಮೂಹದಿಂದ ಕೂಡಿಕೊಂಡ ಆಕಾಶದಂತೆ ಧೃತರಾಷ್ಟ್ರನನ್ನು ನೋಡುವ ಬಯಕೆಯಿಂದ ಬಂದಿರುವ ಜನರಿಂದ ತುಂಬಿಕೊಂಡ ಆಶ್ರಮವನ್ನು ಪ್ರವೇಶಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಪಾಂಡವಧೃತರಾಷ್ಟ್ರದರ್ಶನಂ ನಾಮ ತ್ರಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ತ್ರಿಂಶೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂದನೆಯ ಅಧ್ಯಾಯ
ಸಂಜಯನು ಅಲ್ಲಿರುವ ತಾಪಸರಿಗೆ ಯುಧಿಷ್ಠಿರಾದಿಗಳನ್ನು
ಹಾಗೂ ದ್ರೌಪದಿಯೇ ಮೊದಲಾದ ಸ್ತ್ರೀಯರನ್ನು ಬೊಟ್ಟುಮಾಡಿ
ತೋರಿಸುತ್ತಾ ಪರಿಚಯಿಸುವುದು.
ವೈಶಂಪಾಯನಃ
ಸ ತೈಃ ಸಹ ನರವ್ಯಾಘ್ರೈರ್ಭ್ರಾತೃಭಿರ್ಭರತರ್ಷಭ |
ರಾಜಾ ರುಚಿರಪದ್ಮಾಕ್ಷೈರಾಸಾಂಚಕ್ರೇ ತದಾಶ್ರಮೇ ॥1॥
ತಾಪಸೈಶ್ಚ ಮಹಾಭಾಗೈರ್ನಾನಾದೇಶಸಮಾಗತೈಃ |
ದ್ರಷ್ಟುಂ ಕುರುಪತೇಃ ಪುತ್ರಾನ್ ಪಾಂಡವಾನ್ ಪೃಥುವಕ್ಷಸಃ ॥2॥
ವೈಶಂಪಾಯನ ಹೇ ಭರತರ್ಷಭನೇ, ಆ ಧೃತರಾಷ್ಟ್ರನು ತಾವರೆಯಂತೆ ಕಂಗೊಳಿಸುವ ಕಣ್ಣುಗಳುಳ್ಳ ಪುರುಷಶ್ರೇಷ್ಠರಾದ ಆ ಅಣ್ಣ-ತಮ್ಮಂದಿರೊಂದಿಗೆ ಹಾಗೂ ಕುರುರಾಜನ ಮಕ್ಕಳಾದ ಅಗಲವಾದ ಎದೆಯುಳ್ಳ ಪಾಂಡವರನ್ನು ನೋಡುವುದಕ್ಕಾಗಿ ನಾನಾ ದೇಶಗಳಿಂದ ಬಂದಿರುವ ಮಹಾತ್ಮರಾದ ತಾಪಸ ಜನರೊಂದಿಗೆ ಕೂಡಿಕೊಂಡು ಆ ಆಶ್ರಮದಲ್ಲಿ ಕುಳಿತುಕೊಂಡನು.
ತೇಽಬ್ರುವನ್ ಜ್ಞಾತುಮಿಚ್ಛಾಮಃ ಕತಮೋಽತ್ರ ಯುಧಿಷ್ಠಿರಃ |
ಭೀಮಾರ್ಜುನಯಮಾಶ್ಚೈವ ದ್ರೌಪದೀ ಸಾ ಯಶಸ್ವಿನೀ ॥3॥
ಅವರೆಲ್ಲರೂ ಈ ಇಷ್ಟುಮಂದಿಯಲ್ಲಿ ಯುಧಿಷ್ಠಿರನು ಯಾರು? ಭೀಮಾರ್ಜುನರು, ನಕುಲ-ಸಹದೇವರು ಯಾರು? ಯಶಸ್ವಿನಿಯಾದ ಆ ದ್ರೌಪದಿಯು ಯಾರು? ಇದೆಲ್ಲವನ್ನೂ ನಾವು ತಿಳಿಯಬಯಸುತ್ತೇವೆ ಎಂದರು.
ತಾನಾಚಖ್ಯೌ ತದಾ ಸೂತಸ್ತೇಷಾಂ ನಾಮ ಪ್ರಧಾನತಃ |
ಸಂಜಯೋ ದ್ರೌಪದೀಂ ಚೈವ ಸರ್ವಾಶ್ಚ ಭರತಸ್ತ್ರಿಯಃ ॥4॥
ಆಗ ಸೂತನಾದ ಸಂಜಯನು ಅವರೆಲ್ಲರ ಹೆಸರುಗಳನ್ನು ಹೇಳುತ್ತಾ, ಪ್ರಧಾನರಾದ ಎಲ್ಲರನ್ನೂ, ದ್ರೌಪದಿಯನ್ನೂ ಹಾಗೂ ಪಾಂಡವರ ಎಲ್ಲ ಪತ್ನಿಯರನ್ನೂ ಪರಿಚಯಿಸಿದನು.
ಸಂಜಯಃ
ಯ ಏಷ ಜಾಂಬೂನದಶುದ್ಧಗೌರ-
ತನುರ್ಮಹಾಸಿಂಹ ಇವ ಪ್ರವೃದ್ಧಃ |
ಪ್ರಚಂಡಘೋಣಃ ಪೃಥುದೀರ್ಘನೇತ್ರಃ
ತಾಮ್ರಾಯತಾಕ್ಷಃ ಕುರುರಾಜ ಏಷಃ ॥5॥
ಸಂಜಯ ಇವರೆಲ್ಲರ ಮಧ್ಯದಲ್ಲಿ ಚಿನ್ನದಂತೆ ಶುಭ್ರವಾದ ಬಣ್ಣವುಳ್ಳ ಶರೀರವಿರುವವನು, ದೊಡ್ಡ ಸಿಂಹದಂತೆ ಕಂಗೊಳಿಸುವವನು, ದೀರ್ಘವಾದ ನಾಸಿಕವುಳ್ಳವನು, ವಿಸ್ತಾರವಾದ ಹಾಗೂ ಅಗಲವಾದ ಕಣ್ಣುಗಳುಳ್ಳವನು ಹಾಗೂ ನಸುಗೆಂಪಿನ ಕಣ್ಣುಳ್ಳವನು ಯಾರೋ ಅವನೇ ಕುರುರಾಜನು.
ಅಯಂ ಬೃಹನ್ಮತ್ತಗಜೇಂದ್ರಗಾಮೀ
ವಿಶುದ್ಧಚಾಮೀಕರರಾಶಿಗೌರಃ |
ಪೀನಾಯತಾಂಸೋ ಗುರುದೀರ್ಘಬಾಹುಃ
ವೃಕೋದರಃ ಪಶ್ಯತ ಪಶ್ಯತೈನಮ್ ॥6॥
ಮದಭರಿತವಾದ ಶ್ರೇಷ್ಠ ಆನೆಯಂತೆ ನಡಿಗೆಯುಳ್ಳ, ಶುದ್ಧವಾದ ಚಿನ್ನದ ರಾಶಿಯಂತೆ ಕಂಗೊಳಿಸುವ, ದಷ್ಟಪುಷ್ಟವಾದ ಅಗಲವಾದ ಭುಜಗಳುಳ್ಳ, ಪರಿಪುಷ್ಟವಾದ ಉದ್ದನೆಯ ಕೈಗಳುಳ್ಳ ಇವನು ಭೀಮಸೇನನು. ಇವನನ್ನು ಮತ್ತೆ ಮತ್ತೆ ನೋಡಿರಿ.
ಯ ಏಷ ಪಾರ್ಶ್ವೇಽಸ್ಯ ಮಹಾಧನುಷ್ಮಾನ್
ಶ್ಯಾಮೋ ಯುವಾ ವಾರಣಯೂಥಪಾಭಃ |
ಸಿಂಹೋನ್ನತಾಂಸೋ ಗಜಖೇಲಗಾಮೀ

ಪದ್ಮಾಯತಾಕ್ಷೋಽರ್ಜುನ ಏಷ ವೀರಃ ॥7॥
ಈ ಭೀಮನ ಪಾರ್ಶ್ವದಲ್ಲಿರುವ, ದೊಡ್ಡದಾದ ಬಿಲ್ಲನ್ನು ಧರಿಸಿರುವ, ನಸುಗಪ್ಪು ಬಣ್ಣವುಳ್ಳ, ಆನೆಗಳ ಹಿಂಡಿನ ನಾಯಕನಂತೆ ಕಂಗೊಳಿಸುವ, ಯುವಕನಾದ, ಸಿಂಹದ ಹೆಗಲಿನಂತೆ ಎತ್ತರವಾದ ಹೆಗಲುಳ್ಳ, ಆನೆಯಂತೆ ವಿಲಾಸವಾದ ನಡಿಗೆಯುಳ್ಳ, ಪದ್ಮದ ಎಸಳಿನಂತೆ ಅಗಲವಾದ ಕಣ್ಣುಳ್ಳ ಇವನೇ ವೀರನಾದ ಅರ್ಜುನನು.
ಕುಂತೀಸಮೀಪೇ ಪುರುಷೋತ್ತಮೌ ತು
ಯಮಾವಿಮೌ ವಿಷ್ಣುಮಹೇಂದ್ರಕಲ್ಪೌ |
ಮನುಷ್ಯಲೋಕೇ ವಪುಷಾ ಸಮೋಽಸ್ತಿ
ಯಯೋರ್ನ ರೂಪೇ ನ ಬಲೇ ನ ಶೀಲೇ ॥8॥
ಕುಂತಿಯ ಸಮೀಪದಲ್ಲಿರುವ ವಿಷ್ಣು ಹಾಗೂ ಇಂದ್ರರಂತೆ ಶೋಭಿಸುವ ಪುರುಷೋತ್ತಮರಾದ, ಯಾವ ಇಬ್ಬರಿಗೆ ಮನುಷ್ಯಲೋಕದಲ್ಲಿ ಶರೀರದಿಂದಾಗಲಿ, ರೂಪ-ಬಲ-ಶೀಲದಿಂದಾಗಲಿ ಸಮಾನರಾದವರು ಇಲ್ಲವೋ ಅಂತಹ ಇವರು ಅವಳಿ ಮಕ್ಕಳಾದ ನಕುಲ-ಸಹದೇವರು.
ಇಯಂ ಪುನಃ ಪದ್ಮದಲಾಯತಾಕ್ಷೀ
ಮಧ್ಯಂ ವಯಃ ಕಿಂಚಿದಿವ ಸ್ಪೃಶಂತೀ |
ನೀಲೋತ್ಪಲಾಭಾ ಪುರದೇವತೇವ
ಕೃಷ್ಣಾ ಸ್ಥಿತಾ ಮೂರ್ತಿಮತೀವ ಲಕ್ಷ್ಮೀಃ ॥9॥
ಅನಂತರ ಇರುವ, ಕಮಲದ ಎಸಳಿನಂತೆ ಕಂಗಳುಳ್ಳ, ಮಧ್ಯ ವಯಸ್ಸನ್ನು ಸ್ವಲ್ಪ ಮಾತ್ರವೇ ಸ್ಪರ್ಶಿಸಿರುವ, ನೀಲಕಮಲದಂತೆ ಬಣ್ಣವುಳ್ಳ, ಪುರದೇವತೆಯಂತೆ ಮೂರ್ತಿಮತ್ತಾದ ಲಕ್ಷ್ಮೀದೇವಿಯಂತೆ ಇರುವ ಇವಳೇ ಕೃಷ್ಣೆ ಎಂಬ ದ್ರೌಪದಿಯು.
ಅಸ್ಯಾಸ್ತು ಪಾರ್ಶ್ವೇ ಕನಕೋಪಮತ್ವಗ್
ಏಷಾ ಸ್ಥಿತಾ ಮೂರ್ತಿಮತೀವ ಗೌರೀ |
ಸತ್ಯೇ ಸ್ಥಿತೈಷಾ ಭಗಿನೀ ದ್ವಿಜಾಗ್ರ್ಯಾಃ
ಚಕ್ರಾಯುಧಸ್ಯಾಪ್ರತಿಮಸ್ಯ ತಸ್ಯ ॥10॥
ಹೇ ದ್ವಿಜಶ್ರೇಷ್ಠರೇ, ಇವಳ ಸಮೀಪದಲ್ಲಿಯೇ ಬಂಗಾರದಂತಿರುವ ಚರ್ಮವುಳ್ಳ ಮೂರ್ತಿಮತ್ತಾದ ಗೌರಿಯಂತೆ ಕಂಗೊಳಿಸುವ, ಸತ್ಯಮಾರ್ಗದಲ್ಲಿಯೇ ಸದಾ ಇರುವ, ಈಕೆಯು ಅಪ್ರತಿಮನಾದ ಚಕ್ರಾಯುಧಧಾರಿಯಾದ ಆ ಕೃಷ್ಣನ ತಂಗಿಯಾದ ಸುಭದ್ರೆಯು.
ಇಯಂ ಚ ಜಾಂಬೂನದಶುದ್ಧಗೌರೀ
ಪಾರ್ಥಸ್ಯ ಭಾರ್ಯಾ ಭುಜಗೇಂದ್ರಕನ್ಯಾ |
ಚಿತ್ರಾಂಗದಾ ಚೈವ ನರೇಂದ್ರಕನ್ಯಾ
ಯೈಷಾ ಸವರ್ಣಾಽಽರ್ದ್ರಮಧೂಕಪುಷ್ಪೈಃ ॥11॥
ಇವಳಾದರೂ ಶುದ್ಧವಾದ ಚಿನ್ನದಂತೆ ಕಂಗೊಳಿಸುವ ಸರ್ಪರಾಜನ ಮಗಳಾದ, ಅರ್ಜುನನ ಹೆಂಡತಿಯಾದ ಉಲೂಪಿಯು. ಆನಂತರದವಳು ಹಸಿಯಾದ ಹಿಪ್ಪೆಯ ಪುಷ್ಪಗಳಿಗೆ ಸದೃಶವಾದ ಬಣ್ಣವುಳ್ಳ ಮಣಲೂರ ರಾಜನ ಮಗನಾದ ಚಿತ್ರಾಂಗದೆಯು.
ಇಯಂ ಸ್ವಸಾ ರಾಜಚಮೂಪತೇಸ್ತು
ಪ್ರಬುದ್ಧನೀಲೋತ್ಪಲದಾಮವರ್ಣಾ |
ಪಸ್ಪರ್ಧ ಕೃಷ್ಣೇನ ನೃಪಃ ಸದಾ ಯೋ
ವೃಕೋದರಸ್ಯೈಷ ಪರಿಗ್ರಹೋಽಗ್ರ್ಯಃ ॥12॥
ಯಾವ ರಾಜನು ಕೃಷ್ಣನೆಂಬ ಹೆಸರುಳ್ಳ ಅರ್ಜುನನೊಂದಿಗೆ ಸದಾ ಸ್ಪರ್ಧೆಯಲ್ಲಿದ್ದನೋ ಅಂತಹ, ಯುಧಿಷ್ಠಿರನ ಸೇನಾಧಿಪತಿಯಾದ, ಧೃಷ್ಟದ್ಯುಮ್ನನ ಸಹೋದರಿಯಾದ ಈಕೆಯು ಭೀಮಸೇನನ ಪತ್ನಿಯರಲ್ಲಿ ಶ್ರೇಷ್ಠಳಾದ ದ್ರೌಪದಿಯು.
ಇಯಂ ಚ ರಾಜ್ಞೋ ಮಗಧಾಧಿಪಸ್ಯ
ಸುತಾ ಜರಾಸಂಧ ಇತಿ ಶ್ರುತಸ್ಯ |
ಯವೀಯಸೋ ಮಾದ್ರವತೀಸುತಸ್ಯ
ಭಾರ್ಯಾ ಮತಾ ಚಂಪಕದಾಮಗೌರೀ ॥13॥
ಮಗಧಾದಿಪತಿಯಾದ, ಜರಾಸಂಧನೆಂಬ ಹೆಸರುಳ್ಳ ರಾಜನ ಮಗಳಾದ, ಸಂಪಿಗೆಯ ಮಾಲೆಯಂತೆ ಗೌರವರ್ಣವುಳ್ಳ ಇವಳಾದರೂ ಮಾದ್ರಿಯ ಮಕ್ಕಳಲ್ಲಿ ಚಿಕ್ಕವನಾದ ಸಹದೇವನ ಪತ್ನಿಯಾಗಿದ್ದಾಳೆ.
ಇಂದೀವರಶ್ಯಾಮತನುಃ ಸ್ಥಿತಾ ತು
ಯೈಷಾ ಪರಾಽಽಸನ್ನತರೋರ್ಲತೇವ |
ಭಾರ್ಯಾ ಮತಾ ಮಾದ್ರವತೀಸುತಸ್ಯ
ಯಾಽಸೌ ವಿಶುದ್ಧಾಂಬುಜಪತ್ರನೇತ್ರಾ ॥14॥
ನೈದಿಲೆಯಂತೆ ಶ್ಯಾಮಲವರ್ಣದ ಶರೀರವುಳ್ಳ, ಸಮೀಪದಲ್ಲಿರುವ ಮರಕ್ಕೆ ಬಳ್ಳಿಯಂತೆ ನಿಂತಿರುವ, ಸಹದೇವನ ಪತ್ನಿಯ ನಂತರವಿರುವ, ಶುದ್ಧವಾದ ಕಮಲದ ಪತ್ರದಂತೆ ಕಣ್ಣುಗಳುಳ್ಳ ಈಕೆಯು ಮಾದ್ರೀಸುತನಾದ ನಕುಲನ ಪತ್ನಿಯಾಗಿದ್ದಾಳೆ.
ಇಯಂ ತು ನಿಷ್ಟಪ್ತಸುವರ್ಣಗೌರೀ
ರಾಜ್ಞೋ ವಿರಾಟಸ್ಯ ಸುತಾ ಸಪುತ್ರಾ |
ಭಾರ್ಯಾಽಭಿಮನ್ಯೋರ್ನಿಹತೋ ರಣೇ ಯೋ

ದ್ರೋಣಾದಿಭಿಸ್ತೈರ್ವಿರಥೋ ರಥಸ್ಥೈಃ ॥15॥
ಚೆನ್ನಾಗಿ ಕಾಯಿಸಿದ ಚಿನ್ನದಂತೆ ಗೌರವರ್ಣವುಳ್ಳ, ವಿರಾಟರಾಜನ ಮಗಳಾದ, ಮಗುವಿನೊಂದಿಗೆ ನಿಂತಿರುವ ಈಕೆಯಾದರೂ ರಥದಲ್ಲಿರುವ ದ್ರೋಣಾದಿಗಳಿಂದ ವಿರಥನಾಗಿ ಯುದ್ಧದಲ್ಲಿ ಯಾರು ಮಡಿದನೋ ಅಂತಹ ಅಭಿಮನ್ಯುವಿನ ಪತ್ನಿಯಾದ ಉತ್ತರೆಯು.
ಏತಾಸ್ತು ಸೀಮಂತಶಿರೋರುಹಾ ಯಾಃ
ಶುಕ್ಲೋತ್ತರೀಯಾ ನರರಾಜಕನ್ಯಾಃ ।
ರಾಜ್ಞೋಽಸ್ಯ ವೃದ್ಧಸ್ಯ ಪರಂ ಶತಾಖ್ಯಾಃ
ಸ್ನುಷಾ ನೃವೀರಾಹತಪುತ್ರನಾಥಾಃ ॥16॥
ಅನಂತರ ನಿಂತಿರುವ, ತಲೆಯಲ್ಲಿ ಕೇವಲ ಬೈತಲೆಗಳನ್ನು ಮಾತ್ರ ಧರಿಸಿರುವ, ಬಿಳಿಯಾದ ಬಟ್ಟೆಯನ್ನು ಧರಿಸಿರುವ, ರಾಜಶ್ರೇಷ್ಠರ ಕನ್ಯೆಯರಾದ ಇವರು ವೃದ್ಧನಾದ ಈ ಧೃತರಾಷ್ಟ್ರ ರಾಜನ ಸೊಸೆಯಂದಿರಾಗಿದ್ದು, ವೀರಭಟರಿಂದ ತಮ್ಮ ಮಕ್ಕಳನ್ನೂ, ಗಂಡಂದಿರನ್ನೂ ಕಳೆದುಕೊಂಡ ನೂರಕ್ಕೂ ಹೆಚ್ಚು ಮಂದಿ ಇರುವರು.
ಏತಾ ಯಥಾಮುಖ್ಯಮುದಾಹೃತಾ ವೋ
ಬ್ರಹ್ಮಣ್ಯಭಾವಾದ್ ಋಜುಬುದ್ಧಿಸತ್ವಾತ್ ।
ಸರ್ವೇ ಭವಂತೋಽಪಿ ತಪೋಬಲಾಗ್ರ್ಯಾಃ
ಕ್ಷಾಂತಾಶ್ಚ ದಾಂತಾಶ್ಚ ಕುಲೋದ್ಗತಾಶ್ಚ ॥17॥
ಹೇ ಬ್ರಾಹ್ಮಣಶ್ರೇಷ್ಠರೇ, ತಾವೆಲ್ಲರೂ ಭಗವಂತನಲ್ಲಿ ಮನಸ್ಸನ್ನು ನೆಟ್ಟು ನೇರವಾದ ಬುದ್ಧಿ ಮತ್ತು ನಡತೆಯುಳ್ಳವರಾದುದರಿಂದ ತಪಸ್ಸು ಮತ್ತು ಬಲಗಳಿಂದ ಶ್ರೇಷ್ಠರಾಗಿರುವಿರಿ. ಅಲ್ಲದೇ ಸಹನಶೀಲರಾಗಿದ್ದು, ಇಂದ್ರಿಯನಿಗ್ರಹವುಳ್ಳವರಾಗಿದ್ದು ಉತ್ತಮವಾದ ಕುಲದಲ್ಲಿ ಬಂದಿರುವಿರಿ. ಅಂತಹ ತಮಗೆ ಇಲ್ಲಿರುವ ಸ್ತ್ರೀಯರನ್ನು ಮುಖ್ಯತೆಗೆ ಅನುಸಾರವಾಗಿ ಪರಿಚಯಿಸಿದ್ದೇನೆ.
ವೈಶಂಪಾಯನಃ
ಏವಂ ಸ ರಾಜಾ ಕುರುವೃದ್ಧವರ್ಯಃ
ಸಮಾಗತಸ್ತೈರ್ನರದೇವಪುತ್ರೈಃ ।
ಪಪ್ರಚ್ಛ ಚೈನಾನ್ ಕುಶಲಂ ತದಾನೀಂ
ಗತೇಷು ಸರ್ವೇಷ್ವಥ ತಾಪಸೇಷು ॥18॥
ವೈಶಂಪಾಯನ ಅನಂತರ ಎಲ್ಲ ತಾಪಸರೂ ತಮ್ಮ ತಮ್ಮ ಆಶ್ರಮಕ್ಕೆ ತೆರಳಿದೊಡನೆ ಕುರುಗಳಲ್ಲಿ ಶ್ರೇಷ್ಠನಾದ ಆ ಧೃತರಾಷ್ಟ್ರನು ಬಂದು ಸೇರಿರುವ ಎಲ್ಲ ನರದೇವಪುತ್ರರಲ್ಲಿ ಕುಶಲವನ್ನು ಪ್ರಶ್ನಿಸಿದನು.
ಯೋಧೇಷು ಚಾಪ್ಯಾಶ್ರಮಮಂಡಲಂ ತ-
ನ್ಮತ್ವಾ ನಿವಿಷ್ಟೇಷು ವಿಮುಚ್ಯ ಪಾರ್ಥಾನ್ ।
ಸ್ತ್ರೀಬಾಲವೃದ್ಧಾಂಶ್ಚ ಸುಸನ್ನಿವಿಷ್ಟಾನ್
ಯಥಾರ್ಹತಸ್ತಾನ್ ಕುಶಲಂ ಹ್ಯಪೃಚ್ಛತ್ ॥19॥
ಯೋಧರೆಲ್ಲರೂ ಆ ಸ್ಥಳವು ಆಶ್ರಮಗಳ ಮಂಡಲವೆಂದು ತಿಳಿದು ಪಾಂಡವರನ್ನು ಬಿಟ್ಟು ದೂರದಲ್ಲಿ ಕುಳಿತರು. ಬಂದಿರುವ ಸ್ತ್ರೀ-ಬಾಲ-ವೃದ್ಧರೂ ಕೂಡ ಯಥಾ ಯೋಗ್ಯವಾಗಿ ಸರಿಯಾದ ಸ್ಥಳದಲ್ಲಿ ಕುಳಿತರು. ಅನಂತರ ಧೃತರಾಷ್ಟ್ರರಾಜನು ಯೋಗ್ಯತಾನುಸಾರವಾಗಿ ಅವರೆಲ್ಲರನ್ನೂ ಕುಶಲಪ್ರಶ್ನೆ ಮಾಡಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಸಂಜಯವಚನಂ ನಾಮ ಏಕತ್ರಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ಏಕತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದಆಶ್ರಮವಾಸಿಕಪರ್ವದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆರಡನೆಯ ಅಧ್ಯಾಯ
ಧೃತರಾಷ್ಟ್ರ ಮತ್ತು ಯುಧಿಷ್ಠಿರನ ಉಭಯ ಕುಶಲೋಪರಿ ಮಾತುಕತೆ.
ಯುಧಿಷ್ಠಿರನು ಧೃತರಾಷ್ಟ್ರನನ್ನು ವಿದುರನೆಲ್ಲೆಂದು ಪ್ರಶ್ನಿಸಿದಾಗ ಅಲ್ಲಿರುವ ವ್ಯಕ್ತಿಯೊಬ್ಬ ಆಕಸ್ಮಿಕವಾಗಿ ಧೃತರಾಷ್ಟ್ರನ ಸಮೀಪಕ್ಕೆ ಬರುತ್ತಿರುವ ಜನಸಂಪರ್ಕವನ್ನು ನೋಡಿ ಹಿಂದಿರುಗಲು ಬಯಸಿದ ವಿದುರನನ್ನು ತೋರಿಸುವುದು. ನಂತರ ಯುಧಿಷ್ಠಿರನು ಅವನನ್ನು ಹಿಂಬಾಲಿಸುವುದು. ವಿದುರನು ಯೋಗಬಲದಿಂದ ತನ್ನ ಶರೀರವನ್ನು ಬಿಟ್ಟು ಯುಧಿಷ್ಠಿರನ ಶರೀರದಲ್ಲಿ ಪ್ರವೇಶಿಸುವುದು. ಯುಧಿಷ್ಠಿರನು ಧೃತರಾಷ್ಟ್ರಾದಿಗಳಲ್ಲಿ
ಆ ಅದ್ಭುತ ಪ್ರಸಂಗವನ್ನು ವಿವರಿಸುವುದು.
ಧೃತರಾಷ್ಟ್ರಃ
ಯುಧಿಷ್ಠಿರ ಮಹಾಬಾಹೋ ಕಚ್ಚಿತ್ ತಾತ ಕುಶಲ್ಯಸಿ ।
ಸಹಿತೋ ಭ್ರಾತೃಭಿಃ ಸರ್ವೈಃ ಪೌರಜಾನಪದೈಸ್ತಥಾ ॥1॥
ಧೃತರಾಷ್ಟ್ರ ಮಗು ಮಹಾಬಾಹುವಾದ ಯುಧಿಷ್ಠಿರನೇ, ಸಹೋದರರರೊಂದಿಗೆ ಹಾಗೂ ಎಲ್ಲ ಪಟ್ಟಣ, ಗ್ರಾಮೀಣ ಜನರೊಂದಿಗೆ ಕೂಡಿರುವ ನೀನು ಕುಶಲಿಯಾಗಿರುವೆ ತಾನೇ?
ಯೇ ಚ ತ್ವಾಮನುಜೀವಂತಿ ಕಚ್ಚಿತ್ ತೇಽಪಿ ನಿರಾಮಯಾಃ ।

ಸಚಿವಾ ಭೃತ್ಯವರ್ಗಾಶ್ಚ ಗುರವಶ್ಚೈವ ತೇ ವಿಭೋ ॥2॥
ಹೇ ವಿಭುವೇ, ಯಾರೆಲ್ಲ ನಿನ್ನನ್ನು ಆಶ್ರಯಿಸಿ ಜೀವಿಸುವರೋ ಮಂತ್ರಿಗಳು, ಸೇವಕ ವರ್ಗದವರು ಮತ್ತು ಗುರುಗಳು ಅವರೆಲ್ಲರೂ ಆರೋಗ್ಯದಿಂದ ಇರುವರು ತಾನೇ?
ಕಚ್ಚಿದ್ವರ್ತಸಿ ಪೌರಾಣೀಂ ವೃತ್ತಿಂ ರಾಜರ್ಷಿಸೇವಿತಾಮ್ ।
ಕಚ್ಚಿದಾಯಾನನುಚ್ಛಿದ್ಯ ಕೋಶಸ್ತೇಽಭಿಪ್ರಪೂರ್ಯತೇ ॥3॥
ಹಿಂದಿನ ರಾಜರ್ಷಿಗಳು ನಡೆದು ತೋರುವ ನಡತೆಯಲ್ಲಿಯೇ ಇರುವೆ ತಾನೆ? ನಿನ್ನ ಕೋಶವು ನ್ಯಾಯಮಾರ್ಗವನ್ನು ಬಿಡದೆ ತುಂಬುತ್ತಿದೆ ತಾನೆ?
ಅರಿಮಧ್ಯಸ್ಥಮಿತ್ರೇಷು ವರ್ತಸೇ ಚಾನುರೂಪತಃ ।
ಬ್ರಹ್ಮಣಾನಗ್ರಹಾರೈರ್ವಾ ಯಥಾವದನುಪಶ್ಯಸಿ ॥4॥
ಶತ್ರುಗಳು, ಉದಾಸೀನರು ಮತ್ತು ಮಿತ್ರರಲ್ಲಿ ಅವರವರಿಗೆ ಯೋಗ್ಯವಾದ ಕ್ರಮದಲ್ಲೇ ವರ್ತಿಸುವಿ ತಾನೆ? ಹಾಗೂ ಯಥಾವತ್ತಾಗಿ ಬ್ರಾಹ್ಮಣರನ್ನು, ಅಗ್ರಹಾರಾದಿಗಳನ್ನು ನೀಡುವ ಮೂಲಕ ನೋಡಿಕೊಳ್ಳುತ್ತಿರುವೆ ತಾನೆ?
ಕಚ್ಚಿತ್ ತೇ ಪರಿತುಷ್ಯಂತಿ ಶೀಲೇನ ಭರತರ್ಷಭ ।
ಶತ್ರವೋಽಪಿ ಕುತಃ ಪೌರಾ ಭೃತ್ಯಾ ವಾ ಸ್ವಜನೋಽಪಿ ವಾ ॥5॥
ಹೇ ಭರತರ್ಷಭನೇ! ನಿನ್ನ ನಡವಳಿಕೆಯಿಂದ ಪಟ್ಟಣಿಗರು, ಸೇವಕಜನರು ಹಾಗೂ ಆತ್ಮೀಯ ಜನರು ಅಷ್ಟೇ ಏಕೆ, ಶತ್ರುಗಳೂ ಸಂತೋಷಗೊಳ್ಳುತ್ತಿದ್ದಾರೆ ತಾನೆ?
ಕಚ್ಚಿದರ್ಚಸಿ ರಾಜೇಂದ್ರ ಶ್ರದ್ಧಾವಾನ್ ಪಿತೃದೇವತಾಃ ।
ಅತಿಥೀಂಶ್ಚಾನ್ನಪಾನೇನ ಕಚ್ಚಿದರ್ಹಸಿ ಭಾರತ ॥6॥
ಹೇ ರಾಜೇಂದ್ರನೇ, ಶ್ರದ್ಧೆಯುಳ್ಳವನಾಗಿ ಪಿತೃದೇವತೆಗಳನ್ನು ಅರ್ಚಿಸುತ್ತಿರುವೆ ತಾನೆ? ಹೇ ಭಾರತನೇ, ಅನ್ನ-ಪಾನಾದಿಗಳಿಂದ ಅತಿಥಿಗಳನ್ನು ಪೂಜಿಸುತ್ತಿರುವೆ ತಾನೆ?
ಕಚ್ಚಿಚ್ಚ ವಿಷಯೇ ವಿಪ್ರಾಃ ಸ್ವಕರ್ಮನಿರತಾಸ್ತವ ।
ಕ್ಷತ್ರಿಯಾ ವೈಶ್ಯವರ್ಣಾ ವಾ ಶೂದ್ರಾ ವಾಽಪಿ ಕುಟುಂಬಿನಃ ॥7॥
ನಿನ್ನ ರಾಜ್ಯದಲ್ಲಿ ಸಂಸಾರವಂದಿಗಳಾದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯವರ್ಣದವರು ಅಥವಾ ಶೂದ್ರರೂ ಕೂಡ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾಗಿರುವರು ತಾನೆ?
ಕಚ್ಚಿತ್ ಸ್ತ್ರೀಬಾಲವೃದ್ಧಂ ತೇ ನ ಶೋಚತಿ ನ ಯಾಚತಿ ।
ಜಾಮಯಃ ಪೂಜಿತಾಃ ಕಚ್ಚಿತ್ ತವ ಗೇಹೇ ಚ ಪಾರ್ಥಿವ ॥8॥
ಹೇ ಪಾರ್ಥಿವನೇ, ನಿನ್ನ ರಾಜ್ಯದಲ್ಲಿ ಸ್ತ್ರೀಯರು, ಬಾಲರು, ವೃದ್ಧರು ದುಃಖಪಡದೆ, ಪರರನ್ನು ಯಾಚಿಸದೆ ಬದುಕುತ್ತಿದ್ದಾರೆ ತಾನೆ? ಅಲ್ಲದೇ ನಿನ್ನ ಅರಮನೆಯಲ್ಲಿ ನಿನ್ನ ಸಮೀಪದ ಬಂಧುಗಳು ಗೌರವದಿಂದ ಬದುಕುತ್ತಿದ್ದಾರೆ ತಾನೆ?
ಕಚ್ಚಿದ್ ರಾಜರ್ಷಿವಂಶೋಽಯಂ ತ್ವಾಮಾಸಾದ್ಯ ನರಾಧಿಪ ।
ಯಥೋಚಿತಂ ಮಹಾರಾಜ ಯಶಸೋ ನಾವಸೀದತಿ ॥9॥
ಹೇ ನರಾಧಿಪನೇ, ಮಹಾರಾಜನೇ, ಈ ನಮ್ಮ ರಾಜಶ್ರೇಷ್ಠರ ವಂಶವು ನಿನ್ನ ಆಳ್ವಿಕೆಯನ್ನು ಪಡೆದು ಕೀರ್ತಿಯನ್ನು ಕಳೆದುಕೊಳ್ಳುತ್ತಿಲ್ಲ ತಾನೆ?
ವೈಶಂಪಾಯನಃ
ಇತ್ಯೇವಂವಾದಿನಂ ಸಂತಂ ನ್ಯಾಯವತ್ ಪ್ರತ್ಯಭಾಷತ ।
ಕುಶಲಪ್ರಶ್ನಸಂಯುಕ್ತಂ ಕುಶಲೋ ವಾಕ್ಯಮಬ್ರವೀತ್ ॥10॥
ವೈಶಂಪಾಯನ ಹೀಗೆ ನ್ಯಾಯಯುತವಾಗಿ ಪ್ರಶ್ನೆಗಳನ್ನು ಕೇಳುತ್ತಿರುವ ಧೃತರಾಷ್ಟ್ರನನ್ನು ಕುರಿತು ಕುಶಲನಾದ ಯುಧಿಷ್ಠಿರನು ಕುಶಲಪ್ರಶ್ನೆಯೊಂದಿಗೆ ಮುಂದೆ ಹೇಳುವಂತೆ ಮಾತನಾಡಿದನು.
ಯುಧಿಷ್ಠಿರಃ
ಅಪಿ ತೇ ವರ್ಧತೇ ರಾಜನ್ ತಪೋ ಮಂದ್ರಃ ಶಮಶ್ಚ ತೇ ॥11॥
ಯುಧಿಷ್ಠಿರ ಹೇ ರಾಜನೇ, ನಿನ್ನ ತಪಸ್ಸು, ತಪಸ್ಸಿನಿಂದಾದ ಸಂತೋಷವು ಮತ್ತು ಭಗವನ್ನಿಷ್ಠೆಯು ಬೆಳೆಯುತ್ತಿದೆ ತಾನೆ?
ಅಪಿ ಮಜ್ಜನನೀ ಚೇಯಂ ಶುಶ್ರೂಷುರ್ವಿಗತಕ್ಲಮಾ ।
ಅಪ್ಯಸ್ಯಾಃ ಸಫಲೋ ರಾಜನ್ ವನವಾಸೋ ಭವಿಷ್ಯತಿ ॥12॥
ಈ ನನ್ನ ತಾಯಿಯಾದ ಕುಂತೀದೇವಿಯು ಯಾವುದೇ ರೀತಿಯ ಸಂಕಟವಿಲ್ಲದೆ ನಿಮ್ಮ ಸೇವೆಯನ್ನು ನಡೆಸುವಳು ತಾನೆ? ಹೇ ರಾಜನೇ, ಇವಳ ವನವಾಸವು ಸಫಲವಾಗುವುದಲ್ಲವೆ?
ಇಯಂ ಚ ಮಾತಾ ಜ್ಯೇಷ್ಠಾ ಮೇ ಶೀತವಾತಾಧ್ವಕರ್ಶಿತಾ ।
ಘೋರೇಣ ತಪಸಾ ಯುಕ್ತಾ ದೇವೀ ಕಚ್ಚಿನ್ನ ಶೋಚತಿ ॥13॥
ಈ ನನ್ನ ಹಿರಿ ತಾಯಿಯು ಚಳಿ, ಗಾಳಿ ಹಾಗೂ ನಡಿಗೆಗಳಿಂದ ಕೃಶಳಾಗಿ ಘೋರವಾದ ತಪಸ್ಸಿನಿಂದ ಕೂಡಿಕೊಂಡು ದುಃಖಪಡುತ್ತಿಲ್ಲ ತಾನೆ?
ಗತಾನ್ ಪುತ್ರಾನ್ ಮಹಾವೀರ್ಯಾನ್ ಕ್ಷತ್ರಧರ್ಮಪರಾಯಣಾನ್ ॥
ನಾಧ್ಯಾಪಯತಿ ವಾ ಕಚ್ಚಿದ್ ಅಸ್ಮಾನ್ ಪಾಪಕೃತಃ ಸದಾ ॥15॥
ಮಹಾಬಲಿಷ್ಠರಾದ, ಕ್ಷತ್ರಧರ್ಮದಲ್ಲಿ ನಿಯತರಾದ, ಮರಣ ಹೊಂದಿದ ತನ್ನ ಮಕ್ಕಳನ್ನು ಚಿಂತಿಸುತ್ತಾ ನಮ್ಮನ್ನು ಪಾಪಿಗಳನ್ನಾಗಿ

ಯಾವಾಗಲೂ ಚಿಂತಿಸುತ್ತಿಲ್ಲ ತಾನೆ?
ಕ್ವ ಚಾಸೌ ವಿದುರೋ ರಾಜನ್ ನೈನಂ ಪಶ್ಯಾಮಹೇ ವಯಮ್ |
ಸಂಜಯಃ ಕುಶಲೀ ಚಾಪಿ ಕಚ್ಚಿತ್ ತಪಸಿ ಚ ಸ್ಥಿರಃ ||16||
ಹೇ ರಾಜನೇ, ಈ ವಿದುರನು ಎಲ್ಲಿರುವನು? ನಾವು ಅವನನ್ನು ಕಾಣುತ್ತಿಲ್ಲವಷ್ಟೇ! ಅಲ್ಲದೆ ಸಂಜಯನು ತಪಸ್ಸಿನಲ್ಲಿ ಸ್ಥಿರನಾಗಿ ಕುಶಲಿಯಾಗಿರುವನು ತಾನೆ?
ವೈಶಂಪಾಯನಃ
ಇತ್ಯುಕ್ತಃ ಪ್ರತ್ಯುವಾಚೈನಂ ಧೃತರಾಷ್ಟ್ರೋ ಜನಾಧಿಪಃ ||17||
ವೈಶಂಪಾಯನ ಹೀಗೆ ಯುಧಿಷ್ಠಿರನು ಹೇಳಿದಾಗ ಜನಾಧಿಪತಿಯಾದ ಧೃತರಾಷ್ಟ್ರನು ಅವನಿಗೆ ಉತ್ತರ ನೀಡಿದನು.
ಧೃತರಾಷ್ಟ್ರಃ
ಕುಶಲೀ ವಿದುರಃ ಪುತ್ರ ತಪೋ ಘೋರಂ ಸಮಾಸ್ಥಿತಃ ||18||
ವಾಯುಭಕ್ಷೋ ನಿರಾಹಾರಃ ಕೃಶೋ ಧಮನಿಸಂತತಃ ||19||
ಕದಾಚಿದ್ ದೃಶ್ಯತೇ ವಿಪ್ರೈಃ ಶೂನ್ಯೇಽಸ್ಮಿನ್ ಕಾನನೇ ಕ್ವಚಿತ್ ||20||
ಧೃತರಾಷ್ಟ್ರ ಮಗನೇ, ವಿದುರನು ಘೋರವಾದ ತಪಸ್ಸನ್ನು ನಡೆಸುತ್ತಾ ಕುಶಲಿಯಾಗಿರುವನು. ಅವನು ಕೇವಲ ವಾಯುವನ್ನು ಸೇವಿಸುವವನಾಗಿ ಬೇರೆ ಯಾವುದೇ ಆಹಾರವಿಲ್ಲದೆ ಅತ್ಯಂತ ಕೃಶನಾಗಿ, ದೇಹದ ನರನಾಡಿಗಳೆಲ್ಲ ಹೊರಗೆ ಕಾಣುವಂತೆ ಇರುವನು. ಅವನು ಈ ನಿರ್ಜನವಾದ ಕಾಡಿನಲ್ಲಿ ಕೆಲವು ಕಡೆ ಕೆಲವೊಮ್ಮೆ ಬ್ರಾಹ್ಮಣರ ಕಣ್ಣಿಗೆ ಬೀಳುವನು.
ವೈಶಂಪಾಯನಃ
ಇತ್ಯೇವಂ ವದತಸ್ತಸ್ಯ ಜಟೀದಿಗ್ಧಮುಖಃ ಕೃಶಃ |
ದಿಗ್ವಾಸಾ ಮಲದಿಗ್ಧಾಂಗೋ ವನರೇಣುಸಮುಕ್ಷಿತಃ ||21||
ದೂರಾದಾಲಕ್ಷಿತಃ ಕ್ಷತ್ತಾ ತತ್ರಾಖ್ಯಾತೋ ಮಹೀಪತೇ |
ವಿದುರಸ್ತ್ವೇಷ ಧರ್ಮಾತ್ಮಾ ಜನಂ ದೃಷ್ಟ್ವಾ ನಿವರ್ತತೇ ||22||
ವೈಶಂಪಾಯನ ಹೀಗೆ ಅವನು ಹೇಳುತ್ತಿರುವಾಗಲೇ ಜಡೆಯಿಂದ ಮುಚ್ಚಿದ ಮುಖವುಳ್ಳ, ಕೃಶವಾದ ಶರೀರವುಳ್ಳ, ದಿಗಂಬರನಾದ, ಕೊಳಕು ಮೆತ್ತಿಕೊಂಡ ಅಂಗಗಳುಳ್ಳ, ಕಾಡಿನ ಧೂಳಿನಿಂದ ಮುಚ್ಚಿಹೋದ ವಿದುರನು ದೂರದಲ್ಲಿ ಕಾಣಿಸಿದನು. ಹೇ ರಾಜನೇ, ಆಗ ಅಲ್ಲಿರುವ ವ್ಯಕ್ತಿಗಳು `ಇವನು ಧರ್ಮಾತ್ಮನಾದ ವಿದುರನು, ಜನರನ್ನು ನೋಡಿ ಎದುರು ಬಾರದೆ ಹಿಂದಿರುಗುವನು' ಎಂದರು.
ನಿವರ್ತಮಾನಂ ಸಹಸಾ ಜನಂ ದೃಷ್ಟ್ವಾಽಽಶ್ರಮಂ ಪ್ರತಿ |
ತಮನ್ವಧಾವನ್ನೃಪತಿರೇಕ ಏವ ಯುಧಿಷ್ಠಿರಃ ||23||
ಆಶ್ರಮದ ಸಮೀಪದಲ್ಲಿ ಜನರನ್ನು ನೋಡಿ ಕೂಡಲೇ ಹಿಂದಿರುಗತೊಡಗಿದ ಆ ವಿದುರನನ್ನು ಯುಧಿಷ್ಠಿರನೊಬ್ಬನೇ ಹಿಂಬಾಲಿಸಿದನು.
ಪ್ರವಿಶಂತಂ ವನಂ ಘೋರಂ ಲಕ್ಷ್ಯಾಲಕ್ಷ್ಯಂ ಕ್ವಚಿತ್ ಕ್ವಚಿತ್ ||24||
ಭೋ ಭೋ ವಿದುರ ರಾಜಾಽಹಂ ದಯಿತಸ್ತೇ ಯುಧಿಷ್ಠಿರಃ |
ಇತಿ ಬ್ರುವನ್ ನರಪತಿರ್ಯತ್ನಾತ್ ತಮನುಜಗ್ಮಿವಾನ್ ||25||
ಘೋರವಾದ ಕಾಡಿನೊಳಗೆ ಪ್ರವೇಶಿಸುತ್ತಿರುವ ಒಮ್ಮೆ ಕಂಡು, ಇನ್ನೊಮ್ಮೆ ಕಾಣದಿರುವ ಆ ವಿದುರನನ್ನು `ಹೇ ವಿದುರನೇ, ನಾನು ನಿನಗೆ ಪ್ರೀತಿಪಾತ್ರನಾದ ರಾಜನಾದ ಯುಧಿಷ್ಠಿರನಾಗಿದ್ದೇನೆ' ಹೀಗೆ ಹೇಳುತ್ತಾ ರಾಜನು ಪ್ರಯತ್ನ ಪೂರ್ವಕವಾಗಿ ಅವನನ್ನು ಹಿಂಬಾಲಿಸಿದನು.
ತತೋ ವಿವಿಕ್ತ ಏಕಾಂತೇ ತಸ್ಥೌ ಬುದ್ಧಿಮತಾಂ ವರಃ |
ವಿದುರೋ ವೃಕ್ಷಮಾಶ್ರಿತ್ಯ ಕಂಚಿತ್ ತಸ್ಮಿನ್ ವನಾಂತರೇ ||26||
ಅನಂತರ ಬುದ್ಧಿವಂತರಲ್ಲಿ ಶ್ರೇಷ್ಠನಾದ ವಿದುರನು ಅದೇ ಕಾಡಿನೊಳಗೆ ಯಾವುದೋ ಒಂದು ಮರದ ಬುಡದಲ್ಲಿ ಏಕಾಂತದಲ್ಲಿ ಬೇರೆ ಯಾರಿಗೂ ಕಾಣದಂತೆ ನಿಂತನು.
ತಂ ರಾಜಾ ಕ್ಷೀಣಭೂಯಿಷ್ಠಮಾಕೃತೀಮಾತ್ರಸೂಚಿತಮ್ |
ಅಭಿಜಜ್ಞೇ ಮಹಾಬುದ್ಧಿಂ ಮಹಾಬುದ್ಧಿರ್ಯುಧಿಷ್ಠಿರಃ ||27||
ಮಹಾಬುದ್ಧಿಯುಳ್ಳ ಯುಧಿಷ್ಠಿರರಾಜನು ತುಂಬಾ ಕ್ಷೀಣನಾದ, ಮನುಷ್ಯಾಕೃತಿಯಂತೆ ಮಾತ್ರ ಕಾಣುವ ಆ ವ್ಯಕ್ತಿಯನ್ನು ಮಹಾಬುದ್ಧಿಯಾದ ವಿದುರನೆಂಬುದಾಗಿ ತಿಳಿದನು.
ಯುಧಿಷ್ಠಿರೋಽಹಮಸ್ಮೀತಿ ವಾಕ್ಯಮುಕ್ತ್ವಾಽಗ್ರತಃ ಸ್ಥಿತಃ |
ವಿದುರಸ್ಯಾಶ್ರಮೇ ರಾಜಾ ಸ ಚ ಪ್ರತ್ಯಾಹ ಸಂಜ್ಞಯಾ ||28||
ರಾಜನು `ನಾನು ಯುಧಿಷ್ಠಿರನು' ಎಂಬುದಾಗಿ ಒಂದು ವಾಕ್ಯವನ್ನು ಮಾತ್ರ ಹೇಳಿ ವಿದುರಾಶ್ರಮದಲ್ಲಿ ಅವನ ಮುಂಭಾಗದಲ್ಲಿ ನಿಂತನು. ಆ ವಿದುರನು ಸಂಜ್ಞೆಯಿಂದಲೇ ಉತ್ತರಿಸಿದನು.
ತತಃ ಸೋಽನಿಮಿಷೋ ಭೂತ್ವಾ ರಾಜಾನಂ ಸಮುದೈಕ್ಷತ |
ಸಂಯೋಜ್ಯ ವಿದುರಸ್ತಸ್ಮಿನ್ ದೃಷ್ಟ್ವಾ ದೃಷ್ಟಿಂ ಸಮಾಹಿತಃ ||29||
ಅನಂತರ ಆ ವಿದುರನು ಸಮಾಧಾನಚಿತ್ತನಾಗಿ ಯುಧಿಷ್ಠಿರನ ಮುಂಭಾಗದಲ್ಲಿ ದೃಷ್ಟಿಗೆ ದೃಷ್ಟಿಯನ್ನು ಕೂಡಿಸಿ, ರೆಪ್ಪೆಯನ್ನು ಮಿಟುಕಿಸದೆ ರಾಜನನ್ನು ದಿಟ್ಟಿಸಿ ನೋಡಿದನು.
ವಿವೇಶ ವಿದುರೋ ಧೀಮಾನ್ ಗಾತ್ರೈರ್ಗಾತ್ರಾಣಿ ಚೈವ ಹಿ |

ಪ್ರಾಣಾನ್ ಪ್ರಾಣೇಷು ಚ ದಧದ್ ಇಂದ್ರಿಯಾಣೀಂದ್ರಿಯೇಷು ಚ ॥
ಸ ಯೋಗಬಲಮಾಸ್ಥಾಯ ವಿವೇಶ ನೃಪತೇಸ್ತನುಮ್ |
ವಿದುರೋ ಧರ್ಮರಾಜಸ್ಯ ತೇಜಸಾ ಪ್ರಜ್ವಲನ್ನಿವ ॥31॥
ಅನಂತರ ಧೀಮಂತನಾದ ವಿದುರನು ತನ್ನ ಪ್ರಾಣಗಳನ್ನು ಯುಧಿಷ್ಠಿರನ ಪ್ರಾಣಗಳಲ್ಲೂ, ತನ್ನ ಇಂದ್ರಿಯಗಳನ್ನು ಯುಧಿಷ್ಠಿರನ ಇಂದ್ರಿಯಗಳಲ್ಲೂ ಇರಿಸಿ, ಯೋಗಬಲದಿಂದ ತನ್ನ ಶರೀರದಿಂದ ಯುಧಿಷ್ಠಿರನ ಶರೀರವನ್ನು ಪ್ರವೇಶಿಸುವವನಾಗಿ ತೇಜಸ್ಸಿನಿಂದ ಉರಿಯುತ್ತಿರುವ ಬೆಂಕಿಯಂತೆ ರಾಜನಾದ ಧರ್ಮರಾಜನ ಶರೀರವನ್ನು ಪ್ರವೇಶಿಸಿದನು.
ವಿದುರಸ್ಯ ಶರೀರಂ ತು ತಥೈವ ಸ್ತಬ್ಧಲೋಚನಮ್ |
ವೃಕ್ಷಾಶ್ರಿತಂ ತದಾ ರಾಜಾ ದದರ್ಶ ಗತಚೇತನಮ್ ॥32॥
ಆಗ ರಾಜನಾದ ಯುಧಿಷ್ಠಿರನು ವಿದುರನ ಶರೀರವು ಮರಕ್ಕೆ ಒರಗಿದಂತೆಯೇ ಕಣ್ಣುಗಳು ಸ್ತಬ್ಧವಾಗಿ ಚೇತನವು ಹೊರಟು ಹೋಗಿರುವುದನ್ನಾಗಿ ಗಮನಿಸಿದನು.
ಬಲಸ್ವಮಪಿ ಚಾತ್ಮಾನಂ ಮೇನೇ ಬಹುಗುಣಂ ತದಾ |
ಧರ್ಮರಾಜೋ ಮಹಾರಾಜಸ್ತಂ ಚ ಸಸ್ಮಾರ ಪಾಂಡವಃ ॥33॥
ಪೌರಾಣಮಾತ್ಮನಃ ಸರ್ವಂ ಭವಿಷ್ಯಂ ಚ ನರಾಧಿಪ |
ಯೋಗಧರ್ಮಂ ಮಹಾತೇಜಾ ವ್ಯಾಸೇನ ಕಥಿತಂ ತಥಾ ॥34॥
ಆಗ ಮಹಾತೇಜಸ್ವಿಯಾದ ಪಾಂಡವನಾದ ಮಹಾರಾಜನಾದ ಧರ್ಮರಾಜನು ತಾನು ಅತ್ಯಂತ ಬಲಿಷ್ಠನಾದಂತೆಯೂ, ಬಹಳ ಗುಣಗಳಿಂದ ಕೂಡಿದವನನ್ನಾಗಿಯೂ ತಿಳಿದುಕೊಂಡನು. ಜೊತೆಗೆ ಈ ಹಿಂದೆ ವೇದವ್ಯಾಸರು ಹೇಳಿದ ತನ್ನ ಎಲ್ಲ ಭವಿಷ್ಯವನ್ನೂ, ಯೋಗಧರ್ಮದಿಂದ ವಿದುರನು ತನ್ನಲ್ಲಿ ಪ್ರವೇಶಿಸುವ ವಿಷಯವನ್ನೂ ಸ್ಮರಿಸಿಕೊಂಡನು.
ಧರ್ಮರಾಜಸ್ತು ತತ್ರೈನಂ ಸಂಚಸ್ಕಾರಯಿಷುಸ್ತದಾ |
ದಗ್ಧುಕಾಮೋಽಭವದ್ ವಿದ್ವಾನ್ ಅಥಾಕಾಶೇ ವಚೋಽಬ್ರವೀತ್ ॥35॥
ಆಗ ಧರ್ಮರಾಜನು ಈ ವಿದುರನ ಶರೀರಕ್ಕೆ ಸಂಸ್ಕಾರ ಮಾಡಲು ಇಚ್ಛಿಸುತ್ತಾ, ಶರೀರವನ್ನು ದಹನ ಮಾಡಲು ಬಯಸಿದನು. ಆಗ ಆಕಾಶದಲ್ಲಿ ಮಾತು ಕೇಳಿ ಬಂದಿತು.
ವಾಕ್
ಭೋ ಭೋ ರಾಜನ್ ನ ದಗ್ಧವ್ಯಮ್ ಏತದ್ವಿದುರಸಂಜ್ಞಕಮ್ |
ಕಲೇವರಮಿಹೈತತ್ ತೇ ನೈಷ ಧರ್ಮಃ ಸನಾತನಃ ॥36॥
ಅಶರೀರವಾಣಿ ಹೇ ರಾಜನೇ, ಈ ವಿದುರನ ಶರೀರವು ದಹನಕ್ಕೆ ಯೋಗ್ಯವಾಗಿಲ್ಲ. ಇದು ಸನಾತನವಾದ ಧರ್ಮವಲ್ಲ.
ಲೋಕವೈಕರ್ಮಣಾ ನಾಮ ಭವಿಷ್ಯತ್ಯಸ್ಯ ಪಾರ್ಥಿವ |
ಯತಿಧರ್ಮಮವಾಪ್ತೋಽಸೌ ನ ಶೋಚ್ಯೋ ಭರತರ್ಷಭ ॥37॥
ಹೇ ರಾಜನೇ, ಈ ಶರೀರವು ಲೋಕದಲ್ಲಿ ಪ್ರವೃತ್ತಿಕರ್ಮವನ್ನು ಬಿಟ್ಟ, ಶಾಂತರಾದ ಮುನಿಗಳ ಶರೀರದಂತೆಯೇ. ಏಕೆಂದರೆ ಈ ವಿದುರನು ಯತಿಧರ್ಮವನ್ನು ಸ್ವೀಕರಿಸಿದ್ದಾನೆ. ಆದ್ದರಿಂದ ಇವನ ವಿಷಯದಲ್ಲಿ ನೀನು ದುಃಖ ಪಡಬೇಡ.
ವೈಶಂಪಾಯನಃ
ಇತ್ಯುಕ್ತೋ ಧರ್ಮರಾಜಸ್ತು ವಿನಿವೃತ್ಯ ಮಹಾಮನಾಃ |
ರಾಜ್ಞೋ ವೈಚಿತ್ರವೀರ್ಯಸ್ಯ ತತ್ಸರ್ವಂ ಪ್ರತ್ಯವೇದಯತ್ ॥38॥
ವೈಶಂಪಾಯನ ಹೀಗೆ ಅಶರೀರವಾಣಿಯು ಹೇಳಿದಾಗ, ಮಹಾಮನಸ್ವಿಯಾದ ಧರ್ಮರಾಜನು ಅಲ್ಲಿಂದ ಹಿಂದಿರುಗಿ, ಧೃತರಾಷ್ಟ್ರರಾಜನಿಗೆ ಆ ಎಲ್ಲವನ್ನೂ ನಿವೇದಿಸಿದನು.
ತತಃ ಸ ರಾಜಾ ಧೃತಿಮಾನ್ ಸ ಚ ಸರ್ವೋ ಜನಸ್ತದಾ |
ಭೀಮಸೇನಾದಯಶ್ಚೈವ ಪರಂ ವಿಸ್ಮಯಮಾಗತಾಃ ॥39॥
ಇದನ್ನು ಕೇಳಿದ ಧೈರ್ಯಶಾಲಿಯಾದ ಆ ಧೃತರಾಷ್ಟ್ರರಾಜನೂ, ಅಲ್ಲಿರುವ ಎಲ್ಲ ಜನಸಮೂಹಗಳೂ, ಭೀಮಸೇನಾದಿಗಳೂ ಆಶ್ಚರ್ಯಚಕಿತರಾದರು.
ತಚ್ಛ್ರುತ್ವಾ ಪ್ರೀತಿಮಾನ್ ರಾಜಾ ಭೂತ್ವಾ ಧರ್ಮಜಮಬ್ರವೀತ್ ॥40॥
ಎಲ್ಲವನ್ನೂ ಕೇಳಿದ ನಂತರ ಸಂತೋಷಗೊಂಡ ರಾಜನು ಧರ್ಮರಾಜನನ್ನು ಕುರಿತು ಹೀಗೆ ಹೇಳಿದನು.
ಧೃತರಾಷ್ಟ್ರಃ
ಆಪೋ ಮೂಲಂ ಫಲಂ ಚೈವ ಮಮೈವ ಪ್ರತಿಗೃಹ್ಯತಾಮ್ |
ಯದನ್ನೋ ಹಿ ನರೋ ರಾಜನ್ ತದನ್ನೋಽಸ್ಯಾತಿಥಿರ್ಮತಃ ॥41॥
ಧೃತರಾಷ್ಟ್ರ ಹೇ ರಾಜನೇ, ಮನುಷ್ಯನು ತಾನು ಯಾವ ಅನ್ನವನ್ನು ಉಣ್ಣುವನೋ ಅವನ ಅತಿಥಿಗೂ ಅದೇ ಅನ್ನವಾಗಿದೆ. ನಾನು ನೀರು ಹಾಗೂ ಮೂಲ-ಫಲಗಳನ್ನು ಸ್ವೀಕರಿಸುವವನು. ಆದ್ದರಿಂದ ನೀವೆಲ್ಲರೂ ನನ್ನಿಂದ ನೀರು, ಮೂಲಫಲಗಳನ್ನು ಸ್ವೀಕರಿಸಿ.
ವೈಶಂಪಾಯನಃ
ಇತ್ಯುಕ್ತಃ ಸ ತಥೇತ್ಯೇವಂ ಪ್ರಾಹ ಧರ್ಮಾತ್ಮಜೋ ನೃಪಮ್ |
ಫಲಮೂಲಂ ಚ ಬುಭುಜೇ ರಾಜ್ಞಾ ದತ್ತಂ ಸಹಾನುಜಃ ॥42॥
ವೈಶಂಪಾಯನ ಧೃತರಾಷ್ಟ್ರನು ಹೀಗೆ ಹೇಳಿದಾಗ ಧರ್ಮರಾಜನು `ಹಾಗೇ ಆಗಲಿ' ಎಂದು ರಾಜನಿಗೆ ಉತ್ತರಿಸಿದನು. ನಂತರ ರಾಜನು ನೀಡಿದ ಫಲ ಹಾಗೂ ಮೂಲಗಳನ್ನು ಸಹೋದರರೊಂದಿಗೆ ಸ್ವೀಕರಿಸಿದನು.

ತತಸ್ತೇ ವೃಕ್ಷಮೂಲೇಷು ಕೃತವಾಸಪರಿಗ್ರಹಾಃ |
ತಾಂ ರಾತ್ರಿಂ ನ್ಯವಸನ್ ಸರ್ವೇ ಫಲಮೂಲಕೃತವ್ರತಾಃ ॥43॥
ಅನಂತರ ಅವರೆಲ್ಲರೂ ಮರದ ಬುಡಗಳಲ್ಲಿ ವಾಸವನ್ನು ಪರಿಕಲ್ಪಿಸಿಕೊಂಡು ಫಲ-ಮೂಲಾದಿಗಳಿಂದ ಆಹಾರವನ್ನು ಸ್ವೀಕರಿಸಿ ಆ ರಾತ್ರಿಯನ್ನು ಕಳೆದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ವಿದುರಸ್ಯ ಧರ್ಮರಾಜಪ್ರವೇಶೋ ನಾಮ
ದ್ವಾತ್ರಿಂಶೋಽಧ್ಯಾಯಃ ॥
॥ ಆಶ್ರಮವಾಸಪರ್ವಣಿ ದ್ವಾತ್ರಿಂಶೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.
* * * * *

ಮೂವತ್ಮೂರನೆಯ ಅಧ್ಯಾಯ

ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದ ಯುಧಿಷ್ಠಿರನು ಸಹೋದರರೊಂದಿಗೆ ಮಹರ್ಷಿಗಳ ಆಶ್ರಮವನ್ನು ಸಂದರ್ಶಿಸುವುದು. ಶತಯೂಪಾದಿ ಮಹರ್ಷಿಗಳು ಮತ್ತು ಶಿಷ್ಯರೊಂದಿಗೆ ಕೂಡಿದ ವೇದವ್ಯಾಸರು- ಯುಧಿಷ್ಠಿರಾದಿಗಳ ಜೊತೆಗಿರುವ ಧೃತರಾಷ್ಟ್ರನ ಆಶ್ರಮಕ್ಕೆ ಆಗಮಿಸುವುದು. ವೇದವ್ಯಾಸರು ಧೃತರಾಷ್ಟ್ರನಿಗೆ ಕುಶಲಪ್ರಶ್ನೆಯೊಂದಿಗೆ ವಿದುರನ ನಿಜಸ್ವರೂಪವನ್ನು ವಿವರಿಸುವುದು ಹಾಗೂ ``ಇತರ ಋಷಿಗಳಿಗೆ ಅಸಾಧ್ಯವಾದ ನಿಮಗೆ ಇಷ್ಟವಾದ ಆಶ್ಚರ್ಯಕರ್ಮವನ್ನು ನಡೆಸುವೆನೆಂದು'' ಶಪಥಗೈಯ್ಯುವುದು.

ವೈಶಂಪಾಯನಃ
ಏವಂ ಸಾ ರಜನೀ ತೇಷಾಮಾಶ್ರಮೇ ಪುಣ್ಯಕರ್ಮಣಾಮ್ |
ಶಿವಾ ನಕ್ಷತ್ರವಿದ್ಯೋತಾ ವ್ಯತಿಯಾತಾ ಕುರೂದ್ವಹ ॥1॥
ವೈಶಂಪಾಯನ ಹೇ ಕುರೂದ್ವಹನೇ, ಪುಣ್ಯಕರ್ಮವುಳ್ಳ ಆ ಪಾಂಡವರು ಮಂಗಳಮಯವಾದ, ನಕ್ಷತ್ರಗಳ ಮಂದ ಬೆಳಕುಳ್ಳ ಆ ರಾತ್ರಿಯನ್ನು ಸುಖವಾಗಿ ಕಳೆದರು.
ತತ್ರ ತತ್ರ ಕಥಾಶ್ಚಾಸನ್ ತೇಷಾಂ ಧರ್ಮಾರ್ಥಲಕ್ಷಣಾಃ |
ವಿಚಿತ್ರಪದಸಂಚಾರಾ ನಾನಾಶ್ರುತಿಭಿರನ್ವಿತಾಃ ॥2॥
ಆ ರಾತ್ರಿಕಾಲದಲ್ಲಿ ಅಲ್ಲಲ್ಲಿ ಅವರ ನಡುವೆ ವಿಚಿತ್ರವಾದ ಪದಗಳ ಬಳಕೆಯುಳ್ಳ, ನಾನಾ ರೀತಿಯ ವೇದವಾಕ್ಯಗಳಿಂದ ಕೂಡಿದ ಧರ್ಮ ಮತ್ತು ಪುರುಷಾರ್ಥಗಳಿಗೆ ಸಂಬಂಧಿಸಿದ ಮಾತುಕತೆಗಳು ನಡೆದವು.
ಪಾಂಡವಾಸ್ತ್ವಭಿತೋ ಮಾತುರ್ಧರಣ್ಯಾಂ ಸುಷುಪುಸ್ತದಾ |
ಉತ್ಸೃಜ್ಯ ಸುಮಹಾರ್ಹಾಣಿ ಶಯನಾನಿ ನರಾಧಿಪ ॥3॥
ಹೇ ನರಾಧಿಪನೇ, ಪಾಂಡವರಾದರೂ ಬಹಳ ಬೆಲೆಬಾಳುವ ಹಾಸಿಗೆಗಳನ್ನು ಬಿಟ್ಟು ತಾಯಿಯ ಸುತ್ತಲೂ ನೆಲದಲ್ಲಿ ಮಲಗಿದರು.
ಯದಾಹಾರೋಽಭವದ್ ರಾಜಾ ಧೃತರಾಷ್ಟ್ರೋ ಮಹಾಮನಾಃ |
ತದಾಹಾರಾ ನೃವೀರಾಸ್ತೇ ನ್ಯವಸಂಸ್ತಾಂ ನಿಶಾಂ ತದಾ ॥4॥
ಮಹಾಮನಸ್ವಿಯಾದ ಧೃತರಾಷ್ಟ್ರ ರಾಜನು ಯಾವ ಆಹಾರವನ್ನು ಸ್ವೀಕರಿಸಿದನೋ ಅದೇ ಆಹಾರವನ್ನು ಆ ರಾತ್ರಿಯಲ್ಲಿ ವೀರರಾದ ಪಾಂಡವರು ಸ್ವೀಕರಿಸಿ ಆ ರಾತ್ರಿಯನ್ನು ಕಳೆದರು.
ವ್ಯತೀತಾಯಾಂ ತು ಶರ್ವರ್ಯಾಂ ಕೃತಪೌರ್ವಾಹ್ನಿಕಕ್ರಿಯಃ |
ಭ್ರಾತೃಭಿಃ ಸಹಿತೋ ರಾಜಾ ದದರ್ಶಾಶ್ರಮಮಂಡಲಮ್ ॥5॥
ಸಾಂತಃಪುರಪರೀವಾರಃ ಸಭೃತ್ಯಃ ಸಪುರೋಹಿತಃ |
ಯಥಾಮುಖಂ ಯಥೋದ್ದೇಶಂ ಧೃತರಾಷ್ಟ್ರಾಭ್ಯನುಜ್ಞಯಾ ॥6॥
ಆ ರಾತ್ರಿ ಕಳೆದ ನಂತರ ಪೂರ್ವಾಹ್ನಿಕ ಕ್ರಿಯೆಗಳನ್ನು ನಡೆಸಿದ ಸಹೋದರರಿಂದ ಸಹಿತರಾದ ಯುಧಿಷ್ಠಿರರಾಜನು ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದು, ಅಂತಃಪುರ ಪರಿವಾರ, ಭೃತ್ಯರು, ಪುರೋಹಿತರೊಡನೆ ಕೂಡಿಕೊಂಡು ಇಷ್ಟಬಂದ ಕಡೆಯಲ್ಲಿ, ಇಷ್ಟ ಬಂದ ರೀತಿಯಲ್ಲಿ ಆಶ್ರಮ ಪರಿಸರವನ್ನು ಸಂದರ್ಶಿಸಿದನು.
ದದರ್ಶ ತತ್ರ ವೇದೀಶ್ಚ ಸಂಪ್ರಜ್ವಲಿತಪಾವಕಾಃ |
ಕೃತಾಭಿಷೇಕೈರ್ಮುನಿಭಿರ್ಹುತಾಗ್ನಿಭಿರುಪಸ್ಥಿತಾಃ ॥7॥
ಅಲ್ಲಿ ಅಭಿಷೇಕಾದಿಗಳನ್ನು ನಡೆಸುತ್ತಿರುವ ಮುನಿಗಳಿಂದ ಕೂಡಿದ, ಔಪಾಸನಾದಿಗಳಿಂದ ಅಗ್ನಿಯನ್ನು ಅರ್ಚಿಸಿ ಅಗ್ನಿಗೆ ನಮಸ್ಕರಿಸುತ್ತಿರುವ ಮುನಿಗಳಿಂದ ಕೂಡಿದ ಜ್ವಲಿಸುವ ಅಗ್ನಿಗಳುಳ್ಳ ವೇದಿಕೆಗಳನ್ನು ನೋಡಿದನು.
ವನೇಷು ಪುಷ್ಪನಿಕರೈಃ ರಾಜನ್ ಧೂಮೋದ್ಗಮೈರಪಿ |
ಬ್ರಾಹ್ಮೇಣ ವಪುಷಾ ಯುಕ್ತಾ ಯುಕ್ತಾ ಮುನಿಗಣಸ್ಯ ತಾಃ ॥8॥
ಆ ವೇದಿಕೆಗಳ ಸುತ್ತಲೂ ಧೂಪದ ಧೂಮವು ದಟ್ಟವಾಗಿ ಹರಡುತ್ತಿತ್ತು. ಆ ಧೂಮದಂತೆಯೇ ಕಾಡಿನಲ್ಲಿ ಪುಷ್ಪಗಳು ಅರಳಿ ನಿಂತಿದ್ದವು. ಅಲ್ಲದೇ ಆ ವೇದಿಕೆಗಳಲ್ಲಿ ಮುನಿಜನರೂ, ಬ್ರಾಹ್ಮಣಜನರೂ ಸೇರಿಕೊಂಡ ವೇದಿಕೆಯು ಸುಂದರವಾಗಿ ಕಾಣುತ್ತಿತ್ತು.
ಮೃಗಯೂಥೈರನುದ್ವಿಗ್ನೈಸ್ತತ್ರತತ್ರ ಸಮಾಶ್ರಿತೈಃ |
ಅಶಂಕಿತೈಃ ಪಕ್ಷಿಗಣೈಃ ಪ್ರಗೀತೈರಿವ ಚ ಪ್ರಭೋ ॥9॥
ಅಲ್ಲಲ್ಲಿ ಜಿಂಕೆಗಳ ಸಮೂಹಗಳು ಯಾವುದೇ ಉದ್ವೇಗವಿಲ್ಲದೆ ಆಶ್ರಯಿಸಿಕೊಂಡಿದ್ದವು. ಹಾಗೆಯೇ ಹೇ ಪ್ರಭುವೇ, ಪಕ್ಷಿಗಣಗಳು ಶಂಕೆಯಿಲ್ಲದೆ ಅಲ್ಲಲ್ಲಿ ಹಾರುತ್ತಿದ್ದವು.

ಕೇಕಾಭಿರ್ನೀಲಕಂಠಾನಾಂ ದಾತ್ಯೂಹಾನಾಂ ಚ ಕೂಜಿತೈಃ |
ಕೋಕಿಲಾನಾಂ ಕುಹುರವೈಃ ಸುಖೈಃ ಶ್ರುತಿಮನೋಹರೈಃ ॥10॥
ನವಿಲುಗಳ ಕೇಕೆಗಳಿಂದ, ನೀರುಕೋಳಿಗಳ ಕೂಗುಗಳಿಂದ, ಕೇಳಲು ಇಂಪಾದ ಮತ್ತು ಸುಖಕರವಾದ ಕೋಗಿಲೆಗಳ ಕುಹು ಎಂಬ ಶಬ್ದಗಳಿಂದ ಆ ಪ್ರದೇಶವು ಕೂಡಿತ್ತು.
ಪ್ರಾಧೀತದ್ವಿಜಘೋಷೈಶ್ಚ ಕ್ವಚಿತ್ಕ್ವಚಿದಲಂಕೃತಮ್ |
ಫಲಮೂಲಸಮಾಹಾರೈರ್ಮಹದ್ಭಿಶ್ಚೋಪಶೋಭಿತಮ್ ॥11॥
ಅಲ್ಲದೇ ಆ ಪ್ರದೇಶವು ಕೆಲವು ಕಡೆ ಚೆನ್ನಾಗಿ ಅಧ್ಯಯನ ಮಾಡಿದ ಬ್ರಾಹ್ಮಣರ ಮಂತ್ರಘೋಷಗಳಿಂದ ಅಲಂಕೃತವಾಗಿತ್ತು. ಜೊತೆಗೆ ಫಲ-ಮೂಲಾದಿಗಳನ್ನು ಹುಡುಕಿ ತಂದಿರುವ ಹಿರಿಯ ಜನರಿಂದ ಶೋಭಿತವಾಗಿತ್ತು.
ತತಃ ಸ ರಾಜಾ ಪ್ರದದೌ ತಾಪಸಾರ್ಥಮುಪಾಹೃತಾನ್ |
ಕಲಶಾನ್ ಕಾಂಚನಾನ್ ರಾಜನ್ ತಥೈವೌದುಂಬರಾನಪಿ ॥12॥
ಹೇ ರಾಜನ್, ಅನಂತರ ಆ ಧರ್ಮರಾಜನು ತಾಪಸ ಜನರಿಗೋಸ್ಕರ ತಂದಿರುವ ಚಿನ್ನದ ಕಲಶಗಳನ್ನು, ಅಂತೆಯೇ ಅತ್ತಿಯ ಮರದಿಂದ ಮಾಡಿದ ಕಲಶಗಳನ್ನೂ ವಿತರಿಸಿದನು.
ಅಜಿನಾನಿ ಪ್ರವೇಣೀಶ್ಚ ಸ್ರುಕ್‌ಸ್ರುವಂ ಚ ಮಹೀಪತಿಃ |
ಕಮಂಡಲೂಂಶ್ಚ ಸ್ಥಾಲೀಶ್ಚ ಪಿಠರಾಣಿ ಚ ಭಾರತ ॥13॥
ಹೇ ಭಾರತನೇ, ಮಹೀಪತಿಯಾದ ಧರ್ಮರಾಜನು ನಾನಾ ರೀತಿಯ ಅಜಿನಗಳನ್ನೂ, ಚಿತ್ರಗಳಿಂದ ಕೂಡಿದ ಆಸನರೂಪವಾದ ಕಂಬಳಿಗಳನ್ನೂ, ಯಜ್ಞಕ್ಕಾಗಿ ಉಪಯೋಗಿಸುವ ಸ್ರುಕ್-ಸ್ರುವಗಳನ್ನೂ, ಕಮಂಡಲುಗಳನ್ನೂ, ಪಾತ್ರೆಗಳನ್ನೂ, ಕಡಗೋಲುಗಳನ್ನೂ ವಿತರಿಸಿದನು.
ಭಾಜನಾನಿ ಚ ಲೌಹಾನಿ ಪಾತ್ರೀಶ್ಚ ವಿವಿಧಾ ನೃಪ |
ಯದ್ಯದಿಚ್ಛತಿ ಯಾವಚ್ಚ ಯದನ್ಯದಪಿ ಕಾಂಕ್ಷಿತಮ್ ॥14॥
ಹೇ ರಾಜನ್, ಅಷ್ಟೇ ಅಲ್ಲದೆ ಲೋಹದ ಪಾತ್ರೆಗಳನ್ನೂ, ನಾನಾ ರೀತಿಯ ಚಿಕ್ಕ ಚಿಕ್ಕ ಪಾತ್ರೆಗಳನ್ನೂ, ಹೀಗೆ ಯಾರು ಯಾರು ಯಾವೆಲ್ಲವನ್ನು ಎಷ್ಟು ಬಯಸುವರೋ ಅವೆಲ್ಲವನ್ನೂ ವಿತರಿಸಿದನು.
ಏವಂ ಸ ರಾಜಾ ಧರ್ಮಾತ್ಮಾ ಪರೀತ್ಯಾಶ್ರಮಮಂಡಲಮ್ |
ವಸು ವಿಶ್ರಾಣ್ಯ ತತ್ಸರ್ವಂ ಪುನರಾಯಾನ್ಮಹೀಪತಿಃ ॥15॥
ಹೀಗೆ ಧರ್ಮಾತ್ಮನಾದ ಆ ರಾಜನು ಆಶ್ರಮ ಪ್ರದೇಶವನ್ನು ಸುತ್ತುತ್ತಾ ಆಶ್ರಮವಾಸಿಗಳಿಗೆ ಅಗತ್ಯವಾದ ವಸ್ತುಗಳೆಲ್ಲವನ್ನೂ ವಿತರಿಸಿ ಮತ್ತೆ ಹಿಂದಿರುಗಿ ಬಂದನು.
ಕೃತಾಹ್ನಿಕಂ ಚ ರಾಜಾನಂ ಧೃತರಾಷ್ಟ್ರಂ ಮಹೀಪತಿಮ್ |
ದದರ್ಶಾಸೀನಮವ್ಯಗ್ರಂ ಗಾಂಧಾರೀಸಹಿತಂ ತದಾ ॥16॥
ಆಗ ಮಹೀಪತಿಯಾದ ಧೃತರಾಷ್ಟ್ರ ರಾಜನು ಆಹ್ನಿಕವನ್ನು ಪೂರೈಸಿ, ಗಾಂಧಾರೀ ಸಹಿತನಾಗಿ ಸಮಾಧಾನಚಿತ್ತನಾಗಿ ಕುಳಿತಿರುವುದನ್ನು ಕಂಡನು.
ಮಾತರಂ ಚಾವಿದೂರಸ್ಥಾಂ ಶಿಷ್ಯವತ್ಪ್ರಣತಾಂ ಸ್ಥಿತಾಮ್ |
ಕುಂತೀಂ ದದರ್ಶ ಧರ್ಮಾತ್ಮಾ ಶಿಷ್ಟಾಚಾರಸಮನ್ವಿತಾಮ್ ॥17॥
ಅವರ ಜೊತೆಗೆ ಅವರ ಸಮೀಪದಲ್ಲಿಯೇ ಶಿಷ್ಯರಂತೆ ಕೈಮುಗಿದು ಕುಳಿತ, ಶಿಷ್ಟಾಚಾರದಿಂದ ಕೂಡಿದ ತನ್ನ ತಾಯಿಯಾದ ಕುಂತೀದೇವಿಯನ್ನೂ ಕಂಡನು.
ಸ ತಮಭ್ಯರ್ಚ್ಯ ರಾಜಾನಂ ನಾಮ ಸಂಶ್ರಾವ್ಯ ಚಾತ್ಮನಃ |
ನಿಷೀದೇತ್ಯಭ್ಯನುಜ್ಞಾತೋ ಬೃಸ್ಯಾಮುಪವಿವೇಶ ಹ ॥18॥
ಅನಂತರ ಅವನು ರಾಜನಾದ ಧೃತರಾಷ್ಟ್ರನನ್ನು ಗೌರವಿಸಿ ತನ್ನ ಹೆಸರನ್ನು ತಿಳಿಸಿದನು. ಧೃತರಾಷ್ಟ್ರನಿಂದ ``ಕುಳಿತುಕೋ'' ಎಂದು ಅಪ್ಪಣೆ ಪಡೆದು, ಋಷಿಗಳು ಕೂಡುವ ದರ್ಭಾಸನದ ಮೇಲೆ ಕುಳಿತನು.
ಭೀಮಸೇನಾದಯಶ್ಚೈವ ಪಾಂಡವಾ ಭರತರ್ಷಭ |
ಅಭಿವಾದ್ಯೋಪಸಂಗೃಹ್ಯ ನಿಷೇದುಃ ಪಾರ್ಥಿವಾಜ್ಞಯಾ ॥19॥
ಹೇ ಭರತರ್ಷಭನೇ, ಭೀಮಸೇನನೇ ಮೊದಲಾದ ಪಾಂಡವರೂ ಧೃತರಾಷ್ಟ್ರನಿಗೆ ಅಭಿವಾದನೆಯನ್ನು ಮಾಡಿ ರಾಜನ ಆಜ್ಞೆಯಂತೆ ಕುಳಿತರು.
ಸ ತೈಃ ಪರಿವೃತೋ ರಾಜಾ ಶುಶುಭೇಽತೀವ ಕೌರವಃ |
ಬಿಭ್ರದ್ ಬ್ರಾಹ್ಮೀಂ ಶ್ರಿಯಂ ದೀಪ್ತಾಂ ದೇವೈರಿವ ಬೃಹಸ್ಪತಿಃ ॥20॥
ಆ ಪಾಂಡವರಿಂದ ಸುತ್ತುವರಿಯಲ್ಪಟ್ಟ ಕುರುವಂಶಜನಾದ ಧೃತರಾಷ್ಟ್ರ ರಾಜನು ಜ್ವಲಿಸುತ್ತಿರುವ ಬ್ರಾಹ್ಮೀಸಂಪತ್ತನ್ನು ಪಡೆದ ಬೃಹಸ್ಪತಿಯು ದೇವತೆಗಳಿಂದ ಸುತ್ತುವರಿಯಲ್ಪಟ್ಟು ಶೋಭಿಸುವಂತೆ ಅತಿಯಾಗಿ ಶೋಭಿಸಿದನು.
ತಥಾ ತೇಷೂಪವಿಷ್ಟೇಷು ಸಮಾಜಗ್ಮುರ್ಮಹರ್ಷಯಃ |
ಶತಯೂಪಪ್ರಭೃತಯಃ ಕುರುಕ್ಷೇತ್ರನಿವಾಸಿನಃ ॥21॥
ಹೀಗೆ ಅವರೆಲ್ಲರೂ ಕುಳಿತುಕೊಂಡ ಸಮಯಕ್ಕೆ ಸರಿಯಾಗಿ ಕುರುಕ್ಷೇತ್ರದಲ್ಲಿ ವಾಸವಾಗಿರುವ ಶತಯೂಪನೇ ಮೊದಲಾದ ಮಹರ್ಷಿಗಳು ಅಲ್ಲಿ ಬಂದು ಸೇರಿದರು.
ವ್ಯಾಸಶ್ಚ ಭಗವಾನ್ ವಿಪ್ರೋ ದೇವರ್ಷಿಗಣಸೇವಿತಃ |

ವೃತಃ ಶಿಷ್ಯೈರ್ಮಹಾತೇಜಾ ದರ್ಶಯಾಮಾಸ ಪಾರ್ಥಿವಮ್ ॥22॥
ಅದೇ ಸಮಯಕ್ಕೆ ಸರಿಯಾಗಿ ದೇವರ್ಷಿಗಳಿಂದ ಸೇವಿತನಾದ, ಮಹಾತೇಜಸ್ವಿಯಾದ, ಶಿಷ್ಯರಿಂದ ಸುತ್ತುವರಿದ ವಿಪ್ರರಾದ ಭಗವಾನ್ ವೇದವ್ಯಾಸರು ರಾಜನಿಗೆ ದರ್ಶನ ನೀಡಿದರು.
ತತಃ ಸ ರಾಜಾ ಕೌರವ್ಯಃ ಕುಂತೀಪುತ್ರಶ್ಚ ಧರ್ಮರಾಟ್ |
ಭೀಮಸೇನಾದಯಶ್ಚೈವ ಪ್ರತ್ಯುತ್ಥಾಯಾಭ್ಯವಾದಯನ್ ॥23॥
ಅನಂತರ ಆ ಕುರುಶ್ರೇಷ್ಠನಾದ ಧೃತರಾಷ್ಟ್ರರಾಜನೂ, ಕುಂತೀಪುತ್ರನಾದ ಧರ್ಮರಾಜನೂ ಅಂತೆಯೇ ಭೀಮಸೇನಾದಿಗಳು ಎದ್ದು ನಿಂತು ವೇದವ್ಯಾಸರಿಗೆ ಅಭಿವಂದಿಸಿದರು.
ಸಮಾಗತಸ್ತತೋ ವ್ಯಾಸಃ ಶತಯೂಪಾದಿಭಿರ್ವೃತಃ |
ಧೃತರಾಷ್ಟ್ರಂ ಮಹೀಪಾಲಮಾಸ್ಯತಾಮಿತ್ಯಭಾಷತ ॥24॥
ಅಲ್ಲಿಗೆ ಬಂದಿರುವ ವ್ಯಾಸರು ಶತಯೂಪಾದಿಗಳೊಂದಿಗೆ ಕೂಡಿಕೊಂಡು ಧೃತರಾಷ್ಟ್ರನ ಸಮೀಪಕ್ಕೆ ಬಂದು, ರಾಜನಾದ ಧೃತರಾಷ್ಟ್ರನಿಗೆ ಕುಳಿತುಕೊಳ್ಳುವಂತೆ ಹೇಳಿದರು.
ವರಂ ತು ವಿಷ್ಟರಂ ಕೌಶ್ಯಂ ಕೃಷ್ಣಾಜಿನಕುಶೋತ್ತರಮ್ |
ಪ್ರತಿಪೇದೇ ತದಾ ವ್ಯಾಸಸ್ತದರ್ಥಮುಪಕಲ್ಪಿತಮ್ ॥25॥
ಅನಂತರ ವೇದವ್ಯಾಸರು ಅವರಿಗೋಸ್ಕರ ಹಾಸಿದ ಕೃಷ್ಣಾಜಿನ ಮತ್ತು ಕುಶಗಳ ಮೇಲೆ ಹರಡಿರುವ ರೇಷ್ಮೆಯ ಉತ್ತಮವಾದ ಆಸನವನ್ನು ಸ್ವೀಕರಿಸಿದರು (ಕುಳಿತರು).
ತೇ ಚ ಸರ್ವೇ ದ್ವಿಜಶ್ರೇಷ್ಠಾ ವಿಷ್ಟರೇಷು ಸಮಂತತಃ |
ದ್ವೈಪಾಯನಾಭ್ಯನುಜ್ಞಾತಾ ನಿಷೇದುರ್ವಿಪುಲೌಜಸಃ ॥26॥
ವಿಪುಲತೇಜಸ್ವಿಗಳಾದ ಆ ಎಲ್ಲ ಬ್ರಾಹ್ಮಣಶ್ರೇಷ್ಠರು ವೇದವ್ಯಾಸರಿಂದ ಅನುಜ್ಞೆಯನ್ನು ಪಡೆದು ಅವರ ಸುತ್ತಲೂ ಆಸನಗಳಲ್ಲಿ ಕುಳಿತುಕೊಂಡರು.
ಜನಮೇಜಯಃ
ತಥಾ ತೇಷೂಪವಿಷ್ಟೇಷು ವ್ಯಾಸೋ ವೇದವಿದಾಂ ವರಃ |
ಕಿಮುವಾಚ ಮಹಾತೇಜಾ ಧೃತರಾಷ್ಟ್ರಂ ಸಪಾಂಡವಮ್ ॥27॥
ಜನಮೇಜಯ ಹಾಗೆ ಅವರು ಕುಳಿತ ನಂತರ ಮಹಾತೇಜಸ್ವಿಗಳಾದ, ವೇದವೇತ್ತರಲ್ಲಿ ಶ್ರೇಷ್ಠರಾದ ವೇದವ್ಯಾಸರು ಪಾಂಡವರ ಜೊತೆಗೂಡಿ ಇರುವ ಧೃತರಾಷ್ಟ್ರನಿಗೆ ಏನು ಹೇಳಿದರು?
ವೈಶಂಪಾಯನಃ
ತತಃ ಸಮುಪವಿಷ್ಟೇಷು ಪಾಂಡವೇಷು ಮಹಾತ್ಮಸು |
ವ್ಯಾಸಃ ಸತ್ಯವತೀಪುತ್ರಃ ಪ್ರೋವಾಚಾಮಂತ್ರ್ಯ ಪಾರ್ಥಿವಮ್ ॥28॥
ವೈಶಂಪಾಯನ ಮಹಾತ್ಮರಾದ ಪಾಂಡವರು ಕುಳಿತುಕೊಂಡ ನಂತರ ಸತ್ಯವತೀ ಸುತರಾದ ವೇದವ್ಯಾಸರು ರಾಜನನ್ನುದ್ದೇಶಿಸಿ ಹೀಗೆ ಹೇಳಿದರು.
ಧೃತರಾಷ್ಟ್ರ ಮಹಾಬಾಹೋ ಕಚ್ಚಿತ್ತೇ ವರ್ತತೇ ತಪಃ |
ಕಚ್ಚಿನ್ಮನಸ್ತೇ ಪ್ರೀಣಾತಿ ವನವಾಸೇ ನರಾಧಿಪ ॥29॥
ಹೇ ಮಹಾಬಾಹುವಾದ ಧೃತರಾಷ್ಟ್ರನೇ, ನಿನ್ನ ತಪಸ್ಸು ಚೆನ್ನಾಗಿ ನಡೆಯುತ್ತಿದೆ ತಾನೆ? ಹೇ ನರಾಧಿಪನೇ, ನಿನ್ನ ಮನಸ್ಸು ವನವಾಸದಲ್ಲಿ ಸಂತೋಷಗೊಂಡಿದೆ ತಾನೆ?
ಕಚ್ಚಿದ್ಧೃದಿ ನ ತೇ ಶೋಕೋ ರಾಜನ್ ಪುತ್ರವಿನಾಶಜಃ |
ಕಚ್ಚಿಜ್ಜ್ಞಾನಾನಿ ಸರ್ವಾಣಿ ಸುಪ್ರಸನ್ನಾನಿ ತೇಽನಘ ॥30॥
ಹೇ ರಾಜನೇ, ಪುತ್ರರ ವಿನಾಶದಿಂದ ಉಂಟಾದ ಶೋಕವು ನಿನ್ನ ಹೃದಯದಲ್ಲಿ ಇನ್ನೂ ಉಳಿದುಕೊಂಡಿಲ್ಲ ತಾನೆ? ಹೇ ಅನಘನೇ, ನಿನ್ನ ಎಲ್ಲ ತಿಳಿವಳಿಕೆಯೂ ನಿನಗೆ ಸುಪ್ರಸನ್ನತೆಯನ್ನು ನೀಡುತ್ತಿದೆ ತಾನೆ?
ಕಚ್ಚಿದ್ ಬುದ್ಧಿಂ ದೃಢಾಂ ಕೃತ್ವಾ ಚರಸ್ಯಾರಣ್ಯಕಂ ವಿಧಿಮ್ |
ಕಚ್ಚಿದ್ ವಧೂಶ್ಚ ಗಾಂಧಾರೀ ನ ಶೋಕೇನಾಭಿಭೂಯತೇ ॥31॥
ಬುದ್ಧಿಯನ್ನು ದೃಢವಾಗಿ ಮಾಡಿಕೊಂಡು ಆರಣ್ಯಕವಿಧಿಯನ್ನು ಸರಿಯಾಗಿ ನಡೆಸುತ್ತಿರುವಿ ತಾನೆ? ಸೊಸೆಯಾದ ಗಾಂಧಾರಿಯು ಶೋಕದಿಂದ ಪರಿತಪಿಸುತ್ತಿಲ್ಲ ತಾನೆ?
ಮಹಾಪ್ರಜ್ಞಾ ಬುದ್ಧಿಮತೀ ದೇವೀ ಧರ್ಮಾರ್ಥದರ್ಶಿನೀ |
ಆಗಮಾಪಾಯತತ್ತ್ವಜ್ಞಾ ಕಚ್ಚಿದೇಷಾ ನ ಶೋಚತಿ ॥32॥
ಮಹಾಪ್ರಜ್ಞೆಯುಳ್ಳ, ಬುದ್ಧಿವಂತಳಾದ, ಧರ್ಮಾರ್ಥಗಳನ್ನು ಸರಿಯಾಗಿ ತಿಳಿಸಬಲ್ಲ, ಸುಖ-ದುಃಖಗಳು ಹೀಗೆ ಬಂದು ಹಾಗೆ ಹೋಗುವವು ಎಂಬ ತತ್ತ್ವವನ್ನು ತಿಳಿದ ಈ ಗಾಂಧಾರಿದೇವೀಯು ಶೋಕಪಡುತ್ತಿಲ್ಲ ತಾನೆ?
ಕಚ್ಚಿತ್ಕುಂತೀ ಚ ರಾಜಂಸ್ತ್ವಾಂ ಶುಶ್ರೂಷತ್ಯನಹಂಕೃತಾ |
ಯಾ ಪರಿತ್ಯಜ್ಯ ಸ್ವಂ ಪುತ್ರಂ ಗುರುಶುಶ್ರೂಷಣೇ ರತಾ ॥33॥
ಹೇ ರಾಜನೇ, ಯಾವಳು ತನ್ನ ಪುತ್ರರನ್ನೂ ಬಿಟ್ಟು ಗುರುಸೇವೆಗಾಗಿ ಆಸಕ್ತಿಯಿಂದ ನಿಂತಿದ್ದಾಳೋ ಅಂತಹ ಕುಂತೀದೇವಿಯು ನಿನ್ನನ್ನು ಅಹಂಕಾರವಿಲ್ಲದೆ ಸೇವೆಗೈಯ್ಯುತ್ತಿದ್ದಾಳೆ ತಾನೆ?
ಕಚ್ಚಿದ್ಧರ್ಮಸುತೋ ರಾಜಾ ತ್ವಯಾ ಪ್ರತ್ಯಭಿನಂದಿತಃ |

ಭೀಮಾರ್ಜುನಯಮಾಶ್ಚೈವ ಕಚ್ಚಿದೇತೇಽಪಿ ಸಾಂತ್ವಿತಾಃ ॥34॥
ಧರ್ಮಸುತನಾದ ರಾಜನನ್ನು ನೀನು ಪ್ರೀತಿಯಿಂದ ಅಭಿನಂದಿಸುತ್ತಿರುವೆ ತಾನೆ? ಅಲ್ಲದೇ ಈ ಭೀಮಾರ್ಜುನ, ನಕುಲ-ಸಹದೇವರು ನಿನ್ನಿಂದ ಸಾಂತ್ವನವನ್ನು ಪಡೆದಿರುವರು ತಾನೆ?
ಕಚ್ಚಿನ್ನಂದಸಿ ದೃಷ್ಟ್ವೈತಾನ್ ಕಚ್ಚಿತ್ತೇ ನಿರ್ಮಲಂ ಮನಃ |
ಕಚ್ಚಿಚ್ಚ ಶುದ್ಧಭಾವೋಽಸಿ ಜಾತಜ್ಞಾನೋ ನರಾಧಿಪ ॥35॥
ಇವರನ್ನು ನೋಡಿ ನೀನು ಸಂತೋಷಪಡುತ್ತಿರುವೆ ತಾನೆ? ನಿನ್ನ ಮನಸ್ಸು ನಿರ್ಮಲವಾಗಿರುವುದು ತಾನೆ? ಹೇ ನರಾಧಿಪನೇ, ಸರಿಯಾದ ಜ್ಞಾನವನ್ನು ಪಡೆದು ಇವರೊಂದಿಗೆ ಶುದ್ಧಭಾವದಿಂದ ವರ್ತಿಸುತ್ತಿರುವೆ ತಾನೆ?
ಏತದ್ಧಿ ತ್ರಿತಯಂ ಶ್ರೇಷ್ಠಂ ಸರ್ವಭೂತೇಷು ಭಾರತ |
ನಿರ್ವೈರತಾ ಮಹಾರಾಜ ಸತ್ಯಮಕ್ರೋಧ ಏವ ಚ ॥36॥
ಹೇ ಭಾರತನೇ, ಮಹಾರಾಜನೇ, ಯಾರೊಡನೆಯೂ ವೈರಭಾವದಿಂದ ನಡೆಯದಿರುವುದು, ಸತ್ಯಮಾರ್ಗದಲ್ಲಿ ನಡೆಯುವುದು ಮತ್ತು ಕೋಪವಿಲ್ಲದಿರುವುದು ಈ ಮೂರು ಎಲ್ಲ ಪ್ರಾಣಿಗಳಲ್ಲಿ ಅತ್ಯಂತ ಶ್ರೇಷ್ಠವಾದ ಗುಣವಾಗಿದೆ.
ಕಚ್ಚಿತ್ತೇ ನ ಚ ಮೋಹೋಸ್ತಿ ವನವಾಸೇನ ಭಾರತ |
ಸ್ವದತ್ತೇ ವನ್ಯಮನ್ನಂ ವಾ ಉಪವಾಸೋಽಪಿ ವಾ ಭವೇತ್ ॥37॥
ಹೇ ಭಾರತನೇ, ಇದು ವನವಾಸವಾದ್ದರಿಂದ ನೀನು ಕೈಯೆತ್ತಿ ಕೊಟ್ಟ ವಸ್ತುವಿನ ವಿಷಯದಲ್ಲಿ ನಿನಗೆ ಮೋಹವಿಲ್ಲ ತಾನೆ? ಏಕೆಂದರೆ ವನವಾಸಕಾಲದಲ್ಲಿ ಕೇವಲ ಕಾಡಿನ ಗೆಡ್ಡೆ-ಗೆಣಸುಗಳಾಗಲಿ ಅಥವಾ ಉಪವಾಸವಾಗಲಿ ಸಿಕ್ಕೀತು! ಕೊಟ್ಟದ್ದು ಸಿಗುವುದೆಂಬ ನಿಶ್ಚಯವಿಲ್ಲ.
ವಿದಿತಂ ಚಾಪಿ ರಾಜೇಂದ್ರ ವಿದುರಸ್ಯ ಮಹಾತ್ಮನಃ |
ಗಮನಂ ವಿಧಿನಾನೇನ ಧರ್ಮಸ್ಯ ಸುಮಹಾತ್ಮನಃ ॥38॥
ಹೇ ರಾಜೇಂದ್ರನೇ, ಸುಮಹಾತ್ಮನಾದ, ವಾನಪ್ರಸ್ಥಧರ್ಮದ ಈ ರೀತಿಯ ಆಚರಣೆಯಿಂದ ಮಹಾತ್ಮನಾದ ವಿದುರನ ಪರಲೋಕಗಮನವೂ ಕೂಡ ನಿನಗೆ ತಿಳಿದೇ ಇದೆ.
ಮಾಂಡವ್ಯಶಾಪಾದ್ಧಿ ಸ ವೈ ಧರ್ಮೋ ವಿದುರತಾಂ ಗತಃ |
ಮಹಾಬುದ್ಧಿರ್ಮಹಾಯೋಗೀ ಮಹಾತ್ಮಾ ಸುಮಹಾಮನಾಃ ॥39॥
ಮಹಾಬುದ್ಧಿಯುಳ್ಳ, ಮಹಾಯೋಗಿಯಾದ, ಮಹಾತ್ಮನಾದ, ಅತ್ಯಂತ ಮನಸ್ವಿಯಾದ ಅದೇ ಯಮಧರ್ಮನು ಮಾಂಡವ್ಯರ ಶಾಪದಿಂದ ವಿದುರನಾಗಿ ಜನಿಸಿದ್ದನಷ್ಟೆ.
ಬೃಹಸ್ಪತಿರ್ವಾ ದೇವೇಷು ಶುಕ್ರೋ ವಾಽಪ್ಯಸುರೇಷು ಚ |
ನ ತಥಾ ಬುದ್ಧಿಸಂಪನ್ನೋ ಯಥಾ ಸ ಪುರುಷರ್ಷಭಃ ॥40॥
ಆ ಪುರುಷಶ್ರೇಷ್ಠನಾದ ವಿದುರನು ಹೇಗೋ ಹಾಗೆ ದೇವತೆಗಳಲ್ಲಿ ಬೃಹಸ್ಪತಿಯಾಗಲೀ, ಅಸುರರಲ್ಲಿ ಶುಕ್ರಾಚಾರ್ಯರಾಗಲೀ ಅಷ್ಟು ಬುದ್ಧಿ- ಸಂಪನ್ನರಾದವರು ಇಲ್ಲವಷ್ಟೆ?
ತಪೋಬಲವ್ಯಯಂ ಕೃತ್ವಾ ಸುಚಿರಾತ್ ಸಂಭೃತಂ ತದಾ |
ಮಾಂಡವ್ಯೇನರ್ಷಿಣಾ ಧರ್ಮೋ ಹ್ಯಭಿಭೂತಃ ಸನಾತನಃ ॥41॥
ಆ ಕಾಲದಲ್ಲಿ ಮಾಂಡವ್ಯಋಷಿಯು ಬಹಳ ಕಾಲದ ತಪಸ್ಸಿನಿಂದ ಸಂಪಾದಿಸಿದ ತಪೋಬಲದ ವ್ಯಯವನ್ನು ಮಾಡಿ ಸನಾತನನಾದ ಯಮಧರ್ಮನನ್ನು ಸೋಲಿಸಿದ್ದಾನೆ.
ನಿಯೋಗಾದ್ ಬ್ರಾಹ್ಮಣಃ ಪೂರ್ವಂ ಮಯಾ ಸ್ವೇನ ಬಲೇನ ಚ
ವೈಚಿತ್ರವೀರ್ಯಕೇ ಕ್ಷೇತ್ರೇ ಜಾತಃ ಸ ಸುಮಹಾಮತಿಃ ॥42॥
ಈ ಹಿಂದೆ ವಿಚಿತ್ರವೀರ್ಯನ ಪತ್ನಿಯಲ್ಲಿ ನನ್ನಿಂದ ನಿಯೋಗಪದ್ಧತಿಯಿಂದ ಮತ್ತು ತನ್ನ ಬಲದಿಂದಲೂ ಕೂಡಿಕೊಂಡು ಯಮಧರ್ಮನು ಬ್ರಹ್ಮಜ್ಞಾನಿಯಾಗಿ ಮಹಾಬುದ್ಧಿಯುಳ್ಳ ವಿದುರನಾಗಿ ಜನಿಸಿದ್ದಾನೆ.
ಭ್ರಾತಾ ತವ ಮಹಾರಾಜ ದೇವದೇವಃ ಸನಾತನಃ |
ಧಾರಣಾಚ್ಛ್ರೇಯಸೋ ಜ್ಞಾನಾತ್ ಯಂ ಧರ್ಮಂ ಕವಯೋ ವಿದುಃ ॥
ಹೇ ಮಹಾರಾಜನೇ, ಯಾರು ಶ್ರೇಯಸ್ಸನ್ನು ಧರಿಸುವುದರಿಂದಲೂ, ಶ್ರೇಯಸ್ಸು ಎಂಬ ಹೆಸರುಳ್ಳ ಪುಣ್ಯವನ್ನು ಸರಿಯಾಗಿ ತಿಳಿದುಕೊಳ್ಳುವುದರಿಂದಲೂ `ಧರ್ಮ' ಎಂಬುದಾಗಿ ಜ್ಞಾನಿಗಳಿಗೆ ವಿದಿತನಾಗಿರುವನೋ ಅಂತಹ ದೇವದೇವನಾದ, ಸನಾತನನಾದ ಯಮಧರ್ಮನೇ ನಿನ್ನ ಸಹೋದರನಾಗಿದ್ದಾನೆ.
ಸತ್ಯೇನ ಸಂವರ್ಧಯತಿ ಯೋ ದಮೇನ ಶಮೇನ ಚ |
ಅಹಿಂಸಯಾ ಚ ದಾನೇನ ತಪಸಾ ಚ ಸನಾತನಃ ॥44॥
ಸನಾತನನಾದ ಯಾವನು ಸತ್ಯದಿಂದ, ಇಂದ್ರಿಯನಿಗ್ರಹದಿಂದ, ಬುದ್ಧಿಯ ಭಗವನ್ನಿಷ್ಠತೆಯಿಂದ, ಅಹಿಂಸೆಯಿಂದ ಮತ್ತು ದಾನದಿಂದ, ಅಲ್ಲದೆ ತಪಸ್ಸಿನಿಂದ ಈ ಜಗತ್ತನ್ನು ಬೆಳೆಸುವನೋ ಅವನೇ ಧರ್ಮ ಎಂದು ತಿಳಿಯಬಹುದು.
ಯೇನ ಯೋಗಬಲಾದ್ ಜಾತಃ ಕುರುರಾಜೋ ಯುಧಿಷ್ಠಿರಃ |
ಧರ್ಮ ಇತ್ಯೇಷ ನೃಪತೇ ಪ್ರಾಜ್ಞೇನಾಮಿತಬುದ್ಧಿನಾ ॥45॥
ಹೇ ನೃಪತಿಯೇ, ಮಹಾಜ್ಞಾನಿಯಾದ, ಅಮಿತವಾದ ಬುದ್ಧಿಯುಳ್ಳ ಯಾರಿಂದ ಕುರುರಾಜನಾದ ಯುಧಿಷ್ಠಿರನು ಯೋಗಬಲದಿಂದ ಜಗತ್ತಿನಲ್ಲಿ ಜನಿಸಿದ್ದಾನೋ ಅವನೇ ಧರ್ಮ ಎಂದು ತಿಳಿ.
ಯಥಾ ವಹ್ನಿರ್ಯಥಾ ವಾಯುರ್ಯಥಾಽಽಪಃ ಪೃಥಿವೀ ಯಥಾ |

ಯಥಾऽऽಕಾಶಂ ತಥಾ ಧರ್ಮ ಇಹ ಚಾಮುತ್ರ ಚ ಸ್ಥಿತಃ ॥46॥
ಅಗ್ನಿ, ವಾಯು, ನೀರು, ಭೂಮಿ ಮತ್ತು ಆಕಾಶಗಳು ಹೇಗೆ ಈ ಲೋಕದಲ್ಲೂ, ಪರಲೋಕದಲ್ಲೂ ಇವೆಯೋ ಹಾಗೆಯೇ ಧರ್ಮನು ಇಹ-ಪರಗಳಲ್ಲಿ ನೆಲೆಸಿದ್ದಾನೆ.
ಸರ್ವಗಶ್ಚೈವ ರಾಜೇಂದ್ರ ಸರ್ವಂ ವ್ಯಾಪ್ಯ ಚರಾಚರಮ್ |
ದೃಶ್ಯತೇ ದೇವದೇವೈಃ ಸ ಸಿದ್ಧೈರ್ನಿರ್ಮುಕ್ತಕಲ್ಮಷೈಃ ॥47॥
ಹೇ ರಾಜೇಂದ್ರನೇ, ಚರಾಚರವಾದ ಎಲ್ಲ ವಸ್ತುಗಳನ್ನೂ ವ್ಯಾಪಿಸಿ ಎಲ್ಲ ಕಡೆ ಇರುವವನಾದರೂ ಆ ಧರ್ಮನು ದೇವದೇವತೆಗಳಿಂದ, ಕಲ್ಮಶಗಳನ್ನು ಕಳೆದುಕೊಂಡ ಸಿದ್ಧರಿಂದ ನೋಡಲ್ಪಡುತ್ತಾನೆ.
ಯೋ ಹಿ ಧರ್ಮಃ ಸ ವಿದುರೋ ವಿದುರೋ ಯಃ ಸ ಪಾಂಡವಃ |
ಸ ಏಷ ರಾಜನ್ ದೃಶ್ಯಸ್ತೇ ಪಾಂಡವಃ ಪ್ರೇಷ್ಯವತ್ ಸ್ಥಿತಃ ॥48॥
ಯಾರು ಅಂತಹ ಯಮಧರ್ಮನೋ ಅವನೇ ವಿದುರನಾಗಿರುವನು. ಯಾರು ವಿದುರನೋ ಅವನೇ ಪಾಂಡುಪುತ್ರನಾಗಿ ಜನಿಸಿರುವನು. ಹೇ ರಾಜನೇ, ನಿನ್ನ ಕಣ್ಣೆದುರಿಗೆ ಸೇವಕನಂತೆ ನಿಂತಿರುವ ಪಾಂಡುಪುತ್ರನಾದ ಈ ಯುಧಿಷ್ಠಿರನೇ ಅವನು.
ಪ್ರವಿಷ್ಟಃ ಸ ಮಹಾತ್ಮಾನಂ ಭ್ರಾತಾ ತೇ ಬುದ್ಧಿಸಮ್ಮತಃ |
ದೃಷ್ಟ್ವಾ ಮಹಾತ್ಮಾ ಕೌಂತೇಯಂ ಮಹಾಯೋಗಬಲಾನ್ವಿತಃ ॥49॥
ತನ್ನ ಬುದ್ಧಿಯಿಂದಲೇ ಎಲ್ಲರಿಗೂ ಸಮ್ಮತನಾಗಿದ್ದ, ಮಹಾತ್ಮನಾದ ಆ ನಿನ್ನ ಸಹೋದರನಾದ ವಿದುರನು ಮಹಾತ್ಮನಾದ ಕುಂತೀಪುತ್ರನಾದ ಯುಧಿಷ್ಠಿರನನ್ನು ನೋಡಿ ಮಹಾಯೋಗಬಲದಿಂದ ಕೂಡಿಕೊಂಡವನಾಗಿ ಅವನನ್ನು ಪ್ರವೇಶಿಸಿದ್ದಾನೆ.
ತ್ವಾಂ ಚಾಪಿ ಶ್ರೇಯಸಾ ಯೋಕ್ಷ್ಯೇ ನಚಿರಾದ್ ಭರತರ್ಷಭ |
ಸಂಶಯಚ್ಛೇದನಾರ್ಥಾಯ ಪ್ರಾಪ್ತಂ ಮಾಂ ವಿದ್ಧಿ ಪುತ್ರಕ ॥50॥
ಮಗು ಭರತರ್ಷಭನೇ, ನಿನಗೂ ಕೂಡ ಬಹುಬೇಗನೆ ಶ್ರೇಯಸ್ಸಾಗುವಂತೆ ಮಾಡುತ್ತೇನೆ. ನಿನ್ನ ಸಂಶಯವನ್ನು ನಿವಾರಿಸುವುದಕ್ಕಾಗಿಯೇ ನಾನು ಈಗ ಬಂದಿರುವೆನೆಂದು ತಿಳಿ.
ನ ಕೃತಂ ಯೈಃ ಪುರಾ ಕಶ್ಚಿತ್ ಕರ್ಮ ಲೋಕೇ ಮಹರ್ಷಿಭಿಃ |
ಆಶ್ಚರ್ಯಭೂತಂ ತಪಸಃ ಫಲಂ ತದ್ ದರ್ಶಯಾಮಿ ವಃ ॥51॥
ಹಿಂದೆ ಯಾವುದೇ ಮಹರ್ಷಿಗಳಿಂದಲೂ ನಡೆಸಲಾಗದ ಕರ್ಮ ಏನಿದೆಯೋ, ಆಶ್ಚರ್ಯಭೂತವಾದ ತಪಸ್ಸಿನ ಫಲವಾದ ಅದನ್ನು ನಿಮಗೆ ತೋರಿಸಲಿದ್ದೇನೆ.
ಕಿಮಿಚ್ಛಸಿ ಮಹೀಪಾಲ ಮತ್ತಃ ಪ್ರಾಪ್ತುಮಭೀಪ್ಸಿತಮ್ |
ದ್ರಷ್ಟುಂ ಸ್ಪ್ರಷ್ಟುಮಥ ಶ್ರೋತುಂ ತತ್ಕರ್ತಾಸ್ಮಿ ತವಾನಘ ॥52॥
ಹೇ ಮಹೀಪಾಲನೇ, ಅನಘನೇ, ನೀನು ನನ್ನಿಂದ ಏನನ್ನು ಪಡೆಯಬೇಕೆಂದು ಬಯಸಿರುವೆಯೋ ಅಂತಹ ಇಷ್ಟವಾದ ವಸ್ತುವನ್ನು ನೋಡಲು, ಮುಟ್ಟಲು, ಕೇಳಲು ನೀನು ಬಯಸುವಿಯಾದರೆ ಅವೆಲ್ಲವನ್ನೂ ನಿನಗೆ ನಡೆಸಿಕೊಡುತ್ತೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ವೇದವ್ಯಾಸವಚನಂ ನಾಮ ತ್ರಯಸ್ತ್ರಿಂಶೋऽಧ್ಯಾಯಃ ॥
॥ ಆಶ್ರಮವಾಸಪರ್ವಣಿ ತ್ರಯಸ್ತ್ರಿಂಶೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ಮೂರನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಮ್ ಆಶ್ರಮವಾಸಪರ್ವ ॥
* * * *
ಪುತ್ರದರ್ಶನಪರ್ವ
ಮೂವತ್ನಾಲ್ಕನೆಯ ಅಧ್ಯಾಯ
ಸಹೋದರರು ಹಾಗೂ ಸೈನ್ಯದಿಂದ ಕೂಡಿಕೊಂಡು ಯುಧಿಷ್ಠಿರನು ಧೃತರಾಷ್ಟ್ರನ ಆಶ್ರಮದಲ್ಲಿ ಒಂದು ಮಾಸದ ಕಾಲ ವಾಸವಾಗಿದ್ದಾಗ ವೇದವ್ಯಾಸರು ಹಾಗೂ ಧೃತರಾಷ್ಟ್ರಾದಿಗಳನ್ನು ಸುತ್ತುವರಿದು ನಾರದ-ಪರ್ವತಾದಿ ಋಷಿಗಳೂ, ಗಾಂಧಾರಿಯೇ ಮೊದಲಾದ ಸ್ತ್ರೀಯರೂ, ಪಾಂಡವರೂ ಒಟ್ಟುಸೇರುವುದು.
ಜನಮೇಜಯಃ
ವನವಾಸಂ ಗತೇ ವಿಪ್ರ ಧೃತರಾಷ್ಟ್ರೇ ಮಹೀಪತೌ |
ಸಭಾರ್ಯೇ ನೃಪಶಾರ್ದೂಲೇ ವಧ್ವಾ ಕುಂತ್ಯಾ ಸಮನ್ವಿತೇ ॥1॥
ವಿದುರೇ ಚಾಪಿ ಧರ್ಮಜ್ಞೇ ಧರ್ಮರಾಜಂ ವ್ಯಪಾಶ್ರಿತೇ |
ವಸತ್ಸು ಪಾಂಡುಪುತ್ರೇಷು ಸರ್ವೇಷ್ವಾಶ್ರಮಮಂಡಲೇ ॥2॥
ಯತ್ತದಾಶ್ಚರ್ಯಮಿತಿ ವೈ ಕರಿಷ್ಯಾಮೀತ್ಯುವಾಚ ಹ |
ವ್ಯಾಸಃ ಪರಮತೇಜಸ್ವೀ ಮಹರ್ಷಿಸ್ತದ್ವದಸ್ವ ಮೇ ॥3॥
ಜನಮೇಜಯ ಹೇ ವಿಪ್ರನೇ, ಭಾರ್ಯೆಯಿಂದ ಸಹಿತನಾದ, ಸೊಸೆಯಾದ ಕುಂತಿಯಿಂದ ಕೂಡಿದ, ರಾಜಶ್ರೇಷ್ಠನಾದ ಧೃತರಾಷ್ಟ್ರರಾಜನು ವನವಾಸವನ್ನು ನಡೆಸುವ ಸಂದರ್ಭದಲ್ಲಿ ಧರ್ಮಜ್ಞನಾದ ವಿದುರನು ಧರ್ಮರಾಜನಲ್ಲಿ ಸೇರಿಕೊಂಡಾಗ ಆಶ್ರಮ ಪ್ರದೇಶದಲ್ಲಿ ಪಾಂಡವರು ವಾಸ ಮಾಡುತ್ತಿರುವ ಅದೇ ಸಂದರ್ಭದಲ್ಲಿ ಪರಮ ತೇಜಸ್ವಿಯಾದ, ಮಹರ್ಷಿಯಾದ ವೇದವ್ಯಾಸರು ಏನು ಆಶ್ಚರ್ಯವನ್ನು ನಡೆಸುತ್ತೇನೆ ಎಂದು ಹೇಳಿದರೋ ಆ ಆಶ್ಚರ್ಯದ ಬಗ್ಗೆ ನನಗೆ ತಿಳಿಸಿರಿ.

ವನವಾಸೇ ಚ ಕೌರವ್ಯಃ ಕಿಯಂತಂ ಕಾಲಮಚ್ಯುತಃ |
ಯುಧಿಷ್ಠಿರೋ ನರಪತಿರ್ನ್ಯವಸತ್ಸಜನಸ್ತದಾ ॥4॥
ಕುರುವಂಶಜನಾದ, ರಾಜನಾದ ಯುಧಿಷ್ಠಿರನು ಎಷ್ಟು ಸಮಯದವರೆಗೆ, ಯಾವುದೇ ತೊಂದರೆ ಇಲ್ಲದಂತೆ ಸ್ವಜನರೊಂದಿಗೆ ಕೂಡಿಕೊಂಡು ವನದಲ್ಲಿ ವಾಸಿಸಿದನು?
ಕಿಮಾಹಾರಾಶ್ಚ ತೇ ತತ್ರ ಸಸೈನ್ಯಾ ನ್ಯವಸನ್ ಪ್ರಭೋ |
ಸಾಂತಃಪುರಾ ಮಹಾತ್ಮಾನ ಏತದಿಚ್ಛಾಮಿ ವೇದಿತುಮ್ ॥5॥
ಹೇ ಪ್ರಭುವೇ, ಸೈನ್ಯಸಮೇತರಾದ, ಅಂತಃಪುರದ ಜನರೊಂದಿಗೆ ಕೂಡಿದ ಮಹಾತ್ಮರಾದ ಆ ಪಾಂಡವರು ಯಾವ ಆಹಾರವನ್ನು ಸೇವಿಸುತ್ತಿದ್ದರು? ಮತ್ತು ಅಲ್ಲಿ ಹೇಗೆ ವಾಸ ಮಾಡಿದರು? ಇದನ್ನು ತಿಳಿಯಲು ಬಯಸುತ್ತಿದ್ದೇನೆ.
ವೈಶಂಪಾಯನಃ
ವನವಾಸಗತಂ ರಾಜನ್ ಧೃತರಾಷ್ಟ್ರಂ ಮಹೀಪತಿಮ್ |
ಯುಧಿಷ್ಠಿರೋಽಭ್ಯಯಾದ್ ದ್ರಷ್ಟುಂ ಸಸೈನ್ಯೋ ಭ್ರಾತೃಭಿಃ ಸಹ ॥6॥
ವೈಶಂಪಾಯನ ಹೇ ರಾಜನೇ, ವನವಾಸದಲ್ಲಿರುವ ಧೃತರಾಷ್ಟ್ರ ರಾಜನನ್ನು ಸೈನ್ಯ ಸಮೇತನಾದ ಯುಧಿಷ್ಠಿರನು ಸಹೋದರರೊಂದಿಗೆ ನೋಡಲು ಹೋದನು.
ಪ್ರಥಮೇ ದಿವಸೇ ಚೈಷಾಮಾಪೋ ಮೂಲಂ ಫಲಂ ತಥಾ |
ಭೋಜನಂ ಭೂಮಿಶಯ್ಯಾ ಚ ತತ್ರಾಸೀದ್ ಭರತರ್ಷಭ ॥7॥
ಇವರಿಗೆ ಮೊದಲನೆಯ ದಿನದಂದು ನೀರು ಹಾಗು ಗೆಡ್ಡೆ-ಗೆಣಸುಗಳು, ಫಲಗಳು ಆಹಾರವಾಗಿದ್ದವು. ಜೊತೆಗೆ ಭರತರ್ಷಭನೇ, ಅವರು ಭೂಮಿಯಲ್ಲೇ ಮಲಗಿಕೊಂಡರು.
ತೇಽನುಜ್ಞಾತಾಸ್ತದಾ ರಾಜನ್ ಕುರುರಾಜೇನ ಪಾಂಡವಾಃ |
ವಿವಿಧಾನ್ಯನ್ನಪಾನಾನಿ ಶಯ್ಯಾಶ್ಚೈವಾಭಜನ್ ವನೇ ॥8॥
ಹೇ ರಾಜನೇ, ಅನಂತರ ಪಾಂಡವರು ಕುರುರಾಜನಾದ ಧೃತರಾಷ್ಟ್ರನ ಒಪ್ಪಿಗೆಯನ್ನು ಪಡೆದು ನಾನಾ ರೀತಿಯ ಅನ್ನ-ಪಾನಗಳನ್ನೂ, ನಾನಾ ರೀತಿಯ ಹಾಸಿಗೆ ಮೊದಲಾದ ಸಾಮಗ್ರಿಗಳನ್ನು ಕಾಡಿನಲ್ಲಿ ಬಳಸಿಕೊಂಡರು.
ಮಾಸಮೇಕಂ ವಿಜಹ್ರುಸ್ತೇ ಸಸೈನ್ಯಾಂತಃಪುರಾ ವನೇ |
ಅಥ ತತ್ರಾಗಮದ್ ವ್ಯಾಸೋ ಯಥೋಕ್ತಂ ತೇ ಮಯಾಽನಘ ॥9॥
ಹೇ ಅನಘನೇ, ಅವರು ಸೈನ್ಯ ಮತ್ತು ಅಂತಃಪುರದ ಜನರೊಂದಿಗೆ ಕೂಡಿಕೊಂಡು ಒಂದು ತಿಂಗಳ ಕಾಲ ಕಾಡಿನಲ್ಲಿ ವಿಹರಿಸಿದರು. ಆ ಸಮಯದಲ್ಲೇ ನಾನು ಹಿಂದೆ ಹೇಳಿದಂತೆ, ಅಲ್ಲಿಗೆ ವ್ಯಾಸರು ಆಗಮಿಸಿದರು.
ತಥಾ ಚ ತೇಷಾಂ ಸರ್ವೇಷಾಂ ಕಥಾಭಿರ್ನೃಪಸನ್ನಿಧೌ |
ವ್ಯಾಸಮನ್ವಾಸ್ಯ ತಂ ರಾಜನ್ನಾಜಗ್ಮುರ್ಮುನಯೋಽಪರೇ ॥10॥
ನಾರದಃ ಪರ್ವತಶ್ಚೈವ ದೇವಲಶ್ಚ ಮಹಾತಪಾಃ |
ವಿಶ್ವಾವಸುಸ್ತುಂಬುರುಶ್ಚ ಚಿತ್ರಸೇನಶ್ಚ ಭಾರತ ॥11॥
ಹೇ ಭಾರತನೇ, ಹೀಗೆ ಆ ಎಲ್ಲರೂ ವೇದವ್ಯಾಸರನ್ನು ಸೇವಿಸುತ್ತಾ ರಾಜನ ಸನ್ನಿಧಿಯಲ್ಲಿ ನಾನಾ ರೀತಿಯ ಮಾತುಕಥೆಗಳನ್ನು ನಡೆಸುವಾಗಲೇ ನಾರದ, ಪರ್ವತರು, ಮಹಾತಪಸ್ವಿಯಾದ ದೇವಲರು, ವಿಶ್ವಾವಸು, ತುಂಬುರು, ಚಿತ್ರಸೇನ ಮೊದಲಾದ ಮುನಿಗಳು ಮತ್ತು ಬೇರೆ ಜನರು ಅಲ್ಲಿಗೆ ಬಂದರು.
ತೇಷಾಮಪಿ ಯಥಾನ್ಯಾಯಂ ಪೂಜಾಂ ಚಕ್ರೇ ಮಹಾತಪಾಃ |
ಧೃತರಾಷ್ಟ್ರಾಭ್ಯನುಜ್ಞಾತಃ ಕುರುರಾಜೋ ಯುಧಿಷ್ಠಿರಃ ॥12॥
ಆಗ ಮಹಾತಪಸ್ವಿಯಾದ, ಕುರುರಾಜನಾದ ಯುಧಿಷ್ಠಿರನು ಧೃತರಾಷ್ಟ್ರನ ಒಪ್ಪಿಗೆಯನ್ನು ಪಡೆದು ಅವರಿಗೂ ಯಥಾಯೋಗ್ಯವಾಗಿ ಪೂಜೆಯನ್ನು ನಡೆಸಿದನು.
ನಿಷೇದುಸ್ತೇ ತತಃ ಸರ್ವೇ ಪೂಜಾಂ ಪ್ರಾಪ್ಯ ಯುಧಿಷ್ಠಿರಾತ್ |
ಆಸನೇಷು ಚ ಪುಣ್ಯೇಷು ಬರ್ಹಿಷ್ಕೇಷು ನವೇಷು ಚ ॥13॥
ಅನಂತರ ಅವರೆಲ್ಲರೂ ಯುಧಿಷ್ಠಿರನಿಂದ ಪೂಜೆಯನ್ನು ಸ್ವೀಕರಿಸಿ, ಪುಣ್ಯಮಯವಾದ, ದರ್ಭೆಗಳಿಂದ ರಚಿತವಾದ ನೂತನವಾದ ಆಸನಗಳಲ್ಲಿ ಕುಳಿತುಕೊಂಡರು.
ತೇಷು ತತ್ರೋಪವಿಷ್ಟೇಷು ಸ ತು ರಾಜಾ ಮಹಾಮತಿಃ |
ಪಾಂಡುಪುತ್ರೈಃ ಪರಿವೃತೋ ನಿಷಸಾದ ಕುರೂದ್ವಹ ॥14॥
ಹೇ ಕುರೂದ್ವಹನೇ, ಅವರು ಆಸನಗಳಲ್ಲಿ ಕುಳಿತುಕೊಂಡ ನಂತರ ಮಹಾಮತಿಯಾದ, ಪಾಂಡವರಿಂದ ಕೂಡಿದ ಧೃತರಾಷ್ಟ್ರರಾಜನು ತಾನೂ ಕುಳಿತುಕೊಂಡನು.
ಗಾಂಧಾರೀ ಚೈವ ಕುಂತೀ ಚ ದ್ರೌಪದೀ ಸಾತ್ವತೀ ತಥಾ |
ಸ್ತ್ರಿಯಶ್ಚಾನ್ಯಾಸ್ತಥಾಽನ್ಯಾಭಿಃ ಸಹೋಪವಿವಿಶುಸ್ತತಃ ॥15॥
ಧೃತರಾಷ್ಟ್ರಾದಿಗಳು ಕುಳಿತುಕೊಂಡ ನಂತರ ಗಾಂಧಾರೀದೇವಿಯು, ಕುಂತೀ ದೇವಿಯು, ಸುಭದ್ರೆಯು ಹಾಗೆಯೇ ಅಂತಃಪುರದ ಇತರ ಸ್ತ್ರೀಯರೂ ಕೂಡ ಅಲ್ಲಿರುವ ಬೇರೆ ಸ್ತ್ರೀಯರೊಂದಿಗೆ ಕುಳಿತರು.
ತೇಷಾಂ ತತ್ರ ಕಥಾ ದಿವ್ಯಾ ಧರ್ಮಿಷ್ಠಾಶ್ಚಾಭವನ್ನೃಪ |
ರಾಜರ್ಷೀಣಾಂ ಪುರಾಣಾನಾಂ ದೇವಾಸುರವಿಮಿಶ್ರಿತಾಃ ॥16॥

ಹೇ ನೃಪನೇ, ಹೀಗೆ ಎಲ್ಲರೂ ಕುಳಿತುಕೊಂಡ ನಂತರ ಅವರ ಮಧ್ಯದಲ್ಲಿ ದೇವಾಸುರರ ಕಥೆಗಳಿಂದ ಕೂಡಿದ, ಪುರಾಣಕಾಲದ ರಾಜರ್ಷಿಗಳ ಧರ್ಮಭೂಯಿಷ್ಠವಾದ ದಿವ್ಯ ಮಾತುಕತೆಗಳು ನಡೆದವು.
ತತಃ ಕಥಾಂತೇ ವ್ಯಾಸಸ್ತಂ ಪ್ರಜ್ಞಾಚಕ್ಷುಷಮೀಶ್ವರಮ್ |
ಪ್ರೋವಾಚ ವದತಾಂ ಶ್ರೇಷ್ಠಃ ಪುನರೇವ ಸ ತದ್ವಚಃ ||17||
ಪ್ರೀಯಮಾಣೋ ಮಹಾತೇಜಾಃ ಸರ್ವವೇದವಿದಾಂ ವರಃ ||18||
ಹೀಗೆ ಮಾತುಕತೆಗಳು ನಡೆಯುತ್ತಿದ್ದಾಗ ಕಥೆಯ ಅಂತ್ಯಭಾಗದಲ್ಲಿ ವಾಗ್ಮಿಗಳಾದ, ಮಹಾತೇಜಸ್ವಿಗಳಾದ, ವೇದಗಳನ್ನು ಬಲ್ಲವರಲ್ಲಿ ವರಿಷ್ಠರಾದ ವೇದವ್ಯಾಸರು ಪ್ರಜ್ಞೆಯೇ ಕಣ್ಣುಗಳಾಗಿ ಉಳ್ಳ ಪ್ರಭುವಾದ ಆ ಧೃತರಾಷ್ಟ್ರನನ್ನು ಕುರಿತು ಮತ್ತೆ ಹೀಗೆ ಮಾತನಾಡಿದರು.
ವ್ಯಾಸಃ
ವಿದಿತಂ ಮಮ ರಾಜೇಂದ್ರ ಯತ್ತೇ ಹೃದಿ ವಿವಕ್ಷಿತಮ್ ||19||
ವ್ಯಾಸರು ಹೇ ರಾಜೇಂದ್ರನೇ, ನಿನ್ನ ಮನಸ್ಸಿನಲ್ಲಿ ಏನನ್ನು ಹೇಳಬೇಕೆಂಬ ಇಚ್ಛೆ ಇದೆಯೋ ಅದು ನನಗೆ ತಿಳಿದಿದೆ.
ದಹ್ಯಮಾನಸ್ಯ ಶೋಕೇನ ತವ ಪುತ್ರಕೃತೇನ ವೈ |
ಗಾಂಧಾರ್ಯಾಶ್ಚೈವ ಯದ್ ದುಃಖಂ ಹೃದಿ ತಿಷ್ಠತಿ ನಿತ್ಯದಾ ||20||
ಮಕ್ಕಳಿಂದುಂಟಾದ ಶೋಕದಿಂದ ಉರಿದು ಹೋಗುತ್ತಿರುವ ನಿನಗೆ ಮತ್ತು ಗಾಂಧಾರಿಗೆ ಹೃದಯದಲ್ಲಿ ನಿತ್ಯವೂ ಯಾವ ಶೋಕವು ನೆಲೆಸಿದೆಯೋ ಅದೂ ತಿಳಿದಿದೆ.
ಕುಂತ್ಯಾಶ್ಚ ಯನ್ಮಹಾರಾಜ ದ್ರೌಪದ್ಯಾಶ್ಚ ಹೃದಿ ಸ್ಥಿತಮ್ |
ಯಚ್ಚ ಧಾರಯತೇ ತೀವ್ರಂ ದುಃಖಂ ಪುತ್ರವಿನಾಶಜಮ್ ||21||
ಸುಭದ್ರಾ ಕೃಷ್ಣಭಗಿನೀ ತಚ್ಚಾಪಿ ವಿದಿತಂ ಮಮ ||22||
ಮಕ್ಕಳ ವಿನಾಶದಿಂದ ಉಂಟಾದ ತೀವ್ರವಾದ ದುಃಖವು ಏನು ಕುಂತಿಯ ಹೃದಯದಲ್ಲಿ ನೆಲೆಸಿದೆಯೋ ಹಾಗೂ ದ್ರೌಪದಿಯ ಹೃದಯದಲ್ಲಿ ನೆಲೆಸಿದೆಯೋ ಅಲ್ಲದೆ ಕೃಷ್ಣನ ಸಹೋದರಿಯಾದ ಸುಭದ್ರೆಯ ಹೃದಯದಲ್ಲಿದೆಯೋ ಅದೆಲ್ಲವೂ ನನಗೆ ತಿಳಿದಿದೆ.
ಶ್ರುತ್ವಾ ಸಮಾಗಮಮಿಮಂ ಸರ್ವೇಷಾಂ ವಸ್ತತೋ ನೃಪ |
ಸಂಶಯಚ್ಛೇದನಾರ್ಥಾಯ ಪ್ರಾಪ್ತಃ ಕೌರವನಂದನ ||23||
ಹೇ ನೃಪನೇ, ನಿಮ್ಮೆಲ್ಲರ ಈ ಸಮಾಗಮವನ್ನು ಕೇಳಿ ತಿಳಿದು, ನಿಮ್ಮೆಲ್ಲರ ಸಂಶಯವನ್ನು ಪರಿಹರಿಸುವುದಕ್ಕಾಗಿಯೇ ಕೌರವನಂದನನೇ, ನಾನು ಬಂದಿರುವೆನು.
ಇಮೇ ಚ ದೇವಗಂಧರ್ವಾಃ ಸರ್ವೇ ಚೇಮೇ ಮಹರ್ಷಯಃ |
ಪಶ್ಯಂತು ತಪಸೋ ವೀರ್ಯಮದ್ಯ ಮೇ ಚಿರಸಂಭೃತಮ್ ||24||
ಇಲ್ಲಿರುವ ಎಲ್ಲ ದೇವತೆಗಳು, ಗಂಧರ್ವರು, ಈ ಎಲ್ಲ ಮಹರ್ಷಿಗಳು ಬಹಳ ಕಾಲದಿಂದ ನಾನು ತಪಸ್ಸಿನಿಂದ ಸಂಗ್ರಹಿಸಿದ ಬಲವನ್ನು ನೋಡಲಿ.
ತದುಚ್ಯತಾಂ ಮಹಾಪ್ರಾಜ್ಞ ಕಂ ಕಾಮಂ ಪ್ರದದಾಮಿ ತೇ |
ಪ್ರವಣೋಸ್ಮಿ ವರಂ ದಾತುಂ ಪಶ್ಯ ಮೇ ತಪಸೋ ಬಲಮ್ ||25||
ಮಹಾಪ್ರಾಜ್ಞನೇ, ಆದ್ದರಿಂದ ನಿನ್ನ ಯಾವ ಬಯಕೆಯನ್ನು ಪೂರೈಸಬೇಕೆಂಬುದಾಗಿ ತಿಳಿಸು. ಆ ವರವನ್ನು ನೀಡಲು ನಾನು ಸಮರ್ಥನಾಗಿರುವೆನು. ನನ್ನ ತಪಸ್ಸಿನ ಬಲವನ್ನು ನೋಡು.
ಏವಮುಕ್ತಃ ಸ ರಾಜೇಂದ್ರೋ ವ್ಯಾಸೇನಾಮಿತಬುದ್ಧಿನಾ |
ಮುಹೂರ್ತಮಿವ ಸಂಚಿಂತ್ಯ ವಚನಾಯೋಪಚಕ್ರಮೇ ||26||
ಅಮಿತ ಬುದ್ಧಿಯುಳ್ಳ ವೇದವ್ಯಾಸರು ಹೀಗೆ ಹೇಳಿದಾಗ, ರಾಜಶ್ರೇಷ್ಠನಾದ ಆ ಧೃತರಾಷ್ಟ್ರನು ಸ್ವಲ್ಪ ಹೊತ್ತು ಚಿಂತಿಸಿ ಮಾತನಾಡಲು ಆರಂಭಿಸಿದನು.
ಧೃತರಾಷ್ಟ್ರಃ
ಧನ್ಯೋಽಸ್ಮ್ಯನುಗೃಹೀತಶ್ಚ ಸಫಲಂ ಜೀವಿತಂ ಚ ಮೇ |
ಯನ್ಮೇ ಸಮಾಗಮೋಽದ್ಯೇಹ ಭವದ್ಭಿಃ ಸಹ ಸಾಧುಭಿಃ ||27||
ಧೃತರಾಷ್ಟ್ರ ಇಂದು ಸಜ್ಜನರೊಂದಿಗೆ ಕೂಡಿದ ತಮ್ಮ ಸಮಾಗಮವು ಏನು ನಡೆದಿದೆಯೋ ಇದರಿಂದ ನಾನು ಕೃತಾರ್ಥನಾಗಿರುವೆನು. ತಮ್ಮಿಂದ ಅನುಗ್ರಹೀತನಾದ ನನ್ನ ಜೀವಿತವು ಇಂದು ಸಫಲವಾಯಿತು.
ಅದ್ಯ ಚಾಪ್ಯವಗಚ್ಛಾಮಿ ಗತಿಮಿಷ್ಟಾಮಿಹಾತ್ಮನಃ |
ಬ್ರಹ್ಮಕಲ್ಪೈರ್ಭವದ್ಭಿರ್ಯತ್ಸಮೇತೋಽಹಂ ತಪೋಧನಾಃ ||28||
ಹೇ ತಪೋಧನರೇ, ಬ್ರಹ್ಮಸದೃಶರಾದ ತಮ್ಮೊಂದಿಗೆ ಕೂಡಿದ ನಾನು ನನಗೆ ಅಭೀಷ್ಟವಾದ ಉತ್ತಮಗತಿಯು ಸಿಗುವುದೆಂದು ಇಂದೂ ನಂಬುತ್ತೇನೆ.
ದರ್ಶನಾದೇವ ಭವತಾಂ ಪೂತೋಽಹಂ ನಾತ್ರ ಸಂಶಯಃ |
ವಿದ್ಯತೇ ನ ಭಯಂ ಚಾಪಿ ಪರಲೋಕೇ ಮಮಾನಘಾಃ ||29||
ನಿಮ್ಮಂತಹ ಸಜ್ಜನರ ದರ್ಶನದಿಂದಲೇ ನಾನು ಪವಿತ್ರನಾದೆನು. ಇದರಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಹೇ ಅನಘರೇ, ನನಗೆ ಪರಲೋಕದ ವಿಷಯದಲ್ಲಿ ಭಯವೂ ಇಲ್ಲವಾಗಿದೆ.
ಕಿಂತು ತಸ್ಯ ಸುದುರ್ಬುದ್ಧೇರ್ಮಂದಸ್ಯಾಪನಯೈರ್ಭೃಶಮ್ |
ದೂಯತೇ ಮೇ ಮನೋ ನಿತ್ಯಂ ಸ್ಮರತಃ ಪುತ್ರಗೃದ್ಧಿನಃ ||30||

ಆದರೆ ಅತ್ಯಂತ ದುರ್ಬುದ್ಧಿಯಾಗಿದ್ದ, ಮೂಢನಾದ ಆ ದುರ್ಯೋಧನನ ಬಹುವಾದ ಅನ್ಯಾಯಗಳಿಂದ, ಮಕ್ಕಳಿಗಾಗಿ ಆಸೆಪಟ್ಟ ನನ್ನ ಮನಸ್ಸು ಅದನ್ನು ಸ್ಮರಿಸಿಕೊಂಡು ಬಹಳ ಕಷ್ಟಪಡುತ್ತಿದೆ.
ಅಪಾಪಾಃ ಪಾಂಡವಾ ಯೇನ ನಿಕೃತಾಃ ಪಾಪಬುದ್ಧಿನಾ |
ಘಾತಿತಾ ಪೃಥಿವೀ ಯೇನ ಸಹಯಾ ಸನರದ್ವಿಪಾ ||31||
ಏಕೆಂದರೆ ಪಾಪಬುದ್ಧಿಯುಳ್ಳ ಯಾವ ದುರ್ಯೋಧನನಿಂದ ಪಾಪವನ್ನೇ ಮಾಡದ ಪಾಂಡವರು ಮೋಸಕ್ಕೊಳಗಾದರು. ಅಲ್ಲದೇ ಕುದುರೆಗಳು ಮತ್ತು ಆನೆಗಳಿಂದ ಕೂಡಿದ ಮನುಷ್ಯರಿಂದಲೂ ಕೂಡಿದ ಇಡೀ ಭೂಮಿಯು ನಾಶವಾಯಿತು.
ರಾಜಾನಶ್ಚ ಮಹಾತ್ಮಾನೋ ನಾನಾಜನಪದೇಶ್ವರಾಃ |
ಆಗಮ್ಯ ಮಮ ಪುತ್ರಾರ್ಥೇ ಸರ್ವೇ ಮೃತ್ಯುವಶಂ ಗತಾಃ ||32||
ನಾನಾ ಜನಪದಗಳಿಗೆ ನಾಯಕರಾದ, ಮಹಾತ್ಮರಾದ ಅನೇಕ ಮಂದಿ ರಾಜರುಗಳು ನನ್ನ ಮಗನಿಗೋಸ್ಕರ ಇಲ್ಲಿ ಬಂದು ಎಲ್ಲರೂ ಮೃತ್ಯುವಶರಾದರು.
ಯೇ ತೇ ಪಿತೄಂಶ್ಚ ದಾರಾಂಶ್ಚ ಪ್ರಾಣಾಂಶ್ಚ ಮನಸಃ ಪ್ರಿಯಾನ್ |
ಪರಿತ್ಯಜ್ಯ ಗತಾಃ ಶೂರಾಃ ಪ್ರೇತರಾಜನಿವೇಶನಮ್ ||33||
ಆ ಎಲ್ಲರೂ ಕೂಡ ತಮಗೆ ಅತ್ಯಂತ ಪ್ರೀತಿಪಾತ್ರರಾದ ಪಿತೃಗಳನ್ನೂ, ಹೆಂಡಂದಿರನ್ನೂ, ಅಷ್ಟೇ ಏಕೆ ಪ್ರಾಣಗಳನ್ನೂ ಬಿಟ್ಟು ತಾವೆಷ್ಟು ಶೂರರಾಗಿದ್ದರೂ ಪ್ರೇತರಾಜನ ಮನೆಗೆ ಹೊರಟು ಹೋದರು.
ಕಾ ನು ತೇಷಾಂ ಗತಿರ್ಬ್ರಹ್ಮನ್ ಮಿತ್ರಾರ್ಥೇ ಯೇ ಹತಾ ಮೃಧೇ |
ತಥೈವ ಪುತ್ರಪೌತ್ರಾಣಾಂ ಮಮ ಯೇ ನಿಹತಾ ಯುಧಿ ||34||
ಹೇ ಬ್ರಹ್ಮನ್, ಮಿತ್ರರಿಗೋಸ್ಕರ ಯಾರು ಯುದ್ಧದಲ್ಲಿ ಹತರಾದರೋ ಅವರಿಗೆ ಯಾವ ರೀತಿಯ ಗತಿಯುಂಟಾಯಿತು? ಅಂತೆಯೇ, ಯುದ್ಧದಲ್ಲೇ ನಿಹತರಾದ ನನ್ನ ಮಕ್ಕಳು ಹಾಗೂ ಮೊಮ್ಮಕ್ಕಳು ಯಾರಿರುವರೋ ಅವರಿಗೂ ಯಾವ ಗತಿ ಉಂಟಾಯಿತು?
ದೂಯತೇ ಮೇ ಮನೋಽಭೀಕ್ಷ್ಣಂ ಘಾತಯಿತ್ವಾ ಮಹಾಬಲಮ್ |
ಭೀಷ್ಮಂ ಶಾಂತನವಂ ವೃದ್ಧಂ ದ್ರೋಣಂ ಚ ದ್ವಿಜಸತ್ತಮಮ್ ||35||
ಶಂತನುವಿನ ಮಗನಾದ ವೃದ್ಧನಾದ ಭೀಷ್ಮರನ್ನೂ, ಬ್ರಾಹ್ಮಣಶ್ರೇಷ್ಠರಾದ ದ್ರೋಣರನ್ನೂ ಕೂಡಿದ ಮಹಾಬಲರನ್ನೂ ನಾಶಗೊಳಿಸಿ ನನ್ನ ಮನಸ್ಸು ಬಹಳವಾಗಿ ಪರಿತಪಿಸುತ್ತಿದೆ.
ಮಮ ಪುತ್ರೇಣ ಮೂಢೇನ ಪಾಪೇನಾಕೃತಬುದ್ಧಿನಾ |
ಕ್ಷಯಂ ನೀತಂ ಕುಲಂ ದೀಪ್ತಂ ಪೃಥಿವೀರಾಜ್ಯಮಿಚ್ಛತಾ ||36||
ಮೂರ್ಖನಾದ, ಪಾಪಿಷ್ಠನಾದ, ಬುದ್ಧಿನೆಟ್ಟಗಿಲ್ಲದ, ಭೂಮಿಯನ್ನೂ ರಾಜ್ಯವನ್ನೂ ಬಯಸುವ ನನ್ನ ಮಗನಿಂದ ಶೋಭಾಯಮಾನವಾದ ನಮ್ಮ ಕುಲವು ನಾಶಕ್ಕೊಳಗಾಯಿತು.
ಏತೇ ಮದರ್ಥೇ ಪುತ್ರಾಂಶ್ಚ ದಾರಾಂಶ್ಚ ಮನಸಃ ಪ್ರಿಯಾನ್ |
ಭೋಗಾಂಶ್ಚ ವಿವಿಧಾಂಸ್ತಾತ ಇಷ್ಟಾಪೂರ್ತಾಂಸ್ತಥೈವ ಚ ||37||
ಪರಿತ್ಯಜ್ಯ ಗತಾಃ ಶೂರಾಃ ಪ್ರೇತರಾಜನಿವೇಶನಮ್ ||38||
ಈ ಎಲ್ಲರೂ ಕೂಡ ನನಗೋಸ್ಕರ ತಮಗೆ ಅತ್ಯಂತ ಪ್ರೀತಿ ಪಾತ್ರರಾದ ಮಕ್ಕಳನ್ನೂ, ಹೆಂಡಂದಿರನ್ನೂ, ನಾನಾ ರೀತಿಯ ಭೋಗಗಳನ್ನೂ ಅಂತೆಯೇ ತಾವು ಮಾಡುವ ಯಜ್ಞ-ಯಾಗ ಮತ್ತು ಲೋಕೋಪಕಾರ ಕೆಲಸಗಳನ್ನೂ ಬಿಟ್ಟು ತಾವೆಷ್ಟೇ ಶೂರರಾಗಿದ್ದರೂ ಯಮಪಟ್ಟಣಕ್ಕೆ ಹೊರಟು ಹೋದರು.
ಏತತ್ಸರ್ವಮನುಸ್ಮೃತ್ಯ ದಹ್ಯಮಾನೋ ದಿವಾನಿಶಮ್ |
ನ ಶಾಂತಿಮಧಿಗಚ್ಛಾಮಿ ದುಃಖಶೋಕಸಮಾಹತಃ ||39||
ಇತಿ ಮೇ ಚಿಂತಯಾನಸ್ಯ ಪಿತಃ ಶಾಂತಿರ್ನ ವಿದ್ಯತೇ ||40||
ಈ ಎಲ್ಲವನ್ನೂ ಮತ್ತೆ ಮತ್ತೆ ಸ್ಮರಿಸುತ್ತಾ ಹಗಲು-ರಾತ್ರಿ ಬೆಂಕಿಯಲ್ಲಿ ಬಿದ್ದವರಂತೆ ಚಟಪಡಿಸುತ್ತಾ, ದುಃಖಶೋಕಗಳಿಂದ ಪರಿತಪಿಸುತ್ತಾ, ಇದರ ಶಮನೋಪಾಯ ಏನೆಂಬುದಾಗಿ ತಿಳಿಯಲಾರದವನಾಗಿದ್ದೇನೆ. ಹೇ ತಂದೆಯೇ, ಇವೆಲ್ಲವನ್ನೂ ಚಿಂತಿಸುತ್ತಾ ನನಗೆ ಮನಶ್ಶಾಂತಿಯೇ ಇಲ್ಲವಾಗಿದೆ.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರಸ್ಯ ಶೋಕವಚನಂ ನಾಮ ಚತುಸ್ತ್ರಿಂಶೋಽಧ್ಯಾಯಃ ||
|| ಪುತ್ರದರ್ಶನಪರ್ವಣಿ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೈದನೆಯ ಅಧ್ಯಾಯ
ಗಾಂಧಾರಿಯು ವೇದವ್ಯಾಸರಲ್ಲಿ ಧೃತರಾಷ್ಟ್ರನಿಗೆ ಮಕ್ಕಳನ್ನು ನೋಡುವ ಬಯಕೆ ಇದೆ ಎಂದು ನಿವೇದಿಸಿದಾಗ ವೇದವ್ಯಾಸರು ಕುಂತಿಯಲ್ಲಿ ಅವಳ ಅಭೀಷ್ಟವನ್ನು ನಿವೇದಿಸುವಂತೆ ಸೂಚಿಸುವುದು.
ವೈಶಂಪಾಯನಃ
ತಚ್ಛ್ರುತ್ವಾ ವಿವಿಧಂ ತಸ್ಯ ರಾಜರ್ಷೇಃ ಪರಿದೇವಿತಮ್ |
ಪುನರ್ನವೀಕೃತಃ ಶೋಕೋ ಗಾಂಧಾರ್ಯಾ ಜನಮೇಜಯ ||1||
ವೈಶಂಪಾಯನ ಹೇ ಜನಮೇಜಯನೇ, ರಾಜರ್ಷಿಯಾದ ಆ ಧೃತರಾಷ್ಟ್ರನ ನಾನಾ ರೀತಿಯ ಆ ವಿಲಾಪವನ್ನು ಕೇಳಿ ಗಾಂಧಾರಿಯ

ಶೋಕವು ಮತ್ತೆ ಉಮ್ಮಳಿಸಿ ಬಂತು.
ಕುಂತ್ಯಾ ದ್ರುಪದಪುತ್ರ್ಯಾಶ್ಚ ಸುಭದ್ರಾಯಾಸ್ತಥೈವ ಚ |
ತಾಸಾಂ ಚ ವರನಾರೀಣಾಂ ವಧೂನಾಂ ಕೌರವಸ್ಯ ಚ ||2||
ಅದೇ ರೀತಿ ಕುಂತಿಗೂ, ದ್ರೌಪದಿಗೂ, ಅಂತೆಯೇ ಸುಭದ್ರೆಗೂ ಅಷ್ಟಲ್ಲದೆ ಧೃತರಾಷ್ಟ್ರನ ಸೊಸೆಯರಾದ ಎಲ್ಲ ಶ್ರೇಷ್ಠ ಸ್ತ್ರೀಯರಿಗೂ ದುಃಖ ಉಮ್ಮಳಿಸಿ ಬಂತು.
ಪುತ್ರಶೋಕಸಮಾವಿಷ್ಟಾ ಗಾಂಧಾರೀ ತ್ವಿದಮಬ್ರವೀತ್ |
ಶ್ವಶುರಂ ಬದ್ಧನಯನಾ ದೇವೀ ಪ್ರಾಂಜಲಿರುತ್ಥಿತಾ ||3||
ಪುತ್ರಶೋಕದಿಂದ ಕೂಡಿದ ಗಾಂಧಾರಿಯು ಮಾವನಾದ ವೇದವ್ಯಾಸರ ಎದುರು ಕೈಮುಗಿದು ನಿಂತುಕೊಂಡು ಕಣ್ಣು ಮುಚ್ಚಿಕೊಂಡು ಹೀಗೆ ಹೇಳಿದಳು.
ಲೋಕಾಂತರಗತಾನ್ ಪುತ್ರಾನಯಂ ಕಾಂಕ್ಷತಿ ಮಾನದ |
ತಚ್ಚಾಸ್ಯ ಮಾನಸಂ ಜ್ಞಾತಂ ಭಗವಂಸ್ತಪಸಾ ತ್ವಯಾ ||4||
ಹೇ ಭಗವನ್, ಗೌರವಾನ್ವಿತನೇ, ಈ ಧೃತರಾಷ್ಟ್ರ ರಾಜನು ಪರಲೋಕದಲ್ಲಿರುವ ಮಕ್ಕಳನ್ನು ನೋಡಬಯಸುತ್ತಿದ್ದಾನೆ. ತಮಗೂ ಕೂಡ ತಪೋಬಲದಿಂದ ಇವನ ಮನೋಭೀಷ್ಟವು ತಿಳಿದಿದೆಯಲ್ಲವೇ?
ಷೋಡಶೇಮಾನಿ ವರ್ಷಾಣಿ ಗತಾನಿ ಮುನಿಪುಂಗವ |
ಅಸ್ಯ ರಾಜ್ಞೋ ಹತಾನ್ ಪುತ್ರಾನ್ ಶೋಚತೋ ನ ಶಮೋ ವಿಭೋ ||
ಹೇ ಮುನಿಪುಂಗವನೇ, ವಿಭೋ, ಕಳೆದುಕೊಂಡ ಮಕ್ಕಳ ಬಗ್ಗೆ ದುಃಖಿಸುತ್ತಾ ಈ ರಾಜನ ಈ ಹದಿನಾರು ವರ್ಷಗಳು ಕಳೆದು ಹೋದವು.
ಪುತ್ರಶೋಕಸಮಾವಿಷ್ಟೋ ನಿಃಶ್ವಸನ್ ಹ್ಯೇಷ ಭೂಮಿಪಃ |
ನ ಶೇತೇ ವಸತೀಃ ಸರ್ವಾ ಧೃತರಾಷ್ಟ್ರೋ ಮಹಾಮುನೇ ||6||
ಹೇ ಮಹಾಮುನಿಯೇ, ಈ ಭೂಮಿಪಾಲನಾದ ಧೃತರಾಷ್ಟ್ರನು ಪುತ್ರಶೋಕದಿಂದ ತತ್ತರಿಸಿದವನಾಗಿ, ನಿಟ್ಟುಸಿರು ಬಿಡುತ್ತಾ, ಎಲ್ಲ ರಾತ್ರಿಗಳಲ್ಲೂ ನಿದ್ದೆ ಬಾರದೆ ಚಡಪಡಿಸುತ್ತಿದ್ದಾನೆ.
ಲೋಕಾನನ್ಯಾನ್ ಸಮರ್ಥೋಽಸಿ ಸ್ರಷ್ಟುಂ ಸರ್ವಾಂಸ್ತಪೋಬಲಾತ್ |
ಕಿಮು ಲೋಕಾಂತರಗತಾನ್ ರಾಜ್ಞೋ ದರ್ಶಯಿತುಂ ಸುತಾನ್ ||7||
ನೀನು ಎಲ್ಲ ಲೋಕಗಳನ್ನು ತಪೋಬಲದಿಂದ ತಲುಪಲು ಸಮರ್ಥನಾಗಿರುವೆ. ಹಾಗಿರುವಾಗ ಪರಲೋಕದಲ್ಲಿರುವ ರಾಜನ ಮಕ್ಕಳನ್ನು ತೋರಿಸಲಾಗದೆ?
ಇಯಂ ಚ ದ್ರೌಪದೀ ಕೃಷ್ಣಾ ಹತಜ್ಞಾತಿಸುತಾ ಭೃಶಮ್ |
ಶೋಚತ್ಯತೀವ ಸರ್ವಾಸಾಂ ಸ್ನುಷಾಣಾಂ ದಯಿತಾ ಸ್ನುಷಾ ||8||
ಎಲ್ಲ ಸೊಸೆಯಂದಿರ ಮಧ್ಯೆ ಅತ್ಯಂತ ಪ್ರೀತಿಪಾತ್ರ ಸೊಸೆಯಾದ ಈ ಕೃಷ್ಣೆ ದ್ರೌಪದಿಯೂ ಕೂಡ ಬಂಧುಗಳನ್ನೂ, ಮಕ್ಕಳನ್ನೂ ಕಳೆದುಕೊಂಡು ಬಹುವಾಗಿ ದುಃಖಿಸುತ್ತಿದ್ದಾಳೆ.
ತಥಾ ಕೃಷ್ಣಸ್ಯ ಭಗಿನೀ ಸುಭದ್ರಾ ಭದ್ರಭಾಷಿಣೀ |
ಸೌಭದ್ರವಧಸಂತಪ್ತಾ ಭೃಶಂ ಶೋಚತಿ ಭಾಮಿನೀ ||9||
ಹಾಗೆಯೇ ಕೃಷ್ಣನ ತಂಗಿಯಾದ, ಮಂಗಳವಾದ ಮಾತುಳ್ಳ ಈ ಭಾಮಿನಿ ಸುಭದ್ರೆಯೂ ಅಭಿಮನ್ಯುವಿನ ಮರಣದಿಂದ ಸಂತಪ್ತಳಾಗಿ ಬಹುದುಃಖವನ್ನು ಅನುಭವಿಸುತ್ತಿದ್ದಾಳೆ.
ಇಯಂ ಚ ಭೂರಿಶ್ರವಸೋ ಭಾರ್ಯಾ ಪರಮಸಮ್ಮತಾ |
ಭರ್ತೃವ್ಯಸನಶೋಕಾರ್ತಾ ಭೃಶಂ ಶೋಚತಿ ಭಾಮಿನೀ ||10||
ಯಸ್ಯಾಸ್ತು ಶ್ವಶುರೋ ಧೀಮಾನ್ ಬಾಹ್ಲಿಕಃ ಸ ಕುರೂದ್ವಹಃ |
ನಿಹತಃ ಸೋಮದತ್ತಶ್ಚ ಪಿತ್ರಾ ಸಹ ಮಹಾರಣೇ ||11||
ಹಿರಿಯರನ್ನು ಗೌರವದಿಂದ ನೋಡಿಕೊಳ್ಳುತ್ತಿದ್ದ ಭೂರಿಶ್ರವಸ್ಸಿನ ಪತ್ನಿಯಾದ ಈ ಭಾಮಿನಿಯೂ ಕೂಡ ಗಂಡನನನ್ನು ಕಳೆದುಕೊಂಡ ದುಃಖದಿಂದ ತಪ್ತಳಾಗಿ ಬಹಳ ದುಃಖಪಡುತ್ತಿದ್ದಾಳೆ. ಇವಳ ಮಾವನಾದ ಕುರುವಂಶದಲ್ಲೇ ಬಂದ ಧೀಮಂತನಾದ ಬಾಹ್ಲೀಕ ದೇಶದ ಸೋಮದತ್ತನೂ ಕೂಡ ಮಹಾಯುದ್ಧದಲ್ಲಿ ತನ್ನ ತಂದೆಯೊಂದಿಗೆ ಹತನಾಗಿರುವನು.
ಶ್ರೀಮತೋಽಸ್ಯ ಮಹಾಬುದ್ಧೇಃ ಸಂಗ್ರಾಮೇಷ್ವಪಲಾಯಿನಃ |
ಪುತ್ರಸ್ಯ ತೇ ಪುತ್ರಶತಂ ನಿಹತಂ ಯದ್ ರಣಾಜಿರೇ ||12||
ತಸ್ಯ ಭಾರ್ಯಾಶತಮಿದಂ ದುಃಖಶೋಕಸಮಾಹತಮ್ |
ಪುನಃಪುನರ್ವರ್ಧಯಾನಂ ಶೋಕಂ ರಾಜ್ಞೋ ಮಮೈವ ಚ |
ಹತಾಹಾರೇಣ ಮಹತಾ ಮಾಮುಪಾಸ್ತೇ ಮಹಾಮುನೇ ||13||
ಹೇ ಮಹಾಮುನಿಯೇ, ಶ್ರೀಮಂತನಾದ ಮಹಾಬುದ್ಧಿಯುಳ್ಳ ಯುದ್ಧಕ್ಕೆ ಹೆದರದ ನಿನ್ನ ಮಗನಾದ ಈ ಧೃತರಾಷ್ಟ್ರನ ನೂರು ಮಂದಿ ಮಕ್ಕಳು ಯುದ್ಧದಲ್ಲಿ ಏನು ಹತರಾಗಿರುವರೋ ಅವರ ನೂರು ಮಂದಿ ಪತ್ನಿಯರು ದುಃಖ ಹಾಗೂ ಶೋಕಗಳಿಂದ ಪೀಡಿಸಲ್ಪಟ್ಟವರಾಗಿ ರಾಜನಾದ ಧೃತರಾಷ್ಟ್ರನ ಮತ್ತು ನನ್ನ ಶೋಕವನ್ನು ಮತ್ತೆ ಮತ್ತೆ ಹೆಚ್ಚಿಸುತ್ತಾ ಅನ್ನಾಹಾರಗಳನ್ನು ಬಿಡುವ ಮೂಲಕ ದೊಡ್ಡ ತಪಸ್ಸಿನೊಂದಿಗೆ ನನ್ನನ್ನು ಸೇವಿಸುತ್ತಿದ್ದಾರೆ.
ಯೇ ಚ ಶೂರಾ ಮಹಾತ್ಮಾನಃ ಶ್ವಶುರಾ ಮೇ ಮಹಾರಥಾಃ |
ಸೋಮದತ್ತಪ್ರಭೃತಯಃ ಕಾ ನು ತೇಷಾಂ ಗತಿಃ ಪ್ರಭೋ ||14||

ಹೇ ಪ್ರಭುವೇ, ಶೂರರಾದ, ಮಹಾತ್ಮರಾದ, ಮಹಾರಥ ಎಂಬ ಪದವಿಯನ್ನು ಪಡೆದ ಸೋಮದತ್ತನೇ ಮೊದಲಾದ ನನ್ನ ಮಾವಂದಿರು ಏನು ಯುದ್ಧದಲ್ಲಿ ಮಡಿದಿರುವರೋ ಪರಲೋಕದಲ್ಲಿ ಅವರಿಗಾದ ಗತಿಯೇನು?
ತವ ಪ್ರಸಾದಾದ್ ಭಗವನ್ ವಿಶೋಕೋಽಯಂ ಮಹೀಪತಿಃ |
ಕುರ್ಯಾತ್ ಕಾಲಮಹಂ ಚೇಯಂ ವಧೂಸ್ತವ ಮಹಾಮುನೇ ॥15॥
ಮಹಾಮುನಿಯೇ, ಈ ಧೃತರಾಷ್ಟ್ರ ರಾಜನು ಮತ್ತು ನಿನ್ನ ಸೊಸೆಯಾದ ನಾನೂ ಕೂಡ ನಿನ್ನ ಪ್ರಸಾದದಿಂದ ಶೋಕವಿಲ್ಲದೆ ಕಾಲಯಾಪನೆ ನಡೆಸುವಂತೆ ಅನುಗ್ರಹಿಸು.
ಇತ್ಯುಕ್ತವತ್ಯಾಂ ಗಾಂಧಾರ್ಯಾಂ ಕುಂತೀ ವ್ರತಕೃಶಾನನಾ |
ಪ್ರಚ್ಛನ್ನಜಾತಂ ಪುತ್ರಂ ತಂ ಸಸ್ಮಾರಾದಿತ್ಯಸನ್ನಿಭಮ್ ॥16॥
ಹೀಗೆ ಗಾಂಧಾರೀದೇವಿಯು ಹೇಳುತ್ತಿರುವಾಗಲೇ ವ್ರತದಿಂದಾಗಿ ಬಾಡಿದ ಮುಖವುಳ್ಳ ಕುಂತೀದೇವಿಯು ಗುಟ್ಟಾಗಿ ಜನಿಸಿದ ಸೂರ್ಯಸದೃಶನಾದ ಆ ಪುತ್ರನನ್ನು ಸ್ಮರಿಸಿಕೊಂಡಳು.
ತಾಮೃಷಿರ್ವರದೋ ವ್ಯಾಸೋ ದೂರಶ್ರವಣದರ್ಶನಃ |
ಅಪಶ್ಯದ್ ದುಃಖಿತಾಂ ದೇವೀಂ ಮಾತರಂ ಸವ್ಯಸಾಚಿನಃ ॥17॥
ಹೀಗೆ ದುಃಖಿತಳಾದ, ಅರ್ಜುನನ ತಾಯಿಯಾದ ಆ ಕುಂತೀದೇವಿಯನ್ನು ವರದರಾದ, ಎಷ್ಟೇ ದೂರದಲ್ಲಿರುವುದನ್ನೂ ಕೇಳಬಲ್ಲ ಮತ್ತು ನೋಡಬಲ್ಲ ವೇದವ್ಯಾಸ ಋಷಿಗಳು ನೋಡಿದರು.
ತಾಮುವಾಚ ತತೋ ವ್ಯಾಸೋ ಯತ್ತೇ ಕಾರ್ಯಂ ವಿವಕ್ಷಿತಮ್ |
ತದ್ ಬ್ರೂಹಿ ತ್ವಂ ಮಹಾಭಾಗೇ ಯತ್ತೇ ಮನಸಿ ವರ್ತತೇ ॥18॥
ಹೀಗೆ ನೋಡಿದ ವೇದವ್ಯಾಸರು ನಿನಗೆ ಏನು ಮಾಡಬೇಕೆಂಬ ಬಯಕೆ ಇದೆ? ನಿನ್ನ ಮನಸ್ಸಿನಲ್ಲಿ ಏನಿದೆ? ಮಹಾತ್ಮಳೇ, ಅದನ್ನು ನೀನು ಹೇಳು ಎಂದು ಕುಂತಿಯನ್ನು ಕುರಿತು ಹೇಳಿದರು.
ಶ್ವಶುರಾಯ ತತಃ ಕುಂತೀ ಪ್ರಣಮ್ಯ ಶಿರಸಾ ತದಾ |
ಉವಾಚ ವಾಕ್ಯಂ ಸವ್ರೀಡಾ ವಿವೃಣ್ವಾನಾ ಪುರಾತನಮ್ ॥19॥
ಆಗ ಕುಂತೀದೇವಿಯು ಮಾವನಾದ ಧೃತರಾಷ್ಟ್ರನಿಗೆ ತಲೆಬಾಗಿ ನಮಸ್ಕರಿಸಿ, ಹಿಂದೆ ನಡೆದ ಘಟನೆಯನ್ನು ವಿವರಿಸುವುದಕ್ಕಾಗಿ ನಾಚಿಕೆಯಿಂದ ಕೂಡಿಕೊಂಡು ಮಾತನಾಡಲು ಆರಂಭಿಸಿದಳು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಗಾಂಧಾರೀವಚನಂ ನಾಮ ಪಂಚತ್ರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತಾರನೆಯ ಅಧ್ಯಾಯ
ಕುಂತಿಯು ವೇದವ್ಯಾಸರಲ್ಲಿ ದುರ್ವಾಸರ ಅನುಗ್ರಹದಿಂದ ಸೂರ್ಯದೇವನಿಂದ ತನ್ನಲ್ಲಿ ಕರ್ಣನ ಉತ್ಪತ್ತಿಯಾಗಿರುವುದನ್ನು ತಿಳಿಸುವ ಮೂಲಕ ಅವನನ್ನು ನೋಡಬೇಕೆಂಬ ಬಯಕೆ ಇದೆ ಎಂದು ನಿವೇದಿಸುವುದು. ವೇದವ್ಯಾಸರು ಸಕಾರಣವಾಗಿ ಕರ್ಣನ ಉತ್ಪತ್ತಿಯಿಂದ ಕುಂತಿಗೆ ಯಾವುದೇ ದೋಷವಿಲ್ಲ ಎನ್ನುತ್ತಾ ಅವಳ ಶಂಕೆಯನ್ನು ಪರಿಹರಿಸುವುದು.
ಕುಂತೀ
ಭಗವಾನ್ ಶ್ವಶುರೋ ಮೇಽಸಿ ದೈವತಸ್ಯಾಪಿ ದೈವತಮ್ |
ಸ ಮೇ ದೇವಾತಿದೇವಸ್ತ್ವಂ ಶೃಣು ಸತ್ಯಾಂ ಗಿರಂ ಮಮ ॥1॥
ಕುಂತೀ ಹೇ ಭಗವನ್, ನೀನು ನನಗೆ ಮಾವನಾಗಿರುವಿ. ದೇವತೆಗಳಿಗೂ ದೇವತೆಯಾಗಿರುವ ನೀನು ನನಗೆ ದೇವಾಧಿದೇವನಾಗಿರುವಿ. ನನ್ನ ಸತ್ಯವಾದ ಮಾತುಗಳನ್ನು ಆಲಿಸು.
ತಪಸ್ವೀ ಕೋಪನೋ ವಿಪ್ರೋ ದುರ್ವಾಸಾ ನಾಮ ಮೇ ಪಿತುಃ |
ಭಿಕ್ಷಾಮುಪಗತೋ ಭೋಕ್ತುಂ ತಮಹಂ ಪರ್ಯತೋಷಯಮ್ ॥2॥
ನಾನು ತಂದೆಯ ಮನೆಯಲ್ಲಿದ್ದಾಗ ಒಂದು ದಿನ ಅತಿಯಾದ ಕೋಪವುಳ್ಳ, ತಪಸ್ವಿಯಾದ ದುರ್ವಾಸನೆಂಬ ವಿಪ್ರನು ನನ್ನ ತಂದೆ ಇದ್ದಲ್ಲಿಗೆ ಭಿಕ್ಷೆಯನ್ನು ಸ್ವೀಕರಿಸಲು ಬಂದನು. ಅವನನ್ನು ನಾನು ಸೇವೆಯಿಂದ ಸಂತೋಷಗೊಳಿಸಿದೆನು.
ಶೌಚೇನ ತ್ವಾಗಸಸ್ತ್ಯಾಗೈಃ ಶುದ್ಧೇನ ಮನಸಾ ತಥಾ |
ಕೋಪಸ್ಥಾನೇಷ್ವಪಿ ಮಹತ್ಸ್ವಕುಪ್ಯನ್ನ ಕದಾಚನ ॥3॥
ಶೌಚಾಚಾರದಿಂದ ಶುದ್ಧಳಾಗಿ, ವಂಚನೆಯನ್ನು ಬಿಟ್ಟು, ಶುದ್ಧವಾದ ಮನಸ್ಸಿನಿಂದ, ನಾನು ಕೋಪಗೊಳ್ಳಬೇಕಾದ ಮಹತ್ತರ ಸನ್ನಿವೇಶಗಳು ಬಂದಾಗಲೂ ನಾನು ಕೋಪಗೊಳ್ಳಲಿಲ್ಲ.
ಸ ಪ್ರೀತೋ ವರದೋ ಮೇಽಭೂತ್ ಕೃತಕೃತ್ಯೋ ಮಹಾಮುನಿಃ |
ಅವಶ್ಯಂ ತೇ ಗ್ರಹೀತವ್ಯಮಿತಿ ಮಾಂ ಸೋಽಬ್ರವೀದ್ ವಚಃ ॥4॥
ನನ್ನ ಈ ರೀತಿಯ ಸೇವೆಯಿಂದ ಸಂತೋಷಗೊಂಡ, ಕೃತಾರ್ಥನಾದ ಮಹಾಮುನಿಯು ನನಗೆ ವರ ನೀಡಲು ಮುಂದಾದನು. ಅವಶ್ಯವಾಗಿ ನಾನು ನೀಡುವ ವರವನ್ನು ಸ್ವೀಕರಿಸಬೇಕೆಂದು ಅವನು ತಿಳಿಸಿದನು.
ತತಃ ಶಾಪಭಯಾದ್ ವಿಪ್ರಮವೋಚಂ ಪುನರೇವ ತಮ್ |
ಏವಮಸ್ತ್ವಿತಿ ಚ ಪ್ರಾಹ ಪುನರೇವ ಸ ಮೇ ದ್ವಿಜಃ ॥5॥

ನಾನು ಒಪ್ಪದಿದ್ದರೆ ಮತ್ತೆ ಅವನು ಶಾಪ ನೀಡಬಹುದೆಂಬ ಭಯದಿಂದ ಹಾಗೆಯೇ ಆಗಲಿ ಎಂದು ಹೇಳಿದೆನು. ಆಗ ಆ ದ್ವಿಜನು ಮತ್ತೆ ಹೀಗೆ ಹೇಳಿದನು.
ಧರ್ಮಸ್ಯ ಜನನೀ ಭದ್ರೇ ಭವಿತ್ರೀ ತ್ವಂ ಶುಭಾನನೇ |
ವಶೇ ಸ್ಥಾಸ್ಯಂತಿ ತೇ ದೇವಾ ಯಾಂಸ್ತ್ವಮಾವಾಹಯಿಷ್ಯಸಿ ॥6॥
ಹೇ ಶುಭಾನನೆಯೇ, ಮಹಾಮಹಿಮಳೇ, ನೀನು ಧರ್ಮದ ತಾಯಿಯಾಗಿರುವಿ. ಯಾವ ದೇವತೆಗಳನ್ನು ನೀನು ಆರಾಧಿಸುವೆಯೋ ಆ ದೇವತೆಗಳು ನಿನ್ನ ವಶದಲ್ಲಿ ಇರುವರು.
ಇತ್ಯುಕ್ತಶ್ಚಾಽಂತರ್ಹಿತೋ ವಿಪ್ರಸ್ತತೋಽಹಂ ವಿಸ್ಮಿತಾಽಭವಮ್ |
ನ ಚ ಸರ್ವಾಸ್ವವಸ್ಥಾಸು ಸ್ಮೃತಿರ್ಮೇ ವಿಪ್ರಣಶ್ಯತಿ ॥7॥
ಹೀಗೆ ಹೇಳಿ ಆ ದುರ್ವಾಸನು ಅಂತರ್ಧಾನನಾದನು. ಇದರಿಂದ ನಾನು ವಿಸ್ಮಿತಳಾದೆನು. ಆದರೆ ಯಾವುದೇ ಅವಸ್ಥೆಯಲ್ಲಿಯೂ ಈ ವಿಷಯವು ನನಗೆ ಮರೆಯಲಾಗಲಿಲ್ಲ.
ಅಥ ಹರ್ಮ್ಯತಳಸ್ಥಾಽಹಂ ರವಿಮುದ್ಯಂತಮೀಕ್ಷತೀ |
ಸಂಸ್ಮೃತ್ಯ ತದೃಷೇರ್ವಾಕ್ಯಂ ಸ್ಪೃಹಯಂತೀ ದಿವಾಕರಮ್ ॥8॥
ಅದೊಂದು ದಿನ ಮಹಡಿಯಲ್ಲಿರುವ ನಾನು ಉದಯಿಸುತ್ತಿರುವ ರವಿಯನ್ನು ನೋಡುತ್ತಾ ಆ ಋಷಿಯ ಮಾತನ್ನು ಸ್ಮರಿಸಿಕೊಂಡು ಸೂರ್ಯನನ್ನು ಆವಾಹಿಸಲು ಬಯಸಿದೆನು.
ಸ್ಥಿತಾಽಹಂ ಬಾಲಭಾವೇನ ತತ್ರ ದೋಷಮಬುದ್ಧ್ಯತೀ |
ಅಥ ದೇವಃ ಸಹಸ್ರಾಂಶುರ್ಮತ್ಸಮೀಪಗತೋಽಭವತ್ ॥9॥
ಬಾಲ್ಯಾವಸ್ಥೆಯಲ್ಲಿರುವ ನಾನು ಇದರಿಂದ ಮುಂದೆ ಆಗುವ ದುಷ್ಪರಿಣಾಮಗಳನ್ನು ತಿಳಿಯಲಾರದೆ ಹೋದೆನು. ಆಗ ದೇವನಾದ ಸೂರ್ಯನು ನನ್ನ ಸಮೀಪಕ್ಕೆ ಬಂದನು.
ದ್ವಿಧಾ ಕೃತ್ವಾಽಽತ್ಮನೋ ದೇಹಂ ಭೂಮೌ ಚ ಗಗನೇಽಪಿ ಚ |
ತತಾಪ ಲೋಕಾನೇಕೇನ ದ್ವಿತೀಯೇನಾಗಮತ್ಸ ಮಾಮ್ ॥10॥
ಆ ಸೂರ್ಯನು ತನ್ನ ದೇಹವನ್ನು ಭೂಮಿ ಮತ್ತು ಆಕಾಶಗಳಲ್ಲಿ ಎರಡು ರೂಪದ್ವನ್ನಾಗಿಸಿ, ಒಂದು ರೂಪದಿಂದ ಭೂಮಿಗೆ ಬಿಸಿಯನ್ನು ನೀಡುತ್ತಾ, ಎರಡನೆಯ ರೂಪದಿಂದ ನನ್ನ ಬಳಿಗೆ ಬಂದನು.
ಸ ಮಾಮುವಾಚ ವೇಪಂತೀಂ ವರಂ ಮತ್ತೋ ವೃಣೀಷ್ವ ಹ |
ಗಮ್ಯತಾಮಿತಿ ತಂ ಚಾಹಂ ಪ್ರಣಮ್ಯ ಶಿರಸಾಽವದಮ್ ॥11॥
ಬೇಕಾದ ವರವನ್ನು ನನ್ನಿಂದ ಪಡೆ ಎಂದು ನಡುಗುತ್ತಿರುವ ನನಗೆ ಆತನು ಹೇಳಿದಾಗ, ನಾನು ಶಿರಬಾಗಿ ನಮಸ್ಕರಿಸಿ ಹಿಂದೆ ಹೋಗು ಎಂದು ಪ್ರಾರ್ಥಿಸಿದೆನು.
ಸ ಮಾಮುವಾಚ ತಿಗ್ಮಾಂಶುರ್ವೃಥಾಽಽಹ್ವಾನಂ ನ ಮೇ ಕ್ಷಮಮ್ |
ಧಕ್ಷ್ಯಾಮಿ ತ್ವಾಂ ಚ ವಿಪ್ರಂ ಚ ಯೇನ ದತ್ತೋ ವರಸ್ತವ ॥12|
ಆಗ ಸೂರ್ಯನು `ವ್ಯರ್ಥವಾಗಿ ನನ್ನನ್ನು ಕರೆದುದು ಸಹಿಸತಕ್ಕದ್ದಲ್ಲ. ನಿನ್ನನ್ನು, ನಿನಗೆ ವರ ನೀಡಿದ ಆ ವಿಪ್ರನನ್ನು ಸುಟ್ಟು ಬಿಡುವೆನು' ಎಂದು ಗದರಿಸಿದನು.
ತಮಹಂ ರಕ್ಷತೀ ವಿಪ್ರಂ ಶಾಪಾದನಪಕಾರಿಣಮ್ |
ಪುತ್ರೋ ಮೇ ತ್ವತ್ಸಮೋ ದೇವ ಭವೇದಿತಿ ತತೋಽಬ್ರುವಮ್ ॥13॥
ಆಗ ನಾನು ಯಾವುದೇ ಅಪಕಾರ ಮಾಡದ ಆ ವಿಪ್ರನನ್ನು ರಕ್ಷಿಸಲೋಸುಗ ಹೇ ದೇವ, ನಿನಗೆ ಸದೃಶನಾದ ಪುತ್ರನನ್ನು ನನಗೆ ಅನುಗ್ರಹಿಸು ಎಂದು ಕೇಳಿಕೊಂಡೆನು.
ತತೋ ಮಾಂ ತೇಜಸಾಽಽವಿಶ್ಯ ಮೋಹಯಿತ್ವಾ ಚ ಭಾನುಮಾನ್ |
ಉವಾಚ ಭವಿತಾ ಪುತ್ರಸ್ತವೇತ್ಯಭ್ಯಗಮದ್ ದಿವಮ್ ॥14॥
ಆಗ ಸೂರ್ಯನು ನನ್ನನ್ನು ಮೋಹಗೊಳಿಸಿ ತನ್ನ ತೇಜಸ್ಸಿನಿಂದ ನನ್ನಲ್ಲಿ ಪ್ರವೇಶಿಸಿ ನಿನಗೆ ನನ್ನಂತಹ ಪುತ್ರನು ಹುಟ್ಟಲಿರುವನು ಎಂದು ಹೇಳಿ ಆಕಾಶಕ್ಕೆ ಹಿಂದಿರುಗಿದನು.
ತತೋಽಹಮಂತರ್ಭವನೇ ಪಿತುಶ್ಚಿತ್ತಾನುರಕ್ಷಿಣೀ |
ಗೂಢೋತ್ಪನ್ನಂ ಸುತಂ ಬಾಲಂ ಜಲೇ ಕರ್ಣಮವಾಸೃಜಮ್ ॥15॥
ಅನಂತರ ನಾನು ತಂದೆಯ ಗಮನಕ್ಕೆ ಬರದಂತೆ ಈ ವಿಷಯವನ್ನು ರಕ್ಷಿಸುತ್ತಾ ಅಂತಃಪುರದ ಒಳಗೇ ಇದ್ದುಬಿಟ್ಟೆನು. ಹೀಗೆ ರಹಸ್ಯವಾಗಿ ಜನಿಸಿದ ನನ್ನ ಮಗ ಕರ್ಣನನ್ನು ಮಗುವಿದ್ದಾಗಲೇ ನೀರಿನಲ್ಲಿ ಬಿಟ್ಟುಬಿಟ್ಟೆನು.
ನೂನಂ ತಸ್ಯೈವ ದೇವಸ್ಯ ಪ್ರಸಾದಾತ್ ಪುನರೇವ ತು |
ಕನ್ಯಾಽಹಮಭವಂ ವಿಪ್ರ ಯಥಾ ಪ್ರಾಹ ಸ ಮಾಮೃಷಿಃ ॥16॥
ಹೇ ವಿಪ್ರನೇ, ಆ ಋಷಿಯು ನನಗೆ ಹೇಳಿದಂತೆಯೇ ಅದೇ ಸೂರ್ಯದೇವನ ಪ್ರಸಾದದಿಂದಲೇ ನಾನು ಮತ್ತೆ ಕನ್ಯೆಯೇ ಆದೆನು.
ಸ ಮಯಾ ಮೂಢಯಾ ಪುತ್ರೋ ಜ್ಞಾಯಮಾನೋಽಪ್ಯುಪೇಕ್ಷಿತಃ |
ತನ್ಮಾಂ ದಹತಿ ವಿಪ್ರರ್ಷೇ ಯಥಾ ಸುವಿದಿತಂ ತವ ॥17॥
ಹೀಗೆ ಮೂಢಳಾದ ನನ್ನಿಂದ ಆಗ ತಾನೇ ಹುಟ್ಟಿದ ಆ ಪುತ್ರನು ಉಪೇಕ್ಷೆಗೊಳಗಾದನು. ಹೇ ವಿಪ್ರೋತ್ತಮನೇ, ನಿನಗೆ ಚೆನ್ನಾಗಿ ತಿಳಿದಂತೆ ಈ ವೃತ್ತಾಂತವು ನನ್ನನ್ನು ಸುಡುತ್ತಿದೆ.
ಯದಿ ಪಾಪಮಪಾಪಂ ವಾ ವದೇತದ್ ವಿವೃತಂ ಮಯಾ |

ತಂ ಮೇ ಭವಂತಂ ಭಗವನ್ ವ್ಯಪನೇತುಂ ತ್ವಮರ್ಹಸಿ ॥18॥
ಹೇ ಭಗವನ್, ನಾನು ಈಗ ಏನನ್ನು ವಿವರಿಸಿರುವೆನೋ ಅದು ಪಾಪವೋ, ಪಾಪವಲ್ಲವೋ ನನಗೆ ನೀನೇ ಹೇಳಬೇಕು. ಇದರಿಂದ ಉಂಟಾಗಲಿರುವ ಪಾಪವನ್ನು ಹೋಗಲಾಡಿಸಲು ನೀನು ಸಮರ್ಥನಾಗಿರುವಿ.
ಯಚ್ಚಾಸ್ಯ ರಾಜ್ಞೋ ವಿದಿತಂ ಹೃದಿಸ್ಥಂ ಭವತೋಽನಘ |
ತಂ ಚಾಯಂ ಲಭತಾಂ ಕಾಮಮದ್ಯೈವ ಮುನಿಸತ್ತಮ ॥19॥
ಹೇ ಅನಘನೇ, ಮುನಿಶ್ರೇಷ್ಠನೇ, ಈ ರಾಜನ ಹೃದಯದಲ್ಲಿ ಏನಿದೆ ಎಂದು ನಿನಗೂ ತಿಳಿದೇ ಇದೆ. ಅಭಿಲಕ್ಷಿತವಾದ ಆ ವಿಷಯವನ್ನು ಇಂದೇ ಈ ರಾಜನು ಪಡೆಯಲಿ.
ವೈಶಂಪಾಯನಃ
ಇತ್ಯುಕ್ತಃ ಪ್ರತ್ಯುವಾಚೇದಂ ವ್ಯಾಸೋ ವೇದವಿದಾಂವರಃ ॥20॥
ವೈಶಂಪಾಯನ ಕುಂತಿಯು ಹೀಗೆ ಹೇಳಿದಾಗ, ವೇದವೇತ್ತರಲ್ಲಿ ಶ್ರೇಷ್ಠರಾದ ವ್ಯಾಸರು ಹೀಗೆ ಉತ್ತರಿಸಿದರು.
ವ್ಯಾಸಃ
ಸಾಧು ಸರ್ವಮಿದಂ ಭಾವ್ಯಮೇವಮೇತದ್ ಯಥಾಽಽತ್ಥ ಮಾಮ್ ॥
ವ್ಯಾಸರು ನೀನು ನನಗೇನು ಹೇಳಿದೆಯೋ ಅದು ಹಾಗೆಯೇ ನಡೆಯಬೇಕಿತ್ತು. ಸರಿಯಾಗಿಯೇ ನಡೆದಿದೆ.
ಅಪರಾಧಶ್ಚ ತೇ ನಾಸ್ತಿ ಕನ್ಯಾಭಾವಂ ಗತಾ ಹ್ಯಸಿ |
ದೇವಾಶ್ಚೈಶ್ವರ್ಯವಂತೋ ವೈ ಶರೀರಾಣ್ಯಾವಿಶಂತಿ ವೈ ॥22॥
ಈ ವಿಷಯದಲ್ಲಿ ನಿನ್ನ ಯಾವ ಅಪರಾಧವೂ ಇಲ್ಲ. ನೀನು ಕನ್ಯಾಭಾವವನ್ನು ಹೊಂದಿರುವೆ. ದೇವತೆಗಳು ಐಶ್ವರ್ಯದ ಸಿದ್ಧಿಯುಳ್ಳವರಾಗಿದ್ದು ಇತರರ ಶರೀರವನ್ನು ಪ್ರವೇಶಿಸಬಲ್ಲರು.
ಸಂತಿ ದೇವನಿಕಾಯಾಶ್ಚ ಸಂಕಲ್ಪಾಜ್ಜನಯಂತಿ ವೈ |
ವಾಚಾ ದೃಷ್ಟ್ಯಾ ತಥಾ ಸ್ಪರ್ಶಾತ್ ಸಂಘರ್ಷೇಣೇತಿ ಪಂಚಧಾ ॥23॥
ದೇವ ಸಮೂಹದಲ್ಲಿ ಐದು ಬಗೆ ಇದೆ. ಅವರು ಕೆಲವೊಮ್ಮೆ ಸಂಕಲ್ಪದಿಂದಲೇ, ಕೆಲವು ಬಾರಿ ಮಾತಿನಿಂದ, ದೃಷ್ಟಿಯಿಂದ, ಕೆಲವು ಬಾರಿ ಸ್ಪರ್ಶದಿಂದ ಹಾಗೂ ಸಮಾಗಮದಿಂದಲೂ ಪುತ್ರರನ್ನು ಉತ್ಪಾದಿಸಬಲ್ಲರು.
ಮನುಷ್ಯಧರ್ಮೋ ದೈವೇನ ಧರ್ಮೇಣ ಹಿ ನ ದುಷ್ಯತಿ |
ಆರ್ಯೋ ದೈವೇನ ಧರ್ಮೇಣ ಯುಜ್ಯತೇ ನ ಕದಾಚನ ॥24॥
ಮನುಷ್ಯರ ಧರ್ಮವು ದೇವತೆಗಳ ಧರ್ಮದಿಂದ ಯಾವತ್ತೂ ದೋಷಕ್ಕೊಳಗಾಗದು. ಹಾಗೆಯೇ ಧರ್ಮಶೀಲನಾದವನು ದೇವತೆಗಳ ಧರ್ಮವನ್ನು ಯಾವತ್ತೂ ಆಚರಿಸಲು ಬಯಸುವುದಿಲ್ಲ.
ಇತಿ ಕುಂತಿ ವಿಜಾನೀಹಿ ವ್ಯೇತು ತೇ ಮಾನಸೋ ಜ್ವರಃ ॥25॥
ಹೇ ಕುಂತಿಯೇ, ಇದನ್ನು ನೀನು ಸರಿಯಾಗಿ ತಿಳಿದುಕೊ. ನಿನ್ನ ಮನಸ್ಸಿನ ಪರಿತಾಪವು ಕಳೆದುಹೋಗಲಿ.
ಸರ್ವಂ ಬಲವತಾಂ ಪಥ್ಯಂ ಸರ್ವಂ ಬಲವತಾಂ ಶುಚಿ |
ಸರ್ವಂ ಬಲವತಾಂ ಧರ್ಮಃ ಸರ್ವಂ ಬಲವತಾಂ ಸ್ವಕಮ್ ॥26॥
ತಪಸ್ಸಿನ ಬಲವುಳ್ಳವರಿಗೆ ಎಲ್ಲವೂ ಪಥ್ಯವಾಗುವುದು. ಹಾಗೆಯೇ ತಪಸ್ಸಿನ ಬಲವುಳ್ಳವರಿಗೆ ಎಲ್ಲವೂ ಶುದ್ಧವೇ. ತಪಸ್ಸಿನ ಬಲವುಳ್ಳವರಿಗೆ ಎಲ್ಲವೂ ಧರ್ಮವೇ. ತಪೋಬಲವುಳ್ಳವರಿಗೆ ಎಲ್ಲವೂ ತನ್ನದೆನಿಸಿಕೊಳ್ಳುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಕುಂತೀ-ವ್ಯಾಸವಾಕ್ಯಂ ನಾಮ ಷಟ್‌ತ್ರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿಯಿತು.
* * * * *
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ತ್ರಿವತ್ಸರಾದಸ್ಯ ನಿಜಸ್ಯ ಲೋಕ-
ಸ್ಯಾಽಪ್ತಿಂ ಸಭಾರ್ಯಸ್ಯ ಜಗಾದ ತತ್ರ |
ಬ್ರಹ್ಮಾಂಕಜಸ್ತೇನ ಭೃಶಂ ಪ್ರತೀತೋ
ವ್ಯಾಸೋಪದಿಷ್ಟಂ ವ್ಯಚರತ್ ತಪೋಽಗ್ರ್ಯಮ್ ॥
ಬದರಿಕಾಶ್ರಮದಲ್ಲಿ ಸಪತ್ನೀಕನಾದ ಧೃತರಾಷ್ಟ್ರನಿಗೆ ನಾರದರು ಮೂರು ವರ್ಷದಲ್ಲಿ ಸ್ವಲೋಕಪ್ರಾಪ್ತಿ ಎಂದು ಹೇಳಿದರು. ಅದರಿಂದ ಧೃತರಾಷ್ಟ್ರ ಬಹಳ ವಿಶ್ವಾಸ ಹೊಂದಿ ವೇದವ್ಯಾಸರಿಂದ ಉಪದಿಷ್ಟವಾದ ಉತ್ತಮವಾದ ತಪಸ್ಸನ್ನಾಚರಿಸಿದನು.
ಸಕ್ಷತ್ತೃಗಾಂಧಾರಿಪೃಥೇ ಸಸಂಜಯೇ
ತಪೋಭಿರಾರಾಧಯತಿ ಪ್ರಭುಂ ಹರಿಮ್ |
ವೈಚಿತ್ರವೀರ್ಯೇಽತ್ರ ಸದಾರಬಂಧು
ಭೃತ್ಯಾಸ್ತು ಪಾರ್ಥಾ ದೃಶಯೇ ಸಮಾಯಯುಃ ॥
ವಿದುರ-ಗಾಂಧಾರಿ-ಕುಂತೀ-ಸಂಜಯರಿಂದೊಡಗೂಡಿ ಧೃತರಾಷ್ಟ್ರನು ಪ್ರಭು ಶ್ರೀಹರಿಯನ್ನು ತಪಸ್ಸುಗಳಿಂದ ಆರಾಧಿಸುತ್ತಿರಲು, ಅವರನ್ನು ಕಾಣಲು ಪಾಂಡವರು ಪತ್ನಿಯರಿಂದ, ಬಂಧುಗಳಿಂದ, ಭೃತ್ಯರಿಂದ ಯುಕ್ತರಾಗಿ ಬರುತ್ತಿದ್ದರು.
ಕ್ಷತ್ತೈಕತಾಮತ್ರ ಯುಧಿಷ್ಠಿರೇಣ

ಪ್ರಾಪ್ತೋಽಥ ಭಾರ್ಯಾಸಹಿತಂ ಸಸಂಜಯಮ್ |
ಉಪಾಸಮಾನೇಷು ವಿಚಿತ್ರವೀರ್ಯ
ಪುತ್ರಂ ಪೃಥಾಂ ಚೈವ ಪೃಥಾಸುತೇಷು ॥
ಪ್ರಾದುರ್ಬಭೂವಾಮಿತಶಕ್ತಿತೇಜೋ
ಜ್ಞಾನಾದ್ಭುತೈಶ್ವರ್ಯಸುಖಾದಿರೂಪಃ |
ವ್ಯಾಸೋ ಹರಿಸ್ತತ್ರ ಸಮೀಕ್ಷ್ಯ ಸರ್ವೇ
ಸಂಪೂಜಯಾಮಾಸುರುದಗ್ರ್ಯಭಕ್ತ್ಯಾ ॥
ಬದರಿಕಾಶ್ರಮದಲ್ಲಿ ವಿದುರ ಧರ್ಮರಾಜನಲ್ಲಿ ಐಕ್ಯ ಹೊಂದಿದ ಬಳಿಕ ಗಾಂಧಾರೀ ಸಹಿತನಾದ, ಸಂಜಯ ಸಹಿತನಾದ, ಧೃತರಾಷ್ಟ್ರನನ್ನೂ ಕುಂತಿಯನ್ನೂ ಪಾಂಡವರು ಸೇವಿಸುತ್ತಿದ್ದಾಗ ಅಮಿತ ಶಕ್ತಿ, ತೇಜಸ್ಸು, ಜ್ಞಾನ, ಅದ್ಭುತ ಐಶ್ವರ್ಯ, ಸುಖ ಮುಂತಾದ ಗುಣಸ್ವರೂಪರಾದ ವೇದವ್ಯಾಸರು ಅಲ್ಲಿ ಪ್ರಾದುರ್ಭವಿಸಿದರು. ಅವರನ್ನು ಕಂಡು ಎಲ್ಲರೂ ಉತ್ತಮ ಭಕ್ತಿಯಿಂದ ಪೂಜಿಸಿದರು.
ತೈಃ ಪೂಜಿತಸ್ತತ್ರ ನಿಷಣ್ಣ ಆಹ
ಯದ್ಯದ್ ಯದಿಷ್ಟಂ ಪ್ರವದಂತು ತತ್ತತ್ |
ದಾಸ್ಯಾಮಿ ತಸ್ಯಾದ್ಯ ತದಿತ್ಯಮುಷ್ಮಿನ್
ಭಕ್ತ್ಯುಚ್ಛ್ರಯಃ ಪಾಂಡುಸುತೈಃ ಸದಾರೈಃ |
ವೃತೋಽತ್ರ ಕುಂತೀ ರವಿಸೂನುಜನ್ಮ
ಮೃತ್ಯೂತ್ಥದೋಷಾಪಗಮಂ ಯಯಾಚೇ ॥
ಪಾಂಡವರಿಂದ ಮತ್ತು ಧೃತರಾಷ್ಟ್ರ ಮುಂತಾದವರಿಂದ ಪೂಜಿತರಾದ ವೇದವ್ಯಾಸರು ಕುಳಿತು ಹೇಳಿದರು. ನಿಮಗೆ ಏನೇನು ಇಷ್ಟವೋ ಅದೆಲ್ಲವನ್ನೂ ಹೇಳಿರಿ. ನಾನು ನಿಮ್ಮ ಆ ಅಭೀಷ್ಟಗಳನ್ನು ಈಗ ಪೂರೈಸುತ್ತೇನೆ ಎಂದು. ಆಗ ಪಾಂಡವರೂ ಅವರ ಪತ್ನಿಯರೂ ವೇದವ್ಯಾಸರಲ್ಲಿ ಭಕ್ತಿ ಹೆಚ್ಚಲೆಂದು ಕೇಳಿಕೊಂಡರು. ಕುಂತಿ ಕರ್ಣನ ಜನನ-ಮರಣಗಳಿಂದ ತನಗೆ ಬಂದ ಪಾಪದ ಪರಿಹಾರವನ್ನು ಕೇಳಿಕೊಂಡಳು.
ತೇಷಾಂ ಪ್ರದತ್ತೇಷ್ವಭಿವಾಂಛಿತೇಷು
ವೈಚಿತ್ರವೀರ್ಯಃ ಸಹ ಭಾರ್ಯಯೈವ |
ಸಮ್ಮಂತ್ರ್ಯ ನಿಃಶೇಷರಣೇಹತಾನಾಂ
ಸಂದರ್ಶನಂ ಪ್ರಾರ್ಥಿತವಾಂಸ್ತಮೀಶಮ್ ॥
ಕುಂತಿಗೂ ಪಾಂಡವರಿಗೂ ಅವರ ಅಭೀಷ್ಟಗಳನ್ನು ವೇದವ್ಯಾಸರು ಕೊಟ್ಟಾಗ ಧೃತರಾಷ್ಟ್ರ ಗಾಂಧಾರಿಯೊಡನೆ ಆಲೋಚಿಸಿ, ಯುದ್ಧದಲ್ಲಿ ಸತ್ತವರೆಲ್ಲರನ್ನೂ ತಾವು ಕಾಣಬೇಕೆಂದು ಕೇಳಿಕೊಂಡನು.
ತತಸ್ತು ತೇ ಸತ್ಯವತೀಸುತಸ್ಯ
ಸರ್ವೇಶ್ವರಸ್ಯಾಽಜ್ಞಯಾ ಸರ್ವ ಏವ |
ಸಮಾಗತಾಃ ಸ್ವರ್ಗಲೋಕಾತ್ ಕ್ಷಣೇನ
ದತ್ತಾ ಚ ದಿವ್ಯಾ ದೃಗಮುಷ್ಯ ರಾಜ್ಞಃ ॥
ಊಷುಶ್ಚ ರಾತ್ರಿಂ ಪರಮಾಜ್ಞಯೈವ
ಸರ್ವೇ ಸ್ವಭಾರ್ಯಾಸಹಿತಾ ಯಥಾ ಪುರಾ ॥
ಆಗ ಸರ್ವೇಶ್ವರರಾದ ವೇದವ್ಯಾಸರ ಆಜ್ಞೆಯಿಂದ ಅವರೆಲ್ಲರೂ ಕ್ಷಣದಲ್ಲಿ ವೀರಸ್ವರ್ಗಲೋಕದಿಂದ ಬಂದರು. ವೇದವ್ಯಾಸರು ಆಗ ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ನೀಡಿದ್ದರು. ಯುದ್ಧದಲ್ಲಿ ಮೃತರಾದವರೆಲ್ಲರೂ ವೇದವ್ಯಾಸರ ಇಚ್ಛೆಯಂತೆ ಗಂಗಾಪ್ರವಾಹದೊಳಗಿಂದ ಹಿಂದಿನಂತೆಯೇ ಮನುಷ್ಯದೇಹದಲ್ಲಿ ಬಂದು ಒಂದು ರಾತ್ರಿ ಇಡೀ ಪತ್ನೀ ಸಮೇತರಾಗಿ ವಾಸಮಾಡಿದರು.

* * * * *

ಮೂವತ್ತೇಳನೆಯ ಅಧ್ಯಾಯ
ವೇದವ್ಯಾಸರು ಗಾಂಧಾರಿಗೆ ಯುದ್ಧದಲ್ಲಿ ಹತರಾದ ದುರ್ಯೋಧನನೇ ಮೊದಲಾದ ಎಲ್ಲರನ್ನೂ ರಾತ್ರಿಯಲ್ಲಿ ತೋರಿಸುವೆನೆಂದು ಹೇಳುತ್ತಾ, ಧೃತರಾಷ್ಟ್ರನೇ ಮೊದಲಾದವರು ವಿಶೇಷವಾಗಿ ಗಂಧರ್ವಾಂಶದಿಂದ ಜನಿಸಿದವರು ಎಂದು ವಿವರಿಸುವುದು. ಧೃತರಾಷ್ಟ್ರಾದಿಗಳು ವೇದವ್ಯಾಸರ ಮಾತಿನಂತೆ ಗಂಗಾತೀರಕ್ಕೆ ತಲುಪಿ, ಬಂಧುಗಳನ್ನು ನೋಡುವ ಉತ್ಸಾಹದಿಂದ ಕಷ್ಟದಿಂದ ಹಗಲನ್ನು ಕಳೆಯುವುದು.
ವ್ಯಾಸಃ
ಭದ್ರೇ ದ್ರಕ್ಷ್ಯಸಿ ಗಾಂಧಾರಿ ಪುತ್ರಾನ್ ಭ್ರಾತೄನ್ ಸ್ವಕಾನ್ ಗಣಾನ್ |
ವಧೂಶ್ಚ ಪತಿಭಿಃ ಸಾರ್ಧಂ ನಿಶಿ ಸುಪ್ತೋತ್ಥಿತಾ ಇವ ॥1॥
ವ್ಯಾಸರು ಭದ್ರೆಯೇ, ಗಾಂಧಾರಿಯೇ, ಇಂದು ರಾತ್ರಿ ನೀನು ನಿನ್ನ ಮಕ್ಕಳನ್ನೂ, ಸಹೋದರರನ್ನೂ, ನೀನು ತನ್ನವರೆಂದುಕೊಂಡ ಸಮೂಹಗಳನ್ನೂ ಜೊತೆಗೆ ಪತಿಯರೊಂದಿಗೆ ಕೂಡಿದ ನಿನ್ನ ಸೊಸೆಯರನ್ನೂ ನಿದ್ದೆಯಿಂದೆದ್ದು ಬಂದಂತೆ ನೋಡಲಿರುವಿ.
ಕರ್ಣಂ ದ್ರಕ್ಷ್ಯತಿ ಕುಂತೀ ಚ ಸೌಭದ್ರಂ ಚಾಪಿ ಯಾದವೀ |
ದ್ರೌಪದೀ ಪಂಚಪುತ್ರಾಂಶ್ಚ ಪಿತೄನ್ ಭ್ರಾತೄಂಸ್ತಥೈವ ಚ ॥2॥

ಅಂತೆಯೇ ಕುಂತಿಯು ಕರ್ಣನನ್ನು ನೋಡಲಿರುವಳು. ಯಾದವಿಯಾದ ಸುಭದ್ರೆಯು ಅಭಿಮನ್ಯುವನ್ನು ನೋಡುವಳು. ದ್ರೌಪದಿಯೂ ಕೂಡ ತನ್ನೈದು ಮಕ್ಕಳನ್ನು ಹಾಗೂ ತಂದೆ-ಅಣ್ಣಂದಿರನ್ನು ನೋಡಲಿರುವಳು.

ಪೂರ್ವಮೇವೈಷ ಹೃದಯೇ ವ್ಯವಸಾಯೋಽಭವನ್ಮಮ |
ಯದಾಽಸ್ಮಿ ಚೋದಿತೋ ರಾಜ್ಞಾ ಭವತ್ಯಾ ಪೃಥಯೈವ ಚ ||3||

ಯಾವಾಗ ರಾಜ, ನೀನು ಹಾಗೂ ಕುಂತಿಯಿಂದ ನಾನು ಈ ವಿಷಯದಲ್ಲಿ ಪ್ರೇರಿತನಾದೆನೋ ಅದಕ್ಕೂ ಮೊದಲೇ ನನಗೆ ಹೀಗೆ ಮಾಡಬೇಕೆಂಬ ಪ್ರಯತ್ನ ಮನಸ್ಸಿನಲ್ಲಿತ್ತು.

ನ ತೇ ಶೋಚ್ಯಾ ಮಹಾತ್ಮಾನಃ ಸರ್ವ ಏವ ನರರ್ಷಭಾಃ |
ಕ್ಷತ್ರಧರ್ಮಪರಾಃ ಸಂತಸ್ತಥಾ ಹಿ ನಿಧನಂ ಗತಾಃ ||4||

ಆ ಮಹಾತ್ಮರ ಬಗ್ಗೆ ದುಃಖಿಸುವುದು ಯೋಗ್ಯವಲ್ಲ. ಆ ಎಲ್ಲ ನರಶ್ರೇಷ್ಠರೂ ಕ್ಷಾತ್ರಧರ್ಮದ ಬಗ್ಗೆ ಉನ್ನತ ಭಾವನೆಯುಳ್ಳವರಾಗಿದ್ದು ಅದರಿಂದಲೇ ಮರಣ ಹೊಂದಿರುವರು.

ಭವಿತವ್ಯಮವಶ್ಯಂ ತತ್ಸುರಕಾರ್ಯಮನಿಂದಿತೇ |
ಅವತೇರುಸ್ತತಃ ಸರ್ವೇ ದೇವಾ ಭಾಗೈರ್ಮಹೀತಳಮ್ ||5||

ಹೇ ಅನಿಂದಿತಳೇ, ಅದು ಅವಶ್ಯವಾಗಿ ನಡೆಯಬೇಕಾದ ದೇವಕಾರ್ಯವಾಗಿತ್ತು. ಆದ್ದರಿಂದಲೇ ಎಲ್ಲ ದೇವತೆಗಳೂ ತಮ್ಮ ಅಂಶಗಳಿಂದ ಭೂಮಿಗೆ ಇಳಿದುಬಂದಿದ್ದರು.

ಗಂಧರ್ವಾಪ್ಸರಸಶ್ಚೈವ ಪಿಶಾಚಾ ಗುಹ್ಯರಾಕ್ಷಸಾಃ |
ತಥಾ ಪುಣ್ಯಜನಾಶ್ಚೈವ ಸಿದ್ಧಾ ದೇವರ್ಷಯೋಽಪಿ ಚ ||6||
ದೇವಾಶ್ಚ ದಾನವಾಶ್ಚೈವ ತಥಾ ದೇವರ್ಷಯೋಽಮಲಾಃ |
ತ ಏತೇ ನಿಧನಂ ಪ್ರಾಪ್ತಾಃ ಕುರುಕ್ಷೇತ್ರೇ ರಣಾಜಿರೇ ||7||

ಗಂಧರ್ವರು, ಅಪ್ಸರಸ್ತ್ರೀಯರು, ಪಿಶಾಚ ಎಂಬ ದೇವಗಣಗಳು, ಗುಹ್ಯಕರು, ರಾಕ್ಷಸರು ಹಾಗೆಯೇ ಯಾತುಧಾನರು, ಸಿದ್ಧರು, ದೇವರ್ಷಿಗಳು, ದೇವ-ದಾನವರು, ಶುದ್ಧರಾದ ದೇವರ್ಷಿಗಳು ಇವರೆಲ್ಲರೂ ಕುರುಕ್ಷೇತ್ರದ ಯುದ್ಧದಲ್ಲಿ ನಿಧನರಾಗಿರುವರು.

ಗಂಧರ್ವರಾಜೋ ಯೋ ಧೀಮಾನ್ ಧೃತರಾಷ್ಟ್ರ ಇತಿ ಶ್ರುತಃ |
ಸ ಏವ ಮಾನುಷೇ ಲೋಕೇ ಧೃತರಾಷ್ಟ್ರಃ ಪತಿಸ್ತವ ||8||

ಯಾವನು ಧೀಮಂತನಾಗಿದ್ದು ಧೃತರಾಷ್ಟ್ರನೆಂದು ಪ್ರಸಿದ್ಧನಾದ ಗಂಧರ್ವರಾಜನಾಗಿದ್ದನೋ ಅವನೇ ಮನುಷ್ಯಲೋಕದಲ್ಲಿ `ಧೃತರಾಷ್ಟ್ರ' ಎಂಬ ಹೆಸರಿನಿಂದಲೇ ನಿನ್ನ ಪತಿಯಾಗಿರುವನು.

ಪಾಂಡುಂ ಮರುದ್ಗಣಾದ್ ವಿದ್ಧಿ ವಿಶಿಷ್ಟತಮಮಚ್ಯುತಮ್ |
ಧರ್ಮಸ್ಯಾಂಶೋಽಭವತ್ ಕ್ಷತ್ತಾ ರಾಜಾ ಚೈವ ಯುಧಿಷ್ಠಿರಃ ||9||

ಪಾಂಡುವನ್ನು ಅತ್ಯಂತ ವಿಶಿಷ್ಟವಾದ ಚ್ಯುತಿಯಿಲ್ಲದ ಮರುದ್ಗಣಕ್ಕೆ ಸೇರಿದವನೆಂದು ತಿಳಿ. ದಾಸೀಪುತ್ರನಾದ ವಿದುರನೂ ಹಾಗೂ ರಾಜನಾದ ಯುಧಿಷ್ಠಿರನು ಯಮಧರ್ಮನ ಅಂಶಭೂತರು.

ಕಲಿಂ ದುರ್ಯೋಧನಂ ವಿದ್ಧಿ ಶಕುನಿಂ ದ್ವಾಪರಂ ನೃಪಮ್ |
ದುಃಶಾಸನಾದೀನ್ ವಿದ್ಧಿ ತ್ವಂ ರಾಕ್ಷಸಾನ್ ಶುಭದರ್ಶನೇ ||10||

ಹೇ ಶುಭದರ್ಶನಳೇ, ದುರ್ಯೋಧನನನ್ನು ಕಲಿಯನ್ನಾಗಿ ತಿಳಿ. ರಾಜನಾದ ಶಕುನಿಯನ್ನು ದ್ವಾಪರನೆಂಬುದಾಗಿ ತಿಳಿ ಹಾಗೂ ದುಶ್ಶಾಸನನೇ ಮೊದಲಾದವರನ್ನು ರಾಕ್ಷಸರನ್ನಾಗಿ ತಿಳಿದುಕೊ.

ಮರುದ್ಗಣಾದ್ ಭೀಮಸೇನಂ ಬಲವಂತಮರಿಂದಮಮ್ |
ವಿದ್ಧಿ ತ್ವಂ ತು ನರಮೃಷಿಮಿಮಂ ಪಾರ್ಥಂ ಧನಂಜಯಮ್ ||11||

ಅತ್ಯಂತ ಬಲಿಷ್ಠನಾದ, ಅರಿಮರ್ದನನಾದ ಭೀಮಸೇನನನ್ನು ಮರುದ್ಗಣದಿಂದ ಬಂದಿರುವವನೆಂದು ತಿಳಿ. ಪೃಥೆಯ ಮಗನಾದ ಈ ಧನಂಜಯನನ್ನು ಜ್ಞಾನಿಯಾದ ನರನನ್ನಾಗಿ ತಿಳಿ.

ನಾರಾಯಣಂ ಹೃಷೀಕೇಶಮಶ್ವಿನೌ ಯಮಜೌ ತಥಾ ||12||

ಹೃಷೀಕೇಶನೆಂಬ ಹೆಸರಿನ ಶ್ರೀಕೃಷ್ಣನನ್ನು ನಾರಾಯಣನನ್ನಾಗಿ ತಿಳಿ, ಹಾಗೆಯೇ ಅವಳಿ ಮಕ್ಕಳಾದ ನಕುಲ-ಸಹದೇವರನ್ನು ಅಶ್ವಿನೀದೇವತೆಗಳನ್ನಾಗಿ ತಿಳಿ.

ದ್ವಿಧಾ ಕೃತ್ವಾಽಽತ್ಮನೋ ದೇಹಮಾದಿತ್ಯಂ ತಪತಾಂವರಮ್ |
ಲೋಕಾಂಶ್ಚ ತಾಪಯಾನಂ ವೈ ಕರ್ಣಂ ವಿದ್ಧಿ ಪೃಥಾಸುತಮ್ ||13||

ಕುಂತಿಯ ಮಗನಾದ ಕರ್ಣನನ್ನು ತೇಜಸ್ವಿಯಾದ, ಎಲ್ಲ ಲೋಕಗಳಿಗೂ ಬಿಸಿಯನ್ನು ನೀಡುವ, ಎರಡು ರೂಪದಿಂದ ದೇಹವನ್ನು ಧರಿಸಿದ ಸೂರ್ಯನನ್ನಾಗಿ ತಿಳಿದುಕೊ.

ಯಃ ಸ ವೈರಾರ್ಥಮುದ್ಭೂತಃ ಸಂಘರ್ಷಜನನಸ್ತಥಾ |
ತಂ ಕರ್ಣಂ ವಿದ್ಧಿ ಕಲ್ಯಾಣಿ ಭಾಸ್ಕರಂ ಶುಭದರ್ಶನೇ ||14||

ಹೇ ಶುಭದರ್ಶನಳೇ, ಮಂಗಳಮಯಳೇ, ವೈರಸಾಧನೆಗಾಗಿಯೇ ಜನಿಸಿದ ಹಾಗೂ ಪರಸ್ಪರ ಜಗಳವನ್ನು ಉಂಟುಮಾಡುತ್ತಿದ್ದ ಯಾವ ಕರ್ಣನಿರುವನೋ ಅವನನ್ನು ಸೂರ್ಯನನ್ನಾಗಿ ತಿಳಿ.

ಯಶ್ಚ ಪಾಂಡವದಾಯಾದೋ ಹತಃ ಷಡ್ಭಿರ್ಮಹಾರಥೈಃ |
ಸ ಸೋಮ ಇಹ ಸೌಭದ್ರೋ ಯೋಗಾದೇವಾಭವದ್ ದ್ವಿಧಾ ||15||

ಪಾಂಡವರ ವಾರಸುದಾರನಾದ, ಸುಭದ್ರೆಯ ಮಗನಾದ ಯಾವ ಅಭಿಮನ್ಯುವು ಆರು ಮಂದಿ ಮಹಾರಥಿಗಳ ಪ್ರಯತ್ನದಿಂದ ಇಲ್ಲಿ

ಹತನಾಗಿರುವನೋ ಅವನು ಸೋಮನಾಗಿದ್ದು, ಯೋಗಬಲದಿಂದಲೇ ಎರಡು ರೂಪವನ್ನು ತಾಳಿರುವನು.
ದ್ರೌಪದ್ಯಾ ಸಹ ಸಂಭೂತಂ ಧೃಷ್ಟದ್ಯುಮ್ನಂ ಚ ಪಾವಕಾತ್ |
ಅಗ್ನೇರ್ಭಾಗಂ ಶುಭಂ ವಿದ್ಧಿ ರಾಕ್ಷಸಂ ತು ಶಿಖಂಡಿನಮ್ ||16||
ದ್ರೌಪದಿಯ ಜೊತೆಗೆ ಅಗ್ನಿಯಿಂದ ಹುಟ್ಟಿದ ಧೃಷ್ಟದ್ಯುಮ್ನನನ್ನು ಮಂಗಳ ಮಯನಾದ ಅಗ್ನಿಯ ಇನ್ನೊಂದು ರೂಪವನ್ನಾಗಿ ತಿಳಿ. ಶಿಖಂಡಿಯನ್ನು ರಾಕ್ಷಸನೆಂದು ತಿಳಿ.
ದ್ರೋಣಂ ಬೃಹಸ್ಪತೇರ್ಭಾಗಂ ವಿದ್ಧಿ ದ್ರೌಣಿಂ ಚ ರುದ್ರಜಮ್ |
ಗಾಂಗೇಯೋ ವಸುವೀರ್ಯೇಣ ದೇವ್ಯೋ ಮಾನುಷತಾಂ ಗತಃ ||17||
ಆಚಾರ್ಯ ದ್ರೋಣರನ್ನು ಬೃಹಸ್ಪತಿಯ ಅಂಶನನ್ನಾಗಿಯೂ, ದ್ರೋಣರ ಮಗನಾದ ಅಶ್ವತ್ಥಾಮನನ್ನು ರುದ್ರನಿಂದ ಜನಿಸಿದವನನ್ನಾಗಿಯೂ ತಿಳಿದುಕೊ. ಹಾಗೂ ಎಂಟು ಮಂದಿ ವಸುಗಳ ವೀರ್ಯವನ್ನು ಹೊಂದಿದ `ದ್ಯು'ನಾಮಕ ವಸುವು ಗಂಗಾಪುತ್ರ ಭೀಷ್ಮನಾಗಿ ಮನುಷ್ಯಲೋಕಕ್ಕೆ ಬಂದಿರುವನು.
ಏವಮೇತೇ ಮಹಾಪ್ರಜ್ಞೇ ದೇವಾ ಮಾನುಷ್ಯಮೇತ್ಯ ಹಿ |
ತತಃ ಪುನರ್ಗತಾಃ ಸ್ವರ್ಗಂ ಕೃತೇ ಕರ್ಮಣಿ ಶೋಭನೇ ||18||
ಹೇ ಮಹಾಪ್ರಾಜ್ಞಳೇ, ಮಂಗಳಳೇ, ಹೀಗೆ ಈ ದೇವತೆಗಳು ಮನುಷ್ಯಜನ್ಮವನ್ನು ಹೊಂದಿ, ತಮ್ಮ ಕರ್ಮಗಳು ಮುಗಿದ ನಂತರ ಮತ್ತೆ ಸ್ವರ್ಗಕ್ಕೆ ತೆರಳಿದ್ದಾರೆ.
ಯಚ್ಚ ವೈ ಹೃದಿ ಸರ್ವೇಷಾಂ ದುಃಖಮೇತಚ್ಚಿರಂ ಸ್ಥಿತಮ್ |
ತದದ್ಯ ವ್ಯಪನೇಷ್ಯಾಮಿ ಪರಲೋಕಕೃತಾದ್ ಭಯಾತ್ ||19||
ಪರಲೋಕದ ಭಯದಿಂದ ಎಲ್ಲರ ಹೃದಯದಲ್ಲಿ ಬಹಳ ಕಾಲದಿಂದ ಏನು ದುಃಖವಿದೆಯೋ ಅದನ್ನು ಇಂದು ನಿವಾರಿಸುವೆನು.
ಸರ್ವೇ ಭವಂತೋ ಗಚ್ಛಂತು ನದೀಂ ಭಾಗೀರಥೀಂ ಪ್ರತಿ |
ತತ್ರ ದ್ರಕ್ಷ್ಯಥ ತಾನ್ ಸರ್ವಾನ್ ಯೇ ಹತಾಸ್ತತ್ರ ಸಂಯುಗೇ ||20||
ನೀವೆಲ್ಲರೂ ಭಾಗೀರಥೀ ನದಿಯ ತೀರಕ್ಕೆ ತೆರಳಿರಿ. ಅಲ್ಲಿ ಯುದ್ಧದಲ್ಲಿ ಹತರಾದ ಆ ಎಲ್ಲರನ್ನೂ ನೀವು ನೋಡಲಿರುವಿರಿ.
ವೈಶಂಪಾಯನಃ
ಇತಿ ವ್ಯಾಸಸ್ಯ ವಚನಂ ಶ್ರುತ್ವಾ ಸರ್ವೋ ಜನಸ್ತದಾ |
ಮಹತಾ ಸಿಂಹನಾದೇನ ಗಂಗಾಮಭಿಮುಖೋ ಯಯೌ ||21||
ವೈಶಂಪಾಯನ ಹೀಗೆ ವ್ಯಾಸರ ವಚನವನ್ನು ಕೇಳಿದ ಅಲ್ಲಿರುವ ಎಲ್ಲ ಜನರ ಸಮೂಹವೂ ದೊಡ್ಡದಾಗಿ ಸಿಂಹನಾದವನ್ನು ಮಾಡುತ್ತಾ ಗಂಗಾಭಿಮುಖವಾಗಿ ಹೊರಟಿತು.
ಧೃತರಾಷ್ಟ್ರಶ್ಚ ಸಾಮಾತ್ಯಃ ಪ್ರಯಯೌ ಸಹ ಪಾಂಡವೈಃ |
ಸಹಿತೋ ಮುನಿಶಾರ್ದೂಲೈರ್ಗಂಧರ್ವೈಶ್ಚ ಸಮಾಗತೈಃ ||22||
ಧೃತರಾಷ್ಟ್ರನೂ ಕೂಡ ಮಂತ್ರಿಗಳು, ಪಾಂಡವರು, ಮುನಿಶ್ರೇಷ್ಠರು ಮತ್ತು ಬಂದಿರುವ ಗಂಧರ್ವರೊಂದಿಗೆ ತಾನೂ ಹೊರಟನು.
ತತೋ ಗಂಗಾಂ ಸಮಾಸಾದ್ಯ ಕ್ರಮೇಣ ಸ ಜನಾರ್ಣವಃ |
ನಿವಾಸಮಕರೋತ್ ಸರ್ವೋ ಯಥಾಪ್ರೀತಿ ಯಥಾಸುಖಮ್ ||23||
ಕ್ರಮವಾಗಿ ಆ ಜನಸಮೂಹವು ಗಂಗೆಯನ್ನು ತಲುಪಿ, ತಮಗೆ ಇಷ್ಟ ಬಂದಂತೆ ಸುಖವಾಗಿ ಗಂಗಾತೀರದಲ್ಲಿ ಬೀಡುಬಿಟ್ಟಿತು.
ರಾಜಾ ಚ ಪಾಂಡವೈಃ ಸಾರ್ಧಮಿಷ್ಟೇ ದೇಶೇ ಸಹಾನುಗಃ |
ನಿವಾಸಮಕರೋದ್ಧೀಮಾನ್ ಸಸ್ತ್ರೀವೃದ್ಧಪುರಃಸರಃ ||24||
ಧೀಮಂತನಾದ ರಾಜನಾದ ಧೃತರಾಷ್ಟ್ರನು ಸ್ತ್ರೀಯರನ್ನೂ ಮತ್ತು ವೃದ್ಧರನ್ನೂ ಮುಂದೆ ಮಾಡಿಕೊಂಡು, ಪಾಂಡವರೊಂದಿಗೆ ತನ್ನ ಪರಿಜನರನ್ನು ಕೂಡಿಕೊಂಡು, ತನಗಿಷ್ಟವಾದ ಪ್ರದೇಶದಲ್ಲಿ ವಾಸಸ್ಥಾನವನ್ನು ಕಲ್ಪಿಸಿಕೊಂಡನು.
ಜಗಾಮ ತದಹಶ್ಚಾಪಿ ತೇಷಾಂ ವರ್ಷಶತಂ ತಥಾ |
ನಿಶಾಂ ಪ್ರತೀಕ್ಷಮಾಣಾನಾಂ ದಿದೃಕ್ಷೂಣಾಂ ಮೃತಾನ್ ನೃಪಾನ್ ||25||
ಮೃತರಾದ ರಾಜರನ್ನು ನೋಡಬೇಕೆಂಬ ಬಯಕೆಯಿಂದ ರಾತ್ರಿಯಾಗುವುದನ್ನೇ ಕಾಯುತ್ತಿರುವ ಆ ಎಲ್ಲರಿಗೂ ಆ ಹಗಲು ನೂರು ವರ್ಷಗಳಂತೆ ಭಾಸವಾಗಿ ಕಳೆಯಿತು.
ಅಥ ಪುಣ್ಯಂ ಗಿರಿವರಮಸ್ತಮಭ್ಯಗಮದ್ ರವಿಃ |
ತತಃ ಕೃತಾಭಿಷೇಕಾಸ್ತೇ ನೈಶಂ ಕರ್ಮ ಸಮಾಚರನ್ ||26||
ಅನಂತರ ಸೂರ್ಯನು ಪುಣ್ಯಮಯವಾದ ಅಸ್ತಗಿರಿಯನ್ನು ತಲುಪಿದನು. ಆಗ ಆ ಎಲ್ಲರೂ ಸ್ನಾನಾದಿಗಳನ್ನು ಮುಗಿಸಿ ಸಂಧ್ಯಾದಿ ರಾತ್ರಿಕರ್ಮಗಳನ್ನು ಆಚರಿಸಿದರು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಸಪ್ತತ್ರಿಂಶೋಽಧ್ಯಾಯಃ ||
|| ಪುತ್ರದರ್ಶನಪರ್ವಣಿ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೆಂಟನೆಯ ಅಧ್ಯಾಯ
ವೇದವ್ಯಾಸರು ರಾತ್ರಿಯಲ್ಲಿ ಗಂಗೆಯಲ್ಲಿ ಮುಳುಗಿ, ಎಲ್ಲರನ್ನೂ

ಕರೆದಾಗ, ಯುದ್ಧದಲ್ಲಿ ಹತರಾದ ಕುರು-ಪಾಂಡವ ಉಭಯಪಕ್ಷೀಯರೆಲ್ಲರೂ
ತಮ್ಮ ತಮ್ಮ ಆಭರಣ-ಆಯುಧ-ವಾಹನಾದಿಗಳ ಜೊತೆಗೆ ನೀರಿನಿಂದ ಮೇಲೆ ಬಂದು ತೀರದಲ್ಲಿ ಒಟ್ಟು ಸೇರುವುದು. ಧೃತರಾಷ್ಟ್ರನು ವೇದವ್ಯಾಸರ ಅನುಗ್ರಹದಿಂದ ದಿವ್ಯವಾದ ದೃಷ್ಟಿಯನ್ನು ಪಡೆದು ದುರ್ಯೋಧನನೇ ಮೊದಲಾದ ಎಲ್ಲರನ್ನೂ ಅವಲೋಕಿಸುವುದು.

ವೈಶಂಪಾಯನಃ
ತತೋ ನಿಶಾಯಾಂ ಪ್ರಾಪ್ತಾಯಾಂ ಕೃತಸಾಯಾಹ್ನಿಕಕ್ರಿಯಾಃ |
ವ್ಯಾಸಮಭ್ಯಗಮನ್ ಸರ್ವೇ ಯೇ ತತ್ರಾಸನ್ಸಮಾಗತಾಃ ॥1॥
ವೈಶಂಪಾಯನ ಸಾಯಂಕಾಲದ ಆಹ್ನಿಕ ಕ್ರಿಯೆಗಳನ್ನು ಮುಗಿಸಿದ ನಂತರ ಯಾರೆಲ್ಲ ಗಂಗಾತೀರಕ್ಕೆ ಬಂದಿದ್ದರೋ ಅವರೆಲ್ಲರೂ ರಾತ್ರಿಯಾಗುತ್ತಿರಲು ವ್ಯಾಸರ ಸಮೀಪಕ್ಕೆ ಬಂದರು.
ಧೃತರಾಷ್ಟ್ರಸ್ತು ಧರ್ಮಾತ್ಮಾ ಪಾಂಡವೈಃ ಸಹಿತಸ್ತದಾ |
ಶುಚಿರೇಕಮನಾಃ ಸಾರ್ಧಮೃಷಿಭಿಸ್ತೈರುಪಾವಿಶತ್ ॥2॥
ಆಗಲೇ ಧರ್ಮಾತ್ಮನಾದ ಧೃತರಾಷ್ಟ್ರನೂ ಪಾಂಡವರಿಂದ ಸಹಿತನಾಗಿ ಶುಚಿರ್ಭೂತನಾಗಿ, ಏಕಾಗ್ರಚಿತ್ತನಾಗಿ ಆ ಋಷಿಗಳೊಂದಿಗೆ ತಾನೂ ಕುಳಿತನು.
ಗಾಂಧಾರ್ಯಾ ಸಹ ನಾರ್ಯಸ್ತು ಸಹಿತಾಃ ಸಮುಪಾವಿಶನ್ |
ಪೌರಜಾನಪದಶ್ಚಾಪಿ ಜನಃ ಸರ್ವೋ ಯಥಾ ವಯಃ ॥3॥
ಅಲ್ಲಿ ಸೇರಿದ ನಾರಿಯರೆಲ್ಲರೂ ಗಾಂಧಾರಿಯ ಜೊತೆಗೆ ಕುಳಿತರು. ನಂತರ ಎಲ್ಲ ಪಟ್ಟಣಿಗ ಹಾಗೂ ಗ್ರಾಮೀಣ ಜನರು ತಮ್ಮ ತಮ್ಮ ವಯಸ್ಸಿಗೆ ಅನುಗುಣವಾಗಿ ಕುಳಿತುಕೊಂಡರು.
ತತೋ ವ್ಯಾಸೋ ಮಹಾತೇಜಾಃ ಪುಣ್ಯಂ ಭಾಗೀರಥೀಜಲಮ್ |
ಅವತೀರ್ಯಾಜುಹಾವಾಥ ಸರ್ವಾನ್ ಲೋಕಾನ್ ಮಹಾಮುನಿಃ ॥4॥
ಅನಂತರ ಮಹಾತೇಜಸ್ವಿಯಾದ ವೇದವ್ಯಾಸ ಮಹಾಮುನಿಗಳು ಮಂಗಳ ಮಯವಾದ ಗಂಗೆಯ ನೀರಿನಲ್ಲಿ ಇಳಿದು ಎಲ್ಲ ಜನರನ್ನೂ ಕರೆದರು.
ಪಾಂಡವಾನಾಂ ಚ ಯೇ ಯೋಧಾಃ ಕೌರವಾಣಾಂ ಚ ಸರ್ವಶಃ |
ರಾಜಾನಶ್ಚ ಮಹಾಭಾಗಾ ನಾನಾದೇಶನಿವಾಸಿನಃ ॥5॥
ಪ್ರತೀಕ್ಷ್ಯ ತಸ್ಥುಸ್ತೇ ಸರ್ವೇ ತೇಷಾಮಾಗಮನಂ ಪ್ರತಿ ॥6॥
ಪಾಂಡವರ ಯಾರೆಲ್ಲ ಸೈನಿಕರಿದ್ದರೋ ಹಾಗೂ ಕೌರವರ ಸೈನಿಕರು ಹಾಗೂ ನಾನಾ ದೇಶಗಳಲ್ಲಿ ವಾಸವಾಗಿದ್ದ, ಬೇರೆ ಬೇರೆ ಕಡೆಯಿಂದ ಬಂದ ಅಲ್ಲಿರುವ ಎಲ್ಲ ರಾಜರು ಹಿಂದೆ ಯುದ್ಧದಲ್ಲಿ ಮಡಿದವರ ಆಗಮನಕ್ಕಾಗಿ ನಿರೀಕ್ಷಿಸುತ್ತಾ ನಿಂತರು.
ತತಃ ಸುತುಮುಲಃ ಶಬ್ದೋ ಜಲಾಂತೇ ಜನಮೇಜಯ |
ಪ್ರಾದುರಾಸೀದ್ ಯಥಾಯೋಗಂ ಕುರುಪಾಂಡವಸೇನಯೋಃ ॥7॥
ಹೇ ಜನಮೇಜಯನೇ, ಅನಂತರ ನೀರಿನೊಳಗೆ ಹಿಂದೆ ಯುದ್ಧಾರಂಭ ಕಾಲದಲ್ಲಿದ್ದಂತೆ ಕೌರವ ಹಾಗೂ ಪಾಂಡವ ಸೇನೆಗಳ ಗದ್ದಲದ ಶಬ್ದವು ಕೇಳಿಬಂದಿತು.
ತತಸ್ತೇ ಪಾರ್ಥಿವಾಃ ಸರ್ವೇ ಭೀಷ್ಮದ್ರೋಣಪುರೋಗಮಾಃ |
ಸಸೈನ್ಯಾಃ ಸಲಿಲಾತ್ ತಸ್ಮಾತ್ ಸಮುತ್ತಸ್ಥುಃ ಸಹಸ್ರಶಃ ॥8॥
ಅನಂತರ ಭೀಷ್ಮ-ದ್ರೋಣರೇ ಮೊದಲಾದ ಎಲ್ಲ ರಾಜರೂ ಸೈನ್ಯ ಸಮೇತರಾಗಿ ಆ ಗಂಗೆಯ ನೀರಿನಿಂದ ಸಾವಿರಾರು ಸಂಖ್ಯೆಯಲ್ಲಿ ಎದ್ದುಬಂದರು.
ವಿರಾಟದ್ರುಪದೌ ಚೈವ ಸಹಪುತ್ರೌ ಸಸೈನಿಕೌ |
ದ್ರೌಪದೇಯಾಶ್ಚ ಸೌಭದ್ರೋ ರಾಕ್ಷಸಶ್ಚ ಘಟೋತ್ಕಚಃ ॥9॥
ಕರ್ಣದುರ್ಯೋಧನೌ ಚೈವ ಶಕುನಿಶ್ಚ ಮಹಾರಥಃ |
ದುಃಶಾಸನಾದಯಶ್ಚೈವ ಧಾರ್ತರಾಷ್ಟ್ರಾ ಮಹಾಬಲಾಃ ॥10॥
ಜಾರಾಸಂಧಿರ್ಭಗದತ್ತೋ ಜಲಸಂಧಶ್ಚ ವೀರ್ಯವಾನ್ |
ಭೂರಿಶ್ರವಾಃ ಶಲಃ ಶಲ್ಯೋ ವೃಷಸೇನಶ್ಚ ಸಾನುಜಃ ॥11॥
ಲಕ್ಷ ್ಮಮ(ಕ್ಷ)ಣೋ ರಾಜಪುತ್ರಶ್ಚ ಧೃಷ್ಟದ್ಯುಮ್ನಃ ಸಹಾತ್ಮಜಃ |
ಶಿಖಂಡಿಪುತ್ರಾಃ ಸರ್ವೇ ಚ ಧೃಷ್ಟಕೇತುಶ್ಚ ಸಾನುಜಃ ॥12॥
ಅಚಲೋ ವೃಷಕಶ್ಚೈವ ರಾಕ್ಷಸಶ್ಚಾಪ್ಯಲಾಯುಧಃ |
ಬಾಹ್ಲಿಕಃ ಸೋಮದತ್ತಶ್ಚ ಚೇಕಿತಾನಶ್ಚ ಪಾರ್ಥಿವಃ ॥13॥
ಏತೇ ಚಾನ್ಯೇ ಚ ಬಹವೋ ಬಹುತ್ವಾದ್ ಯೇ ನ ಕೀರ್ತಿತಾಃ |
ಸರ್ವೇ ಭಾಸುರದೇಹಾಸ್ತೇ ಸಮುತ್ತಸ್ಥುರ್ಜಲಾತ್ ತತಃ ॥14॥
ಪುತ್ರರು ಹಾಗೂ ಸೈನಿಕರಿಂದ ಕೂಡಿದ ವಿರಾಟ ಮತ್ತು ದ್ರುಪದರಾಜರು, ದ್ರುಪದರಾಜನ ಮಕ್ಕಳು, ಅಭಿಮನ್ಯುವು, ರಾಕ್ಷಸನಾದ ಘಟೋತ್ಕಚನು, ಕರ್ಣ- ದುರ್ಯೋಧನರು, ಹಾಗೆಯೇ ಮಹಾರಥನಾದ ಶಕುನಿಯು, ಅಲ್ಲದೇ ದುಶ್ಶಾಸನನೇ ಮೊದಲಾದ ಮಹಾಬಲಿಷ್ಠರಾದ ಧೃತರಾಷ್ಟ್ರನ ಮಕ್ಕಳು, ಜರಾಸಂಧನ ಮಗನಾದ ಸಹದೇವನು, ಭಗದತ್ತನು, ಹಾಗೆಯೇ ಪರಾಕ್ರಮಿಯಾದ ಮಗಧ ದೇಶದ ಜಲಸಂಧನು, ಭೂರಿಶ್ರವಸ್ಸು, ಶಲ, ಶಲ್ಯ, ತಮ್ಮಂದಿರೊಂದಿಗೆ ಸಹಿತನಾದ ವೃಷಸೇನ, ಲಕ್ಷಣ, ರಾಜಪುತ್ರನಾದ

ಮಕ್ಕಳೊಂದಿಗೆ ಸಹಿತನಾದ ಧೃಷ್ಟದ್ಯುಮ್ನ, ಶಿಖಂಡಿಯ ಎಲ್ಲ ಪುತ್ರರು, ಅನುಜ ಸಹಿತನಾದ ಧೃಷ್ಟಕೇತು, ಅಚಲ, ವೃಷಕ, ಅಲಾಯುಧನೆಂಬ ರಾಕ್ಷಸ, ಬಾಹ್ಲಿಕ, ಸೋಮದತ್ತ, ರಾಜನಾದ ಚೇಕಿತಾನ ಇವರೆಲ್ಲರೂ ಸೇರಿದಂತೆ ಬಹುಮಂದಿ ಬೇರೆ ರಾಜರು ವಿಸ್ತಾರಭಯದಿಂದ ಹೇಳದೆ ಇರುವ ಉಳಿದ ಎಲ್ಲರೂ ಹೊಳೆಯುತ್ತಿರುವ ದೇಹವುಳ್ಳವರಾಗಿ ನೀರಿನ ಮಧ್ಯದಿಂದ ಎದ್ದುಬಂದರು.
ಯಸ್ಯ ವೀರಸ್ಯ ಯೋ ವೇಷೋ ಯೋ ಧ್ವಜೋ ಯಚ್ಚ ವಾಹನಮ್ |
ಯದ್ವರ್ಮ ಯತ್ಪ್ರಹರಣಂ ತೇನ ತೇನ ಸ ದೃಶ್ಯತೇ ॥15॥
ಯುದ್ಧಕಾಲದಲ್ಲಿ ಯಾವ ವೀರನಿಗೆ ಯಾವ ರೀತಿಯ ವೇಷ-ಧ್ವಜ- ವಾಹನಗಳಿದ್ದವೋ, ಯಾವ ರೀತಿಯ ರಥ-ಆಯುಧಗಳಿದ್ದವೋ ಆಯಾಯ ರೂಪಗಳಿಂದಲೇ, ಆಯಾಯ ವಸ್ತುಗಳ ಸಹಿತವಾಗಿ ಆ ವ್ಯಕ್ತಿಯು ಕಾಣಿಸಿದನು.
ದಿವ್ಯಾಂಬರಧರಾಃ ಸರ್ವೇ ಸರ್ವೇ ಭ್ರಾಜಿಷ್ಣುಕುಂಡಲಾಃ |
ನಿರ್ವೈರಾ ನಿರಹಂಕಾರಾ ವಿಗತಕ್ರೋಧಮತ್ಸರಾಃ ॥16॥
ಗಂಧರ್ವೈರುಪಗೀಯಂತಃ ಸ್ತೂಯಮಾನಾಶ್ಚ ವಂದಿಭಿಃ |
ದಿವ್ಯಮಾಲ್ಯಸ್ರುಜೋಪೇತಾಸ್ತಥಾ ದಿವ್ಯಾಪ್ಸರೋವೃತಾಃ ॥17॥
ಅಲ್ಲಿ ಎದ್ದುಬಂದ ಎಲ್ಲರೂ ಕೂಡ ದಿವ್ಯವಾದ ವಸ್ತ್ರಗಳನ್ನು ಧರಿಸಿ, ಹೊಳೆಯುತ್ತಿರುವ ಕುಂಡಲಗಳಿಂದ ಕೂಡಿಕೊಂಡು, ಪರಸ್ಪರ ವೈರವಿಲ್ಲದೆ, ಅಹಂಕಾರವಿಲ್ಲದೆ, ಸಿಟ್ಟು ಹಾಗೂ ಮಾತ್ಸರ್ಯದಿಂದ ರಹಿತರಾಗಿ, ಗಂಧರ್ವರಿಂದ ಗಾನ ಮಾಡಿಸಿಕೊಳ್ಳುತ್ತಾ, ಹೊಗಳುಭಟರಿಂದ ಹೊಗಳಿಸಿಕೊಳ್ಳುತ್ತಾ, ದಿವ್ಯವಾದ ಮಾಲೆ ಮತ್ತು ಅಲಂಕಾರಗಳಿಂದ ಕೂಡಿದವರಾಗಿ ದೇವಲೋಕದ ಅಪ್ಸರೆಯರಿಂದ ಸುತ್ತುವರಿಯಲ್ಪಟ್ಟಿದ್ದರು.
ಧೃತರಾಷ್ಟ್ರಸ್ಯ ಚ ತದಾ ದಿವ್ಯಂ ಚಕ್ಷುರ್ನರಾಧಿಪ |
ಮುನಿಃ ಸತ್ಯವತೀಪುತ್ರಃ ಪ್ರೀತಃ ಪ್ರಾದಾತ್ ತಪೋಬಲಾತ್ ॥18॥
ಹೇ ನರಾಧಿಪನೇ, ಧೃತರಾಷ್ಟ್ರನ ಬಗ್ಗೆ ಪ್ರೀತಿಯುಳ್ಳ ಸತ್ಯವತೀಪುತ್ರರಾದ ವೇದವ್ಯಾಸಮುನಿಗಳು ತಮ್ಮ ತಪೋಬಲದಿಂದ ಧೃತರಾಷ್ಟ್ರನಿಗೆ ದಿವ್ಯವಾದ ಚಕ್ಷುಸ್ಸನ್ನು ನೀಡಿದರು.
ದಿವ್ಯಜ್ಞಾನಬಲೋಪೇತಾ ಗಾಂಧಾರೀ ಚ ಯಶಸ್ವಿನೀ |
ದದರ್ಶ ಪುತ್ರಾಂಸ್ತಾನ್ ಸರ್ವಾನ್ ಯೇ ಚಾನ್ಯೇಽಪಿ ಮೃಧೇ ಹತಾಃ ॥
ಯಶಸ್ವಿನಿಯಾದ ಗಾಂಧಾರಿಯೂ ಕೂಡ ದಿವ್ಯವಾದ ಜ್ಞಾನಬಲದಿಂದ ಕೂಡಿಕೊಂಡು ಯುದ್ಧದಲ್ಲಿ ಮಡಿದ ತನ್ನ ಎಲ್ಲಾ ಪುತ್ರರನ್ನೂ ಮತ್ತು ಉಳಿದ ಎಲ್ಲರನ್ನೂ ನೋಡಿದಳು.
ತದದ್ಭುತಮಚಿಂತ್ಯಂ ಚ ಸುಮಹದ್ ರೋಮಹರ್ಷಣಮ್ |
ವಿಸ್ಮಿತಃ ಸ ಜನಃ ಸರ್ವೋ ದದರ್ಶಾನಿಮಿಷೇಕ್ಷಣಃ ॥20॥
ಅಲ್ಲಿರುವ ಎಲ್ಲಾ ಜನರು ಆಲೋಚಿಸಲೇ ಅಶಕ್ಯವಾದ ಮಹತ್ತಾದ ಆ ಅದ್ಭುತವನ್ನು ವಿಸ್ಮಯದಿಂದ ರೋಮಾಂಚನಗೊಂಡವರಾಗಿ ಕಣ್ಣು ಮಿಟುಕಿಸದೆ ಕಂಡರು.
ತದುತ್ಸವಮಹೋದಗ್ರಂ ಹೃಷ್ಟನಾರೀನರಾಕುಲಮ್ |
ಆಶ್ಚರ್ಯಭೂತಂ ದದೃಶೇ ಚಿತ್ರಂ ಪಟಗತಂ ಯಥಾ ॥21॥
ಅಲ್ಲಿ ಸೇರಿದ ಎಲ್ಲ ನರ-ನಾರಿಯರ ಸಮೂಹವನ್ನು ಸಂತೋಷಗೊಳಿಸುವ ಆಶ್ಚರ್ಯಭೂತವಾದ ಆ ಮಹೋನ್ನತವಾದ ಉತ್ಸವವು ವಸ್ತ್ರದಲ್ಲಿ ಬರೆದ ಚಿತ್ರದಂತೆ ಕಂಡಿತು.
ಧೃತರಾಷ್ಟ್ರಸ್ತು ತಾನ್ ಸರ್ವಾನ್ ಪಶ್ಯನ್ ದಿವ್ಯೇನ ಚಕ್ಷುಷಾ |
ಮುಮುದೇ ಭರತಶ್ರೇಷ್ಠ ಪ್ರಸಾದಾತ್ ತಸ್ಯ ವೈ ಮುನೇಃ ॥22॥
ಹೇ ಭರತಶ್ರೇಷ್ಠನೇ, ಧೃತರಾಷ್ಟ್ರನಾದರೂ ಅಲ್ಲಿ ಮೇಲೆದ್ದು ಬಂದ ಎಲ್ಲರನ್ನೂ ದಿವ್ಯವಾದ ಚಕ್ಷುಸ್ಸಿನಿಂದ ನೋಡುತ್ತಾ, ವೇದವ್ಯಾಸರ ಆ ಅನುಗ್ರಹದಿಂದ ಆನಂದತುಂದಿಲನಾದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಧೃತರಾಷ್ಟ್ರಾದಿಭಿರ್ಹತಬಂಧುದರ್ಶನಂ ನಾಮ ಅಷ್ಟತ್ರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.
* * * * *
ಮೂವತ್ತೊಂಬತ್ತನೆಯ ಅಧ್ಯಾಯ
ಧೃತರಾಷ್ಟ್ರ-ಯುಧಿಷ್ಠಿರಾದಿಗಳು ವೇದವ್ಯಾಸರ ಪ್ರಸಾದದಿಂದ ಮತ್ತೆ ಬದುಕಿಬಂದ, ಯುದ್ಧದಲ್ಲಿ ಹತರಾದ ತಮ್ಮ ಬಂಧುಗಳ ಜೊತೆಗೆ ಮಾತುಕತೆಗಳನ್ನಾಡುತ್ತಾ ಇಡೀ ರಾತ್ರಿ ವಿಹರಿಸುವುದು.
ವೈಶಂಪಾಯನಃ
ತತಸ್ತೇ ಪುರುಷಶ್ರೇಷ್ಠಾಃ ಸಮಾಜಗ್ಮುಃ ಪರಸ್ಪರಮ್ |
ವಿಗತಕ್ರೋಧಮಾತ್ಸರ್ಯಾಃ ಸರ್ವೇ ವಿಗತಕಲ್ಮಷಾಃ ॥1॥
ವೈಶಂಪಾಯನ ಅನಂತರ ಆ ಎಲ್ಲ ಪುರುಷಶ್ರೇಷ್ಠರು ಪರಸ್ಪರವಾಗಿ ಕೋಪ ಹಾಗೂ ಮಾತ್ಸರ್ಯಗಳನ್ನು ಬದಿಗಿಟ್ಟು, ಯಾವುದೇ ರೀತಿಯ ಕೆಟ್ಟ ಭಾವನೆಗಳಿಲ್ಲದೆ ಒಂದುಗೂಡಿದರು.
ವಿಧಿಂ ಪರಮಮಾಸ್ಥಾಯ ಬ್ರಹ್ಮರ್ಷಿವಿಹಿತಂ ಶುಭಮ್ |
ಸಂಹೃಷ್ಟಮನಸಃ ಸರ್ವೇ ದೇವಲೋಕ ಇವಾಮರಾಃ ॥2॥

ಬ್ರಹ್ಮರ್ಷಿಗಳಾದ ವೇದವ್ಯಾಸರಿಂದ ಸೂಚಿತವಾದ, ಮಂಗಳಮಯವಾದ ಉತ್ತಮ ವಿಧಿಯನ್ನು ಒಪ್ಪಿಕೊಂಡವರಾಗಿ, ಎಲ್ಲರೂ ದೇವಲೋಕದಲ್ಲಿರುವ ದೇವತೆಗಳಂತೆ ಪರಸ್ಪರ ಅರಳಿದ ಮನಸ್ಸುಳ್ಳವರಾದರು.
ಪುತ್ರಃ ಪಿತ್ರಾ ಚ ಮಾತ್ರಾ ಚ ಭಾರ್ಯಾಶ್ಚ ಪತಿಭಿಃ ಸಹ |
ಭ್ರಾತ್ರಾ ಭ್ರಾತಾ ಸಖಾ ಚೈವ ಸಖ್ಯಾ ರಾಜನ್ ಸಮಾಗತಾಃ ॥3॥
ಹೇ ರಾಜನ್, ಮಕ್ಕಳು ತಂದೆ-ತಾಯಿಯರೊಂದಿಗೆ, ಪತ್ನಿಯರು ತಮ್ಮ ತಮ್ಮ ಪತಿಗಳೊಂದಿಗೆ, ಸಹೋದರನು ತನ್ನ ಸಹೋದರನೊಂದಿಗೆ, ಮಿತ್ರನು ತನ್ನ ಮಿತ್ರನೊಂದಿಗೆ ಒಗ್ಗೂಡಿದರು.
ಪಾಂಡವಾಸ್ತು ಮಹೇಷ್ವಾಸಂ ಕರ್ಣಂ ಸೌಭದ್ರಮೇವ ಚ |
ಸಂಪ್ರಹರ್ಷಾತ್ ಸಮಾಜಗ್ಮುರ್ದ್ರೌಪದೇಯಾಂಶ್ಚ ಸರ್ವಶಃ ॥4॥
ಪಾಂಡವರಾದರೂ ಮಹಾಪರಾಕ್ರಮಿಯಾದ ಕರ್ಣನನ್ನೂ ಹಾಗೆಯೇ ಅಭಿಮನ್ಯುವನ್ನೂ ಹಾಗೂ ದ್ರೌಪದಿಯ ಇತರ ಎಲ್ಲಾ ಮಕ್ಕಳನ್ನೂ ಸಂತೋಷದಿಂದ ಸೇರಿಕೊಂಡರು.
ತತಸ್ತೇ ಪ್ರೀಯಮಾಣಾ ವೈ ಕರ್ಣೇನ ಸಹ ಪಾಂಡವಾಃ |
ಸಮೇತ್ಯ ಪೃಥಿವೀಪಾಲ ಸೌಹೃದೇ ಚ ಸ್ಥಿತಾಽಭವನ್ ॥5॥
ಹೇ ಪೃಥಿವೀಪಾಲನೇ, ಆ ಪಾಂಡವರು ಕರ್ಣನೊಂದಿಗೆ ಸಂತೋಷವುಳ್ಳವರಾಗಿ ಸೇರಿಕೊಂಡು ಮಿತ್ರಭಾವದಿಂದ ನಡೆದುಕೊಂಡರು.
ಪರಸ್ಪರಂ ಸಮಾಗಮ್ಯ ಯೋಧಾಸ್ತೇ ಭರತರ್ಷಭ |
ಮುನೇಃ ಪ್ರಸಾದಾತ್ ತೇ ಹ್ಯೇವಂ ಕ್ಷತ್ರಿಯಾ ನಷ್ಟಮನ್ಯವಃ ॥6॥
ಹೇ ಭರತರ್ಷಭನೇ, ಮುನಿಗಳಾದ ವೇದವ್ಯಾಸರ ಪ್ರಸಾದದಿಂದ ಆ ಎಲ್ಲ ಕ್ಷತ್ರಿಯ ಯೋಧರು ಕೋಪವಿಲ್ಲದವರಾಗಿ ಪರಸ್ಪರ ಒಗ್ಗೂಡಿದರು.
ಅಸೌಹೃದಂ ಪರಿತ್ಯಜ್ಯ ಸೌಹೃದೇ ಪರ್ಯವಸ್ಥಿತಾಃ |
ಏವಂ ಸಮಾಗತಾಃ ಸರ್ವೇ ಗುರುಭಿರ್ಬಾಂಧವೈಃ ಸಹ ॥7॥
ಹೀಗೆ ಒಗ್ಗೂಡಿದ ಎಲ್ಲರೂ ಗುರುಗಳು ಹಾಗೂ ಬಂಧುಜನರೊಂದಿಗೆ ಹಿಂದಿದ್ದ ಎಲ್ಲ ವೈರವನ್ನೂ ಬಿಟ್ಟು ಮಿತ್ರಭಾವವುಳ್ಳವರಾದರು.

ಪುತ್ರೈಶ್ಚ ಪುರುಷವ್ಯಾಘ್ರಾಃ ಕುರವೋಽನ್ಯೇ ಚ ಪಾರ್ಥಿವಾಃ |
ತಾಂ ರಾತ್ರಿಮಖಿಲಾಮೇವಂ ವಿಹೃತ್ಯ ಪ್ರೀತಮಾನಸಾಃ ॥8॥
ಪುರುಷವ್ಯಾಘ್ರರಾದ ಕುರುವಂಶಜರು ಮತ್ತು ಬೇರೆಲ್ಲ ರಾಜರು ತಮ್ಮ ತಮ್ಮ ಪುತ್ರರೊಂದಿಗೆ ಸಂತೋಷಗೊಂಡ ಮನಸ್ಸುಳ್ಳವರಾಗಿ ಇಡೀ ರಾತ್ರಿ ವಿಹರಿಸಿದರು.
ಮೇನಿರೇ ಪರಿತೋಷೇಣ ನೃಪಾಃ ಸ್ವರ್ಗಸದೋ ಯಥಾ |
ನಾತ್ರ ಶೋಕೋ ಭಯಂ ತ್ರಾಸೋ ನಾರತಿರ್ನಾಯಶೋಽಭವತ್ ॥9॥
ಹೀಗೆ ನಡೆಸಿದ ವಿಹಾರದಿಂದ ಉಂಟಾದ ಸಂತೋಷದಿಂದ ಆ ರಾಜರೆಲ್ಲರೂ ತಾವು ಸ್ವರ್ಗದಲ್ಲಿ ಉಳ್ಳವರೆಂದು ಭಾವಿಸಿದರು. ಈ ಸಂದರ್ಭದಲ್ಲಿ ಶೋಕವಾಗಲಿ, ಭಯವಾಗಲಿ, ಆಯಾಸವಾಗಲಿ, ಅನಾಸಕ್ತಿಯಾಗಲಿ, ಅಪಕೀರ್ತಿಯಾಗಲಿ ಇರಲಿಲ್ಲ.
ಪರಸ್ಪರಂ ಸಮಾಗಮ್ಯ ಯೋಧಾನಾಂ ಭರತರ್ಷಭ |
ಸಮಾಗತಾಸ್ತಾಃ ಪಿತೃಭಿರ್ಭ್ರಾತೃಭಿಃ ಪತಿಭಿಃ ಸುತೈಃ ॥10॥
ಮುದಂ ಪರಮಿಕಾಂ ಪ್ರಾಪ್ಯ ನಾರ್ಯೋ ದುಃಖಮಥಾತ್ಯಜನ್ ॥11॥
ಹೇ ಭರತರ್ಷಭನೇ, ಅಲ್ಲಿ ಪರಸ್ಪರ ಸೇರಿಕೊಂಡಿದ್ದ ಯೋಧರ ನಾರಿಯರೆಲ್ಲರೂ ತಮ್ಮ ತಂದೆಯರೊಂದಿಗೆ, ಸಹೋದರರೊಂದಿಗೆ, ಪತಿಗಳೊಂದಿಗೆ, ಮಕ್ಕಳೊಂದಿಗೆ ಸೇರಿಕೊಂಡು ಅತ್ಯಧಿಕವಾದ ಸಂತೋಷವನ್ನು ಹೊಂದಿ ದುಃಖವನ್ನು ತೊರೆದರು.
ದೇವಲೋಕಂ ಗತಾ ಯೇ ಚ ಯೇ ಚ ಬ್ರಹ್ಮಸದೋ ಗತಾಃ |
ಯೇ ಚಾಪಿ ವಾರುಣಂ ಲೋಕಂ ಯೇ ಚ ಗೋಲೋಕಮಾಶ್ರಿತಾಃ ॥
ತಥಾ ವೈವಸ್ವತಂ ಲೋಕಂ ಯೇ ಚ ಯಕ್ಷಾನುಪಾಗತಾಃ |
ರಾಕ್ಷಸಾಂಶ್ಚ ಪಿಶಾಚಾಂಶ್ಚ ಕುರೂಂಶ್ಚಾಪಿ ತಥೋತ್ತರಾನ್ ॥13॥
ವಿಚಿತ್ರಾಶ್ಚ ಗತೀರನ್ಯೇ ಯೇ ಪ್ರಾಪ್ತಾಃ ಕರ್ಮಭಿರ್ನರಾಃ |
ಸರ್ವೇ ತೇ ತದ್ವಯೋರೂಪವೇಷಾಸ್ತತ್ರ ಸಮಭ್ಯಯುಃ ॥14॥
ಯಾರೆಲ್ಲ ದೇವಲೋಕವನ್ನು ಹೊಂದಿದ್ದರೋ, ಯಾರು ಬ್ರಹ್ಮಸದಸ್ಸಿಗೆ ಹೋಗಿದ್ದರೋ, ವಾರುಣಲೋಕಕ್ಕೆ ಹೋದವರೂ, ಗೋಲೋಕವನ್ನು ಆಶ್ರಯಿಸಿದವರೂ, ಹಾಗೆಯೇ ವೈವಸ್ವತಲೋಕಕ್ಕೆ ಹೋದವರೂ, ಯಕ್ಷಲೋಕದಲ್ಲಿ ಇರುವವರೂ, ರಾಕ್ಷಸರೂ, ಪಿಶಾಚಲೋಕಕ್ಕೆ ಹೋದವರೂ, ಉತ್ತರ ಕುರುವರ್ಷದಲ್ಲಿ ಇರುವವರೂ ಹೀಗೆ ತಮ್ಮ ತಮ್ಮ ಕರ್ಮಗಳಿಂದ ಯಾರೆಲ್ಲ ವಿಚಿತ್ರವಾದ ಗತಿಗಳನ್ನು ಹೊಂದಿದ್ದರೋ ಅವರೆಲ್ಲರೂ ಅದೇ ವಯಸ್ಸು, ರೂಪ ಮತ್ತು ವೇಷವುಳ್ಳವರಾಗಿ ಅಲ್ಲಿ ಸೇರಿಕೊಂಡರು.
ಏಕಾಂ ರಾತ್ರಿಂ ವಿಹೃತ್ಯೈವಂ ತೇ ವೀರಾಸ್ತಾಶ್ಚ ಯೋಷಿತಃ |
ಆಮಂತ್ರ್ಯಾನ್ಯೋನ್ಯಮಾಶ್ಲಿಷ್ಯ ತತೋ ಜಗ್ಮುರ್ಯಥಾಗತಮ್ ॥15॥
ಆ ವೀರರು ಮತ್ತು ಆ ಸ್ತ್ರೀಜನರೆಲ್ಲರೂ ಈ ರೀತಿಯಾಗಿ ಒಂದು ರಾತ್ರಿ ಇಡೀ ವಿಹಾರ ನಡೆಸಿ, ಪರಸ್ಪರ ಸಂಭಾಷಿಸಿ, ಅನ್ಯೋನ್ಯವಾಗಿ ಆಲಿಂಗಿಸಿಕೊಂಡು ನಂತರ ತಾವು ಎಲ್ಲಿಂದ ಬಂದಿದ್ದರೋ ಅಲ್ಲಿಗೆ ತೆರಳಿದರು.
ತತೋ ವಿಸರ್ಜಯಾಮಾಸ ಲೋಕಾಂಸ್ತಾನ್ ಮುನಿಪುಂಗವಃ |
ಕ್ಷಣೇನಾಂತರ್ಹಿತಾಶ್ಚೈವ ಪ್ರೇಕ್ಷತಾಮೇವ ತೇಽಭವನ್ ॥16॥

ಅನಂತರ ಮುನಿಪುಂಗವರಾದ ವೇದವ್ಯಾಸರು ಆ ಜನರನ್ನು ಹಿಂದಿರುಗುವಂತೆ ಮಾಡಿದರು. ಬಂದಿರುವ ಅವರೆಲ್ಲರೂ ನೋಡ ನೋಡುತ್ತಿದ್ದಂತೆಯೇ ಕ್ಷಣದಲ್ಲಿ ಅಂತರ್ಧಾನರಾದರು.

ಅವಗಾಹ್ಯ ಮಹಾತ್ಮಾನಃ ಪುಣ್ಯಾಂ ಭಾಗೀರಥೀಂ ನದೀಮ್ |
ಸರಥಾಃ ಸಧ್ವಜಾಶ್ಚೈವ ಸ್ವಾನಿ ವೇಶ್ಮಾನಿ ಭೇಜಿರೇ ॥17॥

ಮಹಾತ್ಮರಾದ ಅವರು ಮಂಗಳಮಯವಾದ ಭಾಗೀರಥೀ ನದಿಯಲ್ಲಿ ಮುಳುಗಿ ರಥ ಮತ್ತು ಧ್ವಜಗಳೊಂದಿಗೆ ತಮ್ಮ ತಮ್ಮ ಸ್ಥಾನಗಳನ್ನು ಸೇರಿಕೊಂಡರು.

ದೇವಲೋಕಂ ಯಯುಃ ಕೇಚಿತ್ ಕೇಚಿದ್ ಬ್ರಹ್ಮಸದಸ್ತಥಾ |
ಕೇಚಿಚ್ಚ ವಾರುಣಂ ಲೋಕಂ ಕೇಚಿತ್ ಕೌಬೇರಮಾಪ್ನುವನ್ ॥18॥
ತತೋ ವೈವಸ್ವತಂ ಲೋಕಂ ಕೇಚಿಚ್ಚೈವಾಪ್ನುವನ್ನೃಪಾಃ |
ರಾಕ್ಷಸಾನಾಂ ಪಿಶಾಚಾನಾಂ ಕೇಚಿಚ್ಚಾಪ್ಯುತ್ತರಾನ್ ಕುರೂನ್ ॥19॥

ಕೆಲವರು ದೇವಲೋಕವನ್ನು ಸೇರಿಕೊಂಡರು. ಮತ್ತೆ ಕೆಲವರು ಬ್ರಹ್ಮಸದಸ್ಸನ್ನೂ, ಮತ್ತೆ ಕೆಲವರು ವಾರುಣ ಲೋಕವನ್ನೂ, ಮತ್ತೆ ಕೆಲವರು ಕುಬೇರನ ಲೋಕವನ್ನೂ, ಮತ್ತೆ ಕೆಲವರು ವೈವಸ್ವತ ಲೋಕವನ್ನೂ, ಮತ್ತೆ ಕೆಲವರು ರಾಕ್ಷಸ-ಪಿಶಾಚರ ಲೋಕಗಳನ್ನೂ, ಇನ್ನು ಕೆಲವರು ಉತ್ತರ ಕುರುವರ್ಷವನ್ನೂ ಸೇರಿದರು.

ವಿಚಿತ್ರಗತಯಃ ಸರ್ವೇ ಯಾನವಾಪ್ಯಾಮರೈಃ ಸಹ |
ಆಜಗ್ಮುಸ್ತೇ ಮಹಾತ್ಮಾನಃ ಸವಾಹಾಃ ಸಪದಾನುಗಾಃ ॥20॥
ಗತೇಷು ತೇಷು ಸರ್ವೇಷು ಸಲಿಲಸ್ಥೋ ಮಹಾಮುನಿಃ |
ಧರ್ಮಶೀಲೋ ಮಹಾತೇಜಾಃ ಕುರೂಣಾಂ ಹಿತಕೃತ್ತದಾ ॥21॥
ತತಃ ಪ್ರೋವಾಚ ತಾಃ ಸರ್ವಾಃ ಕ್ಷತ್ರಿಯಾ ನಿಹತೇಶ್ವರಾಃ ॥22॥

ವಿಚಿತ್ರಗತಿಗಳುಳ್ಳ ಎಲ್ಲರೂ ದೇವತೆಗಳೊಂದಿಗೆ ಯಾವ ಲೋಕಗಳನ್ನು ಹೊಂದಿ ಇಲ್ಲಿಗೆ ವಾಹನ ಮತ್ತು ಪರಿವಾರದೊಂದಿಗೆ ಆಗಮಿಸಿದ್ದರೋ ಆ ಎಲ್ಲ ಮಹಾತ್ಮರೂ ಹೋದ ನಂತರ ನೀರಿನಲ್ಲೇ ಇದ್ದ ಧರ್ಮಶೀಲರಾದ, ಮಹಾತೇಜಸ್ವಿಯಾದ, ಕುರುರಾಷ್ಟ್ರದವರಿಗೆ ಹಿತವನ್ನುಂಟು ಮಾಡುವ ಮಹಾಮುನಿಯಾದ ವೇದವ್ಯಾಸರು ಅಲ್ಲಿ ಸೇರಿದ್ದ ಪತಿಗಳನ್ನು ಕಳೆದುಕೊಂಡ ಎಲ್ಲ ಕ್ಷತ್ರಿಯ ಸ್ತ್ರೀಯರನ್ನು ಕುರಿತು ಹೀಗೆ ಹೇಳಿದರು.

ಯಾಯಾಃ ಪತಿಕೃತಾನ್ ಲೋಕಾನಿಚ್ಛಂತಿ ಪರಮಸ್ತ್ರಿಯಃ |
ತಾ ಜಾಹ್ನವೀಜಲಂ ಕ್ಷಿಪ್ರಮವಗಾಹಂತ್ವತಂದ್ರಿತಾಃ ॥23॥

ಯಾವ ಯಾವ ಸ್ತ್ರೀಯರು ಪತಿಗಳು ಸೇರಿಕೊಂಡ ಲೋಕಗಳನ್ನು ಇಚ್ಛಿಸುವಿರೋ ಆ ಎಲ್ಲ ಉತ್ತಮ ಸ್ತ್ರೀಯರು ಬೇಗನೆ ಬಂದು ಆಲಸ್ಯ ಮಾಡದೆ ಗಂಗಾನದಿಯಲ್ಲಿ ಮುಳುಗಿರಿ.

ತತಸ್ತಸ್ಯ ವಚಃ ಶ್ರುತ್ವಾ ಶ್ರದ್ದಧಾನಾ ವರಾಂಗನಾಃ |
ಶ್ವಶುರಂ ಸಮನುಜ್ಞಾಪ್ಯ ವಿವಿಶುರ್ಜಾಹ್ನವೀಜಲಮ್ ॥24॥

ಆ ವೇದವ್ಯಾಸರ ಮಾತುಗಳನ್ನು ಕೇಳಿದ ನಂತರ ಅವರ ಮಾತಿನಲ್ಲಿ ಶ್ರದ್ಧೆಯನ್ನಿಟ್ಟು ಎಲ್ಲ ಉತ್ತಮ ಸ್ತ್ರೀಯರೂ ತಮ್ಮ ಮಾವಂದಿರ ಅಪ್ಪಣೆಯನ್ನು ಪಡೆದು ಗಂಗಾನದಿಯ ನೀರಿನಲ್ಲಿ ಪ್ರವೇಶಿಸಿದರು.

ವಿಮುಕ್ತಾ ಮಾನುಷೈರ್ದೇಹೈಸ್ತತಸ್ತಾ ಭರ್ತೃಭಿಃ ಸಹ |
ಸಮಾಜಗ್ಮುಸ್ತದಾ ಸಾಧ್ವ್ಯಃ ಸರ್ವಾ ಏವ ವಿಶಾಂಪತೇ ॥25॥

ಹೇ ನರಪತಿಯೇ, ಅನಂತರ ಆ ಎಲ್ಲ ಸಾಧ್ವಿ ಸ್ತ್ರೀಯರೂ ಮಾನವ ದೇಹಗಳನ್ನು ಬಿಟ್ಟು ತಮ್ಮ ತಮ್ಮ ಗಂಡಂದಿರೊಂದಿಗೆ ಸೇರಿಕೊಂಡರು.

ಏವಂ ಕ್ರಮೇಣ ಸರ್ವಾಸ್ತಾಃ ಶೀಲವತ್ಯಃ ಪತಿವ್ರತಾಃ |
ಪ್ರವಿಶ್ಯ ತೋಯಂ ನಿರ್ಮುಕ್ತಾ ಜಗ್ಮುರ್ಭರ್ತೃಸಲೋಕತಾಮ್ ॥26॥

ಈ ಕ್ರಮದಿಂದ ಆ ಎಲ್ಲ ಶೀಲವತಿಯರಾದ ಪತಿವ್ರತೆಯರು ನೀರಿನಲ್ಲಿ ಮುಳುಗಿ ಲೌಕಿಕ ಬಂಧನಗಳಿಂದ ನಿರ್ಮುಕ್ತರಾಗಿ ಭರ್ತೃಲೋಕವನ್ನು ಹೊಂದಿದರು.

ದಿವ್ಯರೂಪಸಮಾಯುಕ್ತಾ ದಿವ್ಯಾಭರಣಭೂಷಿತಾಃ |
ದಿವ್ಯಮಾಲ್ಯಾಂಬರಧರಾ ಯಥಾಽಽಸಾಂ ಪತಯಸ್ತಥಾ ॥27॥

ಅವರ ಗಂಡಂದಿರು ಹೇಗೆ ಇದ್ದರೋ ಹಾಗೆಯೇ ಆ ಸ್ತ್ರೀಯರೂ ದಿವ್ಯರೂಪದಿಂದ ಕೂಡಿಕೊಂಡು, ದಿವ್ಯವಾದ ಆಭರಣಗಳಿಂದ ಅಲಂಕೃತರಾಗಿ, ದಿವ್ಯವಾದ ಮಾಲೆ ಹಾಗೂ ವಸ್ತ್ರಗಳನ್ನು ಧರಿಸಿದವರಾದರು.

ತಾಃ ಶೀಲಗುಣಸಂಪನ್ನಾಃ ವಿಮಾನಸ್ಥಾ ಗತಕ್ಲಮಾಃ |
ಸರ್ವಾಃ ಸರ್ವಗುಣೋಪೇತಾಃ ಸ್ವಸ್ಥಾನಂ ಪ್ರತಿಪೇದಿರೇ ॥28॥

ಶೀಲ-ಗುಣಗಳಿಂದ ಸಂಪನ್ನರಾದ ಆ ಸ್ತ್ರೀಯರು ವಿಮಾನದಲ್ಲಿ ಕುಳಿತು ಕೊಂಡವರಾಗಿ, ಯಾವುದೇ ರೀತಿಯ ಸಂಕಟವಿಲ್ಲದೆ ಎಲ್ಲ ಶುಭಗುಣಗಳಿಂದ ಕೂಡಿದವರಾಗಿ ತಮಗೆ ಸಿಗಬೇಕಾದ ಸ್ಥಾನವನ್ನು ಪಡೆದರು.

ಯಸ್ಯ ಯಸ್ಯ ತು ಯಃ ಕಾಮಸ್ತಸ್ಮಿನ್ ಕಾಲೇ ಬಭೂವ ಹ |
ತಂ ತಂ ವಿಸೃಷ್ಟವಾನ್ ವ್ಯಾಸೋ ವರದೋ ಧರ್ಮವತ್ಸಲಃ ॥29॥

ಆ ಕಾಲದಲ್ಲಿ ಯಾವ ಯಾವ ವ್ಯಕ್ತಿಗೆ ಯಾವ ಅಭಿಲಾಷೆಯು ಉಂಟಾಯಿತೋ ಆಯಾಯ ಎಲ್ಲ ಕಾಮನೆಗಳನ್ನೂ ವರದರಾದ, ಧರ್ಮವತ್ಸಲರಾದ ವೇದವ್ಯಾಸರು ವಿತರಿಸಿದರು.

ತಚ್ಛ್ರುತ್ವಾ ನರದೇವಾನಾಂ ಪುನರಾಗಮನಂ ನರಾಃ |
ಜಹೃಷುರ್ಮುದಿತಾಶ್ಚಾಸನ್ನಾನಾದೇಶಗತಾ ಅಪಿ ॥30॥
ಆ ರಾಜರ ಪುನರಾಗಮನವನ್ನು ಬೇರೆ ಬೇರೆ ಪ್ರದೇಶಗಳಲ್ಲಿರುವ ಜನರೂ ಕೂಡ ಕೇಳಿ ತಿಳಿದು ಸಂಭ್ರಮಿಸಿದರು ಮತ್ತು ಸಂತೋಷಗೊಂಡವರಾದರು.
ತೇ ನಷ್ಟಭಯಸಂಕಲ್ಪಾ ನರಾ ವಿಗತಕಲ್ಮಷಾಃ |
ಬಭೂವುಃ ಪೌರವಾಃ ಸರ್ವೇ ತದ್ ದೃಷ್ಟ್ವಾಽಽಶ್ಚರ್ಯಮುತ್ತಮಮ್ ॥
ಆ ಎಲ್ಲ ಪುರಜನರೂ ಕೂಡ ಉತ್ತಮವಾದ ಆ ಅದ್ಭುತ ಪ್ರಸಂಗವನ್ನು ನೋಡಿ, ಭಯ ಹಾಗೂ ಸಂಕಲ್ಪಗಳನ್ನು ತೊರೆದು ಕಲ್ಮಶಗಳಿಂದ ರಹಿತರಾದರು.
ಪ್ರಿಯೈಃ ಸಮಾಗಮಂ ತೇಷಾಂ ಯಃ ಸಮ್ಯಕ್ ಶೃಣುಯಾನ್ನರಃ |
ಪ್ರಿಯಾಣಿ ಲಭತೇ ನಿತ್ಯಮಿಹ ಚ ಪ್ರೇತ್ಯ ಚೈವ ಸಃ ॥32॥
ಪ್ರಿಯಜನರೊಂದಿಗೆ ಅವರ ಸಮಾಗಮವನ್ನು ಯಾವನು ಶ್ರದ್ಧೆಯಿಂದ ಕೇಳುವನೋ ಅಂತಹ ಮನುಷ್ಯನು ಇಹಲೋಕದಲ್ಲೂ, ಪರಲೋಕದಲ್ಲೂ ತನಗೆ ಪ್ರಿಯವಾದುದನ್ನು ಪಡೆಯುತ್ತಾನೆ.
ಇಷ್ಟಬಾಂಧವಸಂಯೋಗಮನಾಯಾಸಮನಾಮಯಮ್ ॥33॥
ಜೊತೆಗೆ ಇಷ್ಟರಾದ ಬಂಧುಜನರೊಡನೆ ಸಮಾಗಮವನ್ನೂ ಆಯಾಸ ಹಾಗೂ ರೋಗಗಳ ನಿವೃತ್ತಿಯನ್ನೂ ಪಡೆಯುತ್ತಾನೆ.
ಯಶ್ಚೈತಚ್ಛ್ರಾವಯೇದ್ ವಿದ್ವಾನ್ ವಿದುಷೋ ಧರ್ಮವಿತ್ತಮಃ |
ಸ ಯಶಃ ಪ್ರಾಪ್ನುಯಾಲ್ಲೋಕೇ ಪರತ್ರ ಚ ಶುಭಾಂ ಗತಿಮ್ ॥34॥
ಯಾವನು ಈ ಪ್ರಸಂಗವನ್ನು ವಿದ್ವಾಂಸರಿಂದ ಕೇಳಿಸುತ್ತಾನೋ ಅಂತಹ ಧರ್ಮಿಷ್ಠನಾದ ವಿದ್ವಾಂಸನಾದ ವ್ಯಕ್ತಿಯು ಲೋಕದಲ್ಲಿ ಯಶಸ್ಸನ್ನೂ, ಪರಲೋಕದಲ್ಲಿ ಶುಭಗತಿಯನ್ನೂ ಪಡೆಯುತ್ತಾನೆ.
ಸ್ವಾಧ್ಯಾಯಯುಕ್ತಾ ಮನುಜಾಸ್ತಪೋಯುಕ್ತಾಶ್ಚ ಭಾರತ |
ಸಾಧ್ವಾಚಾರಾ ದಮೋಪೇತಾ ದಾನನಿರ್ಧೂತಕಲ್ಮಷಾಃ ॥35॥
ಋಜವಃ ಶುಚಯಃ ಶಾಂತಾ ಹಿಂಸಾನೃತವಿವರ್ಜಿತಾಃ |
ಆಸ್ತಿಕಾಃ ಶ್ರದ್ದಧಾನಾಶ್ಚ ಧೃತಿಮಂತಶ್ಚ ಮಾನವಾಃ ॥36॥
ಶ್ರುತ್ವಾಽಽಶ್ಚರ್ಯಮಿದಂ ಪರ್ವ ಹ್ಯವಾಪ್ಸ್ಯಂತಿ ಪರಾಂ ಗತಿಮ್ ॥37॥
ಹೇ ಭಾರತನೇ, ಸ್ವಾಧ್ಯಾಯದಿಂದ ಕೂಡಿದ, ತಪೋನಿರತರಾದ, ಉತ್ತಮವಾದ ಆಚಾರವುಳ್ಳ, ಇಂದ್ರಿಯನಿಗ್ರಹವುಳ್ಳ, ದಾನಗಳಿಂದ ಪಾಪವನ್ನು ತೊಳೆದುಕೊಂಡ, ಋಜುಮನಸ್ಸುಳ್ಳ, ಶುಚಿಯಾದ, ಶಾಂತರಾದ, ಹಿಂಸೆ ಮತ್ತು ಸುಳ್ಳುಗಳನ್ನು ವಿವರ್ಜಿಸಿದ, ಆಸ್ತಿಕರಾದ, ಶ್ರದ್ಧಾಯುಕ್ತರಾದ, ಧೈರ್ಯಯುಕ್ತರಾದ ಮಾನವರು ಈ ಅಶ್ಚರ್ಯಕರವಾದ ಪರ್ವವನ್ನು ಶ್ರದ್ಧೆಯಿಂದ ಕೇಳಿ ಉತ್ತಮ ಗತಿಯನ್ನು ಪಡೆಯಬಲ್ಲರು.
ಪುನಸ್ತೇ ದರ್ಶನಂ ಪ್ರಾಪ್ತಾಃ ಪುನಶ್ಚ ಪರಿಕೀರ್ತಿತಾಃ |
ಪುನಃ ಪುನಃ ಪ್ರಯಚ್ಛಂತಿ ಶೃಣ್ವತಾಮಭಯಂ ಸದಾ ॥38॥
ಈ ಪ್ರಸಂಗವನ್ನು ಯಾರು ನೋಡಿದರೋ ಮತ್ತು ಯಾರು ಹೇಳುವರೋ ಅವರೆಲ್ಲರೂ ಮತ್ತೆ ಮತ್ತೆ ಕೇಳುಗರಿಗೆ ಯಾವಾಗಲೂ ಅಭಯವನ್ನು ನೀಡುವರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಏಕೋನಚತ್ವಾರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.
* * * * *

ನಲವತ್ತನೆಯ ಅಧ್ಯಾಯ

ಜನಮೇಜಯನು ದೇಹವನ್ನು ತೊರೆದು ಹೋದ ಕುರು-ಪಾಂಡವಪಕ್ಷದ ಯೋಧರು ಪುನಃ ಹೇಗೆ ಬಂದರು? ಎಂದು ಪ್ರಶ್ನಿಸಿದಾಗ ಸಕಾರಣವಾಗಿ ಅದಕ್ಕೆ ಉತ್ತರ ನೀಡುವುದು.
ಸೌತಿಃ
ಏತಚ್ಛ್ರುತ್ವಾ ನೃಪೋ ವಿದ್ವಾನ್ ಹೃಷ್ಟೋಽಭೂಜ್ಜನಮೇಜಯಃ |
ಪಿತಾಮಹಾನಾಂ ಸರ್ವೇಷಾಂ ಗಮನಾಗಮನಂ ತದಾ ॥1॥
ಅಬ್ರವೀಚ್ಚ ಮುದಾ ಯುಕ್ತಃ ಪುನರಾಗಮನಂ ಪ್ರತಿ ॥2॥
ಸೌತಿ ವಿದ್ವಾಂಸನಾದ ಜನಮೇಜಯರಾಜನು ತನ್ನ ಎಲ್ಲ ಪಿತಾಮಹರ ಗಮನಾಗಮನದ ಈ ಪ್ರಸಂಗವನ್ನು ಕೇಳಿದಾಗ ಬಹಳ ಸಂತೋಷಪಟ್ಟನು. ಅಲ್ಲದೇ, ಈ ಆಗಮನದ ಪ್ರಸಂಗವನ್ನು ಕುರಿತು ಸಂತೋಷದಿಂದ ಮತ್ತೆ ಪ್ರಶ್ನೆ ಮಾಡಿದನು.
ಜನಮೇಜಯಃ
ಕಥಂ ನು ತ್ಯಕ್ತದೇಹಾನಾಂ ಪುನಸ್ತದ್ರೂಪದರ್ಶನಮ್ ॥3॥
ಜನಮೇಜಯ ದೇಹವನ್ನು ಬಿಟ್ಟವರಿಗೆ ಮತ್ತೆ ಅದೇ ರೂಪ ಕಾಣುವುದು ಹೇಗೆ?
ಇತ್ಯುಕ್ತಃ ಸ ದ್ವಿಜಶ್ರೇಷ್ಠೋ ವ್ಯಾಸಶಿಷ್ಯಃ ಪ್ರತಾಪವಾನ್ |

ಪ್ರೋವಾಚ ವದತಾಂಶ್ರೇಷ್ಠಸ್ತಂ ನೃಪಂ ಜನಮೇಜಯಮ್ ॥4॥
ಮಹಾತೇಜಸ್ವಿಯಾದ, ವೇದವ್ಯಾಸರ ಶಿಷ್ಯರಾದ, ಬ್ರಾಹ್ಮಣಶ್ರೇಷ್ಠರಾದ ವೈಶಂಪಾಯನರು ಹೀಗೆ ಕೇಳಲ್ಪಟ್ಟಾಗ, ವಾಗ್ಮಿಯಾದ ಅವರು ಆ ಜನಮೇಜಯ ರಾಜನನ್ನು ಕುರಿತು ಹೀಗೆ ಹೇಳಿದರು.
ವೈಶಂಪಾಯನಃ
ಅವಿಪ್ರಣಾಶಃ ಸರ್ವೇಷಾಂ ಕರ್ಮಣಾಮಿತಿ ನಿಶ್ಚಯಃ।
ಕರ್ಮಜಾನಿ ಶರೀರಾಣಿ ಶರೀರಾಕೃತಯಸ್ತಥಾ ॥5॥
ವೈಶಂಪಾಯನ ಎಲ್ಲ ಕರ್ಮಗಳಿಗೂ (ಅವುಗಳ ಫಲಗಳನ್ನು ಅನುಭವಿಸದೆ) ನಿಶ್ಚಯವಾಗಿಯೂ ನಾಶವಿಲ್ಲ. ಆತ್ಮನಿಗೆ ಶರೀರಗಳು ಹಾಗೂ ಶರೀರದ ಆಕೃತಿಗಳು ಕರ್ಮದಿಂದಲೇ ಉಂಟಾಗುತ್ತವೆ.
ಮಹಾಭೂತಾನಿ ನಿತ್ಯಾನಿ ಭೂತಾಧಿಪತಿಸಂಶ್ರಯಾತ್।
ತೇಷಾಂ ಚ ನಿತ್ಯಸಂವಾಸೋ ನ ವಿನಾಶೋ ವಿಯುಜ್ಯತಾಮ್ ॥6॥
ಮಹಾಭೂತಗಳು ಭೂತಾಧಿಪತಿಯನ್ನು ಆಶ್ರಯಿಸಿರುವುದರಿಂದ ನಿತ್ಯವಾಗಿವೆ. ಅವು ನಿತ್ಯವಾಗಿಯೂ ಪ್ರಕೃತಿಯಲ್ಲಿ ನೆಲೆಸಿರುವುದರಿಂದ ಪರಸ್ಪರ ವಿಯೋಗದಿಂದ ನಾಶವಾಗಲಾರವು.
ಅನಾಶಾಯ ಕೃತಂ ಕರ್ಮ ತಸ್ಯ ಚೇಷ್ಟಃ ಫಲಾಗಮಃ।
ಆತ್ಮಾ ಚೈಭಿಃ ಸಮಾಯುಕ್ತಃ ಸುಖದುಃಖಮುಪಾಶ್ನುತೇ ॥7॥
ಮಾಡಿದ ಕರ್ಮವೂ ನಾಶವಾಗದಿರುವುದರಿಂದ ಅದಕ್ಕೆ ಫಲಪ್ರಾಪ್ತಿ ಆಗಲೇಬೇಕು. ಆತ್ಮನಾದರೂ ಈ ಕರ್ಮದಿಂದ ಕೂಡಿಕೊಂಡು ಸುಖ ಹಾಗೂ ದುಃಖಗಳನ್ನು ಅನುಭವಿಸುವನು.
ಅವಿನಾಶ್ಯಸ್ತಥಾ ನಿತ್ಯಂ ಕ್ಷೇತ್ರಜ್ಞ ಇತಿ ನಿಶ್ಚಯಃ।
ಭೂತಾನಾಮಾತ್ಮಭಾವೋ ಯೋ ಧ್ರುವೋಸೌ ಸಂವಿಜಾನತಾಮ್ ॥8॥
ಪ್ರಾಣಿಗಳಿಗೆ ನಾನು ಎಂಬ ಭಾವ ಏನಿದೆಯೋ ಅದನ್ನೇ ಕ್ಷೇತ್ರಜ್ಞ ಅಥವಾ ಆತ್ಮ ಎಂದು ಕರೆಯಲಾಗಿದ್ದು, ಅವನು ನಿತ್ಯನಾಗಿದ್ದು ಯಾವುದೇ ಕಾರಣದಿಂದ ನಾಶವಾಗಲಾರನು. ಈ ವಿಷಯವು ಜ್ಞಾನಿಗಳಿಗೆ ನಿಶ್ಚಯವಾಗಿ ತಿಳಿದಿದೆ.
ಯಾವನ್ನ ಕ್ಷೀಯತೇ ಕರ್ಮ ತಾವತ್ತಸ್ಯ ಸ್ವರೂಪತಾ।
ಕ್ಷೀಣಕರ್ಮಾ ನರೋ ಲೋಕೇ ರೂಪಾನ್ಯತ್ವಮುಪಾಶ್ನುತೇ ॥9॥
ಎಲ್ಲಿಯವರೆಗೆ ಕರ್ಮಗಳು ಕ್ಷೀಣಿಸುವುದಿಲ್ಲವೋ ಅಲ್ಲಿಯ ತನಕ ಆ ಆತ್ಮನಿಗೆ ಸ್ವರೂಪವಿರುವುದು. ಕರ್ಮಗಳನ್ನು ಕ್ಷೀಣಿಸಿಕೊಂಡ ಮನುಷ್ಯನು ಲೋಕದಲ್ಲಿ ಬೇರೆ ರೂಪಗಳನ್ನು ಪಡೆಯುವನು.
ನಾನಾಭೂತಾಸ್ತಥೈಕತ್ವಂ ಶರೀರಂ ಪ್ರಾಪ್ಯ ಸಂಹತಾಃ।
ಭವಂತಿ ತೇ ತಥಾ ನಿತ್ಯಾಃ ಪೃಥಗ್ಭಾವಂ ವಿಜಾನತಾಮ್ ॥10॥
ಬೇರೆ ಬೇರೆಯಾಗಿರುವ ಭೂತ ಹಾಗೂ ಇಂದ್ರಿಯಗಳು ಜೊತೆಯಾಗಿ ಸೇರಿ ಪರಸ್ಪರ ಮಿಳಿತವಾದಾಗ ಶರೀರದ ರೂಪವನ್ನು ಪಡೆಯುತ್ತವೆ. ಹಾಗಿದ್ದರೂ ಅವುಗಳು ಬೇರೆ ಬೇರೆ ಎಂದು ತಿಳಿದವರಿಗೆ ಅವು ನಿತ್ಯವೇ ಆಗಿವೆ.
ಅಶ್ವಮೇಧಶ್ರುತಿಶ್ಚೇಯಮಶ್ವಸಂಜ್ಞಪನಂ ಪ್ರತಿ।
ಲೋಕಾಂತರಗತಾ ನಿತ್ಯಂ ಪ್ರಾಣಾ ನಿತ್ಯಾ ಹಿ ವಾಜಿನಃ ॥11॥
ಅಶ್ವಮೇಧ ಯಾಗದಲ್ಲಿ ಯಜ್ಞಕ್ಕಾಗಿ ಅಶ್ವವನ್ನು ಮಾರಣ ಮಾಡುವ ಸಂದರ್ಭದಲ್ಲಿ ವಿನಿಯೋಗವಾಗುವ ಈ ಅಶ್ವಮೇಧ ಶ್ರುತಿಯು ಕುದುರೆಯ ಪ್ರಾಣೇಂದ್ರಿಯಗಳು ನಿತ್ಯವಾಗಿದ್ದು ಅವು ಯಾವಾಗಲೂ ಪರಲೋಕದಲ್ಲಿ ಇದ್ದೇ ಇವೆ ಎಂದು ಹೇಳುತ್ತಿದೆ.
ಅಹಂ ಹಿತಂ ವದಾಮ್ಯೇತತ್ ಪ್ರಿಯಂ ಚೇತ್ತವ ಪಾರ್ಥಿವ।
ದೇವಯಾನಾ ಹಿ ಪಂಥಾನಃ ಶ್ರುತಾಸ್ತೇ ಯಜ್ಞಸಂಸ್ತರೇ ॥12॥
ಹೇ ಪಾರ್ಥಿವನೇ, ನಿನಗೆ ಪ್ರಿಯವಾಗುವುದಾದರೆ ನಾನು ಈ ಹಿತನುಡಿಗಳನ್ನು ಹೇಳುತ್ತೇನೆ. ಅಶ್ವಮೇಧಾದಿ ಯಜ್ಞವೇದಿಕೆಯಲ್ಲಿ ದೇವಯಾನ ಮಾರ್ಗಗಳ ಬಗ್ಗೆ ನೀನು ಕೇಳಿರುವೆಯಷ್ಟೆ?
ಸುಕೃತೋ ಯತ್ರ ಯಜ್ಞಸ್ತೇ ತತ್ರ ದೇವಾ ಹಿತಾಸ್ತವ।
ಯದಾ ಸಮನ್ವಿತಾ ದೇವಾಃ ಪಶೂನಾಂ ಗಮನೇಶ್ವರಾಃ ॥13॥
ಎಲ್ಲಿ ಯಜ್ಞವನ್ನು ಒಳ್ಳೆಯ ರೀತಿಯಲ್ಲಿ ನಡೆಸಲಾಗುವುದೋ ಅಲ್ಲಿ ಆ ದೇವತೆಗಳು ನಿನಗೆ ಹಿತರಾಗುವರು. ಯಾವಾಗ ದೇವತೆಗಳು ನಿನ್ನೊಂದಿಗೆ ಕೂಡುವರೋ ಆಗ ಯಜ್ಞದಲ್ಲಿ ವಿಷಸನ ಮಾಡಿದ ಪಶುಗಳ ಆಯಾಯ ಲೋಕಗಳ ಗಮನಕ್ಕೆ ಅನುಗ್ರಾಹಕರಾಗಿರುತ್ತಾರೆ.
ಗತಿಮಂತಶ್ಚ ತೇನೇಷ್ಟ್ವಾ ನಾನ್ಯೇ ನಿತ್ಯಾ ಭವಂತ್ಯುತ।
ನಿತ್ಯೇಽಸ್ಮಿನ್ ಪಂಚಕೇ ವರ್ಗೇ ನಿತ್ಯೇ ಚಾತ್ಮನಿ ಪೂರುಷಃ ॥14॥
ಅಸ್ಯ ನಾಶಂ ಸಮಾಯೋಗಂ ಯಃ ಪಶ್ಯತಿ ವೃಥಾಮತಿಃ।
ವಿಯೋಗೇ ಶೋಚತೇಽತ್ಯರ್ಥಂ ಸ ಬಾಲ ಇತಿ ಮೇ ಮತಿಃ ॥15॥
ಹೀಗೆ ನಿತ್ಯರಾದ ಜೀವರು ಅಶ್ವಮೇಧಾದಿ ಯಾಗಗಳನ್ನು ನಡೆಸಿ ಉತ್ತಮವಾದ ಗತಿಯುಳ್ಳವರಾಗುತ್ತಾರೆ. ಉಳಿದವರು ಈ ರೀತಿಯ ಗತಿಯನ್ನು ಪಡೆಯಲಾರರು. ಯಾವ ಪುರುಷನು ಈ ಭೂತೇಂದ್ರಿಯ ಪಂಚಕವು ನಿತ್ಯವಿದ್ದಾಗಲೂ, ಆತ್ಮನು ನಿತ್ಯವಾಗಿದ್ದಾಗಲೂ ಇವುಗಳಿಗೆ ನಾಶವನ್ನಾಗಲಿ, ಇವುಗಳ ಸಮಾಯೋಗವನ್ನಾಗಲಿ ನೋಡುವನೋ, ಜೊತೆಗೆ ಭೂತೇಂದ್ರಿಯನಿಗೂ, ಆತ್ಮನಿಗೂ ವಿಯೋಗವುಂಟಾದಾಗ ಬಹುವಾಗಿ ದುಃಖಿಸುವನೋ ಅಂತಹ ನಿರರ್ಥಕ ಮತಿಯುಳ್ಳವನು ಶಾಸ್ತ್ರವಿಷಯದಲ್ಲಿ ಇನ್ನೂ ಮಗುವಾಗಿರುವನು ಎಂದು ನನ್ನ ಅಭಿಪ್ರಾಯ.

ವಿಯೋಗೇ ದೋಷದರ್ಶೀ ಯಃ ಸಂಯೋಗಂ ಸ ವಿಸರ್ಜಯೇತ್ |
ಅಸಂಗೇ ಸಂಗಮೋ ನಾಸ್ತಿ ದುಃಖಂ ಭಾವಿ ವಿಯೋಗಜಮ್ ॥16॥
ಯಾವನು ವಿಯೋಗವನ್ನು ದೋಷವುಳ್ಳದ್ದಾಗಿ ನೋಡುವನೋ ಅವನು ಸಂಯೋಗವನ್ನೇ ಬಿಡಬೇಕು. ಏಕೆಂದರೆ ಅಸಂಗವುಳ್ಳ ವ್ಯಕ್ತಿಗೆ ಸಂಗವಾಗಲಿ, ಮುಂದೆ ವಿಯೋಗದಿಂದ ಬರುವ ದುಃಖವಾಗಲಿ ಇರುವುದಿಲ್ಲ.
ಪರಾಪರಜ್ಞಸ್ತು ನರೋ ನಾತಿ(ಭಿ)ಮಾನಾದುದೀರಿತಃ |
ಅಪರಜ್ಞಃ ಪರಾಂ ಬುದ್ಧಿಂ ಸ್ಪೃಷ್ಟ್ವಾ ಮೋಹಾದ್ ವಿಮುಚ್ಯತೇ ॥17॥
ಪರಾಪರಗಳನ್ನು ಚೆನ್ನಾಗಿ ತಿಳಿದ ಮನುಷ್ಯನು (ಆತ್ಮೇಂದ್ರಿಯಗಳ ಬಗ್ಗೆ) ಅತಿಯಾದ ಅಭಿಮಾನವೆಂಬ ದೋಷದಿಂದ ಮೇಲಕ್ಕೇರಲಾರನು. ಅಪರನಾದ ಭಗವಂತನನ್ನು ತಿಳಿದವನು ಉತ್ತಮವಾದ ಬುದ್ಧಿಯನ್ನು ಪಡೆದು ಮೋಹದಿಂದ ವಿಮುಕ್ತನಾಗುವನು.
ಅದರ್ಶನಾದಾಪತಿತಃ ಪುನಶ್ಚಾದರ್ಶನಂ ಗತಃ |
ನಾಹಂ ತಂ ವೇದ್ಮಿ ನಾಸೌ ಮಾಂ ನ ಚ ಮೇಽಸ್ತಿ ವಿರಾಗತಾ ॥18॥
ಈ ಶರೀರಕ್ಕೆ ಈ ಜೀವವು ಹೇಗೆ ಬಂದಿತೆಂದು ನಾವು ಕಾಣಲಾರೆವು. ಕಾಲಾಂತರದಲ್ಲಿ ಇದು ಮತ್ತೆ ನಾಶವಾಗುತ್ತದೆ. ನಾನಂತೂ ಈ ಶರೀರವನ್ನು ಪೂರ್ಣವಾಗಿ ತಿಳಿದಿಲ್ಲ. ಈ ಶರೀರವೂ ನನ್ನನ್ನು ತಿಳಿಯಲಾರದು. ಹೀಗಿದ್ದರೂ ನನಗೆ ವೈರಾಗ್ಯ ಬಂದಿಲ್ಲ.
ಯೇನ ಯೇನ ಶರೀರೇಣ ಕರೋತ್ಯಯಮನೀಶ್ವರಃ |
ತೇನ ತೇನ ಶರೀರೇಣ ತದವಶ್ಯಮುಪಾಶ್ನುತೇ ॥19॥
ಮಾನಸಂ ಮನಸಾಽಽಪ್ನೋತಿ ಶರೀರಂ ಚ ಶರೀರವಾನ್ ॥20॥
ಅಸ್ವತಂತ್ರನಾದ ಈ ಜೀವನು ಯಾವ ಯಾವ ಶರೀರದಿಂದ ಕರ್ಮವನ್ನು ನಡೆಸುತ್ತಾನೋ ಆಯಾ ಶರೀರದಿಂದಲೂ ಅದರ ಫಲವನ್ನು ಅವಶ್ಯವಾಗಿ ಅನುಭವಿಸುವನು. ಮಾನಸ ಕರ್ಮಗಳನ್ನು ಮನಸ್ಸಿನಿಂದಲೂ, ಶರೀರದಿಂದ ಅನುಭವಿಸಿದ ಕರ್ಮವನ್ನು ಶರೀರದಿಂದಲೂ ಅನುಭವಿಸುತ್ತಾನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಕರ್ಮಾನುರೂಪಶರೀರಗ್ರಹಣಕಥನಂ ನಾಮ ಚತ್ವಾರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ನಲವತ್ತನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ತೃಪ್ತಃ ಸದಾರೋ ನೃಪತಿಶ್ಚ ತತ್ರ
ಸರ್ವೇಽಪಿ ದೃಷ್ಟ್ವಾ ಪರಮಾದ್ಭುತಂ ತತ್ |
ಅಥಾಽಜ್ಞಯೈವಾಸ್ಯ ಪರಸ್ಯ ಸರ್ವಾಃ
ಸ್ತ್ರಿಯೋ ನಿಜೇಶೈಃ ಸಹಿತಾ ಯುಯುಃ ಸ್ವಃ ॥
ವಿನೋತ್ತರಾಂ ತಾಂ ತು ಕಥಾಂ ನಿಶಮ್ಯ
ಪಾರೀಕ್ಷಿತೋಽಯಾಚತ ತಾತದೃಷ್ಟಿಮ್ |
ತಂ ಚಾಽನಯಾಮಾಸ ತದೈವ ಕೃಷ್ಣೋ
ಹ್ಯಚಿಂತ್ಯಶಕ್ತಿಃ ಸ ವಿಕುಂಠಲೋಕಾತ್ ॥
ಗಾಂಧಾರೀ ಸಮೇತನಾದ ಧೃತರಾಷ್ಟ್ರನೂ ಪಾಂಡವರು ಮುಂತಾದವರೂ ಪರಮಾದ್ಭುತವಾದ ಮೃತರಾಗಮನವನ್ನು ಕಂಡು ತೃಪ್ತರಾದರು. ಬಳಿಕ ವೇದವ್ಯಾಸರ ಇಚ್ಛೆಯಂತೆಯೇ ಉತ್ತರೆ ಹೊರತು ಎಲ್ಲ ಸ್ತ್ರೀಯರೂ ಗಂಗಾನದಿಯಲ್ಲಿ ಶರೀರ ತ್ಯಾಗ ಮಾಡಿ ತಮ್ಮ ಪತಿಗಳೊಂದಿಗೆ ಸ್ವರ್ಗಕ್ಕೆ ತೆರಳಿದರು. ಈ ಕಥೆಯನ್ನು ಕೇಳಿ ಜನಮೇಜಯ ರಾಜನೂ ತಂದೆಯಾದ ಪರೀಕ್ಷಿತನನ್ನು ನೋಡಬೇಕೆಂದು ಕೇಳಿಕೊಂಡನು. ಅಚಿಂತ್ಯಶಕ್ತಿ ಉಳ್ಳ ವೇದವ್ಯಾಸರು ಅವನನ್ನೂ ಆಗಲೇ ವೈಕುಂಠಲೋಕದಿಂದ ಕರೆಸಿದನು.
ದೃಷ್ಟ್ವಾ ಸ ಪಾರೀಕ್ಷಿತ ಆಪ ತುಷ್ಟಿಂ
ಸ್ವತಾತಮೀಶೇನ ಸಮಾಹೃತಂ ಪುನಃ ॥
ಸಂಪೂಜ್ಯ ತಂ ಕೃಷ್ಣಮಪೀಶವಂದ್ಯಂ
ಕ್ಷಮಾಪಯಾಮಾಸ ಪರೀಕ್ಷಿದಾತ್ಮಜಃ |
ಚಕ್ರೇ ಚ ವಿಸ್ರಂಭಮತೀವ ಭಾರತೇ
ಪುನಶ್ಚ ತತ್ರತ್ಯಜನೈಃ ಸಮೇತಃ ॥
ಜನಮೇಜಯನು ವೇದವ್ಯಾಸರಿಂದ ಕರೆಸಲ್ಪಟ್ಟ ತನ್ನ ತಂದೆಯನ್ನು ಪುನಃ ಕಂಡು ಸಂತುಷ್ಟನಾದ. ಅವನನ್ನೂ ಬ್ರಹ್ಮಾದಿ ವಂದ್ಯರಾದ ವೇದವ್ಯಾಸರನ್ನೂ ಸೇವಿಸಿ ಕ್ಷಮೆ ಕೇಳಿದನು. ಮೃತನಾದ ಪರೀಕ್ಷಿತನನ್ನು ಅಲ್ಲಿದ್ದ ಜನರೊಂದಿಗೆ ತಾನು ಪುನಃ ಕಂಡ ಬಳಿಕ ಭಾರತ ಗ್ರಂಥದಲ್ಲಿ ಬಹಳ ವಿಶ್ವಾಸವಿರಿಸಿದನು.
ಪಾರ್ಥಾಃ ಪುನಃ ಪ್ರಾಪ್ಯ ಪುರಂ ಸ್ವಕೀಯಂ
ಧರ್ಮೇಣ ಪೃಥ್ವೀಂ ಪರಿಪಾಲಯಂತಃ |
ಭೋಗಾನರಾಗಾ ಅಜುಷಂತ ಯೋಗ್ಯಾನ್
ಯುಕ್ತಾ ಜಗದ್ಧಾತರಿ ವಾಸುದೇವೇ ॥

ಪಾಂಡವರು ಪುನಃ ತಮ್ಮ ಪಟ್ಟಣಗಳನ್ನು ಸೇರಿ, ಧರ್ಮದಿಂದ ಭೂಮಿಯನ್ನು ಆಳುತ್ತಾ, ಸರ್ವಧಾರಕನಾದ ಶ್ರೀಕೃಷ್ಣನಲ್ಲಿ ಭಕ್ತಿಯುಕ್ತರಾಗಿ, ಅನಾಸಕ್ತಿಯಿಂದ ಯೋಗ್ಯವಾದ ಭೋಗಗಳನ್ನು ಅನುಭವಿಸಿದರು.
* * * * *
ನಲವತ್ತೊಂದನೆಯ ಅಧ್ಯಾಯ
ಜನಮೇಜಯನು ಪರೀಕ್ಷಿತನನ್ನು ತೋರಿಸಿ ಎಂದು ಪ್ರಾರ್ಥಿಸಿದಾಗ ಪರೀಕ್ಷಿತನನ್ನೂ, ಶಮೀಕ ಮಹರ್ಷಿಯನ್ನೂ, ಶೃಂಗಿಯನ್ನೂ ತೋರಿಸುವುದು. ಜನಮೇಜಯನು ಅವಭೃಥಸ್ನಾನವನ್ನು ಮುಗಿಸಿ, ಆಸ್ತಿಕರನ್ನು ಪೂಜಿಸಿದ ನಂತರ ವೈಶಂಪಾಯನರಿಗೆ ಕಥೆಯನ್ನು ಮುಂದುವರಿಸಬೇಕೆಂದು ಪ್ರಾರ್ಥಿಸುವುದು.
ವೈಶಂಪಾಯನಃ
ಅದೃಷ್ಟ್ವಾ ತು ನೃಪಃ ಪುತ್ರಾನ್ ದರ್ಶನಂ ಪ್ರತಿಲಬ್ಧವಾನ್ |
ಋಷೇಃ ಪ್ರಸಾದಾತ್ ಪುತ್ರಾಣಾಂ ಸ್ವರೂಪಾಣಾಂ ಕುರೂದ್ವಹ ॥1॥
ವೈಶಂಪಾಯನ ಹೇ ಕುರೂದ್ವಹನೇ, ಹಿಂದೆಂದೂ ಮಕ್ಕಳನ್ನು ಕಣ್ಣಾರೆ ನೋಡಿರದ ಧೃತರಾಷ್ಟ್ರ ರಾಜನು ಋಷಿಗಳಾದ ವೇದವ್ಯಾಸರ ಅನುಗ್ರಹದಿಂದ ಸ್ವರೂಪವನ್ನು ಧರಿಸಿ ಬಂದ ಮಕ್ಕಳ ದರ್ಶನಭಾಗ್ಯವನ್ನು ಪಡೆದನು.
ಸ ರಾಜಾ ರಾಜಧರ್ಮಾಂಶ್ಚ ಬ್ರಹ್ಮೋಪನಿಷದಂ ತಥಾ |
ಅವಾಪ್ತವಾನ್ ನರಶ್ರೇಷ್ಠೋ ಬುದ್ಧಿನಿಶ್ಚಯಮೇವ ಚ ॥2॥
ಮನುಜಶ್ರೇಷ್ಠನಾದ ಆ ಧೃತರಾಷ್ಟ್ರ ರಾಜನು ರಾಜಧರ್ಮಗಳನ್ನೂ, ಹಾಗೆಯೇ ಬ್ರಹ್ಮಜ್ಞಾನವನ್ನೂ ಹಾಗೂ ಬುದ್ಧಿಯ ನಿಶ್ಚಯವನ್ನೂ (ಈ ಪ್ರಸಂಗದಿಂದ) ಪಡೆದುಕೊಂಡನು.
ವಿದುರಶ್ಚ ಮಹಾಪ್ರಾಜ್ಞೋ ಯಯೌ ಸಿದ್ಧಿಂ ತಪೋಬಲಾತ್ |
ಧೃತರಾಷ್ಟ್ರಃ ಸಮಾಸಾದ್ಯ ವ್ಯಾಸಂ ಚೈವ ತಪಸ್ವಿನಮ್ ॥3॥
ಮಹಾಪ್ರಾಜ್ಞನಾದ ವಿದುರನು ತಪಸ್ಸಿನ ಬಲದಿಂದ ಸಿದ್ಧಿಯನ್ನು ಪಡೆದಿದ್ದನು. ಈ ಧೃತರಾಷ್ಟ್ರನಾದರೂ ತಪಸ್ವಿಯಾದ ವೇದವ್ಯಾಸರ ಸಂಪರ್ಕದಿಂದ ಸಿದ್ಧಿಯನ್ನು ಪಡೆದಿರುವನು.
ಜನಮೇಜಯಃ
ಮಮಾಪಿ ವರದೋ ವ್ಯಾಸೋ ದರ್ಶಯೇತ್ ಪಿತರಂ ಯದಿ |
ತದ್ರೂಪವೇಷವಯಸಂ ಶ್ರದ್ದಧ್ಯಾಂ ಸರ್ವಮೇವ ತತ್ ॥4॥
ಜನಮೇಜಯ ನನಗೂ ಕೂಡ ವರದರಾದ ವೇದವ್ಯಾಸರು ಅದೇ ರೂಪ, ವೇಷ ಮತ್ತು ವಯಸ್ಸುಗಳುಳ್ಳ ತಂದೆಯನ್ನು ತೋರಿಸಿದ ಪಕ್ಷದಲ್ಲಿ ನೀವು ಹೇಳಿದ ಎಲ್ಲವನ್ನೂ ನಾನು ನಂಬಬಲ್ಲೆನು.
ಪ್ರಿಯಂ ಮೇ ಸ್ಯಾತ್ ಕೃತಾರ್ಥಶ್ಚ ಸ್ಯಾಮಹಂ ಕೃತನಿಶ್ಚಯಃ |
ಪ್ರಸಾದಾದೃಷಿಮುಖ್ಯಸ್ಯ ಮಮ ಕಾಮಃ ಸಮೃದ್ಧ್ಯತಾಮ್ ॥5॥
ಹೀಗೆ ಮಾಡುವುದರಿಂದ ನನಗೆ ಬಹಳ ಸಂತೋಷವಾಗುವುದು. ನಾನು ಕೃತಾರ್ಥನಾಗುವೆನು. ನಾನೂ ನಿಶ್ಚಯಿಸಿದ್ದನ್ನು ನಡೆಸಿದಂತಾಗುವುದು. ಹಾಗಾಗಿ ಋಷಿಮುಖ್ಯರಾದ ವೇದವ್ಯಾಸರ ಅನುಗ್ರಹದಿಂದ ನನ್ನ ಈ ಅಭಿಲಾಷೆಯು ನೆರವೇರಲಿ.
ಸೂತಃ
ಇತ್ಯುಕ್ತವಚನೇ ತಸ್ಮಿನ್ನೃಪೇ ವ್ಯಾಸಃ ಪ್ರತಾಪವಾನ್ |
ಪ್ರಸಾದಮಕರೋದ್ಧೀಮಾನಾನಯಚ್ಚ ಪರಿಕ್ಷಿತಮ್ ॥6॥
ಸೂತರು ಹೀಗೆ ಆ ರಾಜನು ಹೇಳುತ್ತಿರುವಾಗಲೇ ತೇಜಸ್ವಿಯಾದ, ಧೀಮಂತರಾದ ವೇದವ್ಯಾಸರು ಅವನನ್ನು ಅನುಗ್ರಹಿಸಿ, ಪರೀಕ್ಷಿತನನ್ನು ಅಲ್ಲಿಗೆ ಕರೆತಂದರು.
ತತಸ್ತದ್ರೂಪವಯಸಮಾಗತಂ ನೃಪತಿಂ ದಿವಃ |
ಶ್ರೀಮಂತಂ ಪಿತರಂ ರಾಜಾ ದದರ್ಶ ಸ ಪರಿಕ್ಷಿತಮ್ ॥7॥
ಅನಂತರ ಅದೇ ರೂಪ, ವಯಸ್ಸುಗಳುಳ್ಳ, ಆಕಾಶದಿಂದ ಇಳಿದುಬಂದ, ಶ್ರೀಮಂತನಾದ, ರಾಜನಾದ ಹಾಗೂ ತನ್ನ ತಂದೆಯಾದ ಪರೀಕ್ಷಿತನನ್ನು ಜನಮೇಜಯನು ನೋಡಿದನು.
ಶಮೀಕಂ ಚ ಮಹಾತ್ಮಾನಂ ಪುತ್ರಂ ತಂ ಚಾಸ್ಯ ಶೃಂಗಿಣಮ್ |
ಅಮಾತ್ಯಾ ಯೇ ಚ ನಿಹತಾ ರಾಜ್ಞಸ್ತಾಂಶ್ಚ ದದರ್ಶ ಹ ॥8॥
ಅಲ್ಲದೇ ಮಹಾತ್ಮರಾದ ಶಮೀಕರನ್ನೂ, ಆ ಶಮೀಕ ಪುತ್ರನಾದ ಶೃಂಗಿಯನ್ನೂ ಜೊತೆಗೆ ಈ ಮೊದಲು ಮೃತರಾದ ರಾಜ ಹಾಗೂ ಅಮಾತ್ಯರನ್ನೂ ನೋಡಿದನು.
ತತಃ ಸೋಽವಭೃಥೇ ರಾಜಾ ಮುದಿತೋ ಜನಮೇಜಯಃ |
ಪಿತರಂ ಸ್ನಾಪಯಾಮಾಸ ಸ್ವಯಂ ಸಸ್ನೌ ಚ ಪಾರ್ಥಿವಃ ॥9॥
ಅನಂತರ ಅವಭೃಥಕಾಲದಲ್ಲಿ ಸಂತೋಷಗೊಂಡ ಜನಮೇಜಯ ರಾಜನು ತಂದೆಗೆ ಸ್ನಾನ ಮಾಡಿಸಿ ತಾನೂ ಕೂಡ ಮಿಂದನು.
ಪರೀಕ್ಷಿದಪಿ ತತ್ರೈವ ಬಭೂವ ಸ ತಿರೋಹಿತಃ |
ಸ್ನಾತ್ವಾ ಸ ನೃಪತಿರ್ವಿಪ್ರಮಾಸ್ತೀಕಮಿದಮಬ್ರವೀತ್ ॥10॥
ಯಾಯಾವರಕುಲೋತ್ಪನ್ನಂ ಜರತ್ಕಾರುಸುತಂ ತದಾ ॥11॥
ಸ್ನಾನದ ನಂತರವೂ ಪರೀಕ್ಷಿತನು ಅಲ್ಲೇ ಅಂತರ್ಧಾನನಾಗಿ ಇದ್ದನು. ತನ್ನ ಸ್ನಾನವಾದ ನಂತರ, ಆ ಜನಮೇಜಯರಾಜನು ಬ್ರಾಹ್ಮಣರಾದ ಯಾಯಾವರ ಕುಲದಲ್ಲಿ ಉತ್ಪನ್ನರಾದ ಜರತ್ಕಾರುವಿನ ಮಗನಾದ ಆಸ್ತೀಕರನ್ನು ಕುರಿತು ಈ ಮಾತುಗಳನ್ನು

ಹೇಳಿದನು.
ಆಸ್ತೀಕ ವಿವಿಧಾಶ್ಚರ್ಯೋ ಯಜ್ಞೋಽಯಮಿತಿ ಮೇ ಮತಿಃ |
ಯದದ್ಯಾಯಂ ಪಿತಾ ಪ್ರಾಪ್ತೋ ಮಮ ಶೋಕಪ್ರಣಾಶನಃ ॥12॥
ಹೇ ಆಸ್ತೀಕರೇ, ಈ ನನ್ನ ಯಜ್ಞವು ನಾನಾ ರೀತಿಯ ಆಶ್ಚರ್ಯಗಳನ್ನು ತೋರಿಸಿದೆ ಎಂದು ನನ್ನ ಅಭಿಪ್ರಾಯ. ಏಕೆಂದರೆ ಇಂದು ನನ್ನ ದುಃಖವನ್ನು ನಾಶ ಮಾಡಲು ನನ್ನ ತಂದೆಯೇ ಬಂದಿರುವರು.
ಆಸ್ತೀಕಃ
ಋಷಿರ್ದ್ವೈಪಾಯನೋ ಯತ್ರ ಪುರಾಣಸ್ತಪಸೋ ನಿಧಿಃ |
ಯಜ್ಞೇ ಕುರುಕುಲಶ್ರೇಷ್ಠ ತಸ್ಯ ಲೋಕಾವುಭೌ ಜಿತೌ ॥13॥
ಆಸ್ತೀಕರು ಹೇ ಕುರುಕುಲಶ್ರೇಷ್ಠನೇ, ಯಾರ ಯಜ್ಞದಲ್ಲಿ ಪುರಾಣಪುರುಷನಾದ, ತಪೋನಿಧಿಯಾದ ದ್ವೈಪಾಯನಋಷಿಯು ಇರುವನೋ ಅವನು ಇಹ- ಪರಗಳೆರಡನ್ನೂ ಗೆಲ್ಲಬಲ್ಲನು.
ಶ್ರುತಂ ವಿಚಿತ್ರಮಾಖ್ಯಾನಂ ತ್ವಯಾ ಪಾಂಡವನಂದನ |
ಸರ್ಪಾಶ್ಚ ಭಸ್ಮಸಾನ್ನೀತಾ ಗತಾಶ್ಚ ಪದವೀಂ ಪಿತುಃ ॥14॥
ಹೇ ಪಾಂಡವನಂದನನೇ, ಈ ವಿಚಿತ್ರವಾದ ಆಖ್ಯಾನಭಾಗವನ್ನು ನೀನು ಕೇಳಿರುವೆ ಮತ್ತು ಈ ಯಜ್ಞದಲ್ಲಿ ಭಸ್ಮಗೊಂಡ ಸರ್ಪಗಳೆಲ್ಲವೂ ನಿನ್ನ ತಂದೆಯ ಲೋಕವನ್ನೇ ಪಡೆದಿರುವವು.
ಕಥಂಚಿತ್ ತಕ್ಷಕೋ ಮುಕ್ತಃ ಸತ್ಯತ್ವಾತ್ ತವ ಪಾರ್ಥಿವ |
ಋಷಯಃ ಪೂಜಿತಾಃ ಸರ್ವೇ ಗತಿರ್ದೃಷ್ಟಾ ಮಹಾತ್ಮನಃ ॥15॥
ನೀನು ಸತ್ಯವಂತನಾದುದರಿಂದ ತಕ್ಷಕನು ಹೇಗೋ ಮುಕ್ತನಾದನು. ಜೊತೆಗೆ ಎಲ್ಲ ಋಷಿಗಳು ಗೌರವಿಸಲ್ಪಟ್ಟರು. ಅಲ್ಲದೇ ಮಹಾತ್ಮರಾದ ವೇದವ್ಯಾಸರ ಜ್ಞಾನಬಲವು ನಮ್ಮೆಲ್ಲರಿಗೂ ಕಂಡಿತು.
ಪ್ರಾಪ್ತಃ ಸುವಿಪುಲೋ ಧರ್ಮಃ ಶ್ರುತ್ವಾ ಪಾಪವಿನಾಶನಮ್ |
ವಿಮುಕ್ತೋ ಹೃದಯಗ್ರಂಥಿರುದಾರಜನದರ್ಶನಾತ್ ॥16॥
ಪಾಪವನ್ನು ವಿನಾಶ ಮಾಡುವ ಈ ಮಹಾಭಾರತ ಕಥೆಯನ್ನು ಕೇಳಿ ವಿಪುಲವಾದ ಧರ್ಮವು ಪ್ರಾಪ್ತವಾಗಿದೆ. ಅಲ್ಲದೇ ಸತ್ಪುರುಷರ ದರ್ಶನದಿಂದ ಮಡುಗಟ್ಟಿದ ಹೃದಯವು ಅರಳಿದೆ.
ಯೇ ಚ ಪಕ್ಷಧರಾ ಧರ್ಮೇ ಸದ್ವೃತ್ತರುಚಯಶ್ಚ ಯೇ |
ಯಾನ್ ದೃಷ್ಟ್ವಾ ಹೀಯತೇ ಪಾಪಂ ತೇಭ್ಯಃ ಕಾರ್ಯಾ ನಮಸ್ಕ್ರಿಯಾ ॥
ಯಾರು ಧರ್ಮದ ಪಕ್ಷವನ್ನು ಧರಿಸಿರುವರೋ, ಯಾರು ಸನ್ನಡತೆಯಲ್ಲಿ ಸದಾ ಆಸಕ್ತರಾಗಿರುವರೋ, ಯಾರನ್ನು ನೋಡಿ ಪಾಪಗಳು ಪರಿಹಾರವಾಗುವವೋ ಅಂತಹ ಸತ್ಪುರುಷರಿಗೆ ನಿತ್ಯವೂ ನಮಸ್ಕಾರವನ್ನು ಮಾಡಬೇಕು.
ಸೂತಃ
ಏತಚ್ಛ್ರುತ್ವಾ ದ್ವಿಜಶ್ರೇಷ್ಠಾತ್ ಸ ರಾಜಾ ಜನಮೇಜಯಃ |
ಪೂಜಯಾಮಾಸ ತಮೃಷಿಮನುಮಾನ್ಯ ಪುನಃ ಪುನಃ ॥18॥
ಸೂತರು ಹೀಗೆ ದ್ವಿಜಶ್ರೇಷ್ಠರಿಂದ ರಾಜನಾದ ಜನಮೇಜಯನು ಕಥೆಯನ್ನು ಕೇಳಿ ಋಷಿಗಳಾದ ವೇದವ್ಯಾಸರನ್ನು ಮತ್ತೆ ಮತ್ತೆ ಗೌರವಪೂರ್ವಕವಾಗಿ ಪೂಜಿಸಿದನು.
ಪಪ್ರಚ್ಛ ತಮೃಷಿಂ ಚಾಪಿ ವೈಶಂಪಾಯನಮಚ್ಯುತಮ್ |
ಕಥಾವಶೇಷಂ ಧರ್ಮಜ್ಞೋ ವನವಾಸಸ್ಯ ಸತ್ತಮ ॥19॥
ಹೇ ಸತ್ತಮನೇ, ಅಲ್ಲದೇ ಧರ್ಮಜ್ಞನಾದ ಅವನು ಅಚ್ಯುತರಾದ ವೇದವ್ಯಾಸ ಋಷಿಗಳನ್ನೂ, ವೈಶಂಪಾಯನರನ್ನೂ, ಧೃತರಾಷ್ಟ್ರನ ವನವಾಸದಲ್ಲಿ ಉಳಿದ ಕಥೆಗಳನ್ನು ಹೇಳುವಂತೆ ಕೇಳಿಕೊಂಡನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಜನಮೇಜಯೇನ ಸ್ವಪಿತೃಪರಿಕ್ಷಿದ್ದರ್ಶನಕಥನಂ ನಾಮ ಏಕಚತ್ವಾರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ಅಷ್ಟಮೋಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು.
* * * * *
ನಲವತ್ತೆರಡನೆಯ ಅಧ್ಯಾಯ
ಮಕ್ಕಳನ್ನು ನೋಡಿದ ನಂತರ ಧೃತರಾಷ್ಟ್ರನು ಯುಧಿಷ್ಠಿರಾದಿಗಳ ಜೊತೆಗೆ ಮತ್ತೆ ಆಶ್ರಮಕ್ಕೆ ಹಿಂದಿರುಗುವುದು. ವೇದವ್ಯಾಸರು ಧೃತರಾಷ್ಟ್ರನಲ್ಲಿ
ಯುಧಿಷ್ಠಿರಾದಿಗಳನ್ನು ನಗರಕ್ಕೆ ಕಳುಹಿಸುವಂತೆ ಆದೇಶಿಸುವುದು.
ನಗರಕ್ಕೆ ಹಿಂದಿರುಗುವ ಮನಸ್ಸಿಲ್ಲದಿದ್ದರೂ ಧೃತರಾಷ್ಟ್ರನ ಹಾಗೂ
ಕುಂತೀದೇವಿ, ಗಾಂಧಾರಿದೇವಿಯರ ಆದೇಶದಂತೆ ಮತ್ತೆ
ಎಲ್ಲರೊಂದಿಗೆ ಹಸ್ತಿನಪುರಕ್ಕೆ ಹಿಂದಿರುಗುವುದು.
ಜನಮೇಜಯಃ
ದೃಷ್ಟ್ವಾ ಪುತ್ರಾಂಸ್ತಥಾ ಪೌತ್ರಾನ್ ಸಾನುಬಂಧಾನ್ ಜನಾಧಿಪಃ |
ಧೃತರಾಷ್ಟ್ರಃ ಕಿಮಕರೋದ್ ರಾಜಾ ಚೈವ ಯುಧಿಷ್ಠಿರಃ ॥1॥

ಜನಮೇಜಯ ಜನಾಧಿಪತಿಯಾದ ಧೃತರಾಷ್ಟ್ರನು ಪರಿವಾರಸಹಿತರಾದ ಮಕ್ಕಳನ್ನೂ ಹಾಗೂ ಮೊಮ್ಮಕ್ಕಳನ್ನೂ ನೋಡಿ ಏನು ಮಾಡಿದನು? ಅಲ್ಲೇ ಇದ್ದ ಯುಧಿಷ್ಠಿರ ರಾಜನಾದರೂ ಏನು ಮಾಡಿದನು?
ವೈಶಂಪಾಯನಃ
ತದ್ ದೃಷ್ಟ್ವಾ ಮಹದಾಶ್ಚರ್ಯಂ ಪುತ್ರಾಣಾಂ ದರ್ಶನಂ ಪುನಃ |
ವೀತಶೋಕಃ ಸ ರಾಜರ್ಷಿಃ ಪುನರಾಶ್ರಮಮಾಗಮತ್ ॥2॥
ವೈಶಂಪಾಯನ ರಾಜರ್ಷಿಯಾದ ಆ ಧೃತರಾಷ್ಟ್ರನು ಬಹಳ ಆಶ್ಚರ್ಯಕರವಾದ ಮಕ್ಕಳ ದರ್ಶನಭಾಗ್ಯವನ್ನು ನೋಡಿ, ಶೋಕವನ್ನು ಕಳೆದುಕೊಂಡು ಮತ್ತೆ ಆಶ್ರಮಕ್ಕೆ ಹಿಂದಿರುಗಿದನು.
ಇತರಸ್ತು ಜನಃ ಸರ್ವಸ್ತೇ ಚೈವ ಪರಮರ್ಷಯಃ |
ಪ್ರತಿಜಗ್ಮುರ್ಯಥಾಕಾಮಂ ಧೃತರಾಷ್ಟ್ರಾಭ್ಯನುಜ್ಞಯಾ ॥3॥
ಉಳಿದೆಲ್ಲ ಜನರೂ, ಅಲ್ಲಿರುವ ಎಲ್ಲ ಋಷಿಗಳೂ ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದು ತಾವು ಬಯಸಿದಲ್ಲಿಗೆ ಹಿಂದಿರುಗಿದರು.
ಪಾಂಡವಾಸ್ತು ಮಹಾತ್ಮಾನೋ ಲಘುಭೂಯಿಷ್ಠಸೈನಿಕಾಃ |
ಅನುಜಗ್ಮುರ್ಮಹಾತ್ಮಾನಂ ಸದಾರಾಸ್ತಂ ಮಹೀಪತಿಮ್ ॥4॥
ಮಹಾತ್ಮರಾದ ಪಾಂಡವರಾದರೂ ತಮ್ಮೆಲ್ಲ ಸೈನಿಕರನ್ನು ಕೂಡಿಕೊಂಡು, ತಮ್ಮ ಪತ್ನಿಯರೊಂದಿಗೆ ಮಹಾತ್ಮನಾದ ಧೃತರಾಷ್ಟ್ರ ರಾಜನನ್ನು ಅನುಸರಿಸಿದರು.
ತಮಾಶ್ರಮಗತಂ ಧೀಮಾನ್ ಬ್ರಹ್ಮರ್ಷಿರ್ಲೋಕಪೂಜಿತಃ |
ದ್ವೈಪಾಯನೋಽಭ್ಯುಪಾಗಮ್ಯ ರಾಜಾನಮಿದಮಬ್ರವೀತ್ ॥5॥
ಹೀಗೆ ಆಶ್ರಮಕ್ಕೆ ಬಂದ ರಾಜನನ್ನು ಧೀಮಂತರಾದ, ಬ್ರಹ್ಮರ್ಷಿಗಳಾದ, ಲೋಕಪೂಜಿತರಾದ ದ್ವೈಪಾಯನರು ಸಂಧಿಸಿ ಈ ವಾಕ್ಯವನ್ನು ಹೇಳಿದರು.
ವ್ಯಾಸಃ
ಧೃತರಾಷ್ಟ್ರ ಮಹಾಬಾಹೋ ಶೃಣು ಕೌರವನಂದನ |
ಶ್ರುತಾಸ್ತೇ ಜ್ಞಾನವೃದ್ಧಾನಾಮೃಷೀಣಾಂ ಪುಣ್ಯಕರ್ಮಣಾಮ್ ॥6॥
ಅದ್ಧಾಭಿಜನವೃದ್ಧಾನಾಂ ವೇದವೇದಾಂಗವೇದಿನಾಮ್ |
ಧರ್ಮಜ್ಞಾನಾಂ ಪುರಾಣಾನಾಂ ವದತಾಂ ವಿವಿಧಾಃ ಕಥಾಃ ॥7॥
ವ್ಯಾಸರು ಹೇ ಮಹಾಬಾಹುವೇ, ಕೌರವನಂದನನೇ, ಧೃತರಾಷ್ಟ್ರನೇ, ನೀನು ಜ್ಞಾನವೃದ್ಧರಾದ, ಪುಣ್ಯಕರ್ಮಿಗಳಾದ ಜ್ಞಾನಿಜನರ ಮಧ್ಯೆ ವೃದ್ಧರಾದ, ವೇದ ವೇದಾಂಗಗಳನ್ನು ಚೆನ್ನಾಗಿ ತಿಳಿದಿರುವ, ಬ್ರಹ್ಮಜ್ಞರಾದ, ಪುರಾಣ ಋಷಿಗಳ ಬಾಯಿಂದ ನಾನಾ ರೀತಿಯ ಪುಣ್ಯಕಥೆಗಳನ್ನು ಕೇಳಿರುವೆ.
ಮಾ ಸ್ಮ ಶೋಕೇ ಮನಃ ಕಾರ್ಷೀರ್ದಿಷ್ಟೇ ನ ವ್ಯಥತೇ ಬುಧಃ |
ಶ್ರುತಂ ದೇವರಹಸ್ಯಂ ತೇ ನಾರದಾದ್ ದೇವದರ್ಶನಾತ್ ॥8॥
ಯಾವತ್ತೂ ಮನಸ್ಸಿನಲ್ಲಿ ಶೋಕಿಸಬೇಡ. ಬುದ್ಧಿವಂತನಾದವನು ವಿಧಿಯ ವಿಷಯದಲ್ಲಿ ವ್ಯಥೆ ಪಡಲಾರನು. ದೇವತೆಗಳ ಅಭಿಪ್ರಾಯವನ್ನೂ ತಿಳಿಯಬಲ್ಲ ನಾರದರಿಂದ ನಿನಗೆ ದೇವರಹಸ್ಯವೂ ಹೇಳಲ್ಪಟ್ಟಿದೆ.
ಗತಾಸ್ತೇ ಕ್ಷತ್ರಧರ್ಮೇಣ ಶಸ್ತ್ರಪೂತಾಂ ಗತಿಂ ಶುಭಾಮ್ |
ಯಥಾ ದೃಷ್ಟಾಸ್ತ್ವಯಾ ಪುತ್ರಾಸ್ತಥಾ ಕಾಮವಿಹಾರಿಣಃ ॥9॥
ಯುದ್ಧದಲ್ಲಿ ಮಡಿದ ಆ ಎಲ್ಲರೂ ಕ್ಷತ್ರಧರ್ಮದಿಂದ ಶಸತ್ರಸ್ತ್ರಗಳಿಂದ ಪವಿತ್ರವಾದ, ಮಂಗಳಮಯವಾದ ಗತಿಯನ್ನು ಪಡೆದಿರುವರು. ಯಾವ ರೀತಿ ನೀನು ನಿನ್ನ ಮಕ್ಕಳನ್ನು ನೋಡಿರುವೆಯೋ ಅದೇ ರೀತಿ ಅವರೆಲ್ಲರೂ ಮನಸಾರೆ ವಿಹರಿಸುತ್ತಿರುವರು.
ಯುಧಿಷ್ಠಿರಃ ಸ್ವಯಂ ಧೀಮಾನ್ ಭವಂತಮನುರುದ್ಧ್ಯತೇ |
ಸಹಿತೋ ಭ್ರಾತೃಭಿಃ ಸರ್ವೈಃ ಸದಾರಃ ಸಸುಹೃಜ್ಜನಃ ॥10॥
ಯುಧಿಷ್ಠಿರನು ಸ್ವಯಂ ಬುದ್ಧಿಶಾಲಿಯಾದರೂ ಎಲ್ಲ ಸಹೋದರರೊಂದಿಗೆ, ಪತ್ನಿಯರೊಂದಿಗೆ ಮತ್ತು ಮಿತ್ರರೊಂದಿಗೆ ಕೂಡಿಕೊಂಡು ನಿನ್ನನ್ನೇ ಅನುಸರಿಸುತ್ತಿದ್ದಾನೆ.
ವಿಸರ್ಜಯೈನಂ ಯಾತ್ವೇಷ ಸ್ವರಾಜ್ಯಮನುಶಾಸತಾಮ್ |
ಮಾಸಃ ಸಮಧಿಕಸ್ತೇಷಾಮತೀತೋ ವಸತಾಂ ವನೇ ॥11॥
ಆ ಯುಧಿಷ್ಠಿರನನ್ನು ಇಲ್ಲಿಂದ ಹಿಂದೆ ಕಳುಹಿಸು. ಇವನು ಹಿಂದಿರುಗಿ ಹೋಗಿ ತನ್ನ ರಾಜ್ಯವನ್ನು ಚೆನ್ನಾಗಿ ಪಾಲಿಸಲಿ. ಅವರೆಲ್ಲರೂ ಕಾಡಿನಲ್ಲಿ ವಾಸ ಮಾಡಲು ಆರಂಭಿಸಿ ಈಗಾಗಲೇ ಒಂದು ಮಾಸ ಕಳೆದಿದೆ.
ಏತದ್ಧಿ ನಿತ್ಯಂ ಯತ್ನೇನ ಪದಂ ರಕ್ಷ್ಯಂ ನರಾಧಿಪ |
ಬಹುಪ್ರತ್ಯರ್ಥಿಕಂ ಹ್ಯೇತದ್ ರಾಜ್ಯಂ ನಾಮ ಕುರೂದ್ವಹ ॥12॥
ಹೇ ನರಾಧಿಪನೇ, ಈ ರಾಜಪದವಿಯಾದರೂ ನಿತ್ಯವೂ ಪ್ರಯತ್ನಪೂರ್ವಕವಾಗಿ ರಕ್ಷಿಸಲ್ಪಡಬೇಕಾದುದು. ಕುರೂದ್ವಹನೇ, ಈ ರಾಜ್ಯವೆಂದರೆ ಬಹುಮಂದಿ ಶತ್ರುಗಳಿಂದ ಕೂಡಿರುತ್ತದೆ.
ವೈಶಂಪಾಯನಃ
ಇತ್ಯುಕ್ತಃ ಕೌರವೋ ರಾಜಾ ವ್ಯಾಸೇನಾಮಿತಬುದ್ಧಿನಾ |
ಯುಧಿಷ್ಠಿರಮಥಾಹೂಯ ವಾಗ್ಮೀ ವಚನಮಬ್ರವೀತ್ ॥13॥
ವೈಶಂಪಾಯನ ಅಮಿತಬುದ್ಧಿಯುಳ್ಳ ವೇದವ್ಯಾಸರು ಕೌರವರಾಜನಾದ ಧೃತರಾಷ್ಟ್ರನಿಗೆ ಹೀಗೆ ಹೇಳಿದಾಗ ವಾಗ್ಮಿಯಾದ ಅವನು

ಯುಧಿಷ್ಠಿರನನ್ನು ಕರೆಸಿ ಈ ಮಾತನ್ನು ಹೇಳಿದನು.
ಧೃತರಾಷ್ಟ್ರಃ
ಅಜಾತಶತ್ರೋ ಭದ್ರಂ ತೇ ಶೃಣು ಮೇ ಭ್ರಾತೃಭಿಃ ಸಹ |
ತ್ವತ್ಪ್ರಸಾದಾನ್ಮಹೀಪಾಲ ಶೋಕೋ ನಾಸ್ಮಾನ್ ಪ್ರಬಾಧತೇ ॥14॥
ಧೃತರಾಷ್ಟ್ರ ಹೇ ಅಜಾತಶತ್ರುವೇ, ನಿನಗೆ ಮಂಗಳವಾಗಲಿ. ಸಹೋದರರರೊಂದಿಗೆ ನಾನಾಡುವ ಮಾತುಗಳನ್ನು ಕೇಳು. ಹೇ ಮಹೀಪಾಲನೇ, ನಿನ್ನ ಪ್ರಸಾದದಿಂದ ನಮ್ಮನ್ನು ಶೋಕವು ಬಾಧಿಸುತ್ತಿಲ್ಲ.
ರಮೇ ಚಾಹಂ ತ್ವಯಾ ಪುತ್ರ ಪುರೇವ ಗಜಸಾಹ್ವಯೇ |
ನಾಥೇನಾನುಗತೋ ವಿದ್ವನ್ ಪ್ರಿಯೇಷು ಪರಿವರ್ತಿನಾ ॥15॥
ಹೇ ಪುತ್ರನೇ, ವಿದ್ವಾಂಸನೇ, ನಾಥನಾದ ಪ್ರಿಯ ವಿಚಾರಗಳಲ್ಲಿ ನನ್ನೊಂದಿಗೇ ಇದ್ದು ನನ್ನನ್ನು ಅನುಸರಿಸುತ್ತಿರುವ ನಿನ್ನಿಂದ ನಾನು ಹಸ್ತಿನಾಪುರದಲ್ಲಿ ಇದ್ದಂತೆಯೇ ಸಂತೋಷವಾಗಿರುವೆನು.
ಪ್ರಾಪ್ತಂ ಪುತ್ರಫಲಂ ತ್ವತ್ತಃ ಪ್ರೀತಿರ್ಮೇ ಪರಮಾ ತ್ವಯಿ |
ನ ಮೇ ಮನ್ಯುರ್ಮಹಾಬಾಹೋ ಗಮ್ಯತಾಂ ಮಾ ಚಿರಂ ಕೃಥಾಃ ॥
ಹೇ ಮಹಾಬಾಹುವೇ, ನಿನ್ನಿಂದಾಗಿ ನನಗೆ ಮಕ್ಕಳನ್ನು ನೋಡುವ ಭಾಗ್ಯವೂ ಲಭಿಸಿದೆ. ನಿನ್ನ ಬಗ್ಗೆ ನನಗೆ ಅಪಾರವಾದ ಪ್ರೀತಿಯಿದೆ. ನಿನ್ನಲ್ಲಿ ನನಗೆ ಯಾವ ಕೋಪವೂ ಇರುವುದಿಲ್ಲ. ಹಾಗಾಗಿ ತಡಮಾಡದೆ ಇಲ್ಲಿಂದ ಪಟ್ಟಣಕ್ಕೆ ಹೊರಡು.
ಭವಂತಂ ಚೇಹ ಸಂಪ್ರೇಕ್ಷ್ಯ ತಪೋ ಮೇ ಪರಿಹೀಯತೇ |
ಉಪಯುಕ್ತಂ ಶರೀರಂ ಚ ತ್ವಾಂ ದೃಷ್ಟ್ವಾ ಧಾರಿತಂ ಪುನಃ ॥17॥
ನಿನ್ನನ್ನು ನಾನು ಇಲ್ಲಿ ನೋಡುತ್ತಲೇ ಇದ್ದರೆ ನನ್ನ ತಪಸ್ಸು ಕ್ಷೀಣವಾಗುತ್ತದೆ. ನಿನ್ನನ್ನು ನೋಡಿಯೇ ಉಳಿಸಿಕೊಂಡ ಈ ಶರೀರವು ಅತ್ಯಂತ ಉಪಯುಕ್ತವಾದುದು (ಅದು ಹಾಳಾಗಬಾರದು).
ಮಾತರೌ ತೇ ತಥೈವೇಮೇ ಶೀರ್ಣಪರ್ಣಕೃತಾಶನೇ |
ಮಮ ತುಲ್ಯವ್ರತೇ ಪುತ್ರ ನ ಚಿರಂ ವರ್ತಯಿಷ್ಯತಃ ॥18॥
ಈ ನಿನ್ನ ಇಬ್ಬರು ತಾಯಂದಿರು ತಾನಾಗಿ ಬಿದ್ದ ಎಲೆಗಳನ್ನು ಸೇವಿಸುತ್ತಾ, ನನಗೆ ಸಮಾನವಾದ ವ್ರತವನ್ನು ಆಚರಿಸುತ್ತಿದ್ದಾರೆ. ಆದ್ದರಿಂದ ಹೇ ಮಗನೇ, ಇವರು ಬಹುಕಾಲ ಉಳಿಯುವುದಿಲ್ಲ.
ದುರ್ಯೋಧನಪ್ರಭೃತಯೋ ದೃಷ್ಟಾ ಲೋಕಾಂತರಂ ಗತಾಃ |
ವ್ಯಾಸಸ್ಯ ತಪಸೋ ವೀರ್ಯಾದ್ ಭವತಶ್ಚ ಸಮಾಗಮಾತ್ ॥19॥
ದುರ್ಯೋಧನನೇ ಮೊದಲಾದ ಪರಲೋಕಕ್ಕೆ ಹೋದ ನನ್ನ ಮಕ್ಕಳು ವೇದವ್ಯಾಸರ ತಪೋಬಲದಿಂದ ಮತ್ತು ನಿನ್ನ ಸಮಾಗಮದಿಂದ ನನ್ನಿಂದ ನೋಡಲ್ಪಟ್ಟರು.
ಪ್ರಯೋಜನಂ ಚಿರಂ ವೃತ್ತಂ ಜೀವಿತಸ್ಯ ಮಮಾನಘ |
ಉಗ್ರಂ ತಪಃ ಸಮಾಸ್ಥಾಸ್ಯೇ ತ್ವಮನುಜ್ಞಾತುಮರ್ಹಸಿ ॥20॥
ಹೇ ಅನಘನೇ, ನನ್ನ ಜೀವಿತಕ್ಕೆ ಬಹುಕಾಲದಿಂದ ನಿರೀಕ್ಷಿಸುತ್ತಿದ್ದ ಪ್ರಯೋಜನವು ಪ್ರಾಪ್ತವಾಯಿತು. ಇನ್ನು ಮುಂದೆ ನಾನು ಉಗ್ರವಾದ ತಪಸ್ಸನ್ನು ಆಚರಿಸಲಿರುವೆನು. ಇದಕ್ಕೆ ನೀನು ಅನುಜ್ಞೆಯನ್ನು ನೀಡಬೇಕು.
ತ್ವಯ್ಯದ್ಯ ಪಿಂಡಃ ಕೀರ್ತಿಶ್ಚ ಕುಲಂ ಚೇದಂ ಪ್ರತಿಷ್ಠಿತಮ್ |
ಶ್ವೋ ವಾಽದ್ಯ ವಾ ಮಹಾಬಾಹೋ ಗಮ್ಯತಾಂ ಮಾ ಚಿರಂ ಕೃಥಾಃ ॥
ಇಂದು ಪಿತೃಗಳಿಗೆ ಪಿಂಡದ ಹೊಣೆಗಾರಿಕೆಯೂ, ವಂಶದ ಕೀರ್ತಿಯೂ ಈ ಇಡೀ ಕುಲವೂ ನಿನ್ನಲ್ಲೇ ಪ್ರತಿಷ್ಠಿತವಾಗಿದೆ. ಆದ್ದರಿಂದ ಹೇ ಮಹಾಬಾಹುವೇ, ನಾಳೆಯಾಗಲಿ ಇಂದೇ ಆಗಲೀ ನೀನು ಹೊರಟುಬಿಡು. ತಡ ಮಾಡಬೇಡ.
ರಾಜನೀತಿಃ ಸುಬಹುಶಃ ಶ್ರುತಾ ತೇ ಭರತರ್ಷಭ |
ಸಂದೇಷ್ಟವ್ಯಂ ನ ಪಶ್ಯಾಮಿ ಕೃತಮೇತಾವತಾ ವಿಭೋ ॥22॥
ಹೇ ಭರತರ್ಷಭನೇ, ನೀನು ಅನೇಕರಿಂದ ರಾಜನೀತಿಯನ್ನು ಚೆನ್ನಾಗಿ ಕೇಳಿ ತಿಳಿದಿರುವೆ. ಆದ್ದರಿಂದ ಆ ಬಗ್ಗೆ ನಿನಗೆ ಹೇಳಬೇಕಾದುದೇನೂ ನನಗೆ ತೋಚುವುದಿಲ್ಲ. ಹೇ ವಿಭುವೇ, ಇಷ್ಟು ಮಾತು ಸಾಕೆಂದು ಕಾಣುತ್ತದೆ.
ವೈಶಂಪಾಯನಃ
ಇತ್ಯುಕ್ತವಚನಂ ತಂ ತು ನೃಪೋ ರಾಜಾನಮಬ್ರವೀತ್ |
ನ ಮಾಮರ್ಹಸಿ ಧರ್ಮಜ್ಞ ಪರಿತ್ಯಕ್ತುಮನಾಗಸಮ್ ॥23॥
ವೈಶಂಪಾಯನ ಹೀಗೆ ಧೃತರಾಷ್ಟ್ರ ರಾಜನು ಹೇಳಿದಾಗ- `ಹೇ ಧರ್ಮಜ್ಞನೇ, ಅಪಚಾರವನ್ನು ಮಾಡದ ನನ್ನನ್ನು ಪರಿತ್ಯಜಿಸುವುದು ಸರಿಯಲ್ಲ' ಎಂದು ಧೃತರಾಷ್ಟ್ರನಲ್ಲಿ ಹೇಳಿದನು.
ಕಾಮಂ ಗಚ್ಛಂತು ಮೇ ಸರ್ವೇ ಭ್ರಾತರೋಽನುಚರಾಸ್ತಥಾ |
ಭವಂತಮಹಮನ್ವಿಷ್ಯೇ ಮಾತರೌ ಚ ಯತವ್ರತಃ ॥24॥
ನನ್ನ ಎಲ್ಲ ಸಹೋದರರು ಹಾಗೂ ಅನುಚರರು ನಿಶ್ಚಯವಾಗಿ ಪಟ್ಟಣಕ್ಕೆ ಹೋಗಲಿ. ನಾನು ಮಾತ್ರ ವ್ರತನಿಷ್ಠನಾಗಿ ನಿನ್ನನ್ನೂ, ನನ್ನ ತಾಯಂದಿರನ್ನೂ ಅನುಸರಿಸುತ್ತೇನೆ.
ತಮುವಾಚಾಥ ಗಾಂಧಾರೀ ಮೈವಂ ಪುತ್ರ ಶ್ರುಣುಷ್ವ ಚ |
ತ್ವಯ್ಯಧೀನಂ ಕುರುಕುಲಂ ಪಿಂಡಶ್ಚ ಶ್ವಶುರಸ್ಯ ಮೇ ॥25॥
ಆಗ ಗಾಂಧಾರೀದೇವಿಯು ಹೇ ಮಗನೇ, ಈ ರೀತಿ ಮಾಡದಿರು. ನಾನು ಹೇಳುವುದನ್ನು ಕೇಳು. ಇಡೀ ಕುರುಕುಲವು ಹಾಗೂ ನನ್ನ

ಮಾವನವರಿಗೆ ಮಾಡಬೇಕಾದ ಪಿಂಡದಾನವು ನಿನ್ನ ಅಧೀನವಾಗಿದೆ.
ಗಮ್ಯತಾಂ ಪುತ್ರ ಪರ್ಯಾಪ್ತಮೇತಾವತ್ಪೂಜಿತಾ ವಯಮ್ |
ರಾಜಾ ಯದಾಹ ತತ್ಕಾರ್ಯಂ ತ್ವಯಾ ಪುತ್ರ ಪಿತುರ್ವಚಃ ॥26॥
ಹೇ ಮಗನೇ, ಇಷ್ಟು ಕಾಲ ನೀನೇನು ನಮ್ಮ ಸೇವೆ ಮಾಡಿದೆಯೋ ಅದು ಪರಿಪೂರ್ಣವಾಯಿತು. ಆದ್ದರಿಂದ ನೀನು ಹೊರಟುಬಿಡು. ಮಗನೇ, ರಾಜನಾದ ಧೃತರಾಷ್ಟ್ರನು ಏನು ಹೇಳಿರುವನೋ ಅದು ನಿನ್ನ ತಂದೆಯ ಮಾತು. ತಂದೆಯ ಮಾತನ್ನು ನೀನು ಪಾಲಿಸಲೇಬೇಕು ಎಂದು ಹೇಳಿದಳು.
ವೈಶಂಪಾಯನಃ
ಇತ್ಯುಕ್ತಃ ಸ ತು ಗಾಂಧಾರ್ಯಾ ಕುಂತೀಮಿದಮಭಾಷತ |
ಸ್ನೇಹಬಾಷ್ಪಾಕುಲೇ ನೇತ್ರೇ ಪರಿಮೃಜ್ಯ ವಿನೀತವತ್ ॥27॥
ವೈಶಂಪಾಯನ ಗಾಂಧಾರಿಯು ಹೀಗೆ ಹೇಳಿದಾಗ, ಆ ಯುಧಿಷ್ಠಿರನು ವಿನೀತನಾಗಿ ಸ್ನೇಹಬಾಷ್ಪದಿಂದ ಕೂಡಿದ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ, ಕುಂತಿಯನ್ನು ಕುರಿತು ಹೀಗೆ ಹೇಳಿದನು.
ವಿಸರ್ಜಯತಿ ಮಾಂ ರಾಜಾ ಗಾಂಧಾರೀ ಚ ಯಶಸ್ವಿನೀ |
ಭವತಾಂ ಬದ್ಧಚಿತ್ತಸ್ತು ಕಥಂ ಯಾಸ್ಯಾಮಿ ದುಃಖಿತಃ ॥28॥
ರಾಜನಾದ ಧೃತರಾಷ್ಟ್ರನೂ, ಯಶಸ್ವಿನಿಯಾದ ಗಾಂಧಾರಿಯೂ ನನ್ನನ್ನು ತ್ಯಜಿಸುತ್ತಿದ್ದಾರೆ. ನಿಮ್ಮಲ್ಲೇ ಮನಸ್ಸನ್ನು ಇಟ್ಟ ನಾನು ದುಃಖಿತನಾಗಿ ಹೇಗೆ ಹೋಗಲಿ?
ನ ಚೋತ್ಸಹೇ ತಪೋವಿಘ್ನಂ ಕರ್ತುಂ ತೇ ಧರ್ಮಚಾರಿಣಿ |
ತಪಸೋ ಹಿ ಪರಂ ನಾಸ್ತಿ ತಪಸಾ ವಿಂದತೇ ಮಹತ್ ॥29॥
ಹೇ ಧರ್ಮಚಾರಿಣಿಯೇ, ನಿಮ್ಮ ತಪಸ್ಸಿಗೆ ವಿಘ್ನವನ್ನುಂಟು ಮಾಡಲು ನನಗೆ ಮನಸ್ಸಿಲ್ಲ. ಏಕೆಂದರೆ ತಪಸ್ಸಿಗಿಂತ ದೊಡ್ಡದಾದುದು ಯಾವುದೂ ಇಲ್ಲ. ತಪಸ್ಸಿನಿಂದ ಮಹತ್ಫಲವು ದೊರೆಯುತ್ತದೆ.
ಮಮಾಪಿ ನ ತಥಾ ರಾಜ್ಞಿ ರಾಜ್ಯೇ ಬುದ್ಧಿರ್ಯಥಾ ಪುರಾ |
ತಪಸ್ಯೇವಾನುರಕ್ತಂ ಮೇ ಮನಃ ಸರ್ವಾತ್ಮನಾ ತಥಾ ॥30॥
ಹೇ ರಾಜ್ಞಿಯೇ, ನನಗೂ ಹಿಂದೆ ಇದ್ದಂತೆ ಈಗ ರಾಜ್ಯದಲ್ಲಿ ಆಸಕ್ತಿಯಿಲ್ಲ. ನನ್ನ ಮನಸ್ಸೂ ಕೂಡ ನಿಮ್ಮಂತೆಯೇ ಸರ್ವ ರೀತಿಯಲ್ಲಿ ತಪಸ್ಸಿನಲ್ಲಿಯೇ ಅನುರಕ್ತವಾಗಿದೆ.
ಶೂನ್ಯೇಯಂ ಚ ಮಹೀ ಕೃತ್ಸ್ನಾ ನ ಮೇ ಪ್ರೀತಿಕರೀ ಶುಭೇ |
ಬಾಂಧವಾಃ ನಃ ಪರಿಕ್ಷೀಣಾ ಬಲಂ ನೋ ನ ಯಥಾ ಪುರಾ ॥31॥
ಹೇ ಮಂಗಳಮಯಳೇ, ಈ ಇಡೀ ಭೂಮಿಯು ಶೂನ್ಯವಾಗಿದ್ದು ನನಗೆ ಸಂತೋಷವನ್ನು ನೀಡುತ್ತಿಲ್ಲ. ನಮ್ಮ ಬಾಂಧವರೆಲ್ಲರೂ ಯುದ್ಧದಲ್ಲಿ ನಾಶವಾಗಿದ್ದಾರೆ. ನಮಗೂ ಕೂಡ ಹಿಂದಿನಂತೆ ದೇಹಬಲವು ಇಲ್ಲ.
ಪಾಂಚಾಲಾಃ ಸುಭೃಶಂ ಕ್ಷೀಣಾಃ ಕನ್ಯಾಮಾತ್ರಾವಶೇಷಿತಾಃ |
ನ ತೇಷಾಂ ಕುಲಕರ್ತಾರಂ ಕಂಚಿತ್ ಪಶ್ಯಾಮ್ಯಹಂ ಶುಭೇ ॥32॥
ಹೇ ಮಂಗಳಮಯಳೇ, ಪಾಂಚಾಲರೂ ಕೂಡ ಬಹಳವಾಗಿ ಕ್ಷೀಣರಾಗಿದ್ದು ಕೇವಲ ಸ್ತ್ರೀ ಸಂತಾನ ಮಾತ್ರ ಉಳಿದಿದೆ. ಅವರ ಕುಲವನ್ನು ಬೆಳೆಸುವ ಏನನ್ನೂ ನಾನು ನೋಡಲಾರದವನಾಗಿದ್ದೇನೆ.
ಸರ್ವೇ ಹಿ ಭಸ್ಮಸಾನ್ನೀತಾಸ್ತೇ ದ್ರೋಣೇನ ರಣಾಜಿರೇ |
ಅವಶಿಷ್ಟಾಶ್ಚ ನಿಹತಾ ದ್ರೋಣಪುತ್ರೇಣ ವೈ ನಿಶಿ ॥33॥
ಅವರೆಲ್ಲರೂ ದ್ರೋಣಾಚಾರ್ಯರಿಂದ ಯುದ್ಧದಲ್ಲಿ ಸುಟ್ಟುಹೋಗಿರುವರು. ಉಳಿದ ಕೆಲವರೂ ಕೂಡ ದ್ರೋಣಪುತ್ರರಾದ ಅಶ್ವತ್ಥಾಮರಿಂದ ರಾತ್ರಿವೇಳೆಯಲ್ಲಿ ಹತರಾಗಿರುವರು.
ಚೇದಯಶ್ಚೈವ ಮತ್ಸ್ಯಾಶ್ಚ ದೃಷ್ಟಪೂರ್ವಾಸ್ತಥೈವ ನಃ ॥34॥
ನಮಗೆ ಬಂಧುಗಳಾದ ನಾವು ಹಿಂದೆ ನೋಡಿದ ಚೇದಿ ವಂಶದವರೂ, ಮತ್ಸ್ಯ ರಾಜದ ವಂಶದವರೂ ಪಾಂಚಾಲರಂತೆಯೇ ಕ್ಷೀಣರಾಗಿದ್ದಾರೆ.
ಕೇವಲಂ ವೃಷ್ಣಿಚಕ್ರಂ ಚ ವಾಸುದೇವಪರಿಗ್ರಹಾತ್ |
ಯದ್ ದೃಷ್ಟ್ವಾ ಸ್ಥಾತುಮಿಚ್ಛಾಮಿ ಧರ್ಮಾರ್ಥಂ ನಾರ್ಥಹೇತುತಃ ॥
ಕೃಷ್ಣನನ್ನು ಗಟ್ಟಿಯಾಗಿ ನಂಬಿರುವುದರಿಂದ ಕೇವಲ ವೃಷ್ಣಿಗಳ ಸಮೂಹವು ಮಾತ್ರ ಉಳಿದಿದೆ. ಅವರನ್ನು ನೋಡಿ ಧರ್ಮಕ್ಕೋಸ್ಕರ ನಾನು ಇರಬೇಕೆಂದು ಬಯಸುವನೇ ಹೊರತು ಇನ್ನಾವ ಪುರುಷಾರ್ಥಕ್ಕೂ ಅಲ್ಲ.
ಶಿವೇನ ಪಶ್ಯ ನಃ ಸರ್ವಾನ್ ದುರ್ಲಭಂ ತವ ದರ್ಶನಮ್ |
ಭವಿಷ್ಯತ್ಯೇವ ರಾಜಾ ಹಿ ತೀವ್ರಂ ಚಾರಪ್ಸ್ಯತೇ ತಪಃ॥36॥
ನಮ್ಮೆಲ್ಲರನ್ನೂ ಮಂಗಳಮಯವಾದ ದೃಷ್ಟಿಯಿಂದ ನೋಡಿಬಿಡು. ಮುಂದೆ ನಿನ್ನ ದರ್ಶನವು ದುರ್ಲಭವಾಗಲಿದೆ. ಏಕೆಂದರೆ ರಾಜನು ತೀವ್ರವಾದ ತಪಸ್ಸನ್ನು ಆರಂಭಿಸಲಿದ್ದಾನೆ.
ಏತಚ್ಛ್ರುತ್ವಾ ಮಹಾಬಾಹುಃ ಸಹದೇವೋ ಯುಧಾಂಪತಿಃ |
ಯುಧಿಷ್ಠಿರಮುವಾಚೇದಂ ಬಾಷ್ಪವ್ಯಾಕುಲಲೋಚನಃ ॥37॥
ಈ ಮಾತುಗಳನ್ನು ಕೇಳಿ ಮಹಾಬಾಹುವಾದ, ಸೇನಾಧಿಪತಿಯಾದ ಸಹದೇವನು ಕಣ್ಣೀರಿನಿಂದ ತೊಯ್ದ ಕಣ್ಣುಗಳುಳ್ಳವನಾಗಿ ಯುಧಿಷ್ಠಿರನನ್ನು ಕುರಿತು ಹೀಗೆಂದನು.

ನೋತ್ಸಹೇಽಹಂ ಪರಿತ್ಯಕ್ತುಂ ಮಾತರಂ ಭರತರ್ಷಭ |
ಪ್ರತಿಯಾತು ಭವಾನ್ ಕ್ಷಿಪ್ರಂ ತಪಸ್ತಪ್ಸ್ಯಾಮ್ಯಹಂ ವನೇ ॥38॥
ಹೇ ಭರತರ್ಷಭನೇ, ತಾಯಿಯನ್ನು ಬಿಟ್ಟು ಹೊರಡಲು ನನಗೂ ಮನಸ್ಸಿಲ್ಲ. ನೀನು ಶೀಘ್ರವಾಗಿ ಹಿಂದಿರುಗು. ನಾನು ಕಾಡಿನಲ್ಲಿದ್ದು ತಪಸ್ಸನ್ನು ಆಚರಿಸುವೆನು.
ಇಹೈವ ಶೋಷಯಿಷ್ಯಾಮಿ ತಪಸೇದಂ ಕಲೇವರಮ್ |
ಪಾದಶುಶ್ರೂಷಣೇ ರಕ್ತೋ ರಾಜ್ಞೋ ಮಾತ್ರೋಸ್ತಥಾಽನಯೋಃ ॥39॥
ನಾನು ಇಲ್ಲೇ ಇದ್ದು ರಾಜನ ಹಾಗೂ ಈ ಇಬ್ಬರು ತಾಯಂದಿರ ಪಾದ ಸೇವನೆಯನ್ನು ನಡೆಸುತ್ತಾ, ತಪಸ್ಸಿನಿಂದ ಈ ನನ್ನ ಶರೀರವನ್ನು ಒಣಗಿಸುತ್ತೇನೆ.
ತಮುವಾಚ ತತಃ ಕುಂತೀ ಪರಿಷ್ವಜ್ಯ ಮಹಾಭುಜಮ್ |
ಗಮ್ಯತಾಂ ಪುತ್ರ ಮೈವಂ ತ್ವಂ ವೋಚಃ ಕುರು ವಚೋ ಮಮ ॥40॥
ಆಗ ಕುಂತೀದೇವಿಯು ಮಹಾಪೂಜ್ಯನಾದ ಸಹದೇವನನ್ನು ಆಲಿಂಗಿಸಿ, ಹೇ ಮಗನೇ, ನೀನು ಹೀಗೆ ಹೇಳದಿರು. ನನ್ನ ಮಾತನ್ನು ಕೇಳು. ಇಲ್ಲಿಂದ ಹೊರಟುಬಿಡು ಎಂದು ಹೇಳಿದಳು.
ಆಗಮಾ ವಃ ಶಿವಾಃ ಸಂತು ಸ್ವಸ್ಥಾ ಭವತ ಪುತ್ರಕಾಃ |
ಉಪರೋಧೋ ಭವೇದೇವಮಸ್ಮಾಕಂ ತಪಸಃ ಕೃತೇ ॥41॥
ಹೇ ಮಕ್ಕಳೇ, ನಿಮ್ಮ ಆಗಮನವು ಮಂಗಳವನ್ನುಂಟು ಮಾಡಲಿ. ನೀವು ನಿಮ್ಮತನವನ್ನು ಬಿಡದೆ ಸ್ವಸ್ಥರಾಗಿರಿ. ನೀವಂದುಕೊಂಡಂತೆ ಇಲ್ಲೇ ಉಳಿದರೆ ನಮ್ಮ ತಪಸ್ಸಿಗೆ ತಡೆಯುಂಟಾಗುವುದು.
ತ್ವತ್ಸ್ನೇಹಪಾಶಬದ್ಧಾ ಚ ಹೀಯೇಯಂ ತಪಸಃ ಪರಾತ್ |
ತಸ್ಮಾತ್ಪುತ್ರಕ ಗಚ್ಛ ತ್ವಂ ಶಿಷ್ಟಮಲ್ಪಂ ಚ ನಃ ಪ್ರಭೋ ॥42॥
ಹೇ ಮಗನೇ, ನಿನ್ನ ಸ್ನೇಹಪಾಶಕ್ಕೆ ಬದ್ಧಳಾಗಿ ಉತ್ಕೃಷ್ಟವಾದ ತಪಸ್ಸನ್ನು ನಾನು ಬಿಟ್ಟುಬಿಟ್ಟೇನು! ಆದ್ದರಿಂದ ನೀನು ಇಲ್ಲಿಂದ ಹೊರಟುಬಿಡು. ಹೇ ಪ್ರಭುವೇ, ನಮ್ಮ ಜೀವನವು ಇನ್ನು ಸ್ವಲ್ಪವಷ್ಟೇ ಉಳಿದಿದೆ.
ಏವಂ ಸಂಸ್ತಂಭಿತಂ ವಾಕ್ಯೈಃ ಕುಂತ್ಯಾ ಬಹುವಿಧೈರ್ಮನಃ |
ಸಹದೇವಸ್ಯ ರಾಜೇಂದ್ರ ರಾಜ್ಞಶ್ಚೈವ ವಿಶೇಷತಃ ॥43॥
ಈ ರೀತಿ ಬಹುವಿಧವಾದ ಕುಂತಿಯ ವಾಕ್ಯದಿಂದ ಸಹದೇವನ ಮನಸ್ಸು ಸ್ತಂಭೀಭೂತವಾಯಿತು. ಹೇ ರಾಜೇಂದ್ರನೇ, ವಿಶೇಷವಾಗಿ ಯುಧಿಷ್ಠಿರನ ಮನಸ್ಸೂ ಸ್ತಂಭಿತವಾಯಿತು.
ತೇ ಮಾತ್ರಾ ಸಮನುಜ್ಞಾತಾ ರಾಜ್ಞಾ ಚ ಕುರುಪುಂಗವಾಃ |
ಅಭಿವಾದ್ಯ ಕುರುಶ್ರೇಷ್ಠಮಾಮಂತ್ರಯಿತುಮಾರಭನ್ ॥44॥
ಆಗ ಕುರುಪುಂಗವರಾದ ಅವರು ತಾಯಿಯಿಂದ ಅನುಜ್ಞೆಯನ್ನು ಪಡೆದುಕೊಂಡು, ರಾಜನಾದ ಧೃತರಾಷ್ಟ್ರನಿಂದಲೂ ಅನುಜ್ಞೆಯನ್ನು ಪಡೆದು, ಕುರುಶ್ರೇಷ್ಠನಾದ ಧೃತರಾಷ್ಟ್ರನನನ್ನು ನಮಸ್ಕರಿಸಿ, ಅವನನ್ನು ಸಂಬೋಧಿಸಿ ಹೀಗೆಂದರು.
ಯುಧಿಷ್ಠಿರಃ
ರಾಜ್ಯಂ ಪ್ರತಿ ಗಮಿಷ್ಯಾಮಃ ಶಿವೇನ ಪ್ರತಿನಂದಿತಾಃ |
ಅನುಜ್ಞಾತಾಸ್ತ್ವಯಾ ರಾಜನ್ ಗಮಿಷ್ಯಾಮೋ ವಿಕಲ್ಮಷಾಃ ॥45॥
ಯುಧಿಷ್ಠಿರ ನಿಮ್ಮ ಮಂಗಳಮಯವಾದ ಆಶೀರ್ವಾದದಿಂದ ಸಂತೋಷಪಟ್ಟು ನಾವು ರಾಜ್ಯಕ್ಕೆ ಹಿಂದಿರುಗಿ ಹೋಗುತ್ತೇವೆ. ಹೇ ರಾಜನೇ, ನಿನ್ನಿಂದ ಅನುಜ್ಞೆ ಪಡೆದು ಯಾವುದೇ ಬೇಸರವಿಲ್ಲದೆ ಹಿಂದಿರುಗುತ್ತೇವೆ.
ಏವಮುಕ್ತಃ ಸ ರಾಜರ್ಷಿರ್ಧರ್ಮರಾಜ್ಞಾ ಮಹಾತ್ಮನಾ |
ಅನುಜಜ್ಞೇ ಜಯಾಶೀರ್ಭಿಃ ಪೂಜಯಿತ್ವಾ ಯುಧಿಷ್ಠಿರಮ್ ॥46॥
ಹೀಗೆ ಮಹಾತ್ಮನಾದ ಧರ್ಮರಾಜನು ಹೇಳಿದಾಗ ರಾಜರ್ಷಿಯಾದ ಧೃತರಾಷ್ಟ್ರನು ಯುಧಿಷ್ಠಿರನನ್ನು ಅಭಿನಂದಿಸಿ, ಜಯವಾಗಲಿ ಎಂಬ ಆಶೀರ್ವಾದದೊಂದಿಗೆ ಅನುಜ್ಞೆ ನೀಡಿದನು.
ಭೀಮಂ ಚ ಬಲಿನಂ ಶ್ರೇಷ್ಠಂ ಸಾಂತ್ವಯಾಮಾಸ ಪಾರ್ಥಿವಃ |
ಸ ಚಾಸ್ಯ ಸಮ್ಯಗ್-ಮೇಧಾವೀ ಪ್ರತ್ಯಪದ್ಯತ ವೀರ್ಯವಾನ್ ॥47॥
ಮಹಾಬಲಿಷ್ಠನಾದ, ಪಾಂಡವಶ್ರೇಷ್ಠನಾದ ಭೀಮನನ್ನೂ ಕೂಡ ರಾಜನು ಸಮಾಧಾನಪಡಿಸಿದನು. ಮೇಧಾವಿಯಾದ, ಪರಾಕ್ರಮಿಯಾದ ಆ ಭೀಮನು ಇವನ ಅಭಿಪ್ರಾಯವನ್ನು ಚೆನ್ನಾಗಿ ತಿಳಿದುಕೊಂಡನು.
ಅರ್ಜುನಂ ಚ ಸಮಾಶ್ಲಿಷ್ಯ ಯಮೌ ಚ ಭರತರ್ಷಭೌ |
ಅನುಜಜ್ಞೇ ಸ ಕೌರವ್ಯಃ ಪರಿಷ್ವಜ್ಯಾಭಿನಂದ್ಯ ಚ ॥48॥
ಕೌರವ್ಯನಾದ ಆ ಅರ್ಜುನನನ್ನೂ ಆಲಿಂಗಿಸಿ, ಭರತಶ್ರೇಷ್ಠರಾದ ಅವಳಿ ಮಕ್ಕಳನ್ನೂ ಆಲಿಂಗಿಸಿ, ಅವರನ್ನು ಅಭಿನಂದಿಸಿ ಅವರಿಗೂ ಅನುಜ್ಞೆ ನೀಡಿದನು.
ಗಾಂಧಾರ್ಯಾ ಚಾಭ್ಯನುಜ್ಞಾತಾಃ ಕೃತಪಾದಾಭಿವಾದನಾಃ |
ಜನನ್ಯಾ ಸಮುಪಾಘ್ರಾತಾಃ ಪರಿಷ್ವಕ್ತಾಶ್ಚ ತೇ ನೃಪಮ್ ॥49॥
ಚಕ್ರುಃ ಪ್ರದಕ್ಷಿಣಂ ಸರ್ವೇ ವತ್ಸಾ ಇವ ನಿವಾರಣೇ |
ಪುನಃ ಪುನರ್ನಿರೀಕ್ಷಂತಃ ಪ್ರಚಕ್ರುಸ್ತೇ ಪ್ರದಕ್ಷಿಣಮ್ ॥50॥
ಗಾಂಧಾರಿಗೂ ಪಾದಾಭಿವಂದನೆಯನ್ನು ಮಾಡಿ, ಅವಳ ಅನುಜ್ಞೆಯನ್ನು ಪಡೆದು, ತಾಯಿಯಾದ ಕುಂತೀದೇವಿಯಿಂದ

ಆಲಿಂಗಿತರಾಗಿ ಹಾಗೂ ನೆತ್ತಿಯಲ್ಲಿ ಆಘ್ರಾಣಿಸಲ್ಪಟ್ಟು, ಅವರೆಲ್ಲರೂ ರಾಜನಿಗೆ ಪ್ರದಕ್ಷಿಣೆ ಬಂದರು. ಹಸುವಿನ ಹಾಲುಣ್ಣದಂತೆ ತಡೆದಾಗ ವತ್ಸಗಳು ಹೇಗೋ ಹಾಗೆ ಮತ್ತೆ ಮತ್ತೆ ಅವನನ್ನೇ ನೋಡುತ್ತಾ ಅವರು ಪ್ರದಕ್ಷಿಣೆ ಮಾಡಿದರು.
ದ್ರೌಪದೀಪ್ರಮುಖಾಶ್ಚೈವ ಸರ್ವಾಃ ಕೌರವಯೋಷಿತಃ |
ನ್ಯಾಯತಃ ಶ್ವಶುರೇ ವೃತ್ತಿಂ ಪ್ರಯುಜ್ಯ ಪ್ರಯಯುಸ್ತತಃ ॥51॥
ದ್ರೌಪದಿಯೇ ಮೊದಲಾದ ಎಲ್ಲ ಕೌರವ ಸ್ತ್ರೀಯರೂ ಕೂಡ ಲೋಕನ್ಯಾಯಕ್ಕೆ ಅನುಸಾರವಾಗಿ, ಮಾವನಲ್ಲಿ ನಡೆಸಬೇಕಾದ ಆಚರಣೆಯನ್ನು ನಡೆಸಿ, ಅಲ್ಲಿಂದ ಹೊರಟರು.
ಶ್ವಶ್ರೂಭ್ಯಾಂ ಸಮನುಜ್ಞಾತಾಃ ಪರಿಷ್ವಜ್ಯಾಭಿನಂದಿತಾಃ |
ಸಂದಿಷ್ಟಾಶ್ಚೇತಿಕರ್ತವ್ಯಂ ಪ್ರಯಯುರ್ಭರ್ತೃಭಿಃ ಸಹ ॥52॥
ಅತ್ತೆಯರ ಅನುಜ್ಞೆಯನ್ನು ಪಡೆದು, ಅವರಿಂದ ಆಲಿಂಗಿತರಾಗಿ, ಅವರ ಅಭಿನಂದನೆಯನ್ನೂ ಸ್ವೀಕರಿಸಿ, ಹೇಗೆ ವರ್ತಿಸಬೇಕು ಎಂಬ ಸಂದೇಶವನ್ನೂ ಅವರಿಂದ ಪಡೆದು ತಮ್ಮ ಗಂಡಂದಿರೊಂದಿಗೆ ಹೊರಟರು.
ತತಃ ಪ್ರಜಜ್ಞೇ ನಿನದಃ ಸೂತಾನಾಂ ಯುಜ್ಯತಾಮಿತಿ |
ಉಷ್ಟ್ರಾಣಾಂ ಕ್ರೋಶತಾಂ ಚಾಪಿ ಹಯಾನಾಂ ಹೇಷತಾಮಪಿ ॥53॥
ಇಷ್ಟಾದ ನಂತರ `ರಥಗಳನ್ನು ಹೂಡಿರಿ' ಎಂಬ ಸೂತಜನರ ಶಬ್ದವೂ, ಕಿರುಚಾಡುತ್ತಿರುವ ಒಂಟೆಗಳ ಶಬ್ದವೂ, ಕೆನೆಯುತ್ತಿರುವ ಕುದುರೆಯ ಶಬ್ದವೂ ಕೇಳಿಬಂದಿತು.
ತತೋ ಯುಧಿಷ್ಠಿರೋ ರಾಜಾ ಸದಾರಃ ಸಹಸೈನಿಕಃ |
ನಗರಂ ಹಸ್ತಿನಪುರಂ ಪುನರಾಯಾತ್ ಸಬಾಂಧವಃ ॥54॥
ಅನಂತರ ರಾಜನಾದ ಯುಧಿಷ್ಠಿರನು ಪತ್ನಿಯರೊಂದಿಗೆ, ಸೈನಿಕರೊಂದಿಗೆ ಹಾಗೂ ಬಾಂಧವರಿಂದ ಕೂಡಿಕೊಂಡು ಹಸ್ತಿನಪುರ ನಗರವನ್ನು ಕುರಿತು ಹಿಂದಿರುಗಿ ಬಂದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಹಸ್ತಿನಪುರಂ ಪ್ರತಿ ಯುಧಿಷ್ಠಿರಪುನರಾಗಮನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ ॥
॥ ಪುತ್ರದರ್ಶನಪರ್ವಣಿ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಪುತ್ರದರ್ಶನಪರ್ವ ॥
* * * * *
ನಾರದಾಗಮನಪರ್ವ
ಮಹಾಭಾರತತಾತ್ಪರ್ಯನಿರ್ಣಯಃ - 31ನೇ ಅಧ್ಯಾಯ
ವರ್ಷತ್ರಯಾಂತೇ ತ್ವಸಮಾಹಿತಾಗ್ನಿಂ
ತ್ಯಕ್ತಾಗ್ನಿಭಸ್ತ್ಯೈರ್ವನಮಾಲಿಹದ್ಭಿಃ |
ತೇ ಶುಶ್ರುವುರ್ಧೃತರಾಷ್ಟ್ರಂ ಸಭಾರ್ಯಂ
ಸಹೈವ ಕುಂತ್ಯಾ ಪರಿದಗ್ಧದೇಹಮ್ ॥
ತನ್ನೆದೆಯಲ್ಲಿ ಔಪಾಸನಾಗ್ನಿಯನ್ನು ಸಮಾರೋಪ ಮಾಡಿಕೊಂಡಿದ್ದ ಧೃತರಾಷ್ಟ್ರ ಮೂರುವರ್ಷಗಳ ಕೊನೆಯಲ್ಲಿ ಆ ಅಗ್ನಿಯನ್ನು ಹೊರಗೆ ಇಟ್ಟಾಗ ಅದು ಕಾಡನ್ನು ಸುಡಲು ತೊಡಗಿತು. ಧೃತರಾಷ್ಟ್ರ, ಗಾಂಧಾರೀ ಸಹಿತನಾಗಿ ಕುಂತಿಯೊಂದಿಗೆ ಆ ಅಗ್ನಿಯಲ್ಲಿ ಶರೀರವನ್ನು ಸುಟ್ಟುಕೊಂಡುದನ್ನು ಪಾಂಡವರು ಕೇಳಿದರು.
ವೀಟಾಮುಖಾಂ ಧ್ಯಾನಪರಾ ನಿಶಮ್ಯ
ಸ್ವರ್ಯಾತಮಾತ್ಮೀಯಪಿತೃವ್ಯಮಾಶು |
ಸಮೇತ್ಯ ಭರ್ತ್ರಾ ಪ್ರತಿಪೂಜ್ಯಮಾನಾಂ
ಕುಂತೀಂ ಚ ತಪ್ತಾ ವಿದಧುಃ ಕ್ರಿಯಾಶ್ಚ ॥
ಚೆಂಡನ್ನು ಬಾಯಲ್ಲಿ ಇಟ್ಟುಕೊಂಡು ಧ್ಯಾನಪರನಾಗಿ ಧೃತರಾಷ್ಟ್ರನು ಸ್ವರ್ಗಕ್ಕೆ ತೆರಳಿದ್ದನ್ನೂ ಕುಂತಿ ಸ್ವರ್ಗವನ್ನು ಸೇರಿ ಪತಿಯೊಡನೆ ಪೂಜಿತಳಾದುದನ್ನೂ ನಾರದರಿಂದ ಕೇಳಿ ಪಾಂಡವರು ದುಃಖತಪ್ತರಾಗಿ ಉತ್ತರಕ್ರಿಯೆಗಳನ್ನು ನಡೆಸಿದರು.
ತೇ ವಿಷ್ಣುಭಕ್ತ್ಯಾ ಪರಿಪೂತಕರ್ಮಭಿ-
ರ್ಜ್ಞಾನೇನ ಚಾಂತೇ ತಮನುಸ್ಮರಂತಃ |
ಪಾರ್ಥೈಃ ಸುಪುತ್ರೈಃ ಸುಕೃತೋರ್ಧ್ವಕರ್ಮಭಿ-
ರ್ವೃದ್ಧಿಂ ಸುಖಸ್ಯಾಽಪುರನಪ್ಯಯಾಂ ಶುಭಾಮ್ ॥
ಕುಂತೀ, ಗಾಂಧಾರೀ, ಧೃತರಾಷ್ಟ್ರರು ಪುಣ್ಯವಂತರು. ವಿಷ್ಣುಭಕ್ತಿಯಿಂದಲೂ ಪುಣ್ಯಕರ್ಮಗಳಿಂದಲೂ ಜ್ಞಾನದಿಂದಲೂ ಅಂತ್ಯಕಾಲದಲ್ಲಿ ಹರಿಯನ್ನು ಸದಾ ಸ್ಮರಿಸಿದರು. ಸುಪುತ್ರರಾದ ಪಾಂಡವರೂ ಅವರಿಗೆ ಚೆನ್ನಾಗಿ ಉತ್ತರಕ್ರಿಯೆ ಮಾಡಿದರು. ಅದರಿಂದ ಅವರು ಶಾಶ್ವತವಾದ ಆನಂದಾಭಿವೃದ್ಧಿಯನ್ನು ಹೊಂದಿದರು.
ಗಾವಲ್ಗಣಿರ್ವ್ಯಾಸಸಕಾಶಮೇತ್ಯ
ಶುಶ್ರೂಷಯಾ ತಸ್ಯ ಪುನರ್ನಿಜಾಂ ಗತಿಮ್ |
ಪ್ರಪೇದಿವಾನ್ ಪಾಂಡುಸುತಾಶ್ಚ ಕೃಷ್ಣಂ

ಪ್ರತೀಕ್ಷಮಾಣಾಃ ಪೃಥಿವೀಮಶಾಸನ್ ॥
ಸಂಜಯ ವೇದವ್ಯಾಸರ ಬಳಿಗೆ ಬಂದು ಅವರ ಸೇವೆಯಿಂದ ನಿಜಗತಿಯನ್ನು ಪಡೆದನು. ಪಾಂಡವರೂ ಶ್ರೀಕೃಷ್ಣನ ಪರಂಧಾಮ ಪ್ರವೇಶವನ್ನು ಎದುರು ನೋಡುತ್ತಾ ಭೂಮಿಯನ್ನು ಆಳಿದರು.
ಅಷ್ಟಾದಶಾಬ್ದಾಃ ಪೃಥಿವೀಂ ಸಮಸ್ತಾಂ
ಪ್ರಶಾಸತಾಮೇವಮಗುರ್ಮಹಾತ್ಮನಾಮ್ |
ಅರಿಕ್ತಧರ್ಮಾರ್ಥಸುಖೋತ್ತಮಾನಾ-
ಮನುಜ್ಝಿತಾನಂತಪದಸ್ಮೃತೀನಾಮ್ ॥
ಮಹಾತ್ಮರಾದ ಪಾಂಡವರು ಹರಿಚರಣ ಸ್ಮರಣೆಯನ್ನು ಬಿಡದೆ, ಸದಾ ಮಾಡುತ್ತಾ ಪೂರ್ಣವಾದ ಧರ್ಮಾರ್ಥಮೋಕ್ಷಗಳಿಗೆ ಭಾಜನರಾಗಿ, ಸಮಸ್ತ ಪೃಥಿವಿಯನ್ನು ಆಳುತ್ತಿದ್ದಂತೆ ಹದಿನೆಂಟು ವರ್ಷಗಳು ಕಳೆದುವು.
ನಲವತ್ತೆಂಟನೆಯ ಅಧ್ಯಾಯ
ನಾರದರು ಒಮ್ಮೆ ಹಸ್ತಿನಪುರಕ್ಕೆ ಬಂದು ಪಾಂಡವರಲ್ಲಿ ಧೃತರಾಷ್ಟ್ರಾದಿಗಳು ಸ್ವರ್ಗವನ್ನು ಪಡೆದರೆಂದು ತಿಳಿಸುವುದು. ಧೃತರಾಷ್ಟ್ರನು ಗಾಂಧಾರಿ, ಕುಂತಿ ಮತ್ತು ಸಂಜಯರಿಂದ ಕೂಡಿಕೊಂಡು ಗಂಗೆಯಲ್ಲಿ ಮಿಂದು, ತನ್ನ ಆಶ್ರಮಕ್ಕೆ ಹಿಂದಿರುಗುತ್ತಿರುವಾಗ ಮಾರ್ಗಮಧ್ಯದಲ್ಲಿ ದಾವಾಗ್ನಿಯು ಅವರನ್ನು ಸುತ್ತುವರಿಯುವುದು. ಧೃತರಾಷ್ಟ್ರನು ಸಂಜಯನನ್ನು ದೂರ ಹೋಗಲು ತಿಳಿಸಿ ಕುಂತಿ ಹಾಗೂ ಗಾಂಧಾರಿಯೊಂದಿಗೆ ಅಗ್ನಿಯನ್ನು ಪ್ರವೇಶಿಸುವುದು. ನಂತರ ಸಂಜಯನು ಹಿಮವತ್ಪರ್ವತಕ್ಕೆ ತೆರಳುವುದು.
ವೈಶಂಪಾಯನಃ
ತೇಷು ಚೋಪನಿವೃತ್ತೇಷು ಪಾಂಡವೇಷು ಯದೃಚ್ಛಯಾ |
ದೇವರ್ಷಿರ್ನಾರದೋ ರಾಜನ್ನಾಜಗಾಮ ಯುಧಿಷ್ಠಿರಮ್ ॥1॥
ವೈಶಂಪಾಯನ ಪಾಂಡವರು ಯದೃಚ್ಛೆಯಿಂದ ಹಸ್ತಿನಾವತಿಗೆ ಬರುತ್ತಿರಲು; ಯುಧಿಷ್ಠಿರನನ್ನು ಕಾಣಬೇಕೆಂದು ದೇವರ್ಷಿ ನಾರದರು ಅಲ್ಲಿಗೆ ಆಗಮಿಸಿದರು.
ತಮಭ್ಯರ್ಚ್ಯ ಮಹಾಬಾಹುಃ ಕುರುರಾಜೋ ಯುಧಿಷ್ಠಿರಃ |
ಆಸೀನಂ ಪರಿವಿಶ್ವಸ್ತಂ ಪ್ರೋವಾಚ ವದತಾಂವರಃ ॥2॥
ಕುರುರಾಜನಾದ ಮಹಾಬಾಹುವಾದ ಯುಧಿಷ್ಠಿರನು ನಾರದರನ್ನು ಚೆನ್ನಾಗಿ ಉಪಚರಿಸಿದನು. ನಾರದರು ಮಾರ್ಗಾಯಾಸವನ್ನು ಪರಿಹರಿಸಿಕೊಂಡ ಬಳಿಕ ಮಾತು ಬಲ್ಲವನಾದ ಧರ್ಮಜನು ಇಂತು ನುಡಿದನು.
ಚಿರಾತ್ತು ನಾನುಪಶ್ಯಾಮಿ ಭಗವಂತಮುಪಸ್ಥಿತಮ್ |
ಕಚ್ಚಿತ್ತೇ ಕುಶಲಂ ವಿಪ್ರ ಶುಭಂ ವಾ ಪ್ರತ್ಯುಪಸ್ಥಿತಮ್ ॥3॥
ಪೂಜ್ಯರೇ! ನಿಮ್ಮನ್ನು ಕಾಣದೆ ಬಹುಕಾಲವೇ ಸಂದಿದೆ. ನೀವು ಕ್ಷೇಮವೋ? ನಿಮ್ಮ ಆಗಮನದ ಉದ್ದೇಶ ಮಂಗಳಕರವಾಗಿರುವುದಷ್ಟೇ!
ಕೇ ದೇಶಾಃ ಪರಿದೃಷ್ಟಾಸ್ತೇ ಕಿಂ ಚ ಕಾರ್ಯಂ ಕರೋಮಿ ತೇ |
ತದ್ ಬ್ರೂಹಿ ದ್ವಿಜಮುಖ್ಯಸ್ತ್ವಂ ಹ್ಯಸ್ಮಾಕಂ ಚ ಪ್ರಿಯೋಽತಿಥಿಃ ॥4॥
ಯಾವ ಯಾವ ದೇಶಗಳನ್ನು ಸಂಚರಿಸಿ ಬಂದಿರಿ. ನಿಮಗಾಗಿ ನಾನು ಯಾವ ಒಳ್ಳೆಯ ಕಾರ್ಯ ಮಾಡಲಿ? ಹೇಳಿರಿ! ಬ್ರಾಹ್ಮಣಶ್ರೇಷ್ಠರಾದ ನೀವು ನಮಗೆ ಪ್ರೀತಿಯ ಅತಿಥಿಗಳಾಗಿದ್ದೀರಿ.
ನಾರದಃ
ಚಿರದೃಷ್ಟೋಽಸಿ ಮೇಽತ್ಯೇವಮಾಗತೋಽಹಂ ತಪೋವನಾತ್ |
ಪರಿದೃಷ್ಟಾನಿ ತೀರ್ಥಾನಿ ಗಂಗಾ ಚೈವ ಮಯಾ ನೃಪ ॥5॥
ನಾರದರು ರಾಜನೇ! ನಿನ್ನನ್ನು ಕಾಣದೆ ಬಹಳ ಸಮಯವಾಯಿತೆಂದೇ ನಾನು ತಪೋವನದಿಂದ ಬಂದಿರುತ್ತೇನೆ. ಗಂಗಾದಿ ತೀರ್ಥಗಳನ್ನು ಸೇವಿಸುತ್ತಾ ಬಂದಿರುವೆ.
ಯುಧಿಷ್ಠಿರಃ
ವದಂತಿ ಪುರುಷಾ ಮೇಽದ್ಯ ಗಂಗಾತೀರನಿವಾಸಿನಃ |
ಧೃತರಾಷ್ಟ್ರಂ ಮಹಾತ್ಮಾನಮಾಸ್ಥಿತಂ ಪರಮಂ ತಪಃ ॥6॥
ಯುಧಿಷ್ಠಿರ ನಾರದರೇ! ಮಹಾತ್ಮನಾದ ಧೃತರಾಷ್ಟ್ರನು ಗಂಗಾ ತೀರದಲ್ಲಿ ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದಾನೆಂದು ಅನೇಕ ಗಂಗಾತೀರದ ನಿವಾಸಿಗಳಿಂದ ಕೇಳಿಸಿಕೊಂಡಿರುತ್ತೇನೆ.
ಅಪಿ ದೃಷ್ಟಸ್ತ್ವಯಾ ತತ್ರ ಕುಶಲೀ ಸ ಕುರೂದ್ವಹಃ |
ಗಾಂಧಾರೀ ಚ ಪೃಥಾ ಚೈವ ಸೂತಪುತ್ರಶ್ಚ ಸಂಜಯಃ ॥7॥
ಆ ಗಂಗಾತೀರದಲ್ಲಿ ಕೌರವಶ್ರೇಷ್ಠನಾದ ಧೃತರಾಷ್ಟ್ರನನ್ನು ನೀವು ನೋಡಿದಿರಾ? ಅವನು ಕ್ಷೇಮವೇ? ಗಾಂಧಾರೀ-ಕುಂತೀ-ಸೂತಪುತ್ರನಾದ ಸಂಜಯ ಇವರೆಲ್ಲರೂ ಕ್ಷೇಮದಿಂದಿರುವರೇ!
ಕಥಂ ಚ ವರ್ತತೇ ಚಾದ್ಯ ಪಿತಾ ಮಮ ಸ ಪಾರ್ಥಿವಃ |
ಶ್ರೋತುಮಿಚ್ಛಾಮಿ ಭಗವನ್ ಯದಿ ದೃಷ್ಟಸ್ತ್ವಯಾ ನೃಪಃ ॥8॥
ನೀವು ರಾಜನನ್ನು ನೋಡಿದ್ದೀರೆಂದಾದರೆ ಅವನ ಬಗ್ಗೆ ಕೇಳಲು ಬಯಸುತ್ತೇನೆ. ನನ್ನ ತಂದೆಯಾದ ರಾಜನು ಈಗ ಹೇಗಿದ್ದಾನೆ?
ನಾರದಃ

ಸ್ಥಿರೀಭೂಯ ಮಹಾರಾಜ ಶೃಣು ವೃತ್ತಂ ಯಥಾತಥಮ್ ।
ಯಥಾಶ್ರುತಂ ಚ ದೃಷ್ಟಂ ಚ ಮಯಾ ತಸ್ಮಿಂಸ್ತಪೋವನೇ ॥9॥
ನಾರದರು ರಾಜನೇ! ಯಥಾವತ್ತಾಗಿ ನಾನು ಹೇಳುವ ವಾರ್ತೆಯನ್ನು ಸ್ಥಿರವಾದ ಮನಸ್ಸಿನಿಂದ ಕೇಳು. ನಾನು ಆ ಗಂಗಾ ತೀರದ ತಪೋವನದಲ್ಲಿ ಧೃತರಾಷ್ಟ್ರನ ಬಗ್ಗೆ ಏನು ಕೇಳಿಸಿಕೊಂಡಿದ್ದೇನೋ, ನೋಡಿದ್ದೇನೋ ಅದನ್ನು ಹೇಳುತ್ತೇನೆ.
ವನವಾಸನಿವೃತ್ತೇಷು ಭವತ್ಸು ಕುರುನಂದನ ।
ಕುರುಕ್ಷೇತ್ರಾತ್ ಪಿತಾ ತುಭ್ಯಂ ಗಂಗಾದ್ವಾರಂ ಯಯೌ ನೃಪ ॥10॥
ರಾಜನೇ! ನೀವೆಲ್ಲರೂ ರಾಜನಿಗೆ ವನವಾಸಕ್ಕೆ ತೆರಳಲು ಅನುಮತಿ ಇತ್ತ ಬಳಿಕ ನಿಮ್ಮ ತಂದೆಯು ಕುರುಕ್ಷೇತ್ರದಿಂದ ಗಂಗಾದ್ವಾರ ಎನಿಸಿದ ಹರಿದ್ವಾರಕ್ಕೆ ನಡೆದನು.
ಗಾಂಧಾರ್ಯಾ ಸಹಿತೋ ಧೀಮಾನ್ ವಧ್ವಾ ಕುಂತ್ಯಾ ಸಮನ್ವಿತಃ ।
ಸಂಜಯೇನ ಚ ಸೂತೇನ ಸಾಗ್ನಿಹೋತ್ರಃ ಸಯಾಜಕಃ ॥11॥
ಆತಸ್ಥೇ ಸ ತಪಸ್ತೀವ್ರಂ ಪಿತಾ ತವ ತಪೋಧನಃ ।
ಅಗ್ನಿಂ ಮುಖೇ ಸಮಾಧಾಯ ವಾಯುಭಕ್ಷೋಽಭವದ್ ಮುನಿಃ ॥12॥
ಗಾಂಧಾರೀ-ಕುಂತೀ-ಸೂತನಾದ ಸಂಜಯ, ಅಗ್ನಿಹೋತ್ರಿಗಳಿಂದ ಕೂಡಿದ ತಪೋಧನನಾದ ನಿಮ್ಮ ತಂದೆಯು ಕಠಿಣವಾದ ತಪಸ್ಸನ್ನು ಮಾಡಿದನು. ಮುಖದಲ್ಲಿ ಅಗ್ನಿಯನ್ನು ಧರಿಸಿ, ಗಾಳಿಯನ್ನೇ ಆಹಾರವನ್ನಾಗಿಸಿಕೊಂಡು ಮೌನ ಧರಿಸಿದನು.
ವನೇ ಸ ಮುನಿಭಿಃ ಸರ್ವೈಃ ಪೂಜ್ಯಮಾನೋ ಮಹಾತಪಾಃ ।
ತ್ವಗಸ್ಥಿಮಾತ್ರಶೇಷಃ ಸ ಷಣ್ಮಾಸಾನಭವನ್ನೃಪಃ ॥13॥
ಮಹಾತಪಸ್ವಿಯಾದ ರಾಜನು ಆ ಕಾಡಿನ ಸಮಸ್ತ ಮುನಿಗಳಿಂದ ಪೂಜ್ಯಮಾನನಾಗಿದ್ದನು. ತಪಸ್ಸಿನಿಂದ ಅವನ ದೇಹದಲ್ಲಿ ಚರ್ಮ-ಮೂಳೆಗಳು ಮಾತ್ರ ಉಳಿದಿದ್ದವು. ಈ ಆರು ತಿಂಗಳು ತಪಸ್ಸನ್ನಾಚರಿಸಿದನು.
ಗಾಂಧಾರೀ ತು ಜಲಾಹಾರೀ ಕುಂತೀ ಮಾಸೋಪವಾಸಿನೀ ।
ಸಂಜಯಃ ಷಷ್ಠಭುಕ್ತೇನ ವರ್ತಯಾಮಾಸ ಭಾರತ ॥14॥
ಹೇ ಭಾರತನೇ, ಆ ಸಮಯದಲ್ಲಿ ಗಾಂಧಾರೀ ದೇವಿಯು ಕೇವಲ ನೀರನ್ನು ಮಾತ್ರ ಸ್ವೀಕರಿಸುತ್ತಿದ್ದಳು. ಕುಂತಿಯು ತಿಂಗಳಿಗೆ ಒಂದು ಬಾರಿ ಮಾತ್ರ ಆಹಾರವನ್ನು ಸ್ವೀಕರಿಸುವ ಉಪವಾಸ ವ್ರತವನ್ನು ನಡೆಸುತ್ತಿದ್ದಳು. ಸಂಜಯನು ಆರು ದಿನಕ್ಕೊಮ್ಮೆ ಆಹಾರವನ್ನು ಸೇವಿಸುತ್ತಾ ದಿನವನ್ನು ಕಳೆಯುತ್ತಿದ್ದನು.
ಅಗ್ನೀಂಸ್ತು ಯಾಜಕಾಸ್ತತ್ರ ಜುಹುವುರ್ವಿಧಿವತ್ ಪ್ರಭೋ ।
ದೃಶ್ಯತೋಽದೃಶ್ಯತಶ್ಚೈವ ವನೇ ತಸ್ಮಿನ್ನೃಪಸ್ಯ ವೈ ॥15॥
ಹೇ ಪ್ರಭುವೇ, ಆ ರಾಜನ ದರ್ಶನವು ಕಾಡಿನಲ್ಲಿ ಒಮ್ಮೊಮ್ಮೆ ಆಗುತ್ತಿತ್ತು. ಕೆಲವೊಮ್ಮೆ ಆಗುತ್ತಿರಲಿಲ್ಲ. ಹಾಗಿದ್ದರೂ ಯಾಜಕರು ವಿಧಿವತ್ತಾಗಿ ಅಗ್ನಿಗಳಲ್ಲಿ ಹೋಮಿಸುತ್ತಿದ್ದರು.
ಅನಿಕೇತೋಥ ರಾಜಾ ಸ ಬಭೂವ ವನಗೋಚರಃ ।
ತೇ ಚಾಪಿ ಸಹಿತೇ ದೇವ್ಯೌ ಸಂಜಯಶ್ಚ ತಮನ್ವಯುಃ ॥16॥
ದಿನ ಕಳೆದಂತೆ ಆ ರಾಜನು ಕಾಡಿನಲ್ಲೇ ತಿರುಗುತ್ತಾ ಸ್ಥಿರವಾದ ನೆಲೆ ಇಲ್ಲದವನಂತೆ ಆದನು. ಜೊತೆಗಿರುವ ಇಬ್ಬರು ದೇವಿಯರೂ ಹಾಗೂ ಸಂಜಯನು ಅವನನ್ನೇ ಅನುಸರಿಸಿದರು.
ಸಂಜಯೋ ನೃಪತೇರ್ನೇತಾ ಸಮೇಷು ವಿಷಮೇಷು ಚ ।
ಗಾಂಧಾರ್ಯಾಶ್ಚ ಪೃಥಾ ಚೈವ ಚಕ್ಷುರಾಸೀದನಿಂದಿತಾ ॥17॥
ಸಮ ಹಾಗೂ ವಿಷಮ ಪರಿಸ್ಥಿತಿಗಳೆರಡರಲ್ಲೂ ರಾಜನಿಗೆ ಸಂಜಯನು ಸಹಾಯಕನಾಗಿದ್ದನು. ಅಂತೆಯೇ ಗಾಂಧಾರಿಗೆ ಅನಿಂದಿತಳಾದ ಕುಂತಿಯೇ ಕಣ್ಣಾಗಿದ್ದಳು.
ತತಃ ಕದಾಚಿದ್ ಗಂಗಾಯಾಃ ಕಚ್ಛೇ ಸ ನೃಪಸತ್ತಮಃ ।
ಗಂಗಾಯಾಮಾಪ್ಲುತೋ ಧೀಮಾನಾಶ್ರಮಾಭಿಮುಖೋ ಯಯೌ ॥18॥
ಹೀಗೆ ಕೆಲವು ಕಾಲ ಕಳೆದ ನಂತರ ಒಮ್ಮೆ ಧೀಮಂತನಾದ ಆ ರಾಜನು ಗಂಗೆಯಲ್ಲಿ ಸ್ನಾನ ಮಾಡಿ ಗಂಗಾತೀರದಲ್ಲಿ ಆಶ್ರಮಕ್ಕೆ ಅಭಿಮುಖನಾಗಿ ಹೊರಟಿದ್ದನು.
ಅಥ ವಾಯುಃ ಸಮುದ್ಭೂತೋ ದಾವಾಗ್ನಿರಭವನ್ಮಹಾನ್ ।
ದದಾಹ ತದ್ವನಂ ಸರ್ವಂ ಪರಿಗೃಹ್ಯ ಸಮಂತತಃ ॥19॥
ಆ ಸಮಯಕ್ಕೆ ಸರಿಯಾಗಿ ಜೋರಾಗಿ ಗಾಳಿ ಬೀಸಲಾರಂಭಿಸಿತು. ಆ ಗಾಳಿಯಿಂದ ಮಹತ್ತಾದ ಕಾಡ್ಕಿಚ್ಚು ಹುಟ್ಟಿತು. ಅದು ಇಡೀ ಕಾಡನ್ನು ಸುತ್ತಲೂ ವ್ಯಾಪಿಸಿಕೊಂಡಿತು.
ದಹತ್ಸು ಮೃಗಯೂಥೇಷು ದ್ವಿಜಿಹ್ವೇಷು ಸಮಂತತಃ ।
ವರಾಹಾಣಾಂ ಚ ಯೂಥೇಷು ಸಂಶ್ರಯತ್ಸು ಜಲಾಶಯಾನ್ ॥20॥
ಸುತ್ತಲೂ ಜಿಂಕೆಗಳ ಗುಂಪು ಹಾಗೂ ಹಾವುಗಳು ದಹಿಸಲಾರಂಭಿಸಿದವು. ಬಿಸಿಯ ಬೇಗೆಯಿಂದ ಹಂದಿಗಳ ಹಿಂಡು ಜಲಾಶಯಗಳನ್ನು ಆಶ್ರಯಿಸಲಾರಂಭಿಸಿತು.
ಸಂಪ್ರದೀಪ್ತೇ ವನೇ ತಸ್ಮಿನ್ ಪ್ರಾಪ್ತೇ ವ್ಯಸನ ಉತ್ತಮೇ ।
ನಿರಾಹಾರತಯಾ ರಾಜಾ ಮಂದಪ್ರಾಣವಿಚೇಷ್ಟಿತಃ॥21॥
ಅಸಮರ್ಥೋಽಪಸರಣೇ ಸುಕೃಶೇ ಮಾತರೌ ಚ ತೇ ॥22॥

ಹೀಗೆ ಆ ಕಾಡು ಧಗಧಗಿಸಲಾರಂಭಿಸಿ ಮಹತ್ತಾದ ಕಷ್ಟವು ಪ್ರಾಪ್ತವಾದಾಗ ನಿರಾಹಾರನಾಗಿದ್ದ ರಾಜನಾದ ಧೃತರಾಷ್ಟ್ರನು ಅತ್ಯಲ್ಪವಾದ ಬಲ ಮತ್ತು ನಡಿಗೆಯಿಂದ ಕೂಡಿದವನಾಗಿ ಕಾಡ್ಗಿಚ್ಚಿನಿಂದ ಹೊರಬರಲು ಅಸಮರ್ಥನಾದನು. ಹಾಗೆಯೇ ಉಪವಾಸ ವ್ರತದಿಂದ ಕೃಶರಾದ ನಿನ್ನ ಇಬ್ಬರು ತಾಯಂದಿರೂ ಅಸಮರ್ಥರಾದರು.
ತತಃ ಸ ನೃಪತಿರ್ದೃಷ್ಟ್ವಾ ವಹ್ನಿಮಾಯಾಂತಮಂತಿಕಾತ್ |
ಇದಮಾಹ ತತಃ ಸೂತಂ ಸಂಜಯಂ ಜಯತಾಂವರಃ ॥23॥
ಅನಂತರ ಆ ರಾಜನು ಬೆಂಕಿಯು ಬಹಳ ಸಮೀಪದಲ್ಲಿ ಬರುವುದನ್ನು ಕಂಡನು. ಇದನ್ನು ಕಂಡ ಜಯಿಗಳಲ್ಲಿ ಶ್ರೇಷ್ಠನಾದ ಅವನು ಸೂತನಾದ ಸಂಜಯನನ್ನು ಕುರಿತು ಹೀಗೆಂದನು.
ಗಚ್ಛ ಸಂಜಯ ಯತ್ರಾಗ್ನಿರ್ನ ತ್ವಾಂ ದಹತಿ ಕರ್ಹಿಚಿತ್ |
ವಯಮತ್ರಾಗ್ನಿನಾ ಯುಕ್ತಾ ಗಮಿಷ್ಯಾಮಃ ಪರಾಂ ಗತಿಮ್ ॥24॥
ಹೇ ಸಂಜಯನೇ! ಯಾವ ಪ್ರದೇಶದಲ್ಲಿ ಕಾಡ್ಗಿಚ್ಚು ನಿನಗೆ ಸ್ವಲ್ಪವೂ ತೊಂದರೆ ಕೊಡದೋ ಅಲ್ಲಿಗೆ ಹೊರಟು ಹೋಗು. ನಾವು ಅಗ್ನಿಮಧ್ಯದಲ್ಲಿ ಸೇರಿಕೊಂಡು ಉತ್ತಮವಾದ ಪರಲೋಕ ಗತಿಯನ್ನು ಹೊಂದುವೆವು.
ತಮುವಾಚ ಕಿಲೋದ್ವಿಗ್ನಃ ಸಂಜಯೋ ವದತಾಂವರಃ |
ರಾಜನ್ ಮೃತ್ಯುರನಿಷ್ಟೋಽಯಂ ಭವಿತಾ ತೇ ವೃಥಾಽಗ್ನಿನಾ ॥25॥
ನ ಚೋಪಾಯಂ ಪ್ರಪಶ್ಯಾಮಿ ಮೋಕ್ಷಣೇ ಜಾತವೇದಸಃ |
ಯದತ್ರಾನಂತರಂ ಕಾರ್ಯಂ ತದ್ಭವಾನ್ ವಕ್ತುಮರ್ಹತಿ ॥26॥
ಇದನ್ನು ಕೇಳಿದ ವಾಗ್ಮಿಯಾದ ಸಂಜಯನು ಬಹಳ ಉದ್ವಿಗ್ನನಾಗಿ ಹೇ ರಾಜನೇ, ಅನಿಷ್ಟವಾದ ಮೃತ್ಯುವು ನಿನಗೆ ಅಗ್ನಿಯಿಂದ ವೃಥಾ ಪ್ರಾಪ್ತವಾಗಿದೆ. ಈ ಅಗ್ನಿಯಿಂದ ಹೊರಬರಲು ಯಾವುದೇ ಉಪಾಯವೂ ತೋಚುತ್ತಿಲ್ಲ. ಮುಂದೇನು ಮಾಡಬೇಕೆಂಬುದನ್ನು ನೀನೇ ಹೇಳಬೇಕಾಗಿದೆ.
ಇತ್ಯುಕ್ತಃ ಸಂಜಯೇನೇದಂ ಪುನರಾಹ ಸ ಪಾರ್ಥಿವಃ |
ನೈಷ ಮೃತ್ಯುರನಿಷ್ಟೋ ನೋ ನಿಃಸೃತಾನಾಂ ಗೃಹಾತ್ಸ್ವಯಮ್ ॥27॥
ಹೀಗೆ ಸಂಜಯನು ಹೇಳಿದಾಗ, ಈ ಮೃತ್ಯುವು ಸ್ವತಃ ತಾವಾಗಿಯೇ ಮನೆಯಿಂದ ಹೊರಬಂದು ವಾನಪ್ರಸ್ಥದಲ್ಲಿರುವ ನಮಗೆ ಅನಿಷ್ಟವಲ್ಲ ಎಂದು ರಾಜನು ಹೇಳಿದನು.
ಜಲಮಗ್ನಿಸ್ತಥಾ ವಾಯುರಥವಾಽಪಿ ವಿಕರ್ಷಣಮ್ |
ತಾಪಸಾನಾಂ ಪ್ರಶಸ್ಯಂ ತೇ ಗಚ್ಛ ಸಂಜಯ ಮಾಚಿರಮ್ ॥28॥
ಹೇ ಸಂಜಯನೇ, ನೀರಿನಿಂದ, ಬೆಂಕಿಯಿಂದ ಅಥವಾ ಗಾಳಿಯಿಂದ ಅಥವಾ ಉಪವಾಸದಿಂದ ತಾಪಸಜನರಿಗೆ ಮೃತ್ಯುವು ಪ್ರಶಸ್ತವಾದುದು. ಆದ್ದರಿಂದ ತಡ ಮಾಡದೆ ನೀನು ಹೊರಡು.
ಇತ್ಯುಕತ್ವ ಸಂಜಯಂ ರಾಜಾ ಸಮಾಧಾಯ ಮನಸ್ತಥಾ |
ಪ್ರಾಙ್ಮುಖಃ ಸಹ ಗಾಂಧಾರ್ಯಾ ಕುಂತ್ಯಾ ಚೋಪಾವಿಶತ್ ತದಾ ॥29॥
ಸಂಜಯನಿಗೆ ಹೀಗೆ ಹೇಳಿದ ರಾಜನು ಮನಸ್ಸನ್ನು ನಿಗ್ರಹಿಸಿಕೊಂಡು, ಗಾಂಧಾರಿ ಮತ್ತು ಕುಂತಿಯರೊಡನೆ ಪ್ರಾಙ್ಮುಖನಾಗಿ ಅಲ್ಲಿಯೇ ಕುಳಿತನು.
ಸಂಜಯಸ್ತಂ ತಥಾ ದೃಷ್ಟ್ವಾ ಪ್ರದಕ್ಷಿಣಮಥಾಕರೋತ್ |
ಉವಾಚ ಚೈನಂ ಮೇಧಾವೀ ಯುಂಕ್ಷ್ವಾತ್ಮಾನಮಿತಿ ಪ್ರಭೋ ॥30॥
ಹಾಗೆ ಕುಳಿತ ರಾಜನನ್ನು ನೋಡಿ ಮೇಧಾವಿಯಾದ ಸಂಜಯನು ಅವನಿಗೆ ಪ್ರದಕ್ಷಿಣೆ ಬಂದು, ಹೇ ಪ್ರಭುವೇ, ಆತ್ಮನನ್ನು ಯೋಗಧಾರಣೆಯ ಮೂಲಕ ಅಣಿಗೊಳಿಸು ಎಂದನು.
ಋಷಿಪುತ್ರೋ ಮನೀಷೀ ಸ ರಾಜಾ ಚಕ್ರೇಽಸ್ಯ ತದ್ವಚಃ |
ಸನ್ನಿರುದ್ಧ್ಯೇಂದ್ರಿಯಗ್ರಾಮಮಾಸೀತ್ ಕಾಷ್ಠೋಪಮಸ್ತದಾ ॥31॥
ಋಷಿಪುತ್ರನಾದ ಪ್ರಾಜ್ಞನಾದ ಆ ರಾಜನು ಅವನ ಆಜ್ಞೆಯಂತೆಯೇ ನಡೆದುಕೊಂಡನು. ತನ್ನ ಇಂದ್ರಿಯಗಳನ್ನೂ, ಶ್ವಾಸವನ್ನೂ ನಿರೋಧ ಮಾಡಿಕೊಂಡು ಆಗ ಕಟ್ಟಿಗೆಯ ತುಂಡಿನಂತೆ ಆದನು.
ಗಾಂಧಾರೀ ಚ ಮಹಾಭಾಗಾ ಜನನೀ ಚ ಪೃಥಾ ತವ |
ದಾವಾಗ್ನಿನಾ ಸಮಾಯುಕ್ತೇ ಸ ಚ ರಾಜಾ ಪಿತಾ ತವ ॥32॥
ಅಷ್ಟು ಹೊತ್ತಿಗೆ ಮಹಾಭಾಗಳಾದ ಗಾಂಧಾರಿಯೂ, ನಿನ್ನ ತಾಯಿಯಾದ ಪೃಥೆಯೂ ಹಾಗೂ ನಿನ್ನ ತಂದೆಯಾದ ರಾಜನೂ ದಾವಾಗ್ನಿಯ ಮಧ್ಯದಲ್ಲಿ ಸೇರಿಕೊಂಡರು.
ಸಂಜಯಸ್ತು ಮಹಾಪ್ರಾಜ್ಞಸ್ತಸ್ಮಾದ್ ದಾವಾದಮುಚ್ಯತ |
ಗಂಗಾಕೂಲೇ ಮಯಾ ದೃಷ್ಟಸ್ತಾಪಸೈಃ ಪರಿವಾರಿತಃ ॥33॥
ಮಹಾಪ್ರಾಜ್ಞನಾದ ಸಂಜಯನಾದರೂ ಆ ಕಾಡ್ಗಿಚ್ಚಿನಿಂದ ತಪ್ಪಿಸಿಕೊಂಡನು. ಅವನೇ ತಾಪಸರಿಂದ ಕೂಡಿಕೊಂಡು ಗಂಗಾತೀರದಲ್ಲಿ ನನಗೆ ಕಾಣಸಿಕ್ಕನು.
ಸ ತಾನಾಮಂತ್ರ್ಯ ತೇಜಸ್ವೀ ನಿವೇದ್ಯೈತಚ್ಚ ಸರ್ವಶಃ |
ಪ್ರಯಯೌ ಸಂಜಯೋ ಧೀಮಾನ್ ಹಿಮವಂತಂ ಮಹೀಧರಮ್ ॥
ಧೀಮಂತನಾದ, ತೇಜಸ್ವಿಯಾದ ಆ ಸಂಜಯನು ಅವರನ್ನು ಒಟ್ಟು ಸೇರಿಸಿ ಈ ಎಲ್ಲವನ್ನೂ ಆ ಋಷಿಗಳಲ್ಲಿ ನಿವೇದಿಸಿಕೊಂಡು ಹಿಮವದ್ ಪರ್ವತದ ಕಡೆಗೆ ಹೊರಟು ಹೋದನು.

ಏವಂ ಸ ನಿಧನಂ ಪ್ರಾಪ್ತಃ ಕುರುರಾಜೋ ಮಹಾಮನಾಃ |
ಗಾಂಧಾರೀ ಚ ಪೃಥಾ ಚೈವ ಜನನ್ಯೌ ತೇ ವಿಶಾಂಪತೇ ||35||
ಹೇ ವಿಶಾಂಪತಿಯೇ, ಹೀಗೆ ಮಹಾಮನಸ್ವಿಯಾದ ಕುರುರಾಜನು ಮರಣವನ್ನು ಪಡೆದನು. ಅಂತೆಯೇ ನಿನ್ನ ತಾಯಂದಿರಾದ ಗಾಂಧಾರಿ ಮತ್ತು ಕುಂತಿಯರೂ ಮರಣ ಹೊಂದಿದರು.
ಯದೃಚ್ಛಯಾಽನುವ್ರಜತಾ ಮಯಾ ರಾಜ್ಞಃ ಕಲೇಬರಮ್ |
ತಯೋಶ್ಚ ದೇವ್ಯೋರುಭಯೋರ್ಮಯಾ ದೃಷ್ಟಾನಿ ಭಾರತ ||36||
ಹೇ ಭಾರತನೇ, ಆ ತಪೋವನದಲ್ಲಿ ಸಂಚರಿಸುತ್ತಿರುವಾಗ ನನಗೆ ಆಕಸ್ಮಿಕವಾಗಿ ಆ ರಾಜನ ಕಳೇವರವೂ ಹಾಗೂ ಇಬ್ಬರು ದೇವಿಯರ ಕಳೇವರವು ನನಗೆ ಸಿಕ್ಕಿತು. ನಾನು ಅದನ್ನು ನೋಡಿದೆನು.
ತತಸ್ತಪೋವನೇ ತಸ್ಮಿನ್ ಸಮಾಜಗ್ಮುಸ್ತಪೋಧನಾಃ |
ಶ್ರುತ್ವಾ ರಾಜ್ಞಸ್ತದಾ ನಿಷ್ಠಾಂ ನ ತ್ವಶೋಚನ್ ಗತೀಶ್ಚ ತೇ ||37||
ಅನಂತರ ಆ ತಪೋವನಕ್ಕೆ ತಪೋಧನರಾದ ಋಷಿಗಳು ಬಂದರು. ರಾಜನ ಈ ರೀತಿಯ ಅವಸ್ಥೆಗಳನ್ನು ಕೇಳಿದ ಅವರು ಅವನ ತಪೋನಿಷ್ಠೆಯನ್ನೂ ಕೇಳಿ ಅವನಿಗಾಗುವ ಗತಿಗಳ ಬಗ್ಗೆ ಶೋಕಪಡಲಿಲ್ಲ.
ತತ್ರಾಶ್ರೌಷಮಹಂ ಸರ್ವಮೇತತ್ಪುರುಷಸತ್ತಮ |
ಯಥಾ ಚ ನೃಪತಿರ್ದಗ್ಧೋ ದೇವ್ಯೌ ತೇ ಚೇತಿ ಪಾಂಡವ ||38||
ಹೇ ಪುರುಷಶ್ರೇಷ್ಠನಾದ ಪಾಂಡವನೇ, ಹೇಗೆ ನೃಪತಿಯ ದಹನವಾಯಿತೋ ಹಾಗೂ ಆ ಇಬ್ಬರು ದೇವಿಯರೂ ಸುಟ್ಟುಹೋದರೋ ಆ ಎಲ್ಲವನ್ನೂ ಅಲ್ಲಿ ನಾನು ಕೇಳಿ ತಿಳಿದೆನು.
ಇತ್ಯುಕ್ತೋ ಮುನಿನಾ ತೇನ ಧರ್ಮರಾಜಂ ಸಹಾನುಜಃ |
ತೀವ್ರಶೋಕಸಮಾಯುಕ್ತೋ ಬಾಷ್ಪಪರ್ಯಾಕುಲೇಕ್ಷಣಃ ||39||
ಹೀಗೆ ನಾರದಮುನಿಯು ಹೇಳಿದಾಗ ಸಹೋದರರರೊಂದಿಗೆ ಕೂಡಿದ ಧರ್ಮರಾಜನು ತೀವ್ರವಾದ ಶೋಕಕ್ಕೆ ತುತ್ತಾಗಿ ಕಣ್ಣೀರಿನಿಂದ ವ್ಯಾಕುಲನಾದನು.
ಭೀಮಸೇನಾದಯಃ ಸರ್ವೇ ತೀವ್ರಶೋಕೇನ ದುಃಖಿತಾಃ |
ವಿಸಂಜ್ಞಾಂ ತೇ ಗತಾ ಸರ್ವೇ ಪೇತುಃ ಸರ್ವೇ ಮಹೀತಳೇ ||40||
ಭೀಮಸೇನನೇ ಮೊದಲಾದ ಎಲ್ಲರೂ ತೀವ್ರವಾದ ಶೋಕದಿಂದ ದುಃಖಿತರಾದರು. ಆ ಎಲ್ಲರೂ ಮೂರ್ಛೆಗೊಂಡವರಾಗಿ ಭೂಮಿಯಲ್ಲಿ ಬಿದ್ದುಬಿಟ್ಟರು.
ಅಂತಃಪುರಾಣಾಂ ಚ ತದಾ ಮಹಾನಾರ್ತಸ್ವರೋಽಭವತ್ |
ಪೌರಾಣಾಂ ಚ ಮಹಾರಾಜ ಶ್ರುತ್ವಾ ರಾಜ್ಞಸ್ತದಾ ಗತಿಮ್ ||41||
ಹೇ ಮಹಾರಾಜನೇ, ಧೃತರಾಷ್ಟ್ರನಿಗಾದ ಈ ಗತಿಯನ್ನು ಕೇಳಿ ಅಂತಃಪುರ ಸ್ತ್ರೀಯರಿಗೂ, ಪೌರರಿಗೂ ಬಹುದುಃಖವಾಗಿ ಅವರ ಆರ್ತಸ್ವರವೂ ಆಗ ಕೇಳಿಬಂದಿತು.
ಅಹೋ ಧಿಗಿತಿ ರಾಜಾ ತು ವಿಕ್ರುಶ್ಯ ಭೃಶದುಃಖಿತಃ |
ಊರ್ಧ್ವಬಾಹುಃ ಸ್ಮರನ್ ಮಾತುಃ ಪುರುರೋದ ಯುಧಿಷ್ಠಿರಃ ||42||
ರಾಜನಾದ ಯುಧಿಷ್ಠಿರನಾದರೂ ಬಹಳ ದುಃಖಗೊಂಡವನಾಗಿ ತಾಯಿಯ ಸ್ಮರಣೆಯನ್ನು ತಂದುಕೊಂಡು `ಅಯ್ಯೋ ಕಷ್ಟವೇ' ಎಂದು ಜೋರಾಗಿ ಕಿರುಚಿ ಕೈಯೆತ್ತಿಕೊಂಡು ಅಳತೊಡಗಿದನು.
ಭೀಮಸೇನಪುರೋಗಾಶ್ಚ ಭ್ರಾತರಃ ಸರ್ವ ಏವ ತೇ |
ರುರುದುರ್ದುಃಖಸಂತಪ್ತಾ ವರ್ಣಯಂತಃ ಪೃಥಾಂ ತದಾ ||43||
ಭೀಮಸೇನನೇ ಮೊದಲಾದ ಎಲ್ಲ ಆ ಸಹೋದರರು ದುಃಖದಿಂದ ಸಂತಪ್ತರಾಗಿ ಕುಂತಿಯನ್ನು ವರ್ಣಿಸುತ್ತಾ ಜೋರಾಗಿ ಅತ್ತುಬಿಟ್ಟರು.

ಅಂತಃಪುರೇಷು ಚ ತದಾ ಸುಮಹಾನ್-ರುದಿತಸ್ವನಃ |
ಪ್ರಾದುರಾಸೀನ್ಮಹಾರಾಜ ಪೃಥಾಂ ಶ್ರುತ್ವಾ ತಥಾಗತಾಮ್ ||44||
ಅವರೆಲ್ಲರೂ ಕುಂತಿಯ ಬಗ್ಗೆ ಹೇಳುವುದನ್ನು ಕೇಳಿದ ಮೇಲಂತೂ ಅಂತಃಪುರದಲ್ಲಿರುವ ಎಲ್ಲರಿಗೂ ದುಃಖ ಉಮ್ಮಳಿಸಿ ಬಂದು ಬಹುದೊಡ್ಡ ಆರ್ತನಾದವು ಆರಂಭವಾಯಿತು.
ತಂ ಚ ವೃದ್ಧಂ ತಥಾ ದಗ್ಧಂ ಹತಪುತ್ರಂ ನರಾಧಿಪಮ್ |
ಅನ್ವಶೋಚಂತ ತೇ ಸರ್ವೇ ಗಾಂಧಾರೀಂ ಚ ತಪಸ್ವಿನೀಮ್ ||45||
ಮಕ್ಕಳನ್ನು ಕಳೆದುಕೊಂಡ ವೃದ್ಧನಾದ ನರಾಧಿಪತಿಯು ಹಾಗೂ ತಪಸ್ವಿನಿಯಾದ ಗಾಂಧಾರಿಯು ಹೀಗೆ ಕಾಡ್ಗಿಚ್ಚಿನಲ್ಲಿ ಸುಟ್ಟುಹೋದುದನ್ನು ಕೇಳಿ ಆ ಎಲ್ಲರೂ ಮತ್ತೆ ಮತ್ತೆ ದುಃಖಿಸಿದರು.
ತಸ್ಮಿನ್ನುಪರತೇ ಶಬ್ದೇ ಮುಹೂರ್ತಾದಿವ ಭಾರತ |
ನಿಗೃಹ್ಯ ಬಾಷ್ಪಂ ಧೈರ್ಯೇಣ ಧರ್ಮರಾಜೋಽಬ್ರವೀದಿದಮ್ ||46||
ಹೇ ಭಾರತನೇ, ಸ್ವಲ್ಪ ಕಾಲದ ನಂತರ ಆ ಎಲ್ಲ ಅಳುವ ಶಬ್ದವು ನಿಂತಮೇಲೆ ಧರ್ಮರಾಜನು ಧೈರ್ಯದಿಂದ ಕಣ್ಣೀರನ್ನು ತಡೆದುಕೊಂಡು ಹೀಗೆಂದನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಆಶ್ರಮವಾಸಿಕಪರ್ವಣಿ ಯುಧಿಷ್ಠಿರನಾರದಸಮಾಗಮೇ ಧೃತರಾಷ್ಟ್ರಗಾಂಧಾರ್ಯಾದೀನಾಂ ಸ್ವರ್ಗಾರೋಹಣಂ ಶ್ರುತ್ವಾ ಪಾಂಡವಾನಾಂ ಶೋಕಕಥನಂ

ನಾಮ ತ್ರಿಚತ್ವಾರಿಂಶೋಽಧ್ಯಾಯಃ ॥
॥ ನಾರದಾಗಮನಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಆಶ್ರಮವಾಸಿಕಪರ್ವದಲ್ಲಿ ನಲವತ್ಮೂರನೆಯ ಅಧ್ಯಾಯ ಮುಗಿಯಿತು.
॥ ಸಮಾಪ್ತಂ ನಾರದಾಗಮನಪರ್ವ ॥
॥ ಸಮಾಪ್ತಮಾಶ್ರಮವಾಸಿಕಪರ್ವ ॥
* * * * *
॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥
ಮಹಾಭಾರತ
ಮೌಸಲಪರ್ವ
ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ತತಃ ಕುರುಕ್ಷೇತ್ರಮವಾಪ್ಯ ಕೃಷ್ಣೋ
ದೀಕ್ಷಾಂ ಪ್ರಪೇದೇ ದ್ವಿಷಡಬ್ದಸತ್ರೇ ।
ಸ ಏವ ಚ ವ್ಯಾಸಭೃಗೂದ್ವಹಾತ್ಮಾ
ಚಕ್ರೇಽತ್ರ ಸಾದಸ್ಯಮಜೋಽಪ್ರಮೇಯಃ ॥
ಬಳಿಕ ಶ್ರೀಕೃಷ್ಣ ಕುರುಕ್ಷೇತ್ರಕ್ಕೆ ಹೋಗಿ, ಹನ್ನೆರಡು ವರ್ಷಗಳ ಸತ್ರದಲ್ಲಿ ದೀಕ್ಷಾ ಬದ್ಧನಾದನು. ಅಪ್ರಮೇಯನಾದ ಅವನೇ ವೇದವ್ಯಾಸ, ಪರಶುರಾಮ ರೂಪಗಳಿಂದ ಸದಸ್ಯಕರ್ಮವನ್ನೂ ನಿರ್ವಹಿಸಿದನು.
ತತ್ರರ್ತ್ವಿಜೋ ದಕ್ಷಭೃಗುಪ್ರಧಾನಾಃ
ಪಾರ್ಥಾ ಯದೂನಾಂ ಪ್ರವರೈಃ ಸಮೇತಾಃ ।
ಬ್ರಹ್ಮೇಶಶಕ್ರಪ್ರಮುಖಾಃ ಸುರಾಶ್ಚ
ಚಕ್ರುಃ ಸುಸಾಚಿವ್ಯಮನಂತದಾಸಾಃ ॥
ಆ ಯಜ್ಞದಲ್ಲಿ ದಕ್ಷ-ಭೃಗು ಮುಂತಾದ ಋತ್ವಿಜರೂ, ಯಾದವ ಶ್ರೇಷ್ಠರೂ, ಪಾಂಡವರೂ, ಬ್ರಹ್ಮ-ರುದ್ರ-ಇಂದ್ರ ಮೊದಲಾದ ದೇವತೆಗಳೂ ಎಲ್ಲರೂ ಶ್ರೀಹರಿಯ ದಾಸರಾದ ಪ್ರಯುಕ್ತ ಬಹಳ ಸಹಾಯಗೈದರು.
ಸರ್ವೇ ಚ ಜೀವಾ ವಸುಧಾತಳಸ್ಥಾ
ಯೇಽನ್ಯೇಽಂತರಿಕ್ಷದ್ಯುಮುಖೋತ್ತರೇಷು ।
ವಸಂತಿ ನಾರಾಯಣಪಾದಸಂಶ್ರಯಾ-
ಸ್ತೇ ಚಾತ್ರ ಸರ್ವೇ ಮುಮುದುಃ ಸನಾಗಾಃ ॥
ಭೂತಲದಲ್ಲಿದ್ದ ಎಲ್ಲ ಜೀವರೂ, ಬೇರೆ ಅಂತರಿಕ್ಷ-ಸ್ವರ್ಗ ಮುಂತಾದ ಮೇಲಿನ ಲೋಕಗಳಲ್ಲಿ ಯಾರು ವಾಸ ಮಾಡುವರೋ ಅವರೂ, ಪಾತಾಳವಾಸಿಗಳಾದ ನಾಗರೂ, ನಾರಾಯಣನ ಪಾದಗಳನ್ನು ಆಶ್ರಯಿಸಿದ ಎಲ್ಲರೂ ಈ ಯಜ್ಞದಲ್ಲಿ ಸೇರಿ ಸಂತೋಷಗೊಂಡರು.
ಸುನಿರ್ಣಯಸ್ತತ್ವವಿನಿರ್ಣಯಾರ್ಥಿನಾಂ
ತತ್ವಸ್ಯ ಚಾಭೂದಿಹ ವಾದಶೀಲಿನಾಮ್ ।
ಮಿಥೋ ವಿವಾದಾತ್ ಸುರಭೂಸುರಾಣಾಂ
ವಾಕ್ಯಾದ್ಧರೇರ್ವ್ಯಾಸಭೃಗೂದ್ವಹಾತ್ಮನಃ ॥
ದೇವತೆಗಳೊಳಗೆ ಪರಸ್ಪರವಾಗಿಯೂ ಮುನಿಗಳೊಳಗೆ ಪರಸ್ಪರವಾಗಿಯೂ ನಡೆದ ವಾಕ್ಯಾರ್ಥಗೋಷ್ಠಿಗಳಿಂದ ಮತ್ತು ವ್ಯಾಸ-ಪರಶುರಾಮರೂಪನಾದ ಹರಿಯ ಮಾತುಗಳಿಂದ ವಾದಶೀಲರಾಗಿ ತತ್ವನಿರ್ಣಯವನ್ನು ಬಯಸುವ ಜನರಿಗೆ ಈ ಯಜ್ಞದಲ್ಲಿ ಒಳ್ಳೆಯ ತತ್ವನಿರ್ಣಯವಾಯಿತು.
ಧರ್ಮಾರ್ಥಕಾಮಾನಖಿಲಾನವಾಪು-
ಸ್ತದರ್ಥಿನೋ ಮುಕ್ತಿಮಪೀಹ ಕೃಷ್ಣಾತ್ ।
ಯಥೇಷ್ಟಪಾನಾಶನವಾಸಸೋ ಜನಾ
ವಿಚೇರುರತ್ರಾಮರಮಾನವಾದಯಃ ॥
ಈ ಯಜ್ಞದಲ್ಲಿ ಧರ್ಮಾರ್ಥಕಾಮಗಳನ್ನು ಬಯಸುವವರು ಅವೆಲ್ಲವನ್ನೂ ಕೃಷ್ಣನಿಂದ ಪಡೆದರು. ಮೋಕ್ಷಾರ್ಥಿಗಳು ಮೋಕ್ಷವನ್ನೂ ಕೃಷ್ಣನಿಂದ ಪಡೆದರು. ದೇವತೆಗಳು ಮನುಷ್ಯರು ಮುಂತಾದ ಜನರು ಯಥೇಷ್ಟ ಅನ್ನ-ಪಾನ, ವಸ್ತ್ರಗಳನ್ನು ಹೊಂದಿ ಸಂಚರಿಸಿದರು.
ಕ್ಷೇತ್ರಂ ತದಾಸೀದ್ಧರಿಲೋಕಸಮ್ಮಿತಂ
ಯದೀಯುರತ್ರಾಖಿಲಸಜ್ಜನಾ ಯುತಿಮ್ ।
ನಾನಾಪ್ತಕಾಮಾಶ್ಚ ತತೋ ಬಭೂವು-
ರ್ನಿರ್ಯತ್ನದೃಶ್ಯಶ್ಚ ಯತೋಽತ್ರ ಕೇಶವಃ ॥
ಕುರುಕ್ಷೇತ್ರ ಆಗ ವಿಷ್ಣುಲೋಕಕ್ಕೆ ಸದೃಶವಾಗಿತ್ತು. ಏಕೆಂದರೆ ಇಲ್ಲಿ ಎಲ್ಲ ಸಜ್ಜನರೂ ಒಂದೆಡೆ ಸೇರಿದ್ದರು. ಯಾರೂ ತಮ್ಮ ಕಾಮನೆಗಳನ್ನು ಪೂರೈಸಿಕೊಳ್ಳದಿದ್ದವರು ಇಲ್ಲಿ ಇರಲಿಲ್ಲ. ಮತ್ತು ಇಲ್ಲಿ ಕೃಷ್ಣನು ಏನೂ ಪ್ರಯಾಸವಿಲ್ಲದೆ ಕಣ್ಣಿಗೆ ಕಾಣಿಸಿಕೊಳ್ಳುತ್ತಿದ್ದನು.
ದ್ವಾದಶಾಬ್ದಂ ಮಹಾಸತ್ರಮೇವಮೇತಾದೃಶಂ ಹರಿಃ ।

ಸಮಾಪ್ಯಾವಭೃಥಸ್ನಾತಃ ಪೂಜಯಿತ್ವಾಽಖಿಲಾನ್ ಜನಾನ್ ॥
ಅನುಜಜ್ಞೇ ಕ್ರಮೇಣೈವ ವತ್ಸರೇಣ ಸಮಾಗತಾನ್ |
ಸ್ವಕುಲಂ ಸಂಜಿಹೀರ್ಷುಃ ಸ ವಿಪ್ರಶಾಪಮಜೀಜನತ್ ॥
ಹನ್ನೆರಡು ವರ್ಷಗಳ ಮಹಾಸತ್ರವನ್ನು ಶ್ರೀಕೃಷ್ಣನು ಹೀಗೆ ಇದೇ ರೀತಿಯಲ್ಲಿ ಮಾಡಿ ಮುಗಿಸಿ, ಅವಭೃಥ ಸ್ನಾನ ಮಾಡಿ, ಎಲ್ಲ ಜನರನ್ನೂ ಸತ್ಕರಿಸಿ, ಬಂದಿರುವವರೆಲ್ಲರನ್ನೂ ಕ್ರಮವಾಗಿ ಒಂದು ವರ್ಷದಲ್ಲಿ ಹಿಂದೆ ಕಳಿಸಿಕೊಟ್ಟನು. ತನ್ನ ಕುಲವನ್ನು ಸಂಹರಿಸಲು ಬಯಸಿ ಬ್ರಾಹ್ಮಣ ಶಾಪವನ್ನು ಉಂಟು ಮಾಡಿದನು.
ಉಪದಿಶ್ಯ ಪರಂ ಜ್ಞಾನಮುದ್ಧವಾಯಾಮುಮಾಶ್ರಮಮ್ |
ಬದರ್ಯಾಖ್ಯಂ ಪ್ರಾಪಯಿತ್ವಾ ಸಪ್ತಮಾಬ್ದಂ ಶತೋತ್ತರಮ್ ॥
ಪ್ರತೀಕ್ಷನ್ ಪಾಲಯಾಮಾಸ ಪಾರ್ಥೈಃ ಸಹ ಭುವಂ ಪ್ರಭುಃ |
ಸಮಾರಬ್ಧಂ ಕಲಿಯುಗಂ ಯದಾ ದುರ್ಯೋಧನೋಽಪತತ್ |
ಷಟ್‌ತ್ರಿಂಶಾಬ್ದಂ ಪುನಃ ಕೃಷ್ಣಃ ಕೃತಮೇವಾನ್ವವರ್ತಯತ್ ॥
ಶ್ರೀಕೃಷ್ಣನು ಉದ್ಧವನಿಗೆ ಉತ್ತಮ ಜ್ಞಾನವನ್ನು ಉಪದೇಶಿಸಿ, ಬದರಿಕಾಶ್ರಮಕ್ಕೆ ಕಳಿಸಿ, ತನ್ನ ಅವತಾರಸಮಾಪ್ತಿಗಾಗಿ ನೂರೇಳನೇ ವರ್ಷವನ್ನು ಪ್ರತೀಕ್ಷಿಸಿ, ಪಾಂಡವರೊಂದಿಗೆ ಭೂಮಿಯನ್ನು ಆಳಿದನು. ಯಾವಾಗ ದುರ್ಯೋಧನನು ಪತನ ಹೊಂದಿದನೋ ಆಗಲೇ ಕಲಿಯುಗ ಪ್ರಾರಂಭವಾಯಿತು. ಆದರೆ ಶ್ರೀಕೃಷ್ಣನು ಪುನಃ ಮೂವತ್ತಾರು ವರ್ಷ ಕೃತಯುಗವನ್ನೇ ನಡೆಸಿದನು.
ಕೃತಾದಪಿ ವಿಶೇಷೋಽಯಂ ಯತ್ಪುಣ್ಯಸ್ಯಾಧಿಕಂ ಫಲಮ್ |
ಅಲ್ಪಮೇವ ಚ ಪಾಪಸ್ಯ ಕಾಲಾತ್ ಕೃಷ್ಣಾಜ್ಞಯಾ ತಥಾ ॥
ಕಲಿಯುಗಸ್ವಭಾವದಿಂದ ಮತ್ತು ಶ್ರೀಕೃಷ್ಣನ ಸಂಕಲ್ಪದಿಂದ ಪುಣ್ಯಕರ್ಮಕ್ಕೆ ಅಧಿಕ ಫಲ. ಪಾಪಕರ್ಮಕ್ಕೆ ಅಲ್ಪ ಫಲವಾದ್ದರಿಂದ ಈ ಮೂವತ್ತಾರು ವರ್ಷಗಳ ಕಾಲ ಕೃತಯುಗಕ್ಕಿಂತಲೂ ಅಧಿಕವೆನಿಸಿತ್ತು.
ಏವಂ ಸುಧಾರ್ಮಿಕೇ ಲೋಕೇ ಹರಿಭಕ್ತಿಪರಾಯಣೇ |
ನಷ್ಟೇಷು ಕಲಿಲಿಂಗೇಷು ಯುಗವೃತ್ತಿಮಭೀಪ್ಸವಃ ॥
ಬ್ರಹ್ಮರುದ್ರಾದಯೋ ದೇವಾಃ ಸ್ತುತ್ವಾ ಕೇಶವಮವ್ಯಯಮ್ |
ವ್ಯಜ್ಞಾಪಯನ್ ಸ್ವಲೋಕಾಪ್ತಿಮೋಮಿತ್ಯಾಹ ಸ ಚಾಚ್ಯುತಃ ॥
ಹೀಗೆ ಲೋಕವು ಬಹಳ ಧರ್ಮನಿರತವಾಗಿದ್ದು ಹರಿಭಕ್ತಿಯಲ್ಲಿ ಆಸಕ್ತವಾದಾಗ ಕಲಿಯುಗದ ಲಕ್ಷಣಗಳು ಮರೆಯಾದಾಗ, ಕಲಿಯುಗದ ಪ್ರವೃತ್ತಿಯಾಗಬೇಕೆಂದು ಬಯಸಿದ ಬ್ರಹ್ಮ-ರುದ್ರಾದಿ ದೇವತೆಗಳು ಅವ್ಯಯನಾದ ಶ್ರೀಕೃಷ್ಣನನ್ನು ಸ್ತುತಿಸಿ, ತನ್ನ ಲೋಕಕ್ಕೆ ಹಿಂದಿರುಗಿ ಬರಬೇಕೆಂದು ವಿಜ್ಞಾಪಿಸಿದರು. ಕೃಷ್ಣನೂ ಆಗಲಿ ಎಂದನು.
ಪ್ರಾಚುರ್ಯೇ ಸಜ್ಜನಸ್ಯ ಸ್ಯಾನ್ನ ಕಲೇರ್ವೃದ್ಧಿರಂಜಸಾ |
ಇತಿ ಸ್ವಕುಲಸಂಹೃತ್ಯೈ ಪ್ರಭಾಸಮನಯತ್ ಪ್ರಭುಃ ॥
ಸಜ್ಜನರೇ ಭೂಮಿಯ ಮೇಲೆ ಅಧಿಕರಾದರೆ ಕಲಿಕಾಲದ ವಿಜೃಂಭಣೆ ಸರಿಯಾಗಿ ಆಗಲಾರದು ಎಂದು ಶ್ರೀಕೃಷ್ಣನು ತನ್ನ ಕುಲವನ್ನು ಸಂಹರಿಸಲು ಪ್ರಭಾಸಕ್ಕೆ ಕರೆದುಕೊಂಡು ಹೋದನು.
ಪುಣ್ಯಕ್ಷೇತ್ರೇಽಪಿ ನ ಮೃತಿಃ ಸ್ವಗೃಹೇ ತ್ವತಿಧರ್ಮದಾ |
ಗತ್ವೈವಾಲ್ಪಮಪಿ ಕ್ಷೇತ್ರಂ ಸ್ಯಾನ್ಮಹತ್ಫಲಮಿತ್ಯಜಃ ॥
ಪ್ರಕಾಶಯಿತುಮೇವೈತಾನ್ ಪ್ರಭಾಸಾಯ ಕುಶಸ್ಥಲಾ |
ನೀತ್ವಾ ದಾನಾದಿಸದ್ಧರ್ಮಾಂಸ್ತೈರಕಾರಯದಚ್ಯುತಃ ॥
ಪುಣ್ಯಕ್ಷೇತ್ರದಲ್ಲಿಯೂ ಸ್ವಗೃಹದಲ್ಲಿ ಮರಣ ಹೊಂದುವುದು ಹೆಚ್ಚು ಪುಣ್ಯದಾಯಕವಲ್ಲ. ಅಲ್ಪವಾಗಿದ್ದರೂ ಬೇರೆಯೇ ಆದ ಕ್ಷೇತ್ರಕ್ಕೆ ಹೋದರೆಯೇ ಮಹಾಫಲ. ಇನ್ನು ಅಲ್ಲಿಯೇ ಮರಣ ಹೊಂದಿದರೆ ಏನು ಹೇಳಬೇಕು? ಎಂದು ತಿಳಿಸಲು ಶ್ರೀಕೃಷ್ಣನು ಯಾದವರನ್ನು ಕುಶಸ್ಥಲದಿಂದ ಪ್ರಭಾಸಕ್ಕೆ ಒಯ್ದು, ಅಲ್ಲಿ ಒಳ್ಳೆಯ ದಾನಧರ್ಮ ಕಾರ್ಯಗಳನ್ನು ಮಾಡಿಸಿದನು.
ತೇ ತತಃ ಶಾಪದೋಷೇಣ ಕೃಷ್ಣೇನೈವ ವಿಮೋಹಿತಾಃ |
ಮೈರೇಯಮತ್ತಾ ಅನ್ಯೋನ್ಯಂ ನಿಪಾತ್ಯ ಸ್ವಂ ತನೂಂ ಗತಾಃ ॥
ತದ್ ದೃಷ್ಟ್ವಾ ಬಲದೇವೋಽಪಿ ಯೋಗೇನ ಸ್ವಾಂ ತನು ಜಹೌ ॥
ಯಾದವರು ಬಳಿಕ ಶಾಪದೋಷದಿಂದ ಕೃಷ್ಣನಿಂದಲೇ ಮೋಹಪರವಶರಾದರು. ಮದ್ಯಪಾನದಿಂದ ಮತ್ತರಾಗಿ ಪರಸ್ಪರ ಸಂಹರಿಸಿ ತಮ್ಮ ನಿಜಸ್ವರೂಪವನ್ನು ಪಡೆದರು. ಅದನ್ನು ನೋಡಿ ಬಲರಾಮನೂ ಯೋಗದಿಂದ ತನ್ನ ಶರೀರವನ್ನು ಪರಿತ್ಯಜಿಸಿದನು. ಮೂಲರೂಪವನ್ನು ಪಡೆದನು.
* * * * *

ಒಂದನೆಯ ಅಧ್ಯಾಯ

ಪ್ರಜೆಗಳನ್ನು ರಕ್ಷಿಸುತ್ತಾ ತನ್ನ ಪಟ್ಟಣದಲ್ಲಿ ಸಹೋದರರೊಂದಿಗೆ ಸುಖವಾಗಿದ್ದ ಯುಧಿಷ್ಠಿರನು ಒಂದು ಬಾರಿ ಅಶುಭಸೂಚಕವಾದ ನಿಮಿತ್ತಗಳನ್ನು ನೋಡುವುದು. ಸ್ವಲ್ಪ ಕಾಲದ ನಂತರ ಬಲರಾಮ-ಕೃಷ್ಣರಿಂದ ಕೂಡಿದ ಎಲ್ಲ ಯಾದವರು ಪರಸ್ಪರವಾಗಿ ಮುಸಲದಿಂದ ಹೊಡೆದುಕೊಂಡು ಪೂರ್ಣವಾಗಿ ನಾಶರಾದರೆಂದು ಕೇಳಿ ತಿಳಿಯುವುದು.

ಜನಮೇಜಯಃ
ಮೋಕ್ಷಂ ಪ್ರಾಪ್ತೇಥ ವಿದುರೇ ಧೃತರಾಷ್ಟ್ರೇ ದಿವಂ ಗತೇ |
ಸಂಜಯಾದೌ ಚ ಭಗವನ್ ಕಿಮಕುರ್ವತ ಪಾಂಡವ ॥1॥

ಜನಮೇಜಯ ಹೇ ಭಗವನ್, ವಿದುರನು ಮೋಕ್ಷವನ್ನು ಪಡೆದ ನಂತರ ಧೃತರಾಷ್ಟ್ರನೂ, ಸಂಜಯಾದಿಗಳೂ ದಿವಂಗತರಾದ ಮೇಲೆ, ಪಾಂಡುಪುತ್ರನಾದ ಯುಧಿಷ್ಠಿರನು ಏನು ಮಾಡಿದನು?
ವೈಶಂಪಾಯನಃ
ಷಟ್ತ್ರಿಂಶೇ ವತ್ಸರೇ ಪ್ರಾಪ್ತೇ ತದಾ ಕೌರವನಂದನಃ |
ದದರ್ಶ ವಿಪರೀತಾನಿ ನಿಮಿತ್ತಾನಿ ಯುಧಿಷ್ಠಿರಃ ||2||
ವೈಶಂಪಾಯನ ಕುರುನಂದನನಾದ ಯುಧಿಷ್ಠಿರನು ರಾಜ್ಯಭಾರವನ್ನು ಸ್ವೀಕಾರ ಮಾಡಿ ಮೂವತ್ತಾರನೆಯ ವರ್ಷವು ಪ್ರಾಪ್ತವಾದಾಗ ಅಶುಭ ಸೂಚಕವಾದ ವಿಪರೀತ ನಿಮಿತ್ತಗಳನ್ನು ಕಂಡನು.
ವವುರ್ವಾತಾಶ್ಚ ನಿರ್ಘಾತಾ ರೂಕ್ಷಾಃ ಶಕಲವರ್ಷಿಣಃ |
ಅಪಸವ್ಯಾನಿ ಶಕುನಾ ಮಂಡಲಾನಿ ಪ್ರಚಕ್ರಿರೇ ||3||
ಕಲ್ಲು-ಮರಳುಗಳೊಂದಿಗೆ ಕೂಡಿದ ಒಣಗಾಳಿಯು ಜೋರಾಗಿ ಬೀಸುತ್ತಾ ಪರಸ್ಪರ ಹೊಡೆದುಕೊಂಡು ಶಬ್ದವನ್ನೆಬ್ಬಿಸತೊಡಗಿತು. ಪಕ್ಷಿಗಳು ಅಪ್ರದಕ್ಷಿಣೆಯಾಗಿ ಗುಂಪಾಗಿ ಸುತ್ತುಬರತೊಡಗಿದವು.
ಪ್ರತ್ಯಗೂಹುರ್ಮಹಾನದ್ಯೋ ದಿಶೋ ನೀಹಾರಸಂವೃತಾಃ |
ಉಲ್ಕಾಶ್ಚಾಂಗಾರವರ್ಷಿಣ್ಯಃ ಪ್ರಾಪತನ್ ಗಗನಾದ್ ಭುವಿ ||4||
ಮಹಾನದಿಗಳು ವಿರುದ್ಧ ದಿಕ್ಕಿನಲ್ಲಿ ಹರಿಯತೊಡಗಿದವು. ದಿಕ್ಕುಗಳಲ್ಲಿ ದಟ್ಟವಾದ ಮಂಜು ಮುಸುಕಿತು. ಆಕಾಶದಿಂದ ಕೆಂಡದ ಮಳೆಗಳನ್ನು ಸುರಿಸುತ್ತಾ ಉಲ್ಕೆಗಳು ಭೂಮಿಯಲ್ಲಿ ಬಿದ್ದವು.
ಆದಿತ್ಯೋ ರಜಸಾ ರಾಜನ್ ಸಮವಚ್ಛನ್ನಮಂಡಲಃ |
ವಿರಶ್ಮಿರುದಯೇ ನಿತ್ಯಂ ಕಬಂಧೈಃ ಸಮಲಂಕೃತಃ ||5||
ಹೇ ರಾಜನೇ, ಸೂರ್ಯನು ಧೂಳಿನಿಂದ ಪೂರ್ಣವಾಗಿ ಮುಚ್ಚಿಹೋದ ಬಿಂಬವುಳ್ಳವನಾದನು. ಅಲ್ಲದೇ ನಿತ್ಯವೂ ಉದಯಕಾಲದಲ್ಲಿ ಧೂಮಕೇತುಗಳಿಂದ ಸುತ್ತುವರಿಯಲ್ಪಟ್ಟು ಕಿರಣಗಳಿಲ್ಲದವನಾದನು.
ಪರಿವೇಷಾಶ್ಚ ದೃಶ್ಯಂತೇ ದಾರುಣಾಶ್ಚಂದ್ರಸೂರ್ಯಯೋಃ |
ತ್ರಿವರ್ಣಾಃ ಶ್ಯಾಮರೂಕ್ಷಾಂತಾಸ್ತಥಾ ಭಸ್ಮಾರುಣಪ್ರಭಾಃ ||6||
ಚಂದ್ರ ಹಾಗೂ ಸೂರ್ಯರಿಬ್ಬರಿಗೂ ದಾರುಣವಾದ ಹೊರಮಂಡಲಗಳು ಕಾಣುತ್ತಿದ್ದವು. ಆ ಪರಿಧಿಗಳು ಹೊರಭಾಗದಲ್ಲಿ ಕಠೋರವಾದ ಕಪ್ಪು ಬಣ್ಣದಿಂದಲೂ, ಮಧ್ಯದಲ್ಲಿ ಬೂದು ಬಣ್ಣ ಹಾಗೂ ಕೆಂಪು ಬಣ್ಣದ ಪ್ರಭೆಗಳಿಂದಲೂ ಕೂಡಿದ್ದು ಮೂರು ವರ್ಣದವುಗಳಾಗಿದ್ದವು.
ಏತೇ ಚಾನ್ಯೇ ಚ ಬಹವ ಉತ್ಪಾತಾ ಭಯಶಂಸಿನಃ |
ದೃಶ್ಯಂತೇ ಜಗತೋ ನಾಥೇ ದಿವಮಾರೋಢುಮಿಚ್ಛತಿ ||7||
ಯಸ್ಯ ಪ್ರಸಾದಾದ್ ಧರ್ಮೋಽಯಂ ಕೃತೇ ಯದ್ವತ್ ಕಲಾವಪಿ |
ಪಾಂಡವಾಶ್ಚ ಮಹಾಭಾಗ ಯುಕ್ತಾಸ್ತು ಯಶಸಾಽನಘ ||8||
ಹೇ ಮಹಾಭಾಗನೇ, ಅನಘನೇ, ಯಾರ ಪ್ರಸಾದದಿಂದ ಕೃತಯುಗದಲ್ಲಿ ಹೇಗೋ ಹಾಗೆ ಈ ಕಲಿಕಾಲದಲ್ಲಿ ಧರ್ಮವು ನಿಂತಿರುವುದೋ, ಅಲ್ಲದೇ ಪಾಂಡವರೂ ಯಶಸ್ಸಿನಿಂದ ಕೂಡಿರುವರೋ ಅಂತಹ ಜಗನ್ನಾಥನಾದ ಕೃಷ್ಣನು ಸ್ವರ್ಗವನ್ನೇರಲು ಬಯಸಿದಾಗ ಈ ಹಿಂದೆ ಹೇಳಿದ, ಅಲ್ಲದೆ ಭಯವನ್ನುಂಟು ಮಾಡುವ ನಾನಾ ರೀತಿಯ ಬೇರೆ ಉತ್ಪಾತಗಳೂ ತೋರಿದವು.
ಕಸ್ಯಚಿತ್ತ್ವಥ ಕಾಲಸ್ಯ ಕುರುರಾಜೋ ವಿಶಂಕಿತಃ |
ಶುಶ್ರಾವ ವೃಷ್ಣಿಚಕ್ರಸ್ಯ ಮುಸಲೋತ್ಸಾದನಂ ಕೃತಮ್ ||9||
ಹೀಗೆ ಕುರುರಾಜನಾದ ಯುಧಿಷ್ಠಿರ ಉತ್ಪಾತಗಳಿಂದ ಕಳವಳಗೊಂಡಿದ್ದಾಗಲೇ ಸ್ವಲ್ಪ ಕಾಲ ಕಳೆದ ನಂತರ ಯಾದವರ ಸಮೂಹವು ಒನಕೆಯಿಂದ ನಾಶವಾಯಿತೆಂದು ಕೇಳಿದನು.
ವಿಮುಕ್ತಂ ವಾಸುದೇವಂ ಚ ಶ್ರುತ್ವಾ ರಾಮಂ ಚ ಪಾಂಡವಃ |
ಸಮಾನೀಯಾಬ್ರವೀದ್ ಭ್ರಾತೄನ್ ಕಿಂ ಕರಿಷ್ಯಾಮ ಇತ್ಯುತ ||10||
ಅಲ್ಲದೆ ವಾಸುದೇವನು ಈ ಜಗತ್ತನ್ನು ಬಿಟ್ಟು ಹೋದುದನ್ನಾಗಿಯೂ, ರಾಮನೂ ಜಗತ್ತಿನಿಂದ ಹೊರಟು ಹೋದನೆಂದು ಕೇಳಿ ಆ ಪಾಂಡುಪುತ್ರನು ಸಹೋದರರನ್ನು ಕರೆಸಿ, ಮುಂದೇನು ಮಾಡೋಣ? ಎಂದು ಕೇಳಿದನು.
ಪರಸ್ಪರಂ ಸಮಾಸಾದ್ಯ ಬ್ರಹ್ಮದಂಡಬಲಾತ್ ಕೃತಾನ್ |
ವೃಷ್ಣೀನ್ ವಿನಷ್ಟಾಂಸ್ತೇ ಶ್ರುತ್ವಾ ವ್ಯಥಿತಾಃ ಪಾಂಡವಾ ಭೃಶಮ್ ||11||
ಹೀಗೆ ಪರಸ್ಪರ ಮಾತನಾಡಿಕೊಂಡು, ಗೊತ್ತಿರುವವರನ್ನು ಸಂಪರ್ಕಿಸಿ, ಬ್ರಹ್ಮಶಾಪದ ಬಲದಿಂದ ಪ್ರಚೋದಿತರಾಗಿ ವೃಷ್ಣಿಗಳು ನಾಶವಾದರೆಂದು ಕೇಳಿ ಆ ಪಾಂಡವರು ಬಹಳವಾಗಿ ವ್ಯಥೆಗೊಂಡರು.
ನಿಧನಂ ವಾಸುದೇವಸ್ಯ ಸಮುದ್ರಸ್ಯೇವ ಶೋಷಣಮ್ |
ವೀರಾ ನ ಶ್ರದ್ದಧುಸ್ತಸ್ಯ ವಿನಾಶಂ ಶಾರ್ಙ್ಗಧನ್ವನಃ ||12||
ವೀರರಾದ ಅವರು ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದ ವಾಸುದೇವನ ಮರಣವೆಂಬ ವಿನಾಶವನ್ನು, ಸಮುದ್ರವು ಒಣಗಿತೆಂಬಂತೆ ವಿಶ್ವಾಸವಿಲ್ಲದವರಾದರು.
ಮೌಸಲಂ ತೇ ಸಮಾಶ್ರಿತ್ಯ ದುಃಖಶೋಕಸಮನ್ವಿತಾಃ |
ವಿಷಣ್ಣಾ ಹತಸಂಕಲ್ಪಾಃ ಪಾಂಡವಾಃ ಸಮುಪಾವಿಶನ್ ||13||
ಈ ಮೌಸಲಯುದ್ಧದ ಬಗ್ಗೆ ಸರಿಯಾಗಿ ವಿಮರ್ಶಿಸಿ ತಿಳಿದು, ದುಃಖ ಹಾಗೂ ಶೋಕದಿಂದ ಕೂಡಿದವರಾಗಿ ಸಂಕಲ್ಪಗಳನ್ನೇ

ಕಳೆದುಕೊಂಡು ವಿಷಣ್ಣರಾಗಿ ಕುಳಿತರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ವೃಷ್ಣೀನಾಂ ನಿಧನಂ ಶ್ರುತ್ವಾ ಪಾಂಡವಾನಾಂ ಚಿಂತಾ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ವೈಶಂಪಾಯನರು ಜನಮೇಜಯನಿಗೆ ಯಾದವರು ಮುಸಲದಿಂದ ಹತರಾದರೆಂಬ ಕಥೆಯನ್ನು ಹೇಳಲು ಆರಂಭಿಸುವುದು.
ವಿಶ್ವಾಮಿತ್ರಾದಿ ಮಹರ್ಷಿಗಳು ದ್ವಾರಕೆಗೆ ಆಗಮಿಸಿದಾಗ ಕೆಲವು ಯಾದವರು ಸಾಂಬನಿಗೆ ಸ್ತ್ರೀವೇಷವನ್ನು ತೊಡಿಸಿ, ಋಷಿಗಳಲ್ಲಿ ಈ ಗರ್ಭಿಣಿಯು ಎಂತಹ ಮಗುವನ್ನು ಹಡೆಯುತ್ತಾಳೆ ಎಂದು ಪ್ರಶ್ನಿಸುವುದು. ಆಗ ಕೋಪಗೊಂಡ ಮಹರ್ಷಿಗಳು ನಿಮ್ಮ ಕುಲವನ್ನು ನಾಶಮಾಡುವ ಕಬ್ಬಿಣದ ಒನಕೆಯನ್ನು ಹಡೆಯುತ್ತಾಳೆ ಎಂದು ಶಪಿಸುವುದು. ಮಾರನೆಯ ದಿನ ಸಾಂಬನು ಮುಸಲವನ್ನು ಹಡೆದಾಗ ಹೆದರಿದ ಅವರು ರಾಜನ ಆಜ್ಞೆಯಂತೆ ಆ ಮುಸಲವನ್ನು ಚೂರ್ಣೀಕರಿಸಿ ಸಮುದ್ರದಲ್ಲಿ ಎಸೆಯುವುದು.
ಜನಮೇಜಯಃ
ಕಥಂ ವಿನಷ್ಟಾ ಭಗವನ್ನಂಧಕಾ ವೃಷ್ಣಿಭಿಃ ಸಹ |
ಪಶ್ಯತೋ ವಾಸುದೇವಸ್ಯ ಭೋಜಾಶ್ಚೈವ ಮಹಾರಥಾಃ ॥1॥
ಜನಮೇಜಯ ಹೇ ಭಗವನ್, ಮಹಾರಥರಾದ ಅಂಧಕರು ಹಾಗೂ ಭೋಜರು ವೃಷ್ಣಿಗಳೊಂದಿಗೆ ವಾಸುದೇವನು ನೋಡುತ್ತಿದ್ದಂತೆಯೇ ಹೇಗೆ ವಿನಷ್ಟರಾದರು?
ವೈಶಂಪಾಯನಃ
ಷಟ್‌ತ್ರಿಂಶೇಽಥ ತತೋ ವರ್ಷೇ ವೃಷ್ಣೀನಾಮನಯೋಽಭವತ್ |
ಅನ್ಯೋನ್ಯಂ ಮೌಸಲೈಸ್ತೇ ತು ನಿಜಘ್ನುಃ ಕಾಲಚೋದಿತಾಃ ॥2॥
ವೈಶಂಪಾಯನ ಮೂವತ್ತಾರನೆಯ ವರ್ಷದಲ್ಲಿ ವೃಷ್ಣಿಗಳಿಗೆ ಮಹತ್ತಾದ ಆಪತ್ತು ಉಂಟಾಯಿತು. ಮುಸಲಕ್ಕೆ ಸಂಬಂಧಿಸಿದ ಶಾಪವೇ ಮೊದಲಾದವುಗಳಿಂದ ಕಾಲಚೋದಿತರಾದ ಅವರು ಪರಸ್ಪರ ಹೊಡೆದಾಡಿಕೊಂಡರು.
ಜನಮೇಜಯಃ
ಕೇನಾನುಶಪ್ತಾಸ್ತೇ ವೀರಾಃ ಕ್ಷಯಂ ವೃಷ್ಣ್ಯಂಧಕಾ ಗತಾಃ |
ಭೋಜಾಶ್ಚ ದ್ವಿಜವರ್ಯ ತ್ವಂ ವಿಸ್ತರೇಣ ವದಸ್ವ ಮೇ ॥3॥
ಜನಮೇಜಯ ಹೇ ದ್ವಿಜವರ್ಯನೇ, ವೀರರಾದ ವೃಷ್ಣಿಗಳು, ಅಂಧಕರು ಮತ್ತು ಭೋಜರು ಯಾರಿಂದ ಶಾಪಗ್ರಸ್ತರಾಗಿ ಕ್ಷಯವನ್ನೈದಿದರು? ಇದನ್ನು ನನಗೆ ವಿಸ್ತಾರವಾಗಿ ಹೇಳು.
ವೈಶಂಪಾಯನಃ
ವಿಶ್ವಾಮಿತ್ರಂ ಚ ಕಣ್ವಂ ಚ ನಾರದಂ ಚ ತಪೋಧನಮ್ |
ಸಾರಣಪ್ರಮುಖಾ ವೀರಾ ದದೃಶುರ್ದ್ವಾರಕಾಂ ಗತಾನ್ ॥4॥
ವೈಶಂಪಾಯನ ಸಾರಣನೇ ಮೊದಲಾದ ಯಾದವವೀರರು ದ್ವಾರಕಾ ಪಟ್ಟಣವನ್ನು ತಲುಪಿರುವ ವಿಶ್ವಾಮಿತ್ರರನ್ನೂ, ಕಣ್ವರನ್ನೂ, ತಪೋಧನರಾದ ನಾರದನನ್ನೂ ನೋಡಲು ಹೊರಟರು.
ತೇ ವೈ ಸಾಂಬಂ ಪುರಸ್ಕೃತ್ಯ ಭೂಷಯಿತ್ವಾ ಸ್ತ್ರಿಯಂ ಯಥಾ |
ಅಬ್ರುವನ್ನುಪಸಂಗಮ್ಯ ದೈವದಂಡನಿಪೀಡಿತಾಃ ॥5॥
ಅವರು ಕೃಷ್ಣಪುತ್ರನಾದ ಸಾಂಬನನ್ನು ಸ್ತ್ರೀವೇಷದಿಂದ ಅಲಂಕರಿಸಿ, ಅವನನ್ನು ಮುಂದೆ ಮಾಡಿಕೊಂಡು ದುರದೃಷ್ಟದಿಂದ ಪೀಡಿತರಾಗಿ, ಋಷಿಗಳ ಸಮೀಪಕ್ಕೆ ಬಂದು ಹೀಗೆ ಹೇಳಿದರು.
ಇಯಂ ಸ್ತ್ರೀ ಪುತ್ರಕಾಮಸ್ಯ ಬಭ್ರೋರಮಿತತೇಜಸಃ |
ಋಷಯಃ ಸಾಧು ಜಾನೀತ ಕಿಮಿಯಂ ಜನಯಿಷ್ಯತಿ ॥6॥
ಇವಳು ಮಕ್ಕಳ ಬಯಕೆಯುಳ್ಳ ಬಭ್ರುವೆಂಬ ರಾಜನ ಪತ್ನಿ. ಅಮಿತವಾದ ತೇಜಸ್ಸುಳ್ಳ ಋಷಿಗಳೇ, ನೀವು ಭೂತ-ಭವಿಷ್ಯತ್-ವರ್ತಮಾನಗಳನ್ನು ಚೆನ್ನಾಗಿ ತಿಳಿದಿರುವಿರಿ. ಯಾವ ಮಗುವನ್ನು ಇವಳು ಹಡೆಯುತ್ತಾಳೆ?
ಇತ್ಯುಕ್ತಾಸ್ತೇ ತದಾ ರಾಜನ್ ವಿಪ್ರಲಂಭಪ್ರಧರ್ಷಿತಾಃ |
ಪ್ರತ್ಯಬ್ರುವಂಸ್ತಾನ್ ಮುನಯೋ ಯತ್ತಚ್ಛೃಣು ನರಾಧಿಪ ॥7॥
ಹೇ ನರಾಧಿಪತಿಯಾದ ರಾಜನೇ, ಹೀಗೆ ಅವರು ಹೇಳಿದಾಗ ಮೋಸದಿಂದ ಕೋಪಗೊಂಡ ಆ ಮುನಿಗಳು ಯಾವ ರೀತಿ ಉತ್ತರಿಸಿದರೋ ಅದನ್ನು ಕೇಳು.
ವೃಷ್ಣ್ಯಂಧಕವಿನಾಶಾಯ ಮುಸಲಂ ಘೋರಮಾಯಸಮ್ |
ವಾಸುದೇವಸ್ಯ ದಾಯಾದಃ ಸಾಂಬೋಽಯಂ ಜನಯಿಷ್ಯತಿ ॥8॥
ವೃಷ್ಣಿ ಹಾಗೂ ಅಂಧಕರ ನಾಶಕ್ಕಾಗಿ ಘೋರವಾದ ಕಬ್ಬಿಣದ ಒನಕೆಯನ್ನು ವಾಸುದೇವನ ಸಂತತಿಯಾದ ಈ ಸಾಂಬನು ಪ್ರಸವಿಸುತ್ತಾನೆ.
ಯೇನ ಯೂಯಂ ಸುದುರ್ವೃತ್ತಾ ನೃಶಂಸಾ ಜಾತಮನ್ಯವಃ |
ಉಚ್ಛೇತ್ತಾರಃ ಕುಲಂ ಕೃತ್ಸ್ನಮೃತೇ ರಾಮಜನಾರ್ದನೌ ॥9॥
ಆ ಯಾವ ಒನಕೆಯಿಂದಲೇ ಬಹುದುರಾಚಾರಿಗಳಾದ, ಕ್ರೂರರಾದ ನೀವೆಲ್ಲರು ಬಲರಾಮ, ಕೃಷ್ಣರನ್ನು ಹೊರತು ಪಡಿಸಿ ಪರಸ್ಪರ

ಕೋಪಗೊಂಡವರಾಗಿ ಇಡೀ ಕುಲವನ್ನು ನಾಶ ಮಾಡುವಿರಿ.
ಸಮುದ್ರಂ ಯಾಸ್ಯತಿ ಶ್ರೀಮಾಂಸ್ತ್ಯಕತ್ವ ದೇಹಂ ಹಲಾಯುಧಃ |
ಜರಃ ಕೃಷ್ಣಂ ಮಹಾತ್ಮಾನಂ ಶಯಾನಂ ಭುವಿ ವೇತ್ಸ್ಯತಿ ॥10॥
ಶ್ರೀಮಂತನಾದ, ಹಲಾಯುಧನಾದ ಬಲರಾಮನು ದೇಹವನ್ನು ಬಿಟ್ಟು ಸಮುದ್ರವನ್ನು ಸೇರುತ್ತಾನೆ. ಭೂಮಿಯಲ್ಲಿ ಮಲಗಿರುವ ಮಹಾತ್ಮನಾದ ಕೃಷ್ಣನನ್ನು ಜರನೆಂಬ ವ್ಯಾಧನು ಬಾಣದಿಂದ ಹೊಡೆಯುತ್ತಾನೆ.
ಇತ್ಯಬ್ರುವಂಸ್ತತೋ ರಾಜನ್ ಪ್ರಲಬ್ಧಾಸ್ತೈರ್ದುರಾತ್ಮಭಿಃ |
ಮುನಯಃ ಕ್ರೋಧರಕ್ತಾಕ್ಷಾಃ ಸಮೀಕ್ಷ್ಯಾಥ ಪರಸ್ಪರಮ್ ॥11॥
ಹೀಗೆ ದುರಾತ್ಮರಾದ ಆ ಸಾರಣಾದಿಗಳಿಂದ ವಂಚಿತರಾದ ಮುನಿಗಳು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಪರಸ್ಪರ ನೋಡಿಕೊಳ್ಳುತ್ತಾ ಹೀಗೆ ಹೇಳಿದರು.
ತಥೋಕತ್ವ ಮುನಯಸ್ತೇ ತು ಯಥಾಗತಮಥೋ ಯಯುಃ ॥12॥
ಇಷ್ಟು ಹೇಳಿದ ಆ ಮುನಿಗಳು ತಾವು ಬಂದಂತೆಯೇ ಹಿಂದಿರುಗಿದರು.
ಅಥಾಬ್ರವೀತ್ ತದಾ ವೃಷ್ಣೀನ್ ಶ್ರುತ್ವೈತನ್ಮಧುಸೂದನಃ |
ಅಂತಜ್ಞೋ ಮತಿಮಾಂಸ್ತಸ್ಯ ಭವಿತವ್ಯಂ ತಥೇತಿ ತಾನ್ ॥13॥
ಈ ವಿಷಯವನ್ನು ಕೇಳಿದ ಮಧುಸೂದನನಾದ ಶ್ರೀಕೃಷ್ಣನು ತನ್ನ ಕುಲಕ್ಕೆ ಅಂತ್ಯಕಾಲ ಬಂದಿದೆ ಎಂದು ತಿಳಿದು ತ್ರಿಕಾಲಜ್ಞಾನಿಯಾದುದರಿಂದ ಋಷಿಗಳು ಹೇಳಿದಂತೆಯೇ ಆಗಲಿದೆ ಎಂದು ಆ ವೃಷ್ಣಿಗಳಿಗೆ ತಿಳಿಸಿದನು.
ಏವಮುಕತ್ವ ಹೃಷೀಕೇಶಃ ಪ್ರವಿವೇಶ ಪುರಂ ತದಾ |
ಕೃತಾಂತಮನ್ಯಥಾ ನೈಚ್ಛತ್ಕರ್ತುಂ ಸ ಜಗತಃ ಪ್ರಭುಃ ॥14॥
ಇಷ್ಟು ಮಾತ್ರ ಹೇಳಿ ಹೃಷೀಕೇಶನಾದ ಶ್ರೀಕೃಷ್ಣನು ಪಟ್ಟಣವನ್ನು ಪ್ರವೇಶಿಸಿದನು. ಜಗತ್ಪ್ರಭುವಾದ ಅವನು ಯಮಶಾಸನವನ್ನು ಬದಲಿಸಲು ಬಯಸಲಿಲ್ಲ.
ಶ್ವೋಭೂತೇಽಥ ತತಃ ಸಾಂಬೋ ಮುಸಲಂ ತದಸೂತ ವೈ |
ಯೇನ ವೃಷ್ಣ್ಯಂಧಕಕುಲೇ ಪುರುಷಾ ಭಸ್ಮಸಾತ್ಕೃತಾಃ ॥15॥
ಮಾರನೆಯ ದಿನವೇ ಸಾಂಬನು ಯಾವುದರಿಂದ ವೃಷ್ಣಿ ಮತ್ತು ಅಂಧಕಕುಲದ ಎಲ್ಲ ಪುರುಷರೂ ಭಸ್ಮೀಭೂತರಾದರೋ ಅಂತಹ ಆ ಒನಕೆಯನ್ನು ಹಡೆದನು.
ವೃಷ್ಣ್ಯಂಧಕವಿನಾಶಾಯ ಕಿಂಕರಪ್ರತಿಮಂ ಮಹತ್ |
ಅಸೂತ ಶಾಪಜಂ ಘೋರಂ ತಚ್ಚ ರಾಜ್ಞೇ ನ್ಯವೇದಯನ್ ॥16॥
ವೃಷ್ಣಿ ಮತ್ತು ಅಂಧಕರ ನಾಶಕ್ಕೋಸ್ಕರ, ಯಮಕಿಂಕರರಿಗೆ ಸದೃಶವಾದ, ಶಾಪದಿಂದುಂಟಾದ ಘೋರವಾದ ದೊಡ್ಡ ಒನಕೆಯನ್ನು ಏನು ಹಡೆದನೋ ಇದನ್ನು ರಾಜನಿಗೆ ನಿವೇದಿಸಿಕೊಂಡರು.
ವಿಷಣ್ಣರೂಪಸ್ತದ್ ರಾಜಾ ಸೂಕ್ಷ್ಮಮಂ ಚೂರ್ಣಮಕಾರಯತ್ |
ತಚ್ಚೂರ್ಣಂ ಸಾಗರೇ ಚಾಪಿ ಪ್ರಾಕ್ಷಿಪನ್ ಪುರುಷಾ ನೃಪ ॥17॥
ಹೇ ನೃಪನೇ, ಇದರಿಂದ ರಾಜನು ಭಯದಿಂದ ಬಿಳಿಚಿಕೊಂಡವನಾಗಿ ಆ ಒನಕೆಯನ್ನು ಸೂಕ್ಷ್ಮವಾಗಿ ಚೂರ್ಣಗೊಳ್ಳುವಂತೆ ಮಾಡಿಸಿದನು. ರಾಜಪುರುಷರು ಆ ಚೂರ್ಣವನ್ನು ಸಾಗರದಲ್ಲಿ ಎಸೆದರು.
ಅಘೋಷಯಂಶ್ಚ ನಗರೇ ವಚನಾದಾಹುಕಸ್ಯ ತೇ |
ಜನಾರ್ದನಸ್ಯ ರಾಮಸ್ಯ ಬಭ್ರೋಶ್ಚೈವ ಮಹಾತ್ಮನಃ ॥18॥
ಅನಂತರ ಆ ಪುರುಷರು ಆಹುಕನ, ಜನಾರ್ದನನ, ಬಲರಾಮನ, ಮಹಾತ್ಮನಾದ ಬಭ್ರುವಿನ ಮಾತಿನಂತೆ ಮುಂದೆ ಹೇಳುವಂತೆ ಡಂಗುರ ಸಾರಿದರು.
ಅದ್ಯಪ್ರಭೃತಿ ಸರ್ವೇಷು ವೃಷ್ಣ್ಯಂಧಕಕುಲೇಷ್ವಿಹ |
ಸುರಾಸವೋ ನ ಕರ್ತವ್ಯಃ ಸರ್ವೈರ್ನಗರವಾಸಿಭಿಃ ॥19॥
ಇಂದಿನಿಂದ ಆರಂಭಿಸಿ ವೃಷ್ಣ್ಯಂಧಕ ಕುಲದಲ್ಲಿರುವ ಎಲ್ಲರೂ ಜೊತೆಗೆ ನಗರ ವಾಸಿಗಳಾದ ಎಲ್ಲರೂ ಮದ್ಯದ ತಯಾರಿಯನ್ನು ಮಾಡಕೂಡದು.
ಯಶ್ಚ ನೋಽವಿದಿತಂ ಕುರ್ಯಾತ್ ಪೇಯಂ ಕಶ್ಚಿನ್ನರಃ ಕ್ವಚಿತ್ |
ಜೀವನ್ ಸ ಶೂಲಮಾರೋಹೇತ್ಸ್ವಯಂ ಕೃತ್ವಾ ಸಬಾಂಧವಃ ॥20॥
ಯಾವನು ನಮಗೆ ತಿಳಿಯದಂತೆ ಮದ್ಯವನ್ನು ತಯಾರಿಸುವನೋ, ಅಲ್ಲದೆ ಯಾವನಾದರೂ ಮನುಷ್ಯನು ಅದನ್ನು ಕುಡಿಯುತ್ತಾನೋ ಅವನು ಬಾಂಧವರೊಂದಿಗೆ ಜೀವಂತವಾಗಿರುವಾಗಲೇ ಶೂಲವನ್ನು ಏರಬೇಕಾಗುವುದು.
ತತೋ ರಾಜಭಯಾತ್ ಸರ್ವೇ ನಿಯಮಂ ಚಕ್ರಿರೇ ತದಾ |
ನರಾಃ ಶಾಸನಮಾಜ್ಞಾಯ ತಸ್ಯ ರಾಜ್ಞೋ ಮಹಾತ್ಮನಃ ॥21॥
ಅನಂತರ ಆ ರಾಜ್ಯದ ಮನುಷ್ಯರೆಲ್ಲರೂ ಮಹಾತ್ಮನಾದ ಆ ರಾಜನ ಶಾಸನವನ್ನು ತಿಳಿದು ರಾಜನ ಭಯದಿಂದ ನಿಯಮವನ್ನು ಮಾಡಿಕೊಂಡರು.
ನ ಕುರ್ವಂತಿ ನಿಷಿದ್ಧಂ ಚ ಕರ್ಮ ವೈ ನೃಪಸತ್ತಮ ॥22॥
ಹೇ ನೃಪಸತ್ತಮನೇ, ಇದರಿಂದಾಗಿ ನಿಷಿದ್ಧವಾದ ಕರ್ಮಗಳನ್ನು ಯಾರೂ ಮಾಡಲಿಲ್ಲ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ಸುರಾಸವನಿಷೇಧೋ ನಾಮ

ದ್ವಿತೀಯೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮೂರನೆಯ ಅಧ್ಯಾಯ
ದ್ವಾರಕೆಯಲ್ಲಿ ನಾನಾ ರೀತಿಯ ಉತ್ಪಾತಗಳ ಪ್ರಾದುರ್ಭಾವ. ಅದನ್ನು ನೋಡಿದ ಕೃಷ್ಣನು ಗಾಂಧಾರಿಯ ಶಾಪವನ್ನೂ ಸ್ಮರಿಸಿಕೊಂಡು, ಅದನ್ನು ಸತ್ಯಗೊಳಿಸಬೇಕೆಂದು ಎಲ್ಲ ವೃಷ್ಣಿಗಳೂ ತೀರ್ಥಯಾತ್ರೆಗೆ ಹೊರಡಬೇಕೆಂದು ಭಟರಿಂದ ಘೋಷಣೆ ಮಾಡಿಸುವುದು.
ವೈಶಂಪಾಯನಃ
ಏವಂ ಪ್ರಯತಮಾನಾನಾಂ ವೃಷ್ಣೀನಾಮಂಧಕೈಃ ಸಹ |
ಕಾಲೋ ಗೃಹಾಣಿ ಸರ್ವೇಷಾಂ ಪರಿಚಕ್ರಾಮ ನಿತ್ಯಶಃ ||1||
ವೈಶಂಪಾಯನ ಹೀಗೆ ಅಂಧಕರೊಂದಿಗೆ ಕೂಡಿದ ಯಾದವರ ಪ್ರಯತ್ನವು ನಡೆಯುತ್ತಿರುವಾಗಲೇ ಕಾಲಪುರುಷನು (ಮೃತ್ಯುಸೂಚಕವಾದ ಶಕುನಗಳು) ಎಲ್ಲರ ಮನೆಗಳನ್ನು ನಿತ್ಯವೂ ಸುತ್ತಲಾರಂಭಿಸಿದನು.
ಕೃಕಲಾಸಃ ಸಶೇಷಂ ಚ ಕಾಕಪತ್ರವಿಲೋಚನಃ ||2||
ಕಾಲ ಪುರುಷನು ಓತಿಕೇತದಿಂದ ಕೂಡಿದವನಾಗಿ ಕಾಗೆಪುಕ್ಕದಂತೆ ವಿಕೃತ ಕಣ್ಣುಳ್ಳವನಾಗಿ ಯಾದವರಿಗೆ ಕಾಣಿಸುತ್ತಿದ್ದನು.
ಕರಾಲೋ ವಿಕಟೋ ಮುಂಡಃ ಪುರುಷಃ ಕೃಷ್ಣಪಿಂಗಲಃ |
ಗೃಹಾಣ್ಯಾವೇಕ್ಷ್ಯ ವೃಷ್ಣೀನಾಂ ನಾದೃಶ್ಯತ ಪುನಃ ಕ್ವಚಿತ್ ||3||
ಭಯಾನಕವಾದ, ವಿಕೃತರೂಪವಾದ, ತಲೆಯನ್ನು ಬೋಳಿಸಿದ, ಕೆಂಚುಬಣ್ಣವುಳ್ಳ ಪುರುಷನು ಯಾದವರ ಮನೆಗಳನ್ನು ಇಣುಕುತ್ತಿದ್ದನು. ಮತ್ತೆ ಕೆಲವೊಮ್ಮೆ ಅದೃಶ್ಯನಾಗುತ್ತಿದ್ದನು.
ತಮಘ್ನಂತ ಮಹೇಷ್ವಾಸಾಃ ಶರೈಃ ಶತಸಹಸ್ರಶಃ |
ನ ಚಾಶಕ್ಯತ ವೇದ್ಧುಂ ಸ ಸರ್ವಭೂತಾತ್ಯಯಸ್ತದಾ ||4||
ಆಗ ಮಹಾಧನುರ್ಧಾರಿಗಳಾದ ಅವರು ನೂರಾರು, ಸಾವಿರಾರು ಬಾಣಗಳಿಂದ ಅವನನ್ನು ಹೊಡೆದರು. ಆದರೂ ನಾಶಮಾಡಲು ಶಕ್ತರಾಗಲಿಲ್ಲ. ಏಕೆಂದರೆ ಅವನು ಸರ್ವಭೂತಗಳ ಮೃತ್ಯುವಾಗಿದ್ದನು.
ಉತ್ಪೇದಿರೇ ಮಹಾವಾತಾ ದಾರುಣಾಶ್ಚ ದಿನೇದಿನೇ |
ವೃಷ್ಣ್ಯಂಧಕವಿನಾಶಾಯ ಬಹವೋ ರೋಮಹರ್ಷಣಾಃ ||5||
ಅಷ್ಟೇ ಅಲ್ಲದೆ ಪ್ರತಿನಿತ್ಯವೂ ವೃಷ್ಣಿ ಹಾಗೂ ಅಂಧಕರ ನಾಶಕ್ಕಾಗಿ ರೋಮಾಂಚನವನ್ನುಂಟು ಮಾಡುವ ದಾರುಣವಾದ, ಬಹುರೀತಿಯ ಚಂಡ ಮಾರುತಗಳು ಆರಂಭವಾದವು.
ವಿವೃದ್ಧಮೂಷಿಕಾ ರಥ್ಯಾ ವಿಭಿನ್ನಮಣಿಕಾಸ್ತಥಾ |
ಕೇಶಾ ನಖಾಶ್ಚ ಸುಪ್ತಾನಾಮದ್ಯಂತೇ ಮೂಷಿಕೈರ್ನಿಶಿ ||6||
ರಸ್ತೆಗಳಲ್ಲಿ ದೊಡ್ಡ ದೊಡ್ಡ ಇಲಿಗಳು ಸಂಚರಿಸಲಾರಂಭಿಸಿದವು. ಮನೆಗಳಲ್ಲಿರುವ ವಸತತ್ರದಿಗಳನ್ನು ತುಂಬಿಡುವ ಮಣ್ಣಿನ ಪೆಟ್ಟಿಗೆಗಳು (ಗುಡಾಣಗಳು) ತಾವಾಗಿಯೇ ಒಡೆಯಲಾರಂಭಿಸಿದವು. ಅಲ್ಲದೆ ರಾತ್ರಿ ಮಲಗಿದ ವ್ಯಕ್ತಿಗಳ ಕೂದಲು ಮತ್ತು ಉಗುರುಗಳನ್ನು ಇಲಿಗಳು ತಿನ್ನಲಾರಂಭಿಸಿದವು.
ಚೀಚೀಕೂಚೀತಿ ವಾಶಂತಿ ಶಾರಿಕಾ ವೃಷ್ಣಿವೇಶ್ಮಸು |
ನೋಪಶಾಮ್ಯತಿ ಶಬ್ದಶ್ಚ ಸದಿವಾರಾತ್ರಮೇವ ಹಿ ||7||
ಯಾದವರ ಮನೆಗಳಲ್ಲಿ ಹೆಣ್ಣು ಗಿಳಿಗಳು ಚೀಚೀಕೂಚೀ ಇತ್ಯಾದಿಯಾಗಿ ಶಬ್ದ ಮಾಡತೊಡಗಿದವು. ಈ ಶಬ್ದವು ರಾತ್ರಿ-ಹಗಲು ಕೊನೆಯಿಲ್ಲದೆ ಕೇಳಿಬರುತ್ತಿತ್ತು.
ಅನ್ವಕುರ್ವನ್ನುಲೂಕಾನಾಂ ಸಾರಸಾ ವಿರುತಂ ತಥಾ |
ಅಜಾಃ ಶಿವಾನಾಂ ವಿರುತಮನ್ವಕುರ್ವಂತ ಭಾರತ ||8||
ಸಾರಕ್ಕಿಗಳು ಗೂಬೆಗಳ ಕೂಗನ್ನು ಅನುಕರಿಸಿದವು. ಹೇ ಭಾರತನೇ, ಆಡುಗಳು ನರಿಗಳ ಕೂಗನ್ನು ಅನುಸರಿಸಿ ಕೂಗಲಾರಂಭಿಸಿದವು.
ಪಾಂಡುರಾ ರಕ್ತಪಾದಾಶ್ಚ ವಿಹಗಾಃ ಕಾಲಚೋದಿತಾಃ |
ವೃಷ್ಣ್ಯಂಧಕಾನಾಂ ಗೇಹೇಷು ಕಪೋತಾ ವ್ಯಚರಂಸ್ತದಾ ||9||
ವೃಷ್ಣಿ ಹಾಗೂ ಅಂಧಕರ ಮನೆಗಳಲ್ಲಿ ಯಮನಿಂದ ಕಳುಹಿಸಲ್ಪಟ್ಟ ಬಿಳಿಯ ಬಣ್ಣದ, ಕೆಂಪುಕಾಲುಗಳುಳ್ಳ ಹಕ್ಕಿಗಳು ಹಾಗೂ ಪಾರಿವಾಳಗಳು ಸಂಚರಿಸತೊಡಗಿದವು.
ವ್ಯಜಾಯಂತ ಖರಾ ಗೋಷು ಕರಭಾಶ್ವತರೀಷು ಚ |
ಶುನೀಷ್ವಪಿ ಬಿಡಾಲಾಶ್ಚ ಮೂಷಿಕಾ ನಕುಲೀಷು ಚ ||10||
ಗೋವುಗಳ ಹೊಟ್ಟೆಯಲ್ಲಿ ಕತ್ತೆಗಳೂ, ಹೇಸರಗತ್ತೆಗಳಲ್ಲಿ ಒಂಟೆಯ ಮರಿಗಳೂ, ಹೆಣ್ಣುನಾಯಿಗಳಲ್ಲಿ ಬೆಕ್ಕುಗಳೂ, ಮುಂಗುಸಿಗಳಲ್ಲಿ ಇಲಿಗಳೂ ಜನಿಸತೊಡಗಿದವು.
ನಾಪತ್ರಪಂತ ಪಾಪಾನಿ ಕುರ್ವಂತೋ ವೃಷ್ಣಯಸ್ತದಾ |
ಪ್ರಾದ್ವಿಷನ್ ಬ್ರಾಹ್ಮಣಾಂಶ್ಚಾಪಿ ಪಿತೄನ್ ದೇವಾಂಸ್ತಥೈವ ಚ ||11||
ಅದೇ ಸಮಯದಲ್ಲಿ ವೃಷ್ಣಿಗಳು ಪಾಪಕರ್ಮಗಳನ್ನು ನಾಚಿಕೆಯಿಲ್ಲದೆ ನಡೆಸ ತೊಡಗಿದರು. ಬ್ರಾಹ್ಮಣರನ್ನೂ, ಪಿತೃಗಳನ್ನೂ ಹಾಗೂ ದೇವತೆಗಳನ್ನೂ ಹಿಂಸಿಸಲಾರಂಭಿಸಿದರು (ದ್ವೇಷಿಸಲಾರಂಭಿಸಿದರು).

ಗುರೂಂಶ್ಚಾಪ್ಯವಮನ್ಯಂತೇ ನ ತು ರಾಮಜನಾರ್ದನೌ |
ಪತ್ನ್ಯಃ ಪತೀನುಚ್ಚರಂತಿ ಪತ್ನೀಶ್ಚ ಪತಯಸ್ತಥಾ ॥12॥
ಬಲರಾಮ, ಕೃಷ್ಣರನ್ನು ಬಿಟ್ಟು ಉಳಿದೆಲ್ಲ ಹಿರಿಯರನ್ನೂ ಅವಮಾನಿಸಲು ಆರಂಭಿಸಿದರು. ಪತ್ನಿಯರು ಪತಿಗಳನ್ನೂ, ಪತಿಗಳು ಪತ್ನಿಯರನ್ನೂ ಜರಿಯಲಾರಂಭಿಸಿದರು.
ವಿಭಾವಸುಃ ಪ್ರಜ್ವಲಿತೋ ವಾಮಂ ವಿಪರಿವರ್ತತೇ |
ನೀಲಲಲೋಹಿತಮಂಜಿಷ್ಠಾ ವಿಸೃಜನ್ನರ್ಚಿಷಃ ಪೃಥಕ್ ॥13॥
ಸೂರ್ಯನು ಹೊತ್ತಿ ಉರಿಯುತ್ತಾ ಅಪ್ರದಕ್ಷಿಣೆಯಾಗಿ ಸುತ್ತಲಾರಂಭಿಸಿದನು. ನೀಲಿ ಮತ್ತು ಕೆಂಪುಮಿಶ್ರವಾದ ಮಂಜಿಷ್ಠೆಯ ವರ್ಣವುಳ್ಳ ಕಿರಣಗಳನ್ನು ಬೇರೆ ಬೇರೆಯಾಗಿ ವಿಸರ್ಜಿಸಲಾರಂಭಿಸಿದನು.
ಉದಯಾಸ್ತಮಯೇ ನಿತ್ಯಂ ಪುರ್ಯಾಂ ತಸ್ಯಾಂ ದಿವಾಕರಃ |
ವ್ಯದೃಶ್ಯತಾಸಕೃತ್ ಪುಂಭಿಃ ಕಬಂಧೈಃ ಪರಿವಾರಿತಃ ॥14॥
ನಿತ್ಯವೂ ಉದಯಾಸ್ತಮಾನ ಕಾಲದಲ್ಲಿ ಸೂರ್ಯನು ಆ ಪುರದಲ್ಲಿರುವ ಪುರುಷರಿಗೆ ಧೂಮಕೇತುಗಳಿಂದ ಸುತ್ತುವರಿಯಲ್ಪಟ್ಟಂತೆ ಮತ್ತೆ ಮತ್ತೆ ಕಾಣತೊಡಗಿದನು.
ಮಹಾನಸೇಷು ಸಿದ್ಧೇಷು ಸಂಸ್ಕೃತೇಽತೀವ ಭಾರತ |
ಆಹಾರ್ಯಮಾಣೇ ಕೃಮಯೋ ವ್ಯದೃಶ್ಯಂತ ಸಹಸ್ರಶಃ ॥15॥
ಹೇ ಭಾರತನೇ, ಅಡುಗೆಮನೆಗಳಲ್ಲಿ ಸುಸಂಸ್ಕೃತವಾಗಿ ತಯಾರಿಸಲ್ಪಟ್ಟ ಅನ್ನಗಳಲ್ಲಿ ತಿನ್ನುವ ಕಾಲಕ್ಕೆ ಸಾವಿರಾರು ಕ್ರಿಮಿಗಳು ತೋರಲಾರಂಭಿಸಿದವು.
ಪುಣ್ಯಾಹೇ ವಾಚ್ಯಮಾನೇ ತು ಜಪತ್ಸು ಚ ಮಹಾತ್ಮಸು |
ಅಭಿಧಾವಂತಃ ಶ್ರೂಯಂತೇ ನ ಚಾದೃಶ್ಯತ ಕಶ್ಚನ ॥16॥
ಮಹಾತ್ಮರು ಪುಣ್ಯಾಹವನ್ನು ವಾಚನೆ ಮಾಡುವಾಗ ಅಲ್ಲದೆ ಜಪಿಸುವಾಗ ಯಾರೋ ಓಡುತ್ತಿರುವಂತೆ ಶಬ್ದವು ಕೇಳಿಬರತೊಡಗಿತು. ಆದರೆ ನೋಡಹೊರಟರೆ ಯಾರೂ ಕಾಣುತ್ತಿರಲಿಲ್ಲ.
ಪರಸ್ಪರಂ ಚ ನಕ್ಷತ್ರಂ ಹನ್ಯಮಾನಂ ಪುನಃಪುನಃ |
ಗ್ರಹೈರಪಶ್ಯನ್ ಸರ್ವೇ ತೇ ಆತ್ಮನಸ್ತು ನ ಪಶ್ಯಂತೇ ॥17॥
ಪರಸ್ಪರವಾಗಿ ನಕ್ಷತ್ರಗಳು ಮತ್ತೆ ಮತ್ತೆ ಹೊಡೆದಾಡಿಕೊಳ್ಳುವಂತೆ ಹಾಗೂ ಗ್ರಹಗಳು ಹೊಡೆದುಕೊಳ್ಳುವಂತೆ ಆ ಎಲ್ಲರೂ ಕಂಡರು. ಆದರೆ ಅವು ತಮಗೆ ಅನಿಷ್ಟವೆಂದು ಯಾರೂ ಗಮನಿಸಲಿಲ್ಲ.
ನದಂತಂ ಪಾಂಚಜನ್ಯಂ ಚ ವೃಷ್ಣ್ಯಂಧಕನಿವೇಶನೇ |
ಸಮಂತಾತ್ ಪರ್ಯವಾಶಂತ ರಾಸಭಾ ದಾರುಣಸ್ವರಾಃ ॥18॥
ವೃಷ್ಣಿ ಹಾಗೂ ಅಂಧಕರ ಮನೆಗಳಲ್ಲಿ ಶಂಖನಾದವನ್ನು ಮೊಳಗುತ್ತಿರುವಾಗ ಸುತ್ತಲೂ ದಾರುಣವಾದ ಸ್ವರವುಳ್ಳ ಕತ್ತೆಗಳು ಅದಕ್ಕಿಂತ ಹೆಚ್ಚಾಗಿ ಬೊಬ್ಬಿಡಲಾರಂಭಿಸಿದವು.
ಏವಂ ಪಶ್ಯನ್ ಹೃಷೀಕೇಶಃ ಸಂಪ್ರಾಪ್ತಂ ಕಾಲಪರ್ಯಯಮ್ |
ತ್ರಯೋದಶ್ಯಾಮಮಾವಾಸ್ಯಾಂ ತಾನ್ ದೃಷ್ಟ್ವಾ ಪ್ರಾಬ್ರವೀದಿದಮ್ ॥
ಚತುರ್ದಶೀ ಪಂಚದಶೀ ಕೃತೇಯಂ ರಾಹುಣಾ ಪುನಃ |
ಪ್ರಾಪ್ತಂ ವೈ ಭಾರತೇ ಯುದ್ಧೇ ಪ್ರಾಪ್ತಾ ಚಾದ್ಯ ಕ್ಷಯಾಯ ನಃ ॥20॥
ಇವೆಲ್ಲವನ್ನೂ ನೋಡಿದ ಶ್ರೀಕೃಷ್ಣನು ಕುಲವಿನಾಶಕ್ಕೆ ಕಾಲವು ಸಂಪ್ರಾಪ್ತವಾಯಿತೆಂದು ತಿಳಿದನು. ಜೊತೆಗೆ ಹದಿಮೂರನೆಯ ದಿನದಂದೇ ಅಮಾವಾಸ್ಯೆಯು ಬಂದುದನ್ನು ನೋಡಿ ವೃಷ್ಣಿಗಳಲ್ಲಿ ಇದನ್ನು ತಿಳಿಸಿದನು. ಅಷ್ಟೇ ಅಲ್ಲದೆ ಮುಂದಿನ ಪಕ್ಷದಲ್ಲೂ ಹುಣ್ಣಿಮೆಯು ಹದಿನಾಲ್ಕನೆಯ ದಿನದಲ್ಲೇ ಬಂದಿದೆ, ಜೊತೆಗೆ ಗ್ರಹಣವೂ ಉಂಟಾಗಿದೆ. ಇದು ಮಹಾಭಾರತ ಯುದ್ಧದ ಸಂದರ್ಭದಲ್ಲಿ ನಡೆದಿತ್ತು. ಮತ್ತೆ ನಮ್ಮೆಲ್ಲರ ನಾಶಕ್ಕೋಸ್ಕರ ಈ ಸಮಯದಲ್ಲೂ ಬಂದಿದೆ.
ವಿಮೃಶನ್ನೇವ ಕಾಲಂ ತಂ ಪರಿಚಿಂತ್ಯ ಜನಾರ್ದನಃ |
ಮೇನೇ ಪ್ರಾಪ್ತಂ ಸ ಷಟ್‌ತ್ರಿಂಶಂ ವರ್ಷಂ ವೈ ಕೇಶಿಸೂದನಃ ॥21॥
ಕೇಶಿಸೂದನನಾದ, ಜನಾರ್ದನನಾದ ಶ್ರೀಕೃಷ್ಣನು ಹೀಗೆ ಕಾಲಕ್ರಮವನ್ನು ಚಿಂತಿಸುತ್ತಾ, ಭಾರತ ಯುದ್ಧವು ಕಳೆದು ಮೂವತ್ತಾರನೆಯ ವರ್ಷವು ಪ್ರಾಪ್ತವಾಯಿತೆಂದು ಅಭಿಪ್ರಾಯಪಟ್ಟನು.
ಪುತ್ರಶೋಕಾಭಿಸಂತಪ್ತಾ ಗಾಂಧಾರೀ ಹತಬಾಂಧವಾ |
ಯದನುವ್ಯಾಜಹಾರಾರ್ತಾ ತದಿದಂ ಸಮುಪಾಗಮತ್ ॥22॥
ಪುತ್ರಶೋಕದಿಂದ ಬಹುವಾಗಿ ಕಂಗೆಟ್ಟ, ಬಾಂಧವರನ್ನು ಕಳೆದುಕೊಂಡ ಗಾಂಧಾರೀ ದೇವಿಯು ಆರ್ತಳಾಗಿ ಏನನ್ನು ಹೇಳಿದಳೋ ಅದು ಈಗ ಬಂದೊದಗಿದೆ.
ಇದಂ ಚ ತದನುಪ್ರಾಪ್ತಮಬ್ರವೀದ್ ಯದ್ ಯುಧಿಷ್ಠಿರಃ |
ಪುರಾ ವ್ಯೂಢೇಷ್ವನೀಕೇಷು ದೃಷ್ಟ್ವೋತ್ಪಾತಾನ್ ಸುದಾರುಣಾನ್ ॥23॥
ಹಿಂದೆ ಯುದ್ಧಾರಂಭ ಕಾಲದಲ್ಲಿ ಸೇನೆಗಳ ವ್ಯೂಹವು ರಚನೆಯಾದಾಗ ಕಂಡಿರುವ ದಾರುಣವಾದ ಉತ್ಪಾತಗಳ ಬಗ್ಗೆ ಯುಧಿಷ್ಠಿರನು ಏನು ಹೇಳಿದನೋ ಅವೇ ಉತ್ಪಾತಗಳು ಈಗ ಬಂದಿವೆ ಎಂದು ತಿಳಿಸಿದನು.
ಪುಣ್ಯಾಹವಾಚನಾಚ್ಚಾಪಿ ಶಾಂತಿಹೋಮಾಚ್ಚ ಶೋಭನಾತ್ |
ಪೂತತೀರ್ಥಾಭಿಷೇಕಾಚ್ಚ ನ ನೋ ಶ್ರೇಯೋ ಭವೇದಿತಿ ॥24॥

ಪುಣ್ಯಾಹವಾಚನದಿಂದಾಗಲಿ, ಶಾಂತಿಹೋಮದಿಂದಾಗಲಿ, ಮಂಗಳಮಯವಾದ ಪವಿತ್ರತೀರ್ಥಗಳ ಅಭಿಷೇಕದಿಂದಾಗಲಿ ನಮಗೆ ಶ್ರೇಯಸ್ಸಾಗಲಾರದು.
ಇತ್ಯುಕತ್ವ ವಾಸುದೇವಸ್ತು ಚಿಕೀರ್ಷುಃ ಸತ್ಯಮೇವ ತತ್ |
ಆಜ್ಞಾಪಯಾಮಾಸ ತದಾ ತೀರ್ಥಯಾತ್ರಾಮರಿಂದಮಃ ॥25॥
ಇಷ್ಟು ಹೇಳಿ ಅರಿಮರ್ದನನಾದ ಶ್ರೀಕೃಷ್ಣನು ಅವೆಲ್ಲವನ್ನೂ ಸತ್ಯಮಾಡಲು ತೀರ್ಥಯಾತ್ರೆಯನ್ನು ನಡೆಸಬೇಕೆಂದು ಆಗ ಆಜ್ಞಾಪಿಸಿದನು.
ಅಘೋಷಯಂತ ಪುರುಷಾಸ್ತತ್ರ ಕೇಶವಶಾಸನಾತ್ |
ತೀರ್ಥಯಾತ್ರಾ ಸಮುದ್ರೇ ವಃ ಕಾರ್ಯೇತಿ ಪುರುಷರ್ಷಭಾಃ ॥26॥
ಶ್ರೀಕೃಷ್ಣನ ಆಜ್ಞೆಯಂತೆ ರಾಜಪುರುಷರು `ಹೇ ಪುರುಷಶ್ರೇಷ್ಠರೇ, ನೀವು ಸಮುದ್ರದಲ್ಲಿ ತೀರ್ಥಯಾತ್ರೆಯನ್ನು ನಡೆಸಿರಿ' ಎಂದು ಘೋಷಣೆ ಮಾಡಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ಕೃಷ್ಣವಾಕ್ಯಘೋಷಣಂ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ದ್ವಾರಕೆಯಲ್ಲಿ ವೃಷ್ಣಿ ಮತ್ತು ಅಂಧಕಾದಿಗಳು ಅನರ್ಥಸೂಚಕವಾದ ದುಃಸ್ವಪ್ನಾದಿಗಳನ್ನು ಕಾಣುವುದು. ಅನಂತರ ಕೃಷ್ಣನ ಆಜ್ಞೆಯಂತೆ ಸ್ತ್ರೀ-ಬಾಲರಿಂದ ಕೂಡಿದ ಎಲ್ಲರೂ ಪ್ರಭಾಸ ಕ್ಷೇತ್ರಕ್ಕೆ ಹೋಗುವುದು. ಅಲ್ಲಿ ನೃತ್ಯ-ಗಾನಾದಿ ಮಹೋತ್ಸವವನ್ನು ನಡೆಸುತ್ತಾ ಮದ್ಯಪಾನವನ್ನು ಮಾಡುವುದು. ಆ ಕಾಲದಲ್ಲಿ ಸಭಾಮಧ್ಯದಲ್ಲಿ ಸಾತ್ಯಕಿಯು ಸ್ಯಮಂತಕಮಣಿಯನ್ನು ಅಪಹರಣ ಮಾಡಿದ ಗುಟ್ಟನ್ನು ರಟ್ಟುಮಾಡುತ್ತಾ ಕೃತವರ್ಮನನ್ನು ತೆಗಳುವುದು. ಮಣಿಯ ವೃತ್ತಾಂತವನ್ನು ಕೇಳಿ ಸತ್ಯಭಾಮೆಯು ಖಿನ್ನಳಾದಾಗ ಅವಳನ್ನು ಸಂತೋಷ ಪಡಿಸುವುದಕ್ಕಾಗಿ ಸಾತ್ಯಕಿಯು ಕೃತವರ್ಮನ ಶಿರಸ್ಸನ್ನು ಛೇದಿಸುವುದು. ನಂತರ ಕೃತವರ್ಮ ಹಾಗೂ ಸಾತ್ಯಕಿಯ ಪಕ್ಷದವರು ಒನಕೆಯಂತಿರುವ ಹುಲ್ಲುಗಳಿಂದ ಪರಸ್ಪರ ಹೊಡೆದುಕೊಂಡು ಸಾಯಿಸುವುದು.
ವೈಶಂಪಾಯನಃ
ಕಾಲೀ ಸ್ತ್ರೀ ಪಾಂಡುರೈರ್ದಂತೈಃ ಪ್ರವಿಶ್ಯ ಹಸತೀ ನಿಶಿ |
ಸ್ತ್ರಿಯಃ ಸ್ವಪ್ನೇಷು ಮುಷ್ಣಂತೀ ದ್ವಾರಕಾಂ ಪರಿಧಾವತಿ ॥1॥
ವೈಶಂಪಾಯನ ಕೃಷ್ಣವರ್ಣದ ಸ್ತ್ರೀಯೊಬ್ಬಳು ಬಿಳಿಯಾದ ದಂತಗಳಿಂದ ಕೂಡಿಕೊಂಡು ಗಟ್ಟಿಯಾಗಿ ನಗುತ್ತಾ ಸ್ತ್ರೀಯರನ್ನು ಸ್ವಪ್ನದಲ್ಲಿ ವಂಚಿಸುತ್ತಾ ದ್ವಾರಕೆಯನ್ನು ಪ್ರವೇಶಿಸಿ ಓಡಾಡುವಳು.
ಅಗ್ನಿಹೋತ್ರನಿಕೇತೇಷು ವಾಸ್ತುಮಧ್ಯೇಷು ವೇಶ್ಮಸು |
ವೃಷ್ಣ್ಯಂಧಕಾನಖಾದಂತ ಸ್ವಪ್ನೇ ಗೃಧ್ರಾ ಭಯಾನಕಾಃ ॥2॥
ಹಾಗೆಯೇ ಸ್ವಪ್ನದಲ್ಲಿ ಭಯಾನಕವಾದ ಗೃಧ್ರಗಳು ಅಗ್ನಿಹೋತ್ರಕ್ಷೇತ್ರಗಳಲ್ಲಿ, ವಾಸ್ತುವಿನ ಮಧ್ಯದಲ್ಲಿ, ಮನೆಗಳಲ್ಲಿ ವೃಷ್ಣಿ ಹಾಗೂ ಅಂಧಕರನ್ನು ತಿನ್ನತೊಡಗಿದವು.
ಕುರ್ವಂತೋ ಭೀಷಣಾ ನಾದಾನ್ ಕರಾಳಾಂಶ್ಚಾಪಿ ಸಂಗತಾನ್ |
ತಥಾ ವಿಶಿರಸೋ ರೌದ್ರಾಶ್ಚತುರ್ಬಾಹವ ಏವ ಚ ॥3॥
ಭಯಂಕರರಾದ ಹಾಗೆಯೇ ತಲೆಗಳಿಲ್ಲದ, ನಾಲ್ಕು ಕೈಗಳುಳ್ಳ ಉಗ್ರರೂಪವುಳ್ಳ ಪುರುಷರು ಭಯಾನಕವಾದ ಸ್ತಂಭಿತವಾದ ಕರ್ಕಶ ಸ್ವರಗಳನ್ನೂ ಮಾಡತೊಡಗಿದರು.
ಸ್ತ್ರೀಣಾಂ ಗರ್ಭೇಷು ಜಾಯಂತೇ ರಾಕ್ಷಸಾ ಗುಹ್ಯಕಾಸ್ತಥಾ |
ವಸಾತ್ರಣಿ ತುರಗಾಶ್ಚೈವ ರಾಸಭಾ ನೃಪಸತ್ತಮ ॥4॥
ಹೇ ನೃಪಶ್ರೇಷ್ಠನೇ, ಸ್ತ್ರೀಯರ ಗರ್ಭದಲ್ಲಿ ರಾಕ್ಷಸರೂ, ಯಕ್ಷರೂ, ವಸ್ತ್ರಗಳೂ, ಕುದುರೆಗಳೂ, ಕತ್ತೆಗಳೂ ಹುಟ್ಟಿದವು.
ಅಲಂಕಾರಾಶ್ಚ ಛತ್ರಾಣಿ ಧ್ವಜಾಶ್ಚ ಕವಚಾನಿ ಚ |
ಹ್ರಿಯಮಾಣಾನ್ಯದೃಶ್ಯಂತ ರಕ್ಷೋಭಿಃ ಸುಭಯಾನಕೈಃ ॥5॥
ಭಯಾನಕರಾದ ರಾಕ್ಷಸರಿಂದ ಅಲಂಕಾರಗಳೂ, ಛತ್ರ-ಧ್ವಜಗಳೂ, ಕವಚಗಳೂ ಅಪಹರಣವಾದಂತೆ ಕಾಣತೊಡಗಿತು.
ತಚ್ಚಾಗ್ನಿದತ್ತಂ ಕೃಷ್ಣಸ್ಯ ವಜ್ರನಾಭಮಯೋಮಯಮ್ |
ದಿವಮಾಚಕ್ರಮೇ ಚಕ್ರಂ ವೃಷ್ಣೀನಾಂ ಪಶ್ಯತಾಂ ತದಾ ॥6॥
ಕೃಷ್ಣನಿಗೆ ಅಗ್ನಿಯಿಂದ ಕೊಡಲ್ಪಟ್ಟ, ವಜ್ರದ ಮಧ್ಯಭಾಗವುಳ್ಳ, ಉಕ್ಕಿನಿಂದ ಮಾಡಲ್ಪಟ್ಟ ಚಕ್ರವು ವೃಷ್ಣಿಗಳು ನೋಡನೋಡುತ್ತಿದ್ದಂತೆಯೇ ಆಕಾಶಕ್ಕೇರಿತು.
ಯುಕ್ತಂ ರಥಂ ದಿವ್ಯಮಾದಿತ್ಯವರ್ಣಂ
ಹಯಾಽಹರನ್ ಪಶ್ಯತೋ ದಾರುಕಸ್ಯ |
ತೇ ಸಾಗರಸ್ಯೋಪರಿಷ್ಟಾದಗಚ್ಛನ್
ಮನೋಜವಾಶ್ಚತುರೋ ವಾಜಿಮುಖ್ಯಾಃ ॥7॥
ಸೂರ್ಯನಂತೆ ಪ್ರಜ್ವಲಿಸುವ ವರ್ಣವುಳ್ಳ ದಿವ್ಯವಾದ, ಹೊರಡಲು ಅಣಿಗೊಳಿಸಿದ ರಥವನ್ನು, ದಾರುಕನು ನೋಡುತ್ತಿದ್ದಂತೆಯೇ ಕುದುರೆಗಳು ಅಪಹರಿಸಿದವು. ಆ ಮುಖ್ಯವಾದ ಮನೋವೇಗವುಳ್ಳ ನಾಲ್ಕು ಕುದುರೆಗಳು ಸಾಗರದ ಮೇಲಿನಿಂದಲೇ ನಡೆದು ಹೋದವು.

ತಾಲಃ ಸುಪರ್ಣಶ್ಚ ಮಹಾಧ್ವಜೌ ತೌ
ಸುಪೂಜಿತೌ ರಾಮಜನಾರ್ದನಾಭ್ಯಾಮ್ |
ಉಚ್ಚೈರ್ಜಹ್ರುರಪ್ಸರಸಶ್ಚ ದಿವ್ಯಾ
ದೇವಾ ಊಚುರ್ಗಮ್ಯತಾಂ ತೀರ್ಥಯಾತ್ರಾಃ ||8||
ಬಲರಾಮ-ಕೃಷ್ಣರು ನಿತ್ಯವೂ ಪೂಜಿಸುತ್ತಿದ್ದ ತಾಲ ಮತ್ತು ಗರುಡನ ಚಿಹ್ನೆಯುಳ್ಳ ಆ ಎರಡು ಮಹಾಧ್ವಜಗಳನ್ನು ದಿವ್ಯವಾದ ಅಪ್ಸರಾಸ್ತ್ರೀಯರು ಬಲಾತ್ಕಾರವಾಗಿ ಅಪಹರಿಸಿದರು. ಆಕಾಶದಲ್ಲಿ ನಿಂತ ದೇವತೆಗಳು `ತೀರ್ಥಯಾತ್ರೆಗೆ ಹೊರಡಿರಿ' ಎಂದು ಹೇಳಿದರು.
ಭಗವದ್ದರ್ಶನಸ್ಪರ್ಶಸ್ನೇಹೈರ್ವಿತತಭೋಗಿನಃ |
ದಿವಃ ಪ್ರವೇಶನಾರ್ಥಂ ತೇ ವಿಮಾನೈರ್ದಿವಮಾಯಯುಃ ||9||
ಭಗವಂತನಾದ ಶ್ರೀಕೃಷ್ಣನ ದರ್ಶನ-ಸ್ಪರ್ಶ-ಸ್ನೇಹ ಇವುಗಳಿಂದ ವಿಸ್ತಾರವಾದ ಭೋಗಗಳನ್ನು ಅನುಭವಿಸುತ್ತಿದ್ದ ಆ ದೇವತೆಗಳು ಸ್ವರ್ಗವನ್ನು ಸೇರುವುದಕ್ಕೋಸ್ಕರ ವಿಮಾನಗಳಿಂದ ಆಕಾಶದಲ್ಲಿ ಹೊರಟು ಹೋದರು.
ತತೋ ಜಿಗಮಿಷಂತಸ್ತೇ ವೃಷ್ಣ್ಯಂಧಕಮಹಾರಥಾಃ |
ಸಾಂತಃಪುರಾಸ್ತದಾ ತೀರ್ಥಯಾತ್ರಾಮೈಚ್ಛನ್ನರರ್ಷಭಾಃ ||10||
ಅನಂತರ ಹೊರಡಲು ಬಯಸಿದ ಆ ಪುರುಷಶ್ರೇಷ್ಠರಾದ ವೃಷ್ಣ್ಯಂಧಕ ಮಹಾರಥರು ಅಂತಃಪುರದ ಜನರೊಂದಿಗೆ ತೀರ್ಥಯಾತ್ರೆಯನ್ನು ಮಾಡಬೇಕೆಂದು ಬಯಸಿದರು.
ತತೋ ಮನೋಹರಾಃ ಹೃಷ್ಟಾಃ ಪೇಯಂ ಮಾಂಸಂ ಮಧೂನಿ ಚ |
ಬಹು ನಾನಾವಿಧಂ ಚಕ್ರುಸ್ತ್ವರಿತಾಃ ಕಾಲಚೋದಿತಾಃ ||11||
ಅನಂತರ ಯಾತ್ರೆಯ ಬಗ್ಗೆ ಸಂತೋಷಗೊಂಡಿದ್ದ ಅವರು ಕಾಲಚೋದಿತರಾಗಿ ಸಂಭ್ರಮದಿಂದ ನಾನಾ ಪ್ರಕಾರದ ಪಾನೀಯಗಳನ್ನೂ, ಮಾಂಸಗಳನ್ನೂ, ಮದ್ಯಗಳನ್ನೂ ಬಹುಪ್ರಮಾಣದಲ್ಲಿ ತಯಾರಿಸಿಕೊಂಡರು.
ತತಃ ಸೀಧುಷು ಸಕ್ತಾಶ್ಚ ನಿರ್ಯಯುರ್ನಗರಾದ್ ಬಹಿಃ |
ಯಾನೈರಶ್ವೈರ್ಗಜೈಶ್ಚೈವ ಶ್ರೀಮಂತಸ್ತಿಗ್ಮತೇಜಸಃ ||12||
ತತಃ ಪ್ರಭಾಸೇ ನ್ಯವಸನ್ ಯಥೋದ್ದಿಷ್ಟಂ ಯಥಾಗೃಹಮ್ |
ಪ್ರಭೂತಭಕ್ಷ್ಯಪೇಯಾಸ್ತೇ ಸದಾರಾ ಯಾದವಾಸ್ತದಾ ||13||
ಅನಂತರ ಶ್ರೀಮಂತರಾದ, ಜ್ವಲಿಸುವ ಕಾಂತಿಯುಳ್ಳ, ಪತ್ನಿಯರೊಂದಿಗೆ ಕೂಡಿದ ಯಾದವರು ಮದ್ಯಪಾನದಲ್ಲಿ ಆಸಕ್ತರಾಗಿ, ರಥ-ಅಶ್ವ-ಆನೆಗಳನ್ನು ಏರಿಕೊಂಡು, ನಗರದಿಂದ ಹೊರಹೊರಟರು. ನಂತರ ಪ್ರಭಾಸಕ್ಷೇತ್ರಕ್ಕೆ ಬಂದು ತಮಗೆ ಇಷ್ಟಬಂದಂತೆ ಡೇರೆಗಳನ್ನು ನಿರ್ಮಿಸಿಕೊಂಡು, ತಮ್ಮೊಂದಿಗಿದ್ದ ಬಹುವಾದ ಭಕ್ಷ್ಯ- ಪಾನೀಯಗಳೊಂದಿಗೆ ಅಲ್ಲಿ ಬೀಡುಬಿಟ್ಟರು.
ನಿವಿಷ್ಟಾಂಸ್ತಾನ್ನಿಶಮ್ಯಾಥ ಸಮುದ್ರಾಂತೇ ಸ ಯೋಗವಿತ್ |
ಜಗಾಮಾಮಂತ್ರ್ಯ ತಾನ್ ವೀರಾನುದ್ಧವೋಽರ್ಥವಿಶಾರದಃ ||14||
ಸಮುದ್ರತೀರದಲ್ಲಿ ಆ ಯಾದವರು ನೆರೆದಿರುವರೆಂದು ಕೇಳಿ ತಿಳಿದ ಅರ್ಥ ವಿಶಾರದನಾದ ಯೋಗಜ್ಞನಾದ ಉದ್ಧವನು ಧೀರರಾದ ಅವರನ್ನು ಭೇಟಿ ಮಾಡಿ, ಮಾತನಾಡಿಸಿ ಅಲ್ಲಿಂದ ಹೊರಟನು.
ತಂ ಪ್ರಸ್ಥಿತಂ ಮಹಾತ್ಮಾನಮಭಿವಾದ್ಯ ಕೃತಾಂಜಲಿಮ್ |
ಜಾನನ್ ವಿನಾಶಂ ವೃಷ್ಣೀನಾಂ ನೇಚ್ಛದ್ ವಾರಯಿತುಂ ಹರಿಃ ||15||
ವೃಷ್ಣಿಗಳ ನಾಶವು ಖಚಿತವೆಂದು ತಿಳಿದಿದ್ದ ಶ್ರೀಕೃಷ್ಣನು ನಮಸ್ಕರಿಸಿ ಕೈಮುಗಿದು ನಿಂತ, ಅಲ್ಲಿಂದ ಹೊರಟಿರುವ ಮಹಾತ್ಮನಾದ ಉದ್ಧವನನ್ನು ತಡೆಯಲು ಬಯಸಲಿಲ್ಲ.
ತತಃ ಕಾಲಪರೀತಾಸ್ತೇ ವೃಷ್ಣ್ಯಂಧಕಮಹಾರಥಾಃ |
ಅಪಶ್ಯನ್ನುದ್ಧವಂ ಯಾಂತಂ ತೇಜಸಾಽಽವೃತ್ಯ ರೋದಸೀ ||16||
ಇಷ್ಟಾದ ನಂತರ ಕಾಲದ ಸುಳಿಗೆ ಸಿಕ್ಕಿ ಆ ವೃಷ್ಣ್ಯಂಧಕ ವಂಶದ ಮಹಾರಥರು ತೇಜಸ್ಸಿನಿಂದ ಭೂಮ್ಯಾಕಾಶವನ್ನು ಆವರಿಸಿರುವ ಉದ್ಧವನು ಹೊರಟು ಹೋಗುತ್ತಿರುವುದನ್ನು ಕಂಡರು.
ಬ್ರಾಹ್ಮಣಾರ್ಥೇಷು ಯತ್ಸಿದ್ಧಮನ್ನಂ ತೇಷಾಂ ಮಹಾತ್ಮನಾಮ್ |
ತದ್ ವಾನರೇಭ್ಯಃ ಪ್ರದದುಃ ಸುರಾಗಂಧರಸಾನ್ವಿತಮ್ ||17||
ಮಹಾತ್ಮರಾದ ಬ್ರಾಹ್ಮಣರಿಗೋಸ್ಕರ ಸಿದ್ಧಪಡಿಸಿದ ಅವರ ಬಳಿ ಇದ್ದ ಯಾವ ಅನ್ನವಿದೆಯೋ ಅದನ್ನು ಮದ್ಯದೊಂದಿಗೆ ಬೆರೆಸಿ ಕಪಿಗಳಿಗೆ ಹಂಚಿದರು.
ತತಸ್ತೂರ್ಯಶತಾಕೀರ್ಣಂ ನಟನರ್ತಕಸಂಕುಲಮ್
ಅವರ್ತತ ಮಹಾಪಾನಂ ಪ್ರಭಾಸೇ ತಿಗ್ಮತೇಜಸಾಮ್ ||18||
ಆ ಹೊತ್ತಿಗೆ ಸರಿಯಾಗಿ ಪ್ರಭಾಸ ಕ್ಷೇತ್ರದಲ್ಲಿ ವಿಚಿತ್ರವಾದ ತೇಜಸ್ಸುಳ್ಳ ಆ ಯಾದವರ ಮಧ್ಯದಲ್ಲಿ ನೂರಾರು ವಾದ್ಯಘೋಷಗಳಿಂದ ಕೂಡಿದ, ಅನೇಕ ಮಂದಿ ನಾಟ್ಯಗಾರರಿಂದ ಕೂಡಿದ ಮಹಾಪಾನೋತ್ಸವವು ಆರಂಭವಾಯಿತು.
ಕೃಷ್ಣಸ್ಯ ಸನ್ನಿಧೌ ರಾಮಃ ಸಹಿತಃ ಕೃತವರ್ಮಣಾ |
ಅಬ್ರವೀತ್ ಯುಯುಧಾನಶ್ಚ ಗದೋ ಬಭ್ರುಸ್ತಥೈವ ಚ ||19||
ಬಲರಾಮನು ಕೃಷ್ಣನ ಸನ್ನಿಧಿಯಲ್ಲಿ ಕೃತವರ್ಮನೊಂದಿಗೆ ಮದ್ಯಪಾನವನ್ನು ಮಾಡಿದನು. ಅಂತೆಯೇ ಯುಯುಧಾನನೂ,

ಗದನೂ, ಬಭ್ರುವೂ ಮದ್ಯಪಾನವನ್ನು ಮಾಡಿದರು.
ತತಃ ಪರಿಷದೋ ಮಧ್ಯೇ ಯುಯುಧಾನೋ ಮದೋತ್ಕಟಃ |
ಅಬ್ರವೀತ್ ಕೃತವರ್ಮಾಣಮವಹಾಸ್ಯಾವಮತ್ಯ ಚ ॥20॥
ಅವರೆಲ್ಲರೂ ಕಂಠಪೂರ್ತಿ ಕುಡಿದ ನಂತರ ಆ ಗುಂಪಿನ ಮಧ್ಯದಲ್ಲಿ ಮದೋನ್ಮತ್ತನಾದ ಯುಯುಧಾನನು ಕೃತವರ್ಮನನ್ನು ಅವಹೇಳನೆ ಮಾಡುತ್ತಾ ಅವನನ್ನು ಅವಮಾನಿಸುವಂತೆ ಹೀಗೆಂದನು.
ಕಃ ಕ್ಷತ್ರಿಯೋ ಹನ್ಯಮಾನಃ ಸುಪ್ತಾನ್ ಹನ್ಯಾನ್ ಮೃತಾನಿವ |
ತನ್ನ ಮೃಷ್ಯಂತಿ ಹಾರ್ದಿಕ್ಯ ಯಾದವಾ ಯತ್ತ್ವಯಾ ಕೃತಮ್ ॥21॥
ಯಾವ ಮತಿಗೆಟ್ಟ ಕ್ಷತ್ರಿಯನು ಸತ್ತವರಂತೆ ಮಲಗಿರುವವರನ್ನು ಹೊಡೆದಾನು? ಹೇ ಹಾರ್ದಿಕ್ಯನಾದ ಕೃತವರ್ಮನೇ, ನೀನು ಮಾಡಿದ ಆ ಕೆಲಸವನ್ನು ಯಾದವರು ಸಹಿಸಲಾರರು.
ಇತ್ಯುಕ್ತೇ ಯುಯುಧಾನೇನ ಪೂಜಯಾಮಾಸ ತದ್ ವಚಃ |
ಪ್ರದ್ಯುಮ್ನೋ ರಥಿನಾಂ ಶ್ರೇಷ್ಠೋ ಹಾರ್ದಿಕ್ಯಮವಮತ್ಯ ಚ ॥22॥
ಹೀಗೆ ಯುಯುಧಾನನು ಹೇಳಿದಾಗ, ರಥಿಗಳಲ್ಲಿ ಶ್ರೇಷ್ಠನಾದ ಪ್ರದ್ಯುಮ್ನನು ಕೃತವರ್ಮನನ್ನು ಅವಮಾನಿಸುತ್ತಾ ಯುಯುಧಾನನ ಮಾತನ್ನು ಗೌರವಿಸಿದನು.
ತತಃ ಪರಮಸಂಕ್ರುದ್ಧಃ ಕೃತವರ್ಮಾ ತಮಬ್ರವೀತ್ |
ನಿರ್ದಿಶನ್ನಿವ ಸಾವಜ್ಞಂ ತದಾ ಸವ್ಯೇನ ಪಾಣಿನಾ ॥23॥
ಇಷ್ಟಾದ ಕೂಡಲೇ ಬಹಳ ಕೋಪಗೊಂಡ ಕೃತವರ್ಮನು ತಿರಸ್ಕಾರದಿಂದ ಎಡಗೈಯಿಂದ ಅವನನ್ನು ತೋರಿಸುತ್ತಾ ಹೀಗೆಂದನು.
ಭೂರಿಶ್ರವಾಃ ಛಿನ್ನಬಾಹುರ್ಯುದ್ಧೇ ಪ್ರಾಯಗತಸ್ತ್ವಯಾ |
ವಧೇನ ಸುನೃಶಂಸೇನ ಕಥಂ ವೀರೇಣ ಪಾತಿತಃ ॥24॥
ಯುದ್ಧದಲ್ಲಿ ಕತ್ತರಿಸಿದ ಕೈಗಳುಳ್ಳ. ಪ್ರಾಯೋಪವೇಶದಲ್ಲಿ ತೊಡಗಿದ್ದ ಭೂರಿಶ್ರವಸನು ವೀರನಾದ, ವಂಚಕನಾದ ನಿನ್ನಿಂದ ಹೇಗೆ ಪೆಟ್ಟುತಿಂದು ಬಿದ್ದನು?
ಇತಿ ತಸ್ಯ ವಚಃ ಶ್ರುತ್ವಾ ಕೇಶವಃ ಪರವೀರಹಾ |
ತಿರ್ಯಕ್ಸರೋಷಯಾ ದೃಷ್ಟ್ಯಾ ವೀಕ್ಷಾಂಚಕ್ರೇ ಸ ಮನ್ಯುಮಾನ್ ॥25॥
ಕೃತವರ್ಮನ ಈ ರೀತಿಯ ಮಾತುಗಳನ್ನು ಕೇಳಿ, ಪರರ ಶೌರ್ಯವನ್ನು ಅಪಹರಿಸತಕ್ಕ ಕೇಶವನು ಕೋಪಗೊಂಡವನಾಗಿ ಕ್ರೋಧದಿಂದ ಕೂಡಿದ ಕಡೆಗಣ್ಣ ದೃಷ್ಟಿಯಿಂದ ಅವನನ್ನು ನೋಡಿದನು.
ಮಣಿಃ ಸ್ಯಮಂತಕಶ್ಚೈವ ಯಃ ಸ ಸತ್ರಾಜಿತೋಽಭವತ್ |
ತಾಂ ಕಥಾಂ ಶ್ರಾವಯಾಮಾಸ ಸಾತ್ಯಕಿರ್ಮಧುಸೂದನಮ್ ॥26॥
ಸ್ಯಮಂತಕಮಣಿಯು ಸತ್ರಾಜಿತನಿಗೆ ಏನು ಸಿಕ್ಕಿತ್ತೋ ಆ ಸಂದರ್ಭದಲ್ಲಿ ನಡೆದ ಘಟನೆಗಳನ್ನು ಸಾತ್ಯಕಿಯು ಕೃಷ್ಣನಿಗೆ ನೆನಪಿಸಿದನು.
ತಚ್ಛ್ರುತ್ವಾ ಕೇಶವಸ್ಯಾಂಕಮಗಮದ್ ರುದತೀ ತದಾ |
ಸತ್ಯಭಾಮಾ ಪ್ರಕುಪಿತಾ ಕೋಪಯಂತೀ ಜನಾರ್ದನಮ್ ॥27॥
ಆ ಕಥೆಯನ್ನು ಕೇಳಿ ಸತ್ಯಭಾಮೆಯು ಕೋಪಗೊಂಡವಳಾಗಿ ಕೃಷ್ಣನನ್ನು ಕೋಪಗೊಳಿಸುವುದಕ್ಕಾಗಿ ಅಳುತ್ತಾ ಕೃಷ್ಣನ ಸಮೀಪಕ್ಕೆ ಹೋದಳು.
ತತ ಉತ್ಥಾಯ ಸಕ್ರೋಧಃ ಸಾತ್ಯಕಿರ್ವಾಕ್ಯಮಬ್ರವೀತ್ ॥28॥
ಆಗ ಕೋಪಗೊಂಡಿದ್ದ ಸಾತ್ಯಕಿಯು ಎದ್ದು ನಿಂತು ಹೀಗೆಂದನು.
ಪಂಚಾನಾಂ ದ್ರೌಪದೇಯಾನಾಂ ಧೃಷ್ಟದ್ಯುಮ್ನಶಿಖಂಡಿನೋಃ |
ಏಷ ಗಚ್ಛಾಮಿ ಪದವೀಂ ಸತ್ಯೇನ ಚ ತಥಾ ಶಪೇ ॥29॥
ದ್ರೌಪದಿಯ ಐದುಮಂದಿ ಮಕ್ಕಳ ಹಾಗೂ ಧೃಷ್ಟದ್ಯುಮ್ನ, ಶಿಖಂಡಿ ಇವರ ಅಧಿಕಾರಪದವಿಯನ್ನು ನಾನು ವಹಿಸಿಕೊಳ್ಳುತ್ತೇನೆ. ಸತ್ಯವಾದ ಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ.
ಸೌಪ್ತಿಕೇ ಯೇ ಚ ನಿಹತಾಃ ಸುಪ್ತಾ ಯೇನ ದುರಾತ್ಮನಾ |
ದ್ರೋಣಪುತ್ರಸಹಾಯೇನ ಪಾಪೇನ ಕೃತವರ್ಮಣಾ ॥30॥
ಸಮಾಪ್ತಮಾಯುರಸ್ಯಾದ್ಯ ಯಶಶ್ಚೈವ ಸುಮಧ್ಯಮೇ |
ಇತ್ಯೇವಮುಕತ್ವ ಖಡ್ಗೇನ ಕೇಶವಸ್ಯ ಸಮೀಪತಃ ॥31॥
ಅಭಿದ್ರುತ್ಯ ಶಿರಃ ಕ್ರುದ್ಧಶ್ಚಿಚ್ಛೇದ ಕೃತವರ್ಮಣಃ ॥32॥
ಹೇ ಸುಮಧ್ಯಮಳೇ, ಆ ಯುದ್ಧದ ಕೊನೆಯ ರಾತ್ರಿಯಲ್ಲಿ ಮಲಗಿದ್ದ ಆ ಯಾವ ದ್ರೌಪದಿ ಪುತ್ರರು ಅಶ್ವತ್ಥಾಮನ ಜೊತೆಗಿದ್ದ ದುರಾತ್ಮನಾದ, ಪಾಪಿಷ್ಠನಾದ ಯಾವ ಕೃತವರ್ಮನಿಂದ ಹತರಾದರೋ ಅಂತಹ ಈ ಕೃತವರ್ಮನ ಆಯುಷ್ಯವು, ಯಶಸ್ಸು ಇಂದಿಗೆ ಮುಗಿಯಿತು. ಇಷ್ಟು ಹೇಳಿ ಕೃಷ್ಣನ ಸಮೀಪದಿಂದ ಓಡಿಬಂದು ಕೋಪಾವಿಷ್ಟನಾಗಿ ಕೃತವರ್ಮನ ಶಿರಸ್ಸನ್ನು ಖಡ್ಗದಿಂದ ತುಂಡರಿಸಿದನು.
ತಥಾಽನ್ಯಾನಪಿ ನಿಘ್ನಂತಂ ಯುಯುಧಾನಂ ಸಮಂತತಃ |
ಅಭ್ಯಧಾವದ್ ಹೃಷೀಕೇಶೋ ವಿನಿವಾರಯಿತುಂ ತದಾ ॥33॥
ಇದರೊಂದಿಗೆ ಆಗ ಸುತ್ತಲೂ ನೆರೆದಿದ್ದ ಬೇರೆಯವರನ್ನೂ ಕೊಲ್ಲಲು ಮುಂದಾದ ಯುಯುಧಾನನನ್ನು (ಸಾತ್ಯಕಿಯನ್ನು) ತಡೆಯುವುದಕ್ಕಾಗಿ ಶ್ರೀಕೃಷ್ಣನು ಓಡಿದನು.

ಏಕೀಭೂತಾಸ್ತತಃ ಸರ್ವೇ ಕಾಲಪರ್ಯಾಯಚೋದಿತಾಃ |
ಭೋಜಾಂಧಕಾ ಮಹಾರಾಜ ಶೈನೇಯಂ ಪರ್ಯವಾರಯನ್ ॥34॥
ಹೇ ಮಹಾರಾಜನೇ, ಆಗ ಕಾಲಪರಿವರ್ತನೆಯಿಂದ ಪ್ರಚೋದಿತರಾದ ಭೋಜಾಂಧಕರೆಲ್ಲರೂ ಒಂದಾಗಿ ಸಾತ್ಯಕಿಯನ್ನು ಸುತ್ತುವರಿದರು.
ತಾನ್ ದೃಷ್ಟ್ವಾ ಪತತಸ್ತೂರ್ಣಮಭಿಕ್ರುದ್ಧಾನ್ ಜನಾರ್ದನಃ |
ನ ಚುಕ್ರೋಧ ಮಹಾತೇಜಾ ಜಾನನ್ ಕಾಲಸ್ಯ ಪರ್ಯಯಮ್ ॥35॥
ಆ ಕೂಡಲೇ ಮುಗಿಬಿದ್ದ ಹಾಗೂ ಕೋಪಗೊಂಡ ಅವರನ್ನು ನೋಡಿ ಮಹಾತೇಜಸ್ವಿಯಾದ ಶ್ರೀಕೃಷ್ಣನು ಕಾಲಪರಿವರ್ತನೆಯನ್ನು ಬಲ್ಲವನಾದುದರಿಂದ ಕೋಪಗೊಳ್ಳಲಿಲ್ಲ.
ತೇ ತು ಪಾನಮದಾವಿಷ್ಟಾಶ್ಚೋದಿತಾಃ ಕಾಲಧರ್ಮಣಾ |
ಯುಯುಧಾನಮಥಾಭ್ಯಘ್ನನ್ನುಚ್ಛಿಷ್ಟೈರ್ಭಾಜನೈಸ್ತದಾ ॥36॥
ಕಾಲಧರ್ಮದಿಂದ ಪ್ರಚೋದಿತರಾದ, ಜೊತೆಗೆ ಮದ್ಯಪಾನದಿಂದ ಮದೋನ್ಮತ್ತರಾಗಿದ್ದ ಅವರೆಲ್ಲರೂ ಎಂಜಲಿನ ಪಾತ್ರೆಗಳಿಂದಲೇ ಸಾತ್ಯಕಿಯನ್ನು ಹೊಡೆದರು.
ಹನ್ಯಮಾನೇ ತು ಶೈನೇಯೇ ಕ್ರುದ್ಧೋ ರುಗ್ಮಿಣಿನಂದನಃ |
ತದನಂತರಮಾಗಚ್ಛನ್ಮೋಚಯಿಷ್ಯನ್ ಶಿನೇಃ ಸುತಮ್ ॥37॥
ಸಾತ್ಯಕಿಯನ್ನು ಹಾಗೆ ಹೊಡೆಯುತ್ತಿರುವಾಗಲೇ ಕೋಪಾವಿಷ್ಟನಾದ ರುಗ್ಮಿಯ ಮಗನಾದ ಪ್ರದ್ಯುಮ್ನನು, ಶಿನಿಯ ಮಗನಾದ ಅವನನ್ನು ಬಿಡಿಸುವುದಕ್ಕಾಗಿ ಆ ಕೂಡಲೇ ಓಡಿಬಂದನು.
ಸ ಭೋಜೈಃ ಸಹ ಸಂಯುಕ್ತಃ ಸಾತ್ಯಕಿಶ್ಚಾಂಧಕೈಃ ಸಹ |
ವ್ಯಾಯಚ್ಛಮಾನೌ ತೌ ವೀರೌ ಬಾಹುದ್ರವಿಣಶಾಲಿನೌ ॥38॥
ಬಹುತ್ವಾನ್ನಿಹತೌ ತತ್ರ ಉಭೌ ಕೃಷ್ಣಸ್ಯ ಪಶ್ಯತಃ ॥39॥
ಆ ಪ್ರದ್ಯುಮ್ನನು ಭೋಜರೊಂದಿಗೆ ಕೂಡಿ, ಸಾತ್ಯಕಿಯು ಅಂಧಕರೊಂದಿಗೆ, ಹೀಗೆ ಬಾಹುಬಲದ ಸಂಪತ್ತುಳ್ಳ ಆ ವೀರರು ಯುದ್ಧ ಮಾಡುತ್ತಿದ್ದ ಅವರು ತುಂಬಾ ಜನ ಇದ್ದುದರಿಂದ ಕೃಷ್ಣನು ನೋಡುತ್ತಿದ್ದಂತೆಯೇ ಇಬ್ಬರೂ ಅಲ್ಲೇ ಹತರಾದರು.
ಹತಂ ದೃಷ್ಟ್ವಾ ಚ ಶೈನೇಯಂ ಪುತ್ರಂ ಚ ಯದುನಂದನಃ |
ಏರಕಾಣಾಂ ತತೋ ಮುಷ್ಟಿಂ ಕೋಪಾಜ್ಜಗ್ರಾಹ ಕೇಶವಃ ॥40॥
ಸಾತ್ಯಕಿ ಹಾಗೂ ತನ್ನ ಮಗ ಇವರಿಬ್ಬರೂ ಹತರಾದುದನ್ನು ಕಂಡು, ಯದುನಂದನನಾದ ಕೇಶವನು ಕೋಪದಿಂದ ಅವರನ್ನು ಹೊಡೆಯಲೋಸುಗ ಜೊಂಡು ಹುಲ್ಲಿನ ಒಂದು ಮುಷ್ಟಿಯನ್ನು ತೆಗೆದುಕೊಂಡನು.
ತದಭೂನ್ಮುಸಲಂ ಘೋರಂ ವಜ್ರಕಲ್ಪಮಯೋಮಯಮ್ |
ಜಘಾನ ಕೃಷ್ಣಸ್ತಾಂಸ್ತೇನ ಯೇ ಯೇ ಪ್ರಮುಖತೋಽಭವನ್ ॥41॥
ಆ ಹುಲ್ಲಿನ ಮುಷ್ಟಿಯು ವಜ್ರಸದೃಶವಾದ ಉಕ್ಕಿನಿಂದ ಮಾಡಲ್ಪಟ್ಟ, ಘೋರವಾದ ಮುಸಲ(ಒನಕೆ)ವಾಗಿ ಮಾರ್ಪಟ್ಟಿತು. ಕೃಷ್ಣನು ಆ ಮುಷ್ಟಿಯಿಂದ (ಮುಸಲದಿಂದ) ಯಾರೆಲ್ಲ ಹೊಡೆದಾಟದಲ್ಲಿ ಪ್ರಮುಖರಾಗಿದ್ದರೋ ಅವರೆಲ್ಲರನ್ನೂ ಸಂಹರಿಸಿದನು.
ತತೋಽಂಧಕಾಶ್ಚ ಭೋಜಾಶ್ಚ ಶೈನೇಯಾ ವೃಷ್ಣಯಸ್ತಥಾ |
ಜಘ್ನುರನ್ಯೋನ್ಯಮಾಕ್ರಂದೇ ಮುಸಲೈಃ ಕಾಲಚೋದಿತಾಃ ॥42॥
ಅನಂತರ ಅಂಧಕರು, ಭೋಜರು, ಶೈನೇಯರು, ವೃಷ್ಣಿಗಳು ಕಾಲದಿಂದ ಪ್ರಚೋದಿತರಾಗಿ, ಜೋರಾಗಿ ಕಿರುಚುತ್ತಾ ಒನಕೆಗಳಿಂದ ಪರಸ್ಪರ ಹೊಡೆದಾಡಲಾರಂಭಿಸಿದರು.
ಯಸ್ತೇಷಾಮೇರಕಾಂ ಕಶ್ಚಿಜ್ಜಗ್ರಾಹ ಕುಪಿತೋ ನರಃ |
ವಜ್ರಭೂತೇವ ಸಾ ರಾಜನ್ನದೃಶ್ಯತ ತದಾ ವಿಭೋ ॥43॥
ಹೇ ರಾಜನೇ, ಅವರಲ್ಲಿ ಕೋಪಿಷ್ಠನಾದ ಯಾವೊಬ್ಬ ಮನುಷ್ಯನೂ ಹೊಡೆಯುವುದಕ್ಕಾಗಿ ಜೊಂಡುಹುಲ್ಲನ್ನು ಸ್ವೀಕರಿಸುವನೋ ಅದು ವಜ್ರದಂತೆ ಮಾರ್ಪಾಡು ಹೊಂದಿ ಕಾಣಿಸುತ್ತಿತ್ತು.
ತೃಣಂ ಚ ಮುಸಲೀಭೂತಮಪಿ ತತ್ರ ವ್ಯದೃಶ್ಯತ |
ಬ್ರಹ್ಮದಂಡಕೃತಂ ಸರ್ವಮಿತಿ ತದ್ವಿದ್ಧಿ ಭಾರತ ॥44॥
ಆ ಪ್ರದೇಶದಲ್ಲಿ ಹುಲ್ಲು ಕೂಡ ಒನಕೆಯಾಗಿ ಕಾಣಲಾರಂಭಿಸಿತು. ಹೇ ಭಾರತನೇ, ಆ ಎಲ್ಲವೂ ಬ್ರಾಹ್ಮಣರ ಶಾಪದಿಂದ ನಡೆದಿದೆ ಎಂದು ತಿಳಿ.
ಆವಿಧ್ಯಾವಿಧ್ಯ ತೇ ರಾಜನ್ ಪ್ರಹರಂತಿ ಸ್ಮ ತೈಸ್ತೃಣೈಃ |
ತದ್ವಜ್ರಭೂತಂ ಮುಸಲಂ ವ್ಯದೃಶ್ಯತ ತದಾ ದೃಢಮ್ ॥45॥
ಹೇ ರಾಜನೇ, ಅವರೆಲ್ಲರೂ ಹುಲ್ಲುಗಳನ್ನು ಕಿತ್ತು-ಕಿತ್ತು ಆ ಹುಲ್ಲುಗಳಿಂದ ಹೊಡೆಯುತ್ತಿದ್ದರು. ಆ ಕಿತ್ತ ಎಲ್ಲ ಹುಲ್ಲೂ ಕೂಡ ವಜ್ರದಂತೆ ಗಟ್ಟಿಯಾದ ಒನಕೆಯಾಗಿ ಕಾಣುತ್ತಿತ್ತು.
ಅವಧೀತ್ ಪಿತರಂ ಪುತ್ರಃ ಪಿತಾ ಪುತ್ರಂ ಚ ಭಾರತ |
ಮತ್ತಾಃ ಪರಿಪತಂತಿ ಸ್ಮ ಯೋಧಯಂತಃ ಪರಸ್ಪರಮ್ ॥46॥
ಹೇ ಭಾರತನೇ, ಪಾನದಿಂದ ಮತ್ತರಾದ ಅವರೆಲ್ಲರೂ ತಂದೆಯನ್ನು ಮಗನೂ, ಮಗನನ್ನು ತಂದೆಯೂ ಹೀಗೆ ಪರಸ್ಪರ ಹೊಡೆದಾಡಿಕೊಂಡು ಬೀಳತೊಡಗಿದರು.
ಪತಂಗಾ ಇವ ಚಾಗ್ನೌ ತೇ ನಿಪೇತುಃ ಕುಕುರಾಂಧಕಾಃ |

ನಾಸೀತ್ ಪಲಾಯನೇ ಬುದ್ಧಿರ್ವಧ್ಯಮಾನಸ್ಯ ಕಸ್ಯಚಿತ್ ॥47॥
ಆ ಕುಕುರವಂಶದವರೂ, ಅಂಧಕವಂಶದವರೂ ಅಗ್ನಿಯಲ್ಲಿ ಪತಂಗಗಳು ಬಿದ್ದಂತೆ ಬೀಳತೊಡಗಿದರು. ಹೊಡೆದಾಟದಲ್ಲಿ ಪೆಟ್ಟುತಿನ್ನುತ್ತಿರುವ ಯಾರೊಬ್ಬರಿಗೂ ಅಲ್ಲಿಂದ ಓಡಿಹೋಗಬೇಕೆಂಬ ಬುದ್ಧಿಯೇ ಉಂಟಾಗಲಿಲ್ಲ.
ತತ್ರಾಪಶ್ಯನ್ ಮಹಾಬಾಹುರ್ಜಾನನ್ ಕಾಲಸ್ಯ ಪರ್ಯಯಮ್ |
ಮುಸಲಂ ಸಮವಷ್ಟಭ್ಯ ತಸ್ಥೌ ಸ ಮಧುಸೂದನಃ ॥48॥
ಮಹಾಬಾಹುವಾದ ಆ ಶ್ರೀಕೃಷ್ಣನು ಕಾಲಚಕ್ರದ ಗತಿಯನ್ನು ಬಲ್ಲವನಾಗಿ ಒನಕೆಯನ್ನು ಊರಿ ನಿಂತವನಾಗಿ ಅಲ್ಲಿ ಸುತ್ತಲೂ ನೋಡಿದನು.
ಸಾಂಬಂ ಚ ನಿಹತಂ ದೃಷ್ಟ್ವಾ ಚಾರುದೇಷ್ಣಂ ಚ ಮಾಧವಃ |
ಪ್ರದ್ಯುಮ್ನಂ ಚಾನಿರುದ್ಧಂ ಚ ತತಶ್ಚುಕ್ರೋಧ ಭಾರತ ॥49॥
ಹೇ ಭಾರತನೇ, ಹತನಾದ ಸಾಂಬನನ್ನೂ, ಚಾರುದೇಷ್ಣನನ್ನೂ, ಪ್ರದ್ಯುಮ್ನನನ್ನೂ, ಅನಿರುದ್ಧನನ್ನೂ ನೋಡಿದ ಶ್ರೀಕೃಷ್ಣನು ಆಗ ಕೋಪಗೊಂಡನು.
ಗದಂ ವೀಕ್ಷ್ಯ ಶಯಾನಂ ಚ ಭೃಶಂ ಕೋಪಸಮನ್ವಿತಃ |
ಸ ನಿಃಶೇಷಂ ತದಾ ಚಕ್ರೇ ಶಾರ್ಙ್ಗಚಕ್ರಗದಾಧರಃ ॥50॥
ಸತ್ತುಬಿದ್ದ ಗದನನ್ನೂ ನೋಡಿದ ಅವನು ಬಹಳ ಕೋಪಾವಿಷ್ಟನಾಗಿ ಶಾರ್ಙ್ಗ-ಚಕ್ರ ಹಾಗೂ ಗದೆಗಳನ್ನು ಧರಿಸಿದವನಾಗಿ, ಅಲ್ಲಿ ಯಾರೂ ಉಳಿಯದಂತೆ ಎಲ್ಲರನ್ನೂ ಸಂಹರಿಸಿದನು.
ತಂ ನಿಘ್ನಂತಂ ಮಹಾತೇಜಾ ಬಭ್ರುಃ ಪರಪುರಂಜಯಃ |
ದಾರುಕಶ್ಚೈವ ದಾಶಾರ್ಹಮೂಚತುರ್ಯನ್ನಿಬೋಧ ತತ್ ॥51॥
ಹೀಗೆ ಸಂಹರಿಸುತ್ತಿರುವ ಶ್ರೀಕೃಷ್ಣನನ್ನು ಕುರಿತು ಮಹಾತೇಜಸ್ವಿಯಾದ, ಬಹುಪರಾಕ್ರಮಿಯಾದ ಬಭ್ರುವು ದಾರುಕನೂ ಸೇರಿಕೊಂಡು ಏನು ಹೇಳಿದರೋ ಅದನ್ನು ಕೇಳು.
ಭಗವನ್ನಿಹತಾಃ ಸರ್ವೇ ತ್ವಯಾ ಭೂಯಿಷ್ಠಶೋ ನರಾಃ |
ರಾಮಸ್ಯ ಪದಮನ್ವಿಚ್ಛ ತತ್ರ ಗಚ್ಛಾಮ ಯತ್ರ ಸಃ ॥52॥
ಹೇ ಭಗವನ್, ನಿನ್ನಿಂದ ಬಹಳ ಮನುಷ್ಯರೆಲ್ಲರೂ ಹತರಾದರು. ಬಲರಾಮ ಎಲ್ಲಿರುವನೆಂದು ಹುಡುಕು. ಅವನು ಎಲ್ಲಿ ಹೋಗಿರುವನೋ ನಾವೂ ಅಲ್ಲಿಗೆ ಹೋಗೋಣ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ಏರಕರೂಪಮುಸಲೇನ ಸರ್ವಭೋಜವೃಷ್ಣ್ಯಂಧಕಯಾದವಸಂಹಾರೋ ನಾಮ ಚತುರ್ಥೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ತತಃ ಪರೇಶೋಽಗಣಿತಾನುಭಾವಃ
ಸ್ವಸಾರಥಿಂ ಪಾಂಡವಾನಾಂ ಸಕಾಶಮ್ |
ಸ್ವಲೋಕಯಾನಪ್ರತಿವೇದನಾಯ
ಸ್ವಸ್ಯಾನು ಚೈಷಾಂ ತ್ವರಯಾಽಭ್ಯಯಾತಯತ್ ॥
ಬಳಿಕ ಅನಂತಶಕ್ತಿಯುಳ್ಳ ಶ್ರೀಕೃಷ್ಣನು ಪಾಂಡವರಿಗೆ ತನ್ನ ಅನಂತರ ತಾವೂ ತಮ್ಮ ಲೋಕಕ್ಕೆ ತೆರಳಬೇಕೆಂದು ಸೂಚನೆ ಕೊಡುವುದಕ್ಕಾಗಿ ಅವರ ಬಳಿಗೆ ತನ್ನ ಸಾರಥಿಯಾದ ದಾರುಕನನ್ನು ತ್ವರೆಯಿಂದ ಕಳುಹಿಸಿಕೊಟ್ಟನು.
ಅಥಾಽಸತಃ ಪಿಪ್ಪಲಮೂಲ ಈಶಿತು-
ರೂರುಸ್ಥಿತಂ ಪಾದತಲಂ ಸುತಾಮ್ರಮ್ |
ದೃಷ್ಟ್ವಾ ಜರಾ ನಾಮ ಸಸರ್ಜ ಶಲ್ಯಂ
ಭಕ್ತೋಽಪ್ಯಲಂ ರೋಹಿತಂ ಶಂಕಮಾನಃ ॥
ಬಳಿಕ ಅಶ್ವತ್ಥದ ಬುಡದಲ್ಲಿ ಕುಳಿತ ಶ್ರೀಕೃಷ್ಣನು, ತೊಡೆಯ ಮೇಲಿರಿಸಿದ್ದ ಬಲು ಕೆಂಪಾದ ಅಂಗಾಲನ್ನು ಕಂಡು ಜರ ಎಂಬ ಬೇಡ, ಬಹಳ ಭಕ್ತನಾಗಿದ್ದರೂ, ರೋಹಿತ ಮೃಗವೆಂದು ಭ್ರಮಿಸಿ ಬಾಣವನ್ನೆಸೆದನು.
ಅಚ್ಛೇದ್ಯಾಭೇದ್ಯದೇಹಸ್ಯ ಶಲ್ಯೇ ಪಾದಮುಪಸ್ಥಿತೇ |
ಸಮೀಪಮಾಗತೋ ವ್ಯಾಧೋ ದೃಷ್ಟ್ವಾ ಭೀತೋಪತದ್ ಭುವಿ ॥
ಅಚ್ಛೇದ್ಯ-ಅಭೇದ್ಯ ದೇಹದವನಾದ ಕೃಷ್ಣನ ಪಾದಕ್ಕೆ ಬಾಣಬಿದ್ದಾಗ ಸಮೀಪಕ್ಕೆ ಬಂದ ಬೇಡ ನೋಡಿ, ಭಯಪಟ್ಟು ನೆಲದ ಮೇಲೆ ಬಿದ್ದು ನಮಿಸಿದನು.
ವಿಪ್ರವಾಕ್ಯಂ ಮಾನಯಾನಃ ಕಾರಯಿತ್ವಾಽಮುನಾ ಹರಿಃ |
ಪಾಪಂ ಮಾಂ ಜಹಿ ದೇವೇತಿ ಯಾಚಂತಮನಯದ್ ದಿವಮ್ ॥
ಮುನಿಶಾಪವನ್ನು ಮಾನಿಸುತ್ತ ಶ್ರೀಕೃಷ್ಣನು ಬೇಡನಿಂದ ಅದರಂತೆ ಮಾಡಿಸಿ, ಅವನು `ದೇವ, ಪಾಪಿಯಾದ ನನ್ನನ್ನು ಕೊಲ್ಲು' ಎಂದು ಬೇಡಿದಾಗ ಅವನನ್ನು ಸ್ವರ್ಗಕ್ಕೆ ಕಳುಹಿಸಿದನು.
ಪಾದಪ್ರಹಾರದೋಷೇಣ ತಂ ಭೃಗುಂ ವ್ಯಾಧತಾಂ ಗತಮ್ |
ಪಶ್ಚಾತ್ತಾಪೇನ ಭಕ್ತ್ಯಾ ಚ ಸುಪ್ರೀತಸ್ತಚ್ಛರೀರಿಣಮ್ ॥

ಸ್ವಾಜ್ಞಾಪ್ರಾಪ್ತವಿಮಾನೇನ ದಿವಂ ನಿನ್ಯೇ ಜನಾರ್ದನಃ |
ನೀಚಾ ಯೋನಿರ್ನೀಚನೀಚಂ ಕರ್ಮಾಽಪ್ತಂ ನೀಚಕರ್ಮತಃ ॥
ಅದುಷ್ಟತ್ವಾತ್ತು ಮನಸೋ ಭಕ್ತಿಲೋಪೋ ನ ಚಾಪ್ಯಭೂತ್ |
ಭೃಗೋರತ್ರಾಬುದ್ಧಿಪೂರ್ವಂ ನಾತಿದೋಷಕೃದಪ್ಯಭೂತ್ ॥
ಶ್ರೀಹರಿಗೆ ಕಾಲಿನಿಂದ ಒದ್ದ ಪಾಪದಿಂದ ಭೃಗುಮುನಿ ಬೇಡನ ಜನ್ಮ ಪಡೆದಿದ್ದ. ಶ್ರೀಕೃಷ್ಣನು ಅವನ ಪಶ್ಚಾತ್ತಾಪದಿಂದಲೂ ಭಕ್ತಿಯಿಂದಲೂ ಸುಪ್ರೀತನಾಗಿ ನೀಚಕರ್ಮದಿಂದ ನೀಚವಾದ ಯೋನಿಯನ್ನೂ ನೀಚಕ್ಕಿಂತ ನೀಚವಾದ ಕರ್ಮವನ್ನೂ ಹೊಂದಿದ್ದ ಅವನನ್ನು ಆ ಶರೀರದಿಂದಲೇ ತನ್ನಾಜ್ಞೆಯಿಂದ ಬಂದ ವಿಮಾನದಿಂದ ಸ್ವರ್ಗಕ್ಕೆ ಕಳುಹಿಸಿದನು. ಎದೆಗೆ ಒದ್ದಾಗ ಭೃಗುವಿನ ಮನಸ್ಸು ದುಷ್ಟವಾಗಿರಲಿಲ್ಲವಾದ ಕಾರಣ ವ್ಯಾಧಜನ್ಮದಲ್ಲಿಯೂ ಭಕ್ತಿಲೋಪವಾಗಿರಲಿಲ್ಲ. ಈ ವ್ಯಾಧಜನ್ಮದಲ್ಲಿಯೂ ತಿಳಿಯದೆ ಬಾಣ ಎಸೆದುದರಿಂದ ಹೆಚ್ಚು ಪಾಪಕರವೂ ಆಗಲಿಲ್ಲ.
ತತೋ ವಿರಿಂಚೀಶಪುರಂದರಾದ್ಯಾಃ
ಪುನಃ ಸ್ತುವಂತೋಽಭಿಯಯುಃ ಪ್ರಣಮ್ಯ |
ಕೃಷ್ಣಂ ಸ ಚಾಶ್ವೇವ ಯಯೌ ಸ್ವಲೋಕಂ
ಸ್ವತೇಜಸಾ ಸರ್ವಮಿದಂ ಪ್ರಕಾಶಯನ್ ॥
ಶ್ರೀಕೃಷ್ಣನು ತನ್ನ ಪ್ರಕಾಶದಿಂದ ಈ ಲೋಕವನ್ನೆಲ್ಲ ಬೆಳಗುತ್ತ ಬೇಗನೆ ತನ್ನ ಲೋಕಕ್ಕೆ ತೆರಳಿದನು. ಬ್ರಹ್ಮ-ರುದ್ರ ಇಂದ್ರಾದಿಗಳು ಪುನಃ ಶ್ರೀಕೃಷ್ಣನನ್ನು ಸ್ತೋತ್ರ ಮಾಡುತ್ತ ನಮಿಸಿ, ಅವನನ್ನು ಹಿಂಬಾಲಿಸಿದರು.
ಗೋಪಾಲಮಂತ್ರಂ ಭಜತಾಂ ಫಲಪ್ರದ
ಏಕೇನ ರೂಪೇಣ ಸ ಭುವ್ಯದೃಶ್ಯಃ |
ತಸ್ಥೌ ದ್ವಿತೀಯೇನ ಚ ಸೂರ್ಯಮಂಡಲೇ
ತೃತೀಯಮಾಸೀಚ್ಛಿವಪೂಜಿತಂ ವಪುಃ ॥
ಗೋಪಾಲ ಮಂತ್ರವನ್ನು ಭಜಿಸುವವರಿಗೆ ಫಲಪ್ರದನಾಗಿ ಒಂದು ರೂಪದಿಂದ ಶ್ರೀಕೃಷ್ಣನು ಭೂಮಿಯಲ್ಲಿ ಅದೃಶ್ಯನಾಗಿ ನಿಂತನು. ಎರಡನೇ ರೂಪದಿಂದ ಸೂರ್ಯ ಮಂಡಲದಲ್ಲಿ ನಿಂತನು. ಮೂರನೆಯ ರೂಪದಿಂದ ಶಿವನಿಂದ ಪೂಜಿತನಾಗಿ ನಿಂತನು.
ಸಂಪೂಜಿತಂ ಬ್ರಹ್ಮಲೋಕೇ ಚತುರ್ಥಂ
ಕಂಜೋದ್ಭವೇನಾಥ ಪರಂ ಸ್ವಧಾಮ |
ಸಮಾಪ್ನುವಾನಂ ವಪುರಸ್ಯ ಪಂಚಮಂ
ಭಕ್ತ್ಯಾಽನ್ವಯುರ್ದೇವವರಾಃ ಸ್ವಶಕ್ತ್ಯಾ ॥
ನಾಲ್ಕನೆಯ ರೂಪ ಬ್ರಹ್ಮಲೋಕದಲ್ಲಿ ಬ್ರಹ್ಮನಿಂದ ಪೂಜಿತವಾಗಿ ನಿಂತಿತು. ಬಳಿಕ ತನ್ನ ಪರಂಧಾಮವನ್ನು ಹೊಂದುತ್ತಿದ್ದ ಶ್ರೀಕೃಷ್ಣನ ಐದನೇ ರೂಪವನ್ನು ದೇವೋತ್ತಮರು ಭಕ್ತಿಯಿಂದ ತಮ್ಮ ಶಕ್ತಿ ಇದ್ದಷ್ಟು ಹಿಂಬಾಲಿಸಿದರು.
ತತ್ತೇಜಸಾ ತೇ ಪ್ರವಿಮುಷ್ಟದೃಷ್ಟಯಃ
ಪುರುಷ್ಟುತಾದ್ಯಾ ಅಮಿತೋರುದೀಧಿತೇಃ |
ಯಾವತ್ಸ್ವಗಮ್ಯಂ ತ್ವನುಗಮ್ಯ ತಸ್ಥು-
ರ್ನಿಮೀಲಿತಾಕ್ಷಾ ವಿಹತೋರ್ಧ್ವಚಾರಾಃ ॥
ಅಮಿತ ಮಹಾಪ್ರಕಾಶಶಾಲಿಯಾದ ಶ್ರೀಕೃಷ್ಣನ ಐದನೆಯ ರೂಪದ ಪ್ರಕಾಶದಿಂದ ಇಂದ್ರಾದಿ ದೇವತೆಗಳಿಗೆ ಕಣ್ಣು ಕಾಣದಾಯಿತು. ತಮಗೆ ಎಷ್ಟು ದೂರ ಹಿಂಬಾಲಿಸಲು ಸಾಧ್ಯವೋ ಅಷ್ಟು ದೂರಕ್ಕೆ ಹಿಂಬಾಲಿಸಿ ಕಣ್ಣುಮುಚ್ಚಿ ಮೇಲೆ ಹೋಗಲಾರದೆ ನಿಂತು ಬಿಟ್ಟರು.

ವೀಂದ್ರೇಶಶೇಷಾನುಗತಃ ಸ್ವಯಂಭೂ-
ರ್ಧಾಮ ಪ್ರವಿಷ್ಟಂ ತಮಜಂ ಪ್ರಣಮ್ಯ |
ವೀಂದ್ರಾದಿಕೈರಪ್ಯಯುತಃ ಸ್ವಪಿತ್ರಾಽಽ
ಶ್ಲಿಷ್ಟೋ ರಹಶ್ಚಾಕಥಯತ್ ತಥಾಽಸ್ತೌತ್ ॥
ಗರುಡ, ಶೇಷ, ರುದ್ರರು ಜೊತೆಗೆ ಬರುತ್ತಿದ್ದರೂ ಅವರನ್ನು ಬಿಟ್ಟು ಬ್ರಹ್ಮನು, ವೈಕುಂಠಧಾಮವನ್ನು ಪ್ರವೇಶಿಸಿದ ಹರಿಯನ್ನು ನಮಿಸಿ, ತನ್ನ ತಂದೆಯಾದ ಆತನಿಂದ ಆಲಿಂಗಿತನಾಗಿ ರಹಸ್ಯ ಸಂಭಾಷಣೆಯನ್ನೂ ನಡೆಸಿದನು. ಹಾಗೇ ಸ್ತೋತ್ರವನ್ನೂ ಮಾಡಿದನು.
ಸ ಪೂರ್ವರೂಪೇಣ ಸಮಾಪ್ಯ ಚೈಕ್ಯಂ
ವಿಭಜ್ಯ ಚೇಚ್ಛಾನುಸೃತೋಽಥ ರೇಮೇ |
ಹರಿಃ ಶ್ರಿಯಾ ಬ್ರಹ್ಮಮುಖೈಶ್ಚ ಮುಕ್ತೈಃ
ಸಂಪೂಜ್ಯಮಾನೋಽಮಿತಸದ್ಗುಣಾತ್ಮಾ ॥
ಲಕ್ಷ್ಮಿಯಿಂದಲೂ ಬ್ರಹ್ಮಾದಿ ಮುಕ್ತರಿಂದಲೂ ಚೆನ್ನಾಗಿ ಪೂಜಿಸಿಕೊಳ್ಳುವ, ಅಪರಿಮಿತ ಸದ್ಗುಣಸ್ವರೂಪನಾದ ಶ್ರೀಕೃಷ್ಣನು ತನ್ನ ಮೂಲರೂಪದಿಂದ ಐಕ್ಯ ಹೊಂದಿಯೂ ವಿಶೇಷ ಶಕ್ತಿಯಿಂದ ಬೇರೆಯಾಗಿಯೂ ಇದ್ದು ಇಚ್ಛಾನುಸಾರವಾಗಿ ಲಕ್ಷ್ಮಿಯೊಂದಿಗೆ ವಿಹರಿಸಿದನು.
ಬ್ರಹ್ಮಾಽಪಿ ಶರ್ವಾದಿಯುತಃ ಸ್ವಲೋಕಂ
ಪ್ರಾಪ್ತಃ ಪುನಸ್ತತ್ರ ಗತಂ ಚ ಕೃಷ್ಣಮ್ |
ರೇಮೇಽಭಿಪಶ್ಯನ್ ಪ್ರತಿಪೂಜಯಂಸ್ತಂ

ಸುರಾಶ್ಚ ಸರ್ವೇ ರವಿಬಿಂಬಸಂಸ್ಥಮ್ ॥
ಬ್ರಹ್ಮನೂ ರುದ್ರಾದಿಸಮೇತನಾಗಿ ತನ್ನ ಲೋಕವನ್ನು ಹೊಂದಿ, ಪುನಃ ಅಲ್ಲಿದ್ದ ಕೃಷ್ಣನನ್ನು ನೋಡುತ್ತಾ, ಪೂಜಿಸುತ್ತ ಆನಂದಿಸಿದನು. ಎಲ್ಲ ದೇವತೆಗಳೂ ಸೂರ್ಯ ಬಿಂಬದಲ್ಲಿದ್ದ ಕೃಷ್ಣನನ್ನು ನೋಡುತ್ತ ಪೂಜಿಸುತ್ತ ಆನಂದಿಸಿದರು.
ಯತೋ ನ ದರ್ಶಿತಾ ಭ್ರಾಂತಿಃ ಪ್ರಾದುರ್ಭಾವೇಷ್ವಪಿ ಕ್ವಚಿತ್ |
ದೇಹತ್ಯಾಗಾನುಕಾರೇಣ ಹರಿಣಾ ತದಿಹಾಚ್ಯುತಃ ॥
ಮೋಹಯಿತ್ವಾಽಸುರಾನಂಧಂ ತಮಃ ಪ್ರಾಪಯಿತುಂ ಪ್ರಭುಃ |
ಚಿದಾನಂದೈಕದೇಹೋಽಪಿ ತ್ಯಕ್ತಂ ದೇಹಮಿವಾಪರಮ್ ॥
ಸೃಷ್ಟ್ವಾ ಸ್ವದೇಹೋಪಮಿತಂ ಶಯಾನಂ ಭುವ್ಯಗಾದ್ ದಿವಮ್ |
ದಾರುಕೋಕ್ತ್ಯಾ ಸಮಾಯಾತಃ ಪಾರ್ಥಸ್ತಮದಹತ್ ತದಾ ॥
ರೌಹಿಣೇಯಾದಿಕಾನಾಂ ಚ ಶರೀರಾಣಿ ಪ್ರಧಾನತಃ |
ದಾರುಕೋ ವಿಷ್ಣುಲೋಕಂ ತು ಪುನರಾಪ ಯಥಾಗತಮ್ ॥
ಶ್ರೀಹರಿಯು ಹಿಂದೆ ಯಾವ ಅವತಾರಗಳಲ್ಲಿಯೂ ದೇಹತ್ಯಾಗದ ನಟನೆಯಿಂದ ಭ್ರಾಂತಿ ಉಂಟುಮಾಡದಿದ್ದುದರಿಂದ ಈ ಕೃಷ್ಣಾವತಾರದಲ್ಲಿ ಪ್ರಭುವಾದ ಅಚ್ಯುತನು ಅಸುರರನ್ನು ಮೋಹಗೊಳಿಸಿ, ಅಂಧಂತಮಸ್ಸಿಗೆ ನೂಕಲು ತಾನು ಚಿದಾನಂದ ಮಾತ್ರ ಶರೀರನಾಗಿದ್ದರೂ ತ್ಯಕ್ತವಾದ ದೇಹದಂತೆ ಕಾಣುವ ತನ್ನ ದೇಹಕ್ಕೆ ಸದೃಶವಾದ ಇನ್ನೊಂದು ಗೌಣದೇಹವನ್ನು ನಿರ್ಮಿಸಿ, ನೆಲದ ಮೇಲೆ ಒರಗಿಸಿ ವೈಕುಂಠಕ್ಕೆ ತೆರಳಿದನು. ಆಗ ದಾರುಕನ ಮಾತಿನಿಂದ ಬಂದ ಅರ್ಜುನನು ಅದನ್ನೂ ಬಲರಾಮ ಮುಂತಾದವರ ಮುಖ್ಯಶರೀರಗಳನ್ನೂ ದಹಿಸಿದನು. ದಾರುಕನು ಬಂದ ಹಾಗೆಯೇ ತಿರುಗಿ ವಿಷ್ಣುಲೋಕಕ್ಕೆ ತೆರಳಿದನು.
ತಥೈವ ಜನಮೋಹಾಯ ಪ್ರಾಪ್ಯ ವಹ್ನಾವದೃಶ್ಯತಾಮ್ |
ರುಗ್ಮಿಣ್ಯಗಾದ್ಧರೇಃ ಪಾರ್ಶ್ವಂ ಸತ್ಯಾ ಕೃತ್ವಾ ತಪಸ್ತಥಾ ॥
ಕೃಷ್ಣನಂತೆಯೇ ರುಗ್ಮಿಣಿಯೂ ಜನರಿಗೆ ಮೋಹ ಉಂಟುಮಾಡುವುದಕ್ಕಾಗಿ ಬೆಂಕಿಯಲ್ಲಿ ಅದೃಶ್ಯಳಾದಳು. ಹಾಗೇ ಸತ್ಯಭಾಮೆಯೂ ತಪಸ್ಸು ಮಾಡಿ ಕಾಡಿನಲ್ಲಿ ಮರೆಯಾಗಿ ಹರಿಯ ಬಳಿ ಸೇರಿದಳು.
ಚಿದಾನಂದೈಕದೇಹೇ ಹಿ ದ್ವಿರೂಪೇ ಇವ ತೇ ಯತಃ |
ಏಕೈವಾತಃ ಕೃಷ್ಣವತ್ ತೇ ದುಷ್ಟಾನ್ ಮೋಹಯತಸ್ತಥಾ ॥
ರುಗ್ಮಿಣೀ ಸತ್ಯಭಾಮೆಯರು ಎರಡು ರೂಪದವರಂತಿದ್ದರೂ ಏಕಮಾತ್ರ ಲಕ್ಷ್ಮೀ ಸ್ವರೂಪರೇ ಆಗಿದ್ದು ಚಿದಾನಂದೈಕ ದೇಹರೇ ಆಗಿರುವುದರಿಂದ ಕೃಷ್ಣನಂತೆ ದುಷ್ಟರಿಗೆ ಮೋಹಗೊಳಿಸುತ್ತಾರಷ್ಟೆ!
ಅನ್ಯಾ ಮಹಾಮಹಿಷ್ಯಸ್ತು ತ್ಯಕ್ತ್ವಾ ದೇಹಂ ಹುತಾಶನೇ |
ಕಾಶ್ಚಿತ್ ಕಾಶ್ಚಿತ್ತು ತಪಸಾ ತ್ಯಕ್ತದೇಹಾ ಹರಿಂ ಯಯುಃ ॥
ಜಾಂಬವತೀ ಮುಂತಾದ ಇತರ ಮಹಾಮಹಿಷಿಯರು ಕೆಲವರು ದೇಹವನ್ನು ಅಗ್ನಿಯಲ್ಲಿ ಪರಿತ್ಯಜಿಸಿ, ಇನ್ನು ಕೆಲವರು ತಪಸ್ಸಿನಿಂದ ದೇಹತ್ಯಾಗ ಮಾಡಿ ಹರಿಯನ್ನು ಹೊಂದಿದರು.
ರೌಹಿಣೇಯಾದಿಕಾನಾಂ ಚ ಭಾರ್ಯಾ ವಹ್ನಿಮುಖೇ ತನುಮ್ |
ತ್ಯಕ್ತ್ವಾ ಸ್ವಭರ್ತೃರ್ನೇವಾಽಪುಃ ಸರ್ವಾ ಏವ ಪತಿವ್ರತಾಃ ॥
ಬಲರಾಮಾದಿಗಳ ಪತ್ನಿಯರೂ ಪತಿವ್ರತೆಯರು. ಅಗ್ನಿಮುಖದಲ್ಲಿ ಸಹಗಮನ ಮಾಡಿ, ಶರೀರವನ್ನು ತ್ಯಜಿಸಿ, ತಮ್ಮ ಪತಿಗಳನ್ನೇ ಸೇರಿದರು.
ವಸುದೇವಃ ಪಾರ್ಥಮುಖಾತ್ ಶ್ರುತ್ವೈತದ್ಯೋಗಮಾಸ್ಥಿತಃ |
ತ್ಯಕ್ತ್ವಾ ದೇಹಂ ಕಶ್ಯಪತ್ವಂ ಪ್ರಾಪ ಕೃಷ್ಣಾನುರಾಗತಃ ॥
ವಸುದೇವನು, ಅರ್ಜುನನ ಮುಖದಿಂದ ಇದನ್ನು ಕೇಳಿ ಯೋಗವನ್ನು ಅವಲಂಬಿಸಿ, ಕೃಷ್ಣಭಕ್ತಿಯಿಂದ ದೇಹವನ್ನು ತೊರೆದು, ಕೃಷ್ಣನ ಅನುಗ್ರಹದಿಂದ ಕಶ್ಯಪನಾದನು.
ತಸ್ಯಾರ್ಜುನೋಽಶ್ವಮೇಧಾಗ್ನಾವಂತ್ಯಕರ್ಮಾಕರೋತ್ ತದಾ |
ತ್ಯಕ್ತದೇಹಾಸ್ತಸ್ಯ ಭಾರ್ಯಾ ವಹ್ನೌ ಪ್ರಾಪುಸ್ತಮೇವ ಚ ॥
ವಸುದೇವನಿಗೆ ಅವನ ಅಶ್ವಮೇಧಾಗ್ನಿಯಲ್ಲಿಯೆ ಅರ್ಜುನನು ಅಂತ್ಯಕ್ರಿಯೆ ಮಾಡಿದನು. ಅವನ ಪತ್ನಿಯರೂ ಅದೇ ಅಗ್ನಿಯಲ್ಲಿ ಪತಿಯೊಂದಿಗೆ ಸಹಗಮನ ಮಾಡಿ, ಶರೀರವನ್ನು ತೊರೆದು, ಸ್ವರ್ಗದಲ್ಲಿ ಅವನನ್ನೇ ಸೇರಿದರು.
* * * * *

ಐದನೆಯ ಅಧ್ಯಾಯ

ಎಲ್ಲ ಯಾದವರೂ ಮರಣ ಹೊಂದಿದ ನಂತರ ಬಭ್ರು ಹಾಗೂ ದಾರುಕನೊಂದಿಗೆ ಬಲಭದ್ರನನ್ನು ಹುಡುಕುತ್ತಾ ಶ್ರೀಕೃಷ್ಣನು ಕಾಡಿನಲ್ಲಿ ಮರವನ್ನು ಆಶ್ರಯಿಸಿದ ಬಲದೇವನನ್ನು ನೋಡುವುದು. ನಂತರ ಕೃಷ್ಣನು ಪಾಂಡವರಿಗೆ ಸುದ್ದಿಯನ್ನು ಮುಟ್ಟಿಸುವುದಕ್ಕಾಗಿ ದಾರುಕನನ್ನು ಕಳುಹಿಸುವುದು. ಬಲಭದ್ರನು ಯೋಗದಿಂದ ಸರ್ಪಶರೀರವನ್ನು ಸ್ವೀಕರಿಸಿ, ಸಮುದ್ರವನ್ನು ಪ್ರವೇಶಿಸುವುದು. ಕೃಷ್ಣನು ಶರೀರವನ್ನು ಬಿಡುವುದಕ್ಕಾಗಿ ಯೋಗದಿಂದ ನಿದ್ರಿಸುವುದು. ವ್ಯಾಧನು ಪ್ರಾಣಿ ಎಂದುಕೊಂಡು ಕೃಷ್ಣನ ಪಾದಕ್ಕೆ ಬಾಣದಿಂದ ಗಟ್ಟಿಯಾಗಿ ಹೊಡೆಯುವುದು. ಅನಂತರ ಸಮೀಪಕ್ಕೆ ಬಂದು, ಕೃಷ್ಣನನ್ನು ಕಂಡು ಪಶ್ಚಾತ್ತಾಪದಿಂದ ನಮಸ್ಕರಿಸಿದ ಬೇಡನನ್ನು ಸ್ವರ್ಗಕ್ಕೆ ಕಳುಹಿಸುವುದು. ನಂತರ ಕೃಷ್ಣನು ಶರೀರವನ್ನು ತ್ಯಜಿಸಿ, ಸ್ವರ್ಗಲೋಕಕ್ಕೆ ಬಂದು, ಸ್ವರ್ಗದಲ್ಲಿರುವ ದೇವತೆಗಳಿಂದ ಪುಷ್ಪವೃಷ್ಟಿ ಹಾಗೂ ಸ್ತೋತ್ರಾದಿಗಳಿಂದ ಗೌರವಿಸಲ್ಪಟ್ಟು ತನ್ನ ಪರಂಧಾಮವನ್ನು ಪ್ರವೇಶಿಸುವುದು.

ವೈಶಂಪಾಯನಃ
ತತೋ ಯಯುರ್ದಾರುಕಃ ಕೇಶವಶ್ಚ
ಬಭ್ರುಶ್ಚ ರಾಮಸ್ಯ ಪದಂ ಪತಂತಃ |
ಅಥಾಪಶ್ಯನ್ ರಾಮಮನಂತವೀರ್ಯಂ
ವೃಕ್ಷಾಶ್ರಿತಂ ಚಿಂತಯಾನಂ ವಿವಿಕ್ತೇ ॥1॥
ವೈಶಂಪಾಯನ ಇಷ್ಟಾದ ನಂತರ ದಾರುಕನೂ, ಕೃಷ್ಣನೂ, ಬಭ್ರುವೂ ಬಲರಾಮನು ಎಲ್ಲಿರುವನೆಂದು ಹುಡುಕುತ್ತಾ ಹೊರಟರು. ಸ್ವಲ್ಪ ದೂರ ಹೋದನಂತರ ಮರದಲ್ಲಿ ಕುಳಿತು ಏಕಾಂತದಲ್ಲಿ ಚಿಂತಿಸುತ್ತಿರುವ, ಬಹುಪರಾಕ್ರಮವುಳ್ಳ ಬಲರಾಮನನ್ನು ಕಂಡರು.
ತತಃ ಸಮಾಸಾದ್ಯ ಮಹಾನುಭಾವಃ
ಕೃಷ್ಣಸ್ತದಾ ದಾರುಕಮನ್ವಶಾಸತ್ |
ಗತ್ವಾ ಕುರೂನ್ ಸರ್ವಮಿಮಂ ಮಹಾಂತಂ
ಪಾರ್ಥಾಯ ಶಂಸಸ್ವ ವಧಂ ಯದೂನಾಮ್ ॥2॥
ಅನಂತರ ಮಹಾನುಭಾವನಾದ ಶ್ರೀಕೃಷ್ಣನು ದಾರುಕನ ಸಮೀಪಕ್ಕೆ ಹೋಗಿ, ಕುರುಗಳು ಇರುವಲ್ಲಿಗೆ ಹೋಗಿ ದೊಡ್ಡದಾದ ಈ ಎಲ್ಲ ವೃತ್ತಾಂತವನ್ನೂ, ಯದುಗಳ ವಧೆಯನ್ನೂ ಪಾರ್ಥನಿಗೆ ತಿಳಿಸೆಂದು ಅಪ್ಪಣೆ ಮಾಡಿದನು.
ತತೋಽರ್ಜುನಃ ಕ್ಷಿಪ್ರಮಿಹೋಪಯಾತು
ಶ್ರುತ್ವಾ ಮೃತಾನ್ ಯಾದವಾನ್ ಬ್ರಹ್ಮಶಾಪಾತ್ |
ಇತ್ಯೇವಮುಕ್ತಃ ಸ ಯಯೌ ರಥೇನ
ಕುರೂಂಸ್ತದಾ ದಾರುಕೋ ನಷ್ಟಚೇತಾಃ ॥3॥
ಬ್ರಹ್ಮಶಾಪದಿಂದ ಯಾದವರು ಮೃತರಾದುದನ್ನು ಕೇಳಿ ಅರ್ಜುನನು ಕೂಡಲೇ ಇಲ್ಲಿಗೆ ಹೊರಟು ಬರಲಿ. ಕೃಷ್ಣನು ಇಷ್ಟನ್ನು ತಿಳಿಸಿದಾಗ ದಾರುಕನು ದಿಗ್ಭ್ರಾಂತನಾಗಿ ರಥವನ್ನೇರಿ ಕುರುಗಳಿದ್ದಲ್ಲಿಗೆ ಹೊರಟನು.
ತತೋ ಗತೇ ದಾರುಕೇ ಕೇಶವೋಥ
ದೃಷ್ಟ್ವಾಂತಿಕೇ ಬಭ್ರುಮುವಾಚ ವಾಕ್ಯಮ್ |
ಸ್ತ್ರಿಯೋ ಭವಾನ್ ರಕ್ಷಿತುಂ ಯಾತು ಶೀಘ್ರಂ
ನೈತಾ ಹಿಂಸ್ಯುರ್ದಸ್ಯವೋ ವಿತ್ತಲೋಭಾತ್ ॥4॥
ದಾರುಕನು ಹೊರಟು ಹೋದನಂತರ ಸಮೀಪದಲ್ಲಿರುವ ಬಭ್ರುವನ್ನು ಕುರಿತು ಶ್ರೀಕೃಷ್ಣನು `ನಮ್ಮೊಂದಿಗೆ ಬಂದಿರುವ ಸ್ತ್ರೀಯರನ್ನು ರಕ್ಷಿಸುವುದಕ್ಕಾಗಿ ನೀನು ಹೊರಡು. ದರೋಡೆಕೋರರು ಹಣದ ಆಸೆಯಿಂದ ಇವರನ್ನು ಹಿಂಸಿಸದಿರಲಿ' ಹೀಗೆಂದನು.
ಸ ಪ್ರಸ್ಥಿತಃ ಕೇಶವೇನಾನುಶಿಷ್ಟೋ
ಮದಾತುರೋ ಜ್ಞಾತಿವಧಾರ್ದಿತಶ್ಚ |
ತಂ ವೈ ಯಾತಂ ಸನ್ನಿಧೌ ಕೇಶವಸ್ಯ
ತ್ವರಂತಮೇಕಂ ಸಹಸೈವ ಬಭ್ರುಮ್ ॥5॥
ಬ್ರಹ್ಮಾನುಶಪ್ತಮವಧೀನ್ಮಹದ್ವೈ
ಕೂಟೇ ಯುಕ್ತಂ ಮುಸಲಂ ಲುಬ್ಧಕಸ್ಯ ॥6॥
ಕೃಷ್ಣನಿಂದ ಆಜ್ಞಪ್ತನಾಗಿ, ಮದೋನ್ಮತ್ತನಾದ, ಬಂಧುಗಳ ವಧೆಯಿಂದ ಕಂಗೆಟ್ಟ, ಕೃಷ್ಣನ ಸನ್ನಿಧಿಯನ್ನು ಬಿಟ್ಟು ಒಬ್ಬನೇ ವೇಗವಾಗಿ ಹೋಗುತ್ತಿರುವ, ಬ್ರಾಹ್ಮಣನ ಶಾಪಕ್ಕೆ ಗುರಿಯಾಗಿದ್ದ ಆ ಬಭ್ರುವನ್ನು ಬೇಡರ ಗುಂಪಿನಿಂದ ಪ್ರಯೋಗಿಸಲ್ಪಟ್ಟ ದೊಡ್ಡದಾದ ಒಂದು ಒನಕೆಯು ಸಂಹರಿಸಿತು.
ತತೋ ದೃಷ್ಟ್ವಾ ನಿಹತಂ ಬಭ್ರುಮಾಹ
ಕೃಷ್ಣೋಽಗ್ರಜಂ ಭ್ರಾತರಮುಗ್ರತೇಜಾಃ |
ಇಹೈವ ತ್ವಂ ಮಾಂ ಪ್ರತೀಕ್ಷಸ್ವ ರಾಮ
ಯಾವತ್ ಸ್ತ್ರಿಯೋ ಜ್ಞಾತಿವಶಾಃ ಕರೋಮಿ ॥7॥
ಇಷ್ಟಾದ ನಂತರ ಉಗ್ರತೇಜಸ್ವಿಯಾದ ಶ್ರೀಕೃಷ್ಣನು ಬಭ್ರುವು ಹತನಾದುದನ್ನು ನೋಡಿ, ತನ್ನ ಹಿರಿಯಣ್ಣನನ್ನು ಕುರಿತು, `ಹೇ ರಾಮನೇ, ನಾನು ಸ್ತ್ರೀಯರನ್ನು ಬಂಧುಗಳ ವಶಕ್ಕೆ ಒಪ್ಪಿಸುವ ತನಕ ನೀನು ಇಲ್ಲೇ ಇದ್ದು ನನ್ನನ್ನು ನಿರೀಕ್ಷಿಸುತ್ತಿರು' ಎಂದನು.
ತತಃ ಪುರೀಂ ದ್ವಾರವತೀಂ ಪ್ರವಿಶ್ಯ
ಜನಾರ್ದನಃ ಪಿತರಂ ಪ್ರಾಹ ವಾಕ್ಯಮ್ |
ಸರ್ವಂ ಭವಾನ್ ರಕ್ಷತು ನಃ ಸಮಗ್ರಂ
ಧನಂಜಯಸ್ಯಾಗಮನಂ ಪ್ರತೀಕ್ಷನ್ ॥8॥
ಇಷ್ಟು ಹೇಳಿದ ಶ್ರೀಕೃಷ್ಣನು ದ್ವಾರವತಿ ಪಟ್ಟಣವನ್ನು ಪ್ರವೇಶಿಸಿ, ತನ್ನ ತಂದೆಯನ್ನು ಕುರಿತು, ಅರ್ಜುನನ ಆಗಮನವನ್ನು ನಿರೀಕ್ಷಿಸುತ್ತಾ, ನಮಗೆ ಸಂಬಂಧಪಟ್ಟ ಎಲ್ಲ ವಸ್ತುಗಳನ್ನೂ ನೀವು ರಕ್ಷಿಸಿರಿ ಎಂದು ಹೇಳಿದನು.
ರಾಮೋ ವನಾಂತೇ ಪ್ರತಿಪಾಲಯನ್ಮಾಮ್
ಆಸ್ತೇಽದ್ಯಾಹಂ ತೇನ ಸಮಾಗಮಿಷ್ಯೇ |
ದೃಷ್ಟಂ ಮಯೇದಂ ನಿಧನಂ ಯದೂನಾಂ
ರಾಜ್ಞಾಂ ಚ ಪೂರ್ವಂ ಕುರುಪುಂಗವಾನಾಮ್ ॥9॥

ಬಲರಾಮನು ಇಂದು ಕಾಡಿನೊಳಗೆ ನನ್ನ ಬರುವಿಕೆಯನ್ನು ಕಾಯುತ್ತಾ ನಿಂತಿರುವನು. ಅವನ ಜೊತೆಗೆ ನಾನು ಸೇರಬೇಕಾಗಿದೆ. ಇಂದು ನಾನು ಹಿಂದೆ ಕುರುಪುಂಗವರ ಮರಣವನ್ನು ಕಂಡಂತೆ ಯದುರಾಜರ ಮರಣವನ್ನೂ ನೋಡಿದೆನು.

ನಾಹಂ ವಿನಾ ಯದುಭಿರ್ಯಾದವಾನಾಂ
ಪುರೀಮಿಮಾಮಶಕಂ ದ್ರಷ್ಟುಮದ್ಯ |
ತಪಶ್ಚರಿಷ್ಯಾಮಿ ನಿಬೋಧ ತನ್ಮೇ
ರಾಮೇಣ ಸಾರ್ಧಂ ವನಮಭ್ಯುಪೇತ್ಯ ||10||

ಯದುಗಳಿಲ್ಲದ ಯಾದವರ ಈ ಪಟ್ಟಣವನ್ನು ನೋಡಲು ನನಗೆ ಸಾಧ್ಯವಾಗುತ್ತಿಲ್ಲ. ಬಲರಾಮನೊಂದಿಗೆ ಕಾಡನ್ನು ಪ್ರವೇಶಿಸಿ ತಪಸ್ಸನ್ನು ನಡೆಸಬೇಕೆಂಬ ನನ್ನ ಅಭಿಪ್ರಾಯವು ನಿಮಗೆ ತಿಳಿದಿರಲಿ.

ಇತೀದಮುಕತ್ವ ಶಿರಸಾ ಚ ಪಾದೌ
ಸಂಸ್ಪೃಶ್ಯ ಕೃಷ್ಣಸ್ತ್ವರಿತೋ ಜಗಾಮ |
ತತೋ ಮಹಾನ್ನಿನದಃ ಪ್ರಾದುರಾಸೀತ್
ಸಸ್ತ್ರೀಕುಮಾರಸ್ಯ ಪುರಸ್ಯ ತಸ್ಯ ||11||

ಇಷ್ಟು ಹೇಳಿ ಶ್ರೀಕೃಷ್ಣನು ತನ್ನ ಶಿರಸ್ಸಿನಿಂದ ವಸುದೇವನ ಪಾದಗಳನ್ನು ಮುಟ್ಟಿ ನಮಸ್ಕರಿಸಿ, ಅವಸರದಿಂದ ಹೊರಟನು. ಆಗಲೇ ಆ ಪಟ್ಟಣದಲ್ಲಿರುವ ಸ್ತ್ರೀಯರ ಮತ್ತು ಮಕ್ಕಳ ಜೋರಾದ ಆರ್ತನಾದವು ಕೇಳತೊಡಗಿತು.

ತತೋಽಬ್ರವೀತ್ ಕೇಶವಃ ಸನ್ನಿವರ್ತ್ಯ
ಶಬ್ದಂ ಶ್ರುತ್ವಾ ಯೋಷಿತಾಂ ಕ್ರೋಶತೀನಾಮ್ |
ಪುರೀಮಿಮಾಮೇಷ್ಯತಿ ಸವ್ಯಸಾಚೀ
ಸ ವೋ ದುಃಖಾನ್ಮೋಚಯಿತಾ ನರಾಗ್ರ್ಯಃ ||12||

ಹೀಗೆ ಬೊಬ್ಬಿಡುತ್ತಿರುವ ಸ್ತ್ರೀಯರ ಆರ್ತನಾದವನ್ನು ಕೇಳಿ ಶ್ರೀಕೃಷ್ಣನು ಹಿಂದಿರುಗಿ `ಈ ಪಟ್ಟಣಕ್ಕೆ ಅರ್ಜುನನು ಬರಲಿದ್ದಾನೆ. ಆ ನರಶ್ರೇಷ್ಠನು ನಿಮ್ಮನ್ನು ದುಃಖದಿಂದ ಬಿಡುಗಡೆಗೊಳಿಸುವನು' ಎಂದನು.

ತತೋ ಗತಃ ಕೇಶವಸ್ತಂ ದದರ್ಶ
ರಾಮಂ ವನೇ ಸ್ಥಿತಮೇಕಂ ವಿವಿಕ್ತೇ ||13||

ಅನಂತರ ಅಲ್ಲಿಂದ ಹೊರಟ ಶ್ರೀಕೃಷ್ಣನು ಕಾಡಿನಲ್ಲಿ ಏಕಾಂತಸ್ಥಾನದಲ್ಲಿ ಒಬ್ಬನೇ ಇರುವ ಬಲರಾಮನನ್ನು ಕಂಡನು.

ಅಥಾಪಶ್ಯದ್ ಯೋಗಯುಕ್ತಸ್ಯ ತಸ್ಯ
ನಾಗಂ ಮುಖಾನ್ನಿಸರಂತಂ ಮಹಾಂತಮ್ |
ಶ್ವೇತಂ ಯಯೌ ಸತತಂ ಪ್ರೇಕ್ಷ್ಯಮಾಣೋ
ಮಹಾರ್ಣವೋ ಯೇನ ಮಹಾನುಭಾವಃ ||14||
ಸಹಸ್ರಶೀರ್ಷಃ ಪರ್ವತಾಭೋಗವರ್ಷ್ಮಾ
ರಕ್ತಾನನಃ ಸ್ವಾಂ ತನುಂ ತಾಂ ವಿಮುಚ್ಯ ||15||

ಅದೇ ಸಮಯಕ್ಕೆ ಯೋಗಯುಕ್ತನಾದ ಆ ಬಲರಾಮನ ಮುಖದಿಂದ ದೊಡ್ಡದಾದ ಸರ್ಪವು ಹೊರಬರುವುದನ್ನು ಕಂಡನು. ಕೃಷ್ಣನು ಕಣ್ಣುಮಿಟುಕಿಸದೆ ದಿಟ್ಟಿಸಿ ನೋಡುತ್ತಿದ್ದಂತೆಯೇ ಆ ಯಾವ ಬಿಳಿಯ ಬಣ್ಣದ, ಸಾವಿರ ಶಿರಸ್ಸುಳ್ಳ, ಪರ್ವತದಂತೆ ಬಹುದೊಡ್ಡ ಶರೀರವುಳ್ಳ, ಕೆಂಪುಮುಖವುಳ್ಳ ಸರ್ಪವು ಕಂಡುಬಂದು, ಮಹಾನುಭಾವನಾದ ಬಲರಾಮನು ತನ್ನ ಶರೀರವನ್ನು ಬಿಟ್ಟು, ಈ ಶರೀರದಿಂದಲೇ ಸಾಗರವನ್ನು ಹೊಕ್ಕನು.

ಸಂದೃಶ್ಯಂತಂ ಸಾಗರಾಂತಂ ವಿಶಂತಂ
ಸಮ್ಯಕ್ ತದಾ ಸಾಗರಃ ಪ್ರತ್ಯಗೃಹ್ಣಾತ್ |
ನಾಗಾ ದಿವ್ಯಾಃ ಸರಿತಶ್ಚೈವ ಪುಣ್ಯಾಃ
ಕರ್ಕೋಟಕೋ ವಾಸುಕಿಸ್ತಕ್ಷಕಶ್ಚ ||16||
ಪೃಥುಶ್ರವಾ ಅರುಣಃ ಕುಂಜರಶ್ಚ
ಮಿಶ್ರೀ ಶಂಖಃ ಕುಮುದಃ ಪುಂಡರೀಕಃ |
ತಥಾ ನಾಗೋ ಧೃತರಾಷ್ಟ್ರೋ ಮಹಾತ್ಮಾ
ಹ್ರಾದಃ ಕ್ರಾಥಃ ಶಿತಿಪೃಷ್ಠೋ ನಿಕೇತುಃ ||17||
ತಥಾ ನಾಗೌ ಚಕ್ರಮಂದಾತಿಷಂಡೌ
ನಾಗಶ್ರೇಷ್ಠೋ ದುರ್ಮುಖಶ್ಚಾಂಬರೀಷಃ |
ಸ್ವಯಂ ರಾಜಾ ವರುಣಶ್ಚಾಪಿ ರಾಜನ್
ಪ್ರತ್ಯುದ್ಗಮ್ಯ ಸ್ವಾಗತೇನಾಭ್ಯನಂದನ್ ||18||

ಕೃಷ್ಣನ ಕಣ್ಣಿಗೆ ಗೋಚರಿಸುವಂತೆಯೇ ಸಾಗರದೊಳಗೆ ಪ್ರವೇಶಿಸುತ್ತಿರುವ ಆ ಬಲರಾಮನನ್ನು ಸಾಗರವು ಚೆನ್ನಾಗಿ ಎದುರುಗೊಂಡಿತು. ಅಲ್ಲದೆ ದಿವ್ಯವಾದ ನಾಗಗಳು, ಮಂಗಳಮಯವಾದ ನದಿಗಳು, ಕರ್ಕೋಟಕನು, ವಾಸುಕಿಯು, ತಕ್ಷಕನು, ಪೃಥುಶ್ರವಸನು, ಅರುಣನು, ಕುಂಜರನು, ಮಿಶ್ರಿಯು, ಶೃಂಗ-ಕುಮುದ- ಪುಂಡರೀಕನು, ಮಹಾತ್ಮನಾದ ಧೃತರಾಷ್ಟ್ರನಾಗನು, ಹ್ರಾದ-ಕ್ರಾಥ-ಶಿತಿಪೃಷ್ಠ-ನಿಕೇತು ಎಂಬ ನಾಗಗಳು, ಹಾಗೆಯೇ ಚಕ್ರಮಂದ, ಅತಿಷಂಡ ಎಂಬ ನಾಗಗಳು, ನಾಗಶ್ರೇಷ್ಠನಾದ ದುರ್ಮುಖನು, ಅಂಬರೀಷನು ಇವರಲ್ಲದೆ, ಹೇ ಜನಮೇಜಯನೇ, ಸ್ವಯಂ ರಾಜನಾದ ವರುಣನೂ ಕೂಡ ಮೇಲೆದ್ದುಬಂದು

ಸ್ವಾಗತಿಸುವುದರ ಮೂಲಕ ಅಭಿನಂದಿಸಿದರು.
ತೇಽಪೂಜಯಂಶ್ಚಾರ್ಘ್ಯಪಾದ್ಯಕ್ರಿಯಾಭಿಃ
ಸಂಕರ್ಷಣಂ ಭೂಧರಂ ಶುದ್ಧಬುದ್ಧಿಮ್ ॥19॥
ಅವರೆಲ್ಲರೂ ಶುದ್ಧಬುದ್ಧಿಯಾದ, ಭೂಮಿಯನ್ನು ಧರಿಸಿದ ಸಂಕರ್ಷಣ ರೂಪಿಯಾದ ಅವನನ್ನು ಅರ್ಘ್ಯ-ಪಾದ್ಯ ಮೊದಲಾದ ಕ್ರಿಯೆಗಳಿಂದ ಪೂಜಿಸಿದರು.
ತತೋ ಗತೇ ಭ್ರಾತರಿ ವಾಸುದೇವೋ
ಜಾನನ್ ಸರ್ವಾ ಗತಯೋ ದಿವ್ಯದೃಷ್ಟಿಃ।
ವನೇ ಶೂನ್ಯೇ ವಿಚರಂಶ್ಚಿಂತಯಾನೋ
ಭೂಮೌ ಚಾಥ ಸಂವಿವೇಶಾಗ್ರ್ಯತೇಜಾಃ ॥20॥
ಅಣ್ಣನು ಹೊರಟು ಹೋದ ನಂತರ ಶ್ರೀಕೃಷ್ಣನು ದಿವ್ಯದೃಷ್ಟಿಯುಳ್ಳವನಾದ್ದರಿಂದ ಎಲ್ಲರ ಗತಿಯನ್ನು ತಿಳಿದಿದ್ದರೂ ನಿರ್ಜನವಾದ ಕಾಡಿನಲ್ಲಿ ಏನನ್ನೋ ಚಿಂತಿಸುತ್ತಾ ಅಲೆದಾಡಿದನು. ಸ್ವಲ್ಪ ಕಾಲ ಕಳೆದ ನಂತರ ಮಹಾತೇಜಸ್ವಿಯಾದ ಅವನು ಭೂಮಿಯಲ್ಲಿ ಕುಳಿತನು.
ಸರ್ವಂ ತೇನ ಪ್ರಾಕ್ತದಾ ವಿತ್ತಮಾಸೀದ್
ಗಾಂಧಾರ್ಯಾ ಯದ್ವಾಕ್ಯಮುಕ್ತಂ ಸ್ವಧರ್ಮಾತ್।
ದುರ್ವಾಸಸಾ ಪಾಯಸೋಚ್ಛಿಷ್ಟಲಿಪ್ತೇ
ಯಚ್ಚಾಪ್ಯುಕ್ತಂ ತಚ್ಚ ಸಸ್ಮಾರ ಕೃಷ್ಣಃ ॥21॥
ಈ ಎಲ್ಲವೂ ಅವನಿಗೆ ಇದಕ್ಕಿಂತ ಮೊದಲೇ ತಿಳಿದಿತ್ತು. ಜೊತೆಗೆ ಗಾಂಧಾರಿಯು ತನ್ನ ಪತಿವ್ರತಾಧರ್ಮದಿಂದ ಕೂಡಿಕೊಂಡು ಏನನ್ನು ಹೇಳಿದ್ದಳೋ, ಶರೀರಕ್ಕೆ ಪಾಯಸವನ್ನು ಲೇಪಿಸಿಕೊಂಡು ಅಡ್ಡಾಡುತ್ತಿದ್ದಾಗ ದುರ್ವಾಸರು ಏನನ್ನು ಹೇಳಿದ್ದರೋ, ಅದನ್ನೂ ಕೃಷ್ಣನು ನೆನಪಿಸಿಕೊಂಡನು.
ಕುಲಸ್ತ್ರೀಣಾಂ ಸಂವೃತಾನಾಂ ಗವಾಂ ಚ
ದ್ವಿಜೇಂದ್ರಾಣಾಂ ಬಲಮಾದಾಯ ಧರ್ಮೇ।
ಯೋನಿರ್ದೇವಾನಾಂ ವರದೋ ಬ್ರಹ್ಮದೇವೋ
ಗೋವಿಂದಾಖ್ಯೋ ವಾಸುದೇವೋಽಥ ನಿತ್ಯಃ ॥22॥
ಸಂಚಿಂತಯನ್ನಂಧಕವೃಷ್ಣಿನಾಶಂ
ಕುರುಕ್ಷಯಂ ಚೈವ ಮಹಾನುಭಾವಃ।
ಮೇನೇ ತತಃ ಸಂಕ್ರಮಣಸ್ಯ ಕಾಲಂ
ತತಶ್ಚಕಾರೇಂದ್ರಿಯಸನ್ನಿರೋಧಮ್ ॥23॥
ಚೆನ್ನಾಗಿ ರಕ್ಷಿತರಾದ ಕುಲಸ್ತ್ರೀಯರ ಹಾಗೂ ಗೋವುಗಳ ಹಾಗೂ ದ್ವಿಜಶ್ರೇಷ್ಠರ ಬಲವನ್ನು ಧರ್ಮವನ್ನಾಗಿಸಿ, ದೇವತೆಗಳಿಗೂ ಕಾರಣನಾದ, ವರದನಾದ, ಬ್ರಹ್ಮನಿಗೂ ದೇವನಾದ, ಗೋವಿಂದ ಎಂಬ ಪ್ರಸಿದ್ಧಿಯುಳ್ಳ, ನಿತ್ಯನಾದ ವಾಸುದೇವನು ಅಂಧಕ ಮತ್ತು ವೃಷ್ಣಿಗಳ ನಾಶವನ್ನು ಆಲೋಚಿಸುತ್ತಾ, ಹಾಗೆಯೇ ಕುರುಗಳ ಕ್ಷಯವನ್ನೂ ನೆನಪಿಸಿಕೊಳ್ಳುತ್ತಾ, ಮಹಾನುಭಾವನಾದ ಅವನು ತಾನೂ ಶರೀರವನ್ನು ಬಿಟ್ಟು ಹೊರಡಬೇಕಾದ ಕಾಲವು ಬಂದಿದೆ ಎಂದು ತಿಳಿದನು. ಅನಂತರ ಇಂದ್ರಿಯಗಳನ್ನು ನಿರೋಧಿಸಲು ಆರಂಭಿಸಿದನು.
ಯಥಾ ಚ ಲೋಕತ್ರಯಪಾಲನಾರ್ಥಂ
ದುರ್ವಾಸವಾಕ್ಯಪ್ರತಿಪಾಲನಾಯ।
ದೇವೋಪಿ ಸಂದೇಹವಿಮೋಕ್ಷಹೇತೋಃ
ನಿಮಿತ್ತಮೈಚ್ಛತ್ಸಕಲಾರ್ಥತತ್ತ್ವವಿತ್ ॥24॥
ಸ ಸನ್ನಿರುದ್ಧೇಂದ್ರಿಯವಾಙ್ಮನಾಸ್ತು
ಶಿಶ್ಯೇ ಮಹಾಯೋಗಮುಪೇತ್ಯ ಕೃಷ್ಣಃ।
ಜರೋಥ ತಂ ದೇಶಮುಪಾಜಗಾಮ
ಲುಬ್ಧಸ್ತದಾನೀಂ ಮೃಗಲಿಪ್ಸುರುಗ್ರಃ ॥25॥
ಸಕಲಾರ್ಥತತ್ತ್ವಗಳನ್ನು ತಿಳಿದ ಶ್ರೀಕೃಷ್ಣದೇವನು ಲೋಕತ್ರಯಗಳನ್ನು ರಕ್ಷಿಸುವುದಕ್ಕೆ ಹೇಗೋ ಹಾಗೆ ದುರ್ವಾಸರ ಮಾತುಗಳನ್ನು ಸತ್ಯಗೊಳಿಸುವುದಕ್ಕೋಸ್ಕರ, ಜೊತೆಗೆ ದೇವತೆಗಳಿಗೆ ಬರಬಹುದಾದ ಸಂದೇಹವನ್ನು ಪರಿಹಾರ ಮಾಡಲೋಸುಗ ನಿಮಿತ್ತವನ್ನು ಇಚ್ಛಿಸಿ, ಇಂದ್ರಿಯ-ವಾಕ್-ಮನಸ್ಸುಗಳನ್ನು ನಿರೋಧಿಸಿಕೊಂಡು, ಮಹಾಯೋಗವನ್ನು ಆಶ್ರಯಿಸಿ ಮಲಗಿದನು. ಅದೇ ಕಾಲಕ್ಕೆ ಮೃಗಗಳನ್ನು ಬೇಟೆಯಾಡುವ ಜರನೆಂಬ ಉಗ್ರನಾದ ಬೇಡನು ಆ ಪ್ರದೇಶಕ್ಕೆ ಬಂದನು.
ಸ ಕೇಶವಂ ಯೋಗಯುಕ್ತಂ ಶಯಾನಂ
ಮೃಗಾಸಕ್ತೋ ಲುಬ್ಧಕಃ ಸಾಯಕೇನ।
ಜರೋಽವಿಧ್ಯತ್ಪಾದತಳೇ ತ್ವರಾವಾನ್
ತಂ ಚಾಭಿತಸ್ತಜ್ಜಿಘೃಕ್ಷುರ್ಜಗಾಮ ॥26॥
ಆ ಮೃಗಾಸಕ್ತನಾದ ಜರನೆಂಬ ಬೇಡನು ತಡಮಾಡದೆ ಯೋಗಯುಕ್ತನಾಗಿ ಮಲಗಿದ್ದ ಶ್ರೀಕೃಷ್ಣನಿಗೆ ಪಾದತಳದಲ್ಲಿ ಬಾಣದಿಂದ ಹೊಡೆದನು. ನಂತರ ತಾನು ಬಾಣದಿಂದ ಹೊಡೆದ ಪ್ರಾಣಿಯನ್ನು ಹಿಡಿಯಬೇಕೆಂದು ಅಲ್ಲಿಗೆ ಬಂದನು.

ಅಥಾಪಶ್ಯತ್ಪುರುಷಂ ಯೋಗಯುಕ್ತಂ
ಪೀತಾಂಬರಂ ಲುಬ್ಧಕೋಽನೇಕಬಾಹುಮ್ ।
ಮತ್ವಾಽಽತ್ಮಾನಂ ತ್ವಪರಾದ್ಧಂ ಸ ತಸ್ಯ
ಪಾದೌ ಜರೋ ಜಗೃಹೇ ಶಂಕಿತಾತ್ಮಾ ॥27॥

ಅಲ್ಲಿಗೆ ಬಂದಾಗ ಆ ಬೇಡನು ಯೋಗಯುಕ್ತನಾದ, ಪೀತಾಂಬರವನ್ನು ಧರಿಸಿರುವ, ಅನೇಕ ಬಾಹುಗಳುಳ್ಳ ಪುರುಷನನ್ನು ಕಂಡನು. ಇಷ್ಟಾದ ಮೇಲೆ ತಾನು ಅಪರಾಧ ಮಾಡಿದೆ ಎಂದು ತಿಳಿದ ಆ ಜರನು ತನಗೆ ಅನಿಷ್ಟವಾಗುವುದೆಂದು ಶಂಕಿಸುತ್ತಾ ಆ ಕೃಷ್ಣನ ಪಾದಗಳನ್ನು ಹಿಡಿದುಕೊಂಡನು.

ಆಶ್ವಾಸಿತಃ ಪುಣ್ಯಫಲೇನ ಭಕ್ತ್ಯಾ
ತಥಾಽನುತಾಪಾತ್ ಕರ್ಮಣೋ ಜನ್ಮನಶ್ಚ ।
ದೃಷ್ಟ್ವಾ ತಥಾ ದೇವಮನಂತವೀರ್ಯಂ
ದೇವೈಃ ಸ್ವರ್ಗಂ ಪ್ರಾಪಿತಸ್ತ್ಯಕ್ತದೇಹಃ ॥28॥

ಕೃಷ್ಣನಿಂದ ಆಶ್ವಾಸಿತನಾಗಿ, ತಾನು ಹಿಂದೆ ಮಾಡಿದ ಪುಣ್ಯಫಲದಿಂದಲೂ, ಕೃಷ್ಣನ ಮೇಲಿನ ಭಕ್ತಿಯಿಂದಲೂ ತಾನು ಮಾಡಿದ ಕರ್ಮದ ಬಗ್ಗೆ ಹಾಗೂ ಈ ವ್ಯಾಧಜನ್ಮದ ಬಗ್ಗೆ ಪಶ್ಚಾತ್ತಾಪದಿಂದಲೂ, ಹಾಗೆಯೇ ಅನಂತವೀರ್ಯನಾದ ಶ್ರೀಕೃಷ್ಣದೇವನನ್ನು ಆ ರೀತಿಯಲ್ಲಿ ನೋಡಿದುದರಿಂದಲೂ ಆ ಜರನು ದೇವತೆಗಳ ಜೊತೆಗೆ ಶರೀರವನ್ನು ಬಿಟ್ಟು ಸ್ವರ್ಗವನ್ನು ಸೇರಿಕೊಂಡನು.

ಗಣೈರ್ಮುನೀನಾಂ ಪೂಜಿತಸ್ತತ್ರ ಕೃಷ್ಣೋ
ಗಚ್ಛನ್ನೂರ್ಧ್ವಂ ವ್ಯಾಪ್ಯ ಲೋಕಾನ್ ಸ್ವಲಕ್ಷ್ಮ್ಯಾ ॥29॥
ದಿವಂ ಪ್ರಾಪ್ತಂ ವಾಸವೋಽಥಾಶ್ವಿನೌ ಚ
ರುದ್ರಾದಿತ್ಯಾ ವಸವಶ್ಚಾಥ ವಿಶ್ವೇ ।
ಪ್ರತ್ಯುದ್ಯಯುರ್ಮುನಯಶ್ಚಾಪಿ ಸಿದ್ಧಾ
ಗಂಧರ್ವಮುಖ್ಯಾಶ್ಚ ಸಹಾಪ್ಸರೋಭಿಃ ॥30॥

ತನ್ನೊಂದಿಗಿರುವ ಲಕ್ಷ್ಮೀರೂಪಳಾದ ರುಗ್ಮಿಣಿಯೊಂದಿಗೆ ಲೋಕಗಳನ್ನು ವ್ಯಾಪಿಸಿಕೊಂಡು ಊರ್ಧ್ವಲೋಕಕ್ಕೆ ಹೊರಟಿರುವ ಶ್ರೀಕೃಷ್ಣನು ಅಲ್ಲಿರುವ ಮುನಿಗಳ ಸಮೂಹದಿಂದ ಪೂಜಿತನಾದನು. ಸ್ವರ್ಗವನ್ನು ಸೇರಿದ ಶ್ರೀಕೃಷ್ಣನನ್ನು ಇಂದ್ರನು, ಅಶ್ವಿನೀದೇವತೆಗಳು, ರುದ್ರಾದಿತ್ಯರು, ವಸುಗಳು, ವಿಶ್ವೇದೇವತೆಗಳು, ಮುನಿಗಳು, ಸಿದ್ಧರು, ಗಂಧರ್ವಮುಖ್ಯರು ಅಪ್ಸರಸ್ತ್ರೀಯರೊಂದಿಗೆ ಸೇರಿಕೊಂಡು ಸಂಭ್ರಮದಿಂದ ಎದುರುಗೊಂಡರು.

ತತೋ ರಾಜನ್ ಭಗವಾನುಗ್ರತೇಜಾ
ನಾರಾಯಣಃ ಪ್ರಭವಶ್ಚಾವ್ಯಯಶ್ಚ ।
ಯೋಗಾಚಾರ್ಯೋ ರೋದಸೀ ವ್ಯಾಪ್ಯ ಲಕ್ಷ್ಮ್ಯಾ
ಸ್ಥಾನಂ ಪ್ರಾಪ ಸ್ವಂ ಮಹಾತ್ಮಾಽಪ್ರಮೇಯಮ್ ॥31॥

ಹೇ ರಾಜನೇ, ಅನಂತರ ಪ್ರಜ್ವಲಿಸುವ ತೇಜಸ್ಸುಳ್ಳ, ಈ ಜಗತ್ತಿನ ಸೃಷ್ಟಿ ಹಾಗೂ ಲಯಕ್ಕೂ ಕಾರಣನಾದ, ಯೋಗಾಚಾರ್ಯನಾದ, ತನ್ನ ತೇಜಸ್ಸಿನಿಂದ ಭೂಮ್ಯಾಕಾಶಗಳನ್ನು ವ್ಯಾಪಿಸಿ ನಿಂತಿರುವ ಮಹಾತ್ಮನಾದ, ಷಡ್ಗುಣಪೂರ್ಣನಾದ ನಾರಾಯಣನು ಅಪ್ರಮೇಯವಾದ ತನ್ನ ಸ್ಥಾನವನ್ನು ಸೇರಿಕೊಂಡನು.

ತತೋ ದೇವೈರ್ಋಷಿಭಿಶ್ಚಾಪಿ ಕೃಷ್ಣಃ
ಸಮಾಗತಶ್ಚಾರಣೈಶ್ಚೈವ ರಾಜನ್ ।
ಗಂಧರ್ವಾಗ್ರ್ಯೈರಪ್ಸರೋಭಿರ್ವರಾಭಿಃ
ಸಿದ್ಧೈಃ ಸಾಧ್ಯೈಶ್ಚಾನತೈಃ ಪೂಜ್ಯಮಾನಃ ॥32॥

ಹೇ ರಾಜನೇ, ಆಗ ಶ್ರೀಕೃಷ್ಣನು ದೇವತೆಗಳು, ಋಷಿಗಳು, ಚಾರಣರು, ಗಂಧರ್ವರು, ಶ್ರೇಷ್ಠರಾದ ಅಪ್ಸರಸ್ತ್ರೀಯರು, ಸಿದ್ಧರು, ಸಾಧ್ಯರು ಇವರೆಲ್ಲರಿಂದ ನಮಸ್ಕಾರಪೂರ್ವಕವಾಗಿ ಪೂಜೆಯನ್ನು ಸ್ವೀಕರಿಸುತ್ತಿದ್ದನು.

ತಂ ವೈ ದೇವಾಃ ಪ್ರತ್ಯನಂದಂತ ರಾಜನ್
ಮುನಿಶ್ರೇಷ್ಠಾ ಋಗ್ಭಿರಾನರ್ಚುರೀಶಮ್ ।
ತಂ ಗಂಧರ್ವಾಶ್ಚಾಪಿ ತಸ್ಥುಃ ಸ್ತುವಂತಃ
ಪ್ರೀತ್ಯಾ ಚೈನಂ ಪುರುಹೂತೋಽಭ್ಯನಂದತ್ ॥33॥

ಹೇ ರಾಜನೇ! ಆ ಶ್ರೀಕೃಷ್ಣನನ್ನು ದೇವತೆಗಳು ಸ್ತೋತ್ರ ಮಾಡಿದರು. ಮುನಿಶ್ರೇಷ್ಠರು ಸರ್ವಶಕ್ತನಾದ ಅವನನ್ನು ವೇದಮಂತ್ರಗಳಿಂದ ಅರ್ಚಿಸಿದರು. ಗಂಧರ್ವರು ಅವನನ್ನು ಸ್ತೋತ್ರಗೈಯ್ಯುತ್ತಾ ಅಲ್ಲೇ ನಿಂತರು. ಇಂದ್ರನು ಪ್ರೀತಿಯಿಂದ ಆ ಶ್ರೀಕೃಷ್ಣನನ್ನು ಅಭಿನಂದಿಸಿದನು.

ನಮೋ ನಮಸ್ತೇ ಭಗವನ್ ಶಾಙ್ಗಧನ್ವನ್
ಧರ್ಮಸ್ಥಿತ್ಯಾ ಪ್ರಾದುರಾಸೀರ್ಧರಾಯಾಮ್ ।
ಕಂಸಾಖ್ಯಾದೀನ್ ದೇವಶತ್ರೂಂಶ್ಚ ಸರ್ವಾನ್
ಹತ್ವಾ ಭೂಮಿಃ ಸ್ಥಾಪಿತಾ ಭಾರತಪ್ತಾ ॥34॥

ಹೇ ಭಗವನ್, ಶಾರ್ಙ್ಗವೆಂಬ ಧನುಸ್ಸುಳ್ಳವನೇ, ನಿನಗೆ ಮತ್ತೆ ಮತ್ತೆ ನಮಸ್ಕಾರ. ನೀನು ಭೂಮಿಯಲ್ಲಿ ಧರ್ಮದ ಸ್ಥಾಪನೆಗೋಸ್ಕರ ಪ್ರಾದುರ್ಭವಿಸಿರುವಿ. ಕಂಸನೇ ಮೊದಲಾದ ಎಲ್ಲ ದೇವಶತ್ರುಗಳನ್ನೂ ಸಂಹರಿಸಿ, ಭೂಭಾರದಿಂದ ಕಷ್ಟಪಡುತ್ತಿರುವ ಭೂಮಿಯನ್ನು

ಸರಿಯಾದ ರೀತಿಯಲ್ಲಿ ಸ್ಥಾಪಿಸಿರುವಿ.
ದಿವ್ಯಂ ಸ್ಥಾನಮಜರಂ ಚಾಪ್ರಮೇಯಂ
ದುರ್ವಿಜ್ಞೇಯಂ ಚಾಗಮೈರ್ಗಮ್ಯಮಗ್ರ್ಯಮ್ |
ಗಚ್ಛ ಪ್ರಭೋ ರಕ್ಷ ಚಾರ್ತಿಂ ಪ್ರಪನ್ನಾನ್
ಕಲ್ಪೇ ಕಲ್ಪೇ ಜಾಯಮಾನಾಂಶ್ಚ ಮರ್ತ್ಯಾನ್ ॥35॥
ಹೇ ಪ್ರಭುವೇ, ನಮ್ಮನ್ನು ರಕ್ಷಿಸು. ಮುಪ್ಪಿಗೆ ಅವಕಾಶವಿಲ್ಲದ, ಅಪ್ರಮೇಯವಾದ, ವಾಙ್ಮನಸ್ಸುಗಳಿಂದ ತಿಳಿಯಲು ಅಶಕ್ಯವಾದ, ವೇದಗಳಿಂದ ಮಾತ್ರ ತಿಳಿಯಲು ಯೋಗ್ಯವಾದ ಶ್ರೇಷ್ಠ ಸ್ಥಾನವನ್ನು ನೀನು ಹೊಂದು. ಕಲ್ಪ ಕಲ್ಪಗಳಲ್ಲಿ ಮತ್ತೆ ಮತ್ತೆ ಹುಟ್ಟುತ್ತಿರುವ ಶರಣಾಗತರಾದ ಮನುಜರ ಆರ್ತಿಯನ್ನು ಪರಿಹರಿಸಿ ಅವರನ್ನು ರಕ್ಷಿಸು.
ಇತ್ಯೇವಮುಕತ್ವ ದೇವಸಂಘೋಽನುಗಮ್ಯ
ಶ್ರಿಯಾ ಯುಕ್ತಂ ಪುಷ್ಪವೃಷ್ಟ್ಯಾ ವವರ್ಷ |
ವಾಣೀ ಹ್ಯಾಸೀತ್ಸಂಶ್ರುಣೀ ರೂಪಿಣೀ ಸಾ |
ಭಾನೋರ್ಮಧ್ಯೇ ಪ್ರವಿಶಂತಂ ತು ರಾಜನ್ ॥36॥
ಹೀಗೆ ಹೇಳಿ ದೇವತೆಗಳ ಸಮೂಹವು ಅವನನ್ನು ಹಿಂಬಾಲಿಸಿ ಲಕ್ಷ್ಮೀ ಸಮೇತನಾದ ಶ್ರೀಕೃಷ್ಣನಿಗೆ ಪುಷ್ಪವೃಷ್ಟಿಯನ್ನು ನೆರವೇರಿಸಿತು. ಹೇ ರಾಜನೇ, ಕೃಷ್ಣನು ಸೂರ್ಯಮಂಡಲವನ್ನು ಪ್ರವೇಶಿಸುವ ಆ ಕಾಲಕ್ಕೆ ಸರಿಯಾಗಿ ಎಲ್ಲರಿಗೂ ಚೆನ್ನಾಗಿ ಕೇಳುವಂತೆ ಅಶರೀರವಾಣಿಯು ಉಂಟಾಯಿತು.
ಭುಜೈಶ್ಚತುರ್ಭಿಃ ಸಮುಪೇತಂ ಮಮೇದಂ
ರೂಪಂ ವಿಶಿಷ್ಟಂ ಜೀವಿತಂ ಸಂಸ್ಥಿತಂ ಚ |
ಭೂಮೌ ಗತಂ ಪೂಜಯತಾಪ್ರಮೇಯಂ
ಸದಾ ಹಿ ತಸ್ಮಿನ್ನಿವಸಾಮೀತಿ ದೇವಾಃ ॥37॥
ನಾಲ್ಕುಕೈಗಳಿಂದ ಕೂಡಿದ ಈ ನನ್ನ ವಿಶಿಷ್ಟವಾದ, ಯಾವಾಗಲೂ ಜೀವಕಳೆಯಿಂದ ತುಂಬಿದ, ಭೂಮಿಯಲ್ಲಿ ನಿಂತಿರುವ, ಅಪ್ರಮೇಯವಾದ ಈ ರೂಪವನ್ನು ಸದಾ ಪೂಜಿಸಿರಿ. ಹೇ ದೇವತೆಗಳೇ, ಆ ರೂಪದಲ್ಲಿ ನಾನು ಸದಾ ವಾಸವಾಗಿರುವೆನು.
ದೇವಾ ನಿವೃತ್ತಾಸ್ತತ್ಪದಂ ನಾಪ್ನುವನ್ತೋ
ಬುದ್ಧ್ಯಾ ದೇವಂ ಸಂಸ್ಮರಂತಃ ಪ್ರತೀತಾಃ |
ಬ್ರಹ್ಮಾದ್ಯಾಸ್ತೇ ತದ್ಗುಣಾನ್ ಕೀರ್ತಯಂತಃ
ಶುಭಾನ್ ಲೋಕಾನ್ ಸ್ವಾನ್ ಪ್ರಪೇದುಃ ಸುರೇಂದ್ರಾಃ ॥38॥
ಇಷ್ಟಾದನಂತರ ದೇವತೆಗಳು ಅಲ್ಲಿಂದ ಹಿಂದಿರುಗಿ, ಎಷ್ಟು ಹುಡುಕಿದರೂ ಆ ರೂಪವನ್ನು ಕಾಣಲಾಗದೆ ತಮ್ಮ ತಮ್ಮ ಬುದ್ದಿಯಿಂದಲೇ ಆ ರೂಪದಿಂದ ಭಗವಂತನನ್ನು ಸ್ಮರಿಸಿದರು. ಹೀಗೆ ಬ್ರಹ್ಮನೇ ಮೊದಲಾದ ದೇವತಾಶ್ರೇಷ್ಠರು ಆ ಕೃಷ್ಣನ ಗುಣಗಳನ್ನು ಕೀರ್ತನೆ ಮಾಡುತ್ತಾ, ತಮ್ಮ ತಮ್ಮ ಮಂಗಳಮಯವಾದ ಲೋಕಗಳಿಗೆ ತೆರಳಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ವೌಸಲಪರ್ವಣಿ ವಾಸುದೇವಸ್ವರ್ಗಾರೋಹಣಂ ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ವೌಸಲಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *
ಆರನೆಯ ಅಧ್ಯಾಯ
ದಾರುಕನು ಹಸ್ತಿನಪುರಕ್ಕೆ ಬಂದು ಪಾಂಡವರಲ್ಲಿ ಎಲ್ಲ ಯಾದವರ ಕ್ಷಯವನ್ನು ನಿವೇದಿಸುವುದು. ಅರ್ಜುನನು ದ್ವಾರಕೆಗೆ ಆಗಮಿಸಿ ರುಗ್ಮಿಣಿಯೇ ಮೊದಲಾದವರನ್ನು ಸಮಾಧಾನಪಡಿಸಿ ವಸುದೇವನ ಗೃಹಕ್ಕೆ ತೆರಳುವುದು.
ವೈಶಂಪಾಯನಃ
ದಾರುಕೋಽಪಿ ಕುರೂನ್ ಗತ್ವಾ ದೃಷ್ಟ್ವಾ ಪಾರ್ಥಾನ್ ಮಹಾರಥಾನ್ |
ಆಚಷ್ಟ ಮೌಸಲೇ ವೃಷ್ಣೀನನ್ಯೋನ್ಯೇನೋಪಸಂಹೃತಾನ್ ॥1॥
ವೈಶಂಪಾಯನ ದಾರುಕನು ಕುರುರಾಜ್ಯಕ್ಕೆ ಹೋಗಿ ಮಹಾರಥರಾದ ಪಾಂಡವರನ್ನು ಕಂಡು ಮುಸಲಕ್ಕೆ (ಒನಕೆಗೆ) ಸಂಬಂಧಿಸಿದ ಶಾಪಕ್ಕೊಳಗಾಗಿ ವೃಷ್ಣಿಗಳು ಪರಸ್ಪರ ಹೊಡೆದಾಡಿಕೊಂಡು ನಿಧನ ಹೊಂದಿದರೆಂದು ತಿಳಿಸಿದನು.
ಶ್ರುತ್ವಾ ವಿನಷ್ಟಾನ್ ವಾರ್ಷ್ಣೇಯಾನ್ ಸಭೋಜಾಂಧಕಕೌಕುರಾನ್ |
ಪಾಂಡವಾಃ ಶೋಕಸಂತಪ್ತಾ ವಿತ್ರಸ್ತಮನಸೋಭವನ್ ॥2॥
ಭೋಜ, ಅಂಧಕ, ಕುಕರರೊಂದಿಗೆ ವೃಷ್ಣಿಗಳು ನಿಧನರಾದುದನ್ನು ಕೇಳಿ ಪಾಂಡವರು ಶೋಕಸಂತಪ್ತರಾಗಿ ವ್ಯಾಕುಲಗೊಂಡ ಮನಸ್ಸುಳ್ಳವರಾದರು.
ತತೋಽರ್ಜುನಸ್ತಾನಾಮಂತ್ರ್ಯ ಕೇಶವಸ್ಯ ಪ್ರಿಯಃ ಸಖಾ |
ಪ್ರಯಯೌ ಮಾತುಲಂ ದ್ರಷ್ಟುಂ ನೈತದಸ್ತೀತಿ ಚಾಬ್ರುವೀತ್ ॥3॥
ಅನಂತರ ಕೃಷ್ಣನ ಪ್ರಿಯಮಿತ್ರನಾದ ಅರ್ಜುನನು ಪಾಂಡವರೆಲ್ಲರನ್ನೂ ಸಂಬೋಧಿಸಿ, ಕೃಷ್ಣನಿಲ್ಲವಾದರೆ ಈ ರಾಜ್ಯವೇ ಇಲ್ಲ ಎಂದು ಹೇಳಿ ಮಾವನನ್ನು ನೋಡಲು ದ್ವಾರಕೆಗೆ ಹೊರಟನು.
ಸ ವೃಷ್ಣಿನಿಲಯಂ ಗತ್ವಾ ದಾರುಕೇಣ ಸಹ ಪ್ರಭೋ |
ದದರ್ಶ ದ್ವಾರಕಾಂ ವೀರೋ ಮೃತನಾಥಾಮಿವ ಸ್ತ್ರಿಯಮ್ ॥4॥

ಹೇ ಪ್ರಭುವೇ, ವೀರನಾದ ಆ ಅರ್ಜುನನು ದಾರುಕನೊಂದಿಗೆ ವೃಷ್ಣಿಗಳ ವಾಸಸ್ಥಾನವಾದ ದ್ವಾರಕೆಗೆ ಹೋಗಿ, ಪತಿಯನ್ನು ಕಳೆದುಕೊಂಡು ವಿಧವೆಯಂತಿರುವ ದ್ವಾರಕಾ ಪಟ್ಟಣವನ್ನು ಕಂಡನು.
ಯಾಃ ತು ತಾ ಲೋಕನಾಥೇನ ನಾಥವತ್ಯಃ ಪುರಾಽಭವನ್ |
ತಾಸ್ತ್ವನಾಥಾಸ್ತದಾ ನಾಥಂ ಪಾರ್ಥಂ ದೃಷ್ಟ್ವಾ ವಿಚುಕ್ರುಶುಃ ॥5॥
ಯಾವ ಸ್ತ್ರೀಯರು ಹಿಂದೆ ಲೋಕನಾಥನಾದ ಶ್ರೀಕೃಷ್ಣನಿಂದ ಪತಿಸೌಭಾಗ್ಯವನ್ನು ಪಡೆದಿದ್ದರೋ ಅಂತಹ ಎಲ್ಲ ಅನಾಥಸ್ತ್ರೀಯರೂ ತಮಗೆ ರಕ್ಷಕನಾದ ಅರ್ಜುನನು ಬಂದುದನ್ನು ನೋಡಿ ರೋದಿಸಲಾರಂಭಿಸಿದರು.
ಷೋಡಶಸ್ತ್ರೀಸಹಸ್ರಾಣಿ ವಾಸುದೇವಪರಿಗ್ರಹಾಃ |
ತಾಸಾಮಾಸೀನ್ಮಹಾನ್ನಾದೋ ದೃಷ್ಟ್ವೈವಾರ್ಜುನಮಾಗತಮ್ ॥6॥
ಕೃಷ್ಣ ಕೈಹಿಡಿದ ಹದಿನಾರು ಸಾವಿರ ಸ್ತ್ರೀಯರೂ ಅಲ್ಲಿದ್ದರು. ಅರ್ಜುನನ ಆಗಮನವನ್ನು ನೋಡಿದ ಕೂಡಲೇ ಅವರ ಮಧ್ಯದಿಂದ ಬಹಳವಾದ ರೋದನ ಸ್ವರವು ಕೇಳಿಬಂದಿತು.
ತಾಸ್ತು ದೃಷ್ಟ್ವೈವ ಕೌರವ್ಯೋ ಬಾಷ್ಪೇಣಾಪಿಹಿತೇಕ್ಷಣಃ |
ಹೀನಾಃ ಕೃಷ್ಣೇನ ಪುತ್ರೈಶ್ಚ ನಾಶಕತ್ ಸೋಽಭಿವೀಕ್ಷಿತುಮ್ ॥7॥
ಅವರನ್ನು ನೋಡುತ್ತಲೇ ಕುರುವಂಶಜನಾದ ಅರ್ಜುನನು ಕಣ್ಣೀರು ತುಂಬಿಕೊಂಡನು. ಕೃಷ್ಣನಿಂದ ಹಾಗೂ ಪುತ್ರರಿಂದ ರಹಿತರಾದ ಅವರನ್ನು ನೋಡಲು ಅವನು ಸಮರ್ಥನಾಗಲಿಲ್ಲ.
ಸ ತಾಂ ವೃಷ್ಣ್ಯಂಧಕಜಲಾಂ ಹಯಮೀನಾಂ ರಥೋಡುಪಾಮ್ |
ವಾದಿತ್ರರಥಘೋಷೌಘಾಂ ವೇಶ್ಮತೀರ್ಥಮಹಾಗ್ರಹಾಮ್ ॥8॥
ರತ್ನಶೈವಲಸಂಘಾತಾಂ ವಜ್ರಪ್ರಾಕಾರಮಾಲಿನೀಮ್ |
ರಥ್ಯಾಸ್ರೋತೋಜಲಾವರ್ತಾಂ ಚತ್ವರಸ್ತಿಮಿತಹ್ರದಾಮ್ ॥9॥
ರಾಮಕೃಷ್ಣಮಹಾಗ್ರಾಹಾಂ ದ್ವಾರಕಾಂ ಸರಿತಂ ತದಾ |
ಕಾಲಪಾಶಗ್ರಹಾಂ ಭೀಮಾಂ ನದೀಂ ವೈತರಣೀಮಿವ ॥10॥
ದದರ್ಶ ವಾಸವಿರ್ಧೀಮಾನ್ ವಿಹೀನಾಂ ವೃಷ್ಣಿಪುಂಗವೈಃ |
ಗತಶ್ರಿಯಂ ನಿರಾನಂದಾಂ ಪದ್ಮಿನೀಂ ಶಿಶಿರೇ ಯಥಾ ॥11॥
ಅನಂತರ ಅವನು ಹರಿಯುವ ಮಹಾನದಿಯಂತಿದ್ದ ದ್ವಾರಕಾ ಪಟ್ಟಣವನ್ನು ದಿಟ್ಟಿಸಿದನು. ಈ ನದಿಯಲ್ಲಿ ವೃಷ್ಣಿ ಮತ್ತು ಅಂಧಕರೇ ನೀರಿನಂತಿದ್ದರು. ಕುದುರೆಗಳು ಮೀನಿನಂತಿದ್ದವು, ರಥಗಳು ನೌಕೆಯಂತಿದ್ದವು, ವಾದ್ಯ ಮತ್ತು ರಥದ ಘೋಷಗಳೇ ಹರಿಯುವ ಝುಳುಝುಳು ನಾದದಂತಿತ್ತು. ಮನೆಗಳೇ ತೀರ್ಥ ಹಾಗೂ ಮಡುಗಳಂತಿದ್ದವು. ರತ್ನಗಳೇ ಪಾಚಿಯ ಸಮೂಹದಂತಿದ್ದವು. ವಜ್ರದ ಗೋಡೆಗಳೇ ಹರಿಯುವ ಪ್ರವಾಹದಂತಿದ್ದವು. ರಸ್ತೆಗಳೇ ಹಾಗೂ ಬೀದಿಗಳೇ ಸುಳಿಯಂತಿದ್ದವು. ಯಜ್ಞಶಾಲೆ ಹಾಗೂ ಮಠ-ಮಂದಿರಗಳೇ ಸರೋವರದಂತಿದ್ದವು. ರಾಮ ಹಾಗೂ ಕೃಷ್ಣರೆಂಬ ದೊಡ್ಡ ಮೊಸಳೆಯಿಂದ ಕೂಡಿತ್ತು. ಅದೇ ನದಿಯು ಈಗ ಯಮಪಾಶದಿಂದ ಭಯಂಕರವಾದ ವೈತರಣೀ ನದಿಯಂತೆ ಕಾಣುತ್ತಿತ್ತು. ವೃಷ್ಣಿಶ್ರೇಷ್ಠರಿಂದ ರಹಿತವಾದ, ಸಂಪತ್ತಿಲ್ಲದ, ಆನಂದವಿಲ್ಲದ, ಶಿಶಿರಕಾಲದ ಪದ್ಮಸರೋವರದಂತೆ ಕಂಗೆಟ್ಟಿರುವ ಆ ದ್ವಾರಕೆಯನ್ನು ಧೀಮಂತನಾದ ಇಂದ್ರಪುತ್ರನಾದ ಅರ್ಜುನನು ಕಂಡನು.
ತಾಂ ದೃಷ್ಟ್ವಾ ದ್ವಾರಕಾಂ ಪಾರ್ಥಸ್ತಾಶ್ಚ ಕೃಷ್ಣಸ್ಯ ಯೋಷಿತಃ |
ಸಸ್ವನಂ ಬಾಷ್ಪಮುತ್ಸೃಜ್ಯ ನಿಪಪಾತ ಮಹೀತಳೇ ॥12॥
ಹೀಗೆ ಆ ದ್ವಾರಕೆಯನ್ನೂ, ಕೃಷ್ಣಪತ್ನಿಯರನ್ನೂ ನೋಡಿದ ಅರ್ಜುನನು ಕಣ್ಣೀರು ತುಂಬಿಕೊಂಡು, ಜೋರಾದ ಶಬ್ದದಿಂದ ಅಳುತ್ತಾ ಭೂಮಿಯಲ್ಲಿ ಬಿದ್ದುಬಿಟ್ಟನು.
ಸಾತ್ರಾಜಿತೀ ಸತ್ಯಭಾಮಾ ರುಗ್ಮಿಣೀ ಚ ವಿಶಾಂಪತೇ |
ಅಭಿಪತ್ಯ ಪ್ರರುರುದುಃ ಪರಿವಾರ್ಯ ಧನಂಜಯಮ್ ॥13॥
ಸತ್ರಾಜಿತನ ಮಗಳಾದ ಸತ್ಯಭಾಮೆಯೂ, ರುಗ್ಮಿಣಿಯೂ ಅರ್ಜುನನ ಸಮೀಪಕ್ಕೆ ಬಂದು ಅಲ್ಲಿ ಕುಳಿತು ತಾವೂ ಅತ್ತರು.
ತತಸ್ತಂ ಕಾಂಚನೇ ಪೀಠೇ ಸಮುತ್ಥಾಪ್ಯೋಪವೇಶ್ಯ ಚ |
ಅಭಿನಂದ್ಯ ಮಹಾತ್ಮಾನಂ ಪರಿವಾರ್ಯೋಪತಸ್ಥಿರೇ ॥14॥
ಅನಂತರ ಅವನನ್ನು ಎಬ್ಬಿಸಿ, ಚಿನ್ನದ ಪೀಠದಲ್ಲಿ ಕುಳ್ಳಿರಿಸಿ, ಮಹಾತ್ಮನಾದ ಅವನನ್ನು ಅಭಿನಂದಿಸುತ್ತ ಎಲ್ಲ ಸ್ತ್ರೀಯರು ಅವನ ಎದುರು ಕುಳಿತರು.
ತತಃ ಸಂಸ್ತೂಯ ಗೋವಿಂದಂ ಕಥಯಿತ್ವಾ ಚ ಪಾಂಡವಃ |
ಆಶ್ವಾಸ್ಯ ತಾಃ ಸ್ತ್ರಿಯಶ್ಚಾಪಿ ಮಾತುಲಂ ದ್ರಷ್ಟುಮಭ್ಯಗಾತ್ ॥15॥
ಅನಂತರ ಅರ್ಜುನನು ಅವರೊಂದಿಗೆ ಮಾತನಾಡುತ್ತಾ, ಕೃಷ್ಣನನ್ನು ಹೊಗಳುತ್ತಾ, ಆ ಸ್ತ್ರೀಯರನ್ನು ಸಮಾಧಾನಪಡಿಸಿ, ಮಾವನನ್ನು ನೋಡಲು ಅಲ್ಲಿಂದ ಹೊರಟನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ಅರ್ಜುನಸ್ಯ ದ್ವಾರಕಾಗಮನಂ ನಾಮ ಷಷ್ಠೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.
* * * * *
ಏಳನೆಯ ಅಧ್ಯಾಯ

ವಸುದೇವನು ತನ್ನ ಮನೆಗೆ ಬಂದ ಅರ್ಜುನನಿಗೆ ಯಾದವರ ಕ್ಷಯವನ್ನೂ, ಅದಕ್ಕೆ ಕಾರಣವನ್ನೂ ತಿಳಿಸುತ್ತಾ, ಕೃಷ್ಣಾದಿಗಳನ್ನು ಸ್ಮರಿಸಿಕೊಂಡು ಪರಿತಪಿಸುವುದು. ಹಾಗೆಯೇ ಅರ್ಜುನನಿಗೆ ಕೃಷ್ಣನ ಸೂಚನೆಯನ್ನು ತಿಳಿಸಿ ರಾಜ್ಯ, ಸ್ತ್ರೀ, ಧನಾದಿಗಳನ್ನು ಅರ್ಪಿಸಿ, ತಾನು ಪ್ರಾಣತ್ಯಾಗ ಮಾಡುವೆನೆಂದು ತಿಳಿಸುವುದು.

ವೈಶಂಪಾಯನಃ

ತಂ ಶಯಾನಂ ಮಹಾತ್ಮಾನಂ ವೀರಮಾನಕದುಂದುಭಿಮ್ |
ಪುತ್ರಶೋಕೇನ ಸಂತಪ್ತಂ ದದರ್ಶ ಕುರುಪುಂಗವಃ ॥1॥

ವೈಶಂಪಾಯನ ಮಾವನನ್ನು ನೋಡಲು ಬಂದ ಕುರುಪುಂಗವನಾದ ಅರ್ಜುನನು ಮಹಾತ್ಮನಾದ, ವೀರನಾದ, ಪುತ್ರಶೋಕದಿಂದ ಬಳಲಿದ, ಮಲಗಿಕೊಂಡಿರುವ ವಸುದೇವನನ್ನು ಕಂಡನು.

ತಸ್ಯಾಶ್ರುಪರಿಪೂರ್ಣಾಕ್ಷೋ ವ್ಯೂಢೋರಸ್ಕೋ ಮಹಾಭುಜಃ |
ಆರ್ತಸ್ಯಾರ್ತತರಃ ಪಾರ್ಥಃ ಪಾದೌ ಜಗ್ರಾಹ ಭಾರತ ॥2॥

ಹೇ ಭಾರತನೇ, ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳ, ಅಗಲವಾದ ಎದೆಯುಳ್ಳ, ಪರಿಪುಷ್ಟವಾದ ಭುಜವುಳ್ಳ ಆ ಪಾರ್ಥನು ಅತ್ಯಂತ ದುಃಖದಿಂದ ಪೀಡಿತನಾಗಿ ಆ ವಸುದೇವನ ಪಾದಗಳನ್ನು ಹಿಡಿದನು.

ತಸ್ಯ ಮೂರ್ಧಾನಮಾಘ್ರಾತುಮಿಯೇಷಾನಕದುಂದುಭಿಃ |
ಸ್ವಸ್ರೀಯಸ್ಯ ಮಹಾಬಾಹುರ್ನ ಶಶಾಕ ವಚೋ ಹರೇಃ ॥3॥

ಆಗ ವಸುದೇವನು ತನ್ನ ಸೋದರಳಿಯನಾದ ಆ ಅರ್ಜುನನ ನೆತ್ತಿಯನ್ನು ಆಘ್ರಾಣಿಸಲು ಬಯಸಿ ಮೇಲೆದ್ದನು. ಆದರೆ ಅರ್ಜುನನು ಬರುವನೆಂದು ಮೊದಲೇ ಹೇಳಿದ ಶ್ರೀಕೃಷ್ಣನ ಮಾತುಗಳನ್ನು ಅವನ ಬಳಿ ಹೇಳಲು ಅಸಮರ್ಥನಾದನು.

ಸಮಾಲಿಂಗ್ಯಾರ್ಜುನಂ ವೃದ್ಧಃ ಸ ಭುಜಾಭ್ಯಾಂ ಮಹಾಭುಜಃ |
ರುರೋದಾಥ ಸ್ಮರನ್ ಶೌರಿಂ ವಿಲಲಾಪ ಸುವಿಹ್ವಲಃ ॥4॥
ಭ್ರಾತ್ರೂನ್ ಪುತ್ರಾಂಶ್ಚ ಪೌತ್ರಾಂಶ್ಚ ದೌಹಿತ್ರಾನ್ ಸ ಸಖೀನಪಿ ॥5॥

ವೃದ್ಧನಾದ, ಮಹಾಭುಜನಾದ ಆ ವಸುದೇವನು ಅರ್ಜುನನನ್ನು ಬಾಹುಗಳಿಂದ ಆಲಿಂಗಿಸಿ, ಕೃಷ್ಣನನ್ನು ಸ್ಮರಿಸುತ್ತಾ ಅತ್ತುಬಿಟ್ಟನು. ಜೊತೆಗೆ ಸಹೋದರರನ್ನೂ, ಮಕ್ಕಳನ್ನೂ, ಮೊಮ್ಮಕ್ಕಳನ್ನೂ, ಮಗಳ ಮಕ್ಕಳನ್ನೂ, ಸ್ನೇಹಿತರನ್ನೂ ನೆನಪಿಸಿಕೊಳ್ಳುತ್ತಾ, ಬಹಳ ವ್ಯಾಕುಲಗೊಂಡವನಾಗಿ ಅರ್ಜುನನೊಂದಿಗೆ ಬಡಬಡಿಸಿದನು.

ವಸುದೇವಃ

ಯೈರ್ಜಿತಾ ಭೂಮಿಪಾಲಾಶ್ಚ ದೈತ್ಯಾಶ್ಚ ಶತಶೋಽರ್ಜುನ |
ತಾನ್ ಸರ್ವಾನ್ನೇಹ ಪಶ್ಯಾಮಿ ಜೀವಾಮ್ಯರ್ಜುನ ದುರ್ಮರಃ ॥6॥

ವಸುದೇವ ಹೇ ಅರ್ಜುನನೇ, ಯಾವ ವೃಷ್ಣಿಗಳಿಂದ ಬಹುಮಂದಿ ರಾಜರೂ, ನೂರಾರು ಮಂದಿ ದೈತ್ಯರೂ ಸೋತುಹೋದರೋ ಆ ಯಾರನ್ನೂ ನಾನೀಗ ನೋಡುತ್ತಿಲ್ಲ. ಆದರೆ ಅರ್ಜುನನೇ ಮರಣವಿಲ್ಲದೆ ನಾನು ಮಾತ್ರ ಬದುಕಿರುವೆನು.

ಯೌ ತಾವರ್ಜುನಶಿಷ್ಯೌ ತೇ ಪ್ರಿಯೌ ಬಹುಮತೌ ಸದಾ |
ತಯೋರಪನಯಾತ್ ಪಾರ್ಥ ವೃಷ್ಣಯೋ ನಿಧನಂ ಗತಾಃ ॥7॥

ಯಾವ ಇಬ್ಬರು ನಿನಗೆ ಅತ್ಯಂತ ಪ್ರಿಯರಾಗಿದ್ದು, ಅರ್ಜುನನ ಶಿಷ್ಯರೆಂದು ಬಹಳ ಮಂದಿ ಹೊಗಳುತ್ತಿದ್ದರೋ ಹೇ ಪಾರ್ಥನೇ, ಆ ಇಬ್ಬರ ದುಡುಕುತನದಿಂದಲೇ ವೃಷ್ಣಿಗಳು ನಿಧನರಾದರು.

ಯೌ ತೌ ವೃಷ್ಣಿಪ್ರವೀರಾಣಾಂ ದ್ವಾವೇವಾತಿರಥೌ ಮತೌ |
ಪ್ರದ್ಯುಮ್ನೋ ಯುಯುಧಾನಶ್ಚ ಕಥಾಂ ಕಥಯಸೇ ಚ ಯೌ ॥8॥
ತೌ ಸದಾ ಕುರುಶಾರ್ದೂಲ ಕೃಷ್ಣಸ್ಯ ಪ್ರಿಯಭಾಜನೌ |
ತಾವುಭೌ ವೃಷ್ಣಿನಾಶಸ್ಯ ಮುಖಮಾಸ್ತಾಂ ಧನಂಜಯ ॥9॥

ಯಾವ ಇಬ್ಬರು ವೃಷ್ಣಿವೀರರ ಮಧ್ಯೆ ಇಬ್ಬರೇ ಅತಿರಥರೆಂದು ಹೊಗಳಿಕೆಗೆ ಪಾತ್ರರಾಗಿದ್ದರೋ ಯಾವ ಯಾರಿಬ್ಬರ ಬಗ್ಗೆ ಇವರು ನನ್ನ ಶಿಷ್ಯರೆಂದು ನೀನು ಹೊಗಳುತ್ತಿದ್ದೆಯೋ ಆ ಪ್ರದ್ಯುಮ್ನ ಮತ್ತು ಯುಯುಧಾನರು ಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರರಾಗಿದ್ದರೋ, ಹೇ ಕುರುಶ್ರೇಷ್ಠನೇ, ಅವರಿಬ್ಬರೇ ಯದುಗಳ ನಾಶಕ್ಕೆ ಪ್ರಮುಖ ಕಾರಣರಾದರು.

ನ ತು ಗರ್ಹಾಮಿ ಶೈನೇಯಂ ಹಾರ್ದಿಕ್ಯಂ ಚಾಹಮರ್ಜುನ |
ಅಕ್ರೂರಂ ರೌಗ್ಮಿಣೇಯಂ ಚ ಶಾಪೋ ಹ್ಯೇವಾತ್ರ ಕಾರಣಮ್ ॥10॥

ಹೇ ಅರ್ಜುನನೇ, ನಾನು ಶೈನೇಯನಾದ ಸಾತ್ಯಕಿಯನ್ನಾಗಲೀ, ಹಾರ್ದಿಕ್ಯನಾದ ಕೃತವರ್ಮನನ್ನಾಗಲೀ, ಅಕ್ರೂರನನ್ನಾಗಲೀ, ರುಗ್ಮಿಣೀಪುತ್ರನಾದ ಪ್ರದ್ಯುಮ್ನನನ್ನಾಗಲೀ ತೆಗಳುತ್ತಿಲ್ಲ. ಇಲ್ಲಿ ಋಷಿಗಳ ಶಾಪವೇ ಈ ಅನರ್ಥಗಳಿಗೆ ಕಾರಣವಾಗಿದೆ.

ಕೇಶಿನಂ ಕೇಶವಃ ಕಂಸಂ ವಿಕ್ರಮ್ಯ ಹತವಾನ್ ಪ್ರಭುಃ |
ವಿದೇಹಮಕರೋತ್ ಪಾರ್ಥ ಚೈದ್ಯಂ ಚ ಬಲಗರ್ವಿತಮ್ ॥11॥

ಸಮರ್ಥನಾದ ಕೇಶವನು ಕೇಶಿಯನ್ನೂ, ಕಂಸನನ್ನೂ ಅವರ ಜೊತೆ ಯುದ್ಧ ಮಾಡಿ ಸಂಹರಿಸಿದನು. ಹಾಗೆಯೇ ಹೇ ಪಾರ್ಥನೇ, ಬಲಗರ್ವಿತನಾದ ಶಿಶುಪಾಲನನ್ನೂ ದೇಹದಿಂದ ಬೇರ್ಪಡಿಸಿದನು.

ನೈಷಾದಿಮೇಕಲವ್ಯಂ ಚ ಚಕ್ರೇ ಕಾಲಿಂಗಮಾಗಧಾನ್ |
ಗಾಂಧಾರಾನ್ ಕಾಶಿರಾಜಂ ಚ ಮರುಭೂಮೌ ಚ ಪಾರ್ಥಿವಾನ್ ॥
ಪ್ರಾಚ್ಯಾಂಶ್ಚ ದಾಕ್ಷಿಣಾತ್ಯಾಂಶ್ಚ ಪಾರ್ವತೀಯಾಂಸ್ತಥಾ ನೃಪಾನ್ |
ಸೋಽಭ್ಯುಪೇಕ್ಷಿತವಾನೇವಮನಯಾನ್ಮಧುಸೂದನಃ ॥13॥

ನಿಷಾದರಾಜನಾದ ಏಕಲವ್ಯನನ್ನೂ, ಕಾಳಿಂಗ, ಮಾಗಧ ರಾಜರನ್ನೂ, ಗಾಂಧಾರ ರಾಜರನ್ನೂ, ಕಾಶಿರಾಜನನ್ನೂ, ಮರುಭೂಮಿಯಲ್ಲಿರುವ ರಾಜರನ್ನೂ, ಪೂರ್ವದೇಶದ ರಾಜರನ್ನೂ, ದಾಕ್ಷಿಣಾತ್ಯರನ್ನೂ, ಪರ್ವತ ದೇಶಗಳಲ್ಲಿರುವ ರಾಜರನ್ನೂ ಗೆದ್ದ ಈ ಮಧುಸೂದನನು ಯಾದವರ ವಿಷಯದಲ್ಲಿ ಮಾತ್ರ ಈ ಅನೀತಿಯನ್ನು ಕಂಡೂ ಏನೂ ತಿಳಿಯದಂತೆ ಉಪೇಕ್ಷೆ ಮಾಡಿದನು.

ತ್ವಂ ಹಿ ತಂ ನಾರದಶ್ಚೈವ ಮುನಯಶ್ಚ ಸನಾತನಮ್ |
ಗೋವಿಂದಮನಘಂ ದೇವಮಭಿಜಾನೀಧ್ವಮಚ್ಯುತಮ್ ॥14॥
ನೀನು, ನಾರದರು, ಬೇರೆಲ್ಲ ಮುನಿಗಳೂ ಕೂಡ ಆ ಕೃಷ್ಣನನ್ನು ಸನಾತನನಾದ, ಮೋಕ್ಷದಾಯಕನಾದ, ನಿರ್ದುಷ್ಟನಾದ, ನಾಶವಿಲ್ಲದ ದೇವನೆಂದು ತಿಳಿದಿರುವಿರಿ.
ಪ್ರತ್ಯಪಶ್ಯಚ್ಚ ಸ ವಿಭುರ್ಜ್ಞಾತಿಕ್ಷಯಮಧೋಕ್ಷಜಃ |
ಸಮುಪೇಕ್ಷಿತವಾನ್ನಿತ್ಯಂ ಸ್ವಯಂ ಸ ಮಮ ಪುತ್ರಕಃ ॥15॥
ಅಧೋಕ್ಷಜನಾದ, ಸಮರ್ಥನಾದ ಅವನು ತನ್ನ ಬಂಧುಗಳ ನಾಶವನ್ನು ತಿಳಿದೇ ಇದ್ದಾನೆ. ಆದರೂ ನನ್ನ ಮಗನಾದ ಅವನು ಸ್ವತಃ ಅದನ್ನು ಉಪೇಕ್ಷೆ ಮಾಡಿದನು.
ಗಾಂಧಾರ್ಯಾ ವಚನಂ ಯತ್ತದೃಷೀಣಾಂ ಚ ಪರಂತಪ |
ತನ್ನೂನಮನ್ಯಥಾ ಕರ್ತುಂ ನೈಚ್ಛತ್ಸ ಜಗತಃ ಪ್ರಭುಃ ॥16॥
ಹೇ ಪರಂತಪನೇ, ಗಾಂಧಾರಿಯ ಮಾತುಗಳೇನಿವೆಯೋ ಹಾಗೆಯೇ ಋಷಿಗಳ ಮಾತೇನಿದೆಯೋ ಆ ಮಾತುಗಳನ್ನು ಜಗತ್ತಿಗೆ ಪ್ರಭುವಾಗಿದ್ದರೂ ಅವನು ನಿಶ್ಚಯವಾಗಿಯೂ ವ್ಯರ್ಥಗೊಳಿಸಲು ಬಯಸಲಿಲ್ಲ.
ಪ್ರತ್ಯಕ್ಷಂ ಭವತಶ್ಚಾಪಿ ತವ ಪೌತ್ರಃ ಪರಂತಪ |
ಅಶ್ವತ್ಥಾಮ್ನಾ ಹತಶ್ಚಾಪಿ ಜೀವಿತಸ್ತಸ್ಯ ತೇಜಸಾ ॥17॥
ಇಮಾಂಸ್ತು ನೈಚ್ಛತ್ ಸ್ವಾನ್ ಜ್ಞಾತೀನ್ ರಕ್ಷಿತುಂ ಚ ಸಖಾ ತವ ॥18॥
ಹೇ ಪರಂತಪನೇ, ನಿನ್ನ ಮೊಮ್ಮಗನು ಅಶ್ವತ್ಥಾಮನಿಂದ ಹತನಾದಾಗ ಆ ಕೃಷ್ಣನ ತೇಜಸ್ಸಿನಿಂದಲೇ ಬದುಕಿದನು. ಇದು ನಿನಗೂ ಪ್ರತ್ಯಕ್ಷವಾಗಿ ತಿಳಿದೇ ಇದೆ. ಆದರೂ ಆ ನಿನ್ನ ಮಿತ್ರನು ಈ ತನ್ನ ಬಂಧುಗಳನ್ನು ರಕ್ಷಿಸಲು ಇಚ್ಛಿಸಲಿಲ್ಲ.
ತತಃ ಪುತ್ರಾಂಶ್ಚ ಪೌತ್ರಾಂಶ್ಚ ಭ್ರಾತೄನಥ ಸಖೀಂಸ್ತಥಾ |
ಶಯಾನಾನ್ ನಿಹತಾನ್ ದೃಷ್ಟ್ವಾ ಕೃಷ್ಣೋ ಮಾಮಬ್ರವೀದಿದಮ್ ॥19॥
ಅಲ್ಲದೇ ಮಕ್ಕಳು, ಮೊಮ್ಮಕ್ಕಳು, ಸಹೋದರರು, ಮಿತ್ರರು ಇವರೆಲ್ಲರೂ ಪರಸ್ಪರ ಹೊಡೆದುಕೊಂಡು ಬಿದ್ದುದನ್ನು ನೋಡಿ ಕೃಷ್ಣನು ನನ್ನ ಬಳಿ ಹೀಗೆಂದನು.
ಸಂಪ್ರಾಪ್ತೋಽದ್ಯಾಯಮಸ್ಯಾಂತಃ ಕುಲಸ್ಯ ಭರತರ್ಷಭ |
ಆಗಮಿಷ್ಯತಿ ಬೀಭತ್ಸುರಿಮಾಂ ದ್ವಾರವತೀಂ ಪುರೀಮ್ ॥20॥
ಆಖ್ಯೇಯಂ ತಸ್ಯ ಯದ್ ವೃತ್ತಂ ವೃಷ್ಣೀನಾಂ ವೈಶಸಂ ಮಹತ್ ॥21॥
ಹೇ ಭರತರ್ಷಭನೇ, ಇಂದು ಈ ನಮ್ಮ ಕುಲಕ್ಕೆ ಕೊನೆಗಾಲ ಬಂದಿದೆ. ಈ ದ್ವಾರಾವತೀ ಪಟ್ಟಣಕ್ಕೆ ಅರ್ಜುನನು ಬರಲಿದ್ದಾನೆ. ಅವನಿಗೆ ಈ ಯಾದವರ ಮಧ್ಯದಲ್ಲಿ ಏನು ಹಿಂಸೆ ನಡೆದಿದೆಯೋ ಅದೆಲ್ಲವನ್ನೂ ತಿಳಿಸಬೇಕು.
ಸ ತು ಶ್ರುತ್ವಾ ಮಹಾತೇಜಾ ಯದೂನಾಂ ನಿಧನಂ ಪ್ರಭೋ |
ಆಗಂತಾ ಕ್ಷಿಪ್ರಮೇವೇಹ ನ ಮೇಽತ್ರಾಸ್ತಿ ವಿಚಾರಣಾ ॥22॥
ಹೇ ಪ್ರಭುವೇ, ಯದುಗಳ ಈ ನಿಧನವನ್ನು ತಿಳಿದ, ಮಹಾತೇಜಸ್ವಿಯಾದ ಅರ್ಜುನನು ಬಹುಬೇಗನೆ ಇಲ್ಲಿಗೆ ಬಂದೇ ಬರುವನು. ಇದರಲ್ಲಿ ಯಾವುದೇ ಸಂಶಯವಿಲ್ಲ.
ಯೋಽಹಂ ತಮರ್ಜುನಂ ವಿದ್ಧಿ ಯೋಽರ್ಜುನಃ ಸೋಹಮೇವ ತು |
ಯದ್ ಬ್ರೂಯಾತ್ ತತ್ತಥಾ ಕಾರ್ಯಮಿತಿ ಬುಧ್ಯಸ್ವ ಭಾರತ ॥23॥
ಈಗ ನಾನೇನು ನಿಮ್ಮೆದುರು ಇರುವೆನೋ ನನ್ನನ್ನು ಅರ್ಜುನನೆಂದೇ ತಿಳಿಯಿರಿ. ಮುಂದೆ ಯಾವ ಅರ್ಜುನನು ಬರುವನೋ ಅವನನ್ನು ನಾನೆಂದೇ ತಿಳಿಯಿರಿ. ಹೇ ಭಾರತನೇ, ಅವನು ಏನು ಹೇಳುವನೋ ಅದನ್ನು ಹಾಗೆಯೇ ನಡೆಸಬೇಕೆಂದು ತಿಳಿಯಿರಿ.
ಸ ಸ್ತ್ರೀಷು ಪ್ರಾಪ್ತಕಾಲಾಸು ಪಾಂಡವೋ ಬಾಲಕೇಷು ಚ |
ಪ್ರತಿಪತ್ಸ್ಯತಿ ಬೀಭತ್ಸುರ್ಭವತಶ್ಚೌರ್ಧ್ವದೇಹಿಕಮ್ ॥24॥
ಆ ಪಾಂಡವನು ಸ್ತ್ರೀಯರು, ಬಾಲಕರು ಹಾಗೂ ತಮಗೂ ಕಾಲ ಬಂದಾಗ ಔರ್ಧ್ವದೇಹಿಕ ಕ್ರಿಯೆಗಳನ್ನು ಯಥಾವತ್ತಾಗಿ ನಡೆಸುತ್ತಾನೆ.
ಇಮಾಂ ಚ ನಗರೀಂ ಸದ್ಯಃ ಪ್ರತಿಯಾತೇ ಧನಂಜಯೇ |
ಪ್ರಾಕಾರಾಟ್ಟಾಲಕೋಪೇತಾಂ ಸಮುದ್ರಃ ಪ್ಲಾವಯಿಷ್ಯತಿ ॥25॥
ಈ ಪಟ್ಟಣದಿಂದ ಅರ್ಜುನನು ಹೊರಹೊರಟಾಗ ಕೋಟೆ, ಉಪ್ಪರಿಗೆಗಳಿಂದ ಕೂಡಿದ ಈ ನಗರವನ್ನು ಕೂಡಲೇ ಸಮುದ್ರವು ಮುಳುಗಿಸಿಬಿಡುತ್ತದೆ.
ಅಹಂ ದೇಶೇ ತು ಕಸ್ಮಿಂಶ್ಚಿತ್ ಪುಣ್ಯೇ ನಿಯಮಮಾಸ್ಥಿತಃ |
ಕಾಲಂ ಕಾಂಕ್ಷೇ ಸದ್ಯ ಏವ ರಾಮೇಣ ಸಹಿತೋ ವನೇ ॥26॥
ನಾನಾದರೂ ಬಲರಾಮನಿಂದ ಸಹಿತನಾಗಿ ಕಾಡಿನಲ್ಲಿ ಯಾವುದಾದರೊಂದು ಮಂಗಳಮಯವಾದ ಪ್ರದೇಶದಲ್ಲಿ ನಿಯಮನಿಷ್ಠನಾಗಿ ಕಾಲವನ್ನು ನಿರೀಕ್ಷಿಸುತ್ತೇನೆ.
ಏವಮುಕತ್ತ್ವ ಹೃಷೀಕೇಶೋ ಮಾಮಚಿಂತ್ಯಪರಾಕ್ರಮಃ |

ಹಿತ್ವಾ ಮಾಂ ಬಾಲಕೈಃ ಸಾರ್ಧಂ ದಿಶಂ ಕಾಮಪ್ಯಗಾತ್ ಪ್ರಭುಃ ॥27॥
ಹೀಗೆ ಅಚಿಂತ್ಯಪರಾಕ್ರಮನಾದ ಹೃಷೀಕೇಶನು ನನ್ನನ್ನುದ್ದೇಶಿಸಿ ಹೇಳಿ, ಮಕ್ಕಳೊಂದಿಗೆ ನನ್ನನ್ನು ಇರಿಸಿ, ನಮ್ಮನ್ನೆಲ್ಲ ಬಿಟ್ಟು ಯಾವುದೋ ದಿಕ್ಕಿಗೆ ಹೊರಟುಹೋದನು.
ಸೋಽಹಂ ತೌ ಚ ಮಹಾತ್ಮಾನೌ ಚಿಂತಯನ್ ರಾಮಕೇಶವೌ |
ಘೋರಂ ಜ್ಞಾತಿವಧಂ ಚೈವ ನ ಭುಂಜೇ ಶೋಕಕರ್ಶಿತಃ ॥28॥
ನಾನಾದರೂ ಮಹಾತ್ಮರಾದ ಆ ರಾಮ ಮತ್ತು ಕೇಶವರನ್ನು ಚಿಂತಿಸುತ್ತಾ ಹಾಗೂ ಘೋರವಾದ ಬಂಧುಗಳ ನಾಶವನ್ನೂ ಚಿಂತಿಸುತ್ತಾ, ಶೋಕದಿಂದ ಕೃಶನಾಗಿ ಆಹಾರವನ್ನೂ ಸ್ವೀಕರಿಸುತ್ತಿಲ್ಲ.
ನ ಮೋಕ್ಷೇ ಽಯೇ ನ ಚ ಜೀವಿಷ್ಯೇ ದಿಷ್ಟ್ಯಾ ಪ್ರಾಪ್ತೋಸಿ ಪಾಂಡವ |
ಯದುಕ್ತಂ ಪಾರ್ಥ ಕೃಷ್ಣೇನ ತತ್ಸರ್ವಮಖಿಲಂ ಕುರು ॥29॥
ಹೇ ಪಾಂಡವನೇ, ನಾನಂತೂ ಇವರನ್ನು ಬಿಡಲೂ ಆಗದೆ, ಬದುಕಲೂ ಆಗದೆ ಕಷ್ಟಪಡುತ್ತಿದ್ದೇನೆ. ಅದೃಷ್ಟವಶಾತ್ ನೀನು ಬಂದಿರುವೆ. ಹೇ ಪಾರ್ಥನೇ, ಕೃಷ್ಣನು ಏನು ಹೇಳಿದ್ದಾನೋ ಅದೆಲ್ಲವನ್ನೂ ಸರಿಯಾಗಿ ನಡೆಸು.
ಏತತ್ತೇ ಪಾರ್ಥ ರಾಜ್ಯಂ ಚ ಸ್ತ್ರಿಯೋ ರತ್ನಾನಿ ಚೈವ ಹಿ |
ಇಷ್ಟಾನ್ ಪ್ರಾಣಾನಹಂ ಹೀಮಾಂಸ್ತ್ಯಕ್ಷ್ಯಾಮಿ ರಿಪುಸೂದನ ॥30॥
ಹೇ ಪಾರ್ಥನೇ, ಈ ರಾಜ್ಯವು, ಈ ಸ್ತ್ರೀಯರು, ಅಲ್ಲದೆ ಈ ರತ್ನಗಳು ಎಲ್ಲವೂ ನಿನ್ನದೆ. ಹೇ ಶತ್ರುನಾಶಕನೇ, ನನಗೆ ಪ್ರೀತಿಪಾತ್ರರಾದ ಇವರನ್ನೂ, ನನ್ನ ಪ್ರಾಣಗಳನ್ನೂ ನಾನು ಬಿಡಲಿದ್ದೇನೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ಅರ್ಜುನಂ ಪ್ರತಿ ವಸುದೇವವಾಕ್ಯಂ ನಾಮ ಸಪ್ತಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಏಳನೆಯ ಅಧ್ಯಾಯ ಮುಗಿಯಿತು.
* * * * *
ಎಂಟನೆಯ ಅಧ್ಯಾಯ
ಅರ್ಜುನನು ವಸುದೇವನನ್ನು ಸಮಾಧಾನಪಡಿಸಿ, ಎಲ್ಲ ಪೌರರಿಗೂ ಅತಿಶೀಘ್ರದಲ್ಲೇ ದ್ವಾರಕೆಯನ್ನು ಸಮುದ್ರವು ಮುಳುಗಿಸುವುದೆಂದು ನಿವೇದಿಸಿ ಎಲ್ಲರೂ ಇಂದ್ರಪ್ರಸ್ಥಕ್ಕೆ ಹೊರಡಬೇಕೆಂದು ಸೂಚಿಸುವುದು. ಮಾರನೆಯ ದಿನ ಶೋಕದಿಂದ ಶರೀರತ್ಯಾಗವನ್ನು ಮಾಡಿದ ವಸುದೇವನಿಗೆ ಪತ್ನಿಯರೊಂದಿಗೆ ಸಂಸ್ಕಾರವನ್ನು ನಡೆಸಿ, ರಾಮ-ಕೃಷ್ಣರ ಶರೀರಕ್ಕೂ ದಹನಸಂಸ್ಕಾರವನ್ನು ನಡೆಸುವುದು. ಅನಂತರ ವಜ್ರ ಹಾಗೂ ಅರ್ಜುನರ ಜವಾಬ್ದಾರಿಯೊಂದಿಗೆ ಎಲ್ಲ ಪೌರಜನರೂ ಮುಂದೆ ಮುಂದೆ ನಡೆದಂತೆ ಸಮುದ್ರವು ಹಿಂಭಾಗದಲ್ಲಿ ದ್ವಾರಕೆಯನ್ನು ಮುಳುಗಿಸುತ್ತಾ ಬರುವುದು. ಅರ್ಜುನನು ಮಾರ್ಗಮಧ್ಯದಲ್ಲಿ ದಸ್ಯುಗಳಿಂದ ಪರಾಜಿತನಾಗಿ, ಅವರು ಅಪಹರಿಸದೆ ಬಿಟ್ಟು ಉಳಿದ ಯಾದವ ಸ್ತ್ರೀಯರೊಂದಿಗೆ ತನ್ನ ದೇಶಕ್ಕೆ ಬಂದು, ಯುಧಿಷ್ಠಿರನ ಆಜ್ಞೆಯಂತೆ ವಜ್ರನನ್ನು ಇಂದ್ರಪ್ರಸ್ಥರಾಜ್ಯದಲ್ಲಿ ಅಭಿಷೇಕ ಮಾಡುವುದು. ಅನಂತರ ಸಾತ್ಯಕಿಯ ಮಗನೇ ಮೊದಲಾದವರನ್ನು ಅಲ್ಲಲ್ಲಿ ರಾಜ್ಯದಲ್ಲಿ ಅಭಿಷೇಕ ಮಾಡುವುದು. ರುಗ್ಮಿಣಿಯೇ ಮೊದಲಾದ ಕೆಲವು ಸ್ತ್ರೀಯರು ಅಗ್ನಿಯನ್ನು ಪ್ರವೇಶಿಸುವುದು. ಸತ್ಯಭಾಮೆಯೇ ಮೊದಲಾದ ಕೆಲವರು ತಪಸ್ಸಿಗಾಗಿ ಕಾಡಿಗೆ ತೆರಳುವುದು.
ವೈಶಂಪಾಯನಃ
ಏವಮುಕ್ತಃ ಸ ಬೀಭತ್ಸುರ್ಮಾತುಲೇನ ಪರಂತಪ |
ದುರ್ಮನಾ ದೀನವದನೋ ವಸುದೇವಮುವಾಚ ಹ ॥1॥
ವೈಶಂಪಾಯನ ಹೇ ಪರಂತಪನೇ, ಮಾವನು ಹೀಗೆ ಹೇಳಿದಾಗ ಅರ್ಜುನನು ಬೇಸರಪಟ್ಟವನಾಗಿ, ಕಳೆಗುಂದಿದ ಮುಖದಿಂದ ಕೂಡಿಕೊಂಡು ವಸುದೇವನಿಗೆ ಹೀಗೆಂದನು.
ಅರ್ಜುನಃ
ನಾಹಂ ವೃಷ್ಣಿಪ್ರವೀರೇಣ ಬಂಧುಭಿಶ್ಚೈವ ಮಾತುಲ |
ವಿಹೀನಾಂ ಪೃಥಿವೀಂ ದ್ರಷ್ಟುಂ ಶಕ್ತಶ್ಚಿರಮಿಹ ಪ್ರಭೋ ॥2॥
ಅರ್ಜುನ ಹೇ ಪ್ರಭುವೇ, ಮಾವನೇ, ಯದುಪ್ರಮುಖನಾದ ಕೃಷ್ಣನಿಂದ ಹಾಗೂ ಬಂಧುಗಳಿಂದ ರಹಿತವಾದ ಈ ಭೂಮಿಯನ್ನು ಬಹಳ ಕಾಲ ನೋಡಲು ನಾನು ಶಕ್ತನಲ್ಲ.
ರಾಜಾ ಚ ಭೀಮಸೇನಶ್ಚ ಸಹದೇವಶ್ಚ ಪಾಂಡವಃ |
ನಕುಲೋ ಯಾಜ್ಞಸೇನೀ ಚ ಷಡೇಕಮನಸೋ ವಯಮ್ ॥3॥
ರಾಜನಾದ ಯುಧಿಷ್ಠಿರನೂ, ಭೀಮಸೇನನೂ, ಪಾಂಡುಪುತ್ರರಾದ ನಕುಲ- ಸಹದೇವರೂ ಹಾಗೂ ಯಾಜ್ಞಸೇನಿಯಾದ ದ್ರೌಪದೀ ನಾವು ಈ ಆರುಮಂದಿಯೂ ಒಂದೇ ಮನಸ್ಸಿನವರಾಗಿದ್ದೇವೆ.
ರಾಜ್ಞಃ ಸಂಕ್ರಮಣೇ ಚಾಪಿ ಕಾಲೋಽಯಂ ನಿತ್ಯಮೇವ ಹಿ |
ತಮಿಮಂ ವಿದ್ಧಿ ಸಂಪ್ರಾಪ್ತಂ ಕಾಲಂ ಕಾಲವಿದಾಂವರ ॥4॥
ಈ ಕಾಲಪ್ರವಾಹದಲ್ಲಿ ರಾಜನು ಭೂಮಿಯನ್ನು ಬಿಟ್ಟು ಹೊರಡಲು ನಿಶ್ಚಯವಾಗಿಯೂ ಒಂದು ಕಾಲ ಇದ್ದೇ ಇದೆ. ಹೇ ಕಾಲವೇತ್ತರಲ್ಲಿ ಶ್ರೇಷ್ಠನಾದ ವಸುದೇವನೇ! ಅಂತಹ ಕಾಲವು ಈಗ ಸಮೀಪ ಬಂದಿದೆ ಎಂದು ತಿಳಿ.
ಸರ್ವಥಾ ವೃಷ್ಣಿದಾರಾಂಸ್ತು ಬಾಲಂ ವೃದ್ಧಂ ತಥೈವ ಚ |
ನಯಿಷ್ಯೇ ಪರಿಗೃಹ್ಯಾಹಮಿಂದ್ರಪ್ರಸ್ಥಮರಿಂದಮ ॥5॥
ಹೇ ಶತ್ರುಮರ್ದನನೇ, ನಿಶ್ಚಯವಾಗಿಯೂ ಯದುಸ್ತ್ರೀಯರನ್ನೂ ಬಾಲರನ್ನೂ ಮತ್ತು ವೃದ್ಧರನ್ನೂ ಒಟ್ಟು ಸೇರಿಸಿಕೊಂಡು

ಇಂದ್ರಪ್ರಸ್ಥಕ್ಕೆ ನಾನು ಹೊರಡಲಿದ್ದೇನೆ.
ಇತ್ಯುಕ್ತ್ವಾ ದಾರುಕಮಿದಂ ವಾಕ್ಯಮಾಹ ಧನಂಜಯಃ |
ಅಮಾತ್ಯಾನ್ ವೃಷ್ಣಿವೀರಾಣಾಂ ದ್ರಷ್ಟುಮಿಚ್ಛಾಮಿ ಮಾಚಿರಮ್ ||6||
ಹೀಗೆ ಹೇಳಿ ಅರ್ಜುನನು ದಾರುಕನನ್ನು ಕುರಿತು, ಯಾದವವೀರರ ಮಂತ್ರಿಗಳನ್ನು ನಾನು ತಡಮಾಡದೆ ನೋಡಲಿಚ್ಛಿಸುತ್ತಿದ್ದೇನೆ ಎಂದನು.
ಇತ್ಯೇವಮುಕ್ತ್ವಾ ವಚನಂ ಸುಧರ್ಮಾಂ ಯಾದವೀಂ ಸಭಾಮ್ |
ಪ್ರವಿವೇಶಾರ್ಜುನಃ ಶೂರಃ ಶೋಚಮಾನೋ ಮಹಾಭುಜಃ ||7||
ಮಹಾಭುಜನಾದ, ಶೂರನಾದ ಅರ್ಜುನನು ಈ ಮಾತನ್ನು ಹೇಳಿ, ಯಾದವರ ಸಭೆಯಾದ ಸುಧರ್ಮವನ್ನು ದುಃಖಿಸುತ್ತಲೇ ಪ್ರವೇಶಿಸಿದನು.
ತಮಾಸನಗತಂ ತತ್ರ ಸರ್ವಾಃ ಪ್ರಕೃತಯಸ್ತಥಾ |
ಬ್ರಾಹ್ಮಣಾ ನಾಗರಾಸ್ತತ್ರ ಪರಿವಾರ್ಯೋಪತಸ್ಥಿರೇ ||8||
ಅವನು ಸಭೆಯಲ್ಲಿ ಆಸನದಲ್ಲಿ ಕುಳಿತ ನಂತರ ಅಲ್ಲಿರುವ ಎಲ್ಲ ಮಂತ್ರಿಗಳೂ ಹಾಗೆಯೇ ಬ್ರಾಹ್ಮಣರು, ನಗರವಾಸಿಗಳೂ ಅವನನ್ನು ಸುತ್ತುವರಿದು ನಿಂತರು.
ತಾನ್ ದೀನಮನಸಃ ಸರ್ವಾನ್ ವಿಮೂಢಾನ್ ಗತಚೇತಸಃ |
ಉವಾಚೇದಂ ವಚಃ ಕಾಲೇ ಪಾರ್ಥೋ ದೀನತರಸ್ತಥಾ ||9||
ವ್ಯಾಕುಲಚಿತ್ತರಾಗಿ ಮೋಹಗೊಂಡು, ಏನು ಮಾಡಬೇಕೆಂದು ತಿಳಿಯದ ಆ ಎಲ್ಲರನ್ನೂ ಉದ್ದೇಶಿಸಿ, ಅತ್ಯಂತ ದೀನನಾದ ಪಾರ್ಥನು ಯೋಗ್ಯಕಾಲದಲ್ಲಿ ಈ ಮಾತನ್ನು ಹೇಳಿದನು.
ಶಕ್ರಪ್ರಸ್ಥಮಹಂ ನೇಷ್ಯೇ ವೃಷ್ಣ್ಯಂಧಕಜನಂ ಸ್ವಯಮ್ |
ಇದಂ ತು ನಗರಂ ಸರ್ವಂ ಸಮುದ್ರಃ ಪ್ಲಾವಯಿಷ್ಯತಿ ||10||
ಇಲ್ಲಿ ಉಳಿದಿರುವ ವೃಷ್ಣಿ ಮತ್ತು ಅಂಧಕಜನರನ್ನು ನಾನು ಇಂದ್ರಪ್ರಸ್ಥಕ್ಕೆ ಕರೆದೊಯ್ಯಲಿದ್ದೇನೆ. ಈ ಇಡೀ ನಗರವನ್ನು ಸಮುದ್ರವು ಮುಳುಗಿಸಲಿದೆ.
ಸಜ್ಜೀಕುರುತ ಯಾನಾನಿ ರತ್ನಾನಿ ವಿವಿಧಾನಿ ಚ |
ವಜ್ರೋಽಯಂ ಭವತಾಂ ರಾಜಾ ಶಕ್ರಪ್ರಸ್ಥೇ ಭವಿಷ್ಯತಿ ||11||
ವಾಹನಗಳನ್ನೂ, ಅಮೂಲ್ಯವಾದ ವಿವಿಧ ರತ್ನಗಳನ್ನೂ ಭದ್ರಪಡಿಸಿಕೊಂಡು ಸಿದ್ಧರಾಗಿರಿ. ಈ ವಜ್ರನು ಇಂದ್ರಪ್ರಸ್ಥದಲ್ಲಿ ನಿಮಗೆ ರಾಜನಾಗಿರುವನು.
ಸಪ್ತಮೇ ದಿವಸೇ ಚೈವ ರವೌ ವಿಮಲ ಉದ್ಗತೇ |
ಬಹಿರ್ವತ್ಸ್ಯಾಮಹೇ ಸರ್ವೇ ಸಜ್ಜೀಭವತ ಮಾಚಿರಮ್ ||12||
ಇಲ್ಲಿಂದ ಏಳನೆಯ ದಿನದಂದು ಶುದ್ಧ ಸೂರ್ಯಬಿಂಬವು ಉದಯಿಸುವ ಹೊತ್ತಿಗೆ ಸರಿಯಾಗಿ ನಾವು ಹೊರಡಲಿದ್ದೇವೆ. ತಡಮಾಡದೆ ಎಲ್ಲರೂ ತಯಾರಾಗಿರಿ.
ಇತ್ಯುಕ್ತಾಸ್ತೇನ ತೇ ಸರ್ವೇ ಪಾರ್ಥೇನಾಕ್ಲಿಷ್ಟಕರ್ಮಣಾ |
ಸಜ್ಜಮಾಶು ತತಶ್ಚಕ್ರುಃ ಸ್ವಸಿದ್ಧ್ಯರ್ಥಂ ಸಮುತ್ಸುಕಾಃ ||13||
ಹೀಗೆ ಎಲ್ಲ ಕರ್ಮಗಳನ್ನೂ ಸುಲಭವಾಗಿ ಮಾಡಲು ಪಾರ್ಥನು ಹೇಳಿದಾಗ, ಆ ಎಲ್ಲರೂ ತಮ್ಮ ಅಭೀಷ್ಟಸಿದ್ಧಿಗೋಸ್ಕರ ಉತ್ಸಾಹದಿಂದ ಎಲ್ಲ ತಯಾರಿಗಳನ್ನೂ ಕೂಡಲೇ ನಡೆಸಿದರು.
ತಾಂ ರಾತ್ರಿಮವಸತ್ಪಾರ್ಥಃ ಕೇಶವಸ್ಯ ನಿವೇಶನೇ |
ಮಹತಾ ಶೋಕಮೋಹೇನ ಸಹಸಾಽಭಿಪರಿಪ್ಲುತಃ ||14||
ಪಾರ್ಥನು ಆ ರಾತ್ರಿಯಲ್ಲಿ ಉಮ್ಮಳಿಸಿ ಬರುವ ಬಹುವಾದ ಶೋಕಮೋಹಗಳಿಂದ ಆವಿಷ್ಟನಾಗಿ ಶ್ರೀಕೃಷ್ಣನ ಮನೆಯಲ್ಲಿ ವಾಸಮಾಡಿದನು.
ಶ್ವೋಭೂತೇಽಥ ತತಃ ಶೌರಿರ್ವಸುದೇವಃ ಪ್ರತಾಪವಾನ್ |
ಯುಕ್ತ್ವಾಽಽತ್ಮಾನಂ ಮಹಾತೇಜಾ ಜಗಾಮ ಗತಿಮುತ್ತಮಾಮ್ ||15||
ಮಾರನೆಯ ದಿನವೇ ಪ್ರತಾಪಶಾಲಿಯಾದ, ಮಹಾತೇಜಸ್ವಿಯಾದ, ಶೂರನ ಮಗನಾದ ವಸುದೇವನು ತನ್ನನ್ನು ಯೋಗಧಾರಣೆಯಲ್ಲಿ ತೊಡಗಿಸಿಕೊಂಡು ಉತ್ತಮವಾದ ಪರಲೋಕಗತಿಯನ್ನು ಪಡೆದನು.
ತತಃ ಶಬ್ದೋ ಮಹಾನಾಸೀದ್ ವಸುದೇವನಿವೇಶನೇ |
ದಾರುಣಃ ಕ್ರೋಶತೀನಾಂ ಚ ರುದತೀನಾಂ ಚ ಯೋಷಿತಾಮ್ ||16||
ಪ್ರಕೀರ್ಣಮೂರ್ಧಜಾಃ ಸರ್ವಾ ವಿಮುಕ್ತಾಭರಣಸ್ರಜಃ |
ಉರಾಂಸಿ ಪಾಣಿಭಿರ್ಘ್ನಂತ್ಯೋ ವ್ಯಲಪನ್ ಕರುಣಂ ಸ್ತ್ರಿಯಃ ||17||
ವಸುದೇವನು ಮರಣಿಸಿದ ಕೂಡಲೇ ವಸುದೇವನ ಮನೆಯಲ್ಲಿ ಗಟ್ಟಿಯಾಗಿ ಕಿರುಚುತ್ತಿರುವ, ಅಳುತ್ತಿರುವ ಸ್ತ್ರೀಯರ ದಾರುಣವಾದ ಶಬ್ದವು ಕೇಳಿಬರತೊಡಗಿತು. ಎಲ್ಲ ಸ್ತ್ರೀಯರೂ ತಲೆಗೂದಲುಗಳನ್ನು ಬಿಡಿಸಿಕೊಂಡು, ಆಭರಣ ಹಾಗೂ ಮಾಲೆಗಳನ್ನು ತೆಗೆದಿಟ್ಟು, ಕೈಗಳಿಂದ ಎದೆಯನ್ನು ಹೊಡೆದುಕೊಳ್ಳುತ್ತಾ ದೀನರಾಗಿ ರೋದಿಸಿದರು.
ತಂ ದೇವಕೀ ಚ ಭದ್ರಾ ಚ ರೋಹಿಣೀ ಮದಿರಾ ತಥಾ |
ಅನ್ವಾರೋಢುಂ ವ್ಯವಸಿತಾ ಭರ್ತಾರಂ ಯೋಷಿತಾಂ ವರಾಃ ||18||

ಸ್ತ್ರೀಶ್ರೇಷ್ಠರಾದ ದೇವಕೀಯೂ, ಭದ್ರೆಯೂ, ರೋಹಿಣಿಯೂ ಹಾಗೂ ಮದಿರೆಯೂ ಇವರು ಗಂಡನಾದ ಆ ವಸುದೇವನ ಜೊತೆಗೆ ಚಿತೆಯಲ್ಲಿ ಸಹಗಮನ ಮಾಡಲು ಉದ್ಯುಕ್ತರಾದರು.

ತತಃ ಶೌರಿಂ ನೃಯುಕ್ತೇನ ಬಹುಮೂಲ್ಯೇನ ಭಾರತ |
ಯಾನೇನ ಮಹತಾ ಪಾರ್ಥೋ ಬಹಿರ್ನಿಷ್ಕ್ರಾಮಯತ್ ತದಾ ॥19॥

ಹೇ ಭಾರತನೇ, ಈ ಹೊತ್ತಿಗೆ ಅರ್ಜುನನು ವಸುದೇವನನ್ನು ಮನುಷ್ಯರು ಹೊರುವ ಬಹುಮೂಲ್ಯವಾದ (ಬಹಳ ಬೆಲೆಬಾಳುವ ದೊಡ್ಡ ಪಲ್ಲಕ್ಕಿಯಿಂದ ಹೊರಿಸಿ ಮನೆಯಿಂದ ಹೊರಗೆ ಹಾಕಿಸಿದನು.

ತಮನ್ವಯುಸ್ತತ್ರ ತತ್ರ ದುಃಖಶೋಕಸಮನ್ವಿತಾಃ |
ದ್ವಾರಕಾವಾಸಿನಃ ಸರ್ವೇ ಪೌರಜಾನಪದಾ ಹಿತಾಃ ॥20॥

ಹೀಗೆ ಮರಣಿಸಿದ ಅವನನ್ನು ದುಃಖ-ಶೋಕಗಳಿಂದ ಕೂಡಿದ ದ್ವಾರಕೆಯಲ್ಲಿ ವಾಸವಾಗಿದ್ದ, ಅವನ ಹಿತಚಿಂತಕರಾಗಿದ್ದ ಎಲ್ಲ ಪಟ್ಟಣಿಗ ಹಾಗೂ ಗ್ರಾಮೀಣ ಜನರು ಅಲ್ಲಲ್ಲಿ ಸೇರಿಕೊಂಡು ಹಿಂಬಾಲಿಸಿದರು.

ತಸ್ಯಾಶ್ವಮೇಧಿಕೇ ಕ್ಷೇತ್ರೇ ದೀಪ್ಯಮಾನಾಶ್ಚ ಪಾವಕಾಃ |
ಪುರಸ್ತಾತ್ ತಸ್ಯ ಯಾನಸ್ಯ ಯಾಜಕಾಶ್ಚ ತತೋ ಯಯುಃ ॥21॥

ಆ ವಾಹನದ ಮುಂಭಾಗದಲ್ಲಿ ಅಶ್ವಮೇಧ ಯಾಗದ ಛತ್ರವೂ, ಜ್ವಲಿಸುತ್ತಿರುವ ಬೆಂಕಿಗಳು ಮತ್ತು ಯಾಜಕರು ನಡೆದುಹೋಗುತ್ತಿದ್ದರು.

ಅನುಜಗ್ಮುಶ್ಚ ತಂ ವೀರಂ ದೇವ್ಯಸ್ತಾ ವೈ ಸ್ವಲಂಕೃತಾಃ |
ಸ್ತ್ರೀಸಹಸ್ರೈಃ ಪರಿವೃತಾ ವಧೂಭಿಶ್ಚ ಸಹಸ್ರಶಃ ॥22॥

ವೀರನಾದ ಅವನನ್ನು ಚೆನ್ನಾಗಿ ಅಲಂಕೃತರಾದ ದೇವಕೀ ಮೊದಲಾದ ಪತ್ನಿಯರು ಸಾವಿರಾರು ಸ್ತ್ರೀಯರಿಂದಲೂ, ಸಾವಿರಾರು ಸೊಸೆಯರಿಂದಲೂ ಕೂಡಿಕೊಂಡು ಹಿಂಬಾಲಿಸಿದರು.

ಯಸ್ತು ದೇಶಃ ಪ್ರಿಯಸ್ತಸ್ಯ ಜೀವತೋಽಭೂನ್ಮಹಾತ್ಮನಃ |
ತತ್ರೈನಮುಪಸಂಕಲ್ಪ್ಯ ಪಿತೃಮೇಧಂ ಪ್ರಚಕ್ರಿರೇ ॥23॥

ಅವನು ಬದುಕಿದ್ದಾಗ ಯಾವ ಪ್ರದೇಶವು ಮಹಾತ್ಮನಾದ ಅವನಿಗೆ ಪ್ರಿಯವಾಗಿತ್ತೋ ಅದೇ ಪ್ರದೇಶದಲ್ಲಿ ಸಂಕಲ್ಪಪುರಸ್ಸರವಾಗಿ ಪಿತೃಮೇಧವನ್ನು (ಔರ್ಧ್ವದೈಹಿಕ ಕ್ರಿಯೆಗಳನ್ನು) ನೆರವೇರಿಸಿದರು.

ತಂ ಚಿತಾಗ್ನಿಗತಂ ವೀರಂ ಶೂರಪುತ್ರಂ ವರಾಂಗನಾಃ |
ತತೋನ್ವಾರುರುಹುಃ ಪತ್ನ್ಯಶ್ಚತಸ್ರಃ ಪತಿಲೋಕಗಾಃ ॥24॥

ಅನಂತರ ಚಿತೆಯಲ್ಲಿರುವ ವೀರನಾದ ಆ ಶೂರಪುತ್ರನನ್ನು ಶ್ರೇಷ್ಠ ಸ್ತ್ರೀಯರಾದ ನಾಲ್ಕು ಮಂದಿ ಪತ್ನಿಯರು, ಪತಿಲೋಕವನ್ನು ಸೇರುವ ಇಚ್ಛೆಯಿಂದ ಅನುಸರಿಸಿ ಚಿತೆಯನ್ನೇರಿದರು.

ತಂ ವೈ ಚತಸೃಭಿಃ ಸ್ತ್ರೀಭಿರನ್ವಿತಂ ಪಾಂಡುನಂದನಃ |
ಅದಾಹಯಚ್ಚಂದನೈಶ್ಚ ಗಂಧೈರುಚ್ಚಾವಚೈರಪಿ ॥25॥

ಆಗ ಪಾಂಡುನಂದನನಾದ ಅರ್ಜುನನು ಚಂದನದಿಂದ ಹಾಗೂ ಬೇರೆ ಬೇರೆ ನಾನಾ ರೀತಿಯ ಗಂಧದ್ರವ್ಯಗಳಿಂದ ಚಿತೆಯನ್ನು ಅಲಂಕರಿಸಿ, ನಾಲ್ಕುಮಂದಿ ಪತ್ನಿಯರಿಂದ ಕೂಡಿದ ವಸುದೇವನನ್ನು ದಹನ ಮಾಡಿದನು.

ತತಃ ಪ್ರಾದುರಭೂಚ್ಛಬ್ದಃ ಸಮಿದ್ಧಸ್ಯ ವಿಭಾವಸೋಃ |
ಸಾಮಗಾನಾಂ ಚ ನಿರ್ಘೋಷೋ ನರಾಣಾಂ ರುದತಾಂ ತಥಾ ॥26॥

ಆಗ ಚಿತೆಯಲ್ಲಿ ಉರಿಯುತ್ತಿರುವ ಬೆಂಕಿಯಿಂದ ಸಾಮವೇದಿಗಳ ವೇದಘೋಷದಂತೆಯೇ, ಅಳುತ್ತಿರುವ ಮನುಷ್ಯರ ಶಬ್ದದಂತೆಯೇ ಶಬ್ದವು ಕೇಳಿಬರತೊಡಗಿತು.

ತತೋ ವಜ್ರಪ್ರಧಾನಾಸ್ತೇ ವೃಷ್ಣ್ಯಂಧಕಕುಮಾರಕಾಃ |
ಸರ್ವೇ ಚೈವೋದಕಂ ಚಕ್ರುಃ ಸ್ತ್ರಿಯಶ್ಚೈವ ಮಹಾತ್ಮನಃ ॥27॥

ಅನಂತರ ಮಹಾತ್ಮನಾದ ವಸುದೇವನಿಗೆ ವಜ್ರನೇ ಮೊದಲಾದ ವೃಷ್ಣ್ಯಂಧಕರ ಕುಮಾರರು ಮತ್ತು ಅಲ್ಲಿರುವ ಸ್ತ್ರೀಯರು ಎಲ್ಲರೂ ಸೇರಿ ಜಲಾಂಜಲಿಗಳನ್ನು ನೀಡಿದರು.

ಅಲುಪ್ತಧರ್ಮಸ್ತಂ ಧರ್ಮಂ ಕಾರಯಿತ್ವಾ ಸ ಫಲ್ಗುನಃ |
ಜಗಾಮ ವೃಷ್ಣಯೋ ಯತ್ರ ವಿನಷ್ಟಾ ಭರತರ್ಷಭ ॥28॥

ಹೇ ಭರತರ್ಷಭನೇ, ಅರ್ಜುನನು ಯಾವುದೇ ಧರ್ಮಲೋಪವಾಗದಂತೆ ವಸುದೇವನಿಗೆ ಪಿತೃಮೇಧಧರ್ಮಗಳನ್ನು ಮಾಡಿಸಿ, ನಂತರ ಎಲ್ಲಿ ಯಾದವರು ಹತರಾದರೋ ಆ ಪ್ರದೇಶಕ್ಕೆ ತೆರಳಿದನು.

ಸ ತಾನ್ ದೃಷ್ಟ್ವಾ ನಿಪತಿತಾನ್ ಕದನೇ ಭೃಶದುಃಖಿತಃ |
ಬಭೂವಾತೀವ ಕೌರವ್ಯಃ ಪ್ರಾಪ್ತಕಾಲಂ ಚಕಾರ ಹ ॥29॥

ಅನಂತರ ಕುರುವಂಶಜನಾದ ಅರ್ಜುನನು, ಯುದ್ಧದಲ್ಲಿ ಹೊಡೆದುಕೊಂಡು ಬಿದ್ದಿರುವ ಆ ಯದುಗಳನ್ನು ನೋಡಿ, ತಡೆಯಲಾಗದ ಬಹುದುಃಖವನ್ನು ಅನುಭವಿಸಿದನು. ನಂತರ ಆ ಕಾಲಕ್ಕೆ ಏನು ಯೋಗ್ಯವೋ ಅದನ್ನು ನಡೆಸಿದನು.

ಯಥಾಪ್ರಧಾನತಶ್ಚೈವ ಚಕ್ರೇ ಸರ್ವಾಸ್ತಥಾ ಕ್ರಿಯಾಃ |
ಯೇ ಹತಾ ಬ್ರಹ್ಮಶಾಪೇನ ಮುಸಲೈರೇರಕೋದ್ಭವೈಃ ॥30॥

ಬ್ರಹ್ಮಶಾಪದ ನಿಮಿತ್ತದಿಂದ ಜೊಂಡುಹುಲ್ಲಿನಿಂದ ಉಂಟಾದ ಒನಕೆಗಳಿಂದ ಯಾರೆಲ್ಲ ಹತರಾಗಿದ್ದರೋ ಅವರೆಲ್ಲರಿಗೂ ಅವರವರ ಹಿರಿತನಕ್ಕೆ ಅನುಸಾರವಾಗಿ ನಡೆಸಬೇಕಾದ ಎಲ್ಲ ಕ್ರಿಯೆಗಳನ್ನೂ ನಡೆಸಿದನು.

ತತೋ ಭಗವತೋ ದೇಹಂ ದೃಷ್ಟ್ವಾ ಶಿಷ್ಯಃ ಪುಲಪ್ಯ ಚ |
ಸ್ಮೃತ್ವಾ ತದ್ವಚನಂ ಸರ್ವಂ ಮೋಹಶೋಕೋಪಬೃಂಹಿತಃ ॥31॥
ಆ ಹೊತ್ತಿಗೆ ಶ್ರೀಕೃಷ್ಣನ ದೇಹವನ್ನು ನೋಡುತ್ತಾ ಶಿಷ್ಯನಾದ ಅರ್ಜುನನು ಜೋರಾಗಿ ಅಳುತ್ತಾ, ಅವನ ಎಲ್ಲ ಮಾತುಗಳನ್ನೂ ನೆನಪಿಸಿಕೊಂಡು ಮೋಹ ಹಾಗೂ ಶೋಕಗಳಿಂದ ಜರ್ಝರಿತನಾದನು.
ತತಃ ಶರೀರೇ ರಾಮಸ್ಯ ವಾಸುದೇವಸ್ಯ ಚೋಭಯೋಃ |
ಅನ್ವೀಕ್ಷ್ಯ ದಾಹಯಾಮಾಸ ಪುರುಷೈರಾಪ್ತಕಾರಿಭಿಃ ॥32॥
ಅನಂತರ ಬಲರಾಮ-ಶ್ರೀಕೃಷ್ಣರಿಬ್ಬರ ಶರೀರಗಳನ್ನೂ ಹುಡುಕಿಸಿ, ಅವರಿಬ್ಬರಿಗೂ ಆಪ್ತರಾಗಿ ಕೆಲಸ ಮಾಡುತ್ತಿದ್ದ ಪುರುಷರಿಂದಲೇ ದಹನಸಂಸ್ಕಾರವನ್ನು ನೆರವೇರಿಸಿದನು.
ಸ ತೇಷಾಂ ವಿಧಿವತ್ಕೃತ್ವಾ ಪ್ರೇತಕಾರ್ಯಾಣಿ ಪಾಂಡವಃ |
ಸಪ್ತಮೇ ದಿವಸೇ ಪ್ರಾಯಾದ್ ರಥಮಾರುಹ್ಯ ಸತ್ವರಃ ॥33॥
ಹೀಗೆ ಆ ಪಾಂಡುಪುತ್ರನಾದ ಅರ್ಜುನನು ಅವರೆಲ್ಲರಿಗೂ ವಿಧಿವತ್ತಾಗಿ ಪ್ರೇತಕಾರ್ಯಗಳನ್ನು ನೆರವೇರಿಸಿ, ಏಳನೆಯ ದಿನದಂದು ರಥವನ್ನೇರಿ ಗಡಿಬಿಡಿಯಿಂದಲೇ ಹೊರಟನು.
ಅಶ್ವಯುಕ್ತೈ ರಥೈಶ್ಚಾಪಿ ಗೋಖರೋಷ್ಟ್ರಯುತೈರಪಿ |
ಸ್ತ್ರಿಯಸ್ತಾ ವೃಷ್ಣಿವೀರಾಣಾಂ ರುದಂತ್ಯಃ ಶೋಕಕರ್ಶಿತಾಃ ॥34॥
ಅನುಜಗ್ಮುರ್ಮಹಾತ್ಮಾನಂ ಪಾಂಡುಪುತ್ರಂ ಧನಂಜಯಮ್ |
ಭೃತ್ಯಾಶ್ಚಾಂಧಕವೃಷ್ಣೀನಾಂ ಸಾದಿನೋ ರಥಿನಶ್ಚ ಯೇ ॥35॥
ಶೋಕದಿಂದ ಕೃಶರಾದ, ಅಳುತ್ತಿರುವ ವೃಷ್ಣಿವೀರರ ಆ ಸ್ತ್ರೀಯರೆಲ್ಲರೂ ಅಶ್ವಗಳನ್ನು ಹೂಡಿದ ರಥಗಳಿಂದ, ಅಂತೆಯೇ ಎತ್ತು, ಕತ್ತೆ, ಒಂಟೆಗಳಿಂದ ಕೂಡಿದ ರಥಗಳಿಂದಲೂ ಮಹಾತ್ಮನಾದ, ಪಾಂಡುಪುತ್ರನಾದ ಧನಂಜಯನನ್ನು ಅನುಸರಿಸಿದರು. ಅಲ್ಲದೇ ಕುದುರೆಯನ್ನೇರಿದ ಹಾಗೂ ರಥದಲ್ಲಿರುವ ಅಂಧಕ ಮತ್ತು ವೃಷ್ಣಿಗಳ ಸೇವಕರೂ ಕೂಡ ಅನುಸರಿಸಿದರು.
ವೀರಹೀನಾ ವೃದ್ಧಬಾಲಾಃ ಪೌರಜಾನಪದಾಸ್ತಥಾ |
ಯಯುಸ್ತೇ ಪರಿವಾರ್ಯಾಥ ಕಲತ್ರಂ ಪಾರ್ಥಶಾಸನಾತ್ ॥36॥
ಮಕ್ಕಳಿಲ್ಲದವರು, ವೃದ್ಧರು, ಬಾಲಕರು ಹಾಗೂ ಪಟ್ಟಣಿಗ-ಗ್ರಾಮೀಣಜನರೂ ಪಾರ್ಥನ ಆಜ್ಞೆಯಂತೆ ಸ್ತ್ರೀಜನರನ್ನು ಸುತ್ತುವರಿದು ಹೊರಟರು.
ಕುಂಜರೈಶ್ಚ ಗಜಾರೋಹಾ ಯಯುಃ ಶೈಲನಿಭೈಸ್ತಥಾ |
ಸಪಾದರಕ್ಷೈಃ ಸಂಯುಕ್ತಾಃ ಸೋತ್ತರಾಯುಧಿಕಾ ಯಯುಃ ॥37॥
ಮಾವುತರು ಬೆಟ್ಟದಂತಿರುವ ಆನೆಗಳನ್ನೇರಿಯೂ, ಸೈನಿಕರು ತಮ್ಮ ಪ್ರಧಾನರೊಂದಿಗೆ ಕೂಡಿಕೊಂಡು ಪಾದರಕ್ಷೆಗಳನ್ನು ಧರಿಸಿಯೂ ಹೊರಟರು.
ಪುತ್ರಾಶ್ಚಾಂಧಕವೃಷ್ಣೀನಾಂ ಸರ್ವೇ ಪಾರ್ಥಮನುವ್ರತಾಃ |
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಮಹಾಧನಾಃ ॥38॥
ಅಂಧಕ ಹಾಗೂ ವೃಷ್ಣಿವಂಶದ ಪುತ್ರರೆಲ್ಲರೂ ಅರ್ಜುನನನ್ನು ಅನುಸರಿಸಿದರು. ಅಂತೆಯೇ ಶ್ರೀಮಂತರಾದ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ ಹಾಗೂ ಶೂದ್ರರೂ ಪಾರ್ಥನನ್ನು ಅನುಸರಿಸಿದರು.
ದಶ ಷಟ್ ಚ ಸಹಸ್ರಾಣಿ ವಾಸುದೇವಾವರೋಧನಮ್ |
ಪುರಸ್ಕೃತ್ಯ ಯಯುರ್ವಜ್ರಂ ಪೌತ್ರಂ ಕೃಷ್ಣಸ್ಯ ಧೀಮತಃ ॥39॥
ಹದಿನಾರು ಸಾವಿರಮಂದಿ ಕೃಷ್ಣನ ಪತ್ನಿಯರೆಲ್ಲರೂ ಧೀಮಂತನಾದ, ಕೃಷ್ಣನ ಮೊಮ್ಮಗನಾದ ವಜ್ರನನ್ನು ಮುಂದೆ ಮಾಡಿಕೊಂಡು ನಡೆದರು.
ಬಹೂನಿ ಚ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ |
ಭೋಜವೃಷ್ಣ್ಯಂಧಕಸ್ತ್ರೀಣಾಂ ಹತನಾಥಾನಿ ನಿರ್ಯಯುಃ ॥40॥
ನಾಥರನ್ನು ಕಳೆದುಕೊಂಡ ಸಾವಿರ ದಶಲಕ್ಷ ದಶಕೋಟಿ ಸಂಖ್ಯೆಯ ಬಹುಮಂದಿ ಭೋಜ-ವೃಷ್ಣಿ-ಅಂಧಕರ ಸ್ತ್ರೀಯರು ಜೊತೆಗೆ ಹೊರಟರು.
ತತ್ಸಾಗರಸಮಪ್ರಖ್ಯಂ ವೃಷ್ಣಿಚಕ್ರಂ ಮಹರ್ದ್ಧಿಮತ್ |
ಉವಾಹ ರಥಿನಾಂಶ್ರೇಷ್ಠಃ ಪಾರ್ಥಃ ಪರಪುರಂಜಯಃ ॥41॥
ಬಹಳ ವೃದ್ಧಿಗೊಂಡಿರುವ ಸಾಗರದಂತೆ ಕಾಣುವ ಆ ವೃಷ್ಣಿಗಳ ಸಮೂಹದ ಜವಾಬ್ದಾರಿಯನ್ನು ರಥಿಗಳಲ್ಲಿ ಶ್ರೇಷ್ಠನಾದ, ಶತ್ರುಸಮೂಹವನ್ನು ಗೆಲ್ಲುವ ಸಾಮರ್ಥ್ಯವುಳ್ಳ ಪಾರ್ಥನು ಹೊತ್ತುಕೊಂಡನು.
ನಿರ್ಯಾತೇ ತು ಜನೇ ತಸ್ಮಿನ್ ಸಾಗರೋ ಮಕರಾಲಯಃ |
ದ್ವಾರಕಾಂ ರತ್ನಸಂಪೂರ್ಣಾಂ ಜಲೇನಾಪ್ಲಾವಯತ್ ತದಾ ॥42॥
ಹೀಗೆ ಆ ಜನಸಮೂಹವು ದ್ವಾರಕೆಯಿಂದ ಹೊರಟ ಕೂಡಲೇ ಮೊಸಳೆಗಳಿಗೆ ಆಶ್ರಯವಾದ ಆ ಸಾಗರವು ರತ್ನಸಮೂಹವಾದ ದ್ವಾರಕೆಯನ್ನು ಆಗಲೇ ನೀರಿನಿಂದ ಮುಳುಗಿಸಿಬಿಟ್ಟಿತು.
ಯದ್ಯದ್ಧಿ ಪುರುಷವ್ಯಾಘ್ರೋ ಭೂಮೇಸ್ತಸ್ಯಾ ವ್ಯಮುಂಚತ |
ತತ್ತತ್ಸಂಪ್ಲಾವಯಾಮಾಸ ಸಲಿಲೇನ ಸ ಸಾಗರಃ ॥43॥
ಪುರುಷಶ್ರೇಷ್ಠನಾದ ಅರ್ಜುನನು ಆ ದ್ವಾರಕೆಯ ಯಾವ ಯಾವ ಭೂಪ್ರದೇಶವನ್ನು ಬಿಟ್ಟು ಮುಂದೆ ಹೋಗುತ್ತಿದ್ದನೋ ಆ ಎಲ್ಲ

ಪ್ರದೇಶವನ್ನೂ ಸಾಗರವು ನೀರಿನಿಂದ ಮುಳುಗಿಸಿಬಿಟ್ಟಿತು.
ತದದ್ಭುತಮಭಿಪ್ರೇಕ್ಷ್ಯ ದ್ವಾರಕಾವಾಸಿನೋ ಜನಾಃ |
ತೂರ್ಣಾತ್ ತೂರ್ಣತರಂ ಜಗ್ಮುರಹೋ ದೈವಮಿತಿ ಬ್ರುವನ್ ॥44॥
ಈ ಅದ್ಭುತವಾದ ದೃಶ್ಯವನ್ನು ನೋಡಿದ ದ್ವಾರಕೆಯಲ್ಲಿ ವಾಸಮಾಡುತ್ತಿದ್ದ ಜನರು ಅಯ್ಯೋ ದೇವರೇ ಎಂದು ಹೇಳುತ್ತಾ ಬೇಗ ಬೇಗನೇ ಅಲ್ಲಿಂದ ಮುಂದೆ ನಡೆದರು.
ಕಾನನೇಷು ಚ ರಮ್ಯೇಷು ಪರ್ವತೇಷು ನದೀಷು ಚ |
ನಿವಸನ್ನಾನಯಾಮಾಸ ವೃಷ್ಣಿದಾರಾನ್ ಧನಂಜಯಃ ॥45॥
ಅಲ್ಲಿಂದ ಹೊರಟ ಅರ್ಜುನನು ರಮ್ಯವಾದ ಕಾಡುಗಳಲ್ಲೂ, ಪರ್ವತಗಳಲ್ಲೂ, ನದೀ ತೀರಗಳಲ್ಲೂ, ಮಧ್ಯೆ ಮಧ್ಯೆ ವಾಸವನ್ನು ಪರಿಕಲ್ಪಿಸಿ ಯಾದವ ಸ್ತ್ರೀಯರನ್ನು ಮುಂದೆ ಕರೆತಂದನು.
ಸ ಪಂಚನದಮಾಸಾದ್ಯ ಧೀಮಾನತಿಸಮೃದ್ಧಿಮತ್ |
ದೇಶೇ ಗೋಪಶುಧಾನ್ಯಾಢ್ಯೇ ನಿವಾಸಮಕರೋತ್ ಪ್ರಭುಃ ॥46॥
ಧೀಮಂತನಾದ, ಸಮರ್ಥನಾದ ಅವನು ಗೋ-ಪಶು-ಧಾನ್ಯಗಳಿಂದ ತುಂಬಿರುವ, ಅತ್ಯಂತ ಸಮೃದ್ಧವಾದ ಪಂಚನದಪ್ರದೇಶಕ್ಕೆ (ಈಗಿನ ಪಂಜಾಬ್) ಬಂದು ಆ ಪ್ರದೇಶದಲ್ಲಿ ಅವರಿಗೆ ನಿವಾಸವನ್ನು ಪರಿಕಲ್ಪಿಸಿದನು.
ತತೋ ಲೋಭಃ ಸಮಭವದ್ ದಸ್ಯೂನಾಂ ನಿಹತೇಶ್ವರಾಃ |
ದೃಷ್ಟ್ವಾ ಸ್ತ್ರಿಯೋ ನೀಯಮಾನಾಃ ಪಾರ್ಥೇನೈಕೇನ ಭಾರತ ॥47॥
ಸುರೂಪಾ ಭರ್ತೃರಹಿತಾಃ ಹೇಮರತ್ನಾದಿಸಂಯುತಾಃ ॥48॥
ಹೇ ಭಾರತನೇ, ಅನಂತರ ಅಲ್ಲಿರುವ ದರೋಡೆಕೋರರಿಗೆ ರಕ್ಷಕರಿಲ್ಲದ, ಸುಂದರವಾದ ರೂಪವುಳ್ಳ, ಪತಿಗಳನ್ನು ಕಳೆದುಕೊಂಡ, ಚಿನ್ನ-ರತ್ನ ಇವುಗಳಿಂದ ಕೂಡಿದ ಪಾರ್ಥನೊಬ್ಬನಿಂದ ಒಯ್ಯಲ್ಪಡುತ್ತಿರುವ ಸ್ತ್ರೀಯರನ್ನು ಕಂಡು ಅವರನ್ನು ದೋಚುವ ಇಚ್ಛೆಯುಂಟಾಯಿತು.
ತತಸ್ತೇ ಪಾಪಕರ್ಮಾಣೋ ಲೋಭೋಪಹತಚೇತಸಃ |
ಆಭೀರಾ ಮಂತ್ರಯಾಮಾಸುಃ ಸಮೇತ್ಯಾಶುಭದರ್ಶನಾಃ ॥49॥
ಅನಂತರ ಪಾಪಕರ್ಮವನ್ನೇ ನಡೆಸುವ, ಆಸೆಯಿಂದ ಬುದ್ಧಿಯನ್ನು ಕಳೆದುಕೊಂಡ, ನೋಡಲೂ ಕುರೂಪರಾದ, ಆ ಬೇಡಜನಾಂಗದವರು ಒಟ್ಟು ಸೇರಿ ಆಲೋಚಿಸಿದರು.
ಅಯಮೇಕೋಽರ್ಜುನೋ ಧನ್ವೀ ವೃದ್ಧಬಾಲಂ ಹತೇಶ್ವರಮ್ |
ನಯತ್ಯಸ್ಮಾನತಿಕ್ರಮ್ಯ ಯೋಧಾಶ್ಚೇಮೇ ಹತೌಜಸಃ ॥50॥
ಈ ಧನುರ್ಧಾರಿಯಾದ ಅರ್ಜುನನೊಬ್ಬನೇ ವೃದ್ಧರೂ ಹಾಗೂ ಬಾಲಕರಿಂದ ಕೂಡಿದ, ಬೇರೆ ರಕ್ಷಕರಿಲ್ಲದ ಈ ಸ್ತ್ರೀಜನರನ್ನು ನಮ್ಮನ್ನು ಧಿಕ್ಕರಿಸಿ ಕರೆದೊಯ್ಯುತ್ತಿದ್ದಾನೆ. ಜೊತೆಗಿರುವ ಈ ಯೋಧರಾದರೂ ಪರಾಕ್ರಮವಿಲ್ಲದವರು.
ತತೋ ಯಷ್ಟಿಪ್ರಹರಣಾ ದಸ್ಯವಸ್ತೇ ಸಹಸ್ರಶಃ |
ಅಭ್ಯಧಾವಂತ ವೃಷ್ಣೀನಾಂ ತಂ ಜನಂ ಲೋಪ್ತ್ರಹಾರಿಣಃ ॥51॥
ಅನಂತರ ಸಾವಿರಾರು ಮಂದಿ ಆ ದರೋಡೆಕೋರರು ದೊಣ್ಣೆಗಳನ್ನು ಎತ್ತಿಕೊಂಡು ಯಾದವರ ಆ ಜನಸಮೂಹದ ಮೇಲೆ ತಾವು ಕದಿಯಬಯಸಿದ ವಸ್ತುಗಳನ್ನು ಅಪಹರಿಸುತ್ತಾ ಏರಿ ಬಂದರು.
ಮಹತಾ ಸಿಂಹನಾದೇನ ತ್ರಾಸಯಂತಃ ಪೃಥಗ್ಜನಮ್ |
ಅಭಿಪೇತುರ್ಧನಾರ್ಥಂ ತೇ ಕಾಲಪರ್ಯಾಯಚೋದಿತಾಃ ॥52॥
ಕಾಲಮಹಾತ್ಮೆಯಿಂದ ಪ್ರೇರಿತರಾದ ಅವರು ದೊಡ್ಡದಾಗಿ ಕಿರುಚಾಡುತ್ತಾ ಪ್ರತ್ಯೇಕವಾಗಿ ಎಲ್ಲ ಜನರನ್ನೂ ಹೆದರಿಸುತ್ತಾ ಹಣಕ್ಕೋಸ್ಕರ ಅವರ ಮೇಲೆ ಮುಗಿಬಿದ್ದರು.
ತತೋ ನಿವೃತ್ತಃ ಕೌಂತೇಯಃ ಸಹಸಾ ಸಪದಾನುಗಃ |
ಉವಾಚ ತಾನ್ ಮಹಾಬಾಹುರರ್ಜುನಃ ಪ್ರಹಸನ್ನಿವ ॥53॥
ಅನಂತರ ಮಹಾಬಾಹುವಾದ, ಕುಂತೀಪುತ್ರನಾದ ಅರ್ಜುನನು ತನ್ನ ಅನುಯಾಯಿಗಳೊಂದಿಗೆ ಕೂಡಲೇ ಹಿಂದಿರುಗಿ ನಗುತ್ತಲೇ ಅವರನ್ನು ಕುರಿತು ಹೀಗೆಂದನು.
ನಿವರ್ತಧ್ವಮಧರ್ಮಜ್ಞಾ ಯದಿ ಜೀವಿತುಮಿಚ್ಛಥ |
ಇದಾನೀಂ ಶರನಿರ್ಭಿನ್ನಾಃ ಶೋಚಧ್ವಂ ನಿಹತಾ ಮಯಾ ॥54॥
ಹೇ ಅಧರ್ಮಜನರೇ, ನೀವು ಬದುಕಲು ಇಚ್ಛಿಸುವಿರಾದರೆ ಹಿಂದಿರುಗಿ. ಇಲ್ಲದಿದ್ದರೆ ನನ್ನ ಬಾಣದಿಂದ ಸೀಳಲ್ಪಟ್ಟವರಾಗಿ, ನನ್ನಿಂದ ಹತರಾಗುವ ಮೂಲಕ ದುಃಖಿಸುವಿರಿ.
ತಥೋಕ್ತಾಸ್ತೇನ ವೀರೇಣ ಕದರ್ಥೀಕೃತ್ಯ ತದ್ವಚಃ |
ಅಭಿಪೇತುರ್ಜನಂ ಮೂಢಾ ವಾರ್ಯಮಾಣಾಃ ಪುನಃಪುನಃ ॥55॥
ಹೀಗೆ ವೀರನಾದ ಅರ್ಜುನನು ಹೇಳಿದಾಗಲೂ ಅವನ ಮಾತನ್ನು ಧಿಕ್ಕರಿಸಿ, ಮೂಢರಾದ ಅವರು ಮತ್ತೆ ಮತ್ತೆ ತಡೆದರೂ ಕೂಡ ಅರ್ಜುನನ ಮೇಲೆ ಏರಿಬಂದರು.
ತತೋಽರ್ಜುನೋ ಧನುರ್ದಿವ್ಯಂ ಗಾಂಡೀವಮಜರಂ ಮಹತ್ |
ಆರೋಪಯಿತುಮಾರೇಭೇ ಯತ್ನಾದಿವ ಕಥಂಚನ ॥56॥
ಆಗ ಅರ್ಜುನನು ಎಂದೂ ಹಾಳಾಗದ, ಬಹುದೊಡ್ಡದಾದ ತನ್ನ ದಿವ್ಯ ಧನುಸ್ಸಾದ ಗಾಂಡೀವವನ್ನು ಹೇಗೋ

ಪ್ರಯತ್ನಪೂರ್ವಕವಾಗಿ ಹೆದೆಯೇರಿಸಲು ಆರಂಭಿಸಿದನು.
ಚಕಾರ ಸಜ್ಯಂ ಕೃಚ್ಛ್ರೇಣ ಸಂಭ್ರಮೇ ತುಮುಲೇ ಸತಿ |
ಚಿಂತಯಾಮಾಸ ಶಸ್ತ್ರಾಣಿ ನ ಚ ಸಸ್ಮಾರ ತಾನ್ಯಪಿ ॥57॥
ಬಹಳ ಕಷ್ಟದಿಂದ ಹೆದೆಯೇರಿಸಿ ದಸ್ಯುಗಳ ಗಲಭೆಯು ಜೋರಾಗುತ್ತಿದ್ದಂತೆ ದಿವ್ಯಶಸ್ತ್ರಗಳನ್ನು ಚಿಂತಿಸಿದನು. ಆದರೆ ಆ ಯಾವ ಶಸ್ತ್ರಗಳನ್ನೂ ನೆನಪಿಸಿಕೊಳ್ಳಲಾಗಲಿಲ್ಲ.
ವೈಕೃತಂ ತನ್ಮಹದ್ ದೃಷ್ಟ್ವಾ ಭುಜವೀರ್ಯಂ ತಥಾ ಯುಧಿ |
ದಿವ್ಯಾನಾಂ ಚ ಮಹಾಸ್ತ್ರಾಣಾಂ ವಿನಾಶಾದ್ ವ್ರೀಡಿತೋಽಭವತ್ ॥
ಆ ದೊಡ್ಡ ದುರ್ನಿಮಿತ್ತವನ್ನು ನೋಡಿ, ಹಾಗೆಯೇ ಯುದ್ಧದಲ್ಲಿ ತಾನು ತೋರಬೇಕಾದ ಭುಜಬಲವನ್ನೂ, ದಿವ್ಯವಾದ ಮಹಾಸ್ತ್ರಗಳೂ ವಿನಾಶವಾದುದನ್ನು ನೋಡಿ ನಾಚಿಕೆ ಪಟ್ಟನು.
ವೃಷ್ಣಿಯೋಧಾಶ್ಚ ತೇ ಸರ್ವೇ ಗಜಾಶ್ವರಥಯೋಧಿನಃ |
ನ ಶೇಕುರಾವರ್ತಯಿತುಂ ಹ್ರಿಯಮಾಣಂ ಸ್ವಕಂ ಧನಮ್ ॥59॥
ಆನೆ, ಕುದುರೆ, ರಥಗಳಿಂದ ಯುದ್ಧಮಾಡಬಲ್ಲ ಆ ಎಲ್ಲ ಯಾದವ ಸೈನಿಕರೂ ಕೂಡ ತಮ್ಮ ಸಂಪತ್ತು ಕಳ್ಳರ ಪಾಲಾಗುತ್ತಿದ್ದರೂ ಅದನ್ನು ತಡೆಯಲು ಸಮರ್ಥರಾಗಲಿಲ್ಲ.
ಕಲತ್ರಸ್ಯ ಬಹುತ್ವಾದ್ಧಿ ಸಂಪತತ್ಸು ತತಸ್ತತಃ |
ಪ್ರಯತ್ನಮಕರೋತ್ ಪಾರ್ಥೋ ಜನಸ್ಯ ಪರಿರಕ್ಷಣೇ ॥60॥
ಯದುಪತ್ನಿಯರು ಬಹುಮಂದಿ ಇದ್ದುದರಿಂದ ದಸ್ಯುಗಳು ಅಲ್ಲಲ್ಲಿ ಏರಿ ಬರುತ್ತಿದ್ದರು. ಆಗ ಅರ್ಜುನನು ಜನರನ್ನು ರಕ್ಷಿಸಲು ಬಹುಪ್ರಯತ್ನವನ್ನು ಮಾಡಿದನು.
ಮಿಷತಾಂ ಸರ್ವಯೋಧಾನಾಂ ತತಸ್ತಾಃ ಪ್ರಮದೋತ್ತಮಾಃ |
ಸಮಂತತೋಽವಕೃಷ್ಯಂತ ಕಾಮಾಚ್ಚಾನ್ಯಾಃ ಪ್ರವವ್ರಜುಃ ॥61॥
ಅನಂತರ ಆ ಉತ್ತಮ ಸ್ತ್ರೀಯರು ಎಲ್ಲ ಯದುವೀರರೂ ರಕ್ಷಣೆ ಮಾಡಲು ಸ್ಪರ್ಧಿಸುತ್ತಿದ್ದಂತೆಯೇ ಎಲ್ಲ ಕಡೆಗಳಿಂದಲೂ ಬಲಾತ್ಕರಿಸಲ್ಪಟ್ಟರು. ಮತ್ತೆ ಕೆಲವರು ತಡೆಯಲು ಸಾಧ್ಯವಿಲ್ಲದೆ ತಾವಾಗಿಯೇ ದಸ್ಯುಗಳೊಂದಿಗೆ ಹೊರಟರು.
ತತೋ ಗಾಂಡೀವನಿರ್ಮುಕ್ತೈಃ ಶರೈಃ ಪಾರ್ಥೋ ಧನಂಜಯಃ |
ಜಘಾನ ದಸ್ಯೂನ್ ಸೋದ್ವೇಗೋ ವೃಷ್ಣಿಭೃತ್ಯೈಃ ಸಹಸ್ರಶಃ ॥62॥
ಅನಂತರ ಕುಂತೀಪುತ್ರನಾದ ಧನಂಜಯನು ಸಾವಿರಾರು ಯಾದವ ಸೇವಕರೊಂದಿಗೆ ಕೂಡಿಕೊಂಡು, ಉದ್ವೇಗದಿಂದಲೇ ಗಾಂಡೀವದಿಂದ ಹೊರಟ ಬಾಣಗಳಿಂದ ದಸ್ಯುಗಳನ್ನು ಹೊಡೆದನು.
ಕ್ಷಣೇನ ತಸ್ಯ ತೇ ರಾಜನ್ ಕ್ಷಯಂ ಜಗ್ಮುರಜಿಹ್ಮಗಾಃ |
ಅಕ್ಷಯಾ ಹಿ ಪುರಾ ಭೂತ್ವಾ ಕ್ಷೀಣಾಃ ಕ್ಷತಜಭೋಜನಾಃ ॥63॥
ಹೇ ರಾಜನೇ, ಸ್ವಲ್ಪ ಹೊತ್ತಿನಲ್ಲಿಯೇ ಅವನಲ್ಲಿದ್ದ ಬಾಣಗಳು ಖಾಲಿಯಾದವು. ಹಿಂದೆ ಅಕ್ಷಯವಾಗಿದ್ದ ಆ ರಕ್ತಾಹಾರಿ ಬಾಣಗಳು ಈಗ ಕ್ಷೀಣವಾಗಿಬಿಟ್ಟವು.
ಸ ಶರಕ್ಷಯಮಾಸಾದ್ಯ ದುಃಖಶೋಕಸಮಾಹತಃ |
ಧನುಷ್ಕೋಟ್ಯಾ ತದಾ ದಸ್ಯೂನವಧೀತ್ ಪಾಕಶಾಸನಿಃ ॥64॥
ಆಗ ಇಂದ್ರಪುತ್ರನಾದ ಪಾರ್ಥನು ಬಾಣಗಳು ಖಾಲಿಯಾದುದರಿಂದ ದುಃಖ-ಶೋಕಗಳಿಂದ ಕೂಡಿದವನಾಗಿ ಧನುಸ್ಸಿನ ತುದಿಯಿಂದ ಆ ದಸ್ಯುಗಳನ್ನು ಹೊಡೆಯಲಾರಂಭಿಸಿದನು.
ಪ್ರೇಕ್ಷತಸ್ತ್ವೇವ ಪಾರ್ಥಸ್ಯ ವೃಷ್ಣ್ಯಂಧಕವರಸ್ತ್ರಿಯಃ |
ಜಗ್ಮುರಾದಾಯ ತೇ ಮ್ಲೇಚ್ಛಾಃ ಸಮಂತಾಜ್ಜನಮೇಜಯ ॥65॥
ಹೇ ಜನಮೇಜಯನೇ, ಪಾರ್ಥನು ನೋಡನೋಡುತ್ತಿದ್ದಂತೆಯೇ ಆ ಮ್ಲೇಚ್ಛರು ವೃಷ್ಣಿ ಮತ್ತು ಅಂಧಕರ ವಂಶದ ಉತ್ತಮಸ್ತ್ರೀಯರನ್ನು ತಮ್ಮ ವಶಕ್ಕೆ ಕರೆದುಕೊಂಡು ಹೊರಟೇ ಬಿಟ್ಟರು.
ಧನಂಜಯಸ್ತು ದೈವಂ ತನ್ಮನಸಾಽಚಿಂತಯತ್ಪ್ರಭುಃ |
ದುಃಖಶೋಕಸಮಾವಿಷ್ಟೋ ನಿಃಶ್ವಾಸಪರಮೋಽಭವತ್ ॥66॥
ಸಮರ್ಥನಾದ ಅರ್ಜುನನು ಈ ಎಲ್ಲವನ್ನೂ ಭಗವತ್ಸಂಕಲ್ಪವೆಂದು ಮನಸ್ಸಿನಲ್ಲಿ ಅಂದುಕೊಂಡು ದುಃಖ-ಶೋಕಗಳಿಂದ ವ್ಯಾಕುಲನಾಗಿ ಜೋರಾಗಿ ನಿಟ್ಟುಸಿರು ಬಿಟ್ಟನು.
ಅಸ್ತ್ರಾಣಾಂ ಚ ಪ್ರಣಾಶೇನ ಬಾಹುವೀರ್ಯಸ್ಯ ಚ ಕ್ಷಯಾತ್ |
ಧನುಷಶ್ಚಾವಿಧೇಯತ್ವಾತ್ ಶರಾಣಾಂ ಸಂಕ್ಷಯೇನ ಚ ॥67॥
ಬಭೂವ ವಿಮನಾಃ ಪಾರ್ಥೋ ದೈವಮಿತ್ಯನುಚಿಂತಯನ್ |
ನ್ಯವರ್ತತ ತತೋ ರಾಜನ್ನೇದಮಸ್ತೀತಿ ಚಿಂತಯನ್ ॥68॥
ಹೇ ರಾಜನೇ, ಅಸ್ತ್ರಗಳು ಖಾಲಿಯಾದುದರಿಂದಲೂ, ಬಾಹುಬಲವು ಕ್ಷೀಣಿಸಿರುವುದರಿಂದಲೂ, ಧನುಸ್ಸಿನ ಹೆದೆಯೇರಿಸಲು ಕಷ್ಟವಾದುದರಿಂದಲೂ ಅರ್ಜುನನು ವಿಮನಸ್ಕನಾದನು. ಇದೆಲ್ಲವೂ ಭಗವತ್ಸಂಕಲ್ಪವೆಂದು ಆಲೋಚಿಸುತ್ತಾ, ಇದ್ಯಾವುದೂ ನನ್ನ ಕೈಯಲ್ಲಿಲ್ಲ ಎಂದು ಚಿಂತಿಸುತ್ತಾ ಅಲ್ಲಿಂದ ಹಿಂದಿರುಗಿದನು.
ತತಃ ಶೇಷಂ ಸಮಾದಾಯ ಕಲತ್ರಸ್ಯ ಮಹಾಮತಿಃ |
ಹೃತಭೂಯಿಷ್ಠರತ್ನಸ್ಯ ಕುರುಕ್ಷೇತ್ರಮವಾತರತ್ ॥69॥

ಅನಂತರ ಮಹಾಮತಿಯಾದ ಅರ್ಜುನನು ಬಹುರತ್ನಗಳನ್ನು ಕಳೆದುಕೊಂಡ, ದಸ್ಯುಗಳ ಪಾಲಾಗದೆ ಉಳಿದ, ಯದುಪತ್ನೀ ಸಮೂಹವನ್ನು ಒಗ್ಗೂಡಿಸಿಕೊಂಡು ಕುರುಕ್ಷೇತ್ರಕ್ಕೆ ಬಂದಿಳಿದನು.
ಯುಧಿಷ್ಠಿರಸ್ಯಾನುಮತೇ ವಂಶಕರ್ತೄನ್ ಕುಮಾರಕಾನ್ |
ನ್ಯವೇಶಯತ ಕೌರವ್ಯಸ್ತತ್ರ ತತ್ರ ಧನಂಜಯಃ ||70||
ಯುಧಿಷ್ಠಿರನ ಅನುಮತಿಯಂತೆ, ಯದುವಂಶವನ್ನು ಮುಂದುವರೆಸುವ ಮಕ್ಕಳನ್ನು ಕುರುವಂಶಜನಾದ ಧನಂಜಯನು ಅಲ್ಲಲ್ಲಿ ಇರಿಸಿದನು.
ಹಾರ್ದಿಕ್ಯತನಯಂ ಪಾರ್ಥೋ ನಗರೇ ಮೃತ್ತಿಕಾವನೇ |
ಅಶ್ವಪತಿಂ ಖಾಂಡವಾರಣ್ಯೇ ರಾಜ್ಯೇ ತತ್ರ ನ್ಯವೇಶಯತ್ ||71||
ಕೃತವರ್ಮನ ಮಗನನ್ನು ಮೃತ್ತಿಕಾವನದ ಸಮೀಪದ ನಗರದಲ್ಲಿಯೂ, ಅಶ್ವಪತಿಯನ್ನು ಖಾಂಡವವನ ಸಮೀಪದ ರಾಜ್ಯದಲ್ಲಿಯೂ ಪಾರ್ಥನು ವ್ಯವಸ್ಥೆಗೊಳಿಸಿದನು.
ಭೋಜರಾಜಕಲತ್ರಂ ಚ ಹೃತಶೇಷಂ ನರೋತ್ತಮಃ ||72||
ತಥಾ ವೃದ್ಧಾಂಶ್ಚ ಬಾಲಾಂಶ್ಚ ಸ್ತ್ರಿಯಶ್ಚಾದಾಯ ಪಾಂಡವಃ |
ವೀರೈರ್ವಿಹೀನಾನ್ ಸರ್ವಾಂಸ್ತಾನ್ ಶಕ್ರಪ್ರಸ್ಥೇ ನ್ಯವೇಶಯತ್ ||73||
ನರೋತ್ತಮನಾದ ಆ ಪಾಂಡವನು ಅಪಹರಿಸದೆ ಉಳಿದಿರುವ ಭೋಜರಾಜನ ಪತ್ನಿಯನ್ನೂ ಹಾಗೂ ಮಕ್ಕಳಿಲ್ಲದ ವೃದ್ಧರನ್ನೂ, ಮಕ್ಕಳನ್ನೂ, ಸ್ತ್ರೀಯರನ್ನೂ ಒಟ್ಟುಗೂಡಿಸಿ ಅವರೆಲ್ಲರನ್ನೂ ಇಂದ್ರಪ್ರಸ್ಥದಲ್ಲಿ ಇರಿಸಿದನು.
ಯೌಯುಧಾನಿಂ ಸರಸ್ವತ್ಯಾಃ ಪುತ್ರಂ ಸಾತ್ಯಕಿನಃ ಪ್ರಿಯಮ್ |
ನ್ಯವೇಶಯತ ಧರ್ಮಾತ್ಮಾ ವೃದ್ಧಬಾಲಪುರಸ್ಕೃತಮ್ ||74||
ಸಾತ್ಯಕಿಗೆ ಅತ್ಯಂತ ಪ್ರೀತಿಪಾತ್ರನಾದ, ಸರಸ್ವತಿಯ ಮಗನಾದ ಯೌಯುಧಾನಿಯನ್ನು ವೃದ್ಧ ಹಾಗೂ ಬಾಲರೊಂದಿಗೆ ಧರ್ಮಾತ್ಮನಾದ ಅರ್ಜುನನು ಉತ್ತಮ ಪ್ರದೇಶದಲ್ಲಿ ನೆಲೆಗೊಳಿಸಿದನು.
ಇಂದ್ರಪ್ರಸ್ಥೇ ದದೌ ರಾಜ್ಯಂ ವಜ್ರಾಯ ಪರವೀರಹಾ |
ವಜ್ರೇಣಾಕ್ರೂರದಾರಾಸ್ತು ವಾರ್ಯಮಾಣಾಃ ಪ್ರವವ್ರಜುಃ ||75||
ಸರಸ್ವತೀಂ ಪ್ರವಿವಿಶುಃ ತಥಾನ್ಯಾಃ ಶುದ್ಧಚೇತಸಃ ||76||
ಶತ್ರುಮರ್ದನನಾದ ಅರ್ಜುನನು ಇಂದ್ರಪ್ರಸ್ಥದಲ್ಲಿಯೇ ವಜ್ರನಿಗೆ ರಾಜ್ಯವನ್ನು ನೀಡಿದನು. ವಜ್ರನು ತಡೆಯುತ್ತಿದ್ದರೂ ಅಕ್ರೂರರ ಪತ್ನಿಯಂದಿರು ಅಲ್ಲಿಂದ ಹೊರಟೇ ಬಿಟ್ಟರು. ಅಲ್ಲದೆ ಶುದ್ಧಚೇತಸ್ಕರಾದ ಅವರು ಮತ್ತು ಬೇರೆ ಸ್ತ್ರೀಯರೂ ಕೂಡ ಸರಸ್ವತಿ ನದಿಯನ್ನು ಪ್ರವೇಶಿಸಿದರು.
ರುಗ್ಮಿಣೀ ತ್ವಥ ಗಾಂಧಾರೀ ಶೈಬ್ಯಾ ಹೈಮವತೀತ್ಯಪಿ |
ದೇವೀ ಜಾಂಬವತೀ ಚೈವ ವಿವಿಶುರ್ಜಾತವೇದಸಮ್ ||77||
ರುಗ್ಮಿಣೀ, ಅಂತೆಯೇ ಗಾಂಧಾರೀ, ಶೈಬ್ಯೆ, ಹೈಮವತೀ, ಜಾಂಬವತೀ ದೇವಿ ಇವರೆಲ್ಲರೂ ಅಗ್ನಿಯನ್ನು ಪ್ರವೇಶಿಸಿದರು.
ಸತ್ಯಭಾಮಾ ತಥೈವಾನ್ಯಾ ದೇವ್ಯಃ ಕೃಷ್ಣಸ್ಯ ಸಮ್ಮತಾಃ |
ವನಂ ಪ್ರವಿವಿಶೂ ರಾಜಂಸ್ತಾಪಸೇ ಕೃತನಿಶ್ಚಯಾಃ ||78||
ಹೇ ರಾಜನೇ, ಸತ್ಯಭಾಮೆಯು ಹಾಗೂ ಕೃಷ್ಣನಿಗೆ ಸಮ್ಮತರಾದ ಉಳಿದ ದೇವಿಯರು ತಪಸ್ಸಿನಲ್ಲಿ ಆಸಕ್ತಿಯನ್ನಿರಿಸಿ ಕಾಡನ್ನು ಪ್ರವೇಶಿಸಿದರು.
ವನೇ ಮೂಲಾದಿಭೋಜಿನ್ಯೋ ಹವಿರ್ದಾನೈಕತತ್ಪರಾಃ |
ಹಿಮವಂತಮತಿಕ್ರಮ್ಯ ಕಲಾಪಗ್ರಾಮಮಾವಿಶನ್ ||79||
ಆ ಎಲ್ಲ ಸ್ತ್ರೀಯರು ಕಾಡಿನಲ್ಲಿ ಗೆಡ್ಡೆ-ಗೆಣಸುಗಳನ್ನು ತಿನ್ನುತ್ತಾ ಹವಿಷ್ಯಾನ್ನವನ್ನು ದಾನ ಮಾಡುವುದರಲ್ಲೇ ಆಸಕ್ತರಾಗಿದ್ದುಕೊಂಡು ಹಿಮವದ್ಪರ್ವತವನ್ನು ದಾಟಿ ಕಲಾಪ ಗ್ರಾಮಕ್ಕೆ ಪ್ರವೇಶಿಸಿದರು.
ದ್ವಾರಕಾವಾಸಿನೋ ಯೇ ತು ಪುರುಷಾಃ ಪಾರ್ಥಮಭ್ಯಯುಃ |
ಯಥಾರ್ಹಂ ಸಂವಿಭಜ್ಯೈನಾನ್ ವಜ್ರೇ ಪರ್ಯದದಜ್ಜಯಃ ||80||
ದ್ವಾರಕೆಯಲ್ಲಿ ವಾಸಮಾಡುತ್ತಿದ್ದ ಯಾರೆಲ್ಲ ಪುರುಷರು ಪಾರ್ಥನನ್ನು ಹಿಂಬಾಲಿಸಿದ್ದರೋ ಅವರೆಲ್ಲರನ್ನೂ ಅವರವರ ವರ್ಣಾಶ್ರಮಕ್ಕನುಸಾರವಾಗಿ ವಿಭಾಗಿಸಿ ಅವರನ್ನು ರಕ್ಷಿಸುವಂತೆ ವಜ್ರನಲ್ಲಿ ಪಾರ್ಥನು ಒಪ್ಪಿಸಿದನು.
ಸ ತತ್ಕೃತ್ವಾ ಪ್ರಾಪ್ತಕಾಲಂ ಬಾಷ್ಪೇಣಾಪಿಹಿತೋಽರ್ಜುನಃ |
ಕೃಷ್ಣದ್ವೈಪಾಯನಂ ವ್ಯಾಸಂ ದದರ್ಶಾಸೀನಮಾಶ್ರಮೇ ||81||
ಸಾಕ್ಷಾನ್ನಾರಾಯಣಂ ದೇವಂ ನಿಜರೂಪಧರಂ ವಿಭುಮ್ ||82||
ಹೀಗೆ ಅರ್ಜುನನು ಆ ಕಾಲಕ್ಕೆ ಯಾವುದು ಸರಿಯಾದುದೋ ಅದೆಲ್ಲವನ್ನೂ ಮಾಡಿ ಮುಗಿಸಿ, ಕಣ್ಣೀರಿನಿಂದ ಮುಚ್ಚಿದ ಕಣ್ಣುಳ್ಳವನಾಗಿ ವೇದವ್ಯಾಸರ ಆಶ್ರಮಕ್ಕೆ ತೆರಳಿ ಅಲ್ಲಿ ಕುಳಿತಿರುವ ಸಾಕ್ಷಾತ್ ನಾರಾಯಣನೇ ತನ್ನ ರೂಪವನ್ನು ಧರಿಸಿ ಬಂದಿರುವ ಸರ್ವ ಸಮರ್ಥನಾದ, ಕ್ರೀಡಾಗುಣವಿಶಿಷ್ಟನಾದ ಕೃಷ್ಣದ್ವೈಪಾಯನ ಎಂಬ ಹೆಸರುಳ್ಳ ವೇದವ್ಯಾಸರನ್ನು ಕಂಡನು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ವ್ಯಾಸಾರ್ಜುನಸಮಾಗಮೋ ನಾಮ ಅಷ್ಟಮೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಎಂಟನೆಯ ಅಧ್ಯಾಯ ಮುಗಿಯಿತು.
* * * * *

ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ಸ್ತ್ರಿಯೋ ಬಾಲಾಂಸ್ತಥಾऽऽದಾಯ ಧನಂ ಚೈವ ಧನಂಜಯಃ |
ವಿನಿರ್ಯಯೌ ದ್ವಾರವತ್ಯಾಸ್ತಾಂ ಜಗ್ರಾಸ ಚ ಸಾಗರಃ ॥
ಅರ್ಜುನನು ಕೃಷ್ಣನ ಹದಿನಾರುಸಾವಿರದ ನೂರು ಮಂದಿ ಮಡದಿಯರನ್ನೂ ಬಾಲಕರನ್ನೂ ಧನವನ್ನೂ ಹಿಡಿದುಕೊಂಡು ದ್ವಾರಕೆಯಿಂದ ಹೊರಗೆ ನಡೆದನು. ಆಗ ದ್ವಾರಕೆಯನ್ನು ಸಮುದ್ರ ಮುಳುಗಿಸಿತು.
ಸ್ತ್ರೀಬಾಲಸಹಿತೇ ಪಾರ್ಥ ಏಕಸ್ಮಿನ್ ಪಥಿ ಗಚ್ಛತಿ |
ಶಾಪಾತ್ ಸುಪಾಪಾ ಆಭೀರಾಃ ಸ್ತ್ರೀಜನಾನ್ ಜಹ್ರುರುದ್ಧತಾಃ ॥
ಸ್ತ್ರೀಯರಿಂದಲೂ ಬಾಲಕರಿಂದಲೂ ಸಹಿತನಾಗಿ ಅರ್ಜುನನು ನಡೆದಾಗ ಒಂದು ದಾರಿಯಲ್ಲಿ ಶ್ರೀಕೃಷ್ಣನ ಶಾಪದಿಂದ ಮಹಾಪಾಪಿಗಳಾದ ಮ್ಲೇಚ್ಛರು ಉದ್ಧತರಾಗಿ ಸ್ತ್ರೀಯರನ್ನು ಅಪಹರಿಸಿದರು.
ಯಾಸ್ತಾಃ ಷೋಡಶಸಾಹಸ್ರವನಿತಾಃ ಶತಸಂಯುತಾಃ |
ಕೃಷ್ಣಶಾಪಾನ್ಮ್ಲೇಚ್ಛವಶಂ ಯಯುರ್ದರ್ಪನಿಮಿತ್ತತಃ ॥
ಶ್ರೀಕೃಷ್ಣನ ಹದಿನಾರು ಸಾವಿರದ ನೂರು ಮಂದಿ ಪತ್ನಿಯರು ದರ್ಪನಿಮಿತ್ತವಾಗಿ ಅವನಿಂದ (ಕೃಷ್ಣನಿಂದ) ಶಾಪ ಹೊಂದಿ ಮ್ಲೇಚ್ಛರಿಗೆ ವಶರಾದರು.
ಹ್ರಿಯಮಾಣೇ ಧನೇ ಚೈವ ವನಿತಾಸು ಚ ವಾಸವಿಃ |
ಯುಯುತ್ಸುರ್ಗಾಂಡಿವಂ ಸಜ್ಯಂ ಕೃಚ್ಛ್ರೇಣೈವ ಚಕಾರ ಹ ॥
ಧನವನ್ನೂ, ಸ್ತ್ರೀಯರನ್ನೂ ಮ್ಲೇಚ್ಛರು ಅಪಹರಿಸುವಾಗ ಅರ್ಜುನನು ಯುದ್ಧ ಮಾಡಲು ಬಯಸಿ ಗಾಂಡೀವವನ್ನು ಕಷ್ಟದಿಂದಲೇ ಹೆದೆಯೇರಿಸಿದನು.
ಕ್ಷೀಣಾಸ್ತಸ್ಯ ಶರಾ ದೈವಾನ್ನಾಸಶತ್ರುಣಿ ಸ್ಮೃತಿಮಾಯಯುಃ |
ಸ ತದ್ ದೈವಕೃತಂ ಜ್ಞಾತ್ವಾ ಸಂಸ್ಮರನ್ ಪುರುಷೋತ್ತಮಮ್ |
ನಿಘ್ನನ್ಶತ್ರೂನ್ ಗಾಂಡಿವೇನ ಶೇಷಂ ರಕ್ಷನ್ ಕುರೂನಗಾತ್ ॥
ದೈವಾತ್ ಅರ್ಜುನನ ಬಾಣಗಳು ಎಲ್ಲವೂ ಬರಿದಾದುವು. ಅಸ್ತ್ರಗಳೂ ಸ್ಮರಣೆಗೆ ಬರಲಿಲ್ಲ. ಅದನ್ನು ಅವನು ದೈವಕೃತವೆಂದುಕೊಂಡು, ಕೃಷ್ಣನನ್ನು ನೆನೆಯುತ್ತ, ಗಾಂಡೀವದಿಂದಲೆ ಶತ್ರುಗಳನ್ನು ಕೊಂದು, ಉಳಿದ ಧನಸಂಪತ್ತನ್ನು ರಕ್ಷಿಸುತ್ತ ಕುರುಕ್ಷೇತ್ರಕ್ಕೆ ತೆರಳಿದನು.
ತದಾ ಕುರುಕ್ಷೇತ್ರಗತಂ ಜಗದ್ಗುರುಂ
ಸುಪೂರ್ಣವಿಜ್ಞಾನಬಲಾಬ್ಧಿಸತ್ಸುಖಮ್ |
ತಮೇವ ವಾಸಿಷ್ಠಕುಲೋದ್ವಹಂ ಹರಿಂ
ನಿರೀಕ್ಷ್ಯ ದುಃಖೇನ ಪಪಾತ ಪಾದಯೋಃ ॥
ಆಗ ಕುರುಕ್ಷೇತ್ರದಲ್ಲಿದ್ದ ಪೂರ್ಣಜ್ಞಾನಶಕ್ತಿಸಮುದ್ರನೂ ಉತ್ತಮ ಆನಂದ ಪೂರ್ಣನೂ ಜಗದ್ಗುರುವೂ ಆದ, ಶ್ರೀವೇದವ್ಯಾಸರೂಪದಿಂದ ವಸಿಷ್ಠಕುಲದಲ್ಲಿ ಪ್ರಾದುರ್ಭವಿಸಿದ ಅದೇ ಹರಿಯನ್ನು ಕಂಡು, ಕೃಷ್ಣವಿರಹದುಃಖದಿಂದ ಪಾದಗಳಲ್ಲಿ ನಮಿಸಿದನು.
ಸ ತೇನ ಪುಂಸಾಂ ಪ್ರವರೇಣ ಹೇತುಭಿಃ
ಸಂಬೋಧಿತೋऽಜ್ಞಾನತಮೋऽಂಶುಮಾಲಿನಾ |
ಸಂಸ್ಥಾಪ್ಯ ಚೇತಃ ಪುನರೇವ ತಸ್ಮಿನ್
ಜಹೌ ಶುಚಃ ಪ್ರಾಯಶ ಏವ ಧೈರ್ಯಾತ್ ॥
ಅಜ್ಞಾನತಮಸ್ಸಿಗೆ ಸೂರ್ಯರೆನಿಸಿದ, ಪುರುಷೋತ್ತಮರಾದ ವೇದವ್ಯಾಸರು ಅರ್ಜುನನನ್ನು ಯುಕ್ತಿಯುಕ್ತವಾಗಿ ತಿಳಿಯಹೇಳಿದಾಗ ಅರ್ಜುನ `ಈತನೆ ಆ ಕೃಷ್ಣ' ಎಂದು ಅವರಲ್ಲಿ ಮನಸ್ಸನ್ನಿಟ್ಟು ಧೈರ್ಯದಿಂದ ಬಹುಪಾಲು ಶೋಕಗಳನ್ನು ಮರೆತನು.
ಸ್ತ್ರಿಯೋ ಮ್ಲೇಚ್ಛಹೃತಾಃ ಕೃಷ್ಣಪ್ರೇಷಿತಾದ್ ದಾಲ್ಭ್ಯತಃ ಪುನಃ |
ಗೋವಿಂದ್ಯೇಕಾದಶೀಂ ಶ್ರುತ್ವಾ ಕೃತ್ವಾ ಸಾರಸ್ವತೇ ಜಲೇ ॥
ನಿಮಜ್ಜ್ಯ ವಾಯೋರ್ವಚನಾತ್ ತ್ಯಕ್ತದೇಹಾ ದಿವಂ ಯಯುಃ |
ಅರ್ಜುನಸ್ತು ಕುರುಕ್ಷೇತ್ರೇ ಹಾರ್ದಿಕ್ಯಯುಯುಧಾನಯೋಃ |
ಸುತೌ ಸಾರಸ್ವತೇ ಚೈವ ದೇಶೇ ರಾಜ್ಯೇऽಭ್ಯಷೇಚಯತ್ ॥
ಮ್ಲೇಚ್ಛರಿಂದ ಅಪಹೃತರಾದ ಕೃಷ್ಣ ಪತ್ನಿಯರು ಕೃಷ್ಣ ಕಳಿಸಿದ್ದ ದಾಲ್ಭ್ಯಮುನಿಯಿಂದ ಗೋವಿಂದ್ಯೇಕಾದಶೀ ವ್ರತ, ಮಹಿಮಾದಿಗಳನ್ನು ಕೇಳಿ ಆ ವ್ರತವನ್ನು ಆಚರಿಸಿ, ಸರಸ್ವತೀ ನದಿಜಲದಲ್ಲಿ ಸ್ನಾನ ಮಾಡಿ, ವಾಯುವಿನ ವಚನದಿಂದ ಆ ಜಲದಲ್ಲಿ ಶರೀರತ್ಯಾಗ ಮಾಡಿ ಸ್ವರ್ಗಕ್ಕೆ ಹೋದರು. ಅರ್ಜುನನು ಕೃತವರ್ಮ-ಸಾತ್ಯಕಿಯರ ಪುತ್ರರನ್ನು ಕುರುಕ್ಷೇತ್ರ ಸಾರಸ್ವತ ದೇಶಗಳಲ್ಲಿ ಆಳುವುದಕ್ಕೆ ಪಟ್ಟಾಭಿಷೇಕ ಮಾಡಿದನು.
ಅನಿರುದ್ಧಸುತಂ ವಜ್ರಂ ಪ್ರಿಯಂ ಕೃಷ್ಣಸ್ಯ ಸದ್ಗುಣಮ್ |
ಸ ಶೂರಸೇನೇಂದ್ರಪ್ರಸ್ಥ ರಾಜಾನಮಕರೋದ್ ವಶೀ ॥
ಶ್ರೀಕೃಷ್ಣನಿಗೆ ಪ್ರಿಯನಾದ, ಸದ್ಗುಣಿಯಾದ ಅನಿರುದ್ಧ ಪುತ್ರ ವಜ್ರನನ್ನು ಅರ್ಜುನನು ಶೂರಸೇನ ದೇಶ ಮತ್ತು ಇಂದ್ರಪ್ರಸ್ಥಗಳಿಗೆ ರಾಜನನ್ನಾಗಿ ಮಾಡಿದನು.
ಸ್ತ್ರೀಬಾಲಾಂಶ್ಚ ಧನಂ ಚೈವ ತಸ್ಮಿನ್ ಸಂಸ್ಥಾಪ್ಯ ಫಲ್ಗುನಃ |

ಯಯೌ ಭ್ರಾತೄನಶೇಷಂ ಚ ವೃತ್ತಂ ತೇಷಾಮವರ್ಣಯತ್ ॥
ಸ್ತ್ರೀಯರನ್ನೂ ಬಾಲಕರನ್ನೂ ಧನವನ್ನೂ ವಜ್ರನ ವಶದಲ್ಲಿ ಇರಿಸಿ, ಅರ್ಜುನನ ಸಹೋದರರ ಬಳಿಗೆ ನಡೆದನು. ಅವರಿಗೆ ಎಲ್ಲ ವೃತ್ತಾಂತವನ್ನೂ ಬಣ್ಣಿಸಿದನು.
ತೇ ಚಾವಿಯೋಗಸಮಯಂ ಸ್ಮರಂತೋ ಮುರವೈರಿಣಾ |
ಅಭ್ಯಷಿಂಚನ್ ಭಾಗವತಂ ಮಹಾರಾಜ್ಯೇ ಪರೀಕ್ಷಿತಮ್ ॥
ಪಾಂಡವರು ತಮಗೆ ಶ್ರೀಕೃಷ್ಣನ ವಿಯೋಗವಿಲ್ಲದಂತೆ ಮಾಡಿಕೊಳ್ಳಲು, ವಿಯೋಗ ಕಾಲದಲ್ಲಿ ತಾವೇ ಇರಕೂಡದೆಂದು ಮಾಡಿದ ಸಂಕಲ್ಪವನ್ನು ಆಲೋಚಿಸುತ್ತ ಭಗವದ್ಭಕ್ತನಾದ ಪರೀಕ್ಷಿತನನ್ನು ಮಹಾರಾಜ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿದರು.
ಸ್ತ್ರೀಹಾರಿಣಾಂ ಚ ಮ್ಲೇಚ್ಛಾನಾಂ ವಧಾಯೈನಮಯೋಜಯನ್ |
ಕೃತಂ ಚ ತೇನ ತತ್ಕರ್ಮ ವೋಢ್ರಾ ಪೈತಾಮಹಂ ಧುರಮ್ ॥
ಸ್ತ್ರೀಯರನ್ನು ಅಪಹರಿಸಿದ ಮ್ಲೇಚ್ಛರ ವಧೆಗೆ ಪರೀಕ್ಷಿತನನ್ನು ಆಜ್ಞಾಪಿಸಿದರು. ತಾತಂದಿರು ವಹಿಸಿಕೊಟ್ಟ ಕಾರ್ಯಭಾರವನ್ನು ಪರೀಕ್ಷಿತನು ಹೊತ್ತು ಯಶಸ್ವಿಯಾಗಿ ನಡೆಸಿದನು.
ಸಮಯಂ ಪರಿರಕ್ಷದ್ಭಿರ್ನ ಪಾರ್ಥೈರೇವ ಯತ್ ಕೃತಮ್ |
ವಾಸುದೇವಪದಾ ಸ್ಪೃಷ್ಟಭೂಕಂಟಕಸಮುದ್ಧೃತಿಃ |
ಸಮಯಃ ಪಾಂಡವಾನಾಂ ಹಿ ತಸ್ಯೈವಾನುಗತಿಃ ಪರಮ್ |
ತಮ್ಮ ಪ್ರತಿಜ್ಞೆಯನ್ನು ರಕ್ಷಿಸುವುದಕ್ಕಾಗಿ ಪಾಂಡವರು ಆ ಕೆಲಸವನ್ನು ತಾವೇ ಮಾಡಲಿಲ್ಲ. ಶ್ರೀಕೃಷ್ಣನ ಪಾದಸ್ಪರ್ಶವಿರುವಷ್ಟು ಕಾಲ ಮಾತ್ರ ಭೂಮಿಗೆ ಕಂಟಕ ರೂಪರಾದ ದುರ್ಜನರ ನಾಶ ಮಾಡಬೇಕು. ಬಳಿಕ ಶ್ರೀಕೃಷ್ಣನನ್ನೇ ಹಿಂಬಾಲಿಸಬೇಕು ಎಂಬುದು ಪಾಂಡವರು ತೊಟ್ಟ ಪ್ರತಿಜ್ಞೆಯಾಗಿತ್ತು.
ಅನುವ್ರಜದ್ಭಿರ್ವಿಶ್ವೇಶಂ ನಾಸ್ಮಾಭಿರ್ಭೂಸ್ತದುಜ್ಝಿತಾ |
ಭೋಜ್ಯಾ ರಕ್ಷ್ಯಾಽಪಿ ವಾ ತೇಷಾಮಿತ್ಯೇವ ಸಮಯಃ ಪುರಾ ॥
ನಾವು ಕೃಷ್ಣನನ್ನು ಅನುಸರಿಸಬೇಕು. ಅವನು ಬಿಟ್ಟು ಹೋದ ಭೂಮಿಯನ್ನು ಭೋಗಿಸುವುದಾಗಲಿ, ರಕ್ಷಿಸುವುದಾಗಲಿ ಕೂಡದು ಎಂದು ಪಾಂಡವರು ಹಿಂದೆ ಕೈಗೊಂಡ ಪ್ರತಿಜ್ಞೆಯಾಗಿತ್ತು.
ತತ್ರ ಕಾಳೀ ಭೀಮಭಾರ್ಯಾ ವೈಷ್ಣವಂ ಯೋಗಮಾಸ್ಥಿತಾ |
ಕೃಷ್ಣಯೈಕತ್ವಮಾಪನ್ನಾ ತ್ಯಕ್ತ್ವಾ ದೇಹಂ ತು ಮಾನುಷಮ್ ॥
ಭೀಮನ ಪತ್ನಿ ಕಾಳಿ ಹರಿಧ್ಯಾನರೂಪವಾದ ಯೋಗಬಲವನ್ನು ಅವಲಂಬಿಸಿ, ಮನುಷ್ಯ ಶರೀರವನ್ನು ತೊರೆದು ದ್ರೌಪದಿಯಲ್ಲಿ ಐಕ್ಯ ಹೊಂದಿದಳು.
ಸುಭದ್ರಾದ್ಯಾಸ್ತು ಯಾ ಭಾರ್ಯಾಃ ಪಾರ್ಥಾನಾಂ ತು ತದಾಜ್ಞಯಾ |
ಯುಯುತ್ಸುಶ್ಚಾತ್ರ ಶಿಕ್ಷಾರ್ಥಂ ಪೌತ್ರಸ್ಯೈವಾವಸನ್ ಪುರೇ ॥
ಸುಭದ್ರೆ ಮುಂತಾದ ಪಾಂಡವಪತ್ನಿಯರೂ ಯುಯುತ್ಸುವೂ ಪಾಂಡವರ ಆಜ್ಞೆಯಂತೆ ಪರೀಕ್ಷಿತನಿಗೆ ಧರ್ಮಶಿಕ್ಷಣಕ್ಕಾಗಿ ಹಸ್ತಿನಾವತಿ ಪಟ್ಟಣದಲ್ಲಿಯೇ ವಾಸ ಮಾಡಿದರು.
* * * * *

ಒಂಬತ್ತನೆಯ ಅಧ್ಯಾಯ

ಅರ್ಜುನನು ವೇದವ್ಯಾಸರ ಆಶ್ರಮಕ್ಕೆ ತೆರಳಿ ಅಲ್ಲಿ ವೇದವ್ಯಾಸರನ್ನು ಸಂದರ್ಶಿಸುವುದು. ವೇದವ್ಯಾಸರಲ್ಲಿ ದ್ವಾರಕಾವೃತ್ತಾಂತವನ್ನು ನಿವೇದಿಸುವುದು. ವೇದವ್ಯಾಸರು
ಅರ್ಜುನನಿಗೆ ಯುಧಿಷ್ಠಿರನೇ ಮೊದಲಾದ ನೀವು ಸ್ವರ್ಗಕ್ಕೆ ತೆರಳಿರೆಂದು
ಸೂಚಿಸುವುದು. ಅನಂತರ ಅರ್ಜುನನು ಹಸ್ತಿನಪುರಕ್ಕೆ ಬಂದು ಯುಧಿಷ್ಠಿರನಿಗೆ ದ್ವಾರಕೆಯಲ್ಲಾದ ವೃತ್ತಾಂತವನ್ನು ನಿವೇದಿಸುವುದು.
ವೈಶಂಪಾಯನಃ
ಪ್ರವಿಶ್ಯ ತ್ವರ್ಜುನೋ ರಾಜನ್ನಾಶ್ರಮಂ ಸತ್ಯವಾದಿನಃ |
ದದರ್ಶಾಸೀನಮೇಕಾಂತೇ ಮುನಿಂ ಸತ್ಯವತೀಸುತಮ್ ॥1॥
ವೈಶಂಪಾಯನ ಹೇ ರಾಜನೇ, ಅರ್ಜುನನು ಸತ್ಯವಾದಿಗಳಾದ ವೇದವ್ಯಾಸರ ಆಶ್ರಮವನ್ನು ಪ್ರವೇಶಿಸಿ, ಏಕಾಂತದಲ್ಲಿ ಕುಳಿತಿರುವ ಸತ್ಯವತಿಯ ಮಗನಾದ ವೇದವ್ಯಾಸ ಮುನಿಗಳನ್ನು ಕಂಡನು.
ಸ ತಮಾಸಾದ್ಯ ಧರ್ಮಜ್ಞಮುಪತಸ್ಥೇ ಮಹಾವ್ರತಮ್ |
ಅರ್ಜುನೋಽಸ್ಮೀತಿ ನಾಮಾಸ್ಮೈ ನಿವೇದ್ಯಾಭ್ಯವದತ್ ತತಃ ॥2॥
ಧರ್ಮಜ್ಞರಾದ ವೇದವ್ಯಾಸರನ್ನು ಅವನು ಸಮೀಪಿಸಿ, ಮಹಾವ್ರತರಾದ ಅವರ ಸಮೀಪದಲ್ಲಿ ನಿಂತನು. ಅನಂತರ ಅರ್ಜುನ ಎಂಬ ಹೆಸರಿನ ನಾನು ನಮಸ್ಕರಿಸುತ್ತಿದ್ದೇನೆ ಎಂದು ನಿವೇದಿಸಿ ಅಭಿವಾದನೆ ಮಾಡಿದನು.
ಸ್ವಾಗತಂ ತೇಽಸ್ತ್ವಿತಿ ಪ್ರಾಹ ಮುನಿಃ ಸತ್ಯವತೀಸುತಃ |
ಆಸ್ಯತಾಮಿತಿ ಹೋವಾಚ ಪ್ರಸನ್ನಾತ್ಮಾ ಮಹಾಮುನಿಃ ॥3॥
ಸತ್ಯವತೀ ಸುತರಾದ ಆ ಮುನಿಗಳು `ನಿನಗೆ ಸ್ವಾಗತವಿರಲಿ' ಎಂದರು. ನಂತರ ಪ್ರಸನ್ನಾತ್ಮರಾದ ಆ ಮುನಿಗಳು `ಇಲ್ಲೇ ಕುಳಿತುಕೊ' ಎಂದು ಹೇಳಿದರು.
ತಮಪ್ರತೀತಮನಸಂ ನಿಃಶ್ವಸಂತಂ ಪುನಃ ಪುನಃ |
ನಿರ್ವಿಣ್ಣಮನಸಂ ದೃಷ್ಟ್ವಾ ಪಾರ್ಥಂ ವ್ಯಾಸೋಽಬ್ರವೀದಿದಮ್ ॥4॥

ಮನಸ್ಸಂತೋಷವಿಲ್ಲದ, ಮತ್ತೆ ಮತ್ತೆ ನಿಟ್ಟುಸಿರು ಬಿಡುತ್ತಿರುವ, ಮನಸ್ಸಿನಲ್ಲಿ ವೈರಾಗ್ಯವನ್ನು ತಳೆದಂತೆ ತೋರುತ್ತಿರುವ ಪಾರ್ಥನಿಗೆ ವೇದವ್ಯಾಸರು ಹೀಗೆಂದರು.
ವ್ಯಾಸಃ
ನಖಕೇಶದಶಾಕುಂಭವಾರಿಣಾ ಕಿಂ ಸಮುಕ್ಷಿತಃ ॥5॥
ಆವೀರಜಾನುಗಮನಂ ಬ್ರಾಹ್ಮಣೋ ವಾ ಹತಸ್ತ್ವಯಾ ॥6॥
ಯುದ್ಧೇ ಪರಾಜಿತೋ ವಾಽಸಿ ಗತಶ್ರೀರಿವ ಲಕ್ಷ್ಯಸೇ |
ನ ತ್ವಾಂ ಪ್ರಭಿನ್ನಂ ಜಾನಾಮಿ ಕಿಮಿದಂ ಭರತರ್ಷಭ ॥7॥
ಶ್ರೋತವ್ಯಂ ಚೇನ್ಮಯಾ ಪಾರ್ಥ ಕ್ಷಿಪ್ರಮಾಖ್ಯಾತುಮರ್ಹಸಿ ॥8॥
ಹೇ ಭರತರ್ಷಭನೇ, ಇದೇನು ನೀನು ಉಗುರು, ಕೂದಲು, ವಸ್ತ್ರದ ತುದಿ, ಗಡಿಗೆಯ ಮುಖ ಇವುಗಳಿಂದ ಸಿಡಿದ ನೀರಿನಿಂದ ಪ್ರೋಕ್ಷಿತನಾಗಿರುವೆಯೇ? ಅಥವಾ ಗರ್ಭಿಣಿ ಸ್ತ್ರೀ, ರಜಸ್ವಲಾ ಸ್ತ್ರೀ ಇವರನ್ನು ಗಮನ ಮಾಡಿರುವೆಯಾ? ಅಥವಾ ಬ್ರಾಹ್ಮಣನು ನಿನ್ನಿಂದ ಹತನಾಗಿರುವನೆ? ಅಥವಾ ಯುದ್ಧದಲ್ಲಿ ಪರಾಜಿತನಾಗಿರುವೆಯೇ? ಏಕೆಂದರೆ ಸಂಪತ್ತನ್ನು ಕಳೆದುಕೊಂಡಂತೆ ತೋರುತ್ತಿರುವೆ (ಈ ಹಿಂದೆ ಹೇಳಿದ ಕಾರಣಗಳು ಸಂಪತ್ತಿನ ನಾಶಕ್ಕೆ ಕಾರಣವಾಗಿವೆ ಎಂದು ತಿಳಿಯಬೇಕು). ನೀನು ಯುದ್ಧದಲ್ಲಿ ಸೋತಿದ್ದನ್ನು ನಾನೆಂದೂ ತಿಳಿದಿಲ್ಲ. ಹಾಗಾಗಿ ಹೇ ಪಾರ್ಥನೇ, ನಾನು ಕೇಳಬಹುದಾದ ವಿಷಯವಾಗಿದ್ದರೆ ಅದನ್ನು ಬೇಗ ನನಗೆ ಹೇಳು.
ಅರ್ಜುನಃ
ಯಃ ಸ ಮೇಘವಪುಃ ಶ್ರೀಮಾನ್ ಬೃಹತ್ಪಂಕಜಲೋಚನಃ |
ಸ ಕೃಷ್ಣಃ ಸಹ ರಾಮೇಣ ತ್ಯಕ್ತ್ವಾ ದೇಹಂ ದಿವಂ ಗತಃ ॥9॥
ಅರ್ಜುನ ಮೇಘದಂತೆ ಶರೀರವುಳ್ಳ, ಕಾಂತಿಯುಕ್ತನಾದ, ದೊಡ್ಡ ಕಮಲದಂತಹ ಕಣ್ಣುಗಳುಳ್ಳ ಯಾವ ಕೃಷ್ಣನಿದ್ದನೋ ಅವನು ಬಲರಾಮನೊಂದಿಗೆ ದೇಹವನ್ನು ತ್ಯಜಿಸಿ ಪರಲೋಕಕ್ಕೆ ಹೊರಟು ಹೋದನು.
ಮೌಸಲೇ ವೃಷ್ಣಿವೀರಾಣಾಂ ವಿನಾಶೋ ಬ್ರಹ್ಮಶಾಪಜಃ |
ಬಭೂವ ವೀರಾಂತಕರಃ ಪ್ರಭಾಸೇ ರೋಮಹರ್ಷಣಃ ॥10॥
ಬ್ರಹ್ಮಶಾಪದ ನಿಮಿತ್ತದಿಂದ ಉಂಟಾದ ಮುಸಲಗಳಿಂದ ಯದುವೀರರ ವಿನಾಶವಾಯಿತು. ರೋಮಾಂಚಕಾರಿಯಾದ ಈ ವೀರರ ನಾಶವು ಪ್ರಭಾಸದಲ್ಲಿ ನಡೆಯಿತು.
ಏತೇ ಶೂರಾ ಮಹಾತ್ಮಾನಃ ಸಿಂಹದರ್ಪಾ ಮಹಾಬಲಾಃ |
ಭೋಜವೃಷ್ಣ್ಯಂಧಕಾ ಬ್ರಹ್ಮನ್ನನ್ಯೋನ್ಯಂ ತೈರ್ಹತಂ ಯುಧಿ ॥11॥
ಈ ಭೋಜ-ವೃಷ್ಣ್ಯಂಧಕರು ಶೂರರಾಗಿದ್ದು, ಮಹಾತ್ಮರೂ, ಸಿಂಹದಂತೆ ದರ್ಪವುಳ್ಳವರೂ, ಮಹಾಬಲಿಷ್ಠರೂ ಆಗಿದ್ದರು. ಹೇ ಬ್ರಹ್ಮನ್ ಅವರು ಪರಸ್ಪರ ಯುದ್ಧಮಾಡಿ ಹತರಾದರು.
ಗದಾಪರಿಘಶಕ್ತೀನಾಂ ಸಹಾಃ ಪರಿಘಬಾಹವಃ |
ತ ಏರಕಾಭಿರ್ನಿಹತಾಃ ಪಶ್ಯ ಕಾಲಸ್ಯ ಪರ್ಯಯಮ್ ॥12॥
ಗದೆ, ಪರಿಘ, ಶಕ್ತ್ಯಾಯುಧ ಇವುಗಳ ಏಟನ್ನೂ ಸಹಿಸಿಕೊಳ್ಳುವ, ಉಕ್ಕಿನ ಒನಕೆಯನ್ನೇ ಕೈಯಲ್ಲಿ ಧರಿಸಿರುವ ಆ ಶೂರರು ಹುಲ್ಲುಗಳಿಂದ ಹೊಡೆದುಕೊಂಡು ಹತರಾದರು. ಕಾಲಚಕ್ರದ ಭ್ರಮಣೆಯನ್ನು ನೋಡಿರಿ.
ಪಂಚ ಪಂಚಶತಂ ತೇಷಾಂ ಸಹಸ್ರಂ ಬಾಹುಶಾಲಿನಾಮ್ |
ನಿಧನಂ ಸಮನುಪ್ರಾಪ್ತಂ ಸಮಾಸಾದ್ಯೇತರೇತರಮ್ ॥13॥
ಪರಾಕ್ರಮಿಗಳಾದ ಅವರ ಸಂಖ್ಯೆಯು ಐದೈದು ನೂರು ಸಾವಿರಗಳಷ್ಟಿತ್ತು. ಅವರು ಪರಸ್ಪರ ಹೊಡೆದಾಡಿಕೊಂಡು ಅವರ ಮರಣವು ಪ್ರಾಪ್ತವಾಯಿತು.
ವ್ಯಾಖ್ಯಾನ ವಿಶೇಷ ನೂರುಸಾವಿರ ಎಂದರೆ ಒಂದು ಲಕ್ಷ. ಪರಸ್ಪರ ಹೊಡೆದಾಡಬೇಕಾದರೆ ಎರಡು ಗುಂಪು ಇರುತ್ತದೆ. ಆ ಒಂದೊಂದು ಗುಂಪಿನಲ್ಲೂ ಐದೈದು ನೂರು ಜನ ಇದ್ದರು. ಎಂದರೆ ಒಂದು ಗುಂಪಿನಲ್ಲಿ ಐದು ನೂರು ಇನ್ನೊಂದು ಗುಂಪಿನಲ್ಲಿ ಐದು ನೂರು. ಇದು ಸಾವಿರ ಸಂಖ್ಯೆಯಲ್ಲಿತ್ತು ಅಂದರೆ ಒಂದು ಕಡೆ ಐದು ನೂರು ಸಾವಿರ, ಇನ್ನೊಂದು ಕಡೆ ಐದು ನೂರು ಸಾವಿರ. ಒಟ್ಟು ಹತ್ತು ಲಕ್ಷ ಮಂದಿ ಇದ್ದರು ಲಕ್ಷಾಲಂಕಾರ.
ಪುನಃಪುನರ್ನ ಮೃಷ್ಯಾಮಿ ವಿನಾಶಮಮಿತೌಜಸಾಮ್ |
ಚಿಂತಯಾನೋ ಯದೂನಾಂ ಚ ಕೃಷ್ಣಸ್ಯ ಚ ಯಶಸ್ವಿನಃ ॥14॥
ಅಮಿತವಾದ ತೇಜಸ್ಸುಳ್ಳ ಯದುಗಳ ವಿನಾಶವನ್ನು ಮತ್ತೆ ಮತ್ತೆ ಚಿಂತಿಸಿದರೂ ಸಹಿಸಿಕೊಳ್ಳಲಾಗುತ್ತಿಲ್ಲ. ಅಲ್ಲದೆ ಯಶಸ್ವಿಯಾದ ಶ್ರೀಕೃಷ್ಣನ ವಿನಾಶವನ್ನೂ ತಡೆದುಕೊಳ್ಳಲಾಗುತ್ತಿಲ್ಲ.
ಶೋಷಣಂ ಸಾಗರಸ್ಯೇವ ಮಂದರಸ್ಯೇವ ಚಾಲನಮ್ |
ನಭಸಃ ಪತನಂ ಚೈವ ಶೈತ್ಯಮಗ್ನೇಸ್ತಥೈವ ಚ ॥15॥
ಅಶ್ರದ್ಧೇಯಮಹಂ ಮನ್ಯೇ ವಿನಾಶಂ ಶಾರ್ಙ್ಗಧನ್ವನಃ |
ನ ಚೇಹ ಸ್ಥಾತುಮಿಚ್ಛಾಮಿ ಲೋಕೇ ಕೃಷ್ಣವಿನಾಕೃತಃ ॥16॥
ಶಾರ್ಙ್ಗಧನ್ವನಾದ ಶ್ರೀಕೃಷ್ಣನ ನಾಶವನ್ನು ಸಾಗರದ ಶೋಷಣದಂತೆಯೂ, ಮಂದರವನ್ನು ಕಿತ್ತೆಸೆದಂತೆಯೂ, ಆಕಾಶವು ಬಿದ್ದಂತೆಯೂ, ಅಗ್ನಿಯು ತಂಪಾದಂತೆಯೂ ನನಗೆ ನಂಬಲಾಗುತ್ತಿಲ್ಲ. ಕೃಷ್ಣನಿಲ್ಲದ ಈ ಲೋಕದಲ್ಲಿ ನಾನು ಇರಲು ಬಯಸಲಾರೆನು.

ಇತಃ ಕಷ್ಟತರಂ ಚಾನ್ಯಚ್ಛೃಣು ತದ್ವೈ ತಪೋಧನ |
ಮನೋ ಮೇ ದೀರ್ಯತೇ ಯೇನ ಚಿಂತಯಾನಸ್ಯ ವೈ ಮುಹುಃ ॥
ಹೇ ತಪೋಧನನೇ, ಇದಕ್ಕಿಂತಲೂ ಕಷ್ಟಕರವಾದುದು ಇನ್ನೊಂದಿದೆ. ಯಾವುದನ್ನು ಚಿಂತಿಸುವುದರಿಂದ ಮತ್ತೆ ಮತ್ತೆ ನನ್ನ ಮನಸ್ಸು ಒಡೆದು ಹೋಗುವುದೋ ಅದನ್ನು ನೀನು ಕೇಳು.
ಪಶ್ಯತೋ ವೃಷ್ಣಿದಾರಾಶ್ಚ ಮಮ ಬ್ರಹ್ಮನ್ ಸಹಸ್ರಶಃ |
ಆಭೀರೈರಭಿಭೂಯಾಜೌ ಹೃತಾಃ ಪಂಚನದಾಲಯೈಃ ॥18॥
ಹೇ ಬ್ರಹ್ಮನ್, ನಾನು ನೋಡನೋಡುತ್ತಿದ್ದಂತೆ ಸಾವಿರಾರು ಮಂದಿ ಯಾದವ ಪತ್ನಿಯರು ಪಂಚನದ (ಪಂಜಾಬ್) ಪ್ರದೇಶದಲ್ಲಿ ವಾಸವಾಗಿದ್ದ ಗೊಲ್ಲಜನರಿಂದ ನಮ್ಮೆಲ್ಲರನ್ನೂ ಸೋಲಿಸುವ ಮೂಲಕ ಅಪಹೃತರಾದರು.
ಧನುರಾದಾಯ ತತ್ರಾಹಂ ನಾಶಕಂ ತಸ್ಯ ಪೂರಣೇ |
ಯಥಾ ಪುರಾ ಚ ಮೇ ವೀರ್ಯಂ ಭುಜಯೋರ್ನ ತಥಾಽಭವತ್ ॥
ಅಲ್ಲಿ ನಾನು ಧನುಸ್ಸನ್ನೆತ್ತಿ ಹೆದೆಯೇರಿಸಲು ಪ್ರಯತ್ನಪಟ್ಟರೂ ಸಮರ್ಥನಾಗಲಿಲ್ಲ. ನನ್ನ ಭುಜಗಳಲ್ಲಿ ಹಿಂದೆ ಯಾವ ಶಕ್ತಿಯಿದ್ದಿತೋ ಆ ಶಕ್ತಿ ಅಲ್ಲಿ ಕೂಡಿಬರಲಿಲ್ಲ.
ಅಸ್ತ್ರಾಣಿ ಮೇ ಪ್ರನಷ್ಟಾನಿ ವಿವಿಧಾನಿ ಮಹಾದ್ಯುತೇ |
ಶರಾಶ್ಚ ಕ್ಷಯಮಾಪನ್ನಾಃ ಕ್ಷಣೇನೈವ ಸಮಂತತಃ ॥20॥
ಹೇ ಮಹಾದ್ಯುತಿಯೇ, ನನ್ನಲ್ಲಿದ್ದ ನಾನಾ ರೀತಿಯ ಅಸ್ತ್ರಗಳು ಅಲ್ಲಿ ಕಾಣದಾದವು. ಕ್ಷಣದಲ್ಲೇ ನನ್ನೆಲ್ಲ ಬಾಣಗಳೂ ಖಾಲಿಯಾದವು.
ತದ್ಧನುಸ್ತಾನಿ ಚಾಸ್ತ್ರಾಣಿ ಸ ರಥಸ್ತೇ ಚ ವಾಜಿನಃ |
ಸರ್ವಮೇಕಪದೇ ಭ್ರಷ್ಟಂ ದಾನಮಶ್ರೋತ್ರಿಯೇ ಯಥಾ ॥21॥
ಅದೇ ಧನುಸ್ಸು, ಅವೇ ಅಸ್ತ್ರಗಳು, ಅಂತೆಯೇ ಇರುವ ರಥ, ಅದೇ ರೀತಿಯ ಕುದುರೆಗಳು ಇದ್ದರೂ ಶ್ರೋತ್ರಿಯನಲ್ಲದವನಿಗೆ ಕೊಟ್ಟ ದಾನದಂತೆ ಎಲ್ಲವೂ ಒಂದೇ ಹೆಜ್ಜೆಯಲ್ಲಿ ವ್ಯರ್ಥವಾದವು.
ಪುರುಷಶ್ಚಾಪ್ರಮೇಯಾತ್ಮಾ ಶಂಖಚಕ್ರಗದಾಧರಃ |
ಚತುರ್ಭುಜಃ ಪೀತವಾಸಾಃ ಶ್ಯಾಮಃ ಪದ್ಮದಲೇಕ್ಷಣಃ ॥22॥
ಯಶ್ಚ ಯಾತಿ ಪುರಸ್ತಾನ್ಮೇ ರಥಸ್ಯ ಸುಮಹಾದ್ಯುತಿಃ |
ಪ್ರದಹನ್ ರಿಪುಸೈನ್ಯಾನಿ ನ ಪಶ್ಯಾಮ್ಯಹಮದ್ಯ ತಮ್ ॥23॥
ಸಕಲ ಪ್ರಾಣಿಗಳ ಹೃದಯದಲ್ಲಿರುವ, ಅಪ್ರಮೇಯವಾದ ಸ್ವರೂಪವುಳ್ಳ, ಶಂಖಚಕ್ರಗದೆಗಳನ್ನು ಧರಿಸಿರುವ, ನಾಲ್ಕು ಭುಜಗಳುಳ್ಳ, ಪೀತಾಂಬರಧಾರಿಯಾದ, ಮೇಘಶ್ಯಾಮನಾದ, ಪದ್ಮದಳಗಳಂತೆ ಅಗಲವಾದ ಕಣ್ಣುಗಳುಳ್ಳ ಯಾವ ಶ್ರೀಕೃಷ್ಣನು ಉತ್ತಮವಾದ ಮಹಾಕಾಂತಿಯಿಂದ ಕೂಡಿಕೊಂಡು, ನನ್ನ ರಥದ ಮುಂಭಾಗದಲ್ಲಿದ್ದು, ಶತ್ರುಸೈನ್ಯವನ್ನು ಸುಡುತ್ತಾ ಹೋಗುತ್ತಿದ್ದನೋ ಅವನನ್ನು ನಾನಿಂದು ನೋಡುತ್ತಿಲ್ಲ.
ಯೇನ ಪೂರ್ವಂ ಪ್ರದಗ್ಧಾನಿ ಶತ್ರುಸೈನ್ಯಾನಿ ತೇಜಸಾ |
ಶರೈರ್ಗಾಂಡೀವನಿರ್ಮುಕ್ತೈರಹಂ ಪಶ್ಚಾದಶಾತಯಮ್ ॥24॥
ತಮಪಶ್ಯನ್ ವಿಮುಹ್ಯೋಽಸ್ಮಿ ಘೂರ್ಣಾಮಿವ ಚ ಸತ್ತಮ |
ಪರಿನಿರ್ವಿಣ್ಣಚೇತಾಶ್ಚ ಶಾಂತಿಂ ನೋಪಲಭೇಽಪಿ ಚ ॥25॥
ಯಾವ ಶ್ರೀಕೃಷ್ಣನ ತೇಜಸ್ಸಿನಿಂದ ಶತ್ರುಸೈನ್ಯವು ಮೊದಲು ದಗ್ಧವಾಗಿದ್ದು ಅನಂತರ ನಾನು ಗಾಂಡೀವದಿಂದ ಬಿಡಲ್ಪಟ್ಟ ಬಾಣಗಳಿಂದ ಬೀಳಿಸಿದ್ದೆನೋ ಅವನನ್ನು ನೋಡದೆಯೂ ನಾನಿಂದು ಬದುಕಿ ಉಳಿದಿದ್ದೇನೆ. ಹೇ ಸಜ್ಜನೋತ್ತಮನೇ, ಎಲ್ಲ ರೀತಿಯಿಂದ ವ್ಯಾಕುಲಗೊಂಡ ಮನಸ್ಸುಳ್ಳವನಾಗಿ ಸುಮ್ಮನೆ ಪರಿಭ್ರಮಿಸುತ್ತಿದ್ದೇನೆ. ಇಷ್ಟಾದರೂ ಮನಶ್ಶಾಂತಿಯನ್ನು ಪಡೆಯಲಾಗುತ್ತಿಲ್ಲ.
ದೇವಕೀನಂದನಂ ದೇವಂ ವಾಸುದೇವಮಜಂ ಪ್ರಭುಮ್ |
ವಿನಾ ಜನಾರ್ದನಂ ವೀರಂ ನಾಹಂ ಜೀವಿತುಮುತ್ಸಹೇ ॥26॥
ದೇವಕಿಯ ಮಗನಾದ, ಕ್ರೀಡಾದಿಗುಣವಿಶಿಷ್ಟನಾದ, ವಾಸುದೇವ ಎಂದು ಕರೆಸಿಕೊಳ್ಳುವ, ಹುಟ್ಟಿಲ್ಲದ, ಸಮರ್ಥನಾದ, ವೀರನಾದ ಜನಾರ್ದನನನ್ನು ಬಿಟ್ಟು ನಾನು ಜೀವಿಸಲು ಬಯಸುತ್ತಿಲ್ಲ.
ಶ್ರುತ್ವೈವ ಹಿ ಗತಂ ವಿಷ್ಣುಂ ಮಮಾಪಿ ಮುಮುಹುರ್ದಿಶಃ |
ಪುನಷ್ಟಜ್ಞಾತಿವೀರ್ಯಸ್ಯ ಶೂನ್ಯಸ್ಯ ಪರಿಧಾವತಃ ॥27॥
ಬಂಧುಗಳ ಬಲವನ್ನು ಕಳೆದುಕೊಂಡು ಶೂನ್ಯನಾಗಿ ಓಡಾಡುತ್ತಿರುವ ನನಗೂ ಕೂಡ ವಿಷ್ಣುವು ಪರಲೋಕಕ್ಕೆ ಹೋದನೆಂದು ಕೇಳಿಯೇ ದಿಕ್ಕುಗಳು ತೋಚದಂತಾದವು.
ಉಪದೇಷ್ಟುಂ ಮಮ ಶ್ರೇಯೋ ಭವಾನರ್ಹತಿ ಸತ್ತಮ ॥28॥
ಹೇ ಸಜ್ಜನಶ್ರೇಷ್ಠನೇ, ನನಗೆ ಶ್ರೇಯೋಮಾರ್ಗವನ್ನು ತಾವೇ ಉಪದೇಶಿಸಬೇಕು.
ವ್ಯಾಸಃ
ಬ್ರಹ್ಮಶಾಪವಿನಿರ್ದಗ್ಧಾ ವೃಷ್ಣ್ಯಂಧಕಮಹಾರಥಾಃ |
ವಿನಷ್ಟಾಃ ಕುರುಶಾರ್ದೂಲ ನ ತಾನ್ ಶೋಚಿತುಮರ್ಹಸಿ ॥29॥
ವ್ಯಾಸರು ಹೇ ಕುರುಶ್ರೇಷ್ಠನೇ, ವೃಷ್ಣಿ ಮತ್ತು ಅಂಧಕ ವಂಶದ ಮಹಾರಥರು ಬ್ರಹ್ಮಶಾಪದಿಂದ ಭಸ್ಮೀಭೂತರಾಗಿ ಮರಣ ಹೊಂದಿದರು. ಅವರ ಬಗ್ಗೆ ಶೋಚಿಸುವ ಅಗತ್ಯವಿಲ್ಲ.

ಭವಿತವ್ಯಂ ತಥಾ ತಚ್ಚ ದಿಷ್ಟಮೇತನ್ಮಹಾತ್ಮನಾಮ್ |
ಉಪೇಕ್ಷಿತಂ ಚ ಕೃಷ್ಣೇನ ಶಕ್ತೇನಾಪಿ ವ್ಯಪೋಹಿತುಮ್ ॥30॥
ಆ ಮಹಾತ್ಮರಿಗೆ ಹೀಗಾಗಬೇಕೆಂದು ದೈವಸಂಕಲ್ಪವಾಗಿತ್ತು. ಅದು ಹಾಗೆಯೇ ಆಯಿತು. ಇದನ್ನು ತಡೆಯಲು ಸಮರ್ಥನಾದರೂ ಕೃಷ್ಣನು ತಡೆಯದೆ ಉಪೇಕ್ಷಿಸಿದನು.
ತ್ರೈಲೋಕ್ಯಮಪಿ ಗೋವಿಂದಃ ಕೃತ್ಸ್ನಂ ಸ್ಥಾವರಜಂಗಮಮ್ |
ಪ್ರಸಹೇದನ್ಯಥಾ ಕರ್ತುಂ ಕುತಃ ಶಾಪಂ ಮಹಾತ್ಮನಾಮ್ ॥31॥
ಗೋವಿಂದನಾದ ಅವನು ಜೀವ-ಜಡಾತ್ಮಕವಾದ ಇಡೀ ಮೂರುಲೋಕವನ್ನೂ ಬದಲಾಯಿಸಲು ಸಮರ್ಥನಾಗಿದ್ದಾನೆ. ಮಹಾತ್ಮರ ಶಾಪವು ಅವನಿಗೆ ಹೇಗೆ ಅಡ್ಡಿಯಾದೀತು?
ರಥಸ್ಯ ಪುರತೋ ಯಾತಿ ಶಂಖಚಕ್ರಗದಾಧರಃ |
ತವ ಸ್ನೇಹಾತ್ ಪುರಾಣರ್ಷಿರ್ವಾಸುದೇವಶ್ಚತುರ್ಭುಜಃ ॥32॥
ಶಂಖ-ಚಕ್ರ-ಗದಾಧರನಾದ, ಪುರಾಣಪುರುಷನಾದ, ಚತುರ್ಭುಜನಾದ ವಾಸುದೇವನು ನಿನ್ನ ಮೇಲಿನ ಸ್ನೇಹದಿಂದಷ್ಟೇ ರಥದ ಮುಂಭಾಗದಲ್ಲಿ ಹೋಗುತ್ತಿದ್ದನು.
ಕೃತ್ವಾ ಭಾರಾವತರಣಂ ಪೃಥಿವ್ಯಾಃ ಪೃಥುಲೋಚನಃ |
ಮೋಕ್ಷಯಿತ್ವಾ ತನುಂ ಪ್ರಾಪ್ತಃ ಕೃಷ್ಣಃ ಸ್ವಸ್ಥಾನಮುತ್ತಮಮ್ ॥33॥
ವಿಸ್ತಾರವಾದ ಕಣ್ಣುಗಳುಳ್ಳ ಆ ಕೃಷ್ಣನು ಭೂಭಾರಹರಣವನ್ನು ಮಾಡಿ, ಶರೀರವನ್ನು ಬಿಡುವ ಮೂಲಕ ತನ್ನ ಉತ್ತಮವಾದ ಸ್ಥಾನಕ್ಕೆ ತೆರಳಿದ್ದಾನೆ.
ತ್ವಯಾಽಪೀಹ ಮಹತ್ಕರ್ಮ ದೇವಾನಾಂ ಪುರುಷರ್ಷಭ |
ಕೃತಂ ಭೀಮಸಹಾಯೇನ ಯಮಾಭ್ಯಾಂ ಚ ಮಹಾಭುಜ ॥34॥
ಹೇ ಮಹಾಭುಜನಾದ ಪುರುಷಶ್ರೇಷ್ಠನೇ, ಭೀಮನ ಸಹಕಾರವುಳ್ಳ ನಿನ್ನಿಂದಲೂ ಮತ್ತು ಅವಳಿ ಮಕ್ಕಳಾದ ನಕುಲ-ಸಹದೇವರಿಂದಲೂ ದೇವತೆಗಳ ದೊಡ್ಡ ಕೆಲಸವು ನಡೆಸಲ್ಪಟ್ಟಿದೆ.
ಕೃತಕೃತ್ಯಾಂಶ್ಚ ವೋ ಮನ್ಯೇ ಸಂಸಿದ್ಧಾನ್ ಕುರುಪುಂಗವ |
ಗಮನಂ ಪ್ರಾಪ್ತಕಾಲಂ ವ ಇದಂ ಶ್ರೇಯಸ್ಕರಂ ವಿಭೋ ॥35॥
ಹೇ ಕುರುಪುಂಗವನೇ, ನೀವೆಲ್ಲರೂ ನಡೆಸಬೇಕಾದ ಎಲ್ಲವನ್ನೂ ಸಿದ್ಧಿಸಿಕೊಂಡು ಕೃತಕೃತ್ಯರಾಗಿರುವಿರಿ ಎಂದು ಭಾವಿಸುತ್ತೇನೆ. ಹೇ ವಿಭುವೇ, ನಿಮಗೂ ಗಮನ ಕಾಲವು ಪ್ರಾಪ್ತವಾಗಿದೆ. ಇದರಿಂದ ಶ್ರೇಯಸ್ಸಾಗುವುದು.
ಬಲಂ ಬುದ್ಧಿಶ್ಚ ತೇಜಶ್ಚ ಪ್ರತಿಪತ್ತಿಶ್ಚ ಭಾರತ |
ಭವಂತಿ ಭವಕಾಲೇಷು ವಿಪದ್ಯಂತೇ ವಿಪರ್ಯಯೇ॥36॥
ಹೇ ಭಾರತನೇ, ಬಲವೂ, ಬುದ್ಧಿಯೂ, ತೇಜಸ್ಸೂ, ಕಾರ್ಯಾಕಾರ್ಯಗಳ ತಿಳುವಳಿಕೆಯೂ ಅಭಿವೃದ್ಧಿಯ ಕಾಲದಲ್ಲಿ ಒದಗಿಬರುತ್ತದೆ. ಅವನತಿಯ ಕಾಲ ಬಂದಾಗ ಎಲ್ಲವೂ ನಶಿಸಿಹೋಗುವುದು.
ಕಾಲಮೂಲಮಿದಂ ಸರ್ವಂ ಜಗದ್ಬೀಜಂ ಧನಂಜಯ |
ಕಾಲ ಏವ ಸಮಾದತ್ತೇ ಪುನರೇವ ಯದೃಚ್ಛಯಾ ॥37॥
ಹೇ ಧನಂಜಯನೇ, ಈ ಇಡೀ ಜಗತ್ತಿಗೂ ಮೂಲಕಾರಣವಾದುದು ಕಾಲವೇ ಆಗಿದೆ. ಮತ್ತೆ ನಾಶಕಾಲ ಬಂದಾಗ ಆಕಸ್ಮಿಕವಾಗಿ ಕಾಲವೇ ಎಲ್ಲವನ್ನೂ ಸ್ವೀಕರಿಸುವುದು.
ಸ ಏವ ಬಲವಾನ್ ಭೂತ್ವಾ ಪುನರ್ಭವತಿ ದುರ್ಬಲಃ |
ಸ ಏವೇಶಶ್ಚ ಭೂತ್ವೇಹ ಪರೈರಾಜ್ಞಾಪ್ಯತೇ ಪುನಃ ॥38॥
ಒಬ್ಬನೇ ವ್ಯಕ್ತಿ ಒಂದು ಕಾಲದಲ್ಲಿ ಬಲಿಷ್ಠನಾಗಿದ್ದು ಇನ್ನೊಮ್ಮೆ ದುರ್ಬಲನಾಗುವನು. ಅವನೇ ಒಂದುಕಾಲದಲ್ಲಿ ಇಲ್ಲಿ ಒಡೆಯನಾಗಿದ್ದು ಇನ್ನೊಮ್ಮೆ ಇನ್ನೊಬ್ಬರ ಆಜ್ಞಾಪಾಲಕ ಆಗುತ್ತಾನೆ (ಇವೆಲ್ಲವೂ ಕಾಲಮಹಿಮೆಯಿಂದಲೇ).
ಕೃತಕೃತ್ಯಾನಿ ಚಾಸ್ತ್ರಾಣಿ ಗತಾನ್ಯದ್ಯ ಯಥಾಗತಮ್ |
ಪುನರೇಷ್ಯಂತಿ ತೇ ಹಸ್ತಂ ಯದಾ ಕಾಲೋ ಭವಿಷ್ಯತಿ ॥39॥
ನಿನ್ನ ಬಳಿ ಇದ್ದ ಎಲ್ಲ ಅಸ್ತ್ರಗಳೂ ಇಂದು ಕೃತಕೃತ್ಯವಾಗಿ ಎಲ್ಲಿಂದ ಬಂದಿವೆಯೋ ಅಲ್ಲೇ ಹೊರಟು ಹೋದವು. ಯಾವಾಗ ಕಾಲವು ಒದಗಿಬರುವುದೋ ಆಗ ನಿನ್ನ ಕೈಗೆ ಮತ್ತೆ ಬಂದು ಸೇರುವವು.
ಕಾಲೋ ಗಂತುಂ ಗತಿಂ ಮುಖ್ಯಾಂ ಭವತಾಮಪಿ ಭಾರತ |
ಏತಚ್ಛ್ರೇಯೋ ಹಿ ವೋ ಮನ್ಯೇ ಪರಮಂ ಭರತರ್ಷಭ ॥40॥
ಹೇ ಭಾರತನೇ, ನಿಮಗೂ ಕೂಡ ಉತ್ತಮ ಗತಿಯನ್ನು ಹೊಂದಲು ಇದು ಮುಖ್ಯಕಾಲವಾಗಿದೆ. ಹೇ ಭರತರ್ಷಭನೇ, ಪರಲೋಕಕ್ಕೆ ತೆರಳುವುದೇ ನಿಮಗೆ ಪರಮಶ್ರೇಯಸ್ಸು ಎಂದು ತಿಳಿಯುತ್ತೇನೆ.
ವೈಶಂಪಾಯನಃ
ಏತದ್ ವಚನಮಾಜ್ಞಾಯ ವ್ಯಾಸಸ್ಯಾಮಿತತೇಜಸಃ |
ಅನುಜ್ಞಾತೋ ಯಯೌ ಪಾರ್ಥೋ ನಗರಂ ನಾಗಸಾಹ್ವಯಮ್॥41॥
ವೈಶಂಪಾಯನ ಅಮಿತವಾದ ಕಾಂತಿಯುಳ್ಳ ವೇದವ್ಯಾಸರ ಈ ಮಾತಿನ ಅಭಿಪ್ರಾಯವನ್ನು ತಿಳಿದು, ಪಾರ್ಥನು ಅವರ ಅನುಜ್ಞೆಯನ್ನು ಪಡೆದು, ಹಸ್ತಿನಾಪುರ ನಗರಕ್ಕೆ ಹೊರಟು ಬಂದನು.
ಪ್ರವಿಶ್ಯ ಚ ಪುರೀಂ ವೀರಃ ಸಮಾಸಾದ್ಯ ಯುಧಿಷ್ಠಿರಮ್ |

ಆಚಷ್ಟ ತದ್ ಯಥಾವೃತ್ತಂ ವೃಷ್ಣ್ಯಂಧಕಕುಲಂ ಪ್ರತಿ ॥42॥
ವೀರನಾದ ಪಾರ್ಥನು ಪಟ್ಟಣವನ್ನು ಪ್ರವೇಶಿಸಿ, ಯುಧಿಷ್ಠಿರನ ಬಳಿ ಸಾಗಿ ಬಂದು, ವೃಷ್ಣಿ ಮತ್ತು ಅಂಧಕರ ಕುಲದ ವಿಷಯದಲ್ಲಿ ಏನೆಲ್ಲ ನಡೆದಿದೆಯೋ ಅದನ್ನು ಯಥಾವತ್ತಾಗಿ ವಿವರಿಸಿದನು.
ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮೌಸಲಪರ್ವಣಿ ಅರ್ಜುನನಗರಪ್ರವೇಶಕಥನಂ ನಾಮ ನವಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮೌಸಲಪರ್ವದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಮೌಸಲಪರ್ವ ॥
* * * * *
ಮಹಾಪ್ರಸ್ಥಾನಿಕಪರ್ವ
ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ಸಂತ್ಯಜ್ಯ ರಾಜಚಿಹ್ನಾನಿ ವೈಷ್ಣವಂ ಯೋಗಮಾಸ್ಥಿತಾಃ |
ವೀರಾಧ್ವಾನಂ ಯಯುಃ ಸರ್ವೇ ಕೃಷ್ಣಯಾ ಸಹ ಪಾಂಡವಾಃ ॥
ರಾಜಚಿಹ್ನೆಗಳನ್ನು ಬಿಟ್ಟು, ಹರಿಧ್ಯಾನಯೋಗನಿಷ್ಠರಾಗಿ ಪಾಂಡವರು ದ್ರೌಪದಿಯೊಂದಿಗೆ ಯೋಗಿಗಳಿಗೆ ಯೋಗ್ಯವಾದ ಈಶಾನ್ಯ ದಿಕ್ಕಿನ ಮಾರ್ಗದಲ್ಲಿ ಮಹಾಪ್ರಸ್ಥಾನ ಕೈಗೊಂಡರು.
ಪ್ರಾಗುದೀಚೀಂ ದಿಶಂ ಪೂರ್ವಂ ಯಯುಸ್ತತ್ರಾರ್ಜುನೋ ಧನುಃ |
ನಾತ್ಯಜಲ್ಲೋಭತಸ್ತಂ ತು ಸಮುದ್ರಮುಪ ಪಾವಕಃ |
ದೃಷ್ಟ್ವಾ ಯಯಾಚೇ ರಾಜಾನಂ ತದುಕ್ತಃ ಪ್ರಾಸ್ಯದಂಬುಧೌ ॥
ಮೊದಲಿಗೆ ಈಶಾನ್ಯ ದಿಕ್ಕಿನಲ್ಲಿ ಪ್ರಯಾಣ ಮಾಡಿದರು. ಅವರಲ್ಲಿ ಅರ್ಜುನನು ಲೋಭದಿಂದ ಗಾಂಡೀವವನ್ನು ತ್ಯಜಿಸಲಿಲ್ಲ. ಸಮುದ್ರ ತೀರದಲ್ಲಿ ಅಗ್ನಿ ಅದನ್ನು ನೋಡಿ ಧರ್ಮರಾಜನಲ್ಲಿ ಬೇಡಿದನು. ಧರ್ಮರಾಜನ ಮಾತಿನಂತೆ ಅರ್ಜುನನು ಅದನ್ನು ಸಮುದ್ರದಲ್ಲಿ ಹಾಕಿದನು.
ಪ್ರಾತಿಭಾವ್ಯಂ ತು ವರುಣೇ ನಿಸ್ತೀರ್ಯಾಗ್ನಿರದೃಶ್ಯತಾಮ್ |
ಯಯೌ ತೇಽಪಿ ಯಯುಃ ಕ್ಷಿಪ್ರಂ ಪ್ಲವಂತಃ ಸಪ್ತ ವಾರಿಧೀನ್ ॥
ಅಹೋಭಿಃ ಸಪ್ತಭಿರ್ಯೋಗಂ ಸಮಾರೂಢಾಃ ಪ್ರದಕ್ಷಿಣಮ್ |
ಕೃತ್ವಾ ಕ್ವಚಿದಸಜ್ಜಂತಃ ಆಸೇದುರ್ಗಂಧಮಾದನಮ್ ॥
ಅಗ್ನಿ ಹೀಗೆ ವರುಣನಲ್ಲಿ ಋಣವನ್ನು ಪರಿಹರಿಸಿಕೊಂಡು ಅದೃಶ್ಯನಾದನು. ಪಾಂಡವರು ಯೋಗಾರೂಢರಾಗಿ ಬೇಗನೆ ಏಳು ದಿನಗಳಲ್ಲಿ ಏಳು ಸಮುದ್ರಗಳನ್ನು ಯೋಗಬಲದಿಂದ ಹಾರುತ್ತಲೆ ಹೋದರು. ಎಲ್ಲಿಯೂ ವಿಶ್ರಮಿಸದೆ ಭೂಪ್ರದಕ್ಷಿಣೆ ಮಾಡಿ ಗಂಧಮಾದನ ಪರ್ವತಕ್ಕೆ ಬಂದರು.
* * * * *
ಒಂದನೆಯ ಅಧ್ಯಾಯ
ಸಹೋದರರು ಹಾಗೂ ದ್ರೌಪದಿಯೊಂದಿಗೆ ಸ್ವರ್ಗಕ್ಕೆ ತೆರಳಲಿರುವ ಯುಧಿಷ್ಠಿರನು ಯುಯುತ್ಸುವಿನಲ್ಲಿ ರಾಜ್ಯದ ಹೊಣೆಯನ್ನು ಒಪ್ಪಿಸಿ, ಪರೀಕ್ಷಿತನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡುವುದು. ಅನಂತರ ಬಹುಪ್ರಯಾಸದಿಂದ ಪೌರರ ಅನುಮತಿಯನ್ನು ಸ್ವೀಕರಿಸುವುದು.
ಜನಮೇಜಯಃ
ಏವಂ ವೃಷ್ಣ್ಯಂಧಕಕುಲೇ ಶ್ರುತ್ವಾ ಮೌಸಲಮಾಹವಮ್ |
ಪಾಂಡವಾಃ ಕಿಮಕುರ್ವಂತ ತಥಾ ಕೃಷ್ಣೇ ದಿವಂ ಗತೇ ॥1॥
ಜನಮೇಜಯ ವೃಷ್ಣ್ಯಂಧಕರ ಕುಲದಲ್ಲಿ ನಡೆದ ಮುಸಲಕ್ಕೆ (ಒನಕೆಗೆ) ಸಂಬಂಧಿಸಿದ ಯುದ್ಧವನ್ನು ಕೇಳಿ, ಹಾಗೆಯೇ ಕೃಷ್ಣನು ಪರಲೋಕಕ್ಕೆ ತೆರಳಿದನೆಂಬುದನ್ನು ಕೇಳಿ ಪಾಂಡವರು ಏನು ಮಾಡಿದರು?
ವೈಶಂಪಾಯನಃ
ಶ್ರುತ್ವೈವಂ ಕೌರವೋ ರಾಜಾ ವೃಷ್ಣೀನಾಂ ಕದನಂ ಮಹತ್ |
ಪ್ರಸ್ಥಾನೇ ಮತಿಮಾಧಾಯ ವಾಕ್ಯಮರ್ಜುನಮಬ್ರವೀತ್ ॥2॥
ವೈಶಂಪಾಯನ ಹೀಗೆ ಯದುಗಳ ಮಧ್ಯೆ ನಡೆದ ಮಹಾಸಂಗ್ರಾಮವನ್ನು ಕೇಳಿದ ಕುರುವಂಶದ ರಾಜನಾದ ಯುಧಿಷ್ಠಿರನು ತಾವೂ ರಾಜ್ಯವನ್ನು ಬಿಟ್ಟು ತೆರಳಬೇಕೆಂದು ಮನಸ್ಸಿನಲ್ಲಿ ದೃಢಪಡಿಸಿಕೊಂಡು ಅರ್ಜುನನನ್ನು ಕುರಿತು ಹೀಗೆಂದನು.
ಕಾಲಃ ಪಚತಿ ಭೂತಾನಿ ಸರ್ವಾಣ್ಯೇವ ಮಹಾಮತೇ |
ಕಾಲಪಾಶಮಹಂ ಮನ್ಯೇ ತ್ವಮಪಿ ದ್ರಷ್ಟುಮರ್ಹಸಿ ॥3॥
ಹೇ ಮಹಾಮತಿಯೇ, ಕಾಲವೇ ಎಲ್ಲ ಭೂತಗಳನ್ನೂ ಯೋಗ್ಯರೀತಿಯಲ್ಲಿ ಪಕ್ವಗೊಳಿಸುವುದು. ಈ ಕಾಲಪಾಶವನ್ನು (ಮರಣವನ್ನು) ನಾನು ಒಪ್ಪಿಕೊಳ್ಳುತ್ತಿದ್ದೇನೆ. ನೀನೂ ಈ ಬಗ್ಗೆ ಆಲೋಚಿಸಿ ನೋಡು.
ಇತ್ಯುಕ್ತಃ ಸ ತು ಕೌಂತೇಯಃ ಕಾಲಃ ಕಾಲ ಇತಿ ಬ್ರುವನ್ |
ಅನ್ವಪದ್ಯತ ತದ್ವಾಕ್ಯಂ ಭ್ರಾತುರ್ಜ್ಯೇಷ್ಠಸ್ಯ ಧೀಮತಃ ॥4॥
ಯುಧಿಷ್ಠಿರನು ಹೀಗೆ ಹೇಳಿದಾಗ, ಕುಂತೀಪುತ್ರನಾದ ಅರ್ಜುನನು ಕಾಲ ಕಾಲ ಎಂದು ಹೇಳುತ್ತಾ, ಧೀಮಂತನಾದ ಹಿರಿಯಣ್ಣನ ಆ

ವಾಕ್ಯವನ್ನು ಅನುಮೋದಿಸಿದನು.
ಅರ್ಜುನಸ್ಯ ಮತಂ ಜ್ಞಾತ್ವಾ ಭೀಮಸೇನೋ ಯಮೌ ತಥಾ |
ಅನ್ವಪದ್ಯಂತ ತದ್ವಾಕ್ಯಂ ಯದುಕ್ತಂ ಸವ್ಯಸಾಚಿನಾ ॥5॥
ತತೋ ಯುಯುತ್ಸುಮಾನಾಯ್ಯ ಪ್ರವ್ರಜನ್ ಧರ್ಮಕಾಮ್ಯಯಾ |
ರಾಜ್ಯಂ ಪರಿದದೌ ಸರ್ವಂ ವೈಶ್ಯಾಪುತ್ರೇ ಯುಧಿಷ್ಠಿರಃ ॥6॥
ಅರ್ಜುನನ ಅಭಿಪ್ರಾಯವನ್ನು ತಿಳಿದ ಭೀಮಸೇನ ಹಾಗೂ ಆ ಅವಳಿಗಳು ಸವ್ಯಸಾಚಿ (ಅರ್ಜುನ) ಏನೆಂದನೋ ಆ ವಾಕ್ಯವನ್ನು ಅನುಮೋದಿಸಿದರು. ಅನಂತರ ಯುಧಿಷ್ಠಿರನು ಯುಯುತ್ಸುವನ್ನು ಕರೆಯಿಸಿ, ತಾನು ಹೊರಟು ನಿಂತವನಾಗಿ ಧರ್ಮವನ್ನು ಮುನ್ನಡೆಸುವ ಇಚ್ಛೆಯಿಂದ ಇಡೀ ರಾಜ್ಯವನ್ನು ಆ ವೇಶ್ಯೆಯ ಮಗನಾದ ಅವನಲ್ಲಿ ಒಪ್ಪಿಸಿದನು.
ಅಭಿಷಿಚ್ಯ ಸ್ವರಾಜ್ಯೇ ಚ ರಾಜಾನಂ ಚ ಪರಿಕ್ಷಿತಮ್ |
ದುಃಖಾರ್ತಶ್ಚಾಬ್ರವೀದ್ ರಾಜಾ ಸುಭದ್ರಾಂ ಪಾಂಡವಾಗ್ರಜಃ ॥7॥
ರಾಜನಾದ ಯುಧಿಷ್ಠಿರನು ತನ್ನ ರಾಜ್ಯದಲ್ಲಿ ಪರೀಕ್ಷಿತನನ್ನು ರಾಜನನ್ನಾಗಿ ಪಟ್ಟಾಭಿಷೇಕ ಮಾಡಿ, ಪಾಂಡವಾಗ್ರಜನಾದ ಅವನು ಸುಭದ್ರೆಯನ್ನು ನೋಡುತ್ತಾ ದುಃಖಾರ್ತನಾಗಿ ಹೀಗೆಂದನು.
ಏಷ ಪುತ್ರಸ್ಯ ಪುತ್ರಸ್ತೇ ಕುರುರಾಜೋ ಭವಿಷ್ಯತಿ |
ಯದೂನಾಂ ಪರಿಶೇಷಶ್ಚ ವಜ್ರೋ ರಾಜಾ ಕೃತಶ್ಚ ಹ ॥8॥
ಈ ನಿನ್ನ ಮಗನ ಮಗನೇ ಕುರುರಾಜನಾಗಿ ಮುಂದುವರೆಯುವನು. ಯದುಗಳಿಗೆ ಅವರಲ್ಲಿ ಉಳಿದ ವಜ್ರನು ಈ ಮೊದಲೇ ರಾಜನಾಗಿರುವನಷ್ಟೆ?
ಅಭಿಷಿಚ್ಯ ಹಸ್ತಿನಪುರೇ ಶಕ್ರಪ್ರಸ್ಥೇ ಚ ಯಾದವಃ |
ವಜ್ರೋ ರಾಜಾ ತ್ವಯಾ ರಕ್ಷ್ಯೋ ಮಾ ಚಾಧರ್ಮೇ ಮನಃ ಕೃಥಾಃ ॥9॥
ಹಸ್ತಿನಪುರಕ್ಕೆ ಸಮೀಪದಲ್ಲೇ ಇರುವ ಶಕ್ರಪ್ರಸ್ಥದಲ್ಲಿ (ಇಂದ್ರಪ್ರಸ್ಥ) ಯಾದವ ರಾಜನಾದ ವಜ್ರನು ರಾಜನಾಗಿರುವನೆಂದು ಪಟ್ಟಾಭಿಷೇಕ ಮಾಡಿ ಅವನು ನಿನ್ನಿಂದ ರಕ್ಷಿತನಾಗಬೇಕು. ಈ ವಿಷಯದಲ್ಲಿ ಧರ್ಮವಿರುದ್ಧವಾದ ಮನಸ್ಸನ್ನು ಮಾಡದಿರು.
ಇತ್ಯುಕತ್ವ ಧರ್ಮರಾಜಃ ಸ ವಾಸುದೇವಸ್ಯ ಧೀಮತಃ |
ಮಾತುಲಸ್ಯ ಚ ವೃದ್ಧಸ್ಯ ರಾಮಾದೀನಾಂ ತಥೈವ ಚ ॥10॥
ಭ್ರಾತೃಭಿಃ ಸಹ ಧರ್ಮಾತ್ಮಾ ಕೃತ್ವೋದಕಮತಂದ್ರಿತಃ |
ಶ್ರಾದ್ಧಾನ್ಯುದ್ದಿಶ್ಯ ಸರ್ವೇಷಾಂ ಚಕಾರ ವಿಧಿವತ್ ತದಾ ॥11॥
ಇಷ್ಟು ಹೇಳಿ ಆ ಧರ್ಮರಾಜನು ಧೀಮಂತನಾದ ವಾಸುದೇವನಿಗೂ, ವೃದ್ಧನಾದ ಮಾವನಿಗೂ, ಹಾಗೆಯೇ ಬಲರಾಮಾದಿಗಳಿಗೂ ತನ್ನ ಸಹೋದರರೊಂದಿಗೆ ಜಲಾಂಜಲಿಗಳನ್ನು ನೀಡಿ, ಧರ್ಮಾತ್ಮನಾದ ಅವನು ಉದಾಸೀನವಿಲ್ಲದೆ ವಿಧಿವತ್ತಾಗಿ ಎಲ್ಲರ ಶ್ರಾದ್ಧಗಳನ್ನು ಉದ್ದೇಶಿಸಿ, ಮಾಡಬೇಕಾದ ಕ್ರಿಯೆಗಳನ್ನು ನಡೆಸಿದನು.
ದ್ವೈಪಾಯನಂ ನಾರದಂ ಚ ಮಾರ್ಕಂಡೇಯಂ ತಪೋಧನಮ್ |
ಭಾರದ್ವಾಜಂ ಯಾಜ್ಞವಲ್ಕ್ಯಂ ಹರಿಮುದ್ದಿಶ್ಯ ಯತ್ನವಾನ್ ॥12॥
ಅಭೋಜಯತ್ಸ್ವಾದು ಭೋಜ್ಯಂ ಕೀರ್ತಯಿತ್ವಾ ಚ ಶಾರ್ಙ್ಗಿಣಮ್ ॥
ಪ್ರಯತ್ನಪೂರ್ವಕವಾಗಿ ಶ್ರೀಕೃಷ್ಣನ ಉದ್ದೇಶದಿಂದ ವೇದವ್ಯಾಸರನ್ನೂ, ನಾರದರನ್ನೂ, ತಪೋಧನರಾದ ಮಾರ್ಕಂಡೇಯರನ್ನೂ, ಭಾರದ್ವಾಜರನ್ನೂ, ಯಾಜ್ಞವಲ್ಕ್ಯರನ್ನೂ ಆಮಂತ್ರಿಸಿ, ಕೃಷ್ಣನ ಗುಣಗಳ ಕೀರ್ತನೆಯನ್ನೂ ನಡೆಸುತ್ತಾ ಮಧುರವಾದ ಉತ್ತಮ ಭಕ್ಷ್ಯಗಳನ್ನು ಉಣಬಡಿಸಿದನು.
ದದೌ ರತ್ನಾನಿ ವಾಸಾಂಸಿ ಗ್ರಾಮಾನಶ್ವಾನ್ ರಥಾಂಸ್ತಥಾ |
ಸ್ತ್ರಿಯಶ್ಚ ದ್ವಿಜಮುಖ್ಯೇಭ್ಯಸ್ತದಾ ಶತಸಹಸ್ರಶಃ ॥14॥
ಅದೇ ಸಮಯದಲ್ಲಿ ನೂರಾರು ಸಹಸ್ರಾರು ಬ್ರಾಹ್ಮಣಶ್ರೇಷ್ಠರಿಗೆ ರತ್ನಗಳನ್ನೂ, ಉತ್ತಮ ವಸ್ತ್ರಗಳನ್ನೂ, ಕುದುರೆಗಳನ್ನೂ, ಗ್ರಾಮಗಳನ್ನೂ ಹಾಗೆಯೇ ರಥಗಳನ್ನೂ, ಸ್ತ್ರೀಯರನ್ನೂ ದಾನ ಮಾಡಿದನು.
ಕೃಪಮಭ್ಯರ್ಚ್ಯ ಚ ಗುರುಮಥ ಪೌರಪುರಸ್ಕೃತಮ್ |
ಆಹೂಯ ಭರತಶ್ರೇಷ್ಠ ಸನ್ನಿವೇಶ್ಯಾಸನೇ ತದಾ ॥15॥
ಶಿಷ್ಯಂ ಪರಿಕ್ಷಿತಂ ತಸ್ಮೈ ದದೌ ಭರತಸತ್ತಮಃ ॥16॥
ಹೇ ಭರತಶ್ರೇಷ್ಠನೇ, ಗುರುವಾದ ಕೃಪಾಚಾರ್ಯರನ್ನು ಪೌರಜನರ ಪುರಸ್ಕಾರದೊಂದಿಗೆ ಪೂಜಿಸಿ, ಅವರನ್ನು ಅರಮನೆಗೆ ಆಮಂತ್ರಿಸಿ, ಆಸನದಲ್ಲಿ ಕುಳ್ಳಿರಿಸಿ, ಭರತಸತ್ತಮನಾದ ಆ ಯುಧಿಷ್ಠಿರನು ಪರೀಕ್ಷಿತನನ್ನು ಅವರಿಗೆ ಶಿಷ್ಯನನ್ನಾಗಿ ಒಪ್ಪಿಸಿದನು.
ತತಸ್ತು ಪ್ರಕೃತೀಃ ಸರ್ವಾಃ ಸಮಾನಾಯ್ಯ ಯುಧಿಷ್ಠಿರಃ |
ಸರ್ವಮಾಚಷ್ಟ ರಾಜರ್ಷಿಶ್ಚಿಕೀರ್ಷಿತಮಥಾತ್ಮನಃ ॥17॥
ಅನಂತರ ರಾಜರ್ಷಿಯಾದ ಯುಧಿಷ್ಠಿರನು ಮಂತ್ರಿಮಂಡಲದ ಎಲ್ಲರನ್ನೂ ಕರೆಸಿ ಅವರಿಗೆ ತಾನು ಮಾಡಬಯಸಿದ ಎಲ್ಲವನ್ನೂ ವಿವರಿಸಿದನು.
ತೇ ಶ್ರುತ್ವೈವ ವಚಸ್ತಸ್ಯ ಪೌರಜಾನಪದಾ ಜನಾಃ |
ಭೃಶಮುದ್ವಿಗ್ನಮನಸೋ ನಾಭ್ಯನಂದಂತ ತದ್ವಚಃ ॥18॥
ಆ ಎಲ್ಲ ಪಟ್ಟಣಿಗ ಹಾಗೂ ಗ್ರಾಮೀಣ ಜನರು ಅವನಾಡಿದ ಮಾತುಗಳನ್ನು ಕೇಳಿಯೇ ಬಹಳ ವ್ಯಾಕುಲಚಿತ್ತರಾಗಿ ಆ ಮಾತುಗಳನ್ನು ಅಭಿನಂದಿಸಲಿಲ್ಲ.

ನೈವ ಕರ್ತವ್ಯಮಿತಿ ತೇ ತದೋಚುಸ್ತಂ ಜನಾಧಿಪಮ್ |
ನ ಚ ರಾಜಾ ತಥಾಽಕಾರ್ಷೀತ್ಕಾಲಪರ್ಯಾಯಧರ್ಮವಿತ್ ॥19॥
ಅವರೆಲ್ಲರೂ ಜನಾಧಿಪತಿಯಾದ ಆ ಯುಧಿಷ್ಠಿರನನ್ನು ಕುರಿತು `ಹೀಗೆ ಮಾಡುವುದು ಯೋಗ್ಯವಲ್ಲ' ಎಂದೇ ಹೇಳಿದರು. ಆದರೆ ಕಾಲಚಕ್ರದ ಪರಿಭ್ರಮಣೆಯ ಧರ್ಮವನ್ನು ತಿಳಿದ ರಾಜನು ಅವರು ಹೇಳಿದಂತೆ ಮಾಡಲಿಲ್ಲ.
ತತೋಽನುಮಾನ್ಯ ಧರ್ಮಾತ್ಮಾ ಪೌರಜಾನಪದಂ ಜನಮ್ |
ಗಮನಾಯ ಮತಿಂ ಚಕ್ರೇ ಕೃಷ್ಣಸ್ಯ ಗಮನಾದಪಿ ॥20॥
ಅನಂತರ ಧರ್ಮಾತ್ಮನಾದ ಯುಧಿಷ್ಠಿರನು ಪಟ್ಟಣಿಗ ಹಾಗೂ ಗ್ರಾಮೀಣ ಜನರನ್ನು ಒಪ್ಪಿಸಿ, ಕೃಷ್ಣನು ಪರಂಧಾಮಕ್ಕೆ ತೆರಳಿರುವುದರಿಂದಲೂ, ತಾನೂ ಹೊರಡಬೇಕೆಂದು ಮನಸ್ಸು ಮಾಡಿದನು.
ವರ್ತಮಾನೇ ವಿವಾದೇ ತು ವಾಸ್ತುವಿಕ್ರಯಿಣಂ ಪ್ರತಿ |
ಧನೇಚ್ಛಾ ಯುಗಪತ್ಪ್ರಾಪ್ತಾ ಕ್ಷೇತ್ರವತ್ಸ್ವಾಮಿಭೂಭೃತಾಮ್ ॥21॥
ಇದೇ ಸಮಯಕ್ಕೆ ಸರಿಯಾಗಿ ಮನೆಯನ್ನು ಮಾರಾಟ ಮಾಡಿದ ಬಗ್ಗೆ ವಿವಾದವು ಉಂಟಾದಾಗ, ಆ ಸ್ಥಳದ ಒಡೆತನವುಳ್ಳ ಸ್ವಾಮಿಗೂ, ಆ ಸ್ಥಳದಲ್ಲಿ ವಾಸವಾಗಿರುವ ವ್ಯಕ್ತಿಗೂ ಒಂದೇ ಕಾಲದಲ್ಲಿ ಹಣದ ಬಯಕೆಯು ಉಂಟಾಯಿತು.
ಪ್ರಾಪ್ತಂ ಕಲಿಯುಗಂ ಜ್ಞಾತ್ವಾ ಸಹದೇವೋ ಹಸನ್ನಿವ |
ರಾಜ್ಞಸ್ತು ಕಥಯಾಮಾಸ ಧರ್ಮೋ ನಷ್ಟಸ್ತು ಸಂಕರಃ ॥22॥
ಆಗ ಸಹದೇವನು ನಗುತ್ತಾ, ಕಲಿಯುಗವು ಪ್ರಾಪ್ತವಾಯಿತೆಂದು ತಿಳಿದು, ಧರ್ಮಕ್ಕೆ ಸಾಂಕರ್ಯವುಂಟಾಗಿದೆ ಎಂದು ರಾಜನಾದ ಯುಧಿಷ್ಠಿರನಿಗೆ ವಿವರಿಸಿದನು.
ಶ್ರುತ್ವಾ ತು ದುರ್ಮನಾ ರಾಜಾ ಪರ್ಯಾಪ್ತಂ ಜೀವನಂ ಮಮ |
ಇತಿ ಸ್ಮ ರಾಜಾ ಕೌರವ್ಯೋ ಧರ್ಮಪುತ್ರೋ ಯುಧಿಷ್ಠಿರಃ ॥23॥
ಉತ್ಸೃಜ್ಯಾಭರಣಾನ್ಯಂಗಾತ್ ಜಗೃಹೇ ವಲ್ಕಲಾನ್ಯುತ ॥24॥
ಇದನ್ನು ಕೇಳಿ ಬೇಸರಗೊಂಡ ರಾಜನು, ತನ್ನ ಜೀವನವು ಮುಗಿಯುತ್ತಾ ಬಂತೆಂದು ತಿಳಿದನು. ನಂತರ ಕುರುವಂಶಜನಾದ ಧರ್ಮಪುತ್ರನಾದ ಯುಧಿಷ್ಠಿರರಾಜನು ತಾನು ಧರಿಸಿದ ಆಭರಣಗಳನ್ನು ತೆಗೆದಿರಿಸಿ ನಾರುಮಡಿಗಳನ್ನು ಧರಿಸಿದನು.
ಭೀಮಾರ್ಜುನಯಮಾಶ್ಚೈವ ದ್ರೌಪದೀ ಚ ಯಶಸ್ವಿನೀ |
ತಥೈವ ಜಗೃಹುಃ ಸರ್ವೇ ವಲ್ಕಲಾನಿ ನರಾಧಿಪ ॥25॥
ಹೇ ನರಾಧಿಪನೇ, ಭೀಮಾರ್ಜುನರೂ, ನಕುಲ-ಸಹದೇವರೂ ಮತ್ತು ಯಶಸ್ವಿನಿಯಾದ ದ್ರೌಪದೀ ದೇವಿಯೂ ಧರ್ಮರಾಜನಂತೆಯೇ ಎಲ್ಲರೂ ನಾರುಮಡಿಗಳನ್ನು ಧರಿಸಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಮಹಾಪ್ರಸ್ಥಾನಿಕಪರ್ವಣಿ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮಹಾಪ್ರಸ್ಥಾನಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ನಾರುಮಡಿಗಳನ್ನುಡುವ ಮೂಲಕ ಶ್ವಾನದೊಂದಿಗೆ ಯುಧಿಷ್ಠಿರಾದಿಗಳು ಮನೆಯಿಂದ ಹೊರಡುವುದು. ಮಾರ್ಗಮಧ್ಯದಲ್ಲಿ ಅರ್ಜುನನು ಬತ್ತಳಿಕೆಯೊಂದಿಗೆ ಗಾಂಡೀವವನ್ನು ಅಗ್ನಿಯ ಮಾತಿನಂತೆ ವರುಣನಿಗಾಗಿ ಸಮುದ್ರದಲ್ಲಿ ಎಸೆಯುವುದು.
ವೈಶಂಪಾಯನಃ
ವಿಧಿವತ್ ಕಾರಯಿತ್ವೇಷ್ಟಿಂ ನೈಷ್ಠಿಕೀಂ ಭರತರ್ಷಭ ॥
ಸಮುತ್ಸೃಜ್ಯಾಪ್ಸು ಸರ್ವೇಽಗ್ನೀನ್ ಪ್ರತಸ್ಥುರ್ನರಪುಂಗವಾಃ ॥1॥
ವೈಶಂಪಾಯನ ಹೇ ಭರತರ್ಷಭನೇ, ನರಶ್ರೇಷ್ಠರಾದ ಆ ಪಾಂಡವರು ಮರಣಕಾಲಕ್ಕೆ ಸಂಬಂಧಿಸಿದ ಇಷ್ಟಿಯನ್ನು ವಿಧಿವತ್ತಾಗಿ ಮಾಡಿಸಿ, ಅಗ್ನಿಗಳನ್ನು ನೀರಿನಲ್ಲಿ ವಿಸರ್ಜಿಸಿ ಎಲ್ಲರೂ ಅಲ್ಲಿಂದ ಹೊರಟರು.
ತತಃ ಪ್ರುರುರುದುಃ ಸರ್ವಾಃ ಸ್ತ್ರಿಯೋ ದೃಷ್ಟ್ವಾ ನರೋತ್ತಮಾನ್ |
ಪ್ರಸ್ಥಿತಾನ್ ದ್ರೌಪದೀಷಷ್ಠಾನ್ ಪುರಾ ದ್ಯೂತಜಿತಾನ್ಯಥಾ ॥2॥
ಹೀಗೆ ಹೊರಟುನಿಂತ ನರಶ್ರೇಷ್ಠರಾದ ಪಂಚಪಾಂಡವರನ್ನೂ, ಆರನೆಯವಳಾಗಿ ದ್ರೌಪದಿಯನ್ನೂ ನೋಡಿ, ಅಲ್ಲಿರುವ ಎಲ್ಲ ಸ್ತ್ರೀಯರೂ ಹಿಂದೆ ದ್ಯೂತದಲ್ಲಿ ಹೊರಟು ನಿಂತಾಗ ಹೇಗೋ ಹಾಗೆ ಬಹಳವಾಗಿ ರೋದಿಸಿದರು.
ಹರ್ಷೋಽಭವಚ್ಚ ಸರ್ವೇಷಾಂ ಭ್ರಾತೄಣಾಂ ಗಮನಂ ಪ್ರತಿ |
ಯುಧಿಷ್ಠಿರಮತಂ ಜ್ಞಾತ್ವಾ ವೃಷ್ಣಿಕ್ಷಯಮವೇಕ್ಷ್ಯ ಚ ॥3॥
ಯುಧಿಷ್ಠಿರನ ಅಭಿಪ್ರಾಯವನ್ನು ತಿಳಿದಿರುವುದರಿಂದಲೂ, ಯಾದವರ ನಾಶವನ್ನು ನೋಡಿರುವುದರಿಂದಲೂ ಎಲ್ಲ ಸಹೋದರರಿಗೂ ತಾವು ಹೊರಟಿರುವ ವಿಷಯದಲ್ಲಿ ಸಂತೋಷವೇ ಆಯಿತು.
ಭ್ರಾತರಃ ಪಂಚ ಕೃಷ್ಣಾ ಚ ಷಷ್ಠೀ ಶ್ವಾ ಚೈವ ಸಪ್ತಮಃ |
ಆತ್ಮನಾ ಸಪ್ತಮೋ ರಾಜಾ ನಿರ್ಯಯೌ ಗಜಸಾಹ್ವಯಾತ್ ॥4॥
ಐದು ಮಂದಿ ಸಹೋದರರು, ಆರನೆಯವಳಾಗಿ ಕೃಷ್ಣೆಯು, ಏಳನೆಯದ್ದಾಗಿ ಯಾವುದೋ ಒಂದು ಶ್ವಾನವೂ-ಹೀಗೆ ತಾನು ಏಳನೆಯವನಾಗಿ ರಾಜನಾದ ಯುಧಿಷ್ಠಿರನು ಹಸ್ತಿನಾಪುರದಿಂದ ಹೊರಟನು.
ಪೌರೈರನುಗತೋ ದೂರಂ ಸರ್ವೈರಂತಃಪುರೈಸ್ತಥಾ ॥5॥
ನ ಚೈನಮಶಕತ್ ಕಶ್ಚಿನ್ನಿವರ್ತಸ್ವೇತಿ ಭಾಷಿತುಮ್ |

ನ್ಯವರ್ತಂತ ತತಃ ಸರ್ವೇ ನರಾ ನಗರವಾಸಿನಃ ॥6॥
ಹಾಗೆಯೇ ಅಂತಃಪುರದ ಎಲ್ಲ ಜನರಿಂದಲೂ ಹಾಗೂ ಪೌರರಿಂದಲೂ ಬಹುದೂರದವರೆಗೆ ರಾಜನು ಹಿಂಬಾಲಿಸಲ್ಪಟ್ಟನು. ಆದರೆ ಅವರಲ್ಲಿ ಯಾವನೊಬ್ಬನೂ `ನಮ್ಮ ಜೊತೆಗೆ ಹಿಂದಿರುಗು' ಎಂದು ಈ ಯುಧಿಷ್ಠಿರನನ್ನು ಕೇಳಿಕೊಳ್ಳಲು ಸಮರ್ಥನಾಗಲಿಲ್ಲ. ಅನಂತರ ನಗರವಾಸಿಗಳಾದ ಎಲ್ಲ ಜನರೂ ಅಲ್ಲಿಂದ ಹಿಂದಿರುಗಿದರು.
ಕೃಪಪ್ರಭೃತಯಶ್ಚೈವ ಯುಯುತ್ಸುಂ ಪರ್ಯವಾರಯನ್ |
ವಿವೇಶ ಗಂಗಾಂ ಕೌರವ್ಯ ಉಲೂಪೀ ಭುಜಗಾತ್ಮಜಾ ॥7॥
ಹೇ ಕೌರವ್ಯನೇ, ಕೃಪರೇ ಮೊದಲಾದ ಹಿರಿಯರೆಲ್ಲರೂ ಯುಯುತ್ಸುವಿನ ಪರಿವಾರವಾಗಿ ಉಳಿದುಕೊಂಡರು. ನಾಗನ ಮಗಳಾದ ಉಲೂಪಿಯು ಗಂಗೆಯನ್ನು ಪ್ರವೇಶಿಸಿದಳು.
ಚಿತ್ರಾಂಗದಾ ಯಯೌ ಚಾಪಿ ಮಣಲೂರುಪುರಂ ಪ್ರತಿ |
ಶಿಷ್ಟಾಃ ಪರಿಕ್ಷಿತಂ ತ್ವನ್ಯಾ ಮಾತರಃ ಪರ್ಯವಾರಯನ್ ॥8॥
ಅರ್ಜುನನ ಇನ್ನೋರ್ವಮಡದಿಯಾದ ಚಿತ್ರಾಂಗದೆಯು ಮಣಲೂರು ಪುರವನ್ನು ಕುರಿತು ಹೊರಟು ಹೋದಳು. ಉಳಿದ ಬೇರೆ ತಾಯಂದಿರು (ಧರ್ಮರಾಜಾದಿಗಳ ಪತ್ನಿಯರು) ಪರೀಕ್ಷಿತನನ್ನು ನೋಡಿಕೊಳ್ಳಲು ಉಳಿದರು.
ಪಾಂಡವಾಶ್ಚ ಮಹಾತ್ಮಾನೋ ದ್ರೌಪದೀ ಚ ಯಶಸ್ವಿನೀ |
ಕೃತೋಪವಾಸಾಃ ಕೌರವ್ಯ ಪ್ರಯಯುಃ ಪ್ರಾಙ್ಮುಖಾಸ್ತತಃ ॥9॥
ಹೇ ಕುರುವಂಶಜನೇ, ಮಹಾತ್ಮರಾದ ಪಾಂಡವರು ಹಾಗೂ ಯಶಸ್ವಿನಿಯಾದ ದ್ರೌಪದೀದೇವಿ ಇವರು ಉಪವಾಸದಲ್ಲಿದ್ದುಕೊಂಡು ಪೂರ್ವಾಭಿಮುಖವಾಗಿ ಮುಂದುವರೆದರು.
ಯೋಗಯುಕ್ತಾ ಮಹಾತ್ಮಾನಸ್ತ್ಯಾಗಧರ್ಮಮುಪೇಯುಷಃ |
ಅಭಿಜಗ್ಮುರ್ಬಹೂನ್ ದೇಶಾನ್ ಸರಿತಃ ಸಾಗರಾಂಸ್ತಥಾ ॥10॥
ಯೋಗಯುಕ್ತರಾಗಿ, ಸಂನ್ಯಾಸಧರ್ಮವನ್ನು ಹೊಂದಿದ್ದ ಆ ಮಹಾತ್ಮರು ಅನೇಕ ದೇಶಗಳನ್ನೂ, ನದಿಗಳನ್ನೂ, ಸಾಗರಗಳನ್ನೂ ದಾಟಿ ಮುನ್ನಡೆದರು.
ಯುಧಿಷ್ಠಿರೋ ಯಯಾವಗ್ರೇ ಭೀಮಸ್ತು ತದನಂತರಮ್ |
ಅರ್ಜುನಸ್ತಸ್ಯ ಚಾನ್ವೇವ ಯಮೌ ಚಾಪಿ ಯಥಾಕ್ರಮಮ್ ॥11॥
ಮುಂಭಾಗದಲ್ಲಿ ಯುಧಿಷ್ಠಿರನು, ಯುಧಿಷ್ಠಿರನ ನಂತರ ಭೀಮಸೇನನು, ಭೀಮಸೇನನ ಹಿಂಭಾಗದಲ್ಲೇ ಅರ್ಜುನನು, ಅರ್ಜುನನನ್ನು ಅನುಸರಿಸಿಕೊಂಡೇ ಅವಳಿ ಮಕ್ಕಳು- ಹೀಗೆ ಕ್ರಮವಾಗಿ ಅವರು ಹೋಗುತ್ತಿದ್ದರು.
ಪೃಷ್ಠತಸ್ತು ವರಾರೋಹಾ ಶ್ಯಾಮಾ ಪದ್ಮದಲೇಕ್ಷಣಾ |
ದ್ರೌಪದೀ ಯೋಷಿತಾಂ ಶ್ರೇಷ್ಠಾ ಯಯೌ ಭರತಸತ್ತಮ ॥12॥
ಹೇ ಭರತಶ್ರೇಷ್ಠನೇ, ಇವರೆಲ್ಲರ ಹಿಂಭಾಗದಲ್ಲಿ ಪರಿಪುಷ್ಟವಾದ ನಿತಂಬವುಳ್ಳ, ಕೃಷ್ಣವರ್ಣದ, ಕಮಲದ ಎಸಳಿನಂತೆ ಕಣ್ಣುಗಳುಳ್ಳ, ಸ್ತ್ರೀಯರಲ್ಲಿ ಶ್ರೇಷ್ಠಳಾದ ದ್ರೌಪದೀ ದೇವಿಯು ನಡೆದು ಬರುತ್ತಿದ್ದಳು.
ಶ್ವಾ ಚೈವಾನುಯಯಾವೇಕಃ ಪ್ರಸ್ಥಿತಾನ್ ಪಾಂಡವಾನ್ ವನಮ್ |
ಕ್ರಮೇಣ ತೇ ಯಯುರ್ವೀರಾ ಲೌಹಿತ್ಯಂ ಸಲಿಲಾರ್ಣವಮ್ ॥13॥
ಕಾಡಿಗೆ ಹೊರಟಿರುವ ಆ ಪಾಂಡವರನ್ನು ಒಂದು ಶ್ವಾನವು ಹಿಂಬಾಲಿಸಿತು. ವೀರರಾದ ಅವರು ಕ್ರಮವಾಗಿ ಸಂಚರಿಸುತ್ತಾ ಅಗ್ನಿಸಂಬಂಧಿಯಾದ ಸಮುದ್ರವನ್ನು ತಲುಪಿದರು.
ಗಾಂಡೀವಂ ತು ಧನುರ್ದಿವ್ಯಂ ನ ಮುಮೋಚ ಧನಂಜಯಃ |
ರತ್ನಲೋಭಾನ್ಮಹಾರಾಜ ತೇ ಚಾಕ್ಷಯ್ಯೇ ಮಹೇಷುಧೀ ॥14॥
ಹೇ ಮಹಾರಾಜನೇ, ಅರ್ಜುನನು ದಿವ್ಯವಾದ ಆ ಗಾಂಡೀವ ಧನುಸ್ಸನ್ನು ಹಾಗೂ ಎಂದೂ ಬರಿದಾಗದ ಆ ಮಹಾ ಬತ್ತಳಿಕೆಗಳನ್ನೂ ಅವು ಅತ್ಯಂತ ಶ್ರೇಷ್ಠವಾದವುಗಳೆಂಬ ಲೋಭದಿಂದ ಬಿಟ್ಟಿರಲಿಲ್ಲ.
ಅಗ್ನಿಂ ತೇ ದದೃಶುಸ್ತತ್ರ ಸ್ಥಿತಂ ಶೈಲಮಿವಾಗ್ರತಃ |
ಮಾರ್ಗಮಾವೃತ್ಯ ತಿಷ್ಠಂತಂ ಸಾಕ್ಷಾತ್ ಪುರುಷವಿಗ್ರಹಮ್ ॥15॥
ಆ ಸಮುದ್ರತೀರದಲ್ಲಿಯೇ ಪಾಂಡವರು ಬೆಟ್ಟದಂತೆ ತಮ್ಮೆದುರಿಗೆ ನಿಂತಿರುವ, ಮಾರ್ಗವನ್ನು ಪೂರ್ಣವಾಗಿ ಆವರಿಸಿರುವ, ಮನುಷ್ಯಶರೀರವನ್ನು ತಾಳಿ ಪ್ರತ್ಯಕ್ಷನಾದ ಅಗ್ನಿಯನ್ನು ನೋಡಿದರು.
ತತೋ ದೇವಃ ಸ ಸಪ್ತಾರ್ಚಿಃ ಪಾಂಡವಾನಿದಮಬ್ರವೀತ್ |
ಭೋ ಭೋ ಪಾಂಡುಸುತಾ ವೀರಾಃ ಪಾವಕಂ ಮಾಂ ನಿಬೋಧತ ॥
ಆಗ ಸಪ್ತಜ್ವಾಲೆಗಳುಳ್ಳ ಆ ದೇವನು ಪಾಂಡವರನ್ನು ಕುರಿತು ಹೀಗೆಂದನು. `ಹೇ ವೀರರಾದ ಪಾಂಡುಸುತರೇ, ನಾನು ಅಗ್ನಿ ಎಂದು ತಿಳಿಯಿರಿ'.
ಯುಧಿಷ್ಠಿರ ಮಹಾಬಾಹೋ ಭೀಮಸೇನ ಪರಂತಪ |
ಅರ್ಜುನಾಶ್ವಿಸುತೌ ವೀರೌ ನಿಬೋಧತ ವಚೋ ಮಮ ॥17॥
`ಹೇ ಮಹಾಬಾಹುವಾದ ಯುಧಿಷ್ಠಿರನೇ, ಶತ್ರುಮರ್ದನನಾದ ಭೀಮಸೇನನೇ, ಅರ್ಜುನನೇ, ವೀರರಾದ ಅಶ್ವಿನೀದೇವತೆಗಳ ಮಕ್ಕಳೇ, ನನ್ನ ಮಾತನ್ನು ಗಮನವಿಟ್ಟು ಕೇಳಿರಿ'.
ಅಹಮಗ್ನಿಃ ಕುರುಶ್ರೇಷ್ಠಾ ಮಯಾ ದಗ್ಧಂ ಚ ಖಾಂಡವಮ್ |
ಅರ್ಜುನಸ್ಯ ಪ್ರಭಾವೇನ ತಥಾ ನಾರಾಯಣಸ್ಯ ಚ ॥18॥

`ಹೇ ಕುರುಶ್ರೇಷ್ಠರೇ, ನಾನು ಅಗ್ನಿಯಾಗಿರುವೆನು. ಅರ್ಜುನನ ಹಾಗೂ ನಾರಾಯಣನ ಪ್ರಭಾವದಿಂದ ನನ್ನಿಂದಲೇ ಖಾಂಡವವನವು ದಗ್ಧವಾಗಿದೆ'.
ಅಯಂ ವಃ ಫಲ್ಗುನೋ ಭ್ರಾತಾ ಗಾಂಡೀವಂ ಪರಮಾಯುಧಮ್ |
ಪರಿತ್ಯಜ್ಯ ವನೇ ಯಾತು ನಾನೇನಾರ್ಥೋಽಸ್ತಿ ಕಶ್ಚನ ॥19॥
ಈ ನಿಮ್ಮ ಸಹೋದರನಾದ ಫಲ್ಗುನನು ಶ್ರೇಷ್ಠ ಆಯುಧವಾದ ಗಾಂಡೀವವನ್ನು ನೀರಿನಲ್ಲಿ ಪರಿತ್ಯಜಿಸಿ ಮುಂದೆ ಹೋಗಲಿ. ಇನ್ನು ಈ ಗಾಂಡೀವದಿಂದ ಯಾವುದೇ ಪ್ರಯೋಜನವೂ ಇರುವುದಿಲ್ಲ.
ಚಕ್ರರತ್ನಂ ತು ಯತ್ಕೃಷ್ಣೇ ಸ್ಥಿತಮಾಸೀನ್ಮಹಾತ್ಮನಿ |
ಗತಂ ತಚ್ಚ ಪುನರ್ಹಸ್ತೇ ಕಾಲೇನೈಷ್ಯತಿ ತಸ್ಯ ಹ ॥20॥
ಮಹಾತ್ಮನಾದ ಶ್ರೀಕೃಷ್ಣನಲ್ಲಿ ಯಾವ ಶ್ರೇಷ್ಠವಾದ ಚಕ್ರವು ಸ್ಥಿತವಾಗಿತ್ತೋ ಅದೂ ಕೂಡ ಹೊರಟು ಹೋಗಿದೆ. ಮತ್ತೆ ಅಗತ್ಯವಾದ ಕಾಲವು ಬಂದಾಗ ಅವನ ಕೈಗೆ ಅದು ಬಂದು ಸೇರುವುದಷ್ಟೆ?
ವರುಣಾದಾಹೃತಂ ಪೂರ್ವಂ ಮಯೈತತ್ಪಾರ್ಥಕಾರಣಾತ್ |
ಗಾಂಡೀವಂ ಧನುಷಾಂ ಶ್ರೇಷ್ಠಂ ವರುಣಾಯೈವ ದೀಯತಾಮ್ ॥21॥
ಈ ಧನುಸ್ಸುಗಳಲ್ಲಿ ಶ್ರೇಷ್ಠವಾದ ಗಾಂಡೀವವು ಪಾರ್ಥನಿಗೋಸ್ಕರ ನನ್ನಿಂದಲೇ ಹಿಂದೆ ವರುಣನಿಂದ ಸ್ವೀಕೃತವಾಗಿತ್ತು. ಇದನ್ನು ಮತ್ತೆ ವರುಣನಿಗೇ ಕೊಡಲಿ.
ತತಸ್ತೇ ಭ್ರಾತರಃ ಸರ್ವೇ ಧನಂಜಯಮಚೋದಯನ್ |
ಸ ಜಲೇ ಪ್ರಾಕ್ಷಿಪಚ್ಚೈತತ್ ತಥಾಽಕ್ಷಯ್ಯೇ ಮಹೇಷುಧೀ ॥22॥
ಇಷ್ಟಾದ ನಂತರ ಸಹೋದರರೆಲ್ಲರೂ ಅರ್ಜುನನನ್ನು (ಧನುಸ್ಸನ್ನು ಹಿಂತಿರುಗಿಸುವಂತೆ) ಪ್ರೇರೇಪಿಸಿದರು. ಅವನು ಈ ಧನುಸ್ಸನ್ನು ಮತ್ತು ಅಕ್ಷಯವಾದ ಬತ್ತಳಿಕೆಗಳನ್ನು ನೀರಿನಲ್ಲಿ ಎಸೆದುಬಿಟ್ಟನು.
ತತೋಽಗ್ನಿರ್ಭರತಶ್ರೇಷ್ಠ ತತ್ರೈವಾಂತರಧೀಯತ |
ಯಯುಶ್ಚ ಪಾಂಡವಾ ವೀರಾಸ್ತತಸ್ತೇ ದಕ್ಷಿಣಾಮುಖಾಃ ॥23॥
ಹೇ ಭರತಶ್ರೇಷ್ಠನೇ, ನಂತರ ಅಗ್ನಿಯು ಅಲ್ಲೇ ಅಂತರ್ಧಾನನಾದನು. ಅನಂತರ ವೀರರಾದ ಪಾಂಡವರು ದಕ್ಷಿಣಾಭಿಮುಖವಾಗಿ ಮುಂದೆ ಹೊರಟರು.
ತತಸ್ತೇ ತೂತ್ತರೇಣೈವ ತೀರೇಣ ಲವಣಾಂಭಸಃ |
ಜಗ್ಮುರ್ಭರತಶಾರ್ದೂಲ ದಿಶಂ ದಕ್ಷಿಣಪಶ್ಚಿಮಾಮ್ ॥24॥
ಹೇ ಭರತಶ್ರೇಷ್ಠನೇ, ಅನಂತರ ಅವರೆಲ್ಲರೂ ಲವಣಸಮುದ್ರದ ಉತ್ತರ ತೀರದಲ್ಲೇ ಮುಂದೆ ಸಾಗುತ್ತಾ ದಕ್ಷಿಣ-ಪಶ್ಚಿಮ ಅಂದರೆ ನೈಋತ್ಯದಿಕ್ಕಿಗೆ ಸಾಗಿದರು.
ತತಃ ಪುನಃ ಸಮಾವೃತ್ತಾಃ ಪಶ್ಚಿಮಾಂ ದಿಶಮೇವ ತೇ |
ದದೃಶುರ್ದ್ವಾರಕಾಂ ಚಾಪಿ ಸಾಗರೇಣ ಪರಿಪ್ಲುತಾಮ್ ॥25॥
ಉದೀಚೀಂ ಪುನರಾವೃತ್ತ್ಯ ಯಯುರ್ಭರತಸತ್ತಮಾಃ |
ಪ್ರಾದಕ್ಷಿಣ್ಯಂ ಚಿಕೀರ್ಷಂತಃ ಪೃಥಿವ್ಯಾ ಯೋಗಧರ್ಮಿಣಃ ॥26॥
ಮತ್ತೆ ಪುನಃ ಪಶ್ಚಿಮ ದಿಕ್ಕಿಗೇ ಹಿಂದಿರುಗಿದ ಅವರು, ಸಾಗರದಲ್ಲಿ ಮುಳುಗಿ ಹೋದ ದ್ವಾರಕೆಯನ್ನೂ ಕಂಡರು. ನಂತರ ಭರತಶ್ರೇಷ್ಠರಾದ, ಯೋಗಧರ್ಮದಲ್ಲಿ ಆಸಕ್ತರಾದ ಪಾಂಡವರು ಭೂಮಿಯಲ್ಲಿ ಪ್ರದಕ್ಷಿಣೆಯನ್ನು ಮಾಡಬಯಸುತ್ತಾ ಮತ್ತೆ ಉತ್ತರ ದಿಕ್ಕಿಗೇ ಹಿಂದಿರುಗಿ ಮುಂದೆ ಸಾಗಿದರು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಮಹಾಪ್ರಸ್ಥಾನಿಕಪರ್ವಣಿ ಪಾಂಡವಾನಾಂ ಪೂರ್ವಾದಿಚತುರ್ದಿಕ್ಷು ಲವಣಸಮುದ್ರತೀರೇ ಭೂಪ್ರದಕ್ಷಿಣವರ್ಣನಂ ನಾಮ ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮಹಾಪ್ರಸ್ಥಾನಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ಅತ್ರ ನಾರಾಯಣಕ್ಷೇತ್ರೇ ತೇಷಾಂ ತನ್ವೋಽಪತನ್ ಕ್ರಮಾತ್ |
ದ್ರೌಪದೀಸಹದೇವಾದಿಪಂಚಾನಾಂ ತತ್ರ ಮಾರುತಿಃ ॥
ಸದೇಹನಾಕಾನಿಚ್ಛುತ್ವಾದ್ ದೇಹಪ್ರಪತನಂ ಹಿ ತತ್ ॥
ತೇಷಾಮಿಹೇತಿ ಯಾಥಾರ್ಥ್ಯಂ ಜಾನನ್ ಪಪ್ರಚ್ಛ ಧರ್ಮಜಮ್ |
ಕೇನ ಕೇನಾಪತದ್ ದೇಹೋ ದೋಷೇಣ ನ ಇತಿ ಕ್ರಮಾತ್ ॥
ಅಲ್ಲಿ ಬದರಿಕಾಶ್ರಮದಲ್ಲಿ ದ್ರೌಪದಿ, ಸಹದೇವ ಮುಂತಾದ ಐವರ ಶರೀರಗಳು ಕ್ರಮವಾಗಿ ಪತನ ಹೊಂದಿದವು. ಅವರಿಗೆ ದೇಹಸಹಿತರಾಗಿ ಸ್ವರ್ಗಕ್ಕೆ ಹೋಗಲು ಇಚ್ಛೆಯಿಲ್ಲದ ಕಾರಣದಿಂದಲೆ ಹೀಗೆ ದೇಹಪತನವಾಗಿತ್ತು. ಈ ನಿಜಸಂಗತಿಯನ್ನು ಭೀಮ ತಿಳಿದಿದ್ದರೂ `ಯಾವ ಯಾವ ದೋಷದಿಂದ ನಮ್ಮ ದೇಹಗಳು ಕ್ರಮವಾಗಿ ಬಿದ್ದವೆಂದು' ಧರ್ಮರಾಜನನ್ನು ಕೇಳಿದನು.
ಮೃತಿಕಾಲೇ ಹಿ ಯೋ ಯಸ್ಯ ದೋಷಂ ವಕ್ತ್ಯ ೃಣಮೋಚನಮ್ |
ತಸ್ಮಾತ್ ಸ್ಯಾದುಕ್ತದೋಷಸ್ಯೇತ್ಯಾಹ ಯಚ್ಛ್ರುತಿರೇವ ತತ್ |
ಋಣಮೋಕ್ಷಾಯ ಸರ್ವೇಷಾಂ ಭೀಮೋ ದೋಷಾನವಾದಯತ್ ॥

ಮರಣಕಾಲದಲ್ಲಿ ಯಾವಾತನು ಯಾವನ ದೋಷವನ್ನು ಹೇಳುವನೋ ಅವನಿಗೆ ಆ ದೋಷ ಹೇಳಿದವನ ಋಣ ಪರಿಹಾರವಾಗುವುದು ಎಂದು ಶ್ರುತಿ ಹೇಳುವುದರಿಂದ ಎಲ್ಲರ ಋಣ ಪರಿಹಾರಕ್ಕಾಗಿ ಎಲ್ಲರ ದೋಷಗಳನ್ನು ಧರ್ಮರಾಜನಿಂದ ಭೀಮನು ಹೇಳಿಸಿದನು.
ಸೋಽಪೀಚ್ಛಾಪತಿತಾನ್ ದೇಹಾನಜಾನಂಛುದ್ಧಕರ್ಮಣಾಮ್ |
ಅಪಶ್ಯನ್ ಕಾರಣಂ ಪ್ರಾಹ ದೋಷಾತ್ ಸ್ಯಾದೇವಮಿತ್ಯಪಿ |
ರಾಜಾ ಸಂಭಾವನಾಮಾತ್ರಂ ನಹಿ ಕಾರ್ಯಮಕಾರಣಮ್ ॥
ಧರ್ಮರಾಜನು ದ್ರೌಪದೀ ಮುಂತಾದವರ ಶರೀರ ಅವರ ಇಚ್ಛೆಯಿಂದ ಬಿದ್ದಿತೆಂಬುದನ್ನು ತಿಳಿಯದೆ ಅವರು ಶುದ್ಧಕರ್ಮವನ್ನೆ ಮಾಡುವವರಾದ್ದರಿಂದ ಶರೀರ ಪಾತಕ್ಕೆ ಕಾರಣವಾಗಬಹುದಾದ ಪಾಪ ಒಂದನ್ನೂ ಕಾಣದೆ, ದೋಷದಿಂದ ಹೀಗಾಗಿರ ಬಹುದೆಂದು ಊಹೆಯಿಂದಲೆ ಹೇಳುತ್ತಾನೆ. ಏಕೆಂದರೆ ಕಾರಣವಿಲ್ಲದೆ ಕಾರ್ಯ ಆಗದು ತಾನೆ?
ಸ್ವಚ್ಛಂದಮೃತ್ಯವೋ ಯೋಗಾದ್ ದೇಹಾನುತ್ಸೃಜ್ಯ ಪಾಂಡವಾಃ |
ಕೃಷ್ಣಾ ಚಾಽಪುಃ ಪರಂ ಸ್ಥಾನಂ ಯನ್ನ ಯಾಂತ್ಯಪಿ ದೇವತಾಃ |
ಇತಿ ಶ್ರುತೇರ್ನ ತೇ ಪಾಪಾದ್ ದೇಹಾಂಸ್ತ್ಯಜುರೂರ್ಜಿತಾಃ |
`ಪಾಂಡವರೂ ದ್ರೌಪದಿಯೂ ಸ್ವಚ್ಛಂದ ಮರಣಿಗಳು. ಆದ್ದರಿಂದ ಯೋಗದಿಂದ ಶರೀರ ತ್ಯಾಗಮಾಡಿ, ದೇವತೆಗಳಿಂದಲೂ ಹೊಂದಲಾಗದಂಥ ಉತ್ತಮ ಲೋಕವನ್ನು ಹೊಂದಿದರು' ಎಂದು ಶ್ರುತಿ ಇರುವುದರಿಂದ ಶಕ್ತಿಶಾಲಿಗಳಾದ ಅವರು ಪಾಪದಿಂದ ದೇಹಗಳನ್ನು ತೊರೆಯಲಿಲ್ಲ.
ಋಣಾನ್ಯುನ್ಮುಚ್ಯ ದೋಷೋಕ್ತ್ಯಾ ಸ್ವಾನಾಂ ಭೀಮಃ ಸ್ವಕಾಂ ತನುಮ್ |
ತತ್ಯಾಜ ಪರಮಂ ಧ್ಯಾಯನ್ನಾಪ ಚ ಸ್ಥಾನಮುತ್ತಮಮ್ |
ಇತಿ ಸ್ಕಾಂದಪುರಾಣೋಕ್ತಂ ವ್ಯಾಸವಾಕ್ಯಮೃಷೀನ್ ಪ್ರತಿ ॥
ಭೀಮನು ತನ್ನವರನ್ನು ದೋಷಾರೋಪಣದ ಮೂಲಕ ಋಣದಿಂದ ಮೋಚನಗೊಳಿಸಿ, ಪರಮಾತ್ಮನನ್ನು ಧ್ಯಾನಿಸುತ್ತ, ತನ್ನ ಶರೀರವನ್ನು ತೊರೆದನು. ಮತ್ತು ಉತ್ತಮ ಲೋಕವನ್ನು ಹೊಂದಿದನು ಎಂದು ಸ್ಕಾಂದಪುರಾಣದಲ್ಲಿ ಋಷಿಗಳಿಗೆ ವ್ಯಾಸರು ಹೇಳಿದ ವಚನವಿದೆ.
ಭೀಮಾದೃತೇ ಹಿ ಚತುರ್ಷು ಪಕ್ಷಪಾತಸ್ತು ವಾಸವೌ |
ಯೋಗ್ಯ ಏವೇತಿ ಕೃಷ್ಣಾಯಾ ನ ದೋಷಃ ಸ್ಯಾತ್ ಕಥಂಚನ ॥
ಭೀಮನಲ್ಲಿ ಹೊರತು ಉಳಿದ ನಾಲ್ವರಲ್ಲಿ, ಅರ್ಜುನನಲ್ಲಿ ದ್ರೌಪದಿಗೆ ಪಕ್ಷಪಾತವಿರುವುದು ಯೋಗ್ಯವೆ. ಆದ್ದರಿಂದ ಅದು ದ್ರೌಪದಿಗೆ ಯಾವ ರೀತಿಯಿಂದಲೂ ದೋಷವಲ್ಲ.
ನೀತಿರೂಪೇ ವೀರ್ಯಬಲೇ ಮಹಾಂತ್ಯೇಷಾಂ ಯತಃ ಕ್ರಮಾತ್ |
ಪ್ರಾಣತ್ವಾದ್ ಭೋಗಶಕ್ತಿಶ್ಚ ನ ಹಿ ದೋಷಾಯ ಮಾರುತೇಃ ॥
ನೀತಿ ರೂಪ ವೀರ್ಯಬಲಗಳು ಪಾಂಡವರಲ್ಲಿ ಕ್ರಮವಾಗಿ ಹೆಚ್ಚು ಇರುವುದರಿಂದ ಕ್ರಮವಾಗಿ ಹೆಚ್ಚು ಪಕ್ಷಪಾತವಿರಿಸಿದುದು ದೋಷವಲ್ಲ. ಭೀಮ ಮುಖ್ಯಪ್ರಾಣನಾದ್ದರಿಂದ ಅವನಿಗೆ ಹೆಚ್ಚಿನ ಭೋಜನ ಶಕ್ತಿ ಇರುವುದೂ ದೋಷವಲ್ಲ.
`ಯಥಾಸ್ವರೂಪವಿಜ್ಞಾನಮಾತ್ಮನ್ಯಪಿ ನ ದೋಷಕೃತ್' |
ಇತಿ ವ್ಯಾಸಸ್ಮೃತೇರೇಷಾಮುಕ್ತದೋಷೋದ್ಭವಃ ಕಥಮ್ ॥
`ತನ್ನ ಸ್ವರೂಪ ಹೇಗಿದೆಯೋ ಹಾಗೆ ತಿಳಿದುಕೊಳ್ಳುವುದು ತನ್ನಲ್ಲಿ ದೋಷಕ್ಕೆ ಕಾರಣವಲ್ಲ' ಎಂದು ವ್ಯಾಸಸ್ಮೃತಿ ಇರುವುದರಿಂದ ಪಾಂಡವರಿಗೆ ಧರ್ಮರಾಜ ಹೇಳಿದ ದೋಷ ಹೇಗೆ ದೋಷವಾದೀತು?
ಕದಾಚಿದತಿಮಾನೋಽಪಿ ತ್ರಯಾಣಾಮೇಷು ಜಾಯತೇ |
ತಥಾಽಪಿ ತತ್ಫಲಂ ನೈತತ್ ತಾರತಮ್ಯಂ ಹಿ ಮುಕ್ತಿಗಮ್ ॥
ಗುಣದೋಷಾಧಿಕಾಲ್ಪತ್ವಾದತ್ರಸ್ಥಮಪಿ ಹಿ ಶ್ರುತಮ್ |
ಆರಬ್ಧಕರ್ಮನಾಶೇ ಹಿ ಪತೇದ್ ದೇಹೋಽಪ್ಯಪಾಪಿನಃ ॥
ಕೆಲವೊಮ್ಮೆ ಸಹದೇವ, ನಕುಲ, ಅರ್ಜುನ- ಈ ಮೂವರಲ್ಲಿ ಅತಿಯಾದ ಅಹಂಕಾರವೂ ಉಂಟಾಗುವುದು. ಆದರೂ ಅದಕ್ಕೆ ದೇಹಪಾತ ಫಲವಲ್ಲ. ಮನುಷ್ಯರಿಗೆ ಮುಕ್ತಿಯಲ್ಲಿ ಆನಂದದ ವೃದ್ಧಿ-ಹ್ರಾಸಗಳೆ ಅದಕ್ಕೆ ಫಲವೆಂದು ಶ್ರುತಿ ಸಿದ್ಧವಾಗಿದೆ.
`ಮನುಷ್ಯರಿಗೂ ಅಪರೋಕ್ಷ ಜ್ಞಾನಾನಂತರ ಗುಣ-ದೋಷಗಳು ಅಧಿಕ ಅಥವಾ ಅಲ್ಪವಾದ ಮಾತ್ರಕ್ಕೆ ಸಂಸಾರದಲ್ಲಿರುವ ದೇಹಪಾತಾದಿಗಳು ಅದರ ಫಲವಾಗಿರುವುದಿಲ್ಲ ಎಂದಮೇಲೆ ದೇವತೆಗಳಿಗೆ ಏನು ಹೇಳಬೇಕು? ಪಾಪರಹಿತನ ದೇಹವೂ ಕೂಡ ಪ್ರಾರಬ್ಧ ತೀರಿದಾಗ ಪತನ ಹೊಂದುತ್ತದೆ.
ಯುಧಿಷ್ಠಿರೋಽಪಿ ಹಿ ಸ್ವರ್ಗಂ ಬುಭುಜೇ ನೈವ ತತ್ತನುಃ |
ಅತಿಮಾನಾದಯೋ ದೋಷಾಃ ಕುತ ಏವ ಹಿ ಮಾರುತೇಃ ॥
ಅನಾದಿಕಾಲತಃ ಸರ್ವದೋಷಹೀನಾ ಗುಣಾಧಿಕಾಃ |
ಸರ್ವಜೀವಗಣೇಭ್ಯೋ ಯೇ ತೇ ಹಿ ವಾಯುತ್ವಮಾಪ್ನುಯುಃ |
ಋಜವೋ ನಾಮ ಯೇ ದೇವಾ ದೇವಾನಾಮಪಿ ದೇವತಾಃ ॥
ಧರ್ಮರಾಜನೂ ಕೂಡ ಸಶರೀರನಾಗಿ ಸ್ವರ್ಗಸುಖವನ್ನು ಅನುಭವಿಸಲಿಲ್ಲ. ಅದರಿಂದ ಅತಿಯಾದ ಅಹಂಕಾರ ಮುಂತಾದುವು ಭೀಮನಿಗೆ ಹೇಗೆ ದೋಷವಾಗುವವು? ಅನಾದಿಕಾಲದಿಂದ ಗರುಡ-ಶೇಷಾದಿ ಎಲ್ಲ ಜೀವ ಸಮೂಹಗಳಿಗಿಂತ ಅಧಿಕ ಗುಣ ಉಳ್ಳವರು, ಸರ್ವದೋಷರಹಿತರು, ದೇವತೆಗಳಿಗೂ ದೇವತೆಗಳು - ಇಂತಹ ಋಜುಗಳೆಂಬ ದೇವತೆಗಳು ಯಾರೋ ಅವರೇ ವಾಯು ಪದವಿಗೆ

ಬರುತ್ತಾರೆ ತಾನೆ?
ಅಭಾವಂ ಹ್ಯತಿಮಾನಾದೇರ್ಭೀಮಸ್ಯಾಹ ಚ ಕೇಶವಃ ॥
`ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ |
ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥'
ಇತಿ ತಸ್ಮಾದ್ ಯಥಾ ಯುದ್ಧೇ ಧರ್ಮಹಾನಿಮಮನ್ಯತ |
ಏವಮತ್ರಾಪ್ಯಧರ್ಮೇಣ ದೇಹಪಾತಂ ನೃಪೋऽಬ್ರವೀತ್ ॥
ಅತಿಯಾದ ಅಹಂಕಾರ ಮುಂತಾದ ದೋಷಗಳು ಭೀಮನಲ್ಲಿ ಇಲ್ಲವೆಂದು ಶ್ರೀಕೃಷ್ಣನೇ ಹೇಳಿದ್ದಾನೆ: ನೀನು ನಿನ್ನಲ್ಲಿ ಬಹಳ ಅಲ್ಪಗುಣಗಳನ್ನೆ ಹೇಳಿಕೊಳ್ಳುವಿ. ಅದಕ್ಕಿಂತ ಸಾವಿರಪಾಲು ಅಧಿಕ ಗುಣಗಳನ್ನು ನಾನು ನಿನ್ನಲ್ಲಿ ಕಾಣುತ್ತಿದ್ದೇನೆ' ಎಂದು. ಅದರಿಂದ ಧರ್ಮರಾಜ ಧರ್ಮಯುದ್ಧದಲ್ಲಿ ಅಧರ್ಮವಾಯಿತೆಂದುಕೊಂಡಂತೆ ದೇಹಪಾತ ಪಾಪದಿಂದಾಯಿತು ಎಂದ.
ಪೂಜ್ಯೇಭ್ಯಃ ಪೂರ್ವಮೇವೈಷಾಂ ದೇಹಪಾತಮಭೀಪ್ಸತಾಮ್ |
ತತ್ಕ್ರಮಾತ್ ದೇಹಪಾತೋऽಭೂನ್ನ ಪಾಪಾನ್ಮುಚ್ಯತಾಂ ಯಥಾ ॥
ನ ಹಿ ಪಾಪಫಲಾನ್ಮುಕ್ತೌ ದೇಹಪಾತಃ ಕಥಂಚನ |
ಕಿಂ ತು ಕರ್ಮಕ್ಷಯಾದೇವ ತಥಾ ಸರ್ವತ್ರ ನಿಶ್ಚಿತಃ ॥
ದೇವತೆಗಳು ಮುಕ್ತಿಗೆ ಹೋಗುವಾಗ ಉತ್ತಮದೇವತೆಗಳಿಗಿಂತ ಮೊದಲು ತಮ್ಮ ದಿವ್ಯದೇಹ ಪತನ ಹೊಂದಲಿ ಎಂಬ ಇಚ್ಛೆಯಿಂದಲೆ ಅವರಿಗೆ ಹಾಗೆ ದೇಹಪಾತವಾಗುವುದೆ ಹೊರತು ಪಾಪದಿಂದಲ್ಲ. ಮುಕ್ತಿಯಲ್ಲಿ ದೇಹಪಾತವಾಗುವುದು ಸರ್ವಥಾ ಪಾಪದ ಫಲವಲ್ಲ. ಕರ್ಮಕ್ಷಯದಿಂದಲೆ ಅದು ಸಂಭವಿಸುತ್ತದೆ ಎನ್ನುವುದು ಬ್ರಹ್ಮಸೂತ್ರ ಮುಂತಾದ ಸಕಲ ಶಾಸ್ತ್ರಗಳ ನಿರ್ಣಯ. ಹಾಗೇ ವಯಸ್ಸಿನಲ್ಲಿ ಹಿರಿಯರಾದವರಿಗಿಂತ ಮೊದಲು ಕಿರಿಯರು ತಮ್ಮ ಮಾನುಷ ದೇಹ ಪತನ ಹೊಂದಲಿ ಎಂದು ಬಯಸಿದ್ದರಿಂದ ಆ ಕ್ರಮದಿಂದಲೆ ಪಾಂಡವರಿಗೂ ದ್ರೌಪದಿಗೂ ದೇಹಪತನವಾಯಿತೆ ಹೊರತು ಪಾಪದಿಂದಲ್ಲ.
* * * * *
ಮೂರನೆಯ ಅಧ್ಯಾಯ
ಮೇರುಪರ್ವತವನ್ನು ಏರುತ್ತಾ ಯುಧಿಷ್ಠಿರನು ಹಿರಿತನಕ್ಕೆ ಅನುಸಾರವಾಗಿ ಹಿಂಬಾಲಿಸುತ್ತಿರುವ ದ್ರೌಪದಿಯೇ ಮೊದಲಾದವರು ಯೋಗಭ್ರಷ್ಟರಾಗಿ
ಕ್ರಮವಾಗಿ ಭೂಮಿಯಲ್ಲಿ ಬೀಳುತ್ತಿರುವಾಗ ಭೀಮನ ಪ್ರಶ್ನೆಯಂತೆ ಅವನಿಗೆ
ಅವರು ಬಿದ್ದುದಕ್ಕೆ ಕಾರಣವನ್ನು ತಿಳಿಸುವುದು ಹಾಗೂ ಕೇವಲ ತನ್ನನ್ನು ಹಿಂಬಾಲಿಸುತ್ತಿರುವ ಶ್ವಾನದೊಂದಿಗೆ ಮುಂದೆ ನಡೆಯುವುದು.
ವೈಶಂಪಾಯನಃ
ತತಸ್ತೇ ನಿಯತಾತ್ಮಾನ ಉದೀಚೀಂ ದಿಶಮಾಸ್ಥಿತಾಃ |
ದದೃಶುರ್ಯೋಗಯುಕ್ತಾಶ್ಚ ಹಿಮವಂತಂ ಮಹಾಗಿರಿಮ್ ॥1॥
ವೈಶಂಪಾಯನ ಅನಂತರ ಆತ್ಮನಿಗ್ರಹವುಳ್ಳ, ಯೋಗಯುಕ್ತರಾದ ಆ ಪಾಂಡವರು ಉತ್ತರದಿಕ್ಕಿಗೆ ಸಾಗುತ್ತಾ ಪರ್ವತಶ್ರೇಷ್ಠನಾದ ಹಿಮವಂತನನ್ನು ಕಂಡರು.
ತಂ ಚಾಪ್ಯತಿಕ್ರಮಂತಸ್ತೇ ದದೃಶುರ್ವಾಲುಕಾರ್ಣವಮ್ |
ಅವೈಕ್ಷಂತ ಮಹಾಶೈಲಂ ಮೇರುಂ ಶಿಖರಿಣಾಂ ವರಮ್ ॥2॥
ಆ ಹಿಮವಂತನನ್ನೂ ದಾಟಿ ಮುಂದುವರೆದ ಅವರು ಮರುಳುಗಾಡೊಂದನ್ನು ಕಂಡರು. ನಂತರ ಪರ್ವತದಲ್ಲಿ ಶ್ರೇಷ್ಠವಾದ ಮಹಾಮೇರುಪರ್ವತವನ್ನು ನೋಡಿದರು.
ತೇಷಾಂ ತು ಗಚ್ಛತಾಂ ಶೀಘ್ರಂ ಸರ್ವೇಷಾಂ ಯೋಗಧರ್ಮಿಣಾಮ್ |
ಯಾಜ್ಞಸೇನೀ ಭ್ರಷ್ಟಯೋಗಾ ನಿಪಪಾತ ಮಹೀತಳೇ ॥3॥
ಹೀಗೆ ಯೋಗಧರ್ಮವನ್ನು ಆಶ್ರಯಿಸಿಕೊಂಡು ವೇಗವಾಗಿ ಸಾಗುತ್ತಿರುವ ಅವರಲ್ಲಿ ದ್ರೌಪದಿಯು ಯೋಗಭ್ರಷ್ಟಳಾಗಿ ಭೂತಳದಲ್ಲಿ ಬಿದ್ದುಬಿಟ್ಟಳು.
ತಾಂ ತು ಪ್ರಪತಿತಾಂ ದೃಷ್ಟ್ವಾ ಭೀಮಸೇನೋ ಮಹಾಬಲಃ |
ಉವಾಚ ಧರ್ಮರಾಜಾನಂ ಯಾಜ್ಞಸೇನೀಮವೇಕ್ಷ್ಯ ಹ ॥4॥
ಅವಳು ಬಿದ್ದುದನ್ನು ನೋಡಿದ ಮಹಾಬಲಿಷ್ಠನಾದ ಭೀಮಸೇನನು ದ್ರೌಪದಿಯನ್ನು ನೋಡುತ್ತಾ, ಧರ್ಮರಾಜನನ್ನು ಕುರಿತು ಹೀಗೆಂದನು.
ನಾಧರ್ಮಶ್ಚರಿತಃ ಕಶ್ಚಿದ್ ರಾಜಪುತ್ರ್ಯಾ ಪರಂತಪ |
ಕಾರಣಂ ಕಿನ್ನು ತದ್ ಬ್ರೂಹಿ ಯತ್ಕೃಷ್ಣಾ ಪತಿತಾ ಭುವಿ ॥5॥
ಹೇ ಪರಂತಪನೇ, ರಾಜಪುತ್ರಿಯಾದ ದ್ರೌಪದಿಯಿಂದ ಯಾವುದೇ ಅಧರ್ಮಾಚರಣೆಯೂ ನಡೆದಿರಲಿಲ್ಲ. ಆದರೂ ದ್ರೌಪದಿಯು ಭೂಮಿಯಲ್ಲಿ ಬೀಳಲು ಕಾರಣವೇನೆಂಬುದನ್ನು ಹೇಳು.
ಯುಧಿಷ್ಠಿರಃ
ಪಕ್ಷಪಾತೋ ಮಹಾನಸ್ಯಾ ವಿಶೇಷೇಣ ಧನಂಜಯೇ |
ತಸ್ಯೈ ತತ್ಫಲಮದ್ಯೈಷಾ ಭುಂಕ್ತೇ ಪುರುಷಸತ್ತಮ ॥6॥
ಯುಧಿಷ್ಠಿರ ಹೇ ಪುರುಷಶ್ರೇಷ್ಠನೇ, ಇವಳಿಗೆ ವಿಶೇಷವಾಗಿ ಅರ್ಜುನನಲ್ಲಿ ಪಕ್ಷಪಾತಗುಣವಿತ್ತು. ಅದರ ಫಲವನ್ನೇ ಅವಳಿಂದು

ಅನುಭವಿಸುತ್ತಿದ್ದಾಳೆ.
ವೈಶಂಪಾಯನಃ
ಏವಮುಕತ್ವಾऽನವೇಕ್ಷ್ಯೈನಾಂ ಯಯೌ ಭರತಸತ್ತಮಃ |
ಸಮಾಧಾಯ ಮನೋ ಧೀಮಾನ್ ಧರ್ಮಾತ್ಮಾ ಪುರುಷರ್ಷಭಃ ||7||
ವೈಶಂಪಾಯನ ಇಷ್ಟು ಹೇಳಿ ಧೀಮಂತನಾದ, ಧರ್ಮಾತ್ಮನಾದ, ಪುರುಷ ಶ್ರೇಷ್ಠನಾದ, ಭರತವಂಶದಲ್ಲಿ ಅತ್ಯುತ್ತಮನಾದ ಯುಧಿಷ್ಠಿರನು ಮನಸ್ಸನ್ನು ಸಮಾಧಾನ ಪಡಿಸಿಕೊಂಡು, ಅವಳನ್ನು ನೋಡದೆಯೇ ಮುಂದೆ ಸಾಗಿದನು.
ಸಹದೇವಸ್ತತೋ ವಿದ್ವಾನ್ ನಿಪಪಾತ ಮಹೀತಳೇ |
ತಂ ಚಾಪಿ ಪತಿತಂ ದೃಷ್ಟ್ವಾ ಭೀಮೋ ರಾಜಾನಮಬ್ರವೀತ್ ||8||
ಸ್ವಲ್ಪ ಹೊತ್ತಿನ ನಂತರ ಜ್ಞಾನಿಯಾದ ಸಹದೇವನು ಭೂತಳದಲ್ಲಿ ಬಿದ್ದುಬಿಟ್ಟನು. ಹೀಗೆ ಬಿದ್ದ ಅವನನ್ನು ನೋಡಿದ ಭೀಮಸೇನನು ರಾಜನ ಬಳಿ ಹೀಗೆಂದನು.
ಯೋऽಯಮಸ್ಮಾಸು ಸರ್ವೇಷು ಶುಶ್ರೂಷುರನಹಂಕೃತಃ |
ಸೋऽಯಂ ಮಾದ್ರವತೀಪುತ್ರಃ ಕಸ್ಮಾನ್ನಿಪತಿತೋ ಭುವಿ ||9||
ಯಾವನು ಅಹಂಕಾರವಿಲ್ಲದೆ ನಮ್ಮೆಲ್ಲರ ಸೇವೆಗಾಗಿ ನಿಲ್ಲುತ್ತಿದ್ದನೋ ಅಂತಹ ಈ ಸಹದೇವನು ಭೂಮಿಯಲ್ಲೇಕೆ ಪತಿತನಾದನು?
ಯುಧಿಷ್ಠಿರಃ
ಆತ್ಮನಃ ಸದೃಶಂ ಪ್ರಾಜ್ಞಂ ನೈಷೋऽಮನ್ಯತ ಕಂಚನ |
ತೇನ ದೋಷೇಣ ಪತಿತೋ ವಿದ್ವಾನೇಷ ನೃಪಾತ್ಮಜಃ ||10||
ಯುಧಿಷ್ಠಿರ ಈ ವಿದ್ವಾಂಸನಾದ ರಾಜಪುತ್ರನು ತನಗೆ ಸದೃಶವಾದ ಬುದ್ಧಿವಂತರು ಯಾರೂ ಇಲ್ಲ ಎಂದು ಭಾವಿಸಿದ್ದನು. ಆ ದೋಷದಿಂದಲೇ ಈಗ ಪತಿತನಾದನು.
ವೈಶಂಪಾಯನಃ
ಇತ್ಯುಕತ್ವಾ ತಂ ಸಮುತ್ಸೃಜ್ಯ ಸಹದೇವಂ ಯಯೌ ತದಾ |
ಭ್ರಾತೃಭಿಃ ಸಹ ಕೌಂತೇಯಃ ಶುನಾ ಚೈವ ಯುಧಿಷ್ಠಿರಃ ||11||
ವೈಶಂಪಾಯನ ಇಷ್ಟು ಹೇಳಿದ ಕುಂತೀಪುತ್ರನಾದ ಯುಧಿಷ್ಠಿರನು ಸಹದೇವನನ್ನು ಅಲ್ಲಿಯೇ ಬಿಟ್ಟು, ಉಳಿದ ಸಹೋದರರೊಂದಿಗೆ ಮತ್ತು ಶ್ವಾನದೊಂದಿಗೆ ಮುಂದೆ ನಡೆದನು.
ಕೃಷ್ಣಾಂ ನಿಪತಿತಾಂ ದೃಷ್ಟ್ವಾ ಸಹದೇವಂ ಚ ಪಾಂಡವಮ್ |
ಆರ್ತೋ ಬಂಧುಪ್ರಿಯಃ ಶೂರೋ ನಕುಲೋ ನಿಪಪಾತ ಹ ||12||
ದ್ರೌಪದಿಯೂ, ಪಾಂಡವನಾದ ಸಹದೇವನೂ ಬಿದ್ದುದನ್ನು ನೋಡಿ, ಶೋಕಾವಿಷ್ಟನಾದ ಬಂಧುಪ್ರಿಯನಾದ ಶೂರ ನಕುಲನು ಅವನೂ ಬಿದ್ದನು.
ತಸ್ಮಿನ್ನಿಪತಿತೇ ವೀರೇ ನಕುಲೇ ಚಾರುದರ್ಶನೇ |
ಪುನರೇವ ತದಾ ಭೀಮೋ ರಾಜಾನಮಿದಮಬ್ರವೀತ್ ||13||
ಸುಂದರಾಂಗನಾದ ಆ ವೀರ ನಕುಲನೂ ಬಿದ್ದಾಗ ಮತ್ತೆ ಭೀಮನು ರಾಜನ ಬಳಿ ಹೀಗೆಂದನು.
ಯೋऽಯಮಕ್ಷತಧರ್ಮಾತ್ಮಾ ಭ್ರಾತಾ ವಚನಕಾರಕಃ |
ರೂಪೇಣಾಪ್ರತಿಮೋ ಲೋಕೇ ನಕುಲಃ ಪತಿತೋ ಭುವಿ ||14||
ಯಾವನು ಸ್ವಲ್ಪವೂ ಚ್ಯುತಿಬರದಂತೆ ಧರ್ಮವನ್ನು ಮೈಗೂಡಿಸಿಕೊಂಡಿದ್ದನೋ, ಹೇಳಿದ ಎಲ್ಲವನ್ನೂ ನಡೆಸಿಕೊಡುತ್ತಿದ್ದನೋ, ಲೋಕದಲ್ಲಿ ಅಪ್ರತಿಮ ರೂಪಶಾಲಿಯೋ ಅಂತಹ ಸಹೋದರನಾದ ನಕುಲನೂ ಭೂಮಿಯಲ್ಲಿ ಬಿದ್ದನಲ್ಲವೆ?
ಇತ್ಯುಕ್ತೋ ಭೀಮಸೇನೇನ ಪ್ರತ್ಯುವಾಚ ಯುಧಿಷ್ಠಿರಃ |
ನಕುಲಂ ಪ್ರತಿ ಧರ್ಮಾತ್ಮಾ ಸರ್ವಬುದ್ಧಿಮತಾಂವರಃ ||15||
ಹೀಗೆ ಭೀಮಸೇನನು ಹೇಳಿದಾಗ ಎಲ್ಲ ಬುದ್ಧಿಶಾಲಿಗಳಲ್ಲಿ ಶ್ರೇಷ್ಠನಾದ, ಧರ್ಮಾತ್ಮನಾದ ಯುಧಿಷ್ಠಿರನು ನಕುಲನನ್ನು ಕುರಿತು ಹೀಗೆ ಉತ್ತರಿಸಿದನು.
ರೂಪೇಣ ಮತ್ಸಮೋ ನಾಸ್ತಿ ಕಶ್ಚಿದಿತ್ಯಸ್ಯ ದರ್ಶನಮ್ |
ಅಧಿಕಶ್ಚಾಹಮೇವೈಕ ಇತ್ಯಸ್ಯ ಮನಸಿ ಸ್ಥಿತಮ್ ||16||
ನಕುಲಃ ಪತಿತಸ್ತಸ್ಮಾದಾಗಚ್ಛ ತ್ವಂ ವೃಕೋದರ |
ಯಸ್ಯ ಯದ್ವಿಹಿತಂ ವೀರ ಸೋऽವಶ್ಯಂ ತದುಪಾಶ್ನುತೇ ||17||
ರೂಪದಿಂದ ತನಗೆ ಸರಿಸಾಟಿಯಾದವರು ಯಾರೂ ಇಲ್ಲ. ನಾನೊಬ್ಬನೇ ಅಧಿಕವಾದ ರೂಪಶಾಲಿ ಎಂಬುದಾಗಿ ಇವನ ಮನಸ್ಸಿನಲ್ಲಿ ಭಾವವಿತ್ತು. ಇದರಿಂದಾಗಿ ನಕುಲನು ಪತಿತನಾದನು. ಹೇ ವೃಕೋದರನೇ, ನೀನು ಬಂದು ಬಿಡು. ವೀರನೇ, ಯಾವಾತನಿಗೆ ಯಾವುದು ವಿಹಿತವಾಗಿರುವುದೋ ಅವನು ಅವಶ್ಯವಾಗಿಯೂ ಅದನ್ನು ಅನುಭವಿಸುತ್ತಾನೆ.
ತಾಂಸ್ತು ಪ್ರಪತಿತಾನ್ ದೃಷ್ಟ್ವಾ ಪಾಂಡವಃ ಶ್ವೇತವಾಹನಃ |
ಪಪಾತ ಶೋಕಸಂತಪ್ತಸ್ತತೋऽನು ಪರವೀರಹಾ ||18||
ಆ ಮೂರು ಮಂದಿ ಬಿದ್ದುದನ್ನು ನೋಡಿ ಶತ್ರುವೀರರನ್ನು ಸಂಹರಿಸಿದ, ಬಿಳಿ ಕುದುರೆಗಳನ್ನು ಕಟ್ಟಿದ ರಥವುಳ್ಳ, ಪಾಂಡುಪುತ್ರನಾದ ಅರ್ಜುನನು ದುಃಖಸಂತಪ್ತನಾಗಿ ಅವರ ನಂತರ ತಾನೂ ಬಿದ್ದನು.
ತಸ್ಮಿಂಸ್ತು ಪುರುಷವ್ಯಾಘ್ರೇ ಪತಿತೇ ಶಕ್ರತೇಜಸಿ |

ಮ್ರಿಯಮಾಣೇ ದುರಾಧರ್ಷೇ ಭೀಮೋ ರಾಜಾನಮಬ್ರವೀತ್ ॥19॥
ಪುರುಷಶ್ರೇಷ್ಠನಾದ, ಇಂದ್ರನ ತೇಜಸ್ಸುಳ್ಳ, ಬಲಾತ್ಕಾರಕ್ಕೆ ಒಳಪಡದ ಆ ಅರ್ಜುನನು ಬಿದ್ದು ಮರಣಹೊಂದುತ್ತಿರಲು ಭೀಮನು ರಾಜನ ಬಳಿ ಹೀಗೆಂದನು.
ಅನೃತಂ ನ ಸ್ಮರಾಮ್ಯಸ್ಯ ಸ್ವೈರೇಷ್ವಪಿ ಮಹಾತ್ಮನಃ|
ಅಥ ಕಸ್ಯ ವಿಕಾರೋಽಯಂ ಯೇನಾಯಂ ಪತಿತೋ ಭುವಿ ॥20॥
ಮಹಾತ್ಮನಾದ ಪಾರ್ಥನು ಹಾಸ್ಯಪ್ರಸಂಗದಲ್ಲಿಯೂ ಸುಳ್ಳಾಡಿರುವುದು ನನ್ನ ನೆನಪಿಗೆ ಬರುತ್ತಿಲ್ಲ. ಮತ್ತೆ ಯಾವುದರ ಪರಿಣಾಮದಿಂದ ಇವನು ಭೂಮಿಯಲ್ಲಿ ಪತಿತನಾದನು?
ಯುಧಿಷ್ಠಿರಃ
ಏಕೋಹಂ ನಿರ್ದಹೇಯಂ ವೈ ಶತ್ರೂನಿತ್ಯರ್ಜುನೋಽಬ್ರವೀತ್|
ನ ಚ ತತ್ಕೃತವಾನೇಷ ಶೂರಮಾನೀ ತತೋಽಪತತ್ ॥21॥
ಯುಧಿಷ್ಠಿರ ಈ ಅರ್ಜುನನು ನಾನೊಬ್ಬನೇ ಶತ್ರುಗಳನ್ನು ಸುಟ್ಟುಬಿಡಬಲ್ಲೆ ಎಂದು ಹೇಳಿದ್ದನು. ತಾನೇ ಶೂರನೆಂಬ ದರ್ಪವುಳ್ಳ ಇವನು ಹೇಳಿದಂತೆ ಮಾಡಲಿಲ್ಲ. ಹಾಗಾಗಿ ಬಿದ್ದನು.
ಅವಮೇನೇ ಧನುರ್ಗ್ರಾಹಾನೇಷ ಸರ್ವಾಂಶ್ಚ ಫಲ್ಗುನಃ|
ತಥಾ ಚೈತನ್ನ ತು ತಥಾ ಕರ್ತವ್ಯಂ ಭೂತಿಮಿಚ್ಛತಾ ॥22॥
ಈ ಫಲ್ಗುನನು ಎಲ್ಲ ಧನುರ್ಧಾರಿಗಳನ್ನೂ ಅವಮಾನಿಸುತ್ತಿದ್ದನು. ಏಳಿಗೆಯನ್ನು ಬಯಸುವವನು ಆ ರೀತಿ ಮಾಡಕೂಡದು. ಆದ್ದರಿಂದಲೇ ಹೀಗಾಯಿತು.
ವೈಶಂಪಾಯನಃ
ಇತ್ಯುಕ್ತ್ವಾ ಪ್ರಸ್ಥಿತೋ ರಾಜಾ ಭೀಮೋಽಥ ನಿಪಪಾತ ಹ|
ಪತಿತಶ್ಚಾಬ್ರವೀದ್ ಭೀಮೋ ಧರ್ಮರಾಜಂ ಯುಧಿಷ್ಠಿರಮ್ ॥23॥
ವೈಶಂಪಾಯನ ಇಷ್ಟು ಹೇಳಿ ರಾಜನು ಮುಂದೆ ಹೊರಟನು. ಅಷ್ಟರಲ್ಲಿ ಭೀಮನೂ ಬಿದ್ದನು. ಬೀಳುತ್ತಿರುವ ಭೀಮನು ಧರ್ಮರಾಜನಾದ ಯುಧಿಷ್ಠಿರನನ್ನು ಕುರಿತು ಹೀಗೆಂದನು.
ಭೋ ಭೋ ರಾಜನ್ನವೇಕ್ಷಸ್ವ ಪತಿತೋಽಹಂ ಪ್ರಿಯಸ್ತವ|
ಕಿಂನಿಮಿತ್ತಂ ಚ ಪತನಂ ಬ್ರೂಹಿ ಮೇ ಯದಿ ವೇತ್ಥ ಹ ॥24॥
ಹೇ ರಾಜನ್, ನಿನಗೆ ಪ್ರಿಯನಾದ ನಾನೂ ಬಿದ್ದಿರುವೆನು, ನೋಡು. ನೀನು ತಿಳಿದಿರುವೆಯಾದರೆ ನನ್ನ ಪತನಕ್ಕೆ ಕಾರಣವೇನೆಂದು ಹೇಳು.
ಯುಧಿಷ್ಠಿರಃ
ಅತಿಭುಕ್ತಂ ಚ ಭವತಾ ಪ್ರಾಣೇನ ಚ ವಿಕತ್ಥಸೇ|
ಅನವೇಕ್ಷ್ಯ ಪರಂ ಪಾರ್ಥ ತೇನಾಸಿ ಪತಿತಃ ಕ್ಷಿತೌ ॥25॥
ಯುಧಿಷ್ಠಿರ ಹೇ ಪಾರ್ಥನೇ, ನೀನು ಅಗತ್ಯಕ್ಕಿಂತ ಹೆಚ್ಚಾಗಿ ತಿನ್ನುತ್ತಿದ್ದೆ. ಅಲ್ಲದೇ ಎದುರಿಗಿರುವವರನ್ನು ಲೆಕ್ಕಿಸದೆ ನಿನ್ನ ಬಲದ ಬಗ್ಗೆ ಕೊಚ್ಚಿಕೊಳ್ಳುತ್ತಿದ್ದೆ. ಇದರಿಂದಾಗಿಯೇ ನೀನು ಭೂಮಿಯಲ್ಲಿ ಬಿದ್ದಿರುವೆ.
ಇತ್ಯುಕ್ತ್ವಾ ತಂ ಮಹಾಬಾಹುರ್ಜಗಾಮಾನವಲೋಕಯನ್|
ಶ್ವಾಪ್ಯೇಕೋಽನುಯಯೌ ಯಸ್ತೇ ಬಹುಶಃ ಕೀರ್ತಿತೋ ಮಯಾ ॥26॥
ಇಷ್ಟು ಹೇಳಿ ಮಹಾಬಾಹುವಾದ ಯುಧಿಷ್ಠಿರನು ಅವನನ್ನು ಮತ್ತೆ ನೋಡದೆ ಮುನ್ನಡೆದನು. ಈ ಹಿಂದೆ ನಾನು ಬಹಳ ಬಾರಿ ತಿಳಿಸಿದಂತೆ ಆ ಶ್ವಾನವೊಂದೇ ಇವನನ್ನು ಹಿಂಬಾಲಿಸಿತು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮಹಾಪ್ರಸ್ಥಾನಿಕಪರ್ವಣಿ ಭೀಮಾರ್ಜುನ-ನಕುಲ-ಸಹದೇವ-ದ್ರೌಪದೀ ದೇಹಪತನನಿಮಿತ್ತಕಥನಂ ನಾಮ ತೃತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಮಹಾಪ್ರಸ್ಥಾನಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ನಾಲ್ಕನೆಯ ಅಧ್ಯಾಯ
ಶ್ವಾನದೊಂದಿಗೆ ಮುಂದೆ ನಡೆಯುತ್ತಿರುವ ಯುಧಿಷ್ಠಿರನಿಗೆ ಇಂದ್ರನು ಸ್ವರ್ಗಕ್ಕೆ
ತೆರಳಲು ತನ್ನ ರಥವನ್ನೇರುವಂತೆ ತಿಳಿಸುವುದು. ಯುಧಿಷ್ಠಿರನು ಶ್ವಾನವನ್ನು ಬಿಟ್ಟು ರಥವನ್ನೇರಲು ಬಯಸದಿದ್ದಾಗ, ಯಮನು ನಿಜಸ್ವರೂಪವನ್ನು ತೋರಿಸಿ ಅವನನ್ನು ಪ್ರಶಂಸಿಸುವುದು. ಅನಂತರ ಯಮ-ಇಂದ್ರಾದಿಗಳ ಜೊತೆಗೆ ರಥದಲ್ಲಿ ಸ್ವರ್ಗಕ್ಕೆ ತೆರಳಿದ ಯುಧಿಷ್ಠಿರನು ಅಲ್ಲಿ ಭೀಮಾದಿಗಳನ್ನು ಕಾಣದೆ ಸಹೋದರರಿಲ್ಲದ ಸ್ಥಳವು ಸ್ವರ್ಗವಾಗಿದ್ದರೂ ನನಗೆ ಅದು ಬೇಡ ಎಂದು ಹೇಳುತ್ತಾ, ಭೀಮಾದಿಗಳು
ಇರುವಲ್ಲಿಗೆ ತನ್ನನ್ನು ಕಳುಹಿಸಿರೆಂದು ಇಂದ್ರನನ್ನು ಪ್ರಾರ್ಥಿಸುವುದು.
ವೈಶಂಪಾಯನಃ
ತತಃ ಸನ್ನಾದಯನ್ ಶಕ್ರೋ ದಿವಂ ಭೂಮಿಂ ಚ ಸರ್ವಶಃ|
ರಥೇನೋಪಯಯೌ ಪಾರ್ಥಮಾರೋಹೇತ್ಯಬ್ರವೀಚ್ಚ ತಮ್ ॥1॥
ವೈಶಂಪಾಯನ ಅದೇ ಸಮಯಕ್ಕೆ ಇಂದ್ರನು ಭೂಮ್ಯಾಕಾಶಗಳನ್ನು ಸುತ್ತಲೂ ಮಂಗಳಧ್ವನಿಗಳಿಂದ ಮೊಳಗಿಸುತ್ತಾ ರಥದಿಂದ ಸಾಗಿಬಂದು ಯುಧಿಷ್ಠಿರನನ್ನು ಕುರಿತು `ರಥವನ್ನೇರು' ಎಂದನು.

ಸ್ವಭ್ರಾತೄನ್ ಪತಿತಾನ್ ದೃಷ್ಟ್ವಾ ಧರ್ಮರಾಜೋ ಯುಧಿಷ್ಠಿರಃ |
ಅಬ್ರುವೀಚ್ಛೋಕಸಂತಪ್ತಃ ಸಹಸ್ರಾಕ್ಷಮಿದಂ ವಚಃ ॥2॥
ಧರ್ಮರಾಜನಾದ ಯುಧಿಷ್ಠಿರನು ಬಿದ್ದಿರುವ ತನ್ನ ಸಹೋದರರನ್ನು ನೋಡುತ್ತಾ ದುಃಖತಪ್ತನಾಗಿ ಇಂದ್ರನನ್ನು ಕುರಿತು ಈ ಮಾತನ್ನಾಡಿದನು.
ಧರ್ಮಃ
ಭ್ರಾತರಃ ಪತಿತಾ ಮೇಽತ್ರ ಗಚ್ಛೇಯುಸ್ತೇ ಮಯಾ ಸಹ |
ನ ವಿನಾ ಭ್ರಾತೃಭಿಃ ಸ್ವರ್ಗಮಿಚ್ಛೇ ಗಂತುಂ ಸುರೇಶ್ವರ ॥3॥
ಧರ್ಮರಾಜ ಹೇ ಸುರೇಶ್ವರನೇ, ನನ್ನ ಸಹೋದರರು ಇಲ್ಲೇ ಬಿದ್ದಿರುವರು. ಅವರೂ ನನ್ನ ಜೊತೆಗೆ ಹೋಗುವಂತಾಗಲಿ. ಸಹೋದರರಿಲ್ಲದೆ ಸ್ವರ್ಗವನ್ನೇರಲು ನನಗೆ ಇಷ್ಟವಿಲ್ಲ.
ಸುಕುಮಾರೀ ಸುಖಾರ್ಹಾ ಚ ರಾಜಪುತ್ರೀ ಪುರಂದರ |
ಸಾಽಸ್ಮಾಭಿಃ ಸಹ ಗಚ್ಛೇತ ತದ್ಭವಾನನುಮನ್ಯತಾಮ್ ॥4॥
ಹೇ ಪುರಂದರನೇ, ಸುಕುಮಾರಿಯಾಗಿದ್ದು, ಸುಖಾನುಭವಕ್ಕೆ ಯೋಗ್ಯಳಾದ, ರಾಜಪುತ್ರಿಯಾದ ಆ ದ್ರೌಪದಿಯೂ ನಮ್ಮ ಜೊತೆಗೆ ಬರುವಂತಾಗಲಿ. ಅದನ್ನೂ ನೀನು ಅನುಮತಿಸಬೇಕು.
ಶಕ್ರಃ
ಭ್ರಾತೄನ್ ದ್ರಕ್ಷ್ಯಸಿ ಸ್ವರ್ಗೇ ತ್ವಮಗ್ರತಸ್ತ್ರಿದಿವಂ ಗತಾನ್ |
ಕೃಷ್ಣಯಾ ಸಹಿತಾನ್ ಸರ್ವಾನ್ ಮಾ ಶುಚೋ ಭರತರ್ಷಭ ॥5॥
ಇಂದ್ರ ಹೇ ಭರತರ್ಷಭನೇ, ದುಃಖಿಸಬೇಡ. ದ್ರೌಪದಿಯೊಂದಿಗೆ ಕೂಡಿಕೊಂಡು ಈ ಮೊದಲೇ ಸ್ವರ್ಗವನ್ನೇರಿದ ನಿನ್ನೆಲ್ಲ ಸಹೋದರರನ್ನು ನೀನು ಸ್ವರ್ಗದಲ್ಲಿ ನೋಡಲಿರುವೆ.
ನಿಕ್ಷಿಪ್ಯ ಮಾನುಷಂ ದೇಹಂ ಗತಾಸ್ತೇ ಭರತರ್ಷಭ |
ಅನೇನ ತ್ವಂ ಶರೀರೇಣ ಸ್ವರ್ಗಂ ಗಂತಾ ನ ಸಂಶಯಃ ॥6॥
ಹೇ ಭರತರ್ಷಭನೇ, ಅವರೆಲ್ಲರೂ ಮನುಷ್ಯದೇಹವನ್ನು ಇಲ್ಲೇ ಬಿಟ್ಟು ಸ್ವರ್ಗವನ್ನು ಸೇರಿರುವರು. ನೀನು ಈ ಶರೀರದ ಜೊತೆಗೆ ಸ್ವರ್ಗವನ್ನೇರಬಹುದಾಗಿದೆ. ಇದರಲ್ಲಿ ಸಂಶಯವಿಲ್ಲ.
ಯುಧಿಷ್ಠಿರಃ
ಅಯಂ ಶ್ವಾ ಭೂತಭವ್ಯೇಶ ಭಕ್ತೋ ಮಾಂ ನಿತ್ಯಮೇವ ಹ |
ಸ ಗಚ್ಛೇತ ಮಯಾ ಸಾರ್ಧಮಾನೃಶಂಸ್ಯಾ ಹಿ ಮೇ ಮತಿಃ ॥7॥
ಯುಧಿಷ್ಠಿರ ಭೂತ-ಭವಿಷ್ಯತ್ತುಗಳ ಅಧಿಪತಿಯಾದ ಹೇ ಇಂದ್ರನೇ, ಈ ಶ್ವಾನವು ನಿತ್ಯವೂ ನನ್ನೊಂದಿಗೇ ಇದ್ದು, ನನ್ನ ವಿಶ್ವಾಸಿಯಾಗಿತ್ತು. ಇದೂ ನನ್ನ ಜೊತೆಗೆ ಸ್ವರ್ಗವನ್ನೇರುವಂತಾಗಲಿ. ನನ್ನ ಮನಸ್ಸಿನಲ್ಲಿ ಯಾವುದೇ ವಂಚನೆಯಿಲ್ಲ.
ಶಕ್ರಃ
ಅಮರ್ತ್ಯತ್ವಂ ಮತ್ಸಮತ್ವಂ ಚ ರಾಜನ್
ಶ್ರಿಯಂ ಕೃತ್ಸ್ನಾಂ ಮಹತೀಂ ಚೈವ ಸಿದ್ಧಿಮ್ |
ಸಂಪ್ರಾಪ್ತೋದ್ಯ ಸ್ವರ್ಗಸುಖಾನಿ ಚ ತ್ವಂ
ತ್ಯಜ ಶ್ವಾನಂ ನಾತ್ರ ನೃಶಂಸಮಸ್ತಿ ॥8॥
ಇಂದ್ರ ಹೇ ರಾಜನೇ, ನೀನು ನನಗಿಂದು ಸಮನಾಗಿದ್ದು ಅಮರತ್ವವನ್ನೂ, ಎಲ್ಲ ರೀತಿಯ ಸಂಪತ್ತನ್ನೂ, ಬಹುದೊಡ್ಡ ಸಿದ್ಧಿಯನ್ನೂ ಪಡೆದಿರುವೆ. ಜೊತೆಗೆ ಸ್ವರ್ಗಸುಖಗಳನ್ನೂ ಪಡೆಯಲಿರುವೆ. ಆದ್ದರಿಂದ ಈ ಶ್ವಾನವನ್ನು ಬಿಟ್ಟುಬಿಡು. ಇಲ್ಲಿ ವಂಚನೆಯ ಮಾತೇ ಬರಲಾರದು.
ಯುಧಿಷ್ಠಿರಃ
ಅನಾರ್ಯಮಾರ್ಯೇಣ ಸಹಸ್ರನೇತ್ರ
ಶಕ್ಯಂ ಕರ್ತುಂ ದುಷ್ಕರಮೇತದಾರ್ಯ |
ಮಾ ಮೇ ಶ್ರಿಯಾ ಸಂಗಮನಂ ತಯಾಽಸ್ತು
ಯಸ್ಯಾಃ ಕೃತೇ ಭಕ್ತಜನಂ ತ್ಯಜೇಯಮ್ ॥9॥
ಯುಧಿಷ್ಠಿರ ಹೇ ಗೌರವಾನ್ವಿತನಾದ ಸಹಸ್ರಾಕ್ಷನೇ, ಔದಾರ್ಯವುಳ್ಳ ವ್ಯಕ್ತಿಗೆ ಈ ದುರ್ನೀತಿಯ ನಡತೆಯನ್ನು ಸಾಧಿಸಿ ನಡೆಸುವುದು ಬಹಳ ಕಷ್ಟ. ಆದ್ದರಿಂದ ಯಾವ ಸಂಪತ್ತಿಗೋಸ್ಕರ ಭಕ್ತಜನರನ್ನು ಬಿಡಬೇಕಾಗುವುದೋ ಆ ರೀತಿಯ ಸಂಪತ್ತಿನ ಸಂಬಂಧವೇ ನನಗೆ ಬೇಡ.
ಇಂದ್ರಃ
ಸ್ವರ್ಗೇ ಲೋಕೇ ಶ್ವವತಾಂ ನಾಸ್ತಿ ಧಿಷ್ಣ್ಯ-
ಮಿಷ್ಟಾಪೂರ್ತಂ ಕ್ರೋಧವಶಾ ಹರಂತಿ |
ತತೋ ವಿಚಾರ್ಯ ಕ್ರಿಯತಾಂ ಧರ್ಮರಾಜ
ತ್ಯಜ ಶ್ವಾನಂ ನಾತ್ರ ನೃಶಂಸಮಸ್ತಿ ॥10॥
ಇಂದ್ರ ಹೇ ಧರ್ಮರಾಜನೇ, ಶ್ವಾನದ ಒಡೆತನವುಳ್ಳವರಿಗೆ ಸ್ವರ್ಗಲೋಕದಲ್ಲಿ ಸ್ಥಾನವಿಲ್ಲ. ಏಕೆಂದರೆ ಅಂತಹವರ ಧರ್ಮಕರ್ಮಗಳ ಪುಣ್ಯಫಲವನ್ನು ಕ್ರೋಧವಶರೆಂಬ ರಾಕ್ಷಸರು ಅಪಹರಿಸುವರು. ಆದ್ದರಿಂದ ಚೆನ್ನಾಗಿ ವಿಮರ್ಶಿಸಿ ಮುಂದೆ ನಡೆ. ಶ್ವಾನವನ್ನು

ಬಿಟ್ಟುಬಿಡು. ಇದರಿಂದ ಏನೂ ವಂಚನೆಯಾಗದು.
ಯುಧಿಷ್ಠಿರಃ
ಭಕ್ತತ್ಯಾಗಂ ಪ್ರಾಹುರತ್ಯಂತಪಾಪಂ
ತುಲ್ಯಂ ಲೋಕೇ ಬ್ರಹ್ಮವಧ್ಯಾಕೃತೇನ |
ತಸ್ಮಾನ್ನಾಹಂ ಜಾತು ಕಥಂಚನಾದ್ಯ
ತ್ಯಕ್ಷ್ಯಾಮ್ಯೇನಂ ಸ್ವಸುಖಾರ್ಥೀ ಮಹೇಂದ್ರ ॥11॥
ಯುಧಿಷ್ಠಿರ ಹೇ ಮಹೇಂದ್ರನೇ, ಲೋಕದಲ್ಲಿ ಭಕ್ತರನ್ನು ತ್ಯಾಗ ಮಾಡುವುದು ಬ್ರಹ್ಮಹತ್ಯೆಗೆ ಸಮವಾದ ಮಹಾಪಾಪವೆಂದು ಹೇಳುವರು. ಆದ್ದರಿಂದ ಎಷ್ಟು ವಿಮರ್ಶೆ ಮಾಡಿದರೂ ಯಾವುದೇ ರೀತಿಯಿಂದ ಆಲೋಚಿಸಿದರೂ ನನ್ನ ಸುಖಕ್ಕೋಸ್ಕರ ನಾನು ಈ ಶ್ವಾನವನ್ನು ಬಿಡಲಾರೆ.
ಭೀತಂ ಭಕ್ತಂ ನಾನ್ಯದಸ್ತೀತಿ ಚಾರ್ತಂ
ಪ್ರಾಪ್ತಂ ಕ್ಷೀಣಂ ರಕ್ಷಣೇ ಪ್ರಾಣಲಿಪ್ಸುಮ್ |
ಪ್ರಾಣತ್ಯಾಗಾದಪ್ಯಹಂ ನೈವ ಮೋಕ್ತುಂ
ಯತೇಯಂ ವೈ ನಿತ್ಯಮೇತದ್ ವ್ರತಂ ಮೇ ॥12॥
ಹೆದರಿದ, ಬೇರಾರೂ ಇಲ್ಲವೆಂದು ಕಂಗೆಟ್ಟ, ಕ್ಷೀಣನಾದ, ರಕ್ಷಣೆಗೋಸ್ಕರ ನನ್ನ ಬಳಿ ಬಂದ, ಬದುಕಬೇಕೆಂಬ ಬಯಕೆಯುಳ್ಳ ಭಕ್ತನನ್ನು ಪ್ರಾಣಹೋಗುವಂತಿದ್ದರೂ ನಾನು ಬಿಡಲು ಪ್ರಯತ್ನಿಸಲಾರೆ. ಇದು ನನಗೆ ಬಿಡಲಾರದ ನಿಷ್ಠೆಯಾಗಿದೆ.
ಇಂದ್ರಃ
ಶುನಾ ದೃಷ್ಟಂ ಕ್ರೋಧವಶಾ ಹರಂತಿ
ಯದ್ದತ್ತಂ ವಿವೃತಮಥೋ ಹುತಂ ಚ |
ತಸ್ಮಾಚ್ಛುನಸ್ತ್ಯಾಗಮಿಮಂ ಕುರುಷ್ವ
ಶುನಸ್ತ್ಯಾಗಾತ್ ಪ್ರಾಪ್ಸ್ಯಸೇ ದೇವಲೋಕಮ್ ॥13॥
ಇಂದ್ರ ನಾಯಿಯು ನೋಡಿದ ಯಾವುದೇ ದಾನ, ಯಜ್ಞ, ಆಹುತಿಗಳನ್ನು ಕ್ರೋಧವಶರು ಅಪಹರಿಸುವರು. ಆದ್ದರಿಂದ ಈ ಶ್ವಾನವನ್ನು ತ್ಯಜಿಸು. ಇದನ್ನು ಬಿಟ್ಟುಬಿಡುವುದರಿಂದ ನೀನು ದೇವಲೋಕವನ್ನು ಪಡೆಯುವೆ.
ತ್ಯಕ್ತತ್ವ ಭ್ರಾತೄನ್ ದಯಿತಾಂ ಚಾಪಿ ಕೃಷ್ಣಾಂ
ಪ್ರಾಪ್ತೋ ಲೋಕಃ ಕರ್ಮಣಾ ಸ್ವೇನ ವೀರ |
ಶ್ವಾನಂ ಚೈನಂ ನ ತ್ಯಜಸೇ ಕಥಂ ನು
ತ್ಯಾಗಂ ಕೃತ್ಸ್ನಂ ಚಾಸ್ಥಿತೋ ಮುಹ್ಯಸೇಽದ್ಯ ॥14॥
ಹೇ ವೀರನೇ, ನಿನ್ನ ಸಹೋದರರರನ್ನೂ ಬಿಟ್ಟು, ದಯಿತೆಯಾದ ದ್ರೌಪದಿಯನ್ನೂ ಬಿಟ್ಟು, ನಿನ್ನದೇ ಸತ್ಕರ್ಮಗಳಿಂದ ಸ್ವರ್ಗಲೋಕವು ಪ್ರಾಪ್ತವಾಗಿದೆ. ಈ ಶ್ವಾನವನ್ನೇಕೆ ನೀನು ಬಿಡುತ್ತಿಲ್ಲ? ಎಲ್ಲವನ್ನೂ ಬಿಟ್ಟು ನಿಂತಿರುವ ನೀನು ಈ ಶ್ವಾನದ ವಿಷಯದಲ್ಲಿ ಇಂದು ಏಕೆ ಮೋಹಗೊಂಡಿರುವೆ?
ಯುಧಿಷ್ಠಿರಃ
ನ ವಿದ್ಯತೇ ಸಂಧಿರಥಾಪಿ ವಿಗ್ರಹೋ
ಮೃತೈರ್ಮರ್ತ್ಯೈ ರ್ಿೃರಿತಿ ಲೋಕೇಷು ನಿಷ್ಠಾ |
ನ ತೇ ಮಯಾ ಜೀವಯಿತುಂ ಹಿ ಶಕ್ಯಾಃ
ತತಸ್ತ್ಯಾಗಸ್ತೇಷು ಕೃತೋ ನ ಜೀವತಾಮ್ ॥15॥
ಯುಧಿಷ್ಠಿರ ಮರಣ ಹೊಂದಿದ ಮನುಜರೊಂದಿಗೆ ಸಂಧಾನವಾಗಲಿ, ಯುದ್ಧವಾಗಲಿ ಇರುವುದಿಲ್ಲ ಎಂಬುದು ಲೋಕದ ನೀತಿಯಾಗಿದೆ. ಅವರನ್ನು ಬದುಕಿಸಲೂ ನನಗೆ ಸಾಧ್ಯವಿಲ್ಲ. ಆದ್ದರಿಂದ ಅವರನ್ನು ನಾನು ಬಿಡಬೇಕಾಯಿತು ಹೊರತು ಬದುಕಿದ್ದ ಅವರನ್ನು ನಾನು ತ್ಯಜಿಸಲಿಲ್ಲ.
ಪ್ರತಿಪ್ರದಾನಂ ಶರಣಾಗತಸ್ಯ
ಸ್ತ್ರಿಯಾ ವಧೋ ಬ್ರಾಹ್ಮಣಸ್ವಾಪಹಾರಃ |
ಮಿತ್ರದ್ರೋಹಸ್ತಾನಿ ಚತ್ವಾರಿ ಶಕ್ರ
ಭಕ್ತತ್ಯಾಗಶ್ಚೈವ ಸಮೋ ಮತೋ ಮೇ ॥16॥
ಶರಣಾಗತನಾದವನನ್ನು ಅವನ ಶತ್ರುವಿಗೆ ಒಪ್ಪಿಸುವುದು, ಸ್ತ್ರೀಯನ್ನು ವಧಿಸುವುದು, ಬ್ರಾಹ್ಮಣರ ಸಂಪತ್ತನ್ನು ಅಪಹರಿಸುವುದು ಮತ್ತು ಮಿತ್ರದ್ರೋಹ ಈ ನಾಲ್ಕು ಭಕ್ತತ್ಯಾಗಕ್ಕೆ ಸಮಾನ ಎಂಬುದು ನನ್ನ ಅಭಿಪ್ರಾಯ.
ವೈಶಂಪಾಯನಃ
ತದ್ಧರ್ಮರಾಜಸ್ಯ ವಚೋ ನಿಶಮ್ಯ
ಧರ್ಮಸ್ವರೂಪೀ ಭಗವಾನುವಾಚ |
ಯುಧಿಷ್ಠಿರಂ ಪ್ರೀತಿಯುಕ್ತೋ ನರೇಂದ್ರಂ
ಶ್ಲಕ್ಷ್ಣೈರ್ವಾಕ್ಯೈಃ ಸಂಸ್ತವಸಂಪ್ರಯುಕ್ತೈಃ ॥17॥
ವೈಶಂಪಾಯನ ಧರ್ಮರಾಜನ ಆ ಮಾತನ್ನು ಕೇಳಿ, ಧರ್ಮಸ್ವರೂಪಿಯಾದ ಆ ಭಗವಂತನು ಯುಧಿಷ್ಠಿರನ ಬಗ್ಗೆ ಸಂತೋಷವುಳ್ಳವನಾಗಿ, ಮಧುರವಾಕ್ಯಗಳಿಂದ ಮತ್ತು ಹೊಗಳು ಮಾತುಗಳಿಂದ ರಾಜನನ್ನು ಕುರಿತು ಹೀಗೆಂದನು.

ಅಭಿಜಾತೋಸಿ ರಾಜೇಂದ್ರ ಪಿತುರ್ವೃತ್ತೇನ ಮೇಧಯಾ |
ಅನುಕ್ರೋಶೇನ ಚಾನೇನ ಸರ್ವಭೂತೇಷು ಭಾರತ ॥18॥
ಹೇ ಭಾರತನೇ, ರಾಜಶ್ರೇಷ್ಠನೇ, ತಂದೆಯ ನಡವಳಿಕೆಯಿಂದ, ಉತ್ತಮವಾದ ಬುದ್ಧಿಯಿಂದ ಎಲ್ಲ ಜೀವಜಂತುಗಳಲ್ಲಿ ಈ ರೀತಿಯ ದಯಾಗುಣದಿಂದ ನೀನು ಸಾರ್ಥಕವಾದ ಜನ್ಮವುಳ್ಳವನಾಗಿರುವಿ.
ಪುರಾ ದ್ವೈತವನೇ ಚಾಸಿ ಮಯಾ ಪುತ್ರ ಪರೀಕ್ಷಿತಃ |
ಪಾನೀಯಾರ್ಥೇ ಪರಾಕ್ರಾಂತಾ ಯತ್ರ ತೇ ಭ್ರಾತರೋ ಹತಾಃ ॥19॥
ಹೇ ಮಗನೇ, ಹಿಂದೆ ದ್ವೈತವನದಲ್ಲಿ ನೀರಿಗೋಸ್ಕರ ಪರಾಕ್ರಮವನ್ನು ತೋರಿಸಿ, ನಿನ್ನ ಸಹೋದರರು ಹತರಾದಾಗ ನನ್ನಿಂದ ನೀನು ಪರೀಕ್ಷೆಗೊಳಗಾಗಿದ್ದೆ.
ಭೀಮಾರ್ಜುನೌ ಪರಿತ್ಯಜ್ಯ ಯತ್ರ ತ್ವಂ ಭ್ರಾತರಾವುಭೌ |
ಮಾತ್ರೋಃ ಸಾಮ್ಯಮಭೀಪ್ಸನ್ ವೈ ನಕುಲಂ ಜೀವಮಿಚ್ಛಸಿ ॥20॥
ಆ ಯಾವ ದ್ವೈತವನದಲ್ಲಿ ನಿನ್ನ ಇಬ್ಬರು ಸಹೋದರರಾದ ಭೀಮಾರ್ಜುನರನ್ನು ಬಿಟ್ಟು, ಮಾತೆಯರಲ್ಲಿ ಸಾಮ್ಯವನ್ನು ಬಯಸಿದ ನೀನು ನಕುಲನನ್ನು ಬದುಕಿಸಲು ಇಷ್ಟಪಟ್ಟೆ.
ಅಯಂ ಶ್ವಾ ಭಕ್ತ ಇತ್ಯೇವಂ ತ್ಯಕ್ತೋ ದೇವರಥಸ್ತ್ವಯಾ |
ತಸ್ಮಾತ್ ಸ್ವರ್ಗೇ ನ ತೇ ತುಲ್ಯಃ ಕಶ್ಚಿದಸ್ತಿ ನರಾಧಿಪಃ ॥21॥
ಈಗ ಪುನಃ ಈ ಶ್ವಾನವು ನಿನ್ನ ಭಕ್ತ ಎಂಬ ಕಾರಣದಿಂದಲೇ ದೇವರಥವನ್ನು ತ್ಯಾಗ ಮಾಡಿರುವೆ. ಆದ್ದರಿಂದ ಹೇ ನರಾಧಿಪತಿಯೇ, ಸ್ವರ್ಗದಲ್ಲಿ ನಿನಗೆ ಸಮಾನರಾದವರು ಯಾರೂ ಇಲ್ಲ.
ಅತಸ್ತವಾಕ್ಷಯಾ ಲೋಕಾಃ ಸ್ವಶರೀರೇಣ ಭಾರತ |
ಪ್ರಾಪ್ತೋಸಿ ಭರತಶ್ರೇಷ್ಠ ದಿವ್ಯಾಂ ಗತಿಮನುತ್ತಮಾಮ್ ॥22॥
ಹೇ ಭಾರತನೇ, ಆದ್ದರಿಂದಲೇ ನಿನಗೆ ಈ ಶರೀರದೊಂದಿಗೆ ನಾಶವಿಲ್ಲದ ಪುಣ್ಯಲೋಕಗಳು ಪ್ರಾಪ್ತವಾದವು. ಹೇ ಭರತಶ್ರೇಷ್ಠನೇ, ಇದರಿಂದ ಅದ್ವಿತೀಯವಾದ ದೇವಗತಿಯನ್ನು ನೀನು ಪಡೆದಿರುವಿ.
ವೈಶಂಪಾಯನಃ
ತತೋ ಧರ್ಮಶ್ಚ ಶಕ್ರಶ್ಚ ಮರುತಶ್ಚಾಶ್ವಿನಾವಪಿ |
ದೇವಾ ದೇವರ್ಷಯಶ್ಚೈವ ರಥಮಾರೋಪ್ಯ ಪಾಂಡವಮ್ ॥23॥
ಪ್ರಯಯುಃ ಸ್ವೈರ್ವಿಮಾನೈಸ್ತೇ ಸಿದ್ಧಾಃ ಕಾಮವಿಹಾರಿಣಃ |
ಸರ್ವೇ ವಿರಜಸಃ ಪುಣ್ಯಾಃ ಪುಣ್ಯವಾಗ್ ಬುದ್ಧಿಕರ್ಮಿಣಃ ॥24॥
ವೈಶಂಪಾಯನ ಅನಂತರ ಯಮಧರ್ಮನೂ, ಇಂದ್ರನೂ, ಮರುದ್ದೇವತೆಗಳೂ, ಅಶ್ವಿನೀದೇವತೆಗಳೂ ಅಲ್ಲದೆ ಮನಸ್ಸಿಗೆ ಬಂದಲ್ಲಿ ಸಂಚರಿಸುವ ಸಾಮರ್ಥ್ಯವುಳ್ಳ, ಸಿದ್ಧರಾದ, ಮಂಗಳಮಯವಾದ ಮಾತು-ಬುದ್ಧಿ ಮತ್ತು ಕರ್ಮಗಳುಳ್ಳ ಆ ಎಲ್ಲ ದೇವತೆಗಳು, ದೇವರ್ಷಿಗಳೂ ಪಾಂಡುಪುತ್ರನಾದ ಯುಧಿಷ್ಠಿರನನ್ನು ರಥಕ್ಕೆ ಹತ್ತಿಸಿ ತಮ್ಮ ತಮ್ಮ ವಿಮಾನಗಳಿಂದ ಸ್ವರ್ಗಕ್ಕೆ ಸಾಗಿದರು.
ಸ ತಂ ರಥಂ ಸಮಾಸ್ಥಾಯ ರಾಜಾ ಕುರುಕುಲೋದ್ವಹಃ |
ಊರ್ಧ್ವಮಾಚಕ್ರಮೇ ಶೀಘ್ರಂ ತೇಜಸಾಽಽವೃತ್ಯ ರೋದಸೀ ॥25॥
ಕುರುಕುಲದಲ್ಲಿ ಜನಿಸಿದ ಆ ಯುಧಿಷ್ಠಿರನು ರಥದಲ್ಲಿ ಕುಳಿತು ತನ್ನ ತೇಜಸ್ಸಿನಿಂದ ಭೂಮ್ಯಾಕಾಶಗಳನ್ನು ಬೆಳಗಿಸುತ್ತಾ, ಶೀಘ್ರವಾಗಿ ಮೇಲಕ್ಕೆ ಪ್ರಯಾಣ ಬೆಳೆಸಿದನು.
ತತೋ ದೇವನಿಕಾಯ್ಯಸ್ಥೋ ನಾರದಃ ಸರ್ವಲೋಕವಿತ್ |
ಉವಾಚೋಚ್ಚೈಸ್ತದಾ ವಾಕ್ಯಂ ಬೃಹದ್ವಾದೀ ಬೃಹತ್ತಪಾಃ ॥26॥
ಆಗ ದೇವಸಮೂಹದ ಮಧ್ಯದಲ್ಲಿದ್ದ ಮಹಾನ್‌ವಾಗ್ಮಿಯಾದ, ಉತ್ತಮ ತಪಸ್ವಿಯಾದ, ಸರ್ವಲೋಕಗಳನ್ನೂ ತಿಳಿದಿರುವ ನಾರದರು ಉಚ್ಚಸ್ವರದಲ್ಲಿ ಹೀಗೆಂದರು.
ಯೇಽಪಿ ರಾಜರ್ಷಯಃ ಪೂರ್ವೇ ತೇ ಚಾಪಿ ಸಮುಪಸ್ಥಿತಾಃ |
ಕೀರ್ತಿಂ ಪ್ರಚ್ಛಾದ್ಯ ತೇಷಾಂ ವೈ ಕುರುರಾಜೋಽಧಿತಿಷ್ಠತಿ ॥27॥
ಈ ಮೊದಲು ಯಾರೆಲ್ಲ ರಾಜರ್ಷಿಗಳು ಆಗಿಹೋದರೋ ಅವರೆಲ್ಲರೂ ಈ ಸ್ವರ್ಗದಲ್ಲಿ ಸನ್ನಿಹಿತರಾಗಿರುವರು. ಅಂತಹ ಎಲ್ಲರ ಕೀರ್ತಿಯನ್ನು ಮರೆ ಮಾಡಿ ಈ ಕುರುರಾಜನು ಸ್ವರ್ಗವನ್ನೇರಿರುವನು.
ಲೋಕಾನಾವೃತ್ಯ ಯಶಸಾ ತೇಜಸಾ ವೃತ್ತಸಂಪದಾ |
ಸ್ವಶರೀರೇಣ ಸಂಪ್ರಾಪ್ತಂ ನಾನ್ಯಂ ಶುಶ್ರುಮ ಪಾಂಡವಾತ್ ॥28॥
ತೇಜಾಂಸಿ ಯಾನಿ ದೃಷ್ಟಾನಿ ಭೂಮಿಷ್ಠೇನ ತ್ವಯಾ ವಿಭೋ |
ವೇಶ್ಮಾನಿ ಭುವಿ ದೇವಾನಾಂ ಪಶ್ಯಾಮೂನಿ ಸಹಸ್ರಶಃ ॥29॥
ತನ್ನ ಯಶಸ್ಸೂ, ತೇಜಸ್ಸೂ ಹಾಗೂ ಸನ್ಮಾರ್ಗಗಳೆಂಬ ಸಂಪತ್ತಿನಿಂದ ಇಡೀ ಜಗತ್ತನ್ನು ಆವರಿಸಿಕೊಂಡು ತನ್ನ ಶರೀರದೊಂದಿಗೇ ಸ್ವರ್ಗಕ್ಕೆ ಬಂದ ಧರ್ಮರಾಯನನ್ನು ಬಿಟ್ಟು ಇನ್ನೊಬ್ಬನನ್ನು ನಾವು ಕೇಳಲಾರೆವು. ಹೇ ವಿಭುವೇ, ಭೂಮಿಯಲ್ಲಿರುವ ನಿನ್ನಿಂದ ಯಾರೆಲ್ಲ ತೇಜಸ್ವಿಗಳು ದೃಷ್ಟರಾಗಿರುವರೋ ಅಂತಹ ಸಾವಿರಾರು ಜನರ ಮನೆಗಳನ್ನು ಈ ದೇವಭೂಮಿಯಲ್ಲಿ ನೋಡು.
ನಾರದಸ್ಯ ವಚಃ ಶ್ರುತ್ವಾ ರಾಜಾ ವಚನಮಬ್ರವೀತ್ |
ಭ್ರಾತೄನಪಶ್ಯನ್ ಧರ್ಮಾತ್ಮಾ ಸ್ವಪಕ್ಷಾಂಶ್ಚೈವ ಪಾರ್ಥಿವಾನ್ ॥30॥
ನಾರದರ ಮಾತುಗಳನ್ನು ಕೇಳಿ, ಧರ್ಮಾತ್ಮನಾದ ರಾಜನು ಅಲ್ಲಿ ತನ್ನ ಸಹೋದರರನ್ನೂ, ತನ್ನ ಪಕ್ಷದಲ್ಲಿರುವ ರಾಜರನ್ನೂ

ನೋಡದೆ ಹೀಗೆಂದನು.
ಶುಭಂ ವಾ ಯದಿ ವಾ ಪಾಪಂ ಭ್ರಾತೄಣಾಂ ಸ್ಥಾನಮದ್ಯ ಮೇ |
ತದೇವ ಪ್ರಾಪ್ತುಮಿಚ್ಛಾಮಿ ಲೋಕಾನನ್ಯಾನ್ನ ಕಾಮಯೇ ॥31॥
ನನ್ನ ಸಹೋದರರಿಗೆ ಇಂದು ಯಾವ ಸ್ಥಾನ ಸಿಕ್ಕಿದೆಯೋ ಅದು ಶುಭ ಲೋಕವಾಗಿರಲಿ ಅಥವಾ ಪಾಪಲೋಕವಾಗಿರಲಿ, ಅದನ್ನೇ ಪಡೆಯಲು ನಾನು ಬಯಸುವೆ. ಬೇರೆ ಲೋಕಗಳನ್ನು ಬಯಸಲಾರೆ.
ರಾಜ್ಞಸ್ತು ವಚನಂ ಶ್ರುತ್ವಾ ದೇವರಾಜಃ ಪುರಂದರಃ |
ಆನೃಶಂಸ್ಯಸಮಾಯುಕ್ತಂ ಪ್ರತ್ಯುವಾಚ ಯುಧಿಷ್ಠಿರಮ್ ॥32॥
ರಾಜನ ನಿರ್ವಂಚನೆಯಿಂದ ಕೂಡಿದ ಈ ಮಾತುಗಳನ್ನು ಕೇಳಿದ, ದೇವತೆಗಳ ರಾಜನಾದ ಪುರಂದರನು ಯುಧಿಷ್ಠಿರನನ್ನು ಕುರಿತು ಈ ರೀತಿ ಉತ್ತರಿಸಿದನು.
ಸ್ಥಾನೇಽಸ್ಮಿನ್ ವಸ ರಾಜೇಂದ್ರ ಕರ್ಮಭಿರ್ನಿರ್ಜಿತೇ ಶುಭೈಃ |
ಕಿಂ ತ್ವಂ ಮಾನುಷ್ಯಕಂ ಸ್ನೇಹಮದ್ಯಾಪಿ ಪರಿಕರ್ಷಸಿ ॥33॥
ಹೇ ರಾಜೇಂದ್ರನೇ, ನೀನೇ ಮಾಡಿದ ಉತ್ತಮ ಶುಭಕರ್ಮಗಳಿಂದ ಪಡೆದ ಈ ಸ್ಥಾನದಲ್ಲಿ ನೀನು ವಾಸ ಮಾಡು. ಮನುಷ್ಯ ಜನ್ಮದಲ್ಲಿ ಇರಿಸಿಕೊಂಡಿದ್ದ ಸ್ನೇಹವನ್ನು ನೀನು ಇಂದೂ ಏಕೆ ಎಳೆದುತರುತ್ತಿರುವೆ?
ಸಿದ್ಧಿಂ ಪ್ರಾಪ್ತೋಸಿ ಪರಮಾಂ ಯಥಾ ನಾನ್ಯಃ ಪುಮಾನ್ ಕ್ವಚಿತ್ |
ನೈವ ತೇ ಭ್ರಾತರಃ ಸ್ಥಾನಂ ಸಂಪ್ರಾಪ್ತಾಃ ಕುರುನಂದನ ॥34॥
ಹೇ ಕುರುನಂದನನೇ, ಬೇರ್ಯಾವ ಪುರುಷನು ಎಂದೂ ಪಡೆಯದ, ಉತ್ತಮವಾದ ಸಿದ್ಧಿಯನ್ನು ನೀನು ಹೊಂದಿರುವೆ. ಆ ನಿನ್ನ ಸಹೋದರರು ಈ ಸ್ಥಾನವನ್ನು ಪಡೆದಿಲ್ಲ.
ಅದ್ಯಾಪಿ ಮಾನುಷೋ ಭಾವಃ ಸ್ಪೃಶತೇ ತ್ವಾಂ ನರಾಧಿಪ |
ಸ್ವರ್ಗೋಽಯಂ ಪಶ್ಯ ದೇವರ್ಷೀನ್ ಸಿದ್ಧಾಂಶ್ಚ ತ್ರಿದಿವಾಲಯಾನ್ ॥
ಹೇ ನರಾಧಿಪನೇ, ನಿನಗೆ ಈಗಲೂ ಮನುಷ್ಯಸ್ವಭಾವವೇ ಉಳಿದುಬಿಟ್ಟಿದೆ. ಸರಿಯಾಗಿ ನೋಡು. ಇದು ಸ್ವರ್ಗ. ಇಲ್ಲಿರುವ ದೇವರ್ಷಿಗಳನ್ನೂ, ಸಿದ್ಧರನ್ನೂ, ದೇವತೆಗಳನ್ನೂ ಗಮನಿಸು.
ಯುಧಿಷ್ಠಿರಸ್ತು ದೇವೇಂದ್ರಮೇವಂವಾದಿನಮೀಶ್ವರಮ್ |
ಪುನರೇವಾಬ್ರವೀದ್ಧೀಮಾನಿದಂ ವಚನಮರ್ಥವತ್ ॥36॥
ಹೀಗೆ ಹೇಳುತ್ತಿರುವ ಸ್ವರ್ಗಾಧಿಪತಿಯಾದ ದೇವೇಂದ್ರನನ್ನು ಕುರಿತು ಧೀಮಂತನಾದ ಯುಧಿಷ್ಠಿರನು ಮತ್ತೆ ಹೀಗೆ ಅರ್ಥವತ್ತಾದ ಮಾತುಗಳನ್ನು ಆಡಿದನು.
ಯುಧಿಷ್ಠಿರಃ
ತೈರ್ವಿನಾ ನೋತ್ಸಹೇ ವಸ್ತುಮಿಹ ದೈತ್ಯನಿಬರ್ಹಣ |
ಗಂತುಮಿಚ್ಛಾಮಿ ತತ್ರಾಹಂ ಯತ್ರ ಮೇ ಭ್ರಾತರೋ ಗತಾಃ ॥37॥
ಯುಧಿಷ್ಠಿರ ಹೇ ದೈತ್ಯಸಂಹಾರಕನೇ, ಅವರಿಲ್ಲದ ಸ್ಥಳದಲ್ಲಿ ವಾಸ ಮಾಡಲು ನಾನು ಉತ್ಸಾಹ ಪಡಲಾರೆ. ಎಲ್ಲಿ ನನ್ನ ಸಹೋದರರು ಸೇರಿರುವರೋ ಅಲ್ಲಿಗೇ ಹೋಗಲು ನಾನು ಬಯಸುತ್ತಿದ್ದೇನೆ.
ಯತ್ರ ಸಾ ಬೃಹತೀ ಶ್ಯಾಮಾ ಬುದ್ಧಿಸತ್ತ್ವಗುಣಾನ್ವಿತಾ |
ದ್ರೌಪದೀ ಯೋಷಿತಾಂ ಶ್ರೇಷ್ಠಾ ಯತ್ರ ಚೈವ ಸುತಾ ಮಮ ॥38॥
ಬುದ್ಧಿ ಹಾಗೂ ಸತ್ವಗುಣಗಳಿಂದ ತುಂಬಿದ, ಅದರಿಂದಲೇ ಮಹತ್ವವನ್ನು ಪಡೆದ, ಸ್ತ್ರೀಶ್ರೇಷ್ಠಳಾದ ಕೃಷ್ಣೆ ದ್ರೌಪದಿಯು ಎಲ್ಲಿರುವಳೋ, ನನ್ನ ಮಕ್ಕಳು ಎಲ್ಲಿರುವರೋ ಅಲ್ಲೇ ನಾನು ಇರಬಯಸುವೆ.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಮಹಾಪ್ರಸ್ಥಾನಿಕಪರ್ವಣಿ ಇಂದ್ರಯುಧಿಷ್ಠಿರಸಂವಾದೋ ನಾಮ ಚತುರ್ಥೋಽಧ್ಯಾಯಃ॥
ಇಲ್ಲಿಗೆ ಮಹಾಭಾರತದ ಮಹಾಪ್ರಸ್ಥಾನಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಮಹಾಪ್ರಸ್ಥಾನಿಕಪರ್ವ ॥

* * * *

## ಸ್ವರ್ಗಾರೋಹಣಪರ್ವ

ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ತೇಷು ಸ್ವಲೋಕಾನ್ ಪ್ರಾಪ್ತೇಷು ಧರ್ಮಜಶ್ಚಾತ್ಮನಾ ಸಹ |
ಯಯೌ ಪುರೋ ದೇವರಥಸ್ತದಾಽಸ್ಯಾವತತಾರ ಹ ॥
ಭೀಮ ಮುಂತಾದವರು ತಮ್ಮ ಲೋಕಗಳಿಗೆ ಹೋದ ಬಳಿಕ ಧರ್ಮರಾಜನು ನಾಯಿರೂಪದ ತನ್ನ ಜೊತೆಗೇ ಮುಂದೆ ನಡೆದ. ಆಗ ಅವನ ಮುಂದೆ ದೇವರಥ ಇಳಿದು ಬಂದಿತು.
ರಥಮಾರುಹೇತಿ ಕಥಿತೋ ರಥಿನಾ ಪುರತಃ ಶುನಃ |
ಆರೋಹಮಬ್ರವೀನ್ನೈತದ್ ಯುಕ್ತಮಿತ್ಯಾಹ ಸೋಽಪಿ ತಮ್ ॥
ರಥವನ್ನೇರು ಎಂದು ಸೂತ ನುಡಿದಾಗ ಮೊದಲಿಗೆ ನಾಯಿ ಏರಬೇಕು ಎಂದ ಧರ್ಮರಾಜ. ಇದು ಯುಕ್ತವಲ್ಲ ಎಂದ ಸೂತ.

ನಾSSರುಹೇಯಂ ವಿನಾ ಶ್ವಾನಮಿತಿ ತೇನ ಸ್ಥಿರೋದಿತೇ |
ಸ್ವರೂಪಂ ದರ್ಶಯಾಮಾಸ ಧರ್ಮೋ ಹ್ಯಾತ್ಮಸ್ವರೂಪತಾಮ್ ॥
`ನಾಯಿಯನ್ನು ಬಿಟ್ಟು ನಾನು ರಥವನ್ನೇರಲಾರೆ' ಎಂದು ದೃಢವಾಗಿ ಧರ್ಮರಾಜ ಹೇಳಿದಾಗ ನಾಯಿಯ ರೂಪವನ್ನು ತಳೆದಿದ್ದ ಯಮ ನಿಜರೂಪವನ್ನು ತೋರಿದನು.
ಆನೃಶಂಸ್ಯಪರತ್ವೇನ ಕೀರ್ತಿಮೇವಾತ್ಮನೋ ವೃಷಃ |
ಖ್ಯಾಪಯಾಮಾಸ ಕೌಂತೇಯರೂಪಿಣೋ ಧರ್ಮಸೂಕ್ತಿಭಿಃ ॥
ತಾನು ದಯಾಪರನೆನ್ನುವ ತನ್ನ ಕೀರ್ತಿಯನ್ನು ಹೀಗೆ ಯಮ ಧರ್ಮರಾಜ ರೂಪಿಯಾದ ತನ್ನ ಧರ್ಮಯುಕ್ತ ವಚನಗಳ ಮೂಲಕ ಪ್ರಸಿದ್ಧಿಪಡಿಸಿದನು.
ತತಃ ಸ ರಥಮಾರುಹ್ಯ ಲೋಕಾನಾಮುತ್ತರೋತ್ತರಮ್ |
ಅತಿಕ್ರಮ್ಯಾಖಿಲಾನ್ ರಾಜ್ಞೋ ಜಗಾಮ ಶ್ರೀಪತಿಪ್ರಿಯಃ ॥
ಬಳಿಕ ಹರಿಪ್ರಿಯನಾದ ಧರ್ಮರಾಜ ಮೇಲುಮೇಲಿನ ವೀರಸ್ವರ್ಗದ ಎಲ್ಲ ರಾಜರನ್ನೂ ದಾಟಿ ಮುಂದುವರಿದನು.
ಸರ್ವೇಷಾಮುತ್ತರಂ ಲೋಕಮೈಂದ್ರಂ ಪ್ರಾಪ್ಯೇದಮೇವ ತೇ |
ಸ್ಥಾನಮಿತ್ಯುದಿತೋ ದೇವೈರ್ದುರ್ಯೋಧನಮವೈಕ್ಷತ ॥
ಎಲ್ಲಕ್ಕಿಂತ ಮೇಲೆ ಇಂದ್ರ ತನ್ನ ಲೀಲೆಗಾಗಿ ನಿರ್ಮಿಸಿಕೊಂಡಿದ್ದ ಸಾಂಕಲ್ಪಿಕ ಸ್ವರ್ಗದ ಇಂದ್ರಭವನಕ್ಕೆ ಹೋದಾಗ, ದೇವತೆಗಳು ಧರ್ಮರಾಜನಿಗೆ ಇದೇ ನಿನ್ನ ಸ್ಥಾನ ಎಂದರು. ಆದರೆ ಧರ್ಮರಾಜ ಅಲ್ಲಿ ದುರ್ಯೋಧನನನ್ನು ಕಂಡನು.
ಸಭ್ರಾತೃಕಂ ಜ್ವಲಂತಂ ಚ ಸರ್ವೇಷಾಮುಪರಿ ಸ್ಥಿತಮ್ |
ತಂ ದೃಷ್ಟ್ವಾ ಪರಮಕ್ರುದ್ಧೋ ನಿಮೀಲ್ಯ ನಯನೇ ಶುಭೇ ॥
ಭ್ರಾತರೋ ಮೇ ಕ್ವ ಕೃಷ್ಣಾ ಚ ಸಕರ್ಣಾಃ ಕ್ವ ಚ ಬಾಂಧವಾಃ |
ಧೃಷ್ಟದ್ಯುಮ್ನಾದಯಃ ಪುತ್ರಾ ಹೈಡಿಂಬಾದ್ಯಾಶ್ಚ ಸರ್ವಶಃ ॥
ಯಾದವಾಶ್ಚೇತಿ ಪಪ್ರಚ್ಛ ದೇವಾಂಸ್ತೇ ಚ ತಮಬ್ರುವನ್ |
ಕಿಂ ತೇ ತೈಃ ಸ್ವಕೃತಂ ಕರ್ಮ ಭುಜ್ಯತೇSತ್ರ ನ ಚಾಪರೈಃ ॥
ಎಲ್ಲರಿಗಿಂತ ಉಚ್ಚಸ್ಥಾನದಲ್ಲಿ ಸೋದರರೊಂದಿಗೆ ಕುಳಿತು ಮೆರೆಯುತ್ತಿದ್ದ ದುರ್ಯೋಧನನನ್ನು ಕಂಡು ಧರ್ಮರಾಜನು ಬಹಳ ಕುಪಿತನಾಗಿ, ತನ್ನ ಸುಂದರವಾದ ಕಣ್ಣುಗಳನ್ನು ಮುಚ್ಚಿ `ಕರ್ಣ ಮುಂತಾದ ನನ್ನ ಸೋದರರೆಲ್ಲಿ? ದ್ರೌಪದಿ ಎಲ್ಲಿ? ಧೃಷ್ಟದ್ಯುಮ್ನ ಮುಂತಾದ ಬಾಂಧವರೂ ಘಟೋತ್ಕಚ ಮುಂತಾದ ಮಕ್ಕಳೂ ಎಲ್ಲರೂ ಎಲ್ಲಿ? ಯಾದವರೆಲ್ಲಿ?' ಎಂದು ದೇವತೆಗಳನ್ನು ಕೇಳಿದನು. ಅವರು ಅವನಿಗೆ ಹೇಳಿದರು: `ಅವರಿಂದ ನಿನಗೆ ಏನು ಪ್ರಯೋಜನ? ಇಲ್ಲಿ ಎಲ್ಲರೂ ತಾವು ಮಾಡಿದ ಕರ್ಮವನ್ನು ತಾವು ಅನುಭವಿಸುತ್ತಿದ್ದಾರೆ. ಬೇರೆಯವರಲ್ಲ'.
ಇತ್ಯುಕ್ತ ಆಹ ಪಾಪೋSಯಂ ಪೃಥಿವೀಕ್ಷಯಕಾರಕಃ |
ಸರ್ವಾತಿಶಂಕೀ ಮಿತ್ರಧ್ರುಡ್ ನಾರಾಯಣಪರಾಙ್ಮುಖಃ ॥
ನಾಸ್ತಿಕೋSತಿಶಠಃ ಕ್ರೂರೋ ದ್ವೇಷ್ಟಾ ವಿಷ್ಣೋಶ್ಚ ತದ್ಭುವಾಮ್ |
ಕಥಂ ದುರ್ಯೋಧನಃ ಸ್ಥಾನಂ ಸರ್ವೋತ್ತಮಮವಾಪ್ತವಾನ್ ॥
ದೇವತೆಗಳು ಹೀಗೆ ಹೇಳಿದಾಗ ಧರ್ಮರಾಜನು `ಪಾಪಿಯಾದ ಈ ದುರ್ಯೋಧನನು ಭೂಲೋಕದಲ್ಲಿ ಎಲ್ಲ ರಾಜರನ್ನು ನಾಶಮಾಡಿದವನು ಎಲ್ಲರಲ್ಲಿಯೂ ಸಂಶಯಪಡುವ ಸ್ವಭಾವದವನು. ಮಿತ್ರದ್ರೋಹಿ. ಹರಿಗೆ ವಿಮುಖ, ನಾಸ್ತಿಕ, ಮಹಾವಂಚಕ, ಕ್ರೂರ, ವಿಷ್ಣು-ವೈಷ್ಣವ ದ್ವೇಷಿ. ಇವನು ಸರ್ವೋಚ್ಚವಾದ ಸ್ಥಾನವನ್ನು ಹೇಗೆ ಪಡೆದನು?' ಎಂದು ಕೇಳಿದನು.
ಕಥಂ ಚ ಸರ್ವಧರ್ಮಜ್ಞಾ ನಾರಾಯಣಪರಾಯಣಾಃ |
ಸಂಸ್ಥಿತಾಃ ಪರಮೇ ಧರ್ಮೇ ದೃಶ್ಯಂತೇSತ್ರ ನ ಮತ್ಪ್ರಿಯಾಃ ॥
`ಸರ್ವಧರ್ಮಗಳನ್ನೂ ಬಲ್ಲವರು, ನಾರಾಯಣನನ್ನೇ ನಂಬಿದವರು, ಪರಮ ಧರ್ಮಿಷ್ಠರೂ ಮತ್ತು ನನಗೆ ಪ್ರಿಯರೂ ಆದ ನನ್ನವರು ಇಲ್ಲಿ ಏಕೆ ಕಾಣುತ್ತಿಲ್ಲ?'
ಯತ್ರ ಸಂತಸ್ತು ತೇ ಸಂತಿ ತತ್ರ ಸ್ಥಾತವ್ಯಮೇವ ಮೇ |
ನಿರಯೇSಪಿ ನ ಚಾತ್ರಾಪಿ ನಾನೇನ ಸಹ ಪಾಪಿನಾ ॥
`ಎಲ್ಲಿ ಆ ಸಜ್ಜನರಿರುವರೋ ಅಲ್ಲಿ ನಾನಿರಬೇಕು. ನರಕದಲ್ಲಾದರೂ ಸರಿಯೆ. ಈ ಪಾಪಿಯೊಂದಿಗೆ ಸ್ವರ್ಗದಲ್ಲಿಯೂ ನಾನಿರಲಾರೆ'.
ಅಸ್ಯ ವೀರತಮಸ್ಯೇದಂ ಧಾರ್ತರಾಷ್ಟ್ರಸ್ಯ ಯುಜ್ಯತೇ |
ಇತ್ಯುಕ್ತತ್ವ ದೇವತಾ ದೂತಂ ಸ್ವಾನಾಂ ಸಂದರ್ಶನಾರ್ಥಿನಃ ॥
ರಾಜ್ಞಃ ಸಂಪ್ರೇಷಯಾಮಾಸುಸ್ತತ್ಸಂದರ್ಶಿತವರ್ತ್ಮನಾ |
ದುರ್ಗಂಧೇನ ಸುಕೃಚ್ಛ್ರೇಣ ತಮಸಾ ಪ್ರಾವೃತೇನ ಚ ॥
ಗತ್ವೈವ ಕಿಯತೀಂ ಭೂಮಿಂ ತದ್ದುರ್ಗಂಧಾಸಹೋ ನೃಪಃ |
ಇಚ್ಛನ್ ನಿವರ್ತನಂ ತತ್ರ ಸ್ವಾನಾಂ ವಾಚ ಇವಾಶೃಣೋತ್ ॥
ದೇವತೆಗಳು `ಉತ್ತಮ ವೀರನಾದ ದುರ್ಯೋಧನನಿಗೆ ಈ ಉತ್ತಮ ಸ್ಥಾನ ಯೋಗ್ಯವೆ ಆಗಿದೆ' ಎಂದು ಹೇಳಿ ತನ್ನವರನ್ನು ಕಾಣಲು ಬಯಸಿದ ಧರ್ಮರಾಜನ ಹತ್ತಿರ ದೂತನನ್ನು ಕಳಿಸಿಕೊಟ್ಟರು. ಧರ್ಮರಾಜ ಅವನು ತೋರಿಸಿದ ದುರ್ಗಂಧಮಯವಾದ, ಕತ್ತಲು ಕವಿದ, ಕಷ್ಟಕರವಾದ ದಾರಿಯಲ್ಲಿ ಸ್ವಲ್ಪ ದೂರ ಹೋದ ಬಳಿಕ, ಆ ದುರ್ಗಂಧವನ್ನು ಸಹಿಸಲಾರದೆ ಹಿಂತಿರುಗಲು ಬಯಸಿದಾಗ ಅಲ್ಲಿ ಅವನಿಗೆ ತನ್ನವರ ಮಾತುಗಳು ಕೇಳಿ ಬಂದಂತಾಯಿತು.

ಕ್ಷಣಂ ತಿಷ್ಠ ಮಹಾರಾಜ ಸನ್ನಿಧಾನಬಲಾತ್ ತವ ।
ವೇದನಾ ನೋ ನ ಮಹತೀತ್ಯೇತಚ್ಛ್ರುತ್ವಾ ಯುಧಿಷ್ಠಿರಃ ॥
ಕೇ ಯೂಯಮಿತಿ ಪಪ್ರಚ್ಛ ದೀನಧ್ವನಿವಿಶಂಕಿತಃ ।
ಭೀಮೋಽಹಮರ್ಜುನಃ ಕರ್ಣ ಇತ್ಯಾದ್ಯುಕ್ತಮಿವಾಶೃಣೋತ್ ॥
`ಮಹಾರಾಜನೇ, ಒಂದು ಕ್ಷಣ ನಿಲ್ಲು, ನಿನ್ನ ಸಾಮೀಪ್ಯದ ಬಲದಿಂದ ನಮ್ಮ ವೇದನೆ ಕಡಿಮೆಯಾಗುತ್ತಿದೆ'. ಈ ದೀನಧ್ವನಿಯನ್ನು ಕೇಳಿ ಯುಧಿಷ್ಠಿರನು ಸಂಶಯದಿಂದ ಕೇಳಿದನು: `ಯಾರು ನೀವು?' `ನಾನು ಭೀಮ, ನಾನು ಅರ್ಜುನ, ನಾನು ಕರ್ಣ' ಎಂದು ಮುಂತಾಗಿ ಹೇಳಿದಂತಾಯಿತು. ಅದನ್ನು ಧರ್ಮರಾಜನು ಕೇಳಿದನು.
ಶ್ರುತ್ವಾ ತತ್ಕೃಪಯಾಽಽವಿಷ್ಟಃ ಶೋಕಾಮರ್ಷಸಮನ್ವಿತಃ ।
ಆಹ ದೂತ ಯಥೇಷ್ಟಂ ತ್ವಂ ಗಚ್ಛ ನಾಹಮಿತೋ ವ್ರಜೇ ॥
ನ ಚ ಸ್ವರ್ಗೇಣ ಮೇ ಕಾರ್ಯಂ ತ್ಯಕ್ತತ್ವ ಸ್ವಜನಮೀದೃಶಮ್ ।
ಇತ್ಯುಕ್ತಃ ಪ್ರಯಯೌ ದೂತಸ್ತಸ್ಥಾವೇವ ಯುಧಿಷ್ಠಿರಃ ॥
ಧರ್ಮರಾಜನು ಅದನ್ನು ಕೇಳಿ ಕರುಣೆಯಿಂದ ದುಃಖ. ಕೋಪಯುಕ್ತನಾಗಿ ದೂತನಿಗೆ ಹೇಳಿದನು: `ನೀನು ನಿನಗೆ ಮನಬಂದಲ್ಲಿಗೇ ಹೋಗು. ನಾನು ಇಲ್ಲಿಂದ ಹೋಗಲಾರೆ. ಇಂಥ ಬಂಧುಗಳನ್ನು ಬಿಟ್ಟು ನನಗೆ ಸ್ವರ್ಗದಿಂದಲೂ ಏನಾಗಬೇಕಾಗಿಲ್ಲ'. ಹೀಗೆ ಹೇಳಿದಾಗ ದೂತ ಹೊರಟು ಹೋದನು. ಧರ್ಮರಾಜನು ಅಲ್ಲಿಯೇ ನಿಂತನು.
ತತೋಽತ್ರ ದೇವಾಃ ಪುರುಹೂತಪೂರ್ವಕಾಃ
ಸಮಾಯಯುಃ ಸ್ನೇಹವಶಾದ್ ಯುಧಿಷ್ಠಿರೇ ।
ತೇಷ್ವಾಗತೇಷ್ವೇವ ನ ತತ್ರ ವಾಚೋ
ದೀನಾ ನ ದುರ್ಗಂಧತಮೋಽಪ್ಯಪಶ್ಯತ್ ॥
ಆಗ ಅಲ್ಲಿಗೆ ಇಂದ್ರಾದಿ ದೇವತೆಗಳು ಧರ್ಮರಾಜನಲ್ಲಿ ಸ್ನೇಹವಶದಿಂದ ಬಂದರು. ಅವರು ಬಂದೊಡನೆ ಅಲ್ಲಿ ದುಃಖದ ಮಾತುಗಳು ಕೇಳಿಸದಂತಾದವು. ದುರ್ಗಂಧ ಅಂಧಕಾರಗಳು ಇಲ್ಲವಾದವು.
ಸ್ವರ್ಗೋತ್ತಮಂ ದೇಶಮಪಶ್ಯದೇತ-
ಮಭ್ರಾಂತಚೇತಾಃ ಸ ಯುಧಿಷ್ಠಿರಸ್ತದಾ ।
ಆಹಾತ್ರ ಧರ್ಮಃ ಪುನರಾತ್ಮಸದೃಶಃ
ಪ್ರಕಾಶಯನ್ ಪಾಂಡುಸುತಾಭಿಧಂ ಸ್ವಮ್ ॥
ಆಗ ಭ್ರಮಮುಕ್ತ ಬುದ್ಧಿಯವನಾದ ಯುಧಿಷ್ಠಿರನು ಆ ಪ್ರದೇಶ ಸ್ವರ್ಗಕ್ಕಿಂತ ಉತ್ತಮವಾಗಿರುವುದನ್ನು ಕಂಡನು. ಯಮ ತನ್ನ ಉತ್ತಮವಾದ ಕೀರ್ತಿಯನ್ನು ಪ್ರಸಿದ್ಧಿಗೊಳಿಸುವುದಕ್ಕಾಗಿ ಧರ್ಮರಾಜ ರೂಪದ ತನಗೇ ಹೇಳಿದನು.
ಧರ್ಮಾದ್ ವಿಶಿಷ್ಟಾ ಹಿ ಸದಾಽನೃಶಂಸತಾ
ದೃಷ್ಟಾ ಚ ಸಾ ತ್ವಯ್ಯಧಿಕಾ ತ್ರಿಶೋ ಮಯಾ ।
ಶಕ್ರೋಽಪ್ಯವಾಚ್ಯೈನಮಿದಂ ಮೃಷಾ ತೇ
ಪ್ರದರ್ಶಿತಂ ದ್ರೋಣಕೃತೇ ಮೃಷಾ ಗಿರಃ ॥
ಕೃಚ್ಛ್ರಾದಿದಂ ತೇ ಕಥಿತಂ ನ ಚಾತಿ
ವಿಸ್ರಂಭ ಆಸೀತ್ ತವ ಕೃಷ್ಣವಾಕ್ಯೇ ।
ನ ಹ್ಯಾಜ್ಞಯಾ ವಾಸುದೇವಸ್ಯ ಕಿಂಚಿತ್
ಪಾಪಂ ಭವೇತ್ ಸರ್ವವಿಧರ್ಮಿಣೋಽಪಿ ॥
`ಎಲ್ಲ ಧರ್ಮಕ್ಕಿಂತ ಸದಾ ಶ್ರೇಷ್ಠವಾದುದು ದಯೆ. ಅದು ನಿನ್ನಲ್ಲಿ ಅಧಿಕವಾಗಿಯೇ ಇರುವುದನ್ನು ಮೂರು ಬಾರಿ ನಾನು ಕಂಡೆ' ಎಂದು ಇಂದ್ರನು ಹೇಳಿದನು. ದ್ರೋಣನಿಗೆ ಸುಳ್ಳು ಹೇಳಿದ ನಿನಗೆ ಈ ಸುಳ್ಳು ನರಕ ಪ್ರದರ್ಶಿತವಾಯಿತು. ಏಕೆಂದರೆ ನೀನು ಈ ಸುಳ್ಳನ್ನು ಕಷ್ಟದಿಂದ ಹೇಳಿದೆ. ಶ್ರೀಕೃಷ್ಣನ ಮಾತಿನಲ್ಲಿ ನಿನಗೆ ಪೂರ್ಣ ವಿಶ್ವಾಸವಿರಲಿಲ್ಲ. ಕೃಷ್ಣನ ಆಜ್ಞೆ ಇದ್ದರೆ ಸಕಲಶಾಸ್ತ್ರ ವಿರುದ್ಧ ಆಚರಣೆ ಉಳ್ಳವನಿಗೂ ಏನೂ ಪಾಪ ಬರಲಾರದು.
ಬ್ರಹ್ಮಾಪರೋಕ್ಷೇಯೇಽಪಿ ವಿಕರ್ಮ ಸೂಚಕಂ
ಪ್ರಾರಬ್ಧಪಾಪಸ್ಯ ವಿಷಾಶನಂ ಯಥಾ ।
ಪಶ್ಯಾತ್ರ ಭೀಮಪ್ರಮುಖಾನ್ ಸುಖಸ್ಥಾನ್
ಸಂಪೂಜ್ಯಮಾನಾಂಸ್ತ್ರಿದಶೈಃ ಸುರೂಪಾನ್ ॥
ಬ್ರಹ್ಮಾಪರೋಕ್ಷ ಬಂದ ಬಳಿಕ ಜ್ಞಾನಿ ಮಾಡಿದ ಪಾಪಕರ್ಮ ವಿಷಭಕ್ಷಣದಂತೆ ಪ್ರಾರಬ್ಧಪಾಪಕ್ಕೆ ಸೂಚಕವಾಗುತ್ತದೆ. ಈಗ ಸುಖವಾಗಿ ದೇವತೆಗಳಿಂದ ಆದರಿಸಲ್ಪಡುತ್ತಿರುವ, ಸುಂದರ ರೂಪದವರಾದ ಭೀಮ ಮುಂತಾದವರನ್ನು ಇಲ್ಲಿ ನೋಡು.
ಕುತಃ ಪರಬ್ರಹ್ಮದೃಶಾಂ ಸುಶುದ್ಧ-
ಸತ್ಕರ್ಮಣಾಂ ಕೃಷ್ಣಪರಾಯಣಾನಾಮ್ ।
ಪರೇಣ ಯೋಗೇನ ವಿಸೃಷ್ಟತನ್ವಾಂ
ದುಃಖಂ ಭವೇದ್ ದೇವವರಾಧಿಪಾನಾಮ್ ॥
ಪರಬ್ರಹ್ಮಾಪರೋಕ್ಷ ಉಳ್ಳವರು, ಅತ್ಯಂತ ಶುದ್ಧ ಸತ್ಕರ್ಮ ಮಾಡಿದವರು, ವಿಷ್ಣುಭಕ್ತರು, ಉತ್ತಮ ಯೋಗಬಲದಿಂದ ಶರೀರ ತ್ಯಾಗ ಮಾಡಿದವರು, ದೇವೋತ್ತಮರಿಗೂ ಅಧಿಪತಿಗಳು ಭೀಮ ಮುಂತಾದವರು. ಅವರಿಗೆ ದುಃಖ ಎಲ್ಲಿಂದ ಬಂದೀತು?

ಏತೇ ಹಿ ದೇವಪ್ರವರಾಃ ಪೃಥಿವ್ಯಾಂ
ಜಾತಾ ಭುವೋ ಭಾರಜಿಹೀರ್ಷುಮೀಶಮ್ |
ಪ್ರತೋಷ್ಯ ತದ್ಭಾವಿತಬುದ್ಧಿಕರ್ಮಭಿಃ
ಪುನಶ್ಚ ತೇನೈವ ಸಹಾಽಪಿರೇ ದಿವಮ್ ||
ಈ ಭೀಮ ಮುಂತಾದವರು ದೇವೋತ್ತಮರು. ಭೂಮಿಯಲ್ಲಿ ಅವತರಿಸಿ, ಭೂಭಾರ ಕಳೆಯಲು ಬಯಸಿದ ಹರಿಯನ್ನು ಅವನಲ್ಲಿ ಅರ್ಪಿತವಾದ ಜ್ಞಾನ ಕರ್ಮಗಳಿಂದ ಆರಾಧಿಸಿ ಪುನಃ ಅವನೊಂದಿಗೇ ಸ್ವರ್ಗವನ್ನು ಹೊಂದಿದ್ದಾರೆ.
* * * * *
ಒಂದನೆಯ ಅಧ್ಯಾಯ
ಸ್ವರ್ಗವನ್ನು ಪ್ರವೇಶಿಸಿದ ಯುಧಿಷ್ಠಿರನು ಅಲ್ಲಿ ಎತ್ತರವಾದ ಆಸನದಲ್ಲಿ
ಶೋಭಿಸುತ್ತಿರುವ ದುರ್ಯೋಧನನನ್ನು ನೋಡುವುದು ಹಾಗೂ ಅವನ ಏಳಿಗೆಯನ್ನು ಸಹಿಸಲಾಗದೆ, ಅವರಲ್ಲಿದ್ದ ದೋಷಗಳನ್ನು ಹೇಳುವ ಮೂಲಕ ದುರ್ಯೋಧನನೊಂದಿಗೆ ತನಗೆ ಸ್ವರ್ಗವಾಸದಲ್ಲೂ ಆಸಕ್ತಿಯಿಲ್ಲ ಎಂದು ನಿವೇದಿಸುತ್ತಾ ನಾರದರಲ್ಲಿ ತನ್ನ ಸಹೋದರರನ್ನು ನೋಡುವ ಬಯಕೆಯನ್ನು ನಿವೇದಿಸುವುದು.
ಜನಮೇಜಯಃ
ಸ್ವರ್ಗಂ ತ್ರಿವಿಷ್ಟಪಂ ಪ್ರಾಪ್ಯ ಮಮ ಪೂರ್ವಪಿತಾಮಹಾಃ |
ಪಾಂಡವಾ ಧಾರ್ತರಾಷ್ಟ್ರಾಶ್ಚ ಕಾನಿ ಸ್ಥಾನಾನಿ ಭೇಜಿರೇ ||1||
ಜನಮೇಜಯ ನನ್ನ ಪಿತಾಮಹನಿಗೂ ಪೂರ್ವಜರಾದ ಪಾಂಡವರು ಮತ್ತು ಧೃತರಾಷ್ಟ್ರನ ಮಕ್ಕಳಾದ ಕೌರವರು ಮೂರನೆಯ ಲೋಕವಾದ ಸ್ವರ್ಗವನ್ನು ಪಡೆದು ಎಂತಹ ಸ್ಥಾನಗಳನ್ನು ಅಲಂಕರಿಸಿದರು?
ಏತದಿಚ್ಛಾಮ್ಯಹಂ ಶ್ರೋತುಂ ಸರ್ವವಿಚ್ಚಾಸಿ ಮೇ ಮತಃ |
ಮಹರ್ಷಿಣಾಽಭ್ಯನುಜ್ಞಾತೋ ವ್ಯಾಸೇನಾದ್ಭುತಕರ್ಮಣಾ ||2||
ಅದ್ಭುತವಾದ ಕರ್ಮಗಳನ್ನು ನಡೆಸಿದ ಮಹರ್ಷಿಯಾದ ವೇದವ್ಯಾಸರಿಂದ ಅನುಜ್ಞೆಯನ್ನು ಪಡೆದ ನೀವು ಸರ್ವಜ್ಞರಾಗಿರುವಿರೆಂದು ನನಗೆ ತಿಳಿದಿದೆ. ಹಾಗಾಗಿ ಇದನ್ನು ಕೇಳಲು ನಾನು ಬಯಸುತ್ತಿದ್ದೇನೆ.
ವೈಶಂಪಾಯನಃ
ಸ್ವರ್ಗಂ ತ್ರಿವಿಷ್ಟಪಂ ಪ್ರಾಪ್ಯ ತವ ಪೂರ್ವಪಿತಾಮಹಾಃ |
ಯುಧಿಷ್ಠಿರಪ್ರಭೃತಯೋ ಯದಕುರ್ವತ ತಚ್ಛೃಣು ||3||
ವೈಶಂಪಾಯನ ನಿನ್ನ ಪಿತಾಮಹರಿಗೂ ಪೂರ್ವಜರಾದ ಯುಧಿಷ್ಠಿರನೇ ಮೊದಲಾದವರು ತ್ರಿವಿಷ್ಟಪವೆಂಬ ಸ್ವರ್ಗವನ್ನು ಪಡೆದು ಏನು ಮಾಡಿದರೆಂದು ಕೇಳುವವನಾಗು.
ಸ್ವರ್ಗಂ ತ್ರಿವಿಷ್ಟಪಂ ಪ್ರಾಪ್ಯ ಧರ್ಮರಾಜೋ ಯುಧಿಷ್ಠಿರಃ |
ದುರ್ಯೋಧನಂ ಶ್ರಿಯಾ ಜುಷ್ಟಂ ದದರ್ಶಾಸೀನಮಾಸನೇ ||4||
ಧರ್ಮರಾಜನಾದ ಯುಧಿಷ್ಠಿರನು ತ್ರಿವಿಷ್ಟಪನೆಂಬ ಸ್ವರ್ಗವನ್ನು ಪ್ರವೇಶಿಸಿ, ಆಸನದಲ್ಲಿ ಕುಳಿತು ಸಂಪತ್ತಿನಿಂದ ಮೆರೆಯುವ ದುರ್ಯೋಧನನನ್ನು ಕಂಡನು.
ಭ್ರಾಜಮಾನಮಿವಾದಿತ್ಯಂ ವೀರಲಕ್ಷ್ಮ್ಯಾಽಭಿಸಂವೃತಮ್ |
ದೇವೈರ್ಭ್ರಾಜಿಷ್ಣುಭಿಃ ಸಾಧ್ಯೈಃ ಸಹಿತಂ ಪುಣ್ಯಕರ್ಮಭಿಃ ||5||
ಅವನು ಸೂರ್ಯನಂತೆ ತೇಜಸ್ವಿಯಾಗಿದ್ದನು. ವೀರಲಕ್ಷ್ಮಿಯು ಅವನ ಜೊತೆಗಿದ್ದಳು. ಶೋಭಾಯಮಾನರಾದ ದೇವತೆಗಳಿಂದಲೂ, ಸಾಧ್ಯರಿಂದಲೂ ಪುಣ್ಯಕರ್ಮಿಗಳಿಂದಲೂ ಕೂಡಿಕೊಂಡಿದ್ದನು.
ತತೋ ಯುಧಿಷ್ಠಿರೋ ರಾಜಾ ದುರ್ಯೋಧನಮಮರ್ಷಿತಃ |
ಸಹಸಾ ಸನ್ನಿವೃತ್ತೋಽಭೂಚ್ಛ್ರಿಯಂ ದೃಷ್ಟ್ವಾ ಸುಯೋಧನೇ ||6||
ಇಷ್ಟಾದಾಗ ಈ ಮೊದಲೇ ದುರ್ಯೋಧನನ ಬಗ್ಗೆ ಅಸಹನೆಯುಳ್ಳ ಯುಧಿಷ್ಠಿರ ರಾಜನು, ದುರ್ಯೋಧನನಿಗೆ ಒದಗಿ ಬಂದ ಸಂಪತ್ತನ್ನು ಕಂಡು ಕೂಡಲೇ ಹಿಂದಿರುಗಿದನು.
ಬ್ರುವನ್ನುಚ್ಚೈರ್ವಚಸ್ತಾನ್ ವೈ ನಾಹಂ ದುರ್ಯೋಧನೇನ ವೈ |
ಸಹಿತಃ ಕಾಮಯೇ ಲೋಕಾನ್ ಲುಬ್ಧೇನಾದೀರ್ಘದರ್ಶಿನಾ ||7||
ಅಲ್ಲಿರುವ ದೇವದೂತರನ್ನು ಕುರಿತು ಜೋರಾದ ಸ್ವರದಿಂದ ಹೀಗೆಂದನು: ಲುಬ್ಧನಾದ, ದೂರದೃಷ್ಟಿಯಿಲ್ಲದ ದುರ್ಯೋಧನನೊಂದಿಗೆ ನಾನು ಪುಣ್ಯಲೋಕಗಳನ್ನು ಬಯಸಲಾರೆ.
ಯತ್ಕೃತೇ ಪೃಥಿವೀ ಸರ್ವಾ ಸುಹೃದೋ ಬಾಂಧವಾಸ್ತಥಾ |
ಹತಾಸ್ಮಾಭಿಃ ಪ್ರಸಹ್ಯಾಜೌ ಕ್ಲಿಷ್ಟೈಃ ಪೂರ್ವಂ ಮಹಾವನೇ ||8||
ದ್ರೌಪದೀ ಚ ಸಭಾಮಧ್ಯೇ ಪಾಂಚಾಲೀ ಧರ್ಮಚಾರಿಣೀ |
ಪರ್ಯಾಕೃಷ್ಟಾಽನವದ್ಯಾಂಗೀ ಪತ್ನೀ ನೋ ಗುರುಸನ್ನಿಧೌ ||9||
ಅಸ್ತಿ ದೇವಾ ನ ಮೇ ಕಾಮಃ ಸುಯೋಧನಮುದೀಕ್ಷಿತುಮ್ |
ತತ್ರಾಹಂ ಗಂತುಮಿಚ್ಛಾಮಿ ಯತ್ರ ತೇ ಭ್ರಾತರೋ ಮಮ ||10||
ಯಾರ ದೆಸೆಯಿಂದ ಮೊದಲು ಮಹಾಕಾಡಿನಲ್ಲಿ ಕಷ್ಟವನ್ನು ಅನುಭವಿಸಿದ ನಮ್ಮಿಂದ ಸ್ನೇಹಿತರು, ಬಾಂಧವರು, ಹಾಗೆಯೇ ಭೂಮಿಯಲ್ಲಿರುವ ಎಲ್ಲರೂ ಬಲಾತ್ಕಾರವಾಗಿ ಯುದ್ಧದಲ್ಲಿ ಹತರಾದರೋ, ಸದಾ ಧರ್ಮವನ್ನೇ ಆಚರಿಸುತ್ತಿದ್ದ, ನಿರ್ದುಷ್ಟವಾದ

ಅಂಗಗಳುಳ್ಳ ನಮ್ಮ ಪತ್ನಿಯಾದ, ಪಾಂಚಾಲದೇಶದ ದ್ರೌಪದೀದೇವಿಯು ಗುರು ಹಿರಿಯರ ಸಮ್ಮುಖದಲ್ಲಿ ಸಭೆಯ ಮಧ್ಯದಲ್ಲಿ ಸೀರೆಯ ಸೆಳೆತಕ್ಕೆ ಒಳಗಾದಳೋ ಅಂತಹ ವ್ಯಕ್ತಿಯು ಇಲ್ಲಿರುವನು. ಹೇ ದೇವತೆಗಳೇ, ಆ ಸುಯೋಧನನನ್ನು ನೋಡಲು ನನಗೆ ಮನಸ್ಸಿಲ್ಲ. ಆದ್ದರಿಂದ ಎಲ್ಲಿ ನನ್ನ ಸಹೋದರರಿರುವರೋ ಅಲ್ಲಿಗೇ ನಾನು ಹೋಗ ಬಯಸುವೆ.
ನೈವಮಿತ್ಯಬ್ರುವೀತ್ ತಂ ತು ನಾರದಃ ಪ್ರಹಸನ್ನಿವ |
ಸ್ವರ್ಗೇ ನಿವಾಸೇ ರಾಜೇಂದ್ರ ವಿರುದ್ಧಂ ಚಾಪಿ ನಶ್ಯತಿ ॥11॥
ಆಗ ನಾರದರು ನಗುತ್ತಾ `ಹೇ ರಾಜೇಂದ್ರನೇ, ಸ್ವರ್ಗದಲ್ಲಿ ವಾಸಿಸುವ ಸಂದರ್ಭದಲ್ಲಿ ಭೂಮಿಯಲ್ಲಿದ್ದ ವಿರುದ್ಧ ಭಾವನೆಗಳು ನಾಶವಾಗುವವು. ಆದ್ದರಿಂದ ಈ ನಿನ್ನ ಆಲೋಚನೆ ಸರಿಯಾದುದಲ್ಲ' ಎಂದರು.
ಯುಧಿಷ್ಠಿರ ಮಹಾಬಾಹೋ ಮೈವಂ ವೋಚಃ ಕಥಂಚನ |
ದುರ್ಯೋಧನಂ ಪ್ರತಿ ನೃಪಂ ಶೃಣು ಚೇದಂ ವಚೋ ಮಮ ॥12॥
`ಹೇ ಮಹಾಬಾಹುವಾದ ಯುಧಿಷ್ಠಿರನೇ, ಯಾವುದೇ ಕಾರಣಕ್ಕೂ ಹೀಗೆನ್ನಬೇಡ. ರಾಜನಾದ ದುರ್ಯೋಧನನ ಬಗ್ಗೆ ಈ ನನ್ನ ಮಾತನ್ನು ಕೇಳು'.
ಏಷ ದುರ್ಯೋಧನೋ ರಾಜಾ ಪೂಜ್ಯತೇ ತ್ರಿದಶೈಃ ಸಹ |
ಸದ್ಭಿಶ್ಚ ರಾಜಪ್ರವರೈರ್ಯ ಇಮೇ ಸ್ವರ್ಗವಾಸಿನಃ ॥13॥
`ಈ ರಾಜನಾದ ದುರ್ಯೋಧನನು ಸ್ವರ್ಗವಾಸಿಗಳಾದ ಈ ಯಾವ ರಾಜಶ್ರೇಷ್ಠರು ಮತ್ತು ಸಜ್ಜನರಿರುವರೋ ಅವರಿಂದ ದೇವತೆಗಳ ಜೊತೆಗೆ ಪೂಜಿಸಲ್ಪಡುತ್ತಿದ್ದಾನೆ'.
ವೀರಲೋಕಗತಿಂ ಪ್ರಾಪ್ತಾ ಯುದ್ಧೇ ಹುತ್ವಾಽಽತ್ಮನಸ್ತನುಮ್ |
ಯೂಯಂ ಸರ್ವೇ ಸುರಸಮಾ ಯೇನ ಯುದ್ಧೇನ ಬಾಧಿತಾಃ ॥14॥
`ಯುದ್ಧದಲ್ಲಿ ತಮ್ಮ ಶರೀರವನ್ನು ಆಹುತಿಯನ್ನಾಗಿ ನೀಡಿ ವೀರಲೋಕಗತಿಯನ್ನು ಪಡೆದ ಮತ್ತು ಆ ಯಾವ ಯುದ್ಧದಿಂದ ಬಾಧೆಗೊಳಗಾದ ನೀವೆಲ್ಲರೂ ದೇವತೆಗಳಿಗೆ ಸಮರಾಗಿರುವಿರಿ'.
ಸ ಏಷ ಕ್ಷತ್ರಧರ್ಮೇಣ ಸ್ಥಾನಮೇತದವಾಪ್ತವಾನ್ |
ಭಯೇ ಮಹತಿ ಯೋಽಭೀತೋ ಬಭೂವ ಪೃಥಿವೀಪತಿಃ ॥15॥
`ಅಂತಹ ಈ ಪೃಥಿವೀಪತಿಯಾದ ದುರ್ಯೋಧನನು ಮಹತ್ತಾದ ಭಯವು ಪ್ರಾಪ್ತವಾಗಿದ್ದರೂ ಭೀತಿಗೊಳಗಾಗದೆ ಕ್ಷತ್ರಧರ್ಮದಲ್ಲೇ ಇದ್ದನು. ಆದ್ದರಿಂದ ಈ ಸ್ಥಾನವನ್ನು ಪಡೆದಿದ್ದಾನೆ'.
ನ ತನ್ಮನಸಿ ಕರ್ತವ್ಯಂ ಪುತ್ರ ಯದ್ ದ್ಯೂತಕಾರಿತಮ್ |
ದ್ರೌಪದ್ಯಾಶ್ಚ ಪರಿಕ್ಲೇಶಂ ನ ಚಿಂತಯಿತುಮರ್ಹಸಿ ॥16॥
`ಮಗು, ದ್ಯೂತಕಾಲದಲ್ಲಿ ಇವನಿಂದ ಏನು ಮಾಡಿಸಲ್ಪಟ್ಟಿದೆಯೋ ಅದನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡ. ಅಲ್ಲದೆ ದ್ರೌಪದಿಗೆ ಒದಗಿದ ಕಷ್ಟವನ್ನೂ ಆಲೋಚಿಸುವುದು ಯೋಗ್ಯವಲ್ಲ'.
ಯೇ ಚಾನ್ಯೇಽಪಿ ಪರಿಕ್ಲೇಶಾ ಯುಷ್ಮಾಕಂ ಜ್ಞಾತಿಕಾರಿತಾಃ |
ಸಂಗ್ರಾಮೇಷ್ವಥವಾಽನ್ಯತ್ರ ನ ತಾನ್ ಸಂಸ್ಮರ್ತುಮರ್ಹಸಿ ॥17॥
ಅದೂ ಅಲ್ಲದೆ ನಿಮ್ಮ ಬಂಧುಗಳಿಂದ ನಡೆಸಲ್ಪಟ್ಟ ಯುದ್ಧ ಅಥವಾ ಬೇರೆ ಸಂದರ್ಭಗಳಲ್ಲಿ ಒದಗಿ ಬಂದ ಬೇರೆ ಯಾವೆಲ್ಲ ಕಷ್ಟಗಳಿವೆಯೋ ಅವ್ಯಾವುದನ್ನೂ ನೀನು ಸ್ಮರಿಸುವುದು ತರವಲ್ಲ.
ಸಮಾಗಚ್ಛ ಯಥಾನ್ಯಾಯಂ ರಾಜ್ಞಾ ದುರ್ಯೋಧನೇನ ವೈ |
ಸ್ವರ್ಗೋಽಯಂ ನೇಹ ವೈರಾಣಿ ಭವಂತಿ ಮನುಜಾಧಿಪ ॥18॥
`ಹೇ ಮನುಜಾಧಿಪನೇ, ರಾಜನಾದ ದುರ್ಯೋಧನನೊಂದಿಗೆ ನ್ಯಾಯಾನುಸಾರವಾಗಿ ಸೇರಿಕೊ. ಇದು ಸ್ವರ್ಗವಾಗಿದೆ. ಇಲ್ಲಿ ಭೂಲೋಕದ ಯಾವುದೇ ವೈರಗಳು ಇರಬಾರದು'.
ವೈಶಂಪಾಯನಃ
ನಾರದೇನೈವಮುಕ್ತಸ್ತು ಕುರುರಾಜೋ ಯುಧಿಷ್ಠಿರಃ |
ಭ್ರಾತೄನ್ ಪಪ್ರಚ್ಛ ಮೇಧಾವೀ ವಾಕ್ಯಮೇತದುವಾಚ ಹ ॥19॥
ವೈಶಂಪಾಯನ ನಾರದರು ಹೀಗೆಂದಾಗ ಮೇಧಾವಿಯಾದ, ಕುರುರಾಜನಾದ ಯುಧಿಷ್ಠಿರನು ಸಹೋದರರ ಬಗ್ಗೆ ಕೇಳುತ್ತಾ ಈ ಮಾತುಗಳನ್ನಾಡಿದನು.
ಯದಿ ದುರ್ಯೋಧನಸ್ಯೈತೇ ವೀರಲೋಕಾಃ ಸನಾತನಾಃ |
ಅಧರ್ಮಜ್ಞಸ್ಯ ಪಾಪಸ್ಯ ಪೃಥಿವೀಸುಹೃದದ್ರುಹಃ ॥20॥
ಯತ್ಕೃತೇ ಪೃಥಿವೀ ನಷ್ಟಾ ಸಹಯಾ ಸನರದ್ವಿಪಾ |
ವಯಂ ಚ ಮನ್ಯುನಾ ದಗ್ಧಾ ವೈರಂ ಪ್ರತಿಚಿಕೀರ್ಷವಃ ॥21॥
ಯೇ ತೇ ವೀರಾ ಮಹಾತ್ಮಾನೋ ಭ್ರಾತರೋ ಮೇ ಮಹಾವ್ರತಾಃ |
ಸತ್ಯಪ್ರತಿಜ್ಞಾ ಲೋಕಸ್ಯ ಶೂರಾ ವೈ ಸತ್ಯವಾದಿನಃ ॥22॥
ತೇಷಾಮಿದಾನೀಂ ಕೇ ಲೋಕಾ ದ್ರಷ್ಟುಮಿಚ್ಛಾಮಿ ತಾನಹಮ್ ॥23॥
`ಒಂದು ವೇಳೆ ಯಾವ ದುರ್ಯೋಧನನಿಗೋಸ್ಕರ ಕುದುರೆಗಳು, ಮನುಷ್ಯರು, ಆನೆಗಳಿಂದ ಸಹಿತವಾದ ಇಡೀ ಭೂಮಿಯು ನಷ್ಟವಾಯಿತೋ, ಯಾರಿಂದಾಗಿ ನಾವು ವೈರಕ್ಕೆ ಪ್ರತೀಕಾರವನ್ನು ಮಾಡುವುದಕ್ಕಾಗಿ ಕ್ರೋಧದಿಂದ ದಗ್ಧರಾದೆವೋ ಅಂತಹ ಅಧರ್ಮನಿಷ್ಠನಾದ, ಪಾಪಿಯಾದ, ಭೂಮಿ ಹಾಗೂ ಸ್ನೇಹಿತರಿಗೆ ದ್ರೋಹ ಮಾಡಿದ ದುರ್ಯೋಧನನಿಗೆ ಈ ಸನಾತನವಾದ

ವೀರಲೋಕಗಳು ಸಿಗುವಂತಿದ್ದರೆ ಮಹಾತ್ಮರಾದ, ಮಹಾವ್ರತನಿಷ್ಠರಾದ, ಸತ್ಯವಾದ ಪ್ರತಿಜ್ಞೆಯುಳ್ಳ, ಲೋಕದಲ್ಲಿ ಬಹಳ ಶೂರರಾದ, ಸತ್ಯವನ್ನೇ ಹೇಳಿರುವ, ವೀರರಾದ ನನ್ನ ಸಹೋದರರು ಯಾರಿರುವರೋ ಅವರಿಗೆ ಈಗ ಯಾವ ಲೋಕಗಳು ಸಿಕ್ಕಿವೆ? ಎಂಬುದನ್ನು ನಾನು ನೋಡಬಯಸುತ್ತೇನೆ'.
ವ್ಯಾಖ್ಯಾನ ವಿಶೇಷ ಈ ಶ್ಲೋಕದಲ್ಲಿ ವೀರಲೋಕ ಅಂದರೆ ಯುದ್ಧದಲ್ಲಿ ಅಭಿಮುಖವಾಗಿ ಹೋರಾಡಿ ಮೃತರಾದ ವೀರರಿಗೆ ಸ್ವಲ್ಪ ಕಾಲ ಉಪಭೋಗವನ್ನು ಅನುಭವಿಸಲು ಸ್ವರ್ಗಕ್ಕಿಂತ ಕೆಳಭಾಗದಲ್ಲಿ, ಅಂತರಿಕ್ಷಕ್ಕಿಂತ ಮೇಲ್ಭಾಗದಲ್ಲಿ ಮಾಡಿರತಕ್ಕಂತಹ ಲೋಕಗಳು ಎಂದು ಅರ್ಥ.
ಕರ್ಣಂ ಚೈವ ಮಹಾತ್ಮಾನಂ ಕೌಂತೇಯಂ ಸತ್ಯಸಂಗರಮ್ |
ಧೃಷ್ಟದ್ಯುಮ್ನಂ ಸಾತ್ಯಕಿಂ ಚ ಧೃಷ್ಟದ್ಯುಮ್ನಸ್ಯ ಚಾತ್ಮಜಾನ್ ॥24॥
ಯೇ ಚ ಶಸ್ತ್ರೈರ್ವಧಂ ಪ್ರಾಪ್ತಾಃ ಕ್ಷತ್ರಧರ್ಮೇಣ ಪಾರ್ಥಿವಾಃ |
ಕ್ವನು ತೇ ಪಾರ್ಥಿವಾನ್ ಬ್ರಹ್ಮನ್ನೈತಾನ್ ಪಶ್ಯಾಮಿ ನಾರದ ॥25॥
`ಮಹಾತ್ಮನಾದ ಕುಂತೀಪುತ್ರನಾದ ಕರ್ಣನನ್ನೂ, ಸತ್ಯಪ್ರತಿಜ್ಞೆಯುಳ್ಳ ಧೃಷ್ಟದ್ಯುಮ್ನನನ್ನೂ, ಸಾತ್ಯಕಿಯನ್ನೂ, ಧೃಷ್ಟದ್ಯುಮ್ನನ ಮಕ್ಕಳನ್ನೂ, ಅಲ್ಲದೆ ಬೇರೆ ಯಾವೆಲ್ಲ ರಾಜರುಗಳು ಕ್ಷತ್ರಧರ್ಮವನ್ನು ಹೊಂದಿ, ಶಸ್ತ್ರದಿಂದ ಹತರಾಗಿರುವರೋ ಅಂತಹ ರಾಜರನ್ನು ಹೇ ಬ್ರಹ್ಮನ್, ನಾರದನೇ, ನಾನೆಲ್ಲಿ ನೋಡಲು ಸಾಧ್ಯ?'
ವಿರಾಟದ್ರುಪದೌ ಚೈವ ಧೃಷ್ಟಕೇತುಮುಖಾಂಶ್ಚ ತಾನ್ |
ಶಿಖಂಡಿನಂ ಚ ಪಾಂಚಾಲ್ಯಂ ದ್ರೌಪದೇಯಾಂಶ್ಚ ಸರ್ವಶಃ |
ಅಭಿಮನ್ಯುಂ ಚ ದುರ್ಧರ್ಷಂ ದ್ರಷ್ಟುಮಿಚ್ಛಾಮಿ ನಾರದ ॥26॥
`ಅಲ್ಲದೆ ವಿರಾಟರಾಜ ಹಾಗೂ ದ್ರುಪದರಾಜರು, ಧೃಷ್ಟಕೇತುವೇ ಮೊದಲಾದ ರಾಜರು, ಪಾಂಚಾಲದೇಶದವನಾದ ಶಿಖಂಡಿ, ದ್ರೌಪದಿಯ ಎಲ್ಲ ಮಕ್ಕಳು, ಕಷ್ಟದಿಂದ ಬಲಾತ್ಕಾರಕ್ಕೊಳಗಾದ ಅಭಿಮನ್ಯು, ಇವರೆಲ್ಲರನ್ನೂ ಹೇ ನಾರದರೇ, ನಾನು ನೋಡಬಯಸುವೆನು'.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಸ್ವರ್ಗಾರೋಹಣಪರ್ವಣಿ ಯುಧಿಷ್ಠಿರೇಣ ದುರ್ಯೋಧನದರ್ಶನಾನಂತರಂ
ನಾರದೇನ ಸಹ ಸಂಭಾಷಣಂ ನಾಮ ಪ್ರಥಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ಮೊದಲನೆಯ ಅಧ್ಯಾಯ ಮುಗಿಯಿತು.
* * * * *
ಎರಡನೆಯ ಅಧ್ಯಾಯ
ಯುಧಿಷ್ಠಿರನು ಸ್ವರ್ಗದಲ್ಲಿ ಕರ್ಣನೇ ಮೊದಲಾದ ಬಂಧುಜನರನ್ನು ಕಾಣದೆ, ದೇವತೆಗಳಲ್ಲಿ ಎಂತಹ ಪ್ರದೇಶವಾಗಿದ್ದರೂ ಬಂಧುಜನರೊಂದಿಗೆ ತಾನು ವಾಸಿಸುತ್ತೇನೆ ಎಂದು ತಿಳಿಸುವುದು. ದೇವತೆಗಳಿಂದ ಆಜ್ಞಾಪಿತನಾದ ದೇವದೂತನು ಬಂಧುಜನರನ್ನು ತೋರಿಸುವುದಕ್ಕಾಗಿ ಯುಧಿಷ್ಠಿರನನ್ನು ನರಕ ಪ್ರದೇಶಕ್ಕೆ ಒಯ್ಯುವುದು. ನೋಡಲು ಅಶಕ್ಯವಾದ ನರಕದರ್ಶನವನ್ನು ಸಹಿಸಿಕೊಳ್ಳಲಾಗದೆ ದೇವದೂತನೊಂದಿಗೆ ಹಿಂದಿರುಗುತ್ತಿದ್ದ ಯುಧಿಷ್ಠಿರನು ತಾನು ಹಿಂದೆ ಕೇಳಿದ ಕಂಠಧ್ವನಿಗಳನ್ನು ಕೇಳಿಸಿಕೊಳ್ಳುವುದು. ಅನಂತರ
ಯುಧಿಷ್ಠಿರನು ಕೇಳಿದಾಗ, ತಾವು ಕರ್ಣ-ಭೀಮಾದಿಗಳೆಂದು ತಿಳಿಸುವುದು. ಅನಂತರ ದೂತನಲ್ಲಿ ತಾನು ಹಿಂದಿರುಗಿ ಅಲ್ಲಿಗೆ ಬರಲಾರೆನೆಂದು ತಿಳಿಸು ಎಂದು ಸೂಚಿಸುವುದು. ದೂತನು ಇಂದ್ರನ ಸಮೀಪದಲ್ಲಿ ಯುಧಿಷ್ಠಿರನು ಹೇಳಿದುದನ್ನು ನಿವೇದಿಸುವುದು.
ಯುಧಿಷ್ಠಿರಃ
ನೇಹ ಪಶ್ಯಾಮಿ ವಿಬುಧಾ ರಾಧೇಯಮಮಿತೌಜಸಮ್ |
ಭ್ರಾತರೌ ಚ ಮಹಾತ್ಮಾನೌ ಯುಧಾಮನ್ಯೂತ್ತಮೌಜಸೌ ॥1॥
ಯುಧಿಷ್ಠಿರ ಹೇ ದೇವತೆಗಳೇ, ನಾನು ಅಮಿತವಾದ ಪರಾಕ್ರಮವುಳ್ಳ ರಾಧೇಯನನ್ನು ಇಲ್ಲಿ ನೋಡುತ್ತಿಲ್ಲ. ಅಲ್ಲದೆ ಮಹಾತ್ಮರಾದ ಸಹೋದರರಾದ ಯುಧಾಮನ್ಯು ಮತ್ತು ಉತ್ತಮೌಜರನ್ನೂ ನೋಡುತ್ತಿಲ್ಲ.
ಜುಹುವುರ್ಯೇ ಶರೀರಾಣಿ ರಣವಹ್ನೌ ಮಹಾರಥಾಃ |
ರಾಜಾನೋ ರಾಜಪುತ್ರಾಶ್ಚ ಯೇ ಮದರ್ಥೇ ಹತಾ ರಣೇ ॥2॥
ಯಾವ ಮಹಾರಥರು ಯುದ್ಧವೆಂಬ ಬೆಂಕಿಯಲ್ಲಿ ತಮ್ಮ ಶರೀರವನ್ನು ಹೋಮಿಸಿರುವರೋ, ಯಾವ ರಾಜರು ಮತ್ತು ರಾಜಪುತ್ರರು ನನಗೋಸ್ಕರ ಹತರಾಗಿರುವರೋ ಅವರನ್ನೂ ನೋಡುತ್ತಿಲ್ಲ.
ಕ್ವ ತೇ ಮಹಾರಥಾಃ ಸರ್ವೇ ಶಾರ್ದೂಲಸಮವಿಕ್ರಮಾಃ |
ತೈರಪ್ಯಯಂ ಜಿತೋ ಲೋಕಃ ಕಚ್ಚಿತ್ ಪುರುಷಸತ್ತಮೈಃ ॥3॥
ಹುಲಿಗೆ ಸದೃಶವಾದ ಪರಾಕ್ರಮವುಳ್ಳ ಆ ಎಲ್ಲ ಮಹಾರಥರು ಎಲ್ಲಿರುವರು? ಪುರುಷಶ್ರೇಷ್ಠರಾದ ಅವರಿಂದಲೂ ಈ ಲೋಕವು ಗೆಲ್ಲಲ್ಪಟ್ಟಿದೆ ತಾನೆ?
ಯದಿ ಲೋಕಾನಿಮಾನ್ ಪ್ರಾಪ್ತಾಸ್ತೇ ಚ ಸರ್ವೇ ಮಹಾರಥಾಃ |
ಸ್ಥಿತಂ ವಿತ್ತ ಹಿ ಮಾಂ ದೇವಾಃ ಸಹಿತಂ ತೈರ್ಮಹಾತ್ಮಭಿಃ ॥4॥
ಹೇ ದೇವತೆಗಳೇ, ಒಂದು ವೇಳೆ ಆ ಎಲ್ಲ ಮಹಾರಥರು ಈ ವೀರಲೋಕಗಳನ್ನು ಪಡೆದಿರುವರಾದರೆ ಅಂತಹ ಮಹಾತ್ಮರೊಂದಿಗೆ ನಾನು ಇರುವೆನೆಂದು ತಿಳಿಯಿರಿ.
ಕಚ್ಚಿನ್ನ ತೈರವಾಪ್ತೋಽಯಂ ನೃಪೈರ್ಲೋಕೋಽಕ್ಷಯಃ ಶುಭಃ |

ನ ತೈರಹಂ ವಿನಾ ವತ್ಸ್ಯೇ ಭ್ರಾತೃಭಿರ್ಜ್ಞಾತಿಭಿಸ್ತಥಾ ॥5॥
ಒಂದು ವೇಳೆ ಆ ರಾಜರಿಂದ ಅಕ್ಷಯವಾದ ಈ ಶುಭಲೋಕವು ಪ್ರಾಪ್ತವಾಗಿಲ್ಲದಿದ್ದರೆ ಅಂತಹ ಸಹೋದರರು ಮತ್ತು ಬಂಧುಗಳಿಲ್ಲದ ನಾನು ಇಲ್ಲಿ ವಾಸ ಮಾಡಲಾರೆನು.
ಮಾತುರ್ಹಿ ವಚನಂ ಶ್ರುತ್ವಾ ತದಾ ಸಲಿಲಕರ್ಮಣಿ |
ಕರ್ಣಸ್ಯ ಕ್ರಿಯತಾಂ ತೋಯಮಿತಿ ತಪ್ಯಾಮಿ ತೇನ ವೈ ॥6॥
ಬಂಧುಗಳಿಗೆ ಜಲಾಂಜಲಿ ಕೊಡುವ ಆ ಸಂದರ್ಭದಲ್ಲಿ ಕರ್ಣನಿಗೂ ಜಲಾಂಜಲಿಯನ್ನು ನೀಡಬೇಕೆಂದು ತಾಯಿಯ ಮಾತನ್ನು ಕೇಳಿದ ನಾನು ಈಗಲೂ ಆ ಬಗ್ಗೆ ಪರಿತಪಿಸುತ್ತಿದ್ದೇನೆ.
ಇದಂ ಚ ಪರಿತಪ್ಯಾಮಿ ಪುನಃಪುನರಹಂ ಸುರಾಃ |
ಯನ್ಮಾತುಃ ಸದೃಶೌ ಪಾದೌ ತಸ್ಯಾಹಮಮಿತಾತ್ಮನಃ ॥7॥
ದೃಷ್ಟ್ವೈವ ತಂ ನಾನುಗತಃ ಕರ್ಣಂ ಪರಬಲಾರ್ದನಮ್ |
ನ ಹ್ಯಸ್ಮಾನ್ ಕರ್ಣಸಹಿತಾನ್ ಜಯೇಚ್ಛಕ್ರೋಽಪಿ ಸಂಯುಗೇ ॥8॥
ಹೇ ದೇವತೆಗಳೇ, ಮತ್ತೆ ಮತ್ತೆ ನಾನು ಈ ವಿಷಯದಲ್ಲಿ ಪರಿತಾಪ ಪಡುತ್ತಿದ್ದೇನೆ. ಅದೇನೆಂದರೆ ತಾಯಿಯ ಪಾದಗಳಿಗೆ ಸದೃಶವಾದ, ಅಮಿತಾತ್ಮನಾದ ಅವನ ಪಾದಗಳನ್ನು ನೋಡಿದ ಕೂಡಲೇ ನಾನು ಅವನನ್ನು ಅನುಸರಿಸಿಲ್ಲ. ಆ ಶತ್ರುಗಳ ನಾಶಕನಾದ ಕರ್ಣನನ್ನು ನಾನು ಅನುಸರಿಸಬೇಕಿತ್ತು. ಕರ್ಣಸಹಿತರಾದ ನಮ್ಮನ್ನು ಯುದ್ಧದಲ್ಲಿ ಇಂದ್ರನೂ ಜಯಿಸಲಾರನು.
ತಮಹಂ ಯತ್ರತತ್ರಸ್ಥಂ ದ್ರಷ್ಟುಮಿಚ್ಛಾಮಿ ಸೂರ್ಯಜಮ್ |
ಅವಿಜ್ಞಾತೋ ಮಯಾ ಯೋಸೌ ಘಾತಿತಃ ಸವ್ಯಸಾಚಿನಾ ॥9॥
ಅಂತಹ ಸೂರ್ಯಪುತ್ರನಾದ ಅವನು ಎಲ್ಲೇ ಇರಲಿ, ಅವನನ್ನು ನಾನು ನೋಡ ಬಯಸುವೆನು. ಯಾವ ಕರ್ಣನು ನನ್ನ ಅಣ್ಣನೆಂದು ತಿಳಿಯದೆ ಸವ್ಯಸಾಚಿಯಾದ ಅರ್ಜುನನಿಂದ ಹತನಾದನೋ ಅವನನ್ನು ನೋಡಬೇಕು.
ಭೀಮಂ ಚ ಭೀಮವಿಕ್ರಾಂತಂ ಪ್ರಾಣೇಭ್ಯೋಽಪಿ ಪ್ರಿಯಂ ಮಮ |
ಅರ್ಜುನಂ ಚೇಂದ್ರಸಂಕಾಶಂ ಯಮೌ ಚೈವ ಯಮೋಪಮೌ ॥10॥
ದ್ರಷ್ಟುಮಿಚ್ಛಾಮಿ ತಾಂ ಚಾಹಂ ಪಾಂಚಾಲೀಂ ಧರ್ಮಚಾರಿಣೀಮ್ |
ನ ಚೇಹ ಸ್ಥಾತುಮಿಚ್ಛಾಮಿ ಸತ್ಯಮೇವಂ ಬ್ರವೀಮಿ ವಃ ॥11॥
ಬಹು ಪರಾಕ್ರಮವುಳ್ಳ ಭೀಮನನ್ನೂ, ನನ್ನ ಪ್ರಾಣಗಳಿಗಿಂತಲೂ ನನಗೆ ಪ್ರೀತಿಪಾತ್ರನಾದ ಇಂದ್ರಸದೃಶನಾದ ಅರ್ಜುನನನ್ನೂ, ಯಮಧರ್ಮರಿಗೆ ಸದೃಶರಾದ ಅವಳಿ ಮಕ್ಕಳನ್ನೂ, ಸದಾ ಧರ್ಮಾಚಾರಣೆಯನ್ನೇ ನಡೆಸುತ್ತಿದ್ದ ಪಾಂಚಾಲಿಯನ್ನೂ ನಾನು ನೋಡಬಯಸುತ್ತಿದ್ದೇನೆ. ಸತ್ಯವಾಗಿಯೂ ಹೇಳುವೆನು, ನನಗೆ ಇಲ್ಲಿ ನಿಲ್ಲಲೂ ಇಷ್ಟವಾಗುತ್ತಿಲ್ಲ.
ಕಿಂ ಮೇ ಭ್ರಾತೃವಿಹೀನಸ್ಯ ಸ್ವರ್ಗೇಣ ಸುರಸತ್ತಮಾಃ |
ಯತ್ರ ತೇ ಮಮ ಸ ಸ್ವರ್ಗೋ ನಾಯಂ ಸ್ವರ್ಗೋ ಮತೋ ಮಮ ॥
ಹೇ ದೇವಶ್ರೇಷ್ಠರೇ, ಸಹೋದರರಿಲ್ಲದ ಸ್ವರ್ಗದಿಂದ ನನಗೆ ಏನಾಗಬೇಕಿದೆ? ಎಲ್ಲಿ ನನ್ನ ಸಹೋದರರಿರುವರೋ ಅದೇ ನನಗೆ ಸ್ವರ್ಗ. ಇದು ಸ್ವರ್ಗವೆಂದೇ ನನಗೆ ಅನಿಸುತ್ತಿಲ್ಲ.
ದೇವಾಃ
ಯದಿ ವೈ ತತ್ರ ತೇ ಶ್ರದ್ಧಾ ಗಮ್ಯತಾಂ ತತ್ರ ಮಾಚಿರಮ್ |
ಪ್ರಿಯೇ ಹಿ ತವ ವರ್ತಾಮೋ ದೇವರಾಜಸ್ಯ ಶಾಸನಾತ್ ॥13॥
ದೇವತೆಗಳು ಅವರಿರುವ ಪ್ರದೇಶದಲ್ಲೇ ನಿನಗೆ ಆಸಕ್ತಿಯಿದ್ದರೆ ತಡಮಾಡದೆ ಅಲ್ಲಿಗೆ ಹೋಗೋಣ. ದೇವರಾಜನಾದ ಇಂದ್ರನ ಅಪ್ಪಣೆಯಂತೆ ನಿನಗೆ ಯಾವುದು ಪ್ರಿಯವೋ ಅದನ್ನೇ ನಾವು ನಡೆಸುವೆವು.
ವೈಶಂಪಾಯನಃ
ಇತ್ಯುಕ್ತತ್ವ ತಂ ತತೋ ದೇವಾ ದೇವದೂತಮುಪಾದಿಶನ್ |
ಯುಧಿಷ್ಠಿರಸ್ಯ ಸುಹೃದೋ ದರ್ಶಯೇತಿ ಪರಂತಪ ॥14॥
ವೈಶಂಪಾಯನ ಹೇ ಪರಂತಪನೇ, ದೇವತೆಗಳು ಯುಧಿಷ್ಠಿರನನ್ನು ಕುರಿತು ಇಷ್ಟು ಹೇಳಿ, ನಂತರ ಯುಧಿಷ್ಠಿರನಿಗೆ ಅವನ ಸ್ನೇಹಿತರನ್ನು ತೋರಿಸು ಎಂದು ದೇವದೂತನಿಗೆ ಆದೇಶಿಸಿದರು.
ತತಃ ಕುಂತೀಸುತೋ ರಾಜಾ ದೇವದೂತಶ್ಚ ಜಗ್ಮತುಃ |
ಸಹಿತೌ ರಾಜಶಾರ್ದೂಲ ಯತ್ರ ತೇ ಪುರುಷರ್ಷಭಾಃ ॥15॥
ಹೇ ರಾಜಶಾರ್ದೂಲನೇ, ಅನಂತರ ಕುಂತೀಸುತನಾದ ಯುಧಿಷ್ಠಿರ ರಾಜನೂ ದೇವದೂತನೂ ಇಬ್ಬರೂ ಜೊತೆಯಾಗಿ ಆ ಪುರುಷಶ್ರೇಷ್ಠರು ಎಲ್ಲಿರುವರೋ ಅಲ್ಲಿಗೆ ನಡೆದರು.
ಅಗ್ರತೋ ದೇವದೂತಶ್ಚ ಯಯೌ ರಾಜಾ ಚ ಪೃಷ್ಠತಃ |
ಪಂಥಾನಮಶುಭಂ ದುರ್ಗಂ ಸೇವಿತಂ ಪಾಪಕರ್ಮಭಿಃ ॥16॥
ಮುಂಭಾಗದಲ್ಲಿ ದೇವದೂತನು, ಹಿಂಭಾಗದಲ್ಲಿ ರಾಜನಾದ ಯುಧಿಷ್ಠಿರನು ಪಾಪಕರ್ಮವನ್ನು ಮಾಡಿದ ವ್ಯಕ್ತಿಗಳಿಂದ ತುಂಬಿರುವ ದುರ್ಗಮವಾದ ಅಮಂಗಳವಾದ ದಾರಿಯಲ್ಲಿ ಮುಂದುವರೆದರು.
ತಮಸಾ ಸಂವೃತಂ ಘೋರಂ ಕೇಶಕಂಕಾಲಸಂಕುಲಮ್ |
ಯುಕ್ತಂ ಪಾಪಕೃತಾಂ ಗಂಧೈರ್ಮಾಂಸಶೋಣಿತಕರ್ದಮಮ್ ॥17॥
ಆ ದಾರಿಯು ಕತ್ತಲಿನಿಂದ ತುಂಬಿದ್ದು ಘೋರವಾಗಿತ್ತು. ಪಾಪಕರ್ಮವನ್ನು ಮಾಡಿದ ವ್ಯಕ್ತಿಗಳ ಕೂದಲು, ಶರೀರದ ಮೂಳೆಗಳು

ಇವುಗಳಿಂದ ತುಂಬಿತ್ತು. ಮಾಂಸ, ರಕ್ತ ಇವುಗಳ ಕೆಸರಿನಿಂದ ತುಂಬಿ ದುರ್ನಾತ ಬೀರುತ್ತಿತ್ತು.
ದಂಶೋತ್ಪಾತಕಭಲ್ಲೂಕಮಕ್ಷಿಕಾಮಶಕಾವೃತಮ್ |
ಇತಶ್ಚೇತಶ್ಚ ಕುಣಪೈಃ ಸಮಂತಾತ್ ಪರಿವಾರಿತಮ್ ॥18॥
ಕಾಡುನೊಣ, ಮಿಡತೆ, ಜೀರುಂಡೆ, ನೊಣ ಹಾಗು ಸೊಳ್ಳೆಗಳಿಂದ ಕೂಡಿದ ಸುತ್ತಲೂ ಅಲ್ಲಲ್ಲಿ ಬಿದ್ದಿರುವ ಹೆಣಗಳಿಂದಆ ಪ್ರದೇಶ ತುಂಬಿಹೋಗಿತ್ತು.
ಅಸ್ಥಿಕೇಶಸಮಾಕೀರ್ಣಂ ಕೃಮಿಕೀಟಸಮಾಕುಲಮ್ |
ಜ್ವಲನೇನ ಪ್ರದೀಪ್ತೇನ ಸಮಂತಾತ್ ಪರಿವೇಷ್ಟಿತಮ್ ॥19॥
ಎಲ್ಲೆಡೆ ಎಲುಬು ಹಾಗೂ ಕೂದಲುಗಳ ರಾಶಿಬಿದ್ದಿದ್ದು ಅವುಗಳ ಮೇಲೆ ಕ್ರಿಮಿ ಕೀಟಗಳು ಮುತ್ತಿದ್ದವು. ಅಲ್ಲದೆ ಸುತ್ತಲೂ ಬೇಲಿಯ ರೂಪದಲ್ಲಿ ಉರಿಯುತ್ತಿರುವ ಬೆಂಕಿಯು ಹಬ್ಬಿತ್ತು.
ಅಯೋಮುಖೈಶ್ಚ ಕಾಕೋಲೈರ್ಗೃಧ್ರೈಶ್ಚ ಸಮಭಿದ್ರುತಮ್ |
ಸೂಚೀಮುಖೈಸ್ತಥಾ ಪ್ರೇತೈರ್ವಿಂಧ್ಯಶೈಲೋಪಮೈರ್ವೃತಮ್ ॥20॥
ಮೇದೋರುಧಿರಯುಕ್ತೈಶ್ಚ ಚ್ಛಿನ್ನಬಾಹೂರುಪಾಣಿಭಿಃ |
ನಿಕೃತ್ತೋದರಪಾದೈಶ್ಚ ತತ್ರ ತತ್ರ ಪ್ರವೇಶಿತೈಃ ॥21॥
ಕಬ್ಬಿಣದಂತೆ ಗಟ್ಟಿಯಾದ ಕೊಕ್ಕುಳ್ಳ ಮಂಡಕಾಗೆಗಳು ಹಾಗು ಹದ್ದುಗಳು ಅಟ್ಟಿಸಿಕೊಂಡು ಬರುತ್ತಿದ್ದವು. ಅಲ್ಲದೆ ವಿಂಧ್ಯಪರ್ವತದಂತೆ ಎತ್ತರವಾದ, ಸೂಜಿಯಂತೆ ಮುಖವುಳ್ಳ ಪ್ರೇತಗಳಿಂದ ತುಂಬಿಹೋಗಿತ್ತು. ಕೊಬ್ಬು ಮತ್ತು ರಕ್ತಗಳಿಂದ ಲೇಪಿತವಾದ ತುಂಡಾದ ಕೈ-ಕಾಲುಗಳು ಅಲ್ಲಲ್ಲಿ ಬಿದ್ದಿದ್ದವು. ಅಲ್ಲದೆ ಸೀಳಿ ಹೋದ ಉದರವುಳ್ಳ, ಸೀಳಿದ ಪಾದಗಳುಳ್ಳ ವ್ಯಕ್ತಿಗಳು ಅಲ್ಲಿ ಪ್ರವೇಶಿಸುತ್ತಿದ್ದರು.
ಸ ತತ್ಕುಣಪದುರ್ಗಂಧಮಶಿವಂ ರೋಮಹರ್ಷಣಮ್ |
ಜಗಾಮ ರಾಜಾ ಧರ್ಮಾತ್ಮಾ ಮಧ್ಯೇ ಬಹು ವಿಚಿಂತಯನ್ ॥22॥
ಧರ್ಮಾತ್ಮನಾದ ಆ ಯುಧಿಷ್ಠಿರರಾಜನು ಆ ಹೆಣಗಳ ದುರ್ಗಂಧದಿಂದ ಕೂಡಿದ, ಅಮಂಗಳಮಯವಾದ, ನೆನಪಿನಿಂದಲೇ ರೋಮಾಂಚವನ್ನು ಉಂಟು ಮಾಡುವ ಆ ದಾರಿಯ ಮಧ್ಯದಲ್ಲಿ ಬಹಳವಾದ ಆಲೋಚನೆಯನ್ನು ನಡೆಸುತ್ತಾ ಮುಂದೆ ಸಾಗಿದನು.
ದದರ್ಶೋಷ್ಣೋದಕೈಃ ಪೂರ್ಣಾಂ ನದೀಂ ಚಾಪಿ ಸುದುರ್ಗಮಾಮ್ |
ಅಸಿಪತ್ರವನಂ ಚೈವ ನಿಶಿತಂ ಕ್ಷುರಸಂವೃತಮ್ ॥23॥
ಹೀಗೆ ಸಾಗುತ್ತಾ ದುರ್ಗಮವಾದ, ಕುದಿಯುವ ನೀರಿನಿಂದ ತುಂಬಿದ ನದಿಯನ್ನೂ, ಹರಿತವಾದ ಖಡ್ಗಗಳಿಂದ ಕೂಡಿದ ಅಸಿಪತ್ರವನವನ್ನೂ ನೋಡಿದನು.
ಕರಂಭವಾಲುಕಾಸ್ತಪ್ತಾ ಆಯಸೀಶ್ಚ ಶಿಲಾಃ ಪೃಥಕ್ |
ಲೋಹಕುಂಭೀಶ್ಚ ತೈಲಸ್ಯ ಕ್ವಾಥ್ಯಮಾನಾಃ ಸಮಂತತಃ ॥24॥
ಕೂಟಶಾಲ್ಮಲಿಕಂ ಚಾಪಿ ದುಃಸ್ಪರ್ಶಂ ತೀಕ್ಷ್ಣಕಂಟಕಮ್ |
ದದರ್ಶಾನ್ಯಾಶ್ಚ ಕೌಂತೇಯೋ ಯಾತನಾಃ ಪಾಪಕರ್ಮಿಣಾಮ್ ॥25॥
ಧಾನ್ಯಗಳನ್ನು ಹುರಿಯಲು ಬಳಸುವಂತೆ ಚೆನ್ನಾಗಿ ಬಿಸಿಯಾದ ಮರಳಿನ ರಾಶಿಗಳನ್ನೂ, ಚೆನ್ನಾಗಿ ಬಿಸಿಮಾಡಲ್ಪಟ್ಟ ಕಬ್ಬಿಣದ ಬಂಡೆಗಳನ್ನೂ, ಸುತ್ತಲೂ ಬೆಂಕಿ ಹಾಕುವ ಮೂಲಕ ಕುದಿಯುತ್ತಿರುವ ಎಣ್ಣೆಯಿಂದ ಕೂಡಿದ ಲೋಹಕುಂಭಗಳನ್ನೂ, ಮುಟ್ಟಲು ಅಸಾಧ್ಯವಾದ ಚೂಪಾದ ಮುಳ್ಳುಗಳಿಂದ ಕೂಡಿದ ಶಾಲ್ಮಲೀ ವೃಕ್ಷದ ಸಾಲನ್ನೂ ಹೀಗೆ ಇನ್ನೂ ನಾನಾ ರೀತಿಯ ಪಾಪಕರ್ಮಿಗಳಿಗೆ ಯಾತನೆಯನ್ನು ನೀಡಬಲ್ಲ ವ್ಯವಸ್ಥೆಗಳನ್ನು ಕೌಂತೇಯನು ಅಲ್ಲಿ ಕಂಡನು.
ಸ ತಂ ದುರ್ಗಂಧಮಾಲಕ್ಷ್ಯ ದೇವದೂತಮುವಾಚ ಹ |
ಕಿಯದಧ್ವಾನಮಸ್ಮಾಭಿರ್ಗಂತವ್ಯಮಿಮಮೀದೃಶಮ್ ॥26॥
ಅಲ್ಲಿ ಬರುತ್ತಿರುವ ಆ ದುರ್ಗಂಧವನ್ನು ಗಮನಿಸಿ, ಯುಧಿಷ್ಠಿರನು ನಾವು ಇಂತಹ ಕೆಟ್ಟದಾದ ಈ ದಾರಿಯಲ್ಲಿ ಎಷ್ಟು ದೂರ ನಡೆಯಬೇಕು? ಎಂದು ದೇವದೂತನನ್ನು ಕೇಳಿದನು.
ಕ್ವ ಚ ತೇ ಭ್ರಾತರೋ ಮಹ್ಯಂ ತನ್ಮಮಾಖ್ಯಾತುಮರ್ಹಸಿ |
ದೇಶೋಽಯಂ ಕಶ್ಚ ದೇವಾನಾಮೇತದಿಚ್ಛಾಮಿ ವೇದಿತುಮ್ ॥27॥
ನನ್ನ ಸಹೋದರರು ಎಲ್ಲಿರುವರು ಎಂಬುದನ್ನು ನೀನು ನನಗೆ ಹೇಳಬೇಕು. ಅಲ್ಲದೆ ದೇವತೆಗಳಿಗೆ ಸಂಬಂಧಪಟ್ಟ ಈ ಪ್ರದೇಶವು ಯಾವುದು ಎಂಬುದನ್ನೂ ನಾನು ತಿಳಿಯಬಯಸುತ್ತೇನೆ.
ಸ ಸನ್ನಿವವೃತೇ ಶ್ರುತ್ವಾ ಧರ್ಮರಾಜಸ್ಯ ಭಾಷಿತಮ್ |
ದೇವದೂತೋಽಬ್ರವೀಚ್ಚೈನಮೇತಾವದ್ಗಮನಂ ತವ ॥28॥
ಧರ್ಮರಾಜನ ಈ ಮಾತನ್ನು ಕೇಳಿ ಆ ದೇವದೂತನು ಹಿಂದೆ ತಿರುಗಿ, ಇಷ್ಟು ದೂರ ಮಾತ್ರ ನೀನು ಬರಬೇಕಾಗಿದ್ದುದು ಎಂದನು.
ನಿವರ್ತಿತವ್ಯೋ ಹಿ ಮಯಾ ತಥಾಽಸ್ಮ್ಯುಕ್ತೋ ದಿವೌಕಸೈಃ |
ಯದಿ ಶ್ರಾಂತೋಽಸಿ ರಾಜೇಂದ್ರ ತ್ವಮಥಾಗಂತುಮರ್ಹಸಿ ॥29॥
ನಾನು ಇಲ್ಲಿಂದಲೇ ಹಿಂದುರುಗಬೇಕಾಗಿದೆ. ಹಾಗೆಯೇ ದೇವತೆಗಳು ನನಗೆ ತಿಳಿಸಿದ್ದಾರೆ. ಹೇ ರಾಜಶ್ರೇಷ್ಠನೇ, ನೀನು ಆಯಾಸಗೊಂಡಿದ್ದರೆ ನೀನೂ ನನ್ನೊಂದಿಗೆ ಹಿಂದಿರುಗಬಹುದು.
ಯುಧಿಷ್ಠಿರಸ್ತು ನಿರ್ವಿಣ್ಣಸ್ತೇನ ಗಂಧೇನ ಮೂರ್ಛಿತಃ |
ನಿವರ್ತನೇ ಧೃತಮನಾಃ ಪರ್ಯಾವರ್ತತ ಭಾರತ ॥30॥
ಹೇ ಭಾರತನೇ, ಆಗ ಯುಧಿಷ್ಠಿರನಾದರೂ ಖೇದಗೊಂಡವನಾಗಿ, ಅಲ್ಲಿನ ದುರ್ಗಂಧದಿಂದ ಮೂರ್ಛೆಗೊಳಗಾಗಿ ಹಿಂದಿರುಗಬೇಕೆಂದು

ಮನಸ್ಸು ಮಾಡಿ ತಿರುಗಿ ಹೊರಟನು.
ಸ ಸನ್ನಿವೃತ್ತೋ ಧರ್ಮಾತ್ಮಾ ದುಃಖಶೋಕಸಮಾಹತಃ |
ಶುಶ್ರಾವ ತತ್ರ ವದತಾಂ ದೀನಾ ವಾಚಃ ಸಮಂತತಃ ||31||
ಧರ್ಮಾತ್ಮನಾದ ಅವನು ದುಃಖ-ಶೋಕಗಳಿಂದ ಜರ್ಝರಿತನಾಗಿ ಹಿಂದಿರುಗುತ್ತಿರುವಾಗಲೇ ಸುತ್ತಲೂ ದೀನಸ್ವರದಿಂದ ತನ್ನನ್ನುದ್ದೇಶಿಸಿ ಆಡುವ ಮಾತುಗಳನ್ನು ಕೇಳಿಸಿಕೊಂಡನು.
ಭೋ ಭೋ ಧರ್ಮಜ ರಾಜರ್ಷೇ ಪುಣ್ಯಾಭಿಜನ ಪಾಂಡವ |
ಅನುಗ್ರಹಾರ್ಥಮಸ್ಮಾಕಂ ತಿಷ್ಠ ತಾವನ್ಮುಹೂರ್ತಕಮ್ ||32||
`ಓ ಧರ್ಮಜನೇ, ರಾಜಶ್ರೇಷ್ಠನೇ, ಮಂಗಳಮಯವಾದ ವಂಶದಲ್ಲಿ ಜನಿಸಿದವನೇ, ಪಾಂಡುಪುತ್ರನೇ, ನಮ್ಮನ್ನು ಅನುಗ್ರಹಿಸುವುದಕ್ಕಾಗಿ ಒಂದು ಮುಹೂರ್ತಕಾಲವಾದರೂ ಇಲ್ಲೇ ನಿಲ್ಲು.
ಆಯಾತಿ ತ್ವಯಿ ದುರ್ಧರ್ಷೇ ವಾತಿ ಪುಣ್ಯಃ ಸಮೀರಣಃ |
ತವ ಗಂಧಾನುಗಸ್ತಾತ ಯೇನಾಸ್ಮಾನ್ ಸುಖಮಾಗಮತ್ ||33||
ಸೋಲಿಲ್ಲದ ನೀನು ಬರುತ್ತಿದ್ದಂತೆಯೇ ಮಂಗಳಮಯವಾದ ಗಾಳಿಯು ಬೀಸತೊಡಗಿದೆ. ನಿನ್ನ ಶರೀರದ ಸುಗಂಧಕ್ಕೆ ಅನುಗುಣವಾಗಿರುವ ಆ ಗಾಳಿಯಿಂದ ನಮಗೆ ಸುಖವುಂಟಾಗುತ್ತಿದೆ.
ತೇ ವಯಂ ಪಾರ್ಥ ದೀರ್ಘಸ್ಯ ಕಾಲಸ್ಯ ಪುರುಷರ್ಷಭ |
ಸುಖಮಾಸಾದಯಿಷ್ಯಾಮಸ್ತ್ವಾಂ ದೃಷ್ಟ್ವಾ ರಾಜಸತ್ತಮ ||34||
ಪುರುಷಶ್ರೇಷ್ಠನಾದ ಹೇ ಪಾರ್ಥನೇ, ಬಹಳ ಕಾಲದ ನಂತರ ನಿನ್ನನ್ನು ನೋಡಿದ ಮೇಲೆ ಕಷ್ಟದಲ್ಲಿದ್ದ ನಾವು ಸುಖವನ್ನು ಹೊಂದುತ್ತಿದ್ದೇವೆ.
ಸಂತಿಷ್ಠಸ್ವ ಮಹಾಬಾಹೋ ಮುಹೂರ್ತಮಿಹ ಭಾರತ |
ತ್ವಯಿ ತಿಷ್ಠತಿ ಕೌರವ್ಯ ಯಾತನಾಽಸ್ಮಾನ್ನ ಬಾಧತೇ ||35||
ಹೇ ಮಹಾಬಾಹುವೇ, ಭಾರತನೇ, ಕುರುವಂಶಜನೇ, ಮುಹೂರ್ತದ ಕಾಲ ಇಲ್ಲಿ ನಿಂತುಬಿಡು. ನೀನು ನಿಂತಿರುವಷ್ಟು ಹೊತ್ತು ಈ ಯಾತನೆಯು ನಮ್ಮನ್ನು ಬಾಧಿಸುವುದಿಲ್ಲ'.
ಏವಂ ಬಹುವಿಧಾ ವಾಚಃ ಕೃಪಣಾ ವೇದನಾವತಾಮ್ |
ತಸ್ಮಿನ್ ದೇಶೇ ಸ ಶುಶ್ರಾವ ಸಮಂತಾದ್ ವದತಾಂ ನೃಪ ||36||
ಹೇ ನೃಪನೇ, ಆ ಯುಧಿಷ್ಠಿರನು ಈ ರೀತಿಯಾಗಿ ಕಷ್ಟದಲ್ಲಿದ್ದವರ ಕರುಣಾಜನಕವಾದ ಅನೇಕ ರೀತಿಯ ಮಾತುಗಳನ್ನು ಆ ಪ್ರದೇಶದಲ್ಲಿ ಸುತ್ತಲೂ ಆಡುತ್ತಿರುವುದನ್ನು ಕೇಳಿದನು.
ತೇಷಾಂ ತು ವಚನಂ ಶ್ರುತ್ವಾ ದಯಾವಾನ್ ದೀನಭಾಷಿಣಾಮ್ |
ಅಹೋ ಕೃಚ್ಛ್ರಮಿತಿ ಪ್ರಾಹ ತಸ್ಥೌ ಸ ಚ ಯುಧಿಷ್ಠಿರಃ ||37||
ಹೀಗೆ ದೀನರಾಗಿ ಬೇಡಿಕೊಳ್ಳುತ್ತಿರುವ ಅವರ ಮಾತುಗಳನ್ನು ಕೇಳಿದ ದಯಾಮಯನಾದ ಯುಧಿಷ್ಠಿರನು ಅಯ್ಯೋ ಕಷ್ಟವೇ! ಎಂದು ಹೇಳುತ್ತಾ ಅಲ್ಲೇ ನಿಂತನು.
ಸ ತಾ ಗಿರಃ ಪುರಸ್ತಾದ್ ವೈ ಶ್ರುತಪೂರ್ವಾಃ ಪುನಃಪುನಃ |
ಗ್ಲಾನಾನಾಂ ದುಃಖಿತಾನಾಂ ಚ ನಾಭ್ಯಜಾನತ ಪಾಂಡವಃ ||38||
ಅವನು ಆ ಸ್ವರಗಳನ್ನು ಹಿಂದೆ ಕೂಡ ಮತ್ತೆ ಮತ್ತೆ ಕೇಳಿದ್ದರೂ ದುಃಖದಿಂದ ಬಳಲಿರುವ ಅವರು ಯಾರೆಂದು ಪಾಂಡುಪುತ್ರನು ಸರಿಯಾಗಿ ಗುರುತಿಸಲಾಗಲಿಲ್ಲ.
ಅಬುದ್ಧ್ಯಮಾನಸ್ತಾ ವಾಚೋ ಧರ್ಮಪುತ್ರೋ ಯುಧಿಷ್ಠಿರಃ |
ಉವಾಚ ಕೇ ಭವಂತೋ ವೈ ಕಿಮರ್ಥಮಿಹ ತಿಷ್ಠಥ ||39||
ಎಷ್ಟು ಆಲೋಚಿಸಿದರೂ ಆ ಮಾತುಗಳು ಯಾರದೆಂದು ತಿಳಿಯಲಾರದ ಧರ್ಮಪುತ್ರನಾದ ಯುಧಿಷ್ಠಿರನು `ಯಾರು ನೀವು? ಇಲ್ಲೇಕಿರುವಿರಿ?' ಎಂದು ಕೇಳಿದನು.
ಇತ್ಯುಕ್ತಾಸ್ತೇ ತತಃ ಸರ್ವೇ ಸಮಂತಾದವಭಾಷಿರೇ |
ಕರ್ಣೋಽಹಂ ಭೀಮಸೇನೋಽಹಮರ್ಜುನೋಹಮಿತಿ ಪ್ರಭೋ ||
ನಕುಲಃ ಸಹದೇವೋಽಹಂ ಧೃಷ್ಟದ್ಯುಮ್ನೋಽಹಮಿತ್ಯುತ |
ದ್ರೌಪದೀ ದ್ರೌಪದೇಯಾಶ್ಚ ಇತ್ಯೇವಂ ತೇ ವಿಚುಕ್ರುಶುಃ ||41||
ಹೀಗೆ ಯುಧಿಷ್ಠಿರನು ಹೇಳಿದಾಗ ಅವರೆಲ್ಲರೂ `ನಾನು ಕರ್ಣ, ನಾನು ಭೀಮಸೇನ, ಹೇ ಪ್ರಭೋ, ನಾನು ಅರ್ಜುನ, ನಾನು ನಕುಲ, ನಾನು ಸಹದೇವ, ನಾನು ಧೃಷ್ಟದ್ಯುಮ್ನ, ನಾನು ದ್ರೌಪದಿ, ನಾವು ದ್ರೌಪದಿಯ ಮಕ್ಕಳು'- ಈ ರೀತಿಯಾಗಿ ಜೋರಾಗಿ ಬೊಬ್ಬಿಡುತ್ತಾ ಅವರು ಮಾತನಾಡಿದರು.
ವ್ಯಾಖ್ಯಾನ ವಿಶೇಷ ದ್ರೋಣರನ್ನು ನಿಗ್ರಹ ಮಾಡಬೇಕಾದ ಕಾಲದಲ್ಲಿ ಕೃಷ್ಣನು `ಅಶ್ವತ್ಥಾಮಾ ಹತಃ' ಎಂದು ಹೇಳು ಎಂದು ಧರ್ಮರಾಜನಲ್ಲಿ ಕೇಳಿಕೊಂಡಾಗ, ದೇವರ ಮಾತಿನಲ್ಲಿ ವಿಶ್ವಾಸವಿಡದೆ ಸಣ್ಣದನಿಯಲ್ಲಿ `ಕುಂಜರಶ್ಚ' ಎಂದು ಹೇಳಿದುದರಿಂದ ಅಷ್ಟಂಶ ಪಾಪಕ್ಕೆ ಯೋಗ್ಯವಾದ ನರಕ ದರ್ಶನವನ್ನು ಮಾಡಿಸುವುದಕ್ಕೋಸ್ಕರ ದೇವತೆಗಳು ತತ್ಕಾಲದಲ್ಲಿ ಕಲ್ಪಿಸಿದ ನರಕ ಇದಾಗಿದೆ ಹೊರತು ಇದು ನರಕಲೋಕವಲ್ಲ. ಏಕೆಂದರೆ ಹಿಂದೆ ಮಹಾಪ್ರಸ್ಥಾನಿಕ ಪರ್ವದಲ್ಲಿ `ದ್ರೌಪದಿಯ ಜೊತೆಗೆ ನಿನ್ನ ಸಹೋದರರನ್ನೂ, ಪುತ್ರರನ್ನೂ ಮುಂದೆ ನೀನು ಸ್ವರ್ಗದಲ್ಲಿ ನೋಡಲಿರುವೆ. ಆದ್ದರಿಂದ ದುಃಖಪಡಬೇಡ' ಎಂದು ಇಂದ್ರನು ಹೇಳಿದ್ದಾನೆ. ಇದು ನರಕಲೋಕವೇ ಆಗಿದ್ದಲ್ಲಿ ಆ ಇಂದ್ರನ ಮಾತು ಸುಳ್ಳಾಗುವುದು. ಆದ್ದರಿಂದಲೇ ಪ್ರಕೃತದಲ್ಲಿ ನಾನು ಭೀಮ, ನಾನು ಕರ್ಣ, ನಾನು

ಅರ್ಜುನ ಎಂದು ಹೇಳುವ ಜೀವರನ್ನು ಧರ್ಮರಾಜನಿಗೆ ನರಕದರ್ಶನರೂಪವಾದ ದುಃಖವನ್ನು ನೀಡಲು ದೇವತೆಗಳು ತತ್ಕಾಲದಲ್ಲಿ ಕಲ್ಪಿಸಿದ್ದಾರೆ. ಹಾಗಿಲ್ಲವಾದರೆ ಭೂಮಿಗಿಂತಲೂ ಕೆಳಭಾಗದಲ್ಲಿರುವ ನರಕವು ಸ್ವರ್ಗಮಾರ್ಗದಲ್ಲಿ ಹೇಗೆ ಕಂಡೀತು? ಅಷ್ಟಲ್ಲದೆ ಮುಂದೆ ದೇವತೆಗಳು ಬಂದಾಗ ಆ ಎಲ್ಲ ನರಕಚಿಹ್ನೆಗಳೂ ಹೊರಟು ಹೋದವು ಎಂಬ ಮಾತು ಬರುತ್ತದೆ. ಇದೂ ಸುಳ್ಳಾಗಬೇಕಾಗುತ್ತದೆ - ಲಕ್ಷಾಲಂಕಾರ.

ತಾ ವಾಚಃ ಸ ತದಾ ಶ್ರುತ್ವಾ ತದ್ದೇಶಸದೃಶೀರ್ನೃಪ |
ತತೋ ವಿಮಮೃಶೇ ರಾಜಾ ಕಿಂತ್ವಿದಂ ದೈವಕಾರಿತಮ್ ॥42॥

ಹೇ ನೃಪನೇ, ಆ ಪ್ರದೇಶಕ್ಕೆ ಅನುಗುಣವಾದ ರೀತಿಯಲ್ಲಿ ದೈನ್ಯಯುಕ್ತವಾದ ಆ ಮಾತುಗಳನ್ನು ಕೇಳಿದ ಯುಧಿಷ್ಠಿರ ರಾಜನು `ಇದೇಕೆ ದೈವದ ನಡೆ ಹೀಗಿದೆ' ಎಂದು ತನ್ನಲ್ಲೇ ವಿಮರ್ಶಿಸಿಕೊಂಡನು.

ಕಿಂತು ತತ್ಕಲುಷಂ ಕರ್ಮ ಕೃತಮೇಭಿರ್ಮಹಾತ್ಮಭಿಃ |
ಕರ್ಣೇನ ದ್ರೌಪದೇಯೈರ್ವಾ ಪಾಂಚಾಲ್ಯಾ ವಾ ಸುಮಧ್ಯಯಾ ॥43॥

ಮಹಾತ್ಮರಾದ ಈ ಕರ್ಣ, ದ್ರೌಪದೀ ಪುತ್ರರು ಹಾಗೂ ಸುಮಧ್ಯಮೆಯಾದ ಪಾಂಚಾಲಿಯಿಂದ ಯಾವ ಕೆಟ್ಟ ಕೆಲಸ ಆಚರಿಸಲ್ಪಟ್ಟಿತ್ತು?

ಯ ಇಮೇ ಪಾಪಗಂಧೇಽಸ್ಮಿನ್ ದೇಶೇ ಸಂತಿ ಸುದಾರುಣೇ |
ನಾಹಂ ಜಾನಾಮಿ ಸರ್ವೇಷಾಂ ದುಷ್ಕೃತಂ ಪುಣ್ಯಕರ್ಮಣಾಮ್ ॥44॥

ಬಹುದಾರುಣವಾದ, ದುರ್ಗಂಧವುಳ್ಳ ಈ ಪ್ರದೇಶದಲ್ಲಿ ಏನು ಇವರು ಇದ್ದಾರೆಯೋ ಈ ಎಲ್ಲ ಪುಣ್ಯಕರ್ಮಿಗಳ ದುಷ್ಕರ್ಮವನ್ನು ನಾನು ತಿಳಿಯದವನಾಗಿದ್ದೇನೆ.

ಕಿಂ ಕೃತ್ವಾ ಧೃತರಾಷ್ಟ್ರಸ್ಯ ಪುತ್ರೋ ರಾಜಾ ಸುಯೋಧನಃ |
ತಥಾ ಶ್ರಿಯಾ ಯುತಃ ಪಾಪೈಃ ಸಹ ಸರ್ವೈಃ ಪದಾನುಗೈಃ ॥45॥

ಧೃತರಾಷ್ಟ್ರನ ಪುತ್ರನಾದ, ರಾಜನಾದ ಸುಯೋಧನನು ಯಾವ ಕರ್ಮವನ್ನು ಮಾಡುವ ಮೂಲಕ ತನ್ನ ಪರಿವಾರಭೂತರಾದ ಎಲ್ಲ ಪಾಪಿಷ್ಠರೊಂದಿಗೆ ಆ ರೀತಿಯ ಸಂಪತ್ತಿನಿಂದ ಕೂಡಿಕೊಂಡಿರುವನು?

ಮಹೇಂದ್ರ ಇವ ಲಕ್ಷ್ಮೀಮಾನಾಸ್ತೇ ಪರಮಪೂಜಿತಃ |
ಕಸ್ಯೇದಾನೀಂ ವಿಕಾರೋಽಯಂ ಯ ಇಮೇ ನರಕಂ ಗತಾಃ ॥46॥

ಅವನು ಬಹುಗೌರವಾನ್ವಿತನಾಗಿ ಮಹೇಂದ್ರನಂತೆ ಲಕ್ಷ್ಮೀಯುಕ್ತನಾಗಿದ್ದಾನೆ. ಆದರೆ ಇವರು ಈಗೇನು ನರಕದಲ್ಲಿ ಬಿದ್ದಿರುವರೋ ಇದು ಯಾವ ಕರ್ಮದ ಪರಿಣಾಮವಾಗಿರಬಹುದು?

ಸರ್ವೇ ಧರ್ಮವಿದಃ ಶೂರಾ ಸತ್ಯಾಗಮಪರಾಯಣಾಃ |
ಕ್ಷತ್ರಧರ್ಮರತಾಃ ಸನ್ತೋ ಯಜ್ವಾನೋ ಭೂರಿದಕ್ಷಿಣಾಃ ॥47॥

ಈ ಎಲ್ಲರೂ ಧರ್ಮಜ್ಞಾನಿಗಳು, ಶೂರರು, ಸತ್ಯ ಮತ್ತು ಶಾಸ್ತ್ರದಲ್ಲಿ ನಿಷ್ಣಾತರು, ಕ್ಷತ್ರಿಯಧರ್ಮವನ್ನು ಆಸಕ್ತಿಯಿಂದ ನಡೆಸಿದವರು, ಸಜ್ಜನರು, ಯಜ್ಞಯಾಗಾದಿಗಳನ್ನು ಮಾಡಿಸಿ ಉತ್ತಮ ರೀತಿಯಲ್ಲಿ ದಕ್ಷಿಣೆಯನ್ನು ನೀಡಿದವರೂ ಆಗಿದ್ದಾರೆ.

ಕಿನ್ನು ಸುಪ್ತೋಽಸ್ಮಿ ಜಾಗರ್ಮಿ ಚೇತಯಾಮಿ ನ ಚೇತಯೇ |
ಅಹೋ ಚಿತ್ತವಿಕಾರೋಽಯಂ ಸ್ಯಾದ್ವಾ ಮೇ ಚಿತ್ತವಿಭ್ರಮಃ ॥48॥

ನಾನೇನು ಮಲಗಿರುವೆನೋ, ಎಚ್ಚರದಿಂದಿರುವೆನೋ, ನನಗೆ ಚಿತ್ತ ವಿಕಾರವಾಗಿದೆಯೇ ಅಥವಾ ಬುದ್ಧಿ ಭ್ರಮಣೆಯೇ ಆಗಿದೆಯೇ? ಎಷ್ಟು ಆಲೋಚಿಸಿದರೂ ತಿಳಿಯಲಾಗುತ್ತಿಲ್ಲ.

ಏವಂ ಬಹುವಿಧಂ ರಾಜಾ ವಿಮಮರ್ಶ ಯುಧಿಷ್ಠಿರಃ |
ದುಃಖಶೋಕಸಮಾವಿಷ್ಟಶ್ಚಿಂತಾವ್ಯಾಕುಲಿತೇಂದ್ರಿಯಃ ॥49॥

ಹೀಗೆ ರಾಜನಾದ ಯುಧಿಷ್ಠಿರನು ದುಃಖ-ಶೋಕಗಳಿಂದ ಕೂಡಿದವನಾಗಿ, ಚಿಂತೆಯಿಂದ ವ್ಯಾಕುಲಗೊಂಡ ಇಂದ್ರಿಯವುಳ್ಳವನಾಗಿ ಬಹುಪ್ರಕಾರವಾಗಿ ವಿಮರ್ಶಿಸಿದನು.

ಕ್ರೋಧಮಾಹಾರಯಚ್ಚೈವ ತೀವ್ರಂ ಧರ್ಮಸುತೋ ನೃಪಃ |
ದೇವಾಂಶ್ಚ ಗರ್ಹಯಾಮಾಸ ಧರ್ಮಂ ಚೈವ ಯುಧಿಷ್ಠಿರಃ ॥50॥

ಹೀಗೆ ಧರ್ಮಪುತ್ರನಾದ ಯುಧಿಷ್ಠಿರರಾಜನು ಬಹಳವಾಗಿ ಕೋಪಗೊಂಡು ದೇವತೆಗಳನ್ನೂ, ಧರ್ಮವನ್ನೂ ಹಳಿದನು.

ಸ ತೀವ್ರಶೋಕಸಂತಪ್ತೋ ದೇವದೂತಮುವಾಚ ಹ |
ಗಮ್ಯತಾಂ ಯತ್ರ ಯೇಷಾಂ ತ್ವಂ ದೂತಸ್ತೇಷಾಮುಪಾಂತಿಕಮ್ ॥51॥
ನ ಹ್ಯಹಂ ತತ್ರ ಯಾಸ್ಯಾಮಿ ಸ್ಥಿತೋಸ್ಮೀತಿ ನಿವೇದ್ಯತಾಮ್ |
ಮತ್ಸಂಶ್ರಯಾದಿಮೇ ದೂನಾಃ ಸುಖಿನೋ ಭ್ರಾತರೋ ಹಿ ಮೇ ॥52॥

ತೀವ್ರವಾದ ಶೋಕದಿಂದ ದಗ್ಧನಾದ ಅವನು ದೇವದೂತನನ್ನು ಕುರಿತು `ನೀನು ಯಾರ ದೂತನಾಗಿ ನನ್ನೊಡನೆ ಬಂದಿರುವೆಯೋ ಅವರಿರುವಲ್ಲಿಯೇ ಹೋಗಿಬಿಡು. ನಾನು ಅಲ್ಲಿಗೆ ಬರಲಾರೆ. ಇಲ್ಲೇ ಇರುವೆನೆಂದು ನಿವೇದಿಸು. ಈ ನನ್ನ ಸಹೋದರರು ಬಹುಕಷ್ಟದಲ್ಲಿದ್ದರೂ ನನ್ನ ಜೊತೆಗಿರುವುದರಿಂದ ಸಂತೋಷಪಡುವರು' ಎಂದು ಹೇಳಿದನು.

ಇತ್ಯುಕ್ತಃ ಸ ತದಾ ದೂತಃ ಪಾಂಡುಪುತ್ರೇಣ ಧೀಮತಾ |
ಜಗಾಮ ತತ್ರ ಯತ್ರಾಸ್ತೇ ದೇವರಾಜಃ ಶತಕ್ರತುಃ ॥53॥

ಹೀಗೆ ಧೀಮಂತನಾದ ಪಾಂಡುಪುತ್ರನು ಹೇಳಿದಾಗ, ಆ ದೂತನು ಶತಕ್ರತುವಾದ ದೇವರಾಜನು ಎಲ್ಲಿರುವನೋ ಅಲ್ಲಿಗೆ ತೆರಳಿದನು.

ನಿವೇದಯಾಮಾಸ ಚ ತದ್ಧರ್ಮರಾಜಚಿಕೀರ್ಷಿತಮ್ |

ಯಥೋಕ್ತಂ ಧರ್ಮಪುತ್ರೇಣ ಸರ್ವಮೇವ ಜನಾಧಿಪ ॥54॥
ಹೇ ಜನಾಧಿಪನೇ, ಆ ದೂತನು ಧರ್ಮರಾಜನು ಏನು ಮಾಡಬೇಕೆಂದು ಬಯಸಿರುವನೋ ಅವೆಲ್ಲವನ್ನೂ ಧರ್ಮಪುತ್ರನು ಯಾವ ರೀತಿ ತಿಳಿಸಿದ್ದನೋ ಅದೇ ರೀತಿ ಇಂದ್ರನಲ್ಲಿ ನಿವೇದಿಸಿಕೊಂಡನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಸ್ವರ್ಗಾರೋಹಣಪರ್ವಣಿ ಧರ್ಮರಾಜಸ್ಯ ನರಕದರ್ಶನಂ ನಾಮ
ದ್ವಿತೀಯೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ಎರಡನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ನ ತೇ ನೃಪಾದ್ಯಾಪಿ ಹಿ ಮಾನುಷೋ ಗತೋ
ಭಾವಸ್ತತೋ ದ್ವೇಷ್ಟಿ ಸುಯೋಧನಾದೀನ್ ।
ನಿಮಜ್ಯ ತದ್ವಿಷ್ಣುಪದೋದಕೇಽತ್ರ
ವಿಸೃಜ್ಯ ದೇಹಂ ಭಜ ದೇವಭಾವಮ್ ॥
`ರಾಜನೇ, ನಿನಗಿನ್ನೂ ಮನುಷ್ಯಸ್ವಭಾವ ಬಿಟ್ಟು ಹೋಗಿಲ್ಲ. ದುರ್ಯೋಧನಾದಿಗಳನ್ನು ಇನ್ನೂ ದ್ವೇಷಿಸುತ್ತಿರುವಿ'. ಅದರಿಂದ ಗಂಗಾಜಲದಲ್ಲಿ ಮುಳುಗಿ ದೇಹವನ್ನು ತೊರೆದು ದೇವತ್ವವನ್ನು ಪಡೆ.
ಸುಯೋಧನಾದ್ಯಾ ಯದಿಮೇ ಸುಪಾಪಾ
ಆರಬ್ಧಧರ್ಮಕ್ಷಯಮಾಪ್ಯ ನಿತ್ಯೇ ।
ನಿಶ್ಶೇಷಸೌಖ್ಯೋಜ್ಝಿತನಿತ್ಯದುಃಖೇಽ
ವಶಾಃ ಪತಿಷ್ಯಂತ್ಯಪುನರ್ನಿವೃತ್ತಾಃ ॥
ಈ ದುರ್ಯೋಧನ ಮುಂತಾದವರು ಪಾಪಿಗಳಾದುದರಿಂದ ಪ್ರಾರಬ್ಧ ಪುಣ್ಯ-ಕ್ಷಯ ಹೊಂದಿದ ಬಳಿಕ ಯಾವ ಸುಖವೂ ಇಲ್ಲದಂಥ, ನಿತ್ಯ ದುಃಖಮಯವಾದ ನಿತ್ಯನರಕದಲ್ಲಿ ಪುನರಾವೃತ್ತಿ ಇಲ್ಲದವರಾಗಿ ಹರಿಯ ಅಧೀನರಾಗಿ ಬೀಳುವರು.
ದೇವಾಂಶಜಾ ಯೇ ತು ಸಮಸ್ತಶಸ್ತೇ
ಸ್ವಮೂಲರೂಪಂ ಸಮವಾಪ್ಯ ಕಾಲೇ ।
ಸ್ವತಾರತಮ್ಯಾನುಸೃತಾಂ ವಿಮುಕ್ತಿಂ
ಪ್ರಾಪ್ಸ್ಯಂತಿ ನಾತ್ರಾಪಿ ವಿಚಾರ್ಯಮಸ್ತಿ ॥
ದೇವಾಂಶಸಂಭೂತರು ಯಾರೋ ಅವರೆಲ್ಲರೂ ತಮ್ಮ ಮೂಲರೂಪವನ್ನು ಹೊಂದಿ, ಬ್ರಹ್ಮಪ್ರಳಯ ಕಾಲದಲ್ಲಿ ತಮ್ಮ ಯೋಗ್ಯತಾ ತಾರತಮ್ಯಕ್ಕೆ ಅನುಗುಣವಾದ ಮುಕ್ತಿಯನ್ನು ಹೊಂದುತ್ತಾರೆ. ದೈತ್ಯರ ತಮಃಪ್ರಾಪ್ತಿಯಲ್ಲಾಗಲಿ, ದೇವತೆಗಳ ಮುಕ್ತಿ ಪ್ರಾಪ್ತಿಯಲ್ಲಾಗಲಿ ಸಂಶಯಕ್ಕೆ ಅವಕಾಶವಿಲ್ಲ.
ಇತ್ಯುಕ್ತ ಆಶ್ವೇವ ನಿಮಜ್ಯ ಗಂಗಾಂ
ಧರ್ಮಾತ್ಮಜಸ್ತಂ ಪ್ರವಿಸೃಜ್ಯ ದೇಹಮ್ ।
ಸದ್ಯೋ ಬಭೌ ದೈವಮವಾಪ್ಯ ಕಾಯಂ
ವಿಸೃಷ್ಟರೋಷಾದಿಸಮಸ್ತದೋಷಃ ॥
ದೇವತೆಗಳು ಹೀಗೆ ಹೇಳಿದಾಗ ಧರ್ಮರಾಜನು ಬೇಗನೆ ಗಂಗೆಯಲ್ಲಿ ಮುಳುಗಿ, ಅದರಲ್ಲಿ ಮನುಷ್ಯದೇಹವನ್ನು ತೊರೆದು, ದಿವ್ಯಶರೀರವನ್ನು ಪಡೆದುಕೊಂಡು, ರೋಷ ಮುಂತಾದ ಎಲ್ಲ ದೋಷವನ್ನೂ ಕಳೆದುಕೊಂಡು ಬೆಳಗಿದನು.
ಸ ತು ಪ್ರಪಶ್ಯನ್ ಸ್ವಜನಂ ಸಮಸ್ತಂ
ಸ್ವಮೂಲರೂಪಾತಿಸಮೀಪಸಂಸ್ಥಮ್ ।
ದದರ್ಶ ಭೀಮಂ ಚ ಮರುತ್ಸಮೀಪೇ
ಮಧ್ಯೇ ಜ್ವಲಂತಂ ಮರುತಾಂ ಗಣಸ್ಯ ॥
ಧರ್ಮರಾಜನು ತನ್ನ ಬಂಧುಜನರೆಲ್ಲರೂ ತಮ್ಮ ಮೂಲರೂಪಗಳಿಗೆ ಅತಿ ಸಮೀಪದಲ್ಲಿದ್ದುದನ್ನು ನೋಡುತ್ತ, ಮರುತ್ತುಗಳ ಸಮೂಹದ ನಡುವೆ ಮುಖ್ಯಪ್ರಾಣನ ಸಮೀಪ ಹೊಳೆಯುತ್ತಿದ್ದ ಭೀಮನನ್ನೂ ಕಂಡನು.
ದದರ್ಶ ಕೃಷ್ಣಾಮಪಿ ತತ್ಸಮೀಪೇ
ಶ್ರಿಯಾ ಜ್ವಲಂತೀಂ ಸಮತೀತ್ಯ ಚಾನ್ಯಾಃ ।
ಸ್ಪ್ರಷ್ಟುಂ ಚ ಸಂಸ್ಕಾರವಶಾದಿಯೇಷ
ನಿಷಿಧ್ಯ ತಂ ಪ್ರಾಹ ಸುರಾಧಿರಾಜಃ ॥
ಧರ್ಮರಾಜನು ಭೀಮನ ಸಮೀಪದಲ್ಲಿ ಪ್ರಕಾಶದಿಂದ ಬೆಳಗುತ್ತಿದ್ದ ದ್ರೌಪದಿಯನ್ನೂ ಕಂಡು, ಬೇರೆ ದೇವಿಯರನ್ನು ದಾಟಿ, ಸಂಸ್ಕಾರವಶದಿಂದ ಅವಳನ್ನು ಸ್ಪರ್ಶಿಸಲು ಬಯಸಿದನು. ದೇವೇಂದ್ರ ತಡೆದು ಹೇಳಿದನು.
ಏಷಾ ಹಿ ಸಾಕ್ಷಾಜ್ಜಗತಾಂ ಪ್ರಿಯಸ್ಯ
ಪ್ರಾಣಾತ್ಮನೋ ಜೀವವರೇಶ್ವರಸ್ಯ ।
ಪ್ರಾಣಪ್ರಿಯಾ ಶ್ರೀರಿತಿ ನಾಮ ಯಸ್ಯಾಃ
ಶಮಾತ್ಮಕೇಽಸ್ಮಿನ್ ರಮತೇ ಯದೇಷಾ ॥

ಇವಳು ಸಾಕ್ಷಾತ್ ಲೋಕಪ್ರಿಯನಾದ, ಜೀವೋತ್ತಮನಾದ, ಮುಖ್ಯಪ್ರಾಣನ ಪ್ರಾಣಪ್ರಿಯೆ. ಇವಳು ಸುಖಸ್ವರೂಪನಾದ ಪ್ರಾಣನಲ್ಲಿ ಸದಾ ರಮಿಸುವುದರಿಂದ ಶ್ರೀ ಎಂದು ಇವಳಿಗೆ ಹೆಸರು.
ಯುಷ್ಮಚ್ಚತುರ್ದೇಹಗತಸ್ಯ ವಾಯೋ-
ರ್ವಾಯುಪ್ರಿಯಾ ಭೀಮತನೋಸ್ತಥೈವ |
ಭೋಗಾಯ ಸೃಷ್ಟಾ ಪುರುಷೋತ್ತಮೇನ
ಯುಷ್ಮತ್ಪ್ರಿಯಾರ್ಥಂ ಭವತಾಂ ಚ ದಾರ್ಯೈಃ ॥
ನಿಮ್ಮ ನಾಲ್ವರ ಶರೀರದಲ್ಲಿದ್ದ ಮತ್ತು ಪ್ರತ್ಯೇಕವಾಗಿಯೂ ಭೀಮರೂಪವಾಗಿದ್ದ ವಾಯುವಿನ ಭೋಗಕ್ಕಾಗಿ, ನಿಮ್ಮ ಸಂತೋಷದ ಸಲುವಾಗಿ ನಿಮ್ಮ ಪತ್ನಿಯರೊಂದಿಗೆ ವಾಯುಪತ್ನಿ ಭಾರತಿ ದ್ರೌಪದಿಯಾಗಿ ಹರಿಯಿಂದ ಸೃಷ್ಟಳಾಗಿದ್ದಳು.
ಪ್ರೀತಿಸ್ತತೋ ಹ್ಯಭ್ಯಧಿಕಾ ಬಭೂವ
ಭೀಮಸ್ಯ ಚಾಸ್ಯಾಸ್ತದನು ಸ್ಮ ಪಾರ್ಥೇ |
ತತೋ ಭವತ್ಸ್ವೇವ ಯಥಾಕ್ರಮೇಣ
ಗುಣಾನುಸಾರೇಣ ಸಮೀರಣಸ್ಯ ॥
ಅದರಿಂದ ಭೀಮನಿಗೂ ದ್ರೌಪದಿಗೂ ಪರಸ್ಪರ ಹೆಚ್ಚು ಪ್ರೀತಿ ಇದ್ದಿತು. ಅನಂತರ ಅರ್ಜುನನಲ್ಲಿ, ಅನಂತರ ನಿಮ್ಮಲ್ಲಿ ವಾಯುವಿನ ಆವೇಶವೆಂಬ ಗುಣಕ್ಕೆ ಅನುಸಾರವಾಗಿ ಕ್ರಮದಿಂದ ಪ್ರೀತಿ ಇದ್ದಿತು.
ಏಷಾ ಹಿ ಸಾ ಶುದ್ಧತನುಃ ಪ್ರಜಾತಾ
ಶಚ್ಯಾದಿಯೋಗಾಪಗತಾಽಗ್ರ್ಯದೇಹಾ |
ಯೂಯಂ ಚ ಸರ್ವೇ ಮರುತೋ ವಿಶೇಷ-
ಸಂಯೋಗಹೀನಾಃ ಸ್ವಶರೀರಸಂಸ್ಥಾಃ ॥
ಈಗ ಆ ದ್ರೌಪದಿ ಶಚೀ ಮುಂತಾದ ದೇವಿಯರ ಆವೇಶರಹಿತವಾದ ಉತ್ತಮ ದೇಹ ಉಳ್ಳವಳಾಗಿ ಶುದ್ಧ ಭಾರತೀರೂಪಳಾಗಿದ್ದಾಳೆ. ನೀವೆಲ್ಲರೂ ಮುಖ್ಯಪ್ರಾಣನ ವಿಶೇಷಾವೇಶ ರಹಿತರಾಗಿ ನಿಮ್ಮ ಶರೀರದಲ್ಲಿ ಇರುವಿರಿ.
ಸ್ಪರ್ಶೇಽಪಿ ನಾಸ್ಯಾಃ ಪವಮಾನಪತ್ನ್ಯಾಃ
ಸುಪೂತತಾಽಲಂ ಭವತಾಮಿದಾನೀಮ್ |
ನ ಚೋತ್ತರತ್ರಾಪಿ ಭವೇತ್ ಕಥಂಚಿದ್
ದಿವೌಕಸಾಂ ಮಾನುಷದೇಹಿನೋ ಯಥಾ ॥
ಈಗ ಈ ವಾಯುಪತ್ನಿಯ ಸ್ಪರ್ಶಮಾಡುವುದಕ್ಕೂ ನಿಮಗೆ ಶುದ್ಧಿ, ಯೋಗ್ಯತೆ ಇಲ್ಲ. ಮುಂದೆಯೂ ಅದು ಸರ್ವಥಾ ಬರುವುದಿಲ್ಲ. ಮನುಷ್ಯದೇಹಿಗೆ ದೇವತೆಗಳ ಸ್ಪರ್ಶಯೋಗ್ಯತೆ ಹೇಗೆ ಇಲ್ಲವೋ ಹಾಗೆ.
ಇತೀರಿತಂ ತಂ ಪ್ರತಿಸನ್ನಿವೃತ್ತಂ
ವಿನಾಶಯನ್ ಮಾನುಷವಾಸನಾಂ ಸ್ವಯಮ್ |
ಸಮಾಶ್ಲಿಷಚ್ಛುದ್ಧತನುಃ ಸ್ತನೋತ್ಥೋ
ಧರ್ಮೋ ಹರೇಃ ಸೋಽಭವದಾಶು ತತ್ಸಮಃ ॥
ಇಂದ್ರ ಹೀಗೆ ಹೇಳಿದಾಗ ಧರ್ಮರಾಜ ದ್ರೌಪದೀ ಸ್ಪರ್ಶಕ್ಕೆ ಹಿಮ್ಮೆಟ್ಟಿದನು. ಅವನ ಮಾನುಷ ಸಂಸ್ಕಾರವನ್ನು ಕಳೆಯುವುದಕ್ಕಾಗಿ ಶ್ರೀಹರಿಯ ಬಲಸ್ತನದಿಂದ ಉದ್ಭವಿಸಿದ ಶುದ್ಧಶರೀರಿಯಾದ ಧರ್ಮ ಸ್ವತಃ ಅವನನ್ನು ಆಲಿಂಗಿಸಿದನು. ಒಡನೆ ಧರ್ಮರಾಜ ಧರ್ಮನಿಗೆ ಪೂರ್ತಿ ಸದೃಶನಾದ.
* * * * *
ಮೂರನೆಯ ಅಧ್ಯಾಯ
ತಮ್ಮ ಪರೀಕ್ಷೆಯಲ್ಲಿ ಯುಧಿಷ್ಠಿರನು ಗೆದ್ದುದರಿಂದ ಸಂತೋಷಗೊಂಡ ಧರ್ಮ
ಹಾಗೂ ಇಂದ್ರಾದಿಗಳು ಯುಧಿಷ್ಠಿರನ ಸಮೀಪಕ್ಕೆ ಬಂದಾಗ, ಅಲ್ಲಿ ಈ
ಮೊದಲು ಕಂಡಿದ್ದ ನರಕಾದಿಗಳು ಕ್ಷಣದಲ್ಲಿ ಅಂತರ್ಧಾನವಾಗುವುದು. ಧರ್ಮರಾಜನು ಯುಧಿಷ್ಠಿರನನ್ನು ಪ್ರಶಂಸಿಸುತ್ತಾ, ಅವನು ನೋಡಿದ ನರಕವು ಪರೀಕ್ಷೆಗೋಸ್ಕರ
ಇಂದ್ರನ ಮಾಯೆಯಿಂದ ಸೃಷ್ಟಿಯಾದುದೆಂದು ತಿಳಿಸುವುದು. ಅನಂತರ ಯುಧಿಷ್ಠಿರನು ದೇವಗಂಗೆಯಲ್ಲಿ ಮುಳುಗಿ,
ಮಾನುಷಶರೀರವನ್ನು ಪರಿತ್ಯಜಿಸಿ, ದಿವ್ಯಶರೀರವನ್ನು ಸ್ವೀಕರಿಸಿ, ಮಹರ್ಷಿಗಳ ಹೊಗಳಿಕೆಯೊಂದಿಗೆ ದೇವತೆಗಳ ಜೊತೆಗೆ ತನ್ನ ಸಹೋದರರಿರುವ ದಿವ್ಯ ಸ್ಥಳಕ್ಕೆ ಆಗಮಿಸುವುದು.
ವೈಶಂಪಾಯನಃ
ಸ್ಥಿತೇ ಮುಹೂರ್ತೇ ಪಾರ್ಥೇ ತು ಧರ್ಮರಾಜೇ ಯುಧಿಷ್ಠಿರೇ |
ಆಜಗ್ಮುಸ್ತತ್ರ ಕೌರವ್ಯ ದೇವಾಃ ಶಕ್ರಪುರೋಗಮಾಃ ॥1॥
ವೈಶಂಪಾಯನ ಹೇ ಕುರುವಂಶಜನೇ, ಕುಂತೀಪುತ್ರನಾದ ಧರ್ಮರಾಜನಾದ ಯುಧಿಷ್ಠಿರನು ಒಂದು ಮುಹೂರ್ತ ಕಾಲ ಅಲ್ಲಿದ್ದಾಗಲೇ ಇಂದ್ರನೇ ಮೊದಲಾದ ದೇವತೆಗಳು ಅಲ್ಲಿಗೆ ಆಗಮಿಸಿದರು.
ಸ್ವಯಂ ವಿಗ್ರಹವಾನ್ ಧರ್ಮೋ ರಾಜಾನಂ ಸಂಪರೀಕ್ಷ್ಯ ತಮ್ |
ತತ್ರಾಜಗಾಮ ಯತ್ರಾಸೌ ಕುರುರಾಜೋ ಯುಧಿಷ್ಠಿರಃ ॥2॥
ಆ ರಾಜನನ್ನು ಚೆನ್ನಾಗಿ ಪರೀಕ್ಷೆಗೊಳಪಡಿಸಿದ ಯಮಧರ್ಮರಾಜನೇ ತಾನೇ ಮೂರ್ತಿಮತ್ತಾಗಿ ಕುರುರಾಜನಾದ ಯುಧಿಷ್ಠಿರನು

ಎಲ್ಲಿರುವನೋ ಅಲ್ಲಿಗೆ ಆಗಮಿಸಿದನು.
ತೇಷು ಭಾಸುರದೇಹೇಷು ಪುಣ್ಯಾಭಿಜನಕರ್ಮಸು |
ಸಮಾಗತೇಷು ದೇವೇಷು ವ್ಯಗಮತ್ ತತ್ತಮೋ ನೃಪ ॥3॥
ಹೇ ನೃಪನೇ, ಜನ್ಮ ಹಾಗೂ ಕರ್ಮಗಳಿಂದ ಮಂಗಳಮಯರಾದ, ದೇದೀಪ್ಯಮಾನವಾದ ಶರೀರವುಳ್ಳ ಆ ದೇವತೆಗಳು ಅಲ್ಲಿಗೆ ಬಂದ ಕೂಡಲೇ ಅಲ್ಲಿರುವ ಕತ್ತಲೆಯು ಹೊರಟು ಹೋಯಿತು.
ನಾಪಶ್ಯತ ಚ ತಾಸ್ತತ್ರ ಯಾತನಾಃ ಪಾಪಕರ್ಮಣಾಮ್ |
ನದೀ ವೈತರಣೀ ಚೈವ ಕೂಟಶಾಲ್ಮಲಿನಾ ಸಹ ॥4॥
ಪಾಪಕರ್ಮಿಗಳು ಅಲ್ಲಿ ಅನುಭವಿಸುತ್ತಿದ್ದ ಯಾತನೆಗಳೂ, ವೈತರಿಣೀ ನದಿಯೂ ಶಾಲ್ಮಲೀ ಮರಗಳ ಸಾಲಿನೊಂದಿಗೆ ಅಲ್ಲಿ ಕಾಣೆಯಾದವು.
ಲೋಹಕುಂಭ್ಯಃ ಶಿಲಾಶ್ಚೈವ ನಾದೃಶ್ಯಂತ ಭಯಾನಕಾಃ |
ವಿಕೃತಾನಿ ಶರೀರಾಣಿ ಯಾನಿ ತತ್ರ ಸಮಂತತಃ ॥5॥
ದದರ್ಶ ರಾಜಾ ಕೌರವ್ಯಸ್ತಾನ್ ಸರ್ವಾನ್ ಸುಮಹಾಪ್ರಭಾನ್ ॥6॥
ಹಿಂದೆ ಅಲ್ಲಿದ್ದ ಕಬ್ಬಿಣದ ಗಡಿಗೆಗಳೂ, ಭಯಾನಕವಾದ ಶಿಲೆಗಳೂ, ಸುತ್ತಲೂ ಅಲ್ಲಿ ಬಿದ್ದಿದ್ದ ಯಾವೆಲ್ಲ ವಿಕಾರವಾದ ಶರೀರಗಳಿದ್ದವೋ ಅವುಗಳೂ ಕಾಣೆಯಾದವು. ಆ ಎಲ್ಲ ಪ್ರದೇಶವನ್ನೂ ಕುರುವಂಶಜನಾದ ಆ ರಾಜನು ಉತ್ತಮವಾದ ಮಹಾಪ್ರಭೆಯಿಂದ ಕೂಡಿದ್ದನ್ನಾಗಿ ಕಂಡನು.
ತತ್ರ ವಾಯುಃ ಸುಖಸ್ಪರ್ಶಃ ಪುಣ್ಯಗಂಧವಹಃ ಶಿವಃ |
ವವೌ ದೇವಸಮೀಪಸ್ಥಃ ಶೀತಲೋಽತೀವ ಭಾರತ ॥7॥
ಹೇ ಭಾರತನೇ, ದೇವತೆಗಳ ಸಮೀಪದಲ್ಲಿ ಹಿತಕರವಾದ ಸ್ಪರ್ಶವುಳ್ಳ, ಮಂಗಳಮಯವಾದ, ಉತ್ತಮ ಸುಗಂಧಗಳನ್ನು ಹೊತ್ತುಕೊಂಡ, ತುಂಬಾ ತಂಪಾದ ಗಾಳಿಯು ಬೀಸತೊಡಗಿತು.
ಮರುತಃ ಸಹ ಶಕ್ರೇಣ ವಸವಶ್ಚಾಶ್ವಿನೌ ಸಹ |
ಸಾಧ್ಯಾ ರುದ್ರಾಸ್ತಥಾಽಽದಿತ್ಯಾ ಯೇ ಚಾನ್ಯೇಽಪಿ ದಿವೌಕಸಃ ॥8॥
ಸರ್ವೇ ಚಾಪಿ ಸಮಾಜಗ್ಮುಃ ಸಿದ್ಧಾಶ್ಚ ಪರಮರ್ಷಯಃ |
ಯತ್ರ ರಾಜಾ ಮಹಾತೇಜಾ ಧರ್ಮಪುತ್ರಃ ಸ್ಥಿತೋಽಭವತ್ ॥9॥
ಇಂದ್ರನೊಂದಿಗೆ ಮರುದ್ದೇವತೆಗಳೂ, ವಸುಗಳೂ, ಅಶ್ವಿನೀದೇವತೆಗಳೂ, ಸಾಧ್ಯರೂ, ರುದ್ರರೂ ಹಾಗೆಯೇ ಆದಿತ್ಯರೂ ಬೇರೆ ಯಾವೆಲ್ಲ ದೇವತೆಗಳಿರುವರೋ ಅವರೆಲ್ಲರೂ ಸಿದ್ಧರೂ, ಶ್ರೇಷ್ಠ ಋಷಿಗಳೂ ಮಹಾತೇಜಸ್ವಿಯಾದ ಧರ್ಮಪುತ್ರನಾದ ಯುಧಿಷ್ಠಿರರಾಜನು ಎಲ್ಲಿ ನಿಂತಿದ್ದನೋ ಅಲ್ಲಿಗೆ ಆಗಮಿಸಿದರು.
ತತಃ ಶಕ್ರಃ ಸುರಪತಿಃ ಶ್ರಿಯಾ ಪರಮಯಾ ಯುತಃ |
ಯುಧಿಷ್ಠಿರಮುವಾಚೇದಂ ಸಾಂತ್ವಪೂರ್ವಮಿದಂ ವಚಃ ॥10॥
ಆಗ ಉತ್ತಮವಾದ ಐಶ್ವರ್ಯದಿಂದ ಕೂಡಿದ, ದೇವಪತಿಯಾದ ಇಂದ್ರನು ಸಮಾಧಾನಪೂರ್ವಕವಾಗಿ ಯುಧಿಷ್ಠಿರನನ್ನು ಕುರಿತು ಈ ಮಾತುಗಳನ್ನಾಡಿದನು.
ಯುಧಿಷ್ಠಿರ ಮಹಾಬಾಹೋ ಪ್ರೀತಾ ದೇವಗಣಾಸ್ತ್ವಯಾ |
ಏಹ್ಯೇಹಿ ಪುರುಷವ್ಯಾಘ್ರ ಕೃತಮೇತಾವತಾ ವಿಭೋ ॥11॥
`ಹೇ ಮಹಾಬಾಹುವಾದ ಯುಧಿಷ್ಠಿರನೇ, ನಿನ್ನಿಂದ ದೇವತೆಗಳು ಪ್ರೀತರಾದರು. ಹೇ ವಿಭುವೇ, ಇಷ್ಟರಿಂದ ನೀನು ಕೃತಾರ್ಥನಾಗಿರುವೆ. ಪುರುಷವ್ಯಾಘ್ರನೇ, ಇತ್ತ ಕಡೆ ಬಾ.
ಸಿದ್ಧಿಃ ಪ್ರಾಪ್ತಾ ಮಹಾಬಾಹೋ ಲೋಕಾಶ್ಚಾಪ್ಯಕ್ಷಯಾಸ್ತವ |
ಭ್ರಾತೄಣಾಂ ಸುಹೃದಾಂ ಚೈವ ಗತಿರ್ನಿತ್ಯಾ ಸುಪೂಜಿತಾ ॥12॥
ಹೇ ಮಹಾಬಾಹುವೇ, ನಿನಗೆ ಉತ್ತಮವಾದ ಸಿದ್ಧಿಯು ಪ್ರಾಪ್ತವಾಗಿದೆ. ಅಕ್ಷಯವಾದ ಲೋಕಗಳೂ ದೊರಕಿವೆ. ನಿನ್ನ ಸಹೋದರರಿಗೂ ಹಾಗೂ ಮಿತ್ರರಿಗೂ ಗೌರವಾನ್ವಿತವಾದ, ನಾಶವಿಲ್ಲದ ಉತ್ತಮ ಗತಿಯು ದೊರಕಿತು.
ನ ಚ ಮನ್ಯುಸ್ತ್ವಯಾ ಕಾರ್ಯಃ ಶೃಣು ಚೇದಂ ವಚೋ ಮಮ |
ಅವಶ್ಯಂ ನರಕಸ್ತಾತ ದ್ರಷ್ಟವ್ಯಃ ಸರ್ವರಾಜಭಿಃ ॥13॥
ಮಗು, ನೀನು ಕೋಪ ಮಾಡಿಕೊಳ್ಳಬೇಡ. ನನ್ನ ಈ ಮಾತುಗಳನ್ನು ಕೇಳು. ಎಲ್ಲ ರಾಜರು ಅವಶ್ಯವಾಗಿ ನರಕವನ್ನು ನೋಡಲೇಬೇಕು.
ಶುಭಾನಾಮಶುಭಾನಾಂ ಚ ದ್ವೌ ರಾಶೀ ಪುರುಷರ್ಷಭ |
ಯಃ ಪೂರ್ವಂ ಸುಕೃತಂ ಭುಂಕ್ತೇ ಪಶ್ಚಾನ್ನಿರಯಮೇತಿ ಸಃ ॥14॥
ಹೇ ಪುರುಷಶ್ರೇಷ್ಠನೇ, ಪ್ರತಿಯೊಬ್ಬನು ಮಾಡಿದ ಶುಭಕರ್ಮಗಳ ಹಾಗೂ ಅಶುಭಕರ್ಮಗಳ ಎರಡು ರಾಶಿಗಳು ಇರುತ್ತವೆ. ಯಾವನು ಮೊದಲು ಸುಕೃತದ ಫಲವನ್ನು ಉಣ್ಣುತ್ತಾನೋ ಅವನು ನಂತರ ನರಕವನ್ನು ಹೊಂದುತ್ತಾನೆ.
ಪೂರ್ವಂ ನಿರಯಭಾಗ್ಯಶ್ಚ ಪಶ್ಚಾತ್ ಸ್ವರ್ಗಮುಪೈತಿ ಸಃ |
ಭೂಯಿಷ್ಠಪಾಪಕರ್ಮಾ ಯಃ ಸ ಪೂರ್ವಂ ಸ್ವರ್ಗಮಶ್ನುತೇ ॥15॥
ಯಾವನು ಮೊದಲು ನರಕವನ್ನು ಹೊಂದುತ್ತಾನೋ ಅವನು ನಂತರ ಸ್ವರ್ಗವನ್ನು ಪಡೆಯುತ್ತಾನೆ. ಹೆಚ್ಚು ಪಾಪಕರ್ಮಗಳನ್ನು ಯಾವನು ಮಾಡಿದ್ದಾನೋ ಅವನು ಮೊದಲು ಸ್ವರ್ಗವನ್ನು ಪಡೆಯುತ್ತಾನೆ.
ಭೂಯಿಷ್ಠಶುಭಕರ್ಮಾ ತು ಪೂರ್ವಂ ನರಕಮೃಚ್ಛತಿ |

ತೇನ ತ್ವಮೇವಂ ಗಮಿತೋ ಮಯಾ ಶ್ರೇಯೋರ್ಥಿನಾ ನೃಪ ॥16॥
ಯಾವನು ಹೆಚ್ಚು ಶುಭಕರ್ಮಗಳನ್ನು ನಡೆಸಿದ್ದಾನೋ ಅವನು ಮೊದಲಾಗಿ ನರಕವನ್ನು ಹೊಂದುತ್ತಾನೆ. ಹೇ ನೃಪನೇ, ನಿನ್ನ ಶ್ರೇಯಸ್ಸನ್ನು ಬಯಸುವ ನನ್ನಿಂದ, ನೀನು ಶುಭಕರ್ಮಗಳನ್ನು ಹೆಚ್ಚಾಗಿ ಮಾಡಿರುವುದರಿಂದಲೇ ಈ ರೀತಿ ಮೊದಲು ನರಕಕ್ಕೆ ಆಗಮಿಸಿರುವೆ.
ವ್ಯಾಖ್ಯಾನ ವಿಶೇಷ ಯಾವನು ಮೊದಲು ಸುಕೃತವನ್ನು ಉಣ್ಣುತ್ತಾನೋ ಅವನು ನಂತರ ನರಕಕ್ಕೆ ಹೋಗುತ್ತಾನೆ. ಪಾಪಕರ್ಮಗಳನ್ನು ಹೆಚ್ಚು ನಡೆಸಿದವನು ಯಾವನೋ ಅವನು ಮೊದಲು ಸ್ವರ್ಗವನ್ನು ಹೊಂದುತ್ತಾನೆ ಎಂದು ಏನು ಇಂದ್ರದೇವರ ವಚನವಿದೆಯೋ ಇದು ದುರ್ಯೋಧನನನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿದ್ದು. ಯಾವನು ಮೊದಲು ನರಕಕ್ಕೆ ಹೋಗುತ್ತಾನೋ ಅವನು ನಂತರ ಸ್ವರ್ಗವನ್ನು ಪಡೆಯುತ್ತಾನೆ. ಹೆಚ್ಚು ಶುಭಕರ್ಮಗಳನ್ನು ನಡೆಸಿದವನು ಮೊದಲು ನರಕವನ್ನು ಹೊಂದುತ್ತಾನೆ ಎಂಬ ಇಂದ್ರವಚನವು ಧರ್ಮರಾಜನನ್ನು ಉದ್ದೇಶಿಸಿ ಹೇಳಿದ್ದು ಎಂದು ತಿಳಿಯಬೇಕು ಲಕ್ಷಾಲಂಕಾರ.
ವ್ಯಾಜೇನ ಹಿ ತ್ವಯಾ ದ್ರೋಣ ಉಪಚೀರ್ಣಃ ಸುತಂ ಪ್ರತಿ |
ವ್ಯಾಜೇನೈವ ತತೋ ರಾಜನ್ ದರ್ಶಿತೋ ನರಕಸ್ತವ ॥17॥
ದ್ರೋಣನು ತನ್ನ ಮಗನ ವಿಷಯದಲ್ಲಿ ನಿನ್ನಿಂದ ಕಪಟ ಮಾತುಗಳ ಮೂಲಕ ಮೋಸ ಹೊಂದಿದ್ದಾನೆ. ಆದ್ದರಿಂದ ಹೇ ರಾಜನೇ, ನಿನಗೆ ಕಪಟವಾದ ನರಕವೇ ಪ್ರದರ್ಶಿತವಾಗಿದೆ.
ವ್ಯಾಖ್ಯಾನ ವಿಶೇಷ ವಾಸ್ತವಿಕವಾಗಿ ದ್ರೋಣನ ನಿಗ್ರಹ ಸಂದರ್ಭದಲ್ಲಿ ಧರ್ಮರಾಜನು `ಅಶ್ವತ್ಥಾಮಾ ಹತಃ' ಎಂದು ಹೇಳಿ ಮೆಲ್ಲನೆ `ಕುಂಜರಶ್ಚ' ಎಂದು ಹೇಳಿರುವುದರಿಂದ ಧರ್ಮರಾಜನ ಮಾತಿನಲ್ಲಿ ಕಪಟವಿಲ್ಲ. ಹಾಗಿದ್ದರೂ ಕೃಷ್ಣನ ಮಾತಿನಲ್ಲಿ `ಇದು ಮೋಸ' ಎಂಬ ಬುದ್ಧಿಯನ್ನು ಮಾಡಿದ್ದರಿಂದಲೇ ದೇವರ ಮಾತಿನಲ್ಲಿ ವಿಶ್ವಾಸವಿಡದಿರುವುದೇ ಮೋಸ ಎಂದು ತಿಳಿಯಬೇಕು ಲಕ್ಷಾಲಂಕಾರ.
ಯಥೈವ ತ್ವಂ ತಥಾ ಭೀಮಸ್ತಥಾ ಪಾರ್ಥೋ ಯಮೌ ತಥಾ |
ದ್ರೌಪದೀ ಚ ತಥಾ ಕೃಷ್ಣಾ ವ್ಯಾಜೇನ ನರಕಂ ಗತಾಃ ॥18॥
ಆಗಚ್ಛ ನರಶಾರ್ದೂಲ ಮುಕ್ತಾಸ್ತೇ ಚೈವ ಕಲ್ಮಷಾತ್ ॥19॥
ನೀನು ಹೇಗೋ ಹಾಗೆಯೇ ಭೀಮನೂ, ಅರ್ಜುನನೂ, ಅವಳಿ ಮಕ್ಕಳಾದ ನಕುಲ-ಸಹದೇವರು, ಹಾಗೆಯೇ ಕೃಷ್ಣೆ ಎನಿಸಿದ ದ್ರೌಪದಿಯು ನೆಪಮಾತ್ರಕ್ಕೆ ನರಕವನ್ನು ಹೊಂದಿರುವರು. ಹೇ ರಾಜಶ್ರೇಷ್ಠನೇ, ಅವರೆಲ್ಲರೂ ಕಲ್ಮಷರಹಿತರಾಗಿದ್ದಾರೆ, ಬಂದು ನೋಡು.
ವ್ಯಾಖ್ಯಾನ ವಿಶೇಷ ಇಲ್ಲಿ `ವ್ಯಾಜೇನ ನರಕಂ ಗತಾಃ' ಎಂಬುದಕ್ಕೆ ನಿನ್ನ ನೆಪದಿಂದ ನರಕದಲ್ಲಿದ್ದವರಂತೆ ಕಂಡಿದ್ದಾರೆ ಎಂದರ್ಥ. ಅವರಿಗೆ ನರಕವಿಲ್ಲ ಎಂದು ಅಭಿಪ್ರಾಯ. ಹೀಗೆ ಒಪ್ಪಿಕೊಳ್ಳದಿದ್ದರೆ ಮುಂದೆ 38 ಮತ್ತು 40ನೇ ಶ್ಲೋಕದಲ್ಲಿ ಹೇಳಿದಂತೆ, ದೇವರಾಜನಾದ ಮಹೇಂದ್ರ ಪ್ರಯೋಗಿಸಿದ ಮಾಯೆಯಿದು ಎಂಬ ಮತ್ತು ಅರ್ಜುನ, ಭೀಮ, ನಕುಲ-ಸಹದೇವರು, ಕರ್ಣ, ರಾಜಪುತ್ರಿಯಾದ ಕೃಷ್ಣೆ ಇವರು ಯಾರೂ ನರಕಾರ್ಹರಲ್ಲ ಎಂಬ ಸ್ಪಷ್ಟವಾದ ಮಾತಿನ ವಿರೋಧ ಬರುವುದು. ಆದ್ದರಿಂದ ಭಾರತದ ಹೃದಯವನ್ನು ಭಾರತೀಪತಿ ಮಾತ್ರ ತಿಳಿಯಬಲ್ಲ. ಬೇರೆಯವರಿಗೆ ಸಾಧ್ಯವಾಗದು ಎಂದು ತಿಳಿಯಬೇಕು - ಲಕ್ಷಾಲಂಕಾರ.
ಸ್ವಪಕ್ಷ್ಯಾಶ್ಚೈವ ಯೇ ತುಭ್ಯಂ ಪಾರ್ಥಿವಾ ನಿಹತಾ ರಣೇ |
ಸರ್ವೇ ಸ್ವರ್ಗಮನುಪ್ರಾಪ್ತಾಸ್ತಾನ್ ಪಶ್ಯ ಭರತರ್ಷಭ ॥20॥
ಹೇ ಭರತಶ್ರೇಷ್ಠನೇ, ನಿನಗೆ ಸ್ವಪಕ್ಷಕರೆನಿಸಿಕೊಂಡ ಯಾರೆಲ್ಲ ರಾಜರು ಯುದ್ಧದಲ್ಲಿ ಹತರಾಗಿರುವರೋ ಆ ಎಲ್ಲರೂ ಸ್ವರ್ಗವನ್ನು ಪಡೆದಿರುವರು, ಅವರನ್ನು ನೋಡು.
ಕರ್ಣಶ್ಚೈವ ಮಹೇಷ್ವಾಸಃ ಸರ್ವಶಸ್ತ್ರಭೃತಾಂವರಃ |
ಸ ಗತಃ ಪರಮಾಂ ಸಿದ್ಧಿಂ ಯದರ್ಥಂ ಪರಿತಪ್ಯಸೇ ॥21॥
ಯಾವನಿಗೋಸ್ಕರ ನೀನು ಪರಿತಪಿಸುತ್ತಿರುವೆಯೋ ಅಂತಹ ಮಹಾ ಧನುರ್ಧಾರಿಯಾದ, ಎಲ್ಲ ಶಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಕರ್ಣನೂ ಉತ್ತಮವಾದ ಸಿದ್ಧಿಯನ್ನು ಹೊಂದಿರುವನು.
ತಂ ಪಶ್ಯ ಪುರುಷವ್ಯಾಘ್ರಮಾದಿತ್ಯತನಯಂ ವಿಭೋ |
ಸ್ವಸ್ಥಾನಸ್ಥಂ ಮಹಾಬಾಹೋ ಜಹಿ ಶೋಕಂ ನರರ್ಷಭ ॥22॥
ಹೇ ವಿಭುವೇ, ನರಶ್ರೇಷ್ಠನೇ, ಪುರುಷಸಿಂಹನಾದ ಆ ಸೂರ್ಯನ ಮಗನನ್ನು ನೋಡು. ಹೇ ಮಹಾಬಾಹುವೇ, ಅವನು ಸ್ವಸ್ಥಾನದಲ್ಲೇ ಇರುವನು. ಆದ್ದರಿಂದ ಶೋಕವನ್ನು ಬಿಡು.
ಭ್ರಾತೄನ್ ಪುತ್ರಾಂಸ್ತಥಾ ಪಶ್ಯ ಸ್ವಪಕ್ಷ್ಯಾಂಶ್ಚೈವ ಪಾರ್ಥಿವಾನ್ |
ಸ್ವಂ ಸ್ವಂ ಸ್ಥಾನಮನುಪ್ರಾಪ್ತಾನ್ ವ್ಯೇತು ತೇ ಮಾನಸೋ ಜ್ವರಃ ॥23॥
ಸಹೋದರರನ್ನೂ, ಅಂತೆಯೇ ಪುತ್ರರನ್ನೂ, ಹಾಗೆಯೇ ನಿನ್ನ ಪಕ್ಷದಲ್ಲಿದ್ದ ರಾಜರನ್ನೂ, ಅವರು ತಮ್ಮ ತಮ್ಮ ಸ್ಥಾನ ಪಡೆದಿದ್ದಾರೆ ಎಂದೂ ನೋಡು. ನಿನ್ನ ಮಾನಸಿಕ ವೇದನೆಯು ಕಳೆಯಲಿ.
ಕೃಚ್ಛ್ರಂ ಪೂರ್ವಂ ಚಾನುಭೂಯ ಇತಃಪ್ರಭೃತಿ ಕೌರವ |
ವಿಹರಸ್ವ ಮಯಾ ಸಾರ್ಧಂ ಗತಶೋಕೋ ನಿರಾಮಯಃ ॥24॥
ಹೇ ಕೌರವನೇ, ಮೊದಲು ಕಷ್ಟವನ್ನು ಅನುಭವಿಸಿ ಇನ್ನು ಮುಂದೆ ಶೋಕವಿಲ್ಲದೆ, ಯಾವುದೇ ಉಪಟಳವಿಲ್ಲದೆ ನನ್ನೊಂದಿಗೆ ವಿಹರಿಸು.
ಕರ್ಮಣಾಂ ತಾತ ಪುಣ್ಯಾನಾಂ ಜ್ಞಾನಾನಾಂ ತಪಸಾಂ ಸ್ವಯಮ್ |
ದಾನಾನಾಂ ಚ ಮಹಾಬಾಹೋ ಫಲಂ ಪ್ರಾಪ್ನುಹಿ ಪಾರ್ಥಿವ ॥25॥
ಮಗು, ಮಹಾಬಾಹುವಾದ ರಾಜನೇ, ನೀನು ಮಾಡಿದ ಪುಣ್ಯಕರ್ಮಗಳ, ಜ್ಞಾನದ, ತಪಸ್ಸಿನ, ದಾನಗಳ ಫಲವನ್ನು ಸ್ವಯಂ

ಅನುಭವಿಸು.
ಉಪರ್ಯುಪರಿ ರಾಜ್ಞಾಂ ಹಿ ತವ ಲೋಕಾ ಯುಧಿಷ್ಠಿರ |
ಹರಿಶ್ಚಂದ್ರಸಮಃ ಪಾರ್ಥ ಯೇಷು ತ್ವಂ ವಿಹರಿಷ್ಯಸಿ ||26||
ಹೇ ಯುಧಿಷ್ಠಿರನೇ, ನಿನ್ನ ಲೋಕಗಳು ಇತರ ರಾಜರ ಲೋಕಗಳಿಗಿಂತ ತುಂಬಾ ಮೇಲೆ ಇವೆ. ಹೇ ಪಾರ್ಥನೇ, ಹರಿಶ್ಚಂದ್ರನಿಗೆ ಸಮನಾಗಿ ಆ ಯಾವ ಲೋಕಗಳಲ್ಲಿ ನೀನು ವಿಹರಿಸುವೆ.
ಮಾಂಧಾತಾ ಯತ್ರ ರಾಜರ್ಷಿರ್ಯತ್ರ ರಾಜಾ ಭಗೀರಥಃ |
ದೌಷ್ಯಂತಿರ್ಯತ್ರ ಭರತಸ್ತತ್ರ ತ್ವಂ ವಿಹರಿಷ್ಯಸಿ ||27||
ಎಲ್ಲಿ ರಾಜರ್ಷಿಯಾದ ಮಾಂಧಾತ ಇರುವನೋ, ಎಲ್ಲಿ ರಾಜನಾದ ಭಗೀರಥನಿರುವನೋ, ಎಲ್ಲಿ ದುಷ್ಯಂತನ ಮಗನಾದ ಭರತನಿರುವನೋ ಅಲ್ಲಿ ನೀನು ವಿಹರಿಸಲಿರುವೆ.
ಏಷಾ ದೇವನದೀ ಪುಣ್ಯಾ ಪಾರ್ಥ ತ್ರೈಲೋಕ್ಯಪಾವನೀ |
ಆಕಾಶಗಂಗಾ ರಾಜೇಂದ್ರ ತತ್ರಾಪ್ಲುತ್ಯ ಗಮಿಷ್ಯಸಿ ||28||
ಹೇ ರಾಜಶ್ರೇಷ್ಠನಾದ ಪಾರ್ಥನೇ, ಇದು ದೇವನದಿಯಾದ ಮಂಗಳಮಯವಾದ ಮೂರುಲೋಕಗಳನ್ನು ಪವಿತ್ರಗೊಳಿಸುವ ಆಕಾಶಗಂಗೆಯಾಗಿದೆ. ಅಲ್ಲಿ ಮುಳುಗೆದ್ದು ಮುಂದೆ ಹೋಗು.
ಅತ್ರ ಸ್ನಾತಸ್ಯ ಭಾವಸ್ತೇ ಮಾನುಷೋ ವಿಗಮಿಷ್ಯತಿ |
ಗತಶೋಕೋ ನಿರಾಯಾಸೋ ಮುಕ್ತವೈರೋ ಭವಿಷ್ಯಸಿ ||29||
ಅಲ್ಲಿ ಸ್ನಾನ ಮಾಡಿದಾಗ ನಿನ್ನ ಮಾನುಷಸ್ವಭಾವವು ಇಲ್ಲವಾಗುವುದು. ಆಗ ನೀನು ದ್ವೇಷವನ್ನು ತೊರೆದು ಶೋಕ ಮತ್ತು ಶ್ರಮಗಳು ಇಲ್ಲದವನಾಗುವಿ'.
ಏವಂ ಬ್ರುವತಿ ದೇವೇಂದ್ರೇ ಕೌರವೇಂದ್ರಂ ಯುಧಿಷ್ಠಿರಮ್ |
ಧರ್ಮೋ ವಿಗ್ರಹವಾನ್ ಸಾಕ್ಷಾದುವಾಚ ಸುತಮಾತ್ಮನಃ ||30||
ಕೌರವಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು ದೇವೇಂದ್ರನು ಹೀಗೆ ಹೇಳಿದೊಡನೆಯೇ ಮೂರ್ತಿವೆತ್ತನಾದ ಸಾಕ್ಷಾತ್ ಯಮಧರ್ಮನೇ ತನ್ನ ಮಗನನ್ನು ಕುರಿತು ಹೀಗೆ ಹೇಳಿದನು.
ಭೋ ಭೋ ರಾಜನ್ ಮಹಾಪ್ರಾಜ್ಞ ಪ್ರೀತೋಽಸ್ಮಿ ತವ ಪುತ್ರಕ |
ಮದ್ಭಕ್ತ್ಯಾ ಸತ್ಯವಾಕ್ಯೈಶ್ಚ ಕ್ಷಮಯಾ ಚ ದಮೇನ ಚ ||31||
`ಹೇ ಮಹಾಪ್ರಾಜ್ಞನಾದ ರಾಜನೇ, ಮಗನೇ, ನಿನ್ನ ಸತ್ಯವಾದ ಮಾತುಗಳಿಂದಲೂ, ಕ್ಷಮೆಯಿಂದಲೂ, ಇಂದ್ರಿಯನಿಗ್ರಹದಿಂದಲೂ, ನನ್ನ ಮೇಲಿನ ಭಕ್ತಿಯಿಂದಲೂ ನಾನು ಪ್ರೀತನಾಗಿರುವೆ.
ಏಷಾ ತೃತೀಯಾ ಜಿಜ್ಞಾಸಾ ತವ ರಾಜನ್ ಕೃತಾ ಮಯಾ |
ನ ಶಕ್ಯಸೇ ಚಾಲಯಿತುಂ ಸ್ವಭಾವಾತ್ ಪಾರ್ಥ ಹೇತುಭಿಃ ||32||
ಹೇ ರಾಜನೇ, ಇದು ನಾನು ನಿನಗೆ ಒಡ್ಡಿದ ಮೂರನೆಯ ಪರೀಕ್ಷೆಯಾಗಿದೆ. ಹೇ ಪಾರ್ಥನೇ, ಯಾವುದೇ ಆಮಿಷಗಳಿಂದಲೂ ನೀನು ನಿನ್ನ ಸ್ವಾಭಾವಿಕ ನಿಷ್ಠೆಯನ್ನು ಬಿಟ್ಟು ಅಲುಗಾಡುವಂತೆ ಮಾಡುವುದು ಯಾರಿಗೂ ಶಕ್ಯವಿಲ್ಲ.
ಅದ್ಯ ತ್ವಾಂ ದೇವಗಂಧರ್ವಾ ದಿವ್ಯಾಶ್ಚಾಪ್ಸರಸೋ ದಿವಿ |
ಉಪಸೇವಂತು ಕಲ್ಯಾಣಂ ವಿರಜೋಂಬರಭೂಷಣಾಃ ||33||
ಇಂದು ಮಂಗಳಮಯನಾದ ನಿನ್ನನ್ನು ದೇವಲೋಕದಲ್ಲಿರುವ ದೇವ- ಗಂಧರ್ವರೂ, ದಿವ್ಯರಾದ ಅಪ್ಸರಸ್ತ್ರೀಯರೂ, ಶುಭ್ರವಸ್ತ್ರಾಭರಣಗಳೊಂದಿಗೆ ಸೇವಿಸಲಿ.
ರಾಜಸೂಯಜಿತಾನ್ ಲೋಕಾನಶ್ವಮೇಧಾಭಿನಿರ್ಮಿತಾನ್ |
ಪ್ರಾಪ್ನುಹಿ ತ್ವಂ ಮಹಾಬಾಹೋ ತಪಸಶ್ಚ ಮಹಾಫಲಮ್ ||34||
ಹೇ ಮಹಾಬಾಹುವೇ, ನೀನು ರಾಜಸೂಯಯಾಗದಿಂದ ಗೆದ್ದ ಲೋಕಗಳನ್ನೂ, ಅಶ್ವಮೇಧಯಾಗದಿಂದ ಪ್ರಾಪ್ತವಾದ ಲೋಕಗಳನ್ನೂ, ಈ ಹಿಂದೆ ನಡೆಸಿದ ತಪಸ್ಸಿನ ಮಹಾಫಲವನ್ನೂ ಹೊಂದಲಿರುವೆ.
ಪೂರ್ವಂ ಪರೀಕ್ಷಿತೋ ಹಿ ತ್ವಂ ಪ್ರಶ್ನಾದ್ ದ್ವೈತವನೇ ಮಯಾ |
ಅರಣೀಸಹಿತಸ್ಯಾರ್ಥೇ ತಚ್ಚ ನಿಸ್ತೀರ್ಣವಾನಸಿ ||35||
ಹಿಂದೆ ನೀನು ದ್ವೈತವನದಲ್ಲಿ ಅರಣಿಯನ್ನು ಹುಡುಕಿಕೊಂಡು ಬಂದಿದ್ದಾಗ ನನ್ನಿಂದ ಪ್ರಶ್ನೆಯ ಮೂಲಕ ಪರೀಕ್ಷೆಗೆ ಒಳಪಟ್ಟಿದ್ದೆ. ಅಲ್ಲೂ ನೀನು ತೇರ್ಗಡೆಯಾಗಿದ್ದೆ.
ಸೋದರ್ಯೇಷು ವಿನಷ್ಟೇಷು ದ್ರೌಪದ್ಯಾ ತತ್ರ ಭಾರತ |
ಶ್ವರೂಪಧಾರಿಣಾ ತತ್ರ ಪುನಸ್ತ್ವಂ ಮೇ ಪರೀಕ್ಷಿತಃ ||36||
ಹೇ ಭಾರತನೇ, ದ್ರೌಪದಿಯೊಂದಿಗೆ ನಿನ್ನ ಸಹೋದರರೆಲ್ಲರೂ ನಾಶವಾಗಿದ್ದಾಗ ಶ್ವಾನದ ರೂಪವನ್ನು ಧರಿಸಿ ಮತ್ತೆ ನಿನ್ನನ್ನು ಪರೀಕ್ಷಿಸಿದ್ದೆ.
ಇದಂ ತೃತೀಯಂ ಭ್ರಾತೄಣಾಮರ್ಥೇ ಯತ್ಸ್ಥಾತುಮಿಚ್ಛಸಿ |
ವಿಶುದ್ಧೋಽಸಿ ಮಹಾಭಾಗ ಸುಖೀ ವಿಗತಕಲ್ಮಷಃ ||37||
ಇದು ನಿನಗೆ ಮೂರನೆಯ ಪರೀಕ್ಷೆಯಾಗಿದ್ದು, ಸಹೋದರರಿಗೋಸ್ಕರ ನೀನೇನು ಇಲ್ಲಿರಲು ಬಯಸಿರುವೆಯೋ ಹೇ ಮಹಾನುಭಾವನೇ, ಈ ಪರೀಕ್ಷೆಯಲ್ಲೂ ನೀನು ಶುದ್ಧನಾಗಿದ್ದು, ಯಾವುದೇ ಕಲ್ಮಷವಿಲ್ಲದೆ ಸುಖಾರ್ಹನಾಗಿರುವೆ.
ನ ಚ ತೇ ಭ್ರಾತರಃ ಪಾರ್ಥ ನರಕಾರ್ಹಾ ವಿಶಾಂಪತೇ |

ಮಾಯೈಷಾ ದೇವರಾಜೇನ ಮಹೇಂದ್ರೇಣ ಪ್ರಯೋಜಿತಾ ॥38॥
ಹೇ ಜನಾಧಿಪತಿಯಾದ ಪಾರ್ಥನೇ, ನಿನ್ನ ಸಹೋದರರು ನರಕಯೋಗ್ಯರಲ್ಲವೇ ಅಲ್ಲ. ಇದು ದೇವರಾಜನಾದ ಮಹೇಂದ್ರನಿಂದ ಪ್ರಯೋಗಿಸಲ್ಪಟ್ಟ ಮಾಯೆಯಾಗಿದೆ.
ಅವಶ್ಯಂ ನರಕಾ ಪಾರ್ಥ ದ್ರಷ್ಟವ್ಯಾಃ ಸರ್ವರಾಜಭಿಃ |
ತತಸ್ತ್ವಯಾ ಪ್ರಾಪ್ತಮಿದಂ ಮುಹೂರ್ತಂ ದುಃಖಮುತ್ತಮಮ್ ॥39॥
ಹೇ ಪಾರ್ಥನೇ, ಎಲ್ಲ ರಾಜರು ಅವಶ್ಯವಾಗಿ ನರಕವನ್ನು ನೋಡಲೇಬೇಕು. ಆದ್ದರಿಂದಲೇ ಅತಿಯಾದ ಈ ದುಃಖವು ಒಂದು ಮುಹೂರ್ತದ ಕಾಲ ನಿನ್ನಿಂದ ಪ್ರಾಪ್ತವಾಗಿದೆ.
ನ ಸವ್ಯಸಾಚೀ ಭೀಮೋ ವಾ ಯಮೌ ವಾ ಪುರುಷರ್ಷಭೌ |
ಕರ್ಣೋ ವಾ ಸತ್ಯವಾಕ್ ಶೂರೋ ನರಕಾರ್ಹಾ ವಿಶಾಂಪತೇ ॥40॥
ಹೇ ವಿಶಾಂಪತಿಯೇ, ಸವ್ಯಸಾಚಿಯಾದ ಅರ್ಜುನನಾಗಲೀ, ಭೀಮನಾಗಲೀ, ಪುರುಷಶ್ರೇಷ್ಠರಾದ ಅವಳಿ ಮಕ್ಕಳಾಗಲೀ, ಸತ್ಯವಾದ ಮಾತುಗಳುಳ್ಳ ಶೂರನಾದ ಕರ್ಣನಾಗಲೀ ನರಕಾರ್ಹರು ಅಲ್ಲವೇ ಅಲ್ಲ.
ನ ಕೃಷ್ಣಾ ರಾಜಪುತ್ರೀ ಚ ನರಕಾರ್ಹಾ ಕಥಂಚನ |
ಏಹ್ಯೇಹಿ ಭರತಶ್ರೇಷ್ಠ ಪಶ್ಯ ಚೇಮಾಂತ್ರಿಲೋಕಗಾಮ್ ॥41॥
ಹಾಗೆಯೇ ರಾಜಪುತ್ರಿಯಾದ ಕೃಷ್ಣೆಯಾಗಲೀ ಇವರ್ಯಾರೂ ಯಾವುದೇ ರೀತಿಯಿಂದ ನರಕಾರ್ಹರಲ್ಲ. ಹೇ ಭರತಶ್ರೇಷ್ಠನೇ, ಮೂರುಲೋಕದಲ್ಲಿ ಹರಿಯುವ ಈ ಗಂಗೆಯನ್ನು ನೋಡು, ಅಲ್ಲಿ ಬಾ'.
ವೈಶಂಪಾಯನಃ
ಏವಮುಕ್ತಃ ಸ ರಾಜರ್ಷಿಸ್ತವ ಪೂರ್ವಪಿತಾಮಹಃ |
ಜಗಾಮ ಸಹ ಧರ್ಮೇಣ ಸರ್ವೈಶ್ಚ ತ್ರಿದಿವಾಲಯೈಃ ॥42॥
ವೈಶಂಪಾಯನ ಯಮಧರ್ಮನು ಹೀಗೆ ಹೇಳಿದಾಗ ನಿನ್ನ ಪಿತಾಮಹನಿಗೂ ಪೂರ್ವಜನಾದ ರಾಜರ್ಷಿಯಾದ ಆ ಧರ್ಮರಾಜನು ಯಮಧರ್ಮ ಹಾಗೂ ಎಲ್ಲ ದೇವತೆಗಳೊಂದಿಗೆ ಗಂಗೆಯ ಸಮೀಪಕ್ಕೆ ತೆರಳಿದನು.
ಗಂಗಾಂ ದೇವನದೀಂ ಪುಣ್ಯಾಂ ಪಾವನೀಮೃಷಿಸಂಸ್ತುತಾಮ್ |
ಅವಗಾಹ್ಯ ತತೋ ರಾಜಾ ತನುಂ ತತ್ಯಾಜ ಮಾನುಷೀಮ್ ॥43॥
ದೇವನದಿಯಾದ, ಮಂಗಳಮಯಳಾದ, ಎಲ್ಲ ರೀತಿಯ ಪಾವಿತ್ರ್ಯವನ್ನು ತಂದುಕೊಡುವ, ಋಷಿಗಳಿಂದ ಸ್ತೋತ್ರಗೈಯ್ಯಲ್ಪಟ್ಟ ಗಂಗೆಯಲ್ಲಿ ಮುಳುಗಿದ ನಂತರ ರಾಜನಾದ ಯುಧಿಷ್ಠಿರನು ಮಾನುಷ ಶರೀರವನ್ನು ತೊರೆದನು.
ತತೋ ದಿವ್ಯವಪುರ್ಭೂತ್ವಾ ಧರ್ಮರಾಜೋ ಯುಧಿಷ್ಠಿರಃ |
ನಿರ್ವೈರೋ ಗತಸಂತಾಪೋ ಜಲೇ ತಸ್ಮಿನ್ ಸಮಾಪ್ಲುತಃ ॥44॥
ಆ ನೀರಿನಲ್ಲಿ ಮುಳುಗೆದ್ದ ನಂತರ ಧರ್ಮರಾಜನಾದ ಯುಧಿಷ್ಠಿರನು ದಿವ್ಯವಾದ ಶರೀರವನ್ನು ಹೊಂದಿ, ಹಗೆತನವನ್ನು ಹೋಗಲಾಡಿಸಿಕೊಂಡು, ಸಂತಾಪವಿಲ್ಲದವನಾದನು.
ತತೋ ಯಯೌ ವೃತೋ ದೇವೈಃ ಕುರುರಾಜೋ ಯುಧಿಷ್ಠಿರಃ |
ಧರ್ಮೇಣ ಸಹಿತೋ ಧೀಮಾಸ್ತೂಯಮಾನೋ ಮಹರ್ಷಿಭಿಃ ॥45॥
ಯತ್ರ ತೇ ಪುರುಷವ್ಯಾಘ್ರಾಃ ಶೂರಾ ವಿಗತಮನ್ಯವಃ |
ಪಾಂಡವಾ ಧಾರ್ತರಾಷ್ಟ್ರಾಶ್ಚ ಸ್ವಾನಿ ಸ್ಥಾನಾನಿ ಭೇಜಿರೇ ॥46॥
ಅನಂತರ ಕುರುರಾಜನಾದ, ಧೀಮಂತನಾದ ಯುಧಿಷ್ಠಿರನು ದೇವತೆಗಳಿಂದ ಸುತ್ತುವರಿಯಲ್ಪಟ್ಟ ಯಮಧರ್ಮನೊಂದಿಗೆ ಮಹರ್ಷಿಗಳಿಂದ ಹೊಗಳಿಸಿಕೊಳ್ಳುತ್ತಾ ಪುರುಷಶ್ರೇಷ್ಠರಾದ, ಶೂರರಾದ, ಪರಸ್ಪರ ಕೋಪವಿಲ್ಲದ ಪಾಂಡವರು ಮತ್ತು ಧೃತರಾಷ್ಟ್ರನ ಮಕ್ಕಳು ತಮಗೆ ಯೋಗ್ಯವಾದ ಸ್ಥಾನವನ್ನು ಎಲ್ಲಿ ಪಡೆದಿದ್ದರೋ ಅಲ್ಲಿಗೆ ತೆರಳಿದನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸ್ವರ್ಗಾರೋಹಣಪರ್ವಣಿ ಯುಧಿಷ್ಠಿರಸ್ಯ ಮಂದಾಕಿನ್ಯಾಂ ಸ್ನಾತ್ವಾ ಮಾನುಷದೇಹಂ
ತ್ಯಕ್ತ್ವಾ ಯಮಧರ್ಮಾದಿದೇವೈಃ ಸಹ ಸ್ವರ್ಗಾರೋಹಣಂ ನಾಮ ತೃತೀಽಯೋಧ್ಯಾಯಃ॥
ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ಮೂರನೆಯ ಅಧ್ಯಾಯ ಮುಗಿಯಿತು.
* * * * *
ಮಹಾಭಾರತತಾತ್ಪರ್ಯನಿರ್ಣಯಃ - 32ನೇ ಅಧ್ಯಾಯ
ತತಸ್ತು ಪಾರ್ಥಾ ಅಖಿಲಾಃ ಸ್ವಮೂಲ-
ರೂಪೈಃ ಸಹೈವಾವಿವಿಶುರ್ಮುದಾಽನ್ವಿತಾಃ |
ಸ್ವೀಯಾನಿ ಧಾಮಾನಿ ತತೋಽಪ್ಯನೂನ-
ಭೋಗಾಃ ಸದಾರಾ ನ್ಯವಸಂಶ್ಚ ತತ್ರ ॥
ಬಳಿಕ ಎಲ್ಲ ಪಾಂಡವರೂ ಸಂತುಷ್ಟರಾಗಿ, ತಮ್ಮ ಮೂಲರೂಪಗಳೊಂದಿಗೆ ತಮ್ಮ ಲೋಕಗಳನ್ನು ಪ್ರವೇಶಿಸಿದರು. ಮೂಲರೂಪಗಳಿಗಿಂತ ಕಡಿಮೆಯಲ್ಲದ ಭೋಗ ಉಳ್ಳವರಾಗಿ ಪತ್ನೀಸಮೇತರಾಗಿ ಅಲ್ಲಿ ವಾಸ ಮಾಡಿದರು.
ತತ್ರಾಪಿ ಕೃಷ್ಣೇನ ಸಮಾಗಮೋಽಭೂತ್
ಪುರೇವ ತೇಷಾಮತಿತತ್ಪರಾಣಾಮ್ |
ಚಿಕ್ರೀಡ ಏಭಿಃ ಸಹಿತಸ್ತಥೈವ

कृಷ್ಣೋऽಪಿ ತದ್ವತ್ ಸರಥೋऽರ್ಜುನೇನ ॥
ಅಲ್ಲಿಯೂ ಅತ್ಯಂತ ಕೃಷ್ಣಭಕ್ತರಾದ ಪಾಂಡವರಿಗೆ ಹಿಂದಿನಂತೆ ಶ್ರೀಕೃಷ್ಣನೊಡನೆ ಸಮಾಗಮವಾಯಿತು. ಶ್ರೀಕೃಷ್ಣನು ಹಾಗೇ ಪಾಂಡವರೊಡನೆ ವಿಹರಿಸಿದನು. ಹಿಂದಿನಂತೆಯೆ ರಥವೇರಿ ಅರ್ಜುನನೊಡನೆ ವಿಹರಿಸಿದನು.
ಅನ್ಯೇ ಚ ದೇವಾಂಶಭವಾಃ ಸಮಸ್ತಾಃ
ಸ್ವಮೂಲರೂಪೈಕ್ಯಮವಾಪುರಾಶು |
ಕರ್ಮಕ್ಷಯಾದೇವ ಸುರೇತರಾಸ್ತು
ಪುಣ್ಯಕ್ಷಯಂ ಪ್ರಾಪ್ಯ ಭುವಿ ಪ್ರಜಾತಾಃ ॥
ಚತುಃಸಹಸ್ರಂ ತ್ರಿಶತೋತ್ತರಂ ತೇ
ಸಂವತ್ಸರಾಣಾಮನುಭೂಯ ದಿವ್ಯಾನ್ |
ಭೋಗಾನ್ ನರತ್ವೇऽಪಿ ಸದೇಶ್ವರೋऽಹ-
ಮಸಜ್ಜಗಚ್ಚೇತಿ ಧಿಯಾऽऽಪ್ನುವಂಸ್ತಮಃ ॥
ಬೇರೆ ದ್ರೋಣರು ಮುಂತಾದ ದೇವಾಂಶಸಂಭೂತರೆಲ್ಲರೂ ಪ್ರಾರಬ್ಧ ಕರ್ಮಕ್ಷಯದಿಂದಲೆ ಬೇಗನೆ ತಮ್ಮ ಮೂಲರೂಪಗಳೊಂದಿಗೆ ಐಕ್ಯಹೊಂದಿದರು. ಅಸುರರು ನಾಲ್ಕು ಸಾವಿರದ ಮುನ್ನೂರು ವರ್ಷಪರ್ಯಂತ ವೀರಸ್ವರ್ಗದಲ್ಲಿ ದಿವ್ಯ ಭೋಗಗಳನ್ನು ಅನುಭವಿಸಿ, ಪುಣ್ಯಕ್ಷಯ ಹೊಂದಿ ಭೂಲೋಕದಲ್ಲಿ ಹುಟ್ಟಿದರು. ಆಗ ಮನುಷ್ಯರಾಗಿ ಹುಟ್ಟಿ ಸದಾ ನಾನೇ ಭಗವಂತ, ಜಗತ್ತು ಸುಳ್ಳು ಎಂಬ ಉಪಾಸನೆಯಿಂದ ತಮಸ್ಸನ್ನು ಸಂಪಾದಿಸಿಕೊಂಡರು.
ದುಃಖೇऽಪಿ ತೇಷಾಮಿಹ ತಾರತಮ್ಯಂ
ಕಲೇಃ ಪರಂ ದುಃಖಮಿಹಾಖಿಲಾಚ್ಚ |
ಯಥಾ ವಿರಿಂಚಸ್ಯ ಸುಖಂ ಪರಂ ಸ್ಯಾ-
ನ್ಮುಕ್ತೌ ಹರಿದ್ವೇಷಕೃತೋ ವಿಶೇಷಃ ॥
ಅಂಧಂತಮಸ್ಸಿನಲ್ಲಿ ಅಸುರರಿಗೂ ದುಃಖದಲ್ಲಿ ತಾರತಮ್ಯವಿದೆ. ಅಸುರರಲ್ಲಿ ಎಲ್ಲರಿಗಿಂತ ಕಲಿಗೆ ಹೆಚ್ಚು ದುಃಖ. ಮುಕ್ತಿಯಲ್ಲಿ ಬ್ರಹ್ಮನಿಗೆ ಹೇಗೆ ಎಲ್ಲರಿಗಿಂತ ಹೆಚ್ಚು ಸುಖವೋ ಹಾಗೆ. ಅಸುರರಿಗೆ ಹರಿದ್ವೇಷ ತಾರತಮ್ಯದಿಂದ ದುಃಖದಲ್ಲಿ ತಾರತಮ್ಯ.
ಕೇಚಿತ್ ಪಿಶಾಚಾಸುರರಾಕ್ಷಸತ್ವ-
ಮವಾಪ್ಯ ವಿಷ್ಣೋರಪಿ ತತ್ಪರಾಣಾಮ್ |
ದ್ವೇಷಾತ್ತಮೋऽಂಧಂ ತ್ವರಯಾ ಸಮಾಪ್ನುಯು-
ರ್ದೇವಾಃ ಸ್ವಕಾಲೇ ನಿಜಯೋಗ್ಯಮುಕ್ತಿಮ್ ॥
ಎಲ್ಲ ಅಸುರರೂ ಮನುಷ್ಯರಾಗಿ ಹುಟ್ಟುವುದಿಲ್ಲ. ಕೆಲವರು ಪಿಶಾಚ, ಅಸುರ, ರಾಕ್ಷಸಜನ್ಮ ಪಡೆದು ವಿಷ್ಣು-ವೈಷ್ಣವದ್ವೇಷದಿಂದ ಬೇಗನೆ ಅಂಧಂತಮಸ್ಸನ್ನು ಹೊಂದುತ್ತಾರೆ. ದೇವತೆಗಳು ಸ್ವರೂಪಯೋಗ್ಯತಾನುಗುಣಸಾಧನೆ ಪೂರ್ತಿಯಾದಾಗಲೆ ತಮಗೆ ಯೋಗ್ಯವಾದ ಮುಕ್ತಿಯನ್ನು ಹೊಂದುವರು.
ಚತುಃಸಹಸ್ರೇ ತ್ರಿಶತೋತ್ತರೇ ಗತೇ
ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ |
ಜಾತಃ ಪುನರ್ವಿಪ್ರತನುಃ ಸ ಭೀಮೋ
ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥
ಆ ಭೀಮನೇ ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷಗಳು ಕಳೆದಾಗ ಪುನಃ ಬ್ರಾಹ್ಮಣನಾಗಿ ಹುಟ್ಟಿ, ದೈತ್ಯರಿಂದ ಮರೆಮಾಡಲ್ಪಟ್ಟ ಹರಿತತ್ತ್ವವನ್ನು ಉಪದೇಶಿಸಿದನು.
ತದೈವ ಕೃಷ್ಣಾಪಿ ಭುವಿ ಪ್ರಜಾತಾ
ಪ್ರೀತ್ಯೈ ಹರೇರಂಧತಮಸ್ಯಪಾತಯತ್ |
ಮಹಾಸುರಾನ್ ವಿಷ್ಣುಪರಾರ್ಜುನಾದ್ಯಾಃ
ಕೃತೇ ಪ್ರಜಾತಾ ಹರಿತೋಷಣಾಯ |
ಪುನಶ್ಚ ತೇ ಸ್ಥಾನಮವಾಪ್ಯ ಸರ್ವೇ
ಸ್ವೀಯಂ ಪರಾಂತೇ ತು ವಿಮುಕ್ತಿಮಾಪ್ನುಯುಃ ॥
ಆಗಲೇ ದ್ರೌಪದಿಯೂ ಭೂಮಿಯಲ್ಲಿ ಅವತರಿಸಿ, ವಿಷ್ಣುಪ್ರೀತಿಗಾಗಿ ಮಹಾ ಅಸುರರನ್ನು ಅಂಧಂತಮಸ್ಸಿನಲ್ಲಿ ಬೀಳಿಸಿದಳು. ವಿಷ್ಣುಭಕ್ತರಾದ ಅರ್ಜುನ ಮುಂತಾದವರು ಹರಿಪ್ರೀತಿಗಾಗಿ ಮುಂದಿನ ಕೃತಯುಗದಲ್ಲಿ ವಿಕುಕ್ಷಿ ಮುಂತಾದ ರಾಜರಾಗಿ ಹುಟ್ಟಿ, ಪುನಃ ತಮ್ಮ ಸ್ಥಾನವನ್ನು ಹೊಂದಿ, ಬ್ರಹ್ಮಪ್ರಳಯಾನಂತರ ಮುಕ್ತಿಯನ್ನು ಹೊಂದುವರು.
ವಾಯುತ್ವಮಾಪ್ತಃ ಸ ಹನೂಮದಂಶೋ
ಬ್ರಾಹ್ಮಂ ಪದಂ ಪ್ರಾಪ್ಯ ವೃಕೋದರಶ್ಚ |
ವಾಗೀಶ್ವರೀತ್ವಂ ಗತಯೈವ ಕೃಷ್ಣಯಾ
ಸಹೈವ ಮುಕ್ತಿಂ ಗಮಿತಾऽಖಿಲೋತ್ತಮಾಮ್ ॥
ಹನುಮಂತನೆಂಬ ಅಂಶವೂ ಭೀಮ ಎಂಬ ಅಂಶವೂ ವಾಯುವಿನೊಡನೆ ಐಕ್ಯಹೊಂದಿ ಬ್ರಹ್ಮಪದವಿಯನ್ನು ಪಡೆದು, ಸರಸ್ವತೀ ಪದವಿಯನ್ನು ಹೊಂದಿದ ಭಾರತಿಯೊಂದಿಗೆ ಎಲ್ಲರಿಗಿಂತ ಉತ್ತಮವಾದ ಮುಕ್ತಿಯನ್ನು ಹೊಂದುವುದು.
ಭುವಿ ದ್ಯುಲೋಕೇ ಚ ವಿರಿಂಚತಾಯಾಂ

ಮುಕ್ತೌ ಚ ತಾಭ್ಯಾಮಧಿಕಂ ಸಮಸ್ತಾತ್ |
ಸಂತೋಷ್ಯತೇ ಪೂರ್ಣಗುಣೋ ರಮೇಶಃ
ಸದೈವ ನಿತ್ಯೋರ್ಜಿತಸದ್ರತಿಭ್ಯಾಮ್ ॥
ಭೂಲೋಕದಲ್ಲಿಯೂ ಸ್ವರ್ಗದಲ್ಲಿಯೂ ಬ್ರಹ್ಮಪದವಿಯಲ್ಲಿಯೂ ಮುಕ್ತಿಯಲ್ಲಿಯೂ ಸದಾ ನಿತ್ಯ ಉತ್ಕೃಷ್ಟ ವಿಷ್ಣುಭಕ್ತಿಯುಳ್ಳ ವಾಯು-ಭಾರತಿಯರು ಪೂರ್ಣಗುಣನಾದ ರಮೇಶನನ್ನು ಎಲ್ಲ ಜೀವಸಮೂಹಕ್ಕಿಂತ ಅಧಿಕವಾಗಿ ಸಂತೋಷಪಡಿಸುವರು.
ಭೂಷನ್ನಯೋಧಿ ಬಭ್ರೂಷು ನಮ್ನತೇ
ಬಳಿತ್ಥಾ ತದ್ ವಪುಷೇ ಧಾಯಿ ದರ್ಶತಮ್ |
ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ-
ಇತ್ಯಾದಿಸೂಕ್ತಾನಿ ಚ ತತ್ಪ್ರಮಾಣಮ್ ॥
`ಭೂಷನ್ನ ಯೋಧಿ ಬಭ್ರೂಷು ನಮ್ನತೇ' `ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ' `ತಾಂ ಸು ತೇ ಕೀರ್ತಿಂ ಮಘವನ್ ಮಹಿತ್ವಾ' ಇತ್ಯಾದಿ ಸೂಕ್ತಗಳು ಈ ವಿಷಯದಲ್ಲಿ ಪ್ರಮಾಣಗಳು.
ಅನ್ಯಾನಿ ವಾಕ್ಯಾನಿ ಚ ವೈದಿಕಾನಿ
ಸಪಂಚರಾತ್ರೋಕ್ತಿಪುರಾಣಕಾನಿ |
ಪೃಷ್ಟಶ್ಚ ಭೀಷ್ಮೋಽತ್ರ ಯುಧಿಷ್ಠಿರೇಣೈ-
ತನ್ಮೋಕ್ಷಧರ್ಮೇಷ್ವಪಿ ಕಿಂಚಿದಾಹ ॥
ಬೇರೆ ವೇದವಚನಗಳೂ ಪಂಚರಾತ್ರೋಕ್ತಿಗಳೂ, ಪುರಾಣಗಳೂ ಈ ವಿಷಯದಲ್ಲಿ ಪ್ರಮಾಣಗಳು. ಈ ವಿಷಯದಲ್ಲಿ ಧರ್ಮರಾಜ ಕೇಳಿದಾಗ, ಭೀಷ್ಮ ಮೋಕ್ಷ ಧರ್ಮಗಳಲ್ಲಿಯೂ ಸಂಕ್ಷೇಪವಾಗಿ ಇದನ್ನು ಹೇಳಿದ್ದಾನೆ.
ಏವಂ ಪ್ರಯಾತೇಷು ಸಕೇಶವೇಷು
ಸ್ವಾನೇವ ಲೋಕಾನ್ ಯದುಪಾಂಡವೇಷು |
ಪರೀಕ್ಷಿದಾದ್ಯಾಸ್ತು ತದನ್ವಯೋತ್ಥಾ
ವ್ಯಾಸಾನುಶಿಷ್ಟಾಃ ಪೃಥಿವೀಮರಕ್ಷನ್ ॥
ಹೀಗೆ ಶ್ರೀಕೃಷ್ಣನೂ, ಯಾದವರೂ, ಪಾಂಡವರೂ ತಮ್ಮ ಲೋಕಕ್ಕೆ ಹೋದಾಗ ಅವರ ವಂಶದಲ್ಲಿ ಬಂದ ಪರೀಕ್ಷಿತ ಮುಂತಾದ ರಾಜರು ವೇದವ್ಯಾಸರಿಂದ ಉಪದಿಷ್ಟರಾಗಿ ಭೂಮಿಯನ್ನು ಆಳಿದರು.
* * * * *
ನಾಲ್ಕನೆಯ ಅಧ್ಯಾಯ
ಯುಧಿಷ್ಠಿರನು ಸ್ವರ್ಗದಲ್ಲಿ ವಾಸಿಸುತ್ತಿದ್ದ ಕೃಷ್ಣ-ಕರ್ಣಾದಿಗಳನ್ನು ನೋಡುವುದು. ಇಂದ್ರನು ಯುಧಿಷ್ಠಿರನಿಗೆ ದ್ರೌಪದಿಯ ಮಕ್ಕಳೇ ಮೊದಲಾದವರು ಅವರವರಿಗೆ ಯೋಗ್ಯವಾದ ಸ್ಥಾನದಲ್ಲಿ ಇರುವರೆಂದು ಪ್ರತ್ಯೇಕವಾಗಿ ತೋರಿಸುವುದು.
ವೈಶಂಪಾಯನಃ
ತತೋ ಯುಧಿಷ್ಠಿರೋ ರಾಜಾ ದೇವೈಃ ಸರ್ಷಿಮರುದ್ಗಣೈಃ |
ಪೂಜ್ಯಮಾನೋ ಯಯೌ ತತ್ರ ಯತ್ರ ತೇ ಕುರುಪುಂಗವಾಃ ॥1॥
ವೈಶಂಪಾಯನ ಅನಂತರ ರಾಜನಾದ ಯುಧಿಷ್ಠಿರನು ಋಷಿಗಳು ಹಾಗೂ ಮರುದ್ಗಣಗಳಿಂದ ಕೂಡಿದ ದೇವತೆಗಳಿಂದ ಪೂಜೆಗೊಳ್ಳುತ್ತಾ, ಎಲ್ಲಿ ಆ ಕುರುಶ್ರೇಷ್ಠರಿರುವರೋ ಅಲ್ಲಿಗೆ ಹೊರಟು ನಡೆದನು.
ದದರ್ಶ ತತ್ರ ಗೋವಿಂದಂ ಬ್ರಾಹ್ಮೇಣ ವಪುಷಾಽನ್ವಿತಮ್ |
ತೇನೈವ ದೃಷ್ಟಪೂರ್ವೇಣ ಸಾದೃಶ್ಯೇನೈವ ಸೂಚಿತಮ್ ॥2॥
ಅಲ್ಲಿ ಬ್ರಹ್ಮದೇವರಂತೆ ಕಂಗೊಳಿಸುವ ಶರೀರದಿಂದ ಕೂಡಿದ ಗೋವಿಂದನೆನಿಸಿದ ಕೃಷ್ಣನನ್ನು ಕಂಡನು. ಹಿಂದೆ ನೋಡಿದ ಕೃಷ್ಣ ಶರೀರದ ಹೋಲಿಕೆಯಿಂದಲೇ ಅದು ಕೃಷ್ಣನೇ ಎಂದು ಸೂಚಿತವಾಗಿತ್ತು.
ದೀಪ್ಯಮಾನಂ ಸ್ವವಪುಷಾ ದಿವ್ಯೈರಸ್ತ್ರೈರುಪಸ್ಥಿತಮ್ |
ಚಕ್ರಪ್ರಭೃತಿಭಿರ್ಘೋರೈರ್ದಿವ್ಯೈಃ ಪುರುಷವಿಗ್ರಹೈಃ ॥3॥
ಆ ಕೃಷ್ಣನು ತನ್ನ ಶರೀರದಿಂದ ಸ್ವರ್ಗವನ್ನು ಬೆಳಗಿಸುತ್ತಾ, ಪುರುಷಾಕೃತಿಯನ್ನು ಪಡೆದ ದಿವ್ಯವಾದ ಚಕ್ರವೇ ಮೊದಲಾದ ಘೋರವಾದ ದಿವ್ಯಾಸ್ತ್ರಗಳಿಂದ ಪರಿಸೇವಿತನಾಗಿದ್ದನು.
ಉಪಾಸ್ಯಮಾನಂ ವೀರೇಣ ಫಲ್ಗುನೇನ ಸುವರ್ಚಸಾ |
ತಥಾ ಸ್ವರೂಪಂ ಕೌಂತೇಯೋ ದದರ್ಶ ಮಧುಸೂದನಮ್ ॥4॥
ವೀರನಾದ, ಉತ್ತಮ ವರ್ಚಸ್ವಿಯಾದ ಅರ್ಜುನನಿಂದಲೂ ಉಪಾಸಿತನಾದ, ವಿಶಿಷ್ಟಸ್ವರೂಪವುಳ್ಳ ಮಧುಸೂದನನನ್ನು ಕೌಂತೇಯನು ಕಂಡನು.
ತಾವುಭೌ ಪುರುಷವ್ಯಾಘ್ರೌ ಸಮುದ್ವೀಕ್ಷ್ಯ ಯುಧಿಷ್ಠಿರಮ್ |
ಯಥಾವತ್ ಪ್ರತಿಪೇದಾತೇ ಪೂಜಯಾ ದೇವಪೂಜಿತೌ ॥5॥
ಯುಧಿಷ್ಠಿರನನ್ನು ಕಂಡ ಕೂಡಲೇ ದೇವಪೂಜಿತರಾದ ಆ ಇಬ್ಬರು ಪುರುಷಶ್ರೇಷ್ಠರು ಹಿಂದಿನಂತೆಯೇ ಯಥಾಯೋಗ್ಯವಾಗಿ ಗೌರವಪೂರ್ವಕವಾಗಿ ನಡೆದುಕೊಂಡರು.
ಅಪರಸ್ಮಿನ್ನಥೋದ್ದೇಶೇ ಕರ್ಣಂ ಶಸ್ತ್ರಭೃತಾಂ ವರಮ್ |
ದ್ವಾದಶಾದಿತ್ಯಸಹಿತಂ ದದರ್ಶ ಕುರುನಂದನಃ ॥6॥

ಅಲ್ಲೇ ಸಮೀಪದ ಇನ್ನೊಂದು ಪ್ರದೇಶದಲ್ಲಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಹನ್ನೆರಡು ಮಂದಿ ಆದಿತ್ಯರಿಂದ ಕೂಡಿಕೊಂಡ ಕರ್ಣನನ್ನು ಕುರುನಂದನನು ಕಂಡನು.
ತಥಾಪರಸ್ಮಿನ್ನುದ್ದೇಶೇ ಮರುದ್ಗಣವೃತಂ ವಿಭುಮ್ |
ಭೀಮಸೇನಮಥಾಪಶ್ಯತ್ತೇನೈವ ವಪುಷಾಽನ್ವಿತಮ್ ॥7॥
ಅಲ್ಲಿಯೇ ಇನ್ನೊಂದು ಪ್ರದೇಶದಲ್ಲಿ ಮರುದ್ಗಣದಿಂದ ಸಹಿತನಾದ, ಸಮರ್ಥನಾದ, ಈ ಹಿಂದಿನಂತೆಯೇ ಶರೀರವನ್ನು ಧರಿಸಿಕೊಂಡ ಭೀಮಸೇನನನ್ನು ಕಂಡನು.
ವಾಯೋರ್ಮೂರ್ತಿಮತಃ ಪಾರ್ಶ್ವೇ ದಿವ್ಯಮೂರ್ತಿಸಮನ್ವಿತಮ್ |
ಶ್ರಿಯಾ ಪರಮಯಾ ಯುಕ್ತಂ ಸಿದ್ಧಿಂ ಪರಮಿಕಾಂ ಗತಮ್ ॥8॥
ಆ ಭೀಮನು ಮೂರ್ತಿಮತ್ತಾದ ವಾಯುವಿನ ಪಾರ್ಶ್ವದಲ್ಲೇ ದಿವ್ಯ ಶರೀರದಿಂದ ಕೂಡಿಕೊಂಡು ಶ್ರೇಷ್ಠವಾದ ಕಾಂತಿಯಿಂದ ಯುಕ್ತನಾಗಿ ಉತ್ಕೃಷ್ಟವಾದ ಸಿದ್ಧಿಯನ್ನು ಪಡೆದಿದ್ದನು.
ಅಶ್ವಿನೋಸ್ತು ತಥಾ ಸ್ಥಾನೇ ದೀಪ್ಯಮಾನೌ ಸ್ವತೇಜಸಾ |
ನಕುಲಂ ಸಹದೇವಂ ಚ ದದರ್ಶ ಕುರುನಂದನಃ ॥9॥
ಅಂತೆಯೇ ಅಶ್ವಿನೀದೇವತೆಗಳ ಸ್ಥಾನದಲ್ಲಿ ತಮ್ಮ ತೇಜಸ್ಸಿನಿಂದ ಬೆಳಗುತ್ತಿದ್ದ ನಕುಲನನ್ನೂ, ಸಹದೇವನನ್ನೂ ಕುರುನಂದನನು ಕಂಡನು.
ತಥಾ ದದರ್ಶ ಪಾಂಚಾಲೀಂ ಕಮಲೋತ್ಪಲಮಾಲಿನೀಮ್ |
ವಪುಷಾ ಸ್ವರ್ಗಮಾಕ್ರಮ್ಯ ತಿಷ್ಠಂತೀಮರ್ಕವರ್ಚಸಮ್ ॥10॥
ಹಾಗೆಯೇ ಕಮಲದ ಹೂವುಗಳ ಮಾಲೆಯನ್ನು ಧರಿಸಿರುವ, ಸೂರ್ಯನಂತೆ ಬೆಳಗುತ್ತಿರುವ, ತನ್ನ ಶರೀರದ ತೇಜಸ್ಸಿನಿಂದ ಸ್ವರ್ಗವನ್ನು ವ್ಯಾಪಿಸಿ ನಿಂತಿರುವ ಪಾಂಚಾಲಿಯನ್ನೂ ಮರುದ್ದೇವತೆಗಳ ಸಮೀಪದಲ್ಲಿರುವ ಭೀಮಸೇನನ ಸಮೀಪದಲ್ಲಿ ಕಂಡನು.
ತತ್ರೈನಾಂ ಸಹಸಾ ರಾಜಾ ಸ್ಪ್ರಷ್ಟುಮೈಚ್ಛದ್ ಯುಧಿಷ್ಠಿರಃ |
ತತೋಽಸ್ಯ ಭಗವಾನಿಂದ್ರಃ ಕಥಯಾಮಾಸ ದೇವರಾಟ್ ॥11॥
ಶ್ರೀರೇಷಾ ದ್ರೌಪದೀರೂಪಾ ತ್ವದರ್ಥೇ ಮಾನುಷೀಕೃತಾ |
ಅಯೋನಿಜಾ ಲೋಕಕಾಂತಾ ಪುಣ್ಯಗಂಧಾ ಯುಧಿಷ್ಠಿರ ॥12॥
ರಾಜನಾದ ಯುಧಿಷ್ಠಿರನು ದ್ರೌಪದಿಯನ್ನು ಕಂಡ ಕೂಡಲೇ ಅವಳನ್ನು ಮುಟ್ಟ ಬಯಸಿದನು. ಆಗ ದೇವರಾಜನಾದ ಭಗವಾನ್ ಇಂದ್ರನು ಹೀಗೆಂದನು: `ಹೇ ಯುಧಿಷ್ಠಿರನೇ, ಇವಳು ಭಾರತೀದೇವಿಯಾಗಿರುವಳು. ನಿಮಗೋಸ್ಕರ ಅಯೋನಿಜಳಾಗಿ, ಲೋಕಮನೋಹರಳಾಗಿ, ಮಂಗಳಮಯವಾದ ಸುವಾಸನೆಯನ್ನು ಬೀರುತ್ತಾ ದ್ರೌಪದಿಯ ರೂಪದಿಂದ ಮನುಷ್ಯಳಾಗಿ ಬಂದಿರುವಳು'.
ವ್ಯಾಖ್ಯಾನ ವಿಶೇಷ ಹಿಂದೆ ದ್ರೌಪದೀ ದೇಹದಲ್ಲಿ ಶ್ಯಾಮಲೆಯೇ ಮೊದಲಾದ ಐದು ಮಂದಿ ಕನ್ಯೆಯರು ಸೇರಿಕೊಂಡಿದ್ದರಿಂದಲೇ ನಿಮಗೆಲ್ಲರಿಗೂ ಅವಳು ಸ್ಪರ್ಶಯೋಗ್ಯಳಾಗಿದ್ದಳು. ಈಗ ಕೇವಲ ಭಾರತೀದೇವಿ ಮಾತ್ರ ಅಲ್ಲಿರುವುದರಿಂದ ಭೀಮನಿಗೆ ಮಾತ್ರ ಅವಳು ಸ್ಪರ್ಶಯೋಗ್ಯಳೇ ವಿನಾ ಬೇರೆಯವರಿಗೆ ಅಲ್ಲ ಎಂಬುದನ್ನು ದೇವೇಂದ್ರ ತಿಳಿಸುತ್ತಿದ್ದಾನೆ. ಶಂರೂಪನಾದ ವಾಯುವಿನಲ್ಲಿ ರತಿ ಇರುವುದರಿಂದಲೇ ಭಾರತಿಯು ಶ್ರೀ ಎಂಬುದಾಗಿ ಕೀರ್ತಿತಳಾಗಿದ್ದಾಳೆ. ಅವಳೇ ದ್ರೌಪದಿಯೆಂದೂ, ಕಾಳಿ ಎಂದೂ ಚಂದ್ರಾ ಎಂದೂ ಶಾಸ್ತ್ರದಲ್ಲಿ ಉಕ್ತಳಾಗಿರುವಳು. ಈ ಮಾತಿನಂತೆ ಭಾರತಿಯು ಶ್ರೀ ಶಬ್ದವಾಚ್ಯಳಾಗಿರುವಳು. ಹಾಗಾಗಿಯೇ `ಭಾರತೀರೇಷಾ' ಎಂದು ಹೇಳಬೇಕಾಗಿದ್ದ ಸ್ಥಾನದಲ್ಲಿ `ಶ್ರೀರೇಷಾ' ಎಂದು ಹೇಳಿದ್ದಾರೆ - ಲಕ್ಷಾಲಂಕಾರ.
ದ್ರುಪದಸ್ಯ ಕುಲೇ ಜಾತಾ ಭವದ್ಭಿಶ್ಚೋಪಜೀವಿತಾ |
ರತ್ಯರ್ಥಂ ಭವತಾಂ ಹ್ಯೇಷಾ ನಿರ್ಮಿತಾ ಶೂಲಪಾಣಿನಾ ॥13॥
ಐದು ಮಂದಿ ಒಂದೇ ಕಡೆ ಇರುವ, ನಿಮ್ಮ ಸಂತೋಷಕ್ಕೋಸ್ಕರ ರುದ್ರದೇವರ ವರದಿಂದ ಇವಳು ನಿರ್ಮಿತಳಾಗಿದ್ದು, ದ್ರುಪದರಾಜನ ವಂಶದಲ್ಲಿ ಬಂದು, ನಿಮ್ಮೊಂದಿಗೆ ಜೀವಿಸಿರುವಳು.
ವಿಶೇಷ ಸೂಚನೆ ಈ ಬಗ್ಗೆ ವಿಶೇಷ ವಿವರಣೆ ಶ್ರೀಮಹಾಭಾರತ ತಾತ್ಪರ್ಯನಿರ್ಣಯದ ಹದಿನೆಂಟನೆಯ ಅಧ್ಯಾಯದ ಕೊನೆಯ ಭಾಗದಲ್ಲಿ ಬಂದಿದೆ.
ಏತೇ ಪಂಚ ಮಹಾಭಾಗಾ ಗಂಧರ್ವಾಃ ಪಾವಕಪ್ರಭಾಃ |
ದ್ರೌಪದ್ಯಾಸ್ತನಯಾ ರಾಜನ್ ಯುಷ್ಮಾಕಮಮಿತೌಜಸಃ ॥14॥
ಹೇ ರಾಜನೇ, ನಿಮಗೆ ದ್ರೌಪದಿಯಲ್ಲಿ ಜನಿಸಿದ, ಅಮಿತವಾದ ಪರಾಕ್ರಮವುಳ್ಳ, ಮಹಾತ್ಮರಾದ, ಅಗ್ನಿಯಂತೆ ತೇಜಸ್ಸುಳ್ಳ ಈ ಮಕ್ಕಳು ಐದುಮಂದಿ ಗಂಧರ್ವರಾಗಿರುವರು.
ಪಶ್ಯ ಗಂಧರ್ವರಾಜಾನಂ ಧೃತರಾಷ್ಟ್ರಂ ಮನೀಷಿಣಮ್ |
ಏನಂ ಚ ತ್ವಂ ವಿಜಾನೀಹಿ ಭ್ರಾತರಂ ಪೂರ್ವಜಂ ಪಿತುಃ ॥15॥
ಗಂಧರ್ವರಾಜನಾದ, ಜ್ಞಾನಿಯಾದ ಈ ಧೃತರಾಷ್ಟ್ರನನ್ನು ನೋಡು. ಇವನು ನಿನ್ನ ತಂದೆಗಿಂತ ಮೊದಲು ಜನಿಸಿದ, ಅವನ ಸಹೋದರನಾದ ಧೃತರಾಷ್ಟ್ರನೇ ಎಂದು ತಿಳಿದುಕೊ.
ಅಯಂ ತೇ ಪೂರ್ವಜೋ ಭ್ರಾತಾ ಕೌಂತೇಯಃ ಪಾವಕದ್ಯುತಿಃ |
ಸೂರ್ಯಪುತ್ರೋ ರಥಿಶ್ರೇಷ್ಠೋ ರಾಧೇಯ ಇತಿ ವಿಶ್ರುತಃ ॥16॥
ಆದಿತ್ಯಸಹಿತೋ ಭಾತಿ ಪಶ್ಯೈನಂ ಪುರುಷರ್ಷಭಮ್ ॥17॥
ಅಗ್ನಿಯಂತೆ ತೇಜಸ್ಸುಳ್ಳ ಇವನು ಕುಂತಿಯಲ್ಲಿ ನಿನಗೂ ಮೊದಲೇ ಜನಿಸಿದ ಸಹೋದರನಾಗಿರುವನು. ಸೂರ್ಯಪುತ್ರನಾದ,

ರಥಿಶ್ರೇಷ್ಠನಾದ ಇವನು ರಾಧೇಯನೆಂದು ಪ್ರಸಿದ್ಧನಾಗಿರುವನು. ಪುರುಷಶ್ರೇಷ್ಠನಾದ ಇವನು ಆದಿತ್ಯರೊಂದಿಗೆ ಕೂಡಿಕೊಂಡು ಶೋಭಿಸುತ್ತಿದ್ದಾನೆ, ನೋಡು.
ಸಾಧ್ಯಾನಾಮಥ ದೇವಾನಾಂ ವಿಶ್ವೇಷಾಂ ಮರುತಾಮಪಿ |
ಗಣೇಷು ಪಶ್ಯ ರಾಜೇಂದ್ರ ವೃಷ್ಣ್ಯಂಧಕಮಹಾರಥಾನ್ ||18||
ಸಾತ್ಯಕಿಪ್ರಮುಖಾನ್ ವೀರಾನ್ ಭೋಜಾಂಶ್ಚೈವ ಮಹಾಬಲಾನ್ ||19||
ಹೇ ರಾಜಶ್ರೇಷ್ಠನೇ, ವೃಷ್ಣಿ ಮತ್ತು ಅಂಧಕವಂಶದ ಮಹಾರಥರೂ ಸಾತ್ಯಕಿಯೇ ಮೊದಲಾದ ವೀರರೂ, ಮಹಾಬಲಿಷ್ಠರಾದ ಭೋಜವಂಶದವರೂ ಇವರೆಲ್ಲರೂ ಸಾಧ್ಯರ, ವಿಶ್ವೇದೇವತೆಗಳ, ಮರುದ್ದೇವತೆಗಳ ಗಣದಲ್ಲಿ ಇರುವರು. ಅವರನ್ನು ನೋಡು.
ಸೋಮೇನ ಸಹಿತಂ ಪಶ್ಯ ಸೌಭದ್ರಮಪರಾಜಿತಮ್ |
ಅಭಿಮನ್ಯುಂ ಮಹೇಷ್ವಾಸಂ ನಿಶಾಕರಸಮದ್ಯುತಿಮ್ ||20||
ಮಹಾಧನುರ್ಧಾರಿಯಾದ, ಸೋಲೇ ಇಲ್ಲದ, ಚಂದ್ರನಂತೆ ಕಂಗೊಳಿಸುವ, ಸುಭದ್ರೆಯ ಮಗನಾದ ಅಭಿಮನ್ಯುವು ಸೋಮನೊಂದಿಗೆ ಕೂಡಿರುವನು. ಅವನನ್ನು ನೋಡು.
ಏಷ ಪಾಂಡುರ್ಮಹೇಷ್ವಾಸಃ ಕುಂತ್ಯಾ ಮಾದ್ರ್ಯಾ ಚ ಸಂಗತಃ |
ವಿಮಾನೇನ ಸದಾಽಭ್ಯೇತಿ ಪಿತಾ ತವ ಮಮಾಂತಿಕಮ್ ||21||
ನಿನ್ನ ತಂದೆಯಾದ, ಮಹಾಧನುರ್ಧಾರಿಯಾದ ಈ ಪಾಂಡುರಾಜನು ಕುಂತಿಯೊಂದಿಗೆ ಹಾಗೂ ಮಾದ್ರಿಯೊಂದಿಗೆ ಕೂಡಿಕೊಂಡು, ವಿಮಾನವನ್ನೇರಿ ಸದಾ ನನ್ನ ಬಳಿಗೆ ಬರುತ್ತಾನೆ. ಅವನನ್ನು ನೋಡು.
ವಸುಭಿಃ ಸಹಿತಂ ಪಶ್ಯ ಭೀಷ್ಮಂ ಶಾಂತನವಂ ನೃಪಮ್ |
ದ್ರೋಣಂ ಬೃಹಸ್ಪತೇಃ ಪಾರ್ಶ್ವೇ ಗುರುಮೇನಂ ನಿಶಾಮಯ ||22||
ಶಂತನುವಿನ ಮಗನಾದ, ರಾಜನಾದ ಭೀಷ್ಮನನ್ನು ವಸುಗಳೊಂದಿಗೆ ನೋಡು. ನಿನ್ನ ಗುರುವಾದ ಈ ದ್ರೋಣನು ಬೃಹಸ್ಪತಿಯ ಸಮೀಪದಲ್ಲೇ ಇರುವುದನ್ನು ಗಮನಿಸು.
ಏತೇ ಚಾನ್ಯೇ ಮಹೀಪಾಲಾ ಯೋಧಾಸ್ತವ ಚ ಪಾಂಡವ |
ಗಂಧರ್ವಸಹಿತಾ ಯಾಂತಿ ಯಕ್ಷಪುಣ್ಯಜನೈಸ್ತಥಾ ||23||
ಹೇ ಪಾಂಡವನೇ, ಇವರಲ್ಲದೆ ಬೇರೆ ರಾಜರೂ ನಿನಗೆ ಯುದ್ಧದಲ್ಲಿ ಸಹಾಯಕರಾಗಿ ಬಂದಿರುವರು. ಅವರು ಗಂಧರ್ವರೊಂದಿಗೂ, ಯಕ್ಷರೊಂದಿಗೂ, ಯಾತುಧಾನರೊಂದಿಗೂ ಕೂಡಿ ನಡೆಯುತ್ತಿದ್ದಾರೆ, ಅದನ್ನೂ ನೋಡು.
ಗುಹ್ಯಕಾನಾಂ ಗತಿಂ ಚಾಪಿ ಕೇಚಿತ್ ಪ್ರಾಪ್ತಾ ನರಾಧಿಪಾಃ |
ತ್ಯಕ್ತ್ವಾ ದೇಹಂ ಜಿತಃ ಸ್ವರ್ಗಃ ಪುಣ್ಯವಾಗ್ಬುದ್ಧಿಕರ್ಮಭಿಃ ||24||
ಮತ್ತೆ ಕೆಲವು ರಾಜರು ಗುಹ್ಯಕರ ಗತಿಯನ್ನು ಪಡೆದಿದ್ದಾರೆ. ಮಂಗಳಮಯವಾದ ಮಾತು, ಬುದ್ಧಿ ಹಾಗೂ ಕರ್ಮಗಳುಳ್ಳ ಅವರು ಶರೀರವನ್ನು ತ್ಯಜಿಸಿ ಸ್ವರ್ಗವನ್ನೇ ಗೆದ್ದಿರುವರು.
ಜನಮೇಜಯಃ
ಭೀಷ್ಮದ್ರೋಣೌ ಮಹಾತ್ಮಾನೌ ಧೃತರಾಷ್ಟ್ರಶ್ಚ ಪಾರ್ಥಿವಃ |
ವಿರಾಟದ್ರುಪದೌ ಚೋಭೌ ಶಂಖಶ್ಚೈವೋತ್ತರಸ್ತಥಾ ||25||
ಧೃಷ್ಟಕೇತುರ್ಜಯತ್ಸೇನೋ ರಾಜಾ ಚೈವ ಸ ಸತ್ಯಜಿತ್ |
ದುರ್ಯೋಧನಸುತಾಶ್ಚೈವ ಶಕುನಿಶ್ಚೈವ ಸೌಬಲಃ ||26||
ಕರ್ಣಪುತ್ರಾಶ್ಚ ವಿಕ್ರಾಂತಾ ರಾಜಾ ಚೈವ ಜಯದ್ರಥಃ |
ಘಟೋತ್ಕಚಾದಯಶ್ಚೈವ ಯೇ ಚಾನ್ಯೇ ನಾನುಕೀರ್ತಿತಾಃ ||27||
ಯೇ ಚಾನ್ಯೇ ಕೀರ್ತಿತಾ ವೀರಾ ರಾಜಾನೋ ದೀಪ್ತಮೂರ್ತಯಃ |
ಸ್ವರ್ಗೇ ಕಾಲಂ ಕಿಯಂತಂ ತೇ ತಸ್ಥುಸ್ತದಪಿ ಶಂಸ ಮೇ ||28||
ಜನಮೇಜಯ ಮಹಾತ್ಮರಾದ ಭೀಷ್ಮ ಹಾಗೂ ದ್ರೋಣರು, ರಾಜನಾದ ಧೃತರಾಷ್ಟ್ರ, ವಿರಾಟ ಮತ್ತು ದ್ರುಪದರಾಜ, ಹಾಗೆಯೇ ಆ ಇಬ್ಬರು ಶಂಖ ಮತ್ತು ಉತ್ತಮರು, ಧೃಷ್ಟಕೇತು, ಜಯತ್ಸೇನ, ಅಂತೆಯೇ ಸತ್ಯಜಿತ್ ರಾಜ, ದುರ್ಯೋಧನನ ಮಕ್ಕಳು, ಸುಬಲದೇಶದ ಶಕುನಿ, ಮಹಾಪರಾಕ್ರಮಿಗಳಾದ ಕರ್ಣಪುತ್ರರು, ರಾಜನಾದ ಜಯದ್ರಥ, ಅಲ್ಲದೆ ಘಟೋತ್ಕಚನೇ ಮೊದಲಾದ ಮತ್ತು ಇಲ್ಲಿ ಹೆಸರಿಸದ ಯಾರೆಲ್ಲ ಇರುವರೋ, ಅಲ್ಲದೆ ಇಲ್ಲಿ ಹೆಸರಿಸಿದ ಯಾರೆಲ್ಲ ಇರುವರೋ ಅಂತಹ ವೀರರಾದ, ತೇಜಸ್ವಿಗಳಾದ ರಾಜರು ಸ್ವರ್ಗದಲ್ಲಿ ಎಷ್ಟು ಕಾಲದ ತನಕ ಇದ್ದರು? ಅದನ್ನೂ ನನಗೆ ಹೇಳುವವರಾಗಿ.
ಆಹೋಸ್ವಿಚ್ಛಾಶ್ವತಂ ಸ್ಥಾನಂ ತೇಷಾಂ ತತ್ರ ದ್ವಿಜೋತ್ತಮ |
ಅಂತೇ ವಾ ಕರ್ಮಣಾಂ ಕಾಂ ತೇ ಗತಿಂ ಪ್ರಾಪ್ತಾ ನರರ್ಷಭಾಃ ||29||
ಹೇ ದ್ವಿಜೋತ್ತಮರೇ, ಅವರಿಗೆ ಅಲ್ಲಿ ಶಾಶ್ವತವಾದ ಸ್ಥಾನವು ಸಿಕ್ಕಿದೆಯೇ ಅಥವಾ ನರಶ್ರೇಷ್ಠರಾದ ಅವರು ತಮ್ಮ ಕರ್ಮಫಲಗಳ ಕೊನೆಯಲ್ಲಿ ಬೇರೆ ಯಾವ ಗತಿಯನ್ನು ಪಡೆದರು?
ಏತದಿಚ್ಛಾಮ್ಯಹಂ ಶ್ರೋತುಂ ಪ್ರೋಚ್ಯಮಾನಂ ದ್ವಿಜೋತ್ತಮ |
ತಪಸಾ ಹಿ ಪ್ರದೀಪ್ತೇನ ಸರ್ವಂ ತ್ವಮನುಪಶ್ಯಸಿ ||30||
ಹೇ ದ್ವಿಜೋತ್ತಮರೇ, ನೀವು ಹೇಳುವಿರಾದರೆ ನಾನು ಆ ಎಲ್ಲವನ್ನೂ ಕೇಳಲು ಬಯಸುತ್ತಿದ್ದೇನೆ. ನೀವು ಜಾಜ್ವಲ್ಯಮಾನವಾದ ತಪಸ್ಸಿನಿಂದ ಎಲ್ಲವನ್ನೂ ಸರಿಯಾಗಿ ನೋಡಬಲ್ಲವರಾಗಿರುವಿರಿ (ತಿಳಿದಿರುವಿರಿ).
ಸೂತಃ

ಇತ್ಯುಕ್ತಃ ಸ ತು ವಿಪ್ರರ್ಷಿರನುಜ್ಞಾತೋ ಮಹಾತ್ಮನಾ |
ವ್ಯಾಸೇನ ತಸ್ಯ ನೃಪತೇರಾಖ್ಯಾತುಮುಪಚಕ್ರಮೇ ॥31॥
ಸೂತರು ಜನಮೇಜಯನು ಹೀಗೆ ಕೇಳಿದಾಗ, ಆ ವಿಪ್ರಶ್ರೇಷ್ಠರು ಮಹಾತ್ಮರಾದ ವೇದವ್ಯಾಸರಿಂದ ಅನುಜ್ಞೆ ಪಡೆದು, ಆ ರಾಜನಿಗೆ ಉತ್ತರಿಸಲು ಆರಂಭಿಸಿದರು.
ವೈಶಂಪಾಯನಃ
ಗಂತವ್ಯಂ ಕರ್ಮಣಾಮಂತೇ ಸರ್ವೇಷಾಂ ಮನುಜಾಧಿಪ ॥32॥
ಪ್ರಕೃತಿಂ ಕಿಂತು ಸಮ್ಯಕ್ತ್ವಂ ಪೃಚ್ಛೈಷಾ ಯತ್ಪ್ರಯೋಜಿಕಾ ॥33॥
ವೈಶಂಪಾಯನ ಹೇ ಮನುಜಾಧಿಪನೇ, ಕರ್ಮಗಳ ಕೊನೆಯಲ್ಲಿ ಎಲ್ಲರೂ ತಮ್ಮ ತಮ್ಮ ಮೂಲಸ್ವರೂಪವನ್ನು ಸೇರುವುದೇ ಯೋಗ್ಯ. ಆದರೆ ಈ ನಿನ್ನ ಪ್ರಶ್ನೆಯು ಆ ಮೂಲಸ್ವರೂಪದ ಒಳ್ಳೆಯತನವನ್ನು ಉದ್ದೇಶಿಸಿದೆ (ಮೂಲಸ್ವರೂಪವು ಒಳ್ಳೆಯದೋ ಕೆಟ್ಟದೋ ಎಂದು ನೀನು ಕೇಳಿರುವೆ)
ಶೃಣು ಗುಹ್ಯಮಿದಂ ರಾಜನ್ ದೇವಾನಾಂ ಭರತರ್ಷಭ |
ಯದುವಾಚ ಮಹಾತೇಜಾ ದಿವ್ಯಚಕ್ಷುಃ ಪ್ರತಾಪವಾನ್ ॥34॥
ಹೇ ಭರತಶ್ರೇಷ್ಠನಾದ ರಾಜನೇ, ಮಹಾತೇಜಸ್ವಿಯಾದ, ದಿವ್ಯವಾದ ಚಕ್ಷುಸ್ಸುಳ್ಳ, ಪ್ರತಾಪಶಾಲಿಯಾದ ವೇದವ್ಯಾಸರು ಏನು ಹೇಳಿರುವರೋ ಅಂತಹ ಈ ದೇವಗುಹ್ಯ(ರಹಸ್ಯ)ವನ್ನು ಕೇಳು.
ಮುನಿಃ ಪುರಾಣಃ ಕೌರವ್ಯ ಪಾರಾಶರ್ಯೋ ಮಹಾವ್ರತಃ |
ಅಗಾಧಬುದ್ಧಿಃ ಸರ್ವಜ್ಞೋ ಗತಿಜ್ಞಃ ಸರ್ವಕರ್ಮಣಾಮ್ ॥35॥
ಹೇ ಕುರುವಂಶಜನೇ, ಆ ಮುನಿಗಳು ಪರಾಶರರ ಮಗನಾಗಿ ಹುಟ್ಟಿದ ಪುರಾಣ ಪುರುಷರಾಗಿರುವರು. ಅವರು ಮಹಾವ್ರತನಿಷ್ಠರೂ, ಅಗಾಧವಾದ ಬುದ್ಧಿಯುಳ್ಳವರೂ, ಸರ್ವಜ್ಞರೂ, ಸರ್ವಕರ್ಮಗಳ ಗತಿಯನ್ನು ಬಲ್ಲವರೂ ಆಗಿದ್ದಾರೆ.
ತೇನೋಕ್ತಂ ಕರ್ಮಣಾಮಂತೇ ಪ್ರವಿಶಂತಿ ಸ್ವಕಾಂ ತನುಮ್ ॥36॥
ಅವರು ಹೇಳಿರುವುದು ಏನೆಂದರೆ, ಎಲ್ಲರೂ ಕರ್ಮಗಳು ಕೊನೆಯಾದಾಗ ತಮ್ಮ ತಮ್ಮ ಮೂಲದೇಹವನ್ನು ಪ್ರವೇಶಿಸುವರು.
ವಸೂನೇವ ಮಹಾತೇಜಾ ಭೀಷ್ಮಃ ಪ್ರಾಪ ಮಹಾದ್ಯುತಿಃ |
ಅಷ್ಟಾವೇವ ಹಿ ದೃಶ್ಯಂತೇ ವಸವೋ ಭರತರ್ಷಭ ॥37॥
ಹೇ ಭರತರ್ಷಭನೇ, ಮಹಾಕಾಂತಿಯುಳ್ಳ, ಮಹಾತೇಜಸ್ವಿಯಾದ ಭೀಷ್ಮರು ವಸುಗಳಲ್ಲೇ ಪ್ರವೇಶಿಸಿರುವರು. ಏಕೆಂದರೆ ವಸುಗಳ ಗುಂಪಿನಲ್ಲಿ ಈಗ ಎಂಟು ಮಂದಿ ಮಾತ್ರ ಕಾಣುತ್ತಿದ್ದಾರೆ.
ಬೃಹಸ್ಪತಿಂ ವಿವೇಶಾಥ ದ್ರೋಣೋ ಹ್ಯಂಗಿರಸಾಂ ವರಮ್ |
ಕೃತವರ್ಮಾ ತು ಹಾರ್ದಿಕ್ಯಃ ಪ್ರವಿವೇಶ ಮರುದ್ಗಣಾನ್ ॥38॥
ದ್ರೋಣಾಚಾರ್ಯರು ಅಂಗಿರಸ ವಂಶರಲ್ಲಿ ಶ್ರೇಷ್ಠರಾದ ಬೃಹಸ್ಪತ್ಯಾಚಾರ್ಯರನ್ನು ಪ್ರವೇಶಿಸಿರುವರು. ಹೃದಿಕನ ಮಗನಾದ ಕೃತವರ್ಮನು ಮರುದ್ಗಣವನ್ನು ಪ್ರವೇಶಿಸಿದ್ದಾನೆ.
ಸನತ್ಕುಮಾರಂ ಪ್ರದ್ಯುಮ್ನಃ ಪ್ರವಿವೇಶ ಯಥಾಗತಮ್ |
ಧೃತರಾಷ್ಟ್ರೋ ಧನೇಶಸ್ಯ ಲೋಕಾನ್ ಪ್ರಾಪ ದುರಾಸದಾನ್ ॥39॥
ಪ್ರದ್ಯುಮ್ನನು ತಾನು ಎಲ್ಲಿಂದ ಹೊರಟಿರುವನೋ ಅದೇ ಸನತ್ಕುಮಾರರನ್ನು ಪ್ರವೇಶಿಸಿದ್ದಾನೆ. ಧೃತರಾಷ್ಟ್ರನು ಬೇರೆಯವರಿಗೆ ಹೊಂದಲು ಅಶಕ್ಯವಾದ ಧನಾದಿಪತಿಯಾದ ಕುಬೇರನ ಲೋಕಕ್ಕೆ ತಲುಪಿರುವನು.
ಧೃತರಾಷ್ಟ್ರೇಣ ಸಹಿತಾ ಗಾಂಧಾರೀ ಚ ಯಶಸ್ವಿನೀ |
ಪತ್ನೀಭ್ಯಾಂ ಸಹಿತಃ ಪಾಂಡುರ್ಮಹೇಂದ್ರಸದನಂ ಯಯೌ ॥40॥
ಧೃತರಾಷ್ಟ್ರನೊಂದಿಗೆ ಕೂಡಿದ ಯಶಸ್ವಿನಿಯಾದ ಗಾಂಧಾರೀದೇವಿಯೂ, ಇಬ್ಬರು ಪತ್ನಿಯರಿಂದ ಸಹಿತನಾದ ಪಾಂಡುರಾಜನೂ ಮಹೇಂದ್ರನ ಅರಮನೆಗೆ ತೆರಳಿರುವನು.
ವಿರಾಟದ್ರುಪದೌ ಚೋಭೌ ಧೃಷ್ಟಕೇತುಶ್ಚ ಪಾರ್ಥಿವಃ |
ನಿಶಠಾಕ್ರೂರಶಂಖಾಶ್ಚ ಭಾನುಃ ಕಣ್ವೋ ವಿಡೂರಥಃ ॥41॥
ಭೂರಿಶ್ರವಾಃ ಶಲಶ್ಚೈವ ಭೂರಿಶ್ಚ ಪೃಥಿವೀಪತಿಃ |
ಕಂಸಶ್ಚೈವೋಗ್ರಸೇನಶ್ಚ ವಸುದೇವಸ್ತಥೈವ ಚ ॥42॥
ಉತ್ತರಶ್ಚ ಸಹ ಭ್ರಾತ್ರಾ ಶಂಖೇನ ನರಪುಂಗವಃ |
ವಿಶ್ವೇಷಾಂ ದೇವತಾನಾಂ ತೇ ವಿವಿಶುರ್ನರಸತ್ತಮಾಃ ॥43॥
ವಿರಾಟ ಹಾಗೂ ದ್ರುಪದರೆಂಬ ಆ ಇಬ್ಬರು ರಾಜರು, ಧೃಷ್ಟಕೇತು ಎಂಬ ರಾಜನು, ನಿಶಠ, ಅಕ್ರೂರ, ಶಂಖ ಇವರು, ಭಾನುವೂ, ಕಣ್ವನೂ, ವಿಡೂರಥನೂ, ಭೂರಿಶ್ರವ, ಶಲ, ಹಾಗೆಯೇ ರಾಜನಾದ ಭೂರಿ, ಕಂಸ ಮತ್ತು ಉಗ್ರಸೇನ, ಹಾಗೆಯೇ ವಸುದೇವ, ನರಶ್ರೇಷ್ಠನಾದ ಶಂಖನೆಂಬ ಸಹೋದರನಿಂದ ಸಮೇತನಾದ ಉತ್ತರ - ಆ ಎಲ್ಲ ನರಶ್ರೇಷ್ಠರೂ ವಿಶ್ವೇದೇವತೆಗಳ ಸ್ಥಾನವನ್ನು ಪ್ರವೇಶಿಸಿರುವರು.
ವ್ಯಾಖ್ಯಾನ ವಿಶೇಷ ಶಂಖ, ಕಣ್ವ, ವಿಡೂರಥ - ಈ ಮೂರು ಮಂದಿ ಯಾದವ ಕುಮಾರರು - ಲಕ್ಷಾಲಂಕಾರ.
ಯಸ್ತು ವರ್ಚಾ ಇತಿ ಖ್ಯಾತಃ ಸೋಮಪುತ್ರಃ ಬಭೂವ ಹ |
ಸೋಽಭಿಮನ್ಯುರ್ನೃಸಿಂಹಸ್ಯ ಫಲ್ಗುನಸ್ಯ ಸುತೋಽಭವತ್ ॥44॥
ಯಾವಾತನು ವರ್ಚಾ ಎಂಬ ಹೆಸರಿನಿಂದ ಸೋಮನ ಮಗನಾಗಿ ಹುಟ್ಟಿದ್ದನೋ ಅವನೇ ನರಶ್ರೇಷ್ಠನಾದ ಫಲ್ಗುನನೆಂಬ ಹೆಸರಿನ

ಅರ್ಜುನನಿಗೆ ಮಗನಾಗಿ ಅಭಿಮನ್ಯುವಾಗಿ ಹುಟ್ಟಿದ್ದನು.
ವ್ಯಾಖ್ಯಾನ ವಿಶೇಷ ಸೋಮಪುತ್ರ ಎಂಬ ಶಬ್ದಕ್ಕೆ ಸೋಮನ ಅಂಶ ಎಂದರ್ಥ. ಅಂಶಿಯಾದ ಚಂದ್ರನಿಂದ ಅಂಶರೂಪನಾದ ವರ್ಚಾ ಅಥವಾ ವರ್ಚಸ್ಸು ಎಂಬ ವ್ಯಕ್ತಿ ಹುಟ್ಟಿದ್ದಾನೆ. ಅವನೇ ಅಭಿಮನ್ಯುವಾಗಿ ನಂತರ ಹುಟ್ಟಿದನು - ಲಕ್ಷಾಲಂಕಾರ.
ಸ ಯುದ್ಧ್ವಾ ಕ್ಷತ್ರಧರ್ಮೇಣ ಯಥಾ ನಾನ್ಯಃ ಪುಮಾನ್ ಕ್ವಚಿತ್ |
ವಿವೇಶ ಸೋಮಂ ಧರ್ಮಾತ್ಮಾ ಕರ್ಮಣೋಽಂತೇ ಮಹಾರಥಃ ॥45॥
ಮಹಾರಥನಾದ ಅವನು ಬೇರೆ ಯಾವ ಪುರುಷನೂ ಎಲ್ಲೂ ನಡೆಸದ ರೀತಿಯಲ್ಲಿ ಕ್ಷತ್ರಧರ್ಮದಿಂದ ಯುದ್ಧ ಮಾಡಿ ಕರ್ಮಗಳ ಕೊನೆಯಲ್ಲಿ ಧರ್ಮಾತ್ಮನಾದ ಅವನು ಸೋಮನನ್ನು ಪ್ರವೇಶಿಸಿದನು.
ಆವಿವೇಶ ರವಿಂ ಕರ್ಣೋ ನಿಹತಃ ಪುರುಷರ್ಷಭ |
ದ್ವಾಪರಂ ಶಕುನಿಃ ಪ್ರಾಪ ಧೃಷ್ಟದ್ಯುಮ್ನಸ್ತು ಪಾವಕಮ್ ॥46॥
ಹೇ ಪುರುಷಶ್ರೇಷ್ಠನೇ, ಯುದ್ಧದಲ್ಲಿ ಹತನಾದ ಕರ್ಣನು ಸೂರ್ಯನನ್ನು ಪ್ರವೇಶಿಸಿರುವನು. ಶಕುನಿಯು ದ್ವಾಪರನನ್ನೂ, ಧೃಷ್ಟದ್ಯುಮ್ನನು ಅಗ್ನಿಯನ್ನೂ ಸೇರಿದರು.
ಧೃತರಾಷ್ಟ್ರಾತ್ಮಜಾಃ ಸರ್ವೇ ಯಾತುಧಾನಾನ್ ಪ್ರಪೇದಿರೇ |
ಧರ್ಮಮೇವಾವಿಶತ್ ಕ್ಷತ್ತಾ ರಾಜಾ ಚೈವ ಯುಧಿಷ್ಠಿರಃ ॥47॥
ಧೃತರಾಷ್ಟ್ರನ ಎಲ್ಲ ಮಕ್ಕಳೂ ಅಸುರರನ್ನು ಪ್ರವೇಶಿಸಿದರು. ವಿದುರನು ಹಾಗೂ ರಾಜನಾದ ಯುಧಿಷ್ಠಿರನು ಯಮಧರ್ಮನನ್ನು ಪ್ರವೇಶಿಸಿದರು.
ಅನಂತೋ ಭಗವಾನ್ ದೇವಃ ಪ್ರವಿವೇಶ ರಸಾತಲಮ್ |
ಪಿತಾಮಹನಿಯೋಗಾದ್ ವೈ ಯೋ ಯೋಗಾದ್ ಗಾಮಧಾರಯತ್ ॥
ಬ್ರಹ್ಮದೇವರ ಅಪ್ಪಣೆಯಂತೆ ಯಾವನು ತನ್ನ ಯೋಗಶಕ್ತಿಯಿಂದ ಭೂಮಿಯನ್ನು ಧರಿಸಿರುವನೋ ಅಂತಹ ಬಲದೇವನಾಗಿ ಹುಟ್ಟಿದ ಭಗವಾನ್ ಅನಂತನು ರಸಾತಳವನ್ನು ಪ್ರವೇಶಿಸಿದನು.
ಯಃ ಸ ನಾರಾಯಣೋ ನಾಮ ದೇವದೇವಃ ಸನಾತನಃ |
ತಸ್ಯಾಂಶೋ ವಾಸುದೇವಸ್ತು ಕರ್ಮಣೋಂತೇ ವಿವೇಶ ಹ ॥49॥
ದೇವತೆಗಳಿಗೂ ದೇವನಾದ, ಸನಾತನನಾದ ಯಾವಾತನು ನಾರಾಯಣನೆಂದು ಪ್ರಸಿದ್ಧನೋ ಅವನ ಅಂಶನೇ ಆದ ವಾಸುದೇವನು ಕರ್ಮಗಳನ್ನು ಮುಗಿಸಿ, ತಿರುಗಿ ಮೂಲರೂಪಕ್ಕೆ ಪ್ರವೇಶಿಸಿದನು.
ಷೋಡಶಸ್ತ್ರೀಸಹಸ್ರಾಣಿ ವಾಸುದೇವಪರಿಗ್ರಹಾಃ |
ಅಮಜ್ಜಂಸ್ತಾಃ ಸರಸ್ವತ್ಯಾಂ ಕಾಲೇನ ಜನಮೇಜಯ ॥50॥
ತತ್ರ ತ್ಯಕ್ತತ್ವ ಶರೀರಾಣಿ ದಿವಮಾರುರುಹುಃ ಪುನಃ |
ತಾಶ್ಚೈವಾಪ್ಸರಸೋ ಭೂತ್ವಾ ವಾಸುದೇವಮುಪಾವಿಶನ್ ॥51॥
ಹೇ ಜನಮೇಜಯನೇ, ವಾಸುದೇವನನ್ನು ವರಿಸಿದ ಹದಿನಾರು ಸಾವಿರಮಂದಿ ಸ್ತ್ರೀಯರು ಸರಸ್ವತೀ ನದಿಯಲ್ಲಿ ಮುಳುಗಿ, ಅಲ್ಲಿ ತಮ್ಮ ಶರೀರವನ್ನು ತ್ಯಜಿಸಿ, ಯೋಗ್ಯ ಕಾಲದಲ್ಲಿ ದೇದೀಪ್ಯಮಾನವಾದ ಅರ್ಚಿರ್ಲೋಕವನ್ನು ಏರಿದರು. ಅದೇ ಕೃಷ್ಣನನ್ನು ಗೋಕುಲದಲ್ಲಿ ವರಿಸಿದ ಆ ಗೋಪಿಕೆಯರು ಕೂಡ ಅಪ್ಸರ ಸ್ತ್ರೀಯರಾಗಿ ವಾಸುದೇವನನ್ನು ಸೇರಿಕೊಂಡರು.
ಹತಾಸ್ತಸ್ಮಿನ್ ಮಹಾಯುದ್ಧೇ ಯೇ ವೀರಾಸ್ತು ಮಹಾರಥಾಃ |
ಘಟೋತ್ಕಚಾದಯಶ್ಚೈವ ದೇವಾನ್ಯಕ್ಷಾಂಶ್ಚ ಭೇಜಿರೇ ॥52॥
ಆ ಮಹಾಯುದ್ಧದಲ್ಲಿ ಹತರಾದ ಮಹಾರಥರಾದ ಯಾರೆಲ್ಲ ವೀರರಿರುವರೋ ಘಟೋತ್ಕಚಾದಿಗಳೊಂದಿಗೆ ಅವರೆಲ್ಲರೂ ದೇವತೆಗಳನ್ನೂ, ಯಕ್ಷರನ್ನೂ ಸೇರಿಕೊಂಡರು.
ಧೃತರಾಷ್ಟ್ರಾತ್ಮಜಾಶ್ಚೈವ ಯಾತುಧಾನಾ ಮದೋತ್ಕಟಾಃ |
ದುರ್ಯೋಧನಸಹಾಯಾಶ್ಚ ಪಾರ್ಥಿವಾ ಯೇಽನುಕೀರ್ತಿತಾಃ |
ದಾನವಾನ್ ಗುಹ್ಯಕಾಂಶ್ಚೈವ ಗಂಧರ್ವಾಂಶ್ಚ ತಥಾಽವಿಶನ್ |
ಪ್ರಾಪ್ತಾಸ್ತೇ ಕ್ರಮಶೋ ರಾಜನ್ ಸರ್ವಲೋಕಾನನುತ್ತಮಾನ್ ॥53॥
ಧೃತರಾಷ್ಟ್ರನಿಗೆ ಮಕ್ಕಳಾಗಿ ಹುಟ್ಟಿದ, ಮದೋನ್ಮತ್ತರಾದ ರಾಕ್ಷಸರು ಮತ್ತು ಈ ಹಿಂದೆ ಹೇಳಿದ ದುರ್ಯೋಧನನಿಗೆ ಸಹಾಯಕರಾದ ರಾಜರು ಕ್ರಮವಾಗಿ ದಾನವರನ್ನೂ, ಗುಹ್ಯಕರೆಂಬ ಶಂಖಚೂಡಾದಿ ದುರ್ಜೀವರನ್ನೂ, ಗಂಧರ್ವರೆಂಬ ದ್ರವಿಡಾದಿ ದುರ್ಜೀವರನ್ನೂ ಪ್ರವೇಶಿಸಿದರು. ಹೀಗೆ ಅವರೆಲ್ಲರೂ ಅವರವರ ಯೋಗ್ಯತೆಗೆ ಅನುಸಾರವಾಗಿ ಅಧಮಲೋಕಗಳಿಗೆ ತೆರಳಿದರು.
ಭವನಂ ಚ ಮಹೇಂದ್ರಸ್ಯ ಕುಬೇರಸ್ಯ ಚ ಧೀಮತಃ |
ವರುಣಸ್ಯ ತಥಾ ಲೋಕಾನ್ ವಿವಿಶುಃ ಪುರುಷರ್ಷಭಾಃ ॥54॥
ಅಲ್ಲದೆ ಆ ದುರ್ಯೋಧನನಿಗೆ ಸಹಾಯ ಮಾಡಿದ ರಾಜರಲ್ಲಿ ಉತ್ತಮ ಜೀವರು ಮಹೇಂದ್ರನ ಭವನವನ್ನು, ಧೀಮಂತನಾದ ಕುಬೇರನ ಲೋಕಗಳನ್ನು ಹಾಗೂ ವರುಣನಿಗೆ ಸಂಬಂಧಿಸಿದ ಲೋಕಗಳನ್ನು ಸೇರಿಕೊಂಡರು.
ಏತತ್ತೇ ಸರ್ವಮಾಖ್ಯಾತಂ ವಿಸ್ತರೇಣ ಮಹಾದ್ಯುತೇ |
ಕುರೂಣಾಂ ಚರಿತಂ ಕೃತ್ಸ್ನಂ ಪಾಂಡವಾನಾಂ ಚ ಭಾರತ ॥55॥
ಹೇ ಮಹಾಕಾಂತಿಶಾಲಿಯೇ, ಭಾರತನೇ, ಹೀಗೆ ಪೂರ್ಣವಾಗಿ ಕುರುಗಳ ಮತ್ತು ಪಾಂಡವರ ಚರಿತ್ರೆ ಎಲ್ಲವನ್ನೂ ವಿಸ್ತಾರವಾಗಿ ತಿಳಿಸಿರುವೆನು.
ಸೂತಃ

ಏತಚ್ಛ್ರುತ್ವಾ ದ್ವಿಜಶ್ರೇಷ್ಠಾತ್ ಸ ರಾಜಾ ಜನಮೇಜಯಃ |
ವಿಸ್ಮಿತೋಽಭವದತ್ಯರ್ಥಂ ಯಜ್ಞಕರ್ಮಾಂತರೇಷ್ವಥ ॥56॥
ಸೂತರು ಸರ್ಪಯಜ್ಞದ ಕರ್ಮಗಳ ನಡುವೆ ದ್ವಿಜಶ್ರೇಷ್ಠರಾದ ವೈಶಂಪಾಯನರಿಂದ ಈ ಎಲ್ಲವನ್ನೂ ಕೇಳಿದ, ರಾಜನಾದ ಆ ಜನಮೇಜಯನು ಬಹಳವಾಗಿ ವಿಸ್ಮಯಗೊಂಡನು.
ತತಃ ಸಮಾಪಯಾಮಾಸುಃ ಕರ್ಮ ತತ್ತಸ್ಯ ಯಾಜಕಾಃ |
ಆಸ್ತೀಕಶ್ಚಾಭವತ್ಪ್ರೀತಃ ಪರಿಮೋಕ್ಷ್ಯ ಭುಜಂಗಮಾನ್ ॥57॥
ಅನಂತರ ಯಾಜ್ಞಕರು ಅವರ ಆ ಕರ್ಮವನ್ನು ಪೂರ್ಣಗೊಳಿಸಿದರು. ಆಸ್ತೀಕನೂ ಕೂಡ ಸರ್ಪಗಳನ್ನು ಸಂಕಟದಿಂದ ಬಿಡುಗಡೆಗೊಳಿಸಿ ಪ್ರೀತನಾದನು.
ತತೋ ದ್ವಿಜಾತೀನ್ ಸರ್ವಾನ್ ತಾನ್ ದಕ್ಷಿಣಾಭಿರತೋಷಯತ್ |
ಪೂಜಿತಾಶ್ಚಾಪಿ ತೇ ರಾಜ್ಞಾ ತತೋ ಜಗ್ಮುರ್ಯಥಾಗತಮ್ ॥58॥
ಅನಂತರ ಅವನು ಯಜ್ಞದಲ್ಲಿ ಭಾಗವಹಿಸಿದ ಎಲ್ಲ ಬ್ರಾಹ್ಮಣರನ್ನೂ ದಕ್ಷಿಣೆಗಳಿಂದ ಸಂತೋಷಪಡಿಸಿದನು. ರಾಜನಿಂದ ಪೂಜಿತರಾದ ಅವರೆಲ್ಲರೂ ಅನಂತರ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.
ವಿಸರ್ಜಯಿತ್ವಾ ವಿಪ್ರಾನ್ ತಾನ್ ರಾಜಾಽಪಿ ಜನಮೇಜಯಃ |
ಹೃಷ್ಟಸ್ತಕ್ಷಶಿಲಾಯಾಃ ಸ ಪುನರಾಯಾದ್ ಗಜಾಹ್ವಯಮ್ ॥59॥
ರಾಜನಾದ ಜನಮೇಜಯನೂ ಕೂಡ ಆ ಎಲ್ಲ ಬ್ರಾಹ್ಮಣರನ್ನೂ ಬೀಳ್ಕೊಟ್ಟು ಸಂತೋಷದಿಂದಲೇ ತಕ್ಷಶಿಲೆಯಿಂದ ಮತ್ತೆ ಹಸ್ತಿನಪುರಕ್ಕೆ ಹಿಂದಿರುಗಿದನು.
ಏತತ್ತೇ ಸರ್ವಮಾಖ್ಯಾತಂ ವೈಶಂಪಾಯನಕೀರ್ತಿತಮ್ |
ವ್ಯಾಸಾಜ್ಞಯಾ ಸಮಾಜ್ಞಾತಂ ಸರ್ಪಸತ್ರೇ ನೃಪಸ್ಯ ಹಿ ॥60॥
ವೇದವ್ಯಾಸರ ಆಜ್ಞೆಯಂತೆ, ರಾಜನ ಸರ್ಪಯಜ್ಞದಲ್ಲಿ ವೈಶಂಪಾಯನರಿಂದ ಕೀರ್ತಿತವಾದ ಹಾಗೂ ನಾನು ತಿಳಿದ ಎಲ್ಲವನ್ನೂ ನಿನಗಿಂದು ಹೇಳಿರುವೆನು.
ಪುಣ್ಯೋಽಯಮಿತಿಹಾಸಾಖ್ಯಃ ಪವಿತ್ರಂ ಚೇದಮುತ್ತಮಮ್ |
ವ್ಯಾಸೇನ ಮುನಿನಾ ವಿಪ್ರ ಚರಿತಂ ಸ್ವವ್ಯದರ್ಶಿನಾ ॥61॥
ಇತಿಹಾಸವೆಂಬ ಹೆಸರುಳ್ಳ ಈ ಗ್ರಂಥವು ಮಂಗಳಮಯವಾಗಿದೆ ಹಾಗೂ ಪವಿತ್ರವೂ, ಉತ್ತಮವೂ ಆಗಿದೆ. ಹೇ ವಿಪ್ರನೇ, ಇದು ವೇದಗಳನ್ನು ಕಂಡ ವ್ಯಾಸ ಮುನಿಯಿಂದ ರಚಿತವಾಗಿದೆ.
ಸರ್ವಜ್ಞೇನ ವಿಧಿಜ್ಞೇನ ಧರ್ಮಜ್ಞಾನವತಾ ಸತಾ |
ಅತೀಂದ್ರಿಯೇಣ ಶುಚಿನಾ ತಪಸಾ ಭಾವಿತಾತ್ಮನಾ ॥62॥
ಐಶ್ವರ್ಯೇ ವರ್ತತಾ ಚೈವ ಸಾಂಖ್ಯಯೋಗವತಾ ತಥಾ |
ನೈಕತಂತ್ರವಿಬುದ್ಧೇನ ದೃಷ್ಟ್ವಾ ದಿವ್ಯೇನ ಚಕ್ಷುಷಾ ॥63॥
ಕೀರ್ತಿಂ ಪ್ರಥಯತಾ ಲೋಕೇ ಪಾಂಡವಾನಾಂ ಮಹಾತ್ಮನಾಮ್ |
ಅನ್ಯೇಷಾಂ ಕ್ಷತ್ರಿಯಾಣಾಂ ಚ ಭೂರಿದ್ರುವಿಣತೇಜಸಾಮ್ ॥64॥
ಸರ್ವಜ್ಞರಾದ, ವಿಧಿಗಳನ್ನು ತಿಳಿದಿರುವ, ಧರ್ಮದ ಜ್ಞಾನವುಳ್ಳ, ಸ್ವಯಂ ಆಚರಿಸುವ, ಅತೀಂದ್ರಿಯವಾದ ಶುಚಿಯಾದ ತಪಸ್ಸಿನಿಂದ ಆತ್ಮಜ್ಞಾನವನ್ನು ಪಡೆದಿರುವ, ಅಣಿಮಾದಿ ಅಷ್ಟೈಶ್ವರ್ಯವನ್ನು ಸಿದ್ಧಿಸಿಕೊಂಡ, ಹಾಗೆಯೇ ಸಾಂಖ್ಯ ಯೋಗಶಾಸ್ತ್ರವನ್ನು ಮೈಗೂಡಿಸಿಕೊಂಡು, ಅನೇಕ ಶಾಸ್ತ್ರಗಳನ್ನು ಚೆನ್ನಾಗಿ ತಿಳಿದಿರುವ, ಲೋಕದಲ್ಲಿ ಮಹಾತ್ಮರಾದ ಪಾಂಡವರ ಹಾಗೂ ಬಹುವಾದ ಸಂಪತ್ತು ಮತ್ತು ತೇಜಸ್ಸುಗಳುಳ್ಳ ಉಳಿದ ಕ್ಷತ್ರಿಯರ ಕೀರ್ತಿಯನ್ನು ಬೆಳಗಿಸುತ್ತಾ ದಿವ್ಯಚಕ್ಷುಸ್ಸಿನಿಂದ ಇದನ್ನು ಕಂಡು ವ್ಯಾಸರು ಹೇಳಿರುವರು.
ಕ್ರೀಡಾಂ ಚ ವಾಸುದೇವಸ್ಯ ದೇವದೇವಸ್ಯ ಶಾರ್ಙ್ಗಿಣಃ |
ವಿಶ್ವೇಷಾಂ ದೇವಭಾಗಾನಾಂ ಜನ್ಮಸಾಯುಜ್ಯಮೇವ ಚ ॥65॥
ಯ ಇದಂ ಶೃಣುಯಾದ್ ವಿದ್ವಾನ್ ಪರ್ವಸು ದ್ವಿಜಸತ್ತಮಃ |
ಧೂತಪಾಪ್ಮಾ ಜಿತಸ್ವರ್ಗೋ ಬ್ರಹ್ಮಭೂಯಾಯ ಗಚ್ಛತಿ ॥66॥
ದೇವದೇವನಾದ ಶಾರ್ಙ್ಗಧನುಸ್ಸನ್ನು ಧರಿಸಿದ ವಾಸುದೇವನ ಕ್ರೀಡೆಗಳನ್ನೂ, ಎಲ್ಲ ದೇವತೋತ್ತಮರ ಅವತಾರ ಹಾಗೂ ಸಾಯುಜ್ಯವನ್ನು ಒಳಗೊಂಡ ಈ ಮಹಾಭಾರತವನ್ನು ಜ್ಞಾನಿಯಾದ ಯಾವ ದ್ವಿಜಶ್ರೇಷ್ಠನು ಪರ್ವದಿನಗಳಲ್ಲಿ ಕೇಳುವನೋ, ಅವನು ಪಾಪಗಳನ್ನು ಝಾಡಿಸಿಕೊಂಡು, ಸ್ವರ್ಗವನ್ನೇ ಗೆದ್ದು ಮೋಕ್ಷಕ್ಕೂ ಹೋಗಬಲ್ಲನು.
ಕಾರ್ಷ್ಣಂ ವೇದಮಿಮಂ ಸರ್ವಂ ಶೃಣುಯಾದ್ ಯಃ ಸಮಾಹಿತಃ |
ಬ್ರಹ್ಮಹತ್ಯಾಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥67॥
ವೇದವ್ಯಾಸರಿಂದ ರಚಿತವಾದ ಈ ವೇದವನ್ನು ಯಾವನು ಸಮಾಧಾನಚಿತ್ತನಾಗಿ ಪೂರ್ಣವಾಗಿ ಕೇಳುವನೋ ಅವನು ಬ್ರಹ್ಮಹತ್ಯೆಯಂತಹ ಪಾಪವನ್ನು ಮಾಡಿದ್ದರೂ ಅದು ತಕ್ಷಣದಲ್ಲಿಯೇ ನಾಶವಾಗುವುದು.
ಯಶ್ಚೇದಂ ಶ್ರಾವಯೇಚ್ಛ್ರಾದ್ಧೇ ಬ್ರಾಹ್ಮಣಾನ್ ಪಾದಮಂತತಃ |
ಅಕ್ಷಯ್ಯಮನ್ನಪಾನಂ ವೈ ಪಿತೄಂಸ್ತಸ್ಯೋಪತಿಷ್ಠತೇ ॥68॥
ಯಾವನು ಈ ಮಹಾಭಾರತದ ಸ್ವಲ್ಪ ಭಾಗವನ್ನಾದರೂ ಶ್ರಾದ್ಧಕಾಲದಲ್ಲಿ ಬ್ರಾಹ್ಮಣರಿಗೆ ಕೇಳಿಸುವನೋ ಅವನು ಮಾಡಿದ ಅನ್ನಪಾನವು ಅಕ್ಷಯಫಲವನ್ನು ನೀಡುವುದು ಮತ್ತು ಅವನ ಪಿತೃಗಳಿಗೆ ಅದು ತಲುಪುವುದು.

ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ |
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥69॥
ಹೇ ಭರತಶ್ರೇಷ್ಠನೇ, ಧರ್ಮದ ವಿಷಯದಲ್ಲಿಯೂ, ಅರ್ಥದ ವಿಷಯದಲ್ಲಿಯೂ, ಕಾಮದ ವಿಷಯದಲ್ಲಿಯೂ, ಮೋಕ್ಷದ ವಿಷಯದಲ್ಲಿಯೂ ಇಲ್ಲಿ ಏನಿದೆಯೋ ಅದೇ ಬೇರೆ ಕಡೆ ಸಿಗುವುದು. ಇಲ್ಲಿ ಯಾವುದಿಲ್ಲವೋ ಅದು ಬೇರೆಲ್ಲೂ ಸಿಗಲಾರದು.
ವಾಚ್ಯತೇ ಯತ್ರ ಸತತಂ ಜಯಾಖ್ಯಂ ಭಾರತಂ ಮಹತ್ |
ಶ್ರೀಶ್ಚ ಕೀರ್ತಿಶ್ಚ ವಿದ್ಯಾ ಚ ಭವಂತಿ ಮುದಿತಾಃ ಸದಾ ॥70॥
ಎಲ್ಲಿ ಜಯವೆಂಬ ಹೆಸರುಳ್ಳ ಮಹಾಭಾರತದ ಪ್ರವಚನವು ಸತತವಾಗಿ ನಡೆಯುವುದೋ ಅಲ್ಲಿ ಸಂಪತ್ತು, ಕೀರ್ತಿ, ವಿದ್ಯೆ ಇವುಗಳೆಲ್ಲವೂ ಸಿದ್ಧಿಸುವವು. ಅಲ್ಲದೆ ಅಲ್ಲಿರುವ ಜನರು ಸದಾ ಸಂತೋಷದಿಂದ ಇರುವರು.
ಭಾರತಸ್ಯ ತು ವಕ್ತಾರಂ ಬ್ರಹ್ಮರ್ಷಿಂ ಚ ಮಹಾಗುರುಮ್ |
ವೈಶಂಪಾಯನಮಾರೋಪ್ಯ ಸ್ವರ್ಣಭದ್ರಾಸನಂ ತದಾ ॥71॥
ಜನಮೇಜಯಾದಿರಾಜಾನ ಆಸ್ತಿಕಾದ್ಯಾ ದ್ವಿಜಾತಯಃ |
ಧರ್ಮದತ್ತಾದಿವೈಶ್ಯಾಶ್ಚ ಸೋಮ್ಯವಂಶ್ಯಾದಿಶೂದ್ರಕಾಃ ॥72॥
ಪ್ರಯುತಂ ಚಾಯುತಂ ಚೇತಿ ಸಹಸ್ರಂ ಶತಮಿತ್ಯಪಿ |
ದಶಕಂ ಚೇತಿ ನಿಷ್ಕಾಣಾಮಾನರ್ಚುಸ್ತಂ ಮಹಾಗುರುಮ್ ॥73॥
ಭಾರತವನ್ನು ಪ್ರವಚನ ಮಾಡಿದ, ಮಹಾಗುರುವಾದ, ಬ್ರಹ್ಮರ್ಷಿಗಳಾದ ವೈಶಂಪಾಯನರನ್ನು ಚಿನ್ನದ ಭದ್ರಾಸನದಲ್ಲಿ ಕುಳ್ಳಿರಿಸಿ, ಜನಮೇಜಯನೇ ಮೊದಲಾದ ರಾಜರು, ಆಸ್ತಿಕನೇ ಮೊದಲಾದ ಬ್ರಾಹ್ಮಣರು, ಧರ್ಮದತ್ತನೇ ಮೊದಲಾದ ವೈಶ್ಯರು, ಸೋಮ್ಯವಂಶನೇ ಮೊದಲಾದ ಶೂದ್ರರೂ ಆಗ ಹತ್ತುಲಕ್ಷ, ಹತ್ತು ಸಾವಿರ, ಸಾವಿರ, ನೂರು, ಹತ್ತು ಹೀಗೆ ತಮ್ಮ ಶಕ್ತ್ಯನುಸಾರ ಸುವರ್ಣನಿಷ್ಕಗಳನ್ನು ನೀಡುವ ಮೂಲಕ ಆ ಮಹಾಗುರುವನ್ನು ಪೂಜಿಸಿದರು.
ನಿಷ್ಕಾಣಾಂ ದಶಕಂ ದತ್ತ್ವಾ ಮೃತಪುತ್ರೋಽಮೃತಪ್ರಜಃ |
ಊಷ್ಮಾದಿವ್ಯಾಧಿಯುಕ್ತಶ್ಚ ಶತಂ ದತ್ತ್ವಾ ನಿರಾಮಯಃ ॥74॥
ಹತ್ತು ನಿಷ್ಕಗಳನ್ನು ದಕ್ಷಿಣೆಯಾಗಿ ನೀಡುವ ಮೂಲಕ ಮಕ್ಕಳನ್ನು ಕಳೆದುಕೊಂಡವನು ಮಕ್ಕಳನ್ನು ಪಡೆದನು. ನೂರು ನಿಷ್ಕಗಳನ್ನು ನೀಡಿದವನು ಕುಷ್ಠಾದಿ ಮಹಾವ್ಯಾಧಿಗಳಿಂದ ಕೂಡಿದವನಾದರೂ ಆರೋಗ್ಯವಂತನಾದನು.
ಸಹಸ್ರದಾನಾತ್ಸಂತಾನಹೀನಃ ಸಂತಾನಪುತ್ರವಾನ್ |
ಆಯುರಾರೋಗ್ಯಮೈಶ್ವರ್ಯಂ ಭೇಜುಸ್ತೇಽನ್ನಂ ಚ ಪುತ್ರಕಾನ್ ॥75॥
ಸಾವಿರನಿಷ್ಕಗಳನ್ನು ದಾನ ಮಾಡಿದವನು ಸಂತಾನಹೀನನಾಗಿದ್ದರೂ ಪರಂಪರೆಯನ್ನು ಬೆಳೆಸುವ ಮಗನನ್ನು ಪಡೆದನು. ಹೀಗೆ ದಕ್ಷಿಣೆಗಳನ್ನು ನೀಡಿದವರು ಆಯುಷ್ಯ, ಆರೋಗ್ಯ, ಐಶ್ವರ್ಯಗಳನ್ನು, ಅನ್ನಸಮೃದ್ಧಿಯನ್ನೂ, ಮಕ್ಕಳನ್ನೂ ಪಡೆದರು.
ಸುವರ್ಣಂ ರಜತಂ ರತ್ನಂ ಸರ್ವಾಣ್ಯಾಭರಣಾನಿ ಚ |
ಸರ್ವೋಪಕರಣೈರ್ಯುಕ್ತಂ ನಿಧಿನಿಕ್ಷೇಪಸಂಯುತಮ್ ॥76॥
ಇಷ್ಟಕಾಭಿತ್ತಿಸಂಯುಕ್ತಮಗ್ನಿಬಾಧಾದಿವರ್ಜಿತಮ್ |
ದೇವಪೂಜಾಗ್ನಿಹೋತ್ರಾದಿಪಾಠಾರ್ಥಗೃಹಸಂಯುತಮ್ ॥77॥
ಸಾಂತರ್ಬಹಿಃ ಸಂವರಣಂ ಸಪ್ರಾಸಾದಂ ಸಗೋಗೃಹಮ್ ॥78॥
ವ್ಯಷ್ಟ್ಯಾ ಸಮಷ್ಟ್ಯಾ ವಾ ದದ್ಯಾತ್ ಸ್ವರ್ಗಾರೋಹಣಪರ್ವಣಿ |
ನಿವೃತ್ತಿಕಾಮೋ ದದ್ಯಾಚ್ಚೇತ್ ಪುನರ್ಜನ್ಮ ನ ವಿದ್ಯತೇ ॥79॥
ಸುವರ್ಣ, ಬೆಳ್ಳಿ, ರತ್ನ, ಎಲ್ಲ ರೀತಿಯ ಆಭರಣಗಳು, ಇವುಗಳೊಂದಿಗೆ ಎಲ್ಲ ರೀತಿಯ ಉಪಯುಕ್ತ ಸಾಮಗ್ರಿಗಳಿಂದ ಕೂಡಿದ ಅಮೂಲ್ಯವಸ್ತುಗಳನ್ನು ಗೌಪ್ಯವಾಗಿಡಲು ಮತ್ತು ಬಳಕೆಯ ವಸ್ತುಗಳನ್ನು ಓರಣವಾಗಿಡಲು ವ್ಯವಸ್ಥೆಗಳಿಂದ ಕೂಡಿದ, ಇಟ್ಟಿಗೆಗಳಿಂದ ನಿರ್ಮಿಸಿದ ಗೋಡೆಗಳುಳ್ಳ, ಅಗ್ನಿಯೇ ಮೊದಲಾದ ಬಾಧೆಗಳಿಲ್ಲದ, ದೇವಪೂಜೆಗೆ ಅಗ್ನಿಹೋತ್ರ ಮೊದಲಾದವುಗಳಿಗೆ ಪಾಠಾದಿಗಳನ್ನು ನಡೆಸುವುದಕ್ಕೆ ಬೇಕಾದ ಕೋಣೆಗಳಿಂದ ಕೂಡಿದ, ಹೊರಗೂ ಮತ್ತು ಒಳಗೂ ಮುಚ್ಚಿಗೆಗಳುಳ್ಳ, ಉಪ್ಪರಿಗೆಯಿಂದ ಕೂಡಿದ, ಹಟ್ಟಿಯಿಂದ ಸಹಿತವಾದ ಮನೆಯನ್ನು ಪ್ರತ್ಯೇಕವಾಗಿಯಾಗಲಿ ಅಥವಾ ಜೊತೆ ಜೊತೆಯಾಗಿಯಾಗಲಿ, ಸ್ವರ್ಗಾರೋಹಣ ಪರ್ವ ಮುಗಿಯುವ ಕಾಲದಲ್ಲಿ ದಾನ ಮಾಡಬೇಕು. ನಿವೃತ್ತಿಯನ್ನು ಬಯಸುವವನು ಈ ರೀತಿ ದಾನ ಮಾಡಿದರೆ ಪುನರ್ಜನ್ಮವೇ ಬರಲಾರದು.
ಸಕಾಮಶ್ಚೇದ್ ಬ್ರಹ್ಮಕಲ್ಪಂ ಸುಖಂ ಬ್ರಹ್ಮಗೃಹೇ ವಸೇತ್ ॥80॥
ಸಕಾಮ ವ್ಯಕ್ತಿಯು ಈ ರೀತಿ ದಾನ ಮಾಡುವುದರಿಂದ ಬ್ರಹ್ಮಗೃಹದಲ್ಲಿ ಬ್ರಹ್ಮಕಲ್ಪದ ಕಾಲ ಸುಖವಾಗಿ ವಾಸಮಾಡಬಲ್ಲನು.
ಪುರಾಣಮುಖತೋ ಯಸ್ಮಾದ್ ವೇದಾಂತಜ್ಞಾನಮಾಪ್ಯತೇ |
ಸ ತೇನ ಗುರುರಾಖ್ಯಾತಸ್ತತ್ಪೂಜಾ ಹೀಶಪೂಜನಮ್ ॥81॥
ವೇದಗಳ ನಿರ್ಣಯಜ್ಞಾನವು ಪುರಾಣಗಳ ಮುಖಾಂತರವೇ ಸಿಗಬಹುದಾದ್ದರಿಂದ ಪುರಾಣ ಹೇಳುವವರು ಗುರುಗಳೆಂದು ಪ್ರಸಿದ್ಧರಾಗಿರುವರು. ಅವರನ್ನು ಪೂಜಿಸಿದರೆ ಭಗವಂತನ ಪೂಜೆ ನಡೆಸಿದಂತೆಯೇ ಆಗುವುದು.
ಭಾರತಸ್ಯ ತು ವಕ್ತಾರಂ ಶ್ರೋತಾರಂ ಲೇಖಕಾಂಸ್ತದಾ |
ಪ್ರಪೂಜಯಂತಿ ಸಂಹೃಷ್ಟಾಃ ಸಿದ್ಧಾಶ್ಚ ಪರಮರ್ಷಯಃ ॥82॥
ಮಹಾಭಾರತವನ್ನು ಹೇಳುವವನನ್ನು, ಕೇಳುವವನನ್ನು ಹಾಗೂ ಲೇಖಕರನ್ನು ಸಂತೋಷದಿಂದ ಸಿದ್ಧರು, ಮುನಿಶ್ರೇಷ್ಠರು ಪೂಜಿಸುವರು.

ಮಹಾಭಾರತವಕ್ತಾರಂ ನಾರ್ಚಯಂತೀಹ ಯೇ ನರಾಃ |
ತೇಷಾಂ ಸರ್ವಕ್ರಿಯಾಹಾನಿರ್ಭವೇದ್ ದೇವಾಃ ಶಪಂತಿ ಚ ॥83॥
ಯಾವ ಮನುಷ್ಯರು ಮಹಾಭಾರತವನ್ನು ಹೇಳುವವನನ್ನು ಅರ್ಚಿಸುವುದಿಲ್ಲವೋ ಅವರು ಮಾಡಿದ ಎಲ್ಲ ಕ್ರಿಯೆಗಳು ನಿಷ್ಫಲವಾಗುವವು. ಅಲ್ಲದೆ ದೇವತೆಗಳೂ ಅವರನ್ನು ಶಪಿಸುವರು.
ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ಜಯಮಿಚ್ಛತಾ |
ಇತಿಹಾಸಮಿದಂ ಶ್ರುತ್ವಾ ಪುಣ್ಯಂ ಸಫಲಮಶ್ನುತೇ ॥84॥
ಯಾವನು ಜಯವನ್ನು ಬಯಸುವನೋ ಅವನು ಜಯ ಎಂದು ಪ್ರಸಿದ್ಧವಾದ ಈ ಇತಿಹಾಸವನ್ನು ಕೇಳಲೇಬೇಕು. ಈ ಇತಿಹಾಸವನ್ನು ಕೇಳುವುದರಿಂದ ನಿಶ್ಚಯವಾಗಿ ಫಲವನ್ನು ಕೊಡುವ ಪುಣ್ಯವನ್ನು ಗಳಿಸುವನು.
ರಾಜ್ಞಾ ರಾಜಸುತೈಶ್ಚೈವ ಗರ್ಭಿಣ್ಯಾ ಚೈವ ಯೋಷಿತಾ ॥85॥
ರಾಜನಿಂದಲೂ, ರಾಜನ ಮಕ್ಕಳಿಂದಲೂ ಹಾಗೂ ಗರ್ಭಿಣೀ ಸ್ತ್ರೀಯರಿಂದಲೂ ಈ ಮಹಾಭಾರತವು ಶ್ರವಣ ಯೋಗ್ಯವಾಗಿದೆ.
ಸ್ವರ್ಗಕಾಮೋ ಲಭೇತ್ಸ್ವರ್ಗಂ ಜಯಕಾಮೋ ಲಭೇಜ್ಜಯಮ್ |
ಗರ್ಭಿಣೀ ಲಭತೇ ಪುತ್ರಂ ಕನ್ಯಾಂ ವಾ ಬಹುಭಾಗಿನೀಮ್ ॥86॥
ಸ್ವರ್ಗವನ್ನು ಬಯಸುವವನು ಸ್ವರ್ಗವನ್ನು ಪಡೆಯುತ್ತಾನೆ. ಯುದ್ಧಾದಿಗಳಲ್ಲಿ ಜಯವನ್ನು ಬಯಸುವವನು ಜಯವನ್ನು ಪಡೆಯುತ್ತಾನೆ. ಗರ್ಭಿಣಿಯಾದವಳು ಪುತ್ರನನ್ನು ಪಡೆಯುತ್ತಾಳೆ ಅಥವಾ ಬಹಳ ಭಾಗ್ಯವಂತಳಾದ ಕನ್ಯೆಯನ್ನು ಪಡೆಯುತ್ತಾಳೆ.
ಅನಾಗತಶ್ಚ ಮೋಕ್ಷಶ್ಚ ಕೃಷ್ಣದ್ವೈಪಾಯನಃ ಪ್ರಭುಃ |
ಸಂದರ್ಭಂ ಭಾರತಸ್ಯಾಸ್ಯ ಕೃತವಾನ್ ಧರ್ಮಕಾಮ್ಯಯಾ ॥87॥
ಜನನ-ಮರಣಗಳಿಲ್ಲದೆ ನಿತ್ಯಮುಕ್ತರಾದ, ಸರ್ವಸಮರ್ಥರಾದ ಕೃಷ್ಣದ್ವೈಪಾಯನರು ಧರ್ಮವನ್ನು ಜಗತ್ತಿನಲ್ಲಿ ಪ್ರಚುರಗೊಳಿಸುವ ಇಚ್ಛೆಯಿಂದ ಈ ಭಾರತಗ್ರಂಥವನ್ನು ರಚಿಸಿದ್ದಾರೆ.
ಷಷ್ಟಿಂ ಶತಸಹಸ್ರಾಣಿ ಚಕಾರಾನ್ಯಾಂ ಸ ಸಂಹಿತಾಮ್ |
ತ್ರಿಂಶಚ್ಛತಸಹಸ್ರಾಣಿ ದೇವಲೋಕೇ ಪ್ರತಿಷ್ಠಿತಮ್ ॥88॥
ಪಿತ್ರ್ಯೇ ಪಂಚದಶಂ ಜ್ಞೇಯಂ ಯಕ್ಷಲೋಕೇ ಚತುರ್ದಶ |
ಏಕಂ ಶತಸಹಸ್ರಂ ತು ಮಾನುಷೇಷು ಪ್ರಭಾಷಿತಮ್ ॥89॥
ಆ ಕೃಷ್ಣದ್ವೈಪಾಯನರು ಅರವತ್ತು ಲಕ್ಷ ಗ್ರಂಥ ಪರಿಮಿತವಾದ ಬೇರೊಂದು ಸಂಹಿತೆಯನ್ನು ರಚಿಸಿದರು. ಅದರಲ್ಲಿ ಮೂವತ್ತು ಲಕ್ಷ ಪರಿಮಿತವಾದ ಗ್ರಂಥವು ದೇವಲೋಕದಲ್ಲಿ ನೆಲೆಗೊಂಡಿತು. ಪಿತೃಲೋಕದಲ್ಲಿ ಹದಿನೈದು ಲಕ್ಷ ಹಾಗೂ ಯಕ್ಷಲೋಕದಲ್ಲಿ ಹದಿನಾಲ್ಕು ಲಕ್ಷ ಪರಿಮಿತವಿದೆ ಎಂದು ತಿಳಿಯಬೇಕು. ಒಂದು ಲಕ್ಷ ಪರಿಮಿತವಾದ ಗ್ರಂಥವು ಈ ಮನುಷ್ಯಲೋಕದಲ್ಲಿ ಪ್ರಸಿದ್ಧವಾಗಿದೆ.
ನಾರದೋಽಶ್ರಾವಯದ್ದೇವಾನ್ ಅಸಿತೋ ದೇವಲಃ ಪಿತೄನ್ |
ರಕ್ಷೋ ಯಕ್ಷಾನ್ ಶುಕೋ ಮರ್ತ್ಯಾನ್ ವೈಶಂಪಾಯನ ಏವ ತು ॥
ಈ ಮಹಾಭಾರತದ ಪ್ರವಚನವನ್ನು ದೇವತೆಗಳಿಗೆ ನಾರದರು, ಪಿತೃಗಳಿಗೆ ಅಸಿತ ಎಂಬ ಉಪನಾಮವುಳ್ಳ ದೇವಲರು, ರಾಕ್ಷಸರು ಹಾಗೂ ಯಕ್ಷರಿಗೆ ಶುಕಮುನಿಗಳೂ, ಮನುಷ್ಯರಿಗೆ ವೈಶಂಪಾಯನರು ಹೇಳಿದ್ದಾರೆ.
ಇತಿಹಾಸಮಿಮಂ ಪುಣ್ಯಂ ಮಹಾರ್ಥಂ ವೇದಸಮ್ಮಿತಮ್ |
ವ್ಯಾಸೋಕ್ತಂ ಶ್ರೂಯತೇ ಯೇನ ಕೃತ್ವಾ ಬ್ರಾಹ್ಮಣಮಗ್ರತಃ ॥91॥
ಸ ನರಃ ಸರ್ವಕಾಮಾಂಶ್ಚ ಕೀರ್ತಿಂ ಪ್ರಾಪ್ಯೇಹ ಶೌನಕ |
ಗಚ್ಛೇತ್ ಪರಮಿಕಾಂ ಸಿದ್ಧಿಮತ್ರ ಮೇ ನಾಸ್ತಿ ಸಂಶಯಃ ॥92॥
ವೇದವ್ಯಾಸರಿಂದ ಉಕ್ತವಾದ, ಮಂಗಳಮಯವಾದ, ಮಹಾ ಅರ್ಥಗಳುಳ್ಳ, ವೇದಸದೃಶವಾದ ಈ ಇತಿಹಾಸವನ್ನು ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಯಾವಾತನು ಕೇಳುವನೋ ಆ ನರನು ಇಹಲೋಕದಲ್ಲಿ ಸರ್ವಕಾಮನೆಗಳನ್ನೂ, ಕೀರ್ತಿಯನ್ನೂ ಪಡೆಯಬಲ್ಲನು. ಹೇ ಶೌನಕನೇ, ಅವನು ಇಹ-ಪರಗಳಲ್ಲಿ ಉತ್ತಮವಾದ ಸಿದ್ಧಿಯನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.
ಭಾರತಾಧ್ಯಯನಾತ್ ಪುಣ್ಯಾದಪಿ ಪಾದಮಧೀಯತಃ |
ಶ್ರದ್ದಯಾ ಪರಯಾ ಭಕ್ತ್ಯಾ ಶ್ರಾವ್ಯತೇ ಚಾಪಿ ಯೇನ ತು ॥93॥
ಯ ಇಮಾಂ ಸಂಹಿತಾಂ ಪುಣ್ಯಾಂ ಪುತ್ರಮಧ್ಯಾಪಯಚ್ಛುಕಮ್ ॥94॥
ಯಾವ ವೇದವ್ಯಾಸರು ಈ ಮಂಗಳಕರವಾದ ಸಂಹಿತೆಯನ್ನು ತನ್ನ ಪುತ್ರರಾದ ಶುಕಮುನಿಗಳಿಗೆ ಉಪದೇಶಿಸಿದರೋ ಅಂತಹ ಸಂಹಿತೆಯ ಬಗ್ಗೆ, ವೇದವ್ಯಾಸರ ಬಗ್ಗೆ, ಶುಕಮುನಿಗಳ ಬಗ್ಗೆ ಉತ್ತಮವಾದ ಶ್ರದ್ದೆಯನ್ನಿಟ್ಟು ಭಕ್ತಿಯಿಂದ ಯಾವನು ಈ ಸಂಹಿತೆಯ ನಾಲ್ಕನೆಯ ಒಂದಂಶವನ್ನಾಗಲಿ ಅಥವಾ ಶ್ಲೋಕದ ಒಂದು ಪಾದವನ್ನಾಗಲಿ ಅಧ್ಯಯನ ಮಾಡುವನೋ ಅವನು ಭಾರತವನ್ನು ಅಧ್ಯಯನ ಮಾಡಿದ ಪುಣ್ಯದಿಂದ ಉತ್ಕೃಷ್ಟವಾದ ಸಿದ್ಧಿಯನ್ನು ಪಡೆಯುತ್ತಾನೆ.
ಮುಂದಿನ ನಾಲ್ಕು ಶ್ಲೋಕಗಳು ಭಾರತ ಸಾವಿತ್ರೀ ಅಥವಾ ಚತುಃಶ್ಲೋಕೀ ಭಾರತ ಎಂದು ಪ್ರಸಿದ್ಧವಾದ ಭಾಗ
ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ |
ಸಂಸಾರೇಷ್ವನುಭೂತಾನಿ ಯಾಂತಿ ಯಾಸ್ಯಂತಿ ಚಾಪರೇ ॥95॥
ಹರ್ಷಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ |
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥96॥

ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ |
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ||97||
ನಾವು ಎತ್ತಿಬಂದ ಸಾವಿರಾರು ಜನ್ಮಗಳಲ್ಲಿ ಸಾವಿರಾರು ಮಂದಿ ತಂದೆ-ತಾಯಿಗಳು, ನೂರಾರು ಮಂದಿ ಹೆಂಡಿರು-ಮಕ್ಕಳು ನಮ್ಮ ಅನುಭವದಲ್ಲಿ ಬಂದಿರುವರು. ಈಗಲೂ ಇದ್ದಾರೆ. ಮುಂದೆಯೂ ಬೇರೆ ಮಂದಿ ಬರಲಿದ್ದಾರೆ. ಹಾಗೆಯೇ ಪ್ರತಿನಿತ್ಯವೂ ಮೂರ್ಖನಿಗೆ ಸಾವಿರಾರು ಸಂತೋಷವನ್ನು ನೀಡುವ ಘಟನೆಗಳು, ನೂರಾರು ಭಯವನ್ನು ತಂದುಕೊಡುವ ಘಟನೆಗಳು ಎದುರಾಗುತ್ತವೆ. ಆದರೆ ಜ್ಞಾನಿಗೆ ಇದ್ಯಾವುದೂ ಇಲ್ಲ. ಕೈಗಳನ್ನೆತ್ತಿಕೊಂಡು ಬೊಬ್ಬಿಡುತ್ತಾ ನಾನು ಹೇಳುತ್ತಿದ್ದೇನೆ. ನನ್ನ ಮಾತುಗಳನ್ನು ಯಾರೂ ಕೇಳಿಸಿಕೊಳ್ಳುತ್ತಿಲ್ಲ. ಅದೇನೆಂದರೆ ಧರ್ಮದಿಂದಲೇ ಅರ್ಥವು, ಕಾಮವು ಲಭಿಸುವುದು. ಆದರೆ ಧರ್ಮವನ್ನು ಏತಕ್ಕಾಗಿ ನೀವು ಸೇವಿಸುತ್ತಿಲ್ಲ?
ನ ಜಾತು ಕಾಮಾನ್ನ ಭಯಾನ್ನ ಲೋಭಾದ್
ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ |
ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ
ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ||98||
ಯಾವತ್ತೂ ಕೂಡ ಕಾಮದಿಂದಾಗಲಿ, ಭಯದಿಂದಾಗಲಿ, ಅತಿಯಾಸೆಯಿಂದ ಆಗಲಿ, ಅಷ್ಟೇ ಏಕೆ, ಬದುಕಬೇಕೆಂಬ ಕಾರಣದಿಂದಾಗಲಿ ಧರ್ಮವನ್ನು ಬಿಡಕೂಡದು. ಏಕೆಂದರೆ ಸುಖ-ದುಃಖಗಳು ಅನಿತ್ಯವಾಗಿವೆ. ಧರ್ಮವು ನಿತ್ಯವಾಗಿದೆ. ಅದೇ ರೀತಿ ಜೀವನು ನಿತ್ಯನಾಗಿರುವನು. ಈ ಜೀವನ ಜೀವನಕ್ಕೆ ಕಾರಣವಾದ ಸಂಸಾರವು ಅನಿತ್ಯವಾಗಿದೆ.
ಇಮಾಂ ಭಾರತಸಾವಿತ್ರೀಂ ಪ್ರಾತರುತ್ಥಾಯ ಯಃ ಪಠೇತ್ |
ಸ ಭಾರತಫಲಂ ಪ್ರಾಪ್ಯ ಪರಂ ಬ್ರಹ್ಮಾಧಿಗಚ್ಛತಿ ||99||
ಯಾವನು ಮುಂಜಾನೆ ಎದ್ದು ಈ ಭಾರತದ ಸಾವಿತ್ರೀಯನ್ನು (ಗಾಯತ್ರಿಯಂತೆ ಸಾರಭೂತವಾದ ನಾಲ್ಕು ಶ್ಲೋಕಗಳನ್ನು) ಪಠಿಸುವನೋ ಅವನು ಭಾರತದ ಫಲವನ್ನು ಪಡೆದು ಪರಬ್ರಹ್ಮನನ್ನು ಸೇರುವನು.
ಯಥಾ ಸಮುದ್ರೋ ಭಗವಾನ್ ಯಥಾ ಹಿ ಹಿಮವಾನ್ ಗಿರಿಃ |
ಖ್ಯಾತಾವುಭೌ ರತ್ನನಿಧೀ ತಥಾ ಭಾರತಮುಚ್ಯತೇ ||100||
ಐಶ್ವರ್ಯಯುಕ್ತವಾದ ಸಮುದ್ರ ಮತ್ತು ಹಿಮವದ್ ಪರ್ವತ ಎಂಬ ಈ ಎರಡು ಹೇಗೆ ರತ್ನನಿಧಿ ಎಂದು ಪ್ರಸಿದ್ಧವಾಗಿವೆಯೋ ಹಾಗೆಯೇ ಭಾರತವೂ ರತ್ನನಿಧಿ ಎಂದು ಪ್ರಸಿದ್ಧವಾಗಿದೆ.
ಕಾರ್ಷ್ಣಂ ವೇದಮಿಮಂ ವಿದ್ವಾನ್ ಶ್ರಾವಯಿತ್ವಾಽರ್ಥಮಶ್ನುತೇ||101||
ಕೃಷ್ಣ ಎನಿಸಿಕೊಂಡ ವೇದವ್ಯಾಸರ ಈ ವೇದವನ್ನು ಜ್ಞಾನಿಯಾದವನು ಇನ್ನೊಬ್ಬರಿಗೆ ಕೇಳಿಸುವ ಮೂಲಕ ಎಲ್ಲ ಪುರುಷಾರ್ಥಗಳನ್ನೂ ಪಡೆಯಬಲ್ಲನು.
ಇದಂ ಭಾರತಮಾಖ್ಯಾನಂ ಯಃ ಪಠೇತ್ ಸುಸಮಾಹಿತಃ |
ಸ ಗಚ್ಛೇತ್ ಪರಮಾಂ ಸಿದ್ಧಿಮಿತಿ ಮೇ ನಾಸ್ತಿ ಸಂಶಯಃ ||102||
ಯಾವನು ಸಮಾಧಾನಚಿತ್ತನಾಗಿ ಈ ಮಹಾಭಾರತವೆಂಬ ಇತಿಹಾಸ ಗ್ರಂಥವನ್ನು ಪಠಿಸುವನೋ ಅವನು ಅತ್ಯುತ್ತಮವಾದ ಸಿದ್ಧಿಯನ್ನು ಹೊಂದಬಲ್ಲನು. ನನಗೆ ಈ ವಿಷಯದಲ್ಲಿ ಸಂಶಯವೇ ಇಲ್ಲ.
ದ್ವೈಪಾಯನೋಷ್ಠಪುಟನಿಸ್ಸೃತಮಪ್ರಮೇಯಂ
ಪುಣ್ಯಂ ಪವಿತ್ರಮಥ ಪಾಪಹರಂ ಶಿವಂ ಚ |
ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ
ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ ||103||
ವೇದವ್ಯಾಸರ ತುಟಿಗಳಿಂದ ಹೊರಹೊಮ್ಮಿದ, ಎಣಿಕೆಗೆ ನಿಲುಕದ, ಮಂಗಳಮಯವಾದ, ಪರಿಶುದ್ಧವಾದ, ಜೊತೆಗೆ ಪಾಪವನ್ನು ಪರಿಹರಿಸಿ ಮಾಂಗಲ್ಯವನ್ನು ನೀಡುವ ಮಹಾಭಾರತದ ಪ್ರವಚನವನ್ನು ಯಾವನು ಚೆನ್ನಾಗಿ ಕೇಳುವನೋ ಅವನಿಗೆ ಪುಷ್ಕರವೆಂಬ ಪರ್ವಕಾಲದಲ್ಲಿ ಗಂಗಾದಿ ಜಲದಿಂದ ಅಭಿಷೇಕ ಮಾಡುವುದರಿಂದ ಏನು ಉಪಯೋಗ? (ಪುಷ್ಕರವೆಂಬ ಪರ್ವಕಾಲದಲ್ಲಿ ಗಂಗಾದಿ ತೀರ್ಥಸ್ನಾನವು ಕೋಟಿ ಗ್ರಹಣಸ್ನಾನಕ್ಕೆ ಸಮ ಎಂದು ಅತಿಶಯ ಫಲವನ್ನು ಹೇಳಿದ್ದಾರೆ. ಮಹಾಭಾರತ ಶ್ರವಣವು ಅದಕ್ಕಿಂತಲೂ ಹೆಚ್ಚು ಫಲವನ್ನು ನೀಡುತ್ತದೆ ಎಂಬುದು ಇಲ್ಲಿನ ಅಭಿಪ್ರಾಯ).
ಯೋ ಗೋಶತಂ ಕನಕಶೃಂಗಮಯಂ ದದಾತಿ
ವಿಪ್ರಾಯ ವೇದವಿದುಷೇ ಸುಬಹುಶ್ರುತಾಯ |
ಪುಣ್ಯಾಂ ಚ ಭಾರತಕಥಾಂ ಸತತಂ ಶೃಣೋತಿ
ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ||104||
ಯಾವನು ವೇದಜ್ಞಾನಿಯಾದ, ಒಳ್ಳೆಯ ರೀತಿಯಿಂದ ಬಹುಶಾಸ್ತ್ರಾಧ್ಯಯನವನ್ನು ನಡೆಸಿದ ಬ್ರಾಹ್ಮಣನಿಗೆ ನೂರು ಗೋವುಗಳನ್ನು ಶೃಂಗಗಳಿಗೆ ಚಿನ್ನವನ್ನು ಮುಚ್ಚಿ ದಾನ ಮಾಡುವನೋ ಅವನಿಗೂ, ಯಾವನು ಸತತವಾಗಿ ಪುಣ್ಯಪ್ರದವಾದ ಮಹಾಭಾರತದ ಕಥೆಯನ್ನು ಕೇಳುವನೋ ಅವನಿಗೂ ಸಮಾನವಾದ ಫಲವು ಲಭಿಸುವುದು.
|| ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಸ್ವರ್ಗಾರೋಹಣಪರ್ವಣಿ ಯುಧಿಷ್ಠಿರಾದಿಪಾಂಡವಾನಾಂ ಶ್ರೀಕೃಷ್ಣಸ್ಯ
ಚ ಸ್ವಸ್ವಮೂಲರೂಪಪ್ರವೇಶಾನುವರ್ಣನಂ ನಾಮ ಚತುರ್ಥೋಽಧ್ಯಾಯಃ ||
ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿಯಿತು.

* * * * *

भಾರತಶ್ರವಣವಿಧ್ಯಧ್ಯಾಯಃ
ಐದನೆಯ ಅಧ್ಯಾಯ
ಜನಮೇಜಯಃ
ಭಗವನ್ ಕೇನ ವಿಧಿನಾ ಶ್ರೋತವ್ಯಂ ಭಾರತಂ ಬುಧೈಃ |
ಫಲಂ ಕಿಂ ಕೇ ಚ ದೇವಾಶ್ಚ ಪೂಜ್ಯಾ ವೈ ಪಾರಣೇಷ್ವಿಹ ॥1॥
ಜನಮೇಜಯ ಹೇ ಭಗವನ್, ಮಹಾಭಾರತವನ್ನು ಜ್ಞಾನಿಗಳು ಯಾವ ವಿಧಿಯಿಂದ ಕೇಳಬೇಕು? ಮಹಾಭಾರತ ಶ್ರವಣದಿಂದ ಏನು ಫಲ? ಪಾರಣೆಯ ಕಾಲದಲ್ಲಿ ಯಾವೆಲ್ಲ ದೇವತೆಗಳನ್ನು ಪೂಜಿಸಬೇಕು?
ದೇಯಂ ಸಮಾಪ್ತೇ ಭಗವನ್ ಕಿಂ ಚ ಪರ್ವಣಿ ಪರ್ವಣಿ |
ವಾಚಕಃ ಕೀದೃಶಶ್ಚಾತ್ರ ಏಷ್ಟವ್ಯಸ್ತದ್ ಬ್ರವೀಹಿ ಮೇ ॥2॥
ಹೇ ಭಗವನ್, ಪ್ರತಿಯೊಂದು ಪರ್ವವು ಸಮಾಪ್ತವಾದಾಗ ಏನೆಲ್ಲ ದಾನಗಳನ್ನು ನೀಡಬೇಕು? ಈ ಮಹಾಭಾರತವನ್ನು ಕೇಳಲು ಯಾವ ರೀತಿಯ ಪ್ರವಚನಕಾರರನ್ನು ನಿಯೋಜಿಸಬೇಕು? ಇವೆಲ್ಲವನ್ನೂ ನನಗೆ ತಿಳಿಸಿಕೊಡಿ.
ವೈಶಂಪಾಯನಃ
ಶೃಣು ರಾಜನ್ ವಿಧಿಮಿಮಂ ಫಲಂ ಯಚ್ಚಾಪಿ ಭಾರತಾತ್ |
ಶ್ರುತಾದ್ ಭವತಿ ರಾಜೇಂದ್ರ ಯತ್ತ್ವಂ ಮಾಮನುಪೃಚ್ಛಸಿ ॥3॥
ವೈಶಂಪಾಯನ ಹೇ ರಾಜಶ್ರೇಷ್ಠನಾದ ಜನಮೇಜಯನೇ, ನೀನು ಕೇಳುತ್ತಿರುವುದಕ್ಕೆ ನಾನು ಹೇಳಬಯಸಿದ್ದೇನೆ. ಈ ಭಾರತವನ್ನು ಕೇಳುವ ವಿಧಿಯನ್ನು, ಇದರಿಂದ ಉಂಟಾಗುವ ಏನೆಲ್ಲ ಫಲವಿದೆಯೋ, ಅದನ್ನು ಕೇಳುವುದರಿಂದ ಏನಾಗುವುದೋ ಅದನ್ನೂ ಹೇಳುವೆನು, ಕೇಳು.
ದಿವಿ ದೇವಾ ಮಹೀಪಾಲ ಕ್ರೀಡಾರ್ಥಮವನಿಂ ಗತಾಃ |
ಕೃತ್ವಾ ಕಾರ್ಯಮಿದಂ ಚೈವ ತತಶ್ಚ ದಿವಮಾಗತಾಃ ॥4॥
ಹೇ ಮಹೀಪಾಲನೇ, ದೇವಲೋಕದಲ್ಲಿರುವ ದೇವತೆಗಳು ಕ್ರೀಡೆಗೋಸ್ಕರ ಭೂಮಿಗೆ ಬಂದರು. ಈ ಎಲ್ಲ ಕಾರ್ಯಗಳನ್ನು ಮಾಡಿ ಅನಂತರ ದೇವಲೋಕಕ್ಕೆ ತೆರಳಿದರು.
ಹಂತ ಯತ್ತೇ ಪ್ರವಕ್ಷ್ಯಾಮಿ ತಚ್ಛೃಣುಷ್ವ ಸಮಾಹಿತಃ |
ಋಷೀಣಾಂ ದೇವತಾನಾಂ ಚ ಸಂಭವಂ ವಸುಧಾತಳೇ ॥5॥
ಭೂಮಿಯಲ್ಲಿ ಋಷಿಗಳ ಮತ್ತು ದೇವತೆಗಳ ಅವತಾರವನ್ನು ಕುರಿತು ನಾನೇನು ಹೇಳಲಿರುವನೋ ಆ ಅದ್ಭುತವನ್ನು ಸಮಾಧಾನಚಿತ್ತನಾಗಿ ಕೇಳು.
ಅತ್ರ ರುದ್ರಾಸ್ತಥಾ ಸಾಧ್ಯಾ ವಿಶ್ವೇದೇವಾಶ್ಚ ಶಾಶ್ವತಾಃ |
ಆದಿತ್ಯಾಶ್ಚಾಶ್ವಿನೌ ದೇವೌ ಲೋಕಪಾಲಾ ಮಹರ್ಷಯಃ ॥6॥
ಗುಹ್ಯಕಾಶ್ಚ ಸಗಂಧರ್ವಾ ನಾಗಾ ವಿದ್ಯಾಧರಾಸ್ತಥಾ |
ಸಿದ್ಧಾ ಧರ್ಮಃ ಸ್ವಯಂಭೂಶ್ಚ ಮುನಿಃ ಕಾತ್ಯಾಯನೋ ವರಃ ॥7॥
ಗಿರಯಃ ಸಾಗರಾ ನದ್ಯಸ್ತಥೈವಾಪ್ಸರಸಾಂ ಗಣಾಃ |
ಗ್ರಹಾಃ ಸಂವತ್ಸರಾಶ್ಚೈವ ಅಯನಾನ್ಯೃತವಸ್ತಥಾ ॥8॥
ಸ್ಥಾವರಂ ಜಂಗಮಂ ಚೈವ ಜಗತ್ಸರ್ವಂ ಸುರಾಸುರಮ್ |
ಭಾರತೇ ಭರತಶ್ರೇಷ್ಠ ಏಕಸ್ಥಮಿಹ ದೃಶ್ಯತೇ ॥9॥
ಹೇ ಭರತಶ್ರೇಷ್ಠನೇ, ಈ ಭಾರತದಲ್ಲಿ ರುದ್ರರು, ಹಾಗೆಯೇ ಸಾಧ್ಯರು, ಶಾಶ್ವತರಾದ ವಿಶ್ವೇದೇವತೆಗಳು, ಆದಿತ್ಯರು, ಅಶ್ವಿನೀದೇವತೆಗಳು, ಲೋಕಪಾಲ ದೇವತೆಗಳು, ಮಹರ್ಷಿಗಳು, ಗಂಧರ್ವರೊಂದಿಗೆ ಕೂಡಿದ ಗುಹ್ಯಕರು, ನಾಗರು, ವಿದ್ಯಾಧರರು, ಸಿದ್ಧರು, ಯಮಧರ್ಮನು, ಬ್ರಹ್ಮದೇವನು, ಶ್ರೇಷ್ಠನಾದ ಕಾತ್ಯಾಯನ ಮುನಿಯು, ಗಿರಿದೇವತೆಗಳು, ಸಾಗರದೇವತೆಗಳು, ನದೀದೇವತೆಗಳು, ಅಪ್ಸರೋಗಣಗಳು, ಗ್ರಹಗಳು, ಸಂವತ್ಸರಗಳು, ಅಯನಗಳು, ಋತುಗಳು, ಹಾಗೆಯೇ ಸ್ಥಾವರಜಂಗಮಾತ್ಮಕವಾದ ಮತ್ತು ಸುರಾಸುರಾತ್ಮಕವಾದ ಇಡೀ ಜಗತ್ತು ಒಂದೇ ಕಡೆಯಲ್ಲಿ ಕಾಣಸಿಗುವುದು.
ತೇಷಾಂ ಶ್ರುತ್ವಾ ಪ್ರತಿಷ್ಠಾನಂ ನಾಮಕರ್ಮಾನುಕೀರ್ತನಾತ್ |
ಕೃತ್ವಾಽಪಿ ಪಾತಕಂ ಘೋರಂ ಸದ್ಯೋ ಮುಚ್ಯೇತ ಮಾನವಃ ॥10॥
ಆ ಎಲ್ಲ ದೇವತೆಗಳ ಪ್ರಖ್ಯಾತಿಯನ್ನು ಕೇಳಿ, ಜೊತೆಗೆ ಅವರ ಹೆಸರುಗಳನ್ನೂ, ಅವರು ಮಾಡಿದ ಕರ್ಮಗಳನ್ನೂ ಕೀರ್ತನೆಗೈಯ್ಯುವುದರ ಮೂಲಕ ಘೋರವಾದ ಪಾತಕಗಳನ್ನು ಮಾಡಿದ್ದರೂ ಮನುಷ್ಯನು ಕೂಡಲೇ ಅವುಗಳಿಂದ ಬಿಡುಗಡೆ ಹೊಂದುವನು.
ಇತಿಹಾಸಮಿಮಂ ಶ್ರುತ್ವಾ ಯಥಾವದನುಪೂರ್ವಶಃ |
ಸಂಯತಾತ್ಮಾ ಶುಚಿರ್ಭೂತ್ವಾ ಪಾರಂ ಗತ್ವಾ ಚ ಭಾರತೇ ॥11॥
ತೇಷಾಂ ಶ್ರಾದ್ಧಾನಿ ದೇಯಾನಿ ಶ್ರುತ್ವಾ ಭಾರತ ಭಾರತಮ್ |
ಬ್ರಾಹ್ಮಣೇಭ್ಯೋ ಯಥಾಶಕ್ತ್ಯಾ ಭಕ್ತ್ಯಾ ಚ ಭರತರ್ಷಭ ॥12॥
ಹೇ ಭರತಶ್ರೇಷ್ಠನಾದ ಭಾರತನೇ, ಈ ಇತಿಹಾಸವನ್ನು ಯಥಾವತ್ತಾಗಿ ಅನುಕ್ರಮವಾಗಿ, ಇಂದ್ರಿಯನಿಗ್ರಹದೊಂದಿಗೆ, ಶುಚಿರ್ಭೂತನಾಗಿ ಕೇಳಿ, ಈ ಮಹಾಭಾರತದ ಕೊನೆಯ ಭಾಗವನ್ನು ತಲುಪಿದಾಗ, ಆ ಎಲ್ಲ ರುದ್ರಾದಿ ದೇವತೆಗಳ ಪ್ರೀತ್ಯರ್ಥವಾಗಿ

ಶ್ರಾದ್ಧಕರ್ಮವನ್ನು ನಡೆಸಬೇಕು. ಈ ಭಾರತವನ್ನು ಕೇಳಿ ಶಕ್ತ್ಯನುಸಾರವಾಗಿ ಭಕ್ತಿಯಿಂದ ಬ್ರಾಹ್ಮಣರಿಗೆ ದಾನ ಮಾಡಬೇಕು.
ಮಹಾದಾನಾನಿ ದೇಯಾನಿ ರತ್ನಾನಿ ವಿವಿಧಾನಿ ಚ |
ಗಾವಃ ಕಾಂಸ್ಯೋಪದೋಹಾಶ್ಚ ಕನ್ಯಾಶ್ಚೈವ ಸ್ವಲಂಕೃತಾಃ ॥13॥
ಸರ್ವಕಾಮಗುಣೋಪೇತಾ ಯಾನಾನಿ ವಿವಿಧಾನಿ ಚ |
ಭವನಾನಿ ವಿಚಿತ್ರಾಣಿ ಭೂಮಿರ್ವಾಸಾಂಸಿ ಕಾಂಚನಮ್ ॥14॥
ವಾಹನಾನಿ ಚ ದೇಯಾನಿ ಹಯಾ ಮತ್ತಾಶ್ಚ ವಾರಣಾಃ |
ಶಯನಂ ಶಿಬಿಕಾಶ್ಚೈವ ಸ್ಯಂದನಾಶ್ಚ ಸ್ವಲಂಕೃತಾಃ ॥15॥
ಮಹಾದಾನಗಳನ್ನೂ, ನಾನಾ ರೀತಿಯ ರತ್ನಗಳನ್ನೂ, ಹಾಲು ಕರೆಯುವ ಕಂಚಿನ ಪಾತ್ರೆಗಳ ಜೊತೆಗೆ ಗೋವುಗಳನ್ನೂ, ಅಲಂಕೃತರಾದ ಕನ್ಯೆಯರನ್ನೂ, ಬಯಸಿದ ವಸ್ತುಗಳನ್ನೆಲ್ಲ ಸಂಗ್ರಹಿಸಿಡಬಹುದಾದ ನಾನಾ ರೀತಿಯ ವಾಹನಗಳನ್ನೂ, ಚಿತ್ರ ವಿಚಿತ್ರವಾದ ಮನೆಗಳನ್ನೂ, ಭೂಮಿ-ವಸ್ತ್ರ-ಚಿನ್ನಗಳನ್ನೂ, ಕುದುರೆ-ಮದಭರಿತವಾದ ಆನೆ ಮೊದಲಾದ ವಾಹನಗಳನ್ನೂ ಬ್ರಾಹ್ಮಣರಿಗೆ ನೀಡಬೇಕು. ಅಲ್ಲದೆ ಹಾಸಿಗೆ, ಪಲ್ಲಕ್ಕಿಗಳನ್ನೂ, ಅಲಂಕೃತವಾದ ರಥಗಳನ್ನೂ ಬ್ರಾಹ್ಮಣರಿಗೆ ನೀಡಬೇಕು.
ಯದ್ಯದ್ ಗೃಹೇ ವರಂ ಕಿಂಚಿದ್ಯದ್ಯದಸ್ತಿ ಮಹದ್ವಸು |
ತತ್ತದ್ದೇಯಂ ದ್ವಿಜಾತಿಭ್ಯ ಆತ್ಮಾ ದಾರಾಶ್ಚ ಸೂನವಃ ॥16॥
ಇಷ್ಟೇ ಅಲ್ಲದೆ ಶ್ರದ್ಧಾಳುವಾದ ಅವನ ಮನೆಯಲ್ಲಿ ಶ್ರೇಷ್ಠವಾದ ಏನೆನೆಲ್ಲ ಇದೆಯೋ, ಬೆಲೆ ಬಾಳುವ ಏನೆಲ್ಲ ಸಂಪತ್ತಿದೆಯೋ ಅವೆಲ್ಲವನ್ನೂ ನೀಡಬೇಕು. ಅಷ್ಟೇ ಏಕೆ, ತನ್ನನ್ನೂ, ಪತ್ನಿಯರನ್ನೂ, ಮಕ್ಕಳನ್ನೂ ಅವನ ಸೇವೆಗೆ ಮೀಸಲಿಡಬೇಕು.
ಶ್ರದ್ಧಯಾ ಪರಯಾ ಯುಕ್ತಂ ಕ್ರಮಶಸ್ತಸ್ಯ ಪಾರಗಃ |
ಶಕ್ತಿತಃ ಸುಮನಾ ಹೃಷ್ಟಃ ಶುಶ್ರೂಷುರವಿಕಲ್ಪಕಃ ॥17॥
ಸತ್ಯಾರ್ಜವರತೋ ದಾಂತಃ ಶುಚಿಃ ಶೌಚಸಮನ್ವಿತಃ |
ಶ್ರದ್ದಧಾನೋ ಜಿತಕ್ರೋಧೋ ಯಥಾ ಸಿದ್ಧ್ಯತಿ ತಚ್ಛೃಣು ॥18॥
ಉತ್ಕೃಷ್ಟವಾದ ಶ್ರದ್ಧೆಯಿಂದ ಕೂಡಿಕೊಂಡು, ಕ್ರಮವಾಗಿ ಆ ಮಹಾಭಾರತದ ಕೊನೆಯ ಘಟ್ಟಕ್ಕೆ ತಲುಪಬೇಕು. ಯಥಾಶಕ್ತಿಯಾಗಿ ಒಳ್ಳೆಯ ಮನಸ್ಸಿನಿಂದ, ಸಂತೋಷವುಳ್ಳವನಾಗಿ, ಯಾವುದೇ ರೀತಿಯ ಸಂಶಯವಿಲ್ಲದವನಾಗಿ ಸತ್ಯ ಹಾಗೂ ನೇರವಾದ ನಡತೆಗಳಲ್ಲಿ ಆಸಕ್ತನಾಗಿ, ಇಂದ್ರಿಯನಿಗ್ರಹವುಳ್ಳವನಾಗಿ, ಶುದ್ಧನಾಗಿ, ಶೌಚಾಚಾರಗಳಿಂದ ಕೂಡಿಕೊಂಡು, ಮಹಾಭಾರತದ ಮೇಲೆ ಶ್ರದ್ಧೆ ಇಟ್ಟು, ಕೋಪವನ್ನು ಗೆದ್ದು, ಈ ಮಹಾಭಾರತವನ್ನು ಕೇಳಿದರೆ ಹೇಗೆ ಸಿದ್ಧಿಯಾಗುವುದೋ ಅದನ್ನು ಕೇಳು.
ಶುಚಿಃ ಶೀಲಾನ್ವಿತಾಚಾರಃ ಶುಕ್ಲವಾಸಾ ಜಿತೇಂದ್ರಿಯಃ |
ಸಂಸ್ಕೃತಃ ಸರ್ವಶಾಸ್ತ್ರಜ್ಞಃ ಶ್ರದ್ದಧಾನೋಽನಸೂಯಕಃ ॥19॥
ರೂಪವಾನ್ ಸುಭಗೋ ದಾಂತಃ ಸತ್ಯವಾದೀ ಜಿತೇಂದ್ರಿಯಃ |
ದಾನಮಾನಗೃಹೀತಶ್ಚ ಕಾರ್ಯೋ ಭವತಿ ವಾಚಕಃ ॥20॥
ಮಹಾಭಾರತದ ಪ್ರವಚನವನ್ನು ನಡೆಸುವವನು ಶುಚಿಯಾಗಿದ್ದು, ಒಳ್ಳೆಯ ಆಚಾರವಂತನಾಗಿ, ಶುಭ್ರವಸ್ತ್ರವನ್ನುಟ್ಟು, ಇಂದ್ರಿಯನಿಗ್ರಹವುಳ್ಳವನಾಗಿರಬೇಕು. ಸಂಸ್ಕಾರದಿಂದ ಪೂರ್ಣನಾಗಿರಬೇಕು. ಸರ್ವಶಾಸ್ತ್ರಗಳನ್ನೂ ತಿಳಿದುಕೊಂಡು ಶ್ರದ್ಧೆಯುಳ್ಳವನಾಗಿ, ಯಾರ ಬಗ್ಗೆಯೂ ಅಸೂಯೆಯಿಲ್ಲದೆ, ರೂಪವಂತನಾಗಿ, ಸೌಭಾಗ್ಯವಂತನಾಗಿ, ಸತ್ಯವಾದ ಮಾತುಗಳುಳ್ಳವನೂ, ಜಿತೇಂದ್ರಿಯನೂ ಆಗಿದ್ದು, ದಾನ ಹಾಗೂ ಗೌರವಗಳಿಂದ ಅವನನ್ನು ತೃಪ್ತಿ ಪಡಿಸಿರಬೇಕು. ಅಂತಹ ವ್ಯಕ್ತಿಯನ್ನೇ ವಾಚಕನನ್ನಾಗಿ ಮಾಡಬೇಕು.
ಅವಿಲಂಬಮನಾಯಸ್ತಮದ್ರುತಂ ಧೀರಮೂರ್ಜಿತಮ್ |
ಅಸಂಸಕ್ತಾಕ್ಷರಪದಂ ಸ್ವರಭಾವಸಮನ್ವಿತಮ್ ॥21॥
ತ್ರಿಷಷ್ಟಿವರ್ಣಸಂಯುಕ್ತಮಷ್ಟಸ್ಥಾನಸಮೀರಿತಮ್ |
ವಾಚಯೇದ್ ವಾಚಕಃ ಸ್ವಸ್ಥಃ ಸ್ವಾಸೀನಃ ಸುಸಮಾಹಿತಃ ॥22॥
ಆರೋಗ್ಯವಂತನಾದ, ಯೋಗ್ಯವಾದ ಆಸನದಲ್ಲಿ ಕುಳಿತಿರುವ, ಸಮಾಧಾನ ಚಿತ್ತನಾದ ಪ್ರವಚನಕಾರನು ಹೆಚ್ಚುವಿಳಂಬವಾಗದಂತೆ, ಶ್ರಮವಿಲ್ಲದೆಯೇ, ಹೆಚ್ಚು ವೇಗವೂ ಆಗದಂತೆ ಮನೋಹರವಾಗಿ, ಉತ್ಸಾಹಯುಕ್ತವಾಗಿ, ಅಕ್ಷರ ಹಾಗೂ ಪದಗಳನ್ನು ಒಟ್ಟಾರೆ ಸೇರಿಸದೆಯೇ ಯೋಗ್ಯವಾದ ಸ್ವರ ಹಾಗೂ ಭಾವಗಳಿಂದ ಕೂಡಿಕೊಂಡು, ಕಂಠತಾಲ್ವಾದಿ ಎಂಟು ಸ್ಥಾನಗಳಿಂದ ಉಚ್ಚರಿಸಲ್ಪಟ್ಟ, ಸುಸ್ಪಷ್ಟವಾಗಿ ಕೇಳುವ ಅರವತ್ತೂರು ವರ್ಣಗಳಿಂದ ಯುಕ್ತವಾಗಿ ಮಹಾಭಾರತದ ವಾಚನವನ್ನು ನಡೆಸಬೇಕು.
ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ |
ದೇವೀಂ ಸರಸ್ವತೀಂ (ವ್ಯಾಸಂ) ಚೈವ ತತೋ ಜಯಮುದೀರಯೇತ್ ॥
ಗ್ರಂಥಪ್ರತಿಪಾದ್ಯನಾದ ನಾರಾಯಣನನ್ನೂ, ಉಪಚಾರಕರಾದ ಶೇಷದೇವರನ್ನೂ, ಜೀವೋತ್ತಮರಾದ ವಾಯುದೇವರನ್ನೂ, ಸಕಲ ಭಾಗ್ಯದೇವಿಯಾದ ಲಕ್ಷ್ಮಿಯನ್ನೂ, ವಿದ್ಯಾಧಿದೇವಿಯಾದ ಸರಸ್ವತಿಯನ್ನೂ, ಗ್ರಂಥಕರ್ತೃಗಳಾದ ವೇದವ್ಯಾಸರನ್ನೂ ನಮಸ್ಕರಿಸಿ ಅನಂತರ ಮಹಾಭಾರತವನ್ನು ಹೇಳಬೇಕು.
ಈದೃಶಾದ್ ವಾಚಕಾದ್ ರಾಜನ್ ಶ್ರುತ್ವಾ ಭಾರತ ಭಾರತಮ್ |
ನಿಯಮಸ್ಥಃ ಶುಚಿಃ ಶ್ರೋತಾ ಶೃಣ್ವನ್ ಸ ಫಲಮಶ್ನುತೇ ॥24॥
ಹೇ ರಾಜನೇ, ಭಾರತನೇ, ಇಂತಹ ಪ್ರವಚನಕಾರರಿಂದ ಮಹಾಭಾರತವನ್ನು ಕೇಳಿರುವ ನಿಯಮನಿಷ್ಠನಾದ, ಶುಚಿರ್ಭೂತನಾದ ಶ್ರೋತೃವು ಮಹಾಭಾರತವನ್ನು ಕೇಳಿದ ಎಲ್ಲ ಫಲವನ್ನೂ ಪಡೆಯಬಲ್ಲನು.
ಪಾರಣಂ ಪ್ರಥಮಂ ಪ್ರಾಪ್ಯ ದ್ವಿಜಾನ್ ಕಾಮೈಶ್ಚ ತರ್ಪಯನ್ |

ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ವೈ ಲಭತೇ ನರಃ ॥25॥
ಮಹಾಭಾರತವನ್ನು ಒಂದು ಬಾರಿ ಪೂರ್ತಿಯಾಗಿ ಕೇಳಿ ಮಂಗಳಕಾಲದಲ್ಲಿ ಬ್ರಾಹ್ಮಣರನ್ನು ಅವರಿಗಿಷ್ಟವಾದ ವಸ್ತುಗಳಿಂದ ಸಂತೋಷಪಡಿಸಿದರೆ ಅಂತಹ ವ್ಯಕ್ತಿಯು ಅಗ್ನಿಷ್ಟೋಮ ಯಜ್ಞದ ಫಲವನ್ನು ಪಡೆಯುತ್ತಾನೆ.
ಅಪ್ಸರೋಗಣಸಂಕೀರ್ಣಂ ವಿಮಾನಂ ಲಭತೇ ಮಹತ್ |
ಪ್ರಹೃಷ್ಟಃ ಸ ತು ದೇವೈಶ್ಚ ದಿವಂ ಯಾತಿ ಸಮಾಹಿತಃ ॥26॥
ಅಪ್ಸರೆಯರ ಸಮೂಹದಿಂದ ತುಂಬಿದ ದೊಡ್ಡದಾದ ವಿಮಾನವನ್ನು ಪಡೆಯುತ್ತಾನೆ. ಹೀಗೆ ಅವನು ಸಂತೋಷದಿಂದ ಸಮಾಧಾನಚಿತ್ತನಾಗಿ ದೇವತೆಗಳ ಸಮೂಹವನ್ನು ಸೇರುತ್ತಾನೆ.
ದ್ವಿತೀಯಂ ಪಾರಣಂ ಪ್ರಾಪ್ಯ ಸೋತಿರಾತ್ರಫಲಂ ಲಭೇತ್ |
ಸರ್ವರತ್ನಮಯಂ ದಿವ್ಯಂ ವಿಮಾನಮಧಿರೋಹತಿ ॥27॥
ಎರಡು ಬಾರಿ ಮಹಾಭಾರತದ ಮಂಗಳವನ್ನು ಮಾಡಿದವನು ಅತಿರಾತ್ರಯಜ್ಞದ ಫಲವನ್ನು ಪಡೆಯುತ್ತಾನೆ. ಅವನು ಸರ್ವರತ್ನಗಳಿಂದ ತುಂಬಿದ ದಿವ್ಯವಾದ ವಿಮಾನವನ್ನು ಏರುತ್ತಾನೆ.
ದಿವ್ಯಮಾಲ್ಯಾಂಬರಧರೋ ದಿವ್ಯಗಂಧವಿಭೂಷಿತಃ |
ದಿವ್ಯಾಂಗದಧರೋ ನಿತ್ಯಂ ದೇವಲೋಕೇ ಮಹೀಯತೇ ॥28॥
ದಿವ್ಯವಾದ ಮಾಲೆ ಹಾಗೂ ವಸ್ತ್ರಗಳನ್ನು ಧರಿಸಿಕೊಂಡು, ದಿವ್ಯವಾದ ಗಂಧ ವಸ್ತುಗಳಿಂದ ಅಲಂಕೃತನಾಗಿ, ನಿತ್ಯವೂ ದಿವ್ಯವಾದ ಆಭರಣಗಳನ್ನು ಧರಿಸಿಕೊಂಡು ದೇವಲೋಕದಲ್ಲಿ ಮೆರೆಯುತ್ತಾನೆ.
ತೃತೀಯಂ ಪಾರಣಂ ಪ್ರಾಪ್ಯ ದ್ವಾದಶಾಹಫಲಂ ಲಭೇತ್ |
ವಸತ್ಯಮರಸಂಕಾಶೋ ವರ್ಷಾಣ್ಯಯುತಶೋ ದಿವಿ ॥29॥
ಮೂರು ಬಾರಿ ಮಹಾಭಾರತದ ಮಂಗಳವನ್ನು ನಡೆಸಿದವನು ದ್ವಾದಶಾಹ ಯಜ್ಞದ ಫಲವನ್ನು ಪಡೆಯುತ್ತಾನೆ. ಹತ್ತುಸಾವಿರ ವರ್ಷಗಳ ಕಾಲ ದೇವತೆಗಳಿಗೆ ಸದೃಶನಾಗಿ ಸ್ವರ್ಗದಲ್ಲಿ ವಾಸಮಾಡುತ್ತಾನೆ.
ಚತುರ್ಥೇ ವಾಜಪೇಯಸ್ಯ ಪಂಚಮೇ ದ್ವಿಗುಣಂ ಫಲಮ್ |
ಉದಿತಾದಿತ್ಯಸಂಕಾಶಂ ಜ್ವಲಂತಮನಲೋಪಮಮ್ ॥30॥
ವಿಮಾನಂ ವಿಬುಧೈಃ ಸಾರ್ಧಮಾರುಹ್ಯ ದಿವಿ ಗಚ್ಛತಿ |
ವರ್ಷಾಯುತಾನಿ ಭವನೇ ಶಕ್ರಸ್ಯ ದಿವಿ ಮೋದತೇ ॥31॥
ನಾಲ್ಕು ಬಾರಿ ಮಂಗಳವನ್ನು ನಡೆಸಿದವನು ವಾಜಪೇಯ ಯಾಗದ ಫಲವನ್ನು ಪಡೆಯುವನು. ಐದುಬಾರಿ ಮಂಗಳವನ್ನು ನಡೆಸಿದವನು ಹಿಂದಿಗಿಂತ ಎರಡು ಪಟ್ಟು ಫಲವನ್ನು ಪಡೆಯುತ್ತಾನೆ. ಅವನು ಉದಯಿಸುವ ಸೂರ್ಯನಿಗೆ ಸದೃಶನಾದ, ದೇದೀಪ್ಯಮಾನವಾದ ಅಗ್ನಿಯಂತೆ ಕಂಗೊಳಿಸುವ ವಿಮಾನವನ್ನು ದೇವತೆಗಳ ಜೊತೆಗೆ ಕೂಡಿಕೊಂಡು ಏರಿ, ಆಕಾಶದಲ್ಲಿ ಸಂಚರಿಸುವನು. ಅಲ್ಲದೆ ಸ್ವರ್ಗದಲ್ಲಿ ಇಂದ್ರ ಭವನದಲ್ಲಿ ಹತ್ತು ಸಾವಿರ ವರ್ಷಗಳ ಕಾಲ ಸಂತೋಷವಾಗಿ ವಾಸಮಾಡುತ್ತಾನೆ.
ಷಷ್ಠೇ ದ್ವಿಗುಣಮಸ್ತೀತಿ ಸಪ್ತಮೇ ತ್ರಿಗುಣಂ ಫಲಮ್ |
ಕೈಲಾಸಶಿಖರಾಕಾರಂ ವೈಡೂರ್ಯಮಣಿವೇದಿಕಮ್ ॥32॥
ಪರಿಕ್ಷಿಪ್ತಂ ಚ ಬಹುಧಾ ಮಣಿವಿದ್ರುಮಭೂಷಿತಮ್ |
ವಿಮಾನಂ ಸಮಧಿಷ್ಠಾಯ ಕಾಮಗಂ ಸಾಪ್ಸರೋಗಣಮ್ ॥33॥
ಸರ್ವಾನ್ ಲೋಕಾನ್ ವಿಚರತೇ ದ್ವಿತೀಯ ಇವ ಭಾಸ್ಕರಃ |
ಅಷ್ಟಮೇ ರಾಜಸೂಯಸ್ಯ ಪಾರಣೇ ಲಭತೇ ಫಲಮ್ ॥34॥
ಆರು ಬಾರಿ ಮಹಾಭಾರತದ ಮಂಗಳವನ್ನು ನಡೆಸಿದವನು ಹಿಂದಿಗಿಂತ ಎರಡು ಪಟ್ಟು ಫಲವನ್ನೂ, ಏಳು ಬಾರಿ ಮಂಗಳವನ್ನು ನಡೆಸಿದವನು ಮೂರು ಪಟ್ಟು ಫಲವನ್ನು ಪಡೆಯುತ್ತಾನೆ. ಅಂತಹ ವ್ಯಕ್ತಿಯು ಕೈಲಾಸ ಶಿಖರದಂತೆ ರೂಪವುಳ್ಳ, ವೈಡೂರ್ಯ ಮಣಿಗಳಿಂದ ಮಾಡಿದ ವೇದಿಕೆಯುಳ್ಳ, ನಾನಾ ರೀತಿಯಾಗಿ ಸುತ್ತಲೂ ಕಟ್ಟಲ್ಪಟ್ಟ ಪಟ್ಟಿಗಳುಳ್ಳ, ಮುತ್ತು-ಹವಳ ಮೊದಲಾದ ಮಣಿಗಳಿಂದ ಅಲಂಕೃತವಾದ, ಬಯಸಿದಲ್ಲಿಗೆ ಹೋಗಬಲ್ಲ ವಿಮಾನವನ್ನು ಅಪ್ಸರಾಸ್ತ್ರೀಯರ ಸಮೂಹದೊಂದಿಗೆ ಏರಿ, ಎರಡನೆಯ ಸೂರ್ಯನಂತೆ ಎಲ್ಲ ಲೋಕಗಳನ್ನೂ ಸಂಚರಿಸಬಲ್ಲನು. ಎಂಟು ಬಾರಿ ಮಹಾಭಾರತದ ಮಂಗಳವನ್ನು ನಡೆಸಿದವನು ರಾಜಸೂಯ ಯಾಗದ ಫಲವನ್ನು ಪಡೆಯುತ್ತಾನೆ.
ಚಂದ್ರೋದಯನಿಭಂ ರಮ್ಯಂ ವಿಮಾನಮಧಿರೋಹತಿ |
ಚಂದ್ರರಶ್ಮಿಪ್ರತೀಕಾಶೈರ್ಹಯೈರ್ಯುಕ್ತಂ ಮನೋಜವೈಃ ॥35॥
ಸೇವ್ಯಮಾನೋ ವರಸ್ತ್ರೀಣಾಂ ಚಂದ್ರಾತ್ ಕಾಂತತರೈರ್ಮುಖೈಃ |
ಮೇಖಲಾನಾಂ ನಿನಾದೇನ ನೂಪುರಾಣಾಂ ಚ ನಿಃಸ್ವನೈಃ ॥36॥
ಅಂಕೇ ಪರಮನಾರೀಣಾಂ ಸುಖಸುಪ್ತೋ ವಿಬುದ್ಧ್ಯತೇ |
ನವಮೇ ಕ್ರತುರಾಜಸ್ಯ ವಾಜಿಮೇಧಸ್ಯ ಭಾರತ ॥37॥
ಅವನು ಉದಯಿಸುತ್ತಿರುವ ಚಂದ್ರನಿಗೆ ಸದೃಶವಾದ, ಮನೋಹರವಾದ ವಿಮಾನವನ್ನು ಏರುತ್ತಾನೆ. ಆ ವಿಮಾನವು ಮನೋವೇಗವುಳ್ಳ, ಚಂದ್ರನ ಬೆಳದಿಂಗಳಿನಂತೆ ಮನೋಹರವಾದ ಕುದುರೆಗಳಿಂದ ಕೂಡಿರುತ್ತದೆ. ಅಲ್ಲಿ ಅವನು ದಿವ್ಯಸ್ತ್ರೀಯರ ಚಂದ್ರನಿಗಿಂತಲೂ ಮನೋಹರವಾದ ಮುಖಗಳಿಂದ ಸೇವೆಯನ್ನು ಸ್ವೀಕರಿಸುತ್ತಾ, ಅವರ ವಡ್ಯಾಣದ ನಾದಗಳಿಂದಲೂ, ಗೆಜ್ಜೆಗಳ ನಾದದಿಂದಲೂ ಸಂತೋಷಪಡುತ್ತಾ, ಆ ಸ್ತ್ರೀಯರ ತೊಡೆಗಳಲ್ಲಿ ಸುಖವಾಗಿ ಮಲಗಿ ಸಂತೋಷ ಪಡುತ್ತಾನೆ. ಹೇ ಭಾರತನೇ, ಒಂಬತ್ತು ಬಾರಿ ಮಹಾಭಾರತದ ಮಂಗಳವನ್ನು ನಡೆಸಿದವನು ಯಜ್ಞಗಳಲ್ಲಿ ರಾಜನಾದ ಅಶ್ವಮೇಧಯಾಗದ ಫಲವನ್ನು

ಪಡೆಯುತ್ತಾನೆ.
ಕಾಂಚನಸ್ತಂಭನಿರ್ಯೂಹವೈದೂರ್ಯಕೃತವೇದಿಕಮ್ |
ಜಾಂಬೂನದಮಯೈರ್ದಿವ್ಯೈರ್ಗವಾಕ್ಷೈಃ ಸರ್ವತೋ ವೃತಮ್ ॥38॥
ಸೇವಿತಂ ಚಾಪ್ಸರಃಸ್ಯರ್ಂಗರ್ಗಂಧರ್ವೈರ್ದಿವಿ ಚಾರಿಭಿಃ |
ವಿಮಾನಂ ಸಮಧಿಷ್ಠಾಯ ಶ್ರಿಯಾ ಪರಮಯಾ ಜ್ವಲನ್ ॥39॥
ದಿವ್ಯಮಾಲ್ಯಾಂಬರಧರೋ ದಿವ್ಯಚಂದನರೂಷಿತಃ |
ಮೋದತೇ ದೈವತ್ಯೈಃ ಸಾರ್ಧಂ ದಿವಿ ದೇವ ಇವಾಪರಃ ॥40॥
ಅವನು ಬಂಗಾರದ ಕಂಬ ಹಾಗೂ ಅಟ್ಟಣಿಗೆಗಳಿಂದ ಕೂಡಿದ, ವೈಡೂರ್ಯ- ಮಯವಾದ ವೇದಿಕೆಯುಳ್ಳ, ಸುತ್ತಲೂ ಬಂಗಾರದಿಂದ ರಚಿಸಿದ ಕಿಟಕಿಗಳುಳ್ಳ, ಅಪ್ಸರಸಮೂಹ ಹಾಗೂ ದೇವ-ಗಂಧರ್ವರಿಂದ ಸೇವಿತವಾದ ವಿಮಾನವನ್ನು ಏರಿ, ಉತ್ತಮವಾದ ಐಶ್ವರ್ಯದಿಂದ ಬೆಳಗುತ್ತಾ, ದಿವ್ಯವಾದ ಮಾಲೆ ಹಾಗೂ ವಸ್ತ್ರಗಳನ್ನು ಧರಿಸಿ, ದೇವಲೋಕದ ಚಂದನದಿಂದ ಲೇಪಿತನಾಗಿ ದೇವತೆಗಳೊಂದಿಗೆ ಸ್ವರ್ಗದಲ್ಲಿ ಇನ್ನೊಬ್ಬ ದೇವತೆಯಂತೆ ಸಂತೋಷಪಡುತ್ತಾನೆ.
ದಶಮಂ ಪಾರಣಂ ಪ್ರಾಪ್ಯ ದ್ವಿಜಾತೀನಭಿವಂದ್ಯ ಚ |
ಕಿಂಕಿಣೀಜಾಲನಿರ್ಘೋಷಂ ಪತಾಕಾಧ್ವಜಶೋಭಿತಮ್ ॥41॥
ರತ್ನವೇದಿಕಸಂಬಾಧಂ ವೈದೂರ್ಯಮಣಿತೋರಣಮ್ |
ಹೇಮಜಾಲಪರಿಕ್ಷಿಪ್ತಂ ಪ್ರವಾಲವಲಭೀಮುಖಮ್ ॥42॥
ಗಂಧರ್ವೈರ್ಗೀತಕುಶಲೈರಪ್ಸರೋಭಿಶ್ಚ ಶೋಭಿತಮ್ |
ವಿಮಾನಂ ಸುಕೃತಾವಾಸಂ ಸುಖೇನೈವೋಪಪದ್ಯತೇ ॥43॥
ಹತ್ತನೆ ಬಾರಿ ಮಹಾಭಾರತದ ಮಂಗಳವನ್ನು ನಡೆಸಿ ಬ್ರಾಹ್ಮಣರನ್ನು ಗೌರವಿಸಿದರೆ ಕಿಂಕಿಣಿಗಳ ಸಮೂಹದ ಘೋಷದಿಂದ ಕೂಡಿದ, ಪತಾಕೆ ಹಾಗೂ ಧ್ವಜಗಳಿಂದ ಅಲಂಕೃತವಾದ, ರತ್ನಮಯವಾದ ವೇದಿಕೆಗಳಿಂದ ಕೂಡಿದ, ವೈಡೂರ್ಯ ಮಣಿಗಳ ತೋರಣವುಳ್ಳ, ಚಿನ್ನದ ಬಲೆಯಿಂದ ಸುತ್ತುವರಿಯಲ್ಪಟ್ಟ, ಹವಳದ ಹೊರಾಂಗಣ ದ್ವಾರವುಳ್ಳ, ಸಂಗೀತ ಕುಶಲರಾದ ಗಂಧರ್ವರಿಂದಲೂ, ಅಪ್ಸರಸ್ತ್ರೀಯರಿಂದಲೂ ಶೋಭಿತವಾದ, ಪುಣ್ಯವಂತರಿಗೆ ಮಾತ್ರ ಸಿಗಬಹುದಾದ ವಿಮಾನವನ್ನು ಸುಖವಾಗಿ ಪಡೆಯುತ್ತಾನೆ.
ಮುಕುಟೇನಾಗ್ನಿವರ್ಣೇನ ಜಾಂಬೂನದವಿಭೂಷಿಣಾ |
ದಿವ್ಯಚಂದನದಿಗ್ಧಾಂಗೋ ದಿವ್ಯಮಾಲ್ಯವಿಭೂಷಿತಃ ॥44॥
ದಿವ್ಯಾನ್ ಲೋಕಾನ್ ವಿಚರತಿ ದಿವ್ಯೈರ್ಭೋಗೈಃ ಸಮನ್ವಿತಃ |
ವಿಬುಧಾನಾಂ ಪ್ರಸಾದೇನ ಶ್ರಿಯಾ ಪರಮಯಾ ಯುತಃ ॥45॥
ಅಗ್ನಿಯಂತೆ ಜ್ವಲಿಸುವ, ಚಿನ್ನದಿಂದ ಮಾಡಿದ ಕುಸುರಿಕೆತ್ತನೆಗಳುಳ್ಳ ಕಿರೀಟವನ್ನು ತೊಟ್ಟು, ದಿವ್ಯವಾದ ಗಂಧಗಳಿಂದ ಲೇಪಿತವಾದ ಅಂಗಗಳುಳ್ಳವನಾಗಿ, ದಿವ್ಯ ಮಾಲೆಗಳಿಂದ ಅಲಂಕೃತನಾಗಿ, ಸ್ವರ್ಗಲೋಕಗಳ ಭೋಗಗಳಿಂದ ಕೂಡಿಕೊಂಡು ದೇವತೆಗಳ ಅನುಗ್ರಹದಿಂದ ಉತ್ಕೃಷ್ಟವಾದ ಐಶ್ವರ್ಯದಿಂದ ಕೂಡಿದವನಾಗಿ ದಿವ್ಯಲೋಕಗಳಲ್ಲಿ ಸಂಚರಿಸುತ್ತಾನೆ.
ಅಥ ವರ್ಷಗಣಾನೇವಂ ಸ್ವರ್ಗಲೋಕೇ ಮಹೀಯತೇ |
ತತೋ ಗಂಧರ್ವಸಹಿತಃ ಸಹಸ್ರಾಣ್ಯೇಕವಿಂಶತಿಮ್ ॥46॥
ಪುರಂದರಪುರೇ ರಮ್ಯೇ ಶಕ್ರೇಣ ಸಹ ಮೋದತೇ |
ದಿವ್ಯಯಾನವಿಮಾನೇಷು ಲೋಕೇಷು ವಿವಿಧೇಷು ಚ ॥47॥
ದಿವ್ಯನಾರೀಗಣಾಕೀರ್ಣೋ ನಿವಸತ್ಯಮರೋ ಯಥಾ |
ತತಃ ಸೂರ್ಯಸ್ಯ ಭವನೇ ಚಂದ್ರಸ್ಯ ಭವನೇ ತಥಾ ॥48॥
ಶಿವಸ್ಯ ಭವನೇ ರಾಜನ್ ವಿಷ್ಣೋರ್ಯಾತಿ ಸಲೋಕತಾಮ್ |
ಏವಮೇತನ್ಮಹಾರಾಜ ನಾತ್ರ ಕಾರ್ಯಾ ವಿಚಾರಣಾ ॥49॥
ಅಲ್ಲದೆ ಅನೇಕ ವರ್ಷಗಳ ಕಾಲ ಸ್ವರ್ಗಲೋಕದಲ್ಲಿ ಮೆರೆಯುತ್ತಾನೆ. ಅನಂತರ ಇಪ್ಪತ್ತೊಂದು ಸಾವಿರ ವರ್ಷಗಳ ಕಾಲ ಗಂಧರ್ವರೊಂದಿಗೂ ರಮ್ಯವಾದ ಇಂದ್ರಲೋಕದಲ್ಲಿ ಇಂದ್ರನ ಜೊತೆಗೆ ಆನಂದವನ್ನು ಹೊಂದುತ್ತಾನೆ. ಅಲ್ಲದೆ ದಿವ್ಯವಾದ ವಾಹನ ಮತ್ತು ವಿಮಾನಗಳಲ್ಲಿ ವಿವಿಧ ಲೋಕಗಳಲ್ಲಿ ಸ್ವರ್ಗಲೋಕದ ನಾರೀ ಸಮೂಹದಿಂದ ಸುತ್ತುವರಿಯಲ್ಪಟ್ಟು ದೇವತೆಗಳಂತೆಯೇ ವಾಸ ಮಾಡುವನು. ಅನಂತರ ಸೂರ್ಯನ ಭವನದಲ್ಲಿಯೂ, ಚಂದ್ರನ ಭವನದಲ್ಲಿಯೂ, ರುದ್ರನ ಭವನದಲ್ಲಿಯೂ ಇದೇ ರೀತಿ ಅನೇಕ ವರ್ಷಗಳ ಕಾಲ ಸಂತೋಷಪಡುತ್ತಾನೆ. ರಾಜನೇ, ಕೊನೆಗೆ ವಿಷ್ಣುಲೋಕವನ್ನೇ ಪಡೆಯುತ್ತಾನೆ. ಹೇ ಮಹಾರಾಜನೇ, ಮಹಾಭಾರತವನ್ನು ಶ್ರವಣ ಮಾಡಿದ ಫಲವು ಹೀಗೆ ಇರುತ್ತದೆ. ಇದರಲ್ಲಿ ಯಾವುದೇ ವಿಮರ್ಶೆಯ ಅಗತ್ಯವಿಲ್ಲ.
ಶ್ರದ್ದಧಾನೇನ ವೈ ಭಾವ್ಯಮೇವಮಾಹ ಗುರುರ್ಮಮ |
ವಾಚಕಸ್ಯ ತು ದಾತವ್ಯಂ ಮನಸಾ ಯದ್ಯದಿಚ್ಛತಿ ॥50॥
ಹಸ್ತ್ಯಶ್ವರಥಯಾನಾನಿ ವಾಹನಾನಿ ವಿಶೇಷತಃ |
ಕಟಕೇ ಕುಂಡಲೇ ಚೈವ ಬ್ರಹ್ಮಸೂತ್ರಂ ತಥಾ ಪರಮ್ ॥51॥
ವಸ್ತ್ರಂ ಚೈವ ವಿಚಿತ್ರಂ ಚ ಗಂಧಂ ಚೈವ ವಿಶೇಷತಃ |
ದೇವವತ್ ಪೂಜಯೇತ್ ತಂ ತು ವಿಷ್ಣುಲೋಕಮವಾಪ್ನುಯಾತ್ ॥52॥
ಈ ಎಲ್ಲ ಕ್ರಿಯೆಗಳನ್ನು ಶ್ರದ್ಧೆಯಿಂದ ಕೂಡಿಕೊಂಡೇ, ವಿಶ್ವಾಸಯುಕ್ತನಾಗಿಯೇ ಮಾಡಬೇಕು. ಹೀಗೆಯೇ ನನ್ನ ಗುರುಗಳು ಹೇಳಿದ್ದಾರೆ. ಮಹಾಭಾರತದ ಪ್ರವಚನವನ್ನು ನಡೆಸಿದವನಿಗೆ ಅವನು ಮನಸ್ಸಿನಲ್ಲಿ ಏನೇನು ಬಯಸುವನೋ ಅಂತಹ ಆನೆ, ಕುದುರೆ, ರಥ,

ಪಲ್ಲಕಿಯೇ ಮೊದಲಾದ ವಾಹನಗಳನ್ನೂ ವಿಶೇಷ ರೀತಿಯಿಂದ ನೀಡಬೇಕು. ಅಲ್ಲದೆ ಕಡಗಗಳನ್ನು, ಕುಂಡಲಗಳನ್ನು, ಉತ್ತಮವಾದ ಬ್ರಹ್ಮಸೂತ್ರವನ್ನು, ಚಿತ್ರ ವಿಚಿತ್ರವಾದ ವಸ್ತ್ರಗಳನ್ನು, ಉತ್ತಮವಾದ ಗಂಧವನ್ನು ವಿಶೇಷವಾಗಿ ನೀಡಬೇಕು. ಆ ವಾಚಕನನ್ನು ದೇವರಂತೆಯೇ ಪೂಜಿಸಬೇಕು. ಹೀಗೆ ಮಾಡುವುದರಿಂದ ವಿಷ್ಣು ಲೋಕವನ್ನೇ ಪಡೆಯುವನು.

ಅತಃ ಪರಂ ಪ್ರವಕ್ಷ್ಯಾಮಿ ಯಾನಿ ದೇಯಾನಿ ಭಾರತೇ |
ವಾಚ್ಯಮಾನೇ ತು ವಿಪ್ರೇಭ್ಯೋ ರಾಜನ್ ಪರ್ವಣಿ ಪರ್ವಣಿ ॥53॥

ಹೇ ರಾಜನೇ, ಇನ್ನು ಮುಂದೆ ಮಹಾಭಾರತದ ಪ್ರವಚನವು ನಡೆಯುತ್ತಿರುವಾಗ ಪ್ರತಿಯೊಂದು ಪರ್ವದಲ್ಲೂ ಬ್ರಾಹ್ಮಣರಿಗೆ ಏನೇನನ್ನು ನೀಡಬೇಕೆಂದು ಹೇಳಲಿದ್ದೇನೆ.

ಜಾತಿಂ ದೇಶಂ ಚ ಸತ್ಯಂ ಚ ಮಾಹಾತ್ಮ್ಯಂ ಭರತರ್ಷಭ |
ಧರ್ಮಂ ವೃತ್ತಿಂ ಚ ವಿಜ್ಞಾಯ ಕ್ಷತ್ರಿಯಾಣಾಂ ನರಾಧಿಪ ॥54॥
ಸ್ವಸ್ತಿ ವಾಚ್ಯ ದ್ವಿಜಾನಾದೌ ತತಃ ಕಾರ್ಯೇ ಪ್ರವರ್ತಿತೇ |
ಸಮಾಪ್ತೇ ಪರ್ವಣಿ ತತಃ ಸ್ವಶಕ್ತ್ಯಾ ಪೂಜಯೇದ್ ದ್ವಿಜಾನ್ ॥55॥

ಹೇ ಭರತಶ್ರೇಷ್ಠನೇ, ನರಾಧಿಪತಿಯೇ, ಜಾತಿಯನ್ನೂ, ಇರುವ ಪ್ರದೇಶವನ್ನೂ, ಮಾಡಿದ ಪ್ರತಿಜ್ಞೆಯನ್ನೂ, ಅವರ ದೊಡ್ಡತನವನ್ನೂ, ಧರ್ಮಾಚರಣೆಯನ್ನೂ, ವೃತ್ತಿಯನ್ನೂ ಚೆನ್ನಾಗಿ ತಿಳಿದು ಬ್ರಾಹ್ಮಣರನ್ನು ಮೊದಲು ಪೂಜಿಸಬೇಕು. ಅನಂತರ ರಾಜ್ಯವನ್ನು ರಕ್ಷಿಸುವ ಕ್ಷತ್ರಿಯರಿಗೆ ಸ್ವಸ್ತಿವಾಚನವನ್ನು ಬ್ರಾಹ್ಮಣರಿಂದ ಮಾಡಿಸಬೇಕು. ನಂತರ ಮಹಾಭಾರತ ಪ್ರವಚನಕಾರ್ಯವು ಆರಂಭವಾದ ಮೇಲೆ ಪ್ರತಿಯೊಂದು ಪರ್ವದ ಸಮಾಪ್ತಿಕಾಲದಲ್ಲಿ ಬ್ರಾಹ್ಮಣರನ್ನು ಪೂಜಿಸಬೇಕು.

ಆದೌ ತು ವಾಚಕಂ ಚೈವ ವಸ್ತ್ರಗಂಧಸಮನ್ವಿತಮ್ |
ವಿಧಿವದ್ ಭೋಜಯೇದ್ ರಾಜನ್ ಮಧುಪಾಯಸಮುತ್ತಮಮ್ ॥

ಹೇ ರಾಜನೇ, ಮೊದಲ ಪರ್ವದಲ್ಲಿ ಪ್ರವಚನಕಾರರಿಗೆ ವಸ್ತ್ರ ಹಾಗೂ ಗಂಧಗಳನ್ನು ನೀಡಿ ಗೌರವಿಸಿ, ಉತ್ತಮವಾದ ಜೇನಿನಿಂದ ಕೂಡಿದ ಪಾಯಸವನ್ನು ವಿಧಿವತ್ತಾಗಿ ಉಣಬಡಿಸಬೇಕು.

ತತೋ ಮೂಲಫಲಪ್ರಾಯಂ ಪಾಯಸಂ ಮಧುಸರ್ಪಿಷಾ |
ಆಸ್ತೀಕೇ ಭೋಜಯೇದ್ ರಾಜನ್ ದದ್ಯಾಚ್ಚೈವ ಗುಡೌದನಮ್ ॥57॥

ಹೇ ರಾಜನೇ, ಅನಂತರ ಆಸ್ತಿಕಪರ್ವ ಸಮಾಪ್ತಿಕಾಲಕ್ಕೆ ಬ್ರಾಹ್ಮಣರಿಗೆ ಮೂಲ-ಫಲಗಳೇ ಅಧಿಕವಾಗಿ ಉಳ್ಳ ಆಹಾರವನ್ನೂ, ಜೇನು ಹಾಗೂ ತುಪ್ಪದಿಂದ ಕೂಡಿದ ಪಾಯಸವನ್ನೂ ಉಣಬಡಿಸಬೇಕು. ಅಲ್ಲದೆ ಗುಡಾನ್ನವನ್ನೂ ನೀಡಬೇಕು.

ಅಪೂಪೈಶ್ಚೈವ ಪೂಪೈಶ್ಚ ಮೋದಕೈಶ್ಚ ಸಮನ್ವಿತಮ್ |
ಸಭಾಪರ್ವಣಿ ರಾಜೇಂದ್ರ ಹವಿಷ್ಯಂ ಭೋಜಯೇದ್ ದ್ವಿಜಾನ್ ॥58॥

ಹೇ ರಾಜೇಂದ್ರನೇ, ಸಭಾಪರ್ವದ ಸಮಾಪ್ತಿ ಕಾಲಕ್ಕೆ ನಾನಾ ರೀತಿಯ ಅಪೂಪಗಳಿಂದಲೂ, ಹಿಟ್ಟಿನ ಭಕ್ಷ್ಯಗಳಿಂದಲೂ, ಮೋದಕಗಳಿಂದಲೂ ಕೂಡಿದ ಹವಿಷ್ಯಪದಾರ್ಥವನ್ನು ಬ್ರಾಹ್ಮಣರಿಗೆ ಉಣಬಡಿಸಬೇಕು.

ಆರಣ್ಯಕೇ ಮೂಲಫಲೈಸ್ತರ್ಪಯೇತ್ತು ದ್ವಿಜೋತ್ತಮಾನ್ |
ಅರಣೀಪರ್ವ ಚಾಸಾದ್ಯ ಜಲಕುಂಭಾನ್ ಪ್ರದಾಪಯೇತ್ ॥59॥

ವನಪರ್ವದ ಪ್ರವಚನಕಾಲಕ್ಕೆ ಬ್ರಾಹ್ಮಣರನ್ನು ಮೂಲ-ಫಲಗಳಿಂದ ತೃಪ್ತಿ ಪಡಿಸಬೇಕು. ಅರಣೀಪರ್ವವನ್ನು ಪ್ರವಚನ ಮಾಡುವ ಕಾಲಕ್ಕೆ ಜಲಕುಂಭಗಳನ್ನು ದಾನ ಮಾಡಬೇಕು.

ತರ್ಪಣಾನಿ ಚ ಮುಖ್ಯಾನಿ ವನ್ಯಮೂಲಫಲಾನಿ ಚ |
ಸರ್ವಕಾಮಗುಣೋಪೇತಂ ವಿಪ್ರೇಭ್ಯೋಽನ್ನಂ ಪ್ರದಾಪಯೇತ್ ॥60॥
ವಿರಾಟಪರ್ವಣಿ ತಥಾ ವಾಸಾಂಸಿ ವಿವಿಧಾನಿ ಚ |
ಉದ್ಯೋಗೇ ಭರತಶ್ರೇಷ್ಠ ಸರ್ವಕಾಮಗುಣಾನ್ವಿತಮ್ ॥61॥
ಭೋಜನಂ ಭೋಜಯೇದ್ ವಿಪ್ರಾನ್ ಗಂಧಮಾಲ್ಯೈರಲಂಕೃತಾನ್ |
ಭೀಷ್ಮಪರ್ವಣಿ ರಾಜೇಂದ್ರ ದತ್ತ್ವಾ ಯಾನಮನುತ್ತಮಮ್ ॥62॥
ತತಃ ಸರ್ವಗುಣೋಪೇತಮನ್ನಂ ದದ್ಯಾತ್ ಸುಸಂಸ್ಕೃತಮ್ |
ದ್ರೋಣಪರ್ವಣಿ ವಿಪ್ರೇಭ್ಯೋ ಭೋಜನಂ ಪರಮಾರ್ಚಿತಮ್ ॥63॥
ಶರಾಶ್ಚ ದೇಯಾ ರಾಜೇಂದ್ರ ಚಾಪಾನ್ಯಸಿವರಾಸ್ತಥಾ |
ಕರ್ಣಪರ್ವಣ್ಯಪಿ ತಥಾ ಭೋಜನಂ ಸಾರ್ವಕಾಮಿಕಮ್ ॥64॥
ವಿಪ್ರೇಭ್ಯಃ ಸಂಸ್ಕೃತಂ ಸಮ್ಯಗ್ದದ್ಯಾತ್ ಸಂಯತಮಾನಸಃ |
ಶಲ್ಯಪರ್ವಣಿ ರಾಜೇಂದ್ರ ಮೋದಕೈಃ ಸಗುಡೌದನೈಃ ॥65॥
ಅಪೂಪೈಸ್ತರ್ಪಣೈಶ್ಚೈವ ಸರ್ವಮನ್ನಂ ಪ್ರದಾಪಯೇತ್ |
ಗದಾಪರ್ವಣ್ಯಪಿ ತಥಾ ಮುದ್ಗಮಿಶ್ರಂ ಪ್ರದಾಪಯೇತ್ ॥66॥

ವಿರಾಟ ಪರ್ವದ ಪ್ರವಚನಕಾಲಕ್ಕೆ ಅಧಿಕವಾದ ತೃಪ್ತಿಯನ್ನು ನೀಡುವ, ಕಾಡಿನಲ್ಲಿ ಬೆಳೆದ ಮೂಲಫಲಗಳನ್ನು ಒಳಗೊಂಡ, ಎಲ್ಲರೂ ಬಯಸಬಹುದಾದ ಗುಣಗಳಿಂದ ಕೂಡಿದ ಅನ್ನವನ್ನೂ, ಹಾಗೆಯೇ ನಾನಾ ರೀತಿಯ ವಸ್ತ್ರಗಳನ್ನೂ ಬ್ರಾಹ್ಮಣರಿಗೆ ನೀಡಬೇಕು. ಹೇ ಭರತಶ್ರೇಷ್ಠನೇ, ಉದ್ಯೋಗಪರ್ವದ ಪ್ರವಚನಕಾಲಕ್ಕೆ ಗಂಧಮಾಲ್ಯಾದಿಗಳಿಂದ ಅಲಂಕೃತವಾದ ಬ್ರಾಹ್ಮಣರನ್ನು ಅವರವರಿಗೆ ಇಷ್ಟವಾದ ಅನ್ನವನ್ನು ನೀಡುವುದರ ಮೂಲಕ ಸಂತೋಷಗೊಳಿಸಬೇಕು. ಹೇ ರಾಜಶ್ರೇಷ್ಠನೇ, ಭೀಷ್ಮಪರ್ವದ ಪ್ರವಚನಕಾಲಕ್ಕೆ ಉತ್ತಮವಾದ ವಾಹನವನ್ನು ನೀಡಿ, ಅನಂತರ ಸುಸಂಸ್ಕೃತವಾದ, ಸರ್ವಗುಣಗಳಿಂದ ಕೂಡಿದ ಅನ್ನವನ್ನು

ಉಣಬಡಿಸಬೇಕು. ಹೇ ರಾಜೇಂದ್ರನೇ, ದ್ರೋಣಪರ್ವದ ಪ್ರವಚನಕಾಲಕ್ಕೆ ಬಹು ಆದರಪೂರ್ವಕವಾಗಿ ಬ್ರಾಹ್ಮಣರಿಗೆ ಅನ್ನವನ್ನೂ ಹಾಗೂ ಶರಗಳನ್ನೂ, ಬಿಲ್ಲುಗಳನ್ನೂ, ಶ್ರೇಷ್ಠವಾದ ಖಡ್ಗಗಳನ್ನೂ ನೀಡಬೇಕು. ನಂತರ ಕರ್ಣಪರ್ವದಲ್ಲಿ ಬ್ರಾಹ್ಮಣರಿಗೆ ಬಹು ಅಪೇಕ್ಷಣೀಯವಾದ, ಸುಸಂಸ್ಕೃತವಾದ ಅನ್ನವನ್ನು ನಿರ್ಮಲಚಿತ್ತನಾಗಿ ನೀಡಬೇಕು. ಹೇ ರಾಜಶ್ರೇಷ್ಠನೇ, ಶಲ್ಯಪರ್ವದ ಪ್ರವಚನಕಾಲಕ್ಕೆ ಮೋದಕಗಳಿಂದಲೂ, ಗುಡಾನ್ನಗಳಿಂದಲೂ, ಅಪೂಪಗಳಿಂದಲೂ, ನಾನಾ ರೀತಿಯ ಪಾನಕಗಳಿಂದಲೂ ಕೂಡಿದ ಎಲ್ಲ ರೀತಿಯ ಅನ್ನವನ್ನು ನೀಡಬೇಕು. ಅಂತೆಯೇ ಗದಾಪರ್ವದಲ್ಲಿಯೂ ಕೂಡ ಹಿಂದೆ ಹೇಳಿದ ಎಲ್ಲವನ್ನೂ ಮುದ್ಗಾನ್ನದ ಜೊತೆಗೆ ನೀಡಬೇಕು.

ಸ್ತ್ರೀಪರ್ವಣಿ ತಥಾ ರತ್ನೈಸ್ತರ್ಪಯೇತ್ತು ದ್ವಿಜೋತ್ತಮಾನ್ |
ಘೃತೌದನಂ ಪುರಸ್ತಾಚ್ಚ ಐಷೀಕೇ ದಾಪಯೇತ್ ಪುನಃ ॥67॥
ತತಃ ಸರ್ವಗುಣೋಪೇತಮನ್ನಂ ದದ್ಯಾತ್ ಸುಸಂಸ್ಕೃತಮ್ |
ಶಾಂತಿಪರ್ವಣ್ಯಪಿ ತಥಾ ಹವಿಷ್ಯಂ ಭೋಜಯೇದ್ ದ್ವಿಜಾನ್ ॥68॥

ಸ್ತ್ರೀಪರ್ವದ ಪ್ರವಚನಕಾಲಕ್ಕೆ ರತ್ನಗಳಿಂದ ಬ್ರಾಹ್ಮಣಶ್ರೇಷ್ಠರನ್ನು ಸಂತೋಷ ಪಡಿಸಬೇಕು. ಜೊತೆಗೆ ತುಪ್ಪದಿಂದ ಸಹಿತವಾದ ಅನ್ನವನ್ನು ನೀಡಬೇಕು. ಮುಂದೆ ಐಷೀಕಪರ್ವದಲ್ಲಿ (ಸೌಪ್ತಿಕ) ಸರ್ವಗುಣಗಳಿಂದ ಕೂಡಿದ ಸುಸಂಸ್ಕೃತವಾದ ಅನ್ನವನ್ನು ನೀಡಬೇಕು. ಹಾಗೆಯೇ ಶಾಂತಿಪರ್ವದಲ್ಲೂ ಹವಿಷ್ಯಪದಾರ್ಥಗಳನ್ನು ಬ್ರಾಹ್ಮಣರಿಗೆ ಉಣಬಡಿಸಬೇಕು.

ಅಶ್ವಮೇಧಿಕಮಾಸಾದ್ಯ ಭೋಜನಂ ಸಾರ್ವಕಾಮಿಕಮ್ |
ತಥಾಽಽಶ್ರಮವಾಸಿಕೇ ತು ಹವಿಷ್ಯಂ ಭೋಜಯೇದ್ ದ್ವಿಜಾನ್ ॥69॥

ಆಶ್ವಮೇಧಿಕಪರ್ವದ ಪ್ರವಚನ ನಡೆಯುವ ಕಾಲಕ್ಕೆ ಎಲ್ಲರೂ ಬಯಸುವ ಉತ್ತಮವಾದ ಅನ್ನವನ್ನೂ ಹಾಗೆಯೇ ಆಶ್ರಮವಾಸಿಕ ಪರ್ವದಲ್ಲಿ ಹವಿಷ್ಯ ಪದಾರ್ಥಗಳನ್ನು ಬ್ರಾಹ್ಮಣರಿಗೆ ಉಣಬಡಿಸಬೇಕು.

ಮೌಸಲೇ ಸಾರ್ವಗುಣಿಕಂ ಗಂಧಮಾಲ್ಯಾನುಲೇಪನಮ್ |
ಮಹಾಪ್ರಾಸ್ಥಾನಿಕೇ ತದ್ವತ್ ಸರ್ವಕಾಮಗುಣಾನ್ವಿತಮ್ ॥70॥

ಮೌಸಲಪರ್ವದಲ್ಲಿ ಎಲ್ಲ ರೀತಿಯ ಗುಣಗಳಿಂದ ಕೂಡಿದ ಗಂಧ, ಮಾಲ್ಯ, ಅನುಲೇಪನಾದಿಗಳನ್ನು ನೀಡಬೇಕು. ಅಂತೆಯೇ ಮಹಾಪ್ರಾಸ್ಥಾನಿಕಪರ್ವದಲ್ಲೂ ಎಲ್ಲರೂ ಬಯಸುವ ಮಾಲ್ಯಾದಿಗಳನ್ನು ನೀಡಬೇಕು.

ಸ್ವರ್ಗಪರ್ವಣ್ಯಪಿ ತಥಾ ಹವಿಷ್ಯಂ ಭೋಜಯೇದ್ ದ್ವಿಜಾನ್ |
ಹರಿವಂಶಸಮಾಪ್ತೌ ತು ಸಹಸ್ರಂ ಭೋಜಯೇದ್ ದ್ವಿಜಾನ್ ॥71॥

ಸ್ವರ್ಗಪರ್ವದಲ್ಲೂ ಕೂಡ ಅದೇ ರೀತಿಯಾಗಿ ಗಂಧಮಾಲ್ಯಾದಿಗಳ ಜೊತೆಗೆ ಹವಿಷ್ಯಪದಾರ್ಥಗಳನ್ನು ಬ್ರಾಹ್ಮಣರಿಗೆ ನೀಡಬೇಕು. ಹರಿವಂಶದ ಸಮಾಪ್ತಿಯ ಕಾಲಕ್ಕೆ ಸಾವಿರ ಮಂದಿ ಬ್ರಾಹ್ಮಣರಿಗೆ ಅನ್ನದಾನ ಮಾಡಬೇಕು.

ಗಾಮೇಕಾಂ ನಿಷ್ಕಸಂಯುಕ್ತಾಂ ಬ್ರಾಹ್ಮಣಾಯ ನಿವೇದಯೇತ್ |
ತದರ್ಧೇನಾಪಿ ದಾತವ್ಯಾ ದರಿದ್ರೇಣಾಪಿ ಪಾರ್ಥಿವ ॥72॥

ಅಲ್ಲದೆ ಯೋಗ್ಯಬ್ರಾಹ್ಮಣನಿಗೆ ನಿಷ್ಕಪ್ರಮಾಣದ ಸುವರ್ಣದೊಂದಿಗೆ ಒಳ್ಳೆಯ ಹಸುವನ್ನು ನೀಡಬೇಕು (ನಿಷ್ಕ ಎಂದರೆ ನಾಲ್ಕು ತೊಲೆ). ಹೇ ರಾಜನೇ, ಯಜಮಾನನು ದಾರಿದ್ರ್ಯವುಳ್ಳವನಾಗಿದ್ದರೂ ಹಿಂದೆ ಹೇಳಿದುದರ ಅರ್ಧಭಾಗ ಸುವರ್ಣವನ್ನಾದರೂ ಗೋವಿನ ಜೊತೆಗೆ ನೀಡಬೇಕು.

ಪ್ರತಿಪರ್ವಸಮಾಪ್ತೌ ತು ಪುಸ್ತಕಂ ವೈ ವಿಚಕ್ಷಣಃ |
ಸುವರ್ಣೇನ ಚ ಸಂಯುಕ್ತಂ ವಾಚಕಾಯ ನಿವೇದಯೇತ್ ॥73॥

ಜ್ಞಾನಿಯಾದ ಯಜಮಾನನು ಪ್ರತೀ ಪರ್ವಗಳ ಸಮಾಪ್ತಿಕಾಲಕ್ಕೆ ಸುವರ್ಣದೊಂದಿಗೆ ಪುಸ್ತಕವನ್ನೂ ಪ್ರವಚನಕಾರನಿಗೆ ನೀಡಬೇಕು.

ಹರಿವಂಶೇ ಪರ್ವಣಿ ಚ ಪಾಯಸಂ ತತ್ರ ಭೋಜಯೇತ್ |
ಪಾರಣೇ ಪಾರಣೇ ರಾಜನ್ ಯಥಾವದ್ ಭರತರ್ಷಭ ॥74॥

ಹರಿವಂಶದ ಪ್ರವಚನ ನಡೆಯುವಾಗ ಪ್ರತಿಯೊಂದು ಪರ್ವದಲ್ಲಿಯೂ ಪಾಯಸವನ್ನು ಉಣಬಡಿಸಬೇಕು. ಹೇ ಭರತಶ್ರೇಷ್ಠರಾಜನೇ, ಪ್ರತಿಯೊಂದು ಬಾರಿ ಪ್ರವಚನ ನಡೆಸಿದಾಗಲೂ ಯಥಾವತ್ತಾಗಿ ಈ ಎಲ್ಲ ಕ್ರಮಗಳನ್ನೂ ಅನುಸರಿಸಬೇಕು.

ಸಮಾಪ್ಯ ಸರ್ವಾಃ ಪ್ರಯತಃ ಸಂಹಿತಾಃ ಶಾಸ್ತ್ರಕೋವಿದಃ |
ಶುಭೇ ದೇಶೇ ನಿವೇಶ್ಯಾಥ ಕ್ಷೌಮವಸ್ತ್ರಾಭಿಸಂವೃತಾಃ ॥75॥
ಶುಕ್ಲಾಂಬರಧರಃ ಸ್ರಗ್ವೀ ಶುಚಿರ್ಭೂತ್ವಾ ಸ್ವಲಂಕೃತಃ |
ಅರ್ಚಯೇತ ಯಥಾನ್ಯಾಯಂ ಗಂಧಮಾಲ್ಯೈಃ ಪೃಥಕ್ಪೃಥಕ್ ॥76॥

ಹೀಗೆ ಹಿಂದೆ ಹೇಳಿದ ಎಲ್ಲ ಕ್ರಿಯೆಗಳನ್ನೂ ಶಾಸ್ತ್ರಜ್ಞನಾದ ಯಜಮಾನನು ಪ್ರಯತ್ನ ಪೂರ್ವಕವಾಗಿ ನಡೆಸಿ, ಸಂಹಿತೆಗಳನ್ನು (ಮಹಾಭಾರತದ ಪುಸ್ತಕಗಳನ್ನು) ರೇಷ್ಮೆಯ ವಸ್ತ್ರದಿಂದ ಸುತ್ತಿ ಶುದ್ಧವಾದ ಪ್ರದೇಶದಲ್ಲಿರಿಸಿ, ತಾನೂ ಶುಚಿಯಾದ ವಸ್ತ್ರಗಳನ್ನು ತೊಟ್ಟು, ಮಾಲೆಯನ್ನು ಧರಿಸಿ, ಶುಚಿರ್ಭೂತನಾಗಿ, ಅಲಂಕಾರಗಳನ್ನು ತೊಟ್ಟುಕೊಂಡು ಯಥಾಯೋಗ್ಯವಾಗಿ ಗಂಧ-ಮಾಲ್ಯಗಳಿಂದ ಪ್ರತ್ಯೇಕವಾಗಿ ಪುಸ್ತಕಗಳನ್ನು ಅರ್ಚಿಸಬೇಕು.

ಸಂಹಿತಾಪುಸ್ತಕಾನ್ ರಾಜನ್ ಪ್ರಯತಃ ಸುಸಮಾಹಿತಃ |
ಭಕ್ಷ್ಯೈರ್ಮಾಲ್ಯೈಶ್ಚ ಪೇಯೈಶ್ಚ ಕಾಮೈಶ್ಚ ವಿವಿಧೈಃ ಶುಭೈಃ ॥77॥
ಹಿರಣ್ಯಂ ಚ ಸುವರ್ಣಂ ಚ ದಕ್ಷಿಣಾಮಥ ದಾಪಯೇತ್ |
ಸರ್ವತ್ರ ತ್ರಿಪಲಂ ಸ್ವರ್ಣಂ ದಾತವ್ಯಂ ಪ್ರಯತಾತ್ಮನಾ ॥78॥
ತದರ್ಧಂ ಪಾದಶೇಷಂ ವಾ ವಿತ್ತಶಾಠ್ಯವಿವರ್ಜಿತಮ್ |

ಯದ್ಯದೇವಾತ್ಮನೋಽಭೀಷ್ಟಂ ತತ್ತದ್ದೇಯಂ ದ್ವಿಜಾತಯೇ ॥79॥
ಹೇ ರಾಜನೇ, ಇಂದ್ರಿಯನಿಗ್ರಹವುಳ್ಳ, ಸಮಾಧಾನಚಿತ್ತನಾದ ಯಜಮಾನನು ಆ ಸಂಹಿತೆಯ ಪುಸ್ತಕಗಳನ್ನು ಭಕ್ಷ್ಯ-ಮಾಲೆಗಳು-ಪೇಯಗಳು ಮತ್ತು ನಾನಾ ರೀತಿಯ ಅಭೀಷ್ಟವಸ್ತುಗಳೊಂದಿಗೆ ದಾನ ಮಾಡಬೇಕು. ಅನಂತರ ದಕ್ಷಿಣೆಯಾಗಿ ಹಣವನ್ನೂ, ಬಂಗಾರವನ್ನೂ ನೀಡಬೇಕು. ಸುವರ್ಣವನ್ನು ನೀಡುವ ಸಂದರ್ಭದಲ್ಲಿ ಪ್ರಯತ್ನ ಪೂರ್ವಕವಾಗಿ ಎಲ್ಲ ಕಡೆ ಮೂರುಪಲಗಳಷ್ಟು ಸುವರ್ಣವನ್ನು ನೀಡಬೇಕು (ಒಂದು ಪಲ ಅಂದರೆ ನಾಲ್ಕು ತೊಲೆ) ಅಥವಾ ಅದರ ಅರ್ಧದಷ್ಟನ್ನಾದರೂ ಅಥವಾ ಕಾಲಂಶವನ್ನಾದರೂ ಸಂಪತ್ತಿನ ಮೋಹವನ್ನು ಬಿಟ್ಟು ನೀಡಬೇಕು. ಅಲ್ಲದೆ ತನಗೆ ಯಾವೆಲ್ಲ ವಸ್ತುಗಳು ಪ್ರಿಯವಾಗಿವೆಯೋ ಅಂತಹ ಎಲ್ಲ ವಸ್ತುಗಳನ್ನೂ ಬ್ರಾಹ್ಮಣನಿಗೆ ನೀಡಬೇಕು.
ಸರ್ವಥಾ ತೋಷಯೇದ್ ಭಕ್ತ್ಯಾ ವಾಚಕಂ ಗುರುಮಾತ್ಮನಃ |
ದೇವತಾಃ ಕೀರ್ತಯೇತ್ ಸರ್ವಾ ನರನಾರಾಯಣೌ ತಥಾ ॥80॥
ಎಲ್ಲ ರೀತಿಯಿಂದಲೂ ತನಗೆ ಗುರುವಾದ ವಾಚಕನನ್ನು ಭಕ್ತಿಯಿಂದ ಸಂತೋಷಗೊಳಿಸಬೇಕು. ಈ ಕರ್ತವ್ಯಗಳನ್ನು ನಡೆಸುವ ಸಂದರ್ಭದಲ್ಲಿ ಹಾಗೆಯೇ ನರ-ನಾರಾಯಣರನ್ನೂ ಸ್ತೋತ್ರ ಮಾಡಬೇಕು.
ತತೋ ಗಂಧೈಶ್ಚ ಮಾಲ್ಯೈಶ್ಚ ಸ್ವಲಂಕೃತ್ಯ ದ್ವಿಜೋತ್ತಮಾನ್ |
ತರ್ಪಯೇದ್ ವಿವಿಧೈಃ ಕಾಮ್ಯೈರ್ದಾನೈಶ್ಚೋಚ್ಚಾವಚೈಸ್ತಥಾ ॥81॥
ಅನಂತರ ಸೇರಿದ ಎಲ್ಲ ಬ್ರಾಹ್ಮಣಶ್ರೇಷ್ಠರನ್ನೂ ಗಂಧ ಹಾಗೂ ಮಾಲ್ಯಗಳಿಂದ ಅಲಂಕರಿಸಿ, ಅವರಿಗೆ ಇಷ್ಟವಾದ ನಾನಾ ರೀತಿಯ ವಸ್ತುಗಳಿಂದ ಅವರನ್ನು ಸಂತೋಷಗೊಳಿಸಬೇಕು. ಜೊತೆಗೆ ದಾನಯೋಗ್ಯವಾದ ಪದಾರ್ಥಗಳನ್ನು ಹಿರಿದು ಕಿರಿದೆನ್ನದೆ ದಾನ ಮಾಡಬೇಕು.
ಅತಿರಾತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ |
ಪ್ರಾಪ್ನುಯಾಚ್ಚ ಕ್ರತುಫಲಂ ಯಥಾ ಪರ್ವಣಿ ಪರ್ವಣಿ ॥82॥
ಹೀಗೆ ಮಾಡುವುದರಿಂದ ಮಾನವನು ಅತಿರಾತ್ರ ಯಜ್ಞದ ಫಲವನ್ನು ಪಡೆಯುತ್ತಾನೆ. ಪ್ರತಿಯೊಂದು ಪರ್ವಗಳಲ್ಲಿಯೂ ಹಿಂದೆ ಹೇಳಿದಂತೆ ಕ್ರಿಯೆಗಳನ್ನು ನಡೆಸುವುದರಿಂದ ಆ ಯಜ್ಞಫಲವನ್ನು ಸಂಪೂರ್ಣವಾಗಿ ಪಡೆಯಬಹುದಾಗಿದೆ.
ವಾಚಕೋ ಭರತಶ್ರೇಷ್ಠ ವ್ಯಕ್ತಾಕ್ಷರಪದಸ್ವರಃ |
ಭವಿಷ್ಯಂ ಶ್ರಾವಯೇದ್ ವಿದ್ವಾನ್ ಭಾರತಂ ಭರತರ್ಷಭ ॥83॥
ಹೇ ಭರತಶ್ರೇಷ್ಠನೇ, ಇಷ್ಟಾದ ಮೇಲೆ ವಾಚಕನು ಸ್ಪಷ್ಟವಾದ ಅಕ್ಷರ, ಪದ ಹಾಗೂ ಸ್ವರಗಳುಳ್ಳವನಾಗಿ, ಮಹಾಭಾರತದ ಅಂತರಾರ್ಥಗಳನ್ನು ಬಲ್ಲವನಾಗಿ ಭವಿಷ್ಯ ಪರ್ವವನ್ನು ಪ್ರವಚನ ಮಾಡುವ ಮೂಲಕ ಶ್ರೋತೃಗಳಿಗೆ ಕೇಳಿಸಬೇಕು.
ಭುಕ್ತವತ್ಸು ದ್ವಿಜೇಂದ್ರೇಷು ಯಥಾವತ್ ಸಂಪ್ರದಾಪಯೇತ್ |
ವಾಚಕಂ ಭರತಶ್ರೇಷ್ಠ ಭೋಜಯಿತ್ವಾ ಸ್ವಲಂಕೃತಮ್ ॥84॥
ಹಿಂದೆ ಹೇಳಿದ ದಾನಾದಿಗಳೆಲ್ಲವನ್ನೂ ಬ್ರಾಹ್ಮಣರ ಭೋಜನವಾದ ನಂತರ ಯಥಾವತ್ತಾಗಿ ನೀಡಬೇಕು. ಹಾಗೆಯೇ ವಾಚಕರನ್ನೂ ಕೂಡ ಯಥೋಕ್ತವಾದ ಅನ್ನಾಹಾರಗಳಿಂದ ಸಂತೋಷಗೊಳಿಸಿ, ಚೆನ್ನಾಗಿ ಅಲಂಕರಿಸಿ, ನಂತರ ಅವನ ಪೂಜಾದಿಗಳನ್ನು ನೆರವೇರಿಸಬೇಕು.
ವಾಚಕೇ ಪರಿತುಷ್ಟೇ ತು ಶುಭಾ ಪ್ರೀತಿರನುತ್ತಮಾ |
ಬ್ರಾಹ್ಮಣೇಷು ತು ತುಷ್ಟೇಷು ಪ್ರಸನ್ನಾಃ ಸರ್ವದೇವತಾಃ ॥85॥
ಪ್ರವಚನಕಾರನು ಸಂತೋಷಗೊಂಡರೆ ಅತ್ಯಂತ ಮಂಗಳವು, ಅತಿಶಯವಾದ ಆನಂದವೂ ಸಿಗುವುದು. ಹಾಗೆಯೇ ಬ್ರಾಹ್ಮಣರು ಸಂತೋಷಗೊಂಡರೆ ಎಲ್ಲ ದೇವತೆಗಳೂ ಪ್ರಸನ್ನರಾಗುವರು.
ತತೋ ಹಿ ವರಣಂ ಕಾರ್ಯಂ ದ್ವಿಜಾನಾಂ ಭರತರ್ಷಭ |
ಸರ್ವಕಾಮ್ಯೈರ್ಯಥಾನ್ಯಾಯಂ ಸಾಧುಭಿಶ್ಚ ಪೃಥಗ್ವಿಧೈಃ ॥86॥
ಹೇ ಭರತರ್ಷಭನೇ, ವಾಚಕನನ್ನು ಪೂಜಿಸಿದ ನಂತರ ಬ್ರಾಹ್ಮಣರಿಗೆ ನಾನಾ ವಿಧವಾದ, ಉತ್ತಮವಾದ ಅವರು ಬಯಸುವ ವಸ್ತುಗಳಿಂದ ಯಥಾಯೋಗ್ಯವಾಗಿ ಪೂಜೆಯನ್ನು ನಡೆಸಬೇಕು.
ಇತ್ಯೇಷ ವಿಧಿರುದ್ದಿಷ್ಟೋ ಮಯಾ ತೇ ದ್ವಿಪದಾಂವರ |
ಶ್ರದ್ದಧಾನೇನ ವೈ ಭಾವ್ಯಂ ಯನ್ಮಾಂ ತ್ವಂ ಪರಿಪೃಚ್ಛಸಿ ॥87॥
ಹೇ ಮನುಜಶ್ರೇಷ್ಠನೇ, ನೀನು ಏನನ್ನು ಕೇಳಿರುವೆಯೋ ಆ ವಿಧಿಯನ್ನು ನಾನು ನಿನಗೆ ಉಪದೇಶಿಸಿದ್ದೇನೆ. ಶ್ರದ್ಧೆಯಿಂದ ಈ ಎಲ್ಲ ಕರ್ತವ್ಯಗಳನ್ನು ನಡೆಸಬೇಕು.
ಭಾರತಶ್ರವಣೇ ರಾಜನ್ ಪಾರಣೇ ಚ ನೃಪೋತ್ತಮ |
ಸದಾ ಯತ್ನವತಾ ಭಾವ್ಯಂ ಶ್ರೇಯಸ್ತು ಪರಮಿಚ್ಛತಾ ॥88॥
ಹೇ ನೃಪೋತ್ತಮನಾದ ರಾಜನೇ, ಮಹಾಭಾರತದ ಶ್ರವಣದಲ್ಲಿಯೂ ಪಾರಣದಲ್ಲಿಯೂ (ಮಂಗಳಮಹೋತ್ಸವ) ಪ್ರತಿಯೊಬ್ಬ ವ್ಯಕ್ತಿಯೂ ಉತ್ತಮವಾದ ಶ್ರೇಯಸ್ಸನ್ನು ಬಯಸುವವನಾದರೆ ಸದಾ ಪ್ರಯತ್ನವನ್ನು ನಡೆಸಬೇಕು.
ಭಾರತಂ ಶೃಣುಯಾನ್ನಿತ್ಯಂ ಭಾರತಂ ಪರಿಕೀರ್ತಯೇತ್ |
ಭಾರತಂ ಭವನೇ ಯಸ್ಯ ತಸ್ಯ ಹಸ್ತಗತೋ ಜಯಃ ॥89॥
ಪ್ರತಿನಿತ್ಯವೂ ಭಾರತವನ್ನು ಕೇಳಬೇಕು. ನಿತ್ಯವೂ ಭಾರತವನ್ನು ಕೀರ್ತನೆ ಮಾಡಬೇಕು. ಯಾರ ಮನೆಯಲ್ಲಿ ಭಾರತವಿದೆಯೋ ಜಯವು ಅವನ ಕೈಯಲ್ಲೇ ಇದೆ.
ಭಾರತಂ ಪರಮಂ ಪುಣ್ಯಂ ಭಾರತೇ ವಿವಿಧಾಃ ಕಥಾಃ |

ಭಾರತಂ ಸೇವ್ಯತೇ ದೇವೈರ್ಭಾರತಂ ಪರಮಂ ಪದಮ್ ॥90॥
ಭಾರತವು ಅತ್ಯಂತ ಮಂಗಳಮಯವಾಗಿದೆ. ಭಾರತದಲ್ಲಿರುವ ನಾನಾ ರೀತಿಯ ಕಥೆಗಳೂ ಮಂಗಳಮಯವಾಗಿವೆ. ದೇವತೆಗಳೂ ಭಾರತವನ್ನು ಸೇವಿಸುತ್ತಾರೆ. ಭಾರತವೇ ಉತ್ಕೃಷ್ಟವಾದ ಸ್ಥಾನವನ್ನು ನೀಡುತ್ತದೆ.
ಭಾರತಂ ಸರ್ವಶಾಸ್ತ್ರಾಣಾಮುತ್ತಮಂ ಭರತರ್ಷಭ |
ಭಾರತಾತ್ ಪ್ರಾಪ್ಯತೇ ಮೋಕ್ಷಸ್ತತ್ತ್ವಮೇತದ್ ಬ್ರವೀಮಿ ತತ್ ॥91॥
ಹೇ ಭರತರ್ಷಭನೇ, ನಿಜವಾಗಿಯೂ ಹೇಳುತ್ತಿದ್ದೇನೆ ಭಾರತವು ಸರ್ವ- ಶಾಸ್ತ್ರಗಳಿಗಿಂತಲೂ ಉತ್ತಮವಾಗಿದೆ. ಭಾರತದಿಂದ ಮೋಕ್ಷವೇ ಲಭಿಸುವುದು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಸ್ವರ್ಗಾರೋಹಣಪರ್ವಣಿ ಸರ್ವಭಾರತಾಧ್ಯಾಯಪಠನಫಲಶ್ರುತಿವರ್ಣನಂ ನಾಮ ಪಂಚಮೋಽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ಐದನೆಯ ಅಧ್ಯಾಯ ಮುಗಿಯಿತು.
* * * * *

ಆರನೆಯ ಅಧ್ಯಾಯ
ವೈಶಂಪಾಯನಃ
ಮಹಾಭಾರತಮಾಖ್ಯಾನಂ ಕ್ಷಿತಿಂ ಗಾಂ ಚ ಸರಸ್ವತೀಮ್ |
ಬ್ರಾಹ್ಮಣಾನ್ ಕೇಶವಂ ಚೈವ ಕೀರ್ತಯನ್ನಾವಸೀದತಿ ॥1॥
ವೈಶಂಪಾಯನ ಮಹಾಭಾರತದ ಕಥೆಯನ್ನು, ಭೂಮಿಯನ್ನು, ಗೋವನ್ನು ಹಾಗೆಯೇ ಸರಸ್ವತೀ ದೇವಿಯನ್ನೂ, ಬ್ರಾಹ್ಮಣರನ್ನೂ, ಕೇಶವನೆಂಬ ಹೆಸರುಳ್ಳ ಶ್ರೀಕೃಷ್ಣನನ್ನೂ ಯಾವನು ಕೀರ್ತನೆ ಮಾಡುತ್ತಾನೋ ಅವನು ಎಂದಿಗೂ ಅವನತಿಯನ್ನು ಪಡೆಯುವುದಿಲ್ಲ.

ವ್ಯಾಖ್ಯಾನ ವಿಶೇಷ ಮಹಾಭಾರತದಲ್ಲಿ ಹೇಳಿದಂತೆ ಭೂಮಿಯನ್ನು, ಗೋವನ್ನು, ಸರಸ್ವತಿಯನ್ನು, ಬ್ರಾಹ್ಮಣರನ್ನು, ಕೇಶವನೆನಿಸಿಕೊಂಡ ಕೃಷ್ಣನನ್ನು ಯಾವಾತನು ಸ್ತೋತ್ರ ಮಾಡುತ್ತಾನೋ ಅವನು ಯಾವತ್ತೂ ಅವನತಿಯನ್ನು ಪಡೆಯುವುದಿಲ್ಲ - ಲಕ್ಷಾಲಂಕಾರ.
ಲಕ್ಷಾಲಂಕಾರದ ಶ್ಲೋಕಗಳು
ವ್ಯಾಸಸ್ಯ ಕೃಪಯಾ ಲಕ್ಷಾಲಂಕಾರಾಖ್ಯಃ ಕೃತೋ ಮಯಾ |
ಗ್ರಂಥೋಽಯಂ ಯಃ ಪ್ರಭುಃ ಕೀಟಮಕರೋತ್‌ಪೃಥಿವೀಪತಿಮ್ ॥1॥
ಯಾವ ಪ್ರಭುವು ಕೀಟವನ್ನು ರಾಜನನ್ನಾಗಿ ಮಾಡಿರುವನೋ ಅಂತಹ ವೇದವ್ಯಾಸರ ಕೃಪೆಯಿಂದ ಈ ಲಕ್ಷಾಲಂಕಾರ ಎಂಬ ಹೆಸರುಳ್ಳ ಗ್ರಂಥವು ನನ್ನಿಂದ ರಚಿತವಾಗಿದೆ.
ಭಾರತಸ್ಯ ಸುಧಾಂಬೋಧೇಃ ಭಾರತೀಶಾದಯಃ ಸುರಾಃ |
ಯಥಾವನ್ಮಥನೇ ಶಕ್ತಾಃ ಕೃತಶಿಕ್ಷಾ ಹರೇರ್ಮುಖಾತ್ ॥2॥
ಭಾರತವೆಂಬ ಈ ಅಮೃತಸಮುದ್ರವನ್ನು ಯಥಾವತ್ತಾಗಿ ಮಥನ ಮಾಡಲು ಭಗವಂತನ ಮುಖದಿಂದಲೇ ಶಿಕ್ಷಣವನ್ನು ಪಡೆದ ಭಾರತೀಪತಿಯಾದ ಮುಖ್ಯಪ್ರಾಣನೇ ಮೊದಲಾದ ದೇವತೆಗಳೇ ಸಮರ್ಥರು.
ಅಹಂ ತು ಮಾನುಷಃ ಕುರ್ಯಾಂ ಮಹಾಕಾರ್ಯೇ ಕಥಂ ಮತಿಮ್ |
ಅತ್ರಾಸ್ತಿ ಕಾರಣಂ ಕಿಂಚಿದ್ ಗುಹ್ಯಂ ತಚ್ಛ್ರೂಯತಾಂ ಬುಧೈಃ ॥3॥
ಮನುಷ್ಯನಾದ ನಾನು ಈ ಮಹಾಕಾರ್ಯದಲ್ಲಿ ಹೇಗೆ ತಾನೆ ಮನಸ್ಸು ಮಾಡಿಯೇನು? ಆದರೂ ಇಲ್ಲಿ ಗೋಪ್ಯವಾದ ಏನೋ ಒಂದು ಕಾರಣವಿದೆ. ವಿದ್ವಾಂಸರು ಅದನ್ನು ಕೇಳಿರಿ.
ಪ್ರಯಾಗೇ ಬ್ರಹ್ಮಣಃ ಸಂಧ್ಯಾಮಠೇ ಜಪಪರಾಯಣಃ |
ಅಹಮಾಸಂ ತದಾ ಲಕ್ಷಾಲಂಕಾರಂ ಕುರ್ವಿತಿ ಪ್ರಭುಃ ॥4॥
ಭಾರತಸ್ಯ ಶ್ಲೋಕಲಕ್ಷಸ್ಯಾರ್ಥವಿಸ್ತರಣಾತ್ಮಕಮ್ |
ಕಾರಯಾಮಾಸ ಯೋಗೀಂದ್ರೋ ಲಕ್ಷಾಲಂಕಾರಮೀದೃಶಮ್ ॥5॥
ನಾನೊಮ್ಮೆ ಪ್ರಯಾಗಕ್ಷೇತ್ರದಲ್ಲಿ ಬ್ರಹ್ಮದೇವರ ಸಂಧ್ಯಾಮಠದಲ್ಲಿ ಜಪವನ್ನು ನಡೆಸುತ್ತಾ ಇದ್ದೆನು. ಆಗ ಪ್ರಭುಗಳಾದ ವೇದವ್ಯಾಸರು ಮಹಾಭಾರತದ ಲಕ್ಷಶ್ಲೋಕಗಳ ಅರ್ಥವನ್ನು ವಿಸ್ತಾರವಾಗಿ ತಿಳಿಸುವ ಲಕ್ಷಾಲಂಕಾರವನ್ನು ರಚಿಸು ಎಂದು ಆದೇಶಿಸಿ, ಯೋಗಿಶ್ರೇಷ್ಠರಾದ ಅವರು ಇಂತಹ ಲಕ್ಷಾಲಂಕಾರವೆಂಬ ಗ್ರಂಥವನ್ನು ನನ್ನಿಂದ ಮಾಡಿಸಿದರು.
ವ್ಯಾಸ ಏವ ಯತಃ ಕರ್ತಾ ದಾಸಸ್ಯ ಹೃದಿ ಮೇ ಸ್ಥಿತಃ |
ಅತೋ ನ ವಿಸ್ಮಯಃ ಕಾರ್ಯಃ ಕಿಮಕಾರ್ಯಂ ಮಹಾಪ್ರಭೋಃ ॥6॥
ದಾಸನಾದ ನನ್ನ ಹೃದಯದಲ್ಲಿ ನಿಂತಿದ್ದು ವೇದವ್ಯಾಸರೇ ಈ ಗ್ರಂಥವನ್ನು ರಚಿಸಿರುವುದರಿಂದ ಇಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಮಹಾಪ್ರಭುವಿಗೆ ಮಾಡಲಾಗದ್ದು ಏನಿದೆ?
ಸದ್ವಾಕ್ಯರತ್ನಮಾಲೇಯಂ ತದ್ ವ್ಯಾಸಸ್ಯ ಗಲೇಽರ್ಪಿತಾ |
ಸದಾ ಸ್ಯಾತ್ ಸ್ವಾಂಗಕಾಂತ್ಯೇಮಾಂ ಸ ಏವ ಪ್ರಥಯೇತ್ಪ್ರಭುಃ ॥7॥
ಈ ಉತ್ತಮ ಮಾತುಗಳೆಂಬ ರತ್ನಗಳ ಮಾಲೆಯು ಅದೇ ವೇದವ್ಯಾಸರ ಕೊರಳಿನಲ್ಲಿ ಯಾವಾಗಲೂ ಅರ್ಪಿತವಾಗಿರಲಿ. ಸಮರ್ಥರಾದ ಅವರೇ ತನ್ನ ಶರೀರದ ಕಾಂತಿಯಿಂದ ಈ ಮಾತ್ರಿಯು ಇನ್ನಷ್ಟು ಶೋಭಿಸುವಂತೆ ಮಾಡಲಿ.
ನಮೋಽಸ್ತು ವಾಸುದೇವಾಯ ವ್ಯಾಸದೇವಾಯ ಧೀಮತೇ |

ಅಸುದೇವಾಯ ದೇವೇಭ್ಯೋ ಗುರುಭ್ಯಶ್ಚ ನಮೋ ನಮಃ ॥8॥
ವಾಸುದೇವನೆಂಬ ಶ್ರೀಕೃಷ್ಣನಿಗೂ, ಧೀಮಂತರಾದ ವೇದವ್ಯಾಸರಿಗೂ ನಮಸ್ಕಾರವಿರಲಿ. ಅಂತೆಯೇ ಪ್ರಾಣದೇವರಿಗೂ, ದೇವತೆಗಳಿಗೂ, ಎಲ್ಲ ಗುರುಗಳಿಗೂ ನಮಸ್ಕಾರಗಳು.
ಶ್ರೀದೇವ್ಯೈ ಭಾರತೀದೇವ್ಯೈ ಗೌರೀದೇವ್ಯೈ ನಮೋ ನಮಃ |
ನಮಃ ಶಚ್ಯೈ ಚ ರತ್ಯೈ ಚ ಮಾತೃಭ್ಯಶ್ಚ ನಮೋ ನಮಃ ॥9॥
ಲಕ್ಷ್ಮೀದೇವಿಗೂ, ಭಾರತೀದೇವಿಗೂ, ಗೌರೀದೇವಿಗೂ ನಮಸ್ಕಾರಗಳು. ಅಂತೆಯೇ ಶಚೀದೇವಿ, ರತೀದೇವಿ ಮತ್ತು ಎಲ್ಲ ತಾಯಂದಿರಿಗೂ ನಮಸ್ಕಾರಗಳು.
ಅಕ್ಷರಂ ಯತ್ಪರಿಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ |
ಕ್ಷಂತುಮರ್ಹಂತಿ ವಿದ್ವಾಂಸಃ ಪಿತಾ ಪುತ್ರಾಪರಾಧವತ್ ॥10॥
ಈ ಗ್ರಂಥದಲ್ಲಿ ಅಕ್ಷರವ್ಯತ್ಯಾಸವಾಗಲಿ, ಅರ್ಥವ್ಯತ್ಯಾಸವಾಗಲಿ ಉಂಟಾಗಿದ್ದರೆ ಅದನ್ನು ಮಗನ ಅಪರಾಧವನ್ನು ತಂದೆಯು ಮನ್ನಿಸುವಂತೆ ವಿದ್ವಾಂಸರೆಲ್ಲರೂ ಕ್ಷಮಿಸಬೇಕು.
॥ ಭಾವಿಸಮೀರವಾದಿರಾಜತೀರ್ಥಪೂಜ್ಯಚರಣವಿರಚಿತಾ
ಲಕ್ಷಾಲಂಕಾರಾಖ್ಯಟಿಪ್ಪಣೀ ಸಮಾಪ್ತಾ ॥
ವೇದೇ ರಾಮಾಯಣೇ ಪುಣ್ಯೇ ಭಾರತೇ ಭರತರ್ಷಭ |
ಆದೌ ಚಾಂತೇ ಚ ಮಧ್ಯೇ ಚ ಹರಿಃ ಸರ್ವತ್ರ ಗೀಯತೇ ॥2॥
ಹೇ ಭರತಶ್ರೇಷ್ಠನೇ, ವೇದದಲ್ಲೂ, ರಾಮಾಯಣದಲ್ಲೂ ಮಂಗಳಮಯವಾದ ಭಾರತದಲ್ಲೂ ಆದಿ, ಅಂತ್ಯ ಹಾಗೂ ಮಧ್ಯಭಾಗದಲ್ಲೂ ಎಲ್ಲ ಕಡೆ ಹರಿಯೇ ವರ್ಣಿತನಾಗಿರುವನು.
ಯತ್ರ ವಿಷ್ಣುಕಥಾ ದಿವ್ಯಾಃ ಶ್ರುತಯಶ್ಚ ಸನಾತನಾಃ |
ತಚ್ಛ್ರೋತವ್ಯಂ ಮನುಷ್ಯೇಣ ಪರಂ ಪದಮಿಹೇಚ್ಛತಾ ॥3॥
ದಿವ್ಯವಾದ ವಿಷ್ಣುವಿನ ಕಥೆಗಳು ಎಲ್ಲಿ ಇವೆಯೋ ಹಾಗೂ ಸನಾತನವಾದ ಶ್ರುತಿಗಳು ಎಲ್ಲಿವೆಯೋ ಅಂತಹ ಮಹಾಭಾರತವನ್ನು ಉತ್ತಮವಾದ ಸ್ಥಾನವನ್ನು ಬಯಸುವ ಮನುಷ್ಯನು ಕೇಳಲೇಬೇಕು.
ಏತತ್ ಪವಿತ್ರಂ ಪರಮಮೇತದ್ಧರ್ಮನಿದರ್ಶನಮ್ |
ಏತತ್ಸರ್ವಗುಣೋಪೇತಂ ಶ್ರೋತವ್ಯಂ ಭೂತಿಮಿಚ್ಛತಾ ॥4॥
ಈ ಮಹಾಭಾರತವು ಪರಮಪವಿತ್ರವಾಗಿದೆ. ಧರ್ಮಕ್ಕೆ ಇದೇ ದೃಷ್ಟಾಂತವಾಗಿದೆ. ಆದ್ದರಿಂದ ಐಶ್ವರ್ಯವನ್ನು ಬಯಸುವವನು ಎಲ್ಲ ಸದ್ಗುಣಗಳಿಂದ ಕೂಡಿದ ಈ ಮಹಾಭಾರತವನ್ನು ಕೇಳಲೇಬೇಕು.
ಅಹ್ನಾ ಯದೇನಃ ಕುರುತೇ ಇಂದ್ರಿಯೈರ್ಮನಸಾऽಪಿ ವಾ |
ಮಹಾಭಾರತಮಾಖ್ಯಾಯ ಸರ್ವಪಾಪೈಃ ಪ್ರಮುಚ್ಯತೇ ॥5॥
ಹಗಲಿನಲ್ಲಿ ಇಂದ್ರಿಯಗಳಿಂದಾದರೂ, ಮನಸ್ಸಿನಿಂದಾದರೂ ಏನೆಲ್ಲ ಪಾಪಗಳನ್ನು ನಡೆಸುವನೋ ಆ ಎಲ್ಲ ಪಾಪಗಳಿಂದ ಮಹಾಭಾರತವನ್ನು ಹೇಳುವ ಮೂಲಕ ಬಿಡುಗಡೆಯನ್ನು ಪಡೆಯುತ್ತಾನೆ.
ಯದ್ರಾತ್ರೌ ಕುರುತೇ ಪಾಪಂ ಬ್ರಾಹ್ಮಣಃ ಸ್ತ್ರೀಗಣೈರ್ವೃತಃ |
ಮಹಾಭಾರತಮಾಖ್ಯಾಯ ಪೂರ್ವಾಂ ಸಂಧ್ಯಾಂ ಪ್ರಮುಚ್ಯತೇ ॥6॥
ಬ್ರಾಹ್ಮಣನು ಸ್ತ್ರೀ ಸಮೂಹದಿಂದ ಕೂಡಿಕೊಂಡು ರಾತ್ರಿಕಾಲದಲ್ಲಿ ಏನು ಪಾಪವನ್ನು ಮಾಡಿದ್ದಾನೋ, ಪೂರ್ವಸಂಧ್ಯಾಕಾಲದಲ್ಲಿ ಮಹಾಭಾರತವನ್ನು ಹೇಳುವ ಮೂಲಕ ಅದರಿಂದ ಮುಕ್ತನಾಗುತ್ತಾನೆ.
ಮಹತ್ತ್ವಾದ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ |
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥7॥
ಈ ಗ್ರಂಥವು ಮಹತ್ವಪೂರ್ಣವಾದ ವಿಷಯಗಳನ್ನು ಒಳಗೊಂಡಿರುವು- ದರಿಂದಲೂ, ಪರಿಮಾಣದಲ್ಲಿ ದೊಡ್ಡದಿರುವುದರಿಂದಲೂ, ಅದರಿಂದಾಗಿ ದೇವತೆಗಳು ತುಲನೆ ಮಾಡುವಾಗ ಭಾರವನ್ನು ತೋರಿಸಿರುವುದರಿಂದಲೂ `ಮಹಾಭಾರತ' ಎಂಬ ಹೆಸರನ್ನು ಪಡೆದಿದೆ. ಈ ಹೆಸರಿನ ಅರ್ಥವೈಶಾಲ್ಯವನ್ನು ಯಾವನು ತಿಳಿಯುವನೋ ಅವನು ಎಲ್ಲ ಪಾಪಗಳಿಂದ ಮುಕ್ತನಾಗುವನು.
ಅಷ್ಟಾದಶಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ |
ವೇದಾಃ ಸಾಂಗಾಸ್ತಥೈಕತ್ರ ಭಾರತಂ ಚೈಕತಃ ಸ್ಥಿತಮ್ ॥8॥
ಹದಿನೆಂಟು ಪುರಾಣಗಳು, ಎಲ್ಲ ರೀತಿಯ ಧರ್ಮಶಾಸ್ತ್ರಗಳು, ಎಲ್ಲ ಷಡಂಗಗಳಿಂದ ಸಹಿತವಾದ ವೇದಗಳು ಒಂದು ಕಡೆಯಾದರೆ, ಮಹಾಭಾರತವು ಒಂದೇ ಇನ್ನೊಂದು ಕಡೆ ತಕ್ಕಡಿಯಲ್ಲಿ ಇದೆ.
ಶ್ರೂಯತಾಂ ಸಿಂಹನಾದೋऽಯಮೃಷೇಸ್ತಸ್ಯ ಮಹಾತ್ಮನಃ |
ಅಷ್ಟಾದಶಪುರಾಣಾನಾಂ ಕರ್ತುರ್ವೇದಮಹೋದಧೇಃ ॥9॥
ಹದಿನೆಂಟು ಪುರಾಣಗಳನ್ನು ರಚಿಸಿದ, ವೇದಗಳಿಂದ ದೊಡ್ಡ ಸಮುದ್ರದಂತಿರುವ, ಮಹಾತ್ಮರಾದ ಆ ವೇದವ್ಯಾಸ ಋಷಿಗಳ ಈ ಸಿಂಹನಾದವು ನಿಮಗೆಲ್ಲರಿಗೂ ಕೇಳಿಸಲಿ.
ತ್ರಿಭಿರ್ವರ್ಷೈರ್ಮಹತ್ಪುಣ್ಯಂ ಕೃಷ್ಣದ್ವೈಪಾಯನಃ ಪ್ರಭುಃ |
ಅಖಿಲಂ ಭಾರತಂ ಚೇದಂ ಚಕಾರ ಭಗವಾನ್ ಮುನಿಃ ॥10॥
ಸರ್ವಸಮರ್ಥರಾದ ಭಗವಾನ್ ಕೃಷ್ಣದ್ವೈಪಾಯನ ಮುನಿಗಳು ಮೂರು ವರ್ಷಗಳಲ್ಲಿ ಬಹುಮಂಗಳಕರವಾದ ಈ ಇಡೀ ಭಾರತಗ್ರಂಥವನ್ನು ರಚಿಸಿದರು.

ಆಕರ್ಣ್ಯ ಭಕ್ತ್ಯಾ ಸತತಂ ಜಯಾಖ್ಯಂ ಭಾರತಂ ಮಹತ್ |
ಶ್ರೀಶ್ಚ ಕೀರ್ತಿಸ್ತಥಾ ವಿದ್ಯಾ ಭವಂತಿ ಸಹಿತಾಃ ಸದಾ ॥11॥
ಯಾವಾಗಲೂ ಜಯ ಎಂಬ ಹೆಸರುಳ್ಳ ಈ ಮಹಾಭಾರತವನ್ನು ಭಕ್ತಿಯಿಂದ ಕೇಳಿದರೆ ಸಂಪತ್ತು, ಕೀರ್ತಿ, ಹಾಗೆಯೇ ಎಲ್ಲ ರೀತಿಯ ವಿದ್ಯೆಗಳೂ ನಮ್ಮ ಜೊತೆಗೂಡುತ್ತವೆ.
ಯದ್ಯದಿಷ್ಟತಮಂ ಕಾಮಂ ಲಭತೇ ಶ್ರದ್ಧಯಾಽನ್ವಿತಃ |
ಶೃಣುಯಾನ್ಮುದಿತೋ ಭೂತ್ವಾ ಆಸ್ತಿಕೋ ಬುದ್ಧಿಸಂಯುತಃ ॥12॥
ಈ ಮಹಾಭಾರತವನ್ನು ಸಂತೋಷದಿಂದಲೇ ವೇದಗಳ ಪಾರಮ್ಯವನ್ನು ಒಪ್ಪಿಕೊಂಡು, ಬುದ್ಧಿವಂತನಾಗಿ ಶ್ರದ್ಧೆಯಿಂದ ಕೂಡಿ ಕೇಳಬೇಕು. ಅದರಿಂದ ಯಾವೆಲ್ಲ ಅಭೀಷ್ಟ ಬಯಕೆಗಳಿವೆಯೋ ಅವೆಲ್ಲವನ್ನೂ ಪಡೆಯುತ್ತಾನೆ.
ವಾಸುದೇವಂ ಸ್ಮರನ್ ವಿದ್ವಾನ್ ಪುಂಡರೀಕಾಯತೇಕ್ಷಣಮ್ |
ಇತಿಹಾಸಮಿಮಂ ಪುಣ್ಯಂ ಮಹಾರ್ಥಂ ವೇದಸಮ್ಮಿತಮ್ ॥13॥
ಶ್ರಾವಯೇದ್ಯಸ್ತು ವರ್ಣಾದೀನ್ ಕೃತ್ವಾ ಬ್ರಾಹ್ಮಣಮಗ್ರತಃ |
ಸರ್ವಪಾಪವಿಶುದ್ಧಾತ್ಮಾ ಶುಚಿಸ್ತದ್ಗತಮಾನಸಃ ॥14॥
ಇಹ ಕೀರ್ತಿಂ ಮಹತ್ಪ್ರಾಪ್ಯ ಭೋಗವಾನ್ ಸುಖಮಶ್ನುತೇ |
ವ್ಯಾಸಪ್ರಸಾದೇನ ಪುನಃ ಸ್ವರ್ಗಲೋಕಂ ಸ ಗಚ್ಛತಿ ॥15॥
ಯಾವ ವಿದ್ವಾಂಸನು ಕಮಲದಂತೆ ಕಣ್ಣುಗಳುಳ್ಳ ವಾಸುದೇವನನ್ನು ಸ್ಮರಿಸುತ್ತಾ, ವೇದಸದೃಶವಾದ, ಅತಿಶಯವಾದ ಅರ್ಥಗಳುಳ್ಳ, ಮಂಗಳಮಯವಾದ ಈ ಇತಿಹಾಸ ಗ್ರಂಥವನ್ನು ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಎಲ್ಲ ವರ್ಣದವರಿಗೆ ಕೇಳಿಸುವನೋ ಅವನು ಎಲ್ಲ ಪಾಪಗಳನ್ನು ಕಳೆದುಕೊಂಡು, ಶುದ್ಧನಾಗಿ ಭಗವಂತನಲ್ಲೇ ಮನಸ್ಸುಳ್ಳವನಾಗುವನು. ಅಲ್ಲದೆ ಇಹಲೋಕದಲ್ಲಿ ಮಹತ್ತಾದ ಕೀರ್ತಿಯನ್ನು ಪಡೆದು ಉತ್ತಮಭೋಗಗಳನ್ನೂ, ಸುಖವನ್ನೂ ಅನುಭವಿಸುತ್ತಾನೆ ಮತ್ತು ವೇದವ್ಯಾಸರ ಅನುಗ್ರಹದಿಂದ ಸ್ವರ್ಗಲೋಕವನ್ನೇ ಪಡೆಯುತ್ತಾನೆ.
ಏತದ್ ವಿದಿತ್ವಾ ಸರ್ವಂ ತು ಸರ್ವವೇದಾರ್ಥವಿದ್ ಭವೇತ್ |
ಪೂಜನೀಯಶ್ಚ ಸತತಂ ಮಾನನೀಯೋ ಭವೇದ್ ದ್ವಿಜಃ ॥16॥
ಈ ಮಹಾಭಾರತದಲ್ಲಿ ಹೇಳಿದ ಎಲ್ಲ ಅಂಶಗಳನ್ನೂ ತಿಳಿದುಕೊಂಡರೆ ಎಲ್ಲ ವೇದಗಳ ಅರ್ಥಜ್ಞಾನವುಳ್ಳವನಾಗುವನು. ಅಲ್ಲದೆ ಆ ಬ್ರಾಹ್ಮಣನು ಪೂಜನೀಯನೂ, ಯಾವಾಗಲೂ ಗೌರವಯೋಗ್ಯನೂ ಆಗುವನು.
ಕಾಯಿಕಂ ವಾಚಿಕಂ ಚೈವ ಮನಸಾ ಸಮುಪಾರ್ಜಿತಮ್ |
ತತ್ಸರ್ವಂ ನಾಶಮಾಯಾತಿ ತಮಃ ಸೂರ್ಯೋದಯೇ ಯಥಾ ॥17॥
ಇದರೊಂದಿಗೆ ಕಾಯಿಕವಾದ, ವಾಚಿಕವಾದ ಮತ್ತು ಮನಸ್ಸಿನಿಂದ ಸಂಪಾದಿಸಿದ ಏನೆಲ್ಲ ಪಾಪಗಳಿವೆಯೋ ಅವೆಲ್ಲವೂ ಸೂರ್ಯೋದಯಕಾಲದಲ್ಲಿ ಕತ್ತಲೆಯು ಹೊರಟು ಹೋದಂತೆ ನಾಶವಾಗುವವು.
ಅಷ್ಟಾದಶಪುರಾಣಾನಾಂ ಶ್ರವಣಾದ್ಯತ್ ಫಲಂ ಭವೇತ್ |
ತತ್ಫಲಂ ಸಮವಾಪ್ನೋತಿ ವೈಷ್ಣವೋ ನಾತ್ರ ಸಂಶಯಃ ॥18॥
ಹದಿನೆಂಟು ಪುರಾಣಗಳ ಶ್ರವಣದಿಂದ ಯಾವ ಫಲ ಉಂಟಾಗುವುದೋ ಆ ಎಲ್ಲ ಫಲವನ್ನು ವೈಷ್ಣವನು ಈ ಮಹಾಭಾರತದ ಶ್ರವಣದಿಂದ ಪಡೆಯುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.
ಸ್ತ್ರಿಯಶ್ಚ ಪುರುಷಾಶ್ಚೈವ ವೈಷ್ಣವಂ ಪದಮಾಪ್ನುಯುಃ |
ಸ್ತ್ರೀಭಿಶ್ಚ ಪುತ್ರಕಾಮಾಭಿಃ ಶ್ರೋತವ್ಯಂ ವೈಷ್ಣವಂ ಯಶಃ ॥19॥
ಅಲ್ಲದೆ ಸ್ತ್ರೀಯರಾಗಲೀ, ಪುರುಷರಾಗಲೀ ಭಗವಂತನ ಪಾದವನ್ನೇ ಹೊಂದುವರು. ಯಾವ ಸ್ತ್ರೀಯರು ಮಕ್ಕಳನ್ನು ಬಯಸುವರೋ ಅವರು ವಿಷ್ಣುವಿನ ಕೀರ್ತಿಯನ್ನು ವರ್ಣಿಸುವ ಇದನ್ನು ಕೇಳಲೇಬೇಕು.
ದಕ್ಷಿಣಾ ಚಾತ್ರ ದೇಯಾ ವೈ ನಿಷ್ಕಪಂಚಸುವರ್ಣಕಮ್ |
ವಾಚಕಾಯ ಯಥಾಶಕ್ತ್ಯಾ ಯಥೋಕ್ತಂ ಫಲಮಿಚ್ಛತಾ ॥20॥
ಮಹಾಭಾರತವನ್ನು ವಾಚಿಸಿದ ಗುರುವಿಗೆ ಐದುನಿಷ್ಕಗಳಷ್ಟು ಸುವರ್ಣಗಳನ್ನು ದಕ್ಷಿಣೆಯನ್ನಾಗಿ ನೀಡಬೇಕು ಅಥವಾ ಯಥಾಶಕ್ತಿಯಾದ ದಕ್ಷಿಣೆಯನ್ನು ಇಲ್ಲಿ ಹೇಳಿದ ಫಲವನ್ನು ಬಯಸುವವನು ನೀಡಲೇಬೇಕು.
ಸ್ವರ್ಣಶೃಂಗೀಂ ಚ ಕಪಿಲಾಂ ಸವತ್ಸಾಂ ವಸ್ತ್ರಸಂಯುತಾಮ್ |
ವಾಚಕಾಯ ಚ ದದ್ಯಾದ್ಧಿ ಆತ್ಮನಃ ಶ್ರೇಯ ಇಚ್ಛತಾ ॥21॥
ಯಾವನು ಆತ್ಮೋನ್ನತಿಯನ್ನು ಬಯಸುವನೋ ಅವನು ಮಹಾಭಾರತವನ್ನು ವಾಚನ ಮಾಡಿದ ಗುರುವಿಗೆ ಬಂಗಾರದ ಕೊಂಬುಗಳುಳ್ಳ, ವಸ್ತ್ರಗಳಿಂದ ಕೂಡಿದ ಕಪಿಲಾ ಗೋವನ್ನು ಕರುವಿನೊಂದಿಗೆ ನೀಡಬೇಕು.
ಅಲಂಕಾರಂ ಪ್ರದದ್ಯಾಚ್ಚ ಪಾಣ್ಯೋರ್ವೈ ಭರತರ್ಷಭ |
ಕರ್ಣಸ್ಯಾಭರಣಂ ದದ್ಯಾದ್ಧನಂ ಚೈವ ವಿಶೇಷತಃ ॥22॥
ಹೇ ಭರತಶ್ರೇಷ್ಠನೇ, ಕೈಗಳಿಗೆ ಕಡಗಗಳನ್ನೂ ನೀಡಬೇಕು ಜೊತೆಗೆ ಕರ್ಣಾಭರಣಗಳನ್ನು, ಹಣವನ್ನು ವಿಶೇಷ ರೀತಿಯಿಂದ ನೀಡಬೇಕು.

ಭೂಮಿದಾನಂ ಸಮಾದದ್ಯಾದ್ ವಾಚಕಾಯ ನರಾಧಿಪ |
ಭೂಮಿದಾನಸಮಂ ದಾನಂ ನ ಭೂತಂ ಭವಿಷ್ಯತಿ ॥23॥
ಹೇ ನರಾಧಿಪತಿಯೇ, ವಾಚಕನಿಗೆ ಭೂದಾನವನ್ನೂ ಮಾಡಬೇಕು. ಈ ಭೂದಾನಕ್ಕೆ ಸಮಾನವಾದ ದಾನವು ಹಿಂದೆಂದೂ ಇಲ್ಲ,

ಮುಂದೆಯೂ ಇರುವುದಿಲ್ಲ.
ಶೃಣೋತಿ ಶ್ರಾವಯೇದ್ ವಾऽಪಿ ಸತತಂ ಚೈವ ಯೋ ನರಃ |
ಸರ್ವಪಾಪವಿನಿರ್ಮುಕ್ತೋ ವೈಷ್ಣವಂ ಪದಮಾಪ್ನುಯಾತ್ ॥24॥
ಪಿತೄನುದ್ಧರತೇ ಸರ್ವಾನೇಕಾದಶಸಮುದ್ಭವಾನ್ |
ಆತ್ಮಾನಂ ಸಸುತಂ ಚೈವ ಸ್ತ್ರಿಯಂ ಚ ಭರತರ್ಷಭ ॥25॥
ದಶಾಂಶಶ್ಚೈವ ಹೋಮೋಽಪಿ ಕರ್ತವ್ಯೋऽತ್ರ ನರಾಧಿಪ |
ಇದಂ ಮಯಾ ತವಾಗ್ರೇ ಚ ಪ್ರೋಕ್ತಂ ಸರ್ವಂ ನರರ್ಷಭ ॥26॥
ಯಾವ ಮನುಷ್ಯನು ಈ ಮಹಾಭಾರತವನ್ನು ನಿತ್ಯವೂ ಕೇಳುವನೋ ಅಥವಾ ನಿತ್ಯವೂ ಪ್ರವಚನ ಮಾಡುವನೋ ಅವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು, ಭಗವಂತನ ಪಾದಗಳನ್ನು ಪಡೆಯಬಲ್ಲನು. ಅಂತಹ ವ್ಯಕ್ತಿಯು ಹಿಂದಿನ ಹನ್ನೊಂದು ತಲೆಮಾರಿನ ಪಿತೃಗಳನ್ನು ಉದ್ಧರಿಸುವನು. ಜೊತೆಗೆ ಪುತ್ರರಿಂದ ಕೂಡಿದ ತನ್ನನ್ನೂ, ತನ್ನ ಸ್ತ್ರೀಯರನ್ನೂ ಉದ್ಧರಿಸುವನು. ಹೇ ನರಾಧಿಪತಿಯಾದ ಭರತಶ್ರೇಷ್ಠನೇ, ಈ ಪ್ರವಚನಕಾಲದಲ್ಲಿ ಹತ್ತನೆಯ ಒಂದಂಶ ಹೋಮವನ್ನೂ ಮಾಡಬೇಕು. ಹೇ ನರಶ್ರೇಷ್ಠನೇ, ನೀನು ಏನೆಲ್ಲವನ್ನು ಕೇಳಿರುವೆಯೋ ಆ ಎಲ್ಲವನ್ನೂ ನಿನ್ನ ಮುಂದೆ ನಾನಿಂದು ಹೇಳಿರುವೆನು.
॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಸ್ವರ್ಗಾರೋಹಣಪರ್ವಣಿ ಷಷ್ಠೋऽಧ್ಯಾಯಃ ॥
ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಂ ಸ್ವರ್ಗಾರೋಹಣಪರ್ವ ॥
॥ ಸಮಾಪ್ತಂ ಮಹಾಭಾರತಮ್ ॥
॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥
॥ ಹರಿಃಪ್ರಿಯತಾಮ್ ॥
* * * * *